ಶ್ರೀಸಮರ್ಥ ರಾಮದಾಸ ಸ್ವಾಮಿ ವಿರಚಿ

# ಶ್ರೀಸಮರ್ಥ ಶ್ರೀಮತ್ ದಾಸಬೋಧ

ಕೃಪಾ ಸಿಂಧು ಉಚಂಬಳಲಾ । ಪರಮಾರ್ಥರೂಪ ಗ್ರಂಥ ಕೇಲಾ ಬೈ
ಜೋ ಕಲ್ಪ ಕೋಟಿ ಆಲಾ । ಉಪೇಗಾಸೀ ॥

ದಾಸಬೋಧೀ ಸಮರ್ಥ ನಿವಾಸ । ಗ್ರಂಥಿ ವರದಾನ ನಿಜಧ್ಯಾಸ
ನಿಜಧ್ಯಾಸೇಚಿ ಪ್ರತ್ಯಯಾಸ । ಯೆಂತ ಗ್ರಂಥಸ್ವರೂಪೇ

❖

ಸಂಪಾದಕ ಹಾಗೂ ಅನುವಾದಕ

ಶ್ರೀರಾಮಭಕ್ತ ಪ್ರಾ. ಕೆ. ವಿ. ಬೆಲಸರೆ

ಕನ್ನಡ ಅನುವಾದಕರು

ಪಾಂಡುರಂಗ ತಮ್ಮಾಜಿ ಕುಲಕರ್ಣಿ

ಗ್ರಾಮ : ಮೆಣಸಗಿ ಜಿಲ್ಲಾ : ಧಾರವಾಡ

श्रीसमर्थ सेवामंडळ, सज्जनगड

ಕನ್ನಡ ಪ್ರಥಮ ಮುದ್ರಣ : ಶಕೆ ೧೯೧೫. ಇಸ್ವಿ ೧೯೯೪.

❖

ಪ್ರತಿಗಳು : ೧೦೦೦

❖

ಪುಸ್ತಕ ಬೆಲೆ : ೫೦೦ ರೂಪಾಯಿ

❖



❖

ಪ್ರಕಾಶಕರು :

ಪಾಂಡುರಂಗ ತಮ್ಮಾಜಿ ಕುಲಕರ್ಣಿ

ಪೋಸ್ಟ<br>ಗ್ರಾಮ | ಮೆಣಸಗಿ

ತಾಲೂಕ : ರೋಣ ಜಿಲ್ಲಾ : ಧಾರವಾಡ

ಹಾಲಿ ವಸ್ತಿ (ಮುಕ್ಕಾಂ) ಹುಬ್ಬಳ್ಳಿ-ಶ್ರೀನಗರ, ನಂ. ೬೯
ಉಣಕಲ್ಲ ಹತ್ತಿರ

❖

ಮುದ್ರಕರು :

ವಿಠ್ಠಲಸಾ ಪರಶುರಾಮಸಾ ಪವಾರ
ಶ್ರೀ ಶಕ್ತಿ ಪ್ರಿಂಟಿಂಗ ಪ್ರೆಸ್
ಘಂಟಿಕೇರಿ ಓಣಿ, ಹುಬ್ಬಳ್ಳಿ-೫೮೦೦೨೦.

# ನಿವೇದನ

## ಮನಿ ಚಿಂತಲೆ ತೆ :-

ಸಮರ್ಥ ಗ್ರಂಥ ಶ್ರೀ ದಾಸಬೋಧ। ತೇಥುನೀ ಸರ್ವಹೀ ಬೋಧ ಪ್ರಬೋಧ ।
ವಿಮಳ ಜ್ಞಾನ ಬಾಳಬೋಧ । ಸತ್ಶಿಷ್ಯಾಸೀ ಬಾಣೇಲ॥
ಏವಂ ಶ್ರೀ ದಾಸಬೋಧ ಗ್ರಂಥ । ತೇಥುನೀ ಸರ್ವಹೀ ಪರಮಾರ್ಥ ।
ಜಾಣತೀ ಯೋಗೀ ಸಂತ ಮಹಂತ । ಗ್ರಂಥರಾಜ ಮುಕುಟಮಣಿ ॥

—ಗಿರಿ ನಿವೃತ್ತಿರಾಮ

ಕೃಪಾ ಸಿಂಧು ಉಚಂಬಳಲಾ । ಪರಮಾರ್ಥರೂಪ ಗ್ರಂಥ ಕೇಲಾ ।
ಜೋ ಕಲ್ಪ ಕೋಟಿ ಆಲಾ । ಉಪೇಗಾಸೀ ॥
ಶ್ರವಣ ಕರಿತಾ ದಾಸಬೋಧ । ತಾತ್ಕಾಳ ಉಪತಿಷ್ಠೆ ಪ್ರಬೋಧ ।
ತುಟೆ ಸಂಸಾರ ಸಂಬಂಧ । ಮನನ ಮಾತ್ರೇ ॥
ದಾಸಬೋಧೀ ಸಮರ್ಥ ನಿವಾಸ । ಗ್ರಂಥೀ ವರದಾನ ನಿಜಧ್ಯಾಸ ।
ನಿಜಧ್ಯಾಸೇಚಿ ಪ್ರತ್ಯಯಾಸ । ಯೇತ ಗ್ರಂಥಸ್ವರೂಪೇ ॥

—ರಾಮಸೋಹಳಾ ಮೋರೂಸ್ವಾಮಿ

ಅಹೋ ಸದ್ಗುರು ಕೃಪಾ ಜಯಾಸಿ । ಸಾಮರ್ಥ್ಯ ನ ಚಲೇ ತಯಾಪಾಸೀ ।
ಜ್ಞಾನಬಳೆ ವೈಭವಾಸೀ । ತೃಣ ತುಚ್ಛ ಕೇಲೇ ॥

—ಶ್ರೀ ದಾಸಬೋಧ

ಶ್ರೀಮಂತ್ ಸಾರ್ಥ ದಾಸಬೋಧವನ್ನು ವಾಚಕರ ಕೈಯಲ್ಲಿ ಕೊಡಲಿಕ್ಕೆ ನಮಗೆ ಅತ್ಯಾನಂದವಾಗುವದು. ಬಹುದಿನಗಳಿಂದ ನಮ್ಮ ಮನಸ್ಸಿನಲ್ಲಿದ್ದ ಈ ಇಚ್ಛೆಯು ಸಮರ್ಥರ ಕೃಪೆಯಿಂದ ಈಡೇರಿದ್ದನ್ನು ಕಂಡು ಸಮಾಧಾನವಾಯಿತು. ಶ್ರೀ ಸಮರ್ಥ ಸೇವಾ ಮಂಡಳದಿಂದ ಪ್ರಕಾಶನ ಪಡೆದ ಶ್ರೀಮಂತ್ ದಾಸಬೋಧದ ಸ್ಪಷ್ಟೀಕರಣವುಳ್ಳ ಆವೃತ್ತಿ ಏಕೆ ಇರಬಾರದು? ಅನ್ನುವ ಅಭಿಪ್ರಾಯದ ಪತ್ರಗಳು ಅನೇಕ ಸಹೃದಯ ವಾಚಕರಿಂದ ಮೇಲಿಂದ ಮೇಲೆ ಬಂದು ನಮ್ಮನ್ನು ಕೆಣಕುತ್ತಿದ್ದವು. (ಎಚ್ಚರಿಸುತ್ತಿದವು) ಇವರ ಸದಿಚ್ಛೆಗೆ ತಕ್ಕಂತೆ ನಮ್ಮಿಂದ ಈ ಕಾರ್ಯ ಆಗದ್ದಕ್ಕೆ ನಾವು ಖೇದ ಪಡುತ್ತಲೇ ಇದ್ದೆವು. ಪರಂತು ಭಗವಂತನ ಇಚ್ಛೆ ಇಲ್ಲದೇ ಕೇವಲ ನಮ್ಮ ಪ್ರಬಲ ಇಚ್ಛೆಯು ಶಕ್ಯವಾಗುವದಿಲ್ಲವೆಂಬುದು ಎಲ್ಲರಿಗೂ ತಿಳಿದ ಮಾತೇ ಇರುವದು.

ಕನ್ನಡ ಪ್ರಥಮ ಮುದ್ರಣ : ಶಕೆ ೧೯೧೫. ಇಸ್ವಿ ೧೯೯೪.

❖

ಪ್ರತಿಗಳು : ೧೦೦೦

❖

ಪುಸ್ತಕ ಬೆಲೆ : ೫೦೦ ರೂಪಾಯಿ

❖



❖

ಪ್ರಕಾಶಕರು :

ಪಾಂಡುರಂಗ ತವನ್ಯಾಜಿ ಕುಲಕರ್ಣಿ

ಪೋಸ್ಟ<br>ಗ್ರಾಮ | ಮೆಣಸಗಿ

ತಾಲೂಕ : ರೋಣ ಜಿಲ್ಲಾ : ಧಾರವಾಡ

ಹಾಲಿ ವಸ್ತಿ (ಮುಕ್ಕಾಂ) ಹುಬ್ಬಳ್ಳಿ-ಶ್ರೀನಗರ, ನಂ. ೬೯
ಉಣಕಲ್ಲ ಹತ್ತಿರ

❖

ಮುದ್ರಕರು :

ವಿಠ್ಠಲಸಾ ಪರಶುರಾಮಸಾ ಪವಾರ
ಶ್ರೀ ಶಕ್ತಿ ಪ್ರಿಂಟಿಂಗ ಪ್ರೆಸ್
ಘಂಟಿಕೇರಿ ಓಣಿ, ಹುಬ್ಬಳ್ಳಿ-೫೮೦೦೨೦.

# ನಿವೇದನ

## ಮನಿ ಚಿಂತಲಿ ತೆ :-

ಸಮರ್ಥ ಗ್ರಂಥ ಶ್ರೀ ದಾಸಬೋಧ। ತೇಥುನೀ ಸರ್ವಹೀ ಬೋಧ ಪ್ರಬೋಧ ।
ವಿಮಳ ಜ್ಞಾನ ಬಾಳಬೋಧ । ಸತ್ಶಿಷ್ಯಾಸೀ ಬಾಣೇಲ॥
ಏಸಂ ಶ್ರೀ ದಾಸಬೋಧ ಗ್ರಂಥ । ತೇಥುನೀ ಸರ್ವಹೀ ಪರಮಾರ್ಥ ।
ಜಾಣತೀ ಯೋಗೀ ಸಂತ ಮಹಂತ । ಗ್ರಂಥರಾಜ ಮುಕುಟಮಣಿ ॥

—ಗಿರಿ ನಿವೃತ್ತಿರಾಮ

ಕೃಪಾ ಸಿಂಧು ಉಚಂಬಳಲಾ । ಪರಮಾರ್ಥರೂಪ ಗ್ರಂಥ ಕೇಲಾ ।
ಜೋ ಕಲ್ಪ ಕೋಟಿ ಆಲಾ । ಉಪೇಗಾಸೀ ॥
ಶ್ರವಣ ಕರಿತಾ ದಾಸಬೋಧ । ತಾತ್ಕಾಳ ಉಪತಿಷ್ಠೆ ಪ್ರಬೋಧ ।
ತುಟೆ ಸಂಸಾರ ಸಂಬಂಧ । ಮನನ ಮಾತ್ರೇ ॥
ದಾಸಬೋಧೀ ಸಮರ್ಥ ನಿವಾಸ । ಗ್ರಂಥೀ ವರದಾನ ನಿಜಧ್ಯಾಸ ।
ನಿಜಧ್ಯಾಸೇಚಿ ಪ್ರತ್ಯಯಾಸ । ಯೇತ ಗ್ರಂಥಸ್ವರೂಪೇ ॥

—ರಾಮಸೋಹಳಾ ಮೋರೂಸ್ವಾಮಿ

ಅಹೋ ಸದ್ಗುರು ಕೃಪಾ ಜಯಾಸಿ । ಸಾಮರ್ಥ್ಯ ನ ಚಲೇ ತಯಾಪಾಸೀ ।
ಜ್ಞಾನಬಳೆ ವೈಭವಾಸೀ । ತೃಣ ತುಚ್ಛ ಕೇಲೇ ॥

—ಶ್ರೀ ದಾಸಬೋಧ

ಶ್ರೀಮಂತ್ ಸಾರ್ಥ ದಾಸಬೋಧವನ್ನು ವಾಚಕರ ಕೈಯಲ್ಲಿ ಕೊಡಲಿಕ್ಕೆ ನಮಗೆ ಆತ್ಮಾನಂದವಾಗುವದು. ಬಹುದಿನಗಳಿಂದ ನಮ್ಮ ಮನಸ್ಸಿನಲ್ಲಿದ್ದ ಈ ಇಚ್ಛೆಯು ಸಮರ್ಥರ ಕೃಪೆಯಿಂದ ಈಡೇರಿದ್ದನ್ನು ಕಂಡು ಸಮಾಧಾನ ವಾಯಿತು. ಶ್ರೀ ಸಮರ್ಥ ಸೇವಾ ಮಂಡಳದಿಂದ ಪ್ರಕಾಶನ ಪಡೆದ ಶ್ರೀಮಂತ್ ದಾಸಬೋಧದ ಸ್ಪಷ್ಟೀಕರಣವುಳ್ಳ ಆವೃತ್ತಿ ಏಕೆ ಇರಬಾರದು? ಅನ್ನುವ ಅಭಿಪ್ರಾಯದ ಪತ್ರಗಳು ಅನೇಕ ಸಹೃದಯ ವಾಚಕರಿಂದ ಮೇಲಿಂದ ಮೇಲೆ ಬಂದು ನಮ್ಮನ್ನು ಕೆಣಕುತ್ತಿದ್ದವು. (ಎಚ್ಚರಿಸುತ್ತಿದವು) ಇವರ ಸದಿಚ್ಛೆಗೆ ತಕ್ಕಂತೆ ನಮ್ಮಿಂದ ಈ ಕಾರ್ಯ ಆಗದ್ದಕ್ಕೆ ನಾವು ಖೇದ ಪಡುತ್ತಲೇ ಇದ್ದೆವು. ಪರಂತು ಭಗವಂತನ ಇಚ್ಛೆ ಇಲ್ಲದೇ ಕೇವಲ ನಮ್ಮ ಪ್ರಬಲ ಇಚ್ಛೆಯು ಶಕ್ಯವಾಗುವದಿಲ್ಲವೆಂಬುದು ಎಲ್ಲರಿಗೂ ತಿಳಿದ ಮಾತೇ ಇರುವದು.

ಪ್ರಾಣಿ ಮಾತ್ರರ ಆಶೆ ಆಕಾಂಕ್ಷೆಗಳನ್ನು ಪೂರ್ತಿಗೊಳಿಸುವ ಸಾಮರ್ಥ್ಯವು ಯಾವುದಾದರೂ ಒಂದು ಗ್ರಂಥದಲ್ಲಿ ಇರುವದೇ ಎಂದು ವಿಚಾರಿಸಿದರೆ ಅದಕ್ಕೆ ಉತ್ತರವೇನಂದರೆ "ಶ್ರೀಮದ್ ದಾಸಬೋಧ" ಅಂತಾ ಪ್ರತಿ ಉತ್ತರ ಕೊಡಲಿಕ್ಕೆ ಯಾವ ಅಡ್ಡಿಯೂ ಇಲ್ಲವೆಂದು ನಮಗೆ ಅನಿಸುವದು. ಇದು ಅಧ್ಯಾತ್ಮದ ಮೇರುಮಣಿ ಇರುವದು. ಮತ್ತು ಅಧ್ಯಾತ್ಮವು ಪ್ರತ್ಯಕ್ಷ ಜೀವನದಲ್ಲಿ ಯಾವ ಯಾವ ಸಾಧನದಿಂದ ಅಳವಡಿಸಿಕೊಳ್ಳಲಿಕ್ಕೆ [ಹೊಂದಿಸಿಕೊಳ್ಳಲಿಕ್ಕೆ] ಬರುವದು ಇತ್ಯಾದಿ ಸರ್ವ ಆಚಾರ ಸಂಹಿತೆಯು ನಿಮಗೆ ಒಂದೇ ಒಂದಾದ ದಾಸಬೋಧದಲ್ಲಿ ಸಿಗುವದು. ಚಿತ್ತ ವೃತ್ತಿಯನ್ನು ಸ್ಥಿರಮಾಡಿ ಬ್ರಹ್ಮಜ್ಞಾನವನ್ನು ಪ್ರಾಪ್ತಮಾಡಿಕೊಡುವ ಸಾಧನ, ಅಭ್ಯಾಸ ಮತ್ತು ಇವರ ಎಲ್ಲ ಲಕ್ಷಣ ಇತ್ಯಾದಿಗಳ ವಿವೇಚನ ಮಾಡುವಂಥ ಅನೇಕ ಅಧ್ಯಾತ್ಮಪರಪ್ರಾಸಾದಿಕ ಗ್ರಂಥಗಳು ಉಪಲಬ್ಧ ಇರುವವು. ಅನೇಕ ಸಾಧಕರು ಈ ಗ್ರಂಥದ ಅಭ್ಯಾಸದಿಂದ ಇದರಲ್ಲಿರುವ ಉಪಾಯಗಳ ಮನನದಿಂದ ಉದ್ಧಾರವಾಗಿ ಹೋಗಿರುವರು. ಮತ್ತು ಈಗೂ ಸಹ ಉದ್ಧಾರವಾಗಿ ಹೋಗುತ್ತಲಿರುವರು. ಶ್ರೀಮತ್ ದಾಸಬೋಧದಲ್ಲಿ ಉಪಯುಕ್ತವಾದ ಸರ್ವಗುಣಗಳು ಇದ್ದೇ ಇರುವವು. ಆದರೆ ಇದರಲ್ಲಿಯ ಶಿಕ್ಷಣವು [ಬೋಧಾಮೃತವು] ಜೀವನದಲ್ಲಿಯ ನಿರಾಶೆಯನ್ನು ದೂರಮಾಡಿ ಚೈತನ್ಯವನ್ನು ಉಂಟುಮಾಡುವಂಥ ಶಕ್ತಿಉಳ್ಳದ್ದಿರುವದು.

**ನಾರಾಯಣ ಅಸೇ ವಿಶ್ವೀ । ತ್ಯಾಚೀ ಪೂಜಾ ಕರಿತ ಜಾವೀ ।**
**ಯಾ ಕಾರಣೆ ತೋಷವಾವೀ । ಕೋಣೀ ತರೀ ಕಾಯಾ ॥**

—ದಾಸಬೋಧ

**ಅರ್ಥ :** ವಿಶ್ವದಲ್ಲಿ ತುಂಬಿದಂಥ ಪರಮಾತ್ಮನನ್ನು ಹೇಗೆ ನೋಡಬೇಕು ? ಪ್ರತ್ಯಕ್ಷ ನಮ್ಮ ಆಚರಣೆಯಲ್ಲಿ ಈ ಉಪಾಸನೆಯನ್ನು ಹೇಗೆ ತರಬೇಕು ? ಉಪಾಸನೆಯಿಂದ ಸಮಾಜದ ಕಾರ್ಯ ಶಕ್ತಿಯು ಕುಗ್ಗದೆ ಅದಕ್ಕೆ ಹೆಚ್ಚು ಬಲ ಬರುವಂತೆ ನಮ್ಮ ಆಚರಣೆಯನ್ನು ಹೇಗೆ ? ಯಾವ ರೀತಿಯಲ್ಲಿ ಮೇಳೈಸಬೇಕು ? ಇದರಿಂದ ಸಮಾಜ ಸುಧಾರಣೆಗೆ ಹೇಗೆ ಉಪಯೋಗವಾದೀತು ? ವೈಯುಕ್ತಿಕವಾದ ಈ ನನ್ನ ಉಪಾಸನೆಗೆ ಸಾಮುದಾಯಿಕ ಸ್ವರೂಪವನ್ನು ಹೇಗೆ ಕೊಡಬೇಕಾಗುವದು ? ತ್ಯಾಗ ಅಂದರೆ ಅಂತಸ್ತ್ಯಾಗ [ಅಂತರಂಗದಲ್ಲಿಯ ತ್ಯಾಗ, ಒಳಗಿನ ತ್ಯಾಗ] ವಾಗಿರುವದು. ಇದರ ಉಪಯೋಗವನ್ನು ಎಳ್ಳಷ್ಟು ಬಿಡುವಿಲ್ಲದಂತೆ ಶರೀರವನ್ನು ಎರಡನೆಯವರ ಸಲುವಾಗಿ ಸವೆಸಿ (ದುಡಿಸಿ) ಹೆಚ್ಚು ಹೆಚ್ಚಾಗಿ (ಅಧಿಕಾಧಿಕವಾಗಿ) ಇದರ ಕಲ್ಯಾಣ ಹೇಗೆ ಆದೀತು ? (ಇದರಿಂದ ಸಮಾಜ ಕಲ್ಯಾಣ, ದೇಹದ ಕಲ್ಯಾಣ, ಜೀವನ ಕಲ್ಯಾಣವು ಆಗುವದು) ಇದರ ಬಗ್ಗೆ ಹಗಲೂ ರಾತ್ರಿಯೂ ಚಿಂತನ; ಮತ್ತು ಇದರ ಬಗ್ಗೆ ಸಾಗ್ರ (ಸಮಗ್ರ ಸವಿಸ್ತಾರ ವಿವೇಚನೆಯು ಗ್ರಂಥರಾಜ ದಾಸಬೋಧದಲ್ಲಿ ಇರುವದು. ಪ್ರಾರಂಭದಲ್ಲಿಯೇ ಉಲ್ಲೇಖ ಮಾಡಿದಂಥ ಓವಿಯಲ್ಲಿ (ನುಡಿಯಲ್ಲಿ) ಶ್ರೀ ಸಮರ್ಥರ ಸಂಪ್ರದಾಯದ ಪ್ರಮುಖ ಆಚಾರ್ಯ ಗಿರಿಧರ ಮತ್ತು ಮೇರು ಸ್ವಾಮಿ ಇವರು ಈ ಗ್ರಂಥರಾಜದ ಮಹಿಮೆಯನ್ನು ವರ್ಣನೆ ಮಾಡಿರುವರು. ಬೋಧ ಮತ್ತು ಪ್ರಬೋಧ [ಅರಿವು ಜಾಗ್ರತವಾಗುವಿಕೆ, ಯಥಾರ್ಥ ಜ್ಞಾನ ಉಂಟಾಗುವಿಕೆ] ಅಂದರೆ ನಮಗೆ ಆದಂಥ ಯಥಾರ್ಥ ಜ್ಞಾನವನ್ನು ಇನ್ನೊಬ್ಬರಲ್ಲಿ ಬಿಂಬಿಸುವ ಅರಿವನ್ನು ಜಾಗ್ರತಗೊಳಿಸುವ ಸಾಮರ್ಥ್ಯವು ಸರ್ವ (ಯಾವತ್ತೂ) ಜೀವನದ ವ್ಯವಹಾರವು ವಿಮಲ ಜ್ಞಾನ (ಸ್ವಚ್ಛ, ನಿರ್ಮಲ ಜ್ಞಾನ) ರೂಪ ಆಗುವಂಥ ಕಲೆಯು ಈ ಗ್ರಂಥದಲ್ಲಿಯೇ ನಿಮಗೆ ಸಿಗುವದು. ಶ್ರೀ ಸಮರ್ಥರ ಕೃಪಾಸಿಂಧುವು ಉಕ್ಕಿತು ಮತ್ತು ಲೋಕದ ಕೋಟಿ ಕೋಟಿ ಜನರ ಉಪಯೋಗಕ್ಕೆ ಬಂದಿತು. ಕೇವಲ ಶ್ರವಣ ಮಾಡಿದರೂ ಸಹ ಕೂಡಲೇ (ತತ್ಕಾಲದಲ್ಲಿ) ಜ್ಞಾನ ಸ್ಫೂರ್ತಿ ಉತ್ಪನ್ನವಾಗುವದು. ಮತ್ತು ವಿಶೇಷವಾಗಿ ಅಂದರೆ ಈ ಗ್ರಂಥದಲ್ಲಿ ಶ್ರೀ ಸಮರ್ಥರ ವಾಸವಿರುವದು. ಅಂತೆಯೇ ಗ್ರಂಥದ ಸತತ ಚಿಂತನ [ಉತ್ಕಟ ಪ್ರಬಲ ಇಚ್ಛೆಯಿಂದ] ಮಾಡಿದೆವೆಂದರೆ ಆಗ ಇದರೊಳಗಿಂದಲೇ ಶ್ರೀ ಸಮರ್ಥರ ದರ್ಶನವಾಗುವದು ಈ ರೀತಿಯು ವರದಿ (ವರ್ದಿ) ಗ್ರಂಥವಿರುವದು. (ವರದಿ ಪುರುಷನಿಂದ ರಚಿಸಲ್ಪಟ್ಟ ಗ್ರಂಥವಿರುವದು) ಸದ್ಗುರುವಿನ ಕೃಪಾ ಸಹಜ ಸುಲಭವಾಗುವದು ಮತ್ತು ಒಮ್ಮೆ ಇದು ಆಯಿತೆಂದರೆ

ಯಾವ ದುಷ್ಟ ಶಕ್ತಿಯು ಸಾಮರ್ಥ್ಯ (ಆಟ) ನಡೆಯುವದಿಲ್ಲ. ನಮಗಾದ ಜ್ಞಾನ ಸಾಮರ್ಥ್ಯದ ಮುಂದೆ ತ್ರಿಭುವನ ಸಂಪತ್ತಿಯ ಲೋಭ ಉಂಟಾಗುವದಿಲ್ಲ.

**ಭಕ್ತಾಚೇನಿ ಸಾಭಿಮಾನೆ । ಕೃಪಾ ಕೇಲಿ ದಾಶರಥೀನೆ ।**
**ಸಮರ್ಥ ಕೃಪೆಚೀ ವಚನೇ । ತೋ ಹಾ ದಾಸಬೋಧ ॥**

ಅರ್ಥ : ಭಕ್ತನ ಮೇಲೆ ಒಳ್ಳೆ ಹರ್ಷದಿಂದ ಶ್ರೀರಾಮನು ಕೃಪಾ ಮಾಡಿದನು. ಅದ್ದರಿಂದ ಶ್ರೀ ಸಮರ್ಥರ ಕೃಪೆಯ ವಚನಗಳೇ ಈ ದಾಸಬೋಧವಾಗಿದೆ.

## ಶ್ರೀಮತ್ ದಾಸಬೋಧವೆಂದರೆ ಸಾಕ್ಷಾತ್ ಶ್ರೀ ಸಮರ್ಥರೂಪವೇ ಆಗಿದೆ. ಸ್ವಲ್ಪದರಲ್ಲಿ ಶ್ರೀ ಸಮರ್ಥರ ಚರಿತ್ರೆ :—

ಈ ಅಲ್ಪ ನಿವೇದನದಲ್ಲಿ ನಮಗೆ ಬಹಳಷ್ಟು ಯಾವುದನ್ನೂ ವಿಸ್ತಾರವಾಡಿ ಹೇಳುವ ಅವಶ್ಯಕತೆ ಇರುವದಿಲ್ಲ. ಯಾಕಂದರೆ ಪ್ರಾ. ಸ. ಭ. ಬೆಲಸರೆ ಇವರು ತಮ್ಮ ಪ್ರಸ್ತಾವನೆಯಲ್ಲಿ ಶ್ರೀ ಸಮರ್ಥ ಚರಿತ್ರ ಮತ್ತು ಅದರ ಗುಣ ವಿಶೇಷತಾ, ವಾಙ್ಮಯ ದಾಸಬೋಧ ಇತ್ಯಾದಿಗಳ ಬಗ್ಗೆ ವಿಸ್ತಾರದಿಂದ ಬರೆದಿರುವರು. ಅದ್ದರಿಂದ ಇಲ್ಲಿ ಪುನಃ ಬರೆಯುವ ಕಾರಣವಿರುವದಿಲ್ಲ. ಆದರೂ ಶ್ರೀ ಸಮರ್ಥ ಚರಿತ್ರದ ಚಿಂತನವಾಡದ ಹೊರತು ಎಲ್ಲವೂ ನಿರಾಧಾರವಾಗಿ ಹೋಗುವದು. ಶ್ರೀ ಸಮರ್ಥರ ವಂಶದಲ್ಲಿ ಇಪ್ಪತ್ತೊಂದು ಪೀಳಿಗೆಯಿಂದ ಶ್ರೀರಾಮನ ಉಪಾಸನೆಯು ನಡೆಯುತ್ತಿತ್ತು. ಇಂತಹ ಪರಂಪರಾವನ ಕುಲದಲ್ಲಿ ರಾಮನವಮಿಯ ದಿವಸವೇ (ರಾಮ ಜನ್ಮದ ಸಮಯದಲ್ಲಿ) ಮಧ್ಯಾಹ್ನ ಹನ್ನೆರಡು ಗಂಟೆಗೆ ಶ್ರೀ ಸಮರ್ಥರ ಅವತಾರವು ಜಾಂಬ ಎಂಬ ಊರಿನಲ್ಲಿ ಆಯಿತು. ಅವರ ಐದನೆಯ ವಯಸ್ಸಿನಲ್ಲಿ ಮಾರುತಿರಾಯನ ಅನುಗ್ರಹವಾಯಿತು. ಸಣ್ಣ ವಯಸ್ಸಿನಲ್ಲಿಯೇ ವಿರಾದಿ ವೃತ್ತಿ, ಉದಾಸೀನತಾ ಮೈಗೂಡಿದ್ದು ಪ್ರಪಂಚದ ವಿಷಯದಲ್ಲಿ ವಿಲಕ್ಷಣ ತಿರಸ್ಕಾರ, ಸೀತಾಪತಿ ಶ್ರೀ ರಾಮನನ್ನು ಬಿಟ್ಟು ಅಂತ್ಯ ಕಾಲದಲ್ಲಿ ಯಾರೂ ಇಲ್ಲಾ ಮಾಯಾ ಪ್ರಪಂಚೀ ವೃಥಾ ಶಿಣಾವೇ । ಸೇಖೀಜಿವೆ ಸಾಂಡುನಿ ಸರ್ವಜಾವೇ ॥

ಅರ್ಥ : ಈ ಕ್ಷಣಿಕ ಪ್ರಪಂಚದಿಂದ ವ್ಯರ್ಥ ದಣಿದು ಕೊನೆಗೆ ಜೀವವು ಎಲ್ಲವನ್ನೂ ಇಲ್ಲೇ ಬಿಟ್ಟು ಹೋಗುವದು.

ಈ ರೀತಿಯಾಗಿ ಅವರ ನಿರಂತರ ನಂಬುಗೆ ಇತ್ತು. ರಾಮನಾಮದ ನಾದ ಬಿಟ್ಟು ಇತರ ಬೇರೆ ಹವ್ಯಾಸ ಇರಲಿಲ್ಲ. ಎಲ್ಲಿಯಾದರೂ ಏಕಾಂತದ ಮೂಲೆಯಲ್ಲಿ ಕುಳಿತು ಚಿಂತನೆ ಮಾಡುತ್ತಿದ್ದರು. ಕೇವಲ ಅವರ ಏಳನೆಯ ವಯಸ್ಸಿನಲ್ಲಿ ತಾಯಿಯು "ಮಗು ಈ ಏಕಾಂತ ಸ್ಥಳದಲ್ಲಿ ಕುಳಿತು ಏನು ಮಾಡುತ್ತಿದ್ದೀ ?" ಎಂದು ಕೇಳಿದಳು. ಆಗ ಶ್ರೀ ಸಮರ್ಥರು ಹೀಗೆ ಉತ್ತರಿಸಿದರು "ವಿಶ್ವದ ಚಿಂತನೆ ಮಾಡುತ್ತಿದ್ದೇನಮ್ಮಾ" ಇಷ್ಟು ಚಿಕ್ಕ ವಯಸ್ಸಿನಲ್ಲಿಯೇ ಶ್ರೀ ಸಮರ್ಥರಿಗೆ ವಿಶ್ವದ ಚಿಂತನೆ ಇತ್ತು. ಮತ್ತು ಅವರು ಅದನ್ನು ತಮ್ಮ ಆಯುಷ್ಯದ ಕೊನೆಯವರೆಗೂ ಮಾಡಿದರು. ಇತರ ಯಾವ ಮಹಾಪುರುಷರೂ ಇಷ್ಟು ಚಿಕ್ಕ ವಯಸ್ಸಿನಲ್ಲಿ ಇಂತಹ ವಿಶ್ವವ್ಯಾಪಿ(ಸರ್ವವ್ಯಾಪಿ)ಚಿಂತನೆ ಮಾಡಿದ್ದು ಇತಿಹಾಸದಲ್ಲಿ ದಾಖಲೆ ಸಿಗುವದಿಲ್ಲ. ಶ್ರೀ ಸಮರ್ಥರ ಸಂಪೂರ್ಣ ಚರಿತ್ರೆಯು ವಿಲಕ್ಷಣ ಮತ್ತು ಉತ್ಕಟವಾಗಿದೆ. ಅವರು ಮನಸ್ಸಿನಲ್ಲಿ ನಿಶ್ಚಯಿಸಿದ್ದೇನಂದರೆ, ಈ ಚಿಂತನೆಯನ್ನು ಕಾರ್ಯರೂಪದಲ್ಲಿ ತರುವದಾದರೆ ಸ್ವಂತದ, ಪ್ರಪಂಚದ ವ್ಯಾಪವು ಉಪಯೋಗವಿಲ್ಲ. "ಸ್ವಂತಕ್ಕಾಗಿ ಲವಲೇಶವೂ ವಿಚಾರ ಮಾಡದೇ ಸದೈವ ಇತರರಿಗಾಗಿ ಈ ದೇಹ ಸಮಿಸಲ್ಪಡಬೇಕು." ಎಂದು ತಾಯಿಗೆ ಕೊಟ್ಟ ವಚನದ ಪ್ರಕಾರ ಲಗ್ನ ಮಂಟಪದ ಆಶ್ರಯ ತೆಗೆದುಕೊಳ್ಳಬೇಕಾಯಿತು. ಆದರೂ ಅಲ್ಲಿಂದ ತಪ್ಪಿಸಿಕೊಂಡು ಓಡಿ ಹೋಗಿ ಘೋರ ಅನುಷ್ಠಾನದ ಸಲುವಾಗಿ ಹತ್ತಿರ ಇರುವ

ಟಾಕಳಿ ಎಂಬ ಊರಿಗೆ ಹೊರಟು ಹೋದರು. ವಯಸ್ಸಿನ ಹನ್ನೆರಡನೇ ವರ್ಷಕ್ಕೇ ಮನೆ, ಮಠವನ್ನು ತ್ಯಜಿಸಿ ಶ್ರೀರಾಮನ ಸಂಪೂರ್ಣ ಕೃಪೆಯನ್ನು ಸಂಪಾದನೆ ಮಾಡುವ ಸಲುವಾಗಿ ಶ್ರೀರಾಮನ ಪ್ರಾರ್ಥನೆ ಮಾಡಿದರು. ಉಪಾಸನೆ, ಅನುಷ್ಠಾನದ ಹೊರತು ಬೇರೆ ಸಾಮರ್ಥ್ಯವಿಲ್ಲ ಮತ್ತು ಸಾಮರ್ಥ್ಯವಿಲ್ಲದೇ ಜನರ ಉಪಯೋಗಕ್ಕಾಗಿ ಅವರ ದುಃಖ ಹೋಗಲಾಡಿಸುವದು ಶಕ್ಯವಿಲ್ಲವೆಂದು ಸಮರ್ಥರು ಸಂಪೂರ್ಣವಾಗಿ ನಂಬಿದ್ದರು. (ಅರಿತುಕೊಂಡಿದ್ದರು)

ರಾಮಾ ತುಜಕಾರಣೆ । ಜಿವಲಗಾಂಚಾ ಸಂಗ ಸೋಡಲಾ ॥

"ಹೇ ರಾಮನೇ ನಿನ್ನ ಸಲುವಾಗಿ ಆಪ್ತೇಷ್ಟರನ್ನು ತ್ಯಜಿಸಿದೆ" ಹೀಗೆ ದುಃಖಿತರಾಗಿ ದೈನ್ಯದಿಂದ ಹೀಗೆ ಬೇಡಿಕೊಂಡರು. ಈಗ ನಿನ್ನ ಹೊರತು ನನಗೆ ಯಾರೂ ಇಲ್ಲ. ಈ ತಿಳುವಳಿಕೆಯಿಂದ ಹನ್ನೆರಡು ವರ್ಷ ಕೃತಯುಗ, ತ್ರೇತಾಯುಗ ದಲ್ಲಿಯ ಋಷಿ ಮುನಿಗಳನ್ನು ನಾಚಿಸುವಂಥ ಉಗ್ರ ಅನುಷ್ಠಾನ ಮಾಡಿದರು. ಪ್ರಭು ಶ್ರೀ ರಾಮಚಂದ್ರನು ಅವರಿಗೆ ದರ್ಶನ ಕೊಟ್ಟನು. ಮತ್ತು ಶ್ರೀ ಸಮರ್ಥರು ಕೃತಾರ್ಥರಾದರು. ಮನುಷ್ಯ ಜನ್ಮ ಸಫಲವಾಯಿತು. ಮತ್ತು ಮಾಡುವದೇನೂ ಉಳಿಯಲಿಲ್ಲ. ಆದರೂ ಕೂಡ ಜಗದೀಶನು ಶ್ರೀ ಸಮರ್ಥರ ರೂಪದಲ್ಲಿ ತೆಗೆದುಕೊಂಡ ಈ ಅವತಾರವು ಏನೋ ವಿಶೇಷವಾದುದೊಂದನ್ನು ತೋರಿಸುವ ಸಲುವಾಗಿ ಇತ್ತು. ಅಭ್ಯಾಸದ ಏಕಾಂತಚ ಸ್ಥಿತಿ ಯಲ್ಲಿ ಸೃಷ್ಟಿ ಮೊದಲು ಮಾಡಿ ಈ ದೃಶ್ಯವೆಲ್ಲ ಮಿಥ್ಯವೆಂಬುದು ಬಂದರೂ ಕೂಡ ಈ ಅಜ್ಞಾನಿ ಜೀವಗಳ ವೇದನೆಗಳು ಮುಗಿಯುವದಿಲ್ಲ ಸಮಾಜವು ದುಃಖದಿಂದ ವ್ಯಾಕುಲ ಆಗುತ್ತಿರುವದು ಕಾಣಿಸುತ್ತದೆ. ಅವರ ದುಃಖವನ್ನು ಹೋಗಲಾಡಿಸುವಂತೆ ಪ್ರಯತ್ನಮಾಡುವದೂ- ಒಂದು ಆಯುಷ್ಯದಲ್ಲಿಯ ಪ್ರಮುಖ ಭಾಗ ಎಂದು ಶ್ರೀ ಸಮರ್ಥರು ಮನಸ್ಸಿನಲ್ಲಿ ತಂದುಕೊಂಡರು. ಯಾತ್ರೆಯು ಇಚ್ಛೆಯಿಂದ (ಆಕಾಂಕ್ಷೆಯಿಂದ) ಹನ್ನೆರಡು ವರ್ಷ ತಿರುಗಾಡಿ ಜನರ ಸ್ಥಿತಿಗತಿಗಳನ್ನು ಅವಲೋಕಿಸಿದರು. ಶ್ರೀ ಸಮರ್ಥರು ತಮ್ಮ ಪ್ರಕರಣ ಗ್ರಂಥದಲ್ಲಿ ಅವರು ನೋಡಿದ ಸಮಾಜದ, ಮತ್ತು ಭೀಕರ ಸ್ಥಿತಿಯ ವರ್ಣನೆಯನ್ನು ಬಹಳ ಹೃದಯವಿದ್ರಾವಕವಾಗಿ ನಿರೂಪಿಸಿ ರುವರು. ಅದನ್ನು ಓದಿದರೆ ಪಾಶವೀ ಸತ್ತೆಯು, ಅಮಾನುಷತೆಯು ತುತ್ತತುದಿಗೆ ಮುಟ್ಟಿದ, ದೈನ್ಯದ ಪರಮಾವಧಿ, ಹೊಟ್ಟೆಯ ಪಾಡಿಗಾಗಿ ರಾಜಾರೋಷವಾಗಿ ನಡೆಯುತ್ತಿದ್ದ ಮತಾಂತರ, ಸ್ವಧರ್ಮದ ಅಭಿಮಾನ ಎಳ್ಳಷ್ಟೂ ಇಲ್ಲ. ಮನಸ್ಸಿನಲ್ಲಿ ಸ್ವರಾಜ್ಯದ ಕಲ್ಪನೆಯು ವಿಶ್ವಾಸವಿಲ್ಲ, ಪಶು ಸಮಾನವಾದಿ ಯಾವತ್ತೂ ಜೀವನ ನಡೆಯುತ್ತಿತ್ತು. ಮತ್ತು ಸಮಾಜದ ರಕ್ಷಣ ಕರ್ತಾ ಯಾರೂ ಇಲ್ಲ, ಕಾಪಾಡುವವರು ಯಾರೂ ಇಲ್ಲವೇ ಇಲ್ಲ. ಹೀಗೆ ಅವರಿಗೆ ಕಾಣಿಸಿತು. ಆದ್ದರಿಂದ ಸಮರ್ಥರ ಅಂತಃಕರಣವು ಅಕ್ಷರಶಃ ದ್ರವಿಸಿದ್ದರಲ್ಲಿ ಆಶ್ಚರ್ಯವಿಲ್ಲ. ಯಾತ್ರೆ ಮುಗಿಸಿ ಶ್ರೀ ಸಮರ್ಥರು ಕೃಷ್ಣಾತೀರಕ್ಕೆ ಶ್ರೀರಾಮನ ಆದೇಶಾನುಸಾರವಾಗಿ ಬಂದರು. ಪ್ರಭುವಿನ ಪ್ರಾರ್ಥನೆಯನ್ನು ಮಾಡಿದರು. ಪ್ರಭುವಿನಿಂದ ವರವನ್ನು ಪಡೆದರು. 'ರಾಘವಾಚಾ ವರ ಪಾವಲೋ ಸತ್ವರ' ಅರ್ಥವೇನೆಂದರೆ ರಾಘವನ ವರವನ್ನು ತ್ವರಿತವಾಗಿ ಪಡೆದೆನು ಹೀಗೆಂದು "ಕ್ಷಣಮಾತ್ರದಲ್ಲಿ ಜನರನ್ನು ಮುಕ್ತಮಾಡುವೆನು." ಹೀಗೆ ಪ್ರತಿಜ್ಞೆಮಾಡಿದರು. ಮತ್ತು ಕಾರ್ಯ ಪ್ರವೃತ್ತರಾದರು. ಶ್ರೀ ಸಮರ್ಥರು ಮುಂದೆ ಯಾವ ಯಾವ ಯೋಜನೆ ಗಳನ್ನು ಮಾಡಿದರು ? ರಾಷ್ಟ್ರಕ್ಕೆ ಚೈತನ್ಯದ ಸ್ಫೂರ್ತಿಯನ್ನು ಹೇಗೆ ಕೊಟ್ಟರು ? ಇದೆಲ್ಲವೂ ಜನರಿಗೆ ಗೊತ್ತೇ ಇದೆ. ಮತ್ತು ಅದನ್ನು ಹೇಳುವ ಸ್ಥಳ ಈಗ ಇದಲ್ಲ. ಕೇವಲ ನಿರ್ದೇಶನ (ದಿಗ್ದರ್ಶನ) ಮಾಡುವದಿದೆ. ಉಪಾ ಸನೆಯ ಮೇಲೆ ಸಮರ್ಥರ ದೃಷ್ಟಿ ಅಪಾರವಾಗಿತ್ತು.

ಉಪಾಸನೇಚಾ ಮೋಠಾ ಆಶ್ರಯೋ । ಉಪಾಸನೇವಿಣ ನಿರಾಶ್ರಯೋ ।
ಉದಂಡ ಕೇಲೆ ತರೀ ಜಯೋ । ಪ್ರಾಪ್ತ ನಾಹೀ ॥
ಸಮರ್ಥಾಚೀ ನಾಹೀ ಪಾಠೀ । ತಯಾಸೀ ಭಲತಾಚ ಕುಟೀ ।
ಯಾ ಕಾರಣೆ ಉಠಾ ಉಠೀ । ಭಜನ ಕರಾವೆ ॥

ಅರ್ಥ : ಸಾಕಷ್ಟು ದುಡಿದು ಕೆಲಸ ಮಾಡಿದರೂ ಜಯವು ಸಿಗುವದಿಲ್ಲ. ಯಾಕೆಂದರೆ ಶ್ರೀ ಸಮರ್ಥ ಸದ್ಗುರುವಿನ ಬೆಂಬಲ ಆಶೀರ್ವಾದ ಇಲ್ಲದ್ದರಿಂದ ಜನರು ಆಡಿಕೊಳ್ಳುವಂತೆ ಆಗುವದು. ಆದ್ದರಿಂದ ಮೊದಲು ದೇವರ ಭಜನೆಯನ್ನು ಪ್ರಾರಂಭಿಸಬೇಕು. ಶ್ರೀರಾಮನ ಕೃಪೆ ಇಲ್ಲದಿದ್ದರೆ ಯಾವ ಕಾರ್ಯಕ್ಕೂ ಯಶ ಇಲ್ಲ. ಮತ್ತು ಅವನ ಕೃಪೆಗಾಗಿ ಉಪಾಸನೆಯನ್ನು ಮಾಡುವದು ಒಂದೇ ಮಾರ್ಗ.

## ಅಂತರೀ ಕಲ್ಪನಾ ಕೇಲೀ । ಏಕಾಂತೀ ಬೋಲಿಲೋ ಬಹು ।
## ರಕ್ಷಿತಾ ದೇವ ದೇವಾಂಚಾ । ತ್ಯಾಚಾ ಉತ್ಸಾವ ಇಚ್ಛಿಲಾ ॥

ಅಂತರಂಗದಲ್ಲಿ ಒಂದು ನಿಶ್ಚಯ ಮಾಡಿಕೊಂಡು ಏಕಾಂತದಲ್ಲಿ ಬಹಳಷ್ಟು ವಿಚಾರ ಮಾಡಿಕೊಂಡು ರಕ್ಷಿಸುವವನು ದೇವರ ದೇವನೇ ಇರುವನು. ಅವನ ಉತ್ಸವನ್ನು ಪ್ರಾರಂಭಿಸುವ ನಿಶ್ಚಯ ಮಾಡಿದರು.

ಸಮರ್ಥರು ರಘುವೀರನ ಉಪಾಸನೆಯನ್ನು ಉತ್ಸವ ಮಾಡಿ ಆರಂಭಿಸಿದರು. ತಮ್ಮ ಸಾಮರ್ಥ್ಯ ಬಲದಿಂದ ಅಖಿಲ ರಾಷ್ಟ್ರವನ್ನು ಸಂಘಟಿಸಿದರು. "ಸಂಘೇ ಶಕ್ತಿಃ ಕಲೌ ಯುಗೇ" ಇದನ್ನು ಅವರು ಮನಸ್ಸಿನಲ್ಲಿ ದೃಢ ಮಾಡಿಕೊಂಡಿದ್ದರು. ಉಪಾಸನೆ ಮತ್ತು ಕಲಿಸುವಿಕೆ ಇವುಗಳಿಂದ ಸಂಪೂರ್ಣ ಸಮಾಜದ ಜನರನ್ನು ಮಂತ್ರ ಮುಗ್ಧರನ್ನಾಗಿ ಮಾಡಿದರು. ಇಷ್ಟೊಂದು ಸಂಘಟನೆಯ ಕುಶಲತೆ ಎಲ್ಲಿಯೂ ದೃಷ್ಟಿಗೆ ಬೀಳುವದಿಲ್ಲ. ತಮ್ಮ ಭಗವದ್ಭಕ್ತಿಯಿಂದ ಈಶ್ವರನಲ್ಲಿ ತದ್ರೂಪ ಆಗಿರುವ ಅನೇಕ ಮಹಾತ್ಮರು ಆಗಿ ಹೋಗಿರುವರು. ಮತ್ತು ಈಗಲೂ ಇರುವರು. ಆದರೆ ಏಕಾಂತಿಕ, ನಿಸ್ಪೃಹ, ನಿಸ್ಸಂಗ, ಸಂತರಾಗಿದ್ದರೂ ಸಮಾಜ ಸೇವೆಯ ಸಲುವಾಗಿ, ರಾಷ್ಟ್ರದ ಸ್ಥಿರತೆಗಾಗಿ ಸದಾ ಸರ್ವಕಾಲ ತಳಮಳಿಸುವ ಮಹಾತ್ಮರು ಎಂದರೆ ಶ್ರೀ ಸಮರ್ಥರು ಒಬ್ಬರೇ ಎಂದು ಅನಿಸುತ್ತದೆ. ಎಷ್ಟೇ ವಿಚಾರ ಮಾಡಿದರೂ ಕೂಡಾ ಅಲೌಕಿಕತೆಯಿಂದ ಮನಸ್ಸು ಮಂತ್ರಮುಗ್ಧವಾಗಿ ಹೋಗುತ್ತದೆ. ಚರಣಕ್ಕೆ ತನ್ನಿಂದ ತಾನೇ ಶಿರವು ಬಾಗುತ್ತದೆ.

ಕಲ್ಯಾಣ ಕರೀ ರಾಮರಾಯಾ । ಜನಹಿತ ವಿವರೀ॥

**ಅರ್ಥ:** ರಾಮರಾಯನೇ, ಕಲ್ಯಾಣವನ್ನು ಮಾಡುವವನಾಗಿ, ಜನಹಿತವನ್ನು ವಿವರಿಸುವವನಾಗು.

ಈ ರೀತಿ ಬೇರೆ ಯಾವ ಮಹಾತ್ಮನು ಅನ್ನುವದು ನಮಗೆ ಕಾಣಿಸುತ್ತದೆ. ದುಷ್ಟರ ಸಂಹಾರಕ್ಕಾಗಿ ನೀನು ನಿನ್ನ ಸಾಮರ್ಥ್ಯವನ್ನು ತೋರಿಸು, ಹಿಂದೆ ಅನೇಕ ದುಷ್ಟರನ್ನು ನೀನು ಸಂಹರಿಸಿರುವಿ ಎಂಬುದನ್ನು ನಾವು ಕೇಳಿದ್ದೇವೆ. ಆದರೆ ಈಗ ಯಾವ ರೀತಿ ದುಷ್ಟರು ಹಿಂಸೆಕೊಡುವ ಶಕ್ತಿಯ ರೌದ್ರತಾಂಡವ ನಡೆಸಿರುತ್ತಾರೆ ಅವರ ಸಂಹಾರ ಯಾರು ಮಾಡುವರು ?

ತುಝಾತೂ ವಾಢವೀರ.ಜಾ । ಶೀಘ್ರ ಆವಡ್ಯಾಚೀ ದೇಖತಾ

**ಅರ್ಥ:** ಎಲೈ ರಾಜ ಶ್ರೇಷ್ಠನೇ ನಮ್ಮನ್ನು ನೀನು ನೋಡಿವೆಯಲ್ಲಾ ? ನಿನ್ನ ಕಾರ್ಯವನ್ನು ನೀನು ತಡಮಾಡದೇ ಪ್ರಾರಂಭಿಸು.

ಇದು ಶಿವ ಛತ್ರಪತಿಯ ಸಲುವಾಗಿ ಮಾಡಿದ ಪ್ರಾರ್ಥನೆ. ಯಾವ ಸನ್ಯಾಸಿಯು (ಗೋಸಾವಿ) ಹೀಗೆ ಭವಾನಿ ಮಾತೆಗೆ ಪ್ರಾರ್ಥನೆ ಮಾಡಿರುವರು ? ಶ್ರೀ ಸಮರ್ಥರು ಸಾವಿರಾರು ಮಠಗಳನ್ನು ಸ್ಥಾಪನೆ ಮಾಡಿದರು. ಆ ಎಲ್ಲ ಮಠಗಳಿಂದ ಈ ನಿನಾದವು ಕೇಳಿಬರುತ್ತಿತ್ತು. ಗೋಸಾವಿಗಳು ತಮ್ಮ ಶಿಕ್ಷಣವನ್ನು ಕೊಟ್ಟು ಮಹಂತರನ್ನು (ಶಿಷ್ಯರನ್ನು) ತಯಾರು ಮಾಡಿದರು. ಸ್ವತಂತ್ರವಾದ ಸಂಪ್ರದಾಯವನ್ನು ಸ್ಥಾಪಿಸಿದರು. ಹರಿ ಕಥೆಯ ನಿರೂಪಣೆ ಧರ್ಮದ ಆಧಾರದ ಮೇಲಿಂದ ರಾಜಕಾರಣ ಈ ಸಾಧನೆಗಳಿಂದ ಸಾಂಪ್ರದಾಯಕ್ಕೆ ಸ್ಥಿರತೆಯನ್ನು ಜನರಲ್ಲಿ ಸ್ಥೈರ್ಯವನ್ನು ತಂದರು. ಸಾಂಪ್ರದಾಯದ ಐದು ಲಕ್ಷಣಗಳನ್ನು ಹೇಳುತ್ತಾರೆ.

**ಶುದ್ಧ ಉಪಾಸನಾ ವಿಮಲ ಜ್ಞಾನ। ವೀತರಾಗ ಆಣಿ ಬ್ರಾಹ್ಮಣ್ಯ ರಕ್ಷಣ।**
**ಗುರು ಪರಂಪರೆಚೆ ಲಕ್ಷಣ। ಶುದ್ಧ ಮಾರ್ಗ॥**

**ಅರ್ಥ :** ಶುದ್ಧ ಉಪಾಸನೆ ನಿರ್ಮಲ ಜ್ಞಾನ ಮತ್ತು ಆಸಕ್ತಿರಹಿತ ಬ್ರಾಹ್ಮಣ್ಯ ರಕ್ಷಣೆ ಇದು ಗುರು ಪರಂಪರೆಯು ಶುದ್ಧ ಮಾರ್ಗವಾಗಿದೆ.

ಸಾಂಪ್ರದಾಯದಲ್ಲಿ ಲೋಭವಿಲ್ಲ, ಮೋಹವಿಲ್ಲ, ಆಸಕ್ತಿ ಇಲ್ಲ, ಕೇವಲ ಪರೋಪಕಾರಕ್ಕಾಗಿಯೇ ಜೀವನ ಇದು ಅವರ ಕಲಿಸುವಿಕೆ ಆಗಿತ್ತು. ಮಹಂತನು ನಿಸ್ಪೃಹನೇ ಇರಲಿಕ್ಕೆ ಬೇಕು. ಪ್ರಾಪಂಚಿಕನಾಗಿದ್ದರೂ, ಅನಾಸಕ್ತಿ ಇರಲೇ ಬೇಕು. ಸಮರ್ಥರು ಸಮಾಜಕ್ಕೆ ಜೀವನ ಪರಿಪೂರ್ಣ ಹೇಗಾಗುವದು ಎಂಬುದನ್ನು ಕಲಿಸಿ ಕೊಟ್ಟರು. ಅವರು ಹೀಗೆ ಹೇಳುತ್ತಾರೆ.

**ಜ್ಞಾನೀ ಆಣಿ ಉದಾಸ। ಸಮುದಾಯಾಚಾ ಹವ್ಯಾಸ।**
**ತೇಣೆ ಅಖಂಡ ಸಾವಕಾಶ। ಏಕಾಂತ ಸೇವಾವಾ॥**

**ಅರ್ಥ :** ಜ್ಞಾನಿ ಹಾಗೂ ಉದಾಸ ವೃತ್ತಿಯುವ ಸಮುದಾಯದ ಸಂಗ್ರಹದ ಹವ್ಯಾಸವುಳ್ಳವ ಹಾಗೂ ಆಗಾಗ್ಗೆ ಅವಕಾಶ ಮಾಡಿಕೊಂಡು ಏಕಾಂತ ಸೇವನೆ ಮಾಡಬೇಕು.

ಜನರಿಗೆ ಆಶ್ಚರ್ಯವೆನಿಸೀತು ? ಯಾಕೆಂದರೆ ಸಮುದಾಯದ ಹವ್ಯಾಸ ಇಟ್ಟುಕೊಂಡ ಮನುಷ್ಯನು ಏಕಾಂತ ವಾಸ ಮಾಡಿದರೆ ಏನು ಉಪಯೋಗ ? ಇದಕ್ಕೆ ಉತ್ತರ ಹೀಗೆ ಇರುವದು. ಏಕಾಂತದಲ್ಲಿ ಅನೇಕ ವಿಚಾರಗಳನ್ನು ಬದಲಾವಣೆ ಮಾಡಬಹುದು. ಬುದ್ಧಿಗೆ ವ್ಯಾಪಕತೆಯು ಸ್ವರೂಪ ಬರುವದು ಮತ್ತು ಜನತೆಯಲ್ಲಿ ಹೋಗಿ ಮಾಡುವ ಕಾರ್ಯ ಸುರಳೀತವಾಗಿ ಆಗುವದು. ಜಯಾಸ ಏಕಾಂತ ಮಾನಲಾ। ಅವಘ್ಯಾ ಅಧೀಕಳೆ ತಯಾಲಾ।

**ಅರ್ಥ:** ಯಾರಿಗೆ ಏಕಾಂತವು ಸಾಧ್ಯವಾಗುವದೋ ಅವರಿಗೆ ಎಲ್ಲವೂ ಮೊದಲಿಗೇ ತಿಳಿಯುವದು.

**ಆಮುಚೀ ಪ್ರತಿಜ್ಞಾ ಏಸೀ। ಕಾಂಹೀ ನ ಮಾಗಾವೇ ಶಿಷ್ಯಾಸೀ।**
**ಆಪಣಾಮಾಗೆ ಜಗದೀಶಾಸೀ। ಭಜತ ಜಾವೇ॥**
**ಉಪಾಸನೇಚೆ ಉತ್ತೀರ್ಣ ವ್ಹಾವೇ। ಭಕ್ತಜನೆ ವಾಢವಾವೆ॥**

**ಅರ್ಥ:** ನಮ್ಮ ಪ್ರತಿಜ್ಞೆಯು ಹೀಗೆ ಇರುವದು, ಶಿಷ್ಯರಿಂದ ಏನನ್ನೂ ಬೇಡಬಾರದು. ಜಗದೀಶನ ಭಜನೆಯನ್ನು ಮಾಡುತ್ತ ಹೋಗಬೇಕು. ಉಪಾಸನೆಯಲ್ಲಿ ಯಶಸ್ವಿಯಾಗಬೇಕು. ಭಕ್ತ ಜನರನ್ನು ಹೆಚ್ಚು ಸಂಗ್ರಹಿಸಬೇಕು.

ಇದು ಅವರ ಸ್ಥಿರ ನಿಯಮವಾಗಿತ್ತು. ಅವರ ಶಿಕ್ಷಣದಲ್ಲಿ ಬಾರದೇ ಇದ್ದ ವಿಷಯಗಳಿಲ್ಲ. ಸದ್ಧರ್ಮ, ಸದಾಚಾರ, ಸದುಪಾಸನಾ, ಶುದ್ಧಸಾಧನಾ ಹೀಗೆ ಉಪಯೋಗಕ್ಕೆ ಬರುವ ವಿಷಯಗಳನ್ನು ಎಲ್ಲ ಸಂತರೂ ಹೇಳುತ್ತಾರೆ. ಮತ್ತು ಆ ಪ್ರಕಾರ ಶ್ರೀ ಸಮರ್ಥರು ಸಹಿತ ಬಹಳಷ್ಟು ಪ್ರಮಾಣದಲ್ಲಿ ಹೇಳಿಯೇ ಇರುತ್ತಾರೆ. ಆದರೆ ಅದರ ಹೊರತಾಗಿ ಮೂರ್ಖ ಲಕ್ಷಣ, ನಿಪುಣ, ಅಭಾಗಿ ಲಕ್ಷಣ, ಕುವಿದ್ಯಾ ಲಕ್ಷಣ, ಪಢತ (ಕಲಿತ, ಸುಶಿಕ್ಷಿತ) ಲಕ್ಷಣ ಇವುಗಳನ್ನು ಸಹ ಶ್ರೀ ಸಮರ್ಥರು ವಿಸ್ತಾರವಾಗಿ ವರ್ಣನೆ ಮಾಡಿದ್ದಾರೆ. ಮತ್ತು ಅವರು ಅನ್ನುವದೇನೆಂದರೆ

ತ್ಯಾಗವನ್ನು ಏಕೆ ಮಾಡಬೇಕು ? ಇದಾದರೂ ತಿಳಿದಿರಬೇಕು. ತಿಳಿಯದ ಹೊರತು ತ್ಯಾಗ ಸಿದ್ಧಿಸುವದಿಲ್ಲ. (ಮಾಡಲಿಕ್ಕೆ ಆಗುವದಿಲ್ಲ) ತಿಳಿದುಕೊಂಡು ತ್ಯಾಗ ಮಾಡುವದಕ್ಕಾಗಿ ಈ ಕುಲಕ್ಷಣಗಳ ಜ್ಞಾನ ಅವಶ್ಯವಾಗಿರುವದು. ಈ ವಿಕಸಿತ(ಅರಳಿದ)ಪ್ರಜ್ಞೆ ಮತ್ತು ತಳಮಳ ಶ್ರೀ ಸಮರ್ಥರಿಗೆ ಮಾತ್ರ ಶೋಭಿಸುತ್ತದೆ. ಇಷ್ಟು ಮಾಡಿಯೂ ಕೂಡ.

**ಸಕಳ ಕರಣೆ ಜಗದೀಶಾಚೆ। ಆಣಿ ಕವಿತ್ವಾಚಿ ಕಾಯ ಮಾನುಷಾನೆ।**
**ಏಶಾ ಅಪ್ರಮಾಣ ಬೋಲಣ್ಯಾಚೆ। ಕಾಯ ಘ್ಯಾವೆ॥**
**ಸಕಲ, ದೇಹಾಚಾ ಝಾಡಾಕೇಲಾ। ಆಣಿ ತತ್ತ್ವ ಸಮುದಾಯ ಉಡಾಲಾ।**
**ತೇಥೇ ಕೋಣ್ಯಾ ಪದಾರ್ಥಾಲಾ। ಆಪಲೇ ಮ್ಹಣಾವೆ॥**

ಅರ್ಥ : ಎಲ್ಲ ಮಾಡಿಸುವವನು ಜಗದೀಶ್ವರನೆ ಇರುವನು ಕೇವಲ ಕವಿತ್ವವನ್ನು ಮನುಷ್ಯ ಬರೆದರೆ ಅದು ಅಪ್ರಮಾಣವೆನಿಸುವದು. ಇದರಿಂದ ಏನು ಉಪಯೋಗ? ಸಕಲ ದೇಹವನ್ನು ಝಾಡಿಸಿ ಹುಡುಕಿದರೂ ತತ್ತ್ವ ಸಮುದಾಯವೇ ಹಾರಿ ಹೋಗಿರುತ್ತದೆ. ಅಲ್ಲಿಯು ಯಾವ ಪದಾರ್ಥಕ್ಕೆ ನಮ್ಮದೆನ್ನಬೇಕು?

ನಿರ್ಧಾರದ ನುಡಿಗೆ ಅವರಿಗಿತ್ತು. ತಮ್ಮ ಅಪಾರ ಜ್ಞಾನ ವೈಭವವನ್ನು ಹಿಂದೆ ಇಟ್ಟು ಅಪಾರ ಬುದ್ಧಿಯು ಈ ಮಹಾಪುರುಷರು ಸಜ್ಜನ ಗಡದಲ್ಲಿ ಚೈತನ್ಯ ಮತ್ತು ಸ್ಫೂರ್ತಿಯ ರೂಪದಲ್ಲಿ ಸುಶೋಭಿಸುತ್ತಿದ್ದಾರೆ. ದೃಶ್ಯ ಇದು ನಾಶವಂತ ಇರುವದು ಶಾಶ್ವತ ಯಾವುದೂ ಇಲ್ಲ. ಅವಿದ್ಯಾ ರೂಪದಿಂದ ಮಾಯೆಯೇ ಇರುವದು. ಕೇವಲ ಬ್ರಹ್ಮಸ್ವರೂಪ, ಸತ್ಯ, ಜ್ಞಾನ, ಮತ್ತು ಆನಂದರೂಪ ಇರುವದು. ಈ ಸಿದ್ಧಾಂತವು ಸನಾತನ ಇದ್ದರೂ ಕೂಡಾ ಈ ನಾಶವಂತ ಜಗತ್ತಿಗೆ ತಮ್ಮ ನಿಶ್ಚಿತ ಶಿಕ್ಷಣದಿಂದ ಸತ್ಯ ಸ್ವರೂಪವನ್ನು ನೋಡಲು ಹಚ್ಚುವ (ತೋರಿಸಿ ಕೊಡುವ) ಆಚಾರ ವಿಚಾರಗಳ ಜೋಡಿಯನ್ನು ನಮಗರಿಯದಂತೆ (ಗೊತ್ತಿಲ್ಲದಂತೆ) ತಳಕು ಹಾಕಿಕೊಡುವರು. ಸಮಾಜವು ಧರ್ಮದಿಂದ ಬಂಧಿಸಲ್ಪಟ್ಟಿರುತ್ತದೆ. ಈ ಧರ್ಮದ ಬಗ್ಗೆ ಪ್ರೀತಿಯು ಉತ್ಪನ್ನವಾಗದ ಹೊರತು ಸಮಾಜಕ್ಕೆ ಸ್ಥೈರ್ಯ ಬರುವದಿಲ್ಲ. ಮತ್ತು ಸಮಾಜಕ್ಕೆ ಸ್ಥೈರ್ಯ ಬಾರದ ಹೊರತು ಯಾವುದೇ ಪ್ರಕಾರದ ಶಾರೀರಿಕ, ಬೌದ್ಧಿಕ, ಮಾನಸಿಕ, ಆತ್ಮಿಕ ಸ್ವಾಸ್ಥ್ಯವು ಲಭಿಸುವದಿಲ್ಲ. ಇದನ್ನು ಗುರುತಿಸಿ ತಮ್ಮ ಸಂಪೂರ್ಣ ಆಯುಷ್ಯವನ್ನು ಜನರ ಸುಖಕ್ಕಾಗಿ ತೇಯ್ದು (ಸವೆಸಿ) ತಮ್ಮ ವೈಯಕ್ತಿಕ ಸುಖವನ್ನು ಲವಲೇಶವೂ ಇಟ್ಟುಕೊಳ್ಳದೇ ಮಹಾರಾಷ್ಟ್ರಕ್ಕೆ ಸುಖದ, ಸ್ವರಾಜ್ಯದ, ನೀತಿಯುಕ್ತವಾದ ಜೀವನವನ್ನು ತಂದುಕೊಟ್ಟರು. ರಾಷ್ಟ್ರ ಗುರುಗಳಾದ ಆ ಸದ್ಗುರುಗಳ ಚರಣಕ್ಕೆ ಹೇಗೆ ಮತ್ತು ಎಷ್ಟು ಕಾಕಡಾ (ಮಾಡಿ) ಬೆಳಗಬೇಕೋ ಎಂಬುದು ಅನಂತ ಜನ್ಮ ಖರ್ಚು ಮಾಡಿದರೂ ತಿಳಿಯುವದಿಲ್ಲ.

## ಶ್ರೀ ಸಮರ್ಥ ಸೇವಾ ಮಂಡಳ ಹಾಗೂ ಕಾರ್ಯ

ಈ ರಾಷ್ಟ್ರ ಗುರುಗಳ ಅಲ್ಪ ಸೇವೆಯನ್ನಾದರೂ ಮಾಡಲು ಅನುಕೂಲವಾಗಬೇಕೆಂಬ ಉದ್ದೇಶದಿಂದ ಕೆಲವು ರಾಮದಾಸಿಗಳು "ಶ್ರೀ ಸಮರ್ಥ ಸೇವಾ ಮಂಡಳ ಸಜ್ಜನಗಡ" ಎಂಬ ಹೆಸರಿನ ಸಂಸ್ಥೆಯನ್ನು ಸ್ಥಾಪನೆ ಮಾಡಿದರು. ಸಜ್ಜನ-ಗಡವು ಅದರ ಮುಖ್ಯ ಕೇಂದ್ರವು. ೧೯೫೦ ರಲ್ಲಿ ಅದನ್ನು ಸರಿಯಾದ ರೀತಿಯಲ್ಲಿ ರಿಜಿಷ್ಟರ ಮಾಡಲಾಯಿತು. ಜೀರ್ಣವಾದ ವಸ್ತುವಿನ ಜೀರ್ಣೋದ್ಧಾರ ಮಾಡುವದು. ಶ್ರೀ ಸಮರ್ಥರ ಸಮಾಧಿಯ ಪೂಜಾ ಅರ್ಚನೆಯ ವ್ಯವಸ್ಥೆಯನ್ನು ಎಷ್ಟು ಚನ್ನಾಗಿ ಮಾಡಲು ಸಾಧ್ಯವೋ ಅಷ್ಟು ಮಾಡುವದು. ಶ್ರೀ ಸಮರ್ಥರ ಕಲಿಸುವಿಕೆಯ (ಶಿಕವಣದ) ಪ್ರಚಾರವನ್ನು ಮಹಾರಾಷ್ಟ್ರ ಮತ್ತು ಮಹಾರಾಷ್ಟ್ರದ ಹೊರಗೆ ಮಾಡುವದು ಮತ್ತು ಆ ಪ್ರಕಾರ ಜನಮಾನಸದಲ್ಲಿ ಕಲಿಸುವಿಕೆಯ ಬೀಜ ಮೊಳಕೆ ಒಡೆಸುವದು (ಅಂಕುರಾರ್ಪಣ) ಹಾಗೂ ಸಮಾಜವನ್ನು

ಶಕ್ತಿ-ಯುಕ್ತಿಯಿಂದ ನೀತಿ ಮಂತ್ರಿಯಿಂದ ಸುಧಾರಿಸಿ ಸಾಮರ್ಥ್ಯಉಳ್ಳದ್ದಾಗಿ ಮಾಡುವದು ಇತ್ಯಾದಿ ಧ್ಯೇಯದಿಂದ ಈ ಸಂಸ್ಥೆಯು ಪ್ರೇರಿತವಾಗಿರುವದು. ಮಂಡಳವು ತನ್ನ ಲಕ್ಷ್ಯವನ್ನು ಸಜ್ಜನಗಡದ ಮೇಲೆ ಕೇಂದ್ರೀಕೃತ ಮಾಡಿರುವದು. ಸಜ್ಜನಗಡದಲ್ಲಿಯ ಸರ್ವಸಾಧಾರಣವಾಗಿ ಎಲ್ಲ ಕಟ್ಟಡಗಳು ಜೀರ್ಣವಾಗಿ ಬೀಳುವಂತಾಗಿದ್ದವು. ಅವುಗಳ ದುರಸ್ತಿ ಮಾಡಿಸಿದರು. ಸಮರ್ಥರ ಮಠ, ಶಯನ ಗೃಹ, ಹಾಗೂ ಮಹಡಿ, ಸಜ್ಜನಗಡದ ರಕ್ಷಣೆಗಾಗಿ ಮಾರುತಿ ಮಂದಿರದ ದುರಸ್ತಿ, ಎಲ್ಲ ಋತುಗಳಲ್ಲಿ ಶ್ರೀ ಸಮರ್ಥರ ಪೂಜೆಗಾಗಿ ಸಾಕಷ್ಟು ಹೂವುಗಳು ದೊರೆಯುವ ಸಲುವಾಗಿ ಸುಂದರವಾದ ಪುಷ್ಪವನ, ತಯಾರು ಮಾಡಿದ್ದು, ಶ್ರೀರಾಮನಿಗೆ ಹಾಗೂ ಶ್ರೀ ಸಮರ್ಥರಿಗೆ ನಿತ್ಯ ಹಾರ ತಯಾರು ಆಗುತ್ತಿವೆ. ಶ್ರೀ ಸಮರ್ಥರ ನೈವೇದ್ಯದ ಸಲುವಾಗಿ ಉತ್ತಮವಾದ ವ್ಯವಸ್ಥೆಯನ್ನು ಮಂಡಳವು ಮಾಡಿರುವದು. ಬರುತ್ತಿರುವ ಯಾತ್ರಿಕರಿಗಾಗಿ ಪ್ರಸಾದದ ವ್ಯವಸ್ಥೆ ಇರುವದು. ಈ ದೇವಸ್ಥಾನದ ಟ್ರಸ್ಟ ಇದ್ದು ಅದ-ರಿಂದಲೂ ಮಂಡಳಕ್ಕೆ ಅನುಕೂಲವಿರುವದು. (ಸಹಕಾರವಿರುವದು). ಎಲ್ಲ ಕಾರ್ಯಭಾರವನ್ನು ಮಂಡಳದ ಉಪ ಸಮಿತಿಯೇ ನೋಡಿಕೊಳ್ಳುತ್ತದೆ. ಯಾತ್ರಿಕರಿಗೆ ಗುಡ್ಡದ ಮೇಲೆ ಹತ್ತಲು ಅನುಕೂಲವಾಗುವಂತೆ ಕೆಳಗಿನಿಂದ ಮೇಲಿನವರೆಗೆ ಉತ್ತಮ ತರಹದ ಕಲ್ಲಿನ ಪಾವಟಿಗೆಗಳನ್ನು ಮಾಡಿರುತ್ತಾರೆ. ಆದುದರಿಂದ ಮಳೆಗಾಲದಲ್ಲಿಯೂ ಕೂಡಾ ಸಜ್ಜನಗಡದ ಮೇಲೆ ಸುಖರೂಪವಾಗಿ ಹೋಗಲು ಬರುತ್ತದೆ. ಮಂಡಳದ ಪ್ರಯತ್ನದಿಂದ ಈಗ ಸಜ್ಜನ ಗಡದ ಮೇಲೆ ಹೋಗುವದಕ್ಕಾಗಿ ಮೋಟರ ದಾರಿಯ ವ್ಯವಸ್ಥೆಯು [ಕೆಲಸವು] ಮುಗಿಯುತ್ತ ಬಂದಿದೆ, [ಈಗ ಪೂರ್ಣ ಮುಗಿದಿದೆ.] ಈಗ ಎಸ್.ಟಿ. ಬಸ್ಸುಗಳು ಪ್ರಾರಂಭವಾಗಿವೆ.

## ಶಿವಥರಘಳ

ಯಾವ ಸ್ಥಾನದಲ್ಲಿ ಶ್ರೀ ಸಮರ್ಥರು ಶ್ರೀಮತ್ ದಾಸಬೋಧವನ್ನು ಕಲ್ಯಾಣಸ್ವಾಮಿ ಹಸ್ತದಿಂದ ಬರೆಯಿಸಿದರೋ ಅಲ್ಲಿಯೂ ಕೂಡಾ ಮಂಡಳದವರು ಸಾಕಷ್ಟು ದೊಡ್ಡ ಮೊತ್ತದ ಹಣವನ್ನು ಖರ್ಚುಮಾಡಿರುವರು. ಆ ಗುಹೆಯ ದುರಸ್ತಿ, ಅಲ್ಲಿ ಅತಿಥಿಗೃಹ, ಸಾಧಕಾಶ್ರಮ, ವಸತಿ ಸಲುವಾಗಿ ಜಾಗೆ, ಮಂಟಪ ವಗೈರೆ ಎಲ್ಲ ತಯಾರಿ ಇದ್ದು, ಪೂಜೆಯ ಸಲುವಾಗಿ ಇರುವ ಪೂಜಾರಿಗಳಿಗೆ ಎಲ್ಲ ಅನುಕೂಲ ಇರುವದು. ಗುರುಕುಲದ ಯೋಜನೆ ಇದ್ದು ಈಗೀಗ ಏಳೆಂಟು ಹುಡುಗರು ಪುಣೆಯಲ್ಲಿ ವೇದ, ಶಾಸ್ತ್ರಗಳ ಶಿಕ್ಷಣವನ್ನು ಕಲಿಯುತ್ತಿದ್ದಾರೆ. ಮಹಾಡ-ಭೋರ ರಸ್ತೆಯ ಮೇಲೆ ಮಾಜೇರಿ ಎಂಬ ಊರು ಇರುವದು. ಅಲ್ಲಿಂದ ನಾಲ್ಕು ಮೈಲಿನ ಮೇಲೆ ಈ ಘಳ ಇರುವದು. ಸಮರ್ಥ ಸೇವಾ ಮಂಡಳವು ಉಪ ಸಮಿತಿಯನ್ನು ನಿಯಮಿಸಿ ಅದರ ಮೂಲಕ ಈ ಸ್ಥಾನದ ಎಲ್ಲ ವ್ಯವಸ್ಥೆಯು ಉತ್ತಮ ರೀತಿಯಿಂದ ನಡೆಯುತ್ತಿದೆ. ಶ್ರೀ ಸಮರ್ಥರು ಸ್ಥಾಪಿಸಿದ ಮಾಜಗಾಂವ (ಚಾಫಳದ ಹತ್ತಿರ) ಎಂಬಲ್ಲಿ ಮಾರುತಿ ಮಂದಿರದ ದುರಸ್ತಿ ಕಾರ್ಯವನ್ನು ಮಂಡಳವು ಮಾಡಿರುವದು ಅಲ್ಲದೆ ಚಾಫಳದಲ್ಲಿಯ ಹಿಂದಿನ ರಾಮ, ಭೀಮ, ಮಾರುತಿ, ಮಂದಿರಗಳ ಮೇಲಿನ ತಗಡುಹಾಕಿ ದುರಸ್ತಿಮಾಡಿರುವರು. ಈಗ ದೊಡ್ಡ ಪ್ರಮಾಣದ ಜವಳಿ ಉದ್ಯಮಿ ಮಫತಲಾಲ, ಅರವಿಂದ ಶೇಠಜಿ ಅವರು (ಸಂಗಮರಿ ಕಲ್ಲಿನಲ್ಲಿ) ದೊಡ್ಡದಾಗಿ ಗುಡಿಯನ್ನು ಕಟ್ಟಿಸಿದ್ದಾರೆ. ಹೊಸದಾಗಿ ಚಾಫಳದಲ್ಲಿ ಭವ್ಯವಾದ ರಾಮ ಮಂದಿರವನ್ನು ಶ್ರೀ ಮಫತಲಾಲ, ಅರವಿಂದ ಶೇಠಜೀ ಅವರು ಕಟ್ಟಿಸಿರುವರು. ಅದಕ್ಕೂ ಪ್ರೇರಣೆ ಶ್ರೀ ಸಮರ್ಥಸೇವಾ ಮಂಡಳದ್ದೆ ಇದ್ದು ಮಂಡಳದ ವತಿಯಿಂದಲೇ ಈ ಕಾರ್ಯ ಆಗಿರುವದು.

## ಶ್ರೀ ಸಮರ್ಥ ವಾಙ್ಮಯ ಪ್ರಚಾರ

ಇತರ ಕಾರ್ಯಗಳ ಜೊತೆಗೆ ಮಂಡಳವು ಶ್ರೀ ಸಮರ್ಥ ವಾಙ್ಮಯ ಪ್ರಚಾರದ ಕಡೆಗೆ ದುರ್ಲಕ್ಷ್ಯ ಮಾಡಿರುವದಿಲ್ಲ. ಏಕೆಂದರೆ ಅದು ಕಾರ್ಯದ ಪ್ರಾಣವೇ ಇರುವದು. "ಸಜ್ಜನಗಡ" ಎಂಬ ಮಾಸಿಕವನ್ನು ಕಳೆದ ಇಪ್ಪತ್ತೈದು ವರ್ಷಗಳಿಂದ ಮಂಡಳವು ನಡೆಸುತ್ತಲಿದೆ. ಅದರಲ್ಲಿ ಮುಖ್ಯವಾಗಿ ಶ್ರೀ ಸಮರ್ಥ ವಾಙ್ಮಯದ ಅಭ್ಯಾಸ, ಅದಕ್ಕೆ ಬೇಕಾಗುವ ಸಂಬಂಧಪಟ್ಟ ಲೇಖನ ಇವುಗಳ ಸಮಾವೇಶ ಇರುತ್ತದೆ. ಹಿಂದುಸ್ಥಾನದ ಎಲ್ಲ

ಭಾಗಗಳಲ್ಲಿ ಅದು ಓದಲ್ಪಡುತ್ತದೆ. ಕ್ವಚಿತ್ತಾಗಿ ಹಿಂದುಸ್ಥಾನದ ಹೊರಗೂ ಓದಲ್ಪಡುತ್ತದೆ. ಅದು ಪ್ರತಿ ತಿಂಗಳೂ ಪ್ರಕಾಶಿಸಲ್ಪಡುತ್ತದೆ. ಅದು ಮಂಡಳದ ಮುಖ್ಯ ಮಾಸಿಕವಿರುವದರಿಂದ ಮಂಡಳದ ಕಾರ್ಯಕ್ಕೆ ಬಹಳ ಸಹಾಯಕ ವಾಗಿದೆ. ಸಮರ್ಥರ ಪಾದುಕೆಗಳ ದರ್ಶನ ಜನರಿಗೆ ಲಭ್ಯವಾಗಲೆಂದು ಹಿಂದುಸ್ಥಾನದಲ್ಲಿಯ ಎಲ್ಲ ಭಾಗಗಳಲ್ಲಿಯ ಜನರಿಗೆ ಶ್ರೀ ಸಮರ್ಥರ ತತ್ವಜ್ಞಾನ ತಿಳಿಯಲೆಂದು ಪ್ರತಿವರ್ಷ ದೀಪಾವಳಿಯ ನಂತರ ಶ್ರೀಮಂತ್ ದಾಸ ನವಮಿಯ ವರೆಗೆ ಎರಡೂವರೆಯಿಂದ ೩ ತಿಂಗಳು ಸುಮಾರು ಇಪ್ಪತ್ತು ಇಪ್ಪತ್ತೆರಡು ರಾಮದಾಸೀ ಮಂಡಳಿಯವರು ಶ್ರೀಸಮರ್ಥರ ಪಾದುಕೆಗಳನ್ನು ತೆಗೆದುಕೊಂಡು ಬೇರೆ ಬೇರೆ ಭಾಗಗಳಲ್ಲಿ ಪ್ರಚಾರದ ಸಲುವಾಗಿ ಮತ್ತು ಶ್ರೀಮಂತ್ ದಾಸ ನವಮಿಯ ಉತ್ಸವದ ಸಲುವಾಗಿ ಭಿಕ್ಷೆಗಾಗಿ ಅಡ್ಡಾಡುತ್ತಾರೆ. ಸಜ್ಜನಗಡದಲ್ಲಿ ನಡೆಯುವ ದೈನಂದಿನ ಕಾರ್ಯಕ್ರಮಗಳೆಲ್ಲವೂ ಪ್ರವಾಸ ಕಾಲದಲ್ಲಿಯೂ ನಡೆಯುತ್ತವೆ. ಪ್ರತಿದಿನ ರಾಮದಾಸೀ ಮಂಡಳಿಯವರು ಊರಲ್ಲಿ ಮುಂಜಾನೆ ಜೋಳಿಗೆ ಹಿಡಿದು ಭಿಕ್ಷೆ ತರುತ್ತಾರೆ. ಅದು ಅತ್ಯಂತ ವಿಲೋಭನೀಯ ಹಾಗೂ ಆಕರ್ಷಕವಿರುತ್ತದೆ. ಸಮರ್ಥರ ಬಗ್ಗೆ ಅಪಾರ ನಿಷ್ಠೆ ಇರುವದರಿಂದ ಜನರ ಪ್ರತಿಕ್ರಿಯೆ ಒಳ್ಳೆಯದಾಗಿರುತ್ತದೆ. ಅಲ್ಲಲ್ಲಿ ಸಮರ್ಥರ ಭವ್ಯ ಸ್ವಾಗತ–ವಾಗುತ್ತದೆ. ಪ್ರವಾಸ ಮತ್ತು ಕಾರ್ಯಕ್ರಮ ಅಚ್ಚುಕಟ್ಟಾಗಿ ಹಾಗೂ ಸಮಯಾನುಸಾರವಾಗಿ ನಡೆಯಲಿ ಎಂದು ಮಂಡಳಿಯು ಒಂದು ಮೋಟಾರನ್ನು ಖರೀದಿಸಿದೆ, ಪಾದುಕೆಗಳ ಸಲುವಾಗಿಯೇ ಅದರ ಉಪಯೋಗವನ್ನು ಪ್ರವಾಸ ಸಮಯದಲ್ಲಿ ಮಂಡಳಿ ಮಾಡುತ್ತದೆ. ಶ್ರೀ ಸಮರ್ಥ ವಾಙ್ಮಯದ ಪ್ರಕಾಶನದ ಕಾರ್ಯವನ್ನು ಮಂಡಳಿಯು ತಕ್ಕ ಮಟ್ಟಿಗೆ ಮಾಡುತ್ತದೆ. ಶ್ರೀ ಸಮರ್ಥರ ಪೂಜೆ, ಅರ್ಚನೆ ವ್ಯವಸ್ಥಿತವಾಗಿ ನಡೆಯಲಿ ಎಂದು ಮಂಡಳಿಯು ಶಾಶ್ವತ ನಿಧಿಯ ಯೋಜನೆಯೊಂದನ್ನು ಸಿದ್ಧಪಡಿಸಿದ್ದು ಅದಕ್ಕೂ ಒಳ್ಳೆಯ ಪ್ರೋತ್ಸಾಹ ದೊರಕಿದೆ. ಇದರಿಂದಾಗಿ ಸಮರ್ಥರ ಪೂಜೆ, ನೈವೇದ್ಯ ಮೊದಲಾದವುಗಳ ಶಾಶ್ವತ ವ್ಯವಸ್ಥೆಯಾಗಬಹುದೆಂಬ ಆಶೆ ಇದೆ. ಶ್ರೀ ಸಮರ್ಥ ಸೇವಾ ಮಂಡಳಿಯು ತನ್ನ ಶಕ್ತ್ಯಾನುಸಾರ ಕಾರ್ಯ ಮಾಡುತ್ತದೆ. ಶ್ರೀಸಮರ್ಥರ ಸಜ್ಜನಗಡದ ಮೇಲೆ ಸೇವೆ ಮಾಡುವ ಸಲುವಾಗಿ ಸಂಘಟಿತವಾದ ಇದು ಒಂದೇ ಒಂದು ಸಂಸ್ಥೆಯಾಗಿದೆ. ಜಿಲ್ಹಾಮಟ್ಟ ಹಾಗೂ ತಾಲೂಕಾ ಮಟ್ಟದಲ್ಲಿ ಇಂಥ ಸಂಸ್ಥೆಗಳು ತಯಾರಾಗಿವೆ. ಸಮರ್ಥರ ಶಿಕ್ಷಣವು ರಾಷ್ಟ್ರಕ್ಕೆ ತಾರಕವಾಗಿದೆ. ಇದು ಎಷ್ಟು ತಿಳಿಯುವದೋ ಅಷ್ಟು(ಮಹಾ) ರಾಷ್ಟ್ರಕ್ಕೆ ಕಲ್ಯಾಣವಾಗುತ್ತದೆ. "ಸಮರ್ಥರ ಮರೆವು ಅಂದರೆ ಮಹಾರಾಷ್ಟ್ರದ ಮರಣ" ಎಂದು ನಾನಾಸಾಹೇಬ ದೇವ ಎಂಬವರು ಅನ್ನುತ್ತಾರೆ.

## ಸಾರ್ಥ ಸಟೀಪ ದಾಸಬೋಧ ಪ್ರಕಾಶನದ ಪ್ರಸಂಗ

ಮಂಡಳದ ಸ್ಥಾಪನೆಯಾಗಿ ೨೫ ವರ್ಷಗಳಾದವು. ಮಂಡಳದ ಕಾರ್ಯವೂ ಬಹುಮುಖವಾಗಿ ನಡೆದಿದೆ. ಆದರೆ ಅತ್ಯಾವಶ್ಯಕ ಕೆಲಸಗಳ ಮೂಲಕ ಮಂಡಳಿಗೆ ಪ್ರಕಾಶನದ ಕಡೆಗೆ ಲಕ್ಷ್ಯ ಕೊಡಲು ಸಾಧ್ಯವಾಗಲಿಲ್ಲ. ಮಂಡಳಿಯ ಇಚ್ಛೆ ತೀವ್ರವಾಗಿದ್ದರೂ ಉಪಾಯವಿರಲಿಲ್ಲ. ಏಕೆಂದರೆ ಜೀರ್ಣೋದ್ಧಾರದ ಕೆಲಸಗಳು ಬಹಳ ಬೆಳೆದು ನಿಂತದ್ದರಿಂದ ಅವು ಪೂರ್ಣವಾಗದೆ ಉಳಿದ ಖರ್ಚಿನ ಕೆಲಸಗಳಲ್ಲಿ ಕೈಹಾಕಲು ಸಾಧ್ಯವೇ ಇರಲಿಲ್ಲ. ಜೀರ್ಣೋದ್ಧಾರಕ್ಕಾಗಿ ಸಮಯ ಮತ್ತು ಹಣ ಖರ್ಚ ಮಾಡಬೇಕಾಯಿತು. ದೇಣಿಗೆಗಳೂ ದೊರೆಯುತ್ತಿದ್ದವು. ಇಮಾರತಿಯ ಸಂರಕ್ಷಣ ಮಹತ್ವದ ಅಂಗವಾಗಿತ್ತು. ಮೂಲ ಅಡಿಪಾಯವೇ ಅದು. ಅದು ಪರಿಪೂರ್ಣವಾಗದೇ ಬೇರೆ ಏನೂ ಮಾಡುವಂತಿರಲಿಲ್ಲ. ಜೀರ್ಣೋದ್ಧಾರದ ಕಾರ್ಯ ಈಗ ಮುಗಿಯುತ್ತ ಬಂದಿದೆ. ಈಗ ಈ ಮಹತ್ವದ ಕಾರ್ಯವನ್ನು ಸಾಧ್ಯವಿದ್ದಷ್ಟು ಬೇಗನೇ ಕೈಗೆತ್ತಿಕೊಳ್ಳಬೇಕೆಂದು ನಿರ್ಣಯಿಸಿ ಆ ಕೆಲಸಕ್ಕೆ ತೊಡಗಬೇಕಾಯಿತು.

ಮಂಡಳಿಯ ಪ್ರಕಾಶನ ಸುಂದರವಾಗಿರಬೇಕು, ಜನರಿಗೆ ಸುಲಭವಾಗಿ ತಿಳಿಯಬೇಕು, ಕೊಳ್ಳುವವರಿಗೆ ಬಹಳ ಭಾರವಾಗಿರಬಾರದು, ಈ ವಿಚಾರದಲ್ಲಿಯೇ ಎಷ್ಟೋ ಕಾಲ ಕಳೆದು ನಂತರ ಅದಕ್ಕೆ ಚಾಲನೆ ದೊರೆಯಿತು.

ಪ್ರಾಧ್ಯಾಪಕ ಸ. ಭ. ಬೆಲಸರೆ ಇವರಿಗೆ ಸಂತ ವಾಙ್ಮಯದ ಅಭ್ಯಾಸ ಆಳವಾಗಿದೆ. ಅವರು ಮಹಾನ್ ಸತ್ಪುರುಷರಾದ ಗೋಂದಾವಲೆಕರ ಮಹಾರಾಜರ ಶಿಷ್ಯರಾಗಿದ್ದು ಅವರ ಚರಿತ್ರೆಯನ್ನು ಬರೆದಿದ್ದಾರೆ. ಅದು ಜನತೆಗೆ ಬಹಳ ಹಿಡಿಸಿದೆ. ಅದೇ ರೀತಿ ಅವರು ಶ್ರೀಮತ್ ಗ್ರಂಥರಾಜ ದಾಸಬೋಧದ ಅರ್ಥವನ್ನು ವಿವರಣೆ ಸಹಿತ ಬರೆದು ಕೊಡಬಹುದೇ ಎಂದು ಅವರನ್ನು ವಿಚಾರಿಸಿದಾಗ ಅವರು ಆನಂದದಿಂದ ಒಪ್ಪಿಕೊಂಡರು. ಒಂದು ವರ್ಷದಲ್ಲಿ ಸಮಗ್ರ ಗ್ರಂಥವನ್ನು ತಯಾರಿಸಿ ಕೊಡುವದಾಗಿ ಆಶ್ವಾಸನೆಯನ್ನು ಕೊಟ್ಟರು. ಗ್ರಂಥ ಬರೆಯುವಾಗ ನಾವು ಒಂದೆರಡು ಬಾರಿ ಅವರ ಹತ್ತಿರ ಹೋಗಿ ಬಂದೆವು.ಗ್ರಂಥವು ಯೋಗ್ಯ ರೀತಿಯಿಂದ ನಡೆದಿದ್ದನ್ನು ನೋಡಿ ನಮಗೆ ಸಮಾಧಾನವೆನಿಸಿತು.

## ಸಾರ್ಥ ದಾಸಬೋಧ ಮತ್ತೊಂದು ಇದ್ದರೂ ಇದರ ಪ್ರಯೋಜನ

ಮುಖ್ಯ ವಿಚಾರವನ್ನು ಲಕ್ಷ್ಯದಲ್ಲಿ ಇಡಬೇಕು. ಏನಂದರೆ, ಶ್ರೀಮತ್ ದಾಸಬೋಧ ಗ್ರಂಥ ಹೇಗಿರುವದೆಂದರೆ, ಅದರ ವಿವರಣೆಯನ್ನು ನಾವು ಎಷ್ಟೆಷ್ಟು ಮಾಡುತ್ತೇವೆಯೋ ಅಷ್ಟಷ್ಟು ಹೆಚ್ಚು ತಿಳುವಳಿಕೆ ಆಗುತ್ತದೆ. "ವಿವರತಾ ವಿಷೇಷ ವಿಶೇಷ ಕಳೋಲಾಗೆ" ಎಂದು ಸಮರ್ಥರೇ ಹೇಳುತ್ತಾರೆ, ಅದರಿಂದ ಎಷ್ಟು ಭಾಷಾಂತರಗಳಾದರೂ ಬೇಕೇ ಬೇಕು ಎನ್ನಿಸುತ್ತದೆ. ಶ್ರೀ ಆರಲ್ಕೆ. ಪಾಂಗಾರಕರ ಹಾಗೂ ನವೀನ ಆವೃತ್ತಿಯು ಶ್ರೀ ನಾರಾಯಣ ಮಹಾರಾಜ ಇವರ ಈ ಎಲ್ಲ ದಾಸಬೋಧಗಳು ಶ್ರೇಷ್ಠವೇ ಆಗಿರುವವು ಇದರಲ್ಲಿ ಸಂಶಯವಿಲ್ಲ. ಆದರೂ ಈ ಹೊಸ ದಾಸಬೋಧವನ್ನು ನಾವು ಪ್ರಕಾಶಗೊಳಿಸುತ್ತಿದ್ದೇವೆ. ಇದು ವಿಶೇಷ ಮಾರ್ಗದರ್ಶಕವಾಗಿದೆ ಎಂದು ನಿರ್ಣಯಿಸಲ್ಪಡುವದು. ಈ ದಾಸಬೋಧದಲ್ಲಿ ಓವಿಗಳಿವೆ. ಅರ್ಥವನ್ನಂತೂ ತಿಳಿಯುವಂತೆ ಕೊಟ್ಟಿದೆ. ಅದರ ಹೊರತಾಗಿ ಎಲ್ಲಿ ಸಹಜವಾಗಿ ತಿಳಿಯುವದಿಲ್ಲವೋ ಅಲ್ಲಿ ಸಾಕಷ್ಟು ಸ್ಪಷ್ಟೀಕರಣ ಕೊಡಲಾಗಿದೆ. ಪ್ರತಿಯೊಂದು ದಶಕದ ಪ್ರಾರಂಭದಲ್ಲಿ ಸಾಮಾನ್ಯವಾಗಿ ಯಾವ ವಿಷಯ ಹೇಳಿದೆಯೋ ಅದರ ಸಾರಾಂಶವನ್ನು ಹೇಳಲಾಗಿದೆ. ಮತ್ತು ಸಮಾಸದ ಆರಂಭದಲ್ಲಿ ಸಮಾಸದ ಸಾರವನ್ನು ವ್ಯಕ್ತಪಡಿಸಲಾಗಿದೆ. ಇದರಿಂದಾಗಿ ಅಭ್ಯಾಸ ಮಾಡುವ ಸಾಧಕರಿಗೆ ಇದರಿಂದ ಒಳ್ಳೆಯ ಮಾರ್ಗದರ್ಶನವಾಗಲಿದೆ.

## ಪ್ರಾ. ಬೆಲಸರೆ ಅವರ ಅಭ್ಯಾಸ

ಶ್ರೀ ಬೆಲಸರೆ ಅವರ ಅಭ್ಯಾಸ ಬಹಳ ದೊಡ್ಡದು ಎಂಬುದನ್ನು ಈ ಮೊದಲೇ ನಾವು ಬರೆದಿದ್ದೇವೆ. ಅವರು ವಿದ್ವಾನರಾಗಿದ್ದಂತೆ, ಶ್ರೇಷ್ಠ ಭಕ್ತ ಮತ್ತು ಅಭ್ಯಾಸಿ ಮತ್ತು ಸಾಧಕರಾಗಿದ್ದಾರೆ. ಅಧ್ಯಾತ್ಮಿಕ ಗ್ರಂಥಗಳ ಪ್ರಜ್ಞೆ ಯಾವಾಗಲೂ ಫಲಪ್ರದವಾಗಿರುತ್ತದೆ.ಈ ದಾಸಬೋಧ ಗ್ರಂಥವನ್ನು ಆ ದೃಷ್ಟಿಯಿಂದಲೇ ವಿವೇಚಿಸಲಾಗಿದೆ. ಅವರು ಭಕ್ತಿಭಾವದಿಂದಲೇ ಗ್ರಂಥದ ಅಭ್ಯಾಸವನ್ನು ಮನನ ಮಾಡಿಕೊಂಡು ಶ್ರೀ ಸಮರ್ಥರ ಕೃಪಾ ಪ್ರಸಾದ ಸಂಪಾದನ ಮಾಡಿಯೇ ವಿವರಣೆಗೆ ತೊಡಗಿದ್ದಾರೆ. ಯಾವುದಾದರೂ ಒಂದು ಓವಿಯ ಅರ್ಥ ಸರಿಯಾಗಿ ಆಗದೇ ಇದ್ದಾಗ, ಉಪವಾಸ ಮಾಡಿ ಸಮರ್ಥರ ಪ್ರಾರ್ಥನೆ ಮಾಡುತ್ತ ಕುಳಿತುಬಿಡುತ್ತಿದ್ದರು, ಮತ್ತು ಅವರ ಕೃಪೆಯಿಂದ ಯಾವ ಅರ್ಥ ಸ್ಫುರಿಸುತ್ತಿತ್ತೋ ಅದನ್ನೇ ಬರೆಯುತ್ತಿದ್ದರು, ಆದ್ದರಿಂದ ಅವರ ಬರವಣಿಗೆಯಲ್ಲಿ ಗುರುಪ್ರಸಾದ ಇದೆ, ಭಕ್ತಿಯ ಹಸಿ ಇದೆ, ಸಾಧನೆಯ ರಸವಿದೆ. ಪ್ರಜ್ಞೆಗೆ ಬಿಗುವು ಹಚ್ಚಿ ಮಾಡಿದ ಅರ್ಥ ಯಾವಾಗಲೂ ಎಳೆದಾಡಿದ್ದೇ ಇರುವದೆಂದು ಅದನ್ನು ಬಿಟ್ಟುಕೊಟ್ಟಿದ್ದಾರೆ, ಈಗ ಗ್ರಂಥವು ವಾಚಕರ ಎದುರಿಗೇ ಇರುವದರಿಂದ ಹೆಚ್ಚು ಸ್ಪಷ್ಟೀಕರಣ ಅಗತ್ಯವೇ ಇಲ್ಲ.

## ಅರ್ಥ ಸರಳವಾಗಿಸುವ ಶ್ರೀ ಬೆಲಸರೆಯವರ ದೃಷ್ಟಿ. ಒಂದು ಉದಾಹರಣೆ

ಐದನೆಯ ದಶಕದಲ್ಲಿ ಶಿಷ್ಯ ಲಕ್ಷಣದ ಬಗ್ಗೆ ಶ್ರೀ ಸಮರ್ಥರು ಹೇಳಿರುತ್ತಾರೆ. ಆ ಸಮಯದಲ್ಲಿ ಪ್ರಾಧ್ಯಾಪಕರು ಹೇಳಿರುವದೇನಂದರೆ ಆತ್ಮಜ್ಞಾನ ಪ್ರಾಪ್ತವಾಗಬೇಕಾದರೆ, ಕೆಲವೊಂದು ಗುಣಗಳು ನಮ್ಮಲ್ಲಿ ಇರಬೇಕಾಗುತ್ತದೆ. ಯಾರಲ್ಲಿ ಈ ಗುಣಗಳು ಇರುವದಿಲ್ಲವೋ ಅವುಗಳನ್ನು ಪ್ರಯತ್ನದಿಂದ ಸಾಧಿಸಬೇಕಾಗುವದು. ಮುಂಡುಕ ಉಪನಿಷತ್ತಿನಲ್ಲಿ 3 ಮಂತ್ರಗಳಿರುವವು.

**ಮಂತ್ರ ೧ ನೇಯದು :-** ನಾಯಮಾತ್ಮಾ ಪ್ರವಚನೇನ ಲಭ್ಯಃ ನಮೇಧಯಾ ನ ಬಹುಧಾ ಶ್ರುತೇನ

**ಮಂತ್ರ ೨ ನೇಯದು :-** ನಾಯಮಾತ್ಮಾ ಬಲಹೀನೇನ ಲಭ್ಯಃ

**ಮಂತ್ರ ೩ ನೇಯದು :-** ಸತ್ಯೇನ ಲಭ್ಯಃ ತಪಸಾ ಹ್ಯೇಷ ಆತ್ಮಾ ಸಮ್ಯಕ್ ಜ್ಞಾನೇನ ಬ್ರಹ್ಮ ಚರ್ಯೇಣ ನಿತ್ಯಮ್

೧] ಕೇವಲ ನಿರೂಪಣದಿಂದ, ಕುಶಾಗ್ರ ಬುದ್ಧಿಯ ಸಹಾಯದಿಂದ ಈ ಆತ್ಮ ತಿಳಿಯಲಾರ.

೨] ಆತ್ಮಜ್ಞಾನದ ಸಾಧನ ಮಾಡಲು ಬೇಕಾದ ದೃಢತೆ, ದಕ್ಷತೆ, ಬಲ ಇವು ಯಾರಲ್ಲಿ ಇಲ್ಲವೋ ಅಂಥವರಿಗೆ ಆತ್ಮ ಅಲಭ್ಯ

೩] ಹಾಗಾದರೆ ಯಾವುದರಿಂದ ಪ್ರಾಪ್ತವಾಗುತ್ತದೆ? ಸತ್ಯದಿಂದ, ತಪಾಚರಣೆಯಿಂದ, ಯಥಾರ್ಥ ಜ್ಞಾನದಿಂದ ಮತ್ತು ನಿರಂತರ ಸಾಧನೆಯಿಂದ ಈ ಆತ್ಮ ಪ್ರಾಪ್ತಿಯಾಗುತ್ತದೆ.

## ಶಿಷ್ಯರ ಲಕ್ಷಣಗಳು ಇವು

೧] ದೃಶ್ಯದ ಸಂಪೂರ್ಣ ಅನಾಸಕ್ತಿ ೨] ಮನದ ನಿಜವಾದ ಹಿರಿತನ ಉದಾರತೆ, ೩] ಸರ್ವ ಭಾವದಿಂದ ಸ್ವಭಾವದಿಂದ ಅತ್ಯಂತ ಲೀನತೆ. ೪] ಸದ್ಗುರುವಿನಲ್ಲಿ ನಿಜವಾದ ನಿಶ್ಚಲ ನಿಷ್ಠೆ ೫] ಮತ್ತು ಸಾಧನೆಗಳ ಸತತ ಸಂಪರ್ಕ. ಈ ಐದು ಲಕ್ಷಣಗಳೆಂದರೆ ಪಂಚ ಪ್ರಾಣವಾಗಿದೆ.

ಶ್ರೀ ಸಮರ್ಥರು ಶಿಷ್ಯನ ಯಾವ ಲಕ್ಷಣಗಳನ್ನು ನಿರೂಪಿಸಿರುವರೋ ಆ ಎಲ್ಲ ಲಕ್ಷಣಗಳೂ ಮೇಲಿನ ಲಕ್ಷಣಗಳಲ್ಲಿಯೇ ಸಹಜವಾಗಿ ಸಮಾವೇಶವಾಗುತ್ತವೆ.

ಇದರಿಂದ ಸ. ಭ. ಪ್ರಾ. ಬೆಲಸರೆಯವರು ಎಷ್ಟೊಂದು ಪರಿಶ್ರಮ. ಭಕ್ತಿ ಪ್ರೇಮದಿಂದ ದಾಸಬೋಧ ಸಂಗ್ರಹದ ವಿವರಣೆಯನ್ನು ಮಾಡಿದ್ದಾರೆ, ಎಂಬ ಕಲ್ಪನೆಯು ವಾಚಕರಿಗೆ ಬರಬಹುದು. ಮಾರ್ಮಿಕ, ಭಕ್ತ ರಸಜ್ಞ, ಟೀಕಾಕಾರರು ನಮ್ಮ ದಾಸಬೋಧಕ್ಕೆ ದೊರೆತದ್ದು ನಮ್ಮ ದೊಡ್ಡ ಭಾಗ್ಯ. ಅವರಿಗೆ ಹೊಗಳಿಕೆ ಹಿಡಿಸುವದಿಲ್ಲ. ಆಭಾರ ಮಾಡುವ ಪ್ರಶ್ನೆ ಇಲ್ಲ. ಸ್ವಸ್ವರೂಪದಲ್ಲಿ ಅವರ ಬುದ್ಧಿ ಅಚಲವಾಗಿ ಇರಲೆಂದು ಶ್ರೀಸಮರ್ಥರ ಚರಣದಲ್ಲಿ ಮಾಡುವ ಪ್ರಾರ್ಥನೆಯೇ ಅವರಿಗೆ ಹಿಡಿಸುತ್ತದೆ. ಎಂದು ತಿಳಿದು ಹಾಗೆಯೇ ಮಾಡೋಣ.

## ಸಮರ್ಥ ಭಕ್ತರ ಪ್ರೋತ್ಸಾಹ.

ಶ್ರೀ ಬೆಲಸರೆಯವರ ಸ್ಪಷ್ಟೀಕರಣದ ಶ್ರೀಮತ್ ದಾಸಬೋಧವನ್ನು ಪ್ರಕಟಪಡಿಸುವವರಿದ್ದೇವೆ ಎಂದು ಸಜ್ಜನಗಡದ ಮಾಸ ಪತ್ರಿಕೆಯಲ್ಲಿ ಜಾಹೀರಪಡಿಸಿದೆವು, ದೇಣಿಗೆ ಕೊಡಲು ಹಾಗೂ ಠೇವು (ಡಿಪಾಜಿಟ್) ಇಡಲು ಆವ್ಹಾನ ಕೊಟ್ಟೆವು. ಜನರು ತಕ್ಷಣವೇ ಪ್ರೋತ್ಸಾಹ ಕೊಟ್ಟರು. ಮಂಡಳಿಯ ಬೆನ್ನ ಹಿಂದೆ ಸಮರ್ಥರ ಕೃಪೆ ಇದ್ದು

ದರಿಂದ ಯಾವುದೇ ಕೊರತೆ ಕಂಡುಬರಲಿಲ್ಲ. ಅವಧಿಗಿಂತ ಮೊದಲೇ ಪ್ರತಿಗಳೂ ಖರ್ಚಾದವು. ಪ್ರಮುಖ ದೇಣಿಗೆದಾರರ ಹೆಸರುಗಳನ್ನು ಕೊನೆಗೆ ನಾವು ಕೊಡುವವರಿದ್ದೇವೆ. ಅಂತೆಯೇ ಜ್ಞಾನಸಾಗರ ಲಿಥೋ ಪ್ರೆಸ್ಸಿನ ಮಾಲಿಕರಾದ ಬಾಬುರಾವ ಜೋಶಿ ಇವರ ಸೇವೆಯನ್ನು ಇಲ್ಲಿ ಮರೆಯಲಾಗದು. ಕಾಗದವೂ ಒಮ್ಮೆಲೇ ದೊರೆತು ಕೆಲಸಕ್ಕೆ ಅನುವು ಆಯಿತು. ಸೇವಾ ಮಂಡಳಿಯವರು ಮುಂಬೈ, ಪುಣೆಗಳಿಗೆ ಹೋಗಿ ಬಂದರು. ಅಲ್ಲಿಯ ಜನರೂ ಯೋಗ್ಯ ಸಹಾಯ ನೀಡಿದರು. ಗ್ರಂಥದ ಬೆಲೆಯನ್ನು ಅತ್ಯಂತ ಸಮರ್ಪಕವಾಗಿ ಇಡಲಾಗಿದೆ. ಸಾಮಾನ್ಯ ಜನರೂ ಕೊಂಡುಕೊಳ್ಳಬಹುದು

## ಪ್ರಕಾಶನ ಕಾರ್ಯ–ಶ್ರೀ ಅನಂತರಾವ ಕುಲಕರ್ಣಿ ಇವರ ಅಮೌಲ್ಯ ಸೇವೆ.

ಶ್ರೀಮತ್ ದಾಸಬೋಧದ ಪ್ರಕಾಶನ ಕಾರ್ಯದಲ್ಲಿ ನಿಜವಾದ ಆಸಕ್ತಿ, ಮನಃಪೂರ್ವಕ ಶ್ರಮವು ಯಾರದಾದರೂ ಇದ್ದರೆ ಅದು ದಾಸಬೋಧ ಪ್ರಕಾಶನ ಸಮಿತಿಯ ಕಾರ್ಯವಾಹಕ ಶ್ರೀ ಸ. ಭ. ಅನಂತರಾವ ಕುಲಕರ್ಣಿಯವರದೇ ಎಂದು ಹೇಳಬಹುದು. ಸಮರ್ಥ ಸೇವಾ ಮಂಡಳದ ಕಾರ್ಯದಲ್ಲಿ ಅವರು ಯಾವಾಗಲೂ ಮುಂದಾಗಿ ಕಾರ್ಯ ಮಾಡುತ್ತಾರೆ. ಪ್ರಕಾಶನದ ಕಾರ್ಯದ ಶ್ರೇಯಸ್ಸನ್ನು ಅವರಿಗೆ ಕೊಡಲು ನಮಗೆ ಏನೂ ಸಂಕೋಚವೆನಿಸದು. ಅವರ ತಳಮಳ ದೊಡ್ಡದು. ಕಾರ್ಯ ಮಾಡುವ ಉತ್ಸಾಹವೂ ದೊಡ್ಡದು. ಶ್ರೀ ಅನಂತರಾವ ಇವರು ಮನಸ್ಸಿನ ಮೇಲೆ ತೆಗೆದುಕೊಂಡಿರದಿದ್ದರೆ ಈ ಕೆಲಸ ಇದುವರೆಗೆ ಆಗುತ್ತಿತ್ತೋ ಇಲ್ಲವೋ ಎಂಬುದು ನಮಗೆ ಸಂದೇಹಾಸ್ಪದವಾಗಿಯೇ ಇದೆ. ಅವರ ಕೈಯಿಂದ ಇದೇ ರೀತಿ ಸತ್ಕಾರ್ಯಗಳು ನೆರವೇರಲಿ, ಅವರು ಸದೈವ ಉತ್ಕರ್ಷಿತರಾಗಲಿ, ಎಂದು ಸಮರ್ಥರ ಚರಣದಲ್ಲಿ ಪ್ರಾರ್ಥನೆ. ಸಾತಾರಾದಲ್ಲಿಯ "ಆನಂದ ಮುದ್ರಣಾಲಯ" ಮತ್ತು "ವಿಮಾ ಛಾಪಖಾನಾ" ಎಂಬ ಎರಡು ಪ್ರೆಸ್ಸುಗಳಲ್ಲಿ ಈ ಕೆಲಸವನ್ನು ವಿಭಾಗಿಸಿ ಕೊಟ್ಟಿತ್ತು. ಎರಡೂ ಪ್ರೆಸ್ಸುಗಳವರು ಉತ್ತಮ ಕೆಲಸ ಮಾಡಿದರು. ಕೆಲಸಗಾರರಿಗೂ ಪರಿಶ್ರಮವಾಯಿತು. ಎಲ್ಲರಿಗೂ ಶ್ರೀ ಸಮರ್ಥರ ಕೃಪಾ ಪ್ರಸಾದ ದೊರೆಯಲಿ ಎಂದು ಶ್ರೀ ಸಮರ್ಥರ ಚರಣಗಳಲ್ಲಿ ಪ್ರಾರ್ಥನೆ.

### ಸಮಾರೋಪ

ಶ್ರೀ ಸಮರ್ಥರು ಶರೀರದಿಂದ ನಮ್ಮ ಮಧ್ಯದಲ್ಲಿ ಇರದಿದ್ದರೂ, ಶ್ರೀಮತ್ ದಾಸಬೋಧದ ರೂಪದಿಂದ ನಮ್ಮಲ್ಲಿ ಪ್ರತ್ಯಕ್ಷವಾಗಿ ಓಡಾಡುತ್ತಿದ್ದಾರೆ. ಶ್ರೀಮತ್ ದಾಸಬೋಧೆಯ ವಿವರಣೆಯಿಂದ ಶ್ರೀ ಸಮರ್ಥರ ನಿಜ ಸ್ವರೂಪವು ತಿಳಿಯಲಿದ್ದು, ನಮ್ಮಲ್ಲಿ ತಳಮಳವಿದ್ದರೆ ಶಿಷ್ಯಶ್ರೇಷ್ಠ ಕಲ್ಯಾಣನ ಹಾಗೆ ನಮಗೆ ಪ್ರತ್ಯಕ್ಷವಾಗಿ ದರ್ಶನವನ್ನು ಕೊಡುತ್ತಾರೆ. ಉಪಾಸನೆಯು ಮಾತ್ರ ಅವಶ್ಯವಾಗಿ ಬೇಕು.

ಉಪಾಸನಾ ಸಕಳಾ ಠಾಯೀ । ಆತ್ಮಾರಾಮ ಕೋಠೆ ನಾ ಹೀ ।
ಯಾ ಕಾರಣೆ ಠಾಯೀ ಠಾಯೀ । ರಾಮೋ ಆಟೋಪಲೆ ॥
ಐಸೀ ಮಾಝೀ ಉಪಾಸನಾ । ಆಣಿತಾ ನಯೆ ಅನುಮಾನಾ ।
ನೇಮೂನ ಘಾಲೀ ನಿರಂಜನಾ । ಪೈಲೀ ಕಡೆ ॥

ಶ್ರೀ ಸಮರ್ಥರು ನಿಶ್ಚಯವಾಗಿ ಹೇಳುತ್ತಾರೆ.

ರಾಮ ಉಪಾಸನಾ ಮಾಝೀ । ತ್ರೈಲೋಕ್ಯ ವ್ಯಾಪಿನೀ ಪಾಹಾ ।
ರಾಮ ಉಪಾಸನಾ ಮಾಝೀ । ತ್ರೈಲೋಕ್ಯ ಸುಖ ಪಾವಲೆ ।
ರಾಮ ಉಪಾಸನಾ ಐಸೀ । ಬ್ರಹ್ಮಾಂಡ ವ್ಯಾಪಿಸೀ ಪಹಾ ॥

ರಾಮನ ಮೇಲೆ ಶ್ರೀ ಸಮರ್ಥರದು ಎಷ್ಟೊಂದು ಪ್ರೇಮ! ಎಷ್ಟೊಂದು ವಿಶ್ವಾಸ! ಈ ಸಾಮರ್ಥ್ಯದ ಬಲದಿಂದ ಅವರು ಬ್ರಹ್ಮಾಂಡಕ್ಕೆ ಹೊದಿಕೆ[ಆಚ್ಛಾದನ]ಹಾಕಿದರು. ಉಪಾಸನೆ ಎಂದರೆ, ದ್ವೇಷವಲ್ಲ, ಮತ್ಸರವಲ್ಲ! ಜಗತ್ತಿನಲ್ಲಿ ಶಾಂತತೆಯಿಂದ ಬಾಳಬೇಕಾದರೆ ಪ್ರತಿಯೊಬ್ಬರೂ ಉಪಾಸನೆಯನ್ನು ಸ್ವೀಕರಿಸ ಬೇಕೇ ಬೇಕು,

## ಉಪಸಂಹಾರ.

ಹೀಗೆ ಪರಮ ಪವಿತ್ರ, ಕೇವಲ ಜೀವ ಪ್ರಾಣವಾದ ಗ್ರಂಥ ರಾಜ ದಾಸಬೋಧವನ್ನು ಇಂದಿನ ವಿಜಯ ದಶಮಿಯ ಶುಭ ಮುಹೂರ್ತದಲ್ಲಿ ಸಮಸ್ತ ಸಮರ್ಥಭಕ್ತರ ವಶಕ್ಕೆ ಕೊಡುತ್ತಿದ್ದೇವೆ. ಅದರ ಪಠಣ, ಮನನ ಮಾಡಿರಿ, ಅಭ್ಯಾಸ ಮಾಡಿರಿ, ಅದರೊಳಗಿನ ರಹಸ್ಯವನ್ನು ಲಕ್ಷ್ಯದಲ್ಲಿ ಇಟ್ಟುಕೊಳ್ಳಿರಿ. ಅಂದರೆ ಕೃತಕೃತ್ಯರಾಗುವಿರಿ. ನಮಗೆ ಮೋಹವನ್ನು ತಡೆಯುವದಾಗುವದಿಲ್ಲ. ಶ್ರೀಮತ್ ದಾಸಬೋಧದಲ್ಲಿಯ ಸಾರಭೂತವಾದ ಎರಡು, ಮೂರು, ಓವಿಗಳನ್ನು ಕೆಳಗೆ ಸಾದರಪಡಿಸುತ್ತೇವೆ. ಅದು ನಮ್ಮ ಜೀವನ ಸರ್ವಸ್ವವಾಗಿದೆ. ಸಮರ್ಥರು ಸಾಧನ ವನ್ನು ಹೇಳುತ್ತಾರೆ, ಮಾರ್ಗವನ್ನು ತೋರಿಸುತ್ತಾರೆ. ಅದು ಯಾವ ಸಾಧನಾ ?

**ಸಾಧನ ಅಭ್ಯಾಸ ಆಣಿ ಸದ್ಗುರು । ಸಚ್ಛಿಷ್ಯ ಆಣಿ ಸಚ್ಛಾಸ್ತ್ರ ವಿಚಾರು ।**
**ಸತ್ಕರ್ಮ ಸದ್ವಾಸನಾ ಪಾರು । ಪಾವವಿ ಭವಾಚಾ ॥**
**ಸದುಪಾಸನಾ ಸತ್ಕರ್ಮ । ಸತ್ಕ್ರಿಯಾ ಆಣಿ ಸ್ವಧರ್ಮ ।**
**ಸತ್ಸಂಗ ಆಣಿ ನಿತ್ಯನೇಮು । ನಿರಂತರ**
**ಏಸೇಹೇ ಅವಘೇಚಿ ಮೆಳೆ । ತರೀಚ ವಿಮಳ ಜ್ಞಾನ ನಿವಳೇ ।**
**ನಾಹೀತರೀ ಪಾಷಾಂಡ ಸಂಚರೆ ಬಳೆ । ಸಮುದಾಯಿ ॥**

ಸಾಧನ, ಅಭ್ಯಾಸ, ಸದ್ಗುರು, ಸಚ್ಛಿಷ್ಯ, ಸಚ್ಛಾಸ್ತ್ರ ವಿಚಾರ, ಸತ್ಕರ್ಮ, ಸದ್ವಾಸನಾ, ಸದುಪಾಸನಾ, ಸ್ವಧರ್ಮ,ಸತ್ಸಂಗ,ಮತ್ತು ನಿತ್ಯನೇಮ ಈ ಹನ್ನೊಂದು ಲಕ್ಷಣಗಳು ಜೀವನದ ಮೌಲ್ಯಗಳಾಗಿದ್ದು,ಶ್ರೀದಾಸಬೋಧದ ಪ್ರಾಣವಾಗಿವೆ. ಇದೊರಳಗೆ ಒಂದಾದರೂ ಕಡಿಮೆ ಬಿದ್ದರೆ ಸಮಾಜದಲ್ಲಿ ಪಾಖಂಡತನ ಬೆಳೆಯುವ ಭೀತಿ ಇದೆ. ಇವು ಶ್ರೀಮತ್ ದಾಸಬೋಧದ ಮೌಲ್ಯಗಳಾಗಿದ್ದು ಯಾವಾಗಲೂ ಇವುಗಳು ಜೊತೆಗೇ ಇರಬೇಕು,

**ಸರ್ವೇತ್ರ ಸುಖಿನಃಸ್ಯಂತು । ಸರ್ವೇ ಸಂತು ನಿರಾಮಯಾಃ ।**
**ಸರ್ವೇಭದ್ರಾಣಿ ಪಶ್ಯಂತು । ಮಾ ಕಶ್ಚಿತ್ ದುಃಖಮಾಪ್ನುಯಾತ್ ॥**

ಇತಿ ಶಮ್

ಈ ರೀತಿ ದೀರ್ಘವಾದ ಈ ವಿವರಣ ಶ್ರೀ ಸಮರ್ಥರ ಚರಣದಲ್ಲಿ ಅರ್ಪಣ.

ಸಜ್ಜನಗಡ
ವಿಜಯಾ ದಶಮಿ ಶಕೆ ೧೮೯೭
ದಿನಾಂಕ ೧೪-೧೦-೧೯೭೫

ಸಮರ್ಥ ಚರಣ ರಜ,
**ಅಣ್ಣಾಬುವಾ ಕಾಲಗಾಂವಕರ**
ಕಾರ್ಯಾಧ್ಯಕ್ಷ
ಸಮರ್ಥ ಸೇವಾ ಮಂಡಳ, ಸಜ್ಜನಗಡ

## ಶ್ರೀರಾಮ ಸಮರ್ಥ

# ವ್ಯಕ್ತಿ ಹಾಗೂ ತತ್ವಜ್ಞಾನ

## ೧. ಪ್ರಾಸ್ತಾವಿಕ

ಉಪನಿಷತ್ತುಗಳು ಮತ್ತು ಭಗವದ್ಗೀತೆ ಈ ಸಂಸ್ಕೃತ ಗ್ರಂಥಗಳು ಇಡೀ ಭಾರತದಲ್ಲಿ ಅಧ್ಯಾತ್ಮದ ಬೆಳವಣಿಗೆಯನ್ನು ಮಾಡಿದವು. ಆದರೆ ಮಹಾರಾಷ್ಟ್ರದಲ್ಲಿ ಮಾತ್ರ ಶ್ರೀ ಜ್ಞಾನದೇವರ 'ಜ್ಞಾನೇಶ್ವರಿ' ಮತ್ತು ಶ್ರೀಸಮರ್ಥರ ದಾಸಬೋಧ, ಈ ಎರಡು ಸಂತ ಗ್ರಂಥಗಳು ಆಧ್ಯಾತ್ಮವನ್ನು ಇಂದಿನವರೆಗೆ ಇಟ್ಟವುಗಳಾಗಿರುತ್ತವೆ. ಶ್ರೀ ಜ್ಞಾನದೇವ, ಹಾಗೂ ಶ್ರೀ ಸಮರ್ಥರು ಇಬ್ಬರೂ ಮಹಾನ್ ಸಂತರು. ಇಬ್ಬರೂ ದೊಡ್ಡ ಸಾಕ್ಷಾತ್ಕಾರಿ, ಬ್ರಹ್ಮಜ್ಞಾನಿ ಪುರುಷರಾಗಿದ್ದರು. ಸಚ್ಚಿದಾನಂದ ಪರಮಾತ್ಮ ವಸ್ತುವಿನ ಸಾಕ್ಷಾತ್ ಅನುಭವ ಪಡೆದು ಯಾರು ವಸ್ತುರೂಪವೇ ಆಗಿರುವರೋ ಅವರಿಗೆ ಸಂತರು ಎನ್ನುತ್ತಾರೆ. ಅಜ್ಞಾನೀ ಮನುಷ್ಯರಿಗೆ ದೇಹ ಬುದ್ಧಿಯ ಪಾತಳಿಯ ಮೇಲೆ ಈ ದೃಶ್ಯ ವಿಶ್ವವೊಂದೇ ಸದಾಕಾಲ ಅನುಭವಕ್ಕೆ ಬರುತ್ತದೆ. ಬ್ರಹ್ಮಜ್ಞಾನಿ ಪುರುಷರಿಗೆ ಆತ್ಮ ಬುದ್ಧಿಯ ಪಾತಳಿಯ ಮೇಲೆ ಒಂದೇಒಂದು ಸದ್ವಸ್ತು ಸದಾಕಾಲವೂ ಅನುಭವಕ್ಕೆ ಬರುತ್ತದೆ. ಅಂತೆಯೇ ಸರ್ವ ಸಂತರ ಪರಮಾತ್ಮ ವಸ್ತುವಿನ ಅನುಭವ ಮೂಲತಃ ಸಮಾನ ಆಗಿರುತ್ತದೆ. ಸದ್ವಸ್ತುವಿನ ದರ್ಶನದಿಂದ ಸಂಪೂರ್ಣ ಸಮಾಧಾನ ಪಡೆದ ಸಂತರು ಆತ್ಮಜ್ಞಾನಾನಂತರ ಸ್ವಸ್ಥ ಕೂಡುವದಿಲ್ಲ. ಸಮಾಜದಲ್ಲಿಯ ಸಮಕಾಲೀನ ವ್ಯಕ್ತಿಗಳು ಸದ್ವಸ್ತುವಿನ ಅಥವಾ ಸ್ವಸ್ವರೂಪದ ದರ್ಶನ ಪಡೆದು ತಮ್ಮ ಹಾಗೆಯೇ ಕೃತಾರ್ಥರಾಗಲಿ ಎಂದು ಅವರು ಬದುಕಿರುವವರೆಗೂ ಕಷ್ಟಪಡುತ್ತಾರೆ. ಆ ಪವಿತ್ರ ಕಾರ್ಯಕ್ಕಾಗಿ ತಮ್ಮ ವಾಣಿ ಮತ್ತು ಲೇಖನಿಯನ್ನು ಹಗಲೂ ರಾತ್ರಿಯೂ ಸವೆಸುತ್ತಾರೆ. ಶ್ರೀ ಸಮರ್ಥರು ಅನೇಕ ಮಠಗಳನ್ನು ಸ್ಥಾಪಿಸಿದರು. ಆ ಮಠಗಳಲ್ಲಿ ಕೆಲಸಮಾಡುವ ಎಷ್ಟೋ ಮಹಂತರು ಇದ್ದರು ಆ ಎಲ್ಲ ಮಹಂತರಮಹಂತ ಎಂಬ ರೀತಿಯಲ್ಲಿ ಸಮರ್ಥರಿಗೆ ಅಪಾರವಾದ ಹೊಣೆ ಇದ್ದಿತು. ಸಾವಿರಾರು (ಅಸಂಖ್ಯ) ಸ್ತ್ರೀ ಪುರುಷರು ಅವರಿಗೆ ಭೆಟ್ಟಿಯಾಗಿ ಹೋಗಿರಬಹುದು. ಅವರಲ್ಲಿ ಅನೇಕರ ಜೊತೆಗೆ ಎಷ್ಟೆಷ್ಟೋ ಆಧ್ಯಾತ್ಮಿಕ ಮಾತುಗಳನ್ನಾಡಿರಬಹುದು. ಕೆಲವರಿಗೆ ಸಾಧನೆಯಲ್ಲಿ, ರಾಜಕಾರಣದಲ್ಲಿ, ವ್ಯವಹಾರದಲ್ಲಿ ಮಾರ್ಗದರ್ಶನ ಮಾಡಿರಬಹುದು. ಆ ಸಂಭಾಷಣೆ ಮತ್ತು ನಿರೂಪಣೆ ಕಾಲಗರ್ಭದಲ್ಲಿ ಮರೆಯಾಗಿ ಹೋದವು. ಆದರೆ ನಮ್ಮ ಭಾಗ್ಯ ಎಂಬಂತೆ ಶ್ರೀ ಸಮರ್ಥರು ಪ್ರಸಂಗಾನುಸಾರ ಬಹಳಷ್ಟು ವಾಙ್ಮಯಗಳನ್ನು ಬರೆದು ಇಟ್ಟಿದ್ದಾರೆ. ಆ ವಾಙ್ಮಯಗಳಲ್ಲಿ ಅವರ ದಾಸಬೋಧವು ಕೋಹಿನೂರ ವಜ್ರದಂತೆ ಸುಂದರವಾಗಿಕಾಣಿಸುತ್ತದೆ. ಅವರ ಜೀವನ, ತತ್ವಜ್ಞಾನ ದಾಸಬೋಧದಲ್ಲಿ ಒಂದೆಡೆಯಲ್ಲಿಯೇ ಪೋಣಿಸಿದಂತೆ ಕಾಣುತ್ತದೆ. ಆ ಗ್ರಂಥರಾಜವನ್ನು ಇಲ್ಲಿ ವಿನಯ ಪೂರ್ವಕವಾಗಿ ಭಾಷಾಂತರಿಸಲಾಗಿದೆ.

## ೨. ಶ್ರೀ ಸಮರ್ಥರ ಚರಿತ್ರದ ರೂಪರೇಷೆ

ಬ್ರಹ್ಮಜ್ಞಾನ, ಭಕ್ತಿ, ಗುರುತ್ವ, ವಾಙ್ಮಯ ಮತ್ತು ಲೋಕಸಂಗ್ರಹ ಈ ಐದೂ ಅಂಗಗಳಿಂದ ವೈಭವ ಸಂಪನ್ನರಾದ ಶ್ರೀ ಸಮರ್ಥ ರಾಮದಾಸರು ಪ್ರಥಮ ದರ್ಜೆಯ ಸಂತರಾಗಿ ಹೋದರು. 'ಜಾಂಬ' ಎಂಬ

ಗ್ರಾಮದಲ್ಲಿ ಶಕೆ ೧೫೩೦ರಲ್ಲಿ ಚೈತ್ರ ಶುದ್ಧ ನವಮಿ ಮಧ್ಯಾಹ್ನ ಕಾಲದಲ್ಲಿ ಅವರ ಜನನವಾಯಿತು. ಅವರ ಹೆಸರು ನಾರಾಯಣ, ತಂದೆಯ ಹೆಸರು ಸೂರ್ಯಾಜಪಂತ, ತಾಯಿಯ ಹೆಸರು ರಾಣೂಬಾಯಿ, ಅಡ್ಡ ಹೆಸರು ಠೋಸರ. ಅವರ ಅಣ್ಣನಿಗೆ ಶ್ರೇಷ್ಠರು ಎನ್ನುತ್ತಿದ್ದರು. ಸಮರ್ಥರು ೮ ವರ್ಷದವರು ಇದ್ದಾಗಲೇ ಅವರ ತಂದೆ ನಿಧನರಾದರು. ಆದರಿಂದ ಅವರು ಅಂತರ್ಮುಖರಾದರು. ಮರು ವರ್ಷದಲ್ಲಿ ಅವರಿಗೆ ರಾಮದರ್ಶನವಾಯಿತು. ಮತ್ತು ಪ್ರಭುವು ಅವರಿಗೆ ಹದಿಮೂರು ಅಕ್ಷರದ ತಾರಕ ಮಂತ್ರೋಪದೇಶ ನೀಡಿ ಮಂತ್ರದ ಜಪಮಾಡಲು ಹೇಳಿದರು. ಅದರೊಂದಿಗೆ ಭಗವಂತನು ಅವರಿಗೆ ದೀಕ್ಷೆ ನೀಡಿ 'ರಾಮದಾಸ' ಎಂಬ ಹೆಸರನ್ನಿಟ್ಟನು. ತಮ್ಮ ೧೨ ನೆಯ ವಯಸ್ಸಿನಲ್ಲಿ ಲಗ್ನ ಸಮಯದಲ್ಲಿ ಮಂತ್ರದಲ್ಲಿ ಅನ್ನುವ ಸಾವಧಾನ, ಎಂಬ ಶಬ್ದ ಕೇಳಿ ಲಗ್ನ ಮಂಟಪದಿಂದ ಓಡಿ ಹೋದರು. ನಂತರ ನಾಶಿಕದ ಹತ್ತಿರ ಗೋದಾವರೀ ತೀರದಲ್ಲಿ ಟಾಕಳಿ ಎಂಬಲ್ಲಿ ಅವರು ಅತಿಶಯ ವೈರಾಗ್ಯದಿಂದ, ಏಕಾಗ್ರ ಮನಸ್ಸಿನಿಂದ, ಉತ್ಕಟತೆಯಿಂದ ೧೨ ವರ್ಷಗಳ ವರೆಗೆ ರಾಮೋಪಾಸನೆಯ ತಪಸ್ಸು ಮಾಡಿದರು. ಸಾಧನೆಯ ಮಧ್ಯದಲ್ಲಿ ಅವರಿಗೆ ಅಂತರಂಗದಿಂದ ಶ್ರೀರಾಮನ ಮಾರ್ಗದರ್ಶನವಿತ್ತು ಕೊನೆಗೆ ಅವರ ಉಪಾಸನೆಯು ಫಲಿಸಿತು. ಆತ್ಮ ಸಾಕ್ಷಾತ್ಕಾರವಾಗಿ ಅವರು ಸ್ವಾನುಭವದ ಮೇಲೆ ಆರೂಢರಾದರು. ಆತ್ಮಜ್ಞಾನದಿಂದ ಸಂಪನ್ನರಾಗಿ ತಮ್ಮ ೨೪ನೆಯ ವರ್ಷದಲ್ಲಿ ತೀರ್ಥಯಾತ್ರೆಗೆಂದು ಅವರು ಹೊರಗೆ ಬಂದರು. (ಹೊರಟರು) ೧೨ ವರ್ಷಗಳ ವರೆಗೆ ಇಡೀ ಭಾರತವನ್ನೆಲ್ಲ ಕಾಲ್ನಡಿಗೆಯಿಂದ ಸುತ್ತಿದರು. ತಮ್ಮ ೩೬ ನೆಯ ವಯಸ್ಸಿನಲ್ಲಿ ಅಂದರೆ ಶಕೆ ೧೫೬೬ ರಲ್ಲಿ ಅವರು ಕೃಷ್ಣಾ ತೀರಕ್ಕೆ ಬಂದರು. ಮೊದಲು ಮಹಾಬಳೇಶ್ವರದಲ್ಲಿ ಕೆಲವು ದಿನ ಇದ್ದು ಶ್ರೀ ಸಮರ್ಥರು ಮಸೂರದಲ್ಲಿ ಮೊದಲನೆಯ ರಾಮನವಮಿಯ ಉತ್ಸವವನ್ನು ಮಾಡಿದರು. ಮುಂದೆ ಅಂಗಾಪೂರದ ಕೆರೆಯಲ್ಲಿ ರಾಮನ ಮೂರ್ತಿ ಅವರಿಗೆ ಸಿಕ್ಕಿತು. ಚಾಫಳದಲ್ಲಿ ಆ ಮೂರ್ತಿಯನ್ನು ಸ್ಥಾಪನೆ ಮಾಡಿದರು ಮತ್ತು ಶಕೆ ೧೫೭೦ ರಲ್ಲಿ ಅಲ್ಲಿಯೇ ರಾಮನವಮಿಯ ಉತ್ಸವ ದೊಡ್ಡ ಪ್ರಮಾಣದಲ್ಲಿ ಆಯಿತು. ಶಕೆ ೧೫೭೧ರಲ್ಲಿ ಶ್ರೀ ಸಮರ್ಥರು ಶಿವಾಜಿ ಮಹಾರಾಜರಿಗೆ ಅನುಗ್ರಹ ಕೊಟ್ಟರು. ಆದರಿಂದ ರಾಜರ ನಿಷ್ಠೆ ಹೆಚ್ಚುತ್ತ ಹೋಯಿತು. ಶಕೆ ೧೫೭೭ ರಲ್ಲಿ ಅವರು ತಮ್ಮ ರಾಜ್ಯದ ಸಿಕ್ಕಾ ಪತ್ರವನ್ನು ಭಿಕ್ಷೆಯೆಂದು ಅವರ (ಶ್ರೀ ಸಮರ್ಥರ) ಜೋಳಿಗೆಯಲ್ಲಿ ಹಾಕಿದರು. ಶ್ರೀ ಸಮರ್ಥರು ಅದನ್ನು ಹಾಗೆಯೇ ತಿರುಗಿ ಕೊಟ್ಟರು. ಮತ್ತು ತಮ್ಮ ಚಿನ್ಹೆಯಾಗಿ ರಾಜ್ಯದ ಧ್ವಜವನ್ನು (ಭಗವಾ) ಕೇಸರಿ ಬಣ್ಣದ್ದಾಗಿ ಮಾಡಲು ಹೇಳಿದರು. ೧೧ ಮಾರುತಿ ಸ್ಥಾಪಿಸಿ ೧೧ ಮಠಗಳು ತಯಾರು ಆದಿದ್ದವು ಅವುಗಳ ಮೇಲೆ ಶ್ರೀ ಸಮರ್ಥರು ೧೧ ಮಹಂತರ ಯೋಜನೆ ಮಾಡಿದರು. ಮಠ ಮತ್ತು ಮಹಂತರನ್ನು ತಯಾರು ಮಾಡುವ ಕಾರ್ಯಕ್ರಮವು ಮುಂದೆ ಚಾಲೂ ಇತ್ತು. ಇದೇ ಅವಧಿಯಲ್ಲಿ ಅವರ ತಾಯಿಯು ನಿಧನರಾದರು. ಆದ್ದರಿಂದ ಶ್ರೀ ಸಮರ್ಥರು ಜಾಂಬಕ್ಕೆ ಹೋದರು. ಅಲ್ಲಿಂದ ಬಂದ ಮೇಲೆ ಅವರು ಕರ್ನಾಟಕದ ಕಡೆಗೆ ಹೋದರು. ಮಾರ್ಗ ಮಧ್ಯದಲ್ಲಿ ಅವರು ಮಿರಜದಲ್ಲಿ ಹೊಸದಾಗಿ ಮಠ ಸ್ಥಾಪಿಸಿದರು. ಮತ್ತು ವೇಣಾಬಾಯಿಯನ್ನು ಆ ಮಠದ ಮುಖ್ಯಸ್ಥರನ್ನಾಗಿ ನಿಯಮಿಸಿದರು. ತಂಜಾವೂರಕ್ಕೆ ಹೋದ ಮೇಲೆ ಶ್ರೀ ಸಮರ್ಥರು ವೆಂಕೋಜಿ ರಾಜರಿಗೆ ಅನುಗ್ರಹಕೊಟ್ಟು ಕೃತಾರ್ಥರನ್ನಾಗಿ ಮಾಡಿದರು. ಶಕೆ ೧೫೮೦ರ ಮಧ್ಯದಲ್ಲಿ ಶಿವಾಜಿ ರಾಜರು ಚಾಫಳದ ಮಂದಿರಕ್ಕೆ ಎರಡುನೂರ ಸುವರ್ಣದ ನಾಣ್ಯಗಳನ್ನು ವರ್ಷದ ಕೊಡುಗೆಯನ್ನಾಗಿ ಮಾಡಿದರು. ಶಕೆ ೧೫೮೧ರಲ್ಲಿ ದಾಸಬೋಧದ ಆರು ದಶಕ ಮತ್ತು ನಾಲ್ಕು ಸಮಾಸಗಳು ಪೂರ್ಣ ಆಗಿದ್ದವು. ಶಕೆ ೧೫೮೩ರಲ್ಲಿ ಪ್ರತಾಪಗಡದ ಮೇಲೆ ದೇವಿಯ ಸ್ಥಾಪನೆಯನ್ನು ಮಾಡಿದರು. ಶಕೆ ೧೫೯೪ ರಲ್ಲಿ ಶ್ರೀ ಸಮರ್ಥರು ಶಿವಾಜಿ ರಾಜರಿಗೆ ವಿಶೇಷ ಪರಮಾರ್ಥವನ್ನು ಬೋಧಿಸಿದರು. (ಹೇಳಿದರು). ಶಕೆ ೧೫೯೬ರಲ್ಲಿ ಶಿವಾಜಿ ರಾಜರಿಗೆ ರಾಜ್ಯಾಭಿಷೇಕದ ಸಮಾರಂಭವು ಆಯಿತು. ಶಕೆ ೧೬೦೧ ರಲ್ಲಿ ಶಿವಾಜಿ ರಾಜರು ಸಜ್ಜನಗಡದ ಮೇಲೆ ಶ್ರೀ ಸಮರ್ಥರ ಸನ್ನಿಧಿಯಲ್ಲಿ ಬಹಳಷ್ಟು ದಿವಸ ಇದ್ದರು. ಶಕೆ ೧೬೦೨ರಲ್ಲಿ ಶಿವಾಜಿ ರಾಜರು ದೇಹ ಬಿಟ್ಟರು. ಅದೇ ವರ್ಷದಲ್ಲಿ ಶ್ರೀ ಸಮರ್ಥರು ಸಂಭಾಜಿಗೆ ಪತ್ರ ಕಳುಹಿಸಿದರು. ಅವನು ಸ್ವತಃ ಸಜ್ಜನಗಡಕ್ಕೆ ಬಂದು ಶ್ರೀ ಸಮರ್ಥರನ್ನು ಭೆಟ್ಟಿಯಾಗಿ ಹೋದನು. ಮುಂದೆ ಶಕೆ ೧೬೦೩ ಮಾಘ ವದ್ಯ ನವಮಿ ಶನಿವಾರ ಮಧ್ಯಾಹ್ನದಂದು ಶ್ರೀ ಸಮರ್ಥರು ಸಜ್ಜನಗಡದಲ್ಲಿ ದೇಹ ಬಿಟ್ಟರು.

# ೩. ವ್ಯಕ್ತಿ ಮತ್ತು ಗುಣ ವಿಶೇಷ

ಶ್ರೀ ಸಮರ್ಥರು ಮಧ್ಯಮ ಎತ್ತರದವರಾಗಿದ್ದು ಅವರ ಮೈ ಬಣ್ಣ ನಸುಗೆಂಪಾಗಿತ್ತು. ಮೈಕಾಂತಿ ತೇಜಃಪುಂಜವಾಗಿತ್ತು. ಅವರ ಶರೀರ ಬಲಾಢ್ಯವಾಗಿತ್ತು. ಅವರ ದೊಡ್ಡ ಹಣೆಯ ಮೇಲೆ ಒಂದು ಸಣ್ಣ ಬುಗುಟೆ ಇತ್ತು, ಅವರ ಕಣ್ಣುಗಳು ತೇಜಃ ಪುಂಜವಾಗಿದ್ದವು. ಮೂಗು ಸರಳವಾಗಿತ್ತು. ಅವರ ಧ್ವನಿ ಖಣಖಣಿತ ಅಂದರೆ ಮಧುರವಾಗಿತ್ತು ಅವರ ಮುಖದ ಮೇಲಿನ ಒಂದು ತರಹದ ತೇಜಸ್ಸು ಯಾವಾಗಲೂ ದೃಷ್ಟಿಗೆ ಬೀಳುತ್ತಿತ್ತು. ಅವರು ಯಾವಾಗಲೂ ಲಂಗೋಟ ಹಾಕುತ್ತಿದ್ದರು. ಕಟಿ ಸೂತ್ರ, ಕಾಲಲ್ಲಿ ಪಾದುಕಾ, ದಾಡಿ, ಜಟಾಧಾರ, ಕೊರಳಲ್ಲಿ ತುಳಸೀಮಾಲೆ, ಕೈಯಲ್ಲಿ ಕುಬಡಿ (ದಂಡ) ಮತ್ತು ಹೆಗಲಲ್ಲಿ ಜೋಳಿಗೆ ಹಾಕಿಕೊಂಡು ಹೊರಗೆ ತಿರುಗಾಡುತ್ತಿದ್ದರು. ಯಾವಾಗಲೂ ಜರದಅಂಚು ಇದ್ದ ಕಫನಿಯನ್ನು ಅವರು ಉಪಯೋಗಿಸುತ್ತಿದ್ದರು. ಹೋಗುವಾಗಲೂ ಮತ್ತು ಬರುವಾಗಲೂ ಅವರ ಮುಖದಿಂದ "ರಘುವೀರ ಸಮರ್ಥ" ಎಂಬ ಶಬ್ದವನ್ನು ಅವರು ಉಚ್ಚರಿಸುತ್ತಿದ್ದರು. ಮತ್ತು ಯಾರಾದರೂ ಏನನ್ನಾದರೂ ಕೇಳಿದರೆ "ರಾಮ ಕರ್ತಾ" ಇದು ಅವರ ನುಡಿಯಾಗಿತ್ತು. ಅವರು ತಣ್ಣೀರಿನಿಂದ ಸ್ನಾನ ಮಾಡುತ್ತಿದ್ದರು. ಚಳಿ, ಗಾಳಿ, ಬಿಸಿಲು ಅವರಿಗೆ ಬಾಧಿಸುತ್ತಿದ್ದಿಲ್ಲ. ವಯಸ್ಸಾದ ಮೇಲೆ ಕಫದ ಬಾಧೆ ಅವರಿಗೆ ಉಂಟಾಗಿ ತೊಂದರೆ ಕೊಡುತ್ತಿತ್ತು. ಆದ್ದರಿಂದ ಊಟ ಆದ ಮೇಲೆ ಅವರು ದಿನಾಲೂ ವಿಡಾ ತಿನ್ನುತ್ತಿದ್ದರು. ಅವರು ಕುದುರೆಯ ಮೇಲೆ ಸವಾರಿಮಾಡುವಲ್ಲಿ ಪ್ರವೀಣರಾಗಿದ್ದರು. ಆ ಕಾಲದ ಶಸ್ತ್ರಗಳನ್ನು ಅವರು ಚನ್ನಾಗಿ ಚಲಾಯಿಸುತ್ತಿದ್ದರು. ಶ್ರೀ ಸಮರ್ಥ ಎಂದರೆ ಮೂರ್ತಿಮಂತ, ನಿಸ್ಪೃಹತಾ ಮತ್ತು ಅತ್ಯಂತ ನಿರ್ಭಯರಾಗಿದ್ದರು. ನಿಜವಾಗಿಯೂ ನಿಸರ್ಗರಮ್ಯ ಅರಣ್ಯದಲ್ಲಿ ಮತ್ತು ನಿರ್ಜನ ಏಕಾಂತದಲ್ಲಿ ಇರುವದು ಅವರಿಗೆ ಪ್ರಿಯವಾಗಿತ್ತು. ಅವರು ಯಾವಾಗಲೂ ಲವಲವಿಕೆಯಿಂದ ಇರುತ್ತಿದ್ದರು. ಹೀಗಾಗಿ ಬಹಳ ವೇಗವಾಗಿ ನಡೆಯುತ್ತಿದ್ದರು. ಮತ್ತು ನೋಡ ನೋಡುತ್ತಲೇ ಕಠಿಣವಾದ ಗುಡ್ಡವನ್ನು ಹತ್ತಿ ಹೋಗುತ್ತಿದ್ದರು. ಗುಡ್ಡದ ಮೇಲಿನ ಕಠಿಣವಾದ ಸ್ಥಳದಲ್ಲಿದ್ದ ಗುಹೆ ಮತ್ತು ತಗ್ಗುಗಳಲ್ಲಿ ಇರುವದು ಅವರಿಗೆ ಪ್ರಿಯವಾಗಿತ್ತು. ಅವರಿಗೆ ಉತ್ತಮವಾಗಿ ಈಜಲು ಬರುತ್ತಿತ್ತು. ಸಹಜವಾದ ಸುಲಭವಾದ ನಮ್ರತೆ ಇತ್ತು ಅವರ ಮಾತುಗಳು ಅತ್ಯಂತ ಸವಿಯಾದಿಯೂ, ಮೃದುವಾಗಿಯೂ ಇದ್ದವು. ರುಚಿಯಾದ ಮತ್ತು ಚತುರತೆಯಿಂದ ಕೂಡಿದ ಸಂಭಾಷಣೆಯಿಂದ ಮತ್ತೊಬ್ಬರ ಮನಸ್ಸನ್ನು ತಮ್ಮದನ್ನಾಗಿ ಮಾಡಿಕೊಳ್ಳುತ್ತಿದ್ದರು. ಈ ಕಲೆಯಿಂದ ಅವರು ಅಕ್ಷರಶಃ ಸಾವಿರಾರು ಸಣ್ಣವರು, ದೊಡ್ಡವರು. ಹಾಗೂ ಸ್ತ್ರೀ ಪುರುಷರನ್ನು ತಮ್ಮ ಮೇಲೆ ನಿರ್ವಾಜ್ಯ ಪ್ರೀತಿಮಾಡಲು ಹಚ್ಚಿದರು. ಸಣ್ಣ ಮಕ್ಕಳು ಅವರಿಗೆ ವಿಶೇಷವಾಗಿ ಸೇರುತ್ತಿದ್ದರು.(ಪ್ರೀತಿಸುತ್ತಿದ್ದರು). ಸಾಕಷ್ಟು ಸಲ ಅವರು ಮಕ್ಕಳ ಜೊತೆ ಆಟ ಆಡುತ್ತಿದ್ದರು ಅವರಿಗೆ ಓದುವ, ಬರೆಯುವ ಉತ್ಸಾಹ ಬಹಳ ಇತ್ತು- ಅಲ್ಲದೆ ಯಾವತ್ತೂ ಗ್ರಂಥಗಳ ಪಾಠ ಕರಗತವಾಗಿತ್ತು. ಕವಿತೆ ಮತ್ತು ಸಂಗೀತವು ಅವರಿಗೆ ಬಹಳವಾಗಿ ಸೇರುತ್ತಿದ್ದವು. ಅವರು ಸ್ವತಃ ಹಾಡುತ್ತಿದ್ದರು. ಅವರ ಅಂತಃಕರಣವು ಬಹಳ ಸಂವೇದನಶೀಲವಾಗಿತ್ತು. ಅವರ ತತ್ವಜ್ಞಾನ ದೃಷ್ಟಿಯಲ್ಲಿ ಕಾಣುವ ದೃಶ್ಯ ವಿಶ್ವವು ನಾಶವಂತವೆನ್ನುವದು ನಿಜ. ಆದರೆ ಅದೇ ದೃಶ್ಯ ವಿಶ್ವದಲ್ಲಿ ಎಲ್ಲೆಲ್ಲಿ ಸೌಂದರ್ಯ ಕಂಡು ಬರುವದೋ ಎಲ್ಲೆಲ್ಲಿ ಭವ್ಯತೆಯು ಕಂಡು ಬರುವದೋ ಅಲ್ಲಲ್ಲಿ ಶ್ರೀ ಸಮರ್ಥರು ಬಹಳ ರಸಿಕತೆಯಿಂದ ಮೋಹಿತರಾಗುತ್ತಿದ್ದರು. ಮನುಷ್ಯನ ಪೋಷಾಕು, ನಡವಳಿಕೆ, ಬರೆಯುವದು, ಓದುವದು, ನಡತೆ ಈ ಎಲ್ಲವೂ ಸುಂದರವಾಗಿರಬೇಕೆಂದು ಅವರಿಗೆ ಅನ್ನಿಸುತ್ತಿತ್ತು. ಜೀವನದಲ್ಲಿ ಭವ್ಯತನ ಮತ್ತು ಸೌಂದರ್ಯ ತುಂಬಿರುವದು. ಅವರ ದೃಷ್ಟಿಯಲ್ಲಿ ಉತ್ತಮ ಜೀವನದ ಒಂದು ಪ್ರಧಾನ ಲಕ್ಷಣವಾಗಿತ್ತು ತೀರ್ಥಯಾತ್ರೆ ಮಾಡುವ ನಿಮಿತ್ತದಿಂದ ಅವರು ಸಂಪೂರ್ಣ ಭಾರತವನ್ನು ತಿರುವಿ ಹಾಕಿದರು(ಸುತ್ತಿದರು). ಆದ್ದರಿಂದ ಅವರಿಗೆ ಅನೇಕ ಬಗೆಯ ಲೋಕ ರೀತಿಯು ತಿಳಿದಿತ್ತು. ಅಲ್ಲದೆ ಅವರಿಗೆ ಅನೇಕ ಭಾಷೆಗಳೂ ಬರುತ್ತಿದ್ದವು. ಮರಾಠಿ, ಹಿಂದಿ, ಉರ್ದು ಭಾಷೆಗಳಲ್ಲಿ ಅವರಿಗೆ ಉತ್ತಮ ಪ್ರಭುತ್ವವಿತ್ತು ಅವರ ಅವಲೋಕನ ತುಂಬಾ ಸೂಕ್ಷ್ಮ. ವಿಶಾಲ (ಬಹುರಂಗಿ) ವಾಗಿತ್ತು. ಶ್ರೀ ಸಮರ್ಥರು ಸ್ವತಃ ಅತಿಶಯ ವಿವೇಕ ಶೀಲ, ಮತ್ತು ಉದ್ಯೋಗಶೀಲರಾಗಿದ್ದರಿಂದ ತಿಳಿವಳಿಕೆಯುಳ್ಳ ಮನುಷ್ಯರು ಮಾತ್ರ ಅವರಿಗೆ ಸೇರುತ್ತಿದ್ದರು. ಆಲಸೀ

ಮನುಷ್ಯರನ್ನು ಮಾತ್ರ ಎಂದೂ ಸೇರುತ್ತಿರಲಿಲ್ಲ. ಆಲಸೀ ಮನುಷ್ಯರಿಗೆ ಅವರು "ದುರ್ದೈವಿ"ಅನ್ನುತ್ತಿದ್ದರು. ಅವರು ನಿಜವಾದ ಪರಿಶ್ರಮಿಗಳೂ, ಉದಾರರೂ ಇದ್ದದ್ದರಿಂದ ದೇವರವೈಭವ ಬೆಳೆಸುವದು ಅವರಿಗೆ ಬಹಳ ಉತ್ಸಾಹದ್ದಾಗಿತ್ತು. ಅವರಿಗೆ ಪ್ರಚೀತಿಯ ಅನುಭವದ ಮೇಲೆ ಬಹಳ ಪ್ರಭುತ್ವವಿತ್ತು. ನಂಬಿಗೆ ಇತ್ತು: ಜನರಿಗೆ ಏನು ಹೇಳುತ್ತೇವೆಯೋ ಅದನ್ನು ಮೊದಲು ತಾನು ಸ್ವತಃ ಅನುಭವಿಸಬೇಕು, ಆ ಮೇಲೆ ಜನರಿಗೆ ಹೇಳಬೇಕು. ಇದು ಅವರ ಅಪೇಕ್ಷೆಯಾಗಿತ್ತು. ಅವರ ಅಂತಃಕರಣ ಬಹಳ ಕರುಣಾಮಯ ಇರುವದರಿಂದ ಅವರಿಗೆ ಮತ್ತೊಬ್ಬರ ದುಃಖವನ್ನು ನೋಡಲು ಆಗುತ್ತಿದ್ದಿಲ್ಲ. ಈ ಗುಣದಲ್ಲಿಯೇ ಅವರ ಲೋಕ ಸಂಗ್ರಹದ ಬೀಜ ದೊರೆಯುತ್ತದೆ.

## ೪. ಶ್ರೀ ಸಮರ್ಥರ ಕಾಲದ ಲೋಕ ಸ್ಥಿತಿ

ಭಾರತೀಯ ಸಂಸ್ಕೃತಿಯ ಜೀವನದಲ್ಲಿ ಸಮರ್ಥರ ಕಾಲವು ಪ್ರಕ್ಷುಬ್ಧಕರವಾಗಿತ್ತು. ಭಾರತೀಯ ಸಮಾಜವು ಒಳಗಿನಿಂದ ಹಾಗೂ ಹೊರಗಿನಿಂದ ಅಸ್ತವ್ಯಸ್ತವಾಗಿತ್ತು. ಬೇರೆ ಜಾತಿಯ ಸಂಸ್ಕೃತಿಯು ಆಳವಾಗಿ ಬೇರೂರುತ್ತಿತ್ತು. ರಾಜ್ಯಭಾರ ಮಾಡುವ ಯವನರು ಆಚಾರ, ವಿಚಾರ, ಮೌಲ್ಯ, ಧ್ಯೇಯ, ನೀತಿ, ರಾಜನೀತಿ, ಧರ್ಮ ಈ ಎಲ್ಲ ವಿಷಯಗಳಲ್ಲಿ ಸಾಕಷ್ಟು ಭಿನ್ನಾಭಿಪ್ರಾಯ ಉಳ್ಳವರಾಗಿದ್ದರು. ಹೀಗಾಗಿ ಭಾರತೀಯ ಸಮಾಜದ ಮೇಲೆ ಗಂಭೀರ ಪರಿಣಾಮ ಉಂಟುಮಾಡಿತ್ತು. ಬ್ರಾಹ್ಮಣ ವರ್ಗದವರು ಭಾರತೀಯ ಸಮಾಜದಲ್ಲಿ ಬೌದ್ಧಿಕವಾಗಿ ಮುಂದುವರೆದವರಾಗಿದ್ದರು. ಅವರೇ ಆಚಾರ ವಿಚಾರಗಳಲ್ಲಿ ಭ್ರಷ್ಟರಾದರು. ತ್ಯಾಗ ಹಾಗೂ ನಿಸ್ಪೃಹತಾ ಮರೆತು ಬ್ರಾಹ್ಮಣರು ಅತ್ಯಂತ ಸ್ವಾರ್ಥಿಗಳಾದರು. ಸಾಕಷ್ಟು ಬ್ರಾಹ್ಮಣರು ಇಲ್ಲದ ಪ್ರಾವೀಣ್ಯತೆಯನ್ನು ತೋರಿಸಹತ್ತಿದರು. ಕ್ಷತ್ರಿಯ ವರ್ಗದವರು ಸಮಾಜದಲ್ಲಿ ಶೌರ್ಯ ಹಾಗೂ ವೀರತ್ವದ ಪ್ರತೀಕದಂತಿದ್ದರು. ಆದೇ ಕ್ಷತ್ರಿಯರಿಗೆ ಯವನರ ಸೇವೆಯೇ ಧನ್ಯವಾಯಿತು. ಅವರ ಆಚಾರ ವಿಚಾರದ ಮೇಲೆ, ಧರ್ಮದ ಮೇಲೆ, ಇರುವಿಕೆಯ ಮೇಲೆ ರಾಜ್ಯಭಾರ ಮಾಡುವವರ ಮುದ್ರೆ ಅಚ್ಚೊತ್ತಿದಂತೆ ಆಯಿತು. ಸಮಾಜದಲ್ಲಿಯ ಧನಿಕ ವ್ಯಾಪಾರೀ ವರ್ಗದವರು ರಾಜ್ಯಭಾರ ಮಾಡುವವರೊಂದಿಗೆ ನಾಚಿಕೆ ಇಲ್ಲದವರಂತೆ ವರ್ತಿಸಿ ತಮ್ಮ ಬೇಳೆ ಬೇಯಿಸಿಕೊಳ್ಳುತ್ತಿದ್ದರು. ಢೋಂಗಿ ಜನರು, ಬುವಾಬಾಜಿಗಳು, ನಾಸ್ತಿಕರು, ವಿತಂಡವಾದಿಗಳು ಮತ್ತು ಹಿರಿಯರು ಇವರೆಲ್ಲರಿಗೂ ಸೊಕ್ಕು ಬಂದಿತ್ತು. ನಿಜವಾದ ಪಾರಮಾರ್ಥವು ಇಲ್ಲದಂತೆ ಆಗಿತ್ತು. ಸಂಕುಚಿತವೃತ್ತಿಯ ಅತ್ಯಂತ ಸ್ವಾರ್ಥಿ ಜನರಿಂದ ಸಮಾಜವು ತುಂಬಿ ಹೋಗಿತ್ತು. ಸಮಾಜದಲ್ಲಿಯ ಅನೇಕ ದುಷ್ಟ ಹಾಗೂ ವಿಧ್ವಂಸಕ ಶಕ್ತಿಗಳು ಪ್ರಕಟವಾದವು. ಅವರೆಲ್ಲರನ್ನು ತಡೆಯುವದು ಅಶಕ್ಯವಾಯಿತು. ಅಧಿಕಾರದ ಸಲುವಾಗಿ ನೀಚಸ್ಪರ್ಧೆ, ಹಣಕ್ಕಾಗಿ ಸಂಘರ್ಷ, ಸ್ವಾರ್ಥಕ್ಕಾಗಿ ಭಯಂಕರದ್ವೇಷ ಮತ್ತು ವಿಷಯಭೋಗಕ್ಕಾಗಿ ಅನಾಚಾರ ಇವೆಲ್ಲವುಗಳಿಗಾಗಿ ಬಡಿದಾಡಹತ್ತಿದರು. ಹಣ ಗಳಿಸುವದಕ್ಕಾಗಿ ಮತ್ತು ಕಾಮವಾಸನಾ ತೃಪ್ತಿಗೊಳಿಸುವದಕ್ಕಾಗಿ ಮನುಷ್ಯನು ಏನೂ ಉಳಿಸಲಿಲ್ಲ. ತೀರ್ಥ ಕ್ಷೇತ್ರಗಳನ್ನು ಭ್ರಷ್ಟಗೊಳಿಸುವದು, ಹೆಂಡತಿ ಮತ್ತು ಮಕ್ಕಳನ್ನು ಮಾರುವದು, ಹೆಣ್ಣುಮಕ್ಕಳನ್ನು ಓಡಿಸಿಕೊಂಡು ಹೋಗುವದು, ಅವರನ್ನು ಭ್ರಷ್ಟಗೊಳಿಸಿ ಗುಲಾಮರನ್ನಾಗಿ ಮಾಡುವದು, ವ್ಯಾಪಾರಿಗಳನ್ನು ಲೂಟಿಮಾಡುವದು, ತುರುಂಗು ಮಾಡುವದು, ದರೋಡೆ ಮಾಡುವದು, ಬೆಂಕಿ ಹಚ್ಚುವದು, ಕ್ರೂರವಾದ ಶಿಕ್ಷೆ ಕೊಡುವದು, ಸಾಮಾಜಿಕ ಹತ್ಯೆಮಾಡುವದು, ಹೀಗೆ ಮಾನವನನ್ನಾಚುವಂತಹ ಘಟನೆಗಳು ಕೇಳಿಬರುತ್ತಿದ್ದವು. ಈ ನಡುವೆ ಮೇಲಿಂದ ಮೇಲೆ ಬರುವ ಕ್ಷಾಮವು ಕಾಡುತ್ತಿತ್ತು. ಈ ಕಾರಣಗಳಿಂದ ಜೀವನದಲ್ಲಿ ಸ್ಥಿರತೆ, ಸ್ವಾಸ್ಥ್ಯ ಇವು ಸ್ವಲ್ಪವೂ ಉಳಿಯಲಿಲ್ಲ. ಯಾವ ವೇಳೆಯಲ್ಲಿ ಎಂತಹ ಭಯಂಕರ ಪ್ರಸಂಗ ಬರುವದೋ ಅದರ ನೇಮ ಇದ್ದಿಲ್ಲ. ಭಯ, ಚಿಂತೆ, ಅಸ್ಥಿರತೆ, ಪಾರತಂತ್ರ್ಯ, ಮತ್ತು ದಾರಿದ್ರ್ಯ ಇವುಗಳಿಂದ ಸಮಾಜವು ಪೂರ್ಣವಾಗಿ ಹೀನಾವಸ್ಥೆಯಲ್ಲಿತ್ತು. ಹೇಗಾದರೂ ಜೀವಿಸುವದೆಂದು ಜನರು ಕಾಲ ಕಳೆಯುತ್ತಿದ್ದರು. ಜನರ ಇಂತಹ ಹೀನ ಮತ್ತು ದೀನ ಅವಸ್ಥೆಯನ್ನು ನೋಡಿ ಶ್ರೀ ಸಮರ್ಥರ ದಯಾಮಯ ಅಂತಃಕರಣವು ದ್ರವಿಸಿತು.(ಕರಗಿತು). ಯಾವಾಗಲೂ ಏಕಾಂತದಲ್ಲಿದ್ದು ಆತ್ಮ ಚಿಂತನೆ ಮಾಡುವಂತಹ ವಿಲಕ್ಷಣವಾದ ಈ ಮಹಾತ್ಮರು ತಮ್ಮ ನಿಯಮವನ್ನು ಬದಿಗೆ ಸರಿಸಿ ಲೋಕ ಸಂಗ್ರಹ ಮಾಡುವದಕ್ಕಾಗಿ ಜನರ ಮಧ್ಯೆ ಕೂಡಿಕೊಂಡರು.

## ೫. ಶ್ರೀ ಸಮರ್ಥರ ಸಂಪ್ರದಾಯ

ಎಲ್ಲಿಯವರೆಗೆ ಪರಕೀಯ ರಾಜಸತ್ತೆಯು ಸಮಾಜದ ಮೇಲೆ ಸ್ವಾಮಿತ್ವವನ್ನು ಸ್ಥಾಪಿಸುವದೋ, ಎಲ್ಲಿಯವರೆಗೆ ರಾಜಕೀಯ ಸ್ವಾತಂತ್ರ್ಯ ಇರುವದಿಲ್ಲವೋ, ಅಲ್ಲಿಯವರೆಗೆ ಸಮಾಜದ ದೈನ್ಯಾವಸ್ಥೆಯು ಕಠಿಣವಾಗಿರುವದು. ಸಮಾಜ ಜೀವನದ ಈ ಮಹತ್ವದ ಸೂತ್ರವು ಶ್ರೀ ಸಮರ್ಥರ ಲಕ್ಷ್ಯದಲ್ಲಿ ಬಂದ ಮೇಲೆ ಅವರು ತಮ್ಮ ದೃಷ್ಟಿಕೋನವನ್ನು ಕೇಂದ್ರೀಕರಿಸಿದರು. ರಾಜ್ಯ ಕ್ರಾಂತಿಯು ಹೊರತು ಸಮಾಜದ ಕ್ರಾಂತಿ ಆಗುವದಿಲ್ಲ; ಎಂಬ ಮಾತನ್ನು ಅವರು ತಮ್ಮ ಮನಸ್ಸಿನಲ್ಲಿ ದೃಢ ನಿಶ್ಚಯಿಸಿದರು. ಅದೇ ಸಮಯದಲ್ಲಿ ಮಹಾರಾಷ್ಟ್ರದಲ್ಲಿ ಶಿವಾಜಿ ರಾಜರು ಧೈರ್ಯದಿಂದ, ನಿಸ್ವಾರ್ಥದಿಂದ ರಾಜ್ಯ ಕ್ರಾಂತಿಮಾಡುವ ಕೆಲಸದಲ್ಲಿ ತೊಡಗಿದ್ದರು. ಅವನ ಕಾರ್ಯಕ್ಕೆ ಜನ ಸಾಮಾನ್ಯರ ಪೂರ್ಣ ಸಹಾಯ ಆಗಬೇಕು, ಮತ್ತು ಸಹಾನುಭೂತಿ ಒದಗಬೇಕೆಂದು ಶ್ರೀ ಸಮರ್ಥರು ಹೊಸ ಧ್ಯೇಯವನ್ನು ಇಟ್ಟುಕೊಂಡು ಮುಂದೆ ಬಂದರು. ಅದರಲ್ಲಿ ಎರಡು ಉದ್ದೇಶಗಳು ಇದ್ದವು. ಮೊದಲನೆಯ ಉದ್ದೇಶವು ಏನೆಂದರೆ, ರಾಜನು ಒಂದು ಅರ್ಥದಲ್ಲಿ ಬೈರಾಗಿಯಂತಿರಬೇಕು, ಕೇವಲ ಜನರ ಸುಖ ಸಮಾಧಾನಕ್ಕಾಗಿ ಜೀವಿಸಬೇಕು. ನಿರ್ಭಯದಿಂದ ಜೀವನ ನಡೆಸಬೇಕು, ಇದಕ್ಕಾಗಿ ರಾಜನು ರಾಜ್ಯವನ್ನು ನಡೆಸಬೇಕು. ರಾಜನು ರಾಜರ್ಷಿಯಂತೆ ಇರಬೇಕು, ಅವನು ಉತ್ತಮ ಪುರುಷನಂತಿರಬೇಕು. ಎರಡನೆಯ ಉದ್ದೇಶವೇನೆಂದರೆ, ಸ್ವರಾಜ್ಯದಲ್ಲಿ ನಿರ್ಭಯದಿಂದ ಜೀವಿಸುವ ಜನರು ಅಧ್ಯಾತ್ಮಿಕ ಉಪಾಸನೆಯನ್ನು ಮಾಡಬೇಕು. ಕೇವಲ ತಿನ್ನುವದು, ಕುಡಿಯುವದು ಮತ್ತು ಚೈನಿ ಮಾಡುವದು ಇದಕ್ಕಾಗಿಯೇ ಸ್ವರಾಜ್ಯ ಇರುವದು ಯೋಗ್ಯವಲ್ಲ. ಪರಮಾರ್ಥ ಸಾಧಿಸುವದಕ್ಕಾಗಿ ಯಾವ ಪರಿಸ್ಥಿಯ ಆವಶ್ಯಕತೆಯು ಇರುವದೋ ಅದನ್ನು ನಿರ್ಮಾಣ ಮಾಡುವದಕ್ಕಾಗಿ ರಾಜಕೀಯ ಸ್ವಾತಂತ್ರ್ಯದ ಅವಶ್ಯಕತೆ ಇರುವದು. ರಾಜಕೀಯ ಸ್ವಾತಂತ್ರ್ಯ ದೊರಕಿಸುವದಕ್ಕಾಗಿ ಉದಾತ್ತ ಮನೋಭಾವನೆಯ ನಿಸ್ವಾರ್ಥ ಮನುಷ್ಯನ ಅವಶ್ಯಕತೆ ಇರುವದು. ಇಂತಹ ಮನುಷ್ಯರನ್ನು ತಯಾರು ಮಾಡುವದಕ್ಕಾಗಿ ಶ್ರೀ ಸಮರ್ಥರು ಹೊಸ ಸಂಪ್ರದಾಯ ಸ್ಥಾಪನೆ ಮಾಡಿದರು. ಕೇವಲ ರಾಜಕಾರಣಪಟು, ಮುತ್ಸದ್ದಿ ಮತ್ತು ಶ್ರೀ ಸಮರ್ಥರ ಮಹಂತ ಇವರಲ್ಲಿ ಮಹತ್ವದ ವ್ಯತ್ಯಾಸ ಇರುವದು. ಕೇವಲ ಮುತ್ಸದ್ದಿತನದಿಂದ ರಾಜಕಾರಣದ ಆಟ ಆಡುವ ಪುರುಷನು ಅಂತಃಕರಣದಿಂದ ಉದಾತ್ತನಿರುವದಿಲ್ಲ. ಅವನ ರಾಜಕಾರಣ ಸ್ವಾರ್ಥದಿಂದ ತುಂಬಿರುತ್ತದೆ. ಅವನೊಬ್ಬ ಪ್ರಪಂಚದಲ್ಲಿ, ವ್ಯವಸಾಯವನ್ನೇ ಮಾಡಿಕೊಂಡಿರುತ್ತಾನೆ. ಆದರೆ ಜನರ ದುಃಖ ಇಲ್ಲದಂತೆಮಾಡಿ ಅವರನ್ನು ಸುಖಿಗಳನ್ನಾಗಿ ಮಾಡಬೇಕು. ಜೀವನದಲ್ಲಿಯ ಉತ್ತಮೋತ್ತಮಮೌಲ್ಯಗಳ ಉಪಾಸನೆಯನ್ನು ಮಾಡುವ ಸಂಧಿಯು ಎಲ್ಲರಿಗೂ ಸಿಗಬೇಕು. ರಾಜಕಾರಣ ಮಾಡುವ ಪುರುಷರ ಅಂತಃಕರಣ ಉದಾತ್ತ ಇರುತ್ತದೆ. ಈ ಉದಾತ್ತತೆಯು ಈಶ್ವರನ ಉಪಾಸನೆ ಇಲ್ಲದೇ ಬರುವದು ಶಕ್ಯವಿರುವದಿಲ್ಲ. ಇದಕ್ಕಾಗಿ ಶ್ರೀ ಸಮರ್ಥರ ಮಹಂತನು ಮೊದಲು ಭಕ್ತ ನಂತರ ನೇತಾ ಆಗುತ್ತಾನೆ. ಮಹಂತನ ಪುಢಾರಿತನ ಮತ್ತು ರಾಜಕಾರಣವು ಅಧ್ಯಾತ್ಮದ, ಧರ್ಮದ ಮತ್ತು ನೀತಿಯ ಆಧಾರದ ಮೇಲೆ ನಿಂತಿರುವದರಿಂದ ಅವನ ಜೀವನದಲ್ಲಿ ಪ್ರವೃತ್ತಿ ಮತ್ತು ನಿವೃತ್ತಿ ಇವುಗಳ ಸುಂದರವಾದ ಸಂಗಮವು ಕಾಣಿಸುತ್ತದೆ. ಯಾವುದೇ ಸಾಮಾಜಿಕ ಧ್ಯೇಯ ಸಾಕಾರವಾಗಲು ಜನರು ಸಂಘಟಿತರಾಗಬೇಕಾಗುತ್ತದೆ. ಜನ ಸಂಘಟನೆ ತಯಾರ ಆಗಬೇಕಾದರೆ ನಿಯಮಬದ್ಧವಾದ ಜನಸಮೂಹವನ್ನು ತಯಾರು ಮಾಡಬೇಕಾಗುತ್ತದೆ. ಸಂವಾದಿ ಮತ್ತು ಧ್ಯೇಯನಿಷ್ಠ ಜನಸಮೂಹದ ನಿರ್ಮಾಣಮಾಡಿ ಸ್ಥಿರಗೊಳಿಸಲು ಹೊಸ ಸಂಸ್ಥೆಯನ್ನು ಸ್ಥಾಪನೆ ಮಾಡಬೇಕಾಗುತ್ತದೆ. ಎಂದು ಶ್ರೀ ಸಮರ್ಥರು ಅಲ್ಲಲ್ಲಿ ಮಠಗಳನ್ನು ಸ್ಥಾಪನೆ ಮಾಡಿದರು. ಮಠ ಎಂದರೆ ಜನ ಸಂಘಟನೆಯ ಕೇಂದ್ರವೂ ಹೌದು. ಮಠದ ಮೇಲೆ ನಿಯಮಿಸಿದ ಮಹಂತನು ಪಾವಿತ್ರ್ಯ ಉಳ್ಳವನಾಗಿರಲೇ ಬೇಕು. ಏಕೆಂದರೆ ಅವನು ಭಕ್ತನಿರುವನು, ಜನಸಂಗ್ರಹಕರ್ತಾ ಇರಲೇಬೇಕು – ಏಕೆಂದರೆ ಅವನು ಸಮಾಜದ ನೇತಾ ಇರುತ್ತಾನೆ. ಪ್ರತಿಯೊಬ್ಬ ಮಹಂತನ ಜೀವನಕ್ಕೆ ಒಂದೆಡೆಗೆ ಅಧ್ಯಾತ್ಮ ನೀತಿ ಧರ್ಮ ಇದ್ದರೆ ಮತ್ತೊಂದೆಡೆಗೆ ಸಮಾಜ ಸೇವೆಯು ಮತ್ತು ಪ್ರಸಂಗ ಬಂದಲ್ಲಿ ರಾಜಕಾರಣವನ್ನೂ ನಿಭಾಯಿಸಬೇಕಾಗುತ್ತದೆ. ಶ್ರೀ ಸಮರ್ಥರು ಮಹಂತತನದ ಆದರ್ಶವನ್ನು ಸ್ವತಃ ಜನರ ಮುಂದೆ ಇಟ್ಟರು. ಧರ್ಮ ಎಂದರೆ ಸಮಾಜದ ಸ್ಥಿರತೆ ಹೌದು.

ಅಜ್ಞಾನದ, ಅನೀತಿಯ, ಪರಕೀಯ ರಾಜಸತ್ತೆಯ, ಮತ್ತು ದಾರಿದ್ರ್ಯದ ದಾಸ್ಯದಲ್ಲಿ ತಮ್ಮ ಸಂತ್ರ ಮಂತ್ರಲೂ ವ್ಯರ್ಥವಾಗಿ ತಿರುಗುವ ಮನುಷ್ಯರು ಇರುವಾಗ ಯಾವ ಸಂತನು ಸ್ವಸ್ಥ ಕೂಡ್ರುವನೋ ಅವನೆಂಥ ಸಂತನು ? ತಮ್ಮ ಜ್ಞಾನದಿಂದ, ಪಾವಿತ್ರ್ಯದಿಂದ, ಸಾಮರ್ಥ್ಯದಿಂದ ಮತ್ತು ಶರೀರದಿಂದ ದೀನ ಜನರನ್ನು ದಾಸ್ಯದಿಂದ ಮುಕ್ತ ಮಾಡುವದು ಪ್ರತಿಯೊಬ್ಬ ಮಹಂತನ ಕರ್ತವ್ಯವೇ ಇರುವದು. ಶ್ರೀ ಸಮರ್ಥರು ರಾಜಕಾರಣವನ್ನು ಮತ್ತು ಸಮಾಜ ಸೇವೆಯನ್ನು ಅಧ್ಯಾತ್ಮದ ಪವಿತ್ರ ಕ್ಷೇತ್ರದಲ್ಲಿ ಅಳವಡಿಸಿದರು. ಅತ್ಯಂತ ನಿಸ್ಪೃಹತೆ, ಅಲಿಪ್ತತೆ, ನಿಷ್ಕಾಮತೆ, ನಿಸ್ವಾರ್ಥತೆ, ಮತ್ತು ಸೇವಾಭಾವ ಈ ಗುಣಗಳು ಮಹಂತನ ಪಂಚಪ್ರಾಣ ಇರುವವು. ಭಗವಂತನ ಅನುಸಂಧಾನ ಇಲ್ಲದೆ ಮೇಲಿನ ಗುಣಗಳು ಶಾಶ್ವತವಾಗಿ ಉಳಿಯಲಿಕ್ಕೆ ಸಾಧ್ಯವಿಲ್ಲ. ಶ್ರೀ ಸಮರ್ಥರ ಮಹಂತನು ಮೊದಲು ಭಕ್ತನು, ಅನಂತರ ಮಹಂತನು ಆಗಿರುತ್ತಾನೆ. ಈ ಉದ್ದೇಶವನ್ನು ಮರೆಯಬಾರದು. ಶ್ರೀ ಸಮರ್ಥರ ಪ್ರತ್ಯಕ್ಷ ಉದಾಹಣೆಯಿಂದ ಮತ್ತು ವಿಲಕ್ಷಣವಾದ ಸಂಘಟನಾ ಚಾತುರ್ಯದಿಂದ ಅವರ ನೇತೃತ್ವದಲ್ಲಿ ಅನೇಕ ಉತ್ತಮ ಮಹಂತರು ಲೋಕ ಸಂಗ್ರಹವನ್ನು ಮಾಡುವದರಲ್ಲಿ ಯಶಸ್ವಿಗಳಾದರು.

## ೬. ಶ್ರೀ ಸಮರ್ಥರ ವಾಙ್ಮಯ

ಶ್ರೀ ಸಮರ್ಥರು ನಿಜವಾಗಿಯೂ ಬಹಳಷ್ಟು ಸಾಹಿತ್ಯ ನಿರ್ಮಾಣ ಮಾಡಿದರು. "ಏಕವೀಸ್ ಸಮಾಸಿ" ಅಥವಾ ಹಳೆಯ ದಾಸಬೋಧ, ಕರುಣಾಷ್ಟಕಗಳು, ರಾಮಾಯಣದಲ್ಲಿಯ ಸುಂದರಕಾಂಡ, ಮತ್ತು ಯುದ್ಧಕಾಂಡ. ಪಂಚೀಕರಣ ಇತ್ಯಾದಿ ಅಭಂಗಗಳು, ಹನ್ನೆರಡುಓವಿಯ ಶತಕಗಳು, ಪೂರ್ವಾರಂಭ, ಅಂತರ್ಭಾವ, ಆತ್ಮಾರಾಮ, ಚತುರ್ಥಮಾನ, ಪಂಚಮಾನ, ಮಾನಪಂಚಕ, ಜನಸ್ವಭಾವ, ಗೋಸಾವಿ, ಪಂಚಸಮಾಸಿ, ಸಪ್ತಸಮಾಸಿ, ಸಗುಣ ಧ್ಯಾನ, ನಿರ್ಗುಣಧ್ಯಾನ, ಜುನಾಟ ಪುರುಷ, ಷಡ್‌ರಿಪು ನಿರೂಪಣ, ಪಂಚೀಕರಣಯೋಗ, ಮನಾಚೆ ಶ್ಲೋಕ, ದಾಸಬೋಧ, ಇತರ ಸ್ಫುಟ ಪ್ರಕರಣಗಳು. ಕೆಲವೊಂದು ಓವಿ ಬದ್ಧ ಪತ್ರಗಳು ಮುಂತಾದವು ಪ್ರಸಿದ್ಧ ಸಾಹಿತ್ಯಗಳಾಗಿ ಇರುವವು. ದಾಸಬೋಧದಲ್ಲಿ ವಿವೇಕದ ಮೇಲೆ ವಿಲಕ್ಷಣವಾಗಿ ಒತ್ತಿ ಹೇಳಿದ್ದಾರೆ ಮತ್ತು ಯತ್ನವೇ ದೇವರು ಇನ್ನುತ್ತಿದ್ದ ಶ್ರೀಸಮರ್ಥರು ಅಂತಃಕರಣದಿಂದ ಎಷ್ಟು ಕೋಮಲ, ಪ್ರೇಮಳ ಮಾತ್ತು ಉತ್ಕಟವಾಗಿದ್ದರು ಎಂಬ ವಿಷಯವು ಅವರ ಕರುಣಾಷ್ಟಕವನ್ನು ಓದುವಾಗ ಪ್ರಕಟಗೊಳ್ಳುತ್ತದೆ. ಅವರಲ್ಲಿ ಜಬರದಸ್ತ ಪ್ರತಿಭೆಯಿತ್ತು. ಇದರಲ್ಲಿ ಸಂಶಯವೇ ಇಲ್ಲ ಆದರೆ ಅವರು ಹೇಗೆ ಅನುಭವಿಸಿದರೊ ಹಾಗೆಯೇ ಸರಳವಾದ ಸಾದಾ ಶಬ್ದಗಳಲ್ಲಿ ಅವರು ವಿವರಿಸಿರುವರು. ಆ ಸರಳತನದಲ್ಲಿ ಸದೃಢ ವಿಚಾರಗಳನ್ನು ಕಾವ್ಯದಲ್ಲಿ ಮಂಡಿಸಿರುವರು ಅವರಿಗೆ ಅನೇಕ ಭಾಷೆಗಳು ಬರುತ್ತಿದ್ದವು ಮರಾಠಿ, ಹಿಂದಿ, ಉರ್ದು ಈ ಭಾಷೆಗಳಂತೂ ಅವರಿಗೆ ಕರತಲಾಮಲಕವಾಗಿದ್ದವು. ವಿಷಯ ಹೇಳುವಾಗ ಹಿಂದಿ,ಉರ್ದು, ಫಾರ್ಶಿ, ಅರಬ್ಬಿ ಹಾಗೂ ಸಂಸ್ಕೃತ ಶಬ್ದಗಳ ಪ್ರವಾಹವು ಸಹಜವಾಗಿ ಹರಿದು ಬರುತ್ತಿತ್ತು. ಸಾಕಷ್ಟು ಸ್ಥಳಗಳಲ್ಲಿ ತಮಗೆ ಬೇಕಾದ ಹಾಗೆ ಹೊಸ ಶಬ್ದಗಳನ್ನು ಅವರು ತಯಾರಿಸಿದರು. ಮತ್ತು ವಿಷಯವನ್ನು ತಿಳಿಸಿಕೊಟ್ಟರು. ಅವರ ಭಾಷೆಯಲ್ಲಿ ಒಂದು ರೀತಿಯ ಉತ್ಸಾಹ ಇತ್ತು ಅವರ ಭಾಷೆಯು ಸಾದಾ ಹಾಗೂ ಸರಳವಾಗಿತ್ತು. ಇದು ನಿಜ. ಆದರೆ ಕೇಲವೇ ಶಬ್ದಗಳಲ್ಲಿ ಸರಿಯಾದ ಅರ್ಥ ನಿಸ್ಸಂದೇಹವಾಗಿ ಹೇಳುವ ಹತೋಟಿ (ಹಿಡಿತ) ಇತರರಲ್ಲಿ ಕಂಡು ಬರುವದಿಲ್ಲ. ಅವರ ಓವಿಯು ಸಣ್ಣದಾಗಿ ಕಾಣುತ್ತದೆ. ಆದರೆ ಒಳ್ಳೇ ಅರ್ಥ ಗರ್ಭಿತವಾಗಿದೆ. ಅನೇಕ ವಿಷಯದ ಸತತವಾದ ಚಿಂತನೆಯಿಂದ ಅವರ ವಿಚಾರದಲ್ಲಿ ಪ್ರಬಲವಾದ ಶಕ್ತಿ ತುಂಬಿತ್ತು. ಯಾವುದಾದರೂ ವಿಷಯವನ್ನು ಅವರು ಹೇಳಲಾರಂಭಿಸಿದರೆ ಆ ವಿಷಯದ ಅಪಾರವಾದ ಮಾಹಿತಿ ಅವರ ಮನಸ್ಸಿನ ಮುಂದೆ ಕೈ ಜೋಡಿಸಿ ನಿಲ್ಲುತ್ತದೆ. ಅವರ ಭಾಷೆಗೆ ವಿಲಕ್ಷಣವಾದ ಪ್ರವಾಹವು ಪ್ರಾಪ್ತವಾಗಿತ್ತು ಆ ಪ್ರವಾಹದಲ್ಲಿ ಕೆಲವೊಮ್ಮೆ ಶಬ್ದದ ಅಶುದ್ಧರೂಪ ಬಂದು ಹೋಗುತ್ತಿದ್ದರೆ, ಕೆಲವೊಮ್ಮೆ ವಾಕ್ಯ ರಚನೆಯು ಸರಳವಾಗಿ ಆಗುತ್ತಿತ್ತು. ಶ್ರೀ ಸಮರ್ಥರು ದೊಡ್ಡ ಸಿದ್ಧ ಮಹಾನುಭಾವರು ಇರುವದರಿಂದ ಅವರಲ್ಲಿ ಪ್ರತಿಭೆಯು ಯಾವಾಗಲೂ ಜಾಗ್ರತವಾಗಿರುತ್ತಿತ್ತು. ಅವರ ಮುಖದಿಂದ ಸಾಹಿತ್ಯವು ಹರಿದುಬರುತ್ತಿದ್ದಂತೆ ಅದನ್ನು ಕಲ್ಯಾಣಸ್ವಾಮಿ ಬರೆದು ಕೊಳ್ಳುತ್ತಿದ್ದರು.

## ೭. ಶ್ರೀ ದಾಸಬೋಧ

ಶ್ರೀ ಸಮರ್ಥರ ಸಾಹಿತ್ಯದ ಪೈಕಿ ಕೆಲವು ಆರತಿಯು ಹಾಗೂ ಇತರ ಕೆಲವು ಪದಗಳು, ಕರುಣಾಷ್ಟಕಗಳು, ಮನಾಚೆ ಶ್ಲೋಕ, ಮತ್ತು ದಾಸಬೋಧ ಈ ಸಾಹಿತ್ಯಗಳು ಬಹಳ ಲೋಕಪ್ರಿಯವಾಗಿರುವವು. ಮರಾಠಿ ಜನರ ಮನಸ್ಸಿನ ಮೇಲೆ ಇವುಗಳ ಪ್ರಭಾವ ಇನ್ನೂ ಅಚ್ಯುತ್ತಿದಂತಿದೆ. ಶ್ರೀ ದಾಸಬೋಧ ಇದು ಶ್ರೀ ಸಮರ್ಥರ ಪ್ರಧಾನವಾದ ಗ್ರಂಥವಿರುವದು. ಆ ಕಾಲದಲ್ಲಿಯ ರೀತಿಯಂತೆ ಅವರು ದಾಸಬೋಧವನ್ನು ಶ್ಲೋಕಗಳ ರೂಪದಲ್ಲಿ ರಚಿಸಿರುವರು. ದಾಸಬೋಧದಲ್ಲಿಯ ಓವಿಗಳು ಅತಿ ಸರಳ ಹಾಗೂ ಸಾದಾ ಇರುವವು. ಆ ಕಾಲದಲ್ಲಿ ಗದ್ಯ ವಾಡಿಕೆ ಯಲ್ಲಿರುವದರಿಂದ ಶ್ರೀ ಸಮರ್ಥರಿಗೆ ದಾಸಬೋಧವನ್ನು ಗದ್ಯ ರೂಪದಲ್ಲಿಯೇ ಹೇಳುವದು ಅತಿ ಸಮಂಜಸವೆನಿಸಿತು. ದಾಸಬೋಧದಲ್ಲಿ ಒಟ್ಟು ಇಪ್ಪತ್ತು ದಶಕಗಳು, ಎರಡು ನೂರು ಸಮಾಸಗಳು ಇರುವವು. ಒಟ್ಟು ಓವಿಗಳ ಸಂಖ್ಯೆಯು ಏಳು ಸಾವಿರದಾ ಏಳುನೂರಾ ಐವತ್ತೊಂದು ಇರುವವು.

ಆತ್ಮ ಸಾಕ್ಷಾತ್ಕಾರವಾದ ನಂತರ ಕೆಲವೇ ದಿನಗಳಲ್ಲಿ ಶ್ರೀ ಸಮರ್ಥರು ಹಳೆಯ ದಾಸಬೋಧವನ್ನು ರಚಿಸಿದರು. ಸ್ವಸ್ವರೂಪಾನುಭೂತಿಯ ಹೊಸತನ, ನಿರ್ಭಯಂತೆ, ನಿಸಂದಿಗ್ಧತೆ ಹಾಗೂ ನಿರ್ಭಿಡೆ ಇವುಗಳು ದಾಸ ಬೋಧದಲ್ಲಿ ಸ್ಪಷ್ಟವಾಗಿ ಕಂಡುಬರುವವು. ಆ ಮೇಲೆ ಶಕೆ ೧೫೮೧ ರಲ್ಲಿ ಹೊಸ ದಾಸಬೋಧವನ್ನು ರಚಿಸಿದರು. ಅದರಲ್ಲಿ ಆರನೆಯ ದಶಕದ ನಾಲ್ಕನೆಯ ಸಮಾಸದವರೆಗೆ ಬರೆದಿದ್ದರು, ಹೊಸ ದಾಸಬೋಧದ ವಿಸ್ತಾರವು ಏಳು ದಶಕಗಳವರೆಗೆ ಮಾತ್ರ ಇತ್ತು. ಮುಂದೆ ಮೊದಲೇ ಬರೆದು ಇಟ್ಟಿದ್ದ ಜ್ಞಾನ ದಶಕವನ್ನು ಜೋಡಿಸಿ ಎಂಟು ದಶಕದ ದಾಸಬೋಧವನ್ನು ತಯಾರಿಸಿದರು. ಆ ನಂತರ ಬೇರೆ ಬೇರೆ ವೇಳೆಯಲ್ಲಿ ಬೇರೆ ಬೇರೆ ಪ್ರಸಂಗಗಳ ನಿಮಿತ್ತವಾಗಿ ಬರೆದಿದ್ದ ಎಲ್ಲ ಸಮಾಸಗಳನ್ನು ಶ್ರೀ ಸಮರ್ಥರು ಒಂದೆಡೆಗೆ ಮಾಡಿದರು. ಅವುಗಳ ವರ್ಗೀಕರಣಮಾಡಿ ಹತ್ತು ಹತ್ತು ಸಮಾಸದ ಹೊಸ ಹನ್ನೆರಡು ದಶಕಗಳನ್ನು ತಯಾರು ಮಾಡಿದರು. ಅದನ್ನು ಅವರು ಮೊದಲು ಬರೆದಿದ್ದ ಎಂಟು ದಶಕಗಳಿಗೆ ಜೋಡಿಸಿ ಒಟ್ಟು ಇಪ್ಪತ್ತು ದಶಕಗಳಿರುವ ಈಗಿರುವ ದಾಸಬೋಧವನ್ನು ಸಿದ್ಧಪಡಿಸಿದರು. ೧೬೦೩ರಲ್ಲಿ ಮಾರ್ಗಶಿರ ಮಾಸದಲ್ಲಿ ಅಂದರೆ ತಮ್ಮ ನಿರ್ವಾಣ ಕಾಲದ ಕೇವಲ ಎರಡು ತಿಂಗಳ ಮೊದಲೇ ತಮ್ಮ ಕೈಯಿಂದ ಇಂದು ಪ್ರಚಲಿತವಿರುವ ದಾಸಬೋಧವನ್ನು ತಯಾರು ಮಾಡಿದರು. "ಅಧಿ ಕೇಲೆ ಮಗ ಸಾಂಗೀತಲೆ" ಇದು ಶ್ರೀ ಸಮರ್ಥರ ಮೂಲ ಮಂತ್ರವಾಗಿತ್ತು. ಆದ್ದರಿಂದ ದಾಸಬೋಧದಲ್ಲಿಯ ಅನೇಕ ಉಲ್ಲೇಖಗಳಿಂದ ಅವರು ಸ್ವತಃ ಪರಮಾರ್ಥ ಮತ್ತು ಲೋಕಸಂಗ್ರಹ ಹೇಗೆ ಮಾಡಿದರು, ಇದರ ಉತ್ತಮ ಕಲ್ಪನೆ ನಮಗೆ ಬರುತ್ತದೆ. ಆದರೂ ಆಧ್ಯಾತ್ಮವೇ ದಾಸಬೋಧದ ಪ್ರಾಣವಿರುವದು.

## ೮. ಸಮರ್ಥರ ತತ್ವಜ್ಞಾನ

ಶ್ರೀ ಸಮರ್ಥರ ಮನೆತನದಲ್ಲಿ ಮಾಧ್ವಸಂಪ್ರದಾಯ ಇತ್ತೆಂದು ಅನ್ನುತ್ತಾರೆ. ಮಧ್ವಾಚಾರ್ಯರು ಪೂರ್ಣ ದ್ವೈತ ಸಂಪ್ರದಾಯದವರಿದ್ದರು. ಇದು ಪ್ರಸಿದ್ಧವೇ ಇರುವದು. ಆದರೆ ಇದರ ವಿರುದ್ಧವಾಗಿ ಶ್ರೀ ಸಮರ್ಥರು ಸಂಪೂರ್ಣವಾಗಿ ಅದ್ವೈತ ಸಂಪ್ರದಾಯದವರಿದ್ದರು. ಇಲ್ಲಿ ಕೇವಲ ದಾಸಬೋಧದಲ್ಲಿಯ ತತ್ವ ಚಿಂತನೆಯನ್ನು ಸ್ವಲ್ಪದರಲ್ಲಿ ಅಂದರೆ ಸಾರಾಂಶ ರೂಪದಲ್ಲಿ ಹೇಳುವದಿದೆ. ಅದನ್ನು ಹೇಳುವ ಮೊದಲು ಮುಂದಿನ ವಿಷಯವನ್ನು ಲಕ್ಷ್ಯದಲ್ಲಿಡಬೇಕು. (ಒಂದು) ಶ್ರೀ ಸಮರ್ಥರು ಪಂಡಿತ ವರ್ಗದ ವಿದ್ವಾನ್ ಗ್ರಂಥಕಾರರಾಗಿದ್ದಿಲ್ಲ. ಅವರು ಆತ್ಮ ಸಾಕ್ಷಾತ್ಕಾರಿ ಸಂತರಾಗಿದ್ದರು. ಸ್ವಾನುಭವ ಸಂಪನ್ನರಾದ ಬ್ರಹ್ಮಜ್ಞಾನಿ ಪುರುಷರಾಗಿದ್ದರು. ಅಂದರೆ ವಿಷಯ ಪ್ರತಿಪಾದನೆ ಮಾಡುವಾಗ ಅವರು ಆತ್ಮ ಪ್ರತೀಚಿಗೆ ಸರ್ವೋಚ್ಚ ಮಹತ್ವ ಕೊಡುತ್ತಿದ್ದರು. (ಎರಡು) ದಾಸಬೋಧದ ರಚನೆಗೆ ಮೊದಲು ಅವರ ಜೀವನ ಸಂಬಂಧದ ತತ್ವಜ್ಞಾನವು ಅತ್ಯಂತ ನಿಶ್ಚಿತವಾಗಿತ್ತು. ಆದರೂ

ಮೊದಲು ಆಗಿ ಹೋಗಿದ್ದ ತತ್ವ ಚಿಂತಕರ ತತ್ವಜ್ಞಾನದ ಮೇಲೆ ಸೂಕ್ಷ್ಮ ರೀತಿಯಿಂದ ಅಭ್ಯಾಸ ಮಾಡಿದ್ದರು. ದಾಸಬೋಧದ ಆರಂಭದಲ್ಲಿಯೇ ಈ ವಿಷಯವನ್ನು ಅವರು ಸ್ಪಷ್ಟವಾಗಿ ಹೇಳಿರುವರು. (ಮೂರು) ಶ್ರೀ ಸಮರ್ಥರು ಪೂರ್ಣವಾಗಿ ಅದ್ವೈತಿಗಳಾಗಿದ್ದರು. ಅಂದರೆ ಇದರ ಅರ್ಥ ಇಷ್ಟೇ ಇರುವದು : ಅವರ ಮತವು ಅದ್ವೈತವಾದಿಗಳ ಮತಕ್ಕೆ ಬಹುತೇಕವಾಗಿ ಹೊಂದಾಣಿಕೆ ಆಗುತ್ತಿತ್ತು. ಅದ್ವೈತ ತತ್ವಜ್ಞಾನದ ಅಭ್ಯಾಸಮಾಡಿ ಆ ಮೇಲೆ ಅವರು ತಮ್ಮ ಮತವನ್ನು ನಿಶ್ಚಯಿಸಿದರು, ಎಂದು ಇದರ ಅರ್ಥವಲ್ಲ. ಶ್ರೀ ಸಮರ್ಥರ ಪ್ರತಿಭೆಯು ಪೂರ್ಣ ಸ್ವತಂತ್ರ ವಾಗಿತ್ತು. (ನಾಲ್ಕು) ಸದ್ವಸ್ತುರೂಪ ಪರಬ್ರಹ್ಮ ಅಂತರಾತ್ಮಾರೂಪ, ಈಶ್ವರ, ಮೂಲಮಾಯಾ, ಹಾಗೂ ಗುಣಮಾಯಾ, ದೃಶ್ಯವಿಶ್ವ, ಜೀವ ಮತ್ತು ಒಟ್ಟು ಮಾನವ ಜೀವನ ಇವುಗಳ ಮೂಲ ಸ್ವರೂಪವ ಪರಸ್ಪರ ಸಂಬಂಧವೇನು ಎಂದು ಸ್ಪಷ್ಟವಾಗಿ ಹೇಳುವ ಸಲುವಾಗಿ ಅವರು ದಾಸಬೋಧವನ್ನು ರಚಿಸಿದರು. (ಐದು) ದಾಸ ಬೋಧ ಎಂದರೆ ಗುರು ಶಿಷ್ಯರ ಸಂವಾದವಿದ್ದು, ಪ್ರತ್ಯೇಕ ಸಮಾಸದಲ್ಲಿ ಒಂದು ಹಾಗೂ ಅನೇಕ ಪ್ರಶ್ನೆಗಳಿಗೆ ಶ್ರೀ ಸಮರ್ಥರು ಉತ್ತರಗಳನ್ನು ಕೊಟ್ಟಿರುವರು. ಕೆಲವೊಂದು ವಿಷಯಗಳ ಮೇಲೆ ಸಾಮಾನ್ಯವಾಗಿ ಸಂಶಯಗಳ ಇಲ್ಲವೇ ತರ್ಕ, ವಿತರ್ಕ ಹೊರಡುವದು ಸಾಧ್ಯವಿರುವದು. ಅವನ್ನು ಶ್ರೀ ಸಮರ್ಥರೇ ಉದ್ಭವಿಸಿ ಅವರೇ ಅವುಗಳ ನಿರಸನ ಮಾಡಿರುವರು. ಕೆಲವು ಸಲ ಹೇಳಿದ್ದೇ ಹೇಳಿದರೂ ಅದರ ತಿಳುವಳಿಕೆಯು ಗ್ರಂಥಕಾರರಿಗೆ ಇಲ್ಲ ಎಂದಲ್ಲ. ವಿಷಯ ಪ್ರತಿಪಾದನೆಯು ಪ್ರವಾಹದ ಮಧ್ಯದಲ್ಲಿ ಶ್ರೀ ಸಮರ್ಥರು ಸ್ವತಃ ದ ವ್ಯಾವಹಾರಿಕ ಹಾಗೂ ಪಾರ ಮಾರ್ಥಿಕ ಅನುಭವವನ್ನು ಕೆಲವೇ ಶಬ್ದಗಳಲ್ಲಿ ಮಂಡಿಸಿರುವದು ಕಾಣಿಸುತ್ತದೆ. (ಆರು) ಶ್ರೀ ಸಮರ್ಥರು ಅನ್ನುವ ದೇನೆಂದರೆ, ದಾಸಬೋಧದಲ್ಲಿ ಈಶ್ವರ ಪ್ರಾಪ್ತಿಯ ನಿಶ್ಚಯಾತ್ಮಕ ಸಾಧನವೆಂದು ಭಕ್ತಿಮಾರ್ಗದ ಪ್ರತಿಪಾದನೆಯನ್ನು ಮಾಡಿರುವರು. ಆದರೆ ಶ್ರೀ ಸಮರ್ಥರ ಭಕ್ತಿಮಾರ್ಗವು ವಿಲಕ್ಷಣವಾದ ಬುದ್ಧಿ ಪ್ರಧಾನ ಉಳ್ಳದ್ದಾಗಿರುವದು ಕಂಡುಬರುವದು. (ಏಳು) ಶ್ರೀ ಸಮರ್ಥರಷ್ಟು ವಿವೇಕದ ಪುರಸ್ಕಾರವು ಭಾರತದಲ್ಲಿ ಅಷ್ಟೇ ಏಕೆ ? ಭಾರತದ ಹೊರಗಿನ ತತ್ವ ಚಿಂತಕರಲ್ಲಿ ಕ್ವಚಿತ್ತಾಗಿ ಕಂಡುಬರುವದು. ಯುರೋಪದಲ್ಲಿಯ ಮಹಾನ್ ತತ್ವಚಿಂತಕ ಸ್ಪಿನೋಝಾ; ಇವರು ಶ್ರೀ ಸಮರ್ಥರ ಸಮಕಾಲೀನರಿದ್ದರು. ಅವರು ಮಾತ್ರ ತಮ್ಮ ತತ್ವಚಿಂತನೆಯಲ್ಲಿ ವಿವೇಕಕ್ಕೆ ಪ್ರಾಧಾನ್ಯತೆ ಕೊಟ್ಟಿರುವರು. ಇದೊಂದು ಯೋಗಾಯೋಗವೆಂದು ಅನ್ನಿಸುತ್ತದೆ ಶ್ರೀ ಸಮರ್ಥರು ವಿವೇಕದ ಶಸ್ತ್ರದಿಂದ ಆ ಕಾಲದ ಸಮಾಜದಲ್ಲಿಯ ದೇವರ ವಿಷಯದಲ್ಲಿ ಹಾಗೂ ಸಾಧುಸಂತರ ವಿಷಯದಲ್ಲಿಯ ಕೆಲವೊಂದು ರೂಢಿಗಳನ್ನು– ವ್ಯರ್ಥ ಕಲ್ಪನೆಗಳನ್ನು ಪೂರ್ಣವಾಗಿ ಕಡಿದು ಹಾಕಿದರು. ವಿಜ್ಞಾನ ಪಂಡಿತರಂತೆ ಪ್ರತ್ಯಯದ ಮೇಲೆ, ಪ್ರಚೀತಿಯ ಮೇಲೆ ಅಂದರೆ ಪ್ರತ್ಯಕ್ಷ ಅನುಭವದ ಮೇಲೆ ಯಾವಾಗಲೂ ಪುಷ್ಟಿಕೊಡುತ್ತಿದ್ದರು. ವಿವೇಕದ ಶಕ್ತಿಯಿಂದ ಮನುಷ್ಯನು ಅಂತಃಕರಣದಿಂದ ವಿಶಾಲವಾಗಿ ಆತ್ಮಜ್ಞಾನಿಯಾಗಬಹುದು. ಇದಂತೂ ಅವರ ಸಿದ್ಧಾಂತವೇ ಆಗಿತ್ತು. (ಎಂಟು) ಸಮರ್ಥರು ಹುಟ್ಟಿದಂದಿನಿಂದ ಸ್ವತಃ ಆಧ್ಯಾತ್ಮದಮೇಲಿನಸ್ತರದಲ್ಲಿ ಇದ್ದರೂ, ಕೇವಲ ಸಾಮಾನ್ಯ ಮನುಷ್ಯರ ಮಟ್ಟದಲ್ಲಿಯೂ ಬಹಳ ಸಹಾನುಭೂತಿಯಿಂದ ವಿಚಾರ ಮಾಡುತ್ತಿದ್ದರು. ಇದರ ಅನುಭವವು ದಾಸ ಬೋಧದಲ್ಲಿ ಮೇಲಿಂದ ಮೇಲೆ ಬರುತ್ತದೆ. ಸಾಮಾನ್ಯ ಮನುಷ್ಯರಿಗೆ ದೇವರು ಬೇಕು. ಇದು ನಿಜ. ಆದರೆ ಅವರು ಪ್ರಪಂಚಕ್ಕೆ ಧಕ್ಕೆಯಾಗದಂತೆ ನಡೆಮಕೊಳ್ಳಬೇಕಾಗುತ್ತದೆ ಆದ್ದರಿಂದ ಮನುಷ್ಯನು ಪ್ರಪಂಚ ಮಾಡಬೇಕು. ಆದರೆ ಅದನ್ನು ಮಾಡುತ್ತಿರುವಾಗಲೇ ಭಗವಂತನನ್ನು ಮಾತ್ರ ಮರೆಯಬಾರದು. ಹೀಗೆಂದು ಶ್ರೀ ಸಮರ್ಥರು ಹೇಳುತ್ತಾರೆ (ಒಂಭತ್ತು) ಭಾರತೀಯ ಸಮಾಜವು ಏಕೆ ಹಿಂದೆ ಬಿತ್ತು? ಇದರ ಕಲ್ಪನೆಯನ್ನು ಚಿಕಿತ್ಸಾ ರೂಪದಲ್ಲಿ ವಿಚಾರ ಮತರು ವಿಚಾರ ಮಾಡಿರುವರು. ಆದರೆ ಶ್ರೀ ಸಮರ್ಥರು ಅದಕ್ಕೆ ಎರಡು ಕಾರಣಗಳನ್ನು ಹೇಳುವರು ಸರಿಯಾಗಿ ವಿಚಾರ ಮಾಡದೇ ಇರುವದು ಇದು ಮೊದಲನೆಯ ಕಾರಣ. ಮತ್ತು ಪ್ರಯತ್ನಮಾಡದೇ ಇರುವ ದಿ ಎರಡನೆಯ ಕಾರಣವಿರುತ್ತದೆ. ಅವಿವೇಕ ಮತ್ತು ಆಲಸ್ಯ ಇವು ದುರ್ದೈವಿಯ ಅಥವಾ ಭಾಗ್ಯಹೀನನ ಲಕ್ಷಣಗಳ ಗಿರುವವು. ವಿವೇಕ ಮತ್ತು ಉದಂಡ ಕಷ್ಟ (ಸತತ ಪ್ರಯತ್ನ) ಇವು (ಸದೈವತನ) ಅಥವಾ ಭಾಗ್ಯವಾನ ಪುರುಷನ ಲಕ್ಷಣ ಗಳಾಗಿರುವವು. ಹೀಗೆಂದು ಅವರು ಸ್ಪಷ್ಟವಾಗಿ ಹೇಳಿರುವರು. ಶ್ರೀ ಅರವಿಂದರ ವಿಚಾರವೂ (ಅನಿಸಿಕೆ) ಇದೇ ಆಗಿತ್ತು. (ಹತ್ತು) ಶ್ರೀ ಸಮರ್ಥರು ಸಾಹಿತ್ಯದ ಶಕ್ತಿಯನ್ನು ಸರಿಯಾಗಿ ತಿಳಿದಿದ್ದರು. ಯಾರು ದಾಸಬೋಧದ

ಅಭ್ಯಾಸ ಮಾಡುವರೋ ಅವರಿಗೆ ಏನು ಫಲ ಸಿಗುವದೋ ಇದನ್ನು ಹೇಳುವಾಗ ಅವರು ಅನ್ನುವದೇನಂದರೆ– ಅಜ್ಞಾನ, ದುಃಖ, ಹಾಗೂ ಭ್ರಾಂತಿ ನಾಶ ಹೊಂದಿ ಬೇಗನೇ ವೈರಾಗ್ಯ ವೈಗೂಡುವದು. ಅದಕ್ಕೆ ವಿವೇಕದ ಸಂಗವೂ ಸಿಗುವದು. ಬದ್ಧನು ಮುಮುಕ್ಷು ಆಗಬಹುದು. ನಾಸ್ತಿಕನು ಭಕ್ತನಾಗಿ (ಆಸ್ತಿಕನಾಗಿ) ಮೋಕ್ಷ ಹೊಂದ ಬಹುದು. ಅನೇಕ ದೋಷಗಳು ಹೋಗಿ ಪತಿತನು ಪಾವನನಾಗುವನು. ದೇಹ ಬುದ್ಧಿಯು ಮುಮುಕಾರ ಹೋಗುತ್ತದೆ. ಸಂಸಾರದ ಉದ್ವೇಗ ನಷ್ಟವಾಗುತ್ತದೆ. ಅಧೋಗತಿ ತಪ್ಪುತ್ತದೆ. ಮತ್ತು ಮನಸ್ಸಿಗೆ ನಿಜವಾದ ವಿಶ್ರಾಂತಿ ದೊರೆತು ಅತ್ಯಂತ ಸಮಾಧಾನ ಹೊಂದುವರು." (ದಶಕ ೧, ಸಮಾಸ ೧, ಪುಟ ೨೭ ರಿಂದ ೩೭) ದಾಸಬೋಧವು ಅನೇಕರಿಗೆ ಈ ಫಲವನ್ನು ಕೊಟ್ಟಿರುವದು.

## ೯. ಪರಮ ಶ್ರೇಷ್ಠ ಜೀವನ ಧ್ಯೇಯ

ಜಗತ್ತಿನಲ್ಲಿ ಅನೇಕ ಪ್ರಕಾರದ ಪ್ರಾಣಿಗಳು ಇರುಯವು. ಪ್ರತಿಯೊಂದು ಪ್ರಾಣಿಯಲ್ಲಿ ತಿಳುವಳಿಕೆ ಇರುವದು. ಎಲ್ಲಿ ತಿಳುವಳಿಕೆ ಇರುವದೋ ಅಲ್ಲಿ ಬುದ್ಧಿಯು ಅಂಶ ಇರುವದು. ಆದರೆ ಕೇವಲ ಮನುಷ್ಯನ ಜೀವನ ದಲ್ಲಿ ಮಾತ್ರ ನಿಜವಾದ ಬುದ್ಧಿಯ ಆಟವು ಕಂಡು ಬರುವದು. ಮನುಷ್ಯನ ಬುದ್ಧಿಗೆ ವಿವೇಕದ ಸ್ವರೂಪವು ಬರುವದು. ವಿವೇಕದಲ್ಲಿ ಸಾರಾಸಾರ ವಿಚಾರ ಇರುತ್ತದೆ. ಶಾಶ್ವತ ಹಾಗೂ ಅಶಾಶ್ವತ ಇವುಗಳ ವಿಂಗಡನೆ ಆಗುತ್ತದೆ. ಸತ್ಯ ಮತ್ತು ಅಸತ್ಯದ ಭೇದವು ಸ್ಪಷ್ಟವಾಗಿ ಕಾಣಿಸುವದು. ಮತ್ತು ಆತ್ಮಾನಾತ್ಮದ ಶೋಧವು ನಿಶ್ಚಿತ ನಿರ್ಣಯು ವನ್ನು ಕೊಡುತ್ತದೆ. ಅಸಾರವನ್ನು ಬಿಟ್ಟು ಸಾರವನ್ನು ತೆಗೆದುಕೊಳ್ಳಬೇಕು. ಅಶಾಶ್ವತವನ್ನು ತ್ಯಜಿಸಿ ಶಾಶ್ವತವಾದ ದ್ದನ್ನು ಸ್ವೀಕರಿಸಬೇಕು. ಅಸತ್ಯ ಬಿಟ್ಟು ಸತ್ಯದ ಮಾರ್ಗವನ್ನು ಹಿಡಿಯಬೇಕು. ಮತ್ತು ಅನಾತ್ಮದ ಕಡೆಗೆ ವಿಮುಖ ನಾಗಿ ಆತ್ಮದ ಕಡೆಗೆ ಹೊರಳಬೇಕು. ಹೀಗೆ ಪ್ರೇರಣೆಯು ಆಗಬೇಕಾದರೆ ವಿವೇಕದ ಶಕ್ತಿಯಿಂದಲೇ ಆಗುವದು. ವಿವೇಕದ ಈ ಪ್ರೇರಣೆಯಲ್ಲಿ ಮಾನವೀ ಜೀವನದಲ್ಲಿಯ ವಿವಿಧ ಧ್ಯೇಯಗಳು, ಮೌಲ್ಯಗಳು, ಆದರ್ಶ ಒಳ್ಳೆಯದು ಮತ್ತು ಕೆಟ್ಟದ್ದರ ಕಲ್ಪನೆ. ನಾನಾ ಕಲೆ ಮತ್ತು ವಿದ್ಯೆ ಹಾಗೂ ಶಾಸ್ತ್ರಗಳು ಉದಯವಾಗುವವು. ಹೀಗೆ ಎಲ್ಲ ಧ್ಯೇಯಗಳ ಪೈಕಿ, ಮೌಲ್ಯಗಳ ಪೈಕಿ, ಆದರ್ಶದ ಪೈಕಿ, ವಿದ್ಯೆಯ ಪೈಕಿ, ದೇವರ ದರ್ಶನ – ಆತ್ಮದ ದರ್ಶನ, ಅಥವಾ ಪರಮಾರ್ಥ ದರ್ಶನ ಇವು ಅತ್ಯಂತ ಕಲ್ಯಾಣಮಯ, ಮಂಗಲಮಯ, ಜ್ಞಾನಮಯ ಮತ್ತು ಆನಂದ ಮಯ ಹೀಗೆ ಧ್ಯೇಯ ಹಾಗೂ ಮೌಲ್ಯಗಳು ಇರುವವು. ಮಾನವೀ ಜೀವನದಲ್ಲಿಯ ನಾನಾಪ್ರಕಾರದ ಧ್ಯೇಯಗಳಲ್ಲಿ ಪರಮಾರ್ಥದ ಕ್ರಮಾಂಕವು ಮೊದಲನೆಯ ಸಾಲಿನಲ್ಲಿ ಮೊದಲನೆಯದು ಇರುವದು.

## ೧೦. ಮಾನವ ದೇಹದ ವಿಶೇಷ ಮಹತ್ವ

ಭೋಗಾಸಕ್ತ ವಿಚಾರವಂತರು ಜಗತ್ತನ್ನು ಸಂಪೂರ್ಣವಾಗಿ ಸತ್ಯವೆಂದು ತಿಳಿಯುತ್ತಾರೆ. ತ್ಯಾಗ ಬುದ್ಧಿಯುಳ್ಳ ಸನ್ಯಾಸವಾದಿ ವಿಚಾರವಂತರು ಜಗತ್ತನ್ನು ಸಂಪೂರ್ಣ ಮಿಥ್ಯವೆಂದು ತಿಳಿಯುತ್ತಾರೆ. ಭೋಗಾಸಕ್ತ ಮನುಷ್ಯರು ದೇಹಕ್ಕೆ ಬಹಳ ಮಹತ್ವ ಕೊಡುತ್ತಾರೆ. ಏಕೆಂದರೆ ದೇಹದ ಮಾಧ್ಯಮದಿಂದಲೇ ಜಗತ್ತಿನಲ್ಲಿಯ ಎಲ್ಲ ಭೋಗಗಳನ್ನು ಭೋಗಿಸಲು ಶಕ್ಯವಾಗುವದು. ತ್ಯಾಗ ಬುದ್ಧಿಯುಳ್ಳವರು ದೇಹವನ್ನು ಕ್ಷುಲ್ಲಕವೆಂದು ತಿಳಿದು ಅದರ ನಿಂದೆ ಮಾಡುವದು ಕಂಡು ಬರುವದು. ಶ್ರೀ ಸಮರ್ಥರ ವಿಚಾರದಲ್ಲಿ (ಮತದಲ್ಲಿ) ಈ ಎರಡು ವಾದಗಳು ಅತಿರೇಕವಿರುವವು. ಮನುಷ್ಯನ ದೇಹವು ಅಸ್ಥಿ ಮಾಂಸದ ಮುದ್ದೆ ಇರುವದು, ನರಕದ ಚೀಲವಿದ್ದಂತೆ, ಮುಂತಾದವು ಎಲ್ಲವೂ ಸತ್ಯವಿದ್ದರೂ ಅದರಂತಹ ವಿಲಕ್ಷಣವಾದ ಯಂತ್ರವು ಇನ್ನೊಂದಿಲ್ಲ. ಮನುಷ್ಯರು ತಮ್ಮ ದೇಹದ ಉಪ– ಯೋಗ ಮಾಡಿಕೊಂಡು ಜಗತ್ತಿನಲ್ಲಿ ನಾನಾ ಪ್ರಕಾರದ ವಿದ್ಯೆ, ಕಲೆ, ಯೋಗ ಮತ್ತು ಭೋಗಗಳನ್ನು ಸಂಪಾದನೆ ಮಾಡುವದಂತೂ ನಿಶ್ಚಳವಾಗಿ ಕಾಣಿಸುತ್ತದೆ. ಆದರೆ ಜಗತ್ತಿನಲ್ಲಿಯ ಅತ್ಯಂತ ದೊಡ್ಡ ಬ್ರಹ್ಮಜ್ಞಾನಿ ಪುರುಷರು

ದೇಹದ ಉಪಯೋಗ ಮಾಡಿಕೊಂಡೇ ಆತ್ಮಸಾಕ್ಷಾತ್ಕಾರವನ್ನು ಮಾಡಿಕೊಂಡಿರುವರು. ಆತ್ಮವು ಎಲ್ಲಕ್ಕಿಂತಲೂ ಶ್ರೇಷ್ಠವೆಂಬುದು ನಿಜ, ಆದರೆ ದೇಹವು ಇಲ್ಲದಿದ್ದರೆ ಅದಕ್ಕೆ ಜಗತ್ತಿನಲ್ಲಿ ಸ್ವಂಶದ ಅಸ್ತಿತ್ವ ಹಾಗೂ ಸಾಮರ್ಥ್ಯವನ್ನು ಪ್ರಕಟಗೊಳಿಸಲು ಬರುವದಿಲ್ಲ. ಆದ್ದರಿಂದಲೇ ಸಾಧಕ ಮನುಷ್ಯನು ದೇಹದ ಮಹತ್ವವನ್ನು ಸರಿಯಾಗಿ ತಿಳಿದುಕೊಳ್ಳಬೇಕು. ದೇಹವನ್ನು ಭೋಗಕ್ಕೆಡೆಮಾಡಿಕೊಡಬಾರದು. ಹಾಗೆಯೇ ಅದರತ್ಯಾಗವನ್ನೂ (ಸನ್ಯಾಸ) ಮಾಡಬಾರದು. ಆದರೆ ಪರಮಾರ್ಥದ ಸಲುವಾಗಿ ಮಾತ್ರ ಅದನ್ನು ಸಂಪೂರ್ಣವಾಗಿ ಉಪಯೋಗಿಸಬೇಕು.

## ೧೧. ಪರಬ್ರಹ್ಮ ಸ್ವರೂಪ.

ಕಠೋಪನಿಷತ್ ಭಾಷ್ಯದಲ್ಲಿ ಶ್ರೀ ಶಂಕರಾಚಾರ್ಯರು ಹೇಳುವದೇನಂದರೆ :

ಬುದ್ಧಿಃ ಹಿ ನಃ ಪ್ರಮಾಣಂ ಸದಸತೋಃಯಥಾತ್ಮ್ಯೇ ಅವಗಮೆ ।

**ಅರ್ಥ:**– ಸತ್ ವ ಅಸತ್ ಆತ್ಮಾ ವ ಅನಾತ್ಮಾ ಇವುಗಳ ಯಥಾರ್ಥ ಸ್ವರೂಪವು ತಿಳಿಯುವದಕ್ಕಾಗಿ ಬುದ್ಧಿಯೇ ನಮಗೆ ಪ್ರಮಾಣವಿರುವದು· ಕಠ. ಅ. ೨. ವ. ೩. ಶ್ಲೋಕ ೧೨" ಈ ವಿಶ್ವದ ರಚನೆಯಲ್ಲಿ ಆತ್ಮ-ವಸ್ತು ಮತ್ತು ಅನಾತ್ಮವಸ್ತು ಹೀಗೆ ಎರಡು ಪದಾರ್ಥಗಳಿರುವವು. ವಸ್ತು ಯಾವುದೇ ಇರಲಿ ಅದರ ಅನುಭವ ಬರದ ಹೊರತು ಅದರ ಸ್ವರೂಪ ತಿಳಿಯುವದಿಲ್ಲ. ಆದರೆ ಅನುಭವಕ್ಕೆ ಯಾವ ಒಂದು ಮರ್ಯಾದೆ ಇರುತ್ತದೆಯೋ ಅದು ವಸ್ತುವಿನ ಜ್ಞಾನವಾಗಲಿಕ್ಕೆ ಒಂದು ಮಿತಿಯನ್ನು ಹಾಕುತ್ತದೆ. ಸಾಮಾನ್ಯವಾಗಿ ನಮ್ಮ ಬುದ್ಧಿಯು ಅನಾತ್ಮ ವಸ್ತುವಿಗೆ ಸಮ್ಮುಖವಾಗಿರುತ್ತದೆ ಅರ್ಥಾತ್ ಅನಾತ್ಮವಸ್ತು ಯಾವ ಸ್ಥಳ-ಕಾಲ ನಿಮಿತ್ಯದಿಂದ ಒಂದು ಮರ್ಯಾದೆಯಲ್ಲಿಯೇ ಇರುತ್ತದೆಯೋ ಆ ಮರ್ಯಾದೆಯು ಬುದ್ಧಿಗೆ ಬಂಧನ ಹಾಕುತ್ತದೆ. ಈ ಬಂಧನದಲ್ಲಿ ಇರುವ[ಓಡಾಡುವ] ಬುದ್ಧಿಯು ಯಾವಾಗ ಮರ್ಯಾದೆಯ ಆಚೆಗೆ ಇರುವಂತಹ ಆತ್ಮ ವಸ್ತುವಿನ ವರ್ಣನೆಯನ್ನು ಮಾಡುತ್ತದೆಯೋ ಆಗ ಅದು ತನ್ನ ಸಾಮಾನ್ಯ ಬುದ್ಧಿಯನ್ನು ತೊರೆದು ಮಾಡುತ್ತದೆ. ಆದ್ದರಿಂದ ಶ್ರೀ ಸಮರ್ಥರ ಪರಬ್ರಹ್ಮ ಅಥವಾ ಅದರ ಸದ್ವಸ್ತು ನಿರ್ಗುಣ, ನಿರ್ವಿಕಾರ, ನಿರಾಮಯವ, ನಿರಂಜನ, ನಿರ್ವಿಕಲ್ಪ, ನಿರಾಭಾಸ, ನಿಷ್ಪ್ರಪಂಚ,ನಿರಾಧಾರ,ನಿರಾಮಯ ನಿರುಪಾಧಿ, ನಿರುಪಮ, ನಿಃಸಂಗ, ನಿಶ್ಚಲ, ನಿಃಶಬ್ದ, ನಿರ್ದೋಷ, ನಿಃಕಾಮ, ನಿರ್ಲೇಪ ಅನಾಮ, ಅಜನ್ಮ, ಅನಂತ ಅಪ್ರತ್ಯಕ್ಷ, ಅಗಣಿತ, ಅಕ್ಷಯ, ಅರೂಪ, ಅಲಕ್ಷ್ಯ, ಅಪಾರ, ಅಢಳ, ಅತರ್ಕ್ಯ, ಅದ್ವೈತ, ಅದೃಶ್ಯ, ಅಚ್ಯುತ, ಅಚ್ಛೇದ್ಯ, ಅದಾಹ್ಯ, ಅಕ್ಲೇದ, ಹೀಗೆ ಯಾವತ್ತೂ ಮಾನವೀ ಕಲ್ಪನೆಗಳ ಮತ್ತು ಅನುಭವದ ಆಚೆಗೆ ಈ ವಸ್ತು ಇರುವದು. ಯಾವ ಬುದ್ಧಿಯಿಂದ ಅನಾತ್ಮ ದೃಶ್ಯಜಗತ್ತಿನ ಅನುಭವ ಬರುವದೋ ಆ ಜಗವು ಸದ್ವಸ್ತುವಿನ ಸ್ಥಳದಲ್ಲಿ ಇರುವದಿಲ್ಲ. ಆದ್ದರಿಂದ (ಈ ಕಾರಣವಾಗಿ) ಅನಾತ್ಮರತ ಬುದ್ಧಿಯಿಂದ ಸದ್ವಸ್ತುವಿನ ವರ್ಣನೆಯನ್ನು ಮಾಡುವಾಗ ಯಾವತ್ತೂ ದೃಶ್ಯಜಗತ್ತು ಅಲ್ಲಿ ಇರುವದಿಲ್ಲವೆಂದೇ ಹೇಳಬೇಕಾಗುತ್ತದೆ. ಹಾಗಾದರೆ ಆ ಪರಬ್ರಹ್ಮ ವಸ್ತು ಇರುವದಾದರೂ ಹೇಗೆ? ಶ್ರೀಸಮರ್ಥರು ಹೇಳುವಂತೆ (ಕವಾಲೀಚೆ ವಿಶಾಲ) ಅದು ಅದ್ಭುತ ಹಾಗೂ ವಿಶಾಲವಾಗಿ ಇದ್ದು ಸರ್ವಸ್ಥಳಗಳಲ್ಲಿ ಸೂಕ್ಷ್ಮವಾಗಿ ಹಾಗೂ ನಿರಂತರವಾಗಿ ತುಂಬಿಕೊಂಡಿರುತ್ತದೆ. ಯಾವತ್ತೂ ಪ್ರಾಣಿಗಳಿಗೆ ಇದರ ಅಖಂಡ ಭೆಟ್ಟಿ ಇರುವದು. ಇಷ್ಟೇ ಅಲ್ಲ, ಅವುಗಳ ಸರ್ವಅಂಗಕ್ಕೂ ಅದು ಅಂಟಿಕೊಳ್ಳುತ್ತದೆ. ಅನೇಕದಲ್ಲಿ ಒಂದೇಆಗಿಇರುವ ಪರಬ್ರಹ್ಮವು ಯಾವಾಗಲೂ ಇರುವಂಥದಾದಿರುತ್ತದೆ. ಯಾವಾಗಲೂ. ಎಲ್ಲೆಲ್ಲಿಯೂ ಅದುಇದ್ದಂತೆಯೇಇರುತ್ತದೆ. ರಾಜರಿಗೆ, ರಂಕರಿಗೆ, ಸ್ತ್ರೀಪುರುಷರಿಗೆ ಉಚ್ಚನೀಚರಿಗೆ ಬ್ರಾಹ್ಮಣರಿಗೆ ಮತ್ತು ಶೂದ್ರರಿಗೆ ಸಹ ಪರಬ್ರಹ್ಮವು ಸಂಪೂರ್ಣ ಒಂದೇ ರೀತಿಯದಾಗಿರುವದು. ಎಲ್ಲವನ್ನೂ ಕೂಡಿಕೊಂಡು ಬ್ರಹ್ಮವು ಒಂದೇ ಒಂದಾಗಿರುತ್ತದೆ· ಅದು ಇಂತಹದೇ ಒಂದು ಎಂದು ಹೇಳಲಿಕ್ಕೆ ಬರುವದಿಲ್ಲ. ಸರ್ವಸ್ಥಳಗಳಲ್ಲಿ ಇದ್ದೇ ಇರುವದು. ಯಾರಿಗೆ ಆ ವಸ್ತುವನ್ನು ನೋಡಬೇಕಾಗಿದೆಯೋ ಅವರು ಸ್ವತಃ ಅದೇಆಗಿ ನೋಡಬೇಕಾಗುತ್ತದೆ. ಯಾವನು ಅದೇ ಅದು ಆದನೋ ಅವನು ಅದರ ವರ್ಣನೆಯನ್ನು ಮೌನವಾಗಿ ಮಾಡುವನು.

## ೧೨. ಮೂಳ ಮಾಯಾ

ಪರಬ್ರಹ್ಮನಲ್ಲಿ ತದಾಕಾರ ಹೊಂದಿರುವ ಸಂತರಿಗೆ ಎಲ್ಲೆಲ್ಲಿಯೂ ಒಂದೇ ಒಂದಾದ ಘನದಾಟ (ಸಾರ ಭೂತವಾದ) ನಿರ್ಮಲ, ನಿಶ್ಚಲ, ನಿರ್ಗುಣ ಮತ್ತು ಗಗನಕ್ಕಿಂತಲೂ ದೊಡ್ಡದಾದಂಥ ಸದ್ವಸ್ತುವು ಪ್ರಚೀತಿಗೆ ಬರುವದು. ಆದರೆ ಈ ಅನುಭವ ಯಾರಿಗೆ ಇಲ್ಲವೋ ಅಂಥ ಸಾಮಾನ್ಯ ಮನುಷ್ಯರಿಗೆ ಅನಿತ್ಯ, ಚಂಚಲ, ಅನೇಕ ರೂಪದಿಂದ ತುಂಬಿರುವ, ಸಗುಣ, ವಿಷಮ ಮತ್ತು ಪರಿಚ್ಛಿನ್ನ ದೃಶ್ಯ ವಿಶ್ವವು ಪ್ರಚೀತಿಗೆ ಬರುವದು. ಸಂತರ ಅನುಭವವು ಪೂರ್ಣವಾಗಿ ಸತ್ಯವಾಗಿರುವದು ಈ ವಿಷಯ ನಿರ್ವಿವಾದವೆಂದು ತಿಳಿಯಬೇಕು. ಆದರೆ ಸಾಮಾನ್ಯ ಮನುಷ್ಯರ ಅನುಭವವೂ ಸಂಪೂರ್ಣವಾಗಿ ಅಸತ್ಯವಿರುವದಿಲ್ಲ. ಈ ಮಾತೂ ಅಷ್ಟೇ ನಿರ್ವಿವಾದವಾಗಿರುವದು. ಈ ವಿಷಯವನ್ನು ಬಿಡಿಸುವದಕ್ಕಾಗಿ ತಿಳಿಸುವದಕ್ಕಾಗಿ ಶ್ರೀ ಸಮರ್ಥರು ಮೂಲ ಮಾಯೆಯ ವರ್ಣನೆಯನ್ನು ಹೇಳುತ್ತಾರೆ. ಮೊದಲು ಪರಬ್ರಹ್ಮ ಒಂದೇ. ನಿತ್ಯ ಮುಕ್ತ, ಅಕ್ರಿಯ, ಅಖಂಡ ಮತ್ತು ಹೇಗಿದೆಯೋ ಹಾಗೇ ಇರುವದು. ಆದರಲ್ಲಿಂದಲೇ ಸ್ವತಃದ ತಿಳುವಳಿಕೆ ಉತ್ಪನ್ನವಾಗುವದು. "ನಾನು ಬ್ರಹ್ಮ ಇರುವೆನು" ಹೀಗೆ ಸ್ಮರಣೆ ಉತ್ಪನ್ನವಾಗುವದು. ಮೂಲದ ಹರಿ ಸಂಕಲ್ಪವೂ ಇದೇ ಆಗಿರುವದು. ನಿಶ್ಚಲವಾದ ಆಕಾಶದಲ್ಲಿ ಚಂಚಲ ವಾಯು ಉತ್ಪನ್ನವಾದರೂ ಆಕಾಶವು ಹೇಗೆ ಇತ್ತೋ ಹಾಗೆಯೇ ಇರುವದು (ಮೊದಲಿನಂತೇ ಇರುವದು). ಅದೇ ರೀತಿ ನಿಶ್ಚಲ ಪರಬ್ರಹ್ಮದಲ್ಲಿ ಚಂಚಲದ ಸಂಕಲ್ಪ ಉತ್ಪನ್ನವಾದರೂ ಪರಬ್ರಹ್ಮ ಹೇಗಿತ್ತೋ ಹಾಗೆಯೇ ನಿಶ್ಚಲವಾಗಿ ಉಳಿಯುವದು. ಮೂಲ ಮಾಯೆಯಲ್ಲಿ ಎರಡು ಭಿನ್ನವಾದ ಅಂಗಗಳಿರುವವು. ಶುದ್ಧ ಹಾಗೂ ಸಂಪೂರ್ಣ ಜ್ಞಾನ ಮಯ ತಿಳುವಳಿಕೆ ಇದೊಂದು ಅಂಗವಾದರೆ ಶಕ್ತಿ, ಗರ್ಭ, ಸಾಮರ್ಥ್ಯ ಇದು ಎರಡನೆಯ ಅಂಗವಿರುವದು. ಮೊದಲನೆಯ ಅಂಗಕ್ಕೆ ಮೂಲ ಸ್ವರೂಪ, ಈಶ್ವರ, ಜಗದೀಶ್ವರ, ಅಂತರಾತ್ಮಾ ಶಿವ ಹೀಗೆ ಅನ್ನುತ್ತಾರೆ. ಅವು ಗಳಿಂದ ಸರ್ವ ಕರ್ತೃತ್ವತನವು ಉದಯವಾಗುವದು. ಅವನೇ ನಿಜವಾದ ದೇವರು ಇರುತ್ತಾನೆ.

## ೧೩. ಗುಣ ಮಾಯಾ

ಮೂಲ ಮಾಯೆಯ ಯಾವ ಶಕ್ತಿ ಗರ್ಭವಿರುವದೋ ಅಂಗವಿರುವದೋ, ಅದರಲ್ಲಿ ಸತ್ವ, ರಜ, ತಮ ಈ ಮೂರು ಗುಣಗಳು ಮತ್ತು ಪಂಚ ಮಹಾಭೂತಗಳು ಸೂಕ್ಷ್ಮ ರೂಪದಲ್ಲಿ ಇರುತ್ತವೆ. ಅವಕ್ಕೆ ಗುಣ ಕ್ಷೋಭಿಣಿ ಅಥವಾ ಅಷ್ಟಧಾ ಪ್ರಕೃತಿ ಹೀಗೆ ಅನ್ನುವರು. ಗೋವಿನ ಜೋಳದ ತೆನೆಯನ್ನು ಸುಲಿಯುತ್ತ ಹೋದಂತೆ ಅದರಲ್ಲಿರುವ ಗುಪ್ತ ಕಾಳುಗಳು ಹೇಗೆ ಹೊರಗೆ ಬರುತ್ತವೆಯೋ ಅದರಂತೆ ಮೂಲ ಮಾಯೆಯು ಬಿಟ್ಟು ಹೋದಾಗ ಅದರಲ್ಲಿರುವ ಅಷ್ಟಧಾ ಪ್ರಕೃತಿಯು ಹೊರಗೆ ಬೀಳುತ್ತದೆ. ಈ ದೃಶ್ಯವಿಶ್ವ ಎಂದರೆ ತ್ರಿಗುಣ ಮತ್ತು ಪಂಚಭೂತ ಇವುಗಳ ಮಿಶ್ರಣವಿರುವದು. ಅಲ್ಲಲ್ಲಿ ದೊಡ್ಡ ಪ್ರವಾಹದ ರೂಪದಲ್ಲಿ,ಅಲ್ಲಲ್ಲಿ ಲತೆಯ ರೂಪದಿಂದ, ಅಲ್ಲಲ್ಲಿ ಕಥೆಯ ರೂಪದಿಂದ ಶ್ರೀ ಸಮರ್ಥರು ಮಾಯೆಯ ವರ್ಣನೆಯನ್ನು ಮಾಡಿರುವರು. ಪರಬ್ರಹ್ಮ ಮೊದಲು ಒಬ್ಬನೇ ಇದ್ದನು. ನಾನು ಬಹುರೂಪದಲ್ಲಿ ಆಗಬೇಕೆಂಬ ಇಚ್ಛೆಯು ಅವನಿಗೆ ಆಯಿತು. ಈ ಮೊದಲನೆಯ ಸ್ಫೂರ್ತಿಯಿಂದ ಮಾಯೆ, ತ್ರಿಗುಣ, ಪಂಚಭೂತಗಳು, ಅಹಂಕಾರ ಹೀಗೆ ಕ್ರಮವಾಗಿ ಈ ದೃಶ್ಯವಿಶ್ವವು ಸಾಕಾರವಾಯಿತು. ಯಾವ ಕ್ರಮ ದಿಂದ ವಿಶ್ವವು ಉತ್ಪನ್ನವಾಯಿತೋ ಅದರ ವಿರುದ್ಧ ಕ್ರಮದಿಂದ ಅದರ ಸಂಹಾರ ಆಗುತ್ತದೆ. ಈ ವಿಶ್ವದ ಪ್ರತ್ಯಕ್ಷ ಪ್ರಳಯ ಆಗುವದಿದ್ದರೆ ಆಗಲಿ, ಆದರೆ ಮನುಷ್ಯನು ವಿವೇಕದಿಂದ ತತ್ವ ಶೋಧನೆ ಮಾಡಿಕೊಂಡರೆ ಅವನಿಗೆ ಪ್ರಕೃತಿ ಯನ್ನು ಲಯ ಮಾಡಿ ಮೂಲ ಮಾಯೆಯವರೆಗೆ ಮುಟ್ಟಲು ಬರುವದು, ಆ ಮೇಲೆ ಮೂಲ ಮಾಯೆಯನ್ನು ದಾಟಿ ಶುದ್ಧಪರಬ್ರಹ್ಮನವರೆಗೆ ಹೋಗಲು ಬರುವದು. ಇದಕ್ಕೆ ವಿವೇಕ ಪ್ರಳಯವೆನ್ನುವರು.

## ೧೪. ವಿಶ್ವಮನ

ಜಗತ್ತಿನಲ್ಲಿ ನಾನಾ ಪಂಥ, ನಾನಾ ಮತಗಳು, ನಾನಾ ಪ್ರಕಾರದ ನಾಸ್ತಿಕರು ಇರುವರು. ತಮ್ಮ ಇಚ್ಛೆ ಸಫಲವಾಗಬೇಕೆಂದು ಇವರು ದೇವರನ್ನು ಭಜಿಸುತ್ತಾರೆ. ದೇವರ ಯಥಾರ್ಥ ಸ್ವರೂಪವನ್ನು ತಿಳಿದುಕೊಂಡು ಯಾರೂ ಅವನ ನಿಷ್ಕಾಮಭಕ್ತಿಯನ್ನು ಮಾಡುವದಿಲ್ಲ. ಹೀಗೆ ಪ್ರಸ್ತಾಪಿಸಿ ಶ್ರೀ ಸಮರ್ಥರು ಹೇಳುತ್ತಾರೆ. "ದೇವರ ಪೂಜೆಯಲ್ಲಿ ನಾಲ್ಕು ಪ್ರಕಾರಗಳು ಕಂಡುಬರುವವು. (೧) ಪ್ರತಿಮಾಪೂಜಾ – ಸಾಮಾನ್ಯ ಜನರು ಮೂರ್ತಿಯನ್ನೇ ದೇವರೆಂದು ತಿಳಿದು ಅದರ ಪೂಜಾ ಮಾಡುವರು. (೨) ಅವತಾರಪೂಜಾ – ದೇವರ ಹಾಗೂ ಸಂತರ ಅವತಾರಗಳು ಆಗಿ ಹೋಗಿರುವವು. ಅವರ ಚರಿತ್ರೆಯನ್ನು ಪಠಣ ಮಾಡಿ, ಕೆಲವು ಜನರು ಅವರ ಜಪ ಮಾಡುತ್ತಾರೆ. (೩) ಅಂತರಾತ್ಮನಪೂಜಾ – ಈ ವಿಶ್ವದ ಅಂತರ್ಯಾಮದಲ್ಲಿ ಇರುವ ಹಾಗೂ ತನ್ನ ಬಲದಿಂದ ಸಂಪೂರ್ಣ ವಿಶ್ವವನ್ನು ನಡೆಯಿಸುವ ಯಾವ ಮೂಲ ಪುರುಷನಿರುವನೋ ಅವನ ಪೂಜೆಯನ್ನು ಕೆಲವೇ ಜನರು ಮಾಡುತ್ತಾರೆ ಇವನು ದೃಷ್ಟಾ ಹಾಗೂ ಸಾಕ್ಷಿ ಇರುವನು. ಜ್ಞಾನಾತ್ಮ ಇರುವನು. ಇವನು ಎಲ್ಲ ಪ್ರಾಣಿಗಳ ಅಂತಃಕರಣದಲ್ಲಿ ತಿಳುವಳಿಕೆಯ ರೂಪದಲ್ಲಿ ಇದ್ದುದು ಅನುಭವಕ್ಕೆ ಬರುವದು. (೪) ನಿರ್ವಿಕಾರ ಪರಬ್ರಹ್ಮಪೂಜಾ– ಬ್ರಹ್ಮಜ್ಞಾನೀ ಸಂತರೇ ಈ ಪೂಜೆಯನ್ನು ಮಾಡಲು ಸಾಧ್ಯವಿರುವದು, ವನಸ್ಪತಿಗಳು, ಮೀನುಗಳು, ಪಶುಗಳು, ಪಕ್ಷಿಗಳು ಮತ್ತು ಮನುಷ್ಯರು ಈ ಎಲ್ಲ ಸಚೇತನ ಜೀವಿಗಳಲ್ಲಿ ತಿಳುವಳಿಕೆಯ ರೂಪದಿಂದ ವಾಸ ಮಾಡುವವನು ಅವನೇ ಅಂತರಾತ್ಮಾ, ಅವನೇ ನಿಜವಾದ ದೇವರು ಹೌದು. ಸಾಧಕನಿಗೆ ಆ ತಿಳುವಳಿಕೆಯು ವಿಶ್ವಮನದ ಮುಖಾಂತರವಾಗಿ ಅನುಭವಕ್ಕೆ ಬರುವದು. ಆ ವಿಶ್ವಮನಕ್ಕೆ ಸ್ವಂತದ ರೂಪವಾಗಲಿ, ಅಥವಾ ಸ್ವಂತದ ಆಕಾರವಾಗಲಿ ಇಲ್ಲ. ಉಪಾಸಕರ ಭಾವನೆ ಹೇಗೆ ಇರುವದೋ ಅದಕ್ಕನುಸಾರವಾಗಿ ಆಕಾರ ಅದಕ್ಕೆ ಬರುವದು. ಹಾಗೂ ಕೆಲವು ಕಾಲದ ನಂತರ ಅದು ಇಲ್ಲದಾಗುವದು. ಜಗತ್ತಿನಲ್ಲಿ ಘಟಿಸುವ ಎಲ್ಲ ಘಟನೆಗಳನ್ನು ನಡೆಸುವ ಶಕ್ತಿಯು ಅಂತರಾತ್ಮನ ಹತ್ತಿರ ಇರುವದು. ಅವನು ಏನೆಲ್ಲವನ್ನು ಮಾಡುವನು, ಆದರೆ ಯಾವುದರಲ್ಲಿಯೂ ಅವನು ಅಂಟಿಕೊಳ್ಳುವದಿಲ್ಲ. ಇದೇ ನಿಜವಾದ ಸಾಧಕನ ನಿಜವಾದ ಆದರ್ಶವಿರುವದು. ಆ ಅಂತರಾತ್ಮನ ಹಾಗೆ ಸಾಧಕನು ಏನೆಲ್ಲವನ್ನು ಮಾಡುತ್ತಿರುವಾಗ, ತನ್ನ ಅಲಿಪ್ತತನವನ್ನು ಕಳೆದುಕೊಳ್ಳಬಾರದು. ಎರಡನೆಯ ಮಹತ್ವದ ವಿಷಯವೆಂದರೆ ಎಲ್ಲರ ಅಂತಃಕರಣವು ಒಬ್ಬ ವಿಶ್ವಮನದ ಅಂಶ ಇರುವದರಿಂದಲೇ ಯಾರ ಅಂತಃಕರಣವನ್ನೂ ನೋಯಿಸಬಾರದು. ಮತ್ತೊಬ್ಬರ ಅಂತಃಕರಣವನ್ನು ನೋಯಿಸುವ ರೀತಿಯು ಎರಡು ಬಗೆಯದಾಗಿದೆ. ಮತ್ತೊಬ್ಬರನ್ನು ದ್ವೇಷಮಾಡುವದು, ಅವರ ಅಹಿತ ಚಿಂತನೆ, ಅವರ ಬಗ್ಗೆ ಕೆಟ್ಟ ವಿಚಾರ ಪ್ರಕಟಗೊಳಿಸುವದು, ಇದೊಂದು ರೀತಿ. ಆದರೆ ಕಠೋರ, ತೀವ್ರ ಹಾಗೂ ಹೃದಯಕ್ಕೆ ಚುಚ್ಚುವಂತಹ ಮಾತನಾಡಿ ಮತ್ತೊಬ್ಬರನ್ನು ದುಃಖಿಗಳನ್ನಾಗಿ ಮಾಡುವದು, ಇದು ಎರಡನೆಯ ರೀತಿಯಾಗಿರುವದು. ಈ ಎರಡೂ ಪ್ರಕಾರಗಳನ್ನು ತಿರಸ್ಕರಿಸುವಕುರಿತು ಮೇಲಿಂದ ಮೇಲೆ ಒತ್ತುಕೊಟ್ಟು ಬರೆದುದು ದಾಸಬೋಧದಲ್ಲಿ ಕಾಣಿಸುವದು. ವಿಶ್ವಮನವನ್ನು ವಶಮಾಡಿಕೊಂಡವರ ಹಿಂದೆ ಭಾಗ್ಯವು ತಾನಾಗಿಯೇ ಬರುತ್ತದೆ. ಹೀಗೆ ಸಮರ್ಥರ ನಿರ್ಣಯ ಇರುವದು.

## ೧೫. ಅಜ್ಞಾನ, ಜ್ಞಾನ ಮತ್ತು ವಿಜ್ಞಾನ

ಶ್ರೀ ಸಮರ್ಥರ ಅಭಿಪ್ರಾಯದಲ್ಲಿ ಜಗತ್ತಿನ ಮನುಷ್ಯರಲ್ಲಿ ಮುಖ್ಯವಾಗಿ ಎರಡು ವರ್ಗಗಳು ಇರುತ್ತವೆ. ಒಂದನೆಯದು, ಜ್ಞಾನಿ ಮನುಷ್ಯರದು ಹಾಗೂ ಎರಡನೆಯದು ಅಜ್ಞಾನಿ ಮನುಷ್ಯರದು, ಆದರೆ ಅಜ್ಞಾನಿ ಮನುಷ್ಯರಲ್ಲಿ ಎರಡು ವರ್ಗಗಳಿರುವವು. ಒಂದು, ಆತ್ಮವಿಮುಖಅಜ್ಞಾನಿ ಮನುಷ್ಯರದು. ಅಥವಾ ಬದ್ಧರದು. ಮತ್ತು ಎರಡನೆಯದು ಆತ್ಮಸನ್ಮುಖಅಜ್ಞಾನಿ ಮನುಷ್ಯರದು, ಅಥವಾ ಮುಮುಕ್ಷು ಹಾಗೂ ಸಾಧಕ

ಮುಮುಕ್ಷುರದು. ಮೂರ್ಖ, ರಜೋಗುಣಿ, ತಮೋಗುಣಿ, (ಕಲಿತ) ಮೂರ್ಖ, ದುರ್ದೈವಿ, ಆಲಸಿ ಕುವಿದ್ಯೆಯು ಮನುಷ್ಯರು ಆತ್ಮವಿಮುಖ ಅಜ್ಞಾನಿ ಮನುಷ್ಯರೆಂದು ತಿಳಿಯಬೇಕು. ಸತ್ವಗುಣಿ, ಸದ್ವಿದ್ಯೆಯು, ನಿಸ್ಪೃಹ, ವಿರಕ್ತ, ಮುಮುಕ್ಷು, ಸಾಧಕ, ಸದಾಕಾಲವೂ ಭಕ್ತಿಯು ಮನುಷ್ಯರು – ಆತ್ಮಸನ್ಮುಖಅಜ್ಞಾನಿ ಮನುಷ್ಯರೆಂದು ತಿಳಿಯಬೇಕು. ಎಲ್ಲ ಪ್ರಾಣಿಗಳಲ್ಲಿ ತಿಳುವಳಿಕೆಯು ಕಲೆಯು ಇರುವದು. ಅದು ಜ್ಞಾನವುಯ ಇರುವದರಿಂದ ಎಲ್ಲ ಪ್ರಾಣಿಗಳ ವ್ಯವಹಾರವು ಜ್ಞಾನಕ್ಕನುಸಾರವಾಗಿ ನಡೆಯುವದು. ಇದು ಒಂದುವೇಳೆ ನಿಜವಿದ್ದರೂ ಲೌಕಿಕ ಜೀವನದಲ್ಲಿ ನಾವು ಯಾವುದಕ್ಕೆ ಜ್ಞಾನವೆನ್ನುವೆವೋ ಅದು ಮತ್ತು ಸಂಸಾರ ದುಃಖವನ್ನು ಬಿಡಿಸುವ ಹಾಗೂ ಬ್ರಹ್ಮದರ್ಶನ ಮಾಡಿಸುವ ಆ ಜ್ಞಾನವು, ಇವುಗಳಲ್ಲಿ ಸಾಕಷ್ಟು ದೊಡ್ಡ ವ್ಯತ್ಯಾಸವಿರುವದು. ಜ್ಞಾನದ ಹೆಸರಿನಲ್ಲಿ ಎಷ್ಟೋ ವಿಷಯಗಳು ಜಗತ್ತಿನಲ್ಲಿ ಕಂಡುಬರುವವು. ಆದರೆ ಜ್ಞಾನವೆಂದರೆ ಆತ್ಮಜ್ಞಾನವೇ ಆಗಿರುವದು. ನಿತ್ಯಾನಿತ್ಯ ವಿಚಾರವನ್ನು ಸತತವಾಗಿ ಮಾಡುವದರಿಂದ ಅನಿತ್ಯವು ಇಲ್ಲದಂತಾಗುವದು. ದೃಶ್ಯವು ಅಡಗಿ (ಕರಗಿ) ಹೋಗುವದು. ಮತ್ತು ನಮ್ಮ ಅಂತರ್ಯಾಮದಲ್ಲಿಯೇ ಇರುವ ನಿರ್ಮಲವಾದ ಆತ್ಮಸ್ವರೂಪವು ಸಾಕ್ಷಾತ್ಕಾರದ ರೂಪದಿಂದ ಪ್ರಚೀತಿಗೆ(ಅನುಭವಕ್ಕೆ) ಬರುವದು. ಈ ಆತ್ಮ ಸಾಕ್ಷಾತ್ಕಾರವು ಎಲ್ಲಿಯವರೆಗೆ ಆಗುವದಿಲ್ಲವೋ ಅಲ್ಲಿಯವರೆಗೆ ಉಳಿದುದೆಲ್ಲವೂ ಅಜ್ಞಾನವೆಂದು ತಿಳಿಯಬೇಕು. "ನಾನು ದೇಹ ಇರುವೆ" ಈ ವೃತ್ತಿಯಲ್ಲಿ ಅಂತರ್ಗತವಾಗಿರುವ ಜಾಗೃತಿ, ಸ್ವಪ್ನ ಮತ್ತು ಸುಷುಪ್ತಿ ಹೀಗೆ ಮೂರು ಅವಸ್ಥೆಗಳನ್ನು ದಾಟಿ ಜ್ಞಾನೀ ಪುರುಷನು "ನಾನು ಬ್ರಹ್ಮನಿರುವೆನು" ಅನ್ನುವ ಈ ವೃತ್ತಿಯು ಅಂತರ್ಗತದಲ್ಲಿ ಇರುವ ತುರ್ಯಾವಸ್ಥೆಯಲ್ಲಿ ಪ್ರವೇಶವಾಗುವದು. ತುರ್ಯಾವಸ್ಥೆಯಲ್ಲಿ ದೇಹದ ಹಾಗೂ ದೃಶ್ಯದ ಎಚ್ಚರವು ಉಳಿಯುವದಿಲ್ಲ. ಆದರೆ ನಾನು ನೋಡುತ್ತೇನೆ, ನಾನು ದೃಷ್ಟಾ ಹಾಗೂ ಸಾಕ್ಷಿ ಇರುವೆನು ಹೀಗೆ ತಿಳುವಳಿಕೆಯು ಶಿಲ್ಕು (ಬಾಕಿ) ಉಳಿಯುವದು. ಅದೂ ಕೂಡಾ ಇಲ್ಲದಾಗಿ ಮನಸ್ಸು ಯಾವಾಗ ಉನ್ಮನ ಆಗುವದೋ ಆಗ ನಿರ್ವಿಕಾರ, ನಿರ್ಮಲ, ಪರಬ್ರಹ್ಮನಲ್ಲಿ ತದಾಕಾರವು ಪ್ರಾಪ್ತವಾಗುವದು. ಈ ಸ್ಥಿತಿಗೆ ವಿಜ್ಞಾನವೆಂದು ಅನ್ನುವರು. ಇಲ್ಲಿ ಸಂಪೂರ್ಣವಾಗಿ ವೃತ್ತಿರಹಿತತನವಿರುತ್ತದೆ. ದೃಶ್ಯವು ಇದ್ದೂ ಇಲ್ಲದ ಹಾಗೆ ಆಗುತ್ತದೆ. ಮೊದಲು ಜ್ಞಾನದಿಂದ ಅಜ್ಞಾನವನ್ನು ಇಲ್ಲದಂತೆ ಮಾಡಬೇಕು ಆ ಮೇಲೆ ಜ್ಞಾನದ ಪರ್ಯವಸಾನವನ್ನು ವಿಜ್ಞಾನದಲ್ಲಿ ಪರಿವರ್ತಿಸಿಕೊಳ್ಳಬೇಕು. ದೇಹದ ಬುದ್ಧಿಯು ಅಳಿಸಿ ಹೋಗುವವರೆಗೆ ಆತ್ಮಜ್ಞಾನ ಆಗುವದಿಲ್ಲ. ಅದನ್ನು ಮಾಡುವದಕ್ಕಾಗಿ ಶ್ರೀ ಸಮರ್ಥರು ಸ್ಪಷ್ಟವಾಗಿ ಹೇಳುತ್ತಾರೆ. "ಶಿಷ್ಯ ಏಕಾಂತೀ ಬೈಸಾವೆ । ಸ್ವರೂಪೀ ವಿಶ್ರಾಂತೀಸ ಜಾವೆ । ತೇಣೆ ಗುಣೆ ದೃಢಾವೆ । ಪರಮಾರ್ಥ ಹಾ॥ [ದಾಸಬೋಧ ೫-೬-೫೮]. ಅರ್ಥ : ಶಿಷ್ಯನು ಏಕಾಂತದಲ್ಲಿ ಕೂಡಬೇಕು· ಸ್ವರೂಪದಲ್ಲಿ ವಿಶ್ರಾಂತಿ ಹೊಂದಬೇಕು. ಇದು ದೃಢಪಡುವಂತೆ ಮಾಡಿದರೆ ಇದಕ್ಕೆ ಪರಮಾರ್ಥ ಅನ್ನುವರು· ಸ್ವರೂಪವು ವಿಶ್ರಾಂತಿಯಲ್ಲಿ ಹೋಗುವದಕ್ಕಾಗಿ ಮನುಷ್ಯನು ಸ್ವತಃದ ಅಂತರಂಗದಲ್ಲಿ ಇಳಿಯಲು ಕಲಿಯಬೇಕು. ಅದು ಹೇಗೆ ಇಳಿಯಬೇಕು ಎನ್ನುವದನ್ನು ಈ ಸಾಧನೆಯು ಕಲಿಸುತ್ತದೆ.

## ೧೬. ಆತ್ಮ ಜ್ಞಾನದ ಸಾಧನೆ.

ಯಾವುದು ನಿಜ ಇದೆ ಎಂದು ನಿಃಸಂದೇಹವಾಗಿ ಅನಿಸುವದೋ ಅದಕ್ಕೆ ಮನಸ್ಸು ಅಂಟಿಕೊಳ್ಳುವದು ಇಂದ್ರಿಯಗಳಿಗೆ ಕಾಣಿಸುವ ದೃಶ್ಯ ಜಗತ್ತು ಇಂದು ನಮಗೆ ಸಂಪೂರ್ಣವಾಗಿ ನಿಜವೆಂದು ಅನಿಸುವದು. ಆದ್ದರಿಂದ ನಮ್ಮ ಮನಸ್ಸು ಅಲ್ಲಿ ಅಂಟಿಕೊಳ್ಳುವದು. ಅದು ದೃಶ್ಯದ ಕಡೆಗೆ ಸತತವಾಗಿ ಓಡುತ್ತದೆ. ಅದರ ಈ ಓಡುವಿಕೆಯು ನಿಲ್ಲಲಾರದೆ ನಮಗೆ ನಮ್ಮ ಅಂತರಂಗದಲ್ಲಿ ಇಳಿಯಲು ಬರುವದಿಲ್ಲ. ದೃಶ್ಯಕ್ಕೆ ಮನಸ್ಸು ಅಂಟಿಕೊಳ್ಳುವ ರೂಢಿಯನ್ನು ತಪ್ಪಿಸುವದಕ್ಕಾಗಿ ಈ ದೃಶ್ಯವು ಮಿಥ್ಯ ಇರುವದು, ನಿಜವಾದದ್ದಲ್ಲವೆಂಬ, ಖಾತ್ರಿಯಾಗಬೇಕು. ಅದು ಖಾತ್ರಿಯಾಗುವದಕ್ಕೆ ವಿವೇಕವೇ ದೊಡ್ಡ ಉಪಾಯವಾಗಿರುವದು. ಇಲ್ಲಿ ಒಂದು ಅತಿ ಮಹತ್ವದ ವಿಷಯವನ್ನು ಹೇಳಬೇಕೆಂದು ಅನಿಸುತ್ತದೆ. ಜಗತ್ತಿನಲ್ಲಿ ತತ್ವ ವಿಚಾರವನ್ನು ಮಾಡುವ ವಿಚಾರವಂತರು ಸಾಕಷ್ಟು ಆಗಿ ಹೋಗಿದ್ದಾರೆ.

ಅವರಲ್ಲಿ ಆತ್ಮಜ್ಞಾನಿಗಳು ಬೆರಳೆಣಿಕೆಯಷ್ಟು ಮಾತ್ರ ಇದ್ದರು ಆದರೆ ಇಂತಹ ಆತ್ಮಜ್ಞಾನಿ ವಿಚಾರವಂತರಲ್ಲಿ ಮಾನವೀ ಜೀವನದಲ್ಲಿ ವಿವೇಕಕ್ಕೆ ಸರ್ವಶ್ರೇಷ್ಠ ಸ್ಥಾನ ಕೊಡುವವರು ಕೇವಲ ಐದು ಜನ ತತ್ವ ಚಿಂತಕರು ಮಾತ್ರ ಕಂಡು ಬರುತ್ತಾರೆ. ೧) ಸಾಂಖ್ಯ ದರ್ಶನವನ್ನು ಹೇಳುವ ಕಪಿಲಾಚಾರ್ಯ ಎಂಬುವವರು. ೨) ಇಸ್ವಿಸನ್ ೨೭೦ ರಲ್ಲಿ ದೇಹ ಬಿಟ್ಟಿರುವ ರೋಮನ್ ತತ್ವ ಚಿಂತಕ "ಪ್ಲಾಟಿನಸ್", ೩)ಇಸ್ವಿಸನ್ ೮೧೦ರಲ್ಲಿ ದೇಹ ಬಿಟ್ಟಿರುವ"ಶಂಕರಾಚಾರ್ಯರು", ೪)ಇಸ್ವಿಸನ್ ೧೬೭೭ ರಲ್ಲಿ ಮೃತರಾದ ಜ್ಯೂನಿಯರ್ ತತ್ವಚಿಂತಕ ಸ್ಪಿನೋಝಾ ಮತ್ತು ೫) ಇಸ್ವಿಸನ್ ೧೬೮೨ ರಲ್ಲಿ ದೇಹ ಬಿಟ್ಟಿರುವ ಶ್ರೀ ಸಮರ್ಥ ರಾಮದಾಸ ಸ್ವಾಮಿಗಳು. ಸತ್ಯ ಯಾವುದು (ನಿಜ ಯಾವುದು) ಅಸತ್ಯ ಯಾವುದು ಇವುಗಳ ಆಯ್ಕೆ ಮಾಡುವದಕ್ಕಾಗಿ, ವಿವೇಕದಂತಹ ಅನ್ಯಸಾಧನೆ ಮತ್ತೊಂದಿಲ್ಲ ಎಂಬುದು ಸ್ಪಷ್ಟವಾಗಿ ಕಾಣಿಸುತ್ತದೆ. ಆದರೆ ವಿವೇಕದ ಸಾಮರ್ಥ್ಯದ ಮೇಲೆ ಶ್ರೀ ಸಮರ್ಥರ ವಿಶ್ವಾಸವು ಎಷ್ಟಿದೆ ಎಂದರೆ ಬೇರೆ ಇತರ ಯಾವುದೇ ಸಾಧನೆಯನ್ನು ಮಾಡಲಾರದೆ ಕೇವಲ ವಿವೇಕದ ಬಲದ ಮೇಲೆ ಮನುಷ್ಯನು ಆತ್ಮದರ್ಶನ ಮಾಡಿಕೊಳ್ಳಲು ಸಾಧ್ಯವೆಂದು ಅವರು ಎಚ್ಚರಿಸುತ್ತಾರೆ. ಸಂಸಾರ ತ್ಯಾಗ ನ ಕರಿತಾ । ಪ್ರಪಂಚ ಉಪಾಧಿ ನ ಸಾಂಡಿತಾ । ಜನಾ ಮಧ್ಯೆ ಸಾರ್ಥಕತಾ। ವಿಚಾರೇಚಿ ಹೋಯ ॥ (ದಾಸಬೋಧ ೬-೯-೨೪) ಅದರಂತೆ ಅವರು ದಾಸಬೋಧದ ಕೊನೆಗೆ ಹೀಗೆ ಹೇಳುತ್ತಾರೆ. ಕಾಹೀ ಸಾಂಡಾವೆ ಲಾಗತ ನಾಹಿ । ಕಾಹೀ ಮಾಂಡಾವೆ ಲಾಗತನಾಹೀ । ಏಕ ವಿಚಾರ ಶೋಧೂನ ಪಾಹೀ । ವಸ್ತೂಣಚಿ ಕಳೆ । (ದಾಸಬೋಧ ೨೦-೭-೨) ವೇದಾಂತ ಶಾಸ್ತ್ರದಲ್ಲಿ ಹೇಳಿರುವ ಆತ್ಮಾನಾತ್ಮ ವಿವೇಕ ಇದು ಶ್ರೀ ಸಮರ್ಥರ ಆತ್ಮ ಸಾಧನೆಯ ಆರಂಭವಿರುತ್ತದೆ. ಆದರೆ ಸಾಧನೆಯ ಮಧ್ಯದಲ್ಲಿ ಹಾಗೂ ಕೊನೆಯಲ್ಲಿ ಈ ಎರಡೂ ಅವಸ್ಥೆಗಳವರೆಗೆ ಅದು ಸಾಧಕನಿಗೆ ಸಹಾಯಕವಾಗಿರುತ್ತದೆ. ವಿವೇಕವು ನಿರ್ಮಾಣವಾಗಲು ಮೂರು ಕಾರಣಗಳು ಇರಲು ಸಾಧ್ಯ. ಪೂರ್ವ ಜನ್ಮದ ಪುಣ್ಯದಿಂದ ಈ ಜನ್ಮದಲ್ಲಿ ಆತ್ಮಜ್ಞಾನದ ಕಡೆಗೆ ಮನಸ್ಸು ತನ್ನಿಂದ ತಾನೆ ಹೊರಳುವದು. ಇದು ಮೊದಲನೆಯ ಕಾರಣ ಹೌದು, ಇಂತಹ ಮನುಷ್ಯರು ಬಹಳ ಕಡಿಮೆ ಕಾಣಿಸುತ್ತಾರೆ. ಜೀವನದಲ್ಲಿ ನಾನಾ ತರಹದ ಪ್ರಸಂಗಗಳು ಬಂದು ಅನೇಕ ದುಃಖಗಳನ್ನು ಭೋಗಿಸುವದು ಮತ್ತು ಅವಕ್ಕಾಗಿ ಮನಸ್ಸನ್ನು ಅಂತರಾತ್ಮನ ಕಡೆಗೆ ಹೊರಳಿಸುವದು ಇದು ಎರಡನೆಯ ಕಾರಣ ಇರುವದು. ಇಂತಹ ಮನುಷ್ಯರೂ ಕೂಡಾ ಕಡಿಮೆ ಕಾಣಿಸುತ್ತಾರೆ. ಉದಾಹರಣೆಗೆ: ಶ್ರೀತುಕಾರಾಮನಿಗೆ ಭೋಗಿಸಬೇಕಾದ ದುಃಖದ ಪ್ರಸಂಗಗಳು ಬಂದಂತೆ ಜಗತ್ತಿನಲ್ಲಿಯ ಎಷ್ಟೋ ಜನರ ಮೇಲೆ ಬರುತ್ತವೆ. ಆದರೆ ಅವುಗಳ ಪೈಕಿ ಬಹಳ ಕಡಿಮೆ ಜನರು ಮಾತ್ರ ಶಾಶ್ವತವಾಗಿ ಭಗವಂತನ ಕರೆಗೆ ತಿರುಗುತ್ತಾರೆ. ಸಂತರ ಸಂಗ ಹಿಡಿಯುವದು ಇದು ಮೂರನೆಯ ಉಪಾಯ ಇರುವದು. ಮೂರನೆಯ ಕಾರಣವೂ ಇರುವದು. ಸಂತರ ಅಂತಃಕರಣದಲ್ಲಿ ಆತ್ಮಾನಾತ್ಮ ವಿವೇಕವು ಅತ್ಯಂತ ಸ್ಥಿರವಾಗಿರುತ್ತದೆ. ಅಲ್ಲದೆ ಅಕ್ಷರಶಃ ಇಪ್ಪತ್ನಾಲ್ಕು ಗಂಟೆಗಳ ಕಾಲ ಅದು ಅವರ ಅಂತಃಕರಣದಲ್ಲಿ ಅತಿಶಯ ಪ್ರಜ್ವಲಿತವಾಗಿ ಇರುತ್ತದೆ. ಅವರ ಸಂಗದಲ್ಲಿ ಇರುವವರೆಗೆ ಆತ್ಮವು ಸತ್ಯವಿರುವದು ಹಾಗೂ ಅನಾತ್ಮವು ಅಸತ್ಯವಿರುವದು. ಇದಲ್ಲದೆ ಬೇರೆ ಯಾವುದು ತಪ್ಪಿ ಕೂಡ ಹೇಳಲು ಸಿಗುವದಿಲ್ಲ. ಆದ್ದರಿಂದ ಶ್ರೀ ಸಮರ್ಥರು ಇಡೀ ದಾಸಬೋಧದಲ್ಲಿ ಮೇಲಿಂದ ಮೇಲೆ ಸತ್ಸಂಗತಿಯಲ್ಲಿ ಇದ್ದು ಶ್ರವಣಮಾಡುವ ವಿಷಯವಾಗಿ ಬಹಳ ಆಗ್ರಹ ಪೂರ್ವಕವಾಗಿ ಹೇಳಿರುವರು. ಸಂತರ ಪ್ರತ್ಯಕ್ಷ ಸಂಗವು ಸತತವಾಗಿ ಸಿಗುವದು ಯಾವಾಗಲೂ ಶಕ್ಯವಿರುವದಿಲ್ಲ ಆದ್ದರಿಂದ ಸಂತರ ಗ್ರಂಥದ ಸಂಗವನ್ನು ಹಿಡಿಯಬೇಕು.

## ೧೭. ''ನನಗೆ ದೇವರು ಬೇಕು''

ಯಾವ ಪ್ರಕಾರವಾಗಿ ವಿವೇಕವು ಅಂತಃಕರಣದಲ್ಲಿ ಸ್ಥಿರವಾಗುತ್ತ ಹೋಗುತ್ತದೆಯೋ ಆ ಮಾನದಲ್ಲಿ ದೃಶ್ಯದ ಮೌಲ್ಯವು ಕಡಿಮೆಯಾಗುತ್ತ ಹೋಗುತ್ತದೆ. ಮತ್ತು ಆತ್ಮಸ್ವರೂಪದ ಮೌಲ್ಯವು ಹೆಚ್ಚುತ್ತಾ ಹೋಗುತ್ತದೆ. ಅದರ ಮೌಲ್ಯ ಹೆಚ್ಚಿದಂತೆ ಅದು ತನ್ನಿಂದ ತಾನೇ ಬೇಕೆನಿಸಲು ಹತ್ತುವದು. ಆದ್ದರಿಂದ ವಿವೇಕದಿಂದಲೇ ಮುಮುಕ್ಷು

ತನವು ಉದಯವಾಗುತ್ತದೆ. ಮುಮುಕ್ಷುತನಕ್ಕೆ ಎರಡು ಪ್ರಕಾರಗಳಿರುತ್ತವೆ. ಒಂದು ಪ್ರಕಾರವು ಬೇಡ ಅನ್ನುವ ಪ್ರಕಾರದ್ದು, ಇನ್ನೊಂದು ಪ್ರಕಾರ ಬೇಕೆನ್ನಿಸುತ್ತದೆ. ಯಾವ ದೃಶ್ಯದ ನಾದಕ್ಕೆ ನಾವು ಹತ್ತುತ್ತೇವೆಯೋ ಅದರ ಸಲುವಾಗಿ ಇಂದಿನವರೆಗಿನ ನಮ್ಮ ಆಯುಷ್ಯವು ವ್ಯರ್ಥವಾಗಿ ಹೋಯಿತು. ಆ ದೃಶ್ಯದಲ್ಲಿ ಸಿಲುಕಿಕೊಂಡಿರುವ ಮನಸ್ಸಿಗೆ ಈಗ ಬೇಡವೆಂದು ಒಳಗಿನಿಂದ ಅನಿಸುತ್ತದೆ. ಈ ಅನಿಸುವಿಕೆಯಲ್ಲಿ ನಿಜವಾದ ವಿರಕ್ತಿಯ ಮೂಲವಿರುವದು. ಆ ನಂತರದ ನಮ್ಮ ಆಯುಷ್ಯವನ್ನು ನಮ್ಮ ಆತ್ಮದರ್ಶನ ಮಾಡಿಕೊಳ್ಳುವದಕ್ಕಾಗಿ ಉಪಯೋಗಿಸಬೇಕು. ಈಗ ನಮಗೆ ನಿಜವಾಗಿ ದೇವರು ಬೇಕೆಂದು ಮನಃಪೂರ್ವಕವಾಗಿ ಅನಿಸುತ್ತದೆ. ಈ ಅನಿಸುವಿಕೆಯಲ್ಲಿ ನಿಜವಾದ ಭಕ್ತಿಯ ಮೂಲವಿರುವದು. ಇಲ್ಲಿ ಮೋಜಿನ ಸಂಗತಿ ಹೇಗಿರುವದೆಂದರೆ ವಿರಕ್ತಿ ಮತ್ತು ಭಕ್ತಿ ಒಂದಕ್ಕೊಂದು ಬಹಳೇ ಪೋಷಕ ಹಾಗೂ ಸಹಾಯಕವಾಗಿರುತ್ತವೆ. ಅನಾಸಕ್ತಿ ಇದು ವಿರಕ್ತಿಯ ಪ್ರಾಣವಿರುವದು. ಆದರೆ ತಳಮಳ ಇದು ಭಕ್ತಿಯ ಪ್ರಾಣವಿರುವದು. ಯಾವ ಮಾನದಿಂದ ದೃಶ್ಯದ ಮಹತ್ವವು ಮನಸ್ಸಿನಲ್ಲಿ ಇಳಿಯುತ್ತ ಹೋಗುತ್ತದೆಯೋ ಆ ಮಾನದಿಂದ ಮನುಷ್ಯನು ದೃಶ್ಯದ ಬಗ್ಗೆ ಉದಾಸೀನವಾಗುತ್ತ ಹೋಗುತ್ತಾನೆ. ಅವನ ಮನಸ್ಸಿನಲ್ಲಿ ಸಹಜವಾಗಿ ಭಗವಂತನ ಬಗ್ಗೆ ಉತ್ಕಟವಾದ ಭಾವ ಉದಯವಾಗುವದು. ಅದೇ ರೀತಿಯಲ್ಲಿ ಯಾವ ಮಾನದಿಂದ ಅಂತಃಕರಣ ದಲ್ಲಿ ತಳಮಳ ಬೆಳೆಯುತ್ತ ಹೋಗುತ್ತದೆಯೋ ಆ ಮಾನದಿಂದ ಮನುಷ್ಯನು ದೇಹದ ಸುಖದ ಬಗ್ಗೆ ಹಾಗೂ ಹೊರಗಿನ ವಸ್ತುವಿನ ಬಗ್ಗೆ ಉದಾಸೀನವಾಗುತ್ತ ಹೋಗುವನು. ಅರ್ಥಾತ್ ಅವನ ವೈರಾಗ್ಯಕ್ಕೆ ತೇಜವು ಹೆಚ್ಚಾ ಗುತ್ತದೆ. ಆದರೆ ವಿರಕ್ತಿ ಹಾಗೂ ಭಕ್ತಿ ಎರಡೂ ಸಾಧಿಸುವದಕ್ಕೆ ಅಭ್ಯಾಸವು ಬೇಕಾಗುತ್ತದೆ.

## ೧೮. ಸಾಧಕಾವಸ್ಥೆ

ವಿವೇಕದ ಮೇಲೆ ವಿಲಕ್ಷಣವಾದ ಒತ್ತುಕೊಡುವ ಶ್ರೀ ಸಮರ್ಥರು ದಾಸಬೋಧದಲ್ಲಿ ಅಕ್ಷರಶಃ ಮೇಲಿಂದ ಮೇಲೆ ಪ್ರಚೀತಿ ಮತ್ತು ಪ್ರತ್ಯಯ ಈ ಎರಡು ಶಬ್ದಗಳನ್ನು ಉಪಯೋಗಿಸುತ್ತಾರೆ. ಇಪ್ಪತ್ತನೆಯ ಶತಕದಲ್ಲಿಯ ವಿಜ್ಞಾನ ಪದ್ಧತಿಯ ವೈಶಿಷ್ಟ್ಯವೇನೆಂದರೆ ಆದರ ಮೂಲಕ ದೊರಕಿಸಿಕೊಂಡ ಎಲ್ಲ ಜ್ಞಾನವು ಪ್ರತ್ಯಯ ಕಾರಿ ಇರುತ್ತದೆ. ಯಾವ ಸಿದ್ಧಾಂತವು ಪ್ರತ್ಯಯಕಾರಿ ಇರುವದಿಲ್ಲವೋ, ಅದು ಅಷ್ಟೇ ಉತ್ತಮವಾಗಿದ್ದರೂ ಅದಕ್ಕೆ ಜ್ಞಾನವೆಂದು ವಿಜ್ಞಾನ ಪಂಡಿತರು ಮಹತ್ವಕೊಡುವದಿಲ್ಲ. ಭಾರತದಲ್ಲಿ ಹದಿನೇಳನೆಯ ಶತಕದಲ್ಲಿ ವಿಜ್ಞಾನದ ಬಗ್ಗೆ ಎಷ್ಟೂ ಅರಿವಿರಲಿಲ್ಲ. ಇಂಥ ಸಮಯದಲ್ಲಿಯೇ ಶ್ರೀ ಸಮರ್ಥರು ಪರಮಾರ್ಥದ ಕ್ಷೇತ್ರದಲ್ಲಿ ಪ್ರತ್ಯಯಕ್ಕೆ ಕೊಟ್ಟ ಮಹತ್ವವನ್ನು ನೋಡಿ ಮನಸ್ಸಿಗೆ ಅಚ್ಚರಿ ಆಗುತ್ತದೆ. ಹೀಗೆ ಪ್ರತ್ಯಯಕಾರಿ ಜ್ಞಾನಕ್ಕೆ "ರೋಕಡೆ" (ಪ್ರತ್ಯಕ್ಷ) ಎಂಬ ಶಬ್ದವನ್ನು ಅವರು ಉಪಯೋಗಿಸಿರುವರು. ನಮ್ಮ ವಿವೇಕವು ಯಾವ ನಿರ್ಣಯ ಕೊಡುತ್ತದೆಯೋ ಅದರ ನಿಜವಾದ ಸಾಕ್ಷಾತ್ ಅನುಭವದಿಂದ ನಿಶ್ಚಿತ ಜ್ಞಾನವಾಗುವದು. ಅದರ ಹೆಸರೇ ಪ್ರತ್ಯಯ ಅಥವಾ ಪ್ರಚೀತಿ ಎಂದು ಇರುವದು. ಪರಮಾರ್ಥದಲ್ಲಿ ಪ್ರಚೀತಿ ಬರುವದಕ್ಕಾಗಿ "ಉಪಾಸನಾ" ಇದು ಸರ್ವಶ್ರೇಷ್ಠ ಉಪಾಯವೆಂದು ಶ್ರೀಸಮರ್ಥರು ಹೇಳಿರುವರು. ಉಪಾಸನೆಯು ಬಹಳ ದೊಡ್ಡ ವಿದ್ಯೆ ಇರುವದು. ಅದನ್ನು ಕಲಿಯುವದಕ್ಕಾಗಿ ಆ ವಿದ್ಯೆಯಲ್ಲಿ ಪಾರಂಗತರಾಗಿರುವ ಆತ್ಮ ಸಾಕ್ಷಾತ್ಕಾರಿ ಪುರುಷರ ಕಡೆಗೆ ಹೋಗಬೇಕಾಗುತ್ತದೆ. ಇಂತಹ ಪುರುಷರಿಗೆ 'ಸದ್ಗುರು' ಎಂದು ಅನ್ನುತ್ತಾರೆ. ಅನೇಕ ವೇಳೆ ಸದ್ಗುರುಗಳು ಪ್ರಾಪ್ತರಾಗುತ್ತಾರೆ. ಆದರೆ ಸಚ್ಛಿಷ್ಯರು ಸಿಗುವದು ಕಠಿಣವಾಗಿರುವದು. ಉಪಾಸನೆಯಲ್ಲಿ ಬಹಿರಂಗ ಹಾಗೂ ಅಂತರಂಗ ಎರಡೂ ಇರುತ್ತವೆ. ಪೂಜಾ, ಪೋಥಿ, ಭಜನೆ, ಆರತಿ, ಶ್ರವಣ, ನಾಮಸ್ಮರಣ, ಇವು ಬಹಿರಂಗ ಎಂಬುದು ನಿಜ. ನಾನು ಇಲ್ಲ, ನೀನು ಇರುವೆ. ನೀನೇ ನಿಜವಾದ ಮಾಲಕನು, ಮತ್ತು ಪಾಲಕ ಹಾಗೂ ಚಾಲಕನಿರುವಿ. ನಿಜವಾದಕರ್ತೃ ನೀನೇ ಇರುವಿ. ನಿನ್ನ ಇಚ್ಛೆಯೇ ನನ್ನ ಇಚ್ಛೆ "ಈ ಭಾವನೆಯನ್ನು ರಕ್ಷಿಸಿಕೊಂಡು ಅವನ್ನು ಬೆಳೆಯಲು ಹಚ್ಚುವದು ಅಂತರಂಗದ ಉಪಾಸನೆಯು. ಉಪಾಸನೆಯ ನಿಜವಾದ ಅಭ್ಯಾಸವು ಅಂತರಂಗದಲ್ಲಿಯೇ ನಡೆಯುವದು. ಅದಕ್ಕಾಗಿ ಮನವನ್ನು ತಿರುವು - ಮುರುವು

(ಉಪರಾಟ) ಮಾಡಿ ಒಳಗಿನ ವೃತ್ತಿಯನ್ನು ಒಳಗೇ ಜೀರ್ಣಿಸಿಕೊಳ್ಳಬೇಕಾಗುವದು. ಈ ಅಭ್ಯಾಸದಲ್ಲಿ ಮುಳುಗಿರುವ ಉಪಾಸಕನಿಗೆ ಸಾಧಕ ಎನ್ನುವರು. ಶ್ರೀ ಸದ್ಗುರುಗಳ ಕೃಪಾಕಟಾಕ್ಷದಲ್ಲಿ ಈ ರೀತಿಯಿಂದ ಸಾಧನೆ ಮಾಡುವ ಸಾಧಕನಿಗೆ ಕೊನೆಗೆ ಆತ್ಮ ಸಾಕ್ಷಾತ್ಕಾರ ಆಗುತ್ತದೆ. ಶ್ರೀ ಸಮರ್ಥರು ಈ ದಿವ್ಯ ಅನುಭವದ ವರ್ಣನೆಯನ್ನು ಬಹಳ ಸುಂದರವಾಗಿ ಮಾಡಿರುವರು.

ಯಾವನಿಗೆ ಆತ್ಮಾನುಭವ ಆಗುತ್ತದೆಯೋ ಅವನ ಸಂದೇಹಗಳು ಬ್ರಹ್ಮಾಂಡದ ಹೊರಗೆ ಹೋಗುವವು. ಪಂಚಭೂತಗಳಿಂದ ನಿರ್ಮಿತವಾದುದೆಲ್ಲವೂ ಅವನಿಗೆ ತುಚ್ಛವಾಗಿ ಕಾಣುವದು, ಅವನಿಗೆ ಅನುಭವಗಳ ಕೊರತೆಯು ಹೆಚ್ಚು ಅನಿಸುವದಿಲ್ಲ. ಅವನಿಗೆ ರಾಜ ಭಯವಿಲ್ಲ. ಅಥವಾ ಅಗ್ನಿ ಭಯವಿಲ್ಲ, ಅವನು ಎಂದೂ ಬದಲಾಗುವದಿಲ್ಲ. ಆ ಅನುಭವದಲ್ಲಿ ಪ್ರಚೀತಿಗೆ ಬರುವ ಸ್ವಸ್ವರೂಪವು ಎಲ್ಲ ಕಡೆಗೂ ದಟ್ಟವಾಗಿ ತುಂಬಿಕೊಂಡಿರುವದು. ಪಂಚಭೂತದಲ್ಲಿ ಮಿಶ್ರಿತವಾಗಿದ್ದು ಪುನಃ ಪಂಚಭೂತದ ಆಚೆಗೆ ಇರುತ್ತದೆ. ಅದು ಅಖಂಡವಾಗಿ ಎದುರಿಗೇ ಇರುತ್ತದೆ. ಇಂದ್ರಿಯಗಳಿಂದ ಅದನ್ನು ಗುರುತಿಸಲು ಹೋದರೆ ಇಂದ್ರಿಯಗಳ ತಿಳಿದುಕೊಳ್ಳುವ ಶಕ್ತಿಯೇ ಇಲ್ಲದಂತಾಗುತ್ತದೆ. ಅದು ಮಳೆಯಲ್ಲಿ ನೆನೆಯುವದಿಲ್ಲ, ಅಗ್ನಿಯಲ್ಲಿ ಸುಡುವದಿಲ್ಲ, ಮಹಾಪೂರದಲ್ಲಿ ಹರಿದು ಹೋಗುವದಿಲ್ಲ. ಅದು ಆಕಾಶಕ್ಕಿಂತಲೂ ನಿರ್ಮಲ, ರೂಪರಹಿತ, ಅತಿಶಯ ಸೂಕ್ಷ್ಮ ಮತ್ತು ಕಲ್ಪನಾತೀತವಾಗಿ ವಿಶಾಲವಾಗಿರುವದು. ಅಭ್ಯಾಸದಿಂದ ಆ ಆತ್ಮಸ್ವರೂಪದಲ್ಲಿ ಸಾಧಕನು ತಾದಾತ್ಮ್ಯ ಹೊಂದುವನು. ಶ್ರೀ ಸಮರ್ಥರು ಅದಕ್ಕೆ ಆತ್ಮನಿವೇದನ ಎನ್ನುತ್ತಾರೆ. ಉಪಾಸನೆಯ ಪ್ರಾಥಮಿಕ ಅವಸ್ಥೆಯಲ್ಲಿ ದೇವ ಮತ್ತು ಭಕ್ತ ಒಬ್ಬರಿಗೊಬ್ಬರು ಭಿನ್ನವಾಗಿರುತ್ತಾರೆ. ಆದರೆ ಯಾವ ಪ್ರಮಾಣದಲ್ಲಿ ದೇವರ ಮಹಾಪೂಜೆಯು ಕೊನೆಗೆ ದೇವರಿಗೆ ಮಸ್ತಕವನ್ನರ್ಪಿಸುವನೋ ಆ ಪ್ರಮಾಣದಲ್ಲಿ ಉಪಾಸನೆಯು ಕೊನೆಗೆ ಉಪಾಸಕನು ತನ್ನ ತನವನ್ನು ಸಂಪೂರ್ಣವಾಗಿ ದೇವರ ಪಾದದಲ್ಲಿ ವಿಲೀನ ಮಾಡುವನು. ಈ ರೀತಿಯಲ್ಲಿ ದೇವ ಮತ್ತು ಭಕ್ತ ಒಬ್ಬರಲ್ಲೊಬ್ಬರು ಕೂಡಿ ಹೋಗುವರು. ತನ್ನ ಧ್ಯೇಯವು ಸಾರ್ಥಕವಾದುದರಿಂದ ಸಾಧಕನ ಸಾಧನೆಯು ಪೂರ್ಣತೆಗೆ ಮುಟ್ಟುತ್ತದೆ. ಅವನಿಗೆ ತನ್ನ ಜನ್ಮದ ಸಾರ್ಥಕತೆಯು ಆಯಿತೆಂದು ಅನಿಸುತ್ತದೆ. ಸಾಧಕನು ಅಜ್ಞಾನದ ಮೂರು ಅವಸ್ಥೆಗಳನ್ನು ದಾಟಿ ನಾಲ್ಕನೆಯ ಅವಸ್ಥೆಗೆ ಹೋಗುತ್ತಾನೆ.

## ೧೯. ಸಿದ್ಧಾವಸ್ಥೆ

ಪ್ರಪಂಚದಲ್ಲಿಯ ಆಘಾತಗಳಿಂದಾಗಲಿ ಅಥವಾ ದಾರುಣವಾದ ಅಪೇಕ್ಷಾ ಭಂಗದಿಂದಾಗಲಿ ಪೂರ್ವ ಪುಣ್ಯದ ಬಲದಿಂದ ಘಟಿಸಿದ ಸತ್ಸಂಗದಿಂದಾಗಲಿ, ಮನುಷ್ಯನಿಗೆ ಅನುತಾಪವಾದರೆ ಅವನು ಬದ್ಧನಾದವನು ಮುಮುಕ್ಷು ಆಗುತ್ತಾನೆ. ಅವನು ಅನುತಾಪಪೂರ್ವಕವಾಗಿ ಅವಗುಣಗಳ ತ್ಯಾಗ ಮಾಡುತ್ತಾನೆ. ಮತ್ತು ಸಂತರಿಂದ ಪರಮಾರ್ಥ ಶ್ರವಣ ಮಾಡುತ್ತಾನೆ. ಆ ಬಗ್ಗೆ ಸತತ ಮನನ ಮಾಡಿ ಅವನು ವಿವೇಕದ ಬಲದಿಂದ ವಿರಕ್ತಿ ಸಂಪಾದನೆ ಮಾಡುತ್ತಾನೆ. ಕೆಲವರು ಶ್ರೀ ಸದ್ಗುರುಗಳ ಮಾರ್ಗದರ್ಶನದಲ್ಲಿ ನಿಧಿಧ್ಯಾಸದ ಅಭ್ಯಾಸದಲ್ಲಿ ಸ್ವತಃ ತಮ್ಮನ್ನು ಅರ್ಪಿಸಿಕೊಂಡರು. ಸದ್ಗುರುಗಳ ಕೃಪೆಯಿಂದಲೇ ಅವರಿಗೆ ಆತ್ಮ ಸಾಕ್ಷಾತ್ಕಾರವಾಯಿತು. ತ್ಯಾಗದ ಹೊರತು ಪರ-ಮಾರ್ಥ ಸಾಧಿಸುವದಿಲ್ಲ. ಆದ್ದರಿಂದ ಸಾಧಕನು ಒಂದೆಡೆಗೆ ಅಭಾವದ, ಸಂಶಯದ, ಹಾಗೂ ಅಜ್ಞಾನದ ತ್ಯಾಗ ಮಾಡುತ್ತಾನೆ. ಹಾಗೂ ಮತ್ತೊಂದೆಡೆಗೆ ಅವನು ಸ್ವರೂಪದ ಅನುಸಂಧಾನದ ಸಂಗ ಮಾಡುವನು ! ಎಲ್ಲಿಯವರೆಗೆ ಅನುಸಂಧಾನದ ಅಭ್ಯಾಸ ದೃಢವಾಗಿ ಮಾಡಬೇಕಾಗಿದೆಯೋ, ಅಲ್ಲಿಯವರೆಗೆ ಸಾಧಕಾವಸ್ಥೆಯು ಇರುವದು. ಯಾವಾಗಲೂ ಸ್ವರೂಪಾನುಸಂಧಾನ ಇಟ್ಟುಕೊಳ್ಳುವದು ಸಹಜ ಸ್ವಭಾವವಾಯಿತೆಂದರೆ, ಸಿದ್ಧಾವಸ್ಥೆ ಪ್ರಾಪ್ತವಾಯಿತೆಂದು ತಿಳಿಯಬೇಕು. ಸಿದ್ಧನು ಹೊರಗಿನಿಂದ ಸಾಧಕನಾಗಿ ಕಂಡರೂ ಅಂತರ್ಯಾಮದಲ್ಲಿ ಅವನು ಪೂರ್ಣ ಸ್ವರೂಪಾ-

ಕಾರವೇ ಇರುತ್ತಾನೆ ಸ್ವರೂಪಾನಂದದಲ್ಲಿ ಯಾವಾಗಲೂ ತಲ್ಲೀನನಾಗಿರುವದರಿಂದ ಸಿದ್ಧನಿಗೆ ಬೇರೆ ಯಾವುದೇ ಉಪಾಧಿ ಮಾಡಬೇಕಾಗುವದಿಲ್ಲ. ತನ್ನ ಅಕ್ಷಯವಾದ ಆನಂದವನ್ನು ಯಾರೂ ಕಸಿದುಕೊಳ್ಳಲು ಸಾಧ್ಯವಿಲ್ಲವೆಂಬ ಖಾತ್ರಿಯಿಂದ ಅವನಿಗೆ ಸಿಟ್ಟು ಬರುವದಿಲ್ಲ. ಅವನ ಸ್ವಾರ್ಥವು ಇಲ್ಲವಾಗಿರುವದರಿಂದ ಅವನಿಗೆ ಆಶಾ ಭಂಗವಿಲ್ಲ. ದೃಶ್ಯದ ಭಾಸವು ಇಲ್ಲವಾಗಿರುವದರಿಂದ ಅವನಿಗೆ ಚಿಂತೆ, ಮಾನಾಪಮಾನ, ಶೋಕ, ಮೋಹ, ಗರ್ವ, ತಿರಸ್ಕಾರ ಇತ್ಯಾದಿ ವಿಕಾರಗಳು ಅವನನ್ನು ಬಂಧಿಸುವದಿಲ್ಲ. ವಿವೇಕದಿಂದ ಸ್ವರೂಪದಲ್ಲಿ ಮುಳುಗಿ ಹೋದಂಥ ಈ ಸಿದ್ಧನಿಗೆ ಬೇರೆತನ ಉಳಿಯುವದಿಲ್ಲ. ಪರಬ್ರಹ್ಮದಲ್ಲಿ ಸಮರಸ ಹೊಂದಿ ಈ ಜಗತ್ತಿನಲ್ಲಿಯೇ ಈ ಜೀವನದಲ್ಲಿ ವಿದೇಹಾವಸ್ಥೆಯನ್ನು ಪಡೆದುಕೊಂಡ ಈ ಸಿದ್ಧ ಪುರುಷನು ದೇಹವನ್ನು ಪ್ರಾರಬ್ಧಕ್ಕೆ ಬಿಟ್ಟು ನಿಃಸಂದೇಹವಾಗಿ ಜಗತ್ತಿನ ಕಲ್ಯಾಣಕ್ಕಾದಿ ಪ್ರಯತ್ನ ಮಾಡುವನು. ತಾನು ಯಾರು ? ದೇವರು ಯಾರು ? ಎಂಬ ನಿಃಸಂದೇಹವಾದ ಜ್ಞಾನ ಪ್ರಾಪ್ತವಾಗಿ ಪಾಪ-ಪುಣ್ಯಕ್ಕೆ ತಿಲಾಂಜಲಿ ಕೊಡುವ ಸಿದ್ಧಪುರುಷನು ಯಾವಾಗಲೂ ಮುಕ್ತನೇ ಇರುತ್ತಾನೆ. ಅವನ ದೇಹವು ಎಲ್ಲಿ ಬೀಳುವದೋ ಅದೇ ಪುಣ್ಯಭೂಮಿಯಾಗುವದು. ಶ್ರೀ ಸಮರ್ಥರು ಹೇಳುವದೇನಂದರೆ, ಸಾಗರದಲ್ಲಿ ಕೂಡಿದ ನದಿಗಳು ಪುನಃ ಬೇರೆಯಾಗಲು ಸಾಧ್ಯವಿಲ್ಲ. ಅದರಂತೆ ಪರಬ್ರಹ್ಮದಲ್ಲಿ ಕೂಡಿಕೊಂಡ ಸಿದ್ಧಪುರುಷನು ಅದರಿಂದ ವಿಭಕ್ತನಾಗುವದಿಲ್ಲ. (ಬೇರೆಯಾಗುವದಿಲ್ಲ). ಜೀವಂತತನದ ಅವನ ಮುಕ್ತಾವಸ್ಥೆಯು ಅಂತ್ಯಕಾಲದಲ್ಲಿಯೂ ಹಾಗೆಯೇ ಉಳಿಯುವದು. ಇದೇ ಬ್ರಹ್ಮಜ್ಞಾನದ ನಿಜವಾದ ಗುರುತಾಗಿದೆ. ಎಲ್ಲ ಪರಮಾರ್ಥದ ಮರ್ಮವು ಈ ಜೀವನದ ಮುಕ್ತಾವಸ್ಥೆಯಲ್ಲಿ ತುಂಬಿರುವದು.

## ೨೦. ಲೋಕ ಸಂಗ್ರಹ

ಪ್ರತಿಯೊಬ್ಬ ಮನುಷ್ಯನು ಅವನು ಅಗದೀ ಅಜ್ಞಾನಿಯೇ ಇರಲಿ ಅಥವಾ ಶ್ರೇಷ್ಠ ಬ್ರಹ್ಮಜ್ಞಾನಿಯೇ ಇರಲಿ, ಈ ಸಮಾಜದಲ್ಲಿಯೇ ಹುಟ್ಟುವನು, ಸಮಾಜದಲ್ಲಿಯೇ ಬಾಳುವನು, ಬದುಕುವನು. ಕೊನೆಗೆ ಈ ಸಮಾಜದಲ್ಲಿಯೇ ಮರಣ ಹೊಂದುವನು (ಸಾಯುವನು). ಸಾಮಾಜಿಕ ಜೀವನಕ್ಕೆ ಮೂರು ಅಂಗಗಳಿರುವವು. ಮೌಲ್ಯ ಇದು ಮೊದಲನೆಯ ಅಂಗ, ಆ ಮೌಲ್ಯಗಳ ಆವಿಷ್ಕಾರವಾಗುವದಕ್ಕೆ ಲೋಕ ಸಮೂಹ ತಯಾರಾಗುತ್ತವೆ. ಲೋಕ ಸಮೂಹ, ಅಥವಾ ಸಮಾಜ ಸಂಸ್ಥೆಗಳು ಇವು ಎರಡನೆಯ ಅಂಗಗಳು. ಆದರೆ ಲೋಕ ಸಂಗ್ರಹವೇ ಇರಲಿ,ಸಮಾಜ ಸಂಸ್ಥೆಯೇ ಇರಲಿ, ಅವುಗಳಲ್ಲಿ ಮನುಷ್ಯರೇ ಒಂದೆಡೆಗೆ ಕೂಡುತ್ತಾರೆ. ಆದ್ದರಿಂದ ವ್ಯಕ್ತಿ ಇವನು ಮೂರನೆಯ ಅಂಗವು. ಉದಾ : ಮಂದಿರವು ಇದು ಸಮಾಜ ಸಂಸ್ಥೆ ಇದ್ದಂತೆ "ಎಲ್ಲ ಜನರ ಮೇಲೆ ನಿಸ್ವಾರ್ಥವಾದ ಪ್ರೀತಿ ಮಾಡಲು ಕಲಿಯುವದು" ಈ ಮೌಲ್ಯವನ್ನು ಸಾಕಾರ ಮಾಡುವದಕ್ಕಾಗಿ ಮಂದಿರವೆಂಬ ಸಂಸ್ಥೆಯು ಜನ್ಮತಾಳಿತು. ಮಂದಿರದಲ್ಲಿ ಇರುವವರು ಅಥವಾ ಮಂದಿರಕ್ಕೆ ಹೋಗುವ ಯಾವ ಲೋಕ ಸಮೂಹವಿರುವದೋ ಅದು ಈ ಮೌಲ್ಯದ ಪಾರ್ಶ್ವ ಭೂಮಿಯ ಮೇಲೆ ತಯಾರಾಗಿರುತ್ತದೆ. ಅದಕ್ಕೆ ಆ ಸಮೂಹದಲ್ಲಿಯ ವ್ಯಕ್ತಿ-ವ್ಯಕ್ತಿಯ ಪರಸ್ಪರ ಸಂಬಂಧವು ಅತ್ಯಂತ ಯೋಗ್ಯ ನಿಸ್ವಾರ್ಥ ಪ್ರೀತಿಯಿಂದ ಕೂಡಿದ್ದು ಇರಬೇಕು. ಮಾನವ ಸಮಾಜದಲ್ಲಿ ಸಾಮಾನ್ಯವಾಗಿ ಸ್ವಾರ್ಥಿ ಜನರು ತುಂಬಿರುತ್ತಾರೆ. ಸಾಮಾನ್ಯ ಮನುಷ್ಯರು ಕಾಮ ವಾಸನೆಯ ಆಧೀನನಾಗಿರುತ್ತಾರೆ. ರಾಗ ಮತ್ತು ದ್ವೇಷ ಇವುಗಳಿಂದ ತುಂಬಿ ಹೋಗಿರುತ್ತಾರೆ. ಲೋಭಿ ಇರುತ್ತಾರೆ. ಮಾನವನ್ನೇ ಬಯಸುವವರು ಮತ್ತು ವಾಸನೆಯ ತೃಪ್ತಿಗಾಗಿ ಧಡಪಡಿಸುವವರು ಆಗಿರುತ್ತಾರೆ. ಇಂಥವರ ಅಂತರಂಗದಲ್ಲಿ ಯಾವಾಗಲೂ ಸಂಘರ್ಷ ನಡೆದಿರುತ್ತದೆ. ಸಾಮಾಜಿಕ ಜೀವನದಲ್ಲಿ ಇಂಥ ಮನುಷ್ಯರಲ್ಲಿ ಪರಸ್ಪರ ನಿಕಟ ಸಂಬಂಧ ಬಂದರೆ, ಅಲ್ಲಿಯೂ ಸಂಘರ್ಷ ಬರುವದು. ಅದರಿಂದ ಒಳಗೆ ಹಾಗೂ ಹೊರಗೆ ಸಮಾಧಾನ ಸಿಗುವದಿಲ್ಲ. ಸಾಧು ಪುರುಷರು ಸ್ವತಃದ ಅಂತರಂಗದಲ್ಲಿಯ ಸಂಘರ್ಷವನ್ನು ಸಂಪೂರ್ಣವಾಗಿ ಇಲ್ಲದಂತೆ ಮಾಡಿಕೊಂಡಿರುತ್ತಾರೆ. ನಿಸ್ವಾರ್ಥ ಪ್ರೇಮದಿಂದ ಸಮೂಹದಲ್ಲಿಯ ಸಂಘರ್ಷವನ್ನು ಇಲ್ಲದಂತೆಮಾಡುವ ಜೀವನ ಪದ್ಧತಿಗೆ ಲೋಕ ಸಂಗ್ರಹವೆನ್ನುವರು. ಯಾವ

ಲೋಕಸಮೂಹದಲ್ಲಿ "ನಾನು ನನ್ನ ಸಲುವಾಗಿ" ಹೀಗೆ ವ್ಯಕ್ತಿಯ ವೃತ್ತಿ ಇರುವದೋ ಅಲ್ಲಿ ಸಂಘರ್ಷವು ಅನಿವಾರ್ಯವಾಗುತ್ತದೆ. ಆದರೆ ಯಾವ ಲೋಕಸಮೂಹದೊಳಗೆ "ನಾನು ಜನರ ಸಲುವಾಗಿ" ಹೀಗೆ ಪ್ರತಿಯೊಬ್ಬರ ವೃತ್ತಿ ಇದ್ದರೆ ಅಲ್ಲಿ ಸಂಘಟಿತ ಕಾರ್ಯ ಘಟಿಸುತ್ತದೆ. ಮತ್ತು ಪರಸ್ಪರರಲ್ಲಿ ನಿರ್ಮಲವಾದ ಪ್ರೇಮವು ಉತ್ಪನ್ನವಾಗುವದು. "ನಾನು ಜನರ ಸಲುವಾಗಿ ಇರುವೆ" ಎಂಬ ಮಂತ್ರವನ್ನು ಜಪಿಸುವದರಿಂದ ಮನುಷ್ಯನು ನಿಸ್ವಾರ್ಥಿಯಾಗುವದಿಲ್ಲ. ಮನುಷ್ಯನಿಗೆ ದೇವರ ದರ್ಶನ ಬೇಕಾಗಿರುತ್ತದೆ. ದೇವರೆಂದರೆ ಅಂತರಾತ್ಮನೇ ಅಹುದು, (ಹೌದು) ಅಂತರಾತ್ಮನು ಸರ್ವ ಪ್ರಾಣಿ ಮಾತ್ರರ ಅಂತರಂಗದಲ್ಲಿ ವ್ಯಾಪಿಸಿರುವನು. ಆ ಅಂತರಾತ್ಮನನ್ನು ಪ್ರಸನ್ನಗೊಳಿಸುವ ಸಲುವಾಗಿ ಎಲ್ಲರ ಮನೋಗತವನ್ನು ಸಂತೋಷಗೊಳಿಸುವದು ಅವಶ್ಯವಾಗಿರುವದು. ಎಲ್ಲರ ಜೊತೆ ನಿಸ್ವಾರ್ಥ ಪ್ರೇಮದಿಂದ ನಡೆದು ಅತ್ಯಂತ ಮಧುರ ಭಾಷೆಯಿಂದ ಮತ್ತು ನಮ್ರತೆಯಿಂದ ಯಾರು ಮತ್ತೊಬ್ಬರ ಅಂತಃಕರಣವನ್ನು ವಶ ಮಾಡಿಕೊಳ್ಳುವರೋ, ಅವರೇ ಅಂತರಾತ್ಮನನ್ನು ಪ್ರಸನ್ನಗೊಳಿಸುವರು. ಇಂತಹ ಪುರುಷರ ದೇಹ ಬುದ್ಧಿಯು ತ್ವರಿತದಲ್ಲಿ ಕ್ಷೀಣವಾಗಿ ಅವರಿಗೆ ಆತ್ಮ ಸಾಕ್ಷಾತ್ಕಾರವಾಗುವದು. ಶ್ರೀ ಸಮರ್ಥರ ಲೋಕಸಂಗ್ರಹದ ಸ್ವರೂಪವು ಹೀಗೆ ಸೂಕ್ಷ್ಮ ಹಾಗೂ ಪಾರಮಾರ್ಥಿಕವಾಗಿದೆ.

## ೨೧. ಶ್ರೀ ಸಮರ್ಥರ ಮಹಂತನು

ಸಾಮಾನ್ಯ ಮನುಷ್ಯನ ಮನಸ್ಸು ಪರಿಸ್ಥಿತಿಗೆ ತಕ್ಕಂತೆ ಅಂಟಿಕೊಂಡಿರುತ್ತದೆ. ಪರಿಸ್ಥಿತಿಯು ಹೇಗೆ ಬದಲಾಗುವದೋ ಹಾಗೆ ಅವನ ಮನಸ್ಸು ಉಯ್ಯಾಲೆಯಾಡುತ್ತದೆ. ಹೊರಗಿನ ಪರಿಸ್ಥಿತಿ ಏನೇ ಇರಲಿ ಆದರೆ ನಮ್ಮ ಮನಸ್ಸು ಭಗವಂತನ ಕಡೆಗೆ ಇಡುವ ಸಾಮರ್ಥ್ಯ ನಮ್ಮಲ್ಲಿ ಇರುವದಿಲ್ಲ. ಆದ್ದರಿಂದ ಭಗವಂತನ ಸ್ಮರಣೆಯು ಸಹಜವಾಗಿ ಇರುವ ಹಾಗೆ ವಾತಾವರಣ ನಿರ್ಮಾಣ ಮಾಡಬೇಕಾಗುತ್ತದೆ. ದೇವರ ಉತ್ಸವ, ಸಾಮುದಾಯಿಕ ಭಜನೆ, ಪೂಜೆ, ನಿರೂಪಣ, ಕೀರ್ತನೆ, ತೀರ್ಥಯಾತ್ರಾ, ಸತ್ಸಂಗತಿ ಇತ್ಯಾದಿಗಳಿಂದ ಪಾರಮಾರ್ಥಿಕ ವಾತಾವರಣ ನಿರ್ಮಾಣವಾಗುತ್ತದೆ. ಆದರೆ ಇಂಥ ವಿಷಯಗಳಿಗೆ ಚಾಲನೆಯನ್ನು ಕೊಟ್ಟು ಅದರಲ್ಲಿ ಭಾಗವಹಿಸುವಂತಹ ವ್ಯಕ್ತಿಗಳನ್ನು ಪ್ರೇಮದಿಂದ ಒಂದೆಡೆಗೆ ತರುವದಕ್ಕಾಗಿ ಒಬ್ಬ ಅತ್ಯಂತ ನಿಸ್ಪೃಹ, ವಿರಕ್ತ, ಆದರೆ ಭಗವಂತನ ನಿರ್ಮಲವಾದ ಪ್ರೇಮದಿಂದ ತುಂಬಿರುವಂಥ ವ್ಯಕ್ತಿಯು ಬೇಕಾಗುತ್ತದೆ. ಆ ವ್ಯಕ್ತಿ ಎಂದರೆ ಶ್ರೀ ಸಮರ್ಥರ ಮಹಂತನು ಆಗಿರುವನು. ಅವನು ಸಮಾಜಕ್ಕೆ ಆದರ್ಶನಾಗಿರುತ್ತಾನೆ. ಅವನು ಯಾವಾಗಲೂ ಕಾರ್ಯನಿರತನಿದ್ದು ತನ್ನ ಶರೀರವನ್ನು ಪರೋಪಕಾರಕ್ಕಾಗಿ ಸವೆಸುತ್ತಾನೆ. ಎಲ್ಲ ಜನರು ಸುಖವಾಗಿರಬೇಕು, ಇದೊಂದೇ ಪ್ರೇರಣೆಯು ಅವನ ಕರ್ಮದ ಹಿಂದೆ ಇರುತ್ತದೆ. ಅವನು ಮತ್ತೊಬ್ಬರ ದುಃಖದಲ್ಲಿ ದುಃಖಿಯಾಗಿರುತ್ತಾನೆ. ಮತ್ತು ಮತ್ತೊಬ್ಬರ ಸುಖದಲ್ಲಿ ಸುಖವನ್ನು ಹೊಂದುತ್ತಾನೆ. ಎಲ್ಲಿ, ಯಾರಿಗಾದರೂ, ಏನಾದರೂ ಕಡಿಮೆ ಇದ್ದರೆ ಅಲ್ಲಿ ಸಹಾಯ ಮಾಡುವದಕ್ಕೆ ಅವನು ಮುಂದೆಯೇ ಇರುತ್ತಾನೆ. ಮತ್ತೊಬ್ಬರ ಅಂತಃಕರಣಕ್ಕೆ ಎಂದೂ ಧಕ್ಕೆಯಾಗದಂತೆ ಸಾಕಷ್ಟು ಜನರನ್ನು ಜಾಣರನ್ನಾಗಿ ಮಾಡುತ್ತಾನೆ. ಆತ್ಮಜ್ಞಾನ ಮತ್ತು ವೈರಾಗ್ಯ ಇವುಗಳಿಂದ ಶೋಭಿಸುವಂಥ ಆ ಮಹಂತನು ಯಾರಿಂದಲೂ ಏನನ್ನೂ ಅಪೇಕ್ಷೆಮಾಡದೆ ಎಲ್ಲರನ್ನೂ ಭಗವಂತನ ಭಕ್ತಿಯ ಕಡೆಗೆ ಹೊರಳಿಸುತ್ತಾನೆ. ಹೇಗೆ ಮಾತನಾಡುತ್ತಾನೆಯೋ ಹಾಗೆಯೇ ಅವನು ನಡೆದು ತೋರಿಸುತ್ತಾನೆ. ಅಷ್ಟೇ ಅಲ್ಲದೆ, ಸ್ವತಃ ಮೊದಲು ಪ್ರಚೀತಿ (ಅನುಭವ) ಪಡೆದುಕೊಂಡೇ ಆ ಮೇಲೆ ಅವನು ಜನರಿಗೆ ಅದನ್ನು ಹೇಳುತ್ತಾನೆ. ಅವನು ದೊಡ್ಡ ಚತುರನಿರುತ್ತಾನೆ, ಹೊತ್ತು ವೇಳೆ ನೋಡಿ ಅವನು ರಾಜಕಾರಣವನ್ನೂ ಕೂಡ ಮಾಡುತ್ತಾನೆ, ಲೋಕಸಮುದಾಯದಲ್ಲಿ ಅನೇಕ ತರಹದ ಜನರ ಸಂಬಂಧ ಬರುತ್ತದೆ; ಪ್ರತ್ಯೇಕ ಪ್ರತಿಯೊಬ್ಬ ಮನುಷ್ಯನನ್ನು ತನ್ನೆಡೆಗೆ ತಿರುಗಿಸಿಕೊಳ್ಳಲು ಅವನನ್ನು ಅವನಂತೆಯೇ ನಡೆನು-ಮಾತಾಡಿ ತಿರುವು-ಮುರುವು ಉಪಾಯ ಮಾಡಬೇಕಾಗುತ್ತದೆ. ಅದನ್ನು ಮಾಡುವ ಕುಶಲತೆಯು ಅವನಲ್ಲಿ ಇದೆ. ಇಂತಹ ಚಾತುರ್ಯದಿಂದ ದೊಡ್ಡ ಲೋಕ ಸಂಗ್ರಹ ಮಾಡುತ್ತಿರುವಾಗ ಶ್ರೀ ಸಮರ್ಥರ ಮಹಂತನು ತನ್ನ

ಸ್ವಸ್ವರೂಪದ ಅನುಸಂಧಾನವನ್ನು ಕಿಂಚಿತ್ (ಸ್ವಲ್ಪವಾದರೂ) ಕೂಡಾ ತಪ್ಪುವದಿಲ್ಲ. ಮೇಲಿಂದ ಮೇಲೆ ಬಿಡುವು ಮಾಡಿಕೊಂಡು ಅವನು ಏಕಾಂತಕ್ಕೆ ಹೋಗುವನು. ಸ್ವಸ್ವರೂಪದಲ್ಲಿ ಲೀನನಾಗಿ ಕೆಲವು ಹೊತ್ತು ವಿಶ್ರಾಂತಿ ತೆಗೆದು ಕೊಳ್ಳುತ್ತಾನೆ. ಮತ್ತು ಲೋಕ ಕಲ್ಯಾಣದ ಅನೇಕ ಸಮಸ್ಯೆಗಳ ಮೇಲೆ ಉಪಾಯವನ್ನು ಹುಡುಕಿ ತೆಗೆಯುತ್ತಾನೆ. ಮಹಂತನ ಜೀವನದಲ್ಲಿ ಪ್ರಪಂಚ ಮತ್ತು ಪರಮಾರ್ಥ; ಅಧ್ಯಾತ್ಮ ಮತ್ತು ವ್ಯವಹಾರ; ಉಪಾಸನಾ ಮತ್ತು ಉಪಕಾರ, ಇವುಗಳ ದೊಡ್ಡ ಸಮತೋಲನ, ಮತ್ತು ಯೋಗ್ಯ ಸಂವಾದ ಇವುಗಳ ಸುಂದರ ಸಂಗಮ ಕಂಡು ಬರುತ್ತದೆ. ಮಹಂತನು ಬಹಳ ಉಪಾಧಿ ಬೆಳೆಸಬಾರದು. ಆದರೆ ಉಪಾಧಿಇಲ್ಲದೇ ಇರಬಾರದು. ಬಹಳ ಹೊತ್ತು ಜನರ ನಡುವೆ ಇರಬಾರದು. ಆದರೆ ಸತತವಾಗಿ ಅರಣ್ಯದಲ್ಲಿಯೂ ಇರಬಾರದು. ಬಹಳ ಕರ್ಮಠನಾಗಬಾರದು. ಆದರೆ ಅತಿಯಾಗಿ ಕರ್ಮಹೀನನಾಗಬಾರದು. ತನ್ನ ಒಳಗಿನ ಅವಸ್ಥೆಯನ್ನು ಪ್ರಕಟಗೊಳಿಸಬಾರದು. ಆದರೆ ಇದರ ಬಗ್ಗೆ ಸಂಪೂರ್ಣ ಮೌನಿಯೂ ಆಗಿರಬಾರದು. ಬಹುಜನ ಸಮಾಜದ ಮುಖ್ಯಸ್ಥ ಮುಖಂಡತನವನ್ನು ಸ್ವೀಕರಿಸುವದು ಹೊಣೆಗಾರಿಕೆಯ ಪ್ರಸಂಗ ಇರುವದು. ಅದನ್ನು ಯಶಸ್ವಿಯಾಗಿ ಪಾರುಗಾಣಿಸಲು ಒಂದು ವಿಶಿಷ್ಟ ಮನೋರಚನೆಯ ಅವಶ್ಯಕತೆ ಇರುವದು. ಇದು ಯಾರ ಹತ್ತಿರ ಇಲ್ಲವೋ ಅವನು ಮಹಂತನಾಗುವ ಗೊಂದಲಕ್ಕೆ ಬೀಳಬಾರದು. ತನ್ನ ಪರಮಾರ್ಥ ಸಾಧನೆಯನ್ನು ಸಂಭಾಳಿಸಿಕೊಂಡು ಅವನು ಕಾಲಕ್ರಮಣ ಮಾಡಬೇಕು. ಸಮಾಜದಲ್ಲಿಯ ಯಾವ ವ್ಯಕ್ತಿಯಲ್ಲಿ ಮಹಂತನ ಲಕ್ಷಣಗಳು ಕಂಡುಬರುವವು ಎಂಬುದನ್ನು ಹೇಳಲು ಬರುವದಿಲ್ಲ. ಶ್ರೀ ಸಮರ್ಥರ ಮಹಂತರ ಪೈಕಿ ಕೆಲವರು ಸ್ತ್ರೀಯರೂ ಇದ್ದರು. ಹಾಗೂ ಕೆಲವರು ಅಶಿಕ್ಷಿತ ವರ್ಗದ ಪುರುಷರೂ ಇದ್ದರು.

## ೨೨. ಶ್ರೀ ದಾಸಬೋಧದ ಸಂದೇಶ

ಮಹಾನ್ ಪುರುಷರ ಕಾರ್ಯಕ್ಕೆ ಒಂದಲ್ಲದೇ ಅನೇಕ ಅಂಗಗಳಿರುವವು. ಅವುಗಳಲ್ಲಿ ಕೆಲವು ಅಂಗಗಳು ತಾತ್ಪೂರ್ತಿಕವಾಗಿ ಅಂದರೆ (ಆಗಿನ ಮಟ್ಟಿಗೆ ಮಾತ್ರ) ಯೋಗ್ಯವಾದದ್ದಾಗಿರುತ್ತವೆ. ಕಾಲವು ಬದಲಾದಂತೆ ಅವುಗಳ ಮಹತ್ವವು ಇಲ್ಲದಂತಾಗುವದು (ಕಾಣಿಸದಂತಾಗುವದು) ಅಥವಾ ನಿಧಾನವಾಗಿ ಕಡಿಮೆಯಾದರೂ ಆಗುವವು. ಆದರೆ ಬೇರೆ ಕೆಲವು ಅಂಗಗಳು ಚಿರಕಾಲವಾಗಿರುವವು. ಹಾಗೂ ಸರ್ವಕಾಲದ ಸ್ವರೂಪವುಳ್ಳವವಾಗಿರುವವು, ಅವುಗಳ ಮಹತ್ವ ಕಡಿಮೆಯಾಗುವದಿಲ್ಲ. ಇಷ್ಟೇ ಅಲ್ಲದೇ ಅವುಗಳ ಮಹತ್ವ ಹೆಚ್ಚುತ್ತ ಹೋಗುವದು. ಶ್ರೀ ಸಮರ್ಥರು ಯಾವ ಮಠಗಳನ್ನು ಸ್ಥಾಪನೆ ಮಾಡಿದರೋ, ಯಾವ ಮಹಂತರ ಸಂಘಟನೆಯನ್ನು ಮಾಡಿದರೋ, ಯಾವ ಮಂದಿರ ಗಳನ್ನು ಕಟ್ಟಿದರೋ, ಯಾವ ಉತ್ಸವವನ್ನು ಮಾಡಿದರೋ, ಮತ್ತು ತತ್ಕಾಲದ ಪ್ರಸಂಗವನ್ನು ಅನುಲಕ್ಷಿಸಿ ಯಾವ ವಾಙ್ಮಯಗಳನ್ನು ಬರೆದರೋ, ಈ ವಿಷಯಗಳಿಗೆ ಇಂದು ಕೇವಲ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಮಹತ್ವ ಉಳಿದಿರುವದು. ಆದರೆ ಅವರ ಕೃತಿ "ದಾಸಬೋಧ"ವು ಮಾತ್ರ ಸರ್ವ ಕಾಲದಲ್ಲಿಯೂ, ಸರ್ವ ಸ್ಥಳಗಳಲ್ಲಿಯೂ ಯಾವತ್ತೂ ಜನರಿಗೆ ದಿವ್ಯ ಜೀವನದ ಆದರ್ಶವನ್ನು ತೋರಿಸುವ ಶಾಶ್ವತವಾದ ಕೈದೀವಿಗೆಯಾಗಿರುವದು. ಎಲ್ಲ ಸಂತರ ಹಾಗೆ ಶ್ರೀ ಸಮರ್ಥರು ಹೇಳುವದೇನಂದರೆ "ಮಾನವ ಜೀವನವು ಎಲ್ಲ ಕಡೆಗೆ ಅನೇಕ ರೀತಿಯಿಂದ ಅಪೂರ್ಣ ವಾದದ್ದು ಕಂಡುಬರುವದು. ಆದರೆ ಮಾನವ ದೇಹದಲ್ಲಿ ದಿವ್ಯ ಅಥವಾ ಈಶ್ವರೀ ಜೀವನ ಜೀವಿಸುವ ಶಕ್ತಿಯು ವಾಸಮಾಡಿರುವದು. ಇದು ಪ್ರತ್ಯಕ್ಷ ಅನುಭವಕ್ಕೆ ಬರುತ್ತದೆ. ಆದ್ದರಿಂದ ಈ ಮಾನವ ದೇಹ ಪ್ರಾಪ್ತವಾದಾಗ ಅಂತರಂಗದಲ್ಲಿಯ ಈಶ್ವರೀ ಶಕ್ತಿಯ ಜಾಗೃತಿಯನ್ನು ಮಾಡಿಕೊಂಡು ದಿವ್ಯ ಜೀವನ ಸಂಪಾದನೆ ಮಾಡಿಕೊಳ್ಳುವ ಸಾಹಸ ಮಾಡಬೇಕು" ಹೀಗೆ ದಾಸಬೋಧದ ಪ್ರಧಾನವಾದ ಸಂದೇಶವಿರುವದು. "ನಾನು ದೇಹವೇ ಇರುವೆನು"ಈ ದೃಢಭಾವನೆಯಿಂದ ಸಾಮಾನ್ಯ ಮನುಷ್ಯನು ಜೀವಿಸುತ್ತಾನೆ. ಆ ಭಾವನೆಯಿಂದ "ನಾನು ಹಾಗೂ ನನ್ನದು" ಈ ಎರಡು ಕಲ್ಪನೆಗಳು ಪ್ರಕಟವಾಗುತ್ತವೆ. ಆದರೆ ಅವುಗಳಿಂದ ಅವನ ಜೀವನ ಅತೀ ಸ್ವಾರ್ಥಿ ಮತ್ತು ಸಂಕುಚಿತ ವಾಗುತ್ತದೆ. ಇಂಥ ಸಂಕುಚಿತ ಜೀವನದಲ್ಲಿ ಅಂತರಂಗ ಹಾಗೂ ಬಹಿರಂಗ ಸಂಘರ್ಷ ಹಾಗೂ ಸ್ಪರ್ಧೆ ಇರುವದರಿಂದ

ವ್ಯಕ್ತಿಗೆ ಹಾಗೂ ಸಮಾಜಕ್ಕೆ ಸಮಾಧಾನ ಸಿಗುವದಿಲ್ಲ. ಇದರ ಬದಲಾಗಿ "ನಾನು ಆತ್ಮವೇ ಇರುವೆನು" ಈ ದೃಢ ಭಾವನೆಯಿಂದ ಮನುಷ್ಯನು ಜೀವನ ಜೀವಿಸುವದರಿಂದ ಅವನ ಜೀವನ ಒಳ ಹಾಗೂ ಹೊರಗೆ ನಿರಾತಂಕವಾಗಿರುತ್ತದೆ ಆ ಭಾವನೆಯಲ್ಲಿ "ನೀನು ಹಾಗೂ ನಿನ್ನದು" ಈ ಎರಡು ಕಲ್ಪನೆಗಳು ಪ್ರಕಟವಾಗುತ್ತವೆ. ಆದರೆ ಅವುಗಳ ಪರಿಣಾಮವಾಗಿ ಆ ಮನುಷ್ಯನ ಜೀವನವು ಅತಿ ನಿಸ್ವಾರ್ಥಿ ಮತ್ತು ವಿಶಾಲವಾಗುತ್ತದೆ. ಅವನ ಸ್ವತಃದ ಜೀವನದಲ್ಲಿ ಒಳ-ಹೊರಗೆ ಸಂಪೂರ್ಣ ಸಮಾಧಾನ ತುಂಬಿ ಹರಿಯುತ್ತದೆ. ಆದರೆ ಯಾರಿಗೆ ಅವನ ಸಂಬಂಧ ಬರುತ್ತದೆಯೋ ಅವರ ಜೀವನದಲ್ಲಿಯೂ ಕೂಡಾ ಆ ಸಮಾಧಾನದ ಪ್ರತಿಬಿಂಬವು ಸ್ವಲ್ಪ ಹೆಚ್ಚು ಕಡಿಮೆಯಲ್ಲಿ ಕಂಡುಬರುವದು. ಸ್ವತಃ ಸಮಾಧಾನ ಹೊಂದಿ ಜಗತ್ತಿಗೆ ಹೆಚ್ಚು ಹೆಚ್ಚು ಸಮಾಧಾನ ಕೊಡುವ ಜೀವನವೇ ನಿಜವಾದ ದಿವ್ಯಜೀವನವು. ಇಂಥ ದಿವ್ಯ ಜೀವನದ ಸರ್ವಾಂಗೀಣ ಪ್ರತಿಪಾದನೆಯು "ದಾಸಬೋಧ"ದಲ್ಲಿ ಇರುವದು. ಈ ಸಂಗತಿಯು ನಿಜವಾದದ್ದೇ ಆಗಿದೆ. ಅಲ್ಲದೆ "ದಾಸಬೋಧ" ಇನ್ನೊಂದು ಹೆಜ್ಜೆ ಮುಂದೆ ಹೋಗುವದು. ಯಾವ ಪುರುಷನಿಗೆ ದಿವ್ಯ ಜೀವನ ಲಭಿಸುವದೋ, ಅವನು ಸ್ವತಃ ತಾನಾಗಿಯೇ ಸಾಮಾನ್ಯ ಜನಸಮುದಾಯದಲ್ಲಿ ಇಳಿಯಬೇಕು.(ಸೇರಬೇಕು). ಮತ್ತು ಬಹು ಜನ ಸಮಾಜಕ್ಕೆ ದಿವ್ಯ ಜೀವನ ಭೋಗಿಸಲು ಸಾವಕಾಶವಾಗಿ ಕಲಿಸಿ ಅವರನ್ನೂ ಪಾತ್ರರನ್ನಾಗಿ ಮಾಡಬೇಕು. ಹೀಗೆ ಸಮರ್ಥರ ಆಗ್ರಹ ಇರುವದು. ಸಮಾಜದಲ್ಲಿಯ ಒಬ್ಬ ವ್ಯಕ್ತಿ ಪೂರ್ಣ ಬ್ರಹ್ಮಜ್ಞಾನಿಯಾಗಿ, ಇತರ ಎಲ್ಲ ಜನರು ಪೂರ್ಣ ಅಜ್ಞಾನಿಯಾಗಿ ಇರುವದಕ್ಕಿಂತ ಯಾರೂ ಬ್ರಹ್ಮಜ್ಞಾನಿ ಆಗದೇ ಎಲ್ಲ ಜನರ ಅಜ್ಞಾನವನ್ನು ಸಾಕಷ್ಟು ಕಡಿಮೆ ಮಾಡುವದು ಅಧಿಕ ಶ್ರೇಯಸ್ಕರವಾದದ್ದು. ಈ ದೃಷ್ಟಿಕೋನವು "ದಾಸಬೋಧ" ದ ಮೂಲ ವೈಶಿಷ್ಟ್ಯವಾಗಿರುವದು. ಪ್ರಪಂಚದ ಉಪಾಧಿ ಮತ್ತು ಕಿರುಕಳ (ಕಟಕಟಿ) ಸಂಭಾಳಿಸಿ ಯಾರು ದಿವ್ಯಜೀವನ ಪ್ರಾಪ್ತ ಮಾಡಿಕೊಳ್ಳುವರೋ, ಅವರ ಸಹವಾಸದಿಂದ ಅನೇಕ ಸಾಮಾನ್ಯ ಮನುಷ್ಯರ ಜೀವನದಲ್ಲಿ ಸಹಜವಾಗಿ ಉತ್ತಮ ವ್ಯತ್ಯಾಸ ಕಂಡುಬರುವದು. ಆದ್ದರಿಂದ ಪ್ರಪಂಚದ ಮರ್ಯಾದೆಯನ್ನು ಬಿಡಲಾರದೇ ಪರಮಾರ್ಥದ ಸಾಧನೆಯನ್ನು ಮಾಡಬೇಕು. ಹೀಗೆ ದಾಸಬೋಧದಲ್ಲಿ ಪ್ರತಿಪಾದಿಸಿರುವರು. ವ್ಯಕ್ತಿ ಜೀವನ ಮತ್ತು ಸಮೂಹ ಜೀವನ ಇವುಗಳ ಸುಂದರ ಸಮನ್ವಯ ಸಾಧಿಸಿರುವ ಶ್ರೀ ಸಮರ್ಥರಂತಹ ಮಹಾತ್ಮರು ಕ್ವಚಿತ್ತಾಗಿ ದೃಷ್ಟಿಗೆ ಬೀಳುವರು."ಶ್ರೀ ದಾಸಬೋಧ"ವನ್ನು ಯಾರು ಎಷ್ಟು ಹೆಚ್ಚು ಹೆಚ್ಚು ಮನನ ಮಾಡುವರೋ ಅಷ್ಟು ಶ್ರೀ ಸಮರ್ಥರ ಬ್ರಹ್ಮಜ್ಞಾನದ ಮತ್ತು ದಿವ್ಯ ಜೀವನದ ತತ್ತ್ವವನ್ನು ಸ್ಪಷ್ಟವಾಗಿ ತಿಳಿದುಕೊಳ್ಳುವರು. ಆದರೆ, ಸ್ವತಃ ಅತಿ ಮಹಾನವರಿದ್ದು ಅವರ ಹತ್ತಿರ ಶ್ರೇಷ್ಠವಾದ ಕೆಲಸ ಮಾಡುವ ಸಾಮಾನ್ಯ ಮನುಷ್ಯರ ಉತ್ಕರ್ಷದ ಬಗ್ಗೆ ಅವರಲ್ಲಿದ್ದ ತಳಮಳವನ್ನು ನೋಡಿದರೆ ಮನವು ಪ್ರೇಮಾದರದಿಂದ ತುಂಬಿ ಬರುತ್ತದೆ ಮತ್ತು ನಮಗೆ ತಿಳಿಯದೇ ನಾವು ಅವರಿಗೆ ವಂದಿಸುತ್ತೇವೆ.

## ೨೪. ಪ್ರಸ್ತುತ ಪಡಿಸಿದ ಅನುವಾದ

ಶ್ರೀ ದಾಸಬೋಧದ ಅನೇಕ ಅನುವಾದಗಳಿರುವವು. ಈ ಅನುವಾದ ಮಾಡುವಾಗ ನನಗೆ ಆ ಎಲ್ಲವುಗಳ ಉಪಯೋಗವಾಗಿದೆ. ಇಲ್ಲಿ ಇವನ್ನು ಮುದ್ದಾಂ (ಎತ್ತಿ) ಹೇಳುವದು ಅವಶ್ಯವಾಗಿರುವದು. ಅನುವಾದ ಮಾಡುವಾಗ ಅನೇಕ ಕಡೆಗೆ ಮುಂದಿನ ತೊಂದರೆಗಳು ಬರುವವು. ಮೂಲ ದಾಸಬೋಧದ ಭಾಷೆಯು ಅತಿ ಸರಳ ಹಾಗೂ ಸ್ಪಷ್ಟವಾಗಿರುವದು. ಅನುವಾದ ಮಾಡುವಾಗ್ಗೆ ನಮ್ಮ ಭಾಷೆಯು ಕಠಿಣ ಹಾಗೂ ನೀರಸ ಆದರೆ ಹೇಗೆ ? ಎಂಬ

ಸಂಶಯ ಉಂಟಾಗುತ್ತಿತ್ತು. ಶ್ರೀ ಸಮರ್ಥರ ಪ್ರತಿಪಾದನೆಯಲ್ಲಿ ಅನೇಕ ಕಡೆಗೆ ತತ್ವಜ್ಞಾನದಲ್ಲಿಯ ಪ್ರಶ್ನೆಗಳ ಊಹಾಪೋಹ ಕಂಡುಬರುವದು. ಅಲ್ಲಿ ಅನುವಾದ ಮಾಡುವಾಗ ಮೂಲ ಪ್ರಶ್ನೆ ಹಾಗೂ ಶ್ರೀ ಸಮರ್ಥರ ಉತ್ತರ ತಿಳಿದುಕೊಳ್ಳುವದು ಸುಲಭವಾಗಬೇಕೆಂದು ಸ್ವಲ್ಪ ಟಿಪ್ಪಣಿ ಕೊಡಲಾಗಿದೆ. ಯಾವ ಕಡೆಗೆ ಅವರು ಸ್ವತಃದ ಸ್ವರೂಪಾನುಭವದ ಬಗ್ಗೆ ಹೇಳಿರುವರೋ ಅಲ್ಲಿ ಹೆಚ್ಚು ಬರೆಯುವದು ಯೋಗ್ಯವಲ್ಲ. ಪ್ರಮುಖವಾಗಿ ಉಪನಿಷತ್‌ಗಳ ಮೇಲಿನ ಶಂಕರಭಾಷ್ಯ ಮತ್ತು ಭಗವದ್ಗೀತೆ ಇವುಗಳ ಪಾರ್ಶ್ವಭೂಮಿಯ ಮೇಲೆ ದಾಸಬೋಧದ ರಚನೆಯಾಗಿದೆ. ಎಂದು ನಿಶ್ಚಿತವಾಗಿ ಅನಿಸುತ್ತದೆ, ಇರಲಿ, ಶ್ರೀ ಸಮರ್ಥ ಸೇವಾ ಮಂಡಳದವರು ಈ ಅನುವಾದದ ಕೆಲಸವನ್ನು ನನ್ನ ಮೇಲೆ ಹಾಕಿದರು. ಆ ನಿಮಿತ್ತದಿಂದ ಶ್ರೀ ಸಮರ್ಥರ ಸೇವೆಯನ್ನು ಮಾಡುವ ಅವಕಾಶ ದೊರೆತದ್ದಕ್ಕಾಗಿ ಮಂಡಳಕ್ಕೆ ಶತಶಃ ಧನ್ಯವಾದಗಳು.

ಕೇಶವ ವಿಷ್ಣು ಬೆಲಸರೆ
(ಮಾಲಾಡ, ಮುಂಬೈ)

# ಅನುಕ್ರಮಣಿಕೆ (ಪರಿವಿಡಿ)

## ಪೂರ್ವಾರ್ಧ

### ದಶಕ ೧ : ಸ್ತುತಿಪರ



### ದಶಕ ೨ : ಮೂರ್ಖರ ಲಕ್ಷಣ



### ದಶಕ ೩ : ಸ್ವಗುಣ ಪರೀಕ್ಷಾ



### ದಶಕ ೪ : ನವವಿಧಾಭಕ್ತಿ



### ದಶಕ ೫ : ಮಂತ್ರದ್ದು



### ದಶಕ ೬ : ದೇವ ಶೋಧನ

## ದಶಕ ೭ : ಚತುರ್ದಶ ಬ್ರಹ್ಮದ ಬಗ್ಗೆ



## ದಶಕ ೮ : 'ಮಾಯೋದ್ಭವ'



## ದಶಕ ೯ : ಗುಣರೂಪ



## ವಶಕ ೧೦ : ಜಗಜ್ಯೋತಿನಾಮ

# ಉತ್ತರಾರ್ಧ

## ದಶಕ ೧೧ : ಭೀಮದಶಕ



## ದಶಕ ೧೨ : ''ವಿವೇಕ ವೈರಾಗ್ಯ



## ದಶಕ ೧೩ : ನಾಮರೂಪ



## ದಶಕ ೧೪ : ಅಖಂಡ ಧ್ಯಾನ



## ದಶಕ ೧೫ : ಆತ್ಮದಶಕ



## ದಶಕ ೧೬ : ಸಪ್ತತಿನ್ವಯ

## ದಶಕ ೧೭ : ಪ್ರಕೃತಿ ಪುರುಷ



## ದಶಕ ೧೮ : ಬಹುಜಿನಸಿ



## ದಶಕ ೧೯ : ಶಿಕವಣ



## ದಶಕ ೨೦ : ಪೂರ್ಣನಾಮ ದಶಕ

# ಸಾರ್ಥ ಶ್ರೀ ದಾಸಬೋಧ
## ಪೂರ್ವಾರ್ಧ
## ಪ್ರಾರಂಭವಾಗುವದು.

# ಸಾಂಪ್ರದಾಯಿಕ ಮಂಗಲಾಚರಣ

ದಿನಾಲೂ ಸ್ನಾನಸಂಧ್ಯಾ ಪೂಜಾ ವಗೈರೆ ನಿತ್ಯಕರ್ಮ ಮಾಡಿದ ಮೇಲೆ ಶ್ರೀ ದಾಸಬೋಧ ಗ್ರಂಥದ ಕನಿಷ್ಠ ಎರಡು ಸಮಾಸ ಮತ್ತು ಮನೋಬೋಧದ ೧೩ [ಹದಿಮೂರು] ಶ್ಲೋಕ ಮತ್ತು ಎರಡು ಕರುಣಾಷ್ಟಕಗಳನ್ನು ಅನುತ್ತ ಮನನಪೂರ್ವಕ ಅರ್ಥವನ್ನು ಗ್ರಹಿಸುತ್ತ ಎರಡು ಸಮಾಸವನ್ನಾದರೂ ಓದಬೇಕು. ಶ್ರೀ ದಾಸಬೋಧದ ೧೧೩ ಪಾರಾಯಣಗಳನ್ನು ಮಾಡುವ ಸಂಕಲ್ಪವನ್ನು ಗುರುಚರಣದಲ್ಲಿ ಮಾಡಿ ಪ್ರತಿ ಏಕಾದಶಿ ದಿವಸ ಹೊಸ ಪಾರಾಯಣಕ್ಕೆ ಆರಂಭ ಮಾಡಬೇಕು. ೧೫ ದಿವಸದಲ್ಲಿ ಪಾರಾಯಣ ಪೂರ್ಣ ಮುಗಿಯಬೇಕು. ಇದು ಉತ್ತಮ ಮಾರ್ಗ ದಿನಾಲೂ ನಿಯಮಿತ ಸಮಾಸ ಓದುವ ಮೊದಲು ಮುಂದೆ ಹೇಳಿದಂತೆ ಮಂಗಲಾಚರಣ ಮಾಡಬೇಕು.

ಗಣೇಶಃ ಶಾರದಾ ಚೈವ ಸದ್ಗುರುಃ ಸಜ್ಜನಸ್ತಥಾ ।
ಆರಾಧ್ಯ ದೈವತಂಗುಹ್ಯ ಸರ್ವೇ ರಘುನಂದನಃ ॥೧॥

ಗಣೇಶ ಶಾರದಾ ಸದ್ಗುರು । ಸಂತ ಸಜ್ಜನ ಕುಳೇಶ್ವರೂ ।
ಸರ್ವಹೀ ಮಾರುತಿ ರಘುವೀರೂ । ಸದ್ಗುರು ರೂಪೇ ॥೨॥

ಮಾರುತಿ ಆರಾಧ್ಯ ದೈವತ । ಪರಮಗುಹ್ಯ ಗುಹ್ಯಾತೀತ ।
ಗುಹ್ಯಪಣಾತೀ ಮಾತ । ನ ಚಲೆ ಜೇಥೆ ॥೩॥

ಯೋ ಜಾತೋ ಮರುದಂಶಜೋ ಕ್ಷಿತಿತಲೆ ಸಂಬೋಧಯನ್ ಸಜ್ಜನಾನ್
ಗ್ರಂಥ ಯೋ ರಚಯನ್ ಸಂಪುಣ್ಯಜನಕಮ್ ಶ್ರೀದಾಸಬೋಧಾಭಿಧಮ್ ।
ಯಃ ಕೀರ್ತ್ಯ ಪಠನೇನ ಸರ್ವವಿದುಷಾಂ ಸಂತಾಪಹಾರಿಃ ಸದಾ
ಸೋಯಂ ಮುಕ್ತಿಕರಃ ಕ್ಷಿತೌ ವಿಜಯಂತೆ ಶ್ರೀರಾಮದಾಸೋ ಗುರುಃ ॥೪॥

ಶುಕಾಸಾರಿಖೆ ಪೂರ್ಣ ವೈರಾಗ್ಯ ಜಾಚೆ ।
ವಶಿಷ್ಠಾಪರೀ ಜ್ಞಾನ ಯೋಗೇಶ್ವರಾಚೆ ॥
ಕವೀ ವಾಲ್ಮಿಕಾ ಸಾರಿಖಾ ಮಾನ್ಯ ಏಸಾ ।
ನಮಸ್ಕಾರ ಮಾಝಾ ಸದ್ಗುರು ರಾಮದಾಸಾ ॥೫॥

ಮುಲಾ ವಾಚತೆ ಅಂತರೀ ತ್ವಾಮ್ ಬಸಾವೆ ।
ತುಝಾ ದಾಸಬೋಧಾಸಿ ತ್ವಾಮ್ ಬೋಧವಾವೆ ॥
ಆಪತ್ಯಾಪರೀ ಪಾವವೀ ಪ್ರೇಮ ಗ್ರಾಸಾ ।
ಮಹಾರಾಜಯಾ ಸದ್ಗುರೋ ರಾಮದಾಸಾ ॥೬॥

ಓದುವದು ಮುಗಿದ ಮೇಲೆ ದಾಸಬೋಧದ ಉಪಸಂಹಾರದಲ್ಲಿಯ ಹನ್ನೆರಡು ಓವ್ಯಾ- "ಜಾಲಿ ಸಾಧನಾಚೆ ಫಳ" ಇಲ್ಲಿಂದ ಅದನ್ನು "ಜಗದೀಶ್ವರೆ ಅನುಕ್ರಮೆ - ಸಕಳ ಕೇಲೆ" ಇಲ್ಲಿಯವರೆಗೆ ಪಾಠ ಅಂದು ದಾಸಬೋಧದ ಆರತಿ ಮಾಡಿರಿ.

॥ ಶ್ರೀ ರಾಮ ॥

ಶುಕಾ ಸಾರಿಖೆ ಪೂರ್ಣ ವೈರಾಗ್ಯ ಜ್ಯಾಚೇ ।
ವಸಿಷ್ಠಾಪರೀ ಜ್ಞಾನ ಯೋಗೇಶ್ವರಾಚೇ ।
ಕವಿ ವಾಲ್ಮಿಕಾ ಸಾರಿಖಾ ಮಾನ್ಯ ಐಸಾ ।
ನಮಸ್ಕಾರ ಮಾಝಾ ಸದ್ಗುರು ರಾಮದಾಸಾ ॥

॥ ಜಯ ಜಯ ರಘುವೀರ ಸಮರ್ಥ ॥

# ಸಾರ್ಥ ಶ್ರೀ ದಾಸಬೋಧ

## ದಶಕ ಒಂದು : ಸ್ತುತಿಪರ

ವೇದಾಂತದ ಮೇಲಿನ ಗ್ರಂಥಗಳನ್ನು ಬರೆಯುವ ಮಧ್ಯಯುಗದಲ್ಲಿಯ ಭಾರತೀಯ ಗ್ರಂಥಕಾರರ ಪರಂಪರೆಗೆ ಅನುಗುಣವಾಗಿ ಶ್ರೀ ಸಮರ್ಥರು ಈ ಮೊದಲನೆಯ ದಶಕದಲ್ಲಿ ಶ್ರೀ ಗಣೇಶ, ಶಾರದಾ, ಸದ್ಗುರು ಮತ್ತು ಸಂತರು ಇವರೆಲ್ಲರಿಗೆ ನಮಸ್ಕರಿಸಿ, ಇವರೆಲ್ಲರನ್ನು ಆವಾಹನ ಮಾಡಿಕೊಂಡಿದ್ದಾರೆ. ಇದರ ಜೊತೆಗೆ ಕವಿ, ಶ್ರೋತೃ, ಸಭಾ, ಪರಮಾರ್ಥ ಹಾಗೂ ನರದೇಹ ಇವುಗಳ ಮಾನವೀ ಜೀವನದಲ್ಲಿಯ ಮತ್ತು ಅಧ್ಯಾತ್ಮ ಸಾಧನದಲ್ಲಿಯ ಮಹತ್ವ ಎಷ್ಟಿದೆ, ಎಂಬುದನ್ನು ಸಹ ಹೇಳಿರುವರಲ್ಲದೇ, ಇವುಗಳ ಸ್ತುತಿಯನ್ನೂ ಸಹ ಮಾಡಿದ್ದಾರೆ.

### ಸಮಾಸ ೧. ಗ್ರಂಥಾರಂಭ ನಿರೂಪಣ (ನುಡಿ ೩೮)

ಈ ಸಮಾಸವು ಪ್ರಸ್ತಾವನೆಯ ಸ್ವರೂಪದ್ದಿರುವದು. ಗ್ರಂಥದ ಹೆಸರು ಯಾವುದು? ಗ್ರಂಥ ಬರೆಯುವ ಉದ್ದೇಶ ಯಾವುದು ? ಗ್ರಂಥದಲ್ಲಿ ವಿವೇಚಿಸಿ, ಚರ್ಚಿಸಿದ ವಿಷಯಗಳು ಯಾವವು ? ಗ್ರಂಥಾಭ್ಯಾಸದಿಂದ ಸಿಗುವ ಫಲವೇನು? ಗ್ರಂಥದಲ್ಲಿಯ ವಿಷಯಗಳಿಗೆ ಆಧಾರವೇನು? ಇತ್ಯಾದಿ ವಿಷಯಗಳನ್ನು ಶ್ರೀ ಸಮರ್ಥರು ಆರಂಭದಲ್ಲಿಯೇ ಸ್ಪಷ್ಟ ರೀತಿಯಲ್ಲಿ ಹೇಳಿರುತ್ತಾರೆ.

## ಪ್ರಥಮ ದಶಕ : ಪ್ರಥಮ ಸಮಾಸ.

॥ಶ್ರೀರಾಮ॥ ಶ್ರೋತೆ ಪುಸತೀ ಕೋಣ ಗ್ರಂಥ। ಕಾಯ ಬೋಲಿಲೇ ಜೀ ಯೇಥ।
ಶ್ರವಣ ಕೇಲಿಯಾನೇ ಪ್ರಾಪ್ತ। ಕಾಯ ಆಹೆ ॥೧॥

ಗ್ರಂಥಾ ನಾಮ ದಾಸಬೋಧ। ಗುರುಶಿಷ್ಯಾಂಚಾ ಸಂವಾದ।
ಯೇಥ ಬೋಲಿಲಾ ವಿಶದ। ಭಕ್ತಿಮಾರ್ಗ ॥೨॥

ನವವಿಧಾ ಭಕ್ತಿ ಆಣಿ ಜ್ಞಾನ। ಬೋಲಿಲೇ ವೈರಾಗ್ಯಾಚೇ ಲಕ್ಷಣ।
ಬಹುಧಾ ಅಧ್ಯಾತ್ಮ ನಿರೋಪಣ। ನಿರೋಪಿಲೇ ॥೩॥

ಭಕ್ತಿಚೇನ ಯೋಗೇ ದೇವ। ನಿಶ್ಚಯೇ ಪಾವತೀ ಮಾನವ।
ಐಸಾ ಆಹೆ ಅಭಿಪ್ರಾವ। ಈಯೇ ಗ್ರಂಥೀ ॥೪॥

ಮುಖ್ಯ ಭಕ್ತೀಚಾ ನಿಶ್ಚಯೋ। ಶುದ್ಧಜ್ಞಾನಾಚಾ ನಿಶ್ಚಯೋ।
ಆತ್ಮಸ್ಥಿತೀಚಾ ನಿಶ್ಚಯೋ। ಬೋಲಿಲಾ ಅಸೆ ॥೫॥

ಶುದ್ಧ ಉಪದೇಶಾಚಾ ನಿಶ್ಚಯೋ। ಸಾಯೋಜ್ಯಮುಕ್ತೀಚಾ ನಿಶ್ಚಯೋ।
ಮೋಕ್ಷ ಪ್ರಾಪ್ತೀಚಾ ನಿಶ್ಚಯೋ। ಬೋಲಿಲಾ ಅಸೆ ॥೬॥

ಶುದ್ಧ ಸ್ವರೂಪಾಚಾ ನಿಶ್ಚಯೋ। ವಿದೇಹಸ್ಥಿತೀಚಾ ನಿಶ್ಚಯೋ।
ಅಲಿಪ್ತಪಣಾಚಾ ನಿಶ್ಚಯೋ। ಬೋಲಿಲಾ ಅಸೆ ॥೭॥

ಮುಖ್ಯ ದೇವಾಚಾ ನಿಶ್ಚಯೋ। ಮುಖ್ಯ ಭಕ್ತಾಚಾ ನಿಶ್ಚಯೋ।
ಜೀವಶಿವಾಚಾ ನಿಶ್ಚಯೋ। ಬೋಲಿಲಾ ಅಸೆ ॥೮॥

ಮುಖ್ಯ ಬ್ರಹ್ಮಾಚಾ ನಿಶ್ಚಯೋ। ನಾನಾ ಮತಾಂಚಾ ನಿಶ್ಚಯೋ।
ಆಪಣ ಕೋಣ ಹಾ ನಿಶ್ಚಯೋ। ಬೋಲಿಲಾ ಅಸೆ ॥೯॥

ಮುಖ್ಯ ಉಪಾಸನಾ ಲಕ್ಷಣ। ನಾನಾ ಕವಿತ್ವ ಲಕ್ಷಣ।
ನಾನಾ ಚಾತುರ್ಯಲಕ್ಷಣ। ಬೋಲಿಲೇ ಅಸೆ ॥೧೦॥

ಮಾಯೋದ್ಭವಾಚೇ ಲಕ್ಷಣ। ಪಂಚಭೂತಾಂಚೇ ಲಕ್ಷಣ।
ಕರ್ತಾ ಕೋಣ ಹೇ ಲಕ್ಷಣ। ಬೋಲಿಲೇ ಅಸೆ ॥೧೧॥

ನಾನಾ ಕಿಂತ ನಿವಾರಿಲೆ। ನಾನಾ ಸಂಶಯೋ ಛೇದಿಲೆ।
ನಾನಾ ಆಶಂಕಾ ಫೇಡಿಲೇ। ನಾನಾ ಪ್ರಶ್ನ ॥೧೨॥

ಐಸೆ ಬಹುಧಾ ನಿರೋಪಿಲೆ। ಗ್ರಂಥಗರ್ಭೀ ಜೇ ಬೋಲಿಲೆ।
ತೇ ಅವಘೇ ಚಿ ಅನುವಾದಲೆ। ನ ವಚೆ ಕಿ ಕದಾ ॥೧೩॥

**ಶ್ರೋತೃವಿನ ಪ್ರಶ್ನೆ** :— ಗ್ರಂಥಾರಂಭಕ್ಕೆ ಮೊದಲೇ **ಶ್ರೋತೃವು** ಶ್ರೀ ಸಮರ್ಥರಿಗೆ ಪ್ರಶ್ನೆ **ಕೇಳುತ್ತಾನೆ**. "ಈ ಗ್ರಂಥ ಯಾವುದು, ಇದರಲ್ಲಿ ಏನೇನು ಹೇಳಲಾಗಿದೆ? ಇದರ ಶ್ರವಣ ಮತ್ತು ಅಭ್ಯಾಸ ಮಾಡುವದರಿಂದ ಸಿಗುವ ಫಲವೇನು ?" ಅದಕ್ಕೆ ಶ್ರೀ ಸಮರ್ಥರ ಉತ್ತರ :- (೧) **ಶ್ರೀ ಸಮರ್ಥರು ಉತ್ತರ ಕೊಡುತ್ತಾರೆ**—"ಈ ಗ್ರಂಥದ ಹೆಸರು ದಾಸಬೋಧ" ವೆಂದು, ಗುರು ಮತ್ತು ಶಿಷ್ಯರಲ್ಲಿಯ ಸಂವಾದಾತ್ಮಕ ರೂಪದಲ್ಲಿ ನಡೆದದ್ದನ್ನು ಈ ಗ್ರಂಥದಲ್ಲಿ ಬರೆಯಲ್ಪಟ್ಟಿದೆ. ಭಕ್ತಿ ಮಾರ್ಗದ ಸ್ಪಷ್ಟವಾದ ವಿವೇಚನೆಯೂ ಇದರಲ್ಲಿ ಇರುತ್ತದೆ. **(೨) ದಾಸಬೋಧದಲ್ಲಿ ಏನೇನು ಹೇಳಲಾಗಿದೆ?** "ಈ ದಾಸಬೋಧದಲ್ಲಿ (ನವವಿಧ) ಒಂಬತ್ತು ಪ್ರಕಾರದ ಭಕ್ತಿ, ಬ್ರಹ್ಮಜ್ಞಾನ ಮತ್ತು ವೈರಾಗ್ಯ ಇವುಗಳ ಲಕ್ಷಣಗಳನ್ನು ಹೇಳಲಾಗಿದೆ. ಇವುಗಳನ್ನು ಹೇಳುವಾಗ್ಗೆ ಅಲ್ಲಲ್ಲಿ ಆತ್ಮವಿದ್ಯೆಯ ಅನೇಕ ಪ್ರಕಾರ (ಭೇದ. ಅಂಗ)ದ ವಿವೇಚನೆಯನ್ನು ಕೂಡ ಮಾಡಲಾಗಿದೆ. **(೩) ದಾಸಬೋಧದಲ್ಲಿ ಮುಖ್ಯವಾಗಿ ಸಿದ್ಧಮಾಡಲಾಗಿರುವ ವಿಷಯಗಳು** :— ಭಕ್ತಿ ಮಾರ್ಗದಿಂದ ಹೋಗುವವರಿಗೆ ಈಶ್ವರ (ದೇವ)ನ ದರ್ಶನವು ನಿಶ್ಚಿತವಾಗಿ ಆಗುವದೆಂದು ಈ ಗ್ರಂಥದಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. **(೪) ದಾಸಬೋಧದಲ್ಲಿ ನಿಃಸಂಶಯವಾಗಿ ವರ್ಣಿಸಿದ ವಿಷಯಗಳು** :— ಉತ್ಕೃಷ್ಟವಾದ ಭಕ್ತಿ ಯಾವದು? ಅಜ್ಞಾನದ ಸ್ಪರ್ಶವಿಲ್ಲದಂಥ ಶುದ್ಧವಾದ ಜ್ಞಾನ ಯಾವದು ? ಆತ್ಮ ಸ್ಥಿತಿಯು ಹೇಗೆ ಇರುತ್ತದೆ.? ಇವುಗಳನ್ನು ನಿರ್ಣಯ ಮಾಡಲಾಗಿವೆ. (೫) ಶುದ್ಧ ಉಪದೇಶ ಹೇಗಿರುತ್ತದೆ ? ಸಾಯುಜ್ಯ ಮುಕ್ತಿಯೆಂದು ಯಾವುದಕ್ಕೆ ಅನ್ನುವರು ? ಮೋಕ್ಷ ಪ್ರಾಪ್ತಿಯ ಲಕ್ಷಣಗಳು ಯಾವವು ? (೬) ಶುದ್ಧವಾದ ಆತ್ಮ ಸ್ವರೂಪ ಯಾವ ಪ್ರಕಾರದ್ದು ಇರುತ್ತದೆ ? ವಿದೇಹ ಸ್ಥಿತಿ, ನಿರ್ವಿಕಲ್ಪ ಸ್ಥಿತಿ ಎಂದರೆ ಯಾವುದು ? ಅಲಿಪ್ತತನವೆಂದರೆ ಯಾವ ಪ್ರಕಾರದ್ದು ? (೭) ಎಲ್ಲ ದೇವರ ದೇವನು ಯಾರು ? ಉತ್ತಮ ಭಕ್ತನೆಂದರೆ ಯಾರು ? ಜೀವ ಮತ್ತು ಶಿವ ಇವರ ಸ್ವರೂಪದ ನಿರ್ಣಯ ಮತ್ತು (೮) ಸರ್ವೋತ್ತಮ ಬ್ರಹ್ಮನ ನಿಶ್ಚಯ (ನಿರ್ಣಯ), ಅನೇಕ ಪ್ರಕಾರದ ಮತ ಮತ್ತು ಮತಾಂತರಗಳು ಯಾವವು ? ಮತ್ತು ಸತ್ಯವಾಗಿಯೂ ನಾನು ಯಾರು ? ಈ ಯಾವತ್ತೂ ವಿಷಯಗಳ ಬಗ್ಗೆ ಸ್ಪಷ್ಟ, ದೋಷರಹಿತ, ಸರಳವಾದ ಹಾಗೂ ನಿಃಸಂಶಯವಾದ ವಿವರಗಳ ಬಗ್ಗೆ ಈ ದಾಸಬೋಧದಲ್ಲಿ ಹೇಳಲಾಗಿವೆ. **(೯) ದಾಸಬೋಧದಲ್ಲಿ ಬಂದ ಇತರ ವಿಷಯಗಳು**:-ಮೇಲೆ ಹೇಳಿದ ವಿಷಯಗಳ ಜೊತೆಗೆ ಉಪಾಸನೆಯ ಮುಖ್ಯವಾದ ಲಕ್ಷಣಗಳನ್ನು. ನಾನಾ ಪ್ರಕಾರದ ಕಾವ್ಯದ ಲಕ್ಷಣಗಳನ್ನು, ನಾನಾ ಪ್ರಕಾರದ ಚತುರತೆಯ ಲಕ್ಷಣಗಳನ್ನು; (೧೦) ಮತ್ತು ಮಾಯಾ ಉತ್ಪತ್ತಿ ಲಕ್ಷಣಗಳನ್ನು, ಪಂಚ ಮಹಾಭೂತದ ಲಕ್ಷಣಗಳನ್ನು, ಹಾಗೂ ಈ ಸೃಷ್ಟಿಯ ಕರ್ತನು ಯಾರು ? ಮತ್ತು ಅವನ ಲಕ್ಷಣಗಳು ಎಂಥವು ? ಈ ಎಲ್ಲದರ ಬಗ್ಗೆ ನಿಸ್ಸಂದಿಗ್ಧ ವರ್ಣನೆಯನ್ನು ಈ ದಾಸಬೋಧದಲ್ಲಿ ಹೇಳಲಾಗಿದೆ. **(೧೧) ದಾಸಬೋಧದಲ್ಲಿ ಅನೇಕ ಸಂಶಯಗಳ ಪರಿಹಾರ (ನಿವಾರಣೆ) ಮಾಡಲಾಗಿದೆ.** ಅನೇಕ ವಿಕಲ್ಪ, ಸಂಶಯಗಳ ಮತ್ತು ಭ್ರಮೆ ಅಂದರೆ ತಪ್ಪು ತಿಳವಳಿಕೆಯ ನಿವಾರಣೆಯನ್ನು ಇದರಲ್ಲಿ ಮಾಡಲಾಗಿದೆ. ಅನೇಕ ಸಂಶಯಗಳನ್ನು ದೂರೀಕರಿಸಿ ಹೊಡೆದು ಹಾಕಲಾಗಿದೆ. ಅದರಂತೆಯೇ ಅನೇಕ ಆಕ್ಷೇಪಗಳಿಗೆ ಮತ್ತು ಪ್ರಶ್ನೆಗಳಿಗೆ ಸಮಾಧಾನವಾಗುವಂತೆ ಉತ್ತರ ಕೊಡಲಾಗಿದೆ. (೧೨) **ದಾಸಬೋಧದ ನಿವರ್ಣಣ ವಿವರಣೆ**:— ಈ ರೀತಿಯಾದ ಅನೇಕ ವಿಷಯಗಳ ವಿವರಣೆಯು ಈ ದಾಸಬೋಧದಲ್ಲಿ ಬಂದಿದೆ. ಗ್ರಂಥದೊಳಗೆ ಹೇಳಿದ ವಿಷಯಗಳೆಲ್ಲವನ್ನೂ ಒಂದೂ ಬಿಡದಂತೆ ಪ್ರಾರಂಭದಲ್ಲಿಯೇ ಹೇಳಲಿಕ್ಕೆ ಶಕ್ಯವಿಲ್ಲ. (೧೩)

ತಥಾಪಿ ಅವಘಾ ದಾಸಬೋಧ । ದಶಕ ಫೋಡೂನ ಕೇಲಾ ವಿಶದ ।
ಜೆ ಜೆ ದಶಕೀ ಚಾ ಅನುವಾದ । ತೇ ತೇ ದಶಕೀಬೋಲಿಲಾ ॥೧೪॥

ನಾನಾ ಗ್ರಂಥಾಂಚ್ಯಾ ಸಮತೀ । ಉಪನಿಷದೇ ವೇದಾಂತ ಶ್ರುತೀ ।
ಆಣಿ ಮುಖ್ಯ ಆತ್ಮ ಪ್ರಚೀತಿ । ಶಾಸ್ತ್ರೇ ಸಹಿತ ॥೧೫॥

ನಾನಾ ಸಮತೀ ಅನ್ವಯೇ । ಮ್ಹಣೌನೀ ಮಿಥ್ಯಾ ಮ್ಹಣತಾ ನಯೇ ।
ತಥಾಪಿ ಹೇ ಅನುಭವಾಸಿ ಯೇ । ಪ್ರತ್ಯಕ್ಷ ಆತಾ ॥೧೬॥

ಮತ್ಸರೇ ಯಾಸೀ ಮಿಥ್ಯಾ ಮ್ಹಣತೀ । ತರೀ ಅವಘೇ ಚಿ ಗ್ರಂಥ ಉಛೇದತೀ ।
ನಾನಾ ಗ್ರಂಥಾಂಚ್ಯಾ ಸಮತಿ । ಭಗವದ್ವಾಕ್ಯೇ ॥೧೭॥

ಶಿವಗೀತಾ ರಾಮಗೀತಾ । ಗುರುಗೀತಾ ಗರ್ಭಗೀತಾ ।
ಉತ್ತರ ಗೀತಾ ಅವಧೂತ ಗೀತಾ । ವೇದ ಆಣಿ ವೇದಾಂತ ॥೧೮॥

ಭಗವದ್ಗೀತಾ ಬ್ರಹ್ಮಗೀತಾ । ಹಂಸಗೀತಾ ಪಾಂಡವಗೀತಾ ।
ಗಣೇಶಗೀತಾ ಯಮಗೀತಾ । ಉಪನಿಷದೆ ಭಾಗವತ ॥೧೯॥

ಇತ್ಯಾದಿಕ ನಾನಾ ಗ್ರಂಥ । ಸಮತೀಸ ಬೋಲಿಲೆ ಯೇಥ ।
ಭಗವದ್ವಾಕ್ಯೆ ಯಥಾರ್ಥ । ನಿಶ್ಚಯೇಸೀ ॥೨೦॥

ಭಗವದ್ವಚನೀ ಅವಿಶ್ವಾಸೇ । ಐಸಾ ಕೋಣ ಪತಿತ ಅಸೆ ।
ಭಗವದ್ವಾಕ್ಯಾವಿರಹಿತ ನಸೆ । ಬೋಲಣೆ ಯೇಥೀಚೇ ॥೨೧॥

ಪೂರ್ಣ ಗ್ರಂಥ ಪಾಹಿಲ್ಯಾವಿಣ। ಉಗಾ ಚ ಠೇವೀ ಜೋ ದೂಷಣ ।
ತೋ ದುರಾತ್ಮಾ ದುರಾಭಿಮಾನ । ಮತ್ಸರೇ ಕರೀ ॥೨೨॥

ಅಭಿಮಾನೆ ಉಠೆ ಮತ್ಸರ। ಮತ್ಸರೇ ಯೇ ತಿರಸ್ಕಾರ ।
ಪುಢೇ ಕ್ರೋಧಾಚಾ ವಿಕಾರ । ಪ್ರಬಳೇ ಬಳೇ ॥೨೩॥

ಐಸಾ ಅಂತರೀ ನಾಸಲಾ । ಕಾಮಕ್ರೋಧೇ ಖವಳಲಾ ।
ಅಹಂಭಾವೇ ಪಾಲಟಲಾ । ಪ್ರತ್ಯಕ್ಷ ದಿಸೆ ॥೨೪॥

ಕಾಮಕ್ರೋಧೇ ಲಿಥಾಡಿಲಾ । ತೊ ಕೈಸಾ ಮ್ಹಣಾವಾ ಭಲಾ ।
ಅಮೃತ ಸೇವಿತಾ ಚ ಪಾವಲಾ। ಮೃತ್ಯ ರಾಹೋ ॥೨೫॥

ಆತಾ ಅಸೋ ಹೇ ಬೋಲಣೆ । ಅಧಿಕಾರಾ ಸಾರಿಖೇ ಘೇಣೆ ।
ಪರಂತು ಅಭಿಮಾನ ತ್ಯಾಗಣೇ । ಹೇ ಉತ್ತಮೋತ್ತಮ ॥೨೬॥

ಮಾಗಾ ಶ್ರೋತೀ ಆಕ್ಷೇಪಿಲೇ । ಜಿ ಯೇ ಗ್ರಂಥೀ ಕಾಯ ಬೋಲಿಲೇ ।
ತೇ ಸಕಳ ಹಿ ನಿರೋಪಿಲೇ । ಸಂಕಳೀತ ಮಾಗೆ ॥೨೭॥

ಇಡೀ ದಾಸಬೋಧವನ್ನು ಇಪ್ಪತ್ತು ದಶಕಗಳಲ್ಲಿ ವಿಭಾಗಿಸಲಾಗಿದೆ. ಪ್ರತಿಯೊಂದು ದಶಕದಲ್ಲಿ ಹತ್ತು ಸಮಾಸಗಳು ಇರುವವು. ಈ ಪ್ರತಿಯೊಂದು ದಶಕದಲ್ಲಿಯ ವಿಷಯವು ಆ ದಶಕದಲ್ಲಿಯೇ ತಿಳಿಯುವಂತೆ ಹೇಳಿದ್ದರಿಂದ ಇಡೀ ದಾಸ ಬೋಧವನ್ನು ಸ್ಪಷ್ಟ ರೀತಿಯಲ್ಲಿ ರಚನೆ ಮಾಡಲಾಗಿದೆ. (೧೪) **ದಾಸಬೋಧ ರಚನೆಗೆ ಉಪಯೋಗಿಸಿಕೊಂಡ ಆಧಾರ ಗ್ರಂಥಗಳು:-** ಈ ದಾಸಬೋಧ ಗ್ರಂಥದಲ್ಲಿ ವಿಷಯಗಳ ವಿವೇಚನೆಗೆ ಅನೇಕ ಗ್ರಂಥಗಳ ಆಧಾರವನ್ನು ಪಡೆ ಯಲಾಗಿದೆ. ಅವುಗಳಲ್ಲಿ ಕೆಲವು ಉಪನಿಷತ್ತುಗಳು, ಬ್ರಹ್ಮಸೂತ್ರಗಳು ಮತ್ತು ವೇದ ಇವುಗಳ ಆಧಾರವು ಮಹತ್ವದ್ದಾ ಗಿದೆ. ಮುಖ್ಯ ಮಾತೆಂದರೆ, ಶಾಸ್ತ್ರ ಪ್ರತೀತಿಯ ಜೊತೆಗೇನೇ ಪ್ರಾಮುಖ್ಯವಾಗಿ ಆತ್ಮ ಪ್ರತೀತಿಯ ಅಂದರೆ ಸ್ವಾನು ಭವದ ನಿಜವಾದ ಆಧಾರವನ್ನೇ ಮುಖ್ಯವಾಗಿ ವಿವರಿಸಲಾಗಿದೆ. (೧೫) **ಮತ್ಸರ ಬುದ್ಧಿಯ ಜನರ ಟೀಕೆ:-**ಅನೇಕ ಪ್ರಕಾರದ ಆಧಾರಗಳನ್ನು ಉಪಯೋಗಿಸಿಕೊಂಡು ರಚಿಸಿದಂಥ ದಾಸಬೋಧ ರಚನೆಯಲ್ಲಿಯ ವಿಷಯಗಳು ಸುಳ್ಳು ಅಥವಾ ದೋಷಯುಕ್ತವಿವೆ ಎಂದು ಅನ್ನುವವರೂ ಇರಬಹುದಾಗಿದೆ. ಈ ಮಾತು ಪ್ರತ್ಯಕ್ಷ ಸ್ವಾನುಭವಕ್ಕೆ ಬರುವಂಥ ದಿರುತ್ತದೆ. (೧೬) ಮತ್ಸರ ಬುದ್ಧಿಯವರು ಇದಕ್ಕೆ ಈ ಗ್ರಂಥದಲ್ಲಿ ತಪ್ಪು ಹೇಳಲಾಗಿದೆ. ಅನ್ನಬಹುದು. ಹೀಗೆ ಅನ್ನುವಾಗ ಇದಕ್ಕೆ ಆಧಾರ ಗ್ರಂಥಗಳ ಹಾಗೂ ಪ್ರತ್ಯಕ್ಷ ಭಗವಂತನೇ ಹೇಳಿದ ವಚನ ಮತ್ತು ಯಾವತ್ತೂ ವೇದಾಂತ ಗಳೆಲ್ಲವನ್ನೂ ತಪ್ಪು. ಸುಳ್ಳು ಎಂದು ತಿಳಿಯಬೇಕಾದಿತೆಂಬುದನ್ನು ಇವರು ಲಕ್ಷಿಸಿದಂತೆ ಕಾಣುವದಿಲ್ಲ. (೧೭) **ಆಧಾರ ಗ್ರಂಥಗಳ ಹೆಸರಿನ ಯಾದಿ:-** ಶಿವಗೀತಾ, ರಾಮಗೀತಾ, ಗುರುಗೀತಾ, ಗರ್ಭಗೀತಾ, ಉತ್ತರಗೀತಾ, ಅವಧೂತಗೀತಾ, ವೇದ ಮತ್ತು ವೇದಾಂತ- (ಶಾರೀರಭಾಷ್ಯ). (೧೮) ಭಗವದ್ಗೀತಾ, ಬ್ರಹ್ಮಗೀತಾ, ಹಂಸಗೀತಾ ಪಾಂಡವಗೀತಾ. ಗಣೇಶಗೀತಾ, ಯಮಗೀತಾ ಉಪನಿಷತ್ತು ಮತ್ತು ಭಾಗವತ, (೧೯) ಇತ್ಯಾದಿ ಇನ್ನೂ ಅನೇಕ ಗ್ರಂಥಗಳ ಆಧಾರ ತೆಗೆದುಕೊಂಡು ಈ ದಾಸಬೋಧ ಬರೆಯಲಾಗಿದೆ. ಮೊದಲಿಗೆ ಪ್ರತಿಯೊಂದು ವಿಷಯದ ಸ್ವರೂಪವನ್ನು ವಿವೇಕದಿಂದ ನಿಶ್ಚಿತಪಡಿಸಿಕೊಂಡು ನಂತರ ಆಧಾರಭೂತ ಗ್ರಂಥಗಳ ಹಾಗೂ ಭಗವಂತನು ಹೇಳಿದ ವಚನಗಳಲ್ಲಿ ಸರಿಯಾದ ಅರ್ಥ ಕೊಡುವಂಥವುಗಳನ್ನು ಉಪಯೋಗಿಸಿಕೊಳ್ಳಲಾಗಿದೆ. (೨೦) ದಾಸಬೋಧದಲ್ಲಿಯ ವಿಷಯದ ಚರ್ಚೆಯು ಭಗವಂತನ ವಚನಕ್ಕನುಸಾರವಾಗಿ ಇರುವದು. ಆದುದರಿಂದ ಭಗವಂತನ ಹೇಳಿಕೆಯ ಮೇಲೆ ವಿಶ್ವಾಸವಿಡದಂಥ ಕ್ಷುದ್ರ, ಮತ್ತು ಹೀನ ಬುದ್ಧಿಯ ಮನುಷ್ಯ ಇರಬಹುದೆಂದು ನಮಗೆ ಅನಿಸುವದಿಲ್ಲ. (೨೧) **ಕ್ಷುದ್ರ ಟೀಕಾಕಾರರ ಮನೋವೃತ್ತಿಯ ಬಗ್ಗೆ ವಿವರಣೆ :-** ಯಾವದೇ ಒಂದು ಗ್ರಂಥವನ್ನು ಆರಂಭದಿಂದ ಕೊನೆಯ ವರೆಗೆ ಸಂಪೂರ್ಣ ಓದದೇ ಟೀಕೆ ಮಾಡುವದು, ಅಥವಾ ಕೆಟ್ಟ ಅಭಿಪ್ರಾಯ ಪ್ರಕಟಿಸುವದು ಆ ಓದುಗನ ದುಷ್ಟಬುದ್ಧಿಯನ್ನು ಎತ್ತಿ ತೋರಿಸುತ್ತದೆ. ಕೇವಲ ಮತ್ಸರ ಮತ್ತು ದುರಭಿಮಾನದಿಂದ ಮುಕ್ತನಾಗದವನು ತನ್ನ ಹೀನತನವನ್ನು ತೋರ್ಪಡಿಸಿಕೊಳ್ಳುತ್ತಾನೆ(೨೨)ದುಷ್ಟತನ ಮತ್ತು ದುರಭಿಮಾನದಿಂದ ಮತ್ಸರ ನಿರ್ಮಾಣವಾಗುವದು ಮತ್ಸರದಿಂದ ತಿರಸ್ಕಾರ ಪ್ರಕಟಗೊಂಡು ನಂತರ ಅದು ಕ್ರೋಧರೂಪದಲ್ಲಿ ಬೆಳೆಯುತ್ತದೆ. (೨೩) ಯಾವನ ಮನಸ್ಸು ಈ ರೀತಿಯಾಗಿ ವಿಕೃತಹೊಂದಿರುವದೋ ಅಂಥವನ ಅಂತರಂಗವು ಕಾಮ ಕ್ರೋಧಾದಿಗಳಿಂದ ಉಲ್ಬಣ ಗೊಂಡು ಅವನು ಕೇವಲ ಅಹಂಕಾರಕ್ಕೊಳಪಟ್ಟು ಇಂಥ ಕಲುಷಿತ ಕೊಳಕು ಮನಸ್ಥಿತಿಗೆ ಮುಟ್ಟುತ್ತಾನೆ. ಇಂಥವರು ಈ ಜಗತ್ತಿನಲ್ಲಿ ಪ್ರತ್ಯಕ್ಷವಾಗಿ ನೋಡಲಿಕ್ಕೆ ಸಿಗುವರು. (೨೪) ಕಾಮ ಕ್ರೋಧಗಳಿಂದ ವ್ಯಾಪ್ತನಾದ ಮನುಷ್ಯನು ಚನ್ನಾಗಿರಲು ಸಾಧ್ಯವೇ ಇಲ್ಲ. ಉದಾ:- ರಾಹು ಎಂಬ ದೈತ್ಯನು ಅಮೃತವನ್ನು ನಿಜವಾಗಿಯೂ ಕುಡಿದದ್ದರಿಂದ ಅವನು ಅಮರನಾಗಬೇಕಿತ್ತು. ಆದರೆ ಕಾಮ-ಕ್ರೋಧಗಳ ಮೂಲಕ ಅಮರನಾಗುವದರ ಬದಲಾಗಿ ಮರಣವನ್ನು ಮಾತ್ರ ಹೊಂದಿದನು. (೨೫) ಈ ಬಗ್ಗೆ ಹೆಚ್ಚಿನ ಮಾತನಾಡುವದುಬೇಡ. ಪ್ರತಿಯೊಬ್ಬರು ತಮಗೆ ಸಹಿಸಿದಷ್ಟು, ಒಪ್ಪಿಗೆಯಾದಷ್ಟು, ಹಿಡಿಸಿದಷ್ಟು ಮಾತ್ರ ದಾಸಬೋಧದಿಂದ ತೆಗೆದುಕೊಳ್ಳಬೇಕು. ಅಂದರೆ ಅಹಂಕಾರವನ್ನು ಬದಿಗಿರಿಸಿ ದಾಸಬೋಧದಲ್ಲಿಯ ವಿಷಯವನ್ನು ಗ್ರಹಿಸಿದರೆ ಬಹಳ ಉತ್ತಮವಾಗುತ್ತದೆ. (೨೬) "ಈ ಗ್ರಂಥದಲ್ಲಿ ಏನೇನು ಹೇಳಲ್ಪಟ್ಟಿದೆ" ? ಎಂದು ಶ್ರೋತೃವು ಪ್ರಶ್ನೆಯನ್ನು ಮಾಡಿದ್ದನು. ಅದಕ್ಕೆ ಸ್ವಲ್ಪದರಲ್ಲಿ ಸ್ಪಷ್ಟವಾಗಿದೆ. (೨೭)

ಆತಾ ಶ್ರವಣ ಕೇಲಿಯಾಚೇ ಫಳ । ಕ್ರಿಯಾ ಪಾಲಟೆ ತತ್ಕಾಳ ।
ತುಟೆ ಸಂಶಯಾಚೇ ಮೂಳ । ಯೇಕಸರಾ ॥೨೮॥
ಮಾರ್ಗ ಸಾಂಪಡೇ ಸುಗಮ । ನ ಲಗೆ ಸಾಧನ ದುರ್ಗಮ ।
ಸಾಯೋಜ್ಯ ಮುಕ್ತೀಚೇ ಮರ್ಮ । ಠಾ ಈ ಪಡೆ ॥೨೯॥
ನಾಸೆ ಅಜ್ಞಾನ ದುಃಖ ಭ್ರಾಂತೀ । ಶೀಘ್ರ ಚಿ ಯೆಥೇ ಜ್ಞಾನ ಪ್ರಾಪ್ತೀ ।
ಐಸೀ ಆಹೆ ಫಳಶ್ರುತೀ । ಈಯೇ ಗ್ರಂಥೀ ॥೩೦॥
ಯೋಗಿಯಾಂಚೇ ಪರಮ ಭಾಗ್ಯ । ಆಂಗೀ ಬಾಣೇ ತೇ ವೈರಾಗ್ಯ ।
ಚಾತುರ್ಯ ಕಳೆ ಯಥಾಯೋಗ್ಯ । ವಿವೇಕೇ ಸಹಿತ ॥೩೧॥
ಭ್ರಾಂತ ಅವಗುಣೀ ಅವಲಕ್ಷಣ । ತೇ ಚಿ ಹೋತೀ ಸುಲಕ್ಷಣ ।
ಧೂರ್ತ ತಾರ್ಕಿಕ ವಿಚಕ್ಷಣ । ಸಮಯೊ ಜಾಣತೀ ॥೩೨॥
ಆಳಸೀ ತೇ ಚೀ ಸಾಕ್ಷಪೀ ಹೋತೀ। ಪಾಪೀ ತೇ ಚಿ ಪ್ರಸ್ತಾವತೀ ।
ನಿಂದಕ ತೇ ಚಿ ವಂದೂ ಲಾಗತೀ । ಭಕ್ತಿಮಾರ್ಗಾಸೀ ॥೩೩॥
ಬದ್ಧ ಚಿ ಹೋತೀ ಮುಮುಕ್ಷ । ಮೂರ್ಖ ಹೋತೀ ಅತಿ ದಕ್ಷ ।
ಅಭಕ್ತ ಚಿ ಪಾವತೀ ಮೋಕ್ಷ । ಭಕ್ತಿಮಾರ್ಗೇ ॥೩೪॥
ನಾನಾ ದೋಷ ತೆ ನಾಸತೀ । ಪತಿತ ತೇ ಚೀ ಪಾವನ ಹೋತೀ ।
ಪ್ರಾಣೀ ಪಾವೆ ಉತ್ತಮ ಗತೀ । ಶ್ರವಣಮಾತ್ರೇ ॥೩೫॥
ನಾನಾ ಧೋಕೆ ದೇಹ ಬುದ್ಧೀಚೆ । ನಾನಾ ಕಿಂತ ಸಂದೇಹಾಚೆ ।
ನಾನಾ ಉದ್ವೇಗ ಸಂಸಾರಾಚೆ । ನಾಸತೀ ಶ್ರವಣೆ ॥೩೬॥
ಐಸೀ ಯಾಚೀ ಫಳಶ್ರುತೀ । ಶ್ರವಣೆಚುಕೆ ಅಧೋಗತೀ ।
ಮನಾಸ ಹೋಯ ವಿಶ್ರಾಂತೀ । ಸಮಾಧಾನ ॥೩೭॥
ಜಯಾಚಾ ಭಾವಾರ್ಥ ಜೈಸಾ । ತಯಾಸ ಲಾಭ ತೈಸಾ ।
ಮತ್ಸರ ಧರೀ ಜೊ ಪುಸಾ । ತಯಾಸ ತೇ ಚಿ ಪ್ರಾಪ್ತ ॥೩೮॥

ಇತಿ ಶ್ರೀದಾಸಬೋಧೇ ಗುರುಶಿಷ್ಯಸಂವಾದೇ
ಗ್ರಂಥಾರಂಭಲಕ್ಷಣನಾಮ ಪ್ರಥಮಾಧ್ಯಾಯೆ ಪ್ರಥಮ ಸಮಾಸ ಸಮಾಪ್ತ ॥

**ದಾಸಬೋಧದ ಅಭ್ಯಾಸದಿಂದ ಸಿಗುವ ಫಲ:-** ಈ ಗ್ರಂಥದ ಅಭ್ಯಾಸ ಮಾಡಿದರೆ ಯಾವ ಫಲ ಸಿಗುತ್ತದೆಂಬುದನ್ನು ಹೇಳುತ್ತೇವೆ. ಅಭ್ಯಾಸ ಮಾಡುವ ಮನುಷ್ಯನ ಆಚರಣೆ ಬೇಗ ಸುಧಾರಿಸುತ್ತದೆ. ಅವನ ಯಾವತ್ತೂ ಸಂಶಯಗಳು ಕೂಡಲೇ ಪೂರ್ಣವಾಗಿ ನಾಶ ಹೊಂದುವವು. (೨೮) ಈಶ್ವರ ದರ್ಶನ ಸುಗಮ, ಮತ್ತು ಸುಖದ ಮಾರ್ಗ ಗೊತ್ತಾಗುವದು. ಪರಮಾರ್ಥ ಸಾಧನೆಗಾಗಿ ನಿಜವಾಗಿ ಕಷ್ಟದಾಯಕ ಕಠಿಣ ಸಾಧನೆಗಳ ಅವಶ್ಯಕತೆ ಬೇಕಾಗುವುದಿಲ್ಲ. ಸಾಯುಜ್ಯ ಮುಕ್ತಿಯ ರಹಸ್ಯವು ಸಹಜವಾಗಿ ಸುಲಭ ರೀತಿಯಿಂದ ಕೈಗೆ ಸಿಗುವದು ಸಾಧ್ಯವಾಗುವದು. (೨೯) ಈ ಗ್ರಂಥದ ಅಭ್ಯಾಸದಿಂದ ಸಿಗುವ ಫಲವೆಂದರೆ ಅಜ್ಞಾನ, ದುಃಖ ಮತ್ತು ತಪ್ಪು ತಿಳುವಳಿಕೆ ಇವುಗಳೆಲ್ಲ ಪೂರ್ಣವಾಗಿ ನಾಶವಾಗಿ ತತ್‌ಕ್ಷಣದಲ್ಲಿ (ಕೂಡಲೇ) ಜ್ಞಾನ ಪ್ರಾಪ್ತಿ ಆಗುತ್ತದೆ. (೩೦) ಯೋಗಿ ಮನುಷ್ಯನು ವೈರಾಗ್ಯವನ್ನು ದೊಡ್ಡ ಭಾಗ್ಯವೆಂದು ತಿಳಿಯುತ್ತಾನೆ. ಅಂಥ ವೈರಾಗ್ಯ ಮನುಷ್ಯನಲ್ಲಿ ಚಂಚಲಿಸುತ್ತದೆ. ಅದೇ ರೀತಿಯಾಗಿ ಅಂತರ್ಯಾಮಿಯಲ್ಲಿ ವಿವೇಕ ಉತ್ಪನ್ನವಾಗಿ, ವ್ಯವಹಾರದಲ್ಲಿ ಚಾತುರ್ಯದಿಂದ ಮತ್ತು ಪ್ರಸಂಗ ವಿಶೇಷದಲ್ಲಿ ಹೇಗೆ ನಡೆಯಬೇಕು ಎಂಬುದು ತಿಳಿಯುತ್ತದೆ. (೩೧) ಇದರಿಂದ ಭ್ರಮಿಷ್ಟ ಅಂದರೆ ಹುಚ್ಚ, ತಪ್ಪು ತಿಳುವಳಿಕೆಯುಳ್ಳವ, ಅಥವಾ ಕುಕಲ್ಪನೆ ಇರುವಂಥ ದುರ್ಗುಣಿ ಮತ್ತು ಹೀನ ಲಕ್ಷಣಗಳುಳ್ಳವರೂ ಸಹ ಉತ್ತಮ ಲಕ್ಷಣವುಳ್ಳವರಾಗುತ್ತಾರೆ. ಮತ್ತು ಎರಡನೆಯವರಲ್ಲಿರುವ ಅಪ್ರಮಾಣಿಕತನವನ್ನು ಕಂಡು ಹಿಡಿಯುವ ಚತುರತೆಯು ಪ್ರಾಪ್ತವಾಗುತ್ತದೆ· ವಾದ ವಿವಾದ ಮಾಡಲಿಕ್ಕೆ ಬರುವದು. ಸೂಕ್ಷ್ಮ ವಿಚಾರದ ತಿಳುವಳಿಕೆ ಬರುತ್ತದೆ. ಮತ್ತು ಪ್ರಸಂಗ ವಿಶೇಷಗಳನ್ನು ತಿಳಿಯುವ ಶಕ್ತಿ ಬರುತ್ತದೆ. (೩೨) ಆಲಸ್ಯವುಳ್ಳವನು ಉದ್ಯೋಗಿಯಾಗುತ್ತಾನೆ. ಪಾಪಿಯು ಪಶ್ಚಾತ್ತಾಪ ಹೊಂದಿ ಪವಿತ್ರನಾಗುತ್ತಾನೆ. ಭಕ್ತಿಮಾರ್ಗದ ನಿಂದೆ ಮಾಡುವವರು ಸ್ವತಃ ಅದರಿಂದ ಭಕ್ತಿ ಮಾಡಲಿಕ್ಕೆ ಹತ್ತುವರು. (೩೩) ಪ್ರಪಂಚದಲ್ಲಿ ಮುಳುಗಿದ ಸ್ವಾರ್ಥ ಸಾಧಕನಿಗೆ ಈಶ್ವರ ದರ್ಶನದ ಇಚ್ಛೆ ಉತ್ಪನ್ನವಾಗುತ್ತದೆ. ಶಿಸ್ತುರಹಿತ ಮನುಷ್ಯನು ವ್ಯವಸ್ಥಿತವಾಗಿ ನಡೆಯ ಹತ್ತುವನು. ನಾಸ್ತಿಕನಾಗಿದ್ದವನು ಭಕ್ತಿ ಮಾರ್ಗದಿಂದ ಮೋಕ್ಷದವರೆಗೆ ಹೋಗಿ ಮುಟ್ಟುತ್ತಾನೆ. (೩೪) ಅಭ್ಯಾಸಿ ಮನುಷ್ಯನ ಅನೇಕ ದೋಷಗಳು ನಷ್ಟವಾಗುವವು. ಅಪವಿತ್ರ ಮನುಷ್ಯನು ಪವಿತ್ರನಾಗುವನು. ಮನುಷ್ಯನಿಗೆ ಉತ್ತಮ ಗತಿಯು ಲಾಭವಾಗುವದು. (೩೫) "ನಾನು ದೇಹವೇ ಇರುವೆ" ಎಂಬ ಶಾಶ್ವತ ತಿಳುವಳಿಕೆಯಿಂದ ನಡೆಯುವವರಿಗೆ ಜೀವನದಲ್ಲಿ ಅನೇಕ ಕಠಿಣ ಪ್ರಸಂಗಗಳು ಬರುತ್ತವೆ. ಆದರೆ ದಾಸಬೋಧದ ಅಭ್ಯಾಸದ ಬಲದಿಂದ ಇವೆಲ್ಲ ದೂರಾಗುವವು. ಅದರಂತೆಯೇ ನಾನಾ ಪ್ರಕಾರದ ಸಂಶಯದಿಂದ ನಿರ್ಮಾಣವಾಗುವ ಭ್ರಮೆಗಳೆಲ್ಲ ಇಲ್ಲದಂತಾಗುವವು. ಸಂಸಾರದಲ್ಲಿಯ ದುಃಖ. ಮತ್ತು ನಿರಾಶೆಯ ಅನೇಕ ಪ್ರಸಂಗಗಳು ಇಲ್ಲದಂತಾಗುವವು. (೩೬) ದಾಸಬೋಧದ ಅಭ್ಯಾಸದಿಂದ ಪ್ರಾಪ್ತವಾಗುವ ಫಲಗಳು ಇವಾಗಿರುತ್ತವೆ. ಜೀವನದ ಅವನತಿಯಾಗುವದು ನಿಲ್ಲುತ್ತದೆ. ಮನುಷ್ಯನ ಮನಸ್ಸಿಗೆ ಸ್ಥಿರವಾದ ವಿಶ್ರಾಂತಿ ಮತ್ತು ಸಮಾಧಾನ ಸಿಗುವದು. (೩೭) **ಓದುವವನಲ್ಲಿ ಯಾವ ರೀತಿಯ ವೃತ್ತಿ ಇರುವದೋ ಆ ರೀತಿಯಲ್ಲಿ ಅವನಿಗೆ ಫಲ ಸಿಗುವದು.** ಮೇಲೆ ಹೇಳಿದ್ದೆಲ್ಲವೂ ಸತ್ಯವೇ ಇರುತ್ತದೆ. ಆದರೆ, ಅಭ್ಯಾಸ ಮಾಡುವವನ ಮನೋವೃತ್ತಿ ಯಾವ ರೀತಿಯಲ್ಲಿ ಇರುವದೋ ಅದರಂತೆಯೇ ಅವನಿಗೆ ಫಲವು ಸಿಗುವುದು. ಮತ್ಸರ ವೃತ್ತಿ ಹಾಗೂ ದೋಷ ದೃಷ್ಟಿ ಇಟ್ಟು ಗ್ರಂಥ ಓದಿದವನಿಗೆ ಆ ರೀತಿಯಲ್ಲಿಯೇ ಫಲ ಸಿಗುವದೆಂಬುದನ್ನು ಬೇರೆ ಹೇಳುವ ಅವಶ್ಯಕತೆ ಇರುವದಿಲ್ಲ. (೩೮)

ಇತಿ ಶ್ರೀದಾಸಬೋಧದ ಗುರುಶಿಷ್ಯ ಸಂವಾದದಲ್ಲಿಯ "ಗ್ರಂಥಾರಂಭ ಲಕ್ಷಣ" ಎಂಬ ಹೆಸರುಳ್ಳ ಒಂದನೇ ಸಮಾಸ ಮುಗಿಯಿತು.

• •

## ಸಮಾಸ ದುಸರಾ : ಗಣೇಶ ಸ್ತವನ.

॥ ಶ್ರೀರಾಮ ॥ ಓಂ ನಮೋ ಜಿ ಗಣನಾಯಕಾ । ಸರ್ವಸಿದ್ಧಿಫಳದಾಯಕಾ ।
ಅಜ್ಞಾನಭ್ರಾಂತಿಛೇದಕಾ । ಬೋಧರೂಪಾ ॥೧॥
ಮಾಝಿಯೆ ಅಂತರೀಭರಾವೆ । ಸರ್ವಕಾಳ ವಾಸ್ತವ್ಯ ಕರಾವೇ ।
ಮಜ ವಾಗ್ಶೂನ್ಯಾಸ ವದವಾವೇ । ಕೃಪಾಕಟಾಕ್ಷೇಕರೂನೀ ॥೨॥
ತುಝಿಯೆ ಕೃಪೇಚೇನಿ ಬಳೇ । ವಿತುಳತೀ ಭ್ರಾಂತೀಚೀ ಪಡಳೇ ।
ಆಣೀ ವಿಶ್ವಭಕ್ಷಕ ಕಾಳೇ । ದಾಸ್ಯತ್ವ ಕೀಜೆ ॥೩॥
ಯೇತಾ ಕೃಪೇಚೀ ನಿಜ ಉಡೀ । ವಿಘ್ನೆ ಕಾಂಪತಿ ಬಾಪುಡೀ ।
ಹೋಊನ ಜಾತೀ ದೇಶಧಡೀ । ನಾಮಮಾತ್ರೆ ॥೪॥
ಮ್ಹಣೌನ ನಾಮೇ ವಿಘ್ನಹರ । ಆಮ್ಹಾ ಅನಾಥಾಚೇ ಮಾಹೇರ ।
ಆದಿಕರೂನೀ ಹರೀಹರ । ಅಮರ ವಂದಿತೀ ॥೫॥
ವಂದೂನಿಯಾ ಮಂಗಳನಿಧೀ । ಕಾರ್ಯ ಕರಿತಾಸರ್ವಸಿದ್ಧೀ ।
ಆಘಾತ ಅಡಥಾಳೆ ಉಪಾಧೀ । ಬಾಧೂ ಸಕೇನಾ ॥೬॥
ಜಯಾಚೇ ಆಠವಿತಾ ಧ್ಯಾನ । ವಾಟೆ ಪರಮ ಸಮಾಧಾನ ।
ನೇತ್ರೀ ರಿಘೋನಿಯಾ ಮನ । ಪಾಂಗುಳೆ ಸರ್ವಾಂಗೀ ॥೭॥
ಸಗುಣ ರೂಪಾಚೀ ಟೇವ । ಮಹಾ ಲಾವಣ್ಯ ಲಾಘವ ।
ನೃತ್ಯ ಕರಿತಾ ಸಕಳ ದೇವ । ತಟಸ್ತ ಹೋತೀ ॥೮॥
ಸರ್ವಕಾಳ ಮದೋನ್ಮತ್ತ । ಸದಾ ಆನಂದೇ ಡುಲ್ಲತ ।
ಹರೂಷೆ ನಿರ್ಭರ ಉದ್ದಿತ । ಸುಪ್ರಸನ್ನವದನು ॥೯॥

## ಸಮಾಸ ೨. ಗಣೇಶ ಸ್ತವನ (ನುಡಿ ೩೦)

ಈ ಸಮಾಸದಲ್ಲಿ ಶ್ರೀ ಸಮರ್ಥರು ಗಣಪತಿಗೆ ನಮಸ್ಕಾರ ಮಾಡುತ್ತಾರೆ. ಸಂತ ಶರಣರ ವಾಙ್ಮಯದಲ್ಲಿ ಗಣಪತಿ ಎಂದರೆ ವಿಶ್ವವ್ಯಾಪಿಯಾದ ಶುದ್ಧ ಜ್ಞಾನವೇ ಆಗಿರುವನು. ಇದಕ್ಕೇ ಈಶ್ವರ ಅನ್ನುವರು. ಮನುಷ್ಯನ ಮನದಲ್ಲಿ ಅರ್ಥ ತಿಳಿದುಕೊಳ್ಳುವ ಯೋಗ್ಯತೆ ವಾಸಮಾಡುತ್ತದೆ. ಇದೇ ಗಣಪತಿಯ ವಸತಿ ಸ್ಥಾನವಾಗಿದೆ. ಇದು ಮನುಷ್ಯನನ್ನು ಜ್ಞಾನದ ಕಡೆಗೆ ಒಯ್ಯುವದು. ಗಣಪತಿಯು ಜ್ಞಾನಸ್ವರೂಪನಾಗಿರುವದರಿಂದ ಅರ್ಥ ತಿಳಿಯಲು ಅಥವಾ ಅಜ್ಞಾನ ನಾಶವಾಗಲು ಗಣಪತಿಯ ಕೃಪೆ ಅವಶ್ಯವಾಗಿದೆ. ಈ ಭಾವವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಸಂತರು ಗಣೇಶನಿಗೆ ಮೊದಲು ವಂದನೆ ಮಾಡುವರು. ಜ್ಞಾನ ಸಾಧನೆ ಮಾಡುವಾಗ ಮಧ್ಯದಲ್ಲಿ ಉದ್ಭವಿಸ ಬಹುದಾದ ವಿಘ್ನಗಳು ಜ್ಞಾನಸ್ವರೂಪಿಯಾದ ವಿಘ್ನೇಶನ ಕೃಪೆಯಿಂದ ದೂರಾಗುವವು. ಅಂತೆಯೇ ಅವನಿಗೆ ವಿಘ್ನಹರ್ತನೆಂದು ಹೆಸರು ಬಂದಿದೆ. ಈ ಸಮಾಸದಲ್ಲಿ ಮೊದಲಿನ ಆರು ನುಡಿಗಳ ಗಣೇಶನ ತಾತ್ವಿಕ ಸ್ವರೂಪವನ್ನು ಹೇಳಿ ನಂತರ ಪರಂಪರಾಗತ ಲೋಕಪ್ರಿಯವಾದ ಪೌರಾಣಿಕ ಸಗುಣ ಸ್ವರೂಪವನ್ನು ಶ್ರೀ ಸಮರ್ಥರು ವರ್ಣನೆ ಮಾಡಿರುತ್ತಾರೆ.

**ಗಣಪತಿಯು ನಿರ್ಗುಣ ಅಥವಾ ತಾತ್ವಿಕ ವಿಶ್ವವ್ಯಾಪಕ ಸ್ವರೂಪವು** :— ಸರ್ವಸಿದ್ಧಿಗಳಿಗೆ ಫಲ ಕೊಡುವಂಥ ಅಜ್ಞಾನದ ಆವರಣದ ಮುಸುಕನ್ನು ದೂರಮಾಡಿ ಭ್ರಮೆಯನ್ನು ಹೋಗಲಾಡಿಸುವಂಥ ಮತ್ತು ಮೂರ್ತಿವಂತ ಜ್ಞಾನವೇ ಆಗಿರುವ ಓಂಕಾರ ರೂಪದ ಗಣಪತಿಯೇ ನಿನಗೆ ನಾನು ನಮಸ್ಕಾರ ಮಾಡುತ್ತೇನೆ. (೧) ಹೇ ಗಣಪತಿಯೇ ನೀನು ನನ್ನ ಅಂತಃಕರಣದ ಒಳ-ಹೊರಗೆಲ್ಲದರಲ್ಲಿಯೂ ವ್ಯಾಪಿಸುವವನಾಗು, ನನ್ನಲ್ಲಿ ನೀನು ಸ್ಥಿರವಾಗಿ ಇರುವವನಾಗು. ಮತ್ತು ನಿನ್ನ ಕೃಪಾ ದೃಷ್ಟಿಯ ಬಲದಿಂದ ಮೂಕನಾದ ನನಗೆ ಗ್ರಂಥದ ಬಗ್ಗೆ ತಿಳಿಯಾಗಿ ಹೇಳುವ ಹಾಗೂ ರಚಿಸುವ ಸಾಮರ್ಥ್ಯವನ್ನು ಕೊಡುವಂಥವನಾಗು. (೨) ನಿನ್ನ ಕೃಪೆಯ ಸಾಮರ್ಥ್ಯದಿಂದ ಭ್ರಮೆ, ಅಜ್ಞಾನ ಇವುಗಳ ಆವರಣವು ಕರಗಿ ಹೋಗುವದು. ಮತ್ತು ಎಲ್ಲ ವಿಶ್ವವನ್ನೇ ನುಂಗ ತಕ್ಕಂಥ ಕಾಲನೂ ಸಹ ನಮ್ಮ ಆಧೀನನಾಗುತ್ತಾನೆ-ಗುಲಾಮನಾಗುತ್ತಾನೆ. (೩) ಅಕಸ್ಮಾತ್ ಇವನ ಕೃಪೆಯಾದರೆ ದರಿದ್ರತನ ಮತ್ತು ಸಂಕಟಗಳೆಲ್ಲ ಅಂಜಿ ನಡಗುಹತ್ತುವವು. ಇಷ್ಟೇ ಏಕೆ? ನಾಮಸ್ಮರಣ ಮಾತ್ರದಿಂದಲೇ ಓಡಿ ಹೋಗುವವು. ಇಲ್ಲದಾಗುವವು. (೪) ಅಂತೆಯೇ ಗಣಪತಿಗೆ ವಿಘ್ನಹರ ಎಂದು ಹೆಸರು ಬಂದಿದೆ. ಜಗತ್ತಿನಲ್ಲಿ ಆಶ್ರಯವೂ ಇಲ್ಲದವರಿಗೆ ಇವನು ಆಶ್ರಯ ಸ್ಥಾನನಾಗಿರುವನು. ವಿಷ್ಣು, ಶಂಕರ ಆದಿಯಾಗಿ ದೇವತೆಗಳೆಲ್ಲರೂ ಇವನಿಗೆ ನಮಸ್ಕರಿಸುತ್ತಾರೆ. (೫) ಜಗತ್ತಿನಲ್ಲಿ ಮಂಗಳಕರವಾದುದು ಯಾವ್ಯಾವುದು ಇರುವದೋ ಅದರಲ್ಲೆಲ್ಲ ಇವನ ಅಸ್ತಿತ್ವ ಇರುವದು. ಯಾವದೇ ಕೆಲಸವನ್ನು ಮಾಡುವ ಮೊದಲು ಇವನಿಗೆ ನಮಸ್ಕರಿಸಿ ಪ್ರಾರಂಭಿಸಿದರೆ ಅದು ಎಲ್ಲ ರೀತಿಯಿಂದ ಯಶಸ್ವಿ ಆಗಿಯೇ ತೀರುವದು. ಹಾಗೂ ಮಧ್ಯದಲ್ಲಿ ಸಂಕಟ, ಅಡ್ಡಿ, ಆತಂಕ, ಕಿರಿಕಿರಿಗಳು ಬಾಧಿಸುವದಿಲ್ಲ. (೬) **ಗಣಪತಿಯು ಸಗುಣ ರೂಪದ ವರ್ಣನೆಯು**:-ಇವನ ರೂಪದ ವಿಚಾರ ಚಿಂತನ ಮಾಡಿದರೆ ಮನಸ್ಸಿಗೆ ಬಹಳಷ್ಟು ಸಮಾಧಾನವಾಗುತ್ತದೆ. ನಂತರ ಆ ರೂಪವನ್ನು ಪ್ರತ್ಯಕ್ಷವಾಗಿ ನೋಡುವದಕ್ಕಾಗಿ ಮನಸ್ಸು ಹಂಬಲಿಸಿ ನೇತ್ರದಲ್ಲಿ ಏಕಾಗ್ರತೆ ಉಂಟಾಗಿ ಇನ್ನೊಂದೇನೂ ಕಾಣದೆ ಹಂಬಲಿಸಿದವನ ಎಲ್ಲ ಕ್ರಿಯೆಗಳೂ ಬಂದಾಗು ತ್ತವೆ. (೭) ಗಣೇಶನ ಸಗುಣ ರೂಪದ ಚೆಲುವು ಮತ್ತು ಸೌಂದರ್ಯ ಅಸಾಮಾನ್ಯವಾಗಿದೆ. ಅದರಲ್ಲಿ ಚಾತುರ್ಯ ದಿಂದ ಅಗಾಧವಾದ ಸೌಂದರ್ಯದ ರಚನೆಯಾದದ್ದು ಕಂಡುಬರುತ್ತದೆ. ಇವನು ಕುಣಿಯಹತ್ತಿದರೆ ಯಾವತ್ತೂ ದೇವತೆಗಳು ದೇಹದ ಪರಿವೆ ಇಲ್ಲದೆ ಕೇವಲ ಅವನನ್ನೇ ನೋಡುತ್ತ ನಿಲ್ಲುವರು. (೮) ಇವನ ಗಂಡಸ್ಥಳದಿಂದ ಒಂದೇ ಸವನೆ ಬ್ರಹ್ಮನ ಭವರೂಪದ ಮದವು ಸುರಿಯ ಹತ್ತುವದು. ಇದರಿಂದ ಯಾವಾಗ ನೋಡಿದರೂ ಆಗ ಅವನು ಸ್ವಾನಂದ ಸಾಮ್ರಾಜ್ಯದ ಗುಂಗಿನಲ್ಲಿ ಇರುವದನ್ನು ನೋಡಬಹುದು, ಪರಮಾನಂದದಿಂದ ಯಾವಾಗಲೂ ತಲೆಯನ್ನು ಅಲ್ಲಾಡಿಸುತ್ತಾ ಇರುತ್ತಾನೆ. ಅಂತರ್ಯದಿಂದ ಹೊರಹೊಮ್ಮುತ್ತಿರುವ ಆನಂದದ ಮೂಲಕ ಮುಖವು ಪ್ರಸನ್ನ ವಾಗಿರುತ್ತದೆ. (೯)

ಭವ್ಯರೂಪ ವಿತಂಡ । ಭೀಮಮೂರ್ತಿ ಮಹಾ ಪ್ರಚಂಡ ।
ವಿಸ್ತೀರ್ಣ ಮಸ್ತಕೀ ಉದಂಡ । ಸಿಂಧೂರ ಚರ್ಚಿಲಾ ॥೧೦॥
ನಾನಾ ಸುಗಂಧ ಪರಿಮಳೇ । ಥಬಾಥಬಾ ಗಳತೀ ಗಂಡಸ್ಥಳೆ ।
ತೆಥೆ ಆಲೀ ಷಟ್ಪದಕುಳೆ । ಝುಂಕಾರಶಬ್ದೇ ॥೧೧॥
ಮುರ್ಡಿಲೀವ ಶುಂಡಾದಂಡ ಸರಳೆ । ಶೋಭೆ ಅಭಿನವ ಆವಾಳೇ ।
ಲಂಬಿತ ಅಧರ ತಿಕ್ಷಣ ಗಳೆ । ಕ್ಷಣಕ್ಷಣಾ ಮಂದ ಸತ್ವೀ ॥೧೨॥
ಚೌದಾ ವಿದ್ಯಾಂಚಾ ಗೋಸಾವೀ । ಹರಸ್ವ ಲೋಚನ ತೆ ಹಿಲಾವೀ ।
ಲವಲವಿತ ಫಡಕಾವೀ । ಫಡೈ ಫಡೈ ಕರ್ಣಥಾಪಾ ॥೧೩॥
ರತ್ನಖಚಿತ ಮುಗುಟೀ ಝುಳಾಳ । ನಾನಾ ಸುರಂಗ ಫಾಂಕತೀ ಕೀಳ ।
ಕುಂಡಲೇ ತಳಪತೀ ನೀಳ । ವರೀ ಜಡಿಲೆ ಝುಮಕತೀ ॥೧೪॥
ದಂತ ಶುಭ್ರ ಸದ್ದಟ । ರತ್ನಖಚಿತ ಹೇಮಕಟ್ಟ ।
ತಯಾ ತಳವಟೀ ಪತ್ರೆ ನೀಟ । ತಳಪತೀ ಲಘು ಲಘು ॥೧೫॥
ಲವಥವಿತ ಮುಲಪೆ ದೊಂದ । ವೇಷ್ಟಿತ ಕಟ್ಟ ನಾಗಬಂದ ।
ಕ್ಷುದ್ರ ಘಂಟಿಕಾ ಮಂದ ಮಂದ । ವಾಜತೀ ಝಣತ್ಕಾರೇ ॥೧೬॥
ಚತುರ್ಭುಜ ಲಂಬೋದರ । ಕಾಸೆ ಕಾಸಿಲಾ ಪೀತಾಂಬರ ।
ಫಡಕೇ ದೊಂದಿಚಾ ಫಣೀವರ । ಧುಧೂಕಾರ ಟಾಕೀ ॥೧೭॥
ಡೋಲವೀ ಮಸ್ತಕ ಜಿಹ್ವಾ ಲಾಳೀ । ಘಾಲೂನ ಬೈಸಲಾ ವೆಟಾಳಿ ।
ಉಭಾರೋನಿ ನಾಭಿಕಮಳೀ । ಟಕಮಕಾಪಾಹೆ ॥೧೮॥
ನಾನಾ ಯಾತಿ ಕುಶಮಮಾಳಾ । ವ್ಯಾಳ ಪರಿಯಂತ ರುಳತೀ ಗಳಾ ।
ರತ್ನಜಡಿತ ಹೃದಯು ಕಮಳಾ । ವರೀ ಪದಕ ಶೋಭೆ ॥೧೯॥
ಶೋಭೆ ಫರಶ ಆಣೇ ಕಮಳ । ಅಂಕುಶ ತಿಕ್ಷಣ ತೇಜಾಳ ।
ಯೇಕೆ ಕರೀ ಮೋದಕಗೋಳ । ತಯಾವರೀ ಅತಿ ಪ್ರೀತಿ ॥೨೦॥
ನಟಿ ನಾಟ್ಯ ಕಳಾ ಕುಸರೀ । ನಾನಾ ಛಂದೇ ನೃತ್ಯಕರೀ ।
ಟಾಳ ಮೃದಾಗ ಭರೋವರೀ । ಉಪಾಂಗ ಹುಂಕಾರೇ ॥೨೧॥
ಸ್ಥಿರತಾ ನಾಹೀ ಯೇಕ ಕ್ಷಣ । ಚಪಳವಿಶಕ್ಷು ಎ ಅಗ್ರಗಣ ।
ಸಾಜಿರೀ ಮೂರ್ತಿ ಸುಲಕ್ಷಣ । ಲಾವಣ್ಯಖಾಣೀ ॥೨೨॥
ರುಣಝುಣಾ ವಾಜತೀ ನೇಪುರೇ । ವಾಂಕೀ ಬೋಭಾಟತೀ ಗಜರೇ ।
ಘಾಗರಿಯಾಸಹಿತ ಮನೋಹರೇ । ಪಾಉಲೇ ದೋನೀ ॥೨೩॥

ಇವನ ರೂಪವು ಭವ್ಯ ಹಾಗೂ ಬಹು ಎತ್ತರ ಮತ್ತು ದೇಹವು ಪ್ರಚಂಡ ಶಕ್ತಿಯುತ ಹಾಗೂ ಬಲಿಷ್ಠವಾದುದು ಇರುವದು. ವಿಶಾಲವಾದ ಹಣೆಗೆ ದಟ್ಟವಾದ ಸಿಂಧೂರ ಲೇಪಿಸಿರುವದು. (೧೦) ಇವನ ಗಂಡ ಸ್ಥಳದಿಂದ ಸುರಿಯುವ ಮದಕ್ಕೆ ಅನೇಕ ಪ್ರಕಾರದ ಸುಗಂಧದ ವಾಸನೆ ಇರುತ್ತದೆ. ಈ ಸುವಾಸನೆಯು ಸುತ್ತ ಮುತ್ತೆಲ್ಲ ಹರಡುವದರಿಂದ ಗುಂಗೀಮುಳಗಳ ಸಮೂಹವೇ ಇವನ ತಲೆಯ ಸುತ್ತೆಲ್ಲ ಝೂಂ, ಝೂಂ ಎಂದು ಝೇಂಕರಿಸುತ್ತ ತಿರುಗುವವು. (೧೧) ದಪ್ಪವಾದ ಕಟ್ಟಿಗೆಯಂತಿರುವ ಇವನ ಸೊಂಡೆಯು ಒಮ್ಮೆ ಸರಳವಾಗಿ ಮತ್ತೊಮ್ಮೆ ಮುರಗಿಯಂತೆ, ಒಮ್ಮೊಮ್ಮೆ ಸೊಟ್ಟಾಗಿ ಕಾಣುತ್ತಿರುವದು. ತಲೆಯ ಮೇಲೆ ಮಾಂಸದ ಪಿಂಡಗಳೆರಡು ಚನ್ನಾಗಿ ಶೋಭಿಸುವವು. ಕೆಳ ತುಟಿಯು ಜೋಲು ಬಿದ್ದಿರುತ್ತದೆ. ಮತ್ತು ಮಲಕುಗಳಿಂದ ಉಗ್ರ ವಾಸನೆಯ ಸ್ರಾವವು ಸ್ವಲ್ಪ ಸ್ವಲ್ಪ ತೊಟ್ಟಿಕ್ಕುತ್ತಿರುವದು(೧೨)ನಾಲ್ಕು ವೇದ+ಆರು ವೇದಾಂಗಗಳು ಮತ್ತು ನ್ಯಾಯ, ಮೀಮಾಂಸ, ಪುರಾಣ ಮತ್ತು ಧರ್ಮಶಾಸ್ತ್ರ ಇವು ನಾಲ್ಕು ಕೂಡಿ ಒಟ್ಟು ಹದಿನಾಲ್ಕು ವಿದ್ಯೆಗಳ ಈ ಸ್ವಾಮಿಯ ನೇತ್ರಗಳು ಬಹಳ ಚಿಕ್ಕವಾಗಿರುವವು. ಮತ್ತು ಒಂದೇ ಸವನೆ ಮುಚ್ಚುವದು, ತೆಗೆಯುವದನ್ನು ಮಾಡುತ್ತಿರುವವು. ಉದ್ದವಾಗಿ, ಅಗಲ ವಾಗಿರುವ ಮತ್ತು ಮೃದುವಾಗಿರುವ ಕಿವಿಗಳು ಕಾಳುಕೇರುವ ಮರ ಅಥವಾ ಪಕ್ಷಿಗಳ ರೆಕ್ಕೆಯಂತೆ ಫಡ ಫಡ ಶಬ್ದ ದೊಂದಿಗೆ ಅಲ್ಲಾಡುತ್ತವೆ.(೧೩) ಇವನ ಮುಕುಟದಲ್ಲಿ ಸುಂದರವಾದ ರತ್ನಗಳು ಪ್ರಕಾಶಮಾನವಾಗಿ ಬೆಳಗುತ್ತಿರುವವು. ಈ ಪ್ರಕಾಶದ ಬೆಳಕು ಸುತ್ತಲೆಲ್ಲ ಹರಡಿರುತ್ತದೆ. ಗಣಪತಿಯ ಕಿವಿಗಳಲ್ಲಿಯ ಕುಂಡಲಗಳು ಹೊಳೆಯು ವಂಥವು ಇದ್ದು ಇವುಗಳಲ್ಲಿ ಕೂಡಿಸಿದ ನೀಲಮಣಿಗಳು ವಿಶೇಷ ಪ್ರಕಾಶಮಾನವಾಗಿ ಇರುವವು. (೧೪) ಇವನ ಹಲ್ಲುಗಳು ಶುಭ್ರ ಹಾಗೂ ಗಟ್ಟಿಯಾಗಿರುವವು. ಇವನ ಕೋರೆ ಹಲ್ಲುಗಳಿಗೆ ಬಂಗಾರದಲ್ಲಿ ರತ್ನಗಳನ್ನು ಕೂಡಿಸಿದ ಕಡಗ ಅಥವಾ ಬಳೆ ಹಾಕಲಾಗಿದೆ. ಇದಕ್ಕೆ ಸಣ್ಣ ಬಂಗಾರದ ಎಲೆಗಳನ್ನು ಹೊಂದಿಸಿ ಇಳಿಬಿಟ್ಟಿರುವವು. ಇವು ಹೊಳಪಿನಿಂದ ಸುಂದರವಾಗಿ ಕಾಣುವವು. (೧೫) ಇವನ ವಿಶಾಲವಾದ ಹೊಟ್ಟೆ ಮೃದುವಾದುದು, ಸುಂದರ ವಾದುದು, ಜೀವಂತವಿರುವ ಹಾವು ಹೊಟ್ಟೆಗೆ ವಡ್ಡ್ಯಾಣದಂತೆ ಸುತ್ತು ಹಾಕಿರುತ್ತದೆ. ಮತ್ತು ನಡಕ್ಕೆ ಕಟ್ಟುವ ಸರಪಳಿಯಲ್ಲಿಯ ಸಣ್ಣ ಸಣ್ಣ ಗೆಜ್ಜೆಗಳು ಸಾವಕಾಶವಾಗಿ (ಮಂದ ಮಂದವಾಗಿ) ಧ್ವನಿ ಮಾಡಿ ಝಣತ್ಕಾರ ಮಾಡು ವವು. (೧೬) ಇವನಿಗೆ ನಾಲ್ಕು ಕೈಗಳು ಇರುತ್ತವೆ. ಹೊಟ್ಟೆ ಬಹಳಷ್ಟು ದೊಡ್ಡದು ಮತ್ತು ಚನ್ನಾಗಿ ಇಳಿಬಿದ್ದಿದ್ದು ಇರುತ್ತದೆ. ನಡಕ್ಕೆ ಪೀತಾಂಬರವು ಗಟ್ಟಿಯಾಗಿ ಕಟ್ಟಿರುತ್ತದೆ. ಹೊಟ್ಟೆಯ ಮೇಲಿನ ಹಾವು ಹೆಡೆಯನ್ನು ಎತ್ತಿ ಫೂತ್ಕರಿಸುತ್ತಿರುವದು. (೧೭) ಈ ಹಾವು ಹೆಡೆಎತ್ತಿ ಅಲ್ಲಾಡಿಸುತ್ತದೆ. ನಾಲಿಗೆಯನ್ನು ಹೊರ ತೆಗೆಯುತ್ತದೆ. ನಡದಲ್ಲಿ ಸುತ್ತಿರುವ ಹಾವು ಹೊಕ್ಕಳದ ಹತ್ತಿರ ಹೆಡೆ ಎತ್ತಿ ಅತ್ತಿತ್ತ ಟಕಮಕ ನೋಡುತ್ತದೆ. (೧೮) ಗಣಪತಿಯ ಕೊರಳಲ್ಲಿ ನಾನಾ ಪ್ರಕಾರದ ಹೂವಿನ ಹಾರಗಳು ಇರುವವು. ಅವು ನಡದಲ್ಲಿಯ ಹಾವಿನವರೆಗೆ ಇಳಿಬಿದ್ದು ಬಹು ಚಂದ ಕಾಣುವವು. ಹೃದಯದ ಮೇಲಿರುವ ರತ್ನಖಚಿತ ಪದಕವು ಬಹು ಸುಂದರವಾಗಿ ಶೋಭಿಸುತ್ತದೆ. (೧೯) ಇವನಿಗೆ ನಾಲ್ಕು ಕೈಗಳಿರುತ್ತವೆ. ಒಂದು ಕೈಯಲ್ಲಿ ಚಪಕೊಡಲಿ, ಎರಡನೆಯ ಕೈಯಲ್ಲಿ ಕಮಲ, ಮೂರನೆಯ ಕೈಯಲ್ಲಿ ಚೂಪಾದ ಹಾಗೂ ತೇಜಸ್ವಿಯಾದ ಅಂಕುಶ. ನಾಲ್ಕನೆಯ ಕೈಯಲ್ಲಿ ದುಂಡಾದ ಮೋದಕವಿರುತ್ತದೆ. ಮೋದಕವು ಇವನಿಗೆ ಅತಿ ಪ್ರಿಯವಾದುದು. (೨೦) ಇವನು ಅನೇಕ ಪ್ರಕಾರದ ಹಾವಭಾವಯುಕ್ತವಾದ ಕಲಾಕೌಶ ಲ್ಯಗಳಿಂದ ಸಂಪನ್ನವಾದಂಥ ಅನೇಕ ಪ್ರಕಾರದ ನೃತ್ಯ ಮಾಡುವನು. ಜೊತೆಗೆ ತಾಳ,ಮೃದಂಗ ಈ ವಾದ್ಯಗಳೂ ಇರು ವವು. ಮಧ್ಯದಲ್ಲಿ ಹೂಂಕಾರದ ಸ್ವರವೂ ಕೇಳಿಬರುವದು. ಹೂಂಕಾರ ಮಾಡುವದು ನೃತ್ಯದ ಒಂದು ಗೌಣ ಅಂಗ (ಉಪಾಂಗ)ವಾಗಿದೆ.(೨೧) ಶರೀರದಿಂದ ಸ್ಥೂಲ ಕಾಣುವ ಗಣಪತಿಯು ಒಂದು ಕ್ಷಣವೂ ಸಹ ಸ್ತಬ್ಧನಿರುವದಿಲ್ಲ. ಚಪಲ ತನದಲ್ಲಿ ಇವನು ಎಲ್ಲರಿಗಿಂತ ಶ್ರೇಷ್ಠನಾಗಿರುವನು. ಸೌಂದರ್ಯದ ಖಣಿಯೇ ಆಗಿರುವ ಇವನು ಬಹು ಸುಲಕ್ಷಣಿ ಮತ್ತು ಸುಭಗನಿರುವನು. (೨೨). ಇವನ ಪಾದಗಳಲ್ಲಿಯ ಪೈಜಣಗಳು ಝಣ ಝಣ ಎಂದು ಸುನಾದ ಮಾಡುವವು. ಬಾಹುಗಳಲ್ಲಿ ಧರಿಸಿರುವ ಬಾಜುಬಂಧ (ವಂಕಿ)ಗಳೂ ಸಹ ದೊಡ್ಡ ಧ್ವನಿ ಮಾಡುವವು. ಗೆಜ್ಜೆಗಳನ್ನು ಹಾಕಿದ ಇವನ ಎರಡೂ ಪಾದಗಳು ಮನಸ್ಸನ್ನು ಹರಣ ಮಾಡುವವು. (೨೩)

ಈಶ್ವರಸಭೇಸೀ ಆಲೀ ಶೋಭಾ । ದಿವ್ಯಾಂಬರಾಚೀ ಫಾಕಲೀ ಪ್ರಭಾ ।
ಸಾಹಿತ್ಯವಿಶಈ ಸುಲ್ಲಭಾ । ಅಷ್ಟ ನಾಯಕಾ ಹೋತೀ ॥೨೪॥
ಐಸಾ ಸರ್ವಾಂಗೇ ಸುಂದರೂ । ಸಕಳ ವಿದ್ಯಾಂಚಾ ಆಗರೂ ।
ತ್ಯಾಸೀ ಮಾಝಾ ನಮಸ್ಕಾರೂ । ಸಾಷ್ಟಾಂಗ ಭಾವೇ ॥೨೫॥
ಧ್ಯಾನ ಗಣೇಶಾಚೇ ವರ್ಣಿತಾ । ಮತಿಪ್ರಕಾಶ ಹೋಯ ಭ್ರಾಂತಾ ।
ಗುಣಾನುವಾದ ಶ್ರವಣ ಕರಿತಾ । ವೋಳೆ ಸರಸ್ವತೀ ॥೨೬॥
ಜಯಾಸೀ ಬ್ರಹ್ಮಾದಿಕ ವಂದಿತೀ । ತೇಥೇ ಮಾನವ ಬಾಪುಡೆ ಕಿತೀ ।
ಅಸೋ ಪ್ರಾಣೀ ಮಂದಮತೀ । ತೇಹೀ ಗಣೇಶ ಚಿಂತಾವಾ ॥೨೭॥
ಜೆ ಮೂರ್ಖ ಅವಲಕ್ಷಣ । ಜೆ ಕಾ ಹೀಣಾಹೂನಿ ಹೀಣ ।
ತೆ ಚಿ ಹೋತೀ ದಕ್ಷ ಪ್ರವಿಣ । ಸರ್ವವಿಶಈ ॥೨೮॥
ಐಸಾ ಜೊ ಪರಮ ಸಮರ್ಥ । ಪೂರ್ಣ ಕರೀ ಮನೋರಥ ।
ಸಪ್ರಚೀತ ಭಜನ ಸ್ವಾರ್ಥ । ಕಲ್ಲೌ ಚಂಡೀ ವಿನಾಯೆಕಾ ॥೨೯॥
ಐಸಾ ಗಣೇಶ ಮಂಗಳಮೂರ್ತೀ । ತೋ ಮ್ಯಾ ಸ್ತವಿಲಾ ಯೆಥಾಮತೀ ।
ವಾಂಛ್ಯಾ ಧರೂನಿ ಚಿತ್ತೀ । ಪರಮಾರ್ಥಾಚೀ ॥೩೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
ಗಣೇಶಸ್ತವನನಾಮ ಪ್ರಥಮಾಧ್ಯಾಯೆ ದ್ವಿತೀಯ ಸಮಾಸ ಸಮಾಪ್ತ ॥

ಈಶ್ವರನ ಸಭೆಗೆ ಗಣಪತಿಯಿಂದಲೇ ಬಹು ಶೋಭೆ ಬರುತ್ತದೆ. ಇವನ ದಿವ್ಯ ವಸ್ತ್ರದ ತೇಜ ಸಹ ಎಲ್ಲೆಡೆಗೆ ಪಸರಿಸುವದು. ಇವನ ಸಾನಿಧ್ಯ ಲಾಭ ದೊರೆತ ಕೂಡಲೇ ಸಾಹಿತ್ಯದ ನಿರ್ಮಾಣ ಮಾಡಲು ಸ್ವರ್ಗದಲ್ಲಿಯ ಅಷ್ಟ ನಾಯಕಿಯರಾದ ಊರ್ವಶಿ, ಮೇನಕಾ, ರಂಭಾ, ಪೂರ್ವಾ, ಚಿತ್ರೀ, ಸ್ವಯಂಪ್ರಭಾ, ಭಿನ್ನಕೇಶಿ, ಜನವಲ್ಲಭಾ, ಘೃತಾಚೀ, ತಿಲೋತ್ತಮಾ—ಇವರೆಲ್ಲ ಸದೈವ ಸಹಾಯ ಮಾಡುವರು.(೨೪) ಇಂಥ ಈ ಗಣಪತಿಯು ಸರ್ವ ಅವಯವಗಳಿಂದ ಸುಂದರ ಇರುವನು. ಸರ್ವವಿದ್ಯೆಗೂ ಇವನೇ ಸ್ವಾಮಿಯು. ಇವನೇ ಆಗರನು. ಇಂಥ ಸ್ವಾಮಿ ಗಣಪತಿಗೆ ನಾನು ಮನಃಪೂರ್ವಕವಾಗಿ ಸಾಷ್ಟಾಂಗ ನಮಸ್ಕಾರ ಮಾಡುತ್ತೇನೆ. (೨೫) **ಗಣಪತಿಯ ಉಪಾಸನೆಯಿಂದುಂಟಾಗುವ ಫಲ:–** ಗಣಪತಿಯ ಸ್ವರೂಪದ ಚಿಂತನೆ ಸ್ಮರಣೆ ಮಾಡಿದರೆ ಅಜ್ಞಾನದಿಂದ ಭ್ರಮಿಸಿದ ಮನುಷ್ಯನ ಬುದ್ಧಿಯಲ್ಲಿ ಜ್ಞಾನದ ಪ್ರಕಾಶ ಉಂಟಾಗುವದು. ಇವನ ಗುಣದ ವರ್ಣನೆಯನ್ನು ಕೇಳಿದರೆ ಸರಸ್ವತೀದೇವಿ ಪ್ರಸನ್ನಳಾಗುವಳು.(೨೬) ಇವನಿಗೆ ಬ್ರಹ್ಮಾದಿ ದೇವತೆಗಳು ನಮಸ್ಕಾರ ಮಾಡುವರು. ಅಂದ ಮೇಲೆ ಮಾನವನು ಯಾವ ಗಿಡದ ತಪ್ಪಲು ? ಆದರೂ ಸಹ ಯಾವನ ಬುದ್ಧಿ ಮಂದವಿರುವದೋ ಅವನು ಗಣಪತಿಯ ಉಪಾಸನೆ ಹಾಗೂ ಸ್ಮರಣೆಯನ್ನು ಅವಶ್ಯವಾಗಿ ಮಾಡಬೇಕು (೨೭) ಯಾರು ಅವಲಕ್ಷಣೆಗಳು ಹಾಗೂ ಮೂರ್ಖರಿರುವರೋ ಅಥವಾ ಮತಿಹೀನರಿರುವರೋ ಅವರು ಗಣಪತಿಯ ಚಿಂತನ, ಸ್ಮರಣದಿಂದ ಜಾಣರಾಗುವರು. ಮತ್ತು ಸರ್ವ ವಿಷಯಗಳಲ್ಲಿ ಪಾರಂಗತರಾಗುವರು.(೨೮) ಗಣಪತಿಯು ಬಹಳ ಸಮರ್ಥನು, ಸರ್ವ ಇಚ್ಛೆಗಳನ್ನು ಪೂರ್ಣ ಮಾಡುವಂಥವನಿರುವನು. ಸಾಧಕರಿಗೆ ಸ್ವಾನುಭವದ ಸ್ವಾರ್ಥತೆಯನ್ನು ಅಂದರೆ ಪರಮಾರ್ಥದ ಬೋಧೆಯನ್ನು ಸಾಧಿಸಿಕೊಡುವನು. ಅನುಭವಕ್ಕೆ ತಂದುಕೊಡುವನು. ಈ ಕಲಿಯುಗದಲ್ಲಿ ದೇವಿ ಮತ್ತು ಗಣಪತಿ ಇವರೇ ಮುಖ್ಯ ದೇವತೆಗಳೆಂದು ಮಾನ್ಯ ಮಾಡಲ್ಪಟ್ಟಿರುವರು (೨೯) ಮನಸ್ಸಿನಲ್ಲಿ ಪರಮಾರ್ಥದ ಇಚ್ಛೆಯನ್ನು ಇಟ್ಟುಕೊಂಡು ನಾನು ನನ್ನ ಬುದ್ಧಿಗೆ ತೋಚಿದಂತೆ ಈ ಮಂಗಲಮೂರ್ತಿಯ ಸ್ತುತಿಯನ್ನು ಮಾಡುತ್ತೇನೆ. (೩೦)

ಶ್ರೀ ದಾಸಬೋಧದಲ್ಲಿಯ ಗುರು ಶಿಷ್ಯರ ಸಂವಾದದಲ್ಲಿಯ
"ಗಣೇಶ ಸ್ತವನ" ಎಂಬ ಹೆಸರುಳ್ಳ ಎರಡನೆಯ ಸಮಾಸವು
ಮುಗಿದುದು.

● ●

### ತಿಸರಾ ಸಮಾಸ : ಶಾರದಾಸ್ತವನ

॥ಶ್ರೀರಾಮ॥ ಆತಾ ವಂದೀನ ವೇದಮಾತಾ । ಶ್ರೀಶಾರದಾ ಬ್ರಹ್ಮಸುತಾ ।
ಶಬ್ದಮೂಳ ವಾಗ್ದೇವತಾ । ಮಹ ಮಾಯಾ ॥೧॥
ಜೆ ಉಠವೀ ಶಬ್ದಾಂಕುರ । ವದೆ ವೈಖರೀ ಅಪಾರ ।
ಜೆ ಶಬ್ದಾಚೆ ಅಭ್ಯಾಂತರ । ಉಕಲೂನ ದಾವೀ ॥೨॥

## ಸಮಾಸ ೩. ಶಾರದಾ ಸ್ತವನ (ನುಡಿ ೨೬)

ಸಂತರ ಸ್ಫೂರ್ತಿಯು ಅಖಂಡವಾಗಿ ಜಾಗ್ರುತವಿರುವದು. ಶ್ರೀಸಮರ್ಥರು ಶ್ರೇಷ್ಠ ಸಂತರಿದ್ದರು. ಅಂತೆಯೇ ಹನ್ನೆರಡು ತಿಂಗಳು ಹದಿನೆಂಟು ತಾಸೂ ಇವರ ಸ್ಫೂರ್ತಿಗೆ ಖಂಡವಿರಲಿಲ್ಲವೆಂಬುದು ನಿಜವೇ ಆದರೆ ಈ ಸಮಾಸದಲ್ಲಿ ಶಾರದೆಯ ವರ್ಣನೆಯನ್ನು ಮಾಡಲಿಕ್ಕೆ ಆರಂಭ ಮಾಡಿದ ಕೂಡಲೇ ಇವರ ಸ್ಫೂರ್ತಿಗೆ ಸ್ಫೂರ್ತಿ ಬಂದಿತು. ಮತ್ತು ಶಾರದೆಯ ವರ್ಣನೆಯು ಅತಿ ತೇಜಸ್ವೀ, ತತ್ವಗಂಭೀರ ಹಾಗೂ ಕಾವ್ಯಪೂರ್ಣವಾದ ಇಪ್ಪತ್ತೈದು ಓವಿನುಡಿಗಳು ಸುಭಗವಾಗಿ ಬರೆಯಲ್ಪಟ್ಟವು. ಈ ವರ್ಣನೆಯಲ್ಲಿ ಮೇಲಿಂದ ಮೇಲೆ ಅಲ್ಲಲ್ಲಿ ಅದ್ವೈತ ವೇದಾಂತದ ಸಂಪೂರ್ಣ ಜ್ಞಾನವೇ ಕಾಣುವದು. ಹಾಗೂ ಇದರ ಜೊತೆಗೆ ಪ್ರತಿ ಒಂದು ಓವಿಯಲ್ಲಿ ಸ್ವಾನುಭವದ ತೇಜಸ್ವಿ ಸುಂದರ ಲಖ ಲಖಾಟದ ಸೊಬಗೂ ಸಹ ಕಂಡು ಬರುವದು. ಶಾರದೆಯ ಬಗ್ಗೆ ಇಷ್ಟೊಂದು ಸರ್ವಾಂಗೀಣ ಸುಂದರ ವರ್ಣನೆಯು ಇತರತ್ರವೆಲ್ಲಿಯೂ ಕಂಡು ಬರುವದು. ಕಠಿಣವಿರುವದು. ಗಣಪತಿಯು ಜ್ಞಾನರೂಪ ನಿರುವನು. ಆದರೆ ಶಾರದೆಯು ಸಾಮರ್ಥ್ಯರೂಪವಿರುವಳು. ವಿಶ್ವದಲ್ಲಿ ನಿರ್ಮಲ ಅರಿವು ಯಾವ ರೀತಿಯಲ್ಲಿ ವ್ಯಾಪಿಸಿ ಇರುವದೋ ಅದರಂತೆ ಒಂದು ಮಹಾ ಬಲಾಢ್ಯ ಶಕ್ತಿಯೂ ಸಹ ವ್ಯಾಪಿಸಿ ಇರುವದು. ಶಿವಾಯ ಓಂಕಾರ ಅಥವಾ ಸಚ್ಚಿದಾನಂದ ಸ್ವರೂಪ ಈಶ್ವರನು ಒಂದು ಅಂಶದಿಂದ ವಿಶ್ವವ್ಯಾಪಿ ಅರಿವಾಗುವನು. ಆದರೆ ಅದೇ ಎರಡನೇ ಅಂಶದಿಂದ ವಿಶ್ವವ್ಯಾಪಿ ಶಕ್ತಿಯಾಗುವನು. ಈಶ್ವರ ಮತ್ತು ಮಾಯಾ. ಶಿವ ಮತ್ತು ಶಕ್ತಿ, ಗಣೇಶ ಶಾರದಾ ಈ ಜೋಡಿಗಳು ಒಂದೇ ಅರ್ಥದ್ದಿರುವವು. ನಮಗೆ ಯಾವ ಅರ್ಥ ತಿಳಿಯುವದೋ ಅದರಲ್ಲಿ ಗಣಪತಿಯ ಅಧಿಷ್ಠಾನ ವಿರುವದೆಂದು ತಿಳಿಯಬೇಕು. ಅದೇ ರೀತಿ ತಿಳಿದಂಥ ಅರ್ಥಕ್ಕೆ ಶಬ್ದರೂಪಗಳನ್ನು ಕೊಡುವ ಶಕ್ತಿಯಲ್ಲಿ ಶಾರದೆಯ ಅಧಿಷ್ಠಾನ ಇರುವದೆಂದು ತಿಳಿಯಬೇಕು. ಮನುಷ್ಯನ ಮನದಲ್ಲಿಯ ವಿಚಾರವು ಶಬ್ದದ ಸಹಾಯ ಪಡೆದುಕೊಂಡು ಪ್ರಕಟವಾಗುವದು. ಮತ್ತು ಮುಂದೆ ಅದು ಕೃತಿಯಲ್ಲಿ ಇಳಿಯುವದು. ಅಂತೆಯೇ ಜಗತ್ತಿನಲ್ಲಿ ಕಂಡು ಬರುವ ಯಾವತ್ತೂ ಕರ್ತೃತ್ವವು ಶಾರದೆಯ ಸಾಮರ್ಥ್ಯದ ಫಲವಿರುವದು. ಅನಂತ–ಅಪಾರ ಸಾಮರ್ಥ್ಯ ಸಂಪನ್ನಳಾದ ಶಾರದೆಯು ಅನಂತ ಅನೇಕಾನೇಕ ವಿಶ್ವಗಳನ್ನು ಉಂಟು ಮಾಡುವಳು. ಮತ್ತು ಅವನ್ನು ಮುರಿಯುವವಳು. ಇದು ಅವಳ ಒಂದು ಆಟವಿರುವದು. ಎಲ್ಲ ಪ್ರಾಣಿಗಳ. ಎಲ್ಲ ಹಾಲಚಾಲ ಚಲನವಲನಗಳಿಗೆ ಇವಳು ಪ್ರೇರಣೆ ಕೊಡುವಳು. ವಿಚಾರವಂತರಿಗೆ ಸಾರಾಸಾರ ವಿಚಾರ ಮಾಡಲಿಕ್ಕೆ ಹಚ್ಚಿ ಅಸಾರವಿರುವದನ್ನು ಸಂಪೂರ್ಣವಾಗಿ ಬಿಟ್ಟು ಬಿಡುವ ವಿರಕ್ತಿಯನ್ನು ಕೊಡುವ ಕಾರ್ಯವು ಈ ಶಾರದೆಯ ಕೃಪೆಯೇ ಆಗಿರುವದು. ಆನಂದ ಸ್ವರೂಪದ ಈಶ್ವರನ ಅರ್ಧಾಂಗಿಯಾಗಿರುವದರಿಂದ ಇವಳು ಸತತವೂ ತುರ್ಯಾವಸ್ಥೆಯ ಸ್ಥಿತಿಯಲ್ಲಿಯೇ ಇರುವಳು. ಅಖಂಡ ಸ್ಫೂರ್ತಿರೂಪವಿರುವಳು. ಸ್ವಸ್ವರೂಪದಲ್ಲಿ ನಿಶ್ಚಲವಾಗಿ ಇರಲು ಅವಳ ಕೃಪಾಪೂರ್ಣ ಪ್ರಸನ್ನತೆಯೇ ಬೇಕಾಗು ವದು. ಯೋಗಿಗಳಿಗೆ ಧ್ಯಾನ ಮಾಡುವಂಥ, ಸಾಧಕರಿಗೆ ಅನುಸಂಧಾನದಲ್ಲಿ ಇರುವಂಥ, ಮತ್ತು ಸಿದ್ಧರಿಗೆ ಸಮಾ ಧಿಯು ಸ್ಥಿರವಾಗಿ ಉಳಿಯುವಂಥಹ ಶಕ್ತಿಯು ಇವಳಿಂದಲೇ ಸಿಗುವದು. ಜಗತ್ತಿನಲ್ಲಿಯ ಎಲ್ಲ ಸೌಂದರ್ಯದ ಮೂಲವಾಗಿರುವ ಈ ಶಾರದೆಯು ಪರಮಾರ್ಥದಲ್ಲಿ ಸಾಧಕರಿಗೆ ಬಹಳ (ಮದ್ದತ) ಸಹಾಯ ಮಾಡುವಳು. ಇವಳ ನೆನಪು ನಮ್ಮ ಅಂತಃಕರಣದಲ್ಲಿ ಉದಯ ಹೊಂದಿತೆಂದರೆ ನಮ್ಮ "ನಾನು ಮಾಡುವವ" ಅನ್ನುವ ಹಮ್ಮು ಕ್ಷೀಣ ವಾಗಹತ್ತುವದು. ಹಾಗೂ ನಾವು ಸ್ವರೂಪದ ಹತ್ತರ ಸಮೀಪಕ್ಕೆ ಹೋಗಹತ್ತುವೆವು.

### ಸಮಾಸ ೩. ಶಾರದಾ ಸ್ತವನ

**ಶಾರದೆಯ ಮೂಲಸ್ವರೂಪ:–** ವೇದಗಳ ತಾಯಿ, ಬ್ರಹ್ಮದೇವನ ಕನ್ಯೆ, ನಾದದ ಜನ್ಮಸ್ಥಾನ, ವಾಣಿ ಅಂದರೆ ಶಬ್ದ, ಭಾಷೆಯ ಸ್ವಾಮಿನಿ, ಮತ್ತು ಮಹಾ ಮಾಯೆ ಆಗಿರುವ ಶ್ರೀ ಶಾರದೆಗೆ ನಾನು ನಮಸ್ಕಾರ ಮಾಡುವೆನು. (೧) **ಶಾರದೆ ಏನು ಮಾಡುವಳು:–** ಇವಳ ಮುಖಾಂತರ ಶಬ್ದಗಳು ಸೂಕ್ಷ್ಮರೂಪದಿಂದ ಉತ್ಪನ್ನವಾಗುವವು. ಇವಳ ವೈಖರಿಯಿಂದ ಅಪಾರ ಶಬ್ದಗಳು ಸ್ಪಷ್ಟವಾಗಿ ಹೊರ ಬರುವವು. ಇವಳೇ ಶಬ್ದಗಳ ಅಂತರಂಗ ಅಂದರೆ ಅರ್ಥವನ್ನು ಸ್ಪಷ್ಟ ಮಾಡಿ ತೋರಿಸುವಳು. (೨)

ಜೆ ಯೋಗಿಯಾಂಚೀ ಸಮಾಧೀ । ಜೆ ಧಾರಿಷ್ಟಾಂಚೀ ಕೃತ ಬುದ್ಧೀ ।
ಜೆ ವಿದ್ಯಾ ಅವಿದ್ಯಾ ಉಪಾಧೀ । ತೋಡೂನ ಟಾಕೀ ॥೩॥
ಜೆ ಮಹಾಪುರುಷಾಚೀ ಭಾರ್ಯಾ । ಅತಿ ಸಲಗ್ನ ಅವಸ್ಥಾತ್ರಯಾ ।
ಜಯೇಕರಿತಾ ಮಹತ್ಕಾರ್ಯಾ । ಪ್ರವರ್ತಲೆ ಸಾಧು ॥೪॥
ಜೆ ಮಹಂತಾಂಚೀ ಶಾಂತೀ । ಜೆ ಈಶ್ವರಾಚೀ ನಿಜಶಕ್ತೀ ।
ಜೆ ಜ್ಞಾನಿಯಾಂಚೀ ವಿರಕ್ತೀ । ನೈರಾಶಶೋಭಾ ॥೫॥
ಜೆ ಅನಂತ ಬ್ರಹ್ಮಾಂಡೆ ಘಡೀ । ಲೀಳಾವಿನೋದೆ ಚಿ ಮೋಡೀ ।
ಆಪಣ ಆದಿಪುರುಷೀ ದಡೀ । ಮಾರೂನ ರಾಹೆ ॥೬॥
ಜೆ ಪ್ರತ್ಯಕ್ಷ ಪಾಹಾತಾ ಆಡಳೆ । ವಿಚಾರ ಘೇತಾ ತರೀ ನಾಡಳೆ ।
ಜಯೇ ಚಾ ಪಾರ ನ ಕಳೆ । ಬ್ರಹ್ಮಾದಿ ಕಾಸೀ ॥೭॥
ಜೆ ಸರ್ವ ನಾಟಕಅಂತರ್ಕಳಾ । ಜಾಣೀವ ಸ್ಫೂರ್ತಿ ನಿರ್ಮಳಾ ।
ಜಯೆಚೇನಿ ಸ್ವಾನಂದಸೋಹಳಾ । ಜ್ಞಾನ ಶಕ್ತೀ ॥೮॥
ಜೆ ಲಾವಣ್ಯ ಸ್ವರೂಪಾಚೀ ಶೋಭಾ । ಜೆ ಪರಬ್ರಹ್ಮ ಸೂರ್ಯಾಚೀ ಪ್ರಭಾ ।
ಜೆ ಶಬ್ದೀ ವದೋನಿ ಉಭಾ । ಸಂಸಾರ ನಾಸೀ ॥೯॥
ಜೆ ಮೋಕ್ಷಶ್ರಿಯಾ ಮಹಾಮಂಗಳಾ । ಜೆ ಸತ್ರಾವೀ ಜೀವನಕಳಾ ।
ಜೆ ಸತ್ವಲೀಳಾ ಸುಶೀತಳಾ । ಲಾವಣ್ಯಖಾಣೀ ॥೧೦॥
ಜೆ ಅವೆಕ್ತ ಪುರುಷಾಚೀ ವೆಕ್ತೀ। ವಿಸ್ತಾರೆ ವಾಢಲೀ ಇಚ್ಛಾಶಕ್ತೀ ।
ಜೆ ಕಳಿಕಾಳಾಚೀ ನಿಯಂತೀ । ಸದ್ಗುರುಕೃಪಾ ॥೧೧॥
ಜೆ ಪರಮಾರ್ಥಮಾರ್ಗೀಚಾ ವಿಚಾರ । ನಿವಡೂನ ದಾವೀ ಸಾರಾಸಾರ ।
ಭವಸಿಂಧೂಚಾ ಪೈಲಪಾರ । ಪಾವವೀ ಶಬ್ದಬಳೇ ॥೧೨॥
ಐಸೀ ಬಹುವೇಷೆ ನಟಲೀ । ಮಾಯಾ ಶಾರದಾ ಯೇಕಲೀ ।
ಸಿದ್ಧಚಿ ಅಂತರೀ ಸಂಚಲೀ । ಚತುರ್ವಿಧಾ ಪ್ರಕಾರೇ ॥೧೩॥
ತೀಹೀ ವಾಚಾ ಅಂತರೀ ಆಲೆ । ತೇ ವೈಖರಿಯಾ ಪ್ರಗಟ ಕೇಲೆ ।
ಮ್ಹಣೌನ ಕರ್ತೃತ್ವ ಜಿತುಕೇ ಜಾಲೇ । ತೇ ಶಾರದಾಗುಣೆ ॥೧೪॥
ಜೆ ಬ್ರಹ್ಮಾದಿಕಾಂಚೀ ಜನನೀ । ಹರೀಹರ ಜಯೆಪಾಸುನೀ ।
ಸೃಷ್ಟಿರಚನಾ ಲೋಕ ತಿನೀ । ವಿಸ್ತಾರ ಜಯೇಚಾ ॥೧೫॥
ಜೆ ಪರಮಾರ್ಥಾಚೇ ಮೂಳ । ನಾಂತರೀ ಸದ್ವಿದ್ಯಾ ಚಿ ಕೇವಳ ।
ನಿವಾಂತ ನಿರ್ಮಳ ನಿಶ್ಚಳ । ಸ್ವರೂಪಸ್ಥಿತೀ ॥೧೬॥

**ಜೀವನದಲ್ಲಿ ಶಾರದೆಯು ಎಲ್ಲಿ ಎಲ್ಲಿ ತೋರಿ ಬರುವಳು:-** ಯೋಗಿಗಳ ಸಮಾಧಿಯಲ್ಲಿ, ಮತ್ತು ಸಾಹಸೀ ಮಾನವನ ನಿರ್ಭಯತನದಲ್ಲಿ ಕಂಡುಬರುವಳು. ಮತ್ತು ವಿದ್ಯೆಅವಿದ್ಯೆಗಳ ಉಪಾಧಿಯನ್ನುಇಲ್ಲದಂತೆ ಮಾಡುವಳು(೩) ಆದಿ ಪುರುಷ ಈಶ್ವರನ ಭಾರ್ಯೆಯಾಗಿರುವಳು. ಈಶ್ವರನ ಸಂಬಂಧವು ಅತ್ಯಂತ ಸಮೀಪಕ್ಕೆ ಬಂದಾಗ ಭಕ್ತನ ಅನುಭವಕ್ಕೆ ಬರುವ ತುರ್ಯಾವಸ್ಥೆ ಅಂದರೆ ಬ್ರಹ್ಮನೊಂದಿಗೆ ತಾದಾತ್ಮ ಹೊಂದುವ ಸ್ಥಿತಿಯೇ ಈ ಶಾರದೆಯು. ಕೇವಲ ಇವಳ ಬಲದಿಂದಲೇ ಜ್ಞಾನಿಗಳು, ಸಾಧುಪುರುಷರು, ಮಹಾನ್ ಕಾರ್ಯ ಮಾಡುವದಕ್ಕೆ ಪ್ರವರ್ತರಾಗುವರು. (೪) ಶ್ರೇಷ್ಠ ಪುರುಷರ ಶಾಂತತೆಯಲ್ಲಿ, ಮತ್ತು ಜ್ಞಾನಿ ಪುರುಷರ ವಿರಕ್ತಿಯಲ್ಲಿ ಇವಳು ಪ್ರಕಟವಾಗುವಳು. ಈಶ್ವರನ ಸ್ವತಃದ ಈ ಶಕ್ತಿಯು ಅತ್ಯಂತ ವಾಸನಾರಹಿತವಾದ ಅವಸ್ಥೆಯ ಸೌಂದರ್ಯವಾಗಿರುವಳೆಂದು ಅನ್ನುವರು. (೫) **ಶಾರದೆಯ ಸಾಮರ್ಥ್ಯ:-** ಇವಳು ಅನಂತ ವಿಶ್ವವನ್ನು ನಿರ್ಮಾಣ ಮಾಡುವಳು. ಮತ್ತು ಮೋಜಿನಿಂದ ಆಟ ಆಡಬೇಕೆಂದು ನಿರ್ಮಾಣ ಮಾಡಿದ್ದನ್ನು ಮುರಿದೂ ಬಿಡುವಳು. ಆದರೆ ತಾನು ಮಾತ್ರ ಈಶ್ವರನ ಸ್ವರೂಪದಲ್ಲಿ ಲೀನಳಾಗಿ ಮರೆಯಾಗಿ ಕೂಡ್ರುವಳು. (೬) ಇಂದ್ರಿಯಗಳಿಂದ ನೋಡಬೇಕೆಂದರೆ ಪ್ರತ್ಯಕ್ಷವಾಗಿ ಕಾಣುವಳು. ಆದರೆ ವಿಚಾರದಿಂದ ಶೋಧ ಮಾಡಹತ್ತಿದರೆ ಮಾತ್ರ ಕಾಣುವದಿಲ್ಲ. ಆದುದರಿಂದ ಬ್ರಹ್ಮಾದಿಗಳಿಗೂ ಸಹ ಇವಳ ನೆಲೆ ಹತ್ತುವದಿಲ್ಲ. ಇವಳ ನಿಜಸ್ವರೂಪ ತಿಳಿದುಕೊಳ್ಳಲಿಕ್ಕೆ ಆಗುವದಿಲ್ಲ. (೭) **ಶಾರದೆಯ ನಾನಾ ರಂಗರೂಪ:-** ವಿಶ್ವರೂಪಿನಾಟಕದಲ್ಲಿಯ ದೃಶ್ಯಗಳಲ್ಲಿ ಅಂತರ್ಯಾಮಿಯಾಗಿ ಇದ್ದುಕೊಂಡು ತನ್ನ ಶಕ್ತಿಯಿಂದ ಜಗತ್ತನ್ನು ಕುಣಿಸುವಳು. ಬುದ್ಧಿ, ತಿಳುವಳಿಕೆಯಲ್ಲಿ ಉತ್ಪನ್ನವಾಗುವ ಕೇವಲ ನಿರ್ಮಲವಾದ ಸ್ಫೂರ್ತಿಯೂ ಇವಳೇ ಇರುವಳು. ಜ್ಞಾನ ಮಧ್ಯದಲ್ಲಿ ವಾಸ ಮಾಡುವ ಸಾಮರ್ಥ್ಯವು ಇವಳ ರೂಪವೇ ಇರುವದು. ಇವಳ ಕೃಪೆಯಿಂದಾಗಿಯೇ ಪರಮಾನಂದದ ಸುಖವನ್ನು ಅನುಭವಿಸಲು ಬರುತ್ತದೆ. (೮) ವಿಶ್ವದ ಸೌಂದರ್ಯದಲ್ಲಿ ಇವಳೇ ಅತಿ ಸುಂದರ ಸ್ವಾಮಿನಿಯಾಗಿ ಶೋಭಿಸುವಳು. ಪರಬ್ರಹ್ಮರೂಪಿ ಸೂರ್ಯನ ತೇಜದಂತೆಯೇ ಇವಳ ರೂಪವೂ ಏಕಪ್ರಕಾರದ್ದಾಗಿದೆ. ಈ ವಿಶ್ವದ ದೃಶ್ಯರೂಪದ ಪ್ರಸಾರವನ್ನು ಶಬ್ದದ ಸಹಾಯದಿಂದ ಇಲ್ಲದಂತೆ ಮಾಡುವಳು. (೯) ಮೋಕ್ಷದ ವೈಭವವೇ ಶಾರದೆಯು. ಮಂಗಲಕ್ಕೆ ಮಂಗಲಳೆನಿಸಿದ ಈ ಶಾರದೆಯು ಹದಿನೇಳನೆಯ ಜೀವನ ಕಲಾ ಎನಿಸುವಳು. ಲಾವಣ್ಯದ ಖಣಿಯೇ ಆಗಿರುವ ಇವಳು ಜೀವನಕ್ಕೆ ಶಾಂತಿ ಕೊಡುವ ಸತ್ವಗುಣಿಯಾದ ಲೀಲಾವಿಹಾರಿ ಇರುವಳು. (೧೦) ಅವ್ಯಕ್ತ ಈಶ್ವರನನ್ನು ಇವಳು ವ್ಯಕ್ತರೂಪದಲ್ಲಿ ತರುವಳು. ಅವನ ಸಂಕಲ್ಪಗಳ ವಿಸ್ತಾರ ಮಾಡುವ ಇಚ್ಛಾಶಕ್ತಿಯೂ ಇವಳೇ ಆಗಿರುವಳು. ಕಾಲನ ಮೇಲೆ ಅಧಿಕಾರ ನಡೆಸುವಂಥ ಸದ್ಗುರು ಕೃಪಾಶಕ್ತಿಯೂ ಇವಳೇ ಇರುವಳು. (೧೧) ಪರಮಾರ್ಥ ಸಾಧನ ಮಾಡುವ ಸಾಧಕರಿಗೆ ಶಾರದೆಯು ಆತ್ಮಾನಾತ್ಮ ವಿವೇಕದಿಂದ ಆತ್ಮಸ್ವರೂಪದ ಸರಿಯಾದ ಕಲ್ಪನೆಯನ್ನು ತಂದುಕೊಡುವಳು. ಶಬ್ದಗಳ ಸಹಾಯದಿಂದ ಅಂದರೆ ಶ್ರವಣ ಮನನದಿಂದ ಇವಳೇ ಸಾಧಕರನ್ನು ದೃಶ್ಯ ಸಂಸಾರದ ಹೊರಗೆ ಅಂದರೆ ಪರಬ್ರಹ್ಮದ ಕಡೆಗೆ ಒಯ್ಯುವಳು. (೧೨) ಹೀಗೆ ಅನೇಕ ರೂಪದಿಂದ ನಟಿಸುವ ಈ ಶಾರದೆಯು ಮೂಲ ಮಾಯೆಯೇ ಇರುವಳು. ಸ್ವಯಂಭೂ ಹಾಗೂ ಪೂರ್ಣ ಮತ್ತು ಒಂದೇ ರೂಪದವಳಿದ್ದರೂ ಮನುಷ್ಯರ ಅಂತರ್ಯಾಮದಲ್ಲಿ ನಾಲ್ಕು ಪ್ರಕಾರಗಳಲ್ಲಿ ತೋರಿ ಬರುವಳು. (೧೩) **ಕರ್ತೃತ್ವವೆಲ್ಲ ಶಾರದೆಯದೇ:-** ಮನುಷ್ಯನ ಅಂತಃಕರಣದಲ್ಲಿ ಪರಾ, ಪಶ್ಯಂತಿ, ಮಾಧ್ಯಮಾ, ಎಂಬ ಮೂರು ವಾಣಿಗಳಲ್ಲಿ ಯಾವದು ಸ್ಫುರಿಸುವದೋ ಅವುಗಳನ್ನು ನಾಲ್ಕನೆಯದಾದ ವೈಖರಿ ಎಂಬುದರಿಂದ ಶಬ್ದಗಳ ರೂಪದಲ್ಲಿ ಪ್ರಕಟಗೊಳಿಸುವಳು. ಶಬ್ದಗಳಿಂದಲೇ ಸರ್ವ ವ್ಯವಹಾರ ನಡೆಯುವದರಿಂದ ಜಗತ್ತಿನಲ್ಲಿಯ ಸರ್ವ ಶಕ್ತಿ ನಿರ್ಮಾಪಕಳಾಗಿ ಶಾರದೆಯೇ ನಡಿಸುವಳು. (೧೪) ಶಾರದೆಯು ಬ್ರಹ್ಮಾದಿಗಳ ತಾಯಿಯು, ವಿಷ್ಣು, ಶಿವ, ಇವರು ಇವಳ ಉದರದಿಂದ ಜನ್ಮ ತಳೆದವರು. ಮೂರು ಲೋಕಗಳ ಈ ಬಹು ವಿಸ್ತಾರದ ವಿಶ್ವರಚನೆಯು ಇವಳೊಬ್ಬಳಿಂದಲೇ ವಿಸ್ತಾರಗೊಂಡಿದೆ. (೧೫) **ಸಾಧಕರ ಜೀವನದಲ್ಲಿ ಶಾರದೆಯ ಸ್ಥಾನ:-** ಇವಳೇ ಪರಮಾರ್ಥಕ್ಕೆ ಮೂಲಳು. ಅಲ್ಲದೇ ಕೇವಲ ಆತ್ಮವಿದ್ಯೆಯೇ ಆಗಿರುವಳು. ಶಾರದೆ ಅಂದರೆ ಈಶ್ವರನ ನಿವಾಂತ, ಶಾಂತ, ಮತ್ತು ನಿರ್ಮಲ ಹಾಗೂ ನಿಶ್ಚಲ ಜ್ಞಾನರೂಪ ಸ್ಥಿತಿಯೇ ಆಗಿರುವಳು. (೧೬)

ಜೆ ಯೋಗಿಯಾಂಚೇಧ್ಯಾನೀ । ಜೆ ಸಾಧಕಾಚೆ ಚಿಂತನೀ ।
ಜೆ ಸಿದ್ಧಾಂಚೆ ಅಂತಃಕರ್ಣೀ । ಸಮಾಧಿರೂಪೇ ॥೧೭॥

ಜೆ ನಿರ್ಗುಣಾಚೀ ವೊಳಖಣ। ಜೆ ಅನುಭವಾಚೀ ಖೂಣ ।
ಜೆ ವ್ಯಾಪಕಪಣೆ ಸಂಪೂರ್ಣ । ಸರ್ವಾಂಘಟೀ ॥೧೮॥

ಶಾಸ್ತ್ರೆ ಪುರಾಣೆ ವೇದಶ್ರುತಿ । ಅಖಂಡ ಜಯೆಚೀ ಸ್ತವನಕರಿತೀ ।
ನಾನಾರೂಪೀ ಜಯೆಸೀ ಸ್ತವಿತೀ । ಪ್ರಾಣಿಮಾತ್ರ ॥೧೯॥

ಜೆ ವೇದಶಾಸ್ತ್ರಾಂಚೀ ಮಹಿಮಾ । ಜೆ ನಿರೋಪಮಾಚೀ ಉಪಮಾ ।
ಜಯೇಕರಿತಾ ಪರಮಾತ್ಮಾ । ಏಸೆ ಬೋಲಿಜೆ ॥೨೦॥

ನಾನಾ ವಿದ್ಯಾ ಕಳಾ ಸಿದ್ಧೀ । ನಾನಾ ನಿಶ್ಚಯಾಚೀ ಬುದ್ಧೀ ।
ಜೆ ಸೂಕ್ಷ್ಮ ವಸ್ತೂಚೀ ಶುದ್ಧೀ । ಜ್ಞಾಪ್ತೀ ಮಾತ್ರ ॥೨೧॥

ಜೆ ಹರಿಭಕ್ತಾಂಚೀ ನಿಜಭಕ್ತೀ । ಅಂತರ್ನಿಷ್ಠಾಚೀ ಅಂತರಸ್ಥಿತೀ ।
ಜೆ ಜೀವನ್ಮುಕ್ತಾಂಚೀ ಮುಕ್ತೀ । ಸಾಯೋಜ್ಯತಾ ತೇ ॥೨೨॥

ಜೆ ಅನಂತ ಮಾಯಾ ವೈಷ್ಣವೀ । ನ ಕಳೆ ನಾಟಕ ಲಾಘವೀ ।
ಜೆ ಥೋರಾಥೋರಾಸೀ ಗೋವೀ । ಜಾಣಪಣೆ ॥೨೩॥

ಜೆ ಜೆ ದೃಷ್ಟೀನೇ ದೇಖಿಲೇ । ಜೆ ಜೆ ಶಬ್ದೆ ವೋಳಖಿಲೆ ।
ಜೆ ಜೆ ಮನಾಸ ಭಾಸಲೇ । ತಿತುಕೇ ರೂಪ ಜಯೇಚೆ ॥೨೪॥

ಸ್ತವನ ಭಜನ ಭಕ್ತಿ ಭಾವ । ಮಾಯೆವಾಂಚೂನ ನಾಹೀ ಠಾವ ।
ಯಾ ವಚನಾಚಾ ಅಭಿಪ್ರಾವ । ಅನುಭವೀ ಜಾಣತೀ ॥೨೫॥

ಮ್ಹಣೌನಿ ಥೋರಾಹೂನಿ ಥೋರ । ಜೆ ಈಶ್ವರಾಚಾ ಈಶ್ವರ ।
ತಯೇಸಿ ಮಾಝಾ ನಮಸ್ಕಾರ । ತದಾಂಶೇ ಚಿ ಆತಾ ॥೨೬॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
ಶಾರದಾಸ್ತವನನಾಮ ಪ್ರಥಮಾಧ್ಯಾಯೆ ತೃತೀಯ ಸಮಾಸ ಸಮಾಪ್ತ ॥

ಯೋಗಿಗಳ ಜ್ಞಾನ ಸಾಧನೆಗೆ ಸಹಾಯಕಳು, ಸಾಧಕರಿಗೆ ಆತ್ಮಚಿಂತನೆಯ ಕಲೆಯನ್ನು ಕಲಿಸುವಳು. ಮತ್ತು ಸಿದ್ಧರ ಅಂತಃಕರುಣದಲ್ಲಿ ಸಮಾಧಿರೂಪದಿಂದ ಸ್ಥಿರವಾಗಿ ಇರುವವಳೂ ಈ ತಾಯಿಯೇ. (೧೭) ಶಾರದೆಯ ಸ್ವರೂಪ ಗೊತ್ತಾದ ಕೂಡಲೇ ನಿರ್ಗುಣದ ಗುರುತು ಮತ್ತು ಸ್ವಸ್ವರೂಪದ ಅನುಭವ ಆದದ್ದರ ಪರಿಚಯ ವಾಗುವದು. ಸರ್ವದೃಶ್ಯ ಪದಾರ್ಥದಲ್ಲಿ ಇವಳು ಸಂಪೂರ್ಣ ವ್ಯಾಪಿಸಿರುವಳು ಎಂಬ ಅನುಭವ ಬರುವದು. (೧೮) ಶಾಸ್ತ್ರ, ಪುರಾಣ, ವೇದ, ಶ್ರುತಿ ಮೊದಲಾದ ಗ್ರಂಥಗಳು ಯಾವಾಗಲೂ ಇವಳನ್ನು ಸ್ತುತಿಸುವವು. ಎಲ್ಲ ಜನರೂ ಸಹ ನಾನಾರೂಪದಲ್ಲಿ ನಾನಾ ಪ್ರಕಾರದಿಂದ ಇವಳ ಸ್ತುತಿ ಮತ್ತು ಉಪಾಸನೆ ಮಾಡುವರು. (೧೯) **ಶಾರದೆಯ ಮಹಾತ್ಮೆ**:–ಇವಳಿಂದಲೇ ವೇದ ಶಾಸ್ತ್ರಗಳಿಗೆ ಹೆಚ್ಚಿನ ಮಹತ್ವ ಬಂದಿದೆ. ನಿಜವಾದ ಪರಮಾತ್ಮ ಸ್ವರೂಪವು ಕಲ್ಪನೆಗೆ ನಿಲುಕದ್ದಾಗಿದೆ. ಶಬ್ದಗಳು ಅಲ್ಲಿಯವರೆಗೆ ಹೋಗಿ ಮುಟ್ಟುವದೇ ಇಲ್ಲ. ಆದರೆ ಅಂಥ ಕಲ್ಪನಾತೀತವನ್ನು ಮಾನವ ಕಲ್ಪನೆಯ ಕಕ್ಷೆಯೊಳಗೆ "ಪರಮಾತ್ಮ"ಎಂಬ ಹೆಸರನ್ನಿಟ್ಟು ಉಪಮೆಗೆ ನಿಲುಕದಂಥವನನ್ನು ಉಪಮೆಯ ಅಳವಿನಲ್ಲಿ ತಂದವಳು ಈ ಶಾರದಾ ಮಾತೆಯೇ. (೨೦) ಪರಮಾತ್ಮ ಸ್ವರೂಪನಿಗೆ "ಇದ್ದೇನೆ" ಎಂಬ ಕೇವಲ ಜ್ಞಾನಮಯ ಶುದ್ಧ ಜ್ಞಾನವೇ ಶಾರದೆಯ ಸ್ವರೂಪವೆಂದು ತಿಳಿಯಬೇಕು. ಮೂಲದಲ್ಲಿ ಇವಳು ಜ್ಞಾನ ಮಯಳೇ ಇದ್ದುದರಿಂದ ಯಾವತ್ತೂ ಪ್ರಕಾರದ ವಿದ್ಯೆ, ಕಲೆ, ಸಿದ್ಧಿ ಮತ್ತು ನಿಶ್ಚಿತ ಬುದ್ಧಿ ರೂಪದ ಜ್ಞಾನ ಅಂದರೆ ಕೇವಲ ಜ್ಞಾನ ಸೂಕ್ಷ್ಮ ಅನುಭವವೇ ಆಗಿರುವಳು (೨೧) ಇದರಂತೆ ಭಗವಂತನ ಭಕ್ತರ ಪ್ರೀತಿಯ ಭಕ್ತಿ ಅಂತರ್ಮುಖರಾಗಿ ಇರುವಂಥ ಜ್ಞಾನಿ ಪುರುಷರ ಆತ್ಮಸ್ಥಿತಿ, ಅರ್ಥಾತ್ ಅಂತರಂಗದ ಸ್ಥಿತಿ, ಮತ್ತು ಜೀವನ್ಮುಕ್ತರ ಸಾಯುಜ್ಯ ಮುಕ್ತಿಯು ಈ ಶಾರದೆಯೇ ಹೌದು. (೨೨) **ಶಾರದೆಯ ವಿಲಕ್ಷಣತನ**:– ಶಾರದೆಯು ನೆಲೆ ಹತ್ತದವಳು. ಅಂದರೆ ಭಗವಂತನ ಅಥವಾ ಈಶ್ವರನ ಮಾಯೆಯು. ಇವಳ ಕೌಶಲ್ಯದಿಂದ ರೂಪಿಸಿದ ವಿಶ್ವರೂಪೀ ನಾಟಕವು ಯಾರಿಗೂ ತಿಳಿಯಲಸಾಧ್ಯವು. ನಾವು ಜ್ಞಾನಿಗಳು ಎಂಬ ದೊಡ್ಡ ದೊಡ್ಡ ಜನರಿಗೆ ಜ್ಞಾನದ ಅಭಿ ಮಾನದ ಕಾರಣದಿಂದ ಹೆಚ್ಚಾಗಿ ಗೊಂದಲದಲ್ಲಿ ಕೆಡವಿ ಮೋಸ ಮಾಡುವಳು. (೨೩) ಕಣ್ಣಿಗೆ ಕಾಣುವದೆಲ್ಲ ಮತ್ತು ಮನಸ್ಸಿಗೆ ಏನೇನು ಕಲ್ಪಿಸಲು ಬರುವದೊ ಇದೆಲ್ಲವೂ ಇವಳ ರೂಪವೇ ಎಂದು ತಿಳಿಯಬೇಕು. (೨೪) ಭಗವಂತನ ಸ್ತುತಿಯೇ ಇರಲಿ, ಇದಕ್ಕೆಲ್ಲ ಶಾರದೆಯ ಅಂದರೆ ಮಾಯೆಯ ಸಹಾಯವಿಲ್ಲದೇ ಮಾಡಲಿಕ್ಕೆ ಸಾಧ್ಯ ವಿಲ್ಲ. ನನ್ನ ಈ ಮಾತಿನ ನಿಜವಾದ ಅರ್ಥವು ಸ್ವಾನುಭವೀ ಪುರುಷನಿಗೆ ಮಾತ್ರ ಗೊತ್ತಾಗುವದು. (೨೫) ಇರಲಿ. ಕೊನೆಗೆ ದೊಡ್ಡವರಿಗಿಂತಲೂ ದೊಡ್ಡವಳೂ ಈಶ್ವರನ ಈಶ್ವರಿಯೂ ಆಗಿರುವ ಶಾರದಾ ಮಾತೆಗೆ ಅವಳ ಅಂಶ–ದವನೆಂದೇ ಲೀನ ಭಾವದಿಂದ ನಾನು ನಮಸ್ಕಾರ ಮಾಡುತ್ತೇನೆ. (೨೬)

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ
"ಶಾರದಾ ಸ್ತವನ" ಎಂಬ ಹೆಸರಿನ ಮೂರನೆಯ ಸಮಾಸವು
ಮುಗಿದುದು.

● ●

### ಚತುರ್ಥ ಸಮಾಸ : ಸದ್ಗುರು ಸ್ತವನ

॥ಶ್ರೀರಾಮ॥ ಆತಾ ಸದ್‌ಗುರು ವರ್ಣವೇನಾ। ಜೇಥೇ ಮಾಯಾ ಸ್ಪರ್ಶೋ ಸಕೇನಾ।
ತೇ ಸ್ವರೂಪ ಮಜ ಅಜ್ಞಾನಾ । ಕಾಯ ಕಳೆ ॥೧॥
ನ ಕಳೆ ನ ಕಳೆ ನೇತಿ ನೇತಿ । ಐಸೆ ಬೋಲತಸೆ ಶ್ರುತೀ।
ತೇಥೇ ಮಜ ಮೂರ್ಖಾಚೀ ಮತೀ । ಪವಾಡೇಲ ಕೋಠೆ ॥೨॥
ಮಜ ನ ಕಳೆ ಹಾ ವಿಚಾರೂ । ದುರೂನಿ ಮಾಝಾ ನಮಸ್ಕಾರು ।
ಗುರುದೇವಾ ಪೈಲಪಾರು । ಪಾವವೀ ಮಜ ॥೩॥
ಹೋತೀ ಸ್ತವನಾಚೀ ದುರಾಶಾ । ತುಟಲಾ ಮಾಯೇಚಾ ಭರ್ವಸಾ ।
ಆತಾ ಅಸಾಲ ತೈಸೆ ಅಸಾ । ಸದ್‌ಗುರು ಸ್ವಾಮೀ ॥೪॥
ಮಾಯೆಚ್ಯಾ ಬಳೆ ಕರೀನ ಸ್ತವನ । ಐಸೇ ವಾಂಛಿತ ಹೋತೇ ಮನ ।
ಮಾಯಾ ಜಾಲೀ ಲಜ್ಯಾಯಮಾನ । ಕಾಯ ಕರೂ ॥೫॥

# ಸಮಾಸ ೪. ಸದ್ಗುರು ಸ್ತವನ (ನುಡಿ ೩೧)

ಈಶ್ವರನ ಸ್ಥಿರ ಅಂಶದ ಜ್ಞಾನಮಯ ಸ್ವರೂಪದ ಅಥವಾ ಗಣಪತಿಯ ವರ್ಣನೆ ಮತ್ತು ನಮನ ವಾಯಿತು. ಈಶ್ವರನ ಚಂಚಲ ಅಂಶದ ಶಕ್ತಿಮಯ ಸ್ವರೂಪದ ಅಥವಾ ಶಾರದೆಯ ವಂದನೆಯು ಆಯಿತು. ಶ್ರೀ ಸಮರ್ಥರು ಇನ್ನು ಮೇಲೆ ಸದ್ಗುರುವಿಗೆ ನಮನ ಮಾಡುವರು. ಸ್ಥೂಲ ಕಾಲದ ಕಕ್ಷೆಯಲ್ಲಿ ತೋರಿ ಬರುವ ವಿಶ್ವದ ಒಳ ಹೊರಗೆಲ್ಲದರಲ್ಲಿ ಪರಮಾತ್ಮನು ವ್ಯಾಪಿಸಿರುವನೆಂಬುದು ನಿಜವೇ ಇರುವದು. ಆದರೆ ಇಷ್ಟಕ್ಕೆ ಇದು ಮುಗಿಯುವದಿಲ್ಲ. ಈ ವಿಶ್ವದಿಂದ ಒಂದು ವೇಳೆ ಪರಮಾತ್ಮನು ಮುಗಿದದ್ದಾದರೆ ಆಗ ಅನಂತನು ಇರಲಾರನು. ಆದರೆ ವ್ಯಕ್ತಿ ಮತ್ತು ವಿಶ್ವ ಇವುಗಳಲ್ಲಿ ವ್ಯಾಪಿಸಿಯೂ ಅವನು ಉಳಿದೇ ಇರುತ್ತಾನೆ. ಅವನು ಯಾವ ಪ್ರಮಾಣ ದಲ್ಲಿ ಶಿಲ್ಲಕ ಉಳಿದಿರುವನೆಂಬುದು ಈವರೆಗೂ ಯಾರಿಗೂ ತಿಳಿದಿಲ್ಲ. ಇಂಥ ಕಲ್ಪನಾತೀತ ಹಾಗೂ ಅನಂತ ಪರ ಮಾತ್ಮನು ಹೇಗಿರುವನೆಂಬುದು ಮನುಷ್ಯರಿಗೆ ಯಾವ ಕಾಲಕ್ಕೂ ಹೇಳಲಿಕ್ಕೆ ಬರಲಾರದು. ಆದರೆ, ಅವರಿಗೆ ಪರಮಾತ್ಮನ ವರ್ಣನೆ ಮಾಡುವ ಪ್ರಯತ್ನ ಮಾಡದ ಹೊರತು ಸಮಾಧಾನವಾಗುವದಿಲ್ಲ. ತೋರಿಬರುವ ದೃಶ್ಯ ವಿಶ್ವದಲ್ಲಿಯ ಸೂರ್ಯ, ಸಮುದ್ರ, ಆಕಾಶ, ಪೃಥ್ವಿ ಇತ್ಯಾದಿ ಅತ್ಯಂತ ವಿಶಾಲ ವಸ್ತುಗಳ ಉಪಮೆಯಿಂದ ಆ ಅನಂತನನ್ನು ಕಂಡು ಹಿಡಿಯುವ, ವರ್ಣಿಸುವ ಪ್ರಯತ್ನ ಮಾಡುವರು. ಈ ಪ್ರಯತ್ನವು ಸಾಲದಾದಾಗ ಅರ್ಥಾತ್ ಪರಮಾತ್ಮ ಸ್ವರೂಪವೆಂತಿರುವದೆಂಬುದನ್ನು ತಿಳಿಯಲಾಗದೆ ಸೋತ ಮೇಲೆ "ಇವನ ವರ್ಣನೆ ಮಾಡಲಿಕ್ಕೆ ಬರುವ ದಿಲ್ಲ, ಆಗುವದಿಲ್ಲವೆಂಬುದೇ ಇವನ ವರ್ಣನೆ ಆಗಿದೆ" ಎಂದು ತಿಳಿದುಕೊಂಡು ಸುಮ್ಮನಾಗಬೇಕಾಗುತ್ತದೆ. ಈ ಸಮಾಸದಲ್ಲಿ ಈ ಮಾತನ್ನು ಶ್ರೀಸಮರ್ಥರು ಬಹು ಸುಂದರವಾಗಿ ತಿಳಿಸಿದ್ದಾರೆ.

**ಶ್ರೀ ಸದ್ಗುರುವು ವರ್ಣನಾತೀತನಿರುವನು:**– ಸದ್ಗುರುವಿನ ಸ್ತುತಿ ಮಾಡುವಾಗ ಶ್ರೀಸಮರ್ಥರು ಅನ್ನುವದೇನೆಂದರೆ, ಸದ್ಗುರುವಿನ ಸ್ವರೂಪಕ್ಕೆ ಮಾಯಾ ಸ್ಪರ್ಶವಾಗುವದು ಶಕ್ಯವೇ ಇಲ್ಲ. ನಮ್ಮ ಯಾವತ್ತೂ ಜ್ಞಾನವು ಮಾಯೆಯ ಅಳವಿನೊಳಗೆ ಇರುವದರಿಂದ ಸದ್ಗುರು ಸ್ವರೂಪವು ನಮ್ಮಂಥ ಅಜ್ಞಾನಿ ಮನುಷ್ಯರಿಗೆ ತಿಳಿಯಲು ಅಸಾಧ್ಯ. ಆದ್ದರಿಂದ ಸದ್ಗುರುವಿನ ವರ್ಣನೆ ಮಾಡುವದು ಅಸಾಧ್ಯದ ಮಾತಾಗಿದೆ.(೧) ಶ್ರುತಿಯು ಆತ್ಮ ವಿದ್ಯೆಯ ತಾಯಿಯು. ಇವಳು ಪರಮಾತ್ಮ ಸ್ವರೂಪದ ವರ್ಣನೆಯನ್ನು ಮಾಡುವ ಪ್ರಯತ್ನ ಮಾಡಿ ಕೊನೆಗೆ ಇವಳಿಗೂ ಸಹ "ಈ ಸ್ವರೂಪ ತಿಳಿಯುವದಿಲ್ಲ; ತಿಳಿಯುವದಿಲ್ಲ! ಅದು ಹೀಗಲ್ಲ! ಹೀಗಲ್ಲ!!"ಎಂದು ಅನಿಸಿ ನಿರಾಶೆ ಯಿಂದ ಸುಮ್ಮನಾದಳು. ಅಂದಮೇಲೆ ನಮ್ಮಂಥ ತಿಳಿಗೇಡಿಗಳಿಗೆ ಬುದ್ಧಿಯಿಂದ ಮೂಲ ಸ್ವರೂಪ ವನ್ನು ತಿಳಿದುಕೊಳ್ಳಲು ಹೇಗೆ ಸಾಧ್ಯವಾದೀತು ? (೨) ಸದ್ಗುರು ಸ್ವರೂಪದ ವಿಚಾರ ನನಗೆ ತಿಳಿಯದ್ದರಿಂದ ಅವನಿಗೆ ದೂರದಿಂದಲೇ ನಮಸ್ಕರಿಸಿ ಶ್ರೀಸಮರ್ಥರು ಬೇಡಿಕೊಳ್ಳುವದೇನೆಂದರೆ "ಹೇ ಗುರುದೇವಾ ಮಾಯೆಯ ಹಿಡಿತದಿಂದ ಬಿಡಿಸಿ ಆಚೆಯ ದಂಡೆಯನ್ನು ಮುಟ್ಟಿಸಪ್ಪಾ" (೩) **ಮಾಯೆಯ ಸಹಾಯದಿಂದ ಸದ್ಗುರುವಿನ ವರ್ಣನೆ:**– ಮಾಯೆಯ ಬಲದ ಸಹಾಯ ಪಡೆದು ನಿಮ್ಮ ಸ್ತುತಿ ಮಾಡಬೇಕೆಂದು ನಾನು ಅಶಕ್ಯವಾದ ಆಶೆ ಯನ್ನು ಮನಸ್ಸಿನಲ್ಲಿ ಹೊಂದಿ ನಿಶ್ಚಯಿಸಿದೆ. ಇದು ಸಫಲವಾಗುವದರಲ್ಲಿ ಮಾಯೆಯ ಸಹಕಾರ ಸಿಗುವದೆಂದು ಬಹಳಷ್ಟು ನಂಬಿದ್ದೆನು. ಆದರೆ ಇದೆಲ್ಲವೂ ಸುಳ್ಳಾಯಿತು. ಆದರೆ ಈ ಬಗ್ಗೆ ಹೇಳುವದೇನೆಂದರೆ, "ಅಯ್ಯಾ ಶ್ರೀ ಸದ್ಗುರು ಸ್ವಾಮಿಯೇ ನೀನು ಇದ್ದಂತೆಯೇ ಇರಪ್ಪಾ" (೪) ಮಾಯಾ ಬಲದ ಸಹಾಯದಿಂದ ನಿಮ್ಮ ಸ್ತುತಿ ಮಾಡಬೇಕೆಂಬುದು ನನ್ನ ಬಲವಾದ ಇಚ್ಛೆ ಇದ್ದಿತು. ಆದರೆ ಶ್ರೀ ಗುರುನಾಥನೇ, ನಿಮ್ಮ ಹೆಸರು ಅಂದ ಕೂಡಲೇ ಮಾಯೆಯು ಲಜ್ಜಿತಳಾಗಿ ಹಿಂದೆ ಸರಿದಳು. ಆದುದರಿಂದ ನನಗೇನೂ ಮಾಡಲಿಕ್ಕೆ ಬರದಂತಾಗಿದೆ. (೫)

ನಾತುಡೆ ಮುಖ್ಯ ಪರಮಾತ್ಮಾ । ಮ್ಹಣೌನಿ ಕರಾವೀ ಲಾಗೆ ಪ್ರತಿಮಾ ।
ತೈಸಾ ಮಾಯಾಯೋಗೇ ಮಹಿಮಾ । ವರ್ಣೀನ ಸದ್ಗುರೂಚಾ ॥೬॥
ಆಪಲ್ಯಾ ಭಾವಾಸಾರಿಖಾ ಮನೀ । ದೇವ ಆಠವಾವಾ ಧ್ಯಾನೀ ।
ತೈಸಾ ಸದ್ಗುರು ಹಾ ಸ್ತವನೀ । ಸ್ತವೂ ಆತಾ ॥೭॥
ಜಯ ಜಯಾ ಜಿ ಸದ್ಗುರುರಾಜಾ । ವಿಶ್ವಂಭರಾ ವಿಶ್ವಬೀಜಾ ।
ಪರಮ ಪುರುಷಾ ಮೋಕ್ಷಧ್ವಜಾ । ದೀನಬಂಧು ॥೮॥
ತುಝೀಯೇನ ಅಭಯಂಕರೆ । ಅನಾವರ ಮಾಯಾ ಹೇ ವೋಸರೆ ।
ಜೈಸೇ ಸೂರ್ಯಪ್ರಕಾಶೇ ಅಂಧಾರೇ । ಪಳೋನ ಜಾಯೆ ॥೯॥
ಆದಿತ್ಯೆ ಅಂಧಕಾರ ನಿವಾರೆ । ಪರಂತು ಮಾಗುತೇ ಬ್ರಹ್ಮಾಂಡ ಭರೇ ।
ನೀಸೀ ಜಾಲಿಯಾ ನಂತರೇ । ಪುನ್ಹಾ ಕಾಳೋಖೆ ॥೧೦॥
ತೈಸಾ ನವ್ಹೆ ಸ್ವಾಮಿರಾವ್ । ಕರೀ ಜನ್ಮ ಮೃತ್ಯುವಾವ ।
ಸಮೂಳ ಅಜ್ಞಾನಾಚಾ ಠಾವ್। ಪುಸೂನ ಟಾಕೀ ॥೧೧॥
ಸುವರ್ಣಾಚೆ ಲೋಹೋ ಕಾಹೀ । ಸರ್ವಥಾ ಹೋಣಾರ ನಾಹೀ ।
ತೈಸಾ ಗುರುದಾಸ ಸಂದೇಹೀ। ಪಡೋ ಚಿ ನೇಣೆ ಸರ್ವಥಾ ॥೧೨॥
ಕಾ ಸರಿತಾ ಗಂಗೇಸಿ ಮಿಳಾಲೀ । ಮಿಳಣೇ ಹೋತಾ ಗಂಗಾಜಾಲೀ ।
ಮಗ ಜರೀ ವೇಗಳೇ ಕೇಲೀ । ತರೀ ಹೋಣಾರ ನಾಹೀ ಸರ್ವಥಾ ॥೧೩॥
ಪರೀ ತೇ ಸರಿತಾ ಮಿಳಣೇ ಮಾಗೇ । ವಾಹಾಳ ಮಾನಿಜೇತ ಜಗೇ ।
ತೈಸಾ ನವ್ಹೆ ಶಿಷ್ಯ ವೇಗೇ । ಸ್ವಾಮೀ ಚ ಹೋಯೇ ॥೧೪॥
ಪರೀಸ ಆಪಣಾ ಐಸೇ । ಕರೀನಾ ಸುವರ್ಣೆ ಲೋಹೋ ಪಾಲಟೇನಾ ।
ಉಪದೇಶ ಕರೀ ಬಹುತ ಜನಾ । ಅಂಕಿತ ಸದ್ಗುರೂಚಾ ॥೧೫॥
ಶಿಷ್ಯಾಸ ಗುರುತ್ವ ಪ್ರಾಪ್ತ ಹೋಯೆ। ಸುವರ್ಣೇ ಸುವರ್ಣ ಕರಿತಾ ನಯೇ ।
ಮ್ಹಣೌನಿ ಉಪಮಾ ನ ಸಾಹೆ।ಸದ್ಗುರೂಸೀ ಪರಿಸಾಚೀ ॥೧೬॥
ಉಪಮೆ ದ್ಯಾವಾ ಸಾಗರ। ತರೀ ತೋ ಅತ್ಯಂತ ಚಿ ಕ್ಷಾರ ।
ಅಥವಾ ಮ್ಹಣೋ ಕ್ಷೀರಸಾಗರ। ತರೀ ತೋ ನಾಸೇಲ ಕಲ್ಪಾಂತೀ ॥೧೭॥
ಉಪಮೇ ದ್ಯಾವಾ ಜರೀ ಮೇರೂ । ತರೀ ತೋ ಜಡ ಪಾಷಾಣ ಕಠೋರೂ ।
ತೈಸಾ ನವ್ಹೆ ಕೀ ಸದ್ಗುರು । ಕೋಮಳ ದಿನಾ ಚಾ ॥೧೮॥
ಉಪಮೆ ಮ್ಹಣೋ ಗಗನ । ತರೀ ಗಗನಾ ಪರೀಸ ತೇ ನಿರ್ಗುಣ ।
ಯಾ ಕಾರಣೇ ದೃಷ್ಟಾಂತ ಹೀಣ । ಸದ್ಗುರೂಸ ಗಗನಾಚಾ ॥೧೯॥

ಇದೆಲ್ಲವೂ ನಿಜ ವಿಷಯವೇ ಆಗಿದೆ. ಮುಖ್ಯ ಪರಮಾತ್ಮನು ಸಾಧ್ಯವಾಗುವದಿಲ್ಲವೆಂದು ಅವನ ಪ್ರತಿಮೆಗಳನ್ನು ಮಾಡ ಬೇಕಾಗುವದು. ಇದರಂತೆ ಸದ್ಗುರು ಸ್ವರೂಪವು ಸಹ ಕಲ್ಪನೆಗೆ ಮೀರಿದ್ದಾಗಿದ್ದರೂ ಸಹ ನಾನು ಮಾಯೆಯ ಸಹಾಯ ದಿಂದ ಆ ಅನಾಕಲನೀಯನಾದ (ಅಳತೆಗೆ ನಿಲುಕದ) ಸದ್ಗುರು ಸ್ವರೂಪದ ಮಹಿಮೆಯ ವರ್ಣನೆಯನ್ನು ಮಾಡು ವೆನು (೬) ಯಾರ ಭಾವನೆ ಹೇಗೆ ಇರುವದೋ ಆ ಪ್ರಕಾರ ದೇವರ ಕಲ್ಪನೆ ಮಾಡಿಕೊಂಡು ಮನುಷ್ಯರು ಅವನ ಚಿಂತನೆಯನ್ನು ಮಾಡುವರು. ಈ ನಿಯಮಕ್ಕನುಸಾರವಾಗಿ ನಾನೂ ಸಹ ಶ್ರೀ ಸದ್ಗುರುವಿನ ವಂದನೆ ಮಾಡಿ ಅವನನ್ನು ಸ್ತುತಿಸುವೆನು. (೭) **ಶ್ರೀಸಮರ್ಥರು ಮಾಡಿದ ಸದ್ಗುರು ಸ್ತವನ:**– ವಿಶ್ವವನ್ನೆಲ್ಲ ತುಂಬಿಯೂ ಹೆಚ್ಚಾಗಿ ಉಳಿದವ. ವಿಶ್ವಕ್ಕೆ ಮೂಲ. ಸರ್ವೋತ್ತಮ ಪುರುಷ. ಮೋಕ್ಷಗಳ ವಿಜಯ. ಧ್ವಜ, ದೀನರ ಮಿತ್ರನೂ ಆಗಿರುವ ಹೇ ಸದ್ಗುರುವೇ ನಿನಗೆ ಜಯ ಜಯಕಾರವು. (೮) **ಸೂರ್ಯಪ್ರಕಾಶದ ಉಪಮೆ:**- ಸೂರ್ಯನ ಪ್ರಕಾಶದಿಂದ ಕತ್ತಲೆಯು ಓಡಿ ಹೋಗುವದು. ಇದರಂತೆಯೇ ಸದ್ಗುರುವಿನ ಅಭಯಹಸ್ತವು ಯಾರ ತಲೆಯ ಮೇಲೆ ಇರುವದೋ ಅಂಥವರಿಗೆ ಅವನ ಕೃಪೆಯಿಂದಾಗಿ ಅವರಿಗೆ ಆವರಿಸಿದ ಅನಾವರವಾದ, ಆವರಿಸಲಿಕ್ಕೆ ಆಗದ ಮಾಯೆಯ ಅಧಿಕಾರ ಇಲ್ಲದಂತಾಗುವದು. (೯) **ಉಪಮೆಯಲ್ಲಿ ನ್ಯೂನತೆ:**– ಸೂರ್ಯ ಪ್ರಕಾಶ ಇರುವವರೆಗೆ ಮಾತ್ರ ಕತ್ತಲೆಯು ಇರುವದಿಲ್ಲವೆಂಬುದು ನಿಜವಾದರೂ ಸೂರ್ಯಾಸ್ತವಾದ ಮೇಲೆ, ಆ ಪ್ರಕಾಶ ಇಲ್ಲದಾದ ಕೂಡಲೇ ರಾತ್ರಿಯಾಗಿ ಪುನಃ ಕತ್ತಲೆಯು ಬ್ರಹ್ಮಾಂಡವನ್ನೆಲ್ಲ ವ್ಯಾಪಿಸುವದು. (೧೦) ನನ್ನ ಕಣ್ಣುಮುಂದಿರುವ ಸದ್ಗುರು ಸ್ವಾಮಿರಾಜ ಅಂಥವನಲ್ಲ. ಅಜ್ಞಾನವೆಂಬ ಕತ್ತಲೆಯನ್ನು ಸಮೂಲವಾಗಿ ಕಿತ್ತೊಗೆಯುವಂಥವನು. ಅಜ್ಞಾನದ ಬಿಡಾರವನ್ನೇ ಹೆಸರಿಲ್ಲದಂತೆ ಮಾಡುವನು. ಇದರಿಂದ ಜೀವನವು ಜನನ ಮರಣದಿಂದ ಮುಕ್ತವಾಗು ವದು. (೧೧) **ಶಿಷ್ಯನಿಗೆ ಬಂಗಾರದ ಮತ್ತು ನದಿಯ ಉಪಮೆ:**– ಬಂಗಾರವು ಕೆಟ್ಟ ಕಬ್ಬಿಣವೆಂದೂ ಆಗುವ ದಿಲ್ಲ. ಗುರುವಿನ ಶಿಷ್ಯನ ಮನಸ್ಸು ಪರಿಶುದ್ಧವಿದ್ದು ಅದು ಎಂದಿಗೂ ಸಂಶಯದಲ್ಲಿ ಬೀಳುವದಿಲ್ಲ. (೧೨) ಅಥವಾ ಒಂದು ಸಣ್ಣ ನದಿಯು ಬಂದು ಗಂಗೆಗೆ ಕೂಡಿದ ಮೇಲೆ ಅದು ಗಂಗೆಯೇ ಆಗುತ್ತದೆ. ಪುನಃ ಅದನ್ನು ಗಂಗೆ ಯಿಂದ ಪ್ರತ್ಯೇಕಿಸಬೇಕೆಂದರೆ ಅದು ಸಾಧ್ಯವಾಗದು. (೧೩) ಗಂಗೆಗೆ ಕೂಡುವ ಪೂರ್ವದಲ್ಲಿ ಆ ನದಿಗೆ ಒಂದು ಹಳ್ಳವೆಂದೇ ತಿಳಿದಿರುತ್ತಾರೆ. ಇದೇ ರೀತಿಯಲ್ಲಿ ಸದ್ಗುರುವಿಗೆ ಭೆಟ್ಟಿಯಾಗುವ ಪೂರ್ವದಲ್ಲಿ ಆ ಶಿಷ್ಯನು ಒಬ್ಬ ಸಾಮಾನ್ಯ ಮನುಷ್ಯನಿರುತ್ತಾನೆ. ಸದ್ಗುರುವಿನ ಭೆಟ್ಟಿ ಆದ ಕೂಡಲೇ ಅವನ ಕೃಪಾಶೀರ್ವಾದದಿಂದ ಆ ಶಿಷ್ಯನು ತದ್ರೂಪನೇ ಆಗುವನು. ಅವನಿಗೆ ಸದ್ಗುರುವಿನ ಅಧಿಕಾರವೇ ಪ್ರಾಪ್ತವಾಗುವದು. (೧೪) **ಪರುಷಮಣಿ (ಪರಿಸಮಣಿ)ಯ ಉಪಮೆ ಮತ್ತು ಅದರ ನ್ಯೂನತೆ:**– ಪರಿಸವು ಕಬ್ಬಿಣವನ್ನು ಬಂಗಾರವಾಗಿ ಮಾಡುವದು. ಆದರೆ ಆ ಬಂಗಾರವನ್ನು ಇನ್ನೊಂದು ಕಬ್ಬಿಣಕ್ಕೆ ಹಚ್ಚಿದರೆ ಅದು ಬಂಗಾರವಾಗುವದಿಲ್ಲ. ಅಂದರೆ ಪರಿಸಮಣಿಯು ಕಬ್ಬಿಣಕ್ಕೆ ತನ್ನ ಪರಿಸಮಣಿತನವನ್ನು ಕೊಡುವದಿಲ್ಲ. ಅದೇ ಸದ್ಗುರುವಿಗೆ ಶರಣು ಹೋದ ಶಿಷ್ಯನು ಅನೇಕ ಜನ ರಿಗೆ ಉಪದೇಶ ಮಾಡಿ ಉದ್ಧಾರ ಮಾಡುವನು. (೧೫) **ಇದರ ಮಥಿತಾರ್ಥವುಃ-** ಶಿಷ್ಯನಿಗೆ ಗುರುಪದ ಪ್ರಾಪ್ತ ವಾಗುವದು. ಆದರೆ ಅದೇ ಬಂಗಾರವು ತನ್ನ ಸ್ಪರ್ಶದಿಂದ ಕಬ್ಬಿಣವನ್ನು ಬಂಗಾರ ಮಾಡಲಾರದು. ಇದರಿಂದ ಪರುಷಮಣಿಯ ಉಪಮೆಯು ಸದ್ಗುರುವಿಗೆ ಸರಿ ಹೊಂದಲಾರದು. (೧೬) **ಸಾಗರ ಮತ್ತು ಅದರ ನ್ಯೂನತೆ:-** ಸದ್ಗುರುವು ಸಾಗರದಂತೆ ಇರುವನೆಂದು ಅನ್ನುವದಾದರೆ ಸಾಗರದ ನೀರು ಉಪ್ಪಿನ ಕಟಿ ಇರುತ್ತದೆ. ಅಥವಾ ಕ್ಷೀರ ಸಾಗರವನ್ನು ಹೋಲಿಸಿದರೂ ಸಹ ಅದು ಕಾಲಾಂತರದಲ್ಲಿ ಕೆಡುತ್ತದೆ. ಅಂದ ಮೇಲೆ ಈ ಉಪಮೆಗಳು ಸರಿ ಅಲ್ಲ. ಯಾಕಂದರೆ ಸದ್ಗುರುವು ನಿತ್ಯ ನೂತನ ಹಾಗೂ ಅವಿನಾಶ. (೧೭) **ಮೇರು ಪರ್ವತ, ಅದರ ನ್ಯೂನತೆ:-** ಸದ್ಗುರುವು ಮೇರು ಪರ್ವತದಂತೆ ಇರುವನೆಂದು ಅನ್ನುವದೂ ಸರಿಯಲ್ಲ. ಮೇರು, ಅಚೇತನ ಮತ್ತು ಕಠೋರ ಶಿಲೆಯಾಗಿದೆ. ಆದರೆ ಸದ್ಗುರುವು ಸಚೇತನ, ಕೋಮಲ, ಅಂತಃಕರುಣಿ ಇದ್ದು, ದೀನ ದಯಾಳು ಇರುವದ ರಿಂದ ಇದೂ ಯೋಗ್ಯವಲ್ಲ. (೧೮) **ಗಗನ, ಅದರ ನ್ಯೂನತೆ :**– ಸದ್ಗುರುವು ಗಗನದಂತೆ ಇರುವನೆಂದು ಅನ್ನು ವದು. ಯೋಗ್ಯವಲ್ಲ. ಯಾಕೆಂದರೆ ಆಕಾಶ ಕೇವಲ ಶೂನ್ಯವಾಗಿ ಕಾಣುವದು. ಆದರೆ, ಸದ್ಗುರುವು ಶೂನ್ಯದ ಆಚೆಗೆ ಇರುವ ಸ್ವರೂಪನು. ಅಂದರೆ. ನಿರ್ಗುಣನೇ ಆಗಿರುವದರಿಂದ ಇದೂ ಸರಿಯಲ್ಲ. (೧೯).

ಧೀರಪಣೆ ಉಪಮೂ ಜಗತೀ । ತರೀ ಹೇ ಹಿ ಖಚೇಲ ಕಲ್ಪಾಂತೀ ।
ಮ್ಹಣೌನ ಧೀರತ್ವಾಸ ದೃಷ್ಟಾಂತೀ । ಹೀಣ ವಸುಂಧರಾ ॥೨೦॥
ಆತಾ ಉಪಮಾವಾ ಗಭಸ್ತೀ । ತರೀ ಗಭಸ್ತೀಚಾ ಪ್ರಕಾಶ ಕಿತೀ ।
ಶಾಸ್ತ್ರೇ ಮರ್ಯಾದಾ ಬೋಲತೀ। ಸದ್ಗುರು ಅಮರ್ಯಾದ ॥೨೧॥
ಮ್ಹಣೌನಿ ಉಪಮೆ ಉಣಾ ದಿನಕರ । ಸದ್ಗುರು ಜ್ಞಾನ ಪ್ರಕಾಶ ಥೋರ ।
ಆತಾ ಉಪಮಾವಾ ಫಣೀವರ। ತರೀ ತೋ ಹಿ ಭಾರವಾಹೀ ॥೨೨॥
ಆತಾ ಉಪಮೆ ದ್ಯಾವೆ ಜಳ । ತರೀ ತೇ ಕಾಳಾಂತರೀ ಆಟೇಲ ಸಕಳ ।
ಸದ್ಗುರುರೂಪ ತೇ ನಿಶ್ಚಳ । ಜಾಣಾರ ನಾಹೀ ॥೨೩॥
ಸದ್ಗುರೂಸೀ ಉಪಮಾವೇ ಅಮೃತ । ತರೀ ಅಮರ ಧರಿತೀ ಮೃತ್ಯುಪಂಥ ।
ಸದ್ಗುರು ಕೃಪಾ ಯಥಾರ್ಥ । ಅಮರ ಕರೀ ॥೨೪॥
ಸದ್ಗುರೂಸಿ ಮ್ಹಣಾವೆ ಕಲ್ಪತರೂ । ತರೀ ಹಾ ಕಲ್ಪನೇತೀತ ವಿಚಾರೂ ।
ಕಲ್ಪವೃಕ್ಷಾಚಾ ಅಂಗೀಕಾರೂ। ಕೋಣ ಕರೀ ॥೨೫॥
ಚಿಂತಾ ಮಾತ್ರ ನಾಹೀ ಮನೀ । ಕೋಣ ಪುಸೆ ಚಿಂತಾಮಣಿ ।
ಕಾಮಧೇನೂಚೀ ದುಭಣೀ । ನಿಃಕಾಮಾಸೀ ನ ಲಗತೀ ॥೨೬॥
ಸದ್ಗುರು ಮ್ಹಣೋ ಲಕ್ಷ್ಮೀವಂತ । ತರೀ ತೇ ಲಕ್ಷ್ಮೀ ನಾಶಿವಂತ ।
ಜ್ಯಾಚೆ ದ್ವಾರೀ ಅಸೆ ತಿಷ್ಠತ । ಮೋಕ್ಷಲಕ್ಷ್ಮೀ ॥೨೭॥
ಸ್ವರ್ಗಲೋಕ ಇಂದ್ರ ಸಂಪತೀ । ಹೇ ಕಾಳಾಂತರೀ ವಿಟಂಬತೀ ।
ಸದ್ಗುರುಕೃಪೇಚೀ ಪ್ರಾಪ್ತೀ । ಕಾಳಾಂತರೀ ಚಳೇನಾ ॥೨೮॥
ಹರೀಹರ ಬ್ರಹ್ಮಾದಿಕ । ನಾಶ ಪಾವತೀ ಸಕಳಿಕ ।
ಸರ್ವದಾ ಅವಿನಾಶ ಯೇಕ। ಸದ್ಗುರು ಪದ ॥೨೯॥
ತಯಾಸೀ ಉಪಮಾ ಕಾಯ ದ್ಯಾವೀ । ನಾಶಿವಂತ ಸೃಷ್ಟೀ ಆಘವೀ ।
ಪಂಚಭೂತಿಕ ಉಠಾಠೇವೀ । ನ ಚಲೇ ತೇಥೇ ॥೩೦॥
ಮ್ಹಣೌನಿ ಸದ್ಗುರೂ ವರ್ಣವೇನಾ । ಹೇ ಗೇ ಹೇಚಿ ಮಾಝೀ ವರ್ಣನಾ ।
ಅಂತರಸ್ಥಿತೀಚಿಯಾ ಖುಣಾ । ಅಂತರ್ನಿಷ್ಠ ಜಾಣತೀ ॥೩೧॥

ಇತಿ ಶ್ರೀದಾಸಬೋಧೆ ಗುರುಶಿಷ್ಯಸಂವಾದೇ
ಪ್ರಥಮ ಅಧ್ಯಾಯೇ ಸದ್ಗುರು ಸ್ತವನನಾಮ ಸಮಾಸ ಚವಥಾ ॥

● ●

**ಪೃಥ್ವಿ ವ ಅದರ ನ್ಯೂನತೆ:**– ಪೃಥ್ವಿ (ಭೂಮಿ)ಯಂತೆ ನಿಶ್ಚಲ, ನಿರ್ಭಯ ಗಂಭೀರನಾಗಿರುವನೆಂದು ನಾವು ಸದ್ಗುರುವಿಗೆ ಅನ್ನುವದೂ ಸಹ ಸರಿಯಾಗಲಾರದು. ಕಲ್ಪಾಂತ್ಯದ ಸಮಯದಲ್ಲಿ ಪೃಥ್ವಿಯು ನೀರಿನಲ್ಲಿ ಲಯವಾಗುವದು, ಆದರೆ ಸದ್ಗುರುವು ಭಂಗರಹಿತ, ಶಾಶ್ವತನಾಗಿರುವದರಿಂದ ಇದೂ ಸರಿಯಲ್ಲ. (೨೦). **ಸೂರ್ಯ ಹಾಗೂ ಶೇಷ (ನಾಗ) ಇವುಗಳ ನ್ಯೂನತೆ:**- ಸದ್ಗುರುವು ಸೂರ್ಯನಂತೆ ಇರುವನೆನ್ನುವ ಉಪಮೆಯೂ ಸಹ ಸರಿಯಲ್ಲ, ಸೂರ್ಯಪ್ರಕಾಶವೆಷ್ಟು? ಶಾಸ್ತ್ರದಲ್ಲಿ ಸೂರ್ಯ ಪ್ರಕಾಶಕ್ಕೆ ಇಷ್ಟೇ ಅಳತೆ ಇದೆ ಎಂದು ಹೇಳಲಾಗಿದೆ. ಸದ್ಗುರುವು ಅಮರ್ಯಾದಿತವಾಗಿರುವನು. (೨೧) ಸದ್ಗುರುವಿನ ಜ್ಞಾನದ ಪ್ರಕಾಶಕ್ಕೆ ಅಳತೆಯೆಂಬುದೇ ಇರುವದಿಲ್ಲ. ಇವನು ಅನಂತನಿರುವದರಿಂದ ಈ ಉಪಮೆ ಯೋಗ್ಯವಲ್ಲ. ಇನ್ನು ಶೇಷನನ್ನು ಹೋಲಿಸುವದಾದರೆ ಅವನಂತೂ ಪೃಥ್ವಿಯ ಭಾರವನ್ನು ಹೊತ್ತಿದ್ದಾನೆ. ಇದೂ ಸರಿಯಲ್ಲ. (೨೨) **ನೀರು ಹಾಗೂ ಅದರ ನ್ಯೂನತೆ** :- ಸದ್ಗುರುವಿಗೆ ನೀರಿನ ದೃಷ್ಟಾಂತ ಕೊಡುವದು ಸರಿದೋರುವದಿಲ್ಲ. ಯಾಕೆಂದರೆ ನೀರು ಚಂಚಲವಿದ್ದು ಕಾಲಾಂತರದಲ್ಲಿ ಆಟ್ಟಿಸಿ ಹೋಗುತ್ತದೆ. ಆದೇ ಸದ್ಗುರುವಿನ ಸ್ವರೂಪ ಬಹಳ ನಿಶ್ಚಲವಿದೆ. ಇದಕ್ಕೆ ನಾಶವೇ ಇಲ್ಲವೆಂದ ಮೇಲೆ ಇದೂ ಸರಿಯಲ್ಲ. (೨೩) **ಅಮೃತ ಹಾಗೂ ಅದರ ನ್ಯೂನತೆ:**- ಗುರುದೇವ ಅಮೃತದಂತೆ ಇರುವನೆಂಬುದೂ ಸರಿಯಲ್ಲ. ಸ್ವರ್ಗದಲ್ಲಿರುವ ದೇವತೆಗಳು ನಿತ್ಯ ಅಮೃತ ಕುಡಿಯುವರಾದರೂ ಕೊನೆಗೆ ಮೃತ್ಯು ಮಾರ್ಗ ತಪ್ಪಿದ್ದಲ್ಲ, ಇವರು ಹಸರಿಗೆ ಮಾತ್ರ ಅಮರರೆಂದು ಕರೆಯಿಸಿಕೊಳ್ಳುವರು. ಆದರೆ ಸದ್ಗುರುವು ಯಾರ ಮೇಲೆ ಕೃಪೆ ಮಾಡುವನೋ ಅವರು ನಿಜವಾದ ಅರ್ಥದಲ್ಲಿ ಅಮರರಾಗುವರು. ಅಂದ ಮೇಲೆ ಈ ಉಪಮೆಯೂ ಸರಿಯಲ್ಲ. (೨೪). **ಕಲ್ಪತರು ಹಾಗೂ ಅದರ ನ್ಯೂನತೆ:**- ಗುರುವಿಗೆ ಕಲ್ಪತರುವಿನ ದೃಷ್ಟಾಂತವೂ ಸರಿ ಹೊಂದುವದಿಲ್ಲ. ಯಾಕೆಂದರೆ, ನಾವು ಕಲ್ಪನೆ ಮಾಡಿದಷ್ಟನ್ನೇ ಕಲ್ಪತರು ಕೊಡುತ್ತದೆ. ಮಾನವೀ ಕಲ್ಪನೆಗೆ ಮೀರಿ ಇರುವ ಸದ್ಗುರುವಿನ ಮುಂದೆ ಕಲ್ಪತರುವಿಗೆ ಮಹತ್ವವೇ ಇಲ್ಲ. ವಿಶೇಷವೆಂದರೆ ಕಲ್ಪನೆಯನ್ನು ದಾಟಿ ಸದ್ಗುರುವಿನೆಡೆಗೆ ಹೋಗಬೇಕಾಗುತ್ತದೆ. ಎಂದ ಮೇಲೆ ಈ ದೃಷ್ಟಾಂತವೂ ಸರಿಯಲ್ಲ. (೨೫) **ಚಿಂತಾಮಣಿ ಮತ್ತು ಅದರ ನ್ಯೂನತೆ:**- ಸದ್ಗುರುವಿಗೆ ಚಿಂತಾಮಣಿಯ ಉಪಮೆಯೂ ಸರಿ ಹೊಂದುವದಿಲ್ಲ. ಯಾರ ಮನದಲ್ಲಿ ಚಿಂತೆ ಇರುವದೋ ಅವರಿಗೆ ಮಾತ್ರ ಚಿಂತಾಮಣಿಯ ಮಹತ್ವವು. ಆದರೆ ಗುರುವು ಶಿಷ್ಯನ ಮನದಲ್ಲಿ ಚಿಂತೆಯೇ ಇಲ್ಲದಂತೆ ಮಾಡುವವನಾಗಿದ್ದಾನೆ. ಮತ್ತು ಗುರುವಿಗೆ ಏನೂ ಇಚ್ಛೆಯೇ ಇರುವದಿಲ್ಲ. ಅಂದ ಮೇಲೆ ಚಿಂತೆ ಎಂಬುದು ಇರುವದೇ ಇಲ್ಲ. ಮತ್ತು ಇಚ್ಛಾತೀತನಾದ ಇವನು ಕಾಮಧೇನುವಿನ ಹಾಲನ್ನು ಕರೆಯುವ ಕಾಮನೆಯುಳ್ಳವನೆಂದೂ ಆಗಲಾರನು. ಆದುದರಿಂದ ಈ ಉಪಮೆ ಸರಿಯಲ್ಲ.(೨೬). **ಶ್ರೀಮಂತ ಮತ್ತು ಅವನ ನ್ಯೂನತೆ:**–ಸದ್ಗುರುವಿಗೆ ಶ್ರೀಮಂತ ಧನವಂತ ಎಂದು ಅನ್ನಲು ಬರಲಾರದು. ಜಗತ್ತಿನ ಸಂಪತ್ತೆಲ್ಲ ನಶ್ವರವಾದವುಗಳು. ಅದೇ ಸದ್ಗುರುವಿನ ಮನೆಯ ಬಾಗಿಲಿಗೆ ಅವಿನಾಶಿಯಾದ ಮೋಕ್ಷ ಲಕ್ಷ್ಮಿಯೇ ಕಾಯ್ದುಕೊಂಡು ನಿಂತಿರುವಳು. (೨೭) ಸ್ವರ್ಗ ಲೋಕ ಇಂದ್ರಪದ ಮತ್ತು ಅವನ ಸಂಪತ್ತು ಇವೆಲ್ಲ ಕಾಲಾಂತರದಿಂದ ನಾಶವಾಗುವಂಥವು. ಸದ್ಗುರುವಿನ ಕೃಪೆ ಪ್ರಾಪ್ತವಾಯಿತೆಂದರೆ ಅದು ಯಾವ ಕಾಲದಲ್ಲಿಯೂ ನಾಶವಾಗುವದಿಲ್ಲ. ಆದುದರಿಂದ ಈ ದೃಷ್ಟಾಂತವು ಸರಿಯಲ್ಲ (೨೮) **ವಿನಾಶ ಹೊಂದುವ ವಿಶ್ವದ ನ್ಯೂನತೆ:**- ಬ್ರಹ್ಮ, ವಿಷ್ಣು, ಶಂಕರ ಇವರಿಗೆಲ್ಲ ನಾಶವಿದೆ. ಆದರೆ ಒಬ್ಬನೇ ಒಬ್ಬನಾದ ಸದ್ಗುರುವಿನ ಸ್ಥಾನವು ಮಾತ್ರ ಯಾವಾಗಲೂ ಅವಿನಾಶಿಯಾಗಿದೆ. (೨೯) ಒಟ್ಟಿನ ಮೇಲೆ ಸೃಷ್ಟಿಯೆಲ್ಲವೂ ನಶ್ವರವಿರುವದರಿಂದ ದೃಶ್ಯ ವಿಶ್ವದಲ್ಲಿಯ ಯಾವುದೇ ವಸ್ತುವಿನ ದೃಷ್ಟಾಂತವು ಶಾಶ್ವತ ಸ್ವರೂಪದ ಸದ್ಗುರುವಿಗೆ ಹೋಲಿಸಿ ಹೇಳಲು ಬರುವದಿಲ್ಲ. ಪಂಚಮಹಾಭೂತಗಳ ಗೊಂದಲದ ಆಟವು ಸದ್ಗುರು ಸ್ವರೂಪದಲ್ಲಿ ಇರುವದಿಲ್ಲ. ಮತ್ತು ನಡೆಯುವದಿಲ್ಲ.(೩೦) **ವರ್ಣನೆ ಮಾಡಲು ಬರುವದಿಲ್ಲ. ಇದೇ ಅವನ ವರ್ಣನೆಯು:**- ಈ ಎಲ್ಲ ಕಾರಣಗಳಿಂದ ಕಂಡು ಬರುವದೆಂದರೆ, ವರ್ಣನೆ ಮಾಡುವ ಪ್ರಯತ್ನ ಮಾಡಿಯೂ ಸಾಧ್ಯವಾಗಲಿಲ್ಲವೆಂಬುದೇ ಅವನ ವರ್ಣನೆಯೆಂದು ತಿಳಿಯಬೇಕು. ಸದ್ಗುರು ಸ್ವರೂಪದ ಈ ಅನುಭವವು ಒಳಗಿನ ಅವಸ್ಥೆ ಇರುತ್ತದೆ. ಯಾರು ಅಂತರ್ನಿಷ್ಠರಿರುವರೋ ಅಂಥವರು ಆ ಅಂತರ್ನಿಷ್ಠನ ಅಂತಃಸ್ಥಿತಿಯ ಭಾವವನ್ನು ತಿಳಿದುಕೊಳ್ಳಲು ಸಾಧ್ಯವಾಗುವದು. ಈ ಸಮಾಸದಲ್ಲಿ ಸದ್ಗುರುವಿನ ವಿಷಯವಾಗಿ ನಾನು ಈ ಸಮಾಸದಲ್ಲಿ ಹೇಳಿದ್ದೆಲ್ಲವೂ ಮೇಲೆ ಕಾಣಿಸಿದ ಲಕ್ಷಣಗಳುಳ್ಳ ಅಂತರ್ನಿಷ್ಠನಿಗೆ ಮಾತ್ರ ತಿಳಿಯುವದು. (೩೧).

ಇತಿ ಶ್ರೀ ರಾಮದಾಸ ಬೋಧದ ಗುರುಶಿಷ್ಯರ ಸಂವಾದದಲ್ಲಿಯ
"ಸದ್ಗುರು ಸ್ತವನ" ಎಂಬ ಹೆಸರುಳ್ಳ ನಾಲ್ಕನೆಯ ಸಮಾಸವು ಮುಗಿದುವು.

**ಪಾಚವಾ ಸಮಾಸ : ಸಂತ ಸ್ತವನ**

॥ಶ್ರೀರಾಮ॥ ಆತಾ ವಂದೀನ ಸಜ್ಜನ । ಜೆ ಪರಮಾರ್ಥಾಚೇ ಅಧಿಷ್ಠಾನ ।
ಜಯಾಚೆನಿ ಗುಹ್ಯಜ್ಞಾನ । ಪ್ರಗಟೆ ಜನೀ ॥೧॥
ಜೆ ವಸ್ತು ಪರಮ ದುಲ್ಲಭ । ಜಯೆಚಾ ಅಲಭ್ಯಲಾಭ ।
ತೇ ಚಿ ಹೋಯೆ ಸುಲ್ಲಭ । ಸಂತಸಂಗೇಕರೂನೀ ॥೨॥
ವಸ್ತು ಪ್ರಗಟ ಚಿ ಅಸೆ । ಪಾಹಾತಾ ಕೋಣಾಸೀ ಚ ನ ದಿಸೆ ।
ನಾನಾ ಸಾಧನೀ ಸಾಯಾಸೇ । ನ ಪಡೆ ಠಾಈ ॥೩॥

# ಸಮಾಸ ೫. ಸಂತರ ಸ್ತವನ (ನುಡಿ ೨೬)

ವಿಜ್ಞಾನ ಪ್ರಧಾನವಾದ ಸಂಸ್ಕೃತಿಯಲ್ಲಿ ವಿಶ್ವದ ಜ್ಞಾನ ಮಾಡಿಕೊಳ್ಳುವ ಮತ್ತು ಮಾಡಿಕೊಡುವಂಥ ವಿಜ್ಞಾನ ಪಂಡಿತ ಅಥವಾ ಶಾಸ್ತ್ರಜ್ಞರಿಗೆ ಸಮಾಜವು ಆದರ್ಶ ಪುರುಷರೆಂದು ತಿಳಿಯುವದು. ಹಾಗೆಯೇ ಆಧ್ಯಾತ್ಮ ಪ್ರಧಾನ ಸಂಸ್ಕೃತಿಯಲ್ಲಿ ಅದೃಶ್ಯವಾಗಿರುವ ಆತ್ಮ ಸ್ವರೂಪದ ಜ್ಞಾನ ಮಾಡಿಕೊಳ್ಳುವ ಮತ್ತು ಮಾಡಿ ಕೊಡುವಂಥ ಬ್ರಹ್ಮಜ್ಞಾನಿ ಪುರುಷ ಅಥವಾ ಸಂತ (ಶರಣರ)ರಿಗೆ ಸಮಾಜದಲ್ಲಿಯ ಆದರ್ಶ ಪುರುಷರೆಂದು ತಿಳಿ ಯುವರು. ಆತ್ಮಜ್ಞಾನಿಯಾಗಿರುವ ಸಂತ (ಶರಣ)ರು ಮಾತ್ರ ಶ್ರೀ ಸಮರ್ಥರಿಗೆ ಆದರ್ಶ ಪುರುಷರಾಗಿರುವರು. ಸರ್ವೆ ಸಾಮಾನ್ಯ ಮಾನವನು "ನಾನು ದೇಹವೇ ಆಗಿರುವೆನು" ಈ ತಿಳುವಳಿಕೆಯ ಮೇಲೆ ಆರೂಢನಾಗಿ ಜೀವನ ಸಾಗಿಸುವನು. ಇವನ ಅನುಭವ ಕ್ಷೇತ್ರವು ದೃಶ್ಯ ಜಗತ್ತಿಗೆ ಮಾತ್ರ ಸೀಮಿತವಾಗಿರುತ್ತದೆ, ಯಾಕೆಂದರ ಇವನು ಸ್ವಾರ್ಥಿಯಾಗಿರುವನು. ಮತ್ತು ವಾಸನಾ ತೃಪ್ತಿಯ ಬೆನ್ನು ಹತ್ತಿರುವನು. ಆದರೆ ಆತ್ಮಜ್ಞಾನಿಯಾದವನು "ನಾನು ಆತ್ಮನೇ ಆಗಿರುವೆನು" ಈ ಭೂಮಿಕೆಯ ಮೇಲೆ ಆರೂಢನಾಗಿ ಜೀವನ ನಡೆಸುವನು. ಇವರ ಅನುಭವದ ಕ್ಷೇತ್ರವು ದೃಶ್ಯದ ಅಥವಾ ಸ್ಥಲಕಾಲದ ಸೀಮೆಯನ್ನು ಮೀರಿ ಅನಂತಸಂತೆ ವಿಶಾಲವಿರುತ್ತದೆ. ಅಂತೆಯೇ ಇವರಿಗೆ"ಮಹಾತ್ಮಾ" ಅನ್ನುವರು. ಇವರು ಜ್ಞಾನಾಗ್ನಿಯಲ್ಲಿ ತಮ್ಮ ಅಹಂಕಾರದ ಆಹುತಿ ಕೊಡುವಂಥ ಮಹಾತ್ಮರು. ಅತ್ಯಂತ ನಿಃಸ್ವಾರ್ಥಿ ಇರುವರು. ವಾಸನೆಯನ್ನೇ ನಿರ್ಮೂಲಮಾಡಿರುವದರಿಂದ ಇವರು ಪೂರ್ಣ ಸಮಾಧಾನ ವೃತ್ತಿಯವರಾಗಿರುವರು. ಇವರ ಶಾಂತ ವೃತ್ತಿಯು ಸದಾಕಾಲವೂ ಒಂದೇ ರೀತಿಯಲ್ಲಿ ಇರುತ್ತದೆ. ಉದ್ದೇಶರಹಿತವಾದ, ಇಚ್ಛಾರಹಿತವಾದ, ಸರ್ವಉಪಕಾರದಿಂದ ತುಂಬಿದ ಸಂತರ ಜೀವನವು ಸದಾ ಕಾಲದಲ್ಲಿ ಶುಭಮಂಗಲ ಅಭಿಜಾತ ಉಚ್ಚ ವೃತ್ತಿಯ ಸಾಕಾರ ರೂಪವಿರುವದು. ಮಾನವ ಜೀವನದಲ್ಲಿ ಇದು ಅತಿ ಶ್ರೇಷ್ಠವಾದದ್ದು. ಸಂತ ಶರಣರ ದರ್ಶನವಾಗುವಿಕೆ ಹಾಗೂ ಅವರ ನಿಕಟ ಸಹವಾಸದ ಲಾಭ ಹೊಂದುವಿಕೆ ಇವು ಭಾಗ್ಯಮಯ ಪ್ರಸಂಗಗಳೆಂದು ಹೇಳಬಹುದು. ಅತ್ಯಂತ ಸೂಕ್ಷ್ಮ, ಅದೃಶ್ಯ, ಹಾಗೂ ಶಾಶ್ವತವಾದ ಆತ್ಮವಸ್ತುವಿನ ಅನುಭವ ಹೊಂದುವ ಯೋಗ್ಯತೆಯು ಬರಬೇಕಾದರೆ ಅಂಥವರು ಸಂತರ, ಶರಣರ ಸಹವಾಸ ಮಾಡಿದಾಗ ಅವರು ಮುಕ್ತಹಸ್ತದಿಂದ ಕೊಡುವರು. ಇದು ಅವರ ನಿಜ ವಾದ ಕಾರ್ಯವೇ ಆಗಿದೆ, ಆತ್ಮ ಸಾಕ್ಷಾತ್ಕಾರ ಹೊಂದುವ ಯುಕ್ತಿಯ ಮಾರ್ಗ ಸಿಗುವದೇ ಮುಖ್ಯವಾದ ಸಂತರ ಕೃಪೆಯಾಗಿದೆ. ಆತ್ಮ ಸಾಕ್ಷಾತ್ಕಾರ ಪಡೆಯುವ ಮುಕ್ತಿತಿಳಿಯುವದೇ ನಿಜವಾದ ಸಂತರ ಕೃಪೆ ಎನ್ನಬೇಕು. ಇಂಥ ಸಂತರ ವರ್ಣನೆಯನ್ನು ಶ್ರೀ ಸಮರ್ಥರು ಇಲ್ಲಿ ಮಾಡಿದ್ದಾರೆ,

## ಸಮಾಸ ೫. ಸಂತ ಮತ್ತು ಸಂತರ ಸಹವಾಸ ಏನು ಮಾಡುವದು ?

ಪರಮಾರ್ಥಕ್ಕೆ ಆಧಾರವಾಗಿರುವ ಸಜ್ಜನರಿಗೆ ಅಂದರೆ ಸಂತ ಶರಣರಿಗೆ ನಾನು ಈಗ ನಮಸ್ಕರಿಸುವೆನು, ತಮ್ಮ ಸೂಕ್ಷ್ಮವಾದ ಆತ್ಮ ಸ್ವರೂಪದ ಜ್ಞಾನವು ಗುಪ್ತವಿರುವದು. ಈ ಗುಹ್ಯ ತಮ ಸ್ವರೂಪದ ವಿಚಾರವು ಸಂತರ ಇರುವಿಕೆಯಿಂದಲೇ ಜನರಲ್ಲಿ ಪ್ರಕಟವಾಗುವದು. (೧) ಪರಮಾತ್ಮ ವಸ್ತು ಅತಿಶಯ ದುರ್ಲಭ್ಯವಿದೆ. ಇದನ್ನು ದೊರಕಿಸುವದು ಮತ್ತು ತಿಳಿಯುವದೇ ನಿಜವಾದ ಲಾಭವು. ಈ ದುರ್ಲಭ ವಸ್ತು ಸಂತರ ಸಾನಿಧ್ಯದಿಂದ ಮಾತ್ರ ಸುಲಭವಾಗಿ ಲಭಿಸುವದು, ತಿಳಿಯುವದು. (೨) **ಪರಮಾತ್ಮನೆಷ್ಟು ಸೂಕ್ಷ್ಮನಿರುವನೆಂಬುದರ ವರ್ಣನೆಯು**:– ನಿಜವಾಗಿಯೂ ಹೇಳುವುದಾದರೆ ಆತ್ಮವಸ್ತುವು ತೀರ ಸ್ಪಷ್ಟವಿದೆ. ಆದರೆ ದೇಹ ಬುದ್ಧಿಯಿಂದ ನೋಡ ಹೋದರೆ ಇದು ಯಾರಿಗೂ ಕಾಣಿಸುವದಿಲ್ಲ, ಇದು ತಿಳಿಯಬೇಕೆಂದು ನಾನಾ ಪ್ರಕಾರದ ಸಾಧನಗಳಿಂದ ಕಷ್ಟಪಟ್ಟರೂ ಅನು ಭವಕ್ಕೆ ಬರುವದಿಲ್ಲ. (೩)

ಜೇಥೇ ಪರೀಕ್ಷವಂತ ಠಕಲೆ । ನಾಂತರೀ ಡೊಳಸ ಚಿ ಅಂಧ ಜಾಲೆ ।<br>
ಸಾಹಾತ ಅಸತಾ ಚಿ ಚುಕಲೆ । ನಿಜವಸ್ತೂಸೀ ॥೪॥

ಜೇ ದೀಪಾಚೆನಿ ದಿಸೇನಾ । ನಾನಾ ಪ್ರಕಾಶೇ ಗವಸೇನಾ ।<br>
ನೇತ್ರಾಂಜನೇ ಹಿ ವಸೇನಾ । ದೃಷ್ಟೀ ಪುಢೇ ॥೫॥

ಸೋಳಾ ಕಳೀ ಪೂರ್ಣ ಶಶೀ । ದಾಖಊ ಸಕೇನಾ ವಸ್ತೂಸೀ ।<br>
ತೀವ್ರ ಆದಿತ್ಯ ಕಳಾರಾಸೀ । ತೋ ಹಿ ದಾಖವೀನಾ ॥೬॥

ಜಯಾ ಸೂರ್ಯಾಚೇನಿ ಪ್ರಕಾಶೇ । ಊರ್ಣ ತಂತು ತೋಹಿದಿಸೆ ।<br>
ನಾನಾ ಸೂಕ್ಷ್ಮ ಪದಾರ್ಥ ಭಾಸೆ । ಅಣುರೇಣಾದಿಕ ॥೭॥

ಚಿರಲೇ ವಾಳಾಗ್ರ ತೇಹಿ ಪ್ರಕಾಸೀ । ಪರೀ ತೊ ದಾಖವೀನಾ ವಸ್ತೂಸೀ ।<br>
ತೇ ಜಯಾಚೆನಿ ಸಾಧಕಾಸೀ । ಪ್ರಾಪ್ತ ಹೋಯೆ ॥೮॥

ಜೇಥೇ ಆಕ್ಷೇಪ ಆಟಲೆ । ಜೇಥ ಪ್ರೇತ್ನ ಪ್ರಸ್ತಾವಲೇ ।<br>
ಜೇಥೇ ತರ್ಕ ಮಂದಾವಲೇ । ತರ್ಕಿತಾ ನಿಜವಸ್ತೂಸೀ ॥೯॥

ವಳೇ ವಿವೇಕಾಚೀ ವೇಗಡೀ । ಪಡೇ ಶಬ್ದಾಚೀ ಬೋಬಡೀ ।<br>
ಜೇಥೇ ಮನಾಚೀ ತಾಂಠಡೀ । ಕಾಮಾ ನಯೆ ॥೧೦॥

ಜೋ ಬೋಲಕೇಪಣೀ ವಿಶೇಷ । ಸಹಸ್ರ ಮುಖಾಂಚಾ ಜೋ ಶೇಷ ।<br>
ತೋ ಹಿ ಸಿಣಲಾ ನಿಃಶೇಷ । ವಸ್ತು ನ ಸಂಗವೇ ॥೧೧॥

ವೇದೇ ಪ್ರಕಾಶಿಲೇ ಸರ್ವ ಹಿ । ವೇದವಿರಹಿತ ಕಾಹೀನಹೀ ।<br>
ತೋ ವೇದ ಕೊಣಾಸಹೀ । ದಾಖಊ ಸಕೇನಾ ॥೧೨॥

ತೇ ಚಿ ವಸ್ತು ಸಂತ ಸಂಗೇ । ಸ್ವಾನುಭವೇ ಕಳೋಲಾಗೆ ।<br>
ತ್ಯಾಚಾ ಮಹಿಮಾ ವಚನೀ ಸಾಂಗೇ । ಐಸಾ ಕವಣು ॥೧೩॥

ವಿಚಿತ್ರ ಕಳಾಯೆ ಮಾಯೇಚೀ । ಪರೀ ವೊಳಖೀ ನ ಸಂಗವೇ ವಸ್ತೂಚೀ ।<br>
ಮಾಯಾತೀತಾ ಅನಂತಾಚೀ । ಸಂತ ಸೋಯೆ ಸಾಂಗತೀ ॥೧೪॥

ವಸ್ತೂಸೀ ವರ್ಣಿಲೆ ನವಚೆ । ತೇಚಿ ಸ್ವರೂಪ ಸಂತಾಚೇ ।<br>
ಯಾ ಕಾರಣೇ ವಚನಾಚೇ । ಕಾರ್ಯ ನಾಹೀ ॥೧೫॥

ಸಂತ ಆನಂದಾಚೇ ಸ್ಥಳ । ಸಂತ ಸುಖಚಿ ಕೇವಳ ।<br>
ನಾನಾ ಸಂತೋಷಾಚೇ ಮೂಳ । ತೇ ಹೆ ಸಂತ ॥೧೬॥

ಸಂತ ವಿಶ್ರಾಂತೀಚೀ ವಿಶ್ರಾಂತೀ । ಸಂತ ತೃಪ್ತೀಚೀ ನಿಜತೃಪ್ತೀ ।<br>
ನಾಂತರೀ ಭಕ್ತೀಚೀ ಫಳಶ್ರುತೀ । ತೇ ಹೆ ಸಂತ ॥೧೭॥

ಅನೇಕ ವಸ್ತುಗಳನ್ನು ಪರೀಕ್ಷಿಸಿ ಅವುಗಳ ಗುರುತನ್ನು ತಿಳಿದುಕೊಳ್ಳುವಂಥಹ ಮರ್ಮಜ್ಞನೂ ಸಹ ಈ ಆತ್ಮ ವಸ್ತುವನ್ನು ಗುರುತಿಸುವಲ್ಲಿ ಮೋಸ ಹೋಗುತ್ತಾನೆ. ಕಣ್ಣುಗಳಿದ್ದೂ ಸಹ ಆತ್ಮ ವಸ್ತುವನ್ನು ನೋಡಿ ತಿಳಿದುಕೊಳ್ಳಲು ಹೋದರೆ ಅಂಧತ್ವದ ಅನುಭವ ಬರುವದು. ನೋಡುವ ಪ್ರಯತ್ನ ಮಾಡಿಯೂ ಸಹ ತನ್ನಲ್ಲಿಯೇ ಇರುವ ಈ ಆತ್ಮ ವಸ್ತುವನ್ನು ನೋಡಲು ಸಮರ್ಥನಾಗುವದಿಲ್ಲ. (೪) ದೀಪದ ಪ್ರಕಾಶದಿಂದ ಈ ವಸ್ತು ಕಾಣುವದಿಲ್ಲ. ಅನೇಕ ಪ್ರಕಾರದ ಇತರ ಪ್ರಕಾಶದ ಸಾಧನಗಳಿಂದ ಸಹ ಇದು ಕಾಣುವದಿಲ್ಲ. ಕಣ್ಣಿಗೆ ಅಂಜನ ಹಚ್ಚಿ ಹುಡುಕಿದರೂ ಸಹ ಇದು ಕಣ್ಣ ಮುಂದೆ ಬರುವದಿಲ್ಲ. (೫) ಹದಿನಾರು ಕಲೆಗಳಿಂದ ವ್ಯಾಪ್ತನಾದ ಪೌರ್ಣಿಮೆಯ ಪೂರ್ಣಚಂದ್ರ ಪ್ರಕಾಶವೂ ಸಹ ಈ ವಸ್ತುವನ್ನು ತೋರಿಸಲಾರದು. ಇಷ್ಟೇ ಏಕೆ? ಪ್ರಕಾಶದ ಎಲ್ಲ ಕಲೆಗಳಿಂದ ಪರಿಪೂರ್ಣನಾದ ತೇಜೋಮಯ ಸೂರ್ಯನೂ ಸಹ ಈ ವಸ್ತುವನ್ನು ತೋರಿಸಲಾರನು. (೬) ಜೇಡ ಹುಳದ ಮೈಯಿಂದ ಹೊರಡುವ ಅತ್ಯಂತ ಸೂಕ್ಷ್ಮ ಎಳೆಯೂ ಸಹ ಸೂರ್ಯಪ್ರಕಾಶದಲ್ಲಿ ಕಾಣುವದು, ತೀರಾ ಸಣ್ಣ ಕಣ, ಹೂವಿನಲ್ಲಿಯ ಪರಾಗದ ಸೂಕ್ಷ್ಮ ಧೂಳು ಸಹ ಸೂರ್ಯಪ್ರಕಾಶದಿಂದ ಕಾಣುವದು. (೭) ಕೂದಲನ್ನು ಸೀಳಿ ಭಾಗ ಮಾಡಿದರೆ ಅದರ ಎಳೆಗಳ ತುದಿಗಳೂ ಸಹ ಸೂರ್ಯಪ್ರಕಾಶದಿಂದ ಕಾಣುವವು. ಇವೆಲ್ಲ ನಿಜವಿದ್ದರೂ ಸಹ ಈ ಸೂರ್ಯಪ್ರಕಾಶದಿಂದ ಮಾತ್ರ ಆತ್ಮವಸ್ತು ತೋರಿ ಬರುವದಿಲ್ಲ, ಕಾಣುವದಿಲ್ಲ. ಇಂಥ ಈ ಆತ್ಮವಸ್ತು ಸಂತರ, ಶರಣರ ಕೃಪಾ ಮಾತ್ರದಿಂದ ಸಾಧಕನಿಗೆ ಸುಲಭವಾಗಿ ಪ್ರಾಪ್ತವಾಗುವದು, (೮). ವಾಣಿ, ಮನ, ಬುದ್ಧಿ, ಇವುಗಳ ಶಕ್ತಿಯು ಆಚೆಗೆ ಆತ್ಮವಸ್ತು ಇರುವದು. ಆತ್ಮವಸ್ತುವು ಹೇಗಿರುವದೆಂದರೆ,ಇದರ ಮುಂದೆ ಪ್ರಶ್ನೆಗೆ ಅವಕಾಶವಿಲ್ಲದಾಗುವದು.ಪ್ರಯತ್ನ ವ್ಯರ್ಥಗೊಳ್ಳುವದು. ತರ್ಕಮಾಡಿ ತಿಳಿಯಹೋದರೆ ಆ ತರ್ಕವೇ ಮಂಕಾಗುವದು.(೯) ವಿವೇಕದಿಂದ ತಿಳಿಯಬೇಕೆಂದರೆ ವಿವೇಕವೇ ಸಂಕುಚಿತವಾಗುವದು, ಶಬ್ದಗಳು ತೊದಲುವವು. ಮತ್ತು ಚಂಚಲ ಮನಸ್ಸಿನ ಪ್ರಯತ್ನ (ಚಪಲತ್ವ) ಉಪಯೋಗ ಬೀಳುವದಿಲ್ಲ, (೧೦). ಪುರಾಣಗಳಲ್ಲಿ ವರ್ಣಿಸಿದಂತೆ ಸಾವಿರ ನಾಲಿಗೆಯ ಆದಿಶೇಷನ ಎಲ್ಲ ನಾಲಿಗೆಗಳೂ ಮಾತನಾಡಬಲ್ಲಂಥವು. ಇವು ಕೂಡ ಈ ಆತ್ಮವಸ್ತುವನ್ನು ವರ್ಣನೆ ಮಾಡಿಮಾಡಿ ದಣಿದು ಸುಮ್ಮನಾದವು.(೧೧)ಜಗದೊಳಗಿನ ಸರ್ವಜ್ಞಾನವನ್ನು ವೇದಗಳು ಪ್ರಕಾಶಕ್ಕೆ ತಂದವು ಎಂದು ಜ್ಞಾನಿಗಳೇ ಹೇಳುವರು. ವೇದದಲ್ಲಿ ಇಲ್ಲದಂಥದು ಯಾವದೂ ಇಲ್ಲ. ಇಂಥ ಸರ್ವಜ್ಞ ವೇದಗಳೂ ಸಹ ಆತ್ಮವಸ್ತುವನ್ನು ತೋರಿಸಲಾರವು. (೧೨). **ಸತ್ಸಂಗದಿಂದ ಸ್ವಾನುಭವವಾಗಿ ಅದರಿಂದ ಈ ವಸ್ತುವು ಅನುಭವಕ್ಕೆ ಬರುವದು**:– ಸಂತರ ಸಹವಾಸದಿಂದ ಸಾಧಕರಿಗೆ ಸ್ವಸ್ವರೂಪದ ಅನುಭವ ಬರುತ್ತದೆ. ಮತ್ತು ಆತ್ಮ ವಸ್ತುವು ಹೇಗಿರುತ್ತದೆ ಎಂಬುದು ತಿಳಿಯ ಹತ್ತುತ್ತದೆ. ಇಂಥ ಸತ್ಸಂಗದ ಮಹಿಮೆಯನ್ನು ಶಬ್ದಗಳಿಂದ ಹೇಳುವ ಮನುಷ್ಯನು ಜಗತ್ತಿನಲ್ಲಿಯೇ ಇಲ್ಲ. (೧೩). ಮಾಯೆಯಲ್ಲಿ ಅನೇಕ ಪ್ರಕಾರದ ವಿಚಿತ್ರ ಕಲೆ ಹಾಗೂ ಅನೇಕ ಪ್ರಕಾರದ ಶಕ್ತಿ ಇರುವದು, ಆದರೆ ಆತ್ಮ ವಸ್ತುವಿನ ಗುರುತನ್ನು ಮಾಡಿಕೊಡುವ ಕಲೆ ಅಥವಾ ಶಕ್ತಿ ಆ ಮಾಯೆಯಲ್ಲಿ ಇಲ್ಲ. ಮಾಯೆಯ ಆಚೆಗೆ ಇರುವ ಮಾಯಾರಹಿತನಾದ ಈ ಅನಂತ ವಸ್ತುವಿನ ಪ್ರಾಪ್ತಿಯು ವಿಷಯಕವಾದ ಸುಲಭ ಮಾರ್ಗವನ್ನು ಸಂತರು ಮಾತ್ರ ತಿಳಿಯಬಲ್ಲರು. (೧೪). **ಸಂತರ ಸಾಂಕೇತಿಕ ವರ್ಣನೆ**:– ಸಂತರು ಆತ್ಮಸ್ವರೂಪರೇ ಇರುವರು, ಆ ಆತ್ಮ ಸ್ವರೂಪದ ವರ್ಣನೆಯನ್ನು ಮಾಡಲಿಕ್ಕೆ ಬರುವದಿಲ್ಲ. ಯಾಕೆಂದರೆ ಶಬ್ದಗಳ ಕೆಲಸವೇ ಇಲ್ಲಿ ಇರುವದಿಲ್ಲ.(೧೫). ಇದೆಲ್ಲವೂ ನಿಜವಾಗಿದ್ದರೂಸಹ ಸಂತರು ಹೇಗಿರುವರೆಂಬುದನ್ನು ಮಾತ್ರ ಕೆಲವೊಂದು ಸಂಕೇತಗಳಿಂದ ವರ್ಣನೆ ಮಾಡಲಿಕ್ಕೆ ಬರುತ್ತದೆ. ಸಂತರು ಪರಮಾನಂದದ ಸ್ವರೂಪರು. ಎಲ್ಲ ತರಹದ ಪೂರ್ಣ ಸುಖ ಸಂತೋಷದ ಮೂಲವೇ ಆಗಿರುವರು. (೧೬). ಸಂತರೆಂದರೆ ಅಖಂಡ ವಿಶ್ರಾಂತಿ ಸ್ಥಾನರೂ, ನಿತ್ಯ ತೃಪ್ತರೂ ಆಗಿರುವರು. ಭಕ್ತಿಯ ಪರಮ ಫಲ ಸ್ವರೂಪರೆಂದರೆ ಸಂತರೇ ಆಗಿರುವರು.(೧೭.)

ಸಂತ ಧರ್ಮಾಚೇ ಧರ್ಮಕ್ಷೇತ್ರ । ಸಂತ ಸ್ವರೂಪಾಚೇ ಸತ್ಪಾತ್ರ ।
ನಾತರೀ ಪುಣ್ಯಾಚೀ ಪವಿತ್ರ । ಪುಣ್ಯಭೂಮೀ ॥೧೮॥
ಸಂತ ಸಮಾಧೀಚೇ ಮಂದಿರ । ಸಂತ ವಿವೇಕಾಚೇ ಭಾಂಡಾರ ।
ನಾತರೀ ಬೋಲಿಜೆ ಮಾಹೇರ । ಸಾಯೋಜ್ಯ ಮುಕ್ತೀಚೇ ॥೧೯॥
ಸಂತ ಸತ್ಯಾಚಾ ನಿಶ್ಚಯೋ । ಸಂತ ಸಾರ್ಥಕಾಚಾ ಜಯೋ ।
ಸಂತ ಪ್ರಾಪ್ತೀಚಾ ಸಮಯೋ । ಸಿದ್ಧರೂಪ ॥೨೦॥
ಮೋಕ್ಷ ಶ್ರಿಯಾ ಆಳಂಕೃತ । ಐಸೆ ಹೆ ಸಂತ ಶ್ರೀಮಂತ ।
ಜೀವ ದರಿದ್ರೀ ಅಸಂಖ್ಯಾತ । ನೃಪತೀ ಕೇಲೆ ॥೨೧॥
ಜೆ ಸಮರ್ಥಪಣೇ ಉದಾರ । ಜೆ ಕಾ ಅತ್ಯಂತ ದಾನಶೂರ ।
ತಯಾಂಚೇನಿ ಹಾ ಜ್ಞಾನವಿಚಾರ । ದಿಧಲಾ ನವಚೆ ॥೨೨॥
ಮಾಹಾರಾಜೆ ಚಕ್ರವರ್ತೀ । ಜಾಲೆ ಆಹೇತ ಪುಢೇ ಹೋತೀ ।
ಪರಂತು ಕೋಣೇ ಸಾಯೋಜ್ಯ ಮುಕ್ತೀ । ದೇಣಾರ ನಾಹೀ ॥೨೩॥
ಜೇ ತ್ರೈಲೋಕೀ ನಾಹೀ ದಾನ । ತೇ ಕರಿತೀ ಸಂತ ಸಜ್ಜನ ।
ತಯಾ ಸಂತಾಂಚೇ ಮಹಿಮಾನ । ಕಾಯ ಮ್ಹಣೌನೀ ವರ್ಣಾವೆ ॥೨೪॥
ಜೇ ತ್ರೈಲೋಕ್ಯಾಹೂನ ವೇಗಳೇ । ಜೇ ವೇದ ಶ್ರುತೀಸೀ ನಾಕಳೇ ।
ತೇಂ ಚಿ ಜಯಾಂಚೇನಿ ಮ್ರೋಳೆ । ಪರಬ್ರಹ್ಮ ಅಂತರೀ ॥೨೫॥
ಐಸೀ ಸಂತಾಂಚೀ ಮಹಿಮಾ । ಬೊಲಿಜೆ ತಿತುಕೀ ಉಣೀ ಉಪಮಾ ।
ಜಯಾಚೇನಿ ಮುಖ್ಯ ಪರಮಾತ್ಮಾ । ಪ್ರಗಟ ಹೋಯೆ ॥೨೬॥

ಇತಿ ಶ್ರೀದಾಸಬೋಧೆ ಗುರುಶಿಷ್ಯ ಸಂವಾದೇ
ಸಂತ ಸ್ತವನನಾಮ ಸಮಾಸ ಪಾಂಚವಾ ॥

ಸಂತರು ತೀರ್ಥಗಳಂತೆ ಧರ್ಮವನ್ನು ಜಾಗೃತಗೊಳಿಸುವರು. ಸಂತರ ಅಂತಃಕರಣವೆಂದರೆ, ಆತ್ಮ ಸ್ವರೂಪವನ್ನು ಇಡುವಂಥ ಉತ್ತಮ ಪಾತ್ರೆಯೆಂದು ಹೇಳಬಹುದು. ಸಂತರ ದೇಹವೆಂದರೆ ಪುಣ್ಯಸಂಚಯ ಮಾಡಿಡುವ ಪವಿತ್ರ ಸ್ಥಾನವಾಗಿದೆ. (೧೮) ಸಂತರ ದೇಹ ರೂಪಿ ಮಂದಿರದಲ್ಲಿ ಸಮಾಧಿ ರೂಪದ ದೇವತೆ ವಾಸ ಮಾಡಿರುವಳು. ಸಂತರ ಅಂತರಂಗವು ಉತ್ತಮ ವಿಚಾರಗಳಿಂದ ತುಂಬಿದ ದೊಡ್ಡ ಕಣಜವೇ ಆಗಿರುತ್ತದೆ. ಸಂತರ ಜೀವನವೆಂದರೆ ಸಾಯುಜ್ಯ ಮುಕ್ತಿಯ ವಿಶ್ರಾಂತಿ ಸ್ಥಾನವೇ ಆಗಿರುತ್ತದೆ. (೧೯). ಎಂಥ ಪ್ರಸಂಗ ಬಂದರೂ ಸಂತ ಶರಣರು ಸತ್ಯವನ್ನು ಎಷ್ಟೂ ಬಿಡಲಾರರು. ಸಂತರ ಚರಿತ್ರೆಯು ಸಫಲ ಜೀವನದ ದೃಶ್ಯ ರೂಪವೇ ಇರುವದು. ಸಂತರ ದರ್ಶನವೆಂದರೆ ಆತ್ಮವಸ್ತು ಪ್ರಾಪ್ತವಾಗುವ ಸುಯೋಗ ತಾನಾಗಿಯೇ ಒದಗಿ ಬಂದಿದೆ ಎಂದು ತಿಳಿಯ ಬೇಕು.(೨೦). **ಸಂತರು ಏನನ್ನು ಕೊಡುವರು:**–ಸಂತರು ದೊಡ್ಡ ಶ್ರೀಮಂತರಿರುವರು. ಮೋಕ್ಷರೂಪಿ ಸಂಪತ್ತಿನಿಂದ ಅವರು ಶ್ರೀಮಂತರಾಗಿರುವರು. ಅಸಂಖ್ಯ ದರಿದ್ರ ಜೀವರಿಗೆ ಈ ಮೋಕ್ಷಲಕ್ಷ್ಮಿಯನ್ನು ಕೊಟ್ಟು ಸಂತರು ಅವರನ್ನು ರಾಜರಂತೆ ವೈಭವಶಾಲಿಗಳನ್ನಾಗಿ ಮಾಡಿದ್ದಾರೆ, ಅಂದರೆ ಅನೇಕ ಅಜ್ಞಾನಿಗಳಿಗೆ ಅವರು ಆತ್ಮಜ್ಞಾನ ಸಂಪನ್ನರಾಗುವಂತೆ ಮಾಡಿದ್ದಾರೆ. (೨೧) ಸಂತರು ಬಹು ಶಕ್ತಿಯುಳ್ಳವರು. ತಮ್ಮ ಸಾಮರ್ಥ್ಯವನ್ನು ಎರಡನೆಯವರ ಹಿತಕ್ಕಾಗಿ ಬಹು ಉದಾರತೆಯಿಂದ ಉಪಯೋಗಿಸುವರು. ಸಂತರು ವಿಲಕ್ಷಣ ದಾನಶೂರರಾಗಿರುವರು. ಇಂಥ ಸತ್‌ಸಂತರಿಂದ ಆತ್ಮಜ್ಞಾನ ಸಿಗುವದೇ? ಅರ್ಥಾತ್ ಇಂಥ ಸಂತರಿಂದ ಆತ್ಮಜ್ಞಾನ ಸಿಕ್ಕೇ ತೀರುವದೆಂದು ಕೈಯೆತ್ತಿ ಹೇಳಬಹುದು. (೨೨). ಇವತ್ತಿನವರೆಗೆ ಜಗತ್ತಿನಲ್ಲಿ ಬಹುಜನ ರಾಜ, ಮಹಾರಾಜ, ಚಕ್ರವರ್ತಿರಾಜರು ಆಗಿಹೋದರು. ಮತ್ತು ಈಗಲೂ ಇರುತ್ತಾರೆ. ಮುಂದೆಯೂ ಇರಬಹುದು. ಆದರೆ ಇವರಲ್ಲಿಯ ಒಬ್ಬರಿಂದಲೂ ಸಹ ಸಾಯುಜ್ಯ ಮುಕ್ತಿಯನ್ನು ದೊರಕಿಸಿಕೊಡುವ ಶಕ್ತಿ ಇರುವದಿಲ್ಲ. (೨೩) **ಸಂತರ ಅಲೌಕಿಕ ದಾನ:**– ತ್ರೈಲೋಕ್ಯದಲ್ಲೆಲ್ಲಿಯೂ ಹುಡುಕಿದರೆ ಸಿಗಲಾರದಂಥ ಅಲೌಕಿಕವಾದ ದಾನವನ್ನು ಸಂತರು ಕೊಡುತ್ತಾರೆ. ಅಂದ ಮೇಲೆ ಇಂಥ ಸಂತ ಶರಣ ಸಾಧುಗಳನ್ನು ಯಾವ ಶಬ್ದಗಳಿಂದ ವರ್ಣನೆ ಮಾಡಿದರೂ ಕಡಿಮೆಯೇ ಸರಿ. (೨೪). ಯಾವ ಪರಬ್ರಹ್ಮವು ಈ ದೃಶ್ಯ ವಿಶ್ವದಿಂದ ಬೇರೆಯಾಗಿದೆಯೋ, ವೇದ ಮತ್ತು ಶ್ರುತಿಗಳು ಯಾರನ್ನು ತಿಳಿಯಲು ಮತ್ತು ತಿಳಿಯಪಡಿಸಲು ಅಸಮರ್ಥವಾದವೋ, ಅಂಥ ಪರಬ್ರಹ್ಮವು ಸಂತ ಸಾಧುಗಳ ಕೃಪೆಯಿಂದ ಮಾತ್ರ ಸಾಧಕರ ಅಂತಃಕರಣೆಯಲ್ಲಿ ಪ್ರಕಟವಾಗುವದು. (೨೫) ಹೀಗೆ ಸಂತರ ಮಹಿಮೆ ಇದೆ. ಇದನ್ನು ವರ್ಣಿಸಲು ಉಪಮೆಗಳೆಲ್ಲ ಸಾಲದಾಗುವವು. ಆದರೆ ಸಂತರ ಕೃಪೆಯಿಂದ ಮಾತ್ರ ಮುಖ್ಯವಾಗಿ ಪರಮಾತ್ಮನೇ ಪ್ರಕಟನಾಗುವನು. (೨೬).

ಇತಿ ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ
"ಸಂತ ಸ್ತವನ" ಎಂಬ ಹೆಸರಿನ ಐದನೆಯ ಸಮಾಸವು
ಮುಗಿದುದು.

● ●

## ಸಮಾಸ ೬. ಶ್ರೋತೃ ಸ್ತವನ. (ನುಡಿ ೨೩)

ಸಾಮಾನ್ಯರಾದ ಬಹುಜನ ಗ್ರಂಥಕರ್ತರ ಬಗ್ಗೆ ಇಲ್ಲಿ ಹೇಳುವದಿಲ್ಲ. ಆದರೆ ಯಾವನೊಬ್ಬ ಶ್ರೇಷ್ಠ ಗ್ರಂಥಕಾರನು ಒಂದು ಗ್ರಂಥ ಬರೆಯುವದಕ್ಕೆ ಪ್ರಾರಂಭಿಸುವಾಗ ಅವನ ಕಣ್ಣಿನ ಮುಂದೆ ಸ್ಪಷ್ಟವಾಗಿ ನಾಲ್ಕು ಮುಖ್ಯ ಮಾತುಗಳು ಇರುವವು. (೧) ಗ್ರಂಥದಲ್ಲಿ ಏನು ಹೇಳಬೇಕು? (೨) ಅದನ್ನು ಯಾಕೆ ಹೇಳಬೇಕು? (೩) ಅದನ್ನು ಯಾರಿಗೆ ಹೇಳಬೇಕು?(೪)ಮತ್ತು ಅದನ್ನುಹೇಗೆ ಹೇಳಬೇಕು? ಈ ಮಾತುಗಳನ್ನೇ ಈ ಕೆಳಗಿನಂತೆ ವಿವರಿಸ ಲಾಗಿದೆ. [೧] ಭಕ್ತಿಮಾರ್ಗ ಹೇಳುವದಕ್ಕಾಗಿ, ಭಕ್ತಿಯಿಂದ ನಿಶ್ಚಿತವಾಗಿಯೂ ಈಶ್ವರ ಪ್ರಾಪ್ತಿ ಆಗುವದೆಂಬು ದನ್ನು ಹೇಳುವದಕ್ಕಾಗಿಯೇ ಶ್ರೀ ಸಮರ್ಥರು ದಾಸಬೋಧ ಗ್ರಂಥವನ್ನು ಬರೆದರು. [೨] ಸಾಮಾನ್ಯ ಜನತೆಯ

ಲ್ಲಿಯ ಅಜ್ಞಾನ ದೂರಾಗಿ ಅವರಿಗೂ ಜ್ಞಾನ ಪ್ರಾಪ್ತವಾಗಲಿ, ಈ ಜ್ಞಾನದಿಂದ ಅವರು ತಮ್ಮ ಜೀವನದಲ್ಲಿ ನಿಜವಾದ ವಿಶ್ರಾಂತಿ ಅಥವಾ ಖರೇ ಸಮಾಧಾನ ಶಾಂತಿಯನ್ನು ಅನುಭವಿಸಲಿ ಎಂದೂ ಶ್ರೀ ಸಮರ್ಥರು ದಾಸಬೋಧವನ್ನು ಬರೆದರು. ಇದು ಮೇಲೆ ತೋರಿಬರುವ ಸ್ಪಷ್ಟ ಕಾರಣವು. "ದಾಸಬೋಧ" ಅಂದರೆ ದಾಸನಿಗೆ ಆದಂಥ ಜ್ಞಾನವು. ಶ್ರೀರಾಮಚಂದ್ರನೇ ಶ್ರೀ ಸಮರ್ಥರ ಸದ್ಗುರು ಆಗಿದ್ದನು. ಶ್ರೀ ರಾಮಚಂದ್ರನಿಂದಲೇ ಶ್ರೀ ಸಮರ್ಥರಿಗೆ ಯಾವ ಆತ್ಮಜ್ಞಾನವಾಯಿತೋ ಅದೇ ಈ ದಾಸಬೋಧವಾಗಿದೆ. ಆ ಮೇಲೆ ಶ್ರೀಸದ್ಗುರುವಿನ ಅಪ್ಪಣೆಯಂತೆ ಆ ಜ್ಞಾನವನ್ನು ಶ್ರೀ ಸಮರ್ಥರು ಗ್ರಂಥ ರೂಪದಿಂದ ಲೋಕದ ಜನರಿಗೆ ಹೇಳಿದರು, ಇದು ಅದೃಶ್ಯ ಕಾರಣವಿರುವದು, ಅರ್ಥಾತ್ "ದಾಸಬೋಧ"ವೆಂದರೆ ದಾಸನು ಮಾಡಿದ ಬೋಧ. ಅಥವಾ ಆತ್ಮಜ್ಞಾನವು. ಯಾರಿಗೆ ಭಗವಂತನ ದಾಸರಾಗಿದ್ದುಕೊಂಡು ಆತ್ಮಜ್ಞಾನ ಮಾಡಿಕೊಳ್ಳುವ ಇಚ್ಛೆ ಇದೆಯೋ ಅವರಿಗೆ ಸ್ಪಷ್ಟವಾಗಿ ನಿಶ್ಚಿತ ಮಾರ್ಗ ತೋರಿಸುವದಕ್ಕಾಗಿಯೇ ಶ್ರೀ ಸಮರ್ಥರು ಈ "ದಾಸಬೋಧ"ವನ್ನು ಹೇಳಿದರು, [೩] ಸತ್ಯ ಸಂಗತಿ ಎಂದರೆ, ಅಜ್ಞಾನಿ, ದೀನ, ದುಃಖಿ ಮತ್ತು ಪ್ರಾಪಂಚಿಕರಿಗಾಗಿಯೇ ದಾಸಬೋಧದ ಅವತಾರವಿರುವದು. ಆದರೆ, ಗ್ರಂಥವು ಒಮ್ಮೆ ಪ್ರಸಿದ್ಧವಾಯಿತೆಂದರೆ ಅದನ್ನು ಯಾರು ಬೇಕಾದರೂ ಓದಬಹುದಾಗಿದೆ. ತಮ್ಮ ಗ್ರಂಥದ ವಾಚಕರಲ್ಲಿ ಬದ್ಧರಿಂದ ಸಿದ್ಧರವರೆಗೆ, ದಡ್ಡರಿಂದ ವಿದ್ವಾನರವರೆಗೆ, ಪ್ರಾಪಂಚಿಕರಿಂದ ಮಹಂತರವರೆಗೆ, ಜ್ಞಾನಿಯಿಂದ ಯೋಗಿಯವರೆಗೆ, ಸೈನಿಕರಿಂದ ಮುತ್ಸದ್ದಿಯವರೆಗೆ, ಹೀಗೆ ಎಲ್ಲ ಪ್ರಕಾರದ ಜನರು ಇರುವರೆಂಬ ತಿಳುವಳಿಕೆಯು ಶ್ರೀ ಸಮರ್ಥರಿಗೆ ಇದ್ದಿತು. ತಾವು ಜಗತ್ತಿಗೆ ಕಲಿಸುವೆವು ಎಂಬ ಅಹಂಕಾರವು ಇರಲಿಲ್ಲವಾದುದರಿಂದಲೇ ವಾಚಕರನ್ನು ಪರಮಾತ್ಮ ಸ್ವರೂಪರೆಂದು ತಿಳಿದು ನಮಸ್ಕರಿಸುತ್ತಾರೆ. ಬ್ರಹ್ಮಜ್ಞಾನಿ ಮಹಾಮಾನವರ ಮಾಲಿಕೆಯಲ್ಲಿ ಮೊದಲಿಗರಾಗಿ ಕುಳಿತು ಶೋಭಿಸಬಲ್ಲ ಶ್ರೀ ಸಮರ್ಥರಲ್ಲಿಯ ಈ ಸಜ್ಜನಿಕೆಯು ಬಹು ಶ್ಲಾಘನೀಯವಾಗಿ ಶೋಭಿಸುವದು. [೪] ಪ್ರಪಂಚ ಮತ್ತು ಪರಮಾರ್ಥ, ಅಥವಾ ವ್ಯವಹಾರ ಮತ್ತು ಆತ್ಮಜ್ಞಾನ ಇವುಗಳಲ್ಲಿ ಸ್ವಭಾವ ವಿರೋಧವಿರುವದು ಎಂಬ ಒಂದು ಭ್ರಾಮಕ ಕಲ್ಪನೆಯು ನಮ್ಮ ದೇಶದಲ್ಲಿ ಇರುತ್ತದೆ. ಇದು ಶ್ರೀಸಮರ್ಥರಿಗೆ ಮಾತ್ರ ಮಾನ್ಯವಿಲ್ಲ, ಯಾಕೆಂದರೆ ಅಧ್ಯಾತ್ಮಿಕ ಧ್ಯೇಯವಾದ ಮತ್ತು ವ್ಯವಹಾರಿಕ, ವಾಸ್ತವವಾದಗಳ ಸಾಮ್ಯ ಸಮರಸ ಧೋರಣೆಯು ಇವರ ದಾಸಬೋಧ ಗ್ರಂಥದಲ್ಲಿ ಮೇಲಿಂದ ಮೇಲೆ ಅಲ್ಲಲ್ಲಿ ಕಂಡು ಬರುತ್ತದೆ. ಅಂತೆಯೇ ಇದರಲ್ಲಿ ವಿಷಯ ಹೇಳುವ ಪದ್ಧತಿ ಬಹಳ ಸರಳ, ಸ್ಪಷ್ಟ, ಸುಲಭ ವಿವೇಕದ ಮೇಲೆ ಹೆಚ್ಚು ಆಧಾರಿತವಿರುವದು. ದಾಸಬೋಧ ಓದುವಾಗ ಇರುವ ಸ್ವತಂತ್ರ ವಿಚಾರ ಶಕ್ತಿ ಮತ್ತು ವಿಚಾರ ಶಕ್ತಿಯ ಮೇಲಿನ ಶ್ರದ್ಧೆಯು ಕೌತುಕಾಸ್ಪದವಾಗಿದೆ. ಜ್ಞಾನೇಶ್ವರಿ ಮತ್ತು ನಾಥಭಾಗವತ ಈ ಎರಡು ಅತಿ ಉತ್ತಮ ಆಧ್ಯಾತ್ಮ ಗ್ರಂಥಗಳು ಜನತೆಯ ಮುಂದೆ ಇರುವಾಗಲೂ, ದಾಸಬೋಧ ಗ್ರಂಥವು ಸಹ ಸರಿಸಮ ಮಾನ್ಯತೆ ಪಡೆಯಿತು. ಮತ್ತು ಇವತ್ತಿಗೂ ಮಾನ್ಯ ಗ್ರಂಥವೆಂದು ಗಣಿಸಲ್ಪಡುವದು. ಇದರಿಂದಲೇ ಇದರ ಅಪೂರ್ವ ವೈಶಿಷ್ಟ್ಯವು ಕಂಡು ಬರುವಂಥಾದ್ದಾಗಿದೆ. ಅಂತೆಯೇ ಇದು "ಗ್ರಂಥ ರಾಜ" ಎನಿಸಿಕೊಂಡಿದೆ.

## ಸಮಾಸ ಸಹಾವಾ : ಶ್ರೋತೆಜನ ಸ್ತವನ

॥ಶ್ರೀರಾಮ॥ ಆತಾ ವಂದೂ ಶ್ರೋತೆ ಜನ। ಭಕ್ತ ಜ್ಞಾನೀ ಸಂತ ಸಜ್ಜನ।
ವಿರಕ್ತ ಯೋಗೀ ಗುಣಸಂಪನ್ನ। ಸತ್ಯವಾದೀ ॥೧॥
ಯೇಕ ಸತ್ವಾಚೆ ಸಾಗರ। ಯೇಕ ಬುದ್ಧೀಚೆ ಆಗರ।
ಯೇಕ ಶ್ರೋತೆ ವೈರಾಗರ। ನಾನಾ ಶಬ್ದರತ್ನಾಚೆ ॥೨॥
ಜೆ ನಾನಾ ಅರ್ಥಾಂಬೃತಾಚೆ ಭೋಕ್ತೆ। ಜೆ ಪ್ರಸಂಗೀ ವಕ್ತಯಾಚೆ ವಕ್ತೆ।
ನಾನಾ ಸಂಶಯಾತೆ ಛೇದಿತೆ। ನಿಶ್ಚೈ ಪುರುಷ ॥೩॥
ಜ್ಯಾಂಚೀ ಧಾರಣಾ ಅಪಾರ। ಜೆ ಈಶ್ವರಾಚೆ ಅವತಾರ।
ನಾತರೀ ಪ್ರತ್ಯಕ್ಷ ಸುರವರ। ಬೈಸಲೆ ಜೈಸೆ ॥೪॥
ಕಿಂ ಹೆ ಋಷೇಶ್ವರಾಂಚೀ ಮಂಡಳೀ। ಶಾಂತ ಸ್ವರೂಪ ಸತ್ವಾಗಳೀ।
ಜಯಾಂಚೆನಿ ಸಭಾಮಂಡಳೀ। ಪರಮಶೋಭಾ ॥೫॥
ಹೃದಈ ವೇದಗರ್ಭ ವಿಲಸೆ। ಮುಖೀ ಸರಸ್ವತೀ ವಿಳಾಸೆ।
ಸಾಹಿತ್ಯ ಬೋಲತಾ ಜೈಸೆ। ಭಾಸತೀ ದೇವಗುರೂ ॥೬॥
ಜೆ ಪವಿತ್ರಪಣೆ ವೈಶ್ವಾನರ। ಜೆ ಸ್ಫೂರ್ತಿ ಕಿರಣಾಚೆ ದಿನಕರ।
ಜ್ಞಾತೆಪಣೆ ದೃಷ್ಟೀಸಮೋರ। ಬ್ರಹ್ಮಾಂಡ ನ ಯೇ ॥೭॥
ಜೆ ಅಖಂಡ ಸಾವಧಾನ। ಜಯಾಸ ತ್ರಿಕಾಳಾಚೇ ಜ್ಞಾನ।
ಸರ್ವಕಾಳ ನಿರಾಭಿಮಾನ। ಆತ್ಮಜ್ಞಾನೀ ॥೮॥
ಜ್ಯಾಂಚೆ ದೃಷ್ಟೀಖಾಲೂನ ಗೇಲೇ। ಐಸೆ ಕಾಂಹೀ ಚ ನಾಹೀ ಉರಲೇ।
ಪದಾರ್ಥ ಮಾತ್ರಾಸೀ ಲಕ್ಷಿಲೇ। ಮನೇ ಜಯಾಂಚ್ಯಾ ॥೯॥
ಜೇ ಜೇ ಕಾಹೀ ಆಠವಾವೆ। ತೇ ತೇ ತಯಾಸ ಪೂರ್ವಿ ಚ ಠಾವೇ।
ತೇಥೇ ಕಾಯೆ ಅನುವಾದಾವೇ। ಜ್ಞಾತೇಪಣೇ ಕರೂನೀ ॥೧೦॥
ಪರಂತು ಹೆ ಗುಣಗ್ರಾಹಿಕ। ಮ್ಹಣೌನ ಬೋಲತೊ ನಿಃಶಂಕ।
ಭಾಗ್ಯಪುರುಷ ಕಾಯೆ ಯೇಕ। ಸೇವೀತ ನಾಹೀ ॥೧೧॥
ಸದಾ ಸೇವಿತೀ ದಿವ್ಯಾನ್ನೇ। ಪಾಲಟಾಕಾರಣೇ ಆವೇಟ ಅನ್ನೇ।
ತೈಸೀ ಚ ಮಾಝೀ ವಚನೇ। ಪರಾಕೃತೇ ॥೧೨॥
ಆಪುಲೆ ಶಕ್ತಿನುಸಾರ। ಭಾವೇ ಪುಜಾವಾ ಪರಮೇಶ್ವರ।
ಪರಂತು ಪುಜೂ ನಯೆ ಹಾ ವಿಚಾರ। ಕೋಠೇ ಚಿ ನಾಹೀ ॥೧೩॥

**ಗ್ರಂಥ ಶ್ರವಣ ಮಾಡುವದಕ್ಕಾಗಿ ಕುಳಿತಿರುವ ಶ್ರೇಷ್ಠರಾದ ಶ್ರೋತೃಗಳು ಎಂಥವರು ಇರುವರು? ಇದನ್ನು ಕೇಳಿರಿ**:– ಈಗ ದಾಸಬೋಧ ಕೇಳಬೇಕೆಂದು ಕುಳಿತಿರುವ ಶ್ರೋತೃಗಳೆಲ್ಲರಿಗೂ ನಾನು ನಮಸ್ಕರಿಸುವೆನು. ಭಕ್ತ, ಜ್ಞಾನಿ, ಸಂತ, ಸಜ್ಜನ, ವಿರಕ್ತ, ಯೋಗಿ, ಗುಣಸಂಪನ್ನ ಮತ್ತು ಸತ್ಯವಾದಿಗಳಾದ ಶ್ರೋತೃಗಳೇ ಇಲ್ಲಿ ಇರುವರು. [೧] **ಪ್ರತಿಯೊಬ್ಬರ ಅಧಿಕಾರ ಹೇಳುವರು**:– ಒಬ್ಬರು ಸತ್ವಗುಣದ ಸಮುದ್ರರು. ಇನ್ನೊಬ್ಬರು ಅಸಾಮಾನ್ಯ ಬುದ್ಧಿವಂತರು. ಮುಗದೊಬ್ಬರು ಶಬ್ದ ರತ್ನಗಳ ಖಣಿಯೇ ಇರುವರು. ಇವರಲ್ಲಿ ಶಬ್ದಗಳ ಅಪಾರ ಭಂಡಾರಗಳ ಸಂಗ್ರಹವೇ ತುಂಬಿದೆ. [೨]. ವಕ್ತಾ ಏನು ಹೇಳುವನೋ ಅದರ ಸರಿಯಾದ ಅರ್ಥಾಮೃತದ ರಸ ಸೇವಿಸುವವರು ಇರುವರು. ಕೆಲವರು ಪ್ರಸಂಗ ಬಿದ್ದರೆ ಉತ್ತಮ ಉಪನ್ಯಾಸ, ಭಾಷಣಗಳಿಂದ ರಂಜಿಸುವವರು, ಕೆಲವರಂತೂ ಅತ್ಯಂತ ನಿಶ್ಚಿತ ಅಭಿಪ್ರಾಯದವರಿದ್ದು, [ಶಂಕೆ] ಸಂಶಯಗಳನ್ನು ತಿಳಿಸಿ ಹೇಳಬಲ್ಲಂಥವರೂ ಇರುವರು. [೩]. ಈಶ್ವರನ ಅವತಾರವೆಂಬಂತೆ ಶೋಭಿಸುವವರು. ಕಾರಣವೆಂದರೆ ಇವರ ಜ್ಞಾನ ಸಂಗ್ರಹದ ಬುದ್ಧಿಶಕ್ತಿ ಅಪಾರವಿರುವದು, ಪ್ರತ್ಯಕ್ಷ ದೇವರೇ ಸಭೆಯಲ್ಲಿ ಬಂದು ಕುಳಿತಿರಬಹುದೆಂದು ಅನಿಸುತ್ತದೆ[೪] ಇಂಥಶೋತೃಗಳನ್ನುನೋಡಿ ಇಲ್ಲಿ ಕುಳಿತಿರುವವರೆಲ್ಲ ಮೂರ್ತಿವಂತ ಶಾಂತಿಇದ್ದವರು ಮತ್ತು ಸತ್ವಗುಣಕ್ಕಿಂತಲೂ ಶ್ರೇಷ್ಠರಾದ ಋಷಿ ಮಂಡಳಿಯೇ ಸಭೆಗೆ ಬಂದು ಕುಳಿತಿರುವದರಿಂದ ಸಭೆಗೆ ಶೋಭೆ ಬಂದಿರಬಹುದೆಂದು ಅನಿಸುವದು. [೫] ಇವರ ಅಂತಃಕರಣದಲ್ಲಿ ವೇದಗಳ ನಿಜ ಅರ್ಥ ಸಹಜ ರೀತಿಯಲ್ಲಿ ಹೊಳೆಯುವದು, ಇವರ ಮುಖದಲ್ಲಿ ಅಂದರೆ ನಾಲಿಗೆಯ ಮೇಲೆ ಸರಸ್ವತಿ ಆಡುತ್ತಿರುವಳು. ಕಾವ್ಯ, ನಾಟಕ, ಕಥೆ ಇತ್ಯಾದಿ ಸಾಹಿತ್ಯಗಳ ಮೇಲೆ ಭಾಷಣ ಮಾಡಹತ್ತಿದರೆ ಪ್ರತ್ಯಕ್ಷ ದೇವಗುರು ಬೃಹಸ್ಪತಿಯೇ ಅನಿಸುವರು. [೬] ಅಗ್ನಿಯಂತೆ ಇವರು ಪವಿತ್ರರಿದ್ದು ಸ್ಫೂರ್ತಿ ರೂಪಿ ಕಿರಣಗಳುಳ್ಳ ಸೂರ್ಯನಂತೆ ತೋರುವರು. ಸೂರ್ಯನಿಂದ ಪ್ರಕಾಶಕಿರಣಗಳು ಒಂದೇ ಸವನೆ ಹೇಗೆ ಹೊರಬರುತ್ತಿರುವವೋ ಅದರಂತೆ ಇವರ ಸ್ಫೂರ್ತಿಯು ಸದೈವ ಜಾಗೃತ ಇರುವದು. ಇವರ ಜ್ಞಾನ ಮರ್ಯಾದೆ ಅಪಾರವಾಗಿರುವದರಿಂದ ನಮ್ಮ ಈ ವಿಶ್ವವೇ ಅತಿ ಕ್ಷುಲ್ಲಕವೆಂದು ಇವರ ದೃಷ್ಟಿಗೆ ಅನಿಸುವದು, [೭] ಯಾವಾಗಲೂ ಎಲ್ಲ ಕಡೆಯೂ ಇವರ ದೃಷ್ಟಿ ಇರುತ್ತದೆ. ತ್ರಿಕಾಲಜ್ಞಾನವಿರುತ್ತದೆ. ಇವರು ಆತ್ಮಜ್ಞಾನಿಯಿದ್ದು ಸದೈವ ನಿರಭಿಮಾನಿಗಳಾಗಿರುವರು. [೮]. ಸರ್ವಜ್ಞರಾದ ಇವರ ದೃಷ್ಟಿಗೆ ಬರದೆ ಹೋಗುವದು ಯಾವದೂ ಇಲ್ಲ. ದೃಶ್ಯ ರೂಪವಿರುವ ಯಾವತ್ತೂ ವಸ್ತುಗಳನ್ನು ಇವರು ಕೇವಲ ಮನಸ್ಸಿನಿಂದಲೇ ನೋಡಿರುತ್ತಾರೆ. [೯] ನಾವು ಬಹು ವಿಚಾರದಿಂದ ಯಾವುದನ್ನಾದರೂ ಹೇಳಹೋದರೆ ಈ ಶ್ರೋತೃಗಳಿಗೆ ಈ ವಿಷಯ ಮೊದಲೇ ತಿಳಿದು ಹೋಗಿರುತ್ತದೆ ಎಂಬ ಅನುಭವ ಬರುತ್ತದೆ. ಅಂದ ಮೇಲೆ ನಾವು ತಿಳಿದವರೆಂಬ ಹೆಸರಿಟ್ಟುಕೊಂಡು ಯಾವ ಹೊಸ ವಿಷಯವನ್ನು ಅವರ ಮುಂದೆ ಹೇಗೆ ಹೇಳಬಲ್ಲೆವು ? [೧೦] **ಹೀಗಿದ್ದರೂ ದಾಸಬೋಧ ಏಕೆ ಹೇಳಿದರು?** ಭಾಗ್ಯಶಾಲಿ ಮತ್ತು ಐಶ್ವರ್ಯ ಸಂಪನ್ನನಾದ ಮನುಷ್ಯನು ತನ್ನ ಮುಂದೆ ಯಾವುದು ಬರುವದೋ ಅದನ್ನು ತಿರಸ್ಕರಿಸುವದಿಲ್ಲ. ಅವನು ಗುಣಗ್ರಾಹಿ ಇರುತ್ತಾನೆ. ಪ್ರತಿಯೊಂದರಲ್ಲಿಯ ಉತ್ತಮ ಗುಣದ ಸ್ವೀಕಾರ ಮಾಡುತ್ತಾನೆ. ಇದೇ ಪ್ರಕಾರವಾಗಿ ದಾಸಬೋಧದ ಶೋತೃಗಳೂ ಸಹ ಅತ್ಯಂತ ಗುಣಗ್ರಾಹಿ ಇರುವರೆಂಬ ನಂಬಿಗೆಯಿಂದ ನಾನು ನಿಃಶಂಕನಾಗಿ ಗ್ರಂಥವನ್ನು ಹೇಳುತ್ತೇನೆ. [೧೧]. ಐಶ್ವರ್ಯ ಸಂಪನ್ನ ಮನುಷ್ಯನು ಯಾವಾಗಲೂ ಉತ್ತಮೋತ್ತಮ ಪಕ್ವಾನ್ನಗಳನ್ನೇ ತಿನ್ನುವನು. ಆದರೆ ಬಾಯಿ ರುಚಿಗಾಗಿ ಮಧ್ಯ ಮಧ್ಯದಲ್ಲಿ ರುಚಿ ಬದಲಾವಣೆಗಾಗಿ ರುಚಿ ಹೆಚ್ಚಲೆಂದು ಸಾದಾ ವ್ಯಂಜನ ಪದಾರ್ಥಗಳನ್ನೂ ತಿನ್ನುವನು. ಇದೇ ಪ್ರಕಾರ ಯಾವಾಗಲೂ ಸಂಸ್ಕೃತದ ವೇದಾಂತ ವಾಙ್ಮಯ ಓದುವವನು ನನ್ನ ಈ ಪ್ರಾಕೃತ ಅಥವಾ ಮರಾಠಿ ಗ್ರಂಥವನ್ನು ಕೇವಲ ರುಚಿ ಬದಲಾವಣೆಯೆಂದು ಓದಬೇಕು. [೧೨] ಪರಮೇಶ್ವರನನ್ನು ಯಥಾ ಸಾಂಗವಾಗಿ ಪೂಜಿಸುವದು ಕಠಿಣವಿದ್ದರೂ ನಮ್ಮ ನಮ್ಮ ಶಕ್ತಿಯ ಪ್ರಕಾರ ನಿರ್ಮಲ ಮನಸ್ಸಿನಿಂದ ಪೂಜಿಸುತ್ತೇವೆಂದ ಮೇಲೆ ಪೂಜೆ ಕಠಿಣವಿದೆ–ಮಾಡಲೇಬಾರದೆಂದು ಯಾರೂ ಹೇಳುವದಿಲ್ಲ. [೧೩]

ತೈಸಾ ಮೀ ಯೇಕ ವಾಗ್ದುರ್ಬಳ । ಶ್ರೋತೆ ಪರಮೇಶ್ವರ ಚಿ ಕೇವಳ ।
ಯಾಂಚೀ ಪೂಜಾ ನಾಚಾಬರಳ । ಕರೂ ಪಾಹೆ ॥೧೪॥
ವಿತ್ಪತ್ತೀ ನಾಹೀ ಕಳಾ ನಾಹೀ । ಚಾತುರ್ಯ ನಾಹೀ ಪ್ರಬಂದ ನಾಹೀ ।
ಭಕ್ತಿ ಜ್ಞಾನ ವೈರಾಗ್ಯ ನಾಹೀ । ಗೌಲ್ಯತಾ ನಾಹೀ ವಚನಾಚೀ ॥೧೫॥
ಏಸಾ ಮಾಝಾ ವಾಗ್ವಿಳಾಸ । ಮ್ಹಣೌನ ಬೋಲತೋ ಸಾವಕಾಶ ।
ಭಾವಾಚಾ ಭೋಕ್ತಾ ಜಗದೀಶ । ಮ್ಹಣೌನಿಯಾ ॥೧೬॥
ತುಮ್ಹೀ ಶ್ರೋತೆ ಜಗದೀಶ ಮೂರ್ತಿ । ತೇಥೆ ಮಾಝೊ ವಿತ್ಪತ್ತೀ ಕಿತೀ ।
ಬುದ್ಧಿಹೀಣ ಅಲ್ಪಮತೀ । ಸಲಗೀ ಕರಿತೋ ॥೧೭॥
ಸಮರ್ಥಾಚಾ ಪುತ್ರ ಮೂರ್ಖ ಜಗೀ । ಪರೀ ಸಾಮರ್ಥ್ಯ ಅಸೆ ತ್ಯಾಚಾ ಆಂಗೀ ।
ತುಮ್ಹಾ ಸಂತಾಚಾ ಸಲಗೀ । ಮ್ಹಣೌನಿ ಕರಿತೋ ॥೧೮॥
ವ್ಯಾಘ್ರ ಸಿಂಹ ಭಯಾನಕ । ದೇಖೋನಿ ಭಯಾಚಕಿತ ಲೋಕ ।
ಪರೀ ತ್ಯಾಂಚೀ ಪಿಲೀ ನಿಃಶಂಕ । ತಯಾ ಪುಢೇ ಖೇಳತೀ ॥೧೯॥
ತೈಸಾ ಮೀ ಸಂತಾಂಚಾ ಅಂಕಿತ । ತುಮ್ಹಾ ಸಂತಾಪಾಸೀ ಬೋಲತ ।
ತರೀ ಮಾಝೀ ಚಿಂತಾ ತುಮಚೇ ಚಿತ್ತ । ನಾಹೇಲ ಚ ಕೀ ॥೨೦॥
ಆಪಲೇ ಚಿ ಬೋಲೆ ವಾಉಗೇ । ತ್ಯಾಚೀ ಸಂಪಾದಣೀ ಕರಣೇ ಲಾಗೆ ।
ಪರಂತು ಕಾಂಹೀ ಸಾಂಗಣೇ ನಲಗೆ । ನ್ಯೂನ ತೇ ಪೂರ್ಣ ಕರಾವೇ ॥೨೧॥
ಹೇ ತೋ ಪ್ರೀತೀಚೇ ಲಕ್ಷಣ । ಸ್ವಭಾವೇ ಚಿ ಕರೀ ಮನ ।
ತೈಸೆ ತುಮ್ಹೀ ಸಂತಸಜ್ಜನ । ಮಾಯೆಬಾಪ ವಿಶ್ವಾಚೆ ॥೨೨॥
ಮಾಝಾ ಅಶಯು ಜಾಣೊನಿ ಜೀವೇ । ಆತಾ ಉಚಿತ ತೇ ಕರಾವೇ ।
ಪುಢೇ ಕಥೇಸಿ ಅವಧಾನ ದ್ಯಾವೇ । ಮ್ಹಣೆ ದಾಸಾನುದಾಸ ॥೨೩॥

ಇತಿ ಶ್ರೀದಾಸಬೋಧೆ ಗುರುಶಿಷ್ಯ ಸಂವಾದೆ
ಶ್ರೋತೆ ಸ್ತವನನಾಮ ಸಮಾಸ ಸಹಾವಾ ॥

**ದಾಸಬೋಧ ಬರೆಯುವಾಗ ಶ್ರೀಸಮರ್ಥರು ವಹಿಸಿದ ನಮ್ರ ಭೂಮಿಕೆ:-** ಇದೇ ಪ್ರಕಾರ ನನ್ನ ಶ್ರೋತೃಗಳು ಕೇವಲ ಪರಮೇಶ್ವರ ಸ್ವರೂಪರಿರುವರು. ನಾನು ಮುಗ್ಧನಿದ್ದುದರಿಂದ ನನ್ನ ಬಾಯಿಯಿಂದ ಏನನ್ನು ಬಡಬಡಿಸುವೆನೋ ಅಂಥ ಆ ಹರಕು ಮುರಕು ಶಬ್ದಗಳಿಂದ ನಾನು ಶ್ರೋತೃರೂಪಿ ಪರಮೇಶ್ವರನ ಪೂಜಾ ಮಾಡುವ ಪ್ರಯತ್ನ ಮಾಡುವೆನು. (೧೪). ನಿಜವಾಗಿಯೂ ನಾನು ಹೇಗಿರುವೆನೆಂದರೆ, ನನ್ನಲ್ಲಿ ಕ್ರಮ ಬದ್ಧ ಅಭ್ಯಾಸ ಮಾಡಿ ಬರುವಂಥ ಭಾಷಾಪಾಂಡಿತ್ಯವಿಲ್ಲ, ಕಲೆ ಇಲ್ಲ, ಜಾಣ್ಮೆ ಇಲ್ಲ, ಮತ್ತು ಸುವ್ಯವಸ್ಥಿತವಾಗಿ ರಚಿಸಿ ಗ್ರಂಥ ಬರೆಯುವ ಶಕ್ತಿ ಇಲ್ಲ. ನನ್ನಲ್ಲಿ ಭಕ್ತಿ,ಜ್ಞಾನ, ವೈರಾಗ್ಯಗಳಿಲ್ಲ. ಸುಂದರ ಶಬ್ದ ರಚಿಸಲಿಕ್ಕೆ ಬರುವದಿಲ್ಲ. (೧೫). ನನ್ನ ಗ್ರಂಥ ರಚನಾ ಪ್ರಕಾರವು ಹೀಗೆ ಇರುವದು. ಆದರೂ ಭಕ್ತಿಯಿಂದ ಪೂಜೆ ಮಾಡುವವನ ಪ್ರೇಮದ ರಸವನ್ನು ಈಶ್ವರನು ಸೇವಿಸುತ್ತಾನೆಂಬುದನ್ನು ನಂಬಿಯೇ ನಾನು ನಿರ್ಭಯನಾಗಿ ಗ್ರಂಥ ಬರೆಯುವದಕ್ಕೆ ಉದ್ಯುಕ್ತ ನಾಗಿರುವೆನು. ನನ್ನ ಶಬ್ದ ರಚನೆಯ ಕಡೆಗೆ ನೀವು ಲಕ್ಷ ಕೊಡುವದಿಲ್ಲವೆಂಬ ಭರವಸೆ ಇದೆ. (೧೬), **ಸಂತರೂಪಿ ಶ್ರೋತೃಗಳಿಗೆ ಅತಿ ನಮ್ರತೆಯಿಂದ, ಮಮತೆ ಹಾಗೂ ಸ್ವಾಭಿಮಾನದಿಂದ ಮಾಡಿದ ವಿನಂತಿ:-** ಶ್ರೋತೃಗಳಾದ ನೀವು ಪ್ರತ್ಯಕ್ಷ ಪರಮಾತ್ಮ ಸ್ವರೂಪರಿರುವಿರಿ. ನಿಮ್ಮಂಥವರ ಮುಂದೆ ನನ್ನವಿದ್ವತ್ತು ಕಡಿಮೆಯದೇ ಆಗಿದೆ. ನಾನು ಮಂದ ಬುದ್ಧಿಯವನಿರುವದರಿಂದ ನನ್ನ ವಿಚಾರಗಳು ಪ್ರಗಲ್ಭ ಪ್ರೌಢವಿರುವದಿಲ್ಲ. ನಾನು ನಿಮ್ಮ ಸಂಗಡ ನಮ್ಮವರೆಂಬ ಸಲಿಗೆಯಿಂದ ಆತ್ಮೀಯತೆಯಿಂದ ನಡೆಯುವೆನು. (೧೭). ಜಗತ್ತಿನಲ್ಲಿ ಯಾವನೊಬ್ಬ ಶ್ರೀಮಂತ (ದೊಡ್ಡವ)ರ ಮಗ ಮೂರ್ಖ ಮತ್ತು ದಡ್ಡನಾಗಿದ್ದರೂ ಅವನಿಗೆ ಮಾನ ಮರ್ಯಾದೆ ಸಿಗುತ್ತದೆಂದ ಮೇಲೆ, ನಾನು ಹೀನ, ದೀನನಿದ್ದರೂ ನಿಮ್ಮವನೇ ಇರುವೆನೆಂಬ ನಂಬಿಗೆಯಿಂದ ನಿಮ್ಮ ಕೂಡ ಇಷ್ಟೊಂದು ಸಲಿಗೆ ಯಿಂದ ವರ್ತಿಸುವೆನು. (೧೮). ಹುಲಿ ಮತ್ತು ಸಿಂಹಗಳಂಥ ಭಯಂಕರ ಪ್ರಾಣಿಗಳನ್ನು ನೋಡಿ ಜನರು ಹೆದರು ತ್ತಾರೆ. ಆದರೆ ಆ ಭಯಂಕರ ಪ್ರಾಣಿಯ ಸಣ್ಣ ಮರಿಗಳು ಯಾವ ಹೆದರಿಕೆ ಇಲ್ಲದೆ ಅವುಗಳ ಹತ್ತಿರವೇ ಆಡು ವವು.(೧೯) ಇದೇ ರೀತಿಯಿಂದ ನಾನು ಸಂತರಾದ ನಿಮ್ಮಬಾಲಕನೇ ಇರುವೆನು.ನಿಮ್ಮ ಮುಂದೆ ದಾಸಬೋಧವನ್ನು ಹೇಳುತ್ತೇನೆ. ನೀವು ನನ್ನ ಕಾಳಜಿ ಮಾಡುವಿರೆಂಬ ಬಗ್ಗೆ ಸಂಶಯವೇ ಇಲ್ಲ. (೨೦). **"ದೋಷಗಳನ್ನು ತಿದ್ದಿರಿ" ಎಂದು ಪ್ರಾರ್ಥಿಸುವರು:-** ಮಕ್ಕಳು ಮಾತನಾಡುವಾಗ ತೊದಲಿದರೆ, ಎಬಡಾ ತಬಡಾ ಮಾತನಾಡಿದರೆ ತಾಯಿ-ತಂದೆಗಳು ಸಮಾಧಾನದಿಂದ ಸಹಿಸಿಕೊಂಡು ಹೋಗುತ್ತಾರೆ. ನೀವೂ ಹೀಗೆಯೇ ಮಾಡಿರಿ, ಎಂದು ಹೇಳ ಬೇಕಾಗಿಲ್ಲ. ಅರ್ಥಾತ್ ದಾಸಬೋಧ ಹೇಳುವಾಗ ನಾನು ಏನಾದರೂ ಹೆಚ್ಚು ಕಡಿಮೆ ಹೇಳಿದರೆ ವಿಶಾಲ ಹೃದಯಿ ಗಳಾದ ಶೋತೃರೂಪೀ ಸಂತರೇ, ನೀವಾಗಿಯೇ ಏನಾದರೂ ಕುಂದು ಕೊರತೆಗಳು ಕಂಡು ಬಂದರೆ ಅವನ್ನು ನೀವು ತುಂಬಿ ಸರಿಪಡಿಸುವಿರೆಂದು ನಂಬಿರುತ್ತೇನೆ(೨೧) ಸಂತ ಸಜ್ಜನರಾದ ನೀವುಜಗಕ್ಕೆಲ್ಲ ತಾಯಿ-ತಂದೆಗಳೇ ಆಗಿರು ವಿರಿ. ಮಾತೃ ಪ್ರೇಮದಿಂದ ನೀವು ನನ್ನನ್ನು ಸಂಬಾಳಿಸಿಕೊಂಡು ಹೋಗುವಿರಿ. ಯಾಕೆಂದರೆ ಎಲ್ಲಿ ಪ್ರೇಮವಿರು ವದೋ ಅಲ್ಲಿ ಮನಸ್ಸು ಸ್ವಾಭಾವಿಕವಾಗಿ ಹೀಗೆ, ನಡೆಯುತ್ತದೆ. (೨೨). ನನ್ನ ಮನಸ್ಸಿನಲ್ಲಿರುವ ಉದ್ದೇಶವನ್ನು ನೀವು ನಿಮ್ಮ ಮನಸ್ಸಿನಿಂದ ತಿಳಿದುಕೊಳ್ಳಿರಿ. ಮತ್ತು ಯಾವದು ಯೋಗ್ಯವೋ ಅದರಂತೆ ಮಾಡಿರಿ. ಮುಂದೆ ಬರುವ ವಿಷಯವನ್ನು ಮನಃಪೂರ್ವಕ ಲಕ್ಷ್ಯಗೊಟ್ಟು ಕೇಳಿರೆಂದು ದಾಸರ ದಾಸನಾದ ರಾಮದಾಸನು ನಿಮ್ಮಲ್ಲಿ ಪ್ರಾರ್ಥಿಸುತ್ತಾನೆ. (೨೩).

ಶ್ರೀದಾಸಬೋಧದ ಗುರು ಶಿಷ್ಯರ ಸಂವಾದದಲ್ಲಿಯ
"ಶ್ರೋತೃ ಸ್ತವನ"ವೆಂಬ ಹೆಸರಿನ ೧ನೆಯ ದಶಕದಲ್ಲಿಯ
೬ನೆಯ ಸಮಾಸವು ಮುಗಿದುದು.

● ●

### ಸಮಾಸ ಸಾತವಾ : ಕವೇಶ್ವರ ಸ್ತವನ

॥ಶ್ರೀರಾಮ॥ ಆತಾ ವಂದೂ ಕವೇಶ್ವರ । ಶಬ್ದ ಸೃಷ್ಟೀಚೆ ಈಶ್ವರ ।
ನಾತರೀ ಹೇ ಪರಮೇಶ್ವರ । ವೇದಾವತಾರೀ ॥೧॥
ಕೀ ಹೇ ಸರಸ್ವತೀಚೇ ನಿಜಸ್ಥಾನ । ಕೀ ಹೇ ನಾನಾ ಕಳಾಂಚೆ ಜೀವನ ।
ನಾನಾ ಶಬ್ದಾಂಚೇ ಭುವನ । ಯೇಥಾರ್ಥ ಹೋಯೆ ॥೨॥
ಕೀ ಹೇ ಪುರುಷಾರ್ಥಾಚೆ ವೈಭವ । ಕೀ ಹೇ ಜಗದೇಶ್ವರಾಚೆ ಮಹತ್ವ ।
ನಾನಾ ಲಾಘವೇ ಸತ್ಕೀರ್ತೀಸ್ತವ । ನಿರ್ಮಾಣ ಕವೀ ॥೩॥

## ಸಮಾಸ ೭. ಕವೇಶ್ವರ ಸ್ತವನ (ನುಡಿ ೩೪)

ಮಾನವನಲ್ಲಿ ಪ್ರತ್ಯಕ್ಷ ಪರಮಾತ್ಮ ಸ್ವರೂಪ ಹೊಂದುವ ಯೋಗ್ಯತೆ ಇದೆ. ಈ ಧ್ಯೇಯ ಸಾಧ್ಯವಾಗ ಬೇಕಾದರೆ ಅವರ ಅಂತರ್ಯಾಮಿಯಲ್ಲಿ ಸಹಜವಾಗಿ ಸುಪ್ತವಿದ್ದ ಪ್ರತಿಭಾ ಅಂದರೆ ದಿವ್ಯದೃಷ್ಟಿ ಎಂಬ ಹೆಸರಿನ ಶಕ್ತಿ ಜಾಗೃತವಾಗಬೇಕಾಗುವದು. ಸಂತ, ಶರಣ, ಕವಿ ಇವರ ಅಂತಃಕರಣದಲ್ಲಿ ಪ್ರತಿಭೆ ಜಾಗೃತವಿರುವದರಿಂದ ಎರಡ ನೆಯವರ ಅಂತಃಕರಣದಲ್ಲಿಯ ಸುಪ್ತ ಪ್ರತಿಭೆಯನ್ನು ಜಾಗೃತಗೊಳಿಸಬಲ್ಲವರಾಗಿರುತ್ತಾರೆ. ಅಂತೆಯೇ ಶ್ರೀ ಸಮರ್ಥರು ಸಂತರಿಗೆ ಮತ್ತು ಸಂತ ಶ್ರೋತೃಗಳಿಗೆ ನಮಸ್ಕರಿಸಿದ ನಂತರ ಈಗ ಕವಿಗಳಿಗೆ, ಗ್ರಂಥಕರ್ತ, ಕಾವ್ಯಗಾರರಿಗೆ ನಮಸ್ಕರಿಸುತ್ತಾರೆ. ಸಂತ ಮತ್ತು ಕವಿ ಇವರಲ್ಲಿರುವ ಅಂತರವೇನೆಂದರೆ, ಸಂತರ ಪ್ರತಿಭೆ ಅಖಂಡ ಜಾಗೃತವಿರುತ್ತದೆ. ಇಷ್ಟೆ ಅಲ್ಲ, ಇವರ ಅಂತಃಕರಣದಲ್ಲಿ ಅದು ಜಾಗೃತಾವಸ್ಥೆಯಲ್ಲಿ ಸ್ಥಿರವಿರುವದರಿಂದ ಇವರು ಸಂತರೆನಿಸಿಕೊಂಡಿರುವರು.ಆದರೆ ಕವಿಯಲ್ಲಿಯ ಪ್ರತಿಭೆ ಒಮ್ಮೆ ಜಾಗೃತವಿದ್ದರೆ ಮತ್ತೊಮ್ಮೆ ನಿದ್ರಾವಶ. ಇನ್ನೊಮ್ಮೆ ಸತೇಜದಿಂದ ಇದ್ದರೆ ಮಗದೊಮ್ಮೆ ಮಂದತ್ವದಿಂದ ಇರುವದು. ಪ್ರತಿಭೆ ಜಾಗೃತಗೊಂಡರೆ ಅದು ಉಕ್ಕೇರಿ ಮೇರೆದಪ್ಪಿ ಅನಿವಾರ್ಯವಾದ ಸ್ಫೂರ್ತಿ ಬರುತ್ತದೆ. ಕಲ್ಪನಾ ಮತ್ತು ಬುದ್ಧಿ ಯಲ್ಲಿ ವಿಲಕ್ಷಣ ಕ್ರಿಯಾಶೀಲ (ಕ್ರಿಯೆಟಿವ್) ಆಗಿ ಉತ್ಕೃಷ್ಟ ಕಾವ್ಯ, ಆವೇಶಮಯ ಭಾಷಣ, ಅಥವಾ ಅತ್ಯಂತ ಹೊಸ ಜ್ಞಾನ, ಪ್ರಕಟವಾಗುವದು. ಮನುಷ್ಯರಲ್ಲಿಯ ಪ್ರತಿಭೆಯನ್ನು ಜಾಗೃತಗೊಳಿಸುವದೇ ಮುಖ್ಯವಾದ ಪರ ಮಾರ್ಥ ಸಾಧನದ ಮರ್ಮವಾಗಿದೆ. ಸಂತರ ಸಂಗತಿಯಿಂದ ಮನುಷ್ಯನಲ್ಲಿ ಪ್ರತಿಭೆಯು ಅನಾಯಾಸ ಜಾಗೃತ ವಾಗುವದು. ಅಂತೆಯೇ ಸತ್‌ಸಂಗತಿಯ ಮಹಿಮೆಯನ್ನು ಎಲ್ಲರೂ ಹೊಗಳುವರು. ಇದರ ನಂತರದ ಸ್ಥಾನವು ಉತ್ತಮ ಕಾವ್ಯ ಮತ್ತು ಸಾಹಿತ್ಯಕ್ಕೆ ಇರುವದು. ಅಂತಃಕರಣದ ಮೇಲೆ ಇಷ್ಟು ಪರಿಣಾಮ ಮಾಡಿ ಪ್ರತಿಭೆ ಪ್ರಕಟವಾಗುವದಕ್ಕೆ ದಾರಿಯನ್ನು ಸುಗಮಗೊಳಿಸುವದು. ಈ ದೃಷ್ಟಿಯಿಂದ ನೋಡಿದರೆ ಮಾನವ ಜೀವನದಲ್ಲಿ ಕವಿಗಳಿಗೆ ಮತ್ತು ಸಾಹಿತಿಗಳಿಗೆ ಬಹಳ ಮಹತ್ವವಿದೆ. ಕಲ್ಪನೆಯಿಂದಲಾದರೂ ಹೊಸ ಸೃಷ್ಟಿ ನಿರ್ಮಾಣ ಮಾಡಿ ಉತ್ತಮ ಆದರ್ಶವನ್ನು ಜನತೆಯ ಮುಂದೆ ಇಡುವದು, ಪ್ರಾಚೀನ ಮೌಲ್ಯವನ್ನು ಕಾಯುವದು, ಮತ್ತು ಕ್ಷೀಣ ಹಾಗೂ ನಿರಾಶಾ ಜೀವನಕ್ಕೆ ನವಚೈತನ್ಯ ತುಂಬುವದು, ಈ ಮಹತ್ವದ ಕಾರ್ಯವನ್ನು ಕವಿಯು ಮಾಡುತ್ತಾನೆ. ಪ್ರಾಪಂಚಿಕ ಮನುಷ್ಯನ ಜೀವನದಲ್ಲಿ ನಿತ್ಯವೂಮಾಡಿದ್ದನ್ನೇ ಮಾಡಿ ಅದರಲ್ಲಿ ಆಂತರಿಕ ವಿಕಾಸದ ಬೆಳವಣಿಗೆಯೇ ನಿಲ್ಲು ತ್ತದೆ. ಅಂಥ ಸಮಯದಲ್ಲಿ ಸಂತ ಕವಿಯ ಕಾವ್ಯ ಸಾಹಿತ್ಯಗಳೇ ಅವನ ಅಂತಃಕರಣದಲ್ಲಿ ಭಗವಂತನ ಪ್ರೇಮದ ಅಂಕುರವನ್ನು ನಿರ್ಮಾಣಗೊಳಿಸಿ ಅವನ ಆ ಸೂಕ್ಷ್ಮ ಶಕ್ತಿಗೆ ಸತೇಜತ್ವ ತರುವವು. ಇದೇ ಜಗದೋದ್ಧಾರಕ ಕಾರ್ಯ ವಾಗಿದೆ.

### ಸಮಾಸ ೭. ಕವಿ ಸ್ತವನ

**ಪ್ರಥಮದಲ್ಲಿ ಕವಿಯ ಪ್ರತಿಭೆಯ ಸಾಮಾನ್ಯ ಸ್ವರೂಪವನ್ನು ಹೇಳುವರು:–** ಈಗ ನಾನು ಶ್ರೇಷ್ಠ ಕವಿಗಳಿಗೆ ನಮಸ್ಕರಿಸುತ್ತೇನೆ. ಕವಿಗಳು ಶಬ್ದ ಸೃಷ್ಟಿಯ ಮೇಲೆ ರಾಜನಂತೆ ಅಧಿಕಾರ ನಡೆಯಿಸುವರು. ಕವಿ ಅಂದರೆ ವೇದರೂಪದಿಂದ ಅವತರಿಸಿದ ಪರಮೇಶ್ವರನಿರುವನು. (೧). ಕವಿಯ ಅಂತಃಕರಣವೆಂದರೆ ಸರ ಸ್ವತಿಯ ಸ್ವಂತ ಮಾಲಕಿಯ ಒಡೆತನದ ಮನೆಯೆಂದು ತಿಳಿಯಬೇಕು. ಕವಿಗೆ ಸರಸ್ವತಿಯು ಪೂರ್ಣವಶವಾಗಿರು ವಳು. ಯಾವಾಗಲೂ ಅವನ ಹತ್ತಿರವೇ ಇರುವಳು. ಕವಿಯು ನಾನಾ ಪ್ರಕಾರದ ಕಲೆಗಳನ್ನು ಜೀವಂತವಿಡುವನು. ಮತ್ತು ಎಷ್ಟೋ ಶಬ್ದಗಳು ನಿಜ ಅರ್ಥದೊಡನೆ ಕವಿಯ ಹೃದಯದಲ್ಲಿ ಬಂದು ವಾಸ ಮಾಡಿರುತ್ತವೆ. ಕವಿಯ ಶಬ್ದ ಸಂಗ್ರಹವು ಬಹಳ ದೊಡ್ಡದಾಗಿದೆ. (೨) ಜಗತ್ತಿನಲ್ಲಿಯ ಉತ್ತಮ ಮೌಲ್ಯದ ಐಶ್ವರ್ಯ ತೋರಿಸುವ ದಕ್ಕಾಗಿ ಭಗವಂತನ ದೊಡ್ಡಸ್ತಿಕೆಯನ್ನು ಹೊಗಳುವದಕ್ಕಾಗಿ ಹಾಗೂ ಅನೇಕ ಪ್ರಕಾರದ ಕೌಶಲ್ಯದಿಂದ ಸಂತರ ಕೀರ್ತಿಯನ್ನು ಹೊಗಳುವದಕ್ಕಾಗಿ ಕವಿಯು ಹುಟ್ಟಿ ಬರುತ್ತಾನೆ. (೩).

ಕೀ ಹೇ ಶಬ್ದರತ್ನಾಚೆ ಸಾಗರ । ಕೀ ಹೇ ಮುಕ್ತಾಂಚೆ ಮುಕ್ತ ಸರೋವರ ।
ನಾನಾ ಬುದ್ಧೀಚೆ ವೈರಾಗರ । ನಿರ್ಮಾಣ ಜಾಲೆ ॥೪॥

ಅಧ್ಯಾತ್ಮಗ್ರಂಥಾಚೀ ಖಾಣೀ । ಕೀ ಹೇ ಬೋಲಿಕೆ ಚಿಂತಾಮಣೀ ।
ನಾನಾ ಕಾಮಧೇನೂಚೀ ದುಭಣೀ । ಮೋಳಲೀ ಶ್ರೋತಯಾಸೀ ॥೫॥

ಕೀ ಹೇ ಕಲ್ಪನೆಚೆ ಕಲ್ಪತರೂ । ಕೀ ಹೇ ಮೋಕ್ಷಾಚೆ ಮುಖ್ಯ ಪಡೀಭರೂ ।
ನಾನಾ ಸಾಯೋಜ್ಯತೇಚೆ ವಿಸ್ತಾರೂ । ವಿಸ್ತಾರಲೇ ॥೬॥

ಕೀ ಹಾ ಪರಲೋಕೀಚಾ ನಿಜಸ್ವಾರ್ಥು। ಕೀ ಹಾ ಯೋಗಿಯಾಚಾ ಗುಪ್ತಪಂಥು।
ನಾನಾ ಜ್ಞಾನಿಯಾಚಾ ಪರಮಾರ್ಥು । ರೂಪಾಸಿ ಆಲಾ ॥೭॥

ಕೀ ಹೇ ನಿರಂಜನಾಚೀ ಖೂಣ । ಕೀ ಹೇ ನಿರ್ಗುಣಾಚೀ ಮೋಳ ಖಣ ।
ಮಾಯಾವಿಲಕ್ಷಣಾಚೇ ಲಕ್ಷಣ । ತೇ ಹೇ ಕವೀ ॥೮॥

ಕೀ ಹಾ ಶ್ರುತೀಚಾ ಭಾವಗರ್ಭ । ಕೀ ಹಾ ಪರಮೇಶ್ವರಾಚಾ ಅಲಭ್ಯ ಲಾಭ ।
ನಾತರೀ ಹೋಯೆ ಸುಲ್ಲಭ । ನಿಜಬೋಧ ಕವಿರೂಪೇ ॥೯॥

ಕವಿ ಮುಮುಕ್ಷಾಚೇ ಅಂಜನ । ಕವಿ ಸಾಧಕಾಂಚೇ ಸಾಧನ ।
ಕವಿ ಸಿದ್ಧಾಂಚೇ ಸಮಾಧಾನ । ನಿಶ್ಚಯಾತ್ಮಕ ॥೧೦॥

ಕವಿ ಸ್ವಧರ್ಮಾಚಾ ಆಶ್ರಯೋ । ಕವಿ ಮನಾಚಾ ಮನೋಜಯೋ ।
ಕವಿ ಧಾರ್ಮಿಕಾಚಾ ವಿನಯೋ । ವಿನಯಕರ್ತೇ ॥೧೧॥

ಕವಿ ವೈರಾಗ್ಯಾಚೇ ಸಂರಕ್ಷಣ । ಕವಿ ಭಕ್ತಾಂಚೇ ಭೂಷಣ ।
ನಾನಾ ಸ್ವಧರ್ಮರಕ್ಷಣ । ತೇ ಹೇ ಕವೀ ॥೧೨॥

ಕವಿ ಪ್ರೇಮಳಾಚೀ ಪ್ರೇಮಳ ಸ್ಥಿತೀ । ಕವಿ ಧ್ಯಾನಸ್ಥಾಚೀ ಧ್ಯಾನಮೂರ್ತೀ ।
ಕವಿ ಉಪಾಸಕಾಚೀ ವಾಢ ಕೀರ್ತೀ । ವಿಸ್ತಾರಲೀ ॥೧೩॥

ನಾನಾ ಸಾಧನಾಚೇ ಮೂಳ । ಕವಿ ನಾನಾ ಪ್ರೈತ್ನಾಚೇ ಫಳ ।
ನಾನಾ ಕಾರ್ಯಸಿದ್ಧೀ ಕೇವಳ । ಕವಿಚೇನಿ ಪ್ರಸಾದೇ ॥೧೪॥

ಕವಿಯುಶಬ್ದರೂಪದ ರತ್ನದ ಸಮುದ್ರವೇ ಆಗಿರುವನು. ಕವಿಯಲ್ಲಿ ಸುಂದರ ಶಬ್ದಗಳ ರಾಶಿಯೇ ಇರುತ್ತದೆ. ಕವಿಯ ಅಂತಕರಣರೂಪಿ ಸರೋವರದಲ್ಲಿ ಮುಕ್ತ ಪುರುಷನು ತೆರೆದ ಮನಸ್ಸಿನಿಂದ ವಿಹಾರ ಮಾಡುವನು. ಮುಕ್ತ ಪುರುಷನ ವಿಲಕ್ಷಣ ಸ್ಥಿತಿಯ ಸರ್ವಾಂಗೀಣ ಕಲ್ಪನೆಯನ್ನು ಕವಿಯೇ ಮಾಡಲು ಶಕ್ತನು. ಬುದ್ಧಿಯ ವಿಲಾಸದ ಅನೇಕ ಪ್ರಕಾರದ ಆಟ ಮಾಡಿ ತೋರಿಸುವ ಕಲಾವಂತನೇ ಕವಿಯ ರೂಪದಿಂದ ಜನ್ಮ ತಳೆಯುವನು. (೪). ಕವಿಯು ಅಧ್ಯಾತ್ಮ ಗ್ರಂಥಗಳ ಖಣಿಯೇ ಆಗಿರುವನು. ಬಹಳಷ್ಟು ಅಧ್ಯಾತ್ಮ ಗ್ರಂಥ ಬರೆಯಬಲ್ಲವನೂ ಆಗಿರುವನು. ಕವಿಯು ಮಾತನಾಡುವ ಚಿಂತಾಮಣಿಯೇ ಆಗಿರುವನು. ಕವಿ ಅಂದರೆ ಶ್ರೋತೃಗಳಿಗೆ ವಿನಾ ಕಷ್ಟದಿಂದ ಕುಡಿಯಲು ಸಿಗುವ ಕಾಮಧೇನುವಿನ ಅಮೃತ ಸಮಾನವಾದ ಹಾಲು ಎಂದು ಹೇಳಬಹುದು, (೫). ಕವಿಗೆ ದಿವ್ಯ ದೃಷ್ಟಿಯ ಕಲ್ಪತರು ಎನ್ನಬಹುದು. ಯಾಕೆಂದರೆ ಬೇಕೆಂದೆನಿಸಿದಾಗ ಪ್ರತಿಭೆ ಅವನ ಸೇವೆಗೆ ಸ್ವತಃ ಸಿದ್ಧಳಿರುವಳು. ಮೋಕ್ಷದ ಸಂಗ್ರಹವನ್ನು ರಕ್ಷಿಸಿಡುವ ಈ ಕವಿಯು ಸಾಯುಜ್ಯ ಮುಕ್ತಿಯಿಂದ ಪಸರಿಸಿದಂಥ ಭವ್ಯ ನೆಲೆಯೇ ಆಗಿರುವನು. ಕವಿಯು ತನ್ನ ಕಾವ್ಯದಲ್ಲಿ ಸಾಯುಜ್ಯ ಮುಕ್ತಿಯ ಬಗ್ಗೆ ಬಹಳ ವಿಸ್ತಾರವಾಗಿ ವರ್ಣನೆ ಮಾಡುತ್ತಾನೆ. (೬). ಮೃತ್ಯುಲೋಕದ ಆಚೆಗೆ ಇರುವ ಜೀವನ ಅವಸ್ಥೆ ಅಂದರೆ ಜೀವನ್ಮುಕ್ತಾವಸ್ಥೆ ಮತ್ತು ಯೋಗಿ ಜನರ ಷಟ್‌ಚಕ್ರ ಭೇದನ ಮಾರ್ಗ,(ಯೋಗಿಗಳ ಗುಪ್ತಮಾರ್ಗ)ಮತ್ತು ಜ್ಞಾನಮಾರ್ಗದಿಂದ ಹೋಗುವವನ ಪರಮಾರ್ಥ ಈ ಮೂರು ಅತಿ ಸೂಕ್ಷ್ಮ ಅಂದರೆ ಇಂದ್ರಿಯಗಳಿಗೆ ಅಗೋಚರ (ಅತೀಂದ್ರಿಯ) ಮತ್ತು ಅತಿಗುಪ್ತವಿರುವವು. ಕವಿಯು ಮಾತ್ರ ತನ್ನ ಶಬ್ದ ಸಾಮಾರ್ಥ್ಯದಿಂದ ಇವನ್ನು ಸಾಕಾರಗೊಳಿಸಿ ಪ್ರಕಟಿಸುವನು. ಸಾಮಾನ್ಯ ಜನತೆಗೂ ಸಹ ತಿಳಿಯುವಂತೆ ಮಾಡುವನು. (೭). ಇದರಂತೆಯೇ ಪರಮಾತ್ಮಸ್ವರೂಪ ಅಥವಾ ಪರಬ್ರಹ್ಮವು ಅತ್ಯಂತ ಶುದ್ಧ, ದೋಷರಹಿತವಿದ್ದು, ತ್ರಿಗುಣಾತೀತವಿರುವದು. ಹಾಗೂ ಮಾಯೆಯ ಆಚೆಗೆ ಇರುವದು. ಮನುಷ್ಯರ ಕಲ್ಪನೆ ಮತ್ತು ಬುದ್ಧಿಗೆ ನಿಲುಕುವದಿಲ್ಲ. ಶಬ್ದಗಳು ಪರಬ್ರಹ್ಮನವರೆಗೆ ಮುಟ್ಟಲಿಕ್ಕೆ ಶಕ್ಯವಿಲ್ಲವಾದರೂ ಕವಿಯು ತನ್ನ ಕಾವ್ಯಶಕ್ತಿಯಿಂದ ಅವನ ಗುರುತು ಹೇಳುವನು. ಪರಿಚಯದ ಪ್ರಯತ್ನ ಮಾಡಿ ಅವನ ಲಕ್ಷಣಗಳನ್ನು ತಿಳಿಸಿಕೊಡುವನು. (೮). ಕವಿಯು ಶ್ರುತಿ (ವೇದಗಳಿ)ಗೆ ಏನು ಹೇಳಬೇಕಾಗಿದೆ ಎಂಬುದರ ರಹಸ್ಯವನ್ನು ಬಿಡಿಸಿ ತೋರಿಸುವನು. ಕವಿಯ ದರ್ಶನವೆಂದರೆ ಪರಮೇಶ್ವರನ ಅಲಭ್ಯ ಲಾಭವೆಂದು ತಿಳಿಯಬೇಕು. ಕವಿಯ ಸಹವಾಸದಿಂದ ಆತ್ಮಜ್ಞಾನ ಸುಲಭವಾಗುವದು. (೯). **ವ್ಯಕ್ತಿಯ ಮೇಲೆ ಮತ್ತು ಮಾನವ ಜೀವನದ ಮೇಲೆ ಯಾವ ಪರಿಣಾಮವಾಗುವದೆಂಬುದನ್ನು ಶ್ರೀಸಮರ್ಥರು ಈಗ ಹೇಳುವರು:–** ಕವಿಯ ಪ್ರತಿಭೆಯಿಂದ ಮೋಕ್ಷಾಪೇಕ್ಷೆಯುಳ್ಳವನಿಗೆ ಹೊಸ ಜ್ಞಾನ ದೃಷ್ಟಿ ದೊರಕುವದು. ಸಾಧಕನಿಗೆ ಯಾವ ಸಾಧನೆ ಮಾಡಬೇಕೆಂಬುದು ತಿಳಿಯುವದು. ಮತ್ತು ಸಿದ್ಧರಿಗೆ ನಿಶ್ಚಯಾತ್ಮಕ ಸಮಾಧಿಯ ಸ್ಥಿರತ್ವ ಪ್ರಾಪ್ತವಾಗುವದು. (೧೦). ಕವಿಯು ತಿಳಿಸಿಕೊಡುವ ಮಾತಿನಿಂದ ಸ್ವಕರ್ತವ್ಯದ ಅರಿವಾಗುವದು. ಮನಸ್ಸನ್ನು ಜಯಿಸುವ ಉಪಾಯದ ಹಾದಿ ತಿಳಿಯುವದು. ಮತ್ತು ಧಾರ್ಮಿಕರಿಗೆ ನೀತಿಯ ಪ್ರವೃತ್ತಿಯಾಗುವದು. (೧೧). ಕವಿಯು ವೈರಾಗ್ಯದ ಮಹತ್ವವನ್ನು ಬಿಂಬಿಸಿ ಮನುಷ್ಯನು ವೈರಾಗ್ಯಶಾಲಿಯಾಗುವಂತೆ ಮಾಡುವನು. ಭಕ್ತರ ಮಹಾತ್ಮ್ಯದ ವರ್ಣನೆಯನ್ನು ಮಾಡಿ ಅವರ ಗೌರವ ಮಾಡುವನು. ಮತ್ತು ಆಚಾರ ಧರ್ಮದ ಅವಶ್ಯಕತೆಯನ್ನು ತಿಳಿಸಿ ಧರ್ಮ ರಕ್ಷಣೆ ಮಾಡುವನು. (೧೨) ಪ್ರೇಮಿ ಪುರುಷನ ಪ್ರೇಮಾವಸ್ಥೆಯನ್ನು ಕವಿಯು ಮಾತ್ರ ತನ್ನ ಸುಂದರ ಶಬ್ದಗಳಿಂದ ಕಟ್ಟಿ ರಚಿಸಬಲ್ಲನು. ಧ್ಯಾನ ಹಚ್ಚುವ ಸಾಧಕರಿಗೆ ಭಗವಂತನ ಅನುಭವವು ಅಂತರಂಗದಲ್ಲಿ ಹೇಗೆ ಬರುವದೆಂಬುದರ ಕಲ್ಪನೆಯನ್ನು ಕವಿಯೇ ಮಾಡಿಕೊಡುವನು. ಮತ್ತು ಭಕ್ತರ ಚರಿತ್ರೆಯನ್ನು ವರ್ಣಿಸಿ ಹೇಳಿ ಅವರ ಕೀರ್ತಿಯನ್ನು ಬಹಳಷ್ಟು ಬೆಳೆಸುವನು. (೧೩). ನಾನಾ ಪ್ರಕಾರದ ಸಾಧನಗಳ ಅರಿವನ್ನು, ತಿಳುವಳಿಕೆಯನ್ನು ಮತ್ತು ಅನೇಕ ಪ್ರಕಾರದ ಸಾಧನಗಳ ಫಲದ ವರ್ಣನೆಯನ್ನು ಕವಿಯೇ ಮಾಡಿಕೊಡುತ್ತಾನೆ. ಇಷ್ಟೇ ಅಲ್ಲ, ಇವನ ಕೃಪೆಯಿಂದಲೇ ಬೇರೆ ಬೇರೆ ಕಾರ್ಯಗಳಲ್ಲಿ ಯಶಃಪ್ರಾಪ್ತಿಯಾಗುವದು. (೧೪)

ಆಧೀ ಕವೀಚಾ ವಾಗ್ವಿಳಾಸ । ತರೀ ಮಗ ಶ್ರವಣೀ ತುಂಬಳೆ ರಸ ।
ಕವೀಚೇನಿ ಮತಿಪ್ರಕಾಶ । ಕವಿತ್ವಾಸ ಹೋಯು ॥೧೫॥
ಕವಿ ವಿತ್ಪನ್ನಾಚೀ ಯೋಗ್ಯತಾ । ಕವಿ ಸಾಮರ್ಥ್ಯವಂತಾಂಚೀಸತ್ತಾ ।
ಕವಿ ವಿಚಕ್ಷಣಾಚೀ ಕುಶಳತಾ । ನಾನಾ ಪ್ರಕಾರೇ ॥೧೬॥
ಕವಿ ಕವಿತ್ವಾಚಾ ಪ್ರಬಂದ । ಕವಿ ನಾನಾ ಧಾಟೀ ಮುದ್ರಾ ಛಂದ ।
ಕವಿ ಗದ್ಯಪದ್ಯೇಭೇದಾಭೇದ । ಪದತ್ರಾಸಕರ್ತೇ ॥೧೭॥
ಕವಿ ಸೃಷ್ಟೀಚಾ ಅಳಂಕಾರ । ಕವಿ ಲಕ್ಷ್ಮೀಚಾ ಶೃಂಘಾರ ।
ಸಕಳ ಸಿದ್ಧೀಚಾ ನಿರ್ಧಾರ । ತೇ ಹೇ ಕವೀ ॥೧೮॥
ಕವಿ ಸಭೇಚೇ ಮಂಡಣ । ಕವಿ ಭಾಗ್ಯಾಚೇ ಭೂಷಣ ।
ನಾನಾ ಸುಖಾಚೇ ಸಂರಕ್ಷಣ । ತೇ ಹೇ ಕವೀ ॥೧೯॥
ಕವಿ ದೇವಾಂಚೆ ರೂಪಕರ್ತೆ । ಕವಿ ಋಷೀಂಚೆ ಮಹತ್ವವರ್ಣಿತೆ ।
ನಾನಾ ಶಾಸ್ತ್ರಾಂಚೇ ಸಾಮರ್ಥ್ಯತೆ । ಕವಿ ವಾಖಾಣಿತೀ ॥೨೦॥
ನಸ್ತಾ ಕವೀಚಾ ವ್ಯಾಪಾರ । ತರೀ ಕೈಂಚಾ ಅಸ್ತಾ ಜಗೋದ್ಧಾರ ।
ಮ್ಹಣೌನಿ ಕವಿ ಹೇ ಆಧಾರ । ಸಕಳ ಸೃಷ್ಟೀಸೀ ॥೨೧॥
ನಾನಾ ವಿದ್ಯಾ ಜ್ಞಾತೃತ್ವ ಕಾಹೀ । ಕವೇಶ್ವರೇವಿಣ ತೋ ನಾಹೀ ।
ಕವೀಪಾಸೂನ ಸರ್ವಹಿ । ಸರ್ವಜ್ಞತಾ ॥೨೨॥
ಮಾಗಾ ವಾಲ್ಮೀಕ ವ್ಯಾಸಾದಿಕ । ಜಾಲೆ ಕವೇಶ್ವರ ಅನೇಕ ।
ತಯಾಪಾಸೂನ ವಿವೇಕ । ಸಕಳ ಜನಾಸೀ ॥೨೩॥
ಪೂರ್ವೀ ಕಾವ್ಯೇ ಹೋತೀ ಕೇಲೀ । ತರೀ ಚ ವಿತ್ಪತ್ತೀ ಪ್ರಾಪ್ತ ಜಾಲೀ ।
ತೇಣೆ ಪಂಡಿತಾಅಂಗೀ ಬಾಣಲೀ । ಪರಮ ಯೋಗ್ಯತಾ ॥೨೪॥
ಏಸೇ ಪೂರ್ವೀ ಥೋರ ಥೋರ । ಜಾಲೆ ಕವೇಶ್ವರ ಅಪಾರ ।
ಆತಾ ಆಹೇತ ಪುಢೇ ಹೋಣಾರ । ನಮನ ತ್ಯಾಸೀ ॥೨೫॥
ನಾನಾ ಚಾತುರ್ಯಾಚ್ಯಾ ಮೂರ್ತೀ । ಕೀ ಹೇ ಸಾಕ್ಷಾತ್ ಬೃಹಸ್ಪತೀ ।
ವೇದ ಶ್ರುತೀ ಬೋಲೋ ಮ್ಹಣತೀ । ಜ್ಯಾಂಚ್ಯಾ ಮುಖೇ ॥೨೬॥
ಪರೋಪಕಾರಾಕಾರಣೇ । ನಾನಾ ನಿಶ್ಚಯು ಅನುವಾದಣೇ ।
ಸೇಖೀ ಬೋಲಿಲೆ ಪೂರ್ಣಪಣೇ । ಸಂಶಯಾತೀತ ॥೨೭॥
ಕೀ ಹೇ ಅಮೃತಾಚೆ ಮೇಘ ವೊಳಲೇ। ಕೀ ಹೇ ನವರಸಾಚೆ ವೋಘ ಲೋಟಲೇ।
ನಾನಾ ಸುಖಾಚೆ ಉಚಂಬಳೆಲೇ । ಸರೋವರ ಹೇ ॥೨೮॥

ಕವಿಯ ವಾಣಿಯ ಲಾವಣ್ಯ ವಿಲಾಸ ಪ್ರಾರಂಭವಾಗಿ ಕಾವ್ಯರಸ ಹೊರಡಹತ್ತಿದರೆ ಅದರಿಂದ ಅನೇಕ ರಸಗಳ ನಿರ್ಮಾಣವಾಗಿ ಕೇಳುವವನ ಕಿವಿಗೆ ಅತ್ಯಂತ ತೃಪ್ತಿಯಾಗುವದು. ಪೂರ್ವಕಾಲದ ಶ್ರೇಷ್ಠ ಕವಿಗಳು ರಚಿಸಿದ ಉತ್ಕೃಷ್ಟ ಕಾವ್ಯಗಳನ್ನು ಓದಿದರೆ ಹೊಸ ಕವಿಗಳಲ್ಲಿ ಕವಿತಾಶಕ್ತಿ ಜಾಗೃತವಾಗುತ್ತದೆ. (೧೫). ಕವಿಯು ವಿದ್ವಾಂಸರ ಯೋಗ್ಯತೆಯನ್ನೂ ಸತ್ತಾಧಾರಿ ಪುರುಷರ ಸತ್ತೆಯನ್ನೂ ಮತ್ತು ಜಾಣ ಪುರುಷರ ಚಾತುರ್ಯವನ್ನೂ ಅನೇಕ ವಿಧ ವಾಗಿ ವರ್ಣಿಸುವನು. (೧೬). ಅನೇಕ ಪ್ರಕಾರದ ಕಾವ್ಯ ಪ್ರಬಂಧ ರಚನೆಯಲ್ಲಿ ಮತ್ತು ನಾನಾ ಪ್ರಕಾರದ ಸಾಹಿತ್ಯ ಗದ್ಯ ಪದ್ಯಾದಿ ವಾಙ್ಮಯಗಳ ಬರವಣಿಗೆಯಲ್ಲಿ ಬೇರೆ ಬೇರೆ ಪ್ರಕಾರದ ಧಾಟಿ, ಛಂದ, ಪ್ರಾಸ ಮತ್ತು ಅಲಂಕಾರ ಗಳನ್ನು ಉಪಯೋಗಿಸುತ್ತಾನೆ. ಹಾಗೂ ಅನೇಕ ಹೊಸ ಹೊಸ ಪ್ರಕಾರಗಳನ್ನು ಬೆಳಕಿಗೆ ತರುತ್ತಾನೆ. (೧೭) ಈ ಚರಾಚರ ಸೃಷ್ಟಿಗೆ ಕವಿಯೊಬ್ಬನು ಒಂದಾನೊಂದು ಸುಂದರ ಆಭರಣದಂತೆ ಶೋಭಿಸಿ ತೋರುವನು. ಕವಿತ್ವದ ಮೂಲಕವಾಗಿ ಐಶ್ವರ್ಯವು ಶೋಭಿಸುವದು. ಕವಿಯು ಎಲ್ಲದರಲ್ಲಿಯೂ ನಿಶ್ಚಿತವಾದ ನಿರ್ಣಯವನ್ನು ಕೊಡ ಬಲ್ಲನು. (೧೮) ಕವಿಯಿಂದ ಸಭೆಗೆ ಶೋಭೆಯು ಬರುವದು. ಭಾಗ್ಯಕ್ಕೆ ಭೂಷಣತ್ವ ಮತ್ತು ನಾನಾ ಪ್ರಕಾರದ ಸುಖಗಳ ಸಂರಕ್ಷಣೆ ಕವಿಯಿಂದ ಆಗುತ್ತದೆ. (೧೯) ಅದೃಶ್ಯ ದೇವನಿಗೆ ಕವಿಯು ರೂಪಕೊಟ್ಟು ದೃಶ್ಯನನ್ನಾಗಿ ಮಾಡುವನು. ಋಷಿಗಳ ಮಹತ್ವವನ್ನು ತಿಳಿಸಿಕೊಡುವನು. ಮತ್ತು ನಾನಾಶಾಸ್ತ್ರಗಳ ಮಹತ್ವ ಹಾಗೂ ಅಧಿಕಾರ ಮತ್ತು ಸ್ಥಾನ ಸಾಮರ್ಥ್ಯವನ್ನು ತಿಳಿಸಿ ಹೇಳುತ್ತಾನೆ. (೨೦) ಶ್ರೇಷ್ಠರಾದ ಕವಿಗಳು ಉತ್ತಮೋತ್ತಮ ಕಾವ್ಯರಚನೆ ಯನ್ನು ಮಾಡದೇ ಇದ್ದಿದ್ದರೆ, ಜಗತ್ತಿನ ಉದ್ಧಾರವಾಗುತ್ತಿರಲಿಲ್ಲ. ಒಟ್ಟಿನ ಮೇಲೆ ಇಡೀ ಮಾನವಜೀವನಕ್ಕೆ ಕವಿಯೇ ದೊಡ್ಡ ಆಧಾರವಾಗಿರುತ್ತಾನೆ (೨೧) ಪೂರ್ವದ ಸಮಕಾಲೀನರಾದ ಮತ್ತು ಮುಂದೆ ಆಗಬಹುದಾದ ಎಲ್ಲ ಕವಿಗಳಿಗೆ ಶ್ರೀ ಸಮರ್ಥರು ವಂದನೆ ಮಾಡುವರು.—ನಾನಾ ಪ್ರಕಾರದ ವಿದ್ಯೆ, ಜ್ಞಾನ ಇವು ಪಂಡಿತ ಕವಿಗಳ ಕಾವ್ಯದ ಹೊರತು ನನಗೆ ಸಿಗಲಿಕ್ಕೆ ಸಾಧ್ಯವಿರಲಿಲ್ಲ. ಕವಿಯಿಂದಲೇ ಸರ್ವಜ್ಞಾನವೂ ಜಗತ್ತಿನಲ್ಲಿ ಪಸರಿಸಿದೆ. (೨೨) ಹಿಂದೆ ವ್ಯಾಸ, ವಾಲ್ಮೀಕಿ ಇತ್ಯಾದಿ ಅನೇಕ ಮಹಾಕವಿಗಳು ಆಗಿ ಹೋಗಿರುವರು. ಇವರೇ ಜನತೆಗೆ ವಿವೇಕವನ್ನು ಕಲಿಸಿ ದವರಾಗಿರುವರು (೨೩) ಹಿಂದೆ ಕಾವ್ಯ ರಚಿಸಿದ್ದರು. ಅವನ್ನು ಪಾಠ ಮಾಡಿದ್ದರಿಂದಲೇ ದೊಡ್ಡ ದೊಡ್ಡ ಪಂಡಿತ ರಿಗೆ ವಿದ್ವತ್ತು ಪ್ರಾಪ್ತವಾಯಿತು. ಈ ವಿದ್ವತ್ತಿನಿಂದಲೇ ಇವರು ಜಗತ್ತಿನೊಳಗೆ ದೊಡ್ಡ ಯೋಗ್ಯತೆಯನ್ನು ಪಡೆ ದರು. (೨೪) ಇಂಥ ದೊಡ್ಡ ಕವಿಗಳು ಪೂರ್ವಕಾಲದಲ್ಲಿ ಬಹಳಷ್ಟು ಜನ ಆಗಿಹೋದರು. ಈಗ ಇರುವರು, ಮುಂದಾದರೂ ಆಗಬಹುದು. ಈ ಎಲ್ಲರಿಗೂ ನಾನು ನಮಸ್ಕಾರ ಮಾಡುತ್ತೇನೆ. (೨೫) **ಕವಿ ಅಂದರೆ ಈಶ್ವರೀ ಶಕ್ತಿಯ ಭಂಡಾರನಿರುವನು:–** ಕವಿಯು ಚಾತುರ್ಯ ಮೂರ್ತಿಯು, ಪ್ರತ್ಯಕ್ಷ ಬೃಹಸ್ಪತಿಯೆಂದೇ ಹೇಳಬಹುದು. ವೇದ, ಶೃತಿಗಳೂ ಸಹ ತಾವು ಕವಿಯ ಮುಖದಿಂದ ಶಬ್ದರೂಪದಲ್ಲಿ ಪ್ರಕಟವಾಗಬೇಕೆಂದು ಇಚ್ಛಿಸುವವು. (೨೬) ಕವಿಯು ಪರೋಪಕಾರಾರ್ಥವಾಗಿಯೇ ತನ್ನ ಕಾವ್ಯಸಾಹಿತ್ಯಗಳಲ್ಲಿ ಅನೇಕ ಪ್ರಕಾರದ ಸಿದ್ಧಾಂತಗಳನ್ನು ಹೇಳುವನು. ಪರಿಪೂರ್ಣವಾದ ಸಂಶಯರಹಿತವಾದ ಸಿದ್ಧಾಂತಗಳನ್ನು ಕೊನೆಯಲ್ಲಿ ಹೇಳುವನು. (೨೭) ಕವಿಯೆಂದರೆ ಜನತೆಯ ಮೇಲೆ ಕಾವ್ಯಾಮೃತದ ಮಳೆಯನ್ನು ಕರೆಯುವ ಮೇಘ. ಅಥವಾ ನವರಸಗಳಿಂದ ತುಂಬಿ ಹರಿಯುವ ದೊಡ್ಡ ಪ್ರವಾಹ ಅಥವಾ ಅನೇಕ ಪ್ರಕಾರದ ಸುಖಗಳಿಂದ ತುಂಬಿ ಹೊರಚೆಲ್ಲುವ ಸರೋವರವೆಂದು ಹೇಳಬಹುದು. (೨೮)

ಕೀ ಹೇ ವಿವೇಕನಿಧೀಚೀ ಭಾಂಡಾರೇ । ಪ್ರಗಟ ಜಾಲೀ ಮನುಷ್ಯಾಕಾರೇ ।
ನಾನಾ ವಸ್ತೂಚೇನಿ ವಿಚಾರೇ । ಕೋಂದಾಟಲೇ ಹೇ ॥೨೯॥
ಕೀ ಹೇ ಆದಿಶಕ್ತೀಚೇ ಠೇವಣೇ । ನಾನಾ ಪದಾರ್ಥಾಸ ಆಣೇ ಉಣೇ ।
ಲಾಧಲೇ ಪೂರ್ವ ಸಂಚಿತಾ ಚ್ಯಾ ಗುಣೇ । ವಿಶ್ವಜನಾಸೀ ॥೩೦॥
ಕೀ ಹೇ ಸುಖಾಚೀ ತಾರುವೇ ಲೋಟಲೀ । ಆಕ್ಷೈ ಆನಂದೇ ಉತಟಲೀ ।
ವಿಶ್ವಜನಾಸ ಉಪೇಗಾ ಆಲೀ । ನಾನಾ ಪ್ರಯೋಗಾಕಾರಣೇ ॥೩೧॥
ಕೀ ಹೇ ನಿರಂಜನಾಚೀ ಸಂಪತ್ತೀ । ಕೀ ಹೇ ವಿರಾಟಾಚೀ ಯೋಗಸ್ಥಿತೀ ।
ನಾತರೀ ಭಕ್ತೀಚೀ ಫಳಶ್ರುತೀ । ಫಳಾಸ ಆಲೀ ॥೩೨॥
ಕೀ ಹಾ ಈಶ್ವರಾಚಾ ಪವಾಡ । ಪಾಹಾತಾ ಗಗನಾಹೂನ ವಾಡ ।
ಬ್ರಹ್ಮಾಂಡರಚನೇಹೂನ ಜಾಡ । ಕವಿ ಪ್ರಬಂದ ರಚನಾ ॥೩೩॥
ಆತಾ ಅಸೋ ಹಾ ವಿಚಾರ । ಜಗಾಸ ಆಧಾರ ಕವೇಶ್ವರ ।
ತಯಾಸೀ ಮಾಝಾ ನಮಸ್ಕಾರ । ಸಾಷ್ಟಾಂಗ ಭಾವೇ ॥೩೪॥

ಇತಿ ಶ್ರೀದಾಸಬೋಧೆ ಗುರುಶಿಷ್ಯಸಂವಾದೇ
ಕವೇಶ್ವರ ಸ್ತವನನಾಮ ಸಮಾಸ ಸಾತವಾ ॥

• •

ಕವಿಯು ಮನುಷ್ಯರೂಪದಿಂದ ಪ್ರಕಟವಾದ ವಿವೇಕರೂಪದ ಸಂಪತ್ತಿನ ಸಂಗ್ರಹಾಗಾರವಾಗಿರುವನು. ಇವನ ಅಂತರಂಗವು ಪರಮಾತ್ಮ ವಸ್ತುವಿನ ವಿಚಾರದಿಂದಲೇ ಪರಿಪೂರ್ಣವಾಗಿ ತುಂಬಿರುತ್ತದೆ. (೨೯) ಆದಿ ಪುರುಷ ನಲ್ಲಿ ಮರೆಯಾಗಿ ಇರುವ ಈಶ್ವರನ ನಿಜ ಶಕ್ತಿ ಅಂದರೆ ಮಹಾಮಾಯೆಯು. ಇವಳ ಇಡುಗಂಟಾಗಿರುವ ಮರ್ಮ ಸ್ಥಾನವೆಂದರೆ ಕವಿಗಳಾಗಿರುವರು. ಕಾಣಬರುವ ಜಗತ್ತಿನಲ್ಲಿಯ ಎಲ್ಲ ಪದಾರ್ಥಗಳಲ್ಲಿ ನ್ಯೂನತೆ, ದೋಷ ಕಂಡುಬರು ವಂತೆ ಮಾಡುವ ಮತ್ತು ಹೀನಗಳೆಯುವ ಈ ಮಾಯಾ ಠೇವು (ಇಡುಗಂಟು) ಪೂರ್ವ ಪುಣ್ಯದ ಬಲದಿಂದ ಸರ್ವ ಜನರಿಗೂ ಲಭಿಸುವಂತೆ ಕವಿಗಳೇ ಮಾಡುವರು. (೩೦) ಕವಿಗಳೆಂದರೆ ಅಕ್ಷಯ ಸ್ವಾನಂದ, ಅಂದರೆ ಆತ್ಮಾನಂದ- ಬ್ರಹ್ಮಾನಂದದಿಂದ ಸಿಗುವ ಆನಂದದಿಂದ ಪೂರ್ಣ ತುಂಬಿದ ಸೌಖ್ಯದ ನೌಕೆಯಾಗಿದೆ. ಜೀವನ ಪ್ರವಾಹದಲ್ಲಿ ತೇಲು ವಂಥ ಈ ನೌಕೆಯು ಅನೇಕ ಯೋಜನೆ, ಅನೇಕ ಉದ್ಯೋಗಗಳನ್ನು ಸಫಲಗೊಳಿಸಲು ಯಾವತ್ತೂ ಜನರಿಗೆ ಉಪ ಯೋಗ ಬೀಳುತ್ತದೆ. (೩೧) ಕವಿಗಳೇ ಅತ್ಯಂತ ಶುದ್ಧವಾದ ಪರಬ್ರಹ್ಮನ ಐಶ್ವರ್ಯವಾಗಿರುವರು. ದೃಶ್ಯ (ತೋರಿ ಬರುವ) ವಿಶ್ವವನ್ನು ಈಶ್ವರನಂತೆ ಅಂತರ್ಯಾಮಿ ಆಗಿ ಸಂರಕ್ಷಿಸುವ ಆ ವಿರಾಟ ಪುರುಷ ವಿಶ್ವಾತ್ಮಕ ದೇವನ ಧ್ಯಾನಾವಸ್ಥೆ ಅಂದರೇನೇ ಈ ಕವಿಯು. ಭೇದಗಳಿಂದ ತುಂಬಿದ ವಿಶ್ವದಲ್ಲೆಲ್ಲ ವ್ಯಾಪಿಸಿ ಇದ್ದರೂ ಸಹ ಈಶ್ವರನು ಅಭೇದಾವಸ್ಥೆಯಲ್ಲಿಯೇ ಇರುತ್ತಾನೆ. ಭೇದದಲ್ಲಿ ಇದ್ದರೂ ಭೇದದ ಎಚ್ಚರ, ಅರಿವು ಇವನಿಗೆ ಇರುವದಿಲ್ಲ. ಇದೇ ಇವನ ಧ್ಯಾನಮಗ್ನಾವಸ್ಥೆಯು. ಇದಕ್ಕೆ ಕವಿರೂಪವೆನ್ನುವರು. ಕಾವ್ಯ ಹುಟ್ಟುವಾಗ ಕವಿಯು ಧ್ಯಾನಮಗ್ನನಿರುವನು. ಈಶ್ವರನೊಂದಿಗೆ ತಾದಾತ್ಮ್ಯ ಹೊಂದುವನು. ಕವಿ ಅಂದರೆ ಸಾಕಾರಗೊಂಡ ಭಕ್ತಿಯ ಪರಿಣಾಮವಾಗಿದೆ. ಭಗವಂತನ ಪ್ರೇಮದ ಕಲ್ಪನೆಯನ್ನು ಕವಿಯು ಪ್ರತ್ಯಕ್ಷವಾಗಿ ಮಂಡಿಸಿ ತೋರಿಸುವನು. (೩೨) ಆಕಾಶಕ್ಕಿಂತಲೂ ವಿಶಾಲವಾದ ಈಶ್ವರನ ದಿವ್ಯ ಗುಣಕರ್ಮವೆಂದರೆ ಕವಿಯೇ ಸರಿ. ಅಂತೆಯೇ ಕವಿಯ ಕಾವ್ಯರಚನೆಯು ಈ ಬ್ರಹ್ಮಾಂಡಕ್ಕಿಂತ ವಿಶಾಲವಾಗಿರುವದು. (೩೩) ಕವಿ ವರ್ಣನೆಯ ನನ್ನ ವಿಚಾರಗಳನ್ನು ನಾನು ಇನ್ನು ಪೂರ್ಣಗೊಳಿಸುವೆನು. ಮಹಾ ಕವಿಯು ಈ ಜಗದ ಅಂದರೆ ಮಾನವ ಸಮಾಜದ ಆಧಾರನಾಗಿರುವದರಿಂದ ಇವನಿಗೆ ಮನಃಪೂರ್ವಕವಾಗಿ ಸಾಷ್ಟಾಂಗ ನಮಸ್ಕಾರ ಮಾಡುವೆನು. (೩೪)

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ
"ಕವೀಶ್ವರ ಸ್ತವನ" ಎಂಬ ಹೆಸರಿನ ೧ನೆಯ ದಶಕದ
ಏಳನೆಯ ಸಮಾಸವು
ಮುಗಿದುದು.

● ●

### ಸಮಾಸ ಆಠವಾ : ಸಭಾ ಸ್ತವನ

॥ಶ್ರೀರಾಮ॥ ಆತಾ ವಂದೂ ಸಕಳ ಸಭಾ । ಜಯೆ ಸಭೇಸೀ ಮುಕ್ತಿ ಸುಲ್ಲಭಾ ।
ಜೇಥೆ ಸ್ವಯೇ ಜಗದೀಶ ಉಭಾ । ತಿಷ್ಠತು ಭರೇ ॥೧॥

**ಶ್ಲೋಕ** ॥ ನಾಹಂ ವಸಾಮಿ ವೈಕುಂಠೇ ಯೋಗಿನಾಂ ಹೃದಯೇ ರವೌ ।
ಮದ್‌ಭಕ್ತಾ ಯತ್ರ ಗಾಯಂತಿ ತತ್ರ ತಿಷ್ಠಾಮಿ ನಾರದ ॥

ನಾಹೀ ವೈಕುಂಠೀಚಾ ಠಾಈ । ನಾಹೀ ಯೋಗಿಯಾಂಚಾ ಹೃದಈ ।
ಮಾಝೆ ಭಕ್ತ ಗಾತೀ ಠಾಈ ಠಾಈ । ತೇಥೇ ಮೀ ತಿಷ್ಠತು ನಾರದಾ ॥೨॥

# ಸಮಾಸ ೮. ಸಭಾ ಸ್ತವನ (ನುಡಿ ೨೯)

ಸುಸಂಸ್ಕೃತ ಸಮಾಜದಲ್ಲಿರುವ ಜನತೆಯ ಜೀವನದಲ್ಲಿ ಸಭೆ ಸಮ್ಮೇಳನಗಳಿಗೆ ಎಷ್ಟೊಂದು ಮಹತ್ವ ವಿದೆಯೆಂಬುದು ಶಹರಗಳಲ್ಲಿ ವಾಸಿಸುವ ನಾಗರಿಕರಿಗೆ ಮಾತ್ರ ಹೆಚ್ಚು ಗೊತ್ತಿರುವದೇ ಆಗಿದೆ. ಶಿಕ್ಷಣ, ರಾಜಕಾರಣ ವ್ಯಾಪಾರ, ಧರ್ಮಕಾರಣ, ನಾಟಕ, ಸಂಗೀತ, ಆಟ ಇತ್ಯಾದಿ ಕ್ಷೇತ್ರಗಳ ಮಧ್ಯದಲ್ಲಿ ಸಭೆ ಸಮ್ಮೇಳನಗಳು ಯಾವ ಕಾರ್ಯ ಮಾಡುವವೋ, ಅಷ್ಟೇ ಏಕೆ ಅದಕ್ಕಿಂತ ಹೆಚ್ಚಿನ ಕಾರ್ಯವು ಪರಮಾರ್ಥ ಸಭೆಗಳಲ್ಲಿ ಆಗಬಹುದಾಗಿದೆ. ಮೊದಲಿಗೆ ನಿಶ್ಚಿತಪಡಿಸಿದ ಸಮಯ ಮತ್ತು ಸ್ಥಳದಲ್ಲಿ ಗೊತ್ತುಪಡಿಸಿದ ಕಾರ್ಯದ ಬಗ್ಗೆ ಒಟ್ಟುಗೂಡುವ ಮರ್ಯಾದಿತ ಜನ ಸಮೂಹಕ್ಕೆ ಸಭೆ(ಸಮ್ಮೇಲನ) ಅನ್ನುವರು. ಈ ಸಮಾಸದಲ್ಲಿ ಶ್ರೀ ಸಮರ್ಥರು ಆಧ್ಯಾತ್ಮಿಕ ಸಭೆಯ ಅಂದರೆ ಕೀರ್ತನ, ಪ್ರವಚನಗಳನ್ನು ಕೇಳಲು ಕೂಡುವ ಜನಸಮೂಹದ ವರ್ಣನೆಯನ್ನು ಮಾಡುವರು. ಆಧ್ಯಾತ್ಮಿಕ ಸಭೆಗೆ ಬರುವವರು ಭಗವಂತನ ಮೇಲೆ ಪ್ರೇಮ ಮಾಡುವವರೇ ಇರುವರು. ಇಂಥ ಚಿಂತನಶೀಲರು ಶಿಸ್ತಿನಿಂದ ನಡೆಯುವರು. ವಕ್ತಾ ಭಾಷಣ. ಪ್ರವಚನ ಮಾಡುವಾಗ ಮಧ್ಯದಲ್ಲಿಯೇ ಸಂತೋಷ ಸೂಚಿಸುವ ಸಮಯ ಬಂದಾಗ ಸಂಯಮವನ್ನು ಕಳೆದುಕೊಳ್ಳುವದಿಲ್ಲ. ಆದರೆ ಇಂಥ ಸಭೆಗಳ ವೈಶಿಷ್ಟ್ಯವೇನೆಂದರೆ. ಮೊದಲ ನೆಯದಾಗಿ ಅತ್ಯಂತ ಪವಿತ್ರ ವಾತಾವರಣ ನಿರ್ಮಾಣಗೊಂಡಿರುತ್ತದೆ. ತನ್ಮೂಲಕವಾಗಿ ಸಭಾಸದರ ಮನವು ಹೆಚ್ಚಿನ ಶುದ್ಧತೆಯ ಸ್ತರದಲ್ಲಿ ನಿರಾಯಾಸದಿಂದ ಆರೂಢವಾಗಿರುತ್ತದೆ. ಎರಡನೆಯ ಮಹತ್ವದ ಮಾತೆಂದರೆ, ಕೇಳುವವರು (ಶ್ರೋತಾ) ಹೇಳುವವ (ವಕ್ತಾ)ನಲ್ಲಿ ಬಹು ಬೇಗ ತಾದಾತ್ಮ್ಯ ಹೊಂದಿ ಶ್ರೋತೃಗಳು ದೇಹದ ಮೇಲಿನ ಎಚ್ಚರ ಕಳೆದುಕೊಳ್ಳುವರು. ಮತ್ತು ಇವರಿಂದ ಕೆಲವೊಂದು ಸಮಯವವರೆಗಾದರೂ ಅಂಥವರು ಭಗವಂತನ ಪ್ರೇಮದಲ್ಲಿ ಮುಳುಗುವರು. ಮೂರನೆಯ ವೈಶಿಷ್ಟ್ಯವೇನೆಂದರೆ, ಆಧ್ಯಾತ್ಮಿಕಸಭೆಯಲ್ಲಿ ತರ್ಕಕ್ಕಿಂತ ಶ್ರದ್ಧೆಗೆ,ವಿಶ್ವಾಸಕ್ಕೆ ಪ್ರಾಧಾನ್ಯ ವಿರುವದು. ಶ್ರದ್ಧೆಯ ಭೂಮಿಕೆ ಉಳ್ಳವನಾಗಿಯೇ ಶ್ರೋತೃವು ಶ್ರವಣ ಮಾಡಲಿಕ್ಕೆ ಬಂದು ಕುಳಿತಿರುವನು. ಈ ಕಾರಣದಿಂದ ವಕ್ತಾ ಹೊಸದೇನನ್ನೂ ಹೇಳದೇ ಇದ್ದರೂ ಬೇಸರ ಪಡುವದಿಲ್ಲ. ಕೇಳಿದ್ದನ್ನೇ ಪುನಃ ಮನಃಪೂರ್ವಕ ಕೇಳುವನು. ನಾಲ್ಕನೆಯ ವೈಶಿಷ್ಟ್ಯವೆಂದರೆ, ಪ್ರೇಮ, ಮೈತ್ರಿ. ದಯಾ, ವಾತ್ಸಲ್ಯ, ಕ್ಷಮಾ, ಸಹಕಾರ್ಯ ಸಹಾ ನುಭೂತಿ ಇತ್ಯಾದಿ ದೈವೀ ಭಾವನೆಗಳನ್ನು ಮನಃಪೂರ್ವಕವಾಗಿ ಆವಾಹನ ಮಾಡಿರುತ್ತದೆ. ಇದರಿಂದ ಶ್ರೋತೃ ವಿನ ಅಂತಃಕರಣದಲ್ಲಿ ಇಂಥ ಶುದ್ಧ ಮತ್ತು ಕಲ್ಯಾಣಕರ ಭಾವನೆಗಳು ಪರಿಪೋಷಣೆಗೊಳ್ಳದೇ ಇರಲಾರವು. ಆದುದರಿಂದ ಯಾರಿಗೆ ಪರಮಾರ್ಥ ಸಾಧಿಸಿಕೊಳ್ಳುವದಿದೆಯೋ ಅವರು ಇಂಥ ಸಭೆ ಸಮ್ಮೇಲನಗಳಲ್ಲಿ ತಪ್ಪದೇ ಬಂದು ಶಿಸ್ತಿನಿಂದ ಕುಳಿತು ಮನಗೊಟ್ಟು ಶ್ರವಣ ಮಾಡಬೇಕೆಂಬುದೇ ಶ್ರೀಸಮರ್ಥರ ಆಗ್ರಹದ ಹೇಳಿಕೆ ಇರುವದು. ಇದು ಅತ್ಯಂತ ಸಮರ್ಪಕವಾದದ್ದೇ ಇರುವದು.

## ಸಮಾಸ ೮ ಸಭಾ ಸ್ತವನ

**ಶ್ರೀ ಸಮರ್ಥರು ಪ್ರಥಮದಲ್ಲಿ ಅಧ್ಯಾತ್ಮಿಕ ಸಭೆಯ ಶ್ರೇಷ್ಠತ್ವವನ್ನು ಹೇಳುವರು:**–ಈಗ ನಾನು ಎಲ್ಲ ಪ್ರಕಾರದ ಅಧ್ಯಾತ್ಮಿಕ ಸಭೆಗಳನ್ನು ವಂದಿಸುತ್ತೇನೆ. ಇಂಥ ಸಭೆಯಲ್ಲಿ ಮುಕ್ತಿಯು ಸುಲಭವಿರುವದು. ಇಂಥಲ್ಲಿ ಈಶ್ವರನು ತಾನಾಗಿ ಪ್ರೇಮದಿಂದ ಕಾಯುತ್ತ ನಿಂತಿರುವನು. [೧] **ಶ್ಲೋಕ:**– ನಾಹಂ ವಸಾಮಿ ವೈಕುಂಠೇ ಯೋಗಿನಾಂ ಹೃದಯೇ ರವೌ । ಮದ್‌ಭಕ್ತಾಯತ್ರಗಾಯನ್ತಿ ತತ್ರ ತಿಷ್ಠಾಮಿನಾರದ ॥ಥ॥ **ಶ್ಲೋಕದ ಅರ್ಥ:**– ಭಗವಂತನು ನಾರದನಿಗೆ ಹೇಳುತ್ತಾನೆ, "ನಾರದಾ, ನಾನು ವೈಕುಂಠ, ಯೋಗಿಗಳ ಹೃದಯ ಅಥವಾ ಸೂರ್ಯ ಈ ಸ್ಥಳದಲ್ಲಿ ಇರುವದಿಲ್ಲ. ನನ್ನ ಭಕ್ತರು ಎಲ್ಲಿ ಹಾಡುವರೋ, ಭಜನೆ ಮಾಡುವರೋ ಅಲ್ಲಿ ನಾನು ನಿಂತಿರುತ್ತೇನೆ" ನಾನು ವೈಕುಂಠದಲ್ಲಿ ಸಿಗುವದಿಲ್ಲ. ಯೋಗಿಗಳ ಹೃದಯದಲ್ಲಿ ತೋರಿಬರುವದಿಲ್ಲ. ಆದರೆ ನನ್ನ ಭಕ್ತರು ಯಾವ ಯಾವ ಸ್ಥಳದಲ್ಲಿ ಗಾಯನ ಮಾಡುವರೋ, ನನ್ನನ್ನು ಸ್ಮರಿಸುವರೋ, ಆ ಸ್ಥಳದಲ್ಲಿ ನಾನು ನಿಂತಿರುತ್ತೇನೆ. [೨]

ಯಾಕಾರಣೇ ಸಭಾಶ್ರೇಷ್ಠ । ಭಕ್ತಗಾತೀ ತೇ ವೈಕುಂಠ ।
ನಾಮಘೋಷೇ ಘಡಘಡಾಟ । ಜಯ ಜಯಕಾರೇ ಗರ್ಜತೀ ॥೩॥
ಪ್ರೇಮಳ ಭಕ್ತಾಂಚೀ ಗಾಯನೇ । ಭಗವತ್ಕಥಾ ಹರಿಕೀರ್ತನೆ ।
ವೇದವ್ಯಾಖ್ಯಾನ ಪುರಾಣ ಶ್ರವಣೇ । ಜೇಥೇ ನಿರಂತರ ॥೪॥
ಪರಮೇಶ್ವರಾಚೆ ಗುಣಾನುವಾದ । ನಾನಾ ನಿರೂಪಣಾಚೆ ಸಂವಾದ ।
ಅಧ್ಯಾತ್ಮವಿದ್ಯಾ ಭೇದಾಭೇದ । ಮಥನ ಜೇಥೇ ॥೫॥
ನಾನಾ ಸಮಾಧಾನೇ ತೃಪ್ತೀ । ನಾನಾ ಆಶಂಕಾ ನಿವೃತ್ತೀ ।
ಚಿತ್ತೀ ಬೈಸೆ ಧ್ಯಾನಮೂರ್ತಿ । ವಾಗ್ವಿಳಾಸೆ ॥೬॥
ಭಕ್ತ ಪ್ರೇಮಳ ಭಾವಿಕ । ಸಭ್ಯ ಸಖೋಲ ಸಾತ್ವಿಕ ।
ರಮ್ಯ ರಸಾಳ ಗಾಯಕ । ನಿಷ್ಠಾವಂತ ॥೭॥
ಕರ್ಮಸೀಳ ಆಚಾರಸೀಳ । ದಾನಸೀಳ ಧರ್ಮಸೀಳ ।
ಸುಚಿಸ್ಮಂತ ಪುಣ್ಯಸೀಳ । ಅಂತರಶುದ್ಧ ಕೃಪಾಳು ॥೮॥
ಯೋಗೀ ವೀತರಾಗೀ ಉದಾಸ । ನೇಮಕ ನಿಗ್ರಹ ತಾಪಸ ।
ವಿರಕ್ತ ನಿಸ್ಪೃಹ ಬಹುವಸ । ಆರಣ್ಯವಾಸೀ ॥೯॥
ದಂಡಧಾರೀ ಜಟಾಧಾರೀ । ನಾಥಪಂಥೀ ಮುದ್ರಾಧಾರೀ ।
ಯೇಕ ಬಾಳ ಬ್ರಹ್ಮಚಾರೀ । ಯೋಗೇಶ್ವರ ॥೧೦॥
ಪುರಶ್ಚರಣೀ ಆಣೀ ತಪಸ್ವೀ । ತೀರ್ಥವಾಸೀ ಆಣೀ ಮನಸ್ವೀ ।
ಮಹಾಯೋಗೀ ಆಣೀ ಜನಸ್ವೀ । ಜನಾಸಾರಖೇ ॥೧೧॥
ಸಿದ್ಧ ಸಾಧು ಆಣೀ ಸಾಧಕ । ಮಂತ್ರಯಂತ್ರ ಶೋಧಕ ।
ಯೇಕ ನಿಷ್ಠ ಉಪಾಸಕ । ಗುಣಗ್ರಾಹೀ ॥೧೨॥
ಸಂತ ಸಜ್ಜನ ವಿದ್ವಜ್ಜನ । ವೇದಜ್ಞ ಶಾಸ್ತ್ರಜ್ಞ ಮಹಾಜನ ।
ಪ್ರಬುದ್ಧ ಸರ್ವಜ್ಞ ಸಮಾಧಾನ । ವಿಮಳಕರ್ತೇ ॥೧೩॥
ಯೋಗೀ ವಿತ್ಪನ್ನ ಋಷೇಶ್ವರ । ಧೂರ್ತ ತಾರ್ಕಿಕ ಕವೇಶ್ವರ ।
ಮನೋಜಯಾಚೆ ಮುನೇಶ್ವರ । ಆಣೀ ದಿಗ್ವಲ್ಕೀ ॥೧೪॥
ಬ್ರಹ್ಮಜ್ಞಾನೀ ಆತ್ಮಜ್ಞಾನೀ । ತತ್ವಜ್ಞಾನೀ ಪಿಂಡಜ್ಞಾನೀ ।
ಯೋಗಾಭ್ಯಾಸೀ ಯೋಗಜ್ಞಾನೀ । ಉದಾಸೀನ ॥೧೫॥
ಪಂಡಿತ ಆಣೀ ಪುರಾಣಿಕ । ವಿದ್ವಾಂಸ ಆಣೀ ವೈದಿಕ ।
ಭಟ ಆಣೀ ಪಾಠಕ । ಯೆಜುರ್ವೇದೀ ॥೧೬॥

ಅದಕ್ಕಾಗಿ ಸಭೆಯು ಶ್ರೇಷ್ಠವೆಂದು ತಿಳಿಯಬೇಕು. ಎಲ್ಲಿ ಭಕ್ತರು ಭಗವಂತನ ಗುಣಗಾನವನ್ನು ಮಾಡುವರೋ ಅದೇ ಸ್ಥಳ ವೈಕುಂಠವೆಂದು ತಿಳಿಯಬೇಕು. ಅಂಥಲ್ಲಿ ನಾಮಘೋಷದ ಗರ್ಜನೆಯು ಮತ್ತು ಭಗವಂತನ ಜಯ ಜಯ ಕಾರವು ಇರುವದು. (೩). **ಸಭೆಯಲ್ಲಿ ಯಾವ ಕಾರ್ಯಕ್ರಮಗಳು ನಡೆಯುವವು**:– ಪ್ರೇಮಿ ಭಕ್ತರ ಗಾಯನ, ಭಗವಂತನ ಕಥೆ, ಹರಿಕೀರ್ತನ, ವೇದಗಳ ಬಗ್ಗೆ ಭಾಷಣ, ಪ್ರವಚನ ಮತ್ತು ಪುರಾಣಗಳ ಶ್ರವಣ ಈ ಕಾರ್ಯಕ್ರಮಗಳು ಆಧ್ಯಾತ್ಮಿಕ ಸಭೆಯಲ್ಲಿ ನಿರಂತರ ನಡೆಯುತ್ತಿರುವವು. (೪). ಇದರಿಂದ ಪರಮೇಶ್ವರನ ಗುಣಾನುವಾದಗಳೂ ನಡೆಯುವವು. ಪರಮಾರ್ಥದ ಅನೇಕ ಅಂಗ (ಭಾಗ)ಗಳ ಬಗ್ಗೆ ನಿರೂಪಣೆಗಳು ಆಗುವವು. ಮತ್ತು ಪ್ರಶ್ನೋತ್ತರ ರೂಪದ ಸಂವಾದಗಳು ನಡೆಯುವವು. ಇವಲ್ಲದೇ ಆತ್ಮ ವಿದ್ಯೆಯಲ್ಲಿ ಅನೇಕ ಭೇದಾಭೇದ ಗಳಿರುವದರಿಂದ ಅಂಥವುಗಳ ಬಗ್ಗೆ ಹೆಚ್ಚಿನ ಚರ್ಚೆ ನಡೆಯುತ್ತದೆ. ತನ್ಮೂಲಕ ಈ ಗುಹ್ಯ ವಿಷಯದ ವಿಚಾರ ಮಂಥನವಾಗುತ್ತದೆ. (೫). ಸಭೆಯಲ್ಲಿ ಅನೇಕ ಪ್ರಕಾರದ ಶಂಕಾನುಶಂಕಾಗಳ ನಿರಸನ (ಪರಿಹಾರ)ವಾಗಿ ತನ್ಮೂಲಕ ಮನುಷ್ಯನಿಗೆ ಸಮಾಧಾನವಾಗಿ ಅವನ ಮನಸ್ಸು ತೃಪ್ತಿ ಹೊಂದುವದು. ಅಲ್ಲಿ ನಡೆಯುವ ಸುಂದರ ಸಂಭಾಷಣ ಗಳಿಂದ ಶ್ರೋತೃವಿನ ಮನದಲ್ಲಿ ಅವನ ಉಪಾಸ್ಯ ದೇವತೆಯ ಮೂರ್ತಿ ಸ್ಥಿರಗೊಳ್ಳುವದು.(೬)**ಅಧ್ಯಾತ್ಮಿಕ ಸಭೆ ಯಲ್ಲಿಯ ಸಭಾಸದರ ಯಾದಿ**:– ಇಂಥ ಸಭೆಯಲ್ಲಿ ಮುಂದೆ ವರ್ಣಿಸಿರುವಂಥ ಸಭಾಸದರು ಕುಳಿತಿರುತ್ತಾರೆ. ಭಕ್ತ. ಪ್ರೇಮಳ, ಭಾವಿಕ, ಶ್ರೇಷ್ಠಜ್ಞಾನಿ. ಸಾತ್ವಿಕ, ರಮ್ಯವಾಗಿ ರಸಭರಿತವಾಗಿ ಹಾಡುವವ, ನಿಷ್ಠಾವಂತ. (೭) ಕರ್ಮನಿಷ್ಠ, ಆಚಾರನಿಷ್ಠ, ದಾನಶೀಲ, ಧರ್ಮನಿಷ್ಠ, ಪವಿತ್ರ, ಪುಣ್ಯಶೀಲ, ಶುದ್ಧ ಅಂತಃಕರಣದ ಕೃಪಾಳು.(೮) ಯೋಗಿ, ವಿರಕ್ತ, ನಿಸ್ಪೃಹ, ಹೆಚ್ಚು ಕಾಲ ಅರಣ್ಯದಲ್ಲಿರುವವ, ಉದಾಸ, ನೇಮದಿಂದ ನಡೆಯುವವ, ಇಂದ್ರಿಯ ನಿಗ್ರಹವುಳ್ಳವ, ತಾಪಸಿ, (೯). ದಂಡಾಧಾರಿ, ಜಟಾಧಾರಿ, ನಾಥ ಪಂಥದವ, ಮುದ್ರಾಧಾರಿ, ವೈಷ್ಣವ, ಬಾಲ ಬ್ರಹ್ಮಚಾರಿ,ದೊಡ್ಡ(ಶ್ರೇಷ್ಠ)ಯೋಗಿ(೧೦). ಪುರಶ್ಚರಣ ಮಾಡುವವ, ತಪಸ್ವಿ, ತೀರ್ಥವಾಸಿ, ಮನಸ್ಸನ್ನು ಗೆದ್ದವ, ಮಹಾಯೋಗಿ, ಜನತೆಯಲ್ಲಿದ್ದುಕೊಂಡು. ಅವರಿಂದ ಅಲಿಪ್ತನಾಗಿರುವವ, (೧೧). ಸಿದ್ಧ. ಸಾಧು, ಸಾಧಕ.ಮಂತ್ರ ತಂತ್ರ ಮಾಡಿಕೊಡುವವ, ಏಕನಿಷ್ಠ, ಉಪಾಸಕ. ಗುಣಗ್ರಾಹಿ, (೧೨) ಸಂತ, ಶರಣ, ಸಜ್ಜನ, ದಾಸ, ವಿದ್ವಾಂಸ, ವೇದಜ್ಞ, ಶಾಸ್ತ್ರಜ್ಞ, ಮಹಾಜನರು, ಪ್ರೌಢ. ಸರ್ವಜ್ಞ, ಶುದ್ಧ, ಸಂಶಯ ರಹಿತ, ಸಮಾಧಾನ ಮಾಡುವವ. (೧೩). ಯೋಗಿ, ಪ್ರವೀಣ, ವಿದ್ಯಾವಂತ, ಋಷೀಶ್ವರ, ಧೂರ್ತ, ತಾರ್ಕಿಕ, ಮಹಾ ಕವಿ, ಮನೋಜಯ ಹೊಂದಿದ ಹಿರಿಯ ಮುನಿ, ದಿಗಂಬರ. (೧೪). ಬ್ರಹ್ಮಜ್ಞಾನಿ, ಆತ್ಮಜ್ಞಾನಿ, ತತ್ವಜ್ಞಾನಿ, ಪಿಂಡಜ್ಞಾನಿ, ಅಥವಾ ಶರೀರ ಜ್ಞಾನಿ, ಯೋಗಾಭ್ಯಾಸಿ, ಯೋಗಜ್ಞಾನಿ, ಉದಾಸೀನ, (೧೫). ಪಂಡಿತ, ಪುರಾಣಿಕ, ವಿದ್ವಾನ ವೈದಿಕ, ಭಟ್ಟ, ಯಜುರ್ವೇದಿ ಪಾಠಕ. (೧೬).

ಮಾಹಾಭಲೇ ಮಾಹಾಶ್ರೋತ್ರೀ । ಯಾಜ್ಞಿಕ ಆಣೀ ಅಗ್ನಿಹೋತ್ರೀ ।
ವೈದ್ಯ ಆಣೀ ಪಂಚಾಕ್ಷರೀ । ಪರೋಪಕಾರಕರ್ತೇ ॥೧೭॥
ಭೂತ ಭವಿಷ್ಯ ವರ್ತಮಾನ । ಜಯಾಸ ತ್ರಿಕಾಳಾಚೇ ಜ್ಞಾನ ।
ಬಹುಶ್ರುತ ನಿರಾಭಿಮಾನ । ನಿರಾಪೇಕ್ಷೀ ॥೧೮॥
ಶಾಂತಿ ಕ್ಷಮಾ ದಯಾಸೀಳ । ಪವಿತ್ರ ಆಣೀ ಸತ್ವಸೀಳ ।
ಅಂತರಶುದ್ಧ ಜ್ಞಾನಸೀಳ । ಈಶ್ವರೀ ಪುರುಷ ॥೧೯॥
ಏಸೆ ಜಾ ಕಾ ಸಭಾ ನಾಯೆಕ । ಜೇಥೇ ನಿತ್ಯಾನಿತ್ಯವಿವೇಕ ।
ತ್ಯಾಂಚಾ ಮಹಿಮಾ ಅಲೋಲಿಕ । ಕಾಯ ಮ್ಹಣೋನಿ ವರ್ಣಾವಾ ॥೨೦॥
ಜೇಥೇ ಶ್ರವಣಾಚಾ ಉಪಾಯೋ । ಆಣೀ ಪರಮಾರ್ಥಸಮುದಾಯೋ ।
ತೇಥೇ ಜನಾಸೀ ತರಣೋಪಾಯೋ । ಸಹಜ ಚಿ ಹೋಯೆ ॥೨೧॥
ಉತ್ತಮ ಗುಣಾಚೀ ಮಂಡಳೀ । ಸತ್ವಧೀರ ಸತ್ವಾಗಳೀ ।
ನಿತ್ಯ ಸುಖಾಚೀ ನವ್ಹಾಳೀ । ಜೇಥೆ ವಸೆ ॥೨೨॥
ವಿದ್ಯಾಪಾತ್ರೇ ಕಳಾಪಾತ್ರೇ । ವಿಶೇಷ ಗುಣಾಚೀ ಸತ್ಪಾತ್ರೇ ।
ಭಗವಂತಾಚೀ ಪ್ರೀತಿಪಾತ್ರೇ । ಮಿಳಾಲೀ ಜೇಥೇ ॥೨೩॥
ಪ್ರವೃತ್ತೀ ಆಣೀ ನಿವೃತ್ತೀ । ಪ್ರಪಂಚೀ ಆಣೀ ಪರಮಾರ್ಥಿ ।
ಗೃಹಸ್ತಾಶ್ರಮೀ ವಾನಪ್ರಸ್ತೀ । ಸಂನ್ಯಾಸಾದಿಕ ॥೨೪॥
ವೃದ್ಧ ತರುಣ ಆಣೀ ಬಾಳ । ಪುರುಷ ಸ್ತ್ರಿಯಾದಿಕ ಸಕಳ ।
ಅಖಂಡ ಧ್ಯಾತೀ ತಮಾಳ ನೀಳ । ಅಂತರ್ಯಾಮೀ ॥೨೫॥
ಏಸೆ ಪರಮೇಶ್ವರಾಚೇ ಜನ । ತ್ಯಾಸೀ ಮಾಝೇ ಅಭಿವಂದನ ।
ಜಯಾಂಚೇನಿ ಸಮಾಧಾನ । ಅಕಸ್ಮಾತ ಬಾಣೇ ॥೨೬॥
ಏಸಿಯೇ ಸಭೇಚಾ ಗಜರ । ತೇಥೇ ಮಾಝಾ ನಮಸ್ಕಾರ ।
ಜೇಥೇ ನಿತ್ಯ ನಿರಂತರ । ಕೀರ್ತನ ಭಗವಂತಾಚೇ ॥೨೭॥
ಜೇಥೇ ಭಗವಂತಾಚ್ಯಾ ಮೂರ್ತೀ । ತೇಥೇ ಪಾವಿಜೆ ಉತ್ತಮ ಗತೀ ।
ಏಸಾ ನಿಶ್ಚಯ ಬಹುತಾ ಗ್ರಂಥೀ । ಮಹಂತ ಬೋಲಿಲೇ ॥೨೮॥
ಕಲ್ಲೌ ಕೀರ್ತನ ವರಿಷ್ಠ । ಜೇಥೇ ಹೋಯ ತೇ ಸಭಾ ಶ್ರೇಷ್ಠ ।
ಕಥಾಶ್ರವಣೇ ನಾನಾ ನಷ್ಟ । ಸಂದೇಹ ಮಾವಳತೀ ॥೨೯॥

ಇತಿ ಶ್ರೀದಾಸಬೋಧೆ ಗುರುಶಿಷ್ಯ ಸಂವಾದೇ
ಸಭಾಸ್ತವನನಾಮ ಸಮಾಸ ಆಠವಾ ॥

ಅತಿ ಉತ್ತಮನಾಗಿರುವವ. ವೇದದ ಬಗ್ಗೆ ಬಹಳ ತಿಳಿದವ, ಯಾಜ್ಞಿಕ, ಅಗ್ನಿಹೋತ್ರಿ, ವೈದ್ಯ ಪಂಚಾಕ್ಷರಿ, (ಮಂತ್ರಗಾರ–"ನಮಃ ಶಿವಾಯ" ಎಂದು ಪಠಿಸುವ ಪುರುಷ) ಪರೋಪಕಾರ ಮಾಡುವವ. (೧೭). ಭೂತ, ಭವಿಷ್ಯ. ಮತ್ತು ವರ್ತಮಾನ ಈ ಮೂರೂ ಕಾಲಗಳ ಜ್ಞಾನವಿರುವವ. ಬಹಳಷ್ಟು ತಿಳಿದವ, ನಿರಭಿಮಾನಿ, ನಿರಪೇಕ್ಷಿ, (೧೮). ಶಾಂತಿ. ಕ್ಷಮಾ, ದಯಾಶೀಲ. ಪವಿತ್ರ ಸತ್ವಶೀಲ. ಶುದ್ಧ ಅಂತಃಕರಣದ ಜ್ಞಾನಶೀಲ ಪುರುಷ, ನೋಡಿದರೆ ದೇವರನ್ನೇ ನೋಡಿದಂತೆ ಅನಿಸುವ ಪುರುಷ, (೧೯). ಉತ್ತಮ ಪ್ರಕಾರದ ದೊಡ್ಡ ಯೋಗ್ಯತೆಯ ಅನೇಕ ಸಭಾಸದರು ಆಧ್ಯಾತ್ಮಿಕ ಸಭೆಯಲ್ಲಿ ಶಾಶ್ವತವಾದುದು ಯಾವುದು ? ಮತ್ತು ಅಶಾಶ್ವತವಾದುದು ಯಾವುದು ? ಇದರ ಬಗ್ಗೆ ಸದಾಕಾಲ ವಿಚಾರ ಮಂಥನ ನಡೆದಿರುತ್ತದೆ. ಈ ಚರ್ಚೆಯು ಅಲೌಕಿಕವಿರುವದು. ಇದರ ಸಂಪೂರ್ಣ ವರ್ಣನೆ ಮಾಡುವದು ಅಶಕ್ಯವಿರುವದು. (೨೦). **ಅಧ್ಯಾತ್ಮಿಕ ಸಭೆಯಿಂದ ದೊಡ್ಡ ಲಾಭ:–** ಇಂಥ ಸಭೆಗಳಿಗೆ ಪರಮಾರ್ಥದಲ್ಲಿ ಆಸಕ್ತಿ ಇರುವಂಥ ಜನರೇ ಬಂದು ಸೇರುವರು. ನಿಜ ಪರಮಾರ್ಥದ ಬಗ್ಗೆ ತಿಳಿಯಲು ಅವಕಾಶ ಒದಗುತ್ತದೆ. ಇದರಿಂದ ಸಹಜವಾಗಿ ಲೋಕದ ಉದ್ಧಾರವಾಗುತ್ತದೆ. (೨೧). ಅತ್ಯಂತ ಧೀರ (ಪಂಡಿತ–ಪಾಂಡಿತ್ಯ) ಮತ್ತು ಸತ್ವಗುಣದಿಂದ ತುಂಬಿದ ಉತ್ತಮ ಗುಣಸಂಪನ್ನರಾದಂಥ, ಪರಮಾರ್ಥ ಪ್ರೇಮಿ ಮಂಡಳಿ ಸಮ್ಮಿಳಿತರಾದಂಥ, ಸ್ಥಳದಲ್ಲಿ ನಿತ್ಯವೂ ಹೊಸ ಸ್ವಾನಂದವನ್ನು ಅನುಭವಿಸಲು ಶಕ್ಯವಾಗುವದು. (೨೨). ವಿದ್ಯಾಸಂಪನ್ನ, ಕಲಾಸಂಪನ್ನ, ವಿಶೇಷ ಗುಣಸಂಪನ್ನ, ಭಗವಂತನಲ್ಲಿ ಪ್ರೇಮ ಸಂಪನ್ನರಾದಂಥ ಜನರೆಲ್ಲರೂ ಕೂಡಿರುವರು. (೨೩). ಮತ್ತು ಪ್ರವೃತ್ತ ಅಂದರೆ ಸಂಸಾರದಲ್ಲಿ ಆಸಕ್ತರಾದವರು, ನಿವೃತ್ತ ಅಂದರೆ ಮೋಕ್ಷಾಪೇಕ್ಷಿಗಳು ಪ್ರಾಪಂಚಿಕ ವ್ಯವಹಾರ ಮಾರ್ಗಿ, ಪಾರಮಾರ್ಥಿ ಅಂದರೆ ವೈರಾಗ್ಯಮೂರ್ತಿಗಳು ಗೃಹಸ್ಥಾಶ್ರಮ, ವಾನಪ್ರಸ್ಥಿ ಸನ್ಯಾಸಿ, ಮೊದಲಾದವರು. [೨೪]. ವೃದ್ಧ, ತರುಣ, ಸಣ್ಣ ಮಕ್ಕಳು, ಸ್ತ್ರೀ. ಪುರುಷ ವಗೈರೆ ಯಾವತ್ತೂ ಜನ ಸೇರಿದ ಸಭೆಯಲ್ಲಿ ಕುಳಿತು ತಮ್ಮ ಹೃದಯದಲ್ಲಿ ಭಗವಂತನ ಧ್ಯಾನ ಮಾಡುವರು [೨೫]. ಇಂಥವರೆಲ್ಲರೂ ಪರಮೇಶ್ವರನಿಗೆ ಪ್ರಿಯರಾದವರೆಂದು ತಿಳಿಯಬೇಕು. ಇಂಥವರ ಸಹವಾಸದಿಂದ ತತ್ಕಾಲವೇ ಸಮಾಧಾನ ಸಿಗುವದು. ಇವರೆಲ್ಲರಿಗೂ ನಾನು ನಮಸ್ಕಾರ ಮಾಡುವೆನು. [೨೬]. ಯಾವ ಸಭೆಯಲ್ಲಿ ಭಗವಂತನ ಅಖಂಡ ಕೀರ್ತನೆ, ನಡೆಯುವದೋ ಅಂಥಲ್ಲಿಯ ಮತ್ತು ಎಲ್ಲಿ ಹರಿನಾಮ ಗರ್ಜನೆ ನಡೆದಿರುವದೋ ಅಲ್ಲಿಯ ಸಭೆಗೆ ನನ್ನ ನಮಸ್ಕಾರವಿರಲಿ. [೨೭]. **"ಕಲೌ ಕೀರ್ತನ ವರಿಷ್ಠ" ಕಲಿಯುಗದಲ್ಲಿ ಕೀರ್ತನವೇ ಶ್ರೇಷ್ಠವು:–** ಶ್ರೇಷ್ಠ ಪುರುಷರೆಲ್ಲರೂ ಅನೇಕ ಗ್ರಂಥದಲ್ಲಿ ಸ್ಪಷ್ಟವಾಗಿ ಹೇಳಿರುವದೇನೆಂದರೆ, ಎಲ್ಲಿ ಭಗವಂತನ ಮೂರ್ತಿಯು ಅಖಂಡ ಉಪಾಸನೆ, ಆರಾಧನೆ, ಪ್ರಾರ್ಥನೆ, ಪೂಜೆ ನಡೆದಿರುವದೋ ಅಲ್ಲಿ ಅನೇಕರಿಗೆ ಉತ್ತಮ ಗತಿ ಪ್ರಾಪ್ತವಾಗುವದು. [೨೮]. ಕಲಿಯುಗದಲ್ಲಿ ಕೀರ್ತನವೇ ಎಲ್ಲದಕ್ಕಿಂತ ಶ್ರೇಷ್ಠ ಉಪಾಯವಾಗಿದೆ. ಎಲ್ಲಿ ಕೀರ್ತನೆ ನಡೆದಿರುವದೋ ಆ ಸಭೆ ಶ್ರೇಷ್ಠವಾದದ್ದು. ಕಥಾ, ಪುರಾಣ, ಕೀರ್ತನ, ಶ್ರವಣ ಮಾಡುವದರಿಂದ ಅನೇಕ ಪ್ರಕಾರದ ಕೆಟ್ಟ ಹಾಗೂ ವಿಕಲ್ಪ ಭಾವನೆಗಳು ಮತ್ತು ಸಂಶಯಗಳು ಇಲ್ಲದಂತಾಗುವವು. [೨೯]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ
"ಸಭಾ ಸ್ತವನ" ಎಂಬ ಹೆಸರಿನ ೧ನೆಯ ದಶಕದ
ಎಂಟನೆಯ ಸಮಾಸವು
ಮುಗಿದುದು.

● ●

## ಸಮಾಸ ೯. ಪರಮಾರ್ಥ ಸ್ತವನ (ನುಡಿ ೨೭)

ಶ್ರೀ ಸಮರ್ಥರು ಆತ್ಮವಾದಿಗಳಾಗಿದ್ದರು. ಇವರು ಅಧ್ಯಾತ್ಮ ಜ್ಞಾನಸಂಪನ್ನರಾಗಿದ್ದರು. ಪರಮಾರ್ಥವು ಇವರ ಜೀವನದ ಉಸಿರಾಗಿತ್ತು. ಇಂಥ ಪರಮಾರ್ಥ ಜ್ಞಾನದಿಂದ ತಾವು ಸ್ವತಃ ಧನ್ಯರಾಗಿ ಇತರರನ್ನೂ ಧನ್ಯರನ್ನಾಗಿ ಮಾಡಿದರು. ಇಂಥ ಪರಮಾರ್ಥಕ್ಕೆ ಈ ಸಮಾಸದಲ್ಲಿ ಶ್ರೀ ಸಮರ್ಥರು ವಂದಿಸುತ್ತಾರೆ. ನಿಜವಾದ "ದಾಸಬೋಧ"ವು ಇಲ್ಲಿಂದಲೇ ಪ್ರಾರಂಭವಾಗುತ್ತದೆ. ಬ್ರಹ್ಮ, ಬ್ರಹ್ಮಜ್ಞಾನ, ಮತ್ತು ಬ್ರಹ್ಮಜ್ಞಾನ ಸಾಧನೆ ಈ ಮೂರೂದರ ಬಗ್ಗೆ "ಪರಮಾರ್ಥ" ಎಂಬ ಒಂದೇ ಶಬ್ದವನ್ನು ಸಂತರು ಉಪಯೋಗಿಸುತ್ತಾರೆ. "ಪರಮಾರ್ಥ" ಎಂಬ ಶಬ್ದದಲ್ಲಿ ಪರಮ ಮತ್ತು ಅರ್ಥ ಹೀಗೆ ಎರಡು ಶಬ್ದಗಳಿರುವವು. ಇವುಗಳ ಅರ್ಥವನ್ನು ಅವಲೋಕಿಸಿದರೆ ಸಹಜವಾಗಿಯೇ "ಪರಮಾರ್ಥ" ಅಂದರೇನು ಎಂಬುದು ಸಹಜವಾಗಿ ತಿಳಿಯುವದು. (ಅ) ಪರಮ ಅಂದರೆ ಸರ್ವಶ್ರೇಷ್ಠ, ಮತ್ತು ಅರ್ಥವೆಂದರೆ ತಿಳಿವಿಗೆ ಬಂದದ್ದು. ಅಂದರೆ ಧ್ಯೇಯ ವಸ್ತುವು-ಜ್ಞಾನವು. ಒಂದು ವೇಳೆ ಮನುಷ್ಯನು ಅನ್ನ ನೀರುಗಳಿಲ್ಲದೇ ಬದುಕಬಹುದು. ಆದರೆ ಅನುಭವವಿಲ್ಲದೆ ಒಂದು ಕ್ಷಣ ಕೂಡ ಇರಲಾರನು. ಇವನ ಈ ಅನುಭವದಲ್ಲಿ ಅಕ್ಷರಶಃ ಅನಂತಜ್ಞೇಯ (ತಿಳುವಿಗೆ ಬಂದಂಥ) ವಸ್ತುಗಳು ಸೇರುವವು. ಇವೆಲ್ಲವೂ ಒಂದೇ ಯೋಗ್ಯತೆಯವು ಇರುವದಿಲ್ಲ. ಇಂಥ ವಸ್ತುಗಳಲ್ಲಿಯೇ ಸರ್ವೋತ್ಕೃಷ್ಟವಿರುವ ವಸ್ತುವನ್ನು ಶೋಧಿಸಿ ಹುಡುಕಿ ತೆಗೆಯುವದೇ ಪರಮಾರ್ಥವೆನಿಸುವದು. ಆತ್ಮಜ್ಞಾನಿ ಮತ್ತು ಸಿದ್ಧಪುರುಷರುಗಳ ಸ್ಪಷ್ಟವಾದ ಅಭಿಪ್ರಾಯವೆಂದರೆ, ಬ್ರಹ್ಮ ಅಥವಾ ಆತ್ಮವು ಸರ್ವಶ್ರೇಷ್ಠವಾದ ವಸ್ತುವಿರುತ್ತದೆ. (ಆ) ಪರಮ ಅಂದರೆ ನಿರತಿಶಯ, ಅತಿ ಉತ್ತಮ, ಅದ್ವಿತೀಯ. ಮತ್ತು "ಅರ್ಥ" ಎಂದರೆ ಭಾವಾರ್ಥವು ಮನುಷ್ಯನಿಗೆ ವಸ್ತುವಿನ ಜ್ಞಾನವಾಗುತ್ತದೆ. ಅಂದರೆ ಅದರ

ಅರ್ಥ ತಿಳಿಯುತ್ತದೆ. ಸರ್ವ ಮಾನವೀಯ ಜ್ಞಾನವು ಅರ್ಥ ರೂಪವಿರುತ್ತದೆ. ನಾನು ಮತ್ತು ಜಗತ್ತು ಇದರ ಸುತ್ತ ಮುತ್ತ ತಿರುಗುತ್ತಿರುವದು. ದೊಡ್ಡ ದೊಡ್ಡ ಕವಿಗಳು, ನಾಟಕಕಾರರು, ಕಾದಂಬರಿಕಾರರು, ಮತ್ತು ಶಾಸ್ತ್ರಜ್ಞರು, ಇವರೆಲ್ಲ ಮಾನವ ಜೀವನದ ಮತ್ತು ದೃಶ್ಯವಿಶ್ವದ ಅರ್ಥ ಅಂದರೆ ಆಶಯ, ಕಾರಣ. ಪ್ರಯೋಜನ ಮೊದಲಾದವುಗಳನ್ನು ತಿಳಿಯುವ ಪ್ರಯತ್ನ ಮಾಡುತ್ತಾರೆ. ಇವರಿಗೆ ಇದರ ಅರ್ಥಮರ್ಥ ಅರ್ಥವು ಮಾತ್ರ ತಿಳಿದಿರುತ್ತದೆ. ಸ್ವಸ್ವರೂಪದ ಅನುಭವ ಪಡೆಯುವ ಅಥವಾ ಹೊಂದಿರುವ ಬ್ರಹ್ಮಜ್ಞಾನಿ ಪುರುಷನಿಗೆ ಮಾತ್ರ ಇದರ ಸಂಪೂರ್ಣ ಅರ್ಥ ತಿಳಿದಿರುತ್ತದೆ. ಅಂತೆಯೇ ಸಂತರಿಗೆ ಇರುವ ಜ್ಞಾನವೇ ಆ ಪರಮಾರ್ಥವಾಗಿದೆ. (ಇ). ಪರಮ ಅಂದರೆ ಅನುಪಮ ಸರ್ವೋತ್ತಮ. ಅರ್ಥ ಎಂದರೆ ಧ್ಯೇಯವು. ಯಾವ ಪ್ರಮಾಣದಲ್ಲಿ ವಸ್ತುವಿಗೆ ಅರ್ಥವಿರುವದೋ, ಆ ಪ್ರಮಾಣದಲ್ಲಿ ಅದಕ್ಕೆ ಮಹತ್ವ ಮತ್ತು ಮೌಲ್ಯ–ಅಂದರೆ ಕಿಮ್ಮತ್ತು ಇರುತ್ತದೆ. ಜಗತ್ತಿನಲ್ಲಿಯ ವಸ್ತುಗಳಿಗೆ ಸಂಪೂರ್ಣ ವಸ್ತುವಿಗೆ ಪರಿಪೂರ್ಣ ಅರ್ಥವಿರುತ್ತದೆ. ಆದುದರಿಂದಲೇ ಬ್ರಹ್ಮವಸ್ತು ನಿರತಿಶಯ ಮೂಲ್ಯವುಳ್ಳದ್ದಾಗಿರುತ್ತದೆ. ಮಹತ್ವದ ಮೂಲ್ಯವಾದ ವಸ್ತುವಿನ ಮೇಲೆ ಮನುಷ್ಯನಿಗೆ ಸಹಜವಾದ ಪ್ರೀತಿ ಇರುತ್ತದೆ. ಈ ಪ್ರಿಯ ವಸ್ತುಗಳನ್ನು ಪಡೆದುಕೊಳ್ಳುವ, ದೊರಕಿಸಿಕೊಳ್ಳುವ ಧ್ಯೇಯವುಳ್ಳವನಾಗುವನು. ಅಂತೆಯೇ ಪರಬ್ರಹ್ಮ ವಸ್ತುವನ್ನು ಪ್ರಾಪ್ತ ಮಾಡಿಕೊಳ್ಳುವದೇ ಮನುಷ್ಯನ ಸರ್ವಶ್ರೇಷ್ಠ ಧ್ಯೇಯವಾಗಿರುವದು. ಇದನ್ನು ಹೊಂದುವದಕ್ಕಾಗಿ ಯಾವ ಯಾವ ಸಾಧನಗಳನ್ನು ಮಾಡಬೇಕಾಗುವದೋ ಅದಕ್ಕೆ ಪರಮಾರ್ಥವೆನ್ನುವರು. (ಈ) ಪರಮ ಅಂದರೆ ಅಖೈರದ, ಅದ್ವಿತೀಯವಾದ ಮತ್ತು ಅರ್ಥವೆಂದರೆ ಕಾರಣ, ಹೇತು, ಮೂಲ (ಪುರಾತನವು). ನಮ್ಮಅನುಭವಕ್ಕೆ ಬರುವ ವಿಶ್ವವು ಘಟನಾಮಯವಿರುವದು, ಆದಂಥಾದ್ದು ಇರುವದು. ಅನಂತ ಘಟನೆಗಳ ಸಾಗರವಿರುವದು. ಘಟನೆಯನ್ನು ಅನುಭವಿಸಿದ ಕೂಡಲೇ ಅದರ ಮೂಲ ಅಥವಾ ಕಾರಣ ಅಥವಾ ಉದ್ದೇಶಗಳನ್ನು ಶೋಧಿಸದ ಹೊರತು ಮಾನವೀ ಬುದ್ಧಿಗೆ ಸಮಾಧಾನವಾಗುವದಿಲ್ಲ. ಈ ಶೋಧದ ಪ್ರವೃತ್ತಿಯಿಂದ ಧರ್ಮ, ತತ್ವಜ್ಞಾನ ಮತ್ತು ವಿಜ್ಞಾನ ಇವುಗಳು ಜನ್ಮ ಹೊಂದಿದವು. ಒಂದೆರಡು ಅಥವಾ ಕೆಲವೊಂದು ಘಟನೆಗಳ ಕಾರಣವನ್ನು ಶೋಧ ಮಾಡಿ ಸ್ವಸ್ಥ ಕೂಡುವದಿಲ್ಲ. ಕೂಡಲು ಶಕ್ಯವಾಗುವದಿಲ್ಲ. ಯಾವತ್ತೂ ಘಟನೆಗಳ ಅಂದರೆ ಅಖಿಲ ವಿಶ್ವದ ಕಾರಣವನ್ನೇ ಶೋಧಿಸುವ ಹವ್ಯಾಸದಲ್ಲಿ ತೊಡಗುತ್ತಾನೆ. ವಿಶ್ವದ ಆದಿ ಕಾರಣಕ್ಕೆ ಈಶ್ವರ ಎನ್ನುವರು. ಪರಮಾರ್ಥವೆಂದರೆ, ಈ ಈಶ್ವರನ ಶೋಧವೇ ಆಗಿದೆ. (ಉ) ಪರಮ ಅಂದರೆ, ಉತ್ತಮ, ಮುಖ್ಯವಾದ ಮತ್ತು ಅರ್ಥವೆಂದರೆ ದ್ರವ್ಯ, ಸಂಪತ್ತು ಅಥವಾ ಫಲ. ತಮ್ಮ ಅವಶ್ಯಕತೆ, ಇಚ್ಛೆಗಳನ್ನು ತೃಪ್ತ ಮಾಡಿಕೊಳ್ಳುವದಕ್ಕಾಗಿ ಮನುಷ್ಯನಿಗೆ ಸಂಪತ್ತು ಬೇಕಾಗಿರುತ್ತದೆ. ಆದರೆ ಬೇಡಿಕೆ ಬಹಳಷ್ಟು ಪೂರೈಸಿದರೂ ಅದಕ್ಕೆ ಸಾಕೆಂಬುವದೇ ಇಲ್ಲ. ಅಂತೆಯೇ ಮನುಷ್ಯನು ಹೆಚ್ಚು ಹೆಚ್ಚು ಸಂಪತ್ತನ್ನು ಗಳಿಸುವ ಹವ್ಯಾಸದಲ್ಲಿ ತೊಡಗುವನೆಂದು ಅರ್ಥ ಶಾಸ್ತ್ರ ಹೇಳುತ್ತದೆ. ರಾಜರಲ್ಲಿ ಅಪಾರ ಸಂಪತ್ತಿರುವದೆಂಬ ತಿಳುವಳಿಕೆಯಿಂದ ಸಾಮಾನ್ಯ ಮನುಷ್ಯರು ರಾಜನು ಅತಿ ಸುಖವಾಗಿರುವನೆಂದು ತಿಳಿದಿರುತ್ತಾರೆ. ಆದರೆ ಈ ಜಗತ್ತಿನಲ್ಲಿಯ ಅಶಾಶ್ವತ ಸಂಪತ್ತಿನಿಂದ ರಾಜನ ವಾಸನಾ ತೃಪ್ತವಾಗುವದಿಲ್ಲ. ಅವನ ಬೇಡಿಕೆ ಅಂದರೆ ಪ್ರಜರಿಂದ ಹಣ ಸೆಳೆಯುವ ಆಶೆ–ಮುಗಿಯುವದಿಲ್ಲ. ಆದರೆ ಇದರ ವಿರುದ್ಧವಾಗಿ ಬ್ರಹ್ಮರೂಪಿ ಶಾಶ್ವತ ಸಂಪತ್ತನ್ನು ಗಳಿಸಿರುವ ಸಂತ ಶರಣರು ಅತ್ಯಂತ ತೃಪ್ತ ಮತ್ತು ಸಮಾಧಾನ ಇರುವರು. ಇವರ ಸಮಾಧಾನದ ಮುಂದೆ ರಾಜರದೂ ಸಹ ಇವರಿಗೆ ಕಿಮ್ಮತ್ತಿರುವದಿಲ್ಲ. "ಪರಮಾರ್ಥಿಯೇ ರಾಜ್ಯಧಾರಕನು; ಪರಮಾರ್ಥ ಇಲ್ಲದವನೇ ಭಿಕಾರಿಯು, ಹೀಗೆ ತಮ್ಮ ಸ್ವಾನುಭವವನ್ನು ಶ್ರೀ ಸಮರ್ಥರು ನಿರ್ಭಿಡೆಯಿಂದ ಸ್ಪಷ್ಟವಾಗಿ ಹೇಳಿದ್ದಾರೆ. ಒಟ್ಟಿನ ಮೇಲೆ ಹೇಳುವದೇನಂದರೆ, ನಿರತಿಶಯ ಸಮಾಧಾನ, ಅಥವಾ ಆನಂದವನ್ನು ಭೋಗಿಸಲಿಕ್ಕೆ ದೊರೆತದ್ದರಿಂದ ನಿಸ್ಪೃಹತೆಯ ಅಥವಾ ವೈರಾಗ್ಯವೆಂಬ ಐಶ್ವರ್ಯದ ಡೌಲಿನಿಂದ ಜೀವನ ನಡೆಸುವದು. ಅಂದರೇನೇ ಪರಮಾರ್ಥವಾಗಿದೆ. ಯಾವುದೇ ಜ್ಞಾನವು ಸಾಮರ್ಥ್ಯ ಸಂಪನ್ನವಿರುತ್ತದೆ. ಆದುದರಿಂದಲೇ ಭಗವಂತನ ಜ್ಞಾನವಾಗಿ ಜೀವನದಲ್ಲಿ ದುಃಖವನ್ನು ನಾಮಶೇಷಗೊಳಿಸುವದೇ ಪರಮಾರ್ಥದ ನಿಜವಾದ ಲಕ್ಷಣವಾಗಿದೆ.

## ಸಮಾಸ ನವವಾ : ಪರಮಾರ್ಥ ಸ್ತವನ

॥ಶ್ರೀರಾಮ॥ ಆತಾ ಸ್ತವೂ ಹಾ ಪರಮಾರ್ಥ। ಜೋ ಸಾಧಕಾಂಚಾ ನಿಜಸ್ವಾರ್ಥ।
ನಾಂತರೀ ಸಮರ್ಥಾಮಧ್ಯೇ ಸಮರ್ಥ। ಯೋಗ ಹಾ ॥೧॥

ಆಹೆ ತರೀ ಪರಮ ಸುಗಮ। ಪರೀ ಜನಾಸೀ ಜಾಲಾ ದುರ್ಗಮ।
ಕಾ ಜಯಾಚೇ ಚುಕಲೇ ವರ್ಮ। ಸತ್ಸಮಾಗಮಾಕಡೆ ॥೨॥

ನಾನಾ ಸಾಧನಾಂಚೆ ಉಧಾರ। ಹಾ ರೋಕಡಾ ಬ್ರಹ್ಮಸಾಕ್ಷಾತ್ಕಾರ।
ವೇದಶಾಸ್ತ್ರೀ ಜೇ ಸಾರ। ತೇ ಅನುಭವಾಸಯೇ ॥೩॥

ಆಹೇ ತರೀ ಚಹೂಕಡೆ। ಪರೀ ಅಣುಮಾತ್ರ ದೃಷ್ಟೀ ನ ಪಡೆ।
ಉದಾಸ ಪರೀ ಯೆಕೀಕಡೆ। ಪಾಹತಾ ದಿಸೇನಾ ॥೪॥

ಆಕಾಶಮಾರ್ಗೀ ಗುಪ್ತ ಪಂಥ। ಜಾಣತೀ ಯೋಗಿಯೇ ಸಮರ್ಥ।
ಇತರಾಸ ಹಾ ಗುಹ್ಯಾರ್ಥ। ಸಹಸಾ ನ ಕಳೆ ॥೫॥

ಸಾರಾಚೇ ಹೀ ನಿಜಸಾರ। ಅಖಂಡ ಅಕ್ಷೈ ಅಪಾರ।
ನೇಊ ನ ಸಕತೀ ತಸ್ಕರ। ಕಾಂಹೀ ಕೇಲ್ಯಾ ॥೬॥

ತಯಾಸ ನಾಹೀ ರಾಜಭಯೆ। ಅಥವಾ ನಾಹೀ ಅಗ್ನಿಭಯೆ।
ಅಥವಾ ಸ್ವಾಪದಭಯೆ। ಬೋಲೋಂಚ ನಯೆ ॥೭॥

ಪರಬ್ರಹ್ಮ ತೇ ಹಾಲವೇನಾ। ಅಥವಾ ಠಾವ ಹಿ ಚುಕೇನಾ।
ಕಾಳಾಂತರೀ ಚಳೇನಾ। ಜೇಥೀಚಾ ತೇಥೇ ॥೮॥

ಐಸೇ ತೇ ನಿಜ ಠೇವಣೇ। ಕದಾಪಿ ಪಾಲಟೋ ನೇಣೇ।
ಅಥವಾ ನವ್ಹೆ ಆದಿಕ ಉಣೇ। ಬಹುತಾ ಕಾಳೇ ॥೯॥

ಅಥವಾ ತೇ ಘಸಟವೇನಾ। ಅಥವಾ ಅದೃಶ್ಯ ಹೋಯೇನಾ।
ನಾತರೀ ಪಾಹಾತಾ ದಿಸೇನಾ। ಗುರುಅಂಜನೇವಿಣ ॥೧೦॥

ಮಾಗಾ ಯೋಗಿಯೇ ಸಮರ್ಥ। ತ್ಯಾಂಚಾ ಹಿ ನಿಜಸ್ವಾರ್ಥ।
ಯಾಸೀ ಬೋಲಿಜೆ ಪರಮಾರ್ಥ। ಪರಮಗುಹ್ಯ ಮ್ಹಣಾನೀ ॥೧೧॥

ಜೇಹೀ ಶೋಧೂನ ಪಾಹಿಲಾ। ತ್ಯಾಸೀ ಅರ್ಥ ಸಾಂಪಡಲಾ।
ಯೇರಾ ಅಸೋನಿ ಅಲಭ್ಯ ಜಾಲಾ। ಜನ್ಮೋಜನ್ಮೀ ॥೧೨॥

## ಸಮಾಸ ೯ ಪರಮಾರ್ಥ ಸ್ತವನ

**ಮೊದಲಿಗೆ ಪರಮಾರ್ಥದ ಶ್ರೇಷ್ಠತ್ವವನ್ನು ಹೇಳುವರು :–** ಈಗ ನಾನು ಪರಮಾರ್ಥದ ಗುಣವರ್ಣನೆಯನ್ನು ಮಾಡುತ್ತೇನೆ. ಈ ಪರಮಾರ್ಥವು ಸಾಧಕರ ನಿಜಧ್ಯೇಯವಾಗಿದೆ. ಮಾನವ ಜೀವನದಲ್ಲಿ ಅತಿ ಉತ್ತಮವಾದುದರಲ್ಲಿ ಸಾಧ್ಯ ಅಥವಾ ಫಲವಿರುವದಾದರೆ ಅದು ಪರಮಾರ್ಥವೇ ಆಗಿದೆ. [೧] **ಪರಮಾರ್ಥ ಬಹಳ ಸುಲಭ ಹಾಗೂ ಸ್ಪಷ್ಟವಾದದ್ದು ಅದೆ :–** ನಿಜವಾಗಿ ನೋಡಿದರೆ ಪರಮಾರ್ಥ ಅತ್ಯಂತ ಸುಲಭವಿದೆ. ಸಂತ ಶರಣರ ಸಮಾಗಮ ಮಾಡಿದರೆ ಇದು ಸಹಜವಾಗಿ ವಶವಾಗುವದು, ಆದರೆ ಇದನ್ನು ಪ್ರಾಪ್ತ ಮಾಡಿಕೊಳ್ಳುವ ಮರ್ಮ ತಪ್ಪಿದ್ದರಿಂದಲೇ ಇದು ಅತಿ ಕಠಿಣವಾಗಿ ಕುಳಿತಿದೆ. [೨] ಇದರಂತೆಯೇ ನಾನಾ ಪ್ರಕಾರದ ಸಾಧನಗಳು ಇರುವವು. ಇವೆಲ್ಲ ಉದ್ಧರಿ ಪಂಚಾಂಗವೇ ಆಗಿವೆ. ಅಂದರೆ ಇವುಗಳ ಫಲ ಕಾಲಾಂತರದಿಂದ ಸಿಗುವದು. ಅದರ ದಾರಿ ಕಾಯುತ್ತ ಕೂಡ್ರ ಬೇಕಾಗುತ್ತದೆ. ನಿಜವಾಗಿಯೂ ಪರಮಾರ್ಥವು ಕೇವಲ ರೋಖಡಿ ವ್ಯವಹಾರವಿದ್ದುದರಿಂದ ತತ್ಕಾಲ ದಲ್ಲಿ ಫಲ ಸಿಗುತ್ತದೆ. ಕೂಡಲೇ ಬ್ರಹ್ಮಸ್ವರೂಪದ ಸಾಕ್ಷಾತ್ ದರ್ಶನವಾಗುತ್ತದೆ, ವೇದಗಳಲ್ಲಿ ಮತ್ತು ಶಾಸ್ತ್ರಗಳಲ್ಲಿ ಯಾವ ಆತ್ಮ ಸ್ವರೂಪದ ವರ್ಣನೆ ಇರುವುದೋ ಆ ಸ್ವರೂಪದ ಪ್ರತ್ಯಕ್ಷ ಅನುಭವ ಕೂಡಲೇ ಆಗುವದು. [೩] **ತಾತ್ವಿಕ ದೃಷ್ಟಿಯಿಂದ ಪರಮಾರ್ಥವು ಬ್ರಹ್ಮಸ್ವರೂಪವೇ ಇರುವದು :– ಈ ಸ್ವರೂಪವು ಅಖಂಡ, ಅಕ್ಷಯ, ಅಪಾರ ಮತ್ತು ಗುಪ್ತ ವಿರುವದು :-** ನೋಡ ಹೋದರೆ ಮಾತ್ರ ಪರಮಾರ್ಥವು ಸರ್ವತ್ರದಲ್ಲಿ ತುಂಬಿರುತ್ತದೆ. ಆದರೆ ಇದನ್ನು ನೋಡುವ ದೃಷ್ಟಿ ಇಲ್ಲವೆಂದು ಅದು ಅಣುವಿನಷ್ಟು ಸಹ ಕಾಣಿ–ಸುವದಿಲ್ಲ. ಸರ್ವಸಂಗ ಪರಿತ್ಯಾಗ ಮಾಡಿ ಏಕಾಂತದಲ್ಲಿ ಹೋಗಿ ಈ ನೋಡುವ ಪ್ರಯತ್ನ ಮಾಡಿದರೂ ಸಹ ತೋರಿಬರುವದಿಲ್ಲ [೪]. ಹೃದಯಾಕಾಶ ಮಾರ್ಗ ಮಧ್ಯದಲ್ಲಿಂದ ಹೃದಯಸ್ಥ ಸ್ವಸ್ವರೂಪ ಪರ್ಯಂತದ ವರೆಗೆ ಹೋಗಿ ಮುಟ್ಟುವ ಯಾವ ಒಂದು ಗುಪ್ತ ಮಾರ್ಗದರ್ಶಿಯಿರುವದೋ ಇದು ಕೇವಲ ಉತ್ತಮಯೋಗಿಗಳಿಗೆ ಮಾತ್ರ ಗೊತ್ತಿರುವದಾಗಿದೆ. ಸಾಮಾನ್ಯ ಮನುಷ್ಯರಿಗೆ ಆ ಗುಪ್ತಮಾರ್ಗ ಮತ್ತು ಸೂಕ್ಷ್ಮ ಅರ್ಥದ ಜ್ಞಾನ ಬಹು ತೇಕವಾಗಿ ಆಗಲಾರದು. [೫] ಸರ್ವಜ್ಞಾನ ತಾತ್ಪರ್ಯ, ಅಖಂಡ ಅಕ್ಷಯ ಮತ್ತು ಅಪಾರವಾದ ಈ ಪರಮಾರ್ಥ ವನ್ನು ಯಾವ ಪ್ರಯತ್ನದಿಂದಲೂ ಚೋರರಿಗೆ ತುಡುಗುಮಾಡಿ ಒಯ್ಯಲು ಬರಲಾರದು [೬] ರಾಜ, ಮತ್ತು ಸಿಂಹ, ಹುಲಿ, ಇತ್ಯಾದಿ ದುಷ್ಟ ಮೃಗ ವಗ್ಗೈರೆಗಳಿಂದ ಸಹ ಪರಮಾರ್ಥಕ್ಕೆ ಎಷ್ಟೂ ಭಯವಿಲ್ಲ. ಭಯವಿದೆಯೆಂದು ಅನ್ನಲೂ ಸಹ ಹೇಳಲಿಕ್ಕೆ ಬರಲಾರದು. [೭] ಪರಬ್ರಹ್ಮವನ್ನು ಅದರ ಸ್ಥಾನದಿಂದ ಎತ್ತಲು ಶಕ್ಯವಿಲ್ಲ. ಅಥವಾ ಅಲುಗಾಡಿಸಲೂ ಸಹ ಶಕ್ಯವಿಲ್ಲ. ಎಷ್ಟು ಕಾಲ ಗತಿಸಿದರೂ ಬದಲಾವಣೆಯಾದರೂ ಸಹ ಅತ್ತಿತ್ತ ಚಲಿಸುವದಿಲ್ಲ. ಇದ್ದಲ್ಲಿಯೇ ಹೇಗಿತ್ತೋ ಹಾಗೆಯೇ ಸ್ಥಿರವಿರುತ್ತದೆ. [೮] ಇಂತಹ ನಮ್ಮ ನಿಜಸೊತ್ತು (ಠೇವು) ಇರುವದು. ಎಂದೆಂದಿಗೂ ಇದರಲ್ಲಿ ಬದಲಾವಣೆ ಆಗುವದಿಲ್ಲ. ಎಷ್ಟು ಕಾಲ ಗತಿಸಿದರೂ ಸಹ ಇದರಲ್ಲಿ ಹೆಚ್ಚು ಕಡಿಮೆ ಆಗುವದಿಲ್ಲ. [೯] ಪರಬ್ರಹ್ಮವು ಸವೆಯುವದಿಲ್ಲ, ಅಥವಾ ಕಣ್ಮರೆಯಾಗುವದಿಲ್ಲ, ಕಾಣುವದಿಲ್ಲವೆಂದು ಅನ್ನಲಿಕ್ಕೆ ಬರಲಾರದು. ಆದರೆ ಗುರುವಿನ ಜ್ಞಾನರೂಪೀ ಅಂಜನವು ನಮ್ಮ ನೇತ್ರಗಳಿಗೆ ಹತ್ತದ ಹೊರತು ಕಾಣುವದಿಲ್ಲವೆಂಬುದು ನಿಜವೇ ಆಗಿದೆ.[೧೦]ಪರಮಾರ್ಥವು ಅತಿ ಗುಹ್ಯ, ಗುಪ್ತವಿದೆಯೆಂಬುದು ನಿಜವಾದರೂ ಸಹ ಯಾವನು ಶೋಧ ಮಾಡುವನೋ ಅವನಿಗೆ ಮಾತ್ರ ಅದು ಲಭಿಸುವದು. ಹಿಂದೆ ಆಗಿಹೋದ ದೊಡ್ಡ ದೊಡ್ಡ ಜ್ಞಾನಿಗಳ ಧ್ಯೇಯವಾದರೂ ಪರಮಾರ್ಥದ ಗಳಿಕೆಯೇ ಆಗಿತ್ತು. ಇದು ಅತಿಶಯ ಗೌಪ್ಯಸ್ವರೂಪದ್ದಿರುವದರಿಂದಲೇ ಇದಕ್ಕೆ "ಪರಮಾರ್ಥ"ವೆಂದು ಅನ್ನುತ್ತಾರೆ. [೧೧] ಯಾರು ಇದರ ಶೋಧ ಮಾಡುವರೋ ಅವರಿಗೆ ಈ ಅರ್ಥ ರೂಪದ ನಿಧಿಯು ಸಿಗುವದು. ಉಳಿದವರಿಗೆ ಇದು ಹತ್ತಿರವಿದ್ದರೂ ಸಹ ಅನೇಕ ಜನ್ಮ ಕಳೆದರೂ ಇದು ಸಿಗುವದಿಲ್ಲ[೧೨]

ಅಪೂರ್ವತಾ ಯಾ ಪರಮಾರ್ಥಾಚೀ । ವಾರ್ತಾ ನಾಹೀ ಜನ್ಮಮೃತ್ಯಾಚೀ ।
ಆಣೀ ಪದವೀ ಸಾಯೋಜ್ಯತೇಚೀ । ಸನ್ನಿಧ ಚಿ ಲಾಭೇ ॥೧೩॥
ಮಾಯಾ ವಿವೇಕೇ ಮಾವಳೆ । ಸಾರಾಸಾರ ವಿಚಾರ ಕಳೆ ।
ಪರಬ್ರಹ್ಮ ತೇ ಹಿ ನಿವಳೆ । ಅಂತರ್ಯಾಮೀ ॥೧೪॥
ಬ್ರಹ್ಮ ಭಾಸಲೇ ಉದಂಡ । ಬ್ರಹ್ಮೀ ಬುಡಾಲೇ ಬ್ರಹ್ಮಾಂಡ ।
ಪಂಚಭೂತಾಂಚೇ ಥೋತಾಂಡ । ತುಚ್ಛ ವಾಟೆ ॥೧೫॥
ಪ್ರಪಂಚ ವಾಟೆ ಲಟಿಕಾ । ಮಾಯಾ ವಾಟೆ ಲಾಪಣಿಕಾ ।
ಶುದ್ಧ ಆತ್ಮಾ ವಿವೇಕಾ । ಅಂತರೀ ಆಲಾ ॥೧೬॥
ಬ್ರಹ್ಮಸ್ಥಿತ ಬಾಣತಾ ಅಂತರೀ । ಸಂದೇಹ ಗೇಲಾ ಬ್ರಹ್ಮಾಂಡಾಬಾಹೇರೀ ।
ದೃಶ್ಯಾಚೀ ಜುನೀ ಜರ್ಜರೀ । ಕುಹಿಟ ಜಾಲೀ ॥೧೭॥
ಐಸಾ ಹಾ ಪರಮಾರ್ಥ । ಜೋ ಕರೀ ತ್ಯಾಚಾ ನಿಜಸ್ವಾರ್ಥ ।
ಆತಾ ಯಾ ಸಮರ್ಥಾಸ ಸಮರ್ಥ । ಕಿತೀ ಮ್ಹಣೌನಿ ಮ್ಹಣಾವೇ ॥೧೮॥
ಯಾ ಪರಮಾರ್ಥಾಕರಿತಾ । ಬ್ರಹ್ಮಾದಿಕಾಸಿ ವಿಶ್ರಾಮತಾ ।
ಯೋಗೀ ಪಾವತೀ ತನ್ಮಯತಾ । ಪರಬ್ರಹ್ಮೀ ॥೧೯॥
ಪರಮಾರ್ಥ ಸಕಳಾಸ ವಿಸಾವಾ । ಸಿದ್ಧ ಸಾಧು ಮಹಾನುಭಾವಾ ।
ಸೆಖೀ ಸಾತ್ವಿಕ ಜಡಜೀವಾ । ಸತ್ಸಂಗೇಕರೂನಿ ॥೨೦॥
ಪರಮಾರ್ಥ ಜನ್ಮಾಚೇ ಸಾರ್ಥಕ । ಪರಮಾರ್ಥ ಸಂಸಾರೀ ತಾರಕ ।
ಪರಮಾರ್ಥ ದಾಖವೀ ಪರಲೋಕ । ಧಾರ್ಮಿಕಾಸೀ ॥೨೧॥
ಪರಮಾರ್ಥ ತಾಪಸಾಸೀ ಥಾರ । ಪರಮಾರ್ಥ ಸಾಧಕಾಸೀ ಆಧಾರ ।
ಪರಮಾರ್ಥ ದಾಖವೀ ಪಾರ । ಭವಸಾಗರಾಚಾ ॥೨೨॥
ಪರಮಾರ್ಥೀ ತೋ ರಾಜ್ಯಧಾರೀ । ಪರಮಾರ್ಥ ನಾಹೀ ತೋ ಭಿಕಾರೀ ।
ಯಾ ಪರಮಾರ್ಥಾಚೀ ಸರೀ । ಕೋಣಾಸ ದ್ಯಾವೀ ॥೨೩॥
ಅನಂತ ಜನ್ಮಿಚೇ ಪುಣ್ಯ ಜೋಡೆ । ತರೀ ಚ ಪರಮಾರ್ಥ ಘಡೆ ।
ಮುಖ್ಯ ಪರಮಾತ್ಮಾ ಆತುಡೆ । ಅನುಭವಾಸೀ ॥೨೪॥
ಜೇಣೇ ಪರಮಾರ್ಥ ವೋಳಖಿಲಾ । ತೇಣೇ ಜನ್ಮ ಸಾರ್ಥಕ ಕೇಲಾ ।
ಯೇರ ತೋ ಪಾಪೀ ಜನ್ಮಲಾ । ಕುಲಕ್ಷಯಾಕಾರಣೇ ॥೨೫॥

**ಪರಮಾರ್ಥದ ಅಪೂರ್ವತೆ:–** ಈ ಪರಮಾರ್ಥವು ಬಹಳ ವಿಲಕ್ಷಣವಾಗಿದೆ. ಪರಮಾರ್ಥಿಯಲ್ಲಿ ಕಾಲಾಧೀನವಾದ ಜನ್ಮ, ಮೃತ್ಯುವಿನ ಘಟನೆಗಳ ಸುದ್ದಿಯೇ ಇಲ್ಲದಂತಾಗುತ್ತದೆ. ಪರಮಾರ್ಥದ ಮೂಲಕ ಸಾಯುಜ್ಯ ಮುಕ್ತಿಯು ಪದವಿ ನಿಮ್ಮದೇ, ನಿಮ್ಮಲ್ಲಿದ್ದುದೇ ನಿಮಗೆ ದೊರಕುವದು. ಲಭಿಸುವದು. (೧೩). **ಬ್ರಹ್ಮಾನುಭವದ ಅಪ್ರತಿಮ ವರ್ಣನೆ:–** ಆತ್ಮಾನಾತ್ಮ ವಿವೇಕದಿಂದ ಮಾಯೆಯು ಅಸ್ತಂಗತವಾಗುವದು, ಅಡಗುವದು, ಇಲ್ಲದಂತಾಗುವದು. ಸಾರವೆಂದರೆ ಯಾವುದು, ಅಸಾರವೆಂದರೆ ಯಾವುದು, ಇದನ್ನು ವಿಚಾರದಿಂದ ಶೋಧಿಸಿ ನೋಡಿದರೆ ಸರಿಯಾಗಿ ತಿಳಿಯುವದು. ಆಗ ನಿಮ್ಮ ಹೃದಯದಲ್ಲಿಯೇ ಬ್ರಹ್ಮಸ್ವರೂಪವು ಸ್ವಚ್ಛವಾಗಿ ಅನುಭವಕ್ಕೆ ತೋರಿ ಬರುವದು. (೧೪). ಅನಂತನಾದ ಪರಬ್ರಹ್ಮ ಎಲ್ಲೆಂದರಲ್ಲಿ ಅಮಾರ್ಯದಿತ, ಗಣನಾತೀತ, ಕೊನೆಯಿಲ್ಲದ ಈ ಬ್ರಹ್ಮವು ಅನು ಭವಕ್ಕೆ ಬರಹತ್ತಿದಂತೆ ಈ ದೃಶ್ಯ ವಿಶ್ವವು ಅದರಲ್ಲಿ ಅಂದರೆ ಬ್ರಹ್ಮಾನುಭವದಲ್ಲಿ ಮುಳುಗಿ ಹೋಗುವದು. ದೃಶ್ಯವು ಅಲ್ಲಿಂದಲ್ಲಿಯೇ ಇಲ್ಲದಂತಾಗುವದು. ಪಂಚಭೂತಗಳಿಂದ ನಿರ್ಮಿತವಾದ ದೇಹಕ್ಕೆ ಇಲ್ಲಿ ಬೆಲೆ ಇರುವದಿಲ್ಲ. (೧೫). ಪ್ರಪಂಚವೆಲ್ಲವೂ ಅಸತ್ಯ, ಖೊಟ್ಟಿ ಅನಿಸುವದು. ಮಾಯೆಯ ಪ್ರಸಾರ ವಿಸ್ತಾರವು ಕೇವಲ ಕಲ್ಪನಾ ಮಯವೆಂದು ಅನಿಸುವದು. ಹಾಗೂ ವಿವೇಕದ ಸಾಮರ್ಥ್ಯದಿಂದ ಶುದ್ಧ ಆತ್ಮಸ್ವರೂಪದ ಅಂತರ್ಯಾಮಿ ದರ್ಶನ ವಾಗುವದು. (೧೬). ಒಳ ಹೊರಗೆಲ್ಲ ಬ್ರಹ್ಮದರ್ಶನವಾಗುವ ಸ್ಥಿತಿ ಅಂತರ್ಯಾಮಿಯಲ್ಲಿ ಸ್ಥಿರವಾಯಿತೆಂದರೆ ಸರ್ವ ಸಂಶಯಗಳು ಪೂರ್ಣ ನಾಶವಾಗುವವು. ಈ ಯಾವತ್ತೂ ದೃಶ್ಯ ವಿಶ್ವವು ಹಳೆಯದು, ಹರಕು ಮುರುಕಾದದ್ದು, ಛಿದ್ರವಿರುವಂಥಾದ್ದು, ಕೊಳಕು ಕೊಳಕಾದದ್ದೆಂದು ಅನಿಸುವದು. ಇವೆಲ್ಲವನ್ನು ಮನಸ್ಸಿನಿಂದ ಹೊರಗೆಸೆಯಲು ಯೋಗ್ಯವಾಗಿವೆಯೆಂದು ಖಾತ್ರಿಯಾಗುವದು. (೧೭). **ಮಾನವೀಯ ಜೀವನದಲ್ಲಿ ಪರಮಾರ್ಥದ ಶ್ರೇಷ್ಠ ಸ್ಥಾನ:–** ಪರಮಾರ್ಥವೆಂದರೆ ಹೀಗೆ ಇರುವದು, ಯಾವನು ಮಾಡುವನೋ ಅವನ ಜೀವನವೇ ಸಾರ್ಥಕತೆಯನ್ನು ಪಡೆದಂತೆ. ಇದು ಮೂಲದಲ್ಲಿಯೇ ಅತ್ಯಂತ ಶ್ರೇಷ್ಠ, ದೊಡ್ಡ, ಮತ್ತು ಯೋಗ್ಯ. ಹಾಗೂ ಶಕ್ತಿವಂತವಿರುವದು. ಮೇಲಿಂದ ಮೇಲೆ ಈ ಬಗ್ಗೆ ಸಮರ್ಥ—ಸಮರ್ಥ, ಬಲಾಢ್ಯ-ಬಲಾಢ್ಯವೆಂದು ಹೇಳುವ ಅವಶ್ಯಕತೆ ಇರುವ ದಿಲ್ಲ. (೧೮). ಈ ಪರಮಾರ್ಥದಿಂದ ಬ್ರಹ್ಮಾದಿಗಳಿಗೆ ವಿಶ್ರಾಂತಿ ಸಿಗುವದು. ಸಮಾಧಾನ ದೊರಕುವದು. ಇದ ರಿಂದಲೇ ಜ್ಞಾನಿ, ಯೋಗಿ ಪುರುಷರು ಪರಬ್ರಹ್ಮನಲ್ಲಿ ತಾದಾತ್ಮ್ಯ ಹೊಂದುವರು. ಏಕರೂಪರಾಗುವರು. (೧೯). ಸಿದ್ಧ, ಸಾಧು, ಮತ್ತು ಮಹಾತ್ಮರಿಗೆಲ್ಲ ಪರಮಾರ್ಥವು ವಿಶ್ರಾಂತಿಯ ಸ್ಥಾನವಾಗಿದೆ. ಸಾತ್ವಿಕವಾಗಿರುವ ಸಾಮಾನ್ಯ ರಾದ ಮಂದ ಬುದ್ಧಿಗಳೂ ಸಹ ಸಂತ ಶರಣರ ಸಹವಾಸ ಮಾಡಿದರೆ ಅವರಿಗೂ ಸಹ ಕೊನೆಗೆ ಬ್ರಹ್ಮ ವಸ್ತುವಿನ ಜ್ಞಾನವಾಗಿ ಸಮಾಧಾನ ಸಿಗುವದು. (೨೦). **ಪರಮಾರ್ಥದಿಂದ ಸರ್ವ ಸಾಧಾರಣ ಕಾರ್ಯಗಳು:–** ಪರಮಾ ರ್ಥವು ಮನುಷ್ಯ ಜನ್ಮದ ಸಾರ್ಥಕ್ಯ ಮಾಡುವದು. ಪರಮಾರ್ಥವೇ ಸಂಸಾರಿಗಳನ್ನು ಉದ್ಧರಿಸಿ ಪಾರು ಮಾಡು ವದು. ಧಾರ್ಮಿಕ ವೃತ್ತಿಯ ಜನರಿಗೆ ಪರಮಾರ್ಥವೇ ಪರಲೋಕ ಸುಖದ ಮಾರ್ಗ ತೋರಿಸುವದು. (೨೧). ಪರಮಾರ್ಥ ತಾಪಸರಿಗೆ, ತಪಸ್ವಿಗಳಿಗೆ ಆಶ್ರಯ ಕೊಡುವದು. ಸಾಧಕರಿಗೆ ಆಧಾರವಾಗುವದು. ಈ ಕಠಿಣ ಭವ ಸಾಗರದಿಂದ ಹೇಗೆ ಪಾರಾಗಬೇಕೆಂಬುದನ್ನು ಪರಮಾರ್ಥವು ಹೇಳಿ ಕೊಡುತ್ತದೆ. (೨೨). ಯಾವನಿಗೆ ಪರಮಾರ್ಥ ಸಾಧಿಸಿರುವದೋ ಅವನೇ ನಿಜವಾದ ರಾಜಾಧಿರಾಜನು. ಯಾವನು ಪರಮಾರ್ಥವನ್ನು ಸಾಧಿಸಿರುವದಿಲ್ಲವೋ ಅವನು ಒಂದು ರೀತಿಯಿಂದ ಭಿಕಾರಿಯೆಂದು ತಿಳಿಯಬೇಕು. ಪರಮಾರ್ಥಕ್ಕೆ ಸರಿದೊರೆಯಾಗಬಲ್ಲುದು ಜಗತ್ತಿನಲ್ಲಿ ಯಾವದೂ ಇಲ್ಲ. (೨೩). ಈ ಪದರಿನಲ್ಲಿ ಅನೇಕ ಜನ್ಮದ ಪುಣ್ಯವಿದ್ದರೇನೇ ಅವನಿಂದ ಪರಮಾರ್ಥ ಘಟಿಸುವದು. ಪರಮಾರ್ಥ ಸ್ವರೂಪದ ಪ್ರತ್ಯಕ್ಷಅನುಭವವೇ ಬರುವದು. (೨೪). **ಪರಮಾರ್ಥ ಮಾಡದಿರುವವರು ಮೂರ್ಖರೆಂದು ತಿಳಿಯ ಬೇಕು–ತಿಳಿದವರು ಪರಮಾರ್ಥ ಮಾಡಬೇಕು:–** ಯಾವ ಮನುಷ್ಯ ಪರಮಾರ್ಥ ತಿಳಿಯುವನೋ ಮತ್ತು ಅದನ್ನು ಆಚರಣೆಯಲ್ಲಿ ತರುವನೋ ಅಂಥವನ ಜನ್ಮ ಸಾರ್ಥಕ ಹೊಂದಿತೆಂದು ತಿಳಿಯಬೇಕು. ಇತರ ಜನರೆಲ್ಲರೂ ಪಾಪಿಗಳಿದ್ದು, ಕೇವಲ ಕುಲ ಕ್ಷಯಕ್ಕಾಗಿ ಜನ್ಮ ತಳೆದವರಾಗಿರುವರು. (೨೫).

ಅಸೋ ಭಗವತ್ಪ್ರಾಪ್ತೀವೀಣ। ಕರೀ ಸಂಸಾರಾಚಾ ಸೀಣ।
ತ್ಯಾ ಮೂರ್ಖಾಚೇ ಮುಖಾವಲೋಕನ। ಕರೂ ಚ ನಯೇ ॥೨೬॥

ಭಲ್ಯಾನೇ ಪರಮಾರ್ಥೀ ಭರಾವೇ। ಶರೀರ ಸಾರ್ಥಕ ಕರಾವೇ।
ಪೂರ್ವಜಾಸ ಉದ್ಧರಾವೇ। ಹರಿಭಕ್ತೀ ಕರೂನೀ ॥೨೭॥

ಇತಿ ಶ್ರೀ ದಾಸಬೋಧೇ ಗುರುಶಿಷ್ಯಸಂವಾದೇ
ಪರಮಾರ್ಥ ಸ್ತವನನಾಮ ಸಮಾಸ ನವಮ ॥

● ●

ಭಗವಂತನ ಪ್ರಾಪ್ತಿ ಮಾಡಿಕೊಳ್ಳದೇ ಸಂಸಾರದಲ್ಲಿ ಯಾರು ನಿರರ್ಥಕ ಶ್ರಮಪಡುವರೋ ಅವರು ಮೂರ್ಖರಾಗಿರುವರು. ಇಂಥವರ ಮುಖಾವಲೋಕನ ಮಾಡಕೂಡದು. (೨೬). ಆದುದರಿಂದ ತಿಳಿದ ಮನುಷ್ಯನು ಪರಮಾರ್ಥದ ಮಾರ್ಗವನ್ನು ಹಿಡಿಯಬೇಕು. ಮತ್ತು ತಮ್ಮ ಶರೀರದ ಸಾರ್ಥಕ್ಯವನ್ನು ಮಾಡಿಕೊಳ್ಳಬೇಕು. ಭಗವಂತನ ಭಕ್ತಿ ಮಾಡಿ ತಮ್ಮ ಶರೀರದ ಸಾರ್ಥಕ್ಯ ಮಾಡಿಕೊಳ್ಳಬೇಕು. ಇದರಂತೆಯೇ ಭಗವಂತನ ಭಕ್ತಿ ಮಾಡಿ ತಮ್ಮ ಪೂರ್ವಜರ ಉದ್ಧಾರ ಮಾಡಬೇಕು. (೨೭).

ಶ್ರೀದಾಸಬೋಧದ ಗುರು ಶಿಷ್ಯರ ಸಂವಾದದಲ್ಲಿಯ
"ಪರಮಾರ್ಥ ಸ್ತವನ"ವೆಂಬ ಹೆಸರಿನ ೧ನೆಯ ದಶಕದಲ್ಲಿಯ
೯ನೆಯ ಸಮಾಸವು ಮುಗಿದುದು.

● ●

## ಸಮಾಸ ೧೦. ನರದೇಹ ಸ್ತವನ (ನುಡಿ ೬೨)

ಮನುಷ್ಯನ ಶರೀರವನ್ನು ಅವರಲ್ಲೂ ಹೆಚ್ಚಾಗಿ ಮನಸ್ಸನ್ನು ಕಲ್ಪನಾತೀತವಾಗಿ ವಿಕಾಸಗೊಳಿಸಲಿಕ್ಕೆ ಬರುತ್ತದೆ. ಮನುಷ್ಯನ ಮಿದುಳು ಭಾರದಿಂದ ಮತ್ತು ಆಕಾರದಿಂದ ಎಲ್ಲದರಲ್ಲಿ ದೊಡ್ಡದಿದ್ದು ರಚನಾದೃಷ್ಟಿಯಿಂದ ನೋಡಿದರೆ ಮೆದುಳು ಎಲ್ಲದರಲ್ಲಿ ಶ್ರೇಷ್ಠವಾದದ್ದಿರುವುದು. ಮೇಂದುವಿನಲ್ಲಿ ವಿಲಕ್ಷಣ ಸಾಮರ್ಥ್ಯದ ಸಂಚಯವಿರುವದು. ಇದರಂತೆಯೇ ಮನುಷ್ಯನ ಬುದ್ಧಿಯ ಮತ್ತು ಕಲ್ಪನೆಯ ಮಟ್ಟವು ಶ್ರೇಷ್ಠ ಪ್ರತಿಯದಾಗಿದೆಯೆಂದು ಅನುಭವಕ್ಕೆ ಬರುವದು. ತಿಳಿಯುವದಕ್ಕೆ ಯೋಗ್ಯವಾದ ಜ್ಞೇಯ ವಸ್ತುವಿನ ಅರ್ಥ ತಿಳಿದುಕೊಳ್ಳುವದು. ಮತ್ತು ಅದರ ಅಂತರಂಗ ಶೋಭಿಸುವದು. ಅನೇಕದರಲ್ಲಿ ಒಂದನ್ನು (ಏಕತ್ವ) ನೋಡುವದು. ಸಮಾಧಾನ, ಶಾಂತಿಗಳೊಂದಿಗೆ ಅನಂತ, ಅಂತವಿಲ್ಲದ ಪರಬ್ರಹ್ಮನ ಕಡೆಗೆ ಹರಿಸುವದು. ಈ ಅಗಾಧ ಅಂತವಿಲ್ಲದ ವಿಶ್ವದ ನಿಯಮಗಳನ್ನು ಗ್ರಹಿಸುವದು ವಗೈರೆ ಜ್ಞಾನದ ಕ್ರಿಯೆಗಳನ್ನು ಕೇವಲ ಮನುಷ್ಯಮಾತ್ರ ಮಾಡಬಲ್ಲವನಾಗಿರುವನು. ಮತ್ತು ಇದರ ಮುಂದೆ ಹೋಗಿ ತನ್ನಲ್ಲಿ ಮತ್ತು ವಿಶ್ವದಲ್ಲೆಲ್ಲ ಅಂತರ್ಯಾಮಿತ್ವದಿಂದ ಕ್ರೀಡೆ ಮಾಡುವ ಸಚ್ಚಿದಾನಂದ ಸ್ವರೂಪವನ್ನು ಪ್ರತ್ಯಕ್ಷವಾಗಿ ಅನುಭವಿಸುವ ವಿಲಕ್ಷಣ ಸಾಮರ್ಥ್ಯವು ಮನುಷ್ಯನಲ್ಲಿಯೇ ಇರುತ್ತದೆ. ಮಾನವೀ ಜೀವನದಲ್ಲಿ ಇದೇ ಸರ್ವೋತ್ತಮ ಧ್ಯೇಯವಾಗಿದೆ ಎಂದು ಬಲ್ಲವರು ಹೇಳುವರು. ಇದನ್ನುಸಾಧಿಸುವದಕ್ಕಾಗಿ ನರದೇಹವನ್ನು ಉಪಯೋಗಿಸಿರಿ ಎಂದು ಸಂತ ಶರಣರು ಆಗ್ರಹದಿಂದ ಹೇಳುತ್ತಾರೆ. ಈ ಆಧ್ಯಾತ್ಮಿಕ ದೃಷ್ಟಿ ಇಟ್ಟುಕೊಂಡು ಈ ಸಮಾಸದಲ್ಲಿ ಶ್ರೀ ಸಮರ್ಥರು ನರದೇಹದ ಗುಣವರ್ಣನೆಯನ್ನು ಮಾಡಿರುತ್ತಾರೆ.

## ಸಮಾಸ ದಹಾವಾ : ನರದೇಹ ಸ್ತವನ ನಿರೂಪಣ

॥ಶ್ರೀರಾಮ॥ ಧನ್ಯ ಧನ್ಯ ಹಾ ನರದೇಹೋ । ಯೇಥೀಲ ಅಪೂರ್ವತಾ ಪಾಹೋ।
ಜೊ ಜೊ ಕೀಜೆ ಪರಮಾರ್ಥಲಾಹೋ । ತೊ ತೊ ಪಾವೆ ಸಿದ್ಧೀತೇ ॥೧॥
ಯಾ ನರದೇಹಾಚೇನಿ ಲಾಗವೇಗ । ಯೇಕ ಲಾಗಲೆ ಭಕ್ತಿಸಂಗೇ।
ಯೇಕೀ ಪರಮ ವೀತರಾಗೇ । ಗಿರಿಕಂದರೇ ಸೇವಿಲೀ ॥೨॥
ಯೇಕ ಫಿರತೀ ತೀರ್ಥಾಟಣೇ । ಯೇಕ ಕರಿತೀ ಪುರಶ್ಚರಣೇ ।
ಯೇಕ ಅಖಂಡ ನಾಮಸ್ಮರಣೇ। ನಿಷ್ಠಾವಂತ ರಾಹಿಲೇ ॥೩॥
ಯೇಕ ತಪೇ ಕರೂ ಲಾಗಲೆ । ಯೇಕ ಯೋಗಾಭ್ಯಾಸೀ ಮಾಹಾಭಲೆ ।
ಯೇಕ ಅಭ್ಯಾಸಯೋಗೇ ಜಾಲೆ । ವೇದಶಾಸ್ತ್ರೀ ವಿತ್ಪನ್ನ ॥೪॥
ಯೇಕೀ ಹಟನಿಗ್ರಹ ಕೇಲಾ । ದೇಹ ಅತ್ಯಂತ ಪೀಡಿಲಾ ।
ಯೇಕೀ ದೇವ ಠಾಈ ಪಾಡಿಲಾ । ಭಾವಾರ್ಥಬಳೇ ॥೫॥
ಯೇಕ ಮಾಹಾನುಭಾವ ವಿಖ್ಯಾತ । ಯೇಕ ಭಕ್ತ ಜಾಲೆ ಖ್ಯಾತ ।
ಯೇಕ ಸಿದ್ಧ ಅಕಸ್ಮಾತ। ಗಗನ ಮೋಳಗತೀ ॥೬॥
ಯೇಕ ತೇಜೀ ತೇಜ ಚೀ ಜಾಲೆ । ಯೇಕ ಜಳೀ ಮಿಳೋನ ಗೇಲೆ ।
ಯೇಕ ತೇ ದಿಸತ ಚಿ ಅದೃಶ್ಯ ಜಾಲೆ । ವಾಯೋಸ್ವರೂಪೀ ॥೭॥
ಯೇಕ ಯೇಕ ಚಿ ಬಹುಧಾ ಹೋತೀ । ಯೇಕ ದೇಖತ ಚಿ ನಿಘೋನಿ ಜಾತೀ ।
ಯೇಕ ಬೈಸಲೆ ಅಸತಾ ಚಿ ಭ್ರಮತಿ । ನಾನಾ ಸ್ಥಾನೀ ಸಮುದ್ರೀ ॥೮॥
ಯೇಕ ಭಯಾನಕಾವರೀ ಬೈಸತೀ । ಯೇಕ ಅಚೇತನೇ ಚಾಲವಿತೀ ।
ಯೇಕ ಪ್ರೇತೇ ಉಠವಿತೀ । ತಪೋಬಳೇಕರೂನೀ ॥೯॥
ಯೇಕ ತೇಜೇ ಮಂದ ಕರಿತೀ । ಯೇಕ ಜಳೇ ಆಟವಿತೀ ।
ಯೇಕ ವಾಯೋ ನಿರೋಧಿತೀ। ವಿಶ್ವಜನಾಚಾ ॥೧೦॥
ಏಸೆ ಹಟನಿಗ್ರಹೀ ಕೃತಬುದ್ಧೀ । ಜಯಾಸ ಮೋಳಲ್ಯಾ ನಾನಾ ಸಿದ್ಧೀ ।
ಏಸೆ ಸಿದ್ಧ ಲಕ್ಷಾವಧೀ । ಹೋಊನ ಗೇಲೆ ॥೧೧॥
ಯೇಕ ಮನೋಸಿದ್ಧ ಯೇಕ ವಾಚಾಸಿದ್ಧ। ಯೇಕ ಕಲ್ಪಸಿದ್ಧ ಯೇಕ ಸರ್ವಸಿದ್ಧ।
ಏಸೆ ನಾನಾ ಪ್ರಕಾರೀಚೆ ಸಿದ್ಧ । ವಿಖ್ಯಾತ ಜಾಲೆ ॥೧೨॥
ಯೇಕ ನವವಿಧಾಭಕ್ತಿರಾಜಪಂಥೇ । ಗೇಲೆ ತರಲೆ ಪರಲೋಕೀಚ್ಯಾ ನಿಜಸ್ವಾರ್ಥೇ ।
ಯೇಕ ಯೋಗೀ ಗುಪ್ತಪಂಥೇ । ಬ್ರಹ್ಮಭುವನಾ ಪಾವಲೇ ॥೧೩॥

## ಸಮಾಸ ೧೦. ನರದೇಹ ಸ್ತವನ ನಿರೂಪಣ

ಈ ನರದೇಹದ ಸಹಾಯದಿಂದಲೇ ಅನೇಕ ಜನರು ಪರಮಾರ್ಥದ ಸಾಧನದಿಂದ ಅನೇಕ ಪ್ರಕಾರದ ಪ್ರಯತ್ನ ಮಾಡಿದ್ದಾರೆ. ಮತ್ತು ಅದನ್ನು ಸಿದ್ಧಿಗೆ ಮುಟ್ಟಿಸಿದ್ದಾರೆ. ಈ ನರದೇಹ ಅತ್ಯಂತ ಧನ್ಯವಾದದ್ದು. ಇದರ ಮಹತ್ವವೆಂದರೆ ಪರಮಾರ್ಥದ ಲಾಭವಾಗಬೇಕೆಂದು ಏನೇನು ಪ್ರಯತ್ನ ಮಾಡುವದಿರುವದೋ ಅದೆಲ್ಲವೂ ಯಶಸ್ವಿಯಾಗುವದು[೧] ಈ ನರದೇಹಕ್ಕೆ ಬಂದವರಲ್ಲಿ ಕೆಲವರು ಭಕ್ತಿಮಾರ್ಗದ ಹಾದಿಯನ್ನು ಹಿಡಿದರು. ಕೆಲವರು ಅತ್ಯಂತ ವಿರಕ್ತರಾಗಿ ಪರ್ವತದ ಗುಹೆಗಳಲ್ಲಿ ಆಶ್ರಯ ಹೊಂದಿರುವರು. [೨]. ಕೆಲವರು ತೀರ್ಥಾಟನೆ ಮಾಡುತ್ತಾ ತಿರುಗುತ್ತಾರೆ. ಕೆಲವರು ಪುರಶ್ಚರಣ ಅಂದರೆ ಠರಾವಿಕ ಮಂತ್ರ ಜಪದಿಂದ ಸಿದ್ಧಿ ಪಡೆಯುವರು. ಮತ್ತೆ ಕೆಲವರು ಅತ್ಯಂತ ನಿಷ್ಠೆಯಿಂದ ಅಖಂಡ ನಾಮಸ್ಮರಣೆ ಮಾಡುತ್ತಲಿರುವರು. [೩] ಕೆಲವರು ತಪಸ್ಸಾಧನೆಯಲ್ಲಿ ಇರುವರು. ಕೆಲವರು ಉತ್ತಮ ಪುರುಷರು ಯೋಗದ ಅಭ್ಯಾಸಮಾಡುವರು. ಇನ್ನು ಕೆಲವರು ವೇದ ಶಾಸ್ತ್ರಗಳ ಅಭ್ಯಾಸಮಾಡಿ ದೊಡ್ಡ ವಿದ್ವಾಂಸರಾಗುವರು. [೪]. ಕೆಲವರು ಹಟಯೋಗದ ಅಭ್ಯಾಸಮಾಡಿ ಸ್ವದೇಹಕ್ಕೆ ಕಷ್ಟ ಕೊಡುವರು. ಮತ್ತೆ ಕೆಲವರು "ದೇವರು ಇದ್ದಾನೆ" ಎಂಬ ನಂಬಿಗೆಯನ್ನು ಬೆಳೆಸುತ್ತ ಇದರ ಬಲದಿಂದಲೇ ದೇವರನ್ನು ಕಂಡುಕೊಂಡರು; ತಿಳಿದುಕೊಂಡರು. [೫]. ಕೆಲವರು ಮಹಾತ್ಮಾಯೆಂದು ಪ್ರಸಿದ್ಧಿ ಪಡೆದರು. ಕೆಲವರು ಭಕ್ತಿಮಾಡಿ ಭಕ್ತಾಗ್ರೇಸರರೆನಿಸಿದರು. ಮತ್ತೆ ಕೆಲವರು ಬೇಕೆನಿಸಿದಾಗ ಆಕಾಶದಲ್ಲಿ ಸಂಚರಿಸುವ ಸಿದ್ಧಿ ಹೊಂದಿದರು. **ಉದಾ:**– ಶ್ರೀವಾಸುದೇವಾನಂದ ಸರಸ್ವತಿಗಳು [ಟೆಂಬೇ ಮಹಾರಾಜರು] [೬]. ಕೆಲವರು ತೇಜೋರೂಪವಾಗಿ ತೇಜದಲ್ಲಿ ಮುಳುಗಿದರು. ಕೆಲವರು ನೀರಿನಲ್ಲಿ ಕರಗಿ ಹೋದರು. ಹಾಗೂ ಕೆಲವರು ವಾಯುರೂಪವಾಗಿ ನೋಡ ನೋಡು–ವದರಲ್ಲಿ ಕಾಣದಾಗುವರು. [೭]. ಒಬ್ಬರೇ ಬಹುರೂಪಧಾರಣ ಮಾಡುತ್ತಾರೆ. ಕೆಲವರು ನೋಡನೋಡುವಷ್ಟರಲ್ಲಿ ಗುಪ್ತರಾಗುತ್ತಾರೆ. ಮತ್ತೆ ಕೆಲವರು ಒಂದು ಸ್ಥಳದಲ್ಲಿ ಇದ್ದೂ ಸಹ ಅನೇಕ ಸ್ಥಳಗಳಲ್ಲಿ ಅಡ್ಡಾಡುತ್ತಾರೆ. ಅಂದರೆ ಇಲ್ಲಿಯೂ ಇರುವರು, ಅಲ್ಲಿಯೂ ಇರುವರು. ಸಮುದ್ರದಲ್ಲಿ ಸಹ ಹೋಗಿ ಬರುತ್ತಾರೆ. [೮]. ಕೆಲವರು ಹಿಂಸ್ರ ಪಶುಗಳ ಮೇಲೆ ಕೂಡ್ರುವರು. [**ಉದಾ:**– ಚಾಂಗ ದೇವರು ಹುಲಿಯಮೇಲೆ ಕುಳಿತು ಬಂದರು.] ಕೆಲವರು ಜಡ ವಸ್ತುವನ್ನು ನಡೆಸುವರು[ಶ್ರೀ ಜ್ಞಾನೇಶ್ವರರು[ಗೋಡೆಯ ಮೇಲೆಕುಳಿತು ನಡೆಸುತ್ತಬಂದರು.]ಮತ್ತೆಕೆಲವರು ತಮ್ಮ ತಪೋಬಲದಿಂದ ಸತ್ತಂಥನ್ನು ಬದುಕಿಸುವರು[೯] ಕೆಲವರು ಬೆಳಕನ್ನು (ತೇಜ) ಕುಗ್ಗಿಸುವರು. ಕೆಲವರು ಜಲಾ–ಶಯಗಳಲ್ಲಿಯ ನೀರನ್ನು ಆಟ್ಟಿಸುವರು. ಕೆಲವರು ಎಲ್ಲ ಪ್ರಾಣಿಗಳ ಶ್ವಾಸವನ್ನು ನಿರೋಧಿಸುವರು. [೧೦] ಕೆಲವರು ಬಹು ಗಾಢ ನಿಶ್ಚಯದಿಂದ ಯೋಗದ ಅಭ್ಯಾಸ ಮಾಡುವರು. ಇವರಿಗೆ ಅನೇಕ ಸಿದ್ಧಿಗಳು ವಶವಾಗುವವು. ಇಂಥ-ವರು ಲಕ್ಷಾವಧಿ ಜನ ಸಿದ್ಧರಾಗಿ ಹೋಗಿರುವರು. [೧೧] ಕೆಲವರು ಮನೋಸಿದ್ಧರು– ಅವರ ಮನಸ್ಸಿಗೆ ಬಂದದ್ದು ಆಗುತ್ತದೆ. ಕೆಲವರು ವಾಚಾಸಿದ್ಧರು. ಇವರು ಮಾತಾಡಿದ್ದು, ಅಂದದ್ದು ನಿಜವಾಗುವದು. ಕೆಲವರಿಗೆ ಸಣ್ಣಪುಟ್ಟ ಸಿದ್ಧಿಗಳು ಲಭಿಸಿರುತ್ತವೆ. ಹಲವರಿಗೆ ಸರ್ವಸಿದ್ಧಿಗಳು ವಶವಾಗಿರುತ್ತವೆ. ಇಂಥ ನಾನಾ ಪ್ರಕಾರದ ಸಿದ್ಧಿ ಪುರುಷರು ಆಗಿಹೋಗಿರುವರು [೧೨] ಕೆಲವರು ನವವಿಧ ಭಕ್ತಿಯ ರಾಜಮಾರ್ಗದಿಂದ ಹೋದರು. ಇವರು ಸ್ವರೂಪದ ಅರಿವನ್ನು ಪಡೆದು ಕೃತಾರ್ಥರಾದರು. ಕೆಲವು ಯೋಗಿಗಳು ಆಕಾಶದ ಗುಪ್ತಮಾರ್ಗದಿಂದ ಬ್ರಹ್ಮಲೋಕಕ್ಕೆ ಹೋದರು [೧೩].

ಯೇಕ ವೈಕುಂಠಾಸ ಗೇಲೇ । ಯೇಕ ಸತ್ಯಲೋಕೀ ರಾಹಿಲೇ ।
ಯೇಕ ಕೈಳಾಸೀ ಬೈಸಲೆ । ಶಿವರೂಪ ಹೋಉನೀ ॥೧೪॥
ಯೇಕ ಇಂದ್ರಲೋಕೀ ಇಂದ್ರ ಜಾಲೆ । ಯೇಕ ಪಿತೃಲೋಕೀ ಮಿಳಾಲೆ ।
ಯೇಕ ತೆ ಉಡಗಣೀ ಬೈಸಲೆ । ಯೇಕ ತೆ ಕ್ಷೀರಸಾಗರೀ ॥೧೫॥
ಸಲೋಕತಾ ಸಮೀಪತಾ । ಸ್ವರೂಪತಾ ಸಾಯೋಜ್ಯತಾ ।
ಯಾ ಚತ್ವಾರ ಮುಕ್ತೀ ತತ್ವತಾ । ಇಚ್ಛಾ ಸೇಊನ ರಾಹಿಲೇ ॥೧೬॥
ಐಸೆ ಸಿದ್ಧ ಸಾಧು ಸಂತ । ಸ್ವಹಿತಾ ಪ್ರವರ್ತಲೆ ಅನಂತ ।
ಐಸಾ ಹಾ ನರದೇಹ ವಿಖ್ಯಾತ । ಕಾಯ ಮ್ಹಣೌನಿ ವರ್ಣಾವಾ ॥೧೭॥
ಯಾ ನರದೇಹಾಚೇನಿ ಆಧಾರೇ । ನಾನಾ ಸಾಧನಾಂಚೇನಿ ದ್ವಾರೇ।
ಮುಖ್ಯ ಸಾರಾಸಾರ ವಿಚಾರೇ । ಬಹುತ ಸುಟಲೇ ॥೧೮॥
ಯಾ ನರದೇಹಾಚೇನಿ ಸಂಮಂಧೇ । ಬಹುತ ಪಾವಲೇ ಉತ್ತಮ ಪದೇ ।
ಅಹಂತಾ ಸಾಂಡೂನ ಸ್ವಾನಂದೇ । ಸುಖೀ ಜಾಲೇ ॥೧೯॥
ನರದೇಹೀ ಯೇಊನ ಸಕಳ । ಉಧರಾಗತೀ ಪಾವಲೇ ಕೇವಳ ।
ಯೇಥೇ ಸಂಶಯಾಚೇ ಮೂಳ । ಖಂಡೋನ ಗೇಲೇ ॥೨೦॥
ಪಶುದೇಹೀ ನಾಹೀ ಗತೀ । ಐಸೇ ಸರ್ವತ್ರ ಬೋಲತೀ ।
ಮ್ಹಣೌನ ನರದೇಹೀ ಚ ಪ್ರಾಪ್ತೀ । ಪರಲೋಕಾಚೀ ॥೨೧॥
ಸಂತ ಮಹಂತ ಋಷಿಮುನೀ । ಸಿದ್ಧ ಸಾಧು ಸಮಾಧಾನೀ ।
ಭಕ್ತ ಮುಕ್ತ ಬ್ರಹ್ಮಜ್ಞಾನೀ । ವಿರಕ್ತ ಯೋಗೀ ತಪಸ್ವೀ ॥೨೨॥
ತತ್ವಜ್ಞಾನೀ ಯೋಗಾಭ್ಯಾಸೀ । ಬ್ರಹ್ಮಚಾರೀ ದಿಗಂಬರ ಸಂನ್ಯಾಸೀ
ಶಡದರ್ಶನೀ ತಾಪಸೀ । ನರದೇಹೀ ಚ ಜಾಲೆ ॥೨೩॥
ಮ್ಹಣೌನೀ ನರದೇಹ ಶ್ರೇಷ್ಠ । ನಾನಾ ದೇಹಾಮಧೆ ವರಿಷ್ಠ ।
ಜಯಾಚೇನಿ ಚುಕೇ ಆರಿಷ್ಟ। ಯೆಮಯಾತನೇಚೇ ॥೨೪॥
ನರದೇಹ ಹಾ ಸ್ವಾಧೇನ । ಸಹಸಾ ನವ್ಹೆ ಪರಾಧೇನ ।
ಪರಂತು ಹಾ ಪರೋಪಕಾರೀ ಝಿಜವೂನ । ಕೀರ್ತಿರೂಪೇ ಉರವಾವಾ ॥೨೫॥
ಅಶ್ವ ವೃಷಭ ಗಾಈ ಮ್ಹೈಸೀ । ನಾನಾ ಪಶು ಸ್ತ್ರಿಯಾ ದಾಸೀ ।
ಕೃಪಾಳೂಪಣೇ ಸೋಡಿತಾ ತ್ಯಾಸೀ। ಕೋಣೀ ತರೀ ಧರೀಲ ॥೨೬॥
ತೈಸಾ ನವ್ಹೆ ನರದೇಹೋ । ಇಛಾ ಜಾವ ಅಥವಾ ರಾಹೋ ।
ಪರೀ ಯಾಸ ಕೋಣೀ ಪಾಹೋ। ಬಂಧನ ಕರೂ ಸಕೇನಾ ॥೨೭॥

ಕೆಲವರು ವೈಕುಂಠಕ್ಕೆ ಹೋದರು. ಕೆಲವರು ಸತ್ಯಲೋಕದಲ್ಲಿ ಇರುವವರಾದರು. ಕೆಲವರು ಶಿವರೂಪರಾಗಿ ಕೈಲಾಸ ದಲ್ಲಿ ಉಳಿದರು. (೧೪). ಕೆಲವರು ಇಂದ್ರಲೋಕಕ್ಕೆ ಹೋಗಿ ಇಂದ್ರರಾದರು. ಕೆಲವರು ಪಿತೃಲೋಕದಲ್ಲಿ ಸೇರಿ ಕೊಂಡರು. ಕೆಲವರು ನಕ್ಷತ್ರದಲ್ಲಿ ಹೋಗಿ ಕುಳಿತರು. [**ಉದಾ**:- ಧೃವ ಮತ್ತು ಅರುಂಧತಿಯವರು] ಕೆಲವರು ಕ್ಷೀರಸಾಗರದಲ್ಲಿ ಇರಲು ಹೋದರು. (೧೫). ಸಲೋಕತಾ, ಸಮೀಪತಾ, ಸರೂಪತಾ, ಸಾಯುಜ್ಯತಾ ಈ ನಾಲ್ಕು ಮುಕ್ತಿಗಳಲ್ಲಿ ಯಾರಿಗೆ ಯಾವ ಮುಕ್ತಿಯಲ್ಲಿ ಇರಬೇಕೆನಿಸಿತೋ ಅಲ್ಲಿ ಕೆಲವರು ಅದರ ಉಪಭೋಗಕ್ಕೆ ನಿಂತರು.(೧೬). ಈ ಪ್ರಕಾರ ಅಸಂಖ್ಯ ಸಿದ್ಧ, ಸಾಧು ಮತ್ತು ಸಂತ ಶರಣರು ಆತ್ಮ ಹಿತಕ್ಕೆ ಈ ನರದೇಹದ ಉಪಯೋಗ ಮಾಡಿ ಕೊಂಡರು. ಅಂತೆಯೇ ಈ ನರದೇಹವು ಬಹಳ ಶ್ರೇಷ್ಠವಾದುದು. ಇದರ ವರ್ಣನೆ ಎಷ್ಟು ಮಾಡಿದರೂ ಕಡಿಮೆ ಯೆನಿಸುವದು. (೧೭). ಇಂಥ ನರದೇಹ ಶ್ರೇಷ್ಠವೇಕೆ ? ಈ ನರದೇಹದ ಆಧಾರದಿಂದ ಅನೇಕ ಸಾಧನಗಳ ಮಾರ್ಗ ಸುಲಭವಾಗಿದೆ. ಅನೇಕ ಸಾಧನಗಳನ್ನು ಮಾಡಲು ಶಕ್ಯವಾಗಿದೆ. ವಿಶೇಷವಾಗಿ ಸಾರಾಸಾರ ವಿಚಾರದ ಸಹಾಯದಿಂದ ಬಹಳಷ್ಟು ಜನರು ಮುಕ್ತರಾಗಿರುವರು. (೧೮). ಈ ನರದೇಹದ ಪ್ರಾಪ್ತಿಯಿಂದ ಬಹುಜನರು ಅಹಂಕಾರವನ್ನು ತ್ಯಜಿಸಿ ಆತ್ಮಾನಂದದಿಂದ ಸಮಾಧಾನವನ್ನು ಹೊಂದಿ ಉತ್ತಮ ಪದಕ್ಕೆ ಮುಟ್ಟಿದರು. (೧೯). ನರದೇಹ ಹೊಂದಿ ಬಂದ ಬಹುಜನರು ಶ್ರೇಷ್ಠ ಮತ್ತು ಉತ್ತಮ ಲೋಕಕ್ಕೆ ಹೋಗಿ ಮುಟ್ಟಿದರು. ಅಂದಮೇಲೆ ಈ ನರದೇಹದ ಶ್ರೇಷ್ಠತೆಯ ಬಗ್ಗೆ ಯಾರಿಗೂ ಯಾವ ಸಂದೇಹವೂ ಬಾರದು. (೨೦). ಪಶು ದೇಹಕ್ಕಿಂತ ನರದೇಹವು ಶ್ರೇಷ್ಠ ವೇಕೆ ? ಪಶು ದೇಹಕ್ಕೆ ಉತ್ತಮ ಗತಿ ಆಗುವದಿಲ್ಲವೆಂದು ಎಲ್ಲರೂ ಹೇಳುತ್ತಾರೆ. ಆದುದರಿಂದ ಭಗವಂತನ ಪ್ರಾಪ್ತಿಗೆ ನರದೇಹದಿಂದಲೇ ಸಾಧ್ಯ. ಇದರಲ್ಲಿ ಸಂಶಯವಿಲ್ಲ. (೨೧). ಸಂತ, ಮಹಂತ, ಋಷಿ, ಮುನಿ, ಸಿದ್ಧ, ಸಾಧು, ಶರಣ, ದಾಸ, ಸಮಾಧಾನಿ, ಭಕ್ತ, ಮುಕ್ತ, ಬ್ರಹ್ಮಜ್ಞಾನಿ, ವಿರಕ್ತಯೋಗಿ, ತಪಸ್ವಿ. (೨೨) ತತ್ವಜ್ಞಾನಿ ಯೋಗಾಭ್ಯಾಸಿ, ಬ್ರಹ್ಮಚಾರಿ, ದಿಗಂಬರ, ಸನ್ಯಾಸಿ, ಷಡ್‌ದರ್ಶನಿ, ಮತ್ತು ತಾಪಸಿ ಇವರೆಲ್ಲರೂ ನರದೇಹಿಗಳೇ ಅಲ್ಲವೇ ? (೨೩). ಆದ್ದರಿಂದ ನರದೇಹ ಶ್ರೇಷ್ಠವಿದೆ. ಸರ್ವ ಪ್ರಕಾರದ ಪ್ರಾಣಿ ದೇಹಗಳಲ್ಲಿ ನರದೇಹವು ವರಿಷ್ಠ ವಾದದ್ದು. ಇದರ ಸಹಾಯದಿಂದಲೇ ಯಮಯಾತನೆಯ ಸಂಕಟ ತಪ್ಪುತ್ತದೆ. (೨೪) **ನರದೇಹ ಸ್ವಾಧೀನ ಅದೆ ಸ್ವತಂತ್ರ ಅದೆ, ಪರಾಧೀನ ಅಥವಾ ಪರತಂತ್ರವಿಲ್ಲ**:- ನರದೇಹದ ಇನ್ನೊಂದು ದೊಡ್ಡ ಗುಣ ಯಾವುದೆಂದರೆ, ಅದು ಸ್ವತಂತ್ರವಿದೆ. ಸಹಸಾ ಇದು ಪರತಂತ್ರವಾಗುವದಿಲ್ಲ. ಆದರೆ ಇದನ್ನು ಪರೋಪಕಾರ ಮಾಡುವದರಲ್ಲಿ ದುಡಿಸಬೇಕು. ಕೀರ್ತಿಯ ಹೆಮ್ಮೆಗೆ ಒಳಪಡದಂತೆ, ಕೀರ್ತಿಯ ಅಹಂಕಾರದಿಂದ ಉಳಿಸಬೇಕು. ಅರ್ಥಾತ್ ಮರಣಾನಂತರವೂ ಕೀರ್ತಿ ಉಳಿಯಬೇಕು. (೨೫). ಕುದುರೆ, ಆಕಳು, ಎತ್ತು, ಎಮ್ಮೆ ಈ ಪ್ರಾಣಿ ಗಳು ಮತ್ತು ಇತರ ಪಶುಗಳನ್ನು ಒಂದು ವೇಳೆ ಕನಿಕರ ಪಟ್ಟು ದಯೆಯಿಂದ ಮುಕ್ತ ಮಾಡಿಬಿಟ್ಟರೆ (ಕಟ್ಟಿ ಹಾಕಿದ ಹಗ್ಗ ಬಿಚ್ಚಿ ಮೋಕಳೀಕ ಮಾಡಿದರೆ) ಇವನ್ನು ಯಾರಾದರೂ ಹಿಡಿದುಕೊಂಡು ಹೋಗುತ್ತಾರೆ. ಸ್ತ್ರೀಯರನ್ನು ವಿಶೇಷತಃ ದಾಸೀ ಜನರನ್ನು ಸಹ ಇದೇ ರೀತಿ ಒಯ್ಯಬಹುದು. (೨೬). ಆದರೆ ನರದೇಹ (ಪುರುಷ ದೇಹದ) ಸ್ಥಿತಿ ಹೀಗಿರುವದಿಲ್ಲ. ತನ್ನ ಇಚ್ಛೆ ಬಂದಾಗ ಅವನು ಹೊರಗೆ ಬರಬಹುದು, ಅಥವಾ ಮನೆಯಲ್ಲಿ ಇರಬಹುದು. ಇವನನ್ನು ಯಾರೂ ಹಿಡಿಯುವದಿಲ್ಲ. (೨೭).

ನರದೇಹ ಪಾಂಗುಳ ಅಸತಾ । ತರೀ ತೋ ಕಾರ್ಯಾಸ ನ ಯೇತಾ ।
ಅಥವಾ ಥೋಟಾ ಜರೀ ಅಸತಾ । ತರೀ ಪರೋಪಕಾರಾಸ ನಯೇ ॥೨೮॥
ನರದೇಹ ಅಂಧ ಅಸಿಲಾ । ತರೀ ತೊ ನಿಪಟ ಚಿ ವಾಯಾ ಗೇಲಾ ।
ಅಥವಾ ಬಧಿರ ಜರೀ ಅಸಿಲಾ । ತರೀ ನಿರೂಪಣ ನಾಹೀ ॥೨೯॥
ನರದೇಹ ಅಸಿಲಾ ಮುಕಾ । ತರೀ ಘೇತಾ ನಯೇ ಆಶಂಕಾ।
ಅಶಕ್ತ ರೋಗೀ ನಾಸಕಾ । ತರೀ ತೋ ನಿಃಕಾರಣ ॥೩೦॥
ನರದೇಹ ಅಸಿಲಾ ಮೂರ್ಖ । ಅಥವಾ ಫೇಪರ್‍ಯಾ ಸಮಂಧಾಚೇ ದುಃಖ ।
ತರೀತೋ ಜಾಣಾವಾ ನಿರಾರ್ಥಕ । ನಿಶ್ಚಯೇಸೀ ॥೩೧॥
ಇತುಕೇ ಹೇ ನಸ್ತಾ ವೆಂಗ । ನರದೇಹ ಆಣೀ ಸಕಳ ಸಾಂಗ ।
ತೇಣೇ ಧರಾವಾ ಪರಮಾರ್ಥ ಮಾರ್ಗ । ಲಾಗವೇಗೇ ॥೩೨॥
ಸಾಂಗ ನರದೇಹ ಜೋಡಲೇ । ಆಣೀ ಪರಮಾರ್ಥಬುದ್ಧಿ ವಿಸರ್ಲೇ ।
ತೇ ಮೂರ್ಖ ಕೈಸೇ ಭ್ರಮಲೇ । ಮಾಯಾಜಾಳೀ ॥೩೩॥
ಮೃತ್ತಿಕಾ ಖಾಣೋನ ಘರ ಕೇಲೇ । ತೇ ಮಾಝೇ ಐಸೇ ದೃಢ ಕಲ್ಪಿಲೇ ।
ಪರೀ ತೇ ಬಹುತಾಂಚೇ ಹೇ ಕಳಲೇ । ನಾಹೀ ಚ ತಯಾಸೀ ॥೩೪॥
ಮುಷ್ಯಕ ಮ್ಹಣತೀ ಘರ ಆಮುಚೇ । ಪಾಲೀ ಮ್ಹಣತೀ ಘರ ಆಮುಚೇ ।
ಮಕ್ಷಿಕಾ ಮ್ಹಣತೀ ಘರ ಆಮುಚೇ । ನಿಶ್ಚಯೇಸೀ ॥೩೫॥
ಕಾಂತಣ್ಯಾ ಮ್ಹಣತೀ ಘರ ಆಮುಚೆ । ಮುಂಗಳೇ ಮ್ಹಣತೀ ಘರ ಆಮುಚೆ ।
ಮುಂಗ್ಯಾ ಮ್ಹಣತೀ ಘರ ಆಮುಚೆ । ನಿಶ್ಚಯೇಸೀ ॥೩೬॥
ವಿಂಚೂ ಮ್ಹಣತೀ ಆಮುಚೆ ಘರ । ಸರ್ಪ ಮ್ಹಣತೀ ಆಮುಚೆ ಘರ ।
ಝುರಳೇ ಮ್ಹಣತೀ ಆಮುಚೇ ಘರ । ನಿಶ್ಚಯೇಸೀ ॥೩೭॥
ಭ್ರಮರ ಮ್ಹಣತೀ ಆಮುಚೇ ಘರ । ಭಿಂಗೋರ್‍ಯಾ ಮ್ಹಣತೀ ಆಮುಚೇ ಘರ ।
ಆಳಿಕಾ ಮ್ಹಣತೀ ಆಮುಚೇ ಘರ । ಕಾಷ್ಠಮಧೇ ॥೩೮॥
ಮಾರ್ಜಾರೇ ಮ್ಹಣತೀ ಆಮುಚೇ ಘರ । ಶ್ವಾನೇ ಮ್ಹಣತೀ ಆಮುಚೇ ಘರ ।
ಮುಂಗಸೇ ಮ್ಹಣತೀ ಆಮುಚೇ ಘರ । ನಿಶ್ಚಯೇಸೀ ॥೩೯॥
ಪುಂಗಳ ಮ್ಹಣತೀ ಆಮುಚೇ ಘರ । ವಾಳಮ್ಯಾ ಮ್ಹಣತೀ ಆಮುಚೇ ಘರ ।
ಪಿಸುವಾ ಮ್ಹಣತೀ ಆಮುಚೇ ಘರ । ನಿಶ್ಚಯೇಸೀ ॥೪೦॥
ಢೇಕುಣ ಮ್ಹಣತೀ ಆಮುಚೇ ಘರ । ಚಾಂಚಣ್ಯಾ ಮ್ಹಣತೀ ಆಮುಚೇ ಘರ ।
ಘುಂಗರ್ಡೀ ಮ್ಹಣತೀ ಆಮುಚೇ ಘರ । ನಿಶ್ಚಯೇಸೀ ॥೪೧॥

**ವ್ಯಂಗ ದೇಹವು ಉಪಯೋಗಕ್ಕೆ ಬರುವದಿಲ್ಲ:** ನರದೇಹ ಕುಂಟ, ಹೆಳವನಾಗಿದ್ದರೆ ಕೆಲಸ ಮಾಡಲಿಕ್ಕೆ ಬರುವ-ದಿಲ್ಲ.ಕೈಮುರಕನಾಗಿದ್ದರೆ ಪರೋಪಕಾರ ಮಾಡಲಿಕ್ಕೆ ಬರುವದಿಲ್ಲ(೨೮) ಕುರುಡನಾಗಿದ್ದರೆ ಯಾವದಕ್ಕೂಉಪಯೋಗ ವಿಲ್ಲದಂತಾಗುವದು. ಕಿವುಡನಾಗಿದ್ದರೆ ಪ್ರವಚನ, ನಿರೂಪಣಾಧಿಗಳ ಶ್ರವಣ ಮಾಡಲಿಕ್ಕೆ ಬರುವದಿಲ್ಲ. (೨೯). ನರದೇಹ ಮೂಕವಾಗಿದ್ದರೆ ತನಗೆ ಬಂದ ಸಂಶಯಗಳ ಪರಿಹಾರದ ಬಗ್ಗೆ ಮಾತಾಡಿ ತಿಳಿಸಲು ಬರುವದಿಲ್ಲ. ಅಶಕ್ತ, ರೋಗಿ, ಅಥವಾ ಕ್ಷಯರೋಗಿ, ಕುಷ್ಟರೋಗಿ, ಇದ್ದರೆ ಇವರು ಯಾವ ಕೆಲಸಕ್ಕೂ ಬರದೆ ನಿರುಪಯೋಗಿ ಯಾಗುವರು. (೩೦) ಜಾಣತನವಿಲ್ಲದ ಮೂರ್ಖ, ಮಲರೋಗದಿಂದ ಪೀಡಿತವಿದ್ದವ, ಪಿಶಾಚ ಬಾಧೆ ಇದ್ದವರೆಲ್ಲರೂ ನಿಶ್ಚಿತವಾಗಿಯೂ ನಿರುಪಯೋಗಿ ಎಂದು ತಿಳಿಯಬೇಕು. (೩೧). **ವ್ಯಂಗರಹಿತ ನರದೇಹವನ್ನು ಪರಮಾರ್ಥಕ್ಕೆ ಹಚ್ಚಬೇಕು:-** ಮೇಲೆ ಹೇಳಿದ ನ್ಯೂನತೆ (ವ್ಯಂಗ)ಗಳಲ್ಲಿ ಯಾವ ವ್ಯಂಗವೂ ಇಲ್ಲದವರು ಅವಯವಗಳಿಂದ ಸಶಕ್ತ ರಿದ್ದವರು ವೇಳೆಗಳೆಯದೇ ತತ್ಕಾಲದಲ್ಲಿ ಪರಮಾರ್ಥ ಮಾರ್ಗಕ್ಕೆ ಹಚ್ಚಬೇಕು. (೩೨). **ನಿರ್ವ್ಯಂಗ ಮತ್ತು ಉತ್ತಮ ನರದೇಹ ಪ್ರಾಪ್ತವಿದ್ದರೂ ಸಹ ಮೂರ್ಖ ಮನುಷ್ಯನು ಪರಮಾರ್ಥ ಮಾಡದೆ ಮಾಯೆಯ ಬಲೆಯಲ್ಲಿ ಸಿಕ್ಕಿ ಒದ್ದಾಡುವನು:-** ಮೂರ್ಖ ಮನುಷ್ಯನಿಗೆ ಉತ್ತಮ, ನಿರ್ವ್ಯಂಗ, ದೇಹ ದೊರಕಿರುವಾಗಲೂ ಪರಮಾರ್ಥದ ವಿಚಾರ ಮಾಡುವದನ್ನೇ ಮರೆತು ಬಿಡುವನು. ನಂತರ ಮಾಯೆಯ ಜಾಲದಲ್ಲಿ ಸಿಲುಕಿ ಭ್ರಮೆಗೊಂಡು ತಿರುಗುವನು. (೩೩). ಉದಾಹರಣೆಗೆ ಹೇಳುವದಾದರೆ, ಇಂಥ ಮನುಷ್ಯನು ಭೂಮಿಯಿಂದ ಮಣ್ಣನ್ನು ಕಡಿದು ತಂದು ತನಗಾಗಿ ಒಂದು ಮನೆಯನ್ನು ಕಟ್ಟಿಕೊಳ್ಳುತ್ತಾನೆ "ಈ ಮನೆ ನನ್ನದು" ಎಂಬ ಧೃಡ ಕಲ್ಪನೆಯನ್ನು ಮನದಲ್ಲಿ ಮಾಡಿಕೊಂಡಿರುತ್ತಾನೆ. ಆದರೆ, ಇದು ಬಹಳ ಜೀವಿಗಳದಾಗಿದೆ. ಇದು ನನ್ನದೊಬ್ಬನದೇ ಅಲ್ಲ ಎಂಬ ವಿಚಾರವನ್ನೇ ತಿಳಿದುಕೊಂಡಿಲ್ಲ. (೩೪). ಮೂರ್ಖನು ಯಾವ ಮನೆ ತನ್ನದೆಂಬು ತಿಳಿದು ಅದರಲ್ಲಿ ನನ್ನದೆಂಬ ಧೃಡತೆಯಿಂದ ವಾಸಿಸುವನೋ, ಆದರೆ ಆ ಮನೆಯ ಮೇಲೆ ಎಷ್ಟೋ ಜೀವಜಂತುಗಳೂ ಮತ್ತು ಮನುಷ್ಯರೂ ಇದು ನನ್ನದು, ನನ್ನದು ಎಂದು ಹೇಳುವರು. **ಇದರ ವರ್ಣನೆ:-** ಇಲಿಯು ಅನ್ನುತ್ತದೆ "ಈ ಮನೆಯು ನನ್ನದು", ಹಲ್ಲಿ ಅನ್ನುತ್ತದೆ "ನಮ್ಮದೀ ಮನೆ", ನೊಣ ಅನ್ನುತ್ತದೆ"ಇದು ನಮ್ಮ ಮನೆ"ಎಂದು(೩೫). ಇದೇ ಪ್ರಕಾರವಾಗಿ ಜೇಡಹುಳದಂಥ ಒಂದು ಕ್ಷುದ್ರ ಜೀವ (ಕೋಳ್ಯಾ ಜಾತಿಯ) ಕಟ್ಟಿರುವೆ, ಇರುವೆ. (೩೬). ಚೇಳು, ಹಾವು, ಝುರಿ. (೩೭). ಗುಂಗೀಹುಳದ ಸಮುದಾಯ, ಮನೆಯ ಕಟ್ಟಿಗೆಯಲ್ಲಿರುವ ಡೊಣ್ಣೆಹುಳ (೩೮). ಬೆಕ್ಕು, ನಾಯಿ, ಮುಂಗಲಿ ಇವೆಲ್ಲವೂ ಈ ಮನೆ ನನ್ನದು ಅನ್ನುವವು. (೩೯). ಹೊಲಸು ವಾಸನೆ ಬಿಡುವ ಕಾಲಿನ ಕೀಟಕ, ಗೆದ್ದಲಿ, ಧ್ವಂಸ ಮಾಡುವ ಒಂದು ಕ್ಷುದ್ರ ಜೀವಿ. (೪೦). ತಗಣೆ, ಕೆಂಪಿರುವೆ, ಮಚ್ಚರ, (ಡಾಂಸ) ಗುಂಯಿ ಎಂದು ಶಬ್ದ ಮಾಡುವ ಗುಂಗಾಡು. (೪೧).

ಪಿಸೊಳೆ ಮ್ಹಣತೀ ಆಮುಚೇ ಘರ । ಗಾಂಧೆಲೆ ಮ್ಹಣತೀ ಆಮುಚೇ ಘರ ।
ಸೋಟೆ ಮ್ಹಣತೀ ಆಮುಚೇ ಘರ । ಆಣೀ ಗೊಂಬೀ ॥೪೨॥
ಬಹುತ ಕೀಡ್ಯಾಂಚಾ ಜೋಜಾರ । ಕಿತೀ ಸಾಂಗಾವಾ ವಿಸ್ತಾರ ।
ಸಮಸ್ತ ಮ್ಹಣತೀ ಆಮುಚೇ ಘರ । ನಿಶ್ಚಯೇಸೀ ॥೪೩॥
ಪಶು ಮ್ಹಣತೀ ಆಮುಚೇ ಘರ । ದಾಸೀ ಮ್ಹಣತೀ ಆಮುಚೇ ಘರ ।
ಘರೀಚೀ ಮ್ಹಣತೀ ಆಮುಚೇ ಘರ । ನಿಶ್ಚಯೇಸೀ ॥೪೪॥
ಪಾಹುಣೆ ಮ್ಹಣತೀ ಆಮುಚೇ ಘರ । ಮಿತ್ರ ಮ್ಹಣತೀ ಆಮುಚೇ ಘರ ।
ಗ್ರಾಮಸ್ತ ಮ್ಹಣತೀ ಅಮುಚೇ ಘರ । ನಿಶ್ಚಯೇಸೀ ॥೪೫॥
ತಶ್ಕರ ಮ್ಹಣತೀ ಆಮುಚೇ ಘರ । ರಾಜಕೀ ಮ್ಹಣತೀ ಆಮುಚೇ ಘರ ।
ಆಗ್ನ ಮ್ಹಣೆ ಆಮುಚೇ ಘರ । ಭಸ್ಮ ಕರೂ ॥೪೬॥
ಸಮಸ್ತ ಮ್ಹಣತೀ ಘರ ಮಾಝೇ।ಹೇ ಮೂರ್ಖ ಹಿ ಮ್ಹಣೆ ಮಾಝೆ ಮಾಝೇ।
ಸೇವಟ ಜಡಜಾಲೆ ವೋಝೇ । ಟಾಕಿಲಾ ದೇಶ ॥೪೭॥
ಅವಘೀ ಘರೇ ಭಂಗಲೀ । ಗಾವಾಂಚೀ ಪಾಂಢರೀ ಪಡಿಲಿ ।
ಮಗ ತೇ ಗೃಹೀ ರಾಹಿಲೀ । ಆರಣ್ಯ ಸ್ವಾಪದೇ ॥೪೮॥
ಕಿಡಾ ಮುಂಗೀ ವಾಳವೀ ಮೂಷಕ । ತ್ಯಾಂಚೇ ಚ ಘರ ಹೇ ನಿಶ್ಚಯಾತ್ಮಕ ।
ಹೇ ಪ್ರಾಣೀ ಬಾಪುಡೆ ಮೂರ್ಖ । ನಿಘೋನ ಗೇಲೆ ॥೪೯॥
ಐಸೀ ಗೃಹಾಂಚೀ ಸ್ಥಿತೀ । ಮಿಥ್ಯಾ ಆಲೀ ಆತ್ಮ ಪ್ರಚಿತೀ।
ಜನ್ಮದೋ ದಿಸಾಂಚೀ ವಸ್ತೀ । ಕೋಠೇ ತರೀ ಕರಾವೀ ॥೫೦॥
ದೇಹ ಮ್ಹಣಾವೇ ಆಪುಲೇ । ತರೀ ಹೇ ಬಹುತಾ ಕಾರಣೇ ನಿರ್ಮಿಲೇ ।
ಪ್ರಾಣೀಯಾಂಚ್ಯಾ ಮಾಥಾ ಘರ ಕೇಲೇ । ವಾ ಮಸ್ತಕೀ ಭಕ್ಷಿತೀ ॥೫೧॥
ರೋಮೋಮುಳೀ ಕಿಡೆ ಭಕ್ಷಿತೀ । ಖಾಂಡುಕ ಜಾಲ್ಯಾ ಕಿಡೆ ಪಡತೀ ।
ಪೋಟಾಮಧ್ಯೇ ಜಂತ ಹೋತೀ । ಪ್ರತ್ಯಕ್ಷ ಪ್ರಾಣಿಯಾಂಚ್ಯಾ ॥೫೨॥
ಕೀಡ ಲಾಗೆ ದಾಂತಾಸೀ । ಕೀಡ ಲಾಗೆ ಡೋಳ್ಯಾಸೀ ।
ಕೀಡ ಲಾಗೆ ಕರ್ಣಾಸೀ। ಆಣೀ ಗೋಮಾಶಾ ಭರತೀ ॥೫೩॥
ಗೋಂಚಿಡ ಅಶುದ್ಧ ಸೇವಿತೀ । ಚಾಮವಾ ಮಾಂಸಾಂತ ಘುಸತೀ ।
ಪಿಸೋಳೆ ಚಾವೂನ ಪಳತೀ । ಅಕಸ್ಮಾತ್ ॥೫೪॥
ಭೊಂಗೆ ಗಾಂಧೇಲೇ ಚಾವಿತೀ । ಗೊಂಬೀ ಜಳವಾ ಅಶುದ್ಧ ಘೇತೀ ।
ವಿಂಚೂ ಸರ್ಪ ದಂಶ ಕರಿತೀ । ಕಾನಟೇ ಫುರ್ಸೀ ॥೫೫॥

ಕಡಿಯುವ ಕ್ಷುದ್ರಜೀವಿ, ಚಿಕ್ಕಾಡು, ಕಣಜೀರಿಗೆ ಹುಳ, ಸೋಟ ಎಂಬ ಜಂತು ಕ್ರಿಮಿ ಮತ್ತು ಬಹಳ ಕಾಲುಗಳಿದ್ದ ಜೀವ ಇವೆಲ್ಲವೂ ಈ ಮನೆ ನನ್ನದೆಂದು ಅನ್ನುವವು. (೪೨). ಈ ಯಾವತ್ತೂ ಕ್ರಿಮಿ ಕೀಟಗಳ ಬಳಗದ ಸಮುದಾಯವನ್ನು ಎಷ್ಟೆಂದು ಸವಿಸ್ತಾರವಾಗಿ ಹೇಳುವದು. ಒಟ್ಟಿನಲ್ಲಿ ಸರ್ವ ಕೀಟಕ ಜೀವ ಜಂತುಗಳೆಲ್ಲ ಈ ಮನೆಯು ನಮ್ಮದೆ" ಎಂದು ಅನ್ನುವವು. ಇದಕ್ಕಿಂತ ವಿಸ್ತಾರವಾಗಿ ಹೇಳುವದು ಬೇಡ. (೪೩). ಪಶುಗಳು, ಕೆಲಸಕ್ಕಿರುವ ಸ್ತ್ರೀ (ದಾಸಿ) ಮತ್ತು ಮನೆಯಲ್ಲಿರುವ ಜನರೆಲ್ಲ "ಈ ಮನೆ ನಮ್ಮದೆ" ಎಂದು ಅನ್ನುವರು. (೪೪). ಇನ್ನೂ ಹೇಳುವದಾದರೆ. ಬೀಗರು, ಮಿತ್ರರು, ಊರ ಜನರು. (೪೫). ಚೋರ ಮತ್ತು ರಾಜ್ಯದ ಅಧಿಕಾರಿ ಇವರೆಲ್ಲ " ಈ ಮನೆ ನಮ್ಮದೆನ್ನುವರು". ಹೆಚ್ಚಿಗೆ ಏನು ಹೇಳುವದು, "ಈ ಮನೆ ನನ್ನದೆ" ಇದನ್ನು ಬೇಕಾದಾಗ ಸುಟ್ಟು ಭಸ್ಮಮಾಡಬಲ್ಲೆನೆಂದು ಅಗ್ನಿದೇವನೂ ಸಹ ಅನ್ನುವನು. (೪೬). ಇದೇ ಪ್ರಕಾರ "ಈ ಮನೆ ನಮ್ಮದೆಂದು" ಎಲ್ಲರೂ ಅನ್ನುವರೆಂದ ಮೇಲೆ ಮೂರ್ಖನೂ ಸಹ "ಈ ಮನೆ ನನ್ನದು, ನನ್ನದು ಎಂದು ಅನ್ನುವದು ಆಶ್ಚರ್ಯವಲ್ಲ. ಕೊನೆಯಲ್ಲಿ ಈ ಮನೆಯು ಸಂಸಾರ ಭಾರದಿಂದ ಜಡವಾಗುತ್ತದೆ. ಇದರ ಭಾರ ಸಹಿಸದಾಗುತ್ತದೆ. ಆಗ ಅವನು ಮನೆ, ಮಾರು, ಊರು, ಬಿಟ್ಟು ಬೇರೆ ಕಡೆಗೆ ಹೋಗುವನು. (೪೭) **ಆಗಿನ ಕಾಲದ ಜನ ರೀತಿಯ ಪ್ರಕಾರ ಊರು ಹಾಳು ಬಿದ್ದಿತೆಂದರೆ ಎಲ್ಲರೂ ಮನೆ ಮಾರು-ಬಿಟ್ಟು ಹೋಗಬೇಕಾಗುತ್ತಿತ್ತು:-** ಕಾಲಾಂತರ ಎಲ್ಲ ಮನೆಗಳೂ ಬೀಳುವವು. ಇಡೀ ಊರೆಲ್ಲ ಹಾಳು ಬೀಳುತ್ತದೆ. ಆಗ ಆ ಹಾಳು ಬಿದ್ದ ಮನೆಯಲ್ಲಿ ಅರಣ್ಯದಲ್ಲಿಯ ಪ್ರಾಣಿಗಳು ವಾಸ ಮಾಡುವವು. (೪೮). ನಿಜವಾಗಿ ಹೇಳುವದಾದರೆ ಹುಳ, ಇರುವೆ, ಗೆದ್ದಲಿ, ಇಲಿ ಮೊದಲಾದ ವುಗಳದೇ ಈ ಮನೆ ಇರುತ್ತದೆ. ಈ ಪ್ರಾಣಿಗಳು ಮಾತ್ರ ಅಲ್ಲಿ ವಸತಿ ಮಾಡಿರುತ್ತವೆ. "ನನ್ನದು-ನನ್ನದು" ಎಂದು ಭ್ರಮಿಸಿರುವ ವಿಚಾರಹೀನ ಮೂರ್ಖನಿಗೆ ಮಾತ್ರ ಮನೆ ಬಿಟ್ಟು ಹೋಗಬೇಕಾಯಿತು, (೪೯). ಮನೆಯ ಅವಸ್ಥೆ ಹೀಗಾಯಿತು. ಮಣ್ಣಿನ ಮನೆಗೆ "ನನ್ನದು-ನನ್ನದು" ಎಂದು ಅನ್ನುವದು ಎಷ್ಟೊಂದು ಸುಳ್ಳು ಮತ್ತು ಮೂರ್ಖತನದ್ದಾಗಿದೆಯೆಂಬುದು ಪ್ರತ್ಯಕ್ಷ ಅನುಭವದಿಂದಲೇ ಗೊತ್ತಾಗುವದು. **ಸಾರಾಂಶ:-** ಜನ್ಮವೆಂದರೆ ಜಗದಲ್ಲಿಯ ಎರಡು ದಿನಗಳ ವಾಸ ಇರುವದು. ಅಂದ ಮೇಲೆ ಎಲ್ಲಿಯಾದರೂ ನಿಲ್ಲಬೇಕು. (೫೦) **ಮನೆಯು ಹೇಗೆ ನಮ್ಮದಲ್ಲವೋ ಹಾಗೆಯೇ ದೇಹವೂ ಸಹಿತ ನಿಜವಾಗಿ ನಮ್ಮದಲ್ಲ:-** ದೇಹವು ನಮ್ಮದೆಂದು ಅನ್ನುವದಾದರೆ ಇದೂ ನಿಜವಲ್ಲ. ಮನೆಯಂತೆಯೇ ಇದೂ ಸಹ ಅನೇಕರಿಗಾಗಿಯೇ ಜನ್ಮಕ್ಕೆ ಬಂದಿದೆ. **ಉದಾಹರಣಾರ್ಥ:-** ಮನುಷ್ಯನ ತಲೆಯಲ್ಲಿ ಹೇನುಗಳಾಗುವವು. ಅವು ಅಲ್ಲಿ ವಾಸ ಮಾಡಿ ಅವನ ತಲೆಯನ್ನೇ ತಿನ್ನುವವು.(೫೧).ಕೂದಲಿನ ಬೊಡ್ಡೆಯಲ್ಲಿ ಇದ್ದುಕೊಂಡು ಶೀರು ಮತ್ತು ಇತರ ಕೀಟಗಳು ರೋಮರಂಧ್ರದಲ್ಲಿಯ ಮಾಂಸವನ್ನು ತಿನ್ನುವವು. ಕುರು ಆದರೆ ಅವರಲ್ಲಿ ಹುಳುಬೀಳುವವು. ಮನುಷ್ಯನ ಹೊಟ್ಟೆಯಲ್ಲಿ ಜಂತುಗಳಾಗುವವು. ಇವೆಲ್ಲ ನೀವು ಪ್ರತ್ಯಕ್ಷ ನೋಡುವಿರಿ(೫೨) ಹಲ್ಲು, ಕಣ್ಣು, ಕಿವಿಗಳಲ್ಲಿ ಹುಳು ಹತ್ತುವವು. ಕಿವಿಯಲ್ಲಿ ಹುಳು ಬಿದ್ದರೆ ನೊಣ, ತೊನಶಿಗಳು ಮುತ್ತಿಗೆ ಹಾಕುವವು. (೫೩). ಕುರುಡು ನೊಣಗಳು ರಕ್ತ ಕುಡಿಯುವವು. ಉಣ್ಣೆ-ಹಂಚುಣ್ಣಿಗಳು ರಕ್ತ ಹೀರುವವು. ಇನ್ನೊಂದು ಪ್ರಾಣಿ (ಚಾಮವಾ) ಮಾಂಸದಲ್ಲಿ ಸೇರುವದು. ಒಂದು ಪ್ರಕಾರದ ಸಣ್ಣ ಜೀವ ಪಿಸೋಳಿ ಎಂಬುದು ಕಡಿದ ಕೂಡಲೇ ಓಡಿ ಹೋಗುವದು. (೫೪). ಗುಂಗೀಹುಳ, ಕಡಜೀರಿಗೆ ಹುಳಗಳು ಕಡಿಯುವವು. ಗೋಮಾ ಅಂದರೆ ಬಹಳ ಕಾಲಿರುವ ಪ್ರಾಣಿ. ಮತ್ತು ಜಿಗಳಿಗಳು ರಕ್ತ ಕುಡಿಯುವವು. ಚೇಳು, ಹಾವು, ಕೊಂಕಣದಲ್ಲಿರುವ ಒಂದು ಜಾತಿಯ ವಿಷಾರಿ ಹಾವು. (ಕಾನಟೆ ಘೋಣಸಾ) ಮತ್ತು ಘುರ್ಶಿ ಎಂಬ ಒಂದು ಜಾತಿಯ ವಿಷಾರಿ ರಕ್ತಶೋಷಕ ಹುಳು ಅಥವಾ ಹಾವು ಇವು ಕಡಿಯುವವು. (೫೫).

ಜನ್ಮೊನ ದೇಹ ಪಾಳಿಲೇ । ತೇ ಅಕಸ್ಮಾತ ವ್ಯಾಘ್ರೇ ನೇಲೇ ।
ಕಾ ತೇ ಲಾಂಡಗೀ ಚ ಭಕ್ಷಿಲೇ । ಬಳಾತ್ಕಾರೇ ॥೫೬॥
ಮೂಷಕೇ ಮಾರ್ಜರೇ ದಂಶ ಕರಿತೀ । ಸ್ವಾನೇ ಅಶ್ವೇ ಲೋಲೇ ತೋಡಿತೀ।
ರೀಸೇ ಮರ್ಕಟೇ ಮಾರಿತೀ । ಕಾಸಾವೀಸ ಕರೂನಿ ॥೫೭॥
ಉಷ್ಟ್ರೇ ಡಸೋನ ಉಚಲಿತೀ । ಹಸ್ತೀ ಚಿರ್ಡೂನ ಟಾಕಿತೀ ।
ವೃಷಭ ಟೋಚೂನ ಮಾರಿತೀ । ಅಕಸ್ಮಾತ ॥೫೮॥
ತಸ್ಕರ ತಡತಡಾ ತೋಡಿತೀ । ಭೂತೇ ಝಡಪೋನ ಮಾರಿತೀ ।
ಅಸೋ ಯಾ ದೇಹಾಚೀ ಸ್ಥಿತೀ। ಐಸೀ ಅಸೆ ॥೫೯॥
ಐಸೆ ಶರೀರ ಬಹುತಾಂಚೆ । ಮೂರ್ಖ ಮ್ಹಣೆ ಆಮುಚೆ ।
ಪರಂತು ಖಾಜೆ ಜಿವಾಚೆ । ತಾಪತ್ರೈ ಬೋಲಿಲೇ ॥೬೦॥
ದೇಹ ಪರಮಾರ್ಥೀ ಲಾವಿಲೇ । ತರೀ ಚ ಯಾಚೇ ಸಾರ್ಥಕ ಜಾಲೇ ।
ನಾಹೀ ತರೀ ಹೇ ವ್ಯರ್ಥ ಚಿ ಗೇಲೇ । ನಾನಾ ಆಘಾತೇ ಮೃತ್ಯುಪಂಥೇ ॥೬೧॥
ಅಸೋ ಜೆ ಪ್ರಾಪಂಚಿಕ ಮೂರ್ಖ। ತೇ ಕಾಯೋ ಜಾಣತೀ ಪರಮಾರ್ಥ ಸುಖ ।
ತ್ಯಾ ಮೂರ್ಖಾಚೇ ಲಕ್ಷಣ ಕಾಂಹೀ ಯೇಕ। ಪುಢೇ ಬೋಲಿಲೇ ಅಸೆ ॥೬೨॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
ನರದೇಹ ಸ್ತವನ ನಿರೂಪಣ ನಾಮ ಸಮಾಸ ದಹಾವಾ

● ●

ದಶಕ ಪಹಿಲಾ ಸಮಾಪ್ತ

ಹುಟ್ಟಿದಂದಿನಿಂದ ಬಹುಪರಿಯಿಂದ ಜೋಪಾನ ಮಾಡಿದ ಈ ದೇಹವನ್ನು ಅಕಸ್ಮಾತ್ತಾಗಿ ಹುಲಿಯು ಎಳೆದೊಯ್ಯುವದು. ಅಥವಾ ತೋಳ ಜಪ್ಪಿಸಿ ಹಿಡಿದು ತಿಂದು ಬಿಡುವದು. (೫೬). ಇಲಿ ಹಾಗೂ ಬೆಕ್ಕುಗಳು ಕಡಿಯುವವು. ನಾಯಿ ಮತ್ತು ಕುದುರೆಗಳು ಕಡಿದು ಮಾಂಸದ ತುಣುಕನ್ನು ಹಿರಿದು ಹೊರತೆಗೆಯುವವು. ಕರಡಿ ಮತ್ತು ಮರ್ಕಟಗಳು ಬಹಳ ಗೋಳಾಡಿಸಿ ಕೊಲ್ಲುವವು. (೫೭). ಒಂಟಿಯು ಕಡಿದು ಎತ್ತಿ ಒಗೆಯುವದು. ಆನೆಯು ಕಾಲಿನ ಕೆಳಗೆ ಹಾಕಿ ತುಳಿದು ಗಿಜಿಗಿಜಿ ಮಾಡಿ ಬಿಡುವದು. ಅಕಸ್ಮಾತ್ತಾಗಿ ಎತ್ತುಗಳು ಕೋಡಿನಿಂದ ಇರಿದು ಕೊಲ್ಲುವವು. (೫೮). ಚೋರರು ಶರೀರವನ್ನು ಕಟಕಟ ಕಡಿದು ಒಗೆಯುವರು. ಪಿಶಾಚಿಗಳು ಮೈಯಲ್ಲಿ ಸೇರಿ ಜೀವ ತೆಗೆಯುವವು. ಇರಲಿ, ದೇಹದ ಅವಸ್ಥೆಯು ಈ ಪ್ರಕಾರವಿರುತ್ತದೆ. (೫೯) ದೇಹವು ಬಹುಜನರದಿದೆ. ಇದನ್ನು ಪರಮಾರ್ಥದ ಕಡೆಗೆ ಹತ್ತುವಂತೆ ಮಾಡಿದರೆ ಅದರ ಸಾರ್ಥಕವಾಗುವದು. ಪರಮಾರ್ಥ ತಿಳಿಯದವರು ಮೂರ್ಖರೆಂದು ತಿಳಿಯಬೇಕು. ಈ ದೃಷ್ಟಿಯಿಂದ ವಿಚಾರ ಮಾಡಿದ್ದಾದರೆ ಈ ಶರೀರ ಬಹುಜನರದಾಗಿದೆ. ಕೇವಲ ನಮ್ಮದೇ ಅಲ್ಲವೆಂಬುದು ಸ್ಪಷ್ಟವಿದೆ. ಮೂರ್ಖ ಮನುಷ್ಯನು ಮಾತ್ರ ಈ ದೇಹ ನನ್ನದೆಂದು ಅನ್ನುವನು. ಆದರೆ ಶರೀರವು ಜೀವನದ ಖಾದ್ಯವಿರುತ್ತದೆ. ತಾಪತ್ರಯ ವರ್ಣನೆಯ ದಶಕ 3, ಸಮಾಸ 6. ಮತ್ತು 8ರಲ್ಲಿ ಈ ವಿಷಯವನ್ನು ಸ್ಪಷ್ಟಗೊಳಿಸಲಾಗಿದೆ. (೬೦). ದೇಹವನ್ನು ಪರಮಾರ್ಥದ ಸಲುವಾಗಿ ಉಪಯೋಗಿಸಿದರೆ ಮಾತ್ರ ದೇಹದ ಸಾರ್ಥಕ್ಯವಾಯಿತೆಂದು ತಿಳಿಯಬೇಕು, ಇಲ್ಲವಾದರೆ ನಾನಾ ಪ್ರಕಾರದ ಅಪಘಾತಗಳಿಗೆ ದೇಹವು ಈಡಾಗಿ ವ್ಯರ್ಥವಾಗುತ್ತದೆ. ಮತ್ತು ಒಂದು ದಿನ ಸಾಮಾನ್ಯರಂತೆ ಮರಣ ಹೊಂದುತ್ತದೆ. (೬೧). ಇರಲಿ. ಪ್ರಪಂಚದಲ್ಲಿ ತೊಡಕಿಕೊಂಡ ಮೂರ್ಖರಿಗೆ ಪರಮಾರ್ಥದಲ್ಲಿಯ ಸುಖದ ಕಲ್ಪನೆ ಬರಲು ಶಕ್ಯವಿಲ್ಲ, ಇಂಥ ಮೂರ್ಖರ ಕೆಲವು ಲಕ್ಷಣಗಳನ್ನು ಮುಂದೆ ಹೇಳಿರುತ್ತದೆ. (೬೨).

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ೧ನೇಯ ದಶಕದಲ್ಲಿಯ
"ನರದೇಹ ಸ್ತವನ" ಎಂಬ ಹೆಸರುಳ್ಳ ೧೦ನೆಯ ಸಮಾಸವು ಮುಗಿದುದು.

● ●

ಒಂದನೆಯ ದಶಕ ಸಮಾಪ್ತ–ಒಟ್ಟು ನುಡಿ 326

## ದಶಕ ೨. ಮೂರ್ಖರ ಲಕ್ಷಣ

ಜಗತ್ತಿನಲ್ಲಿ ಬಹಳ ಹಿಂದಿನ ಕಾಲದಿಂದ ಮೂರ್ಖರಿಗೆ ಸಮಾಜದೊಳಗೆ ಯಾವ ಸ್ಥಾನ ಮಾನ ದೊರೆತಿರುವದು ? ಯಾವ ಮಾನವ ಸಮಾಜದಲ್ಲಿಯೂ ಮೂರ್ಖರಿಗೆ ಅಸ್ತಿತ್ವವೇ ಇಲ್ಲವೆಂದು ಹೇಗೆ ಹೇಳಲಿಕ್ಕೆ ಬಂದೀತು ? ಅರ್ಥಾತ್ ಅವರಿಗೂ ಸ್ಥಾನವಿದೆ. ಬಹುದೊಡ್ಡ ವಿಚಾರವಂತರು, ತತ್ವವೇತ್ತರು ಮತ್ತು ಸಾಹಿತಿಗಳು ಇವರೆಲ್ಲ ಮೂರ್ಖ ಮನುಷ್ಯನ ವರ್ಣನೆ ಮಾಡಿಟ್ಟಿದ್ದಾರೆ. ಮೂರ್ಖನ ಹಾಗೂ ಮೂರ್ಖತನದ ಸರ್ವಸಾಮಾನ್ಯ ವ್ಯಾಖ್ಯೆ ಮಾಡುವದು ಹಗುರಾದ ಕೆಲಸವಲ್ಲ. ಜೀವನದಲ್ಲಿ ತನ್ನ ಹಿತ ಸಾಧಿಸಿಕೊಳ್ಳುವ ಸಂಧಿ, ಸಮಯ ದೊರೆತಾಗ ಯಾವನು ಅದನ್ನು ಸಾಧಿಸಿಕೊಳ್ಳುವದಿಲ್ಲವೋ ಅವನು ಮೂರ್ಖನೆಂದು ತಿಳಿಯಬೇಕು. ಪರಮಾರ್ಥ ಸಾಧಿಸುವದು ಅಥವಾ ಆತ್ಮಜ್ಞಾನ ಮಾಡಿಕೊಳ್ಳುವದು ಮಾನವೀ ಜೀವನದ ಧ್ಯೇಯವಾಗಿದೆ. ಇದನ್ನು ಸಾಧಿಸಲಿಕ್ಕೆ ನರದೇಹವೇ

ಅತಿ ಉಪಯೋಗ ಬೀಳುವದು. ಈ ಎರಡು ಮೂಲಭೂತ ಮಾತುಗಳನ್ನು ಒಂದನೆಯ ದಶಕದಲ್ಲಿ ಸ್ಪಷ್ಟವಾಗಿ ತಿಳಿಸಿ ಹೇಳಿದೆ.

ಪರಮಾರ್ಥ ಅಥವಾ ಆತ್ಮಜ್ಞಾನ ಇವುಗಳ ವೈಪರೀತ್ಯವೇ ಪ್ರಪಂಚ ಅಥವಾ ಅಜ್ಞಾನವಾಗಿದೆ. ಅಜ್ಞಾನ ಇಲ್ಲದಂತೆ ನಾಶಮಾಡುವದಕ್ಕಾಗಿಯೇ ದಾಸಬೋಧ ಹೇಳಲಾಗಿದೆ. ಈ ಕಾರಣದಿಂದಲೇ ಅಜ್ಞಾನದ ಸ್ವರೂಪ ಹೇಳುವದಕ್ಕೆ ಶ್ರೀಸಮರ್ಥರು ಎರಡನೆಯ ದಶಕವನ್ನು ಪ್ರಾರಂಭಿಸಿರುವರು.

ಅಜ್ಞಾನಿ ಮನುಷ್ಯನ ನಡವಳಿಕೆಯಲ್ಲಿಯೇ ಅಜ್ಞಾನವು ಕೊನೆಗೆ ಪ್ರಕಟಗೊಳ್ಳುತ್ತದೆ. ಇದಕ್ಕಾಗಿ ಮೂರ್ಖ, ಕುವಿದ್ಯಾ, ರಜೋಗುಣ, ತಮೋಗುಣ, ಮತ್ತು ಕಲಿತ ಮೂರ್ಖ (ಪಢತ ಮೂರ್ಖ) ಇವುಗಳೆಲ್ಲದರ ವರ್ಣನೆಯನ್ನು ಸವಿಸ್ತಾರವಾಗಿ ಮಾಡಿರುವರು. ಪ್ರಾಪಂಚಿಕ ಮನುಷ್ಯರು ದೇಹ ಬುದ್ಧಿಯಿಂದ ಇರುವರು. ದೇಹ ಬುದ್ಧಿ ಒಮ್ಮೆಲೇ ಹೋಗುವದಿಲ್ಲ. ಅದಕ್ಕಾಗಿ ನೀತಿಯ ಆಚರಣೆ ಮತ್ತು ವೈರಾಗ್ಯದ ಅಭ್ಯಾಸ ಇವೆರಡೂ ಅವಶ್ಯವು. ಅದುದರಿಂದ ಸದ್ವಿದ್ಯಾ, ಸತ್ವಗುಣ, ಮತ್ತು ವಿರಕ್ತಿ ಇವುಗಳ ಲಕ್ಷಣಗಳನ್ನೂ ಇದರಲ್ಲಿ ಹೇಳಲಾಗಿದೆ.

ಶ್ರೀಸಮರ್ಥರು ಆತ್ಮಜ್ಞಾನದ ಧ್ಯೇಯ ದೃಷ್ಟಿಗೆ ತಂದರು. ಸತ್ವಗುಣದ ವಿಕಾಸ ಮಾಡಿದರು. ಮತ್ತು ವಿರಕ್ತಿಯು ದೇಹದಲ್ಲಿ ದೃಢಗೊಂಡರೇನೇ ಪರಮಾರ್ಥ ಸಾಧನೆಯು ಚನ್ನಾಗಿ ನಡೆಯುವದೆಂದು ಹೇಳಿದರು. ಅಂತೆಯೇ ಈ ದಶಕದಲ್ಲಿ ಪರಮಾರ್ಥ ಸಾಧನದ ಅಡಿಗಲ್ಲನ್ನು ಶ್ರೀಸಮರ್ಥರು ಹಾಕಿರುವರು.

## ಸಮಾಸ ೧. ಮೂರ್ಖರ ಲಕ್ಷಣ (ನುಡಿ ೭೪)

ಶ್ರೀ ಸಮರ್ಥರ ಅಭಿಪ್ರಾಯದಲ್ಲಿ ಪ್ರಪಂಚವನ್ನೇ ಸರ್ವಸ್ವವಾಗಿ ನಿಜವೆಂದು ನಂಬಿ ಜೀವನ ಸಾಗಿಸಿರುವ ಅಜ್ಞಾನಿ ಮನುಷ್ಯನೇ ಖರೇ ಮೂರ್ಖನಾಗಿರುವನು. ಇಂಥ ಮೂರ್ಖ ಅತ್ಯಂತ ಸ್ವಾರ್ಥಿಯಾಗಿರುವದರಿಂದ ಜಗವೆಲ್ಲವೂ ನನ್ನ ಸುಖಕ್ಕಾಗಿಯೇ ಇರುವದೆಂದು ಭಾವಿಸುವನು. ನಾನು ಮತ್ತು ನನ್ನದು ಈ ಎರಡರ ಹೊರತು ಬೇರೇನೂ ಇವನಿಗೆ ಕಾಣಿಸುವದಿಲ್ಲ. ದೇಹವೇ ನಾನು ಎಂಬ ಧೃಡಕಲ್ಪನೆಯಿಂದ ದೇಹ ಸುಖಕ್ಕಾಗಿಯೇ ಯಾವಾಗಲೂ ಹಪಾಪಿಸುವನು. ಅತ್ಯಂತ ವಿಕಾರ ವಶವಾಗಿರುವ ಈ ಮೂರ್ಖನ ಮನಸ್ಸು ದ್ವೇಷ, ಮತ್ಸರದಿಂದ ತುಂಬಿ ಹರಿಯುವದರಲ್ಲಿ ಸಂಶಯವಿಲ್ಲ. ಆದರೆ ಭೋಗ ಭೋಗಿಸುವಾಗ ವಿಕಾರಗಳ ಅಧೀನನಾದ ಇವನು ಮನಕ್ಕಾಗಲಿ, ಜನಕ್ಕಾಗಲಿ ಅಂಜದೇ ಲಜ್ಜೆ, ಮರ್ಯಾದೆಗಳನ್ನು ಪಾಲಿಸುವದಿಲ್ಲ. ಧರ್ಮ, ನೀತಿ, ಮತ್ತುನ್ಯಾಯ ಇವುಗಳ ಪರಿವೆಇಲ್ಲದೇ ಅನೀತಿಯಿಂದ ಅಪಾರ ಹಣ ಗಳಿಸುವನು.ಮತ್ತು ನಿಂದ್ಯ ನಡವಳಿಕೆಯ ಆಧೀನನಾಗಿ ತಾಯಿ, ತಂದೆ, ಗುರು, ದೇವ, ಸ್ವಾಮಿ ಇವರಲ್ಲಿ ಯಾರೂ ಅವನಿಗೆ ಪೂಜ್ಯರಾಗಿ ಕಾಣಿಸುವದಿಲ್ಲ. ಈಶ್ವರನನ್ನಂತೂ ಮರೆತೇ ಬಿಟ್ಟಿರುತ್ತಾನೆ. ಆದರೆ ಯಾವಾಗಾದರೊಮ್ಮೆ ದೇವರ ನೆನಪಾದರೆ ಅವನು ಪ್ರಪಂಚದ ಭೋಗದಲ್ಲಿ ಇದರಿಂದಲೇ ಕೊರತೆಯಾಯಿತೆಂದು ಬಗೆಯುವನು. ಅಂತೆಯೇ ಪೂಜ್ಯ ವಸ್ತುವಿಗೆ ಬಯ್ಯುವನು. ಚಂಚಲ ಬುದ್ಧಿಯ ಈ ಮೂರ್ಖ ಮನುಷ್ಯನು ಪ್ರೀತಿಯ ನಿಜ ಹಿತಚಿಂತಕನಲ್ಲ ಎಂದೂ ಪ್ರೇಮದಿಂದ ನಡೆದುಕೊಳ್ಳುವದಿಲ್ಲ. ಆಲಸ್ಯದಲ್ಲಿ ಹೊತ್ತು ಕಳೆಯುವನು. ಸದಾ ಸರ್ವಕಾಲ ವಿಷಯ ಚಿಂತಾಗ್ರಸ್ತನಿರುವನು. **ತಾತ್ಪರ್ಯ**:— ಶ್ರೀ ಸಮರ್ಥರ ಪ್ರಕಾರ ಮೂರ್ಖನೆಂದರೆ ಸಮಾಜದಲ್ಲಿಯ ಅತ್ಯಂತ ಸ್ವಾರ್ಥಿ, ವಿಕಾರವಶ, ಕುವಿಚಾರಿ, ಭೋಗಿ, ಹೀನ ಲಕ್ಷಣವುಳ್ಳವ ಮತ್ತು ಆಲಸ್ಯದ ಮನುಷ್ಯನಾಗಿರುವದು.

**ದಶಕ ದುಸರಾ : ಸಮಾಸ ಪಹಿಲಾ : ಮೂರ್ಖ ಲಕ್ಷಣ**

॥ಶ್ರೀರಾಮ॥ ಓಮ್ ನಮೋ ಜಿ ಗಜಾನನಾ । ಯೇಕದಂತಾ ತ್ರಿನಯನಾ ।
ಕೃಪಾದೃಷ್ಟೀ ಭಕ್ತಜನಾ । ಅವಲೋಕಾವೇ ॥೧॥
ತುಜ ನಮೂ ವೇದಮಾತೆ । ಶ್ರೀಶಾರದೆ ಬ್ರಹ್ಮಸುತೆ ।
ಅಂತರೀ ವಸೆ ಕೃಪಾವಂತೆ । ಸ್ಫೂರ್ತಿರೂಪೇ ॥೨॥
ವಂದೂನ ಸದ್ಗುರುಚರಣ । ಕರೂನ ರಘುನಾಥ ಸ್ಮರಣ ।
ತ್ಯಾಗಾರ್ಥ ಮೂರ್ಖಲಕ್ಷಣ । ಬೋಲಿಜೇಲ ॥೩॥
ಯೇಕ ಮೂರ್ಖ ಯೇಕ ಪಢತಮೂರ್ಖ । ಉಭಯ ಲಕ್ಷಣೇ ಕೌತುಕ ।
ಶ್ರೋತೀ ಸಾದರ ವಿವೇಕ । ಕೇಲಾ ಪಾಹಿಜೆ ॥೪॥
ಪಢತಮೂರ್ಖಾಚೇ ಲಕ್ಷಣ । ಪುಢಿಲೆ ಸಮಾಸೀ ನಿರೂಪಣ ।
ಸಾವಧ ಹೋಊನಿ ವಿಚಕ್ಷಣ । ಪರಿಸೋತ ಪುಢೇ ॥೫॥
ಆತಾ ಪ್ರಸ್ತುತ ವಿಚಾರ । ಲಕ್ಷಣೇ ಸಾಂಗತಾ ಅಪಾರ ।
ಪರೀ ಕಾಂಹೀಯೇಕ ತತ್ಪರ । ಹೋಊನ ಐಕಾ ॥೬॥
ಜೆ ಪ್ರಪಂಚಿಕ ಜನ । ಜಯಾಸ ನಾಹೀ ಆತ್ಮಜ್ಞಾನ ।
ಜೆ ಕೇವಳ ಅಜ್ಞಾನ । ತ್ಯಾಂಚೀ ಲಕ್ಷಣೇ ॥೭॥
ಜನ್ಮಲಾ ಜಯಾಚೇ ಉದರೀ । ತಯಾಸೀ ಜೋ ವಿರೋಧ ಕರೀ ।
ಸಖೀ ಮಾನಿಲೀ ಅಂತರೀ । ತೋ ಯೇಕ ಮೂರ್ಖ ॥೮॥
ಸಾಂಡೂನ ಸರ್ವ ಹಿ ಗೋತ । ಸ್ತ್ರೀಆಧೀನ ಜೀವಿತ ।
ಸಾಂಗೆ ಅಂತರೀಚೀ ಮಾತ । ತೋ ಯೇಕ ಮೂರ್ಖ ॥೯॥
ಪರಸ್ತ್ರೀಸೀ ಪ್ರೇಮಾಧರೀ । ಶ್ವಶುರಗೃಹೀ ವಾಸಕರೀ ।
ಕುಳೇವಿಣ ಕನ್ಯಾ ವರೀ । ತೋಯೇಕ ಮೂರ್ಖ ॥೧೦॥
ಸಮರ್ಥಾವರೀ ಅಹಂತಾ । ಅಂತರೀ ಮಾನೀ ಸಮತಾ ।
ಸಾಮರ್ಥ್ಯೇವಿಣ ಕರೀ ಸತ್ತಾ । ತೋ ಯೇಕ ಮೂರ್ಖ ॥೧೧॥
ಆಪಲೀ ಆಪಣ ಕರೀ ಸ್ತುತೀ । ಸ್ವದೇಶೀ ಭೋಗೀ ವಿಪತ್ತಿ ।
ಸಾಂಗೇ ವಡಿಲಾಂಚೀ ಕೀರ್ತೀ । ತೋ ಯೇಕ ಮೂರ್ಖ ॥೧೨॥
ಅಕಾರಣ ಹಾಸ್ಯಕರೀ । ವಿವೇಕ ಸಾಂಗತಾ ನ ಧರೀ ।
ಜೋ ಬಹುತಾಂಚಾ ವೈರೀ । ತೋ ಯೇಕ ಮೂರ್ಖ ॥೧೩॥

## ಸಮಾಸ ೧. ಮೂರ್ಖ ಲಕ್ಷಣ

ಸಮಾಸದ ಆರಂಭದಲ್ಲಿ ಗಣಪತಿ ಶಾರದಾ ಮತ್ತು ಶ್ರೀಸದ್ಗುರು ಇವರಿಗೆ ನಮಸ್ಕಾರ ಮತ್ತು ಶ್ರೀರಾಮಸ್ಮರಣ ಮೂರು ಕಣ್ಣು(ಇದು ಪಂಚಾಯತನದ ಧ್ಯಾನದಲ್ಲಿಯ ಗಣೇಶನ ಧ್ಯಾಸದಲ್ಲಿ ತ್ರಿನಯನ ಎಂದು ವರ್ಣಿಸಲಾಗಿದೆ.) ಒಂದು ಕೋರೆಹಲ್ಲಿರುವ ಓಂಕಾರ ರೂಪದ ಗಜಾನನಿಗೆ ನಾನು ನಮಸ್ಕಾರ ಮಾಡುತ್ತೇನೆ."ಹೇ ದೇವಾ ನೀನು ಕೃಪಾ ದೃಷ್ಟಿಯಿಂದ ನಿನ್ನ ಭಕ್ತನ ಕಡೆಗೆ ನೋಡು"ಎಂದು ಪ್ರಾರ್ಥಿಸುತ್ತೇನೆ.(೧). ವೇದಗಳ ಜನನಿ ಮತ್ತು ಬ್ರಹ್ಮದೇವನ ಕನ್ಯೆಯಾದ ಶಾರದೆಯೇ ನಿನಗೆ ನಾನು ನಮಸ್ಕಾರ ಮಾಡುತ್ತೇನೆ. "ಹೇ ದಯಾಮಯಳಾದ ದೇವಿಯೇ ನನ್ನ ಅಂತಃಕರಣದಲ್ಲಿ ಸ್ಫೂರ್ತಿ ರೂಪದಿಂದ ನೆಲೆಸುವವಳಾಗು" (೨). ಇನ್ನು ಮೇಲೆ ಆತ್ಮಸ್ವರೂಪದ ಸದ್ಗುರುವಿನ ಚರಣಕಮಲಗಳಿಗೆ ನಾನು ನಮಸ್ಕಾರ ಮಾಡುತ್ತೇನೆ. ಮತ್ತು ನನ್ನ ಸ್ವಾಮಿ ಅಂದರೆ ಶ್ರೀರಾಮಚಂದ್ರನ ಸ್ಮರಣೆ ಮಾಡಿ ನಾನು ಹೇಳುವ ಮೂರ್ಖರ ಲಕ್ಷಣಗಳನ್ನು ನೀವು ಕೇಳಿರಿ ಮತ್ತು ಅವುಗಳ ತ್ಯಾಗ ಮಾಡಿರಿ. (೩). **ಮೂರ್ಖರ ಪ್ರಕಾರ ಮತ್ತು ಅವರ ಅಪಾರ ಲಕ್ಷಣಗಳು:–** ಜಗತ್ತಿನಲ್ಲಿ ಎರಡು ಪ್ರಕಾರದ ಮೂರ್ಖರಿರುತ್ತಾರೆ. ಒಬ್ಬ ಸಾಮಾನ್ಯ ಮೂರ್ಖ, ಇನ್ನೊಬ್ಬ ಕಲಿತ (ಪಂಡಿತ) ಮೂರ್ಖ. ಈ ಎರಡೂ ತರಹದವರ ಲಕ್ಷಣಗಳನ್ನು ಕೇಳಿ ನಿಮಗೆ ಮೋಜೆನಿಸಬಹುದು. ಶ್ರೋತೃಗಳು ಆದರದಿಂದ ಇವುಗಳನ್ನು ಕೇಳಬೇಕು. ಮತ್ತು ಅದರ ಮೇಲೆ ಯೋಗ್ಯ ವಿಚಾರ ಮಾಡಬೇಕು. (೪). ಕಲಿತ (ಪಂಡಿತ) ಮೂರ್ಖನ ಲಕ್ಷಣಗಳನ್ನು ಮುಂದಿನ ಸಮಾಸ ಅಂದರೆ ಹತ್ತನೆಯ ಸಮಾಸದಲ್ಲಿ ಹೇಳಿದೆ. ಜಾಣರಾದ ವಾಚಕರು ಅದನ್ನು ಅಲ್ಲಿ ಲಕ್ಷ್ಯಪೂರ್ವಕವಾಗಿ ಓದಬೇಕು. (೫). ಈಗ ಇಲ್ಲಿ ಸಾಮಾನ್ಯ ಮೂರ್ಖನ ಲಕ್ಷಣಗಳ ಬಗ್ಗೆ ವಿಚಾರ ಹೇಳಬೇಕಾಗಿದೆ. ಸಮಗ್ರ ಲಕ್ಷಣ ಹೇಳ ಹೋದರೆ ಮೂರ್ಖ ಲಕ್ಷಣಗಳು ಅಪಾರವಿರುವವು. ಅವುಗಳ ಪೈಕಿ ಕೆಲವೊಂದು ಲಕ್ಷಣಗಳ ಬಗ್ಗೆ ಇಲ್ಲಿ ನಾನು ಹೇಳುತ್ತೇನೆ. ಇವುಗಳನ್ನು ನೀವು ಮನಸ್ಸುಗೊಟ್ಟು ಕೇಳಬೇಕು. (೬). ಯಾರಿಗೆ ಆತ್ಮಜ್ಞಾನ ವಿರುವದಿಲ್ಲ, ಯಾವನು ತೀರ ಅಜ್ಞಾನಿ ಮತ್ತು ಯಾರು ಪ್ರಪಂಚದಲ್ಲಿ ಸಂಪೂರ್ಣ ಆಸಕ್ತರಾಗಿರುವರೋ ಅಂಥ ಜನರಲ್ಲಿಯ ಮೂರ್ಖ ಲಕ್ಷಣಗಳು ಈ ಪ್ರಕಾರ ಇರುವವು. (೭). **ಕಾಮೋಪಾಸನೆಗೆ ಒಳಪಟ್ಟು ಕೇವಲ ಸ್ತ್ರೀ ಅಧೀನನಾಗಿ ಜೀವನ ನಡೆಸುವವನು ಮೂರ್ಖ:–** ಯಾವಳ ಹೊಟ್ಟೆಯಲ್ಲಿ ಹುಟ್ಟಿ ಬಂದಿರುವನೋ, ಆ ತಾಯಿಗೆ ತಿರುಗಿ ಬೀಳುತ್ತಾನೆ. ತನ್ನ ಹೆಂಡತಿಯೇ ತನ್ನ ಹಿತಚಿಂತಕಳಾದ ಸಖ–ಮಿತ್ರ ಎಂದು ತಿಳಿಯುವವನು ಮೂರ್ಖ. (೮). ಇನ್ನುಳಿದ ತನ್ನ ಆಪ್ತೇಷ್ಟರನ್ನೆಲ್ಲ ದೂರೀಕರಿಸಿ ಹೆಂಡತಿಯ ಹಿಂಬಾಲಕನಾಗಿ ನಡೆಯುವವನು, ತನ್ನ ಅಂತರಂಗದ ಗುಟ್ಟನ್ನು ಹೆಂಡತಿಯಲ್ಲಿ ಮಾತ್ರ ಹೇಳುವವನು ಮೂರ್ಖ. (೯). ಪರಸ್ತ್ರೀಯಳ ಮೇಲೆ ಪ್ರೇಮ ಮಾಡುವವನು, ಹೆಣ್ಣು ಕೊಟ್ಟ ಮಾವನ ಮನೆಯಲ್ಲಿ ಕಾರಣವಿಲ್ಲದೇ ಬಹುದಿನ ಇರುವವನು, ಕುಲ-ಶೀಲ ನೋಡದೇಯಾವದೇಕನ್ಯೆಯನ್ನುಲಗ್ನ ಮಾಡಿಕೊಳ್ಳುವವನು, ಇಂಥವರೆಲ್ಲರೂ ಮೂರ್ಖರೆಂದು ತಿಳಿಯಬೇಕು.(೧೦) **ಅತಿ ಅಹಂಕಾರಿ, ಬಡಾಯಿ, ಜಂಭಗಾರ, ನಿಂದಕ ಮತ್ತು ವ್ಯಸನಿಯಾಗಿರುವವರು ಮೂರ್ಖರು:–** ತನಗಿಂತ ಎಲ್ಲ ರೀತಿಯಲ್ಲಿ ಶ್ರೇಷ್ಠರಾಗಿರುವವರ ಮುಂದೆ ಅತಿ ಅಹಂಕಾರದಿಂದ ವರ್ತಿಸುವವ, ತಾನು ಮತ್ತು ಇವರು ಅಂದರೆ ವಿದ್ಯಾ, ಬುದ್ಧಿ, ಧನ ಮತ್ತು ಸಾಧನ ಸಂಪನ್ನರಾದ ಶ್ರೇಷ್ಠ ಜನರು ಸರಿಸಮಾನರಾದವರೆಂದು ಮನದಲ್ಲಿ ತಿಳಿಯುವವನ, ಯಾವ ಅಧಿಕಾರ ಸಾಮರ್ಥ್ಯವಿಲ್ಲದೆಯೂ ಇತರರ ಮೇಲೆ ಅಧಿಕಾರ ನಡೆಸುವ ಪ್ರಯತ್ನ ಮಾಡುವವ ಮೂರ್ಖನು.(೧೧). ತನ್ನ ಆತ್ಮ ಸ್ತುತಿಯನ್ನು ತಾನೇ ಮಾಡಿಕೊಳ್ಳುವವ,ಊರಲ್ಲಿಯ ಮನೆಯಲ್ಲಿ ತಾನು ದುರ್ದೆಸೆ ಭೋಗಿಸುತ್ತಿದ್ದರೂ ಎರಡನೆಯ ಕಡೆ ಪೂರ್ವಜ ಮತ್ತು ಮನೆತನದ ಬಗ್ಗೆ ಇಲ್ಲದ ಬಡಾಯಿ ಕೊಚ್ಚಿಕೊಳ್ಳುವವನು ಮೂರ್ಖ.(೧೨). ಯಾವ ಕಾರಣವಿಲ್ಲವೇ ಸುಮ್ಮನೇ ನಗುತ್ತಲಿರುವವನು, ಎರಡನೆಯವರು ಹೇಳುವ ಸುವಿಚಾರದ ಬುದ್ಧಿಯ ಮಾತುಗಳನ್ನು ಕೇಳದವನು, ಬಹು ಜನರಿಗೆ ಬೇಡವಾದವನು ಮೂರ್ಖ. (೧೩).

ಆಪುಲೀ ಧರೂನಿಯಾ ದುರೀ । ಪರಾವ್ಯಾಸೀ ಕರೀ ಮಿತ್ರೀ ।
ಪರನ್ಯೂನ ಬೋಲೇ ರಾತ್ರೀ । ತೋ ಯೇಕ ಮೂರ್ಖ ॥೧೪॥
ಬಹುತ ಜಾಗತೇ ಜನ । ತಯಾಮಧ್ಯೇ ಕರೀಶಯನ ।
ಪರಸ್ಥಳೀ ಬಹು ಭೋಜನ । ಕರೀ ತೋ ಯೇಕ ಮೂರ್ಖ ॥೧೫॥
ಮಾನ ಅಥವಾ ಅಪಮಾನ । ಸ್ವಯೇ ಕರೀ ಪರಿಚ್ಛಿನ್ನ ।
ಸಪ್ತ ವೆಸನೀ ಜಯಾಚೇ ಮನ । ತೋ ಯೇಕ ಮೂರ್ಖ ॥೧೬॥
ಧರೂನ ಪರಾವೀ ಆಸ । ಪ್ರೇತ್ನ ಸಾಂಡೀ ಸಾವಕಾಸ ।
ನಿಸುಗಾಈಚಾ ಸಂತೋಷ । ಮಾನೀ ತೋ ಯೇಕ ಮೂರ್ಖ ॥೧೭॥
ಘರೀ ವಿವೇಕ ಉಮಜೆ । ಆಣೀ ಸಭೆಮಧ್ಯೇ ಲಾಜೇ ।
ಶಬ್ದ ಬೋಲತಾ ನಿರ್ಬುಜೇ । ತೋ ಯೇಕ ಮೂರ್ಖ ॥೧೮॥
ಆಪಣಾಹೂನ ಜೋ ಶ್ರೇಷ್ಠ । ತಯಾಸೀ ಅತ್ಯಂತ ನಿಕಟ ।
ಸಿಕವಣೇಚಾ ಮಾನೀ ವೀಟ । ತೋ ಯೇಕ ಮೂರ್ಖ ॥೧೯॥
ನಾಯೇಕೆ ತ್ಯಾಸೀ ಸಿಕವೀ । ವಡಿಲಾಸೀ ಜಾಣೀವ ದಾವೀ ।
ಜೋ ಆರಜಾಸ ಗೋವೀ । ತೋ ಯೇಕ ಮೂರ್ಖ ॥೨೦॥
ಯೇಕಾಯೇಕೀ ಯೇಕಸರಾ । ಜಾಲಾ ವಿಷಈ ನಿಲಾಜಿರಾ ।
ಮರ್ಯಾದಾ ಸಾಂಡೂನ ಸ್ವೈರಾ । ವರ್ತೇ ತೋ ಯೇಕ ಮೂರ್ಖ ॥೨೧॥
ಔಷಧ ನೆ ಘೇ ಅಸೋನ ವೆಥಾ । ಪಥ್ಯ ನಕರೀ ಸರ್ವಥಾ ।
ನ ಮಿಳೇ ಆಲಿಯಾ ಪದಾರ್ಥಾ । ತೋ ಯೇಕ ಮೂರ್ಖ ॥೨೨॥
ಸಂಗೇವಿಣ ವಿದೇಶ ಕರೀ । ವೋಳಖೀವಿಣ ಸಂಗ ಧರೀ ।
ಉಡೀ ಘಾಲೀ ಮಾಹಾಪುರೀ । ತೋ ಯೇಕ ಮೂರ್ಖ ॥೨೩॥
ಆಪಣಾಸ ಜೇಥೇ ಮಾನ । ತೇಥೇ ಅಖಂಡ ಕರೀ ಗಮನ ।
ರಕ್ಷೂ ನೇಣೆ ಮಾನಾಭಿಮಾನ । ತೋ ಯೇಕ ಮೂರ್ಖ ॥೨೪॥
ಸೇವಕ ಜಾಲಾ ಲಕ್ಷ್ಮೀವಂತ । ತಯಾಚಾ ಹೋಯು ಅಂಕಿತ ।
ಸರ್ವಕಾಳ ಜೋ ದುಶ್ಚಿತ್ತ । ತೋ ಯೇಕ ಮೂರ್ಖ ॥೨೫॥
ವಿಚಾರ ನ ಕರಿತಾ ಕಾರಣ । ದಂಡ ಕರೀ ಅಪರಾಧೇವಿಣ ।
ಸ್ವಲ್ಪಾಸಾಠೀ ಜೋ ಕೃಪಣ । ತೋ ಯೇಕ ಮೂರ್ಖ ॥೨೬॥
ದೇವಲಂಡ ಪಿತೃಲಂಡ । ಶಕ್ತಿವೀಣ ಕರೀ ತೋಂಡ ।
ಜ್ಯಾಚೇ ಮುಖೀ ಭಂಡಉಭಂಡ । ತೋ ಯೇಕ ಮೂರ್ಖ ॥೨೭॥

ತನ್ನ ಆಪ್ತ ಬಾಂಧವರನ್ನೆಲ್ಲ ದೂರ ಸರಿಸಿ ಪರಕೀಯರ ಸಂಗಡ ಸಖ್ಯತ್ವ ಬೆಳೆಸುವವನು, ಹಗಲು-ರಾತ್ರಿ ಬರುವಾಗ, ಹೋಗುವಾಗ, ಪರನಿಂದೆಯನ್ನೇ ಮಾಡುವವನು ಮೂರ್ಖ (೧೪) ಬಹು ಜನರು ಎಚ್ಚರಿದ್ದು, ಅವರು ಕುಳಿತಿರುವಾಗ ಅವರ ಮಧ್ಯದಲ್ಲಿ ಕೈಕಾಲು ಪಸರಿಸಿ ಸ್ವೇಚ್ಛೆಯಿಂದ ಮಲಗುವವನು, ಪರರ ಮನೆಯಲ್ಲಿ ಮಾತ್ರ ಅತಿಯಾಗಿ ಊಟ ಮಾಡುವವನು ಮೂರ್ಖ. (೧೫) ತನಗಾದ ಮಾನ ಅಪಮಾನಗಳನ್ನು ತಾನೇ ತನ್ನ ಬಾಯಿಂದ ಹೇಳಿಕೊಳ್ಳುವವನು, ಮುಂದೆ ಹೇಳಲಾದ ಏಳು ವ್ಯಸನಗಳ ಜೂಜು, ವೇಶ್ಯಾಗಮನ, ತುಡುಗು, ಚಾಡಿಕೋರತನ (ಸುಳ್ಳು ಹೇಳುವದು) ಪರಸ್ತ್ರೀ ಗಮನ, ಪಕ್ಷಿ ಕಾಳಗ ಪ್ರಿಯ, ಕಿನ್ನರಿ ಗಾಯನ, (ಢಫ್ ಮತ್ತು ಹೋಳಿ, ತಮಾಶ್ಯಾ ಗಾಯನ ವಗೈರೆ) ಅಥವಾ ಚಾರಣ, ಮಾರಣ, ವಿಧ್ವಂಸನ, ಮೋಹನ, ವಶೀಕರಣ, ಉಚ್ಚಾಟನೆಗಳಲ್ಲಿ ನಿತ್ಯವೂ ಮಗ್ನನಾಗಿರುವವ, ಇವರೆಲ್ಲ ಮೂರ್ಖರೆಂದು ತಿಳಿಯಬೇಕು. (೧೬) ಆಲಸಿಗ ಹೇಳಿದ್ದನ್ನು ಕೇಳುವ, ಬುದ್ಧಿಯಿಲ್ಲದವ, ನಾಚುವವ, ಮತ್ತು ವಿಷಯ-ಭೋಗಗಳನ್ನು ನಾಚಿಕೆಯಿಲ್ಲದೇ ಯಥೇಚ್ಛವಾಗಿ ಉಪಭೋಗಿಸುವವರೆಲ್ಲರೂ ಮೂರ್ಖರು:-ತನಗೆ ಎರಡನೆಯವರು ಸಹಾಯ ಮಾಡುವವರೆಂಬ ಭರವಸೆಯಿಂದ ತಾನು ಮಾಡಬೇಕಾದ ಪ್ರಯತ್ನವನ್ನು ಸಾವಕಾಶವಾಗಿ ಬಿಡುವವನು. ಆಲಸ್ಯತನದಲ್ಲಿಯೇ ಸಂತೋಷವಿದೆಯೆಂದು ತಿಳಿಯುವವನು ಮೂರ್ಖ (೧೭) ಮನೆಯಲ್ಲಿ ಜ್ಞಾನದ ಬಗ್ಗೆ ಬಹಳಷ್ಟು ಹರಟೆ ಕೊಚ್ಚುವದು. ಆದರೆ ಸಭೆಯಲ್ಲಿ ಗಾಬರಿಗೊಂಡು ಸುಮ್ಮನಿರುವವನು ಮೂರ್ಖ. (೧೮). ತನಗಿಂತ ಬಹು ಶ್ರೇಷ್ಠರಾದವರ ಸಂಗಡ ಬಹಳಷ್ಟು ಸಲಿಗೆಯನ್ನು ಮಾಡುವವನು, ಅವರು ಹಿತದ ಮಾತುಗಳನ್ನು ಹೇಳಿದರೆ ಬೇಸರಪಟ್ಟುಕೊಳ್ಳುವವನು ಮೂರ್ಖ. (೧೯) ಕೇಳದಂತಹ ಜನರಿಗೆ ಕಲಿಸುವ ಪ್ರಯತ್ನ ಮಾಡುವವನು, ಬುದ್ಧಿ ಹೇಳುವವನು. ಹಿರಿಯರ ಮುಂದೆ ತನ್ನ ಬುದ್ಧಿವಂತಿಕೆಯನ್ನು ಹೊಗಳಿಕೊಳ್ಳುವವನು, ಸಂಭಾವಿತ, ಶ್ರೇಷ್ಠ ಪ್ರತಿಷ್ಠಿತರಾದವರನ್ನು ಭಾನಗಡಿಯಲ್ಲಿ ಸಂಕಟದಲ್ಲಿ ತೊಡಕಿಸುವವನು ಮೂರ್ಖ. (೨೦). ಕಾಮ ವಾಸನೆಯ ಉಪಭೋಗಕ್ಕಾಗಿ ಎಲ್ಲ ಮರ್ಯಾದೆಯನ್ನು ತೊರೆದು ಬೇಫಾಮ್ (ಲಗಾಮು ಇಲ್ಲದ ಕುದುರೆಯಂತೆ) ಸ್ವೈರನಾಗಿ ವರ್ತಿಸುವವನು. ಇವರೆಲ್ಲ ಮೂರ್ಖರೆಂದು ತಿಳಿಯಬೇಕು. (೨೧). **ವಿರೋಧ (ಸಂಕಟ) ಬರದಂತೆ ಪ್ರಪಂಚದಲ್ಲಿ ಸುಖನಾಗಿರುವದಕ್ಕಾಗಿ ಮುಂದೆ ಹೇಳಿದ ಸಾಮಾನ್ಯ ನಿಯಮಗಳನ್ನು ಪಾಲಿಸುವವರು ಮೂರ್ಖರು:-** ರೋಗ ಬಂದಾಗ ಔಷಧ ತೆಗೆದುಕೊಳ್ಳದವನು, ಎಷ್ಟೂ ಪಥ್ಯ ಮಾಡದವನು, ಜೀವನದಲ್ಲಿ ತನ್ನ ಪಾಲಿಗೆ ಬಂದದ್ದನ್ನು ಪಂಚಾಮೃತವೆಂದು ಪ್ರೇಮದಿಂದ ಸ್ವೀಕರಿಸಿದವನು ಮೂರ್ಖ. (೨೨). ಜೊತೆಗೆ ಸಂಗಡಿಗರಿಲ್ಲದೇ ಪರದೇಶಕ್ಕೆ ಹೋಗುವವನು, ಪರಿಚಯವಿಲ್ಲದವರ ಸಂಗಡ ಗೆಳೆತನ ಮಾಡುವವನು, ಮಹಾಪೂರದಲ್ಲಿ ಹಾರಿಕೊಳ್ಳುವವನು ಮೂರ್ಖ (೨೩). ಮಾನ ಮರ್ಯಾದೆ ಸಿಗುವ ಸ್ಥಳದಲ್ಲಿ ಮೇಲಿಂದ ಮೇಲೆ ಕಾರಣವಿಲ್ಲದೇ ಹೋಗುವವನು, ದೊರೆತ ಮರ್ಯಾದೆಯನ್ನು ಉಳಿಸಿಕೊಳ್ಳದವನು. ಯೋಗ್ಯ ವಿಷಯದ ಬಗ್ಗೆ ಅಭಿಮಾನ ಹಿಡಿಯದಿರುವವನು ಮೂರ್ಖ. (೨೪). ತನ್ನಲ್ಲಿದ್ದ ನೌಕರನು ಶ್ರೀಮಂತನಾದರೆ ಅವನಲ್ಲಿ ನೌಕರಿ ಮಾಡುವವನು. ಯಾವತ್ತೂ ಸಮಯದಲ್ಲಿ ಸದಾ ಅಸ್ಥಿರ ಚಿತ್ತ-ನಾಗಿರುವವನು ಮೂರ್ಖ (೨೫) ಸರಿಯಾದ ಕಾರಣಗಳನ್ನು ವಿಚಾರಮಾಡದೇ ದುಡುಕಿ ನಿರಪರಾಧಿಗೆ ಶಿಕ್ಷೆ ವಿಧಿಸುವವನು, ಅಲ್ಪಸ್ವಲ್ಪ ಖರ್ಚಿನ ಬಗ್ಗೆ ಬಹಳಷ್ಟು ಜಿಪುಣತನ ತೋರಿಸುವವನು ಮೂರ್ಖ (೨೬). ದೇವರನ್ನು ಹಾಗೂ ಹಿರಿಯರನ್ನು ಲೆಕ್ಕಿಸದವನು, (ಧರ್ಮಲಂಡ, ದೇವಲಂಡ, ಪಿತೃಲಂಡನಾದವನು) ಅಶಕ್ತ (ಕೈಲಾಗದವ) ನಿದ್ದು ಕೇವಲ ಚೀರಾಡುವ ವಾಚಾಳಿಯು (ಕೈಲಾಗದವನು ಮೈಪರಚಿಕೊಂಡನೆಂಬ ಗಾದೆಯಂತೆ) ಯಾವುದೇ ಕಟ್ಟುನಿಟ್ಟಿಲ್ಲದೇ ಬಾಯಿಯಿಂದ ಸದಾ ಅಶ್ಲೀಲ ಶಬ್ದಗಳನ್ನು ಉಪಯೋಗಿಸುವವನು ಮೂರ್ಖ (೨೭).

ಘರೀಚ್ಯಾವರೀ ಖಾಯ ದಾಢಾ। ಬಾಹೇರೀ ದೀನ ಬಾಪುಡಾ।
ಏಸಾ ಜೋ ಕಾ ವೇಡ ಮೂಢಾ। ತೋ ಯೇಕ ಮೂರ್ಖ ॥೨೮॥
ನೀಚ ಯಾತೀಸೀ ಸಾಂಗಾತ। ಪರಾಂಗನೇಸೀ ಯೇಕಾಂತ।
ಮಾರ್ಗೀ ಜಾಯ ಖಾತಖಾತ। ತೋ ಯೇಕ ಮೂರ್ಖ ॥೨೯॥
ಸ್ವಯೇ ನೇಣೇ ಪರೋಪಕಾರ। ಉಪಕಾರಾಚಾ ಅನೋಪಕಾರ।
ಕರೀ ಥೋಡೇ ಬೋಲೇ ಫಾರ। ತೋ ಯೇಕ ಮೂರ್ಖ ॥೩೦॥
ತಪೀಳ ಖಾದಾಡ ಆಳಸೀ। ಕುಶ್ಚೀಳ ಕುಟೀಳ ಮಾನಸೀ।
ಧಾರೀಷ್ಟ ನಾಹೀ ಜಯಾಪಾಸೀ। ತೋ ಯೇಕ ಮೂರ್ಖ ॥೩೧॥
ವಿದ್ಯಾ ವೈಭವ ನಾ ಧನ। ಪುರುಷಾರ್ಥ ಸಾಮರ್ಥ್ಯ ನಾ ಮಾನ।
ಕೋರಡಾಚ ವಾಹೇ ಅಭಿಮಾನ। ತೋ ಯೇಕ ಮೂರ್ಖ ॥೩೨॥
ಲಂಡೀ ಲಟಿಕಾ ಲಾಬಾಡ। ಕುಕರ್ಮೀ ಕುಟೀಳ ನಿಚಾಡ।
ನಿದ್ರಾ ಜಯಾಚೀ ವಾಡ। ತೋ ಯೇಕ ಮೂರ್ಖ ॥೩೩॥
ಉಂಚೀ ಜಾಊನ ವಸ್ತ್ರನೇಸೇ। ಚೌಬಾರಾ ಬಾಹೇರೀ ಬೈಸೆ।
ಸರ್ವಕಾಳ ನಗ್ನ ದಿಸೆ। ತೋ ಯೇಕ ಮೂರ್ಖ ॥೩೪॥
ದಂತ ಚಕ್ಷು ಆಣೀ ಘ್ರಾಣ। ಪಾಣೀ ವಸನ ಆಣೀ ಚರಣ।
ಸರ್ವಕಾಳ ಜಯಾಚೇ ಮಳಿಣ। ತೋ ಯೇಕ ಮೂರ್ಖ ॥೩೫॥
ವೈಧೃತಿ ಆಣೀ ವಿತಿಪಾತ। ನಾ ಕುಮುಹೂರ್ತೇ ಜಾತ।
ಅಪಶಕುನೇ ಕರೀ ಘಾತ। ತೋ ಯೇಕ ಮೂರ್ಖ ॥೩೬॥
ಕ್ರೋಧೇ ಅಪಮಾನೇ ಕುಬುದ್ಧಿ। ಆಪಣಾಸ ಆಪಣ ವಧೀ।
ಜಯಾಸ ನಾಹೀ ದೃಢ ಬುದ್ಧಿ। ತೋ ಯೇಕ ಮೂರ್ಖ ॥೩೭॥
ಜಿವಲಗಾಸ ಪರಮ ಖೇದೀ। ಸುಖಾಚಾ ಶಬ್ದ ತೋ ಹಿ ನೇದೀ।
ನೀಚ ಜನಾಸ ವಂದೀ। ತೋ ಯೇಕ ಮೂರ್ಖ ॥೩೮॥
ಆಪಣಾಸ ರಾಖೇ ಪರೋಪರೀ। ಶರಣಾಗತಾಸ ಅವ್ಹೇರೀ।
ಲಕ್ಷ್ಮೀಚಾ ಭರ್ವಸಾ ಧರೀ। ತೋ ಯೇಕ ಮೂರ್ಖ ॥೩೯॥
ಪುತ್ರ ಕಳತ್ರ ಆಣೀ ದಾರಾ। ಇತುಕಾ ಚಿ ಮಾನುನಿಯಾ ಥಾರಾ।
ವಿಸರೋನ ಗೇಲಾ ಈಶ್ವರಾ। ತೋ ಯೇಕ ಮೂರ್ಖ ॥೪೦॥
ಜೈಸೇ ಜೈಸೇ ಕರಾವೇ। ತೈಸೇ ತೈಸೇ ಪಾವಾವೇ।
ಹೇ ಜಯಾಸ ನೇಣವೇ। ತೋ ಯೇಕ ಮೂರ್ಖ ॥೪೧॥

ತನ್ನ ಮನೆಯುವರ ಮೇಲೆ ಸದಾ ಹಲ್ಲು ಕಡಿಯುತ್ತ ಹೊರಗೆ ಮಾತ್ರ ಅತಿ ದೀನನಾಗಿ ಸಂಭಾವಿತನಂತೆ ನಡೆಯುವವ, ಅಜ್ಞಾನಿ ಮತ್ತು ಹುಚ್ಚನಾದ ಅರಳು-ಮರಳನು ಈ ಜನರೆಲ್ಲ ಮೂರ್ಖರೆಂದು ತಿಳಿಯಬೇಕು(೨೮). ಕಾಮವಾಸನೆಯ ವಿಷಯದಲ್ಲಿ ಸಡಿಲುತನ, ಕೃತಘ್ನತೆ, ವಾಚಾಳತನ, ಅರ್ಥವಿಲ್ಲದ ಮಾತುಗಾರ, ದುಷ್ಟ ಬುದ್ಧಿ ಇರುವವ, ಅಂಜುಬುರುಕ, ನಿರ್ಲಜ್ಜ, ದುರಭಿಮಾನಿ, ದುಷ್ಕರ್ಮಿ ಮತ್ತು ಮಾಲಿನ್ಯದಿಂದ ಇರುವವ ಇವರೆಲ್ಲ ಮೂರ್ಖರು. ಕೀಳು ನಡತೆಯ ಜನರ ಸಂಪರ್ಕ (ಗೆಳೆತನ) ಮಾಡುವವನು, ಎರಡನೆಯವರ ಹೆಂಡಂದಿರ ಸಂಗಡ ಏಕಾಂತ ಮಾಡುವವನು, ರಸ್ತೆಗುಂಟ ತಿನ್ನುತ್ತ ತಿರುಗುವವನು ಮೂರ್ಖ (೨೯). ತಾನು ಮಾತ್ರ ಯಾರಿಗೂ ಉಪಕಾರ ಮಾಡದೇ ಇತರರು ತನಗೆ ಉಪಕಾರ ಮಾಡಿದರೆ ಅದರ ಋಣವನ್ನು ಅಪಕಾರದಿಂದಲೇ ತೀರಿಸುವವನು, ಮಾಡುವದು ಕಡಿಮೆ,-ಮಾತನಾಡುವದು ಬಹಳ ಮಾಡುವವನು ಮೂರ್ಖ (೩೦). ಮುಂಗೋಪಿ, ಅತಿ ಆಶೆ-ಯುಳ್ಳವ, ಹೊಟ್ಟೇಬಾಕ, ಆಲಸೀ ಮನುಷ್ಯ, ದುರ್ವರ್ತನೆಯುಳ್ಳವ, ಕಪಟಿ, ಮತ್ತು ಧೈರ್ಯಗೇಡಿ, ಅಧೀರ, ಅಂಜುಬುರುಕನು ಮೂರ್ಖ (೩೧). ವಿದ್ಯೆ, ವೈಭವ, ಧನ, ಪರಾಕ್ರಮ ಸಾಮರ್ಥ್ಯ, ಕರ್ತವ್ಯಶಕ್ತಿ ಮಾನ ಇವು ಗಳಲ್ಲಿ ಒಂದೂ ಸಹ ತನ್ನಲ್ಲಿ ಇಲ್ಲದೇ ಸುಮ್ಮನೇ ದುರಭಿಮಾನದಿಂದ ಮೆರೆಯುವವನು ಮೂರ್ಖ (೩೨) ಉದ್ಧಟ (ಲಂಡ), ಸುಳ್ಳಾಡುವವ, ಲಬಾಡ, ದುರಾಚಾರಿ, ಕೊಂಕು ಡೊಂಕು ಬುದ್ಧಿಯುವ, ಬೇಪರ್ವಾ, ಬೇಶರಮ್, ಬಹಳ ನಿದ್ದೆ ಮಾಡುವವನು ಮೂರ್ಖ (೩೩). ಎತ್ತರವಾದ ಸ್ಥಳದಲ್ಲಿ ಹೋಗಿ ವಸ್ತ್ರ ಉಡುವವನು, ಬಜಾರದಲ್ಲಿ (ಜನರ ಗದ್ದಲ ವಿರುವ ಸ್ಥಳಗಳಲ್ಲಿ) ಮಲವಿಸರ್ಜನೆ ಮಾಡುವವನು, ಸದಾಕಾಲ ಅರ್ಥಾತ್ ವಿಶೇಷವಾಗಿ ನಗ್ನಸ್ಥಿತಿ ಯಿಂದ ಅಥವಾ ನಗ್ನ ಪ್ರಾಯ ಇರುವವನು ಮತ್ತು ತಿರುಗಾಡುವವನು ಮೂರ್ಖ (೩೪). ಹಲ್ಲು, ಕಣ್ಣು, ಮೂಗು, ಕೈ ಮತ್ತು ಬಟ್ಟೆ, ಪಾದ ಇವು ಯಾವಾಗಲೂ ಸ್ವಚ್ಛವಾಗಿ ಇರದವನು ಮೂರ್ಖ (೩೫). ವೈಧೃತಿ (ಒಂದು ಅಶುಭ ಯೋಗದಲ್ಲಿಯ ಇಪ್ಪತ್ತೇಳನೆಯ ಹೆಸರು) ವ್ಯತಿಪಾತ (ಅಪಶಕುನದಲ್ಲಿಯ ಹದಿನೇಳನೆಯ ಯೋಗ) ಇಂಥ ಕೆಟ್ಟ ಮುಹೂರ್ತದ ಮೇಲೆ ಪ್ರವಾಸ ಮಾಡುವವನು, ಅಪಶಕುನಗಳಿಂದ ಎರಡನೆಯವರಿಗೆ ಹಾನಿ ಮಾಡುವ ಉದ್ದೇಶದಿಂದ ತೋದರೆ ಮಾಡುವವನು,ಇಂಥವರೆಲ್ಲ ಮೂರ್ಖರಾಗಿರುವರು(೩೬)ಚಂಚಲ ಬುದ್ಧಿಯುವ, ಸ್ವಾರ್ಥಿ, ಹಣವೇ ಸರ್ವಸ್ವವೆಂದು ನಂಬಿರುವವ, ಈಶ್ವರನನ್ನು ಮರೆಯುವವ, ಕಾಮುಕ, ದುರ್ಜನರ ಗೆಳೆತನದಲ್ಲಿ ಇರುವವ, ನಿಂದ್ಯವಸ್ತು ಸ್ವೀಕರಿಸುವವ, ಯಾವಾಗಲೂ ವಿನೋದ ಮಾಡುವವ, ಸಿಟ್ಟಿನಿಂದ ಸ್ವತಃದ ಹಾನಿಮಾಡಿಕೊಳ್ಳುವವರೆಲ್ಲ ಮೂರ್ಖರು. ಬಹಳಷ್ಟು ಸಿಟ್ಟು ಬಂದಾಗ ಅಥವಾ ಅಪಮಾನವಾದಾಗ ದುರ್ಬುದ್ಧಿಯಿಂದ ಆತ್ಮಹತ್ಯಾ ಮಾಡಿಕೊಳ್ಳುವವ, ಮತ್ತು ಬುದ್ಧಿಯಿಂದ ಅಸ್ಥಿರನಿರುವವ ಮೂರ್ಖ (೩೭). ತನ್ನ ಪ್ರೀತ್ಯಾಸ್ಪದರಾದ ಜನರಿಗೇ ಅತಿ ದುಃಖ ಕೊಡುವವನು, ಅವರ ಸಂಗಡ ಒಂದು ಸಲವೂ ಸಂತೋಷದಿಂದ ಮಾತನಾಡದವನು, ನೀಚ ಜನರ ಸಂಗಡ ಮಾತ್ರ ಕೈ ಜೋಡಿಸಿ ನಡೆಯುವವನು ಮೂರ್ಖ [೩೮]. ತನ್ನನ್ನು ನಾನಾ ಪ್ರಕಾರವಾಗಿ ಜೋಕೆಯಿಂದ ಸಂಭಾಳಿಸಿಕೊಳ್ಳುವವನು, ಆದರೆ ಆಶ್ರಯಕ್ಕೆ ಯಾರಾದರೂ ಬಂದರೆ ಅವರನ್ನು ದೂರೀಕರಿಸುವವನು, ಸಂಪತ್ತು ಸ್ಥಿರವೆಂದು ನಂಬಿ ನಡೆಯುವವನು ಮೂರ್ಖ [೩೯]. ಮಕ್ಕಳು, ಕುಟುಂಬದ ಜನರು ಮತ್ತು ಹೆಂಡತಿ ಇವರೇ ತನ್ನ ಪ್ರಪಂಚದ ಆಧಾರವೆಂದು ತಿಳಿದು ಈಶ್ವರನನ್ನೇ ಮರೆಯುವವನು ಮೂರ್ಖ [೪೦]. "ಹೇಗೆ ಮಾಡಿರು ವವೋ ಹಾಗೆ ಫಲ ಪಡೆಯಬೇಕು." ಅರ್ಥಾತ್ "ಮಾಡಿದ್ದುಣ್ಣೋ ಮಹಾರಾಯಾ" ಎಂಬ ನೀತಿಯ ಮಾತು ಯಾವನಿಗೆ ತಿಳಿಯುವದಿಲ್ಲವೋ ಅವನು ಮೂರ್ಖ [೪೧].

ಪುರುಷಾಚೇನಿ ಅಷ್ಟಗುಣೇ । ಸ್ತ್ರಿಯಾಸ ಈಶ್ವರೀ ದೇಣೇ ।
ಏಶಾ ಕೇಲ್ಯಾ ಬಹುತ ಜೇಣೇ । ತೋ ಯೇಕ ಮೂರ್ಖ ॥೪೨॥
ದುರ್ಜನಾಚೇನಿ ಬೋಲೇ । ಮರ್ಯಾದಾ ಸಾಂಡೂನ ಚಾಲೇ ।
ದಿವಸಾ ಝಾಂಕಿಲೇ ಡೋಳೇ । ತೋ ಯೇಕ ಮೂರ್ಖ ॥೪೩॥
ದೇವದ್ರೋಹೀ ಗುರುದ್ರೋಹೀ । ಮಾತೃದ್ರೋಹೀ ಪಿತೃದ್ರೋಹೀ ।
ಬ್ರಹ್ಮದ್ರೋಹೀ ಸ್ವಾಮೀದ್ರೋಹೀ । ತೋ ಯೇಕ ಮೂರ್ಖ ॥೪೪॥
ಪರಪೀಡೇಚೇ ಮಾನೀ ಸುಖ । ಪರಸಂತೋಷಾಚೇ ಮಾನೀ ದುಃಖ ।
ಗೇಲೇ ವಸ್ತೂಚಾ ಕರೀ ಶೋಕ । ತೋ ಯೇಕ ಮೂರ್ಖ ॥೪೫॥
ಆದರೇವಿಣ ಬೋಲಣೆ । ನ ಪುಸತಾ ಸಾಕ್ಷ ದೇಣೇ ।
ನಿಂದ್ಯ ವಸ್ತು ಆಂಗಿಕಾರಣೇ । ತೋ ಯೇಕ ಮೂರ್ಖ ॥೪೬॥
ತುಕ ತೋಡೂನ ಬೋಲೆ । ಮಾರ್ಗ ಸಾಂಡೂನ ಚಾಲೆ ।
ಕುಕರ್ಮೀ ಮಿತ್ರ ಕೇಲೆ । ತೋ ಯೇಕ ಮೂರ್ಖ ॥೪೭॥
ಪತ್ಯ ರಾಖೋ ನೇಣೇಕದಾ । ವಿನೋದ ಕರೀ ಸರ್ವದಾ ।
ಹಾಸತಾ ಖಿಜೆ ಪೇಟೇ ದ್ವಂದ್ವಾ । ತೋ ಯೇಕ ಮೂರ್ಖ ॥೪೮॥
ಹೋಡ ಘಾಲೀ ಅವಘಡ । ಕಾಜೇವಿಣ ಕರೀ ಬಡಬಡ ।
ಬೋಲೋ ಚಿ ನೇಣೆ ಮುಖಜಡ । ತೋ ಯೇಕ ಮೂರ್ಖ ॥೪೯॥
ವಸ್ತ್ರ ಶಾಸ್ತ್ರ ದೋನೀ ನಸೆ । ಉಂಚ ಸ್ಥಳೀ ಜಾಊನ ಬೈಸೇ ।
ಜೋ ಗೋತ್ರಜಾಸ ವಿಶ್ವಾಸೆ । ತೋ ಯೇಕ ಮೂರ್ಖ ॥೫೦॥
ತಸ್ಕರಾಸೀ ವೊಳಖೀ ಸಾಂಗೇ । ದೇಖಿಲೀ ವಸ್ತು ತೇಚೀ ಮಾಗೇ ।
ಆಪಲೇ ಆಹ್ನೀತ ಕರೀ ರಾಗೇ । ತೋ ಯೇಕ ಮೂರ್ಖ ॥೫೧॥
ಹೀನ ಜನಾಸೀ ಬರಾಬರೀ । ಬೋಲ ಬೋಲೆ ಸರೋತ್ತರೀ ।
ವಾಮಹಸ್ತೇ ಪ್ರಾಶನ ಕರೀ । ತೋ ಯೇಕ ಮೂರ್ಖ ॥೫೨॥
ಸಮರ್ಥಾಸೀ ಮತ್ಸರ ಧರೀ । ಅಲಭ್ಯ ವಸ್ತೂಚಾ ಹೇವಾ ಕರೀ ।
ಘರೀಚಾ ಘರೀ ಕರೀ ಚೋರೀ । ತೋ ಯೇಕ ಮೂರ್ಖ ॥೫೩॥
ಸಾಂಡೂನಿಯಾ ಜಗದೀಶಾ । ಮನುಷ್ಯಾಚಾ ಮಾನೀ ಭರ್ವಸಾ ।
ಸಾರ್ಥಕೇವಿಣ ವೇಚೀ ವಯುಸಾ । ತೋ ಯೇಕ ಮೂರ್ಖ ॥೫೪॥
ಸಂಸಾರ ದುಃಖಾಚೇನಿ ಗುಣೇ । ದೇವಾಸ ಗಾಳೀ ದೇಣೇ ।
ಮೈತ್ರಾಚೇ ಬೋಲೆ ಉಣೇ । ತೋ ಯೇಕ ಮೂರ್ಖ ॥೫೫॥

ಸ್ತ್ರೀಯರಿಗೆ ಪುರುಷರಿಗಿಂತ ಎಂಟು ಪಟ್ಟು ಕಾಮವಾಸನೆ ಇರುವದು. (ಸ್ತ್ರೀಣಾಮಷ್ಟಗುಣಾಃಕಾಮಃ) ಎಂದು ಅನ್ನುವರು. ಇಂಥ ಅನೇಕ ಸ್ತ್ರೀಯರರನ್ನು ಲಗ್ನ ಮಾಡಿಕೊಳ್ಳುವವನು ಮೂರ್ಖ. (೪೨). ದುರ್ಜನ ಮನುಷ್ಯನ ಚಾಳಿಗೆ ಬಿದ್ದು ತನ್ನ ಮರ್ಯಾದೆ ಮೀರಿ ನಡೆಯುವವನು. ಹಗಲುಗಣ್ಣು ಮುಚ್ಚುವವನು, ಅಂದರೆ ಜ್ಞಾನವಿದ್ದು ಪರಿಣಾಮದ ಕಡೆಗೆ ನೋಡದೆ ಮುದ್ದಾಂ ಅಜ್ಞಾನಿಯಂತೆ ವರ್ತಿಸುವವನು ಮೂರ್ಖ. (೪೩). ದೇವ, ಗುರು, ತಾಯಿ, ತಂದೆ, ಬ್ರಾಹ್ಮಣ ಮತ್ತು ಸ್ವಾಮಿ, ಸಂತ ಶರಣ, ಸಾಧು ಇವರುಗಳಿಗೆ ವಿಶ್ವಾಸಘಾತ ಮಾಡುವವನು ಮೂರ್ಖ (೪೪). ಎರಡನೆಯವರಿಗೆ ದುಃಖವಾದರೆ ಸುಖಿಸುವವನು, ಮತ್ತು ಎರಡನೆಯವರಿಗೆ ಸುಖವಾದರೆ ಸಂತೋಷಪಡದವನು ಕಳೆದುಕೊಂಡ ವಸ್ತುವಿನ ಬಗ್ಗೆಸದಾಶೋಕಿಸುವವನು ಮೂರ್ಖ. (೪೫). ಮಾತನಾಡುವಾಗ ಭಿಡೆಯಿಲ್ಲದೆ ನಿಷ್ಠುರವಾಗಿ ಮಾತನಾಡುವವನು, ಕರೆಯಲಾರದೇ ಮತ್ತು ಕೇಳಲಾರದೇ ಸಾಕ್ಷಿ ನುಡಿಯುವವನು, ನಿಂದ್ಯವಸ್ತುಗಳನ್ನು ಹೇಯ ಪದಾರ್ಥಗಳನ್ನು ಅಂಗೀಕರಿಸುವವನು ಮೂರ್ಖ. (೪೬). ಮಹತ್ವ ತಿಳಿದುಕೊಳ್ಳದೇ ಸಹಜವಾಗಿ ಹಿಡಿತ ಮೀರಿ ಮಾತನಾಡುವವನು, ಅಡ್ಡ ಮಾರ್ಗದಿಂದ ಹೋಗುವವನು, ನೀಚ ಕೆಲಸಗಳಿಗಾಗಿ ಗುಂಪುಗೂಡಿಸುವವನು ಮೂರ್ಖ. (೪೭). ತನ್ನ ವಿಶ್ವಾಸ, ಪತ್ತು ಸಾಜೋಗತನವನ್ನು ಕಾಯ್ದುಕೊಳ್ಳದವನು, ಯಾವಾಗಲೂ ಥಟ್ಟಾ ಮಸ್ಕರಿ ಚೇಷ್ಟೆಮಾಡುವವನು, ಯಾರಾದರೂ ನಕ್ಕರೆ ತಾನು ಸಿಟ್ಟಿಗೆದ್ದುಕೈಮಿಲಾಯಿಸಲಿಕ್ಕೆ ಅಂದರೆ ಜಗಳಕ್ಕೆ ತಯಾರಾಗುವವ ಮೂರ್ಖ. (೪೮). ಕಠಿಣವಾದ ಜಿದ್ದು ಹಾಕುವವನು, ಕಾರಣವಿಲ್ಲದೆ ಬಡಬಡಿಸುವವನು, ಆದರೆ ಅವಶ್ಯವಿದ್ದಾಗ ಮೂಕನಂತೆ ಸುಮ್ಮನಿರುವವನು ಮೂರ್ಖ (೪೯). ಸಭೆಗೆ ಸರಿಯಾದ ಉತ್ತಮ ವೇಷಭೂಷಣಗಳು ಮತ್ತು ವಿದ್ಯೆ-ಜ್ಞಾನ ಎರಡೂ ತನ್ನಲ್ಲಿ ಇಲ್ಲದೇ ಉಚ್ಚಾಸನದ ಮೇಲೆ ಹೋಗಿ ಕೂಡುವವನು, ದಾಯಾದಿಗಳ-ಭಾಗಾದಿಗಳ ಮೇಲೆ ವಿಶ್ವಾಸವಿಡುವವನು ಮೂರ್ಖ. (೫೦). ತುಡುಗನಿಗೆ ತನ್ನ ಎಲ್ಲ ವಿಷಯ ತಿಳಿಸುವವನು, ಕಂಡ ಕಂಡ ವಸ್ತುಗಳನ್ನು ಕೇಳುವವನು, ಸಿಟ್ಟಿನಿಂದ ತನ್ನ ಹಾನಿ ತಾನೇ ಮಾಡಿ ಕೊಳ್ಳುವವನು, ಇಂಥವರೆಲ್ಲ ಮೂರ್ಖರೆಂದು ತಿಳಿಯಿರಿ (೫೧) ಹೀನ ಜನರ ಬಾಯಿಗೆ ಹತ್ತುವದು, ಮತ್ಸರಗ್ರಸ್ತ, ವಯಸ್ಸನ್ನು ವ್ಯರ್ಥವಾಗಿ ಕಳೆಯುವವ, ದೇವರಿಗೆ ಹೆಸರಿಡುವವ, ವಿಶ್ವಾಸಘಾತಕಿ, ಹಳಬರನ್ನು ಕೈಬಿಡುವವ, ಭ್ರಷ್ಟಾಚಾರಿ, ಪರಸ್ತ್ರೀ ಸಂಗಿ, ಚಿಂತಾಗ್ರಸ್ತ, ಮೂರ್ಖರ ಸಂಗತಿ ಮಾಡುವವ ಮತ್ತು ಗ್ರಂಥಗಳ ಕಾಳಜಿ ಮಾಡ-ದಿರುವವರೆಲ್ಲರೂ ಮೂರ್ಖರು:-ಕಲಹಪ್ರಿಯ, ಕೀಳು ಮನುಷ್ಯನ ಸಂಗಡ ಸಲುಗೆಯಿಂದ ನಡೆಯುವವನು, ಅಂಥವ ರೊಡನೆ ಸರಿಸಮದಿಂದ ವಾದ ಹಾಕುವವನು, ಉತ್ತರಕ್ಕ ಅವರಂತೆಯೇ ಅದೇ ರೀತಿಯಲ್ಲಿ ಪ್ರತ್ಯುತ್ತರ ಕೊಡು-ವವನು, ಎಡಗೈಯಿಂದ ಊಟ ಮಾಡುವವನು, ಹಾಲು, ನೀರು ಕುಡಿಯುವವನು, ಮೂರ್ಖ (೫೨). ಶ್ರೇಷ್ಠ ಜನರ ಸಂಗಡ ಮತ್ಸರ ಮಾಡುವದು, ತನಗೆ ಯಾವ ವಸ್ತುವು ಸಿಗಲಿಕ್ಕೆ ಅಶಕ್ಯವಿರುವುದೋ ಅದರ ಸಲುವಾಗಿ ಮತ್ಸರ ಪಡುವದು, ತನ್ನಮನೆಯಲ್ಲಿಯೇ ತುಡುಗು ಮಾಡುವವ ಮೂರ್ಖ (೫೩). ಈಶ್ವರನನ್ನು ಬಿಟ್ಟು ಮನುಷ್ಯರ ಮೇಲೆ ಭರವಸೆ ಇಡುವವ, ಯಾವ ಸಾರ್ಥಕ ಕೆಲಸವನ್ನೂ ಮಾಡದೇ ಆಯುಷ್ಯದ ದಿವಸಗಳನ್ನು ನಿರರ್ಥಕ ಗೊಳಿಸುವವನು ಮೂರ್ಖ (೫೪). ಸಂಸಾರದಲ್ಲಿ ಅನುಭವಿಸಬೇಕಾಗಿರುವ ದುಃಖಕ್ಕಾಗಿ ದೇವರನ್ನು ಬಯ್ಯುವವನು,ತನ್ನ ಮಿತ್ರನ ದೋಷಗಳನ್ನು ಜನರಲ್ಲಿ ಬಹಿರಂಗ ಪಡಿಸುವವನು ಮೂರ್ಖ (೫೫).

ಅಲ್ಪ ಅನ್ಯಾಯು ಕ್ಷ್ಮಾನ ಕರೀ । ಸರ್ವಕಾಳ ಧಾರಕೀ ಧರೀ ।
ಜೋ ವಿಸ್ವಾಸಘಾತ ಕರೀ । ತೋ ಯೇಕ ಮೂರ್ಖ ॥೫೬॥
ಸಮರ್ಥಾಚೆ ಮನೀಚೆ ತುಟೆ । ಜಯಾಚೇನಿ ಸಭಾ ವಿಟೆ ।
ಕ್ಷಣಾ ಬರಾ ಕ್ಷಣಾ ಪಾಲಟೆ । ತೋ ಯೇಕ ಮೂರ್ಖ ॥೫೭॥
ಬಹುತಾ ದಿವಸಾಂಚೆ ಸೇವಕ । ತ್ಯಾಗೂನ ಠೇವೀ ಆಣಿಕ ।
ಜ್ಯಾಚೀ ಸಭಾ ನಿರ್ನಾಯೇಕ । ತೋ ಯೇಕ ಮೂರ್ಖ ॥೫೮॥
ಅನೀತೀನೇ ದ್ರವ್ಯ ಜೋಡೀ । ಧರ್ಮ ನೀತೀ ನ್ಯಾಯು ಸೋಡೀ ।
ಸಂಗತೀಚೇ ಮನುಷ್ಯ ತೋಡೀ । ತೋ ಯೇಕ ಮೂರ್ಖ ॥೫೯॥
ಘರೀ ಅಸೋನ ಸುಂದರೀ । ಜೋ ಸದಾಚಾ ಪರದ್ವಾರೀ ।
ಬಹುತಾಂಚೇ ಉಚಿಷ್ಟ ಅಂಗೀಕಾರೀ । ತೋ ಯೇಕ ಮೂರ್ಖ ॥೬೦॥
ಆಪುಲೇ ಅರ್ಥ ದುಸರ್‍ಯಾಪಾಸೀ । ಆಣೀ ದುಸರ್‍ಯಾಚೇ ಅಭಿಳಾಸೀ ।
ಪರ್ವತ ಕರೀ ಹೀನಾಸೀ । ತೋ ಯೇಕ ಮೂರ್ಖ ॥೬೧॥
ಅತಿತಾಚಾ ಅಂತ ಪಾಹೇ । ಕುಗ್ರಾಮಾಮಧೇ ರಾಹೇ ।
ಸರ್ವಕಾಳ ಚಿಂತಾ ವಾಹೇ । ತೋ ಯೇಕ ಮೂರ್ಖ ॥೬೨॥
ದೋಘೇ ಬೋಲತ ಅಸತೀ ಜೇಥೇ । ತಿಸರಾ ಜಾಊನ ಬೈಸೆ ತೇಥೇ ।
ಡೋಈ ಖಾಜವೀ ದೋಹೀ ಹಾತೇ । ತೋ ಯೇಕ ಮೂರ್ಖ ॥೬೩॥
ಉದಕಾಮಧೇ ಸಾಂಡೀ ಗುರಳೀ । ಪಾಯೇ ಪಾಯೇ ಕಾಂಡೋಳೀ ।
ಸೇವಾ ಕರೀ ಹೀನ ಕುಳೀ । ತೋ ಯೇಕ ಮೂರ್ಖ ॥೬೪॥
ಸ್ತ್ರೀ ಬಾಳಕಾ ಸಲಗೀ ದೇಣೇ । ಪಿಶಾಚ್ಯಾ ಸನ್ನಿಧ ಬೈಸಣೇ ।
ಮರ್ಯಾದೆವಿಣ ಪಾಳೀ ಸುಣೇ । ತೋ ಯೇಕ ಮೂರ್ಖ ॥೬೫॥
ಪರಸ್ತ್ರೀಸೀ ಕಳಹ ಕರೀ । ಮುಕೀ ವಸ್ತು ನಿಘಾತೇ ಮಾರೀ ।
ಮೂರ್ಖಾಚೀ ಸಂಗತೀಧರೀ । ತೋ ಯೇಕ ಮೂರ್ಖ ॥೬೬॥
ಕಳಹ ಪಾಹಾತ ಉಭಾ ರಾಹೇ । ತೋಡವಿನಾ ಕೌತುಕ ಪಾಹೇ ।
ಖರೇ ಅಸ್ತಾ ಖೋಟೇ ಸಾಹೇ । ತೋ ಯೇಕ ಮೂರ್ಖ ॥೬೭॥
ಲಕ್ಷ್ಮೀ ಆಲಿಯಾವರೀ । ಜೋ ಮಾಗಿಲ ವೋಳಖೀನ ಧರೀ ।
ದೇವೀ ಬ್ರಾಹ್ಮಣೀ ಸತ್ತಾ ಕರೀ । ತೋ ಯೇಕ ಮೂರ್ಖ ॥೬೮॥
ಆಪಲೇ ಕಾಜ ಹೋಯೇ ತವರೀ । ಬಹುಸಾಲ ನಮ್ರತಾ ಧರೀ ।
ಪುಢಿಲಾಂಚೇ ಕಾರ್ಯ ನ ಕರೀ । ತೋ ಯೇಕ ಮೂರ್ಖ ॥೬೯॥

ಸಣ್ಣ ಪುಟ್ಟ ತಪ್ಪಿಗೆ ಕ್ಷಮೆ ಮಾಡದೇ ಇರುವವನು, ತಪ್ಪು ಮಾಡಿದವನಿಗೆ ಒಂದೇಸವನೆ ಒರೆಗೆ ಹಚ್ಚಿ ತ್ರಾಸು ಕೊಟ್ಟು ಗೋಳಾಡಿಸುವವನು, ವಿಶ್ವಾಸಘಾತ ಮಾಡುವವನು ಮೂರ್ಖ (೫೬). ಶ್ರೇಷ್ಠ ಮನುಷ್ಯರ ಮನಸ್ಸಿನಿಂದ ದೂರಾಗುವದು, ದೊಡ್ಡವರ ಮನಸ್ಸಿನ ವಿರುದ್ಧ ಹೋಗುವದು, ಸಭೆಯಲ್ಲಿ, ಚರ್ಚಾಕೂಟದಲ್ಲಿ ಜನಕ್ಕೆ ಬೇಡವಾಗುವವನು, ಕ್ಷಣ ಕ್ಷಣಕ್ಕೆ ಮನಸ್ಸನ್ನು ಬದಲಾಯಿಸುವವನು ಮೂರ್ಖ (೫೭). ಹಳೆಯ ವಿಶ್ವಾಸಿ ನೌಕರರನ್ನು ತೆಗೆದು ಹೊಸ ನೌಕರರನ್ನು ಇಟ್ಟುಕೊಳ್ಳುವವನು,ಹಿರಿಯರಿಲ್ಲದೇ (ಅಧ್ಯಕ್ಷರು) ಸಭೆ ಸೇರಿಸುವವನು ಮೂರ್ಖ (೫೮). ಭ್ರಷ್ಟ ಮಾರ್ಗದಿಂದ ದ್ರವ್ಯಗಳಿಸುವವನು, ಧರ್ಮ, ನೀತಿ, ನ್ಯಾಯಗಳನ್ನು ಪಾಲಿಸದವನು, ಸಂಗಡಿದ್ದವನ ಗೆಳೆತನ-ವಿಶ್ವಾಸ ಹರಿದುಕೊಳ್ಳುವವನು ಮೂರ್ಖ (೫೯) ಮನೆಯಲ್ಲಿ ಸುಂದರಳಾದ ಧರ್ಮಪತ್ನಿ ಇದ್ದರೂ ಯಾವಾಗಲೂ ಹೊರಚ್ಯಾಳಿಯುಳ್ಳ ಪರಸ್ತ್ರೀಗಾಮಿಯು, ಯಾವಾಗಲೂ ಬಹುಜನರ ಎಂಜಲು ತಿನ್ನುವವನು ಮೂರ್ಖ (೬೦). ತನ್ನ ಹಣವನ್ನು ಎರಡನೆಯವರಲ್ಲಿ ಇಟ್ಟು ಇತರರಲ್ಲಿ ಹಣದ ಇಚ್ಛೆ, ಆಶೆ, ತಾಳುವವನು, ಕನಿಷ್ಠ ಜನರ ಸಂಗಡ ಕೊಡಕೊಳ್ಳುವ ವ್ಯವಹಾರ ಮಾಡುವವನು ಮೂರ್ಖ (೬೧). ಮನೆಗೆ ಬಂದ ಆಪ್ತೇಷ್ಟರರಿಗೆ ಸಹಾಯ ಮಾಡದವನು, ದುಷ್ಟರು ಇರುವ ಗ್ರಾಮದಲ್ಲಿ ವಾಸ ಮಾಡುವವನು,ಮತ್ತು ಸದಾಸರ್ವ ಕಾಲ ಚಿಂತಾಗ್ರಸ್ತನಾಗಿರುವವನು ಮೂರ್ಖ(೬೨). ಇಬ್ಬರು ಆಪ್ತಾಲೋಚನೆ ಮಾಡುವ ಸ್ಥಳದಲ್ಲಿ ಕರಿಯದೇ ಹೋಗಿ ಕೂಡುವವನು, ಎರಡೂ ಕೈಗಳಿಂದ ತಲೆ ತುರಿಸಿಕೊಳ್ಳುವವನು ಮೂರ್ಖ [೬೩]. ಜಲಾಶಯ, ಕೆರೆ, ಭಾವಿ, ಗುಂಡಿ, ವರ್ತಿಗಳಲ್ಲಿ ಬಾಯಿ ಮುಕ್ಕಳಿಸಿದ ನೀರನ್ನು ಉಗುಳುವದು, ಆ ನೀರಿನಲ್ಲಿ ಪಾದದಿಂದ ಪಾದವನ್ನು ತಿಕ್ಕುವದು, ನೀಚ ಜನರ ಮನೆಯಲ್ಲಿ ನೌಕರಿಮಾಡುವವನು ಮೂರ್ಖ [೬೪]. ಹೆಂಡತಿ ಮಕ್ಕಳಿಗೆ ಇಲ್ಲದ ಫಾಜಿಲ ಸಲಿಗೆ ಕೊಟ್ಟು ಪ್ರೀತಿಸುವವನು, ಭೂತಾದಿಗಳ ಹತ್ತಿರ ಕೂಡುವವನು, ಅಥವಾ ಪಿಶ್ಯಾಚಿಯಂತೆ ತಾಪ ದಾಯಕ ಮನುಷ್ಯರ ಹತ್ತರ ಕೂಡುವವನು, ಶಿಸ್ತು ಕಲಿಸದೇ ನಾಯಿಯನ್ನು ಸಾಕುವವನು ಮೂರ್ಖ [೬೫]. ಪರಸ್ತ್ರೀಯ ಕೂಡ ತಂಟೆ ತಕರಾರು ಮಾಡುವವನು, ಮೂಕ ಪ್ರಾಣಿಗಳನ್ನು ಆಯುಧದಿಂದ ಹೊಡೆಯುವವನು, ಮೂರ್ಖರ ಸಂಗತಿ ಮಾಡುವವನು ಮೂರ್ಖ [೬೬]. ಯಾವುದಾದರೂ ಬಡಿದಾಟ ನಡೆದಾಗ ಅದನ್ನು ಬಿಡಿಸದೇ ಕೌತುಕದಿಂದ ನೋಡುತ್ತ ನಿಲ್ಲುವವನು, ನಿಜವಿರುವದನ್ನು ಬಿಟ್ಟು ಸುಳ್ಳಿರುವದನ್ನು ಸಚಿಸಿ ನಂಬುವವನು ಮೂರ್ಖ[೬೭].ಶ್ರೀಮಂತಿಕೆ ಬಂದಾಗ ಮೊದಲಿನ ಜನರ ಗುರುತು-ಪರಿಚಯ ಮರೆಯುವವನು, ದೇವ ಬ್ರಾಹ್ಮಣರ ಮೇಲೆ ಅಧಿಕಾರ ನಡೆಸುವವನು ಮೂರ್ಖ [೬೮]. ತನ್ನ ಕೆಲಸವಾಗುವವರೆಗೆ ಅತಿ ನಮ್ರತೆಯಿಂದ ಇದ್ದು, ಕೆಲಸ ಆದನಂತರ ಎರಡನೆಯವರಿಗೆ ತಾನು ಉಪಯೋಗ ಬೀಳದಿರುವವನು ಮೂರ್ಖ [೬೯].

ಅಕ್ಷರೇ ಗಾಳೂನ ವಾಚೀ । ಕಾ ತೇ ಘಾಲೀ ಪದರಿಚೀ ।
ನೀಘಾ ನಕರೀ ಪುಸ್ತಕಾಚೀ । ತೋ ಯೇಕ ಮೂರ್ಖ ॥೭೦॥
ಆಪಣ ವಾಚೀನಾ ಕಧೀ । ಕೋಣಾಸ ವಾಚಾವಯಾ ನೇದೀ ।
ಬಾಂಧೋನ ಠೇವೀ ಬಂದೀ । ತೋ ಯೇಕ ಮೂರ್ಖ ॥೭೧॥
ಐಸೀ ಹೇ ಮೂರ್ಖ ಲಕ್ಷಣೇ । ಶ್ರವಣೇ ಚಾತುರ್ಯ ಬಾಣೇ ।
ಚಿತ್ತ ದೇಊನಿಯಾ ಶಹಾಣೇ । ಐಕತೀ ಸದಾ ॥೭೨॥
ಲಕ್ಷಣೇ ಅಪಾರ ಅಸತೀ । ಪರೀ ಕಾಂಹೀ ಯೇಕ ಯಥಾಮತೀ ।
ತ್ಯಾಗಾರ್ಥ ಬೋಲಿಲೇ ಶ್ರೋತೀ । ಕ್ಷಮಾ ಕೇಲೇ ಪಾಹಿಜೇ ॥೭೩॥
ಉತ್ತಮ ಲಕ್ಷಣೇ ಘ್ಯಾವೀ । ಮೂರ್ಖ ಲಕ್ಷಣೇ ತ್ಯಾಗಾವೀ ।
ಪುಢಿಲೆ ಸಮಾಸೀ ಆಘವೀ । ನಿರೋಪಿಲೀ ॥೭೪॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
ಮೂರ್ಖ ಲಕ್ಷಣ ನಾಮ ಸಮಾಸ ಪಹಿಲಾ ॥

ಏನಾದರೂ ಓದುವಾಗ ಅದರಲ್ಲಿರುವ ಕೆಲವನ್ನು ಬಿಟ್ಟು ಓದುವದು. ಅಥವಾ ಇಲ್ಲದ್ದನ್ನು ತನ್ನ ಕೈಯಿಂದ ಹಾಕಿ ಅದನ್ನು ಓದುವವ, ಪುಸ್ತಕಗಳ ಸಂರಕ್ಷಣೆ ಮಾಡದಿರುವವನು ಮೂರ್ಖ. (೭೦). ಎಂದೂ ತಾನು ಪುಸ್ತಕಗಳನ್ನು ಓದದೇ ಓದುವವರಿಗೆ ಸಹ ಕೊಡದೇ ಅವುಗಳನ್ನು ಗಂಟು ಕಟ್ಟಿ ಇಡುವವನು. ಇಂಥವರೆಲ್ಲ ಮೂರ್ಖರೆಂದು ತಿಳಿಯಬೇಕು. (೭೧). ಈ ಮೂರ್ಖರ ಲಕ್ಷಣಗಳನ್ನು ಓದಿ ಮತ್ತು ಕೇಳಿ ಮನುಷ್ಯನು ಚತುರ ನಾಗುವನು. ಜಾಣರಾದವರು ಮೂರ್ಖರ ಲಕ್ಷಣಗಳನ್ನು ತ್ಯಾಗ ಮಾಡಬೇಕು. ಇವೆಲ್ಲವುಗಳೂ ಮೂರ್ಖರ ಲಕ್ಷಣಗಳಾಗಿವೆ· ಕೇಳಿ ತಿಳಿದವನು ಚತುರನಾಗುವನು. ಜಾಣನಾದವನು ಸದಾ ಈ ಲಕ್ಷಣಗಳನ್ನು ಮನಗೊಟ್ಟು ಕೇಳುವನು ಮತ್ತು ಇವುಗಳನ್ನು ತ್ಯಜಿಸುವನು. (೭೨). ನಿಜವಾಗಿ ಹೇಳುವದಾದರೆ ಮೂರ್ಖ ಲಕ್ಷಣಗಳು ಅಪಾರವಿರುವವು, ಶ್ರೋತೃಗಳು ಈ ಮೂರ್ಖ ಲಕ್ಷಣಗಳನ್ನೆಲ್ಲ ತ್ಯಾಗ ಮಾಡಬೇಕು. ಅಂತೆಯೇ ನನ್ನ ಬುದ್ಧಿಗೆ ಹೊಳೆದ ಕೆಲವು ಮೂರ್ಖರ ಲಕ್ಷಣಗಳ ಬಗ್ಗೆ ಮಾತ್ರ ಇಲ್ಲಿ ಹೇಳಿದ್ದೇನೆ. ಆದ್ದರಿಂದ ಶ್ರೋತೃಗಳು ಕ್ಷಮೆ ಮಾಡಬೇಕು. (೭೩). ಶ್ರೋತೃವು ಉತ್ತಮ ಲಕ್ಷಣಗಳನ್ನು ಅಂಗೀಕರಿಸಬೇಕು. ಮೂರ್ಖ ಲಕ್ಷಣಗಳನ್ನು ತ್ಯಾಗ ಮಾಡಬೇಕು. ಮುಂದಿನ ಸಮಾಸದಲ್ಲಿ ಉತ್ತಮ ಲಕ್ಷಣಗಳನ್ನೆಲ್ಲ ಹೇಳಿರುವೆವು. (೭೪).

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದ ಎರಡನೆಯ ದಶಕದಲ್ಲಿಯ
"ಮೂರ್ಖರ ಲಕ್ಷಣ" ಎಂಬ ಹೆಸರಿನ ಒಂದನೆಯ ಸಮಾಸವು ಮುಗಿದುದು.

● ●

## ದಶಕ ೨. ಸಮಾಸ ೨. ಉತ್ತಮ ಲಕ್ಷಣ (ನುಡಿ ೪೨)

ದೇಹ ಬುದ್ಧಿಯಲ್ಲಿ "ನಾನು ದೇಹವೇ ಇರುವೆ" ಈ ಭಾವನೆ ಇರುತ್ತದೆ. ಆತ್ಮ ಬುದ್ಧಿಯಲ್ಲಿ " ನಾನು ಆತ್ಮನೇ ಇರುವೆ" ಎಂಬ ಭಾವವಿರುತ್ತದೆ. ದೇಹ ಬುದ್ಧಿ ಹೋಗಿ ಅದು ಇಲ್ಲದಾಗಿ ಆತ್ಮಬುದ್ಧಿ ಸ್ಥಿರಗೊಳ್ಳು ವದಕ್ಕೆ "ಪರಮಾರ್ಥ"ವೆಂಬ ಹೆಸರು. ದೇಹ ಬುದ್ಧಿಯ ಬಗೆಗಿನ ವಿಚಾರವನ್ನು "ಇಲ್ಲ"ವೆಂಬುದನ್ನೇ ಆಧರಿಸಿ ಮಾಡಬೇಕಾಗುವದು. ಇದು ಸುಲಭ ಉಪಾಯವು. ಆದರೆ ಆತ್ಮಬುದ್ಧಿಯ ವಿಚಾರದಲ್ಲಿ "ಇರುವದು" ಎಂಬುದನ್ನೇ ಆಧರಿಸಿ ಮಾಡಬೇಕಾಗುತ್ತದೆ. ಇದು ಇಲ್ಲಿ ಸುಲಭ ಉಪಾಯವಾಗಿರುವದು. ದೇಹಬುದ್ಧಿ ಹೋಗದ ಹೊರತು ಪರಮಾರ್ಥವು ಕೈವಶವಾಗುವದಿಲ್ಲ ಎಂಬುದು ಎಷ್ಟು ನಿಜವಿದೆಯೋ ಅದರಂತೆ ದೇಹ ಬುದ್ಧಿ ಒಮ್ಮೆಲೇ ಹೋಗುವದಿಲ್ಲವೆಂಬುದೂ ಅಷ್ಟೇ ಸತ್ಯವಿದೆ. ಆದರೆ ಇದು ಕ್ರಮುಕ್ರಮವಾಗಿ ಬಿಟ್ಟು ಹೋಗುವದೆಂಬುದೂ ನಿಜವು. ದೇಹಬುದ್ಧಿ ಬಿಡುವ ಪದ್ಧತಿ, ರೀತಿಗೆ ಸ್ವಇಚ್ಛೆಯಿಂದ ಪ್ರತಿಬಂಧಕ ಕಟ್ಟುಪಾಡುಗಳನ್ನು ಹಾಕಿಕೊಳ್ಳ ಬೇಕಾಗುವದು. ಇದು ಮೊದಲ ಮೆಟ್ಟಲೆಂದು ತಿಳಿದುಕೊಳ್ಳಬೇಕು.

ಮೆಟ್ಟಲುಗಳನ್ನು ಹತ್ತುವದಕ್ಕೆ ಮಾನವ ಜೀವನದಲ್ಲಿಯ ದೇಹಬುದ್ಧಿಯು ಯಾವ ಯಾವ ರೂಪದಲ್ಲಿ ಪ್ರಕಟ ಗೊಳ್ಳುವದೆಂಬುದನ್ನು ತಿಳಿಯಬೇಕಾಗುವದು. ಅಂತೆಯೇ ಮೂರ್ಖ ಲಕ್ಷಣದಲ್ಲಿ ಶ್ರೀಸಮರ್ಥರು ದೇಹಬುದ್ಧಿ ಅಂದರೆ ಮುಚ್ಚುಮರೆ ಇಲ್ಲದ ಬಟ್ಟಬಯಲಾದ ಸ್ವಾರ್ಥದ ಕಲ್ಪನೆಯೆಂಬುದನ್ನು ಮಾಡಿಕೊಟ್ಟಿದ್ದಾರೆ. ನೀತಿಯ ಆಚರಣೆ, ಧರ್ಮದ ಪಾಲನೆ, ಮತ್ತು ಇದರ ಸಂಗಡ ವ್ಯವಹಾರದ ಜತನ ಮಾಡಿಕೊಂಡದ್ದಾದರೆ ಪ್ರಾಪಂಚಿಕ ಮನುಷ್ಯನ ದೇಹಬುದ್ಧಿಗೆ ಸಹಜವಾಗಿ ಕಡಿವಾಣ ಹಾಕಿದಂತೆ ಆಗುತ್ತದೆ. ಇದನ್ನು ಲಕ್ಷದಲ್ಲಿ ಇಟ್ಟುಕೊಂಡು ಶ್ರೀ ಸಮರ್ಥರು ಈಗ ಉತ್ತಮ ಲಕ್ಷಣಗಳನ್ನು ಹೇಳುತ್ತಾರೆ. ದೇಹಬುದ್ಧಿಯ ಪ್ರಕಟಪ್ರವೃತ್ತಿಯು ಐಹಿಕ ಜೀವನದಲ್ಲಿಯ ಆಸಕ್ತಿಯಲ್ಲಿ ಕೆಲವನ್ನು ಹಿಡಿತದಲ್ಲಿಡುವದು ಮತ್ತು ತಪ್ಪಿಸುವದು ಆಗಿರುವದರಿಂದ ಉತ್ತಮ ಲಕ್ಷಣಗಳನ್ನು "ನ" ಕಾರತನದಿಂದ ಹೇಳಬೇಕಾಯಿತು.

### ಸಮಾಸ ದುಸರಾ : ಉತ್ತಮ ಲಕ್ಷಣ

॥ಶ್ರೀರಾಮ॥ ಶ್ರೋತಾ ವ್ಹಾವೇ ಸಾವಧಾನ। ಆತಾ ಸಾಂಗತೋ ಉತ್ತಮ ಗುಣ।
ಜೇಣೇ ಕರಿತಾ ಬಾಣೇ ಖೂಣ। ಸರ್ವಜ್ಞ ಪಣಾಚೀ ॥೧॥
ವಾಟ ಪುಸಿಲ್ಯಾವಿಣ ಜಾಊ ನಯೇ। ಫಳ ವೋಳಖಿಲ್ಯಾವಿಣ ಖಾಊ ನಯೇ।
ಪಡಿಲೀ ವಸ್ತು ಘೇಊ ನಯೇ। ಯೇಕಾಯೇಕೀ ॥೨॥
ಅತಿ ವಾದ ಕರೂ ನಯೇ। ಪೋಟೀ ಕಪಟ ಧರೂ ನಯೇ।
ಶೋಧಿಲ್ಯಾವಿಣ ಕರೂ ನಯೇ। ಕುಳಹೀನ ಕಾಂತಾ ॥೩॥
ವಿಚಾರೇವಿಣ ಬೋಲೋ ನಯೇ। ವಿವಂಚನೇವಿಣ ಚಾಲೋ ನಯೇ।
ಮರ್ಯಾದೇವಿಣ ಹಾಲೋ ನಯೇ। ಕಾಂಹೀ ಯೇಕ ॥೪॥
ಪ್ರೀತೀವಿಣ ರುಸೋ ನಯೇ। ಚೋರಾಸ ವೋಳಖೀ ಪುಸೋ ನಯೇ।
ರಾತ್ರೀ ಪಂಥ ಕ್ರಮೂ ನಯೇ। ಯೇಕಾಯೇಕೀ ॥೫॥
ಜನೀ ಆರ್ಜವ ತೋಡೂನಯೇ। ಪಾಪದ್ರವ್ಯ ಜೋಡೂ ನಯೇ।
ಪುಣ್ಯಮಾರ್ಗ ಸೋಡೂ ನಯೇ। ಕದಾಕಾಳೀ ॥೬॥
ನಿಂದಾ ದ್ವೇಷ ಕರೂ ನಯೇ। ಅಸತ್ಸಂಗ ಧರೂ ನಯೇ।
ದ್ರವ್ಯದಾರಾ ಹರೂ ನಯೇ। ಬಳಾತ್ಕಾರೇ ॥೭॥
ವಕ್ತಯಾಸ ಖೋದೂ ನಯೇ। ಐಕ್ಯತೇಸೀ ಫೋಡೂ ನಯೇ।
ವಿದ್ಯಾ ಅಭ್ಯಾಸ ಸೋಡೂ ನಯೇ। ಕಾಂಹೀ ಕೇಲ್ಯಾ ॥೮॥
ತೋಂಡಾಳಾಸೀ ಭಾಂಡೋ ನಯೇ। ವಾಚಾಳಾಸೀ ತಂಡೋ ನಯೇ।
ಸಂತಸಂಗ ಖಂಡೂ ನಯೇ। ಅಂತರ್ಯಾಮೀ ॥೯॥
ಅತಿಕ್ರೋಧ ಕರೂ ನಯೇ। ಜಿವಲಗಾಸ ಖೇದೂ ನಯೇ।
ಮನೀ ವೀಟ ಮಾನೂ ನಯೇ। ಸಿಕವಣೇಚಾ ॥೧೦॥
ಕ್ಷಣಕ್ಷಣಾ ರುಸೋ ನಯೇ। ಲಟಿಕಾ ಪುರುಷಾರ್ಥ ಬೋಲೋ ನಯೇ।
ಕೇಲ್ಯಾವಿಣ ಸಾಂಗೋ ನಯೇ। ಆಪಲಾ ಪರಾಕ್ರಮು ॥೧೧॥
ಬೋಲಿಲಾ ಬೋಲ ವಿಸರೋ ನಯೇ। ಪ್ರಸಂಗೀ ಸಾಮರ್ಥ್ಯ ಚುಕೋ ನಯೇ।
ಕೇಲ್ಯಾವಿಣ ನಿಖಂದೂ ನಯೇ। ಪುಢಿಲಾಸೀ ಕದಾ ॥೧೨॥
ಆಳಸೇ ಸುಖ ಮಾನೂ ನಯೇ। ಚಾಹಾಡೀ ಮನಾಸ ಆಣೂ ನಯೇ।
ಶೋಧಲ್ಯಾವಿಣ ಕರೂ ನಯೇ। ಕಾರ್ಯ ಕಾಂಹೀ ॥೧೩॥

**ವ್ಯಕ್ತಿಗತ ಮತ್ತು ಸಾಮಾಜಿಕ ನಿತ್ಯ ವ್ಯವಹಾರ ಹಾಗೂ ನೈತಿಕ ಆಚರಣೆಗಳ ವರ್ಣನೆ--** "ಈಗ ನಾನು ಉತ್ತಮ ಗುಣಗಳನ್ನು ಹೇಳುತ್ತೇನೆ. ಶ್ರೋತೃಗಳು ಲಕ್ಷಗೊಟ್ಟು ಕೇಳಬೇಕು". ಉತ್ತಮ ಗುಣಗಳು ತಿಳಿದರೆ ಮಾತ್ರ ಪ್ರಪಂಚ ಮತ್ತು ಪಾರಮಾರ್ಥ ಈ ಎರಡನ್ನೂ ಸಾಧಿಸಲು ಬೇಕಾಗುವ ಜ್ಞಾನವೆಲ್ಲ ತಿಳಿಯುವದು. ಈ ಸಮಾಸದಲ್ಲಿ ಸಾವಧಾನದ ಎಚ್ಚರಿಕೆಯ ಸೂಚನೆಗಳನ್ನು ಶ್ರೀ ಸಮರ್ಥರು ಮಾಡಿರುತ್ತಾರೆ. (೧). ಪ್ರವಾಸಕ್ಕೆ ಹೋಗುವ ಮೊದಲು ದಾರಿಯ ಬಗ್ಗೆ ವಿಚಾರ ಮಾಡಿ ತಿಳಿದುಕೊಳ್ಳದೇ ಹೋಗಬಾರದು. ಏಕೆಂದರೆ ದಾರಿ ತಪ್ಪಬಹುದು. ಫಲ (ಹಣ್ಣು) ತಿನ್ನುವ ಮೊದಲು ಅದರ ಗುಣದ ಬಗ್ಗೆ ತಿಳಿದುಕೊಳ್ಳದೇ ತಿನ್ನಬಾರದು, ಏಕೆಂದರೆ ದೇಹಕ್ಕೆ ಅಪಾಯ ವಗೈರೆ ಆಗುವ ಸಂಭವವಿರುತ್ತದೆ. ದಾರಿಯಲ್ಲಿ ಬಿದ್ದಂಥ ವಸ್ತುಗಳನ್ನು ನೋಡಿದ ಕೂಡಲೇ ತೆಗೆದುಕೊಳ್ಳಬಾರದು. ಏಕೆಂದರೆ ಇಂಥ ವಸ್ತುಗಳಿಂದ ತುಡುಗಿನ ಅಪವಾದ ಬರಬಹುದು. (೨). ಬಹಳ ವಾದ ಮಾಡಬಾರದು. ಮನಸ್ಸಿನಲ್ಲಿ ಕಪಟವಿಟ್ಟು ವರ್ತಿಸಬಾರದು. ಸರಿಯಾಗಿ ಕುಲಶೀಲಗಳ ಬಗ್ಗೆ ವಿಚಾರ ಮಾಡದ ಹೊರತು ಕನ್ಯೆಯ ಸಂಗಡ ಲಗ್ನ ಮಾಡಿಕೊಳ್ಳಬಾರದು. (೩). ವಿಚಾರ ಮಾಡದೇ ದುಡುಕಿ ಮಾತನಾಡಬಾರದು. ಎಲ್ಲ ಪ್ರಕಾರಗಳಿಂದ ನಾಲ್ಕೂ ಕಡೆಗೆ ಲಕ್ಷಗೊಟ್ಟು ತಿಳಿದುಕೊಳ್ಳದೇ ಯಾವದೇ ಕೆಲಸ ಪ್ರಾರಂಭಿಸಬಾರದು. ನೀತಿ ಧರ್ಮಗಳ ದಾರಿ ಬಿಟ್ಟು ಸರಿದಾಡಬಾರದು. (೪). ಪ್ರೇಮವಿಲ್ಲದಲ್ಲಿ ಸಿಟ್ಟಿಗೇಳಬಾರದು. ತುಡುಗನಿಗೆ ಗುರುತು ಪರಿಚಯ ಹೇಳಬಾರದು. ಹಾಗೂ ಕೇಳಬಾರದು. ಒಮ್ಮಿಂದೊಮ್ಮೆಲೇ ರಾತ್ರಿ ಕಾಲದಲ್ಲಿ ಒಬ್ಬಂಟಿಗನಾಗಿ ಪ್ರವಾಸ ಮಾಡಬಾರದು. (೫). ಜನರ ಸಂಗಡ ಸರಳತನದಿಂದ ನಡೆಯುವದನ್ನು ಬಿಡಬೇಡ. ಪಾಪ ಮಾರ್ಗದಿಂದ ದ್ರವ್ಯ ಸಂಗ್ರಹ ಮಾಡಬೇಡ. ನೀತಿಧರ್ಮದ ಮಾರ್ಗ ಎಂದೂ ಬಿಡಬೇಡ (೬). ಯಾರ ನಿಂದೆಯನ್ನೂ ಮಾಡಬೇಡ. ಯಾರೊಡನೆಯೂ ದ್ವೇಷ ಮಾಡಬೇಡ. ದುಷ್ಟ ಜನರ ಸಂಗತಿ ಹಿಡಿಯಬೇಡ. ಶಕ್ತಿಯ ಬಲದಿಂದ ಎರಡನೆಯವರ ಹಣ ಮತ್ತು ಹೆಂಡರನ್ನು ಬಲತ್ಕಾರದಿಂದ ಅಪಹರಿಸಬೇಡ (೭). ವಕ್ತಾರನಿಗೆ ಕೆದರಿ ಕೆದರಿ ಅಸಂಬದ್ಧ ಪ್ರಶ್ನೆಗಳನ್ನು ಕೇಳಬಾರದು. ಜನರಲ್ಲಿರುವ ಐಕ್ಯತೆಯನ್ನು ಒಡೆಯುವ ಕೆಲಸ ಮಾಡಬಾರದು. ಎಂಥ ಪ್ರಸಂಗ ಬಂದರೂ ವಿದ್ಯಾಭ್ಯಾಸ ಬಿಡಬಾರದು (೮). ಬಾಯಿಬಡಕರೊಡನೆ ಜಗಳ ತೆಗೆಯಬಾರದು. ವಾಚಾಳಿ, ಶಿಪಿಗೇಡಿಯೊಡನೆ ವಾದ ಹಾಕಬಾರದು. ಸಂತ ಸಜ್ಜನರ ಸಹವಾಸವನ್ನು ಮನದಿಂದ ದೂರೀಕರಿಸಬಾರದು. ಅಂದರೆ ಮನದಲ್ಲಿ ಇವರನ್ನು, ಇವರ ಮಾತನ್ನು ಸದಾ ನೆನಪಿಡಬೇಕು (೯). ಮಿತಿಮೀರಿ ಸಿಟ್ಟಿಗೇಳಬಾರದು, ಪ್ರೇಮದ ಜನರಿಗೆ ದುಃಖ ಕೊಡಬಾರದು. ಇನ್ನೊಬ್ಬರಿಂದ ಉತ್ತಮ ಶಿಕ್ಷಣ ದೊರಕಿಸಿಕೊಳ್ಳುವಲ್ಲಿ ಬೇಸರ ಪಡ ಬಾರದು. [೧೦]. ಮೇಲಿಂದ ಮೇಲೆ ಸಿಟ್ಟಿಗೇಳಬೇಡ. ಸುಳ್ಳು ದೊಡ್ಡಿಸ್ತನ ಹೇಳಬೇಡ, ಮಾಡದೇ ಇದ್ದ ಪರಾ ಕ್ರಮವನ್ನು ಹೊಗಳಿ-ಹೊಗಳಿ, ಹೇಳಬೇಡ (೧೧). ಕೊಟ್ಟ ಮಾತನ್ನು ಮುರಿಯಬೇಡ. ಮತ್ತು ಮರೆಯಬೇಡ. ಯೋಗ್ಯ ಪ್ರಸಂಗ ಬಂದಾಗ ನಿನ್ನ ಬಲದ ಉಪಯೋಗ ಮಾಡದೇ ಇರಬೇಡ, ತಾನು ಒಂದಾದರೂ ಉತ್ತಮ ಕೆಲಸ ಮಾಡದೇ ಇತರರ ಉಪಹಾಸ ಮಾಡಬಾರದು (೧೨). ಆಲಸ್ಯದಲ್ಲಿ ಸುಖವಿದೆಯೆಂದು ಭಾವಿಸಬಾರದು. ಎರಡನೆ ಯವರ ಚಾಡಿ, ಚಪಾಟಿ ಹೇಳುವ ಮನಸ್ಸು ಮಾಡಬೇಡ, ಮತ್ತು ಮನವಲ್ಲಿ ಸಹ ತರಬೇಡ, ಎಲ್ಲ ರೀತಿಯಿಂದ ವಿಚಾರಮಾಡದ ಹೊರತು, ಯಾವುದೇ ಕಾರ್ಯ ಮಾಡಬೇಡ (೧೩).

ಸುಖಾ ಆಂಗ ದೇಊ ನಯೇ। ಪ್ರೇತ್ನ ಪುರುಷೇ ಸಾಂಡೂ ನಯೇ।
ಕಷ್ಟ ಕರಿತಾ ತ್ರಾಸೋ ನಯೇ। ನಿರಂತರ ॥೧೪॥
ಸಭೆಮಧ್ಯೇ ಲಾಜೋ ನಯೇ। ಬಾಷ್ಕಳಪಣೇ ಬೋಲೋ ನಯೇ।
ಪೈಜ ಹೋಡ ಘಾಲೂ ನಯೇ। ಕಾಂಹೀ ಕೇಲ್ಯಾ ॥೧೫॥
ಬಹುತ ಚಿಂತಾ ಕರೂ ನಯೇ। ನಿಸುಗಪಣೇ ರಾಹೋ ನಯೇ।
ಪರಸ್ತ್ರೀತೇ ಪಾಹೋ ನಯೇ। ಪಾಪಬುದ್ಧೀ ॥೧೬॥
ಕೋಣಾಚಾ ಉಪಕಾರ ಘೇಊ ನಯೇ। ಘೇತಲಾ ತರೀ ರಾಖೋ ನಯೇ।
ಪರಪೀಡಾ ಕರೂ ನಯೇ। ವಿಸ್ವಾಸಘಾತ ॥೧೭॥
ಶೋಚ್ಯೇವೀಣ ಅಸೋ ನಯೇ। ಮಳಿಣ ವಸ್ತ್ರ ನೇಸೋ ನಯೇ।
ಜಾಣಾರಾಸ ಪುಸೋ ನಯೇ। ಕೋಠೇ ಜಾತೋಸ ಮ್ಹಣೌನೀ ॥೧೮॥
ವ್ಯಾಪಕಪಣ ಸಾಂಡೂ ನಯೇ। ಪರಾಧೇನ ಹೋಊ ನಯೇ।
ಆಪಲೇ ಓಝೇ ಘಾಲೂನಯೇ। ಕೋಣೇಯೆಕಾಸೀ ॥೧೯॥
ಪತ್ರೇವಿಣ ಪರ್ವತ ಕರೂ ನಯೇ। ಹೀನಾಚೇ ರುಣ ಘೇಊ ನಯೇ।
ಗೋಹೀವಿಣ ಜಾಊ ನಯೇ। ರಾಜದ್ವಾರಾ ॥೨೦॥
ಲಟಿಕೀ ಜಾಜೂ ಘೇಊ ನಯೇ। ಸಭೇಸ ಲಟಿಕೆ ಕರೂ ನಯೇ।
ಆದರ ನಸ್ತಾ ಬೋಲೋ ನಯೇ। ಸ್ವಭಾವಿಕ ॥೨೧॥
ಆದಖಣೇಪಣ ಕರೂ ನಯೇ। ಅನ್ಯಾಯೇವಿಣ ಗಾಂಜೂ ನಯೇ।
ಅವನೀತೀನೇ ವರ್ತೋ ನಯೇ। ಆಂಗಬಳೇ ॥೨೨॥
ಬಹುತ ಅನ್ನ ಖಾಊ ನಯೇ। ಬಹುತ ನಿದ್ರಾ ಕರೂ ನಯೇ।
ಬಹುತ ದಿವಸ ರಾಹೋ ನಯೇ। ಪಿಸುಣಾಚೇಥೇ ॥೨೩॥
ಆಪಲ್ಯಾಚೀ ಗೋಹೀ ದೇಊ ನಯೇ। ಆಪಲೀ ಕೀರ್ತಿ ವರ್ಣೂ ನಯೇ।
ಆಪಲೇ ಆಪಣ ಹಾಸೋ ನಯೇ। ಗೋಷ್ಟೀ ಸಾಂಗೋನೀ ॥೨೪॥
ಧೂಮ್ರಪಾನ ಘೇಊ ನಯೇ। ಉನ್ಮತ್ತ ದ್ರವ್ಯ ಸೇಊ ನಯೇ।
ಬಹುಚಕಾಸೀ ಕರೂ ನಯೇ। ಮೈತ್ರೀಕದಾ ॥೨೫॥
ಕಾಮೇ ವಿಣ ರಾಹೋ ನಯೇ। ನೀಚ ಉತ್ತರ ಸಾಹೋ ನಯೇ।
ಆಸುದೇ ಅನ್ನ ಸೇಊ ನಯೇ। ವಡಿಲಾಂಚೇ ಹೀ ॥೨೬॥
ತೋಂಡೀ ಸೀವೀ ಅಸೋ ನಯೇ। ದುಸರ್ಯಾಸ ದೇಖೋನ ಹಾಸೋ ನಯೇ।
ಉಣೇ ಅಂಗೀ ಸಂಚಾರೋ ನಯೇ। ಕುಳವಂತಾಚೇ ॥೨೭॥

ದೇಹಕ್ಕೆ ಬಹಳಷ್ಟು ಸುಖ ಮತ್ತು ಆರಾಮ, ಐಷಾರಾಮಗಳಿಗೆ ಆಸ್ಪದ ಕೊಡಬಾರದು. ಪುರುಷನು ಪ್ರಯತ್ನ ಮಾಡುವದನ್ನು ಎಂದೂ ಬಿಡಬಾರದು. ಸತತ ಪರಿಶ್ರಮ ಮಾಡಬೇಕಾದ ಪ್ರಸಂಗ ಬಂದರೂ ಬೇಸರ ಪಟ್ಟುಕೊಳ್ಳಬಾರದು [೧೪]. ಸಭೆಯಲ್ಲಿ ನಾಚಬಾರದು. ಆದರೆ ನಿರರ್ಥಕವಾಗಿ ಬಾಯಿಗೆ ಬಂದಂತೆ ಇದ್ದದ್ದೊಂದು ಇಲ್ಲದ್ದೊಂದು ಮಾತನಾಡಬಾರದು. ಏನು ಮಾಡಿದರೂ ಜಿದ್ದು, ಪಣ, ಜೂಜು ಕಟ್ಟಬಾರದು. [೧೫]. ಯಾವ ಮಾತಿನ ಬಗೆಗೂ ಅತಿ ಚಿಂತೆ ಮಾಡಬಾರದು. ಆಲಸ್ಯದಿಂದ ವ್ಯರ್ಥ ಕಾಲ ಕಳೆಯಬಾರದು. ಪರಸ್ತ್ರೀಯರನ್ನು ಪಾಪ ಬುದ್ಧಿಯಿಂದ ನೋಡಬಾರದು. [೧೬]. ಯಾರ ಉಪಕಾರ ವನ್ನು ತೆಗೆದುಕೊಳ್ಳಬಾರದು. ಒಂದುವೇಳೆ ತೆಗೆದುಕೊಂಡದ್ದೇ ಆದರೆ ಅದನ್ನು ಪರತ ತೀರಿಸದೇ ಇರಬಾರದು. ಎರಡನೆಯವರಿಗೆ ದುಃಖಕೊಡಬಾರದು.ಅವರ ವಿಶ್ವಾಸಘಾತ ಮಾಡಬಾರದು[೧೭]ಹೊಲಸು ಬಟ್ಟೆಗಳನ್ನು ತೊಡ ಬಾರದು, ಉಡಬಾರದು, ಹೊರಗೆ ಹೋಗುವವನಿಗೆ "ಎಲ್ಲಿಗೆ ಹೋಗುವಿ" ಎಂದು ಕೇಳಬಾರದು.[೧೮]. ಉದಾರ ದೃಷ್ಟಿಕೋನ ಬಿಡಬಾರದು. ಎರಡನೆಯವರ ಮೇಲೆ ತನ್ನ ಹೊರೆ ಹೊರಿಸಬಾರದು. ಯಾರ ಆಧೀನ ಅಥವಾ ಪರಾ ಧೀನನೂ ಆಗಬೇಡ[೧೯]ಲೇಖೀ ಪತ್ರವಿಲ್ಲದೇ ಕೊಡಕೊಳ್ಳುವ ವ್ಯವಹಾರ ಮಾಡಬಾರದು. ಹೀನ ಕಲಹಕಾರಿ ಮನು ಷ್ಯನಲ್ಲಿ ಸಾಲ ತೆಗೆದುಕೊಳ್ಳಬಾರದು. ಸಾಕ್ಷಿ ಪುರಾವೆಗಳಿಲ್ಲದೇಕೋರ್ಟ ಕಚೇರಿಗಳಿಗೆ ಹೋಗಬಾರದು.ಕರೆಯದೇ ಸಾಕ್ಷಿ ಹೇಳಲಿಕ್ಕೆ ಹೋಗಬಾರದು. ಒಂದುವೇಳೆ ಕರೆದರೂ ಸುಳ್ಳು ಸಾಕ್ಷಿ ಹೇಳಬಾರದು [೨೦] ಸುಳ್ಳು ಆರೋಪ ಮಾಡ ಬೇಡ. ಇಂಥ ಆರೋಪಕ್ಕೆ ನೀನು ಒಳಗಾಗಬೇಡ. ಕೂಡಿದ ಸಭೆಯಲ್ಲಿರುವವರೆಲ್ಲರೂ ಸುಳ್ಳುಗಾರರೆಂದು ಸಭೆ ಯನ್ನೇ ಸುಳ್ಳು ಮಾಡಬಾರದು. ಆದರವಿಲ್ಲದಲ್ಲಿ ಸಹಜಿಕವಾಗಿ ತಾನು ಮಾತನಾಡಲಿಕ್ಕೆ ಹೋಗಬಾರದು. [೨೧] ಮಹತ್ವದ ವಿಷಯಗಳಲ್ಲಿ ನಿರ್ಲಕ್ಷ ಮಾಡಬಾರದು. ಅನ್ಯಾಯದಿಂದ ಯಾರನ್ನೂ ಪೀಡಿಸಬಾರದು, ತನ್ನಲ್ಲಿ ಶಕ್ತಿ ಸಾಮರ್ಥ್ಯವಿದೆಯೆಂದು ಸೊಕ್ಕು ಮತ್ತು ಅನ್ಯಾಯದಿಂದ ನಡೆಯಬಾರದು [೨೨]. ಅತೀ ಆಹಾರ ಸೇವನೆ ಮಾಡ–ಬಾರದು. ದುಷ್ಟ, ಚಾಡಿಕೋರ, ಕುಹಕಿ ಮನುಷ್ಯನ ಮನೆಯಲ್ಲಿ ಬಹಳ ದಿವಸ ಇರಬಾರದು. ಅವನ ಹತ್ತಿರ ಮೇಲಿಂದ ಮೇಲೆ ಹೋಗಬಾರದು. [೨೩]. ನಮ್ಮ ಮನುಷ್ಯನೆಂಬ ಒಂದೇ ಕಾರಣದಿಂದ ಅವನ ಪತಿಯಿಂದ ಸಾಕ್ಷಿ ಹೇಳಬಾರದು. ತನ್ನ ದೊಡ್ಡಿಸ್ತನವನ್ನು ತಾನೇ ಹೇಳಿಕೊಳ್ಳಬಾರದು. ಮಾತಾಡುವಾಗ ತನ್ನ ಮಾತಿಗೆ ತಾನೇ ನಗಬಾರದು [೨೪]. ಧೂಮ್ರಪಾನ ಮಾಡಬಾರದು. ಮಾದಕ ಪದಾರ್ಥಗಳನ್ನು ಸೇವಿಸಬಾರದು. ಬಾಯಿಗೆ ಬಂದಂತೆ ಬಹಳ ಮಾತನಾಡುವವರ ಹಾಗೂ ಚಾಡಿಕೋರ ಮನುಷ್ಯರ ಕೂಡ ಗೆಳೆತನ ಮಾಡಬಾರದು. [೨೫]. ಉದ್ಯೋಗವಿಲ್ಲದೇ ಇರಬಾರದು. ಯಾರಾದರೂ ಕಾರಣವಿಲ್ಲದೇ ಹೀಗಳೆಯುವ ಮಾತನಾಡಿದರೆ ಸಹಿಸಬಾರದು. ಕಷ್ಟ ಪಡದೇ ದುಡಿಯದೇ ಅನಾಯಾಸವಾಗಿ ಸಿಗುವ ಅನ್ನ,ಅದು ತನ್ನ ಹಿರಿಯರದೇ ಇದ್ದರೂ ಸಹ ತಿನ್ನಬಾರದು. [೨೬] ಬಾಯಲ್ಲಿ ಬಯ್ಗುಳಿರಬಾರದು. ಎರಡನೆಯವರನ್ನು ನೋಡಿ ತಿರಸ್ಕಾರದ ನಗೆ ನಗಬಾರದು. ಉತ್ತಮ ಕುಲದಲ್ಲಿಯ ಮನುಷ್ಯನಿಗೆ ಹೀನತನ ಅಂಟಿಕೊಂಡಿರಬಾರದು. ಅಂಥವರಿಗೆ [ಸಜ್ಜನರಿಗೆ] ಅಂಟಿಸಲು ಪ್ರಯತ್ನ ಮಾಡ ಬಾರದು. [೨೭].

ದೇಖಿಲೀ ವಸ್ತು ಚೋರೂ ನಯೇ। ಬಹುತ ಕೃಪಣ ಹೋಊ ನಯೇ।
ಜಿವಲಗಾಸೀ ಕರೂ ನಯೇ। ಕಳಹ ಕದಾ ॥೨೮॥

ಯೇಕಾಚಾ ಘಾತ ಕರೂ ನಯೇ। ಲಟಿಕೀ ಗೋಹೀ ದೇಊ ನಯೇ।
ಅಪ್ರಮಾಣ ವರ್ತೋ ನಯೇ। ಕದಾಕಾಳೀ ॥೨೯॥

ಚಾಹಾಡೀ ಚೋರೀ ಧರೂ ನಯೇ। ಪರದ್ವಾರ ಕರೂ ನಯೇ।
ಮಾಗೇ ಉಣೇ ಬೋಲೋ ನಯೇ। ಕೋಣೇ ಯೇಕಾಚೇ ॥೩೦॥

ಸಮಈ ಯಾವಾ ಚುಕೋ ನಯೇ। ಸತ್ವಗುಣ ಸಾಂಡೂ ನಯೇ।
ವೈರಿಯಾಸ ದಂಡೂ ನಯೇ। ಶರಣ ಆಲಿಯಾ ॥೩೧॥

ಅಲ್ಪಧನೇ ಮಾಜೋ ನಯೇ। ಹರಿಭಕ್ತೀಸ ಲಾಜೋ ನಯೇ।
ಮರ್ಯಾದೇ ವಿಣ ಚಾಲೋ ನಯೇ। ಪವಿತ್ರ ಜನೀ ॥೩೨॥

ಮೂರ್ಖಾಸೀ ಸಮಂಧ ಪಡೋ ನಯೇ। ಅಂಧಾರೀ ಹಾತ ಘಾಲೂ ನಯೇ।
ದುಶ್ಚಿತ ಪಣೇ ವಿಸರೋ ನಯೇ। ವಸ್ತು ಆಪುಲೀ ॥೩೩॥

ಸ್ನಾನಸಂಧ್ಯಾ ಸಾಂಡೂ ನಯೇ। ಕುಳಾಚಾರ ಖಂಡೂ ನಯೇ।
ಅನಾಚಾರ ಮಾಂಡೂ ನಯೇ। ಚುಕುರ ಪಣೇ ॥೩೪॥

ಹರಿಕಥಾ ಸಾಂಡೂ ನಯೇ। ನಿರೂಪಣ ತೋಡೂ ನಯೇ।
ಪರಮಾರ್ಥಾಸ ಮೋಡೂ ನಯೇ। ಪ್ರಪಂಚಬಳೇ ॥೩೫॥

ದೇವಾಚಾ ನವಸ ಬುಡಊ ನಯೇ। ಆಪಲಾ ಧರ್ಮ ಉಡಊ ನಯೇ।
ಭಲತೇ ಭರೀ ಭರೋ ನಯೇ। ವಿಚಾರೇ ವಿಣ ॥೩೬॥

ನಿಷ್ಠುರಪಣ ಧರೂ ನಯೇ। ಜೀವಹತ್ಯಾ ಕರೂ ನಯೇ।
ಪಾಊಸ ದೇಖೋನ ಜಾಊ ನಯೇ। ಅಥವಾ ಅವಕಾಳೀ ॥೩೭॥

ಸಭಾ ದೇಖೋನ ಗಳೋ ನಯೇ। ಸಮಈ ಉತ್ತರ ಟಳೋ ನಯೇ।
ಧಿಃಕಾರಿತಾ ಚಳೋ ನಯೇ। ಧಾರಿಷ್ಟ ಆಪುಲೆ ॥೩೮॥

ಕಣ್ಣಿಗೆ ಬಿದ್ದ ಪದಾರ್ಥವನ್ನು ಕದಿಯಬಾರದು. ಅತಿ ಜೀನತನ ಮಾಡಬಾರದು. ಪ್ರೇಮಿ ಜನರ ಕೂಡ ಕಲಹ ಮಾಡಬಾರದು. [೨೮]. ಸರ್ವಸ್ವ ನಾಶವಾಗುವ ರೀತಿಯಲ್ಲಿ ಯಾರಿಗೂ ಹಾನಿ ಮಾಡಬಾರದು. ಸುಳ್ಳು ಸಾಕ್ಷಿ ಹೇಳಬಾರದು. ವೇದ ಶಾಸ್ತ್ರ ಸಂತ ಶರಣರ ಮತ್ತು ವ್ಯವಹಾರ ಇವುಗಳಿಗೆ ಅಮಾನ್ಯವಾಗುವಂಥ ವರ್ತನೆ ಎಂದೂ ಇರಬಾರದು. [೨೯]. ಚಾಡಿ ಚಪಾಟೆ ಮತ್ತು ಚೋರ, ಕಳ್ಳತನದ ಇಚ್ಛೆಯನ್ನು ಎಂದೂ ಹಿಡಿಯಬಾರದು. ಪರಸ್ತ್ರೀಯರ ಸಂಗಡ ಅನೀತಿಯ ಸಂಬಂಧವನ್ನು ಎಂದೂ ಇಟ್ಟುಕೊಳ್ಳಬಾರದು. ಯಾರ ಮುಂದೂ ಇನ್ನೊಬ್ಬರ ಕುಂದನ್ನು ಎತ್ತಿ ಆಡಿಕೊಳ್ಳಬಾರದು. ಮತ್ತು ಯಾರ ಹಿಂದೂ ಇನ್ನೊಬ್ಬರ ಕುಂದು–ಕೊರತೆಯನ್ನು ಎತ್ತಿ ಆಡಿಕೊಳ್ಳಬಾರದು. [೩೦]. **ಕೇವಲ ನೀತಿವಂತ ವ್ಯವಹಾರದಿಂದ ಪರಮಾರ್ಥ ಸಾಧಿಸುವದಿಲ್ಲ. ಅದರಲ್ಲಿ ಭಗವಂತನಿಗೆ ಸ್ಥಾನವಿರಬೇಕು. ಇದರ ವರ್ಣನೆಯನ್ನು ಈಗ ಶ್ರೀ ಸಮರ್ಥರು ಮಾಡುತ್ತಾರೆ**.:- ಪ್ರಸಂಗ ಬಂದಾಗ ಇನ್ನೊಬ್ಬರಿಗೆ ಸಹಾಯ ಮಾಡಲಿಕ್ಕೆ ತಪ್ಪಬಾರದು. ಸತ್ವ ಗುಣದ ಸಾತ್ವಿಕ ವೃತ್ತಿಯನ್ನು ಬಿಡಬಾರದು. ಶರಣಾಗತನಾಗಿ ಬಂದ ಶತ್ರುವಿಗೆ ಶಿಕ್ಷೆ ಮಾಡಬಾರದು. [೩೧]. ಸ್ವಲ್ಪ ಹೆಚ್ಚು ಧನ ಅಕಸ್ಮಾತ ದೊರೆತಾಗ ಉನ್ಮತ್ತನಾಗಬಾರದು. ಭಗವಂತನ ಭಕ್ತಿಗೆ ಎಂದೂ ನಾಚಬಾರದು. ಪವಿತ್ರರಾದ ಸಂತ ಶರಣರ ಎದುರು ಶಿಷ್ಟಾಚಾರ ಬಿಡಬಾರದು. ಮತ್ತು ಅಮರ್ಯಾದೆಯಿಂದ ಎಂದೂ ನಡೆಯಬಾರದು. [೩೨]. ಮೂರ್ಖರ ಕೂಡ ಗೆಳೆತನ, ಸಂಪರ್ಕ ಬೆಳೆಸಬಾರದು. ಕತ್ತಲಲ್ಲಿ ಕೈಹಾಕಬಾರದು, ಅಲಕ್ಷದಿಂದ ತನ್ನ ವಸ್ತುವನ್ನು ಮರೆಯಬಾರದು. (೩೩). ಸ್ನಾನ ಸಂಧ್ಯಗಳನ್ನು ಬಿಡಬಾರದು. ಅಂದರೆ ನಿತ್ಯೋಪಾಸನೆಯನ್ನು ಬಿಡಬಾರದು. ಕುಲಾಚಾರವನ್ನು ಖಂಡಿಸಬಾರದು. ಅನಾಚಾರದಿಂದ, ಆಲಸ್ಯದಿಂದ, ಮೈಗಳ್ಳತನದಿಂದ ನಡೆಯಬಾರದು. (೩೪). ಹರಿಕಥೆ,ಪುರಾಣ,ಕೀರ್ತನೆ ಬಿಡಬಾರದು. ಪ್ರವಚನ ತಪ್ಪಿಸಬಾರದು. ಪ್ರಪಂಚದ ಆಸಕ್ತಿಯಲ್ಲಿ ಬಿದ್ದು ಪರಮಾರ್ಥದ ಕಡೆಗೆ ಅನಾಸಕ್ತಿಯಿಂದ ದುರ್ಲಕ್ಷ ಮಾಡಬಾರದು. (೩೫). ದೇವರ ಹರಕೆ ತೀರಿಸದಿರಬಾರದು. ತನ್ನ ಧರ್ಮಕ್ಕೆ ವಿರೋಧ ಮಾಡಬಾರದು. ಧರ್ಮವು ಕೆಟ್ಟದ್ದೆಂದು ಅನ್ನಬಾರದು. ಚೆನ್ನಾಗಿ ವಿಚಾರ ಮಾಡದ ಹೊರತು ದುಡುಕಿ, ಸಲ್ಲದ ಕೆಲಸ ಮಾಡುವ ಹವ್ಯಾಸಕ್ಕೆ ಬೀಳಬಾರದು. ಮನಬಂದಂತೆ ಬೇಫಾಮ ನಡೆಯಬಾರದು. (೩೬). ಕಠೋರತನವಿರಬಾರದು. ಜೀವಿಗಳ ಪ್ರಾಣಹಾನಿ ಮಾಡಬಾರದು. ದೊಡ್ಡ ಮಳೆಯಲ್ಲಿ ಹಾಗೂ ಅಯೋಗ್ಯ ವೇಳೆಯಲ್ಲಿ ಪ್ರವಾಸಕ್ಕೆ ಹೊರಡಬಾರದು. (೩೭). ಸಭೆಯನ್ನು ನೋಡಿ ಗಾಬರಿಪಡಬಾರದು. ಯೋಗ್ಯ ಸಮಯ ಬಂದಾಗ ಯೋಗ್ಯಉತ್ತರಕೊಡಲು ಹಿಂಜರೆಯಬಾರದು.ಯಾರಾದರೂ ನಿಮ್ಮಎದುರಿಗೇನೇನಿಮಗೆ ಅಪಮಾನ ಹಾಗೂ ನಿಂದೆ ಮತ್ತು ಹೀಗಳೆದುತುಚ್ಛಮಾತನಾಡಿದರೂಸಹನಿಮ್ಮಧೈರ್ಯತನ ಗಂಭೀರತನಗಳನ್ನು ಕಳೆದುಕೊಳ್ಳಬಾರದು. (೩೮)

ಗುರುವಿರಹಿತ ಅಸೋ ನಯೇ । ನೀಚ ಯಾತೀಚಾ ಗುರು ಕರೂ ನಯೇ ।
ಜಿಣೇ ಶಾಶ್ವತ ಮಾನೂ ನಯೇ। ವೈಭವೇಸೀ ॥೩೯॥
ಸತ್ಯ ಮಾರ್ಗ ಸಾಂಡೂ ನಯೇ । ಅಸತ್ಯ ಪಂಥೇ ಜಾಊ ನಯೇ ।
ಕದಾ ಅಭಿಮಾನ ಘೇಊ ನಯೇ। ಅಸತ್ಯಾಚಾ ॥೪೦॥
ಅಪಕೀರ್ತಿ ತೇ ಸಾಂಡಾವೀ । ಸಾದ್‌ಕೀರ್ತಿ ವಾಢವಾವೀ ।
ವಿವೇಕೇ ದೃಢ ಧರಾವೀ । ವಾಟ ಸತ್ಯಾಚೀ ॥೪೧॥
ನೇ ಘೇತಾ ಹೇ ಉತ್ತಮ ಗುಣ । ತೇ ಮನುಷ್ಯ ಅವಲಕ್ಷಣ ।
ಐಕ ತಯಾಂಚೇ ಲಕ್ಷಣ । ಪುಢಿಲೇ ಸಮಾಸೀ ॥೪೨॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
ಉತ್ತಮ ಲಕ್ಷಣ ನಾಮ ಸಮಾಸ ದುಸರಾ ॥

ಗುರುವಿಲ್ಲದೇ ಇರಬಾರದು. ಹೀನ ಜಾತಿಯ ಗುರುವನ್ನು ಮಾಡಿಕೊಳ್ಳಬಾರದು. ಐಶ್ವರ್ಯ ಮತ್ತು ಆಯುಷ್ಯ ಕಾಯಂ ಇರುವದೆಂದು ತಿಳಿಯಬಾರದು. (೩೯) ನಿಜಮಾರ್ಗ ಬಿಡಬಾರದು. ಸುಳ್ಳು ಮಾರ್ಗ ಹಿಡಿಯಬಾರದು. ಅಸತ್ಯದ ಅಭಿಮಾನವನ್ನೆಂದೂ ಹಿಡಿಯಬಾರದು. (೪೦) ಅಪಕೀರ್ತಿಯನ್ನು ಹಿಂದೆ ಸರಿಸಿ ಸತ್ಕೀರ್ತಿ ಬೆಳೆಯುವಂತಹುದನ್ನು ಮಾಡಬೇಕು. ಸತ್ಯದ ಮಾರ್ಗವನ್ನು ವಿವೇಕದಿಂದ ಗಟ್ಟಿಯಾಗಿ ಹಿಡಿಯಬೇಕು. (೪೧) ಯಾವ ಮನುಷ್ಯನು ಈ ಉತ್ತಮ ಗುಣಗಳನ್ನು ಗ್ರಹಿಸುವದಿಲ್ಲವೋ ಅವನು ಅವಲಕ್ಷಣಿಯಾಗುತ್ತಾನೆ. ಅಂಥ ಅವಲಕ್ಷಣಗಳ ವರ್ಣನೆಯನ್ನು ಕುವಿದ್ಯಾಲಕ್ಷಣವೆಂಬ ಮುಂದಿನ ಸಮಾಸದಲ್ಲಿ ಹೇಳುವೆನು ಕೇಳಿರಿ. (೪೨)

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದ ಎರಡನೆಯ ದಶಕದಲ್ಲಿಯ
"ಉತ್ತಮ ಲಕ್ಷಣ" ಎಂಬ ಹೆಸರುಳ್ಳ ಎರಡನೆಯ ಸಮಾಸವು ಮುಗಿದುದು.

## ಸಮಾಸ ೩. ಕುವಿದ್ಯಾ ಲಕ್ಷಣ (ನುಡಿ ೪೦)

ಕುವಿದ್ಯಾ ಲಕ್ಷಣಗಳನ್ನು ಹೇಳುವಾಗ ಶ್ರೀ ಸಮರ್ಥರು ಗೀತೆಯ ಹದಿನಾರನೆಯ ಅಧ್ಯಾಯದಲ್ಲಿಯ ನಾಲ್ಕನೆಯ ಶ್ಲೋಕವನ್ನು ಆಧಾರಕ್ಕಾಗಿ ತೆಗೆದುಕೊಂಡಿದ್ದಾರೆ. ಅದರಲ್ಲಿ ಅಸುರಿ ಸಂಪತ್ತಿಯ ವರ್ಣನೆ ಇದ್ದುದು ಕಂಡು ಬರುತ್ತದೆ. ಗೀತೆಯ ಮತದಂತೆ ಜಗತ್ತಿನಲ್ಲಿ ಎರಡು ಪ್ರಕಾರದ ಶೀಲ ಮತ್ತು ಚಾರಿತ್ರ್ಯವಿದ್ದ ಜನರು ಇರುತ್ತಾರೆ. ಒಂದು ದೈವೀ ಸಂಪತ್ತಿದ್ದವರು ಮತ್ತು ಇನ್ನೊಬ್ಬರು ಅಸುರೀ ಸಂಪತ್ತಿದ್ದವರು. ಆತ್ಮಬುದ್ಧಿಯ ಉದಯಕ್ಕೆ ದೈವೀ ಸಂಪತ್ತಿಯ ಜನರು ಪಾತ್ರರಾಗುವರು. ಆದರೆ ದೇಹಬುದ್ಧಿ ಕಾಯಂ ಆಗಿ ಇರಲು ಅಸುರೀ ಸಂಪತ್ತಿಯ ಜನರು ಪಾತ್ರರಾಗುವರು. ಈ ಸಮಾಸದಲ್ಲಿ ಶ್ರೀ ಸಮರ್ಥರು ಯಾವ ಕುವಿದ್ಯಾ ಲಕ್ಷಣಗಳನ್ನು ಹೇಳಿರುವರೋ ಅವುಅಸುರಿಸಂಪತ್ತಿಯ ಸಂತಾನವೇ ಇದ್ದು ಮಾನವೀ ಜೀವನ ಹಾಳು ಮಾಡುವಂಥವುಗಳಾಗಿರುವವು. ಇದರಲ್ಲಿ ವ್ಯಕ್ತಿಯ ನಾಶ ಮತ್ತು ಸಮಾಜದ ಘಾತ ಹೀಗೆ ಎರಡೂ ಇರುವವು. ಮನುಷ್ಯರನ್ನು ಸುತ್ತೂ ಕಡೆಯಿಂದ ಹೀನಗೊಳಿಸುವ ಈ ಲಕ್ಷಣಗಳನ್ನು ತ್ಯಜಿಸುವದು ಅತಿ ಅವಶ್ಯವಿದೆ.

## ಸಮಾಸ ತಿಸರಾ : ಕುವಿದ್ಯಾ ಲಕ್ಷಣ

॥ಶ್ರೀರಾಮ॥ ಐಕಾ ಕುವಿದ್ಯೇಚೀ ಲಕ್ಷಣೇ। ಅತಿ ಹೀನ ಕುಲಕ್ಷಣೇ।
ತ್ಯಾಗಾರ್ಥ ಬೋಲಿಲೀ ತೇ ಶ್ರವಣೇ। ತ್ಯಾಗ ಘಡೇ ॥೧॥
ಐಕಾ ಕುವಿದ್ಯೇಚಾ ಪ್ರಾಣೀ। ಜನ್ಮಾ ಯೇಊನ ಕೇಲೀ ಹಾನೀ।
ಸಾಂಗಿಜೇಲ ಯೇಹೀ ಲಕ್ಷಣೀ। ವೋಳಖಾವಾ ॥೨॥
ಕುವಿದ್ಯೇಚಾ ಪ್ರಾಣೀ ಅಸೇ। ತೋಕರಿಣ ನಿರೂಪಣೇ ತ್ರಾಸೇ।
ಅವಗುಣಾಚೀ ಸಮೃದ್ಧೀ ಅಸೇ। ಮ್ಹಣೌನಿಯಾ ॥೩॥
ಶ್ಲೋಕ॥ ದಂಭೋ ದರ್ಪೋಽಭಿಮಾನಶ್ಚ। ಕ್ರೋಧಃ ಪಾರುಷ್ಯಮೇವಚ॥
ಅಜ್ಞಾನಂ ಚಾಭಿಜಾತಸ್ಯ। ಪಾರ್ಥ ಸಂಪದಮಾಸುರೀಮ್ ॥ಭ.ಗೀ.॥
ಕಾಮಕ್ರೋಧ ಮದ ಮತ್ಸರ। ಲೋಭ ದಂಭ ತಿರಸ್ಕಾರ।
ಗರ್ವ ತಾಠಾ ಅಹಂಕಾರ। ದ್ವೇಷ ವಿಷಾದ ವಿಕಲ್ಪೀ ॥೪॥
ಆಶಾ ಮಮತಾ ತೃಷ್ಣಾ ಕಲ್ಪನಾ। ಚಿಂತಾ ಅಹಂತಾ ಕಾಮನಾ ಭಾವನಾ।
ಅಸೂಯಾ ಅವಿದ್ಯಾ ಈಷಣಾ ವಾಸನಾ। ಅತೃಪ್ತೀ ಲೋಲಂಗತಾ ॥೫॥
ಇಚ್ಛಾ ವಾಂಛಾ ಚಿಕಿತ್ಸ್ಯಾ ನಿಂದಾ। ಅನಿತ್ಯ ಗ್ರಾಮಣೀ ಮಸ್ತೀ ಸದಾ।
ಜಾಣೀವ ಅವಜ್ಞಾ ವಿಪತ್ತೀ ಆಪದಾ। ದುರ್ವೃತ್ತೀ ದುರ್ವಾಸನಾ ॥೬॥
ಸ್ಪರ್ಧಾ ಖಟಪಟ ಆಣೀ ಚಟಪಟ। ತರ್ಹೆ ಝಟಪಟ ಆಣೀ ವಟವಟ।
ಸದಾ ಖಟಖಟ ಆಣೀ ಲಟಪಟ। ಪರಮ ವೇಥಾ ಕುವಿದ್ಯಾ ॥೭॥
ಕುರೂಪ ಆಣಿ ಕುಲಕ್ಷಣ। ಅಶಕ್ತ ಆಣೀ ದುರ್ಜನ।
ದರಿದ್ರೀ ಆಣಿ ಕೃಪಣ। ಆತಿಶಯೇಸೀ ॥೮॥
ಆಳಸೀ ಆಣಿ ಖಾದಾಡ। ದುರ್ಬಳ ಆಣೀ ಲಾತಾಡ।
ತುಟಕ ಆಣೀ ಲಾಬಾಡ। ಆತಿಶಯೇಸೀ ॥೯॥
ಮೂರ್ಖ ಆಣೀ ತಪೀಳ। ವೇಡೇ ಆಣೀ ವಾಚಾಳ।
ಲಟಿಕೇ ಆಣೀ ತೋಂಡಾಳ। ಆತಿಶಯೇಸೀ ॥೧೦॥
ನೇಣೆ ಆಣೀ ನಾಯಕೇ। ನಯೇ ಆಣೀ ನ ಸೀಕೇ।
ನ ಕರೀ ಆಣೀ ನ ದೇಖೇ। ಅಭ್ಯಾಸ ದೃಷ್ಟೀ ॥೧೧॥
ಅಜ್ಞಾನ ಆಣೀ ಅವಿಸ್ವಾಸೀ। ಛಳವಾದೀ ಆಣೀ ದೋಷೀ।
ಅಭಕ್ತ ಆಣೀ ಭಕ್ತಾಸೀ। ದೇಖೋ ಸಕೇನಾ ॥೧೨॥

## ಸಮಾಸ ೩. ಕುವಿದ್ಯಾ ಲಕ್ಷಣ

ಸುಸಂಸ್ಕೃತ ಮನುಷ್ಯನಿಗೆ ಶೋಭಿಸದಿರುವ ಈ ಕುಲಕ್ಷಣಗಳನ್ನು ಅವಶ್ಯ ನೆನಪಿನಲ್ಲಿಡಬೇಕು. **ಅಂದರೆ ಅದರ ಬಗ್ಗೆ ಹೆಚ್ಚಿಗೆ ವರ್ಣನೆ ಅಥವಾ ವರ್ಗೀಕರಣ ಮಾಡುವ ಅವಶ್ಯಕತೆ ಬೀಳುವದಿಲ್ಲ**:- ಈಗ ಕುವಿದ್ಯಾ ಲಕ್ಷಣಗಳನ್ನು ಕೇಳಿರಿ. ಇವು ಅತಿಶಯ ಹೀನ ಹಾಗೂ ಕೆಟ್ಟ ಲಕ್ಷಣಗಳಿರುವೆವು. ಮನುಷ್ಯನು ಈ ಲಕ್ಷಣಗಳನ್ನು ತ್ಯಾಗ ಮಾಡಬೇಕು. ನೀವು ಇವುಗಳನ್ನು ಶ್ರವಣ ಮಾಡುವದರಿಂದ ಮಾತ್ರ ಈ ದುಷ್ಟ ಲಕ್ಷಣಗಳನ್ನು ತ್ಯಾಗ ಮಾಡಲು ಬರುವದು. (೧) ಕುವಿದ್ಯಾ ಮನುಷ್ಯ ಹೇಗಿರುತ್ತಾನೆಂಬುದನ್ನು ಹೇಳುವೆನು. ಮನುಷ್ಯ ಜನ್ಮಕ್ಕೆ ಬಂದು ತಾನೇ ತನಗೆ ಹಾನಿ ಮಾಡಿಕೊಳ್ಳುವನು. ಇಲ್ಲಿ ಹೇಳಿದ ಲಕ್ಷಣಗಳ ಮೇಲಿಂದ ಅವನ್ನು ಕಂಡು ಹಿಡಿಯಬೇಕು. (೨) ಕುವಿದ್ಯೆಯ ಮನುಷ್ಯನಲ್ಲಿ ಬಹಳಷ್ಟು ಅವಗುಣಗಳು ಇರುವವು. ಇಂಥವನಿಗೆ ಯಾರಾದರೂ ನಿರ್ಭಿಡೆಯಿಂದ ಉಪದೇಶ ಮಾಡ ಹೋದರೆ ಇವನಿಗೆ ರುಚಿಸುವದಿಲ್ಲ. (೩)

**ಶ್ಲೋ** ॥ ದಂಭೋ ದರ್ಪೋಽಭಿಮಾನಶ್ಚ ಕ್ರೋಧಃ ಪಾರುಷ್ಯಮೇವಚ ।
ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಮ್ ॥ [ಭಗವದ್ಗೀತಾ]

**ಶ್ಲೋಕದ ಅರ್ಥಃ**– ಡಾಂಭಿಕತನ, ದರ್ಪ, ಅಭಿಮಾನ, ಕ್ರೋಧ, ಕಠೋರತನ ಉತ್ತಮ ಕುಟುಂಬದಲ್ಲಿ ಹುಟ್ಟಿಯೂ ಅಜ್ಞಾನಿ ಇರುವದು ಇವು ಅಸುರೀ ಸಂಪತ್ತಿ ಅನಿಸುವವು. [ಗೀತಾ ೧೬–೪] ಮತ್ಸರ. ಲೋಭ ದಂಭ, ತಿರಸ್ಕಾರ, ಗರ್ವ,ಉದ್ಧಟತನ,ಒರಟುತನ, ಅಹಂಕಾರ, ದ್ವೇಷ,ವಿಷಾದ, ಖೇದ, ಉತ್ಸಾಹಭಂಗ,ವಿಕಲ್ಪ. (೪) ಆಶೆ, ಮಮತೆ, ತೃಷ್ಣಾ, ಹಪಾಪಿತನ, ಕಲ್ಪನಾ ಅಂದರೆ ವಿಚಾರ ತರಂಗ ಅಥವಾ ಮನದಲ್ಲಿ ಮಾಡಿಕೊಂಡ ಯೋಜನೆ, ಚಿಂತೆ, ಅಹಂಭಾವ, ಕಾಮನೆ. ಭಾವನೆ ಅಂದರೆ ಊಹೆ, ಅಭಿಪ್ರಾಯ, ಅಸೂಯೆ, ಅವಿದ್ಯೆ, ಆಸಕ್ತಿ, ಆಸ್ಥೆ (ಹೆಂಡರು–ಮಕ್ಕಳಲ್ಲಿಯೇ ಆಸ್ಥಾ ಇದ್ದವ) ವಾಸನೆ (ಆಶೆ) ಅತೃಪ್ತಿ, ವಿಷಯ ಲೋಲುಪತೆ ವಿಷಯಾಸಕ್ತಿ, ಲೋಭತನ. (೫) ಇಚ್ಛೆ,ಆಕಾಂಕ್ಷೆ, ಚಿಕಿತ್ಸಾ, ನಿಂದಾ, ಅನೀತಿ, ಪುಂಡಾಟಿಕೆ, ಸದಾ ಸೊಕ್ಕಿನಲ್ಲಿರುವದು, ಅಭಿಮಾನ ಅನಾದರ, ತಿರಸ್ಕಾರ, ವಿಪತ್ತು, ಆಪತ್ತು, ದುರವೃತ್ತಿ, ದುರ್ವಾಸನೆ. (೬) ಸ್ಪರ್ಧೆ, ಶೌರ್ಯ, (ಮೋಸಗಾರ) ನಷ್ಟ. ದುಷ್ಟತನ, ಅಸ್ವಸ್ಥತೆ. ವಿಲಕ್ಷಣ ರೀತಿಯವ, ಹೇಗಾದರೂ ಮಾಡಿ ಕಾರ್ಯ ಕೆಲಸ ತೀರಿಸುವದಕ್ಕೆ ಅವಸರ ಪಡುವವ, ವಸವಸ ವಟವಟ ಎಂದು ವಟಗುಡುವವ, ಯಾವಾಗಲೂ ತಕರಾರು ತಂಟೆ ಮಾಡುವಂಥವ, ಮತ್ತು ಹಿಂದು ಮುಂದು ಉಲಟಾ ಮಾಡಿ ಗೊಂದಲವೆಬ್ಬಿಸುವವ, ಈ ಲಕ್ಷಣಗಳಿಂದ ಉಂಟಾಗುವ ಕುವಿದ್ಯೆಯೆಂದರೆ ಇದು ದೊಡ್ಡ ರೋಗವೇ ಆಗಿದೆ. (೭) ಕುವಿದ್ಯೆಯ ಮನುಷ್ಯನು ಕುರೂಪಿ ಇದ್ದು ಕುಲಕ್ಷಣಿಇದ್ದವನು, ಅಶಕ್ತನಾಗಿದ್ದು ದುಷ್ಟ ಮತ್ತು ದರಿದ್ರನಾಗಿದ್ದು, ಅತಿಶಯ ಜೀನ, ಜಿಪುಣನಾಗಿರುವನು. (೮) ಅವನು ಆಲಸಿಗನಾಗಿದ್ದು ಕೂಳುಬಾಕನಾಗಿರುವವ, ದುರ್ಬಲನಾಗಿದ್ದು ಕಾಲುಕೆದರಿ ಜಗಳ ತೆಗೆಯುವವ, ಮತ್ತು ವಡವಡ ಖೊಟ್ಟಿ ಮಾತಾಡುವವನಿರುವನು. ಮತ್ತು ಲಬಾಡಲುಚ್ಚಾ ಪುಂಡ ಪೋಕರ ಇರುವನು. (೯) ಅವನು ಮೂರ್ಖನಿದ್ದು ಶೀಘ್ರಕೋಪಿ, ಭ್ರಮಿಷ್ಟ, ಹುಚ್ಚರಂತೆ ಕಾಣುವವನಿದ್ದು ಬಹಳ ಮಾತಾಡುವವ ಮತ್ತು ಸುಳ್ಳುಗಾರನಿದ್ದು ಬಾಯಿಗೆ ಬಂದಂತೆ ಬಕಾಸುವವ, ಬಡಬಡ್ಯಾ ಇರುವನು. (೧೦) ಕುವಿದ್ಯೆಯವನು, ತನಗೆ ತಿಳಿಯುವಂತಿಲ್ಲ, ಇನ್ನೊಬ್ಬರು ಹೇಳಿದ್ದು ಕೇಳುವಂತಿಲ್ಲ, ಮತ್ತು ತನಗೆ ಬರದಿದ್ದುದನ್ನು ಎರಡನೆಯವರಿಂದ ಕೇಳಿ ಕಲಿಯುವಂತಿಲ್ಲ. ಸ್ವತಃ ತಾನೂ ಮಾಡುವದಿಲ್ಲ. ಅಭ್ಯಾಸ ದೃಷ್ಟಿಯಿಂದ ನಿರೀಕ್ಷಣ ಮಾಡುವದಿಲ್ಲ. (೧೧), ಅಜ್ಞಾನಿ ಆಗಿದ್ದು, ಅವಿಶ್ವಾಸಿ ಇರುವನು. ಇದ್ದದ್ದೊಂದು ಇಲ್ಲದ್ದೊಂದು ಅರ್ಥ ಮಾಡುವ ಪಟವಾರಿ ಇದ್ದು, ದ್ರೋಹಿ ಹಾಗೂ ಸ್ವತಃ ಭಕ್ತಿರಹಿತನಿದ್ದು, ಭಕ್ತರ ದ್ವೇಷ ಮಾಡುವವನಿರುತ್ತಾನೆ. (೧೨)

ಪಾಪೀ ಆಣೀ ನಿಂದಕ । ಕಷ್ಟೀ ಆಣೀ ಘಾತಕ ।
ದುಃಖೀ ಆಣೀ ಹಿಂಸಕ । ಆತಿಶಯೋಸೀ ॥೧೩॥
ಹೀನ ಆಣೀ ಕೃತ್ರಿಮೀ । ರೋಗೀ ಆಣೀ ಕುಕರ್ಮೀ ।
ಆಚಂಗುಲ ಆಣೀ ಅಧರ್ಮೀ । ವಾಸನಾ ರಮೋ ॥೧೪॥
ಹೀನ ದೇಹ ಆಣೀ ತಾಠಾ । ಅಪ್ರಮಾಣ ಆಣೀ ಘಾಂಟಾ ।
ಬಾಷ್ಕಳ ಆಣೀ ಕರಂಟಾ । ವಿವೇಕ ಸಾಂಗೇ ॥೧೫॥
ಲಂಡೀ ಆಣೀ ಉನ್ಮತ್ತ । ನಿಕಾಮೀ ಆಣೀ ಡುಲ್ಲತ ।
ಭ್ಯಾಡ ಆಣೀ ಬೋಲತ । ಪರಾಕ್ರಮು ॥೧೬॥
ಕನಿಷ್ಠ ಆಣೀ ಗರ್ವಿಷ್ಠ । ಸುಪರತೇ ಆಣೀ ನಷ್ಟ ।
ದ್ವೇಷೀ ಆಣೀ ಭ್ರಷ್ಟ । ಆತಿಶಯೋಸೀ ॥೧೭॥
ಅಭಿಮಾನೀ ಆಣೀ ನಿಸಂಗಳ । ಮೋಡಗಸ್ತ ಆಣೀ ಖಳ ।
ದಂಭಿಕ ಆಣೀ ಅನರ್ಗಳ । ಆತಿಶಯೋಸೀ ॥೧೮॥
ಮೋಖಟೇ ಆಣೀ ವಿಕಾರೀ । ಖೋಟೇ ಆಣೀ ಅನೋಪಕಾರೀ ।
ಅವಲಕ್ಷಣ ಆಣೀ ಧಿಃಕಾರೀ । ಪ್ರಾಣಮಾತ್ರಾಸೀ ॥೧೯॥
ಅಲ್ಪಮತೀ ಆಣೀ ವಾದಕ । ದೀನರೂಪ ಆಣೀ ಭೇದಕ ।
ಸೂಕ್ಷ್ಮ ಆಣೀ ತ್ರಾಸಕ । ಕುಶಬ್ದೇ ಕರೂನಿ ॥೨೦॥
ಕಠಿಣ ವಚನೀ ಕರ್ಕಶ ವಚನೀ । ಕಾಪಟ್ಯ ವಚನೀ ಸಂದೇಹ ವಚನೀ ।
ದುಃಖ ವಚನೀ ತೀವ್ರ ವಚನೀ । ಕ್ರೂರ ನಿಷ್ಠುರ ದುರಾತ್ಮಾ ॥೨೧॥
ನ್ಯೂನ ವಚನೀ ಪೈಶೂನ್ಯ ವಚನೀ । ಅಶುಭ ವಚನೀ ಆನಿತ್ಯ ವಚನೀ ।
ದ್ವೇಷ ವಚನೀ ಅನೃತ್ಯ ವಚನೀ । ಬಾಷ್ಕಳ ವಚನೀ ಧಿಃಕಾರೂ ॥೨೨॥
ಕಪಟೀ ಕುಟಿಳ ಗಾಠ್ಯಾಳ । ಕುರ್ಟೀ ಕುಚರ ನಟ್ಯಾಳ ।
ಕೋಪೀ ಕುಧನ ಟವಾಳ । ಆತಿಶಯೋಸೀ ॥೨೩॥
ತಪೀಳ ತಾಮಸ ಅವಿಚಾರ । ಪಾಪೀ ಅನರ್ಥೀ ಅಪಸ್ಮಾರ ।
ಭೂತ ಸಮಂಧೀ ಸಂಚಾರ । ಆಂಗೀಮಸೆ ॥೨೪॥
ಆತ್ಮಹತ್ಯಾರಾ ಸ್ತ್ರೀಹತ್ಯಾರಾ । ಗೋಹತ್ಯಾರಾ ಬ್ರಹ್ಮತ್ಯಾರಾ ।
ಮಾತೃಹತ್ಯಾರಾ ಪಿತೃಹತ್ಯಾರಾ । ಮಹಾಪಾಪೀ ಪತಿತ ॥೨೫॥
ಉಣೇ ಕುಪಾತ್ರ ಕುತರ್ಕೀ । ಮಿತ್ರದ್ರೋಹೀ ವಿಶ್ವಾಸಘಾತಕೀ ।
ಕೃತಘ್ನ ತಲ್ಪಕೀ ನಾರಕೀ । ಅತಿತ್ಯಾಈ ಜಲ್ಪಕ ॥೨೬॥

ಇವನು ಪಾಪಿ, ನಿಂದಕ, ದುಃಖಿ ಆಗಿದ್ದು ಎರಡನೆಯವರಿಗೆ ಘಾತ ಮಾಡುವವ, ಮತ್ತು ಸ್ವತಃ ಕ್ಲೇಷ ಅನುಭವಿಸುತ್ತಿದ್ದರೂ ಅತಿ ನಿರ್ದಯನಿರುವನು. (೧೩) ಇವನು ಹೀನನಿದ್ದು, ಢೋಂಗಿ ಹಾಗೂ ರೋಗಿಯಾಗಿದ್ದು ಕೆಟ್ಟ ಕೆಲಸ ಬಿಡಲಾರದವ ಅಂದರೆ ಮಾಡುವವ ಮತ್ತು ಜಿಪುಣ, ಜೀನನಿದ್ದು ಅಧರ್ಮದಲ್ಲಿ ಅತಿ ಆಸಕ್ತಿ ತೋರುವವ. ಧರ್ಮಹೀನ ಇಚ್ಛೆಯುಳ್ಳವನಿರುವನು.(೧೪) ಇವನು ದುರ್ಬಲ ದೇಹದವನಿದ್ದು ಅತಿ ಗರ್ವಿಷ್ಠ, ದುರಭಿಮಾನಿ, ಅಪ್ರಾಮಾಣಿಕ, ಕೆಟ್ಟಚ್ಯಾಳಿಯ ದೋಷಿಗನಿದ್ದು ಇಲ್ಲದ ಅಡಚಣಿ ಹುಟ್ಟಿಸಿ ವಿರೋಧ ಮಾಡುವವ. ಅರ್ಥವಿಲ್ಲದ ಬಡಬಡಿಕೆಯ ಮಾತಿನವ ಮತ್ತು ಸ್ವತಃ ದುರ್ದೈವಿಯಿದ್ದು, ಜನರಿಗೆ ಜ್ಞಾನ ಹೇಳುವನು. (೧೫) ಅಂಜಬುರುಕನಿದ್ದು ಉದ್ಧಟನು, ಉನ್ಮತ್ತ, ಬೇಕಾರಿ, ನಿರುದ್ಯೋಗಿಇದ್ದು, ಡೌಲಿನಿಂದ ಮೆರೆಯುವವ, ಅಂಜಗುಳಿ ಇದ್ದು ಪರಾಕ್ರಮದ ಮಾತುಗಳನ್ನೇಆಡುವನು.(೧೬) ಕಡಿಮೆ ತರಗತಿಯವನಿದ್ದು, ಗರ್ವಿಷ್ಠ ವಿಷಯಾಸಕ್ತನಾಗಿದ್ದು, ವ್ಯಸನಿ, ಮತ್ತು ದ್ವೇಷ ಮಾಡುವವನಿದ್ದು, ಭ್ರಷ್ಟನಿರುವನು. (೧೭) ಅತಿ ಅಭಿಮಾನಿ ಇದ್ದು ಕಟ್ಟುಪಾಡುಗಳನ್ನು ಪಾಲಿಸದ ನಿರ್ಲಜ್ಜನು, ಹಣದ ಬಗ್ಗೆ ಜಡಗೈ, ಕೊಡ ತಕ್ಕೊಳ್ಳುವ ವ್ಯವಹಾರಕ್ಕೆ ಸರಳನಲ್ಲದವನಿದ್ದು, ದುಷ್ಟ ವೃತ್ತಿಯವ ಮತ್ತು ಢೋಂಗಿಯಾಗಿದ್ದು ಸ್ವಚ್ಛಂದಿಯಾದವ, ಸ್ವೇಚ್ಛಾಚಾರ ಮಾಡುವವನು. (೧೮) ಕೆಟ್ಟವನಿದ್ದು ವಿಕಾರಗಳಿಗೆ ಅಧೀನ, ಸುಳ್ಳುಗಾರನಿದ್ದು, ಅನುಪಕಾರಿ ಮತ್ತು ಸ್ವತಃ ಹೀನ ಕುಲದವನಿದ್ದು ಇತರರನ್ನು ಬಹಳಷ್ಟು ತಿರಸ್ಕಾರ ಮಾಡುವವ. (೧೯) ಅಲ್ಪಬುದ್ಧಿಯವನಿದ್ದು ವಾದ ಮಾಡುವವ, ಭಿಕಾರಿಯಂತಿದ್ದು, ತೀಕ್ಷ್ಣ ಕುಶಬ್ದಗಳನ್ನು ಆಡುವವ, ಮತ್ತು ಧೂರ್ತ ಅಥವಾ ಕಪಟಿ ಇದ್ದು ಕೆಟ್ಟ ಶಬ್ದಗಳಿಂದ ಇತರರಿಗೆ ದುಃಖ ಕೊಡುವವನು. (೨೦) ಮನಸ್ಸಿಗೆ ಹತ್ತುವಂತೆ ಮಾತನಾಡುವವನು, ಮೈಮೇಲೆ ಏರಿ ಬಂದು ಒದರಿ ಮಾತನಾಡುವವ, ಕಪಟತನದಿಂದ ಮಾತನಾಡುವವ, ಸಂಶಯದಿಂದ ಮಾತನಾಡುವವ, ದುಃಖವಾಗುವಂತೆ ಮಾತನಾಡುವವ, ಮರ್ಮಕ್ಕೆ ಹತ್ತುವಂತೆ ಮಾತನಾಡುವ, ಕ್ರೂರಿ, ನಿಷ್ಠುರ, ದುರಾತ್ಮ ಮನುಷ್ಯನು. (೨೧) ಎರಡನೆಯವರಲ್ಲಿರುವ ವ್ಯಂಗ ನ್ಯೂನತೆಗಳನ್ನು ಎತ್ತಿ ಮಾತನಾಡುವವ, ಅಶುಭ ಮಾತನಾಡುವವ, ಘಾತಕ ಶಬ್ದ ಮಾತಾಡುವ, ಕ್ಷಣಕ್ಷಣಕ್ಕೆ ಮಾತು ಬದಲಿಸಿ ಮಾತನಾಡುವವ, ದ್ವೇಷದಿಂದ ಮಾತನಾಡುವವ, ಸುಳ್ಳು ಮಾತನಾಡುವವ, ನಿರರ್ಥಕ ಮಾತನಾಡುವವ, ಮತ್ತು ಧಿಕ್ಕರಿಸಿ ಮಾತನಾಡುವವನು.(೨೨). ಕಪಟಿ, ಡೊಂಕು ಬುದ್ಧಿಯವ, ಗುಮ್ಮನ ಗುಸುಗ,ಕ್ಷುದ್ರ ಮನದವ, ಸಂಕಟಪಡುವವ, ಮೈಗಳ್ಳ, ಕೆಟ್ಟ ಚಾಳಿಯವ, ಪ್ರಾತ್ಯ,(ಹೀನ,)ಸಿಟ್ಟಿನವ,ಪಾಪವ್ರವ್ಯವಿರುವವ,ಅತಿಉಡಾಳ, ಠಕ್ಕ, ಕುಚೇಷ್ಟೆಗಾರನು.(೨೩) ಶೀಘ್ರಕೋಪಿ, ತಾಮಸಿ, ಅವಿಚಾರಿ, ಪಾಪಿ, ಅನರ್ಥ ಮಾಡುವವ, ಕೆಡಿಸುವವ, ಅಪಸ್ಮಾರ ಇದ್ದವ (ಮುಲರೋಗಿ) ಮೈಯಲ್ಲಿ ದೆವ್ವ, ಭೂತ, ಪಿಶಾಚಿ ಸಂಚಾರ ಇರುವವ. (೨೪) ಆತ್ಮಘಾತಕಿ, ಸ್ತ್ರೀಘಾತಕಿ, ಗೋಹತ್ಯಾರಿ, ಬ್ರಹ್ಮಹತ್ಯಾರಿ, ಬ್ರಾಹ್ಮಣ ಹತ್ಯೆ ಮಾಡುವವ, ಮಾತೃಹತ್ಯಾರಿ, ಮತ್ತು ಮಹಾಪಾತಕಿ ಹಾಗೂ ಭ್ರಷ್ಟನು. (೨೫) ಎಲ್ಲ ದೃಷ್ಟಿಯಿಂದ ಕಡಿಮೆ ಇರುವವ, ಅಯೋಗ್ಯ. ಕುತರ್ಕಗಳನ್ನೇ ಮಾಡುವವ, ಮಿತ್ರದ್ರೋಹಿ, ವಿಶ್ವಾಸಘಾತಕಿ, ಕೃತಘ್ನ, ಮಾತೃಗಾಮಿ, ಪರಸ್ತ್ರೀ ಗಮನ ಮಾಡುವವ, ನರಕಕ್ಕೆ ಹೋಗಲು ಯೋಗ್ಯ, ಅಘೋರ ಕೃತಿ ಮಾಡುವವ, ಖೂನಿ, ಬೆಂಕಿ ಹಚ್ಚುವವು ವಗೈರೆ ನೀಚ ಕೆಲಸ ಮಾಡುವವ ಮತ್ತು ಬಡಬಡ್ಯಾ, ವ್ಯರ್ಥವಾಗಿ ಬಹಳ ಮಾತನಾಡುವವ. (೨೬)

ಕಿಂತ ಭಾಂಡಣ ಝುಗಡಾ ಕಳ್ಪೋ। ಅಧರ್ಮ ಅನರಾಹಾಟೀ ಶೋಕ ಸಂಗ್ರಹೋ।
ಚಾಹಾಡ ನೆಸನೀ ವಿಗ್ರಹೋ । ನಿಗ್ರಹ ಕರ್ತಾ ॥೨೭॥

ದ್ವಾಡ ಆಪೇಸೀ ವ್ರೋಂಗಳ । ಚಾಳಕ ಚುಂಬಕ ಲಚ್ಯಾಳ ।
ಸ್ವಾರ್ಥೀ ಅಭಿಲಾಸೀ ವ್ರೋಢಾಳ । ಆದ್ದತ್ತ ಝೋಡ ಆದಖಣಾ ॥೨೮॥

ಶಠ ಶುಂಭ ಕಾತರು । ಲಂಡ ತರ್ಮುಂಡ ಸಿತರು ।
ಬಂಡ ಪಾಷಾಂಡ ತಸ್ಕರು । ಅಪಹಾರ ಕರ್ತಾ ॥೨೯॥

ಧೀಟ ಸ್ವೈರಾಟ ವೋಕಾಟ। ಚಾಟಿ ಚಾವಟಿ ವಾಜಟ ।
ಥೋಟ ಉದ್ಧಟ ಲಂಪಟ । ಬಟವಾಲ ಕುಬುದ್ಧೀ ॥೩೦॥

ಮಾರೇಕರೀ ವರಪೇಕರೀ । ದರವಡೇಕರೀ ಖಾಣೋರೀ ।
ವ್ಯೆಂದ ಭೋಂದು ಪರದ್ವಾರೀ । ಭುರರೇಕರೀ ಚೇಟಕೀ ॥೩೧॥

ನಿಶಂಕ ನಿಲಾಜಿರಾ ಕಳಭಂಟ । ಟೌಣಪಾ ಲೌಂದ ಧಟ ಉದ್ಧಟ ।
ಠಸ ಠೋಂಬಸ ಖಟನಟ । ಜಗಭಾಂಡ ವಿಕಾರೀ ॥೩೨॥

ಅಧೀರ ಆಳಿಕಾ ಅನಾಚಾರೀ । ಅಂಧ ಪಂಗು ಖೋಕಲೇಕರೀ ।
ಥೋಂಟಾ ಬಧಿರ ದಮೋಕರೀ । ತರ್ಹೀ ತಾಠಾ ನ ಸಂಡೀ ॥೩೩॥

ವಿದ್ಯಾಹೀನ ವೈಭವಹೀನ । ಕುಳಹೀನ ಲಕ್ಷ್ಮೀಹೀನ ।
ಶಕ್ತಿಹೀನ ಸಾಮರ್ಥ್ಯಹೀನ । ಅದೃಷ್ಟಹೀನ ಭಿಕಾರೀ ॥೩೪॥

ಬಳಹೀನ ಕಳಾಹೀನ । ಮುದ್ರಾಹೀನ ದೀಕ್ಷಾಹೀನ ।
ಲಕ್ಷಣಹೀನ ಲಾವಣ್ಯಹೀನ । ಅಂಗಹೀನ ವಿಪಾರಾ ॥೩೫॥

ಯುಕ್ತಿಹೀನ ಬುದ್ಧಿಹೀನ । ಆಚಾರಹೀನ ವಿಚಾರಹೀನ ।
ಕ್ರಿಯಾಹೀನ ಸತ್ವಹೀನ । ವಿವೇಕಹೀನ ಸಂಶಈ ॥೩೬॥

ಇವನು ಸಂಶಯುವುಳ್ಳವ,ಜಗಳ-ಗುದ್ದಾಟದ ಕಲಹಪ್ರಿಯು,ಅಧರ್ಮದಿಂದ ನಡೆಯುವವ.ಕುಮಾರ್ಗದಿಂದ ನಡೆಯುವವ, ಸದಾಶೋಕಿಸುವವ, ಚ್ಯಾಡಿ ಹೇಳುವವ, ವ್ಯಸನಿ, ಒಡಕು–ಭೇದ ಹುಟ್ಟಿಸುವವ, ಜಗಳ ಹಚ್ಚುವವ ಹಾಗೂ ಅತಿಶಯು ಹಟಮಾರಿ ಇರುವವನು, ಲೋಕದ ರೀತಿ ರಿವಾಜಗಳನ್ನು ಮುರಿಯುವವ [೨೭] ಸೊಕ್ಕಿನವ, ಅಪಯಶಿ, ಅಪಕೀರ್ತಿಯುವ ಕೊಳಕಾಗಿರುವವ, ಅಸ್ವಚ್ಛ, ಪುಢಾರಿ ಅಂದರೆ ಜನರನ್ನು ತನ್ನ ಹಿಡಿತದಲ್ಲಿಟ್ಟುಕೊಂಡು ಅವರನ್ನು ಮನಬಂದಂತೆ ಉಪಯೋಗಿಸಿಕೊಳ್ಳುವವ, ಅತಿಕೃಪಣ. ಅತಿಕ್ಷುಲ್ಲಕ, ಕವಡೀ ಸಹ ಬಿಡದವ, ಧಿಕ್ಕರಿಸಿದರೂ ತಿರುಗಿ ಬಂದು ಬಡಬಡಿಸುವ ವಾಚಾಳಿ, ಸ್ವಾರ್ಥಿ. ಅತಿಲೋಭಿ, ತೃಪ್ತಿರಹಿತ, ಅಪಹಾರಿ, ಸ್ವೈರ ವರ್ತನಿ, ಪರೋಪಕಾರಕ್ಕಾಗಿ ಏನೂ ಕೊಡದವ. ಮಂಗಬುದ್ಧಿಯ ಪುಂಡ. ಭಾರಿ ನಿರ್ಲಜ್ಜ, ಇನ್ನೊಬ್ಬರ ಯಶಸ್ಸು ಮತ್ತು ಏರಿಕೆಯನ್ನು ಸಹಿಸದವನು (೨೮) ಲಬಾಡ,ಶುಂಭ,ಅಂಜುಬುರುಕ, ಪರಿವೆ ಇಲ್ಲದೆ ಉನ್ಮತ್ತ, ಯದ್ವಾತದ್ವಾ ಲುಡುಬುಡು ಹೊಕ್ಕಾಡುವವ, ಲಫಂಗ, ಉರ್ಮಟ, ಪಾಖಂಡಿ, ತುಡುಗ, ಎರಡನೆಯವರ ವಸ್ತುಗಳನ್ನು ಅಪಹರಿಸುವವನು. [೨೯] ದುಸ್ಸಾಹಸಿ. ಸ್ವೈರ ಅಂದರೆ ಮನಬಂದಂತೆ ಇರುವವ, ಉಚ್ಛೃಂಖಲ, ಹಲಕಟ್ಟ, ಕುತ್ಸಿತನಾಗಿರುವವ, ಪ್ರಸಿದ್ಧಿ ಹೊಂದುವದಕ್ಕೆ ಗಡಬಡಿಸುವವ, ಕಪಟಕಾರಸ್ಥಾನಿ, ಉದ್ಧಟ, ವಿಷಯಾಸಕ್ತ, ತನ್ನ ಜಾತಿಯಿಂದ ಭ್ರಷ್ಟನಾದವ, ಮತ್ತು ಕೆಟ್ಟಬುದ್ಧಿಯವನು. [೩೦] ದಾರಿ ಬಡಿಯುವವ,ದರೋಡೆ ಮಾಡುವವ, ಮನೆಯನ್ನು ಅಂಜನ ಹಚ್ಚಿ ಅಗಿದು ಧನ ಶೋಧಿಸುವವ. ಇದಕ್ಕಾಗಿ ಪ್ರಾಣ ತೆಗೆದುಕೊಳ್ಳುವವ, ಘಾತಕಿ, ಡಾಂಭಿಕ, ಪರಸ್ತ್ರೀ ಗಮನ ಮಾಡುವವ, ಭುಲತಾಪಿಯಿಂದ ಫಸಾಯಿಸುವವ, ಮೋಹಗೊಳಿಸುವವ, ಮತ್ತು ಜಾದೂ ಮಾಡುವವನು [೩೧] ಶಂಕಾರಹಿತನಂತೆ ಕಾಣುವ ದುಷ್ಟ,ನಾಚಿಕೆ ಇಲ್ಲದವ, ಕಲಹಖೋರ, ನಿರುದ್ಯೋಗಿ,ಟೊಣಪ, ಅಡದಾಂಡ, ದಾಂಡಗ್ಯಾ. ಭಿಡೆ ಮುರವತ್ತು ನೋಡದವ. ಉರ್ಮಟ್ಟ ಉದ್ಧಟ, ಫಜೀತಿಖೋರ, ನಿರ್ಭಿಡೆಯ ಸ್ವಭಾವದವ. ಥಾಪು ಹೊಡೆಯುವವ, ಅಕ್ಷರ ಶತ್ರು ಅಂದರೆ ತೀರ ಅಶಿಕ್ಷಿತ, ಶಠ, ದುಷ್ಟ, ನಾಟಕಿ, ಢೋಂಗಿ, ಸುಳ್ಳು,ಎಲ್ಲರ ಸಂಗಡ ಜಗಳಾಡುವವ, ಮತ್ತು ವಿಕಾರಗಳಿಗೆ ಆಧೀನನು. [೩೨] ಧೈರ್ಯವಿಲ್ಲದ ಉತಾವಳಿ, ಸುಮ್ಮನೇ ಇಲ್ಲದ ಆರೋಪ ತಾನು ಹೊರುವವ, ಅಥವಾ ತನ್ನ ಮೇಲೆ ತಂದುಕೊಳ್ಳುವ ಬುದ್ಧಿಗೇಡಿ, ಅನಾಚಾರಿ, ಕುರುಡ, ಕುಂಟ, ಕೆಮ್ಮಿನಿಂದ ಹೈರಾಣ ಆದವ, ಕೈಮುರುಕ,ಕಿವುಡ, ದಮ್ಮಿನವನಾಗಿದ್ದು,ಅಭಿಮಾನ ಬಿಡದವ. [೩೩] ವಿದ್ಯಾಹೀನ, ವೈಭವಹೀನ, ಕುಲಹೀನ, ಲಕ್ಷ್ಮೀಹೀನ, ಶಕ್ತಿಹೀನ, ಸಮರ್ಥ್ಯಹೀನ ಭಾಗ್ಯಹೀನ ಮತ್ತು ಭಿಕಾರಿ. [೩೪] ಬಲಹೀನ, ಕಳಾಹೀನ, ಮುದ್ರಾಹೀನ, [ಯಾವುದೇ ಧರ್ಮದ ಸಂಪ್ರದಾಯವಿಲ್ಲದವ] ದೀಕ್ಷಾಹೀನ, ಲಕ್ಷಣಹೀನ, ಲಾವಣ್ಯಹೀನ, ಅಂಗಹೀನ, ವಿದ್ರೂಪಿ [ರೂಪಗೇಡಿ]. [೩೫] ಯುಕ್ತಿಹೀನ, ಬುದ್ಧಿಹೀನ, ಆಚಾರಹೀನ, ವಿಚಾರಹೀನ, ಕ್ರಿಯಾಹೀನ, ಸತ್ವಹೀನ, ವಿವೇಕಹೀನ, ಸಂಶಯೀ [೩೬]

ಭಕ್ತಿಹೀನ ಭಾವಹೀನ । ಜ್ಞಾನಹೀನ ವೈರಾಗ್ಯಹೀನ ।
ಶಾಂತಿಹೀನ ಕ್ಷ್ಮಾಹೀನ । ಸರ್ವಹೀನ ಕ್ಷುಲ್ಲಕು ॥೩೭॥
ಸಮಯೋ ನೇಣೆ ಪ್ರಸಂಗ ನೇಣೆ । ಪ್ರೇತ್ನ ನೇಣೆ ಅಭ್ಯಾಸ ನೇಣೆ ।
ಆರ್ಜವ ನೇಣೆ ಮೈತ್ರೀ ನೇಣೆ । ಕಾಂಹೀ ಚ ನೇಣೆ ಅಭಾಗೀ ॥೩೮॥
ಅಸೋ ಐಸೇ ನಾನಾ ವಿಕಾರ । ಕುಲಕ್ಷಣಾಚೇ ಕೋಠಾರ ।
ಐಸಾ ಕುವಿದ್ಯೇಚಾ ನರ । ಶ್ರೋತೀ ವೋಳಖಾವಾ ॥೩೯॥
ಐಸೀ ಕುವಿದ್ಯೇಚೀ ಲಕ್ಷಣೇ । ಐಕೋ ನಿ ತ್ಯಾಗ ಚಿ ಕರಣೇ ।
ಅಭಿಮಾನೇ ತರ್ಹೀ ಭರಣೇ । ಹೇ ವಿಹಿತ ನವ್ಹೇ ॥೪೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
ಕುವಿದ್ಯಾ ಲಕ್ಷಣ ನಾಮ ಸಮಾಸ ತಿಸರಾ ॥

• •

ಭಕ್ತಿಹೀನ, ಭಾವಹೀನ, ಜ್ಞಾನಹೀನ, ವೈರಾಗ್ಯಹೀನ, ಶಾಂತಿಹೀನ, ಕ್ಷಮಾಹೀನ, ಸರ್ವಹೀನ, ಮತ್ತು ಕ್ಷುಲ್ಲಕನು. [೩೭] ಸಮಯದ ಮಹತ್ವ ಇರದವನು, ಪ್ರಸಂಗದ ಮಹತ್ವ ಗೊತ್ತಾಗದವನು, ಪ್ರಯತ್ನವನ್ನರಿಯದವನು, ಅಭ್ಯಾಸದ ಮಹತ್ವ ತಿಳಿಯದವನು, ಜನರ ಮನ ಗೆದೆಯಲು ಅರಿಯದವನು. ಮಿತ್ರತ್ವದ ಮಹತ್ವ ತಿಳಿಯದವನು, ಸಾರಾಂಶವೆಂದರೆ ಏನೂ ತಿಳಿಯದವನು, ಹೀಗಿರುವ ಅಭಾಗಿಯು, ಕುವಿದ್ಯಾ ಲಕ್ಷಣಉಳ್ಳವನು. [೩೮] ಇಂಥ ಅನೇಕ ಪ್ರಕಾರದ ದೋಷಗಳು ಇವನಲ್ಲಿರುವವು. ಇವನ ದೇಹವು ಕೆಟ್ಟ ಗುಣಗಳ ಸಂಗ್ರಹಾಲಯವೇ ಆಗಿದೆ. ಕುವಿದ್ಯೆಯ ಮನುಷ್ಯನನ್ನು ಶ್ರೋತೃಗಳು ಈ ಲಕ್ಷಣಗಳಿಂದ ಕಂಡು ಹಿಡಿಯಬೇಕು. [೩೯] ಇಲ್ಲಿಯವರೆಗೆ ಹೇಳಿದ ಕುವಿದ್ಯಾ ಲಕ್ಷಣಗಳನ್ನು ಕೇಳಬೇಕು. ನಂತರ ಕೇಳಿದವುಗಳು ನಿಮ್ಮಲ್ಲಿದ್ದರೆ ಅವನ್ನು ಬಿಡಬೇಕು. ಅಂದರೆ ಕುವಿದ್ಯಾ ಲಕ್ಷಣಗಳನ್ನು ತ್ಯಜಿಸಬೇಕು. ವ್ಯರ್ಥವಾದ ಅಭಿಮಾನದಿಂದ ಈರ್ಷೆಗೆ ಬಿದ್ದು ಕೆಟ್ಟ ಲಕ್ಷಣಗಳನ್ನು ಬಿಡಬಾರದೆಂದು ಹಟ ಹಿಡಿಯುವದು ಯೋಗ್ಯವಲ್ಲ. [೪೦]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ೨ನೇಯ ದಶಕದ
"ಕುವಿದ್ಯಾ ಲಕ್ಷಣ" ಹೆಸರುಳ್ಳ ಮೂರನೆಯ ಸಮಾಸವು ಮುಗಿದುದು.

● ●

## ದಶಕ ೨. ಸಮಾಸ ೪. ಭಕ್ತಿ ನಿರೂಪಣ (ನುಡಿ ೨೭)

ಮನುಷ್ಯನ ಶರೀರದಲ್ಲಿ ಹಾಗೂ ಮನದಲ್ಲಿ ಪ್ರಚಂಡ ಶಕ್ತಿ ಗುಪ್ತವಾಗಿ ವಾಸವಾಗಿದೆಯೆಂದು ನರದೇಹ ಸ್ತವನದಲ್ಲಿ ಶ್ರೀ ಸಮರ್ಥರು ನಮಗೆ ತೋರಿಸಿಕೊಟ್ಟಿದ್ದಾರೆ. ಜಗದಲ್ಲಿಯ ಮಾನವೀ ಜೀವನದ ಬಗ್ಗೆ ನೋಡಿದ್ದಾರೆ. ಒಂದು ಮಾತು ನಮ್ಮ ದೃಷ್ಟಿಯ ಎದುರಿಗೆ ಕಾಣುತ್ತದೆ. **ಅದು ಯಾವುದೆಂದರೆ**:- ಮನುಷ್ಯ ಹೀನತನದಿಂದ ಜೀವಿಸುತ್ತಾನೆ. ಆದರೆ ಶಕ್ತಿಯ ಉಪಯೋಗ ಮಾಡಿಕೊಂಡು ಉತ್ತಮ ಜೀವನ ನಡೆಸುವ ಪ್ರಯತ್ನವನ್ನೇ ಮಾಡುವದಿಲ್ಲ. ಈ ಶಕ್ತಿಯ ಉಪಯೋಗವನ್ನು ಮಾಡಿಕೊಂಡದ್ದೇ ಆದರೆ ಅದನ್ನು ಹೆಚ್ಚಾಗಿ ಕುವಿದ್ಯಾ ಲಕ್ಷಣದಲ್ಲಿ ವರ್ಣನೆ ಮಾಡಿದ ಹೀನ ಮಟ್ಟದ ಸ್ವಾರ್ಥಕ್ಕಾಗಿ ಮಾತ್ರ ಉಪಯೋಗಿಸುತ್ತಾನೆ. ಮನುಷ್ಯರು ಈ ರೀತಿ ಮಾಡಬಾರದು. ಯಾಕೆಂದರೆ ಅನಾಯಾಸವಾಗಿ ಒದಗಿ ಬಂದ ಸುಸಂಧಿಯ ಸಮಯವನ್ನು ವ್ಯರ್ಥ ಮಾಡಬಾರದು. ಇದಕ್ಕಾಗಿಯೇ ಸಂತರ ಜೀವನವು ತಳಮಳಗೊಳ್ಳುತ್ತದೆ. ಈ ಸಮಾಸದಲ್ಲಿ ಶ್ರೀ ಸಮರ್ಥರಿಗಾದ ತಳಮಳವು ನೋಡಲಿಕ್ಕೆ ಸಿಗುವದು. ಜಗತ್ತಿನಲ್ಲಿ ಯಾವುದು ಶಾಶ್ವತವಿದೆ. ಕಲ್ಯಾಣಕಾರಕವಿದೆ, ಉತ್ತಮವಿದೆ, ಮತ್ತು ಸರ್ವರಿಗೂ ಸುಖ ಕೊಡುವದಿದೆಯೋ ಮನುಷ್ಯರು ಅಂಥದರ ಬೆನ್ನು ಹತ್ತಬೇಕೆಂಬುದೇ ಶ್ರೀ ಸಮರ್ಥರ ಅಭಿಪ್ರಾಯ ಹಾಗೂ ಆಗ್ರಹವಿದೆಯೆಂದು ಅನಿಸುವದು. ಅರ್ಥಾತ್ ಭಗವಂತನ ಶೋಧ ಮಾಡುವದೇ ಮನುಷ್ಯನ ಸರ್ವೋತ್ತಮ ಧ್ಯೇಯವಾಗಿದೆಯೆಂದು ಶ್ರೀ ಸಮರ್ಥರು ಸಂಬಿದ್ದಾರೆ.

## ಸಮಾಸ ಚವಥಾ : ಭಕ್ತಿ ನಿರೂಪಣ

॥ಶ್ರೀರಾಮ॥ ನಾನಾ ಸುಕೃತಾಚೇ ಫಳ । ತೋ ಹಾ ನರದೇಹ ಕೇವಳ ।
ತ್ಯಾಹಿ ಮಧೇ ಭಾಗ್ಯ ಸಫಳ । ತರೀ ಚ ಸನ್ಮಾರ್ಗ ಲಾಗೇ ॥೧॥
ನರದೇಹೀ ವಿಶೇಷ ಬ್ರಾಹ್ಮಣ । ತ್ಯಾಹಿ ವರೀ ಸಂಧ್ಯಾ ಸ್ನಾನ ।
ಸದ್ವಾಸನಾ ಭಗವದ್ಭಜನ । ಘಡೇ ಪೂರ್ವಪುಣ್ಯೇ ॥೨॥
ಭಗವದ್ಭಕ್ತಿ ಹೇ ಉತ್ತಮ । ತ್ಯಾಹಿ ವರೀ ಸತ್ಸಮಾಗಮ ।
ಕಾಳ ಸಾರ್ಥಕ ಹಾಚಿ ಪರಮ । ಲಾಭ ಜಾಣಾವಾ ॥೩॥
ಪ್ರೇಮ ಪ್ರೀತೀಚಾ ಸದ್ಭಾವ । ಆಣೀ ಭಕ್ತಾಂಚಾ ಸಮುದಾವ ।
ಹರಿಕಥಾ ಮೊಹೋತ್ಸಾವ । ತೇಣೇ ಪ್ರೇಮಾ ದುಣಾವೇ ॥೪॥
ನರದೇಹೀ ಆಲಿಯಾ ಯೇಕ । ಕಾಂಹೀ ಕರಾವೇ ಸಾರ್ಥಕ ।
ಜೇಣೇ ಪಾವಿಜೇ ಪರಲೋಕ । ಪರಮ ದುಲ್ಲಭ ಜೋ ॥೫॥
ವಿಧಿಯುಕ್ತ ಬ್ರಹ್ಮಕರ್ಮ । ಅಥವಾ ದಯಾ ದಾನಧರ್ಮ ।
ಅಥವಾ ಕರಣೇ ಸುಗಮ । ಭಜನ ಭಗವಂತಾಚೇ ॥೬॥
ಅನುತಾಪೇ ಕರಾವಾ ತ್ಯಾಗ । ಅಥವಾ ಕರಣೇ ಭಕ್ತಿಯೋಗ ।
ನಾಹೀ ತರೀ ಧರಣೇ ಸಂಗ । ಸಾಧು ಜನಾಚಾ ॥೭॥
ನಾನಾ ಶಾಸ್ತ್ರೇ ಧಾಂಡೋಳಾವೀ । ಅಥವಾ ತೀರ್ಥೇ ತರೀ ಕರಾವೀ ।
ಅಥವಾ ಪುರಶ್ಚರಣೇ ಬರವೀ । ಪಾಪಕ್ಷಯಾಕಾರಣೇ ॥೮॥
ಅಥವಾ ಕೀಜೆ ಪರೋಪಕಾರ । ಅಥವಾ ಜ್ಞಾನಾಚಾ ವಿಚಾರ ।
ನಿರೂಪಣೀ ಸಾರಾಸಾರ । ವಿವೇಕ ಕರಣೇ ॥೯॥
ಪಾಳಾವೀ ವೇದಾಂಚೀ ಆಜ್ಞಾ । ಕರ್ಮಕಾಂಡ ಉಪಾಸನಾ ।
ಜೇಣೇ ಹೋಇಜೆ ಜ್ಞಾನಾ । ಅಧಿಕಾರ ಪಾತ್ರ ॥೧೦॥
ಕಾಯಾವಾಚಾ ಆಣೀ ಮನೇ । ಪತ್ರೇ ಪುಷ್ಪೇ ಫಳೇ ಜೀವನೇ ।
ಕಾಂಹೀ ತರೀ ಯೇಕಾ ಭಜನೇ । ಸಾರ್ಥಕ ಕರಾವೇ ॥೧೧॥
ಜನ್ಮಾ ಆಲಿಯಾಚೇ ಫಳ । ಕಾಂಹೀ ಕರಾವೇ ಸಫಳ ।
ಐಸೇ ನ ಕರಿತಾ ನಿರ್ಫಳ । ಭೂಮಿ ಭಾರ ಹೋಯೇ ॥೧೨॥
ನರದೇಹಾಚೇ ಉಚಿತ । ಕಾಂಹೀ ಕರಾವೇ ಆತ್ಮಹಿತ ।
ಯಥಾನುಶಕ್ತ್ಯಾ ಚಿತ್ತವಿತ್ತ । ಸರ್ವೋತ್ತಮೀ ಲಾವಾವೇ ॥೧೩॥
ಹೇ ಕಾಂಹೀ ಚ ನ ಧರೀ ಜೋ ಮನೀ । ತೋ ಮೃತ್ಯಪ್ರಾಯ ವರ್ತೇ ಜನೀ ।
ಜನ್ಮಾ ಯೇಊನ ತೇಣೇ ಜನನೀ । ವಾಯಾಂ ಚ ಕಷ್ಟವಿಲೀ ॥೧೪॥

## ಸಮಾಸ ೪. ಭಕ್ತಿ ನಿರೂಪಣ

**ಭಾಗ್ಯದ ಉತ್ತರೋತ್ತರ ಪಾವುಟಿಗೆಗಳು:-** ಅನೇಕ ಜನ್ಮದಲ್ಲಿ ಮಾಡಿದ ಸತ್ಕರ್ಮಗಳ ಫಲವಾಗಿ ಈ ನರದೇಹವು ಪ್ರಾಪ್ತವಾಗಿದೆ. ಇದರಲ್ಲಿಯೇದೈವ ಫಲಿಸಿದರೆಮಾತ್ರ ಮನುಷ್ಯನು ಸನ್ಮಾರ್ಗಕ್ಕೆ ಹತ್ತುವನು. (೧) ಮೊದಲನೆಯದಾಗಿ ಈ ನರದೇಹ ದೊರಕಿಸುವದೇ ಒಂದು ಭಾಗ್ಯವು. ಅದರಲ್ಲಿಯೂ ಬ್ರಾಹ್ಮಣ ಜನ್ಮವು, ಅದರಲ್ಲಿಯೂ ಸ್ನಾನ. ಸಂಧ್ಯಾ ಮೇಲೆ ಉತ್ತಮ ಸಂಸ್ಕಾರ, ಇದಲ್ಲದೇ ಭಗವಂತನ ಭಜನೆ ಇವೆಲ್ಲ ಪೂರ್ವ ಪುಣ್ಯದಿಂದಲೇ ಪ್ರಾಪ್ತವಾಗುವವು. (೨) ಭಗವಂತನ ಭಕ್ತಿ ಮಾಡುವದು ಉತ್ತಮವೇ ಆಗಿದೆ. ಇದಕ್ಕೆ ಸಂತಶರಣರ ಸಮಾಗಮ ಪ್ರಾಪ್ತವಾದರೆ ಇನ್ನೂ ಉತ್ತಮವಾದುದು. ಈ ರೀತಿಯೀದ ಆಯುಷ್ಯದ ಕಾಲ ಸಾರ್ಥಕಗೊಳ್ಳುವದು, ಇದೇ ಸರ್ವಶ್ರೇಷ್ಠ ಲಾಭವೆಂದು ತಿಳಿಯಬೇಕು. (೩) ಅಂತರ್ಯಾಮಿ ಭಗವಂತನ ಬಗ್ಗೆ ಅಗದೀ ಖರೇ ಖರೇ ಸದ್ಭಾವದ ಪ್ರೇಮ ಮತ್ತು ಬಾಹ್ಯದಲ್ಲಿ ಭಕ್ತರ ಮತ್ತು ಸಂತಶರಣರ ಸಮೂಹದ ಸಹವಾಸವಿರಬೇಕು. ತತ್ಪರಿಣಾಮದಿಂದ ಹರಿಕಥಾ ಕೀರ್ತನಾದಿಗಳು ಸತತವಾಗಿ ಉತ್ಸಾಹದಿಂದ ನಡೆದು ಭಗವಂತನ ಮೇಲಿನ ಪ್ರೇಮವು ಇದರಿಂದ ದ್ವಿಗುಣಿತವಾಗುವದು. (೪) **ಈ ಜನ್ಮದಲ್ಲಿಯೇ ಆತ್ಮ ಹಿತಸಾಧಿಸಬೇಕಾದರೆ ಏನೇನು ಉಪಯೋಗಕ್ಕೆ ಬರುತ್ತದೆ? ಅದರ ವರ್ಣನೆಯು:-** ನಮಗೆ ನರದೇಹ ಪ್ರಾಪ್ತವಾಗಿದೆ. ಇದರ ಸದುಪಯೋಗವನ್ನು ಯಾವ ರೀತಿಯಿಂದಲಾದರೂ ಪಡೆಯಬೇಕು. ಅಲ್ಪಸ್ವಲ್ಪನ್ನಾದರೂ ಸಾಧಿಸಬೇಕು. ಹೀಗೆ ಮಾಡಿದ್ದಾದರೆ ಅತಿ ದುರ್ಲಭವಾದ ಪರಲೋಕ ಪ್ರಾಪ್ತವಾಗುವದು. (೫) ವಿಧಿಯುಕ್ತ, ವೇದವಿಹಿತ, ಬ್ರಹ್ಮಕರ್ಮ ಮಾಡಬೇಕು. ಅಥವಾ ದಯೆ, ಧರ್ಮ, ದಾನ ಮಾಡಬೇಕು. ಅಥವಾ ಅತಿ ಸುಲಭವಾದ ಭಗವಂತನ ಭಜನೆ ಮಾಡಬೇಕು. (೬). ಪಶ್ಚಾತ್ತಾಪದ ವೈರಾಗ್ಯದಿಂದ ಸಂಸಾರದ ತ್ಯಾಗ ಮಾಡಬೇಕು. ಅಥವಾ ಭಕ್ತಿಯ ಮಾರ್ಗ ಹಿಡಿಯಬೇಕು. ಇಲ್ಲವೇ ಸಂತರ ಸಹವಾಸ, ಸಂಗತಿ ಹಿಡಿಯಬೇಕು. (೭) ಅನೇಕ ಶಾಸ್ತ್ರಗಳನ್ನು ಆಳವಾಗಿ ಅಭ್ಯಾಸ ಮಾಡಬೇಕು. ಅಥವಾ ತೀರ್ಥಯಾತ್ರೆಯನ್ನಾದರೂ ಮಾಡಬೇಕು. ಅಥವಾಪಾಪನಾಶಕ್ಕಾಗಿಪುರಶ್ಚರಣ ಅಂದರೆ ಗಾಯಿತ್ರಿ ಪುರಶ್ಚರಣ ವಗ್ಯೆರೆ ಯಥಾವಿಧಿಯಿಂದ ಮಾಡಬೇಕು. (೮) ಅಥವಾ ಪರೋಪಕಾರ ಮಾಡುತ್ತ ಕಾಲ ಕಳೆಯಬೇಕು. ಅಥವಾ ಜ್ಞಾನಮಾರ್ಗದ ವಿಚಾರವನ್ನು ತಿಳಿಯಬೇಕು. ಸಂತಶರಣ–ಸದ್ಗುರುಗಳಿಂದ ಕೇಳಿದ ಪ್ರವಚನಾದಿಗಳ ಸಾರಾಸಾರ ವಿಚಾರ ಶೋಧಿಸಿ ತಿಳಿಯಬೇಕು. (೯) ವೇದಾಜ್ಞೆಯನ್ನು ಪಾಲಿಸಬೇಕು. ಕರ್ಮಕಾಂಡ ಪಾಲಿಸಬೇಕು. ಉಪಾಸನೆ, ಆರಾಧನೆ ಮಾಡಬೇಕು. ಅಂದರೆ ಜ್ಞಾನಪ್ರಾಪ್ತಿ ಮಾಡಿಕೊಳ್ಳುವ ಅಧಿಕಾರ ಬರುತ್ತದೆ. ಯೋಗ್ಯತೆ ಬರುತ್ತದೆ. (೧೦) ಶರೀರ, ವಾಣಿ, ಮನದಿಂದ, ಇದೇ ಪ್ರಕಾರ ಎಲೆ, ಹೂವು, ಹಣ್ಣು ಅಥವಾ ನೀರಿನಿಂದ ಇಲ್ಲವೇ ಇವುಗಳಲ್ಲಿ ಯಾವುದಾದರೊಂದರಿಂದ ಭಗವಂತನನ್ನು ಪೂಜಿಸಿ ಜನ್ಮ ಸಾರ್ಥಕ ಮಾಡಿಕೊಳ್ಳಬೇಕು. (೧೧) ನರಜನ್ಮಕ್ಕೆ ಬಂದೂ ಆತ್ಮಹಿತ ಸಾಧಿಸಿಕೊಳ್ಳದಿದ್ದರೆ ನೀವು ಜೀವಿಸಿಯೂ ಸತ್ತಂತೆಯೆಂದು ತಿಳಿಯಬೇಕು. ನಾವು ಮನುಷ್ಯರೆಂದು ಜನ್ಮಕ್ಕೆ ಬಂದ ಮೇಲೆ ಏನಾದರೂ ಪಡೆದು ಈ ಜನ್ಮ ಸಾರ್ಥಕತೆಯ ಫಲವನ್ನು ಪದರಿನಲ್ಲಿ ಹಾಕಿಕೊಳ್ಳಬೇಕು. ಹೀಗೆ ಮಾಡದೆ ಇದ್ದರೆ ಜನ್ಮ ನಿಷ್ಫಲವಾಗುವದಲ್ಲದೇ ದೇಹವು ಕೇವಲ ಭೂಮಿಗೆ ಭಾರವಾಗುವದು. (೧೨) ಏನಾದರೂ ಆತ್ಮಹಿತವನ್ನು ಸಾಧಿಸಿಕೊಳ್ಳುವದೇ ನರದೇಹಕ್ಕೆ ಅತ್ಯಂತ ಅವಶ್ಯವೂ, ಯೋಗ್ಯವೂ ಆಗಿದೆ. ತಮ್ಮ ತಮ್ಮ ಶಕ್ತ್ಯಾನುಸಾರವಾಗಿ ಮನ ಮತ್ತು ಧನವನ್ನು ಭಗವಂತನ ಸೇವೆಯಲ್ಲಿ ವ್ಯಯಿಸಬೇಕು(೧೩) ಮೇಲೆ ಹೇಳಿದ್ದರಲ್ಲಿ ಯಾವುದನ್ನೂ ಮನಸ್ಸಿನ ಮೇಲೆ ತೆಗೆದುಕೊಳ್ಳದೇ ಇರುವವನು ಜಗದಲ್ಲಿ ಜೀವಂತವಿದ್ದೂ ಸತ್ತಂತಿರುವನು. ಜನ್ಮಕ್ಕೆ ಬಂದು ಇವನು ತನ್ನ ತಾಯಿಗೆ ವ್ಯರ್ಥ ಕಷ್ಟಕೊಟ್ಟಂತಾಗುವನು,(೧೪)

ನಾಹೀ ಸಂಧ್ಯಾ ನಾಹೀ ಸ್ನಾನ । ನಾಹೀ ಭಜನ ದೇವತಾರ್ಚನ ।
ನಾಹೀ ಮಂತ್ರ ಜಪಧ್ಯಾನ । ಮಾನಸ ಪೂಜಾ ॥೧೫॥
ನಾಹೀ ಭಕ್ತಿ ನಾಹೀ ಪ್ರೇಮ । ನಾಹೀ ನಿಷ್ಠಾ ನಾಹೀ ನೇಮ ।
ನಾಹೀ ದೇವ ನಾಹೀ ಧರ್ಮ । ಅತೀತ ಅಭ್ಯಾಗತ ॥೧೬॥
ನಾಹೀ ಸದ್‌ಬುದ್ಧಿ ನಾಹೀ ಗುಣ । ನಾಹೀ ಕಥಾ ನಾಹೀ ಶ್ರವಣ ।
ನಾಹೀ ಅಧ್ಯಾತ್ಮ ನಿರೂಪಣ । ಏಕಿಲೇ ಕದಾ ॥೧೭॥
ನಾಹೀ ಭಲ್ಯಾಂಚೀ ಸಂಗತೀ । ನಾಹೀ ಶುದ್ಧ ಚಿತ್ತವೃತ್ತಿ ।
ನಾಹೀ ಕೈವಲ್ಯಾಚೀ ಪ್ರಾಪ್ತೀ । ಮಿಥ್ಯಾಮದೇ ॥೧೮॥
ನಾಹೀ ನೀತಿ ನಾಹೀ ನ್ಯಾಯೋ । ನಾಹೀ ಪುಣ್ಯಾಚಾ ಉಪಾಯೋ ।
ನಾಹೀ ಪರತ್ರೀಚೀ ಸೋಯ । ಯುಕ್ತಾಯುಕ್ತ ಕ್ರಿಯಾ ॥೧೯॥
ನಾಹೀ ವಿದ್ಯಾ ನಾಹೀ ವೈಭವ । ನಾಹೀ ಚಾತುರ್ಯಾಚಾ ಭಾವ ।
ನಾಹೀ ಕಳಾ ನಾಹೀ ಲಾಘವ । ರಮ್ಯ ಸರಸ್ವತೀಚೇ ॥೨೦॥
ಶಾಂತೀ ನಾಹೀ ಕ್ಷಮಾ ನಾಹೀ । ದೀಕ್ಷಾ ನಾಹೀ ಮೈತ್ರೀ ನಾಹೀ ।
ಶುಭಾಶುಭ ಕಾಂಹೀ ಚ ನಾಹೀ । ಸಾಧನಾದಿಕ ॥೨೧॥
ಸುಚಿ ನಾಹೀ ಸ್ವಧರ್ಮ ನಾಹೀ । ಆಚಾರ ನಾಹೀ ವಿಚಾರ ನಾಹೀ ।
ಆರತ್ರ ನಾಹೀ ಪರತ್ರ ನಾಹೀ । ಮುಕ್ತ ಕ್ರಿಯಾ ಮನಾಚೀ ॥೨೨॥
ಕರ್ಮ ನಾಹೀ ಉಪಾಸನಾ ನಾಹೀ । ಜ್ಞಾನ ನಾಹೀ ವೈರಾಗ್ಯ ನಾಹೀ ।
ಯೋಗ ನಾಹೀ ಧಾರಿಷ್ಟ ನಾಹೀ । ಕಾಂಹೀ ಚ ನಾಹೀ ಪಾಹಾತಾ ॥೨೩॥
ಉಪರತೀ ನಾಹೀ ತ್ಯಾಗ ನಾಹೀ । ಸಮತಾ ನಾಹೀ ಲಕ್ಷಣ ನಾಹೀ ।
ಆದರ ನಾಹೀ ಪ್ರೀತಿ ನಾಹೀ । ಪರಮೇಶ್ವರಾಚೀ ॥೨೪॥
ಪರಗುಣಾಚಾ ಸಂತೋಷ ನಾಹೀ । ಪರೋಪಕಾರೇ ಸುಖ ನಾಹೀ ।
ಹರಿಭಕ್ತೀಚಾ ಲೇಶ ನಾಹೀ । ಅಂತರ್ಯಾಮೀ ॥೨೫॥
ಐಸೆ ಪ್ರಕಾರೀಚೆ ಪಾಹಾತಾ ಜನ । ತೇ ಜೀತ ಚಿ ಪ್ರೇತಾಸಮಾನ ।
ತ್ಯಾಸೀ ನ ಕರಾವೇ ಭಾಷಣ । ಪವಿತ್ರ ಜನೀ ॥೨೬॥
ಪುಣ್ಯಸಾಮಗ್ರೀ ಪುರತೀ । ತಯಾಸೀ ಚ ಘಡೇ ಭಗವದ್ಭಕ್ತೀ ।
ಜೇ ಜೇ ಜೈಸೇ ಕರಿತೀ । ತೇ ಪಾವತೀ ತೈಸೇ ಚಿ ॥೨೭॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
ಭಕ್ತಿ ನಿರೂಪಣ ನಾಮ ಸಮಾಸ ಚವಥಾ ॥

**ಈ ರೀತಿಯಲ್ಲಿ ಜೀವಂತವಿದ್ದೂ ಸತ್ತಂತೆ ಜೀವನ ಸಾಗಿಸುವ ಮನುಷ್ಯ ಹೇಗಿರುತ್ತಾನೆಂಬುದರ ವರ್ಣನೆಯು:–** ಇವನಲ್ಲಿ, ಸ್ನಾನವಿಲ್ಲ, ಸಂಧ್ಯೆಯಿಲ್ಲ, ಭಜನೆಯಿಲ್ಲ, ದೇವಪೂಜೆ ಇಲ್ಲ, ಮಂತ್ರ, ಜಪ. ಧ್ಯಾನ–ಮಾನಸ ಪೂಜೆಗಳಿಲ್ಲ. [೧೫] ಭಕ್ತಿ ಇಲ್ಲ, ಪ್ರೇಮವಿಲ್ಲ, ನಿಷ್ಠೆಯಿಲ್ಲ, ನೇಮವಿಲ್ಲ, ದೇವರಿಲ್ಲ, ಧರ್ಮವಿಲ್ಲ, ಅತಿಥಿ ಅಭ್ಯಾಗತರಿಲ್ಲ. [೧೬] ಸದ್ಬುದ್ಧಿ ಇಲ್ಲ, ಸದ್ಗುಣವಿಲ್ಲ, ಹರಿಕಥೆ ಇಲ್ಲ, ಶ್ರವಣವಿಲ್ಲ, ಅಧ್ಯಾತ್ಮ ನಿರೂಪಣವೂ ಇಲ್ಲ. [೧೭] ಉತ್ತಮ ಗುಣದವರ ಸಂಗವಿಲ್ಲ, ಶುದ್ಧ ಚಿತ್ತ ವೃತ್ತಿ ಇಲ್ಲ, ಹಾಗೂ ಅಹಂಕಾರದಿಂದ ಇರುವ ಇವರಿಗೆ ಮೋಕ್ಷದ ಪ್ರಾಪ್ತಿಯೂ ಆಗುವದಿಲ್ಲ. [೧೮] ನೀತಿಯಿಲ್ಲ, ನ್ಯಾಯವಿಲ್ಲ ಪುಣ್ಯಗಳಿಸುವ ಉಪಾಯವಿಲ್ಲ.ಪರಲೋಕಸಾಧನವಿಲ್ಲ.ಮತ್ತುಯೋಗ್ಯಾಯೋಗ್ಯ ಕೃತಿಯ ಬಗ್ಗೆ ವಿಚಾರವಿಲ್ಲ, [೧೯] ವಿದ್ಯೆ ಇಲ್ಲ, ವೈಭವವಿಲ್ಲ, ಚಾತುರ್ಯವಿಲ್ಲ, ಕಲೆ ಇಲ್ಲ, ಮತ್ತು ಸುಂದರ ಸರಸ್ವತಿಯ ಶಬ್ದಕೌತುಕದ ಪೈಕಿ ಯಾವ ಕಾವ್ಯ ಶೋಭೆಯೂ ಇಲ್ಲ. [೨೦] ಶಾಂತಿ ಇಲ್ಲ, ಕ್ಷಮೆ ಇಲ್ಲ, ದೀಕ್ಷಾ ಗುರುವಿನಿಂದ ಸ್ವೀಕರಿಸಿದ ಒಂದು ವ್ರತವೂ ಇಲ್ಲ. ಮಿತ್ರತ್ವವಿಲ್ಲ, ಶುಭ ಅಶುಭಗಳ ವಿವೇಕವಿಲ್ಲ. ಯಾವ ಸಾಧನಾದಿಗಳಿಲ್ಲ. [೨೧] ಪಾವಿತ್ರ್ಯವಿಲ್ಲ, ಸ್ವಧರ್ಮಾಚರಣೆ ಇಲ್ಲ, ಸದಾಚಾರವಿಲ್ಲ, ಸದ್ವಿಚಾರವಿಲ್ಲ, ಇಹಲೋಕವಿಲ್ಲ ಮತ್ತು ಪರಲೋಕವೂ ಇಲ್ಲ. ಇವರಲ್ಲಿ ಕೇವಲ ಮನಬಂದಂತೆ ನಡೆಯುವ ಸ್ವೇಚ್ಛಾಚಾರದ ಓಡಾಟವಿರುವದು. [೨೨] ಕರ್ಮವಿಲ್ಲ, ಉಪಾಸನೆ ಇಲ್ಲ, ಜ್ಞಾನವಿಲ್ಲ, ವೈರಾಗ್ಯವಿಲ್ಲ, ಯೋಗವಿಲ್ಲ, ಯಾವದೇ ತರಹದ ಧೈರ್ಯವಿಲ್ಲ, ನೋಡಿದರೆ ಏನೂ ಇಲ್ಲ. [೨೩] ವಿರಕ್ತಿ ಇಲ್ಲ, ತ್ಯಾಗವಿಲ್ಲ, ಸಮಭಾವ ಉತ್ತಮ ಲಕ್ಷಣಗಳಿಲ್ಲ.ಪರಮೇಶ್ವರನಲ್ಲಿ ಪ್ರೇಮ ಆದರಗಳೇನೂ ಇಲ್ಲ.[೨೪] ಪರರ ಸದ್ಗುಣಗಳನ್ನು ನೋಡಿ ಸಂತೋಷಪಡುವದಿಲ್ಲ. ಪರೋಪಕಾರ ಮಾಡಿ ಪಡೆಯುವ ಸುಖವಿಲ್ಲ, ಇವನ ಅಂತರ್ಯಾಮಿ ಹೃದಯದಲ್ಲಿ–ಅಂತಃಕರಣದಲ್ಲಿ ಭಗವಂತನ ಭಕ್ತಿಯ ಬಗ್ಗೆ ಇಚ್ಛೆಯ ಲವಲೇಶವೂ ಇರುವದಿಲ್ಲ[೨೫] ಇಂಥ ಅಪವಿತ್ರ ಜನರನ್ನು ಬಿಡಬೇಕು. ಭಕ್ತಿ ಲಭಿಸಬೇಕಾದರೆ ಪುಣ್ಯ ಬೇಕು. ಈ ಪ್ರಕಾರದ ಜನರನ್ನು ನೋಡುವದೆಂದರೆ ಜೀವಂತ ಪ್ರೇತವನ್ನೇ ನೋಡಿದಂತೆ ಅನಿಸುವದು. ಪವಿತ್ರ ಜನರು ಇಂಥವರ ಕೂಡ ಮಾತನಾಡಲೇಬಾರದು. [೨೬] ಯಾರ ಹತ್ತಿರ ಬೇಕೆನಿಸಿದಷ್ಟು ಪುಣ್ಯ ಸಾಮಗ್ರಿ ಇರುವದೋ ಅವರಿಗೆ ಮಾತ್ರ ಭಗವಂತನ ಭಕ್ತಿ ಒದಗಿ ಬರುತ್ತದೆ. ಲಭಿಸುತ್ತದೆ. ಯಾರು ಹೇಗೆ ನಡೆಯುವರೋ, ಮತ್ತು ಎಂಥ ಕರ್ಮ ಮಾಡುವರೋ ಅದರಂತೆ ಅವರಿಗೆ ಅದರ ಫಲ ಸಿಗುವದು. [೨೭]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಎರಡನೆಯ ದಶಕದ
"ಭಕ್ತಿ ನಿರೂಪಣ" ಎಂಬ ಹೆಸರಿನ ನಾಲ್ಕನೆಯ ಸಮಾಸವು ಮುಗಿದುದು.

● ●

### ಸಮಾಸ ಪಾಂಚವಾ : ರಜೋಗುಣ ಲಕ್ಷಣ

॥ಶ್ರೀರಾಮ॥ ಮಾಗೀ ದೇಹ ತ್ರಿಗುಣಾಚಾ । ಸತ್ವರಜ ತಮಾಚಾ ।
ತ್ಯಾಮಧ್ಯೇ ಸತ್ವಾಚಾ। ಉತ್ತಮ ಗುಣ ॥೧॥

ಸತ್ವಗುಣೇ ಭಗವದ್ಭಕ್ತೀ । ರಜೋಗುಣೇ ಪುನರಾವೃತ್ತಿ ।
ತಮೋಗುಣೇ ಅಧೋಗತೀ। ಪಾವತೀ ಪ್ರಾಣೀ ॥೨॥

# ಸಮಾಸ ೫. ರಜೋಗುಣ ಲಕ್ಷಣ (ನುಡಿ ೪೨)

ಶ್ರೀ ಜ್ಞಾನೇಶ್ವರ ಮಹಾರಾಜ ಅಥವಾ ಶ್ರೀ ಸಮರ್ಥರಂಥವರು ಅವತಾರೀ ಸಂತರಾಗಿದ್ದರೂ, ಇವರು ಸಹ ದೇಹದಿಂದ ಕೊನೆಯವರೆಗೆ ತಮ್ಮ ಸ್ವಭಾವಕ್ಕನುಸಾರವಾಗಿ ನಡೆಯುವವರಾಗಿದ್ದರು. ಮನುಷ್ಯ ಮನುಷ್ಯರೆಲ್ಲರೂ ಒಂದೇ ಆಗಿದ್ದರೂ ಸಹ ಪ್ರತಿಯೊಬ್ಬ ಮನುಷ್ಯನು ತನ್ನಷ್ಟಕ್ಕೆ ತಾನೇ ಬೇರೆಯಾಗಿಯೇ ಇರುವದನ್ನು ಕಾಣುವೆವು. ಆದರೆ, ದೃಶ್ಯ ಸೃಷ್ಟಿಯ ರಚನೆಯ ಬಗ್ಗೆ ವಿಚಾರ ಮಾಡಿದಾಗ ಪ್ರತಿಯೊಂದು ವಿಶೇಷದ ಹಿಂದೆ ಸಾಮಾನ್ಯವೂ ಇರುತ್ತದೆ. ಅಂದ ಮೇಲೆ ಮನುಷ್ಯನಲ್ಲಿಯ ಭಿನ್ನತ್ವದಹಿಂದೆ ಇರುವಂಥ ಸಾಮಾನ್ಯವಾವುದು ಎಂಬ ಬಗ್ಗೆ ಪ್ರಾಚೀನ ಕಾಲದಿಂದಲೂ ವಿಚಾರವಂತರು ಶೋಧ ಮಾಡುತ್ತಲಿದ್ದಾರೆ.ಯಾವುದು ಯಾವ ಆಕಾರದಲ್ಲಿ ತೋರಿ ಬರುವದೋ ಅದೆಲ್ಲ ತ್ರಿಗುಣದಿಂದ ಕೂಡಿದ್ದಾಗಿದೆಯೆಂಬ ಸಿದ್ಧಾಂತವು ಭಾರತದಲ್ಲಿ ಕಪಿಲಾಚಾರ್ಯರಿಂದ ಬಹುಕಾಲದ ಹಿಂದೆಯೇ ಮಂಡಿಸಲ್ಪಟ್ಟಿತು. ಮತ್ತು ತತ್ವಜ್ಞಾನವು ಇದನ್ನು ಒಪ್ಪಿ ತನ್ನದನ್ನಾಗಿ ಮಾಡಿಕೊಂಡಿತು. ಕಪಿಲಾಚಾರ್ಯರ ಹೇಳಿಕೆ ಏನೆಂದರೆ,ದೃಶ್ಯವಿಶ್ವವೆಲ್ಲವೂ ಸತ್ವ·ರಜ,ತಮ,ಈ ಮೂರು ಗುಣಗಳಿಂದ ಹೆಣೆಯಲ್ಪಟ್ಟಿದೆ. ಎಂದ ಮೇಲೆ, ಮನುಷ್ಯ ಕೂಡಾ ತ್ರಿಗುಣಾತ್ಮ (ಸತ್ವ + ರಜ + ತಮ)ನಾಗಿರಲೇಬೇಕು. ಸತ್ವ ಗುಣದ ಕೂಡ ಪ್ರಕಾಶ, ಜ್ಞಾನ, ಶಾಂತಿ, ಸಮಾಧಾನ, ನಿಃಸ್ವಾರ್ಥ, ಪ್ರೇಮ ಇತ್ಯಾದಿ ಬರುವವು. ರಜೋಗುಣದ ಸಂಗಡ ಇಚ್ಛೆ, ವಾಸನಾ,ಅತಿಪರಿಶ್ರಮ,ಪ್ರಯತ್ನವಾದಿತನ,ಮೆಹನತ್,ಕಷ್ಟಪಡುವದು.ಉಲಾಢಾಲ,ಹೆಚ್ಚು ಕಡಿಮೆಯ ಕಾರಭಾರತನ ಮಾಡುವದು, ಉದ್ಯೋಗತನ, ಯೋದ್ಧಾ,ಲಢಾವು ವೃತ್ತಿ ಇತ್ಯಾದಿ ಬರುವವು. ತಮೋಗುಣದ ಸಂಗಡ ಆಲಸ್ಯ, ನಿದ್ರೆ, ಸುಸ್ತು, ಜಡತ್ವ, ಮೋಹ ಇತ್ಯಾದಿ ಇತ್ಯಾದಿ ಬರುವವು. ಅಸ್ತು. ಪ್ರತಿಯೊಬ್ಬ ಮನುಷ್ಯನಲ್ಲಿ ಮೂರು ಗುಣಗಳೂ ಇರುತ್ತವೆ–ಅಂದಹಾಗಾಯಿತು. ಆದರೆ ಈ ಮೂರರಲ್ಲಿ ಒಂದು ಇನ್ನುಳಿದ ಎರಡಕ್ಕಿಂತ ಹೆಚ್ಚಿಗಿರುತ್ತದೆ. ಈ ಹೆಚ್ಚಿಗಿನ ಗುಣದ ಪ್ರಕಾರ ಪ್ರತಿಯೊಬ್ಬ ಮನುಷ್ಯನು ಸತ್ವಗುಣಿ, ರಜೋಗುಣಿ ಅಥವಾ ತಮೋಗುಣಿ ಎಂದು ತಿಳಿಯುವರು. (ಅನ್ನುವರು).ಬ್ರಹ್ಮಜ್ಞಾನದದೃಷ್ಟಿಯಿಂದಎಲ್ಲ ಸಂತರು ಒಂದೇ ಭೂಮಿಕೆ, ಅಂತಸ್ತು ಉಳ್ಳವರು, ಇರುವರೆಂಬುದೇನೂ ಸುಳ್ಳಲ್ಲ. ಆದರೆ ಜ್ಞಾನದ ಬಗ್ಗೆ ಸಮಾನ ಅಧಿಕಾರ ಭೋಗಿಸುವ ಈ ಸಂತ ಸಮುದಾಯವು ತ್ರಿಗುಣಾತೀತವಾಗಿದ್ದುಕೊಂಡೂ ವ್ಯವಹಾರದಲ್ಲಿಯ ಇವರ ನಡವಳಿಕೆಯು ಮಾತ್ರ ಗುಣ ಪ್ರಮಾಣಾನುಸಾರವಾಗಿ ಭಿನ್ನ ಸ್ವಭಾವದವು ಮತ್ತು ಅದರಂತೆ ನಡೆಯುವ ರೀತಿಯಲ್ಲಿ ಸಹ ಭಿನ್ನಮತ ಇದ್ದದ್ದು ಕಂಡು ಬರುವದು. ಸಾಮಾನ್ಯ ಮನುಷ್ಯನು ಈ ತ್ರಿಗುಣದ ಸಾಮ್ರಾಜ್ಯದಲ್ಲಿಯೇ ತಿರುಗುತ್ತಿರುವನು. ಇದರೊಳಗಿಂದಲೇ ಈ ಮನುಷ್ಯನಿಗೆ ಪರಮಾರ್ಥದ ದಾರಿಯನ್ನು ಕ್ರಮಿಸುವದಿರುತ್ತದೆ. ಆದುದರಿಂದ ಪ್ರತಿಯೊಂದು ಗುಣದಲ್ಲಿ ಶುದ್ಧ, ಮತ್ತು ಶಬಲ ಅಂದರೆ ಲೌಕಿಕ, ಪ್ರಾಪಂಚಿಕ ಅಶುದ್ಧ, ಮಿಶ್ರವೆಂದು ಭೇದ ಮಾಡಿದರು. ಇದರಲ್ಲಿಯ ಶುದ್ಧಗುಣ ಪರಮಾರ್ಥದ ಕಡೆಗೆ ಒಯ್ಯುವದು. ಅದೇ ಶಬಲ ಗುಣವಾಗಿದ್ದರೆ ಪ್ರಪಂಚದ ಕಡೆಗೆ ಎಳೆಯುವದೆಂದು ಸಂತರು ಹೇಳಿರುವರು. ಮುಂದಿನ ಮೂರು ಸಮಾಸಗಳಲ್ಲಿ ಈ ಮೂರು ಗುಣಗಳ ಸವಿಸ್ತಾರ ವರ್ಣನೆಯನ್ನು ಶ್ರೀಸಮರ್ಥರು ಮಾಡುತ್ತಾರೆ.

## ಸಮಾಸ ೫. ರಜೋಗುಣ ಲಕ್ಷಣ

**ಗುಣಗಳೆಷ್ಟು? ಮತ್ತು ಅವು ಯಾವವು? ಅವನ್ನು ಗುರುತಿಸುವ ಬಗ್ಗೆ ಮತ್ತು ಗುಣದಲ್ಲಿಯ ಶುದ್ಧ ಮತ್ತು ಶಬಲ–ಮಿಶ್ರ–ಗಳ ಭೇದ ಇವುಗಳ ವರ್ಣನೆಯು:**–ದೇಹವು ಮೂಲತಃ ಸತ್ವ, ರಜ, ತಮ ಈ ಮೂರು ಗುಣಗಳಿಂದ ನಿರ್ಮಿತವಾಗಿದೆ. ಇವುಗಳಲ್ಲಿ ಸತ್ವಗುಣವು ಶ್ರೇಷ್ಠವಾಗಿದೆ.(೧) ಜೀವನಿಗೆ ಸತ್ವಗುಣದಿಂದ ಭಗವಂತನಲ್ಲಿ ಭಕ್ತಿ ಉಂಟಾಗುವದು. ರಜೋಗುಣದಿಂದ ಪುನಃ ಜನ್ಮ ಹೊಂದಿ ಬರಬೇಕಾಗುವದು. ತಮೋಗುಣದಿಂದ ಹೀನಯೋನಿಯಲ್ಲಿ ಜನ್ಮ ಹೊಂದಬೇಕಾಗುವದು. (೨)

ಶ್ಲೋಕ ॥ ಊರ್ಧ್ವಂ ಗಚ್ಛಂತಿ ಸತ್ವಸ್ಥಾ । ಮಧ್ಯೇ ತಿಷ್ಠಂತಿ ರಾಜಸಾಃ ॥
ಜಘನ್ಯ ಗುಣವೃತ್ತಿಸ್ಥಾ । ಅಧೋ ಗಚ್ಛಂತಿ ತಾಮಸಾಃ ॥೧॥

ತ್ಯಾಂತ ಹಿ ಶುದ್ಧ ಆಣೀ ಸಬಳ । ತೇಹಿ ಬೋಲಿಜೇತಿ ಸಕಳ ।
ಶುದ್ಧ ತೇಂ ಚಿ ಜೇ ನಿರ್ಮಳ । ಸಬಳ ಬಾಧಕ ಜಾಣಾವೇ ॥೨॥

ಶುದ್ಧ ಸಬಳಾಚೇ ಲಕ್ಷಣ । ಸಾವಧ ಪರಿಸಾ ವಿಚಕ್ಷಣ ।
ಶುದ್ಧ ತೋ ಪರಮಾರ್ಥೀ ಜಾಣ । ಸಬಳ ತೋ ಸಂಸಾರಿಕ ॥೪॥

ತಯಾ ಸಂಸಾರಿಕಾಂಚೀ ಸ್ಥಿತೀ । ದೇಹೀ ತ್ರಿಗುಣ ವರ್ತತೀ ।
ಯೇಕ ಯೇತಾ । ದೋನೀ ಜಾತೀ । ನಿಘೋನಿಯಾ ॥೫॥

ರಜತಮ ಆಣೀ ಸತ್ವ । ಯೇಣೇ ಚಿ ಚಾಲೆ ಜೀವಿತ್ವ ।
ರಜೋಗುಣಾಚೇ ಕರ್ತೃತ್ವ । ದಾಖಲಾ ಆತಾ ॥೬॥

ರಜೋಗುಣ ಯೇತಾ ಶರೀರೀ । ವರ್ತಣುಕ ಕೈಸೀ ಕರೀ ।
ಸಾವಧ ಹೋಊನೀ ಚತುರೀ । ಪರಿಸಾವೇ ॥೭॥

ಮಾಝೇ ಘರ ಮಾಝಾ ಸಂಸಾರ । ದೇವ ಕೈಂಚಾ ಆಣಿಲಾ ಥೋರ ।
ಐಸಾ ಕರೀ ಜೋ ನಿರ್ಧಾರ । ತೋ ರಜೋಗುಣ ॥೮॥

ಮಾತಾ ಪಿತಾ ಆಣೀ ಕಾಂತಾ । ಪುತ್ರ ಸುನಾ ಆಣೀ ದುಹಿತಾ ।
ಇತುಕಿಯಾಂಚೀ ವಾಹೇ ಚಿಂತಾ । ತೋ ರಜೋಗುಣ ॥೯॥

ಬರೇ ಖಾವೇ ಬರೇ ಜೇವಾವೇ । ಬರೇ ಲ್ಯಾವೇ ಬರೇ ನೇಸಾವೇ ।
ದುಸರ್ಯಾಚೇ ಅಭಿಳಾಷಾವೇ । ತೋ ರಜೋಗುಣ ॥೧೦॥

ಕೈಂಚಾ ಧರ್ಮ ಕೈಂಚೇ ದಾನ । ಕೈಂಚಾ ಜಪ ಕೈಂಚೇ ಧ್ಯಾನ ।
ವಿಚಾರೀನಾ ಪಾಪಪುಣ್ಯ । ತೋ ರಜೋಗುಣ ॥೧೧॥

ನೇಣೇ ತೀರ್ಥ ನೇಣೇ ವ್ರತ । ನೇಣೇ ಅತೀತ ಅಭ್ಯಾಗತ ।
ಅನಾಚಾರೀ ಮನೋಗತ । ತೋ ರಜೋಗುಣ ॥೧೨॥

ಧನ ಧಾನ್ಯಾಚೇ ಸಂಚಿತ । ಮನ ಹೋಯೆ ದ್ರವ್ಯಾಸಕ್ತ ।
ಅತ್ಯಂತ ಕೃಪಣ ಜೀವಿತ್ವ । ತೋ ರಜೋಗುಣ ॥೧೩॥

ಶ್ಲೋಕ:- ಊರ್ಧ್ವಂಗಚ್ಛಂತಿ ಸತ್ವಸ್ಥಾ। ಮಧ್ಯೇತಿಷ್ಠಂತಿ ರಾಜಸಾಃ ॥
ಜಘನ್ಯಗುಣವೃತ್ತಿಸ್ಥಾ। ಅಧೋಗಚ್ಛಂತಿ ತಾಮಸಾಃ : :ಛ: : (ಗೀ, ಅ.೧೪, ಶೋ. ೧೮)

**ಶ್ಲೋಕಾರ್ಥ**:- ಸತ್ವ ಪ್ರಧಾನ ಮನುಷ್ಯನಿಗೆ ಶ್ರೇಷ್ಠವಾದ ಮೇಲ್ತರಗತಿಯು [ಅವಸ್ಥೆ] ದೊರಕುವದು. ರಜ ಪ್ರಧಾನ ಮನುಷ್ಯನು ಮಧ್ಯಮ ತರಗತಿಯಲ್ಲಿ ಇರುವನು. ಹೀನಗುಣವಿದ್ದ ತಮ ಪ್ರಧಾನ ಸ್ವಭಾವದ ಮನುಷ್ಯನು ಕೆಳದರ್ಜೆಯಲ್ಲಿ ಹೋಗುವನು. (**ಗೀತಾ** ಅ ೧೪-೧೮):– ಗುಣಗಳಲ್ಲಿ ಶುದ್ಧ-ಪಾರಮಾರ್ಥಿಕ ಮತ್ತು ಶಬಲ-ಲೌಕಿಕ ಪ್ರಾಪಂಚಿಕ ಹೀಗೆ ಭೇದವಿದೆ. ಇದನ್ನೆಲ್ಲ ಈಗ ಹೇಳುವೆನು. ಯಾವುದು ನಿರ್ಮಲವಾಗಿದೆಯೋ ಅದು ಶುದ್ಧ. ಮತ್ತು ಯಾವದು ಗೌಣವಾದದ್ದು (ಮಿಶ್ರಗುಣದ್ದು) ಇರುವದೋ ಅದು ಶಬಲವು.ಶಬಲವುಬಾಧಕವಾದದ್ದು(೩)ಶುದ್ಧ ಹಾಗುಶಬಲಇವುಗಳ ಲಕ್ಷಣವಿವರಿಸುವೆನು.ವಿಚಾರವಂತರು ಇವುಗಳನ್ನು ಲಕ್ಷಗೊಟ್ಟು ಕೇಳಬೇಕು. ಶುದ್ಧ ಗುಣ ಪಾರಮಾರ್ಥಿಕವಿದ್ದರೆ, ಶಬಲ ಗುಣವು ಸಂಸಾರಿಕವಿರುತ್ತದೆ. (೪) ಪ್ರಾಪಂಚಿಕ ಮನುಷ್ಯನ ಸ್ಥಿತಿ ಯಾವ ಪ್ರಕಾರವಾಗಿರುವದೆಂದರೆ, ಅವನ ದೇಹದಲ್ಲಿ ಮೂರು ಗುಣಗಳು ಕೆಲಸ (ಕಾರ್ಯ) ಮಾಡುವವು. ಒಂದು ಗುಣದ ಜೋರು ಪ್ರಬಲವಾದರೆ ಉಳಿದೆರಡು ಹಿಂದೆ ಸರಿಯುವವು. (೫) ಸತ್ವ, ರಜ ಮತ್ತು ತಮ ಈ ಮೂರೂ ಗುಣಗಳ ಯೋಗದಿಂದ ಜೀವನ ನಡೆಯುತ್ತದೆ. ಮೊದಲಿಗೆ ರಜೋ ಗುಣದ ಕಾರ್ಯ ಪ್ರಭಾವ ಹೇಗೆ ನಡೆಯುವದು, ಇದರಬಗ್ಗೆ ತಿಳಿಸುವೆನು. (೬) ಜೀವನದಲ್ಲಿ ಇಚ್ಛಾಶಕ್ತಿಗೊಂದು ಗತಿ ಇರುವದು. ಪರಿಸ್ಥಿತಿಯ ಮೇಲೆ ಸ್ವಾಮಿತ್ವ ಮೆರೆಯಿಸುವ ಉತ್ಕಟ ಇಚ್ಛೆ ಇರುವದು ಆಗಾಗ ಪರಿವರ್ತನೆ ಹೊಂದುವ ಉತ್ಸುಕತೆ ಇರುವದು. ಇವು ರಜೋಗುಣದ ವ್ಯಕ್ತ ರೂಪಗಳೆಂದು ತಿಳಿಯಬೇಕು. ಯಾವುದೇ ಒಂದು ದೊಡ್ಡ ಧ್ಯೇಯ ಸಾಧಿಸಬೇಕಾದರೆ ರಜೋಗುಣದ್ದೇ ಹೆಚ್ಚಿನ ಸಹಾಯ ಬೇಕಾಗುವದು. ಆದರೆ ಈ ರಜೋಗುಣವು ಪ್ರಪಂಚದ ಕಡೆಗೆ ಹೊರಳಿದರೆ ಆಗ ಅದರ ದುರುಪಯೋಗವಾಗುವದು. **ಅದರ ವರ್ಣನೆಯನ್ನು ಶ್ರೀಸಮರ್ಥರು ಮಾಡುವರು**;–ಶರೀರದಲ್ಲಿರಜೋಗುಣಪ್ರಬಲವಾಯಿತೆಂದರೆಮನುಷ್ಯನುಹೇಗೆವರ್ತಿಸುವನೆಂಬುದು ಲಕ್ಷ್ಯಪೂರ್ವಕವಾಗಿ ಜಾಣ ಶ್ರೋತೃಗಳು ಕೇಳಬೇಕು. (೭) ಈ ಮನೆ ನನ್ನದು, ಈ ಸಂಸಾರ ನನ್ನದು, ಇದೇ ಶ್ರೇಷ್ಠವು. ಇದರಲ್ಲಿ ದೇವರು ಶ್ರೇಷ್ಠನೆಂಬುದನ್ನು ಎಲ್ಲಿಂದ ತಂದಿರಿ.?ಹೀಗೆ ನಿಶ್ಚಿತವಾಗಿ ನಂಬಿ ನುಡಿಯುವವನು ರಜೋಗುಣಿಯು. (೮) ತಾಯಿ, ತಂದೆ, ಹೆಂಡತಿ, ಮಗ, ಸೊಸೆ ಮತ್ತು ಮಗಳು ಇವರೇ ನನ್ನವರೆಂದು, ಇವರ ಬಗ್ಗೆ ಕಾಳಜಿ ಮಾಡುವದು ಮತ್ತು ಇವರ ಚಿಂತೆ ಹೊತ್ತಿರುವದೇ ರಜೋಗುಣವು. (೯) ಚನ್ನಾಗಿರುವದನ್ನೇ ತಿನ್ನಬೇಕು. ಚನ್ನಾಗಿರುವದನ್ನೇ ಊಟ ಮಾಡಬೇಕು. ಚನ್ನಾಗಿರುವುದೇ ಮೈಮೇಲೆ ಇರಬೇಕು.ಚನ್ನಾಗಿರುವದನ್ನೇ ಉಡಬೇಕು. ಮತ್ತು ಎರಡನೆಯವರದೆಲ್ಲ ತನಗೆ ಆಗಬೇಕು ಎಂದು ಬಯಸುವದು ರಜೋಗುಣವು (೧೦) ಎಲ್ಲಿಯ ಧರ್ಮ, ಎಲ್ಲಿಯ ದಾನ, ಎಲ್ಲಿಯ ಜಪ, ಎಲ್ಲಿಯ ತಪ-ಧ್ಯಾನ, ಹೀಗೆ ಅನ್ನುವವ ಮತ್ತುಪರಮಾರ್ಥ ಹಾಗೂ ಪಾಪ ಪುಣ್ಯಗಳ ಬಗ್ಗೆ ವಿಚಾರವನ್ನೇ ಮಾಡದವನು ರಜೋಗುಣದವನು. (೧೧) ಯಾವನು ತೀರ್ಥ ವ್ರತ, ಅತಿಥಿ, ಅಭ್ಯಾಗತರ ಬಗ್ಗೆ ತಿಳಿದಿರುವದಿಲ್ಲವೋ ಅಂಥವನು ಮತ್ತು ಅಭ್ಯಾಗತರನ್ನು ಆದರಿಸದವನು ಮತ್ತು ಅನಾಚಾರದ ಕಡೆಗೆ ಯಾವನಮನಸ್ಸುಸ್ವಭಾವತಃ ಸ್ವಾಭಾವಿಕವಾಗಿಹರಿಯುವದೋಅವನುರಜೋಗುಣದವನು.(೧೨) ಯಾವನ ಮನೆಯಲ್ಲಿ ಧನ ಹಾಗೂ ಧಾನ್ಯ ಸಾಕಷ್ಟು ಸಂಗ್ರಹವಿದ್ದೂ ಅವನ ಮನಸ್ಸು ಹಣದಲ್ಲಿಯೇ ಆಸಕ್ತವಾಗಿರುತ್ತದೆಯೋ ಮತ್ತು ಅತಿಶಯ ಜಿಪುಣತನದಿಂದ ಜೀವಿಸುವವನೋ ಅವನು ರಜೋಗುಣದವನು.(೧೩)

ಮೀ ತರುಣ ಮೀ ಸುಂದರ । ಮೀ ಬಳಾಢ್ಯ ಮೀ ಚತುರ ।
ಮೀ ಸಕಳಾ ಮಧ್ಯೇ ಥೋರ । ಮ್ಹಣೆ ತೋ ರಜೋಗುಣ ॥೧೪॥
ಮಾಝಾ ದೇಶ ಮಾಝಾ ಗಾಂವ । ಮಾಝಾ ವಾಡಾ ಮಾಝಾ ಠಾವ ।
ಐಸೀ ಮನೀ ಧರೀ ಹಾಂವ । ತೋ ರಜೋಗುಣ ॥೧೫॥
ದುಸರ್‍ಯಾಚೇ ಸರ್ವ ಜಾವೇ । ಮಾಝೇ ಚಿ ಬರೇ ಅಸಾವೇ ।
ಐಸೇ ಆಠವೇ ಸ್ವಭಾವೇ । ತೋ ರಜೋಗುಣ ॥೧೬॥
ಕಪಟ ಆಣೀ ಮತ್ಸರ । ಉಠೇ ದೇಹೀ ತಿರಸ್ಕಾರ ।
ಅಥವಾ ಕಾಮಾಚಾ ವಿಕಾರ । ತೋ ರಜೋಗುಣ ॥೧೭॥
ಬಾಳಕಾವರೀ ಮಮತಾ । ಪ್ರೀತೀನೇ ಆವಡೇ ಕಾಂತಾ।
ಲೋಭ ವಾಟೇ ಸಮಸ್ತಾ । ತೋ ರಜೋಗುಣ ॥೧೮॥
ಜಿವಲಗಾಂಚೀ ಖಂತೀ । ಜೇಣೇ ಕಾಳೇ ವಾಟೇ ಚಿತ್ತೀ ।
ತೇಣೇ ಕಾಳೇ ಸೀಘ್ರಗತೀ । ರಜೋಗುಣ ಆಲಾ ॥೧೯॥
ಸಂಸಾರಾಚೇ ಬಹುತ ಕಷ್ಟ। ಕೈಸಾ ಹೋಈಲ ಸೇವಟ ।
ಮನಾಸ ಆಠವೇ ಸಂಕಟ । ತೋ ರಜೋಗುಣ ॥೨೦॥
ಕಾ ಮಾಗೇ ಜೇ ಜೇ ಭೋಗಿಲೇ । ತೇ ತೇ ಮನೀ ಆಠವಲೇ ।
ದುಃಖ ಅತ್ಯಂತ ವಾಟಲೇ । ತೋ ರಜೋಗುಣ ॥೨೧॥
ವೈಭವ ದೇಖೋನ ದೃಷ್ಟೀ । ಆವಡೀ ಉಪಜಲೀ ಪೋಟೀ ।
ಆಶಾಗುಣೇ ಹಿಂಪುಟೀ । ಕರೀ ತೋ ರಜೋಗುಣ ॥೨೨॥
ಜೇ ಜೇ ದೃಷ್ಟೀ ಪಡಿಲೇ । ತೇ ತೇ ಮನೇ ಮಾಗೀತಲೇ ।
ಲಭ್ಯ ನಸ್ತಾ ದುಃಖ ಜಾಲೇ । ತೋ ರಜೋಗುಣ ॥೨೩॥
ವಿನೋದಾರ್ಥೀ ಭರೇ ಮನ । ಶೃಂಘಾರಿಕ ಕರೀ ಗಾಯೆನ ।
ರಾಗ ರಂಗತಾನ ಮಾನ । ತೋ ರಜೋಗುಣ ॥೨೪॥
ಟವಾಳೀ ಥವಾಳೀ ನಿಂದಾ । ಸಾಂಗಣೇ ಘಡೇ ವೆವಾದಾ ।
ಹಾಸ್ಯ ವಿನೋದ ಕರೀ ಸರ್ವದಾ । ತೋ ರಜೋಗುಣ ॥೨೫॥
ಆಳಸ ಉಠೆ ಪ್ರಬಳ । ಕರ್ಮಣುಕೇಚಾ ನಾನಾಖೇಳ ।
ಕಾ ಉಪಭೋಗಾಚೇ ಗೋಂಧಳ । ತೋ ರಜೋಗುಣ ॥೨೬॥
ಕಳಾವಂತ ಬಹುರೂಪೀ । ನಟಾವಲೋಕೀ ಸಾಕ್ಷಪೀ ।
ನಾನಾ ಖೇಳೀ ದಾನ ಅರ್ಪೀ । ತೋ ರಜೋಗುಣ ॥೨೭॥

ನಾನು ತರುಣ, ನಾನು ಅತಿಸುಂದರ, ನಾನು ಬಲಾಢ್ಯ, ನಾನು ಚತುರ, ಅಲ್ಲದೇ ಎಲ್ಲರಿಗಿಂತ ನಾನೇ ಶ್ರೇಷ್ಠ ನೆಂದು ತಿಳಿಯುವವನು ರಜೋಗುಣದವನು.(೧೪) ನನ್ನದೇಶ, ನನ್ನ ಊರು, ನನ್ನಮನೆ, ನನ್ನ ವಾಡೆ, ಇದು ನನ್ನ ಸ್ಥಳವೆಂದು ಮನದಲ್ಲಿ ಅಭಿಮಾನ ಪಡುವವನು ರಜೋಗುಣದವನು. (೧೫) ರಜೋಗುಣಿಯು ಮನುಷ್ಯ ಪ್ರಪಂಚದಲ್ಲಿ ನಾನು, ನನ್ನದು ಎಂಬ ಅಹಂಕಾರಮಮಕಾರಗಳಿಂದ ಯಾವ ಪ್ರಕಾರವಾಗಿ ಸಿಕ್ಕಿಕೊಂಡಿರುವನೆಂಬುದರ ವರ್ಣನೆಯು ಆಯಿತು. **ಇನ್ನು ಮೇಲೆ ವಾಸನಾದಲ್ಲಿ ತೊಡಕಿಕೊಂಡದ್ದರಿಂದ ಅವನು ಹೇಗೆ ದು:ಖ ಭೋಗಿಸುವನೆಂಬುದನ್ನು ಹೇಳುವರು**:-ಎರಡನೆಯವರದೆಲ್ಲಇಲ್ಲದಂತಾಗಬೇಕು.ತನ್ನದು ಮಾತ್ರಚನ್ನಾಗಿರಬೇಕು. ಹೀಗೆ ಸ್ವಾಭಾವಿಕವಾಗಿ ಇಚ್ಛಿಸುವವನು ರಜೋಗುಣದವನು. (೧೬) ಯಾರಲ್ಲಿ ಕಪಟಗುಣ ಇರುವದು ಮತ್ತು ಮತ್ಸರದಿಂದ ಕಾಣುವದು,ಯಾರ ಅಂತರ್ಯಾಮ ಅಂದರೆ ಅಂತರಂಗದಲ್ಲಿ ಕಾಮವಾಸನೆ ಉದ್ಭವಿಸುವದೋ ಅವರು ಮತ್ತು ಎರಡನೆಯವರನ್ನು ತುಚ್ಛವಾಗಿ ಕಾಣುವವರು ಈ ಎಲ್ಲರೂ ರಜೋಗುಣದವರು (೧೭) ತನ್ನ ಮಕ್ಕಳ ಮೇಲಿನ ಮಾಯೆ, ಹೆಂಡತಿಯ ಮೇಲಿನಅನಿವಾರಪ್ರೀತಿ, ಮತ್ತು ಆಪ್ತೇಷ್ಟರ ಬಗ್ಗೆ ಹಿಗ್ಗು, ಅಭಿಮಾನಗಳ ಮೇಲೆ ಲೋಭವಿರುವದು. ಇವೆಲ್ಲ ರಜೋಗುಣದ ಲಕ್ಷಣಗಳು. (೧೮) ತನ್ನ ಪ್ರೀತಿಯ ಸಮೀಪದವರು ಆಪ್ತ ಸಂಬಂಧಿ ಗಳ ಸಲುವಾಗಿ ಚಿಂತೆಯಾಗಿ ದುಃಖಬರುವದು. ಆಗ ರಜೋಗುಣವು ಜೋರಿನಿಂದ ಅವನ ಒಳಗೆ ಪ್ರವೇಶ ಮಾಡಿತೆಂದು ತಿಳಿಯಬೇಕು. (೧೯). ಸಂಸಾರದಲ್ಲಿ ಬಹಳ ಕಷ್ಟವಿದೆ. ಇದು ಹೇಗೆ ದಂಡೆಗೆ ಹತ್ತೀತು ? ಎಂಬ ವಿಚಾರದಿಂದ ಮನಸ್ಸಿನಲ್ಲಿ ವಿಪತ್ತುಗಳ ವಿಚಾರ ಬಂದು ದುಃಖ-ಸಂಕಟವಾಗುತ್ತದೆ. ಇದು ರಜೋಗುಣವು. (೨೦) ಹಿಂದೆ ಯಾವ ಸುಖಗಳ ಭೋಗ ಭೋಗಿಸಿದೆವೆಂಬುದರ ನೆನಪನ್ನು ಮನದಲ್ಲಿ ಮಾಡಿಕೊಂಡು ಈಗ ಆ ಭೋಗಗಳು ಇಲ್ಲವಲ್ಲಾ ಎಂದು ಹಳಹಳಿಸಿ ದುಃಖಿಸುವದು ರಜೋಗುಣವು. (೨೧) ಎರಡನೆಯವರ ವೈಭವ ನೋಡಿ ತನಗೂ ಇದು ಇರಬೇಕೆಂಬ ಇಚ್ಛೆ ಮನದಲ್ಲಿ ಉಂಟಾಗಿ ಈ ಆಶೆಗಾಗಿ ಸಂಕಟಪಡುವವನು ರಜೋಗುಣಿಯು. (೨೨) ಕಣ್ಣಿಗೆ ಕಂಡದ್ದೆಲ್ಲ ತನಗೆ ಬೇಕು ಎಂದು ಅನ್ನುವವ ಮತ್ತು ಮನಸ್ಸು ಬೇಡಿತು, ಆದರೆ ಅದು ಸಿಗದಿದ್ದಾಗ ಯಾವ ದುಃಖ ಆಗುವದೋ ಅದು ರಜೋಗುಣವು. (೨೩) ಯಾರ ಮನಸ್ಸು ವಿನೋದ ವೃತ್ತಿಯಿಂದ ತುಂಬಿರುವದೋ ಅಂಥವರು ಮತ್ತು ಶೃಂಗಾರಿಕ ಗಾಯನ ಮಾಡುವವರು, ರಾಗ, ಸ್ವರ, ತಾಳ, ತಾನ, ಮತ್ತು ಹಾವಭಾವಗಳಲ್ಲಿ ತಲ್ಲೀನರಾಗಿರುವರೆಲ್ಲ ರಜೋಗುಣಗಳಿಂದ ತುಂಬಿದವರು. (೨೪) ಎರಡನೆಯವರಿಗೆ ಬಿರುಸು ಮಾತನಾಡುವದು. ಉಡಾಳತನದ ಕುಚೇಷ್ಟೆ ಮಾಡುವದು. ಫಜೀತಿ, ಮಸ್ಕರಿ, ನಿಂದಾ ಮಾಡುವದು, ಸದಾ ಸರ್ವ ಕಾಲ ಹಾಸ್ಯ, ವಿನೋದ ಮಾಡುವವನು, ಇವನ ಮಾತಿನಿಂದ ವಾದ ಉತ್ಪನ್ನವಾಗಿ ಅತಿರೇಕಕ್ಕೆ ಹೋಗುವದು. ಇವೆಲ್ಲ ರಜೋಗುಣದ ಲಕ್ಷಣಗಳು. (೨೫) ಅತಿಶಯ ಆಲಸ್ಯ ತುಂಬಿರುವವ, ನಾನಾ ಪ್ರಕಾರದ ಮನರಂಜನೆಯ ಆಟ ಆಡುವವ, ಅಥವಾ ನಾನಾ ದುರ್ವ್ಯಸನದ ಗೊಂದಲದ ತಿಕ್ಕಾಟಗಳ ದ್ವಂದ್ವ ನಡೆಯುವದು, ಸದಾಕಾಲ ವಿಲಾಸೀ ವಿಷಯದ ಧಾಂದಲೇ ನಡೆಯುವದು ಇವೆಲ್ಲ ರಜೋಗುಣ. (೨೬) ಯಾವನು ಕಲಾವಂತ, ಅನೇಕ ಪ್ರಕಾರದ ಸೋಗು ಹಾಕುವವ, ನಾಟಕ ನೋಡುವ ಹವ್ಯಾಸಿ, ನಾನಾ ತರಹದ ಆಟಗಳಿಗೆ ದಾನ ಕೊಡುವವ, ಇದಕ್ಕಾಗಿ ದುಡ್ಡು ಖರ್ಚು ಮಾಡುವವರೆಲ್ಲ ರಜೋಗುಣಿಗಳು. (೨೭)

ಉನ್ಮತ್ತ ದ್ರವ್ಯಾವರೀ ಅತಿ ಪ್ರೀತೀ । ಗ್ರಾಮಜ್ಯ ಆಠವೇ ಚಿತ್ತೀ ।
ಆವಡೇ ನೀ ಚಾಚೀ ಸಂಗತೀ । ತೋ ರಜೋಗುಣ ॥೨೮॥

ತಸ್ಕರ ವಿದ್ಯಾ ಜೀವೀ ಉಠೇ । ಪರನ್ಯೂನ ಬೋಲಾವೇ ವಾಟೇ ।
ನಿತ್ಯ ನೇಮಾಸ ಮನವಿಟೇ । ತೋ ರಜೋಗುಣ ॥೨೯॥

ದೇವಕಾರಣೀ ಲಾಜಾಳು । ಉದರಾಲಾಗೀ ಕಷ್ಟಾಳು ।
ಪ್ರಪಂಚೀ ಜೋ ಸ್ನೇಹಾಳು । ತೋ ರಜೋಗುಣ ॥೩೦॥

ಗೋಡಗ್ರಾಸೀ ಆಳಕೇಪಣ । ಅತ್ಯಾದರೇ ಪಿಂಡಪೋಷಣ ।
ರಜೋಗುಣೇ ಉಪೋಷಣ । ಕೇಲೇ ನ ವಚೇ ॥೩೧॥

ಶೃಂಗಾರಿಕ ತೇ ಆವಡೇ। ಭಕ್ತೀ ವೈರಾಗ್ಯ ನಾವಡೇ ।
ಕಳಾಲಾಘವೀ ಪವಾಡೇ। ತೋ ರಜೋಗುಣ ॥೩೨॥

ನೇಣೋನಿಯಾ ಪರಮಾತ್ಮಾ । ಸಕಳ ಪದಾರ್ಥೀ ಪ್ರೇಮಾ ।
ಬಳಾತ್ಕಾರೇ ಘಾಲೀ ಜನ್ಮಾ । ತೋ ರಜೋಗುಣ ॥೩೩॥

ಅಸೋ ಐಸಾ ರಜೋಗುಣ । ಲೋಭೇ ದಾವೀ ಜನ್ಮಮರಣ ।
ಪ್ರಪಂಚೀ ತೋ ಸಬಳ ಜಾಣ । ದಾರುಣ ದುಃಖ ಭೋಗವೀ ॥೩೪॥

ಆತಾ ರಜೋಗುಣ ಹಾ ಸುಟೇನಾ । ಸಂಸಾರಿಕ ಹೇ ತುಟೇನಾ ।
ಪ್ರಪಂಚೀ ಗುಂತಲೀ ವಾಸನಾ । ಯಾಸ ಉಪಾಯ ಕೋಣ ॥೩೫॥

ಉಪಾಯೋ ಯೇಕ ಭಗವದ್ಭಕ್ತೀ । ಜರೀ ಠಾಕೇನಾ ವಿರಕ್ತೀ ।
ತರೀ ಯಥಾನುಶಕ್ತೀ । ಭಜನ ಕರಾವೇ ॥೩೬॥

ಕಾಯಾ ವಾಚಾ ಆಣೀ ಮನೇ । ಪತ್ರೇ ಪುಷ್ಪೇ ಫಳೇ ಜೀವನೇ ।
ಈಶ್ವರೀ ಅರ್ಪೂನಿಯಾ ಮನೇ । ಸಾರ್ಥಕ ಕರಾವೇ ॥೩೭॥

ಯಥಾನುಶಕ್ತೀ ದಾನ ಪುಣ್ಯ । ಪರೀ ಭಗವಂತೀ ಅನನ್ಯ ।
ಸುಖ ದುಃಖೇ ಪರೀ ಚಿಂತನ । ದೇವಾಚೇ ಚಿ ಕರಾವೇ ॥೩೮॥

ಆದಿ ಅಂತೀ ಯೇಕ ದೇವ । ಮಧ್ಯೇ ಚಿ ಲಾವಿಲೀ ಮಾವ ।
ಮ್ಹಣೋನಿಯಾ ಪೂರ್ಣ ಭಾವ । ಭಗವಂತೀ ಅಸಾವಾ ॥೩೯॥

ಐಸಾ ಸಬಳ ರಜೋಗುಣ । ಸಂಕ್ಷೇಪೇ ಕೇಲೇ ಕಥನ ।
ಆತಾ ಶುದ್ಧ ತೋ ತೂ ಜಾಣ । ಪರಮಾರ್ಥಿಕ ॥೪೦॥

ಅಮಲು ಬರುವ, ನಿಶೆ ಆಗುವ, ಮದ್ಯ, ಗಾಂಜಾ, ಅಫು ಇತ್ಯಾದಿ ಪದಾರ್ಥಗಳ ಮೇಲೆ ಅತಿಶಯ ಪ್ರೇಮ, ಪುಂಡ ಪೋಕರಿತನ ಅಥವಾ ಊರ ಭಾನಗಡಿಯ ವಿಷಯದಲ್ಲಿ ಸದಾ ಧ್ಯಾಸ, ಹಲಕಟ್ಟ ಜನರ ಬಗ್ಗೆ ಪ್ರೀತಿ, ಶರೀರ ಸುಖದ ವಿಚಾರ, ಇವು ಇದ್ದಲ್ಲಿ ರಜೋಗುಣವಿರುತ್ತದೆ. (೨೮) ರಜೋಗುಣಿ ಮನುಷ್ಯನು ಸದಾ ಪ್ರಪಂಚದಲ್ಲಿ ಸಿಕ್ಕಿಕೊಂಡಿರುವನು. ಇಷ್ಟೇ ಅಲ್ಲ, ತನ್ನ ದೇಹ ವ ಇಂದ್ರಿಯಗಳಿಗೆ ಸುಖ ಕೊಡುವ ಕೆಲಸದಲ್ಲಿ ಸದಾ ಮಗ್ನನಿರುವನು. ಇಷ್ಟೆಲ್ಲ ಆದ ಮೇಲೆ ಅವನಿಗೆ ಭಕ್ತಿ ವೈರಾಗ್ಯ ಸತ್‌ಸಮಾಗಮ ಇವೆಲ್ಲ ಬೇಕೆನಿಸುವದಿಲ್ಲವೆಂದು ಶ್ರೀ ಸಮರ್ಥರು ಹೇಳುತ್ತಾರೆ. ತುಡುಗು ಮಾಡುವ ವಿದ್ಯೆ ಕಲಿಯಬೇಕೆಂಬ ವಿಚಾರ ಮನದಲ್ಲಿ ಬರುವದು. ಇನ್ನೊಬ್ಬರ ನ್ಯೂನತೆಗಳನ್ನು ಅಥವಾ ದೋಷಗಳನ್ನು ಅವರೆದುರಿಗೆ ಹೇಳಿಬಿಡಬೇಕೆಂಬ ಮನಸ್ಸಾಗುವದು ಮತ್ತು ಉಪಾಸನೆಯ ನಿತ್ಯ ನೇಮಗಳನ್ನು ಮಾಡುವದಕ್ಕೆ ಬೇಸರಪಡುವದು ಅಥವಾ ಮನಸ್ಸಾಗದಿರುವದು, ಇವೆಲ್ಲ ರಜೋಗುಣಗಳು. (೨೯) ದೇವರ ಕೆಲಸ ಕಾರ್ಯ ಮಾಡಲಿಕ್ಕೆ ನಾಚುವದು, ದುರಭಿಮಾನ ಅಡ್ಡ ಬರುವದು, ಆದರೆ ಹೊಟ್ಟೆಯ ಪಾಡಿಗಾಗಿ ಸಾಕಷ್ಟು ಕಷ್ಟಪಡುವದು ಮತ್ತು ಪ್ರಪಂಚದಲ್ಲಿಯೇ ಯಾರ ಮನಸ್ಸು ಸದಾ ತೊಡಗಿ ಕೊಂಡಿರುವದೋ ಇವೆಲ್ಲ ರಜೋಗುಣಗಳು. (೩೦) ಸವಿ ಸವಿ ತಿನಸಿನಮೇಲೆ, ಸಿಹಿ ತಿನಸಿನ ಮೇಲೆ ಬಹಳ ಪ್ರೀತಿ, ದೇಹ ಬೆಳೆಸುವಲ್ಲಿ, ಸಂರಕ್ಷಿಸುವಲ್ಲಿ ಬಹಳಷ್ಟು ಆದರವಿರುತ್ತದೆ. ಆದರೆ ಉಪವಾಸ ಮಾಡುವದಕ್ಕೆ ಮನಸ್ಸಿಲ್ಲ. ಸಹನವಾಗುವದಿಲ್ಲ. ಇವೆಲ್ಲ ರಜೋಗುಣಗಳು. (೩೧) ಶೃಂಗಾರಿಕ ವಿಷಯದಲ್ಲಿ ಸ್ವಾಭಾವಿಕವಾದ ಪ್ರೇಮವಿರುವದು. ಭಕ್ತಿ ಮತ್ತು ವೈರಾಗ್ಯಗಳಲ್ಲಿ ಸ್ವಾಭಾವಿಕವಾಗಿ ಮನಸ್ಸಿನಿಂದ ತಿರಸ್ಕಾರ ಬೇಸರವಿರುವದು. ಮತ್ತು ಕಲೆಯ ಕೌತುಕವನ್ನು ಬಹು ರಸಿಕತನದಿಂದ ಮಾಡುವಲ್ಲಿ ಚತುರತೆ, ಇವೆಲ್ಲ ರಜೋಗುಣಗಳು. (೩೨) ಪರಮಾತ್ಮನ ಜ್ಞಾನವಿಲ್ಲದ್ದರಿಂದಲೇ ಎಲ್ಲ ದೃಶ್ಯ ವಸ್ತುಗಳ ಮೇಲೆ ನಿಜವಾದ ಪ್ರೇಮವಿರುತ್ತದೆ. ಮತ್ತು ಪುನಃ ಜನ್ಮ ತಳೆಯುವದು ಬೇಡವಾಗಿದ್ದರೂ ಅದನ್ನು ಜುಲುಮೆ, ಜಬರದಸ್ತಿಯಿಂದ ತೆಗೆದುಕೊಳ್ಳಬೇಕಾಗುತ್ತದೆ. ಇದು ರಜೋಗುಣವು. (೩೩) ಅಸ್ತು, ರಜೋಗುಣವೆಂದರೆ ಅದು ಹೀಗಿದೆ. ಮನಸ್ಸು ಆಸಕ್ತಿಯಲ್ಲಿ, ವಾಸನಾದಲ್ಲಿ ತೊಡಗುವದರಿಂದ ಜನ್ಮ ಮರಣ ಭೋಗಿಸುವದಕ್ಕೆ ಕಾರಣವಾಗುವದು. ಪ್ರಪಂಚದಲ್ಲಿ ರಜೋಗುಣದ ಪ್ರಾಬಲ್ಯ ಬಹಳವಿದ್ದು ಅದು ಬಹಳ ದುಃಖ ಭೋಗಿಸಲಿಕ್ಕೆ ಹಚ್ಚುವದು. (೩೪) ರಜೋಗುಣದಿಂದ ಆಸಕ್ತಿ ಹೆಚ್ಚಾಗಿ ಪ್ರಪಂಚದಲ್ಲಿ ನಮ್ಮನ್ನು ಕಟ್ಟಿಹಾಕಿದೆ. ಅಲ್ಲಿಂದ ಬಿಡುಗಡೆ ಆಗಬೇಕಾದರೆ ಭಕ್ತಿಯೇ ನಿಜವಾದ ಉಪಾಯವಾಗಿದೆ. ನಮ್ಮ ಮನಸ್ಸನ್ನು ಭಗವಂತನಿಗೆ ಅರ್ಪಿಸಿ ಅವನ ಮೇಲೆ ಪ್ರೇಮ ಮಾಡಲಿಕ್ಕೆ ಕಲಿಯಬೇಕು. ಶಬಲ (ಅಶುದ್ಧ ಮಿಶ್ರ) ರಜೋಗುಣವು ಸಂಸಾರಿಕರನ್ನಾಗಿ ಮಾಡುವದು. ಆದರೆ ಶುದ್ಧ (ಸಾತ್ವಿಕ) ರಜೋಗುಣವು ಭಕ್ತಿಯ ಮಾರ್ಗ ತೋರುವದು. ಈ ರಜೋಗುಣವೇನೂ ನಮ್ಮನ್ನು ಬಿಟ್ಟರೂ ಬಿಡಲೊಲ್ಲದು. ಸಂಸಾರದ ಬಂಧನವು ಸಹ ಹರಿಯಲೊಲ್ಲದು. ಆಸಕ್ತಿ (ವಾಸನಾ)ಯಂತೂ ಪ್ರಪಂಚದಲ್ಲಿಯೇ ನೆಲೆಗೊಂಡಿದೆ ಯೆಂದ ಮೇಲೆ ಇದಕ್ಕೆ ಯಾವ ಉಪಾಯ ಮಾಡಬೇಕು ? (೩೫) ಇದಕ್ಕೆ ಖಾತ್ರಿಯಾದ ಒಂದು ಉಪಾಯವಿದೆ. ಅದು ಯಾವದೆಂದರೆ, ಭಗವಂತನ ಭಕ್ತಿಯನ್ನು ಮಾಡುವದು, ಈ ಭಕ್ತಿ ಸಾಧಿಸಬೇಕಾದರೆ ವೈರಾಗ್ಯಬೇಕು. ಅಂದರೆ ಪ್ರಪಂಚದಲ್ಲಿ ಮನಸ್ಸು ಆಸಕ್ತವಾಗಿರಬಾರದು. ಒಂದು ವೇಳೆ ಇದು ಪೂರ್ಣ ಸಾಧಿಸದಿದ್ದರೆ ನಿಮ್ಮ ಶಕ್ತಿಯ ಪ್ರಕಾರ ಭಗವಂತನ ಭಜನೆ ಮಾಡಬೇಕು. (೩೬) ಶರೀರ, ವಾಣಿ, ಮನಸ್ಸು (ಕಾಯಾ, ವಾಚಾ, ಮನಸ್ಸಿನಿಂದ)ಗಳಿಂದ ಎಲೆ, ಹೂವು, ಹಣ್ಣು, ನೀರುಗಳಿಂದ ಈಶ್ವರನಿಗೆ ಶುದ್ಧ ಮನದಿಂದ ಅರ್ಪಿಸಬೇಕು. ಮತ್ತು ಜೀವನ ಸಾರ್ಥಕ ಮಾಡಿಕೊಳ್ಳಬೇಕು. (೩೭) ನಿಮಗೆ ಶಕ್ಯವಾದಷ್ಟು ದಾನ-ಪುಣ್ಯಕಾರ್ಯ ಮಾಡಬೇಕು. ಮುಖ್ಯವಾಗಿ ಭಗವಂತನಲ್ಲಿ ಅನನ್ಯಭಾವದಿಂದ ಇರಬೇಕು. ಸಂಸಾರದಲ್ಲಿಯ ಸುಖ ದುಃಖಗಳನ್ನು ಅನುಭವಿಸುವಾಗಲೂ ಸಹ ಭಗವಂತನ ಸ್ಮರಣೆ ಬಿಡಬಾರದು. (೩೮) ಈ ದೃಶ್ಯ ಜಗತ್ತಿನ ಮೊದಲು ಹಾಗೂ ನಂತರ ಉಳಿಯುವವನೊಬ್ಬನೇ ದೇವ. ಅವನೇ ಭಗವಂತನು. ಮಧ್ಯದಲ್ಲಿ ಮಾತ್ರ ಈ ಮಾಯೆ ಕಾಣುತ್ತದೆ. ಆದ್ದರಿಂದ ಇದನ್ನು ನಿಜವೆಂದು ನಂಬದೇ ಕೇವಲ ಭಗವಂತನ ಮೇಲೆ ಪೂರ್ಣ ವಿಶ್ವಾಸವಿಡಬೇಕು. (೩೯) ಶಬಲ ಅಥವಾ ಸಮ್ಮಿಶ್ರ ರಜೋಗುಣದ ವರ್ಣನೆಯನ್ನು ಸ್ವಲ್ಪದರಲ್ಲಿ ಮಾಡಲಾಗಿದೆ. ಶುದ್ಧ ರಜೋಗುಣವು ಪರಮಾರ್ಥದ ಕಡೆಗೆ ಒಯ್ಯುವವಾಗಿವೆ ಎಂಬ ಮಾತನ್ನು ಎಷ್ಟೂ ಮರೆಯಬಾರದು. (೪೦)

ತ್ಯಾಚೆ ವೊಳಖೀಚೇ ಚಿನ್ಹ । ಸತ್ವಗುಣೀ ಅಸೆ ಜಾಣ ।
ತೋ ರಜೋಗುಣ ಪರಿಪೂರ್ಣ । ಭಜನ ಮೂಳ ॥೪೧॥

ಐಸಾ ರಜೋಗುಣ ಬೋಲಿಲಾ । ಶ್ರೋತೀ ಮನೇ ಅನುಮಾನಿಲಾ ।
ಆತಾ ಪುಢೇ ಪರಿಸಿಲಾ । ಪಾಹಿಜೇ ತಮೋಗುಣ ॥೪೨॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
ರಜೋಗುಣ ಲಕ್ಷಣ ನಾಮ ಸಮಾಸ ಪಾಂಚವಾ

● ●

ಶುದ್ಧ ರಜೋಗುಣದ ಗುರುತು ಸಂಕೇತಗಳು ಸತ್ವಗುಣದಲ್ಲಿ ಕಂಡು ಬರುವವು. ಸತ್ವಮೂಲ ರಜೋ ಗುಣವೇ ಸಂಪೂರ್ಣವಾಗಿ ಭಗವಂತನ ಭಕ್ತಿಗೆ ಮೂಲಾಧಾರವಾಗಿದೆ. (೪೧) ಈಗ ರಜೋಗುಣವನ್ನೆಲ್ಲ ಹೇಳಿದ್ದಾಯಿತು. ಶ್ರೋತೃಗಳಿಗೆ ಇವುಗಳ ಬಗ್ಗೆ ಸ್ಥೂಲವಾಗಿ ಗೊತ್ತಾಗಿರಬಹುದು. ಅಥವಾ ಇವುಗಳ ಸ್ವರೂಪದ ಕಲ್ಪನೆ ಆಗಿರಬಹುದು. ಇನ್ನು ಮುಂದೆ ನೀವು ತಮೋಗುಣವನ್ನು ಕೇಳುವದು ಅವಶ್ಯವು. (೪೨)

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದ ಎರಡನೆಯ ದಶಕದಲ್ಲಿಯ
"ರಜೋಗುಣ" ಎಂಬ ಹೆಸರಿನ ಐದನೆಯ ಸಮಾಸವು ಮುಗಿದುದು.

● ●

## ದಶಕ ೨ ಸಮಾಸ ೬ ತಮೋಗುಣ ಲಕ್ಷಣ (ನುಡಿ ೪೧)

ವಿಶ್ವವಿದ್ಯಾಲಯದಲ್ಲಿಯ ಪರೀಕ್ಷೆಗಳನ್ನು ಪಾಸಾಗುವವರಲ್ಲಿ ಒಂದನೆಯ, ಎರಡನೆಯ ಮತ್ತು ಮೂರನೆಯ, ಈ ಪ್ರಕಾರ ಮೂರು ವರ್ಗಗಳನ್ನು ಮಾಡಿರುತ್ತಾರೆ. ಆದರೆ ಮೂರನೆಯವರ್ಗದ ನಂತರ ಪಾಸಾದವರ ವರ್ಗವೆಂಬುದು ಇರುವದಿಲ್ಲ, ಇದರಂತೆ ಶ್ರೀ ಸಮರ್ಥರು ಮನುಷ್ಯರಲ್ಲಿ ಸತ್ವಗುಣಿ, ರಜೋಗುಣಿ ಮತ್ತು ತಮೋಗುಣಿ ಎಂದು ಮೂರು ವರ್ಗಗಳನ್ನು ಕಲ್ಪಿಸಿರುವರು. ಸತ್ವಗುಣಿ ಮನುಷ್ಯನು ನಿಜವಾದ ಅರ್ಥದಲ್ಲಿ ಮನುಷ್ಯನಾಗಿರುವನೆಂಬಲ್ಲಿ ಸಂಶಯವೇ ಇಲ್ಲ. ಶುದ್ಧ ರಜೋಗುಣಿ ಮನುಷ್ಯನು ಕೂಡ ಸತ್ವಗುಣಿ ಎನ್ನಲು ಅಡ್ಡಿ ಇಲ್ಲ. ಇನ್ನುಳಿದ ಎರಡರಲ್ಲಿ ಶಬಲ ರಜೋಗುಣಿ ಮತ್ತು ತಮೋಗುಣಿ ಮನುಷ್ಯನೆಂದರೆ ಮನಃಪೂರ್ವಕವಾಗಿ ಪ್ರಪಂಚದಲ್ಲಿ ನಿರತನಾಗಿ ರಮಿಸುವವ, ಸಾಮಾನ್ಯ ಸಂಸಾರಿ ಮನುಷ್ಯನೆಂದು ತಿಳಿಯಬೇಕು. ಇವನ ಜೀವನದಲ್ಲಿ ಪರಮಾರ್ಥಕ್ಕೆ ಸ್ಥಳವೇ ಇರುವದಿಲ್ಲ. ಇದು ಸತ್ಯವಾಗಿದ್ದರೂ ಸಹ ಇವನು ಬಹಳ ರಸಿಕತೆಯಿಂದ ಜೀವನ ನಡೆಸುತ್ತಾನೆ. ಉಣ್ಣುವುದು, ತಿನ್ನುವುದು, ಭೋಗ ಭೋಗಿಸುವದು, ಆಟ ಆಡುವದು, ನಾಟಕ ನೋಡುವದು ಮತ್ತು ಮಾಡುವದು. ವ್ಯಸನಗಳ ಉಪಭೋಗ, ಸಂಗೀತ ನೃತ್ಯಾದಿ ಕಲೆಗಳಲ್ಲಿ ಭಾಗವಹಿಸುವದು, ಹಣಗಳಿಸುವದು, ಹಾಗೂ ಚೈನಿಯಿಂದ ಆಯುಷ್ಯ ಕಳೆಯುವದು. ಇವೆಲ್ಲ ಇವನ ದೃಷ್ಟಿಕೋನವಾಗಿರುವುವು. ಇವನ ಭೋಗ ವೃತ್ತಿಯು ಸುಸ್ಪಷ್ಟವಾಗಿರುತ್ತವೆ. ಕೊನೆಯದಾದ ತಮೋಗುಣದವನಲ್ಲಿ ಅಂದರೆ ತಮೋಗುಣಿ ಮನುಷ್ಯನಲ್ಲಿ ಶಬಲ ರಜೋಗುಣದ ಎಲ್ಲ ದೋಷಗಳು ಇರುವವಲ್ಲದೇ ಪ್ರತಿಯೊಂದರಲ್ಲಿ ತನ್ನದೇ ಆದ ಹಟಮಾರಿತನ, ಒಬ್ಬನೇ ಕುಳಿತು ಕುವಿಚಾರ ಮಾಡುವ ಮೂರ್ಖತನ, ಕೊಲೆಪಾತಕತನದ ವಿಚಾರ ಮತ್ತು ಅತಿ ಭಯಂಕರ ಹಾಗೂ ಅಮಂಗಲ ಸಾಹಸತನಗಳು ಕಂಡು ಬರುವವು. **ಉದಾ:–** ರಜೋಗುಣದಂತೆ ತಮೋಗುಣದಲ್ಲಿಯೂ ವಿಕಾರಗಳು ಇರುವವು. ಆದರೆ ತಮೋಗುಣದಲ್ಲಿಯವು ಬಹಳ ಭಯಂಕರ ಪ್ರಮಾಣದಲ್ಲಿರುವವು. ರಜೋಗುಣದಲ್ಲಿ ಸ್ವಾರ್ಥವಿರುತ್ತದೆ. ತಮೋಗುಣದಲ್ಲಿ ಇದು ಅಮರ್ಯಾದಿತವಾಗಿ ಅಳತೆಯಿಲ್ಲದಷ್ಟು ಇರುತ್ತದೆ. ರಜದಲ್ಲಿ ಆಸಕ್ತಿ ಇರುವದು, ತಮೋಗುಣದಲ್ಲಿ ಇದು ಸೀಮಾತೀತವಾಗಿರುತ್ತದೆ. ರಜೋಗುಣದಲ್ಲಿ ಆಚರಣೆ ಇದ್ದರೆ,ತಮೋಗುಣದಲ್ಲಿ ಕೊಲೆ ಮಾಡಿಸುವ ಹಾಗೂ ಮಾಡುವಂಥ ಮೂರ್ಖ ಆಚರಣೆಗಳೂ ಇರುತ್ತವೆ. ಮತ್ತು ರಜದಲ್ಲಿ ಸಾಧನದ ಭಕ್ತಿ, ಭಜನೆ, ಜಪತಪ ವಗೈರೆಗಳು ಅಲ್ಪುಸಲ್ಪು ಇದ್ದರೆ ಇರುವವು. ತಮೋಗುಣದಲ್ಲಿಯ ಸಾಧನವು ಅಘೋರ, ಭಯಂಕರ ಅಮಂಗಲ, ದುಷ್ಟ ಸಾಹಸಗಳನ್ನು ಸಾಧಿಸುವದಾಗಿರುತ್ತದೆ. ತಮೋಗುಣದವನ ಸಂಗತಿ, ಗೆಳತನ ಮಾಡುವದು ಕಠಿಣವಿರುತ್ತದೆ. ನಿಜ ಹೇಳುವದಾದರೆ ನಿರ್ವಾಹವಿಲ್ಲದೇ ಇವನು ಒಬ್ಬ ಮನುಷ್ಯನೆಂದು ಅನ್ನಬೇಕಾಗುವದು.

### ಸಮಾಸ ಸಹಾವಾ : ತಮೋಗುಣ ಲಕ್ಷಣ

॥ಶ್ರೀರಾಮ॥ ಮಾಗಾ ಬೋಲಿಲಾ ರಜೋಗುಣ । ಕ್ರಿಯೇಸಹಿತ ಲಕ್ಷಣ।
ಆತಾ ಐಕಾ ತಮೋಗುಣ । ತೋ ಹಿ ಸಾಂಗಿಜೇಲ ॥೧॥
ಸಂಸಾರೀ ದುಃಖ ಸಮಂಧ । ಪ್ರಾಪ್ತ ಹೋತಾ ಉಠೇ ಖೇದ ।
ಕಾ ಅದ್ಭುತ ಆಲಾ ಕ್ರೋಧ । ತೋ ತಮೋಗುಣ ॥೨॥
ಶರೀರೀ ಕ್ರೋಧ ಭರತಾ । ನೋಳಖೆ ಮಾತಾ ಪಿತಾ ।
ಬಂಧು ಬಹಿಣ ಕಾಂತಾ । ತಾಡೀ ತೋ ತಮೋಗುಣ ॥೩॥
ದುಸರ್ಯಾಚಾ ಪ್ರಾಣ ಘ್ಯಾವಾ । ಆಪಲಾ ಆಪಣ ಸ್ವಯೇ ದ್ಯಾವಾ ।
ವಿಸರವೀ ಜೀವಭಾವಾ । ತೋ ತಮೋಗುಣ ॥೪॥
ಭರಲೇ ಕ್ರೋಧಾಚೇ ಕಾವಿರೇ । ಪಿಶ್ಯಾಚ್ಯಾಪರೀ ನಾವರೇ ।
ನಾನಾ ಉಪಾಯೇ ನಾವರೇ । ತೋ ತಮೋಗುಣ ॥೫॥
ಆಪಲಾ ಆಪಣ ಶಸ್ತ್ರಪಾತ । ಪರಾಚಾ ಕರೀ ಘಾತ ।
ಐಸಾ ಸಮಯು ವರ್ತತ । ತೋ ತಮೋಗುಣ ॥೬॥
ಡೋಳಾ ಯುಧ್ಯಚಿ ಪಾಹಾವೇ । ರಣಪಡಿಲೇ ತೇಥೇ ಜಾವೇ ।
ಐಸೇ ಘೇತಲೇ ಜೀವೇ । ತೋ ತಮೋಗುಣ ॥೭॥
ಅಖಂಡ ಭ್ರಾಂತೀ ಪಡೇ । ಕೇಲಾ ನಿಶ್ಚಯು ವಿಘಡೇ ।
ಅತ್ಯಂತ ನಿದ್ರಾ ಆವಡೇ । ತೋ ತಮೋಗುಣ ॥೮॥
ಕ್ಷುಧಾ ಜಯಾಚೀ ವಾಡ । ನೇಣೇ ಕಡು ಅಥವಾ ಗೋಡ ।
ಅತ್ಯಂತ ಜೋಕಾ ಮೂಢ । ತೋ ತಮೋಗುಣ ॥೯॥
ಪ್ರೀತಿ ಪಾತ್ರ ಗೇಲೇ ಮರಣೇ । ತಯಾಲಾಗೀ ಜೀವ ದೇಣೇ ।
ಸ್ವಯೇ ಆತ್ಮಹತ್ಯಾ ಕರಣೇ । ತೋ ತಮೋಗುಣ ॥೧೦॥
ಕಿಡಾ ಮುಂಗೀ ಆಣೀ ಸ್ವಾಪದ । ಯಾಚಾ ಕರೂ ಆವಡೇ ವಧ ।
ಅತ್ಯಂತ ಜೋ ಕೃಪಾಮಂದ । ತೋ ತಮೋಗುಣ ॥೧೧॥
ಸ್ತ್ರೀಹತ್ಯಾ ಬಾಳಹತ್ಯಾ । ದ್ರವ್ಯಾಲಾಗೀ ಬ್ರಹ್ಮತ್ಯಾ ।
ಕರೂ ಆವಡೇ ಗೋಹತ್ಯಾ । ತೋ ತಮೋಗುಣ ॥೧೨॥
ವಿಸಾಳಾಚೇ ನಿ ನೇಟೇ । ವೀಷ ಘ್ಯಾವೇಸೇ ವಾಟೇ ।
ಪರವಧ ಮನೀ ಉಠೇ । ತೋ ತಮೋಗುಣ ॥೧೩॥

## ಸಮಾಸ ೬ ತಮೋಗುಣ ಲಕ್ಷಣ

**ಆವರಿಸಲು ಸಾಧ್ಯವಿಲ್ಲದ ಕ್ರೋಧದ ವರ್ಣನೆ:-** ಹಿಂದಿನ ಸಮಾಸದಲ್ಲಿ ರಜೋಗುಣವು ಪ್ರತ್ಯಕ್ಷ ಕೃತಿಯಲ್ಲಿ ಹೇಗೆ ತೋರಿ ಬರುವದೆಂಬುದನ್ನು ತಿಳಿಸಿ ಅದರ ಲಕ್ಷಣಗಳನ್ನು ಹೇಳಲಾಗಿದೆ. ಈಗ ತಮೋಗುಣದ ಬಗ್ಗೆ ಹೇಳುವೆನು ಕೇಳಿರಿ. (೧) ಸಂಸಾರದಲ್ಲಿ ದುಃಖ ಅನುಭವಿಸುವ ಪ್ರಸಂಗ ಬಂದಾಗ ಮನಸ್ಸಿನಲ್ಲಿ ಉದ್ವೇಗ, ಆವೇಶ, ತಳಮಳ ಉತ್ಪನ್ನವಾಗುವದು. ಅಥವಾ ಮಿತಿ ಮೀರಿದ ಕ್ರೋಧ ಬರುವದು. ಇದು ತಮೋಗುಣವು. (೨) ಶರೀರದಲ್ಲಿ ಒಮ್ಮೆ ಸಹಿಸಲಸಾಧ್ಯವಾದ ಕ್ರೋಧದ ಆವೇಶ ಬಂದಿತೆಂದರೆ, ಆಗ ಅವನು ತನ್ನ ತಂದೆ-ತಾಯಿಗಳನ್ನು ಸಹ ಲಕ್ಷಿಸುವದಿಲ್ಲ. ಅಣ್ಣ-ತಮ್ಮ, ಅಕ್ಕ-ತಂಗಿ ಹೆಂಡತಿ ಇವರನ್ನೆಲ್ಲ ಹೊಡೆಯುವವನು, ಇದು ತಮೋಗುಣವು. (೩) ಸಿಟ್ಟಿನ ಭರದಲ್ಲಿ ಎರಡನೆಯವರ ಪ್ರಾಣ ತೆಗೆದುಕೊಳ್ಳುವ ಅಥವಾ ತನ್ನ ಪ್ರಾಣವನ್ನು ತಾನೆ ಘಾತ ಮಾಡಿಕೊಳ್ಳುವವಿಚಾರಗಳೂ ಬರುವವು. ತನ್ನ ಜೀವದ ವಿಚಾರವನ್ನೇ ಮರೆಯುವವನು ತಮೋಗುಣಿಯು.(೪) ಕ್ರೋಧದ ಹುಚ್ಚುಗಾಳಿ ಮೈಯಲ್ಲಿ ಸೇರಿ ಅದು ಬೇಫಾಮು ಗೊಂಡಾಗ ಅವನು ಪಿಶಾಚಿಯಂತೆ ವರ್ತಿಸುವನು. ಆಗ ಅದು ಯಾವದೇ ಉಪಾಯದಿಂದ ಹಿಡಿತಕ್ಕೆ ಬಂದು ಶಾಂತವಾಗಲಾರದು. ಇದು ತಮೋಗುಣವು. (೫) ತಮೋಗುಣದ ಮನುಷ್ಯನಿಗೆ ಬಡಿದಾಟ, ಹೊಡೆದಾಟ, ಜಗಳ ಇವುಗಳ ಬಗ್ಗೆ ಬಹಳಷ್ಟು ಪ್ರೀತಿ ಇರುತ್ತದೆ. ಆಹಾರ, ವಿಹಾರ, ಕುಡಿಯುವದೆಲ್ಲವೂ ಅದ್ಭುತ ಹಾಗೂ ವಿಲಕ್ಷಣ ವಿರುತ್ತದೆ. ತಾನೇ ತನ್ನ ಮೇಲೆ ಶಸ್ತ್ರದಿಂದ ತಿವಿದುಕೊಂಡು ಗಾಯಮಾಡಿಕೊಳ್ಳುವದು. ಅಥವಾ ಇನ್ನೊಬ್ಬರ ಮೇಲೆ ಶಸ್ತ್ರದಿಂದ ಹಲ್ಲೆಮಾಡಿ ಘಾತಗೊಳಿಸುವದು. ಇಂಥ ಪ್ರಸಂಗ ಬಂದಾಗ ಅದು ತಮೋಗುಣವು. (೬) ಪ್ರತ್ಯಕ್ಷವಾಗಿ (ಕಣ್ಣಿನಿಂದ) ಲಡಾಯಿ ಜಗಳ ನೋಡಬೇಕು. ಯುದ್ಧ ನಡೆದಾಗ ರಣಾಂಗಣಕ್ಕೆ ಹೋಗಬೇಕೆಂದು ಮನಸಾ ಇಚ್ಛಿಸುವವನು ತಮೋಗುಣಿಯು. (೭) ಯಾರ ಮನಸ್ಸಿನಲ್ಲಿ ಸದಾ ಗೊಂದಲ, ಗಲಾಟೆ, ಅಸ್ತವ್ಯಸ್ತತನ ಹುಚ್ಚಾಪಟ್ಟಿಯ ವರ್ತನೆ ಮತ್ತು ಸಂಶಯತನ ಹಾಗೂ ನಿಶ್ಚಿತಪಡಿಸಿಕೊಂಡದ್ದನ್ನು ಆಡಿದ್ದನ್ನು ಮೇಲಿಂದಮೇಲೆ ಬದಲಿಸುವುದು. ಸದಾ ನಿದ್ರೆಯಲ್ಲಿರಲು ಆಸಕ್ತಿ ಹೊಂದಿದವ, ಇವೆಲ್ಲ ತಮೋಗುಣಗಳು. (೮) ಅತಿಶಯ ದೊಡ್ಡ ಹಸಿವು ಇರುವವ, ಹಸಿವಿನಲ್ಲಿ ಕಹಿಸಿಹಿಗಳನ್ನು ಸಹ ತಿಳಿಯದ ಕೂಳುಬಾಕ, ಅತಿ ಮೂರ್ಖನಾದವ ಇವೆಲ್ಲ ತಮೋಗುಣಗಳು· (೯) ಅತಿ ಪ್ರೇಮದ ತನ್ನ ಜನರು ಮರಣ ಹೊಂದಿದಾಗ ಅವರ ಸಲುವಾಗಿ ಜೀವ ಕಳೆದು ಕೊಳ್ಳುವವ, ಅಥವಾ ಸ್ವೇಚ್ಛೆಯಿಂದ ಆತ್ಮಹತ್ಯಾ ಮಾಡಿಕೊಳ್ಳುವವರೆಲ್ಲರೂ ತಮೋಗುಣಗಳು. (೧೦) ಹುಳ, ಇರುವೆ, ಮತ್ತು ದನಕರುಗಳನ್ನು ಕೊಲ್ಲುವದರಲ್ಲಿ ಪ್ರೇಮವಿರುವವ, ಇದರಂತೆಯೇ ಅತಿಶಯ ನಿರ್ದಯತನ ವಿರುವವರೆಲ್ಲರೂ ತಮೋಗುಣಿಗಳು. (೧೧) ಸ್ತ್ರೀಯರ, ಹುಡುಗರ ವಧೆ ಮಾಡುವದು, ಹಣಕ್ಕಾಗಿ ಬ್ರಾಹ್ಮಣ ವಧೆ ಮಾಡುವದು. ಆಕಳನ್ನು ಕೊಲ್ಲುವ ಇಚ್ಛೆಯನ್ನು ಮಾಡುವದು ಇವೆಲ್ಲ ತಮೋಗುಣಗಳು (೧೨) ವಿಷ ಸೇವನದಲ್ಲಿ ಹಾಗೂ ಮಾರಾಮಾರಿಯಲ್ಲಿ ಪ್ರೀತಿ. ದ್ವೇಷದಿಂದ ಎರಡನೆಯವರಿಗೆ ಮುಳ್ಳಿನಿಂದ ಮುಳ್ಳು ತೆಗೆದಂತೆ ಪರಸ್ಪರ ಕೇಡಾಗುವ ಉಪಾಯ ಹುಡುಕುವದು, ಪಾಪದ ಭಯವಿಲ್ಲದಿರುವದು, ಇಂಥವೆಲ್ಲ ತಮೋಗುಣದ ಚಿನ್ಹಗಳಾಗಿರುವವು. ವಿಷ ಸೇವನೆಯ ವ್ಯಸನ ವಿರುವವನ ಆಗ್ರಹಕ್ಕಾಗಿ ವಿಷ ಸೇವನೆ ಮಾಡಬೇಕೆಂದು ಇಚ್ಛಿಸುವವನು ಮತ್ತು ಎರಡನೆಯವನನ್ನು ಕೊಂದುಹಾಕಬೇಕೆಂಬ ಆಲೋಚನೆ ಮನದಲ್ಲಿಮಾಡುವವನು ಅಥವಾ ಇಂಥ ವಿಚಾರಗಳು ಮೇಲಿಂದಮೇಲೆ ಬರುವವು. ಇವೆಲ್ಲ ತಮೋಗುಣದ ಲಕ್ಷಣಗಳು. (೧೩)

ಅಂತರೀ ಧರೂನಿ ಕಪಟ । ಪರಾಚೇ ಕರೀ ತಳಪಟ ।
ಸದಾ ಮಸ್ತ ಸದಾ ಉದ್ಧಟ । ತೋ ತಮೋಗುಣ ॥೧೪॥
ಕಳಹ ವ್ಹಾವಾ ಐಸೇ ವಾಟೇ । ಝೊಂಬೀ ಘ್ಯಾವೀ ಐಸೇಉಠೇ ।
ಅಂತರೀ ದ್ವೇಷ ಪ್ರಗಟೇ । ತೋ ತಮೋಗುಣ ॥೧೫॥
ಯುುಧ್ಯ ದೇಖಾವೇ ಐಕಾವೇ । ಸ್ವಯೇ ಯುುಧ್ಯ ಚಿ ಕರಾವೇ ।
ಮಾರಾವೇ ಕೀ ಮರಾವೇ । ತೋ ತಮೋಗುಣ ॥೧೬॥
ಮತ್ಸರೇ ಭಕ್ತಿ ಮೋಡಾವೀ । ದೇವಾಳಯೇ ವಿಘಡಾವೀ ।
ಫಳತೀ ಝಾಡೇ ತೋಡಾವೀ । ತೋ ತಮೋಗುಣ ॥೧೭॥
ಸತ್ಕರ್ಮೇ ತೇ ನಾವಡತೀ । ನಾನಾ ದೋಷ ತೇ ಆವಡತೀ ।
ಪಾಪಭಯ ನಾಹೀ ಚಿತ್ತೀ । ತೋ ತಮೋಗುಣ ॥೧೮॥
ಬ್ರಹ್ಮವೃತ್ತೀಚಾ ಉಛೇದ । ಜೀವಮಾತ್ರಾಸ ದೇಣೇ ಖೇದ ।
ಕರೂ ಆವಡೇ ಅಪ್ರಮಾದ । ತೋ ತಮೋಗುಣ ॥೧೯॥
ಆಗ್ನಿಪ್ರಳಯೇ ಶಸ್ತ್ರಪ್ರಳಯೇ । ಭೂತಪ್ರಳಯೇ ವಿಷಪ್ರಳಯೇ।
ಮತ್ಸರೇ ಕರೀ ಜೀವಕ್ಷಯೇ। ತೋ ತಮೋಗುಣ ॥೨೦॥
ಪರಪೀಡೇಚಾ ಸಂತೋಷ। ನಿಷ್ಠುರಪಣಾಚಾ ಹವ್ಯಾಸ ।
ಸಂಸಾರಾಚಾ ನಯೇ ತ್ರಾಸ। ತೋ ತಮೋಗುಣ ॥೨೧॥
ಭಾಂಡಣ ಲಾಊನ ದ್ಯಾವೇ । ಸ್ವಯೇ ಕೌತುಕ ಪಾಹಾವೇ ।
ಕುಬುದ್ಧಿ ಘೇತಲೀ ಜೀವೇ । ತೋ ತಮೋಗುಣ ॥೨೨॥
ಪ್ರಾಪ್ತ ಜಾಲಿಯಾ ಸಂಪತ್ತೀ । ಜೀವಾಸ ಕರೀ ಯಾತಾಯಾತೀ ।
ಕಳವಳಾ ನಯೇ ಚಿತ್ತೀ । ತೋ ತಮೋಗುಣ ॥೨೩॥
ನಾವಡೇ ಭಕ್ತಿ ನಾವಡೇ ಭಾವ । ನಾವಡೇ ತೀರ್ಥ ನಾವಡೇ ದೇವ ।
ವೇದ ಶಾಸ್ತ್ರ ನಲಗೇ ಸರ್ವ। ತೋ ತಮೋಗುಣ ॥೨೪॥
ಸ್ನಾನಸಂಧ್ಯಾ ನೇಮ ನಸೇ। ಸ್ವಧರ್ಮೀ ಭ್ರಷ್ಟಲಾ ದಿಸೇ।
ಅಕರ್ತವ್ಯ ಕರೀತಸೇ। ತೋ ತಮೋಗುಣ ॥೨೫॥
ಜೇಷ್ಠ ಬಂಧು ಬಾಪ ಮಾಯೇ। ತ್ಯಾಂಚೀ ವಚನೇ ನ ಸಾಹೇ ।
ಪೀಘ್ರಕೋಪೀ ನಿಘೋನ ಜಾಯೇ। ತೋ ತಮೋಗುಣ ॥೨೬॥
ಉಗೇ ಚಿ ಖಾವೇ ಉಗೇ ಚಿ ಅಸಾವೇ । ಸ್ತಬ್ಧ ಹೋಊನ ಬೈಸಾವೇ ।
ಕಾಹೀ ಚ ಸ್ಮರೇನಾ ಸ್ವಭಾವೇ । ತೋ ತಮೋಗುಣ ॥೨೭॥

ದುಷ್ಟಬುದ್ಧಿಯ ಮನಸ್ಸಿನಿಂದ ಎರಡನೆಯವರಿಗೆ ಭಯಂಕರ ಹಾನಿ ಮಾಡುವವನು ಸದಾ ಸರ್ವಕಾಲ ಉನ್ಮತ್ತ ಹಾಗೂ ಉರ್ಮಟನಾಗಿರುವವನು ತಮೋಗುಣಿಯು. (೧೪) ಎಲ್ಲಿಯಾದರೂ ಹೊಡೆದಾಟ ಬಡಿದಾಟಗಳಾಗಬೇಕೆಂಬ ಇಚ್ಛೆ ಇರುವವನು. ಗುದ್ದಾಟ, ಗದ್ದಲ ಮಾಡಬೇಕೆಂಬ ಇಚ್ಛೆ ಹೊಂದಿದವ ಮತ್ತು ಮನದಲ್ಲಿ ದ್ವೇಷಾಗ್ನಿ ಹೊಂದಿರುವವ, ಇವೆಲ್ಲ ತಮೋಗುಣಗಳು. (೧೫) ಕಾಳಗ, ಲಢಾಯಿ ಸ್ವತಃ ನೋಡಬೇಕು ಅಥವಾ ಕಾಳಗದ ಮಾತು ಕಥೆ ಕೇಳಬೇಕು. ಅಥವಾ ಸ್ವತಃ ಕಾಳಗ ಮಾಡಬೇಕು. ಶತ್ರುವನ್ನು ಕೊಲ್ಲಬೇಕು. ಇಲ್ಲವೇ ತಾನು ಸ್ವತಃ ಸಾಯಬೇಕು. ಹೀಗೆ ಇಚ್ಛಿಸುವವನು ತಮೋಗುಣಿಯು(೧೬) ಭಕ್ತಿ ಮಾಡುವ ಮನುಷ್ಯನನ್ನು ಮತ್ಸರದಿಂದ ಕಾಣುವನು.ಅವರ ಭಕ್ತಿಯ ಕಾರ್ಯದಲ್ಲಿ ಇಲ್ಲದ ವಿಘ್ನಗಳನ್ನು ತಂದು ಕೆಡಿಸಿಬಿಡಬೇಕೆಂಬ ಇಚ್ಛೆಯುಳ್ಳವನು, ದೇವಾಲಯವನ್ನು ಕೆಡವಿಬಿಡಬೇಕೆಂಬ ಮನಸ್ಸಿನವನು, ಉತ್ತಮ ಫಲ ಕೊಡುವ ಗಿಡಗಳನ್ನು ಕಡಿದು ಬಿಡಬೇಕೆಂಬ ಮನಸ್ಸಿನವನು,ಈಎಲ್ಲವೂ ತಮೋಗುಣಗಳು(೧೭) ಸತ್ಕರ್ಮ ಕಾರ್ಯಗಳಲ್ಲಿ ಪ್ರೇಮವಿಲ್ಲದವ, ಆದರೆ ಅವರಲ್ಲಿಯ ದೋಷಗಳನ್ನು ಎತ್ತಿ ತೋರಿಸಿ ಆನಂದಪಡುವವ,ಮತ್ತು ಎಷ್ಟೂ ಪಾಪದ ಭಯವಿಲ್ಲದವ,ಇವೆಲ್ಲ ತಮೋಗುಣಗಳು.(೧೮) ಜನರಿಗೆ ತ್ರಾಸು ತೊಂದರೆ ಕೊಡುವದು, ನಿರ್ದಯತನದ ನಡತೆ, ಭ್ರಷ್ಟಾಚಾರಮಾಡುವದು, ಇವೆಲ್ಲವೂ ತಮೋಗುಣಿ ಮನುಷ್ಯನಲ್ಲಿ ಸಹಜವಾಗಿಯೇ ಇರುವವು. ಬ್ರಾಹ್ಮಣರಿಗೆ ಕೊಟ್ಟ ವತನ ವರ್ಷಾಶನ, ದೇಣಿಗೆ, ಉಪಜೀವನದ ಸಾಧನಗಳನ್ನು ಕೆಡಿಸುವದು, ಪ್ರಾಣಿ ಮಾತ್ರರಿಗೆಲ್ಲ ವಿನಃಕಾರಣ ತೊಂದರೆ ಕೊಡುವದು. ಮುದ್ದಾಂ ತಿಳಿದೂ ತಿಳಿದೂ ದೊಡ್ಡ ತಪ್ಪುಮಾಡುವಲ್ಲಿ ಇಚ್ಛೆ, ಪ್ರೀತಿ ಇರುವದು, ಇವೆಲ್ಲ ತಮೋಗುಣಗಳು(೧೯) ಬೆಂಕಿಹಚ್ಚುವದು, ಶಸ್ತ್ರಾಸ್ತ್ರಗಳಿಂದ ಹೊಡೆಯುವದು, ಭೂತ ಪಿಶಾಚಿಗಳ ಬಾಧೆಯಾಗುವಂತೆ ಚೇಟಕ ಮಂತ್ರ ತಂತ್ರ ಮಾಡಿ ಕೊಡುವದು. ವಿಷ ತಿನ್ನಲು ಕೊಡುವದು ಮತ್ತು ಮತ್ಸರದಿಂದ ಜೀವಹತ್ಯಾ ಮಾದುವದು ಇವೆಲ್ಲ ತಮೋಗುಣಗಳು.(೨೦) ಇನ್ನೊಬ್ಬರಿಗಾದ ದುಃಖವನ್ನು ಕೇಳಿ, ನೋಡಿ ಸಂತೋಷಪಡುವದು, ನಿರ್ದಯತನದಿಂದ ನಡೆಯುವಲ್ಲಿ ಉತ್ಸಾಹವಿರುವದು, ಪ್ರಪಂಚದ ಬಗ್ಗೆ ಎಷ್ಟೂ ಬೇಸರ ಪಡದೇ ಇರುವದು, ಇವೆಲ್ಲ ತಮೋಗುಣಗಳು (೨೧) ಜನರಲ್ಲಿ ಮೊದಲು ಜಗಳ ಹಚ್ಚುವದು ನಂತರ ತಾನು ನಿಂತು ಅದರ ಮೋಜು ನೋಡುವದು, ಈ ದುಷ್ಟಬುದ್ಧಿ ಯಾರಲ್ಲಿರುವುದೋ ಅವನು ತಮೋಗುಣಿಯು (೨೨) ಅಪಾರ ಸಂಪತ್ತು ಸಿಕ್ಕು ಶ್ರೀಮಂತನಾದ ಮೇಲೆ ಸಹ ಜೀವಕ್ಕೆ ಸುಮ್ಮನೇ ಕೆಲಸವಿಲ್ಲದ ಕಷ್ಟ ಕೊಡುವದು, ಇನ್ನೊಬ್ಬರ ಮೇಲೆ ದ್ವೇಷ ಬರುವದು ಇದೆಲ್ಲ ತಮೋಗುಣವು. (೨೩) ಭಕ್ತಿ, ಭಾವ, ನಿಷ್ಠೆ, ತೀರ್ಥ, ಮತ್ತು ದೇವರು ಇವುಗಳಲ್ಲಿ ಎಳ್ಳಷ್ಟೂ ಪ್ರೀತಿಯಿಲ್ಲ. ವೇದ, ಶಾಸ್ತ್ರ ವಗೈರೆಗಳು, ಎಷ್ಟೂ ಬೇಡವಾಗಿರುವವು. ಇದು ತಮೋಗುಣವು. (೨೪) ಸ್ನಾನ, ಸಂಧ್ಯಾ ವಗೈರೆ ನೇಮಗಳೇನೂ ಇರುವದಿಲ್ಲ, ಆಚಾರ, ಧರ್ಮ ಪಾಲಿಸದೇ ಇರುವಂಥ ಭ್ರಷ್ಟನು. ಅಷ್ಟೇ ಅಲ್ಲ, ಯಾವುದು ಮಾಡಬಾರದ್ದಾಗಿರುವುದೋ ಅದನ್ನೇ ಮುದ್ದಾಂ ಮಾಡುವವನು ತಮೋಗುಣಿಯು (೨೫) ತಂದೆ, ತಾಯಿ ಹಿರಿಯಅಣ್ಣ, ಇವರ ಮಾತನ್ನು ಸಹಿಸಲಾಗದ ಮತ್ತು ಇವರ ಮಾತಿಗೆ ಒಮ್ಮೆಲೇ ಸಿಟ್ಟಿಗೆದ್ದು ಮನೆಯಿಂದ ಒಮ್ಮೆಲೇ ಹೊರಟು ಹೋಗುವವನು ತಮೋಗುಣಿಯು, (೨೬) ಏನೂ ದುಡಿಯದೇ ತಿನ್ನುವವ, ಆಲಸ್ಯದಿಂದ ಇರುವವ, ಕೆಲಸವಿಲ್ಲದೇ ಒಂದೇ ಸ್ಥಳದಲ್ಲಿ ಸುಮ್ಮನೇ ಕುಳಿತಿರುವ ನಿರುದ್ಯೋಗಿ ಮತ್ತು ಯಾವುದರ ಸ್ಮರಣೆಯೂ ಇಲ್ಲದ ಇವರೆಲ್ಲ ಸ್ಮರಣಗೇಡಿ, ವಿಚಾರವಿಲ್ಲದ ತಮೋಗುಣಿಗಳು. (೨೭)

ಚೇಟಕವಿದ್ಯೇಚಾ ಅಭ್ಯಾಸ । ಶಸ್ತ್ರವಿದ್ಯೇಚಾ ಹವ್ಯಾಸ ।
ಮಲ್ಲವಿದ್ಯಾ ಮ್ಹಣೇ ಜ್ಯಾಸ । ತೋ ತಮೋಗುಣ ॥೨೮॥

ಕೇಲೇ ಗಳಾಚೆ ನವಸ । ರಾಡಿಬೇಡೀಚೆ ಸಾಯಾಸ ।
ಕಾಷ್ಠಯಂತ್ರ ಛೇದೀ ಜಿವ್ಹೇಸ । ತೋ ತಮೋಗುಣ ॥೨೯॥

ಮಸ್ತಕೀ ಭದೇ ಜಾಳಾವೇ । ಪೋತೇ ಅಂಗ ಹುರಪಳಾವೇ ।
ಸ್ವಯೇ ಶಸ್ತ್ರ ಟೋಚೂನ ಘ್ಯಾವೇ । ತೋ ತಮೋಗುಣ ॥೩೦॥

ದೇವಾಸ ಸಿರ ವಾಹಾವೇ । ಕಾ ತೇ ಅಂಗ ಸಮರ್ಪಾವೇ ।
ಪಡಣೇವರೂನ ಘಾಲೂನ ಘ್ಯಾವೇ । ತೋ ತಮೋಗುಣ ॥೩೧॥

ನಿಗ್ರಹ ಕರೂನ ಧರಣೇ । ಕಾ ತೇ ಟಾಂಗೂನ ಘೇಣೇ ।
ದೇವದ್ವಾರೀ ಜೀವ ದೇಣೇ । ತೋ ತಮೋಗುಣ ॥೩೨॥

ನಿರಾಹಾರ ಉಪೋಷಣ । ಪಂಚಾಗ್ನೀ ಧೂಮ್ರಪಾನ ।
ಆಪಣಾಸ ಘ್ಯಾವೇ ಪುರೂನ । ತೋ ತಮೋಗುಣ ॥೩೩॥

ಸಕಾಮ ಜೇ ಕಾ ಅನುಷ್ಠಾನ । ಕಾ ತೇ ವಾಯೋನಿರೋಧನ ।
ಅಥವಾ ರಾಹಾವೇ ಪಡೋನ । ತೋ ತಮೋಗುಣ ॥೩೪॥

ನಖೇ ಕೇಶ ವಾಢವಾವೇ । ಹಸ್ತ ಚಿ ವರ್ತೇ ಕರಾವೇ ।
ಅಥವಾ ವಾಗ್ಸುನ್ಯ ಮ್ಹಣಾವೇ । ತೋ ತಮೋಗುಣ ॥೩೫॥

ನಾನಾ ನಿಗ್ರಹೇ ಪಿಡಾವೇ । ದೇಹ ದುಃಖೇ । ಚರ್ಫಡಾವೇ ।
ಕ್ರೋಧೇ ದೇವಾಸ ಫೋಡಾವೇ । ತೋ ತಮೋಗುಣ ॥೩೬॥

ದೇವಾಚೀ ಜೋ ನಿಂದಾ ಕರೀ । ತೋ ಆಶಾಬದ್ಧಿ ಅಘೋರೀ ।
ಜೋ ಸಂತಸಂಗ ನ ಧರೀ । ತೋ ತಮೋಗುಣ ॥೩೭॥

**ತಮೋಗುಣಿ ಮನುಷ್ಯರು ದೇವರ ಬಗ್ಗೆ ಏನಾದರೂ ಕಾರ್ಯ ಮಾಡುವಾಗ ಅತಿ ಭಯಂಕರ ಅಥವಾ ಅತಿ ಸಾಹಸಿ ಕ್ರೂರ ಕರ್ಮದ ಆಚರಣೆಯನ್ನು ಮಾಡುವರೆಂಬುದರ ಸುಂದರ ವರ್ಣನೆಯು:-**
ಜಾರಣ ಅಂದರೆ ಅಘೋರ ಮಂತ್ರ ಪ್ರಯೋಗವು. ಮಾರಣ ಅಂದರೆ ಅಘೋರ ಮಂತ್ರದಿಂದ ಹೋಮ ಮಾಡಿ ಒಬ್ಬರಿಗೆ ಹಾನಿ ಮಾಡುವದು. ಉಚ್ಚಾಟನ ಅಂದರೆ ಅಘೋರ ಮಂತ್ರದಿಂದ ಒಬ್ಬರನ್ನು ಓಡಿಸುವದು ವಗೈರೆ, ಇಂಥ ಚೇಟಕಿ ವಿದ್ಯೆ, ಮಾಟ ಮದ್ದುಗಳ ಅಭ್ಯಾಸ ಮಾಡಬೇಕೆಂಬ ಇಚ್ಛೆಪಡುವವ, ಶಸ್ತ್ರಾಸ್ತ್ರ ವಿದ್ಯೆಯನ್ನು ಕಲಿಯಬೇಕೆಂಬ ಹಂಬಲದವ, ಮಲ್ಲವಿದ್ಯೆ ಕಲಿಯಬೇಕೆಂಬ ಇಚ್ಛೆ ಇರುವವರು, ಇವು ತಮೋಗುಣಗಳು. (೨೮) ಕುತ್ತಿಗೆಯನ್ನು ಡೊಂಕಾದ ಕವಲಿನ ಕಟ್ಟಿಗೆಯಲ್ಲಿ ಸೇರಿಸಿ ತೂಗು ಹಾಕುವ ಅಂದರೆ ಜೋತು ಬೀಳುವ ಹರಕೆ. ಇವು ದೇವರ ಸೇವೆಗಾಗಿ ಮಾಡುವ ಸಂಕಲ್ಪದ ಹರಿಕೆಗಳಾಗಿರುವವು. ಧಗಧಗ ಉರಿಯುವ ನಿಗಿನಿಗಿ ಕೆಂಡದಲ್ಲಿ ನಡೆದು ಹೋಗುವ ಕಷ್ಟದ ಸಾಹಸ ಮಾಡುವದು, ಕಟ್ಟಿಗೆ ಯಂತ್ರ ಅಂದರೆ ಇಂಗಳಕಟ್ಟಿಗೆಯ ಚೂಪು ಮೊನೆಯ ಗೂಟ ಅಥವಾ ತ್ರಿಶೂಲಗಳಿಂದ ನಾಲಿಗೆಯಲ್ಲಿ ಚುಚ್ಚಿಕೊಳ್ಳುವದು. ಇದಕ್ಕಾಗಿಯೇ ತಯಾರಿಸಿದ ಕೆಲವು ತರಹದ ಶಸ್ತ್ರಗಳು ಇರುವವು. ಅವು ಬಂಗಾರ, ಬೆಳ್ಳಿ, ತಾಮ್ರ, ಹಿತ್ತಾಳಿಗಳಿಂದ ಮಾಡಿದವು ಇರುವವು. ಈ ಎಲ್ಲ ಪ್ರಕಾರದವು ತಮೋಗುಣದವು. (೨೯) ಮಣ್ಣಿನ ಮಡಿಕೆ ಅಥವಾ ಗಡಿಗೆಯಲ್ಲಿ ನಿಗಿನಿಗಿ ಕೆಂಡವನ್ನು ಹಾಕಿ ತಲೆಯ ಮೇಲೆ ಹೊರುವದು, ಉರಿಯುವ ದೀವಟಿಗೆ ಕಕ್ಕಡ, ಹಿಲಾಲುಗಳಿಂದ ಶರೀರದ ಅಂಗಾಂಗಗಳಿಗೆ ಹಚ್ಚಿಕೊಳ್ಳುವದು, ಸುಟ್ಟುಕೊಳ್ಳುವದು ಅಥವಾ ಸ್ವತಃ ತಾನೇ ತನ್ನ ಶರೀರದಲ್ಲಿ ಶಸ್ತ್ರ ಚುಚ್ಚಿಕೊಳ್ಳುವದು, ತುಟಿ,ಕಿವಿ,ಮೂಗು, ಹೊಟ್ಟೆ,ಕಾಲು,ಕೈ, ನಾಲಿಗೆ, ಕೊರಳು, ಕಣ್ಣಿನರೆಪ್ಪೆ ಮೊದಲಾದವುಗಳಲ್ಲಿ ಚುಚ್ಚಿಕೊಳ್ಳುವದು ಅಥವಾ ಹಾಗೆಯೇ ಅಂದರೆ ಬೇರೆಯವರಿಗೆಚುಚ್ಚುವ ಪ್ರಯತ್ನಉಳ್ಳವರು ತಮೋಗುಣಿಗಳು. (೩೦) ತನ್ನತಲೆಯನ್ನು ಕಡಿದು ದೇವರಿಗೆ ಅರ್ಪಿಸಬೇಕು ಅಥವಾ ಯಾವುದಾದರೊಂದು ಅವಯವಗಳನ್ನು ಕಡಿದು ದೇವರಿಗೆ ಅರ್ಪಿಸುವ ಇಚ್ಛೆ ಉಳ್ಳವ, ಅಥವಾ ತಾನಾಗಿ ಅತಿ ಎತ್ತರದ ಮೇಲಿಂದ ಹಾರಿಕೊಳ್ಳುವ ಮನಸ್ಸು ಮಾಡುವದು. ಇವೆಲ್ಲ ತಮೋಗುಣಗಳು. (೩೧) ಹಟದಿಂದ ದೇವರ ಮುಂದೆ ಗಟ್ಟಿಯಾಗಿ ಧರಣೆ ಕುಳಿತು ಬಿಡುವದು, ದೇಹವನ್ನು ತೂಗು ಹಾಕಿಕೊಳ್ಳುವದು, ಜೋತು ಬೀಳುವದು, ದೇವರ ಬಾಗಿಲಲ್ಲಿ ಜೀವ ಬಿಡುವದು, ಇವೆಲ್ಲವೂ ಏನಾದರೂ ತನ್ನ ಬೇಡಿಕೆ ಪೂರೈಸಿಕೊಳ್ಳುವದಕ್ಕೆ ಇರುವವು. ಇವೆಲ್ಲ ತಮೋಗುಣಗಳು. (೩೨) ಕೇವಲ ಹಣ್ಣು ತಿಂದು, ನೀರು ಕುಡಿದು ಇರುವದು, ಅಥವಾ ಕಟ್ಟಾ ಉಪವಾಸ ಮಾಡುವದು. ಅಥವಾ ಪಂಚಾಗ್ನಿ ಸಾಧನ ಮಾಡುವದು, ಅಂದರೆ ತಾನು ಮಧ್ಯದಲ್ಲಿ ಬರೀ ಮೈಯಿಂದ ಕುಳಿತು ನಾಲ್ಕೂ ಬಾಜೂಕ್ಕೆ ನಾಲ್ಕು ನಿಗಿನಿಗಿ ಕೆಂಡದ ಕುಂಡಗಳನ್ನು ಇಡುವದು, ತಲೆಯ ಮೇಲೆ ಪ್ರಖರವಾದ ಸೂರ್ಯನ ಉರಿಬಿಸಿಲು ಹೀಗೆ ಐದು ಅಗ್ನಿ ಮಧ್ಯದಲ್ಲಿ ಕುಳಿತು ಜಪ ಮಾಡುವ ಸಾಧನವಾಗಿದೆ. ಧೂಮ್ರಪಾನದ ಸಾಧನ ಮಾಡುವದು, ಅಂದರೆ ತಾನು ತಲೆ ಕೆಳಗೆ ಮಾಡಿ ಗಿಡದ ಟೊಂಗೆಗಾಗಲಿ, ಗೂಟಕ್ಕಾಗಲಿ, ಉಲಟಾ ತೂಗು ಬೀಳುವದು. ಮುಖದ ಸಮೀಪ ಭೂಮಿಯ ಮೇಲೆ ಉರಿ ಹಚ್ಚಿದ ಅಗ್ನಿಯಲ್ಲಿಯ ಹೊಗೆಯನ್ನು ಮೂಗು ಮುಖದ್ವಾರದಿಂದ ಒಳಗೆ ಎಳೆದುಕೊಳ್ಳುವ ಸಾಧನೆ ಮಾಡುವದು, ಅಥವಾ ಸ್ವತಃ ಶರೀರವನ್ನು ಭೂಮಿಯಲ್ಲಿ ತಗ್ಗು ತೆಗೆದು ಅದರಲ್ಲಿ ಕುಳಿತು ಅಥವಾ ನಿಂತು ಮಣ್ಣಿನಿಂದ ಮುಚ್ಚಿಸಿಕೊಳ್ಳುವದು ಇವೆಲ್ಲ ತಮೋಗುಣಗಳು. (೩೩) ಮನಸ್ಸಿನಲ್ಲಿ ಯಾವುದಾದರೊಂದು ವಸ್ತುವಿನ ಅಭಿಲಾಷೆ ಇಟ್ಟುಕೊಂಡು ದೇವರ ಉಪಾಸನೆ, ಸಕಾಮ ಉಪಾಸನೆ, ಅನುಷ್ಠಾನ ಮಾಡುವದು. ಕೇವಲ ಸುಮ್ಮನೇ ಪ್ರಾಣಾಯಾಮಮಾಡುವದು, ಅಥವಾ ಅಹೋರಾತ್ರಿ ಭೂಮಿಯ ಮೇಲೆ ಬಿದ್ದುಕೊಂಡಿರುವದು, ಇವೆಲ್ಲ ತಮೋಗುಣಗಳು. (೩೪) ಉಗುರು ಹಾಗೂ ಕೂದಲು ಬೆಳೆಸುವದು, ಯಾವಾಗಲೂ ಕೈಯನ್ನು ಮೇಲಕ್ಕೆ ಎತ್ತಿ ಹಿಡಿದುಕೊಂಡಿರುವದು, ಎಷ್ಟೂ ಮಾತನಾಡದೇ ಇರುವದು. ಇವೆಲ್ಲ ತಮೋಗುಣಗಳು, (೩೫) ನಾನಾ ಪ್ರಕಾರದ ಕ್ರಿಯೆಗಳಿಂದ ದೇಹಕ್ಕೆ ಕಷ್ಟ, ನೋವು ಕೊಡುವದು, ಆದರೆ ದೇಹಕ್ಕೆ ದುಃಖವಾದ ಕೂಡಲೇ ಮನದಲ್ಲಿ ಚಡಪಡಿಸುವದು, ಸಿಟ್ಟಿನಿಂದ ದೇವರನ್ನು ಒಡೆದು ಹಾಕುವದು, ಇವೆಲ್ಲವೂ ತಮೋಗುಣಗಳು. (೩೬) ಯಾವ ಮನುಷ್ಯ ದೇವರ ನಿಂದೆ ಮಾಡುವನೋ ಅವನು ವಾಸನಾ ಚಕ್ರದಲ್ಲಿ ತೊಡಕು ಹಾಕಿಕೊಂಡ ಭಯಂಕರ ಮನುಷ್ಯನಾಗಿರುತ್ತಾನೆ. ಮತ್ತು ಸಂತಶರಣರ ಸಂಗಮಾಡದವರೆಲ್ಲರೂತಮೋಗುಣಿಗಳು(೩೭)

ಏಸಾಹಾ ತಮೋಗುಣ । ಸಾಂಗತಾ ತೋ ಅಸಾಧಾರಣ ।
ಪರೀ ತ್ಯಾಗಾರ್ಥ ನಿರೂಪಣ । ಕಾಂಹೀ ಯೇಕ ॥೩೮॥
ಏಸೇ ವರ್ತೇ ತೋ ತಮೋಗುಣ । ಪರೀ ಹಾ ಪತನಾಸ ಕಾರಣ ।
ಮೋಕ್ಷಪ್ರಾಪ್ತೀಚೇ ಲಕ್ಷಣ । ನವ್ಹೇ ಯೇಣೇ ॥೩೯॥
ಕೇಲ್ಯಾ ಕರ್ಮಾಚೇ ಫಳ । ಪ್ರಾಪ್ತ ಹೋಈಲ ಸಕಳ ।
ಜನ್ಮದುಃಖಾಚೇ ಮೂಳ । ತುಟೇನಾ ಕೀ ॥೪೦॥
ವ್ಹಾವಯಾ ಜನ್ಮಾಚೇ ಖಂಡಣ। ಪಾಹಿಜೇ ತೋ ಸತ್ವಗುಣ ।
ತೇ ಚಿ ಅಸೆ ನಿರೂಪಣ । ಪುಢಿಲೇ ಸಮಾಸೀ ॥೪೧॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
ತಮೋಗುಣ ನಾಮ ಸಮಾಸ ಸಹಾವಾ ॥

ತಮೋಗುಣವಂತೂ ಹೀಗೆ ಇರುವದು. ಇದು ಅಸಾಧಾರಣ ಮತ್ತು ವಿಲಕ್ಷಣವಾಗಿದೆ. ಇದನ್ನು ನೀವೆಲ್ಲ ಬಿಡಬೇಕೆಂದು ನಾನು ಸ್ವಲ್ಪದರಲ್ಲಿ ವಿವೇಚಿಸಿರುವೆನು. (೩೮) ತಮೋಗುಣವು ಪ್ರತ್ಯಕ್ಷ ನಡವಳಿಕೆ (ರೂಢಿ)ಯಲ್ಲಿ ಹೇಗೆ ಕಾಣುವದೆಂಬ ಬಗ್ಗೆ ಈ ವರೆಗೆ ಹೇಳಲಾಯಿತು. ಇದು ಅಧೋಗತಿಗೆ ಒಯ್ಯಲು ಕಾರಣವಾಗುವದು. ತಮೋಗುಣದಲ್ಲಿ ಮೋಕ್ಷಪ್ರಾಪ್ತಿ ಮಾಡಿಕೊಳ್ಳುವ ಲಕ್ಷಣಗಳಿರುವದಿಲ್ಲ. (೩೯) ಮನುಷ್ಯ ಯಾವ ಕರ್ಮ ಮಾಡುವನೋ ಅದರ ಸಂಪೂರ್ಣ ಫಲವು ಇವತ್ತಿಲ್ಲ ನಾಳೆ ಸಿಕ್ಕೇ ಸಿಗುವದು. ರಜೋಗುಣ ಮತ್ತು ತಮೋಗುಣಗಳು ಪ್ರಪಂಚದಲ್ಲಿ ಮನುಷ್ಯನನ್ನು ಅಟಕಾಯಿಸುವವು, ಕಟ್ಟಿ ಹಾಕುವವು. ಸರ್ವ ದುಃಖದ ಮೂಲವಾದ ಜನ್ಮವು ರಜ-ತಮಗಳಿಂದ ಬಿಡುಗಡೆ ಹೊಂದುವದಿಲ್ಲ. (೪೦) ಹುಟ್ಟಿ ಬರುವದನ್ನು ನಿಲ್ಲಿಸುವದಕ್ಕಾಗಿ ಸತ್ವಗುಣದ ಅವಶ್ಯಕತೆ ಇರುವದು. ಈ ಸತ್ವಗುಣದ ವರ್ಣನೆಯನ್ನು ಮುಂದಿನ ಸಮಾಸದಲ್ಲಿ ಮಾಡಿರುವೆನು. (೪೧)

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಎರಡನೆಯ ದಶಕದ
"ತಮೋಗುಣ ಲಕ್ಷಣ" ಎಂಬ ಹೆಸರಿನ ಆರನೆಯ ಸಮಾಸವು ಮುಗಿದುದು.

● ●

## ದಶಕ ೨. ಸಮಾಸ ೭. ಸತ್ವಗುಣ ಲಕ್ಷಣ (ನುಡಿ ೮೮)

ನಮ್ಮ ಸುತ್ತ ಹರಡಿರುವ ಈ ಎಲ್ಲ ವಿಶ್ವವು ತ್ರಿಗುಣಾತ್ಮಕವಿರುವದೆಂಬುದು ನಿಜವಿರುವುದಾದರೆ, ಪೃಥ್ವಿಯಲ್ಲಿಯ ಮಾನವೀ ಜೀವನವು ಸಹ ತ್ರಿಗುಣಾತ್ಮಕ ಇರಲೇಬೇಕು. ಸತ್ವ, ರಜ, ತಮ, ಈ ಮೂರು ಗುಣಗಳು ಶಕ್ತಿರೂಪವಿರುವವು. ಶಕ್ತಿಯು ಸ್ವತಃ ಒಳ್ಳೆಯವಳೂ ಅಲ್ಲ, ಕೆಟ್ಟವಳೂ ಅಲ್ಲ. ಉಪಯೋಗ ಮಾಡಿಕೊಳ್ಳುವವನು ಇವಳನ್ನು ಯಾವ ರೀತಿ ಉಪಯೋಗಿಸಿಕೊಳ್ಳುವನೋ ಆ ರೀತಿಯಂತೆ ಒಳಿತು ಕೆಡಕು ಪರಿಣಾಮಗಳು ಒದಗಿ ಬರುವವು. ತ್ರಿಗುಣದಲ್ಲಿ ಶುದ್ಧ ಮತ್ತು ಶಬಲ ಅಂದರೆ ಮಾಯಿಕ, ಬಾಧಿಕ, ಔಪಾಧಿಕ ಹೀಗೆ ಭೇದ ಮಾಡಿರುವದರ ಕಾರಣವೇನು ? ಅಂದರೆ ದೇಹ ಬುದ್ಧಿಯ ವರ್ಚಸ್ಸಿನ ಹಿಡಿತದಲ್ಲಿರುವ ಸ್ವಾರ್ಥಿ ಜೀವನದ ಗುಣಗಳೇ ಶಬಲ ರೂಪದವಿರಬೇಕೆಂದು ತಿಳಿಯುವದು. ಆದರೆ ಆತ್ಮ ಬುದ್ಧಿಯ ಅಂದರೆ ಶುದ್ಧ ವರ್ಚಸ್ಸಿನ ಹಿಡಿತದಲ್ಲಿರುವ ನಿಃಸ್ವಾರ್ಥಿ ಜೀವನದಲ್ಲಿ ಈ ಗುಣಗಳ ಶುದ್ಧ ರೂಪ ತೋರಿ ಬರುವವು. **ಉದಾ:-** ಯುದ್ಧ ನೋಡುವದು, ಯುದ್ಧ ಮಾಡುವದು, ಅಥವಾ ಕೊಲೆ ಮಾಡುವದು, ಇವು ತಮೋಗುಣಗಳು, ಭಗವಾನ ಶ್ರೀ ರಾಮಚಂದ್ರ ಅಸ್ತ್ರವಿದ್ಯೆ ಕಲಿತನು, ಸ್ವತಃ ಅತಿ ಉತ್ಸಾಹದಿಂದ ಯುದ್ಧ ಮಾಡಿದನು. ಇದಲ್ಲದೇ ವಾಲಿ. ರಾವಣ, ತಾಟಿಕಾ, ಇವರ ವಧೆಯನ್ನೂ ಮಾಡಿದನು. ಇದರಂತೆಯೇ ಅರ್ಜುನನೂ ಯುದ್ಧ ಬೇಡವೆನ್ನುತ್ತಿದ್ದನು. ಆದರೆ ಶ್ರೀ ಕೃಷ್ಣನು ಹದಿನೆಂಟು ಅಧ್ಯಾಯದ ಗೀತೆಯ ಉಪದೇಶ ಮಾಡಿ ಕೊನೆಗೆ ಅವನನ್ನು ಯುದ್ಧ ಮಾಡಲಿಕ್ಕೆ ಹಚ್ಚಿದನು. ಹೀಗೆ ಇದ್ದರೂಸಹ ಈ ಎರಡೂ ಅವತಾರಗಳಿಗೆ ಯಾರೂ ತಮೋಗುಣಿ ಎಂದು ಭಾವಿಸುವದಿಲ್ಲ, ಅನ್ನುವದಿಲ್ಲ, ಇಬ್ಬರೂ ಕೇವಲ ಕರ್ತವ್ಯವೆಂದು ಯುದ್ಧ ಮಾಡಿದರು. ಅಥವಾ ವಧ ಮಾಡಿದರು. ಅರ್ಥಾತ್ ಇವರ ಕೆಲಸ ಸಂಪೂರ್ಣ ಸಾತ್ವಿಕವಾಗಿತ್ತು. ಇದರಲ್ಲಿ ವಾದವೇ ಇಲ್ಲ. ದೇಹ ಬುದ್ಧಿಯ ಅಥವಾ ದೇಹದ ಸುತ್ತ ಕೇಂದ್ರಿತವಾದ ಜೀವನವೆಂದರೆ ಪ್ರಪಂಚವು ಮತ್ತು ಆತ್ಮ ಬುದ್ಧಿಯ ಅಥವಾ ದೇವರ ಸುತ್ತ ಕೇಂದ್ರಿತವಾದ ಜೀವನವೆಂದರೆ ಪರಮಾರ್ಥವಾಗಿರುವದು. ತ್ರಿಗುಣಗಳ ಪ್ರಾಪಂಚಿಕ ರೂಪವು ಶಬಲವಾಗಿದ್ದು, ಪಾರಮಾರ್ಥಿಕ ರೂಪವು ಶುದ್ಧವಾಗಿರುವದು. ಎರಡೂ ರೂಪದ ತುಲನಾತ್ಮಕ ಸ್ಪಷ್ಟೀಕರಣವನ್ನು ಸ್ವಲ್ಪದರಲ್ಲಿ ಕೆಳಗೆ ಕೊಡಲಾಗಿದೆ.

೧. **ಪ್ರಾಪಂಚಿಕ ತ್ರಿಗುಣ**–ಜಗತ್ತು (ವಿಶ್ವ, ಪ್ರಪಂಚ) ನನ್ನ ಸಲುವಾಗಿ ಇರುವುದೆಂಬ ಭಾವನೆ ಇರುವದರಿಂದ ಇದು ಸ್ವಾರ್ಥಮಯವಾದದ್ದು.

**ಪಾರಮಾರ್ಥಿಕ ತ್ರಿಗುಣ**–ನಾನು ಈ ಜಗತ್ತಿಗಾಗಿ ಇರುವೆನೆಂಬ ಭಾವನೆ ಇರುವದು ನಿಃಸ್ವಾರ್ಥವಾದದ್ದು.

೨. **ಪ್ರಾಪಂಚಿಕ ತ್ರಿಗುಣ**–ಜಡವಾಗಿರುವ ದೃಶ್ಯವೇ ಸರ್ವಸ್ವವೆಂದು ತಿಳಿದು ಭೋಗವೃತ್ತಿಯನ್ನು ಸಂಭಾಳಿಸುವದು, ಬೆಳೆಸುವದು.

**ಪಾರಮಾರ್ಥಿಕ ತ್ರಿಗುಣ**–ಸೂಕ್ಷ್ಮವಾದ ಅದೃಶ್ಯ (ನಿರಾಕಾರ) ವಸ್ತುವೇ ಸರ್ವಸ್ವವೆಂದು ತಿಳಿದು ತ್ಯಾಗ ವೃತ್ತಿಯನ್ನು ಬೆಳೆಸುವದು.

೩. **ಪ್ರಾಪಂಚಿಕತ್ರಿಗುಣ**–ಕಾಮನ (ವಾಸನಾ,ಇಚ್ಛಾ)ದ ಅಧೀನನಾಗಿರುವದರಿಂದ ಕರ್ಮರತ–ಆಸಕ್ತಿ ಹೊಂದಿದ ಮತ್ತು ಪ್ರಾಪಂಚಿಕ ಹಾಗೂ ವ್ಯವಹಾರ ಪ್ರಧಾನವಾಗಿರುವದು.

**ಪಾರಮಾರ್ಥಿಕ ತ್ರಿಗುಣ**–ಕಾಮರಹಿತ, ನಿಷ್ಕಾಮದಿಂದ ಆದರ್ಶತನ ಬಂದು ಚಿಂತನಶೀಲ, ವಿಚಾರವಂತ ಮತ್ತು ನಿವೃತ್ತಿಪ್ರಧಾನವಾದ, ವೈರಾಗ್ಯ, ಆಶಾರಹಿತತನ ಇರುವದು.

೪. **ಪ್ರಾಪಂಚಿಕತ್ರಿಗುಣ**.ವಾಸನಾ ತೃಪ್ತಿಯ ಹಟದದ್ವಾರಾ ದೇಹದಿಂದ ಸುಖ ಪಡೆಯುವ ಸಾಧನಗಳನ್ನು ಕೊನೆಯುವರೆಗೂ ಮಾಡುವದು. ಇದರಿಂದ ವಿಜ್ಞಾನ-ವಿಶೇಷವಿಜ್ಞಾನದ ಬೆಳವಣಿಗೆ ಹೊಂದುವದು.

**ಪಾರಮಾರ್ಥಿಕ ತ್ರಿಗುಣ**-ವಾಸನಾ ನಿರ್ಮೂಲನ ಮಾಡುವ ಛಲ(ಹಟ)ದಿಂದ, ಭಗವಂತನಿಂದ ಸುಖಪಡೆಯುವ ಸಾಧನವನ್ನು ಕೊನೆಯವರೆಗೂ ಮಾಡುವದು, ಇದರಿಂದ ಆತ್ಮಜ್ಞಾನ ಪ್ರಕಟವಾಗುವದು.

೫. **ಪ್ರಾಪಂಚಿಕತ್ರಿಗುಣ**-ಈ ಜೀವನದಲ್ಲಿ ಕಾಮ, ಕ್ರೋಧ, ದ್ವೇಷ. ಮತ್ಸರ, ಮೋಹ. ವಗೈರೆ ವಿಕಾರಗಳ ಅತಿ ಪ್ರಾಬಲ್ಯದಿಂದ ಗೊಂದಲ, ಗದ್ದಲ ನಡೆಯುತ್ತದೆ. ಇದರಿಂದ ಯಾವಾಗಲೂ ಅಸಮಾಧಾನವಿರುತ್ತದೆ.

**ಪಾರಮಾರ್ಥಿಕ ತ್ರಿಗುಣ**:-ಈ ಜೀವನದಲ್ಲಿ ಆತ್ಮಾನಾತ್ಮ ವಿವೇಕದ ರಮ್ಯ ಆನಂದೋಲ್ಲಾಸ ನಡೆಯುವದು, ತನ್ಮೂಲಕ ಮನಸ್ಸಿಗೆ ಯಾವಾಗಲೂ ಸಮಾಧಾನವಿರುತ್ತದೆ.

೬. **ಪ್ರಾಪಂಚಿಕತ್ರಿಗುಣ**-ಸತ್ತಾಧಾರಿ ಅಧಿಕಾರವಿದ್ದವ, ಶ್ರೀಮಂತ, ಕಲಾವಂತ. ರಾಜವಿಲಾಸಿ ಹಾಗೂ ಚೈನಿ ಮನುಷ್ಯ, ಇವರೆಲ್ಲ ಆದರ್ಶವಂತರೆಂದು ತಿಳಿದು ನಡೆಯುವದು. ಇವರಂತೆ ಆಗಬೇ-ಕೆಂದು ಅನಿಸುವದು.

**ಪಾರಮಾರ್ಥಿಕ ತ್ರಿಗುಣ**–ಸಾಧು, ಸಂತ, ಶರಣ, ಮಹಾತ್ಮಾ, ಯೋಗಿ, ತ್ಯಾಗಿ, ಆತ್ಮಜ್ಞಾನಿ, ಮತ್ತು ಭಗವಂತನ ಪ್ರೇಮಿ, ಭಕ್ತ, ಇವರೆಲ್ಲ ಆದರ್ಶವಂತರಿರುತ್ತಾರೆ. ನಾವು ಇವರಂತೆ ಆಗಬೇಕೆಂದು ಅನಿಸುವದು.

೭. **ಪ್ರಾಪಂಚಿಕತ್ರಿಗುಣ**-ಸಂಕುಚಿತ ವರ್ತನದಿಂದ ದೋಷದೃಷ್ಟಿ ಬಂದು ಎರಡನೆಯವರ ನಿಂದೆ ಮಾಡುವ ಘಟನೆ ಉಂಟಾಗುವದು. ಮತ್ತು ಇದರಿಂದ ಅನೇಕರ ಸಂಗಡ ವಿರೋಧ ಬರುವದು.

**ಪಾರಮಾರ್ಥಿಕ ತ್ರಿಗುಣ**-ವಿಶಾಲ ವರ್ತನದಿಂದ ಎರಡನೆಯವರಲ್ಲಿ ಪ್ರೇಮ ಉಂಟಾಗಿ ಆ ಮನುಷ್ಯನಲ್ಲಿಯ ಉತ್ತಮಗುಣವೇ ಎದ್ದು ಕಾಣುವದು, ದೋಷಗಳಮೇಲೆ ಮುಸುಕು ಹಾಕಲಾಗುವದು. ಇದರಿಂದ ಅನೇಕರೊಡನೆ ಸ್ನೇಹ ಬೆಳೆಯುವದು.

೮. **ಪ್ರಾಪಂಚಿಕತ್ರಿಗುಣ**-ಎರಡನೆಯವರಿಗಾದ ದುಃಖದ ಬಗ್ಗೆ ಉದಾಸೀನತೆ ಇರುವದು. ಇಷ್ಟೇ ಅಲ್ಲ ಇದಕ್ಕಿಂತ ಕೆಳಗಿನ ದೃಷ್ಟಿಯಲ್ಲಿ ಹೇಳುವದಾದರೆ, ಎರಡನೆಯವರಿಗಾದ ದುಃಖದಿಂದ ಸುಖವೆನಿಸುವದು. ಪರೋಪಕಾರ ಮಾಡುವ ಪ್ರವೃತ್ತಿ ಇರುವದಿಲ್ಲ.

**ಪಾರಮಾರ್ಥಿಕ ತ್ರಿಗುಣ**–ಎರಡನೆಯವರಿಗಾದ ದುಃಖ ನೋಡಲಾಗುವದಿಲ್ಲ. ಪರೋಪಕಾರ ಮಾಡುವ ಹಂಬಲ ಇರುತ್ತದೆ. ಎರಡನೆಯವರಿಗಾದ ಸುಖದಿಂದ ತಾನೂ ಸುಖ ಹೊಂದುವದು.

೯. **ಪ್ರಾಪಂಚಿಕತ್ರಿಗುಣ**-ಪ್ರಪಂಚದಲ್ಲಿಯ ಸುಖದಿಂದ ಸುಖಿ, ದುಃಖದಿಂದ ದುಃಖಿ ಆಗುವನು. ಶೃಂಗಾರ, ಸಂಗೀತ, ನೃತ್ಯ, ನಾಚು, ನಾಟಕ, ತಮಾಷೆ ಇತ್ಯಾದಿಗಳು ಮನರಂಜನೆಯ ಸ್ಥಳಗಳಿರುವವು.

**ಪಾರಮಾರ್ಥಿಕ ತ್ರಿಗುಣ**–ಪ್ರಪಂಚದಲ್ಲಿಯ ಸುಖ ದುಃಖಗಳ ಆಂದೋಲನ (ಚಕ್ರ)ದಲ್ಲಿ ಮನಸ್ಸು ಹೆಚ್ಚು, ಕಡಿಮೆ ಆಗುವದಿಲ್ಲ. ಸ್ಥಿರವಿರುತ್ತದೆ. ದುಃಖದ ಆಘಾತವಾದರೂ ಸಹ ಮನಸ್ಸು ಡಗಮಗಿಸುವದಿಲ್ಲ. ಧೈರ್ಯಗೆಡುವದಿಲ್ಲ. ಹರಿಕಥೆ, ಭಜನೆ, ಕೀರ್ತನೆ, ಪ್ರವಚನ ಪುಣ್ಯಕಥೆ, ಉತ್ಸವ ಇತ್ಯಾದಿಗಳು ಮನರಂಜನೆಯ ಸ್ಥಳ ಮತ್ತು ಸಾಧನಗಳಾಗಿರುವವು.

೧೦ **ಪ್ರಾಪಂಚಿಕತ್ರಿಗುಣ**–ದೇಹವನ್ನೇ ದೇವರೆಂದು ತಿಳಿದು ದೇಹವನ್ನೇ ಅಖಂಡವಾಗಿ ಸ್ಮರಿಸುವದು. ಅರ್ಥಾತ್ ಭಗವಂತನ ವಿಸ್ಮರಣ ಉಂಟಾಗುವದು.

**ಪಾರಮಾರ್ಥಿಕ ತ್ರಿಗುಣ**–ದೇವರನ್ನೇ ಸರ್ವಸ್ವವೆಂದು ತಿಳಿದದ್ದರಿಂದ ಭಗವಂತನ ಅಖಂಡ ಸ್ಮರಣೆ ಹಾಗೂ ತತ್ಪರಿಣಾಮವಾಗಿ ದೇಹದ ವಿಸ್ಮರಣವು ತನ್ನಷ್ಟಕ್ಕೆ ತಾನೇಉಂಟಾಗುವದು. **ಅಸ್ತು**:– ಈ ಸಮಾಸದಲ್ಲಿ ಸತ್ವಗುಣದ ಲಕ್ಷಣಗಳನ್ನು ಹೇಳುವಾಗ ಶ್ರೀ ಸಮರ್ಥರು ತ್ರಿಗುಣದ ಪಾರಮಾರ್ಥಿಕ ರೂಪವನ್ನು ವಿಸ್ತಾರವಾಗಿ **ಹೇಳಿರುವರು.**

## ಸಮಾಸ ಸಾತವಾ : ಸತ್ವಗುಣ ಲಕ್ಷಣ

॥ಶ್ರೀರಾಮ॥ ಮಾಗಾ ಬೋಲಿಲಾ ತಮೋಗುಣ। ಜೋ ದುಃಖದಾಯಕ ದಾರುಣ।
ಆತಾ ಏಕಾ ಸತ್ವಗುಣ । ಪರಮ ದುಲ್ಲಭ ॥೧॥
ಜೋ ಭಜನಾಚಾ ಆಧಾರ । ಜೋ ಯೋಗಿಯಾಂಚೀ ಥಾರ ।
ಜೋ ನಿರಸೀ ಸಂಸಾರ । ದುಃಖ ಮೂಳ ಜೋ ॥೨॥
ಜೇ ಹೋಯೆ ಉತ್ತಮ ಗತೀ । ಮಾರ್ಗ ಫುಟೇ ಭಗವಂತೀ ।
ಜೇಣೇ ಪಾವಿಜೇ ಮುಕ್ತೀ । ಸಾಯೋಜ್ಯತಾ ತೇ ॥೩॥
ಜೋ ಭಕ್ತಾಚಾ ಕೋವಸಾ । ಜೋ ಭವಾರ್ಣ ವೀಚಾ ಭರ್ವಸಾ ।
ಮೋಕ್ಷ ಲಕ್ಷ್ಮೀಚೀ ದಶಾ । ತೋ ಸತ್ವಗುಣ ॥೪॥
ಜೋ ಪರಮಾರ್ಥಾಚೇ ಮಂಡಣ । ಜೋ ಮಹಂತಾಚೇ ಭೂಷಣ ।
ರಜತಮಾಚೇ ನಿರ್ಶನ । ಜಯಾಚೇನೀ ॥೫॥
ಜೋ ಪರಮ ಸುಖಕಾರೀ । ಜೋ ಆನಂದಾಚೀ ಲಹರೀ ।
ದೇಊನಿಯಾ ನಿವಾರೀ । ಜನ್ಮ ಮೃತ್ಯ ॥೬॥
ಜೋ ಅಜ್ಞಾನಾಚಾ ಸೇವಟ। ಜೋ ಪುಣ್ಯಾಚ ಮೂಳ ಪೀಠ ।
ಜಯಾಚೇನೀ ಸಾಂಪಡೇ ವಾಟ । ಪರಲೋಕಾಚೀ ॥೭॥
ಐಸಾ ಹಾ ಸತ್ವಗುಣ । ದೇಹೀ ಉಮಟತಾ ಆಪಣ ।
ತಯೇ ಕ್ರಿಯೇಚೇ ಲಕ್ಷಣ । ಐಸೇ ಅಸೆ ॥೮॥
ಈಶ್ವರೀ ಪ್ರೇಮಾ ಅಧಿಕ । ಪ್ರಪಂಚ ಸಂಪಾದಣೇ ಲೋಕಿಕ ।
ಸದಾ ಸನ್ನಿಧ ವಿವೇಕ । ತೋ ಸತ್ವಗುಣ ॥೯॥
ಸಂಸಾರ ದುಃಖ ವಿಸರವೀ । ಭಕ್ತಿ ಮಾರ್ಗ ವಿಮಳ ದಾವೀ ।
ಭಜನ ಕ್ರಿಯಾ ಉಪಜವೀ । ತೋ ಸತ್ವಗುಣ ॥೧೦॥
ಪರಮಾರ್ಥಾಚೀ ಆವಡೀ। ಉಠೇ ಭಾವಾರ್ಥಾಚೀ ಗೋಡೀ ।
ಪರೋಪಕಾರೀ ತಾಂತಡೀ । ತೋ ಸತ್ವಗುಣ ॥೧೧॥
ಸ್ನಾನಸಂಧ್ಯಾ ಪುಣ್ಯಸೀಳ । ಅಭ್ಯಾಂತರೀಚಾ ನಿರ್ಮಳ ।
ಶರೀರ ವಸ್ತ್ರೇ ಸೋಜ್ವಳ । ತೋ ಸತ್ವಗುಣ ॥೧೨॥
ಯೆಜನ ಆಣೀ ಯಾಜನ । ಆಧೇನ ಆಣೀ ಅಧ್ಯಾಪನ ।
ಸ್ವಯೇ ಕರೀ ದಾನಪುಣ್ಯ । ತೋ ಸತ್ವಗುಣ ॥೧೩॥

## ಸಮಾಸ ೭. ಸತ್ವಗುಣ ಲಕ್ಷಣ

**ಅಜ್ಞಾನವನ್ನು ಕೊನೆಗೊಳಿಸಿ ಪರಮಾನಂದ ಕೊಡುವಂಥ ಈ ಸತ್ವಗುಣವು ಪರಮಾರ್ಥದ ಸೌಂದರ್ಯವಿರುವದುಃ**-ಹಿಂದಿನ ಸಮಾಸದಲ್ಲಿ ಭಯಂಕರ ದುಃಖ ಕೊಡುವದಾದ ತಮೋಗುಣದ ಬಗ್ಗೆ ಹೇಳಿದೆನು. ಈಗ ಅತ್ಯಂತ ದುರ್ಲಭವಾದ ಸತ್ವಗುಣದ ಬಗ್ಗೆ ಕೇಳಿರಿ. (೧) ಭಜನಾದಿಗಳ ಭಕ್ತಿಗೆ ಸತ್ವಗುಣದ್ದೇ ಆಧಾರ ಬೇಕಾಗುವದು; ಯೋಗಿಗಳು ಇದರ ಆಶ್ರಯದಿಂದ ಸಿದ್ಧಿ ಪಡೆಯುವರು. ಮತ್ತು ಸಂಸಾರವು ಕೇವಲ ದುಃಖ ಮೂಲವಾಗಿದೆ. ಇದನ್ನು ಸತ್ವಗುಣದಿಂದ ಪರಿಹರಿಸಬಹುದು. ಮತ್ತು ದುಃಖ ಇಲ್ಲದಂತೆ ಮಾಡಲೂ ಬರುತ್ತದೆ. (೨) ಸತ್ವಗುಣದಿಂದ ಉತ್ತಮ ಗತಿ ದೊರಕುವದು; ಭಗವಂತನ ದರ್ಶನದ ಮಾರ್ಗ ದೊರೆಯುವದು. ಹಾಗೂ ಸಾಯುಜ್ಯ ಮುಕ್ತಿ ಹಸ್ತಗತವಾಗುವದು. (೩) ಭಕ್ತರಿಗೆ ಸತ್ವಗುಣದ್ದೇ ಆಧಾರವಾಗಿರುವದು. ಇದರ ಭರವಸೆಯಿಂದ ಭವಸಾಗರದಾಟಿ ಹೋಗಲು ಶಕ್ಯವಾಗುವದು.ಮತ್ತುಇದು ಮೋಕ್ಷರೂಪಿ ಲಕ್ಷ್ಮಿಯ ಐಶ್ವರ್ಯವಾಗಿದೆ. ಅಂದರೆ ಮುಕ್ತಪುರುಷನ ನಡವಳಿಕೆಯಲ್ಲಿ ಇದು ಕಂಡು ಬರುವದು. (೪) ಇದು ಪರಮಾರ್ಥದ ಸೌಂದರ್ಯವಿದೆ. ಮಹಾತ್ಮರಿಗೆ ಇದೇ ಭೂಷಣವಿರುವದು. ಅಂದರೆ ಸತ್ವಗುಣವೇ ಮಾನವನ ಮನವನ್ನು ಪರಮಾರ್ಥದ ಕಡೆಗೆ ಎಳೆದೊಯ್ಯುವದು. ತನ್ಮೂಲಕ ಮನವು ಆಕರ್ಷಣ ಹೊಂದಿ ಸ್ವಾನುಭವಿ ಪುರುಷನ ನಡವಳಿಕೆಯಲ್ಲಿ ಇದರಿಂದ ಶೋಭೆ ಬರುವದು. ಮತ್ತು ಇದರ ಮೂಲಕವಾಗಿ ರಜ, ತಮಗುಣಗಳ ಅರ್ಥ ತಿಳಿದು ಇವನ್ನು ದೂರೀಕರಿಸಲು ಬರುವದು. (೫) ಸತ್ವಗುಣದಿಂದ ಅತ್ಯಂತ ಸುಖದೊರೆಯುವದು. ಇದು ಪರಮಾನಂದದ ಅನುಭವ ಕೊಟ್ಟು ಜನನ ಮರಣಗಳಿಂದ ಬಿಡುಗಡೆ ಮಾಡುವದು. (೬) ಇದು ಅಜ್ಞಾನವನ್ನು ನಾಶಮಾಡುವದು. ಇದೇ ಸರ್ವ ಪುಣ್ಯದ ಮೂಲಸ್ಥಾನವಾಗಿದೆ. ಅಂದರೆ ಸತ್ವಗುಣದಿಂದ ಸರ್ವ ಪುಣ್ಯಗಳು ಉದಯ ಹೊಂದುವವು, ಸತ್ವಗುಣ ದಿಂದಲೇ ಪರಮಾರ್ಥದ ಮಾರ್ಗವು ತೋರಿಬರುವದು. (೭) ಸತ್ವಗುಣವು ಹೀಗೆ ಇರುವದು. ಇದು ದೇಹದಲ್ಲಿ ಪ್ರಕಟಗೊಂಡಾಗ ಯಾವ ಆಚರಣೆಗಳು ಕಂಡು ಬರುವವು. ಇದರ ವರ್ಣನೆ ಮುಂದೆ ಹೇಳಿದಂತೆ ಇರುವದು. (೮) ಈಶ್ವರನ ಮೇಲೆ ಪ್ರೇಮ, ವಿವೇಕಯುಕ್ತ ನಡತೆ,ಪರಮಾರ್ಥದಲ್ಲಿ ಪ್ರೇಮ,ಹರಿಕಥೆಯಲ್ಲಿ ಪ್ರೀತಿ, ಇವು ಸತ್ವಗುಣದ ಮಹತ್ವದ ಲಕ್ಷಣಗಳಿರುವವು. ಎಲ್ಲಕ್ಕಿಂತ ಹೆಚ್ಚು ಈಶ್ವರನ ಮೇಲೆ ಪ್ರೇಮವಿರುವದು. ನಾಲ್ಕು ಜನರಂತೆ ಪ್ರಪಂಚದಲ್ಲಿದ್ದೂ ಇದನ್ನು ನಿಭಾಯಿಸುವದು.ಮತ್ತು ಹೃದಯದಲ್ಲಿ ಸದಾಕಾಲವಿವೇಕವನ್ನುಜಾಗೃತವಾಗಿಡುವದು. ಇದು ಸತ್ವ ಗುಣವು. (೯) ಸಂಸಾರದಲ್ಲಿಯ ದುಃಖದ ಮರೆವು ಮಾಡುವದು, ಭಕ್ತಿಮಾರ್ಗವನ್ನು ಸ್ಪಷ್ಟವಾಗಿ ಮತ್ತು ಪ್ರತ್ಯಕ್ಷ ಭಜನೆ ಮಾಡಲಿಕ್ಕೆ ಹಚ್ಚುವದು. ಇವೆಲ್ಲ ಸತ್ವಗುಣದಿಂದಲೇ ಸರಿ. (೧೦) ಪರಮಾರ್ಥದಲ್ಲಿ ಪ್ರೇಮ ಉಂಟಾಗುವದು, ಆತ್ಮ ತತ್ವದಲ್ಲಿ ಪ್ರೀತಿ ನಿರ್ಮಾಣ ಮಾಡುವದು, ಮತ್ತು ಪರೋಪಕಾರ ಮಾಡುವಲ್ಲಿ ಉತ್ಸಾಹ ಉಂಟಾಗುವದಕ್ಕೆಲ್ಲ ಸತ್ವಗುಣವೇಕಾರಣವು. (೧೧) ಸ್ನಾನಸಂಧ್ಯಾದಿಗಳನ್ನು ನಿಯಮದಿಂದ ಮಾಡುವದು, ಪುಣ್ಯ ಕರ್ಮಗಳನ್ನು ಸಹಜವಾಗಿ ಮಾಡುವದು. ಮತ್ತು ನಿರ್ಮಲ ಅಂತಃಕರಣ ಇರುವವ, ಹಾಗೂ ಬಾಹ್ಯಾಂಗ ಅಂದರೆ ಶರೀರ, ಬಟ್ಟೆ ವಗೈರೆ ಸ್ವಚ್ಛವಿರುವವು, ಇವು ಸತ್ವಗುಣದವು. (೧೨) ಯಜನ ಅಂದರೆ ಸ್ವತಃ ಯಜ್ಞ ಮಾಡುವದು, ಯಾಜನವೆಂದರೆ ಎರಡನೆಯವರಿಂದ ಯಜ್ಞ ಮಾಡಿಸುವದು. ಅಧ್ಯಯನವೆಂದರೆ ಸ್ವತಃ ಅಭ್ಯಾಸ ಮಾಡುವದು. ಅಧ್ಯಾಪನವೆಂದರೆ ಎರಡನೆಯವರಿಗೆ ಕಲಿಸುವದು. ದಾನ ಮಾಡುವ ಪುಣ್ಯಕರ್ಮ ಮಾಡುವದು, ಈ ಎಲ್ಲ ಲಕ್ಷಣಗಳು ಎಲ್ಲಿ ಕಂಡು ಬರುವವೋ ಅವು ಸತ್ವಗುಣದವಿರುವವು. (೧೩)

ನಿರೂಪಣಾಚೀ ಆವಡೀ । ಜಯಾ ಹರಿಕಥೇಚೀ ಗೋಡೀ ।
ಕ್ರಿಯಾ ಪಾಲಟೇ ರೋಕಡೀ । ತೋ ಸತ್ವಗುಣ ॥೧೪॥
ಅಶ್ವದಾನೇ ಗಜದಾನೇ । ಗೋದಾನೇ ಭೂಮಿದಾನೇ ।
ನಾನಾರತ್ನಾಂಚೀ ದಾನೇ । ಕರೀತೋ ಸತ್ವಗುಣ ॥೧೫॥
ಧನದಾನ ವಸ್ತ್ರದಾನ । ಅನ್ನದಾನ ಉದಕದಾನ ।
ಕರೀ ಬ್ರಾಹ್ಮಣ ಸಂತರ್ಪಣ । ತೋ ಸತ್ವಗುಣ ॥೧೬॥
ಕಾರ್ತಿಕಸ್ನಾನೇ ಮಾಘಸ್ನಾನೇ । ವ್ರತೇ ಉದ್ಯಾಪನೇ ದಾನೇ ।
ನಿಃಕಾಮ ತೀರ್ಥೇ ಉಪೋಷಣೇ । ತೋ ಸತ್ವಗುಣ ॥೧೭॥
ಸಹಸ್ರ ಭೋಜನೇ ಲಕ್ಷ ಭೋಜನೇ । ವಿವಿಧ ಪ್ರಕಾರೀಚೀ ದಾನೇ ।
ನಿಃಕಾಮ ಕರೀ ಸತ್ವಗುಣೇ । ಕಾಮನಾ ರಜೋಗುಣ ॥೧೮॥
ತೀರ್ಥೀ ಅರ್ಪೀ ಜೋ ಅಗ್ರಾರೇ । ಬಾಂಧೇ ವಾಪೀ ಸರೋವರೇ ।
ಬಾಂಧೇ ದೇವಾಳಯೇ ಸಿಖರೇ । ತೋ ಸತ್ವಗುಣ ॥೧೯॥
ದೇವದ್ವಾರೀ ಪಡಶಾಳಾ। ಪಾಈರಿಯಾ ದೀಪಮಾಳಾ ।
ವೃಂದಾವನೇ ಪಾರ ಪಿಂಪಳಾ । ಬಾಂಧೇ ತೋ ಸತ್ವಗುಣ ॥೨೦॥
ಲಾವೀವನೇ ಉಪವನೇ । ಪುಷ್ಪವಾಟಿಕಾ ಜೀವನೇ ।
ನಿವವೀ ತಾಪಸ್ಯಾಚೀ ಮನೇ । ತೋ ಸತ್ವಗುಣ ॥ ॥೨೧॥
ಸಂಧ್ಯಾಮಠ ಆಣೀ ಭುಯೇರೀ । ಪಾಈರಿಯಾ ನದೀತೀರೀ ।
ಭಾಂಡಾರಗೃಹೇ ದೇವದ್ವಾರೀ। ಬಾಂಧೇ ತೋ ಸತ್ವಗುಣ ॥೨೨॥
ನಾನಾ ದೇವಾಚೀ ಜೇ ಸ್ಥಾನೇ । ತೇಥೇ ನಂದಾದೀಪ ಘಾಲಣೇ ।
ವಾಹೇ ಅಳಂಕಾರ ಭೂಷಣೇ । ತೋ ಸತ್ವಗುಣ ॥೨೩॥
ಜೇಂಗಟ ಮೃದಾಂಗ ಟಾಳ । ದಮಾಮೇ ನಗಾರೇಕಾಹಳ।
ನಾನಾ ವಾದ್ಯಾಂಚೇ ಕಲ್ಲೋಳ । ಸುಸ್ವರಾದಿಕ ॥೨೪॥
ನಾನಾ ಸಾಮುಗ್ರೀ ಸುಂದರ । ದೇವಾಳಈ ಘಾಲೀ ನರ ।
ಹರಿಭಜನೀ ಜೋ ತತ್ಪರ । ತೋ ಸತ್ವಗುಣ ॥೨೫॥
ಛತ್ರೇ ಆಣೀ ಸುಖಾಸನೇ । ದಿಂಡ್ಯಾ ಪತಾಕಾ ನಿಶಾಣೇ ।
ವಾಹೇ ಚಾಮರೇ ಸೂರ್ಯಾಪಾನೇ । ತೋ ಸತ್ವಗುಣ ॥೨೬॥
ವೃಂದಾವನೇ ತುಳಸೀವನೇ । ರಂಗಮಾಳಾ ಸಮಾರ್ಜನೇ ।
ಏಸೀ ಪ್ರೀತಿ ಘೇತಲೀ ಮನೇ । ತೋ ಸತ್ವಗುಣ ॥೨೭॥

ಪರಮಾರ್ಥ ಮತ್ತು ತತ್ವಜ್ಞಾನ ಅಥವಾ ವೇದಾಂತ ವಿಷಯ ಕೇಳಬೇಕೆಂಬಲ್ಲಿ ಪ್ರೀತಿ, ಭಗವಂತನ, ಸಗುಣಚರಿತ್ರೆಯಲ್ಲಿ ಆಸಕ್ತಿ,ಮತ್ತು ಶ್ರವಣ ಮಾಡಿದ ಉಪದೇಶಾದಿಗಳಂತೆ ನಡೆಯಬೇಕೆಂದು ತನ್ನ ನಡವಳಿಕೆಯನ್ನು ತಿದ್ದಿಕೊಂಡು ನಡೆಯುವ ಶಕ್ತಿ ಇರುವದು. ಇವೆಲ್ಲ ಸತ್ವಗುಣಗಳು. (೧೪) ಸತ್ವಗುಣದ ಮನುಷ್ಯನು ಅನೇಕ ಪ್ರಕಾರದ ದಾನಮಾಡುವನು, ವ್ರತಾದಿಗಳನ್ನು ಮಾಡುವನು, ದೇವ ಮಂದಿರಾದಿಗಳಿಗೆ ಸಹಾಯ ಮಾಡುವದಲ್ಲದೇ ಸ್ವತಃ ದೇವರ ಸೇವೆಯಲ್ಲಿ ದುಡಿಯುವನು; ಕುದುರೆ, ಆನೆ, ಆಕಳು, ಭೂಮಿ ಅನೇಕ ಪ್ರಕಾರದ ರತ್ನಗಳನ್ನು ದಾನ ಮಾಡುವದು ಸತ್ವಗುಣವು. (೧೫) ದ್ರವ್ಯ, ಧನ, ವಸ್ತ್ರ, ಅನ್ನ, ನೀರು, ಇವುಗಳ ದಾನ ಮಾಡುವದು ಮತ್ತು ಬ್ರಾಹ್ಮಣರಿಗೆ ಭೋಜನ ಮಾಡಿಸುವದು ಸತ್ವಗುಣವು. (೧೬) ಕಾರ್ತೀಕ, ಮಾಘ ತಿಂಗಳಲ್ಲಿಯ ಸ್ನಾನ, ವ್ರತ,ಉದ್ಯಾಪನ ಹಾಗೂ ಇತರ ಅನೇಕ ದಾನಗಳನ್ನು ಮಾಡುವದು, ಯಾವ ಅಪೇಕ್ಷೆ ಇಟ್ಟುಕೊಳ್ಳದೇ ತೀರ್ಥಾಟನೆ ಮತ್ತು ಉಪವಾಸ ಮಾಡುವದು ಸತ್ವಗುಣವು.(೧೭) ಸಹಸ್ರ–ಲಕ್ಷ ಜನರ ಭೋಜನ, ಇದರಂತೆ ನಾನಾ ಪ್ರಕಾರದ ದಾನಗಳನ್ನು ನಿಷ್ಕಾಮ ಮನದಿಂದ ಮಾಡಿದರೆ ಅದೆಲ್ಲ ಸತ್ವಗುಣದಿಂದಲೇಸರಿ.ಆದರೆ ಅದೇ ಸಕಾಮದಿಂದ ಮಾಡಿದರೆ ರಜೋಗುಣದ್ದೆನಿಸುವದು. (೧೮) ತೀರ್ಥಸ್ಥಳಗಳಲ್ಲಿ ಹೋಗುವದು, ಬಡವರಿಗೆ ಜಮೀನು, ಮನೆಗಳನ್ನು ಇನಾಮಾಗಿ ಕೊಡುವದು, ಭಾವಿ, ಕೆರೆಗಳನ್ನು ಕಟ್ಟಿಸುವದು, ದೇವಾಲಯ ಮತ್ತು ಶಿಖರಗಳನ್ನು ಕಟ್ಟಿಸುವದು ಇವೆಲ್ಲ ಸತ್ವಗುಣಗಳು. (೧೯) ದೇವರ ಬಾಗಿಲ ಹತ್ತಿರ, ದೇವಾಲಯದ ಹತ್ತಿರದಲ್ಲಿಯೇ ಧರ್ಮಶಾಲೆ ಕಟ್ಟಿಸುವದು. ಪಾವುಟಿಗೆ, ದೀಪಮಾಲಿಯ ಕಂಬ, ವೃಂದಾವನ, (ಸಮಾಧಿ ಕಟ್ಟೆ) ಅಶ್ವತ್ಥ ವೃಕ್ಷಕ್ಕೆ ಕಟ್ಟೆ ಕಟ್ಟಿಸುವದು, ಇವೆಲ್ಲ ಸತ್ವಗುಣಗಳು. (೨೦) ದೇವರ ಸಲುವಾಗಿ ಸಣ್ಣ ದೊಡ್ಡ ತೋಟಪಟ್ಟಿಗಳಲ್ಲಿ ಹಣ್ಣು ಕಾಯಿಗಳನ್ನು ಬೆಳೆಸುವದು, ಹೂವು ಪತ್ರಿಗಳ ಸುಂದರ ಉಪವನ ನಿರ್ಮಿಸುವದು, ನೀರಿನ ಅನುಕೂಲತೆ ಮಾಡುವದು, ತಪಸ್ವಿ ಜನರ ಮನಸ್ಸಿಗೆ ಶಾಂತಿಕೊಡುವ ಕೆಲಸಗಳೆಲ್ಲ ಸತ್ವಗುಣಗಳು(೨೧) ೧)ಸಂಧ್ಯಾಮಠ(ಚಿಂತನಕ್ಕೆ ಅನುಕೂಲವಾದ ಮಠ)ಮತ್ತು ೨)ಗವಿ ಗುಹೆ (ಗುಡ್ಡದಲ್ಲಿ ಅಥವಾ ನೆಲದಲ್ಲಿರುವ ಪೋಟರೆ ಭುಯಾರ, ನೆಲಮನೆ)ಗಳನ್ನು ಕಟ್ಟುವದು, ನೀರು ತರಲು ಅನುಕೂಲವಾಗಲೆಂದು ನದಿಯ ದಂಡೆಯಲ್ಲಿ ಪಾವಟಿಗೆಗಳನ್ನು ಕಟ್ಟುವದು, ದೇವರ ಗುಡಿಗೆ ಹತ್ತಿರವಾಗಿ ಭಾಂಡಾರ ಗೃಹ (ಕೋಠಿ ಮನೆ) ಕಟ್ಟಿಸುವದು. ಸತ್ವಗುಣವು. ( (೧) ಸಂಧ್ಯಾಮಠ—ಶ್ರೀ ಸಮರ್ಥರು ಪರಳಿನದಿ ಹತ್ತಿರ ಮಾಡಿರುವ ಸಂಧ್ಯಾಮಠದಂತಹ ಮಠ ಕಟ್ಟಿಸಬೇಕು. ಈಗ ಇದು ನಾಮಶೇಷವಾಗಿದೆ. ಆದರೆ ಶಹಾಪೂರ(ಮಸೂರ) ಹತ್ತಿರದ ಮಠ ಈಗ ಇರುವದು. (೨) ಭುಯಾರ—ಚಾಫಳ, ಶಹಾಪುರದ ಹತ್ತಿರ ಶ್ರೀ ಸಮರ್ಥರು ವಾಸ ಮಾಡಿದಂತಹ ನೆಲಮನೆ (ಗವಿ) ಇಂಥವು ಇರಬೇಕೆಂದು ಶ್ರೀಸಮರ್ಥರು ಉದಾಹರಣಾರ್ಥವಾಗಿ ಹೇಳಿದ್ದಾರೆ.(೨೨) ಬೇರೆಬೇರೆ ದೇವಸ್ಥಾನಗಳಲ್ಲಿ ನಂದಾದೀಪ ಇಡುವವ ಮತ್ತು ದೇವರಿಗೆ ದಾಗೀನೆ, ವಸ್ತ್ರ ಭೂಷಣಾದಿಗಳನ್ನು ಅರ್ಪಿಸುವವರೆಲ್ಲರೂ ಸತ್ವಗುಣಿಗಳು. (೨೩) ಝಾಂಗಡಿ ಅಥವಾ ಝಾಗಟಿ, ಮೃದಂಗ, ತಾಳ, ದೊಡ್ಡ ನಗಾರಿ, ಸಣ್ಣ ಡೋಲು,ಕಾಳಿ,ಡಪ್ಪು ಇತ್ಯಾದಿ ಅನೇಕ ಸುಸ್ವರವಾದ್ಯಗಳನ್ನು ದೇವಸ್ಥಾನಕ್ಕೆಕೊಡುವದು(೨೪)ಮತ್ತು ಇನ್ನೂ ಅನೇಕ ಪ್ರಕಾರದ ಸುಂದರ ಸಾಹಿತ್ಯ ಸಾಮುಗ್ರಿಗಳನ್ನು ದೇವಸ್ಥಾನಕ್ಕೆ ಕೊಡುವದು ಮತ್ತು ಭಗವಂತನ ಭಜನೆಗಾಗಿ ಆತುರಗೊಂಡವರೆಲ್ಲ ಸತ್ವಗುಣಿಗಳು. (೨೫) ದೊಡ್ಡ ಛತ್ರಿ, ಪಾಲಖಿ, ದಿಂಡಿ ಪತಾಕೆ. ನಿಶಾನೆ. ಚೌರಿ, ಅಪ್ತಗಿರಿ ಇತ್ಯಾದಿಗಳನ್ನು ದೇವರಿಗೆ ಅರ್ಪಿಸುವದು ಸತ್ವಗುಣವು. (೨೬) ವೃಂದಾವನ [ತುಳಸೀಕಟ್ಟೆ] ಮತ್ತು ತುಳಸೀವನ [ಬಹಳಷ್ಟು ತುಳಸೀಗಿಡಗಳನ್ನು ಬೆಳೆಸಿದ ಸ್ಥಳ], ದೇವಸ್ಥಾನದಲ್ಲಿ ರಂಗೋಲಿಹಾಕುವದು. ನೀರಿನ ಥಳೀ ಹೊಡೆಯುವದು ಅಥವಾ ಸಮ್ಮಾರ್ಜನ ಅಂದರೆ ದೇವಸ್ಥಾನದಲ್ಲಿ ಕಸಗೂಡಿಸಿ, ಸಾರಿಸಿ ಸ್ವಚ್ಛಮಾಡುವದಕ್ಕಾಗಿ ಬೇಕಾಗುವ ಸಾಧನಗಳನ್ನು ಕೊಡುವಲ್ಲಿ ಉತ್ಸುಕತೆ ಇವೆಲ್ಲ ಸತ್ವಗುಣಗಳು. (೨೭)

ಸುಂದರೇ ನಾನಾ ಉಪಕರ್ಣೇ। ಮಂಡಪ ಚಾಂದವೇ ಆಸನೇ।
ದೇವಾಳಈ ಸಮರ್ಪಣೇ। ಹಾ ಸತ್ವಗುಣ ॥೨೮॥
ದೇವಾಕಾರಣೇ ಖಾದ್ಯ। ನಾನಾ ಪ್ರಕಾರೀ ನೈವೇದ್ಯ।
ಅಪೂರ್ವ ಫಳೇ ಅರ್ಪೀ ಸದ್ಯ। ತೋ ಸತ್ವಗುಣ ॥೨೯॥
ಐಸೀ ಭಕ್ತೀಚೀ ಆವಡೀ। ನೀಚ ದಾಸ್ಯತ್ವಾಚೀ ಗೋಡೀ।
ಸ್ವಯೇ ದೇವದ್ವಾರ ಝಾಡೀ। ತೋ ಸತ್ವಗುಣ ॥೩೦॥
ತಿಥೀಪರ್ವ ಮೊಹೋತ್ಸಾವ। ತೇಥೇ ಜ್ಯಾಚಾ ಅಂತರ್ಭಾವ।
ಕಾಯಾವಾಚಾ ಮನೇ ಸರ್ವ। ಅರ್ಪೀ ತೋ ಸತ್ವಗುಣ ॥೩೧॥
ಹರಿಕಥೇಸೀ ತತ್ಪರ। ಗಂಧೇ ಮಾಳಾ ಆಣೀ ಧುಶರ।
ಘೇಊನ ಉಭೀ ನಿರಂತರ। ತೋ ಸತ್ವಗುಣ ॥೩೨॥
ನರ ಅಥವಾ ನಾರೀ। ಯಥಾನಶಕ್ತಿ ಸಾಮಗ್ರೀ।
ಘೇಊನ ಉಭೀ ದೇವದ್ವಾರೀ। ತೋ ಸತ್ವಗುಣ ॥೩೩॥
ಮಹತ್ಕೃತ್ಯ ಸಾಂಡೂನ ಮಾಗೇ। ದೇವಾಸಯೇ ಲಾಗವೇಗೇ।
ಭಕ್ತಿನಿಕಟ ಅಂತರಂಗೇ। ತೋ ತಮೋಗುಣ ॥೩೪॥
ಥೋರಪಣ ಸಾಂಡೂನ ದುರಿ। ನೀಚಕೃತ್ಯ ಅಂಗೀಕಾರೀ।
ತಿಷ್ಠತ ಉಭೀದೇವದ್ವಾರೀ। ತೋ ಸತ್ವಗುಣ ॥೩೫॥
ದೇವಾಲಾಗೀ ಉಪೋಷಣ। ವರ್ಜೀ ತಾಂಬೋಲ ಭೋಜನ।
ನಿತ್ಯ ನೇಮ ಜಪಧ್ಯಾನ। ಕರೀ ತೋ ಸತ್ವಗುಣ ॥೩೬॥
ಶಬ್ದ ಕಠೀಣ ನ ಬೋಲೇ। ಅತಿ ನೇಮೇಸೀ ಚಾಲೇ।
ಯೋಗೀ ಜೇಣೇ ತೋಷವಿಲೇ। ತೋ ಸತ್ವಗುಣ ॥೩೭॥
ಸಾಂಡೂನಿಯಾ ಅಭಿಮಾನ। ನಿಃಕಾಮ ಕರೀ ಕೀರ್ತನ।
ಶ್ವೇದ ರೋಮಾಂಚ ಸ್ಫುರಣ। ತೋ ಸತ್ವಗುಣ ॥೩೮॥
ಅಂತರೀ ದೇವಾಚೇ ಧ್ಯಾನ। ತೇಣೇ ನಿಡಾರಲೇ ನಯನ।
ಪಡೇ ದೇಹಾಚೇ ವಿಸ್ಮರಣ। ತೋ ಸತ್ವಗುಣ ॥೩೯॥
ಹರಿಕಥೇಚೀ ಅತಿ ಪ್ರೀತೀ। ಸರ್ವಥಾ ನಯೇ ವಿಕೃತೀ।
ಆದಿಕ ಪ್ರೇಮಾ ಆದಿ ಅಂತೀ। ತೋ ಸತ್ವಗುಣ ॥೪೦॥
ಮುಖೀ ನಾಮ ಹಾತೀ ಟಾಳೀ। ನಾಚತ ಬೋಲೇ ಬ್ರೀದಾವಳೀ।
ಘೇಊನ ಲಾವೀ ಪಾಯಧುಳೀ। ತೋ ಸತ್ವಗುಣ ॥೪೧॥

ಅನೇಕ ಪ್ರಕಾರದ ಪೂಜಾ ಸಾಮುಗ್ರಿ ಅಂದರೆ ಪಾತ್ರೆ. ಮಂಟಪ, ಛತ್ರಿ. ಮತ್ತು ಆಸನ ವಗೈರೆ ದೇವರಿಗೆ ಕೊಡುವದು ಸತ್ವಗುಣವು. (೨೮) ದೇವರ ಸಲುವಾಗಿ ನಾನಾ ಪ್ರಕಾರದ ಖಾದ್ಯ ಸಾಮಾನುಗಳನ್ನು ತಯಾರಿಸಿ ನಾನಾ ಪ್ರಕಾರದಿಂದ ನೈವೇದ್ಯ ಮಾಡುವದು, ದುರ್ಮಿಳವಾದ ಮತ್ತು ರುಚಿಕರವಾದ ಸುಂದರ ಹಣ್ಣು ಹಂಪಲಗಳನ್ನು ದೇವರಿಗೆ ಅರ್ಪಿಸುವದು, ಇವೆಲ್ಲ ಸತ್ವಗುಣಗಳು. (೨೯) ಇಂಥ ಪ್ರಕಾರದ ಭಕ್ತಿಯಲ್ಲಿ ಪ್ರೇಮವು ಯಾರಿಗೆ ಇರುತ್ತದೆ. ಮತ್ತು ದೇವರ ವಿಷಯದಲ್ಲಿ ತೀರ ಕ್ಷುಲ್ಲಕವಾದ ಕೆಲಸವನ್ನೂ ಸಹ ಸೇವೆ ಎಂದು ಮಾಡುವಲ್ಲಿ ಯಾರಿಗೆ ಮನಃಪೂರ್ವಕವಾದ ಇಚ್ಛೆ ಇರುತ್ತದೆ ಮತ್ತು ಯಾರು ಸ್ವತಃ ದೇವಾಲಯದಲ್ಲಿ ಕಸ ಸಹ ಉಡುಗುತ್ತಾರೆ. ಅಂಥವರೆಲ್ಲ ಸತ್ವಗುಣಗಳು. (೩೦) ಮನುಷ್ಯನು ಉತ್ಸವ ಪ್ರಿಯನಾಗಿರುವನು ನಿಯಮದಿಂದ ಉಪಾಸನೆ ಮಾಡುವ ಭಕ್ತನಿಗೆ ಉತ್ಸವದಲ್ಲಿ ಭಗವಂತನ ಬಗ್ಗೆ ವಿಶೇಷ ಪ್ರೇಮ, ಉತ್ಪನ್ನವಾಗುವದು. ಅನೇಕ ಜನರ ಸೇವಾ ಮಾಡುವ ಭಾಗ್ಯ ಸಿಗುವದು ಉತ್ತಮ ಶ್ರವಣ ಘಟಿಸುವದು, ಉತ್ಸವದಿಂದ ಸಂತರ ಸಮಾಗಮವಾಗುವದು. ಇದೆಲ್ಲ ಕಾರಣದಿಂದ ಸತ್ವಗುಣ ಮನುಷ್ಯನಿಗೆ ಉತ್ಸವದಲ್ಲಿ ಪ್ರೇಮವಿರುತ್ತದೆ,– ಪುಣ್ಯತಿಥಿ, ಪುಣ್ಯಕಾಲ, (ಪರ್ವಣಿ) ಮತ್ತು ಮಹೋತ್ಸವ ಇವುಗಳಲ್ಲಿ ಸದಾಕಾಲ ದುಡಿಯುವವ ಮತ್ತು ಇಂಥ ವೇಳೆ ಯಾವಾಗ ಬರುವದೋ ಎಂದು ನಿರೀಕ್ಷಿಸುವವ, ಮತ್ತು ಇವುಗಳಿಗಾಗಿ ಕಾಯಾ, ವಾಚಾ, ಮನಸಾ ತನ್ನದೆಲ್ಲವನ್ನು ಅರ್ಪಣ ಮಾಡುವವರೆಲ್ಲರೂ ಸತ್ವಗುಣಗಳು. [೩೧] ಭಗವಂತನ ಕಥೆ ಕೇಳುವಲ್ಲಿ ತತ್ಪರನಿರುವದು. ಮತ್ತು ಸುವಾಸಿಕ ಗಂಧ, ಹೂವಿನಹಾರ, ಬುಕ್ಕಿಟ್ಟು ವಗೈರೆ ದೇವರಿಗೆ ಪ್ರಿಯವಾದವುಗಳನ್ನು ತೆಗೆದುಕೊಂಡು ಯಾವಾಗಲೂ ದೇವರ ಮುಂದೆ ನಿಂತಿರುವದು ಇವೆಲ್ಲ ಸತ್ವಗುಣಗಳು. [೩೨] ಸ್ತ್ರೀಯಾಗಲಿ, ಪುರುಷನಾಗಲಿ ಪ್ರತಿಯೊಬ್ಬರು ತಮ್ಮ ತಮ್ಮ ಅನುಕೂಲತೆಯ ಪ್ರಕಾರ ದೇವರಿಗೆ ಪ್ರಿಯವಾದ ಸಾಹಿತ್ಯ ತೆಗೆದುಕೊಂಡು ದೇವಾಲಯದಲ್ಲಿ ನಿಂತಿರುವದು ಸತ್ವಗುಣವು. [೩೩] ಮಹತ್ವದ ದೊಡ್ಡ ಕೆಲಸ ಸ್ವಂತದಿದ್ದರೂ ಸಹ ಅದನ್ನು ಹಿಂದಕ್ಕೆ ಸರಿಸಿ ಅವಸರದಿಂದ ದೇವರ ದರ್ಶನಕ್ಕೆ ಬರುವದು, ಅಂತರಂಗದಲ್ಲಿ ಭಗವಂತನ ಪ್ರೇಮವು ಜೀವನಕ್ಕೆ ನಿಕಟವಾಗಿ ಅಂಟಿಕೊಂಡಿರುವದು. ಇವೆಲ್ಲ ಸತ್ವಗುಣಗಳು. [೩೪] ತನ್ನ ದೊಡ್ಡಸ್ತನವನ್ನು ದೂರಸರಿಸಿ ಮತ್ತು ದೇವರ ತೀರ ಕೆಳಮಟ್ಟದ ಕೆಲಸವನ್ನು ತಾನು ಅಂಗೀಕಾರ ಮಾಡುವವ ಹಾಗೂ ದೇವದ್ವಾರದಲ್ಲಿ ನೋಡುತ್ತ ನಿಲ್ಲುವವರೆಲ್ಲ ಸತ್ವಗುಣಗಳು. [೩೫] ದೇವರ ಸಲುವಾಗಿ ಉಪವಾಸ ಮಾಡುವದು, ಎಲೆ, ಅಡಿಕೆ, ತಂಬಾಕ [ತಾಂಬೂಲ]ನ್ನು ಮತ್ತು ಊಟವನ್ನು ಬಿಡುವದು ಮತ್ತು ನಿತ್ಯ ನೇಮದಿಂದ ಜಪ ಮತ್ತು ಧ್ಯಾನ ಮಾಡುವದು ಇವೆಲ್ಲ ಸತ್ವಗುಣಗಳು. [೩೬] ಎಂದೂ ಕಠೋರ ಶಬ್ದಗಳನ್ನು ಮಾತನಾಡದವ, ಅತಿಶಯ ನಿಯಮದಿಂದ ನಡೆಯುವವ, ಯೋಗಿಗಳನ್ನು ಸಂತೋಷಪಡಿಸುವವ, ಇವರೆಲ್ಲ ಸತ್ವಗುಣಿಗಳು (೩೭) ಅಭಿಮಾನ ಬಿಟ್ಟು ಅತ್ಯಂತ ನಿಷ್ಕಾಮ ಭಾವದಿಂದ ಕೀರ್ತನ ಮಾಡುವದು. ಕೀರ್ತನ ಮಾಡುವಾಗ ಗದ್ಗದಿತರಾಗುವದು. ರೋಮಾಂಚನಗೊಳ್ಳುವದು, ವಗೈರೆ ಸಾತ್ವಿಕ ಭಾವಗಳು ಮೈಯಲ್ಲಿ ತೋರಿ ಬರುವದೆಲ್ಲವು ಸತ್ವಗುಣವಾಗಿದೆ. (೩೮) ಅಂತರ್ಯಾಮಿ ದೇವರ ಧ್ಯಾನ ಮಾಡುವದು, ತತ್‌ಪರಿಣಾಮವಾಗಿ ಆನಂದಾಶ್ರುಗಳು ಬಳಬಳ ಉದರುವವು. ಮತ್ತು ಈ ಪ್ರೇಮೋನ್ಮಾದದಿಂದ ಸ್ವತಃದ ದೇಹದ ವಿಸ್ಮರಣವಾಗುವದು ಇದು ಸತ್ವಗುಣವು. (೩೯) ಸ್ವತಃದ ವಿಸ್ಮರಣೆಯಾಗುವದೇ ಸಾಧನವು, ಸರಿಯಾಗಿ ನಡೆದದ್ದರ (ಖರೇ) ನಿಜವಾದ ಗುರುತಾಗಿದೆ, ಭಗವಂತನ ಸ್ಮರಣೆ ಹೆಚ್ಚು ಹೆಚ್ಚು ಸ್ಥಿರವಾಗಿ, ಅವರಿಂದ ಪ್ರೇಮದ ಉತ್ಕರ್ಷವಾಗಹತ್ತುವದು. ಇದರಿಂದಲೇ ವೈರಾಗ್ಯವು ಭರದಿಂದ ಹೆಚ್ಚುವದು. ಮತ್ತು ಭೋಗ ಮತ್ತು ಆಸಕ್ತಿಯಲ್ಲಿ ತಿರಸ್ಕಾರ ಉಂಟಾಗುವದು. ಮತ್ತು ದೃಶ್ಯದಿಂದ ಮನವು ನಿವೃತ್ತವಾಗುವದು, ಇದರ ವರ್ಣನೆಯನ್ನು ಈಗ ಕೇಳಿರಿ—ಭಗವಂತನ ಸಗುಣ ಚರಿತ್ರೆಯಲ್ಲಿ ಅಪಾರ ಪ್ರೇಮವಿರುತ್ತದೆ. ಈ ಪ್ರೇಮದಲ್ಲಿ ಎಂದೂ ಬೇಸರ ತಿರಸ್ಕಾರಗಳು ಉತ್ಪನ್ನವಾಗುವದಿಲ್ಲ. ಹಾಗೂ ಭಗವಂತನ ಮೇಲಿನ ಪ್ರೇಮವು ಆರಂಭದಿಂದ ಕೊನೆಯವರೆಗೆ ಹೆಚ್ಚುತ್ತ ಹೋಗುವದು ಇದು ಸತ್ವಗುಣವು. (೪೦) ಮುಖದಿಂದ ಭಗವಂತನ ನಾಮ ಗಾನ ಮಾಡುವದು ಮತ್ತು ಕೈಯಿಂದ ತಾಳ ಬಾರಿಸುವದು, ಕುಣಿಯುವದು, ಕುಣಿ ಕುಣಿದು ಭಗವಂತನ ಗುಣಾನುವಾದ ಬಿರುದಾವಳಿ ಹೊಗಳುವದು ಮತ್ತು ಭಕ್ತರ ಪಾದಧೂಳಿಯನ್ನು ತೆಗೆದುಕೊಂಡು ತನ್ನ ಹಣೆಗೆ ಹಚ್ಚಿಕೊಳ್ಳುವದು ಇವೆಲ್ಲ ಸತ್ವಗುಣವು. (೪೧)

ದೇಹಾಭಿಮಾನ ಗಳೇ । ವಿಷಈ ವೈರಾಗ್ಯ ಪ್ರಬಳೇ ।
ಮಿಥ್ಯಾ ಮಾಯಾ ಐಸೇ ಕಳೇ। ತೋ ಸತ್ವಗುಣ ॥೪೨॥
ಕಾಂಹೀ ಕರಾವಾ ಉಪಾಯೋ । ಸಂಸಾರೀ ಗುಂತೋನ ಕಾಯೋ।
ಉಕಲವೀ ಐಸೇ ಹೃದಯೋ । ತೋ ಸತ್ವಗುಣ ॥೪೩॥
ಸಂಸಾರಾಸೀ ತ್ರಾಸೇ ಮನ । ಕಾಂಹೀ ಕರಾವೇ ಭಜನ ।
ಐಸೇ ಮನೀ ಉಠೇ ಜ್ಞಾನ । ತೋ ಸತ್ವಗುಣ ॥೪೪॥
ಅಸತಾ ಆಪುಲೇ ಆಶ್ರಮೀ । ಅತ್ಯಾದರೇ ನಿತ್ಯನೇಮೀ ।
ಸದಾ ಪ್ರೀತೀ ಲಾಗೇ ರಾಮೀ । ತೋ ಸತ್ವಗುಣ ॥೪೫॥
ಸಕಳಾಂಚಾ ಆಲಾ ವೀಟ। ಪರಮಾರ್ಥೀ ಜೋ ನಿಕಟ ।
ಆಘಾತೀ ಉಪಜೇ ಧಾರಿಷ್ಟ । ತೋ ಸತ್ವಗುಣ ॥೪೬॥
ಸರ್ವಕಾಳ ಉದಾಸೀನ । ನಾನಾ ಭೋಗೀ ವಿಟೇಮನ ।
ಆಠವೇ ಭಗವದ್ಭಜನ । ತೋ ಸತ್ವಗುಣ ॥೪೭॥
ಪದಾರ್ಥೀ ನ ಬೈಸೇ ಚಿತ್ತ । ಮನೀ ಆಠವೇ ಭಗವಂತ ।
ಐಸಾ ದೃಢ ಭಾವಾರ್ಥ । ತೋ ಸತ್ವಗುಣ ॥೪೮॥
ಲೋಕ ಬೋಲತೀ ವಿಕಾರೀ । ತರೀ ಆದಿಕ ಪ್ರೇಮಾಧರೀ ।
ನಿಶ್ಚಯು ಬಾಣೇ ಅಂತರೀ । ತೋ ಸತ್ವಗುಣ ॥೪೯॥
ಅಂತರೀ ಸ್ಫೂರ್ತೀ ಸ್ಫೂರೇ । ಸಸ್ವರೂಪೀ ತರ್ಕ ಭರೇ ।
ನಷ್ಟ ಸಂದೇಹ ನಿವಾರೇ । ತೋ ಸತ್ವಗುಣ ॥೫೦॥
ಶರೀರ ಲಾವಾವೇ ಕಾರಣೀ । ಸಾಕ್ಷೇಪ ಉಠೇ ಅಂತಃಕರ್ಣೀ ।
ಸತ್ವಗುಣಾಚೀ ಕರಣೀ । ಐಸೀ ಅಸೆ ॥೫೧॥
ಶಾಂತಿ ಕ್ಷ್ಮಾ ಆಣಿ ದಯಾ । ನಿಶ್ಚಯು ಉಪಜೇ ಜಯಾ ।
ಸತ್ವಗುಣ ಜಾಣಾವಾ ತಯಾ । ಅಂತರೀ ಆಲಾ ॥೫೨॥
ಆಲೇ ಅತೀತ ಅಭ್ಯಾಗತ । ಜಾಊ ನೇದೀ ಜೋ ಭುಕಿಸ್ತ ।
ಯಥಾನ ಶಕ್ತೀ ದಾನ ದೇತ । ತೋ ಸತ್ವಗುಣ ॥೫೩॥
ತಡಿತಾಪಡೀ ದೈನ್ಯವಾಣೇ । ಆಲೇ ಆಶ್ರಮಾಚೇನಿ ಗುಣೇ ।
ತಯಾಲಾಗೀ ಸ್ಥಳ ದೇಣೇ । ತೋ ಸತ್ವಗುಣ ॥೫೪॥
ಆಶ್ರಮೀ ಅನ್ನಾಚೀ ಆಪದಾ । ಪರೀವಿಮುಖ ನವ್ಹೆ ಕದಾ ।
ಶಕ್ತಿನಸಾರ ದೇ ಸರ್ವದಾ । ತೋ ಸತ್ವಗುಣ ॥೫೫॥

ದೇಹದ ಮೇಲಿನ ಅಭಿಮಾನ ಕ್ಷೀಣವಾಗುತ್ತ ಹೋಗುವದು. ದೃಶ್ಯ ಜಗತ್ತಿನ ಬಗ್ಗೆ ವೈರಾಗ್ಯವು ವೇಗದಿಂದ ಬೆಳೆಯುತ್ತ ಹೋಗುವದು. ಮಾಯೆಯ ವಿಸ್ತಾರ ಜಾಲ—ಗದ್ದಲವು ಭ್ರಮಾತ್ಮಕವಿರುವದೆಂದು ತಿಳಿಯ ಹತ್ತುವದು. ಇವೆಲ್ಲ ಸತ್ವಗುಣಗಳು. (೪೨) ಸಂಸಾರದಲ್ಲಿ ಆಸಕ್ತಿ ಹೊಂದಿ ಇರುವದರಲ್ಲಿ ಏನೂ ಅರ್ಥವಿಲ್ಲ. ಇದರಿಂದ ಮುಕ್ತರಾಗಲು ಏನಾದರೂ ಉಪಾಯ ಮಾಡಲಿಕ್ಕೇ ಬೇಕು. ಅರ್ಥಾತ್ ಪ್ರಪಂಚದಿಂದ ಮನವನ್ನು ಮುಕ್ತ ಮಾಡಬೇಕು. ಎಂಬ ಆತ್ಮಾನಾತ್ಮ ವಿವೇಕವು ಯಾವನ ಅಂತರ್ಯಾಮಿಯಲ್ಲಿ ಉತ್ಪನ್ನವಾಗುವದೋ ಅದು ಸತ್ವಗುಣವಾಗಿರುವದು. (೪೩) ಸಂಸಾರದ ಕಟಕಟೆಯಿಂದಮನಸ್ಸಿಗೆ ತ್ರಾಸವಾಗುವದು. ಇದರಸಮಾಧಾನಕ್ಕಾಗಿ ನಾನು ಯಾವುದಾದರೂ ಉಪಾಸನಾ ಮಾಡಬೇಕೆಂಬ ಪರಮಾರ್ಥ ವಿಚಾರ ಮನಸ್ಸಿನಲ್ಲಿ ಉತ್ಪನ್ನವಾಗುವದೆಲ್ಲ ಸತ್ವಗುಣವಾಗಿದೆ.(೪೪)ಬ್ರಹ್ಮಚಾರಿ–ಗೃಹಸ್ಥಾಶ್ರಮಿಯಾಗಿರಲಿ ಆಯಾ ಆಶ್ರಮಗಳಪ್ರಕಾರ ಅವರಲ್ಲಿಇದ್ದು ಅತೀಆದರ ದಿಂದ ನಿತ್ಯ ನೇಮಗಳನ್ನು ಮನಃಪೂರ್ವಕವಾಗಿ ಸರಿಯಾಗಿ ಪಾಲನ ಮಾಡುವವನಾಗಿದ್ದು ಸದಾಕಾಲ ಮನಸ್ಸು ಭಗವಂತನ ಪ್ರೇಮದಲ್ಲಿ ತೊಡಗಿರುತ್ತದೆ. ಇದು ಸತ್ವಗುಣವು. (೪೫) ಭಗವಂತನೊಬ್ಬನ ಹೊರತಾಗಿ ಇತರ ಸರ್ವದರಲ್ಲಿ ಬೇಸರ ಉಂಟಾಗುವದು. ಪರಮಾರ್ಥದಲ್ಲಿ ಮನಸ್ಸು ಹಾಕಿ ಅದನ್ನು ಸಾಧಿಸುವದು, ಮತ್ತು ಸಂಕಟಗಳು ಬಂದರೆ ಅದನ್ನು ಶಾಂತತೆಯಿಂದ ಎದುರಿಸುವ ಧೈರ್ಯ ಉತ್ಪನ್ನವಾಗುವದು. ಇದೆಲ್ಲ ಸತ್ವಗುಣ.(೪೬) ಸದಾ ಸರ್ವಕಾಲ ಅನಾಸಕ್ತವಾಗಿರುವದು. ಅಂದರೆ ಎಲ್ಲದರಲ್ಲಿಯೂ ತೊಡಕಿಕೊಂಡಿರುವದಿಲ್ಲ. ನಾನಾ ಪ್ರಕಾರದ ದೇಹ ಸುಖಕ್ಕೆ ಮನಸ್ಸು ಬೇಸರಪಡುವದು. ಅಥವಾ ಹೇಸಿಕೊಳ್ಳುವದು, ಯಾವಾಗಲೂ ಪುನಃ ಪುನಃ ಭಗವಂತನ ನೆನಪಾಗುವದು. ಇದೆಲ್ಲ ಸತ್ವಗುಣವು. (೪೭) ಯಾವುದೇ ದೃಶ್ಯವಸ್ತುವಿನ ಮೇಲೆ ಮನಸ್ಸು ಆಸಕ್ತಗೊಳ್ಳುವದಿಲ್ಲ. ಭಗವಂತನ ಸ್ಮರಣೆಯು ಮನದಲ್ಲಿ ಸದಾಸರ್ವಕಾಲ ನಡೆದಿರುತ್ತದೆ. ದೇವರಲ್ಲಿ ಪೂರ್ಣ ಭಕ್ತಿ, ಸ್ಥಿರ ಮನಸ್ಸು ಇರುವದೆಲ್ಲ ಸತ್ವಗುಣವು. (೪೮) ಭಗವಂತನ ಮೇಲಿರುವ ಪ್ರೇಮವನ್ನು ನೋಡಿ ಜನರು ಇವ ಹುಚ್ಚನಿರುವ, ಇವನ ತಲೆ ಸರಿಯಿಲ್ಲವೆಂದು ಅಂದರೂ ದೇವರ ಮೇಲಿನ ಪ್ರೇಮ ಹೆಚ್ಚು ಅಧಿಕವಾಗುತ್ತ ಹೋಗುತ್ತದೆ. ಮನಸ್ಸಿನ ಪೂರ್ಣ ನಿಶ್ಚಯವಿರುವದು ಸತ್ವಗುಣವು.(೪೯) ಸತ್ವಗುಣದಲ್ಲಿ ಬುದ್ಧಿಯು(ಪ್ರತಿಭಾ)ಜಾಗೃತವಿರುವದು. ಬುದ್ಧಿಯು ಆತ್ಮ ಪ್ರಕಾಶದಿಂದ ತುಂಬಿರುತ್ತದೆ. ಶಾಂತಿ, ಕ್ಷಮೆ, ದಯೆ ಈ ದಿವ್ಯ ಸದ್ಗುಣಗಳು ಅಂತಃಕರಣದಲ್ಲಿ ಸ್ಥಿರವಾಗುವವು. ವಾಸನಾ ಶಾಂತವಾಗುವದು. ನಾಲಿಗೆ ಹತೋಟಿಯಲ್ಲಿ ಉಳಿಯುವದು. **ತಾತ್ಪರ್ಯ**:– ಸ್ವರೂಪ ಸಾಕ್ಷಾತ್ಕಾರ, ಆತ್ಮಸಾಕ್ಷಾತ್ಕಾರವಾಗುವ ಮುಂಚೆ ಬೇಕಾಗುವ ಪೂರ್ವ ತಯಾರಿ ಕೈವಶವಾಗುವದು; ತಿಳಿಯುವದು. ಅಂತರ್ಯಾಮಿ ಸ್ಫೂರ್ತಿ ಜಾಗೃತವಾಗುವದು. ಆತ್ಮಸ್ವರೂಪದ ವಿಚಾರಗಳಿಂದ ಬುದ್ಧಿ (ನಿಶ್ಚಯ ರೂಪಿ, ಅಂತಃಕರಣ ಶುದ್ಧಿ) ಪರಿಪೂರ್ಣಗೊಳ್ಳುವದು. ದುಷ್ಟ ಸಂಶಯಗಳು ತಮ್ಮಷ್ಟಕ್ಕೆ ತಾವೇ ಇಲ್ಲದಾಗುವವು. ಇವು ಸತ್ವಗುಣಗಳು. (೫೦) ಈ ಶರೀರದ ಉತ್ತಮ ಉಪಯೋಗ ಮಾಡಿಕೊಳ್ಳಬೇಕೆಂಬ ಹಂಬಲ ಅಥವಾ ಸಾರ್ಥಕವಾಗುವಂಥ ಕಾರ್ಯದಲ್ಲಿ ತೊಡಗಿಸಬೇಕೆಂಬ ಇಚ್ಛೆಯು ಅಂತಃಕರಣದಲ್ಲಿ ಉತ್ಪನ್ನವಾಗುವದೇ ಸತ್ವಗುಣದ ಕಾರ್ಯವು. (೫೧) ನಡವಳಿಕೆ (ವರ್ತನೆ) ಯಲ್ಲಿ ಶಾಂತಿ, ಕ್ಷಮೆ, ದಯೆ ಇವು ತೋರಿಬರುವವು. ಮತ್ತು ಭಗವಂತನ ಭಕ್ತಿಯು ನಿಶ್ಚಯವು ಮನಸ್ಸಿನಲ್ಲಿ ಉತ್ಪನ್ನವಾಗುವದು, ಇದು ಮನುಷ್ಯನ ಅಂತರ್ಯದಲ್ಲಿ ಸತ್ವಗುಣವು ಉದಯ ಹೊಂದಿದ ಲಕ್ಷಣವೆಂದು ತಿಳಿಯಬೇಕು. (೫೨) ಮನೆಗೆ ಬಂದ ಅತಿಥಿ ಅಭ್ಯಾಗತರಿಗೆ ಏನಾದರೂ ತಿಂಡಿ ತಿನಿಸು ಕೊಡದೇ[ತಿನ್ನಿಸದೇ]ಹೋಗಗೊಡುವದಿಲ್ಲ. ಇವರಿಗೆ ಯಥಾಶಕ್ತಿದಾನ ಕೊಡುವದು ಇವೆಲ್ಲ ಸತ್ವಗುಣಗಳು[೫೩] ಬೈರಾಗಿ, ಗೋಸಾವಿ, ಮತ್ತು ದುಃಖ ದಾರಿದ್ರ್ಯದಿಂದ ಪೀಡಿತರಾದ ಮನುಷ್ಯರು ಆಶ್ರಯಕ್ಕಾಗಿ ಬಂದಾಗ ಗೃಹ ಸ್ಥಾಶ್ರಮದ ಕರ್ತವ್ಯವೆಂದು ತಿಳಿದು ಅವರಿಗೆ ಆಶ್ರಯ ಕೊಡುವದು ಸತ್ವಗುಣ.[೫೪] ಮನೆಯಲ್ಲಿದ್ದವರಿಗೆ ಹೊಟ್ಟೆ ತುಂಬ ಊಟಕ್ಕೆ ಅನ್ನವಿಲ್ಲದಿದ್ದರೂ ಸಹ ಬಂದವರಿಗೆ ಏನಾದರೂ ತಿನ್ನಲಿಕ್ಕೆ ಕೊಡದೇ ಕಳಿಸುವದಿಲ್ಲ. ಶಕ್ಯವಿದ್ದಷ್ಟನ್ನು ಯಾವಾಗಲೂ ಕೊಡುತ್ತಲೇ ಇರುವದು ಸತ್ವಗುಣವು. [೫೫]

ಜೇಣೇ ಜಿಂಕೀಲೀ ರಸನಾ । ತೃಪ್ತ ಜಯಾಚೀ ವಾಸನಾ ।
ಜಯಾಸ ನಾಹೀ ಕಾಮನಾ । ತೋ ಸತ್ವಗುಣ ॥೫೬॥
ಹೋಣಾರ ತೈಸೆ ಹೋತ ಜಾತ । ಪ್ರಪಂಚೀ ಜಾಲಾ ಆಘಾತ ।
ಡಳಮಳಿನಾ ಜ್ಯಾಚೇ ಚಿತ್ತ । ತೋ ಸತ್ವಗುಣ ॥೫೭॥
ಯೇಕಾ ಭಗವಂತಾಕಾರಣೇ । ಸರ್ವ ಸುಖ ಸೋಡಿಲೇ ಜೇಣೆ ।
ಕೇಲೇ ದೇಹಾಚೇ ಸಾಂಡಣೇ । ತೋ ಸತ್ವಗುಣ ॥೫೮॥
ವಿಷಈ ಧಾವೇ ವಾಸನಾ । ಪರೀ ತೋ ಕದಾ ಡಳಮಳಿನಾ ।
ಜ್ಯಾಚೇ ಧಾರಿಷ್ಟ ಚಳೇನಾ । ತೋ ಸತ್ವಗುಣ ॥೫೯॥
ದೇಹ ಆಪದೇನೇ ಪೀಡಲಾ । ಕ್ಷುಧೇ ತೃಷೇನೇ ವೋಸಾವಲಾ ।
ತರೀ ನಿಶ್ಚಯೋ ರಾಹಿಲಾ । ತೋ ಸತ್ವಗುಣ ॥೬೦॥
ಶ್ರವಣ ಆಣೀ ಮನನ । ನಿಜಧ್ಯಾಸೇ ಸಮಾಧಾನ ।
ಶುದ್ಧ ಜಾಲೇ ಆತ್ಮಜ್ಞಾನ । ತೋ ಸತ್ವಗುಣ ॥೬೧॥
ಜಯಾಸ ಅಹಂಕಾರ ನಸೆ । ನೈರಾಶತಾ ವಿಲಸೇ ।
ಜಯಾಪಾಸೀ ಕೃಪಾ ನಸೇ । ತೋ ಸತ್ವಗುಣ ॥೬೨॥
ಸಕಳಾಸೀ ನಮ್ರ ಬೋಲೇ । ಮರ್ಯಾದಾ ಧರೂನ ಚಾಲೇ ।
ಸರ್ವಜನ ತೋಷವಿಲೇ । ತೋ ಸತ್ವಗುಣ ॥೬೩॥
ಸಕಳ ಜನಾಸೀ ಆರ್ಜವ । ನಾಹೀ ವಿರೋಧಾಸ ಠಾವ ।
ಪರೋಪಕಾರೀ ವೇಚೀ ಜೀವ । ತೋ ಸತ್ವಗುಣ ॥೬೪॥
ಆಪಕಾರ್ಯಾಹೂನ ಜೀವೀ । ಪರಕಾರ್ಯಸಿದ್ಧೀ ಕರಾವೀ ।
ಮರೋನ ಕೀರ್ತೀ ಉರವಾವೀ । ತೋ ಸತ್ವಗುಣ ॥೬೫॥
ಪರಾವ್ಯಾಚೇ ದೋಷಗುಣ । ದೃಷ್ಟೀಸ ದೇಖೆ ಆಪಣ ।
ಸಮುದ್ರಾ ಐಸೀ ಸಾಠವಣ । ತೋ ಸತ್ವಗುಣ ॥೬೬॥
ನೀಚ ಉತ್ತರ ಸಾಹಾಣೇ । ಪ್ರತ್ಯೋತ್ತರ ನ ದೇಣೇ ।
ಆಲಾ ಕ್ರೋಧ ಸಾವರಣೇ । ತೋ ಸತ್ವಗುಣ ॥೬೭॥
ಅನ್ಯಾಯೇ ವಿಣ ಗಾಂಜಿತೀ । ನಾನಾಪರೀ ಪೀಡಾ ಕರಿತೀ ।
ತಿತುಕೇ ಹಿ ಸಾಠವೀ ಚಿತ್ತೀ । ತೋ ಸತ್ವಗುಣ ॥೬೮॥
ಶರೀರೇ ಘೀಸ ಸಾಹಾಣೇ । ದುರ್ಜನಾಸೀ ಮಿಳೋನ ಜಾಣೇ ।
ನಿಂದಕಾಸ ಉಪಕಾರ ಕರಣೇ । ಹಾ ಸತ್ವಗುಣ ॥೬೯॥

ನಾಲಿಗೆಯನ್ನು ಹತೋಟಿಯಲ್ಲಿಟ್ಟುಕೊಂಡವ, ಕಹಿ. ಸಿಹಿ, ರುಚಿಯಾದದ್ದೇ ಬೇಕೆಂಬ ಪ್ರಬಲ ಇಚ್ಛೆ ಇತ್ಯಾದಿಗಳ ಕಡೆಗೆ ದುರ್ಲಕ್ಷ ಮಾಡುವವ, ವಾಸನಾ ತೃಪ್ತನಾಗಿರುವವ. ಕಾಮನಾರಹಿತ, ಇಚ್ಛಾರಹಿತರಾದವರೆಲ್ಲ ಸತ್ವಗುಣಿಗಳು. (೫೬) ಏನಾಗಬೇಕಾಗಿರುವದೋ ಅದು ಆಗಿಯೇ ತೀರುವದೆಂಬ ನಿಯಮಾನುಸಾರವಾಗಿ ಪ್ರಪಂಚದಲ್ಲಿ ದೊಡ್ಡ ಸಂಕಟ ಬಂದರೂಮನಸ್ಸುಡಳಮಳಿಸುವದಿಲ್ಲ.ಶಾಂತಚಿತ್ತನಾಗಿರುವನು ಸತ್ವಗುಣಿಯು.(೫೭) ಒಬ್ಬ ಭಗವಂತನ ಸಲುವಾಗಿ ಇತರ ಸರ್ವಸುಖವನ್ನೂ ತ್ಯಜಿಸುವದು. ಇಷ್ಟೇ ಅಲ್ಲ, ತನ್ನ ದೇಹದ ಮೇಲಿನ ಪ್ರೇಮವನ್ನೂತ್ಯಜಿಸುವದು.ಅಂದರೆ ದೇಹಸುಖದ ಕಡೆಗೆ ದುರ್ಲಕ್ಷ.ಉದಾಸೀನತನ ಅಥವಾನಿಷ್ಕಾಳಜಿಯಾಗಿರುವದು. ಇದು ಸತ್ವಗುಣವು. (೫೮) ಹೊರಗಿನ ವಸ್ತುಗಳ ಮೇಲೆ ಇಚ್ಛೆ ಉಂಟಾದರೂ ಮನಸ್ಸು ಡಗಮಗಿಸುವದಿಲ್ಲ. ಅಥವಾ ಮನೋಧೈರ್ಯಸಡಿಲಾಗುವದಿಲ್ಲ. ಇದು ಸತ್ವಗುಣವು. (೫೯) ಶರೀರವು ದಾರಿದ್ರ್ಯದಿಂದ ಪೀಡಿತವಾಗಿದೆ. ಹಸಿವೆ ನೀರಡಿಕೆಯಿಂದ ವ್ಯಾಕುಲವಾಗಿದೆ. ಆದರೆ ಇಂಥ ಪರಿಸ್ಥಿತಿಯಲ್ಲಿ ಸಹ ಭಗವಂತನ ಭಕ್ತಿಯ ನಿಶ್ಚಯ ಅಲುಗಾಡದೇ ಭರಭಕ್ಕಮ್ ಅಂದರೆ ಅಗದೀ ಸ್ಥಿರ ಉಳಿಯುವದು. ಇದು ಸತ್ವಗುಣವು. (೬೦) ಸಾಧನೆ ಸಾಧಿಸಿಕೊಂಡು ಶುದ್ಧ ಆತ್ಮಜ್ಞಾನವಾಗುವದೇ ಸತ್ವಗುಣದ ನಿಜವಾದ ಕರಾಮತಿ ಆಗಿದೆ. (ಕೈವಾಡ. ಕರ್ತವ್ಯ). ಇಂಥ ಜ್ಞಾನಿಪುರುಷ ಪೂರ್ಣವಾಸನಾರಹಿತನಿರುವನು. ಅವನು ಅತಿ ದಯಾಳು ಇದ್ದು. ಎಲ್ಲರ ಸಂಗಡ ನಮ್ರವಾಗಿ ಪರೋಪಕಾರದಲ್ಲಿ ಸದಾ ನಿರತನಿರುವನು. ಅತ್ಯಂತ ವಿಶಾಲ ಹೃದಯದವನೂ ಅಂತಃಕರಣದವನೂ ಆಗಿರುವ ಈ ಜ್ಞಾನಿಯು ಎರಡನೆಯವರ ದೋಷವನ್ನು ಎಣಿಸದೇ ಸಹಿಸಿಕೊಂಡು ಅವರನ್ನು ಭಗವಂತನ ಮಾರ್ಗಕ್ಕೆ ಹಚ್ಚುವನು. ಶ್ರವಣ. ಮನನ, ನಿಧಿಧ್ಯಾಸ, ಸತತ ಚಿಂತನ. ಈ ಸಾಧನಮಾರ್ಗದಿಂದ ಹೋಗಿ ಯಾವನಿಗೆ ಶುದ್ಧ ಆತ್ಮಜ್ಞಾನವಾಗಿ ಸಮಾಧಾನ ಪ್ರಾಪ್ತವಾಗುವದೋ ಅದು ಸತ್ವಗುಣವು. (೬೧) ಅಹಂಕಾರ ಇಲ್ಲದಿರುವದು, ವಾಸನಾರಹಿತತನವು, ಸ್ಪಷ್ಟವಾಗಿ ಕಂಡು ಬರುವದು, ಅಜ್ಞಾನಿ ಜೀವದ ಬಗ್ಗೆ ದಯೆ ಯಾರಲ್ಲಿರುವದೋ ಅದು ಸತ್ವಗುಣವು. (೬೨) ಎಲ್ಲರ ಸಂಗಡ ನಮ್ರತೆಯಿಂದ ಮಾತನಾಡುವದು, ನೀತಿ ಧರ್ಮಗಳನ್ನು ಪಾಲಿಸಿ ಸರ್ವರಿಗೂ ಸಂತೋಷವಾಗುವಂತೆ ಇರುವದೆಲ್ಲ ಸತ್ವಗುಣವು. (೬೩) ಸರ್ವರ ಸಂಗಡ ಅತಿ ಸರಳತನದಿಂದ ಮತ್ತು ಮುಕ್ತ ಮನದಿಂದ ನಡೆಯುವದು. ಇದರಿಂದ ಎಲ್ಲಿಯೂ, ಯಾರಿಂದಲೂ ವಿರೋಧ ಉಂಟಾಗಲು ಆಸ್ಪದವಾಗುವದಿಲ್ಲ. ಎರಡನೆಯವರಿಗೆ ಉಪಕಾರ ಮಾಡುವಲ್ಲಿ ತಮ್ಮ ಆಯುಷ್ಯವನ್ನು ಕಳೆಯುವವರೆಲ್ಲ ಸತ್ವಗುಣಿಗಳು. (೬೪) ಸ್ವತಃದ ಕೆಲಸ ಮಾಡುವದಕ್ಕಿಂತ ಎರಡನೆಯವರ ಕೆಲಸ ಮಾಡುವಲ್ಲಿ ಹೆಚ್ಚು ಆಸಕ್ತಿ ಇರುವದು. ಪ್ರಾಣಹೋದರೂ ಅಡ್ಡಿ ಇಲ್ಲ, ಆದರೆ ಸತ್‌ಕೀರ್ತಿ ಮಾತ್ರ ಕಾಯಂ ಉಳಿಯಬೇಕೆಂದು ನಡೆಯುವವನುಸತ್ವಗುಣಿ(೬೫) ಎರಡನೆಯವರ ಗುಣದೋಷ ತನ್ನ ದೃಷ್ಟಿಗೆ (ನಜರಿಗೆ) ತೋರಿಬಂದರೂ ಅದನ್ನು ಲಕ್ಷಕ್ಕೆ ತರದೇ ಸಮುದ್ರದೋಪಾದಿಯಲ್ಲಿ ಅದನ್ನು ತನ್ನ ಅಂತಃಕರಣದಲ್ಲಿ ಸಂಗ್ರಹಿಸುವವ ಮತ್ತು ಅದನ್ನು ದೊಡ್ಡಸ್ತಿಕೆಗಾಗಿಜನರಲ್ಲಿ ಪ್ರಕಟಪಡಿಸದವರೆಲ್ಲರು ಸತ್ವಗುಣಿಗಳು. (೬೬) ಯಾರಾದರೂ ಹೀಯಾಳಿಸಿ ಮಾತನಾಡಿದರೆ ಅದನ್ನು ಸಹನ ಮಾಡಿಕೊಳ್ಳುವವ, ಅದೇ ರೀತಿಯಲ್ಲಿ ಪ್ರತಿ ಉತ್ತರ ಕೊಡದಿರುವವ, ಸಿಟ್ಟು ಬಂದರೂ ಅದನ್ನು ಸಹನ ಮಾಡಿಕೊಳ್ಳುವವರೆಲ್ಲರು ಸತ್ವಗುಣಿಗಳು (೬೭) ದುಃಖವನ್ನು ನುಂಗಿಕೊಳ್ಳುವದು. ನಿಂದಕರಿಗೂ ಉಪಕಾರ ಮಾಡುವದು, ಇಂದ್ರಿಯ ನಿಗ್ರಹ, ನಾಮಸ್ಮರಣದಲ್ಲಿ ವಿಶ್ವಾಸವಿರುವದು, ಸಂತರಿಗೆ ಶರಣು ಹೋಗುವದು, ಅವರ ಕೃಪೆ ಪಡೆಯುವದು. ಜನರನ್ನು ಜಾಣರನ್ನಾಗಿ ಮಾಡುವದು, ಗ್ರಂಥಸಂಗ್ರಹ ಮಾಡುವದು, ಪರರದುಃಖ ಸಹನವಾಗದಿರುವದು, ಇವೆಲ್ಲ ಸತ್ವಗುಣದ ಸರ್ವಸಾಮಾನ್ಯ ಲಕ್ಷಣಗಳಾಗಿರುವವು. ಏನೂ ಅನ್ಯಾಯ ಮಾಡದಿದ್ದರೂ,ಸಹ ಅನ್ಯಾಯ ಮಾಡಿರುವಿ ಎಂದು ತೊಂದರೆ ಕೊಡುವದನ್ನೂ ಮತ್ತು ಅನೇಕ ರೀತಿಯಿಂದ ದುಃಖ ಕೊಡುವದನ್ನೂ ಮಾಡಿದರೂ ಸಹ ಶಾಂತರಾಗಿದ್ದು ಸಹನ ಮಾಡಿಕೊಳ್ಳುವದೆಲ್ಲ ಸತ್ವಗುಣವು. (೬೮) ಎರಡನೆಯವರ ಸಲುವಾಗಿ ದೇಹವನ್ನು ಕಷ್ಟಪಡಿಸುವದು. ದುರ್ಜನರ ಸಂಗಡ ಸಹ ಮಮತೆಯಿಂದ ಇರುವದು, ನಿಂದಕರಿಗೂ ಉಪಕಾರ ಮಾಡುವದು ಇವೆಲ್ಲ ಸತ್ವಗುಣಗಳು. (೬೯)

ಮನ ಭಲತೀಕಡೆ ಧಾವೇ । ತೇ ವಿವೇಕೇ ಆವರಾವೇ ।
ಇಂದ್ರಿಯೇ ದಮನ ಕರಾವೇ । ತೋ ಸತ್ವಗುಣ ॥೭೦॥
ಸತ್ಕ್ರಿಯಾ ಆಚರಾವೀ । ಅಸತ್ಕ್ರಿಯಾ ತ್ಯಾಗಾವೀ ।
ವಾಟ ಭಕ್ತೀಚೀ ಧರಾವೀ । ತೋ ಸತ್ವಗುಣ ॥೭೧॥
ಜಯಾ ಆವಡೇ ಪ್ರಾತಃಸ್ನಾನ । ಆವಡೇ ಪುರಾಣ ಶ್ರವಣ ।
ನಾನಾ ಮಂತ್ರೀ ದೇವತಾರ್ಚನ । ಕರೀ ತೋ ಸತ್ವಗುಣ ॥೭೨॥
ಪರ್ವಕಾಳೀ ಅತಿ ಸಾದರ । ವಸಂತ ಪೂಜೇಸ ತತ್ಪರ ।
ಜಯಂತ್ಯಾಚೀ ಪ್ರೀತೀ ಥೋರ । ತೋ ಸತ್ವಗುಣ ॥೭೩॥
ವಿದೇಸಿ ಮೇಲೇ ಮರಣೇ । ತಯಾಸ ಸಂಸ್ಕಾರ ದೇಣೇ ।
ಅಥವಾ ಸಾದರ ಹೋಣೇ । ತೋ ಸತ್ವಗುಣ ॥೭೪॥
ಕೋಣೇ ಯೇಕಾಸ ಮಾರೀ । ತಯಾಸ ಜಾಊನ ವಾರೀ ।
ಜೀವ ಬಂಧನ ಮುಕ್ತ ಕರೀ । ತೋ ಸತ್ವಗುಣ ॥೭೫॥
ಲಿಂಗೇ ಲಾಖೋಲೀ ಅಭಿಶೇಷ । ನಾಮಸ್ಮರಣೀ ವಿಶ್ವಾಸ ।
ದೇವದರ್ಶನೀ ಅವಕಾಶ । ತೋ ಸತ್ವಗುಣ ॥೭೬॥
ಸಂತ ದೇಖೋನಿ ಧಾವೇ । ಪರಮ ಸುಖ ಹೇಲಾವೇ ।
ನಮಸ್ಕಾರೀ ಸರ್ವಭಾವೇ । ತೋ ಸತ್ವಗುಣ ॥೭೭॥
ಸಂತಕೃಪಾ ಹೋಮ ಜಯಾಸ । ತೇಣೇ ಉದ್ಧರಿಲಾ ವಂಶ ।
ತೋ ಈಶ್ವರಾಚಾ ಅಂಶ । ಸತ್ವಗುಣೇ ॥೭೮॥
ಸನ್ಮಾರ್ಗ ದಾಖವೀ ಜನಾ । ಜೋ ಲಾವೀ ಹರಿಭಜನಾ ।
ಜ್ಞಾನ ಸಿಕವೀ ಅಜ್ಞಾನಾ । ತೋ ಸತ್ವಗುಣ ॥೭೯॥
ಆವಡೇ ಪುಣ್ಯಸಂಸ್ಕಾರ । ಪ್ರದಕ್ಷಣಾ ನಮಸ್ಕಾರ ।
ಜಯಾರಾಹೇ ಪಾಠಾಂತರ । ತೋ ಸತ್ವಗುಣ ॥೮೦॥
ಭಕ್ತೀಚಾ ಹವ್ಯಾಸ ಭಾರೀ । ಗ್ರಂಥ ಸಾಮಗ್ರೀ ಜೋ ಕರೀ ।
ಧಾತು ಮೂರ್ತಿ ನಾನಾಪರೀ । ಪೂಜೀ ತೋ ಸತ್ವಗುಣ ॥೮೧॥
ಝುಳಝಳಿತ ಉಪಕರ್ಣೇ । ಮಾಳಾ ಗವಾಳೀ ಆಸನೇ ।
ಪವಿತ್ರೇ ಸೋಜ್ವಳೇ ವಸನೇ । ತೋ ಸತ್ವಗುಣ ॥೮೨॥
ಪರಪೀಡೇಚೇ ವಾಹೇ ದುಃಖ । ಪರಸಂತೋಷಾಚೇ ಸುಖ ।
ವೈರಾಗ್ಯ ದೇಖೋನ ಹರಿಖ । ಮಾನೀ ತೋ ಸತ್ವಗುಣ ॥೮೩॥

ಮನಸ್ಸು ಹತೋಟಿಯಲ್ಲಿರದೇ ಅಯೋಗ್ಯವಾದ ವಿಷಯದ ಬೆನ್ನು ಹತ್ತಿ ಓಡುವದು, ಇಂಥ ಮನವನ್ನು ವಿವೇಕದಿಂದ ಅಟೋಪ[ಹಿಡಿತ]ಕ್ಕೆ ತರುವದು. ಇಂದ್ರಿಯಗಳನ್ನು ಹಿಡಿತದಲ್ಲಿ ಇಟ್ಟುಕೊಂಡು ನಡೆಯುವದು ಇವೆಲ್ಲ ಸತ್ವಗುಣಗಳು. (೭೦) ಸತ್ಕರ್ಮ ಮಾಡಬೇಕು. ದುಷ್ಕರ್ಮ ಬಿಟ್ಟು ಬಿಡಬೇಕು. ಭಕ್ತಿಯ ಮಾರ್ಗದಿಂದ ಹೋಗಬೇಕೆಂದು ಅನಿಸುವದು ಸತ್ವಗುಣವು. (೭೧) ಪ್ರಾತಃಸ್ನಾನದಲ್ಲಿ ಪ್ರೀತಿ. ಪುರಾಣ ಕೇಳುವಲ್ಲಿ ಪ್ರೇಮ, ಮಂತ್ರ ಪಠಿಸುತ್ತ ಮಾಡುವ ದೇವರ ಪೂಜೆಯಲ್ಲಿ ಪ್ರೇಮ,ಇವು ಸತ್ವಗುಣಗಳು. (೭೨) ಪರ್ವಕಾಲ, ಪುಣ್ಯಕಾಲದ ಬಗ್ಗೆ ಸದ್ಭಾವ–ಆದರ ಇರುವದು, ವಸಂತ ಪೂಜೆ (ವಸಂತ ಋತುವಿನಲ್ಲಿ ಅಂದರೆ ಚೈತ್ರ ವೈಶಾಖ ಮಾಸಗಳಲ್ಲಿ ಮಾಡುವ ಪೂಜೆ) ಮಾಡುವಲ್ಲಿ ಬಹಳ ಪ್ರೇಮವಿರುವದು. ಮತ್ತು ದೇವರ ಜನ್ಮೋತ್ಸವ ಆಚರಿಸುವಲ್ಲಿ ಅತೀ ಪ್ರೇಮವಿರುವದೆಲ್ಲವೂ ಸತ್ವಗುಣವು. (೭೩) ಅನಾಥ. ಪರದೇಶಿ, ಮನುಷ್ಯ ಸತ್ತರೆ ಸ್ವತಃ ಅವನ ಅಗ್ನಿಸಂಸ್ಕಾರ ಮಾಡುವದು ಅಥವಾ ಆ ಕಾರ್ಯದಲ್ಲಿ ಸ್ವತಃ ಭಾಗವಹಿಸುವದು ಸತ್ವಗುಣವು. (೭೪) ಒಬ್ಬನು ಇನ್ನೊಬ್ಬನನ್ನು ಹೊಡೆಯುತ್ತಿದ್ದರೆ ಆಗ ಮಧ್ಯದಲ್ಲಿ ಪ್ರವೇಶಿಸಿ ಅದನ್ನು ನಿಲ್ಲಿಸುವದು, ಬಡಿದಾಟದಲ್ಲಿ ತೊಡಗಿದವರನ್ನು ಬಿಡಿಸುವದು. ಇವು ಸತ್ವಗುಣಗಳು. (೭೫) ಲಿಂಗಪೂಜೆ (ಲಿಂಗಾರ್ಚನೆ) ಮಾಡುವದು, ಸಹಸ್ರನಾಮದಿಂದ ಹೂ ಪತ್ರಿಗಳನ್ನು ಏರಿಸುವದು, ಇದಕ್ಕೆ ಲಿಂಗಲಾಖೋಲಿಅನ್ನುವರು. ಹಾಗೂ ಅಭಿಷೇಕಮಾಡುವದು. ನಾಮಸ್ಮರಣೆಯ ಬಗ್ಗೆ ಶ್ರದ್ಧೆ ವಿಶ್ವಾಸವಿರುವದು. ಏನಾದರೂ ಮಾಡಿ ವೇಳೆ ಉಳಿಸಿಕೊಂಡು ದೇವರ ದರ್ಶನಕ್ಕೆ ಹೋಗುವದು. ಇವೆಲ್ಲ ಸತ್ವಗುಣಗಳು. (೭೬) ಸಂತ ಶರಣರನ್ನು ನೋಡಿದ ಕೂಡಲೇ ಆಗಿಂದಾಗ್ಗೆ ಅವರ ಹತ್ತಿರ ಹೋಗುವದು; ಅವರ ದರ್ಶನದಿಂದ ಅತ್ಯಾನಂದ ಹೊಂದುವದು. ಮತ್ತು ಅವರಿಗೆ ಅತ್ಯಾದರದಿಂದ ಸಾಷ್ಟಾಂಗ ನಮಸ್ಕಾರ ಮಾಡುವದು, ಇವೆಲ್ಲ ಸತ್ವಗುಣಗಳು. (೭೭) ಸಂತರ ಕೃಪೆ ಯಾರ ಮೇಲೆ ಆಗುವದೋ ಅವನು ತನ್ನ ವಂಶದ ಉದ್ಧಾರ ಮಾಡಿದನೆಂದು ತಿಳಿಯಬೇಕು. ಸತ್ವಗುಣದಿಂದ ಸಂತರ ಕೃಪೆ ಹೊಂದಿದವನಲ್ಲಿ ಈಶ್ವರಾಂಶವು ಅಧಿಕವಿರುತ್ತದೆ. (೭೮) ಜನರಿಗೆ ಸನ್ಮಾರ್ಗ ತೋರಿಸುವದು, ಅವರನ್ನು ಭಗವಂತನ ಭಕ್ತಿ ಮಾರ್ಗಕ್ಕೆ ಹಚ್ಚುವದು. ಅಜ್ಞಾನಿ ಮನುಷ್ಯನಿಗೆ ಜ್ಞಾನ ಕಲಿಸುವದು ಇವೆಲ್ಲ ಸತ್ವಗುಣವು. (೭೯) ಪುಣ್ಯಸಂಸ್ಕಾರ, ದೇವ ಪ್ರದಕ್ಷಣೆ ಮತ್ತು ದೇವರಿಗೆ ನಮಸ್ಕಾರ ಮಾಡುವದರಲ್ಲಿಪ್ರೇಮವಿರುವದು, ಹಾಗೂ ಪಾಠಾಂತರವಿರುವದು. ಇವು ಸತ್ವಗುಣವು.(೮೦) ಭಕ್ತಿ ಮಾಡುವಲ್ಲಿ ಅತಿ ಉತ್ಕಟ ಇಚ್ಛೆ ಇರುವದು, ಗ್ರಂಥ ಸಂಗ್ರಹ ಮಾಡುವದು. ಮತ್ತು ಅನೇಕ ಪ್ರಕಾರದ ಧಾತು (ಖನಿಜ ಪದಾರ್ಥ)ಗಳ ಮೂರ್ತಿಗಳ್ನು ಪ್ರೇಮದಿಂದ ಪೂಜೆ ಮಾಡುವದು ಇವೆಲ್ಲ ಸತ್ವಗುಣಗಳು. (೮೧) ದೇವರ ಪೂಜೆ ಮಾಡುವ ಸ್ವಚ್ಛವಾದ ಪಾತ್ರೆಗಳು, ಜಪಮಾಲೆ, ಗೋಮುಖ (ಜಪ ಮಾಡುವ ಈ ಆಕಾರದ್ದು [ಕೈ ಸೇರಿಸಿ] ಜಪ ಮಾಡುವ ಚೀಲ) ಆಸನ. ಪವಿತ್ರ [ಜನಿವಾರ, ಪವಿತ್ರದ ಉಂಗುರ, ದರ್ಭೆ] ಸ್ವಚ್ಛ ವಸ್ತುಗಳ ಮೇಲೆ ಪ್ರೀತಿ ಇರುವದು ಸತ್ವಗುಣ. (೮೨) ಎರಡನೆಯವರಿಗೆ ದುಃಖವಾದರೆ ತಾನೂ ದುಃಖಿಸುವವ, ಎರಡನೆಯುವರಿಗೆ ಸುಖವಾದರೆ ತಾನೂ ಸಂತೋಷಪಡುವವ. ವೈರಾಗ್ಯವಂತರನ್ನು ನೋಡಿ ಆನಂದಪಡುವವರೆಲ್ಲರೂ ಸತ್ವಗುಣಗಳು. (೮೩)

ಪರಭೂಷಣೇ ಭೂಷಣ । ಪರದೂಷಣೇ ದೂಷಣ ।
ಪರದುಃಖ ಸಿಣೇ ಜಾಣ । ತೋ ಸತ್ವಗುಣ ॥೮೪॥
ಆತಾ ಅಸೋ ಹೇ ಬಹುತ । ದೇವೀ ಧರ್ಮಿ ಜ್ಯಾಚೇ ಚಿತ್ತ ।
ಭಜೇ ಕಾಮನಾರಹಿತ । ತೋ ಸತ್ವಗುಣ ॥೮೫॥
ಐಸಾ ಹಾ ಸತ್ವಗುಣ ಸಾತ್ತ್ವಿಕ । ಸಂಸಾರಸಾಗರೀ ತಾರಕ ।
ಯೇಣೇ ಉಪಜೇ ವಿವೇಕ । ಜ್ಞಾನ ಮಾರ್ಗಾಚಾ ॥೮೬॥
ಸತ್ವಗುಣೇ ಭಗವದ್ಭಕ್ತೀ । ಸತ್ವಗುಣೇ ಜ್ಞಾನಪ್ರಾಪ್ತೀ ।
ಸತ್ವಗುಣೇ ಸಾಯೋಜ್ಯಮುಕ್ತೀ । ಪಾವಿಜೇತೇ ॥೮೭॥
ಐಸೀ ಸತ್ವಗುಣಾಚೀ ಸ್ಥಿತೀ । ಸ್ವಲ್ಪ ಬೋಲಿಲೇ ಯಥಾಮತೀ ।
ಸಾವಧ ಹೋಊನ ಶ್ರೋತೀ । ಪುಢೇ ಅವಧಾನ ದ್ಯಾವೇ ॥೮೮॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
ಸತ್ವಗುಣ ನಾಮ ಸಮಾಸ ಸಾತವಾ ॥

• •

ಎರಡನೆಯವರಿಗಾಗುವ ಭೂಷಣ, ಶೋಭೆ, ಸ್ತುತಿಗಳು ತನ್ನ ಭೂಷಣ, ಶೋಭೆ, ಸ್ತುತಿಗಳೇ ಎಂದು ತಿಳಿಯುವವ, ಎರಡನೆಯವರ ನಿಂದೆ, ದೋಷ, ತನ್ನ ನಿಂದೆಯೆಂದು ತಿಳಿಯುವವ, ಮತ್ತು ಎರಡನೆಯವರಿಗೆ ಆಗುವ ದುಃಖ ನೋಡಿ ಸ್ವತಃ ತಾನು ದುಃಖಿತನಾಗಿ ಕಷ್ಟ ಹೊಂದುವದು. ಇದು ಸತ್ವಗುಣವು. (೪೪) ಈಗ ಮೂರು ಓವಿ(ನುಡಿ)ಗಳಲ್ಲಿ ಈ ಸಮಾಸದ ಪೂರ್ಣ ಸಾರಾಂಶ ಹೇಳುತ್ತಾರೆ. ವಿಸ್ತಾರದಿಂದ ಹೇಳಿದ ಸತ್ವಗುಣದ ವರ್ಣನೆ ಇನ್ನು ಸಾಕು. ಸ್ವಲ್ಪದರಲ್ಲಿ ಹೇಳುವೆ. ದೇವರ ಬಗ್ಗೆ, ಧರ್ಮದ ಬಗ್ಗೆ ಯಾರಿಗೆ ಮನಪೂರ್ವಕ ಪ್ರೀತಿ ಇರುವದೋ ಯಾರಿಗೆ ದೇವರಲ್ಲಿ, ಧರ್ಮದಲ್ಲಿ ಚಿತ್ತವು ಸದಾ ರಮಿಸುವದೋ, ಆನಂದ ಹೊಂದುವದೋ ಮತ್ತು ನಿಷ್ಕಾಮದಿಂದ ಯಾರು ಭಗವಂತನ ಭಕ್ತಿ ಮಾಡುವರೋ ಅವರೆಲ್ಲ ಸತ್ವಗುಣಿಗಳು. (೧೭, ೧೮, ನೇ ಓವಿ ನೋಡಿರಿ) (೪೫) ಸಾತ್ವಿಕ ಮನುಷ್ಯರಲ್ಲಿ ಕಂಡು ಬರುವ ಈ ಸತ್ವಗುಣವು ಸಂಸಾರ ಸಾಗರದಿಂದ ಪಾರು ಮಾಡುತ್ತದೆ. ಇದರಿಂದ ಜ್ಞಾನ ಮಾರ್ಗದಲ್ಲಿಯ ಆತ್ಮಾನಾತ್ಮವಿವೇಕ ಉತ್ಪನ್ನವಾಗುವದು. (೪೬) ಸತ್ವಗುಣದಿಂದ ಭಗವಂತನಲ್ಲಿ ಭಕ್ತಿ ಉಂಟಾಗುವದು. ಸತ್ವಗುಣದಿಂದ ಜ್ಞಾನದ ಪ್ರಾಪ್ತಿ ಆಗುವದು. ಸತ್ವಗುಣದಿಂದ ಮನುಷ್ಯ ಆತ್ಮಜ್ಞಾನಿ ಆಗುವನು. ಕೊನೆಗೆ ಸತ್ವಗುಣದಿಂದಲೇ ಸಾಯುಜ್ಯ ಮುಕ್ತಿ ಪ್ರಾಪ್ತವಾಗುವದು. (೪೭) ಇಂಥ ಸತ್ವಗುಣದ ವಿಷಯವನ್ನು ಸ್ವಲ್ಪದರಲ್ಲಿ ನನ್ನ ಬುದ್ಧಿಗೆ ತೋಚಿದಷ್ಟನ್ನು ನಾನು ಹೇಳಿದನು. ಶ್ರೋತೃಗಳು ಇವನ್ನು ತಿಳಿದು ಜಾಗೃತರಾಗಬೇಕು. ಮತ್ತು ಮುಂದಿನ ಸಮಾಸದ ಕಡೆಗೆ ಲಕ್ಷ್ಯ ಕೊಡಬೇಕು. (೪೮)

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಎರಡನೆಯ ದಶಕದಲ್ಲಿಯ
"ಸತ್ವಗುಣ" ನಾಮವೆಂಬ ಏಳನೆಯ ಸಮಾಸವು ಮುಗಿದುದು.

● ●

## ದಶಕ ೨ ಸಮಾಸ ೮ ಸದ್ವಿದ್ಯಾ ನಿರೂಪಣ (ನುಡಿ ೩೨)

ಶ್ರೀ ಸಮರ್ಥರ ಅಭಿಪ್ರಾಯದಂತೆ, ಮಾನವ ಸಮಾಜದಲ್ಲಿ ಸಾಮಾನ್ಯವಾಗಿ ಮೂರು (೩) ಪ್ರಕಾರಗಳು ಕಾಣುವವು. **ಒಂದನೆಯದು ಸತ್ವಗುಣಿ ಮನುಷ್ಯ ವರ್ಗ:–** ಮಾನವೀ ಜೀವನದಲ್ಲಿ ಅಧ್ಯಾತ್ಮಕ್ಕೆ ಪೋಷಕವಾದದ್ದನ್ನು ಇವರು ಮನಃಪೂರ್ವಕವಾಗಿ ಅಂಗೀಕರಿಸುವವರಾಗಿರುವರು. **ಎರಡನೆಯದು ರಜೋಗುಣಿ ಮನುಷ್ಯರ ವರ್ಗ:–** ಮಾನವ ಜೀವನದಲ್ಲಿಯ ದೇಹ ಸುಖಕ್ಕೆ ಅನುಕೂಲವಾಗಿರುವಂಥದ್ದೆಲ್ಲವೂ ಈ ಜನರಿಗೆ ಮನಃಪೂರ್ವಕವಾಗಿ ಬೇಕಾಗಿರುವದು. **ಮೂರನೆಯ ವರ್ಗವೆಂದರೆ:-** ತಮೋಗುಣಿ ಅಥವಾ ಕುವಿದ್ಯಾ (ಕುವಿಚಾರ) ಮನುಷ್ಯರ ವರ್ಗ. ಮಾನವ ಜೀವನದೊಳಗಿನ ಅವಿವೇಕತನದ ಅತಿರೇಕವೇ ಈ ಜನರ ಸ್ಥಿತಿ ಸ್ವಭಾವ (ವ್ಯಭಿಚಾರ ಭಾವ) ಇರುತ್ತದೆ. ಈ ಕುವಿದ್ಯೆಯ ಜನರು ಅತಿಹೀನ ಸ್ವಾರ್ಥಿಗಳೂ ಮತ್ತು ಸಮಾಜ ವಿಧ್ವಂಸಕರೂ ಇರುತ್ತಾರೆ. ರಜೋಗುಣಿ ಜನರು ಜಡ ಸ್ವಾರ್ಥಿ (ಅತಿ ಸ್ವಾರ್ಥಿ) ಮತ್ತು ಸ್ವತಃದ ಸುಖ ಸಂತೋಷವೇ ಮುಖ್ಯವೆಂದು ತಿಳಿದುಕೊಂಡವರು. ಇನ್ನೊಬ್ಬರ ಸುಖ ಸಂತೋಷದ ವಿಚಾರವೇ ಇಲ್ಲದವರಾಗಿರುತ್ತಾರೆ. ೧ನೇಯ ವರ್ಗದ ಸತ್ವಗುಣಿ ಜನರು ಅತಿ ಮೃದು ಮತ್ತು ಸೌಮ್ಯಸ್ವಾರ್ಥಿಗಳಿರುತ್ತಾರೆ. ಇವರು ನಿಃಸ್ವಾರ್ಥದ ದಾರಿಯಲ್ಲಿ ಹೋಗುವದಕ್ಕೆ ಪ್ರಾರಂಭ ಮಾಡಿದವರಿರುವರು. ಈ ಮೂರು ಪ್ರಕಾರದ ಜನರಿಗೆ ಆತ್ಮ ಸುಧಾರಣೆ ಮಾಡಿಕೊಳ್ಳುವದಕ್ಕೆ ಆದರ್ಶ ಗುರಿಯ ಅವಶ್ಯಕತೆ ಇರುವದು. ಸದ್ವಿದ್ಯಾಲಕ್ಷಣಗಳು ಇಂಥ ಆದರ್ಶ ಪುರುಷನ ಲಕ್ಷಣಗಳಾಗಿರುವವು. ಶ್ರೀ ಸಮರ್ಥರು ಹೇಳಿದ ಈ ಸಮಾಸದ ಲಕ್ಷಣಗಳನ್ನು ನಾವು ನೋಡಿದರೆ, ಪ್ರಭು ಶ್ರೀರಾಮಚಂದ್ರನ ಹಾಗೂ ಅವನ ಶಿಷ್ಯೋತ್ತಮ ಶ್ರೀ ಮಾರುತಿರಾಯನ ಜ್ಞಾಪಕವು ಒಮ್ಮೆಲೇ ಆಗುವದು. ಇಂಥ ಗುಣದ ಪುರುಷ ಯಾವ ಸಮಾಜಕ್ಕೆ ಲಭಿಸುವನೋ ಆ ಸಮಾಜದ ಭಾಗ್ಯೋದಯವಾಯಿತೆಂದು ನಿಶ್ಚಿತವಾಗಿ ತಿಳಿಯಬೇಕು. ಇಂಥವರ ಚರಿತ್ರೆ ಅನೇಕ ತಲೆಮಾರುಗಳ ತನಕ ಸ್ಫೂರ್ತಿ ಉಂಟು ಮಾಡುತ್ತಲಿರುವದೆಂಬ ಮಾತು ಅನುಭವಕ್ಕೆ ಬರುವಂಥಾದ್ದಾಗಿದೆ.

**ಸಮಾಸ ಆಠವಾ : ಸದ್ವಿದ್ಯಾ ನಿರೂಪಣ**

॥ಶ್ರೀರಾಮ॥ ಐಕಾ ಸದ್ವಿದ್ಯೇಚೀ ಲಕ್ಷಣೇ । ಪರಮ ಶುದ್ಧ ಸುಲಕ್ಷಣೇ ।
ವಿಚಾರ ಘೇತಾ ಬಳೇಚಿ ಬಾಣೇ । ಸದ್ವಿದ್ಯಾ ಆಂಗೀ ॥೧॥

ಸದ್ವಿದ್ಯೇಚಾ ಜೋ ಪುರುಷ । ತೋ ಉತ್ತಮ ಲಕ್ಷಣೇ ವಿಶೇಷ ।
ತ್ಯಾಚೇ ಗುಣ ಐಕತಾ ಸಂತೋಷ । ಪರಮ ವಾಟೇ ॥೨॥

ಭಾವಿಕ ಸಾತ್ವಿಕ ಪ್ರೇಮಳ । ಶಾಂತಿ ಕ್ಷಮಾ ದಯಾಸೀಳ ।
ಲೀನ ತತ್ಪರ ಕೇವಳ । ಅಮೃತ ವಚನೀ ॥೩॥

ಪರಮ ಸುಂದರ ಆಣೀ ಚತುರ । ಪರಮ ಸಬಳ ಆಣೀ ಧೀರ ।
ಪರಮ ಸಂಪನ್ನ ಆಣೀ ಉದಾರ । ಅತಿಶಯೇಸೀ ॥೪॥

ಪರಮ ಜ್ಞಾತಾ ಆಣೀ ಭಕ್ತ । ಮಹಾ ಪಂಡಿತ ಆಣೀ ವಿರಕ್ತ ।
ಮಹಾ ತಪಸ್ವೀ ಆಣೀ ಶಾಂತ । ಅತಿಶಯೇಸೀ ॥೫॥

ವಕ್ತಾ ಆಣೀ ನೈರಾಶತಾ । ಸರ್ವಜ್ಞ ಆಣೀ ಸಾದರತಾ ।
ಶ್ರೇಷ್ಠ ಆಣೀ ನಮ್ರತಾ । ಸರ್ವತ್ರಾಸೀ ॥೬॥

ರಾಜಾ ಆಣೀ ಧಾರ್ಮಿಕ । ಶೂರ ಆಣೀ ವಿವೇಕ ।
ತಾರುಣ್ಯ ಆಣೀ ನೇಮಕ । ಅತಿಶಯೇಸೀ ॥೭॥

ವೃಧಾಚಾರೀ ಕುಳಾಚಾರೀ । ಯುಕ್ತಾಹಾರೀ ನಿರ್ವಿಕಾರೀ ।
ಧನ್ವಂತರೀ ಪರೋಪಕಾರೀ । ಪದ್ಮ ಹಸ್ತೀ ॥೮॥

ಕಾರ್ಯಕರ್ತಾ ನಿರಾಭಿಮಾನೀ । ಗಾಯಕ ಆಣೀ ವೈಷ್ಣವ ಜನೀ ।
ವೈಭವ ಆಣೀ ಭಗವದ್ಭಜನೀ । ಅತ್ಯಾದರೇ ॥೯॥

ತತ್ವಜ್ಞ ಆಣೀ ಉದಾಸೀನ । ಬಹುಶ್ರುತ ಆಣೀ ಸಜ್ಜನ ।
ಮಂತ್ರೀ ಆಣೀ ಸಗುಣ । ನೀತಿವಂತ ॥೧೦॥

## ಸಮಾಸ ೮. ಸದ್ವಿದ್ಯಾ ನಿರೂಪಣ

**ಸದ್ವಿದ್ಯಾ ಮನುಷ್ಯನ ಲಕ್ಷಣಗಳು ಕೇಳಲಿಕ್ಕೆಸುಖಪ್ರದವಿರುವವು-ವಿವೇಕದಿಂದ ಇವುಗಳನ್ನು ನಮ್ಮಲ್ಲಿ ತಂದುಕೊಳ್ಳಲಿಕ್ಕೆ ಸಾಧ್ಯವಿದೆ:-** ಈಗ ಸದ್ವಿದ್ಯೆಯ ಲಕ್ಷಣಗಳನ್ನು ಕೇಳಿರಿ. ಇವು ಅತಿ ಶುದ್ಧ ಮತ್ತು ಉತ್ತಮವಿರುವವು. ನೀವು ಈ ಲಕ್ಷಣಗಳ ಬಗ್ಗೆ ವಿಚಾರ ಮಾಡಿದ್ದಾದರೆ, ಸದ್ವಿದ್ಯೆಯು ತಾನಾಗಿ ಆತುರದಿಂದ ನಿಮ್ಮಲ್ಲಿ ಪ್ರವೇಶಿಸುತ್ತದೆ. (೧) ಸದ್ವಿದ್ಯೆಯ ಮನುಷ್ಯನಲ್ಲಿ ವಿಶೇಷವಾದ ಶ್ರೇಷ್ಠ ಉತ್ತಮ ಲಕ್ಷಣಗಳಿರುವವು. ಇವುಗಳ ಗುಣಗಳನ್ನು ಕೇಳಿದರೆ ಮನಸ್ಸಿಗೆ ಬಹಳ ಸಂತೋಷವಾಗುವದು. (೨) **ಉತ್ತಮ ಪುರುಷರ ಸಾಮಾನ್ಯ ವರ್ಣನೆ:–** ಸದ್ವಿದ್ಯೆಯ ಪುರುಷನು ಅತಿ ನಿಷ್ಠಾವಂತನಿರುವನು. ಸತ್ವಗುಣ ಸಂಪನ್ನನಿರುವನು. ಪ್ರೇಮಳನಿರುವನು. ಶಾಂತ, ಕ್ಷಮಾ,ದಯಾಶೀಲನಿದ್ದು ಅತಿನಮ್ರನಾಗಿರುವನು. ಯಾವದೇ ಕೆಲಸದಲ್ಲಿ ಮನಸ್ಸಿನಿಂದ ದುಡಿಯುವನು ಮತ್ತು ಅಮೃತದಂತೆ ಒಳ್ಳೇ ಸವಿ ಮಾತನಾಡುವನು (೩) ಮುಂದಿನ ಏಳು ಓವಿ (ನುಡಿ)ಗಳಲ್ಲಿ ಶ್ರೀ ಸಮರ್ಥರು ಲಕ್ಷಣಗಳ ಕೆಲವು ಯುಗಲ (ಜೋಡಿ)ಗಳನ್ನು ಹೇಳಿದ್ದಾರೆ.ಒಂದು ದೇಹದಲ್ಲಿ ಒಂದುಲಕ್ಷಣವಿದ್ದರೆ ಬಹುಶಃ ಇನ್ನೊಂದು ಲಕ್ಷಣ ಆ ದೇಹದಲ್ಲಿ ಕಾಣಬರುವದಿಲ್ಲ. ಆದರೆ ಇವುಗಳಲ್ಲಿಯ ಒಂದು ಯುಗಲ [ಜೋಡಿ] ವಾದರೂ ಒಬ್ಬನ ದೇಹದಲ್ಲಿ ಇದ್ದದ್ದಾದರೆ ಅದು ತನ್ನ ಶ್ರೇಷ್ಠತ್ವವನ್ನು ಮೆರೆಸದೆ ಬಿಡುವದಿಲ್ಲ. ಅಂದ ಮೇಲೆ ಯಾವನೊಬ್ಬನ ದೇಹದಲ್ಲಿ ಹೆಚ್ಚು ಯುಗಲ [ಜೋಡಿ] ಗಳಿದ್ದರೆ ಅಂಥವನ ಶ್ರೇಷ್ಠತ್ವವು ಹೆಚ್ಚಿನದು. **ಕೇವಲ ಮಹಾನುಭಾವೀ ಪುರುಷರ ದೇಹದಲ್ಲಿಮಾತ್ರ ಇಂಥ ಅನೇಕ ಯುಗಲಗಳು ಕಂಡುಬರುವವು:–** ಉತ್ತಮ ಪುರುಷನು ಅತಿ ಸುಂದರ ಮತ್ತು ಬಹಳ ಚತುರನಿರುವನು. ಅತಿ ಬಲವಾನ ಮತ್ತು ಬಲು ಶಾಂತ, ಸೌಮ್ಯನಿರುವನು. ಅತಿ ಶ್ರೀಮಂತನಿದ್ದು ಬಹಳ ಉದಾರನಿರುವನು. (೪) ಮಹಾಜ್ಞಾನಿ ಇದ್ದು ಉತ್ತಮ ಭಕ್ತನಿರುವನು. ದೊಡ್ಡ ಪಂಡಿತನಿದ್ದು ಅತಿ ವಿರಕ್ತನಿರುವನು. ದೊಡ್ಡ ತಪಸ್ವಿ ಇದ್ದು ಅತಿ ಶಾಂತನಿರುವನು,(೫) ದೊಡ್ಡ ವಕ್ತಾ ವಾಗ್ಮಿ ಇದ್ದು, ನಿರ್ಲೋಭಿ, ಆಶಾರಹಿತ ಇರುವನು. ಎಲ್ಲ ತಿಳಿದವನಿದ್ದು ಎರಡನೆಯವರನ್ನು ಆದರದಿಂದ ಕಾಣುವನು. ಸ್ವತಃ ಶ್ರೇಷ್ಠನಿದ್ದು, ಎಲ್ಲರ ಸಂಗಡ ಅತಿ ನಮ್ರನಿರುವನು. [೬] ರಾಜ್ಯಪದವಿಯ ಮೇಲಿದ್ದರೂ ಧಾರ್ಮಿಕ ವೃತ್ತಿಯುವನಿರುವನು. ಅತಿ ಶೂರನಿದ್ದರೂ ಬಹು ವಿವೇಕವುಳ್ಳವನಿರುವನು, ಅತ್ಯಂತ ನವತರುಣನಿದ್ದು ಬಹಳ ನಿಯಮಬದ್ಧನಾಗಿ ವರ್ತಿಸುವನು. [೭] ಹಿರಿಯರು ಹಾಕಿಕೊಟ್ಟ ಮಾರ್ಗದಿಂದ ನಡೆಯುವನು. ಹಾಗೂ ಅದರ ಜೊತೆಯಲ್ಲಿ ಮನೆತನದ ಕುಲಾಚಾರವನ್ನು ಪಾಲಿಸುವನು. ನಿಯಮಿತ ಹಾಗೂ ಹಿತಮಿತದಿಂದ ಊಟ ಮಾಡುವನು. ಯಾವ ವಿಕಾರ, ದೋಷಗಳಿಗೂ ಬಲಿ ಬೀಳುವದಿಲ್ಲ. ಖಾತ್ರಿಯಿಂದ ಗುಣಪಡಿಸುವ ಧನ್ವಂತರಿಯಂತೆ ಜೀವನದಲ್ಲಿ ನಿಶ್ಚಿತ ಯಶ ಕೊಡುವಂಥ ಉಪಾಯಗಾರ ಹಾಗೂ ಪರೋಪಕಾರಿ. ಇದಲ್ಲವೇ, ಪದ್ಮಹಸ್ತಿ ಅಂದರೆ ಅಂಗೈಯಲ್ಲಿ ಧನಲಕ್ಷ್ಮಿಯ ಚಿನ್ಹವಿರುವ ಉದಾರಿ ಇರುವನು.[೮]ದೊಡ್ಡ ಕಾರ್ಯ ಮಾಡುವವನಾಗಿದ್ದರೂ ನಿರಭಿಮಾನಿ ಇರುವನು. ಉತ್ತಮ ಗಾಯಕನಿದ್ದು ಭಗವಂತನ ಭಕ್ತಿ ಮಾಡುವನು. ಮತ್ತು ದೇವಭಕ್ತನೆಂದು ಹೆಸರು ಪಡೆಯುವನು. ದೊಡ್ಡ ವೈಭವ ಅಂದರೆಐಶ್ವರ್ಯ ಶಕ್ತಿ, ಸಾಮರ್ಥ್ಯಗಳಿದ್ದರೂ ಅತ್ಯಂತ ಪ್ರೇಮದಿಂದ ಮತ್ತುಆಸಕ್ತಿಯಿಂದ ಭಗವಂತನಭಜನೆ ಮಾಡುವನು. [೯] ದೊಡ್ಡ ತತ್ವಜ್ಞಾನಿಯಾಗಿದ್ದು ತೀರ ಆಸಕ್ತಿರಹಿತನಿರುವನು. ದೊಡ್ಡ ಪಂಡಿತನಿದ್ದು, ಅತಿ ಸಜ್ಜನನಿರುವನು. ರಾಜನಿಗೆ ಸಲ್ಲಾ ಮಸಲತ [ಸಲಹೆ] ಹೇಳುವ ಮಂತ್ರಿ ಅಥವಾ ಪ್ರಧಾನಿ ಇದ್ದು, ಅತಿ ಸದ್ಗುಣಿ ಮತ್ತು ಅಷ್ಟೇ ನೀತಿವಂತನಿರುವನು. [೧೦]

ಸಾಧು ಪವಿತ್ರ ಪುಣ್ಯಸೀಳ ॥ ಅಂತರಶುದ್ಧ ಧರ್ಮಾತ್ಮಾ ಕೃಪಾಳ ।
ಕರ್ಮನಿಷ್ಠ ಸ್ವಧರ್ಮೀ ನಿರ್ಮಳ । ನಿರ್ಲೋಭ ಅನುತಾಪೀ ॥೧೧॥

ಗೋಡೀ ಆವಡೀ ಪರಮಾರ್ಥ ಪ್ರೀತೀ । ಸನ್ಮಾರ್ಗ ಸತ್ಕ್ರಿಯಾ ಧಾರಣಾ ಧೃತೀ।
ಶ್ರುತೀ ಸ್ಮೃತೀ ಲೀಳಾ ಯುಕ್ತಿ । ಸ್ತುತೀ ಮತೀ ಪರೀಕ್ಷಾ ॥೧೨॥

ದಕ್ಷ ಧೂರ್ತ ಯೋಗ್ಯ ತಾರ್ಕಿಕ । ಸತ್ಯ ಸಾಹಿತ್ಯ ನೇಮಕ ಭೇದಕ ।
ಕುಶಳ ಚಪಳ ಚಮತ್ಕಾರಿಕ । ನಾನಾ ಪ್ರಕಾರೇ ॥೧೩॥

ಆದರ ಸನ್ಮಾನ ತಾರ್ತಮ್ಯ ಜಾಣೇ। ಪ್ರಯೋಗ ಸಮಯೋ ಪ್ರಸಂಗ ಜಾಣೇ।
ಕಾರ್ಯಾಕಾರಣ ಚಿನ್ಹೇ ಜಾಣೇ। ವಿಚಕ್ಷಣ ಬೋಲಿಕಾ ॥೧೪॥

ಸಾವಧ ಸಾಕ್ಷೇಪೀ ಸಾಧಕ । ಆಗಮ ನಿಗಮ ಶೋಧಕ ।
ಜ್ಞಾನ ವಿಜ್ಞಾನ ಬೋಧಕ । ನಿಶ್ಚಯಾತ್ಮಕ ॥೧೫॥

ಪುರಶ್ಚರಣೀ ತೀರ್ಥ ವಾಸೀ । ದೃಢವ್ರತೀ ಕಾಯಾಕ್ಲೇಸೀ ।
ಉಪಾಸಕ ನಿಗ್ರಹಾಸೀ । ಕರೂ ಜಾಣೇ ॥೧೬॥

ಈ ಆದರ್ಶ ಪುರುಷ, ಅಂತರಂಗದಲ್ಲಿ ಎಷ್ಟು ಪವಿತ್ರನಿರುವನೋ ಅಷ್ಟೇ ಸದಾಚಾರಿ ಮತ್ತು ಪ್ರಸಂಗ ನೋಡಿ ಅದರಂತೆ ನಡೆಯುವವನಿರುವನು. ಜ್ಞಾನದ ಅನೇಕ ಪಕ್ಷ [ಪಂಗಡ]ಗಳಲ್ಲಿ ನಿಶ್ಚಿತ ಅಭಿಪ್ರಾಯ ಕೊಡುವಂಥ ಬಹುಶ್ರುತ ಅಂದರೆ ಅನೇಕ ವಿಷಯಗಳನ್ನು ಬಲ್ಲಂಥ ಎಲ್ಲ ವಿಷಯಗಳನ್ನೂ ಓದಿ ತಿಳಿದವನಿರುವನು. ಸದ್ವಿದ್ಯೆ ಪಡೆದ ಪುರುಷ, ಸಾಧು, ಸಭ್ಯ ವೃತ್ತಿಯುವನು, ಪವಿತ್ರ ಮನಸ್ಸಿನವನು, ಹಾಗೂ ಪುಣ್ಯಶೀಲ ಚರಿತ್ರೆಯುಳ್ಳವನೂ ಇರುವನು. ಇಂಥವನ ಅಂತಃಕರಣ ಶುದ್ಧವಿರುವದು. ಶ್ರೇಷ್ಠ ಧರ್ಮಾತ್ಮ ಹಾಗೂ ದಯಾಳು ಇರುವನು. ಕರ್ಮನಿಷ್ಠನಿರುವನು. ಸ್ವಧರ್ಮ ಪಾಲನೆಯಿಂದ ಒಳಗೂ ಹೊರಗೂ ಶುದ್ಧನಿರುವನು. ಇವನಲ್ಲಿ ಲೋಭವಿರುವದಿಲ್ಲ, ಮತ್ತು ತಪ್ಪು ವರ್ತನೆ ಮಾಡಿದಾಗ ಅದಕ್ಕಾಗಿ ಪಶ್ಚಾತ್ತಾಪ ಪಡುವನು. [೧೧] ಪರಮಾರ್ಥದಲ್ಲಿ ರುಚಿ ಮತ್ತು ಪ್ರೇಮವಿರುವದು, ಪರಮಾರ್ಥದ ಮೇಲೆ ಪ್ರೀತಿ ಇರುವದು, ಸನ್ಮಾರ್ಗದಿಂದ ಹೋಗುವನು. ಸತ್ಕರ್ಮದ ಆಚರಣೆ ಮಾಡುವನು. ಯಾವಾಗಲೂ ಭಗವಂತನ ಅನುಸಂಧಾನ ಅಂದರೆ ಭಗವಂತನಲ್ಲಿ ಭಕ್ತಿ, ಜ್ಞಾನ. ವೈರಾಗ್ಯಗಳ ಸಂಬಂಧ ಮತ್ತು ಆತ್ಮ ಪರಮಾತ್ಮನ ಬಗ್ಗೆ ಚಿಂತನೆ ಮಾಡುವದು – ಇರುವದು. ಮನಸ್ಸನ್ನು ಹರಿಬಿಡದೆ ಸ್ಥಿರವಿಡುವದು. ಇವನಿಗೆ ಶ್ರುತಿ (ವೇದ) ಸ್ಮೃತಿ (ಧರ್ಮ) ಶಾಸ್ತ್ರಗಳ ಜ್ಞಾನವಿರುವದು. ಆಡತಾಡುತ್ತ ಸಹಜವಾಗಿ ಮತ್ತು ಯುಕ್ತಿಯಿಂದ ಕರ್ಮ ಕಾರ್ಯ ಮಾಡುವ ಜಾಣ್ಮೆ ಇರುವದು. ಭಗವಂತನ ಸ್ತುತಿ ಹೇಗೆ ಮಾಡಬೇಕೆಂಬುದು ತಿಳಿದಿರುವನು. ಮತ್ತು ಬುದ್ಧಿವಂತನಿರುವನು. ಮತ್ತು ಅನೇಕ ವಸ್ತುಗಳ ಪರೀಕ್ಷೆ ಮಾಡುವಂಥ ಚತುರನಿರುವನು. (೧೨) ಎಲ್ಲ ಬಾಬತ್ತಿನ ಕಾರ್ಯದಲ್ಲಿ ಎಚ್ಚರವಿರುತ್ತಾನೆ. ಲುಚ್ಚಾ ಮನುಷ್ಯರಲಬಾಡತನವನ್ನು ಕಂಡು ಹಿಡಿಯುವಷ್ಟು ಧೂರ್ತನಿರುತ್ತಾನೆ. ಯೋಗ್ಯ ರೀತಿಯಿಂದ ಮತ್ತು ಸಪ್ರಮಾಣವಾಗಿ ತರ್ಕ (ವಾದ ವಿವಾದ) ಮಾಡುವನು. ಸತ್ಯದಿಂದ ನಡೆಯುವನು. ಇವನಿಗೆ ವಾಙ್ಮಯ ಸಾಹಿತ್ಯ ಶಾಸ್ತ್ರಾದಿಗಳ ಜ್ಞಾನವಿದ್ದು, ಬಹಳ ನಿಯಮಿತವಾಗಿ ವರ್ತಿಸುವನು. ಒದಗಿ ಬಂದ ಪ್ರಸಂಗದಲ್ಲಿ ಅಥವಾ ಮನುಷ್ಯರನ್ನು ಈ ತುದಿಯಿಂದ ಆ ತುದಿಯವರೆಗೆ ಅಂದರೆ ಅವರ ಇರವನ್ನು ಒಳಹೊಕ್ಕು ನೋಡುವ ಭೇದಕ ದೃಷ್ಟಿಯುವನಿರುವನು. ಬಹಳ ಕೌಶಲ್ಯದಿಂದ ನಡೆಯುವನು. ಮತ್ತು ಛಟಪಟ ತೀವ್ರ ಕೆಲಸ ಮಾಡುವನು. ಇಂಥ ನಾನಾ ಪ್ರಕಾರದ ಚಮತ್ಕಾರಿಕ ಗುಣಗಳು ಸದ್ವಿದ್ಯೆಯ ಮನುಷ್ಯನಲ್ಲಿ ಇರುವವು. (೧೩) ಯಾರಿಗೆ ಎಷ್ಟು ಮರ್ಯಾದೆ ಕೊಡಬೇಕು. ಯಾರಿಗೆ ಯಾವ ರೀತಿಯ ಆದರ, ಸನ್ಮಾನ ಮಾಡಬೇಕು. ಈ ತಾರತಮ್ಯವನ್ನು ಸದ್ಗುಣಿಯು ಚನ್ನಾಗಿ ತಿಳಿದಿರುವನು. ಇದರಂತೆಯೇ ಎಲ್ಲಿ ಯಾವ ರೀತಿಯ ಪದ್ಧತಿ ಅನುಸರಿಸಬೇಕು, ಸದ್ಯದ ವೇಳೆ ಪ್ರಸಂಗ ಯಾವ ಪ್ರಕಾರದ್ದು ಇರುವದು. ಇದೆಲ್ಲವನ್ನು ಸರಿಯಾಗಿ ತಿಳಕೊಳ್ಳುವನು. ಅವಶ್ಯಕತೆ ಮತ್ತು ಅದರ ಉದ್ದೇಶ (ಕಾರಣ ವ ಕಾರ್ಯ)ಗಳ ಚಿನ್ಹ ಅಂದರೆ ಲಕ್ಷಣಗಳು ಗೊತ್ತಿರುವವು. ಬಹಳ ಹುಷಾರದಿಂವತೂಗಿಮಾತನಾಡುವನು. (೧೪)ದಕ್ಷಮತ್ತು ಹುಷಾರನಿದ್ದುಬುದ್ಧಿವಂತಿಕೆಯಿಂದ ನಡೆಯುವನು. ಯಾವಾಗಲೂ ಉದ್ಯೋಗಶೀಲನಾಗಿರುವನು. ತನ್ನ ಸಾಧಕ ವೃತ್ತಿ ಬಿಡದವನು. ವೇದಶಾಸ್ತ್ರಗಳ ಸೂಕ್ಷ್ಮ ಅಭ್ಯಾಸ ಮಾಡುವವನು. ಹಾಗೂ ಆತ್ಮ ಸ್ವರೂಪದ ಬೌದ್ಧಿಕ ಜ್ಞಾನ ಮತ್ತು ಅದರ ಸಾಕ್ಷಾತ್ ಅನುಭವ ಇವುಗಳ ಬಗ್ಗೆ ತನ್ನ ಅನುಭವದಿಂದ ನಿಶ್ಚಿತವಾದ ಖರೇ ಆತ್ಮಬೋಧ ಮಾಡಿಕೊಡುವನು. (೧೫) **ಸದ್ವಿದ್ಯೆಯುವನು ಹೇಗೆ ಮಾತನಾಡುವನು, ಹೇಗೆ ನಡೆಯುವನು, ಜನರ ಕೂಡ ಇವನ ನಡತೆಯು ರೀತಿ ರಿವಾಜುಗಳು ಹೇಗಿರುವವು, ಹೇಗೆ ಕಾಣುವನು. ಇವುಗಳ ವರ್ಣನೆ ಮಾಡಿ ಅನಂತರ ಇವನು ಹೇಗೆ ಸಾಧನ ಮಾಡುವನು. ಇದನ್ನು ಹೇಳುತ್ತಾರೆ:–** ಒಮ್ಮೆ ಪುರಶ್ಚರಣ (ತರಾವಿಕ ಮಂತ್ರ ಜಪ) ಮಾಡುವನು. ಒಮ್ಮೆ ತೀರ್ಥಕ್ಷೇತ್ರಗಳಲ್ಲಿ ಹೋಗಿಇರುವನು, ಒಮ್ಮೆ ಕಠಿಣ ವ್ರತ ಮಾಡುವನು. ಒಮ್ಮೆ ದೇಹಕ್ಕೆ ಕಷ್ಟ ಕೊಡುವ ಕಾರ್ಯಗಳಾದ ವ್ರತ. ನಿಯಮ ಮಾಡುವನು. ಉಪಾಸನೆಯನ್ನು ಹೇಗೆ ಮಾಡಬೇಕೆಂಬುದು ಗೊತ್ತಿರುವದರಿಂದ ಉಪಾಸನೆ ಚಾಲೂ ಇರುವಾಗ ಇಂದ್ರಿಯಗಳನ್ನು ವಶದಲ್ಲಿಟ್ಟುಕೊಂಡು ನಡೆಯುವನು. (೧೬)

ಸತ್ಯವಚನೀ ಶುಭವಚನೀ । ಕೋಮಳವಚನೀ ಯೇಕವಚನೀ ।
ನಿಶ್ಚಯುವಚನೀ ಸೌಖ್ಯವಚನೀ । ಸರ್ವಕಾಳ ॥೧೭॥

ವಾಸನಾ ತೃಪ್ತ ಸಖೋಲ ಯೋಗೀ । ಭವ್ಯ ಸುಪ್ರಸನ್ನ ವೀತರಾಗೀ ।
ಸೌಮ್ಯ ಸಾತ್ವಿಕ ಶುದ್ಧ ಮಾರ್ಗೀ । ನಿಃಕಪಟ ನಿರ್ವೆಸನೀ ॥೧೮॥

ಸುಗಡ ಸಂಗೀತ ಗುಣಗ್ರಾಹೀ । ಅನಾಪೇಕ್ಷೀ ಲೋಕ ಸಂಗ್ರಹೀ ।
ಆರ್ಜವ ಸಖ್ಯ ಸರ್ವಹೀ । ಪ್ರಾಣಿ ಮಾತ್ರಾಸಿ ॥೧೯॥

ದ್ರವ್ಯಸುಚೀ ದಾರಾಸುಚೀ । ನ್ಯಾಯುಸುಚೀ ಅಂತರಸುಚೀ ।
ಪ್ರವೃತ್ತಿಸುಚೀ ನಿವೃತ್ತಿಸುಚೀ । ಸರ್ವಸುಚೀ ನಿಃಸಂಗಪಣೀ ॥೨೦॥

ಮಿತ್ರಪಣೀ ಪರಹಿತಕಾರೀ । ವಾಗ್ಮಾಧುರ್ಯ ಪರಶೋಕ ಹಾರೀ ।
ಸಾಮರ್ಥ್ಯಪಣೀ ವೇತ್ರಧಾರೀ । ಪುರುಷಾರ್ಥೀ ಜಗಮಿತ್ರ ॥೨೧॥

ಸಂಶಯು ಛೇದಕ ವಿಶಾಳ ವಕ್ತಾ । ಸಕಳ ಕ್ಲುಪ್ತ ಅಸೋನಿ ಶ್ರೋತಾ ।
ಕಥಾನಿರೂಪಣೀ ಶಬ್ದಾರ್ಥಾ । ಜಾಊ ಚನೇದೀ ॥೨೨॥

ವೆವಾದರಹಿತ ಸಂವಾದೀ । ಸಂಗರಹಿತ ನಿರೋಪಾಧೀ ।
ದುರಾಶಾರಹಿತ ಅಕ್ರೋಧೀ । ನಿರ್ದೋಷ ನಿರ್ಮತ್ಸರೀ ॥೨೩॥

ವಿಮಳಜ್ಞಾನೀ ನಿಶ್ಚಯಾತ್ಮಕ । ಸಮಾಧಾನೀ ಆಣೀ ಭಜಕ ।
ಸಿದ್ಧ ಅಸೋನೀ ಸಾಧಕ । ಸಾಧನ ರಕ್ಷೀ ॥೨೪॥

ಇವನ ಮಾತುಗಳುಸದಾ ಸತ್ಯದಿಂದಕೂಡಿರುವವು. ಶುಭವಚನಗಳು ಮೃದುವಾಗಿದ್ದು ನಿಶ್ಚಿತ ನಿರ್ಣಾಯಕವಿರುವವು. ಇವು ಕೊನೆಯುವರೆಗೆ ಇರುವಂಥ ಮತ್ತು ಆಲ್ಹಾದಕರವಿರುವವು. (೧೭) ಇವನ ಸರ್ವವಾಸನಾ ತೃಪ್ತವಾಗಿರುವವು. ಬಹಳ ಆಳವಾದ ಹಾಗೂ ಗೂಢವಾದ ಅಭ್ಯಾಸ ಮಾಡುವಂಥ ಪ್ರವೀಣ ಯೋಗಿ ಇರುವನು. ನೋಡುವುದಕ್ಕೆ ಭವ್ಯವಾಗಿ ಕಾಣುವಂಥ ಸುಪ್ರಸನ್ನನಿರುವನು. ಇವನು ನಿಜವಾದ ವೈರಾಗ್ಯಶೀಲ ವಿರಕ್ತನಾಗಿದ್ದೂ ಅತಿ ಸೌಮ್ಯ ಮತ್ತು ಸಾತ್ವಿಕನಿರುವನು. ಹಾಗೆಯೇ ಅತ್ಯಂತ ನಿಷ್ಕಪಟಿ ಮತ್ತು ನಿರ್ವ್ಯಸನಿ, ಆಗಿದ್ದುಕೊಂಡು ಯಾವಾಗಲೂ ಪವಿತ್ರ ಮಾರ್ಗದಿಂದ ಜೀವನ ನಡೆಸುವನು. (೧೮) ಯಾವದೇ ಕೆಲಸವನ್ನು ಚಾತುರ್ಯದಿಂದ ಮಾಡುವನು. ಉತ್ತಮ ಸಂಗೀತ ತಿಳಿದಿರುವನು. ಗುಣಗ್ರಾಹಿ ಇರುವದರಿಂದ ಸಂಗೀತದ ರಸಸ್ವಾದ ಮಾಡುವನು. ಮತ್ತು ಮಾಡಿಸುವನು. ಪ್ರತಿಫಲದ ಅಪೇಕ್ಷೆ ಇಲ್ಲದೆ ಜನರನ್ನು ಸನ್ಮಾರ್ಗಕ್ಕೆ ಹಚ್ಚುವನು. ಸರ್ವ ಪ್ರಾಣಿ ಮಾತ್ರರಲ್ಲಿ ಸ್ನೇಹ ಮಾಡುವನು. ಮತ್ತು ಅವರ ಸಂಗಡ ಅತಿ ಸರಳ ರೀತಿಯಿಂದ ನಡೆಯುವನು. (೧೯) ದ್ರವ್ಯ (ಹಣ) ಮತ್ತು ಸ್ತ್ರೀಯರ ವಿಷಯದಲ್ಲಿ ಇವನ ವರ್ತನೆಯು ಅತ್ಯಂತ ಶುದ್ಧ ಹಾಗೂ ಪವಿತ್ರವಿರುವದು. ನಡವಳಿಕೆಯು ನೀತಿ ನ್ಯಾಯದ ಮರ್ಯಾದೆಗೆ ಅನುಸರಿಸಿ ಇರುವದು. ಅಂತಃಕರಣ ಶುದ್ಧವಿರುವದು. ಪ್ರಪಂಚ ಮತ್ತು ವ್ಯವಹಾರ ಎರಡರಲ್ಲೂ ಅತಿ ನಿಷ್ಕಳಂಕ ಹಾಗೂ ಸರಳವಿರುವದು, ಇದರಂತೆ ಪರಮಾರ್ಥವೂ ಸಹ ಅತಿ ನಿರ್ಮಲ ಮತ್ತು ಪವಿತ್ರವಿರುವದು. ಮನವು ಯಾವುದರಲ್ಲಿಯೂ ಆಸಕ್ತವಾಗಿರುವದಿಲ್ಲ. (ತೊಡಕಿಕೊಂಡಿರುವದಿಲ್ಲ.) ಆಂತೆಯೇ ಇವನ ಸಮಗ್ರ ಜೀವನವು ಒಳಗೂ ಹೊರಗೂ ಬಹು ಪವಿತ್ರವಿರುವದು. (೨೦) ಎಲ್ಲರ ಸಂಗಡ ಮಿತ್ರತ್ವದ ಸ್ನೇಹವಿಡುವ ಬುದ್ಧಿ ಇರುವದರಿಂದ ಇವನು ಯಾವಾಗಲೂ ಎರಡನೆಯವರ ಕಲ್ಯಾಣವನ್ನು ಮಿತ್ರರೇಂದೇ ಮಾಡುವನು. ತನ್ನ ಪ್ರೇಮದ ಮಾತುಗಳಿಂದ ಎರಡನೆಯವರ ದುಃಖವನ್ನು ದೂರ ಮಾಡುವನು. ತನ್ನ ಅಧಿಕಾರ ಸತ್ತೆಯ ಬಲದಿಂದ ಸಜ್ಜನರ ಹಾಗೂ ಅನಾಥರ ರಕ್ಷಣೆ ಮಾಡುವಲ್ಲಿ ದಂಡಧಾರಿಯಾಗಿರುವನು. ಮತ್ತು ತನ್ನ ಪರಾಕ್ರಮದಿಂದ ಎಲ್ಲ ಜಗತ್ತಿನ ಜಗಮಿತ್ರನಾಗುವನು. (೨೧) ಜಬರದಸ್ತ ವಕ್ತೃತ್ವ ಶಕ್ತಿ ಅಂದರೆ ಪ್ರವಚನ ಭಾಷಣ ವಗೈರೆ ಇವನಲ್ಲಿ ಇರುವದರಿಂದ ಸರ್ವಪ್ರಕಾರದ ಸಂಶಯಗಳನ್ನು ತತ್ಕಾಲದಲ್ಲಿ ನಿವಾರಿಸುವನು. ಎಲ್ಲ ವಿಷಯುವನ್ನುತಾನು ತಿಳಿದವನಾಗಿದ್ದರೂ ಎರಡನೆಯವರು ಹೇಳುವದನ್ನು ಶ್ರೋತೃಆಗಿ ಶಾಂತರೀತಿಯಿಂದ ಕುಳಿತು ಕೇಳುವನು. ಇವನು ಹರಿಕಥೆ ಪ್ರವಚನಾದಿಗಳನ್ನು ಕೇಳುವಾಗ ಪ್ರತಿಯೊಂದು ಶಬ್ದಾರ್ಥದ ಕಡೆಗೆ ಲಕ್ಷ್ಯ ಕೊಡುವನು. ತಾನು ಮಾಡುವಾಗ ಪ್ರತಿ ಒಂದು ಶಬ್ದಗಳ ವಿವರಣೆ ಸರಿಯಾಗಿ ಮಾಡುವನು. (೨೨) ಸಂಭಾಷಣೆ ಕಾಲವಲ್ಲಿ ಎಂದೂ ವಿತಂಡವಾದ ಮಾಡುವದಿಲ್ಲ. ಸಂಭಾಷಣಾ ಚತುರನಿರುವನು. ಇದರಿಂದ ಅಲಿಪ್ತನಾಗಿ ಉಳಿಯುವನು. ದುರಾಚಾರರಹಿತನಾಗಿರುವನು. ಎಂದೂ ಸಿಟ್ಟಿನ ಕೈಯಲ್ಲಿ ಬುದ್ಧಿ ಕೊಡುವದಿಲ್ಲ. ಅತ್ಯಂತ ದ್ವೇಷ ಮತ್ಸರಗಳಿಂದ ಮುಕ್ತನಿರುವನು. (೨೩) ಇವನ ಜ್ಞಾನವು ಅಜ್ಞಾನದಿಂದ ಮುಕ್ತವಾಗಿ ಹೊರಬಂದಿರುವದರಿಂದ ಅದು ಅತಿಶುದ್ಧ ಹಾಗೂ ಪರಿಪಕ್ವ ಮತ್ತು ನಿಶ್ಚಿತವಾದದ್ದಿರುತ್ತದೆ. ಮತ್ತು ಸಮಾಧಾನ ಪ್ರಾಪ್ತವಾಗಿರುವದರಿಂದ ಇವನು ಭಗವಂತನ ಭಜನೆ, ಪೂಜೆ ಮಾಡುವನು. ಭಕ್ತಿಭಾವದಿಂದ ಇರುವನು. ಮತ್ತು ಸಿದ್ಧಾವಸ್ಥೆ ಪ್ರಾಪ್ತ ಮಾಡಿಕೊಂಡಿದ್ದರೂ ಸಾಧಕರಂತೆ ನಡೆಯುವನು. ವರ್ಣಾಶ್ರಮ, ಸಗುಣ ಉಪಾಸನೆ, ಭಜನ, ಪೂಜನ, ನಾಮಸ್ಮರಣೆ ಇತ್ಯಾದಿ ಸಾಧನಗಳ ರಕ್ಷಣೆ ಮಾಡುವನು. (೨೪)

ಸುಖರೂಪ ಸಂತೋಷರೂಪ । ಆನಂದರೂಪ ಹಾಸ್ಯರೂಪ ।
ಏಕ್ಯರೂಪ ಆತ್ಮರೂಪ । ಸರ್ವತ್ರಾಂಸೀ ॥೨೫॥

ಭಾಗ್ಯವಂತ ಜಯವಂತ । ರೂಪವಂತ ಗುಣವಂತ ।
ಆಚಾರವಂತ ಕ್ರಿಯಾವಂತ । ವಿಚಾರವಂತ ಸ್ಥಿತೀ ॥೨೬॥

ಯೆಶವಂತ ಕೀರ್ತಿವಂತ । ಶಕ್ತಿವಂತ ಸಾಮರ್ಥ್ಯವಂತ ।
ವೀರ್ಯವಂತ ವರದವಂತ । ಸತ್ಯವಂತ ಸುಕೃತೀ ॥೨೭॥

ವಿದ್ಯಾವಂತ ಕಳಾವಂತ । ಲಕ್ಷ್ಮೀವಂತ ಲಕ್ಷ್ಣವಂತ ।
ಕುಳವಂತ ಸುಚಿಷ್ಮಂತ । ಬಳವಂತ ದಯಾಳು ॥೨೮॥

ಯುಕ್ತಿವಂತ ಗುಣವಂತ ವರಿಷ್ಠ । ಬುದ್ಧಿವಂತ ಬಹುಧಾರಿಷ್ಟ ।
ದೀಕ್ಷಾವಂತ ಸದಾ ಸಂತುಷ್ಟ । ನಿಸ್ಪ್ರಹ ವೀತರಾಗೀ ॥೨೯॥

ಅಸೋ ಏಸೇ ಉತ್ತಮ ಗುಣ । ಹೇ ಸದ್ವಿದ್ಯೇಚೇ ಲಕ್ಷಣ ।
ಅಭ್ಯಾಸಾಯಾ ನಿರೂಪಣ । ಅಲ್ಪಮಾತ್ರ ಬೋಲಿಲೇ ॥೩೦॥

ರೂಪ ಲಾವಣ್ಯ ಅಭ್ಯಾಸಿತಾ ನಯೇ । ಸಹಜ ಗುಣಾಸ ನ ಚಲೇ ಉಪಾಯೇ ।
ಕಾಹೀ ತರೀ ಧರಾವೀ ಸೋಯೇ । ಆಗಾಂತುಕ ಗುಣಾಚೀ ॥೩೧॥

ಏಸೀ ಹೇ ಸದ್ವಿದ್ಯಾ ಬರವೀ । ಸರ್ವತ್ರಾ ಪಾಸೀ ಅಸಾವೀ ।
ಪರೀ ವಿರಕ್ತ ಪುರುಷೇ ಅಭ್ಯಾಸಾವೀ । ಅಗತ್ಯರೂಪ ॥೩೨॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
ಸದ್ವಿದ್ಯಾ ನಿರೂಪಣ ನಾಮ ಸಮಾಸ ಆಠವಾ ॥

**ಸಂಸ್ಕೃತದಲ್ಲಿ ನಾಮಗಳಿಗೆ ಮತ್ ಹಾಗೂ ವತ್ ಹೀಗೆ ಪ್ರತ್ಯಯ ಹತ್ತಿ ಸಾಮಾನ್ಯವಾಗಿ ವಿಶೇಷ ಗುಣಗಳಾಗುವವು ಉದಾ :—** ರೂಪವತ್, ಗುಣವತ್, ಕೀರ್ತಿಮತ್, ಲಕ್ಷ್ಮೀವತ್ ಇತ್ಯಾದಿ. ಅಧಿಕ್ಯತೆ (ಬಹಳಷ್ಟು) ಪ್ರಶಂಸೆ; ನಿತ್ಯ ಸಂಬಂಧ ಹತ್ತಿರವಿರುವದು, ಮಧ್ಯದಲ್ಲಿರುವದು; ಹೀಗೆ ಅರ್ಥವಾಗುವದನ್ನು ಈ ಪ್ರತ್ಯಯಗಳು ತೋರಿಸುವವು. ಮುಂದಿನ ಐದು ಓವಿ(ನುಡಿ)ಗಳಲ್ಲಿ ಆದರ್ಶ ಅಥವಾ ಉತ್ತಮ ಪುರುಷನಲ್ಲಿ ಇರುವಂಥ ಮಹತ್ವದ ಸರ್ವಲಕ್ಷಣಗಳನ್ನು ಶ್ರೀ ಸಮರ್ಥರು ವಿಶೇಷಣ ರೂಪದಲ್ಲಿ ಬಹಳ ಚಾತುರ್ಯದಿಂದ ಒಂದೇ ಕಡೆಗೆ ಸುಂದರವಾಗಿ ಹೆಣೆದಿದ್ದಾರೆ. ಇವುಗಳನ್ನು ಹೇಳುವಾಗ ಅವರ ನಿರ್ಮಲ ಸ್ಫೂರ್ತಿ ಸ್ಪಷ್ಟವಾಗಿ ಕಾಣಿಸುವದು. ಇದೆನೋ ನಿಜವಾಗಿಯೇ ಇದೆ. **ಇದರ ಜೊತೆಗೆ ಅವರ ಮರಾಠಿಭಾಷೆಯಮೇಲಿನ ಪ್ರಭುತ್ವವೂಸಹ ಅನುಭವಕ್ಕೆ ಬರುತ್ತದೆ:**–ಸದ್ವಿದ್ಯಾ ಸಂಪನ್ನನಿರುವ ಮನುಷ್ಯನನ್ನು ನೋಡಿದ ಕೂಡಲೇ ಮೂರ್ತಿಮಂತ ಸುಖ ಸಂತೋಷಗಳನ್ನೇ ನೋಡುತ್ತಿರುವೆವೆಂಬ ಭಾಸವಾಗುತ್ತದೆ. ಇವನು ಆನಂದದ ಮೂರ್ತಿಯೇ ಆಗಿರುವನು. ಸದಾ ಸರ್ವಕಾಲ ನಗುಮುಖದಿಂದ ಇದ್ದು ಪ್ರಸನ್ನನಾಗಿರುವನು. ಆತ್ಮರೂಪದಿಂದ ಸರ್ವಪ್ರಾಣಿ ಮಾತ್ರರಲ್ಲಿ ಏಕರೂಪ (ಒಂದಾಗಿ) ನಿರುವನು. "ಆತ್ಮವತ್ ಸರ್ವಭೂತೇಷು" ಎಂಬಂತೆ ಇವನ ನಡವಳಿಕೆ ಇರುವದು. (೨೫) ಇವನು ಭಾಗ್ಯವಂತ ಮತ್ತು ಜಯವಂತನಿರುವನು. ರೂಪವಂತ ಮತ್ತು ಗುಣವಂತನಿರುವನು. ಆಚಾರವಂತ ಕ್ರಿಯಾವಂತನಿದ್ದು ವಿಚಾರವಂತನಿರುವನು. ಹೀಗೆ ಇವನ ಸ್ಥಿತಿ ಇರುವದು. (೨೬) ಯಶವಂತ, ಮತ್ತು ಕೀರ್ತಿವಂತನಿರುವನು. ಶಕ್ತಿವಂತ ಸಾಮರ್ಥ್ಯವಂತನಿರುವನು. ಮತ್ತು ವೀರ್ಯವಂತ (ವೀರ್ಯ ರಕ್ಷಿಸಿಕೊಂಡವ) ಅಥವಾ ಪರಾಕ್ರಮಿ ಆಗಿರುವನು. ಮತ್ತು ಗುರುವಿನಿಂದ ವರವನ್ನು ಪಡೆದ (ಗುರುಕೃಪಾ ಹೊಂದಿದ)ವನಾದುದರಿಂದ ಇವನು ಮಾಡಿದ ಆಶೀರ್ವಾದವು ಫಲಪ್ರದವಾಗುವದು. ಹಾಗೂ ಸತ್ಯವಾನನಾಗಿದ್ದು ಪುಣ್ಯ ಕರ್ಮ ಮಾಡುವವನಾಗಿರುವನು. (೨೭) ವಿದ್ಯಾವಂತ ಮತ್ತು ಕಲಾವಂತನಿರುವನು. ಐಶ್ವರ್ಯ ಸಂಪನ್ನ ಸುಲಕ್ಷಣ ಸಂಪನ್ನನಾಗಿರುವನು. ಕುಲಶೀಲವಾನನಾಗಿದ್ದು ಅತ್ಯಂತ ಪವಿತ್ರಾಚರಣೆಯವನಿರುವನು. ಬಲವಾನನಾಗಿದ್ದು ದಯಾಳು ಇರುವನು. (೨೮) ಬಹು ಯುಕ್ತಿವಂತನಿರುವನು. ಗುಣಸಂಪನ್ನನಿದ್ದು ಶ್ರೇಷ್ಠನಿರುವನು. ಬುದ್ಧಿವಾನನಿದ್ದು ಬಹಳ ಧೈರ್ಯವಾನನಿರುವನು. ಪರಮಾರ್ಥದ ದೀಕ್ಷಾವ್ರತ ಇವನು ತೆಗೆದುಕೊಂಡಿರುತ್ತಾನೆ. ಇವನು ಸದಾ ಸರ್ವಕಾಲ ಅತ್ಯಂತ ಸಂತುಷ್ಟನಿರುವನು. ಇವನಿಗೆ ಯಾವುದರಲ್ಲಿಯೂ ಆಸಕ್ತಿ ಉಳಿದಿರುವದಿಲ್ಲ. ಇವನು ಅತ್ಯಂತ ವೈರಾಗ್ಯ ಸಂಪನ್ನನಿರುವನು. (೨೯) **ಸಮಾಸ ಮುಗಿಸುವ ಮೊದಲು ಶ್ರೀ ಸಮರ್ಥರು ಒಂದು ಮಹತ್ವದ ಮಾತನ್ನು ಹೇಳುತ್ತಾರೆ. ಅದು ಯಾವುದೆಂದರೆ, ಮನುಷ್ಯನು ಪ್ರಯತ್ನ ಮಾಡಿ ಈ ಉತ್ತಮ ಗುಣಗಳನ್ನು ತನ್ನಲ್ಲಿ ತಂದುಕೊಂಡಿದ್ದಾದರೆ ಅದೇ ಇದರ ನಿಜವಾದ ಪ್ರಯತ್ನದ ಫಲವಾಗಿದೆ. ಇದೇ ಅವನ ಖರೇ ಪ್ರಯತ್ನವಾಗಿರುವದು:**– ಇರಲಿ, ಇಲ್ಲಿಯವರೆಗೆ ಹೇಳಿದ ಈ ಉತ್ತಮ ಗುಣಗಳು, ಸದ್ವಿದ್ಯಾ ಲಕ್ಷಣಗಳಾಗಿರುವವು. ಇವುಗಳನ್ನು ಸ್ವಲ್ಪದರಲ್ಲಿ ವರ್ಣನೆ ಮಾಡಿದೆನು. (೩೦) ರೂಪ, ಲಾವಣ್ಯ, ಸುರೇಖ, ಸೌಂದರ್ಯ ಇವುಗಳನ್ನು ಅಭ್ಯಾಸಮಾಡಿ ಅಥವಾ ಪ್ರಯತ್ನಮಾಡಿ ನಮ್ಮಲ್ಲಿ ತಂದುಕೊಳ್ಳಲಿಕ್ಕೆ ಬರುವದಿಲ್ಲ. ಯಾಕೆಂದರೆ ಈ ಗುಣಸಹಜ ಅಥವಾ ಜನ್ಮತಃ ಬಂದವುಗಳಿರುವದರಿಂದ ಇವುಗಳ ಮೇಲೆ ಉಪಾಯ ನಡೆಯುವದಿಲ್ಲ. ಆದರೆ (ಜನ್ಮತಃ ಇಲ್ಲದ, ಆದರೆ ಅಭ್ಯಾಸ ಬಲದಿಂದ ಬರತಕ್ಕ) ಉತ್ತಮ ಗುಣಗಳನ್ನು ಅಭ್ಯಾಸ ಬಲದಿಂದ ಪ್ರಯತ್ನಿಸಿ ಸಾಧ್ಯ ಮಾಡಿಕೊಳ್ಳಲು ಬರುವದು. ಆದ್ದರಿಂದ ಯಾವುದಾದರೂ ಆಗಂತುಕ ಉತ್ತಮ ಗುಣಗಳನ್ನು ನಿಮ್ಮಲ್ಲಿ ಅಳವಡಿಸಿಕೊಳ್ಳುವ ಪ್ರಯತ್ನ ಮಾಡಬೇಕು. (ಈ ಓವಿಯನ್ನು ಮುಂದೆ ದಶಕ 14. ಸ. 6 ದಲ್ಲಿ ಮೊದಲಿಗೆ ಎತ್ತಿಕೊಂಡು ಇದರ ಬಗ್ಗೆ ವಿವರಣೆ ಮಾಡಿದ್ದಾರೆ. ಅಲ್ಲಿ ಅವಶ್ಯ ನೋಡಿ ತಿಳಿಯಿರಿ.) (೩೧) ಹೀಗಿರುವ ಈ ಉತ್ತಮ ಸದ್ವಿದ್ಯೆಯು ಸರ್ವರಲ್ಲಿ ಇರಬೇಕು. ವಿರಕ್ತ ಪುರುಷನು ಅವಶ್ಯವಾಗಿ ಈ ಸದ್ವಿದ್ಯೆಯನ್ನು ಅಭ್ಯಾಸಮಾಡಬೇಕು. (೩೨)

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಎರಡನೆಯ ದಶಕದಲ್ಲಿಯ
"ಸದ್ವಿದ್ಯಾ ನಿರೂಪಣ" ಎಂಬ ಹೆಸರಿನ ಎಂಟನೆಯ ಸಮಾಸವು ಮುಗಿದುದು.

## ಸಮಾಸ ನವವಾ : ವಿರಕ್ತ ಲಕ್ಷಣ

॥ಶ್ರೀರಾಮ॥ ಏಕಾ ವಿರಕ್ತಾಂಚೀ ಲಕ್ಷಣೇ । ವಿರಕ್ತೇ ಅಸಾವೇ ಕೋಣ್ಯಾಗುಣೇ ।
ಜೇಣೇ ಅಂಗೀ ಸಾಮರ್ಥ್ಯ ಬಾಣೇ । ಯೋಗಿಯಾಚೇ ॥೧॥
ಜೇಣೇ ಸದಕೀರ್ತಿ ವಾಢೇ । ಜೇಣೇ ಸಾರ್ಥಕತಾ ಘಡೇ ।
ಜೇಣೇ ಕರಿತಾ ಮಹಿಮಾ ಚಢೇ । ವಿರಕ್ತಾಸಿ ॥೨॥
ಜೇಣೇ ಪರಮಾರ್ಥ ಫಾವೇ । ಜೇಣೇ ಆನಂದ ಹೇಲಾವೇ ।
ಜೇಣೇ ವಿರಕ್ತಿ ದುಣಾವೇ । ವಿವೇಕೇ ಸಹಿತ ॥೩॥
ಜೇಣೇ ಸುಖ ಉಚಂಬಳೇ । ಜೇಣೇ ಸದ್ವಿದ್ಯಾವೋಳೇ।
ಜೇಣೇ ಭಾಗ್ಯಶ್ರೀ ಪ್ರಬಳೇ । ಮೋಕ್ಷೇ ಸಹಿತ ॥೪॥
ಮನೋರಥ ಪೂರ್ಣ ಹೋತೀ । ಸಕಳ ಕಾಮನಾ ಪುರತೀ ।
ಮುಖೀ ರಾಹೇ ಸರಸ್ವತೀ । ಮಧುರ ಬೋಲಾವಯಾ ॥೫॥
ಹೇ ಲಕ್ಷಣೇ ಶ್ರವಣ ಕೀಜೇ। ಆಣೀ ಸದೃಢ ಜೀವೀ ಧರಿಜೇ।
ತರೀ ಮಗ ವಿಖ್ಯಾತ ಹೋಈಜೇ । ಭೂಮಂಡಳೀ ॥೬॥

## ದಶಕ ೨. ಸಮಾಸ ೯. ವಿರಕ್ತ ಲಕ್ಷಣ (ನುಡಿ ೪೩)

ಮನಾಚೆ ಶ್ಲೋಕ ನಂಬರ 172 ರಲ್ಲಿಯ ಎರಡು ಸಾಲುಗಳು ಒಳ್ಳೇ ಉತ್ತಮ ವಾಗಿರುವವು. : : "ಸ್ಫುರೆ ! ವಿಷಯೀ ಕಲ್ಪನಾ ತೆ ಅವಿದ್ಯಾ : ಸ್ಫುರೆ ಬ್ರಹ್ಮರೇ ಜಾಣ ಮಾಯಾ ಸುವಿದ್ಯಾ" : : ಅವಿದ್ಯೆ ಮತ್ತು ವಿದ್ಯಾ ಎಂಬ ಎರಡು ಶಕ್ತಿ ಜಗದಲ್ಲಿ ಅನುಭವಕ್ಕೆ ಬರುವವು. "ನಾನು ದೇಹವೇ ಇರುವೆ" ಎಂಬ ಭಾವನೆ ನಿರ್ಮಾಣ ಮಾಡುವ ಅವಿದ್ಯೆಯು ನಮ್ಮನ್ನು ಈ ದೃಶ್ಯ, ಸ್ಥೂಲ ಇಂದ್ರಿಯ ಪ್ರಿಯ, ಹಾಗೂ ಅಶಾಶ್ವತವಾದ ವಿಶ್ವದ ವಿಸ್ತಾರ ಜಂಜಡದಲ್ಲಿ ತೊಡಗಿಸುವದು. "ನಾನು ಆತ್ಮವೇ ಇರುವೆ" ಎಂಬ ಭಾವನೆ ನಿರ್ಮಾಣ ಮಾಡುವ ವಿದ್ಯೆಯು ಅಥವಾ ಸದ್ವಿದ್ಯೆಯು ನಮ್ಮನ್ನು ಆ ಅದೃಶ್ಯ, ಸೂಕ್ಷ್ಮ, ಅತೀಂದ್ರಿಯಮತ್ತು ಶಾಶ್ವತ ಸಚ್ಚಿದಾನಂದದ ಸಾಕ್ಷಾತ್ಕಾರ ಮಾಡಿಸುವದು. ಅವಿದ್ಯೆಯೆಂದರೆ ಪ್ರಪಂಚವು. ವಿದ್ಯೆಯೆಂದರೆ ಪರಮಾರ್ಥವಾಗಿದೆ. ನಾನು "ದೇಹವೇ ಆಗಿರುವೆ" ಈ ಭಾವನೆಯ ಮೂಲಕ ನಮ್ಮ ಮನಸ್ಸು ಪ್ರಪಂಚದೊಳಗೆ ಅಂದರೆ ಯಾವತ್ತೂ ದೃಶ್ಯವಸ್ತುವಿನೊಳಗೆ ಮತ್ತು ಇದರ ಮುಖಾಂತರ ದೊರೆಯುವ ದೇಹಸುಖದಲ್ಲಿ ತೊಡಗುತ್ತದೆ. ಆದರೆ ಪರಮಾರ್ಥ ಸಾಧಿಸಿಕೊಳ್ಳುವ ದಿದ್ದರೆ, ಮನಸ್ಸು ಪ್ರಪಂಚ ಸುಖದಿಂದ ಹೊರಬರಬೇಕಾಗುವದು. ಇದು ಹೊರಬರಬೇಕಾದರೆ ದೃಶ್ಯ ವಸ್ತುವಿನ ಮೇಲಿರುವಪ್ರೇಮ ಕ್ಷೀಣವಾಗಬೇಕಾಗುತ್ತದೆ. ದೃಶ್ಯ ವಸ್ತುವಿನಪ್ರೇಮ ಕ್ಷೀಣವಾಗಲು ನಮ್ಮ ಪ್ರೇಮವನ್ನುಭಗವಂತನ ಕಡೆಗೆ ಹೊರಳಿಸಬೇಕಾಗುವದು. ಇಲ್ಲವೇ ದೃಶ್ಯ ವಸ್ತುವಿನ ಅಶಾಶ್ವತತನದ ಖಾತ್ರಿಯಾಗಬೇಕು. ಇದು ಮನಸ್ಸಿಗೆ ಪೂರ್ಣ ಮನದಟ್ಟಾಗಬೇಕು. ಭಗವಂತನ ಕಡೆಗೆ ಪ್ರೇಮ ಹೊರಳುವದು, ಇದು ಭಕ್ತಿಮಾರ್ಗವೆನಿಸುವದು. ಮತ್ತು ದೃಶ್ಯದ ಜೊಳ್ಳು ಸುಳ್ಳುತನದ ಖಾತ್ರಿಯಾಗುವದೇ ಜ್ಞಾನ ಮಾರ್ಗವೆನಿಸುವದು. ಈ ಎರಡೂ ಮಾರ್ಗ ಗಳಲ್ಲಿಯೂ ಮನಸ್ಸು ದೃಶ್ಯದ ಹಿಡಿತದೊಳಗಿಂದ ಹೊರಬೀಳುತ್ತದೆ. ಮನಸ್ಸಿನ ಈ ಅವಸ್ಥೆಗೆ ವೈರಾಗ್ಯವೆಂದು ಹೆಸರು. ವೈರಾಗ್ಯ ಸಂಪನ್ನರಾಗದ ಹೊರತು ಪರಮಾರ್ಥ ಸಾಧಿಸುವದಿಲ್ಲವೆಂಬ ನಿಶ್ಚಿತ ನಿಯಮವಿರುವುದು. ದೇಹ ಬುದ್ಧಿಯ ಮನುಷ್ಯರು ಮೊದಲಿಗೆ ನೀತಿವಂತರಾಗುವದು ಅವಶ್ಯವಿದೆ. ಯಾಕಂದರೆ, ಇದರಲ್ಲಿ ಇಂದ್ರಿಯಗಳಿಗೆ ಲಗಾಮು (ಹಿಡಿತ) ಹಾಕಿ ಜಗ್ಗಿ ಹಿಡಿಯುವ ರೂಢಿ ಆಗುತ್ತದೆ, ಅಂತೆಯೇ ಶ್ರೀ ಸಮರ್ಥರು ಮೊದಲಿಗೆ ಉತ್ತಮ ಲಕ್ಷಣಗಳೆನಿಸುವ ಸತ್ವ ಗುಣಗಳ ಲಕ್ಷಣಗಳನ್ನು ಹೇಳಿದರು. ಈ ಎಲ್ಲದರ ಪರ್ಯವಸಾನವು ವೈರಾಗ್ಯದ ಉದಯಕ್ಕಾಗಿ ಮಾತ್ರ ಆಗಬೇಕು. ಅಂದರೆ ಪರಮಾರ್ಥಕ್ಕೆ ಯೋಗ್ಯವು. ಅಂತೆಯೇ ಈ ವೈರಾಗ್ಯ ಸಂಪನ್ನ ಮನುಷ್ಯರ ಲಕ್ಷಣ ಗಳಾವವೆಂಬುದನ್ನು ಹೇಳುತ್ತಾರೆ.

### ಸಮಾಸ ೯. ವಿರಕ್ತ ಲಕ್ಷಣ. [ನುಡಿ ೪೩]

**ಮನುಷ್ಯನಲ್ಲಿ ವೈರಾಗ್ಯ ಪ್ರಾಪ್ತವಾಯಿತೆಂದರೆ ಅವನಿಗೆ ಯಾವ ಯಾವವು ಸಾಧಿಸುವವು ಇದರ ವರ್ಣನೆಯು :–** ಈಗ ವಿರಕ್ತನೆಂದರೆ, ವೈರಾಗ್ಯ ಸಂಪನ್ನ ಪುರುಷ. ಇಂಥ ಮನುಷ್ಯನ ಲಕ್ಷಣಗಳನ್ನು ಕೇಳಿರಿ. ವಿರಕ್ತನಲ್ಲಿ ಯಾವ ಗುಣಗಳಿರಬೇಕೆಂಬುದನ್ನು ಹೇಳುತ್ತೇನೆ. ಈ ಗುಣಗಳಿಂದ ಮನುಷ್ಯನು ಯೋಗಿಯ ಸಾಮರ್ಥ್ಯವನ್ನು ಹೊಂದುವನು. (೧) ವಿರಕ್ತ ಲಕ್ಷಣಗಳ ಅನುಸರಣೆಯಿಂದ ಸತ್‌ಕೀರ್ತಿ ಎಲ್ಲ ಕಡೆಗೂ ಚನ್ನಾಗಿ ಬೆಳೆಯುವದು, ಜನ್ಮದ ಸಾರ್ಥಕ್ಯವಾಗುವದು. ವಿರಕ್ತನ ಶ್ರೇಷ್ಠತೆ ಬೆಳೆಯುವದು. (೨) ಇದರಿಂದ ಪರಮಾರ್ಥ ದೊರಕುವದು. ಸ್ವಾನಂದವು ಉಕ್ಕೇರಿ, ಆದರಿಂದ ನಲಿಯುವನು, ಮತ್ತು ಆತ್ಮಾನಾತ್ಮ ವಿವೇಕಯುಕ್ತ ವೈರಾಗ್ಯವು ದ್ವಿಗುಣಿತ ತೇಜದಿಂದ ಬೆಳಗುವದು. (೩) ಇದರಿಂದ ಆತ್ಮ ಸುಖವು ತುಂಬಿ ಉಕ್ಕೇರಿ ಹರಿಯುವದು. ಸದ್ವಿದ್ಯೆಯು ವಶವಾಗುವದು. ಅಂದರೆ ಸ್ವರೂಪದ ಅನುಭವ ಪ್ರಾಪ್ತವಾಗುವದು. ಮತ್ತು ಮೋಕ್ಷದ ಸಂಗಡ ಎಲ್ಲ ಭಾಗ ಹಾಗೂ ಐಶ್ವರ್ಯಗಳು ಜೀವನದಲ್ಲಿ ಶೋಭಿಸುವವು ಬೆಳಗುವವು. (೪) ಈ ಗುಣಗಳಿಂದ ಮನದಲ್ಲಿಯ ಸರ್ವ ಅಪೇಕ್ಷೆಗಳು ಪೂರ್ಣವಾಗುವವು. ಎಲ್ಲ ಇಚ್ಛೆಗಳೂ ಈಡೇರುವವು. ಮತ್ತುಮಧುರ ಹಾಗೂಸ್ಪಷ್ಟ ಮಾತಿಗಾಗಿ ಸಾಕ್ಷಾತ್ ಸರಸ್ವತಿಯು ಮುಖದಲ್ಲಿ (ನಾಲಿಗೆಯ ಮೇಲೆ) ಬಂದು ವಾಸಿಸುವಳು (೫) ವಿರಕ್ತ ಲಕ್ಷಣಗಳನ್ನು ಕೇಳಿ. ಅವು ಗಳನ್ನು ಮನದಲ್ಲಿ [ಅಂತರಂಗದಲ್ಲಿ] ಸ್ಥಿರವಾಗಿ ಹಿಡಿಯಬೇಕು. ಅಂದರೆ ಮಾತ್ರ ಮನುಷ್ಯನು ಜಗತ್ತಿನಲ್ಲಿ ಪ್ರಖ್ಯಾತ ನಾಗುವನು (೬)

ವಿರಕ್ತೇ ವಿವೇಕೇ ಅಸಾವೇ । ವಿರಕ್ತೇ ಅಧ್ಯಾತ್ಮ ವಾಢವಾವೇ ।
ವಿರಕ್ತೇ ಧಾರಿಷ್ಟ ಧರಾವೇ । ದಮನ ವಿಷಈ ॥೭॥

ವಿರಕ್ತೇ ರಾಖಾವೇ ಸಾಧನ । ವಿರಕ್ತೇ ಲಾವಾವೇ ಭಜನ ।
ವಿರಕ್ತೇ ವಿಶೇಷ ಬ್ರಹ್ಮಜ್ಞಾನ । ಪ್ರಗಟವಾವೇ ॥೮॥

ವಿರಕ್ತೇ ಭಕ್ತೀ ವಾಢವಾವೀ । ವಿರಕ್ತೇ ಶಾಂತೀ ದಾಖವಾವೀ ।
ವಿರಕ್ತೇ ಯೆತ್ನೇ ಕರಾವೀ । ವಿರಕ್ತೀ ಆಪುಲೀ ॥೯॥

ವಿರಕ್ತೇ ಸದಕ್ರಿಯಾ ಪ್ರತಿಷ್ಠಾವೀ । ವಿರಕ್ತೇ ನಿವೃತ್ತೀ ವಿಸ್ತಾರಾವೀ।
ವಿರಕ್ತೇ ನೈರಾಶತಾ ಧರಾವೀ । ಸದೃಢ ಜಿವೇಸೀ ॥೧೦॥

ವಿರಕ್ತೇ ಧರ್ಮಸ್ಥಾಪನಾ ಕರಾವೀ । ವಿರಕ್ತೇ ನೀತಿ ಅವಲಂಬಾವೀ ।
ವಿರಕ್ತೇ ಕ್ಷಮಾ ಸಾಂಭಾಳಾವೀ । ಅತ್ಯಾದರೇಸೀ ॥೧೧॥

ವಿರಕ್ತೇ ಪರಮಾರ್ಥ ಉಜಳಾವಾ । ವಿರಕ್ತೇ ವಿಚಾರ ಶೋಧಾವಾ ।
ವಿರಕ್ತೇ ಸನ್ನಿಧ ಠೇವಾವಾ । ಸನ್ಮಾರ್ಗ ಸತ್ವಗುಣ ॥೧೨॥

ವಿರಕ್ತೇ ಭಾವಿಕೇ ಸಾಂಭಾಳಾವೀ । ವಿರಕ್ತೇ ಪ್ರೇಮಳ ನಿವವಾವೀ ।
ವಿರಕ್ತೇ ಸಾಬಡೀ ನುಪೇಕ್ಷಾವೀ । ಶರಣಾಗತೇ ॥೧೩॥

ವಿರಕ್ತೇ ಅಸಾವೇ ಪರಮ ದಕ್ಷ । ವಿರಕ್ತೇ ಅಸಾವೇ ಅಂತರಸಾಕ್ಷ ।
ವಿರಕ್ತೇ ಘೋಢಾವಾ ಕೈಪಕ್ಷ । ಪರಮಾರ್ಥಾಚಾ ॥೧೪॥

ವಿರಕ್ತೇ ಅಭ್ಯಾಸ ಕರಾವಾ । ವಿರಕ್ತೇ ಸಾಕ್ಷೇಪ ಧರಾವಾ ।
ವಿರಕ್ತೇ ವಗತೃತ್ವೇ ಉಭಾರಾವಾ । ಮೋಡಲಾ ಪರಮಾರ್ಥ ॥೧೫॥

ವಿರಕ್ತೇ ವಿಮಳಜ್ಞಾನ ಬೋಲಾವೇ । ವಿರಕ್ತೇ ವೈರಾಗ್ಯ ಸ್ತವೀತ ಜಾವೇ ।
ವಿರಕ್ತೇ ನಿಶ್ಚಯಾಚೇ ಕರಾವೇ । ಸಮಾಧಾನ ॥೧೬॥

ಪರ್ವೇ ಕರಾವೀ ಅಚಾಟೇ । ಚಾಲವಾವೀ ಭಕ್ತಾಂಚೀ ಥಾಟೇ ।
ನಾನಾ ವೈಭವೇ ಕಚಾಟೇ । ಉಪಾಸನಾ ಮಾರ್ಗ ॥೧೭॥

ಹರಿಕೀರ್ತನೇ ಕರಾವೀ । ನಿರೂಪಣೇ ಮಾಜವಾವೀ ।
ಭಕ್ತಿಮಾರ್ಗೇ ಲಾಜವಾವೀ । ನಿಂದಕ ದುರ್ಜನೇ ॥೧೮॥

ಶ್ರೀ ಸಮರ್ಥರು ಹೇಳುವಂಥ ವಿರಕ್ತನು ಸ್ವತಃ ಶ್ರೇಷ್ಠ ಬ್ರಹ್ಮಜ್ಞಾನಿ, ಅತ್ಯಂತ ನಿಷ್ಕಾಮ, ವಿಲಕ್ಷಣ, ಶಾಂತ ಹಾಗೂ ಚತುರನಾದ, ಲೋಕ ಸಂಗ್ರಹ ಕರ್ತಾ ಅಂದರೆ ಬಹು ಜನಪ್ರಿಯ ಪುರುಷನಾಗಿರುವನು. ಅತೀ ಧೈರ್ಯದಿಂದ ತನ್ನ ಮುಖಂಡತ್ವ ಕಾಯ್ದುಕೊಳ್ಳುವನು. ಜನರಿಗೆ ಅಧ್ಯಾತ್ಮ ಬೋಧನೆಯನ್ನು ಕಲಿಸುವನು. ಹಾಗೂ ಜನರ ಅಂತರ್ಯಾಮಿಯಲ್ಲಿ ನಿಜ ವಿವೇಕ ನಿರ್ಮಾಣಮಾಡುವನು. ಸಮಾಜದಲ್ಲಿಯ ಉಚ್ಚ, ನೀಚ, ಉತ್ತಮ, ಹೀನ ವಗೈರೆ ಸರ್ವತರದ ಜನರನ್ನು ಒತ್ತಟ್ಟಿಗೆ ಕೂಡ್ರಿಸಿ ಅವರನ್ನು ಸನ್ಮಾರ್ಗದಿಂದ ದಾರಿಗೆ ಹಚ್ಚುವನು. ಸರ್ವರ ಸಮಾಧಾನವನ್ನೂ ಸಹ ಈ ವಿರಕ್ತ ಪುರುಷನು ಮಾಡುವನು :– ವಿರಕ್ತನು ಸದಾ ವಿವೇಕವನ್ನು ಜಾಗ್ರತ ಇಡಬೇಕು. ಜನರಲ್ಲಿ ಅಧ್ಯಾತ್ಮ ಬೆಳೆಸಬೇಕು. ಮತ್ತು ಇಂದ್ರಿಯಗಳನ್ನು ದಮನಗೊಳಿಸುವಲ್ಲಿ ಹೆಚ್ಚಿನ ಧೈರ್ಯ ತಳೆಯಬೇಕು.(೭)ವಿರಕ್ತನು ತನ್ನ ಸಾಧನವನ್ನುಚನ್ನಾಗಿರಕ್ಷಿಸಬೇಕು.ಜನರನ್ನುಭಜನೆಯ ಮಾರ್ಗಕ್ಕೆಹಚ್ಚಬೇಕು.ಅಂದರೆ ಭಗವಂತನ ಪ್ರಾಪ್ತಿಯ ಮಾರ್ಗಕ್ಕೆ ಹಚ್ಚಬೇಕು. ಅದರಲ್ಲೂ ವಿಶೇಷವಾಗಿ ಬ್ರಹ್ಮಜ್ಞಾನವನ್ನು ಪ್ರಚುರಗೊಳಿಸಬೇಕು. ಅಂದರೆ ಬ್ರಹ್ಮಜ್ಞಾನ ಹೇಗಿರುತ್ತದೆಯೆಂಬುದನ್ನು ತನ್ನ ಸ್ವಾನುಭವದಿಂದ ಮತ್ತು ಶಬ್ದಗಳಿಂದ ಜನರಿಗೆ ಪ್ರತ್ಯಕ್ಷ ತೋರಿಸಬೇಕು. (೮) ಜನರಲ್ಲಿ ಭಕ್ತಿಮಾರ್ಗವನ್ನು ವಿವರಿಸಿ ಹೇಳಬೇಕು. ಶಾಂತಿಯು ಹೇಗಿರುವದು ಎಂಬುದನ್ನು ವಿರಕ್ತನು ಶಾಂತಿಯನ್ನು ತಾನು ತಳೆದು ತೋರಿಸಬೇಕು. ಮತ್ತುತನ್ನ ವಿರಕ್ತಿಯನ್ನು ಇವನು ಬಹು ಪ್ರಯತ್ನದಿಂದ ಕಾಯ್ದುಕೊಳ್ಳಬೇಕು. (೯) ಸತ್ಕರ್ಮಗಳಿಗೆ ಮಹತ್ವ ಕೊಟ್ಟು ಅವುಗಳು ಸರಿಯಾಗಿ ನಡೆಯುವಂತೆ ಕ್ರಮ ಕೈಕೊಳ್ಳಬೇಕು. ವಿರಕ್ತ, ವೈರಾಗ್ಯ, ಅನಾಸಕ್ತಿಯ ಬಗ್ಗೆ ಪ್ರಸಾರ ಮಾಡಬೇಕು. ಮತ್ತು ಸ್ವತಃ ನಿರ್ವಾಸನೆ, ನಿಷ್ಕಾಮತೆಗಳನ್ನು ತನ್ನ ಜೀವನದಲ್ಲಿ ಗಟ್ಟಿಯಾಗಿ ದೃಢಪಡಿಸಬೇಕು. ವಿರಕ್ತನು ತನ್ನ ಅಂತಃಕರಣದಲ್ಲಿಯ ನಿವೃತ್ತಿರೂಪ ವೃತ್ತಿ ಸಂಧಿಕಾಲವನ್ನು ಅಭ್ಯಾಸದಿಂದ ಬೆಳಿಸಬೇಕು. (೧೦) ಧರ್ಮದ ಮಹತ್ವ ಹೆಚ್ಚಾಗುವಂತೆ ಮಾಡಬೇಕು, ಅದರ ಪುನರುಜ್ಜೀವನ ಮಾಡಬೇಕು, ಅತ್ಯಂತ ನೀತಿವಂತನಾಗಿರಬೇಕು. ಮತ್ತು ಮನಸಾ ತನ್ನ ಕ್ಷಮಾಶೀಲ ವೃತ್ತಿಯನ್ನು ಕಾಯ್ದುಕೊಳ್ಳಬೇಕು. (೧೧) ಪರಮಾರ್ಥದ ಬೆಳವಣಿಗೆ ನಿಧಾನವಾಗಿದ್ದರೆ ಅದನ್ನು ಉಜ್ವಲಗೊಳಿಸಬೇಕು. ಯಾವಾಗಲೂ ಚಿಂತನಶೀಲನಾಗಿ ಸರಿಯಾದ ವಿಚಾರದ ವ್ಯಾಪ್ತಿಯನ್ನು ಬೆಳೆಸಬೇಕು. ಹಾಗೂ ಅದನ್ನು ಶೋಧಿಸಬೇಕು. ಹೆಚ್ಚು ವಿಚಾರ ಮಾಡುವ ಪರಿಪಾಠವಿರಬೇಕು. ಮತ್ತು ಸತ್ವಗುಣದಿಂದ ಇದ್ದು ಸನ್ಮಾರ್ಗದಲ್ಲಿ ಹೋಗಬೇಕು. (೧೨) ಭಾವಿಕರನ್ನು ಸಂಭಾಳಿಸಬೇಕು. ಭಗವಂತನ ಮೇಲೆ ಪ್ರೇಮ ಮಾಡುವವರ ಮನಸ್ತಾಪವನ್ನು ಶಾಂತಗೊಳಿಸಬೇಕು. ಹಾಗೂ ಶರಣುಬಂದ ಭೋಳೆ (ಸಾತ್ವಿಕ) ಸ್ವಭಾವದ ಜನರನ್ನು ದುರ್ಲಕ್ಷ್ಯಮಾಡಿದೂರವಿರಿಸಬಾರದು. (೧೩) ವಿರಕ್ತನು ಅತಿ ಎಚ್ಚರದಿಂದ ನಡೆಯಬೇಕು. ಎರಡನೆಯವರ ಅಂತರಂಗದಲ್ಲಿಯದನ್ನು ತಿಳಿದುಕೊಳ್ಳುವವನಿರಬೇಕು. ಮತ್ತು ಯಾವಾಗಲೂ ಪರಮಾರ್ಥದ ಪಕ್ಷ ವಹಿಸಬೇಕು. ಹಾಗೂ ಪರಮಾರ್ಥದ ಬಾಜೂ ಎತ್ತಿಹಿಡಿಯಬೇಕು. (೧೪) ಇವನು ಯಾವಾಗಲೂ ಅಭ್ಯಾಸ ಮಾಡಬೇಕು. ವಿರಕ್ತನು ಬಹುಶ್ರುತನಿರಬೇಕು. ವಿರಕ್ತನು ಉದ್ಯೋಗಿ ಮತ್ತು ಪ್ರಯತ್ನವಾದಿಯಾಗಿರಬೇಕು. ಮತ್ತು ಭಾಷಣ, ಉಪನ್ಯಾಸ, ಪ್ರವಚನಾದಿಗಳನ್ನು ಮಾಡುವಂಥ ಬಹುಶ್ರುತ ಹಾಗೂ ಪ್ರೇಮಳ ವಕ್ತಾ ಇರಬೇಕು. ತನ್ನ ವಕ್ತೃತ್ವ ಬಲದಿಂದ ಜೀರ್ಣ, ಜರ್ಜರವಾದ ಪರಮಾರ್ಥವನ್ನು ಜನರಲ್ಲಿ ಪುನಃ ಉರ್ಜೀತ ಮಾಡಬೇಕು. (೧೫) ಇವನು ಶುದ್ಧ ಆತ್ಮಜ್ಞಾನ ಹೇಳುತ್ತಿರಬೇಕು. ವೈರಾಗ್ಯದ ಸ್ತುತಿ ಮಾಡಬೇಕು. ಮತ್ತು ಜನರ ಶಂಕಾ ಕುಶಂಕಾಗಳ ನಿವಾರಣೆ ಮಾಡಿ ಜನರಿಗೆ ಖಾತ್ರಿಯಿಂದ ಕೂಡಿದ ಸಮಾಧಾನ ಮಾಡಬೇಕು. (೧೬) ವಿರಕ್ತನು ಅಧ್ಯಾತ್ಮ ಬೆಳೆಸಬೇಕು. ಮತ್ತು ಪರಮಾರ್ಥದ ಪ್ರಕಾಶವನ್ನು ಉಜ್ವಲಗೊಳಿಸಬೇಕೆಂದು ಹೇಳಿರುವರು. ಭಕ್ತಿಮಾರ್ಗದ ಪ್ರಸಾರವಾಗಬೇಕಾದರೆ ವಿರಕ್ತನು"ಯಾವ ಉಪಾಯ ಮಾಡಬಹುದಾಗಿದೆ" ಎಂಬ ವರ್ಣನೆಯನ್ನು ಈಗ ಹೇಳುವರು. ದೊಡ್ಡ ಪ್ರಮಾಣದಿಂದ ಪರ್ವಕಾಲದ, ಪುಣ್ಯಕಾಲದ ಮಹೋತ್ಸವಾದಿಗಳನ್ನು ವಿರಕ್ತನು ಮಾಡಬೇಕು. ಇವಕ್ಕೆ ಭಕ್ತರ ದೊಡ್ಡ ಸಮುದಾಯವನ್ನು ಒಂದೆಡೆಗೆ ಕೂಡಿಸಿ ಭಜನ, ಪೂಜನ, ಜಪ, ಕೀರ್ತನ ವಗೈರೆ ಉಪಾಸನಾ ಮಾಡುವಂಥವುಗಳನ್ನು ಅನೇಕ ಸಾಹಿತ್ಯ ಸಾಮುಗ್ರಿಗಳನ್ನು ಒಡಗೂಡಿ ವೈಭವದಿಂದ ಆಚರಿಸಬೇಕು(೧೭) ಹೆಚ್ಚೆಚ್ಚು ದೇವರ ಹರಿಕೀರ್ತನ ಮಾಡಬೇಕು, ಪ್ರವಚನ ಮತ್ತು ನಿರೂಪಣ,ಉಪನ್ಯಾಸಗಳನ್ನು ಸಾಕಷ್ಟು ಮಾಡಬೇಕು.ಮತ್ತು ಭಕ್ತಿಮಾರ್ಗದ ಐಶ್ವರ್ಯ ನೋಡಿ, ನಿಂದಕರು-ದುರ್ಜನರು ನಾಚಿಕೊಳ್ಳುವಂತೆ ಮಾಡಬೇಕು. (೧೮)

ಬಹುತಾಸ ಕರಾವೆ ಪರೋಪಕಾರ । ಭಲೇಪಣಾಚಾ ಜೀರ್ಣೋದ್ಧಾರ ।
ಪುಣ್ಯಮಾರ್ಗಾಚಾ ವಿಸ್ತಾರ । ಬಳೇಂಚಿ ಕರಾವಾ ॥೧೯॥
ಸ್ನಾನ ಸಂಧ್ಯಾಜಪ ಧ್ಯಾನ । ತೀರ್ಥಯಾತ್ರಾ ಭಗವದ್ಭಜನ ।
ನಿತ್ಯನೇಮ ಪವಿತ್ರ ಪಣ । ಅಂತರಶುದ್ಧ ಅಸಾವೇ ॥೨೦॥
ದೃಢ ನಿಶ್ಚಯೋ ಧರಾವಾ । ಸಂಸಾರ ಸುಖಾಚಾ ಕರಾವಾ ।
ವಿಶ್ವಜನ ಉದ್ಧರಾವಾ । ಸಂಸರ್ಗಮಾತ್ರೇ ॥೨೧॥
ವಿರಕ್ತೇ ಅಸಾವೇ ಧೀರ । ವಿರಕ್ತೇ ಅಸಾವೇ ಉದಾರ ।
ವಿರಕ್ತೇ ಅಸಾವೇ ತತ್ಪರ । ನಿರೂಪಣ ವಿಷಈ ॥೨೨॥
ವಿರಕ್ತೇ ಸಾವಧ ಅಸಾವೇ । ವಿರಕ್ತೇ ಶುದ್ಧಮಾರ್ಗೇ ಜಾವೇ ।
ವಿರಕ್ತೇ ಝಿಜೋನ ಉರವಾವೇ । ಸದಕೀರ್ತಿಸೀ ॥೨೩॥
ವಿರಕ್ತೇ ವಿರಕ್ತ ಧುಂಡಾವೇ । ವಿರಕ್ತೇ ಸಾಧು ವೋಳಖಾವೇ ।
ವಿರಕ್ತೇ ಮಿತ್ರ ಕರಾವೇ । ಸಂತಯೋಗೀ ಸಜ್ಜನ ॥೨೪॥
ವಿರಕ್ತೇ ಕರಾವೀ ಪುರಶ್ಚರಣೇ । ವಿರಕ್ತೇ ಫಿರಾವೀ ತೀರ್ಥಾಟಣೇ ।
ವಿರಕ್ತೇ ಕರಾವೀ ನಾನಾ ಸ್ಥಾನೇ । ಪರಮ ರಮಣೀಯ ॥೨೫॥
ವಿರಕ್ತೇ ಉಪಾಧೀ ಕರಾವೀ । ಆಣೀ ಉದಾಸ ವೃತ್ತಿನ ಸಂಡಾವೀ ।
ದುರಾಶಾ ಜಡೋ ನೇದಾವೀ । ಕೋಣಯೇಕ ವಿಷಈ ॥೨೬॥
ವಿರಕ್ತೇ ಅಸಾವೇ ಅಂತರನಿಷ್ಠ । ವಿರಕ್ತೇ ನಸಾವೇ ಕ್ರಿಯಾಭ್ರಷ್ಟ ।
ವಿರಕ್ತೇ ನ ವ್ಹಾವೇ ಕನಿಷ್ಠ । ಪರಾಧೇನ ಪಣೇ ॥೨೭॥
ವಿರಕ್ತೇ ಸಮಯ ಜಾಣಾವಾ । ವಿರಕ್ತೇ ಪ್ರಸಂಗ ವೋಳಖಾವಾ ।
ವಿರಕ್ತ ಚತುರ ಅಸಾವಾ । ಸರ್ವಪ್ರಕಾರೇ ॥೨೮॥
ವಿರಕ್ತೇ ಯೇಕ ದೇಸೀ ನಸಾವೇ । ವಿರಕ್ತೇ ಸರ್ವ ಅಭ್ಯಾಸಾವೇ ।
ವಿರಕ್ತೇ ಅವಘೇ ಜಾಣಾವೇ । ಜ್ಯಾಚೇ ತ್ಯಾಪರೀ ॥೨೯॥
ಹರಿಕಥಾ ನಿರೂಪಣ । ಸಗುಣಭಜನ ಬ್ರಹ್ಮಜ್ಞಾನ ।
ಪಿಂಡಜ್ಞಾನ ತತ್ವಜ್ಞಾನ । ಸರ್ವಜಾಣಾವೇ ॥೩೦॥
ಕರ್ಮಮಾರ್ಗ ಉಪಾಸನಾಮಾರ್ಗ । ಜ್ಞಾನಮಾರ್ಗ ಸಿದ್ಧಾಂತಮಾರ್ಗ ।
ಪ್ರವೃತ್ತಿಮಾರ್ಗ ನಿವೃತ್ತಿಮಾರ್ಗ । ಸಕಳ ಜಾಣಾವೇ ॥೩೧॥

ವಿರಕ್ತನು ಬಹಳ ಜನರಿಗೆ ಹೆಚ್ಚಾಗಿ ಉಪಕಾರ ಮಾಡಬೇಕು. ಸಜ್ಜನತನದಿಂದ ಆಗುವ ಲಾಭಗಳು ಜನರಿಗೆ ಮನವರಿಕೆಯಾಗುವಂತೆ ಮಾಡಬೇಕು. ಸಜ್ಜನತನದ ಜೀರ್ಣೋದ್ಧಾರ ಮಾಡಬೇಕು. ಸತ್ಕರ್ಮಗಳ ಕಡೆಗೆ ಜನರ ಮನಸ್ಸನ್ನು ಎಳೆಯಬೇಕು. ಮತ್ತು ಆಗ್ರಹ ಹಾಗೂ ಬಲವಂತದಿಂದ ಪುಣ್ಯಮಾರ್ಗದ ಪ್ರಸಾರ ಮಾಡಬೇಕು. (೧೯) ಅಧ್ಯಾತ್ಮದ ವಿಸ್ತಾರ,ಪ್ರಸಾರ, ಮಾಡುವಾಗ ವಿರಕ್ತನು ಅದರಲ್ಲಿ ಸ್ನಾನ,ಸಂಧ್ಯೆ,ಜಪ,ಧ್ಯಾನ, ತೀರ್ಥಯಾತ್ರಾ, ಭಗವಂತನ ಭಜನೆ, ನಿತ್ಯ ನೇಮ ಹಾಗೂ ಪವಿತ್ರತನ, ಈ ಎಲ್ಲವೂ ಸಮಾವೇಶಗೊಂಡಿರಬೇಕು. ಮತ್ತು ಇದರ ಜೊತೆಗೆ ಅಂತಃಕರಣ ಶುದ್ಧವಿರುವಂತೆ ನೋಡಿಕೊಳ್ಳಬೇಕು(೨೦)ವಿರಕ್ತನು ದೃಢ ನಿಶ್ಚಯದಿಂದ ನಡೆಯಬೇಕು. ಮತ್ತು ಎಲ್ಲರಿಗೂ ಸುಖ ದೊರೆಯುವಂತೆ ಪ್ರಪಂಚ ಮಾಡಬೇಕು. ಮತ್ತುತಮ್ಮ ಸಹವಾಸದಿಂದಎಲ್ಲರ ಕಲ್ಯಾಣ ಮಾಡಬೇಕು. ಅವರ ಉದ್ಧಾರವಾಗುವಂತೆ ಮಾಡಬೇಕು(೨೧) **ಶ್ರೀ ಸಮರ್ಥರ ವಿರಕ್ತ ಪುರುಷನು ಏಕಾಂತಪ್ರಿಯನಿದ್ದು, ಅತಿ ಹೆಚ್ಚು ಲೋಕ ಸಂಗ್ರಹಿ ಇರುವನು. ಈ ವಿರಕ್ತನ ಲೋಕ ಸಂಗ್ರಹ ಮಾಡುವ ತಂತ್ರ ಅಂದರೆ ಉಪಾಯ, ರೀತಿ ಯಾವ ಪ್ರಕಾರದ್ದು ಮತ್ತು ಹೇಗೆ ಇರುವದೆಂಬುದನ್ನು ವರ್ಣಿಸುತ್ತಾರೆ :—** ವಿರಕ್ತನು ನಿರ್ಭಯ ಮತ್ತು ಗಂಭೀರನಿರಬೇಕು, ಉದಾರನಿರಬೇಕು. ಪ್ರವಚನ ಸತ್ಕಥಾಲಾಪಾದಿಗಳ ಬಗ್ಗೆ ಆಸ್ಥೆಯಿಂದ ಮತ್ತು ಪ್ರಾಮಾಣಿಕ ಹಾಗೂ ಶ್ರದ್ಧೆಯಿಂದ ಕೆಲಸ ಮಾಡಬೇಕು. ಹಾಗೂ ಹೇಳಬೇಕು ಮತ್ತು ಕೇಳಬೇಕು. (೨೨) ಯಾವಾಗಲೂ ಜಾಗೃತನಿರಬೇಕು. ಶುದ್ಧ ಮಾರ್ಗದಿಂದಲೇ ಹೋಗಬೇಕು. ಹಾಗೂ ಒಳ್ಳೆಯ ರೀತಿಯಿಂದ,ಆದರ್ಶರೀತಿಯಿಂದಜನತೆಗಾಗಿ ದೇಹ ಸವಿಸಿ,ದುಡಿಸಿ, ತಮ್ಮಹೆಸರನ್ನು ಮರೆಸಿಕೊಳ್ಳದೇ ಕೀರ್ತಿ ಉಳಿಸಿಕೊಳ್ಳಬೇಕು(೨೩) ವಿರಕ್ತನು ತನ್ನಂತಹ ಬೇರೆ ವಿರಕ್ತ ಪುರುಷರನ್ನು ಹುಡುಕಬೇಕು. ಸಾಧು ಸತ್ಪುರುಷರನ್ನು ಗುರುತಿಸಬೇಕು. ಹಾಗೂ ಸಂತ,ಶರಣ, ಯೋಗಿ ಮತ್ತು ಸಜ್ಜನ ಇವರ ಸಂಗಡ ಮಿತ್ರತ್ವದಿಂದ ಸಂಬಂಧ ಬೆಳೆಸಬೇಕು. (೨೪) ವಿರಕ್ತನು ಸ್ವತಃ ಪುರಶ್ಚರಣ ಮಾಡಬೇಕು. ತೀರ್ಥಕ್ಷೇತ್ರಗಳ ಪರ್ಯಟನ ಮಾಡಬೇಕು. ಹಾಗೂ ನೋಡಬೇಕು. ಮತ್ತು ಉಪಾಸನೆಗೆ ಯೋಗ್ಯವಾದಂಥ ಕೆಲವು ಸ್ಥಳಗಳನ್ನು ರಮಣೀಯವಾಗಿ ಕಾಣುವಂತೆ ಮಾಡಬೇಕು. (೨೫) ವಿರಕ್ತನು ಜನತೆಯ ಪರೋಪಕಾರದ ಕೆಲಸಗಳನ್ನು ತಾನು ಮುಂದಾಗಿ ವಹಿಸಿ ಮಾಡಿಕೊಡಬೇಕು. ಆದರೆ, ವಿರಕ್ತನು ತನ್ನ ಅಲಿಪ್ತತನದ ಅಂತರಸ್ಥಿತಿಯನ್ನು ಮಾತ್ರ ಬಿಟ್ಟು ಕೊಡಬಾರದು. ಅರ್ಥಾತ್ ತಾನು ಮಾಡಿಕೊಡುವೆನೆಂದು ಹೇಳಿದ ಕೆಲಸದಲ್ಲಿಯೇ ಕಾಯಂ ಆಸಕ್ತನಾಗಿ ಅದರಲ್ಲಿ ಮಗ್ನನಾಗಬಾರದು. ಅದೇ ಪ್ರಕಾರ ಯಾವುದಕ್ಕೂ ಆಶಾ ಅಪೇಕ್ಷೆಯನ್ನು ಎಷ್ಟೂ ಮಾಡಬಾರದು. (೨೬) ವಿರಕ್ತನು, ಯಾವಾಗಲೂ ಅಂತರಮುಖ (ಬ್ರಹ್ಮನಿಷ್ಠ) ವೃತ್ತಿಯವನಿರಬೇಕು. ಕ್ರಿಯಾಭ್ರಷ್ಟ ಅಂದರೆ ಆಚರಣೆಯಿಂದ ಅಪವಿತ್ರನಾಗಬಾರದು. ಒಬ್ಬರ ಆಧೀನನಾಗಿ ಪರತಂತ್ರದಿಂದ ಕೀಳನಾಗಬಾರದು. ಆಚರಣೆಯಿಂದ ಪವಿತ್ರನಾಗಿರಬೇಕು. (೨೭)ಕಾಲನ ಅಥವಾ ಪ್ರಸಂಗದಹೆಜ್ಜೆಗಳನ್ನುಗುರುತಿಸಬೇಕು. ಪ್ರಸಂಗ ಹೇಗಿರುವದೆಂಬುದನ್ನು ತಿಳಿಯಬೇಕು. ಒಟ್ಟಿನಲ್ಲಿ ವಿರಕ್ತನು, ಸರ್ವರೀತಿಯಿಂದ ಜಾಗರೂಕನಾಗಿರಬೇಕು. (೨೮) ವಿರಕ್ತನು ಏಕಾಂಗಿ ಅಂದರೆ ಅಲ್ಪಜ್ಞ ಅಥವಾ ಒಂದೇ ವಿಷಯದ ಬಗ್ಗೆ ವಿಚಾರ ಮಾಡಿದವನಿರಬಾರದು. ಎಲ್ಲ ಪ್ರಕಾರದ ವಿಷಯಗಳ ಅಭ್ಯಾಸ ಮಾಡಬೇಕು. ಯಾವುದು ಹೇಗೆ ಇರುವದೋ ಅದರಂತೆ ಅದನ್ನು ಸರಿಯಾಗಿ ವಿಚಾರಿಸಿ ವಿರಕ್ತನು ತಿಳಿದುಕೊಳ್ಳಬೇಕು. (೨೯) **ವಿರಕ್ತನು ನಿಜವಾಗಿಯೂ ಬಹುಶ್ರುತನಾದ ಪಂಡಿತನಿರಬೇಕು. ಅವನ ಜ್ಞಾನವೂ ಆಳವಾದದ್ದಿರಬೇಕೆಂಬುದು ನಿಜವೇ ಆಗಿದೆ. ಆದರೆ ಇದರ ಜೊತೆಗೆ ಜ್ಞಾನದ ಆಳವಾದ ವಿಸ್ತಾರ ಸಹ ಇರಬೇಕು. ಹೀಗೆ ಶ್ರೀ ಸಮರ್ಥರ ದೃಷ್ಟಿಕೋನವಿರುವದು:–** ಹರಿಕಥಾ ಅಂದರೆ ಭಗವಂತನ ಸಗುಣ ಚರಿತ್ರೆಯ ವರ್ಣನೆ, ವೇದಾಂತ ಸಿದ್ಧಾಂತದ ವಿವೇಚನ, ಸಗುಣರೂಪದ ಭಜನೆ,ಪೂಜೆ, ಬ್ರಹ್ಮಜ್ಞಾನವೆಂದರೆ ಪರಮಾತ್ಮ ಸ್ವರೂಪದ ಜ್ಞಾನ, ಶರೀರ ರಚನೆಯ ಜ್ಞಾನ, ಹಾಗೂ ತತ್ವಜ್ಞಾನ, ನಿರೂಪಣ ಅಂದರೆ ಸರ್ವ ಅಧ್ಯಾತ್ಮ ವಿಷಯದ ಜ್ಞಾನವು ವಿರಕ್ತನಿಗೆ ಇರಬೇಕು. (೩೦) ಕರ್ಮ ಮಾರ್ಗವೆಂದರೇನು? ಉಪಾಸನಾ ಮಾರ್ಗ ಯಾವುದು? ಜ್ಞಾನಮಾರ್ಗ ಹೇಗೆ ಇರುವುದು? ಸಿದ್ಧಾಂತ ಮಾರ್ಗ (ಗುರುಭಕ್ತಿ ಮಾರ್ಗ) ವೆಂದು ಯಾವುದಕ್ಕೆ ಅನ್ನುವರು? ಪ್ರವೃತ್ತಿ ಮಾರ್ಗ, ನಿವೃತ್ತಿ ಮಾರ್ಗ ಇವುಗಳ ಲಕ್ಷಣಗಳೇನು? ಈ ಎಲ್ಲ ಪರಮಾರ್ಥ ಸಾಧನದ ಜ್ಞಾನವು ವಿರಕ್ತನಿಗಿರಬೇಕು. (೩೧)

ಪ್ರೇಮಳ ಸ್ಥಿತೀ ಉದಾಸ ಸ್ಥಿತೀ । ಯೋಗಸ್ಥಿತೀ ಧ್ಯಾನಸ್ಥಿತೀ ।
ವಿದೇಹ ಸ್ಥಿತೀ ಸಹಜ ಸ್ಥಿತೀ । ಸಕಳ ಜಾಣಾವೇ ॥೩೨॥
ಧ್ವನೀ ಲಕ್ಷ ಮುದ್ರಾ ಆಸನೇ । ಮಂತ್ರ ಯಂತ್ರ ವಿಧೀ ವಿಧಾನೇ ।
ನಾನಾ ಮತಾಂಚೇ ದೇಖಣೇ । ಪಾಹೋನ ಸಾಂಡಾವೇ ॥೩೩॥
ವಿರಕ್ತೇ ಅಸಾವೇ ಜಗಮಿತ್ರ । ವಿರಕ್ತೇ ಅಸಾವೇ ಸ್ವತಂತ್ರ ।
ವಿರಕ್ತೇ ಅಸಾವೇ ವಿಚಿತ್ರ । ಬಹುಗುಣೀ ॥೩೪॥
ವಿರಕ್ತೇ ಅಸಾವೇ ವಿರಕ್ತ । ವಿರಕ್ತೇ ಅಸಾವೇ ಹರಿಭಕ್ತ ।
ವಿರಕ್ತೇ ಅಸಾವೇ ನಿತ್ಯ ಮುಕ್ತ । ಅಲಿಪ್ತಪಣೇ ॥೩೫॥
ವಿರಕ್ತೇ ಶಾಸ್ತ್ರೇ ಧಾಂಡೋಳಾವೀ । ವಿರಕ್ತೇ ಮತೇ ವಿಭಾಂಡಾವೀ ।
ವಿರಕ್ತೇ ಮುಮುಕ್ಷೇ ಲಾವಾವೀ । ಶುದ್ಧಮಾರ್ಗೇ ॥೩೬॥
ವಿರಕ್ತೇ ಶುದ್ಧಮಾರ್ಗ ಸಾಂಗಾವಾ । ವಿರಕ್ತೇ ಸಂಶಯು ಛೇದಾವಾ ।
ವಿರಕ್ತೇ ಆಪಲಾ ಮ್ಹಣಾವಾ । ವಿಶ್ವಜನ ॥೩೭॥
ವಿರಕ್ತೇ ನಿಂದಕ ವಂದಾವೇ । ವಿರಕ್ತೇ ಸಾಧಕ ಬೋಧಾವೇ ।
ವಿರಕ್ತೇ ಬದ್ಧ ಚೇತವಾವೇ । ಮುಮುಕ್ಷ ನಿರೂಪಣೇ ॥೩೮॥
ವಿರಕ್ತೇ ಉತ್ತಮ ಗುಣ ಘ್ಯಾವೇ । ವಿರಕ್ತೇ ಅವಗುಣ ತ್ಯಾಗಾವೇ ।
ನಾನಾ ಅಪಾಯ ಭಂಗಾವೇ । ವಿವೇಕ ಬಳೇ ॥೩೯॥
ಐಸೀ ಹೇ ಉತ್ತಮ ಲಕ್ಷಣೇ । ಐಕಾವೀ ಯೇಕಾಗ್ರ ಮನೇ ।
ಯಾಚಾ ಅವ್ಹೇರ ನ ಕರಣೇ । ವಿರಕ್ತ ಪುರುಷೇ ॥೪೦॥
ಇತುಕೇ ಬೋಲಿಲೇ ಸ್ವಭಾವೇ । ತ್ಯಾತ ಮಾನೇಲ ತಿತುಕೇ ಘ್ಯಾವೇ ।
ಶ್ರೋತೀ ಉದಾಸ ನ ಕರಾವೇ । ಬಹು ಬೋಲಿಲೇ ಮ್ಹಣೌನೀ ॥೪೧॥
ಪರಂತು ಲಕ್ಷಣೇ ನೇ ಘೇತಾ । ಅವಲಕ್ಷಣೇ ಬಾಷ್ಕಳತಾ ।
ತೇಣೇ ತ್ಯಾಸ ಪಢತ ಮೂರ್ಖತಾ । ಯೇವ್ರೋ ಪಾಹೇ ॥೪೨॥
ತ್ಯಾ ಪಢತ ಮೂರ್ಖಾಚೇ ಲಕ್ಷಣ । ಪುಢಿಲೇ ಸಮಾಸೀ ನಿರೂಪಣ ।
ಬೋಲಿಲೇ ಅಸೇ ಸಾವಧಾನ । ಹೋಊನ ಐಕಾ ॥೪೩॥

ಇತಿ ಶ್ರೀ ದಾಸಬೋಧೇ ಗುರುಶಿಷ್ಯ ಸಂವಾದೇ
ವಿರಕ್ತ ಲಕ್ಷಣ ನಾಮ ಸಮಾಸ ನವವಾ ॥

ಹಾಗೂಭಗವಂತನ ಪ್ರೇಮ ಉದಯ ಹೊಂದಿದಮೇಲೆ ಇರುವಸ್ಥಿತಿ,ವಾಸನಾಕ್ಷೀಣ,ಆದಮೇಲೆ ಅಲಿಪ್ತತನದ ಅವಸ್ಥೆ [ಇರುವಿಕೆ]ಯೋಗಾಭ್ಯಾಸದಿಂದ ಬರುವಅವಸ್ಥೆಧ್ಯಾನವುಸಾಧಿಸಿದ ನಂತರ ಅವಸ್ಥೆ,ದೇಹವಿಸ್ಮೃತಿರೂಪ,ಜ್ಞಾನಿಯನಿರ್ವಿ ಕಲ್ಪಸ್ಥಿತಿ, ಅಂದರೆ ದೇಹದ ಎಚ್ಚರ ಇಲ್ಲದಾದ ಮೇಲಿನ ಅವಸ್ಥೆ ಮತ್ತು ನಿರ್ವಿಕಲ್ಪಸ್ಥಿತಿಗಳೆರಡರಲ್ಲೂ ಇರತಕ್ಕ ಸಮಾಧಾನ ವೃತ್ತಿ (ಸ್ಥಿತಿ) ಅಂದರೆ ತುರ್ಯಾವಸ್ಥೆ ಸಾಧಿಸಿದ ನಂತರ ಇರುವ ಅವಸ್ಥೆ, ಈ ಸರ್ವಸಾಕ್ಷಾತ್ಕಾರ ಲಕ್ಷಣಗಳ ಜ್ಞಾನವು ವಿರಕ್ತನಿಗಿರಬೇಕು. (೩೨) ಅನೇಕ ಪ್ರಕಾರದ ನಾದ (ಧ್ವನಿ), ನಾನಾ ಪ್ರಕಾರದ ಪ್ರಕಾಶ ಮತ್ತು ದರ್ಶನಗಳು, ನಾನಾ ಪ್ರಕಾರದ ಯೋಗ-ಮುದ್ರೆ, ಯೋಗಾಸನ, ಅನೇಕ ಪ್ರಕಾರದ ಮಂತ್ರ, ಅನೇಕ ಪ್ರಕಾರದ ವಿಧಿ ಅಂದರೆ ಶಾಸ್ತ್ರ ನಿಯಮ ಮತ್ತು ದರ್ಶನ, ಅನೇಕ ಪ್ರಕಾರದ ಮಂತ್ರ, ಅನೇಕ ಪ್ರಕಾರದ ಯಂತ್ರ, ಅನೇಕ ಪ್ರಕಾರದ ವಿಧಿ, ಎಂದರೆ ಶಾಸ್ತ್ರ ನಿಯಮಾದಿಗಳು ಮತ್ತು ವಿಧಾನ ಅಂದರೆ, ವ್ರತ ಅನುಷ್ಠಾನಾದಿ ಗಳು, ಇದರಂತೆ ಜನತೆಯಲ್ಲಿ ಪ್ರಚಲಿತವಿರುವ ಅನೇಕ ಮತಗಳ ಮರ್ಮ (ರಹಸ್ಯ) ಮುಂತಾದ ಈ ಎಲ್ಲ ಪಾರ ಮಾರ್ಥಿಕ ವಿಷಯುಗಳನ್ನು ವಿರಕ್ತನು ಚನ್ನಾಗಿ ತಿಳಿದು ನೋಡಿ ಬಿಟ್ಟುಬಿಡಬೇಕು. (೩೩) **ಇಷ್ಟನ್ನು ಹೇಳಿದ ಮೇಲೆ ವಿರಕ್ತನು ಸರ್ವಸಾಮಾನ್ಯವಾಗಿ ತನ್ನ ನಡವಳಿಕೆಯಲ್ಲಿ ಯಾವ ರೀತಿಯನ್ನು ಅನುಸರಿಸಬೇಕು. ಹಾಗೂ ಯಾವ ಧೋರಣೆಯನ್ನು ಸಂಬಾಳಿಸಬೇಕೆಂಬುದನ್ನು ಹೇಳುತ್ತಾರೆ :–** ವಿರಕ್ತನು ಸರ್ವರಿಗೂ ಮಿತ್ರ ಅಂದರೆ ಜಗಮಿತ್ರನಾಗಿರಬೇಕು. ಸರ್ವತಂತ್ರ ಸ್ವತಂತ್ರನಿರಬೇಕು. ವಿರಕ್ತನು ವಿಚಿತ್ರ ಮತ್ತು ವಿಲಕ್ಷಣನಂತೆ ಕಾಣುವ ನಾನಾ ತರಹದ ಗುಣಗಳುಳ್ಳ ವಿಸ್ಮಯಕಾರಕನಿರಬೇಕು. (೩೪) ವಿರಕ್ತನು ನಿಜವಾಗಿಯೂ ವೈರಾಗ್ಯ ಸಂಪನ್ನ ನಾಗಿರಬೇಕು. ಭಗವಂತನ ಭಕ್ತನಾಗಿರಬೇಕು. ಯಾವುದರಲ್ಲಿಯೂ ಆಸಕ್ತಿ ಇಡದೇ ಸದೈವ ಮುಕ್ತಹಾಗೂ ಬಂಧನ ರಹಿತನಿರಬೇಕು. (೩೫) ವಿರಕ್ತನು ಶಾಸ್ತ್ರಗಳ ಸೂಕ್ಷ್ಮ ಅಭ್ಯಾಸ ಮಾಡಬೇಕು. ಪರಮಾರ್ಥಕ್ಕೆ ಘಾತಕ ವೆನಿಸುವ ಮತ್ತು ವಿರೋಧ ಮಾಡುವಂಥವುಗಳನ್ನು ನಿರ್ಭಿಡೆಯಿಂದ ಖಂಡಿಸಬೇಕು. ಹಾಗೂ ಭಗವಂತನ ಪ್ರಾಪ್ತಿಯ ಇಚ್ಛೆ ಇರುವ ಜನರನ್ನು ಶುದ್ಧ ಸಾಧನ ಮಾರ್ಗಕ್ಕೆ ಹಚ್ಚಬೇಕು. (೩೬) ವಿರಕ್ತನು ತಾನು ಹೇಳುವ ನಿರೂಪಣ, ಪ್ರವಚನಗಳಲ್ಲಿ ಅಗದೀ ಶುದ್ಧ ಪರಮಾರ್ಥ ಮಾರ್ಗವನ್ನೇ ಹೇಳಬೇಕು.ಶಂಕಾ ಸಂಶಯುಗಳನ್ನು ವಿಚಾರಿಸಿ ದರೆ, ಅವುಗಳ ಬಗ್ಗೆ ತಿಳಿಯುವಂತೆ ಹೇಳಿ, ಶಂಕಾ ನಿವಾರಣ ಮಾಡಬೇಕು. ಜಗತ್ತಿನಲ್ಲಿರುವ ಸರ್ವಜನತೆಯ ಮೇಲೆ ಇವರು ನಮ್ಮವರೆಂಬ ಭಾವನೆಯಿಂದ ಪ್ರೇಮ ಮಾಡಬೇಕು. (೩೭) ವಿರಕ್ತನು ತನ್ನ ನಿಂದಕರಿಗೆ ಮೊದಲು ವಂದಿಸಬೇಕು. ಸಾಧಕ ವೃತ್ತಿಯವರಿದ್ದರೆ ಅಂಥವರಿಗೆ ಸಾಧನ ಮಾರ್ಗದ ನಿಶ್ಚಿತ ಜ್ಞಾನ ಮಾಡಿಕೊಡಬೇಕು· ಮತ್ತು "ನನಗೆ ಭಗವಂತನು ಬೇಕು" ಎಂಬ ಇಚ್ಛೆಯು ಉತ್ಪನ್ನವಾಗುವಂತಹ ಶ್ರೇಷ್ಠ ಪ್ರವಚನ ಮಾಡಿ ಪ್ರಪಂಚದ ಜಂಜಡದಲ್ಲಿ ಸಿಕ್ಕಿರುವ ಜನರನ್ನು ಪರಮಾರ್ಥಕ್ಕಾಗಿ ಜಾಗ್ರತಗೊಳಿಸಬೇಕು. [೩೮] **ಸಾರಾಂಶ :–** ವಿರಕ್ತನು ಉತ್ತಮ ಗುಣಗಳ ಸ್ವೀಕಾರ ಮಾಡಬೇಕು. ಕೆಟ್ಟಗುಣಗಳ ತ್ಯಾಗ ಮಾಡಬೇಕು. ಮತ್ತು ತನ್ನ ವೈರಾಗ್ಯಕ್ಕೆ ಅಡ್ಡ ಬರುವಂಥ ಸಂಕಟ ವಿಘ್ನಗಳೇನಾದರೂ ಇದ್ದರೆ ಅವನ್ನು ವಿವೇಕದ ಬಲದಿಂದಇಲ್ಲದಂತೆ ಮಾಡಬೇಕು. [೩೯] ಕೊನೆಗೆ ಈ ಮಹತ್ವದ ಸಮಾಸವನ್ನು ಶ್ರೀ ಸಮರ್ಥರು ಉಪಸಂಹಾರ ಮಾಡುತ್ತಾರೆ.ಮೇಲೆಹೇಳಿದವುಗಳುಉತ್ತಮ ಲಕ್ಷಣಗಳಾಗಿವೆ. ಏಕಾಗ್ರಮನದಿಂದ ಕೇಳಿ ತಿಳಿಯಿರಿ. ವಿರಕ್ತ ಮನುಷ್ಯನು ಇವುಗಳ ಉಪೇಕ್ಷೆ ಮಾಡಬಾರದು [೪೦] ನನ್ನ ಅನುಭವಕ್ಕೆ ಬಂದಂಥವು ಅರ್ಥಾತ್ ನನಗೆ ಮನದಟ್ಟಾಗಿ ಖಾತ್ರಿಯಾದಂಥ ಲಕ್ಷಣಗಳಷ್ಟು ಮಾತ್ರ ಸಹಜವಾಗಿ ಹೇಳಿರುತ್ತೇನೆ, ನಿಮಗೆ ಇವುಗಳಲ್ಲಿ ಮನಕ್ಕೆ ಒಪ್ಪುವಂಥವನ್ನು ಮತ್ತುಮೆಚ್ಚಿದಷ್ಟನ್ನು ಸ್ವೀಕರಿಸಿರಿ. ನಾನು ಹೆಚ್ಚು ಮಾತನಾಡಿದೆನೆಂದು ಶ್ರೋತೃಗಳು ಖಿನ್ನರಾಗಬಾರದು[೪೧]ಪರಂತು,ಈ ಉತ್ತಮ ಲಕ್ಷಣಗಳನ್ನು ಸ್ವೀಕಾರಮಾಡದೇ ಅವಲಕ್ಷಣದ ಗುಣಗಳನ್ನು ಸ್ವೀಕಾರ ಮಾಡಿದರೆಆಗ ಮನುಷ್ಯನ ಜೀವನಕ್ಕೆ ಎಷ್ಟೂ ತಾಳ ಮೇಳ ಉಳಿಯುವದಿಲ್ಲಾ ಇಂಥ ಮನುಷ್ಯನ ಪಾಲಿಗೆಕಲಿತಮೂರ್ಖ[ಪಂಡಿತಮೂರ್ಖ]ನೆಂಬ ಹೆಸರು ಬರಬಹುದಾಗಿದೆ[೪೨]ಮುಂದಿನ ಸಮಾಸ ದಲ್ಲಿ ಅಂಥಕಲಿತ ಮೂರ್ಖ[ಪಂಡಿತಮೂರ್ಖ]ನ ಲಕ್ಷಣಗಳವಿವೇಚನೆ ಇರುವದು.ಅದನ್ನು ಲಕ್ಷ್ಯಗೊಟ್ಟು ಕೇಳಿರಿ[೪೩]

ಶ್ರೀ ದಾಸಬೋಧದ ಗುರು ಶಿಷ್ಯರ ಸಂವಾದದಲ್ಲಿಯ ಎರಡನೆಯ
ದಶಕದ "ವಿರಕ್ತರ ಲಕ್ಷಣ"ಎಂಬ ಹೆಸರಿನ ಒಂಭತ್ತನೆಯ ಸಮಾಸವು ಮುಗಿದುದು

**ಸಮಾಸ ದಹಾವಾ ; ಪಢತ ಮೂರ್ಖ ಲಕ್ಷಣ**

॥ಶ್ರೀರಾಮ॥ಮಾಗಾ ಸಾಂಗಿತಲೀ ಲಕ್ಷಣೇ।ಮೂರ್ಖಾಅಂಗೀ ಚಾತುರ್ಯವಾಣೇ।
ಆತಾ ಏಕಾ ಶಾಹಾಣೇ। ಅಸೋನಿ ಮೂರ್ಖ ॥೧॥

ತಯಾ ನಾವ ಪಢತಮೂರ್ಖ। ಶ್ರೋತೀ ನ ಮನಾವೇ ದುಃಖ।
ಅವಗುಣ ತ್ಯಾಗಿತಾ ಸುಖ। ಪ್ರಾಪ್ತ ಹೋಯೇ ॥೨॥

## ದಶಕ ೨. ಸಮಾಸ ೧೦. ಕಲಿತ ಪಂಡಿತ (ಪಢತ) ಮೂರ್ಖ ಲಕ್ಷಣ (ನುಡಿ ೪೧)

ಮಾನವನ ಅಂತಃಕರಣದಲ್ಲಿ ಆತ್ಮಬುದ್ಧಿ ಹಾಗೂ ದೇಹಬುದ್ಧಿಗಳೆರಡೂ ವಾಸ ಮಾಡುತ್ತವೆ. ಆತ್ಮ ಬುದ್ಧಿಯು ನಿಷ್ಪಕ್ಷಪಾತಿ ಇರುವದರಿಂದ ಇದು ಸತ್ಯ, ಇದು ಉತ್ತಮವಾದುದು, ಮತ್ತು ಹಿತಕರವಾದುದೆಂಬುದನ್ನು ನಮಗೆ ಹೇಳುತ್ತದೆ. ದೇಹ ಬುದ್ಧಿಯು ಪಕ್ಷಪಾತಿ ಇರುವದರಿಂದ ಇದು ತಾತ್ಕಾಲಿಕ ಸತ್ಯ ಇದ್ದು, ನೋಡಲಿಕ್ಕೆ ಹಿತವಾದ ಹಾಗೂ ದೇಹಕ್ಕೆ ಸುಖ ಕೊಡುವಂಥವು ಯಾವವೆಂಬುವನ್ನು ಮಾತ್ರ ಹೇಳುತ್ತದೆ. ಪ್ರಾಪಂಚಿಕ ಜನರಲ್ಲಿ ದೇಹ ಬುದ್ಧಿಯ ಒತ್ತಡ ಇರುವದು. ಆದರೆ ವಿರಕ್ತ ಮನುಷ್ಯನಲ್ಲಿ ಆತ್ಮಬುದ್ಧಿಯ ಒತ್ತಡ (ಪ್ರಾಬಲ್ಯ) ಇರುವದು. ವಿಚಾರ ಮಾಡಿ ನೋಡಿದಾಗ ತಿಳಿಯುವದೇನೆಂದರೆ, ಪ್ರಾಪಂಚಿಕ ಮನುಷ್ಯನ ಜೀವನದಲ್ಲಿ ಆಂತರಿಕ ಜಗಳ ಮತ್ತು ವಿರೋಧಗಳು ನಿರ್ಮಾಣವಾಗುವವು. ಈ ದ್ವಂದ್ವದಲ್ಲಿ ಸಿಕ್ಕ ಮನುಷ್ಯನು ಸತ್ಕರ್ಮವು ಯಾವುದೆಂಬುದನ್ನು ತನಗೆ ತಿಳಿದಿದ್ದರೂ ಸಹ ದುಷ್ಕರ್ಮ ಮಾಡುವನು. ವಂದನೀಯ (ಪೂಜ್ಯ) ಯಾವುದೆಂಬುದು ಗೊತ್ತಿದ್ದರೂ ನಿಂದ್ಯ(ನೀಚ)ವನ್ನೇ ಇವನು ಅಂಗೀಕಾರ ಮಾಡುವನು. ಸದ್ಗುಣಗಳ ತಿಳುವಳಿಕೆ ಇದ್ದೂ ಸಹ ಇವನು ದುರ್ಗುಣಗಳ ಬೆನ್ನು ಹತ್ತುವನು. ಸದಾಚಾರದ ಯೋಗ್ಯತೆ (ಮಹತ್ವ) ತಿಳಿದಿದ್ದರೂ ಸಹ ಇವನು ಭ್ರಷ್ಟಾಚಾರಕ್ಕಿಳಿಯುವನು. ಮತ್ತು ಉತ್ತಮ ಲಕ್ಷಣಗಳನ್ನು ತಿಳಿದೂ ತಿಳಿದೂ ಇವನು ಬಿಟ್ಟು ಬಿಡುವನು. ಹಾಗೂ ಹೀನ ಗುಣಗಳಿಗೆ ಇವನು ಆಶ್ರಯ ಕೊಡುವನು. ಇಂಥ ಮನುಷ್ಯರಿಗೆ ಶ್ರೀ ಸಮರ್ಥರು "ಪಢತ ಮೂರ್ಖ ಅಂದರೆ ಕಲಿತ [ತಿಳಿದ, ಪಂಡಿತ] ಮೂರ್ಖ ಎಂದು ಅಂದಿದ್ದಾರೆ. ಎರಡನೆಯವರ ಮೇಲೆ ಏನಾದರೂ ಪ್ರಸಂಗ ಬಂದಾಗ ಅವರಿಗೆ ಮಾತ್ರ ಆಗ ಇವನು ಉತ್ತಮ ರೀತಿಯಲ್ಲಿ ಜ್ಞಾನೋಪದೇಶ ಮಾಡುವನು. ಅದೇ ಪ್ರಸಂಗ ತನ್ನ ಮೇಲೆ ಬಂದಾಗ ಸ್ವಾರ್ಥದ ವಶನಾಗಿ ವಿರುದ್ಧ ನಡೆಯುವನು. [ಆಚಾರ ಹೇಳುವದು,ಬದನಿಕಾಯಿ ತಿನ್ನುವದು] ಇಂಥ ಮನುಷ್ಯನಿಗೆ ಪಢತ ಮೂರ್ಖ (ಕಲಿತವನಾಗಿದ್ದೂ ವ್ಯವಹಾರ ಶೂನ್ಯ-ತಪ್ಪು ನಡೆಯುವವ) ನೆಂದು ಅಂದಿದ್ದಾರೆ. ವಿಸ್ತಾರವಾದ ಈ ಪ್ರಪಂಚದಲ್ಲಿ ಎಲ್ಲವೂ ಸ್ವಾರ್ಥದಿಂದ ಕೂಡಿದ ಗೊಂದಲವೇ ಇರುವದು. ಅಂದ ಮೇಲೆ ಈ ಪ್ರಪಂಚ ಕ್ಷೇತ್ರದೊಳಗೆ ಪಢತ ಮೂರ್ಖರು ಕಂಡುಬರುವದು ಆಶ್ಚರ್ಯದ ಮಾತೇನೂ ಅಲ್ಲ. ಆದ್ದರಿಂದ ವೈರಾಗ್ಯ, ಅನಾಸಕ್ತಿ ಮತ್ತು ನಿಸ್ವಾರ್ಥತನ ಇವು ಪರಮಾರ್ಥದ ಪ್ರಾಣವೇ ಆಗಿರುವವು, ಇಂಥ ಅಮೌಲ್ಯ ಪರಮಾರ್ಥ ಕ್ಷೇತ್ರದಲ್ಲಿ ಯಾವಾಗ ಪಢತ(ಕಲಿತಂಥ ಪಂಡಿತ)ಮೂರ್ಖರ ಸುಳಸುಳಾಟವಾಗುವದೋ ಆಗ ಸಮಾಜದ ಆರೋಗ್ಯಕ್ಕೆ ಮಹಾಕ್ರೂರವಾದ ದುಷ್ಟ ಹುಳ ಹತ್ತಿದಂತೆ ಆಗುತ್ತದೆ. ಭಾರತದಲ್ಲಿಯ ಅಧ್ಯಾತ್ಮಕ್ಕೆ ಇದೇ ದುಃಖಾಂತದ ವಿಷಯವಾಗಿದೆ. (ಕೊನೆಯಿಲ್ಲದ ದೌರ್ಭಾಗ್ಯ ಜನಕ ಸ್ಥಿತಿ). ಶ್ರೀಸಮರ್ಥರಿಗೆ ಈಶೋಕಾಂತಿಕದ ಗಾಂಭೀರ್ಯ [ಪರಿಣಾಮ] ಎಷ್ಟೊಂದು ಚುಚ್ಚಿದೆಯೋ ಅಷ್ಟೊಂದು ಇತರರಿಗೆ ಆಗಿರಲಾರದು. ಅಂತೆಯೇ ಅವರು ಇದಕ್ಕಾಗಿ ಒಂದು ಸಮಾಸವನ್ನೇ ಪೂರ್ತಿ ಬರೆದಿರುವರು.

### ಸಮಾಸ ೧೦. ಪಢತ ಮೂರ್ಖ ಲಕ್ಷಣ (ನುಡಿ ೪೧)

**ಜಾಣನು, ಕಲಿತವನು, ಪಂಡಿತ ಅನಿಸಿಕೊಳ್ಳುತ್ತಾನೆ. ಆದರೆ ಇಂಥವನು ಮೂರ್ಖತನದಿಂದ ನಡೆಯುತ್ತಾನೆ. ಅಂದರೆ ಮೂರ್ಖತನದಿಂದ ನಡೆಯುವವನು ಪಢತ, ಪಂಡಿತ (ಕಲಿತ) ಮೂರ್ಖನು:-**
ಮೂರ್ಖ ಮನುಷ್ಯ ಸಹ ಚತುರನಾಗಬಹುದು. ಆಗುವನು ಎಂಬ ಬಗ್ಗೆ ಕೆಲವು ಲಕ್ಷಣಗಳನ್ನು ಹಿಂದೆ ಹೇಳಿದೆವು. ಈಗ ಯಾವ ಜನರು ಕಲಿತವರು, ಬುದ್ಧಿವಂತರು ಜಾಣರಾಗಿದ್ದೂ ಸಹ ಮೂರ್ಖರಂತೆ ನಡೆಯುತ್ತಾರೆ? ಅಂಥವರ ವರ್ಣನೆ ಈಗ ಕೇಳಿರಿ. (೧) ಇಂಥ ಮೂರ್ಖರಿಗೆ ಪಢತ, ಕಲಿತ, ಜಾಣ, ಮೂರ್ಖ ಎಂಬ ಹೆಸರು ಇರುವದು. ಇಂಥ ಕೆಲವು ಲಕ್ಷಣಗಳು ನಿಮ್ಮಲ್ಲಿ ಕಂಡು ಬಂದರೂ ಶ್ರೋತಾಜನರು ಇದನ್ನು ಮನಸ್ಸಿಗೆ ಹಚ್ಚಿಕೊಳ್ಳಬಾರದು. ಯಾಕೆಂದರೆ ಪ್ರಯತ್ನದಿಂದ ಇವುಗಳನ್ನು ಅಂದರೆ ಅವಗುಣಗಳನ್ನು ತ್ಯಾಗ ಮಾಡಲು ಬರುವದು. ನಂತರ ಮನುಷ್ಯ ಸುಖಿ ಆಗುವನು. (೨)

ಬಹುಶ್ರುತ ಆಣೀ ವಿತ್ಪನ್ನ । ಪ್ರಾಂಜಳ ಬೋಲೆ ಬ್ರಹ್ಮಜ್ಞಾನ ।
ದುರಾಶಾ ಆಣೀ ಅಭಿಮಾನ । ಧರೀ ತೋ ಯೇಕ ಪಢತ ಮೂರ್ಖ ॥೩॥
ಮುಕ್ತ ಕ್ರಿಯಾ ಪ್ರತಿಪಾದೀ । ಸಗುಣ ಭಕ್ತಿ ಉಛೇದೀ ।
ಸ್ವಧರ್ಮ ಆಣೀ ಸಾಧನ ನಿಂದೀ । ತೋ ಯೇಕ ಪಢತ ಮೂರ್ಖ ॥೪॥
ಆಪಲೇನ ಜ್ಞಾತೇಪಣೇ । ಸಕಳಾಸ ಶಬ್ದ ಠೇವಣೇ ।
ಪ್ರಾಣಿಮಾತ್ರಾಚೇ ಪಾಹೇ ಉಣೇ । ತೋ ಯೇಕ ಪಢತ ಮೂರ್ಖ ॥೫॥
ಶಿಷ್ಯಾಸ ಅವಜ್ಞಾ ಘಡೇ । ಕಾ ತೋ ಸಂಕಟೀ ಪಡೇ ।
ಜಯಾಚೇನಿ ಶಬ್ದೇ ಮನ ಮೋಡೆ । ತೋ ಯೇಕ ಪಢತ ಮೂರ್ಖ ॥೬॥
ರಜೋಗುಣೀ ತಮೋಗುಣೀ । ಕಪಟೀ ಕುಟಿಳ ಅಂತಃಕರ್ಣೀ ।
ವೈಭವ ದೇಖೋನ ವಾಖಾಣೀ । ತೋ ಯೇಕ ಪಢತ ಮೂರ್ಖ ॥೭॥
ಸಮೂಳ ಗ್ರಂಥ ಪಾಹಿಲ್ಯಾವಿಣ । ಉಗಾ ಚಠೇವೀ ಜೋ ದೂಷಣ ।
ಗುಣ ಸಾಂಗತಾ ಅವಗುಣ । ಪಾಹೇ ತೋ ಯೇಕ ಪಢತ ಮೂರ್ಖ ॥೮॥
ಲಕ್ಷಣೇ ಐಕೋನ ಮಾನೀ ವೀಟ । ಮತ್ಸರೇ ಕರೀ ಖಟಪಟ ।
ನೀತಿ ನ್ಯಾಯ ಉದ್ಧಟ । ತೋ ಯೇಕ ಪಢತ ಮೂರ್ಖ ॥೯॥
ಜಾಣಪಣೇ ಭರೀ ಭರಿ । ಆಲಾ ಕ್ರೋಧ ನಾವರೇ ।
ಕ್ರಿಯಾ ಶಬ್ದಾಸ ಅಂತರೇ । ತೋ ಯೇಕ ಪಢತ ಮೂರ್ಖ ॥೧೦॥
ಮಕ್ತಾ ಅಧಿಕಾರೇ ವೀಣ । ಮಗತ್ವತ್ವಾಚಾ ಕರೀ ಸೀಣ ।
ವಚನ ಜಯಾಚೇ ಕಠೀಣ । ತೋ ಯೇಕ ಪಢತ ಮೂರ್ಖ ॥೧೧॥
ಶ್ರೋತಾ ಬಹುಶ್ರುತಪಣೇ । ವಕ್ತಯಾಸ ಆಣೀ ಉಣೇ ।
ವಾಚಾಳ ಪಣಾಚೇನಿ ಗುಣೇ । ತೋ ಯೇಕ ಪಢತ ಮೂರ್ಖ ॥೧೨॥
ದೋಷ ಠೇವೀ ಪುಢಿಲಾಸೀ । ತೇ ಚಿ ಸ್ವಯೇ ಆಪಣಾಪಾಸೀ ।
ಐಸೇ ಕಳೇನಾ ಜಯಾಸೀ । ತೋ ಯೇಕ ಪಢತ ಮೂರ್ಖ ॥೧೩॥
ಅಭ್ಯಾಸಾಚೆನಿ ಗುಣೇ । ಸಕಳ ವಿದ್ಯಾ ಜಾಣೇ ।
ಜನಾಸ ನಿವಲೂ ನೇಣೇ । ತೋ ಯೇಕ ಪಢತ ಮೂರ್ಖ ॥೧೪॥
ಹಸ್ತ ಬಾಂಧೀಜೆ ಊರ್ಣತಂತೇ । ಲೋಭೇ ಮೃತ್ಯ ಭ್ರಮರಾತೇ ।
ಐಸಾ ಜೋ ಪ್ರಪಂಚೀ ಗುಂತೆ । ತೋ ಯೇಕ ಪಢತ ಮೂರ್ಖ ॥೧೫॥

**ಜೀವನದಲ್ಲಿ ವಿಚಾರ ಮತ್ತು ಆಚಾರ, ಜ್ಞಾನ ಮತ್ತು ಕ್ರಿಯಾ ಅಥವಾ ಧ್ಯೇಯ ಮತ್ತು ಸಾಧನ ಇವುಗಳಲ್ಲಿ ತಿಳಿದೂ ತಿಳಿದೂ ವಿರೋಧನಿರುವದು ಕಂಡು ಬರುತ್ತದೆ. ಇವನೇ ಶ್ರೀ ಸಮರ್ಥರ ಪಢತ (ಕಲಿತ) ಮೂರ್ಖನಾಗಿರುವನು:-** ಬಹಳಷ್ಟು ಗ್ರಂಥಗಳನ್ನು ಓದುವನು ಮತ್ತು ಸ್ವತಃ ವಿದ್ವಾನನಾಗಿರುವನು. ಸುಂದರ ಹಾಗೂ ಸರಳ ರೀತಿಯಲ್ಲಿ ಬ್ರಹ್ಮಜ್ಞಾನವನ್ನು ಸ್ಪಷ್ಟವಾಗಿ ಹೇಳುವನು. ಆದರೆ ದುರಾಸೆ ಮತ್ತು ಅಹಂಕಾರಿಯಾಗಿದ್ದರೆ ಅಂಥವನು ಕಲಿತ ಪಂಡಿತನಿದ್ದೂ ಮೂರ್ಖನೆನಿಸುವನು. [೩] ಬ್ರಹ್ಮಜ್ಞಾನಿಯಾದವನು ಮನಬಂದಂತೆ ನಡೆಯಬೇಕು. ಬಂಧನರಹಿತ ಆಚರಣೆ ಇರಬೇಕೆಂದು ಪ್ರತಿಪಾದಿಸುವವನು, ಸಗುಣ ಭಕ್ತಿಯು ಜ್ಞಾನಿಗೆ ವ್ಯರ್ಥವೆಂದು ಹೇಳುವನು. ವೇದಾಧಾರ ರಹಿತ ಕರ್ಮ ಹೇಳುವನು. ಸ್ವಧರ್ಮಾಚರಣೆ ಹಾಗೂ ಸಾಧನದ ನಿಂದೆ ಮಾಡುವಂಥವನು ಕಲಿತ ಪಂಡಿತ ಮೂರ್ಖನೆನಿಸುವನು. [೪] ತಾನು ದೊಡ್ಡ ಜ್ಞಾನಿ ಎಂಬ ಅಭಿಮಾನದಿಂದ ಎಲ್ಲರಿಗೂ ಹೆಸರಿಡುವನು. ಹಾಗೂ ಇತರರ ದೋಷಗಳನ್ನು ಎತ್ತಿ ತೋರಿಸುವಲ್ಲಿ ಬಹು ಚತುರನಿರುವನು. ಇಂಥವನೊಬ್ಬ ಪಢತ ಮೂರ್ಖನು. [೫] ತನ್ನ ಶಿಷ್ಯನಿಗೆ ಆಚರಿಸಲಿಕ್ಕೆ ಪಾಲಿಸಲಿಕ್ಕೆ ಆಗದಂಥ ಅತಿ ಅಸಾಧ್ಯವಾದ ಆಜ್ಞೆಯನ್ನು ಮಾಡುವನು. ಅಥವಾ ಶಿಷ್ಯನು ಸಂಕಟದಲ್ಲಿ ಬೀಳುವಂತಹ ಆಜ್ಞೆಯನ್ನು ಮಾಡುವವನು ಮತ್ತು ಜನರನ್ನು ಕಠೋರ ಶಬ್ದಗಳಿಂದ ಮನನೋಯುವಂತೆ ಮಾಡುವವನು ಪಢತ ಪಂಡಿತ ಮೂರ್ಖನು. [೬] ರಜೋಗುಣ, ತಮೋಗುಣಗಳಿಂದ ತುಂಬಿದವ, ಕಪಟ ಕಾರಸ್ಥಾನದವ, ದುಷ್ಟ ಅಂತಃಕರಣದವ ಹಾಗೂ ಶ್ರೀಮಂತ ಜನರ ವೈಭವ ನೋಡಿ ಸುಳ್ಳು ಮುಖಸ್ತುತಿ ಮಾಡುವವನು ಪಢತ ಪಂಡಿತ ಮೂರ್ಖನು. [೭] ಯಾವುದೇ ಗ್ರಂಥ ಸಂಪೂರ್ಣ ಓದದೇ ವಿನಾಕಾರಣ ಅದಕ್ಕೆ ಹೆಸರಿಡುವದು [ದೂಷಿಸುವದು] ಹಾಗೂ ಅದರ ವಿಮರ್ಶೆ ಮಾಡುವಾಗ ಅಥವಾ ಗುಣ ಹೇಳುವಾಗ ಕೇವಲ ಅವಗುಣಗಳನ್ನೇ ಹುಡುಕಿ ತೆಗೆಯುವವನು ಪಢತ ಪಂಡಿತಮೂರ್ಖನು.[೮] ಉತ್ತಮವಿಷಯ, ಉತ್ತಮಲಕ್ಷಣ ಸುದ್ದಿಗಳನ್ನು ಕೇಳಲು, ಹೇಳಲು ಬೇಸರ ಮಾಡಿಕೊಳ್ಳುವವ, ದ್ವೇಷ ಮತ್ಸರಗಳಿಂದ ಕೂಡಿ ಅನೇಕ ಉಪದ್ವ್ಯಾಪ ಮಾಡುವವ, ನೀತಿ ನ್ಯಾಯ ಧರ್ಮಗಳ ಪರಿವೆ ಇಲ್ಲದೆ ಉದ್ಧಟ ಉರ್ಮಟನಿರುವವನು ಪಢತ ಪಂಡಿತ ಮೂರ್ಖನು. [೯] ತಿಳಿದೂ ತಿಳಿದೂ ನಾನು ದೊಡ್ಡ ಜ್ಞಾನಿ ಇರುವೆನೆಂಬ ಗರ್ವ [ಘಮೇಂಡ]ದಿಂದ ಸಲ್ಲದ ಆಕಾಂಕ್ಷೆಗಳನ್ನು ಬಯಸುವವ, ಈರ್ಷೆಯಿಂದ ಸಿಟ್ಟನ್ನು ಆವರಿಸಲಿಕ್ಕೆ [ನಿಯಂತ್ರಿಸಲು] ಆಗದವ, ಹಾಗೂ ಮಾತಾಡುವದೊಂದು, ಮಾಡುವದು ಇನ್ನೊಂದು, ಕೇಳಿದರೆ ಹೇಳುವದು ಮತ್ತೊಂದು ಹೀಗೇಇರುವವನು ಪಢತಪಂಡಿತ ಮೂರ್ಖನು.[೧೦] ಯೋಗ್ಯತೆ ಇಲ್ಲದೇ ಹೇಳಲಿಕ್ಕೆ [ಭಾಷಣ, ಉಪನ್ಯಾಸಗಳಿಗೆ] ಹೋಗುವವನು ಯಾರೂ ಅಲ್ಲಿ ಕೇಳಲಿಕ್ಕೆ ಇರದಿದ್ದರೂ ವಿನಾಕಾರಣ ಕಂಠಶೋಷಣ ಮಾಡಿ ಶ್ರಮಪಡುವವನು, ಹೇಳುವಾಗ ಕಠೋರ ಶಬ್ದಗಳನ್ನು ಆಡುವವನು, ಪಢತ ಮೂರ್ಖನು. [೧೧] ತಾನು ಬಲ್ಲವನಾಗಿ ವಾಚಾಳನಾದ ಶ್ರೋತೃವು. ತಾನು ಕಲಿತವನೆಂಬ ಸೊಕ್ಕಿನಿಂದ ವಕ್ತಾರನನ್ನು ಹೀಯಾಳಿಸಲಿಕ್ಕೆ ಪ್ರಯತ್ನಿಸುವವನು ಪಢತ ಪಂಡಿತ ಮೂರ್ಖನು. [೧೨] ಎರಡನೆಯವರ ದೋಷಗಳನ್ನು ಎತ್ತಿ ಹೆಸರಿಡುವವ (ಆಡಿಕೊಳ್ಳುವವ)ನು ಆ ಗುಣಗಳೇ ತನ್ನಲ್ಲಿರುವವನೆಂಬುದು ಯಾವನ ಲಕ್ಷ್ಯಕ್ಕೆ ಬರುವದಿಲ್ಲವೋ ಅಂಥವನು ಪಢತ ಪಂಡಿತ ಮೂರ್ಖನು. [೧೩] ಬಹು ಶ್ರಮವಹಿಸಿ ಬಹಳ ಅಭ್ಯಾಸ ಮಾಡಿ ಎಲ್ಲ ವಿದ್ಯೆಗಳ ಜ್ಞಾನ ಮಾಡಿಕೊಂಡಿದ್ದರೂ ಜನರಿಗೆ ಸಂತೋಷ ಸಮಾಧಾನವಾಗುವಂತೆ ವಿಷಯವನ್ನು ಸ್ಪಷ್ಟಪಡಿಸಿ ಹೇಳಲಿಕ್ಕೆ ಆಗದ ಮುಖಹೀನನೊಬ್ಬ ಪಢತ ಪಂಡಿತ ಮೂರ್ಖನು. [೧೪] **ಕಾಮವಾಸನೆ ಹಣ ಹಾಗೂ ಲೌಕಿಕ ಪ್ರಸಿದ್ಧಿ, ಹೆಸರು, ವ್ಯವಹಾರ ಇವುಗಳ ಅಧೀನನಾಗಿ ಯಾವನು ಭಗವಂತನನ್ನು ಮರೆಯುವನೋ ಅವನು ಪಢತ (ಕಲಿತ) ಮೂರ್ಖನಿರುವನೆಂದು ಶ್ರೀ ಸಮರ್ಥರು ಈಗ ಹೇಳುತ್ತಾರೆ:-** ಜೇಡ ಹುಳದ ಮೈಯಲ್ಲಿಯ ಸೂಕ್ಷ್ಮ ತಂತು[ಎಳೆ]ವಿನಿಂದ ಒಂದು ಆನೆಯನ್ನು ಕಟ್ಟಿ ಹಾಕುವದು, ಅಥವಾ ಸುಗಂಧದ ವಾಸನೆಗೆ ಮರುಳಾಗಿ ಭ್ರಮರ [ಗುಂಗೀಹುಳ]ವು ಕೋಮಲವಾದ ಕಮಲದಲ್ಲಿ ಸಿಕ್ಕು ಸತ್ತು ಹೋಗುವದು. ಇವರಂತೆಯೇ ಪರಮಾರ್ಥಸಾಧಿಸುವ ಸಾಮರ್ಥ್ಯವಿದ್ದು ಈ ನಿಃಸ್ಸತ್ವ ಪ್ರಪಂಚದಲ್ಲಿ ಸಿಕ್ಕು ವ್ಯರ್ಥವಾಗುವವನು ಪಢತ ಪಂಡಿತ ಮೂರ್ಖನು. [೧೫]

ಸ್ತ್ರೀಯಾಂಚಾ ಸಂಗ ಧರೀ । ಸ್ತ್ರೀಯಾಸೀ ನಿರೂಪಣ ಕರೀ ।
ನಿಂದ್ಯ ವಸ್ತು ಅಂಗೀಕಾರೀ । ತೋ ಯೇಕ ಪಢತ ಮೂರ್ಖ ॥೧೬॥
ಜೇಣೇ ಉಣೇವ ಯೇ ಅಂಗಾಸೀ । ತೇಚಿ ದೃಢ ಧರೀ ಮಾನಸೀ ।
ದೇಹಬುದ್ಧೀ ಜಯಾಪಾಸೀ । ತೋ ಯೇಕ ಪಢತ ಮೂರ್ಖ ॥೧೭॥
ಸಾಂಡೂನಿಯಾ ಶ್ರೀಪತೀ । ಜೋ ಕರೀ ನರಸ್ತುತೀ ।
ಕಾ ದೃಷ್ಟೀ ಪಡಿಲ್ಯಾಚೀ ಕೀರ್ತೀ। ವರ್ಣೀ ತೋ ಯೇಕ ಪಢತ ಮೂರ್ಖ॥೧೮॥
ವರ್ಣೀ ಸ್ತ್ರೀಯಾಂಚೇ ಅವೇವ । ನಾನಾ ನಾಟಕೇ ಹಾವಭಾವ ।
ದೇವಾ ವಿಸರೇ ಜೋ ಮಾನವ । ತೋ ಯೇಕ ಪಢತ ಮೂರ್ಖ ॥೧೯॥
ಭರೋನ ವೈಭವಾಚೇ ಭರೀ । ಜೀವ ಮಾತ್ರಾಸ ತುಚ್ಛ ಕರೀ ।
ಪಾಷಾಂಡ ಮತ ಥಾವರೀ । ತೋ ಯೇಕ ಪಢತ ಮೂರ್ಖ ॥೨೦॥
ವಿತ್ಪನ್ನ ಆಣೀ ವೀತರಾಗೀ । ಬ್ರಹ್ಮಜ್ಞಾನೀ ಮಹಾಯೋಗೀ ।
ಭವಿಷ್ಯ ಸಾಂಗೋ ಲಾಗೇ ಜಗೀ । ತೋ ಯೇಕ ಪಢತ ಮೂರ್ಖ ॥೨೧॥
ಶ್ರವಣ ಹೋತಾ ಅಭ್ಯಾಂತರೀ । ಗುಣದೋಷಾಚೀ ಚಾಳಣಾ ಕರೀ ।
ಪರಭೂಷಣೇ ಮತ್ಸರೀ । ತೋ ಯೇಕ ಪಢತ ಮೂರ್ಖ ॥೨೨॥
ನಾಹೀ ಭಕ್ತೀಚೇ ಸಾಧನ । ನಾಹೀ ವೈರಾಗ್ಯ ನಾ ಭಜನ ।
ಕ್ರಿಯೆ ವಿಣ ಬ್ರಹ್ಮಜ್ಞಾನ । ಬೋಲೆ ತೋ ಯೇಕ ಪಢತ ಮೂರ್ಖ ॥೨೩॥
ನ ಮನೀ ತೀರ್ಥ ನ ಮನೀ ಕ್ಷೇತ್ರ । ನ ಮನೀ ವೇದ ನ ಮನೀ ಶಾಸ್ತ್ರ ।
ಪವಿತ್ರ ಕುಳೀ ಜೋ ಅಪವಿತ್ರ । ತೋ ಯೇಕ ಪಢತ ಮೂರ್ಖ ॥೨೪॥
ಆದರ ದೇಖೋನಿ ಮನ ಧರೀ । ಕೀರ್ತೀ ವಿಣ ಸ್ತುತೀ ಕರೀ ।
ಸವೇ ಚಿ ನಿಂದೀ ಅನಾದರೀ । ತೋ ಯೇಕ ಪಢತ ಮೂರ್ಖ ॥೨೫॥
ಮಾಗೇ ಯೇಕ, ಪುಢೇ ಯೇಕ । ಐಸಾ ಜಯಾಚಾ ದಂಡಕ ।
ಬೋಲೇ ಯೇಕ ಕರೀ ಯೇಕ । ತೋ ಯೇಕ ಪಢತ ಮೂರ್ಖ ॥೨೬॥
ಪ್ರಪಂಚವಿಶೀ ಸಾದರ । ಪರಮಾರ್ಥೀ ಜ್ಯಾಚಾ ಅನಾದರ ।
ಜಾಣಪಣೆ ಘೇ ಆಧಾರ । ತೋ ಯೇಕ ಪಢತ ಮೂರ್ಖ ॥೨೭॥
ಯಥಾರ್ಥ ಸಾಂಡೂನ ವಚನ । ಜೋ ರಕ್ಷೂನ ಬೋಲೇ ಮನ ।
ಜ್ಯಾಚೇ ಜಿಣೇ ಪರಾಧೇನ । ತೋ ಯೇಕ ಪಢತ ಮೂರ್ಖ ॥೨೮॥
ಸೋಂಗ ಸಂಪಾಧೀ ವರೀ ವರೀ । ಕರೂ ನಯೇ ತೇ ಚಿ ಕರೀ ।
ಮಾರ್ಗ ಚುಕೋನ ಭರೇ ಭರೀ । ತೋ ಯೇಕ ಪಢತ ಮೂರ್ಖ ॥೨೯॥

ಸ್ತ್ರೀಯರ ಸಂಗತಿಯಲ್ಲಿ ಸದಾ ಆಸಕ್ತನಾಗಿ ಅವರಿಗೆ ಬ್ರಹ್ಮಜ್ಞಾನ ಹೇಳುವವನು, ಮತ್ತು ನಿಂದ್ಯ ವಸ್ತುಗಳನ್ನು ಸೇವಿಸುವವನು, ಪಢತ ಪಂಡಿತ ಮೂರ್ಖನು. [೧೬] ತನ್ನ ಮರ್ಯಾದೆ ದೊಡ್ಡಸ್ತಿಕೆಗೆ ನ್ಯೂನ್ಯತೆ ಬಂದು ನಾನೆಲ್ಲಿ ಕಡಿಮೆಯವನೆನಿಸುವೆನೋ ಎಂದು ಸದಾ ಮನದಲ್ಲಿ ವಿಚಾರ ಮಾಡುವವ,"ನಾನು ದೇಹವೇ ಇರುವೆ" ಹೀಗೆ ಯಾರ ಭಾವನೆ ಇರುವದೋ ಅವನು ಪಢತ ಪಂಡಿತ ಮೂರ್ಖನು. [೧೭] ಭಗವಂತನ ಸ್ತುತಿ ಮಾಡುವ-ದನ್ನು ಬಿಟ್ಟು ಮನುಷ್ಯರ ಸ್ತುತಿ ಮಾಡುವವ, ಅಥವಾ ತನ್ನೊಡನೆ ಸಂಪರ್ಕ ಬಂದವರನ್ನು ಅವರೆದುರಿಗೆ ಅತಿಶಯ ಸ್ತುತಿ ಮಾಡುವವನು ಪಢತ ಪಂಡಿತ ಮೂರ್ಖನು. [೧೮] ಸ್ತ್ರೀಯರ ಅಂಗಾಂಗಗಳ ವರ್ಣನೆ ಮಾಡುವವ ಅಥವಾ ಸ್ತ್ರೀಯರ ವೇಶ ಧರಿಸಿ ಅದಕ್ಕನುಸಾರವಾಗಿ ಹಾವಭಾವ ಅಭಿನಯ ಮಾಡಿ ತೋರಿಸುವವ ಮತ್ತು ತತ್ಪರಿಣಾಮದಿಂದ ಭಗವಂತನನ್ನು ಮರೆಯುವವನು ಪಢತ ಪಂಡಿತಮೂರ್ಖನು[೧೯] ಶ್ರೀಮಂತಿಕೆಯ ಘಮೇಂಡ ಸೊಕ್ಕಿನಲ್ಲಿ ಎಲ್ಲರನ್ನೂ ಹೀನರೆಂದು ತಿಳಿಯುವವನು,ಶಾಸ್ತ್ರಗಳಿಗೆ ವಿರುದ್ಧವಾಗಿ ಪ್ರತಿಪಾದನ ಮಾಡುವವನು ಮತ್ತು ಇಂಥ ಜನರಿಗೆ ತಾನು ಆಧಾರನಾಗಿ ನಿಲ್ಲುವವನು ಪಢತ ಪಂಡಿತನು ಮೂರ್ಖನು. [೨೦] ವಿದ್ವಾನನಿರುವವನು ಮತ್ತು ವಿರಕ್ತನಿರುವವನು, ಬ್ರಹ್ಮಜ್ಞಾನಿ ಇರುವವನು, ಮಹಾಯೋಗಿ ಇರುವನು, ಆದರೆ ಇಷ್ಟೆಲ್ಲ ಯೋಗ್ಯತೆ ಅಧಿಕಾರ ಪಡೆದಿದ್ದರೂ ಆಮಿಷದಿಂದ ಜನರಿಗೆ ಭವಿಷ್ಯ ಹೇಳುವವನು ಪಢತ ಪಂಡಿತ ಮೂರ್ಖನು. [೨೧] ಏನಾದರೂ ಉತ್ತಮ ಅರ್ಥಗರ್ಭಿತ ಶ್ರವಣ ನಡೆದಿರುವಾಗ ಅದರ ಕಡೆಗೆ ಲಕ್ಷ್ಯ ಕೊಡದೇ ಕೇವಲ ಅದರಲ್ಲಿಯ ಗುಣದೋಷಗಳ ಎಣಿಕೆ [ಪಟ್ಟಿ] ಮಾಡುವವನು ಮತ್ತು ಎರಡನೆಯವರಿಗೆ ಒಳಿತು ಆದರೆ ಅಥವಾ ಅವರನ್ನು ಹೊಗಳಿದರೆ ಆ ಬಗ್ಗೆ ಮತ್ಸರ ಪಡುವವನು ಪಢತ ಪಂಡಿತ ಮೂರ್ಖನು. [೨೨] **ಭಗವಂತನನ್ನು ಮರೆಯುವ ದಂತೂ ಪಢತ ಪಂಡಿತ ಮೂರ್ಖರ ಲಕ್ಷಣವೇ ಆಗಿದೆ. ಇದಲ್ಲದೆ, ಯಾವುದಕ್ಕೂ ಮತ್ತು ಯಾರಿಗೂ ಕಿಮ್ಮತ್ತು ಕೊಡುವದಿಲ್ಲ, ಮಾತನಾಡುವದೊಂದು, ಮಾಡುವದು ಮತ್ತೊಂದು ಹಾಗೂ ಮಾನವನಾಗಿ ಬಂದು ಸ್ವಹಿತ, ಆತ್ಮಹಿತ ಮಾಡಿಕೊಳ್ಳದವನು. ಇವರೆಲ್ಲರೂ ದೊಡ್ಡ ಮಹಾಪಂಡಿತ ಪಢತ ಮೂರ್ಖ ರೆಂದು ತಿಳಿಯಬೇಕು** :- ಎಂದೂ ಭಕ್ತಿ ಮಾರ್ಗದ ಸಾಧನೆ ಮಾಡಿಲ್ಲ, ವೈರಾಗ್ಯವಿಲ್ಲ. ಮತ್ತು ಭಜನೆ ಪೂಜೆ ಗಳನ್ನು ಮಾಡಿಲ್ಲ. ಹೀಗಿದ್ದೂ ಆಚಾರರಹಿತವಾದ ಬ್ರಹ್ಮ ಜ್ಞಾನದ ಬಗ್ಗೆ ಮಾತನಾಡುವನು. ಇಂಥವನು ಪಢತ ಪಂಡಿತ ಮೂರ್ಖನು. [೨೩] ತೀರ್ಥ, ಕ್ಷೇತ್ರ, ವೇದ ಮತ್ತು ಶಾಸ್ತ್ರ ಇವುಗಳಲ್ಲಿ ಯಾವುದನ್ನೂ ಮನ್ನಿಸದವನು, ಪವಿತ್ರಕುಲದಲ್ಲಿ ಹುಟ್ಟಿ ಬಂದು ಅಪವಿತ್ರನಾಗಿ ಅಂದರೆ ಭ್ರಷ್ಟತನದಿಂದ ನಡೆಯುವವನು ಪಢತ ಪಂಡಿತ ಮೂರ್ಖನು. [೨೪] ಆದರ ಮಾಡಿದವರನ್ನು ಮಾತ್ರ ಮುಖಸ್ತುತಿ ಮಾಡಿ ಹಾ, ಜಿ. ಅನ್ನುವದು ಮತ್ತು ನಿಜವಾದ ಯೋಗ್ಯತೆ ಇಲ್ಲದವನನ್ನು ಮೊದಲು ಸ್ತುತಿ ಮಾಡುವದು, ನಂತರ ಮರುಕ್ಷಣದಲ್ಲಿ ನಿಂದೆ ಹಾಗೂ ಅನಾದರ ಮಾಡಲಿಕ್ಕೆ ತಯಾರಾಗುವನು. ಇವನೊಬ್ಬ ಪಢತ ಪಂಡಿತ ಮೂರ್ಖನು [೨೫] [ಮೋರೆಯ] ಮುಖದ ಮುಂದೆ ಒಂದು ಮಾತನಾಡುವದು ಮತ್ತು ಅವನ ಬೆನ್ನ ಹಿಂದೆಯೇ ಮತ್ತೊಂದು ಮಾತನಾಡುವದು ಇದು ಯಾವಾಗಲೂ ಇವನ ರೀತಿಯೇ ಆಗಿದೆ. ಮಾತು ಒಂದಾದರೆ ಮಾಡುವದೇ ಬೇರೊಂದು ಇರುವದು. ಇಂಥವನು ಪಢತ ಪಂಡಿತ ಮೂರ್ಖನು [೨೬] ಪ್ರಪಂಚದ ಬಗ್ಗೆ ಅತ್ಯಂತ ಆದರ ಇರುವವನು, ಪರಮಾರ್ಥದ ಬಗ್ಗೆ ಮಾತ್ರ ಅತ್ಯಂತ ಅನಾದರ ಹೊಂದಿದವನು, ತಿಳಿದೂ ತಿಳಿದೂ ಕಣ್ಣು ಮುಚ್ಚಿ ಪ್ರಪಂಚದ ಬೆನ್ನುಹತ್ತುವವನು ಇಂಥವರು ಪಢತ ಪಂಡಿತ ಮೂರ್ಖರು. [೨೭] ಯಾವುದು ಯೋಗ್ಯವಿರುವದೋ, ನಿಜವಿರುವದೋ ಅದನ್ನು ಬಿಟ್ಟು ಎರಡನೆಯವರ ಭಿಡೆ ಮುರವತ್ತಿಗೆ ಅಥವಾ ಮರ್ಜಿ ಸಂಪಾದನೆಗಾಗಿ ಅಯೋಗ್ಯವಾದುದನ್ನು ನಿಜವಲ್ಲದ್ದನ್ನು ಸಹ ಹೇಳಲು ಹಿಂದು ಮುಂದೆ ನೋಡದವನು ಮತ್ತು ಪರಾಧೀನ ಜೀವನ ನಡೆಸುವವನು ಇವರೆಲ್ಲ ಪಢತ ಪಂಡಿತ ಮೂರ್ಖರು. [೨೮] ಒಳ್ಳೆಯ ನಡತೆಯವನಂತೆ ಮೇಲ್ತೋರಿಕೆಗೆ ಚನ್ನಾಗಿ ನಟನೆ ಮಾಡುವದು ಅಥವಾ ಮೇಲ್ತೋರಿಕೆಯ ನಡತೆಯು ಸೋಗಿನಂತೆ ಸರಿಯಾಗಿ ನಡೆದಿರುತ್ತದೆ. ಆದರೆ ಮಾಡಬಾರದ ಕರ್ಮವನ್ನು ಮುಸುಕಿನಲ್ಲಿ ಮಾಡುವನು. ತಾನು ಮಾಡುವದು ತಪ್ಪೆಂದು ತಿಳಿದೂ ತಿಳಿದೂ ಸಹ ತಿದ್ದಿಕೊಳ್ಳದೇ ಹಟದಿಂದ ತನ್ನ ತಪ್ಪುದಾರಿ ಯಲ್ಲಿಯೇ ನಡೆಯುವವನು, ಅದೇ ಸರಿಯೆಂದು ವಾದಿಸುವವನು ಪಢತ ಪಂಡಿತ ಮೂರ್ಖನು. [೨೯]

ರಾತಂದಿವಸ ಕರೀ ಶ್ರವಣ । ನ ಸಂಡೀ ಆಪಲೆ ಅವಗುಣ ।
ಸ್ವಹಿತ ಆಪಲೇ ಆಪಣ । ನೇಣೇ ತೋ ಯೇಕ ಪಢತ ಮೂರ್ಖ ॥೩೦॥
ನಿರೂಪಣೀ ಭಲೇ ಭಲೇ । ಶ್ರೋತೇ ಯೇಊನ ಬೈಸಲೇ ।
ಕ್ಷುದ್ರೇ ಲಕ್ಷುನೀ ಬೋಲೇ । ತೋ ಯೇಕ ಪಢತ ಮೂರ್ಖ ॥೩೧॥
ಶಿಷ್ಯ ಜಾಲಾ ಅನಾಧಿಕಾರೀ । ಆಪಲೀ ಅವಜ್ಞಾ ಕರೀ ।
ಪುನ್ಹಾ ತ್ಯಾಚೀ ಆಶಾ ಧರೀ । ತೋ ಯೇಕ ಪಢತ ಮೂರ್ಖ ॥೩೨॥
ಹೋತ ಅಸತಾ ಶ್ರವಣ । ದೇಹಾಸ ಆಲೇ ಉಣೇಪಣ ।
ಕ್ರೋಧೇ ಕರೀ ಚಿಣಚಿಣ । ತೋ ಯೇಕ ಪಢತ ಮೂರ್ಖ ॥೩೩॥
ಭರೋನ ವೈಭವಾಚೆ ಭರೀ । ಸದ್‍ಗುರೂಚೀ ಉಪೇಕ್ಷಾ ಕರೀ ।
ಗುರು ಪರಂಪರಾ ಚೋರೀ । ತೋ ಯೇಕ ಪಢತ ಮೂರ್ಖ ॥೩೪॥
ಜ್ಞಾನ ಬೋಲೋನ ಕರೀ ಸ್ವಾರ್ಥ । ಕೃಪಣಾ ಐಸಾ ಸಾಂಚೀ ಅರ್ಥ ।
ಅರ್ಥಾಸಾರೀ ಲಾವೀ ಪರಮಾರ್ಥ । ತೋ ಯೇಕ ಪಢತ ಮೂರ್ಖ ॥೩೫॥
ವರ್ತಲ್ಯಾವೀಣ ಸಿಕವೀ । ಬ್ರಹ್ಮಜ್ಞಾನ ಲಾವಣೀ ಲಾವೀ ।
ಪರಾಧೇನ ಗೋಸಾವೀ । ತೋ ಯೇಕ ಪಢತ ಮೂರ್ಖ ॥೩೬॥
ಭಕ್ತಿಮಾರ್ಗ ಅವಘಾ ಮೋಡೆ । ಆಪಣಾ ಮಧ್ಯೇ ಉಪಂಢರ ಪಡೆ ।
ಐಸಿಯೇ ಕರ್ಮೀ ಪವಾಡೇ । ತೋ ಯೇಕ ಪಢತ ಮೂರ್ಖ ॥೩೭॥
ಪ್ರಪಂಚ ಗೇಲಾ ಹಾತೀಚಾ । ಲೇಶ ನಾಹೀ ಪರಮಾರ್ಥಾಚಾ ।
ದ್ವೇಷೀ ದೇವಾ ಬ್ರಾಹ್ಮಣಾಚಾ । ತೋ ಯೇಕ ಪಢತ ಮೂರ್ಖ ॥೩೮॥
ತ್ಯಾಗಾವಯಾ ಅವಗುಣ । ಬೋಲಿಲೇ ಪಢತ ಮೂರ್ಖಾಚೇ ಲಕ್ಷಣ ।
ವಿಚಕ್ಷಣೇ ನೀಉನ ಪೂರ್ಣ । ಕ್ಷಮಾ ಕೇಲೇ ಪಾಹಿಜೇ । ॥೩೯॥
ಪರಮ ಮೂರ್ಖಾ ಮಾಜೀ ಮೂರ್ಖ । ಜೋ ಸಂಸಾರೀ ಮಾನೀ ಸುಖ ।
ಯಾ ಸಂಸಾರ ದುಃಖಾ ಐಸೇ ದುಃಖ । ಆಣೀಕ ನಾಹೀ ॥೪೦॥
ತೇ ಚಿ ಪುಢೇ ನಿರೂಪಣ । ಜನ್ಮ ದುಃಖಾಚೇ ಲಕ್ಷಣ ।
ಗರ್ಭವಾಸ ಹಾ ದಾರುಣ । ಪುಢೇ ನಿರೋಪಿಲಾ ॥೪೧॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
ಪಢತ ಮೂರ್ಖ ಲಕ್ಷಣ ನಾಮ ಸಮಾಸ ದಹಾವಾ ॥

ದಶಕ ದುಸರಾ ಸಮಾಪ್ತ

ಪ್ರತಿ ದಿನ ಹಗಲೂರಾತ್ರಿಯೂ[ಯಾವಾಗಲೂ] ಉತ್ತಮ ಉಪದೇಶದ ಶ್ರವಣ ಮಾಡಿದರೂ ಸಹ ತನ್ನ ಅವಗುಣಗಳನ್ನುಬಿಡದವನು ಮತ್ತು ಸ್ವತಃಹದ ಹಿತವು ಯಾವುದರಲ್ಲಿರುವದೆಂಬುದನ್ನು ತಾನೇ ಅರಿಯದವನು ಪಢತ ಪಂಡಿತ ಮೂರ್ಖನು. [೩೦] **ಲೋಕ ಸಂಗ್ರಹ ಮಾಡಲಿಕ್ಕಾಗದವನು, ಸದ್ಗುರುವನ್ನು ಮರೆಯುವವನು,ತನ್ನ ಪ್ರಪಂಚಕ್ಕಾಗಿಯೇಪರಮಾರ್ಥದಉಪಯೋಗ ಪಡೆಯುವವನು ಹಾಗೂಕೊನೆಯಲ್ಲಿಇತ್ತಪ್ರಪಂಚವಿಲ್ಲದ ಅತ್ತ ಪರಮಾರ್ಥವೂಇಲ್ಲದಅವಸ್ಥೆಉಂಟಾಗುವಂತೆ ಇರುವವನು ಪಢತಪಂಡಿತ ಮೂರ್ಖನೆಂದು ತಿಳಿಯಿರಿ ಎಂದು ಶ್ರೀಸಮರ್ಥರು ಹೇಳುತ್ತಾರೆ:-** ವಕ್ತಾನ ಪ್ರವಚನ ನಿರೂಪಣಾದಿಗಳನ್ನು ಕೇಳಲು ದೊಡ್ಡ ದೊಡ್ಡ ಸಜ್ಜನರು ಮತ್ತು ಪಾರಮಾರ್ಥಿಕ ಅಧಿಕಾರಿ ಶ್ರೋತೃಗಳು ಬಂದು ಕುಳಿತಾಗ ಪ್ರವಚನದಲ್ಲಿ ವಕ್ತಾರನು ಬಂದವರ ಕ್ಷುದ್ರ ನ್ಯೂನತೆಗಳನ್ನು ಎತ್ತಿ ಎತ್ತಿ ಚುಚ್ಚಿ ಮಾತನಾಡುವವನೊಬ್ಬ ಪಢತ ಪಂಡಿತ ಮೂರ್ಖನು. [೩೧] ಶಿಷ್ಯನು ಪರಮಾರ್ಥ ಮಾರ್ಗದಿಂದ ಜಾರಿದರೆ, ಅಧಿಕಾರಿ ಆದರೆ, ಅಂಥವನು ಗುರುವಿನ ಅಪಮಾನ ಮಾಡಿದರೆ, ತಾತ್ಸಾರ ಮಾಡಿದರೆ ಅಂತಹ ಶಿಷ್ಯನ ಉಪೇಕ್ಷೆ ಮಾಡದೇ ಅವನ ಆಶೆಯನ್ನೇ ಹಿಡಿಯುವವನು ಪಢತ ಪಂಡಿತ ಮೂರ್ಖನು. [೩೨] ಕೀರ್ತನ. ಪ್ರವಚನ, ಅಥವಾ ಪುರಾಣ ವಗೈರೆ ಶ್ರವಣ ಮಾಡಲಿಕ್ಕೆ ಕುಳಿತಾಗ ಅಕಸ್ಮಾತ್ ದೇಹ ಧರ್ಮಗುಣಗಳ ಮೂಲಕ ನ್ಯೂನತೆ ಬಂದರೆ. ಕೆಮ್ಮು, ಸೀನು, ಅಪಾನವಾಯು. ನಡಸೋವು ಬಂದರೆ ಸಿಟ್ಟಿನಿಂದ ಮುಸುಗುಡುತ್ತಾ [ಘುಸ್ ಘುಸ್ ಘುಸ್ ಘುಸ್ ಮಾಡುತ್ತ] ಚಡಪಡಿಸುವ ಶ್ರೋತೃವು ಪಢತ ಪಂಡಿತ ಮೂರ್ಖನು. [೩೩] ತನ್ನ ಐಶ್ವರ್ಯದ ಸೊಕ್ಕು, ಗರ್ವ, ಘಮೆಂಡದಿಂದ ಮತ್ತು ಅಮಲಿನ ಉನ್ಮಾದದಲ್ಲಿ ಸದ್ಗುರುವಿಗೆ ಕಿಮ್ಮತ್ತು ಕೊಡದೇ ಇರುವವನು ಮತ್ತು ತಿರಸ್ಕಾರ ಮಾಡುವವನು ತನ್ನ ಗುರುಪರಂಪರೆಯನ್ನು ಯಾರಿಗೂ ಹೇಳದೇ ಬಚ್ಚಿಡುವವನು ಪಢತ ಪಂಡಿತ ಮೂರ್ಖನು. [೩೪] ಜ್ಞಾನದ ದೊಡ್ಡ ದೊಡ್ಡ ಮಾತುಗಳ ಥಾಪು ಬಡಾಯಿ ಹೊಡೆದು ಸುಳ್ಳೊಂದು ಸೊಟ್ಟೊಂದು ಹೇಳಿ ತನ್ನ ಸ್ವಾರ್ಥ ಸಾಧಿಸಿಕೊಳ್ಳುವವ ಹಾಗೂ ಅತೀ ಜೀನ ಮನುಷ್ಯನಂತೆ ಹಣ ಸಂಗ್ರಹಿಸುವವ, ದುಡ್ಡಿಗಾಗಿಯೇ ಪರಮಾರ್ಥವನ್ನು [ಬ್ರಹ್ಮಜ್ಞಾನವನ್ನು] ಉಪಯೋಗಿಸಿಕೊಳ್ಳುವವನು ಪಢತ ಪಂಡಿತ ಮೂರ್ಖನು. [೩೫] ಸ್ವತಃ ನುಡಿದಂತೆ ನಡೆಯದೆ ಜನರಿಗೆ ಅದರಂತೆ ನಡೆಯಲಿಕ್ಕೆ ಉಪದೇಶ ಮಾಡುವವ. ಸ್ವತಃ ತಾನು ಬ್ರಹ್ಮಜ್ಞಾನಿ ಇರದೇ ಜನರಲ್ಲಿ ಬ್ರಹ್ಮಜ್ಞಾನದ ಬೀಜ ಬಿತ್ತುವದಕ್ಕೆ ವ್ಯರ್ಥ ಶ್ರಮಪಡುವವ, ಅಥವಾ ಬ್ರಹ್ಮಜ್ಞಾನವನ್ನು ಮುಂಗಡ ರೊಕ್ಕಕ್ಕಾಗಿ [ಅಗಾವಲಾವಣಿಯಂತೆ] ಮಾರಿಕೊಳ್ಳುವವನು, ಮತ್ತು ದುರಾಶೆಯಿಂದ ಬ್ರಹ್ಮಜ್ಞಾನ ಪ್ರಸಾರದ ಬೆನ್ನು ಹತ್ತುವವನು, ವಿರಕ್ತನಂತೆ ಕಾಣಿಸಿಕೊಳ್ಳುವ ಇವನು ಆ ಲಾಂಛನದ ಅಭಿಮಾನವಿಲ್ಲದೇ ಪರತಂತ್ರದಿಂದ ಇನ್ನೊಬ್ಬರಅಧೀನನಾಗಿ ನಡೆಯುವವನು ಬ್ರಹ್ಮಜ್ಞಾನದ ಉಪಯೋಗವನ್ನು ತನ್ನ ಸ್ವತಃದ ಲಾಭಕ್ಕಾಗಿ ಬಳಸುವವನು ಪಂಡಿತನಾದ ಪಢತ ಮೂರ್ಖನು[೩೬] ಯಾವ ಕೆಲಸ (ಕಾರ್ಯ) ಮಾಡುವದರಿಂದ ಭಕ್ತಿ ಮಾರ್ಗ ಮುರಿದು ಬೀಳುವ [ಮುಗ್ಗರಿಸುವ]ಸ್ಥಿತಿಗೆ ಬರುವದೋ ಮತ್ತು ಇದರಿಂದ ಸ್ವತಃದ ಜೀವನ ಅಸ್ತವ್ಯಸ್ತವಾಗಿ ಹೋಗುವದೋ ಅಂಥ ಕರ್ಮ ಮಾಡಲಿಕ್ಕೆ ಹಿಂದೆ ಮುಂದೆ ನೋಡದವನು ಪಢತ ಪಂಡಿತ ಮೂರ್ಖನು. [೩೭] ಪ್ರಪಂಚವು ಅಶಾಶ್ವತವೆಂದು, ಅದು ಕೈಬಿಟ್ಟು ಹೋಯಿತು. ಪರಮಾರ್ಥವು ಖೋಟಾ [ಸುಳ್ಳು] ಎಂದು ತಿಳಿದುಕೊಂಡಿದ್ದರಿಂದ ಅದನ್ನು ಮಾಡಲಿಲ್ಲ. [ತೇಲನಹಿ, ತೂಪನಹಿ] ಇಂಥ ಪರಿಸ್ಥಿತಿ ಇದ್ದರೂ ಸಹ ದೇವ ಬ್ರಾಹ್ಮಣರ ದ್ವೇಷ ಮಾಡುವಂಥವನು ಪಢತ ಪಂಡಿತ ಮೂರ್ಖನು. [೩೮] **ಈಸಮಾಸದಉಪಸಂಹಾರಮಾಡಿ ಶ್ರೀಸಮರ್ಥರು ಮುಂದಿನದಶಕದಬಗ್ಗೆಪೂರ್ವಸೂಚನೆ ಕೊಡುತ್ತಾರೆ:-** ನೀವು ದುರ್ಗುಣವನ್ನು ಅವಗುಣಗಳನ್ನು ಬಿಡಬೇಕೆಂಬ ಉದ್ದೇಶವನ್ನು ಮನದಲ್ಲಿ ತಂದು ಪಢತ ಪಂಡಿತಮೂರ್ಖನ ಕೆಲವೊಂದು ಲಕ್ಷಣಗಳನ್ನು ನಾನು ಹೇಳಿರುವೆನು. ವಿಚಾರವಂತರು, ನಾನು ಹೇಳುವದರಲ್ಲಿ ಏನಾದರೂ ಹೆಚ್ಚು ಕಡಿಮೆ ಆಗಿದ್ದರೆ ಅವುಗಳನ್ನು ಸರಿಪಡಿಸಬೇಕು. ಮತ್ತು ನನ್ನನ್ನು ಕ್ಷಮಿಸಬೇಕು. [೩೯] ಈ ಸಂಸಾರದಲ್ಲಿ ಸುಖವಿದೆ ಎಂದು ಭಾವಿಸುವವನು ಮೂರ್ಖರಲ್ಲಿ ಮಹಾಮೂರ್ಖನೆಂದು ತಿಳಿಯಬೇಕು. ಯಾಕೆಂದರೆ ಈ ಸಂಸಾರದಷ್ಟು ದುಃಖವು ಇನ್ನೊಂದಾವುದರಲ್ಲಿಯೂ ಇಲ್ಲ. [೪೦] ಮುಂದಿನ ದಶಕದಲ್ಲಿ ಈ ಸಂಗತಿಯನ್ನೇ ವಿಸ್ತಾರವಾಗಿ ವರ್ಣಿಸಿರುತ್ತದೆ. ಜನ್ಮ ತಳೆದ ನಂತರ ಆಗುವ ದುಃಖ ಮತ್ತು ಗರ್ಭವಾಸದ ಭಯಂಕರ ದುಃಖ ಇವುಗಳ ವರ್ಣನೆಯನ್ನು ಮುಂದೆ ಮಾಡಿರುವೆವು. [೪೧]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದ ಎರಡನೆಯ ದಶಕದಲ್ಲಿಯ
"ಪಢತ ಮೂರ್ಖ ಲಕ್ಷಣ" ಎಂಬ ಹೆಸರಿನ ಹತ್ತನೆಯ ಸಮಾಸವು ಮುಗಿದುದು.

# ದಶಕ ೩. ಸ್ವಗುಣ ಪರೀಕ್ಷಾ

ಈ ಸಮಾಸದಲ್ಲಿ ಶ್ರೀ ಸಮರ್ಥರು ಮಾನವ ಜೀವನದಲ್ಲಿಯ ಮೂಲ ಸಮಸ್ಯೆಗಳನ್ನು ಶ್ರೋತೃಗಳ ಮುಂದೆ ಇಡುತ್ತಾರೆ. ಜಗತ್ತಿನಲ್ಲಿಯ ಸರ್ವಸಾಮಾನ್ಯ ಮನುಷ್ಯನು ಕೊನೆಯವರೆಗೂ ಜೀವಿಸಿದ್ದಷ್ಟು ಕಾಲ ಸುಖದ ಸಲುವಾಗಿ ಧಡಪಡಿಸುತ್ತಾನೆ. ಆದರೆ, ಅವನ ಪಾಲಿಗೆ ಸುಖವಂತೂ ದೊರಕುವದಿಲ್ಲ. ವಿರುದ್ಧವಾಗಿ ದುಃಖವು ಮಾತ್ರ ದೊಡ್ಡ ಪ್ರಮಾಣದಲ್ಲಿ ಅನೇಕ ಪ್ರಕಾರಗಳಿಂದ ಬಹು ರೀತಿಯಿಂದ ಭೋಗಿಸಬೇಕಾಗುವದು. ಇದು ಹೀಗೇಕೆ ? ಎಂಬ ಪ್ರಶ್ನೆಗೆ ಸಂತ ಶರಣರ ಅರ್ಥಾತ್ ಶ್ರೀ ಸಮರ್ಥರ ಉತ್ತರವು ಈ ಬಗೆಯಾಗಿರುವದು:- ಮನುಷ್ಯನು ಸಲ್ಲದ, ಅಸಾಧ್ಯವಾದ ಧ್ಯೇಯವನ್ನು ತನ್ನ ಗುರಿಯಾಗಿ ಇಟ್ಟುಕೊಂಡು ತನ್ನ ಜೀವನವನ್ನು ಆ ಗುರಿಯ ಕಡೆಗೆ ಕೇಂದ್ರೀಕೃತ ಮಾಡುವನು. ಇದರ ಪರಿಣಾಮದಿಂದ ದುಃಖ ಭೋಗಿಸದ ಹೊರತು ಗತ್ಯಂತರವೇ ಇರುವದಿಲ್ಲ. ಶ್ರೀ ಸಮರ್ಥರು ಕೊನೆಯಲ್ಲಿ ಈ ಬಗ್ಗೆ ತಮ್ಮ ನಿಶ್ಚಿತವಾದ, ನಿರ್ಧರಿತವಾದ ನಿರ್ಣಯದಲ್ಲಿ ಹೇಳುವದೇನೆಂದರೆ- ಮನುಷ್ಯನು ತನ್ನ ಗುರಿಯನ್ನು ಭಗವಂತನ ಕಡೆಗೆ ಕೇಂದ್ರೀಕರಿಸಿ ನಿಜವಾದ ಸುಖ ಪಡೆಯುವ ಧ್ಯೇಯವನ್ನು ಇಟ್ಟುಕೊಳ್ಳುವದೊಂದೇ ನಿಜವಾದ ಉಪಾಯವೆಂದು ಹೇಳಿರುವರು. ಮನುಷ್ಯ ಜನ್ಮದ ವೈಶಿಷ್ಟ್ಯಗಳು ಮೂರು ಇರುವವು.—೧) ಮನುಷ್ಯನಿಗೆ ನಾನು ಎಂಬ ಅಹಂಕಾರದ ತಿಳುವಳಿಕೆ ಇರುತ್ತದೆ, ೨) ಮನುಷ್ಯನಿಗೆ ಕಾಲನ ಜ್ಞಾಪಕವಿರುತ್ತದೆ. ೩) ಭಗವಂತನ ಬಗ್ಗೆ ತಿಳಿದುಕೊಳ್ಳುವ ಇಚ್ಛೆ ಇರುತ್ತದೆ. ನಾನು ಎಂಬ ತಿಳುವಳಿಕೆಯಿಂದಲೇ ಅವನಿಗೆ ಪ್ರಯತ್ನ ಮಾಡುವ ಸ್ವಾತಂತ್ರವಿರುವದು. ಅವನು ಅತಿ ಉತ್ತಮನಾಗಬಹುದು. ಅಥವಾ ಅತಿ ಹೀನನೂ ಆಗಬಹುದು. ಮನುಷ್ಯನು ಕಾಲನ ಬಗ್ಗೆ ವಿಚಾರ ಮಾಡುತ್ತಿರುವದರಿಂದ ಅವನಿಗೆ ಮೃತ್ಯುವಿನ ಬಗ್ಗೆ ತಿಳುವಳಿಕೆ ಇರುವದು. ಈ ರೀತಿಯ ತಿಳುವಳಿಕೆಯ ಬುದ್ಧಿ ಶಕ್ತಿಯಿಂದಲೇ ಜ್ಞಾನವೃದ್ಧಿಯಾಗುವದು. ಮನುಷ್ಯನಿಗೆ ಭಗವಂತನ ಬಗ್ಗೆ ಜಿಜ್ಞಾಸೆ ಅಂದರೆ ತಿಳಿದುಕೊಳ್ಳುವ ಇಚ್ಛೆ ಇರುವದರಿಂದ ಅವನು ನಿಃಸ್ವಾರ್ಥಿಯಾಗುವನು. ಅದರಿಂದ ಜಗತ್ತಿನ ಮೇಲೆ ಪ್ರೇಮ ಮಾಡುವ ಪ್ರವೃತ್ತಿಯಾಗುವದು. ಈ ದಶಕದಲ್ಲಿ ಮೇಲೆ ಹೇಳಿದ ಮೂರು ಮುದ್ದೆಗಳ ಮೇಲೆ ಶ್ರೀ ಸಮರ್ಥರು ತಮ್ಮ ವಿಚಾರವನ್ನು ಬಹು ಸ್ಪಷ್ಟ ರೀತಿಯಿಂದ ತಿಳಿಸಿ ಹೇಳಿದ್ದಾರೆ.

## ದಶಕ ತಿಸರಾ : ಸಮಾಸ ಪಹಿಲಾ : ಜನ್ಮ ದುಃಖ ನಿರೂಪಣ

॥ಶ್ರೀರಾಮ॥ ಜನ್ಮ ದುಃಖಾಚಾ ಅಂಕುರ । ಜನ್ಮ ಶೋಕಾಚಾ ಸಾಗರ ।
ಜನ್ಮ ಭಯಾಚಾ ಡೋಂಗರ । ಚಳೇನಾ ಐಸಾ ॥೧॥
ಜನ್ಮ ಕರ್ಮಾಚೀ ಆಟಣೀ । ಜನ್ಮ ಪಾತಕಾಚೀ ಖಾಣೀ ।
ಜನ್ಮ ಕಾಳಾಚೀ ಜಾಚಣೀ । ನಿಚ ನವೀ ॥೨॥

## ಸಮಾಸ ೧ ಜನ್ಮ ದುಃಖ ನಿರೂಪಣೆ (ನುಡಿ ೫೩)

ಸಂತರು, ಶರಣರು ಹೇಳುವದೇನೆಂದರೆ : ಜೀವವು ಯಾವಾಗ ತನ್ನ ಸ್ವರೂಪವನ್ನು ಮರೆಯುವದೋ ಆಗ ಅದು ಭಗವಂತನಿಂದ ದೂರಾಗುತ್ತದೆ. ಅದು ದೂರಾದ ಕೂಡಲೇ ಅಪೂರ್ಣವಾಗುವದು. ಕೂಡಲೇ ಅದರಲ್ಲಿ ವಾಸನಾ ಉತ್ಪನ್ನವಾಗುವದು. ವಾಸನಾದ ಹರಿದಾಟ ಪ್ರಾರಂಭವಾದ ಕೂಡಲೇ ದೇಹ ಬುದ್ಧಿಯ ಉದಯವಾಗುವದು. ಈ ದೇಹ ಬುದ್ಧಿಯು ಜೀವದ ಜನ್ಮಕ್ಕೆ ಕಾರಣವಾಗುವದು. ದೇಹ ಬುದ್ಧಿಯಿಂದ ಬಂದ ಜನ್ಮವು ಸ್ವಾರ್ಥದ ಸಂಕುಚಿತತನದಿಂದ ಅನೇಕ ಪ್ರಕಾರದ ಶಾರೀರಿಕ ಹಾಗೂ ಮಾನಸಿಕ ದುಃಖದ ಭಂಡಾರವೇ ಆಗುವದು. ಮನುಷ್ಯನ ಜನ್ಮದ ಈ ಸೂಕ್ಷ್ಮ ಮತ್ತು ಗೂಢ ಕಾರಣಗಳನ್ನು ಹೇಳಿ ಅನಂತರ ತಾಯಿಯ ಗರ್ಭಾಶಯದಲ್ಲಿ ದೇಹದ ಬೆಳವಣಿಗೆ ಆಗುವಾಗ ಅಲ್ಲಿ ಜೀವಕ್ಕೆ ಎಷ್ಟು ದುಃಖ ಅನುಭವಿಸಬೇಕಾಗುವದೆಂಬುದರ ವರ್ಣನೆಯನ್ನು ಶ್ರೀ ಸಮರ್ಥರು ಚನ್ನಾಗಿ ವಿವರಿಸಿದ್ದಾರೆ. ಜನ್ಮದಿಂದ ಮಾನವ ಜೀವನವು ಆರಂಭಗೊಂಡು ಕೊನೆಗೆ ಮೃತ್ಯುವಿನ ಕೂಡ ಅದರ ಕೊನೆಯಾಗುತ್ತದೆ. ಈ ಆರಂಭ ಹಾಗೂ ಅಂತ್ಯದ ನಡುವೆ (ಮಧ್ಯದಲ್ಲಿ) ಸಾಮಾನ್ಯ ಮನುಷ್ಯ ಎಂಥ ದುಃಖಮಯ ಜೀವನ ನಡೆಸುವದೆಂಬುದರ ರೂಪರೇಷೆಯನ್ನು ಸಮರ್ಥರು ಈ ಸಮಾಸದಲ್ಲಿ ತಿಳಿಸಿದ್ದಾರೆ.

## ದಶಕ ೩ ಸಮಾಸ ೧ ಜನ್ಮ ದುಃಖ ನಿರೂಪಣ (ನುಡಿ ೫೩)

ಮೊದಲಿನ ಹತ್ತು ನುಡಿಗಳಲ್ಲಿ ಶ್ರೀ ಸಮರ್ಥರು ಮಾನವ ಜನ್ಮದ ಬಗ್ಗೆ ತತ್ವಜ್ಞಾನ ದೃಷ್ಟಿಯಿಂದ ಮತ್ತು ಸ್ವರೂಪಾನುಭವದ ಪಾರ್ಶ್ವಭೂಮಿಯ ಮೇಲಿಂದ ಕಂಡು ಬರುವ ಲಕ್ಷಣಗಳನ್ನು ಹೇಳಿದ್ದಾರೆ. ಅವ್ಯಕ್ತ ಅವಸ್ಥೆಯು ನಮ್ಮ ಸ್ವಾಭಾವಿಕ ಸ್ಥಿತಿ ಇರುವದು. ಆದರೆ ದೇಹ ಧಾರಣ ಮಾಡಿ ವ್ಯಕ್ತಸ್ಥಿತಿಗೆ ಬರುವದೆಂದರೆ ಕೆಳಗೆ ಸರಿಯುವದೇ ಆಗಿದೆ, ಈ ಕಾರಣದಿಂದಲೇ ಅಪೂರ್ಣತೆಯ ಸರ್ವ ಅಡಚಣಿ, ತೊಂದರೆಗಳನ್ನು ಸಹಿಸಬೇಕಾಗುವದು. ಇದರಿಂದಾಗಿ ದೃಶ್ಯದ ವಶದಲ್ಲಿ ಹೋಗಬೇಕಾಗುವದು. ಮತ್ತು ಸಮಾಧಾನವನ್ನು (ತಾಳ್ಮೆಯನ್ನು) ರಕ್ಷಿಸುವದು ಕಠಿಣವಾಗುವದು.– ಜನ್ಮ ಅಂದರೆ ದುಃಖರೂಪಿ ವೃಕ್ಷದ ಅಂಕುರ (ಮೊಳಕೆ) ವು. ವಾಸನಾ ಇದು ಜನ್ಮದ ಬೀಜವಾಗಿದೆ. ಜಗತ್ತಿನಲ್ಲಿಯ ದುಃಖಕ್ಕೆ ಇದೇ ಮೂಲಕಾರಣವಾಗಿದೆ. ಆದರೆ ಇದು ಅತಿ ಸೂಕ್ಷ್ಮವಿರುವದು. ಗುಪ್ತವಿರುತ್ತದೆ. ಜನ್ಮವು ಇದರ ದೃಶ್ಯರೂಪವಿರುವದು. ಅಂಕುರವು ಆರಂಭವಾಗಿದೆ. ಅದು ಹೇಗೆ ಹೇಗೆ ಬೆಳೆಯುತ್ತದೆಯೋ ಹಾಗೆ ಹಾಗೆ ದುಃಖವು ಪ್ರಕಟ ರೂಪವನ್ನು ತಳೆಯುವದು. ಜನ್ಮ ಅಂದರೆ ಶೋಕದ ಸಮುದ್ರವಾಗಿದೆ. ಸರ್ವಕಾಲ, ಸರ್ವ ಋತುಗಳಲ್ಲಿ ಸಮುದ್ರವು ಪೂರ್ಣ ತುಂಬಿದ್ದೇ ಇರುವದು. ಇದೇ ಪ್ರಕಾರ ಮಾನವೀ ಜೀವನವೂ ಸಹ ಸರ್ವಕಾಲವು ಸರ್ವತ್ರದಲ್ಲಿ ದುಃಖದ ಉಪ್ಪು ನೀರಿನಿಂದ ತುಂಬಿಯೇ ಇರುವದು. ಜನ್ಮವು ಎಂದೂ ಚಲಿಸಲಾರದ ಭೀತಿಯ ಪರ್ವತವಾಗಿದೆ. ಮಾನವ ಜೀವನದಲ್ಲಿ ಭೀತಿಯು ಆಳವಾಗಿ ಸೇರಿ ಕುಳಿತಿರುವದು. ಮನುಷ್ಯನು ಎಷ್ಟೇ ಪ್ರಯತ್ನ ಮಾಡಿದರೂ ಭೀತಿಯೂ ತನ್ನ ಸ್ಥಳದಿಂದ ಎಷ್ಟೂ ಯಾವ ಕಡೆಗೂ ಸರಿಯುವದಿಲ್ಲವೆಂದ ಮೇಲೆ ಭೀತಿ ಇಲ್ಲದಾಗುವ ಮಾತಂತೂ ದೂರೇ ಉಳಿಯಿತು. (೧) ಜನ್ಮವು ಕರ್ಮದ ಮೂಸೆ (ಬಂಗಾರ ವಗೈರೆ ಕರಗಿಸುವ ಪಾತ್ರೆ) ಇರುವದು. ಜೀವದ ಸರ್ವಕರ್ಮದ ಸಂಗ್ರಹದ ಪೈಕಿ ಕೆಲವು ಭಾಗವನ್ನು ಭೋಗಿಸುವದಕ್ಕಾಗಿ ಜೀವವು ಜನ್ಮ ತಳೆಯುವದೆಂದು ವೇದಾಂತ ಶಾಸ್ತ್ರ ಹೇಳುತ್ತದೆ. ಕರ್ಮವು ಸೂಕ್ಷ್ಮ ಅವಸ್ಥೆಯಲ್ಲಿ ಇರುವದು. ಇದರ ಭೋಗ (ಸುಖದುಃಖಗಳ ಅನುಭವ) ಹೊಂದುವದಕ್ಕಾಗಿಯೇ ದೇಹದ ಆಶ್ರಯ ಪಡೆಯುವ ಅವಶ್ಯಕತೆ ಇರುವದು. ಅದಕ್ಕಾಗಿ ಸೂಕ್ಷ್ಮ ಕರ್ಮವು ದೇಹರೂಪದ ಆಕಾರ ಹೊಂದಿ ಹುಟ್ಟಿ ಬರುವದು. ಅರ್ಥಾತ್ ಜನ್ಮವು ಕರ್ಮಮಯವಾಗಿದೆ. (ಕರ್ಮವು ಸುಖ ದುಃಖಗಳಿಗೆ ಕಾರಣವಾದ ಪೂರ್ವಜನ್ಮದ ಕೃತಿ ಇರುವದು) ಜನ್ಮವು ಪಾಪದ ಖಣಿ ಇರುವದು. ಭಗವಂತನ ಸ್ಮರಣವೇ ಪುಣ್ಯವು. ಅವನ ವಿಸ್ಮರಣವೇ ಪಾಪವು. ಭಗವಂತ ಅದೃಶ್ಯನು. ಆದರೆ ಜಗವು ದೃಶ್ಯವಾಗಿದೆ. ಈ ದೃಶ್ಯದ ಜೋರು (ಶಕ್ತಿ) ಬಹಳ ವಿಲಕ್ಷಣವಿರುತ್ತದೆ. ಜಗತ್ತಿನಲ್ಲಿ ಜನ್ಮ ತಳೆದು ಬಂದಮೇಲೆ ದೃಶ್ಯದ ಭಾರ, ಒತ್ತಡದ ಕೆಳಗೆ ಸಿಕ್ಕು ಭಗವಂತನನ್ನು ಅದು ಮರೆತೇ ಬಿಡುತ್ತದೆ. ಅವನನ್ನು ಮರೆತು ಮಾಡಿದ್ದೆಲ್ಲ ಪಾಪವೇ ಇರುವದು. ಜನ್ಮವೆಂದರೆ ಕಾಲನ ನಿತ್ಯದ ಹೊಸ ಹೊಸ ಪೀಡೆ (ತ್ರಾಸು) ಆಗಿದೆ. ದೃಶ್ಯದಲ್ಲಿ ಕ್ಷಣ ಕ್ಷಣಕ್ಕೂ ಬದಲಾವಣೆಯನ್ನು ಉಂಟು ಮಾಡುತ್ತಿರುವ ಶಕ್ತಿಯೇ ಕಾಲನಾಗಿದೆ. ಕಾಲನ ಮುಖವು ಯಾವಾಗಲೂ ವಿನಾಶದ ಕಡೆಗೆ ಇರುತ್ತದೆ. ದಿನಂಪ್ರತಿ ಹೊಸ ಬದಲಾವಣೆ ಮತ್ತು ಹೊಸ ನಾಶ (ವಿಧ್ವಂಸ)ದ ಎಡೆ ಮಾಡಿ ಮುಂದಿಡುತ್ತಿರುವದರಿಂದ ಇದಕ್ಕೆ ಕಾಲನ ಪೀಡೆ—ಕಾಟ ಎಂದು ಅನ್ನುವರು. (೨)

ಜನ್ಮ ಕುವಿದ್ಯೆಚೇ ಫಳ । ಜನ್ಮ ಲೋಭಾಚೇ ಕಮಳ ।
ಜನ್ಮ ಭ್ರಾಂತೀಚೇ ಪಡಳ । ಜ್ಞಾನಹೀನ ॥೩॥

ಜನ್ಮ ಜಿವಾಸೀ ಬಂಧನ । ಜನ್ಮ ಮೃತ್ಯಾಸೀ ಕಾರಣ ।
ಜನ್ಮ ಹೇ ಚಿ ಅಕಾರಣ । ಗಥಾಗೋವೀ ॥೪॥

ಜನ್ಮ ಸುಖಾಚಾ ವಿಸರ । ಜನ್ಮ ಚಿಂತೇಚಾ ಆಗರ ।
ಜನ್ಮ ವಾಸನಾ ವಿಸ್ತಾರ । ವಿಸ್ತಾರಲಾ ॥೫॥

ಜನ್ಮ ಜೀವಾಚೀ ಆವದಸಾ । ಜನ್ಮ ಕಲ್ಪನೇಚಾ ಠಸಾ ।
ಜನ್ಮ ಲಾವೇಚಾ ವಳಸಾ । ಮುಮುತಾರೂಪ ॥೬॥

ಜನ್ಮವು ಕುವಿದ್ಯೆಯ ಫಲವಾಗಿದೆ.ಕುವಿದ್ಯೆಯೆಂದರೆ ಅಜ್ಞಾನವು.ಅಜ್ಞಾನವಿರುವವರೆಗೂ ವಾಸನಾ ಇದ್ದೇ ಇರುತ್ತದೆ. ವಾಸನಾ ಇರುವವರೆಗೂಜನ್ಮತಳೆಯುವದು ತಪ್ಪುವದಿಲ್ಲ.ಜನ್ಮವೆಂದರೆ ಲೋಭದಕಮಲವು.ಲೋಭವೆಂದರೆಆಸಕ್ತಿಯು ಇದು ಕಠಿಣವಾದ ಕಟ್ಟಿಗೆಯನ್ನು ಕೊರೆಯುವ ಗುಂಗೀಹುಳವು. ಇಂಥ ಹುಳವು ಕಮಲದಲ್ಲಿ ಸಿಕ್ಕಿ ಬೀಳುತ್ತದೆ. ಇದರಂತೆಯೇ ಬ್ರಹ್ಮಸ್ವರೂಪದ ಜೀವವು ಆಸಕ್ತಿಯಲ್ಲಿ ಸಿಕ್ಕು ದೇಹದಲ್ಲಿ ಜನ್ಮ ಹೊಂದುವದು. ಮತ್ತು ದೇಹದಲ್ಲಿಯೇ ಸಿಕ್ಕಿ ಬೀಳುವದು. ಜನ್ಮವೆಂದರೆ ಜ್ಞಾನಹೀನ. ಭ್ರಾಂತಿಯ ಪಡದೆ (ಪರದೆ) ಯಾಗಿರುವದು. ಜನ್ಮ ಹೊಂದುವ ಮೊದಲು ಜೀವಕ್ಕೆ ಸ್ವಸ್ವರೂಪದ ತಿಳುವಳಿಕೆ ಇರುವದು. ಆಗ ಅದರ ಜ್ಞಾನವು ಸ್ವಚ್ಛವಾಗಿರುವದು. ಆದರೆ ಜನ್ಮಕ್ಕೆ ಬಂದು ಜಗದ ಗಾಳಿ ಅದಕ್ಕೆ ಬಡೆದ ಕೂಡಲೆ ಸ್ವರೂಪದ ಬಗ್ಗೆ ಅಜ್ಞಾನ ಉಂಟಾಗುತ್ತದೆ. "ನಾನು ದೇಹವೇ ಇರುವೆ" ಎಂಬ ಭ್ರಮೆಯ ಪಡದೆಯು ಜ್ಞಾನದ ಮೇಲೆ ಬಿದ್ದು ಜೀವವು ಭ್ರಮೆಗೊಳಗಾಗುವದು. (೩) ಜನ್ಮವೆಂದರೆ ಜೀವನಿಗೆ ಬಂಧನಕರವು, ದೇಹ ಧರಿಸಿದ ಕೂಡಲೇ ದೇಹದ ಮರ್ಯಾದೆ (ನಿಯಮ)ಗಳೆಲ್ಲ ಜೀವದ ಮೇಲೆ ಹೇರಲ್ಪಡುವವು. ಜೀವವು ತನ್ನ ಸ್ವಾತಂತ್ರ್ಯವನ್ನೆಲ್ಲ ಕಳೆದುಕೊಳ್ಳುವದು. ಕೊನೆಯವರೆಗೂ ಬಂಧನದಲ್ಲಿ ಜೀವಿಸಿದ ನಂತರ ಬಂಧನದಲ್ಲಿಯೇ ದೇಹವಿಡುವದು. ಜನ್ಮವು ಮೃತ್ಯುವಿಗೆ (ಹುಟ್ಟು-ಸಾವು) ಕಾರಣವು. (ಹುಟ್ಟಿದ್ದಕ್ಕೆ ಸಾವು ನಿಶ್ಚಿತ). ಜನನ ಮರಣ ಇವು ಪರಸ್ಪರಾವಲಂಬಿ ಅಥವಾ ನಿಶ್ಚಿತ ಘಟನೆ ಇರುವದು. ಒಂದು ಇದ್ದುದಾದರೆ ಇನ್ನೊಂದೂ ಇರುವದು. ಅಂತೆಯೇ ಜನ್ಮ ತಳೆದುದರ ಹಿಂದಿನಿಂದಲೇ ಮೃತ್ಯುವೂ ಕೂಡಾ ಬರುತ್ತದೆ. ಜನ್ಮವೆಂದರೆ ದೃಶ್ಯದ ಜಂಜಾಟ (ಘೋಟಾಳ, ಗೊಂದಲ)ದಲ್ಲಿ ವಿನಾಕಾರಣ ಸಿಕ್ಕಿ ಹಾಕಿಕೊಳ್ಳುವದಾಗಿದೆ. ಸೂಕ್ಷ್ಮ ಶರೀರವು ದೃಶ್ಯದಲ್ಲಿ ಬರಬೇಕೆಂದು ಧಡಪಡಿಸುತ್ತದೆ. ಪರಿಶ್ರಮಿಸುತ್ತದೆ. ಈ ಕಾರಣದಿಂದ ಜನ್ಮ ಬರುವದು. ದೃಶ್ಯವು ಅತ್ಯಂತ ಕ್ಲಿಷ್ಟ ಹಾಗೂ ಗೊಂದಲದ್ದಾಗಿದೆ. ಒಮ್ಮೆ ಇದರಲ್ಲಿ ಅವತರಿಸಿದರೆ ಸಾಮಾನ್ಯನಾದ ಮನುಷ್ಯನು ಇದರಲ್ಲಿ ಸಿಕ್ಕಿಕೊಂಡು ಬಿಡುವನು. ಇದರಿಂದ ಜೀವಕ್ಕೆ ಬಹಳ ದುಃಖವಾಗುವದು.ಆದರೆಈ ಎಲ್ಲವನ್ನು ಅದು ಹೊರುವ ಕಾರಣವಿತ್ತೇ?ಅರ್ಥಾತ್ ಇರಲಿಲ್ಲ. (೪) ಜನ್ಮ ಅಂದರೆ ಸುಖದ ವಿಸ್ಮೃತಿ (ಮರೆವು) ಎಂದು ತಿಳಿಯಿರಿ. ತನ್ನಲ್ಲಿಯೇ ತನ್ನ ಸುಖವಿದೆಯೆಂಬುದನ್ನು ಮರೆತದ್ದರಿಂದ ಜೀವವು ದೇಹದ ಮುಖಾಂತರ ಹೊರಗಿನಿಂದ ಸುಖ ಪಡೆಯುವದಕ್ಕಾಗಿ ಧಡಪಡಿಸುತ್ತದೆ. ಈ ಧಡಪಡವು (ಚಡಪಡಿಕೆ, ಒದ್ದಾಟ) ಜನ್ಮದ ಮೂಲ (ಪ್ರಾರಂಭ)ದಲ್ಲಿಯೇ ಇರುವದು. ಜನ್ಮವೆಂದರೆ ಚಿಂತೆಯ ತೋಟವು. ಚಿಂತೆಯು ಭೀತಿಯ ಪ್ರಿಯಕನ್ಯೆಯು. ಎಲ್ಲಿ ಭೀತಿಯು ಇರುವದೋ ಅಲ್ಲಿ ಚಿಂತೆ ಇದ್ದೇ ಇರುವದು. ಆದುದರಿಂದಲೇ ಮಾನವೀ ಜೀವನದಲ್ಲಿ ಅಳತೆ ಇಲ್ಲದಷ್ಟು ಚಿಂತೆಯು ಹುಟ್ಟುತ್ತದೆ. ಜನ್ಮವೆಂದರೆ ವಾಸನಾದ ದೊಡ್ಡ ವಿಸ್ತಾರವು. ವಾಸನಾ ಜನ್ಮಕ್ಕೆ ಕಾರಣವಾಗುವದು. ಆದರೆ ಇದು ಸೂಕ್ಷ್ಮವಿರುವದು. ಸಂಕ್ಷಿಪ್ತ ಮುಚ್ಚಿದ್ದು ಇರುವದು. ದೇಹ ದೊರೆತಮೇಲೆ ಇದು ಅಳತೆತಪ್ಪಿ(ಮೇರೆ ಮೀರಿ)ಬೆಳೆಯುತ್ತದೆ. ಸ್ವರ್ಗಲೋಕದ ಪರ್ಯಂತರವೂ ಇದುಬೆಳೆಯುತ್ತದೆ.(೫)ಜನ್ಮವೆಂದರೆ ಜೀವವನ್ನುಸ್ವಸ್ವರೂಪದಿಂದ ಕೆಳಗೆಜಗ್ಗುವ, ಸ್ವಾನಂದದಿಂದ ಹೊರಗೆಎಳೆಯುವ ಅವಸ್ಥೆಯೇ (ಸನ್ನಿವೇಶ) ಆಗಿದೆ. ಜನ್ಮಕ್ಕೆ ಬಂದ ಕೂಡಲೇ ಜೀವವು ಸ್ವಸ್ವರೂಪದಿಂದ ಚ್ಯುತ (ಪತನ)ವಾಗುವದು. ಜನ್ಮವೆಂದರೆ ಕಲ್ಪನೆಯ ಛಾಪ ಅಥವಾ ಶಿಕ್ಕಾ ಇರುವದು. ಈ ಕಲ್ಪನೆಯೇ ದೃಶ್ಯ ಸೃಷ್ಟಿಗೆ ಮೂಲ ಕಾರಣವು. "ನಾನು ದೇಹವೇ ಇರುವೆನು" ಎಂಬ ಈ ಸೂಕ್ಷ್ಮ ಕಲ್ಪನೆಯು ಜೀವವು ಜನ್ಮ ತಳೆಯಲು ಕಾರಣವಿರುವದು.ಜೀವದ ಮೇಲೆ ಕಲ್ಪನೆಯ ಛಾಪ ಇರುತ್ತದೆ. ಜನ್ಮವೆಂದರೆ ಮಮತಾರೂಪದ ಡಾಕಿನಿ (ಪಿಶಾಚಿ)ಯ ಸಂಚಾರವಾಗಿದೆ. (ಜನ್ಮಕ್ಕೆ ಡಾಕಿನಿ ಭೂತ ಬಡೆದುಕೊಂಡಿರುವದು) "ನಾನು" ಎಂಬ ಅಹಂ ವೃತ್ತಿಯಲ್ಲಿ ಜೀವವು ಒಂದೇ ಒಂದು ಸಲ ಸಿಕ್ಕಿ ಹಾಕಿಕೊಂಡಿತೆಂದರೆ ಅದರ ಅಮಲು (ಅಧಿಕಾರ) ಬಿಟ್ಟೇನೆಂದರೂ ಬಿಡುವದಿಲ್ಲ. ಸತ್ತನಂತರವೂ ಸಹ ಬಿಡುವದಿಲ್ಲ. (೬)

ಜನ್ಮ ಮಾಯೆಚೇ ಮೈಂದಾವೇ । ಜನ್ಮ ಕ್ರೋಧಾಚೇ ವಿರಾವೇ ।
ಜನ್ಮ ಮೋಕ್ಷಾಸ ಆಡವೇ । ವಿಘ್ನ ಆಹೇ ॥೭॥

ಜನ್ಮ ಜಿವಾಚೇ ಮೀಪಣ । ಜನ್ಮ ಅಹಂತೇಚಾ ಗುಣ ।
ಜನ್ಮ ಹೇಚಿ ವಿಸ್ಮರಣ । ಈಶ್ವರಾಚೇ ॥೮॥

ಜನ್ಮ ವಿಷಯಾಂಚೀ ಆವಡೀ । ಜನ್ಮ ದುರಾಶೇಚೀ ಬೇಡಿ ।
ಜನ್ಮ ಕಾಳಾಚೀ ಕಾಂಕಡೀ । ಭಕ್ಷಿತಾಹೇ ॥೯॥

ಜನ್ಮ ಹಾ ಚಿ ವಿಷಮ ಕಾಳ । ಜನ್ಮ ಹೇಚಿ ವೋಖಟೀ ವೇಳ ।
ಜನ್ಮ ಹಾಅತಿ ಕುಶ್ಚೀಳ । ನರ್ಕ ಪತನ । ॥೧೦॥

ಪಾಹಾತಾ ಶರೀರಾಚೇ ಮೂಳ । ಯಾ ಐಸೇ ನಾಹೀ ಅಮಂಗಳ ।
ರಜಸ್ವಲೇಚಾ ಜೋ ವಿಟಾಳ । ತ್ಯಾಮಧ್ಯೇ ಜನ್ಮ ಯಾಸೀ । ॥೧೧॥

ಅತ್ಯಂತ ದೋಷ ಜ್ಯಾ ವಿಟಾಳಾ । ತ್ಯಾ ವಿಟಾಳಾಚಾ ಚಿ ಪುತಳಾ ।
ತೇಥೇ ನಿರ್ಮಳ ಪಣಾಚಾ ಸೋಹಳಾ । ಕೇವೀ ಘಡೆ ॥೧೨॥

ರಜಸ್ವಲೇಚಾ ಜೋ ವಿಟಾಳ । ತ್ಯಾಚಾ ಆಳೋನ ಜಾಲಾ ಗಾಳ ।
ತ್ಯಾ ಗಾಳಾಚೇ ಚ ಕೇವಳ । ಶರೀರ ಹೇ ॥೧೩॥

ಜನ್ಮವೆಂದರೆ ಮಾಯೆಯು ರಚಿಸಿದ ಕಪಟತನವು, ಮೋಸಗಾರಿಕೆಯು. ದೃಶ್ಯವು ನಿಜವೆನಿಸುವದು. ಆದರೆ ಈ ಅನಿಸಿಕೆಯು ನಿಜವಲ್ಲ. ಆದರೆ ಮಾಯೆಯ ಲೀಲಾಜಾಲದಿಂದ ಜೀವವು ಮೋಸ ಹೋಗುವದು, ಮತ್ತು ಸತ್ಯ ಬುದ್ಧಿ (ಸರಳ, ಸ್ವಾಭಾವಿಕ ನಂಬಿಕೆ) ಯಿಂದ ದೃಶ್ಯದ ಬೆನ್ನು ಹತ್ತುವದು. ಈ ದೇಹ ಬುದ್ಧಿಯು ಮಾಯೆಯ ಕಪಟತನವಿರುವದು. ಜನ್ಮವೆಂದರೆ ಕ್ರೋಧದ ಶೂರತನವಾಗಿದೆ. ತೀರ ಸಣ್ಣ ಮೊಲೆ ಕುಡಿಯುವ ಬಾಲಕನಿಂದ ಅತಿ ಸೂಜ್ಞ. ವೃದ್ಧನವರೆಗೂ ಯಾವ ಮನುಷ್ಯನೂ ಸಿಟ್ಟಿನ ಅಧೀನನಾಗದೇ ಉಳಿದಿಲ್ಲ. ಜನ್ಮವೆಂದರೆ ಮೋಕ್ಷಕ್ಕೆ ಅಡ್ಡಿ ಮಾಡುವ ದೊಡ್ಡ ವಿಘ್ನವಾಗಿದೆ. ಅವಿದ್ಯೆಯಿಂದ ಜೀವವು ಜನ್ಮ ತಳೆಯುವದು. ಈ ಅವಿದ್ಯೆಯೇ ಮುಖ್ಯವಾಗಿ ಆತ್ಮ ಬುದ್ಧಿಯ ಅಂದರೆ ಮೋಕ್ಷ ಮಾರ್ಗದಲ್ಲಿ ಅಡ್ಡಬರುವದು.(೭) ಜನ್ಮವೆಂದರೆ ಜೀವದ ಅಹಂ ಆಗಿದೆ. ನಿಜವಾಗಿ ನೋಡಿದರೆ ಭಗವಂತನ ಸತ್ತೆಯಿಂದಲೇ ಜೀವದ ಸರ್ವ ವ್ಯವಹಾರ ನಡೆಯುವದು, ಅದು ಭಗವಂತನದೇ ಇರುವದು.ಭಗವಂತನನ್ನು ಬಿಟ್ಟು ಜೀವವು ಬೇರೆಯಾಯಿತೆಂದ-ಕೂಡಲೇ ದ್ವೈತ ನಿರ್ಮಾಣವಾಗುವದು. ಮತ್ತು ಜೀವಕ್ಕೆ ಜನ್ಮ ಬರುವದು. ಜೀವವು ಅಹಂ ದಿಂದ ಬೇರೆ ಯಾಗುವದು. ಜನ್ಮವು ಅಹಂ ತನದ ಗುಣವಾಗಿದೆ."ನಾನು"ಎಂಬುದು ಕಾರ್ಯಪ್ರವೃತ್ತವಾದ ಕೂಡಲೇ ಅಹಂಕಾರವು ಮುಂದೆ ಬರುವದು. ಅಹಂಕಾರವೆಂದರೆ ತೋರಿ ಬರುವ (ದರ್ಶನಿ) "ನಾನು" ಎಂದು ತಿಳಿಯಬೇಕು. ಅರ್ಥಾತ್ ಅಹಂಕಾರವು ಜೀವನವನ್ನು ಜನ್ಮ ತಳೆಯುವ ಕಡೆಗೆ ನೂಕುವದು, ಜನ್ಮವೆಂದರೇನೇ ಈಶ್ವರ (ಭಗವಂತ)ನ ವಿಸ್ಮರಣವು, ಈಶ್ವರನ ಸ್ಮರಣವೆಂದರೆ ವಿದ್ಯೆಯು. ಈಶ್ವರನ ವಿಸ್ಮರಣವೆಂದರೆ ಅವಿದ್ಯೆಯಿಂದ ವಾಸನಾ ಉತ್ಪನ್ನ ವಾಗುವದು. ಮತ್ತು ಈ ವಾಸನಾದ ಹೊಟ್ಟೆಯಿಂದ ಜನ್ಮ ಬರುವದು. (೮) ಜನ್ಮ ವೆಂದರೆ ವಿಷಯದ ಪ್ರೇಮವು. ವಿಷಯ ಶಬ್ದದ ಅರ್ಥ- "ವಿಶೇಷಣ ಸಿಂಚತಿ ಇಂದ್ರಿಯಾಣಿ ಮನಶ್ಚ" ಯಾವ ಸ್ಥಳದಲ್ಲಿ ಇಂದ್ರಿಯ ಮತ್ತು ಮನ ಮುಳುಗಿ ಹೋಗುವಂಥ ಅಥವಾ ಮಗ್ನವಾಗುವಂಥ ಪದಾರ್ಥ ಅಂದರೆ ಇಂದ್ರಿಯ ಭೋಗ ಅರ್ಥಾತ್ ದೇಹದಿಂದ ಸುಖ ಪಡೆಯುವ ಸ್ವಾಭಾವಿಕ ಪ್ರೀತಿಯು, ಜನ್ಮವು ದುರಾಸೆಯ ಬೇಡಿಯಾಗಿದೆ. ಎಂದೂ ತೃಪ್ತವಾಗದಂಥ ಆಶೆಯೆಂಬ ಸರಪಳಿಯಿಂದ ಮನುಷ್ಯನು ಕಟ್ಟಲ್ಪಟ್ಟಿರುವನು. ಜನ್ಮವೆಂದರೆ ಕಾಲನ ಸವತೀಕಾಯಿಯಾಗಿದೆ. ಅವನು ಅದನ್ನು ತಿನ್ನುವನು. ಅಷ್ಟೇ ಸಹಜವಾಗಿ ಕಾಲನು ಶರೀರವೆಂಬ ಸವತೀಕಾಯಿಯನ್ನೇ ತಿಂದು ಹಾಕುವನು, (೯) ಜನ್ಮವೇ ಕೆಟ್ಟ- ದುರ್ಘಟ ಕಾಲವಾಗಿದೆ. ಎಂದು ತಿಳಿಯಬೇಕು. ಭಗವಂತನ ಮರೆವು ಆಗುವವೆಂದರೆ ಅದು ಜೀವದ ಕೆಟ್ಟ ಕಾಲವೆಂದು ತಿಳಿಯಬೇಕು. ಅಂತೂ ಜನ್ಮವು ಒಂದು ಕೆಟ್ಟ ಪ್ರಸಂಗವು. ದೇಹವೇ ಎಲ್ಲ ದುಃಖಗಳಿಗೆ ಆಮಂತ್ರಣ ಕೊಡುವದೆಂದಮೇಲೆ ದೇಹ ಯಾವುದೇ ಹೊತ್ತಿನಲ್ಲಿ ಹುಟ್ಟಿದರೂ ಅದು ದುಃಖ ಕೊಡದೇ ಇರಲಾರದು. ಜನ್ಮವೆಂದರೆ (ಹೇಸಿ) ಹೊಲಸು ನರಕದಲ್ಲಿ ಬಿದ್ದಂತೆ ಇರುವದು. ಆತ್ಮ ಬುದ್ಧಿಯಿಂದ ಸರಿದು ಬುದ್ಧಿಯಲ್ಲಿ ಬೀಳುವದು, ಅಂದರೆ ಸ್ವರ್ಗದಿಂದ ನರಕದಲ್ಲಿ ಬಿದ್ದಂತೆ- ಯೆಂದು ತಿಳಿಯಬೇಕು. (೧೦) ಮುಂದಿನ ಹದಿನೆಂಟು ನುಡಿಗಳಲ್ಲಿ ಶ್ರೀ ಸಮರ್ಥರು ಶರೀರದ ಬಗ್ಗೆ ಜನ್ಮದ ಕ್ರಿಯೆ ಮತ್ತು ಅದರಮೂಲ ಮಸಾಲೆಯ ವರ್ಣನೆ ಮಾಡುವರು. ಇದನ್ನು ಓದಿದರೆ ಶರೀರದ ಬಗ್ಗೆ ಜಿಗುಪ್ಸೆ, ಬೇಸರ, ಓಕರಿಕೆ ಬರುತ್ತದೆ. ಈ ದೇಹ ಹೇಗೆ ನಿರ್ಮಾಣ ವಾಗುತ್ತದೆಂಬುದರ ಮೂಲವನ್ನು ನೋಡ ಹೋದರೆ ಆಗ ನಮಗೆ ಇದರಂಥ ಅಮಂಗಲ, ಅರಿಷ್ಟವಾದದ್ದು ಇನ್ನೊಂದಿಲ್ಲವೆಂದು ಖಾತರಿಯಿಂದ ಅನಿಸುತ್ತದೆ. ಸ್ತ್ರೀಯ (ರಜಸ್ವಲಿ) ಮುಟ್ಟಿನಿಂದ ಶರೀರವು ತಯಾರ ಆಗುವದು. (೧೧)ಮುಟ್ಟನ್ನು ಅತಿಶಯ ಅಶುದ್ಧವೆಂದು ತಿಳಿಯುವರು. ದೇಹವು ಈ ಮುಟ್ಟಿನ ಗೊಂಬೆ ಆಗಿದೆ. ಇದನ್ನು ಎಷ್ಟುಸಲ ಸ್ವಚ್ಛ ಮಾಡಿದರೂ ಕೊನೆಯಲ್ಲಿ ಅಶುದ್ಧವೇ ಆಗಿರುವದು. ಇದನ್ನು ನಿರ್ಮಲವಾಗಿಡಬೇಕೆಂಬ ಇಚ್ಛೆ ಕೈಗೂಡುವದಿಲ್ಲ. (೧೨) ಸ್ತ್ರೀಯ ಮುಟ್ಟಿನ ರಕ್ತ ದಟ್ಟವಾಗುತ್ತ ಹೋಗಿ ಕೊನೆಗೆ ಗಟ್ಟಿಯಾಗುತ್ತವೆ. (ಗುಂಡಗಾಗುವದು. ಇದಕ್ಕೆ ವೀರ್ಯದ ಸಂಪರ್ಕವಾಗಿರುವದು) ಈ ಗಟ್ಟಿಯಾದ ಮುಟ್ಟಿನ ರಕ್ತದಿಂದ ಶರೀರ ವುಂಟಾಗುವದು. (೧೩)

ವರಿವರಿ ದಿಸೇ ವೈಭವಾಚೇ । ಅಂತರೀ ಪೋತಡೇ ನರ್ಕಾಚೇ ।
ಜೈಸೇ ಝಾಂಕಣೇ ಚರ್ವಾ ಕುಂಡಾಚೆ । ಉಘಡಿತಾಂ ಚ ನಯೇ ॥೧೪॥
ಕುಂಡ ಧುತಾ ಶುದ್ಧ ಹೋತೇ । ಯಾಸ ಪ್ರತ್ಯಕ್ಷ ಧುಕ್ಷಜೇತೇ ।
ತರೀ ದುರ್ಗಂಧೀ ದೇಹಾತೇ । ಶುದ್ಧತಾ ನಯೇ ॥೧೫॥
ಅಸ್ಥೀಪಂಜರ ಉಭವಿಲಾ । ಸೀರಾನಾಡೀ ಗುಂಡಾಳಿಲಾ ।
ಮೇದಮಾಂಸೇ ಸರಸಾವಿಲಾ । ಸಾಂದೋಸಾಂದೀ ಭರೂನಿ ॥೧೬॥
ಅಶುದ್ಧ ಶಬ್ದೇ ಶುದ್ಧ ನಾಹೀ । ತೇ ಹಿ ಭರಲೇ ಅಸೇ ದೇಹೀ
ನಾನಾ ವ್ಯಾಧೀ ದುಃಖೇ ತೇ ಹಿ । ಅಭ್ಯಾಂತರೀ ವಸತೀ ॥೧೭॥
ನರ್ಕಾಚೇ ಕೋಠಾರ ಭರಲೇ । ಆತ ಬಾಹೇರೀ ಲಿಡೀಬಿಡಿಲೇ ।
ಮೂತ್ರ ಪೋತಡೇ ಜನ್ಮಲೇ । ದುರ್ಗಂಧೀಚೇ ॥೧೮॥
ಜಂತ ಕಿಡೇ ಆಣೀ ಆಂತಡೀ । ನಾನಾ ದುರ್ಗಂಧೀಚೀ ಪೋತಡೀ ।
ಅಮುಪ ಲವಥ ವಿತೀ ಕಾತಡೀ । ಕಾಂಟಾಳ ವಾಣೇ ॥೧೯॥
ಸರ್ವಾಂಗಾಸ ಸಿರ ಪ್ರಮಾಣ । ತೇಥೇ ಬಳಸೇ ವಾಹೇ ಘ್ರಾಣ ।
ಉಠೇ ಘಾಣೇ ಫುಟತಾ ಶ್ರವಣ । ತೇ ದುರ್ಗಂಧೀ ನೇ ಘವೇ ॥೨೦॥
ಡೋಳಾ ನಿಘತೀ ಚಿಪಡೇ । ನಾಕೀ ದಾಟತೀ ಮೆಕಡೇ ।
ಪ್ರಾತಃಕಾಳೀ ಘಾಣೇ ಪಡೆ । ಮುಖೀ ಮಳಾಸಾರಿಖೀ ॥೨೧॥
ಲಾಳ ಥುಂಕಾ ಆಣೀ ಮಳ । ಪೀತ ಶ್ಲೇಷ್ಮಾ ಪ್ರಬಳ ।
ತಯಾಸ ಮ್ಹಣತೀ ಮುಖಕಮಳ । ಚಂದ್ರಾಸಾರಿಖೇ ॥೨೨॥
ಮುಖ ಏಸೇ ಕುತ್ಸಿಳ ದಿಸೇ । ಪೋಟೀ ವಿಷ್ಠಾ ಭರಲೀ ಅಸೆ ।
ಪ್ರತ್ಯಕ್ಷಾಸ ಪ್ರಮಾಣ ನಸೇ । ಭೂಮಂಡಳೀ ॥೨೩॥
ಪೋಟೀ ಘಾಲಿತಾ ದಿವ್ಯಾನ್ನ । ಕಾಹೀ ವಿಷ್ಠಾ ಕಾಹೀ ವಮನ ।
ಭಾಗೀರಥೀಚೇ ಘೇತಾ ಜೀವನ । ತ್ಯಾಚೀ ಹೋಯೇ ಲಘು ಶಂಕಾ ॥೨೪॥
ಏವ ಮಳಮೂತ್ರ ಆಣೀ ವಮನ । ಹೇ ಚಿ ದೇಹಾಚೇ ಜೀವನ ।
ಯೇಣೇ ಚಿ ದೇಹ ವಾಢೇ ಜಾಣ । ಯದರ್ಥೀ ಸಂಶಯು ನಾಹೀ ॥೨೫॥
ಪೋಟೀ ನಸ್ತಾ ಮಳಮೂತ್ರ ವೋಕ । ಮರೋನ ಜಾತೀ ಸಕಳ ಲೋಕ ।
ಜಾಲಾರಾವ ಅಥವಾ ರಂಕ । ಪೋಟೀ ವಿಷ್ಠಾ ಚುಕೇನಾ ॥೨೬॥
ನಿರ್ಮಳಪಣೇ ಕಾಢೂ ಜಾತಾ । ತರೀ ದೇಹ ಪಡೇಲ ತತ್ವತಾ ।
ಏವಂ ದೇಹಾಚೀ ವ್ಯವಸ್ಥಾ । ಏಸೀ ಅಸೇ ॥೨೭॥

ಶರೀರವು ಮೇಲ್ನೋಟಕ್ಕೆ ಚಂದವಾಗಿ ಆಕರ್ಷಕವಾಗಿ ಕಂಡರೂ ಒಳಗೆ ಹೊಲಸು ಮಲದ ಚೀಲವೇ ಆಗಿರುವದು.ಚರ್ಮಕಾರನ ಚರ್ಮ ಹದಗೊಳಿಸುವ ಬಾನಿ ಅಥವಾ ಕುಂಡವು ಅತೀಹೊಲಸು ದುರ್ಗಂಧದಿಂದ ತುಂಬಿರುತ್ತದೆ. ಅವರ ಮುಚ್ಚಳ ತೆಗೆಯಲು ಮನಸ್ಸಾಗುವದಿಲ್ಲ. ಇದರಂತೆಯೇ ದೇಹದ ಅವಸ್ಥೆ ಇರುವದು. ದೇಹದ ಒಳಗೆ ನೋಡಲು ಸಾಧ್ಯವಾಗುವದಿಲ್ಲ. (೧೪) ಚರ್ಮದ ಕುಂಡ ತೊಳೆದರೆ ಅದು ಸ್ವಚ್ಛವಾಗುವದು. ಆದರೆ ದೇಹವನ್ನು ದಿನಾಲೂ ತೊಳೆದರೂ ಸಹ ದುರ್ಗಂಧದಿಂದ ಮತ್ತು ಹೊಲಸಿನಿಂದ ತುಂಬಿದ ಈ ಶರೀರವು ಮಾತ್ರ ನಿರ್ಮಲವಾಗುವದಿಲ್ಲ. (೧೫) ದೇಹ ಹೇಗೆ ತಯಾರ ಮಾಡಲಾಗಿದೆಯೆಂದರೆ ಎಲುಬಿನ ಪಂಜರ ನಿಲ್ಲಿಸಿ, ಅದಕ್ಕೆ ನರನಾಡಿಗಳಿಂದ ಸುತ್ತಿ, ಪ್ರತಿ ಸಂದಿನಲ್ಲಿ ಮೇದಸ್ಸು (ಚರಬಿ) ಮತ್ತು ಮಾಂಸವನ್ನು ತುಂಬಿ, ಅದನ್ನು ಚನ್ನಾಗಿ ಉಬ್ಬಿಸಲಾಗಿದೆ. (೧೬) ರಕ್ತವು "ಅಶುದ್ಧ"ವೆಂದು ತಿಳಿಯಲಾಗುವದು ಅರ್ಥಾತ್ ರಕ್ತವು ಶುದ್ಧವಿರುವದಿಲ್ಲ. ಇದೂ ಸಹ ದೇಹದಲ್ಲಿ ತುಂಬಿರುವದು. ಇದಲ್ಲದೇ ಅನೇಕ ರೋಗ ಮತ್ತು ಅನೇಕ ಪ್ರಕಾರದ ದುಃಖದ ವಾಸವು ಈ ದೇಹವಲ್ಲಿ ಇರುವದು. (೧೭) ಶರೀರವೆಂದರೆ ಒಳಗೂ ಹೊರಗೂ ಹೊಲಸಿನಿಂದ ಲೇಪಿಸಿದ, ಮೆತ್ತಿದ, ಸವರಿದ, ಮಾಂಸ ರಸದಿಂದ ತುಂಬಿದ ಮತ್ತು ನರಕದಿಂದ ತುಂಬಿದ ಸಂಗ್ರಹವೇ ಆಗಿರುವದು. ಶರೀರವೆಂದರೆ ದುರ್ಗಂಧ ದಿಂದ ತುಂಬಿದ ಮೂತ್ರದ ಚೀಲವೇ ಆಗಿದೆ. (೧೮) ಶರೀರದಲ್ಲಿ ಜಂತು ಮತ್ತು ಅನೇಕ ಪ್ರಕಾರದ ಕ್ರಿಮಿಗಳು ಇರುವವು. ಕರುಳು ಅಂದರೆ ಅನೇಕ ಪ್ರಕಾರದ ಹೊಲಸುಗಳಿಂದ ತುಂಬಿದ ಚೀಲವಾಗಿರುವದು. ಶರೀರದಲ್ಲಿಯ ಅಶುದ್ಧ ಚರ್ಮವು ಎಲ್ಲ ಕಡೆಗೆ ಜೋತಾಡುತ್ತದೆ. (೧೯) ಎಲ್ಲ ಅವಯುವಗಳಲ್ಲಿ ತಲೆಯು (ಮಸ್ತಕವು) ಸರ್ವಶ್ರೇಷ್ಠವೆನಿಸಿದೆ. ಅದಕ್ಕೆ ಉತ್ತಮಾಂಗವೆನ್ನುವರು. ಆದರೆ ಮಸ್ತಕದ ಭಾಗವೇ ಆಗಿರುವ ಮೂಗಿನಿಂದ ಸುಂಬಳ ಸೋರುತ್ತದೆ. ಮತ್ತು ಕಿವಿ ಒಡೆದರೆ ಅದರಿಂದ ಕೀವು ಬರುವದು. ಅದರ ದುರ್ಗಂಧ ಸಹಿಸಲಾಗುವದಿಲ್ಲ. (೨೦) ಕಣ್ಣಿನಿಂದ ಹೊಲಸು ಪಿಚ್ಚು ಬರುತ್ತದೆ. ಮೂಗಿನಲ್ಲಿ ಹಿಕ್ಕು (ದಟ್ಟ ಸುಂಬಳ) ಗಟ್ಟುತ್ತದೆ. ಪ್ರತಿದಿನ ಮುಂಜಾನೆ ಬಾಯಿಯಿಂದ ಹೊಲಸು ಹೊರಬೀಳುತ್ತದೆ. (೨೧) ಯಾವ ಮುಖದ ಬಾಯಿಯಿಂದ ಜೊಲ್ಲು,ಉಗುಳು, ಇತರ ಹೊಲಸು ಪಿತ್ತ, ವಗೈರೆ ಮತ್ತು ಗಟ್ಟಿ ದಟ್ಟ ಹಳದಿ ಸುಂಬಳ ವಗೈರೆ ಇರುವದೋ ಅಂಥ ಮುಖಕ್ಕೆ ಕಮಲದ ಹಾಗೂ ಚಂದ್ರನ ಉಪಮೆಯನ್ನು (ಕಮಲಮುಖಿ, ಚಂದ್ರಮುಖಿ ಎಂದು) ಕೊಡುತ್ತಾರೆ. (೨೨) ಮುಖವೇ ಇಷ್ಟು ಹೊಲಸಿನಿಂದ ತುಂಬಿರುವಾಗ ಹೊಟ್ಟೆಯಲ್ಲಂತೂ ಹೊಲಸು ಮಲವೇ ತುಂಬಿರುವದು. ಇದು ಪ್ರತ್ಯಕ್ಷ ಪ್ರಮಾಣವೇ ಆಗಿದೆ. ಇದಕ್ಕೆ ಬೇರೆ ಪ್ರಮಾಣ ಕೊಡುವದು ಅವಶ್ಯಕತೆ ಇರುವದಿಲ್ಲ. (೨೩) ಅತೀಉತ್ತಮಅನ್ನವನ್ನು ಹೊಟ್ಟೆಗೆಹಾಕಿದರೆ ಅದರಲ್ಲಿಯಕೆಲವೊಂದು ಮಲರೂಪವಾಗುವದು. ಒಮ್ಮೊಮ್ಮೆ ಅದು ವಾಂತಿಯಾಗಿ ಹೊರಬರುವದು. ಅದನ್ನು ನೋಡಲಿಕ್ಕೂ ಆಗುವದಿಲ್ಲ. ಪವಿತ್ರವಾದ ಗಂಗಾನದಿಯ ನೀರನ್ನು ಕುಡಿದರೂ ಸಹ ಅದು ಮೂತ್ರ ರೂಪ ಹೊಂದುವದು. (೨೪) ಸಾರಾಂಶವೇನೆಂದರೆ, ದೇಹವು ಮಲ,ಮೂತ್ರ, ವಾಂತಿ, ಮುಂತಾದ ಹೊಲಸುಗಳಿಂದಲೇ ತುಂಬಿದೆ. ಇವುಗಳಿಂದಲೇ ದೇಹ ಜೀವಿಸುವದು. ಮತ್ತು ಬೆಳೆಯುತ್ತದೆಯೆಂಬ ಬಗ್ಗೆ ಸಂಶಯವಿಲ್ಲ. (೨೫) ಮಲ, ಮೂತ್ರ, ವಾಂತಿ ಇವು ಒಂದು ವೇಳೆ ಹೊಟ್ಟೆಯಲ್ಲಿ ಇಲ್ಲದಿದ್ದರೆ ಮನುಷ್ಯನು ಸತ್ತು ಹೋಗುತ್ತಿದ್ದನು. ರಾಜನಿರಲಿ, ರಂಕನಿರಲಿ, ಅವನ ಹೊಟ್ಟೆಯಲ್ಲಿ ಮಲದ ಹೊಲಸು ಇರಲಿಕ್ಕೇ ಬೇಕು. (೨೬) ದೇಹದಲ್ಲಿರುವ ಈ ಹೊಲಸನ್ನು ತೆಗೆದು, ಹೊರಗೆ ಹಾಕಿ, ಅದನ್ನು ಸ್ವಚ್ಛಗೊಳಿಸುವ ಅಟ್ಟಹಾಸ ಎಷ್ಟೇ ನಾಜೂಕಾಗಿ ಮಾಡಹೋದರೂ ದೇಹವು ಸತ್ತು ಹೋಗುವದು. ಒಟ್ಟಿನಲ್ಲಿ ಈ ದೇಹದ ಸ್ಥಿತಿಯು ಹೀಗಿರುವದು. (೨೭)

ಐಸಾ ಹಾ ಧಡ ಅಸತಾ । ಯೆಥಾಭೂತ ಪಾಹೋ ಜಾತಾ ।
ಮಗ ತೇ ದುರ್ದಶಾ ಸಾಂಗತಾ । ಶಂಕಾ ಬಾಧೀ ॥೨೮॥
ಐಸಿಯೇ ಕಾರಾಗೃಹೀ ವಸ್ತೀ । ನವಮಾಸ ಬಹು ವಿಪತ್ತೀ ।
ನವ ಹಿ ದ್ವಾರೇ ನಿರೋಧತೀ । ವಾಯೋ ಕೈಚಾ ತೇಥೇ ॥೨೯॥
ವೋಕಾ ನರಕಾಚೆ ರಸ ಝಿರಪತೀ । ತೇ ಜಠರಾಗ್ನೀಸ್ತವ ತಾಪತೀ ।
ತೇಣೇ ಸರ್ವ ಹೀ ಉಕಡತೀ । ಅಸ್ತಿಮಾಂಸ ॥೩೦॥
ತ್ವಚೇವಿಣ ಗರ್ಭ ಖೋಳೇ । ತವ ಮಾತೇಸೀ ಹೋತೀ ಡೋಹಳೇ ।
ಕಟವತಿಕ್ಷ್ಣೇ ಸರ್ವಾಂಗ ಪೋಳೇ । ತಯಾ ಬಾಳಕಾಚೇ ॥೩೧॥
ಬಾಂಧಲೇ ಚರ್ಮಾಚೇ ಮೋಟಾಳೇ । ತೇಥೇ ವಿಷ್ಠೇಚೇ ಪೇಟಾಳೇ ।
ರಸಉಪಾಯು ನಂಕನಾಳೇ । ಹೋತ ಅಸೇ ॥೩೨॥
ವಿಷ್ಠಾ ಮೂತ್ರ ವಾಂತೀ ಪಿತ । ನಾಕೀ ತೋಂಡೀ ನಿಘತೀ ಜಂತ ।
ತೇಣೇ ನಿರ್ಬುಜಲೇ ಚಿತ್ತ । ಅತಿಶಯೇಸೀ ॥೩೩॥
ಐಸಿಯೇ ಕಾರಾಗೃಹೀ ಪ್ರಾಣೀ । ಪಡಿಲಾ ಅತ್ಯಂತ ದಾಟಣೀ ।
ಕಳವಳೋನ ಮ್ಹಣೇ ಚಕ್ರಪಾಣೀ । ಸೋಡವೀ ಯೇಥೂನ ಆತಾ ॥೩೪॥
ದೇವಾ ಸೋಡವಿಸೀ ಯೇಥೂನ । ತರೀ ಮೀ ಸ್ವಹಿತ ಕರೀನ ।
ಗರ್ಭವಾಸ ಹಾ ಚುಕವೀನ । ಪುನ್ಹಾ ನ ಯೇ ಯೇಥೇ ॥೩೫॥
ಐಸೀ ದುಃಖವೋನ ಪ್ರತಿಜ್ಞಾ ಕೇಲೀ । ತವ ಜನ್ಮವೇಳ ಪುಢೇ ಆಲೀ ।
ಮಾತಾ ಆಕ್ರಂದೋ ಲಾಗಲೀ । ಪ್ರಸೂತ ಕಾಳೀ ॥೩೬॥
ನಾಕೀ ತೋಂಡೀ ಬೈಸಲೇ ಮಾಂಸ । ಮಸ್ತಕದ್ವಾರೇ ಸಾಂಡೀ ಸ್ವಾಸ ।
ತೇ ಹೀ ಬುಜಲೇ ನಿಶೇಷ । ಜನ್ಮಕಾಳೀ ॥೩೭॥
ಮಸ್ತಕದ್ವಾರ ತೇ ಬುಜಲೇ । ತೇಣೇ ಚಿತ್ತ ನಿರ್ಬುಜಲೇ ।
ಪ್ರಾಣೀ ತಳಮಳೂ ಲಾಗಲೇ । ಚಹೂ ಕಡೆ ॥೩೮॥
ಸ್ವಾಸ ಉಸ್ವಾಸ ಕೋಂಡಲಾ । ತೇಣೇ ಪ್ರಾಣೀ ಜಾಜಾವಲಾ ।
ಮಾರ್ಗ ದಿಸೇನಾಸಾ ಜಾಲಾ । ಕಾಸಾವೀಸ ॥೩೯॥
ಚಿತ್ತ ಬಹು ನಿರ್ಬುಜಲೇ । ತೇಣೇ ಆಡಭರೀ ಭರಲೇ ।
ಲೋಕ ಮ್ಹಣತೀ ಆಡವೇ ಆಲೇ । ಖಾಂಡೂನ ಕಾಢಾ ॥೪೦॥
ಮಗ ತೇ ಖಾಂಡೂನ ಕಾಢಿತೀ । ಹಸ್ತಪಾದ ಛೇದೂನ ಘೇತೀ ।
ಹಾತಾ ಪಡಿಲೇ ತೇ ಚಿ ಕಾಪಿತೀ । ಮುಖ ನಾಸಿಕ ಉದರ ॥೪೧॥

ಎಲ್ಲಿಯುವರೆಗೆ ಈ ದೇಹ ಗಟ್ಟಿಮುಟ್ಟಾಗಿರುವದೋ ಅವರೆಗೆ ದೇಹದ ಅವಸ್ಥೆಯು ನಿಜವಾದ ವರ್ಣನೆಯನ್ನು ಮಾಡುವಾಗ ಅದರಲ್ಲಿಯು ಹೊಲಸಿನ (ಗಲೀಜದ ವರ್ಣನೆಯನ್ನೂ ಹೇಳಬೇಕಾಗುವದು. ಮುಪ್ಪಿನ ಕಾಲದಲ್ಲಿಯ ಸ್ಥಿತಿಯು ವರ್ಣನೆಯಂತೂ ಹೇಳಲಿಕ್ಕೆ ಅಸಾಧ್ಯವೇ. ಆದರೆ ಅದು ಮನಸ್ಸಿಗೆ ನಿಜವೆಂದು ತೋರುವದಿಲ್ಲ ದೇಹವು ನಿಜವಾಗಿಯೂ ಇಷ್ಟೊಂದು ಹೊಲಸು ಅಮಂಗಳವಾಗಿದೆಯೇ? ಎಂಬ ಸಂಶಯು ಮನದಲ್ಲಿ ಮೂಡುವದು. (೨೮) ಇಲ್ಲಿಂದ ಮುಂದಿನ ಇಪ್ಪತ್ತು ನುಡಿಗಳಲ್ಲಿ ತಾಯಿಯ ಗರ್ಭದಲ್ಲಿ ಜೀವಕ್ಕೆ ಯಾವ ಪ್ರಕಾರ ಮತ್ತು ಎಷ್ಟು ಕಷ್ಟಗಳು ಬರುವವು. ಎಂಬುದರ ಸವಿಸ್ತಾರ ವರ್ಣನೆ ಇರುವದು. ಇಂಥ ದೇಹ ರೂಪಿ ಸೆರೆಮನೆಯಲ್ಲಿ ಜೀವವು ಇರುವದಕ್ಕಾಗಿ ಬಂದಿದೆ. ಅದಕ್ಕೆ ಒಂಭತ್ತು ತಿಂಗಳತನಕ ಬಹಳ ಕಷ್ಟಗಳನ್ನು ಅನುಭೋಗಿಸಬೇಕಾಗುತ್ತದೆ. ಗರ್ಭಾಶಯದಲ್ಲಿ ವಾಯು (ಗಾಳಿ) ಇರುವದಿಲ್ಲ. ದೇಹದ ಎರಡು ಕಣ್ಣು, ಎರಡು ಕಿವಿ, ಮೂಗಿನ ದ್ವಾರ ಎಂದರೆ ಎರಡು ಹೊರಳಿಯ ತೂತು ಮತ್ತು ಬಾಯಿ, ಗುದ (ಮಲದ್ವಾರ) ಹಾಗೂ ಉಪಸ್ಥ (ಮೂತ್ರದ್ವಾರ)ಗಳಲ್ಲಿ ಮಾಂಸಾದಿಗಳು ಮೆತ್ತಿಕೊಂಡಿರುವದರಿಂದ ಈ ನವದ್ವಾರಗಳಲ್ಲಿ ಗಾಳಿ (ವಾಯು)ಗೆ ಪ್ರವೇಶವಿರುವದಿಲ್ಲ. ಅವು ಮುಚ್ಚಿರುವದರಿಂದ ಗಾಳಿ ತನ್ನ ಕಾರ್ಯ ಮಾಡಲು ಶಕ್ಯವಾಗುವದಿಲ್ಲ. (೨೯) ತಾಯಿಯ ಹೊಟ್ಟೆಯೊಳಗಿನ ವಾಂತಿರಸ, ಹಾಗೂ ಮಲಗಳ ನೀರು ಸೋರುವದು ಇದು ಜಠರಾಗ್ನಿಯ ಉಷ್ಣತೆಯಿಂದಕಾಯುವದು. ಇದರಿಂದಗರ್ಭದಮಾಂಸ ಹಾಗೂಎಲುಬುಗಳುಕಾಯ್ದು ಹುರಪಳಿಸಿದಂತಾಗುವದು. (೩೦) ಪ್ರಾರಂಭದಲ್ಲಿ ಗರ್ಭಕ್ಕೆ ಚರ್ಮವಿರುವದಿಲ್ಲ. ಗರ್ಭವು ತ್ವಚಾಹೀನವಿರುವದು. ಮಾಂಸಪಿಂಡದ ಆವರಣದ ತಿಳುವಾದ ಹೊದಿಕೆ ಇರುವದು. ಅಲ್ಲಿ ಇದುಮಿಸುಕಾಡಹತ್ತುವದು. (ಚರ್ಮದ ಆವರಣವಿಲ್ಲದೇಚಲನ-ವಲನಪ್ರಾರಂಭಿಸುವದು) ಆಗ ತಾಯಿಗೆ ಬಯಿಕೆಗಳು ಪ್ರಾರಂಭವಾಗುವವು. ಬಯಿಕೆಯ ಕಾರಣದಿಂದ ಗರ್ಭಿಣಿಗೆ ಖಾರ, ಹುಳಿ ಹಾಗೂ ತೀಕ್ಷ್ಣ ಪದಾರ್ಥಗಳ ಆಶೆಯಾಗಿ ಅವುಗಳನ್ನು ತಿನ್ನಹತ್ತುವಳು. ಇಂಥ ಅನ್ನದಿಂದ ಹೊಟ್ಟೆಯಲ್ಲಿರುವ ಶಿಶುವಿನ ಅಂಗವು ಸುಡುವದು. (ಹುರುಪಳಿಸುವದು) (೩೧) ಗರ್ಭವೆಂದರೆ ಚರ್ಮದಲ್ಲಿ ಸುತ್ತಿಟ್ಟ (ಗುಂಡಾಳಿಸಿದ) ರಕ್ತದ ಗಂಟೆಂದು ಹೇಳಬಹುದು. ಅದರಲ್ಲಿ ಮಲವನ್ನು ತಡೆಹಿಡಿಯುವ ಹೊಲಸಿನ ಚೀಲವಿರುತ್ತದೆ. ಗರ್ಭನಾಳದಿಂದ ಹೊಕ್ಕಳದ ನಾಭಿಯ ನಳಿಯಿಂದ ಗರ್ಭಸ್ಥ ಶಿಶುವಿಗೆ ಜೀವಿಸಲು ಅಗತ್ಯವಿರುವ ರಸವು ದೊರಕುವದು. (೩೨) ಮಲ,ಮೂತ್ರ, ವಾಂತಿ ಮತ್ತು ಪಿತ್ತ ಈ ರಸಗಳಿಂದ ಆದ ಜಂತು, ಕ್ರಿಮಿಗಳು ಮೂಗು ಮತ್ತು ಬಾಯಿಯಿಂದ ಹೊರಬರುವವು. ಅರ್ಥಾತ್ ಇವೆಲ್ಲವುಗಳಿಂದ ಗರ್ಭಸ್ಥ ಜೀವವು ಗಾಬರಿಗೊಳ್ಳುವದು. (೩೩) ಇಂಥ ಕೈದುಖಾನೆಯಲ್ಲಿ ಅತಿಶಯದ ಅಡಚಣಿಯಲ್ಲಿ ಸಿಕ್ಕಿಕೊಂಡ ಜೀವವು ಕಳವಳಗೊಂಡು ದೀನವಾಗಿ ದೇವರಿಗೆ ವಿನಂತಿಸಿಕೊಳ್ಳುವದು. "ದೇವಾ ನನ್ನನ್ನು ಇಲ್ಲಿಂದ ಬಿಡುಗಡೆ ಮಾಡು" (೩೪) "ದೇವಾ ಇಲ್ಲಿಂದ ನನ್ನನ್ನು ಬಿಡುಗಡೆ ಮಾಡಿದ್ದಾದರೆ ನಾನು ಸ್ವತಃದ ಕಲ್ಯಾಣವನ್ನು ಮಾಡಿಕೊಳ್ಳುವೆನು. ನಾನು ಗರ್ಭವಾಸವನ್ನು ತಪ್ಪಿಸಿಕೊಳ್ಳುವೆನು. ಪುನಃ ಈ ಸ್ಥಳದಲ್ಲಿ ಜನ್ಮಕ್ಕೆ ಬರುವದಿಲ್ಲ" (೩೫) ಗರ್ಭಾಶಯದಲ್ಲಿಯ ಯಾತನೆಗಳಿಂದ ಬೇಸತ್ತು ಜೀವವು ಹೀಗೆ ಪ್ರತಿಜ್ಞೆ ಮಾಡುವದು. ಆದರೆ, ಅದರ ಜನ್ಮಕಾಲ ಸಮೀಪಿಸುವದು. ಮತ್ತು ಪ್ರಸವ ವೇದನೆಯಿಂದ ಅದರ ತಾಯಿ ನರಳುವಳು, ಒದರುವಳು, ಕಷ್ಟಪಡುವಳು. (೩೬) ಬಾಲಕನ ಮೂಗು, ಬಾಯಿಯಲ್ಲಿ ಮಾಂಸವು ಮೆತ್ತಿಕೊಂಡದ್ದರಿಂದ (ಒತ್ತಿ ತುಂಬಿದ್ದರಿಂದ) ಮಸ್ತಕದ ಮೇಲ್ಭಾಗದಲ್ಲಿರುವ ಆಳ ನೆತ್ತಿಯಲ್ಲಿರುವ ಛಿದ್ರದಿಂದ ಅದು ಶ್ವಾಸ ತೆಗೆದುಕೊಳ್ಳುತ್ತಿರುವದು. ಆದರೆ ಜನ್ಮಕಾಲ ಅಂದರೆ ಜನ್ಮ ಆಗುವ ಮುಂದೆ ಈ ಛಿದ್ರವೂ ಮುಚ್ಚಿ ಬಂದಾಗುವದು. (೩೭) ಮಸ್ತಕದಲ್ಲಿಯ ಛಿದ್ರ ಬಂದಾದ ಕೂಡಲೇ ಬಾಲಕನ ಜೀವವು ಕಸಿವಿಸಿ (ಗಾಬರಿ) ಗೊಳ್ಳುವದು. ಮತ್ತು ಹೊಟ್ಟೆಯಲ್ಲಿ ಅದು ತಳಮಳಗೊಂಡು ಅತ್ತಿತ್ತ ಅಲುಗಾಡುವದು. (೩೮) ಶ್ವಾಸೋಚ್ಛ್ವಾಸವು (ಉಸಿರಾಡಿಸುವದು) ಬಂದಾದದ್ದರಿಂದ ಆ ಶಿಶುವಿಗೆ ಬಹಳ ಕಷ್ಟವಾಗುವದು. ಬಹಳ ದಣಿವುಗೊಂಡ ಆ ಬಾಲಕನಿಗೆ ಹೊರಬರುವ ದಾರಿ ಕಾಣದಾಗುತ್ತದೆ. (೩೯) ಅತಿಶಯ ಗಾಬರಿಗೊಂಡ ಮನದಿಂದ ಮಗುವು ಹೊರಗೆ ಬರುವದಕ್ಕಾಗಿ ಧಡಪಡಿಸುತ್ತದೆ. ಅದು ಒಮ್ಮೊಮ್ಮೆ ಅಯೋಗ್ಯ ಸ್ಥಳದಲ್ಲಿ ಸಿಕ್ಕಿಕೊಳ್ಳುತ್ತದೆ. ಆಗ ಕೂಸು ಅಡ್ಡ ಸಿಕ್ಕಿದೆ, ಅದನ್ನು ಕೊಯ್ದು ತುಂಡು ಮಾಡಿ ತೆಗೆಯಿರಿ, ಹೀಗೆ ಜನರು(ತಿಳಿದವರು) ಅನ್ನುತ್ತಾರೆ(೪೦) ಆ ಮೇಲೆ ಕತ್ತರಿಸಿ ತುಂಡು ಮಾಡಿ ಮಗುವನ್ನು ಹೊರಗೆ ತೆಗೆಯುವರು. ಅದರ ಕೈಕಾಲುಮುಖ,ಮೂಗು,ಕಿವಿ,ಹೊಟ್ಟೆವಗೈರೆ ಯಾವಭಾಗ ಕೈಗೆಹತ್ತುವದೋ ಅವನ್ನೆಲ್ಲ ಕತ್ತರಿಸುವರು(೪೧)

ಐಸೇ ಟವಕೇ ತೋಡಿಲೇ । ಬಾಳಕೇ ಪ್ರಾಣ ಸೋಡಿಲೇ ।
ಮಾತೇನೇ ಹೀ ಸಾಂಡಿಲೇ । ಕಳಿವರ ॥೪೨॥
ಮೃತ್ಯ ಪಾವಲಾ ಆಪಣ । ಮಾತೇಚಾ ಘೇತಲಾ ಪ್ರಾಣ ।
ದುಃಖ ಭೋಗಿಲೇ ದಾರುಣ । ಗರ್ಭವಾಸೀ ॥೪೩॥
ತಥಾಪೀ ಸುಕೃತೇ ಕರೂನೀ । ಮಾರ್ಗ ಸಾಂಪಡಲಾ ಯೋನೀ ।
ತರ್ಹೀ ಆಡಕಲಾ ಜಾಉನೀ । ಕಂಠ ಸ್ಕಂದೀ ಮಾಗುತಾ ॥೪೪॥
ತಯೇ ಸಂಕೋಚಿತ ಸಂಧೀ । ಬಳೇ ಚಿ ವೋಢೂನ ಕಾಢಿತೀ ।
ತೇಣೇ ಗುಣೇ ಪ್ರಾಣ ಜಾತೀ । ಬಾಳಕಾಚೆ ॥೪೫॥
ಬಾಳಕಾಚೆ ಜಾತಾ ಪ್ರಾಣ । ಅಂತೀ ಹೋಯೇ ವಿಸ್ಮರಣ ।
ತೇಣೇ ಪೂರ್ವಿಲ ಸ್ಮರಣ । ವಿಸರೋನ ಗೇಲಾ ॥೪೬॥
ಗರ್ಭೀ ಮ್ಹಣೇ ಸೋಹಂ ಸೋಹಂ । ಬಾಹೇರೀ ಪಡತಾ ಮ್ಹಣೇ ಕೋಹಂ ।
ಐಸಾ ಕಷ್ಟೀ ಜಾಲಾ ಬಹು । ಗರ್ಭವಾಸೀ ॥೪೭॥
ದುಃಖಾ ವರಪಡಾ ಹೋತಾ ಜಾಲಾ । ಥೋರಾ ಕಷ್ಟೀ ಬಾಹೇರೀ ಆಲಾ ।
ಸವೇ ಚ ಕಷ್ಟ ವಿಸರಲಾ । ಗರ್ಭ ವಾಸಾಚೇ ॥೪೮॥
ಸುನ್ಯಾಕಾರ ಜಾಲೀ ವೃತ್ತೀ। ಕಾಹೀ ಆಠವೇನಾ ಚಿತ್ತೀ ।
ಅಜ್ಞಾನೇ ಪಡಿಲೀ ಭ್ರಾಂತೀ । ತೇಣೇ ಸುಖ ಚಿ ಮಾನಿಲೇ ॥೪೯॥
ದೇಹ ವಿಕಾರ ಪಾವಲೇ । ಸುಖದುಃಖೇ ಝುಳಂಬಲೇ ।
ಅಸೋ ಐಸೇ ಗುಂಡಾಳಲೇ। ಮಾಯಾಜಾಳೀ ॥೫೦॥
ಐಸೇ ದುಃಖ ಗರ್ಭವಾಸೀ । ಹೋತೇ ಪ್ರಾಣಿಮಾತ್ರಾಸೀ ।
ಮ್ಹಣೋನಿಯಾ ಭಗವಂತಾಸೀ । ಶರಣ ಜಾವೇ ॥೫೧॥
ಜೋ ಭಗವಂತಾಚಾ ಭಕ್ತ । ತೋ ಜನ್ಮಾ ಪಾಸೂನ ಮುಕ್ತ ।
ಜ್ಞಾನಬಳೇ ವಿರಕ್ತ । ಸರ್ವಕಾಳ ॥೫೨॥
ಐಶಾ ಗರ್ಭವಾಸೀ ವಿಪತ್ತೀ । ನಿರೋಪಿಲ್ಯಾ ಯಥಾಮತೀ ।
ಸಾವಧ ಹೋಊನ ಶ್ರೋತೀ । ಪುಢೇ ಅವಧಾನ ದ್ಯಾವೇ ॥೫೩॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
''ಜನ್ಮ ದುಃಖ ನಿರೂಪಣ'' ನಾಮ ಸಮಾಸ ಪಹಿಲಾ ॥

ಈ ಪ್ರಕಾರ ಬಾಲಕನ ಶರೀರ ಕತ್ತರಿಸಿ ತೆಗೆಯುವಾಗ ಅದರ ಪ್ರಾಣ ಹೋಗುತ್ತದೆ.ಹೋಗಬಹುದು. ಈ ಎಲ್ಲ ಗಡಬಡಿಯಲ್ಲಿ ತಾಯಿಯ ದೇಹವೂ ಬಿದ್ದು ಹೋಗುವದು (೪೨) ಬಾಲಕನು ಸಾಯುವದಲ್ಲದೇ ಅದರ ಸಂಗಡ ತಾಯಿಯ ಜೀವವೂ ಹೋಯಿತು. ಇದಲ್ಲದೇ ಗರ್ಭಾವಸ್ಥೆಯಲ್ಲಿ ಭಯಂಕರ ದುಃಖ ಅನುಭವಿಸಿದ್ದೊಂದು ಬೇರೆಯೇ ಉಳಿಯಿತು. (೪೩) ಒಂದು ವೇಳೆ ಪೂರ್ವ ಪುಣ್ಯದಿಂದ ಬಾಲಕನಿಗೆ ತಾಯಿಯ ಯೋನಿಯಿಂದ ಸುರಳಿತವಾಗಿ ಹೊರ ಬರುವ ಮಾರ್ಗ ಸಿಕ್ಕರೂಸಹ ಅದರಕುತ್ತಿಗೆ,ಕೈ ವಗೈರೆ ಅವಯುವಗಳು ಒಳಗೆ ಏತಕ್ಕಾದರೂ ಸಿಕ್ಕಿಕೊಂಡು ಒಮ್ಮೊಮ್ಮೆ ಹೊರಬರಲಿಕ್ಕೆ ತೊಂದರೆ ಆಗುತ್ತದೆ. (೪೪) ಆಗ ಆ ಇಕ್ಕಟ್ಟಾದ ಮಾರ್ಗದಿಂದ ಕೂಸನ್ನು ಜೋರಾಗಿ ಜಗ್ಗಿ ತೆಗೆಯುವ ಮುಂದೆ ಅದು (ಕೂಸು) ಗತಪ್ರಾಣವಾಗುತ್ತದೆ. (೪೫) ಗರ್ಭದಲ್ಲಿಯ ಶಿಶು ಜನ್ಮಕ್ಕೆ ಬರುವಾಗ ದೇಹದ ಅವಸ್ಥೆ ಹೇಗಿರುತ್ತದೆ ಎಂಬುದರ ಸಾಮಾನ್ಯ ವರ್ಣನೆಯಾಯಿತು. ಈ ಎಲ್ಲ ಖಟಾಟೋಪದಲ್ಲಿ ಆ ಜೀವದ ಅಂತರ್ಯಾಮ (ಅಂತಃಕರಣ)ದಲ್ಲಿ ಏನು ನಡೆಯುವದೆಂಬುದರ ವರ್ಣನೆ ಇನ್ನು ಮೇಲೆ ಪ್ರಾರಂಭವಾಗುವದು. ಜೀವದ ಅಂತರ್ಯಾಮದ ಅವಸ್ಥೆಯನ್ನು ಕೇವಲ ಅತೀಂದ್ರಿಯ ಜ್ಞಾನಿಗಳಾದ (ಇಂದ್ರಿಯಗಳಿಗೆ ಅಗೋಚರವಾದ ಜ್ಞಾನ) ಸಂತ ಶರಣರು ಮಾತ್ರ ತಿಳಿದಿರುತ್ತಾರೆ. ಜನ್ಮಕ್ಕೆ ಬರುವ ಧಡಪಡದಲ್ಲಿ (ಪ್ರಯತ್ನದಲ್ಲಿ) ಬಾಲಕನ ಪ್ರಾಣ ಹೋಗುವದರಲ್ಲಿದ್ದಾಗ ಕೊನೆಯ ಕ್ಷಣದಲ್ಲಿ ಅವನಿಗೆ ಭಗವಂತನ ಮರೆವು ಆಗುವದು. ಗರ್ಭದಲ್ಲಿದ್ದಾಗಿನ ಈ ಭಗವಂತನ ನೆನಪನ್ನು ಮರೆತು ಬಿಡುತ್ತಾನೆ. (೪೬) ಗರ್ಭದಲ್ಲಿದ್ದಾಗಿನ ಶಿಶುವು "ಸೋಹಂ ಸೋಹಂ" ಅನ್ನುತ್ತಿರುತ್ತದೆ. ಅಂದರೆ ನಾನು ಅವನೇ ಆಗಿರುವೆನು. ನಾನು ಈಶ್ವರನಿರುವೆನು. ಆಗ ಅದಕ್ಕೆ ಆತ್ಮ ಬುದ್ಧಿ ಇರುವದು. ಸ್ವಸ್ವರೂಪದ ತಿಳುವಳಿಕೆ ಇರುತ್ತದೆ. ಅದೇ ಶಿಶುವು ಹೊರಬಂದಕೂಡಲೇ ಅನ್ನುವದೇನೆಂದರೆ "ಕೋಹಂ ಕೋಹಂ" ಅಂದರೆ ನಾನು ಯಾರು ಇರುವೆನು? ನಾನು ಯಾರು ಇರುವೆನು? ಎಂದು ಅನ್ನುವದು. ಆಗ ದೇಹಕ್ಕೆ ಜೀವ ಬುದ್ಧಿ ಬಂದಿರುವದು. ಅದಕ್ಕೆ ತನ್ನ ಸ್ವಸ್ವರೂಪದ ತಿಳುವಳಿಕೆ ಮಾಯವಾಗಿರುತ್ತದೆ. ಸಾರಾಂಶ ಗರ್ಭವಾಸದಲ್ಲಿ ಜೀವವು ಅನೇಕ ಯಾತನೆಗಳನ್ನು ಅನುಭವಿಸುತ್ತದೆ. ಕಷ್ಟ ಸೋಸುತ್ತದೆ. (೪೭) ಗರ್ಭದಲ್ಲಿದ್ದಾಗ ಅದು ದುಃಖಭಾರದಿಂದ ಹತ್ತಿಕ್ಕಲ್ಪಟ್ಟಿತ್ತು. ಬಹಳಕಷ್ಟದಿಂದ ಕೊನೆಗೊಮ್ಮೆ ಹೊರಬಂದಿತೆಂದರೆ ಕೂಡಲೇನೇ ಗರ್ಭವಾಸದ ನೋವು ಕಷ್ಟಗಳನ್ನು ಮರೆತು ಬಿಟ್ಟಿತು, (೪೮) ಇದರ ಮನವು ಶೂನ್ಯಾಕಾರವಾಯಿತೆಂದರೆ ಮನಸ್ಸಿನ ವ್ಯಾಪಾರ ಸಂಪೂರ್ಣವಾಗಿ ನಿಲ್ಲುವದು. ಆಗ ಅದಕ್ಕೆ ಪೂರ್ವದ (ಗತಕಾಲದ) ಸ್ಮರಣೆ ಎಷ್ಟೂ ಉಳಿಯುವದಿಲ್ಲ. ಅಜ್ಞಾನಾವರಣದ ಮುಸುಕು ಬಂದದ್ದರಿಂದ ಈ ಭ್ರಾಂತ ಸ್ಥಿತಿ ಅದಕ್ಕೆ ಎಂದೂ ಏನೂ ನಿಜವಿಷಯ ತೋಚದಂತಾಯಿತು. ಇಷ್ಟಾದರೂ ಜನ್ಮ ತಳೆದ ಬಾಲಕನು ಇದರಲ್ಲಿಯೇ ಸುಖವಿದೆಯೆಂದು ತಿಳಿದನು. (೪೯) ದಿನಕಳೆದಂತೆ ದೇಹ ವಿಕಾರ ಹೊಂದಹತ್ತಿತು. ಅದರ ಬೆಳವಣಿಗೆ ಆಗಹತ್ತಿತು. ಅದರ ಕೂಡ ಸುಖದುಃಖದ ಆವೇಶಗಳನ್ನು ಸಹಿಸಬೇಕಾಯಿತು. ಇರಲಿ. ಈ ರೀತಿಯಿಂದ ಶರೀರಕ್ಕೆ ಮಾಯೆಯ ಜಾಲವು ಸುತ್ತೂ ಕಡೆಯಿಂದ ಆವರಿಸಿ ಕಟ್ಟಿ ಹಾಕಿತು. ದೇಹ ಬುದ್ಧಿಯು ಪೂರ್ಣ ವ್ಯಾಪಿಸಿರುವದು. (೫೦) ಈ ಗರ್ಭವಾಸದ ಯಾತನೆಯಿಂದ ಮುಕ್ತವಾಗುವದಕ್ಕಾಗಿ ಭಗವಂತನಿಗೆ ಶರಣು ಹೋಗಬೇಕು. ಯಾವತ್ತೂ ಜೀವಿಗಳಿಗೆ ಗರ್ಭವಾಸದಲ್ಲಿ ಈ ಪ್ರಕಾರದದುಃಖಗಳನ್ನು ಅನುಭವಿಸಬೇಕಾಗುತ್ತದೆ. ಅದಕ್ಕಾಗಿ ಜೀವವು ಭಗವಂತನಿಗೆ ಶರಣು ಹೋಗಬೇಕು. (೫೧) ಯಾರು ಭಗವಂತನಭಕ್ತರಾಗಿರುವರೋಅಂಥವರುಜನ್ಮದಿಂದಲೇ ಮುಕ್ತರಾಗಿರುವರು. ಅಂಥವರಿಗೆ ಪುನಃ ಜನ್ಮ ಬರುವದಿಲ್ಲ. ಅರ್ಥಾತ್ ಅವರಿಗೆ ಗರ್ಭವಾಸದ ಕಷ್ಟವಿಲ್ಲ. ಆತ್ಮಜ್ಞಾನದ ಬಲದಿಂದ ಅಂಥವರು ಸರ್ವಕಾಲ ವಿರಕ್ತರಾಗಿರುವರು. ಯಾವುದರಲ್ಲಿಯೂ ಸಿಕ್ಕಿಕೊಂಡಿರುವದಿಲ್ಲ. (೫೨) ಈ ಪ್ರಕಾರದ ಗರ್ಭವಾಸದಲ್ಲಿಯ ದುಃಖ ಪರಂಪರೆಯ ವರ್ಣನೆಯನ್ನು ನನಗೆ ತಿಳಿದ ಮಟ್ಟಿಗೆ ನಾನು ಮಾಡಿರುವೆನು. ಶ್ರೋತೃಗಳು ಮುಂದಿನ ಭಾಗವನ್ನು (ವಿಷಯವನ್ನು) ಲಕ್ಷ್ಯಗೊಟ್ಟು ಕೇಳಬೇಕು. (೫೩)

ಶ್ರೀ ದಾಸಬೋಧದಲ್ಲಿಯ ಗುರು ಶಿಷ್ಯರ ಸಂವಾದದ ಮೂರನೆಯ ದಶಕದ
"ಜನ್ಮ ದುಃಖ ನಿರೂಪಣ" ಎಂಬ ಹೆಸರಿನ ಒಂದನೆಯ ಸಮಾಸವು ಮುಗಿದುದು.

## ಸಮಾಸ ದುಸರಾ : ಸ್ವಗುಣ ಪರೀಕ್ಷಾ (ಅ)

॥ಶ್ರೀರಾಮ॥ ಸಂಸಾರ ಹಾ ಚಿ ದುಃಖಮೂಳ। ಲಾಗತೀ ದುಃಖಾಚೇ ಇಂಗಳ।
ಮಾಗಾ ಬೋಲಿಲೀ ತಳಮಳ। ಗರ್ಭವಾಸಾಚೀ ॥೧॥

ಗರ್ಭವಾಸೀ ದುಃಖ ಜಾಲೇ। ತೇ ಬಾಳಕ ವಿಸರಲೇ।
ಪುಢೇ ವಾಢೋ ಲಾಗಲೇ। ದಿವಸೇ ದಿವಸ ॥೨॥

ಬಾಳಪಣೀ ತ್ವಚಾ ಕೋವಳೀ। ದುಃಖ ಹೋತಾ ಚಿ ತಳಮಳೀ।
ವಾಚಾ ನಾಹೀ ತಯೇ ಕಾಳೀ।ಸುಖದುಃಖ ಸಾಂಗಾವಯಾ ॥೩॥

## ದಶಕ ೩. ಸಮಾಸ ೨. ಸ್ವಗುಣ ಪರೀಕ್ಷಾ (ಅ) (ನುಡಿ ೬೫)

ಸ್ವಗುಣ ಪರೀಕ್ಷೆಯ ನಾಲ್ಕು ಸಮಾಸಗಳು ಇರುವವು. ಇವುಗಳಲ್ಲಿ ಶ್ರೀ ಸಮರ್ಥರು ತಮ್ಮ ಸುತ್ತು ಮುತ್ತಲಿರುವ ಸಮಾಜಗಳಲ್ಲಿಯ ಸಾಮಾನ್ಯ ಸಂಸಾರಿ ಮನುಷ್ಯರ ಜೀವನದಲ್ಲಿ ಸತ್ಯ ಭೂಮಿಕೆಯ ರೂಪ ರೇಷೆಗಳನ್ನು ಎಲ್ಲರ ಮುಂದೆ ತಿಳಿಯುವಂತೆ ಬಿಡಿಸಿ ಇಟ್ಟಿದ್ದಾರೆ. ಶ್ರೀ ಸಮರ್ಥರಿದ್ದಾಗಿನ ಕಾಲವು ಪ್ರಕ್ಷುಬ್ಧ ಪರಿಸ್ಥಿತಿಯದಾಗಿತ್ತು. ಅನೇಕ ರಾಜಕೀಯ ಮತ್ತು ಧಾರ್ಮಿಕ ಸಮಸ್ಯೆಗಳು "ಆ" ಎಂದು ಬಾಯ್ತೆರೆದು ಎದುರು ನಿಂತಿದ್ದವು. ಆರ್ಥಿಕ ದೃಷ್ಟಿಯಿಂದ ಬಹುಜನ ಸಮಾಜವು ಅಷ್ಟಕ್ಕಷ್ಟೇ ಸ್ಥಿತಿಯಲ್ಲಿತ್ತು. ಸ್ವಾರ್ಥಿ ಜನರು ನೀತಿ ನ್ಯಾಯಗಳನ್ನು ಬದಿಗಿಟ್ಟು ತಮ್ಮ ಸ್ವಾರ್ಥ ಸಾಧನೆಯಲ್ಲಿ ತೊಡಗಿದ್ದರು. ಸಾಮಾನ್ಯ ಸಂಸಾರಿ ಮನುಷ್ಯರು ಒಂದು ಪ್ರಕಾರದ ಸಂಕುಚಿತ (ಆಕುಂಚಿತ) ಮತ್ತು ಠರಾವಿಕ ಜೀವನ ನಡೆಸುತ್ತಿದ್ದರು. ಪ್ರತಿಯೊಬ್ಬರ ಜೀವನದಲ್ಲಿ ಒಂದೇ ತರದ ಘಟನೆಗಳು ಇರುತ್ತಿದ್ದವೆಂದು ಮಾತ್ರ ಇದರ ಅರ್ಥವಲ್ಲ. ಆದರೆ ಸಂಸಾರದಿಂದ ಸುಖಿಸಿಗಬೇಕೆಂದು ಪ್ರಾಪಂಚಿಕ ಮನುಷ್ಯನು ಯಾವ ರೀತಿ ಖಟಪಟಿ ಮಾಡುವನೋ ಅದು ಎಲ್ಲ ಕಡೆಗೂ ಒಂದೆ ತರದ್ದಾಗಿರುತ್ತದೆ. ಕುಟುಂಬ ಸಂಘ,[ಸಂಸ್ಥೆ] ಸಮುದಾಯವನ್ನೇ ನೋಡಿದರೆ ಅದರಲ್ಲಿ ಗಂಡ,ಹೆಂಡತಿ, ಮಗ,ಮಗಳು, ಅವರ ಲಗ್ನ. ಹಣ, ಅನಾರೋಗ್ಯ, (ಅಜಾರಿ,) ಲೌಕಿಕ, ರೋಗ, ಮೃತ್ಯು, ಮತ್ತು ಮುಪ್ಪು (ಮುದಿತನ) ಇವುಗಳಿಗಾಗಿ ನಿರ್ಮಾಣವಾಗುವ ನಾನಾ ಸಮಸ್ಯೆಗಳು ಶ್ರೀ ಸಮರ್ಥರ ಕಾಲದಲ್ಲಿ ಮತ್ತು ಇಂದಿನ ಕಾಲದಲ್ಲಿಯೂ ಸಹ ಮೂಲತಃ ಒಂದೇ ಪ್ರಕಾರವಾಗಿರುವವು. **ಉದಾ:**-ಲಗ್ನದ ಮೊದಲು ತಾಯಿ-ತಂದೆಗಳ ಮೇಲೆ ಪ್ರೇಮ ಮಾಡುವ ಆಜ್ಞಾಧಾರಕ ಮಗನು, ಲಗ್ನಾನಂತರ ಒಮ್ಮೆಲೇ ಬದಲಾಗುವನು. ಈ ಮಾತು ಆ ಕಾಲದಲ್ಲಿಯೂ ಇದ್ದಿತು. ಈಗಲೂ ಸಹ ಇರುವದು. ಕಂಡುಬರುತ್ತದೆ. ಎರಡನೆಯ ಹೆಂಡತಿಯ ಲಗ್ನವಾದ ಮೇಲೆ ಮನೆಯಲ್ಲಿ ಉಂಟಾಗುವ ಇಲ್ಲದ ಕಟಕಟಿ ಅಥವಾ ದುರ್ವ್ಯಸನದಿಂದಾಗುವ ಹಾನಿ ಅಥವಾ ಮುಪ್ಪಿನಕಾರಣದಿಂದಾಗುವ ದೈನ್ಯಾವಸ್ಥೆ ಇತ್ಯಾದಿ ಪ್ರಾಪಂಚಿಕ ಸಮಸ್ಯೆಗಳು ಮೊದಲೂ ಇದ್ದವು, ಈಗಲೂ ಸಹ ಅದರಂತೆಯೇ ಇರುವವು. ಶ್ರೀಸಮರ್ಥರಿಗೆ ಮಾನವ ಜೀವನದ ವಿಷಯವಾಗಿ ಎಷ್ಟೊಂದು ಆಳವಾದ ಜ್ಞಾನವಿದ್ದಿತೆಂಬುದನ್ನು ಮುಂದಿನ ನಾಲ್ಕು ಸಮಾಸಗಳಲ್ಲಿ ನೋಡಿ ನಾವು ತಿಳಿಯಬಹುದಾಗಿದೆ. ಒಟ್ಟಿನಲ್ಲಿ ಹೇಳುವದೇನೆಂದರೆ, ಪ್ರಾಪಂಚಿಕ ಮನುಷ್ಯನು ಮೂಲತಃ ಸ್ವಾರ್ಥಿ ಇರುವನು. ಅವನ ಸ್ವಾರ್ಥದ ಅಂಗ (ಅಂಶ, ರೀತಿ, ದೇಹ) ಅದೇ ಇರುವದರಿಂದ ಅದರಲ್ಲಿಯೇ ಉದ್ಭವಿಸುವ (ಹುಟ್ಟುವ) ಸಮಸ್ಯೆಗಳು ಸರ್ವಕಾಲದಲ್ಲಿಯೂ ಸಮಾಜದಲ್ಲಿ ಒಂದೇ ಪ್ರಕಾರವಾಗಿರುವವು. ಸ್ವಾರ್ಥಸಾಧಿಸುವ ಮಾರ್ಗ (ರೀತಿ) ಗಳು ಮಾತ್ರ ಆಯಾ ಕಾಲದ ವಿಜ್ಞಾನದ ಪ್ರಗತಿ ಅಂದರೆ ಜ್ಞಾನದಲ್ಲಿಯ ವಿಶೇಷ ಪ್ರಗತಿಯ ಮೇಲೆ ಮತ್ತು ಸಮಾಜದ ಒಟ್ಟಿನಲ್ಲಿಯ ಪರಿಸ್ಥಿತಿಯ ಮೇಲೆ ಅವಲಂಬಿಸಿರುತ್ತದೆ. **ಉದಾಃ**- ರೋಗಕ್ಕೆ ಉಪಚಾರ ಮಾಡುವ ಪ್ರಕಾರ, ಪದ್ಧತಿಗಳು ಅಥವಾ ಹಣ ಗಳಿಸುವ ಮಾರ್ಗವು ಬದಲಾಗುತ್ತ ಹೋಗುತ್ತದೆ. ಇರಲಿ. ಈ ಸಮಾಸದಲ್ಲಿ ತೀರ ಚಿಕ್ಕಂದಿನಿಂದ ಹಿಡಿದು ಎರಡನೆಯ ಲಗ್ನ ಆಗುವವರೆಗೆ ಈ ಸಾಮಾನ್ಯ ಮನುಷ್ಯನು ಯಾವ ಪ್ರಕಾರದ ಜೀವನ ನಡೆಸುವನು, ಸಾಗಿಸುವನು, ಇದರ ವರ್ಣನೆ ಇಲ್ಲಿ ಕಂಡು ಬರುವದು.

### ಸಮಾಸ ೨. ಸ್ವಗುಣ ಪರೀಕ್ಷಾ (ಅ) [ನುಡಿ ೬೫]

**ಮೊದಲಿಗೆ ನವಜನ್ಮ ಜಾತ ಶಿಶುವಿನ ವರ್ಣನೆ:-** ಕಣ್ಣಿಗೆ ಕಾಣುವ ಈ ಸೃಷ್ಟಿಯು ದುಃಖದ ಮೂಲವಿರುವದು. ಅರ್ಥಾತ್ ಮನುಷ್ಯ ಲೋಕದಲ್ಲಿ ಅಂದರೆ ಭೂಮಿಯ ಮೇಲೆ ಜನ್ಮ ಹೊಂದಿದ ಕೂಡಲೇ ಅವನು ದೃಶ್ಯ ವಿಶ್ವದ ಭಾಗವಾಗುವನು. ಅದರಿಂದ ದುಃಖದ ಬಿಸಿ ಅವನ ದೇಹಕ್ಕೆ ತಾಕಿ ವ್ಯಥೆಗೊಳಿಸುವದು, ಹಿಂದಿನ ಸಮಾಸದಲ್ಲಿ ಗರ್ಭವಾಸದಲ್ಲಿಯ ದುಃಖದ ವರ್ಣನೆಯನ್ನು ಹೇಳಲಾಗಿದೆ. (೧) ಜನ್ಮ ಹೊಂದಿದ ನಂತರ ಗರ್ಭವಾಸದಲ್ಲಿ ಆದ ದುಃಖವನ್ನು ಶಿಶುವು ಮರೆಯುವದು. ಆ ಮೇಲೆ ದಿನದಿನವು ಅದು ಬೆಳೆಯುಹತ್ತುವದು.(೨) ಹುಟ್ಟಿದಾಗ ಅದರ ಚರ್ಮ ಅತಿ ಮೃದುವಾಗಿರುವದು.ಸ್ವಲ್ಪ ನೋವಾದರೂ ಸಹ ಅದು ವ್ಯಾಕುಲಗೊಳ್ಳುವದು. ಆದರೆ ತನಗೆ ಆಗುವ ಸುಖದುಃಖವನ್ನು ಶಬ್ದಗಳಿಂದ ಹೇಳಲಿಕ್ಕೆ ಬರುವದಿಲ್ಲ. (೩)

ದೇಹಾಸ ಕಾಹೀ ದುಃಖ ಜಾಲೇ । ಅಥವಾ ಕ್ಷುಧೇನೇ ಪೀಡಲೇ ।
ತರೀ ತೇ ಪರಮ ಆಕ್ರಂದಲೇ । ಪರೀ ಅಂತರ ನೇಣವೇ ॥೪॥
ಮಾತಾ ಕುರವಾಳೀ ವರೀ । ಪರೀ ಜೇ ಪೀಡಾ ಜಾಲೀ ಅಂತರೀ।
ತೇ ಮಾಯೇಸೀ ನ ಕಳೆ ಅಭ್ಯಾಂತರೀ। ದುಃಖ ಹೋಯೇ ಬಾಳಕಾಸೀ ॥೫॥
ಮಾಗುತೇ ಮಾಗುತೇ ಘುಂಜೇ ರಡೇ। ಮಾತಾ ಬುಝಾವೀ ಘೇಊನ ಕಡೇ।
ವೆಥಾ ನೇಣತೀ ಬಾಪುಡೇ । ತಳಮಳೀ ಜೀವೀ ॥೬॥
ನಾನಾ ವ್ಯಾಧೀಚೇ ಉಮಾಳೇ । ತೇಣೇ ದುಃಖೇ ಆಂದೋಳೇ।
ರಡೇ ಪಡೇ ಕಾ ಪೋಳೇ । ಅಗ್ನಿಸಂಗೇ ॥೭॥
ಶರೀರ ರಕ್ಷಿತಾ ನಯೇ । ಘಡತೀ ನಾನಾ ಅಪಾಯೇ ।
ಖೋಡೀ ಅಧಾಂತರೀ ಹೋಯೇ । ಆವೇವಹೀನ ಬಾಳಕ ॥೮॥
ಅಥವಾ ಅಪಾಯ ಚುಕಲೇ। ಪೂರ್ವ ಪುಣ್ಯ ಪುಢೇ ಠಾಕಲೇ ।
ಮಾತೇಸ ವೊಳಖೋ ಲಾಗಲೇ । ದಿವಸೇದಿವಸ ॥೯॥
ಕ್ಷಣಭರೀ ಮಾತೇಸ ನ ದೇಖೇ । ತರೀ ಆಕ್ರಂದೇ ರುದನ ಕರೀ ದುಃಖೇ ।
ತೇ ಸಮಈ ಮಾತೇಸಾರಿಖೇ । ಆಣೀಕ ಕಾಹೀ ಚ ನಾಹೀ ॥೧೦॥
ಆಸ ಕರೂನ ವಾಸ ಪಾಹೇ। ಮಾತೇ ವಿಣ ಕದಾನರಾಹೇ ।
ವಿಯೋಗ ಪಳಮಾತ್ರ ನ ಸಾಹೇ । ಸ್ಮರಣ ಜಾಲಿಯಾ ನಂತರೇ ॥೧೧॥
ಜರೀ ಬ್ರಹ್ಮಾದಿಕ ದೇವ ಆಲೇ । ಅಥವಾ ಲಕ್ಷ್ಮೀನೇ ಅವಲೋಕಿಲೇ ।
ತರೀ ನವಚೇ ಬುಝಾವಿಲೇ । ಆಪಲೇ ಮಾತೇವಾಚುನೀ ॥೧೨॥
ಕುರೂಪ ಅಥವಾ ಕುಲಕ್ಷಣ । ಸಕಳಾಹೂನಿ ಕರಟೇಪಣ ।
ತರೀ ನಾಹೀ ತೀಸಮಾನ । ಭೂಮಂಡಳೀ ಕೋಣೀ ॥೧೩॥
ಐಸೇ ತೇ ಕೇವಿಲವಾಣೇ । ಮಾತೇವಿಣ ದಿಸೇ ಉಣೇ ।
ರಾಗೇ ಪರತೇ ಕೇಲೇ ತಿನೇ । ತರೀ ಆಕ್ರಂದೋನಿ ಮಿಠೀ ಘಾಲೀ ॥೧೪॥
ಸುಖ ಪಾವೇ ಮಾತೇಜವಳೀ । ದುರೀ ಕರಿತಾ ಚಿ ತಳಮಳೀ ।
ಅತಿ ಪ್ರೀತಿ ತಯೇ ಕಾಳೀ । ಮಾತೇವರೀ ಲಾಗಲೀ ॥೧೫॥
ತವ ತೇ ಮಾತೇಸ ಮರಣ ಆಲೇ । ಪ್ರಾಣೀ ಪೊರಟೇ ಜಾಲೇ ।
ದುಃಖೇ ಝುರೂಣೇ ಲಾಗಲೇ । ಆಈ ಆಈ ಮ್ಹಣೋನೀ ॥೧೬॥
ಆಈ ಪಾಹಾತಾ ದಿಸೇನಾ । ದೀನರೂಪ ಪಾಹೇ ಜನಾ ।
ಆಸ ಲಾಗಲಿಸೇ ಮನಾ । ಆಈ ಯೇಈಲ ಮ್ಹಣೋನೀ ॥೧೭॥

ದೇಹಕ್ಕೆ ಯಾವುದೇದುಃಖವಾದರೆ ಅಥವಾ ಹಸಿವಾದರೆ ಆಗಶಿಶುವು ದೊಡ್ಡದಾಗಿ ಅಳುತ್ತದೆ.ಅದಕ್ಕೆ ಒಳಗೆ ಆಗುವ ದುಃಖವೆಂತಹದೆಂಬಬಗ್ಗೆ ತಾಯಿಗೆ ತಿಳಿಯುವದಿಲ್ಲ(೪)ತಾಯಿ ಶಿಶುವನ್ನುಎತ್ತಿಕೊಳ್ಳುತ್ತಾಳೆ. ರಂಜಿಸುತ್ತಾಳೆ.ಮುದ್ದು ಮಾಡುತ್ತಾಳೆ. ಪ್ರೇಮದಿಂದ ಕೈ ಆಡಿಸುತ್ತಾಳೆ. ಲಾಲಿ ಪದ ಅನ್ನುತ್ತ ಕೈಆಡಿಸುತ್ತಾಳೆ. ಆದರೆ ಇದು ಹೊರಗಿನ ಉಪಾಯವಾಗುತ್ತದೆ. ಅದರ ಅಂತರಂಗದಲ್ಲಿ ಯಾವ ದುಃಖವಾಗುತ್ತಿರುವದೆಂಬುದನ್ನು ಮಾತ್ರ ನಿಶ್ಚಿತವಾಗಿ ತಿಳಿದುಕೊಳ್ಳಲು ಶಕ್ತಳಾಗುವದಿಲ್ಲ.(೫)ಆ ಶಿಶು ಪುನಃಪುನಃ ಬಿಕ್ಕಿಬಿಕ್ಕಿ ಅಳುತ್ತದೆ. ತಾಯಿ ಮಗುವನ್ನು ಹೆಗಲ ಮೇಲಾಗಲಿ, ತೊಡೆಯ ಮೇಲಾಗಲಿ ತೆಗೆದುಕೊಂಡು ಅಳುವದನ್ನು ನಿಲ್ಲಿಸುವ ಪ್ರಯತ್ನ ಮಾಡುವಳು. ಆದರೆ ಅದರ ನೋವು, ವ್ಯಥೆ ತಿಳಿಯದ್ದರಿಂದ ಮಗುವು ತಳಮಳಿಸುತ್ತಲೇ ಇರುತ್ತದೆ. (೬) ಅನೇಕ ರೋಗಗಳು ಸೇರಿ ಅವು ಹೆಚ್ಚಾಗಿ ಅದರಿಂದ ಮಗುವಿನ ದುಃಖ ಹೆಚ್ಚಿ ಅದರ ಜೀವ ತಳಮಳಗೊಳ್ಳುವದು. ಶ್ವಾಸ ಕೆಳಗೂ ಮೇಲೂ ಬಡಿದುಕೊಳ್ಳುವದು. ಆ ಮಗು ಅಳುವದು, ಬೀಳುವದು ಅಥವಾ ಒಮ್ಮೊಮ್ಮೆ ಬೆಂಕಿಯಿಂದ ಸುಟ್ಟುಕೊಳ್ಳುವದು.(೭) ಅದಕ್ಕೆ ತನ್ನ ರಕ್ಷಣೆ ಮಾಡಿಕೊಳ್ಳಲಿಕ್ಕೆ ಬರುವದಿಲ್ಲವೆಂದೇ ಅದು ನಾನಾ ಪ್ರಕಾರದ ಅಪಾಯಗಳನ್ನು ಅನುಭವಿಸಬೇಕಾಗುವದು. ದೊಡ್ಡವರು ಚೇಷ್ಟೆಗಾಗಿ ಮಗುವನ್ನು ಕೈಕಾಲು ಹಿಡಿದುಎತ್ತುವದು, ಹೊಟ್ಟೆ ಹಿಡಿದು ತಿರುಗಿಸುವದನ್ನು ಮಾಡುವದರಿಂದ ಅಥವಾ ಹುಡುಗರಲ್ಲಿಯೇ ಇರುವ ಹುಡುಗಾಟಿಕೆಯ ಚಾಳಿ ಯಿಂದ(ಸ್ವಭಾವದಿಂದ)ಆಗುವಅಪಾಯದಿಂದ ಕೈಕಾಲು ಅಥವಾ ಯಾವುದಾದರೊಂದು ಅವಯವ ಕಳೆದುಕೊಳ್ಳುವ, ಊನು ಮಾಡಿಕೊಳ್ಳುವ, ಪ್ರಸಂಗ ಬರುತ್ತದೆ. (೮) ಮುಂದೆ ಮಗುವು ತಾಯಿಯನ್ನು ಗುರುತು ಹಿಡಿಯುವದು ಮತ್ತು ಅವಳಿಲ್ಲದೇ ಒಂದು ಕ್ಷಣ ಸಹ ಕಳೆಯಲು ಆಗುವದಿಲ್ಲ. (ಸಹನವಾಗುವದಿಲ್ಲ.) ಆದರೆ ಪೂರ್ವ ಪುಣ್ಯ ಮುಂದೆ ಬಂದು ನಿಂತಿದ್ದರಿಂದ ಮತ್ತು ಬರಬಹುದಾದ ಅಪಾಯಗಳು ತಪ್ಪಿದವು. ಆಮೇಲೆ ಮಗುವು ಸಾವಕಾಶವಾಗಿ ತಾಯಿಯನ್ನು ಹೆಚ್ಚು ಹೆಚ್ಚು ಗುರುತಿಸಹತ್ತುವದು. (೯) ಒಂದು ಕ್ಷಣ ತಾಯಿ ಕಾಣದಿದ್ದರೆ ಅದು ಅಳುವದು ಮತ್ತು ಚೀರುವದು. ಆ ವಯಸ್ಸಿನಲ್ಲಿ ತಾಯಿಯ ಹೊರತಾಗಿ ಯಾವುದಕ್ಕೂ ಮಹತ್ವ ಕೊಡುವದಿಲ್ಲ. ಬೇಕೆನಿಸುವದಿಲ್ಲ. (೧೦) ಅದು ಬಹಳ ಆಶೆಯಿಂದ ತಾಯಿಯ ದಾರಿಯನ್ನು ಕಾಯುವದು. ಯಾವಾಗಲೂ ತಾಯಿಯಿಂದ ದೂರಿರಲು ಬಯಸುವದಿಲ್ಲ. ಮತ್ತು ಒಮ್ಮೆ ತಾಯಿಯ ನೆನಪಾದರೆ ಒಂದು ಕ್ಷಣ ಸಹ ಅವಳ ವಿಯೋಗವನ್ನು ಸಹಿಸುವದು ಮಗುವಿಗೆ ಆಗುವದಿಲ್ಲ. (೧೧) ಬ್ರಹ್ಮಾದಿ ದೇವತೆಗಳಿಗಾಗಲಿ ಅಥವಾ ಪ್ರತ್ಯಕ್ಷ ಲಕ್ಷ್ಮಿಯೇ ಬಂದು ಪ್ರೇಮದಿಂದ ಕರೆದರೂ ಸಹ ತಾಯಿಯ ಹೊರತಾಗಿ ಯಾರಿಗೂ ಸಮಾಧಾನ ಮಾಡುವದು ಆಗುವದಿಲ್ಲ. (೧೨) ತಾಯಿ ರೂಪಹೀನಳಿರಲಿ. ಕೆಟ್ಟ ಲಕ್ಷಣದವಳಿರಲಿ, ಅಥವಾ ಸರ್ವರಿಗಿಂತ ದುರ್ದೈವಿಯಾಗಿರಲಿ ಹೇಗಿದ್ದರೂ ಮಗುವಿಗೆ ಜಗತ್ತಿನಲ್ಲಿ ತಾಯಿಯ ಹೊರತಾಗಿ ಬೇರೊಬ್ಬಳುಬೇಕೆನಿಸುವದಿಲ್ಲ.(೧೩) ತಾಯಿ ಇರಲಿಲ್ಲವೆಂದರೆ ಆ ಮಗು ದೀನ ಮುಖಿಯಾಗುವದು. ಸಪ್ಪೆಯಾಗುವದು. ತಾಯಿಯು ಸಿಟ್ಟಿನಿಂದಅದನ್ನು ದೂರ ದೂಡಿದರೂ ಸಹ ದೊಡ್ಡ ಧ್ವನಿಯಿಂದ ಅಳುತ್ತ ಪುನಃ ಅವಳಿಗೇ ಅಪ್ಪಿಕೊಳ್ಳುವದು. (೧೪) ತಾಯಿಯ ಹತ್ತಿರವೇ ಅದರ ಸರ್ವಸುಖ ಕೇಂದ್ರೀಕೃತವಾಗಿರುತ್ತದೆ, ಒಟ್ಟಿನಲ್ಲಿ ತಾಯಿಯಿಂದ ದೂರವಾದ ಕೂಡಲೇ ಅದರ ಜೀವ ತಳಮಳಗೊಳ್ಳುತ್ತದೆ. ಈ ರೀತಿಯಲ್ಲಿ ಆ ಬಾಲಕನ ಪ್ರೇಮವು ಆ ಚಿಕ್ಕ ವಯಸ್ಸಿನಲ್ಲಿ ತಾಯಿಯ ಮೋರೆಯೇ ದೃಢಗೊಂಡಿರುತ್ತದೆ.(೧೫)**ತಾಯಿಯ ವಿಯೋಗದಿಂದಾಗುವ ದುಃಖ ಹಾಗೂ ಅದರ ವರ್ಣನೆ:-** ಇಂಥ ಪರಿಸ್ಥಿತಿಯಲ್ಲಿ ತಾಯಿಯು ಮರಣವನ್ನು ಹೊಂದಿದರೆ ಆಗ ಮಗುವು ಪರದೇಶಿಯಾಗುವದು. "ಅವ್ವ,ಅವ್ವ" "ಅಮ್ಮ,ಅಮ್ಮ" ಎಂದು ಅನ್ನುತ್ತ ಅವಳ ಧ್ಯಾಸದಿಂದ ದುಃಖಿತವಾಗುವದು, ಕ್ರಮೇಣ ಸೊರಗಹತ್ತುವದು.(೧೬) ಅದು ತಾಯಿಯನ್ನು ಹುಡುಕುವದು. ಆದರೆ ಅವಳು ಕಾಣುವದಿಲ್ಲ. ಮುಖ ಸಣ್ಣದು ಮಾಡಿ ಜನರ ಕಡೆಗೆ ನೋಡುತ್ತದೆ. ತಾಯಿ ಬರುವಳು, ತನ್ನನ್ನು ಕಾಣುವಳು ಎಂಬ ಆಶೆಯನ್ನು ಮನದಲ್ಲಿ ತಂದುಕೊಳ್ಳುವದು.(೧೭)

ಮಾತಾ ಮ್ಹಣೌನ ಮುಖ ಪಾಹೇ । ತವ ತೇ ಆಪುಲೀ ಮಾತಾ ನವ್ಹೇ ।
ಮಗ ಹಿಮಾಂಸಲೇ ರಾಹೇ । ದೈನ್ಯವಾಣೇ ॥೧೮॥
ಮಾತಾವಿಯೋಗೇ ಕಷ್ಟಲೇ । ತೇಣೇ ಮಾನಸೀ ದುಃಖ ಜಾಲೇ ।
ದೇಹ ಹಿ ಕ್ಷೀಣತ್ವ ಪಾವಲೇ । ಅತಿಶಯೇಂಸೀ ॥೧೯॥
ಅಥವಾ ಮಾತಾ ಹಿ ವಾಂಚಲೀ । ಮಾಯುಲೇಕುರಾ ಭೇಟೀ ಜಾಲೀ ।
ಬಾಳ ದಶಾ ತೇ ರಾಹಿಲೀ । ದಿವಸೇದಿವಸ ॥೨೦॥
ಬಾಳಪಣ ಜಾಲೇ ಉಣೇ । ದಿವಸೇದಿವಸ ಹೋಯೇಂ ಶಾಹಾಣೇ ।
ಮಗ ತೇ ಮಾಯೇಂಚೇ ಅತ್ಯಂತ ಪೇಖಣೇ । ಹೋತೇ ತೇ ರಾಹಿಲೇ ॥೨೧॥
ಪುಢೇ ಛಂದ ಲಾಗಲಾ ಖೇಳಾಚಾ। ಕಳಪ ಮೇಳವಿಲಾ ಪೋರಾಂಚಾ ।
ಆಲ್ಯಾಗೇಲ್ಯಾ ಡಾಯೂಚಾ । ಆನಂದ ಶೋಕ ವಾಹೇ ॥೨೨॥
ಮಾಯಬಾಪೇ ಸಿಕವಿತೀ ಪೋಟೇ। ತಯಾಚೇ ಪರಮ ದುಃಖ ವಾಟೇ।
ಚಟ ಲಾಗಲೀ ನ ಸುಟೇ। ಸಂಗತೀ ಲೇಕುರಾಚೀ ॥೨೩॥
ಲೇಕುರಾಮಧ್ಯೇ ಖೇಳತಾ । ನಾಠವೇ ಮಾತಾ ಆಣಿ ಪಿತಾ ।
ತವ ತೇಥೇ ಹಿ ಅವಚಿತಾ । ದುಃಖ ಪಾವಲಾ ॥೨೪॥
ಪಡಿಲೇ ದಾಂತ ಫುಟಲಾ ಡೋಳಾ । ಮೋಡಲೇ ಪಾಯ ಜಾಲಾ ಖುಳಾ ।
ಗೇಲಾ ಮಾಜ ಅವಕಳಾ । ಠಾಕೂನ ಆಲೀ ॥೨೫॥
ನಿಘಾಲ್ಯಾ ದೇವೀ ಆಣೀ ಗೋವರ । ಉಠಲೇ ಕಪಾಳ ಲಾಗಲಾ ಜ್ವರ ।
ಪೋಟಸುಳೀ ನಿರಂತರ । ವಾಯಗೋಳಾ ॥೨೬॥
ಲಾಗಲೀ ಭೂತೇ ಜಾಲೀ ಝಡಪಣೇ।ಜಳೀಚ್ಯಾ ಮೇಸಕೋ ಮಾಯೇರಾಣೇ।
ಮುಂಜ್ಯಾ ಝೋಟಿಂಗ್ ಕರಣೇ । ಮ್ಹೈಸೋಬಾಚೀ ॥೨೭॥
ವೇತಾಳ ಖಂಕಾಳ ಲಾಗಲಾ । ಬ್ರಹ್ಮಗಿರ್ಹೋ ಸಂಚರಲಾ ।
ನೆಣೋ ಚೆಡಾ ವ್ರೋಲಾಂಡಿಲಾ । ಕಾಹೀ ಕಳೇನಾ ॥೨೮॥
ಯೇಕ ಮ್ಹಣತೀ ಬೀರೇದೇವ । ಯೇಕ ಮ್ಹಣತೀ ಖಂಡೇರಾವ ।
ಯೇಕ ಮ್ಹಣತೀ ಸಕಳ ವಾವ । ಹಾ ಬ್ರಾಹ್ಮಣ ಸಮಂಧ ॥೨೯॥
ಯೇಕ ಮ್ಹಣತೀ ಕೋಣೇ ಕೇಲೇ । ಅಂಗೀ ದೇವತ ಘಾತಲೇ ।
ಯೇಕ ಮ್ಹಣತೀ ಚುಕಲೇ । ಸಟವಾಈಚೇ ॥೩೦॥
ಯೇಕ ಮ್ಹಣತೀ ಕರ್ಮಭೋಗ । ಅಂಗೀ ಜಡಲೇ ನಾನಾ ರೋಗ ।
ವೈದ್ಯ ಪಂಚಾಕ್ಷರೀ ಚಾಂಗ। ಬೋಲಾಊನ ಆಣಿಲೇ ॥೩೧॥

ಒಮ್ಮೊಮ್ಮೆ ತನ್ನ ತಾಯಿಯೆಂದೇ ತಿಳಿದು ಇತರ ಹೆಣ್ಣು ಮಕ್ಕಳ ಮುಖದ ಕಡೆಗೆ ನೋಡುವದು. ಆಗ ಇವಳು ತನ್ನ ತಾಯಿ ಅಲ್ಲವೆಂದು ಗೊತ್ತಾಗುವದು. ಆಗ ಮುಖ ಸಣ್ಣದು ಮಾಡಿ ದೀನವಾಗುವದು. ಉತ್ಸಾಹಹೀನವಾಗುವದು. (೧೮) ತಾಯಿಯ ವಿಯೋಗದಿಂದ ಅದಕ್ಕೆ ಕಷ್ಟವಾಗುವದು. ಅದರ ಮನಸ್ಸು ದುಃಖ ಕಷ್ಟಗಳಿಂದ ಕೂಡಿದ್ದರಿಂದ ಮಗುವಿನ ದೇಹವು ಬಹಳ ಸೊರಗಹತ್ತುವದು. (೧೯) **ಸುದೈವದಿಂದ ತಾಯಿಯು ಉಳಿದಳು, (ಸಾಯಲಿಲ್ಲ) ಅಂದರೆ ಆಗ ಆ ಮಗುವು ಇನ್ನೂ ಬೆಳೆಯುತ್ತದೆ. ಆಗ ಅದರ ಲಕ್ಷ್ಯವು ಆಟದ ಕಡೆಗೆ ಹೋಗುತ್ತದೆ. ಅದರಲ್ಲಿ ಅಪಘಾತಾದಿಗಳು ಆಗುವವು. ಅದರ ವರ್ಣನೆ:-** ಒಂದು ವೇಳೆ ತಾಯಿಯು ಜೀವಂತ ಉಳಿದಳೆಂದರೆ ಇಬ್ಬರ ಭೆಟ್ಟಿ ಆಗುವದು. ಆ ಮೇಲೆ ಕೆಲವು ಕಾಲದ ನಂತರ ಆ ಮಗುವಿನ ಬಾಲ್ಯತನ ಮುಗಿಯುತ್ತದೆ. (೨೦) ಬಾಲ್ಯತನ ಮುಗಿದಂತೆ ದಿನ ದಿನವು ಹುಡುಗನು ಜಾಣನಾಗಹತ್ತುವನು. ಆಗ ತಾಯಿಯ ಮೇಲೆ ಮೊದಲಿಗೆ ಇಟ್ಟಂಥ ಅತಿಶಯ ಪ್ರೇಮವು ಬರಬರುತ್ತ ಕಡಿಮೆಯಾಗುವದು. (೨೧) ಹುಡುಗನು ಆಟದ ಹವ್ಯಾಸ ಅಥವಾ ಇಚ್ಛೆಯಿಂದ ಅತ್ತ ಕಡೆ ಲಕ್ಷ್ಯ ಹಾಕುವನು. ಹುಡುಗರ ಗುಂಪುಕಟ್ಟಿಕೊಂಡು ಆಟ ಆಡುವದರಲ್ಲಿ ತೊಡಗುವನು. ಅದರಲ್ಲಿ ಆಟ ಗೆದ್ದಾಗಿನ ಆನಂದ, ಆಟ ಸೋತಾಗಿನ ದುಃಖ, ಹೀಗೆ ಸುಖ ದುಃಖದಲ್ಲಿರುವನು.(೨೨) ತಾಯಿ–ತಂದೆಗಳು ಮನಮುಟ್ಟಿ ತಿಳಿಸಿ ಹೇಳುವರು.ಆದರೆ ಅವನಿಗೆ ಅವರ ಬುದ್ಧಿವಾದ ಸೇರುವದಿಲ್ಲ. ಅವರ ಬುದ್ಧಿವಾದವು ಅವನಿಗೆ ಬಹಳ ದುಃಖಕಾರಕವೆನಿಸುವದು. ಹುಡುಗರ ಕೂಡ ಆಡುವ ಚಟವು ಏನು ಮಾಡಿದರೂ ಬಿಡಲಿಕ್ಕೆ ಆಗುವದಿಲ್ಲ. (೨೩) ಹುಡುಗರ ಕೂಡ ಆಟ ಆಡುವಾಗ ಅವನಿಗೆ ತಾಯಿ–ತಂದೆಗಳ ನೆನಪೇ ಇರುವದಿಲ್ಲ. ಒಮ್ಮೊಮ್ಮೆ ಆಡುವ ಆಟದಲ್ಲಿ (ಅಚಾನಕ್,) ಅಕಸ್ಮಿಕವಾಗಿ ಪೆಟ್ಟು ವಗೈರೆ ಹತ್ತಿ ದುಃಖ ಒದಗುವದು. (೨೪) ಒಮ್ಮೊಮ್ಮೆ ಹಲ್ಲು ಮುರಿಯುವದು. ಕಣ್ಣಿಗೆ ಹೊಡೆತ ಬೀಳುವದು. ಕಾಲು ಮುರಿಯುವದು ಅಥವಾ ಕುಂಟತನ ಬರುವದು. ಆಗ ಮಾತ್ರ ಅವನ ಸೊಕ್ಕು ಮುರಿಯುತ್ತದೆ. ಶರೀರಕ್ಕಾದ ವ್ಯಂಗತ್ವದಿಂದ ಕುರೂಪಿಯಾಗುವನು. (೨೫) ಜ್ವರ, ಮೈಲಿ, ಗೊಬ್ಬರದಂಥ ರೋಗಗಳು ಬರುವವು. ಅದರಲ್ಲಿ ಬಹಳ ಕಷ್ಟದಿಂದ ಉಳಿದರೆ ತಂದೆ-ತಾಯಿಗಳು ಅವನಿಗೆ ಹೊಡೆದು ಬಡಿದು ದಾರಿಗೆ ತಂದು ಜಾಣನನ್ನಾಗಿ ಮಾಡುವರು. ಮುಂದೆ ಮಗುವಿಗೆ ಮೈಲಿ ಏಳುತ್ತವೆ, ಅಥವಾ ಗೊಬ್ಬರ ಏಳುವವು. ಇಲ್ಲವೆ ತಲೆಶೂಲಿ ಎದ್ದು ಒಂದೇ ಸವನೇ ಜ್ವರ ಬರಹತ್ತುವವು. ಅಥವಾ ಹೊಟ್ಟೆಶೂಲಿ ಬಂದು ವಾಯುವಿನ ಗಂಟು (ವಾಯು ಗೋಳಾ) ಏಳುತ್ತದೆ. (೨೬) ಈ ರೋಗ ಬರಲು ಕಾರಣವೇನೆಂದು ಜನರು ತರ್ಕ ಮಾಡಹತ್ತುವರು. ಅವರಲ್ಲಿ ಒಬ್ಬರು ಭೂತ ಬಡಿದು (ಹಿಡಿದು) ಕೊಂಡಿದೆಯೆನ್ನುವರು. ಇನ್ನೊಬ್ಬರು ನೀರಿನಲ್ಲಿರುವ ಒಂದು ಕ್ಷುದ್ರ ದೇವತೆ ಅಥವಾ ಜಲಪಿಶಾಚಿಯಾದ ಮಾಯರಾಣಿಯೆಂಬುದು ಹಿಡಿದುಕೊಂಡಿದೆಯೆನ್ನುವರು. ಮತ್ತೊಬ್ಬರು ಮುಂಜಾ ಅನ್ನುವ ಬ್ರಹ್ಮಚಾರಿ ಭೂತ ಇಲ್ಲವೆ ಝೋಟಿಂಗ ಅನ್ನುವ ಮುಸಲ್ಮಾನೀ ದೆವ್ವ ಅಥವಾ ಮ್ಹಸೋಬಾ ಅಥವಾ ಭರಮಪ್ಪ ವಗೈರೆ ಕಾಡುವಂತೆ ಯಾರೋ ಪ್ರಯೋಗ ಮಾಡಿರುತ್ತಾರೆ (೨೭) ಮತ್ತೊಬ್ಬರು ವೇತಾಳ, ಖಂಕಾಳ, ಭೂತರಾಜ, ದುಷ್ಟ ಉಗ್ರಭೂತಗಳಲ್ಲಿ ಒಂದು ಬಡಿದುಕೊಂಡಿದೆ. ಇನ್ನೊಬ್ಬರು ಬ್ರಹ್ಮಸಂಬಂಧದ ಬ್ರಾಹ್ಮಣ ಪಿಶಾಚಿಯ ಸಂಚಾರವಾಗಿದೆ. ಮಗದೊಬ್ಬರು ಮಂತ್ರಿಸಿದ ವಸ್ತುವನ್ನೇನಾದರೂ ದಾಟಿರಬಹುದಾಗಿದೆಯೆನ್ನುವರು. ಆದರೆ ನಿಶ್ಚಿತವಾವುದೆಂಬುದು ತಿಳಿಯುವದಿಲ್ಲ. (೨೮) ಒಬ್ಬರು ಬೀರದೇವರು, ಒಬ್ಬರು ಖಂಡೇರಾಯ (ಮೈಲಾರಲಿಂಗ–ಖಂಡೋಬ)ನ ಕಾಟವಿರಬಹುದೆಂದು ಅಂದರೆ ಮತ್ತೊಬ್ಬರು "ಇವೆಲ್ಲ ಸುಳ್ಳು, ಅವನಿಗೆ ಸತ್ಯವಾಗಿಯೂ ಬ್ರಹ್ಮರಾಕ್ಷಸವೇ ಹಿಡಿದಿರುತ್ತದೆ" ಅನ್ನುವರು. (೨೯) ಒಬ್ಬರೆನ್ನುತ್ತಾರೆ "ಮಂತ್ರ ಮಾಟದಿಂದ ಆ ಹುಡುಗನ ಮೈಯಲ್ಲಿ ಯಾವುದೋ ಒಂದು ದೇವತೆಯನ್ನು ಬಿಟ್ಟಿದ್ದಾರೆ" ಇನ್ನೊಬ್ಬರೆನ್ನುವರು "ಸಟವಾಯಿ ದೇವತೆಗೆ ಬೇಡಿಕೊಂಡ ಹರಕೆಯನ್ನು ತಾಯಿ ತಪ್ಪಿಸಿರಬಹುದು ಆದರಿಂದ ಹೀಗಾಗಿದೆ" (೩೦) **ಒಬ್ಬರು ಅನ್ನುವರು:–** ಪೂರ್ವ ಕರ್ಮದ ಫಲ ಭೋಗಿಸಬೇಕಾಗಿದೆ. ಅದಕ್ಕಾಗಿ ಈ ಹುಡುಗನಿಗೆ ನಾನಾ ಪ್ರಕಾರದ ರೋಗಗಳು ಅಂಟಿಕೊಂಡಿವೆ.ಇದಕ್ಕಾಗಿ ಆಗ ಉತ್ತಮವೈದ್ಯ ಹಾಗೂಮಾಂತ್ರಿಕರನ್ನು ಕರೆಯಿಸಿ ಔಷದೋಪಚಾರಗಳು ನಡೆಯುವವು. (೩೧)

ಯೇಕ ಮ್ಹಣತೀ ಹಾ ವಾಂಚೇನಾ । ಯೇಕ ಮ್ಹಣತೀ ಹಾ ಮರೇನಾ ।
ಭೋಗ ಭೋಗಿತೋ ಯಾತನಾ । ಪಾಪಾಸ್ತವ ॥೩೨॥

ಗರ್ಭದುಃಖ ವಿಸರಲಾ । ತೋ ತ್ರಿವಿಧತಾಪೇ ಪೋಳಲಾ ।
ಪ್ರಾಣೀ ಬಹುತ ಕಷ್ಟೀ ಜಾಲಾ । ಸಂಸಾರ ದುಃಖೇ ॥೩೩॥

ಇತುಕೇ ಹಿ ಚುಕೋನ ವಾಂಚಲಾ । ತರೀ ಮಾರಮಾರೂ ಶಾಹಾಣಾ ಕೇಲಾ ।
ಲೋಕಿಕೀ ನೇಟಕಾ ಜಾಲಾ । ನಾವ ರಾಖೆ ವಿಸಾ ॥೩೪॥

ಪುಢೇ ಮಾಯೆಬಾಪೀ ಲೋಭಾಸ್ತವ । ಸಂಭ್ರಮೇ ಮಾಂಡಿಲಾ ವಿವ್ಹಾವ ।
ದಾಊನಿಯಾ ಸಕಳ ವೈಭವ । ನೋವರೀ ಪಾಹಿಲೀ ॥೩೫॥

ವರ್ಹಾಡೀ ವೈಭವ ದಾಟಲೇ । ದೇಖೋನ ಪರಮ ಸುಖ ವಾಟಲೇ ।
ಮನ ಹೇ ರಂಗೋನ ಗೇಲೇ । ಸಾಸುರವಾಡೀ ಕಡೇ ॥೩೬॥

ಮಾಯಬಾಪೀ ಭಲತೈಸೇ ಅಸಾವೇ । ಪರೀ ಸಾಸುರವಾಡೀಸ ನೇಟಕೇ ಜಾವೇ ।
ದ್ರವ್ಯ ನಸೇಲ ತರೀ ಘ್ಯಾವೇ । ರುಣ ಕಳಾಂತರೇ ॥೩೭॥

ಅಂತರ್ಭಾವ ತೇ ಸಾಸುರವಾಡೀ । ಮಾಯೆಬಾಪೇ ರಾಹಿಲೀ ಬಾಪುಡೀ ।
ಹೋತಾತೀ ಸರ್ವಸ್ವೇ ಕುಡಕುಡೀ । ತಿತುಕೇಚ ಕಾರ್ಯ ತ್ಯಾಂಚೇ ॥೩೮॥

ನೋವರೀ ಆಲಿಯಾ ಘರಾ । ಅತೀ ಹವ್ಯಾಸ ವಾಟೆ ಬರಾ ।
ಮ್ಹಣೇ ಮಜಸಾರಿಖಾ ದುಸರಾ। ಕೋಣೀಚ ನಾಹೀ ॥೩೯॥

ಮಾಯಬಾಪ ಬಂಧು ಬಹಿಣಿ । ನೋವರೀ ನ ದಿಸತಾ ವಾಟ ಕೋಣೀ।
ಅತ್ಯಂತ ಲೋಧಲಾ ಪಾಪಿಣೀ। ಅವಿದ್ಯೇನೇ ಭುಲವಿಲಾ ॥೪೦॥

ಸಂಭೋಗ ನಸ್ತಾ ಇತುಕಾ ಪ್ರೇಮಾ। ಯೋಗ್ಯ ಜಾಲಿಯಾ ಉಲಂಘೀ ಸೀಮಾ।
ಪ್ರೀತಿ ವಾಢವಿತೀ ಕಾಮಾ । ಕರಿತಾ ಪ್ರಾಣೀ ಗುಂತಲಾ ॥೪೧॥

ಜರೀ ನ ದೇಖೆ ಕ್ಷಣ ಯೇಕ ಡೋಳಾ । ತರೀ ಜೀವ ಹೋಯ ಉತಾವಿಳಾ ।
ಪ್ರೀತಿ ಪಾತ್ರ ಅಂತರ್ಕಳಾ । ಘೇಊನ ಗೇಲೀ ॥೪೨॥

ಒಬ್ಬರು "ಇವನು ಉಳಿಯುವದಿಲ್ಲ"ವೆಂದರೆ ಇನ್ನೊಬ್ಬರು "ಇವನೇನೂ ಸಾಯುವದಿಲ್ಲ. ಯಾಕೆಂದರೆ ಪೂರ್ವದ ಪಾಪ ಕರ್ಮಕ್ಕನುಸಾರವಾಗಿ ಈ ರೀತಿ ರೋಗ ರೂಪದಿಂದ ಯಾತನೆಯನ್ನು ಭೋಗಿಸುತ್ತಿದ್ದಾನೆ"[೩೨] ಮನುಷ್ಯನು ಗರ್ಭವಾಸದ ದುಃಖವನ್ನು ಮರೆತರೂ ಸಹ ಜೀವನದಲ್ಲಿಯ ತ್ರಿವಿಧ ತಾಪಗಳಿಂದ ಅವನು ಹುರಪಳಿಸಿ ವ್ಯಥಿತನಾಗಿಯೇ ಆಗುತ್ತಾನೆ. ಒಟ್ಟಿನಲ್ಲಿ ಮನುಷ್ಯನಿಗೆ ಸಂಸಾರ ದುಃಖದಿಂದ ಬಹಳಷ್ಟು ಯಾತನೆಯ ಕಷ್ಟಗಳನ್ನು ಅನುಭವಿಸಬೇಕಾಗುವದು. [೩೩] ಇಷ್ಟೆಲ್ಲ ಭಾನಗಡಿಯ ಘೋಟಾಳೆ, ಗೊಂದಲ ಹಾಗೂ ಅಡಚಣೆ ತೊಂದರೆಗಳಿಂದ ಮನುಷ್ಯ [ಹುಡುಗ] ಜೀವಂತ ಉಳಿದರೆ ವಿದ್ಯೆ ಕಲಿಯಲಿ ಎಂದು ತಾಯಿ ತಂದೆಗಳು ಹೊಡೆದು ಬಡಿದು ಮಾಡಿ ಕಷ್ಟಪಟ್ಟು ಜಾಣನನ್ನಾಗಿ ಮಾಡುವರು. ಇದರಿಂದ ನಾಲ್ಕು ಜನರಲ್ಲಿ ಹೆಸರು ಬರುವಂಥವನಾಗಿ ಚನ್ನಾಗಿ ಬೆಳೆದು ಬಂದನು. [೩೪] ವಿದ್ಯೆಗಳಿಸಿದ ಮಗನು ವಯಸ್ಸಿಗೆ ಬಂದು ಉತ್ತಮ ರೀತಿಯಿಂದ ನಡೆಯ ಹತ್ತಿದನು. ಇದನ್ನೆಲ್ಲ ನೋಡಿದ ತಂದೆ-ತಾಯಿಗಳು ಹರ್ಷದಿಂದ ಉತ್ತಮ ಕನ್ಯೆಯನ್ನುನೋಡಿ ಲಗ್ನ ಮಾಡಿದರು:- ಲಗ್ನವಾದಮೇಲೆ ಮಗನವೃತ್ತಿಯಲ್ಲಿ ಯಾವ ಬದಲಾವಣೆಗಳಾದವೆಂಬುದರ ಸುಂದರ ವರ್ಣನೆಯನ್ನು ಶ್ರೀಸಮರ್ಥರು ಇಲ್ಲಿ ಹೇಳುತ್ತಾರೆ:-ಆಮೇಲೆ ತಾಯಿ-ತಂದೆಗಳು ಸಂಸಾರ ಲೋಭದಿಂದ ವ್ಯಾಪ್ತರಾಗಿ ಬಹಳ ಉತ್ಸುಕತೆಯಿಂದ ಮತ್ತು ವಿಜೃಂಭಣೆಯಿಂದ ಮಗನ ಲಗ್ನ ಮಾಡಬೇಕೆಂದು ನಿಶ್ಚಯಿಸುತ್ತಾರೆ. ಕನ್ಯೆಯ ತಂದೆ-ತಾಯಿಗಳಿಗೆ ತಮ್ಮ ಹಣ ಶ್ರೀಮಂತಿಕೆಗಳ ಡೌಲು ತೋರಿಸಿ ಮಗನಿಗೆ ಒಂದು ಕನ್ಯೆಯನ್ನು [ನೋಡಿ] ಗೊತ್ತುಪಡಿಸಿದರು[೩೫] ತಮ್ಮ ತಮ್ಮ ವೈಭವದೊಂದಿಗೆ ಬಹಳಷ್ಟು ಬೀಗರು ಲಗ್ನಕ್ಕಾಗಿ ಬಂದರು. ಲಗ್ನದ ವೈಭವ ನೋಡಿ ಮದುಮಗನ ಮನಸ್ಸಿಗೆ ಅತ್ಯಾನಂದವಾಯಿತು. ಮತ್ತು ಅವನು ಹೆಂಡತಿಯ ಮನೆಯತ್ತ ಆಕರ್ಷಿತನಾದನು. [೩೬] ತಾಯಿ-ತಂದೆಗಳು ಯಾವುದೇ ಹೀನ ಅಥವಾ ದೀನಪರಿಸ್ಥಿತಿಯಲ್ಲಿದ್ದರೂ ಚಿಂತೆ ಇಲ್ಲ. ತಾನು ಮಾವನ ಮನೆಗೆ ಮಾತ್ರ ಒಳ್ಳೆ ಥಾಟಿನಿಂದ ಜಬರದಸ್ತಾಗಿ ಹೋಗಬೇಕೆಂದು ನಿಶ್ಚಯ ಮಾಡುವನು. ಆಗ ಹತ್ತರ ಹಣವಿರದಿದ್ದರೂ ಸಹ ಎರಡನೆಯವರಲ್ಲಿ ಬಡ್ಡಿ ಸಾಲ ತೆಗೆದುಕೊಂಡು ಹುರುಪಿನಿಂದ ಮಾವನ ಮನೆಗೆ ಅಂದರೆ ಹೆಂಡತಿಯ ತವರು ಮನೆಗೆ ಹೋಗುವನು. [೩೭] ಅವನ ಅಂತರಂಗವೆಲ್ಲ [ಜೀವವೆಲ್ಲ] ಅತ್ತೆ ಮಾವನ ಊರ ಕಡೆಗೆ ಇರುತ್ತದೆ. ಅಂದ ಮೇಲೆ ತಾಯಿ-ತಂದೆಗಳು ಅಸಾಹಯಕರೂ ದೀನರೂ ಆಗಿ ಸುಮ್ಮನೆ ಮನೆಯಲ್ಲಿ ಇರಬೇಕಾಗುವದು. ಅವರು ಸುತ್ತೂ ಕಡೆಯಿಂದ ತ್ರಸ್ತರಾಗಿ ದುಃಖಿಗಳಾಗುವರು. ಒಟ್ಟಿನಲ್ಲಿ ಅವರ ಜೀವನದಲ್ಲಿ ಇಷ್ಟೇ ಕಾರ್ಯವಿದ್ದಿತು. ಅದನ್ನು ಮಾಡಿದರು. ಅದು ಈಗ ಮುಗಿಯಿತು. [೩೮] ಈಗ ಕಾಮವಾಸನೆಯ ಆಧೀನತೆಗೊಳಗಾದ ವಿವಾಹಿತ ತರುಣ ಮನುಷ್ಯನ ಬಗ್ಗೆ ಶ್ರೀ ಸಮರ್ಥರು ವರ್ಣನೆ ಮಾಡುತ್ತಾರೆ:- ಇದರಲ್ಲಿ ಅತಿಶಯೋಕ್ತಿ ಇದೆಯೆಂದು ಅನ್ನಲು ಬಾರದು. ಯಾಕೆಂದರೆ ಈಗ್ಯೂ ಕೂಡಾ ಅಂಥವರು ಬಹಳಷ್ಟು ಕಂಡು ಬರುತ್ತಾರೆ. ಹೆಂಡತಿ ಮನೆಗೆ ಬಂದ ಕೂಡಲೇ ಅವಳು ಒಂದೇ ಸವನೇ ತನ್ನ ಹಿಂದು ಮುಂದು, ಸುತ್ತುಮುತ್ತುಲೇ ಇರಬೇಕೆಂದು ಅನಿಸುತ್ತದೆ. ತನ್ನಷ್ಟು ಸುಖಿಗಳು ಈಗ ಯಾರೂ ಇಲ್ಲವೆಂದು ತಿಳಿಯುತ್ತಾನೆ. [೩೯] ಹೆಂಡತಿ ಮನೆಯಲ್ಲಿ ತಂದೆ-ತಾಯಿ, ಅಕ್ಕ-ತಂಗಿ, ಅಣ್ಣ-ತಮ್ಮ ಇವರೆಲ್ಲ ಇದ್ದರೂ ಸಹ ಸಮಾಧಾನವಾಗುವದಿಲ್ಲ. ಆಗ ಖಿನ್ನನಾಗುತ್ತಾನೆ. ತನ್ನ ಹೆಂಡತಿಯಲ್ಲಿ ಅವನು ಬಹಳಷ್ಟು ಆಸಕ್ತನಾಗಿ ಹೋಗುವನು. ಪಾಪಕ್ಕೆ ಕಾರಣವಾದ ಅವಿದ್ಯೆಯು ಅವನನ್ನು ಸಂಪೂರ್ಣವಾಗಿ ಮೋಹದಲ್ಲಿ ಕಟ್ಟಿ ಹಾಕಿರುತ್ತದೆ. [೪೦] ಹೆಂಡತಿ ವಯಸ್ಸಿಗೆ ಬರದಿದ್ದಾಗಲೇ ಇಷ್ಟೊಂದು ಆಸಕ್ತನಾದವನು ಪ್ರೇಮ ಮಾಡುವವನು ಮುಂದೆ ಅವಳು ವಯಸ್ಸಿಗೆ ಬಂದು ಸ್ತ್ರೀ ಸುಖ ಸಿಗಹತ್ತಿದಾಗ ಅವನ ನಡವಳಿಕೆಗೆ ಮರ್ಯಾದೆಯೆಂಬುದೇ ಇರುವದಿಲ್ಲ. ಇದು ಸ್ವಾಭಾವಿಕವೇ ಇರುವದು. ಯಾಕೆಂದರೆ ಅವಳ ಪ್ರೀತಿಯಿಂದ ಇವನ ಕಾಮವಾಸನೆ ಹೆಚ್ಚುತ್ತಲೇ ಹೋಗುವದು. ಹೀಗಾಗಿ ಮನುಷ್ಯ ಇದರಲ್ಲಿ ಸಿಕ್ಕಿಹಾಕಿಕೊಳ್ಳುವನು. [೪೧] ಈಗಂತೂ ಹೆಂಡತಿ ದೊಡ್ಡವಳಾಗಿರುವಳು. ಈಗಂತೂ ಒಂದು ಕ್ಷಣ ಮರೆಯಾದರೆ ಅವಳನ್ನು ನೋಡುವದಕ್ಕಾಗಿ ಆತುರದಿಂದ ಧಡಪಡಿಸುವನು. ಪ್ರೇಮದ ಹೆಂಡತಿಯು ಅವನ ವಿವೇಕವನ್ನು ಕಸಿದುಕೊಂಡು ಬಿಟ್ಟಂತೆ ಕಾಣುತ್ತದೆ. [೪೨]

ಕೋವಳೇ ಕೋವಳೇ ಶಬ್ದ ಮಂಜುಳ। ಮರ್ಯಾದಾ ಲಜ್ಜಾ ಮುಖಕಮಳ।
ವಕ್ರಲೋಕನೇ ಕೇವಳ । ಗ್ರಾಮಜ್ಯಾಚೇ ಮೈದಾವೇ ॥೪೩॥
ಕಳವಳಾ ಯೇತಾ ಸಾವರೇನಾ । ಶರೀರ ವಿಕಳ ಆವರೇನಾ ।
ಅನೇತ್ರ ವೆವಸಾಈ ಕ್ರಮೇನಾ । ಹುರಹುರವಾಟೇ ॥೪೪॥
ವೆವಸಾಯ ಕರಿತಾ ಬಾಹೇರೀ। ಮನ ಲಾಗಲೇಸೇ ಘರೀ ।
ಕ್ಷಣಕ್ಷಣಾ ಅಭ್ಯಾಂತರೀ। ಸ್ಮರಣ ಹೋಯೇ ಕಾಮಿನೀಚೇ ॥೪೫॥
ತುಮ್ಹೀ ಮಾಝಿಯಾ ಜಿವಾತೀಲ ಜೀವ । ಮ್ಹಣೌನಿ ಅತ್ಯಂತ ಲಾಘವ ।
ದಾಊನಿಯಾ ಚಿತ್ತ ಸರ್ವ । ಹಿರೋನ ಘೇತಲೇ ॥೪೬॥
ಮೈಂದ ಸೊಇರೀಕ ಕಾಢಿತೀ । ಘಾಂಸೇ ಘಾಲೂನ ಪ್ರಾಣ ಘೇತೀ ।
ತೈಸೇ ಆಯುಷ್ಯ ಗೇಲಿಯಾ ಅಂತೀ । ಪ್ರಾಣಿಯಾಸ ಹೋಯೇ ॥೪೭॥
ಪ್ರೀತಿ ಕಾಮಿನೀಸೀ ಲಾಗಲೀ । ಜರೀ ತಯೇಸೀ ಕೋಣೀ ರಾಗೇಜಲೀ ।
ತರೀ ಪರಮ ಕ್ಷಿತೀ ವಾಟಲೀ । ಮಾನಸೀ ಗುಪ್ತರೂಪೇ ॥೪೮॥
ತಯೇ ಭಾರ್ಯೇಚೇನಿ ಕೈವಾರೇ। ಮಾಯೇಬಾಪಾಸೀ ನೀಚ ಉತ್ತರೇ ।
ಬೋಲೋನಿಯಾ ತಿರಸ್ಕಾರೇ । ವೆಗಳಾನಿಘೇ ॥೪೯॥
ಸ್ತ್ರೀಕಾರಣೇ ಲಾಜ ಸಾಂಡಿಲೀ । ಸ್ತ್ರೀಕಾರಣೇ ಸಖೀ ಸೋಡಿಲೀ ।
ಸ್ತ್ರೀಕಾರಣೇ ವಿಘಡಿಲೀ । ಸಕಳಹಿ ಜಿವಲಗೇ ॥೫೦॥
ಸ್ತ್ರೀಕಾರಣೇ ದೇಹ ವಿಕಿಲಾ । ಸ್ತ್ರೀಕಾರಣೇ ಸೇವಕ ಜಾಲಾ ।
ಸ್ತ್ರೀಕಾರಣೇ ಸಾಂಡವಲಾ । ವಿವೇಕಾಸೀ ॥೫೧॥
ಸ್ತ್ರೀಕಾರಣೇ ಲೋಲಂಗತಾ । ಸ್ತ್ರೀಕಾರಣೇ ಅತಿನಮ್ರತಾ ।
ಸ್ತ್ರೀಕಾರಣೇ ಪರಾಧೇನತಾ । ಅಂಗಿಕಾರಿಲೀ ॥೫೨॥
ಸ್ತ್ರೀಕಾರಣೇ ಲೋಭೀ ಜಾಲಾ । ಸ್ತ್ರೀಕಾರಣೇ ಧರ್ಮ ಸಾಂಡಿಲಾ ।
ಸ್ತ್ರೀಕಾರಣೇ ಅಂತರಲಾ । ತೀರ್ಥಯಾತ್ರಾ ಸ್ವಧರ್ಮ ॥೫೩॥
ಸ್ತ್ರೀಕಾರಣೇ ಸರ್ವಥಾ ಕಾಂಹೀ । ಶುಭಾಶುಭ ವಿಚಾರಲೇ ನಾಹೀ ।
ತನು ಮನು ಧನು ಸರ್ವಹೀ । ಅನನ್ಯಭಾವೇ ಅರ್ಪಿಲೇ ॥೫೪॥
ಸ್ತ್ರೀಕಾರಣೇ ಪರಮಾರ್ಥ ಬುಡವಿಲಾ । ಪ್ರಾಣೀ ಸ್ವಹಿತಾಸ ನಾಡಲಾ ।
ಈಶ್ವರೀ ಕಾನಕೋಂಡಾಜಾಲಾ । ಸ್ತ್ರೀಕಾರಣೇ ಕಾಮಬುದ್ಧೀ ॥೫೫॥
ಸ್ತ್ರೀಕಾರಣೇ ಸೋಡಿಲೀ ಭಕ್ತೀ । ಸ್ತ್ರೀಕಾರಣೇ ಸೋಡಿಲೀ ವಿರಕ್ತೀ ।
ಸ್ತ್ರೀಕಾರಣೇ ಸಾಯುಜ್ಯ ಮುಕ್ತೀ। ತೇಹೀ ತುಚ್ಛ ಮಾನಿಲೀ ॥೫೬॥

ಅವಳ ಮಧುರ ಹಾಗೂ ಮಂಜುಳ ಶಬ್ದ, ಅವಳ ವಿನಯ, ಅವಳ ವಯ್ಯಾರ, ಕಮಲದಂತಹ ಸುಂದರ ಮುಖ ಇವೆಲ್ಲದರಿಂದ ಈ ತರುಣನು ಮೋಹವಶನಾಗುವನು. ಕೇವಲ ಹೆಂಡತಿಯ ಮುಖ ನೋಡಿದರೆ ಸಾಕು. ಅವನಿಗೆ ಸಂಭೋಗ ಸುಖದ ವಿಚಾರದಿಂದ ಮನಸ್ಸು ತುಂಬಿ ಹೋಗುವದು.[೪೩] ಅವಳ ಬಗ್ಗೆ ಪ್ರೇಮದ ಅಲೆ ಲಹರಿ ಬಂದ ಕೂಡಲೇ ಮನಸ್ಸು ಸ್ವಾಧೀನದಲ್ಲಿಉಳಿಯುವದಿಲ್ಲ. ವಿಷಯಸೇವನದಿಂದ ಬಂದಶರೀರದ ಶಿಥಿಲತನವನ್ನು ಬಿಗಿಹಿಡಿಯಲಾಗುವದಿಲ್ಲ. ಬೇರೆ ಕೆಲಸ ಮಾಡಬೇಕೆಂದರೆ ಮನಸ್ಸು ಒಪ್ಪುವದಿಲ್ಲ. ಒಂದೇ ಸವನೆ ಹೆಂಡತಿಯ ಹವ್ಯಾಸವೇ ಹವ್ಯಾಸ. [೪೪] ಹೊರಗೆ ಉದ್ಯೋಗ ವ್ಯವಸಾಯ ಮಾಡುವಾಗ ಸಹ ಅವನ ಮನಸ್ಸುಮನೆಯಲ್ಲಿರುವ ಹೆಂಡತಿಯಲ್ಲಿ ಮಗ್ನವಾಗಿರುತ್ತದೆ. ಕ್ಷಣ ಕ್ಷಣಕ್ಕೂ ಮನದಲ್ಲಿ ತನ್ನ ಹೆಂಡತಿಯ ಜ್ಞಾಪಕವಾಗುತ್ತಲೇ ಇರುತ್ತದೆ. [೪೫] "ನನ್ನ ಜೀವಕ್ಕಿಂತಲೂ ನೀವು ಹೆಚ್ಚಿನ ಪ್ರೀತಿಯವರು" ಎಂದು ಹೆಂಡತಿಯು ಅತ್ಯಂತ ವಯ್ಯಾರದಿಂದ ಅನ್ನುವಳು. ಮತ್ತು ಅನೇಕ ಪ್ರಕಾರದ ಮಧುರ ಮಾತುಗಳಿಂದ ಗಂಡನ ಮನಸ್ಸನ್ನು ತನ್ನ ಕಡೆಗೆ ಪೂರ್ಣ ಎಳೆದುಕೊಳ್ಳುವಳು. [೪೬] ಸುಳ್ಳು, ಠಕ್ಕ, ದುಷ್ಟ ಜನರು ಪ್ರಾರಂಭದಲ್ಲಿ ಆಪ್ತತ್ವ ಗೆಳೆತನಗಳಿಂದ ಮನುಷ್ಯನನ್ನು ವಿಶ್ವಾಸದಲ್ಲಿ ತೆಗೆದುಕೊಳ್ಳುವರು. ಆ ಮೇಲೆ ಸಮಯ ಸಾಧಿಸಿ ಕುತ್ತಿಗೆ ಕೊಯ್ಯುವರು. ಘಾತ ಮಾಡುವರು. ಇದೇ ಪ್ರಕಾರದಿಂದ ಸಾವು ಸಮೀಪಿಸಿದರೆ, ಆಯುಷ್ಯ ಮುಗಿದಿದ್ದರೆ ಮನುಷ್ಯನ ಅವಸ್ಥೆ ಹೀಗಾಗುವದು. [೪೭] ಹೆಂಡತಿಯ ಮೇಲೆ ಅತಿಪ್ರೇಮವಿಡುವನು. ಇವಳ ಮೇಲೆ ಯಾರಾದರೂ ಹಿರಿಯರು ಸಿಟ್ಟಿಗೆದ್ದರೆ ಆ ತರುಣನಿಗೆ ಮನಸ್ಸಿನಲ್ಲಿ ಬಹಳ ದುಃಖವಾಗುವದು.ಆದರೆಅದನ್ನು ಹೊರಗೆ ತೋರಗೊಡುವದಿಲ್ಲ[೪೮] ದಿನಗಳೆದಂತೆ ಹೆಂಡತಿಯ ಬೆನ್ನು ಕಟ್ಟಿ ತಾಯಿ ತಂದೆಗಳನ್ನು ಬಯ್ಯುವನು. ಒಂದೊಂದು ಸಲಬಾಯಿಗೆ ಬಂದಂತೆ ಒದರಾಡುವನು. ಕೊನೆಗೆ ತಿರಸ್ಕಾರದಿಂದ ಅವನು ಬೇರೆ ಹೋಗುವನು. [೪೯] **ಕೇವಲ ಕಾಮವಾಸನೆಯ ಕಾರಣದಿಂದ ಮನುಷ್ಯರ ಅಧಃಪಾತ ಹೇಗೆ ಆಗುವದೆಂಬುದನ್ನು ಶ್ರೀ ಸಮರ್ಥರು ವಿವರಿಸುತ್ತಾರೆ:-**

ಸ್ತ್ರೀಯಳಿಗಾಗಿ [ಹೆಂಡತಿಗಾಗಿ] ಲಜ್ಜೆಯನ್ನು ಬಿಟ್ಟು ಮಿತ್ರರನ್ನು ದೂರ ಇಟ್ಟನು ಹೆಂಡತಿಯಿಂದಾಗಿ ಹತ್ತಿರದ ಆಪ್ತೇಷ್ಟರ ಸಂಗಡ ಇವನ ಸಂಬಂಧ ಕೆಡಹತ್ತಿತು. [೫೦] ಸ್ತ್ರೀಯಳಿಗಾಗಿ ತನ್ನ ದೇಹವನ್ನೇ ಮಾರಿಕೊಂಡವನು. ಇವಳಿಗಾಗಿ ನೌಕರನಾದನು. ಇವಳ ಆಧೀನನಾಗಿ ತನ್ನ ವಿವೇಕವನ್ನೇ ಕಳೆದುಕೊಂಡು ವಿವೇಕ ಭ್ರಷ್ಟನಾದನು. [೫೧] ಸ್ತ್ರೀಯಳಿಗಾಗಿ ಲಂಪಟನಾದಇವನು ಅತೀನಮ್ರತೆಯುವನಾದನು. ಇವಳಿಗಾಗಿಎರಡನೆಯವರ ತಾಬೇದಾರನಾದನು.[೫೨] ಸ್ತ್ರೀಯಳಿಗಾಗಿ ಇವನು ಲೋಭಿಯಾದನು. ಧರ್ಮಬಿಟ್ಟನು. ತೀರ್ಥಯಾತ್ರೆ ನಿತ್ಯ ಕರ್ಮ ಇಂಥವುಗಳನ್ನು ಮಾಡಲು ಶಕ್ತನಾಗುವದಿಲ್ಲ. [೫೩] ಸ್ತ್ರೀಯಳಿಗಾಗಿ ಎಂದೂ ಒಳಿತು ಕೆಡಕಿನ ವಿಚಾರ ಮಾಡದಂತೆ ಆದನು. ತನು,ಮನ,ಧನ, ಇವನ್ನೆಲ್ಲ ಇವನು ಮನಸ್ಸಿನಿಂದ ಹೆಂಡತಿಗಾಗಿ[ಸ್ತ್ರೀಯಳಿಗಾಗಿ]ವ್ಯಯಿಸಲು ಸಿದ್ಧನಾದನು.[೫೪] ಸ್ತ್ರೀಯಳಿಗಾಗಿ ತನ್ನ ಪರಮಾರ್ಥವನ್ನು ಕೈಬಿಟ್ಟನು. ಅವನು ತನ್ನ ಸ್ವತಃದ ಕಲ್ಯಾಣವನ್ನು ಮರೆತನು, ಕಳೆದುಕೊಂಡನು. ಸ್ತ್ರೀಯ ಮೂಲಕ ವಿಷಯ ವಾಸನೆ ಹೆಚ್ಚಿತು. ಮತ್ತು ಕೊನೆಗೆ ಈಶ್ವರನ ಕಡೆಗೆ ಹೋಗುವದಕ್ಕೆ ಲಜ್ಜೆ ಅಡ್ಡಬರಹತ್ತಿತು.[೫೫] ಸ್ತ್ರೀಯಳಿಗಾಗಿ ಅವನು ಭಕ್ತಿ ಮಾಡುವದನ್ನು ಬಿಟ್ಟನು. ವಿರಕ್ತತನ ಬಿಟ್ಟನು. ಇಷ್ಟೇ ಏಕೆ? ಸಾಯುಜ್ಯ ಮುಕ್ತಿಯನ್ನೂ ಸಹ ಅವಳ ಮುಂದೆ ತುಚ್ಛವೆಂದು ತಿಳಿದನು. [೫೬]

ಯೇಕೇ ಸ್ತ್ರೀಯೇಚೇನಿ ಗುಣೇ । ಬ್ರಹ್ಮಾಂಡ ಮಾನಿಲೆ ಠೇಂಗಣೇ ।
ಜಿವಲಗೇ ತೀ ಪಿಸುಣೇ । ಐಸೀ ವಾಟಲೀ ॥೫೭॥
ಐಸೀ ಅಂತರಪ್ರೀತಿ ಜಡಲೀ । ಸರ್ವಸ್ವಾಚೀ ಸಾಂಡೀ ಕೇಲೀ ।
ತವ ತೇ ಮರೋನ ಗೇಲೀ । ಅಕಸ್ಮಾತ ಭಾರ್ಯಾ ॥೫೮॥
ತೇಣೇ ಮನೀ ಶೋಕ ವಾಢಲಾ । ಮ್ಹಣೇ ಥೋರಘಾತ ಜಾಲಾ ।
ಆತಾ ಕೈಂಚಾ ಬುಡಾಲಾ । ಸಂಸಾರ ಮಾಝಾ ॥೫೯॥
ಜಿವಲಗಾಂಚಾ ಸೋಡಿಲಾ ಸಂಗ । ಅವಚಿತಾ ಜಾಲಾ ಘರಭಂಗ ।
ಆತಾ ಕರೂ ಮಾಯಾತ್ಯಾಗ । ಮ್ಹಣೇ ದುಃಖೇ ॥೬೦॥
ಸ್ತ್ರೀ ಘೇಊನ ಆಡವೀ । ಉರ ಬಡವೀ ಪೋಟ ಬಡವೀ ।
ಲಾಜ ಸಾಂಡೂನ ಗೌರವೀ । ಲೋಕಾ ದೇಖತಾ ॥೬೧॥
ಮ್ಹಣೇ ಮಾಝೇ ಬುಡಾಲೇ ಘರ । ಆತಾ ನ ಕರೀ ಹಾ ಸಂಸಾರ ।
ದುಃಖೇ ಆಕ್ರಂದಲಾ ಥೋರ । ಘೋರ ಘೋಷೇ ॥೬೨॥
ತೇಣೇ ಜೀವ ವಾರಯಾವೇಘಲಾ । ಸರ್ವಸ್ವಾಚಾ ಉಬಗ ಆಲಾ ।
ತೇಣೇ ದುಃಖೇ ಜಾಲಾ । ಜೋಗೀ ಕಾ ಮಹಾತ್ಮಾ ॥೬೩॥
ಕಾ ತೇ ನಿಘೋನ ಜಾಣೇ ಚುಕಲೇ । ಪುನ್ಹಾ ಮಗುತೇ ಲಗ್ನ ಕೇಲೆ ।
ತೇಣೇ ಅತ್ಯಂತಚಿ ಮಗ್ನ ಜಾಲೇ । ಮನ ದ್ವಿತೀಯ ಸಂಬಂಧೀ ॥೬೪॥
ಜಾಲಾ ದ್ವಿತೀಯ ಸಂಬಂಧ । ಸವೇಚಿ ಮಾಂಡಿಲಾ ಆನಂದ ।
ಶ್ರೋತೀ ವ್ಹಾವೇ ಸಾವಧ । ಪುಢಿಲೇ ಸಮಾಸೀ ॥೬೫॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
"ಸ್ವಗುಣ ಪರೀಕ್ಷಾ" ನಾಮ ದುಸರಾ ॥೨॥

● ●

ಓರ್ವ ಸ್ತ್ರೀಯಳ ಮೋಹ ಜಾಲದಲ್ಲಿ ಸಿಕ್ಕು ಇವನು ಬ್ರಹ್ಮಾಂಡವನ್ನೇ ಕಡಿಮೆ ಯೋಗ್ಯತೆಯದೆಂದು ತಿಳಿದನು. ಪ್ರೇಮದ ಹಿತಚಿಂತಕ ಆಪ್ತೇಷ್ಟರನ್ನೆಲ್ಲ ಶತ್ರುಗಳಂತೆ ಕಂಡನು. [೫೭] ಈ ರೀತಿಯಲ್ಲಿ ಕೇವಲ ಸ್ತ್ರೀಯ ಆಧೀನ ಜೀವನ ನಡೆಸುವಾಗ ಆಕೆ ಮರಣ ಹೊಂದಿದಳು. ಆಗ ಅವನು ಅವಳ ವಿಯೋಗದಿಂದ ಕೇವಲ ಹುಚ್ಚನಂತಾದನು. ಅವನು ಬೈರಾಗಿಯೇ ಆಗತಕ್ಕವನು. ಆದರೆ ಕೆಲವೊಂದು ಕಾರಣಗಳಿಂದ ಮನೆಯಲ್ಲಿಯೇ ಉಳಿಯುತ್ತಾನೆ. ಮತ್ತು ಆನಂತರ ಪುನಃ ಎರಡನೆಯ ಲಗ್ನ ಮಾಡಿಕೊಳ್ಳುತ್ತಾನೆ. ತನ್ನ ಹೆಂಡತಿಯ ಮೇಲೆ ಬಹು ಪ್ರಕಾರದ ಅವನ ಪ್ರೇಮ ಆಳವಾಗಿ ಬೇರು ಬಿಟ್ಟಿರುತ್ತದೆ. ಅವಳ ಸಲುವಾಗಿ ಅವನು ತನ್ನ ಸರ್ವಸ್ವದ ತ್ಯಾಗ ಮಾಡಿರುತ್ತಾನೆ. ಆದರೆ ದುರ್ದೈವದಿಂದ ಆ ಹೆಂಡತಿ ಒಮ್ಮಿಂದೊಮ್ಮೆ ಮರಣ ಹೊಂದಿದಳು. [೫೮] ಹೆಂಡತಿಯ ಮರಣದಿಂದ ಬಹಳಷ್ಟು ದುಃಖಿಸುತ್ತಾನೆ. ಆಗ "ನನ್ನದು ಅಪಾರ ಘಾತವಾಯಿತು. ಇನ್ನೇತರ ಸಂಸಾರ, ನನ್ನ ಸಂಸಾರವೇ ಮುಳುಗಿ ಹೋಯಿತು" ಎಂದು ಒದರಿಕೊಳ್ಳುವನು. [೫೯] ಪ್ರೀತಿಯ ಜನರ ಸಹವಾಸ ಬಿಟ್ಟು ಪ್ರತ್ಯೇಕ ಮನೆ ಮಾಡಿದ್ದನು. ಆದರೆ ಈಗ ಒಮ್ಮಿಂದೊಮ್ಮೆಲೇ ಮನೆ ಮುರಿಯಿತು. ಹೀಗಾದ ಮೇಲೆ ಅವನು ದುಃಖದಿಂದ ಹೀಗೆನ್ನುತ್ತಾನೆ"ಇನ್ನು ಈ ಮಾಯಾ ಜಾಲ ತ್ಯಾಗ ಮಾಡುವೆನು" [೬೦]ಹೆಂಡತಿಯ ಪ್ರೇತವನ್ನು ತನ್ನತೊಡೆಯ ಮೇಲೆಅಡ್ಡ ಹಾಕಿಕೊಂಡುಅವನು ಎದೆ ಎದೆ.ಹೊಟ್ಟೆ ಹೊಟ್ಟೆ, ಬಡಿದುಕೊಳ್ಳುವನು. ಲಜ್ಜೆಯನ್ನು ತ್ಯಜಿಸಿ ಅಲ್ಲಿ ನೆರೆದವರ ಮುಂದೆ ಹೆಂಡತಿಯ ಸ್ತುತಿ ಮಾಡುವನು[೬೧]ದುಃಖದಿಂದ ದೊಡ್ಡದಾಗಿ ದನಿ ತೆಗೆದು ಗಳಗಳ ಗೋಳಿಟ್ಟುಅಳುವನು. ಮತ್ತೂ ಅವನು ಅನ್ನುತ್ತಾನೆ–"ನನ್ನಮನೆ ಮುಳುಗಿ ಹೋಯಿತು. ಇನ್ನು ಮುಂದೆ ನಾನು ಸಂಸಾರ ಮಾಡುವದಿಲ್ಲ" [೬೨] ವಾಯು ವಿಕಾರದ ಮನುಷ್ಯನಂತೆ, ಭ್ರಮಿಷ್ಟನಂತೆ ಮಾಡಹತ್ತಿದನು. ಎಲ್ಲ ವಿಷಯದ ಬಗ್ಗೆ ಬೇಸರ ಬಂದಿತು. ಈ ದುಃಖದಲ್ಲಿ ಮೈಗೆ ಬೂದಿ ಬಡಿದುಕೊಂಡು ಬೈರಾಗಿ ಆದನು. ಅಥವಾ ದೀಕ್ಷಾ ಹೊಂದಿ ಸಾಧುವಾದನು. [೬೩] ಆದರೆ ಕೆಲವೊಂದು ಕಾರಣಕ್ಕಾಗಿ ಅವನಿಗೆ ಮನೆ ಬಿಟ್ಟು ಹೊರಗೆ ಹೋಗುವದಕ್ಕೆ ಆಗಲಿಲ್ಲ. ಆಮೇಲೆ ಪುನಃ ಎರಡನೆಯ ಲಗ್ನ ಮಾಡಿಕೊಂಡನು. ಎರಡನೆಯ ಹೆಂಡತಿಯಲ್ಲಿ ಮನಸ್ಸು ಅತಿಶಯ ಅನುರಕ್ತ, ಆಸಕ್ತವಾಯಿತು. [೬೪] ಎರಡನೆಯ ಲಗ್ನ ಮಾಡಿಕೊಂಡ ಕೂಡಲೇಆನಂದ ಉಕ್ಕೇರಿತು. ಮುಂದಿನಸಮಾಸದ ವಿಷಯಕೇಳುವದಕ್ಕೆ ಶ್ರೋತೃಗಳುಸಾವಧಾನರಾಗಬೇಕು. [೬೫]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಮೂರನೆಯ ದಶಕದೊಳಗಿನ
"ಸ್ವಗುಣ ಪರೀಕ್ಷಾ" ಎಂಬ ಹೆಸರಿನ ಎರಡನೆಯ ಸಮಾಸವು ಮುಗಿಯಿತು.

● ●

## ದಶಕ ೩. ಸಮಾಸ ೩. ಸ್ವಗುಣ ಪರೀಕ್ಷಾ (ಬ) (ನುಡಿ ೪೮)

ಎರಡನೆಯ ಲಗ್ನವಾದ ಕೂಡಲೇ ಅವನು ಜಿಪುಣತನದಿಂದ ನಡೆಯು ಹತ್ತುವನು. ಎರಡನೆಯ ಹೆಂಡತಿ ಇನ್ನೂ ದೊಡ್ಡವಳಾಗಿರುವದಿಲ್ಲ. ಇವನಾದರೋ ಸ್ತ್ರೀ ಸುಖಕ್ಕಾಗಿ ಚಡಪಡಿಸುತ್ತಾನೆ. ಮತ್ತು ಪರಸ್ತ್ರೀ ವ್ಯಸನದಲ್ಲಿ ತೊಡಗುವನು. ಇದರಿಂದಾಗಿ ಇವನಿಗೆ ಅತಿಕೆಟ್ಟ ರೋಗ(ಗರ್ಮಿ, ಉಪದಂಶ)ಹತ್ತುವದು.ಇದರೊಳಗಿಂದ ಹೇಗೋ ಪಾರಾಗಿ ಉಳಿಯುವನು.ಹೆಂಡತಿದೊಡ್ಡವಳಾಗಿ ಗಂಡನಮನೆಗೆ ಬರುವಳು. ಸಂಸಾರಪ್ರಾರಂಭವಾಗುವದು. ಆದರೆ ಕೆಲ ಕಾಲ ಗತಿಸಿದರೂ ಮಕ್ಕಳಾಗಲಿಲ್ಲವೆಂದು ಅನೇಕ ಪ್ರಕಾರದ ಹರಕೆ, ವ್ರತ ನೇಮಗಳನ್ನು ಇವರು ಮಾಡುವರು. ಕೊನೆಗೆ ಮಕ್ಕಳಾಗುವವು.

## ತೃತೀಯ ಸಮಾಸ : ಸ್ವಗುಣ ಪರೀಕ್ಷಾ (ಬ)

॥ಶ್ರೀರಾಮ॥ ದ್ವಿತೀಯ ಸಂಮಂಧ ಜಾಲಾ । ದುಃಖ ಮಾಗೀಲ ವಿಸರಲಾ ।
ಸುಖ ಮಾನೂನ ರಾಹಿಲಾ । ಸಂಸಾರಾಚೇ ॥೧॥
ಜಾಲಾ ಅತ್ಯಂತ ಕೃಪಣ । ಪೋಟೇ ನ ಖಾಯ ಅನ್ನ ।
ರೂಕ್ಯಾಕಾರಣೇ ಸಾಂಡೀ ಪ್ರಾಣ । ಯೇಕ ಸರಾ ॥೨॥
ಕದಾ ಕಲ್ಪಾಂತೀ ನ ವೇಚೀ । ಸಾಂಚಿಲೇಚೀ ಪುನ್ಹಾ ಸಾಂಚೀ ।
ಅಂತರೀ ಅಸೇಲ ಕೈಂಚೀ । ಸದ್ವಾಸನಾ ॥೩॥
ಸ್ವಯೇ ಧರ್ಮ ನ ಕರೀ । ಧರ್ಮಕರ್ತ್ಯಾಸ ಹಿ ವಾರೀ ।
ಸರ್ವಕಾಳ ನಿಂದಾ ಕರೀ । ಸಾಧು ಜನಾಚೀ ॥೪॥
ನೇಣೇ ತೀರ್ಥ ನೇಣೇ ವ್ರತ । ನೇಣೇ ಅತೀತ ಅಭ್ಯಾಗತ ।
ಮುಂಗೀಮುಖೀಚೇ ಜೇ ಸೀತ । ತೇಹೀ ವೆಂಚೂನ ಸಾಚೀ ॥೫॥
ಸ್ವಯೇ ಪುಣ್ಯ ಕರವೇನಾ । ಕೇಲೇ ತರೀ ದೇಖವೇನಾ ।
ಉಪಹಾಸ್ಯ ಕರೀ ಮನಾ । ನಯೇ ಮ್ಹಣೋನೀ ॥೬॥
ದೇವಾ ಭಕ್ತಾಸ ಉಚ್ಛೇದೀ । ಆಂಗಬಳೇ ಸಕಳಾಸ ಖೇದೀ ।
ನಿಷ್ಠುರ ಶಬ್ದೇ ಅಂತರ ಭೇದೀ । ಪ್ರಾಣಿಮಾತ್ರಾಚೇ ॥೭॥
ನೀತಿ ಸಾಂಡೂನಿಯಾ ಮಾಗೇ । ಅನೀತೀನೇ ವರ್ತೋ ಲಾಗೇ ।
ಗರ್ವ ಧರೂನ ಫುಗೇ । ಸರ್ವಕಾಳ ॥೮॥
ಪೂರ್ವಜಾಸ ಸಿಂತರಿಲೇ । ಪಕ್ಷಶ್ರಾದ್ಧಹೀ ನಾಹೀ ಕೇಲೇ ।
ಕುಳದೈವತ ಠಕಿಲೇ । ಕೋಣೇಪರೀ ॥೯॥
ಆಕ್ಷತ ಭರೀಲೀ ಭಾಣಾ । ದುಜಾ ಬ್ರಾಹ್ಮಣ ಮೇಹುಣಾ ।
ಆಲಾ ಹೋತಾ ಪಾಹುಣಾ । ಸ್ತ್ರೀಯೇಸ ಮೂಳ ॥೧೦॥
ಕದಾ ನಾವಡೇ ಹರಿಕಥಾ । ದೇವ ನಲಗೇ ಸರ್ವಥಾ ।
ಸ್ನಾನಸಂಧ್ಯಾ ಮ್ಹಣೇ ವೃಥಾ । ಕಾಸಯಾ ಕರಾವೀ ॥೧೧॥
ಅಭಿಲಾಷೇ ಸಾಂಚೀ ವಿತ್ತ । ಸ್ವಯೇ ಕರೀ ವಿಶ್ವಾಸಘಾತ ।
ಮಂದೇ ಮಾತಲಾ ಉನ್ಮತ್ತ । ತಾರುಣ್ಯಪಣೇ ॥೧೨॥
ತಾರುಣ್ಯ ಆಂಗೀ ಭರಲೇ । ಧಾರಿಷ್ಟ ನವಚೇ ಧರಿಲೇ ।
ಕರೂ ನಯೇ ತೇಚೀ ಕೇಲೇ । ಮಹಾಪಾಪ ॥೧೩॥

## ಸಮಾಸ ೩. ಸ್ವಗುಣ ಪರೀಕ್ಷಾ (ಬ)

ಹೊಸ ಸಂಸಾರದಲ್ಲಿ ಅವನ ಮನವು ಆಸಕ್ತವಾದರೂ ಅವನು ಹಣಕ್ಕಾಗಿ ಪ್ರಾಣ ಬಿಡುವನು. ಹಣದ ಮುಂದೆ ಅವನಿಗೆ ದೇವ ಧರ್ಮಗಳನ್ನು ಮನ್ನಿಸಲಿಕ್ಕೆ ಆಗುವದಿಲ್ಲ. ಎರಡನೆಯ ಲಗ್ನ ಮಾಡಿಕೊಂಡನು. ಆ ಮೇಲೆ ಹಿಂದಿನ ದುಃಖವನ್ನೆಲ್ಲ ಪೂರ್ಣ ಮರೆತೂಬಿಟ್ಟನು. ಸಂಸಾರದಲ್ಲಿಯೇ ಸುಖವಿದೆಯೆಂದು ತಿಳಿದುಕೊಂಡು ದಿನಗಳೆಯ ಹತ್ತಿದನು. (೧) ಈಗ ಅವನು ಅತಿಶಯ ಜಿಪುಣನಾಗುವನು. ಮೊದಲು ಬಹಳ ಖರ್ಚಿಕನಾಗಿದ್ದನು. ಈಗ ಹೆಚ್ಚು ಖರ್ಚಾಗುವದೆಂದು ಹೊಟ್ಟೆ ತುಂಬ ಊಟ ಸಹ ಮಾಡಲಾರನು. ಒಂದು ಪೈಸೆಗಾಗಿ ಜೀವ ಕಳೆದುಕೊಳ್ಳುವನು. (೨) ಜಗತ್ತು ಮುಳುಗುವ ಪ್ರಸಂಗ ಬಂದರೂ ಒಂದು ಪೈಸೆ ಸಹ ಖರ್ಚು ಮಾಡಲಾರನು, ಸಂಗ್ರಹಿಸಿದ ಹಣದಲ್ಲಿ ಮೇಲಿಂದ ಮೇಲೆ ಹಣದ ಭರ್ತಿ ಮಾಡಿ ಅದನ್ನು ಬೆಳೆಸಹತ್ತಿದನು. ಈ ಲೋಭಿ ವೃತ್ತಿಯಿಂದ ಅವನ ಅಂತರಂಗದಲ್ಲಿ ಉತ್ತಮ ಸಂಸ್ಕಾರ ಸ್ಥಿರವಿರಲು ಅಶಕ್ಯವಾಯಿತು. (೩) ತಾನು ಧರ್ಮಪಾಲನೆ ಮಾಡುವದಿಲ್ಲ. ಬೇರೆಯವರು ಮಾಡಬೇಕೆಂದರೆ ಅವರಿಗೆ ಮಾಡಗೊಡುವದಿಲ್ಲ. ಯಾವಾಗಲೂ ಸತ್ಪುರುಷ ಮತ್ತು ಸಜ್ಜನರ ನಿಂದೆ ಮಾಡುವದೇ ಇವನ ಕೆಲಸವಾಯಿತು. (೪) ತೀರ್ಥ, ವ್ರತ, ಅತಿಥಿ, ಅಭ್ಯಾಗತರು ಯಾವುದನ್ನೂ ಜ್ಞಾಪಿಸದಾದನು. ಇರುವೆಯಬಾಯಲ್ಲಿ ಧಾನ್ಯದಕಣವಿರುವದುಕಂಡರೆಅದನ್ನೂಸಹ ಆರಿಸಿಕೂಡಿಡುವವನಾದನು.(೫) ಇವನಿಗೆ ಸ್ವತಃ ಪುಣ್ಯಕಾರ್ಯ ಮಾಡುವ ಬುದ್ಧಿ ಆಗಲೊಲ್ಲದು. ಎರಡನೆಯವರು ಮಾಡಿದ್ದನ್ನೂ ಸಹ ನೋಡಲಾರನು. ತನಗೆ ಸರಿ ಬರದಿದ್ದರೆಬಿಡಲಿ. ಆದರೆ ಮಾಡುವವರನಿಂದಾ ಚೇಷ್ಟೆಯನ್ನೂ ಮಾಡಹತ್ತಿದನು.(೬) ದೇವರು ಮತ್ತು ಭಕ್ತರನ್ನು ಸುಳ್ಳು ಎಂದು ತಿಳಿಯಹತ್ತಿದನು. ತನ್ನ ಶಕ್ತಿಯ ಬಲದಿಂದ ಜನರಿಗೆ ದುಃಖ ಕೊಡಹತ್ತಿದನು.ಕಠೋರ ಶಬ್ದಗಳನ್ನುಮಾತಾಡಿ ಜನರ ಅಂತಃಕರಣಕ್ಕೆ ವ್ಯಥೆ, ನೋವು ಉಂಟು ಮಾಡಹತ್ತಿದನು(೭) ನೀತಿಯನ್ನು ಬದಿಗಿರಿಸಿ ಅನೀತಿಯಿಂದ ನಡೆಯಹತ್ತಿದನು. ಮತ್ತು ಯಾವಾಗಲೂ ಅಭಿಮಾನದಿಂದ ಉಬ್ಬಿ ಗರ್ವದಿಂದ ನಡೆಯಹತ್ತಿದನು. (೮) ಇವನು ತನ್ನ ಪೂರ್ವಜರಿಗೆ ಮೋಸಗೊಳಿಸಿದನು. ಏನಾದರೂ ಯುಕ್ತಿ ಹುಡುಕಿ ತನ್ನ ಕುಲದೈವತವನ್ನೂ ಫಸಾಯಿಸಿದನು, ಠಕ್ಕಿಸಿದನು, ಕುಲಾಚಾರವನ್ನೂ ಆಚರಿಸದಾದನು. (೯) ಒಂದು ಸಲ ಕುಲಧರ್ಮಕ್ಕಾಗಿ ಮುತ್ತೈದೆಯ ಅವಶ್ಯವಿತ್ತು. ತವರು ಮನೆಗೆ ಬಂದ ತಂಗಿಗೇ ಅಕ್ಷತ ಅಂದರೆ ಆಮಂತ್ರಣ ಕೊಟ್ಟನು· ಕರೆಯಲಿಕ್ಕೆಂದು ಬಂದ ಬೀಗನಿಗೆ ಬ್ರಾಹ್ಮಣನೆಂದು ಆಮಂತ್ರಣ ಕೊಟ್ಟನು. ಹೀಗೆ ಮಾಡಿ ಖರ್ಚನ್ನು ಕಡಿಮೆ ಮಾಡಿ ಹಣ ಕೂಡಿಸಹತ್ತಿದನು. (೧೦) ಇವನಿಗೆಹರಿಕಥಾ ಕೀರ್ತನಗಳು ಬೇಡವಾದವು, ದೇವರಂತೂ ಎಷ್ಟೂ ಬೇಡವಾದನು. ಸುಮ್ಮನೇ ವ್ಯರ್ಥವಾಗಿ ಸ್ನಾನ ಸಂಧ್ಯಾದಿಗಳನ್ನು ಏಕೆ ಮಾಡಬೇಕು ಎಂದು ಅನ್ನಹತ್ತಿದನು. (೧೧) ತರುಣ ವಯಸ್ಸು ಮತ್ತು ಬಹಳಷ್ಟು ಧನಸಂಗ್ರಹದ ಪರಿಣಾಮವಾಗಿ ಕಾಮವಾಸನೆಯಿಂದ ಲಂಗು ಲಗಾಮು ಇಲ್ಲದೆ, ಬೇಫಾಮು—ಸ್ವೈರಾಚಾರದ ನಡವಳಿಕೆಯವನಾದನು. ಮತ್ತು ಪರಸ್ತ್ರೀ ವ್ಯಸನ ಉಳ್ಳವನಾದನು. ಜನರ ವಿಶ್ವಾಸಘಾತಮಾಡಿ ಲೋಭದಿಂದ ಸಾಕಷ್ಟುದ್ರವ್ಯ ಸಂಪಾದಿಸಿದನು.ತಾರುಣ್ಯದ ಮದದಿಂದ ಇವನು ಉನ್ಮತ್ತನಾದನು.(೧೨)ತಾರುಣ್ಯದಮದ ಅವನ ಅಂಗಾಂಗಗಳಲ್ಲಿ ಹರಿದಾಡಹತ್ತಿತು.ಹರಿದಾಡುವಮನಸ್ಸನ್ನು ಧೈರ್ಯದಿಂದಹಿಡಿತದಲ್ಲಿ ಇಡಲಿಕ್ಕೆ ಆಗಲಿಲ್ಲ. ಎಂದ ಮೇಲೆ ಅವನಿಂದ ಏನಾಗಬಾರದಾಗಿತ್ತೋ ಆ ಮಹಾಪಾಪವು ಆಗಿ ಹೋಯಿತು (೧೩)

ಸ್ತ್ರೀ ಕೇಲೀ ಪರೀ ಧಾಕುಟೀ । ಧೀರ ನ ಧರವೇಚಿ ಪೋಟೀ ।
ವಿಷಯಂ ಲೋಭೇ ಸೇವಟೀ । ವೋಳಖೀ ಸಾಂಡಿಲೀ ॥೧೪॥
ಮಾಯೆಬಹಿಣ ನ ವಿಚಾರೀ । ಜಾಲಾ ಪಾಪೀ ಪರದ್ವಾರೀ ।
ದಂಡ ಪಾವಲಾ ರಾಜದ್ವಾರೀ । ತರ್ಹೀ ಪಾಲಟೇನಾ ॥೧೫॥
ಪರಸ್ತ್ರೀ ದೇಖೋನ ದೃಷ್ಟೀ । ಅಭಿಳಾಷ ಉಠೇ ಪೋಟೀ ।
ಅಕರ್ತವ್ಯೇ ಹಿಂಪುಟೀ । ಪುನ್ಹಾ ಹೋಯೇ ॥೧೬॥
ಏಸೇ ಪಾಪ ಉದಂಡ ಕೇಲೇ । ಶುಭಾಶುಭ ನಾಹೀ ಉರಲೇ ।
ತೇಣೇ ದೋಷೇ ದುಃಖೇ ಭರಲೇ । ಅಕಸ್ಮಾತ ಅಂಗೀ ॥೧೭
ವ್ಯಾಧೀ ಭರಲೀ ಸರ್ವಾಂಗೀ । ಪ್ರಾಣೀ ಜಾಲಾ ಕ್ಷಯರೋಗೀ ।
ಕೇಲೇ ದೋಷ ಆಪುಲೇ ಭೋಗೀ । ಸೀಘ್ರ ಕಾಳೇ ॥೧೮॥
ದುಃಖೇ ಸರ್ವಾಂಗ ಫುಟಲೇ । ನಾಸಿಕ ಅವಘೇಚಿ ಬೈಸಲೇ ।
ಲಕ್ಷಣ ಜಾಊನ ಜಾಲೇ । ಕುಲಕ್ಷಣ ॥೧೯॥
ದೇಹಾಸ ಕ್ಷೀಣತಾ ಆಲೀ । ನಾನಾ ವೆಥಾ ಉದ್ಭವಲೀ ।
ತಾರುಣ್ಯಶಕ್ತೀ ರಾಹಿಲೀ । ಖಂಗಲಾ ಪ್ರಾಣೀ ॥೨೦॥
ಸರ್ವಾಂಗೀ ಲಾಗಲ್ಯಾ ಕಳಾ । ದೇಹಾಸ ಆಲೀ ಅವಕಳಾ ।
ಪ್ರಾಣೀ ಕಾಂಪೇ ಚಳಚಳಾ । ಶಕ್ತೀ ನಾಹೀ ॥೨೧॥
ಹಸ್ತಪಾದಾದೀಕ ಝಡಲೇ । ಸರ್ವಾಂಗೀ ಕಿಡೇ ಪಡಿಲೇ ।
ದೇಖೋನ ಥುಂಕೋ ಲಾಗಲೇ । ಲಹಾನಥೋರ ॥೨೨॥
ಜಾಲೀ ವಿಷ್ಟೇಚೀ ಸಾರಣೀ । ಭೋವತೀ ಉಠಲೀ ವರ್ಢಾಣೀ ।
ಅತ್ಯಂತ ಖಂಗಲಾ ಪ್ರಾಣೀ । ಜೀವ ನ ವಚೆ ॥೨೩॥
ಆತಾ ಮರಣ ದೇ ಗಾ ದೇವಾ । ಬಹುತ ಕಷ್ಟ ಜಾಲೇ ಜೀವಾ ।
ಜಾಲಾ ನಾಹೀ ನೇಣೋ ಠೇವಾ । ಪಾತಕಾಚಾ ॥೨೪॥
ದುಃಖೇ ಘಳಘಳಾ ರಡೇ । ಜೋ ಜೋ ಪಾಹೇ ಆಂಗಾಕಡೇ ।
ತೋ ತೋ ದೈನ್ಯವಾಣೇ ಬಾಪುಡೇ । ತಳಮಳೀ ಜೀವೀ ॥೨೫॥
ಏಸೇ ಕಷ್ಟ ಜಾಲೇ ಬಹುತ । ಸಕಳ ಜಾಲೇ ವಾತಾಹಾತ ।
ದರವಡಾ ಘಾಲೂನ ವಿತ್ತ । ಚೋರಟೇ ನೇಲೇ ॥೨೬॥
ಜಾಲೇ ಆರತ್ರ ನಾ ಪರತ್ರ । ಪ್ರಾರಬ್ಧ ಠಾಕಲೇ ವಿಚಿತ್ರ ।
ಆಪಲಾ ಆಪಣ ಮಳಮೂತ್ರ । ಸೇವಿಲಾ ದುಃಖೇ ॥೨೭॥

ಹೊಸ ಎರಡನೆಯ ಹೆಂಡತಿಯನ್ನು ಮಾಡಿಕೊಂಡಿದ್ದು ನಿಜ, ಆದರೆ ಅವಳು ವಯಸ್ಸಿನಲ್ಲಿ ಸಣ್ಣವಳಿದ್ದದರಿಂದ ಧೈರ್ಯವಾಗಿ ತನ್ನ ಮನಸ್ಸನ್ನು ಹಿಡಿದಿಡಲು ಸಾಧ್ಯವಾಗದ್ದರಿಂದ ಮೊದಲಿಗೇನೆ ಸ್ತ್ರೀಸುಖದ ರುಚಿ ಕಂಡವನಾದ್ದರಿಂದ ಸ್ತ್ರೀ ಸುಖಕ್ಕಾಗಿ ಯಾರನ್ನೂ ಗುರುತಿಸದಾದನು. (೧೪) ತಾಯಿ, ಅಕ್ಕ, ತಂಗಿಯರಂತೆ ಸಂಬಂಧವಿರುವ (ಸಂಬಂಧ ಹತ್ತುವ) ಸ್ತ್ರೀಯರ ಬಗ್ಗೆಯೂ ಸಹ ಸಾರಾಸಾರ ವಿಚಾರ ಮಾಡದವನಾದನು, ನೋಡದವನಾದನು. ಇಷ್ಟೇ ಏಕೆ ಈ ಪಾಪಿಯು ವೇಶ್ಯಾಗಾಮಿಯೂ ಆದನು. ಅಯೋಗ್ಯ ಸ್ತ್ರೀಯ ಬೆನ್ನು ಹತ್ತಿದ್ದಕ್ಕಾಗಿ ಇವನಿಗೆ ಸರಕಾರವು ಶಿಕ್ಷೆ ಮಾಡಿತು. ಆದರೂ ಇವನ ಚಟವೇನೂ ಹೋಗಲಿಲ್ಲ. [೧೫] ಯಾವಳಾದರೊಬ್ಬ ಸ್ತ್ರೀ ಕಣ್ಣಿಗೆ ಬಿದ್ದಳೆಂದರೆ ಕೂಡಲೇ ಅವಳು ತನ್ನವಳಾಗಬೇಕೆಂಬ ಹವ್ಯಾಸ ಮಾಡುತ್ತಿದ್ದನು. ಆದರೆ ಅದು ಸಿಗುವದು ಅಶಕ್ಯವೆನಿಸಿದಾಗ ಉತ್ಸಾಹಹೀನನಾಗಿ ದುಃಖಿಯಾಗುತ್ತಿದ್ದನು. [೧೬] ಈ ರೀತಿಯಿಂದ ಬಹಳಷ್ಟು ಪಾಪ ಮಾಡಿದನು. ಉತ್ತಮ–ಕೆಟ್ಟ, ಒಳಿತು–ಕೆಡಕು, ಎಂಬುದಾವುದೂ ಉಳಿಯಲಿಲ್ಲ. ಈ ವ್ಯಸನದಿಂದಾಗಿ ಒಮ್ಮೆಲೇ ದೇಹವು ದುಃಖದಿಂದ ತುಂಬಿತು.[೧೭] ಇವನಿಗೆ ಉಪದಂಶದಂತಹ ರೋಗ ಅಂಟಿತು. ಹಾಗೂ ರೋಗದ ರಭಸದಿಂದ ಅತಿ ದೈನ್ಯಾವಸ್ಥೆ ಪ್ರಾಪ್ತವಾಯಿತು. ಸರ್ವಾಂಗಗಳಲ್ಲಿ ಹುಳ ಬಿದ್ದವು. ಎದ್ದು ಕುಳಿತುಕೊಳ್ಳಲುಬಾರದಂತಾಯಿತು. ಆ ಮೇಲೆ ಔಷಧೋಪಚಾರದಿಂದ ರೋಗ ಹಿಮ್ಮೆಟ್ಟಿತು. ಕೊನೆಗೊಮ್ಮೆ ನೆಟ್ಟಗಾದನು. ಈ ಸ್ಥಿತಿಯಲ್ಲಿ ಮನೆಯಲ್ಲಿ ದರೋಡೆ ಆಗಿ ಕೂಡಿಟ್ಟ ದ್ರವ್ಯವೆಲ್ಲ ಹೋಯಿತು. ದೇಹದಲ್ಲೆಲ್ಲ ರೋಗ ಪಸರಿಸಿತು. ಕ್ಷಯ ರೋಗವೂ ಅಂಟಿತು. ಅವನಿಗೆ ತಾನು ಮಾಡಿದ ಪಾಪದ ಫಲವನ್ನು ಕೂಡಲೇ ಭೋಗಿಸುವ ಪ್ರಸಂಗ ಬಂದಿತು. (೧೮) ರೋಗದಿಂದ ಶರೀರದಲ್ಲೆಲ್ಲ ಆದ ಹುಣ್ಣುಗಳು ಒಡೆದವು, ಮೂಗಿನ ಎಲುಬು ಮುರಿದು ಮೂಗು ಕುಪ್ಪಳಿಸಿತು. ಇದರಿಂದಮೊದಲಿನ ಲಕ್ಷಣಹೋಗಿ ಹೇಗೇಗೊ ಕಾಣಹತ್ತಿದನು.(೧೯) ಚರ್ಮ ಸುಕ್ಕುಗಟ್ಟಿತು. ದೇಹ ಕ್ಷೀಣವಾಯಿತು. ಮತ್ತು ಅನೇಕ ರೋಗಗಳು ಉದ್ಭವವಾದವು. ತಾರುಣ್ಯದ ಬಲವೇ ಹೋಯಿತು. ಹಾಗೂ ಅವನು ಬಹಳ ಅಶಕ್ತನಾದನು. (೨೦) ಅವನ ದೇಹದ ಸಂದು ಸಂದುಗಳು ಸಹಿಸಲಾರದ ವೇದನೆಯಿಂದ ವ್ಯಾಪ್ತವಾದವು. ದೇಹವು ಕಳಾಹೀನವಾಗಿಕಾಣಹತ್ತಿತು. ದೇಹದಲ್ಲಿ ಶಕ್ತಿ ಇಲ್ಲದಂತಾಗಿ ಶರೀರವು ಕಂಪಿಸ (ನಡುಗ) ಹತ್ತಿತು. (೨೧) ಕೈಕಾಲು ವಗೈರೆ ಅವಯವಗಳು ನಿಸ್ತೇಜಗೊಂಡು ಸೊರಗಿದವು. ಸರ್ವಾಂಗಗಳಲ್ಲಿ ಹುಳ ಬಿದ್ದವು. ಈಅತ್ಯಂತ ಹೇಸಿಗೆ ಬರುವಂಥ ಅವಸ್ಥೆಯನ್ನು ನೋಡಿ ಚಿಕ್ಕವರು, ದೊಡ್ಡವರೆಲ್ಲ ಥಾಕರಿಸಿ ಉಗುಳಹತ್ತಿದರು. (೨೨) ಇಂಥವನಿಗೆ ಜುಲಾಬ [ಝಾಡಿಸುವದು] ಪ್ರಾರಂಭವಾಯಿತು. ಇದರಿಂದ ಸುತ್ತ ಮುತ್ತಲೂ ಬಹಳಷ್ಟು ಹೊಲಸಾಯಿತು. ಅವನು ಬಹಳ ಕ್ಷೀಣನಾದನು. ಆದರೆ ಅವನ ಜೀವ ಮಾತ್ರ ಹೋಗಲಿಲ್ಲ. (೨೩) ಅವನು "ದೇವಾ ನನಗೆ ಬೇಗನೇಸಾವು ಬರುವಂತೆ ಮಾಡಪ್ಪಾ,ಜೀವವು ಬಹಳ ವ್ಯಥೆಗೊಂಡಿದೆ, ನನ್ನ ಪಾಪದ ಸಂಗ್ರಹ ಇನ್ನೂ ಮುಗಿದಿಲ್ಲವೇ"? [೨೪] ಎಂದು ಅಂದುಕೊಂಡು ಆಗಾಗ ತನ್ನ ಶರೀರದ ಕಡೆಗೆ ನೋಡಿಕೊಂಡು ಅದರ ದಾರುಣ ದುರ್ದೆಶೆಯನ್ನು ನೆನೆದು ದು:ಖದಿಂದ ಗಳಗಳ ಅಳುತ್ತಾನೆ. ಅತ್ಯಂತ ದೀನವದನನಾಗಿ ಮನದಲ್ಲಿಚಡಪಡಿಸುತ್ತಾನೆ. [೨೫] ಈ ರೀತಿಯಿಂದಾಗಿ ಬಹಳಕಷ್ಟವಾಯಿತು. ಮನೆಯಲ್ಲಿರುವದೆಲ್ಲ ಇಟ್ಟಲ್ಲಿಯೇ ಇಲ್ಲದಾಯಿತು. ಯಾರು ಯಾರೋ ಅದನ್ನು ಹೊಡೆದುಕೊಂಡು ಹೋದರು. ದರೋಡೆ ಹಾಕಿ ತುಡುಗರು ಇದ್ದ ಬಿದ್ದದ್ದನ್ನೆಲ್ಲ ಹೊಡಕೊಂಡು ಹೋದರು. [೨೬] ಇತ್ತ ಇಹಲೋಕವೂ ಇಲ್ಲ, ಅತ್ತ ಪರೋಪಕಾರವೂ ಇಲ್ಲ. ಇಂಥ ಎಡಬಿಡಂಗಿ ಪರಿಸ್ಥಿತಿ ಬಂದಿತು. ಪ್ರಾರಬ್ಧದ ವಿಚಿತ್ರ ಭೋಗ ಭೋಗಿಸಬೇಕಾಯಿತು. ಸ್ವತಃದ ಮಲ ಮೂತ್ರವನ್ನು ತಾನೇ ಸೇವಿಸುವ ಹೊತ್ತು ಬಂದಿತು.[೨೭]

ಪಾಪಸಾಮುಗ್ರೀ ಸರಲೀ । ದಿವಸೇದಿವಸ ವೇಥಾಹರಲೀ ।
ವೈದ್ಯೇ ಔಷಧೇ ದಿಧಲೀ । ಉಪಚಾರ ಜಾಲಾ ॥೨೮॥
ಮರತ ಮರತ ವಾಚಲಾ । ಯಾಸ ಪುನ್ಹಾ ಜನ್ಮ ಜಾಲಾ ।
ಲೋಕ ಮ್ಹಣತೀ ಪಡಿಲಾ । ಮಾಣಸಾ ಮಧೇ ॥೨೯॥
ಯೇರೇ ಸ್ತ್ರೀ ಆಣಿಲೀ । ಬರವೀ ಘರವಾತ ಮಾಂಡಿಲೀ ।
ಅತಿ ಸ್ವಾರ್ಥ ಬುದ್ಧೀ ಧರಿಲೀ । ಪುನ್ಹಾ ಮಾಗುತೀ ॥೩೦॥
ಕಾಂಹೀ ವೈಭವ ಮೇಳವಿಲೇ । ಪುನ್ಹಾ ಸರ್ವಹೀ ಸಂಚಿಲೇ ।
ಪರಂತು ಗೃಹ ಬುಡಾಲೇ । ಸಂತಾನ ನಾಹೀ ॥೩೧॥
ಪುತ್ರ ಸಂತಾನ ನಸ್ತಾ ದುಃಖೀ । ವಾಂಜ ನಾಂವ ಪಡಿಲೇ ಲೋಕಿಕೀ ।
ತೇ ನ ಫಿಟೇ ಮ್ಹಣೋನೀ ಲೇಕೀ । ತರೀ ಹೋ ಆತಾ ॥೩೨॥
ಮ್ಹಣೋನ ನಾನಾ ಸಾಯಾಸ । ಬಹುತ ದೇವಾಸ ಕೇಲೇ ನವಸ ।
ತೀರ್ಥೇ ವ್ರತೇ ಉಪವಾಸ । ಧರಣೇಪಾರಣೇ ಮಾಂಡಿಲೇ ॥೩೩॥
ವಿಷಯಸುಖ ತೇ ರಾಹಿಲೇ । ವಾಂಜಪಣ ದುಃಖೀ ಕೇಲೇ ।
ತವ ತೇ ದೈವತ ಪಾವಲೇ । ಜಾಲೀ ವೃದ್ಧೀ ॥೩೪॥
ತ್ಯಾ ಲೇಕುರಾವರೀ ಅತೀ ಪ್ರೀತೀ । ದೋಘೇಹಿ ಕ್ಷಣ ಯೇಕ ನ ವಿಶಂಭತೀ ।
ಕಾಹೀ ಜಾಲ್ಯಾ ಆಕ್ರಂದತೀ । ದೀರ್ಘಸ್ವರೇ ॥೩೫॥
ಐಸೀ ತೇ ದುಃಖಿಸ್ತೇ । ಪೂಜೀತ ಹೋತೀ ನಾನಾ ದೈವತೇ ।
ತವ ತೇಹೀ ಮೇಲೇ ಅವಚಿತೇ । ಪೂರ್ವಪಾಪೇ ಕರೂನಿ ॥೩೬॥
ತೇಣೇ ಬಹುತ ದುಃಖ ಜಾಲೇ । ಘರೀ ಆರಂಧೇ ಪಡಿಲೇ ।
ಮ್ಹಣತೀ ಆಮ್ಹಾಸ ಕಾ ಠೇವಿಲೇ । ದೇವೇ ವಾಂಜ ಕರೂನೀ ॥೩೭॥
ಆಮ್ಹಾಸ ದ್ರವ್ಯ ಕಾಯೇ ಕರಾವೇ । ತೇ ಜಾವೇ ಪರೀ ಅಪತ್ಯ ವ್ಹಾವೇ ।
ಅಪತ್ಯಾಲಾಗೀ ತ್ಯಜಾವೇ । ಲಾಗೇಲ ಸರ್ವ ॥೩೮॥
ವಾಂಜಪಣ ಸಂದಿಸೇ ಗೇಲೇ । ತೋ ಮರತವಾಂಜ ನಾವ ಪಡೀಲೇ ।
ತೇ ನ ಫಿಟೇ ಕಾಹೀ ಕೇಲೇ । ತೇಣೇ ದುಃಖೇ ಆಕ್ರಂದತೀ ॥೩೯॥
ಆಮುಚೀ ವೇಲೀ ಕಾ ಖುಂಟಿಲೀ । ಹಾಹಾ ದೇವಾ ವೃತ್ತೀ ಬುಡಾಲೀ ।
ಕುಳಸ್ವಾಮಿಣೀ ಕಾ ಕ್ಷೋಭಲೀ । ವಿಝಾಲಾ ಕುಳದೀಪ ॥೪೦॥
ಆತಾ ಲೇಕುರಾಚೇ ಮುಖ ದೇಖೇನ । ತರೀ ಆನಂದೇ ರಾಡೀ ಚಾಲೇನ ।
ಆಣೀ ಗಳಹೀ ಟೋಂಚೀನ । ಕುಳಸ್ವಾಮಿಣೀ ಪಾಸೀ ॥೪೧॥

ಇಷ್ಟರಲ್ಲಿ ಅವನ ಪಾಪಕರ್ಮದ ಭೋಗಕಾಲ ಮುಗಿಯಿತು. ದಿನದಿನಕ್ಕೆ ರೋಗ ಕಡಿಮೆ ಆಯಿತು. ವೈದ್ಯರು ಔಷಧವನ್ನು ಕೊಟ್ಟರು. ಉಪಚಾರವನ್ನೂ ಮಾಡಿದರು[೨೮] ಸಾಯುವನು,'ಸಾಯುವನು' ಎಂದು ಜನ ಅಂದರೂ ಉಳಿದನು. ಅವನ ಪುನರ್ಜನ್ಮವೇ ಆಯಿತೆಂದು ಹೇಳಬಹುದು. ಇವನು ಪುನಃ ನಾಲ್ಕು ಜನರಲ್ಲಿ ಬರುವಂತಾದನೆಂದು ಜನರು ಅನ್ನಹತ್ತಿದರು. [೨೯] ಹೆಂಡತಿ ವಯಸ್ಸಿಗೆ ಬಂದಳು. ಅವಳನ್ನು ಕರೆದುಕೊಂಡು ಬಂದನು. ಪುನಃ ಸಂಸಾರ ಹೂಡಿದನು. ಮತ್ತು ಮಕ್ಕಳು ತೀವ್ರ ಆಗಬೇಕೆಂದು ತಳಮಳಿಸ ಹತ್ತಿದನು. ಆ ಮೇಲೆ ಮನೆಯಲ್ಲಿ ವ್ಯವಸ್ಥಿತವಾಗಿ ದೀಪ ಉರಿಯ ಹತ್ತಿತು. ಅಂದರೆ ಪುನಃ ಸಂಸಾರವನ್ನು ಪ್ರಾರಂಭಿಸಿದನು. ಆದರೆ ಅವನು ಪುನಃ ಸ್ವಾರ್ಥಿಯಾಗಿಯೇ ಸಂಸಾರ ನಡೆಸಲು ಪ್ರಾರಂಭಿಸಿದನು.[೩೦] ಪುನಃಕೆಲವೊಂದು ಸಂಪತ್ತು ಗಳಿಸಿದನು. ಸರ್ವ ಸಾಹಿತ್ಯಗಳನ್ನು ಸಂಗ್ರಹಿಸಿದನು. ಆದರೇನು? ಮಕ್ಕಳಿಲ್ಲದ್ದರಿಂದ ಮನೆತನವೇ ಮುಳುಗಿ ಹೋಗುವದೆಂಬ ಚಿಂತೆ ಪ್ರಾರಂಭವಾಯಿತು. [೩೧] ಮಕ್ಕಳಿಲ್ಲದ ಚಿಂತೆ ಒಂದಾದರೆ ಹೆಂಡತಿಗೆ ಬಂಜೆ, ಬಂಜೆ ಎಂದು ಜನ ಅನ್ನಹತ್ತಿದರು. ಇದರಿಂದ ದುಃಖ ಇಮ್ಮಡಿಸಿತು. ಈ ಅಪವಾದದಿಂದ ಮುಕ್ತನಾಗ-ಬೇಕಾದರೆ ಒಂದು ಹೆಣ್ಣು ಮಗುವಾದರೂ ಆಗಬೇಕೆಂದು ಅಂದುಕೊಂಡನು. [೩೨] ಇದಕ್ಕಾಗಿ ಬಹಳಷ್ಟು ಪ್ರಯತ್ನ ಮಾಡಹತ್ತಿದನು. ಬಹಳಷ್ಟು ದೇವರಿಗೆ ಹರಕೆ ಹೊತ್ತನು. ತೀರ್ಥ, ವ್ರತ, ಉಪವಾಸ, ಜಾಗರಣಾದಿಗಳು ಮತ್ತು ಒಂದು ಉಪವಾಸ, ಎರಡನೆಯ ದಿನ ಊಟ, (ಧಾರಣೆ, ಪಾರಣೆ) ಈ ರೀತಿಯ ವ್ರತಗಳನ್ನು ಸಾಕಷ್ಟು [ಬಹಳಷ್ಟು] ಒಂದೇ ಸವನೆ ಮಾಡಹತ್ತಿದನು. [೩೩] ಮೊದಲಿದ್ದ ಸಂಭೋಗ ಸುಖದ ಹುಚ್ಚು ಒತ್ತಟ್ಟಿಗುಳಿಯಿತು. ಬಂಜೆತನವು ಇಬ್ಬರಿಗೂ ಕಷ್ಟ ಕೊಟ್ಟಿತು. ಅಕಸ್ಮಾತ್ತಾಗಿ (ಇಷ್ಟರಲ್ಲಿಯೇ) ಕುಲದೇವತೆ ಪ್ರಸನ್ನಳಾದಳು. ಅಂತೂ ಕೊನೆಯಲ್ಲಿ ವಂಶ ಉದ್ಧಾರ ಮಾಡುವ ಮಗನು ಹುಟ್ಟಿದನು. [೩೪] ಆ ಮಗನ ಮೇಲೆ ತಂದೆತಾಯಿಗಳಿಬ್ಬರದೂ ಅಪಾರ ಪ್ರೇಮ ಉಂಟಾಯಿತು, ಒಂದು ಕ್ಷಣ ಮಗನು ಕಾಣದಿರಬಾರದು.ಯಾವಾಗಲೂ ಕಣ್ಣು ಮುಂದೆ ಅವನು ಇರಬೇಕು. ಮಗನಿಗೆ ಅಲ್ಪಸ್ವಲ್ಪ ಏನಾದರೂ ಆದರೆ ಇಬ್ಬರೂ ದೊಡ್ಡ ಧ್ವನಿಯಿಂದ ಅಳಲು ಪ್ರಾರಂಭ ಮಾಡುವರು. (೩೫) ಈ ದುಃಖಿಗಳಿಬ್ಬರೂ ಮಗನ ಕ್ಷೇಮಕ್ಕಾಗಿ ಅನೇಕ ದೇವರ ಪೂಜೆ ಮಾಡುವರು. ಆದರೆ ಮಾಡುವದೇನು? ಪೂರ್ವದ ಕೆಲ ಪಾಪಗಳಿಂದ ಆ ಮಗನು ಅಕಸ್ಮಾತ್ತಾಗಿ ಮರಣ ಹೊಂದಿದನು. (೩೬) ಇದರಿಂದಾಗಿ ಇಬ್ಬರಿಗೂ ಅಪಾರ ದುಃಖವಾಯಿತು. ಮನೆಯ ಸೂರ್ಯ ಮುಳುಗಿ ಕತ್ತಲೆ ಮತ್ತೆ ಆವರಿಸಿತು. ಆಗ ದುಃಖದಿಂದ "ದೇವಾ ನಮ್ಮನ್ನು ಮಕ್ಕಳಿಲ್ಲದವರನ್ನಾಗಿ ಮಾಡಿ ಜೀವಂತವೇಕೆ ಇಟ್ಟಿರುವಿ" (೩೭) ನಮಗೆ ಈ ಹಣವೇತಕ್ಕೆ? ಇದರ ಉಪಯೋಗವೇನು? ಈ ಹಣವೆಲ್ಲ ಹೋಗಲಿ,ಆದರೆ ಮಕ್ಕಳು ಮಾತ್ರ ಆಗಲಿ, ಮಕ್ಕಳಿಗಾಗಿ ಎಲ್ಲವನ್ನು ತ್ಯಜಿಸಲಿಕ್ಕೆ ನಾವು ಸಿದ್ಧರಿದ್ದೇವೆ. (೩೮) ಒಂದು ಮಗುವಿನಿಂದಾಗಿ ಬಂಜೆತನವೇನೋ ಹೋಯಿತು. ಆದರೆ ಆ ಮಗುವು ಸತ್ತದ್ದರಿಂದ ಮೃತ ಬಂಜೆ ಎಂಬ ಹೆಸರೇನೂ ಹೋಗುವ ದಿಲ್ಲವಲ್ಲಾ, ಎಂದು ಅವರು ಪುನಃ ಅಳಹತ್ತಿದರು. (೩೯) ಶ್ರೀ ಸಮರ್ಥರ ಕಾಲದಲ್ಲಿ ಒಳ್ಳೇ ತಿಳುವಳಿಕೆ ಇದ್ದ ಜನರೂ ಸಹ ಮಕ್ಕಳು ಮರಿ ಆಗುವದಕ್ಕಾಗಿ ಏನೇನು ಉಪಾಯ ಹಾಗೂ ಕೃತಿ ಮಾಡುತ್ತಿದ್ದರೆಂಬುದರ ವರ್ಣನೆ-ಯನ್ನು ಮುಂದಿನ ಏಳೆಂಟು ನುಡಿಗಳಲ್ಲಿ ಹೇಳಿದ್ದಾರೆ—"ನಮ್ಮ ವಂಶದ ಬಳ್ಳಿ ಏಕೆ ಬೆಳೆಯಲಿಲ್ಲ? ಬಳ್ಳಿಯ ಬೆಳವಣಿಗೆ ನಿಂತಿತೇ? ಅಥವಾ ಒಣಗಿ ಹೋಯಿತೇ? ಅಯ್ಯೋ ದೇವರೇ! ನಮ್ಮ ನಿರ್ವಾಹ ಸಾಧನವೇ ಮುಳುಗಿತು (ಪತನ ಮಾಡಿ) ನಮ್ಮ ಕುಲಸ್ವಾಮಿನಿಯು ನಮ್ಮ ಮೇಲೇಕೆ ಸಿಟ್ಟಿಗೆದ್ದಳೋ ಏನೋ! ದೇವಿ ನಮ್ಮ ಕುಲದೀಪ ವನ್ನೇ ಆರಿಸಿದಳು. (೪೦) ನಮಗೆ ಮಗ ಹುಟ್ಟಿದರೆ, ಮಗನ ಮುಖ ನೋಡಿದರೆ, ಆನಂದದಿಂದ ನಾನು ನಿಗಿನಿಗಿ ಬೆಂಕಿಯಲ್ಲಿ ನಡೆದು ಹೋಗುವೆನು. ಅಗ್ನಿ ಅಥವಾ ಅಗ್ಗಿ ಹಾಯುವೆನು. (ಬೇಡಿಕೊಂಡವರು ದೇವರ ಮುಂದೆ ರಚಿಸಿರುವ ಬೆಂಕಿಯ ಕುಂಡದಲ್ಲಿ ನಡೆದು ಹೋಗುವರು.) ಮತ್ತು ನಮ್ಮ ಕುಲಸ್ವಾಮಿನಿಯ ಮುಂದೆ ಶಸ್ತ್ರ ಚುಚ್ಚಿ ಕೊಳ್ಳುತ್ತೇನೆ. (ಬೆನ್ನಿನಲ್ಲಿ, ಟೊಂಕದ ಮೇಲ್ಭಾಗದಲ್ಲಿಯ ಚರ್ಮದಲ್ಲಿ ತಾಮ್ರ, ಬೆಳ್ಳಿ, ಬಂಗಾರದ ತಂತಿಯಿಂದ ಚುಚ್ಚುವದು. ಅಥವಾ ಗಲ್ಲ ಕಂಠದಲ್ಲಿ ತಂತಿ ಚುಚ್ಚಿಕೊಳ್ಳುವ ಹರಕೆ) (೪೧)

ಆಈ ಭುತಾ ಕರೀನ ತುರ್ಝಾ । ನಾವ ಠೇವೀನ ಕೆರಪುಂಜಾ ।
ವೆಸಣೇ ಘಾಲೀನ ಮಾರ್ಝಾ । ಮನೋರಥ ಪುರವೀ ॥೪೨॥
ಬಹುತದೇವಾಸ ನವಸ ಕೇಲೇ । ಬಹುತ ಗೋಸಾವೀ ಧುಂಡಿಲೇ ।
ಗಟಿಗಟಾ ಗಿಳಿಲೆ । ಸಗಳೇ ವಿಂಚೂ ॥೪೩॥
ಕೇಲೇ ಸಮಂಧಾಚೇ ಸಾಯಾಸ । ರಾಹಾಣೇ ಘಾತಲೇ ಬಹುವಸ ।
ಕೇಳೇ ನಾರೀಕೇಳೇ ಬ್ರಾಹ್ಮಣಾಸ । ಆಂಬ್ರದಾನೇ ದಿಧಲೀ ॥೪೪॥
ಕೇಲೀ ನಾನಾ ಕವಟಾಲೇ । ಪುತ್ರಲೋಭೇ ಕೇಲೀ ಢಾಲೇ ।
ತರೀ ಅದೃಷ್ಟ ಫಿರಲೇ । ಪುತ್ರ ನಾಹೀ ॥೪೫॥
ವೃಕ್ಷಾಖಾಲೇ ಜಾಊನ ನಾಹಾತೀ । ಫಳತೀ ಝಾಡೇ ಕರಪತೀ ।
ಐಸೇ ನಾನಾ ದೋಷ ಕರೀತೀ । ಪುತ್ರಲೋಭಾಕಾರಣೇ ॥೪೬॥
ಸೋಡೂನ ಸಕಳ ವೈಭವ । ತ್ಯಾಂಚಾ ವಾರಯಾವೇಘಲಾ ಜೀವ ।
ತವ ತೋ ಪಾವಲಾ ಖಂಡೇರಾವ । ಆಣೇ ಕುಳ ಸ್ವಾಮಿಣೀ ॥೪೭॥
ಆತಾ ಮನೋರಥ ಪುರತೀ । ಸ್ತ್ರೀಪುರುಷೇ ಆನಂದತೀ ।
ಸಾವಧ ಹೋಊನ ಶ್ರೋತೀ । ಪುಢೇ ಅವಧಾನ ದ್ಯಾವೇ ॥೪೮॥

ಇತೀ ಶ್ರೀ ದಾಸಬೋಧೇ ಗುರುಶಿಷ್ಯ ಸಂವಾದೇ
"ಸ್ವಗುಣ ಪರೀಕ್ಷಾ" ನಾಮ ಸಮಾಸ ತೃತೀಯ ಸಮಾಪ್ತ ॥

ಹೇ! ಕುಲಸ್ವಾಮಿನಿಯಾದ ತಾಯಿಯೇ!! ಹುಟ್ಟಿದ ಮಗನನ್ನೇ ನಿನಗೆ ಅರ್ಪಿಸುವೆನು. (ಜೋಗಿ) ಜೋಗಮ್ಮ, ಜೋಗಪ್ಪ, ವಗ್ಗಯ್ಯ, ದಾಸಯ್ಯನನ್ನಾಗಿ, ಎಲ್ಲಮ್ಮ, ಭವಾನಿ ಖಂಡೋಬಾದಿ ದೇವರಿಗೆ ಅರ್ಪಿಸುವ ಹರಕೆ. ಮಗನಿಗೆ ಕೇರಪುಂಜಾ ಅಂದರೆ ಬಾರಿಗೆ, ಕಸಬರಿಗೆ, ದೇವಿ ನನ್ನ ಮಗ ನಿನ್ನ ಅಂಗಳ ಉಡುಗುವ ಕಸಬರಿಗೆಯಾಗಿ ಉಳಿಯಲೆಂಬ ಭಾವದಿಂದ ಈ ಹೆಸರಿಡುವೆನು. ಮಗನ ಮೂಗು ಚುಚ್ಚಿಸುವದು. ಅಂದರೆ ಮೂಗಿನಲ್ಲಿ ತಂತಿ ಹಾಕುವದು. ಮೂಗುದಾಣ ಹಾಕುವದು. ತಾಯೀ! ಮಗ ಹುಟ್ಟಿ ಬೆಳೆಯಬೇಕೆಂಬ ನನ್ನ ಇಚ್ಛೆಯನ್ನು ಪೂರ್ಣ ಮಾಡುವವಳಾಗು. (೪೨) ಈ ಪ್ರಕಾರವಾಗಿ ಬಹಳ ದೇವರಿಗೆ ಹರಕೆ ಹೊತ್ತರು, ಬಹಳಷ್ಟು ಜನ ಸನ್ಯಾಸಿ, ಬೈರಾಗಿ ವಿರಕ್ತರುಗಳನ್ನು ಹುಡಿಕಿಕೊಂಡು ಹೋಗಿ ಅವರು ಹೇಳಿದ ಉಪಾಯಗಳನ್ನು ಮಾಡಿದರು. ಇಡೀ ಚೇಳನ್ನೇ ಗುಳುಂ ಎಂದು ನುಂಗಿದರು(೪೩) ಪಿಶ್ಯಾಚಾದಿಗಳ ಸಂಬಂಧವಿರುವದೋ ಏನೋ ಎಂದು ತಿಳಿದು ಅದರ ಪ್ರಸನ್ನತೆ ಮತ್ತು ನಿವಾರಣೆಯ ಬಗ್ಗೆಯೂ ಪ್ರಯತ್ನ ಮಾಡಿದರು. ಮೈಯಲ್ಲಿ ದೇವತಾ (ಕ್ಷುದ್ರ ದೇವತಾದಿ) ಸಂಚಾರವಾಗುವಂತೆ ಮಾಂತ್ರಿಕನಿಂದ ಮಾಡಿಸಿಕೊಂಡು ನಾನಾ ಪ್ರಕಾರದಿಂದ ಕಷ್ಟಮಾಡಿಕೊಂಡರು. ಬ್ರಾಹ್ಮಣರಿಗೆ ಬಾಳೆಹಣ್ಣು, ಟೆಂಗಿನಕಾಯಿ, ಮಾವಿನ ಹಣ್ಣುಗಳ ದಾನ ಮಾಡಿದನು. (೪೪) ಇನ್ನೂ ಅನೇಕ ಪ್ರಕಾರದ ಚಾಟಕ, ಮಾಟಕ, ಜಾದು, ಜಂತ್ರ, ಮಂತ್ರ ಅಂದರೆ ಬನ್ನೀಗಿಡ. ಆಲದಗಿಡ. ಅಶ್ವತ್ಥಗಿಡ, ಅತ್ತೀಗಿಡ, ಬಸರೀಗಿಡ, ಕಾರೀಗಿಡ, ಬಾರೀಗಿಡಗಳಿಗೆ ಮಧ್ಯರಾತ್ರಿಯಲ್ಲಿ ದಿಗಂಬರರಾಗಿ ಹೋಗಿ, ಪೂಜೆ ವಗೈರೆ ಮಾಡುವದು ಇಂಥ ಅನೇಕ ಹೀನ ಪ್ರಯೋಗಗಳನ್ನೂ ಸಹ ಮಾಡಿಸಿದನು. ಮಾಡುವದೇನು? ಪ್ರಾರಬ್ಧವು ಅನುಕೂಲವಿರಲಿಲ್ಲವೆಂದು ಮಕ್ಕಳು ಮಾತ್ರ ಆಗಲಿಲ್ಲ. (೪೫) ಮಕ್ಕಳಾಗುವವೆಂಬ ಹಂಬಲದಲ್ಲಿ ರಜಸ್ವತಿಯಾದ ಹೆಂಡತಿಯನ್ನು ಫಲವೃಕ್ಷದ ಬೊಡ್ಡೆಗೆ ಕೂಡ್ರಿಸಿ ಸ್ನಾನ ಮಾಡಿಸಿದನು. ಫಲ ಬಿಡುವ ಗಿಡ ಕಮರಿ ಹೋಯಿತು, ಹಣ್ಣಿನ ಗಿಡ ಸುಟ್ಟರು, ಆದರೂ ಮಕ್ಕಳಾಗಲಿಲ್ಲ. ಹೀಗೆ ಅನೇಕ ಪಾಪ ಕರ್ಮ ಮಾಡಿನೋಡಿದರು. (೪೬) ಮಕ್ಕಳಾಗದ್ದರಿಂದ ಇಬ್ಬರೂ ತಮ್ಮ ವೈಭವವನ್ನು ತ್ಯಜಿಸಿದರು. ತಲೆಯಲ್ಲಿ ವಾಯು (ಪಿಶಾಚಿ)ಬಾಧೆ ಆದಂತೆ, ಭ್ರಮಿಷ್ಟರಂತೆ ನಡೆಯಹತ್ತಿದರು. ಈ ಹೊತ್ತಿಗೆ ಖಂಡೋಬ (ಮೈಲಾರಲಿಂಗ) ಹಾಗೂ ಕುಲಸ್ವಾಮಿನಿ ಇಬ್ಬರೂ ಒಮ್ಮೆಲೆ ಪ್ರಸನ್ನರಾದರು. (೪೭) ದಂಪತಿಗಳ ಮನೋಕಾಮನೆ ಪೂರ್ತಿಯಾಯಿತು. ಹೆಂಡತಿ ಗರ್ಭಿಣಿಯಾದಳು. ಮತ್ತು ಮಕ್ಕಳಾದವು. ಗಂಡ ಹೆಂಡತಿ ಆನಂದಸಾಗರದಲ್ಲಿ ಮುಳುಗಿದರು. ಇನ್ನು ಮುಂದಿನ ವಿಷಯವನ್ನು ಕೇಳುವದಕ್ಕಾಗಿ ಶ್ರೋತೃಗಳು ಸಾವಧಾನಚಿತ್ತರಾಗಬೇಕು. (೪೮)

ಇತಿ ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಮೂರನೆಯ ದಶಕದ
"ಸ್ವಗುಣ ಪರೀಕ್ಷಾ" ಎಂಬ ಹೆಸರಿನ ಮೂರನೆಯ ಸಮಾಸ ಮುಗಿದುದು.

● ●

## ದಶಕ ೩. ಸಮಾಸ ೪. ಸ್ವಗುಣ ಪರೀಕ್ಷಾ (ಕ) (ನುಡಿ ೫೪)

ಮಕ್ಕಳಿಂದ ಮನೆ ತುಂಬಿ ಹೋಯಿತು. ಆದರೆ ಹಣದ ಅಭಾವದಿಂದ ತೊಂದರೆ ಆಗಹತ್ತಿತು. ಮಗಳ ಲಗ್ನ ಮಾಡಿದನು. ಈ ಲಗ್ನಕ್ಕಾಗಿ ಸಾಲ ತೆಗೆದನು. ಆಮೇಲೆ ಎರಡು ವರ್ಷ ಒಬ್ಬನೇ ಪರದೇಶಕ್ಕೆ ಹೋದನು. ಅಲ್ಲಿ ನೌಕರಿ ಚಾಕರಿ ಮಾಡಿ ಹಣ ಸಂಪಾದಿಸಿದನು. ಹಣವನ್ನು ತೆಗೆದುಕೊಂಡು ಮನೆಗೆ ಬಂದನು. ಸ್ವಲ್ಪದಿವಸಗಳಲ್ಲಿ ತಂದ ಹಣ ಮುಗಿಯಿತು. ಅವನು ಪುನಃ ಪರದೇಶಕ್ಕೆ ಹೋಗುವ ಪ್ರಸಂಗ ಬಂದಿತು. ಈ ಸಲ ಮನೆ ಬಿಡುವಾಗ ಬಹಳ ದುಃಖವಾಯಿತು. ತನ್ನ ತಾಯಿ ತಂದೆಗಳ ನೆನಪಾಯಿತು. ಆಗ ಅವನು ದೊಡ್ಡ ಧ್ವನಿ ತೆಗೆದು ಹಿಂದಿನದನ್ನು ನೆನೆಸಿ ಅಳಹತ್ತಿದನು. ಆದರೆ ಈಗ ಅದರ ಉಪಯೋಗವಿಲ್ಲೆಂದು ತಿಳಿದು ಸುಮ್ಮನೆ ಪರದೇಶದತ್ತ ಹೊರಟನು,

## ಸ್ವಗುಣ ಪರೀಕ್ಷಾ [ಕ] ನಾಮ ಚತುರ್ಥ ಸಮಾಸ

॥ಶ್ರೀರಾಮ॥ ಲೇಕುರೇ ಉದಂಡ ಜಾಲೀ। ತೋ ತೇ ಲಕ್ಷ್ಮೀ ನಿಘೋನ ಗೇಲೀ।
ಬಾಪಡೀ ಭೀಕೇಸಿ ಲಾಗಲೀ। ಕಾಹೀ ಖಾಯಾ ಅನ್ನ ಮಿಳೇನಾ ॥೧॥
ಲೇಕುರೇ ಖೇಳತೀ ಧಾಕುಟೇ। ಯೇಕೇ ರಾಂಗತೀ ಯೇಕೇ ಪೋಟೇ।
ಐಸೀ ಘರಭರೀ ಜಾಲೀ ದಾಟೇ। ಕನ್ಯಾ ಆಣೀ ಪುತ್ರಾಂಚೀ ॥೨॥
ದಿವಸೆಂದಿವಸ ಖರ್ಚ ವಾಢಲಾ। ಯಾವಾ ಹೋತಾ ತೋ ಖುಂಟೋನ ಗೆಲಾ।
ಕನ್ಯಾ ಉಪವರ ಜಾಲ್ಯಾ ತ್ಯಾಲಾ। ಉಜವಾವಯಾ ದ್ರವ್ಯ ನಾಹೀ ॥३॥
ಮಾಯೇಬಾಪೇ ಹೋತೀ ಸಂಪನ್ನ। ತ್ಯಾಂಚೇ ಉದಂಡ ಹೋತೇ ಧನ।
ತೇಣೇ ಕರಿತಾ ಪ್ರತಿಷ್ಠಾ ಮಾನ। ಜನೀ ಜಾಲಾ ಹೋತಾ ॥४॥
ಭರಮ ಆಹೇ ಲೋಕಾಚಾರೀ। ಪಹಿಲೀ ನಾಂದಣೂಕ ನಾಹೀ ಘರೀ।
ದಿವಸೆಂದಿವಸ ಅಭ್ಯಾಂತರೀ। ದರಿದ್ರ ಆಲೇ ॥೫॥
ಐಸೀ ಘರವಾತ ವಾಢಲೀ। ಖಾತೀ ತೋಂಡೇ ಮಿಳಾಲೀ।
ತೇಣೇ ಪ್ರಾಣಿಯಾಸ ಲಾಗಲೀ। ಕಾಳಜೀ ಉದ್ವೇಗಾಚೀ ॥೬॥
ಕನ್ಯಾ ಉಪವರೀ ಜಾಲ್ಯಾ। ಪುತ್ರಾಸ ನೋವರ್‍ಯಾ ಆಲ್ಯಾ।
ಆತಾ ಉಜವಣೇ ಕೇಲ್ಯಾ। ಪಾಹಿಜೇತ ಕೀ ॥೭॥
ಜರೀ ಮುಲೇ ತೈಸೀಚ ರಾಹಿಲೀ। ತರೀ ಪುನ್ಹಾ ಲೋಕಲಾಜ ಜಾಲೀ।
ಮ್ಹಣತೀ ಕಾಸಯಾ ವ್ಯಾಲೀ। ಜನ್ಮದಾರಿದ್ರ್ಯೇ ॥೮॥
ಐಸೀ ಲೋಕಲಾಜ ಹೋಈಲ। ವಡೀಲಾಂಚೇ ನಾವ ಜಾಈಲ।
ಆತಾ ರುಣ ಕೋಣ ದೇಈಲ। ಲಗ್ನಾಪುರತೇ ॥೯॥
ಮಾಗೇ ರುಣ ಜ್ಯಾಚೇ ಘೇತಲೇ। ತ್ಯಾಚೇ ಪರತೋನ ನಾಹೀ ದಿಲ್ಹೇ।
ಐಸೇ ಆಭಾಳ ಕೋಸಳಲೇ। ಉದ್ವೇಗಾಚೇ ॥೧೦॥
ಆಪಣ ಖಾತೋ ಅನ್ನಾಸೀ। ಅನ್ನ ಖಾತೇ ಆಪಣಾಸೀ।
ಸರ್ವಕಾಳ ಮಾನಸೀ। ಚಿಂತಾತುರ ॥೧೧॥
ಪತೀ ಅವಘೀಚ ಮೋಡಲೀ। ವಸ್ತುಭಾವ ಗಾಹಾಣ ಪಡಿಲೀ।
ಅಹಾ ದೇವಾ ವೇಳ ಆಲೀ। ಆತಾ ಡಿವಾಳ್ಯಾಚೀ ॥೧೨॥
ಕಾಹೀ ಕೇಲಾ ತಾಡಾಮೋಡಾ। ವಿಕಿಲಾ ಘರೀಚಾ ಪಾಡಾರೆಡಾ।
ಕಾಹೀ ಪೈಕಾ ರೋಕಡಾ। ಕಳಾಂತರೇ ಕಾಢಿಲಾ ॥೧३॥

## ಸಮಾಸ ೪. ಸ್ವಗುಣ ಪರೀಕ್ಷಾ [೪]

**ಅವನಿಗೆ ಬಹಳ ಮಕ್ಕಳಾದವು. ಇದರಿಂದಾಗಿ ಅನೇಕ ಸಮಸ್ಯೆಗಳು ಅವನ ಮುಂದೆ "ಆ"ಎಂದು ಬಾಯಿ ತೆರೆದು ನಿಂತವು. ಇವುಗಳಲ್ಲಿ ಹಣ ಸಂಗ್ರಹಿಸುವ (ದೊರಕಿಸುವ) ಸಮಸ್ಯೆಯೇ ಮುಖ್ಯ ಹಾಗೂ ಅವಸರದ ಸಮಸ್ಯೆಯಾಗಿತ್ತು**:– ಬಹಳಷ್ಟು ಮಕ್ಕಳಾದವು. ಆದರೆ ಮನೆಯಲ್ಲಿ ಕೂಡಿಟ್ಟ ಹಣವೆಲ್ಲ ಖರ್ಚಾಗಿ ಹೋಯಿತು. ತಿನ್ನುವದಕ್ಕೂ ಅಭಾವಬದಗಿ ಹುಡುಗರುಭಿಕ್ಷೆ ಬೇಡುವ ಪ್ರಸಂಗ ಬಂದಿತು.(೧) ಕೆಲವು ಟೊಂಕದ ಮೇಲೆ, ಕೆಲವು ಹೆಗಲ ಮೇಲೆ ಎತ್ತಿಕೊಳ್ಳುವ ಮಕ್ಕಳು ಅಂಬೆಗಾಲಿಕ್ಕುವಂಥವು. ಕೆಲವು ಹುಡುಗರು ಮನೆಯಲ್ಲಿ ಸದಾ ಆಟ ಆಡುತ್ತ ಗದ್ದಲ ಮಾಡುವಂಥ ಇನ್ನೂ ಕೆಲವು ಸಣ್ಣದೊಡ್ಡ ಮಕ್ಕಳು, ಇವರೆಲ್ಲರಿಂದ ಕೂಡಿದ ಮನೆ ಸದಾ ಮಕ್ಕಳಿಂದ ತುಂಬಿರುವದೇ ಕಾಣುತ್ತಿತ್ತು. (೨) ದಿನದಿನಕ್ಕೆ ಖರ್ಚಿನ ಬಾಬು ಬೆಳೆಯಹತ್ತಿತು. ಹಣ ಬರುವ ಬಾಬು ನಿಂತು ಹೋಯಿತು. ಹೆಣ್ಣು ಮಗಳು ದೊಡ್ಡವಳಾದಳು. ಆದರೆ ಅವಳ ಲಗ್ನದ ಸಲುವಾಗಿ ಹಣವಿಲ್ಲದಾಯಿತು. (೩) ಇವನ ತಾಯಿ ತಂದೆ ಹಣ ಕಾಯ್ದುಕೊಂಡು ಇಡುತ್ತಿದ್ದರು. ಅವರ ಹತ್ತಿರ ಬಹಳಷ್ಟು ಹಣವೂ ಇದ್ದಿತು. ಅದರಿಂದ ಅವರಿಗೆ ಜನರಲ್ಲಿ ಲೌಕಿಕದಲ್ಲಿ ಮಾನ ಮರ್ಯಾದೆ ದೊಡ್ಡಸ್ತನವೆಲ್ಲ ಇದ್ದಿತು. (೪) ಪೂರ್ವ ಶ್ರೀಮಂತಿಕೆಯ ಭ್ರಮದಿಂದ ನಾಲ್ಕು ಜನರ ಕೂಡ ತಾನೂ ನಡೆಯುತ್ತ ಬಂದಿದ್ದನು. ಈಗ ಮೊದಲಿನ ದೊಡ್ಡಿಸ್ತನ ಹೋಗಿ ಮನೆಯಲ್ಲಿ ದಿನದಿನವೂ ದಾರಿದ್ರ್ಯದ ಹಾವಳಿ ಹೆಚ್ಚಿತು. (೫) ಈ ಪರಿಸ್ಥಿತಿಯಿಂದ ಮನೆಯ ಖರ್ಚು ಹೆಚ್ಚಾಗಹತ್ತಿತು. ತಿನ್ನುವ ಜನರೂ ಹೆಚ್ಚಿದರು. ಮತ್ತು ದೊಡ್ಡವರೂ ಆದರು. ಇದರಿಂದ ದುಃಖ ಹಾಗೂ ಕಾಳಜಿ, ಚಿಂತೆ ಹೆಚ್ಚುತ್ತ ನಡೆಯಿತು. (೬) ಮಗಳು ಲಗ್ನಕ್ಕಾದಳು. ಗಂಡು ಮಕ್ಕಳಿಗೆ ಕನ್ಯಾ ಬರಹತ್ತಿದವು. ಮಗಳು ಮಗ ಇವರ ಲಗ್ನ ಮಾಡಬೇಕಾದ ಅನಿವಾರ್ಯ ಪ್ರಸಂಗ ಬಂದಿತು.(೭) ಒಂದು ವೇಳೆ ಮಕ್ಕಳ ಲಗ್ನ ಮಾಡದೆ ಇದ್ದರೆ ಪುನಃ ಜನರಿಂದ ಛೀ, ಥೂ. ಅನ್ನಿಸಿಕೊಳ್ಳಬೇಕಾಗುತ್ತದೆ. ಜನರು "ಇವನು ಜನ್ಮದರಿದ್ರ"ನೆಂದು ಅನ್ನುತ್ತಾರೆ. ಇಷ್ಟೊಂದು ಮಕ್ಕಳನ್ನು ಇವನು ಏಕೆ ಹಡೆಯಬೇಕಾಗಿತ್ತು ಎಂದೂ ಅನ್ನುತ್ತಾರೆ. (೮) ಲೌಕಿಕದಲ್ಲಿ ನನ್ನ ಮರ್ಯಾದೆ ಮಾನ ಉಳಿಯುವದಿಲ್ಲ. ನಮ್ಮ ಮನೆತನದ ಹಿರಿಯರ ಹೆಸರಿಗೆ ಕುಂದು ಬರುತ್ತದೆ. ಆದರೆ ಲಗ್ನಕ್ಕಾಗಿ ಸಾಲ ಕೊಡುವವರು ಯಾರಿರುವರೆಂಬ ದೊಡ್ಡ ಸಮಸ್ಯೆ ಮುಂದೆ ಬರುತ್ತದೆ. (೯) ಹಿಂದೆ ತೆಗೆದುಕೊಂಡವರ ಸಾಲವನ್ನೇ ನಾನು ಈವರೆಗೂ ನಾನು ತೀರಿಸಿಲ್ಲ. ಹೀಗೆ ಚಿಂತೆಯ ಮೋಡ ಆವರಿಸಿತು. (೧೦) ನಾವು ಅನ್ನ ತಿನ್ನುವದು ನಿಜವಾದರೂ ಅದೇ ನಮ್ಮನ್ನು ತಿನ್ನುತ್ತದೆ ಎಂದು ಅನ್ನುವಂತೆ ತಿಂದ ಅನ್ನ ಮೈಗೆ ಹತ್ತದಂತಾಗಿ ಅವನ ಮನಸ್ಸು ಸದಾಕಾಲ ಚಿಂತಾಮಗ್ನವಾಯಿತು. (೧೧) ಊರ ಜನರ ವಿಶ್ವಾಸ ಹಾರಿಹೋಗಿದ್ದಿತಾದ್ದರಿಂದ ಮನೆಯಲ್ಲಿರುವ ಕೆಲವೊಂದುಬೀಜ ವಸ್ತುಗಳು, ಸಾಮಾನುಗಳು ವತ್ತಿ ಬಿದ್ದಿದ್ದವು. ಅವನು "ದೇವರೆ" ಇನ್ನು ದಿವಾಳಿ ತೆಗೆಯುವ ಹೊತ್ತು ಬಂದಿತು" ಎಂದು ಹಲುಬಿದನು.(೧೨) ನಿರುಪಾಯನಾಗಿ ಮನೆಯಲ್ಲಿ ಇನ್ನೂ ಉಳಿದು ಕೆಲವೊಂದು ವಸ್ತುಗಳನ್ನು ಮಾರಿ ಹಾಗೂ ಮನೆಯಲ್ಲಿರುವ ದನಕರುಗಳನ್ನು ವಿಕ್ರಿಯ ಮಾಡಿ ಮತ್ತು ಬಡ್ಡಿ ಕರಾರಿನಿಂದ ಕೆಲವೊಂದು ಹಣ ಸಾಲ ಪಡೆದು ಕೊನೆಗೊಮ್ಮೆ ಹಣ ಕೂಡಿಸಿದನು. (೧೩)

ಐಸೇ ರುಣ ಘೇತಲೇ । ಲೋಕಿಕೀ ದಂಭ ಕೇಲೇ ।
ಸಕಳ ಮ್ಹಣತೀ ನಾಂವ ರಾಖಿಲೇ । ವಡೀಲಾಚೇ ॥೧೪॥
ಐಸೇ ರುಣ ಉದಂಡ ಜಾಲೇ । ರಿಣಾಇತೀ ವೇಢೂನ ಘೇತಲೇ ।
ಮಗ ಪ್ರಯಾಣ ಆರಂಭಿಲೇ । ವಿದೇಶಾಪ್ರತೀ ॥೧೫॥
ದೋನೀ ವರುಷೇ ಬುಡೀ ಮಾರಿಲೀ । ನೀಚ ಸೇವಾ ಅಂಗೀಕಾರಿಲೀ ।
ಶರೀರೇ ಆಪದಾ ಭೋಗಿಲೀ । ಅತಿಶಯೇಸೀ ॥೧೬॥
ಕಾಹೀ ಮೇಳವಿಲೇ ವಿದೇಶೀ । ಜೀವ ಲಾಗಲಾ ಮನುಷ್ಯಾಪಾಸೀ ।
ಮಗ ಪುಸೋನಿಯಾ ಸ್ವಾಮೀಸೀ । ಮುರಡತಾ ಜಾಲಾ ॥೧೭॥
ತವ ತೇ ಅತ್ಯಂತ ಪೀಡಾವಲೀ । ವಾಟ ಪಾಹಾತ ಬೈಸಲೀ ।
ಮ್ಹಣತೀ ದಿವಸಗತೀ ಕಾ ಲಾಗಲೀ। ಕಾಯೇ ಕರಣೇ ದೇವಾ ॥೧೮॥
ಆತಾ ಆಮ್ಹೀ ಕಾಯ ಖಾವೇ । ಕಿತೀ ಉಪವಾಸೀ ಮರಾವೇ ।
ಐಸಿಯಾಚೇ ಸಂಗತೀಸ ದೇವೇ । ಕಾ ಪಾ ಘಾತಲೇ ಆಮ್ಹಾಸೀ ॥೧೯॥
ಐಸೇ ಆಪುಲೇ ಸುಖ ಪಾಹಾತೀ । ಪರೀ ತ್ಯಾಚೇ ದುಃಖ ನೇಣತೀ ।
ಆಣೇ ಶಕ್ತೀ ಗೇಲೀಯಾ ಅಂತೀ । ಕೋಣೇ ಚ ಕಾಮಾ ನ ಯೇತೀ ॥೨೦॥
ಅಸೋ ಐಸೀ ವಾಟ ಪಾಹತಾ । ದೃಷ್ಟೀ ದೇಖಿಲಾ ಅವಚಿತಾ ।
ಮುಲೇ ಧಾವತೀ ತಾತಾ । ಭಾಗಲಾಸ ಮ್ಹಣೌನೀ ॥೨೧॥
ಸ್ತ್ರೀ ದೇಖೋನ ಆನಂದಲೀ । ಮ್ಹಣೇ ಆಮುಚೀ ದೈನ್ಯ ಫಿಟಲೀ ।
ತವ ಯೇರೇ ದಿಧಲೀ । ಗಾಠೋಡೀ ಹಾತೀ ॥೨೨॥
ಸಕಳಾಸ ಆನಂದ ಜಾಲಾ । ಮ್ಹಣತೀ ಆಮುಚಾ ವಡೀಲ ಆಲಾ ।
ತೇಣೇ ತರೀ ಆಮ್ಹಾಲಾ । ಆಂಗ್ಯಾ ಟೋಪ್ಯಾ ಆಣಿಲ್ಯಾ ॥೨೩॥
ಐಸಾ ಆನಂದ ಚ್ಯಾರೀ ದಿವಸ । ಸವೇಚ ಮಾಂಡಿಲೀ ಕುಸಮುಸ ।
ಮ್ಹಣತೀ ಹೇ ಗೇಲಿಯಾ ಆಮ್ಹಾಸ । ಪುನ್ಹಾ ಆಪದಾ ಲಾಗತೀ ॥೨೪॥
ಮ್ಹಣೌನೀ ಆಣೇಲೇ ತೇ ಅಸಾವೇ । ಯೇಣೇ ಮಾಗುತೇ ವಿದೇಶಾಸ ಜಾವೇ ।
ಆಮ್ಹೀ ಹೇ ಖಾಊ ನ ತೋ ಯಾವೇ । ದ್ರವ್ಯ ಮೇಳಊನ ॥೨೫॥
ಐಸೀ ವಾಸನಾ ಸಕಳಾಚೀ । ಅವಘೀ ಸೋಇರೀ ಸುಖಾಚೀ ।
ಸ್ತ್ರೀ ಅತ್ಯಂತ ಪ್ರೀತೀಚೀ । ತೇಹಿ ಸುಖಾಚ ಲಾಗಲೀ ॥೨೬॥
ವಿದೇಸೀ ಬಹು ದಗದಲಾ । ವಿಶ್ರಾಂತೀ ಘ್ಯಾವಯಾ ಆಲಾ ।
ಸ್ವಾಸ ಹೀ ನಾಹೀ ಟಾಕಿಲಾ । ತೋ ಜಾಣೇ ಮ್ರೋಢನಲೇ ॥೨೭॥

ಈ ಪ್ರಕಾರ ಸಾಲ ಮಾಡಿ ಲೌಕಿಕದೊಳಗೆ ಸುಳ್ಳು ಜೊಳ್ಳು ದೊಡ್ಡಿಸ್ತನದಿಂದ ಮೆರೆದನು, ಲಗ್ನಮಾಡಿದನು. ಜನರೂ ಸಹ ತಂದೆಯ ಹೆಸರನ್ನು ಉಳಿಸಿದನೆಂದು ಅಂದರು.(೧೪) ಸಾಲದ ಹೊರೆ ಭಾರವಾದ್ದರಿಂದ ೨ ವರ್ಷ ಪರದೇಶಕ್ಕೆ ಹೋದನು. ಮತ್ತು ಕಷ್ಟಪಟ್ಟು ಹಣ ಉಳಿಸಿ ಊರಿಗೆ ಪರತ ಬಂದನು. ಇದರಿಂದ ಅತಿಶಯ ಸಾಲವಾಯಿತು. ಹಣ ಕೊಟ್ಟವರೆಲ್ಲ ಅವನಿಗೆ ಹಣ ಕೊಡಬೇಕೆಂದು ಫೇರಾವ (ಮುಗಿಬಿದ್ದರು) ಹಾಕಿದರು. ಆಗ ನಿರ್ವಾಹವಿಲ್ಲದೆ ಅವನು ಪರದೇಶಕ್ಕೆ ಹೋಗಬೇಕೆಂದು ನಿಶ್ಚಯಿಸಿದನು. (೧೫) ಹೇಳದೆ ಕೇಳದೆ ದೇಶಬಿಟ್ಟು ಪರದೇಶದಲ್ಲಿ ಎರಡು ವರ್ಷ ಇದ್ದನು, ಅಲ್ಲಿ ಹೀನ ಜನರ ನೌಕರಿ ಮಾಡಿದನು. ದೇಹದಿಂದ ಸಾಕಷ್ಟು ಪಡಬಾರದ ಕಷ್ಟಗಳನ್ನು ಪಟ್ಟನು. (೧೬) ಪರದೇಶದಲ್ಲಿ ಅವನು ಕೆಲವೊಂದು ಹಣ ಗಳಿಸಿ ಕೂಡಿಟ್ಟನು. ಆಗ ಮನೆಯ ಜನರ ಕಡೀಗೆ ಜೀವ ಎಳೆಯ ಹತ್ತಿತು. ಮಾಲಕನ ಅಪ್ಪಣೆ ಪಡೆದು ತನ್ನ ಊರ ಕಡೆಗೆ ಹೊರಟನು. (೧೭) ಮನೆಯಲ್ಲಿದ್ದ ಹೆಂಡತಿ ಮಕ್ಕಳು ಇವನ ಬರವನ್ನು ಆತುರದಿಂದ ನೋಡುತ್ತಲೇ ಇದ್ದರು. ಅಕಸ್ಮಾತ ಬಂದದ್ದರಿಂದ ಎಲ್ಲರಿಗೂ ಆನಂದವಾಯಿತು. ಅವನು ಮನೆಗೆ ಬಂದಾಗ ಮನೆಯ ಜನರು ಬಹಳ ಕಷ್ಟದಲ್ಲಿರುವದನ್ನು ಮತ್ತು ತನ್ನ ಬರುವಿಕೆಯನ್ನೇ ಆತುರದಿಂದ ಕಾಯುತ್ತಿರೆಂಬುದನ್ನು ಕಂಡನು. ಹೆಂಡತಿಯು "ದೇವಾ ಯಾವ ಕಾರಣದಿಂದ ಯಜಮಾನರು ಬರಲಿಕ್ಕೆ ತಡಮಾಡಿರಬಹುದು.(೧೮) ನಾವು ಏನನ್ನು ತಿನ್ನಬೇಕು, ಎಷ್ಟು ದಿವಸ ಉಪವಾಸವಿರಬೇಕು, ಇಂಥ ದಟ್ಟದರಿದ್ರ ಮನುಷ್ಯನ ಕೂಡ ನಮ್ಮನ್ನು ಏಕೆ ಇಟ್ಟಿರುವಿ ? (೧೯) ಈ ಎಲ್ಲವನ್ನು ನೋಡಿದಾಗ ಪ್ರಪಂಚದಲ್ಲಿರುವ ಮನುಷ್ಯರು ತಮ್ಮ ಸುಖವನ್ನಷ್ಟೇ ನೋಡಿಕೊಳ್ಳುತ್ತಾರೆ. ಎರಡನೆಯವರ (ಇನ್ನೊಬ್ಬರ) ದುಃಖದ ಅರಿವನ್ನು ಮನುಷ್ಯ ಲಕ್ಷದಲ್ಲಿ ತರುವದಿಲ್ಲ. ಶಕ್ತಿ ಕ್ಷೀಣವಾದ ಮೇಲೆ ಯಾರೂ ಉಪಯೋಗಕ್ಕೆ ಬರುವದಿಲ್ಲ. (೨೦) ಇರಲಿ, ಮನೆಯ ಜನರು ಇವನು ಬರುವ ದಾರಿ ಕಾಯುತ್ತ ಇರುವಾಗ ಅಕಸ್ಮಾತ್ತಾಗಿ ಮನೆಯ ಮುಂದೆ ಅವರಿಗೆ ಕಂಡನು. ತಂದೆಗೆ "ಅಪ್ಪಾ ನೀನು ಬಹಳ ದಣಿದಿರುವೆ" ಅನ್ನುತ್ತ ಮಕ್ಕಳು ಅವನ ಕಡೆಗೆ ಓಡುತ್ತ ಬಂದರು. (೨೧) ಇದನ್ನು ನೋಡಿ ಹೆಂಡತಿಗೂ ಆನಂದವಾಯಿತು. ತಮ್ಮ ದೈನ್ಯಾವಸ್ಥೆ ಇನ್ನು ಮುಗಿಯಿತು ಎಂದು ಅವಳು ಅಂದಳು. ಆಗ ಅವನು ತಾನು ತಂದ ಹಣದ ಗಂಟನ್ನು ಹೆಂಡತಿಯ ಕೈಗೆ ಕೊಟ್ಟನು.(೨೨)ಇದರಿಂದ ಮನೆಯಲ್ಲಿರುವವರಿಗೆಲ್ಲ ಆನಂದವಾಯಿತು. ಹುಡುಗರು "ನಮ್ಮ ಅಪ್ಪ ಬಂದ, ನಮ್ಮ ಅಪ್ಪ ಬಂದನು"ಎಂಬಸಂತೋಷದೊಂದಿಗೆ"ನಮಗೆಅಂಗಿ ಟೊಪ್ಪಿಗೆಯನ್ನೂ ತಂದಿರುವ"ನೆಂದರು(೨೩) ಈ ಆನಂದನಾಲ್ಕು ದಿನದವರೆಗೆ ಮಾತ್ರಇದ್ದಿತು.ಆಮೇಲೆ ಮನೆಯಲ್ಲಿ ದುಸುಮುಸಿ, ಕಿರಿಕಿರಿಪ್ರಾರಂಭವಾಯಿತು. ಮನೆಯಲ್ಲಿರುವವರು " ಈಗ ತಂದ ಹಣ ಖರ್ಚಾದ ನಂತರ ನಮ್ಮ ಸ್ಥಿತಿ ಪುನಃ ಗೋಳಾಟದ್ದಾಗುವದು" ಎಂದು ಅನ್ನಹತ್ತಿದರು. (೨೪) ಈ ತಂದ ಹಣ ನಮ್ಮಲ್ಲಿಯೇ ಇಟ್ಟು ಪುನಃ ಪರದೇಶಕ್ಕೆ ಹೋಗಲಿ. ಹಾಗೂ ನಾವು ಈ ಹಣದಿಂದ ನಿರ್ವಾಹ ಸಾಗಿಸುವೆವು. ಹಣ ಮುಗಿಯುವದರೊಳಗಾಗಿ ಮತ್ತಷ್ಟು ದ್ರವ್ಯಗಳಿಸಿಕೊಂಡು ಮನೆಗೆ ಪರತ ಬರಲಿ. (೨೫) ಅವನಿಗೆ ಪೂರ್ಣ ವಿಶ್ರಾಂತಿ ದೊರಕಲಿಲ್ಲ. ಬೇಗನೆ ಪುನಃ ಪರದೇಶಕ್ಕೆ ಹೊರಡಬೇಕಾಯಿತು. ಹೆಂಡರು ಮಕ್ಕಳ ವಿಯೋಗ ಅವನಿಗೆ ಸಹಿಸುವದಾಗಲಿಲ್ಲ. ಆದರೆ ಮಾಡುವದೇನು? ನಿರ್ವಾಹವಿಲ್ಲದೆ ಕುದುರೆಯ ಮೇಲೆ ಕುಳಿತು ಅವನು ಹೊರಟನು. - ಹೀಗೆ ಮನೆಯವರೆಲ್ಲರಅಭಿಪ್ರಾಯವಾಗಿತ್ತು. ಪ್ರಪಂಚದಲ್ಲಿಯ ಎಲ್ಲ ಸಂಬಂಧಗಳು ಕೇವಲ ಸುಖಕ್ಕಾಗಿ ಮಾತ್ರ ಇರುತ್ತವೆ. ಹೆಂಡತಿ ತನ್ನ ಗಂಡನ ಮೇಲೆ ಪ್ರೇಮ ಮಾಡುವದು ನಿಜವೇ ಸರಿ. ಆದರೆ ಅವಳೂ ಸಹ ತನ್ನ ಸ್ವತಃದ ಸುಖದ ಕಡೆಗೆ ಲಕ್ಷವಿಟ್ಟೇ ಇರುವಳು. ಕೊನೆಗೆ ತನ್ನ ಸುಖವನ್ನೇ ನೋಡುವಳು. (೨೬) ಪರದೇಶದಲ್ಲಿ ಬಹಳ ಕಷ್ಟವಾದ್ದರಿಂದ ವಿಶ್ರಾಂತಿಗಾಗಿ ಅವನು ಮನೆಗೆ ಬಂದನು. ಪೂರ್ಣ ವಿಶ್ರಾಂತಿ ತೆಗೆದುಕೊಳ್ಳಬೇಕೆಂಬುದರೊಳಗಾಗಿ ಪುನಃ ಪರದೇಶಕ್ಕೆ ಹೋಗುವ ಪ್ರಸಂಗ ಬಂದಿತು. (೨೭)

ಪುಢೇ ಅಪೇಕ್ಷಾ ಜೋಸಿಯಾಂಚೀ । ಕೇಲೀ ವಿವಂಚನಾ ಮುಹೂರ್ತಾಚೀ ।
ವೃತ್ತೀ ಗುಂತಲೀ ತಯಾಚೀ । ಜಾತಾ ಪ್ರಶಸ್ತ ನ ವಟೇ ॥೨೮॥
ಮಾಯಾ ಮಾತ್ರಾ ಸಿದ್ಧ ಕೇಲೀ । ಕಾಹೀ ಸಾಮಗ್ರೀ ಬಾಂಧಲೀ।
ಲೇಕುರೇ ದೃಷ್ಟೀಸ ಪಾಹೀಲೀ । ಮಾರ್ಗಸ್ಥ ಜಾಲಾ ॥೨೯॥
ಸ್ತ್ರೀಯೇಸ ಅವಲೋಕಿಲೇ । ವಿಯೋಗೇ ಬಹುತ ದುಃಖ ವಾಟಲೇ ।
ಪ್ರಾರಬ್ಧಸೂತ್ರ ತುಕಲೇ । ರುಣಾನುಬಂಧಾಚೇ ॥೩೦॥
ಕಂಠ ಸದ್ಗದಿತ ಜಾಲಾ । ನ ಸವರೇಚ ಗಹಿವರಲಾ ।
ಲೇಕುರಾ ಆಣೀ ಪಿತ್ಯಾಲಾ । ತಡಾತೋಡೀ ಜಾಲೀ ॥೩೧॥
ಜರೀ ರುಣಾನುಬಂಧ ಅಸೇಲ । ತರೀ ಮಾಗುತೀ ಭೇಟೀ ಹೋಈಲ ।
ನಾಹೀ ತರೀ ಸಂಗತೀ ಪುರೇಲ । ಯೇಚಿ ಭೇಟೀನೇ ತುಮಚೀ ॥೩೨॥
ಐಸೇ ಬೋಲೋನ ಸ್ವಾರ ಹೋಯೇ । ಮಾಗುತಾ ಫಿರಫಿರೋ ಪಾಹೇ ।
ವಿಯೋಗದುಃಖ ನ ಸಾಹೇ । ಪರಂತು ಕಾಹೀ ನ ಚಲೇ ॥೩೩॥
ಆಪುಲಾ ಗಾಂವ ರಾಹಿಲಾ ಮಾಗೇ । ಚಿತ್ತ ಭ್ರಮಲೇ ಸಂಸಾರಉದ್ವೇಗೇ ।
ದುಃಖವಲಾ ಪ್ರಪಂಚಸಂಗೇ । ಅಭಿಮಾನಾಸ್ತವ ॥೩೪॥
ತೇ ಸಮಈ ಮಾತಾ ಆಠವಲೀ । ಮ್ಹಣೇ ಧನ್ಯ ಧನ್ಯ ತೇ ಮಾಉಲೀ ।
ಮಜಕಾರಣೇ ಬಹುತ ಕಷ್ಟಲೀ । ಪರೀ ಮೀ ನೇಣೇಚಿ ಮೂರ್ಖ ॥೩೫॥
ಆಜೀ ಜರೀ ತೇ ಅಸತೀ । ತರೀ ಮಜಲಾ ಕದಾ ನ ವಿಶಂಭತೀ ।
ವಿಯೋಗ ಹೋತಾ ಆಕ್ರಂದತೀ । ತೇ ಪ್ರೋಟಾಗಿ ವೇಗಳೀ ಚ ॥೩೬॥
ಪುತ್ರ ವೈಭವಹೀನ ಭಿಕಾರೀ । ಮಾತಾ ತೈಸಾಚಿ ಅಂಗಿಕಾರೀ ।
ದಗದಗಲಾ ದೇಖೋನಿ ಅಂತರೀ । ತ್ಯಾಚ್ಯಾ ದುಃಖೇ ದುಃಖವೇ ॥೩೭॥
ಪ್ರಪಂಚ ವಿಚಾರೇ ಪಾಹಾತಾ । ಹೇ ಸಕಳ ಜೋಡೇ ನ ಜೋಡೇ ಮಾತಾ ।
ಹೇ ಶರೀರ ಜಯೇಕರಿತಾ । ನಿರ್ಮಾಣ ಜಾಲೇ ॥೩೮॥
ಲಾವ ತರೀ ತೇ ಮಾಯಾ । ಕಾಯ ಕರಾವಿಯಾ ಸಹಶ್ರ ಜಾಯಾ ।
ಪರೀ ಭುಲೋನ ಗೇಲೋ ವಾಯಾ । ಮಕರಧ್ವಜಾಚೇನಿ ॥೩೯॥
ಯಾ ಯೇಕಾ ಕಾಮಾಕಾರಣೇ । ಜಿವಲಗಾಪಿ ದ್ವಂದ್ವ ಘೇಣೇ ।
ಸಖೀ ತೀ ಚ ಪಿಸುಣೇ । ಐಸೀ ವಾಟತೀ ॥೪೦॥
ಮ್ಹಣೌನ ಧನ್ಯ ಧನ್ಯ ತೇ ಪ್ರಪಂಚೀ ಜನ । ಜೇ ಮಾಯೇಬಾಪಾಚೇ ಭಜನ।
ಕರಿತೀ ನ ಕರಿತೀ ಮನ । ನಿಷ್ಠುರ ಜಿವಲಗಾಸೀ ॥೪೧॥

ಅವನು ಜೋತಿಷಿಯನ್ನು ವಿಚಾರಿಸಿ ಪ್ರಯಾಣದ ಮುಹೂರ್ತ ಗೊತ್ತು ಮಾಡಿಕೊಂಡನು. ಆದರೆ ಅವನಜೀವ ಮನೆಯ ಮಮತೆಯಲ್ಲಿತೊಡಕಿಕೊಂಡದ್ದರಿಂದ ಪ್ರಯಾಣ ಮಾಡುವದುಯೋಗ್ಯವೆನಿಸಲೊಲ್ಲದು.(೨೮) ಆದರೂ ಅವನು ಸ್ವಲ್ಪ ಹಣ, ಕೆಲವೊಂದು ಔಷಧ ತೆಗೆದುಕೊಂಡನು. ಮತ್ತು ಸ್ವಲ್ಪ ಧಾನ್ಯ, ಅರಿವೆ, ಪಾತ್ರೆ ಮೊದಲಾದವನ್ನೂ ತೆಗೆದುಕೊಂಡನು. ಅವೆಲ್ಲವುಗಳ ಗಂಟು ಕಟ್ಟಿಕೊಂಡು ತನ್ನ ಎಲ್ಲ ಮಕ್ಕಳನ್ನೂ ಪ್ರೇಮ ದೃಷ್ಟಿಯಿಂದ ನೋಡಿ ಗಂಟು ಹೊತ್ತು ಹೊರಟನು. (೨೯) ಹೋಗುವಾಗ ತನ್ನ ಹೆಂಡತಿಯ ಕಡೆಗೆ ನೋಡಿದಾಗ ಅವನಿಗೆ ವಿಯೋಗ ದುಃಖ ಉಮ್ಮಳಿಸಿತು. ತನ್ನ ಪ್ರಾರಬ್ಧದಲ್ಲಿ ಕುಟುಂಬದ ಸಂಬಂಧ ಇಷ್ಟು ಮಾತ್ರದ ಋಣಾನುಬಂಧದ್ದಿದೆಯೆಂಬ ವಿಚಾರ ಬಂದಿತು. (೩೦) ಕಂಠ ತುಂಬಿ ಬಂದಿತು. ದುಃಖದ ಆವೇಗ (ಬಿಕ್ಕಿಬಿಕ್ಕಿ ಅಳುವದು) ತಡೆಯಲಾಗಲಿಲ್ಲ. ತಂದೆ ಮಕ್ಕಳ ಅಗಲುವಿಕೆ ಆಗುವದೆಂದು ಅವನಿಗೆ ಬಹಳ ದುಃಖವಾಯಿತು. (೩೧) ಋಣಾನುಬಂಧವಿದ್ದರೆ ಮಾತ್ರ ಪುನಃ ಇವರೆಲ್ಲರ ಭೆಟ್ಟಿಯಾಗುವದು. ಇಲ್ಲದಿದ್ದರೆ ಇದೆ ತನ್ನ ಕೊನೆಯ ಭೆಟ್ಟಿಯೆಂದು ತಿಳಿಯಿರಿ (೩೨) ಹೀಗೆ ನುಡಿದು ಅವನು ಕುದುರೆಯನ್ನು ಹತ್ತಿದನು. (ಆ ಕಾಲದಲ್ಲ ಹೆಚ್ಚಾಗಿ ಕುದುರೆಯು ಪ್ರಯಾಣದ ಸಾಧನವಾಗಿತ್ತು) ಆದರೆ, ಹೋಗುವಾಗ ಪುನಃ ಪುನಃ ತಿರುತಿರುಗಿ ನೋಡುತ್ತಿದ್ದನು. ವಿಯೋಗದ ದುಃಖ ಸಹಿಸದಾಯಿತು.ಆದರೆ ಮುಂದೆ ಹೋಗದ ಹೊರತುಎರಡನೆಯಉಪಾಯವೇ ಇರಲಿಲ್ಲ.(೩೩) ಆಗ ಅವನಿಗೆ ತನ್ನ ತಾಯಿಯ ನೆನಪಾಯಿತು. ಕಾಮವಾಸನೆಯ ಬಲವಾದ ಹಿಡಿತದಲ್ಲಿ ತಾನು ಅವರಕೂಡ ಚನ್ನಾಗಿ ನಡೆದುಕೊಳ್ಳಲಿಲ್ಲವೆಂಬ ಅರಿವಾಯಿತು. ಪ್ರಪಂಚದಲ್ಲಿ ಕೇವಲ ಸ್ವಾರ್ಥದ ಸಂತೆ (ಬಾಜಾರ)ಯೇ ಇರುವದು. ಎಂಬುದರ ಅರಿವು ಆಯಿತು. ಹತ್ತಿದ ಕುದುರೆ ನಡೆಯಹತ್ತಿದಂತೆ ಅವನ ಗ್ರಾಮವು ಹಿಂದುಳಿಯಿತು. ಸಂಸಾರದ ಕಟಕಟೆಯಿಂದ ಅವನ ಮನಸ್ಸು ಗೊಂದಲಗೊಂಡಿತ್ತು. ಅಹಂಕಾರದಿಂದ ಪ್ರಪಂಚದ ಸಂಬಂಧ ಮಾಡಿದ್ದಕ್ಕಾಗಿ ಅವನಿಗೆ ದುಃಖವಾಯಿತು. (೩೪) ಆಗ ಅವನಿಗೆ ತಾಯಿಯ ನೆನಪಾಯಿತು. ಮತ್ತು ಅವನು ಅನ್ನಹತ್ತಿದನು. "ನನ್ನ ತಾಯಿ ಧನ್ಯಳು. ನನ್ನ ಸಲುವಾಗಿ ಬಹಳಕಷ್ಟ ಸೋಸಿದಳು. ಆದರೆ ನನಗೆ ಅದರ ತಿಳುವಳಿಕೆ ಬರಲಿಲ್ಲ (೩೫) ಈಗಅವಳು ಒಂದು ವೇಳೆ ಇದ್ದುದಾಗಿದ್ದರೆ ಅವಳು ಎಂದೂ ನನ್ನನ್ನು ಪರದೇಶದಂಥ ದೂರದ ಸ್ಥಳಕ್ಕೆ ಹೋಗಗೊಡುತ್ತಿರಲಿಲ್ಲ. ಮತ್ತು ವಿಯೋಗವಾದಾಗ ಇತರ ಆಪ್ತ ಸಂಬಂಧಿಗಳು ದೊಡ್ಡ ಧ್ವನಿಯಿಂದ ಅಳುವದು ಮಾತ್ರ, ನಿಜವಾದರೂ ತಾಯಿಯು ಅಳುವಾಗಿನ ಅವಳ ಹೊಟ್ಟೆಯಲ್ಲಿ ಆಗುವ ಉರಿ, ಕಳವಳ, ಅಂತಃಕರುಣದ ಕಳಕಳಿಯು ಬೇರೆಯೇ ಆಗಿರುತ್ತದೆ. (೩೬) ಮಗನು ಬಡವ, ಭೋಳಾ, ಭಿಕಾರಿ ಸಹ ಇದ್ದರೂ ಅವಳು ಅವನನ್ನು ದೂರ ಮಾಡುವದಿಲ್ಲ. ಮಗನು ಹತ್ತಿರವೇ ಇರಲಿ ಎಂದು ಬಯಸುವಳು. ಅವನಿಗೆ ಕಷ್ಟ ಶ್ರಮವಾಗುವದನ್ನು ನೋಡಿ ದುಃಖದಿಂದ ಅವಳು ಮನದಲ್ಲಿ ಮರಗುವಳು. (೩೭) ಪ್ರಪಂಚದ ವಿಷಯದ ಬಗ್ಗೆ ವಿಚಾರ ಮಾಡಿ ನೋಡಿದರೆ ಪ್ರಪಂಚದಲ್ಲಿ ಉಳಿದೆಲ್ಲ ವಸ್ತುಗಳು ಸಿಗಬಹುದು. ಆದರೆ ನಮಗೆ ಜನ್ಮಕೊಟ್ಟ ತಾಯಿಯು ಮಾತ್ರ ಸಿಗಲಾರಳು. (೩೮) ತಾಯಿ ರಾಕ್ಷಸಿ (ಡಾಕಿನಿ) ಯಾಗಿದ್ದರೂ ಸಹ ತನ್ನ ಮಕ್ಕಳ ಮೇಲೆ ಅವಳಿಗೆ ಅತಿ ಪ್ರೀತಿ, ಮಮತೆ ಇರುತ್ತದೆ. ಸಾವಿರ ಹೆಂಡಿರನ್ನು ಮಾಡಿಕೊಂಡರೂ ತಾಯಿಯ ಪ್ರೇಮ ಅವರಲ್ಲಿ ಸಿಗಲಾರದು. ಆದರೆ ನಾನು ಕಾಮವಾಸನೆಯ ಜಾಲದಲ್ಲಿ ಸಿಕ್ಕು ಹುಚ್ಚರಂತೆ ಅತಿಯಾಗಿಯೇ ನಡೆದುಕೊಂಡೆನು. (೩೯) ನಾನು ಈ ಒಂದು ಕಾಮವಾಸನೆಯ ಚಟಕ್ಕೆ ಬಿದ್ದು ನನ್ನ ಪ್ರೇಮದ ಜನರ ಕೂಡ ಬಡಿದಾಡಿದೆನು. ನನ್ನ ಹಿತಚಿಂತಕರಾದ ಮಿತ್ರರೂ ಸಹ ನನಗೆ ಮೋಸಗಾರ (ಲಬಾಡ)ರಾಗಿ ಆಗ ಕಂಡರು. (೪೦) ಪ್ರಪಂಚದಲ್ಲಿರುವ ಜನರು ತಮ್ಮ ತಂದೆ ತಾಯಿಗಳ ಕೂಡ ಭಕ್ತಿಭಾವದಿಂದ ನಡೆದುಕೊಳ್ಳುವವರಾಗಬೇಕು. ಅಂಥವರೇ ಧನ್ಯರು. ತಾಯಿ ತನ್ನ ಜೀವದ, ಮಮತೆಯ, ಪ್ರೀತಿಯ ಸಂತಾನದ ವಿಷಯದಲ್ಲಿ ತನ್ನ ಮನಸ್ಸನ್ನು ಎಂದೂ ಕಠೋರ ಮಾಡಲಾರಳು. (೪೧)

ಸಂಗತೀ ಸ್ತ್ರೀಬಾಳಕಾಚೀ । ಆಹೇ ಸಾಠೀ ಜನ್ಮಾಚೀ ।
ಪರೀ ಮಾಯೇಬಾಪೇ ಕೈಚೀ । ಮಿಳತೀಲ ಪುಢೇ ॥೪೨॥
ಐಸೇ ಪೂರ್ವೀ ಹೋತೇ ಐಕಿಲೇ । ಪರಿ ತೇ ಸಮಜಈ ನಾಹೀ ಕಳಲೇ ।
ಮನ ಹೇ ಬುಡೋನ ಗೇಲೇ । ರತೀ ಸುಖಾಚಾ ಡೋಹೀ ॥೪೩॥
ಹೇ ಸಖೀ ವಾಟತೀ ಪರೀ ಪಿಸುಣೇ । ಮಿಳಾಲೀ ವೈಭವಾಕಾರಣೇ ।
ರಿತೇ ಜಾತಾ ಲಾಜೀರವಾಣೇ । ಅತ್ಯಂತ ವಾಟೇ ॥೪೪॥
ಆತಾ ಭಲತೈಸೇ ಕರಾವೇ । ಪರಿ ದ್ರವ್ಯ ಮೇಳಊನ ನ್ಯಾವೇ ।
ರಿತೇ ಜಾತಾ ಸ್ವಭಾವೇ । ದುಃಖ ಆಹೇ ॥೪೫॥
ಐಸೀ ವೇವರ್ಥನಾ ಕರೀ । ದುಃಖ ವಾಟಲೇ ಅಂತರೀ ।
ಚಿತೇಚಿಯೇ ಮಹಾಪುರೀ । ಬುಡೋನ ಗೇಲಾ ॥೪೬॥
ಐಸಾ ಹಾ ದೇಹ ಆಪುಲಾ । ಅಸತಾಚ ಪರಾಧೀನ ಕೇಲಾ ।
ಈಶ್ವರೀ ಕಾನಕೊಂಡಾ ಜಾಲಾ । ಕುಟುಂಬಕಾಬಾಡೀ ॥೪೭॥
ಯಾ ಯೇಕಾ ಕಾಮಾಸಾಠೀ । ಜನ್ಮ ಗೇಲಾ ಆಟಾಟೀ ।
ವಯು ವೇಚಲ್ಯಾ ಸೇವಟೀ । ಯೇಕಲೇ ಚಿ ಜಾವೇ ॥೪೮॥
ಐಸಾ ಮನೀ ಪ್ರಸ್ತಾವಲಾ । ಕ್ಷಣ ಏಕ ಉದಾಸ ಜಾಲಾ ।
ಸವೇಚಿ ಪ್ರಾಣೀ ಝುಳಂಬಲಾ । ಮಾಯಾಜಾಳೀ ॥೪೯॥
ಕನ್ಯಾಪುತ್ರೀ ಆಠವಲೀ । ಮನೀಹೂನಿ ಕ್ಷಿತೀವಾಟಲೀ ।
ವೃದ್ಧಣೇ ಲೇಕುರೇ ಅಂತರಲೀ । ಮಾಝೀ ಮಜ ॥೫೦॥
ಮಾಗೀಲ ದುಃಖ ಆಠವಲೇ । ಜೇ ಜೇ ಹೋತೇ ಪ್ರಾಪ್ತ ಜಾಲೇ ।
ಮಗ ರುದನ ಆರಂಭಿಲೇ । ದೀರ್ಘ ಸ್ವರೇ ॥೫೧॥
ಅರಣ್ಯರುದನ ಕರಿತಾ । ಕೋಣೇ ನಾಹೀ ಬುಝಾವಿತಾ ।
ಮಗ ಹೋಯೆ ವಿಚಾರಿತಾ । ಆಪುಲೇ ಮನೀ ॥೫೨॥
ಆತಾ ಕಾಸಯಾ ರಡಾವೇ । ಪ್ರಾಪ್ತ ಹೋತ ತೇ ಭೋಗಾವೇ ।
ಐಸೇ ಬೋಲೋನಿಯಾ ಜೀವೇ । ಧಾರಿಷ್ಟ ಕೇಲೇ ॥೫೩॥
ಐಸಾ ದುಃಖೇ ದಗದಲಾ । ಮಗ ವಿದೇಶಾಪ್ರತೀ ಗೇಲಾ ।
ಪುಢೇ ಪ್ರಸಂಗ ವರ್ತಲಾ । ತೋ ಸಾವಧ ಐಕಾ ॥೫೪॥

ಇತೀ ಶ್ರೀ ದಾಸಬೋಧೇ ಗುರುಶಿಷ್ಯ ಸಂವಾದೇ
''ಸ್ವಗುಣ ಪರೀಕ್ಷಾ'' ನಾಮ ಚತುರ್ಥ ಸಮಾಸ ಸಮಾಪ್ತ ॥

ಹೆಂಡತಿ ಮತ್ತು ಮಕ್ಕಳ ಸಹವಾಸ ಜೀವಿಸುವವರೆಗೂ ಇರುವದು. ಆದರೆ ತಾಯಿ ತಂದೆ ಇವರು ಸ್ವಲ್ಪ ದಿವಸ ಮಾತ್ರ ಇರುವರು ಮುಂದೆ ಇವರ ಸಹವಾಸ ಕೊನೆಯವರೆಗೂ ಹೇಗೆ ಸಿಕ್ಕೀತು? (೪೨) ಇಂಥ ವಿವೇಕದ ಮಾತುಗಳನ್ನು ನಾನು ಮೊದಲಿಗೆ ಕೇಳಿದ್ದೆನು. ಆದರೆ ತಾರುಣ್ಯದ ಮುಸ್ತಿ ಮದ (ಮದ, ಅಮಲು) ಯಲ್ಲಿ ಇವೆಲ್ಲವನ್ನು ಮರೆತೆನು. ಲಕ್ಷಿಸಲಿಲ್ಲ. ಕೇವಲ ಸ್ತ್ರೀ ಸುಖದ ತಿರುಗಣಿ ಮಡದಲ್ಲಿ ಮುಳುಗಿಬಿಟ್ಟೆನು. (೪೩) ಯಾರನ್ನು ನಾನು ನನ್ನ ಗೆಳೆಯರೆಂದು ತಿಳಿದಿದ್ದೆನೋ ಅವರು ಲಬಾಡರಾಗಿದ್ದರು. ನನ್ನಲ್ಲಿರುವ ಹಣದಿಂದ ನನ್ನಸುತ್ತ ತಿರುಗುವ ಹೊಗಳು ಭಟ್ಟರಾಗಿದ್ದರು. ಈಗ ಹಣವಿಲ್ಲದೆ ಬರಿಗೈಯಿಂದ ತಿರುಗಿ ಊರಿಗೆ ಹೋಗಲು ನನಗೆ ಅತಿ ನಾಚಿಕೆಗೇಡಿತನವೆನಿಸುತ್ತದೆ. (೪೪) ಈಗ ನಾನು ಏನಾದರೂ ಮಾಡಿ ಹಣ ಸಂಗ್ರಹಿಸಿಕೊಂಡು ಹೋಗಲೇಬೇಕು. ನಾನು ದ್ರವ್ಯ ಸಂಗ್ರಹಿಸದೆ ಬರಿಗೈಯಿಂದ ಪರತ ಊರಿಗೆ ಹೋದರೆ ಅಲ್ಲಿ ಸಹಜವಾಗಿಯೇ ದುಃಖವಾಗುವದು. (೪೫) ಈ ಪ್ರಕಾರವಾಗಿ ವಿಚಾರಗಳು ಅವನ ಮನದಲ್ಲಿ ಬರಹತ್ತಿದವು. ಇದರಿಂದ ಅವನ ಜೀವ ಕಷ್ಟಕ್ಕೊಳಗಾಯಿತು. ಮತ್ತು ಅವನು ಚಿಂತೆಯ ಮಹಾಪೂರದಲ್ಲಿ ಮುಳುಗಿ ಹೋದನು. (೪೬) ಇಂಥ ವಿಚಾರಗಳ ಪ್ರಭಾವದಿಂದ ತನ್ನ ಜನ್ಮವು ಪ್ರಪಂಚದ ಕಾರಣಕ್ಕಾಗಿ ವ್ಯರ್ಥವಾಯಿತೆಂದು ಒಂದು ಕ್ಷಣ ಅವನಿಗೆ ಅನಿಸಿತು. ಆದರೆ ತತ್‌ಕ್ಷಣದಲ್ಲಿ ಮಮತ್ವದ ಪ್ರಾಬಲ್ಯದ ಸೆಳವಿನಿಂದ ಮಕ್ಕಳ ಮರಿಯ ನೆನಪಾಗಿ ಅವನು ದೊಡ್ಡಧ್ವನಿ ತೆಗೆದು ಅಳಹತ್ತಿದನು. ಆದರೆ ಆ ಅರಣ್ಯ ಮಾರ್ಗದಲ್ಲಿ ಯಾರು ಕೇಳುವವರು. ಆಮೇಲೆ ತಾನೇ ಶಾಂತನಾಗಿ ದಾರಿಯನ್ನು ಹಿಡಿದು ನಡೆಯಹತ್ತಿದನು. ನಿಜವಾಗಿಯೂ ಈ ದೇಹವು ನನ್ನ ಸ್ವಂತ ಮಾಲಕಿಯದಿದ್ದರೂ ಇದನ್ನು ಎರಡನೆಯವರ ಆಧೀನಗೊಳಿಸಿದೆನು. ಈಶ್ವರನ ಸಲುವಾಗಿ ಉಪಯೋಗಿಸಲಿಲ್ಲ. ಕೇವಲ ಸ್ವಾರ್ಥಿ ಕುಟುಂಬದವರಿಗಾಗಿ ಕಷ್ಟಪಡುವದಕ್ಕೆ ಇದನ್ನು ಉಪಯೋಗಿಸಿ ದುರ್ಬಲಗೊಳಿಸಿದೆನು.(೪೭) ಕೇವಲ ಒಂದು ಕಾಮವಾಸನೆಗಾಗಿ ಇಲ್ಲಿಯವರೆಗೆ ಜನ್ಮವಿಡೀ ಎಷ್ಟೊಂದು ಶ್ರಮ, ಕಷ್ಟಪಟ್ಟೆನು, ಏನೆಲ್ಲ ಮಾಡಿದರೂ ಆಯುಷ್ಯ ಮುಗಿದ ಮೇಲೆ ನಾನೊಬ್ಬನೇ ಎಲ್ಲ ಬಿಟ್ಟು ಹೊರಟು ಹೋಗಬೇಕಾಗುವದು. (೪೮) ಈ ರೀತಿಯ ವಿಚಾರಗಳು ಮನದಲ್ಲಿ ಬಂದು ಪಶ್ಚಾತ್ತಾಪಗೊಂಡನು. ಒಂದು ಕ್ಷಣ ಉದಾಸ (ಖಿನ್ನ)ನಾದನು. ಆದರೆ ಕೂಡಲೇ ಪುನಃ ಅವನು ಮಾಯೆಯ ಮಮತ್ವದ ಜಾಲದಲ್ಲಿ ತೊಡಕಿಕೊಂಡನು. (೪೯) ಮಗಳ ಹಾಗೂ ಗಂಡು ಮಕ್ಕಳ ನೆನಪಾಗಿ ಅವನು ಮನಃಪೂರ್ವಕವಾಗಿ ಅವರಿಗಾಗಿ "ಅಯ್ಯೋ ನನ್ನ ಮಕ್ಕಳು ಮರಿ ನನ್ನಿಂದ ದೂರವಾದರಲ್ಲ" ಎಂದು ದುಃಖಿಗೊಂಡು ಅನ್ನಹತ್ತಿದನು. (೫೦) ಈ ಮೊದಲು ಎಷ್ಟೆಷ್ಟು ದುಃಖವನ್ನು ಅವನು ಅನುಭವಿಸಿದ್ದನೋ ಅವೆಲ್ಲ ನೆನಪಾಗಿದೊಡ್ಡ ಧ್ವನಿ ತೆಗೆದು "ಹೋ" ಎಂದು ಅಳಲುಪ್ರಾರಂಭಿಸಿದನು.(೫೧) ಅರಣ್ಯದಲ್ಲಿ ಯಾರಾದರೂ ಅಳಹತ್ತಿದರೆ ಅಲ್ಲಿ ಅವರನ್ನು ಶಾಂತಗೊಳಿಸುವವರು ಯಾರೂ ಇರುವದಿಲ್ಲವೆಂಬುದರ ವಿಚಾರ ಬಂದು ಅವನು ತನ್ನಲ್ಲಿಯೇ ವಿಚಾರಕ್ಕೊಳಗಾದನು. (೫೨) ಈಗ ಅತ್ತು ಏನು ಉಪಯೋಗ? ಯಾವುದು ನಮ್ಮ ಪಾಲಿಗೆ ಬರುವದೋ ಹಣೆಬರಹದಲ್ಲಿ ಇದ್ದದ್ದು ಅದನ್ನು ಸುಮ್ಮನೆ ಅನುಭವಿಸಬೇಕು. ಹೀಗೆ ಅಂದುಕೊಂಡು ತನ್ನಷ್ಟಕ್ಕೆ ತಾನೇ ಧೈರ್ಯ ತಂದುಕೊಂಡನು. (೫೩) ದುಃಖದಿಂದ ಬಳಲಿ ಬೆಂಡಾದ ಅವನು ಮುಂದೆ ಪರದೇಶಕ್ಕೆ ಹೋದನು. ಅನಂತರ ಏನೇನು ನಡೆಯಿತೆಂಬ ಪ್ರಸಂಗದ ವಿಷಯುವನ್ನು ಲಕ್ಷಗೊಟ್ಟು ಕೇಳಿರಿ. (೫೪)

ಇತಿ ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದ ಮೂರನೆಯ ದಶಕದಲ್ಲಿಯ
"ಸ್ವಗುಣ ಪರೀಕ್ಷಾ" ಎಂಬ ಹೆಸರಿನ ನಾಲ್ಕನೆಯ ಸಮಾಸವು ಮುಗಿದುದು.

● ●

### ಸ್ವಗುಣ ಪರೀಕ್ಷಾ (೫) ನಾಮ ಪಂಚಮ ಸಮಾಸ

॥ಶ್ರೀರಾಮ॥ ಪುಢೇ ಗೇಲಾ ವಿದೇಶಾಸೀ । ಪ್ರಾಣೀ ಲಾಗಲಾ ವ್ಯಾಸಂಗಾಸೀ ।
ಆಪಲ್ಯಾ ಜಿವೇಸೀ ಸೋಸೀ । ನಾನಾ ಶ್ರಮ ॥೧॥
ಐಸಾ ದುಸ್ತರ ಸಂಸಾರ । ಕರಿತಾ ಕಷ್ಟಲಾ ಥೋರ ।
ಪುಢೇ ದೋನೀ ಚ್ಯಾರೀ ಸಂವತ್ಸರ । ದ್ರವ್ಯ ಮೇಳವಿಲೇ ॥೨॥
ಸವೇಚಿ ಆಲಾ ದೇಶಾಸೀ । ತೋ ಆವರ್ಷಣ ಪಡಿಲೇ ದೇಸೀ ।
ತೇಣೇ ಗುಣೇ ಮನುಷ್ಯಾಸೀ । ಬಹುತ ಕಷ್ಟ ಜಾಲೇ ॥೩॥
ಯೇಕಾಚ್ಯಾ ಬೈಸಲ್ಯಾ ಅಮೃತಕಳಾ । ಯೇಕಾಸ ಚಂದ್ರೀ ಲಾಗಲೀ ಡೋಳಾ।
ಯೇಕೇ ಕಾಪತಿ ಚಳಚಳಾ । ದೈನ್ಯವಾಣೇ ॥೪॥
ಯೇಕೇ ದೀನರೂಪ ಬೈಸಲೀ । ಯೇಕೇ ಸುಜಲೀ ಯೇಕೇ ಮೇಲೀ ।
ಐಸೀ ಕನ್ಯಾಪುತ್ರೇ ದೇಖಿಲೀ । ಅಕಸ್ಮಾತ ಡೋಳಾ ॥೫॥

# ದಶಕ ३ ಸಮಾಸ ४. ಸ್ವಗುಣ ಪರೀಕ್ಷಾ (ಡ) (ನುಡಿ ४६)

ಸಮಾಸದ ಪ್ರಾರಂಭದಲ್ಲಿ ಶ್ರೀ ಸಮರ್ಥರು ದುಷ್ಕಾಳ, ದುರ್ಭಿಕ್ಷಗಳಿಂದ ಕುಟುಂಬದ ಕಷ್ಟನಷ್ಟ ಯಾವ ಪ್ರಕಾರದಲ್ಲಿ ಆಗುವದೆಂಬುದರ ಮಾರ್ಮಿಕ ವರ್ಣನೆ ಮಾಡಿದ್ದಾರೆ. ಶ್ರೀ ತುಕಾರಾಮ ಮಹಾರಾಜರಿಗೂ ಸಹ ಇಂಥ ಕಷ್ಟ-ನಷ್ಟಗಳನ್ನು ದುರ್ಭಿಕ್ಷ ಕಾಲದಲ್ಲಿ ಅನುಭವಿಸಬೇಕಾಯಿತು.

ಪರದೇಶಕ್ಕೆಹೋಗಿ ಹಣಗಳಿಸಿ ಸ್ವದೇಶಕ್ಕೆ ಅವನು ತಿರುಗಿ ಬಂದನು.ಆದರೆ ತನ್ನ ಪ್ರದೇಶದಲ್ಲಿ ದುಷ್ಕಾಳಬಿದ್ದಿತ್ತು. ಅವನ ಕುಟುಂಬದಲ್ಲಿ ಬಹಳ ಕಷ್ಟದ ಪ್ರಸಂಗಗಳು ಬಂದಿದ್ದವು. ನಿತ್ಯದ ಊಟಕ್ಕೂ ಸಹ ಅನ್ನ ಸಿಗದಂತಾಗಿ ಮತ್ತೆ ಮೂರನೆಯ ಲಗ್ನ ಮಾಡಿಕೊಂಡನು. ಆದರೆ ಇವನು ವಯಸ್ಸಾಗಿ ಹುಮ್ಮಸ್ಸಿಲ್ಲದವನಾಗಿದ್ದನು. ಹೆಂಡತಿಯು ನವತಾರುಣ್ಯದವಳಾದಳು ಮನೆಯಲ್ಲಿಯ ಮೊದಲಿನ ಮಕ್ಕಳು ದೊಡ್ಡವರಾದರು. ಅಂದಮೇಲೆ ಮನೆಯಲ್ಲಿ ದಿನಾಲೂ ಜಗಳ, ತಂಟೆಗಳು ಪ್ರಾರಂಭವಾದವು. ಒಂದು ದಿವಸ ದೊಡ್ಡವನಾದ ಮಗನು ತಂದೆಯನ್ನು ಹೊಡೆದನು. ಆಗ ನಾಲ್ಕು ಜನ ಸಂಭಾವಿತರು ಕೂಡಿ ತಂದೆ ಮಕ್ಕಳಲ್ಲಿ ಪಾಲು ಮಾಡಿ ಆಸ್ತಿಯ ಹಂಚಿಕೆ ಮಾಡಿಕೊಟ್ಟರು. ಇವನು ಹೆಂಡತಿಯೊಂದಿಗೆ ಒಂದು ಗುಡಿಸಲದಲ್ಲಿ ಬೇರೆ ಇರಹತ್ತಿದನು. ಸ್ವಲ್ಪ ದಿನಗಳಲ್ಲಿ ಪರಚಕ್ರ ಪರರಾಜರ ದಂಡು ಬಂದಿತು. ಲೂಟಿ ಪಾಟಿ ಆಯಿತು. ಇವನ ತರುಣ ಹೆಂಡತಿಯನ್ನು ಅವರು ಓಡಿಸಿಕೊಂಡು ಹೋಗಿ ಭ್ರಷ್ಟಗೊಳಿಸಿದರು. ಕೊನೆಯಲ್ಲಿ ಮುಪ್ಪಿನಿಂದ ಬಹಳಷ್ಟುಅಶಕ್ತನಾದನು, ಶಕ್ತಿಹೀನನಾದನು. ಹೀಗಾಗಿ "ಯಾವಾಗ ಒಮ್ಮೆ ಸತ್ತು ಹೋದೇನು" ಎಂದು ಅನ್ನಹತ್ತಿದನು. ಈ ಬಗೆಯಿಂದ ಅವನು ಜನ್ಮವಿಡೀ ಸುಖಕ್ಕಾಗಿ ಧಡಪಡಿಸಿದನು, ಹೋರಾಡಿದನು. ಆದರೆ ಅಂತ್ಯ ಕಾಲದವರೆಗೂ ದುಃಖವನ್ನೇ ಭೋಗಿಸುತ್ತ ಇರುವವನಾದನು. **ತಾತ್ಪರ್ಯ:**– ಜನ್ಮ (ಹುಟ್ಟು) ಇದೇ ಮೂಲದಲ್ಲಿ ದುಃಖಕ್ಕೆ ಕಾರಣವಾಗಿದೆ. ದುಃಖವನ್ನು ಇಲ್ಲದಂತೆ ಮಾಡಬೇಕಾದರೆ ಭಕ್ತಿಯು ಬೇಕು.

## ಸಮಾಸ ४. ಸ್ವಗುಣ ಪರೀಕ್ಷಾ (ಡ)

ಆಮೇಲೆ ಪರದೇಶಕ್ಕೆ ಹೋದನು. ಅಲ್ಲಿ ತನ್ನ ಉದ್ಯೋಗಕ್ಕೆ ಪ್ರಾರಂಭಿಸಿದನು. ಅನೇಕ ಪ್ರಕಾರದ ಕಷ್ಟಗಳನ್ನು ಗಟ್ಟಿ ಮನಸ್ಸಿನಿಂದ ಅನುಭವಿಸಿದನು. (೧) ಈ ಕಠಿಣ ಸಂಸಾರ ಮಾಡುವಾಗ ಮೇಲಿಂದ ಮೇಲೆ ಬಹಳ ಶ್ರಮಪಟ್ಟನು. ಎರಡು–ನಾಲ್ಕು ವರ್ಷ ಅತಿ ಕಷ್ಟಪಟ್ಟು ಅವನು ದ್ರವ್ಯವನ್ನು ಸಂಪಾದಿಸಿದನು. (೨) ಆ ಮೇಲೆ ಕೂಡಲೇ ಅವನು ಸ್ವದೇಶಕ್ಕೆ ತಿರುಗಿ ಬಂದನು. ಆಗ ದೇಶದಲ್ಲಿ ದುಷ್ಕಾಳ, ಬರಗಾಲ ಬಿದ್ದಿತು. ಅದರಿಂದ ಜನರು ಬಹಳಷ್ಟು ಕಷ್ಟವನ್ನು ಸಹಿಸುವ ಪ್ರಸಂಗ ಬಂದಿತ್ತು. (३) ಅವನು ಮನೆಗೆ ಬಂದು ನೋಡಿದಾಗ ಹೆಂಡತಿ ಸತ್ತು ಹೋಗಿದ್ದಳು. ಮಕ್ಕಳಲ್ಲಿ ಕೆಲವರ ಗಲ್ಲ ಒಳಸೇರಿದ್ದವು. ಕೆಲವರ ಕಣ್ಣು ಒಳಸೇರಿ ನಿಸ್ತೇಜವಾಗಿದ್ದವು. ಇನ್ನು ಕೆಲವರು ದೀನರಾಗಿ ಶಕ್ತಿ ಇಲ್ಲದೆ ಥರಥರ ನಡುಗುತ್ತಿದ್ದರು. (४) ಕೆಲವರು ಭಿಕಾರಿಗಳಂತೆ ಕುಳಿತಿದ್ದರು, ಕೆಲವರ ಮೈಮೇಲೆ ಬಾವು ಬಂದಿತ್ತು. ಕೆಲವರು ಸತ್ತುಹೋಗಿದ್ದರು. ಈ ಪ್ರಕಾರದಲ್ಲಿ ಆವ ಮಕ್ಕಳ ಸ್ಥಿತಿಯನ್ನು ಅವನು ನೋಡಿದನು. (५)

ತೇಣೇ ಬಹುತ ದುಃಖೀ ಜಾಲಾ । ದೇಖೋನಿಯಾ ಉಭಡ ಆಲಾ ।
ಪ್ರಾಣೀ ಆಕ್ರಂದೋ ಲಾಗಲಾ । ದೈನ್ಯವಾಣಾ ॥೬॥
ತವ ತೀ ಅವಘೀ ಸಾವಧ ಜಾಲೀ । ಮ್ಹಣತೀ ಬಾಬಾ ಬಾಬಾ ಜೇಊ ಘಾಲೀ।
ಅನ್ನಾಲಾಗೀ ಮಿಡಕಲೀ । ಝುಡಾ ಘಾಲಿತೀ ॥೭॥
ಗಾಂಠೋಡೇ ಸೋಡೂನ ಪಾಹಾತೀ । ಹಾತಾ ಪಡಿಲೇ ತೇಚಿ ಖಾತೀ ।
ಕಾಹೀ ತೋಂಡೀ ಕಾಹೀ ಹಾತೀ । ಪ್ರಾಣ ಜಾತೀ ನಿಘೋನೀ ॥೮॥
ತಾಂತಡೀ ತಾಂತಡೀ ಜೇಊ ಘಾಲೀ। ತೋ ತೇ ಜೇವಿತಾ ಕಾಹೀ ಮೇಲೀ।
ಕಾಹೀ ಹೋತೀ ಧಾದಾವಲೀ । ತೇಹಿ ಮೇಲೀ ಅಜೀರ್ಣೇ ॥೯॥
ಐಸೀ ಬಹುತೇಕೇ ಮೇಲೀ । ಯೇಕ ದೋನೀ ಮುಲೇ ಉರಲೀ ।
ತೇಹೀ ದೈನ್ಯವಾಣೇ ಜಾಲೀ । ಆಪಲೇ ಮಾತೇವಾಚುನೀ ॥೧೦॥
ಐಸೇ ಆವರ್ಷಣ ಆಲೇ । ತೇಣೇ ಘರ ಚಿ ಬುಡಾಲೇ ।
ಪುಢೇ ದೇಸೀ ಸುಭಿಕ್ಷ ಜಾಲೇ ಆತಿಶಯೇಸೀ ॥೧೧॥
ಲೇಕುರಾ ನಾಹೀ ವಾಢವಿತೇ । ಅನ್ನ ಕರಾವೇ ಆಪುಲೇನ ಹಾತೇ ।
ಬಹು ತ್ರಾಸ ಘೇತಲಾ ಲಾಗೇ ಚಿತ್ತೇ । ಸ್ವಯಂ ಪಾಕಾಚಾ ॥೧೨॥
ಲೋಕೀ ಭರೀಸ ಘಾತಲೇ । ಪುನ್ಹಾ ಮಾಗುತೇ ಲಗ್ನ ಕೇಲೇ ।
ದ್ರವ್ಯ ಹೋತೇ ತೇ ವೇಚಲೇ । ಲಗ್ನಾಕಾರಣೇ ॥೧೩॥
ಪುನ್ಹಾ ವಿದೇಶಾಸೀ ಗೇಲಾ । ದ್ರವ್ಯ ಮೇಳಊನ ಆಲಾ ।
ತವ ಘರೀ ಕಳ್ಹೋ ಲಾಗಲಾ । ಸಾವತ್ರ ಪುತ್ರಾಸೀ ॥೧೪॥
ಸ್ತ್ರೀ ಜಾಲೀ ನ್ಹಾತೀಧುತೀ । ಪುತ್ರ ದೇಖೋ ನ ಸಕತೀ ।
ಭ್ರತಾರಾಚೀ ಗೇಲೀ ಶಕ್ತೀ । ವೃದ್ಧ ಜಾಲಾ ॥೧೫॥
ಸದಾ ಭಾಂಡಣ ಪುತ್ರಾಚೇ । ಕೋಣೀ ನಾಯಕತೀ ಕೋಣಾಚೇ ।
ವನಿತಾ ಅತಿ ಪ್ರೀತೀಚೇ । ಪ್ರೀತಿ ಪಾತ್ರ ॥೧೬॥
ಕಿಂತ ಬೈಸಲಾ ಮನಾ । ಯೇಕೇ ಠಾಈ ಪಡೇನಾ ।
ಮ್ಹಣೋನಿಯಾ ಪಾಂಚಾಜಣಾ । ಮೇಳವಿಲೇ ॥೧೭॥
ಪಾಂಚ ಜಣ ವಾಂಟೆ ಕರಿತೀ । ತೋ ತೇ ಪುತ್ರ ನಾಯೆಕತೀ।
ನಿವಾಡಾ ನವ್ಹೇಚಿ ಅಂತೀ । ಭಾಂಡಣ ಲಾಗಲೇ ॥೧೮॥
ಬಾಪಲೇಕಾ ಭಾಂಡಣ ಜಾಲೇ । ಲೇಕೀ ಬಾಪಾಸ ಮಾರಿಲೇ ।
ತವತೇ ಮಾತೇನೇ ಘೇತಲೇ । ಶಂಖತೀರ್ಥ ॥೧೯॥

ಈ ದೃಶ್ಯವನ್ನು ನೋಡಿ ಅವನಿಗೆ ಅತಿಶಯ ದುಃಖವಾಯಿತು. ಕಂಠ ಗದ್ಗದಿತವಾಗಿ ದುಃಖ ಉಮ್ಮಳಿಸಿತು. ಮತ್ತು ದೀನನಂತೆ ಅವನು ದೊಡ್ಡ ಧ್ವನಿ ತೆಗೆದು ಅಳಹತ್ತಿದನು. (೬) ಆಗ ಅಲ್ಲಿದ್ದ ಎಲ್ಲ ಮಕ್ಕಳು ಎಚ್ಚರಗೊಂಡು ನೋಡಿ "ಅಪ್ಪಾ, ಅಪ್ಪಾ, ಊಟಕ್ಕೆ ಹಾಕು" ಎಂದು ಒದರುತ್ತ ಅನ್ನಕ್ಕಾಗಿ ಹಸಿದು ಕಂಗಾಲಾದಂಥ ಕ್ಷುಧಾಪೀಡಿತರಾದ ಆ ಮಕ್ಕಳು ಅವನ ಮೈಮೇಲೆ ಹಾರಿ ಬಂದು ಮುಗಿಬಿದ್ದರು. (೭) ಮಕ್ಕಳು ತಂದೆಯು ತಂದ ಗಂಟನ್ನುಬಿಚ್ಚಿ ನೋಡಿದರು.ಕೈಗೆ ಸಿಕ್ಕಷ್ಟನ್ನು ಗಬಗಬ ತಿನ್ನಹತ್ತಿದರು.ಆದರೆಕೆಲವೊಂದು ಬಾಯಿಯಲ್ಲಿ ಕೆಲವೊಂದು-ಕೈಯಲ್ಲಿ ಇರುವಾಗಲೇ ಪ್ರಾಣ ಹೋಯಿತು(೮)ಅವಸರವಸರದಿಂದ ಊಟಕ್ಕೆ ಹಾಕುವಾಗ ಕೆಲವೊಂದು ಹುಡುಗರು ಊಟ ಮಾಡುತ್ತಿರುವಾಗಲೇ ಸತ್ತರು, ಕೆಲವರು ಅತಿಶಯ ಹಸಿದವರಿದ್ದರು. ಅವರು ಬಹಳಷ್ಟು ತಿಂದದ್ದರಿಂದ ಅಜೀರ್ಣವಾಗಿ ಸತ್ತರು. (೯) ಈ ರೀತಿಯಲ್ಲಿ ಮಕ್ಕಳು ಸತ್ತರು. ಒಂದೆರಡು ಉಳಿದವು. ಅವು ತಾಯಿ ಸತ್ತ ಚಿಂತೆಯಲ್ಲಿ ಬಹಳಷ್ಟು ಸೊರಗಿ ದೀನವದನರಾದರು.(೧೦) ಕೆಲವು ದಿವಸಗಳ ನಂತರ ಪರಿಸ್ಥಿತಿ ಸುಧಾರಿಸಿತು. ಜನರು ಆಗ್ರಹ ಮಾಡಿದ್ದರಿಂದ ಭಿಡೆಗೆ, ದಾಕ್ಷಿಣ್ಯಕ್ಕೆ ಬಿದ್ದು ಅವನು ಮೂರನೆಯ ಲಗ್ನ ಮಾಡಿಕೊಂಡನು. ವಯಸ್ಸಾದ ಮುದಿಗಂಡ ಹಾಗೂ ನವತಾರುಣ್ಯದ ಹೆಂಡತಿ ಮತ್ತು ಮನೆಯಲ್ಲಿಯ ಕಟಕಟಿಗೆ ಬೇಸತ್ತು ಕೊನೆಗೆ ಒಂದು ದಿನ ಮಕ್ಕಳು ತಂದೆಯನ್ನು ಹೊಡೆದರು. ದುಷ್ಕಾಳದ ಭೀಕರತೆ ಭಯಂಕರವಿದ್ದುದರಿಂದ ಅವನ ಮನೆಯೇ ಹಾಳಾಯಿತು. ಪೂರ್ತಿ ನಷ್ಟಕ್ಕೊಳಗಾಯಿತು. ಮುಂದೆ ಕೆಲವು ದಿವಸಗಳ ನಂತರ ದೇಶದಲ್ಲಿ ಅತ್ಯಂತ ಸುಭಿಕ್ಷದ ಕಾಲವು ಬಂದಿತು. (೧೧) ಮಕ್ಕಳಿಗೆ ಮಾಡಿ ಹಾಕುವವರು ಯಾರು ಇಲ್ಲ. ದಿನಾಲೂ ತಾನೇ ಅಡಿಗೆ ಮಾಡಬೇಕಾಗುತ್ತಿತ್ತು. ಈ ಅಡಿಗೆ ಮಾಡುವದು ಅವನಿಗೆ ಬೇಸರದ್ದು, ತ್ರಾಸಿನದೆನಿಸಹತ್ತಿತು. (೧೨) ಊರ ಜನರು ಬಹಳ ಆಗ್ರಹ ಮಾಡಿದರೆಂದು ಅವನು ಪುನಃ ಮೂರನೆಯ ಲಗ್ನ ಮಾಡಿಕೊಂಡನು. ಪತ್ತಿರವಿದ್ದ ಅಲ್ಪಸ್ವಲ್ಪ ಹಣ ಸಹ ಲಗ್ನಕ್ಕಾಗಿ ಖರ್ಚಾಗಿ ಹೋಯಿತು (೧३) ಈಗ ಅವನು ಪುನಃ ಹಣಬೇಕೆಂದು ಪರದೇಶಕ್ಕೆ ಹೋದನು. ಮತ್ತು ಹಣವನ್ನು ಸಂಗ್ರಹಿಸಿ ಊರಿಗೆ ತಿರುಗಿ ಬಂದನು. ಮನೆಯೊಳಗೆ ಬಂದಾಗ ಹೆಂಡತಿ ಹಾಗೂ ಮಲಮಕ್ಕಳಲ್ಲಿ ಜಗಳ ನಡೆದದ್ದು ನೋಡಿದನು.(೧೪) ಹೆಂಡತಿ ವಯಸ್ಸಿಗೆಬಂದವಳು. ಮನೆಯ ಯಜಮಾನಿಯೂ ಆಗಿದ್ದಳು. ಹುಡುಗರಿಗೆ ಇದನ್ನು ನೋಡಲಾಗಲಿಲ್ಲ. ಅವರು ಇವಳ ಕೂಡ ದ್ವೇಷ ಮಾಡಹತ್ತಿದರು. ತಂದೆ ಮುದುಕನಾಗಿ ಶಕ್ತಿಹೀನನಾಗಿದ್ದನು. (೧೫) ಮನೆಯಲ್ಲಿ ಸದಾಕಾಲ ಹುಡುಗರ ಕೂಡ ಜಗಳವಾಗಹತ್ತಿತು. ಒಬ್ಬರ ಮಾತನ್ನು ಒಬ್ಬರು ಕೇಳದಾದರು. ಹೆಂಡತಿಯ ಮೇಲೆ ಮುದುಕನ ಪ್ರೇಮ ಅತಿಹೆಚ್ಚಿತು. (೧೬) ಎರಡೂ ಕಡೆಯವರ ಮನಸ್ಸಿನಲ್ಲಿ (ತ್ರಾಸು ಬೇಸರದಿಂದ) ಸಂಶಯದ ವಿಷ ಬೀಜ ಹುಟ್ಟಿ ಅವರಲ್ಲಿ ಕೂಡಿ ನಡೆಯದಂಥ ಭಿನ್ನಾಭಿಪ್ರಾಯ ತಲೆಯೆತ್ತಿತು. ಯಾವುದರಲ್ಲಿಯೂ ಒಮ್ಮತಆಗದಾಯಿತು. ಆಗ ಅವನು ಐದು ಜನ ಪಂಚರನ್ನು ಕೂಡಿಸಿದನು. (೧೭) ಪಂಚರು ಪಾಲ, ವಾಟಣಿ ಮಾಡಿದರು. ಮಕ್ಕಳಿಗೆ ಸರಿ ಬರಲಿಲ್ಲ. ವಾಟಣಿಯಾಗುವದು ನಿಂತಿತು. ಕೊನೆಗೆ ಪುನಃ ಜಗಳಕ್ಕೆ ಪ್ರಾರಂಭವಾಯಿತು. (೧೮) ತಂದೆ ಮಕ್ಕಳು ಬಡಿದಾಡಿದರು. ಅವರಲ್ಲಿ ತರುಣ ಮಕ್ಕಳು ಮುಪ್ಪಿನ ತಂದೆಯನ್ನು ಹೊಡೆದರು. ಆಗ ಮಲತಾಯಿ ಶಂಖವಾದ್ಯ ಮಾಡಹತ್ತಿದಳು. (೧೯)

ಏಕೋನಿ ಮಿಳಾಲೆ ಲೋಕ । ಉಭೇ ಪಾಹಾತೀ ಕೌತುಕ।
ಮ್ಹಣತೀ ಬಾಪಾಸ ಲೇಕ । ಕಾಮಾ ಆಲೇ ॥೨೦॥
ಜ್ಯಾ ಕಾರಣೇ ಕೇಲೆ ನವಸ । ಜ್ಯಾ ಕಾರಣೇ ಕೇಲೆ ಸಾಯಾಸ ।
ತೇ ಪುತ್ರ ಪಿತಯಾಸ । ಮಾರಿತೀ ಪಾಹಾ ॥೨೧॥
ಏಸೀ ಆಲೀ ಪಾಪಕಳೀ । ಆಶ್ಚರ್ಯ ಮಾನಿಲೇ ಸಕಳೀ ।
ಉಭೆ ತೋಡಿತೀ ಕಳೀ । ನಗರಲೋಕ ॥೨೨॥
ಪುಢೆ ಬೈಸೋನ ಪಾಂಚ ಜಣ । ವಾಟೆ ಕೇಲೇ ತತ್ಸಮಾನ ।
ಬಾಪಲೇಕಾಂಚೇ ಭಾಂಡಣ । ತೋಡಿಲೇ ತೇಹೀ ॥೨೩॥
ಬಾಪಾಸ ವೇಗಳೇ ಘಾತಲೇ । ಕೋಪಟೆ ಬಾಂಧೋನ ದಿಧಲೇ ।
ಮನ ಕಾಂತೇಚೇ ಲಾಗಲೇ । ಸ್ವಾರ್ಥಬುದ್ಧೀ ॥೨೪॥
ಕಾಂತಾ ತರುಣ ಪುರುಷ ವೃದ್ಧ । ದೋಘಾಸ ಪಡಿಲಾ ಸಂಮಂಧ ।
ಖೇದ ಸಾಂಡೂನ ಆನಂದ । ಮಾನಿಲಾ ತೇಹೀ ॥೨೫॥
ಸ್ತ್ರೀ ಸಾಂಪಡಲೀ ಸುಂದರ । ಗುಣವಂತ ಆಣೀ ಚತುರ ।
ಮ್ಹಣೇ ಮಾಝೋ ಭಾಗ್ಯಥೋರ। ವೃದ್ಧಪಣೀ ॥೨೬॥
ಏಸಾ ಆನಂದ ಮಾನಿಲಾ । ದುಃಖ ಸರ್ವಹೀ ವಿಸರಲಾ ।
ತವ ತೋ ಗಲ್ಬಲಾ ಜಾಲಾ । ಪರಚಕ್ರ ಆಲೇ ॥೨೭॥
ಅಕಸ್ಮಾತ ಧಾಡೀ ಆಲೀ । ಕಾಂತಾ ಬಂದೀ ಧರೂನ ನೇಲೀ ।
ಮಸ್ತಭಾವಹಿ ಗೇಲೀ । ಪ್ರಾಣೀಯಾಚೀ ॥೨೮॥
ತೇಣೇ ದುಃಖ ಜಾಲೇ ಭಾರೀ । ದೀರ್ಘ ಸ್ವರೇ ರುದನ ಕರೀ ।
ಮನೀ ಆಠವೇ ಸುಂದರೀ । ಗುಣವಂತ ॥೨೯॥
ತವ ತಿಚೀ ವಾರ್ತಾ ಆಲೀ । ತುಮಚೀ ಕಾಂತಾ ಭ್ರಷ್ಟಲೀ ।
ಏಕೋನಿಯಾ ಆಂಗ ಘಾಲೀ । ಪೃಥ್ವೀವರೀ ॥೩೦॥
ಸವ್ಯ ಅಪಸವ್ಯ ಲೋಳೇ । ಜಳೇ ಪಾಝರತೀ ಡೋಳೇ ।
ಆಠವಿತಾ ಚಿತ್ತ ಪೋಳೇ । ದುಃಖಾನಳೇ ॥೩೧॥
ದ್ರವ್ಯ ಹೋತೇ ಮೇಳವಿಲೇ । ತೇಹೀ ಲಗ್ನಾಸ ವೇಚಲೇ ।
ಕಾಂತೇಸಿ ಹೀ ಧರೂನ ನೇಲೇ । ದುರಾಚಾರೀ ॥೩೨॥
ಮಜ ಹೀ ವೃದ್ಧಾಪ್ಯ ಆಲೇ । ಲೇಕೀ ವೇಗಳೇ ಘಾತಲೇ ।
ಅಹಾ ದೇವಾ ವೋಢವಲೇ। ಅದೃಷ್ಟ ಮಾಝೋ ॥೩೩॥

ಏಕೋನಿ ಮಿಳಾಲೆ ಲೋಕ । ಉಭೇ ಪಾಹಾತೀ ಕೌತುಕ।
ಮ್ಹಣತೀ ಬಾಪಾಸ ಲೇಕ । ಕಾಮಾ ಆಲೇ ॥೨೦॥

ಜ್ಯಾ ಕಾರಣೇ ಕೇಲೆ ನವಸ । ಜ್ಯಾ ಕಾರಣೇ ಕೇಲೆ ಸಾಯಾಸ ।
ತೇ ಪುತ್ರ ಪಿತಯಾಸ । ಮಾರಿತೀ ಪಾಹಾ ॥೨೧॥

ಏಸೀ ಆಲೀ ಪಾಪಕಳೀ । ಆಶ್ಚರ್ಯ ಮಾನಿಲೇ ಸಕಳೀ ।
ಉಭೆ ತೋಡಿತೀ ಕಳೀ । ನಗರಲೋಕ ॥೨೨॥

ಪುಢೆ ಬೈಸೋನ ಪಾಂಚ ಜಣ । ವಾಟೆ ಕೇಲೇ ತತ್ಸಮಾನ ।
ಬಾಪಲೇಕಾಂಚೇ ಭಾಂಡಣ । ತೋಡಿಲೇ ತೇಹೀ ॥೨೩॥

ಬಾಪಾಸ ವೇಗಳೇ ಘಾತಲೇ । ಕೋಪಟೆ ಬಾಂಧೋನ ದಿಧಲೇ ।
ಮನ ಕಾಂತೇಚೇ ಲಾಗಲೇ । ಸ್ವಾರ್ಥಬುದ್ಧೀ ॥೨೪॥

ಕಾಂತಾ ತರುಣ ಪುರುಷ ವೃದ್ಧ । ದೋಘಾಸ ಪಡಿಲಾ ಸಂಮಂಧ ।
ಖೇದ ಸಾಂಡೂನ ಆನಂದ । ಮಾನಿಲಾ ತೇಹೀ ॥೨೫॥

ಸ್ತ್ರೀ ಸಾಂಪಡಲೀ ಸುಂದರ । ಗುಣವಂತ ಆಣೀ ಚತುರ ।
ಮ್ಹಣೇ ಮಾಝೇ ಭಾಗ್ಯಥೋರ। ವೃದ್ಧಪಣೀ ॥೨೬॥

ಏಸಾ ಆನಂದ ಮಾನಿಲಾ । ದುಃಖ ಸರ್ವಹೀ ವಿಸರಲಾ ।
ತವ ತೋ ಗಲ್ಬಲಾ ಜಾಲಾ । ಪರಚಕ್ರ ಆಲೇ ॥೨೭॥

ಅಕಸ್ಮಾತ ಧಾಡೀ ಆಲೀ । ಕಾಂತಾ ಬಂದೀ ಧರೂನ ನೇಲೀ ।
ಪಸ್ತಭಾವಹಿ ಗೇಲೀ । ಪ್ರಾಣೀಯಾಚೀ ॥೨೮॥

ತೇಣೇ ದುಃಖ ಜಾಲೇ ಭಾರೀ । ದೀರ್ಘ ಸ್ವರೇ ರುದನ ಕರೀ ।
ಮನೀ ಆಠವೇ ಸುಂದರೀ । ಗುಣವಂತ ॥೨೯॥

ತವ ತಿಚೀ ವಾರ್ತಾ ಆಲೀ । ತುಮಚೀ ಕಾಂತಾ ಭ್ರಷ್ಟಲೀ ।
ಏಕೋನಿಯಾ ಆಂಗ ಘಾಲೀ । ಪೃಥ್ವೀವರೀ ॥೩೦॥

ಸವ್ಯ ಅಪಸವ್ಯ ಲೋಳೇ । ಜಳೇ ಪಾಝುರತೀ ಡೋಳೇ ।
ಆಠವಿತಾ ಚಿತ್ತ ಪೋಳೇ । ದುಃಖಾನಳೇ ॥೩೧॥

ದ್ರವ್ಯ ಹೋತೇ ಮೇಳವಿಲೇ । ತೇಹೀ ಲಗ್ನಾಸ ವೇಚಲೇ ।
ಕಾಂತೇಸಿ ಹೀ ಧರೂನ ನೇಲೇ । ದುರಾಚಾರೀ ॥೩೨॥

ಮಜ ಹೀ ವೃದ್ಧಾಪ್ಯ ಆಲೇ । ಲೇಕೀ ವೇಗಳೇ ಘಾತಲೇ ।
ಅಹಾ ದೇವಾ ವೋಢವಲೇ। ಅದೃಷ್ಟ ಮಾಝೇ ॥೩೩॥

ಈ ಸದ್ದು ಕೇಳಿ ಬಹಳ ಜನ ಬಂದು ಕೂಡಿದರು. ನಿಂತು ಮೋಜು ನೋಡಿದರು. ಮತ್ತು ಅವರು "ಮಕ್ಕಳು ಹುಟ್ಟಿ ತಂದೆಯ ಉಪಯೋಗಕ್ಕೆ ಸರಿಯಾಗಿ ಬಂದರು. ಮಕ್ಕಳು ಹುಟ್ಟಿದ್ದು ಸಾರ್ಥಕವಾಯಿತು ಎಂದರು. (೨೦) ಇದರ ಸಲುವಾಗಿ ಹರಿಕೆ, ಉಪವಾಸ, ವ್ರತ ಮಾಡಿ ಕಷ್ಟಪಟ್ಟರು. ಈಗ ದೊಡ್ಡವರಾಗಿ ತಂದೆಯನ್ನೇ ಹೊಡೆಯಹತ್ತಿದರು. ಕಲಿಕಾಲದ ಮಹಿಮೆ ನೋಡಿರಿ.(೨೧)ಇಂಥ ಪಾಪ ಮೂಲದ ಜಗಳ ನೋಡಿ ಎಲ್ಲರೂ ಆಶ್ಚರ್ಯಪಟ್ಟರು. ಆಮೇಲೆ ಅಲ್ಲಿ ಕೂಡಿದ ಜನರು ಆ ಜಗಳವನ್ನು ಬಿಡಿಸಿದರು. (೨೨) ನಂತರ ಐದು ಜನ ಪಂಚರು ಅವರಲ್ಲಿ ಕುಳಿತು ಸರಿಯಾಗಿ ಹಿಸೆ ಮಾಡಿಕೊಟ್ಟರು. ಈ ಪ್ರಕಾರ ಹಿಸೆ ಮಾಡಿಕೊಟ್ಟು ತಂದೆ ಮಕ್ಕಳ ಜಗಳವನ್ನು ಒಮ್ಮೆ ಪೂರ್ಣ ಬಗೆಹರಿಸಿ ಬಿಟ್ಟರು. (೨೩) ತಂದೆ ತನ್ನ ತರುಣ ಪತ್ನಿಯೊಂದಿಗೆ ಬೇರೆ ಇರಹತ್ತಿದನು. ಸ್ವಲ್ಪ ದಿನದಲ್ಲಿ ಪರರಾಜ್ಯ (ಪರಚಕ್ರ)ದ ದಾಳಿ ಆಗಿ ಶತ್ರುಗಳು ಅವನ ಹೆಂಡತಿಯನ್ನು ಹಿಡಿದುಕೊಂಡು ಹೋದರು. ಅವಳು ಮುಂದೆ ಭ್ರಷ್ಟಳಾದಳು, ತಂದೆ ಬೇರೆ ಆದನು. ಅವನಿಗೆ ಇರಲಿಕ್ಕೆ ಒಂದು ಝೋಪಡಿಯನ್ನು ಹಾಕಿಕೊಟ್ಟರು. ಇಷ್ಟರಲ್ಲಿ ಆ ಹೆಂಡತಿಯ ಮನಸ್ಸು ಸ್ವಾರ್ಥಬುದ್ಧಿಯಿಂದ ಕೂಡಿ ಸ್ವಾರ್ಥಿಯಾದಳು. (೨೪) ತರುಣ ಹೆಂಡತಿ ಮುದುಕ ಗಂಡ ಮನೆಯಲ್ಲಿ ಈ ಇಬ್ಬರದೇ ಸಂಬಂಧ. ಅಲ್ಲಿ ಮೂರನೆಯವರು ಯಾರೂ ಇಲ್ಲ. ಇಂಥದರಲ್ಲಿ ಸ್ವಲ್ಪವೂ ಸಹ ಖೇದ ಪಡದೆ ಇಬ್ಬರೂ ಆನಂದದಿಂದ ಇರಹತ್ತಿದರು. (೨೫) ಹೊಸ ಹೆಂಡತಿ ಬಹು ಸುಂದರಿ, ಸದ್ಗುಣಿ ಮತ್ತು ಚತುರಳಿದ್ದಳು. ನನ್ನ ಭಾಗ್ಯ ದೊಡ್ಡದೆಂದೇ ಈ ಮುದಿತನದಲ್ಲಿ ಇಂಥ ಹೆಂಡತಿ ನನಗೆ ದೊರೆತಳು. (೨೬) ಹೀಗೆ ಆನಂದದಿಂದ ಅವನು ಉಬ್ಬಿದನು. ಹಿಂದಿನ ಎಲ್ಲ ದುಃಖ ಕಷ್ಟ ಮರೆತನು. ಇಷ್ಟರಲ್ಲಿ ಸುತ್ತೂ ಕಡೆಗೂ ಬೊಬ್ಬಾಟವೆದ್ದಿತು. ಪರರಾಜ್ಯದ ಸೈನ್ಯ (ಶತ್ರು ಸೈನ್ಯ)ದ ಹಲ್ಲೆ ಪ್ರಾರಂಭವಾಗಿದೆ. (೨೭) ಒಮ್ಮೆಲೆ ಶತ್ರುವಿನ ಮುತ್ತಿಗೆ ಬಂದು ಅವರು ಇವನ ತರುಣ ಹೆಂಡತಿಯನ್ನು ಕೈಸೆರೆ ಮಾಡಿಕೊಂಡು ಹೋದರು. ಮತ್ತು ಮನೆಯಲ್ಲಿಯ ಎಲ್ಲ ವಸ್ತ್ರ ಒಡವೆ ವಗೈರೆ ಲೂಟಿ ಮಾಡಿ ಒಯ್ದರು. (೨೮) ಇದರಿಂದಾಗಿ ಅವನಿಗೆ ಅತಿಶಯ ದುಃಖವಾಯಿತು. ಅವನು ದೊಡ್ಡ ಧ್ವನಿಯಿಂದ ಅಳಹತ್ತಿದನು. ಅವನ ಸುಂದರ ಮತ್ತು ಗುಣವಂತಿಯಾದ ಹೆಂಡತಿಯ ನೆನಪು ಸದಾ ಬರಹತ್ತಿತು. (೨೯) ಅಷ್ಟರಲ್ಲಿ "ನಿನ್ನ ಹೆಂಡತಿಯನ್ನು ಭ್ರಷ್ಟಗೊಳಿಸಿದರು" ಎಂಬ ಸುದ್ದಿ ಬಂದಿತು. ಇದನ್ನು ಕೇಳಿ ಅವನು ಭೂಮಿಯ ಮೇಲೆ ಕುಸಿದು ಬಿದ್ದನು. (೩೦) ಎಡ ಮತ್ತು ಬಲ ಮಗ್ಗಲಾಗುತ್ತ ನೆಲದ ಮೇಲೆ ಗಡಬಡ ಉರುಳಾಡಹತ್ತಿದನು. ಅವನ ಕಣ್ಣಿನಿಂದ ನೀರು ಹರಿಯಹತ್ತಿತು. ಹೆಂಡತಿಯ ನೆನಪಾಯಿತೆಂದರೆ ದುಃಖಾಗ್ನಿಯಿಂದ ಅವನ ಮನಸ್ಸು ಕೇವಲ ಹುರುಪಳಿಸಿದಂತಾಗುತ್ತಿತ್ತು. (೩೧) ಗಳಿಸಿದ ಹಣವನ್ನು ಲಗ್ನಕ್ಕಾಗಿ ಖರ್ಚು ಮಾಡಿಬಿಟ್ಟನು. ಮತ್ತು ದುಷ್ಟರು ಕೊನೆಯಲ್ಲಿ ಹೆಂಡತಿಯನ್ನೂ ಹಿಡಿದುಕೊಂಡು ಹೋದರು. (೩೨) ಈಗ ಅವನಿಗೆ ದೇವರ ನೆನಪು ಬರಹತ್ತಿತು, ಅವನ ಹೊರತು ನನ್ನವರು ಹಿತಚಿಂತಕರು ಯಾರೂ ಇಲ್ಲವೆಂಬುದರ ಅರಿವು ಉಂಟಾಯಿತು. ಅವನು ಅನ್ನಹತ್ತಿದನು. "ನನಗೆ ಮುಪ್ಪು ಬಂದಿತು. ಇದರಿಂದ ಶರೀರವು ಕ್ಷೀಣವಾಗಿ ಬಡಕಲಾದೆನು, ಮಕ್ಕಳು ನನ್ನನ್ನು ಹೊರಗೆ ಹಾಕಿದರು. ಅಯ್ಯೋ ದೇವರೆ ಇದೆಂಥ ದುರ್ದೈವ ನನ್ನ ಮೇಲೆ ಎರಗಿತು. (೩೩)

ಜೇ ಜನ್ಮೋನ ಪೋಸಿಲೀ । ತೇಚಿ ಫಿರೋನ ಪಡಿಲೀ ।
ಅಂತೀ ವಿಷಮ ವೇಳ ಆಲೀ । ಪ್ರಾಣೀಯಾಸೀ ॥೪೮॥
ಗೇಲೇ ತಾರುಣ್ಯ ಗೇಲೇ ಬಳ । ಗೇಲೇ ಸಂಸಾರೀಚೇ ಸಳ ।
ವಾತಾಹಾತ ಜಾಲೇ ಸಕಳ । ಶರೀರ ಆಣೀ ಸಂಪತ್ತೀ ॥೪೯॥
ಜನ್ಮವರೀ ಸ್ವಾರ್ಥ ಕೇಲಾ । ತಿತುಕಾ ಹಿ ವ್ಯರ್ಥ ಗೇಲಾ।
ಕೈಸಾ ವಿಷಮ ಕಾಳ ಆಲಾ । ಅಂತಕಾಳೀ ॥೫೦॥
ಸುಖಾಕಾರಣೇ ಝುರಲಾ । ಸೇಖೀ ದುಃಖೇ ಕಷ್ಟೀ ಜಾಲಾ ।
ಪುಢೇ ಮಾಗುತಾ ಧೋಕಾ ಆಲಾ । ಯೆಮಯಾತನೇಚಾ ॥೫೧॥
ಜನ್ಮ ಅವಘಾ ದುಃಖಮೂಳ । ಲಾಗತೀ ದುಃಖಾಚೇ ಇಂಗಳ।
ಮ್ಹಣೋನಿಯಾ ತತ್ಕಾಳ । ಸ್ವಹಿತ ಕರಾವೇ ॥೫೨॥
ಅಸೋ ಐಸೇ ವೃದ್ಧಪಣ । ಸಕಳಾಸ ಆಹೇ ಧಾರುಣ ।
ಮ್ಹಣೋನಿಯಾ ಶರಣ । ಭಗವಂತಾಸ ಜಾವೇ ॥೫೩॥
ಪುಢೇ ವೃದ್ಧೀಸ ತತ್ವತಾ । ಗರ್ಭೀ ಪ್ರಸ್ತಾವಾ ಹೋತಾ ।
ತೋ ಚಿ ಆಲಾ ಮಾಗುತಾ । ಅಂತಕಾಳೀ ॥೫೪॥
ಮ್ಹಣೋನೀ ಮಾಗುತೇ ಜನ್ಮಾಂತರ । ಪ್ರಾಪ್ತ ಮಾತೇಚೇ ಉದರ ।
ಸಂಸಾರ ಹಾ ಅತಿದುಸ್ತರ । ತೋಚಿ ಠಾಕೂನ ಆಲಾ ॥೫೫॥
ಭಗವದ್ಭಜನಾವಾಂಚುನೀ । ಚುಕೇನಾ ಹೇ ಜನ್ಮಯೋನೀ ।
ತಾಪತ್ರಯಾಚೀ ಜಾಚಣೀ । ಸಾಂಗಿಜೆಲ ಪುಢೇ ॥೫೬॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
‘‘ಸ್ವಗುಣ ಪರೀಕ್ಷಾ’’ ನಾಮ ಸಮಾಸ ಪಂಚಮ ಸಮಾಪ್ತ ॥

ಯಾರನ್ನು ಹುಟ್ಟಿದಂದಿನಿಂದ ಸಲುಹಿ ದೊಡ್ಡವರನ್ನಾಗಿ ಮಾಡಿದೆನೋ ಅವನೇ ತಿರುಗಿ ಬೀಳುತ್ತಾನೆ. ಹೇಳಿದಂತೆ ಕೇಳುವದಿಲ್ಲ. ವೈರತ್ವ ಮಾಡುತ್ತಾನೆ. ಕೊನೆಯಲ್ಲಿ ಮನುಷ್ಯನಿಗೆ ಕಠಿಣ ಪ್ರಸಂಗ ಬರುತ್ತದೆ. [೪೮] ಆಯುಷ್ಯವಿಡೀ ಸುಖದ ಸಲುವಾಗಿ ಪ್ರಯಾಸ [ಧಡಪಡ] ಪಟ್ಟರೂ ಕೊನೆಗೆ ದುಃಖವೇ ಪದರಿನಲ್ಲಿ ಬೀಳುತ್ತದೆ. ಇದು ಜೀವನದ ಒಂದು ಪ್ರಕಾರವೇ ಆಗಿದೆ. ಜನ್ಮವಿಡೀ ಮಾಡಿದ ಸ್ವಾರ್ಥವು ವ್ಯರ್ಥವಾಗುವದು. ಸಂಸಾರ ಬಹಳ ಕಠಿಣವಿದೆ. ಆದುದರಿಂದ ಭಗವಂಥನಿಗೆ ಶರಣು ಹೋಗಬೇಕು. ತಾರುಣ್ಯ ಹೋಯಿತು. ಶಕ್ತಿಹೋಯಿತು. ಸಂಸಾರ ಮಾಡಬೇಕೆಂಬ ಹೌಸಿನ ಅಬ್ಬರ ಹೋಯಿತು. ಶರೀರ ಹಾಗೂ ಸಂಪತ್ತಿನ ನಾಶವಾಯಿತು. [೪೯] ಜನ್ಮವಿಡೀ ಸ್ವಾರ್ಥ ಸಾಧಿಸುವ ಹಾದಿಯನ್ನೇ ಹಿಡಿದೆನು. ಆದರೆ ಅದೆಲ್ಲ ಪೂರ್ಣ ವ್ಯರ್ಥವಾಯಿತು. ಕೊನೆಗೆ ಸಾಯುವ ಸಮಯದಲ್ಲಿ ಕಠಿಣ ಪ್ರಸಂಗ ಬಂದಿತು. [೫೦] ಜನ್ಮವಿಡೀ ಸುಖದ ಸಲುವಾಗಿ ಶ್ರಮಪಟ್ಟೆನು. ಆದರೆ ಕೊನೆಗೆ ದುಃಖದಿಂದ ಕಷ್ಟವನ್ನೇ ಅನುಭವಿಸಬೇಕಾಯಿತು. ಮತ್ತು ಮರಣದ ನಂತರ ಯಮ ಯಾತನೆಯನ್ನು ಭೋಗಿಸುವ ಅಂಜಿಕೆಯಂತೂ ಇದ್ದೇ ಇದೆ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ. [೫೧] **ತಾತ್ಪರ್ಯ:–** ಜನ್ಮ ಇದೇ ಎಲ್ಲ ದುಃಖಕ್ಕೂ ಮೂಲ ಕಾರಣವಾಗಿದೆ. ಮನುಷ್ಯ ಪ್ರಾಣಿ ಜನ್ಮ ಹೊಂದಿದ ಕೂಡಲೇ ಅವನಿಗೆ ದುಃಖದ ಶಾಖ ಝಳ (ಕಾವು) ಬಡಿದೇ ತೀರುತ್ತದೆ. ಆದುದರಿಂದ ಶಕ್ಯವಿದ್ದಷ್ಟು ಬೇಗ ಮನುಷ್ಯನು ಸ್ವತಃದ ಕಲ್ಯಾಣ ಮಾಡಿಕೊಳ್ಳಬೇಕು. [೫೨] ಇರಲಿ, ಈ ರೀತಿಯಲ್ಲಿರುವ ಈ ಭಯಂಕರ ಮುಪ್ಪು ವೃದ್ಧಾಪ್ಯತನ ಎಲ್ಲರಿಗೂ ಬರಬಹುದು. ಆದುದರಿಂದ ಪ್ರತಿಯೊಬ್ಬರೂ ಭಗವಂತನಿಗೆ ಶರಣು ಹೋಗಬೇಕು. [೫೩] ಗರ್ಭಾವಸ್ಥೆಯಲ್ಲಿ ಜೀವಕ್ಕೆ ಆಗ ತ್ರಾಸು ಆಗಿ ಆಗುವ ಪಶ್ಚಾತ್ತಾಪವೇ ಪುನಃ ಅವನ ವೃದ್ಧಾಪ್ಯ ಕಾಲದಲ್ಲಿಯೂ ಪುನಃ ಆಗುತ್ತದೆ. ಆದುದರಿಂದ ಅಂತ್ಯಕಾಲದಲ್ಲಿ ಜೀವಕ್ಕೆ ಪುನಃ ಪಶ್ಚಾತ್ತಾಪವಾಗುತ್ತದೆ. [೫೪] ಈ ಕಾರಣದಿಂದಲೇ ಜೀವನಿಗೆ ಪುನಃ ಜನ್ಮ ಹೊಂದಬೇಕಾಗುತ್ತದೆ. ತಾಯಿಯ ಉದರದಲ್ಲಿ ಕೆಲವು ಕಾಲ ಇರಬೇಕಾಗುವದು. ಉದ್ಧಾರ ಹೊಂದುವದಕ್ಕೆ ಅತ್ಯಂತ ಕಠಿಣವಾದ ಈ ಸಂಸಾರವು ಪುನಃ ಅವನ ಪಾಲಿಗೆ ಬರುತ್ತದೆ. [೫೫] ಭಗವಂತನ ಭಕ್ತಿಯ ಹೊರತು ಜನ್ಮ ಮರಣದ ಚಕ್ರ ಎಡತಾಕ ಪಟ್ಟಿಯು [ಗತಿ] ತಪ್ಪುವಂತಿಲ್ಲ. ಇನ್ನು ಮುಂದಿನ ಸಮಾಸದಲ್ಲಿ ತ್ರಿವಿಧ(ಮೂರು ಪ್ರಕಾರದ) ತಾಪದ ಕಷ್ಟದ ಬಗ್ಗೆ ನಾನು ಹೇಳುವವನಿರುವೆನು. [೫೬]

ಇತಿ ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿ ಮೂರನೆಯ ದಶಕದ
"ಸ್ವಗುಣ ಪರೀಕ್ಷಾ" ಎಂಬ ಐದನೆಯ ಸಮಾಸವು ಮುಗಿದುದು.

● ●

## ಆಧ್ಯಾತ್ಮಿಕ ತಾಪ ನಿರೂಪಣ ಷಷ್ಟಮ ಸಮಾಸ

॥ಶ್ರೀರಾಮ॥ ತಾಪತ್ರಯಾಚೇ ಲಕ್ಷ್ಮಣ । ಆತಾ ಸಾಂಗಿಜೇಲ ನಿರೂಪಣ ।
ಶ್ರೋತೀ ಕರಾವೇ ಶ್ರವಣ। ಯೇಕಾಗ್ರ ಹೋಊನೀ ॥೧॥
ಜೋ ತಾಪತ್ರೈ ಪೋಳಲಾ । ತೋ ಸಂತಸಂಗೇ ನಿವಾಲಾ ।
ಆರ್ತಭೂತ ತೋಷಲಾ । ಪದಾರ್ಥ ಜೇವಿ ॥೨॥
ಕ್ಷುಧಾಕ್ರಾಂತಾಸ ಮಿಳೇ ಅನ್ನ । ತೃಷಾಕ್ರಾಂತಾಸ ಜೀವನ ।
ಬಂದೀ ಪಡಿಲ್ಯಾಚೇ ಬಂಧನ । ತೋಡಿತಾ ಸುಖ ॥೩॥
ಮಹಾಪುರೇ ಜಾಜಾವಲಾ । ತೋ ಪೈಲತೀರಾಸ ನೇಲಾ ।
ಕಾ ತೋ ಸ್ವಪ್ನಿಂಚಾ ಚೇಇಲಾ। ಸ್ವಪ್ನದುಃಖೀ ॥೪॥
ಕೋಣೇ ಯೆಕಾಸೀ ಮರಣ । ಯೇತಾ ದಿಲೇ ಜೀವದಾನ ।
ಸಂಕಟಾಸ ನಿವಾರಣ । ತೋಡಿತಾ ಸುಖ ॥೫॥

## ದಶಕ ೩ ಸಮಾಸ ೬. ಆಧ್ಯಾತ್ಮಿಕ ತಾಪ (ನುಡಿ ೫೬)

ಮಾನವ ಜೀವನದಲ್ಲಿ ದುಃಖವಿರುವದೆಂಬ ಮಾತನ್ನು ಯಾರೂ ಅಲ್ಲಗಳೆಯಲಾರರೆಂಬುದರಲ್ಲಿ ಸಂಶಯವೇ ಇಲ್ಲ. ಈ ದುಃಖವಲ್ಲಿ ಅಧಿಭೌತಿಕ ಆಧ್ಯಾತ್ಮಿಕ ಮತ್ತು ಅಧಿ ದೈವಿಕ ಹೀಗೆ ಮೂರು ಭೇದಗಳ ಮೂಲ ಕಲ್ಪನೆಯು ಸಾಂಖ್ಯರದು. ಮುಂದೆ ವೇದಾಂತವು ಅದನ್ನು ತನ್ನಲ್ಲಿ ತೆಗೆದುಕೊಂಡಿತು. ಹೊರ ಜಗತ್ತಿನೊಳಗಿನ ವಸ್ತು (ಪದಾರ್ಥ)ವು ಮನುಷ್ಯನ ಇಂದ್ರಿಯಗಳ ಸಂಯೋಗ (ಸಂಬಂಧ)ದಿಂದ ಯಾವ ದುಃಖವನ್ನು ಅನುಭವಿಸಬೇಕಾಗುವದು. ಅಧಿಭೌತಿಕ ದುಃಖವೆನಿಸುವದು. ಬಾಹ್ಯ ಸಂಯೋಗದ ಹೊರತಾಗಿ ಉದ್ಭವಿಸುವ ದುಃಖವು ಆಧ್ಯಾತ್ಮಿಕವೆಂದು ಅನ್ನುವರು. ಮತ್ತು ದೇವತಾ ಕೋಪದಿಂದ ಭೋಗಿಸಬೇಕಾದ ದುಃಖಕ್ಕೆ ಅಧಿದೈವಿಕವೆಂದು ಅನ್ನುವರು. ಇದರಲ್ಲಿಯ ಮರ್ಮವೇನೆಂದರೆ. ಪಿಂಡ, ದೇಹ ಮತ್ತು ಪರಿಸ್ಥಿತಿ (ಸುತ್ತು ಮುತ್ತಲಿನ ಸ್ಥಿತಿ) ವಾತಾವರಣ ಇವುಗಳ ಪರಸ್ಪರ ಕ್ರಿಯಾ ಪ್ರತಿಕ್ರಿಯಾಗಳಿಂದ ಜೀವನ ನಡೆಯುವದು. ತಾಯಿಯ ಗರ್ಭದಲ್ಲಿ ಬಂದಾಗಿನಿಂದಲೇ ಜೀವಕ್ಕೆ ಪರಿಸ್ಥಿತಿಯ ಸಂಬಂಧ ಬರುತ್ತದೆ. ಅದು ದೇಹ ಬಿಡುವ (ಮರಣ ಪರ್ಯಂತರ)ವರೆಗೆ ಇರುವದು. ಪಿಂಡ, ದೇಹ ಮತ್ತು ಪರಿಸ್ಥಿತಿ ಇವುಗಳ ಜಗ್ಗಾಟ (ಎಳೆದಾಟ)ದಲ್ಲಿ ಪಿಂಡದ ಮೇಲೆ ಯಾವ ಪ್ರತಿಕೂಲ ಆಘಾತಗಳಾಗುವವೋ ಅವಕ್ಕೆ ಸಂತ ಶರಣರು ತಾಪ, ವ್ಯಥೆ, ಕಷ್ಟ ಸಂಕಟ ಎಂದು ಹೆಸರಿಸಿದರು. ಮನುಷ್ಯನಿಗೆ ಅವನ ಜೀವನದಲ್ಲಿ ಸ್ವತಃದ ದೇಹದಿಂದ ತಾಪ, ವ್ಯಥೆ ಕಷ್ಟವಾಗುವದು. ಹಾಗೂ ಮನಸ್ಸಿನಿಂದ ತಾಪವಾಗುವದು. ಮತ್ತು ಇತರ ಪ್ರಾಣಿಗಳಿಂದ ಹಾಗೂ ಮನುಷ್ಯರಿಂದ ತಾಪವಾಗುವದು. ಹವಾ ನೀರು, ವಿದ್ಯುತ್ತು, ಅಗ್ನಿ ಈ ನೈಸರ್ಗಿಕ ಶಕ್ತಿಗಳಿಂದ ತಾಪವಾಗುವದು. ಇವುಗಳಿಗೆಲ್ಲ ತಾಪತ್ರಯವೆಂದು ಹೆಸರು. ಜನ್ಮ ತಳೆದ ಮನುಷ್ಯರೆಲ್ಲ ಈ ತಾಪತ್ರಯದ ಹಿಡಿತದಲ್ಲಿ ಸಿಗಲೇಬೇಕು. (ಅದರಿಂದ ಬಿಡುಗಡೆಯಿಲ್ಲ) ಮನುಷ್ಯನಿಗೆ ದುಃಖ ಬೇಡಾಗಿರುತ್ತದೆ. ಆದರೆ ಅದನ್ನು ಭೋಗಿಸಲೇಬೇಕಾಗುವದು. ಅದನ್ನು ಎಷ್ಟು ಪ್ರಕಾರದಿಂದ ಭೋಗಿಸಬೇಕಾಗುವವೆಂಬುದರ ಸವಿಸ್ತರ ವರ್ಣನೆಯನ್ನು ಶ್ರೀ ಸಮರ್ಥರು ಮುಂದಿನ ಮೂರು ಸಮಾಸಗಳಲ್ಲಿ ಹೇಳಿರುತ್ತಾರೆ.

### ಸಮಾಸ ೬. ಆಧ್ಯಾತ್ಮಿಕ ತಾಪ ನುಡಿ ೫೬

ಜೀವನದಲ್ಲಿಯ ಅನೇಕ ಪ್ರಕಾರದ ದುಃಖದಿಂದ ಮನುಷ್ಯನು ಸಂಕಟ, ಕಷ್ಟ ವ್ಯಥೆಪಟ್ಟಾಗ ಅವನು ಜೀವನದ ನಿಜವಾದ ಅರ್ಥ ಅಥವಾ ಪರಮಾರ್ಥವನ್ನು ಶೋಧಿಸ ಹತ್ತುವನು. ಇದರಲ್ಲಿ ಅವನಿಗೆ ಸತ್ಸಂಗತಿಯ ಲಾಭ ದೊರೆತ ಕೂಡಲೇ ಭಗವಂತನ ಮಾರ್ಗಕ್ಕೆ ಹತ್ತುವನು. ನಾನು ಈಗ ತಾಪತ್ರಯಗಳ ಲಕ್ಷಣಗಳ ಬಗ್ಗೆ ಚನ್ನಾಗಿ ವರ್ಣನೆ ಮಾಡುವೆನು. ಮನಸ್ಸು ಏಕಾಗ್ರಗೊಳಿಸಿ ಶ್ರೋತೃಗಳು ಇದನ್ನು ಕೇಳಬೇಕು. [೧] ಯಾವನು ತಾಪತ್ರಯಗಳಿಂದ ಬೆಂದು ಬೆಂಡಾಗಿರುವನೋ ಅವನು ಸಂತ ಶರಣರ ಸಹವಾಸದಿಂದ ಸಮಾಧಾನಗೊಳ್ಳುವನು. ಅಂದರೆ ಅವನಿಗೆ ಶಾಂತಿ ಲಭಿಸುವದು ಅವನಿಗೆ ನಿಜವಾದ ಸಮಾಧಾನ ಲಾಭವಾಗುವದು. ಇಚ್ಛಿತ ವಸ್ತುವಿನ ಪ್ರಾಪ್ತಿಗಾಗಿ ಹಂಬಲಿಸುವ ಮನುಷ್ಯನಿಗೆ ಆ ವಸ್ತು ಪ್ರಾಪ್ತವಾದರೆ ಸಂತೋಷವಾಗುವದು. ಇದೇ ರೀತಿಯಲ್ಲಿ ದುಃಖಿ ಮನುಷ್ಯನಿಗೆ ಸತ್ಸಂಗತಿಯಿಂದ ಶಾಶ್ವತ ಸಮಾಧಾನ ಸಿಗುವದು. [೨] ಹೇಗೆಂದರೆ ಹಸಿದವನಿಗೆ ಅನ್ನ ದೊರೆತರೆ, ನೀರಡಿಸಿದವನಿಗೆ ನೀರು ದೊರೆತರೆ, ಮತ್ತು ಬಂಧನದಲ್ಲಿದ್ದವನ ಬಿಡುಗಡೆ ಆದರೆ ಇವರಿಗೆಲ್ಲ ಸುಖವಾಗುವದು. [೩] ಮಹಾಪೂರದಲ್ಲಿ ಸಿಕ್ಕು ಗಾಬರಿಯಿಂದ ಒದ್ದಾಡುವವನಿಗೆ ದಂಡೆಗೆ ಮುಟ್ಟಿಸಿದರೆ ಅಥವಾ ಮಲಗಿದಾಗ ಕೆಟ್ಟ ಸ್ವಪ್ನ ಬಿದ್ದು ದುಃಖಿಸುವವನನ್ನು ಎಚ್ಚರ (ಜಾಗೃತ)ಗೊಳಿಸಿದರೆ. [೪] ಮರಣದ ಮಾರ್ಗವಲ್ಲಿ (ಬಾಗಿಲಲ್ಲಿ) ಬಿದ್ದವನಿಗೆ ಜೀವದಾನ ಕೊಟ್ಟರೆ, ಅವರಿಗೆ ಸುಖವೆನಿಸುವದು. (೫)

ರೋಗಿಯಾಸ ಔಷಧ । ಸಪ್ರಚಿತ ಆಣಿ ಶುದ್ಧ ।
ತಯಾಸೀ ಹೋಯೆ ಆನಂದ। ಆರೋಗ್ಯ ಹೋತಾ ॥೬॥
ತೈಸಾ ಸಂಸಾರೇ ದುಃಖವಲಾ । ತ್ರಿವಿಧತಾಪೇ ಪೋಳಲಾ ।
ತೋಚಿ ಯೇಕ ಅಧಿಕಾರೀ ಜಾಲಾ । ಪರಮಾರ್ಥಾಸೀ ॥೭॥
ತೇ ತ್ರಿವಿಧ ತಾಪ ಕೈಸೇ । ಆತಾ ಬೋಲಿಜೇತ ತೈಸೆ ।
ಯೇವಿಷಈ ಯೇಕ ಅಸೇ । ವಾಕ್ಯಾಧಾರ ॥೮॥

॥ಶ್ಲೋಕ॥ ದೇಹೇಂದ್ರಿಯ ಪ್ರಾಣೇನ ಸುಖಂ ದುಃಖಂ ಚ ಪ್ರಾಪ್ಯತೇ ।
ಇಮಮಾಧ್ಯಾತ್ಮಿಕಂ ತಾಪಂ ಜಾಯತೇ ದುಃಖ ದೇಹಿನಾಮ್ ॥೧॥

ಸರ್ವಭೂತೇನ ಸಂ ಯೋಗಾತ್ । ಸುಖಂ ದುಃಖಂ ಚ ಜಾಯತೇ ॥
ದ್ವಿತೀಯ ತಾಪ ಸಂತಾಪಃ । ಸತ್ಯಂ ಚೈವಾಧಿಭೌತಿಕಃ ॥೨॥

ಶುಭಾಶುಭೇನ ಕರ್ಮಣಾ । ದೇಹಾಂತೆ ಯಮಯಾತನಾ ॥
ಸ್ವರ್ಗನರಕಾದಿ ಭೋಕ್ತ್ಯವ್ಯಮಿದಂ ಚೈವಾಧಿದೈವಿಕಮ್ ॥೩॥

ಯೇಕ ತಾಪ ಆಧ್ಯಾತ್ಮಿಕ । ದುಜಾ ತೋ ಆದಿ ಭೂತಿಕ ।
ತಿಸರಾ ಆದಿದೈವಿಕ । ತಾಪ ಜಾಣಾವಾ ॥೯॥
ಆಧ್ಯಾತ್ಮಿಕ ತೋ ಕೋಣ । ಕೈಸೀ ತ್ಯಾಚೀ ವೋಳಖಣ ।
ಆದಿ ಭೂತಿಕಾಚೇ ಲಕ್ಷಣ। ಜಾಣಿಜೇ ಕೈಸೇ ॥೧೦॥
ಆದಿದೈವಿಕ ತೋ ಕೈಸಾ । ಕವಣ ತಯಾಚೀ ದಶಾ ।
ಹೇ ಹಿ ವಿಶದ ಕಳೇ ಐಸಾ।ವಿಸ್ತಾರ ಕೀಜೇ ॥೧೧॥
ಹಾ ಜೀ ಮ್ಹಣೋನಿ ವಕ್ತಾ । ಜಾಲಾ ಕಥಾ ವಿಸ್ತಾರಿತಾ ।
ಆಧ್ಯಾತ್ಮಿಕ ತಾಪ ಆತಾ । ಸಾವಧ ಐಕಾ ॥೧೨॥
ದೇಹ ಇಂದ್ರಿಯ ಆಣೀ ಪ್ರಾಣ । ಯಾಚೇನಿ ಯೋಗೇ ಆಪಣ ।
ಸುಖದುಃಖೇ ಸಿಣೆ ಜಾಣ । ಯಾ ನಾವ ಆಧ್ಯಾತ್ಮಿಕ ॥೧೩॥
ದೇಹಾಮಧೂನ ಜೇ ಆಲೇ। ಇಂದ್ರಿಯೋ ಪ್ರಾಣೇ ದುಃಖ ಜಾಲೇ ।
ತೇ ಆಧ್ಯಾತ್ಮಿಕ ಬೋಲಿಲೇ । ತಾಪತ್ರಈ ॥೧೪॥

ರೋಗದಿಂದ ಪೀಡಿತನಾದವನಿಗೆ ಅನುಭವಸಿದ್ಧವಾದ ಉತ್ತಮ ಖಾತ್ರಿಯ ಔಷಧ ದೊರೆತರೆ ಅವನ ರೋಗ ನಾಶವಾಗಿ ಅವನಿಗೆಆನಂದವಾಗುವದು[೬]ಇದರಂತೆಯೇ ಸಂಸಾರದಲ್ಲಿಯ ದುಃಖದಿಂದ ತ್ರಸ್ತನಾದ ಮತ್ತು ತ್ರಿವಿಧ ತಾಪಗಳಿಂದ ಬೆಂದು ಬೆಂಡಾದ ಮನುಷ್ಯನೇ ಪರಮಾರ್ಥ ಪಡೆಯುವಲ್ಲಿ ಯೋಗ್ಯ (ಲಾಯಖ)ನಾಗುವನು. [೭] **ತ್ರಿವಿಧ ತಾಪಗಳ ಲಕ್ಷಣ ಹೇಳುವ ಮೂರು ಶ್ಲೋಕ ಇಲ್ಲಿ ಕೊಟ್ಟಿರುತ್ತದೆ- ಅದರ ಅರ್ಥ** ಆ ತ್ರಿವಿಧ ತಾಪ ಹೇಗಿರುವದೆಂಬುದನ್ನು ನಾನು ಈಗ ಹೇಳುವೆನು, ಈ ಬಗ್ಗೆ ಒಂದು ಆಧಾರ ವಾಕ್ಯವಿದೆ. [೮]

**ಶ್ಲೋಕ**

ದೇಹೇಂದ್ರಿಯ ಪ್ರಾಣೇನ ಸುಖಂ ದುಃಖಂ ಚ ಪ್ರಾಪ್ಯತೆ
ಇಮ ಮಾಧ್ಯಾತ್ಮಿಕಂ ತಾಪಂ ಜಾಯತೇ ದುಃಖಂ (ಸರ್ವ) ದೇಹಿನಾಂ 1
ಸರ್ವಭೂತೇನ ಸಂ ಯೋಗಾತ್ ಸುಖಂ ದುಃಖಂ ಚ ಜಾಯತೆ
ದ್ವಿತೀಯ ತಾಪ ಸಂತಾಪ: ಸತ್ಯಂ ಜ್ಯೆವಾಧಿ ಭೌತಿಕ 2
ಶುಭಾ ಶುಭೇನ ಕರ್ಮಣಾ ದೇಹಾಂತೇ ಯಮ ಯಾತನಾ
ಸ್ವರ್ಗ ನರಕಾದಿ ಭೋಕ್ತವ್ಯಮಿದಂ ಚ್ಯೆವಾಧಿ ದೈವಿಕಮ್ 3

ದುಃಖ ಇದರ ಬದಲು ಸರ್ವ ಎಂದೂ ಮತ್ತೊಂದರಲ್ಲಿದೆ, (ಮೇಲಿನ ಶ್ಲೋಕದಲ್ಲಿ ಛಂದಸ್ಸು. ಪ್ರಾಸ, ವ್ಯಾಕರಣಾಧಿಗೆ ಹೊಂದುವದಿಲ್ಲವೆಂಬುದು ಕೆಲವರು ಬರೆದು ತಿದ್ದಿಕೊಟ್ಟದ್ದಾರೆ. ಆದರೆ ಇದು ಮೂಲದ್ದೇ ಇದೆ). **ಶ್ಲೋಕದ ಅರ್ಥ**:—ದೇಹ, ಇಂದ್ರಿಯ ಮತ್ತು ಪ್ರಾಣಗಳಿಂದ ಜೀವರಿಗೆ ಸುಖ ದುಃಖಗಳು ಪ್ರಾಪ್ತವಾಗುವವು, ಅಂದರೆ ಅವನ್ನು ಅನುಭೋಗಿಸಬೇಕಾಗುವದು. (ದೇಹಾದಿಗಳ ಮೂಲಕವಾಗಿ ಆಗುವ ದುಃಖ) ಇದಕ್ಕೆ ಆಧ್ಯಾತ್ಮಿಕ ತಾಪವೆನ್ನುವರು, ಮನುಷ್ಯನಿಗೆ ಇದರಿಂದ ದುಃಖವೇ ಆಗುವದು—1 ಎಲ್ಲ ಪಂಚಭೂತಗಳ ಹಾಗೂ ತಜ್ಜನಿತ ವಸ್ತುಗಳ ಸಂಯೋಗದಿಂದ ಸುಖ ದುಃಖಗಳು ಉತ್ಪನ್ನವಾಗುವವು. ಇದು ಎರಡನೆಯ ತಾಪವಿದ್ದು ಬಹಳ ಕ್ಲೇಶಕರವಾದದ್ದಿರುವದು. ಸತ್ಯವಾಗಿಯೂ ಇದು ಆದಿ ಭೌತಿಕವಾದ ಎರಡನೆಯ ತಾಪವು—2 ಮನುಷ್ಯರು ಮಾಡಿದ ಪುಣ್ಯ ಪಾಪ ಕರ್ಮ ಪ್ರಕಾರ ಸತ್ತ [ಮರಣದ] ನಂತರ ಯಮ ಯಾತನೆ ಸ್ವರ್ಗ, ನರಕ, ವಗ್ಯೆರೆ ಅನುಭೋಗಿಸಬೇಕಾಗುತ್ತದೆ, ಅದರಲ್ಲಿಯ ಯಮ ಯಾತನೆಯು ಮೂರನೆಯದಾದ ತಾಪವು ಇದು ಆಧಿ ದೈವಿಕ ತಾಪವೇ ಇರುವದು—3 **ಸಾರಾಂಶ**:-ಆಧ್ಯಾತ್ಮಿಕ ಒಂದು ತಾಪ, ಆಧಿ ಭೌತಿಕ ಎರಡನೆಯ ತಾಪ, ಮತ್ತು ಅಧಿ ದೈವಿಕವು ಮೂರನೆಯ ತಾಪ, ಹೀಗೆ ಮೂರು ತಾಪಗಳೆಂದು ತಿಳಿಯಬೇಕು[೯] ಶಿಷ್ಯನು ಪ್ರಶ್ನೆ ಮಾಡುತ್ತಾನೆ—"ಆಧ್ಯಾತ್ಮಿಕ ತಾಪ ಎಂಥದು, ಅದರ ಗುರುತನ್ನು ಹೇಗೆ ತಿಳಿಯಬೇಕು. ಅಧಿ ಭೌತಿಕ ತಾಪದ ಲಕ್ಷಣಗಳನ್ನು ಹೇಗೆ ತಿಳಿಯಬೇಕು. [೧೦] ಆದಿ ದೈವಿಕ ತಾಪ ಹೇಗಿರುತ್ತದೆ? ಅದರ ಸ್ಥಿತಿ ಲಕ್ಷಣಗಳಾವವು? ಈ ಮೂರು ತಾಪಗಳು ಸ್ಪಷ್ಟವಾಗಿ ತಿಳಿಯುವಂತೆ ವಿಸ್ತಾರವಾಗಿ ತಾವು ಹೇಳಬೇಕು.[೧೧] ಹಾ! ಜೀ!! ಅಂದರೆ ಯಾಕಾಗಲೊಲ್ಲದು ಎಂದು ವಕ್ತಾರರಾದ ಶ್ರೀಸಮರ್ಥರು ಅಂದರು. ಮತ್ತು ತ್ರಿವಿಧ ತಾಪದ ಕಥೆಯನ್ನು ವಕ್ತಾರರು ವಿಸ್ತಾರವಾಗಿ ಹೇಳಹತ್ತಿದರು. ಈಗ ನೀವು ಅಧ್ಯಾತ್ಮ ತಾಪದ ವರ್ಣನೆಯನ್ನು ಸಾವಧಾನದಿಂದ ಕೇಳಿರಿ [೧೨] **ಮೊದಲಿಗೆ ಆಧ್ಯಾತ್ಮಿಕ ತಾಪದ ವ್ಯಾಖ್ಯೆ ಅಂದರೆ ಮುಖ್ಯ ಲಕ್ಷಣ ಹೇಳುವರುಃ**– ದೇಹ, ಇಂದ್ರಿಯ, ಮತ್ತು ಪ್ರಾಣ ಇವುಗಳ ಯೋಗದಿಂದ ಮನುಷ್ಯನು ಸುಖ ದುಃಖಗಳನ್ನು ಉಪಭೋಗಿಸುವನು. ಮತ್ತು ಇವುಗಳಿಂದ ತ್ರಸ್ತನಾಗುವನು. (ಗಾಸಿಯಾಗುವನು)ಈ ತಾಪಕ್ಕೆ ಆಧ್ಯಾತ್ಮಿಕವೆಂದು ಹೆಸರಿರುವದು. ಮನಸ್ಸಿಗೆ ಆಗುವ ತಾಪವು ಅಧ್ಯಾತ್ಮಿಕವೆಂದು ಏಕನಾಥೀ ಭಾಗವತದಲ್ಲಿ ಹೇಳಲಾಗಿದೆ. [೧೩] ಯಾವ ದುಃಖವು ದೇಹದಿಂದ ನಿರ್ಮಾಣವಾಗುವದೋ ಅದನ್ನು ಮತ್ತು ಇಂದ್ರಿಯ, ಪ್ರಾಣಗಳಿಂದ ಆಗುವ ದುಃಖ ಇವೆಲ್ಲ ಆಧ್ಯಾತ್ಮಿಕ ತಾಪ, ಇವನ್ನು ಇಂದ್ರಿಯ, ಪ್ರಾಣಗಳ ಮುಖಾಂತರ ಅನುಭವಿಸಬೇಕಾಗುವದು. [೧೪]

ದೇಹಾಮಧೂನ ಕಾಯೆ ಆಲೇ । ಪ್ರಾಣೇ ಕೋಣ ದುಃಖ ಜಾಲೇ ।
ಆತಾ ಹೇ ವಿಶದ ಕೇಲೇ । ಪಾಹಿಜೆ ಕೀ ॥೧೫॥
ಖರೂಜ ಖವಡೆ ಪುಳಿಯಾ ನಾರು । ನಖುರುಡೇ ಮಾಂಜರ್ಯಾ ದೇವೀಗೋವರು ।
ದೇಹಾಮಧೀಲ ವಿಕಾರು । ಯಾ ನಾವ ಆಧ್ಯಾತ್ಮಿಕ ॥೧೬॥
ಕಾಖಮಾಂಜರೀ ಕೇಶತೋಡ । ವೊಖಟೇ ವರ್ಣ ಕಾಳಫೋಡ ।
ವ್ಯಾಧೀ ಮೂಳವ್ಯಾಧೀ ಮಾಹಾಜಡ । ಯಾ ನಾವ ಆಧ್ಯಾತ್ಮಿಕ ॥೧೭॥
ಅಂಗುಳವೇಡೆ ಗಾಲಫುಗೀ । ಕಂಡ ಲಾಗೇ ಜೇವಾಲುಗೀ ।
ಹಿರಡೀ ಸುಜೇ ಭರೇ ಬಲಂಗೀ । ಯಾ ನಾವ ಆಧ್ಯಾತ್ಮಿಕ ॥೧೮॥
ವಾಲುಗೆ ಫೋಡ ಉಠತೀ । ಕಾಂ ತೇ ಸುಜೇ ಆಂಗಕಾಂತೀ।
ವಾತ ಆಣೀ ತಿಡಕಾ ಲಾಗತೀ । ಯಾ ನಾವ ಆಧ್ಯಾತ್ಮಿಕ ॥೧೯॥
ನಾಇಟೇ ಅಂದು ಗಜಕರ್ಣ। ಪೇಹಾಚೇ ಫೋಟ ವಿಸ್ತೀರ್ಣ ।
ಬೈಸಲೇ ಟಾಳೇ ಫುಟತೀ ಕರ್ಣ । ಯಾ ನಾವ ಆಧ್ಯಾತ್ಮಿಕ ॥೨೦॥
ಕುಷ್ಟ ಆಣೀ ವೋಲಾ ಕುಷ್ಟ । ಪಂಡ್ಯಾರೋಗ ಅತಿಶ್ರೇಷ್ಠ।
ಕ್ಷಯರೋಗಾ ಚೆ ಕಷ್ಟ। ಯಾ ನಾವ ಆಧ್ಯಾತ್ಮಿಕ ॥೨೧॥
ವಾಟೀ ವಟಕ ವಾಯೆಗೋಳಾ । ಹಾತೀ ಪಾಂಈ ಲಾಗತೀ ಕಳಾ ।
ಭೋವಂಡೀ ಲಾಗೇ ವೇಳೋವೇಳಾ। ಯಾ ನಾವ ಆಧ್ಯಾತ್ಮಿಕ ॥೨೨॥
ವೋಲಾಂಡಾ ಆಣೀ ವಳ । ಪೋಟಸುಳಾಚೀ ತಳಮಳ ।
ಅರ್ಧಶಿಸೀ ಉಠೇ ಕಪಾಳ। ಯಾ ನಾವ ಆಧ್ಯಾತ್ಮಿಕ ॥೨೩॥
ದುಃಖೇ ಮಾಜ ಆಣೀ ಮಾನ । ಪುಷ್ಟೀ ಗ್ರೀವಾ ಆಣೀ ವದನ ।
ಅಸ್ಥಿಸಾಂದೇ ದುಖತೀ ಜಾಣ । ಯಾ ನಾವ ಆಧ್ಯಾತ್ಮಿಕ ॥೨೪॥
ಕುಳಿಕ ತರಳ ಕಾಮಿಣೀ । ಮುರಮಾ ಸುಂಠರೇ ಮಾಳಿಣೀ ।
ವಿದೇಸೀ ಲಾಗಲೇ ಪಾಣೀ । ಯಾ ನಾವ ಆಧ್ಯಾತ್ಮಿಕ ॥೨೫॥
ಜಳಸೋಸ ಆಣೀ ಹಿವಾರೇ। ಗಿರೀವಿರೀ ಆಣಿ ಅಂಧಾರೇ ।
ಜ್ವರ ಪಾಚಾವ ಆಣೀ ಶಾರೇ । ಯಾ ನಾವ ಆಧ್ಯಾತ್ಮಿಕ ॥೨೬॥
ಶೈತ್ಯ ಉಷ್ಣ ಆಣೀ ತೃಷಾ । ಕ್ಷುಧಾ ನಿದ್ರಾ ಆಣೀ ದಿಶಾ ।
ವಿಷಯತೃಷ್ಣೇಚೀ ದುರ್ದಶಾ । ಯಾ ನಾವ ಆಧ್ಯಾತ್ಮಿಕ ॥೨೭॥
ಆಳಸೀ ಮೂರ್ಖ ಆಣೀ ಅಪೇಸೀ । ಭಯ ಉದ್ಭವೇ ಮಾನಸೀ ।
ವಿಸರಾಳು ದುಶ್ಚಿತ್ತ ಅಹರ್ನಿಶೀ । ಯಾ ನಾವ ಆಧ್ಯಾತ್ಮಿಕ ॥೨೮॥

ಶರೀರದಿಂದ ಯಾವುದುನಿರ್ಮಾಣವಾಗುವದು ಮತ್ತು ಪ್ರಾಣದ ಮೂಲಕ ಯಾವ ದುಃಖವಾಗುವದು, ಇದನ್ನೆಲ್ಲ ಸ್ಪಷ್ಟವಾಗಿ ವಿವರಿಸಿ ಹೇಳುವದು ಅವಶ್ಯವಿದೆ. (೧೫) **ಇದರ ಮುಂದಿನ ಅಜಮಾಸ ನಾಲ್ವತ್ತು ಓವಿಗಳಲ್ಲಿ ಶ್ರೀ ಸಮರ್ಥರು ಆಧ್ಯಾತ್ಮಿಕ ತಾಪದಲ್ಲಿ ಬರುವ ದುಃಖದ ವರ್ಣನೆ ಮಾಡಿದ್ದಾರೆ. ಇದರ ಮೇಲಿಂದ ನೋಡಿದರೆ ಶ್ರೀ ಸಮರ್ಥರ ನಿರೀಕ್ಷಣವು ಎಷ್ಟು ಸೂಕ್ಷ್ಮವಿತ್ತು. ಮತ್ತು ಅವರ ವ್ಯವಹಾರ ಜ್ಞಾನ ಎಷ್ಟೊಂದು ಅಪಾರವಿತ್ತು ಹಾಗೂ ಅವರ ಜ್ಞಾಪಕಶಕ್ತಿ ಎಷ್ಟು ವಿಲಕ್ಷಣವಾಗಿತ್ತೆಂಬುದು ನಾವು ಈ ಸಮಾಸ ಹಾಗೂ ಮುಂದಿನ ಸಮಾಸಗಳಲ್ಲಿ ಕಂಡುಕೊಳ್ಳಬಹುದು:-** ಹುರುಕು, ಕಜ್ಜಿ, ತಲೆಯಲ್ಲಿ ಆಗುವ ಕಜ್ಜಿ (ಹುಣ್ಣು), ಮೈಮೇಲೆ ಏಳುವ ಗುಳ್ಳಿ, ಬಕ್ಕೆ, ನಾರು ಹುಣ್ಣು, ಉಗುರಿಗೆ ದೂಷಿತ ಅಸ್ತ್ರ ಹತ್ತಿ ಆಗುವ ಘಾಯದ ನಂಜು, (ಉಗುರಿಗೆ ಆಗುವ ರೋಗ)ಮಂಜರಿ (ಸಂಕದಾಳ)ಮೈಲಿ,ಗೊಬ್ಬರವು ಇವುದೇಹದಲ್ಲಿಯೇ ಹುಟ್ಟುವ ರೋಗಗಳಾಗಿವೆಯೆಂದು ಇವಕ್ಕೆ ಆಧ್ಯಾತ್ಮಿಕ ತಾಪವೆನ್ನುವರು. (೧೬) ಬಗಲಲ್ಲಿ ಆಗುವ ಬಕ್ಕೆ (ಗುಳ್ಳೆ) ಹುಣ್ಣು (ಕುರು–ವ್ರಣ) ಕೊಳೆಯುವ ವ್ರಣ (ದುಷ್ಟವ್ರಣ) ಕರಿವ್ರಣ (ರಕ್ತ ಮಾಂಸ ಕರ್ರಗಾಗಿರುತ್ತದೆ.) ಮೂಲವ್ಯಾಧಿ ದುಸ್ಸಹವಾದುದು. (೧೭) ಗಳಲುಹುಣ್ಣು (ಬೆರಳಿಗೆ ಆಗುವ ನೋವಿನ ರೋಗ) ಕಪಾಳ ಬಾವು, ಸುಮ್ಮನೆ ಮೈಯಲ್ಲಿ ಉಂಟಾಗುವ ತುರಿಕೆ, ಒಸಡಿಯ ಬಾವು, ಹಲ್ಲಲ್ಲಿ ಏನಾದರೂ ನಟ್ಟು ಆಗುವ ನೋವು ವಗೈರೆ (೧೮) ಮೈಮೇಲೆ ವಿನಾಕಾರಣ ಗುಳ್ಳೆ ಏಳುವದು, ಮೈ ಬಾವು, ವಾತ ವಿಕಾರ ಆಗುವಿಕೆ, ನೋವು, ಹೊಡೆತ (ಠಣಕಾ) ಇವೆಲ್ಲ ಆಧ್ಯಾತ್ಮಿಕ ತಾಪಗಳು. (೧೯) ನಾಯಟೆ (ತ್ವಚೆ ರೋಗ, ಇಸಬು) ಎಲುವು ಕೊಳೆಯುವ ವ್ರಣ (ಗ್ಯಾಂಗ್ರಿನ) ಜಲೋದರದಿಂದ ಹೊಟ್ಟೆ ಉಬ್ಬುವಿಕೆ, ಕಿವಿಯಲ್ಲಿ ದೊಡ್ಡ ಶಬ್ದವಾಗಿ ಕಿವಿ ಗಪ್ಪಾಗಿ ಸೋರುವದು. (೨೦) ಬಿಳಿತೊನ್ನು, ಸ್ವೇತ ಕುಷ್ಟ, ಮಹಾರೋಗ, ಅತಿಶ್ರೇಷ್ಟವಾದ ಪಾಂಡುರೋಗ ಮತ್ತು ಅತಿ ಕಷ್ಟಕರವಾದ ಕ್ಷಯರೋಗ.(೨೧) ಗಂಟು ಸರಿಯುವದು, ವಾಯು ಗುಲ್ಮ, ಹಾಲು ಕುಡಿದ ಕೂಡಲೇ ಹುಡುಗರು ವಾಂತಿ ಮಾಡಿಕೊಳ್ಳುವದು, ಕೈಕಾಲು ವರಟಿ (ವಟ್ಟಿ) ಹಿಡಿಯುವದು, ನರಸೆಳೆತ, ಮೇಲಿಂದ ಮೇಲೆ ಚಕ್ಕರು, ತಲಿ ಸುತ್ತುವಿಕೆ, ಘೇರಿ ಬರುವದು. (೨೨) ಉಪದಂಶ, ಪರಮಾ ರೋಗಿಗಳು ಮಾಡಿದ ಮೂತ್ರವನ್ನು ದಾಟುವದರಿಂದ ಆಗುವ ವಿಕಾರ, ಪೆಟ್ಟು ಹೊಡೆತದಿಂದ ಏಳುವ ಗಂಟು ಅವರ ನೋವು, ಹೊಟ್ಟೆಶೂಲೆಯು ತಳಮಳ, ಅರತಲೆಶೂಲಿ, ಕಪಾಳ (ಗಲ್ಲ) ನೋವು. (೨೩) ನಡ, ಕುತ್ತಿಗೆ, ಬೆನ್ನು, ಕಂಠ, ಬಾಯಿ ಇವುಗಳ ನೋವು, ಮತ್ತು ಎಲುಬಿನ ಸಂದಿನಲ್ಲಿಯ ನೋವು. (೨೪) ಅಜೀರ್ಣದಿಂದ [ವಾಂತಿ. ಭ್ರಾಂತಿ, ಹೊಟ್ಟೆ] ಝಾಡಿಸುವಿಕೆ ಹಾಗೂ ಓಕರಿಕೆ, ಕಾಮಣಿ, ಗ್ಲಾನಿ, ಮುಖಚರ್ಯೆ ಬದಲಾಗುವಿಕೆ, ಕೈಕಾಲು ಮುದುಡಿ ಮಲಗುವದು, ಮಡಿಬಕ್ಕೆಯ ನೋವು [ಹಾರಕ],ದಾಟ ಬಕ್ಕೆಯುಹುಣ್ಣು,ಕುರುವಿನಂತಹ ಹುಣ್ಣು,ವ್ರಣಗಂಡಮಾಲೆ ಮೂಗಿನಲ್ಲಿ ಆಗುವ ಗುಳ್ಳಿ, ಪರದೇಶದ ನೀರಿನಿಂದ [ನೀರಿನ ಬದಲಾವಣೆಯಿಂದ] ಆಗುವ ಬಾಧೆ [೨೫] ಗಂಟಲು ಒಣಗುವಿಕೆ, ಮತ್ತು ಥಂಡಿ ಜ್ವರ, ಮೈತಿರುಗುವಿಕೆ, ಮತ್ತು ಕಣ್ಣು ಕತ್ತಲುಗೂಡಿಸುವದು, ಜ್ವರ ಉಲಟಿಸುವ [ತಿರತಿರುಗಿ ಬರುವ] ವಿಕಾರ, ರೋಗ ನೆಟ್ಟಗಾದಂತೆ ಅನಿಸಿ ಪುನಃ ತಿರುಗಿ ಬರುವ ವಿಕಾರ, ಕಾರಣವಿಲ್ಲದೆ ರೋಮಾಂಚನವಾಗುವಿಕೆ. [೨೬] ಥಂಡಿ, ಉಷ್ಣ, ನೀರಡಿಕೆ, ಹಸಿವು, ನಿದ್ರೆ, ಅತಿಸಾರ, ಅತಿಸಂಭೋಗದಿಂದಾಗುವ ದುರ್ದೆಸೆ [೨೭] ಆಲಸಿ, ಮೂರ್ಖ, ಅಭಾಗಿ [ಅಪಯಶಿ] ಮನದಲ್ಲಿ ಭಯಗೊಳ್ಳುವದು, ಮರೆವು [ವಿಸ್ಮೃತಿ] ಯಾವಾಗಲೂ [ಉದ್ವಿಗ್ನ] ದುಶ್ಚಿತ್ತತನ [ಭಯಗ್ರಸ್ತನಾಗುವಿಕೆ]. [೨೮]

ಮೂತ್ರಕೋಡ ಆಣೀ ಪರಮೋ । ರಕ್ತಪಿತೀ ರಕ್ತಪರಮೋ ।
ಖಡಾಚಢಾಚೇನೀ ಶ್ರಮೋ । ಯಾ ನಾವ ಆಧ್ಯಾತ್ಮಿಕ ॥೨೯॥
ಮುರಡಾ ಹಾಗವಣ ಉನ್ಹಾಳೆ । ದಿಶಾ ಕೊಂಡ ತಾ ಆಂದೋಳೆ ।
ಯೆಕ ವೆಥಾ ಅಸೋನ ನ ಕಳೆ । ಯಾ ನಾವ ಆಧ್ಯಾತ್ಮಿಕ ॥೩೦॥
ಗಾಂಠೀ ಢಳಲೀ ಜಾಲೆ ಜಂತ । ಪಡೆ ಆವ ಆಣೀ ರಕ್ತ ।
ಅನ್ನ ತೈಸೇಚಿ ಪಡತ । ಯಾ ನಾವ ಆಧ್ಯಾತ್ಮಿಕ ॥೩೧॥
ಪೋಟಫುಗೀ ಆಣೀ ತಡಸ । ಭರಲಾ ಹಿರ ಲಾಗಲಾ ಘಾಂಸ ।
ಫೋಡೀ ಲಾಗತಾ ಕಾಸಾವೀಸ । ಯಾ ನಾವ ಆಧ್ಯಾತ್ಮಿಕ ॥೩೨॥
ಉಚಕೀ ಲಾಗಲೀ ಉಸಿತ ಗೇಲಾ । ಪೀತ ಉಸಳಲೇ ಉಲಾಟ ಜಾಲಾ ।
ಖರೆ ಪಡಸಾ ಆಣೀ ಖೋಕಲಾ । ಯಾ ನಾವ ಆಧ್ಯಾತ್ಮಿಕ ॥೩೩॥
ಉಸಳಲಾ ದಮಾ ಆಣೀ ಧಾಪ । ಪಡಜಿಭ ಢಾಸಿ ಆಣೀ ಕಫ ।
ನೋವಾಜ್ವರ ಆಣೀ ಸಂತಾಪ। ಯಾ ನಾವ ಆಧ್ಯಾತ್ಮಿಕ ॥೩೪॥
ಕೋಣೀ ಸೆಂದುರ ಘಾತಲಾ । ತೇಣೇ ಪ್ರಾಣೀ ನಿರ್ಬುಜಲಾ ।
ಘಶಾಮಧ್ಯೇ ಫೋಡ ಜಾಲಾ । ಯಾ ನಾವ ಆಧ್ಯಾತ್ಮಿಕ ॥೩೫॥
ಗಳಸೊಟ್ಯಾ ಆಣೀ ಜೀಭ ಝಡೆ । ಸದಾ ಮುಖೀ ದುರ್ಗಂಧೀ ಪಡೆ ।
ದಂತಹೀನ ಲಾಗತೀ ಕಿಡೆ । ಯಾ ನಾವ ಆಧ್ಯಾತ್ಮಿಕ ॥೩೬॥
ಜರಂಡೀ ಫೋಲಾಣಾ ಗಂಡಮಾಳಾ । ಅವಚಿತಾ ಸ್ವಯೋ ಫುಟೆ ಡೋಳಾ ।
ಆಪಣಚಿ ಕಾಪೀ ಅಂಗುಳಾ । ಯಾ ನಾವ ಆಧ್ಯಾತ್ಮಿಕ ॥೩೭॥
ಕಳಾ ತಿಡಕಾ ಲಾಗತೀ । ಕಾ ತೆ ದಂತ ಉನ್ಮಳತೀ ।
ಅಧರ ಜಿವ್ಹಾ ರಗಡತೀ । ಯಾ ನಾವ ಆಧ್ಯಾತ್ಮಿಕ ॥೩೮॥
ಕರ್ಣದುಃಖ ನೇತ್ರದುಃಖ । ನಾನಾದುಃಖೇ ಘಡೆ ಶೋಕ ।
ಗರ್ಭಾಂಧ ಆಣೀ ನಪುಶ್ಯಕ । ಯಾ ನಾವ ಆಧ್ಯಾತ್ಮಿಕ ॥೩೯॥
ಫುಲೇ ವಡಸ ಆಣೀ ಪಡಳೇ । ಕೀಡಗರ್ತಾ ರಾತಾಂಧಳೇ ।
ದುಶ್ಚಿತ್ತ ಭ್ರಮಿಷ್ಟ ಆಣೀ ಖುಳೇ । ಯಾ ನಾವ ಆಧ್ಯಾತ್ಮಿಕ ॥೪೦॥
ಮುಕೇ ಬಧಿರ ರಾಖೋಡೇ । ಥೋಟೇ ಚಳಲೇ ಆಣೀ ವೇಡೇ ।
ಪಾಂಗುಳ ಕುರ್ಡೆ ಆಣೀ ಪಾವಡೇ । ಯಾ ನಾವ ಆಧ್ಯಾತ್ಮಿಕ ॥೪೧॥
ತಾರಸೇ ಫುಲೇ ಕಾಣೇ ಕೈರೇ । ಗಾರೋಳೇ ಜಾಮುನ ಟಾಫರೇ ।
ಶಡಾಂಗುಳೇ ಗೇಂಗಾಣೇ ಖಿದರೇ। ಯಾ ನಾವ ಆಧ್ಯಾತ್ಮಿಕ ॥೪೨॥

ಮೂತ್ರ ಕಟ್ಟುವಿಕೆ, ಪರಮಾವಿಕಾರ,ರಕ್ತ ಪಿತ್ತ, ರಕ್ತದ ಅಂಶವೂ ಇರುವ ಪರಮಾ, ಮೂತ್ರದಲ್ಲಿ ಹರಳು, ಖಡಾ ಇರುವ ರೋಗ ಯಾತನೆ.[೨೯]ಹೊಟ್ಟೆ ಮುರಿಯುವದು,ಆಮಾಂಶ, ಬಿಸಲಿನ ತಾಪ, ವಿಕಾರ,ಮಲಬಂದಾದದ್ದರಿಂದ ಆಗುವ ತಳಮಳ,ರೋಗವಿದ್ದರೂ ಅದು ಯಾವುದೆಂಬುದು ತಿಳಿಯುವದಿಲ್ಲ[೩೦]ಗಂಟು ಏಳುವದು [ಉಬ್ಬುವದು, ಹಾರುವದು] ಜಂತು ಆಗುವದು, ಆಮ ರಕ್ತ ಬೀಳುವದು, ತಿಂದ ಅನ್ನ ಪಚನವಾಗದೇ ಇದ್ದಂತೆಯೇ ಬೀಳುವದು [ಸಂಗ್ರಹಿಣಿ ರೋಗ] [೩೧] ಹೊಟ್ಟೆ ಉಬ್ಬುವದು,ಅದರ ಉಲ್ಬಣ ಬಿಗಿತ, ಒಣಕೆಮ್ಮು ಹತ್ತುವದು ಗಂಟಲದಲ್ಲಿಯ ಹುಣ್ಣಿನಿಂದ ಆಗುವ ತ್ರಾಸ, ಹುಣ್ಣಿಗೆ ಪೆಟ್ಟು ತಾಕಿ ಜೀವ ತಳಮಳಿಸುವದು. [೩೨] ಬಿಕ್ಕು ಹತ್ತುವದು, ತಿಂದದ್ದು ಗಂಟಲಲ್ಲಿ ಸಿಕ್ಕು ತ್ರಾಸ ಆಗುವದು, ಪಿತ್ತ ಹೆಚ್ಚಾಗಿ ಹಳದಿ ವಾಂತಿಯಾಗುವದು. ನಾಲಿಗೆಯ ಮೇಲೆ ಮುಳ್ಳು ಹುಟ್ಟುವದು. ನೆಗಡಿ ಕೆಮ್ಮು ಆಗುವದು. [೩೩] ದಮ್ಮು ಹತ್ತುವದು, ತೇಕು ಬರುವದು, ಕಿರುನಾಲಿಗೆ ಬಿದ್ದು ಕೆಮ್ಮು, ಕಫವಾಗುವದು, ಮೋಹಜ್ವರ [ಜ್ವರದ ಒಂದು ಪ್ರಕಾರ] ಮೈ ಉರಿಯುವಿಕೆ. [೩೪] ಶೇಂಧೂರ [ವಿಕರಾರಕ ದ್ರವ್ಯ]ವನ್ನು ತಿನ್ನಲಿಕ್ಕೆ ಆಹಾರದಲ್ಲಿ ಕೂಡಿಸಿ ಹಾಕಿದ್ದರಿಂದ ಗಾಬರಿಗೊಂಡು ಅಗುವ ಮನಸ್ಸಿನ ಪರಿಣಾಮ, ಅಂಗಳದಲ್ಲಿ ವ್ರಣ [೩೫] ಘಟಸರ್ಪ [ಡಿಫ್ಥೀರಿಯಾ] ನಾಲಿಗೆಯಿಂದ ಜೊಲ್ಲು ಸುರಿಯುವಿಕೆ, ಮುಖದಿಂದ ಅತಿದುರ್ಗಂಧ ವಾಸನೆ ಬರುವದು, ಹಲ್ಲು ಬಿದ್ದ ಸ್ಥಳದ ವಸಡಿಯಲ್ಲಿ ಹುಳು ಬೀಳುವಿಕೆ. [೩೬] ಪಾಂಥರಿ [ಪ್ಲೀಹ, ಗುಲ್ಮ] ವೃದ್ಧಿ ಹೊಂದುವಿಕೆ, ಮೂಗಿನಿಂದ ರಕ್ತ ಬರುವದು, ಗಂಡಮಾಲಿ, ಅಕಸ್ಮಾತ್ ಒಮ್ಮಿಂದೊಮ್ಮೆಲೆ ಕಣ್ಣು ಒಡೆಯುವದು, ತನ್ನನ್ನು ತಾನೇ ಕೊಯ್ದುಕೊಳ್ಳುವದು. [೩೭] ನೋವು, ಹೊಡೆತ [ರೆಣಕಾ, ಹಲ್ಲು ಕಿತ್ತುವದು, ತುಟಿ ಮತ್ತು ನಾಲಿಗೆ ಕಡಿದುಕೊಳ್ಳುವದು. [೩೮] ಕಿವಿನೋವು, ಹೊಡೆತ ಕಣ್ಣು ನೋವು, ಅನೇಕ ಪ್ರಕಾರದ ದುಃಖಗಳಿಂದ ಒದರುವದು, ಚೀರುವದು, ಜನ್ಮಾಂಧ [ಹುಟ್ಟು ಕುರುಡ]ನಿರುವದು ನಪುಂಸಕನಿರುವದು, [೩೯] ಕಣ್ಣಲ್ಲಿ ಹೂ ಬೀಳುವದು, ಕಣ್ಣಲ್ಲಿ ಗೊಡಚಿ ಬೆಳೆಯುವದು. ಮೋತಿ ಬಿಂದು ಮತ್ತು ಕಾಚಬಿಂದು ಆಗುವದು, ಕಣ್ಣಿನ ರೆಪ್ಪೆಗೆ ಹೇನು ಸೀರು ಆಗುವದು, ಕಣ್ಣು ಸರಿ ಕಂಡುಬಂದರೂ ಕಾಣಿಸದಿರುವದು, ದುಷ್ಟ ಚಿತ್ತನಾಗಿರುವದು, ಭ್ರಮಿಷ್ಟತನ, ಬುದ್ಧಿ ಇಲ್ಲದವ [೪೦] ಮೂಕತನ, ಕಿವುಡತನ, ತುಟಿ ಹರಿದದ್ದು,ಕೈಮುರುಕ[ಕೈ ಇಲ್ಲದ್ದು]ವೃತ್ತಿಭ್ರಂಶತೆ[ಮನೋವಿಕಾರಿ ಅಥವಾ ಧಾತು ಸ್ಖಲನವಾಗುವದು] ಹುಚ್ಚು ತನ, ಕಾಲಿಲ್ಲದ ಕುಂಟ,ಕುಬ್ಜ,[ಗೂನುಬೆನ್ನಿನವ]ಕಿರಿಕಾಲಿನವ,ಬಂಕಣಕಾಲಿನವ,ಸರಿಯಾಗಿ ನಡೆಯಲು ಬಾರದವ [೪೧] ಮೆಳ್ಳಗಣ್ಣಿನವ, ಸೊಟ್ಟ [ಡೊಂಕ] ಗೋಣಿನವ, ಒಂಟಿಗಣ್ಣಿನವ [ಗಜನೇತ್ರಿ] ವಂಚರಿತಿ, ರುಪ್ಪುಗಣ್ಣಿನವ, ಹದ್ದಿನ ಕಣ್ಣಿನವ, ಅತಿಗಿಡ್ಡ ಸಪ್ಪಳ ಮಾಡುತ್ತ ನಡೆಯುವವ, ಆರುಬೆರಳಿನವ, ಮೂಗಿನಿಂದ ಮಾತನಾಡುವವ, ವಿದ್ರೂಪಿ, ಇವೆಲ್ಲ ಅಧ್ಯಾತ್ಮಿಕ ತಾಪಗಳು. [೪೨]

ದಾಂತಿರೇ ಬೋಚಿರೇ ಘಾನಾಳ । ಘ್ರಾಣಹೀನ ಶ್ರೋತ್ರಹೀನ ಬರಳ ।
ಅತಿ ಕೃಶ ಅತಿ ಸ್ಥೂಳ । ಯಾ ನಾವ ಆಧ್ಯಾತ್ಮಿಕ ॥೪೩॥

ತೋಂತರೇ ಬೋಬಡೇ ನಿರ್ಬಳ । ರೋಗೀ ಕುರೂಪ ಕುಟೀಳ ।
ಮತ್ಸರೀ ಖಾದಾಡ ತಪೀಳ । ಯಾ ನಾವ ಆಧ್ಯಾತ್ಮಿಕ ॥೪೪॥

ಸಂತಾಪೀ ಅನುತಾಪೀ ಮತ್ಸರೀ । ಕಾಮಿಕ ಹೇವಾ ತಿರಸ್ಕಾರೀ ।
ಪಾಪೀ ಅವಗುಣೀ ವಿಕಾರೀ । ಯಾ ನಾವ ಆಧ್ಯಾತ್ಮಿಕ ॥೪೫॥

ಉತವಣೆ ತಾಠಾ ಕರಕ। ಆವಟಳೇ ಆಣೀ ಲಚಕ ।
ಸುಜೀ ಆಣೀ ಚಾಲಕ । ಯಾ ನಾವ ಆಧ್ಯಾತ್ಮಿಕ ॥೪೬॥

ಸಲ ಆಡವೇ ಗರ್ಭಪಾತ । ಸ್ತನಗುಂತೆ ಸನಪಾತ ।
ಸಂಸಾರಕೋಂಡೆ ಅಪಮೃತ್ಯ । ಯಾ ನಾವ ಆಧ್ಯಾತ್ಮಿಕ ॥೪೭॥

ನಖಿಖ ಆಣೀ ಹಿಂಗುರ್ಡೇ । ಬಾಸ್ಟ ಆಣೀ ಬಾವಡೇ ।
ಉಗೀಚ ದಾಂತಖಿಳ ಪಡೆ । ಯಾ ನಾವ ಆಧ್ಯಾತ್ಮಿಕ ॥೪೮॥

ಝುಡತೀ ಪಾತೀ ಸುಜತೀ ಭವಯಾ । ನೇತ್ರೀ ಹೋತೀ ರಾಂಝುಣವಡೀಯಾ।
ಚಾಳಸೀ ಲಾಗೇ ಪ್ರಾಣಿಯಾ । ಯಾ ನಾವ ಆಧ್ಯಾತ್ಮಿಕ ॥೪೯॥

ವಾಂಗ ತಿಳ ಸುರಮೋ ಲಾಸೇ । ಚಾಮುಖಿಳ ಗಲಂಡೇ ಮಸೇ ।
ಚುಕುರ ಹೋಇಜೆ ಮಾನಸೇ । ಯಾ ನಾವ ಆಧ್ಯಾತ್ಮಿಕ ॥೫೦॥

ನಾನಾ ಘುಗ ಆಣೀ ಆವಾಳೇ । ಅಂಗೀ ದುರ್ಗಂಧೀ ಪ್ರಬಳೇ ।
ಚಾ ಈಚಾಟೀ ಲಾಳ ಗಳೆ । ಯಾ ನಾವ ಆಧ್ಯಾತ್ಮಿಕ ॥೫೧॥

ನಾನಾ ಚಿಂತೇಚೀ ಕಾಜಳೀ । ನಾನಾ ದುಃಖೇ ಚಿತ್ತ ಪೋಳೀ ।
ವ್ಯಾಧೀವಾಂಚೂನ ತಳಮಳೀ । ಯಾ ನಾವ ಆಧ್ಯಾತ್ಮಿಕ ॥೫೨॥

ವೃದ್ಧಪಣೀಚ್ಯಾ ಆಪದಾ । ನಾನಾ ರೋಗ ಹೋತೀ ಸದಾ ।
ದೇಹ ಕ್ಷೀಣ ಸರ್ವದಾ । ಯಾ ನಾವ ಆಧ್ಯಾತ್ಮಿಕ ॥೫೩॥

ನಾನಾ ವ್ಯಾಧೀ ನಾನಾ ದುಃಖೇ । ನಾನಾ ಭೋಗ ನಾನಾ ಖಂಡಕೇ ।
ಪ್ರಾಣೀ ತಳಮಳೀ ಶೋಕೇ । ಯಾ ನಾವ ಆಧ್ಯಾತ್ಮಿಕ ॥೫೪॥

ಐಸಾ ಆಧ್ಯಾತ್ಮಿಕ ತಾಪ । ಪೂರ್ವ ಪಾಪಾಚಾ ಸಂತಾಪ ।
ಸಾಂಗತಾ ಸರೇನಾ ಅಮೂಪ । ದುಃಖಸಾಗರ ॥೫೫॥

ಬಹುತ ಕಾಯ ಬೋಲಾವೇ । ಶ್ರೋತೀ ಸಂಕೇತೇ ಜಾಣಾವೇ ।
ಪುಢೇ ಬೋಲಿಜೆ ಸ್ವಭಾವೇ । ಆದಿಭೌತಿಕ ॥೫೬॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
''ಆಧ್ಯಾತ್ಮಿಕ ತಾಪ ನಿರೂಪಣ'' ನಾಮ ಸಮಾಸ ಷಷ್ಟಮ ಸಮಾಪ್ತ ॥

ದೊಡ್ಡ ಹಲ್ಲಿನವ, ಬಹಳ ಮುಂದೆ ಹಾದ ಹಲ್ಲಿನವ, ಬಹಳ ಉದ್ದ ಮೂಗಿನವ, ಮೂಗಿಲ್ಲದವ [ಬಸಕಾ ಮೂಗಿನವ],ಕಿವಿ ಇಲ್ಲದವ, ಅರ್ಥವಿಲ್ಲದ ಬಡಬಡಿಸುವ ವಟವಟಗುಟ್ಟುವವ]ಅತಿ ಕೃಶ, ಅತಿ ಲಠ್ಠ [೪೩] ಎಬಡ ಮಾತು, ಗುಕ್ಕು ಮಾತು. ಅಸ್ಪಷ್ಟ ಉಚ್ಚಾರದ ಮಾತು. ಅಶಕ್ತ ರೋಗಗ್ರಸ್ತ, ಕುರೂಪಿ, ಡೊಂಕು ಬುದ್ಧಿಯವ, ಮತ್ಸರಿ, ಅತ್ಯಾಶಿ, ಅತಿಸಿಟ್ಟಿನವ. (೪೪) ಸಿಟ್ಟಿನ ಆವೇಶ ಹೊಂದಿದವ, ಅಲ್ಪಸಿಟ್ಟಿನವ,ಪಶ್ಚಾತ್ತಾಪಿ (ಅನುತಾಪಿ) ಮತ್ಸರ ಉಳ್ಳವ, ಕಾಮುಕ (ಹಟಸ್ವಭಾವ), ಹ್ಯಾಂವ ಪಂಥ (ಹೇವಾದವ) ಜದ್ದಿನವ, ತಿರಸ್ಕಾರ ಬುದ್ಧಿಯವ, ಪಾಪಿ, ಅವಗುಣಿ. ವಿಕಾರಗಳಿಗೆ ಆಧೀನನಾದವ, (೪೫) ಸರಿಯಾಗಿ ಏಳಲು ಹಾಗೂ ಕೂಡ್ರಲು ಬರುವದಿಲ್ಲ. ಆಗ ನೋವು ಹೊಡೆತ, ಬಗ್ಗಲಿಕ್ಕೆ (ಬಾಗಲಿಕ್ಕೆ) ಬರುವದಿಲ್ಲ, ಒಳೆದದ್ದು, ತಲೆಗೆ ಪೆಟ್ಟು ಬಿದ್ದು ಆಗುವ ವಿಕಾರ, ಹಿಂಡಿ ಹಿಪ್ಪಿ ಮಾಡಿದಂತೆ ಆಗುವದು, ಬಾವು ಬರುವದು, ಕಾಲಿನ ಸಂಧಿವಾತ ಇವೆಲ್ಲ ಆಧ್ಯಾತ್ಮಿಕ ತಾಪಗಳು. (೪೬) ಸಲ್ಲು ಆಗುವಿಕೆ (ಗರ್ಭಬೆಳೆಯುವದಿಲ್ಲ) ಕೂಸು ಅಡ್ಡ ಬರುವದು (ಹಡೆಯುವಾಗ),ಗರ್ಭಪಾತ ಮೊಲೆಯ ತೊಡಕು (ಗಂಟು) ಸನ್ನಿಪಾತ, ಸಂಸಾರದಲ್ಲಿಯ ಕಷ್ಟ ಅಡಚಣಿಗಳು, ಅಪಮೃತ್ಯು (೪೭) ಉಗುರು ನಂಜು (ವಿಷ) ಆಗಿ ಆಗುವ ಬಾಧೆ, ಜಖಮಿಗೆ ಇಂಗಿನ ಸ್ಪರ್ಶ ಅಥವಾ ಇಂಗು ತಿನ್ನುವದರಿಂದ ಆಗುವ ಅಪಥ್ಯಕಾರಕ ಗಂಟು, (ಉಗುರಿಗೆ ಆಗುವದು) ಹಳಸಿದ (ತಂಗಳ) ಆಹಾರ ಮತ್ತು ಕುಪಥ್ಯದ ಆಹಾರ ತಿಂದು ಪ್ರಕೃತಿ ಕೆಡುವದು, ಕಾರಣವಿಲ್ಲದೆ ಬಾಯಿ ತೆರೆಯುಲಿಕ್ಕೆ ಬರುವದಿಲ್ಲ. (ಹಲ್ಲಿನ ದವಡಿಯ ಏರುಪೇರಿನಿಂದ). (೪೮) ಕಣ್ಣು ರೆಪ್ಪೆಯ ಕೂದಲು ಉದುರುವದು, ಹುಬ್ಬಿನ ಬಾವು, ಕಣಚಿಟ್ಟಲಿ, ಕಣ್ಣಿನ ಪರಿ ವಗ್ಯೆರೆದಿಂದ ಚಾಳೀಸ ಹಚ್ಚುವಂತೆ ಆಗುವದು. (೪೯) ಮೈಮೇಲೆ ಕಪ್ಪು ವರ್ಣದ ಗುಳ್ಳೆ ಏಳುವದು (ಕರಿಯಳ್ಳಿನಂತಹ) ಬಿಳಿಯಕಲೆ, ಕರಿಯ ಕಲೆ, ಚರ್ಮದಲ್ಲಿ ಕುರುವಿನಂತೆ ಆಗುತ್ತದೆ. ನೋವು ಇರುವದಿಲ್ಲ (ವಾಳ) ಕಪಾಳ (ಗಲ್ಲ)ಕ್ಕೆ ಬಾವು ಮೈಮೇಲೆ ಮಾಂಸ ಬೆಳೆಯುವದು, ಮನಸ್ಸಿಗೆ ಭ್ರಮವಾಗುವದು. ಇವೆಲ್ಲ ಅಧ್ಯಾತ್ಮಿಕ ತಾಪಗಳು(೫೦)ಮೈಮೇಲೆ ಆಗುವ ಬಾವು (ಉಬ್ಬುವಿಕೆ), ಮಾಂಸ ವೃದ್ಧಿಯ ಗಂಟು, ಮೈಯಿಂದ ಬಹಳ ದುರ್ಗಂಧ ವಾಸನೆ ಬರುವದು. ತಲೆ ಕೂದಲು ಉದುರುವಿಕೆ, ಬಾಯಿಯಿಂದ ಜೊಲ್ಲು ಸೋರುವಿಕೆ.(೫೧) ಅನೇಕ ಚಿಂತೆಯ ಕಾರಣದಿಂದ ಮುಖ ಕಪ್ಪಾಗುವಿಕೆ, (ಕಳಾರಹಿತ) ಅನೇಕ ದುಃಖದಿಂದ, ಮಾನಸಿಕ ಯಾತನೆಯಿಂದ ಬೆಂದು ಬೆಂಡಾಗುವದು, ಯಾವ ರೋಗವಿಲ್ಲದಿದ್ದರೂ ಜೀವ ತಳಮಳಗೊಳ್ಳುವದು. (೫೨) ಮುಪ್ಪಿನಕಾಲದಲ್ಲಿಯ ಯಾತನೆ [ಕಷ್ಟ] ಸದಾ ಒಂದಿಲ್ಲೊಂದು ರೋಗ ಬರುವದು. ದೇಹ ಸದಾಕಾಲ ಅಶಕ್ತವಾಗಿರುವದು[೫೩]ಅನೇಕ ರೋಗ, ಅನೇಕ ದುಃಖ, ಅನೇಕಭೋಗ,ಅನೇಕ ಜಖಂ[ಪೆಟ್ಟು]ಈ ಎಲ್ಲ ಕಾರಣಗಳಿಂದ ಮನುಷ್ಯನಿಗೆ ದುಃಖವಾಗಿ ಅವನ ಜೀವಕ್ಕೆ ಆಗುವ ತಳ ಮಳ ಇವಕ್ಕೆಲ್ಲ ಅಧ್ಯಾತ್ಮಿಕ ತಾಪವೆಂದು ಅನ್ನುವರು[೫೪] ಅಧ್ಯಾತ್ಮಿಕ ತಾಪವೆಂಬುದು ಹೀಗಿರುತ್ತದೆ. ಪೂರ್ವದಲ್ಲಿ ಮಾಡಿದ ತಾಪ [ಪೂರ್ವ ಕರ್ಮದ ತಾಪ] ಜೋರಾಗಿ ಹೊರಬೀಳುವದು [ಭುಗಿಲ್ಲೆಂದು ಏಳುವದು] ಅದರಿಂದ ಈ ತಾಪವನ್ನು ಅನುಭವಿಸಬೇಕಾಗುವದು. ಇದರ ವರ್ಣನೆಯನ್ನು ಎಷ್ಟು ಮಾಡಿದರೂ ಮುಗಿಯಲಾರದ ದುಃಖದ ಸಾಗರವೇ ಇರುವದು. [೫೫] **ಸಾರಾಂಶ:-** ಬಹಳ ವರ್ಣಿಸುವದೇನೆಂದರೆ,ಶ್ರೋತೃಗಳು ನಿಜಾನುಭವದಿಂದ ಎಲ್ಲವನ್ನೂ ತಿಳಿಯಬೇಕು. ಇನ್ನು ಮೇಲೆ ಮುಂದಿನ ಸಮಾಸದಲ್ಲಿ ಸಹಜವಾದ ಆದಿಭೌತಿಕ ತಾಪದ ವರ್ಣನೆ ಮಾಡುವೆನು. [೫೬]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದ ಮೂರನೆಯ ದಶಕದಲ್ಲಿಯ

"ಅಧ್ಯಾತ್ಮಿಕ ತಾಪ"ವೆಂಬ ಹೆಸರಿನ ಆರನೆಯ ಸಮಾಸವು ಮುಕ್ತಾಯವಾಯಿತು

● ●

### ಸಮಾಸ ಸಪ್ತಮ : ಆಧಿಭೌತಿಕ ತಾಪ

॥ಶ್ರೀರಾಮ॥ ಮಾಗಾ ಜಾಲೇ ನಿರೂಪಣ । ಆಧ್ಯಾತ್ಮಿಕಾಚೇ ಲಕ್ಷಣ ।
ಆತಾ ಆದಿಭೂತಿಕ ತೋ ಕೋಣ । ಸಾಂಗಿಜೇಲ ॥೧॥

॥ಶ್ಲೋಕ॥ ಸರ್ವಭೂತೇನ ಸಂಯೋಗಾತ್ ಸುಖಂ ದುಃಖಂ ಚ ಜಾಯತೇ ।
ದ್ವಿತೀಯು ತಾಪ ಸಂತಾಪಃ ಸತ್ಯಂ ಚೈವಾಧಿಭೌತಿಕಃ ॥

ಸರ್ವ ಭೂತಾಚೇನಿ ಸಂಯೋಗೇ । ಸುಖದುಃಖ ಉಪಜೋ ಲಾಗೇ ।
ತಾಪ ಹೋತಾ ಮನ ಭಂಗೆ । ಯಾ ನಾವ ಆದಿಭೂತಿಕ ॥೨॥
ತರೀ ಯಾ ಆದಿಭೂತಿಕಾಚೇ ಲಕ್ಷಣ । ಸ್ಪಾಂಜಳ ಕರೂ ನಿರೂಪಣ ।
ಜೇಣೇ ಅನುಭವಾಸ ಯೇ ಪೂರ್ಣ । ವೋಳಖೀ ತಾಪತ್ರಯಾಚೀ ॥೩॥
ಠೇಂಚಾ ಲಾಗತೀ ಠೋಡತೀ ಕಾಂಟೇ ವಿರ್ಘುತೀ ಶಸ್ತ್ರಾಂಚೇ ಘಾಯಟೇ ।
ಸಲ ಸಿಲಕಾ ಆಣೀ ಸರಾಂಟೇ । ಯಾ ನಾವ ಆದಿಭೂತಿಕ ॥೪॥

# ದಶಕ ೩. ಸಮಾಸ ೭. ಆದಿ ಭೌತಿಕ ತಾಪ (ನುಡಿ ೮೭)

ದೇಹದ ಅಂತಃಕರುಣದಲ್ಲಿ [ಅಂತರಂಗದಲ್ಲಿ]ಆಗುವ ಹೆಚ್ಚು ಕಡಿಮೆ ಕ್ರಿಯೆಗಳಿಂದ ಎಂಥ ದುಃಖವನ್ನು ಭೋಗಿಸಬೇಕಾಗುವದೆಂಬ ಬಗ್ಗೆ ಹಿಂದಿನ ಸಮಾಸದಲ್ಲಿ ಹೇಳಿರುತ್ತದೆ. ಈಗ ದೇಹದ ಹೊರಗಿನ ಪರಿಸ್ಥಿತಿಯಿಂದ ನಿರ್ಮಾಣವಾಗುವ ದುಃಖಗಳು ಯಾವವು? ಎಂಬ ವರ್ಣನೆ ಮಾಡುತ್ತಾರೆ. ಹೊರಗಿನ ಪರಿಸ್ಥಿತಿಯಲ್ಲಿ ೧]ಅಚೇತನ ಅಂದರೆ ಜಡ, ಚೇತನಾರಹಿತ, ೨] ಸಚೇತನ ಅಂದರೆ ಸಜೀವ, ಚೇತನಾಯುಕ್ತ, ಹೀಗೆ ಭೇದ ಮಾಡಲು ಬರುತ್ತದೆ. ೧] ಅಚೇತನದ ದುಃಖಕಾರಣಗಳು ಅಂದರೆ ಪಂಚಮಹಾಭೂತ [ಪೃಥ್ವಿ, ಆಪ್, ತೇಜ, ವಾಯು, ಆಕಾಶ]ಗಳಿಂದ ಆಗುವ ತಾಪ, ಕಷ್ಟಗಳು. ೨] ಸಚೇತನ ದುಃಖಕಾರಣಗಳು. ಅಂದರೆ ಸಚೇತನವಿರುವ ಜೀವಜಂತು ಕ್ಷುದ್ರ ಪ್ರಾಣಿ, ಕ್ರಿಮಿ ಕೀಟ, ಪಶು, ದನಕರು, ಹಾವು, ಹುಲಿ, ಕರಡಿ ವಗೈರೆ ಯಾವತ್ತೂ ಮೂಕ ಪ್ರಾಣಿಗಳು ಮತ್ತು ಮನುಷ್ಯರು ಇವರಿಂದ ಆಗುವ ದುಃಖವೆಂದು ತಿಳಿಯಬೇಕು. ಮನುಷ್ಯನಿಗೆ ಮನುಷ್ಯನಿಂದ ಆಗುವ ದುಃಖ ಎಲ್ಲಕ್ಕಿಂತ ದುಃಖಸಹ ಅತಿಕಷ್ಟಕರವಿರುವದು. ಶ್ರೀಸಮರ್ಥರು ಕೆಲವೊಂದು ಇಂಥ ದುಃಖದ ಪ್ರಕಾರಗಳ ವರ್ಣನೆ ಮಾಡಿದ್ದನ್ನು ನೋಡಿದರೆ ಮೈಮೇಲೆ ಮುಳ್ಳು ಏಳುತ್ತವೆ. ಇರಲಿ, ಈ ಇಪ್ಪತ್ತನೆಯ ಶತಕದಲ್ಲಿಯು ಮನುಷ್ಯ ಈ ವಿಷಯದಲ್ಲಿ [ಈ ಬಾಬತ್ತಿನಲ್ಲಿ) ಸುಧಾರಿಸಿದ್ದಾನೆ ಎಂದು ಅನ್ನಲು ಬರಲಾರದು. ಶ್ರೀ ಸಮರ್ಥರ ಯಾದಿ ನೆನಪಿನ ಟಿಪ್ಪಣಿಗೆ ಈಗಿನವರು ಇನ್ನಷ್ಟು ಹೆಚ್ಚಿಗೆ ಸೇರಿಸಿದ್ದಾರೆಂದು ಹೇಳಬಹುದು. ಈ ಸಮಾಸದಲ್ಲಿ ಸಹ ಶ್ರೀ ಸಮರ್ಥರ ಅಗಾಧ ವ್ಯವಹಾರ ಜ್ಞಾನದ ಅನುಭವ ನಮಗೆ ಕಂಡು ಬರುವದು.

## ಸಮಾಸ ೭. ಆದಿ ಭೌತಿಕ ತಾಪ [ನುಡಿ ೮೭]

ಹಿಂದಿನ ಸಮಾಸದಲ್ಲಿ ಆಧ್ಯಾತ್ಮಿಕ ತಾಪದ ಲಕ್ಷಣಗಳನ್ನು ಸವಿಸ್ತಾರವಾಗಿ ಹೇಳಿರುತ್ತದೆ. ಈಗ ಆದಿಭೌತಿಕ ತಾಪಗಳು ಯಾವವು ಎಂಬುದನ್ನು ಹೇಳುತ್ತೇನೆ. [೧]

**ಶ್ಲೋಕ:-** ಸರ್ವ ಭೂತೇನ ಸಂಯೋಗಾತ್ ಸುಖಂ ದುಃಖಂ ಚ ಜಾಯತೆ
ದ್ವಿತೀಯ ತಾಪಸಂತಾಪಃ ಸತ್ಯಂ ಚೈವಾಧಿ ಭೌತಿಕ : ॥ ೧ ॥

**ಹಿಂದಿನ ಸಮಾಸದಲ್ಲಿಯ ಶ್ಲೋಕದೊಳಗಿನ ಎರಡನೆಯ ಶ್ಲೋಕದ ಅರ್ಥ:-** ಪಂಚಭೂತ ಮಾತ್ರದ ಅಂದರೆ ಬಾಹ್ಯ ಪದಾರ್ಥಗಳ ಸಂಯೋಗದಿಂದ ಯಾವ ಸುಖ ದುಃಖಗಳು ನಿರ್ಮಾಣವಾಗುವವೋ ಆ ಎರಡನೇ ತಾಪ ಸಂತಾಪಕ್ಕೆ ಯಥಾರ್ಥ ರೀತಿಯಲ್ಲಿ ಆದಿಭೌತಿಕ ತಾಪವೆಂದು ಅನ್ನುವರು. ಸರ್ವಭೂತಗಳ ಸಂಬಂಧ ಕಾರಣದಿಂದ ಅಂದರೆ ಪ್ರಾಣಿ, ಜೀವಜಂತು, ಜಡವಸ್ತುಗಳ ಕಾರಣದಿಂದ ಏನೇನು ಸುಖ ದುಃಖಗಳು ಉತ್ಪನ್ನವಾಗುವವೋ ಅವುಗಳ ಮೂಲಕ ಆಗುವ ತಾಪ ಕಷ್ಟದಿಂದ ಮನಸ್ಸಿಗೆ ದುಃಖವಾಗುತ್ತದೆ. ಸಮಾಧಾನ ಇಲ್ಲದಾಗುತ್ತದೆ. ಇದೇ ಆದಿಭೌತಿಕ ತಾಪವೆನಿಸುವದು. [೨] ಆದಿಭೌತಿಕ ತಾಪದ ಲಕ್ಷಣಗಳನ್ನು ಸರಿಯಾಗಿ, ಸುಲಭವಾಗಿ ತಿಳಿಯುವಂತೆ, ವರ್ಣನೆ ಮಾಡಿ ಹೇಳುವೆನು. ಇವು ತಿಳಿದವೆಂದರೆ ತಾಪತ್ರಯಗಳು ಸಂಪೂರ್ಣ ತಿಳಿಯುವವು.[೩] ಎಡುವುವದು, ಜಜ್ಜುವದು, ಮುಳ್ಳು ಮುರಿಯುವದು, ಶಸ್ತ್ರಾಸ್ತ್ರ ಪ್ರಹಾರದ [ಘಾಯ] ಪೆಟ್ಟು ಬೀಳುವದು. ಶರೀರದಲ್ಲಿ ಸಣ್ಣಕಟ್ಟಿಗೆಯ ಚೂರು, ಮುಳ್ಳು ಕಾಜಿನ ಚೂರು, ವಗೈರೆ ನಟ್ಟು ಅದರ ಒಂದು ಭಾಗ [ಚೂರು] ಒಳಗೆ ಸೇರಿಕೊಳ್ಳುವದು. ಕಬ್ಬಿನ ಸಿಪ್ಪಿ ಮತ್ತು ರವದಿಯಿಂದ ಆಗುವ ಘಾಯ, ಕಟ್ಟಿಗೆಯ ತುದಿ ತಾಕಿ ರಕ್ತದ ಗೆರೆ ಬೀಳುವದು. [ಪರಚಿಕೊಂಡಂತೆ ಗರ ಬೀಳುವದು]. [೪]

ಅಂಗ್ಯಾ ಆಣೀ ಕಾಚಕುಹಿರೀ । ಆವಚಟಾ ಲಾಗೇ ಶರೀರೀ ।
ಗಾಂಧೀಲ ಯೇಊನ ದಂಶ ಕರೀ । ಯಾ ನಾವ ಆದಿಭೂತಿಕ ॥೫॥

ಮಾಶೀ ಗೋಮಾಶೀ ಮೋಹಳಮಾಶೀ। ಮುಂಗೀ ತೇಲಮುಂಗೀ ಡಾಂಸ ದಶೀ ।
ಸೋಟ ಜಳು ಲಾಗೇ ಯಾಶೀ । ಆದಿಭೂತಿಕ ಬೋಲಿಜೇ ॥೬॥

ಪಿಸಾ ಪಿಸೋಳೆ ಚಾಂಚಣ । ಕುಸಳೇ ಮುಂಗಳೇ ಢೇಂಕುಣ ।
ವಿಶೇಷ ಭೋವರ ಗೊಂಚಿಡ ಜಾಣ । ಯಾ ನಾವ ಆದಿಭೂತಿಕ ॥೭॥

ಗೊಂಬೀ ವಿಂಚು ಆಣೀ ವಿಖಾರ । ವ್ಯಾಘ್ರ ಲಾಂಡಿಗೆ ಆಣೀ ಶೂಕರ ।
ಗೌಸಾಯುಳ ಸಾಮರ । ಯಾ ನಾವ ಆದಿಭೂತಿಕ ॥೮॥

ರಾನಗಾಈ ರಾನಮ್ಹೈಸೇ । ರಾನಶಕಟ್ಟ ಆಣೀ ರಿಸೇ ।
ರಾನಹಾತೀ ಲಾವ ಪಿಸೇ । ಯಾ ನಾವ ಆದಿಭೂತಿಕ ॥೯॥

ಸುಸರೀನೇ ಮೋಢೂನ ನೇಲೇ । ಕಾ ತೇ ಆವಚಿತೇ ಬುಡಾಲೇ ।
ಅಥವಾ ಖಳಾಳೀ ಪಡಿಲೇ । ಯಾ ನಾವ ಆದಿಭೂತಿಕ ॥೧೦॥

ನಾನಾ ವಿಖಾರೇ ಆಜಗರ । ನಾನಾ ಮಗರೇ ಜಳಚರ ।
ನಾನಾ ವನಚರೇ ಅಪಾರ । ಯಾ ನಾವ ಆದಿಭೂತಿಕ ॥೧೧॥

ಅಶ್ವ ವೃಷಭ ಆಣೀ ಖರ । ಸ್ವಾನ ಶೂಕರ ಜಂಬುಕ ಮಾರ್ಜರ ।
ಐಸೀ ಬಹುವಿಧ ಕ್ರೂರ । ಯಾ ನಾವ ಆದಿಭೂತಿಕ ॥೧೨॥

ಐಸೀ ಕರ್ಕಶೇ ಭಯಾನಕೇ । ಬಹುವಿಧ ದುಃಖದಾಯಕೇ ।
ದುಃಖೇ ದಾರುಣೇ ಅನೇಕೇ । ಯಾ ನಾವ ಆದಿಭೂತಿಕ ॥೧೩॥

ಭಿಂತೀ ಮಾಳವದೇ ಪಡತೀ । ಕಡೆ ಭುಯೇರೀ ಕೋಸಳತೀ ।
ವೃಕ್ಷ ಅಂಗಾವರೀ ಮೋಡತೀ । ಯಾ ನಾವ ಆದಿಭೂತಿಕ ॥೧೪॥

ಕೋಣೇ ಯೇಕಾಚಾ ಶ್ರಾಪ ಜಡೇ। ಕೋಣೀ ಯೇಕೇ ಕೇಲೇ ಚೇಡೇ ।
ಆಧಾಂತರೀ ಹೋತೀ ವೇಡೇ । ಯಾ ನಾವ ಆದಿಭೂತಿಕ ॥೧೫॥

ಕೋಣೀ ಯೇಕೇ ಚಾಳವಿಲೇ । ಕೋಣೀ ಯೇಕೇ ಭ್ರಷ್ಟವಿಲೇ ।
ಕೋಣೇ ಯೇಕೇ ಧರೂನ ನೇಲೇ । ಯಾ ನಾವ ಆದಿಭೂತಿಕ ॥೧೬॥

ಕೋಣೇ ಯೇಕೇ ದಿಲೇ ವಿಷ । ಕೋಣೇ ಯೇಕೇ ಲಾವಿಲೇ ದೋಷ ।
ಕೋಣೇ ಯೇಕೇ ಘಾತಲೇ ಪಾಶ । ಯಾ ನಾವ ಆದಿಭೂತಿಕ ॥೧೭॥

ಅವಚಿತಾ ಸೇರ ಲಾಗಲಾ । ನೇಣೋ ಬಿಬವಾ ಚಿಡಲಾ ।
ಪ್ರಾಣೇ ಧುರೇ ಜಾಜಾವಲಾ । ಯಾ ನಾವ ಆದಿಭೂತಿಕ ॥೧೮॥

ಶರೀರಕ್ಕೆ ತಗಲಿದರೆ ಉರುಪು ಉಂಟಾಗುವಂತೆ ಮಾಡುವ ಉರಿವ [ಉರಿಮದ್ದಿನ] ಚುರ್ಚಿ ತಪ್ಪಲ ಇತ್ಯಾದಿ ವನಸ್ಪತಿಗಳು ಮೈಗೆ ತಾಗಿ ಉಂಟಾಗುವ ತಾಪ, ಮೈಗೆ ತಾಗಿದರೆ ತುರಿಕೆ, ತಿಂಡಿ ಬಿಡುವ ತುರಿಕೆಯ ವನಸ್ಪತಿ, ಮೈಗೆ ತಾಗುವದು, ಕಡಜೇರಿಗಿ ಹುಳ ಕಡಿಯುವದು, ಇವೆಲ್ಲ ಆದಿಭೌತಿಕ ತಾಪಗಳು. (೫) ನೊಣ, ದನಗಳಿಗೆ ಕಡಿದು ಹುಣ್ಣು ಮಾಡುವಂಥ ನೊಣ,(ಕುರುಡು ನೊಣ),ಜೇನುನೊಣ.ತೊನಸಿ,ಇರುವೆ,ಎಣ್ಣೆ ಇರುವೆ, ಮಚ್ಛರ ಗುಂಗಾಡು (ಡಾಂಸ) ಇವುಗಳ ಕಡಿತ, ರಕ್ತ ಹೀರುವ (ಕುಡಿಯುವ) ಉಣ್ಣೆ, ತಗಣಿ ಮತ್ತು ಕಲ್ಲತಗಣಿ, ಅಬಕಾರ ಹಾಗೂ ಜಿಗಳಿ ಇವು ಮೈಗೆ ಹತ್ತಿಕೊಳ್ಳುವದು. (೬) ಮೆಣಸಿನ ಹುಳದಂತಹ ಕಡಿಯುವ ಒಂದು ಕ್ಷುದ್ರಜೀವ (ಒಂದು ಗಂಡು, ಒಂದು ಹೆಣ್ಣು ಕೆಂಪಿರುವೆ, ಚುಚ್ಚುವ ಪ್ರಾಣಿ ಇದರ ಹಿಂಬದಿಯಲ್ಲಿ ಮುಳ್ಳಿನಂತೆ ಇರುವದು) ಕಟ್ಟಿರುವೆ, ತಗಣಿ, ಇಸಬು ರೋಗ ಉತ್ಪನ್ನ ಮಾಡುವ ಕ್ರಿಮಿ, ಗುಂಗೀಹುಳ, ಹಾಲುಣ್ಣಿ (ಗೋಚೀಡ) ದನದ ಮೈಯಲ್ಲಿದ್ದು ಕಡಿಯುವ ಒಂದು ಪ್ರಾಣಿ. (೭) ಬಹಳ ಕಾಲಿನ ಪ್ರಾಣಿ, (ಝುರಿ) ಚೇಳು, ಹಾವು, ಹುಲಿ, ತೋಳ, ಕಾಡ ಹಂದಿ, ಸಾಳು ಜಾತಿಯ ಒಂದು ಪಕ್ಷಿ, ಅಥವಾ ಒಂದು ಪ್ರಾಣಿ ಟಿಸಿಲುಕೋಡಿನ ಚಿಗರಿಯ ಜಾತಿಯ ಪ್ರಾಣಿ, ಸಾರಂಗ. (೮) ಅಡವಿ ಆಕಳ, (ಕಾಡಾಕಳ) ಕಾಡೆಮ್ಮೆ, ಕಾಡೆತ್ತು, ಕರಡಿ, ಕಾಡಾನೆ, ಏದು, ಪಕ್ಕಗಳಿಗೆ ಮುಳ್ಳಿರುವ ಪಕ್ಷಿ, ಇತ್ಯಾದಿ ಹುಳುಗಳು ಹಾಗೂ ಪ್ರಾಣಿಗಳ ಕಡಿತ ಮತ್ತು ಜನಾವರಗಳಿಂದಾಗುವ ಹೊಡೆತ. (೯) ಮೊಸಳೆಯು ಹಿಡಿದು ಎಳೆಯುವದು, ಒಮ್ಮಿಂದೊಮ್ಮೆಲೇ ನೀರಿನಲ್ಲಿ ಮುಳುಗುವದು, ಕಾಲುಜಾರಿ ಹಳ್ಳದ ನೀರಿನಲ್ಲಿ ಬೀಳುವದು. (೧೦) ವಿಷಾರಿ ಸರ್ಪ, ಹೆಬ್ಬಾವು, ಮುಸಳಿ, ಇತರ ಜಲಚರ ಪ್ರಾಣಿ, ಅಡವಿಯಲ್ಲಿರುವ ಅನೇಕ ಜನಾವರ, ವಗೈರೆಗಳಿಂದ ದುಃಖವಾಗುವದು. ಇವೆಲ್ಲ ಆದಿಭೌತಿಕ ತಾಪಗಳು. (೧೧) ಕುದುರೆ, ಎತ್ತು, ಕತ್ತೆ, ನಾಯಿ, ಹಂದಿ, ನರಿ, ಬೆಕ್ಕು ಮತ್ತು ಅನೇಕ ಪ್ರಕಾರದ ಕ್ರೂರ ಪಶು ಪ್ರಾಣಿಗಳಿಂದ ದುಃಖ ಒದಗಿ ಬರುವದು. (೧೨) ಇಂಥ ಕರ್ಕಶ, ಭಯಂಕರ ಮತ್ತು ನಾನಾರೀತಿಯಿಂದ ಕಷ್ಟಪಡಬೇಕಾಗುವ ಅನೇಕ ಅಸಹ್ಯ ದುಃಖಗಳು. (೧೩) ಗೋಡೆ, ಛಪ್ಪರ (ದಾಬೆ) ಅಥವಾ ಮಾಳಿಗೆ (ಇಮಾರತಿಯ ಮೇಲ್ಭಾಗ) ಇವು ಮೈಮೇಲೆ ಬೀಳುವದು. ನದಿ, ಹಳ್ಳ, ಗುಡ್ಡದ ಓರೆ ಕುಸಿದು ಬೀಳುವದು, ಗುಹೆ, ನೆಲ, ಮನೆಯ ಮಾಳಿಗೆ ಮೈಮೇಲೆ ಕುಸಿದು ಬೀಳುವದು, (ಗುಹೆ ನೆಲಮನೆಯ ಮಾಳಿಗೆ ಕುಸಿದು ಬೀಳುವದು) ಗಿಡಗಳು ಮುರಿದು ಮೈಮೇಲೆ ಬಿದ್ದು ಕೈಕಾಲು ಮುರಿಯುವದು. (೧೪) ಯಾರದಾದರೂ ಶಾಪದ ಬಾಧೆ ಆಗುವಿಕೆ, ಯಾರಾದರೂ ಮಾಡಿದ ಮಾಟ ಮದ್ದು, ಯಂತ್ರಗಳಿಂದ ತ್ರಾಸು ಆಗುವದು, ಕಾರಣವಿಲ್ಲದೆ ಹುಚ್ಚು ಹಿಡಿಯುವದು, ಇವೆಲ್ಲ ಆದಿಭೌತಿಕ ತಾಪಗಳು. (೧೫)ಯಾರಾದರೂ ಮೋಸಗೊಳಿಸುವದು, ಧರ್ಮಭ್ರಷ್ಟಗೊಳಿಸುವದು,ಯಾರಾದರೂ ಹಿಡಿದುಕೊಂಡು ಒಯ್ಯುವದು(೧೬)ಯಾರಾದರೂವಿಷ ಕೊಡುವದು,ಯಾರಾದರೂ ಸುಳ್ಳುಆರೋಪ ಹೊರಿಸುವದು, ಯಾರಾದರೂ ಉರುಲು(ನೇಣು)ಹಾಕುವದು(೧೭)ತಿಳಿಯದೇ ಕಳ್ಳಿಯಗಿಡದ ಹಾಲು, ರಸ, ಮೈಗೆ ಹತ್ತುವದು, ಕೇರೆಣ್ಣೆ ಹತ್ತುವದು, ಹೊಗೆಯಿಂದ ಜೀವ ಗಾಬರಿಗೊಳ್ಳುವದು. (೧೮)

ಇಂಗಳಾವರೀ ಪಾಯ ಪಡೇ । ಶಿಳೇಖಾಲೇ ಹಾತ ಸಾಂಪಡೇ।
ಧಾವತಾ ಆಡಖುಳೇ ಪಡೇ । ಯಾ ನಾವ ಆದಿಭೂತಿಕ ॥೧೯॥
ವಾಪೀ ಕೂಪ ಸರೋವರ । ಗರ್ತಾ ಕಡಾ ನದೀ ತೀರ ।
ಆವಚಿತೇ ಪಡೇ ಶರೀರ । ಯಾ ನಾವ ಆದಿಭೂತಿಕ ॥೨೦॥
ದುರ್ಗಾಖಾಲೇ ಕೋಸಳತೀ । ಝಾಡಾವರೂನ ಪಡತೀ ।
ತೇಣೇ ದುಃಖೇ ಆಕ್ರಂದತೀ । ಯಾ ನಾವ ಆದಿಭೂತಿಕ ॥೨೧॥
ಸೀತೇ ವೋಠ ತರಕತೀ । ಹಾತ ಪಾವ ಟಾಂಕಾ ಫುಟತೀ ।
ಚೀಖಲ್ಯಾ ಜೀವ್ಹಾಳ್ಯಾ ಲಾಗತೀ । ಯಾ ನಾವ ಆದಿಭೂತಿಕ ॥೨೨॥
ಅಶನಪಾನಾಚಿಯೇ ವೇಳೇ । ಉಷ್ಣ ರಸೇ ಜೀವ್ಹಾ ಪೋಳೇ ।
ದಾಂತ ಕಸ್ಕರೆ ಆಣೀ ಹರಳೇ । ಯಾ ನಾವ ಆದಿಭೂತಿಕ ॥೨೩॥
ಪರಾಧೀನ ಬಾಳಪಣೀ । ಕುಶಬ್ದಮಾರಜಾಚಣೀ ।
ಅನ್ನವಸ್ತ್ರೇವೀಣ ಆಳಣೀ । ಯಾ ನಾವ ಆದಿಭೂತಿಕ ॥೨೪॥
ಸಾಸುರವಾಸ ಗಾಲೋರೇ । ಠುಣಕೇ ಲಾಸಣೇ ಚಿಮೋರೇ ।
ಆಲೇ ರುದನ ನ ಧರೇ । ಯಾ ನಾವ ಆದಿಭೂತಿಕ ॥೨೫॥
ಚುಕತಾ ಕಾನ ಪಿಳಿತೀ । ಕಾ ತೋ ಡೋಳಾ ಹಿಂಗ ಘಾಲಿತೀ ।
ಸರ್ವಕಾಳ ಧಾರಕೀ ಧರಿತೀ । ಯಾ ನಾವ ಆದಿಭೂತಿಕ ॥೨೬॥
ನಾನಾ ಪ್ರಕಾರೀಚೇ ಮಾರ । ದುರ್ಜನ ಮಾರೀತೀ ಅಪಾರ ।
ದುರೀ ಅಂತರೇ ಮಾಹೇರ । ಯಾ ನಾವ ಆದಿಭೂತಿಕ ॥೨೭॥
ಕರ್ಣ ನಾಸಿಕ ವಿಂಧಿಲೇ । ಬಳೇಚೇ ಧರೂನ ಗೋಂಧಿಲೇ ।
ಖೋಡೀ ಜಾಲಿಯಾ ಪೋಳವಿಲೇ । ಯಾ ನಾವ ಆದಿಭೂತಿಕ ॥೨೮॥
ಪರಚಕ್ರೀ ಧರೂನ ನೇಲೇ । ನೀಚ ಯಾತೀಸ ದಿಧಲೇ ।
ದುರ್ದಶಾ ಹೋಊನ ಮೇಲೇ । ಯಾ ನಾವ ಆದಿಭೂತಿಕ ॥೨೯॥
ನಾನಾ ರೋಗ ಉದ್ಭವಲೇ । ಜೇ ಆಧ್ಯಾತ್ಮಕೀ ಬೋಲಿಲೇ ।
ವೈದ್ಯ ಪಂಚಾಕ್ಷರೀ ಆಣಿಲೇ । ಯಾ ನಾವ ಆದಿಭೂತಿಕ ॥೩೦॥
ನಾನಾ ವೇಥೇಚೇ ನಿರ್ಶನ । ವ್ಹಾವಯಾ ಔಷಧ ದಾರುಣ ।
ಬಳಾತ್ಕಾರೇ ದೇತೀ ಜಾಣ । ಯಾ ನಾವ ಆದಿಭೂತಿಕ ॥೩೧॥
ನಾನಾ ವಲ್ಲೀಚೇ ರಸ । ಕಾಢೇ ಗರ್ಗೋಡ ಕರ್ಕಶ ।
ಘೇತಾ ಹೋಯೇ ಕಾಸಾವೀಸ । ಯಾ ನಾವ ಆದಿಭೂತಿಕ ॥೩೨॥

ದೊಡ್ಡ ಚೇಳಿನ ಮೇಲೆ ಕಾಲಿಡುವದು. ಕಲ್ಲಿನ ಕೆಳಗೆ ಕೈಸಿಗುವದು, ಓಡುವಾಗ ಎಡವಿ ಮುಗ್ಗರಿಸಿ ಬೀಳುವದು. (೧೯) ಬಾವಿ, ಕೆರೆ, ಹೌದು, ದೊಡ್ಡ ತಗ್ಗು, ದಂಡೆ, ಓರೆ, ನದಿಯ ದಂಡೆ ಇತ್ಯಾದಿಯಲ್ಲಿ ಏಕಾಏಕಿ [ಒಮ್ಮಿಂದೊಮ್ಮೆಲೆ] ಶರೀರ ಬೀಳುವದು. [೨೦] ಕಿಲ್ಲೆ [ಕೋಟೆ]ಯ ಮೇಲಿಂದ ಕೆಳಗೆ ಬೀಳುವದು. ಗಿಡದ ಮೇಲಿಂದ ಬೀಳುವದು. ಈ ಎಲ್ಲವುಗಳ ದುಃಖದಿಂದ ದೊಡ್ಡಧ್ವನಿಯಿಂದ ಅಳುವದು. ಇವೆಲ್ಲ ಆದಿ ಭೌತಿಕ ತಾಪಗಳು. [೨೧] ಚಳಿಯಿಂದ ತುಟಿ ಒಡೆಯುವದು, ಕೈಕಾಲು, ಹಿಮ್ಮಡ ಒಡೆಯುವದು, ಸೀಳು ಬಿಡುವದು, ಕೈಕಾಲು ಬೆರಳುಗಳ ಸಂದಿನಲ್ಲಿ ಸೆಲಿತು (ಸತತ ನೀರಿನ ಸಂಪರ್ಕದಿಂದ) ಸೀಳು ಬಿದ್ದು ಅದರ ಘಾಯದಲ್ಲಿ ಕೀವು ಆಗುವದು, [೨೨] ತಿನ್ನುವಾಗ, ಕುಡಿಯುವಾಗ ಅತಿ ಸುಡುವದು, ಬಾಯಲ್ಲಿ ಹೋಗಿ ನಾಲಿಗೆ ಸುಡುವದು, ಹಲ್ಲಿಗೆ ಹಲ್ಲು [ಗಟಗರದು] ಘರ್ಷಿಸುವದು, ಹಲ್ಲಲ್ಲಿ ತೂತು ಬೀಳುವದು,ಗೆರೆಬೀಳುವದು, ಹಲ್ಲಿನ ಪೆಣಿಕೆ ಹಾರುವದು [೨೩] ಚಿಕ್ಕವರಿದ್ದಾಗ ಪರಾವಲಂಬಿ ಇರುವದರಿಂದ ಆಗ ಬೈಗಳನ್ನು ಅನುಭವಿಸುವದು, ಅನ್ನ ಹಾಗೂ ವಸ್ತ್ರದ ಅಭಾವವಿರುವದು. [೨೪] ಅತ್ತೆಯ ಮನೆಯಲ್ಲಿರುವ ಸೊಸೆಗೆ ಗಲ್ಲ ಹಿಂಡುವದು, ಗುದ್ದುವದು, ಬರೆ ಕೊಡುವದು, ಚಿವುಟುವದು, ಇತ್ಯಾದಿ ಅತ್ತೆಯ ಮನೆಯವರ ಕಾಟದಿಂದ ಆಗುವ ಕಷ್ಟ ಮತ್ತು ಅಳುವನ್ನು ತಡೆದುಕೊಳ್ಳಲಿಕ್ಕೆ ಆಗುವದಿಲ್ಲ. [೨೫] ತಪ್ಪು ಮಾಡಿದ ಕೂಡಲೇ ಕಿವಿ ಹಿಂಡುವದು, ಅಥವಾ ಕಣ್ಣಲ್ಲಿ ಇಂಗು ಹಾಕುವದು, ಸಕ್ತ ನಿರ್ಬಂಧದಲ್ಲಿ ಇಡುವದು. ಇವೆಲ್ಲ ಆದಿ ಭೌತಿಕ ತಾಪಗಳು. [೨೬] ದುಷ್ಟರಾದವರು ನಾನಾ ತರದಲ್ಲಿ ಹೊಡೆ ಬಡೆ ಮಾಡುವದು, ಸೊಸೆಯನ್ನು ತವರು ಮನೆಗೆ ಕಳಿಸದಿರುವದು, [೨೭] ಕಿವಿ, ಮೂಗುಗಳಲ್ಲಿ ತೂತು ತೆಗೆಯುವದು. ಜುಲುಮೆಯಿಂದ ಹಚ್ಚೆ ಚುಚ್ಚುವದು, ಒಂದು ಸಣ್ಣ ತಪ್ಪಿಗೂ ಸಪ ಬೆಂಕಿ [ಕೆಂಡ]ಯಿಂದ ಮೈಗೆ ಚುರುಕು ಕೊಡುವದು. (೨೮) ಶತ್ರುಗಳ ದಾಳಿ (ಹಲ್ಲೆ)ಯಲ್ಲಿ ಕೈಸೆರೆ ಸಿಗುವದು, ನೀಚ ಜಾತಿಯ ಜನರನ್ನು ಮಾರಿ ಬಿಡುವದು. [ಗುಲಾಮಗಿರಿ] ತತ್‌ಪರಿಣಾಮದಿಂದ ದುರ್ದೆಸೆಗೊಂಡು ಮರಣ ಹೊಂದುವದು. (೨೯) ಆಧ್ಯಾತ್ಮಿಕ ತಾಪದಲ್ಲಿ ಹೇಳಿದ ಅನೇಕ ರೋಗ ಬರುವದು, ಮತ್ತು ಅದರ ಸಲುವಾಗಿ ವೈದ್ಯ ಮಾಂತ್ರಿಕರನ್ನು ಕರೆಸುವದು. (೩೦) ರೋಗ ನೆಟ್ಟಗಾಗಲೆಂದು ಅತಿ ಕಡಕ [ತೀವ್ರ]ಔಷಧವನ್ನು ಜಬರದಸ್ತಿ [ಜುಲುಮೆ]ಯಿಂದ ಕುಡಿಸುವದು. (೩೧) ಬೇರೆ ಬೇರೆ ವನಸ್ಪತಿಯ ರಸ, ಕಾಢೆ [ಕಷಾಯ] ಕಲ್ಕ [ಅರೆದು ತಯಾರಿಸಿದ ದಟ್ಟ ಔಷಧ] ಇವುಗಳನ್ನು ತೆಗೆದುಕೊಳ್ಳುವಾಗ ಜೀವ ತಳಮಳಗೊಳ್ಳುವದು, ಇವೆಲ್ಲ ಆದಿ ಭೌತಿಕ ತಾಪಗಳು. (೩೨)

ಢಾಳ ಆಣೀ ಉಖಾಳ ದೇತೀ । ಪಥ್ಯ ಕರೀಣ ಸಾಂಗತೀ ।
ಅನುಪಾನ ಚುಕತಾ ವಿಪತ್ತೀ । ಯಾ ನಾವ ಆದಿಭೂತಿಕ ॥೩೩॥
ಘಾಡ ರಕ್ತ ಘಾಂಸಣೀ । ಗುಲಡಾಗಾಂಚೀ ಜಾಚಣೀ ।
ತೇಣೇ ದುಃಖೇ ದುಃಖವೇ ಪ್ರಾಣೀ । ಯಾ ನಾವ ಆದಿಭೂತಿಕ ॥೩೪॥
ರುಚಿಕ ಬಿಬವೇ ಘಾಲೀತೀ । ನಾನಾ ದುಃಖೇ ದಡಪೇ ದೇತೀ ।
ಸಿರಾ ತೋಡಿತೀ ಜಳವಾ ಲಾವೀತೀ । ಯಾ ನಾವ ಆದಿಭೂತಿಕ ॥೩೫॥
ಬಹು ರೋಗ ಬಹು ಔಷಧೇ । ಸಾಂಗತಾ ಅಪಾರೇ ಅಗಾಧೇ ।
ಪ್ರಾಣೀ ದುಖವೇ ತೇಣೇ ಖೇದೇ । ಯಾ ನಾವ ಆದಿಭೂತಿಕ ॥೩೬॥
ಬೋಲಾವಿಲಾ ಪಂಚಾಕ್ಷರೀ । ಧೂರವಾರ ಪೀಡಾ ಕರೀ ।
ನಾನಾ ಯಾತನಾ ಚತುರೀ । ಆದಿಭೂತಿಕ ಜಾಣಿಜೇ ॥೩೭॥
ದರವಡೇ ಘಾಲೂನಿಯಾ ಜನಾ । ತಸ್ಕರ ಕರಿತೀ ಯಾತನಾ ।
ತೇಣೇ ದುಃಖ ಹೋಯೇ ಮನಾ । ಯಾ ನಾವ ಆದಿಭೂತಿಕ ॥೩೮॥
ಅಗ್ನೀಚೇನಿ ಜ್ವಾಳೇ ಪೋಳೇ । ತೇಣೇ ದುಃಖೇ ಪ್ರಾಣೀ ಹರಂಬಳೇ ।
ಹಾನೀ ಜಾಲೀಯಾ ವಿವಳೇ । ಯಾ ನಾವ ಆದಿಭೂತಿಕ ॥೩೯॥
ನಾನಾ ಮಂದಿರೇ ಸುಂದರೇ । ನಾನಾ ರತ್ನಾಂಚೀ ಭಾಂಡಾರೇ ।
ದಿವ್ಯಾಂಬರೇ ಮನೋಹರೇ । ದಗ್ಧ ಹೋತೀ ॥೪೦॥
ನಾನಾ ಧಾನ್ಯೇ ನಾನಾ ಪದಾರ್ಥ । ನಾನಾ ಪಶು ನಾನಾ ಸ್ವಾರ್ಥ ।
ನಾನಾ ಪಾತ್ರೇ ನಾನಾ ಅರ್ಥ । ಮನುಷ್ಯೇ ಭಸ್ಮ ಹೋತೀ ॥೪೧॥
ಆಗ್ನ ಲಾಗಲಾ ಸೆತೀ । ಧಾನ್ಯೇ ಬಣಬ್ಯಾ ಆಣೀ ಖಡಕುತೀ ।
ಯುಕ್ಷದಂಡ ಜಳೋನ ಜಾತೀ । ಆಕಸ್ಮಾತ ॥೪೨॥
ಐಸಾ ಆಗ್ನ ಲಾಗಲಾ । ಅಥವಾ ಕೋಣೇ ಲಾವಿಲಾ ।
ಹಾನೀ ಜಾಲೀ ಕಾ ಪೋಳಲಾ । ಯಾ ನಾವ ಆದಿಭೂತಿಕ ॥೪೩॥
ಐಸೇ ಸಾಂಗತಾ ಬಹುತ । ಹೋತೀ ವನ್ಹೀಚೇ ಆಘಾತ ।
ತೇಣೇ ದುಃಖೇ ದುಃಖವೇ ಚಿತ್ತ । ಯಾ ನಾವ ಆದಿಭೂತಿಕ ॥೪೪॥
ಹಾರಪೇ ವಿಸರೇ ಆಣೀ ಸಾಂಡೇ । ನಾಸೇ ಗಾಹಾಳೇ ಫುಟೇ ಪಡೇ ।
ಅಸಾಧ್ಯ ಹೋಯೇ ಕೋಣೇ ಕಡೇ । ಯಾ ನಾವ ಆದಿಭೂತಿಕ ॥೪೫॥
ಪ್ರಾಣೀ ಸ್ಥಾನಭ್ರಷ್ಟ ಜಾಲೇ । ನಾನಾ ಪಶೂತೇ ಚುಕಲೇ ।
ಕನ್ಯಾಪುತ್ರ ಗಾಹಾಳಲೇ । ಯಾ ನಾವ ಆದಿಭೂತಿಕ ॥೪೬॥

ಜುಲಾಬ ಆಗುವದಕ್ಕೆ ಅಥವಾ ವಾಂತಿ ಆಗುವದಕ್ಕೆ ಔಷಧ ಕೊಡುವದು, ಕಠಿಣ ಪಥ್ಯ ಮಾಡಲಿಕ್ಕೆ ಹೇಳುವದು. ಔಷಧ ಸೇವಿಸುವ ರೀತಿ [ವಿಧಾನ] ತಪ್ಪಿದಾಗ ಆಗುವ ಕ್ಲೇಶ. (೩೩) ಶರೀರದ ಮೇಲಿನ ಚರ್ಮ ಹರಿಯುವದು, ಶಸ್ತ್ರದಿಂದ ಶರೀರದಲ್ಲಿಯ ರಕ್ತ ತೆಗೆಯುವದು, ಕಾಧ ಸಲಾಖೆ [ಒಂದು ಬಗೆಯ ಆಯುಧ] ಯಿಂದ ಒತ್ತುವದು, ಅಂದರೆ ಶರೀರವನ್ನು ಒತ್ತಿ ಹಿಡಿದು ತೂತು ಹಾಕುವದು. (೩೪) ಶರೀರಕ್ಕೆ ಎಕ್ಕೆ ಗಿಡದ ಹಾಲು ಹಚ್ಚುವದು, ಕೇರು ಹಚ್ಚುವದು, ಅನೇಕ ಪ್ರಕಾರದ ದುಃಖದ ಆಘಾತವಾಗುವದು, ನರ ಹರಿದು [ನರ ಕತ್ತರಿಸಿ] ಅವಕ್ಕೆ ಜಿಗಳಿ ಹಚ್ಚುವದು. (೩೫) ಅನೇಕಾನೇಕ ರೋಗಗಳು ಮತ್ತು ಅವುಗಳಿಗೆ ಅನೇಕಾನೇಕ ಔಷಧಗಳಿರುವವು. ಅವೆಲ್ಲವನ್ನು ಹೇಳಬೇಕೆಂದರೆ ಅವು ಅಪಾರವಿರುವವು. ಒಟ್ಟಿನಲ್ಲಿ ಇವೆಲ್ಲವುಗಳಿಂದ ಯಾತನೆಯಾಗುವದು. (೩೬) ಒಬ್ಬ ಮಾಂತ್ರಿಕನನ್ನು ಕರೆದಾಗ ಅವನು ಅತಿ ಹೊಗೆಯನ್ನು ಹಾಕಿದಾಗ ಆಗುವ ಯಾತನೆ ಅಲ್ಲದೇ ಇನ್ನೂ ಅನೇಕ ಪ್ರಕಾರದ ಯಾತನೆಗಳಿರುವವು. ಜಾಣರಾದವರು ಇವನ್ನೆಲ್ಲ ಆದಿಭೌತಿಕ ತಾಪವೆಂದು ತಿಳಿಯಬೇಕು. (೩೭) ಕಳ್ಳ ದರೋಡೆ ಹಾಕುತ್ತಾನೆ. ಮತ್ತು ಜನರನ್ನು ಪೀಡಿಸುತ್ತಾನೆ. ಇದರಿಂದ ಮನಸ್ಸಿಗೆ ದುಃಖವಾಗುತ್ತದೆ. ಇದೆಲ್ಲ ಆದಿಭೌತಿಕ ತಾಪಗಳು. [೩೮] ಅಗ್ನಿಜ್ವಾಲೆಯ ಝಳ ತಾಗಿ ವ್ಯಾಕುಲಗೊಳ್ಳುವದು, ಲುಕ್ಸಾನ [ಹಾನಿ] ಆದದ್ದಕ್ಕೆ ಸಂಕಟ ಪಡುವದು.[೩೯] ಅನೇಕ ಅತಿಸುಂದರ ಗೃಹಗಳು, ಮುತ್ತು ರತ್ನದ ಸಂಗ್ರಹ, ಸುಂದರವಾದ ಮತ್ತು ಬಸು ಬೆಲೆಯ ವಸ್ತುಗಳು [೪೦] ಧಾನ್ಯ. ಪದಾರ್ಥ, ಪಶು ಮನೆಯಲ್ಲಿ ಕೂಡಿಟ್ಟ ಹಣ ಪಾತ್ರೆಗಳು, ಇತರ ವಸ್ತುಗಳು ಹಾಗೂ ಮನುಷ್ಯರು. (೪೧) ಹೊಲವಲ್ಲಿಯ ಧಾನ್ಯ, ಹುಲ್ಲಿನ ಬಣವೆ, ನಾನಾ ತರಹದ ಹೊಟ್ಟಿನ ಸಂಗ್ರಹದ ಬಣವೆ, ಕಬ್ಬು ಇತ್ಯಾದಿ ಎಕದಂ (ಒಮ್ಮಿಂದೊಮ್ಮೆ) ಸುಟ್ಟು ಹೋಗುವದು. [೪೨] ಈ ಬೆಂಕಿ ತನ್ನಿಂದ ತಾನೇ ಹೊತ್ತಿತೋ ಅಥವಾ ಯಾರಾದರೂ ಮುದ್ದಾಂ ಹಚ್ಚಿದರೋ ಎಂಬ ಪ್ರಶ್ನೆಯನ್ನು ಬಿಟ್ಟರೂ ಸಹ ಈ ಬೆಂಕಿಯಿಂದ ಆರ್ಥಿಕ [ಲುಕ್ಸಾನ] ಹಾನಿ ಮತ್ತು ಮನುಷ್ಯರು ಸುಟ್ಟುಕೊಳ್ಳುವದು. [೪೩] ಬೆಂಕಿ ಹತ್ತಿ ಆಗುವ ಆಘಾತಗಳು ಬಹಳಷ್ಟು ಇರುವವು. ಆದರೆ ಇದರಿಂದ ಮನುಷ್ಯನ ಮನಸ್ಸಿನ ಮೇಲೆ ಆಗುವ ಯಾತನೆಯು ಆದಿಭೌತಿಕ ತಾಪವೆನಿಸುವದು. [೪೪] ವಸ್ತು [ಪದಾರ್ಥ] ಅಪಹಾರಗೊಳ್ಳುವದು, ಮರೆಯುವದು, ಕಳೆದುಕೊಳ್ಳುವದು, ನಾಶವಾಗುವದು, [ನಿರುಪಯುಕ್ತ]ಇಲ್ಲದಂತಾಗುವದು, ಒಡೆಯುವದು, ಬೀಳುವದು, ತಿರುಗಿ ಪಡೆಯಲು ಅಸಾಧ್ಯವಾಗುವಿಕೆ. [೪೫] ಮನುಷ್ಯ ಸ್ಥಾನಭ್ರಷ್ಟ ಅಥವಾ ಪದಭ್ರಷ್ಟಗೊಳ್ಳುವದು, ಜನಾವರಗಳು ತಪ್ಪಿಸಿಕೊಂಡು ಹೋಗುವದು. ಇಲ್ಲದಂತಾಗುವದು, ಹುಡುಗ, ಹುಡುಗಿ ಇವರು [ಬೇಪತ್ತಾ] ಕಣ್ಮರೆ ಆಗುವದು. [೪೬]

ತಸ್ಕರ ಅಥವಾ ದಾವೇದಾರ । ಅವಚಿತಾ ಕರಿತೀ ಸಂವ್ಹಾರ ।
ಲುಟಿತೀ ಘರೇ ನೇತೀಖಿಲ್ಲಾರ । ಯಾ ನಾವ ಆದಿಭೂತಿಕ ॥೪೭॥
ನಾನಾ ಧಾನ್ಯೇ ಕೇಳೀ ಕಾಪಿತೀ । ಪಾನಮಳಾ ಮೀಠ ಘಾಲೀತೀ ।
ಐಸೇ ನಾನಾ ಆಘಾತ ಕರಿತೀ । ಯಾ ನಾವ ಆದಿಭೂತಿಕ ॥೪೮॥
ಸೈಂದ ಉಚಲೇ ಖಾಣೋರೀ । ಸುವರ್ಣಪಂಥೀ ಭುರರೇಕರೀ ।
ಠಕು ಸಿಂತರು ವರಪೇಕರೀ । ವರಪಾ ಘಾಲಿತೀ ॥೪೯॥
ಗಶೀಥೋಡೆ ದ್ರವ್ಯ ಸೋಡಿತೀ । ನಾನಾ ಅಳಂಕಾರ ಕಾಢಿತೀ ।
ನಾನಾ ವಸ್ತು ಮೂಷಕ ನೇತೀ । ಯಾ ನಾವ ಆದಿಭೂತಿಕ ॥೫೦॥
ವೀಜ ಪಡೆ ಹಿಂವ ಪಡೆ । ಪ್ರಾಣೀ ಪ್ರಜನೀ ಸಾಂಪಡೆ ।
ಕಾ ತೋ ಮಹಾಪುರೀ ಬುಡೇ । ಯಾ ನಾವ ಆದಿಭೂತಿಕ ॥೫೧॥
ಭೋವರೆ ವಳಣೇ ಆಣೀ ಧಾರ । ವ್ಹೊಸಾಣೇ ಲಾಟಾ ಅಪಾರ ।
ವೃಶ್ಚಿಕ ಗೊಂಬೀ ಆಜಗರ । ನಾಹೋನ ಜಾತೀ ॥೫೨॥
ತಯಾಮಧ್ಯೇ ಪ್ರಾಣೀ ಸಾಂಪಡಲಾ । ಖಡಕೀ ಭೇಟೀ ಆಡಕಲಾ ।
ಬುಡತ ಬುಡತ ವಾಚಲಾ । ಯಾ ನಾವ ಆದಿಭೂತಿಕ ॥೫೩॥
ಮನಾಸಾರಿಖಾ ನಸೆ ಸಂಸಾರ । ಕುರೂಪ ಕರ್ಕಶ ಸ್ತ್ರೀ ಕ್ರೂರ ।
ವಿಧವಾ ಕನ್ಯಾ ಮೂರ್ಖ ಪುತ್ರ । ಯಾ ನಾವ ಆದಿಭೂತಿಕ ॥೫೪॥
ಭೂತ ಪಿಶಾಚ್ಯ ಲಾಗಲೇ । ಅಂಗಾವರೂನ ವಾರೇ ಗೇಲೇ ।
ಅಬದ್ಧ ಮಂತ್ರೇ ಪ್ರಾಣೀ ಚಳಲೇ । ಯಾ ನಾವ ಆದಿಭೂತಿಕ ॥೫೫॥
ಬ್ರಾಹ್ಮಣ ಸಮಂಧ ಶರೀರೀ । ಬಹುಸಾಲ ಪೀಡಾ ಕರೀ ।
ಶನೇಶ್ವರಾಚಾ ಧೋಕಾ ಧರೀ । ಯಾ ನಾವ ಆದಿಭೂತಿಕ ॥೫೬॥
ನಾನಾ ಗ್ರಹೇ ಕಾಳವಾರ । ಕಾಳತಿಥೀ ಘಾತಚಂದ್ರ ।
ಕಾಳವೇಳ ಘಾತ ನಕ್ಷತ್ರ । ಯಾ ನಾವ ಆದಿಭೂತಿಕ ॥೫೭॥
ಸಿಂಕ ಪಿಂಗಳಾ ಆಣೀ ಪಾಲೀ । ವ್ಹೋಖಟೀ ಹೋಲಾ ಕಾಕ ಕಲಾಲೀ ।
ಚಿಂತಾ ಕಾಜಳೀ ಲಾಗಲೀ । ಯಾ ನಾವ ಆದಿಭೂತಿಕ ॥೫೮॥
ದಿವಟಾ ಸರವದಾ ಭಾಕೂನ ಗೇಲಾ । ಅಂತರೀ ಧೋಕಾ ಲಾಗಲಾ ।
ದುಃಸ್ವಪ್ನೇ ಜಾಜಾವಲಾ । ಯಾ ನಾವ ಆದಿಭೂತಿಕ ॥೫೯॥
ಭಾಲು ಭುಂಕೆ ಸ್ವಾನರಡೆ । ಪಾಲೀ ಅಂಗಾವರೀ ಪಡೆ ।
ನಾನಾ ಚಿನ್ಹೇ ಚಿಂತಾ ಪವಾಡೆ । ಯಾ ನಾವ ಆದಿಭೂತಿಕ ॥೬೦॥

ಕಳ್ಳರು ಅಥವಾ ಶತ್ರುಗಳು ಅಕಸ್ಮಾತ್ ದಾಳಿ ಮಾಡುವದು ಮತ್ತು ಸಂಹಾರ ಮಾಡುವದು, ಮನೆ ಲೂಟಿ ಮಾಡುವದು, ಜನಾವರಗಳನ್ನು ಓಡಿಸಿಕೊಂಡು ಹೋಗುವದು. [೪೭] ಹೊಲವಲ್ಲಿಯ ಬೆಳೆಯನ್ನು ಕೊಯ್ದು ಒಯ್ಯುವದು, ಬಾಳೆಯ ಗಿಡಗಳನ್ನು ಕೊಯ್ದು ಒಯ್ಯುವದು, ತಿನ್ನುವ ಎಲೆ ಬಳ್ಳಿ ಬುಡಕ್ಕೆ ಉಪ್ಪು ಹಾಕಿ ನಾಶಗೊಳಿಸುವದು, ಆದಿಭೌತಿಕ ತಾಪಗಳು. [೪೮] ಘಸಾಯಿಸಿ [ಕಪಟತನದಿಂದ] ಲೂಟಿ ಮಾಡುವದು, ಕಣ್ಣು ತಪ್ಪಿಸಿ ಒಯ್ಯುವದು, ಕನ್ನ ಹಾಕುವವ, ಅತ್ಯಾಸೆಯಿಂದ ತಿನ್ನುವ ಪದಾರ್ಥ ಕಳವು ಮಾಡುವವ, ಹಲಕಾ ಧಾತುವಿನಿಂದ ಬಂಗಾರ ಮಾಡುವ ವಿದ್ಯೆ ಬಲ್ಲವ,[ಕಿಮಯಾಗಾರ]ಭ್ರಮೆಗೊಳಿಸುವವ,ಠಕ್ಕ,ಬದ್ಮಾಷ, ಮೋಸಗಾರ, ಲೂಟಿ ದರೋಡೆಮಾಡುವವರು ಇತ್ಯಾದಿಜನರುದಾಳಿಮಾಡುವದು,ಲೂಟಿಮಾಡುವದುಮತ್ತುಘಸಾಯಿಸುವದು[೪೯] ಗಂಟುಗಳನ್ನು ಕಳವು ಮಾಡುವವನು, ಅದರಲ್ಲಿರುವ ದ್ರವ್ಯ ಮತ್ತು ದಾಗೀನುಗಳನ್ನು ಲಬಾಡತನದಿಂದ ಎತ್ತಿ ಹಾಕುವದು, ಇಲಿಗಳು ಅನೇಕ ವಸ್ತುಗಳನ್ನು ಒಯ್ಯುವದು.(೫೦)ಮೈಮೇಲೆ ವಿದ್ಯುತ್ (ಸಿಡಿಲು) ಬಡೆಯುವದು, ಅತ್ಯಂತ ಚಳಿ ಬೀಳುವದು, ಭಾರೀ ಮಳೆಯಲ್ಲಿ ಸಿಕ್ಕಿಕೊಳ್ಳುವದು, ನೀರಿನ ಮಹಾಪೂರದಲ್ಲಿ ಮುಳುಗುವದು (೫೧) ನದಿಯ ಎರಡು ಪ್ರವಾಹ ಜೋರಿನಿಂದ ಸಂಧಿಸುವ ಸ್ಥಳ, (ನೀರಿನ ಸುಳಿ, ತಿರುಗುಣಿ ಮಡು) ಅಂಕುಡೊಂಕಾಗಿ ಜೋರಿನಿಂದ ಹರಿಯುವ ಪ್ರವಾಹ, ತುಂಬಿ ಹರಿಯುವ ನೀರಿನ ಪ್ರವಾಹ. ನೀರಿನ ಪ್ರವಾಹದಲ್ಲಿ ತೇಲಿ ಬರುವ ವಸ್ತುಗಳು, ಅಂದರೆ ಕಟ್ಟಿಗೆ ವಗೈರೆಗಳ ದೊಡ್ಡ ಲಾಟು ಇರುತ್ತದೆ. ಇದರ ಕೂಡ ಚೇಳು, ಝುರಿ, ಅನೇಕ ಕಾಲಿನ ಪ್ರಾಣಿ, ಹಾವು (ಇರುತ್ತವೆ) ಹರಿದು ಹೋಗುತ್ತವೆ. ಇವೆಲ್ಲ ಆದಿಭೌತಿಕ ತಾಪಗಳು. (೫೨) ಇಂಥದರಲ್ಲಿ ಸಿಕ್ಕು ಬೀಳುವದು, ತೇಲುತ್ತ ತೇಲುತ್ತ ಪ್ರವಾಹ ಮಧ್ಯದಲ್ಲಿರುವ ಒಂದು ಕಲ್ಲಿನ ದಿಬ್ಬ (ಎತ್ತರ ಸ್ಥಳ)ದ ದಂಡೆಗೆ ಅಥವಾ ಗಿಡಗಂಟೆಗಳಿದ್ದ ದ್ವೀಪಕ್ಕೆಬಂದು ಸಿಕ್ಕಿಕೊಳ್ಳುವದು. ಕೊನೆಗೆಮುಳುಗು ಮುಳಗುತ್ತ ಪಾರಾಗುವದು.(೫೩) ಕುರೂಪಿ, ಕರ್ಕಶಿ, ಕ್ರೂರ, ಸ್ವಭಾವದ ಹೆಂಡತಿ ದೊರಕುವದು. ಮಗಳು ವಿಧವೆಯಾಗುವದು, ಮಗ ಮೂರ್ಖನಾಗುವದು, ಇವುಗಳಿಂದ ಮನಪಸಂದ (ಮನಸ್ಸಿಗೆ ಒಗ್ಗುವ) ಸಂಸಾರವಿರುವದಿಲ್ಲ. (೫೪) ಭೂತ ಪಿಶಾಚಿ ಒಡಿದುಕೊಳ್ಳುವದು,ಮೈಯಲ್ಲಿ ಗಾಳಿ ಸಂಚಾರ, ಮಂತ್ರ ಪಠಣ, ಕ್ರಮದಲ್ಲಿ ತಪ್ಪು ಆಗಿ ಭ್ರಮೆ ಆಗುವಿಕೆ.(೫೫) ಯಾವುದೋ ಒಂದು ಬ್ರಹ್ಮರಾಕ್ಷಸ ಮೈಯಲ್ಲಿ ಸೇರಿ ಬಹಳ ವರ್ಷಗಳಿಂದ ತ್ರಾಸು ಕೂಡುವದು, ಶನಿಯ ವಕ್ರದೃಷ್ಟಿ (ಶನಿದೆಸೆ ಚನ್ನಾಗಿರುವದಿಲ್ಲ) ಬೀಳುವಿಕೆ. (೫೬) ಇತರ ಗ್ರಹಗಳದೂ ಕೆಟ್ಟ ದೃಷ್ಟಿ ಬೀಳುವಿಕೆ, ಅಶುಭವಾರ, ಅಶುಭ ನಕ್ಷತ್ರ, ಚಂದ್ರನ ಅಶುಭ ಯೋಗವಿರುವ ಕಾಲ, ಘಾತನಕ್ಷತ್ರ (೫೭) ಸೀನುವ ಅಪಶಕುನ, ಹಾಲಕ್ಕಿ,(ಪಿಂಗಳಾ)ಶಕುನ(ಟಿ.ಟಿ.ಟಿಂವಕ್ಕಿ)ಹಲ್ಲಿಯ ಲೊಚಲೊಚ ಶಬ್ದ(ಹಲ್ಲಿಯ ಶಕುನ) ಅಪಶಕುನಕರವಾದ ನಿಂದ್ಯ ಪಕ್ಷಿ, (ಗೂಗೆ) ಕಾಗೆ ಇವೆಲ್ಲ ಅಶುಭ, ಅಪಶಕುನ ಪಕ್ಷಿಗಳು, ಇವುಗಳ ಕಲಕಲ ಇತ್ಯಾದಿ ಅಪಶಕುನದ ಶಬ್ದ ಕೇಳಿ ಮನಸ್ಸಿಗೆ ಚಿಂತೆ, ಕಾಳಜಿ ಆಗುವದು. ಇವೆಲ್ಲ ಆದಿಭೌತಿಕ ತಾಪಗಳು. (೫೮) ರಾತ್ರಿಯ ಕಾಲದಲ್ಲಿ ದಿವಟಿಗೆ [ಹಿಲಾಲ]ಯ ಬೆಳಕಿನಲ್ಲಿ ಭವಿಷ್ಯ ಹೇಳುತ್ತ ತಿರುಗುವವ, ಮತ್ತು ಬುಡುಬಡು ಎಂಬ ಶಬ್ದ ಬರುವ ಸಾಧನದಿಂದ ನಸುಕಿನಲ್ಲಿ ಭವಿಷ್ಯ ಹೇಳುತ್ತ ತಿರುಗುವ ಬುಡು ಬುಡಿಕ್ಯಾ ಈ ಇಬ್ಬರೂ ಏನಾದರೂ ಭವಿಷ್ಯ [ಅಶುಭ ಭವಿಷ್ಯ] ಹೇಳಿ ಹೋದರೆ ಮನಸ್ಸಿಗೆ ಆಗುವ ವ್ಯಥೆ [ಕಷ್ಟ] ತನ್ಮೂಲಕ ಕೆಟ್ಟ ಸ್ವಪ್ನ ಬಿದ್ದು ಭಯಪಡುವದು. [೫೯] ನರಿಯ ಕೂಗು, ನಾಯಿಯ ಅಳುವಿಕೆ, ಹಲ್ಲಿ ಮೈಮೇಲೆ ಬೀಳುವದು, ಇಂಥ ಅನೇಕ ಪ್ರಕಾರದ ಅಪಶಕುನಗಳಿಂದ ಮನಸ್ಸಿಗೆ ಚಿಂತೆಯಾಗುವದು. (೬೦)

ಬಾಹೇರಿ ನಿಘತಾ ಅಪಶಕುನ । ನಾನಾ ಪ್ರಕಾರೇ ನಿಭಿನ್ನ ।
ತೇಣೇ ಗುಣೇ ಭಂಗೇ ಮನ । ಯಾ ನಾವ ಆದಿಭೂತಿಕ ॥೬೧॥
ಪ್ರಾಣೀ ಬಂದೀ ಸಾಂಪಡಲಾ । ಯಾತನೇ ಪರಪಡಾ ಜಾಲಾ ।
ನಾನಾ ದುಃಖೇ ದುಃಖವಲಾ । ಯಾ ನಾವ ಆದಿಭೂತಿಕ ॥೬೨॥
ಪ್ರಾಣೀ ರಾಜದಂಡ ಪಾವತ । ಜೇರಬಂದ ಚಾಬುಕ ವೇತ ।
ದರೇಮಾರ ತಳವೇಮಾರ ಹೋತ। ಯಾ ನಾವ ಆದಿಭೂತಿಕ ॥೬೩॥
ಕೊರಡೆ ಪಾರಂಬ್ಯಾ ಫೋಕ । ಬಹು ಪ್ರಕಾರೇ ಅನೇಕ ।
ಬಹು ತಾಡಿತೀ ಆದಿಭೂತಿಕ । ಯಾ ನಾವ ಬೋಲಿಜೇ ॥೬೪॥
ಮೋಘರೀ ಮಾರ ಬುಧಲೇ ಮಾರ। ಚೌಖರೂನ ಡಂಗಾರಣೇ ಮಾರ ।
ಬುಕ್ಕ್ಯಾ ಗಚಾಂಡ್ಯಾ ಗುಡಘೇಮಾರ। ಯಾ ನಾವ ಆದಿಭೂತಿಕ ॥೬೫॥
ಲಾತಾ ತಪರಾಖಾ ಸೇಣ ಮಾರ । ಕಾನಖಡೆ ದಗಡ ಮಾರ ।
ನಾನಾ ಪ್ರಕಾರೀಚೆ ಮಾರ । ಯಾ ನಾವ ಆದಿಭೂತಿಕ ॥೬೬॥
ಟಾಂಗಣೇ ಟಿಪರ್ಯಾ ಪಿಛೋಡೆ । ಬೇಡೀ ಬುಧನಾಲ ಕೋಲದಂಡೆ ।
ರಕ್ಷಣನಿಗ್ರಹ ಚಹೂಕಡೆ । ಯಾ ನಾವ ಆದಿಭೂತಿಕ ॥೬೭॥
ನಾಕವಣೀ ಚುನವಣೀ । ಮೀಠವಣೀ ರಾಯವಣೀ ।
ಗುಳವಣ್ಯಾಚೀ ಜಾಚಣೀ । ಯಾ ನಾವ ಆದಿಭೂತಿಕ ॥೬೮॥
ಜಳಾಮಧ್ಯೇ ಬುಚಕುಳಿತೀ । ಹಸ್ತೀಪುಢೇ ಬಾಂಧೋನ ಟಾಕಿತೀ ।
ಹಾಕಿತೀ ಛಳಿತೀ ಯಾತಾಯಾತೀ । ಯಾ ನಾವ ಆದಿಭೂತಿಕ ॥೬೯॥
ಕರ್ಣಛೇದ ಘ್ರಾಣಛೇದ । ಹಸ್ತಛೇದ ಪಾದಛೇದ ।
ಜಿವ್ಹಾಛೇದ ಅಧರಛೇದ । ಯಾ ನಾವ ಆದಿಭೂತಿಕ ॥೭೦॥
ತೀರಮಾರ ಸುಳೀ ದೇತೀ । ನೇತ್ರ ವೃಷಣ ಕಾಢಿತೀ ।
ನಖೋನಖೀ ಸುಯಾ ಮಾರಿತೀ । ಯಾ ನಾವ ಆದಿಭೂತಿಕ ॥೭೧॥
ಪಾರಡ್ಯಾಮಧ್ಯೇ ಘಾಲಣೇ । ಕಾ ಕಡೇಲೋಟ ಕರಣೇ ।
ಕಾ ಭಾಂಡ್ಯಾಮುಖೇ ಉಡವಣೇ । ಯಾ ನಾವ ಆದಿಭೂತಿಕ ॥೭೨॥
ಕಾನೀ ಖುಂಟ್ಯಾ ಆದಳಿತೀ । ಅಪಾನೀ ಮೇಖಾ ಮಾರಿತೀ ।
ಖಾಲ ಕಾಢೂನ ಟಾಕಿತೀ । ಯಾ ನಾವ ಆದಿಭೂತಿಕ ॥೭೩॥
ಭೋಂತ ಆಣೀ ಬೋಟಬೋಟೀ । ಅಥವಾ ಗಳ ಘಾಲಣೇ ಕಂಠೀ ।
ಸಾಂಡಸ ಲಾಊನ ಆಟಾಟೀ । ಯಾ ನಾವ ಆದಿಭೂತಿಕ ॥೭೪॥

ಮನೆಯಿಂದ ಹೊರಬಿದ್ದಕೂಡಲೇ ನಾನಾಪ್ರಕಾರದ ವಿಚಿತ್ರ ಅಪಶಕುನಗಳಾಗಿ ಮನಸ್ಸು ಉದಾಸೀನವಾಗುವದು.(೬೧) ಬಂದೀಖಾನೆಯಲ್ಲಿರುವದು(ಕೈದು ಆಗುವದು)ಅಲ್ಲಿ ಅನೇಕಯಾತನೆಗಳನ್ನು ಅನುಭವಿಸಬೇಕಾಗುವದು.ಅನೇಕ ದುಃಖ ಗಳಿಂದ ಕಷ್ಟಪಡುವದು.(೬೨)ರಾಜನಕಡೆಯಿಂದ ಶಿಕ್ಷೆಯಾಗುವದು,ಕುದುರೆಹತ್ತುವಾಗ ಉಪಯೋಗಿಸುವ ಜೇರಬಂಡ ಎಂಬ ತೊಗಲಿನ ಪಟ್ಟಿ ಅಥವಾ ನೂಲಿನ ಪಟ್ಟಿಯಿಂದ ಚಾಬುಕ.(ಬಾರುಕೋಲು)ಬೆತ್ತ, ಬಡಿಗೆ, ಛಡಿ,ಇವುಗಳಿಂದ ಹೊಡೆತ ಬೀಳುವದು, ಕಂದಕದಲ್ಲಿ ನೂಕುವದು, ಕಾದ ಕಬ್ಬಿಣದ ತಗಡಿನ ಮೇಲೆ ನಿಲ್ಲಿಸಿ ಹೊಡೆಯುವದು. (೬೩) ಆಲದ ಮರದಲ್ಲಿಯ ಜಡೆ (ಆಗಂತುಕ-ಬೇರು ಬಿಳಿಲು)ಗಳಿಂದ, ಹುಣಶಿ ಜಬರಿ, ಲೆಕ್ಕೆಯ ಜಬರಿಯಂತಹವುಗಳಿಂದ ಇಂಥ ಅನೇಕ ಸಾಧನಗಳಿಂದ ಬಹಳಷ್ಟು ಹೊಡೆಯುವದು. ಇವೆಲ್ಲ ಆದಿಭೌತಿಕ ತಾಪಗಳು. (೬೪) ದಪ್ಪ ಬಡಿಗೆಯಂತಹ, ಕಟ್ಟಿಗೆಯಂತಹ (ಮುದ್ಗಲ)ದಿಂದ ಬಡೆಯುವದು, ಬುದ್ಧಣಿಕೆ, ಬುದ್ಧಣಿಗೆಯಲ್ಲಿಯ ಕುಪ್ಪಿಯಲ್ಲಿ ಮದ್ದು ತುಂಬಿ ಅದನ್ನು ಮನುಷ್ಯನಿಗೆ ಕಟ್ಟಿ ಅದಕ್ಕೆ ಬೆಂಕಿ ಹಚ್ಚುವದು. ನಾಲ್ಕು ಬಾಜೂಗಳಿಂದ ಹಗ್ಗ ಬಿಗಿದು ನಿಲ್ಲಿಸಿ ಬಡೆಯುವದು, ಗುದ್ದಿ ಗುದ್ದಿ ಹೊಡೆಯುವದು. (೬೫) ಒದೆಯುವದು, ಕೈಯಿಂದ ಹೊಡೆಯುವದು, ಶಗಣಿಯಿಂದ ಒಗೆಯುವದು, ಕಿವಿಯಲ್ಲಿ ಕಲ್ಲು ಹರಳು ತುಂಬುವದು, ಕಲ್ಲಿನಿಂದ ಹೊಡೆಯುವದು, ಇಂಥ ಅನೇಕ ಪ್ರಕಾರದ ಹೊಡೆತಬಡಿತವನ್ನು ಭೋಗಿಸಬೇಕಾಗುವದು(೬೬)ತೂಗು ಹಾಕುವದು.ಒತ್ತುವದು(ಚಿಮುಟಾ ಪಕ್ಕಡಗಳಿಂದ ಹಿಚಕುವದು)ಅಥವಾ ಬೆರಳ ಸಂದಿನಲ್ಲಿ ಕಟ್ಟಿಗೆ ಇಟ್ಟು ಹಿಚಕುವದು, ಎರಡೂ ಕೈಗಳನ್ನು ಹಿಂದೆ ಮಾಡಿ ಜಗ್ಗಿ ಕಟ್ಟುವರು. ಬೇಡಿ (ಸಂಕೋಲೆ) ಹಾಕುವದು. ಗಿಡದ ಟೊಂಗೆ ಬಗ್ಗಿಸಿ ಅದಕ್ಕೆ ಕಟ್ಟಿ ಹೊಡೆಯುವದು, ಸರಬಡಿಗಿ ಹಾಕುವದು, ಕಠಿಣ ಪಹರೆಯಲ್ಲಿಟ್ಟು ಎಷ್ಟೂ ಸರಿದಾಡದಂತೆ ಮಾಡಿ ನೋಡಿಕೊಳ್ಳುವದು. (೬೭) ಸುಣ್ಣದ ನೀರು, ಉಪ್ಪಿನ ನೀರು, ಸಾಸಿವೆಯ ನೀರು, ಬೆಲ್ಲದ ನೀರು ಇತ್ಯಾದಿ ನೀರನ್ನು ಮೂಗಿನಲ್ಲಿ, ಕಿವಿಯಲ್ಲಿ ಗಂಟಲದಲ್ಲಿ ಸುರುವಿದರೆ [ಹಾಕಿದರೆ] ಅದರಿಂದಾಗುವ ತಾಪ, ಇವೆಲ್ಲ ಆದಿಭೌತಿಕ ತಾಪಗಳು· (೬೮) ನೀರಿನಲ್ಲಿ ಮುಳುಗಿಸುವದು, ಕೈಕಾಲು ಕಟ್ಟಿ ಆನೆಯ ಮುಂದೆ ಒಗೆಯುವದು, ದನಗಳಿಗೆ ಹೊಡೆದಂತೆ ಬಾರಕೋಲಿನಿಂದ ಹೊಡೆಯುವದು, ಓಡಾಡಿಸುವದು. ಮತ್ತು ಎಳೆಸುವದು ಜಗ್ಗಿಸುವದು. ಇಂಥವೇ ಕಾಟ (ತ್ರಾಸು) ಕಷ್ಟ ಕೊಡುವದು, ಕಾರಣವಿಲ್ಲದೇ ಸುಮ್ಮನೆ ಪೀಡಿಸಿ ಕಷ್ಟಕೊಡುವದು [೬೯] ಕಿವಿ, ಮೂಗು, ಕೈಕಾಲು, ನಾಲಿಗೆ, ತುಟಿ ಇವುಗಳನ್ನು ಛೇದಿಸುವದು ಕತ್ತರಿಸುವದು. [೭೦) ಬಾಣದಿಂದಹೊಡೆಯುವದು ಚುಚ್ಚುವದು ತಿವಿಯುವದು ಕಣ್ಣು [ಕೀಳುವದು] ತೆಗೆಯುವದು, ವೃಷಣ ತೆಗೆಯುವದು,ಬೆರಳಿನ ಉಗುರುಗಳಲ್ಲಿ ಸೂಜಿ ಚುಚ್ಚುವದು.(೭೧) ತಕ್ಕಡಿಯ ಪರಡಿಯಲ್ಲಿಟ್ಟು ತೂಗುವದು, [ಪ್ರತಿದಿನ ತೂಕ ಕಡಿಮೆ ಆಗುವಂತೆ ಕಷ್ಟ ಕೊಡುವದು]. ಗುಡ್ಡದ [ತುದಿಯಿಂದ] ಮೇಲಿಂದ ಕೆಳಕ್ಕೆ ನೂಕುವದು, ತೋಫಿನ ಬಾಯಿಗೆ ಕಟ್ಟಿ ಹಾರಿಸುವದು. (೭೨) ಕಿವಿಯಲ್ಲಿ ಗೂಟ ಬಡಿಯುವದು, ಅಪಾನದ್ವಾರದಲ್ಲಿ ಗೂಟ ಬಡಿಯುವದು, ಮೈಮೇಲಿನ ಚರ್ಮ ಸುಲಿಯುವದು, ಇವೆಲ್ಲ ಆದಿಭೌತಿಕ ತಾಪಗಳು. (೭೩) ಚೀಲದಲ್ಲಿ ತುರುಕಿ ಹಾಕಿ ಬಡೆಯುವದು, ಬೆರಳ ಮೇಲೆ ಹೊಡೆಯುವದು, ಜಜ್ಜಿ ಬಿಡುವದು, ಕೊರಳಿಗೆ [ಕುತ್ತಿಗೆಗೆ] ಉರಲು ಹಾಕುವದು. ಚಿಮುಟಾ ಇಕ್ಕಳ ಕಾಸಿ ಅದರಿಂದ ವೃಷ್ಣ ಅಥವಾ ಸ್ತನ ಇತರ ಗುಪ್ತಾಂಗಗಳನ್ನು ಹಿಚಕುವದು. (೭೪)

ಸಿಸೇ ಪಾಜಣೇ ವಿಷ ದೇಣೇ । ಅಥವಾ ಸಿರಛೇದ ಕರಣೇ ।
ಕಾ ಪಾಯಾತಳೀ ಘಾಲಣೇ । ಯಾ ನಾವ ಆದಿಭೂತಿಕ ॥೭೫॥
ಸರಡ ಮಾಂಜರೇ ಭರಿತೀ । ಅಥವಾ ಫಾಂಸೀ ನೇಊನ ದೇತೀ ।
ನಾನಾಪರೀ ಪೀಡಾ ಕರಿತೀ । ಯಾ ನಾವ ಆದಿಭೂತಿಕ ॥೭೬॥
ಸ್ವಾನಪ್ರಳಯೋ ವ್ಯಾಘ್ರಪ್ರಳಯೋ । ಭೂತಪ್ರಳಯೋ ಸುಸರೀಪ್ರಳಯೋ ।
ಶಸ್ತ್ರಪ್ರಳಯೋ ವಿಝುಪ್ರಳಯೋ । ಯಾ ನಾವ ಆದಿಭೂತಿಕ ॥೭೭॥
ಪೀರಾ ವೋಢೂನ ಘೇತೀ । ಟೇಂಭೇ ಲಾಊನ ಭಾಜಿತೀ ।
ಐಶಾ ನಾನಾ ವಿಪತ್ತೀ । ಯಾ ನಾವ ಆದಿಭೂತಿಕ ॥೭೮॥
ಮನುಷ್ಯಹಾನೀ ವಿತ್ತಹಾನೀ । ವೈಭವಹಾನೀ ಮಹತ್ವಹಾನೀ ।
ಪಶುಹಾನೀ ಪದಾರ್ಥಹಾನೀ । ಯಾ ನಾವ ಆದಿಭೂತಿಕ ॥೭೯॥
ಬಾಳಪಣೇ ಮರೇ ಮಾತಾ । ತಾರುಣ್ಯಪಣೇ ಮರೇ ಕಾಂತಾ ।
ವೃದ್ಧಪಣೇ ಮೃತ್ಯ ಸುತಾ । ಯಾ ನಾವ ಆದಿಭೂತಿಕ ॥೮೦॥
ದುಃಖ ದಾರಿದ್ರ ಆಣೀ ರುಣ । ವಿದೇಶ ಪಳಣೇ ನಾಗವಣ ।
ಆಪದಾ ಅನುಪತ್ತಿ ಕದಾನ್ನ । ಯಾ ನಾವ ಆದಿಭೂತಿಕ ॥೮೧॥
ಆಕಾಂತ ವಾಖಾಪ್ರಳಯೋ । ಯುದ್ಧ ಹೋತಾ ಪರಾಜಯೋ ।
ಜಿವಲಗಾಚಾ ಹೋಯೋ ಕ್ಷಯೋ । ಯಾ ನಾವ ಆದಿಭೂತಿಕ ॥೮೨॥
ಕಠೀಣ ಕಾಳ ಆಣೀ ದುಷ್ಕಾಳ । ಸಾಶಂಕ ಆಣೀ ವೋಖಟೇ ವೇಳ ।
ಉದ್ವೇಗ ಚಿಂತೇಚೇ ಹಳಾಳ । ಯಾ ನಾವ ಆದಿಭೂತಿಕ ॥೮೩॥
ಘಾಣಾ ಚರಖೀ ಪಿರಕಲಾ । ಚಾಕಾಖಾಲೇ ಸಾಂಪಡಲಾ ।
ನಾನಾ ವನ್ಹೀತ ಪಡಿಲಾ । ಯಾ ನಾವ ಆದಿಭೂತಿಕ ॥೮೪॥
ನಾನಾ ಶಸ್ತ್ರೇ ಭೇದಿಲಾ । ನಾನಾ ಸ್ವಾಪದೀ ಭಕ್ಷಿಲಾ ।
ನಾನಾ ಬಂದೀ ಪಡಿಲಾ । ಯಾ ನಾವ ಆದಿಭೂತಿಕ ॥೮೫॥
ನಾನಾ ಕುವಾಸೇ ನಿರ್ಬುಜೇ । ನಾನಾ ಅಪಮಾನೇ ಲಾಜೇ ।
ನಾನಾ ಶೋಕೇ ಪ್ರಾಣೀ ಝುಜೇ । ಯಾ ನಾವ ಆದಿಭೂತಿಕ ॥೮೬॥
ಐಸೆ ಸಾಂಗತಾ ಅಪಾರ । ಆಹೇತ ದುಃಖಾಚೇ ಡೋಂಗರ ।
ಶ್ರೋತೀ ಜಾಣಾವಾ ವಿಚಾರ । ಆದಿಭೂತಿಕಾಚಾ ॥೮೭॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
ಆದಿಭೂತಿಕ ತಾಪ ನಿರೂಪಣ ನಾಮ ಸಮಾಸ ಸಪ್ತಮ ॥

ಸೀಸ ಎಂಬ ಧಾತುವನ್ನು ಕಾಸಿ ಕುಡಿಸುವದು, ತೀಕ್ಷ್ಣ ವಿಷ ಕುಡಿಸುವದು, ತಲೆ ಹಾರಿಸುವದು, ಮೈಮೇಲೆ ಮನುಷ್ಯರಿಂದ ಕಚಪಚ ತುಳಿಸುವದು, ಅಥವಾ ಇಮಾರತಿಯ ಪಾಯಾದಲ್ಲಿ ಜೀವಂತ ಹೂಳಿ ಮನೆ ಕಟ್ಟಿಸುವದು. (೭೫) ಮೈಮೇಲೆ ಹಾಕಿಕೊಂಡ ಅರಿವೆ, ಅಂಗಿ, ಚಣ್ಣ ವಗೈರೆಯಲ್ಲಿ ಓತೀಕಾಟ, ಡೊಣ್ಣೆಕಾಟ ಬಿಡುವದು, ಮನುಷ್ಯನ ಜೊತೆಗೆ ಹುಚ್ಚು ಹಿಡಿದ ಅಥವಾ ಪ್ರಕ್ಷುಬ್ಧ ಬೆಕ್ಕನ್ನು ಕೋಣೆಯಲ್ಲಿ ಹಾಕಿ ಕೋಣೆಯ ಬಾಗಿಲು ಹಾಕುವದು. ಫಾಸಿಯ ಮೇಲೆ ನಿಲ್ಲಿಸುವದು, [ಫಾಸಿ ಕೊಡುವದು] ಇಂಥ ಇತರ ಅನೇಕ ಪ್ರಕಾರದ ತೋಂದರೆಗಳನ್ನು ಕೊಡುವದು. (೭೬) ನಾಯಿ, ಹುಲಿ, ಭೂತಪಿಶಾಚಿ, ನಕ್ರ [ಮೊಸಳಿ] ಶಸ್ತ್ರ, ಅತಿಗಾಳಿ [ವಿಧ್ವಂಪ್ರಳಯ] ಇವುಗಳ ಅತಿರೇಕದಿಂದ ಜೀವಿತದ ಹಾನಿ ಆಗುವಿಕೆ. (೭೭) ಮೈಮೇಲಿನ ನರಗಳನ್ನು ಜಗ್ಗಿ ಕತ್ತರಿಸುವದು, ಕಕ್ಕಡ ಅಥವಾ ದಿವಟಿಗೆಯಿಂದ ಮೈಮೇಲೆ ಚುರುಕು ಬರೆ ಕೊಡುವದು, ಮತ್ತು ಸುಡುವದು. ಇಂಥವೇ ಅನೇಕ ಯಾತನೆಗಳನ್ನು ಅನುಭವಿಸುವದು, ಇವೆಲ್ಲ ಆದಿಭೌತಿಕ ತಾಪಗಳು (೭೮) ಮನುಷ್ಯ. ದ್ರವ್ಯ, ವೈಭವ, ದೊಡ್ಡಿಸ್ತನ, ಜನಾವರ ಮತ್ತು ಮಹತ್ವವುಳ್ಳ ಪದಾರ್ಥಗಳಂಥವುಗಳ ಹಾನಿ ಆಗುವಿಕೆ. (೭೯) ಚಿಕ್ಕಂದಿನಲ್ಲಿ ತಾಯಿ ಸಾಯುವದು, ತಾರುಣ್ಯದಲ್ಲಿ ಹೆಂಡತಿ ಸಾಯುವದು. ಮುಪ್ಪಿನ ಕಾಲದಲ್ಲಿ ಮಗ ಸಾಯುವದು. (೮೦) ದುಃಖ,ದಾರಿದ್ರ್ಯ, ಸಾಲ, ಪರದೇಶಕ್ಕೆ ಓಡಿ ಹೋಗುವದು, ಲೂಟಿಯಾಗಿ ಸರ್ವಸ್ವವನ್ನು ಕಳೆದುಕೊಂಡು ಬರಿಗೈಯಾಗುವದು. ಸಂಕಟಗಳು ಬರುವದು. ಮೈಮೇಲೆ ತಪ್ತ, ಒಜ್ಜೆಯ ಪದಾರ್ಥ ಬೀಳುವದು, ಕೆಟ್ಟ ಅನ್ನ ತಿನ್ನುವ ಪ್ರಸಂಗ ಬರುವಿಕೆ. (೮೧) ಕಾಲರಾ. (ವಿಷೂಚಿಕಾ, ಮಹಾಮಾರಿ) ರೋಗದ (ಸಂಪರ್ಕ)ದಿಂದ ಸಾವಿರಾರು ಜನ ಸಾಯುವದು, ಯುದ್ಧದಲ್ಲಿ ಪರಾಜಯವಾಗುವದು, ಅತಿ ನಿಕಟ ಪ್ರೇಮದವರ ಮರಣವಾಗುವದು.(೮೨) ಮೊದಲೇ ಕಠಿಣಕಾಲವಿದ್ದು ಅದರಲ್ಲಿ ದುಷ್ಕಾಳ ಬೀಳುವದು, ಮನದಲ್ಲಿ ಧಾಕ ಧುಕ (ದುಗುಡತನ ಚಿಂತೆ) ಇದ್ದಾಗ ಅದರಲ್ಲಿಯೇ ಕಠಿಣ ಪ್ರಸಂಗಗಳು ಉಂಟಾಗುವದು. ಉದ್ವೇಗ ಉಂಟಾಗುವದು. ಚಿಂತೆಯಿಂದ ಜೀವಕ್ಕೆ ಕಷ್ಟವಾಗುವದು. (೮೩) ಗಾಣ, ಚರಕ (ಇಂಜನ್)ಗಳಲ್ಲಿ ಅದರ ಗಾಲಿಯಲ್ಲಿ ಸಿಗುವದು, ಬೇರೆ ಬೇರೆ ಪ್ರಕಾರದ ಬೆಂಕಿಯಲ್ಲಿ ಬೀಳುವದು. (೮೪) ಅನೇಕ ಶಸ್ತ್ರಗಳಿಂದ ಅವಯವ ಕತ್ತರಿಸುವದು, ಅನೇಕ ಜಂಗಲಿ ಜನಾವರಗಳು ಕಡಿದು ತಿಂದು ಬಿಡುವವು. ಅನೇಕ ಜನರ ಬಂಧನದಲ್ಲಿ ಸಿಕ್ಕು ಬೀಳುವದು. ಇವೆಲ್ಲ ಆದಿಭೌತಿಕ ತಾಪಗಳು. (೮೫) ಕೆಟ್ಟ ಸ್ಥಳದಲ್ಲಿ ಇರಬೇಕಾಗಿ ಬಂದದ್ದಕ್ಕೆ ಗಾಬರಿಯಾಗುವದು. ಅನೇಕ ಪ್ರಕಾರದ ಅವಮಾನಗಳಿಂದ ಲಜ್ಜಿತವಾಗುವದು, ಅನೇಕ ಪ್ರಕಾರದ ದುಃಖಗಳಿಂದ ಬೇಸತ್ತು ಸೊರಗಿ ಹೋಗುವದು. (೮೬) ಇಲ್ಲಿಯವರೆಗೆ ಆದಿಭೌತಿಕ ತಾಪದ ವರ್ಣನೆ ಮಾಡಿದೆನು. ಇಂಥವುಗಳು ಅನೇಕವಿದ್ದು ಇದು ದುಃಖದ ಗುಡ್ಡವೇ ಆಗಿದೆ. ಇವೆಲ್ಲವನ್ನೂ ಹೇಳಲಿಕ್ಕೆ ಆಗುವದಿಲ್ಲ. ಆದರೆ ಮೇಲೆ ಹೇಳಿದವುಗಳ ಮೇಲಿಂದ ಶ್ರೋತೃಗಳು ಆದಿಭೌತಿಕ ತಾಪದ ವಿಚಾರವನ್ನು ಮಾಡಬೇಕು. (೮೭)

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದ ಮೂರನೆಯ ದಶಕದಲ್ಲಿಯ<br>
"ಆದಿಭೌತಿಕ ತಾಪ"ವೆಂಬ ಹೆಸರಿನ ಏಳನೆಯ ಸಮಾಸವು ಮುಗಿದುದು.

● ●

### ಸಮಾಸ ಅಷ್ಟಮ : ಆಧಿದೈವಿಕ ತಾಪ

॥ಶ್ರೀರಾಮ॥ ಮಾಗಾ ಬೋಲಿಲಾ ಆಧ್ಯಾತ್ಮಿಕ । ತ್ಯಾಉಪರೀ ಆದಿಭೂತಿಕ ।
ಆತಾ ಬೋಲಿಜೇಲ ಆದಿದೈವಿಕ । ತೋ ಸಾವಧ ಏಕಾ ॥೧॥

॥ಶ್ಲೋಕ॥ ಶುಭಾಶುಭೇನ ಕರ್ಮಣಾ । ದೇಹಾಂತೇ ಯಮಯಾತನಾ ॥
ಸ್ವರ್ಗ ನರಕಾದಿ ಭೋಕ್ತವ್ಯ । ಮಿದಂ ಚೈವಾಧಿದೈವಿಕಮ್ ॥

ಶುಭಾಶುಭ ಕರ್ಮಾನೇ ಜನಾ । ದೇಹಾತೀ ಯಮಯಾತನಾ ।
ಸ್ವರ್ಗ ನರ್ಕ ಭೋಗ ನಾನಾ । ಯಾ ನಾಂವ ಆದಿದೈವಿಕ ॥೨॥

# ದಶಕ ೩. ಸಮಾಸ ೮. ಆದಿ ದೈವಿಕ ತಾಪ (ನುಡಿ ೨೯)

ಮಾನವ ಜೀವನದಲ್ಲಿ ಅನೇಕ ಪುರಾತನ ಸಮಸ್ಯೆಗಳು ಇರುವವು. ಅವುಗಳಲ್ಲೊಂದು "ಈ ಜಗತ್ತು ಕರ್ಮಭೂಮಿ ಇರುವದು. ಇಲ್ಲಿ ಏನನ್ನು ಮಾಡುವೆವೋ ಅದರಂತೆ ಅದರ ಫಲ ಅನುಭವಿಸಬೇಕಾಗುವದೆಂಬುದು ಇದರಲ್ಲಿಯ ಒಂದು ನಿಯಮವಾಗಿರುವದು. ಆದರೆ ಪ್ರತ್ಯಕ್ಷ ಜೀವನದಲ್ಲಿ ಏನು ಕಂಡು ಬರುತ್ತದೆ? ಶರೀರ ಶಕ್ತಿಯಿಂದ ಅಥವಾ ದ್ರವ್ಯ ಶಕ್ತಿಯಿಂದ, ಅಥವಾ ದಂಡ, ಅಧಿಕಾರ ಶಕ್ತಿಯ ಬಲದಿಂದ ಮನುಷ್ಯ ಧಡಧಡಿತ ಸ್ಪಷ್ಟವಾಗಿ ಅನೀತಿಯಿಂದ ಮತ್ತು ಅನ್ಯಾಯದಿಂದ ತನ್ನ ಸ್ವಾರ್ಥವನ್ನು ಸಾಧಿಸುವನು. ಇದರ ಕೆಟ್ಟ ಕರ್ಮದ ಫಲವು ಅವನಿಗೆ ಇಲ್ಲಿ ಸಿಗುವದಿಲ್ಲ. ಇದು ಹೀಗೇಕೆ ?" ಈ ಪ್ರಶ್ನೆಗೆ ಉತ್ತರ:— ಮನುಷ್ಯನು ಯಾವ ಯಾವ ಕರ್ಮಗಳನ್ನು ಇಲ್ಲಿ ಮಾಡುವನೋ ಅದು ಎಂದೂ ವ್ಯರ್ಥ ಹೋಗುವದಿಲ್ಲ. ಅದು ಎಂದಾದರೂ ಎಲ್ಲಿಯಾದರೂ ಆ ಜೀವಕ್ಕೆ ಅದರ ಫಲ ಸಿಗಲಿಕ್ಕೇ ಬೇಕು. ಒಂದು ವೇಳೆ ಅದು ಈ ಜನ್ಮದಲ್ಲಿ ಸಿಗದಿದ್ದರೆ ಮೃತ್ಯು ನಂತರದ ಅವಸ್ಥೆ ಅಂದರೆ ಜನ್ಮಾಂತರ ಸ್ಥಿತಿಯಲ್ಲಿ ಅದು ನಿಶ್ಚಿತವಾಗಿ ದೊರಕುವದು. ಈ ಫಲಭೋಗವು ಅತೀಂದ್ರಿಯವಿದ್ದುದರಿಂದ ಶ್ರೀ ಸಮರ್ಥರು ವಿನಂತಿಸಿಕೊಳ್ಳುವದೇನಂದರೆ—ಮೃತ್ಯು ನಂತರದ ಸ್ಥಿತಿಯ ಬಗ್ಗೆ ಶಾಸ್ತ್ರಗಳಲ್ಲಿ ಹೇಳಿದ ವರ್ಣನೆಯು ಕಾಲ್ಪನಿಕವೆಂದು ತಿಳಿಯಬೇಡಿರಿ. ಮೃತ್ಯುವಿನ ಆಚೆಗೆ ಯಾವುದೋ ಒಂದು ಅವಸ್ಥೆ ಇರುವದು. ಮತ್ತು ಅಲ್ಲಿ ಈ ಜಗತ್ತಿನಲ್ಲಿ ಮಾಡಿದಂಥ ಕರ್ಮಕ್ಕೆ [ಜವಾಬ] ಉತ್ತರ ಕೊಡಬೇಕಾಗುವದು, ಎಂಬ ಮಾತು ಸಹ ಅತಿ ಸತ್ಯವಾದದ್ದಿರುವದು. ಶಾಸ್ತ್ರದಲ್ಲಿ ಇದಕ್ಕೆ ಯಮಯಾತನೆಯೆಂದು ಅನ್ನುವರು. ಯಾವನಿಗೆ ಪರಮಾರ್ಥ ಬೇಕಾಗಿರುವದೋ ಅವನು ಜಗತ್ತಿನಲ್ಲಿ ತನ್ನ ಜೀವನವನ್ನು ಸತ್ಕರ್ಮಗಳಿಗಾಗಿ ಮುಡುಪಿಡಬೇಕೆಂಬುದು ಸುಸ್ಪಷ್ಟವು.

## ಸಮಾಸ ೮. ಆದಿ ದೈವಿಕ ತಾಪ [ನುಡಿ ೨೯]

ಹಿಂದಿನ ಎರಡು ಸಮಾಸಗಳಲ್ಲಿ ಅಧ್ಯಾತ್ಮಿಕ, ಮತ್ತು ಆದಿಭೌತಿಕ ತಾಪಗಳ ಬಗ್ಗೆ ಹೇಳಿದೆನು. ಈಗ ಆದಿದೈವಿಕ ತಾಪದ ಬಗ್ಗೆ ಹೇಳುವೆನು. ಇದನ್ನು ಸಾವಧಾನದಿಂದ ಕೇಳಿರಿ. [೧]

**ಶ್ಲೋಕ:**- ಶುಭಾಶುಭೇನ ಕರ್ಮಣಾ । ದೇಹಾಂತೇ ಯಮಯಾತನಾ ।
ಸ್ವರ್ಗನರಕಾದಿ ಭೋಕ್ತವ್ಯ । ಮಿದಂ ಚೈವಾಧಿ ದೈವಿಕಂ ॥೧॥

**ಶ್ಲೋಕದ ಅರ್ಥ:**- ನಮ್ಮ ಚಲೋ, ಕೆಟ್ಟ, ಶುಭಾಶುಭ ಕರ್ಮಗಳ ಪ್ರಕಾರ ನಾವು ಸತ್ತ ಮೇಲೆ ನಮಗೆ ಯಾವ ಯಾವ ಎಂಥೆಂಥ ಯಮ ಯಾತನೆ ಅಥವಾ ಸ್ವರ್ಗ ನರಕಗಳನ್ನು ಅನುಭೋಗಿಸಬೇಕಾಗುವದೋ ಇದಕ್ಕೆ ಆದಿದೈವಿಕ ತಾಪವೆನ್ನುವರು.

**ಶ್ರೀ ಸಮರ್ಥರ ಅಭಿಪ್ರಾಯವು:**— ಮಾನವೀ ಸಮಾಜದಲ್ಲಿ ಅನೇಕ ಶಕ್ತಿಗಳು ಕೆಲಸ ಮಾಡುತ್ತಿರುವವು. ಅವುಗಳಲ್ಲಿ ಒಂದು ಅಥವಾ ಅನೇಕ ಶಕ್ತಿಗಳು ಮನುಷ್ಯನ ವಶವಾಗುವದು ಶಕ್ಯವಿದೆ. ಈ ಶಕ್ತಿಗಳನ್ನು ಉಪಯೋಗಿಸಿಕೊಂಡು ಮನುಷ್ಯ ಕೇವಲ ತನ್ನ ಸ್ವಾರ್ಥ ಸಾಧಿಸಿಕೊಳ್ಳುವದು ಮಾತ್ರ ಅನೀತಿ ಹಾಗೂಅನ್ಯಾಯವು. ಇಂಥ ಮನುಷ್ಯರಿಗೆ ಈ ಜಗತ್ತಿನಲ್ಲಿ ಸುಖದ ಅವಸರ ಒದಗಿ ಬರುತ್ತದೆ. ಎಂಬುದು ತೋರಿ ಬರುತ್ತದೆ. ಆದರೆ ಮೃತ್ಯುವಿನನಂತರ ಅವರ ದಂಡ ತೆರಬೇಕಾಗುವದೆಂಬುದನ್ನು ಯಾರೂ ಮರೆಯಬಾರದು. ಮನುಷ್ಯನಿಗೆ ಅವನ ಮರಣದ ನಂತರ ಶುಭಾಶುಭ-ಚಲೋ ಕೆಟ್ಟ ಕರ್ಮಗಳಿಗನುಸಾರ ಯಮ ಯಾತನೆ, ಸ್ವರ್ಗ ನರಕ, ಇಂಥ ಅನೇಕ ಭೋಗಗಳನ್ನು ಅನುಭೋಗಿಸಬೇಕಾಗುತ್ತದೆ. ಇವುಗಳಿಗೆ ಆದಿದೈವಿಕ ತಾಪವೆನ್ನುವರು. [೨]

ನಾನಾ ದೋಷ ನಾನಾ ಪಾತಕೇ । ಮದಾಂಧಪಣೇ ಅವಿವೇಕೇ ।
ಕೇಲೀ ಪರೀ ತೇ ದುಃಖದಾಯಕೇ । ಯಮಯಾತನಾ ಭೋಗವಿತೀ ॥೩॥
ಅಂಗಬಳೇ ದ್ರವ್ಯಬಳೇ । ಮನುಷ್ಯಬಳೇ ರಾಜಬಳೇ ।
ನಾನಾ ಸಾಮರ್ಥ್ಯಾಚೇನಿ ಬಳೇ । ಅಕೃತ್ಯ ಕರಿತೀ ॥೪॥
ನೀತೀ ಸಾಂಡೂನಿಯಾ ತತ್ವತಾ । ಕರೂ ನಯೇ ತೇಚಿ ಕರಿತಾ ।
ಯೆಮಯಾತನಾ ಭೋಗಿತಾ । ಜೀವ ಜಾಯೇ ॥೫॥
ಡೋಳೆ ಝಾಂಕೂನ ಸ್ವಾರ್ಥಬುದ್ಧೀ । ನಾನಾ ಅಭಿಳಾಶ ಕುಬುದ್ಧೀ ।
ವೃತ್ತಿ ಭೂಮಿ ಸಿಮಾ ಸಾಧೀ । ದ್ರವ್ಯ ದಾರಾ ಪದಾರ್ಥ ॥೬॥
ಮಾತಲೇಪಣೆ ಉನ್ಮತ್ತ । ಜೀವಘಾತ ಕುಟುಂಬಘಾತ ।
ಅಪ್ರಮಾಣ ಕ್ರಿಯಾ ಕರೀತ । ಮ್ಹಣೌನ ಯೆಮಯಾತನಾ ॥೭॥
ಮರ್ಯಾದಾ ಸಾಂಡೂನಿ ಚಾಲತೀ । ಗ್ರಾಮಾದಂಡೀ ಗ್ರಾಮಾಧಿಪತೀ ।
ದೇಶಾದಂಡೀ ದೇಶಾಧಿಪತೀ । ನೀತಿ ನ್ಯಾಯ ಸಾಂಡಿತಾ ॥೮॥
ದೇಶಾಧಿಪತೀಸ ದಂಡಿತಾರಾವೋ । ರಾಯಾಸ ದಂಡಿತಾ ದೇವೋ ।
ರಾಜಾ ನ ಕರಿತಾ ನೀತಿ ನ್ಯಾವೋ । ಮ್ಹಣೌನ ಯೆಮಯಾತನಾ ॥೯॥
ಅನೀತೀನೆ ಸ್ವಾರ್ಥ ಪಾಹೇ । ರಾಜಾ ಪಾಪೀ ಹೋಊನ ರಾಹೇ ।
ರಾಜಾ ಅಂತೀ ನರ್ಕ ಆಹೇ । ಮ್ಹಣೌನಿಯಾ ॥೧೦॥
ರಾಜಾ ಸಾಂಡಿತಾ ರಾಜನೀತಿ । ತಯಾಸ ಯೆಮ ಗಾಂಜಿತೀ ।
ಯೆಮ ನೀತಿ ಸಾಂಡಿತಾ ಧಾವತೀ । ದೇವಗಣ ॥೧೧॥
ಐಸೀ ಮರ್ಯಾದಾ ಲಾವಿಲೀ ದೇವೇ । ಮ್ಹಣೌನೀ ನೀತೀನೆ ವರ್ತಾವೇ ।
ನೀತಿನ್ಯಾಯ ಸಾಂಡಿತಾ ಭೋಗಾವೇ । ಯೆಮಯಾತನೇಸೀ ॥೧೨॥
ದೇವೇ ಪ್ರೇರಿಲೆ ಯೆಮ । ಮ್ಹಣೌನ ಆದಿದೈವಿಕ ನಾಮ ।
ತೃತೀಯ ತಾಪ ದುರ್ಗಮ । ಯೆಮಯಾತನೇಚಾ ॥೧೩॥
ಯೆಮದಂಡ ಯೆಮಯಾತನಾ । ಶಾಸ್ತ್ರೀ ಬೋಲಿಲೆ ಪ್ರಕಾರ ನಾನಾ ।
ತೋ ಭೋಗ ಕದಾಪಿ ಚುಕೇನಾ । ಯಾ ನಾವ ಆದಿದೈವಿಕ ॥೧೪॥
ಯೆಮಯಾತನೇಚೇ ಖೇದ । ಶಾಸ್ತ್ರೀ ಬೋಲಿಲೇ ವಿಶದ ।
ಶರೀರೀ ಘಾಲೂನ ಅಪ್ರಮಾದ । ನಾನಾ ಪ್ರಕಾರೇ ॥೧೫॥
ಪಾಪಪುಣ್ಯಾಚೀ ಶರೀರೇ । ಸ್ವರ್ಗೀ ಅಸತೀ ಕಳೇವರೇ ।
ತ್ಯಾತ ಘಾಲೂನ ನಾನಾ ಪ್ರಕಾರೇ। ಪಾಪಪುಣ್ಯ ಭೋಗವಿತೀ ॥೧೬॥

ಮನುಷ್ಯ ಮದಾಂಧನಾಗಿ ಅವಿಚಾರಿಯಾಗುವನು. ಅವಿಚಾರದಿಂದ ಅವನು ಅನೇಕ ದೋಷ ಮತ್ತು ಪಾತಕ ಕಾರ್ಯ ಮಾಡುವನು. ಇದು ದುಃಖ ಕೊಡುವದಾಗಿರುತ್ತದೆ. ಅದಕ್ಕಾಗಿ ಯಮಯಾತನೆ ಅನುಭವಿಸ ಬೇಕಾಗುವದು. [೩] ಶರೀರಬಲ (ಅಂಗಬಲ) ದ್ರವ್ಯಬಲ, ಮನುಷ್ಯಬಲ, ಶಾಸನ ಬಲ, [ರಾಜಕೀಯ ಬಲ] ಇಂಥವೇ ಅನೇಕ ಶಕ್ತಿಬಲದ ಜೋರಿನಿಂದ [ಘಮೇಂಡದಿಂದ] ಪಾಪ ಕರ್ಮ [ಅನುಚಿತ] ಕರ್ಮ ಮಾಡುತ್ತಾನೆ[೪] ಸತ್ಯವಾಗಿಯೂ ಮನುಷ್ಯನು ನೀತಿಯನ್ನು ಹಿಂದಕ್ಕಿಟ್ಟು ಮಾಡಬಾರದ್ದನ್ನು ಮಾಡುವನು. ಆನಂತರ ಯಮ ಯಾತನೆ ಭೋಗಿಸುವಾಗ ಅವನ ಜೀವ ತಳಮಳಿಸುವದು. [೫] ಮನುಷ್ಯ ಅತಿ ಸ್ವಾರ್ಥ ಬುದ್ಧಿಯಿಂದ ಅಂಧ ನಾಗುವನು. ವಿಚಾರಹೀನನಾಗುವನು. ಮತ್ತು ಅತಿಲೋಭಿ ಹಾಗೂ ವಕ್ರಬುದ್ಧಿಯುವನಾಗುವನು. ಆಮೇಲೆ ಇದರ ಬಲದಿಂದ ಮುಂದೆ ಹೇಳಿದ ಕೆಟ್ಟ ಕೆಲಸಗಳನ್ನು ಮಾಡುವನು. ಜೀವನಾಧಾರದ ಮುಖ್ಯ ಸಾಧನವಾದ ಜಮೀನು, ಅದರ ಹದ್ದು [ಸೀಮೆ] ಬೆಳೆಸುವದು, ಆಕ್ರಮಣ ಮಾಡುವದು, ಪರದ್ರವ್ಯ ಎತ್ತಿ ಹಾಕುವದು, ಎರಡನೆಯವರ ಹೆಂಡತಿಗೆ ಪ್ರಸಲಾಯಿಸಿ ಓಡಿಸಿಕೊಂಡು ಹೋಗುವದು, ಅಥವಾ ದೂರ ಒಯ್ಯುವದು, ಉಪಭೋಗ ಮಾಡು ವದು. [೬] ಯಾವಾಗಲೂ ಮದೋನ್ಮತ್ತತನ, ಉನ್ಮತ್ತನಂತೆ ವರ್ತಿಸುವದು, ಜೀವ ನಾಶ ಮಾಡುವದು, ಕುಟುಂ ಬದ ನಾಶ ಮಾಡುವದು, ನಿಂದ್ಯಕರವಾದ ರೀತಿಯಲ್ಲಿ ಸಮಾಜ ವಿಧ್ವಂಸಕ ಕರ್ಮ ಮಾಡುವದು. ಇತ್ಯಾದಿ ಹೀಗೆ ಮಾಡುವ ಕರ್ಮಕ್ಕೆ ಮನುಷ್ಯನು ಯಮಯಾತನೆ ಅನುಭೋಗಿಸುವನು. [೭] ಗ್ರಾಮದ ಜನರು ನೀತಿ ನ್ಯಾಯದ ಹದ್ದು ಮೀರಿ ನಡೆದರೆ ಆ ಗ್ರಾಮದ ಹಿರಿಯ ಮನುಷ್ಯ ಅಥವಾ ಅಧಿಕಾರಿ, ಆ ಊರವರಿಗೆ ಶಾಸನ ಮಾಡುವನು ದೇಶದ ಸ್ವಾಮಿ ದೇಶದ ಜನಕ್ಕೆ ಶಾಸನ ಮಾಡುವನು. [೮] ದೇಶದ ಆಧಿಪತ್ಯಕ್ಕೆ ರಾಜನು ಶಾಸನ ಮಾಡುವನು ಶಿಕ್ಷಿಸುವನು, ರಾಜನೇ ನೀತಿ ನ್ಯಾಯದಿಂದ ಒಂದು ವೇಳೆ ನಡೆಯದಿದ್ದರೆ ಆವನಿಗೆ ದೇವರು ಶಿಕ್ಷಿಸುವನು. ರಾಜನಿಗೆ ಸಹ ಯಮಯಾತನೆ ಅನುಭೋಗಿಸಬೇಕಾಗುವದು. [೯] ಯಾವ ರಾಜನು ಅನೀತಿಯಿಂದ ಸ್ವಾರ್ಥ ಸಾಧಿಸಿಕೊಂಡರೆ ಅವನು ಪಾಪಿಯಾಗುವನು. ಅವನ ಪಾಪ ಸಂಗ್ರಹವಾಗುತ್ತ ಹೋಗುವದು. ಅಂತೆಯೇ ಅವನು ಸತ್ತರೆ ಅವನಿಗೆ ನರಕವಾಸ ಕಟ್ಟಿಟ್ಟದ್ದೆಂದು ತಿಳಿಯಬೇಕು. [೧೦] ರಾಜನು ರಾಜ್ಯಕ್ಕೆ ರಾಜನೀತಿ ಅಂದರೆ ಅವಶ್ಯಕವಾದ ನೀತಿ ನ್ಯಾಯ ಮರ್ಯಾದೆಯನ್ನು ಪಾಲಿಸದಿದ್ದರೆ ಅವನಿಗೆ ಯಮರಾಜ ಶಿಕ್ಷಿಸುವನು. ಇನ್ನು ಯಮನೇ ನೀತಿ ನ್ಯಾಯ ಮರ್ಯಾದೆಯನ್ನು ಪಾಲಿಸದಿದ್ದರೆ ದೇವಗಣ ಓಡಿ ಬಂದು ಅವನನ್ನು ಶಿಕ್ಷಿಸುವರು. [೧೧] ಭಗವಂತನು ಹೀಗೆ ಒಂದು ಪದ್ಧತಿಯನ್ನು ಹಾಕಿಕೊಟ್ಟಿದ್ದಾನೆ. ಆದುದರಿಂದ ಎಲ್ಲರೂ ನೀತಿ ನ್ಯಾಯದಿಂದ ನಡೆಯುವದು ಅವಶ್ಯಕ. ನೀತಿ ನ್ಯಾಯ ಲೆಕ್ಕಿಸದೇ ನಡೆದರೆ ಯಮ ಯಾತನೆ ಭೋಗಿಸಬೇಕಾಗುವದು.[೧೨] ಮರಣೋತ್ತರ ಭೋಗದ ರೀತಿ ತಂತ್ರ, ಯಾವದೆಂಬುದನ್ನು ಈಗ ಹೇಳುತ್ತಾರೆ. ದೇವರು ಯಮರಾಯನಿಗೆ ಪ್ರೇರಣೆ ಕೊಟ್ಟು ಅವನ ಮುಖಾಂತರ ಜೀವನಿಗೆ ಈ ಭೋಗ ಭೋಗಿಸಲು ಹಚ್ಚುತ್ತಾನೆ. ಅದರ ದೆಶೆಯಿಂದ ಈ ತಾಪಕ್ಕೆ ಆಧಿದೈವಿಕವೆನ್ನುವರು. ಯಮ ಯಾತನೆಯ ಈ ತಾಪ ಬಹಳ ದುಃಸ್ಸಹ ಮತ್ತು ದುರ್ಗಮವಿರುವದು. [೧೩] ಶಾಸ್ತ್ರದಲ್ಲಿ ಯಮದಂಡ ಮತ್ತು ಯಮಯಾತನೆ ಇವುಗಳ ಬಗ್ಗೆ ಅನೇಕ ಪ್ರಕಾರಗಳನ್ನು ಹೇಳಲಾಗಿದೆ. ಈ ಯಮಭೋಗ ಎಂದೂ ತಪ್ಪಿಸಿಕೊಳ್ಳ ಲಿಕ್ಕೆ ಆಗುವದಿಲ್ಲ. ಅಂತೆಯೇ ಇದಕ್ಕೆ ಆಧಿ ದೈವಿಕ ತಾಪವೆನ್ನುವರು. [೧೪] ಮನುಷ್ಯ ಎಷ್ಟೋ ಪ್ರಕಾರದ ದುಷ್ಕರ್ಮ ಮಾಡುವನು. ಇದರ ಎಲ್ಲ ದೋಷಗಳು ಅವನ ಸೂಕ್ಷ್ಮ ಶರೀರದಲ್ಲಿ ಸಂಗ್ರಹವಾಗಿರುತ್ತವೆ. ಈ ದೋಷಾನುಸಾರದ ಲೆಕ್ಕದ ಮೇಲೆ ಅವನಿಗೆ ಯಮ ಯಾತನೆಯ ಕ್ಲೇಶ, ಕಷ್ಟ ಭೋಗಿಸಬೇಕಾಗುತ್ತದೆ. ಸಹಿಸಬೇಕಾ ಗುತ್ತದೆ. ಶಾಸ್ತ್ರಗಳಲ್ಲಿ ಈ ಬಗ್ಗೆ ಸಾಕಷ್ಟು ಸವಿಸ್ತಾರ ವರ್ಣನೆ ಕಂಡು ಬರುತ್ತದೆ. [೧೫] ಮರಣೋತ್ತರ ಲೋಕ ಅಂದರೆ ಪರಲೋಕ, ಊರ್ಧ್ವಲೋಕದಲ್ಲಿ ಪಾಪ ಪುಣ್ಯಗಳ ಶರೀರಗಳು ಇರುತ್ತವೆ. ಮನುಷ್ಯನು ಸತ್ತ ಮೇಲೆ ಅವನ ಸೂಕ್ಷ್ಮ ಶರೀರ [ಅಂಗದೇಹ]ವನ್ನು ಅವನ ಪಾಪ ಪುಣ್ಯಗಳಿಗನುಸಾರವಾಗಿ ಪಾಪ ಪುಣ್ಯಾತ್ಮಕ ಶರೀರದಲ್ಲಿ ಹಾಕಿ ಆ ಮೇಲೆ ಅವನ ಪಾಪ ಮತ್ತು ಪುಣ್ಯಗಳ ಫಲವನ್ನು ಭೋಗಿಸಲಿಕ್ಕೆ ಹಚ್ಚುತ್ತಾನೆ. [೧೬]

ನಾನಾ ಪುಣ್ಯೇ ನಾನಾ ವಿಳಾಸ । ನಾನಾ ದೋಷೇ ಯಾತನಾ ಕರ್ಕಶ ।
ಶಾಸ್ತ್ರೀ ಬೋಲಿಲೇ ಅವಿಶ್ವಾಸ । ಮಾನೂಚ ನಯೇ ॥೧೭॥
ವೇದಾಜ್ಞೇನೇ ನ ಚಾಲತೀ । ಹರಿಭಕ್ತೀ ನ ಕರಿತೀ ।
ತ್ಯಾಸ ಯೆಮಯಾತನಾ ಕರಿತೀ । ಯಾ ನಾವ ಆದಿದೈವಿಕ ॥೧೮॥
ಅಕ್ಷೋಭ ನರ್ಕೀ ಉದಂಡ ಜೀವ । ಜುನಾಟ ಕಿಡೆ ಕರಿತೀ ರವರವ ।
ಬಾಂಧೋನ ಟಾಕಿತೀ ಹಾತಪಾವ । ಯಾ ನಾವ ಆದಿದೈವಿಕ ॥೧೯॥
ಉದಂಡ ಪೈಸ ಲಹಾನ ಮುಖ । ಕುಂಭಾಕಾರ ಕುಂಡ ಯೇಕ ।
ದುರ್ಗಂಧೀ ಉಕಾಡಾ ಕುಂಭಪಾಕ । ಯಾ ನಾವ ಆದಿದೈವಿಕ ॥೨೦॥
ತಪ್ತ ಭೂಮಿಕಾ ತಾವಿತೀ । ಜಳತ ಸ್ತಂಭ ಪೋಟಾಳವಿತೀ ।
ನಾನಾ ಸಾಂಡಸ ಲಾವಿತೀ । ಯಾ ನಾವ ಆದಿದೈವಿಕ ॥೨೧॥
ಯೆಮದಂಡಾಚೇ ಉದಂಡ ಮಾರ। ಯಾತನೇಚೀ ಸಾಮುಗ್ರೀ ಅಪಾರ ।
ಭೋಗ ಭೋಗಿತೀ ಪಾಪೀ ನರ । ಯಾ ನಾವ ಆದಿದೈವಿಕ ॥೨೨॥
ಪೃಥ್ವೀಮಧ್ಯೇ ಮಾರ ನಾನಾ । ತ್ಯಾಹೂನ ಕಠೀಣ ಯೆಮಯಾತನಾ ।
ಮಾರಿತಾ ಉಸಂತ ಚಿ ಅಸೇನಾ । ಯಾ ನಾವ ಆದಿದೈವಿಕ ॥೨೩॥
ಚೌಘೆ ಚೌಕಡೆ ವೋಢಿತೀ । ಯೇಕ ತೇ ಝೋಂಕೂನ ಪಾಡಿತೀ ।
ತಾಣಿತೀ ಮಾರಿತೀ ವೊಢೂನಿ ನೇತೀ । ಯಾ ನಾವ ಆದಿದೈವಿಕ ॥೨೪॥
ಉಠವೇನಾ ಬೈಸವೇನಾ । ರಡವೇನಾ ಪಡವೇನಾ ।
ಯಾತನೇವರೀ ಯಾತನಾ । ಯಾ ನಾವ ಆದಿದೈವಿಕ ॥೨೫॥
ಆಕ್ರಂದೆ ರಡೇ ಆಣೀ ಘುಂಜೇ । ಧಕಾಧಕೀನೇ ನಿರ್ಬುಜೇ ।
ಝುರ್ಝುರೋ ಪಂಜರ ಹೋಊನ ಝಿಜೇ । ಯಾ ನಾವ ಆದಿದೈವಿಕ ॥೨೬॥
ಕರ್ಕಶ ವಚನೇ ಕರ್ಕಶ ಮಾರ । ಯಾತನೇಚೇ ನಾನಾ ಪ್ರಕಾರ ।
ತ್ರಾಸ ಪಾವತೀ ದೋಷೀ ನರ । ಯಾ ನಾವ ಆದಿದೈವಿಕ ॥೨೭॥
ಮಾಗಾ ಬೋಲಿಲಾ ರಾಜದಂಡ । ತ್ಯಾಹೂನ ಯೆಮದಂಡ ಉದಂಡ ।
ತೇಥೀಲ ಯಾತನಾ ಪ್ರಚಂಡ । ಭೀಮರೂಪ ದಾರುಣ ॥೨೮॥
ಆಧ್ಯಾತ್ಮಿಕ ಆದಿಭೂತಿಕ । ತ್ಯಾಹೂನಿ ವಿಶೇಷ ಆದಿದೈವಿಕ ।
ಅಲ್ಪ ಸಂಕೇತೇ ಕಾಹೀಯೇಕ । ಕಳಾವಯಾ ಬೋಲಿಲೇ ॥೨೯॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
ಆದಿದೈವಿಕ ತಾಪ ನಾಮ ಸಮಾಸ ಅಷ್ಟಮ

ಯಾರು ಹೆಚ್ಚು ಪುಣ್ಯ ಗಳಿಸುವರೋ ಅವರಿಗೆಸ್ವರ್ಗಸುಖದ ವಿಲಾಸ ಬಹಳಷ್ಟು ದೊರಕುವದು. ಯಾರು ಹೆಚ್ಚುಪಾಪ ಗಳಿಸುವರೋ ಅವರಿಗೆ ನರಕಯಾತನೆಯ ಕಷ್ಟ ಬಹಳಷ್ಟು ಆಗುವದು, ಹೀಗೆ ಶಾಸ್ತ್ರದಲ್ಲಿ ಹೇಳಿರುತ್ತದೆ. ಇದರಲ್ಲಿ ಅವಿಶ್ವಾಸಪಡಬಾರದು. ಇದರಲ್ಲಿ ಸತ್ಯ ತತ್ವವಿದೆ.(೧೭)ಯಮಯಾತನೆ ಅಂದರೆ ಏನೇನು ಕಷ್ಟ ಅದರಲ್ಲಿರುವದು, ಇದರ ಬಗ್ಗೆ ಸ್ವಲ್ಪದರಲ್ಲಿ ನಿಜಸ್ವರೂಪವನ್ನು ತಿಳಿಸುತ್ತಾರೆ.— ವೇದಾಜ್ಞೆಯನ್ನು ಪಾಲಿಸದವರು, ಭಗವಂತನ ಭಕ್ತಿ ಮಾಡದವರು, ಇಂಥವರಿಗೆ ಯಮಯಾತನೆಯ ಭೋಗ ತಪ್ಪಿದ್ದಲ್ಲ. ಇದನ್ನು ಭೋಗಿಸಲೇಬೇಕಾಗುವದು. (೧೮) ಅಕ್ಷೋಭ ಎಂಬ ಬಹಳ ಆಳವಾದ ನರಕದಲ್ಲಿ ಅಗಣಿತವಾದ (ಬಹುದಿವಸದ) ದೀರ್ಘಕಾಲದ ಹುಳಗಳು ಹರಿದಾಡುತ್ತಿರುವವು, ಬುಚಗುಡುತ್ತಿರುವವು. ಅಂಥದರಲ್ಲಿ ಪಾಪಿ ಮನುಷ್ಯನನ್ನು ಕೈಕಾಲು ಕಟ್ಟಿ ಯಮರಾಯ ಒಗೆಯುವನು. (೧೯) ಕೆಲವೊಂದು ಪಾಪಿ ಜೀವಗಳನ್ನು ಕುಂಭೀಪಾಕದಲ್ಲಿ ಒಗೆಯುವರು. ಕುಂಭೀಪಾಕವೆಂದರೆ ತೀರ ಸಣ್ಣಬಾಯಿ ಇದ್ದು ಒಳಗೆ ದೊಡ್ಡ ಸ್ಥಳವಿರುವ ಕೊಡದಂತಹ ಪಾತ್ರೆ. ಇದರೊಳಗೆ ಅತಿ ಉಷ್ಣತೆ ಮತ್ತು ದುರ್ಗಂಧ ವಾಸನೆ ಇರುತ್ತದೆ. (೨೦) ಅತಿಶಯ ಕಾದು ಸುಡುತ್ತಿರುವ ಭೂಮಿಯ ಮೇಲೆ ಜೀವವನ್ನು ಹಾಕಿ ಹುರಿಯುತ್ತಾರೆ. ಉರಿಯುವ ಕಂಬಕ್ಕೆ ತೆಕ್ಕೆ ಹಾಯಿಸುವದು. ಮತ್ತು ಅನೇಕ ಪ್ರಕಾರದ ಚಿಮಟಾ ಇಕ್ಕಳಗಳನ್ನು ಕಾಯಿಸಿ ಹಿಚಕುವದು, ಒತ್ತುವದು ಮಾಡುವರು. (೨೧) ಯಮನು ಕೊಡುವ ಶಿಕ್ಷೆಯಲ್ಲಿ ಅನೇಕ ಪ್ರಕಾರದ ಹೊಡೆತಗಳಿರುವವು. ಕ್ಲೇಶ ಕೊಡುವ ಸಾಧನಗಳು ಬಹಳಷ್ಟು ಇರುವವು. ಪಾಪಿ ಮನುಷ್ಯ ಈ ಯಾತನೆಗಳನ್ನು ಭೋಗಿಸಬೇಕಾಗುವದು. (೨೨) ಈ ಜಗತ್ತಿನಲ್ಲಿ ಹೊಡೆ ಬಡೆಯುವ ಅನೇಕ ಪ್ರಕಾರಗಳಿರುವವು. ಆದರೆ ಯಮಯಾತನೆಯ ಹೊಡೆತದ ಮುಂದೆ ಇವು ಸೌಮ್ಯವೆನಿಸುವವು. ಯಮಯಾತನೆಯು ಸಹಿಸುವದಕ್ಕೆ ಅಸಾಧ್ಯ ಹಾಗೂ ಅತಿ ಕಠಿಣವಿರುವದು. ಬಿಡುವಿಲ್ಲದೇ ಹೊಡೆಯುವರು : ಅರ್ಥಾತ್ ಹೊಡೆತ ನಿಲ್ಲುವದೇ ಇಲ್ಲ. (೨೩) ನಾಲ್ಕು ಜನ ಯಮದೂತರು ನಾಲ್ಕು ದಿಕ್ಕಿನಲ್ಲಿ ನಿಂತು ಜಗ್ಗಾಡುವರು, ನೂಕಾಡುವರು, ಎಳೆದಾಡುವರು, ನೆಲಕ್ಕೆ ಕೆಡವಿ ನಿರ್ದಯತನದಿಂದ ಜಗ್ಗುವರು, ಒದೆಯುವರು, ಹೊಡೆಯುವರು.(೨೪) ಹೊಡೆಯುವಾಗ ಏಳಗೊಡುವದಿಲ್ಲ, ಕೂಡಗೊಡುವದಿಲ್ಲ, ಅಳಗೊಡುವದಿಲ್ಲ, ಬೀಳಗೊಡುವದಿಲ್ಲ, ಒಂದಾದ ಕೂಡಲೇ ಇನ್ನೊಂದು ಯಾತನೆಯು ಒಂದೇ ಸವನೆ ಅಖಂಡವಾಗಿ ಚಾಲೂ ಇರುತ್ತದೆ. (೨೫) ಜೀವವು ಅಲ್ಲಿ ಅಳುತ್ತದೆ. ಉಸಿರುಗರೆದು ಬಿಕ್ಕಿ ಬಿಕ್ಕಿ, ಚೀರಿ ಚೀರಿ ಹಾಡ್ಯಾಡಿಕೊಂಡು ಅಳುತ್ತದೆ. ಹರಿಹಾಯುವನು, ಅಲ್ಲಿಯ ಕಷ್ಟಕ್ಕೆ ಗಾಬರಿಗೊಂಡು ಮುದುಡಿಗೊಳ್ಳುವನು. ಒಂದೇ ಸವನೇ ದುಃಖಪಟ್ಟು ಸೊರಗಿ (ಕೃಶನಾಗಿ) ಎಲುವಿನ ಹಂದರ (ಅಸ್ಥಿ ಪಂಜರ)ವಾಗುವನು. ಇಷ್ಟು ಸೊರಗಿದರೂ ಕಷ್ಟ ಯಾತನೆ ನಿಲ್ಲುವದಿಲ್ಲ. ಅದು ಒಂದೇ ಸವನೇ ನಡೆದಿರುತ್ತದೆ.(೨೬) ಕಠೋರವಾದ ಮಾತುಗಳನ್ನು ಅಂದು, ಅಂದು ಕಠೋರವಾದ ಹೊಡೆತಗಳನ್ನು ಕೊಡುವರು. ಇಂಥ ಯಮಯಾತನೆಯ ಅನೇಕ ಪ್ರಕಾರಗಳಿರುವವು. ಪಾಪಿ ಮನುಷ್ಯ ಇವುಗಳ ತೊಂದರೆ ಭೋಗಿಸಬೇಕಾಗುವದು. (೨೭) ಹಿಂದಿನ ಸಮಾಸದಲ್ಲಿ ಹೇಳಿದ ರಾಜದಂಡಕ್ಕಿಂತಲೂ ಯಮನ ಶಿಕ್ಷೆ ಅತಿ ಭಯಂಕರವಿರುತ್ತದೆ. ಯಮಯಾತನೆ ಪ್ರಚಂಡ ಹಾಗೂ ಭಯಂಕರ ಮತ್ತು ಅಕರಾಳ ವಿಕರಾಳ ವಿರುತ್ತದೆ. ಹಾಗೂ ತಪ್ಪಿಸಿಕೊಳ್ಳಲು ಬಾರದ್ದಾಗಿರುತ್ತದೆ. (೨೮) ಆಧ್ಯಾತ್ಮಿಕ, ಆದಿಭೌತಿಕ ಮತ್ತು ಇವೆರಡಕ್ಕಿಂತ ವಿಶೇಷವಾದದ್ದು ಆಧಿದೈವಿಕವು, ಈ ಮೂರು ತಾಪಗಳ ಬಗ್ಗೆ ಸಂಕ್ಷಿಪ್ತ ಲಕ್ಷಣ ಸಹಿತವಾಗಿ ತಿಳಿಯಲೆಂದು ಕಲ್ಪನೆ ಬರಲೆಂದು ಹೇಳಿದೆನು. (೨೯)

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಮೂರನೆಯ ದಶಕದೊಳಗಿನ
"ಆದಿದೈವಿಕ" ಎಂಬ ಹೆಸರಿನ ಎಂಟನೆಯ ಸಮಾಸವು ಮುಕ್ತಾಯವಾಯಿತು.

● ●

# ದಶಕ ೩. ಸಮಾಸ ೯. ಮೃತ್ಯುನಿರೂಪಣ (ನುಡಿ ೫೯)

ಬ್ರಹ್ಮಜ್ಞಾನಿ ಶ್ರೇಷ್ಠ ಪುರುಷರ ಪಂಕ್ತಿಯಲ್ಲಿ ಶ್ರೀ ಸಮರ್ಥರ ಸ್ಥಾನವು ವಶಿಷ್ಠ, ವಾಮದೇವ, ನಾರದ ಶುಕಾಚಾರ್ಯ, ಜ್ಞಾನದೇವ, ಏಕನಾಥ, ಕಬೀರ, ತುಕಾರಾಮ, ರಾಮಕೃಷ್ಣ (ಮತ್ತು ಬಸವಣ್ಣ, ಪುರಂದರದಾಸ ಕನಕದಾಸ, ನಿಜಗುಣರು) ಮೊದಲಾದವರ ಜೊತೆಗೆ ಇರುವದು. ಇದು ಸತ್ಯ ಸಂಗತಿಯೇ ಆಗಿದೆ. ಇದರಷ್ಟೇ ಸಾಕ್ಷಾತ್ಕಾರದ ತತ್ವಜ್ಞಾನವನ್ನು ಹೇಳುವ ಗ್ರಂಥಗಳಲ್ಲಿ ದಾಸಬೋಧದ ಸ್ಥಾನವು ಭಗವದ್ಗೀತೆ, ಯೋಗವಾಶಿಷ್ಠ ಜ್ಞಾನೇಶ್ವರಿ, ನಾಥಭಾಗವತ, [ಮತ್ತು ಡಿವ್ಹಾ ಇನ್ ಲಾಯಿಫ್] ಮೊದಲಾದವುಗಳ ಸರಿಸಮದಲ್ಲಿಯೇ ಇರುವ ರೆಂಬುದೂ ಸಹ ಸತ್ಯಸಂಗತಿಯೇ ಆಗಿದೆ. ಸಾಕ್ಷಾತ್ಕಾರದ ತತ್ವಜ್ಞಾನವನ್ನು ಹೇಳುವಾಗ ಮೃತ್ಯುವಿನ ಬಗ್ಗೆ ವಿಚಾರ ಮಾಡುವದು ಬಹಳ ಮಹತ್ವದ್ದಾಗಿದೆ. ಮೃತ್ಯುವಿನ ವಿಚಾರ ಮಾಡದ ಹೊರತು ಮಾನವೀ ಜೀವನದ ಸಂಪೂರ್ಣ ಅರ್ಥದ ಗುಟ್ಟು (ತಿಳುವಳಿಕೆ) ತಿಳಿಯಲು ಶಕ್ಯವಾಗುವದೇ ಇಲ್ಲ. ಯಾವ ತತ್ವಜ್ಞಾನದ ಗ್ರಂಥವು ಮೃತ್ಯುವಿನ ವಿಚಾರ ಲಕ್ಷ್ಯದಲ್ಲಿಟ್ಟುಕೊಂಡು (ತಿಳಿದುಕೊಂಡು) ಜೀವನದ ಅರ್ಥವನ್ನು ಶೋಧಿಸುವದೋ ಅಂಥ ಗ್ರಂಥವೇ ಯಥಾರ್ಥ ತತ್ವದರ್ಶನ ತಿಳಿಸಿಕೊಡುವದು. ಆಧ್ಯಾತ್ಮದ ದಾರಿಯಲ್ಲಿ ಹೋಗುತ್ತಿರುವಾಗ ಜೀವನಿಗೆ ಇದೇ ಜನ್ಮದಲ್ಲಿ ಸಂಪೂರ್ಣ ಸಾಕ್ಷಾತ್ಕಾರವಾಗುವದು ಬಹಳ ಕಠಿಣವಿರುತ್ತದೆ. ಆತ್ಮಜ್ಞಾನವಾಗಬೇಕೆಂದು ಸಾಯುವವರೆಗೂ ಸತತ ಪ್ರಯತ್ನ ಮಾಡುವ ಜೀವನಿಗೆ ಅಂತ್ಯಕಾಲದಲ್ಲಿ ಯಾವಸ್ಥಿತಿ ಆಗುವದು, ಅಥವಾ ಇರುವದು, ಇದನ್ನು ಸಾಧಕರು ತಿಳಿದುಕೊಳ್ಳುವದು ಅತಿ ಅವಶ್ಯವು. ಇದರ ಹೊರತಾಗಿ, ಒಬ್ಬನಿಗೆ ಇಲ್ಲಿಯೇ ಇದೇ ಜನ್ಮದಲ್ಲಿ ಆತ್ಮಸಾಕ್ಷಾತ್ಕಾರವಾದದ್ದೇ ನಿಜವಿದ್ದರೆ ಅವನು ಅಂತ್ಯಕಾಲದಲ್ಲಿ ಸಹ ಅದೇ ಸತೇಜ ಲಕ್ಷಣದಲ್ಲಿರುವನೋ ಅಥವಾ ನಿಸ್ತೇಜ (ಮಂದತ್ವ)ದಲ್ಲಿರುವನೋ ಎಂಬುದನ್ನು ತಿಳಿದುಕೊಳ್ಳುವದೂ ಅವಶ್ಯ. ಆದರೆ ಸದ್ಯದ ಈ ವ್ಯವಹಾರೀ ಜಗತ್ತಿನಲ್ಲಿಮೃತ್ಯು(ಸಾವಿನಬಗ್ಗೆ)ವಿನಬಗ್ಗೆನಿಃಸಂಶಯವಾಗಿಈ ಮುಂದೆ ವಿವರಿಸಿದ ಮಾತುಗಳನ್ನು ಒಪ್ಪುತ್ತಾರೆ(ಕಬೂಲ ಮಾಡುತ್ತಾರೆ) (ಅ) ವಿಶ್ವದಲ್ಲಿಯ ಯಾವುದೇ ಘಟನೆಯ ಬಗ್ಗೆ ಯಾರಿಗೂ ಖಾತ್ರಿ ಹೇಳಲಿಕ್ಕೆ ಶಕ್ಯವಿಲ್ಲ ಆದರೆ ಸಾವಿನ (ಮೃತ್ಯು) ಬಗ್ಗೆ ಮಾತ್ರ ಯಾರಿಗೂ ಎಂದೂ ಸಂಶಯ ಬಂದಿಲ್ಲ, ಬರುವದೂ ಇಲ್ಲ. "ನಾನು ಎಂದಾದರೂ ಒಂದು ದಿನ ಸಾಯುತ್ತೇನೆ" ಈ ಮಾತನ್ನು ಪ್ರತಿಯೊಬ್ಬರೂ ಖಾತ್ರಿಯಿಂದ ತಿಳಿದಿರುತ್ತಾರೆ. (ಆ) ಮನುಷ್ಯನ ಮೃತ್ಯು (ಸಾವಿನ) ಮರಣ ಕಾಲ (ವೇಳೆ) ತೀರ ಖಾತ್ರಿಯಿಂದ ಮೊದಲೇ ತಿಳಿಯುವದೆಂದು ನಿಶ್ಚಿತವಾಗಿ ಹೇಳಲಿಕ್ಕೆ ಬರುವದಿಲ್ಲ. (ಇ) ಮನುಷ್ಯ ಸತ್ತಮೇಲೆ ಅವನ ದೇಹದಲ್ಲಿಯ ಪ್ರಾಣವು ಇಲ್ಲದಾಗುತ್ತದೆ. ಪ್ರಾಣದ್ದು ಮುಂದೇನಾಗುತ್ತನೆಂಬ ಬಗ್ಗೆ ಏನೂ ಗೊತ್ತಾಗುವದಿಲ್ಲ. (ಈ) ನಿರ್ಜೀವ, ಸತ್ತ ದೇಹವನ್ನು ಹುಗಿಯುತ್ತಾರೆ. ಅಥವಾ ಸುಡುತ್ತಾರೆ. ಅನಂತರ ಜಗತ್ತಿನಲ್ಲಿ ಅರ್ಥಾತ್ ಮೃತನ ಅತಿ ನಿಕಟದ ಸಂಬಂಧಿಕರ ನಿತ್ಯದ ವ್ಯವಹಾರಾದಿ ಕಾರ್ಯಕ್ರಮಗಳುಮೊದಲಿನಂತೆ ಪುನಃ ಪ್ರಾರಂಭವಾಗುವವು.(ಉ)ಮೃತ ಮನುಷ್ಯನ ನೆನಪು ಸಾವಕಾಶವಾಗಿ ಕ್ರಮೇಣ ಕಡಿಮೆ ಕಡಿಮೆಯಾಗುತ್ತ (ಲೋಪವಾಗುತ್ತ) ಹೋಗುವದು. (ಊ) ಮೃತನು ಮಾಡಿದ ಕರ್ಮದ ಶುಭಾಶುಭ ಪರಿಣಾಮಗಳು ಹೆಚ್ಚು ಕಡಿಮೆಯ ಅವಧಿಯವರೆಗೆ ಜಗತ್ತಿನಲ್ಲಿ ಉಳಿಯುತ್ತವೆ. ಆದರೆ ಇಂಥ ಪ್ರಕಾರದ ಕರ್ಮದ ತೇಜವು ಆಚಂದ್ರಾರ್ಕವಾಗಿ ಇದ್ದಷ್ಟೇ ಇರಲು ಶಕ್ಯವಾಗುವದಿಲ್ಲ.(ಎ)ನೂರಕ್ಕೆ 99.9ರಷ್ಟು ಮನುಷ್ಯರ ಮರಣದ ಬಗ್ಗೆ ಜಗತ್ತು ವಿಶೇಷ ವಿಚಾರ ಮಾಡುವದಿಲ್ಲ. ನಿಜವಾಗಿಯೂ ದಿನಾಲು ಸಾವಿರಾರು ಮನುಷ್ಯರು ಸಾಯುವರು. ಆದರೆ ಜಗತ್ತು ಇದರ ಕಡೆಗೆ ಲಕ್ಷ್ಯ ಕೊಡುವದಿಲ್ಲ.

ಮನುಷ್ಯನು ಕರ್ತೃತ್ವವಾನ್‌ನೆಂಬುದು ನಿಜವೇ ಸರಿ. ಆದರೆ ಅವನ ಕರ್ತೃತ್ವದ ಅಹಂಕಾರಕ್ಕೆ(ಅಹಮಿಕೆ) (ಬಡಾಯಿ, ಘಮೇಂಡಿಗೆ) ಮೃತ್ಯುವೊಂದು ದೊಡ್ಡ ಸವಾಲ ಆಗಿದೆ. ಮೃತ್ಯುವಿನ ಬಗ್ಗೆ ವಿಚಾರ ಮಾಡಿ ಮಾಡಿಯೇ ಮನುಷ್ಯನು ನಿಜವಾದ ಅರ್ಥದಲ್ಲಿ ಮನುಷ್ಯನಾದನು. ಸಾವಿನಿಂದ ಎಲ್ಲವೂ ಮುಗಿಯುವದು.

ಆದರೆ ವ್ಯರ್ಥವಾಗಿ ಹೋಗುವದೆಂಬುವದು ನಿಜವಲ್ಲ. ಹೀಗೆ ಇದನ್ನೇ ಸಿದ್ಧ ಮಾಡುವದಕ್ಕಾಗಿ ತತ್ವಜ್ಞಾನ, ಧರ್ಮ ಕಾವ್ಯ, ಇತ್ಯಾದಿಗಳು ಬಹಳಷ್ಟು ಪ್ರಯತ್ನ ಮಾಡುತ್ತವೆ. ತತ್ವಜ್ಞಾನವೆಂದರೆ ಮೃತ್ಯು ಮತ್ತು ಅಂತ್ಯಕಾಲ ಇವುಗಳ ಸೂಕ್ಷ್ಮ ಅಭ್ಯಾಸವಾಗಿದೆ ಎಂದು ಪ್ಲೆಟೋನ ಅಭಿಪ್ರಾಯವಿರುವದು. ಉಪನಿಷತ್ತುಗಳಿಗೆ ಮೃತ್ಯುವಿನ ಜ್ಞಾನದ ಬಗ್ಗೆ ಬಹಳಷ್ಟು ಕುತೂಹಲವಾಗುತ್ತದೆ. ಕಠೋಪನಿಷತ್ತಿನಲ್ಲಿಯ ನಚಿಕೇತನ ಆಖ್ಯಾನ, ಛಾಂದೋಗ್ಯ ಉಪನಿಷತ್‌ದಲ್ಲಿಯ ಶಾಂಡಿಲ್ಯವಿದ್ಯಾ,ಮತ್ತು ಪ್ರಶ್ನೋಪನಿಷತ್‌ದಲ್ಲಿಯ ಮೂರನೆಯ ಪ್ರಶ್ನೆ ಇವುಗಳಲ್ಲಿ ಋಷಿಗಳ ಮೃತ್ಯು ವಿಷಯುಕ ವಿಚಾರಗಳು ಕಂಡು ಬರುವವು. ಗೀತೆಯ ಎಂಟನೆಯ ಅಧ್ಯಾಯದಲ್ಲಿ ಭಗವಾನ ಕೃಷ್ಣನು ಮೃತ್ಯುವಿನ ಬಗ್ಗೆ ಆಳವಾದ ವಿಚಾರಗಳನ್ನು ಪ್ರಸ್ತಾಪಿಸಿದ್ದಾನೆ. ಮೃತ್ಯುವಿನ ಮಹತ್ವವನ್ನು ತಿಳಿದೇ ಶ್ರೀಸಮರ್ಥರು ದಾಸಬೋಧದಲ್ಲಿ ಇದಕ್ಕಾಗಿ ಒಂದು ಸ್ವತಂತ್ರ ಸಮಾಸವನ್ನೇ ಹಾಕಿರುವರು. ಇರಲಿ. ಸಂತ ಶರಣರು ಹೇಳುವ ದೇನೆಂದರೆ—ದ್ವೈತದಿಂದ ಅಥವಾ ಭೇದದಿಂದ ತುಂಬಿದ ಈ ದೃಶ್ಯ ವಿಶ್ವದಲ್ಲಿ ಜನ್ಮ ಮತ್ತು ಮರಣ ಇವು ಒಂದನ್ನೊಂದು ಬಿಟ್ಟಿರಲು ಶಕ್ಯವಾಗುವದಿಲ್ಲ. ಆತ್ಮಸ್ವರೂಪದ ಮರೆವಿನಲ್ಲಿ ಇರುವಂಥ ಜೀವಕ್ಕೆ ಆನಂದದ ನೀರಡಿಕೆಯಾಗುತ್ತದೆ. ಆನಂದ ಪಡೆಯುವುದಕ್ಕೆ ಸಾಧನಬೇಕೆಂದು ಜೀವವು ದೃಶ್ಯ ದೇಹ ನಿರ್ಮಾಣ ಮಾಡುವದು. ಯಾವ ದೃಶ್ಯಗಳಿಂದ ದೇಹ ತಯಾರ ಆಗುವದೋ ಅದಕ್ಕೆ ಕ್ರಮೇಣ ಸೊರಗುತ್ತ ಸೊರಗುತ್ತ ಕೊನೆಗೆ ನಾಶ ಹೊಂದುವ ಗುಣವಿರುವದರಿಂದ ಕಾಲಾಂತರದಲ್ಲಿ ಮೊದಲಿನಂತೆ ಆನಂದ ಕೊಡಲು ದೇಹವು ಸಮರ್ಥವಾಗುವದಿಲ್ಲ. ಆಗ ಆಗದೀ ಸಹಜವಾಗಿ ಹೇಗೆ ಬಂದಿತ್ತೋ ಹಾಗೆಯೇ ಜೀವವು ದೇಹಬಿಟ್ಟು ಹೊರಗೆ ಹೋಗುವದು ಜೀವವು ಹೊರಗೆ ಹೋಗುವದಕ್ಕೆ ಮರಣವೆಂದು ಅನ್ನುವರು. ಜೀವದ ಇತಿಹಾಸದಲ್ಲಿ ಜನನ ಕಾಲ ಮತ್ತು ಅಂತ್ಯಕಾಲ ಇವೆರಡೂ ಬಹಳ ಮಹತ್ವದವೆಂದು ತಿಳಿಯುತ್ತಾರೆ. ಈ ಎರಡೂ ಪ್ರಸಂಗಗಳಲ್ಲಿ ಜೀವವು ಅವ್ಯಕ್ತ ಮತ್ತು ವ್ಯಕ್ತ ಇವುಗಳ ಸಂಧಿಯಲ್ಲಿ ಇರುತ್ತದೆ. ಜನ್ಮದ ಪ್ರಸಂಗ ಅಂದರೆ ತಾಯಿಯ ಹೊಟ್ಟೆಯಲ್ಲಿ ಗರ್ಭಧಾರಣವಾಗುವದು. ಆ ಕಾಲದಲ್ಲಿ ಜೀವವು ಅವ್ಯಕ್ತದಿಂದ ವ್ಯಕ್ತತೆಯಲ್ಲಿ ಇಳಿಯುತ್ತದೆ. ಆದರೆ ಮರಣ ಪ್ರಸಂಗದಲ್ಲಿ ಅಂದರೆ ಅಂತ್ಯಕಾಲ ದಲ್ಲಿ ಜೀವವು ವ್ಯಕ್ತತೆಯಿಂದ ಅವ್ಯಕ್ತದ ಕಡೆಗೆ ತಿರುಗಿ ( ಪರತ ) ಹೋಗುತ್ತದೆ. ಇವೆರಡೂ ಬಹಳ ಮಹತ್ವದ ಸಂಧಿಕಾಲವಿರುತ್ತವೆ. ಇವುಗಳಲ್ಲಿ ಜನನ ಕಾಲದ ಸಂಧಿಯು ಜೀವದ ಶಕ್ತಿಯ ಆಚೆಗಿನದಿರುತ್ತದೆ. ಜೀವವು ಅಲ್ಲಿ (ಆಗ) ವಾಸನಾದ ಅಧೀನವಿರುತ್ತದೆ, ಆದರೆ ಮರಣ ಕಾಲದ ಸಂಧಿಯನ್ನು ಮಾತ್ರ ಜೀವನು ಸ್ವತಂತ್ರನಾಗಿ ಸಾಧಿಸಿಕೊಂಡು ಆಧ್ಯಾತ್ಮಿಕ ಪ್ರಗತಿಯ ಮೇಲಿನ ಪಾವುಟಿಗೆಗಳನ್ನು ಖಾತ್ರಿಯಿಂದ ಹತ್ತುವ ಶಕ್ತಿಯವನಾಗುವನು. ಇಂಥ ಸಂಧಿ ಸಾಧಿಸುವದೆಂದರೆ ಉತ್ತಮ ಮರಣವೇ ಆಗಿರುತ್ತದೆ. ದೃಶ್ಯ ಜಗತ್ತಿನಲ್ಲಿ ಮೃತ್ಯುವೆಂಬುದು ಕಾಲನ ಅಪರಿಹಾರ್ಯ, ಕಟ್ಟಳೆ ಮೀರಲಾರದ ಕಟ್ಟಳೆಯು ಹೊಡೆತವಿರುತ್ತದೆ. ನಿರ್ಮಿತ ವಸ್ತುಗಳ ಸಂಪೂರ್ಣ ನಾಶ (ಹೊಡೆತ) ಮಾಡುವದೇ ಕಾಲನಿಗೆ ಸಹಜವಾದ ಆಟವಾಗಿದೆ. ಅಂತೆಯೇ ಪ್ರತ್ಯಕ್ಷ ಭಗವಂತನ ಅವತಾರಗಳು ಸಹ ಮೃತ್ಯುವಿನ ಹೊಡೆತದಿಂದ ಪಾರಾಗುವಂತಿಲ್ಲ. ಈ ಸತ್ಯವಾದ ಮಾತನ್ನು ಶ್ರೀಸಮರ್ಥರು ಬಹಳಷ್ಟು ಸ್ಪಷ್ಟ ರೀತಿಯಲ್ಲಿ ತಿಳಿಸಿಕೊಟ್ಟಿದ್ದಾರೆ. ಮರಣ ಸಮಯದಲ್ಲಿ ಜೀವದ ಕಣ್ಣು ಮುಂದೆ ಅದರ ಯಾವತ್ತೂ ಪೂರ್ವೇತಿಹಾಸವು ಎದುರು ನಿಲ್ಲುತ್ತದೆ. ಇಡೀ ಜನ್ಮ ಜೀವವಿರುವವರೆಗೆ ಯಾವ ಹವ್ಯಾಸದ ನಾದದಲ್ಲಿ ಅವನು ಇರುತ್ತಿದ್ದನೋ ಅದು ಹಟದಿಂದ,ಬಲಾತ್ಕಾರದಿಂದ ಮರಣ ಸಮಯದಲ್ಲಿ ಮುಂದೆಬಂದು ನಿಲ್ಲುತ್ತದೆ.ಆದು ದರಿಂದ ಉತ್ತಮಮರಣಬರುವದಕ್ಕಾಗಿ ಜೀವಿಸಿರುವಷ್ಟು ಕಾಲ ಭಗವಂತನ ಅನುಸಂಧಾನದ ಅಭ್ಯಾಸ ಮಾಡುವದು, ಸಾಧನೆ ಮಾಡುವದು, ಅವಶ್ಯವಿರುತ್ತದೆ. ಅವಿದ್ಯೆಯ ಪ್ರಭಾವದಿಂದ ಮನುಷ್ಯನಿಗೆ ದೈನಂದಿನ ನಿತ್ಯದ ಜೀವನದಲ್ಲಿ ಮೃತ್ಯುವಿನ ಸ್ಮರಣ ಇರುವದಿಲ್ಲ. ಈ ಕಾರಣದಿಂದ ಉತ್ತಮ ಮರಣ ಬರುವದರ ಸಲುವಾಗಿ ಅವಶ್ಯವಿರುವ ಪ್ರಯತ್ನಗಳನ್ನು ಅವನು ಮಾಡುವದಿಲ್ಲ. ಕೊನೆಯ ದಿನಗಳು ಸುಖ ಶಾಂತಿಯುತವಾಗಬೇಕು. ಅಥವಾ ಉತ್ತಮ ಮರಣ ಬರಲಿ ಅಥವಾ ಕೃತಕೃತ್ಯನಾಗಿ ಭಗವಂತನ ಸ್ಮರಣದಲ್ಲಿ ಶಾಂತವಾಗಿ ದೇಹ ಬಿಡುವದು ಸಾಧ್ಯವಾಗಬೇಕೆಂದು ಯಾವುದನ್ನು ಮಾಡಬೇಕಾಗುವದೋ ಅದೇ ಪರಮಾರ್ಥವು. ಮರಣ ಯಾವಾಗ ಬಂದೀತೆಂಬ ನಿಯಮವಿಲ್ಲ ವಾದ್ದರಿಂದ ಅದು ಯಾವಾಗಬೇಕಾದರೂ ಬರಬಹುದೆಂದು ಅರಿವನ್ನಿಟ್ಟುಕೊಂಡು ಸಾಧಕನು ಯಾವಾಗಲೂ

ತಯಾರಿಯಲ್ಲಿಯೇ ಇರಬೇಕೆಂಬುದನ್ನು ಶ್ರೀಸಮರ್ಥರು ಸ್ಪಷ್ಟಪಡಿಸಿ ಹೇಳುವವರಾಗಿರುವರು.ಪರಮಾರ್ಥಸಾಧನದಲ್ಲಿ ಈ ತಿಳುವಳಿಕೆಗೆ ಬಹಳಷ್ಟು ಮಹತ್ವವಿದೆ. ಯಾಕೆಂದರೆ ಮೃತ್ಯುವಿನ ಸಮಾಸ ಹೇಳುವಾಗ ಶ್ರೀ ಸಮರ್ಥರ ಸ್ಫೂರ್ತಿಯು ಶಿಖರದ ತೀರ ತುತ್ತತುದಿಗೆ ಮುಟ್ಟಿದೆ. ಬೇರ ಬೇರೆ ಭಾಷೆಯಲ್ಲಿಯ ಸಾಹಿತ್ಯದಲ್ಲಿಯಾಗಲೀ ಅಥವಾ ಸಂತರ ವಾಙ್ಮಯದಲ್ಲಾಗಲೀ ಮಾನವ ಜೀವನದಲ್ಲಿಯ ಮೃತ್ಯುವಿನ ವಿಲಕ್ಷಣ ಲೀಲೆ ಇಷ್ಟೊಂದು ಪ್ರಭಾವೀ ಮತ್ತು ಜೋರದಾರ (ಬಲವತ್ತರ) ಆಗಿ ಮತ್ತು ರಸಾಳವಾಣಿಯಿಂದ (ಅಖಂಡ ಪ್ರವಾಹದಂತೆ) ವರ್ಣಿಸಿದ್ದು ಎಲ್ಲಿಯೂ ಕಂಡು ಬಂದಿಲ್ಲ. ಕಾಲನ ಎದೆಯ ಮೇಲೆ ಕುಣಿಯುವಂಥ ಶ್ರೀ ರಾಮದಾಸರೇ ಅದನ್ನು ಮಾಡಲು ಶಕ್ತರಾದರು.

## ಸಮಾಸ ನವಮ : ಮೃತ್ಯುನಿರೂಪಣ

॥ಶ್ರೀರಾಮ॥ ಸಂಸಾರ ಮ್ಹಣಿಜೆ ಸವೇಚ ಸ್ವಾರ । ನಾಹೀ ಮರಣಾಸ ಉಧಾರ ।
ಮಾಸೀ ಲಾಗಲೇ ಶರೀರ । ಘಡೀನೇ ಘಡೀ ॥೧॥
ನಿತ್ಯ ಕಾಳಾಚೀ ಸಂಗತೀ । ನ ಕಳೆ ಹೋಣಾರಾಚೀ ಗತೀ ।
ಕರ್ಮಾಸಾರಿಖೆ ಪ್ರಾಣೀ ಪಡತೀ । ನಾನಾ ದೇಶೀ ವಿದೇಶೀ ॥೨॥
ಸರತಾ ಸಂಚಿತಾಚೇ ಶೇಷ । ನಾಹೀ ಕ್ಷಣಾಚಾ ಅವಕಾಶ ।
ಭರತಾ ನ ಭರತಾ ನಿಮಿಷ್ಯ । ಜಾಣೇ ಲಾಗೇ ॥೩॥
ಅವಚಿತೇ ಕಾಳಾಚೇ ಮ್ಹಣಿಯಾರೇ । ಮಾರಿತ ಸುಟತೀ ಯೇಕಸರೇ ।
ನೇಊನ ಘಾಲಿತೀ ಪುಢಾರೇ । ಮೃತ್ಯಪಂಥೇ ॥೪॥
ಹೋತಾ ಮೃತ್ಯಾಚೀ ಆಟಾಟೀ । ಕೋಣೀ ಘಾಲೂ ನ ಸಕತೀ ಪಾಠೀ ।
ಸರ್ವತ್ರಾಸ ಕುಟಾಕುಟೀ । ಮಾಗೇಪುಢೇ ಹೋತಸೇ ॥೫॥
ಮೃತ್ಯಕಾಳ ಕಾಠೀ ನಿಕೀ । ಬೈಸೆ ಬಳಿಯಾಚೆ ಮಸ್ತಕೀ ।
ಮಹಾರಾಜೆ ಬಳಿಯೆ ಲೋಕೀ । ರಾಹೋ ನ ಸಕತೀ ॥೬॥
ಮೃತ್ಯ ನ ಮ್ಹಣೇ ಹಾ ಕ್ರೂರ । ಮೃತ್ಯ ನ ಮ್ಹಣೇ ಹಾ ಜುಂಝಾರ ।
ಮೃತ್ಯ ನ ಮ್ಹಣೆ ಸಂಗ್ರಾಮ ಶೂರ । ಸಮರಂಗಣೀ ॥೭॥
ಮೃತ್ಯ ನ ಮ್ಹಣೇ ಹಾ ಕೋಪೀ । ಮೃತ್ಯ ನ ಮ್ಹಣೆ ಹಾ ಪ್ರತಾಪೀ ।
ಮೃತ್ಯ ನ ಮ್ಹಣೆ ಉಗ್ರರೂಪೀ । ಮಹಾಖಳ ॥೮॥
ಮೃತ್ಯ ನ ಮ್ಹಣೆ ಹಾ ಬಲಾಢ್ಯ । ಮೃತ್ಯ ನ ಮ್ಹಣೆ ಧನಾಢ್ಯ ।
ಮೃತ್ಯ ನ ಮ್ಹಣೆ ಆಢ್ಯ । ಸರ್ವಗುಣೇ ॥೯॥

## ಸಮಾಸ : ೯ ಮೃತ್ಯುನಿರೂಪಣ (ನುಡಿ ೫೯)

ಮಾನವೀ ಜೀವನದ ಪ್ರವಾಹವು ಕಾಲನ ಆಧಿಪತ್ಯದ ಕಡೆಗೆ ಅಖಂಡವಾಗಿ ಹರಿಯುತ್ತದೆ. ಪ್ರವಾಹದ ದಿಕ್ಕು ಮೃತ್ಯುವಿನಕಡೆಗೆ ಇರುತ್ತದೆ. ಮರಣಹೇಗೆ ಮತ್ತು ಎಲ್ಲಿಬರುತ್ತದೆಂಬುದು ಮನುಷ್ಯನ ಕರ್ಮಾನುಸಾರವಾಗಿ ಇದು ಮೊದಲಿಗೇ ಗೊತ್ತುಪಡಿಸಿರುತ್ತದೆ. ಆದರೆ ಮೃತು ಬಂದಾಗ ಯಾರೂ ಉಳಿಸಿಕೊಳ್ಳಲಿಕ್ಕೆ ಶಕ್ಯವಾಗುವದಿಲ್ಲ. ಸಂಸಾರವೆಂದರೆ ಸದಾ ಒಂದೇ ಸವನೆ ಓಡುತ್ತಿರುವ ಕುದುರೆಯ ಸವಾರ(ಸ್ವಾರ)ಇದ್ದಂತೆ. ಸಂಸಾರದಲ್ಲಿಯ ಮರಣದ ಘಟನೆಯು ಉದ್ದರಿಯದಲ್ಲ, ಇಂದಿನದನ್ನು ನಾಳಿನವರೆಗೆ ಸಹ ಹಾಕಲಿಕ್ಕೆ ಬರುವದಿಲ್ಲ. ಮನುಷ್ಯ ಶರೀರವು ಕ್ಷಣ ಕ್ಷಣದ ಲೆಕ್ಕಕ್ಕೆ ಒಳಪಟ್ಟಿರುವದು. ಅವನ ಆಯುಷ್ಯವು ಕ್ಷಣ ಕ್ಷಣಗಳಿಂದ ಮುಗಿಯುತ್ತ ಕಡಿಮೆಯಾಗುತ್ತ ಬರುವದು (೧) ಹುಟ್ಟಿದಾಗಿನಿಂದಲೇ ಕಾಲನು ಒಂದೇ ಸವನೆ ಬೆನ್ನು ಹತ್ತಿರುತ್ತಾನೆ. ಮುಂದೇನಾಗುವದೆಂಬುದು ತಿಳಿಯುವದಿಲ್ಲ. ಯಾವನ ಕರ್ಮ ಹೇಗಿರುವದೋ ಆದರಂತೆ ಮನುಷ್ಯ ಸ್ವದೇಶದಲ್ಲಿ ಅಥವಾ ಪರದೇಶದಲ್ಲಿ ಸಾಯುವನು. (೨) ಪ್ರಾರಬ್ಧ (ಪೂರ್ವ ಸಂಚಿತ) ಸಂಪೂರ್ಣವಾಗಿ ಮುಗಿದ ಮೇಲೆ ಒಂದು ಕ್ಷಣದಷ್ಟು ಸಹ ಅವಕಾಶಉಳಿಯುವದಿಲ್ಲ. ಕೊನೆಯ ನಿಮಿಷಮುಗಿಯುವಷ್ಟರಲ್ಲಿಜೀವವುದೇಹಬಿಟ್ಟು ಹೊರಬೀಳಬೇಕಾಗುವದು. (೩) ಕಾಲನ ದೂತ ಏಕಾಏಕಿ ಬರುತ್ತಾನೆ. ಜೀವಕ್ಕೆ ಹೊಡೆಯುತ್ತ ಹೋಗುವನು. ಮತ್ತು ಮುಂದೆ ಹಾಕಿಕೊಂಡು ಮೃತ್ಯು ಮಾರ್ಗದಿಂದ ತೆಗೆದುಕೊಂಡು ಹೋಗುವನು. (೪) ಮರಣದ ಮುತ್ತಿಗೆ, ಉರುಲು ಪಾಶ ಬಿದ್ದಾಗ ಅವನನ್ನು ಉಳಿಸಲು ಯಾರೂ ಮುಂದೆ ಬರುವದಿಲ್ಲ. ಬೆನ್ನಿಗೆ ಹಾಕಿಕೊಳ್ಳುವದಿಲ್ಲ. ಬಂದರೂ ಉಳಿಸಲಿಕ್ಕೆ ಶಕ್ಯವಾಗುವದಿಲ್ಲ. ಎಲ್ಲ ಪ್ರಾಣಿಗಳನ್ನೂ ಮರಣವು ಮುರಿದು ಪುಡಿ ಪುಡಿ ಮಾಡಿ ಒಗೆದುಬಿಡುವದು. ಒಬ್ಬರ ಸರತಿ ಮೊದಲಿಗೆ ಬಂದರೆ ಇನ್ನೊಬ್ಬರದು ನಂತರ ಹೀಗೆ ಬಿಟ್ಟದ್ದಲ್ಲ. (೫) ಅಂತ್ಯಕಾಲವೆಂಬುದೊಂದು ಅತಿ ಶಕ್ತಿಯುಳ್ಳ ಬಡಿಗೆ (ಡೊಣ್ಣೆ)ಯು ಎಂಥ ಬಲವಂತನ ತಲೆಗೂ ಇದರ ಹೊಡೆತ ತಪ್ಪಿದ್ದಲ್ಲ. ಬಲಾಢ್ಯರಾದ ರಾಜ ಮಹಾರಾಜರೂ ಸಹ ಮೃತ್ಯುವಿನ ಮುಂದೆ ನಿಲ್ಲಲಾರರು. (೬) ಇನ್ನು ಮೇಲೆ ಮಾನವ ಜೀವನದ ಎಲ್ಲ ಕ್ಷೇತ್ರಗಳಲ್ಲಿಯ ಸಣ್ಣ ಮತ್ತು ದೊಡ್ಡ ಮನುಷ್ಯರೆಲ್ಲರೂ ಕೊನೆಗೆ ಯಾವ ಬಗೆಯಿಂದ ಮರಣಾಧೀನರಾಗುವರೆಂಬುದರ ಒಳ್ಳೆ ಸರಸ ವರ್ಣನೆ ಇರುವದು. ಇಡೀ ಮಾನವೀ ಜೀವನವೇ ಶ್ರೀ ಸಮರ್ಥರ ಮುಂದೆ ಕೈಜೋಡಿಸಿ ನಿಂತುಕೊಂಡಂತೆ ಅನಿಸುವದು. ಒಮ್ಮೆ ಅಂತ್ಯಕಾಲ ಬಂದಿತೆಂದರೆ ಆಗಮೃತ್ಯುವು ಜಗತ್ತಿನಲ್ಲಿಯ ಯಾರನ್ನೂಬಿಟ್ಟಿಪ್ಪನಲ್ಲ. ಇವನು ಅಂದರೆ ಮರಣಾಧೀನನಾದವನು ಬಹು ಕ್ರೂರಿಯೂ ರಣಕುಶಲನೂ (ಯೋಧ್ಧಾ) ಸಂಗ್ರಾಮಶೂರನೂ ಇರುವವನು. (೭) ಇವನು ಸಿಟ್ಟಿನವ, ಪ್ರತಾಪಿ, ಅಥವಾ ಉಗ್ರರೂಪದ ದುಷ್ಟನಿರುವನು. (೮) ಇವನು ಬಲಾಢ್ಯಧನಾಢ್ಯ ಅಥವಾ ಸರ್ವಗುಣಗಳಿಂದ ಸಂಪನ್ನನಿರುವನು. (೯)

ಮೃತ್ಯ ನ ಮ್ಹಣೆ ಹಾ ವಿಖ್ಯಾತ । ಮೃತ್ಯ ನ ಮ್ಹಣೆ ಹಾ ಶ್ರೀಮಂತ ।
ಮೃತ್ಯ ನ ಮ್ಹಣೆ ಹಾ ಅದ್ಭುತ । ಪರಾಕ್ರಮೀ ॥೧೦॥
ಮೃತ್ಯ ನ ಮ್ಹಣೆ ಹಾ ಭೂಪತೀ । ಮೃತ್ಯ ನ ಮ್ಹಣೆ ಹಾ ಚಕ್ರವರ್ತೀ ।
ಮೃತ್ಯ ನ ಮ್ಹಣೆ ಹಾ ಕರಾಮತೀ। ಕೈವಾಡ ಜಾಣೇ ॥೧೧॥
ಮೃತ್ಯ ನ ಮ್ಹಣೆ ಹಯಪತೀ । ಮೃತ್ಯ ನ ಮ್ಹಣೆ ಗಜಪತೀ ।
ಮೃತ್ಯ ನ ಮ್ಹಣೆ ನರಪತೀ । ವಿಖ್ಯಾತ ರಾಜಾ ॥೧೨॥
ಮೃತ್ಯ ನ ಮ್ಹಣೆ ವರಿಷ್ಠ ಜನೀ । ಮೃತ್ಯ ನ ಮ್ಹಣೆ ರಾಜಕಾರಣೀ ।
ಮೃತ್ಯ ನ ಮ್ಹಣೆ ವೆತನೀ । ವೆತನ ಧರ್ತಾ ॥೧೩॥
ಮೃತ್ಯ ನ ಮ್ಹಣೆ ದೇಸಾಈ । ಮೃತ್ಯ ನ ಮ್ಹಣೆ ವೆವಸಾಈ ।
ಮೃತ್ಯ ನ ಮ್ಹಣೆ ಶಾಈ ಶಾಈ। ಪುಂಡರಾಜೇ ॥೧೪॥
ಮೃತ್ಯ ನ ಮ್ಹಣೆ ಮುದ್ರಾಧಾರೀ । ಮೃತ್ಯ ನ ಮ್ಹಣೆ ವ್ಯಾಪಾರೀ ।
ಮೃತ್ಯ ನ ಮ್ಹಣೆ ಪರನಾರೀ । ರಾಜಕನ್ಯಾ ॥೧೫॥
ಮೃತ್ಯ ನ ಮ್ಹಣೆ ಕಾರ್ಯಾಕಾರಣ । ಮೃತ್ಯ ನ ಮ್ಹಣೆ ವರ್ಣಾವರ್ಣ ।
ಮೃತ್ಯ ನ ಮ್ಹಣೆ ಹಾ ಬ್ರಾಹ್ಮಣ । ಕರ್ಮನಿಷ್ಠ ॥೧೬॥
ಮೃತ್ಯ ನ ಮ್ಹಣೆ ವಿತ್ಪನ್ನ । ಮೃತ್ಯ ನ ಮ್ಹಣೆ ಸಂಪನ್ನ ।
ಮೃತ್ಯ ನ ಮ್ಹಣೆ ವಿದ್ವಜ್ಜನ । ಸಮುದಾಈ ॥೧೭॥
ಮೃತ್ಯ ನ ಮ್ಹಣೆ ಹಾ ಧೂರ್ತ । ಮೃತ್ಯ ನ ಮ್ಹಣೆ ಬಹುಶ್ರುತ ।
ಮೃತ್ಯ ನ ಮ್ಹಣೆ ಹಾ ಪಂಡಿತ । ಮಹಾಭಲಾ ॥೧೮॥
ಮೃತ್ಯ ನ ಮ್ಹಣೆ ಪುರಾಣಿಕ । ಮೃತ್ಯ ನ ಮ್ಹಣೆ ಹಾ ವೈದಿಕ ।
ಮೃತ್ಯ ನ ಮ್ಹಣೆ ಹಾ ಯಾಜ್ಞಿಕ । ಅಥವಾ ಜೋಸೀ ॥೧೯॥
ಮೃತ್ಯ ನ ಮ್ಹಣೆ ಅಗ್ನಿಹೋತ್ರೀ । ಮೃತ್ಯ ನ ಮ್ಹಣೆ ಹಾ ಶ್ರೋತ್ರೀ ।
ಮೃತ್ಯ ನ ಮ್ಹಣೆ ಮಂತ್ರಯಂತ್ರೀ । ಪೂರ್ಣಾಗಮೀ ॥೨೦॥
ಮೃತ್ಯ ನ ಮ್ಹಣೆ ಶಾಸ್ತ್ರಜ್ಞ । ಮೃತ್ಯ ನ ಮ್ಹಣೆ ವೇದಜ್ಞ ।
ಮೃತ್ಯ ನ ಮ್ಹಣೆ ಸರ್ವಜ್ಞ । ಸರ್ವಜಾಣೇ ॥೨೧॥
ಮೃತ್ಯ ನ ಮ್ಹಣೆ ಬ್ರಹ್ಮಹತ್ಯಾ । ಮೃತ್ಯ ನ ಮ್ಹಣೆ ಗೋಹತ್ಯಾ ।
ಮೃತ್ಯ ನ ಮ್ಹಣೆ ನಾನಾ ಹತ್ಯಾ । ಸ್ತ್ರೀಬಾಳಕಾದಿಕ ॥೨೨॥
ಮೃತ್ಯ ನ ಮ್ಹಣೆ ರಾಗಜ್ಞಾನೀ । ಮೃತ್ಯ ನ ಮ್ಹಣೆ ತಾಳಜ್ಞಾನೀ ।
ಮೃತ್ಯ ನ ಮ್ಹಣೆ ತತ್ವಜ್ಞಾನೀ । ತತ್ವವೇತ್ತಾ ॥೨೩॥

ಇವನು ವಿಖ್ಯಾತ (ಪ್ರಖ್ಯಾತ) ಶ್ರೀಮಂತ ಅಥವಾ ಅದ್ಭುತ ಪರಾಕ್ರಮಿ ಇರುವವನು. (೧೦) ಇವನು ಭೂಪತಿ ಅಂದರೆ ರಾಜ,ಚಕ್ರವರ್ತಿ,ಅಂದರೆ ಮಹಾರಾಜ,ಅಥವಾ ಸಾಮ್ರಾಟ ಅಥವಾ ಚಮತ್ಕಾರ, ಕುಶಲ (ಯುಕ್ತಿ ಕುಶಲ, ಬುದ್ಧಿ ಕುಶಲ)ಕಾರಸ್ಥಾನಿ(ಮಸಲತಗಾರ,ಚಾಟಕಪೂಟಕ,ಮಾಟಗಾರ)ಇರುವನು.(೧೧)ಇವನು ಕುದುರೆಗಳ ಒಡೆಯ, ಅಶ್ವವಿದ್ಯಾಪಾರಂಗತ, ಕುದುರೆಯ ವಿಷಯದಲ್ಲಿ ಎಲ್ಲ ತಿಳಿದವ, ಆನೆಗಳ ಒಡೆಯ, ಗಜವಿದ್ಯಾಪಾರಂಗತ, ಅಥವಾ ಬಹಳಷ್ಟು ಜನರನ್ನು ಸಲುಹಿದ ರಾಜನಿರುವನು. (೧೨) ಇವನು ಲೋಕದಲ್ಲಿ ಹೆಸರಾದವನು, ರಾಜಕಾರಣಿ, ಅಥವಾ ಸ್ವತಃ ವತನದಾರನಿದ್ದು ಅನೇಕರಿಗೆ ವತನವನ್ನು ಹಾಕಿಕೊಡುವಂಥವ ಅಥವಾ ದೊಡ್ಡ ಸಂಬಳದವನಿದ್ದು ತಾನು ಅನೇಕರಿಗೆ ಸಂಬಳ ಕೊಡತಕ್ಕವನು. (೧೩) ಇವನು ದೇಸಾಯಿ, ವ್ಯಾಪಾರಿ, ಉದ್ದಿಮೆದಾರ ಅಥವಾ ಇವನು ಅನೇಕ ಹಳ್ಳಿಗಳ ಪುಂಡ ಪುಢಾರಿ ರಾಜನಿರುವನು. (೧೪) ಇವನು ಸರಕಾರಿ ಶಿಕ್ಕಾ (ಮುದ್ರೆ)ದ ಅಧಿಕಾರಿ,ವ್ಯಾಪಾರಿ ಇವಳು, ಪರನಾರಿ ಅಥವಾ ರಾಜಕನ್ಯೆ ಇರುವಳು. (೧೫) ಇವನು ಒಂದು ಮಹತ್ತರವಾದ ಕಾರ್ಯಕ್ಕಾಗಿ ಜನ್ಮ ತಳೆದವ,ಕರ್ತವ್ಯನಿಷ್ಠ,ಉಚ್ಚ ವರ್ಣದವ,ನೀಚವರ್ಣದವ(ನಾಲ್ಕು ವರ್ಣದಲ್ಲಿಯವನೋ ಅಥವಾ ಇವುಗಳ ಹೊರಗಿನವನೋಎಂಬುದನ್ನು ವಿಚಾರಿಸುವದಿಲ್ಲ)ಇವನು ಬ್ರಾಹ್ಮಣನಿದ್ದು ಕರ್ಮನಿಷ್ಠನಿರುವನು(೧೬)ಇವನು ವಿದ್ಯಾಸಂಪನ್ನನು ದ್ರವ್ಯ ಸಂಪನ್ನನು ಅಥವಾ ಸಭೆಗಳಲ್ಲಿ ಮರ್ಯಾದೆ ಪಡೆದ ದೊಡ್ಡ ಪಂಡಿತನಿರುವನು. (೧೭) ಇವನು ಧೂರ್ತನು, ಬಹಳಷ್ಟು ಓದಿ ತಿಳಿದವ, ಮಾತುಗಾರ ಅಥವಾ ದೊಡ್ಡ ಸಜ್ಜನ ಪಂಡಿತನಿರುವನು. (೧೮) ಇವನು ಪುರಾಣ ಪಂಡಿತ, ಯಜ್ಞಗಳನ್ನು ಮಾಡಿದವ, ವೈದಿಕ ಕರ್ಮಕಾಂಡ ಪಂಡಿತನು, ಪ್ರಸಿದ್ಧ ಜೋತಿಷಿ ಇರುವನು. (೧೯) ಇವನು ಅಗ್ನಿಹೋತ್ರಿ,ವೇದಗಳ ಗುಹ್ಯಾರ್ಥ ತಿಳಿದ ಜ್ಞಾನಿ,ಮಂತ್ರ ಯಂತ್ರ ಸಾಧನ ತಿಳಿದವ,ಅಥವಾ ವೇದಶಾಸ್ತ್ರ ಅಭ್ಯಾಸ ಮಾಡಿದವನು(೨೦)ಇವನು ಶಾಸ್ತ್ರತಜ್ಞ ವೇದತಜ್ಞ ಅಥವಾ ಎಲ್ಲವನ್ನೂ ತಿಳಿದ ಸರ್ವಜ್ಞನಿರುವನು.[೨೧] ಇದು ಬ್ರಹ್ಮಹತ್ಯೆ, ಗೋಹತ್ಯೆ ಅಥವಾ ಸ್ತ್ರೀಯರು – ಸಣ್ಣ ಮಕ್ಕಳೇ ಮೊದಲಾದವರ ಹತ್ಯೆ ಹೇಗೆ ಮಾಡಬೇಕೆಂಬ ವಿಚಾರವನ್ನೂ ಮೃತ್ಯು ಮಾಡುವದಿಲ್ಲ. ಅರ್ಥಾತ್ ಎಲ್ಲರೂ ಕಾಲಿನ ವಶವರ್ತಿಗಳು (೨೨) ಇವನು ರಾಗಜ್ಞಾನದವನು. ತಾಳಜ್ಞಾನದವನು ಅಥವಾ ತತ್ವಗಳನ್ನು ತಿಳಿದ ತತ್ವಜ್ಞಾನಿ ಇರುವನು. (೨೩)

ಮೃತ್ಯ ನ ಮ್ಹಣೆ ಯೋಗಾಭ್ಯಾಸೀ । ಮೃತ್ಯ ನ ಮ್ಹಣೆ ಸನ್ಯಾಸೀ ।
ಮೃತ್ಯ ನ ಮ್ಹಣೆ ಕಾಳಾಸೀ । ವಂಚೂ ಜಾಣೇ ॥೨೪॥
ಮೃತ್ಯ ನ ಮ್ಹಣೆ ಹಾ ಸಾವಧ । ಮೃತ್ಯ ನ ಮ್ಹಣೆ ಹಾ ಸಿದ್ಧ ।
ಮೃತ್ಯ ನ ಮ್ಹಣೆ ವೈದ್ಯ ಪ್ರಸಿದ್ಧ । ಪಂಚಾಕ್ಷರೀ ॥೨೫॥
ಮೃತ್ಯ ನ ಮ್ಹಣೆ ಹಾ ಗೋಸಾವೀ । ಮೃತ್ಯ ನ ಮ್ಹಣೆ ಹಾ ತಪಸ್ವೀ ।
ಮೃತ್ಯ ನ ಮ್ಹಣೆ ಹಾ ಮನಸ್ವೀ । ಉದಾಸೀನ ॥೨೬॥
ಮೃತ್ಯ ನ ಮ್ಹಣೆ ಋಷೀಶ್ವರ । ಮೃತ್ಯ ನ ಮ್ಹಣೆ ಕವೀಶ್ವರ ।
ಮೃತ್ಯ ನ ಮ್ಹಣೆ ದಿಗಂಬರ । ಸಮಾಧಿಸ್ಥ ॥೨೭॥
ಮೃತ್ಯ ನ ಮ್ಹಣೆ ಹಠಯೋಗೀ । ಮೃತ್ಯ ನ ಮ್ಹಣೆ ರಾಜಯೋಗೀ ।
ಮೃತ್ಯ ನ ಮ್ಹಣೆ ವೀತರಾಗೀ । ನಿರಂತರ ॥೨೮॥
ಮೃತ್ಯ ನ ಮ್ಹಣೆ ಬ್ರಹ್ಮಚಾರೀ । ಮೃತ್ಯ ನ ಮ್ಹಣೆ ಜಟಾಧಾರೀ ।
ಮೃತ್ಯ ನ ಮ್ಹಣೆ ನಿರಾಹಾರೀ । ಯೋಗೇಶ್ವರ ॥೨೯॥
ಮೃತ್ಯ ನ ಮ್ಹಣೆ ಹಾ ಸಂತ । ಮೃತ್ಯ ನ ಮ್ಹಣೆ ಹಾ ಮಹಂತ ।
ಮೃತ್ಯ ನ ಮ್ಹಣೆ ಹಾ ಗುಪ್ತ । ಹೋತ ಅಸೇ ॥३೦॥
ಮೃತ್ಯ ನ ಮ್ಹಣೆ ಸ್ವಾಧೇನ । ಮೃತ್ಯ ನ ಮ್ಹಣೆ ಪರಾಧೇನ ।
ಸಕಳ ಜೀವಾಸ ಪ್ರಾಶನ । ಮೃತ್ಯಚಿ ಕರೀ ॥३೧॥
ಯೇಕ ಮೃತ್ಯಮಾರ್ಗೀ ಲಾಗಲೇ । ಯೇಕೀ ಅರ್ಧಪಂಥ ಕ್ರಮಿಲೇ ।
ಯೇಕ ತೇ ಸೇವಟಾಸ ಗೇಲೇ । ವೃದ್ಧಪಣೇ ॥३೨॥
ಮೃತ್ಯ ನ ಮ್ಹಣೆ ಬಾಳ ತಾರುಣ್ಯ । ಮೃತ್ಯ ನ ಮ್ಹಣೆ ಸುಲಕ್ಷಣ ।
ಮೃತ್ಯ ನ ಮ್ಹಣೆ ವಿಚಕ್ಷಣ । ಬಹುಬೋಲಿಕಾ ॥३३॥
ಮೃತ್ಯ ನ ಮ್ಹಣೆ ಹಾ ಆಧಾರೂ । ಮೃತ್ಯ ನ ಮ್ಹಣ ಉದಾರ ।
ಮೃತ್ಯ ನ ಮ್ಹಣೆ ಹಾ ಸುಂದರ । ಚತುರಾಂಗ ಜಾಣೇ ॥३४॥
ಮೃತ್ಯ ನ ಮ್ಹಣೆ ಪುಣ್ಯ ಪುರುಷ । ಮೃತ್ಯ ನ ಮ್ಹಣೆ ಹರಿದಾಸ ।
ಮೃತ್ಯ ನ ಮ್ಹಣೆ ವಿಶೇಷ । ಸುಕೃತೀ ನರ ॥३೫॥
ಆತಾ ಅಸೋ ಹೇ ಬೋಲಣೇ । ಮೃತ್ಯಾಪಾಸೂನ ಸುಟಿಜೇ ಕೋಣೇ ।
ಮಾಗೇ ಪುಢೇ ವಿಶ್ವಾಸ ಜಾಣೇ । ಮೃತ್ಯಪಂಥೇ ॥३೬॥
ಚ್ಯಾರೀ ಖಾಣೀ ಚ್ಯಾರೀ ವಾಣೀ । ಚೌರ್‍ಯಾಂಸೀ ಲಕ್ಷ ಜೀವಯೋನೀ ।
ಜನ್ಮಾ ಆಲೇ ತಿತುಕೇ ಪ್ರಾಣೀ । ಮೃತ್ಯ ಪಾವತೀ ॥३೭॥

ಇವನು ಯೋಗಾಭ್ಯಾಸಿ ಇವನು ಸನ್ಯಾಸಿ ಅಥವಾ ಯೋಗಬಲದಿಂದ ಮರಣವನ್ನು ತಪ್ಪಿಸಿಕೊಳ್ಳುವವ,ಅಂದರೆ ಕಾಲನನ್ನು ಮೋಸಗೊಳಿಸುವಂಥವ(ಫಸಾಯಿಸುವವನು)ಇವರೆಲ್ಲರೂ ಮೃತ್ಯುವಿನ ವಶವರ್ತಿಗಳು(೨೪)ಇವನು ಬಹು ಎಚ್ಚರವುಳ್ಳವನು.ಇವನು ಸಿದ್ಧಪುರುಷ ಅಥವಾಪ್ರಸಿದ್ಧ ವೈದ್ಯಅಥವಾ ಪಂಚಾಕ್ಷರಿ ಮಂತ್ರಜ್ಞನಿರುವನು.(೨೫)ಇವನು ಗೋಸಾವಿ, ತಪಸ್ವಿ, ತೇಜಸ್ವಿ, ಮನಸ್ಸನ್ನು ಸ್ವಾಧೀನದಲ್ಲಿಟ್ಟುಕೊಂಡವ ಅಥವಾ ದೊಡ್ಡ ಅನಾಸಕ್ತನಿರುವನು.(೨೬) ಇವನು ಹಟಯೋಗಿ, ಇವನು ಋಷೀಶ್ವರ,ಕವೀಶ್ವರ, ದಿಗಂಬರ ಅಥವಾ ಸಮಾಧಿಸ್ಥನಿರುವನು. (೨೭) ಇವನು ಹಟಯೋಗಿ, ಹಟದಿಂದ ಸಿದ್ಧಿಪಡೆದವನು ಅಥವಾ ಸದಾ ಸರ್ವಕಾಲ ವೈರಾಗ್ಯಶೀಲನಾಗಿರುವವನು. ಇವರೆಲ್ಲ ಮೃತ್ಯುವಶರಾದವರೇ. (೨೮) ಇವನು ಬ್ರಹ್ಮಚಾರಿ, ಜಟಾಧಾರಿ, ಏನೂ ತಿನ್ನದೇ ಇರುವವ, ಅಥವಾ ಅತಿ ದೊಡ್ಡಯೋಗಿ ಇರುವನು(೨೯)ಇವನುಸಂತ,ಇವನುಮಹಂತ,ಅನೇಕ ಮಠ ಆಶ್ರಮಗಳ ಅಧಿಪತಿ ಅಥವಾ ಬೇಕಾದಾಗ ಅದೃಶ್ಯ (ಗುಪ್ತ)ವಾಗುವ ಸಿದ್ಧನಿರುವನು. (೩೦) ಇವನು ಸರ್ವಸ್ವತಂತ್ರನು, ಇವನು ಪರತಂತ್ರ (ಪರಾಧೀನ) ನಿರುವನು. ಇವರೆಲ್ಲರನ್ನು ಮೃತ್ಯುವು ಕಬಳಿಸಿ ಬಿಡುತ್ತದೆ. (೩೧) ಕೆಲವೊಂದು ಜೀವ ಹುಟ್ಟಿದ ಕೂಡಲೇ ಸಾಯುತ್ತವೆ. ಕೆಲವೊಂದು ಜೀವ ಅರ್ಧ ಆಯುಷ್ಯ ಕಳೆದು ಸಾಯುವವು. ಕೆಲವೊಂದು ಜೀವ ಮುಪ್ಪಾಗು ವವರೆಗೂ ಇದ್ದು ಸಾಯುವವು. (೩೨) ಮೃತ್ಯುವು ಇವರಾರನ್ನೂ ನೋಡುವದಿಲ್ಲ. ಇವನು ಬಾಲಕ, ತರುಣ, ಸುಲಕ್ಷಣವಂತ, ಜಾಣ, ಅಥವಾ ಕಲಿತವ ಅಥವಾ ಬಹಳಷ್ಟು ಮಾತನಾಡುವವನಿರುವನು. (೩೩) ಇವನು ಬಹುಜನರಿಗೆ ಆಧಾರನು, ಸಂರಕ್ಷಣಕರ್ತನು, ಉದಾರ ಸುಂದರ ಅಥವಾ ನಾಲ್ಕೂಬಾಜೂದ ಕಡೆಗೆ ಲಕ್ಷ್ಯವಿಡುವಂಥ ಜ್ಞಾನ ಸಂಪನ್ನ, ಸಕಲವನ್ನು ತಿಳಿದು ವಿಚಾರಿಸಿ ಹೇಳುವಂಥ ಚತುರನಿರುವನು. (೩೪) ಇವನು ಪುಣ್ಯಪುರುಷ, ಇವನು ಹರಿದಾಸ, ಅಥವಾ ವಿಶೇಷ ಸತ್ಕರ್ಮ ಮಾಡುವಂಥ ಪುಣ್ಯ ಪುರುಷನಿರುವನು. ಇದೆಲ್ಲವನ್ನೂ ಮೃತ್ಯುವು ನೋಡುವದಿಲ್ಲ. (೩೫) ಸರ್ವ ದೃಶ್ಯ ವಿಶ್ವಕ್ಕೆ ಎದುರಿಟ್ಟು ಕಾಣುವದಕ್ಕೆಲ್ಲ ಮರಣವು ನಿಶ್ಚಿತವಿದೆ. ಯಾವನು ಜನ್ಮಕ್ಕೆ ಬರುವನೋ ಅವನು ನಿಶ್ಚಯವಾಗಿ ಮರಣ ಹೊಂದುವನು. ಈಗ ಈ ಮಾತುಗಳ ವಿಸ್ತಾರ ಸಾಕು. ಮೃತ್ಯುವಿನ ಕೈಹಿಡಿತದಿಂದ ಯಾರೂ ತಪ್ಪಿಸಿಕೊಳ್ಳಲಿಕ್ಕೆ ಸಾಧ್ಯವಿಲ್ಲ. ಇದು ನಿಶ್ಚಿತವು. ಈ ಎಲ್ಲ ದೃಶ್ಯ ಜಗತ್ತಿಗೆ ಇಂದಿಲ್ಲ ನಾಳೆ ಮೊದಲು ಅಥವಾ ಹಿಂದುಗಡೆ ಅಂತೂ ಕೊನೆಗೊಮ್ಮೆ ಮೃತ್ಯುವಿನ ಮಾರ್ಗದಿಂದ ಹೋಗಬೇಕಾಗುವದು. (೩೬) ಜಾರಜ (ಜರಾಯುಜ,) ಗರ್ಭಾಶಯ ಮಾಂಸದಿಂದ, ಬೆವರಿನಿಂದ,(ಸ್ವೇದಜ) ಲೋಹ(ಭೂಮಿ)ದಿಂದ (ಉದ್ಭಿಜ), ತತ್ತಿ (ಅಂಡಜ) ದಿಂದ ಹೀಗೆ ನಾಲ್ಕು ಪ್ರಕಾರದ ಹುಟ್ಟುಗಳು ಹಾಗೂ ಪರಾ, ಪಶ್ಯಂತಿ, ಮಧ್ಯಮಾ ವೈಖರೀ ಹೀಗೆ ನಾಲ್ಕು ವಾಣಿಗಳು ಇರುತ್ತಿದ್ದು ಒಟ್ಟು ಎಂಭತ್ತುನಾಲ್ಕು ಲಕ್ಷ ಜೀವರಾಶಿಗಳ ಪ್ರಕಾರಗಳು ಇರುತ್ತವೆ ಇವೆಲ್ಲವೂ ಅಂದರೆ, ಯಾವ ಯಾವ ಜೀವವು ದೃಶ್ಯ ವಿಶ್ವದಲ್ಲಿ ದೇಹಧಾರಣ ಹೊಂದಿ ಜನ್ಮಕ್ಕೆ ಬರುತ್ತವೆಯೋ, ಇವುಗಳೆಲ್ಲಕ್ಕೂ ಮರಣ ಬರದ ಹೊರತು ಉಳಿಗಾಲವಿಲ್ಲ. (೩೭)

ಮೃತ್ಯಾಭೇಣೇ ಪಳೋ ಜಾತಾ । ತರೀ ಮೃತ್ಯ ಸೋಡಿನಾ ಸರ್ವಥಾ ।
ಮೃತ್ಯಾಸ ನ ಯೆ ಚುಕವಿತಾ । ಕಾಹೀ ಕೇಲ್ಯಾ ॥೩೮॥
ಮೃತ್ಯ ನ ಮ್ಹಣೆ ಹಾ ಸ್ವದೇಸೀ । ಮೃತ್ಯ ನ ಮ್ಹಣೆ ಹಾ ವಿದೇಸೀ ।
ಮೃತ್ಯ ನ ಮ್ಹಣೆ ಹಾ ಉಪವಾಸೀ । ನಿರಂತರ ॥೩೯॥
ಮೃತ್ಯ ನ ಮ್ಹಣೆ ಥೋರ ಥೋರ । ಮೃತ್ಯ ನ ಮ್ಹಣೆ ಹರಿಹರ ।
ಮೃತ್ಯ ನ ಮ್ಹಣೆ ಅವತಾರ । ಭಗವಂತಾಚೇ ॥೪೦॥
ಶ್ರೋತೀ ಕೋಪ ನ ಕರಾವಾ । ಹಾ ಮೃತ್ಯಲೋಕ ಸಕಳಾಸ ಠಾವಾ ।
ಉಪಜಲಾ ಪ್ರಾಣೀ ಜಾಈಲ ಬರವಾ । ಮೃತ್ಯಪಂಥೇ ॥೪೧॥
ಯೇಥೇ ನ ಮಾನಾವಾ ಕಿಂತ । ಹಾ ಮೃತ್ಯಲೋಕ ವಿಖ್ಯಾತ ।
ಪ್ರಗಟ ಜಾಣತೀ ಸಮಸ್ತ । ಲಹಾನಥೋರ ॥೪೨॥
ತಥಾಪಿ ಕಿಂತ ಮಾನಿಜೇಲ । ತರೀ ಹಾ ಮೃತ್ಯಲೋಕ ನವ್ಹೇಲ ।
ಯಾಕಾರಣೇ ನಾಸೇಲ । ಉಪಜಲಾ ಪ್ರಾಣೀ ॥೪೩॥
ಐಸೇ ಜಾಣೋ ನಿಯಾ ಜೀವೇ । ಯಾಚೇ ಸಾರ್ಥಕಾಚಿ ಕರಾವೇ ।
ಜನೀ ಮರೋನ ಉರವಾವೇ । ಕೀರ್ತಿರೂಪೇ ॥೪೪॥
ಯೆರವೀ ಪ್ರಾಣೀ ಲಹಾನ ಥೋರ । ಮೃತ್ಯ ಪಾವತೀ ಹಾ ನಿರ್ಧಾರ।
ಬೋಲಿಲೇ ಹೇ ಅನ್ಯಥಾ ಉತ್ತರ । ಮಾನೂಚಿ ನಯೇ ॥೪೫॥
ಗೇಲೆ ಬಹುತ ವೈಭವಾಚೇ । ಗೇಲೆ ಬಹುತ ಆಯುಷ್ಯಾಚೇ ।
ಗೇಲೆ ಅಗಾಧ ಮಹಿಮೇಚೆ । ಮೃತ್ಯಪಂಥೇ ॥೪೬॥
ಗೇಲೆ ಬಹುತ ಪರಾಕ್ರಮೀ । ಗೇಲೆ ಬಹುತ ಕಪಟಕರ್ಮೀ ।
ಗೇಲೆ ಬಹುತ ಸಂಗ್ರಾಮೀ । ಸಂಗ್ರಾಮಸೌರೆ ॥೪೭॥
ಗೇಲೆ ಬಹುತಾ ಬಳಾಚೇ । ಗೇಲ್ ಬಹುತಾ ಕಾಳಾಚೇ ।
ಗೇಲೆ ಬಹುತಾ ಕುಳಾಚೆ । ಕುಳವಂತ ರಾಜೇ ॥೪೮॥
ಗೇಲೆ ಬಹುತಾಂಚೆ ಪಾಳಕ । ಗೇಲೆ ಬುದ್ಧೀಚೆ ಚಾಳಕ ।
ಗೇಲೆ ಯುಕ್ತೀಚೆ ತಾರ್ಕಿಕ । ತರ್ಕವಾದೀ ॥೪೯॥
ಗೇಲೆ ವಿದ್ಯೇಚೆ ಸಾಗರ । ಗೇಲೆ ಬಳಾಚೆ ಡೋಂಗರ ।
ಗೇಲೆ ಧನಾಚೇ ಕುಬೇರ । ಮೃತ್ಯಪಂಥೇ ॥೫೦॥
ಗೇಲೆ ಬಹುತ ಪುರುಷಾರ್ಥಾಚೇ । ಗೇಲೆ ಬಹುತ ವಿಕ್ರಮಾಚೆ ।
ಗೇಲೆ ಬಹುತ ಆಟೋಪಾಚೆ । ಕಾರ್ಯಕರ್ತೇ ॥೫೧॥

ಮರಣಕ್ಕೆ ಅಂಜಿ ಇದರ ಭಯದಿಂದ ಎಲ್ಲಿಯಾದರೂ ಓಡಿ ಹೋಗಬೇಕೆಂದರೂ ಸಾಧ್ಯವಿಲ್ಲ. ಯಾಕೆಂದರೆ ಮೃತ್ಯುವು ಎಂದೂ, ಯಾರನ್ನೂ, ಎಲ್ಲಿದ್ದರೂ ಬಿಡುವದಿಲ್ಲ. ಬೇಕಾದಷ್ಟು ನಾನಾ ರೀತಿಯ ಹಂಚಿಕೆ ಹಾಕಿ ಪ್ರಯತ್ನ ಮಾಡಿದರೂ ಮರಣವನ್ನು ತಪ್ಪಿಸಿಕೊಳ್ಳಲಿಕ್ಕೆ ಆಗುವದಿಲ್ಲ. (೩೮) ಮೃತ್ಯುವೆಂದರೆ ಸರ್ವಭಕ್ಷಕ, ಸರ್ವನಾಶಕ, ಎಲ್ಲರನ್ನೂ ವರೆಗೆ ಹಚ್ಚುವ ವರೆಗಲ್ಲಾಗಿದೆ. (ಪರೀಕ್ಷಾ ಕಲ್ಲು). ಪ್ರತ್ಯಕ್ಷ ಭಗವಂತನ ಅವತಾರಗಳೂ ಸಹ ಕೊನೆಗೆ ಮೃತ್ಯುಪಂಥದಿಂದ ಹೋಗುವವೆಂದ ಮೇಲೆ,ಇಲ್ಲಿ ಇತರ ಜೀವ ಪ್ರಾಣಿಗಳ ಹಂಗೇನು ? ಈ ಜಗತ್ತಿಗೆ ಮೃತ್ಯುಭೂಮಿ, ಮೃತ್ಯುಲೋಕವೆಂದೇ ಹೆಸರಿರುವದು. ಆದುದರಿಂದ ವಿಚಾರವಂತ ಮನುಷ್ಯನು ಮೃತ್ಯುವಿನ ಬಗ್ಗೆ ನಿಸ್ಸಂಶಯ ತಿಳುವಳಿಕೆಯುಳ್ಳವನಾಗಿ ಜೀವನದ ಸಾರ್ಥಕತೆಯನ್ನು ಸಾಧಿಸಿಕೊಳ್ಳಬೇಕು. ಈ ಮನುಷ್ಯ ಸ್ವದೇಶದವನು ಅಥವಾ ವಿದೇಶದವನಿರುವನು. ಅಥವಾ ಇವನು ಕಾಯಂ ಉಪವಾಸ ಮಾಡುವವನಿದ್ದಾನೆ. ಇದ್ಯಾವುದನ್ನೂ ಮೃತ್ಯುವು ವಿಚಾರಿಸುವದಿಲ್ಲ. (೩೯) ಮನುಷ್ಯ ಎಷ್ಟೇ ದೊಡ್ಡವನಿದ್ದರೂ ಅವನು ಮತ್ತು ಪ್ರತ್ಯಕ್ಷ ವಿಷ್ಣು, ಶಂಕರರೂ ಸಹ ಕಾಲಾಧೀನರು. ಇಷ್ಟೇ ಏಕೆ ? ಪ್ರತ್ಯಕ್ಷ ಭಗವಂತನ ಅವತಾರ ಇದ್ದರೂ ಸಹ ಮೃತ್ಯುವು ಯಾರನ್ನೂ ಬಿಟ್ಟಿಲ್ಲ. ಅವರನ್ನೂ ದಾದು ಮಾಡುವದಿಲ್ಲ. (೪೦) ಮರಣದ ಬಗೆಗೆ ಮಾಡಿದ ಈ ವಿವೇಚನೆ ಕೇಳಿ ಶ್ರೋತೃಗಳು ಸಿಟ್ಟಾಗಬಾರದು. ಇದು ಮೃತ್ಯುಲೋಕವಿದೆ. ಎಂಬುದು ಎಲ್ಲರಿಗೂ ತಿಳಿದೇ ಇದೆ. ಹುಟ್ಟಿ ಬಂದ ಪ್ರಾಣಿಗಳೆಲ್ಲ ಎಂದಾದರೊಂದು ದಿನ ಮರಣದ ದಾರಿಯಲ್ಲಿ ಹೋಗಲೇಬೇಕಾಗುವದು.(೪೧) ಈ ವಿಷಯದಲ್ಲಿ ಸಂಶಯಪಡಬಾರದು. ಯಾಕೆಂದರೆ ಈ ಲೋಕ ಮೃತ್ಯುಲೋಕವೆಂಬ ಹೆಸರನಿಂದಲೇ ವಿಖ್ಯಾತ ವಾಗಿದೆ. ದೊಡ್ಡವರು, ಸಣ್ಣವರೆಲ್ಲರಿಗೂ ಇದರಸ್ಪಷ್ಟ ತಿಳುವಳಿಕೆ ಇರುತ್ತದೆ. (೪೨) ಒಂದು ವೇಳೆ ಯಾರಾದರೂ ಮೃತ್ಯುವಿನ ಬಗ್ಗೆ ಸಂಶಯಪಟ್ಟರೂ ಸಹ ಮೃತ್ಯು ಲೋಕವು ಇಲ್ಲವೆಂದೇನೂ ಆಗುವದಿಲ್ಲ. ಇದರಲ್ಲಿ ಸಂಶಯ ಪಡುವವರಿಂದ ಜನ್ಮ ಹೊಂದಿದ ಪ್ರಾಣಿ ಅಥವಾ ಮನುಷ್ಯ ತನ್ನ ಜೀವನವನ್ನು ಹಾಳು ಮಾಡಿಕೊಳ್ಳುವನು.(೪೩) ಇದು ಮೃತ್ಯುಲೋಕವಿರುವದೆಂಬ ತಿಳುವಳಿಕೆ, ಎಚ್ಚರ ಇಟ್ಟುಕೊಂಡು ಮನುಷ್ಯನು ತನ್ನ ದೇಹವನ್ನು ಸಾರ್ಥಕ ಮಾಡಿಕೊಳ್ಳಬೇಕು. ಮೃತ್ಯುವು ದೇಹವನ್ನು ಒಯ್ದರೂ ಸ್ವತಃ ಕೀರ್ತಿ ರೂಪದಿಂದ ಜಗದಲ್ಲಿ ಉಳಿಯಬೇಕು.(೪೪) ಇದೊಂದೇ ಮಾರ್ಗವು ಮೃತ್ಯುವನ್ನು ತಪ್ಪಿಸುವದಕ್ಕೆ ಇರುತ್ತದೆ. ಇದರ ಹೊರತಾಗಿ ಮನುಷ್ಯ ಸಣ್ಣವನಿರಲಿ, ದೊಡ್ಡವನಿರಲಿ, ಯಾವನಿದ್ದರೂ ಅವನು ಒಂದಿಲ್ಲೊಂದು ದಿನ ಮರಣ ಹೊಂದಲೇಬೇಕು. ಇದು ಅತ್ಯಂತ ನಿಶ್ಚಿತವಾದದ್ದು, ಎಂದು ತಿಳಿಯಬೇಕು. ಇಲ್ಲಿಯವರೆಗೆ ಏನನ್ನು ಹೇಳಲಾಗಿದೆಯೋ ಅದೆಲ್ಲವೂ ಸುಳ್ಳು ಎಂದು ತಿಳಿಯಬಾರದು. (೪೫) **ಮುಂದಿನ ಹನ್ನೆರಡು ನುಡಿ (ಓವಿ)ಗಳಲ್ಲಿ ಶ್ರೀಸಮರ್ಥರು ಹೀಗೆ ಹೇಳಿರುವರು: ಜೀವನದ ವಿವಿಧಕ್ಷೇತ್ರಗಳಲ್ಲಿ ಬಹಳಷ್ಟು ಪರಾಕ್ರಮದಿಂದ ಮೆರೆದವರು, ಜಗತ್ತನ್ನೇ ಉಲಟಾ ಪಲಟಾ ಮಾಡಿ ಪ್ರಸಿದ್ಧರಾದ ಎಲ್ಲ ಸ್ತ್ರೀ ಪುರುಷರನ್ನೂ ಮೃತ್ಯುವು ಇಲ್ಲದಂತೆ ಮಾಡಿತು:**—ದೊಡ್ಡ ವೈಭವದವರು ಬಹಳ ಆಯುಷ್ಯದವರು, ಅತ್ಯಂತ ಪ್ರಭಾವದ ಮಹಿಮಾ ಪುರುಷರೆಲ್ಲರೂ ಮೃತ್ಯು ಮಾರ್ಗದಿಂದ ಹೋದರು. (೪೬) ಬಹು ಪರಾಕ್ರಮದವರು, ಬಹಳ ಕಪಟ ಕರ್ಮದವರೆಲ್ಲರೂ ಹೋದರು. ಬಹಳ ಶೂರ ಯೋಧರೂ ಯುದ್ಧದಲ್ಲಿಯೇ ಮರಣ ಹೊಂದಿದರು. (೪೭) ಬಹು ಬಲಶಾಲಿಯಾದವರು, ಬಹುಕಾಲ ಜೀವಿಸಿದವರು, ಅನೇಕ ಕುಲದಲ್ಲಿ ಜನಿಸಿದ ದೊಡ್ಡ ಕುಲವಂತರಾಜರು,ಇವರೆಲ್ಲರೂ ಕಾಲನ ದಾರಿಗೆ ಸೇರಿದರು(೪೮) ಬಹಳಷ್ಟು ಜನರನ್ನು ಕಾಪಾಡುವವರು, ಬಹು ಬುದ್ಧಿಯ ಜಾಣರು, ಬಹುಯುಕ್ತಿಯಿಂದ ತರ್ಕ ಮಾಡುವವರು, ತೀಕ್ಷ್ಣ ಬುದ್ಧಿಯ ತರ್ಕವಾದಿಗಳು, ಇವರೆಲ್ಲ ಅಲ್ಲಿಯೇ ಹೋದರು. (೪೯) ವಿದ್ಯೆಯ ಸಾಗರವೆನಿಸಿದವರು, ಗುಡ್ಡದಷ್ಟು ಬಲವಂತರೆನಿಸಿದವರು, ಕುಬೇರನಷ್ಟು ಧನವಿದ್ದವರು, ಇವರೆಲ್ಲ ಮೃತ್ಯು ಪಥದಲ್ಲಿಯೇ ಹೋದರು.(೫೦) ಬಹಳ ಪುರುಷಾರ್ಥದವರು, ಬಹಳ ಶೂರಧೀರರು, ಅನೇಕ ಕಾರ್ಯಗಳ ವ್ಯಾಪವನ್ನು ಮಾಡುವಂಥ ಕಾರ್ಯಕರ್ತರು ಇವರೆಲ್ಲ ಮರಣದ ಹಾದಿ ಹಿಡಿದರು. (೫೧)

ಗೇಲೆ ಬಹುತ ಶಸ್ತ್ರಧಾರೀ । ಗೇಲೆ ಬಹುತ ಪರೋಪಕಾರೀ ।
ಗೇಲೆ ಬಹುತ ನಾನಾಪರೀ । ಧರ್ಮರಕ್ಷಕ ॥೫೨॥
ಗೇಲೆ ಬಹುತ ಪ್ರತಾಪಾಚೇ । ಗೇಲೆ ಬಹುತ ಸತ್ಕೀರ್ತೀಚೆ ।
ಗೇಲೆ ಬಹುತ ನೀತೀಚೆ । ನೀತಿವಂತ ರಾಜೇ ॥೫೩॥
ಗೇಲೆ ಬಹುತ ಮತವಾದೀ । ಗೇಲೆ ಬಹುತ ಕಾರ್ಯವಾದೀ ।
ಗೇಲೆ ಬಹುತ ವೇವಾದೀ । ಬಹುತಾ ಪರೀಚೇ ॥೫೪॥
ಗೇಲೀ ಪಂಡಿತಾಂಚೀ ಥಾಟೇ । ಗೇಲೀ ಶಬ್ದಾಂಚೀ ಕಚಾಟೇ ।
ಗೇಲೀ ವಾದಕೇ ಅಚಾಟೇ । ನಾನಾ ಮತೇ ॥೫೫॥
ಗೇಲೆ ತಾಪಸಾಂಚೆ ಭಾರ । ಗೇಲೆ ಸನ್ಯಾಸೀ ಅಪಾರ ।
ಗೇಲೆ ವಿಚಾರಕರ್ತೇ ಸಾರ । ಮೃತ್ಯುಪಂಥೇ ॥೫೬॥
ಗೇಲೆ ಬಹುತ ಸಂಸಾರೀ । ಗೇಲೆ ಬಹುತ ವೇಷಧಾರೀ ।
ಗೇಲೆ ಬಹುತ ನಾನಾಪರೀ । ನಾನಾ ಛಂದ ಕರೂನಿ ॥೫೭॥
ಗೇಲೆ ಬ್ರಾಹ್ಮಣ ಸಮುದಾಯೆ । ಗೇಲೆ ಬಹುತ ಆಚಾರ್ಯ ।
ಗೇಲೆ ಬಹುತ ಸಾಂಗೋ ಕಾಯೆ । ಕಿತೀ ಮ್ಹಣೋನೀ ॥೫೮॥
ಅಸೋ ಐಸೇ ಸಕಳ ಗೇಲೇ । ಪರಂತು ಯೇಕಚಿ ರಾಹಿಲೇ ।
ಜೇ ಸ್ವರೂಪಾಕಾರ ಜಾಲೇ । ಆತ್ಮಜ್ಞಾನೀ ॥೫೯॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
ಮೃತ್ಯ ನಿರೂಪಣ ನಾಮ ಸಮಾಸ ನವಮ

ದೊಡ್ಡ ಶಸ್ತ್ರಧಾರಿಗಳು, ಬಹಳ ಪರೋಪಕಾರಿಗಳು, ನಾನಾ ರೀತಿಯಿಂದ ಧರ್ಮ ರಕ್ಷಣೆ ಮಾಡುವವರು ಇವರೆಲ್ಲರೂ ಹೋದರು. (೫೨) ಬಹು ಪ್ರತಾಪಿಗಳು, ಬಹಳ ಸತ್ಕೀರ್ತಿವಂತರು, ಬಹು ನೀತಿವಂತರು, ನೀತಿಯುಳ್ಳ ರಾಜರು, ಎಲ್ಲರೂ ಹೋದರು. (೫೩) ಅತಿ ಮತಾಭಿಮಾನಿಗಳು, ದೊಡ್ಡ ಕಾರ್ಯ ಸಾಧಕರು, ಅಥವಾ ಕೆಲಸ ಮಾಡುವವರು, ಅನೇಕ ಪ್ರಕಾರದ ದೊಡ್ಡ ದೊಡ್ಡ ವಿಷಯಗಳ ಬಗ್ಗೆ ವಾದ ವಿವಾದ ಮಾಡುವವರೆಲ್ಲರೂ ಮರಣದ ಹಾದಿ ಹಿಡಿದರು. (೫೪) ಪಂಡಿತರ ಸಮುದಾಯ ಹೋಯಿತು. ಶಬ್ದ ಶಬ್ದಾರ್ಥಗಳ ಯುಕ್ತಿವಂತರು ವೈಯಾಕರಣಿಗಳು, ವಿಲಕ್ಷಣದ ಅದ್ಭುತ ಕಾರ್ಯಮಾಡಿ ತೋರಿಸುವವರು, ನಾನಾ ಮಾತುಗಳಿಗೆ ಅನುಸಾರವಾಗಿ, (ಆಚಾಟವಾದ) ನ್ಯಾಯ, ತರ್ಕ, ವೇದಾಂತ, ವಗೈರೆಗಳಲ್ಲಿ ಪಂಡಿತರಾದಂಥ ವಾದ ವಿವಾದ ಮಾಡುವಂಥವರು, ಇವರೆಲ್ಲ ಅಲ್ಲಿಗೆ ಹೋದರು. (೫೫) ತಪಸ್ವಿಗಳ ಸಮೂಹ. ಅಸಂಖ್ಯ ಸನ್ಯಾಸಿಗಳು ಸಾರಾಸಾರ ವಿಚಾರ ಮಾಡುವಂಥ ವಿಚಾರವಂತರು ಇವರನ್ನೆಲ್ಲ ಮೃತ್ಯುವು ಇಲ್ಲದಂತೆ ಮಾಡಿತು.(೫೬) ಬಹಳಷ್ಟು ಸಂಸಾರಿಕರು, ವೇಷಧಾರಿಗಳು, ಅನೇಕ ತರಹದ ಕೌಶಲ್ಯವುಳ್ಳವರು, (ಸರ್ಕಸ್, ಜಾದು ಹವ್ಯಾಸಿಗಳು) ಕೊನೆಗೆ ಅದೇ ದಾರಿ ಹಿಡಿದರು. (೫೭) ಬ್ರಾಹ್ಮಣ ಸಮುದಾಯ, ದೊಡ್ಡ ದೊಡ್ಡ ಗುರುಗಳೂ, ಆಚಾರ್ಯರೂ ಸಹ ಹೋದರು. ಇದನ್ನೆಲ್ಲ ಎಷ್ಟೆಂದು ಹೇಳಬೇಕು. (೫೮) ಹೀಗೆ ಎಲ್ಲರೂ ಹೋದರು. ಆದರೆ ಸಂತರು, ಶರಣರು ಮಾತ್ರ ಉಳಿದರು. ಇರಲಿ ಈ ಪ್ರಕಾರ ಯಾವತ್ತೂ ಜನ ಹೋದರು. ಆದರೆ ಆತ್ಮಜ್ಞಾನ ಹೊಂದಿ ಯಾರು ಸ್ವಸ್ವರೂಪದಲ್ಲಿ ಏಕರೂಪರಾದರೋ, ಸಮರಸರಾಗಿ ಹೋದರೋ ಅವರು ಮಾತ್ರ ಅಮರರು ಆಗಿ ಉಳಿದರು.(೫೯)

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದ ಮೂರನೆಯ ದಶಕದಲ್ಲಿಯ
"ಮೃತ್ಯು ನಿರೂಪಣ" ಎಂಬ ಹೆಸರಿನ ಒಂಭತ್ತನೆಯ ಸಮಾಸವು ಮುಗಿಯಿತು.

## ದಶಕ ೩. ಸಮಾಸ ೧೦. ವೈರಾಗ್ಯ ನಿರೂಪಣ (ನುಡಿ ೭೪)

ಈ ಸಮಾಸದಿಂದ ಶ್ರೀ ಸಮರ್ಥರು ತಮ್ಮ ತತ್ವಜ್ಞಾನವನ್ನು ಹೇಳಲಿಕ್ಕೆ ಪ್ರಾರಂಭ ಮಾಡುತ್ತಾರೆ. ಶ್ರೀ ಸಮರ್ಥರ ಸ್ಪಷ್ಟ ಅಭಿಪ್ರಾಯ (ಮತ)ವೆಂದರೆ—ಮಾನವೀ ಜೀವನವು ಮೂಲದಲ್ಲಿಯೇ ಅಪೂರ್ಣವಿದೆ. ಯಾವ (ಎಂಥ) ಸ್ಥಳದ ವಾತಾವರಣದಲ್ಲಿ ಜೀವನ ಸಾಗಿಸಬೇಕಾಗಿವೆಯೋ ಅಲ್ಲಿ ನಮ್ಮ ಸಲುವಾಗಿ ನಿಂತಿರುವವರು ಮತ್ತು ನಮ್ಮ ದಾರಿ ನೋಡುವವರು ಯಾರೂ ಇಲ್ಲ. ಅಚೇತನ ಮತ್ತು ಸಚೇತನ ಅಂದರೆ ವಸ್ತು ಮತ್ತು ಪ್ರಾಣಿ ಇವು ಕಾಲನ ಆಧೀನತ್ವದಲ್ಲಿ ಒಂದೇ ದಿಕ್ಕಿನಲ್ಲಿ ಅಖಂಡವಾಗಿ ಹರಿಯುತ್ತಿರುವವು. ಜೀವನದ ಚಕ ಚಕ, ಮಿರಿ ಮಿರಿ ಮಿರಗುವ ಜ್ಯೋತಿಯು ಮೃತ್ಯುವಿನ ಗಾಢಾಂಧಕಾರದಲ್ಲಿ ಹೇಳ ಹೆಸರಿಲ್ಲದೇ ಮುಳುಗಿ ಹೋಗುವದು. ಈ ಬಗೆಯಿಂದ ಒಮ್ಮೆ ಕೈಯಿಂದ ಜಾರಿ ಹೋದದ್ದರ ದರ್ಶನ ಪುನಃ ಆಗುವದಿಲ್ಲ. ಯಾವಾಗ

ಏನಾದೀತೆಂಬುದರ ನಿಯಮವಿಲ್ಲ. ಆದರೆ ವೇಳೆ (ಪ್ರಸಂಗ) ಒದಗಿ ಬಂದರೆ ಅದಕ್ಕೆ ಸುಮ್ಮನೆ ತಲೆಕೊಡದ ಹೊರತು ಮನುಷ್ಯನಿಗೆ ಏನೂ ಮಾಡಲಿಕ್ಕೆ ಬರುವದಿಲ್ಲ. ಆದರೆ ಇದರಲ್ಲಿ ಒಂದು ಆಶಾಕಿರಣ ಕಾಣುತ್ತದೆ. ಹಾಗಾದರೆ ಅದು ಯಾವುದು? ಮನುಷ್ಯನು ಏತರ ಸಲುವಾಗಿ ಬದುಕಿರಬೇಕೆಂಬುದನ್ನು ನಿಶ್ಚಿತಪಡಿಸುವದಕ್ಕಾಗಿ ಇದನ್ನು ಗೊತ್ತು ಮಾಡಿಕೊಳ್ಳುವ ಸ್ವಾತಂತ್ರ್ಯ ಮನುಷ್ಯನಿಗೆ ಇರುತ್ತದೆ. ಮನುಷ್ಯ ತನ್ನ ಧ್ಯೇಯ ಧೋರಣೆ ಗೊತ್ತು ಮಾಡಿಕೊಂಡು ಅದರಂತೆ ತನ್ನ ಜೀವನದ ಧ್ಯೇಯ ಆದರ್ಶ ನಮೂನೆಯನ್ನು ತಯಾರಿಸಿ ಕೊಳ್ಳಬಲ್ಲನು. ಪ್ರತ್ಯಕ್ಷದಲ್ಲಿ ಕಂಡು ಬರುವದೇನೆಂದರೆ, ಮೊದಲೇ ಅಪೂರ್ಣವಿರುವಂಥ ಜೀವನಕ್ಕೆ ಅಪೂರ್ಣ ಅಂದರೆ ತಾತ್ಪೂರ್ತಿಕವಾದ ಜೋಡು ಕೊಡುವದರಿಂದ ಈ ಜಗದಲ್ಲಿಯ ಮನುಷ್ಯ ಜೀವನವು ಹೆಚ್ಚು ಅಪೂರ್ಣಗೊಳ್ಳುವದು. ಇಂಥ ಜೀವನದಲ್ಲಿ ವಿಕಾರಗಳ(ಗದ್ದಲ) ಗೊಂದಲ ಹೆಚ್ಚುತ್ತದೆ, ವಾಸನಾ ವಿಲಾಸ ಇರುವದು, ಮತ್ತು ಅಹಂಕಾರದ ಪ್ರತಿಷ್ಠೆ ಬೆಳೆಯುತ್ತದೆ, ಹಾಗೂ ಆಶಾ ಮಮತಾಗಳ ಆಗರವಿರುತ್ತವೆ, ಮನುಷ್ಯನ ಅಂತರ್ಯಾಮದಲ್ಲಿ ಸದೈವ ಎಳೆದಾಟ,ಜಗ್ಗಾಟ ನಡೆಯುತ್ತಿರುವದರಿಂದ ಅವನಿಗೆಶಾಂತಿ ಸಮಾಧಾನಗಳು ಎಂದೂ ಅನುಭವಕ್ಕೆ ಬರುವದಿಲ್ಲ. ಈ ಶೋಕಾಂತಿಕದ ನಾಟಕ ತಪ್ಪಿಸಿಕೊಳ್ಳಬಯಸಿದರೆ, ಮೊದಲಿಗೆ ಈಶ್ವರ ಪ್ರಾಪ್ತಿಯ ಅಥವಾ ಸ್ವಸ್ವರೂಪಾನುಭವದ ಧ್ಯೇಯವನ್ನು ಮನುಷ್ಯ ಇಟ್ಟುಕೊಳ್ಳಬೇಕು. ಜಗತ್ತನ್ನು ನಡೆಸುವ (ಪಾಲಿಸುವ) ಶಕ್ತಿ ಅಂದರೇನೆ ಈಶ್ವರನು. ಅಂತರ್ಯಾಮಿತನದಿಂದ, ಅವನು ನಮ್ಮ ನಿಮ್ಮ ಅಂತಃಕರಣದಲ್ಲಿ ಇರುವನು. ಇವನಿಗೆ ಮನಃಪೂರ್ವಕ ಶರಣು ಹೋದರೆ ಸಂಸಾರದ ಸಂಕಟದಲ್ಲಿರುವ ನಮಗೆ ಇವನು ಸತ್ಯವಾಗಿಯೂ ಆಧಾರನಾಗಿ ನಿಲ್ಲುವನು. (ಕೈ ಹಿಡಿದು ನಡೆಸಿ ಪಾರುಗಾಣಿಸುವನು). ಸ್ವತಃದ ಜೀವನವನ್ನು ಆನಂದಮಯವಾಗಿ ಮಾಡಿಕೊಂಡು ಜನರಿಗೂ ಆನಂದಕೊಡುವಂತೆ ಮಾಡಬೇಕು. ಇದೇ ನಿಜವಾದ ಮಾರ್ಗವು. ಪ್ರಾರಂಭದಲ್ಲಿಯೇ ಶ್ರೀ ಸಮರ್ಥರು ಸಂಸಾರಕ್ಕೆ ಮಹಾಪೂರ ಅಥವಾ ನೆರೆ(ದೊಡ್ಡ ಪ್ರವಾಹದ) ಉಪಮೆ ಕೊಟ್ಟು ಒಂದು ರೂಪಕವನ್ನೇ ರಚಿಸಿದ್ದಾರೆ. ಸಂಸಾರವು ಒಂದೇ ಸವನೆ ಹರಿಯುತ್ತದೆ. ಮುಂದೆ ಮುಂದೆ ಹೋಗುತ್ತದೆ. ಅಂತೆಯೇ ಇದು ಸಂಸಾರವೆಂಬ ನದಿಯು. ಅನಂತ ಘಟನೆಗಳ ಪ್ರವಾಹವೇ ಮೇರೆದಪ್ಪಿಬಂದ ನದಿಯ ಮಹಾಪೂರವು ಘಟನೆಗಳ ಪ್ರಕಾರಗಳು ಬಹಳಷ್ಟು ಇರುವುದರಿಂದ ಇವೇ ಮಹಾಪೂರದಲ್ಲಿಯ ಅಸಂಖ್ಯ ಜಲಚರಗಳು. ಮೃತ್ಯುವು ಒಂದೇ ಸವನೆ ಬೆನ್ನು ಹತ್ತಿರುವದು. ಇದೇ ಕಾಳಸರ್ಪದಂಶವು, ಆಶೆ ಅನ್ನುತ್ತದೆ. “ಇನ್ನಷ್ಟು ಬೇಕು”. ಮಮತಾ ಅನ್ನುತ್ತದೆ,“ಇದೂ ನನ್ನದು ಅದೂ ನನ್ನದು” ಹೀಗೆ ಅನ್ನುವದರಿಂದ ಜೀವವು ದೇಹಕ್ಕೆ ಅಂಟಿಕೊಳ್ಳುತ್ತದೆ. ಇದು ಬೇಡಿಯು ಅಂದರೆ, ಆಶಾ, ಮಮತಾ ಎಂಬವು ಬೇಡಿಗಳು,ನೀರಿನಲ್ಲಿ ಮೊಸಳಿಗಳು ಹರಿದು ತಿನ್ನುವವು. ಹರಿದು ಹರಿದು ಒಗೆಯುವವು. ದುಃಖ ಕೊಡುವವು. ಅಂದರೆ ಸಂಸಾರದ ಪ್ರವಾಹದಲ್ಲಿಯ ಮೊಸಳೆಗಳೆಂದರೆ ಆಶೆ ಮತ್ತು ಮಮತೆಗಳು ಇವು ದುಃಖದಲ್ಲಿ ನೂಕುವವು. ಅಹಂಕಾರವು ಅಧಃಪಾತಕ್ಕೊಯ್ಯುವದೆಂದು ಅದು ಪಾತಾಳಕ್ಕೊಯ್ಯುವ ನಕ್ರವು (ಮಸಳಿಯು), ಕಾಮ, ತಿರಸ್ಕಾರ, ಮದ, ಮತ್ಸರ, ಈ ವಿಕಾರಗಳು ಭ್ರಮೆ (ಮೋಹ)ಗೊಳಿಸುತ್ತವೆ. ಇದರಲ್ಲಿಯ ಕಾಮವಾಸನೆಯಂತೂ ಬಹಳ ತೀವ್ರ ಮತ್ತು ಜಬರದಸ್ತ ಇರುವದೆಂದು ಇವರ ಹಿಡಿತವು ಮೊಸಳೆಯ ಹಿಡಿತದಂತೆ ಇರುವದು. ಜೀವನದ ಸುತ್ತಲೂ ವಾಸನೆಯ ಆವರಣ (ಆಚ್ಛಾದನ)ವು. ಅದರೊಳಗಿಂದ ಸ್ವಾರ್ಥದ ಉಗಮವು.ಸ್ವಾರ್ಥದ ದೆಶೆಯಿಂದ ದುರಾಚರಣೆ. ಅಂತೆಯೇ ಕೊರಳಲ್ಲಿ (ಕಂಠದಲ್ಲಿ) ವಾಸನೆಯೆಂಬ ಒಂದು ಘಾತಕ ಪ್ರಾಣಿಯು ಸದಾಕಾಲ ವಿಷವನ್ನೇ ಕಾರುತ್ತದೆ. ಭಯಂಕರವಾಗಿ ನಾಲಿಗೆಯನ್ನು ಅಲ್ಲಾಡಿಸುತ್ತದೆ.ಜೊಲ್ಲುಸುರಿಸುವದು. ನನ್ನದುನನ್ನದು ಎಂದೇ ಒಂದು ದಿನ ಪುಕ್ಕಟೆ ಸತ್ತು ಹೋಗುವನೆಂದು ತಲೆಯ ಮೇಲೆ ಒಜ್ಜೆ (ಭಾರ) ಹೊತ್ತು ಮುಳುಗುತ್ತಾನೆ. ಅಜ್ಞಾನದ ಪ್ರಭಾವ ಮತ್ತು ಅಹಂಕಾರದಿಂದ ಆತ್ಮ ವಿಸ್ಮರಣೆಯಾಗುವದು. ಬುದ್ಧಿಯ ಮೇಲೆ ಅಹಂಕಾರದ ಅಧಿಕಾರವೆಂಬ ಕಗ್ಗತ್ತಲೆಯ ಅಂಧಕಾರದ ಜೋರು ಆಗುವದು. ಮತ್ತು ಚೋರರು ಮತ್ತು ಭೂತಗಳ ಬಾಧೆಯಿಂದ ವ್ಯರ್ಥದಲ್ಲಿ ಸಿಕ್ಕಿಕೊಂಡೆನೆಂದು ಭ್ರಮರದಂತೆ ವ್ಯರ್ಥ ಸತ್ತೆನೆಂದು ಸೆಳವಿನ ಪ್ರವಾಹದಲ್ಲಿ ತೇಲಿ ಹೋದನು.

ಸಮಾಸ ದಶಮು : ವೈರಾಗ್ಯನಿರೂಪಣನಾಮು

॥ಶ್ರೀರಾಮು॥ ಸಂಸಾರ ಮ್ಹಣಿಜೇ ಮುಹಾಪೂರ । ಮಾಜೀ ಜಳಚರೇ ಅಪಾರ ।
ಡಂಖೂ ಧಾವತೀ ವಿಖಾರ । ಕಾಳಸರ್ಪ ॥೧॥

ಆಶಾ ಮುಮುತಾ ದೇಹೀ ಬೇಡೀ । ಸುಸರೀ ಕರಿತಾತೀ ತಡಾತೋಡೀ ।
ನೇಊನ ದುಃಖಾಚೇ ಸಾಂಕಡೀ। ಮಾಜೀ ಘಾಲಿತೀ ॥೨॥

ಅಹಂಕಾರನಕ್ರೇ ಉಡವಿಲೇ । ನೇಊನ ಪಾತಾಳೀ ಬುಡವಿಲೇ ।
ತೇಥುನಿಯಾ ಸೋಡವಿಲೇ। ನ ವಚೇ ಪ್ರಾಣೀ ॥೩॥

ಕಾಮುಮುಗರಮಿಠೀ ಸುಟೇನಾ । ತಿರಸ್ಕಾರ ಲಾಗಲಾ ತುಟೇನಾ ।
ಮುದಮುತ್ಸರ ವೊಹಟೇನಾ । ಭೂಲಿ ಪಡಿಲೀ ॥೪॥

ವಾಸನಾಧಾಮಿಣೀ ಪಡಿಲೀ ಗಳಾ। ಘಾಲೂನ ವೇಟಾಳೇ ವಮೀ ಗರಳಾ।
ಜಿವ್ಹಾ ಲಾಳೀ ವೇಳೋವೇಳಾ । ಭಯಾನಕ ॥೫॥

ಮಾಥಾ ಪ್ರಪಂಚಾಚೇ ವೋಝೇ। ಘೇಊನ ಮ್ಹಣೆ ಮಾಝೇ ಮಾಝೇ ।
ಬುಡತಾ ಹೀ ನ ಸೋಡೀ ಫುಂಜೇ । ಕುಳಾಭಿಮಾನೇ ॥೬॥

ಪಡಿಲೇ ಭ್ರಾಂತೀಚೇ ಅಂಧಾರೇ । ನಾಗವಿಲೇ ಅಭಿಮಾನಚೋರೇ ।
ಆಲೇ ಅಹಂತೇಚೇ ಕಾವಿರೇ । ಭೂತ ಬಾಧಾ ॥೭॥

ಬಹುತೇಕ ಆವರ್ತೀ ಪಡಿಲೇ। ಪ್ರಾಣೀ ವಾಹಾತ ಚಿ ಗೇಲೆ ।
ಜೇಹಿ ಭಗವಂತಾಸೀ ಬೋಭಾಇಲೇ । ಭಾವಾರ್ಥಬಳೇ ॥೮॥

ದೇವ ಆಪಣ ಘಾಲೂನಿ ಉಡೀ । ತಯಾಸೀ ನೇಲೇ ಪೈಲಥಡೀ ।
ಯೇರ ತೇ ಅಭಾವಿಕೇ ಬಾಪುಡೀ । ವಾಹಾತ ಚಿ ಗೇಲೀ ॥೯॥

## ಸಮಾಸ : ೧೦ ವೈರಾಗ್ಯ ನಿರೂಪಣ (ನುಡಿ ೭೪)

ಈ ಸಂಸಾರವೆಂಬುದು ಮಹಾಪೂರವಿದ್ದಂತೆ ಇರುವದು. ಇದರಲ್ಲಿ ಸಹ ಅಸಂಖ್ಯ ಜಲಚರಗಳು ಇರುವವು. ಸಂಸಾರದಲ್ಲಿ ತೊಡಗಿದ ಜೀವಕ್ಕೆ ವಿಷಾರಿ ಕಾಳ ಸರ್ಪಗಳು ಕಡಿಯಲು ಓಡಾಡುತ್ತವೆ. ಇದರಿಂದ ಮೃತ್ಯುವು ಯಾವಾಗ ಬಂದೀತೆಂಬುದನ್ನು ಹೇಳಲು ಬರುವದಿಲ್ಲ. (೧) ಈ ಸೂಕ್ಷ್ಮ ದೇಹಕ್ಕೆ ಆಶೆ, [ಮೋಹ] ಮಮತೆಗಳೆಂಬ ಎರಡು ಬೇಡಿಗಳು. ಇವು ಸ್ಥೂಲ ದೇಹವನ್ನು ಬಿಗಿಯಾಗಿ ಕಟ್ಟಿರುತ್ತವೆ. ನೀರಿನಲ್ಲಿಯ ಮೊಸಳಿಗಳು ದೇಹವನ್ನು ತುಂಡರಿಸಿ ಹರಿದೊಗೆಯುವವು. ಮತ್ತು ದೇಹಕ್ಕೆ ದುಃಖ ಕೊಡುವವು. ಇದರಂತೆಯೇ ಆಶೆ, ಮಮತೆಗಳು ಜೀವವನ್ನು ದುಃಖದ ಸಂಕಟಕ್ಕೆ ಕೆಡವುವವು. (೨) ದೇಹಾಭಿಮಾನರೂಪದ ಮೊಸಳಿ ( ನಕ್ರ )ಯು ಜೀವವನ್ನು ( ಮಹಾಪೂರದಲ್ಲಿ ) ಮುಳುಗಿಸಿ ಪಾತಾಳಕ್ಕೆ ಒಯ್ಯುವದು. ಅಂದರೆ ಆಳವಾದ ಸ್ಥಳಕ್ಕೆ ಒಯ್ದು ಮುಳುಗಿಸಿ ಬಿಡುವದು. ದೃಶ್ಯದ ನಾದಿಗೆ ಹಚ್ಚಿ ಭಗವಂತನಿಂದ ದೂರ ಒಯ್ಯುವದು. ಅಲ್ಲಿಂದ ಪ್ರಾಣಿಗೆ ಬಿಡುಗಡೆಯಾಗುವದಿಲ್ಲ. ದೃಶ್ಯದ ನಿಜತ್ವದ ಮೇಲಿನ ನಂಬಿಗೆ ಬಿಡಬೇಕೆಂದರೂ ಬಿಡಲೊಲ್ಲದು. (३) ಕಾಮವಾಸನೆಯೆಂಬ ಮೊಸಳಿಯ ಹಿಡಿತದಿಂದ ಬಿಡುಗಡೆಯಿಲ್ಲ. ಕಾಮವಾಸನೆಯು ಮನಸ್ಸಿನಿಂದ ಹೊರದೂಡಬೇಕೆಂದರೂ ಹೋಗಲೊಲ್ಲದು. ಅನಾದರ (ಧಿಕ್ಕಾರ) ವೃತ್ತಿ ಹೋಗಲೊಲ್ಲದು. ಎರಡನೆಯವರನ್ನು ತುಚ್ಛವಾಗಿ ಕಾಣುವ(ಚ್ಯಾಳಿ-ಸಮಯ)ಚಟವು ಹೋಗಲೊಲ್ಲದು. ಮದಮತ್ಸರ ಈ ವಿಕಾರಗಳು ಕಡಿಮೆ ಆಗಲೊಲ್ಲವು. ಮನುಷ್ಯ ಒಂದು ಪ್ರಕಾರದ ಮೋಹಿತ ಅವಸ್ಥೆಯಲ್ಲಿರುತ್ತಾನೆ.(೪) ವಾಸನಾ ಎಂಬ ದುಷ್ಟ ಸರ್ಪವು ಕೊರಳಿಗೆ ಗಂಟು ಬಿದ್ದಿರುತ್ತದೆ. ಜೀವನಿಗೆ ವಾಸನಾ ಆವರಿಸಿ ಬಿಗಿದುಕೊಂಡಿರುತ್ತದೆ. ಮತ್ತು ವಿಷವನ್ನು ಉಗಳುತ್ತದೆ. ಓಕರಿಸುತ್ತದೆ. ವಾಸನಾ ಸರ್ಪವು ಜೀವವನ್ನು ನಿರಂತರವೂ ಅಸಮಾಧಾನದಲ್ಲಿಟ್ಟು ಅಸ್ವಸ್ಥ ಮಾಡುತ್ತದೆ. ಮತ್ತು ಮೇಲಿಂದ ಮೇಲೆ ತನ್ನ ಭಯಂಕರ ನಾಲಿಗೆಯನ್ನು ಹೊರ ತೆಗೆದು ಹೆದರಿಸುತ್ತದೆ. ಜೀವನಿಗೆ ಸದಾ ಭೀತಿ ಮತ್ತು ಚಿಂತೆಯಲ್ಲಿ ಇರುವಂತೆ ಮಾಡಿ ಕಾಡುತ್ತದೆ. (೫) ಮನುಷ್ಯನು ಪ್ರಪಂಚದ ಹೊರೆಯನ್ನು ತಲೆಯ ಮೇಲೆ ಹೊತ್ತುಕೊಂಡು "ಇದು ನನ್ನದು, ಇದು ನನ್ನದು" ಎಂದು ಅನ್ನುತ್ತಾನೆ. ಯಾವುದು ನಿಜವಾಗಿ ತನ್ನದಲ್ಲವೋ ಅದನ್ನೇ ತನ್ನದೆಂದು ಅದರ ಎಲ್ಲ ಜವಾಬುದಾರಿಯನ್ನು ಮನುಷ್ಯನು ತನ್ನ ಮೇಲೆ ಹೊತ್ತುಕೊಳ್ಳುವನು. ಮುಳುಗುತ್ತಿದ್ದರೂ ಸಹ ಕುಲಾಭಿಮಾನದಿಂದ ಅವನು ತಲೆಯಮೇಲಿನ ಒಜ್ಜೆಯ ಕೈ ಬಿಡಲಾರನು. ಆಯುಷ್ಯ ವ್ಯರ್ಥ ಹೋಗುತ್ತಿದ್ದರೂ ಸಹ ಮನುಷ್ಯನು ಪ್ರಪಂಚವು "ನನ್ನ"ದೆಂಬುವನ್ನು ಬಿಡುವದಿಲ್ಲ. (೬) ಭ್ರಾಂತಿ ಎಂಬ ಕತ್ತಲೆ ಬಿದ್ದಾಗ ಅಭಿಮಾನವೆಂಬ ತುಡುಗ (ಚೋರ)ನು ಎಲ್ಲವನ್ನೂ ಲೂಟಿ ಮಾಡುವನು. ಅಜ್ಞಾನದಿಂದ ಅವಿವೇಕ ಜನ್ಮ ತಳೆಯಿತು. ಇದರೊಳಗಿಂದ ದೇಹ ಬುದ್ಧಿ ಪ್ರಬಲಗೊಂಡಿತು. ಅದು ಜೀವನನ್ನು ಭಗವಂತನಿಂದ ಬಹುದೂರ ಒಯ್ದಿತು. ದೇಹಬುದ್ಧಿ ಅಥವಾ ಅಹಂಕಾರ ಇದು ಭೂತ ಬಾಧೆ. ಅದು ಮನುಷ್ಯನನ್ನು ಮನಸೇಚ್ಛೆಯಂತೆ ನಡೆಯಲು ಹಚ್ಚಿತು. (೭) ಹುಟ್ಟಿ ಬಂದವರಲ್ಲಿ ಬಹಳಷ್ಟು ಜನರು ಈ ಮಹಾಪೂರದ ತಿರುಗುಣಿ ಮಡದ ಸೆಳವಿನಲ್ಲಿ ಸಿಕ್ಕು ಅಸಹಾಯಕರಾಗಿ ಪ್ರವಾಹದ ಸೆಳವಿನ ಕೂಡ ತೇಲುತ್ತ ಹೊರಟರು. ಇಂಥವರಲ್ಲಿ ನೂರಕ್ಕೆ ತೊಂಭತ್ತೊಂಭತ್ತು ಜನರು ದೃಶ್ಯದ ಪ್ರೇಮದಲ್ಲಿ ತೊಡಕಿಕೊಂಡರು. ಅಶಾಶ್ವತವಾದ ದೃಶ್ಯದ ಬೆನ್ನು ಹತ್ತಿ ವ್ಯರ್ಥವಾಗಿ ಸತ್ತು ಹೋದರು. ಆದರೆ ಕೆಲವೇ ಜನರು ಭಕ್ತಿಯ ಬಲದಿಂದ ಭಗವಂತನನ್ನು ದೊಡ್ಡ ಧ್ವನಿಯಿಂದ ಪ್ರಾರ್ಥಿಸಿದರು. ಅವನ ಹೆಸರನ್ನು ಹಿಡಿದು ಕೂಗಿದರು. ಇದರಿಂದ ಪಾರುಗಾಣಿಸೆಂದೂ, ದಯೆದೋರೆಂದೂ ಬೇಡಿಕೊಂಡರು. (೮) **ಯಾರು ಭಗವಂತನಿಗೆ ಭಾವಿಕತನದಿಂದ ಶರಣು ಹೋಗುವರೋ ಅವರು ಭಾಗ್ಯವಂತರು, ದೈವವಾನರು, ಎಂದು ತಿಳಿಯಬೇಕು. ಯಾಕೆಂದರೆ ಅವರಿಗೆ ಸ್ವಾನಂದದ ಸುಖ ಭೋಗಿಸಲು ಸಿಗುತ್ತದೆ. ಇಂಥವರಿಗೆ ಸಂಸಾರ ದುಃಖ ಬಾಧಿಸುವದಿಲ್ಲ:–** ಭಗವಂತನನ್ನು ಭಕ್ತಿಯಿಂದ ಯಾರು ಕೂಗಿದರೋ ಅವರ ಸಲುವಾಗಿ ಭಗವಂತನು ಪ್ರತ್ಯಕ್ಷನಾಗಿ ಸ್ವತಃ ತನ್ನ ಕೈಯಿಂದ ಅವರನ್ನು ಆಚೆಯ ದಂಡೆಗೆ ಮುಟ್ಟಿಸಿದನು. ಯಾರು ಮನಃಪೂರ್ವಕವಾಗಿ ಭಗವಂತನನ್ನು ಸಹಾಯಕ್ಕಾಗಿ ಬೇಡಿಕೊಂಡರೋ ಅವರನ್ನೆಲ್ಲ ಕೈಹಿಡಿದು ಎತ್ತಿ ಸಹಾಯ ಮಾಡಿದನು. ಅವರ ದುಃಖ ನಿವಾರಣವಾಯಿತು. ಉಳಿದ ತಿಳಿಗೇಡಿ ಶ್ರದ್ಧಾಹೀನ ಜನರು ಸಂಸಾರ ಸಾಗರದಲ್ಲಿಯೇ ಉಳಿದರು. ಅದರಲ್ಲಿ ಮುಳುಗಿ ಮುಳುಗಿ ತೇಲಿ ಹೋಗಹತ್ತಿದರು. ಕೊನೆಗೆ ದುಃಖ ಭೋಗಿಸಿ ಸತ್ತರು. (೯)

ಭಗವಂತ ಭಾವಾಚಾ ಭುಕೇಲಾ । ಭಾವಾರ್ಥ ದೇಖೋನ ಭುಲಲಾ ।
ಸಂಕಟೀ ಪಾವೇ ಭಾವಿಕಾಲಾ । ರಕ್ಷಿತಸೇ ॥೧೦॥

ಜಯಾಸ ಭಗವಂತ ಆವಡೇ । ತಯಾಚೇ ದೇವಾಸೀ ಸಾಂಕಡೇ ।
ಸಂಸಾರ ದುಃಖ ಸಕಳ ಉಡೇ । ನಿಜದಾಸಾಚೇ ॥೧೧॥

ಜೆ ಅಂಕಿತ ಈಶ್ವರಾಚೇ। ತಯಾಸ ಸೋಹಳೇ ನಿಜಸುಖಾಚೇ ।
ಧನ್ಯ ತೇ ಚಿ ದೈವಾಚೇ। ಭಾವಿಕ ಜನ ॥೧೨॥

ಜೈಸಾ ಭಾವ ಜಯಾಪಾಸೀ । ತೈಸಾ ದೇವ ತಯಾಸೀ ।
ಜಾಣೆ ಭಾವ ಅಂತರಸಾಕ್ಷೀ । ಪ್ರಾಣೀ ಮಾತ್ರಾಚಾ ॥೧೩॥

ಜರೀ ಭಾವ ಅಸಿಲಾ ಮಾಈಕ । ತರೀ ದೇವ ಹೋಯು ಮಹಾಠಕ ।
ನವಲ ತಯಾಚೇ ಕೌತುಕ । ಜೈಶಾಸ ತೈಸಾ ॥೧೪॥

ಭಾವ ಎಂದರೆ ದೇವರಿದ್ದಾನೆಂಬ ಪರಿಪೂರ್ಣ ಶ್ರದ್ಧೆಯು. ಭಗವಂತನಿಗೆ ಇಂಥ ಶ್ರದ್ಧೆ ಭಾವದ ಹಸಿವೆ ಇರುವದು. ಅವನು ಸದಾ ಇದನ್ನೇ ನೋಡುತ್ತಿರುತ್ತಾನೆ. ಈ ಭಕ್ತಿಭಾವ, ಶ್ರದ್ಧಾ ಮತ್ತು ಇದರಿಂದ ನಿರ್ಮಾಣವಾಗುವ ಪ್ರೇಮ ಯಾರಲ್ಲಿರುವದೋಅಂಥವರ ಸಲುವಾಗಿ ಇವನು ಸದಾ ಟೊಂಕಕಟ್ಟಿ ನಿಂತಿರುವನು. (ತಾಯಿಗಿಂತ ಹೆಚ್ಚಿನ ಮಮತೆ, ಮೋಹ ಇವನಿಗೆ ಇರುವದು). ಭಕ್ತನಿಗೆ ಸಂಕಟ ಬಂದದ್ದಾದರೆ, ಭಗವಂತ ಸಹಾಯಮಾಡುತ್ತಾನೆ. ಅವನ ರಕ್ಷಣೆ ಮಾಡುತ್ತಾನೆ. (೧೦) ಭಾವ ಮತ್ತು ಭಾವಾರ್ಥ ಈ ಎರಡು ಶಬ್ದಗಳು ಭಕ್ತಿ ವಾಙ್ಮಯದಲ್ಲಿ ಮೇಲಿಂದ ಮೇಲೆ ಬರುತ್ತವೆ. ಭಾವ ಶಬ್ದವು ಭೂ ಧಾತುವಿನಿಂದ ಉಂಟಾಗುತ್ತದೆ. ಭೂ ಎಂದರೆ ಆಗು, ಆಗುವಿಕೆ ಅಥವಾ ಇರು, ಇರುವಿಕೆ ಎಂದಾಗುತ್ತದೆ. ಭಾವ ಎಂದರೆ ಅಸ್ತಿತ್ವ (ಇರುವಿಕೆ) ಭಾವಾರ್ಥವೆಂದರೆ, ವಸ್ತುವಿನ ಅಸ್ತಿತ್ವದಲ್ಲಿ ಅಂತರ್ಭೂತದಲ್ಲಿ ಇರುವಂಥದ್ದೆಲ್ಲದರ ಅರ್ಥವು. ಈಶ್ವರನ ಅಸ್ತಿತ್ವದ ಬಗ್ಗೆ ನಿಃಶಂಕನಾಗಿರುವದು. (ಈಶ್ವರ, ಭಗವಂತ ಇರುವನೆಂಬ ಬಗ್ಗೆ ಪರಿಪೂರ್ಣ ನಂಬಿಕೆ) ಎಂಬ ಭಾವ. ಈಶ್ವರ ಇರುವನೆಂಬ ತಿಳುವಳಿಕೆ ಇಟ್ಟುಕೊಂಡು ಈ ಜಾಗೃತ ಭಾವದಿಂದ ವರ್ತಿಸುವದೇ ಭಾವಾರ್ಥವಾಗಿದೆ. ಭಾವ ಇದ್ದುದಾದರೆ ಅಂದರೆ ಈಶ್ವರನ ಅಸ್ತಿತ್ವದ ಗುಟ್ಟು (ಗುರುತು) ತಿಳಿದಿರುತ್ತದೆ ಎಂದು ಅರ್ಥ, ಭಾವಾರ್ಥ ಇದ್ದಲ್ಲಿ ಆಚಾರ ವಿಚಾರ ಮತ್ತು ಉಚ್ಚಾರ ಇವುಗಳಲ್ಲಿ ಈಶ್ವರನ ಅಸ್ತಿತ್ವದ ಪ್ರತಿಬಿಂಬ ಕಾಣುತ್ತದೆ. ಭಕ್ತಿ ಈ ಶಬ್ದ ಭಜ್ ಧಾತುವಿನಿಂದ ಹುಟ್ಟಿದೆ. ಭಜ್ ಅಂದರೆ ಸೇವೆ ಮಾಡುವದು. ಪೂಜಾ ಮಾಡುವದು. ಅಲುಗಾಡದ ನಿಕಟ ಮನಸ್ಸಿನಿಂದ ತನ್ನವನನ್ನಾಗಿ ಮಾಡಿಕೊಳ್ಳುವದು. ಭಕ್ತಿ ಅಂದರೆ ಅಂತಃಕರಣದ ತದಾಕಾರತ್ವವು ಈಶ್ವರನ ಭಕ್ತಿ ಅಂದರೆ ಈಶ್ವರನ ವಿಷಯವಲ್ಲಿ ರತಿ ಅಥವಾ ಪ್ರೇಮ ಇರುವವನಾಗಿವೆ. ಭಕ್ತಿ ಅಂದರೆ ಅಂತಃಕರಣದ ಏಕಾಗ್ರತೆ. ಇದರಲ್ಲಿ ಅಂತಃಕರಣವು ಭಗವದಾಕಾರ ಧಾರಣ ಮಾಡುತ್ತದೆ. ಭಗವಂತ ಸಚ್ಚಿದಾನಂದ ಸ್ವರೂಪನಾಗಿರುವದರಿಂದ ಭಕ್ತಿಯೂ ಸಹ ಪರಮಾನಂದ ಸ್ವರೂಪವೇ ಆಗಿರುತ್ತದೆ. ಯಾರ ಮನಸ್ಸಿನಲ್ಲಿ ಭಾವ ಇರುವದೋ ಅವನು ಭಾವಿಕನು. ಮತ್ತು ಭಾವವಿದ್ದು ಪ್ರೇಮವಿದ್ದವನು ಭಕ್ತನೆನಿಸುವನು. ಎಲ್ಲಿ ಭಾವವಿರುವದೋ ಅಲ್ಲಿ ಬಹುಶಃ ಪ್ರೇಮ ಇದ್ದೇ ಇರುತ್ತದೆ. ಇರಲಿ, ಈ "ಭಾವ" ತತ್ವದ ಒಂದು ಮಹತ್ವದ ದೊಡ್ಡ ನಿಯಮವು ಇರುತ್ತದೆ. ಅದು ಮುಖ್ಯವಾಗಿ ಈಶ್ವರನ ಪ್ರಚೀತಿಯು ಮನುಷ್ಯನ ಭಾವದ ಮೇಲೆ ಅವಲಂಬಿಸಿರುತ್ತದೆ. ಯಾವ ಪ್ರಮಾಣದಿಂದ ಮನುಷ್ಯನಲ್ಲಿ ಭಾವಶುದ್ಧಿ, ಸ್ಥಿರತೆ ಮತ್ತು ವಿಶಾಲತನ ಇರುವದೋ ಆ ಪ್ರಮಾಣದಲ್ಲಿ ಅವನ ಈಶ್ವರ ಪ್ರಚೀತಿಯು ಶುದ್ಧ ಸ್ಥಿರ ಹಾಗೂ ವಿಶಾಲವಾಗಿರುತ್ತದೆ. ನಿಜವಾದ ಸಂಗತಿ ಎಂದರೆ ಈ ಸಂಬಂಧ ಯಾವತ್ತೂ ದೃಶ್ಯವಿಶ್ವ ಅಂದರೆ ಕಾಣುವ ಜಗತ್ತಿನಲ್ಲಿ ಈಶ್ವರನು ಅಂತರ್ಯಾಮಿಯಾಗಿ ಎಡಬಿಡದೆ ಸದಾ ಇರುವವನಾಗಿರುವನು. ದೃಶ್ಯದ ಜಂಜಾಟದಲ್ಲಿ ಅವನನ್ನು (ಈಶ್ವರನನ್ನು) ಕಂಡುಕೊಳ್ಳುವ ಕುಶಲತನವನ್ನು ಸಾಧಿಸಲಿಕ್ಕೆ ಭಾವ ಇದು ಅಮೋಘ ಸಾಧನವಾಗಿದೆ. ಅಂತಃಕರಣ ಶುದ್ಧ ಹಾಗೂ ಪವಿತ್ರವಿದ್ದದ್ದಾದರೆ, ಭಾವವು ಸತೇಜವಿರುತ್ತದೆ. ಈಶ್ವರನ ತಿಳುವಳಿಕೆ ಹೊಚ್ಚ ಹೊಸದಾಗಿರುತ್ತದೆ. ಅಂತಃಕರಣ ಅಶುದ್ಧ ಮತ್ತು ಅಪವಿತ್ರವಾದ ಕೂಡಲೇ ಭಾವವು ಮಂಕಾಗುತ್ತದೆ, ಮಂದವಾಗುತ್ತದೆ. ಈಶ್ವರ ಅಸ್ತಿತ್ವವು ಮಲಿನವಾಗಿ ಹೋಗುತ್ತದೆ. ಈ ತತ್ವವನ್ನೇ ಈಗ ಶ್ರೀ ಸಮರ್ಥರ ಅಮೋಘವಾಣಿಯಿಂದ ಕೇಳಿರಿ. ದೇವರನ್ನು ಯಾರು ಮನಃಪೂರ್ವಕ ಪ್ರೀತಿಸುವರೋ ಅವರ ಸಂಕಟದ ಹೊಣೆ ದೇವರ ಮೇಲಿರುತ್ತದೆ. ಭಗವಂತ ತನ್ನ ದಾಸ ಭಕ್ತರ ಎಲ್ಲ ಸಂಸಾರದ ದುಃಖವನ್ನು ದೂರ ಮಾಡುವನು. (೧೧) ಯಾರು ಸಂಪೂರ್ಣವಾಗಿ ಈಶ್ವರನ ಆಧೀನರಾಗಿರುವರೋ ಅವರೆಲ್ಲರಿಗೆ ಸ್ವಾನಂದಾಮೃತರಸ ಸೇವಿಸಲು ಸಿಗುತ್ತದೆ. ಇಂಥ ದೈವವಾನ ಭಾವಿಕ ಜನರೇ ಧನ್ಯರು. (೧೨) ಯಾರ ಭಾವ ಹೇಗಿರುವದೋ ಆ ರೀತಿಯಲ್ಲಿ ಆ ದೇವರು ಇರುತ್ತಾನೆ. ದೇವರು ಅಂತಃಕರಣವ ಪರೀಕ್ಷಿಸುವವನಿರುವದರಿಂದ ಮನುಷ್ಯರ ಭಾವ ಎಂಥದೆಂಬುದನ್ನು ಸರಿಯಾಗಿ ಗುರುತು ಹಿಡಿಯುವನು. (೧೩) ಭಾವ ಸುಳ್ಳು ಅಥವಾ ಡಾಂಭಿಕ (ಮೇಲ್ನೋಟದ್ದೆಂದು)ವೆಂದು ತಿಳಿದರೆ ದೇವರು ಸಹ ಅವರ ಸಂಗಡ ಅವರಂತೆಯೇ ಖೊಟ್ಟಿತನದಿಂದ ಇರುವನು. ಅವರು ಹೇಗಿರುವರೋ ಹಾಗೆ ವರ್ತಿಸುವನು. ಇದು ಅವನ ಆಶ್ಚರ್ಯಕಾರಕ ಲೀಲೆಯಾಗಿದೆ. (೧೪)

ಜೈಸೇ ಜಯಾಚೇ ಭಜನ । ತೈಸೇಚಿ ದೇ ಸಮಾಧಾನ ।
ಭಾವ ಹೋತಾ ಕಿಂಚಿತ ನ್ಯೂನ । ಆಪಣಹಿ ದುರಾವೇ ॥೧೫॥

ದರ್ಪಣೀ ಪ್ರತಿಬಿಂಬ ದಿಸೆ । ಜೈಸ್ಯಾಸ ತೈಸೇ ಭಾಸೆ ।
ತಯಾಚೇ ಸೂತ್ರ ಅಸೇ । ಆಪಣಾ ಚ ಪಾಸೀ ॥೧೬॥

ಜೈಸೇ ಆಪಣ ಕರಾವೇ । ತೈಸೇಚಿ ತೇಣೇ ವ್ಹಾವೇ ।
ಜರೀ ಡೋಳೆ ಪಸರೂನಿ ಪಾಹಾವೇ। ತರೀ ತೇ ಹಿ ಟವಕಾರೇ ॥೧೭॥

ಭೃಕುಟೀಸ ಘಾಲೂನ ಮಿಠೀ । ಪಾಹಾತ ಕ್ರೋಧೇ ತೇ ಹಿ ಉಠೀ ।
ಆಪಣ ಹಾಸ್ಯಕರಿತಾ ಪೋಟೀ। ತೇ ಹಿ ಆನಂದೇ ॥೧೮॥

ಜೈಸಾ ಭಾವ ಪ್ರತಿಬಿಂಬಲಾ । ತಯಾಚಾಚಿ ದೇವ ಜಾಲಾ ।
ಜೋ ಜೈಸೇ ಭಜೇ ತ್ಯಾಲಾ । ತೈಸಾಚಿ ವೋಳೆ ॥೧೯॥

ಭಾವೇ ಪರಮಾರ್ಥಾ ಚಿಯಾ ವಾಟಾ । ವಾಹಾತೀ ಭಕ್ತೀಚಿಯಾ ಪೇಠಾ ।
ಭರಲಾ ಮೋಕ್ಷಾಚಾ ಚೋಹಾಟಾ । ಸಜ್ಜನ ಸಂಗೇ ॥೨೦॥

ಭಾವೇ ಭಜನೀ ಜೇ ಲಾಗಲೇ। ತೇ ಈಶ್ವರೀ ಪಾವನ ಜಾಲೇ ।
ಭಾವಾರ್ಥಬಳೇ ಉದ್ಧರಿಲೇ। ಪೂರ್ವಜ ತೇಹೀ ॥೨೧॥

ಆಪಣ ಸ್ವಯೇ ತರಲೇ । ಜನಾಸ ಹಿ ಉಪೇಗಾ ಆಲೇ ।
ಕೀರ್ತಿಶ್ರವಣೇ ಜಾಲೇ । ಅಭಕ್ತ ಭಾವಾರ್ಥೀ ॥೨೨॥

ಧನ್ಯ ತಯಾಚೀ ಜನನೀ। ಜೇ ಲಾಗಲೇ ಹರಿಭಜನೀ ।
ತೇಹಿಂಚ ಯೇಕ ಜನ್ಮ ಜನೀ । ಸಾರ್ಥಕ ಕೇಲಾ ॥೨೩॥

ತಯಾಚೀ ವರ್ಣೂ ಕಾಯ ಥೋರೀ । ಜಯಾಚಾ ಭಗವಂತ ಕೈವಾರೀ ।
ಕಾಸೆ ಲಾಊನ ಉತರೀ । ಪಾರ ದುಃಖಾಚಾ ॥೨೪॥

ಬಹುತಾ ಜನ್ಮಾಚೇ ಸೇವಟೀ । ಜೇಣೇ ಚುಕೆ ಅಟಾಟೀ ।
ತೋ ಹಾ ನರದೇಹ ಭೇಟೀ । ಕರೀ ಭಗವಂತೀ ॥೨೫॥

ಮ್ಹಣೌನಿ ಧನ್ಯ ತೇ ಭಾವಿಕ ಜನ । ಜೇಹೀ ಜೋಡಿಲೇ ಹರಿ ನಿಧಾನ ।
ಅನಂತ ಜನ್ಮಾಂತರೀ ಚೇ ಪುಣ್ಯ । ಫಳಾಸಿ ಆಲೇ ॥೨೬॥

ಆಯುಷ್ಯ ಹೇ ಚಿ ರತ್ನಪೇಟೀ। ಮಾಜೀ ಭಜನರತ್ನೇ ಗೋಮಟೀ ।
ಈಶ್ವರೀ ಅರ್ಪೂನಿಯಾ ಲುಟೀ । ಆನಂದಾಚೀ ಕರಾವೀ ॥೨೭॥

ಯಾರು ಯಾವ ರೀತಿ ಆರಾಧಿಸುವರೋ ಅದರಂತೆಯೇ ಅವರಿಗೆ ಆ ದೇವರು ಸಮಾಧಾನ ಕೊಡುವನು. ಭಾವದಲ್ಲಿ ಸ್ವಲ್ಪಾದರೂ ಕೊರತೆ, ಮಂದತ್ವವಾದರೆ ದೇವರು ಆ ಕ್ಷಣದಲ್ಲಿ ದೂರಾಗುವನು. ಅವನ ವಿಶ್ವಾಸ ಮತ್ತು ಅನು ಭವದಲ್ಲಿ ಮಂದತ್ವ ಕಾಣುವದು. (೧೫) ಕನ್ನಡಿಯಲ್ಲಿ ನಮ್ಮ ಪ್ರತಿಬಿಂಬ ಕಾಣುತ್ತದೆ. ನೋಡುವವನು ಹೇಗಿರು ವನೋ ಅದರಂತೆ ಅದು ಕಾಣುವದು. ಪ್ರತಿಬಿಂಬ ಹೇಗೆ ಕಾಣಬೇಕೆಂಬುದರ ಮರ್ಮವು ನಮ್ಮಲ್ಲಿಯೇ ಇರುತ್ತದೆ(೧೬) ನಾವು ಹೇಗೆ (ಹಾಲಚಾಲ) ಹಾವಭಾವ ಮಾಡುವೆವೋ ಅದರಂತೆಯೇ ಪ್ರತಿಬಿಂಬ ಕನ್ನಡಿಯಲ್ಲಿ ಕಾಣುತ್ತದೆ. ನಾವು ಕಣ್ಣಗಲಿಸಿ ಸಿಟ್ಟಿನಿಂದ ನೋಡಿದರೆ ಪ್ರತಿಬಿಂಬ ಸಹ ಅದೇ ತರಹ ಕಣ್ಣಗಲಿಸಿದ ಸಿಟ್ಟಿನ ನೋಟವೇ ಅದರಲ್ಲಿ ಕಾಣು ವದು. (೧೭) ನಾವು ಹುಬ್ಬುಗಂಟಿಕ್ಕಿ, ಹುಬ್ಬೇರಿಸಿ ನೋಡಿದರೆ, ಕನ್ನಡಿಯಲ್ಲಿ ಸಹ ಅದೇ ರೀತಿ ಸಿಟ್ಟಿನಿಂದ ನೋಡುವ ದೃಶ್ಯ ಕಾಣುತ್ತದೆ. ನಾವು ನಕ್ಕು ನೋಡಿದರೆ ಅದರಂತೆ ಆನಂದದ ದೃಶ್ಯ ಕಾಣುತ್ತದೆ. (೧೮) ಇದೇ ಪ್ರಕಾರ ಯಾರ ಭಾವ ಹೇಗಿರುವದೋ ಆ ಭಾವದಂತೆ ಪ್ರತಿಬಿಂಬವೂ ಇರುವದು. ಆ ಪ್ರಕಾರ ದೇವರೂ ಸಹ ಇರುವನು. ಯಾವನು ಯಾವ ರೀತಿಯಲ್ಲಿ ಭಗವಂತನ ಕೃಪೆಗೆ ಪಾತ್ರನಾಗುವನೋ ಆ ಪ್ರಕಾರದಲ್ಲಿ ಭಗವಂತ ಕೃಪೆ ಮಾಡುವನು. (೧೯) ಭಾವವು ಪರಮಾರ್ಥದ ದಾರಿಯಿಂದ ಮನುಷ್ಯನನ್ನು ಭಕ್ತಿಯ ಬಜಾರ, ಪೇಟೆಯುವರೆಗೆ ತಂದುಬಿಡುವದು. ಆ ಭಕ್ತಿಯ ಬಜಾರದೊಳಗೆ ಸಂತ ಶರಣರ ಸಮುದಾಯದಲ್ಲಿ ಮೋಕ್ಷದ ಬಾಜಾರ ಚೌಕದಲ್ಲಿ "ಭರ್ತಿಯಾಗಿ ಕೊಡುವರು. ಅಂದರೆ ಶುದ್ಧಭಾವ ಇದ್ದವರಿಗೆ ಪರಮಾರ್ಥ ಸಾಧನವು ಸರಿಹೋಗುವದು. ಮತ್ತು ಅದರ ಪರ್ಯವಸಾನವು ಭಗವಂತನ ಭಕ್ತಿಯಲ್ಲಿ ಆಗುವದು. ಭಕ್ತಿ ಉತ್ಪನ್ನವಾದ ಕೂಡಲೇ ಸಂತ ಶರಣರ ಸಂಗ ತಿಯ ಸುಖದ ಲಾಭವಾಗಿ ನಿರಾಯಾಸವಾಗಿ ಮೋಕ್ಷವು ಕೈವಶವಾಗುವದು. (೨೦) ನಿಜವಾದ ಸ್ಥಿರ ಬುದ್ಧಿಯಿಂದ ಯಾರು ಭಗವಂತನ ಆರಾಧನೆಯನ್ನು ಮಾಡುವರೋ ಅವರು ಭಗವಂತನಲ್ಲಿ ಲೀನರಾಗಿ ಪವಿತ್ರರಾಗುವರು. ಇವರ ಭಾವ ಸಾಮರ್ಥ್ಯದಿಂದ ಇವರ ಪೂರ್ವಜರೂ ಸಹ ಉದ್ಧಾರರಾಗುವರು. (೨೧) ಇಂಥ ಪುರುಷರು ಸ್ವತಃ ಮುಕ್ತ ರಾಗಿ ಜಗತ್ತನ್ನೂ ಉದ್ಧರಿಸುತ್ತಾರೆ. ಭಗವಂತ ಇಂಥವರ ಕೈವಾರಿಯಾಗಿರುವನು. ಅವನ ಬೆನ್ನು ಹಿಡಿದು ಭಕ್ತನು ಸ್ವಾನಂದಾಮೃತವನ್ನು ಭೋಗಿಸುವನು. ಇಂಥವರೇ ನಿಜವಾದ ಧನ್ಯರು:– ಈಶ್ವರ ದರ್ಶನದಿಂದ ಪಾವನರಾದವರು ತಾವು ಸ್ವತಃ ಉದ್ಧಾರವಾಗುವದಲ್ಲದೇ ಲೋಕದ ಜನರಿಗೂ ಉಪಯೋಗ ಬೀಳುವರು. ಈ ಜನರನ್ನು ಉದ್ಧಾರ ಗೊಳಿಸುವರು. ಇಂಥವರ ಮುಖದಿಂದ ದೇವರ ಮಹಿಮೆ ಕೇಳಿದವರು ಅಭಕ್ತರಾಗಿದ್ದರೂ ಸಹ ಭಕ್ತಿಮಾರ್ಗ ಹಿಡಿ ಯುವರು. (೨೨) ದೇವರ ಭಕ್ತಿ ಮಾಡುವಂಥವರ ತಾಯಿ ಧನ್ಯಳು. ಇಂಥ ಭಕ್ತನಿಗೆ ಜನ್ಮಕೊಟ್ಟು ಜಗದಲ್ಲಿ ತನ್ನ ಜನ್ಮ ಸಾರ್ಥಕಪಡಿಸಿಕೊಂಡಳು. ಒಟ್ಟಿನಲ್ಲಿ ತಾಯಿ ಮಗ ಇಬ್ಬರೂ ಧನ್ಯರು. (೨೩) ಯಾರ ಮೇಲೆ ದಯೆದೋರಿ ಭಗವಂತ ಸ್ವತಃ ಅವರನ್ನು ಸಂಭಾಳಿಸುವನೋ ಅಂಥ ದೇವರ ಹಾಗೂ ಭಕ್ತರ ದೊಡ್ಡಸ್ತನವನ್ನು ಎಷ್ಟೆಂದು ವರ್ಣಿಸುವದು. ದೇವರು ಭಕ್ತನಿಗೆ ಆಧಾರವಾಗಿ ನಿಲ್ಲುವನು. ಮತ್ತು ಅವನನ್ನು ದುಃಖದಾಚೆಗೆ ಅಂದರೆ ತನ್ನ ಕಡೆಗೇ ಒಯ್ಯುವನು. (೨೪) ಈ ದುರ್ಲಭ ದೇಹವನ್ನು ಭಗವಂತನ ಸಲುವಾಗಿ ಉಪಯೋಗಿಸಿದರೆ ಜೀವನ ಧನ್ಯ ವಾಗುತ್ತದೆ. ಬಹಳಷ್ಟು ಜನ್ಮ ಕಳೆದ ನಂತರ ಈ ನರದೇಹ ಪ್ರಾಪ್ತವಾಗುವದು. ಇದರ ಯೋಗದಿಂದ ಜನ್ಮ-ಮರಣ ರೂಪಿ ಸಂಸಾರದ ದಗದಗಿ ತಪ್ಪುತ್ತದೆ. ಭಗವಂತನ ದರ್ಶನವು ಈ ನರದೇಹದಿಂದಲೇ ಸಾಧ್ಯವಾಗುವದು. (೨೫) ಈ ದೇಹದ ಮೂಲಕ ಯಾವ ಭಾವಿಕ ಭಕ್ತಜನರು ಭಗವಂತ ರೂಪದ ಸಂಪತ್ತನ್ನು ಪಡೆಯುವರೋ ಅವರು ಧನ್ಯರೆಂದು ತಿಳಿಯಬೇಕು. ಅನಂತ ಜನ್ಮದ ಪುಣ್ಯದ ಫಲವೆಂದೇ ಇವರು ಪರಮಾತ್ಮ ಪ್ರಾಪ್ತಿ ಪಡೆಯುವಲ್ಲಿ ಶಕ್ತ ರಾದರು. (೨೬) ಮಾನವ ಜನ್ಮವು ಒಂದು ರತ್ನ ತುಂಬಿದ ಪೆಟ್ಟಿಗೆಯಾಗಿದೆ. ಈ ಪೆಟ್ಟಿಗೆಯಲ್ಲಿ ಈಶ್ವರ ಭಜನೆಯ ಉತ್ತಮ ರತ್ನಗಳು ಇರುವವು. ಈ ರತ್ನಗಳನ್ನೆಲ್ಲ ಭಗವಂತನಿಗೆ ಅರ್ಪಿಸಿರಿ. ಮತ್ತು ಪರಮಾನಂದವನ್ನು ಭೋಗಿಸಿರಿ (ಲೂಟಿ ಮಾಡಿರಿ, ಆನಂದವನ್ನು ಕೊಳ್ಳಿರಿ) (೨೭)

ಹರಿಭಕ್ತ ವೈಭವೇ ಕನಿಷ್ಠ । ಪರೀ ತೋ ಬ್ರಹ್ಮಾದಿಕಾ ವರಿಷ್ಠ ।
ಸದಾ ಸರ್ವದಾ ಸಂತುಷ್ಟ । ನೈರಾಶಬೋಧೇ ॥೨೮॥

ಧರೂನ ಈಶ್ವರಾಚೀ ಕಾಸ । ಕೇಲೀ ಸಂಸಾರಾಚೀ ನೈರಾಶ।
ತಯಾ ಭಾವಿಕಾ ಜಗದೀಶ । ಸಬಾಹ್ಯ ಸಾಂಭಾಳೀ ॥೨೯॥

ಜಯಾ ಸಂಸಾರಾಚೇ ದುಃಖ । ವಿವೇಕೇ ವಾಟೇ ಪರಮ ಸುಖ।
ಸಂಸಾರ ಸುಖಾಚೇನಿ ಪಢತಮೂರ್ಖ। ಲೋಧೋನ ಪಡತೀ ॥೩೦॥

ಜಯಾಚಾ ಈಶ್ವರೀ ಜಿವ್ಹಾಳಾ । ತೇ ಭೋಗಿತೀ ಸ್ವಾನಂದ ಸೋಹಳಾ ।
ಜಯಾಚಾ ಜನಾ ವೇಗಳಾ । ಠೇವಾ ಆಕ್ಷೈ ॥೩೧॥

ತೇ ಆಕ್ಷೈ ಸುಖೇ ಸುಖಾವಲೇ । ಸಂಸಾರ ದುಃಖೇ ವಿಸರಲೇ।
ವಿಷಯೆರಂಗೀ ವೋರಂಗಲೆ । ಶ್ರೀರಂಗರಂಗೀ ॥೩೨॥

ತಯಾಸ ಫಾವಲೀ ನರದೇಹಪೇಟೀ । ಕೇಲೀ ಈಶ್ವರೇಸೀ ಸಾಟೀ ।
ಯೇರೇ ಅಭಾವಿಕೇ ಕರಂಟೀ । ನರದೇಹ ಗೇಲಾ ॥೩೩॥

ಅವಚಟೇ ನಿಧಾನ ಜೋಡಲೇ । ತೇ ಕವಡಿಚ್ಯಾ ಬದಲ ನೇಲೇ ।
ತೈಸೇ ಆಯುಷ್ಯ ನಿಘೋನಿ ಗೇಲೇ । ಅಭಾವಿಕಾಚೇ ॥೩೪॥

ಬಹುತ ತಪಾಚಾ ಸಾಠಾ । ತೇಣೇ ಲಾಧಲಾ ಪರೀಸ ಗೋಟಾ ।
ಪರೀ ತೋ ಠಾಈಚಾ ಕರಂಟಾ । ಭೋಗೂ ಚ ನೇಣೇ ॥೩೫॥

ತೈಸಾ ಸಂಸಾರಾಸ ಆಲಾ । ಮಾಯಾಜಾಳೀ ಗುಂಡಾಳಲಾ ।
ಅಂತೀ ಯೇಕಲಾಚಿ ಗೇಲಾ। ಹಾತ ಝಾಡುನೀ ॥೩೬॥

ಯಾ ನರದೇಹಾಚೇನಿ ಸಂಗತೀ । ಬಹುತ ಪಾವಲೇ ಉತ್ತಮ ಗತೀ ।
ಯೇಕೇ ಬಾಪುಡೀ ಯಾತಾಯಾತೀ । ವರಪಡೀ ಜಾಲೀ ॥೩೭॥

ಭಗವಂತನ ಭಕ್ತನು ವೈಭವ ಸಂಪನ್ನನಿರುವದಿಲ್ಲ. ಆದರೂ ಭಗವಂತನು ಇವರನ್ನು ಸಂಬಾಳಿ ( ನಿಭಾಯಿ ) ಸುತ್ತಾನೆ. ಭಕ್ತನು ಸಂಸಾರ ಸುಖದ ಬೆನ್ನು ಹತ್ತಿ ಓಡುವದಿಲ್ಲ. ಅವನು ಸ್ವಾನಂದವನ್ನು ಭೋಗಿಸುವನು. ಅಕ್ಷಯ ಸುಖ ಭೋಗಿಸುವನು. ಭಕ್ತನು ಭಗವಂತನಲ್ಲಿ ಸಮರಸನಾಗಿರುವನು. ಲೀನನಾಗುವನು. ದೇವರ ಭಕ್ತನಾದವನು ಲೌಕಿಕ ವೈಭವದ ದೃಷ್ಟಿಯಿಂದ ನೋಡಿದರೆ ತೀರ ಕೆಳಗಿನ ಮೆಟ್ಟಲು ಮೇಲೆ ನಿಂತಿರುತ್ತಾನೆ. ಆದರೆ ಅವನ ವೈಭವ ಬೇರೆ ಬಗೆಯದೇ ಇರುತ್ತದೆ. ಅವನು ಬಡವನಾಗಿದ್ದರೂ ಸಹ ಬ್ರಹ್ಮಾದಿಗಳಿಗಿಂತ ಮೇಲಿನ ಮೆಟ್ಟಲಿನ ಮೇಲೆ ಇರುತ್ತಾನೆ. ಆದರೆ ಅವನಲ್ಲಿಯ "ವೈಭವ ಬೇಕು-ಬೇಕು" ಎಂಬುವ ಹವ್ಯಾಸ (ವಾಸನಾ, ಆಶಾ) ಸಂಪೂರ್ಣ ನಷ್ಟವಾಗಿರುತ್ತದೆ. ಆದುದರಿಂದಲೇ ಅವನು ಸದಾ ಸರ್ವಕಾಲ ಅತ್ಯಂತ ಸಂತೋಷದಿಂದ ಇರುತ್ತಾನೆ. ಸಮಾಧಾನದಿಂದ ಇರುತ್ತಾನೆ. (೨೮) ಈಶ್ವರನನ್ನು ಗಟ್ಟಿಯಾಗಿ ಹಿಡಿದು ಆಧಾರ ಹೊಂದಿಯೇ ಸಂಸಾರದ ಆಶೆ (ವಾಸನಾ) ಬಿಟ್ಟು ಬಿಡುತ್ತಾನೆ. ಇಂಥ ಭಾವಿಕ ಭಕ್ತನನ್ನು ದೇವರು ಹೊರಗೂ ಒಳಗೂ ಸಂಬಾಳಿಸುತ್ತಾನೆ. ಅವನ ವೃತ್ತಿಯನ್ನು ಸಂಬಾಳಿಸುವನು. ಮತ್ತು ಅವನ ಪ್ರಪಂಚವನ್ನೂ ಸಂಬಾಳಿಸುವನು. (೨೯) ತಿಳಿದು ನೋಡಿದರೆ ಸಂಸಾರದಲ್ಲಿ ಸುಖವಿಲ್ಲ. ದುಃಖವೇ ತುಂಬಿದೆ. ದೇಹ ಬುದ್ಧಿ. ಪ್ರಪಂಚ ಬುದ್ಧಿಯ ವಿವೇಕದಿಂದ ಈ ದುಃಖ ಯಾರಿಗೆ ಬಹುಸುಖಕರವೆಂದು ಅನಿಸುವದೋ ಅವರು ಪಢತ(ಕಲಿತ.ತಿಳಿದಂಥ)ಮೂರ್ಖರೆಂದು ತಿಳಿಯಬೇಕು.ಇಂಥ ತಿಳಿದ ಮೂರ್ಖರೇಮಾತ್ರ ಸಂಸಾರ ಸುಖವೇ ಖರೇ ಸುಖವೆಂದು ಅದಕ್ಕೆ ಜೋತು ಬೀಳುತ್ತಾರೆ. ಮುಗಿಬೀಳುತ್ತಾರೆ. (೩೦) ಯಾರ ಜೀವವು ಅತ್ಯಂತ ಆತ್ಮೀಯತೆ ಯಿಂದ ಈಶ್ವರನಲ್ಲಿ ತೊಡಗಿಕೊಂಡಿರುವದೋ ಅಂಥ ಭಕ್ತರು ಸ್ವಾನಂದ ಸುಖವನ್ನು ಭೋಗಿಸುವರು. ಇಂಥವರ ಆನಂದದ ಇಡುಗಂಟು ಅಕ್ಷಯವಿರುತ್ತದೆ. ಆದರೆ ಅದು ಸಾಮಾನ್ಯ ವ್ಯವಹಾರದಲ್ಲಿ ಕಂಡು ಬರುವಂಥದಲ್ಲ. (೩೧) ಸ್ವಾನಂದ ರೂಪ ಅಕ್ಷಯ ಸುಖದಿಂದ ಸುಖ ಹೊಂದಿದ ಭಕ್ತನು ಸಂಸಾರದಲ್ಲಿಯ ದುಃಖಗಳನ್ನು ಮರೆಯುತ್ತಾನೆ. ಶ್ರೀರಂಗನ ಅಂದರೆ ಭಗವಂತನ ಪ್ರೇಮದ ರಂಗದಿಂದ-ಉನ್ಮಾದದಿಂದ ಯಾವನು ಆ ರಂಗದಲ್ಲಿ ಮುಳುಗಿದನೋ ಅಂಥವನು ಇಂದ್ರಿಯ ಸುಖದ ರಂಗನ್ನು ತುಚ್ಛವೆಂದು ಹೀಗಳೆಯುವನು.ಮತ್ತು ಆದರಿಂದ ದೂರ ಸರಿಯುವನು(೩೨) ಮಾನವ ಜೀವನವು ಬಹು ಬೆಲೆಯುಳ್ಳದ್ದು, ಇದನ್ನು ವ್ಯರ್ಥ ಹಾಳು ಮಾಡಿಕೊಳ್ಳಬೇಡಿರಿ. ಅದರ ಸಾರ್ಥಕತೆ ಯನ್ನು ಮಾಡಿಕೊಳ್ಳಿರಿ. ಇಂಥ ನರದೇಹರೂಪದ ಪೆಟ್ಟಿಗೆ ಸಿಕ್ಕ ಮೇಲೆ, ಅದರಲ್ಲಿ ಈಶ್ವರನನ್ನು ಸ್ಥಾಪಿಸಬೇಕು. (ಈಶ್ವರನಿಗೆ ಮುಖ್ಯ ಸ್ಥಾನ ಕೊಡಬೇಕು) ಅಂದರೇನೆ ನರದೇಹದ ನಿಜವಾದ ಉಪಯೋಗ ಮಾಡಿಕೊಂಡಂತಾ ಗುವದು. ಹೀಗೆ ಮಾಡದವರು ದುರ್ದೈವಿಗಳು. ಅಭಾವಿಕರು, ನರದೇಹವನ್ನು ವ್ಯರ್ಥ ಕಳೆದುಕೊಳ್ಳುವರು. (೩೩) ಒಬ್ಬನಿಗೆ ಯೋಗಾಯೋಗದಿಂದ ಒಂದು ಬಹುಬೆಲೆಯುಳ್ಳ ರತ್ನ ಸಿಕ್ಕಿತು. ಆದರೆ ಅದನ್ನು ಕವಡಿ ಕಿಮ್ಮತ್ತಿಗೆ ಕೊಟ್ಟರೆ ಅವನು ದುರ್ದೈವಿಯಲ್ಲದೇ ಮತ್ತು ಆತ್ಮಘಾತಕಿಯೂ ಅನಿಸಿಕೊಳ್ಳುವನು. ಇದರಂತೆಯೇ ಅಭಾವಿಕ, ಅಜ್ಞಾನಿ, ಮನುಷ್ಯ ತನ್ನ ಆಯುಷ್ಯವನ್ನು ಕವಡಿ ಕಿಮ್ಮತ್ತಿನದೆಂದು ವ್ಯರ್ಥಗೊಳಿಸುವನು. (೩೪) ಒಬ್ಬನು ಬಹಳಷ್ಟು ತಪಸ್ಸು ಮಾಡಿದನು. ಅದರ ಪುಣ್ಯ ಪ್ರಭಾವ ಅಥವಾ ಪುಣ್ಯ ಸಂಗ್ರಹದಿಂದ ಒಂದು ಪರಿಸಮಣಿ (ಪರಿಸಗಲ್ಲು) ದೊರಕಿತು. ಆದರೆ ಅವನ ನಶೀಬದಲ್ಲಿ ದುರ್ದೈವವೇ ಇದ್ದುದರಿಂದ ಆ ಪರಿಸಮಣಿಯ ಉಪಯೋಗ ಹೇಗೆ ಮಾಡಿಕೊಳ್ಳಬೇಕೆಂದು ತಿಳಿದುಕೊಳ್ಳಲಿಲ್ಲ. ಅದು ಇದ್ದೂ ವ್ಯರ್ಥವಾಗಿ ಬಿಟ್ಟಿತು. ಇಂಥವನು ದರಿದ್ರನೆಂದು ತಿಳಿಯಬೇಕು. (೩೫) ಇದರಂತೆಯೇ ಮನುಷ್ಯನು ಪುಣ್ಯ ಫಲದಿಂದ ನರದೇಹ ಹೊಂದಿ ಸಂಸಾರದಲ್ಲಿ ಬಂದನು. ಆದರೆ ದೇವರನ್ನೇ ಮರೆತು ಮಾಯೆಯ ಜಾಲದಲ್ಲಿ ತೊಡಕಿಕೊಂಡನು. ಕೊನೆಗೆ ಬರಿಗೈ ಝಾಡಿಸುತ್ತ ಅಂದರೆ ತನ್ನದೆಂದು ಅಂದದ್ದೆಲ್ಲವನ್ನೂ ಇಲ್ಲಿಯೇ ಬಿಟ್ಟು ಒಬ್ಬನೇ ಹೊರಟು ಹೋದನು. ವ್ಯರ್ಥ ಸತ್ತು ಹೋದನು.(೩೬) ಈ ನರದೇಹದ ಸಂಗತಿಯಿಂದ ಅನೇಕ ಜನರು ಉತ್ತಮ ಗತಿಯನ್ನು ಹೊಂದಿರುವರು. ಆದರೆ ಉಳಿದ ಬಹಳಷ್ಟು ದುರ್ದೈವಿ ಜನರು ಹುಟ್ಟು ಸಾವಿನ ಸಂಸಾರ ಜಂಜಡದಲ್ಲಿ(ಭಾನಗಡಿಯಲ್ಲಿ)ಯೇ ದುಃಖ ಭೋಗಿಸುತ್ತ ಉಳಿದರು(೩೭)

ಯಾ ನರದೇಹಾಚೇನಿ ಲಾಗವೇಗೇ । ಸಾರ್ಥಕ ಕರಾವೇ ಸಂತಸಂಗೇ।
ನೀಚ ಯೋನೀ ದುಃಖಮಾಗೇ । ಬಹುತ ಭೋಗಿಲೇ ॥೩೮॥
ಕೋಣ ಸಮಯೋ ಯೇಈಲ ಕೈಸಾ । ಯಾಚಾ ನ ಕಳೇ ಕಿ ಭರ್ವಸಾ ।
ಜೈಸೆ ಪಕ್ಷೀ ದಾಹೀ ದಿಶಾ । ಉಡೋನ ಜಾತೀ ॥೩೯॥
ತೈಸೇ ವೈಭವ ಹೇ ಸಕಳ । ಕೋಣ ಜಾಣೆ ಕೈಸೀ ವೇಳ ।
ಪುತ್ರಕಳತ್ರಾದಿ ಸಕಳ । ವಿಘಡೋನ ಜಾತೀ ॥೪೦॥
ಪಾಹಿಲೀ ಘಡೀ ನವ್ಹೇ ಆಪುಲೀ । ವಯುಸಾ ತರೀ ನಿಘೋನ ಗೇಲೀ ।
ದೇಹ ಪಡತಾ ಚ ಠೇವಿಲೀ । ಆಹೇ ನೀಚ ಯೋನೀ ॥೪೧॥
ಸ್ವಾನ ಶುಕರಾದಿಕ ನೀಚಯಾತೀ । ಭೋಗಣೇ ಘಡೆ ವಿಪತ್ತೀ ।
ತೇಥೇ ಕಾಹೀ ಉತ್ತಮ ಗತೀ । ಪಾವಿಜೇತ ನಾಹೀ ॥೪೨॥
ಮಾಗಾ ಗರ್ಭವಾಸೀ ಆಟಾಟೀ । ಭೋಗಿತಾ ಜಾಲಾಸಿ ರೇ ಹಿಂಪುಟೀ ।
ತೇಥುನಿಯಾ ಥೋರಾ ಕಷ್ಟೀ । ಸುಟಲಾಸಿ ದೈವೇ ॥೪೩॥
ದುಃಖ ಭೋಗಿಲೇ ಆಪುಲ್ಯಾ ಜೀವೇ । ತೇಥೇ ಕೈಚೀ ಹೋತೀ ಸರ್ವೇ ।
ತೈಸೇ ಚಿ ಪುಢೇ ಯೇಕಲೇ ಜಾವೇ । ಲಾಗೇಲ ಬಾಪಾ ॥೪೪॥
ಕೈಚೀ ಮಾತಾ ಕೈಚಾ ಪಿತಾ । ಕೈಚೀ ಬಹಿಣ ಕೈಚಾ ಭ್ರಾತಾ ।
ಕೈಚೀ ಸುಹೃದೇ ಕೈಚೀ ವನಿತಾ । ಪುತ್ರ ಕಳತ್ರಾದಿಕ ॥೪೫॥
ಹೇ ತೂ ಜಾಣ ಮಾವೇಚೀ । ಅವಘೀ ಸೋಇರೀ ಸುಖಾಚೀ ।
ಹೇ ತುರ್ಝ್ಯಾ ಸುಖದುಃಖಾಚೀ । ಸಾಂಗಾತೀ ನವ್ಹೆತೀ ॥೪೬॥
ಕೈಚಾ ಪ್ರಪಂಚ ಕೈಚೇ ಕುಳ । ಕಾಸಯಾ ಹೋತೋಸೀ ವ್ಯಾಕುಳ ।
ಧನ ಕಣ ಲಕ್ಷ್ಮೀ ಸಕಳ । ಜಾಇಜಣೇ ॥೪೭॥
ಕೈಚೇ ಘರ ಕೈಚಾ ಸಂಸಾರ । ಕಾಸಯಾ ಕರಿಸೀ ಜೋಜಾರ ।
ಜನ್ಮವರೀ ವಾಹೋನ ಭಾರ । ಸೆಖೀ ಸಾಂಡೂನ ಜಾಸೀ ॥೪೮॥
ಕೈಚೇ ತಾರುಣ್ಯ ಕೈಚೇ ವೈಭವ । ಕೈಚೇ ಸೋಹಳೇ ಹಾವಭಾವ ।
ಹೇ ಸಕಳಹೀ ಜಾಣ ಮಾವ । ಮಾಈಕ ಮಾಯಾ ॥೪೯॥
ಯೇಚ ಕ್ಷಣೀ ಮರೋನ ಜಾಸೀ । ತರೀ ರಘುನಾಥೀ ಅಂತರಲಾಸೀ ।
ಮಾಝೇ ಮಾಝೇ ಮ್ಹಣತೋಸೀ । ಮ್ಹಣೌನಿಯಾ ॥೫೦॥

ಈ ನರದೇಹದ ಉತ್ತಮ ಉಪಯೋಗವನ್ನು ಪಡೆಯಬೇಕು. ಸಂತರ ಸಹವಾಸವನ್ನು ಹಿಡಿದು ಜನ್ಮವನ್ನು ಶಕ್ಯವಿದ್ದಷ್ಟು ಶೀಘ್ರ ಸಾರ್ಥಕ ಮಾಡಿಕೊಳ್ಳಬೇಕು. ಇದಕ್ಕಿಂತ ಮೊದಲಿಗೆ ಕೆಳಗಿನ ಯೋನಿಯಲ್ಲಿ ಜನ್ಮ ಹೊಂದಿದ ಜೀವವು ಬಹಳಷ್ಟು ದುಃಖ ಭೋಗಿಸಿತ್ತೆಂಬುದನ್ನು ಮರೆಯಬಾರದು. (೩೮) **ಮಾನವೀ ಜೀವನವು ಎಷ್ಟೊಂದು ಅಶಾಶ್ವತವಿರುವದು, ಅಸ್ಥಿರವಿರುವದು, ಮತ್ತು ಭ್ರಾಮಕವಿರುವದು ಎಂಬುದನ್ನು ಶ್ರೀಸಮರ್ಥರು ಒಳ್ಳೆ ಪ್ರಭಾವಿಯಾಗಿ ಮುಂದಿನ ಹದಿನೈದು ನುಡಿಗಳಲ್ಲಿ ಹೇಳಿದ್ದಾರೆ:—** ಯಾವಾಗ, ಎಂಥ ಪ್ರಸಂಗ ಬಂದೀತೆಂದು ನಿಶ್ಚಿತ ಹೇಳಲಿಕ್ಕೆಬರುವದಿಲ್ಲ. ಗಿಡದಮೇಲೆ ಎಲ್ಲ ಏಕತ್ರವಾಗಿ ಕುಳಿತಂಥ (ಇರುವಂಥ) ಪಕ್ಷಿಗಳು ಒಂದುಕ್ಷಣದಲ್ಲಿ ಹತ್ತೂದಿಕ್ಕಿಗೆ ಹೇಗೆ ಹಾರಿಹೋಗುವವೋ ಹಾಗೆಯೇ ನಿಜಜೀವನದಲ್ಲಿ ಸಹ ಆಗುವದನ್ನು ಕಾಣುತ್ತೇವೆ. (೩೯) ಇದೇ ಪ್ರಕಾರ ನಮ್ಮ ಎಲ್ಲ ವೈಭವ, ಹೆಂಡರು, ಮಕ್ಕಳು-ಮರಿ, ಮುಂತಾದವುಗಳ ಬಗ್ಗೆ ಹೇಗೆ ಹೇಳುವದು, ಏನು ಹೇಳುವದು, ಎಂಥ ಪ್ರಸಂಗ ಬರುವದೆಂದು ಮತ್ತು ಇದು ಗೊತ್ತಾಗದೆ ಒಮ್ಮಿಂದೊಮ್ಮೆಲೇ ನಾಶವಾಗಿ ಹೋಗುವದು. ವಿಯೋಗ ಹೊಂದಿ ಹೋಗುವದು. (೪೦) ಇಲ್ಲಿಯವರೆಗಿನ ಆಯುಷ್ಯ ವ್ಯರ್ಥ ಕಳೆದುಕೊಂಡಿರುವಿ, ಇದರಂತೆಯೇ ಕ್ಷಣ ಕ್ಷಣವೂ ನೋಡ ನೋಡುತ್ತ ನಿನ್ನಿಂದ ಬಿಡುಗಡೆಯಾಗಿ ಭೂತಕಾಲದಲ್ಲಿ ಸೇರಿ ಹೋಗುವದು. ಮುಂದಿನ ಕ್ಷಣ ಸಹ ನಿಶ್ಚಿತ ನಿನ್ನದೆಂದು ಅನ್ನುವಂತಿಲ್ಲ. ಈ ರೀತಿಯು ಇಡೀ ಆಯುಷ್ಯ ವ್ಯರ್ಥ ಹೊರಟು ಹೋಗುತ್ತದೆ. ಆ ಮೇಲೆ ದೇಹ ಬಿದ್ದ ಕೂಡಲೇ ಕೆಳಗಿನ ನೀಚ ಯೋನಿಯಲ್ಲಿ ಹುಟ್ಟಿ ಬರದ ಹೊರತು ಗತ್ಯಂತರವೇ ಇಲ್ಲ. (೪೧) ನಾಯಿ, ಹಂದಿಗಳೇ ಮುಂತಾದ ಕೀಳು (ಹೀನ) ಜಾತಿಯ ದೇಹ ಹೊಂದಿದರಂತೂದು:ಖವನ್ನೇ ಭೋಗಿಸಬೇಕಾಗುವದು. ಈದೇಹದಿಂದೇನೂ ಉತ್ತಮ ಗತಿ ಸಿಗುವದಿಲ್ಲ.(೪೨) ಮೊದಲು ಗರ್ಭವಾಸದಲ್ಲಿ ಕಷ್ಟವನ್ನು ಭೋಗಿಸುವಾಗ ಜೀವವು ನಿರಾಶೆ ಹೊಂದಿರುತ್ತದೆ. ಸುದೈವದಿಂದ ಅತಿ ಕಷ್ಟದಿಂದ ಜೀವ ಅಲ್ಲಿಂದ ಬಿಡುಗಡೆ ಆಗಿ ಹೊರ ಬರುವದು. (೪೩) ಗರ್ಭವಾಸದಲ್ಲಿ ಜೀವ ದುಃಖ ಅನುಭವಿಸುವಾಗ ಅಲ್ಲಿ ಅದಕ್ಕೆ ಸಹಾಯಕರಾರೂ ಇರುವದಿಲ್ಲ. ಇದೇ ರೀತಿ ಜೀವ ಹೋಗುವಾಗ ಯಾರೂ ಅದರ ಹಿಂದೆ ಬರುವವರಿರುವದಿಲ್ಲ. ಅದೊಂದೇ ಹೋಗಬೇಕಾಗುತ್ತದೆ. (೪೪) ಅಂದ ಮೇಲೆ ಎಲ್ಲಿಯ ತಾಯಿ, ಎಲ್ಲಿಯ ತಂದೆ, ಯಾರು ಅಕ್ಕ, ಯಾರು ತಂಗಿ, ಯಾರು ಅಣ್ಣ, ಯಾರು ತಮ್ಮ, ಯಾರು ಹೆಂಡತಿ, ಯಾರು ಗೆಳತಿ, ಯಾರು ಗೆಳೆಯ, ಯಾರು ಮಕ್ಕಳು ಮರಿ, ಮತ್ತು ಯಾರು ಕುಟುಂಬದ ಇತರ ಜನರು. (೪೫) ಇವರೆಲ್ಲ ಜನರು ಮಮತ್ವದಿಂದ ನಮ್ಮವರೆಂದು ತಿಳಿದುಕೊಂಡವರಲ್ಲದೇ ಬೇರೆಯವರಲ್ಲ ಎಂಬುದನ್ನು ನೆನಪಿನಲ್ಲಿಡಬೇಕು. ಇವರೆಲ್ಲ ನನ್ನವರೆಂಬವರು, ಸುಖದ ಆಶೆಯಿಂದ ಒಟ್ಟುಗೂಡಿರುತ್ತಾರೆ. ನಮ್ಮ ಸುಖದುಃಖದಲ್ಲಿ, ಇವರಲ್ಲಿ ಒಬ್ಬರೂ ಸಹ ಭಾಗಿಗಳಾಗುವದಿಲ್ಲ. (೪೬) ಎಂಥ ಪ್ರಪಂಚ, ಎಂಥ ಕುಲ, ವಿನಾಕಾರಣ ತಳಮಳಗೊಳ್ಳಬಾರದು. ಧನ ಧಾನ್ಯ ಮತ್ತು ಐಶ್ವರ್ಯ ಇದೆಲ್ಲ ನಶ್ವರವಾದದ್ದೇ ಇರುವದು. (೪೭) ಎಂಥ ಮನೆ, ಎಂಥ ಸಂಸಾರ, ಇದಕ್ಕಾಗಿ ಇಷ್ಟೊಂದು ಕಷ್ಟಪಡುವ ಕಾರಣವಿಲ್ಲ. ಸಾಯುವವರೆಗೆ ಇದರ ಒಜ್ಜೆ ಹೊತ್ತು ಹೊತ್ತು ಕೊನೆಗೊಮ್ಮೆ ಇದನ್ನೆಲ್ಲ ಇಲ್ಲಿಯೇ ಬಿಟ್ಟು ಹೋಗಬೇಕಾಗುವದು. (೪೮) ಎಂಥ ತಾರುಣ್ಯ, ಎಂಥ ವೈಭವ, ಎಂಥ ವಿಲಾಸಾದಿ ವೈಭವಗಳು ಎಂಥ ಸಂಭ್ರಮ, ಎಂಥ ಡೌಲು ಎಂಥ ಹಾವಭಾವ, ನಖರಾ ಇದೆಲ್ಲ ಭ್ರಾಮಕವು, ಜೀವನನ್ನು ಭ್ರಮೆಗೊಳಿಸಿ ಮೋಸಗೊಳಿಸುವ ಆಟವಾಗಿದೆ. (೪೯) ಈ ಕ್ಷಣದಲ್ಲಿ (ಇಂಥದರಲ್ಲಿ) ಮರಣ ಬಂದದ್ದಾದರೆ ಮನುಷ್ಯನು ದೇವರಿಂದ ದೂರಾಗುವನು. ಯಾಕೆಂದರೆ ಇದ್ದಾಗ ಸದಾಕಾಲ ನನ್ನದು, ನನ್ನದು, ನಾನು, ಎಂದು ಪ್ರಪಂಚದಲ್ಲಿಯೇ ಆಸಕ್ತನಾಗಿರುವನು. (೫೦)

ತುವಾ ಭೋಗಿಲ್ಯಾ ಪುನರಾವೃತ್ತೀ। ಐಸೀ ಮಾಯಬಾಪೇ ಕಿತೀ।
ಸ್ತ್ರೀಕನ್ಯಾಪುತ್ರ ಹೋತೀ। ಲಕ್ಷಾನಲಕ್ಷ ॥೫೧॥

ಕರ್ಮಯೋಗೇ ಸಕಳ ಮಿಳಾಲೀ। ಯೇಕೆ ಸ್ಥಳೀ ಜನ್ಮಾಸೀ ಆಲೀ।
ತೇ ತುವಾ ಆಪುಲೀ ಮಾನಿಲೀ। ಕೈಸೀ ರೇ ಪಢತಮೂರ್ಖ ॥೫೨॥

ತುಝೋ ತುಜ ನವ್ಹೆ ಶರೀರ। ತೇಥೇ ಇತರಾಚಾ ಕೋಣ ವಿಚಾರ।
ಆತಾ ಯೇಕ ಭಗವಂತ ಸಾಚಾರ। ಧರೀ ಭಾವಾರ್ಥ ಬಳೇ ॥೫೩॥

ಯೇಕಾ ದುರ್ಭರಾ ಕಾರಣೇ। ನಾನಾ ನೀಚಾಂಚೀ ಸೇವಾ ಕರಣೇ।
ನಾನಾ ಸ್ತುತೀ ಆಣೇ ಸ್ತವನೇ। ಮರ್ಯಾದಾ ಧರಾವೀ ॥೫೪॥

ಜೋ ಅನ್ನ ದೇತೋ ಉದರಾಸೀ। ಶರೀರ ವಿಕಾವೇ ಲಾಗೇ ತ್ಯಾಸೀ।
ಮಾ ಜೇಣೇ ಘಾತಲೇ ಜನ್ಮಾಸೀ। ತ್ಯಾಸಿ ಕೈಸೇ ವಿಸರಾವೇ ॥೫೫॥

ಅಹರ್ನಿಶೀ ಜ್ಯಾ ಭಗವಂತಾ। ಸಕಲ ಜೀವಾಚೀ ಲಾಗಲೀ ಚಿಂತಾ।
ಮೇಘ ವರೂಷೆ ಜಯಾಚೀ ಸತ್ತಾ। ಸಿಂಧು ಮರ್ಯಾದಾ ಧರೀ ॥೫೬॥

ಭೂಮಿ ಧರಿಲೀ ಧರಾಧರೇ। ಪ್ರಗಟ ಹೋಇಜೆ ದಿನಕರೇ।
ಐಸೀ ಸೃಷ್ಟೀ ಸತ್ತಾಮಾತ್ರೇ। ಚಾಲವೀ ಜೋ ಕಾ ॥೫೭॥

ಐಸಾ ಕೃಪಾಳು ದೇವಾಧಿದೇವ। ನೇಣವೇ ಜಯಾಚೇ ಲಾಘವ।
ಜೋ ಸಾಂಭಾಳೀ ಸಕಳ ಜೀವ। ಕೃಪಾಳು ಪಣೇ ॥೫೮॥

ಐಸಾ ಸರ್ವಾತ್ಮಾ ಶ್ರೀರಾಮು। ಸಾಂಡೂನ ಧರಿತೀ ವಿಷಯಕಾಮು।
ತೇ ಪ್ರಾಣೀ ದುರಾತ್ಮೆ ಅಧಮು। ಕೇಲೇ ಪಾವತೀ ॥೫೯॥

ರಾಮೇವಿಣ ಜೆ ಜೆ ಆಸ। ತಿತುಕೀ ಜಾಣಾವೀ ನೈರಾಶ।
ಮಾಝೋ ಮಾಝೋ ಸಾವಕಾಶ। ಸೀಣಚಿ ಉರೇ ॥೬೦॥

ಮನುಷ್ಯನು ಇಲ್ಲಿಯವರೆಗೆ ಅನೇಕ ಜನ್ಮ ತಳೆದಿರುತ್ತಾನೆ. ಪ್ರತಿಯೊಂದು ಜನ್ಮದಲ್ಲಿ ತಾಯಿ-ತಂದೆ ಇದ್ದೇ ಇರುತ್ತಾರೆ. ಅಂದ ಮೇಲೆ ಇಲ್ಲಿಯವರೆಗೆ ಎಷ್ಟು ಜನತಾಯಿ ತಂದೆಗಳಾದರು, ಇದರಂತೆಯೇ ಹೆಂಡರು, ಮಕ್ಕಳು ಹೀಗೆ ಲೆಕ್ಕ ಹಾಕಿದರೆ ಲಕ್ಷಾನುಲಕ್ಷವಾಗುವದು. (೫೧) ಪೂರ್ವ ಕರ್ಮದ ಋಣಾನುಬಂಧ ದಿಂದ ಪ್ರಪಂಚದಲ್ಲಿಯು ಜನರು ಒಂದು ಸ್ಥಳದಲ್ಲಿ ಒಟ್ಟುಗೂಡುತ್ತಾರೆ. ಒಂದು ಸ್ಥಳದಲ್ಲಿ ಹುಟ್ಟುವರು. ಇವರೆಲ್ಲರೂ ಕೇವಲ ನಮ್ಮವರೇ ಎಂದು ತಿಳಿಯುವದು ಪಢತ (ಕಲಿತ) ಮೂರ್ಖರ ಲಕ್ಷಣವು. (೫೨) ನಮ್ಮದೆಂದು ಬಂದ ಈ ಶರೀರವು ಸಹ ನಿಜವಾಗಿ ತಿಳಿದು ನೋಡಿದರೆ ಇದು ನಮ್ಮದಲ್ಲ. ಅಂದಮೇಲೆ ಇತರರು ನಮ್ಮವರೆಂದು ಹೇಗೆ ಹೇಳಲಿಕ್ಕೆ ಬಂದೀತು ? ಒಬ್ಬನೇ ಒಬ್ಬ ಭಗವಂತನ ಹೊರತಾಗಿ ನಮ್ಮವನೆಂಬುವರಾರೂ ಇಲ್ಲ. ಭಾವ ಬಲ(ಭಕ್ತಿ)ದಿಂದ ಅವನನ್ನು ಗಟ್ಟಿಯಾಗಿ ಹಿಡಿದಿಟ್ಟುಕೊಳ್ಳಿರಿ.(೫೩) ಈ ವಿಶ್ವದಲ್ಲಿಯ ಎಲ್ಲವ್ಯವಹಾರವು ಭಗವಂತನ ಸತ್ತೆಯಿಂದ ನಡೆಯುತ್ತದೆ. ಅವನೇ ನಮ್ಮನ್ನು ಹುಟ್ಟಿಸುತ್ತಾನೆ. ಅವನೇ ನಮ್ಮನ್ನು ಸಂಬಾಳಿಸುತ್ತಾನೆ. ಅವನನ್ನು ಮರೆಯದೇ ಇರುವದೇ ಮನುಷ್ಯನ ಕರ್ತವ್ಯವಾಗಿದೆ. ಇಂಥವನೇ ಮನುಷ್ಯನೆನಿಸಿಕೊಳ್ಳಲಿಕ್ಕೆ ಯೋಗ್ಯನಾಗುವನು. ತೈತ್ತರೀಯ ಉಪನಿಷತ್‌ದ ಬ್ರಹ್ಮವಲ್ಲಿಯಲ್ಲಿ ಒಂದು ಮಂತ್ರವಿದೆ. "ಭೀಷಾsಸ್ಮಾದ್ ವಾತಃ ಪವತೆ, ಭೀಷೋದೇತಿ ಸೂರ್ಯಃ ಭೀಷಾಸ್ಮಾದ್ ಅಗ್ನಿಶ್ಚ, ಇಂದ್ರಶ್ಚ, ಮೃತ್ಯುಃ ಧಾವತಿ ಪಂಚಮ ಇತಿ. ಇದರ ಅರ್ಥ—ಇವನ ಭಯದಿಂದ ವಾಯು ಬೀಸುತ್ತಾನೆ. ಇವನಭಯದಿಂದ ಸೂರ್ಯ ಉದಯ ಹೊಂದುತ್ತಾನೆ" ಇವನ ಭಯದಿಂದ ಅಗ್ನಿ, ಇಂದ್ರ, ಐದನೆಯ ಮೃತ್ಯು ಸಹ ಓಡಾಡುವರು. (ತಮ್ಮ ತಮ್ಮ ಕಾರ್ಯ ಮಾಡುತ್ತಾರೆ.)ಹೀಗೆ ಆ ಮಂತ್ರದಲ್ಲಿ ಇರುತ್ತದೆ. ಈಶ್ವರನ ಸತ್ತೆಯಿಂದಲೇ ಎಲ್ಲಾ ವಿಶ್ವ ನಡೆಯುತ್ತದೆ ಎಂಬುದೇ ಇದರ ಅರ್ಥವಿರುವದೆಂದು ತಿಳಿಯಬೇಕು. ಈಗ ಶ್ರೀ ಸಮರ್ಥರ ನುಡಿಯನ್ನು ನೋಡಿರಿ. ಎಂದೂ ತುಂಬದಿದ್ದಂಥ ಈ ನಮ್ಮ ಹೊಟ್ಟೆಯ ಸಲುವಾಗಿ ಅನೇಕ (ಹಲಕಾ ಜನರ) ಕೀಳು ಜನರ ನೌಕರಿ ಚಾಕರಿಯನ್ನು ನಮಗೆ ಮಾಡುವ ಪ್ರಸಂಗ ಬರುತ್ತದೆ. ಆಗ ಆ ಹಲಕಾ ಮನುಷ್ಯನ ಸ್ತುತಿ ಸ್ತೋತ್ರ ಮಾಡಬೇಕಾಗುವದು. ಅವನ ಕೂಡ ಬಹಳ ತಗ್ಗಿ ನಮ್ರತೆಯಿಂದ ನಡೆಯಬೇಕಾಗುವದು. (೫೪) ಒಟ್ಟನಲ್ಲಿ ಮುಖ್ಯ ತಾತ್ಪರ್ಯವೆಂದರೆ, ಯಾವನು ನಮ್ಮ ಹೊಟ್ಟೆಗೆ ಅನ್ನ ಕೊಡುವನೋ ಅವನಿಗೆ ನಮ್ಮ ಶರೀರವನ್ನು ಮಾರಿಕೊಳ್ಳಬೇಕಾಗುತ್ತದೆ. ಅಂದ ಮೇಲೆ ನಮಗೆ ಜನ್ಮ ಕೊಟ್ಟು ಕಾಪಾಡುವ ಭಗವಂತನನ್ನೇ ಮರೆಯುವದು ಯೋಗ್ಯವಾಗುವದೇ ? (೫೫) ಅವನು ಎಂಥ ಕೃಪಾವಂತನೆಂಬುದನ್ನು ತಿಳಿಯಿರಿ. ನಮ್ಮ ಯೋಗಕ್ಷೇಮಕ್ಕಾಗಿ ಹಗಲು ರಾತ್ರಿ ಚಿಂತಿಸುತ್ತಾನೆ.ಅವನು ಸತ್ತಾದಿಂದಲೇ ಆಕಾಶದಲ್ಲಿ ಮೋಡ ಹುಟ್ಟಿ ಮಳೆ ಬೀಳುತ್ತದೆ. ಸಮುದ್ರ ತನ್ನ ಮರ್ಯಾದೆಯಲ್ಲಿಯೇ ಇರುತ್ತದೆ, (೫೬) ಆದಿಶೇಷನು ತನ್ನ ತಲೆಯಮೇಲೆ ಪೃಥ್ವಿಯನ್ನು ಸಮಾಧಾನದಿಂದ ಹೊತ್ತಿದ್ದಾನೆ. ಮತ್ತು ಸೂರ್ಯನು ಹೊತ್ತಿಗೆ ಸರಿಯಾಗಿ ಉದಯವಾಗುತ್ತಾನೆ. ಈ ಪ್ರಕಾರವಾಗಿ ಭಗವಂತನು ತನ್ನ ಸತ್ತಾದಿಂದ ಸರ್ವಸೃಷ್ಟಿಯ ಕಾರ್ಯ ನಡೆಸುತ್ತಾನೆ. (೫೭) ಇಂಥ ದೇವಾಧಿದೇವನು ಬಹು ಕೃಪಾಳು ಇರುವನು. ಇವನ ಚಾತುರ್ಯ (ಕೌಶಲ್ಯ)ಗಳು ನಮಗೆ ತಿಳಿಯುವದಿಲ್ಲ. ಸ್ವಯಂ ಕೃಪಾಳು ಮೂರ್ತಿಯಾದ ದೇವದೇವತೆಗಳಿಗೆ ಒಡೆಯನಾದ ಭಗವಂತನು ಸರ್ವಜೀವರ ಸಂರಕ್ಷಣೆ ಮಾಡುತ್ತಾನೆ.(೫೮) ಇಂಥ ಕೃಪಾಳು ಭಗವಂತನನ್ನು ಮರೆತು ಬಿಟ್ಟು, ವಿವೇಕಶೂನ್ಯನಾದ ಮನುಷ್ಯನು ದೃಶ್ಯಭೋಗದ ಅಥವಾ ಇಂದ್ರಿಯ ಸುಖದ ಬೆನ್ನು ಹತ್ತುತ್ತಾನೆ. ಹೀಗಿರುವವರಿಗೆ ಎಂದೂ ಸಮಾಧಾನದೊರಕುವದಿಲ್ಲ.ಹೀಗೆ ಎಲ್ಲರಅಂತರ್ಯಾಮದಲ್ಲಿ ಆತ್ಮರೂಪದಿಂದ ಶೋಭಿಸುವಂಥ ಶ್ರೀರಾಮದೇವನನ್ನು ಬಿಟ್ಟು ಕೇವಲ ದೇಹ ಸುಖದ ಆಸೆಗಾಗಿ ವಾಸನಾ ಯುಕ್ತರಾಗುವ ಜನರು ಹೀನರು, ದುರಾತ್ಮರು, ಎಂದು ತಿಳಿಯಬೇಕು. ಇಂಥವರು ತಮ್ಮ ಕೃತ ಕರ್ಮದ ಫಲವನ್ನು ಭೋಗಿಸುತ್ತಾರೆ. (೫೯) ಒಬ್ಬನೇಒಬ್ಬ ಭಗವಂತನ ಹೊರತು ಯಾವ ಯಾವುದನ್ನು ಇಚ್ಛಿಸುವೆವೋ ಅವುಗಳಿಂದ ಕೊನೆಗೆ ನಿರಾಶೆಯೇ ನಿರ್ಮಾಣ ಹೊಂದುವದು. ನನ್ನದು, ನನ್ನದು ಎಂದೇ ವ್ಯರ್ಥ ಶ್ರಮ ಮಾತ್ರ ಕೊನೆಗೆ ಆಗುವದು. (೬೦)

ಜಯಾಸ ವಾಟೆ ಸೀಣ ವ್ಹಾವಾ । ತೇಣೇ ವಿಷಯೋ ಚಿಂತೀತ ಜಾವಾ ।
ವಿಷಯೋ ನ ಮಿಳತಾ ಜೀವಾ। ತಗಬಗ ಸುಟೇ ॥೬೧॥

ಸಾಂಡೂನ ರಾಮು ಆನಂದ ಘನ। ಜ್ಯಾಚೇ ಮನೀ ವಿಷಯು ಚಿಂತನ ।
ತ್ಯಾಸೀ ಕೈಚೇ ಸಮಾಧಾನ । ಲೋಲಂಗತಾಸೀ ॥೬೨॥

ಜಯಾಸ ವಾಟೆ ಸುಖಚಿ ಅಸಾವೇ । ತೇಣೇ ರಘುನಾಥ ಭಜನೀ ಲಾಗಾವೇ ।
ಸ್ವಜನ ಸಕಳಹಿ ತ್ಯಾಗಾವೆ । ದುಃಖಮೂಳ ಜೇ ॥೬೩॥

ಜೇಥೇ ವಾಸನಾ ಝೊಂಬೋನ ಪಡೆ । ತೇಣೇಚಿ ಅಪಾಯು ದುಃಖ ಜಡೇ।
ಮ್ಹಣೌನೀ ವಿಷಯುವಾಸನಾ ಮೋಡೆ। ತೋ ಯೇಕ ಸುಖೀ ॥೬೪॥

ವಿಷಯು ಜನಿತ ಜೇ ಜೇ ಸುಖ । ತೇಥೇಚಿ ಹೋತೇ ಪರಮು ದುಃಖ ।
ಪೂರ್ವಿ ಗೋಡ ಅಂತೀ ಶೋಕ । ನೇಮಸ್ತ ಆಹೇ ॥೬೫॥

ಗಳ ಗಿಳಿತಾ ಸುಖವಾಟೆ । ಮೊಢೂನ ಘೇತಾ ಘಸಾ ಫಾಟೇ ।
ಕಾ ತೇ ಬಾಪುಡೇ ಮೃಗ ಆಪಟೆ। ಚಾರಾ ಘೇಊನ ಪಳತಾ ॥೬೬॥

ತೈಸೀ ವಿಷಯು ಸುಖಾಚೀ ಗೋಡೀ । ಗೋಡ ವಾಟೆ ಪರೀ ತೇ ಕುಡೀ ।
ಮ್ಹಣೌನಿಯಾ ಆವಡೀ । ರಘುನಾಥೀ ಧರಾವೀ ॥೬೭॥

ಐಕೋನಿ ಬೋಲೆ ಭಾವಿಕ । ಕೈಸೇನಿ ಘಡೆ ಜೀ ಸಾರ್ಥಕ ।
ಸಾಂಗಾ ಸ್ವಾಮೀ ಯುಮುಲೋಕ । ಚುಕೆ ಜೇಣೇ ॥೬೮॥

ದೇವಾಸೀ ವಾಸ್ತವ್ಯ ಕೋಠೇ । ತೋ ಮಜ ಕೈಸೇನಿ ಭೇಟೆ ।
ದುಃಖಮೂಳ ಸಂಸಾರ ತುಟೆ । ಕೋಣೆಪರೀ ಸ್ವಾಮೀ ॥೬೯॥

ಘಡಪುಡೀ ಭಗವತ್ಪ್ರಾಪ್ತೀ । ಹೋಊನ ಚುಕೆ ಅಧೋಗತೀ ।
ಐಸಾ ಉಪಾಯು ಕೃಪಾಮೂರ್ತೀ । ಮಜದೀನಾಸ ಕರಾವಾ ॥೭೦॥

ವಕ್ತಾ ಮ್ಹಣೆ ಹೋ ಯೇಕ ಭಾವೇ । ಭಗವದ್ಭಜನ ಕರಾವೇ ।
ತೇಣೇ ಹೋಈಲ ಸ್ವಭಾವೇ ಸಮಾಧಾನ ॥೭೧॥

ನಮ್ಮ ಶ್ರಮ ವ್ಯರ್ಥ ಹೋದರೂ ಅಡ್ಡಿ ಇಲ್ಲ ಎಂದು ಯಾರಿಗೆ ಅನಿಸುವದೋ ಅವರು ದೃಶ್ಯ ಸುಖದ ಬೆನ್ನು ಹತ್ತಿ ಅಡ್ಡ ಹಾದಿ ಹಿಡಿಯಬೇಕು. ಸುಖ ಕೊಡುವ ವಸ್ತು ದೊರಕದಿದ್ದಾಗ ಜೀವ ತಳಮಳ ಗೊಳ್ಳಹತ್ತುವದು. (೬೧) ಒಳಗೂ ಹೊರಗು ಸರ್ವತ್ರದಲ್ಲಿಯೂ ಆನಂದದಿಂದ ತುಂಬಿರುವ ರಾಮನನ್ನು ಬಿಟ್ಟುಕೊಟ್ಟು ಇಂದ್ರಿಯ ಸುಖದ ಬಗ್ಗೆ ಸದಾ ಚಿಂತಿಸುವ ವಿಷಯಾಸಕ್ತನಿಗೆ, ದೇಹದ ಮೇಲೆ ಮಮತೆ ಇಟ್ಟು ಅದರ ಸುತ್ತು ಮುತ್ತು ಗೊಂದಲಗೆಟ್ಟು ತಿರುಗುವವನಿಗೆ ನಿಜ ಸಮಾಧಾನ ಎಂದೂ ಸಿಗುವದಿಲ್ಲ. (೬೨) **ತಾತ್ಪರ್ಯ:-** ನಮಗೆ ನಿಜವಾದ ಸುಖ ಸಿಗಬೇಕೆಂದು ಯಾರಿಗೆ ಅನಿಸುವದೋ ಅವರು ಭಗವಂತನ (ರಘುನಾಥನ) ಭಜನೆಯಲ್ಲಿ ತೊಡಗಬೇಕು. ಮತ್ತು ದುಃಖಕ್ಕೆ ಮೂಲ ಕಾರಣರಾಗಿರುವಂಥ ಎಲ್ಲ ಸ್ವಜನರನ್ನು ಹಿಂದಕ್ಕೆ ಸರಿಸಬೇಕು. (ಅವರ ಮೇಲಿನ ಮೋಹ ಬಿಟ್ಟು ಅನಾಸಕ್ತನಾಗಬೇಕು). ಭಗವಂತನನ್ನು ಸದಾ ನೆನೆಯಬೇಕು(೬३) ಈಗ ಶ್ರೀಸಮರ್ಥರು ವಾಸನಾದ ಸ್ವಭಾವವನ್ನು ಹೇಳುವರು-ವಾಸನಾ ಇದು ದೃಶ್ಯಕ್ಕೆ ಕಾಣುವಂಥದ್ದಕ್ಕೆಅಂಟಿಕೊಳ್ಳುತ್ತದೆ.ಮೊದಲು ಸುಖಕೊಡುತ್ತದೆ.ಆದರೆ ಕೊನೆಗೆದುಃಖದಲ್ಲಿ ಒಮ್ಮೆಲೇನೂಕಿಬಿಡುತ್ತದೆ.ಆದುದರಿಂದಯಾವಾಗಲೂ ದೃಶ್ಯದ ಮೇಲೆ ಪ್ರೇಮವಿಡದೇ ಭಗವಂತನಲ್ಲಿ ಪ್ರೇಮವಿಡಬೇಕು. ಯಾವ ದೃಶ್ಯ ವಸ್ತುವಿನ ಮೇಲೆ ವಾಸನಾ ಮುಗಿಬೀಳುವದೋ ಅಲ್ಲಿ ಜೀವಕ್ಕೆ ಅಪಾಯವಾಗುವದು. ದುಃಖವೇ ಅದರ ಪದರಿನಲ್ಲಿ ಬೀಳುವದು. ಅಂತೆಯೇ ಯಾರ ದೇಹ ಸುಖದ ವಾಸನಾ ನಷ್ಟವಾಗಿರುವದೋ ಅಂಥವನೊಬ್ಬ ಮಾತ್ರ ನಿಜವಾದ ಸುಖಿಯು. (೬೪) ದೇಹದಿಂದ ಯಾವ ಯಾವ ಸುಖಗಳನ್ನು ತೆಗೆದುಕೊಳ್ಳಲಿಕ್ಕೆ ಬರುವದೋ ಆ,ಆ, ಸುಖವು ದುಃಖವನ್ನೇ ನಿರ್ಮಾಣ ಮಾಡುವದು. ಪ್ರಾರಂಭದಲ್ಲಿ ಸಿಹಿ (ಸುಖ) ಎನಿಸಿದ್ದು ಕೊನೆಯಲ್ಲಿ ಕಹಿ (ದುಃಖ) ಯಾಗಿ ಪರಿಣಮಿಸುತ್ತದೆ. ಇದೊಂದು ಶತಃಸಿದ್ಧ ನಿಯಮವು. (೬೫) ಮೀನು ಹಿಡಿಯುವದರ ಸಲುವಾಗಿ ಮೀನಿನ ಬಲೆಯಲ್ಲಿಯ ಗಾಳಕ್ಕೆ ಕಣಕದ ಉಂಡೆ (ಮುದ್ದಿ)ಯನ್ನು ಹಚ್ಚಿರುತ್ತಾರೆ. ಗಾಳ ನುಂಗುವಾಗ ಮೀನಕ್ಕೆ ಸುಖವೆನಿಸುತ್ತದೆ. ಆದರೆ ಗಾಳವನ್ನು ಮೀನುಗಾರ ಎಳೆದುಕೊಂಡ ಕೂಡಲೇ ಮೀನದ ಗಂಟಲು ಹರಿಯುತ್ತದೆ. ಅಥವಾ ಹಸಿರು ಹುಲ್ಲಿನ ಮೇಲೆ ಪ್ರೇಮವಿರುವ ಚಿಗರಿ ಹುಲ್ಲನ್ನು ಬಾಯಲ್ಲಿ ಹಿಡಿದು ಓಡಾಡುವಾಗ ಬಲೆಯಲ್ಲಿ ಬೀಳುತ್ತದೆ. ಅಥವಾ ಕಲ್ಲಿನ ಬಂಡೆಗೆ (ಎಡವಿ) ಮುಗ್ಗರಿಸಿ ಬೀಳುತ್ತದೆ. ಇದರಿಂದಾಗಿ ಬಾಯಿ ಒಡೆದುಕೊಳ್ಳುತ್ತದೆ. (೬೬) ಇದರಂತೆಯೇ ದೇಹ ಸುಖದ ಸವಿಯು ಅವಸ್ಥೆ ಇರುತ್ತದೆ. ಮೊದಲುಬಲು ಸವಿ ಎನಿಸಿದರೂ ಕೊನೆಯಲ್ಲಿ ದುಃಖತಾಪವಾಗಿರುತ್ತದೆ. ಇದಕ್ಕಾಗಿ ಮನುಷ್ಯನಾದವನು ಭಗವಂತನ ಪ್ರೇಮ ಗಳಿಸಬೇಕು. ಇದೇ ಉತ್ತಮ ಉಪಾಯವು. (೬೭) ಇಲ್ಲಿಯವರೆಗಿನ ಗ್ರಂಥವೆಂದರೆ (ನಾನು ಇಲ್ಲಿಯವರೆಗೂ ನಿಮಗೆ ತಿಳಿಸಿ ಹೇಳಿದ ವಿಷಯವೆಂದು ತಿಳಿಯಬೇಕು) "ಅಥಾತೋ ದೇವ ಜಿಜ್ಞಾಸಾ" ಎಂದು ತಿಳಿಯಬೇಕು. ಶ್ರೋತೃವಿಗೆ ಭಗವಂತನ ಬಗ್ಗೆ ಜಿಜ್ಞಾಸೆ ಅಂದರೆ ತಿಳಿಯುವ ಇಚ್ಛೆ ಹುಟ್ಟಿತು. ಇನ್ನು ಮೇಲೆ ಆ ಭಗವಂತ ಹೇಗಿರುವನು? ಅವನು ಎಲ್ಲಿರುವನು? ಅವನ ಕೃಪೆ ಪಡೆಯುವ ಬಗೆಯಾವುದು? ಅವನ ಭಜನೆಯನ್ನು ಹೇಗೆ ಮಾಡುವದು? ಇತ್ಯಾದಿ ಪ್ರಶ್ನೆಗಳಿಗೆ ಶ್ರೀಸಮರ್ಥರು ಕೊಟ್ಟ ಉತ್ತರ ಗಮ್ಮತ್ತಿನ ಹಾಗೂ ತಮಾಷೆಯದಾಗಿದೆ—ಇದನ್ನೆಲ್ಲ ಕೇಳಿದ ಭಾವಿಕ ಶ್ರೋತಾ ವಿಚಾರಿಸುತ್ತಾನೆ. ಸ್ವಾಮೀ ಸಾರ್ಥಕವು ಹೇಗೆ? ಇದು ಯಾವ ಉಪಾಯದಿಂದ ಒದಗಿ ಬರುತ್ತದೆ? ಮತ್ತು ಯಾವ ಉಪಾಯದಿಂದ ಯಮಲೋಕ ತಪ್ಪುವದು? (೬೮) ದೇವರೆಲ್ಲಿರುತ್ತಾನೆ? ನನಗೆ ಅವನ ಭೆಟ್ಟಿ ಹೇಗೆ ಆದೀತು? ಈ ದುಃಖ ಮೂಲ ಸಂಸಾರವು ಯಾವ ಉಪಾಯದಿಂದ ಬಿಡುತ್ತದೆ? (೬೯) ಅಯ್ಯಾ, ಕೃಪಾ ಮೂರ್ತಿಯೇ, ನಿಶ್ಚಿತವಾಗಿ (ಖಾತ್ರಿಯಿಂದ) ಭಗವಂತನ ಪ್ರಾಪ್ತಿಯಾಗಿ ನನ್ನ ಅಧೋಗತಿ ತಪ್ಪುವಂತ ಉಪಾಯವನ್ನು ಈ ದೀನನಿಗೆ ಹೇಳಬೇಕು" (೭೦) ಶ್ರೋತೃವಿನ ಈ ಮಾತನ್ನು ಕೇಳಿ ವಕ್ತಾ ಅನ್ನುತ್ತಾನೆ, "ಆಗದೀ ಏಕ ಮನಸ್ಸಿನಿಂದ ಒಂದೇ ನಿಷ್ಠೆಯಿಟ್ಟು ಭಗವಂತನ ಭಜನೆ ಮಾಡಬೇಕು. ಹೀಗೆ ಮಾಡುವದರಿಂದ ತಾನೇ ತಾನಾಗಿ ಯಾವ ಕಷ್ಟವಿಲ್ಲದೇ ಶಾಂತಿ, ಸಮಾಧಾನ ಲಾಭವಾಗುವದು." (೭೧)

ಕೈಸೇ ಕರಾವೇ ಭಗವದ್ಭಜನ । ಕೋಣೇ ಠೇವಾವೇ ಹೇ ಮನ ।
ಭಗವದ್ಭಜನಾಚೇ ಲಕ್ಷಣ । ಮಜ ನಿರೋಪಾವೇ ॥೬೨॥

ಐಸಾ ಮ್ಲಾನವದನೇ ಬೋಲಿಲೇ। ಧರಿಲೆ ಸದೃಢ ಪಾಉಲೇ ।
ಕಂಠ ಸದ್ಗದಿತ ಗಳಾಲೇ । ಅಶ್ರುಪಾತ ದುಃಖೇ ॥೬೩॥

ದೇಖೋನ ಶಿಷ್ಯಾಚೀ ಅನನ್ಯತಾ । ಭಾವೇ ವೋಳಲಾ ಸದ್ಗುರು ದಾತಾ ।
ಸ್ವಾನಂದ ತುಂಬಳೇಲ ಆತಾ । ಪುಢಿಲೇ ಸಮಾಸೀ ॥೬೪॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
ವೈರಾಗ್ಯನಿರೂಪಣ ನಾಮ ಸಮಾಸ ದಶಮ

ದಶಕ ತೀಸರಾ ಸಮಾಪ್ತ

ಪುನಃ ಶ್ರೋತೃವು ವಿನೀತನಾಗಿ ಕೇಳುತ್ತಾನೆ."ಭಗವಂತನ ಭಜನೆ ಹೇಗೆ ಮಾಡಬೇಕು?ಮನಸ್ಸನ್ನು ಎಲ್ಲಿನಿಲ್ಲಿಸಬೇಕು? ಎಲ್ಲಿ ತೊಡಗಿಸಬೇಕು?ಭಗವಂತನ ಭಜನೆಯ ಲಕ್ಷಣಗಳಾವವು? ಇದೆಲ್ಲವನ್ನು ನನಗೆ ತಿಳಿಯುವಂತೆ ಹೇಳಬೇಕು"(೬೨) ದೀನ ಮುಖದಿಂದ ಶಿಷ್ಯನು ಕೈಮುಗಿದು ಹೀಗೆ ಪ್ರಾರ್ಥಿಸಿಕೊಂಡನು. ಮತ್ತು ಶ್ರೀ ಸದ್ಗುರುವಿನ ಚರಣ ಕಮಲವನ್ನು ಗಟ್ಟಿಯಾಗಿ ಹಿಡಿದುಕೊಂಡನು. ಆವನ ಕಂಠ ತುಂಬಿ ಬಂದಿತು. ಹಾಗೂ ಕಣ್ಣಿನಿಂದ ದುಃಖಾಶ್ರುಗಳು ಉದುರ ಹತ್ತಿದವು. (೬೩) ಶಿಷ್ಯನ ಈ ಅನನ್ಯ ಭಾವ ನೋಡಿ ಸದ್ಗುರು ಸ್ವಾಮಿಯು ಬಹಳ ಆನಂದಪಟ್ಟನು. ಮತ್ತು ಶಿಷ್ಯನಿಗೆ ಪ್ರಸನ್ನನಾದನು. ಇನ್ನು ಮುಂದಿನ ಸಮಾಸದಲ್ಲಿ ಸ್ವಾನಂದಾಮೃತದ ಅಮೋಘ ಪ್ರವಾಹ ಹರಿಯುವದು. (೬೪)

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಮೂರನೆಯ ದಶಕದೊಳಗಿನ "ವೈರಾಗ್ಯ ನಿರೂಪಣೆ" ಎಂಬ ಹೆಸರಿನ ಹತ್ತನೆಯ ಸಮಾಸವು ಮುಗಿದುದು.

೦ ೦

# ದಶಕ ೪. ನವವಿಧಾ ಭಕ್ತಿ

ದಾಸಬೋಧವನ್ನು ಪ್ರಾರಂಭಿಸುವಾಗಲೇ "ಇದರಲ್ಲಿ ವಿಶದವಾಗಿ ಭಕ್ತಿ ಮಾರ್ಗದ ಬಗೆಗೆ ಹೇಳಿರುತ್ತದೆ" ಎಂದು ಶ್ರೀ ಸಮರ್ಥರು ಅಂದಿರುವರು. ಮೂರನೆಯ ದಶಕದ ಕೊನೆಯಲ್ಲಿ ವಕ್ತಾ ಅನ್ನುವರು. "ಎಲ್ಲರೂ ಏಕಭಾವದಿಂದ ಭಗವಂತನ ಭಜನೆ ಮಾಡಿರಿ" ಎಂದು ಪುನಃ ಹೇಳುವರು. ಈ ನಾಲ್ಕನೆಯ ದಶಕದಲ್ಲಿ ಭಕ್ತಿ ಎಂದರೆ ಏನು? ಮತ್ತು ಭಕ್ತಿಯನ್ನು ಹೇಗೆ ಮಾಡಬೇಕೆಂಬುದರ ಬಗ್ಗೆ ತಿಳಿಸಿಕೊಡುತ್ತಾರೆ. ವ್ಯಾಕರಣ ಶಾಸ್ತ್ರದಂತೆ ಭಕ್ತಿ ಎಂಬ ಶಬ್ದವು ಮೂರು ತರದಿಂದ ಸಿದ್ಧವಾಗುತ್ತದೆ (೧) ಭಜನಂ ಭಕ್ತಿಃ (೨) ಭಾಗೋಭಕ್ತಿಃ (೩)ಭಂಜನಂ ಭಕ್ತಿಃ ಇನ್ನೂ ಒಂದು ಪ್ರಕಾರದಿಂದ ಭಕ್ತಿ ಶಬ್ದ ಸಿದ್ಧವಾಗುತ್ತದೆ– (೪)"ಭಜ್‌ಸೇವಾಯಾಮ್–ಸ್ತ್ರೀಯಾಂಕ್ತಿನ್॥ ಭಕ್ತಿ" ಶ್ರೀಸಮರ್ಥರು "ಈಶ್ವರನ ಭಕ್ತಿ ಮಾಡು" ಎಂದು ಹೇಳುವಾಗಲೆಲ್ಲ, ಈ ನಾಲ್ಕೂ ಪ್ರಕಾರದ ಅರ್ಥದಿಂದ ಹೇಳಿದ್ದಾರೆಂದು ಗೊತ್ತಾಗುತ್ತದೆ.

**ಒಂದನೆಯದರ ಅರ್ಥ:-** ಭಜನೆಯೆಂದರೆ ರಸಾಸ್ವಾದನೆ ಮಾಡುವದು. ರಸ ತೆಗೆದುಕೊಳ್ಳುವದು, (ಕುಡಿಯುವದು) "ಈಶ್ವರನ ಭಕ್ತಿ ಮಾಡು" ಎಂದರೆ ನೀನು ಈಶ್ವರನ ರಸ ತೆಗೆದುಕೋ, ಭಗವಂತನ ಮಹಿಮಾ ತಿಳಿದುಕೋ, ಅವನ ಲೀಲಾ ಕೇಳುವವನಾಗು. ಅವನ ಗುಣ ಶೋಧ ಮಾಡು. ಮತ್ತು ಅವನ ರೂಪ ದರ್ಶನ ಪಡೆ. ನಂತರ ಸಂತರ ಸಹವಾಸದಲ್ಲಿ ಪ್ರವಚನ, ಕೀರ್ತನ, ಕಥಾಶ್ರವಣ, ಗುಣಗಾಯನ, ಕೇಳಿ, ಮಾಡಿ, ಮನದಲ್ಲಿ ಪುನಃ ಪುನಃ ಭಗವಂತನನ್ನು ಸ್ಮರಣಕ್ಕೆ ತಂದುಕೊಂಡು ಅದರ ರಸಾ ಸ್ವಾದ ಮಾಡುವವನಾಗು. ಇದಕ್ಕೆ ಭಕ್ತಿ ಎನ್ನುತ್ತಾರೆ.

**ಎರಡನೆಯದರ ಅರ್ಥ:-** ಭಾಗ ಎಂದರೆ ಅಂಶ, ಅವಯವ, ಭಾಗ, "ನೀನು ಈಶ್ವರನ ಭಕ್ತಿ ಮಾಡು" ಅಂದರೆ "ನೀನು ಈಶ್ವರನ ಅಂಶನಾಗು, ಈಶ್ವರನ ಭಾಗನಾಗು, ಈಶ್ವರನ ಪಾಲುದಾರನಾಗು, ವಾಸ್ತವಿಕವಾಗಿ ಜೀವವು ಸ್ವತಃ ಈಶ್ವರನ ಅಂಶವೇ ಇರುವದು. ಆದರೂ ಜೀವಕ್ಕೆ ಹೀಗೆ ಹೇಳುವದರ ಸ್ವಾರಸ್ಯವೇನು?ಇದರ ಮರ್ಮವುಜೀವವು ಮೂಲದಲ್ಲಿ ಈಶ್ವರನಅಂಶವಾಗಿದ್ದರೂ ಅವಿದ್ಯೆಯ ಆವರಣದಿಂದ ಅದು ಈಶ್ವರನನ್ನು ಮರೆತಿರುವದು. ಅಂದರೆ ತಾನು ಯಾರ ಅಂಶವೆಂಬುದನ್ನು ಮರೆತಿರುವದು. ತನ್ನ ಸ್ವರೂಪದ ವಿಸ್ಮರಣದಿಂದ "ನಾನು ಈಶ್ವರನವನಾಗಿದ್ದೇನೆ" ಎಂದು ಅನ್ನುವದರ ಬದಲಾಗಿ, ನಾನು ದೇಹದವನು, ಪ್ರೀತಿಯ ಜನರವನು, ಧನದವನು, ಪ್ರಪಂಚದವನು" ಹೀಗೆ ಅದು ಅನ್ನುತ್ತದೆ. ಮತ್ತು ಅದೇ ರೀತಿ ಅದರ ನಡೆ ನುಡಿ ಇರುತ್ತದೆ. ಈಶ್ವರನಿಗಿಂತ ನಾನೊಬ್ಬ ಬೇರೆಯವನು ಎಂಬ ಭಾವನೆ ಜೀವಕ್ಕೆ ಬಂದದ್ದರಿಂದಲೇ ಅದು ಮಾಯೆಯ ಜಾಲದಲ್ಲಿ ಬೀಳುತ್ತದೆ. ಅಥವಾ ಮಾಯೆಯು ಆವರಿಸುತ್ತದೆ. ಆದರಿಂದ ವಿನಾಕಾರಣ ದುಃಖ ಭೋಗಿಸುತ್ತದೆ. ನಾನು ಜಗ (ವಿಶ್ವ, ಸೃಷ್ಟಿ)ದವನಲ್ಲ. ಭಗವಂತನವನಾಗಿರುವೆನೆಂಬ ನಿಜವಾದ ತಿಳುವಳಿಕೆಯ ಅರಿವು ನಿರ್ಮಾಣ ವಾಗುವದೇ ಭಕ್ತಿಯನಿಸುತ್ತದೆ.

**ಮೂರನೆಯದರ ಅರ್ಥ:–** ಭಂಜನ ಅಂದರೆ ಒಡೆಯುವದು, ಮುರಿಯುವದು, ನಾಶಮಾಡುವದು ಸೋಲಿಸುವದು, ಹಿಂದಕ್ಕಟ್ಟುವದು, ನೀನು ಈಶ್ವರನ ಭಕ್ತಿ ಮಾಡು ಅಂದರೆ ನಿನ್ನ ಆನಂದಕ್ಕೆ ಅಡ್ಡಿಯಾಗುವ ಅವಿದ್ಯಾ, ಅಹಂಕಾರ ಮತ್ತು ವಾಸನಾ ಇವುಗಳನ್ನು ಭಗವಂತನ ಶಕ್ತಿಯಿಂದ ಇಲ್ಲದಂತೆ ಮಾಡು. ಭಕ್ತಿ ಮತ್ತು ಶಕ್ತಿ ಇವು ಒಂದಕ್ಕೊಂದು ಹೊಂದಿಕೊಂಡೇ ಇರುತ್ತವೆ. ಜಗತ್ತಿನಲ್ಲಿ ವಿದ್ಯಾ ಮತ್ತು ಅವಿದ್ಯಾ ಈ ಎರಡು ಶಕ್ತಿಗಳು ಕೆಲಸ ಮಾಡುತ್ತವೆ. ಅವಿದ್ಯೆಯ ಹೊಟ್ಟೆಯಲ್ಲಿ ಜೀವಿಸುವ ಜೀವವು ಸ್ವಂತದ ಶಕ್ತಿಯಿಂದ ಈ

ಅವಿದ್ಯೆಯನ್ನು ನಾಶಗೊಳಿಸುವದು ಅಥವಾ ಹೊಡೆದೋಡಿಸುವದು ಶಕ್ಯವೇ ಇಲ್ಲ. ಇದನ್ನು ಹೊಡೆದೋಡಿಸುವದಕ್ಕಾಗಿ ವಿದ್ಯಾಶಕ್ತಿಗೆ ಶರಣುಹೋಗುವದು, ಅವಶ್ಯವಿರುವದು. ಭಗವಂತನಿಗೆ ಶರಣುಹೋದದ್ದಾದರೆ ಮಾತ್ರ ವಿದ್ಯಾಶಕ್ತಿ ಕೂಡಲೇ ವಶವಾಗುವದು. ಅದಕ್ಕಾಗಿ ಭಗವಂತನ ಚರಣದಲ್ಲಿ ನಮ್ಮ ಅಹಂದ ಬಲಿ ಕೊಡಬೇಕಾಗುವದು. ಇದಕ್ಕೆ ಭಕ್ತಿ ಎನ್ನುವರು.

**ನಾಲ್ಕನೆಯದರ ಅರ್ಥ:**— ಸೇವೆ ಅಂದರೆ ಆಶ್ರಯಪಡೆಯುವದು. ಪಥಕರಿಸುವದು, ಒಪ್ಪಿಕೊಳ್ಳುವದು, ಅಂಗೀಕರಿಸುವದು, ಅವಲಂಬಿಸುವದು, ಆಧಾರ ಹೊಂದುವದು ಅಂತಾ ಆಗುವದು. ನೀನು ಈಶ್ವರನ ಭಕ್ತಿ ಮಾಡು ಅಂದರೆ ಭಗವಂತನಿಗೆ "ನೀನು ನನ್ನ ಸ್ವಾಮಿ ಒಡೆಯ" ಎಂದು ತಿಳಿದು ಅವನ ಆಶ್ರಯ ಪಡೆ. ತನ್ನವನೆಂದು ಅವನನ್ನು ಸ್ವೀಕಾರ ಮಾಡುವದು, ಒಪ್ಪಿಕೊಳ್ಳುವದು ಅವನ ಮೇಲೆ ಭಾರ ಹಾಕಿ ಜೀವನವನ್ನು ನಡೆಸುವದು, ಈ ಯಾವತ್ತೂ ವಿಶ್ವವು ಈಶ್ವರನ ಒಡೆತನದಲ್ಲಿದೆ. ನಾನು ಈ ವಿಶ್ವದಲ್ಲಿ ಜನಿಸಿದೆನೆಂದು ನಾನು ನನ್ನ ತನು. ಮನ, ಧನ. ಆಪ್ತ ಇಷ್ಟ, ಸಂಪತ್ತಿ ಮತ್ತು ಐಶ್ವರ್ಯ ಇದೆಲ್ಲವೂ ಆ ಈಶ್ವರನ ಒಡೆತನದ್ದಾಗಿದೆ. ನಾನು ಅವನ ನೌಕರ ಅಥವಾ ವಿಶ್ವಸ್ಥನಾಗಿರುವೆನು. ಅರ್ಥಾತ್ ಜಗತ್ತಿನ ವ್ಯವಹಾರದಲ್ಲಿ ನನ್ನ ಪಾಲಿಗೆ ಬಂದ ಕೆಲಸವನ್ನು ಒಡೆಯನಿಗೆ ಈಶ್ವರನಿಗೆ ಪ್ರೀತಿಯಾಗುವಂತೆ ಮಾಡುತ್ತ ಹೋಗುವದೇ ಭಗವಂತನ ಸೇವೆಯಾಗಿರುವದು. ಈ ಬಗೆಯಿಂದ ಸೇವೆ ಮಾಡುವಾಗ ನನ್ನ ಸೇವೆಗೆ ಇಂಥದೇ ಪ್ರತಿಫಲ ಸಿಗಬೇಕೆಂದು ಹಟ, ಆಗ್ರಹ ಹಿಡಿಯದೇ ಯಾವ ಪ್ರತಿಫಲ ಸಿಗುವದೋ ಅದರಿಂದಲೇ ಸಮಾಧಾನ ಹೊಂದುವದಕ್ಕೆ ಭಕ್ತಿಯೆಂದು ಅನ್ನುವರು. ಭಕ್ತಿಯಲ್ಲಿ ಜ್ಞಾನವಿರುವದು. ಹೇಗೆಂದರೆ, "ನಾನು ಅವನ (ಪರಮಾತ್ಮನ)ವನೇ ಇರುವೆನು. ಈ ಜ್ಞಾನವಾಗದ ಹೊರತು ಜೀವನವು ಅವನ ಅಂದರೆ ಭಗವಂತನ (ನಾದಿಗೆ) ಬೆನ್ನು ಹತ್ತಲಾರದು. ಭಕ್ತಿಯಲ್ಲಿ ಪ್ರೇಮವಿದೆ. ಹೇಗೆಂದರೆ, ಭಗವಂತನ ವಿಷಯದಲ್ಲಿ ಪ್ರೀತಿ ಉತ್ಪನ್ನವಾದ ಮೇಲೆ ಜೀವವು ಪುನಃ ಪುನಃ ಭಗವಂತನ ಚಿಂತನೆಯನ್ನೇ ಮಾಡಹತ್ತುತ್ತದೆ. ಭಕ್ತಿಯಲ್ಲಿ ಕರ್ಮವಿದೆ. ಹೇಗೆಂದರೆ, ಭಗವಂತನ ಸಲುವಾಗಿ ಏನಾದರೂ ಮಾಡಲೇಬೇಕೆಂಬ ಹಂಬಲದಿಂದಾಗಿ ಆ ರೀತಿ ಮಾಡಿದಾಗಲೇ ಜೀವಕ್ಕೆ ಸಮಾಧಾನವೆನಿಸುವದು. ಭಕ್ತಿಯಲ್ಲಿ ಯೋಗ ಸಹ ಇರುತ್ತದೆ. ಹೇಗೆಂದರೆ ನಿಜವಾದಪ್ರೇಮದಿಂದ ಭಗವಂತನಚಿಂತನ ಮಾಡುತ್ತಮಾಡುತ್ತಜೀವವು ಅದರಲ್ಲಿಯೇ ಸಹಜವಾಗಿಧಾರಣ ಮತ್ತು ಧ್ಯಾನ ಸಾಧಿಸುವದು. ಇದು ಇಷ್ಟಕ್ಕೆ ಮುಗಿಯುವದಿಲ್ಲ. ಇದರಿಂದ ಭಕ್ತನಿಗೂ ಸಹ ಸಿದ್ಧಿಯು ಅನಾಯಾಸವಾಗಿ ವಶವಾಗುವದು. ಈ ರೀತಿಯಿಂದಾಗಿ ಆಧ್ಯಾತ್ಮ ಜೀವನದ ಸರ್ವ ಅಂಗಗಳೂ ಭಕ್ತಿಯಲ್ಲಿ ಸೇರಿಸಿಕೊಳ್ಳುವವು. ಆದುದರಿಂದಲೇ ಶ್ರೀಸಮರ್ಥರು ತಮ್ಮ ಗ್ರಂಥಗಳಲ್ಲಿ ಮತ್ತು ದಾಸಬೋಧದಲ್ಲಿ ಸಹ ಮೊದಲಿನ ಸ್ಥಾನವನ್ನು ಭಕ್ತಿಗೆ ಕೊಟ್ಟಿದ್ದಾರೆ.

ಒಬ್ಬನೇ ಒಬ್ಬ ಈಶ್ವರನು ಪ್ರತಿ ಒಂದು ಜೀವದ ಅಂತಃಕರಣದಲ್ಲಿ ಪ್ರತಿಬಿಂಬಿತನಾಗಿರುವನು. ಈಶ್ವರನು ಬಿಂಬನೆಂದು ತಿಳಿದರೆ ಜೀವವು ಅದರ ಪ್ರತಿಬಿಂಬ (ಪಡಿನೆಳಲು)ವಾಗಿರುವದು. ಪ್ರತಿಬಿಂಬದ (ಜೀವದ) ವಿಕಾರಗಳು ಬಿಂಬಕ್ಕೆ (ಈಶ್ವರನಿಗೆ) ಸ್ಪರ್ಶವಾಗುವದಿಲ್ಲ. ತಾಗುವದಿಲ್ಲ, ಪ್ರತಿಬಿಂಬದಲ್ಲಿ ಏನಾದರೂ ಹೆಚ್ಚು ಕಡಿಮೆ ಮಾಡಿಕೊಳ್ಳುವದಿದ್ದರೆ, ಮೊದಲು ಬಿಂಬದಲ್ಲಿ ಮಾಡಬೇಕು. ಅಂದರೆ ತನ್ನಿಂದ ತಾನೇ ಪ್ರತಿಬಿಂಬದಲ್ಲಿ ಸಹ ಅದರಂತೆಯೇ ಕಾಣುತ್ತದೆ, ಆಗುತ್ತದೆ. ಜೀವವು ಈಶ್ವರನಲ್ಲಿ ಎಂಥ ಭಾವನೆಯನ್ನು ಇಡುವದೋ ಮತ್ತು ಅದರಲ್ಲಿ ಎಂಥ ಸಾಮರ್ಥ್ಯ ತೋರಿಸುವದೋ (ಸ್ಥಾಪಿಸುವದೋ) ಎಂಥ ಜ್ಞಾನವನ್ನು ಕಲ್ಪಿಸುವದೋ (ಅದರ ಹೂಬೇ-ಹೂಬ, ಥೇಟ) ಅದರಂತೆ ಪ್ರತಿಬಿಂಬವು ಜೀವದಲ್ಲಿಯೂ ತೋರುತ್ತದೆ, ಮೂಡುತ್ತದೆ. ಭಕ್ತಿಯಲ್ಲಿ ಜೀವವು ಈಶ್ವರನ ಸಂಬಂಧವನ್ನು ಹೊಂದುತ್ತದೆ. ಪ್ರತಿಯೊಬ್ಬನು ಯಾರ ಕೂಡಾದರೂ ಯಾವುದಾದರೊಂದು ಸಂಬಂಧವನ್ನು ಹೊಂದಿರುತ್ತಾನೆ. ಜಗತ್ತಿನಲ್ಲಿ ಸಂಬಂಧ ಶೂನ್ಯ ವ್ಯಕ್ತಿಗಳೇ ಇಲ್ಲ. ಯಾರೊಡನೆ ಸಂಬಂಧ

ಹೊಂದಬೇಕಾಗಿರುವದೋ ಆ ವ್ಯಕ್ತಿಯ ಇರುವಿಕೆ ಅಥವಾ ನಡವಳಿಕೆಯ ಬಗ್ಗೆ ಎಷ್ಟೂ ಸಂಶಯವಿರಬಾರದು. ಇದಕ್ಕೆ ಭಾವ, ನಿಷ್ಠೆ ಅನ್ನುವರು. ಈಶ್ವರನಿದ್ದೇ ಇರುತ್ತಾನೆ ಎಂಬ ಧೃಡ ವಿಶ್ವಾಸದಿಂದ ಭಕ್ತಿಯು ಹುಟ್ಟುತ್ತದೆ. ಜೀವನದಲ್ಲಿ ಒಂದಕ್ಕಿಂತ ಹೆಚ್ಚು ಸತ್ಯವಿರುವವೆಂಬ ತಿಳವಳಿಕೆ ಎಲ್ಲಿಯವರೆಗೆ ಇರುವದೋ ಅಲ್ಲಿಯವರೆಗೆ ಭಾವವು ಭಾಗವಾಗಿರುತ್ತದೆ. ಹಂಚಿ ಹೋಗುತ್ತದೆ. ಆದರೆ ಯಾವಾಗ ಒಬ್ಬನೇ ಒಬ್ಬ ಭಗವಂತನಿದ್ದಾನೆ, ಅವನೊಬ್ಬನೇ ಸತ್ಯನು. ಹೀಗೆ ನಿಶ್ಚಿತ ತಿಳುವಳಿಕೆಯ ಅರಿವು ಆದಕೂಡಲೇ ಭಾವ ಒತ್ತಟ್ಟಿಗೆ ಕೇಂದ್ರೀಕೃತವಾಗುವದು. ಮತ್ತು ಭಗವಂತನ ಬಗ್ಗೆ ವಿಕಲ್ಪರಹಿತ, ಅವಿಚಲ, ವಿಶ್ವಾಸ ಹುಟ್ಟುತ್ತದೆ. ಪ್ರಕಟವಾಗುತ್ತದೆ. ಇಂಥ ದೃಢ ವಿಶ್ವಾಸದಿಂದ ಭಗವಂತನ ಸ್ಮರಣೆ (ಸ್ಮೃತಿ)ಯು ಸದಾಕಾಲ ಉಳಿಯುವದು, ಇರುವದು. ಈ ಸದಾ ಸ್ಮರಣದಿಂದ ಅವನ ಸಾನ್ನಿಧ್ಯ (ಸಮೀಪ)ದ ಲಾಭ ದೊರಕುವದು. ಸತತ ಸಾನ್ನಿಧ್ಯದಿಂದ ಭಗವಂತನಗೂಡ ತದಾಕಾರತೆ (ಅದೇರೂಪ, ಏಕ ರೂಪತ್ವ) ಒದಗುವದು. ತದಾಕಾರ ಸ್ಥಿತಿಗೊಂಡ ಕೂಡಲೇ ಆತ್ಮೀಯತೆ ಉಂಟಾಗುತ್ತದೆ. ಈ ಆತ್ಮೀಯತೆಯು ಪ್ರೀತಿ, ಪ್ರೇಮ ರೂಪದಿಂದ ವ್ಯಕ್ತವಾಗುವದು. ಈಶ್ವರನು ಅನಂತ, ಅಖಂಡ, ಅಮೃತ, ಮತ್ತು ರಸಮಯ ನಾಗಿರುವನು. ಇದರಂತೆ ಭಗವಂತನ ಭಾವದಿಂದ ಜನ್ಮ ಹೊಂದಿದ ಪ್ರೀತಿ ಪ್ರೇಮ ಇದು ಕೂಡ ಅಮೃತರೂಪ, ರಸಮಯ, ಅನಂತ, ಮತ್ತು ಆನಂದಮಯವಾಗಿಯೇ ಇರುವದು. ಇದೇ ನಿಜವಾದ ಭಕ್ತಿಯ ಸ್ವರೂಪವಿರುವದು. ಭಗವಂತನು ಸರ್ವಾಂತರ್ಯಾಮಿಯಾಗಿರುವದರಿಂದ ಭಗವಂತನ ಜೊತೆಗೆ ಆತ್ಮೀಯತೆಯು ಸಾಧಿಸಿದ ಕೂಡಲೇ ಜೀವನವು ಸರ್ವಮಾತ್ರದಲ್ಲಿ ಏಕರೂಪವಾಗುವದು. ಒಂದಾಗುತ್ತದೆ. ಇದೇ ಅದರ ಜೀವದ ಸಹಜಾವಸ್ಥೆಯಾಗಿ ಬಿಡುವದು. ಅಂದರೆ ಭಕ್ತನು ಸ್ವಾನಂದದಲ್ಲಿ ಮುಳುಗುತ್ತಲಿರುವನು.

ತನ್ನ ಹಕ್ಕಿನ ಒಡೆತನದ ಮತ್ತು ತನ್ನ ಅಧೀನದಲ್ಲಿ (ಕೈಯಲ್ಲಿ) ಇದ್ದಂಥ ಸ್ವಾನಂದವನ್ನು ಜೀವವು ಕಳೆದು ಕುಳಿತಿರುದದು. ಇದಕ್ಕೆ ಮೂಲ ಕಾರಣವು ಮನಸ್ಸೇ ಆಗಿದೆ. ಅವಿದ್ಯೆಯ ಅಧಿಕಾರದ ಕೆಳಗೆ ಓಡಾಡುವ ಈ ಚಂಚಲ ಮನಸ್ಸು ಈಶ್ವರನನ್ನು ಸ್ಮರಿಸುವ ಹಂಬಲದ ನಾದಕ್ಕೆಬಿದ್ದರೆ ಇದು ಪ್ರಪಂಚದಿಂದ ನಿವೃತ್ತವಾಗುವದು. ಮತ್ತು ಪವಿತ್ರವಾಗಿ ಭಗವಂತನ ಪ್ರೇಮದಲ್ಲಿ ಸದಾ ಮಗ್ನವಾಗುವದು. ಈ ಮನಸ್ಸನ್ನು ಭಗವಂತನ ಕಡೆಗೆ ತಿರುಗಿಸಬೇಕಾದರೆ ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ ಈ ಒಂಭತ್ತು ಪ್ರಕಾರದ ಸಾಧನಗಳನ್ನು ಹೇಳಿರುತ್ತಾರೆ. ಈ ಒಂಭತ್ತು ಪಾವುಟಿಗೆಗಳನ್ನೆಲ್ಲ ಹತ್ತಿಯೇ ಗುರಿಯನ್ನು ಮುಟ್ಟಬೇಕೆಂಬುದೇನೂ ಇಲ್ಲ. ಯಾವುದೇ ಪಾವುಟಿಗೆಯ ಮೇಲಿಂದ ಭಗವಂತನೊಂದಿಗೆ ಆತ್ಮೀಯತೆ ಅಥವಾ ಇವನು ನನ್ನವನೆಂಬ ಪ್ರೇಮ ಅಭಿಮಾನ ಉಂಟಾಗುವಂತೆ ಸಾಧಿಸಿಕೊಳ್ಳಬೇಕು. ಸ್ಥಳ, ಕಾಲ, ಉದ್ದೇಶ (ಹೇತು) ಇಚ್ಛೆ, ವಾಸನಾ ಮತ್ತು ವೃತ್ತಿ. ಭಾವನೆ—ಮನಸ್ಸಿನ ಸ್ಥಿತಿ ಇವುಗಳ ಅಳವಿನಲ್ಲಿ ಅಡ್ಡಾಡುವ ಜೀವದ ಶಕ್ತಿ ಅಳತೆಗೆ ಒಳಪಟ್ಟಿದ್ದಿರುವದು. ಈ ಮಿತಶಕ್ತಿಯ ಉಪಯೋಗ ಮಾಡಿಕೊಂಡು ಅಪರಿಚ್ಛಿನ್ನ ಅಳತೆಗೆ ಸಿಗದ ಭಗವಂತನನ್ನು ಭೆಟ್ಟಿಯಾಗುವದು (ಮುಟ್ಟುವದು) ಶಕ್ಯವಿರುವದಿಲ್ಲ. ಅಂತೆಯೇ ಭಕ್ತಿಯ ಕೊನೆಯು ಶರಣಾಗತಿಯಲ್ಲಿ ಪರಿವರ್ತನವಾಗುವದು. ಸ್ವತಃದ ಹದ್ದುಬಸ್ತಾದ ಇರವು ಹಾಗೂ ಅದರಿಂದ ಉತ್ಪನ್ನವಾಗುವ ನಿರ್ಬಲತನ, ಅಸಹಾಯಕತನ, ದೀನತ್ವ ಇವನ್ನೆಲ್ಲ ನೋಡಿ ಜೀವವು ಯಾವಾಗ ಅಪರಿಚ್ಛಿನ್ನ, ಅನಂತನಾದ ಭಗವಂತನಲ್ಲಿ ಲೀನವಾಗುವದೋ ಆಗಿನ ಆ ಅವಸ್ಥೆಗೆ ಶರಣಾಗತಿ ಎನ್ನುವರು. ನಮ್ಮ ಅಲ್ಪ ವ್ಯಕ್ತಿತ್ವ, ನಮ್ಮ ಸಾಮಾನ್ಯ ವ ಅಸಾಮಾನ್ಯ ಗುಣ ಮತ್ತು ದೋಷ ಹಾಗೂ ನ್ಯೂನತಾ ಮತ್ತು ನಿಪುಣತಾ ವ ನಮ್ಮ ಎಲ್ಲದರಿಂದ ಕೂಡಿದ ವಸ್ತು ಜಾತ ಜೀವವು ಬಹಳಷ್ಟು ಪ್ರೇಮದಿಂದ ಮತ್ತು ಇವನೇ ತಾರಕನು, ನಮ್ಮವನು ಎಂಬ ಅಭಿಮಾನದಿಂದ ಭಗವಂತನ ಪ್ರಭುಚರಣದಲ್ಲಿ ಅರ್ಪಣಗೊಳ್ಳುವದು. ಈ ಶರಣಾಗತಿಯ ಅವಸ್ಥೆಯಂದರೆ ಒಂದು ದಿವ್ಯ ಜೀವನವು. ಇದರಲ್ಲಿ ಬಹಳಷ್ಟು ಮಮತೆ, ನನ್ನವನೆಂಬ ಪ್ರೇಮಾಭಿಮಾನ ಇರುವದರಿಂದ ಜೀವನದ ಅಂತಃಕರಣದಲ್ಲಿ ಪ್ರೇಮದಸೆಲೆಯುಹರಿಯ ಹತ್ತುವದು. ಈಶ್ವರನಮೇಲೆಯೇ ಎಲ್ಲ ಹೊರೆಯುಭಾರ ಹಾಕಿರುವದರಿಂದ ಜೀವಕ್ಕೆ ನಿಶ್ಚಿಂತತೆ ಇರುತ್ತದೆ. ಜೀವವು ಪ್ರಭುವಿನ ಸ್ವಾಧೀನವಾಗಿರುವದರಿಂದ ಜೀವವು ನಿರ್ಭಯವಾಗಿರುತ್ತದೆ.

ಮತ್ತು ಪ್ರಭುವೇ ಕರ್ತಾ ಇದ್ದುದರಿಂದ ಜೀವದ ಅಹಂ ಪೂರ್ಣವಾಗಿ ಕರಗಿ ಹೋಗುತ್ತದೆ. ಜೀವನಿಗೆ ಸ್ವಂತದ್ದು ಯಾವುದೂ ಉಳಿದಿರುವದಿಲ್ಲವಾದ್ದರಿಂದ ಭಗವಂತನ ಗುಣ, ಕರ್ಮ, ಮತ್ತು ಸ್ವಭಾವಗಳು ಜೀವದ ಜೀವನದಲ್ಲಿ ಕಾಣಹತ್ತುವವು. ಜೀವದ ನಡೆಯುವಿಕೆಯು ಭಗವಂತನ ಸಂಕಲ್ಪಕ್ಕನುಸಾರವಾಗಿ ಆಗ ಹತ್ತುವದು. ಕಾಮನೆಯ ನಿವೃತ್ತಿ, ಪ್ರೇಮದ ಪ್ರಾಪ್ತಿ, ಜ್ಞಾನದ ಪ್ರಕಾಶ ದೀಪ್ತಿ, ಕೃಪೆಯ ಶಕ್ತಿ ಮತ್ತು ಸಾಕ್ಷಾತ್ಕಾರದ ಪೂರ್ತಿ ಇವೆಲ್ಲ ಒಮ್ಮೆಲೇ ಅದರ (ಜೀವದ) ಜೀವನದಲ್ಲಿ ಶೋಭಿಸಹತ್ತುವವು. ದಾಸಬೋಧದಲ್ಲಿಯ ಭಕ್ತಿ ನಿರೂಪಣೆಯು ಈ ಪ್ರಕಾರದ್ದಾಗಿರುವದು.

## ದಶಕ ೪. ಸಮಾಸ ೧. ಶ್ರವಣ ಭಕ್ತಿ (ನುಡಿ ೩೪)

ಪ್ರಾಣಿ,ಜೀವ,ಜಂತು ಮತ್ತು ಪರಿಸ್ಥಿತಿ ಅಂದರೆ ಸುತ್ತಮುತ್ತಲಿನಸ್ಥಿತಿ,ವಾತಾವರಣ ಇವುಗಳ ಪರಸ್ಪರಕ್ರಿಯೆ ಮತ್ತು ಪ್ರತಿಕ್ರಿಯೆಗಳಿಂದ ಜೀವನನಡೆಯುವದು.ಮನುಷ್ಯನಜೀವನದಲ್ಲಿ ಭಾಷೆಯುಕ್ರಿಯಾಮತ್ತುಪ್ರತಿಕ್ರಿಯಾಇವುಗಳದೊಡ್ಡ ಮತ್ತು ಮಹತ್ವದ ಸಾಧನವಿರುವದು. ಬರೆದಂಥ ಮತ್ತು ಮಾತನಾಡಿದ ಶಬ್ದಗಳಿಂದ ಮನುಷ್ಯನ ನಡವಳಿಕೆಯು ವ್ಯವಸ್ಥಿತವಾಗುವದು. ಅವನ ವಿಚಾರಗಳಲ್ಲಿ ಬೆಳವಣಿಗೆ ಆಗುವದು. ಮತ್ತು ಅವನ ವ್ಯಕ್ತಿತ್ವದ ವಿಕಾಸವಾಗುವದು. ಮನುಷ್ಯನು ಶಬ್ದಮಯ ವಾತಾವರಣದಲ್ಲಿ ಜೀವಿಸುತ್ತಾನೆಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಆಕಾಶವಾಣಿ, ಚಿತ್ರವಾಣಿ, ಸಿನೇಮಾ, ನಾಟಕ, ವರ್ತಮಾನ ಪತ್ರಗಳು,ಮಾಸಿಕಗಳು,ಗ್ರಂಥಗಳು, ಗ್ರಂಥಾಲಯ,ವಾಚನಾಲಯಗಳು ವ್ಯಾಖ್ಯಾನಗಳು, ಸಭೆ, ಸಮ್ಮೇಲನಗಳು, ಶಾಲೆ, ಕಾಲೇಜದಲ್ಲಿಯ ತರಗತಿ ವರ್ಗ ವಗೈರೆ ಎಲ್ಲವೂ ಶಬ್ದ ಸಾಮ್ರಾಜ್ಯದ ಕೆಳಗೆ ಬರುವವು. ಶಬ್ದವನ್ನು ಶ್ರವಣ ಮಾಡಬೇಕಾಗುವದು. ಈ ಇಪ್ಪತ್ತನೆಯ ಶತಮಾನದಲ್ಲಿ ಅಚ್ಚು ಹಾಕುವ (ಪ್ರಿಂಟು ಮಾಡುವ) ಕಲೆ ಬಹಳಷ್ಟು ಪ್ರಗತಿ ಹೊಂದಿದೆ. ಆದರೂ ಸಹ ಮಾತಾಡಿದ ಶಬ್ದವನ್ನು ಪ್ರತ್ಯಕ್ಷ ಶ್ರವಣ ಮಾಡುವದರ ಮಹತ್ವವು ಎಷ್ಟೂ ಕಡಿಮೆ ಆಗಿಲ್ಲ. ವಿದ್ವಾಂಸರಿಗೆ ಬಹುಶ್ರುತ ಎಂದು ಅನ್ನುವರು. ಇವರು ಬಹಳಷ್ಟು ಶ್ರವಣ ಮಾಡಿರುತ್ತಾರೆ. ಗ್ರಂಥದ ವಾಚನವೂ ಒಂದು ಪ್ರಕಾರದ ಶ್ರವಣವೆಂದೇ ತಿಳಿಯಬೇಕು. ಅರ್ಥಾತ್ ಶಬ್ದ ಓದುವದು ಮತ್ತು ಎರಡನೆಯವರ ಬಾಯಿಯಿಂದ ಅದನ್ನು ಕೇಳುವದು ಇದರಲ್ಲಿ ಅಂತರ ಇರತಕ್ಕದ್ದೇ ಆಗಿದೆ. ಆದರೆ ಶ್ರೀಸಮರ್ಥರಂಥ ಮಹಾತ್ಮರು ಬರೆದ ಶಬ್ದಗಳು ಅವರು ಸ್ವತಃ ಮಾತನಾಡಿದ ಶಬ್ದಗಳಷ್ಟೇ ಪರಿಣಾಮಕಾರಕವಾಗಿರುವವೆಂದು ಸರ್ವ ಅನುಭವವಾಗಿದೆ. ಯಾವನಿಗೆ ಪರಮಾರ್ಥ ಸಾಧನ ಮಾಡಿಕೊಳ್ಳುವದಿರುವದೋ ಅವನು ಯಾವುದಾದರೊಂದು ಸರ್ವಮಾನ್ಯ ಶ್ರೇಷ್ಠ ಸಂತರ ಗ್ರಂಥ ತೆಗೆದುಕೊಂಡು ಅದನ್ನು ನಿವಾಂತ ಸ್ಥಳದಲ್ಲಿ ಮನಸ್ಸುಗೊಟ್ಟು ಸಾವಕಾಶವಾಗಿ ಅನೇಕ ಸಲ ಓದಬೇಕು. ಸಾಧನ ಅಂದರೆ ಜಪ, ತಪ, ವ್ರತ, ವೈಕಲ್ಯ, ಅನುಷ್ಠಾನ ಇತ್ಯಾದಿ ಪುಣ್ಯ ಪ್ರಾಪ್ತಿಯ ಉಪಾಯಗಳನ್ನು ಅನುಸರಿಸುವವರ ಜೊತೆಗೆ (ಚಾಲೂ ಇಟ್ಟು) ಸದ್ಗ್ರಂಥದ ವಾಚನ ಮತ್ತು ಮನನ ಮಾಡಿದರೆ ಶ್ರವಣ ಭಕ್ತಿ ಒದಗುವದು. ಶ್ರವಣದಿಂದ ಅನೇಕ ಸಂಶಯಗಳ ನಿವಾರಣೆಯಾಗುವದು. ನಿಷ್ಠಾಭಕ್ತಿಯ ಭಾವ ಸ್ಥಿರಗೊಳ್ಳುವದು ಹಾಗೂ ಭಗವಂತನಲ್ಲಿ ಪ್ರೇಮಾಧಿಕ್ಯವಾಗುವದು.

### ಸಮಾಸ ಪ್ರಥಮ : ಶ್ರವಣ ಭಕ್ತಿ

॥ಶ್ರೀರಾಮ॥ ಜಯಜಯಜೀ ಗಣನಾಥಾ । ತೂ ವಿದ್ಯಾವೈಭವೇ ಸಮರ್ಥಾ ।
ಅಧ್ಯಾತ್ಮ ವಿದ್ಯೇಚ್ಯಾ ಪರಮಾರ್ಥಾ । ಮಜ ಬೋಲವಾವೇ ॥೧॥

ನಮೂ ಶಾರದಾ ವೇದಜನನೀ । ಸಕಳ ಸಿದ್ಧಿ ಜಯೋಚೆನೀ ।
ಮಾನಸ ಪ್ರವರ್ತಲೇ ಮನನೀ । ಸ್ಫೂರ್ತಿ ರೂಪೇ ॥೨॥

ಆತಾ ಆಠಊ ಸದ್ಗುರು । ಜೋ ಪರಾಚಾಹಿ ಪರೂ ।
ಜಯಾಚೆನೀ ಜ್ಞಾನವಿಚಾರೂ । ಕಳೋ ಲಾಗೇ ॥೩॥

ಶ್ರೋತೇನ ಪುಸಿಲೇ ಬರವೇ । ಭಗವದ್ಭಜನ ಕೈಸೇ ಕರಾವೇ ।
ಮ್ಹಣೌನೀ ಬೋಲಿಲೇ ಸ್ವಭಾವೇ ಗ್ರಂಥಾಂತರೀ ॥೪॥

ಸಾವಧ ಹೋಊನ ಶ್ರೋತೇಜನ । ಏಕಾ ನವವಿಧಾ ಭಜನ ।
ಸತ್‌ಶಾಸ್ತ್ರೀ ಬೋಲಿಲೇ ಪಾವನ । ಹೋಇಜೆ ಯೇಣೇ ॥೫॥

॥ಶ್ಲೋಕ॥ ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಮ್ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮ ನಿವೇದನಮ್ ॥
(ಸ್ಕಂಧ ೭।೫।೨೩)

ನವವಿಧಾ ಭಜನ ಬೋಲಿಲೇ । ತೇಚಿ ಪುಢೇ ಪ್ರಾಂಜಳ ಕೇಲೇ ।
ಶ್ರೋತೀ ಅವಧಾನ ದಿಧಲೇ। ಪಾಹಿಜೇ ಆತಾ ॥೬॥

ಪ್ರಥಮ ಭಜನ ಏಸೇ ಜಾಣ । ಹರಿಕಥಾ ಪುರಾಣ ಶ್ರವಣ ।
ನಾನಾ ಅಧ್ಯಾತ್ಮ ನಿರೂಪಣ । ಏಕತ ಜಾವೇ ॥೭॥

## ಸಮಾಸ : ೧ ಶ್ರವಣ ಭಕ್ತಿ (ನುಡಿ ೩೪)

ಈ ಸಮಾಸದಲ್ಲಿ ಶ್ರೀ ಸಮರ್ಥರು ಗಣೇಶ, ಶಾರದಾ ಮತ್ತು ಸದ್ಗುರು ಇವರಿಗೆ ನಮಸ್ಕರಿಸಿ ಈಗ (ನವವಿಧ) ಒಂಭತ್ತು ಪ್ರಕಾರದ ಭಕ್ತಿಯ ಬಗ್ಗೆ ಹೇಳಲು ಪ್ರಾರಂಭ ಮಾಡುತ್ತಾರೆ. ಭಕ್ತಿಯ ಈ ಪ್ರಕಾರವು ಹಳೆಯ ಸಂಸ್ಕೃತ ಗ್ರಂಥಗಳಲ್ಲಿ ಅದರಲ್ಲಿಯೂ ಭಾಗವತ ಗ್ರಂಥ ಮತ್ತು ನಾರದ ಭಕ್ತಿಸೂತ್ರಗಳಲ್ಲಿ ಇರುವವು. ಆದರೆ ದಾಸಬೋಧದಲ್ಲಿ ಮಾಡಿದ ವಿವೇಚನೆಯು ಶ್ರೀ ಸಮರ್ಥರ ಸ್ವತಂತ್ರ ಪ್ರತಿಭೆಯ ಒಂದು ಪ್ರಕಾರವಾಗಿದೆ. ಶ್ರೀ ಗಜಾನನನೆ ನಿನಗೆ ಜಯ ಜಯಕಾರವಿರಲಿ, ಸಕಲ ವಿದ್ಯಾ ವೈಭವಗಳಲ್ಲಿ ಶ್ರೀ ಗಣಪತಿಯೇ ನೀನು ಸಮರ್ಥನಾಗಿರುವಿ. ನಿನ್ನಲ್ಲಿ ಸರ್ವಜ್ಞತ್ವದಿಂದ ಬರತಕ್ಕ ಸಾಮರ್ಥ್ಯವಿರುವದರಿಂದಲೇ ನೀನು ಸಮರ್ಥನಾಗಿರುವಿ. ಆತ್ಮಜ್ಞಾನದ ಅಧ್ಯಾತ್ಮ ವಿದ್ಯೆಗೆ ಪ್ರಾಣದಂತಿರುವ ಮುಖ್ಯವಾದ ಪರಮಾರ್ಥವನ್ನು ಹೇಳಂವಂತಹ ಶಕ್ತಿಯನ್ನು ನನಗೆ ಕೊಡು ಎಂದು ಶ್ರೀ ಸಮರ್ಥರು ಗಜಾನನನಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತಾರೆ. (೧) ಶಾರದೆಯು ವೇದಗಳ ಜನನಿಯು. ಇವಳ ಕೃಪೆಯಿಂದ ಅಷ್ಟಸಿದ್ಧಿಗಳು(ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವ ಎಂಬ ಎಂಟು ಸಿದ್ಧಿಗಳು) ಪ್ರಾಪ್ತವಾಗುವವು. ಅಂತಃಕರುಣದಲ್ಲಿ ಸ್ಫೂರ್ತಿ (ಬುದ್ಧಿಗೆ ಹೊಳೆಯುವದು)ಯು ಉದಯವಾಗಿ ನನ್ನ ಮನಸ್ಸು ಚಿಂತನ ಧ್ಯಾನದಲ್ಲಿ ಮಗ್ನವಾಯಿತು. ಈ ತಾಯಿಗೆ ನಾನು ನಮಸ್ಕರಿಸುವೆನು, (೨) ಈಗ ಶ್ರೀ ಸದ್ಗುರುವಿನ ಸ್ಮರಣೆ ಮಾಡುವೆನು. ಸದ್ಗುರುವು ಪರಮಾತ್ಮನಿಗಿಂತ, ಎಲ್ಲರಕ್ಕಿಂತಾ ಶ್ರೇಷ್ಠನು. ಇವನ ಕೃಪೆಯಿಂದ ಮಾತ್ರ ಆತ್ಮಜ್ಞಾನ, ಮಾಯೋಪಾದಿರಹಿತ ಶುದ್ಧ ಬ್ರಹ್ಮರೂಪದ ವಿಚಾರಗಳು ತಿಳಿಯುತ್ತವೆ. (೩) ಭಗವಂತನ ಭಜನೆಯನ್ನು ಹೇಗೆ ಮಾಡಬೇಕೆಂದು ಶ್ರೋತೃವು ಗುರುವಿಗೆ ಉತ್ತಮ ಪ್ರಶ್ನೆ ಕೇಳುತ್ತಾನೆ. ಇದಕ್ಕೆ ಉತ್ತರ ರೂಪವಾಗಿ ಗುರುವು ಅನೇಕ ರೀತಿಯ ಸದ್ಗ್ರಂಥಗಳಲ್ಲಿಯ ಭಕ್ತಿ ವಿಷಯಕ ವಿಚಾರಗಳನ್ನು ಸುಲಭವಾಗಿ ಹೇಳುತ್ತಾರೆ. (೪) ಭಕ್ತಿಯ ವಿಷಯಕವಾದ ಒಂಭತ್ತು ಪ್ರಕಾರಗಳನ್ನು ಶ್ರೋತೃವು ಲಕ್ಷ್ಯಗೊಟ್ಟು ಕೇಳಬೇಕು. ಭಗವಂತನ ಬಗ್ಗೆ ಶಾಸ್ತ್ರದಲ್ಲಿ ಬಹಳಷ್ಟು ಹೇಳಿರುತ್ತಾರೆ. ಇದರ ಆಚರಣೆಯಿಂದ ಮನುಷ್ಯನು ಪವಿತ್ರನಾಗಿ ಹೋಗುವನು, (೫)

ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಮ್ ।
ಅರ್ಚನಂ ವಂದನಂ ದಾಸ್ಯಸಖ್ಯಮಾತ್ಮ ನಿವೇದನಮ್ [ಭಾಗವತ ಪುರಾಣ]

**ಶ್ಲೋಕದ ಅರ್ಥ:**— ಶ್ರವಣ, ಕೀರ್ತನ, ನಾಮಸ್ಮರಣ, ಪಾದಸೇವಾ, ಅರ್ಚನ, ವಂದನ, ದಾಸ್ಯ, ಸಖ್ಯ, ಮತ್ತು ಆತ್ಮನಿವೇದನ, ಹೀಗೆ ಭಕ್ತಿಯ ಒಂಭತ್ತು ಪ್ರಕಾರಗಳಿರುವವು. ಶಾಸ್ತ್ರದಲ್ಲಿ ಯಾವ ಒಂಭತ್ತು ಪ್ರಕಾರದ ಭಕ್ತಿಯ ಭಜನದ ಬಗ್ಗೆ ಹೇಳಿದ್ದಾರೆಯೋ ಅದರ ಸವಿಸ್ತಾರ ವರ್ಣನೆಯನ್ನು ಸ್ಪಷ್ಟವಾಗಿ ಮುಂದೆಕೊಡುತ್ತೇವೆ. ಆದುದರಿಂದ ಶ್ರೋತೃವು ಚನ್ನಾಗಿ ಲಕ್ಷ್ಯಗೊಟ್ಟು ಕೇಳಬೇಕು. (೬) ನಮ್ಮ ದೇಶದಲ್ಲಿ ಅಧ್ಯಾತ್ಮ-ತತ್ವಜ್ಞಾನ ಮತ್ತು ಸಾಧನೆ, ಹೀಗೆ ಎರಡೂ ಕಡೆಯಿಂದ ಬಹಳಷ್ಟು ಬೆಳೆದಿದೆ. ಇವುಗಳ ವಿವಿಧ ಅಂಗಗಳ ಜ್ಞಾನ ಮಾಡಿಕೊಳ್ಳಬೇಕೆಂದು ಶ್ರೀ ಸಮರ್ಥರು ಈ ಸಮಾಸದಲ್ಲಿ ಸೂಚಿಸಿದ್ದಾರೆ. ಎಲ್ಲ ಪ್ರಕಾರಗಳನ್ನು ನಾವೇ ಸ್ವತಃ ಮಾಡಿ ನೋಡಲಿಕ್ಕಾಗುವದಿಲ್ಲ. ಆದರೆ ಪ್ರತಿಯೊಂದರ ಮರ್ಮವೇನಿದೆ ಎಂಬುದನ್ನು ಸಾಧಕನು ತಿಳಿದಿರುವದು ಯೋಗ್ಯ, ಹೀಗೆ ಶ್ರೀ ಸಮರ್ಥರ ಅಭಿಪ್ರಾಯವಿದ್ದಂತೆ ತೋರುತ್ತದೆ. **ಒಂಭತ್ತು ಪ್ರಕಾರಗಳಲ್ಲಿ, ಭಕ್ತಿಯ ಮೊದಲಿನ ಪ್ರಕಾರವೇ ಶ್ರವಣವು. ಅದರ ವಿವರವು ಹೀಗಿದೆ:**— ಭಗವಂತನ ಕಥೆಗಳನ್ನು ಕೇಳಬೇಕು, ಪುರಾಣಗಳನ್ನು ಕೇಳಬೇಕು, ಪ್ರವಚನ ಮತ್ತು ನಿರೂಪಣಗಳಲ್ಲಿ ಬರುವ ಅನೇಕ ಪ್ರಕಾರದ ಅಧ್ಯಾತ್ಮ ವಿಷಯದ (ಬ್ರಹ್ಮಜ್ಞಾನ ವಿಷಯಕವಾದ) ಕಥನ ಕೇಳಬೇಕು. (೭)

ಕರ್ಮಮಾರ್ಗ ಉಪಸನಾಮಾರ್ಗ । ಜ್ಞಾನಮಾರ್ಗ ಸಿದ್ಧಾಂತಮಾರ್ಗ ।
ಯೋಗಮಾರ್ಗ ವೈರಾಗ್ಯಮಾರ್ಗ। ಏಕತ ಜಾವೇ ॥೮॥

ನಾನಾ ವ್ರತಾಂಚೆ ಮಹಿಮೆ । ನಾನಾ ತೀರ್ಥಾಂಚೆ ಮಹಿಮೇ ।
ನಾನಾ ದಾನಾಂಚೆ ಮಹಿಮೆ । ಏಕತ ಜಾವೇ ॥೯॥

ನಾನಾ ಮಹಾತ್ಮೆ ನಾನಾ ಸ್ಥಾನೇ । ನಾನಾ ಮಂತ್ರ ನಾನಾ ಸಾಧನೇ ।
ನಾನಾ ತಪೇ ಪುರಶ್ಚರಣೇ । ಏಕತ ಜಾವೀ ॥೧೦॥

ದುಗ್ಧಾಹಾರೀ ನಿರಾಹಾರೀ । ಫಳಾಹಾರೀ ಪರ್ಣಾಹಾರೀ ।
ತೃಣಾಹಾರೀ ನಾನಾಹಾರೀ । ಕೈಸೆ ತೇ ಏಕಾವೇ ॥೧೧॥

ಉಷ್ಣವಾಸ ಜಳವಾಸ । ಸೀತವಾಸ ಆರಣ್ಯವಾಸ ।
ಭೂಗರ್ಭ ಆಣೀ ಆಕಾಶವಾಸ। ಕೈಸೆ ತೇ ಏಕವಾವೆ ॥೧೨॥

ಜಪೀ ತಪೀ ತಾಮಸ ಯೋಗೀ । ನಾನಾ ನಿಗ್ರಹ ಹಟಯೋಗೀ ।
ಶಾಕ್ತ ಆಗಮ ಅಘೋರಯೋಗೀ । ಕೈಸೆ ತೇ ಏಕಾವೇ ॥೧೩॥

ಕರ್ಮಮಾರ್ಗ [ವರ್ಣಾಶ್ರಮ ಪಾಲನಾರ್ಥದ ನಿತ್ಯಕರ್ಮ, ನಿತ್ಯ ನೈಮಿತ್ತಿಕ ಮತ್ತು ಕಾಮ್ಯ ಇತ್ಯಾದಿಗಳ ಆಚರಣೆ.] ಉಪಾಸನಾ ಮಾರ್ಗ [ಶಿವ, ವಿಷ್ಣು, ಶಕ್ತಿ ವಗೈರೆ ದೇವತೆಗಳ ಚಿಂತನ, ಆರಾಧನ, ಪೂಜನ ಮುಂತಾದ ಮಾರ್ಗ] ಜ್ಞಾನಮಾರ್ಗ, (ವೇದಾಂತ ಮಾರ್ಗ) ಗುರುಭಕ್ತಿ ಮಾರ್ಗ, ಯೋಗ ಮಾರ್ಗ. (ಪ್ರಾಣಾಯಾಮಾದಿಗಳಿಂದ ಚಿತ್ತವೃತ್ತಿ-ನಿರೋಧ ಮಾಡುವದು ವಿಶೇಷವಾಗಿ ಹಠಯೋಗಾದಿ ಮಾರ್ಗ) ವೈರಾಗ್ಯ ಮಾರ್ಗ ಇತ್ಯಾದಿ ಅನೇಕ ಮಾರ್ಗಗಳ ವಿಷಯು ಕೇಳಬೇಕು. (೮) ಅನೇಕ ವ್ರತ, ಅನೇಕ ತೀರ್ಥ, ಅನೇಕ ದಾನ ಇವುಗಳ ಮಹಿಮೆ ಕೇಳಬೇಕು. (೯) ಜಗತ್ತಿನಲ್ಲಿಯ ಅನೇಕ ಆಶ್ಚರ್ಯಕಾರಕ ಸಂಗತಿಗಳನ್ನು ಅನೇಕ ದೊಡ್ಡ ಸ್ಥಾನಗಳನ್ನು ಅನೇಕ ಮಂತ್ರಸಾಧನಗಳ ಮಹತ್ವ, ತಪಶ್ಚರ್ಯ, ಪುರಶ್ಚರಣ (ಗಾಯತ್ರಿ ಮೊದಲಾದ ನಿಶ್ಚಿತ ಠರಾವಿಕ ಮಂತ್ರಗಳ ಶಾಸ್ತ್ರೋಕ್ತವಾದ ಸತತ ಜಪ, ಪೂಜಾದಿ ಅನುಷ್ಠಾನ ಮಾಡುವದು) ಇವುಗಳ ವಿವರ ಕೇಳಬೇಕು. (೧೦) ಒಬ್ಬರು ಕೇವಲ ಹಾಲು ಕುಡಿದು ಇರುವರು. ಒಬ್ಬರು ಏನೂ ತಿನ್ನದೇ ಇರುವರು. ಒಬ್ಬರು ಫಲಾಹಾರದಿಂದ ಇರುವರು. ಒಬ್ಬರು ಎಲೆ ತಿಂದು ಇರುವರು. ಒಬ್ಬರು ಹುಲ್ಲು ತಿಂದು ಇರುವರು. ಒಬ್ಬರು ಸಿಕ್ಕದ್ದೆಲ್ಲ ತಿಂದು ಇರುವರು. ಇವರೆಲ್ಲ ಹೇಗೆ ಇರುತ್ತಾರೆಂಬ ವಿಷಯು ಕೇಳಿ ತಿಳಿದುಕೊಳ್ಳುವದು ಯೋಗ್ಯವು. (೧೧) ಒಬ್ಬರು ಬಿಸಿಲಲ್ಲಿಯೇ ಇರುವರು. ಒಬ್ಬರು ನೀರಿನಲ್ಲಿಯೇ ಇರುವರು. ಒಬ್ಬರು ಕೇವಲ ತಂಪಿನಲ್ಲಿ [ಶೀತಸ್ಥಳ] ಇರುವರು. ಒಬ್ಬರು ಆಕಾಶದಲ್ಲಿ ವೃಕ್ಷಾದಿಗಳ ಟೊಂಗೆಗಳಲ್ಲಿ ವಾಸ ಅಥವಾ ಟೊಂಗೆಗಳಿಗೆ ಜೋತುಬಿದ್ದು ಮಾಡುವ ತಪಸ್ಸಾಧನದಲ್ಲಿ ಇರುವರು. ಇವರೆಲ್ಲ ಹೇಗೆ ಇರುತ್ತಾರೆಂಬುದನ್ನು ಕೇಳಿ ತಿಳಿದುಕೊಳ್ಳಬೇಕು. [೧೨] ಜಪ ಮಾಡುವವರು, ತಪಶ್ಚರ್ಯ ಮಾಡುವವರು, ಬಹಳ ಸಿಟ್ಟಿನ ಯೋಗಿ, ನಾನಾ ಪ್ರಕಾರಗಳಿಂದ ಇಂದ್ರಿಯಗಳ ನಿರೋಧ [ಮಲ ಮೂತ್ರಾದಿಗಳನ್ನು ಮಾಡದಿರುವದು] ಮಾಡುವ ಹಟಯೋಗಿ. ಮದ್ಯ, ಮಾಂಸ, ಮೀನ, ಮುದ್ರಾ ಮತ್ತು ಮೈಥುನ ಈ ಪಂಚ ಮಕಾರಗಳನ್ನು ಸೇವಿಸುವ ಶಕ್ತಿಯ ಉಪಾಸಕ, ಸ್ಮಶಾನದಲ್ಲಿದ್ದು ಭೂತ ಪ್ರೇತಾದಿಗಳನ್ನು ವಶಮಾಡಿಕೊಳ್ಳುವ ಅಘೋರ ಪಂಥಿ, ಕಾಪಾಲಿಕ, ವಾಮಮಾರ್ಗಿ, ಇವರೆಲ್ಲ ಹೇಗ ಇರುವರು, ವಗೈರೆ ವಿಷಯು ಕೇಳಿ ತಿಳಿದುಕೊಳ್ಳಬೇಕು. [೧೩]

ನಾನಾ ಮುದ್ರಾ ನಾನಾ ಆಸನೇ । ನಾನಾ ದೇಖಣೇ ಲಕ್ಷಸ್ಥಾನೇ ।
ಪಿಂಡಜ್ಞಾನೇ ತತ್ವಜ್ಞಾನೇ । ಕೈಸೀ ತೇ ಏಕಾವೀ ॥೧೪॥

ನಾನಾ ಪಿಂಡಾಂಚೀ ರಚನಾ । ನಾನಾ ಭೂಗೋಳ ರಚನಾ ।
ನಾನಾ ಸೃಷ್ಟೀಚೀ ರಚನಾ । ಕೈಸೀ ತೇ ಏಕಾವೀ ॥೧೫॥

ಯೋಗಶಾಸ್ತ್ರದಲ್ಲಿ ವಿಶೇಷ ಪ್ರಕಾರದ ಪ್ರಾಣಾಯಾಮಕ್ಕೆ ಮುದ್ರಾ ಅನ್ನುತ್ತಾರೆ. ಈ ಮುದ್ರಾದಲ್ಲಿ ಅನೇಕ ಪ್ರಕಾರಗಳು. (ಇವುಗಳಲ್ಲಿ 108 ಪ್ರಸಿದ್ಧವಿರುವವು. ಇನ್ನೂ ಹೆಚ್ಚು ಇರುವವೆಂದೂ ಕೆಲವರು ಅನ್ನುವರು) ಇರುವವು. ಅವುಗಳಲ್ಲಿ ಖೇಚರಿ, ಭೂಚರಿ, ಚಾಚರಿ, ಅಗೋಚರಿ, ಷಣ್ಮುಖಿ, ಮಹಾ ಮುದ್ರಾ ಮತ್ತು ಶಾಂಭವಿ (ಅಲಕ್ಷ ಅಥವಾ ಜ್ಞಾನಮುದ್ರಾ) ಇವು ಅತಿ ಪ್ರಸಿದ್ಧವಾದವುಗಳಿರುವವು. ಧಾರಣಾ ಅಂದರೆ ಸ್ಥಿರತೆ, ನಿಶ್ಚಿತತನ, ಸ್ಮರಣ ಶಕ್ತಿ, ಬುದ್ಧಿ ಗ್ರಹಣ ಶಕ್ತಿ ಪ್ರಾಪ್ತವಾಗುವದಕ್ಕಾಗಿ ಇವುಗಳ ಉಪಯೋಗವಾಗುವದು. ಖೇಚರಿ ಅಂದರೆ ಎರಡೂ ಹುಬ್ಬಿನ ಮಧ್ಯದಲ್ಲಿ ಎರಡೂ ದೃಷ್ಟಿಯನ್ನು ತಿರುಗಿಸಿ ಆಕಾಶದಲ್ಲಿ ಮನಸ್ಸನ್ನು ಸ್ಥಿರಪಡಿಸುವದು. ಭೂಚರಿ ಅಂದರೆ-ಮೂಗಿನ ತುದಿಯಲ್ಲಿ ಎರಡೂ ನೇತ್ರಗಳ ದೃಷ್ಟಿಯನ್ನು ತಿರುಗಿಸಿ ಅಲ್ಲಿ ಸ್ಥಿರಪಡಿಸಿ ಅದರ ಮುಂದೆ ನಾಲ್ಕುಬೆರಳು ಇರುವಂಥ ಅವಕಾಶದಲ್ಲಿ ಮನಸ್ಸನ್ನು ಸ್ಥಿರಪಡಿಸುವದು. ಚಾಚರಿ ಅಂದರೆ–ಇಷ್ಟದೇವರ ಅನುಸಂಧಾನದಲ್ಲಿ ಮನಸ್ಸನ್ನು ತೊಡಗಿಸುವದು. ಇನ್ನುಳಿದ ಯಾವುದೇ ವಸ್ತುವಿನ ಮೇಲೆ ದೃಷ್ಟಿಯನ್ನು ಸ್ಥಿರವಿಡದೇ ಇರುವದಾಗಿದೆ. ಅಗೋಚರಿ ಅಂದರೆ-ಚಿದಾಕಾಶದಲ್ಲಿ ಮನಸ್ಸನ್ನು ಸ್ಥಿರಪಡಿಸುವದು. ಪದಾರ್ಥಗಳನ್ನು ನೋಡಿಯೂ ನೋಡದಂತಿರುವದು. (ಶ್ರೀ ಸಮರ್ಥರದು ಅಗೋಚರಿ ಮುದ್ರಾ ಇದ್ದಿತು.)ಷಣ್ಮುಖಿ ಅಂದರೆ-ಎರಡು ನೇತ್ರ, ಎರಡು ಕಿವಿ, ಎರಡು ಮೂಗಿನ ಹೊರಳಿಗಳು, ಮತ್ತು ಬಾಯಿ, ಇವೆಲ್ಲವುಗಳನ್ನು ಬಂದು ಮಾಡಿ ಒಳಗಿನ **ಸೋಹಂ** ಧ್ವನಿಯನ್ನು ಕೇಳುತ್ತ ಮನಸ್ಸನ್ನು ಅಲ್ಲಿ ಸ್ಥಿರಪಡಿಸುವದು- ಮಹಾಮುದ್ರಾ ಅಂದರೆ-ಎಡಗಾಲಿನ ಪಾದದ ಟಾಂಚ ಅಂದರೆ ಹಡ್ಡ-ಪಾದದ ಹಿಂಬಾಗವನ್ನು ಶಿವಣಗೆ,ಶೀವಣೀ,ಶಿವಣಿ, ಅಂದರೆ ವೃಷಣದ ಕೆಳಗೆ ಪೃಷ್ಠದತನಕಾ ವಂದು ಗೆರೆ ಅಥವಾ ಎರಡು ಚರ್ಮಗಳು ಕೂಡಿದ ಗೆರೆ ಅರ್ಥಾತ್ ಹೊಲಿದಂತೆ ಕಾಣುವ ಚಿನ್ಹದ ಗೆರೆ ಕಾಣುವದು. ಅದಕ್ಕೆ ಶಿವಣಿ ಅನ್ನುವರು. ಈ ಚಿನ್ಹ ಕಾಣುವ ಚರ್ಮದ ಕೂಡಿಕೆಯ ಒಳಭಾಗದಲ್ಲಿ ಒಂದು ನರ ಇರುವದು ಎಂದು ಅನ್ನುವರು. ಅಲ್ಲಿ ಒತ್ತಬೇಕು, ಬಲಗಾಲನ್ನು ಉದ್ದವಾಗಿಟ್ಟಿರಬೇಕು. ಅದರ ಅಂಗುಷ್ಟ ಹಿಡಿದುಕೊಂಡು ಪ್ರಾಣಾಯಾಮ ಮಾಡಿ ಬಲಗಾಲಿನ ಮಂಡೆಗೆ ತಲೆಯನ್ನು ಹಚ್ಚಬೇಕು. ಇದರಂತೆಯೇ ಎರಡನೆಯ ಕಾಲಿನಿಂದಲೂ ಮಾಡಬೇಕು. ಇದು ಕಪಿಲ ಮಹಾಮುನಿಗಳಿಗೆ ಸಾಧಿಸಿದ್ದಿತು. ಶಾಂಭವಿ ಅಂದರೆ-ಮನಸ್ಸನ್ನು ನಿರ್ಮಲ ಮಾಡಿಕೊಂಡು ಎರಡೂ ಕಣ್ಣುಗಳನ್ನು ತೆರೆದು ದೃಷ್ಟಿಯನ್ನು ಸಮಾಂತರವಿಟ್ಟು ಕಲ್ಪನೆಯಿಂದ ತನ್ನ ಇಷ್ಟ ದೇವತಾ ಅಥವಾ ಸದ್ಗುರು ಕೊಟ್ಟಂಥ ಮಂತ್ರವನ್ನು ಎದುರಿನಲ್ಲಿ ನೋಡುತ್ತ ಅಥವಾ ಕೇಳುತ್ತ ಇರುವದು. ಇದು ಅಲಕ್ಷ್ಯದಲ್ಲಿ ಲಕ್ಷವಿಡುವ ಸುಲಭಪ್ರಕಾರವಿರುವದು. ಈ ಧ್ಯಾನಸ್ಥಿತಿಯಿಂದ ಸಾವಕಾಶವಾಗಿ ಕಣ್ಣುಗಳು ಮುಚ್ಚಿಕೊಳ್ಳುವವು, ಮತ್ತು ಇಷ್ಟದೇವತಾ ಅಥವಾ ಮಂತ್ರವು ಹೃದಯಾಕಾಶದಲ್ಲಿ ಸ್ಥಿರಗೊಳ್ಳುವದು. ದೇಶ, ಸ್ಥಳ, ಕಾಲ ಇವುಗಳ ವಿಸ್ಮರಣವಾಗುವದು. ಶ್ರೀ ಶಂಕರನಿಗೆ ಇದು ಸಾಧಿಸಿತ್ತು. ಅದುದರಿಂದಲೇ ಇದಕ್ಕೆ ಶಾಂಭವಿ ಎಂಬ ಹೆಸರು. ಯೋಗ ಮುದ್ರೆಯಲ್ಲಿ ಇದು ಮಹಾರಾಣಿ ಎಂದು ತಿಳಿಯಬೇಕು. ನಾನಾ ಪ್ರಕಾರದ ಆಸನಗಳು (84 ಪ್ರಕಾರ) ಇರುವವು. ಇವುಗಳ ಬಗ್ಗೆ ತಿಳಿದುಕೊಳ್ಳಬೇಕು. (ಶ್ರೀ ಸಮರ್ಥರದು ಸಿದ್ಧಾಸನವಿದ್ದಿತು). ಅತೀಂದ್ರಿಯ ಪ್ರಕಾಶದಲ್ಲಿ ವಿವಿಧ ಪ್ರಕಾರಗಳಿರುವವು, **ಉದಾ**:– ಶುಭ ಮಂಗಲರೂಪ ಪ್ರಕಾಶವ ದೊಡ್ಡ ಪ್ರವಾಹ (ಮಂಗಲಕರ ದೊಡ್ಡ ಜ್ವಾಲಾ ಪ್ರಕಾಶ) ನೀಲ ಬಿಂದುದರ್ಶನ, ಜ್ಯೋತಿ ದರ್ಶನ, ಇತ್ಯಾದಿಗಳ ವಿಷಯ ತಿಳಿಯಬೇಕು. ಯೋಗಿ ಜನರು ಯಾವುದರ ಮೇಲೆ ಮನಸ್ಸನ್ನು ಕೇಂದ್ರೀಕೃತ ಮಾಡುವರೋ ಆ ಶರೀರದಲ್ಲಿಯ ಚಕ್ರಸ್ಥಾನಗಳು. **ಉದಾ**:– ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ,ವಿಶುದ್ಧ ಮತ್ತು ಆಜ್ಞಾ ಇವುಗಳ ಬಗ್ಗೆ ತಿಳಿದುಕೊಳ್ಳಬೇಕು. ಮತ್ತು ಶರೀರ ರಚನಾ ಶಾಸ್ತ್ರ (ಸ್ಥೂಲ, ಸೂಕ್ಷ್ಮ, ಕಾರಣ, ದೇಹಗಳ ಜ್ಞಾನ) ಹಾಗೂ ವಿಶ್ವರಚನಾ ಶಾಸ್ತ್ರ, ಇವುಗಳ ಮಾಹಿತಿ ಕೇಳಿ ತಿಳಿಯಬೇಕು. (೧೪) ಅನೇಕ ಪ್ರಾಣಿಗಳ ಶರೀರ ರಚನೆ ಪೃಥ್ವಿ ಮೇಲಿರುವ ಅನೇಕ ಪ್ರದೇಶಗಳ ರಚನೆ ಪಶು, ಪಕ್ಷಿ, ಮೀನ ವನಸ್ಪತಿ, ಇತ್ಯಾದಿ (ಉತ್ಪನ್ನವಾದ) ಸೃಷ್ಟಿ ವಸ್ತುಗಳ ರಚನಾದಿಗಳನ್ನು ಕೇಳಬೇಕು. (೧೫)

ಚಂದ್ರ ಸೂರ್ಯ ತಾರಾಮಂಡಳೇ । ಗ್ರಹಮಂಡಳೇ ಮೇಘಮಂಡಳೇ ।
ಯೇಕವೀಸ ಸ್ವರ್ಗೇ ಸಪ್ತ ಪಾತಾಳೇ । ಕೈಸೀ ತೇ ಏಕಾವೀ ॥೧೬॥

ಬ್ರಹ್ಮಾ ವಿಷ್ಣು ಮಹೇಶಸ್ಥಾನೇ । ಇಂದ್ರದೇವ ಋಷಿಸ್ಥಾನೇ ।
ವಾಯೋವರುಣ ಕುಬೇರಸ್ಥಾನೇ । ಕೈಸೀತೇ ಏಕಾವೀ ॥೧೭॥

ನವ ಖಂಡೇ ಚೌದಾಭುವನೇ । ಅಷ್ಟ ದಿಗ್ಪಾಳಾಚೀ ಸ್ಥಾನೇ ।
ನಾನಾ ವನೇ ಉಪವನೇ ಗಹನೇ । ಕೈಸೀ ತೇ ಏಕಾವೀ ॥೧೮॥

ಗಣ ಗಂಧರ್ವ ವಿದ್ಯಾಧರ । ಯೆಕ್ಷ ಕಿನ್ನರ ನಾರದ ತುಂಬರ ।
ಅಷ್ಟ ನಾಯಕಾ ಸಂಗೀತ ವಿಚಾರ । ಕೈಸಾ ತೋ ಏಕಾವಾ ॥೧೯॥

ರಾಗಜ್ಞಾನ ತಾಳಜ್ಞಾನ । ನೃತ್ಯಜ್ಞಾನ ವಾದ್ಯಜ್ಞಾನ ।
ಅಮೃತವೇಳ ಪ್ರಸಂಗಜ್ಞಾನ । ಕೈಸೇ ತೇ ಏಕಾವೇ ॥೨೦॥

ಚೌದಾ ವಿದ್ಯಾ ಚೌಸಷ್ಟೀ ಕಳಾ । ಸಾಮುದ್ರಿಕ ಲಕ್ಷಣೇ ಸಕಳ ಕಳಾ ।
ಬತ್ತೀಸ ಲಕ್ಷಣೇ ನಾನಾ ಕಳಾ । ಕೈಶಾ ತ್ಯಾ ಏಕಾವ್ಯಾ ॥೨೧॥

ಚಂದ್ರ,ಸೂರ್ಯ,ತಾರಾಸಮೂಹ,ಮೇಘಸಮೂಹ,ಇಪ್ಪತ್ತೊಂದುಸ್ವರ್ಗ (ಇವುಗಳ ಹೆಸರುಗಳು–೧)ಜ್ಯೋತಿ,೨)ಸಿತ. ೩) ವಿಮಲ, ೪) ಅಭ್ಯಾಗತ, ೫) ಪ್ರಕಾಶ, ೬) ರಮ್ಯ, ೭) ಸಹಜ, ೮) ಸಿದ್ಧ, ೯) ನಾದ, ೧೦) ದಿವ್ಯ, ೧೧) ಏಕಾಂತ, ೧೨) ಸ್ಥಿರ, ೧೩) ತೃಪ್ತಿ, ೧೪) ನಿರ್ಮಲ, ೧೫) ಅಮಲ, ೧೬) ನಿಜ, ೧೭) ಲಯ, ೧೮) ಅನಂತ ೧೯) ನಿತ್ಯ, ೨೦) ಅತೀವ, ೨೧) ಸಚ್ಚಿದಾನಂದ. ಹೀಗೆ ೨೧ ಸ್ವರ್ಗಗಳು (ಇವುಗಳಲ್ಲಿ ಬ್ರಹ್ಮನವು ಏಳು, ವಿಷ್ಣುವಿನವು ಏಳು, ಶಿವನವು ಏಳು, ಹೀಗೆ ಒಟ್ಟು ಇಪ್ಪತ್ತೊಂದು ಸ್ವರ್ಗಗಳು ಇರುವವು) ಏಳು ಪಾತಾಳ ಇವು ಹೇಗಿರುವವು ಕೇಳಬೇಕು, ತಿಳಿಯಬೇಕು. (೧೬) ಬ್ರಹ್ಮ, ವಿಷ್ಣು, ಮಹೇಶ್ವರ, ಇಂದ್ರ, ದೇವ, ಋಷಿ, ವಾಯು, ವರುಣ, ಕುಬೇರ, ಇವರ ಸ್ಥಾನಗಳು ಹೇಗಿರುವವು? ಎಂಬುದನ್ನು ಕೇಳಬೇಕು. (೧೭) ನವಖಂಡ (ಇಂದ್ರ ಖಂಡ) ೨) ಕಿಶೋರ ಖಂಡ, ೩) ತಾಮ್ರಖಂಡ, ೪) ಗಭಸ್ತಿಖಂಡ, ೫) ನಾಗಖಂಡ, ೬) ವಾರುಣಖಂಡ ೭) ಸೌಮ್ಯಖಂಡ, ೮) ಬ್ರಹ್ಮಖಂಡ, ೯) ಭರತಖಂಡ, ಹದಿನಾಲ್ಕು ಭುವನ ೧) ಭೂಲೋಕ ೨] ಭುವರ್ಲೋಕ ೩] ಸ್ವರ್ಲೋಕ, ೪] ಜನಲೋಕ, ೫] ತಪಲೋಕ ೬] ಸತ್ಯಲೋಕ, ೭] ಮಹರ್ಲೋಕ, ಮತ್ತು + ೧]ಅತಲ ೨] ವಿತಲ, ೩] ಸುತಲ, ೪] ಮಹಾತಲ, ೫] ರಸಾತಲ, ೬] ತಲಾತಲ, ೭] ಪಾತಳ ಏಳು. ಹೀಗೆ ಒಟ್ಟು 14 ಲೋಕಗಳು]. ಅಷ್ಟದಿಕ್ಪಾಲಕರ ಸ್ಥಾನ, [ ೧] ಇಂದ್ರ [ಪೂರ್ವ], ೨] ಅಗ್ನಿ [ಆಗ್ನೇಯ], ೩] ಯಮ [ದಕ್ಷಿಣ] ೪] ನಿಋತಿ [ನೈರುತ್ಯ], ೫] ವರುಣ [ಪಶ್ಚಿಮ], ೬] ವಾಯು [ವಾಯವ್ಯ], ೭] ಕುಬೇರ–ಸೋಮ[ಉತ್ತರ] ೮] ಈಶಾನ [ಈಶಾನ್ಯ]ಗಳು. ಬೇರೆ ಬೇರೆ ತರಹದ ಅನೇಕ ದಟ್ಟ ಅರಣ್ಯ ಮತ್ತು ಉಪವನ ಹೇಗೆ ಇರುತ್ತವೆ, ಎಂಬುದನ್ನು ಕೇಳಬೇಕು. [೧೮] ಶಂಕರನ ಸೇವಕ ಗಣ, ಗಂಧರ್ವಗಣ, ವಿದ್ಯಾಧರ, ಯಕ್ಷ, ಕಿನ್ನರ, ನಾರದ, ತಂಬುರರು ಮತ್ತು ಅಷ್ಟನಾಯಿಕೆಯರು [ಇವರು ಇಂದ್ರ ಸಭೆಯಲ್ಲಿ ಇರುವ ಅಷ್ಟನಾಯಿಕೆಯರು ೧] ಘೃತಾಚಿ ಅಥವಾ ತಿಲೋತ್ತಮಾ, ೨] ಮೇನಕಾ, ೩] ರಂಭಾ, ೪] ಊರ್ವಶಿ, ೫] ತಿಲೋತ್ತಮಾ ಅಥವಾ ಜನವಲ್ಲಭಾ, ೬] ಪೂರ್ವಚಿತ್ತಿ, ೭] ಸ್ವಯಂಪ್ರಭಾ, ೮] ಮಿತ್ರಕೇಶಿ-ಶ್ರೀಕೃಷ್ಣನ ಅಷ್ಟನಾಯಿಕೆಯರು [ಪತ್ನಿಯರುಗಳು] ೧) ರುಕ್ಮಿಣಿ, ೨) ಸತ್ಯಭಾಮಾ, ೩] ಜಾಂಬುವಂತಿ, ೪]ಕಾಲಿಂದಿ [ಸೂರ್ಯಕನ್ಯೆ], ಮಿತ್ರವೃಂದಾ, ೬] ಯಾಜ್ಞಜಿತಿ [ಯಜ್ಞಜಿತ್ ಕನ್ಯಾ], ೭] ಭದ್ರಾ, ೮] ಲಕ್ಷ್ಮಣಾ ಇವರ ಬಗ್ಗೆ ಸಹ ತಿಳಿಯಬೇಕು. ಸಂಗೀತ ಶಾಸ್ತ್ರದ ಬಗ್ಗೆ ಮಾಹಿತಿ ಕೇಳಬೇಕು. ಆ ಗಂಧರ್ವ ಅಂದರೆ ದೇವತೆಗಳ ಗವಾಯಿ,[ಹಾಡುಗಾರ], ವಿದ್ಯಾಧರ ಅಂದರೆ ದೇವತೆಗಳ ಸಹಾಯಕ, ಕನಿಷ್ಠದೇವ, ಯಕ್ಷ ಅಂದರೆ ಕುಬೇರನ ಸೇವಕ, ಕನಿಷ್ಟ ದೇವ, ಕಿನ್ನರ ಅಂದರೆ ಅಶ್ವ ಮುಖದ ಕನಿಷ್ಟದೇವ, ನಾರದ ಅಂದರೆ ಬ್ರಹ್ಮದೇವನ ಮಾನಸಪುತ್ರ ಮತ್ತು ಪ್ರಖ್ಯಾತನಾದ ದೇವಋಷಿ,ತುಂಬರರು ಅಂದರೆ ಒಬ್ಬ ಸಂಗೀತ ತಜ್ಞಗಂಧರ್ವ, ಸಾಹಿತ್ಯ ಶಾಸ್ತ್ರದ ಕಾವ್ಯಗಳಲ್ಲಿ ವರ್ಣಿಸಿದಂಥ ಎಂಟು ಮಂದಿ ಸ್ತ್ರೀಯರು.- ಅನ್ಯಾ [ಸ್ತ್ರೀಯಾ], ಪರಕೀಯಾ, ಸಾಧಾರಣಾ, [ಸಾಮಾನ್ಯಾ] ಇತ್ಯಾದಿ ಮುಖ್ಯ ಸ್ತ್ರೀಯರು. [೧೯] ಸಂಗೀತದಲ್ಲಿಯ ಬೇರೆ ಬೇರೆ ರಾಗ, ತಾಳ, ವಾದ್ಯ, ಮತ್ತು ನೃತ್ಯ, ಇವುಗಳ ಜ್ಞಾನ, ಸಮುಹೂರ್ತ [ಉತ್ತಮ ವೇಳೆ] ಒಳ್ಳೆಯ ದಿವಸ ಕಾಲ ಮತ್ತು ಬೇರೆ ಬೇರೆ ಪ್ರಸಂಗ [ವಿಷಯ] ಇವುಗಳ ಜ್ಞಾನ ಕೇಳಬೇಕು. [೨೦] ಹದಿನಾಲ್ಕು ವಿದ್ಯೆ [ನಾಲ್ಕು ವೇದ— ೧] ಋಗ್ವೇದ, ೨] ಯಜುರ್ವೇದ, ೩] ಸಾಮವೇದ, ೪] ಅಥರ್ವಣವೇದ, **ಆರುಶಾಸ್ತ್ರ**:– [ವೇದಾಂತ] ೧] ಶಿಕ್ಷಾ, 2] ಛಂದಸ್ಸು, ೩] ವ್ಯಾಕರಣ, ೪] ನಿರುಕ್ತ, ೫] ಕಲ್ಪ, ೬] ಜೋತಿಷ್ಯಶಾಸ್ತ್ರ. ಒಂದು ಮಿಮಾಂಸ, ಒಂದು ನ್ಯಾಯ, ಒಂದು ಇತಿಹಾಸ [ಧರ್ಮಶಾಸ್ತ್ರ], ಒಂದು ಪುರಾಣ ಒಟ್ಟು ೧೪ ವಿದ್ಯೆ] ಅರವತ್ನಾಲ್ಕು ಕಲೆಗಳು [ಗೀತ,ನೃತ್ಯ, ನಾಟ್ಯ, ಆಲೇಖ್ಯ [ಚಿತ್ರ] ಪುಷ್ಪಾಸ್ತರಣ [ಹೂವಿನ ಅಲಂಕಾರ] ವಾಚನ, ಕಾವ್ಯಾ, ಸಮಸ್ಯಾ, ಪೂರಣ, ಅಗಿಯುವ ತೋಡುವ ಕೆಲಸ, ಕೇಶಮಾರ್ಜನ, ಛಂದೋಜ್ಞಾನ, ಹಸ್ತಲಾಘವ, ಇವು ಮುಖ್ಯವಿದ್ದು ಇನ್ನೂ ಅನೇಕವಿರುವವು. ಆದರೆ ಗ್ರಂಥದಲ್ಲಿ ಒಮ್ಮತವಿಲ್ಲ,ಇದಲ್ಲದೇ ಸಾಹಿತ್ಯ ಶಾಸ್ತ್ರವಲ್ಲಿಯ ಅಷ್ಟಭಾವಗಳು, ಸ್ಥಂಭ, ಸ್ವೇದ, ರೋಮಾಂಚನ,ಸ್ವರಭಂಗ, ಥರ ಥರ ನಡಗುವದು, ವೈವರ್ಣ್ಯ, ಅಶ್ರು, ವಲಯ ಈ ಎಂಟು ಭಾವಗಳನ್ನು ಅರಿಯಬೇಕು. ಹಸ್ತಸಾಮುದ್ರಿಕ ಲಕ್ಷಣ, ಉತ್ತಮ ಪುರುಷನಲ್ಲಿ ಇರಬೇಕಾದ ಮೂವತ್ತೆರಡು ಲಕ್ಷಣಗಳು[ಸರ್ವಶುಭ ಲಕ್ಷಣ ಸಂಪನ್ನ]ಯಾವತ್ತೂ ಕಲಾ ಇವೆಲ್ಲವುಗಳ ಮಾಹಿತಿ ಕೇಳಬೇಕು.[೨೧]

ಮಂತ್ರ ಮೊಹರೆ ತೋಟಕೆ ಸಿದ್ಧೀ । ನಾನಾ ವಲ್ಲೀ ನಾನಾ ಔಷಧೀ ।
ಧಾತು ರಸಾಯಣ ಬುದ್ಧೀ । ನಾಡಿಜ್ಞಾನೇ ಏಕಾವೀ ॥೨೨॥

ಕೋಣ್ಯಾ ದೋಷೇ ಕೋಣ ರೋಗ। ಕೋಣಾ ರೋಗಾಸ ಕೋಣ ಪ್ರಯೋಗ ।
ಕೋಣ್ಯಾ ಪ್ರಯೋಗಾಸ ಕೋಣ ಯೋಗ । ಸಾಧೆ ತೋ ಏಕಾವಾ ॥೨೩॥

ರವರವಾದಿ ಕುಂಭಪಾಕ । ನಾನಾ ಯಾತನಾ ಯೆಮಲೋಕ ।
ಸುಖದುಃಖಾದಿ ಸ್ವರ್ಗನರ್ಕ । ಕೈಸಾ ತೋ ಏಕಾವಾ ॥೨೪॥

ಕೈಶಾ ನವವಿಧಾ ಭಕ್ತೀ । ಕೈಶಾ ಚತುರ್ವಿಧಾ ಮುಕ್ತೀ ।
ಕೈಸೀ ಪಾವಿಜೇ ಉತ್ತಮ ಗತೀ। ಏಸೇ ಹೇ ಏಕಾವೇ ॥೨೫॥

ಪಿಂಡ ಬ್ರಹ್ಮಾಂಡಾಚೀ ರಚನಾ । ನಾನಾ ತತ್ವ ವಿವಂಚನಾ ।
ಸಾರಾಸಾರ ವಿಚಾರಣಾ । ಕೈಸೀ ತೇ ಏಕಾವೀ ॥೨೬॥

ಸಾಯೋಜ್ಯತಾ ಮುಕ್ತೀ ಕೈಸೀ ಹೋತೇ । ಕೈಸೇ ಪಾವಿಜೇ ಮೋಕ್ಷಾತೇ ।
ಯಾ ಕಾರಣೇ ನಾನಾ ಮತೇ । ಶೋಧಿತ ಜಾವೀ ॥೨೭॥

ವೇದ ಶಾಸ್ತ್ರೇ ಆಣೀ ಪುರಾಣೇ । ಮಾಹಾ ವಾಕ್ಯಾಚೀ ಏವರಣೇ ।
ತನು ಚತುಷ್ಟಯ ನಿರ್ಶನೇ । ಕೈಸೀ ತೇ ಏಕಾವೀ ॥೨೮॥

ಏಸೇ ಹೇ ಅವಘೇಚಿ ಏಕಾವೇ । ಪರಂತು ಸಾರ ಶೋಧೂನ ಘ್ಯಾವೇ ।
ಅಸಾರ ತೇ ಜಾಣೋನಿ ತ್ಯಾಗಾವೇ । ಯಾ ನಾವ ಶ್ರವಣ ಭಕ್ತಿ ॥೨೯॥

ಮಂತ್ರ, ಔಷಧ ಮಣಿ, ತಾಯಿತ [ತಂತ್ರವಿದ್ಯೆ] ಸಿದ್ಧಿ, ವನಸ್ಪತಿಗಳು, ಅನೇಕ ಔಷಧ, ಧಾತು ರಸಾಯನ ಮಾಡುವ ರೀತಿ, ನಾಡೀ ಪರೀಕ್ಷಾ, ಇವೆಲ್ಲವುಗಳ ಬಗ್ಗೆ ಕೇಳಬೇಕು. ಯೋಗಿಯ ವ್ಯಕ್ತಿಗತ ಮನವು ಹ್ಯಾಗೆ ಹ್ಯಾಗೆ ವಿಶ್ವವಿಚಾರದಲ್ಲಿ ತದಾತ್ಮ್ಯ ಹೊಂದುತ್ತ ಹೋಗುವದೋ ಅದೇ ರೀತಿಯಲ್ಲಿ ಅದು ಅತ್ಯಂತ ಸೂಕ್ಷ್ಮ ಹಾಗೂ ವಿಶಾಲವಾಗುತ್ತ ಹೋಗುತ್ತದೆ. ತನ್ಮೂಲಕ ಪಂಚಮಹಾಭೂತಗಳ ಮೇಲೆ ಅಂಥ ಯೋಗಿಯ ಸ್ವಾಮಿತ್ವ ಸ್ಥಾಪಿತವಾಗುವದು. ಇದಕ್ಕೆ ಭೂತ ಜಯವೆನ್ನುವರು. ಭೂತಜಯ ಸಾಧಿಸಿದ ಯೋಗಿಯು ಶರೀರದಲ್ಲಿ ಅನೇಕ ಪ್ರಕಾರದ ವಿಲಕ್ಷಣ ಶಕ್ತಿಗಳು ಪ್ರಕಟವಾಗುವವು. ಇಂಥ ಅನೇಕ ಶಕ್ತಿಗಳಲ್ಲಿ ಮುಖ್ಯವಾಗಿ ಎಂಟು ಶಕ್ತಿಗಳು ಮಹತ್ವದವು. ಇವು ಅಷ್ಟಸಿದ್ಧಿಗಳೆಂದು ಪ್ರಸಿದ್ಧವಿರುವವು. ಮೊದಲನೆಯದು-"ಅಣಿಮಾ" ಅಂದರೆ ಅತ್ಯಂತ ಸೂಕ್ಷ್ಮತನ ತಂದುಕೊಳ್ಳುವ ಶಕ್ತಿಯು. ಎರಡನೆಯದು 'ಲಘಿಮಾ' ಅತ್ಯಂತ ಹಗುರಾಗುವ ಶಕ್ತಿಯು. ಮೂರನೆಯದು 'ಮಹಿಮಾ' ಅಂದರೆ ಅತ್ಯಂತ ವಿಶಾಲ ಹೊಂದುವ ಶಕ್ತಿಯು. ನಾಲ್ಕನೆಯದು 'ಪ್ರಾಪ್ತಿ' ಅಂದರೆ ಬೇಕೆನಿಸಿದ ವಸ್ತುಗಳನ್ನು ನಿರಾಯಾಸವಾಗಿ ಪಡೆದುಕೊಳ್ಳುವ ಶಕ್ತಿಯು. ಐದನೆಯದು 'ಪ್ರಾಕಾಮ್ಯ' ಅಂದರೆ ಸಂದರೆ ಸರ್ವ ಇಚ್ಛಾ ಫಲದ್ರೂಪ (ಪೂರ್ತಿ ಹೊಂದುವ)ವಾಗುವ ಶಕ್ತಿಯು. ಆರನೆಯದು 'ವಶಿತ್ವ' ಅಂದರೆ ಚರಾಚರ ಸೃಷ್ಟಿಯನ್ನು ವಶಪಡಿಸಿಕೊಳ್ಳುವ ಶಕ್ತಿಯು. ಏಳನೆಯದು 'ಈಶತ್ವ' ಅಂದರೆ ವಿಶ್ವದಲ್ಲಿಯ ಯಾವತ್ತೂ ಕಾರ್ಯಗಳ ಮೇಲೆ ಅಧಿಕಾರ (ಸ್ವಾಮಿತ್ವ) ನಡೆಸುವ ಶಕ್ತಿಯು. ಎಂಟನೆಯದು "ಗರಿಮಾ" ಅಂದರೆ "ಯತ್ರ ಕಾಮವಸಾಯಿತ್ವ" ಆಪ್ತಕಾಮ ಮತ್ತು ಪೂರ್ಣಕಾಮ ಹೊಂದುವದು. ಮತ್ತು ಬೇಕಾದಾಗ ಬೇಕಾದಲ್ಲಿಗೆ ಹೋಗಿ ಬರುವ ಶಕ್ತಿಯು. (೨೨) ಕಫ, ವಾತ, ಪಿತ್ತ, ಈ ದೋಷಗಳಲ್ಲಿ ಯಾವ ರೋಗ ಉಂಟಾಗುವದು? ಈ ರೋಗ ಗುಣಪಡಿಸಲಿಕ್ಕೆ ಯಾವ ಔಷಧ ಪ್ರಯೋಗ ಮಾಡಬೇಕು? ಇದಕ್ಕೆ ಅನುಕೂಲ ಕಾಲ ಯಾವುದು ? ಇವುಗಳ ಬಗ್ಗೆ ಕೇಳಬೇಕು. (೨೩) ನರಕಗಳಲ್ಲಿಯ ರೌರವ ಇತ್ಯಾದಿ ಮತ್ತು ಕುಂಭೀಪಾಕ ಹಾಗೂ ಅಲ್ಲಿಯ ಅನೇಕ ತರಹದ ಯಾತನೆ ಮತ್ತು ಯಮಲೋಕ, ಸ್ವರ್ಗದಲ್ಲಿಯ ಸುಖ, ನರಕದಲ್ಲಿಯ ದುಃಖ ಇವುಗಳ ಬಗ್ಗೆ ವಿವರ ಕೇಳಬೇಕು. (೨೪) ಭಕ್ತಿಯಲ್ಲಿಯ ಒಂಭತ್ತು ಪ್ರಕಾರಗಳನ್ನು ಮತ್ತು ೧) ಸಲೋಕತಾ, ೨) ಸಮೀಪತಾ, ೩) ಸಾರೂಪ್ಯತಾ, ೪) ಸಾಯುಜ್ಯತಾ, ಈ ನಾಲ್ಕು ಮುಕ್ತಿಗಳ ಬಗ್ಗೆ ಮತ್ತು ಉತ್ತಮ ಗತಿ (ಅಂತ್ಯದಲ್ಲಿ) ಹೊಂದುವ ಮಾರ್ಗದ ವಿವರಗಳನ್ನೆಲ್ಲವನ್ನೂ ಕೇಳಬೇಕು. (೨೫) ಪಿಂಡ ವಿಚಾರ, ಬ್ರಹ್ಮಾಂಡ ವಿಚಾರ, ಅನೇಕ ತತ್ವಗಳ ವಿವೇಚನೆ ಮತ್ತು ಸಾರಾಸಾರ ವಿಚಾರಗಳ ಬಗ್ಗೆ ಕೇಳಬೇಕು. [೨೬] ಸಾಯುಜ್ಯ ಮುಕ್ತಿ (ಜೀವವು ಶಿವನಲ್ಲಿ ಐಕ್ಯವಾಗುವಿಕೆ ಅರ್ಥಾತ್ ಜೀವವು ಶಿವನಲ್ಲಿ ತಾದಾತ್ಮ್ಯ ಹೊಂದುವದು) ಪ್ರಾಪ್ತಿಯ ವಿಚಾರ, ಮೋಕ್ಷ ಪ್ರಾಪ್ತಿ ಹೇಗೆ ಪ್ರಾಪ್ತವಾಗುವದು ಇದು ತಿಳಿದುಕೊಳ್ಳುವದಕ್ಕಾಗಿ ವಿವೇಚನಾತ್ಮಕ ನಾನಾ ಮತದ ಗ್ರಂಥ ಶೋಧಿಸಿ ನೋಡಬೇಕು. ಮತ್ತು ಸಂತರಿಂದ ಕೇಳಬೇಕು. (೨೭) ವೇದ, ಶಾಸ್ತ್ರ, ಪುರಾಣ, ಮಹಾವಾಕ್ಯದ "ತತ್ತ್ವಮಸಿ" ಇತ್ಯಾದಿಗಳ ಮೇಲೆ ರಚಿಸಿರುವ ಭಾಷ್ಯ ಗ್ರಂಥ. ನಾಲ್ಕು ದೇಹಗಳು ಅಂದರೆ ಸ್ಥೂಲ, ಸೂಕ್ಷ್ಮ, ಕಾರಣ, ಮಹಾ ಕಾರಣ ದೇಹಗಳು. ಇನ್ನು ನಿರಸನ [ಪರಿಹಾರ] ವರ್ಣನೆಯನ್ನು ಕೇಳಬೇಕು. **ಋಗ್ವೇದ**:- ಪ್ರಜ್ಞಾನಂಬ್ರಹ್ಮ, **ಯಜುರ್ವೇದ**:-ಅಹಂ ಬ್ರಹ್ಮಾಸ್ಮಿ, **ಸಾಮವೇದ**:- ತತ್ತ್ವಮಸಿ, **ಅಥರ್ವವೇದ**:-ಅಯಮಾತ್ಮಾ ಬ್ರಹ್ಮ ಇವು ನಾಲ್ಕು ವೇದಗಳ ನಾಲ್ಕು ನಾಲ್ಕು ಮಹಾವಾಕ್ಯಗಳಿರುವವು. ಸ್ಥೂಲ, ಸೂಕ್ಷ್ಮ, ಕಾರಣ ಮಹಾಕಾರಣ ಇವು ಪಿಂಡ ದೇಹದ ನಾಲ್ಕು ಪ್ರಕಾರಗಳಿರುವವು. [೨೮] ಈ ಪ್ರಕಾರವಾಗಿ ಮೇಲೆ ವಿವರಿಸಿದ ಎಲ್ಲ ವಿಷಯಗಳನ್ನು ಕೇಳಬೇಕು. ಆದರೆ ಅವುಗಳಲ್ಲಿಯ ತತ್ವಾಂಶ ಅಥವಾ ರಹಸ್ಯವನ್ನಷ್ಟೇ ಶೋಧಿಸಿ ಗ್ರಹಣ ಮಾಡಬೇಕು. ಯಾವುದು ಅಸಾರ (ಸಾರರಹಿತ, ಅರ್ಥವಿಲ್ಲದ) ಮತ್ತು ವ್ಯರ್ಥ, ನಿರುಪಯೋಗಿ, ಇರುವದನ್ನೆಲ್ಲ ತಿಳಿದು ನೋಡಿ ತ್ಯಜಿಸಬೇಕು. ಇದಕ್ಕೆ ಶ್ರವಣ ಭಕ್ತಿ ಅನ್ನುವರು. (೨೯)

ಸಗುಣಾಚೀ ಚರಿತ್ರೇ ಏಕಾವೀ । ಕಾ ತೇ ನಿರ್ಗುಣ ಅಧ್ಯಾತ್ಮೇ ಶೋಧಾವೀ ।
ಶ್ರವಣ ಭಕ್ತೀಚೀ ಜಾಣಾವೀ । ಲಕ್ಷಣೇ ಐಸೀ ॥೩೦॥

ಸಗುಣ ದೇವಾಚೀ ಚರಿತ್ರೇ । ನಿರ್ಗುಣಾಚೀ ತತ್ತ್ವೇ ಯಂತ್ರೇ ।
ಹೇ ದೋನೀ ಪರಮ ಪವಿತ್ರೇ । ಏಕತ ಜಾವೀ ॥೩೧॥

ಜಯಂತ್ಯಾ ಉಪ್ಪೋಷಣೇ ನಾನಾಸಾಧನೇ । ಮಂತ್ರ ಯಂತ್ರ ಜಪ ಧ್ಯಾನೇ ।
ಕೀರ್ತಿ ಸ್ತುತೀ ಸ್ತವನೇ ಭಜನೇ । ನಾನಾ ವಿಧೇ ಐಕಾವೀ ॥೩೨॥

ಐಸೇ ಶ್ರವಣ ಸಗುಣಾಚೇ । ಅಧ್ಯಾತ್ಮನಿರೂಪಣ ನಿರ್ಗುಣಾಚೇ ।
ವಿಭಕ್ತೀ ಸಾಂಡೂನ ಭಕ್ತೀಚೇ । ಮೂಳ ಶೋಧಾವೇ ॥೩೩॥

ಶ್ರವಣ ಭಕ್ತೀಚೇ ನಿರೂಪಣ । ನಿರೋಪಿಲೇ ಅಸೇ ಜಾಣ ।
ಪುಢೇ ಕೀರ್ತನ ಭಜನಾಚೇ ಲಕ್ಷಣ । ಬೋಲಿಲೇ ಅಸೇ ॥೩೪॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
ಶ್ರವಣ ಭಕ್ತಿ ನಿರೂಪಣನಾಮ ಸಮಾಸ ಪ್ರಥಮ ॥

● — ●

ಭಗವಂತನ ಸಗುಣ ಅವತಾರದ ಮತ್ತು ಭಕ್ತರ ಚರಿತ್ರೆಗಳನ್ನು ಕೇಳಬೇಕು. ಭಗವಂತನ ನಿರ್ಗುಣ ಸ್ವರೂಪದ ಬಗ್ಗೆ ಆತ್ಮ ವಿಚಾರದಿಂದ ಚೆನ್ನಾಗಿ ತಿಳಿದುಕೊಳ್ಳಬೇಕು. ಇವೆಲ್ಲ ಶ್ರವಣ ಭಕ್ತಿಯ ಲಕ್ಷಣಗಳಾಗಿರುವವು. ಇವುಗಳನ್ನೂ ಚನ್ನಾಗಿ ತಿಳಿದುಕೊಳ್ಳಬೇಕು. [೩೦] ಭಗವಂತನ ಸಗುಣ ಸ್ವರೂಪದ ವರ್ಣನೆ ಅಂದರೆ ಅವನು ಸಗುಣ ಅವತಾರ ಧರಿಸಿ ಮಾಡಿದ ಕಾರ್ಯ ಹಾಗೂ ಸಗುಣ ಸ್ವರೂಪದ ವರ್ಣನೆ- ಅಂದರೆ ಪುರಾಣ, ಕಥೆ, ಚರಿತ್ರಾದಿಗಳು. ಅವನ ನಿರ್ಗುಣ ಸ್ವರೂಪದ ವರ್ಣನೆ ಅಂದರೆ ತತ್ವ ಮೀಮಾಂಸೆ [ಆತ್ಮಜ್ಞಾನ ಪ್ರತಿಪಾದಕ ಗ್ರಂಥಾದಿಗಳು]ಯಾಗಿದೆ. ಇವೆರಡೂ ಪವಿತ್ರವಾದವುಗಳು. ಇವನ್ನೆಲ್ಲ ಕೇಳಬೇಕು. [೩೧] ಸಗುಣ ಅವತಾರದ ವಿಷಯದಲ್ಲಿ ಜಯಂತಿ [ರಾಮ, ಕೃಷ್ಣ, ಶಿವ, ದತ್ತ, ಹನುಮಂತ, ಶಕ್ತಿದೇವತಾದಿಗಳ] ಉತ್ಸವ, ಉಪೋಷಣ, ಅನೇಕ ಸಾಧನಗಳು, ಮಂತ್ರ ಯಂತ್ರ, ಜಪ, ಧ್ಯಾನ, ಕೀರ್ತಿ, ವರ್ಣನೆ, ಸ್ತುತಿ, ಗಾಯನ, ಸ್ತೋತ್ರ, ಭಜನ, ಇತ್ಯಾದಿಗಳು ಇವನ್ನೆಲ್ಲ ಕೇಳಬೇಕು.[೩೨] ಒಟ್ಟಿನಲ್ಲಿ ಹೇಳುವದೇನೆಂದರೆ, ಸಗುಣ ಚರಿತ್ರದ ಶ್ರವಣ ಮಾಡಬೇಕು. ನಿರ್ಗುಣ ರೂಪದ ಜ್ಞಾನವಮಾಡಿಕೊಳ್ಳಬೇಕು. ಮತ್ತು ಭಗವಂತನು ಬೇರೆಯಾಗಿರುವನೆಂಬುದನ್ನು ಬಿಟ್ಟುಕೊಟ್ಟು ಅವನ ಕೂಡ ತದಾಕಾರ ಸಾಧಿಸುವ ರಹಸ್ಯದ ಶೋಧ ಮಾಡಬೇಕು. ಭಗವಂತನಲ್ಲಿ ಭೇದ [ದ್ವೈತ ತ್ಯಜಿಸಿ ಏಕರೂಪತೆಯು [ಅದ್ವೈತವು] ಹೇಗೆ ಸಾಧಿಸೀತು ಎಂದು ಹೆಚ್ಚಾಗಿ ವಿಚಾರ ಮಾಡಬೇಕು. [೩೩] ಇಲ್ಲಿಯವರೆಗೆ ಶ್ರವಣ ಭಕ್ತಿಯ ವರ್ಣನೆಯನ್ನು ಮಾಡಿದ್ದಾಯಿತು. ಮುಂದಿನ ಸಮಾಸದಲ್ಲಿ ಕೀರ್ತನ ಹಾಗೂ ಭಜನ ಇವುಗಳ ಲಕ್ಷಣಗಳನ್ನು ವಿವರಿಸುತ್ತೇವೆ. [೩೪]

ಶ್ರೀ ದಾಸಬೋಧದ ಗುರು ಶಿಷ್ಯರ ಸಂವಾದದೊಳಗಿನ ನಾಲ್ಕನೆಯ ದಶಕದಲ್ಲಿಯ
"ಶ್ರವಣ ಭಕ್ತಿ ನಿರೂಪಣ" ನಾಮ ಒಂದನೆಯ ಸಮಾಸವು ಮುಗಿದುದು.

೦ ೦

### ಸಮಾಸ ದ್ವಿತೀಯ : ಕೀರ್ತನ ಭಕ್ತಿ

॥ಶ್ರೀರಾಮ॥ ಶ್ರೋತೀ ಭಗವದ್ಭಜನ ಪುಸಿಲೇ। ತೇ ನವವಿಧಾ ಪ್ರಕಾರೇ ಬೋಲಿಲೇ।
ತ್ಯಾಂತ ಪ್ರಥಮ ಶ್ರವಣ ನಿರೋಪಿಲೇ । ದುಸರೇ ಕೀರ್ತನ ಏಕಾ ॥೧॥

ಸಗುಣ ಹರಿಕಥಾ ಕರಾವೀ । ಭಗವತ್ಕೀರ್ತಿ ವಾಢವಾವೀ ।
ಅಖಂಡ ವೈಖರೀ ವದವಾವೀ । ಯೆಥಾಯೋಗ್ಯ ॥೨॥

ಬಹುತ ಕರಾವೇ ಪಾಠಾಂತರ । ಕಂಠೀ ಧರಾವೇ ಗ್ರಂಥಾಂತರ ।
ಭಗವತ್ಕಥಾ ನಿರಂತರ । ಕರೀತ ಜಾವೀ ॥೩॥

## ದಶಕ ೪. ಸಮಾಸ ೨. ಕೀರ್ತನ ಭಕ್ತಿ (ನುಡಿ ೩೧)

ಒಬ್ಬನೇ ಒಬ್ಬ ಪರಮಾತ್ಮ ಅವಿನಾಶಿಯಾಗಿರುವನು. ಆನಂದರೂಪನಿರುವನು. ಅವನು ನಮ್ಮ ಹೃದಯದಲ್ಲಿ ವಾಸವಾಗಿರುವನು. ಇವನು ನಮ್ಮ ಹೃದಯದ ಸ್ಥಾನ ಬಿಟ್ಟು ಎಂದೂ ಎಲ್ಲಿಯೂ ಹೋಗುವದಿಲ್ಲ. ಆದರೆ ನಮ್ಮ ದುರ್ದೈವದಿಂದಾಗಿ ಅಂತ್ಯವು ಶೋಕರೂಪದಲ್ಲಿ ಪರ್ಯವಸಾನಗೊಂಡಿದೆ. ಯಾಕಂದರೆ ನಮ್ಮ ಜೀವವು ಒಳಗಿರುವ ಆನಂದರೂಪ ಭಗವಂತನ ಕಡಗೆ ಬೆನ್ನು ಮಾಡಿದೆ. ಹಾಗೂ ವಿನಾಶಿ, ಅನಿತ್ಯ ದುಃಖಮಯವಾದ ಪ್ರಪಂಚದ ಕಡೆಗೆ ಮುಖ ಮಾಡಿ ಧಾವಿಸುತ್ತದೆ. ಸಂಸಾರದ ಕಡೆಗೆ ಬೆನ್ನು ಮಾಡಿ ಜೀವವು ಹೃದಯಸ್ಥ ಭಗವಂತನ ಕಡೆಗೆ ಒಮ್ಮೆ ತಿರುಗಿದರೆ ಸಾಕು. ಭಕ್ತಿಯ ಜನ್ಮವಾಯಿತೆಂದು ತಿಳಿಯಬೇಕು. ಜ್ಞಾನ ಮತ್ತು ಭಕ್ತಿ ಇವುಗಳಲ್ಲಿ ಒಂದು ದೊಡ್ಡ ಮಹದಂತರವಿದೆ. ಅಂತಃಕರುಣದಲ್ಲಿ ವಿವೇಕ, ವೈರಾಗ್ಯ, ಶಮೆ, ದಮೆ, ಆತ್ಮ ಸಂಯಮ, ಇಂದ್ರಿಯ ನಿಗ್ರಹ, ದೈವೀಸಂಪತ್ತು ಇದ್ದರೇನೇ ಜ್ಞಾನವು ಅಲ್ಲಿ ಇರುತ್ತದೆ. ಆದರೆ "ಅವನು ಇದ್ದಾನೆ ಮತ್ತು ನಾನು ಅವನವನಾಗಿದ್ದೇನೆ" ಈ ಭಾವ ಅಂತಃಕರುಣದಲ್ಲಿ ಉತ್ಪನ್ನವಾದರೆ ಅಲ್ಲಿ ಭಕ್ತಿಯು ಇರುವದು. ಈ ಭಾವ ಬಂದರೆ ಜೀವವು ಪೂರ್ಣ ಶುದ್ಧ ಮತ್ತು ಪವಿತ್ರವಾಗುವದು. ಇದರಲ್ಲಿ ಸಂಶಯಕ್ಕೆ ಸ್ಥಳವಿಲ್ಲ. ಹೇಗೆ ಹೇಗೆ ಭಾವ ಸ್ಥಿರಗೊಳ್ಳುತ್ತ ಹೋಗುವದೋ ಆಯಾ ರೀತಿಯಲ್ಲಿ ಜೀವವು ಒಳಗೂ ಹೊರಗೂ ಪ್ರೇಮದಿಂದ ತುಂಬ ಹತ್ತುವದು. ಪ್ರೇಮವು ಹೆಚ್ಚುತ್ತ ಹೋಗುವದು. ಆಗ ಭಗವಂತನ ವಿಷಯದಲ್ಲಿ ಅಡ್ಡ ಬರುವಂಥ ಅಡ್ಡಿ ಅಡಚಣಿ, ದೋಷ, ದುಮ್ಮಾನಗಳು ತಮ್ಮಷ್ಟಕ್ಕೆ ತಾವೇ ಇಲ್ಲದಂತಾಗುವವು. ಮತ್ತು ಜೀವವು ಪವಿತ್ರವಾಗುತ್ತದೆ. "ನಾನು ಅವನವನಾಗಿದ್ದೇನೆ" ಈ ಭಾವವು ಯಾವ ಜೀವದಲ್ಲಿ ಎಂದು ಮತ್ತು ಹೇಗೆ ಉತ್ಪನ್ನವಾಗುವದೆಂಬುದನ್ನು ಹೇಳಲಿಕ್ಕೆ ಬರುವದಿಲ್ಲ. ಕೆಲವರಲ್ಲಿ ಕೇವಲ ಶ್ರವಣದಿಂದ, ಕೆಲವರಲ್ಲಿ ಕೀರ್ತನದಿಂದ, ಕೆಲವರಲ್ಲಿ ನಾಮಸ್ಮರಣದಿಂದ, ಕೆಲವರಲ್ಲಿ ಪಾದಸೇವನೆ ಅಥವಾ ಅರ್ಚನದಿಂದ ಭಕ್ತಿಯ ಭಾವ ಉದಯವಾಗುತ್ತದೆ. ಇದರಿಂದ ಭಕ್ತಿಯ ಒಂಭತ್ತು ಪ್ರಕಾರಗಳು ಪ್ರತ್ಯೇಕವಾಗಿ ಒಂದೊಂದು ಸ್ವತಂತ್ರವಾಗಿರುವವು. ಇದೆಲ್ಲ ನಿಜವಾದದ್ದೇ,ಆದರೆ ಮನುಷ್ಯನು ಬಹಳಷ್ಟು ಕೇಳಿದ ನಂತರ ಅದನ್ನು ಇನ್ನೊಬ್ಬರಿಗೆ ಹೇಳದೇ ಇರಲಾರನು. ಅವನು ಮೂಕನಂತೆ ಸ್ವಸ್ಥ ಕೂಡಲಿಕ್ಕಾಗುವದಿಲ್ಲ. ಈ ಕಾರಣದಿಂದಲೇ ಶ್ರವಣ ಮಾಡಿದ ನಂತರ ಕೀರ್ತನವು ಸ್ವಾಭಾವಿಕವಾಗಿ ಬರುವದು. ಸಭೆಯಲ್ಲಿ ಭಗವಂತನ ಗುಣಗಾನ ಮಾಡುವದರಿಂದ ಹೇಳುವವ ಮತ್ತು ಕೇಳುವವರಿಬ್ಬರೂ ಆನಂದಾಮೃತ ಸವಿಯುವರು. ಇದರಿಂದ ಅನೇಕ ಜನ ಭಗವಂತನ ಕಡೆಗೆ ತಿರುಗುವರು,

### ದಶಕ ೪. ಸಮಾಸ : ೨ ಕೀರ್ತನ ಭಕ್ತಿ (ನುಡಿ ೩೧)

ಯಾರಿಗೆ ಭಗವಂತನ ಭಜನ ಭಕ್ತಿ ಬೇಕಾಗಿದೆಯೋ ಅವರು ತಮ್ಮ ವಾಣಿಯ ನಾಲಿಗೆಯನ್ನು, ಶಬ್ದ ಗಳನ್ನು ಭಗವಂತನ ಗುಣಗಾನಕ್ಕಾಗಿ ಅರ್ಪಿಸಬೇಕು. ವಾಣಿಗೆ ಶಬ್ದಗಳಿಗೆ ಯೋಗ್ಯತೆ ಬರುವದಕ್ಕಾಗಿ ಉತ್ತಮ ಗ್ರಂಥಾವಲೋಕನ ಮಾಡಬೇಕು. ಚನ್ನಾಗಿ ಪಾಠಾಂತರ (ಮತ್ತೆ ಮತ್ತೆ ಪುಸ್ತಕಾವಲೋಕನ)ವಿರಬೇಕು. ಕೀರ್ತನದಲ್ಲಿ ಮನಃಪೂರ್ವಕ ಪ್ರೇಮವಿರಬೇಕು. "ಭಗವಂತನ ಭಜನೆ ಅಂದರೆ ಏನು ?" ಹೀಗೆ ಶ್ರೋತೃವು ಗುರುವಿಗೆ ಪ್ರಶ್ನೆ ಮಾಡುತ್ತಾನೆ. ಅವು ಒಂಭತ್ತು ಪ್ರಕಾರದವು ಇರುವವೆಂದು ಗುರುಗಳು ಹೇಳಿದ್ದರು. ಇವುಗಳಲ್ಲಿ ಶ್ರವಣ ಭಕ್ತಿಯ ಬಗ್ಗೆ ಈಗಾಗಲೇ ವರ್ಣನೆ ಮಾಡಿ ತಿಳಿಸಿ ಹೇಳಿದರು. ಈಗ ಎರಡನೆಯದಾದ ಕೀರ್ತನ ಭಕ್ತಿಯ ಬಗ್ಗೆ ವರ್ಣನೆ ಯನ್ನು ಕೇಳುವವರಾಗಿರಿ (೧) ಭಗವಂತನ ಸಗುಣ ಸ್ವರೂಪದ ಕಥೆ ಹೇಳಬೇಕು. ಭಗವಂತನ ಕೀರ್ತಿ, ಮಹಿಮೆ ಬೆಳೆಯುವಂತೆ ವರ್ತಿಸಬೇಕು. ಅದಕ್ಕಾಗಿ ಕೀರ್ತನಕಾರನು ತನ್ನ ವಾಣಿಯನ್ನು ಯಾವಾಗಲೂ ಸ್ಪಷ್ಟ, ನಿರ್ಮಲ, ಕಳಕಳಿಯಿಂದ ಕೂಡಿದ ಭಾವಭರಿತವಾಗಿಡಬೇಕು.(೨) ಗ್ರಂಥಗಳನ್ನು ಬಹಳಷ್ಟು ಪಾಠಾಂತರ (ಪುನರಾವಲೋಕನ) ಮಾಡಿಕೊಂಡಿರಬೇಕು. ಮತ್ತು ಮುಖ್ಯ ಮುಖ್ಯ ಭಾಗಗಳನ್ನು ಮುಖೋದ್ಗತ ಮಾಡಿಕೊಂಡಿರಬೇಕು. ಹಾಗೂ ಸತತವಾಗಿ ಭಗವಂತನ ಕಥೆಯನ್ನು ಹೊಗಳುತ್ತಲಿರಬೇಕು. (೩)

ಆಪುಲಿಯಾ ಸುಖಸ್ವಾರ್ಥಾ । ಕೇಲೀಚ ಕರಾವೀ ಹರಿಕಥಾ ।
ಹರಿಕಥೆವೀಣ ಸರ್ವಥಾ । ರಾಹೊಚಿ ನಯೇ ॥೪॥

ನಿತ್ಯ ನವಾ ಹವ್ಯಾಸ ಧರಾವಾ । ಸಾಕ್ಷೇಪ ಅತ್ಯಂತಚಿ ಕರಾವಾ ।
ಹರಿಕೀರ್ತನೇ ಭರಾವಾ । ಬ್ರಹ್ಮಗೋಳ ಅವಘಾ ॥೫॥

ಮನಾಪಾಸೂನ ಆವಡೀ । ಜೀವಾಪಾಸೂನ ಅತ್ಯಂತ ಗೋಡೀ ।
ಸದಾ ಸರ್ವದಾ ತಾಂತಡೀ । ಹರಿಕೀರ್ತನಾಚೀ ॥೬॥

ಭಗವಂತಾಸ ಕೀರ್ತನ ಪ್ರಿಯ । ಕೀರ್ತನೇ ಸಮಾಧಾನ ಹೋಯ ।
ಬಹುತ ಜನಾಸೀ ಉಪಾಯ । ಹರಿಕೀರ್ತನೇ ಕಲಿಯುಗೀ ॥೭॥

ವಿವಿಧ ವಿಚಿತ್ರೇ ಧ್ಯಾನೇ । ವರ್ಣಾವೀ ಅಳಂಕಾರ ಭೂಷಣೇ ।
ಧ್ಯಾನಮೂರ್ತಿ ಅಂತಃಕರಣೇ । ಲಕ್ಷೂನ ಕಥಾ ಕರಾವೀ ॥೮॥

ಯಶಕೀರ್ತಿ ಪ್ರತಾಪ ಮಹಿಮಾ । ಆವಡೀ ವರ್ಣಾವಾ ಪರಮಾತ್ಮಾ ।
ಜೇಣೇ ಭಗವದ್ಭಕ್ತಾಂಚಾ ಆತ್ಮಾ । ಸಂತುಷ್ಟ ಹೋಯ ॥೯॥

ಕಥಾಅನ್ವಯ ಲಾಪಣಿಕಾ । ನಾಮಘೋಷ ಕರತಾಳಿಕಾ ।
ಪ್ರಸಂಗೇ ಬೋಲಾವ್ಯಾ ಅನೇಕಾ । ಧಾತಮಾತಾ ನೇಮಸ್ತ ॥೧೦॥

ತಾಳ ಮೃದಂಗ ಹರಿಕೀರ್ತನ । ಸಂಗೀತ ನೃತ್ಯ ತಾನಮಾನ ।
ನಾನಾ ಕಥಾನುಸಂಧಾನ । ತುಟೋಂಚಿ ನೇದಾವೇ ॥೧೧॥

ಕರುಣಾಕೀರ್ತ ನಾಚ್ಯಾ ಲೋಟೀ । ಕಥಾ ಕರಾವೀ ಘಡ ಘಡಾಟೀ ।
ಶ್ರೋತಯಾಂಚೀ ಶ್ರವಣ ಪುಟೀ । ಆನಂದೇ ಭರಾವೀ ॥೧೨॥

ಕಂಪ ರೋಮಾಂಚ ಸ್ಫುರಾಣೇ । ಪ್ರೇಮಾಶ್ರುಸಹಿತ ಗಾಣೇ ।
ದೇವದ್ವಾರೀ ಲೋಟಾಂಗಣೇ । ನಮಸ್ಕಾರ ಘಾಲಾವೇ ॥೧೩॥

ನಮ್ಮ ಸ್ವಾನಂದ ಸುಖದ ಸ್ವಾರ್ಥವನ್ನು ಸಾಧಿಸುವದಕ್ಕಾಗಿ, ಅದು ನಮ್ಮ ಕೈವಶವಾಗುವದಕ್ಕಾಗಿ, ನಮ್ಮ ಹಿತಸಾಧನೆಗಾಗಿ ತಿರುತಿರುಗಿ, ಪುನಃ ಪುನಃ ಭಜನೆ ಹಾಗೂ ಹರಿಕಥೆ ಮಾಡಬೇಕು. ಭಜನೆ,ಹರಿಕಥೆ ಮಾಡದೇ ಎಂದೂ ಇರಬಾರದು. (೪) ನೀವು ಹೇಳುವ ಭಜನೆ ವ ಹರಿಕಥೆಯಲ್ಲಿ ಪ್ರತಿಸಲ ಹೊಸತನ ತರುವ ಹವ್ಯಾಸ ವಿರಬೇಕು. ಇದಕ್ಕಾಗಿ ಬಹಳಷ್ಟು ಪ್ರಯತ್ನ ಮಾಡಬೇಕು. ಹರಿಕೀರ್ತನದಿಂದ ವಿಶ್ವವೆಲ್ಲವನ್ನು ತುಂಬಬೇಕು. (೫) ಭಗವಂತನ ಗುಣಗಾನವನ್ನು ಪ್ರೇಮದಿಂದ ಮಾಡುವ ಮನಸ್ಸಿನ ನಿರ್ಧಾರವಿರಬೇಕು, ಭಗವಂತನನ್ನು ಜೀವಕ್ಕಿಂತ ಹೆಚ್ಚಿಗೆ ಪ್ರೀತಿಸುವದು ಅವಶ್ಯ, ಸರ್ವಕಾಲದಲ್ಲಿಯೂ ಭಗವಂತನ ವಿಷಯದಲ್ಲಿ ಉತ್ಸುಕತೆ ಇರಬೇಕು. (೬) ಭಗವಂತನಿಗೆ ಸ್ವತಃ (ಖುದ್ದಾಗಿ) ಕೀರ್ತನವು ಆನಂದ ಕೊಡುವದು. ಆದ್ದರಿಂದ ಭಗವಂತನ ಕೀರ್ತನದಲ್ಲಿ ಆನಂದ ಮತ್ತು ಬಹಳ ಪ್ರೇಮ ಹುಟ್ಟುವಂತೆ, ಅಂದರೆ ಕೇಳುವ ಭಕ್ತರಿಗೂ ಸಹ ಹರ್ಷವಾಗುವಂತೆ ಭಗವಂತನ ವರ್ಣನೆ ಮಾಡಬೇಕು. ಕೀರ್ತನದಲ್ಲಿ ಕಥೆ. ವಿನೋದ, ತಮಾಷೆಯ ಗಮ್ಮತ್ತಿನ ಸಣ್ಣ ಸಣ್ಣ ಕಥೆಗಳು, ಗಾಯನ, ನರ್ತನ ಇತ್ಯಾದಿಗಳೆಲ್ಲ ಹಿತಮಿತ ಪ್ರಮಾಣದಲ್ಲಿರಬೇಕು. ಆದರೆ ಮೂಲ ಕಥೆಗೆ ಸರಿ ಹೊಂದುವಂತಿರಬೇಕು. ವಿಷಯಾಂತರ ವಿರಬಾರದೆಂಬುದನ್ನು ಯಾವಾಗಲೂ ಮರೆಯಬಾರದು. ಭಗವಂತನಿಗೆ ಕೀರ್ತನವೆಂದರೆ ಬಹಳ ಪ್ರೀತಿ. ಕೀರ್ತನದಿಂದ ಹೇಳುವವರಿಗೂ, ಕೇಳುವವರಿಗೂ ಸಮಾಧಾನ ಶಾಂತಿ ದೊರೆಯುವದು. ಕಲಿಯುಗದಲ್ಲಿಯಂತೂ ಬಹುಜನರಿಗೆ ಕೀರ್ತನದಿಂದಲೇ (ಹರಿಕಥೆಯನ್ನು ಕೇಳುವದರಿಂದಲೇ) ಉದ್ಧಾರ ಹೊಂದುವ ಉಪಾಯ ಗೊತ್ತಾಗುವದು. (೭) ಭಗವಂತನು ಅವತಾರ ಮಾಡಿದ ಹಾಗೂ ಇತರ ಅನೇಕ ಸಗುಣರೂಪಗಳ ಹಾಗೂ ಅವನ ಅವಯವ, ಅಲಂಕಾರ• ಭೂಷಣ ಇತ್ಯಾದಿಗಳನ್ನೂ ಕೀರ್ತನದಲ್ಲಿ ಸುಂದರವಾಗಿ ವರ್ಣಿಸಬೇಕು. ನೀವು ಯಾವ ಉಪಾಸ್ಯ ದೇವತೆಯ ಧ್ಯಾನ ಮಾಡುವಿರೋ ಆ ದೇವತಾ ಮೂರ್ತಿಯನ್ನು ಅಂತಃಕರಣದಲ್ಲಿ ಮೊದಲು ಧ್ಯಾನಿಸಿ ನೋಡಿ ಆ ಮೂರ್ತಿಯನ್ನು ಕಣ್ಣು ಮುಂದೆ ತಂದುಕೊಂಡು ಕೀರ್ತನ ಕಥೆಯನ್ನು ಪ್ರಾರಂಭಿಸಬೇಕು. ಆ ದೇವತೆಯ ಮುಂದೆಯೇ ನಾನು ಕೀರ್ತನ ಮಾಡುತ್ತಿರುವೆನೆಂದು ತಿಳಿದು ಕೀರ್ತನೆ ಮಾಡಬೇಕು· (೮) ಭಗವಂತನ ಯಶ, ಅವನ ಕೀರ್ತಿ, ಅವನ ಪ್ರತಾಪ ಮತ್ತು ಮಹಿಮೆಗಳನ್ನೆಲ್ಲ ಬಹು ಪ್ರೀತಿಯಿಂದ, ಹುರುಪಿನಿಂದ ವರ್ಣನ ಮಾಡಬೇಕು. ಈ ಭಗವಂತನ ಗುಣ ವರ್ಣನೆಯನ್ನು ಒಳ್ಳೇ ರಸವತ್ತಾಗಿ ವರ್ಣಿಸಬೇಕು. ಹೀಗೆ ಮಾಡುವದರಿಂದ ಅವನ ಭಕ್ತರ ಆತ್ಮವು ಸಂತುಷ್ಟಗೊಂಡು ನಲಿದಾಡುವಂತಾಗುತ್ತದೆ. (೯) ಕಥೆ ಹೇಳುವಾಗ ಅದರಲ್ಲಿ ಸುಸಂಗತಿ ಇರಬೇಕು. ಹೇಳುವ ಶಬ್ದಗಳ ಮೇಲೆ ಯುಕ್ತಿವಾದ ಮಾಡಬೇಕು. ನಡು ನಡುವೆ ಭಗವಂತನ ನಾಮಘೋಷ ಮಾಡಬೇಕು. ಮತ್ತು ಜನರಿಂದಲೂ ಸಹ ಮಾಡಿಸಬೇಕು. ಎಲ್ಲರೂ ಕೈಯಿಂದ ಚಪ್ಪಾಳೆ ತಟ್ಟಿ ಹರ್ಷ ಸೂಚಿಸಬೇಕು. ಇದಲ್ಲದೇ ಆಯಾ ಪ್ರಸಂಗಕ್ಕನು ಸಾರವಾಗಿ ಒಂದು ಕಾಲ್ಪನಿಕ ಬೋಧ ಕಥೆ, ಅಥವಾ ಸತ್ಯ ಕಥೆ ತಪ್ಪದೇ ಹೇಳಬೇಕು. (೧೦) ತಾಳ, ಮೃದಂಗ, ಗಾಯನ, ನೃತ್ಯ, ಆಲಾಪಾದಿಗಳಿಂದ ಸಹ ಭಗವಂತನ ಕೀರ್ತನ ಮಾಡಬೇಕು. ಹೀಗೆ ಮಾಡುವಾಗ ಕಥೆಯ ಹಿಂದಿನ ಹಾಗೂ ಮುಂದಿನ ವಿಷಯದ ಸಂಬಂಧವು ವ್ಯತ್ಯಾಸಗೊಳ್ಳದಂತೆ, ವಿಷಯಾಂತರವಾಗದಂತೆ ಲಕ್ಷ್ಯಗೊಟ್ಟು ಕೀರ್ತನ ಮಾಡಬೇಕು (೧೧) ಕೀರ್ತನದ ಬಾಹ್ಯಾಂಗದಲ್ಲಿ ಮೇಲೆ ಹೇಳಿದವುಗಳ ಹೊರತಾಗಿ ಕರುಣಾರಸವೂ ಇರಬೇಕು. ಪ್ರೇಮದ ಸಾತ್ವಿಕಭಾವವಿರಬೇಕು. ಮಧ್ಯದಲ್ಲಿ ಅನೇಕ ಪ್ರಕಾರದ ಕಾವ್ಯ ಅಂದು ತೋರಿಸಬೇಕು, ಇವರ ಕೂಡ ಶೃಂಗಾರ ರಸ ಸಹಿತ ಎಲ್ಲ ರಸಗಳೂ ಮಿತವಾಗಿ ಇರಬೇಕು, ಮತ್ತು ಕೀರ್ತನದಲ್ಲಿ ಶಾಸ್ತ್ರಾಧಾರ ಸಹ ಹೇಳುತ್ತಿರ ಬೇಕು. ಕಥೆ ಹೇಳುವ ಭರದಲ್ಲಿ ಕರುಣಾರಸದ ಹೊಳೆಯೇ ಹರಿಯುವಂತೆ ಹೃದಯ ತುಂಬಿ ಹೇಳಬೇಕು. ಶ್ರೋತೃ ಗಳ ಕಿವಿಯಲ್ಲಿ ಆನಂದಾಮೃತ ತುಂಬಿ ಹೊರಸೂಸುವಂತೆ ಮಾಡಬೇಕು. (೧೨) ಕಥೆ ಹೇಳುತ್ತ ಹೋದಂತೆ ಅದು ಸಾತ್ವಿಕ ಭಾವದಿಂದ ಮನತುಂಬಿ ಬರಬೇಕು. ಶರೀರ ಕಂಪನ, ಮೈಕೂದಲು ನೆಟ್ಟಗಾಗುವದು, ಮೈ ಗುಗ್ಗರಿಗಟು ವದು, ಕುಣಿದಾಡಬೇಕೆನಿಸುವದು, ಪ್ರೇಮಾಶ್ರುಗಳುದುರುವದು, ಹಾಡಹತ್ತುವದು, ಇತ್ಯಾದಿಗಳು ಆವರಿಸಲಿಕ್ಕಾಗ ದಂತೆ ಮಾಡುವವು. ಆಗ ದೇವರ ಮುಂದೆ ಸಾಷ್ಟಾಂಗ ನಮಸ್ಕಾರ ಹಾಕಬೇಕು. (೧೩)

ಪದೇ ದೋಹಡೆ ಶ್ಲೋಕ ಪ್ರಬಂದ । ಘಾಟೀ ಮುದ್ರಾ ಅನೇಕ ಛಂದ ।
ವೀರಭಾಟಿವ ವಿನೋದ । ಪ್ರಸಂಗೇ ಕರಾವೆ ॥೧೪॥

ನಾನಾ ನವರಸಿಕ ಶೃಂಘಾರಿಕ । ಗದ್ಯ ಪದ್ಯಾಚೇ ಕೌತುಕ ।
ನಾನಾ ವಚನೇ ಪ್ರಸ್ತಾವಿಕ । ಶಾಸ್ತ್ರಾಧಾರೇ ಬೋಲಾವೀ ॥೧೫॥

ಭಕ್ತಿಜ್ಞಾನ ವೈರಾಗ್ಯ ಲಕ್ಷಣ । ನೀತಿ ನ್ಯಾಯ ಸ್ವಧರ್ಮ ರಕ್ಷಣ ।
ಸಾಧನ ಮಾರ್ಗ ಅಧ್ಯಾತ್ಮ ನಿರೂಪಣ । ಪ್ರಾಂಜಳ ಬೋಲಾವೇ ॥೧೬॥

ಪ್ರಸಂಗೇ ಹರಿಕಥಾ ಕರಾವೀ । ಸಗುಣೀ ಸಗುಣಕೀರ್ತಿ ಧರಾವೀ ।
ನಿರ್ಗುಣ ಪ್ರಸಂಗೇ ವಾಢವಾವೀ । ಅಧ್ಯಾತ್ಮ ವಿದ್ಯಾ ॥೧೭॥

ಪೂರ್ವಪಕ್ಷ ತ್ಯಾಗೂನ ಸಿದ್ಧಾಂತ । ನಿರೂಪಣ ಕರಾವೇ ನೇಮಸ್ತ ।
ಬಹುಧಾ ಬೋಲಣೇ ಅವ್ಯಾವೆಸ್ತ । ಬೋಲೋಚಿ ನಯೇ ॥೧೮॥

ಕರಾವೇ ವೇದ ಪಾರಾಯಣ । ಸಾಂಗಾವೇ ಜನಾಸೀ ಪುರಾಣ ।
ಮಾಯಾಬ್ರಹ್ಮೀಚೇ ವಿವರಣ । ಸಾಕಲ್ಯ ವದಾವೇ ॥೧೯॥

ಬ್ರಾಹ್ಮಣ್ಯ ರಕ್ಷಾವೇ ಆದರೇ । ಉಪಾಸನೇಚೀ ಭಜನ ದ್ವಾರೇ ।
ಗುರುಪರಂಪರಾ ನಿರ್ಧಾರೇ। ಚಳೋ ಚ ನೇದಾವೀ ॥೨೦॥

ಕರಾವೇ ವೈರಾಗ್ಯ ರಕ್ಷಣ । ರಕ್ಷಾವೇ ಜ್ಞಾನಾಚೇ ಲಕ್ಷಣ ।
ಪರಮದಕ್ಷ ವಿಚಕ್ಷಣ । ಸರ್ವಹೀ ಸಾಂಭಾಳೀ ॥೨೧॥

ಕೀರ್ತನ ಏಕತಾ ಸಂದೇಹ ಪಡೆ । ಸತ್ಯ ಸಮಾಧಾನ ತೇ ಉಡೆ ।
ನೀತಿ ನ್ಯಾಯಸಾಧನ ಮೋಡೇ । ಏಸೇ ನ ಬೋಲಾವೇ ॥೨೨॥

ಸಗುಣಕಥಾ ಯಾ ನಾವ ಕೀರ್ತನ । ಅದ್ವೈತ ಮ್ಹಣಿಜೇ ನಿರೂಪಣ ।
ಸಗುಣ ರಕ್ಷೂನ ನಿರ್ಗುಣ । ಬೋಲತ ಜಾವೇ ॥೨೩॥

ಅಸೋ ವಕ್ತೃತ್ವಾಚಾ ಅಧಿಕಾರ । ಅಲ್ಪಾಸ ನ ಘಡೇ ಸತ್ಯೋತ್ತರ ।
ವಕ್ತಾ ಪಾಹಿಜೇ ಸಾಚಾರ । ಅನುಭವಾಚಾ ॥೨೪॥

ಸಕಳ ರಕ್ಷೂನ ಜ್ಞಾನ ಸಾಂಗೇ । ಜೇಣೇ ವೇದಜ್ಞಾನ ಭಂಗೇ ।
ಉತ್ತಮ ಸನ್ಮಾರ್ಗ ಲಾಗೇ । ಪ್ರಾಣಿಮಾತ್ರಾಸೀ ॥೨೫॥

ಕಥೆಯಲ್ಲಿಯ ಪ್ರಸಂಗಗಳನ್ನು ವರ್ಣನೆ ಮಾಡುವಾಗ ಪದ್ಯ, ದೋಹೆ-ದ್ವಿಪದಿ ಶ್ಲೋಕ, ವಚನ, ಪ್ರಬಂಧ, ಧಾಟಿ, ಮುದ್ರಾ ವಗೈರೆ ಕವಿತೆಯ ಅನೇಕ ಪ್ರಕಾರಗಳನ್ನು ಉಪಯೋಗ ಮಾಡಬೇಕು. ಮತ್ತು ವೀರ ರಸವುಳ್ಳ ಲಾವಣಿ ಪೋವಾಡೆ, ಹಾಸ್ಯಗಳ ಉಪಯೋಗ ಮಾಡಬೇಕು. (೧೪) ಕಥೆಯಲ್ಲಿ ಶೃಂಗಾರ ಸಹಿತವಾಗಿ ನವರಸಗಳೂ ಇರಬೇಕು. ಉತ್ತಮ ಪದ್ಯ, ಉತ್ತಮ ಗದ್ಯ, ವಾಙ್ಮಯ ಉಪಯೋಗ ಮಾಡಬೇಕು. ಮತ್ತು ಪ್ರಸಂಗಕ್ಕೆ ಯೋಗ್ಯವಾದ ಹಾಗೂ ಶಾಸ್ತ್ರಸಮ್ಮತವಾದ ವಚನ,ಕಥೆಗಳನ್ನೂಅವಶ್ಯಕವಾದಲ್ಲಿ ಉಪಯೋಗಿಸಬೇಕು(೧೫) ಮುಂದಿನ ಹತ್ತು ಶ್ಲೋಕಗಳಲ್ಲಿ ಶ್ರೀ ಸಮರ್ಥರು ಕೀರ್ತನದ ಅಂತರಂಗ ಹೇಗಿರಬೇಕೆಂಬುದನ್ನು ಹೇಳುತ್ತಾರೆ:- ಕೀರ್ತನಕಾರನು ಸಮಾಜದ ಆಧ್ಯಾತ್ಮ ವಿದ್ಯೆಯಲ್ಲಿಯ ನೇತಾರನಿರುತ್ತಾನೆ, ಇವನು ಸ್ವತ: ಅನುಭವಿ ವಕ್ತಾರನಿರ ಬೇಕು. ನೀತಿ, ನ್ಯಾಯ, ವೈರಾಗ್ಯ, ಭಕ್ತಿ ಮತ್ತು ಜ್ಞಾನ ಇವುಗಳಿಗೆ ಉಪಯುಕ್ತವಾಗುವಂಥದನ್ನೇ ಯಾವಾಗಲೂ ಹೇಳುತ್ತಿರಬೇಕು, ಸನ್ಮಾರ್ಗದ ಪ್ರಸಾರ ಮಾಡುವದೇ ಕೀರ್ತನದ ಧ್ಯೇಯವಾಗಿದೆ. ಭಕ್ತಿ, ಜ್ಞಾನ, ವೈರಾಗ್ಯ, ಇವುಗಳ ಲಕ್ಷಣಗಳು ಯಾವವು. ನೀತಿ, ನ್ಯಾಯ ಹಾಗೂ ಸ್ವಧರ್ಮ ಇವುಗಳ ರಕ್ಷಣೆ ಹೇಗೆ ಮಾಡಬೇಕು. ಸಾಧನ ಮಾರ್ಗ ಹೇಗಿ ರುತ್ತದೆ. ಮತ್ತು ಪರಮಾತ್ಮ ಸ್ವರೂಪ ಹೇಗೆ ಇರುವದು. ಈ ಮಾತುಗಳು ಕೀರ್ತನದಲ್ಲಿ ಸ್ಪಷ್ಟವಾಗಿ ಬರಬೇಕು(೧೬) ಪ್ರಸಂಗ ನೋಡಿ ಕೀರ್ತನದ ವಿಷಯ ಹೇಳಬೇಕು. ಸಗುಣ ಸ್ವರೂಪದ ಪ್ರಸಂಗವಿದ್ದರೆ ಭಗವಂತನ ಚರಿತ್ರದ ಕೀರ್ತಿ ಯನ್ನು ವರ್ಣಿಸಬೇಕು. ನಿರ್ಗುಣದ ಪ್ರಸಂಗವಿದ್ದರೆ ಶುದ್ಧ ಪರಮಾತ್ಮನ ಬಗ್ಗೆ ಆಧ್ಯಾತ್ಮವಿದ್ಯೆಯಲ್ಲಿಯ ಸ್ವರೂಪ ತಿಳಿಸಬೇಕು. (೧೭) ವಿಷಯ ಪ್ರತಿಪಾದನ ಮಾಡುವಾಗ ಪೂರ್ವ ಪಕ್ಷ ಬಿಡಬೇಕು. ಆದರೆ ಸಿದ್ಧಾಂತ ಹೇಳಬೇಕು. ಇದನ್ನು ಮಾತ್ರ ಶಕ್ಯವಿದ್ದಷ್ಟು ವಿಶದವಾಗಿ ವಿವೇಚನ ಮಾಡಿ ತಿಳಿಯುವಂತೆ ಹೇಳಬೇಕು. ಕೀರ್ತನಕಾರನ ಹೇಳಿಕೆ ಶಕ್ಯ ವಿದ್ದಷ್ಟು ಅಪ್ರಮಾಣ, ಅಸಂಬದ್ಧವಿರಬಾರದು. (೧೮) ವೇದದ ಅಭ್ಯಾಸ ವಿವೇಚನಪೂರ್ವಕ ಮಾಡಬೇಕು. ಜನರಿಗೆ ಪುರಾಣವನ್ನು ತಿಳಿಸಿ ಹೇಳಬೇಕು. ಮಾಯಾ ಮತ್ತು ಬ್ರಹ್ಮ ಇವುಗಳ ಸ್ವರೂಪದ ಬಗ್ಗೆ ಎಲ್ಲ ರೀತಿಯಿಂದ ಸವಿಸ್ತಾರ ವಾಗಿ ತಿಳಿಯುವಂತೆ ಹೇಳಬೇಕು. (೧೯) ಬ್ರಾಹ್ಮಣ ಧರ್ಮದ ಅಂದರೆ ಬ್ರಾಹ್ಮಣನಲ್ಲಿ ಅವಶ್ಯ ಇರಬೇಕಾದ ಗುಣಗಳನ್ನು ಆದರದಿಂದ ರಕ್ಷಿಸಬೇಕು. ಗುರು ಪರಂಪರೆಯನ್ನು ಎಲ್ಲರೂ ನಿಶ್ಚಯದಿಂದ ಪಾಲಿಸಬೇಕು. ಅದಕ್ಕೆ ಅನುಸರಿಸಿ ನಡೆಯಬೇಕು. ಇದರಲ್ಲಿ ಮಿಶ್ರಣವಿರಬಾರದು. (೨೦) ವೈರಾಗ್ಯದ ರಕ್ಷಣೆ ಮಾಡಬೇಕು, ಆತ್ಮಜ್ಞಾನದ ಲಕ್ಷಣಗಳ ಅಭ್ಯಾಸ ಮಾಡಬೇಕು. ಹಾಗೂ ಅವುಗಳ ರಕ್ಷಣೆ ಮಾಡಬೇಕು. ಯಾರು ಅತಿಶಯ ದಕ್ಷ ಹುಷಾರ ಮತ್ತು ವಿವೇಕಶೀಲರಿರುವರೋ ಅವರು ಇವೆಲ್ಲವನ್ನು (ಸಂಭಾಳಿಸುವರು) ಕಾಯ್ದುಕೊಳ್ಳುವರು. (೨೧) ಸಂಶಯ ಉತ್ಪನ್ನ ವಾಗುವಂಥ ಮಾತುಗಳಿಂದ ಸಮಾಧಾನಕ್ಕೆ ಧಕ್ಕೆ ಬರುತ್ತದೆ. ಮತ್ತು ನೀತಿ ನ್ಯಾಯಗಳು ಇಲ್ಲದಾಗುವವು. (ಮರೆ ಯಾಗುವವು) ಆದ್ದರಿಂದ ಸಮಾಧಾನಕ್ಕೆ ಧಕ್ಕೆ ಬಾರದಂತೆ, ಸಾಧನ ಮುಗ್ಗರಿಸುವಂತೆ ಎಳ್ಳಷ್ಟೂ ಕೀರ್ತನದಲ್ಲಿ ಮಾಡಬಾರದು. (೨೨) ಭಗವಂತನ ಸಗುಣ ಚರಿತ್ರ ಕಥೆಗೆ "ಕೀರ್ತನ" ಎಂಬ ಹೆಸರು ಇರುವದು. ಅದ್ವೈತದ ವಿವೇಚನ ಮತ್ತು ವೇದಾಂತದ ಪ್ರತಿಪಾದನ ಮಾಡುವದಕ್ಕೆ ನಿರೂಪಣವೆಂಬ ಹೆಸರಿರುವದು. ಕೀರ್ತನಕಾರನಾದ ಹರಿದಾಸನು ಸಗುಣದ ಮಹತ್ವ ಉಳಿಸಿಕೊಂಡು ಅದನ್ನು ಹೀಯಾಳಿಸದೆ ಸಂಭಾಳಿಸಿಕೊಂಡು ಅದನ್ನು ಸ್ಥಿರವಿಟ್ಟು ನಿರ್ಗುಣದ ಪ್ರತಿಪಾದನೆ ಮಾಡಬೇಕು. (೨೩) ಯಾವ ಮನುಷ್ಯನು ಅಲ್ಪನಿರುವನೋ ಅಂದರೆ ಅನುಭವ ವಿದ್ಯೆ ವಿಚಾರ ಮತ್ತು ವ್ಯಾಸಂಗದಿಂದ ಅಲ್ಪ ಮಂದ ಹಾಗೂ ಕ್ಷುಲ್ಲಕನಿರುವನೋ ಅವನಿಗೆ ವಕ್ತೃತ್ವದ ಅಧಿಕಾರವಿರುವದಿಲ್ಲ ವೆಂಬುದು ನಿಜವಾದ ಮರ್ಮವು. ವಕ್ತಾ ನಿಜವಾಗಿಯೂ ಆಚಾರ ಸಂಪನ್ನ ಮತ್ತು ಸ್ವಾನುಭವ ಸಂಪನ್ನನಾಗಿರ ಬೇಕು. (೨೪) ಅನುಭವಿ ವಕ್ತಾ ಇದ್ದವನು ಎಲ್ಲವನ್ನೂ ಸಂಭಾಳಿಸಿಕೊಂಡು ಯಾವುದೇ ಬುದ್ಧಿಭೇದ ಮಾಡದೇ ಜ್ಞಾನ ಹೇಳುವನು. ವೇದದ ಆಜ್ಞೆಯನ್ನು ಮುರಿಯಲಾರನು. ಮತ್ತು ಜನರಿಗೆ ಉತ್ತಮ ಸನ್ಮಾರ್ಗ ದೊರಕುವಂತೆ ಅವನು ಜ್ಞಾನವನ್ನು ತಿಳಿಸಿ ಹೇಳುವನು. (೨೫)

ಅಸೋ ಹೇ ಸಕಳ ಸಾಂಡೂನ । ಕರಾವೇ ಗುಣಾನುವಾದ ಕೀರ್ತನ ।
ಯಾ ನಾವ ಭಗವದ್ಭಜನ । ದುಸರೀ ಭಕ್ತೀ ॥೨೬॥
ಕೀರ್ತನೇ ಮಹಾದೋಷ ಜಾತೀ । ಕೀರ್ತನೇ ಹೋಯ ಉತ್ತಮ ಗತೀ।
ಕೀರ್ತನೇ ಭಗವತ್ಪ್ರಾಪ್ತೀ । ಯೆದರ್ಥೀ ಸಂದೇಹ ನಾಹೀ ॥೨೭॥
ಕೀರ್ತನೇ ವಾಚಾ ಪವಿತ್ರ । ಕೀರ್ತನೇ ಹೋಯ ಸತ್ಪಾತ್ರ ।
ಹರಿಕೀರ್ತನೇ ಪ್ರಾಣಿಮಾತ್ರ । ಸುಸೀಳ ಹೋತೀ ॥೨೮॥
ಕೀರ್ತನೇ ಅವೆಗ್ರತಾ ಘಡೇ । ಕೀರ್ತನೇ ನಿಶ್ಚಯೋ ಸಾಂಪಡೇ ।
ಕೀರ್ತನೇ ಸಂದೇಹ ಬುಡೇ । ಶ್ರೋತಯಾ ವಕ್ತಯಾಚಾ ॥೨೯॥
ಸದಾ ಸರ್ವದಾ ಹರಿಕೀರ್ತನ । ಬ್ರಹ್ಮಸುತ ಕರೀ ಆಪಣ ।
ತೇಣೇ ನಾರದ ತೋಚಿ ನಾರಾಯೆಣ । ಬೋಲಿಜೇತ ಆಹೇ ॥೩೦॥
ಮ್ಹಣೋನಿ ಕೀರ್ತನಾಚಾ ಅಗಾಧ ಮಹಿಮಾ।ಕೀರ್ತನೇ ಸಂತೋಷೆಪರಮಾತ್ಮಾ।
ಸಕಳ ತೀರ್ಥೇ ಆಣೀ ಜಗದಾತ್ಮಾ । ಹರಿ ಕೀರ್ತನೀ ವಸೇ ॥೩೧॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
ಕೀರ್ತನ ಭಜನ ನಿರೂಪಣನಾಮ ಸಮಾಸ ದ್ವಿತೀಯ ॥

ಇದೆಲ್ಲವೂ ಇರಲಿ, ಮುಖ್ಯವಾಗಿ ಭಗವಂತನ ಗುಣಗಾನ ಯಾವುದರಲ್ಲಿ ಮೇಲಿಂದ ಮೇಲೆ ಇರುವದೋ ಅಂಥ ಗುಣಗಾಯನ, ಕಥೆ, ವರ್ಣನೆ, ಇರುವಂಥದೇ ಭಗವದ್ಭಜನವೆಂದು ಅನ್ನಿಸಿಕೊಳ್ಳುವದು. ಇದು ಭಕ್ತಿಯು ಎರಡನೆಯ ಪ್ರಕಾರವು. (೨೬) **ಕೀರ್ತನದಿಂದ ಯಾವ ಯಾವ ಲಾಭವಿದೆ ಅದರ ವರ್ಣನೆ:-** ಕೀರ್ತನದಿಂದ ದೊಡ್ಡ ದೊಡ್ಡ ಪಾಪಗಳು ನಾಶವಾಗುವವು. ಕೀರ್ತನದಿಂದ ಉತ್ತಮಗತಿ ಪ್ರಾಪ್ತವಾಗುವದು. ಕೀರ್ತನದಿಂದ ಭಗವಂತನ ಪ್ರಾಪ್ತಿಯಾಗುವದು. ಈ ವಿಷಯದಲ್ಲಿ ಎಳ್ಳಷ್ಟೂ ಸಂಶಯವಿಲ್ಲ. (೨೭) ಕೀರ್ತನದಿಂದ ವಾಣಿ ಪವಿತ್ರ ವಾಗುವದು. ಕೀರ್ತನದಿಂದ ಮನುಷ್ಯನು ಭಗವಂತನಿಗೆ ಬೇಕಾದವನಾಗುವನು. ಮತ್ತು ಶೀಲವಂತ, ಚಾರಿತ್ರ್ಯವಂತ ನಾಗುವನು. (೨೮) ಕೀರ್ತನದಿಂದ ಏಕಾಗ್ರತೆ ಚಿತ್ತಶಾಂತಿ ಸಾಧ್ಯವಾಗುವದು. ಭಗವಂತನ ಬಗ್ಗೆ ನಿಶ್ಚಯ ತಿಳವಳಿಕೆ ಪ್ರಾಪ್ತವಾಗುವದು. ಕೀರ್ತನದಿಂದ ಶ್ರೋತಾ ಮತ್ತು ವಕ್ತಾ ಇಬ್ಬರ ಸಂಶಯುಗಳೂ ನಿವಾರಣೆ ಹೊಂದುವವು. (೨೯) ಬ್ರಹ್ಮದೇವರ ಮಾನಸ ಪುತ್ರರಾದ ನಾರದರು ಸದಾಕಾಲ ನಿರಂತರವೂ ಭಗವಂತನ ಕೀರ್ತನ ಮಾಡುವರು. ಅಂತೆಯೇ ಸರ್ವಜನ ಅವರಿಗೆ ನಾರಾಯಣ ಎಂದು ಅನ್ನುವರು. ಅವರನ್ನು ಭಗವಂತನ ರೂಪದಲ್ಲಿ ಕಾಣುವರು.(೩೦) ಇವುಗಳೆಲ್ಲ ದರಿಂದ ನೋಡಿದರೆ ಕೀರ್ತನದ ಮಹಿಮಾ ವರ್ಣಿಸಲಿಕ್ಕೆ ಅಸಾಧ್ಯವಾದುದು. ಕೀರ್ತನದಿಂದ ಪರಮಾತ್ಮನು ಸಂತೋಷಪಡುವನು. ಭಗವಂತನ ಕೀರ್ತನದಲ್ಲಿ ಎಲ್ಲ ತೀರ್ಥ ಮತ್ತು ಜಗದಾತ್ಮಾ ಈಶ್ವರ ಎರಡೂ ಇರುವವು(೩೧)

ಶ್ರೀ ದಾಸಬೋಧದ ಗುರು ಶಿಷ್ಯರ ಸಂವಾದದೊಳಗಿನ ನಾಲ್ಕನೆಯ ದಶಕದಲ್ಲಿಯ
"ಕೀರ್ತನ ಭಕ್ತಿ ನಿರೂಪಣ" ನಾಮ ಎರಡನೆಯ ಸಮಾಸವು ಮುಗಿದುದು.

● ●

## ದಶಕ ೪. ಸಮಾಸ ೩. ನಾಮಸ್ಮರಣ ಭಕ್ತಿ (ನುಡಿ ೨೫)

ಒಬ್ಬ ಪರಮಾತ್ಮನ ಹೊರತು ಬೇರೊಂದು ಯಾವುದೂ ಇರುವದೇ ಇಲ್ಲ. ಈ ಮಾತು ನಿಜವಿರುವದೇ ಆದರೆ ಸ್ಥಳಕಾಲದಿಂದ ಆವರಿಸಲ್ಪಟ್ಟ ಮತ್ತು ಒಂದೇ ಸವನೆ ಬದಲಾಗುತ್ತಿರುವ ಈ ವಿಶ್ವವು ಅವನದೇ ಅಂಶದ ತಯಾರಿಕೆ ಇರಬೇಕು. ಈ ಬಗ್ಗೆ ಬೃಹದಾರಣ್ಯಕ ಉಪನಿಷತ್ತಿನಲ್ಲಿ ಬ್ರಹ್ಮನ ರೂಪದ ಬಗ್ಗೆ ಎರಡು ವಿಧವೆಂದು ಹೇಳಿದ್ದಾರೆ. ಒಂದು "ಮೂರ್ತ" "ಅಮೂರ್ತ" ಮತ್ತು ಇನ್ನೊಂದು "ಮರ್ತ್ಯ" "ಅಮೃತ" ಹೀಗೆ ಹೇಳಿದ್ದಾರೆ. "ದ್ವೈವಾವ ಬ್ರಾಹ್ಮಣೋ ರೂಪೇ ಮೂರ್ತಂಚೈವಾ ಮೂರ್ತಂಚ ಮರ್ತ್ಯಂ ಚಾಮೃತಂಚ ಅವಿಬ್ರಾ, ೩ ಮಂ. ೧" ರೂಪರಹಿತ–ಅಮೂರ್ತ ಪರಮಾತ್ಮನು ರೂಪ ಸಹಿತನಾದ (ಆಕಾರ ತಳೆದು) ಮೂರ್ತ ಹೇಗಾಗುತ್ತಾನೆ ? ಇದರ

ಮರ್ಮ ಹೀಗಿರುತ್ತದೆ. ಮೊದಲು ಅಮೂರ್ತ ಅಂದರೆ ಆಕಾರ ರಹಿತನಲ್ಲಿ "ಅಹಂ" ಎಂಬ ಸ್ಫೂರ್ತಿ ಉಂಟಾಗಿ ಇದರಲ್ಲಿ ಬಹುವಿಧ (ಅನೇಕ ಪ್ರಕಾರದ)ವಾಗುವ ಬೀಜವಿರುತ್ತದೆ. ಅಹಂ ಸ್ಫೂರ್ತಿಗೆ "ಆದಿಸಂಕಲ್ಪ"ವೆಂದು ಅನ್ನುವರು. ಈ ಆದಿ ಸಂಕಲ್ಪವು ಸಂಪೂರ್ಣ ಜ್ಞಾನಮಯ, ಶಕ್ತಿಮಯ, ಆನಂದಮಯ, ಅಮೂರ್ತನಾದಮಯವಿರುವದು. ಉಪನಿಷತ್ತುಗಳು ಇದಕ್ಕೆ ಓಂಕಾರ ಅಥವಾ ಪ್ರಣವ (ಪವಿತ್ರ ಮಂತ್ರ)ವೆನ್ನುವರು. ಗೀತೆಯು ಇದಕ್ಕೆ ಏಕಾಕ್ಷರ ಬ್ರಹ್ಮವೆನ್ನುವದು. ವೇದಾಂತವು ಇದಕ್ಕೆ ಶಬ್ದಬ್ರಹ್ಮವೆನ್ನುವದು. ಗ್ರೀಕ್ ತತ್ವವೇತ್ತರು ಇದಕ್ಕೆ ಲೋಗಾಸ ಎನ್ನುವರು. ಮತ್ತು ಸಾಧು ಸಂತರು ಇದಕ್ಕೆ ನಾಮವೆನ್ನುವರು. ನಾಮವು ಶಕ್ತಿಮಯವಿರುವದರಿಂದ ಮೂರ್ತವಿಶ್ವ ಅಂದರೆ ರೂಪ ತಳೆದ ಜಗತ್ತು ಇದರೊಳಗಿಂದ ಜನ್ಮ ಹೊಂದುವದು. ನಾಮವು ಜ್ಞಾನಮಯವಿರುವದರಿಂದ ವಿಶ್ವವೆಲ್ಲ ನಿಯಮಾನುಸಾರವಾಗಿ ನಡೆಯುವದು. ನಾಮವು ಅನಂತವಿದ್ದುದರಿಂದ ಮೂರ್ತ (ರೂಪ, ಆಕಾರ) ದಲ್ಲಿ ಅನಂತ (ಪ್ರಕಾರಗಳು ಇರುವವು. ಆದರೆ ಇಲ್ಲಿಯವರೆಗೆ ಹಿಂದೆ ಆಗಿ ಹೋದಂಥ ಮತ್ತು ಸದ್ಯದಲ್ಲಿ ಇರುವಂಥ ಹಾಗೂ ಮುಂದೆ ಆಗುವಂಥ ಎಲ್ಲ ಮೂರ್ತ ರೂಪಗೊಂಡ, ಆಕಾರ ತಳೆದವುಗಳಲ್ಲಿ ನಾಮವು ಎಡಬಿಡದೆ ಅಖಂಡವಾಗಿ ಅನುಸ್ಯೂತವಾಗಿ ವ್ಯಾಪಿಸಿಯೇ ಇರುತ್ತದೆ. ಆದುದರಿಂದ ನಾಮವು ಮಾತ್ರ ಅವಿನಾಶಿಯಾಗಿದ್ದು ಆಕಾಶ ಪಾತಾಳಗಳಲ್ಲಿ ಸಹ ಅಬಾಧಿತವಾಗಿ ಇರುತ್ತದೆ. ಜಗತ್ತಿನ ವಸ್ತುಗಳನ್ನು ಸಾಮಾನ್ಯ (ಸಾಧಾರಣ) ಮತ್ತು ವಿಶೇಷ (ಅಸಾಮಾನ್ಯ ಶ್ರೇಷ್ಠ) ಇವುಗಳ ಆಟ ಕಂಡು ಬರುತ್ತದೆ. ನಾಮವು ಸಾಧಾರಣವಾದರೆ ರೂಪವು ವಿಶೇಷ ಶ್ರೇಷ್ಠವಿರುವದು. ವಸ್ತುವಿನ ಹೆಸರು ಅಥವಾ ನಾಮವು ವಸ್ತುವಿನ ಗುರುತು ಎನಿಸುವ ಕೇವಲ ಒಂದು ಶಬ್ದ ಮಾತ್ರವಲ್ಲ. ನಾಮವೆಂದರೆ ಆ ವಸ್ತುವಿನ ಅಂತರಂಗದಲ್ಲಿ ಕೆಲಸ ಮಾಡುವ ವ್ಯಾಪಿಸಿರುವ, ಹರಿದಾಡುವ, ಆದಿಸಂಕಲ್ಪದ ಅಂದರೆ ಈಶ್ವರನ ಶಕ್ತಿಯೇ ಆಗಿರುವದು. ನಾಮವೆಂದರೆ ದೃಶ್ಯವನ್ನು ದೃಶ್ಯತ್ವದಿಂದ ಧಾರಣ ಮಾಡುವ ಪರಮಾತ್ಮ ಶಕ್ತಿಯು. ಈ ಕಾರಣದಿಂದ ನಾಮವು ಮೂರ್ತ ಮತ್ತು ಅಮೂರ್ತ ಇವುಗಳನ್ನು ಒಂದಕ್ಕೊಂದು ಜೋಡಿಸುವ ಸರಪಳಿ (ಆಗಿದೆ) ಎನಿಸಿಕೊಳ್ಳುವದು. ಈ ದೃಷ್ಟಿಯಿಂದ ದೃಶ್ಯದಿಂದ ಅದೃಶ್ಯದಲ್ಲಿ ಮತ್ತು ಅದೃಶ್ಯದಿಂದ ಅವ್ಯಕ್ತನಾದ ಶಿವ, ಪರಮಾತ್ಮ, ಕಾಣಿಸದಂಥವನ್ನರ ಕಡೆಗೆ ಹೋಗಲು ನಾಮದ ಸಾಧನವು ಬಹಳ ಸುಲಭ. ನಾಮದಂಥ ಸಹಜ ಹಾಗೂ ಸ್ವತಃದ ಮಾಲಕಿಯ ಕೈಯಲ್ಲಿಯೇ ಇರುವಂಥ ಸಾಧನವು ಇನ್ನೊಂದಿಲ್ಲ. ಜೀವದ ಸಂಕಲ್ಪದಲ್ಲಿ ಜ್ಞಾನದ ವಿಷಯವಾಗುವಂಥ ವಸ್ತು ಮತ್ತು ಆ ವಸ್ತುವಿನ ಜ್ಞಾನ ಇವು ಪ್ರತ್ಯೇಕವಾಗಿ ಇರುವವು. ಆದರೆ ಮೂಲ ಸಂಕಲ್ಪದಲ್ಲಿ ವಸ್ತು ಮತ್ತು ಅದರ ಜ್ಞಾನ ಏಕರೂಪದಿಂದ ಇರುವವು. ಈ ಕಾರಣದಿಂದ ನಾಮ ಮತ್ತು ನಾಮಿ ಇವುಗಳಲ್ಲಿ ಭೇದವಿರುವದಿಲ್ಲ. ಅಭೇದವಿರುವದು. ನಾಮಸ್ಮರಣವೆಂದರೆ ಏನು ? ನಾವು ಯಾವನ ನಾಮವನ್ನು ತೆಗೆದುಕೊಳ್ಳುವೆವೋ–ಅನ್ನುವೆವೋ, ಸ್ಮರಣ ಮಾಡುವೆವೋ,ಅವನೊಬ್ಬನೇ ನಿಜವಾದವನು. ಅವನೇ ಸತ್ವಶಾಲಿಯು. ಮತ್ತು ಅವನ ಸತ್ತಾ ಅಧಿಕಾರದಿಂದಲೇ ಎಲ್ಲವೂ ಆಗುವದು ಎಂಬ ತಿಳುವಳಿಕೆ ಜಾಗ್ರತವಾಗಿರುವದಕ್ಕೆ ನಾಮಸ್ಮರಣವೆನ್ನುವರು. ಪ್ರಪಂಚದಲ್ಲಿ ಕಾಲ ಕಳೆಯುವಾಗ ಭಗವಂತನ ಮರೆವು ಯಾವಾಗಲೂ ಆಗುತ್ತಿರುತ್ತದೆ. ಈ ಮರೆವು ಆಗದಂತೆ ಮಾಡುವದಕ್ಕೆ ನಾಮಸ್ಮರಣವೊಂದೇ ಶ್ರೇಷ್ಠ ಉಪಾಯವು. ಇದರ ಹೊರತು ಅನ್ಯ ಉಪಾಯಗಳಿಲ್ಲ. ಅಂತೆಯೇ ಶ್ರೀ ಸಮರ್ಥರು ನಾಮಸ್ಮರಣದ ಮೇಲೆ ಹೆಚ್ಚಿನ ಭರವಸೆಯನ್ನಿಟ್ಟಿರುತ್ತಾರೆ.

## ಸಮಾಸ ತೃತೀಯ : ನಾಮಸ್ಮರಣ ಭಕ್ತಿ

॥ಶ್ರೀರಾಮ॥ ಮಾಗಾ ನಿರೋಪಿಲೇ ಕೀರ್ತನ । ಜೇ ಸಕಳಾಸ ಕರೀ ಪಾವನ ।
ಆತಾ ಐಕಾ ವಿಷ್ಣೋಃಸ್ಮರಣ । ತೀಸರೀ ಭಕ್ತೀ ॥೧॥

ಸ್ಮರಣ ದೇವಾಚೇ ಕರಾವೇ । ಅಖಂಡ ನಾಮ ಜಪತ ಜಾವೇ ।
ನಾಮಸ್ಮರಣೇ ಪಾವಾವೇ । ಸಮಾಧಾನ ॥೨॥

ನಿತ್ಯನೇಮ ಪ್ರಾತಃಕಾಳೀ । ಮಾಧ್ಯಾನಕಾಳೀ ಸಾಯಂಕಾಳೀ ।
ನಾಮಸ್ಮರಣ ಸರ್ವಕಾಳೀ । ಕರೀತ ಜಾವೇ ॥೩॥

ಸುಖದುಃಖ ಉದ್ವೇಗ ಚಿಂತಾ । ಅಥವಾ ಆನಂದ ರೂಪ ಅಸತಾ ।
ನಾಮಸ್ಮರಣೇ ವಿಣ ಸರ್ವಥಾ । ರಾಹೋಚ ನಯೇ ॥೪॥

ಹರುಷಕಾಳೀ ವಿಷಮಕಾಳೀ । ಪರ್ವಕಾಳೀ ಪ್ರಸ್ತಾವಕಾಳೀ ।
ವಿಶ್ರಾಂತಿಕಾಳೀ ನಿದ್ರಾಕಾಳೀ । ನಾಮಸ್ಮರಣ ಕರಾವೇ ॥೫॥

ಕೋಡೇ ಸಾಂಕಡೇ ಸಂಕಟ । ನಾನಾ ಸಂಸಾರ ಖಟಪಟ ।
ಆವಸ್ಥಾ ಲಾಗತಾ ಚಟಪಟ । ನಾಮಸ್ಮರಣ ಕರಾವೇ ॥೬॥

ಚಾಲತಾ ಬೋಲತಾ ಧಂದಾ ಕರಿತಾ । ಖಾತಾ ಜೇವಿತಾ ಸುಖೀ ಹೋತಾ ।
ನಾನಾ ಉಪಭೋಗ ಭೋಗಿತಾ । ನಾಮ ವಿಸರೋ ನಯೇ ॥೭॥

ಸಂಪತ್ತೀ ಅಥವಾ ವಿಪತ್ತೀ । ಜೈಸೀ ಪಡೇಲ ಕಾಳಗತೀ ।
ನಾಮಸ್ಮರಣಾಚೀ ಸ್ಥಿತೀ । ಸಾಂಡೂಚ ನಯೇ ॥೮॥

ವೈಭವ ಸಾಮರ್ಥ್ಯ ಆಣೀ ಸತ್ತಾ । ನಾನಾ ಪದಾರ್ಥ ಚಾಲತಾ ।
ಉತ್ಕಟ ಭಾಗ್ಯಶ್ರೀ ಭೋಗಿತಾ । ನಾಮಸ್ಮರಣ ಸಾಂಡೂ ನಯೇ ॥೯॥

ಆಧೀ ಆವದಸಾ ಮಗದಸಾ । ಅಥವಾ ದಸೇಉಪರೀ ಆವದಸಾ ।
ಪ್ರಸಂಗ ಅಸೋ ಭಲತೈಸಾ । ಪರಂತು ನಾಮ ಸೋಡೂ ನಯೇ ॥೧೦॥

ನಾಮೇ ಸಂಕಟೇ ನಾಸತೀ । ನಾಮೇ ವಿಘ್ನೇ ನಿವಾರಿತೀ ।
ನಾಮಸ್ಮರಣೇ ಪಾವಿಜೇತೀ । ಉತ್ತಮ ಪದೇ ॥೧೧॥

## ಸಮಾಸ ೩. ನಾಮಸ್ಮರಣ ಭಕ್ತಿ (ನುಡಿ ೨೫)

**ನಾಮಸ್ಮರಣದಿಂದ ಸಮಾಧಾನ ಹೊಂದಬೇಕು. (ಪಡೆಯಬೇಕು):-** ಸರ್ವ ಜನರನ್ನೂ ಪವಿತ್ರ ಮಾಡಿ ಅವರ ಉದ್ಧಾರ ಮಾಡುವಂಥ ಕೀರ್ತನದ ವಿಷಯವಾಗಿ ಹಿಂದಿನ ಸಮಾಸದಲ್ಲಿ ಹೇಳಿದ್ದಾಯಿತು. ಈಗ ಭಗವಂತನ ನಾಮಸ್ಮರಣವೆಂಬ ಹೆಸರಿನ ಮೂರನೆಯ ಭಕ್ತಿಯ ಬಗ್ಗೆ ಕೇಳಿರಿ. (೧) ಭಗವಂತನ ಸ್ಮರಣ ಮಾಡಬೇಕು. ಅವನ ನಾಮವನ್ನು (ಹೆಸರನ್ನು) ಅಖಂಡವಾಗಿ ಜಪಿಸಬೇಕು. ನಾಮಸ್ಮರಣದಿಂದ ಶಾಂತಿ ಸಮಾಧಾನವನ್ನು ಹೊಂದಬೇಕು. (೨) ದಿನನಿತ್ಯದಲ್ಲಿ ವೇಳೆ ಸಿಕ್ಕಾಗ ನಾಮಸ್ಮರಣೆಯನ್ನು ಮಾಡಬೇಕು. ದಿನಾಲೂ ನಿಯಮದಿಂದ ಮುಂಜಾನೆ, ಮಧ್ಯಾಹ್ನ, ಸಾಯಂಕಾಲ ಹೀಗೆ ಮೂರು ಕಾಲವೂ ತಪ್ಪದೇ ನಾಮಸ್ಮರಣ ಮಾಡಬೇಕು. ಇದಲ್ಲದೇ ವೇಳೆ ಸಿಕ್ಕಾಗ ಹಾಗೂ ಸರ್ವಕಾಲದಲ್ಲಿಯೂ ನಾಮಸ್ಮರಣ ಮಾಡಬೇಕು. (೩) ಮನಸ್ಸಿನ ಯಾವದೇ(ಸುಖ ದುಃಖಾದಿಗಳ) ಅವಸ್ಥೆಯಲ್ಲಿ ಸಹ ನಾಮಸ್ಮರಣೆ ಬಿಡಬಾರದು. ಸುಖ ಅಥವಾ ದುಃಖದ ಯಾವುದೇ ಪ್ರಸಂಗದಲ್ಲಿ ಖೇದ, ಉದ್ವೇಗದಲ್ಲಿ ಅಥವಾ ಚಿಂತೆ ಇದ್ದಾಗ ಅಥವಾ ಮನಸ್ಸು ಆನಂದದಲ್ಲಿದ್ದಾಗ ಹಾಗೂ ಮನಸ್ಸಿನ ಅವಸ್ಥೆ ಹೇಗೆಯೇ ಇರಲಿ, ನಾಮಸ್ಮರಣದ ಹೊರತು ಇರಬಾರದು.(೪) **ಪ್ರಪಂಚದಲ್ಲಿಯ ಎಲ್ಲ ಪ್ರಕಾರದ ಪ್ರಸಂಗಗಳಲ್ಲಿ ನಾಮಸ್ಮರಣವನ್ನು ಮಾಡುತ್ತಲಿರಬೇಕು:-** ವೇಳೆಯು ಆನಂದದ್ದಿರಲಿ ಅಥವಾ ಕಠಿಣದ್ದಿರಲಿ, ಶ್ರೇಷ್ಠ ಪರ್ವಕಾಲ (ಗ್ರಹಣ, ಸಂಕ್ರಾಂತಿ ವಗೈರೆ) ವಿರಲಿ, ಪಶ್ಚಾತ್ತಾಪ ಕಾಲ, ಹರಟೆಯ ಕಾಲ, ವಿಶ್ರಾಂತಿಯ ಕಾಲ, ನಿದ್ರೆಯ ಕಾಲ ಯಾವುದೇ ಇರಲಿ ನೀವು ನಾಮಸ್ಮರಣೆ ಮಾಡಬೇಕು. (೫) ಕಠಿಣವಾದ ಪ್ರಶ್ನೆಯು ಎದುರಾದಾಗಾಗಲೀ (ಭಾರೀ ಸಂಕಟ ಕಾಲ) ಯಾವುದಾದರೂ ಅಡಚಣಿ ಬಂದಾಗಾಗಲೀ ಅಥವಾ ಯಾವುದಾದರೂ ಸಂಕಟ ಬಂದಾಗಲಾದರೂ ನಾಮಸ್ಮರಣ ಮಾಡುತ್ತಲೇ ಇರಬೇಕು. ಪ್ರಪಂಚದಲ್ಲಿ ಅನೇಕ (ಖಟಪಟಿ) ಪ್ರಯತ್ನ ನಡೆದಿರಲಿ ಅಥವಾ ಮನಸ್ಸಿಗೆ ಬೇಸರ ತಳಮಳ ಆದಾಗ ಸಹ ನಾಮಸ್ಮರಣ ಮಾಡಬೇಕು (೬) **ನಿತ್ಯ ಜೀವನದಲ್ಲಿ ನಾಮಸ್ಮರಣದ ಮರೆವು ಆಗುವದು ಸಹಜ. ಆದರೆ ಮರೆವು ಆಗದಂತೆ ಎಚ್ಚರವಿರಬೇಕು:-**ನಡೆಯುತ್ತಿರುವಾಗ, ಮಾತಾಡುತ್ತಿರುವಾಗ, ನಿಮ್ಮ ಕೆಲಸ ಕಾರ್ಯ ಉದ್ಯೋಗ, ವ್ಯವಸಾಯ ಮಾಡುತ್ತಿರುವಾಗ, ತಿನ್ನುವಾಗ, ಉಣ್ಣುವಾಗ, ಸುಖದಿಂದ ಸ್ವಸ್ಥ ಇದ್ದಾಗ ಮತ್ತು ಅನೇಕ ಪ್ರಕಾರ ದೇಹೋಪಭೋಗಗಳ ಸುಖ ಹೊಂದುತ್ತಿರುವಾಗ ನೀವು ನಾಮಸ್ಮರಣೆಯನ್ನು ಮರೆಯಬಾರದು.(೭) ಜೀವನದಲ್ಲಿ ಒಮ್ಮೆ ಯಶ ತೋರಿದರೆ, ಮತ್ತೊಮ್ಮೆ ಅಪಯಶ; ಒಮ್ಮೆ ಸುಸ್ಥಿತಿ ಕಂಡರೆ, ಒಮ್ಮೆ ದುಃಸ್ಥಿತಿ ಹೀಗೆ ಹೆಚ್ಚು ಕಡಿಮೆ ಆಗತಕ್ಕದ್ದೇ. ಆದರೆ ಎಲ್ಲ ಬದಲಾವಣೆಯ ಕಾಲದಲ್ಲಿಯೂ ನಾಮಸ್ಮರಣೆಯನ್ನು ಬಿಡದೇ ಸ್ಥಿರವಿಡಬೇಕು. ಕಾಲ ಗತಿಯಿಂದ (ಪ್ರಾರಬ್ಧಾನುಸಾರವಾಗಿ) ಒಮ್ಮೆ ಶ್ರೀಮಂತಿಕೆ ಇದ್ದರೆ ಒಮ್ಮೆ ಬಡತನ ಬರುವದು. ಒಮ್ಮೆ ಬಡತನವಿದ್ದರೆ ಮತ್ತೊಮ್ಮೆ ಶ್ರೀಮಂತಿಕೆ ಬರಬಹುದು. ಆದರೆ ಇದರಿಂದ ಹೊರಗಿನ ಸ್ಥಿತಿಯಲ್ಲಿ ಹೆಚ್ಚು ಕಡಿಮೆ ಬದಲಾವಣೆ ತೋರಿ ಬಂದರೂ ಸಹ ಒಳಗಿನ ಅಂತರಂಗದಲ್ಲಿ ನಾಮಸ್ಮರಣದ ಸ್ಥಿತಿಯಲ್ಲಿ ಬದಲಾವಣೆ ಆಗಬಾರದು. ಈ ನಾಮಸ್ಮರಣ ಸ್ಥಿತಿಯನ್ನು ಯಾವಾಗಲೂ ಕಡಿಮೆ ಆಗದಂತೆ ಮತ್ತು ಅದು ಹೆಚ್ಚುವಂತೆ ಮಾಡಬೇಕು. (೮) ಮಹತ್ ಸಂಪತ್ತು, ದೊಡ್ಡ ವೈಭವ ದೊರೆತಾಗ, ಸಾಮರ್ಥ್ಯದ ಹಿರಿಮೆ ನಿನ್ನಪಾಲಿಗೆ ಬಂದಾಗ, ಅಧಿಕಾರ ಪ್ರಾಪ್ತವಾದಾಗ, ಅನೇಕ ವಸ್ತುಗಳು ಅಕಸ್ಮಾತ್ತಾಗಿ ಮನೆಗೆ ಬಂದು ಸೇರಿದಾಗ, ಮತ್ತು ಈ ರೀತಿಯಲ್ಲಿ ಐಶ್ವರ್ಯವೆಲ್ಲ ಪ್ರಾಪ್ತವಾದಾಗಲೂ ಸಹ ನಾಮಸ್ಮರಣ ಬಿಡಬಾರದು. (೯) **ಉದಾ:—** ಹೇಳುವದಾದರೆ, ಜೀವನದ ಪ್ರಾರಂಭದಲ್ಲಿ ಬಹಳ ದಾರಿದ್ರ್ಯ ಸ್ಥಿತಿ ಇದ್ದು, ಆ ಮೇಲೆ ಸುಸ್ಥಿತಿ ಬಂದಿತು. ಅಥವಾ ಮೊದಲು ಶ್ರೀಮಂತ ಸ್ಥಿತಿ ಇದ್ದು ಆ ಮೇಲೆ ದಾರಿದ್ರ್ಯತನ ಬಂದಿತು ಎಂದು ತಿಳಿದರೂ ಈ ಎರಡೂ ಸ್ಥಿತಿಗಳಲ್ಲಿಯೂ ನಾಮಸ್ಮರಣವನ್ನು ಎಂಥಪ್ರಸಂಗಬಂದರೂ ಬಿಡಬಾರದು.(೧೦) **ನಾಮಸ್ಮರಣದಿಂದ ಏನೇನು ಆಗುವದೆಂಬುದರ ವರ್ಣನೆಯನ್ನು ಕೇಳಿರಿ: —** ನಾಮಸ್ಮರಣದಿಂದ ಸಂಕಟಗಳು ಇಲ್ಲದಾಗುವವು. ವಿಘ್ನಗಳು ನಿವಾರಣ ಹೊಂದುವವು. ನಾಮಸ್ಮರಣದಿಂದ ಮನುಷ್ಯನು ದೊಡ್ಡ ಪದವಿಗೇರುವನು. (೧೧)

ಭೂತ ಪಿಶಾಚ್ಯ ನಾನಾ ಛಂದ । ಬ್ರಹ್ಮಗಿಹ್ರೋ ಬ್ರಾಮ್ಹಣ ಸಮಂಧ ।
ಮಂತ್ರಚಳ ನಾನಾ ಖೇದ । ನಾಮನಿಷ್ಠೇ ನಾಸತೀ ॥೧೨॥

ನಾಮೇ ವಿಷಬಾಧಾ ಹರತೀ । ನಾಮೇ ಚೆಡೇಚೇಟಕೇ ನಾಸತೀ ।
ನಾಮೇ ಹೋಯೆ ಉತ್ತಮಗತೀ । ಅಂತಕಾಳೀ ॥೧೩॥

ಬಾಳಪಣೀ ತಾರುಣ್ಯ ಕಾಳೀ । ಕಠಿಣಕಾಳೀ ವೃದ್ಧಾಪ್ಯಕಾಳೀ ।
ಸರ್ವಕಾಳೀ ಅಂತಕಾಳೀ । ನಾಮಸ್ಮರಣ ಅಸಾವೇ ॥೧೪॥

ನಾಮಾಚಾ ಮಹಿಮಾ ಜಾಣೇ ಶಂಕರ । ಜನಾ ಉಪದೇಸೀ ವಿಶ್ವೇಶ್ವರ ।
ವಾರಾಣಸೀ ಮುಕ್ತಿಕ್ಷೇತ್ರ । ರಾಮನಾಮೇ ಕರೂನೀ ॥೧೫॥

ಉಫರಾಟ್ಯಾ ನಾಮಾಸಾಠೀ । ವಾಲ್ಮೀಕ ತರಲಾ ಉಠಾಉಠೀ ।
ಭವಿಷ್ಯ ವದಲಾ ಶತಕೋಟೀ । ಚರಿತ್ರ ರಘುನಾಥಾಚೇ ॥೧೬॥

ಹರಿನಾಮೇ ಪ್ರಹ್ಲಾದ ತರಲಾ । ನಾನಾ ಆಘಾತಾ ಪಾಸೂನ ಸುಟಲಾ ।
ನಾರಾಯೆಣ ನಾಮೇ ಪಾವನ ಜಾಲಾ । ಅಜಾಮೇಳ ॥೧೭॥

ನಾಮೇ ಪಾಷಾಣ ತರಲೇ । ಅಸಂಖ್ಯಾತ ಭಕ್ತ ಉದ್ಧರಲೇ ।
ಮಹಾಪಾಪೀ ತೇ ಚಿ ಜಾಲೇ । ಪರಮ ಪವಿತ್ರ ॥೧೮॥

ಪರಮೇಶ್ವರಾಚೀ ಅನಂತ ನಾಮೇ। ಸ್ಮರತಾ ತರಿಜೇ ನಿತ್ಯನೇಮೇ ।
ನಾಮಸ್ಮರಣ ಕರಿತಾ ಯೆಮೇ । ಬಾಧಿಜೇನಾ ॥೧೯॥

ಸಹಸ್ರ ನಾಮಾಮಧೇ ಕೋಣೇ ಯೇಕ। ಮ್ಹಣತಾ ಹೋತಸೇ ಸಾರ್ಥಕ ।
ನಾಮ ಸ್ಮರತಾ ಪುಣ್ಯ ಶ್ಲೋಕ । ಹೋಇಜೇ ಸ್ವಯೇ ॥೨೦॥

ಮನಸ್ಸಿನಿಂದ ಶ್ರದ್ಧಾಪೂರ್ವಕ ನಾಮಸ್ಮರಣ ಮಾಡಿದ್ದಾದರೆ ಭೂತ ಪಿಶಾಚಾದಿಗಳ ಬಾಧೆ ಇಲ್ಲದಂತಾಗುವದು. ಅನೇಕ ಪ್ರಕಾರದ ಕಪಟದ ಕಾಡಾಟದಿಂದ ರಕ್ಷಣೆ ದೊರಕುವದು. ಬ್ರಹ್ಮರಾಕ್ಷಸದಿಂದಾಗುವ ಕಷ್ಟ ಸಂಕಟಗಳು ನಾಶವಾಗುವವು. ಮುಂಜಪೀಡಾ (ಬ್ರಹ್ಮಚಾರಿ ಆದರೆ ಸೋಡ ಮುಂಜವಿ ಆಗದಿದ್ದವ ಸತ್ತು ಭೂತವಾಗಿ ಕಾಡುವದು) ಇಲ್ಲದಂತಾಗುವದು. ಮಂತ್ರ ಜಪ ಮಾಡುವಾಗ ತಪ್ಪಾಗಿ ಹುಚ್ಚು ಹಿಡಿದದ್ದು ಸಹ ನೆಟ್ಟಗಾಗುತ್ತದೆ. ಇಂಥ ಅನೇಕ ದುಃಖಗಳು ನಾಮಸ್ಮರಣದಿಂದ ದೂರಾಗುವವು (೧೨) ನಾಮಸ್ಮರಣದಿಂದ ವಿಷ ಬಾಧೆ ದೂರಾಗುವದು. ನಾಮಸ್ಮರಣದಿಂದ ಮಾಟ ಮದ್ದುಗಳ ದುಷ್ಪರಿಣಾಮ ಇಲ್ಲದಂತಾಗಿ ಹೋಗುವದು. ನಾಮಸ್ಮರಣ ಮಾತ್ರದಿಂದ ಅಂತ್ಯಕಾಲದಲ್ಲಿ ಜೀವಕ್ಕೆ ಉತ್ತಮ ಗತಿ ದೊರಕುವದು. (೧೩) **ಮನುಷ್ಯ ಜೀವ ಇರುವವರೆಗೆ ನಾಮಸ್ಮರಣ ಮಾಡಬೇಕು:-** ಸಣ್ಣವರಿದ್ದಾಗ, ತಾರುಣ್ಯ ಕಾಲದಲ್ಲಿ ಮತ್ತು ಮುಪ್ಪಿನ ಕಾಲದಲ್ಲಿ ಹಾಗೂ ಸಂಕಟ ಪ್ರಸಂಗಗಳಲ್ಲಿ ಸರ್ವಕಾಲದಲ್ಲಿ ಮತ್ತು ಅಂತ್ಯಕಾಲದಲ್ಲಿಯೂ ಸಹ ನಾಮಸ್ಮರಣ ಮಾಡುತ್ತಲಿರ ಬೇಕು. (೧೪) **ಇನ್ನು ಮೇಲೆ ನಾಮಸ್ಮರಣ ಮಾತ್ರದಿಂದ ಶ್ರೇಷ್ಠ ಪದವಿಗೆ ಮುಟ್ಟಿದಂಥವರ ವಿವರ ಕೊಡುತ್ತಾರೆ:-** ಶ್ರೀ ಸಮರ್ಥರ ಮತದಂತೆ ಶ್ರೀ ಶಂಕರನೊಬ್ಬನೇ ಈ ನಾಮಸ್ಮರಣದ ಮಹತ್ವ ತಿಳಿದವನು. ಈ ವಿಶ್ವೇಶ್ವರನಾದ ಶಂಕರನು ಜನರಿಗೆ ನಾಮಸ್ಮರಣದ ಮಹತ್ವತಿಳಿಸಿ, ನಾಮದ ಉಪದೇಶವನ್ನು ಕೊಡುತ್ತಾನೆ. ಶ್ರೀ ಕ್ಷೇತ್ರ ಕಾಶಿಯಲ್ಲಿ ದೇಹವಿಡುವ ಮನುಷ್ಯನ ಕಿವಿಯಲ್ಲಿ ಶ್ರೀ ರಾಮನಾಮವನ್ನು ಹೇಳುವನು. ತನ್ಮೂಲಕ ಅವನು ಮುಕ್ತನಾಗುವನು. ಈ ಕಾರಣದಿಂದ ಕಾಶೀ, ವಾರಣಾಶಿ ಕ್ಷೇತ್ರಕ್ಕೆ ಮುಕ್ತಿ ಕೊಡುವ ಕ್ಷೇತ್ರವೆನ್ನುವರು (೧೫) ವಾಲ್ಮೀಕಿಯು ರಾಮರಾಮ ಅನ್ನುವದರ ಬದಲು "ಮರಾ ಮರಾ"ಎಂದು ಉಪರಾಟಿ ನಾಮಸ್ಮರಣ ಮಾಡಿದನು. ಆದರೂ ಅವನು ಕೂಡಲೇ ಉದ್ಧಾರನಾದನು. ನಂತರ ಭವಿಷ್ಯ ಕಾಲದಲ್ಲಿ ಮುಂದೆ ಆಗುವಂಥ ಶ್ರೀರಾಮ ಚರಿತ್ರೆ ಯನ್ನು ನೂರು ಕೋಟಿ ಶ್ಲೋಕಗಳಲ್ಲಿ (ಅಗಾಧ) ಮುಂದಾಗಿ ರಚಿಸಿದನು. (೧೬) ಭಗವಂತನ ನಾಮದಿಂದ ಪ್ರಲ್ಹಾದ ಉದ್ಧಾರವಾದನು. ಅನೇಕ ಪ್ರಕಾರದ ಸಂಕಟಗಳಿಂದಲೂ ಪಾರಾದನು. ನಾರಾಯಣ ಎಂಬ ನಾಮದಿಂದ ಅಜಾಮಿಳನು ಪವಿತ್ರನಾಗಿ ಹೋದನು. (೧೭) ಬಹಳ ಹೇಳುವದೇನಿದೆ ? ನಾಮಸ್ಮರಣದಿಂದ ಪಾಷಾಣಗಳು ಸಹ ತೇಲಿದವು, ಅಗಣಿತ ಭಕ್ತರ ಉದ್ಧಾರವಾಯಿತು. (ಸೇತುಬಂಧನ ಕಾಲದಲ್ಲಿ ರಾಮ ಎಂಬ ಹೆಸರು ಬರೆದಿಟ್ಟ ಕಲ್ಲು ಗಳು ತೇಲಿದವು. ಸೇತುಬಂಧನವಾಯಿತು. ಮತ್ತು ಕಲ್ಲಾಗಿ ಬಿದ್ದ ಅಹಲ್ಯೆಯು ಉದ್ಧಾರವಾಯಿತು. ಇತ್ಯಾದಿ) ಹೆಚ್ಚೇನು ? ದೊಡ್ಡ ದೊಡ್ಡ ಮಹಾ ಪಾಪಗಳನ್ನು ಮಾಡಿದ ಪಾಪಿಗಳು ಸಹ ನಾಮಸ್ಮರಣ ಮಾತ್ರದಿಂದ ಪೂರ್ಣ ಪವಿತ್ರರಾಗಿ ಹೋಗಿರುವರು. (೧೮) ಭಗವಂತನಿಗೆ ಅನೇಕ ಹೆಸರುಗಳು ಅವೆ. ಅವುಗಳಲ್ಲಿಯ ಯಾವುದೇ ಒಂದು ನಾಮದಿಂದ ಮನುಷ್ಯನು ಸಾಧುವಾಗಿ ಹೋಗುವನು. **ಕೇವಲ ನಾಮಸ್ಮರಣ ಮಾತ್ರದಿಂದ ಭಗವಂತನು ಪೂರ್ಣ ಕೃಪೆ ಮಾಡುವನು:-** ಪರಮೇಶ್ವರನಿಗೆ ಅನಂತ ನಾಮಗಳಿರುವವು. ನಿತ್ಯ ನಿಯಮದಿಂದ ನಾಮಗಳ ಸ್ಮರಣ ಮಾಡಿದ್ದಾದರೆ ಮನುಷ್ಯ ಉದ್ಧಾರವಾಗಿ ಹೋಗುವನು. ನಾಮಸ್ಮರಣ ಮಾಡುವವರಿಗೆ ಯಮ ಯಾತನೆ ಆಗುವದಿಲ್ಲ. ಭಕ್ತನಿಗೆ ಯಾವಾಗ ಭಗವಂತನ ಸ್ಪರ್ಶವಾಗುವದೋ ಆ ಕಾಲದಲ್ಲಿ ಅವನ ಅನಂತ ಶಕ್ತಿಗಳಲ್ಲಿ ಕೆಲವು ಶಕ್ತಿಗಳ ಪ್ರಭಾವದ ಅರಿವು, (ಅನುಭವ) ಭಕ್ತನಿಗಾಗುತ್ತದೆ. ಈ ಅನುಭವದಿಂದ ಭಗವಂತನ ಅನೇಕ ನಾಮಗಳು ಉತ್ಪನ್ನವಾಗುವವು. ಈ ನಾಮಗಳಲ್ಲಿ ಯಾವುದಾದರೂ ಒಂದು ನಾಮವನ್ನು ಸ್ಮರಣೆ ಮಾಡಿದರೆ ಮನುಷ್ಯನು ಭಗವಂತನ ತನಕ ಹೋಗಿ ಮುಟ್ಟಲು ಶಕ್ಯವಿದೆ. (೧೯) ಭಗವಂತನ ಸಾವಿರಾರು ನಾಮಗಳಲ್ಲಿ ಒಂದೇ ಒಂದು ನಾಮವನ್ನು ಮನಃಪೂರ್ವಕ ಒಪ್ಪಿ, ಆರಿಸಿಕೊಳ್ಳಬೇಕು. ಈ ನಾಮವನ್ನು ಮನಃಪೂರ್ವಕ ಜಪ, ಸ್ಮರಣ ಮಾಡ ಬೇಕು. ಇದರಿಂದ ಕಲ್ಯಾಣವಾಗದೇ ಇರಲಾರದು. ನಾಮದ ಸತತ ಸ್ಮರಣೆಯಿಂದ ಮನುಷ್ಯನು ಬಹಳ ಪುಣ್ಯವಾನ ಪುರುಷನಾಗುವನು. (೨೦)

ಕಾಹೀ ಚ ನ ಕರೂನಿ ಪ್ರಾಣೀ । ರಾಮನಾಮ ಜಪೇ ವಾಣೀ ।
ತೇಣೇ ಸಂತುಷ್ಟ ಚಕ್ರಪಾಣೀ । ಭಕ್ತಾ ಲಾಗೀ ಸಾಂಭಾಳೀ ॥೨೧॥

ನಾಮಸ್ಮರೇ ನಿರಂತರ । ತೇ ಜಾಣಾವೇ ಪುಣ್ಯ ಶರೀರ ।
ಮಹಾ ದೋಷಾಚೆ ಗಿರಿವರ । ರಾಮನಾಮೇ ನಾಸತೀ ॥೨೨॥

ಅಗಾಧ ಮಹಿಮಾ ನವಚೆ ವದಲಾ । ನಾಮೇ ಬಹುತ ಜನ ಉದ್ಧರಲಾ ।
ಹಳಾಹಳಾ ಪಾಸೂನ ಸುಟಲಾ । ಪ್ರತ್ಯಕ್ಷ ಚಂದ್ರಮೌಳೀ ॥೨೩॥

ಚಹೂ ವರ್ಣಾ ನಾಮಾಧಿಕಾರ । ನಾಮೀಂ ನಾಹೀ ಲಾಹಾನ ಥೋರ।
ಜಡಮೂಢ ಪೈಲಪಾರ । ಪಾವತೀ ನಾಮೇ ॥೨೪॥

ಮ್ಹಣೌನ ನಾಮ ಅಖಂಡ ಸ್ಮರಾವೇ । ರೂಪ ಮನೀ ಆಠವಾವೇ।
ತಿಸರೀ ಭಕ್ತೀ ಸ್ವಭಾವೇ । ನಿರೋಪಿಲೀ ॥೨೫॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
ಸ್ಮರಣ ಭಕ್ತಿ ನಿರೂಪಣ ನಾಮ ಸಮಾಸ ತೃತೀಯ॥

ಮನುಷ್ಯನು ಯಾವುದನ್ನೂ ಮಾಡುವದು ಬೇಡ, ಬಾಯಿಯಿಂದ (ವಾಣಿಯಿಂದ) ಯಾವಾಗಲೂ ರಾಮನಾಮದ ಜಪ ಮಾಡಬೇಕು. ಇಷ್ಟರಿಂದಲೇ ಭಗವಂತನು ಸಂತುಷ್ಟನಾಗುವನು. ಮತ್ತು ಅವನು ತನ್ನ ಭಕ್ತನನ್ನು ಕಾಪಾಡುವನು. ಭಗವಂತನ ಸತತವಾದ ನಾಮಸ್ಮರಣದ ಅನುಸಂಧಾನದಿಂದ ಅದು ದೃಢಗೊಳ್ಳುವ ಯುಕ್ತಿ, ಮರ್ಮ, ಸಾಧಿಸುವದೇ ಎಲ್ಲ ಪರಮಾರ್ಥದ ಮರ್ಮವಾಗಿದೆ. ಇತರ ಸಾಧನಗಳ ಕಷ್ಟಕಾರ್ಯ ಬಿಟ್ಟು ಮನುಷ್ಯನು ನಾಮದಲ್ಲಿ ಸಮರಸಗೊಂಡರೆ, ಆಗ ಅವನು ಯಾವುದನ್ನು ಸಾಧಿಸುವದು ಮೂಲ ಗುರಿಯಾಗಿದೆಯೋ ಅದನ್ನು ಅವನು ಸಾಧಿಸಿದಂತೆಯೇ ಎಂದು ತಿಳಿಯಬಹುದು. (೨೧) ಅಖಂಡ ನಾಮಸ್ಮರಣ ನಡೆಯುವದು ಬಹಳ ದೊಡ್ಡ ಕೆಲಸವು–ಯಾವತ್ಕಾಲದಲ್ಲಿ ಅಂದರೆ ನಿರಂತರ ಅಖಂಡವಾಗಿ ಯಾರು ನಾಮಸ್ಮರಣೆಯನ್ನು ಮಾಡುವರೋ ಅವರ ಶರೀರವು ಪುಣ್ಯಮಯ ಶರೀರವೆಂದು ಹೇಳಬಹುದು. ನಾಮವು ಅಂತಃಕರಣದಲ್ಲಿ ಸ್ಥಿರವಾಗಿ ಅದರ ಓಘವು ಅಖಂಡವಾಗಿ ಹರಿಯುವದಕ್ಕೆ ಬಹಳಷ್ಟು ಪುಣ್ಯಬಲ ಬೇಕಾಗುವದು. ಯಾರಲ್ಲಿ ಹೀಗೆ ನಡೆಯುವ ನಾಮವಿದೆಯೋ ಅವರ ಜೀವ ಪುಣ್ಯಕರವಾದುದೇ ಇರುವದು. ಮತ್ತು ಅವರ ಶರೀರವು ಸಹ ಬಹು ಪುಣ್ಯವಂತವಾದದ್ದೆಂದು ತಿಳಿಯಬೇಕು. ಮಹಾ ಪಾಪದ ಪರ್ವತವೂ ಸಹ ರಾಮನಾಮದ ಜಪದಿಂದ ನಷ್ಟವಾಗುವದು. ಅತಿ ಪಾಪಿ ಮನುಷ್ಯನ ಅಂತಃಕರಣ ನಿರ್ಮಲವಾಗಿ ಹೋಗುವದು. (೨೨) ನಾಮದ (ಕೀರ್ತಿ) ಮಹಿಮೆ ಎಷ್ಟೆಂದು ಹೇಳಬೇಕು ? ನಾಮದ ಮಹಿಮೆ ಎಲ್ಲವನ್ನೂ ಹೇಳಲಿಕ್ಕೆ ಆಗುವದಿಲ್ಲ. ಅಪರಂಪಾರ ಮಹಿಮೆಯನ್ನು ವರ್ಣಿಸಲು ಸಾಧ್ಯವಿಲ್ಲ. ನಾಮಸ್ಮರಣ ಮಾತ್ರದಿಂದ ಬಹಳಷ್ಟು ಜನರು ಉದ್ಧಾರವಾಗಿರುವರು. ಸಾಕ್ಷಾತ್ ಚಂದ್ರಮೌಳಿ ಶಂಕರನೂ ಸಹ ನಾಮಸ್ಮರಣ ಮಾಡಿಯೇ ಹಾಲಾಹಲ ವಿಷಬಾಧೆಯಿಂದ ಮುಕ್ತನಾದನು (೨೩) **ನಾಮವನ್ನು ಯಾರಾದರೂ ತೆಗೆದುಕೊಳ್ಳಬಹುದು. ಮತ್ತು ಉದ್ಧಾರವಾಗಬಹುದು:**– ನಾಲ್ಕು ವರ್ಣದ ಜನರಿಗೆ ಭಗವಂತನ ನಾಮ ತೆಗೆದುಕೊಳ್ಳುವ ಅಧಿಕಾರವಿದೆ. ಭಗವಂತನ ನಾಮಸ್ಮರಣ ಮಾಡುವದರಲ್ಲಿ ದೊಡ್ಡವರು, ಸಣ್ಣವರು ಎಂಬ ಭೇದವಿಲ್ಲ. ಉಡಾಳ, ದಾರಿ ತಪ್ಪಿದವ ಮತ್ತು ಮೂರ್ಖ, ಬುದ್ಧಿಗೇಡಿ ಮನುಷ್ಯರೂ ಸಹ ನಾಮಸ್ಮರಣದ ಆಧಾರದಿಂದ ಸುಖ ಸಂಸಾರ ಮಾಡಿ ಮುಕ್ತರಾಗುವರು. ಸಂಸಾರದಲ್ಲಿಯ ಸುಖ ದುಃಖದ ಓಲಾಟದಲ್ಲಿ ವಿಚಲಿತರಾಗದೇ ಸಮಾಧಾನದಿಂದ ಇರುತ್ತಾರೆ. (೨೪) ಈ ಕಾರಣದಿಂದ ನಿರಂತರ ನಾಮಸ್ಮರಣ ಮಾಡಬೇಕು. ಈ ಕಾರಣದಿಂದ ಅಖಂಡ ನಾಮಸ್ಮರಣ ಮಾಡಬೇಕು. ಭಗವಂತನ ರೂಪವನ್ನು ಮನದಲ್ಲಿ ತಂದು ಅಲ್ಲಿ ಸ್ಥಿರಗೊಳಿಸುವ ಪ್ರಯತ್ನ ಮಾಡಬೇಕು. ಈ ಪ್ರಕಾರ ಭಕ್ತಿಯ ಮೂರನೆಯ ಪ್ರಕಾರವನ್ನು ನಾನು ಸ್ವಭಾವಾನುಸಾರವಾಗಿ ಹೇಳಿರುವೆನು. (೨೫)

ಶ್ರೀ ದಾಸಬೋಧದ ಗುರು ಶಿಷ್ಯರ ಸಂವಾದದೊಳಗಿನ ನಾಲ್ಕನೆಯ ದಶಕದಲ್ಲಿಯ
"ನಾಮಸ್ಮರಣ ಭಕ್ತಿ" ಎಂಬ ಮೂರನೆಯ ಸಮಾಸವು ಮುಗಿದುದು.

## ದಶಕ ೪. ಸಮಾಸ ೪. ಪಾದಸೇವನ ಭಕ್ತಿ (ನುಡಿ ೨೬)

ನಾವು ಯಾರ ನಿಕಟ ಸಂಪರ್ಕದಲ್ಲಿರುವೆವೋ ಅವರ ದೇಹದ ಮತ್ತು ಮನಸ್ಸಿನ ಪರಿಣಾಮವು ನಮ್ಮ ದೇಹ ಮತ್ತು ಮನಸ್ಸಿನ ಮೇಲೆ ಆಗುವದು. ಇದೊಂದು ಜೀವನದ ನಿಯಮವೇ ಇರುವದು. **ಉದಾ:**–ಗಂಡನಿಗೆ ಮಧುಮೇಹ ಇದ್ದರ ಅದು ಅವನ ಹೆಂಡತಿಗೂ ಬಹುಪಾಲು ಬರುತ್ತದೆ. ಗಂಡನಿಗೆ ನಾಟಕದಲ್ಲಿ ಪ್ರೇಮವಿದ್ದರೆ ಹೆಂಡತಿಗೂ ನಾಟಕದಲ್ಲಿ ಆಸ್ಥೆ ಹುಟ್ಟುವದು. ಭಕ್ತಿಯ ವಿಷಯ ಅಥವಾ ಮಾರ್ಗದಲ್ಲಂತೂ ಈ ನಿಯಮ ನೂರಕ್ಕೆ

ನೂರರಷ್ಟು ಪರಿಣಾಮ ತೋರಿ ಬರುವದು. ಯಾರಿಗೆ ಭಕ್ತಿ ಬೇಕಾಗಿರುವದೋ ಅವರು ಮೊದಲು ಭಕ್ತರ ಅಥವಾ ಸಂತ ಶರಣರ ಸಹವಾಸ ಮಾಡಬೇಕು. ಲಗ್ನವಾದ ಸ್ತ್ರೀಯು ತನ್ನ ಪತಿಯ ಮೇಲೆ ಹೇಗೆ ಮನಃಪೂರ್ವಕ ಪ್ರೇಮ ವಿಶ್ವಾಸವಿಡುವಳೋ ಅದೇ ರೀತಿ, ಒಬ್ಬ ಸಂತ ಶರಣನ ಮೇಲೆ ಅತ್ಯಂತ ವಿಶ್ವಾಸ ಪ್ರೇಮ-ಇವರೇ ನನ್ನ ನಿಜವಾದ ಹಿತಚಿಂತಕರೆಂಬ ನಂಬಿಗೆಯನ್ನು ಇಡುವದೆಂದರೆ ಅವನನ್ನು ಸದ್ಗುರುವೆಂದು ಒಪ್ಪಿಕೊಳ್ಳುವದೇ ಆಗಿರುವದು. ಹಾಗಾದರೆ ಸಂತ ಶರಣರನ್ನು ಗುರುತಿಸುವದು ಹೇಗೆ? ನಿಜವಾದ ಸಂತ ಶರಣರ ಆಚಾರ, ನಡವಳಿಕೆ, ವಿಚಾರ, ಉಚ್ಚಾರ ಈ ಮೂರೂ ಭಗವಂತನ ಪ್ರೇಮದಿಂದ ತುಂಬಿ ತುಳುಕಾಡುತ್ತಿರಬೇಕು. ಅಂಥವರೇ ನಿಜವಾದ ಸಂತ ಶರಣರು ಎಂದು ತಿಳಿಯಬೇಕು. ಮತ್ತು ಎಚ್ಚರಿದ್ದಾಗ ಮತ್ತು ಮಲಗಿದಾಗ ಸುಖ ಭೋಗದಲ್ಲಿ, ದುಃಖ ಪ್ರಸಂಗದಲ್ಲಿ, ಐಶ್ವರ್ಯ ಇದ್ದಾಗ, ಆಪತ್ತು ಒದಗಿದಾಗ, ಏಕಾಂತದಲ್ಲಿದ್ದಾಗ ಮತ್ತು ಜನಸಮೂಹದಲ್ಲಿದ್ದಾಗ ಒಟ್ಟಿನಲ್ಲಿ ಸದಾ ಸರ್ವಕಾಲದಲ್ಲಿ ಭಗವಂತನನ್ನು ಮರೆತು-ಬಿಟ್ಟು ಇರಲು ಸಾಧ್ಯವಿಲ್ಲದಂಥವನೇ ಸಂತನು. ಒಂದು ಕಡೆಯಿಂದ ಯಾವಾಗಲೂ ಭಗವಂತನ ದಿವ್ಯಾನಂದದಲ್ಲಿ ಮುಳಿಗೇಳುತ್ತಿರುವಂಥ ಹಾಗೂ ಇನ್ನೊಂದು ಕಡೆಯಿಂದ ಪ್ರಾಣಿ ಮಾತ್ರರಲ್ಲಿ ಅದರಲ್ಲೂ ವಿಶೇಷವಾಗಿ ಮಾನವತೆಯ ಬಗ್ಗೆ ಅಸೀಮವಾದ, ಅಳತೆ ಇಲ್ಲದ ಕಳಕಳಿ, ಕಳವಳ ಇರುವಂಥವನೇ ನಿಜವಾದ ಸಂತನು. ಅಮೂರ್ತನಾದ, ಆಕಾರರಹಿತ ಪರಮಾತ್ಮ ಸ್ವರೂಪದಲ್ಲಿ ಸತತವಾಗಿರುವ ಅಖಂಡ ಸ್ಥಿರತೆ, ನಿಶ್ಚಿತ ಗ್ರಹಿಕೆ, ಮಾನವತೆಯ ಬಗ್ಗೆ ಪರಮಾವಧಿಯ ಹರ್ಷ, ಆನಂದಗಳು ಕಾಣುವವು. ಅಂದರೆ ಅವನೇ ಸದ್ಗುರುವು. ಇಂಥ ಸದ್ಗುರುವಿನೊಂದಿಗೆ ವಿಶ್ವಾಸ, ಪ್ರೇಮವಿಡಬೇಕು. ನಿನ್ನ ದೇಹವನ್ನು ಇಂಥ ಸಂತರ ಸೇವೆಯಲ್ಲಿ ಸದಾ ತೊಡಗಿಸಬೇಕು. ಮತ್ತು ಮನಸ್ಸನ್ನು ಈ ಸಂತರ ಕಡೆಯಿಂದ ಬರುವಂಥ ನುಡಿಮುತ್ತುಗಳನ್ನು ಗ್ರಹಣ ಮಾಡುವದಕ್ಕಾಗಿ ಯಾವಾಗಲೂ ಸಿದ್ಧವಿಡಬೇಕು. ಈ ಮೂರು ಮಾತುಗಳೂ ಒಂದೇ ಕಡೆಗೆ ಬಂದವೆಂದರೆ ಪಾದಸೇವನ ಭಕ್ತಿ ದೊರಕುತ್ತದೆ. ಘಟಿಸುತ್ತದೆ. ಆದರೆ ಈ ಸಂಸಾರಿಕ ಜಗತ್ತಿನಲ್ಲಿಯ ವ್ಯವಹಾರದಲ್ಲಿ ಈ ಪಾದ ಸೇವನ ಭಕ್ತಿ ಸಾಧಿಸುವದು ಬಹಳ ಕಠಿಣವಿರುವದು. ೧] ಮೊವಲಿಗೆ ಸಂತ ಶರಣರ ಭೆಟ್ಟಿಯಾಗುವದು ಕಠಿಣ ೨) ಒಂದು ವೇಳೆ ಅಂಥ ಸಂತನ ಭೆಟ್ಟಿಯಾದರೂ ನಮ್ಮ ಮನಸ್ಸಿಗೆ ಇವನು ನಿಜವಾದ ಸಂತನೆಂದು ಅನಿಸಿ, ಮನೆ ದಟ್ಟಾಗಿ, ಅವನ ಮೇಲೆ ನಿಷ್ಠಾ, ವಿಶ್ವಾಸ ಸ್ಥಿರವಾಗುವದು ಇನ್ನೂ ಕಷ್ಟ. ೩] ನಿಜವಾದ ಸಂತನು ಭೆಟ್ಟಿಯೂ ಆದನು, ಅವನ ಮೇಲೆ ವಿಶ್ವಾಸವನ್ನೂ ಇಟ್ಟೆವು. ಇಷ್ಟಕ್ಕೇ ಇದು ಮುಗಿಯಲಿಲ್ಲ. ಈ ನಿಷ್ಠೆ, ವಿಶ್ವಾಸಗಳು ಸ್ಥಿರಗೊಂಡರೂ ಇವನ್ನು ಉದ್ದೇಶ ಸಾಧಿಸುವವರೆಗೂ ಅರ್ಥಾತ್ ಕೊನೆಯುವರೆಗೂ ಉಳಿಸಿಕೊಳ್ಳುವದು ಮತ್ತು ಭೇದಭಾವವಿಲ್ಲದೇ ನಿಷ್ಠೆಯಿಂದ ನಂಬಿ ಸೇವೆ ಮಾಡುವದು, ಎಲ್ಲಕ್ಕಿಂತಲೂ ಅತಿ ಕಠಿಣವಾದದ್ದೇ ಇರುತ್ತದೆ. ಇರಲಿ ಪಾದಸೇವನ ಭಕ್ತಿಯು, ಭಾಗ್ಯದಿಂದ ಯಾರಿಗೆ ಸಾಧಿಸುವದೋ ಅಂಥ ಭಾಗ್ಯವಂತರ ಸ್ಥಿತಿ ಅಂದರೆ ಅವಸ್ಥೆಯು ಹಾಃ ಹಾಃ ಅನ್ನುವದರೊಳಗಾಗಿ ಬದಲಾಗಿ ಅವನು ತಯಾರ ಆಗುವನು. ಶ್ರೇಷ್ಠ ಭಕ್ತನಾಗುವನು. ಶ್ರೀ ಸದ್ಗುರುವಿನ ಮೇಲೆ ಅಚಲವಾದ ನಿಷ್ಠೆ, ಶ್ರದ್ಧೆ ಇಡುವದು ಮನಸ್ಸಿನ ದೊಡ್ಡ ಶಕ್ತಿಯೇ ಆಗಿರುವದು.

### ಸಮಾಸ ಚತುರ್ಥ : ಪಾದಸೇವನ ಭಕ್ತಿ

॥ಶ್ರೀರಾಮ॥ ಮಾಗಾ ಜಾಲೇ ನಿರೂಪಣ। ನಾಮಸ್ಮರಣಾಚೇ ಲಕ್ಷಣ।
ಆತಾ ಐಕಾ ಪಾದಸೇವನ। ಚೌಥೀ ಭಕ್ತೀ ॥೧॥

ಪಾದಸೇವನ ತೇಂಚಿ ಜಾಣಾವೇ। ಕಾಯಾವಾಚಾ ಮನೋಭಾವೇ।
ಸದ್ಗುರೂಚೆ ಪಾಯ ಸೇವಾವೆ। ಸದ್ಗತಿಕಾರಣೆ ॥೨॥

ಯಾ ನಾವ ಪಾದಸೇವನ। ಸದ್ಗುರೂಪದೀ ಅನನ್ಯ ಪಣ।
ನಿರಸಾವಯಾ ಜನ್ಮಮರಣ। ಯಾತಾಯಾತೀ ॥೩॥

ಸದ್ಗುರು ಕೃಪೇವಿಣ ಕಾಹೀ। ಭವತರಣೋಪಾಯ ತೋ ನಾಹೀ।
ಯಾಕಾರಣೇ ಲವಲಾಹೀ। ಸದ್ಗುರೂಪಾಯ ಸೇವಾವೇ ॥೪॥

ಸದ್ವಸ್ತು ದಾಖವೀ ಸದ್ಗುರೂ। ಸಕಳ ಸಾರಾಸಾರ ವಿಚಾರೂ।
ಪರಬ್ರಹ್ಮಾಚಾ ನಿರ್ಧಾರೂ। ಅಂತರೀ ಬಾಣೇ ॥೫॥

ಜೇ ವಸ್ತು ದೃಷ್ಟೀಸ ದಿಸೇನಾ। ಆಣಿ ಮನಾಸ ತೇಹೀ ಭಾಸೇನಾ।
ಸಂಗತ್ಯಾಗೇ ವಿಣ ಯೇ ನಾ। ಅನುಭವಾಸೀ ॥೬॥

## ದಶಕ ೪. ಸಮಾಸ ೪. ಪಾದಸೇವನ ಭಕ್ತಿ (ನುಡಿ ೨೬)

**ಮೊದಲು ಪಾದಸೇವನ ಭಕ್ತಿಯ ವ್ಯಾಖ್ಯೆಯ ವಿವರಣೆಯನ್ನು ಹೇಳಿ, ಆ ಮೇಲೆ ಶ್ರೀ ಸದ್ಗುರುವಿನ ಕಾರ್ಯಗಳಾವವು ಎಂಬುದನ್ನು ಹೇಳುವರು:—** ಹಿಂದಿನ ಸಮಾಸದಲ್ಲಿ ನಾಮಸ್ಮರಣ ಭಕ್ತಿಯ ಲಕ್ಷಣಗಳನ್ನು ತಿಳಿಸಲಾಯಿತು. ಈಗ ಭಕ್ತಿಯ ನಾಲ್ಕನೆಯ ಪ್ರಕಾರವೆನ್ನುವ ಪಾದಸೇವನದ ಬಗ್ಗೆ ಹೇಳುವೆ ಕೇಳಿರಿ (೧) ಸದ್ಗತಿ, ಮೋಕ್ಷ ಪ್ರಾಪ್ತಿಯ ಸಲುವಾಗಿ ಅಂದರೆ ಭಗವಂತನ ಪ್ರಾಪ್ತಿಗಾಗಿ ಕಾಯಾ ವಾಚಾ, ಮನಸ್ಸಿನಿಂದ ಅಂದರೆ ದೇಹ-ವಾಣಿ, ಮನಸ್ಸುಗಳಿಂದ ಮತ್ತು ಮಮತೆಯಿಂದ ಸದ್ಗುರುವಿನ ಚರಣಸೇವೆ ಮಾಡುವದಕ್ಕೆ ಪಾದಸೇವನ ಭಕ್ತಿಯನ್ನುವರು (೨) ಜನ್ಮ ಮರಣದ ಯಾತಾಯಾತದಿಂದ ಸುತ್ತುವಿಕೆ, ಕಷ್ಟಗಳಿಂದ ಕಾಯಂ ಮುಕ್ತರಾಗುವದಕ್ಕಾಗಿ ಸದ್ಗುರುವಿನ ಚರಣದಲ್ಲಿ ಏಕನಿಷ್ಠೆಯಿಂದ ಇರುವದಕ್ಕೆ ಪಾದಸೇವನವೆನ್ನುವರು (೩) ಈ ಸಂಸಾರ ಸಾಗರದಿಂದ ಪಾರಾಗುವದಕ್ಕೆ ಸದ್ಗುರು ಕೃಪೆಯ ಹೊರತು ಇನ್ನೊಂದು ಉಪಾಯವಿಲ್ಲ. ಅದಕ್ಕಾಗಿ ಬಹಳಷ್ಟು ತೀವ್ರವಾಗಿ ಸದ್ಗುರುವಿನ ಸೇವೆ ಮಾಡುವದಕ್ಕೆ ಪ್ರಾರಂಭಿಸಿರಿ. ಭವಸಾಗರ (ಸಂಸಾರ ಸಾಗರ) ಅಂದರೆ ನಮ್ಮ ದೇಹ ಸಹಿತವಾಗಿ ಎಲ್ಲ ದೃಶ್ಯ ಹಾಗೂ ವಿನಾಶಿ ವಸ್ತುಗಳ ಅನಂತ ಸಮುದಾಯವು. ನಾವೆಲ್ಲ ಈ ಸಮುದಾಯದಲ್ಲಿಯೇ ಜನ್ಮ ತಾಳುವೆವು: ಬಾಳುವೆವು. ಇದರಲ್ಲಿಯ ರಸ ಸ್ವಾದಿಸುವೆವು. ಕೊನೆಗೆ ಅಸಮಾಧಾನದಿಂದಲೇ ಸಾಯುವೆವು. ಇದರೊಳಗಿಂದ ಹೊರಬಿದ್ದು ಶಾಂತಿ-ಸಮಾಧಾನ ಹೊಂದಬೇಕಾದರೆ ಈ ಸಾಗರದಿಂದ ಹೊರಬಿದ್ದಂಥ ಮನುಷ್ಯರ ಸಹಾಯ, ಮಾರ್ಗದರ್ಶನ ಬೇಕಾಗುವದು. ಅದಕ್ಕಾಗಿ ಸಂತ ಪಥದಲ್ಲಿ ಸ್ಥಿರಗೊಂಡಂಥ ಸದ್ಗುರು ಚರಣದಲ್ಲಿ ಲೀನವಾಗುವದು ಅವಶ್ಯವಿರುವದು. ಸದ್ಗುರುವಿನ ಸೇವೆ ಅಂದರೆ ಅವನು ತೋರಿಸಿ ಕೊಟ್ಟಂಥ ಮಾರ್ಗದಲ್ಲಿ ನಡೆದು ನಿಮ್ಮ ಜೀವನವು ಭಗವಂತನ ಕೃಪೆಗೆ ಪಾತ್ರವಾಗುವಂತೆ ಮಾಡುವದೇ ಇರುತ್ತದೆ. ಸದ್ಗುರು ಕೃಪೆ ಅಂದರೆ ಈಶ್ವರನ ಕೃಪೆ ಎಂದು ತಿಳಿಯಿರಿ. (೪) ಸದ್ಗುರುವು ಸತ್ಯ ಸ್ವರೂಪದ ಪರಮಾತ್ಮ ವಸ್ತುವನ್ನು ತೋರಿಸುವನು. ಆತ್ಮ ಸಾಕ್ಷಾತ್ಕಾರ ಮಾಡಿಸಿ ಕೊಡುವನು. ಸಾರಾಸಾರ ವಿಚಾರದ ಮರ್ಮ ತಿಳಿಸಿ ಕೊಡುವನು. ಸತ್ಯವೆಂದರೆ ಏನು ? ಅಸತ್ಯವೆಂದರೆ ಯಾವುದು ? ಉತ್ತಮವು ಯಾವುದು ? ದುಷ್ಟ ಹಾಗೂ ಕೆಟ್ಟದ್ದು ಯಾವುದು ? ಗ್ರಾಹ್ಯವಾವುದು, ಅಗ್ರಾಹ್ಯವಾವುದು ? ಈ ಎಲ್ಲದರ ವಿಚಾರವನ್ನು ಸದ್ಗುರುವೇ ತೋರಿಸಿ ಕೊಡುವನು. ಸದ್ಗುರುವಿನಿಂದ ಶ್ರವಣ ಮಾಡಿದರೆ ಪರಮಾತ್ಮ ವಸ್ತುವಿನ, ಪರಬ್ರಹ್ಮ ವಸ್ತುವಿನ ಜ್ಞಾನವು ಸ್ಪಷ್ಟಗೊಳ್ಳುತ್ತದೆ. ಸ್ಥಿರಗೊಳ್ಳುತ್ತದೆ. (೫) ನಿಜ ಹೇಳುವದಾದರೆ ಬ್ರಹ್ಮಜ್ಞಾನ ಗುಪ್ತವಿದೆ. ಅತ್ಯಂತ ಸಮಾಧಾನ, ತೃಪ್ತಿ, ಶಂಕಾನಿವಾರಣ, ಇವು ಅದರ ಚಿನ್ಹ (ಗುರುತು) ವಾಗಿದೆ. ಅನೇಕ ಶಬ್ದಗಳಿಂದ ಈ ಸಮಾಧಾನದ ವರ್ಣನೆ ಮಾಡಲಿಕ್ಕೆ ಬರುವದು. ಇಂಥ ಗುಪ್ತ ವಿಷಯವು ಸದ್ಗುರುವಿನ ಸೇವಾ ಸಾನಿಧ್ಯದಿಂದ ಮಾತ್ರ ತಿಳಿಯುತ್ತದೆ. ಪರಮಾತ್ಮ ವಸ್ತು ಕಣ್ಣಿನಿಂದ ನೋಡಲಿಕ್ಕೆ ಬರುವದಿಲ್ಲ. ಮನಸ್ಸಿಗೆ ತಿಳಿಯಲು ಆಗುವದಿಲ್ಲ. ಯಾಕಂದರೆ ಮನಸ್ಸಿಗೆ ಇದು ಭಾಸವಾಗುವದಿಲ್ಲ, ಹೊಳೆಯುವದಿಲ್ಲ, ಸಂಗತ್ಯಾಗ, ದೇಹ ಬುದ್ಧಿಯ ತ್ಯಾಗ, ಮಾಡದ ಹೊರತು ಆತ್ಮಾನುಭವ ಆಗುವದಿಲ್ಲ. ಸಂಗ ಈ ಶಬ್ದವು ಸಂಜ ಎಂಬ ಧಾತುವಿನಿಂದ ಹುಟ್ಟಿದೆ. 'ಸಂಜ' ಅಂದರೆ ಅಂಟಿಕೊಳ್ಳುವಿಕೆ, 'ಸಂಗ' ಅಂದರೆ ವಸ್ತುವಿಗೆ ಮನಸ್ಸು ಅಂಟಿಕೊಳ್ಳುವದು. ಸಂಗತ್ಯಾಗವೆಂದರೆ, ಒಬ್ಬನೇ ಒಬ್ಬ ಭಗವಂತನ ಹೊರತಾಗಿ ಇತರ ವಸ್ತುಗಳಲ್ಲಿ ಮನವು ಅಂಟಿಕೊಳ್ಳದೇ ಇರುವದು. ಯಾವ ವಸ್ತುವಿನಲ್ಲಿ ಮನವು ಅಂಟಿಕೊಳ್ಳುವದೋ ಆ ವಸ್ತುವಿನಲ್ಲಿ ಮನಸ್ಸು ಬಂಧಿತವಾಗುವದು. **ತಾತ್ಪರ್ಯ**:- ಸಂಗತ್ಯಾಗವೆಂದರೆ ಯಾವತ್ತೂ ದೃಶ್ಯ ವಸ್ತುಗಳ ಬಂಧನದಿಂದ ಮನಸ್ಸು ಮುಕ್ತವಾಗಿರುವದು. ಅಂದರೆ ಅಹಂಕಾರ, ಅಭಿಮಾನ, ದೇಹ ಬುದ್ಧಿ ಇವುಗಳ ತ್ಯಾಗದಿಂದ ಎಂದು ಹೇಳಬಹುದು. (೬)

ಅನುಭವ ಘೇತಾ ಸಂಗತ್ಯಾಗ ನಸೇ। ಸಂಗತ್ಯಾಗೇ ಅನುಭವ ನ ದಿಸೇ।
ಹೇ ಅನುಭವೀಯಾಸೀಚ ಭಾಸೇ। ಯೇರಾ ಗಥಾಗೋವೀ ॥೭॥

ಸಂಗತ್ಯಾಗ ಆಣೀ ನಿವೇದನ। ವಿದೇಹಸ್ಥಿತೀ ಅಲಿಪ್ತಪಣ।
ಸಹಜಸ್ಥಿತೀ ಉನ್ಮನೀ ವಿಜ್ಞಾನ। ಹೇ ಸಪ್ತಹೀ ಯೇಕರೂಪ ॥೮॥

ಯಾಹೀ ವೇಗಳೀ ನಾಮಾಭಿಧಾನೇ। ಸಮಾಧಾನಾಚೀ ಸಂಕೇತ ವಚನೇ।
ಸಕಳ ಕಾಹೀ ಪಾದಸೇವನೇ। ಉಮಜೋ ಲಾಗೇ ॥೯॥

ವೇದ ವೇದಗರ್ಭ ವೇದಾಂತ। ಸಿದ್ಧ ಸಿದ್ಧಭಾವ ಗರ್ಭ ಸಿದ್ಧಾಂತ।
ಅನುಭವ ಅನುವಾಚ್ಯ ಧಾದಾಂತ। ಸತ್ಯವಸ್ತು ॥೧೦॥

ಬಹುಧಾ ಅನುಭವಾಚೀ ಅಂಗೇ। ಸಕಳ ಕಳತೀ ಸಂತ ಸಂಗೇ।
ಚೌಥೇ ಭಕ್ತೀಚೇ ಪ್ರಸಂಗೇ। ಗೋಪ್ಯ ತೇ ಪ್ರಗಟೇ ॥೧೧॥

ಪ್ರಗಟ ವಸೋನಿ ನಸೇ। ಗೋಪ್ಯ ಅಸೋನಿ ಭಾಸೇ।
ಭಾಸಾಅಭಾಸಾಹೂನ ಅನಾರಿಸೇ। ಗುರುಗಮ್ಯ ಮಾರ್ಗ ॥೧೨॥

"ನಾನು ಅನುಭವ ಹೊಂದುವೆ" ಈ ವೃತ್ತಿ ಅಥವಾ ತಿಳುವಳಿಕೆ (ಜಾಣೀವ) ಎಲ್ಲಿಯವರೆಗೆ ಇರುವದೋ ಅಲ್ಲಿಯತನಕ ಜ್ಞಾತಾ—ಜ್ಞೇಯ ಅಂದರೆ ತಿಳಿದುಕೊಳ್ಳುವವ, ತಿಳಿಯಬೇಕಾದ ವಸ್ತು ಇವುಗಳಲ್ಲಿಯ ಭಿನ್ನತ್ವದಿಂದ ದೃಶ್ಯ ವಸ್ತುವಿನ ಸಂಬಂಧ ಇರುವದು. ಇದೇ ಕಾರಣಕ್ಕಾಗಿ ಭಿನ್ನತ್ವ ಇರುವವರೆಗೆ ಸಂಗತ್ಯಾಗವೂ ಇರುವದಿಲ್ಲ, ದೃಶ್ಯವೆಲ್ಲವೂ ವಿಲೀನವಾದ,ಕಾಣದಾದ ಕೂಡಲೇ ಅನುಭವ ಪಡೆಯುವ "ನಾನು"ಇಲ್ಲದಂತಾಗುವದು ಜ್ಞೇಯದ ಜೊತೆ ಜ್ಞಾತಾ ಸಹ ಇಲ್ಲದಂತಾಗುವದು. ಈ ಸಂಗತ್ಯಾಗದ ಅವಸ್ಥೆಯ ಸ್ಥಿತಿಯಲ್ಲಿ "ನಾನು ಅನುಭವ ತೆಗೆದುಕೊಳ್ಳುವೆ"ನೆಂಬ ತಿಳುವಳಿಕೆ (ಜಾಣೀವ) ಉಳಿಯುವದಿಲ್ಲ. ನನ್ನ ಈ ಮಾತುಗಳು ಸ್ವಾನುಭವೀ ಮನುಷ್ಯನಿಗೆ ಮಾತ್ರ ಸರಿಯಾಗಿ ತಿಳಿಯುವವು, ಇತರರಿಗೆ ಇವು ಕೇವಲ ಶಬ್ದದ ಗೊಂದಲ ಅಥವಾ ಪೊಳ್ಳೆ/ಫೋಟಾಳೆ ಅನಿಸುವದು (೭) ೧) ಸಂಗತ್ಯಾಗ ೨)ನಿವೇದನ ಅಂದರೆ ದೇವರಿಗೆ ನನ್ನದೆನ್ನುವದನ್ನೆಲ್ಲವನ್ನು ಅರ್ಪಿಸುವದು ೩)ವಿದೇಹಸ್ಥಿತಿ ೪)ಅಲಿಪ್ತತನ ೫) ಸಹಜ ಸ್ಥಿತಿ ೬) ಉನ್ಮನಿ ಮತ್ತು ೭) **ವಿಜ್ಞಾನ** ಈ ಏಳೂ ಅವಸ್ಥೆಗಳು ಒಂದೇ ಆಗಿರುವವು. ೧) **ಸಂಗತ್ಯಾಗ:**— ಪರಮಾತ್ಮ ವಸ್ತು ಅತ್ಯಂತ ಸೂಕ್ಷ್ಮವಿರುವದು. ಬುದ್ಧಿ, ಮನಸ್ಸು ಮತ್ತು ಇಂದ್ರಿಯ ಇವು ದೃಶ್ಯದಲ್ಲಿ ಅಡ್ಡಾಡುವವು. ಮತ್ತು ಕೆಲಸ ಮಾಡುತ್ತಿರುವದರಿಂದ ಇದರ ಮೂಲಕ ಜೀವವು ದೃಶ್ಯಕ್ಕೆಅಂಟಿ ಕೊಳ್ಳುತ್ತದೆ· ಇದರಿಂದ ಸಂಪೂರ್ಣ ಬಿಡುಗಡೆ ಆಗದ ಹೊರತು ಅಂದರೆ ಸಂಗತ್ಯಾಗ, ದೇಹಬುದ್ಧಿಯ ತ್ಯಾಗದ ಹೊರತು ಆತ್ಮಸ್ವರೂಪದ ಅನುಭವ ಬರುವದಿಲ್ಲ. ೨) **ನಿವೇದನ:**- ಮನುಷ್ಯನಲ್ಲಿಯ ಅಹಂಕಾರ ರೂಪದ "ನಾನು" ಬುದ್ಧಿ, ಮನಸ್ಸು ಮತ್ತು ಇಂದ್ರಿಯುಗಳ ಒಂದು ಗಂಟೇ ಇರುವದು. ಈ ಗಂಟಿನಲ್ಲಿ ಒಳಗೂ ಹೊರಗೂ ಅನಾತ್ಮವೆನಿಸುವ ಜಡ, ಅಶಾಶ್ವತ, ನಾಶವಂತವಾದ ದೃಶ್ಯವೇ ಸಂಪೂರ್ಣ ತುಂಬಿರುವದು. ಇದು "ನಾನು" ಎಂಬ ದೇಹ ಬುದ್ಧಿಯನ್ನು ತ್ಯಾಗ ಮಾಡಿದ ಕೂಡಲೇ ದೃಶ್ಯದ ನಾಶವೇ ಆಗುವದು. ಆಗ "ನಾನು" ಎಂಬುದನ್ನು ಭಗವಂತನ ಚರಣದಲ್ಲಿ ಅರ್ಪಣ ಮಾಡುವದೇ ಆತ್ಮಸಾಕ್ಷಾತ್ಕಾರಕ್ಕೆ ರಾಜಮಾರ್ಗವು. ತಿಳಿದು ನೋಡಿದರೆ "ಸಂಗ ತ್ಯಾಗ'' ಮತ್ತು "ನಿವೇದನ'' ಒಂದೇ ಎಂದು ಗೊತ್ತಾಗುವದು. ೩) **ವಿದೇಹಸ್ಥಿತಿ:**- ಸಾಮಾನ್ಯ ಮನುಷ್ಯರು ಸದೇಹಸ್ಥಿತಿಯವರೇ ಇರುವರು. "ನಾನು ದೇಹವೇ ಇರುವೆ" ಎಂಬ ದೃಢ ಭಾವನೆಯಿಂದ ಎಲ್ಲ ವ್ಯವಹಾರ ನಡೆಸುತ್ತಾರೆ. ಜಗತ್ತಿನಲ್ಲಿಯ ಸರ್ವದೃಶ್ಯದ ಕೇಂದ್ರವಾಗಿರುವ ದೇಹವೇ ಅವನಿಗೆ ಸತ್ಯವಾದುದು, ದಿಟವಾದುದು ಎಂದು ಅನಿಸುವದು. ಆ ಕಾರಣದಿಂದಲೇ ಅವನು ಒಳಗಿನಿಂದ ಮನಸ್ಸಿನಿಂದ ದೇಹಕ್ಕೆ ಅಂಟಿಕೊಂಡಿರುತ್ತಾನೆ. ಅರ್ಥಾತ್ ಇದರಿಂದಲೇ ದೇಹ ಬಂದಿಯಾಗುತ್ತಾನೆ. ಯಾವ ಮನಸ್ಸಿನಿಂದ ದೇಹದ ಪ್ರೇಮ ಕಡಿಮೆ ಆಗುವದೋ ಆ ಪ್ರಮಾಣದಲ್ಲಿ ದೃಶ್ಯದ ಮೇಲಿನ ಪ್ರೇಮ ಕಡಿಮೆ ಆಗುತ್ತದೆ. ದೇಹದ ಮೇಲಿನ ಪ್ರೇಮ, ಮೋಹ, ಆಶೆ, ಸಂಪೂರ್ಣ ನಾಶವಾದರೆ ಅರ್ಥಾತ್ ದೇಹ ನಾನಲ್ಲವೆಂದು ಸಂಪೂರ್ಣ ಮರೆತುಬಿಟ್ಟ ಕೂಡಲೇ ದೃಶ್ಯದ ಪ್ರೇಮ ಸಂಪೂರ್ಣ ಇಂಗಿ (ನಾಶವಾಗಿ) ಹೋಗುವದು. ಇಂಥ ಸ್ಥಿತಿಯಲ್ಲಿ ದೇಹವಿದ್ದೂ ಇಲ್ಲದಂತಿರುವದು. ಇದೇ ದೇಹ ಬಂಧ ಶೂನ್ಯಾವಸ್ಥೆಯು. **ಸಾರಾಂಶ:**— ಸಂಗತ್ಯಾಗ ಮತ್ತು ವಿದೇಹ ಸ್ಥಿತಿ ಇವು ಒಂದೇ ಆಗಿರುವವು. ೪) **ಅಲಿಪ್ತತನ:**— ಲಿಪ್ತ ಶಬ್ದ ಲಿಪ್ ಧಾತುವಿನಿಂದ ಹುಟ್ಟುತ್ತದೆ. ಲಿಪ್ ಅಂದರೆ ಲೇಪಿಸುವದು, ಸಾರಿಸುವದು, ಮೆತ್ತುವದು, ದೂಷಿತ ಮಾಡುವದು, ವ್ಯಾಪಿಸುವದು. ಲಿಪ್ತವೆಂದರೆ, ಮೆತ್ತಿದಂಥ, ದೂಷಿತ ಮಾಡಿದಂಥ ಲೇಪ ಹಚ್ಚಿದಂಥ ಎಂದಾಗುವದು. ಅಲಿಪ್ತ ಎಂದರೆ ಮೆತ್ತದೆ ಇದ್ದಂಥ, ದೂಷಿತವಾಗದೇ ಇದ್ದಂಥ,ಮೂಲ ಸ್ಥಿತಿಯು ಹೇಗಿತ್ತೋ ಹಾಗೆಯೇ ಶುದ್ಧವಿರುವಂಥದು.ಇದರಂತೆಯೇ ನಮ್ಮ ಮೂಲ ಸ್ಥಿತಿಯು ಅತ್ಯಂತ ಶುದ್ಧ, ಪವಿತ್ರ ಮತ್ತು ಪೂರ್ಣವಿರುವದು. ಅಂದರೆ ದೃಶ್ಯದ ಆಚೆಗೆ ಪೂರ್ಣವಿರುವದು. ಆದರೆ, ಅವಿದ್ಯೆಯ ಪ್ರಭಾವದಿಂದ ನಾವು ನಮ್ಮ ಮೂಲ ಸ್ಥಿತಿಯನ್ನು ಮರೆತಿರುವೆವು. ಮತ್ತು ಈ ದೃಶ್ಯದ ಅಶಾಶ್ವತ ವಿಶ್ವದಲ್ಲಿ (ಅಡಕಾಯಿಸಿದ್ದೇವೆ) ಬಂದಿಯಾಗಿದ್ದೇವೆ. ನಮ್ಮ ಜೀವವು ಹೊರಗೂ ಒಳಗೂ ದೃಶ್ಯದಿಂದ ತಿಕ್ಕಿ ಸಾರಿಸಿದೆ. ಇದರಿಂದ ನಾವು ದೂಷಿತರಾದೆವು· ನಮ್ಮಸುಖವು ದೃಶ್ಯದಲ್ಲಿರುವದೆಂಬ ಭ್ರಮೆಯಿಂದ ದೃಶ್ಯ ವಸ್ತುಗಳೇ ಬೇಕು ಎಂದು ಅನಿಸಹತ್ತುವದು. ಈ ಅನಿಸಿಕೆಗೆ ವಾಸನಾ ಎಂದು ಹೆಸರು. ವಾಸನಾದಿಂದ ನಾವು ಅಪವಿತ್ರರಾದೆವು. ವಾಸನೆಯು

ನಮ್ಮನ್ನು ಅಪವಿತ್ರ ಮಾಡಿತು. ದೃಶ್ಯ ವಸ್ತು ಬಾಧಿಸುವದಿಲ್ಲ. ಅದರ ವಾಸನಾ ಮಾತ್ರ ನಮ್ಮ ಮನಸ್ಸನ್ನು ಮಲಿನ ಗೊಳಿಸುವದು. ವಾಸನಾ ಕ್ಷಯವಾದರೆ ಆಗ ದೃಶ್ಯದ ಬೆಲೆಯೇ ಹೋಗುವದು. ದೃಶ್ಯದ ಆಕರ್ಷಣೆ ಸುಳ್ಳಾಗು ವದು. ಅನಂತರ ದೃಶ್ಯ ಇದ್ದರೂ ನಮ್ಮನ್ನು ಅದು ದೂಷಿತ ಮಾಡಲಿಕ್ಕೆ ಆಗುವದಿಲ್ಲ· ಅಂತೆಯೇ ಸಂಗತ್ಯಾಗ ಮತ್ತು ಅಲಿಪ್ತತನ ಇವು ಒಂದೇ ಆಗಿರುವವು. ೫) **ಸಹಜಸ್ಥಿತಿ**:- ಸಹಜಾತಂ ಸಹಜಮ್ ಅಂದರೆ ನಮ್ಮೊಡನೆ ಜನ್ಮತಳೆದ ಅಥವಾ "ಸಹಜನ್ಮನಾ ಏವ ಉತ್ಪನ್ನಮ್" ಅಂದರೆ ಜನ್ಮತಃ ಪ್ರಾಪ್ತವಾದಂಥ ಜನ್ಮ ಹೊಂದಿದಂಥ ಕೂಸು (ಮಗು) ಅದು ಬೇಕು; ಇದು ಬೇಡವೆಂದು ಅನ್ನುವದಿಲ್ಲ. ಅದು ಸುಖ ಹೊಂದುವ ಪ್ರಯತ್ನ ಮಾಡು ವದಿಲ್ಲ. ಅದರಂತೆ ದುಃಖ ನಿವಾರಣೆಯ ಪ್ರಯತ್ನವನ್ನೂ ಮಾಡುವದಿಲ್ಲ. ಎಷ್ಟು ಸಹಜವಾಗಿ ಅದು ಸುಖಪಡೆ ಯಲು ತಯಾರ ಇರುವದೋ ಅಷ್ಟೇ ಸಹಜವಾಗಿ ದುಃಖಕ್ಕೂ ತಯಾರಿರುವದು. ಈ ಅವಸ್ಥೆಗೆ ವೇದಾಂತದಲ್ಲಿ ಸಹಜ ಸ್ಥಿತಿ ಎಂದು ಅನ್ನುವರು. ದೃಶ್ಯ ಇದು ಮೂಲತಃ ಭ್ರಮವಿದ್ದುದರಿಂದ ಇದು ನಿಜ ಸುಖದ್ದಲ್ಲ. ಇದ ರಂತೆಯೇ ಇದು (ಖರೇ) ನಿಜವಾದ ದುಃಖದ್ದೂ ಅಲ್ಲ. ಆದುದರಿಂದ ದೃಶ್ಯಕ್ಕೆ ಅಂಟಿಕೊಂಡ ಮನಸ್ಸು ಅಲ್ಲಿಂದ ಸಂಪೂರ್ಣವಾಗಿ ಬಿಡುಗಡೆ ಹೊಂದಿ ಹೃದಯ ಕಮಲದಲ್ಲಿ ಸ್ಥಿರವಾಗದ ಹೊರತು ಸುಖ ದುಃಖಗಳಿಗೆ ಎದೆಗೊಡಲು ಬರುವದಿಲ್ಲ. ದೃಶ್ಯದಲ್ಲಿ ಸಿಲುಕಿಕೊಂಡ ಮನವು ಅಲ್ಲಿಂದ ಬಿಡುಗಡೆ ಹೊಂದುವದೇ ಸಂಗತ್ಯಾಗವು. ಅರ್ಥಾತ್ ಸಂಗ ತ್ಯಾಗ ಸಾಧಿಸಿದ ನಂತರ ಅದರ ಪರ್ಯವಸಾನವು ಸಹಜಾವಸ್ಥೆಯೆನಿಸುವದು. ಅಂತೆಯೇ ಎರಡೂ ಒಂದೇ ಆಗಿವೆ. ೬) **ಉನ್ಮನಿ**:- ಉತ್ + ಮನಸ್ ಕೂಡಿ ಉನ್ಮನ ಶಬ್ದವಾಗಿದೆ, ಉತ್ ಅಂದರೆ ಊರ್ಧ್ವಗತಿ ಅಂದರೆ ಹೆಚ್ಚಿನ ಸ್ಥಾನ, ಶ್ರೇಷ್ಠಸ್ಥಾನ, ಶ್ರೇಷ್ಠತ್ವ, ಪೂರ್ಣತೆ, ವಿಕಾಸವಾಗುವದು, ಬೆಳವಣಿಗೆ ಹೊಂದುವದು, ಮುಕ್ತ ಮಾಡುವದು, ಇತ್ಯಾದಿ. ಮನಸ್ ಅಂದರೆ ಮನವು ಸಾಮಾನ್ಯ ಮನುಷ್ಯನ ಮನವು. ಜಾಗೃತ, ಸ್ವಪ್ನ ಮತ್ತು ಗಾಢ ನಿದ್ರೆ ಎಂಬ ಮೂರು ಅವಸ್ಥೆಗಳಲ್ಲಿಯೇ ತಿರುಗಾಡುತ್ತಿರುವದು. ಆದರೆ ಮೂರೂ ಅವಸ್ಥೆಗಳಲ್ಲಿ ಅದು ದೃಶ್ಯದಿಂದ ತುಂಬಿರುತ್ತದೆ. ಜಾಗ್ರತಾವಸ್ಥೆಯಲ್ಲಿ ಇಂದ್ರಿಯಗಳ ಮುಖಾಂತರ ಈ ಜಗತ್ತನ್ನು ಒಳಗೆ ತೆಗೆದುಕೊಂಡಿರುತ್ತದೆ. ಅದೇ ಸ್ವಪ್ನದಲ್ಲಿ ಅವತರಿಸುತ್ತದೆ. ಇಳಿಯುತ್ತದೆ. ತೋರುತ್ತದೆ. ಅದೇ ಗಾಢ ನಿದ್ರೆಯಲ್ಲಿ ತಾತ್ಪೂರ್ತಿಕವಾಗಿ ಲೀನವಾಗಿ ಇರುವದು, ಸಾಧನ ಮಾಡುವ ಮನುಷ್ಯನು ಸಾಧನವೆಂಬ ಖಡ್ಗದಿಂದ ಮನದಲ್ಲಿ ತುಂಬಿ ತುಳುಕುತ್ತಿರುವ ದೃಶ್ಯದ ಭಾರವನ್ನು ಸವರಿ, ಕಡಿದು ಕಡಿಮೆ ಮಾಡುತ್ತ ಹೋಗುತ್ತಾನೆ. ಇದರಿಂದ ಮನವು ಸೂಕ್ಷ್ಮವಾಗುತ್ತ ಹೋಗುವದು. ಈ ಮನಸ್ಸಿನ ಸೂಕ್ಷ್ಮತೆಯು ಒಂದು ವಿಶಿಷ್ಟ ಮೆಟ್ಟಿಗೆ (ಸ್ಥಳಕ್ಕೆ) ಮುಟ್ಟಿದ ಕೂಡಲೇ ಸಾಧಕನಿಗೆ "ನಾನು ದೇಹವಲ್ಲ, ಆತ್ಮನೇ ಇರುವೆ" ಹೀಗೆ ಅನುಭವವಾಗುವದು ಮನಸ್ಸಿನ ಈ ಅವಸ್ಥೆಗೆ ನಾಲ್ಕನೆಯ ಅಥವಾ ತುರ್ಯಾ ಅವಸ್ಥಾ ಅನ್ನುವರು. ಈ ಅವಸ್ಥೆ ಯಲ್ಲಿ ಒಂದು ಕಡೆ ಸ್ವಸ್ವರೂಪದ ಎಚ್ಚರ (ಸ್ಮೃತಿ) ಇರುವದು. ಮನಸ್ಸಿನ ವಿಕಾಸ ಆಗುತ್ತ ಆಗುತ್ತ ಅದು ತುರ್ಯಾ ವಸ್ಥೆಯ ವರೆಗೆ ಮುಟ್ಟುತ್ತದೆ· ಆದರೆ ಇದರ ಮುಂದೆಯೂ ಸಹ ಅದು ಅಂದರೆ ಈ ಸೂಕ್ಷ್ಮ ಮನವು ವಿಕಾಸ ಹೊಂದುವದು. ಸ್ವಸ್ವರೂಪನಿಗೆ ನಾನು ಎಂಬುವ ಅನುಭವವಿರುವ ಶುದ್ಧ ನಾನು ಎಂಬುದೂ ಕೊನೆಗೆ ಲೀನ (ಕರಗಿ) ಹೊಂದಿ ಕೇವಲ ಪರಮಾತ್ಮ ಸ್ವರೂಪ ಮಾತ್ರ ಉಳಿಯುವದು. ಇಲ್ಲಿ ಮನವು ಮನರೂಪದಿಂದ ಇಲ್ಲದಾಗುತ್ತದೆ. ಇದಕ್ಕೆ ಉನ್ಮನಿ (ಐದನೆಯ ಅವಸ್ಥೆ) ಅನ್ನುವರು. ಜಗತ್ತೇ ಪರಮಾತ್ಮ ಸ್ವರೂಪ ಕಾಣಹತ್ತುವದರಿಂದ ದೃಶ್ಯವು ಸಂಪೂರ್ಣ ಲಯವಾಗುತ್ತದೆ. (ನಾಶವಾಗುವದು) ಕರಗುವದು. ಆದುದರಿಂದಲೇ ಸಂಗತ್ಯಾಗ ಮತ್ತು ಉನ್ಮನಿ ಎರಡೂ ಒಂದೇ ಎಂದು ತಿಳಿಯಿರಿ. ೭) **ವಿಜ್ಞಾನ**:- ವಿ + ಜ್ಞಾ ಅಂದರೆ ಖಾತ್ರಿಯಿಂದ ತಿಳಿಯುವದು, ಪೂರ್ಣ ತಿಳಿಯುವದು. "ಶಾಸ್ತ್ರಾರ್ಥಸ್ಯಸ್ವಾನುಭವಾಯ ತತ್ಸಾಪಾದನಮ್ ವಿಜ್ಞಾನಮ್" ಅಂದರೆ ಶಾಸ್ತ್ರಾರ್ಥವನ್ನು ಸ್ವಾನುಭವದಿಂದ ಆರೂಢಿ ಸುವದು. ಅಂದರೆ ತಿಳಿದುಕೊಳ್ಳುವದು. ಅಥವಾ ಶಾಸ್ತ್ರದಲ್ಲಿ ವರ್ಣಿಸಿದ ಪರಮಾತ್ಮ ಸ್ವರೂಪವನ್ನು ಸ್ವತಃ ಅನುಭವಿ ಸುವದೇ ಆಗಿರುತ್ತದೆ. ವಿಜ್ಞಾನವೆಂದರೆ ಸಾಯನ್ಸ ಎಂದು ಒಂದು ವೇಳೆ ಅರ್ಥ ಮಾಡಿದರೂ ಅದರಲ್ಲಿಯೂ ಸಹ ಪ್ರತ್ಯಕ್ಷ ಪ್ರಯೋಗದಿಂದ ಸಿದ್ಧವಾದಂಥ ಪ್ರಮೇಯಗಳಿಗೆ ಮಾತ್ರ ಜ್ಞಾನವೆಂದು, ಮಹತ್ವ (ಕಿಮ್ಮತ್ತ) ಇರುತ್ತದೆ. ಪರಮಾತ್ಮ ಸ್ವರೂಪದ ಅನುಭವ ಸಿದ್ಧ ಜ್ಞಾನಕ್ಕೆ ಈ ಅರ್ಥದಿಂದ ವಿಜ್ಞಾನ ಎಂಬ ಶಬ್ದವನ್ನು ಶ್ರೀ ಸಮರ್ಥರು

ಇಲ್ಲಿ ಯೋಚಿಸಿದ್ದಾರೆ. ಪರಮಾತ್ಮ ಸ್ವರೂಪವು ಅತ್ಯಂತ ಸೂಕ್ಷ್ಮವಿದ್ದದರಿಂದ ಇದಕ್ಕೆ ಸ್ಥೂಲ ಅಥವಾ ದೃಶ್ಯವು ಎಳ್ಳಷ್ಟೂ ಸ್ಪರ್ಶ ಮಾಡಲಿಕ್ಕೆ ಶಕ್ತವಾಗುವದಿಲ್ಲ. ಎಲ್ಲಿಯವರೆಗೆ ನಾವು ದೃಶ್ಯಕ್ಕೆ ಅಂಟಿಕೊಂಡಿರುವೆವೋ ಅಲ್ಲಿಯವರೆಗೆ ನಾವು ಪರಮಾತ್ಮನನ್ನು ಸ್ಪರ್ಶ ಮಾಡಲಿಕ್ಕೆ ಸಾಧ್ಯವಾಗುವದಿಲ್ಲ. ದೃಶ್ಯದ ಸಂಪೂರ್ಣ ತ್ಯಾಗ ಮಾಡುವದೆಂದರೆ ಸಂಗ ತ್ಯಾಗವೇ ಆಗಿದೆ. ಆದ್ದರಿಂದ ಸಂಗತ್ಯಾಗ ಮತ್ತು ವಿಜ್ಞಾನ ಒಮ್ಮೆಲೆ (ಏಕದಂ) ಪ್ರಕಟವಾಗುವವು. ಅರ್ಥಾತ್ ಸಂಗ ತ್ಯಾಗ ಮತ್ತು ವಿಜ್ಞಾನ ಅಂದರೆ ಅನುಭವಸಿದ್ಧ ಜ್ಞಾನ ಪರಮಾತ್ಮ ಸ್ವರೂಪದ ಪ್ರತ್ಯಕ್ಷ ಅಮಭವ ಇವೂ ಸಹ ಒಂದೇ ಆಗಿವೆ. (೮) ಬ್ರಹ್ಮ ಸಾಕ್ಷಾತ್ಕಾರಕ್ಕೆ ಇನ್ನೂ ಅನೇಕ ಜೇರೆ ಬೇರೆ ಹೆಸರುಗಳು ಇವೆ. ಆದರೆ ಅವು ಸಾಕ್ಷಾತ್ಕಾರದಿಂದ ಸಿಗುವ ಸಮಾಧಾನದ ವರ್ಣನೆ ಮಾಡುವ ಭಿನ್ನ ಭಿನ್ನ ಸಂಕೇತಗಳ ಶಬ್ದಗಳೆಂದು ತಿಳಿಯಬೇಕು. ಒಟ್ಟಿನಲ್ಲಿ ಇವೆಲ್ಲವೂ ಸದ್ಗುರುವಿನ ಚರಣ ಸೇವಾ ಮಾಡಿದರೆ ತಮ್ಮಷ್ಟಕ್ಕೆ ತಾವೇ ತಿಳಿಯಹತ್ತುವವು. (೯) ಶ್ರೀ ಸದ್ಗುರುವಿನ ಜೊತೆಗೆ ಇದ್ದು ಅವನ ಸೇವೆ ಮಾಡಹತ್ತಿದರೆ ಸಾಕ್ಷಾತ್ಕಾರದ ಬೇರೆಬೇರೆ ಪ್ರಕಾರಗಳು ತಮ್ಮಿಂದ ತಾವೇ ತಿಳಿಯುವವು. ಹೊಳೆಯುವವು. ಈ ಮಾರ್ಗವು ಒಳಗಿನದಾಗಿರುವದು. ಗುಪ್ತವಿರುವದು. ಅಲ್ಲಿ ತಿಳಿದುಕೊಳ್ಳುವವನಾದ ಜ್ಞಾತಾ ಏಕಾಗ್ರತೆಯಿಂದ ತದಾತ್ಮತೆಯಿಂದ ಜ್ಞೇಯದ ಬಗ್ಗೆ ಅಂದರೆ ತಿಳಿದುಕೊಳ್ಳಲು ಯೋಗ್ಯವಾದ ಬ್ರಹ್ಮಜ್ಞಾನದ ಜ್ಞಾನ ಮಾಡಿಕೊಳ್ಳಬೇಕು. ಇದೆಲ್ಲವೂ ಪಾದಸೇವನ ಭಕ್ತಿಯಿಂದ (ಘಟಿಸುತ್ತದೆ. ಹೊಳೆಯುತ್ತದೆ) ತಿಳಿಯುತ್ತದೆ. ವೇದದ ಅರ್ಥ, ವೇದದ ರಹಸ್ಯಾರ್ಥ, ಉಪನಿಷತ್ ಇತ್ಯಾದಿಗಳ ಅರ್ಥ ಅಥವಾ ಅದರ ಮರ್ಮ ವೇದಾಂತ ತತ್ವಜ್ಞಾನ, ಶೈವ, ಆಗಮ, ಸಿದ್ಧರ ಮಾರ್ಗ, ಸತ್ಪುರುಷರ ಅಭಿಪ್ರಾಯ, ನಡೆ ನುಡಿಯ ಸ್ವಭಾವ, ಸ್ವಾನುಭವ, ರಹಸ್ಯನಾದ, ಬಿಂದು, ಶೂನ್ಯತೆ, ಅಲಕ್ಷದಲ್ಲಿ ಲಕ್ಷ, ಇತ್ಯಾದಿಗಳ ಸಿದ್ಧಾಂತ (ನಿರ್ಣಯ) ಭಗವಂತನ ಮಾರ್ಗದಲ್ಲಿಯ ನಾನಾ ರೀತಿಯ ಅನುಭವ, ಶಬ್ದಕ್ಕೆ ನಿಲುಕದಂಥ ಘಟನೆಗಳು ಪ್ರತ್ಯಕ್ಷ ಇದ್ದರೂ ಸಹ ಭ್ರಮವಿರುವಂಥ ಅನುಭವ, ಪರಮಾತ್ಮ (ಸತ್ಯ) ವಸ್ತು (೧೦) ಹೀಗೆ ಪಾರಮಾರ್ಥಿಕ ಅನುಭವದ ಅನೇಕ ವಿಧಗಳಿರುವವು, ಸಂತ ಶರಣರ ಸಂಗತಿ ಸಾನ್ನಿಧ್ಯದ ಲಾಭ ದೊರೆತದ್ದಾದರೆ ಇವೆಲ್ಲ ವಿಷಯಗಳು ತಿಳಿಯುತ್ತವೆ. ಅನುಭವವಾಗುತ್ತದೆ, ಪಾದಸೇವನ ಭಕ್ತಿಯ ಮೂಲಕ ಈ ಗುಪ್ತ ಮತ್ತು ಗೂಢ ವಿಷಯಗಳು ಸುಲಭವಾಗಿ ಅನುಭವಕ್ಕೆ ಬರುವವು. (೧೧) ಪರಮಾತ್ಮ ವಸ್ತುವು ಪ್ರಕಟವಿದ್ದು ಇಲ್ಲದಂತೆ ಇರುವದು. ಇದು ದಟ್ಟವಾದ ಆವರಣದಿಂದ ಮುಚ್ಚಲ್ಪಟ್ಟಿದೆ. ಇದು ಕೇವಲ ಮನಸ್ಸಿಗೆ ಮಾತ್ರ ಭಾಸವಾಗುವದು. ಪರಂತು(ಆದರೆ) ಈ ವಸ್ತು ಭಾಸ ಮತ್ತು ಅಭಾಸ ಇವುಗಳಿಂದ ಬೇರೆಯೇ ಇರುವದು. ಇದನ್ನು ತಿಳಿಯುವ ಸುಲಭ ನಿಶ್ಚಿತ ಮಾರ್ಗವನ್ನು ಸದ್ಗುರುವು ಮಾತ್ರ ತಿಳಿಸಿಕೊಡಬಲ್ಲನು· ಅವನಿಂದಲೇ ಕಲಿಯಬೇಕು. ಇದರ ಅರ್ಥವೆಂದರೆ ನಾವು ದೇಹ ಬುದ್ಧಿಯಿಂದ ಅಥವಾ ನಾನು ಎಂಬ ಅಹಂಕಾರ–ಮಮಕಾರಗಳಿಂದ ಪರಮಾತ್ಮ ವಸ್ತುವಿನ ಶೋಧ ಮಾಡತೊಡಗಿದರೂ ಅವನು ಎಲ್ಲದರಲ್ಲಿ ವ್ಯಾಪ್ತನಿದ್ದರೂ ಸಹ ನಿಮ್ಮ ಜ್ಞಾನದ ಅಳವಿನಲ್ಲಿ ಬರುವದಿಲ್ಲ. ತಿಳಿಯುವದಿಲ್ಲ.ಆದರೆ ಕ್ವಚಿತ್ ಪ್ರಸಂಗದಲ್ಲಿ ನಿಮ್ಮ ಮನಸ್ಸಿಗೆ ಅವನ ಇರುವಿಕೆಯ ಅರಿವು ಗುರುತು ಆಗುವದು. ಆದರೆ ಇದೆಲ್ಲವೂ ಮಾನವೀ ಕಲ್ಪನೆಯ ಅಳವಿಗೆ ಮೀರಿದ್ದಾಗಿವೆ· ಆದ್ದರಿಂದ ನಾನು ಎಂಬುದನ್ನು ಬದಿಗೊತ್ತಿ ಅವನನ್ನು ಹೇಗೆ ನೋಡಬೇಕೆಂಬುದರ ವಿಚಾರ ಮಾಡಬೇಕು. ಇವೆಲ್ಲ ಆ ಸದ್ಗುರುವಿನ ಹತ್ತಿರವೇ ಕಲಿಯಬೇಕು. (೧೨)

ಮಾರ್ಗ ಹೋಯೆ ಪರೀ ಅಂತರಿಕ್ಷ। ಜೇಥೇ ಸರ್ವಹಿ ಪೂರ್ವಪಕ್ಷ ।
ಪಾಹೋ ಜಾತಾ ಅಲಕ್ಷ । ಲಕ್ಷವೇನಾ ॥೧೩॥

ಲಕ್ಷೇ ಜಯಾಸೀ ಲಕ್ಷಾವೇ । ಧ್ಯಾನೇ ಜಯಾಸೀ ಧ್ಯಾವೇ ।
ತೇ ಗೇ ತೇಚಿ ಆಪಣ ವ್ಹಾವೇ । ತ್ರಿವಿಧಾ ಪ್ರಚಿತೀ ॥೧೪॥

ಅಸೋ ಹೀ ಅನುಭವಾಚಿ ದ್ವಾರೇ । ಕಳತೀ ಸಾರಾಸಾರ ವಿಚಾರೇ ।
ಸತ್ಸಂಗೇ ಕರೂನ ಸತ್ಯೋತ್ತರೇ । ಪ್ರತ್ಯಯಾಸಿ ಯೇತೀ ॥೧೫॥

ಸತ್ಯ ಪಾಹಾತಾ ನಾಹೀ ಅಸತ್ಯ । ಅಸತ್ಯ ಪಾಹಾತಾ ನಾಹೀ ಸತ್ಯ ।
ಸತ್ಯಾಅಸತ್ಯಾಚೇ ಕೃತ್ಯ । ಪಾಹಣಾರಾ ಪಾಸೀ ॥೧೬॥

ಪಾಹಣಾರ ಪಾಹಣೇ ಜಯಾ ಲಾಗಲೇ । ತೇ ತದ್ರೂಪತ್ವೇ ಪ್ರಾಪ್ತ ಜಾಲೇ ।
ತರೀ ಮಗ ಜಾಣಾವೇ ಬಾಣಲೇ । ಸಮಾಧಾನ ॥೧೭॥

ನಿಜವಾದ ಮಾರ್ಗವೆಂದರೆ ಪರಮಾರ್ಥ ಮಾರ್ಗವೇ ಆಗಿದೆ. ಆದರೆ ಇದು ಒಳಗೆ ಆಳದಲ್ಲಿ ಹೋಗುವ ಮಾರ್ಗವಾಗಿದೆ, ಅಂತರ್ಮುಖಿಯಾಗಿ ನೋಡುವ ಮತ್ತು ತಿಳಿಯುವ ಮಾರ್ಗವಾಗಿದೆ. ಒಳಗೆ ನೋಡುವಾಗ ಒಂದೇ ಒಂದು ಆತ್ಮಸ್ವರೂಪದ ಹೊರತು ಏನೆಲ್ಲವೂ ಅನಾತ್ಮವೆಂದೇ ತಿಳಿಯಬೇಕಾಗುವದು. ಯಾಕಂದರೆ ಯಾವ ಯಾವುದನ್ನು ನೋಡಲಿಕ್ಕೆ ಬರುವದೋ ಅದೆಲ್ಲ ಆತ್ಮವಲ್ಲ. ನಾನು ಎಂಬ ಅಹಂಕಾರದಿಂದ ಆತ್ಮ ವಸ್ತುವನ್ನು ನೋಡಹೋದರೆ ಅದು ಕಾಣಿಸುವದಿಲ್ಲ. ಅದು ಅಲಕ್ಷಿತ ಅಂದರೆ ದುರ್ಬೋಧ. ಕಲ್ಪನೆಗೆ ಹೊರತಾದ, ಅತರ್ಕ್ಯವಿರುವದು. ವೇದಾಂತ ಶಾಸ್ತ್ರದಲ್ಲಿ ಪೂರ್ವ ಪಕ್ಷ ಮತ್ತು ಸಿದ್ಧಾಂತವೆಂದು ವಿಷಯ ಮಂಡಿಸುವ ಪದ್ಧತಿ ಇರುತ್ತದೆ. ಪೂರ್ವ ಪಕ್ಷದಲ್ಲಿ ಸ್ವರೂಪದ ಬಗ್ಗೆ ಶಂಕೆ (ಆಕ್ಷೇಪ) ವ್ಯಕ್ತಪಡಿಸಲಾಗುವದು. ಸಿದ್ಧಾಂತದಲ್ಲಿ ಇದರ ಅಂದರೆ ಆಕ್ಷೇಪದ ನಿವಾರಣೆ ಮಾಡಿ ಸ್ವರೂಪದ ಸಿದ್ಧಿಯ ನಿರ್ಣಯ ಮಾಡಲಾಗುತ್ತಿದೆ. ಇದರ ಮೇಲಿಂದ ಹೇಳುವದಾದರೆ ಶ್ರೀ ಸಮರ್ಥರು ಹೇಳುವದೇನಂದರೆ, ಒಳಗೆ ನೋಡುವಾಗ ಯಾವ ಯಾವುದನ್ನು ತಿಳಿದೆನೆಂದು ಗ್ರಹಿಸುವನೋ ಅದೆಲ್ಲವೂ ಅನಾತ್ಮನ ಸಾಮ್ರಾಜ್ಯಕ್ಕೆ ಸೇರುವದು. ಆದರೆ ಆತ್ಮವಸ್ತುವನ್ನು ಹೀಗೆ ನೋಡಲಿಕ್ಕೆ ಬರುವದಿಲ್ಲ. ಹಾಗಾದರೆ ಹೇಗೆ ನೋಡಬೇಕು? ಈ ಬಗ್ಗೆ ಸಮರ್ಥರು ಮುಂದಿನ ಓವಿ ನುಡಿಯಲ್ಲಿಯೇ ಇದರ (ಖುಲಾಸೆಯ) ನಿರ್ಣಯ ಮಾಡಿದ್ದಾರೆ. (೧೩) ಈ ವಸ್ತುವನ್ನು ಚೆನ್ನಾಗಿ ಲಕ್ಷ್ಯಗೊಟ್ಟು ಒಳಗೆ ಹೃದಯ ಮಧ್ಯದಲ್ಲಿ ನೋಡಬೇಕು. ಧ್ಯಾನದಲ್ಲಿ ಈ ವಸ್ತುವಿನ ಧ್ಯಾನವನ್ನೇ ಮಾಡಬೇಕು. ಮತ್ತು ಆ ವಸ್ತುವೇ ನಾವಾಗಿ ಬಿಡಬೇಕು. ತದ್ರೂಪ ವಾಗಬೇಕು. ಮತ್ತು ಶಾಸ್ತ್ರ ಪ್ರಚೀತಿ, ಗುರು ಪ್ರಚೀತಿ, ಇವುಗಳನ್ನು ಆತ್ಮ ಪ್ರಚೀತಿಯ ಜೊತೆಗೆ ಮೇಳಗೂಡಿಸಿ ತಿಳಿಯಬೇಕು. ಆತ್ಮ ವಸ್ತು ನೋಡುವಾಗ ಬೇರೆಯಾಗಿ ಪ್ರತ್ಯೇಕವಾಗಿ ಉಳಿದರೆ ಉಪಯೋಗವಿಲ್ಲ. ಯಾಕಂದರೆ ವಸ್ತುವನ್ನು ತದ್ರೂಪವಾಗಿಯೇ ನೋಡಬೇಕಾಗುವದು. (೧೪) ಇರಲಿ, ಸ್ವಸ್ವರೂಪದ ಅನುಭವ ಹೊಂದುವ ಮಾರ್ಗ ಮಾತ್ರ ಹೀಗಿರುತ್ತದೆ. ಸಾರಾಸಾರ ವಿಚಾರ ಮಾಡಿದರೆ ಈ ವಿಷಯ ತಿಳಿಯುವದು. ಸತ್ಪುರುಷರ ಸಂಗತಿಯಲ್ಲಿ ಅವರ ಸೇವೆಯಲ್ಲಿ ಇದ್ದರೆ ಇಂಥ ವಿಷಯಗಳು [ಖಾತ್ರಿಯಿಂದ] ನಿಶ್ಚಿತವಾಗಿ ತಿಳಿಯುವವು. ಅನುಭವಕ್ಕೂ ಬರುವವು. ಇದು ಸತ್ಯವಾದ ಮಾತೆಂದು ತಿಳಿಯಿರಿ. (೧೫) ಪರಮಾರ್ಥದಲ್ಲಿಯ ಎಷ್ಟೋ ವಿಷಯಗಳು ನಮಗೆ ತಿಳಿದಿರುವದಿಲ್ಲ. ಆದರೆ ಲೋಕವ್ಯವಹಾರ ಅಥವಾ ದೃಶ್ಯ ವ್ಯವಹಾರದಲ್ಲಿಯ ಅನೇಕ ವಿಷಯಗಳನ್ನು ಪ್ರಯತ್ನದಿಂದ ತಿಳಿದುಕೊಳ್ಳಲಿಕ್ಕೆ ಸಾಧ್ಯವಿರುತ್ತದೆ. ಇದು ಈ ಪರಮಾರ್ಥ ವಿಷಯದಲ್ಲಿ ಮಾತ್ರ ಸಾಧ್ಯವಿಲ್ಲ. ಆದುದರಿಂದ ಸದ್ಗುರುವಿನ ಸೇವೆ ಮಾಡಿ ಅವನ ಕೃಪಾ ಛತ್ರದಲ್ಲಿ ಇದ್ದರೆ ಮಾತ್ರ ಈ ವಿಷಯಗಳೆಲ್ಲ ಸಹಜವಾಗಿ ತಿಳಿಯುವವು. ಸತ್ಯವಾದ ಪರಮಾತ್ಮ ವಸ್ತುವಿನೊಂದಿಗೆ ತದ್ರೂಪರಾಗಿ ನೋಡಿದರೆ, ಅನುಭವ ಪಡೆದರೆ ಆಗ ಅಸತ್ಯವಾದ ದೃಶ್ಯವಿಶ್ವವು ನಿಜವೆಂದು ಅನಿಸುವದಿಲ್ಲ. ಮತ್ತು ದೃಶ್ಯವೇ ಶಾಶ್ವತ, ನಿಜವೆಂದು ಅನಿಸುವವರೆಗೆ ಸತ್ಯವಾದ ಪರಮಾತ್ಮ ವಸ್ತುವಿನ ಅನುಭವ ಆಗುವದಿಲ್ಲ. ಒಟ್ಟಿನಲ್ಲಿ ಕೊನೆಯ ಮಾತನ್ನು ಹೇಳುವದಾದರೆ ಅನುಭವ ಪಡೆದುಕೊಳ್ಳುವವನ ಆಂತರಿಕ ಸ್ಥಿತಿಯ ಅವಸ್ಥೆಯ ಮೇಲೆ ಸತ್ಯ ಮತ್ತು ಅಸತ್ಯ ಇವುಗಳ ಅನುಭವವು ಅವಲಂಬಿಸಿರುತ್ತದೆ. (೧೬) ಪರಮಾತ್ಮ ವಸ್ತುವನ್ನು ನೋಡಬೇಕೆಂದು ಯಾರಾದರೂ ಉದ್ಯುಕ್ತರಾಗಬಹುದು. ಆದರೆ ನೋಡುವವನು ಈ ಪರಮಾತ್ಮ ವಸ್ತುವಿನಲ್ಲಿ ತದ್ರೂಪನಾದರೇ ಅವನಿಗೆ ನೋಡಲಿಕ್ಕೆ ಬರುವದು. ಅಥವಾ ಆ ವಸ್ತು ಪ್ರಾಪ್ತವಾಗುವದು. ಇಂಥ ತದ್ರೂಪತೆಯಿಂದ ಮಾತ್ರ ಸಮಾಧಾನ ಸ್ಥಿರಪಡುವದು. ನೆಲೆ ನಿಲ್ಲುವದು. ಇದನ್ನು ಸಾಧಕನು ತಿಳಿದಿರುವದು ಅವಶ್ಯ. ಎಲ್ಲಿಯವರೆಗೆ (ದ್ರಷ್ಟಾ) ನೋಡುವವನು ನೋಡಬೇಕಾದದ್ದನ್ನು ತದ್ರೂಪನಾಗಿ ನೋಡದೆ ಅಂದರೆ ಬೇರೆಯಾಗಿ ಪ್ರತ್ಯೇಕನಾಗಿ ಉಳಿದು ನೋಡುವದಕ್ಕೆ (ಧಡಪಡಿಸಿದರೆ) ಪ್ರಯತ್ನಿಸಿದರೆ ಪ್ರತ್ಯೇಕನಾಗಿ ನೋಡುವವನಿಗೆ ಪರಮಾತ್ಮ ವಸ್ತುವಿನ ದರ್ಶನವಾಗುವದಿಲ್ಲ. (ದ್ರಷ್ಟಾ) ನೋಡುವವನು ಪರಮಾತ್ಮ ವಸ್ತುವಿನಲ್ಲಿ ಲೀನವಾಗಬೇಕು. ಏಕರೂಪನಾಗಬೇಕು. ಆ ವಸ್ತುವೇ ತಾನಾಗಬೇಕು. "ತೇಗೆ ತೇಚಿ ಆಪಣ ವ್ಹಾವೆ" [ಶ್ರೀ ಸಮರ್ಥ] [ಅದುವೇ ಅದು ನೀನಾಗಬೇಕು] ಅಂದರೇನೆ ವಸ್ತುವಿನ ದರ್ಶನವಾಗುತ್ತದೆ. ಇದರಿಂದ ಅದು ಅಂದರೆ ಸಮಾಧಾನವು ನಮ್ಮಲ್ಲಿ ದೃಢಪಡುತ್ತದೆ. ಶೋಭಿಸುತ್ತದೆ. ಚಮಕಿಸುತ್ತದೆ. (೧೭)

ನಾನಾ ಸಮಾಧಾನೇ ಪಾಹಾತಾ । ಜಾಣತೀ ಸದ್‌ಗುರು ಕರಿತಾ ।
ಸದ್ಗುರುವಿಣ ಸರ್ವಥಾ । ಸನ್ಮಾರ್ಗ ನಸೇ ॥೧೮॥
ಪ್ರಯೋಗ ಸಾಧನೇ ಸಾಯಾಸ । ನಾನಾ ಸಾಕ್ಷೆಪೇ ವಿದ್ಯಾ ಅಭ್ಯಾಸ ।
ಅಭ್ಯಾಸೇ ಕಾಹೀ ಗುರುಗವ್ಯಾಸ । ಪಾವಿಜೇತ ನಾಹೀ ॥೧೯॥
ಜೇ ಅಭ್ಯಾಸೇ ಅಭ್ಯಾಸಿತಾ ನ ಯೇ। ಜೇ ಸಾಧನೇ ಅಸಾಧ್ಯ ಹೋಯೇ ।
ತೇ ಹೇ ಸದ್ಗುರುವಿಣ ಕಾಯೆ । ಉಮಜೋ ಜಾಣೇ ॥೨೦॥
ಯಾಕಾರಣೇ ಜ್ಞಾನಮಾರ್ಗ । ಕಳಾಯಾ ಧರಾವಾ ಸತ್ಸಂಗ ।
ಸತ್ಸಂಗೇವಿಣ ಪ್ರಸಂಗ । ಬೋಲೋಚಿ ನಯೇ ॥೨೧॥
ಸೇವಾವೇ ಸದ್ಗುರುಚೆ ಚರಣ । ಯಾ ನಾವ ಪಾದಸೇವನ ।
ಚೌಥೇ ಭಕ್ತೀಚೆ ಲಕ್ಷಣ । ತೇ ಹೇ ನಿರೋಪಿಲೇ ॥೨೨॥
ದೇವ ಬ್ರಾಹ್ಮಣ ಮಹಾನುಭಾವ । ಸತ್ಪಾತ್ರ ಭಜನಾಚೆ ಠಾವ ।
ಏಸಿಯೇ ಠಾಈ ಸದ್ಭಾವ । ದೃಢ ಧರಾವಾ ॥೨೩॥
ಹೇ ಪ್ರವೃತ್ತೀಚೆ ಬೋಲಣೇ । ಬೋಲಿಲೇ ರಕ್ಷಾಯಾ ಕಾರಣೇ ।
ಪರಂತು ಸದ್ಗುರುಪಾಯು ಸೇವಣೇ । ಯಾ ನಾವ ಪಾದಸೇವನ ॥೨೪॥
ಪಾದಸೇವನ ಚೌಥೀ ಭಕ್ತೀ । ಪಾವನ ಕರಿತಸೇ ತ್ರಿಜಗತೀ ।
ಜಯೇ ಕರಿತಾ ಸಾಯುಜ್ಯಮುಕ್ತೀ । ಸಾಧಕಾಸ ಹೋಯೆ ॥೨೫॥
ಮ್ಹಣೌನಿ ಥೋರಾ ಹೂನಿ ಥೋರ । ಚೌಥೇ ಭಕ್ತೀಚಾ ನಿರ್ಧಾರ ।
ಜಯೇ ಕರಿತಾ ಪೈಲಪಾರ । ಬಹುತ ಪ್ರಾಣೀ ಪಾವತೀ ॥೨೬॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
ಪಾದಸೇವನಭಕ್ತಿ ನಿರೂಪಣನಾಮ ಸಮಾಸ ಚವಥಾ ॥

• •

ಸಮಾಧಾನದಲ್ಲಿ ಅನೇಕ [ಬಾಜು ಭೇದ] ಭಾಗಗಳು ಇರುವವು. ಸದ್ಗುರುವಿನ ಸೇವೆ ಮಾಡುವದರಿಂದ ಸಮಾಧಾನದಲ್ಲಿಯ ಒಂದೊಂದು [ಅಂಶ] ಭಾಗಗಳು ನಮ್ಮಲ್ಲಿ ಪ್ರಕಟವಾಗಹತ್ತುವವು. ಆದುದರಿಂದ ಸದ್ಗುರುವಿನ ಸೇವೆಯು ಹೊರತು ಭಗವಂತನನ್ನು ಕೂಡಲು ಕಾಣಲು ಬೇರೆ ಮಾರ್ಗವೇ ಇಲ್ಲದ್ದರಿಂದ ಸದ್ಗುರುವು ಬೇಕೇ ಬೇಕು. (೧೮)ಪ್ರಯೋಗವೆಂದರೆ ಅನೇಕ ದಿವ್ಯ ವನಸ್ಪತಿಗಳ ಸೇವನ ಮಾಡುವದು. ಮತ್ತು ಅನೇಕ ಮಂತ್ರಗಳಜಪಮಾಡಿ ಸಿದ್ಧಿಪಡೆಯುವದು. ಅಥವಾ ಯಂತ್ರಗಳಪೂಜಾಮಾಡಿಇಷ್ಟಪ್ರಾಪ್ತಿಮಾಡಿಕೊಳ್ಳುವದು. ಸಾಧನ ವೆಂದರೆ ಜ್ಞಾನ, ಭಕ್ತಿ, ಕರ್ಮ, ಯೋಗ ಇತ್ಯಾದಿ ಆತ್ಮಜ್ಞಾನದ ಮಾರ್ಗಗಳು. "ಸಾಯಾಸ" ಅಂದರೆ ಉಪವಾಸ, ತಪವಾಸ, ತೀರ್ಥಯಾತ್ರೆ, ವ್ರತ ಇತ್ಯಾದಿ ಶರೀರ ಕಷ್ಟದವು. ಸಾಕ್ಷೇಪದಿಂದ ವಿದ್ಯಾಭ್ಯಾಸ ಅಂದರೆ ಬಹಳ ಪ್ರಯತ್ನ ದಿಂದ ಅನೇಕ ಶಾಸ್ತ್ರಗಳ ಅಭ್ಯಾಸ ಮಾಡಿ (ವಿದ್ವಾನ್) ಪಂಡಿತನಾಗುವದು. ಮೇಲೆ ಹೇಳಿದವುಗಳು ವ್ಯವಹಾರದಲ್ಲಿ ಉತ್ತಮವೇ ಇರುವದು ನಿಜ. ಆದರೆ ಸದ್ಗುರುವಿನ ಹತ್ತಿರ ಇದ್ದು ಅಲ್ಲಿ ಅವನಿಂದ ಯಾವುದು ಸಿಗುವದೋ ಅದರ ಕೂಡ ತುಲನೆ ಮಾಡಿದರೆ ಇವೆಲ್ಲ ಕೆಲಸಕ್ಕೆ ಬಾರದವೆಂದು ಅನಿಸುವದು. ಸದ್ಗುರುವು ಏನನ್ನು ದೊರಕಿಸಿ ಕೊಡು ವನೋ ಅದನ್ನು ಆ ವಸ್ತುವನ್ನು ಮೇಲೆ ಹೇಳಿದವುಗಳು ದೊರಕಿಸಿಕೊಡಲಿಕ್ಕೆ ಸಾಧ್ಯವೇ ಇಲ್ಲ. ಇದು ಅಮೂಲ್ಯ ವಾದದ್ದು. ದುರ್ಮಿಳವಾದದ್ದು ಇರುವದು. (೧೯) ಪರಮಾತ್ಮ ವಸ್ತುವಿನ ಬಗ್ಗೆ ಮಾಡುವ ಅಭ್ಯಾಸವನ್ನು ಶಾಲಾ ವಿದ್ಯಾರ್ಥಿಗಳಂತೆ ಮಾಡಲಿಕ್ಕೆ ಬರುವದಿಲ್ಲ. ಯಾಕಂದರೆ ನಾನು ಎಂಬುದು ಇಲ್ಲದೆ ಅಭ್ಯಾಸಮಾಡಲಿಕ್ಕೆ ಆಗುವದಿಲ್ಲ ಅದೇ ಪರಮಾತ್ಮನಿಗೆ ನಾನು ಎಂಬುದಿದ್ದರೆ ನಡೆಯುವದಿಲ್ಲ. ಪರಮಾತ್ಮ ವಸ್ತುವು ಸಾಧನ ಮಾಡುವದರಿಂದ ಸಾಧ್ಯವಾಗುವದಿಲ್ಲ. ಯಾಕಂದರೆ ಸಾಧನ ಮಾಡುವ ಜೀವವು ಅಲ್ಪವು, (ಸಣ್ಣದು)ತುಚ್ಛವು, ಹೀನವೂ ಇರುವದು. ಅದರ ಸಾಧನವೂ ಅಲ್ಪ. ಮತ್ತು ಸಾಧನ ಕಾಲವೂ ಸಹ ಅಲ್ಪವು. ಪರಮಾತ್ಮನು ಎಲ್ಲ ದೃಷ್ಟಿಯಿಂದ ಅನಂತ, ಕೊನೆಯಿಲ್ಲದ, ಅಪಾರನು. ಅರ್ಥಾತ್ ಅಲ್ಪನು ತನ್ನ ಅಲ್ಪತನವನ್ನು ಸಂಭಾಳಿಸಿಕೊಂಡು ಅನಂತನಿಗೆ (ಗವಸಣ ಅಂದರೆ) ಮುಸುಕು (ಹೊದಿಕೆ, ಆಚ್ಛಾದನೆ) ಹಾಕುವ ಪ್ರಯತ್ನ ಎಷ್ಟೋಪರಿ ಮಾಡಿದರೂ ಅದು ಯಶಸ್ವಿ ಆಗಲಾರದು· ಇದು ಕ್ಷುದ್ರ ಜೀವಿಯು ಗುಡ್ಡ ಎತ್ತುವದಕ್ಕೆ ಪ್ರಯತ್ನ ಮಾಡಿದಂತೆ ಆಗುವದು. ಈ ಗೂಢವಾದ ವಿಷಯ ಸದ್ಗುರುವಿನ ಸಹವಾಸ ಆಗದ ಹೊರತು ತಿಳಿಯುವದು ಶಕ್ಯವಿಲ್ಲ. (೨೦) ಒಟ್ಟಿನಲ್ಲಿ ಪರಮಾತ್ಮನ ಜ್ಞಾನ ಮಾರ್ಗ ತಿಳಿಯಬೇಕೆಂಬ ಹಂಬಲ ಇದ್ದುದಾದರೆ ಸಂತರು, ಶರಣರು, ಸಾಧು ಸದ್ಗುರುಗಳ ಸಹವಾಸ (ಸಂಗತಿ) ಮಾಡಿರಿ. ಗುರು ಮುಖಾಂತರವೇ ತಿಳಿಯುವಂಥ ವಸ್ತು ಅಮೂಲ್ಯವಾಗಿರುವದರಿಂದ ಸಂತ ಸದ್ಗುರು ಸಂಗತಿ ಮಾಡದೇ ಪರಮಾತ್ಮ ಸ್ವರೂಪದ ಅನುಭವ ವಿಷಯದ ಬಗ್ಗೆ ಮಾತಾಡಲಿಕ್ಕೆ ಹೋಗಬೇಡಿರಿ· ಈ ಬಗ್ಗೆ ವಾದ ಮಾಡುವದು ವ್ಯರ್ಥ (೨೧) ಈ ಪ್ರಕಾರ ಪಾದಸೇವನ ಭಕ್ತಿಯ ಗೂಢ ಅರ್ಥವನ್ನು ತಿಳಿಸಿ ಹೇಳಿದ ಮೇಲೆ ಶ್ರೀ ಸಮರ್ಥರು ಕೊನೆಯಲ್ಲಿ ವ್ಯವಹಾರ ದೃಷ್ಟಿಯಿಂದ ಈ ಭಕ್ತಿಯ ಅರ್ಥವನ್ನು ತಿಳಿಸಿ ಹೇಳುತ್ತಾರೆ. ಸದ್ಗುರುವಿನ ಚರಣ ಸೇವೆ ಮನಮುಟ್ಟಿ ಮಾಡುವದೇ ಪಾದಸೇವನವು. ಇದು ನಾಲ್ಕನೆಯ ಭಕ್ತಿಯು. ಇದರ ಲಕ್ಷಣಗಳನ್ನು ಹೇಳಿದೆವು. (೨೨) ದೇವರು, ಬ್ರಾಹ್ಮಣರು, ಬ್ರಹ್ಮಜ್ಞಾನಿ, ಸಂತ ಶರಣರು ಮತ್ತು ಅತ್ಯಂತ ಸಾತ್ವಿಕ ಸಜ್ಜನರು ಇವರೆಲ್ಲರೂ ಪಾದಸೇವೆಗೆ ಯೋಗ್ಯರಾಗಿರುವರು. ಇಂಥ ಮಹಾಜನರ ಬಗ್ಗೆ ಮನಸ್ಸಿನಲ್ಲಿ ದೃಢವಾದ ಸದ್ಭಾವನೆ ಇರಬೇಕು. (೨೩) ಈ ಮಾತುಗಳು ಲೋಕ ವ್ಯವಹಾರಿಕವಾದವುಗಳು. ವ್ಯವಹಾರ ಅಥವಾ ಪರಂಪರಾ ರಕ್ಷಣ ಮಾಡುವದಕ್ಕಾಗಿ ನಾನು ಈ ಮಾತನ್ನು ಹೇಳಿದ್ದೇನೆ. ಇರಲಿ, ನಿಜ ಹೇಳುವದಾದರೆ ಸದ್ಗುರುವಿನ ಚರಣಗಳ ಸೇವೆ ಮಾಡುವದೇ ಪಾದಸೇವನವಾಗಿದೆ. [೨೪] ಈ ನಾಲ್ಕನೆಯ ಪಾದಸೇವನವೆಂಬ ಹೆಸರಿನ ಭಕ್ತಿಯು ಅಂದರೆ ಗುರು ಏನು ಹೇಳುವನೋ ಅದನ್ನೆಲ್ಲ ತಪ್ಪದೇ ಆಚರಣೆಯಲ್ಲಿ ತರುವದು. ಮತ್ತು ಅವನ ಸೇವೆ ಮನಮುಟ್ಟಿ ಸದಾಕಾಲ ಮಾಡುವದು· ಇದೇ ಪಾದ ಸೇವನ ಭಕ್ತಿಯು. ಇದು ತ್ರೈಲೋಕ್ಯವನ್ನೇ ಪಾವನ ಮಾಡುವಂಥದಾಗಿದೆ. ಇದನ್ನು ಮಾಡಿದರೆ ಸಾಧಕನಿಗೆ ಸಾಯುಜ್ಯ ಮುಕ್ತಿ ಅಂದರೆ ಈಶ್ವರ ಸ್ವರೂಪದಲ್ಲಿ ಏಕರೂಪವಾಗುವದು, ಖಾತ್ರಿಯಿಂದ ಸಿಗುವದು. [೨೫] ಆದುದರಿಂದ ಈ ನಾಲ್ಕನೆಯ ಭಕ್ತಿಯು ಶ್ರೇಷ್ಠದಲ್ಲಿ ಶ್ರೇಷ್ಠ ಭಕ್ತಿಯಾಗಿದೆಯೆಂದು ನಾನು ನಿಶ್ಚಿತ ನಿರ್ಣಯ ಮಾಡಿದ್ದೇನೆ. ಈ ಭಕ್ತಿಯಿಂದ ಬಹಳಷ್ಟು ಜನರು ಸಂಸಾರ ಸಾಗರದಿಂದ ಸಹಜವಾಗಿ ಪಾರಾಗಿ ಹೋಗುವರು· [೨೬]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ "ಪಾದಸೇವನ ಭಕ್ತಿ"
**ಎಂಬ ಹೆಸರಿನ ನಾಲ್ಕನೆಯ ದಶಕದೊಳಗಿನ ನಾಲ್ಕನೆಯ ಸಮಾಸವು ಮುಗಿದುದು.**

## ದಶಕ ೪. ಸಮಾಸ ೫. ಅರ್ಚನ ಭಕ್ತಿ (ನುಡಿ ೩೩)

ಪರಮಾತ್ಮ ಸಾಕ್ಷಾತ್ಕಾರವಾಗಲು ಮನುಷ್ಯ ತನ್ನಲ್ಲಿರುವ ತನ್ನತನ [ದೊಡ್ಡಸ್ತಿಕೆ, ನಾನು ಎಂಬ ಅಹಂಭಾವ] ವನ್ನು ಹಿಂದಕ್ಕೆ ಸರಿಸಿ ಮುಂದೆ ಅಂದರೆ ತನ್ನತನದ ವಿರುದ್ಧ ದಿಕ್ಕಿನಲ್ಲಿ ಹಾರಿ ಹೋಗಬೇಕಾಗುವದು. ಹೀಗೆ ಹೋಗುವ ಮಾರ್ಗಗಳು ಎರಡು ಇರುವವು. ಮನುಷ್ಯ ತನ್ನತನವನ್ನು ಸಂಪೂರ್ಣ ಇಲ್ಲದಂತೆ ಮಾಡಿ ಪರಮಾತ್ಮನನ್ನು ಆಶ್ರಯಿಸುವದು. ಅಂದರೆ ಅವನಿಗೆ ತೆಕ್ಕೆ ಬೀಳುವದು, ಗಟ್ಟಿಯಾಗಿ ಅವನನ್ನು ಹಿಡಿದುಕೊಳ್ಳುವದು, ಅಪ್ಪಿಕೊಳ್ಳುವದು ಇದು ಒಂದು ದಾರಿಯಾದರೆ, ಇನ್ನೊಂದು – ಮನುಷ್ಯನು ತನ್ನತನದ ಮುಖವನ್ನು ಸಂಪೂರ್ಣವಾಗಿ ಪರಮಾತ್ಮನ ಕಡೆಗೆ ತಿರುಗಿಸುವದು. ಎರಡನೆಯ ಮಾರ್ಗವಾಗಿದೆ. ಒಂದನೆಯ ಮಾರ್ಗದಲ್ಲಿ, ಜ್ಞಾನ ಮಾರ್ಗ, ಯೋಗಮಾರ್ಗಗಳು ಬರುವವು. ಎರಡನೆಯ ಮಾರ್ಗದಲ್ಲಿ ಭಕ್ತಿಮಾರ್ಗ ಬರುವದು. ವಿಲಕ್ಷಣ ಮತ್ತು ವಿಶಿಷ್ಟವಾದ ಒಂದು ಗುಣವು ಮನುಷ್ಯನಲ್ಲಿ ಇರುವದು. ಆದದರಿಂದ ಯಾರ ಮೇಲೆ ನಮ್ಮ ಪ್ರೇಮ

ವಿರುವದೋ ಅವರನ್ನು ಬಹು ಪರಿಯಿಂದ ಸತ್ಕಾರ ಮಾಡುವದು ಮತ್ತು ಅವರ ಪೂಜೆ ಮಾಡುವದು ಇತ್ಯಾದಿ ಮಾಡುವನು. ಹೀಗೆ ಮಾಡದ ಹೊರತು ಅವನಿಗೆ ಸಮಾಧಾನವಾಗುವದಿಲ್ಲ. ಈ ಪರಿಯನ್ನು ನೋಡಿದಾಗ ಇದರಲ್ಲಿಯೇ ಅರ್ಚನ ಭಕ್ತಿಯ ಮೂಲ [ಉಗಮ] ಸಿಗುವದು. ಜಗತ್ತಿನಲ್ಲಿ ಯಾವ ಯಾವುದು ಉತ್ತಮ ಹಾಗೂ ಪವಿತ್ರವಿರುವದೋ ಅದನ್ನೆಲ್ಲ ಭಗವಂತನಿಗೆ ಅರ್ಪಣ ಮಾಡುವದೇ ಅರ್ಚನ ಭಕ್ತಿಯ ಮುಖ್ಯ ಲಕ್ಷಣವಿರುವದು. ಆದರೆ ಪರಮಾತ್ಮ ಅಥವಾ ಭಗವಂತನು ಅತ್ಯಂತ ಸೂಕ್ಷ್ಮವಿರುವನು. ಅಂತೆಯೇ ಅರ್ಚನದಲ್ಲಿ ಸ್ಥೂಲ ಮತ್ತು ಸೂಕ್ಷ್ಮ ಅಥವಾ ಹೊರಗಿನ, ಮತ್ತು ಒಳಗಿನ ಹೀಗೆ ಎರಡು ಪ್ರಕಾರಗಳಿರುವವು. ಮೊದಲಿಗೆ ಹೊರಗಿನ ಅರ್ಚನದ ಬಗ್ಗೆ ವಿಚಾರ ಮಾಡುವಾ, ಮೊದಲು ನಮ್ಮ ಉಪಾಸ್ಯ ದೇವರನ್ನು ನಿಶ್ಚಿತವಾಗಿ ಮಾಡಿಕೊಳ್ಳಬೇಕು. ಸದ್ಗುರುವೂ ಉಪಾಸ್ಯ ದೇವರಾಗುತ್ತಾನೆ. ದೇವರ ಅಥವಾ ಸದ್ಗುರುವಿನ ಸುಂದರ ಮೂರ್ತಿ ಅಥವಾ ಚಿತ್ರಪಟ (ಫೋಟೋ) ದೇವರ ಮನೆಯಲ್ಲಿ ಅಥವಾ ಸೂಕ್ತ ಸ್ಥಳದಲ್ಲಿ ಮಂಟಪ ಅಥವಾ ಮಣೆಯ ಮೇಲೆ ಇಟ್ಟು ದಿನಾಲು ಪವಿತ್ರ ಮನಸ್ಸಿನಿಂದ ಮೂರ್ತಿ ಅಥವಾ ಫೋಟೋಕ್ಕೆ ಸ್ನಾನ ಮಾಡಿಸಿ ಒರೆಸಿ ಉತ್ತಮ ವಸ್ತ್ರ, ಗಂಧ, ಸುಗಂಧ ದ್ರವ್ಯ ಮತ್ತು ಹೂ ಪತ್ರಿಗಳಿಂದ ಪೂಜಿಸಿ ಸುಗ್ರಾಸ ನೈವೇದ್ಯವನ್ನು ತೋರಿಸಿ ಆ ಮೇಲೆ ಆರತಿ ಮಾಡಬೇಕು. ಮತ್ತು ಸಂಪೂರ್ಣ ಮನಸ್ಸಿನಿಂದ ಶರಣಾಗತ ಭಾವದಿಂದ ಸಾಷ್ಟಾಂಗ ನಮಸ್ಕಾರ ಮಾಡಬೇಕು. ಮತ್ತು ಒಳ್ಳೇ ಪ್ರೇಮ ದಿಂದ ದೇವರ ಕಡೆಗೆ ಒಮ್ಮೆ ಏಕಾಗ್ರತೆ ದೃಷ್ಟಿಯಿಂದ ನೋಡಬೇಕು. ಇನ್ನು ಎರಡನೆಯ ಪ್ರಕಾರದ ಒಳಗಿನ ಅರ್ಚನ ಯಾವ ಪ್ರಕಾರದ್ದಿರುವದು ನೋಡೋಣ. ಮನುಷ್ಯ ದೇಹದಲ್ಲಿ ಕಲ್ಪನೆ ಎಂಬ ಹೆಸರಿನ ಒಂದು ವಿಲಕ್ಷಣ ಶಕ್ತಿ ಇರುವದು. ನಾವು ಜ್ಞಾನ ಸಾಧನೆ ಮಾಡುವಾಗ ಈ ಕಲ್ಪನೆಯ ಸಹಾಯ ಬಹಳಾಗುತ್ತದೆ. ಭಕ್ತಿಯಲ್ಲಿಯೂ ಸಹ ಇದರ ಉತ್ತಮ ಉಪಯೋಗವಾಗುತ್ತದೆ. ಮೊದಲಿಗೆ ನಮ್ಮ ಉಪಾಸ್ಯ ದೇವ ಅಥವಾ ಸದ್ಗುರುವು ನಮ್ಮ ಹೃದಯದಲ್ಲಿರುವನು ಎಂಬ ಭಾವನೆ ಮಾಡಬೇಕು. ಈ ಮೂರ್ತಿಯನ್ನು ಸಜೀವವೆಂದು ಕಲ್ಪನೆ ಮಾಡಬೇಕು. ಆ ಮೇಲೆ ಸ್ಥೂಲ ಅಥವಾ ಹೊರಗಿನ ಮೂರ್ತಿಗೆ ಅರ್ಚನ ಕಾಲದಲ್ಲಿ ಯಾವ ಯಾವ ಉಪಚಾರಾದಿಗಳನ್ನು ನಾವು ಮಾಡುವೆವೋ ಅವೆಲ್ಲವನ್ನು ಒಳಗಿನ ಹೃದಯಸ್ಥ ಮೂರ್ತಿಗೆ ಮನಸ್ಸಿನಿಂದ ಕಲ್ಪನೆಯಿಂದ ಮಾಡಬೇಕು. ಪೂಜಾ ಅರ್ಚನಾದಿಗಳು ಮುಗಿದ ನಂತರ ಆ ಹೃದಯಸ್ಥ ದೇವರಿಗೆ ನಿಮ್ಮ ಹೃದಯದಲ್ಲಿಯೇ ವಿಶ್ರಾಂತಿ ಕೊಡಬೇಕು. ಈ ರೀತಿಯಾಗಿ ಭಗವಂತನ ಕಲ್ಪನಾ ಚಿತ್ರವನ್ನು ಪ್ರತಿದಿನ ಹೃದಯದಲ್ಲಿ ಕಲ್ಪಿಸಿ ಚಿತ್ರಿಸುವ ಅಭ್ಯಾಸ ಮಾಡಿದರೆ ಆಗ ಮನಸ್ಸಿಗೆ ಸೂಕ್ಷ್ಮದಲ್ಲಿ ವಿಹಾರ ಮಾಡುವ ರೂಢಿ ಆಗುತ್ತದೆ. ಮನಸ್ಸು ಹೆಚ್ಚು ಹೆಚ್ಚು ಆ ಸೂಕ್ಷ್ಮ ವಸ್ತು ಅಂದರೆ ಅಮೂರ್ತ, ನಿರಾಕಾರದಲ್ಲಿ ಸಮರಸವಾಗುತ್ತದೆ. ರಮಿಸುತ್ತದೆ. ಈ ಅಭ್ಯಾಸದಲ್ಲಿ ಹೆಚ್ಚಿನ ಪ್ರಗತಿ ಆದರೆ ಪ್ರತಿಭಾ ಸ್ವರೂಪ, ಪ್ರಕಾಶದ ಸ್ಫೂರ್ತಿ ಅಂದರೆ ಒಳ ಅರಿವು ಅಂತರದೃಷ್ಟಿ ಜಾಗ್ರತಗೊಳ್ಳಲು ಸುಲಭವಾಗಿ "ಭಗವಂತ ನನ್ನ ಹತ್ತಿರವಿದ್ದಾನೆ.ಅದೇಕೆ? ನನ್ನಲ್ಲಿಯೇ ಇದ್ದಾನೆ"ಯೆಂಬ ಭಾವನೆಯು ಜಾಗೃತ ಹಾಗೂ ಸ್ಥಿರಗೊಂಡು ಕೆಲಸ ಮಾಡಹತ್ತುತ್ತದೆ. ಮನುಷ್ಯನು ದೃಢ ನಿಶ್ಚಯದಿಂದ (ಚಿಕಾಟಿಯಿಂದ) ಮಾನಸ ಪೂಜೆಯನ್ನು ತಪ್ಪದೇ ಪ್ರತಿದಿನ ಮಾಡಲಿಕ್ಕೇ ಬೇಕು. ತಪ್ಪಬಾರದು. ಮಾನಸ ಪೂಜೆ ಚನ್ನಾಗಿ ಸಾಧಿಸಿದರೆ ಮನಸ್ಸು ಪ್ರಸನ್ನಗೊಳ್ಳುತ್ತದೆ. ಸಮಾಧಾನ ಉಂಟಾಗುತ್ತದೆಂಬ ಮಾತು ಶ್ರೇಷ್ಠ ಭಕ್ತರ ಅನುಭವಕ್ಕೆ ಬಂದದ್ದಿರುವದೆಂಬುದನ್ನು ಜ್ಞಾಪಕ ದಲ್ಲಿಡಬೇಕು.

## ಸಮಾಸ ಪಾಚವಾ : ಅರ್ಚನ ಭಕ್ತಿ

॥ಶ್ರೀರಾಮ॥ ಮಾಗಾ ಜಾಲೇ ನಿರೂಪಣ । ಚೌಥೇ ಭಕ್ತೀಚೇ ಲಕ್ಷಣ ।
ಆತಾ ಏಕಾ ಸಾವಧಾನ । ಪಾಂಚವೀ ಭಕ್ತೀ ॥೧॥
ಪಾಂಚವೀ ಭಕ್ತೀ ತೇ ಅರ್ಚನ । ಅರ್ಚನ ಮ್ಹಣಿಜೇ ದೇವತಾರ್ಚನ।
ಶಾಸ್ತ್ರೋಕ್ತ ಪೂಜಾ ವಿಧಾನ । ಕೇಲೇ ಪಾಹಿಜೇ ॥೨॥
ನಾನಾ ಆಸನೇ ಉಪಕರ್ಣೇ । ವಸ್ತ್ರೇ ಅಳಂಕಾರ ಭೂಷಣೇ ।
ಮಾನಸ ಪೂಜಾ ಮೂರ್ತಿ ಧ್ಯಾನೇ । ಯಾ ನಾವ ಪಾಂಚವೀ ಭಕ್ತೀ ॥೩॥
ದೇವಬ್ರಾಹ್ಮಣ ಅಗ್ನೀಪೂಜನ । ಸಾಧುಸಂತ ಅತೀತ ಪೂಜನ ।
ಇತೀ ಮಹಾನುಭಾವ ಗಾಇತ್ರೀ ಪೂಜನ।ಯಾ ನಾವ ಪಾಂಚವೀ ಭಕ್ತೀ ॥೪॥
ಧಾತುಪಾಷಾಣ ಮೃತ್ತಿಕಾಪೂಜನ । ಚಿತ್ರಲೇಪ ಸತ್ಪಾತ್ರಪೂಜನ ।
ಆಪಲೇ ಗೃಹೀಚೇ ದೇವತಾರ್ಚನ । ಯಾ ನಾವ ಪಾಂಚವೀ ಭಕ್ತೀ ॥೫॥
ಸೀಳಾ ಸಪ್ತಾಂಕಿತ ನವಾಂಕಿತ । ಶಾಲಿಗ್ರಾಮ ಶಕಲೇ ಚಕ್ರಾಂಕಿತ ।
ಲಿಂಗೇ ಸೂರ್ಯಕಾಂತ ಸೋಮಕಾಂತ । ಬಾಣ ತಾಂದಳೇ ನರ್ಬದೇ ॥೬॥
ಭೈರವ ಭಗವತೀ ಮಲ್ಹಾರೀ । ಮುಂಜ್ಯಾ ನೃಸಿಂಹ ಬನಶಂಕರೀ ।
ನಾಗ ನಾಣೀ ನಾನಾ ಪರೀ । ಪಂಚಾಯೇತ್ನ ಪೂಜಾ ॥೭॥
ಗಣೇಶ ಶಾರದಾ ವಿಠಲಮೂರ್ತೀ । ರಂಗನಾಥ ಜಗಂನಾಥ ತಾಂಡವಮೂರ್ತೀ।
ಶ್ರೀರಂಗ ಹನುಮಂತ ಗರುಡಮೂರ್ತೀ। ದೇವತಾರ್ಚನೀ ಪೂಜಾವ್ಯಾ ॥೮॥
ಮಚ್ಛಕೂರ್ಮವರ್‍ಹಾವಮೂರ್ತೀ। ನೃಸಿಂಹ ವಾಮನ ಭಾರ್ಗವ ಮೂರ್ತೀ।
ರಾಮಕೃಷ್ಣ ಹಯಗ್ರೀವ ಮೂರ್ತೀ। ದೇವತಾರ್ಚನೀ ಪೂಜಾವ್ಯಾ ॥೯॥
ಕೇಶವ ನಾರಾಯಣ ಮಾಧವಮೂರ್ತೀ।ಗೋವಿಂದವಿಷ್ಣುಮದಸೂದನಮೂರ್ತೀ।
ತ್ರಿವಿಕ್ರಮ ವಾಮನ ಶ್ರೀಧರ ಮೂರ್ತೀ। ರುಷೀಕೇಶ ಪದ್ಮನಾಭಿ ॥೧೦॥
ದಾಮೋದರ ಸಂಕರ್ಷಣ ವಾಸುದೇವ ಮೂರ್ತೀ।
ಪ್ರದ್ಯುಮ್ನ ಅನುರಧ ಪುರುಷೋತ್ತಮ ಮೂರ್ತೀ।
ಅಧೋಕ್ಷಜ ನಾರಸಿಂಹ ಅಚ್ಯುತಮೂರ್ತೀ।ಜನಾರ್ದನ ಆಣೀ ಉಪೇಂದ್ರ ॥೧೧॥
ಹರಿಹರಾಚ್ಯಾ ಅನಂತ ಮೂರ್ತೀ। ಭಗವಂತ ಜಗದಾತ್ಮಾ ಜಗದೀಶ ಮೂರ್ತೀ।
ಶಿವಶಕ್ತೀಚ್ಯಾ ಬಹುಧಾ ಮೂರ್ತೀ। ದೇವತಾರ್ಚನೀ ಪೂಜಾವ್ಯಾ ॥೧೨॥

## ದಶಕ ೪. ಸಮಾಸ ೫. ಅರ್ಚನ ಭಕ್ತಿ (ನುಡಿ ೩೩)

**ಮೊದಲಿಗೆ ಪೂಜೆ ಮತ್ತು ಮಾನಸ ಪೂಜೆ ಅಂದರೇನು ಇದನ್ನು ಹೇಳಿದ್ದಾರೆ:-** ಹಿಂದಿನ ಸಮಾಸದಲ್ಲಿ ನಾಲ್ಕನೆಯ ಭಕ್ತಿಯ ಲಕ್ಷಣಗಳನ್ನು ಹೇಳಿದೆವು. ಇನ್ನು ಮುಂದೆ ಐದನೆಯ ಭಕ್ತಿಯ ಬಗ್ಗೆ ಹೇಳುವೆವು. ಲಕ್ಷಗೊಟ್ಟು ಕೇಳಿರಿ. (೧) ಅರ್ಚನ ಅಂದರೆ ಪೂಜೆಯು. ಇದು ಐದನೆಯ ಭಕ್ತಿಯು. ನಿಮ್ಮ ಉಪಾಸ್ಯ ದೇವತೆಯ ಪೂಜೆ ಮಾಡುವದು. ಇದರ ಹೆಸರು ಅರ್ಚನ ಶಾಸ್ತ್ರದಲ್ಲಿ ಹೇಳಿದಂತೆ ಪದ್ಧತಿ ಪ್ರಕಾರ ಸರಿಯಾಗಿ ಪೂಜೆ ಮಾಡಬೇಕು. (೨) ಪೂಜೆಗೆ ಅನೇಕ ಪ್ರಕಾರದ ಉಪಕರಣಗಳು ಬೇಕಾಗುವವು, ಅಂದರೆ ಅನೇಕ ಪ್ರಕಾರದ ಆಸನಗಳು, ಪೂಜಾ ಪಾತ್ರೆಗಳು, ವಸ್ತ್ರ, ಅಲಂಕಾರ, ಫಲ, ಪುಷ್ಪ, ಮಾಲೆ ಮೊದಲಾದ ಭೂಷಣ ಸಾಹಿತ್ಯಗಳೊಂದಿಗೆ ಪೂಜಾ ಮಾಡಬೇಕು. ಇದರಂತೆಯೇ ಮೂರ್ತಿಯ ಧ್ಯಾನ ಮಾಡಿ ಮನಸ್ಸಿನಿಂದ ಪೂಜೆ ಮಾಡಬೇಕು. ಇಂಥ ಪೂಜೆಗೆ ಐದನೆಯ ಭಕ್ತಿ ಎಂದು ಹೆಸರಿರುವದು. (೩) ದೇವರು, ಬ್ರಾಹ್ಮಣ, ಅಗ್ನಿ, (ಹೋಮ ಹವನಾದಿ ಅಗ್ನಿಪೂಜೆ) ಸಾಧು ಸಂತ, ಅತಿಥಿ (ಹಸಿವೆಯಿಂದ ಬಳಲಿದವ. ಪಾಂಥಸ್ಥ ಆಗಂತುಕ, ವ್ಯಕ್ತಿ) ಯತಿ ಅಂದರೆ ಸನ್ಯಾಸಿ, ಆತ್ಮಜ್ಞಾನಿಯಾದ ಮಹಾತ್ಮ, ಗೋಪೂಜೆ, ಗಾಯಿತ್ರಿ, ಗಾಯತ್ರಿ ಮಂತ್ರ ಜಪ ಇತ್ಯಾದಿಗಳ ಪೂಜೆ ಮಾಡಬೇಕು. ಇದಕ್ಕೆ ಐದನೆಯ ಭಕ್ತಿ ಎನ್ನುವರು. (೪) ಬಂಗಾರ, ಬೆಳ್ಳಿ, ತಾಮ್ರ, ಇತ್ಯಾದಿ ಧಾತುಗಳ ಮೂರ್ತಿ, ಕಲ್ಲಿನ ಮತ್ತು ಮಣ್ಣಿನ ಅಂದರೆ ಗಂಧ, ಗೋಪಿಚಂದನ, ಚಂದನ ಇತ್ಯಾದಿ ಮಳಲಿನಮೂರ್ತಿ. ದೇವರ ಫೋಟೋ ಕಟ್ಟಿಗೆಯಲ್ಲಿ ತಯಾರಿಸಿದ ಮೂರ್ತಿ ಮತ್ತು ಉತ್ತಮ ಕೊಡ ಹಾಗೂ ಪಾತ್ರೆ ಇವುಗಳ ಪೂಜೆ ಮಾಡಬೇಕು. ಮತ್ತು ಮನೆಯ ದೇವರ ಪೂಜೆ ಸಹ ಮಾಡಬೇಕು. ಇದಕ್ಕೆ ಐದನೆಯ ಭಕ್ತಿಯೆನ್ನುವರು (೫) **ಇನ್ನು ಯಾವ ಯಾವ ದೇವರುಗಳ ಪೂಜೆ ಮಾಡಬೇಕೆಂಬ ದೇವರ ಹೆಸರನ್ನು ಹೇಳುತ್ತಾರೆ. ಇವುಗಳಲ್ಲಿ ಅನೇಕ ಹೆಸರುಗಳು ನಮಗೆ ಗೊತ್ತಿರುವವೇ ಆಗಿವೆ:-** ಏಳು ಮತ್ತು ಒಂಭತ್ತು ಶುಭ ಚಿನ್ಹಗಳಿರುವ ಕಲ್ಲು, ಶಾಲಿಗ್ರಾಮ, ಚಕ್ರದ ಚಿನ್ಹವಿರುವ ಕಲ್ಲಿನ ತುಣುಕು, ಶಂಕರನ ಬಾಣ, ಸೂರ್ಯಕಾಂತ ಮಣಿ. (ಇದನ್ನು ಬೆಳದಿಂಗಳಿನಲ್ಲಿ ಹಿಡಿದರೆ ದ್ರವ (ನೀರು ಪಸುರುವದು) ನರ್ಮದಾ ನದಿಯಲ್ಲಿ ಸಿಗುವ ಶಿವಲಿಂಗ ಸಿಂಧೂರ ಲೇಪಿತ ಕಲ್ಲು, ನರ್ಮದಾ ನದಿಯಲ್ಲಿ ಸಿಗುವ ವಿಶಿಷ್ಟ ಕಲ್ಲು (೬) ಭೈರವ(ಶಿವ), ಭಗವತಿ(ಪಾರ್ವತಿ), ಮಲ್ಹಾರಿ(ಮೈಲಾರಲಿಂಗ), ಮುಂಜ್ಯಾ (ಭೂತ), ನರಸಿಂಹ(ನರಹರಿ), ಬನಶಂಕರಿ(ಶಾಖಾಂಬರಿ), ನಾಗ, ನಾನಾ ಪ್ರಕಾರದ ನಾಣ್ಯ (ಇವುಗಳಲ್ಲಿ ದೇವರ ಮೂರ್ತಿಗಳಿರುವವು) ಪಂಚಾಯತನ ದೇವ ಅಂದರೆ ಶಿವ, ವಿಷ್ಣು, ದೇವಿ, ಗಣಪತಿ, ಸೂರ್ಯ ಇವುಗಳು ಏಕತ್ರವಾಗಿರುವಂಥ ದೇವಪೂಜೆ (೭) ಗಣೇಶ, ಶಾರದಾ, ವಿಠ್ಠಲ, ರಂಗನಾಥ, ಬಾಲಕೃಷ್ಣ, ವಿಷ್ಣು, ಜಗನ್ನಾಥ, ನಟರಾಜ, ಶಿವತಾಂಡವ ಲೀಲಾ ಮೂರ್ತಿ, ಶಿವ ಅಥವಾ ಕೃಷ್ಣಲೀಲಾ ನೃತ್ಯ ದರ್ಶಕ ಮೂರ್ತಿ, ಶ್ರೀರಂಗ, ವಿಷ್ಣು, ಹನುಮಂತ, ಗರುಡ (೮) ಮತ್ಸ್ಯ [ಮೀನ], ಕೂರ್ಮ [ಆಮೆ], ವರಾಹ [ಹಂದಿ], ನರಸಿಂಹ [ಸಿಂಹ+ಮನುಷ್ಯಾಕೃತಿ], ವಾಮನ [ಬ್ರಾಹ್ಮಣ ವೇಷದ ವಟು] ದೇವತಾ]ಪರಶುರಾಮ, ಶ್ರೀರಾಮ, ಶ್ರೀಕೃಷ್ಣ, ಹಯಗ್ರೀವ ಅಂದರೆ ಮುಖ ಕುದುರೆಯಂತೆ. ದೇಹ ಮನುಷ್ಯರಂತೆ ಇರುವ ವಿಷ್ಣುವಿನ ಅವತಾರ ಇವೆಲ್ಲ ದೇವತಾ ಮೂರ್ತಿಗಳ ಪೂಜೆಯನ್ನು ಮಾಡಬೇಕು. [೯] **ಇನ್ನುಮುಂದೆ ಸಂಧ್ಯಾ ಮಾಡುವಾಗಿನ ಹೆಸರು ಇರುವವು:-** ಕೇಶವ, ನಾರಾಯಣ, ಮಾಧವ, ಗೋವಿಂದ, ವಿಷ್ಣು, ಮಧುಸೂದನ, ತ್ರಿವಿಕ್ರಮ, ವಾಮನ, ಶ್ರೀಧರ, ಹೃಷೀಕೇಶ, ಪದ್ಮನಾಭ, (೧೦) ದಾಮೋದರ, ಸಂಕರ್ಷಣ, ವಾಸುದೇವ, ಪ್ರದ್ಯುಮ್ನ, ಅನಿರುದ್ಧ, ಪುರುಷೋತ್ತಮ, ಅಧೋಕ್ಷಜ, ನಾರಸಿಂಹ, ಅಚ್ಯುತ, ಉಪೇಂದ್ರ, ಹರಿ, ಶ್ರೀಕೃಷ್ಣ [೧೧] ಇದೇ ಪ್ರಕಾರ ಹರಿಹರರ ಅನಂತ ಮೂರ್ತಿ, ಅನಂತ ಹೆಸರು ಇರುವವು. ಭಗವಂತ, ಜಗದ್ಮಾತಾ, ಜಗದೀಶ, ಇವರ ಮೂರ್ತಿಗಳನ್ನು ಮತ್ತು ಶಿವಶಕ್ತಿಯ ಅನೇಕ ಪ್ರಕಾರದ ಮೂರ್ತಿಗಳನ್ನು ಪೂಜಿಸಬೇಕು. [೧೨]

ಅಶ್ವತ್ಥ ನಾರಾಯೆಣ ಸೂರ್ಯ ನಾರಾಯೆಣ ।
ಲಕ್ಷ್ಮೀ ನಾರಾಯೆಣ ತ್ರಿಮಲ್ಲ ನಾರಾಯೆಣ ।
ಶ್ರೀಹರಿ ನಾರಾಯಣ ಆದಿನಾರಾಯಣ । ಶೇಷಶಾಯೀ ಪರಮಾತ್ಮಾ ॥೧೩॥
ಐಶ್ಯಾ ಪರಮೇಶ್ವರಾಚ್ಯಾ ಮೂರ್ತೀ। ಪಾಹೋ ಜಾತಾ ಉದಂಡ ಅಸತೀ।
ತ್ಯಾಚೇ ಅರ್ಚನ ಕರಾವೇ ಭಕ್ತೀ । ಪಾಂಚವೀ ಐಸೀ ॥೧೪॥
ಯಾಹಿ ವೇಗಳೇ ಕುಳಧರ್ಮ । ಸೋಡೂ ನಯೇ ಅನುಕ್ರಮು ।
ಉತ್ತಮು ಅಥವಾ ಮಧ್ಯಮು । ಕರೀತ ಜಾವೇ ॥೧೫॥
ಜಾಖಮಾತಾ ಮಾಯರಾಣೀ । ಬಾಳಾ ಬಗುಳಾ ಮಾನವಿಣೀ ।
ಪೂಜಾ ಮಾಂಗಿಣೀ ಜೋಗಿಣೀ । ಕುಳಧರ್ಮೀ ಕರಾವೀ ॥೧೬॥
ನಾನಾ ತೀರ್ಥಾ ಕ್ಷೇತ್ರಾ‌ಸ ಜಾವೇ । ತೇಥೆ ತ್ಯಾ ದೇವಾಚೇ ಪೂಜನ ಕರಾವೇ ।
ನಾನಾ ಉಪಚಾರೀ ಅರ್ಚಾವೇ । ಪರಮೇಶ್ವರಾಸೀ ॥೧೭॥
ಪಂಚಾಮೃತೇ ಗಂಧಾಕ್ಷತೇ । ಪುಷ್ಪೇ ಪರಿಮಳ ದ್ರವ್ಯೇ ಬಹುತೇ ।
ಧೂಪದೀಪ ಅಸಂಖ್ಯಾತೇ । ನಿರಾಂಜನೇ ಕರ್ಪುರಾಚೀ ॥೧೮॥
ನಾನಾ ಖಾದ್ಯ ನೈವೇದ್ಯ ಸುಂದರ । ನಾನಾ ಫಳೇ ತಾಂಬೋಲ ಪ್ರಕಾರ ।
ದಕ್ಷಣಾ ನಾನಾ ಆಳಂಕಾರ । ದಿವ್ಯಾಂಬರೇ ವನಮಾಳಾ ॥೧೯॥
ಸಿಬಿಕಾ ಛತ್ರೇ ಸುಖಾಸನೇ । ಮಾಹಿ ಮೇಘಡಂಬ್ರೇ ಸೂರ್ಯಪಾನೇ ।
ದಿಂಡ್ಯಾ ಪತಾಕಾ ನಿಶಾಣೇ । ಟಾಳಘೋಳ ಮೃದಂಗ ॥೨೦॥
ನಾನಾ ವಾದ್ಯೇ ನಾನಾ ಉತ್ಸವ । ನಾನಾ ಭಕ್ತಸಮುದಾವ ।
ಗಾತೀ ಹರಿದಾಸ ಸದ್ಭಾವ । ಲಾಗಲಾ ಭಗವಂತೀ ॥೨೧॥
ವಾಪೀ ಕೂಪ ಸರೋವರೇ । ನಾನಾ ದೇವಾಳಯೇ ಸಿಖರೇ ।
ರಾಜಾಂಗಣೇ ಮನೋಹರೇ । ವೃಂದಾವನೇ ಭುಯರೀ ॥೨೨॥
ಮಠ ಮಂಡ್ಯಾ ಧರ್ಮಶಾಳಾ । ದೇವದ್ವಾರೀ ಪಡಶಾಳಾ ।
ನಾನಾ ಉಪಕರ್ಣೇ ನಕ್ಷತ್ರ ಮಾಳಾ । ನಾನಾ ವಸ್ತ್ರಸಾಮುಗ್ರೀ ॥೨೩॥
ನಾನಾ ಪಡದೇ ಮಂಡಪ ಚಾಂದೋವೇ।ನಾನಾ ರತ್ನಘೋಷ ಲೋಂಬತೀ ಬರವೇ।
ನಾನಾ ದೇವಾಳಈ ಸಮರ್ಪಾವೇ । ಹಸ್ತಿ ಘೋಡೇ ಶಕ್ಕಟೇ ॥೨೪॥
ಆಳಂಕಾರ ಆಣೀ ಆಳಂಕಾರ ಪಾತ್ರೇ । ದ್ರವ್ಯ ಆಣೀ ದ್ರವ್ಯಪಾತ್ರೇ ।
ಅನ್ನೋದಕ ಆಣೀ ಅನ್ನೋದಕ ಪಾತ್ರೇ । ನಾನಾ ಪ್ರಕಾರೀಚೇ ॥೨೫॥

ಇದೇ ಪ್ರಕಾರ ಅಶ್ವತ್ಥನಾರಾಯಣ [ಪೂಜ್ಯವಾದ ಅರಳೀ ಮರ], ಸೂರ್ಯ ನಾರಾಯಣ, ಲಕ್ಷ್ಮೀ ನಾರಾಯಣ, ತ್ರಿಮಲ್ಲನಾರಾಯಣ, ಹರಿನಾರಾಯಣ, ಆದಿನಾರಾಯಣ, ಶೇಷಶಾಯಿ ಪರಮಾತ್ಮಾ [೧೩] ಈ ಪ್ರಕಾರ ಪರಮೇಶ್ವರನ ಅಗಣಿತ ಮೂರ್ತಿಗಳಿರುವವು. ಇವುಗಳ ಪೂಜೆಮಾಡುವದು ಐದನೆಯ ಭಕ್ತಿಯಾಗಿದೆ[೧೪] ಇನ್ನು ಕುಲಧರ್ಮ ಕುಲಾಚಾರಗಳು ಮೊದಲಿನಿಂದ ಹೇಗೆ ಬಂದಿರುವವೋ ಅದರಂತೆ ಮಾಡುತ್ತಲೇ ಇರಬೇಕು. ಇದರ ಹೊರತಾಗಿ ನಿಮ್ಮ ಮನೆಯಲ್ಲಿ ಯಾವ ಕುಲಧರ್ಮಾಚರಣೆಗಳು ಯಾವ ರೀತಿಯಲ್ಲಿ ಮೊದಲಿನಿಂದ ನಡೆಯುತ್ತ ಬಂದಿರುವವೋ ಅದೇ ರೀತಿ ಆಚರಿಸಬೇಕು. ಅವು ಉತ್ತಮ ಅಥವಾ ಮಧ್ಯಮವಾದವಿದ್ದರೂ ಅದರಂತೆಯೇ ಆಚರಿಸ ಬೇಕು. [೧೫] ಜಾಖಮಾತಾ, ಮಾಯರಾಣಿ, ಬಾಳಾ, ಬಗುಳಾ, ಮಾನವಿಣಿ, ಮಾಂಗಿಣಿ (ಮಾತಂಗಿ) ಜೋಗಿಣಿ, [ಜೋಗವ್ವ] ಈ ಕ್ಷುದ್ರದೇವತೆಗಳು ಮತ್ತು ಸ್ತ್ರೀಯರ ಪೂಜೆ ಮಾಡುವ ಪದ್ಧತಿ ನಿಮ್ಮ ಮನೆಯ ಕುಲಧರ್ಮ ಕುಲಾ ಚಾರದಲ್ಲಿ ಮೊದಲಿನಿಂದ ನಡೆದು ಬಂದಿದ್ದರೆ, ಅವನ್ನೂ ಸಹ ಮಾಡಬೇಕು. [೧೬] ಬೇರೆ ಬೇರೆ ತೀರ್ಥಗಳಲ್ಲಿ ಹೋಗಿ ಅಲ್ಲಿಯ ದೇವರ ಪೂಜೆ ಮಾಡಬೇಕೆಂದು ಹೇಳಿ ಆ ಮೇಲೆ ದೇವರ ವೈಭವ ಬೆಳೆಸುವದಕ್ಕಾಗಿ ದೇವರಿಗೆ ಯಾವ ಯಾವ ವಸ್ತುಗಳನ್ನು ಕೊಡಬೇಕೆಂಬುದರ ಒಂದು ದೀರ್ಘ ಯಾದಿಯನ್ನೇ ಕೊಟ್ಟಿದ್ದಾರೆ. ಬೇರೆ ಬೇರೆ ತೀರ್ಥ ಕ್ಷೇತ್ರಗಳಿಗೆ ಹೋಗಬೇಕು. ಅಲ್ಲಿಯ ದೇವರ ಪೂಜೆ ಮಾಡಬೇಕು. ಅನೇಕ ಪ್ರಕಾರದ ಸಾಧನ ಸಾಮುಗ್ರಿಗಳಿಂದ ಈಶ್ವರನ ಪೂಜೆಯನ್ನು ಮಾಡಬೇಕು. [೧೭] **ಉಪಚಾರಗಳಾವುವೆಂಬುದನ್ನು ಕೇಳಿರಿ:-** ಪಂಚಾಮೃತ [ಆಕಳ ಹಾಲು, ಮೊಸರು, ತುಪ್ಪ, ಜೇನುತುಪ್ಪ, ಸಕ್ಕರಿ ಇವುಗಳ ಮಿಶ್ರಣ] ಗಂಧಾಕ್ಷತೆ, ಹೂವುಗಳು, ತುಳಸಿ, ಬಿಲ್ವಪತ್ರ, ದೂರ್ವಾ [ಕರಿಕಿ] ಇತ್ಯಾದಿಗಳು ಮತ್ತು ಅತ್ತರ ವಗೈರೆ ಸುಗಂಧ ದ್ರವ್ಯಗಳು, ಧೂಪ, ದೀಪ, ನಾನಾ ಪ್ರಕಾರದ ಆರತಿ ಮತ್ತು ನೀಲಾಂಜನ, ದೀಪ. [೧೮] ಅನೇಕ ಪ್ರಕಾರದ ಉತ್ತಮ ಮನಮೋಹಕ ಖಾದ್ಯ ಪದಾರ್ಥಗಳ ನೈವೇದ್ಯ, ಅನೇಕ ಪ್ರಕಾರದ ಫಲ ಮತ್ತು ತಾಂಬೂಲ, (ಎಲೆ ಅಡಿಕೆ ವಗೈರೆ) ದಕ್ಷಿಣೆ, ಅನೇಕ ಪ್ರಕಾರದ ಅಲಂಕಾರಗಳು, ಉಚ್ಚ ತರಗತಿಯ ವಸ್ತ್ರ, ಹೂವಿನ ಹಾರ (೧೯) ಪಲ್ಲಕ್ಕಿ, ಛತ್ರ, [ಛತ್ತರಗಿ] ಚಾಮರ [ಚವರಿ] ಸುಖಾಸನ, [ಮೆತ್ತಗಿನದು] ಸಣ್ಣ ಛತ್ರಿ, ಪಾಲಕಿಯ ಮೇಲೆ ಹಿಡಿಯುವ ಉದ್ದನ್ನ ಛತ್ರಿ, ಅಪ್ತಾಗಿರಿ, ದಿಂಡ್ಯಾ ಪತಾಕೆಗಳು, ನಿಶಾನೆ, ತಾಳ, ಢೋಳ [ಒಂದು ವಾದ್ಯ] ಮೃದಂಗ [೨೦] ಅನೇಕ ಪ್ರಕಾರದ ವಾದ್ಯಗಳು, ಅನೇಕ ತರಹದ ಉತ್ಸವ ಇದರಲ್ಲಿ ಉತ್ಸಾಹಿತ ಅನೇಕ ಭಕ್ತರ ಸಮೂಹ ಮತ್ತು ಅಲ್ಲಿ ಹರಿದಾಸ [ಕೀರ್ತನಕಾರರು] ರು ಭಗವಂತನ ಗುಣ ಹೊಗಳಿ ಹಾಡಹತ್ತಿದರೆಂದರೆ ಭಗವಂತನ ವಿಷಯದಲ್ಲಿ ಅಪಾರ ಶ್ರದ್ಧೆ ನಿರ್ಮಾಣವಾಗುತ್ತದೆ. [೨೧] ಪಾವುಟಿಗೆಗಳಿರುವ ಹೊಂಡ, ಭಾವಿ, ಕೆರೆ, ನಾನಾ ರೀತಿಯ ಗುಡಿ, ಹಾಗೂ ಅವುಗಳ ಶಿಖರ, ಗುಮ್ಮಟ, ಗುಡಿಯ ಮುಂದೆ ದೊಡ್ಡ ಅಂಗಳ, ಸುಂದರವಾದ ವೃಂದಾವನ, ತುಳಸಿಯ ಕಟ್ಟೆ, ಅಶ್ವತ್ಥಕಟ್ಟೆ, ನೆಲಮನೆ (೨೨) ಮಠ, ಅಂಗಡಿಗಳಿಗಾಗಿ ಸ್ಥಳ, ಧರ್ಮಶಾಲೆ, ದೇವಸ್ಥಾನದ ಮಹಾದ್ವಾರದ ಎರಡೂ ಬದಿಗೆ ಬಂಕ ಇದ್ದ ಇಮಾರತಿ, ಇನ್ನೂ ಅನೇಕ ಸಾಧನಗಳು, ಬಹುರಂಗಿನ ಕಾಗದಗಳ ಮಾಲೆ, ನಕ್ಷತ್ರ ಮಾಲೆ, ಅಂದರೆ ಇಪ್ಪತ್ತೇಳು ಮುತ್ತುಗಳುಳ್ಳ ಮಾಲೆ ಮತ್ತು ನಾನಾ ಪ್ರಕಾರದ ವಸ್ತುಗಳ ಸಂಗ್ರಹ. (೨೩) ತರ ತರಹದ ಬಣ್ಣದ ಪಡದೆ, ಮಂಟಪ, ಛತ್ತು (ಹಂದರ, ಛಪ್ಪರ) ಮುತ್ತಿನ ಗೊಂಡೆಗಳು, ಮುತ್ತಿನ ಝುಲ್ಲರಿಗಳು, ಆನೆ, ಕುದುರೆ, ರಥ, ಮತ್ತು ಬಂಡಿಗಳು (ಗಾಡಿ) ಈ ವಸ್ತುಗಳನ್ನು ದೇವಸ್ಥಾನಗಳಿಗೆ ಅರ್ಪಿಸಬೇಕು. (೨೪) ಅಲಂಕಾರ ಮತ್ತು ಅವುಗಳನ್ನಿಡುವ ಪೆಟ್ಟಿಗೆ, ದ್ರವ್ಯ(ಹಣ) ಮತ್ತು ಅದನ್ನು ಇಡುವ ಪೆಟ್ಟಿಗೆ, ಮತ್ತು ಅನ್ನ, ನೀರು, ಮತ್ತು ತಾಟು, ವಾಟಗ, ಲೋಟಾ, ಪಾತೇಲಿ, ಹಂಡೆ, ಕೊಡ, ಕೊಳಗ, ವಗೈರೆ ಭಾಂಡಿ (೨೫)

ವನೇ ಉಪವನೇ ಪುಷ್ಪವಾಟಿಕಾ । ತಾಪಸಸ್ಯಾಚ್ಯಾ ಪರ್ಣ ಕುಟಿಕಾ ।
ಐಸೀ ಪೂಜಾ ಜಗನ್ನಾಯಕಾ । ಯಥಾಸಾಂಗ ಸಮರ್ಪಾವೀ ॥೨೬॥
ಶುಕ ಶಾರಿಕಾ ಮಯೋರೇ । ಬದಕೇ ಚಕ್ರವಾಕೇ ಚಕೋರೇ ।
ಕೋಕಿಳಾ ಚಿತಳೇ ಸಾಮರೇ । ದೇವಾಳಈ ಸಮರ್ಪಾವೀ ॥೨೭॥
ಸುಗಂಧಮೃಗೇ ಆಣೀ ಮಾರ್ಜಾರೇ । ಗಾಈ ಮ್ಹೈಸೀ ವೃಷಭವಾನರೇ ।
ನಾನಾ ಪದಾರ್ಥ ಆಣೀ ಲೇಕುರೇ । ದೇವಾಳಈ ಸಮರ್ಪಾವೀ ॥೨೮॥
ಕಾಯಾ ವಾಚಾ ಆಣೀ ಮನೇ । ಚಿತ್ತೇ ವಿತ್ತೇ ಜೀವೇ ಪ್ರಾಣೇ ।
ಸದ್ಭಾವೇ ಭಗವಂತ ಅರ್ಚನೇ । ಯಾ ನಾವ ಅರ್ಚನ ಭಕ್ತೀ ॥೨೯॥
ಐಸೇಚಿ ಸದ್ಗುರೂಚೇ ಭಜನ । ಕರೂನ ಅಸಾವೇ ಅನನ್ಯ ।
ಯಾ ನಾವ ಭಗವದ್ಭಜನ । ಪಾಂಚವೀ ಭಕ್ತೀ ॥೩೦॥
ಐಸೀ ಪೂಜಾ ನ ಘಡೇ ಬರವೀ । ತರೀ ಮಾನಸ ಪೂಜಾ ಕರಾವೀ।
ಮಾನಸ ಪೂಜಾ ಅಗತ್ಯ ವ್ಹಾವೀ । ಪರಮೇಶ್ವರಾಸೀ ॥೩೧॥
ಮನೇ ಭಗವಂತಾಸ ಪೂಜಾವೇ । ಕಲ್ಪೂನ ಸರ್ವಹೀ ಸಮರ್ಪಾವೇ ।
ಮಾನಸ ಪೂಜೇಚೇ ಜಾಣಾವೇ। ಲಕ್ಷಣ ಐಸೇ ॥೩೨॥
ಜೇ ಜೇ ಆಪಣಾಸ ಪಾಹಿಜೇ । ತೇ ತೇ ಕಲ್ಪೂನ ವಾಹಿಜೇ ।
ಯೇಣೇ ಪ್ರಕಾರೇ ಕಿಜೇ । ಮಾನಸ ಪೂಜಾ ॥೩೩॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
ಅರ್ಚನ ಭಕ್ತಿ ನಿರೂಪಣ ನಾಮ ಸಮಾಸ ಪಂಚಮ ॥

ಜಂಗಲ್ (ಅಡವಿ), ತೋಟ, ಹೂವಿನ ತೋಟ, ತಪಸ್ವಿ ಸಾಧಕರಿಗಾಗಿ ಪರ್ಣಕುಟೀರ, ಹುಲ್ಲಿನ ಝೋಪಡಿ, ಇತ್ಯಾದಿ ಅನೇಕ ಪ್ರಕಾರದ ಉಪಚಾರ ಅರ್ಪಣ ಮಾಡಿದರೆ ಜಗನ್ನಾಯಕ ಈಶ್ವರನ ಪೂಜೆಗೆ ಅವನ ವೈಭವ ಬೆಳೆಸುವದಕ್ಕೆ ಕೊಟ್ಟಂತಾಗುತ್ತದೆ. ಆದರೆ ನೀವು ಈ ಉಪಚಾರದ ವಸ್ತುಗಳನ್ನು ಮನಃಪೂರ್ವಕವಾಗಿ ಭಕ್ತಿಯಿಂದ ಅರ್ಪಣ ಮಾಡಬೇಕು.(೨೬)ಇನ್ನು ಮೇಲೆ ಪಕ್ಷಿ, ಪ್ರಾಣಿ, (ಜನಾವರ) (ಜಾನವರ–ಪ್ರಾಣಿ) ಗಳನ್ನು ದೇವರಿಗೆ ಅರ್ಪಿಸಬೇಕೆಂದು ಹೇಳಿ ಅವುಗಳ ಹೆಸರು ಹೇಳುತ್ತಾರೆ:- ಗಿಳಿ, ಮೈನಾಕ ಪಕ್ಷಿ (ಮೈನಾ) ನವಿಲು, ಬದಕ [ನೀರುಗೋಳಿ] ಚಕ್ರವಾಕ, (ಬಿಸಿಲು ಹಕ್ಕಿ–ಕೋಕ ಪಕ್ಷಿ) ಚಕೋರ ಪಕ್ಷಿ ಅಂದರೆ ಚಂದ್ರನ ಆಗಮನ ನಿರೀಕ್ಷಿಸುತ್ತಿರುವ ಪಕ್ಷಿ, ಕೋಗಿಲ (ಕೋಕಿಲ) ಈ ಪಕ್ಷಿಗಳನ್ನು ಮತ್ತು ಮೈಮೇಲೆ ಚಿಕ್ಕಿ ಚಿಕ್ಕಿ ಇರುವ ಚಿಗರಿ, ಸಾರಂಗ, ಗಂಡೆರಳೆ ಈ ರೀತಿಯ ಚಿಗರಿಗಳನ್ನು ದೇವಾಲಯಕ್ಕೆ ಕೊಡಬೇಕು.(೨೭) ಇದರಂತೆಯೇ ಕಸ್ತೂರಿ ಮೃಗ, ಬೆಕ್ಕು, ಪುನಗ ಬೆಕ್ಕು, ಆಕಳು, ಎಮ್ಮೆ, ಎತ್ತು, ಮಂಗ ಈ ಪ್ರಕಾರದ ಜನಾವರಗಳು ಇನ್ನೂ ಅನೇಕ ಪ್ರಕಾರದ ಪದಾರ್ಥಗಳು, ಮತ್ತು ಸಣ್ಣ ಹುಡುಗರನ್ನು ದೇವಾಲಯಕ್ಕೆ ಕೊಡಬೇಕು. (೨೮) ಅರ್ಚನ ಭಕ್ತಿಯ ಸಮಾರೋಪಣ ಮಾಡುವಾಗಲೇ ಶ್ರೀ ಸಮರ್ಥರು ಒಂದು ಮುಖ್ಯ ಮಾತನ್ನು ಹೇಳುತ್ತಾರೆ. ಅದೇನಂದರೆ, ಪೂಜೆಯನ್ನು ಏಕಾಗ್ರ ಮನಸ್ಸಿನಿಂದ ಏಕಾಗ್ರ ಚಿತ್ತದಿಂದ ಮಾಡಬೇಕು. ದೇವರನ್ನು ಹೇಗೆ ಪೂಜಿಸುವಿರೋ ಅದರಂತೆಯೇ ಸದ್ಗುರುವನ್ನೂ ಪೂಜಿಸಬೇಕು. ಈ ಪೂಜೆ ಬಾಹ್ಯ (ಹೊರಗಿನ)ದ್ದಾಗಲೀ, ಮಾನಸೋಪಚಾರದ್ದಾಗಲಿ ಒಂದೇ ರೀತಿಯಿಂದ ಮಾಡಬೇಕು. ಕಾಯಾ (ದೇಹ) ವಾಚಾ (ವಾಕ್), ಮನಸ್ಸಿನಿಂದ, ಚಿತ್ತದಿಂದ, ಧನದಿಂದ ಮತ್ತು ಜೀವ ಹಾಗೂ ಪ್ರಾಣ ಇವೆಲ್ಲವನ್ನೂ ಭಗವಂತನ ಪಾದದಲ್ಲಿ ಅರ್ಪಿಸಿ, ಭಗವಂತನ ಪೂಜೆಯನ್ನು ಮನಸ್ಸಿನಿಂದ ಮಾಡಬೇಕು. ಇದಕ್ಕೆ ಅರ್ಚನ ಭಕ್ತಿ ಎನ್ನುವರು. (೨೯) ಇದೇ ಪ್ರಕಾರವಾಗಿ ಶ್ರೀ ಸದ್ಗುರುವಿನ ಪೂಜೆ ಮಾಡಿ ದೃಢಭಾವದಿಂದ ಅವರಲ್ಲಿ ಶರಣಾಗತನಾಗಬೇಕು. "ನಿಮ್ಮ ಹೊರತು ನನಗೆ ನಿಜವಾದ ಹಿತಚಿಂತಕರು, ಕಲ್ಯಾಣ ಕರ್ತರು ಇನ್ನೊಬ್ಬರು ಇಲ್ಲವೇ ಇಲ್ಲ"ವೆಂಬ ಭಾವನೆಯಿಂದ ಪೂಜೆ ಮಾಡುವದು ಸಾಕ್ಷಾತ್ ಭಗವಂತನ ಪೂಜೆಯಂದೇ ತಿಳಿಯಬೇಕು. ಇದೂ ಸಹ ಐದನೆಯ ಭಕ್ತಿಯಾಗಿದೆ. (೩೦) ಬಾಹ್ಯ ಉಪಚಾರಗಳಿಂದ ದೇವರ ಪೂಜೆ ಮಾಡುವದು ಶಕ್ಯವಿಲ್ಲವಾದಾಗ ಅಂಥ ಶಕ್ಯವಿಲ್ಲದವರು ಮನಸ್ಸಿನಿಂದ ತನ್ನೊಳಗಿನ ದೇವರಿಗೇ ಮಾನಸ ಪೂಜೆ ಮಾಡಬೇಕು ಭಗವಂತನ ಮಾನಸ ಪೂಜೆ ಮಾಡುವದು ಬಹಳ ಉಪಯುಕ್ತ ಮತ್ತು ಅಗತ್ಯವಾದದ್ದಿರುವದು. (೩೧) ನಿಮ್ಮ ಅಂತರ್ಯಾಮಿ ಮನಸ್ಸಿನಿಂದ ಭಗವಂತನ ಪೂಜೆ ಮಾಡಬೇಕು. ಬಾಹ್ಯ ಉಪಚಾರಗಳನ್ನು ಪೂಜೆಗೆ ಬೇಕಾದವುಗಳನ್ನು ನಿಮ್ಮ ಕಲ್ಪನೆಯಿಂದ ನಿರ್ಮಾಣ ಮಾಡಿಕೊಂಡು ಒಳಗಿಂದೊಳಗೇ ಆ ಕಲ್ಪಿತ ಸಾಮಾನುಗಳನ್ನು ಭಗವಂತನಿಗೆ ಅರ್ಪಣ ಮಾಡಬೇಕು. ಈ ರೀತಿಯಾಗಿ ಮನಸ್ಸಿನಿಂದ ಮಾಡಿದ ಭಗವಂತನ ಪೂಜೆಗೆ ಮಾನಸಪೂಜೆ ಅನ್ನುವರು(೩೨) ದೇವರಿಗೆ ಏನೇನು ಅರ್ಪಿಸಬೇಕೆಂದು ನಿಮಗೆ ಅನಿಸುವದೋ ಆಯಾ ವಸ್ತುಗಳನ್ನು ಕಲ್ಪನೆಯಿಂದ ನಿರ್ಮಾಣ ಮಾಡಿ ಅವನಿಗೆ ಅರ್ಪಿಸಬೇಕು. ಮಾನಸ ಪೂಜೆ ಮಾಡುವದು ಈ ರೀತಿಯಾಗಿದೆ. (೩೩)

ಶ್ರೀ ದಾಸಬೋಧದ ಗುರು ಶಿಷ್ಯರ ಸಂವಾದದೊಳಗಿನ ನಾಲ್ಕನೆಯ ದಶಕದಲ್ಲಿಯ
"ಅರ್ಚನ ಭಕ್ತಿ" ಎಂಬ ಐದನೆಯ ಸಮಾಸವು ಮುಗಿಯಿತು.

• •

ಸಮಾಸ ಸಹಾವಾ : ವಂದನ ಭಕ್ತಿ

॥ಶ್ರೀರಾಮ॥ ಮಾಗಾ ಜಾಲೇ ನಿರೂಪಣ । ಪಾಂಚವೇ ಭಕ್ತೀಚೇ ಲಕ್ಷಣ ।
ಆತಾ ಏಕಾ ಸಾವಧಾನ । ಸಾಹಾವೀ ಭಕ್ತೀ ॥೧॥

ಸಾಹಾವೀ ಭಕ್ತೀ ತೇ ವಂದನ । ಕರಾವೇ ದೇವಾಸೀ ನಮನ ।
ಸಂತ ಸಾಧು ಆಣೀ ಸಜ್ಜನ । ನಮಸ್ಕಾರೀತ ಜಾವೇ ॥೨॥

ಸೂರ್ಯಾಸಿ ಕರಾವೆ ನಮಸ್ಕಾರ । ದೇವಾಸಿ ಕರಾವೆ ನಮಸ್ಕಾರ ।
ಸದ್ಗುರುಸ ಕರಾವೆ ನಮಸ್ಕಾರ । ಸಾಷ್ಟಾಂಗ ಭಾವೇ ॥೩॥

# ದಶಕ ೪. ಸಮಾಸ ೬. ವಂದನ ಭಕ್ತಿ (ನುಡಿ ೨೫)

ವಂದನ ಅಂದರೆ ನಮಸ್ಕಾರ ಮಾಡುವದು. ನಮಸ್ಕಾರ ಅಂದರೆ ಚರಣದಲ್ಲಿ ಲೀನವಾಗುವದು, ಇದು ಶರಣಾಗತಿಯ ಚಿನ್ಹವಿರುವದು, ಪರಮಾರ್ಥ ಸಾಧಿಸಬೇಕಾದರೆ ದೇಹದ ಅಭಿಮಾನ ಹೊಡೆದೋಡಿಸುವದಕ್ಕಾಗಿ ಅನೇಕ ಪ್ರಕಾರದ ಸಾಧನಗಳನ್ನು ಮಾಡಬೇಕಾಗುತ್ತದೆ. ನಮ್ರತೆ ಇದ್ದರೆ ಅಭಿಮಾನವು ಬಹಳಷ್ಟು ಕ್ಷೀಣಿಸಿ ಹೋಗುವದು. ಸಾಷ್ಟಾಂಗ ನಮಸ್ಕಾರ ಮಾಡಿದರೆ ನಮ್ರತೆಯು ಸಹಜ ಸಾಧ್ಯವಾಗುವದು. ಅಂತೆಯೇ ಎಲ್ಲ ಸಾಧು ಸಂತ ಶರಣರು ಭಗವಂತನಿಗೆ ಮನಮುಟ್ಟಿ ಸಾಷ್ಟಾಂಗ ನಮಸ್ಕಾರ ಹಾಕುವರು. ವಂದನೆಯ ಭಕ್ತಿಯ ಬಗ್ಗೆ ತಾತ್ವಿಕ ಚಿಕಿತ್ಸೆ (ತತ್ವದ ಸೂಕ್ಷ್ಮವನ್ನು ಶೋಧಿಸಿದರೆ) ಮಾಡಿ ನೋಡಿದರೆ, ಸಾಧಕನಿಗೆ ಪ್ರಥಮತಃ ಸಂತರಲ್ಲಿ ಶೋಭಿಸುವ (ಹೊಳೆಯುವ) ಅನಂತನನ್ನು ಶೋಧ ಮಾಡಬೇಕಾಗುತ್ತದೆ. ನಮ್ಮ ಸುತ್ತು ಮುತ್ತು ಸುಳಿದಾಡುವ (ಇರುವ) ವಾಸ ಮಾಡುವ ಪ್ರಾಣಿ ಮಾತ್ರರಲ್ಲಿ ಭಗವಂತನು ಅಂತರ್ಯಾಮಿ ರೂಪದಿಂದ ವಾಸ ಮಾಡುತ್ತಾನೆ. ಇದು ನಿಜವಾದುದೇ ಇರುವದು. ಇದು ನಿಜವಾದರೆ ಯಾವ ಯಾವ ಜೀವದ ಕೂಡ ನಮ್ಮ ಸಂಬಂಧ ಬರುವದೋ ಆ ಆ ಜೀವದ ಅವಗುಣಗಳ ಕಡೆಗೆ ದುರ್ಲಕ್ಷ್ಯ ಮಾಡಿ ಅದರ ಗುಣಗಳ ಕಡೆಗೆ ನೋಡುವ ಕಲೆಯನ್ನು ಮಾತ್ರ ನಾವು ಕಲಿಯಬೇಕು. ಈ ಕಲೆಯು ಸಾಧ್ಯವಾದರೆ ಆ ಗುಣಗಳಿಗೆ ಅಧಿಷ್ಠಾನನಾಗಿರುವ ಭಗವಂತನು ನಮ್ಮ ಮನಸ್ಸಿನಲ್ಲಿ ಸುಳಿಯಲಿಕ್ಕೆ ಪ್ರಾರಂಭವಾಗುವನು. ಮನಸ್ಸಿಗೆ ಭಾಸವಾಗಹತ್ತುವನು. ಆ ಮೇಲೆ ಆ ಪ್ರಾಣಿಗೆ ನಮಸ್ಕಾರ ಮಾಡುವಾಗ ಆ ಪ್ರಾಣಿಯ ಬಾಹ್ಯಾಂಗಕ್ಕೆನಮಸ್ಕಾರವಿರದೇ ಅದರ ಅಂತರಂಗದಲ್ಲಿರುವ ಅನಂತನಿಗೆ ಆ ನಮಸ್ಕಾರವಿರುತ್ತದೆ. ಇಂಥ ದೃಷ್ಟಿ ಪ್ರಾಪ್ತವಾದ ಮೇಲೆ ಜಗತ್ತಿನ ತುಂಬೆಲ್ಲ ನಡೆದಿರುವ ಈ ಆಟವು ಭಗವಂತನದೇ ಆಗಿದೆ ಎಂಬ ಪ್ರತ್ಯಕ್ಷಾನುಭವ ಉಂಟಾಗುತ್ತದೆ. ಸ್ವತಃ ನಾವೂ ಸಹ ಆ ಆಟದಲ್ಲಿಯ ಒಂದು ಪಾತ್ರವೇ ಆಗಿರುವೆವು ಎಂಬ ಮಾತು ಖಚಿತಗೊಳ್ಳುತ್ತದೆ. ಮನೋಮನ ಖಾತ್ರಿ ಆಗುತ್ತದೆ. ದೇಹಾಭಿಮಾನವು ಕಳಚಿ ಹೋಗುತ್ತದೆ. ಆಗ ಸರ್ವರ ಸಂಗಡ ಅತ್ಯಂತ ಲೀನತನದಿಂದ ಮತ್ತು ಸಮರಸನಾಗಿ ನಡೆದುಕೊಳ್ಳುವನು. ವಂದನ ಭಕ್ತಿ ಯಾರಿಗೆ ಸಾಧಿಸಿರುವದೋ ಅವರ ಜೀವನದಲ್ಲಿ ಬಹು ದೊಡ್ಡ ಚಮತ್ಕಾರ ಘಟಿಸುತ್ತದೆ. ಅಂತೆಯೇ ಈ ಸಮಾಸದಲ್ಲಿ ನಮಸ್ಕಾರದಂತಹ ಅಪ್ರತಿಮ ಪರಮಾರ್ಥ ಸಾಧನ ಇನ್ನೊಂದಿಲ್ಲವೆಂಬ ತಮ್ಮ ನಿರ್ಣಯವನ್ನು ಶ್ರೀ ಸಮರ್ಥರು ಕೊಟ್ಟಿದ್ದಾರೆ.

## ಸಮಾಸ ೬ : ವಂದನ ಭಕ್ತಿ

ಮೊದಲಿಗೆ ನಮಸ್ಕಾರದ ವಿಷಯವಾಗಿ ಸರ್ವಸಾಧಾರಣ ಮಾಹಿತಿ ಕೊಟ್ಟು ನಂತರ ಯಾರು ಯಾರಿಗೆ ನಮಸ್ಕಾರ ಮಾಡಬೇಕು ಇದನ್ನು ಹೇಳುತ್ತಾರೆ. ಹಿಂದಿನ ಸಮಾಸದಲ್ಲಿ ಐದನೆಯ ಭಕ್ತಿಯ ವರ್ಣನೆಯನ್ನು ಮಾಡಿದ್ದಾಯಿತು. ಈಗ ಆರನೆಯ ಭಕ್ತಿಯ ಬಗ್ಗೆ ಹೇಳುವೆನು. ಮನಗೊಟ್ಟು ಕೇಳಿರಿ.(೧)ನಮಸ್ಕಾರ ಮಾಡುವದು ಆರನೆಯ ಭಕ್ತಿಯು. ದೇವರಿಗೆ ನಮಸ್ಕರಿಸಬೇಕು. ಸಂತ, ಸಾಧು, ಶರಣ ಸಜ್ಜನರು ಇವರಿಗೆಲ್ಲ ನಮಸ್ಕಾರ ಮಾಡುತ್ತ ಹೋಗಬೇಕು. (೨) ಸೂರ್ಯನಿಗೆ ನಮಸ್ಕಾರ ಹಾಕಬೇಕು. ಅದರಂತೆ ದೇವರಿಗೆ ನಮಸ್ಕಾರ ಹಾಕಬೇಕು. ಶ್ರೀ ಸದ್ಗುರುವಿಗೆ ಸಹ ಸಾಷ್ಟಾಂಗ ನಮಸ್ಕಾರ ಹಾಕಬೇಕು. (ಎಂಟು ಅಂಗಗಳಿಂದ ನಮಸ್ಕಾರ ಅಂದರೆ ಎಂಟು ಅಂಗಗಳನ್ನು ನೆಲಕ್ಕೆ ತಾಗಿಸಿ ಮಾಡುವ ಉದ್ದಂಡ ನಮಸ್ಕಾರವು. ಹಾಗಾದರೆ ಆ ಎಂಟು ಅಂಗಗಳು ಯಾವವು ? ಎರಡು ಕೈ, ಎರಡು ಮೊಣಕಾಲ ಮಂಡೆ, ಎರಡು ಪಾದ, ಎದೆ ಮತ್ತು ಹಣೆ (ತಲೆ) ಯು ಇನ್ನೊಂದು ರೀತಿ ಎದೆ, ಮಸ್ತಕ, ಕಣ್ಣು, ವಾಣಿ, ಮನ ಕೈಕಾಲು (ಪಾದ), ಮಂಡೆ ಇವು ಅಷ್ಟಾಂಗಗಳು) (೩)

ಸಾಷ್ಟಾಂಗ ನಮಸ್ಕಾರಾಸ ಅಧಿಕಾರು । ನಾನಾ ಪ್ರತಿಮಾ ದೇವ ಗುರು ।
ಅನ್ಯತ್ರ ನಮನಾಚಾ ವಿಚಾರು । ಅಧಿಕಾರೇ ಕರಾವಾ ॥४॥

ಛಪ್ಪನ್ನ ಕೋಟೀ ವಸುಮತೀ । ಮಧೇ ವಿಷ್ಣುಮೂರ್ತೀ ಅಸತೀ ।
ತಯಾಸ ನಮಸ್ಕಾರ ಪ್ರೀತೀ। ಸಾಷ್ಟಾಂಗ ಘಾಲಾವೇ ॥೫॥

ಪಶುಪತಿ ಶ್ರೀಪತಿ ಆಣೀಗಭಸ್ತೀ । ಯಾಚ್ಯಾ ದರ್ಶನೇ ದೋಷ ಜಾತೀ ।
ತೈಸಾಚಿ ನಮಾವಾ ಮಾರುತೀ । ನಿತ್ಯನೇಮೇ ವಿಶೇಷ ॥೬॥

॥ಶ್ಲೋಕ॥ ಶಂಕರಃ ಶೇಷಶಾಯೀ ಚ । ಮಾರ್ತಂಡೋ ಮಾರುತಿಸ್ತಥಾ ॥
ಏತೇಷಾಂ ದರ್ಶನಂ ಪುಣ್ಯಂ । ನಿತ್ಯನೇಮೇ ವಿಶೇಷತಃ ॥೧॥

ಭಕ್ತಜ್ಞಾನೀ ಆಣೀ ವೀತರಾಗೀ । ಮಹಾನುಭಾವ ತಾಪಸೀ ಯೋಗೀ ।
ಸತ್ಪಾತ್ರೇ ದೇಖೋನಿ ವೇಗೀ । ನಮಸ್ಕಾರ ಘಾಲಾವೇ ॥೭॥

ವೇದಜ್ಞ ಶಾಸ್ತ್ರಜ್ಞ ಆಣೀ ಸರ್ವಜ್ಞ । ಪಂಡಿತ ಪುರಾಣಿಕ ಆಣೀ ವಿದ್ವಜ್ಜನ ।
ಯಾಜ್ಞಿಕ ವೈದಿಕ ಪವಿತ್ರಜನ । ನಮಸ್ಕಾರೀತ ಜಾವೇ ॥೮॥

ಜೇಥೇ ದಿಸತೀ ವಿಶೇಷಗುಣ । ತೇ ಸದ್ಗುರೂಚೇ ಅಧಿಷ್ಠಾನ ।
ಯಾ ಕಾರಣೇ ತಯಾಸೀ ನಮನ । ಅತ್ಯಾದರೇ ಕರಾವೇ ॥೯॥

ಗಣೇಶ ಶಾರದಾ ನಾನಾ ಶಕ್ತೀ । ಹರಿಹರಾಂಚ್ಯಾ ಅವತಾರ ಮೂರ್ತೀ ।
ನಾನಾ ದೇವ ಸಾಂಗೋ ಕಿತೀ । ಪೃಥಕಾಕಾರೇ ॥೧೦॥

ಸರ್ವ ದೇವಾಸ ನಮಸ್ಕಾರಿಲೇ । ತೇ ಯೇಕಾ ಭಗವಂತಾಸ ಪಾವಲೇ ।
ಯೆದರ್ಥೀ ಯೇಕ ವಚನ ಬೋಲಿಲೇ । ಆಹೇ ತೇ ಐಕಾ ॥೧೧॥

॥ಶ್ಲೋಕ॥ ಆಕಾಶಾತ್ಪತಿತಂ ತೋಯಂ । ಯಥಾ ಗಚ್ಛತಿ ಸಾಗರಂ ॥
ಸರ್ವದೇವ ನಮಸ್ಕಾರಃ । ಕೇಶವಂ ಪ್ರತಿಗಚ್ಛತಿ ॥೧॥

ಯಾ ಕಾರಣೇ ಸರ್ವ ದೇವಾಸೀ । ನಮಸ್ಕಾರಾವೇ ಅತ್ಯಾದರೇಸೀ ।
ಅಧಿಷ್ಠಾನ ಮಾನಿತಾ ದೇವಾಸೀ । ಪರಮ ಸೌಖ್ಯ ವಾಟೇ ॥೧೨॥

ದೇವದೇವಾಚೀ ಅಧಿಷ್ಠಾನೆ । ಸತ್ಪಾತ್ರೇ ಸದ್ಗುರೂಚೀ ಸ್ಥಾನೆ ।
ಯಾ ಕಾರಣೇ ನಮಸ್ಕಾರ ಕರಣೇ । ಉಭಯ ಮಾರ್ಗೀ ॥೧೩॥

ಅನೇಕ ಪ್ರಕಾರದ ದೇವರ ಮೂರ್ತಿ ಮತ್ತು ಭಗವಂತನ, ಹಾಗೂ ಶ್ರೀ ಸದ್ಗುರು (ತಾಯಿ, ತಂದೆ, ಸಂತ, ಸಾಧು ಶರಣರು, ಇನ್ನಿತರ ಗುರುಜನ ಮತ್ತು ಹಿರಿಯರು, ಪೂಜ್ಯರು) ಇವರು ನಿಜವಾಗಿಯೂ ಸಾಷ್ಟಾಂಗ ನಮಸ್ಕಾರಕ್ಕೆ ಪಾತ್ರರಿರುವರು. ಇತರ ಉಳಿದವರ ವಿಷಯದಲ್ಲಿ ಅವರವರ ಯೋಗ್ಯತೆಯಂತೆ ನಮಸ್ಕಾರ ಮಾಡಬೇಕು. (೪) ನಮ್ಮ ಪೃಥ್ವಿಯು ವ್ಯಾಸವು ಐವತ್ತಾರು ಕೋಟಿ ಯೋಜನವಿರುವದು. ಒಂದು ಯೋಜನ ಅಂದರೆ 12 ಮೈಲು ಒಟ್ಟು 672 ಕೋಟಿ ಮೈಲು ಆಗುವದು. ಈ ಅಳತೆಯು ಪ್ರಾಚೀನ ಮತದ್ದಾಗಿದೆ. ಈ ಅಳತೆಯು ವ್ಯಾಪ್ತಿಯಲ್ಲಿ ಅನೇಕ ವಿಷ್ಣು–ಮೂರ್ತಿಗಳಿರುವವು. ಇವೆಲ್ಲವುಗಳಿಗೆ ಭಕ್ತಿ ಪ್ರೇಮದಿಂದ ಸಾಷ್ಟಾಂಗ ನಮಸ್ಕಾರ ಹಾಕಬೇಕು. (೫) ಶ್ರೀ ಶಂಕರ, ವಿಷ್ಣು, ಸೂರ್ಯ ಇವರ ದರ್ಶನದಿಂದ ಪಾಪ ನಾಶವಾಗುವದು. ಇದೇ ಪ್ರಕಾರ ತಪ್ಪದೇ ವಿಶೇಷ ಭಕ್ತಿಯಿಂದ ಮಾರುತಿಗೂ ನಿತ್ಯ ನೇಮದಿಂದ ನಮಸ್ಕಾರ ಮಾಡಬೇಕು. (೬)

**ಶ್ಲೋಕ** : ಶಂಕರಃ ಶೇಷಶಾಯೀಚ ಮಾರ್ತಾಂಡೋ ಮಾರುತಿಸ್ತಥಾ । ಏತೇಷಾಂ ದರ್ಶನಂ ಪುಣ್ಯಂ ನಿತ್ಯ ನೇಮ ವಿಶೇಷತಃ ॥ಛ॥ **ಶ್ಲೋಕದ ಅರ್ಥ** : ಶಂಕರ, ಶೇಷಶಾಯಿ ಅಂದರೆ ವಿಷ್ಣು, ಸೂರ್ಯ ಇವರಂತೆ ಮಾರುತಿ ಇವರ ದರ್ಶನವನ್ನು ನಿತ್ಯ ನೇಮದಿಂದ ಪಡೆಯಿರಿ. ಇದು ವಿಶೇಷ ಪುಣ್ಯಕರವಿರುವದು.

ಭಕ್ತ, ಜ್ಞಾನಿ, ಬೈರಾಗಿ (ವೈರಾಗ್ಯ ಸಂಪನ್ನ) ಸ್ವಾನುಭವಿ, ತಪಸ್ವಿ ಯೋಗಿ, ಮತ್ತು ಶ್ರೇಷ್ಠ ವ್ಯಕ್ತಿಗಳನ್ನು ನೋಡಿದ ಕೂಡಲೇ ನಮಸ್ಕಾರ ಹಾಕಬೇಕು.(೭) ವೇದವನ್ನು ತಿಳಿದವರು, ಶಾಸ್ತ್ರವನ್ನು ತಿಳಿದವರು, ಸರ್ವವಿದ್ಯೆಯನ್ನೂ ತಿಳಿದವರು, ಪಂಡಿತರು, ಪುರಾಣಿಕರು, ಯಾಜ್ಞಿಕರು, ವೈದಿಕರು ಮತ್ತು ಪವಿತ್ರ ಮನುಷ್ಯರು ವಿದ್ವಾಂಸರು, ಇವರಿಗೆಲ್ಲ ನಮಸ್ಕಾರ ಮಾಡಬೇಕು. (೮) ಯಾವ ಮನುಷ್ಯರಲ್ಲಿ ವಿಶೇಷ ಗುಣಗಳು ಕಂಡು ಬರುವವೋ ಅಂಥವರಲ್ಲಿ ಶ್ರೀ ಸದ್ಗುರುವಿನ ಅಧಿಷ್ಠಾನ (ಅಂಶ) ವಿರುವದರಿಂದ ಅಲ್ಲಿ ಸದ್ಗುರುವಿನ ವಸತಿ ಸ್ಥಾನವಿರುವದೆಂದು ತಿಳಿಯಿರಿ. ಮತ್ತು ಅಂಥವರಿಗೆ ಆತ್ಮಾದರದಿಂದ ನಮಸ್ಕಾರ ಮಾಡಿರಿ. (೯) ಗಣಪತಿ, ಸರಸ್ವತಿ ಅದೇ ಪ್ರಕಾರ ಶಕ್ತಿ ದೇವತೆಗಳು, ಹರಿಹರರ ಅವತಾರ ಮೂರ್ತಿಗಳು, ಹೀಗೆ ಬೇರೆ ಬೇರೆ ರೂಪದ ದೇವರನ್ನು ಹೆಸರಿಸಿ ಎಷ್ಟೆಂದು ಹೇಳುವದು ಅಪಾರವಿರುವವು. ಹೇಳ ಹೋದರೆ ಮುಗಿಯುವದೇ ಇಲ್ಲ. (೧೦) ಎಲ್ಲ ದೇವರಿಗೆ ಮಾಡಿದ ಅಂದರೆ ಯಾವುದೇ ದೇವರಿಗೆ ಮಾಡಿದ ನಮಸ್ಕಾರಗಳು ಕೊನೆಗೆ ಒಬ್ಬ ದೇವರಿಗೆ ಹೋಗಿ ಮುಟ್ಟುವವೆಂದು ಇರುವ ಒಂದು ಶ್ಲೋಕವನ್ನು ಹೇಳುವೆ ಕೇಳಿರಿ. (೧೧)

**ಶ್ಲೋಕ** : ಆಕಾಶಾತ್ಪತಿತಂ ತೋಯಂ ಯಥಾಗಚ್ಛತಿ ಸಾಗರಂ। ಸರ್ವದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ ॥ಛ॥ **ಶ್ಲೋಕದ ಅರ್ಥ** : ಆಕಾಶದಿಂದ ಬೀಳುವ ನೀರು ಯಾವ ಪ್ರಕಾರ ಕೊನೆಗೆ ಸಮುದ್ರಕ್ಕೆ ಹೋಗಿ ಸೇರುವದೋ ಆ ಪ್ರಕಾರ ಎಲ್ಲ ದೇವರಿಗೆ ಮಾಡಿದ ನಮಸ್ಕಾರಗಳು ಒಬ್ಬ ಕೇಶವನಲ್ಲಿಗೇ ಹೋಗಿ ಮುಟ್ಟುತ್ತದೆ. (ಸಗುಣ ಸಾಕಾರ ದೇವರಿಗೆ ಮಾಡಿದ ನಮಸ್ಕಾರವು ಕೊನೆಗೆ ನಿರ್ಗುಣ ನಿರಾಕಾರನಾದ ಪರಬ್ರಹ್ಮ (ಕೇಶವ)ನಿಗೆ ಹೋಗಿ ಮುಟ್ಟುವದೆಂಬ ಭಾವ)

ಇದರ ಮೇಲಿಂದ ನೋಡಿದರೆ ಸರ್ವ ದೇವರಿಗೂ ಆತ್ಮಾದರದಿಂದ ನಮಸ್ಕಾರ ಮಾಡಬೇಕು. ಎಲ್ಲ ದೇವರಲ್ಲಿ ಭಗವಂತನ ವಾಸ್ತವ್ಯವಿರುವದೆಂಬ ನಿಶ್ಚಿತ ವಿಶ್ವಾಸದಿಂದ ಭಾವಪೂರಿತರಾಗಿ ಮಾಡಿದ ನಮಸ್ಕಾರವು ಭಗವಂತನಿಗೆ ಬಹಳ ಆನಂದವೆನಿಸುತ್ತದೆ. ಇದು ಭಕ್ತಿಯು ಭಾಷೆ ಇರುವದು. ಈ ಭಾವನೆ ಇಟ್ಟರೆ ದೃಶ್ಯದಲ್ಲಿ, ಅಂತರಂಗದಲ್ಲಿರುವ ಶುದ್ಧಸ್ವರೂಪವು ಅನುಭವಕ್ಕೆ ಬರುವಲ್ಲಿ ಸುಲಭವಾಗುವದೆಂಬುವೇ ಇದರ ಅರ್ಥವಾಗಿದೆ (೧೨) ಎಲ್ಲ ದೇವರಲ್ಲಿ ಭಗವಂತನ ವಾಸ್ತವ್ಯ, ಅಸ್ತಿತ್ವ (ಇರುವಿಕೆ) ಇರುವದು. ಎಲ್ಲ ಸಾಧು, ಸಜ್ಜನ, ಶರಣರಲ್ಲಿ ಶ್ರೀ ಸದ್ಗುರುವಿನ ವಾಸ್ತವ್ಯವಿರುವದು ಎಂಬ ಭಾವನೆ ಇಟ್ಟುಕೊಂಡು ಇಬ್ಬರಿಗೂ ಅಂದರೆ ದೇವರು ಮತ್ತು ಸಾಧು ಸಂತ ಶರಣರಲ್ಲಿ ಮನಃಪೂರ್ವಕ ನಮಸ್ಕಾರ ಮಾಡಬೇಕು. (೧೩)

ನಮಸ್ಕಾರೇ ಲೀನತಾ ಘಡೇ। ನಮಸ್ಕಾರೇ ವಿಕಲ್ಪ ಮೋಡೇ।
ನಮಸ್ಕಾರೇ ಸಖ್ಯ ಘಡೇ। ನಾನಾ ಸತ್ಪಾತ್ರಾಸೀ ॥೧೪॥

ನಮಸ್ಕಾರೇ ದೋಷ ಜಾತೀ। ನಮಸ್ಕಾರೇ ಅನ್ಯಾಯ ಕ್ಷಮತೀ।
ನಮಸ್ಕಾರೇ ಮೋಡಲೀ ಜಡತೀ। ಸಮಾಧಾನೇ ॥೧೫॥

ಸೀಸಾಪರತಾ ನಾಹೀ ದಂಡ। ಐಸೇ ಬೋಲತೀ ಉದಂಡ।
ಯಾ ಕಾರಣೇ ಅಖಂಡ। ದೇವ ಭಕ್ತ ವಂದಾವೇ ॥೧೬॥

ನಮಸ್ಕಾರೇ ಕೃಪಾ ಉಚಂಬಳೇ। ನಮಸ್ಕಾರೇ ಪ್ರಸನ್ನತಾ ಪ್ರಬಳೇ।
ನಮಸ್ಕಾರೇ ಗುರುದೇವ ವೊಳೇ। ಸಾಧಕಾವರೀ ॥೧೭॥

ನಿಶೇಷ ಕರಿತಾ ನಮಸ್ಕಾರ। ನಾಸತೀ ದೋಷಾಂಚೆ ಗಿರಿವರ।
ಆಣೀ ಮುಖ್ಯ ಪರಮೇಶ್ವರ। ಕೃಪಾ ಕರೀ ॥೧೮॥

ನಮಸ್ಕಾರೇ ಪತಿತ ಪಾವನ। ನಮಸ್ಕಾರೇ ಸಂತಾಸೀ ಶರಣ।
ನಮಸ್ಕಾರೇ ಜನ್ಮಮರಣ। ದುರೀ ದುರ್ಾವೇ ॥೧೯॥

ಪರಮ ಅನ್ಯಾಯ ಕರೂನಿ ಆಲಾ। ಆಣೀ ಸಾಷ್ಟಾಂಗ ನಮಸ್ಕಾರ ಘಾತಲಾ।
ತರೀ ತೋ ಅನ್ಯಾಯೆ ಕ್ಷಮಾ ಕೇಲಾ। ಪಾಹಿಜೇ ಶ್ರೇಷ್ಠೀ ॥೨೦॥

ಇನ್ನು ಮೇಲೆ ನಮಸ್ಕಾರದಿಂದ ಆಗುವ ಲಾಭದ ವರ್ಣನೆಯನ್ನು ಮಾಡುತ್ತಾರೆ. ನಮಸ್ಕಾರದಿಂದ ಶರೀರದಲ್ಲಿ ನಮ್ರತೆ ಉಂಟಾಗುವದು. ಇದಲ್ಲದೆ ಸದ್ಗುರು ಮತ್ತು ಭಗವಂತ ಇಬ್ಬರೂ ಕೃಪೆ ಮಾಡುವರು. ಇದು ಹೆಚ್ಚಿನ ಲಾಭವೆಂದು ಹೇಳಬಹುದು. ಕೃಪೆ ಅಂದರೆ ಸಾಕ್ಷಾತ್ ಭಗವಂತನ ಶಕ್ತಿಯು ಪ್ರತಿಯೊಂದು ಜೀವದಲ್ಲಿ ಭಗವಂತನ ಶಕ್ತಿಯೇ ಕೆಲಸ ಕಾರ್ಯ ಮಾಡುತ್ತಿರುವದು ನಿಜವಾದರೂ ಈ ಕೃಪೆ ಅಥವಾ ಶಕ್ತಿ ಎಲ್ಲಿ ವಿಶೇಷ ರೂಪದಿಂದ ಮತ್ತು ವಿಶೇಷ ಪ್ರಮಾಣದಿಂದ ಪ್ರಕಟವಾಗುವದೋ ಅಂಥಲ್ಲಿ ಪೂರ್ಣ ಕೃಪಾ ಆಯಿತು. ಎಂದು (ಸಂತರು) ಅನ್ನುವರು. ಮನುಷ್ಯನ ಸೂಕ್ಷ್ಮ ದೇಹದಲ್ಲಿ ಇದು ಹುಟ್ಟುತ್ತದೆ. ಯೋಗ ಮಾರ್ಗದಲ್ಲಿ ಪ್ರಾಣ ಅಪಾನ ಒಂದಾಗಿ ಸುಷುಮ್ನಾ ನಾಡಿ ತೆರೆಯಿತೆಂದರೆ [ಖುಲ್ಲಾ ಆಯಿತೆಂದರೆ] ಆಗ ಕುಂಡಲಿನಿಯು ರೂಪದಿಂದ ಅದು ಅನುಭವಕ್ಕೆ ಬರುತ್ತದೆ. ಮತ್ತು ಭಕ್ತಿ ಮಾರ್ಗದಲ್ಲಿ ಭಾವನೆ, ನಿಷ್ಠೆ, ಚಿಂತನ, ತೀವ್ರಗೊಂಡು ಸಂಪೂರ್ಣ ಶರಣಾಗತದ ಭಾವ ಉಂಟಾದ ಕೂಡಲೇ ಇದು ಹೃದಯ ಮಧ್ಯದಲ್ಲಿ ಸ್ಫೂರ್ತಿರೂಪದಿಂದ ಅನುಭವಕ್ಕೆ ಬರುವದು. ನಮಸ್ಕಾರದಿಂದ ಶರಣಾಗತ ಭಾವ ಬೇಗ ಉತ್ಪನ್ನವಾಗುವದು. ಅಂದರೆ ಸಾಧಕನಿಗೆ ಸಾಧನದ ಕಷ್ಟವಾಗದೇ ಕೇವಲ ವಂದನ ಭಕ್ತಿಯಿಂದ ಸಾಧಕನು ಭಗವಂತನ ಕೃಪೆಗೆ ಪಾತ್ರನಾಗುವನು. ಹೀಗೆ ಶ್ರೀ ಸಮರ್ಥರು ಹೇಳುತ್ತಾರೆ. ಭಗವಂತನ ಕೃಪೆಯ ಓಘವು ಜೀವಕ್ಕೆ ವ್ಯಾಪಿಸಿದರೆ ಆಗ ಅನುಸಂಧಾನವು (ಲಕ್ಷ, ಅವಧಾನ, ಧ್ಯಾನ, ಯೋಗ ಸಂಬಂಧ, ಸಂಗತಿ) ವಿನಾಪ್ರಯಾಸ (ಶ್ರಮವಿಲ್ಲದೆ) ಗಟ್ಟಿಗೊಳ್ಳುತ್ತದೆ. (ನಿಭಾಯಿಸಿ ನಿಲ್ಲುತ್ತದೆ). ನಮಸ್ಕಾರದಿಂದ ನಮ್ರತೆ ಬರುವದು. ಅಹಂಕಾರ ಕಡಿಮೆ ಆಗುವದರಿಂದ ಶಂಕಾ-ಸಂಶಯಗಳೂ ಕಡಿಮೆ ಆಗುವವು, ಮತ್ತು ಅನೇಕ ಸಾಧು ಸಜ್ಜನ ಶರಣರ ಕೂಡ ನಿಕಟ ಸ್ನೇಹ ಉಂಟಾಗುವದು. (೧೪) ನಮಸ್ಕಾರದಿಂದ ನಿಮ್ಮ ಅವಗುಣಗಳು ಕಡಿಮೆ ಆಗುವವು. ದೊಡ್ಡ ತಪ್ಪು ಆಗಿದ್ದರೂ ಸಹ ನಮಸ್ಕಾರ ಹಾಕುವದರಿಂದ ಆ ತಪ್ಪು ಕ್ಷಮಿಸಲ್ಪಡುವದು. ಮತ್ತು ಒಳಗೊಳಗೆ (ಅಪಸಾತದಲ್ಲಿ) ಮತಭೇದವಾಗಿದ್ದರೆ ಅದೂ ಸಹ ನಮಸ್ಕಾರ ಹಾಕುವದರಿಂದ ಮನದಲ್ಲಿಯ ಕಿಲ್ಮಿಷ ಡಂಕು ಸಹಿತ ಎಲ್ಲವೂ ನಾಶವಾಗಿ ಮೊದಲಿನಂತೆ ಪ್ರೇಮತ್ವ ಉಂಟಾಗುವದು. (೧೫) (ಸಿಸ = ಶೀರ್ಷ = ಮಸ್ತಕ) ಮನುಷ್ಯನ ತಲೆ ಹಾರಿಸುವದು, ಕತ್ತರಿಸುವದು ಒಂದು ದೊಡ್ಡ ಗುನ್ಹೆ. ಇದಕ್ಕೆ ಎಲ್ಲಕ್ಕಿಂತ ದೊಡ್ಡ ಶಿಕ್ಷೆ ಇರುವದು. ಇದು ನಿಜವಿರುವದೆಂದು ಎಲ್ಲರೂ ಒಪ್ಪುತ್ತಾರೆ. (ಇಲ್ಲಿ ಅಹಂಕಾರದಿಂದ ತಲೆ ಸೆಟಿಸಿ ನಡೆಯುವವನನ್ನು ತಲೆಬಾಗು (ಬಗ್ಗು) ವಂತೆ ಮಾಡುವದೇ ಇರುವದು. ಅಂದರೆ ಇದರಿಂದ ಅಹಂಕಾರವು ನಾಶವಾಗುವದು) ಮನುಷ್ಯನ ತಲೆ ಕಡಿದರೆ, ಹಾರಿಸಿದರೆ ಅದಕ್ಕೆ ಎಲ್ಲಕ್ಕಿಂತ ದೊಡ್ಡ ಶಿಕ್ಷೆ ಇರುವದೆಂದು ಎಲ್ಲ ಜನರೂ ತಿಳಿದಿರುತ್ತಾರೆಂಬುದು ನಿಜವೇ ಇರುವವಾದರೆ ದೇವ ಮತ್ತು ಭಕ್ತ, ಸಂತ, ಸಾಧು ಇವರ ಮುಂದೆ ಯಾವಾಗಲೂ ನಮ್ಮ ತಲೆ ಬಾಗಿಸಬೇಕು. ಪಾದಕ್ಕೆ ಹಣೆ ಹಚ್ಚಿ ನಮಸ್ಕರಿಸಬೇಕು. ಅಂದರೆ ಶಿಕ್ಷೆ ಭೋಗಿಸಿದರೆ ಹೇಗೆ ಗುನ್ಹೆ ಉಳಿಯುವದಿಲ್ಲವೋ ಹಾಗೆಯೇ ದೇವ, ದೇವ ಭಕ್ತರಿಗೆ ತಲೆಬಗ್ಗಿಸಿ ವಂದನ ಮಾಡಿದರೆ ಮನುಷ್ಯನ ಪಾಪ ಉಳಿಯುವದಿಲ್ಲ. (೧೬) ನಮಸ್ಕಾರದಿಂದ ಕೃಪೆಯು ಹೆಚ್ಚುತ್ತದೆ. (ಉಕ್ಕಿ ಬರುತ್ತದೆ) ಅಂದರೆ ಯಾರಿಗೆ ನಾವು ನಮಸ್ಕಾರ ಮಾಡುವೆವೋ ಆ ನಮಸ್ಕರಿಸಿಕೊಳ್ಳುವ ಪುಣ್ಯಾತ್ಮನ ಅಂತಃಕರಣದಲ್ಲಿ ದಯೆಯೆಂಬ ಅಮೃತವು ತುಂಬಿ ಬರುತ್ತದೆ. ಅವನು ಪ್ರಸನ್ನನಾಗುತ್ತಾನೆ. ಮತ್ತು ಕೊನೆಗೆ ಸಾಧಕನ ಕಡೆಗೇ ಸದ್ಗುರುವು ಬರುತ್ತಾನೆ (೧೭) ಪೂರ್ಣ ಏಕಾಗ್ರ ಮನಸ್ಸಿನಿಂದ ಯಾವ ವಿಕಲ್ಪಗಳನ್ನು ತರದೆ ಭಗವಂತನಿಗೆ ನಮಸ್ಕಾರ ಮಾಡಿದ್ದಾದರೆ ಪಾಪದ ಪರ್ವತವೇ ಛಿನ್‌ಛಿನ್‌ವಾಗಿ ಹೋಗುವದು. ಒಟ್ಟಿನಲ್ಲಿ ಹೇಳುವವಾದರೆ ಪರಮೇಶ್ವರನ ಕೃಪೆಯಾಗುವದು. (೧೮) ಭ್ರಷ್ಟ, ಪತಿತನಾದ ಮನುಷ್ಯ ದೇವರಿಗೆ ನಮಸ್ಕಾರ ಮಾಡಿದರೆ ಪವಿತ್ರನಾಗುವನು. ನಮಸ್ಕಾರದಿಂದ ಸಂತ ಸಾಧುಗಳಿಗೆ ಶರಣು ಹೋಗಲು ಸುಲಭವಾಗುತ್ತದೆ. ಅಂದರೆ ಅವರ ಚರಣದಲ್ಲಿ ಲೀನರಾಗಲಿಕ್ಕೆ ಬರುತ್ತದೆ. ನಮಸ್ಕಾರದಿಂದ ಜನ್ಮ ಮರಣದ ಪೀಡೆ ತೊಲಗುತ್ತದೆ. (೧೯) ಒಬ್ಬ ಮನುಷ್ಯ ಬಹಳ ದೊಡ್ಡ ಗುನ್ಹೆ ಮಾಡಿದನು. ಮತ್ತು ಅವನು ನಿಮಗೆ ತಪ್ಪಾಯಿತೆಂದು ಕ್ಷಮಿಸಲು ಸಾಷ್ಟಾಂಗ ನಮಸ್ಕಾರ ಹಾಕಿದನೆಂದಿಟ್ಟುಕೊಳ್ಳಿರಿ. ಆಗ ನೀವು ಅವನಿಗೆ ಕ್ಷಮೆ ಮಾಡಲೇಬೇಕು. ಯಾಕಂದರೆ ಶರಣಾಗತಿಯು ನಿಜವಾಗಿಯೂ ಶ್ರೇಷ್ಠವಿರುವದು (೨೦)

ಯಾ ಕಾರಣೇ ನಮಸ್ಕಾರಾ ಪರತೇ। ಆಣೀಕ ನಾಹೀ ಅನುಸರತೇ।
ನಮಸ್ಕಾರೇ ಪ್ರಾಣೀಯಾತೇ। ಸದ್ಬುದ್ಧಿ ಲಾಗೇ ॥೨೧॥
ನಮಸ್ಕಾರಾಸ ವೆಚಾವೇ ನಲಗೆ। ನಮಸ್ಕಾರಾಸ ಕಷ್ಟಾವೇನಲಗೆ।
ನಮಸ್ಕಾರಾಸ ಕಾಹೀಚನಲಗೆ। ಉಪಕರಣ ಸಾಮುಗ್ರೀ ॥೨೨॥
ನಮಸ್ಕಾರಾ ಐಸೇ ನಾಹೀ ಸೋಪೆ। ನಮಸ್ಕಾರ ಕರಾವಾ ಅನನ್ಯರೂಪೇ।
ನಾನಾ ಸಾಧನಿ ಸಾಕ್ಷಪೇ। ಕಾಸಯಾ ಸಿಣಾವೆ ॥೨೩॥
ಸಾಧಕ ಭಾವೆ ನಮಸ್ಕಾರ ಘಾಲೀ। ತ್ಯಾಚೀ ಚಿಂತಾ ಸಾಧೂಸ ಲಾಗಲೀ।
ಸುಗಮ ಪಂಥೇ ನೇಊನ ಘಾಲಿ। ಜೇಥೀಲ ತೇಥೇ ॥೨೪॥
ಯಾ ಕಾರಣೆ ನಮಸ್ಕಾರ ಶ್ರೇಷ್ಠ। ನಮಸ್ಕಾರೇ ವೊಳತೀ ವರಿಷ್ಠ।
ಯೇಥೇ ಸಾಂಗಿತಲೀ ಪಷ್ಟ। ಸಾಹಾವೀ ಭಕ್ತೀ ॥೨೫॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
ವಂದನ ಭಕ್ತಿ ನಿರೂಪಣನಾಮ ಸಮಾಸ ಷಷ್ಟಮ ॥

**ತಾತ್ಪರ್ಯ** : ಆಚರಣೆ ಮಾಡುವದಕ್ಕೆ ಸುಲಭ ಹಾಗೂ ಸುರೇಖ ಸಾಧನವೆಂದರೆ, ನಮಸ್ಕಾರವೇ ಆಗಿದೆ. ಇಷ್ಟು ಸುಲಭವಾದುದು ಇನ್ನೊಂದಿಲ್ಲ. ನಮಸ್ಕಾರದಿಂದ ಮನುಷ್ಯನಲ್ಲಿ ಸದ್ಬುದ್ಧಿ ಉತ್ಪನ್ನವಾಗುತ್ತದೆ(೨೧) ನಮಸ್ಕಾರವು ಬಹಳ ಸುಲಭ, ಸರಳ ಸಾಧನವಿರುವನು. ಸಾಧು ಸಂತರಿಗೆ ಮನಃಪೂರ್ವಕ ನಮಸ್ಕಾರ ಮಾಡಿದರೆ ಸಾಕು. ಅವರು ನಿಮ್ಮ ಕ್ಷೇಮದ ಭಾರ ವಹಿಸುವರು. ನಮಸ್ಕಾರ ಮಾಡುವದಕ್ಕೆ ಏನೂ ಖರ್ಚುಮಾಡಬೇಕಾಗಿಲ್ಲ. ನಮಸ್ಕಾರಕ್ಕೆ ಏನೂ ಕಷ್ಟಪಡಬೇಕಾಗಿಲ್ಲ, ನಮಸ್ಕಾರಕ್ಕೆ ಇತರ ಸಾಧನ ಸಾಮಗ್ರಿ ಮತ್ತು ಯಾವ ಉಪಕರಣಾದಿ ಬಾಹ್ಯ ಸಾಹಿತ್ಯಗಳು ಬೇಕಾಗುವದಿಲ್ಲ. (೨೨) ನಮಸ್ಕಾರದಷ್ಟು ಸುಲಭ ಸಾಧನ ಇನ್ನೊಂದಿಲ್ಲ. ಆದರೆ ನಮಸ್ಕಾರ ಮಾಡುವವನು ಮನಃಪೂರ್ವಕ ಹಾಗೂ ಅನನ್ಯ ಭಾವದಿಂದ ನಮಸ್ಕಾರ ಮಾಡಬೇಕು. ಇತರ ಸಾಧನಗಳಿಗೆ ಪ್ರಯತ್ನಿಸಿ ಸುಮ್ಮನೇ ವ್ಯರ್ಥ ಕಷ್ಟಪಡುವದೇಕೆ ? (೨೩) ಯಾವ ಸಾಧಕನು ಅತಿ ಶ್ರದ್ಧೆಯಿಂದ ಮತ್ತು ಮನಃಪೂರ್ವಕವಾಗಿ ಸಾಧು ಸಂತರಿಗೆ ನಮಸ್ಕಾರ ಹಾಕುವನೋ ಅವನ ಕ್ಷೇಮ, ಕಲ್ಯಾಣ ಚಿಂತನೆಯ ಕಾಳಜಿ ಆ ಸಾಧು ಸಂತರಿಗೇ ಹತ್ತುವದು. ಆ ಮೇಲೆ ಆ ಸಾಧುವು ಸಾಧಕನನ್ನು ಅತಿ ಸುಲಭ ಸರಳ ಮಾರ್ಗದಿಂದ ಯಾರಲ್ಲಿಗೋ ಅವರಲ್ಲಿಗೆ ಅಂದರೆ ಭಗವಂತನ ವರೆಗೂ ತಮ್ಮ ಸಂಗಡ ಕರೆದೊಯ್ದು ಮುಟ್ಟಿಸುವನು. (೨೪) ಇವೆಲ್ಲವುಗಳಿಂದ ನೋಡಲಾಗಿ ನಮಸ್ಕಾರವು ಒಂದು ದೊಡ್ಡ ಶ್ರೇಷ್ಠ ಸಾಧನವಿರುವದು. ನಮಸ್ಕಾರದಿಂದ ಭಗವಂತ ಮತ್ತು ಸಂತ, ಸಾಧು, ಶರಣರು ನಿಮಗೆ ಒಲಿಯುವರು. ಸಹಾಯಕರಾಗುವರು. ಈ ರೀತಿಯ ಆರನೆಯ ಭಕ್ತಿಯ ಮಹತ್ವವನ್ನು (ಮರ್ಮವನ್ನು) ಸ್ಪಷ್ಟವಾಗಿ ಹೇಳಿದೆವು. (೨೫)

ಶ್ರೀ ದಾಸಬೋಧದ ಗುರು ಶಿಷ್ಯರ ಸಂವಾದದೊಳಗಿನ ನಾಲ್ಕನೆಯ ದಶಕದಲ್ಲಿಯ<br>"ವಂದನಾ ಭಕ್ತಿ" ಎಂಬ ಆರನೆಯ ಸಮಾಸವು ಮುಗಿದುದು.

● ●

## ದಶಕ ೪. ಸಮಾಸ ೭. ದಾಸ್ಯ ಭಕ್ತಿ (ನುಡಿ ೨೮)

ಭಕ್ತಿಯ ಸಾಮ್ರಾಜ್ಯದಲ್ಲಿ ಭಗವಂತ ಅಥವಾ ಸದ್ಗುರುವಿನ ದಾಸ್ಯ ಭಾವಕ್ಕೆ ಅದ್ವಿತೀಯ ಸ್ಥಾನವಿರುವದು. ಸಂತ ಸಮಾಜಕ್ಕೆ ಸಾಮ್ರಾಟರೆನಿಸಿದ ಯೋಗಿ ಕುಲಗುರು ಶ್ರೀ ಜ್ಞಾನೇಶ್ವರ ಮಹಾರಾಜರು ತಾವು "ನಿವೃತ್ತಿಯ ದಾಸರು" ಎಂದು ಆಗಾಗ ಧನ್ಯತೆಯ ಉದ್ಗಾರ ತೆಗೆದಿದ್ದಾರೆ. ಸಂತ ಕಬೀರದಾಸರು "ರಾಮ ಹಮಾರಾ ಜಪಕರೆ ಹಮ್ ಬೈಠೆ ಆರಾಮ್" ಹೀಗೆ ತನ್ನ ಸ್ವಾಮಿಯ ಮೇಲೆ ಸತ್ತಾಧಿಕಾರ ಮೆರೆಸುವ ಅವರೇ "ಮೈ ಗುಲಾಮ ಮೈ ಗುಲಾಮ ತೇರಾ। ತೂ ಸಾಹೇಬ ಮೇರಾ" ಹೀಗೆ ಆ ತನ್ನ ಸ್ವಾಮಿಗೆ ಕೂಗಿ ಹೇಳುತ್ತಾರೆ. ಸಂತ ಶ್ರೀ ತುಕಾರಾಮ ಮಹಾರಾಜರ "ಗಾಥಾ" ಗ್ರಂಥವು ಭಕ್ತಿ, ಜ್ಞಾನ, ವೈರಾಗ್ಯಗಳಿಂದ ತುಂಬಿದ್ದನ್ನು ನೋಡಿ ಐದನೆಯ ವೇದವೆಂದು ಚಿಕಿತ್ಸಕ ಮರಾಠಿ ಪಂಡಿತರು ಹೇಳುತ್ತಾರೆ. ಒಟ್ಟಿನಲ್ಲಿ ಈ ಸಂತರು ಒಂದು ನಿಶ್ಚಿತ ಸಿದ್ಧಾಂತ ಹೇಳುತ್ತಾರೆ. ತುಕಾರಾಮರು "ತರೀಚ ಜನ್ಮಾ ಯಾವೆ ದಾಸ ವಿಠ್ಠಲಾಚೆ ವ್ಹಾವೆ" (ಹುಟ್ಟಿ ಬರುವ—ದಾದರೆ ವಿಠ್ಠಲನ ದಾಸನಾಗಿಯೇ ಹುಟ್ಟಿ ಬರಬೇಕು. ಅಥವಾ ಎಲೆ ಜನ್ಮವೇ, ಹುಟ್ಟಿ ಬಂದ ಮೇಲೆ ವಿಠ್ಠಲನ ದಾಸನಾಗು) ಎಂದು ದಾಸ್ಯದ ಮಹಿಮೆಯನ್ನು ತಿಳಿಸಿ ಕೊಟ್ಟಿದ್ದಾರೆ. ಭಕ್ತಿ ಭಾಸ್ಕರ ಪ್ರತ್ಯಗಾತ್ಮರು ಎನಿಸಿದ ಗೋಸ್ವಾಮಿ ತುಳಸೀದಾಸರಿಂದ ರಚಿತ ಸಾಹಿತ್ಯದಲ್ಲಿ ಸೇವ್ಯ—ಸೇವಕ ಸಂಬಂಧದ ವರ್ಣನೆಯನ್ನು ಭವ್ಯವಾಗಿ, ವಿಶಾಲವಾಗಿ ತಿಳಿಸಿದ್ದಾರೆ. ಇವರ ವಾಙ್ಮಯವೆಂದರೆ ದಾಸ್ಯ ಭಕ್ತಿಯ ಭಾಗೀರಥಿಯೇ ಆಗಿದೆ. "ಸೇವಕ, ಸೇವ್ಯ, ಭಾವ, ಬಿನು ಭವನ, ತರಿಯ ಉರಗಾರಿ" ಎಂದು ತಮ್ಮ ಸ್ಪಷ್ಟ ಅನುಭವವನ್ನು ವಿವರಿಸಿ ಹೇಳಿದ್ದಾರೆ. ಮತ್ತು ಅಗಾಧ ವೈರಾಗ್ಯದಲ್ಲಿ ಶುಕ್ರಾಚಾರ್ಯರ ಜ್ಞಾಪಕವಾಗುವದು, ಅಗಾಧಜ್ಞಾನದಲ್ಲಿ ಗುರುವಶಿಷ್ಠರ ಜ್ಞಾಪಕವಾಗುವದು· ದಯಾ, ಪ್ರೇಮ, ಆದರ್ಶದಲ್ಲಿ ಪ್ರಭು ಶ್ರೀ ರಾಮಚಂದ್ರನ ಜ್ಞಾಪಕವಾಗುತ್ತದೆ. ಮತ್ತು ಬಹು ಸಂಚಾರ ಹಾಗೂ ವಾಙ್ಮಯ (ಸಂಭಾರ) ಸಂಗ್ರಹ ಇವನ್ನು ನೋಡಿದರೆ ಶ್ರೀ ಶಂಕರ ಭಗವತ್ಪಾದಾಚಾರ್ಯರ ಜ್ಞಾಪಕವಾಗುತ್ತದೆ. ಅನನ್ಯ ಭಕ್ತಿಯ ಬಗ್ಗೆ ಮಾರುತಿರಾಯನ ಜ್ಞಾಪಕವಾಗುತ್ತದೆ. ಸಕಲ ರಾಜೈಶ್ವರ್ಯಗಳಿದ್ದರೂ ಇಲ್ಲದಂತೆ ಇದ್ದು,

ವಿದೇಹಿ ಎನಿಸಿಕೊಂಡ ಜನಕರಾಜನ ಜ್ಞಾಪಕವಾಗುತ್ತದೆ. ವ್ಯವಹಾರ ಚಾತುರ್ಯ ಮತ್ತು ವರ್ತನೆಯ ಖುಬಿ (ನಡವಳಿಕೆಯ ಗುಟ್ಟು) ನೋಡಿದರೆ ಪೂರ್ಣಾವತಾರಿ ಎನಿಸಿದ ಗೀತಾಚಾರ್ಯ ಭಗವಾನ್ ಶ್ರೀ ಕೃಷ್ಣನ ಜ್ಞಾಪಕ ವಾಗುತ್ತದೆ. ಶ್ರೀ ರಾಮನಾಮದ ಮಹತ್ವವನ್ನೂ ಸ್ವಧರ್ಮಾಭಿಮಾನದ ಸಾರವನ್ನೂ ಜಗತ್ತಿಗೆ ಸಾರಿ ಹೇಳಿದ ಶ್ರೀ ಸಮರ್ಥರು "ಶ್ರೀ ರಾಮನದಾಸ'' ಎಂದು ಕೊನೆಯ ಕ್ಷಣದವರೆಗೂ ಹೇಳಿಕೊಂಡು ಜೀವಿಸಿದರು. ಆ ರಾಮದಾಸ ಎಂಬ ಹೆಸರಿನಿಂದಲೇ ಅವರು ದಾಸ್ಯ ಭಕ್ತಿಯ ಚಮತ್ಕಾರವನ್ನು ಸ್ವತಃ ಆಚರಿಸಿ, ಸಾಹಿತ್ಯ ರಚಿಸಿ ಇನ್ನೂ ಅನೇಕ ಅದ್ಭುತ ಅಮೌಲ್ಯ ಕಾರ್ಯಗಳನ್ನು ದಾಸ್ಯಭಕ್ತಿಯ ಬಲದಿಂದಲೇ ಆಶ್ಚರ್ಯಕಾರಕವಾಗಿ ಮಾಡಿ ತೋರಿಸಿದರು. "ರಾಮದಾಸ" ಇದರ ಅರ್ಥವು "ನಾನು ರಾಮನ ದಾಸನಾದೆ" ಎಂದಾಗುತ್ತದೆ. (ಈ ದಾಸ್ಯ ಭಕ್ತಿಯ ಬಲದಿಂದಲೇ "ಸಮರ್ಥ" ಎಂಬ ಹೆಸರಿನಿಂದಲೂ ಕರೆಸಿಕೊಂಡರು) ಈ ದಾಸ್ಯದಿಂದಲೇ ಜಗತ್ತಿನ ಅಂದರೆ ಪ್ರಪಂಚದ ಸ್ವಾಮಿಯಾದನು, ಮತ್ತು ಜಗದಲ್ಲಿ ತಾನೊಬ್ಬ ಅಕಿಂಚನ (ಅತಿ ದರಿದ್ರ) ಆಗಿದ್ದರೂ ಈ ದಾಸನು ಸಮರ್ಥ (ಶ್ರೇಷ್ಠ)ನೆನಿಸಿ ಮೆರೆದನು. **ತಾತ್ಪರ್ಯ:**– ಭಗವಂತ ಅಥವಾ ಸದ್ಗುರುವಿನ ದಾಸ್ಯ ಸ್ವೀಕರಿಸದ ವಿನಃ ಭಕ್ತನಿಗೆ ಪೂರ್ಣತ್ವ ಬರುವದಿಲ್ಲ. ಮನುಷ್ಯನ ವರ್ತನೆಗೆ ಯಾವ ಕಾರಣಗಳುಂಟೋ ಅವುಗಳ ಪೈಕಿ ಸ್ವಾಮಿತನ ಹಾಗೂ ದಾಸತನ ಇವುಗಳ ಬಗೆಗಿನ ಪ್ರೇರಣೆಯು ಬಹಳಷ್ಟು ಮೂಲಗಾಮಿ ಇರುವದು. ಪ್ರತಿಯೊಬ್ಬ ಮನುಷ್ಯನು ಯಾವುದೋ ಒಂದು ಒಡೆತನದ (ಮಾಲಕೀ ಹಕ್ಕಿನ) ಘಮೇಂಡಿ ತೋರಿಸುತ್ತಾನೆ. ಆದರೆ ಇದರ ಸಂಗಡವೇ ಇನ್ನೊಂದು ಕಡೆಗೆ ದಾಸ್ಯತನವನ್ನು ಸ್ವೀಕರಿಸುತ್ತಾನೆ. ಸಾವಿರ ಕುದುರೆಯ ಸರದಾರನಾಗಿದ್ದರೂ, ಮನೀ ಹೆಂಡತಿಯ ಕೈವಾರಿ (ಪಿಂಜಾರ) ಎಂಬಂತೆ ದೊಡ್ಡ ಸೈನ್ಯದ ಸೇನಾಪತಿಯು ಅಧಿಕಾರ ದರ್ಪದಿಂದ ಅಲ್ಲಿ ಇದ್ದರೂ ಮನೀ ಹೆಂಡತಿಯ ಮುಂದೆ ಗುಲಾಮನಾಗಿರುತ್ತಾನೆ. ಭಗವಂತನ ದಾಸ್ಯ ಪಡೆಯುವಲ್ಲಿ ಬಹು ದಿವ್ಯ ಪ್ರೇಮವಿರುತ್ತದೆ. "ಆ ಭಗವಂತನು ನನ್ನವನಿರುವನು ಮತ್ತು ನಾನು ಸರ್ವಸ್ವದಿಂದಲೂ ಅವನವನಿರುತ್ತೇನೆ."ಎಂಬ ಶುದ್ಧ ಭಾವದಲ್ಲಿ ಸ್ವಾಮಿಯ ಸೇವೆಯ ಹೊರತಾಗಿ ಭಕ್ತನ ಜೀವನದಲ್ಲಿ ಬೇರೆ ಯಾವ ಸ್ವಾರ್ಥವೂ ಉಳಿದಿರುವದಿಲ್ಲ.ಒಂದು ವಿಚಾರ ದಿಂದ ನೋಡಿದರೆ ಭಗವಂತನ ಸೇವೆ ಮತ್ತು ಸ್ವಾರ್ಥ ಇವುಗಳಲ್ಲಿ ಸ್ವಭಾವ ವೈರವಿರುವದು ಕಂಡು ಬರುತ್ತದೆ. ಭಕ್ತನು—ದಾಸನು ತನ್ನ ಸೇವೆಗೆ ಯಾವ ಫಲ ಸಿಕ್ಕೀತು, ಸಿಗುವದು ಅಥವಾ ಸಿಗಬಹುದು ಎಂಬುದರ ವಿಚಾರ ವನ್ನು ಸ್ವಲ್ಪವೂ ಮಾಡುವದಿಲ್ಲ. ತನ್ನದೇನಾದರೂ ಆಗಲಿ. ತನ್ನ ಸ್ವಾಮಿ ಸದಾ ಪ್ರಸನ್ನನಾಗಿರಲಿ ಎಂಬ ಸ್ವಾರ್ಥ ಮಾತ್ರ ಭಕ್ತನಲ್ಲಿರುತ್ತದೆ. "ಖುದ್ ಭೂಕಾ ಮರೆ ಮಗರ ಮಾಶೂಕ ಕೋ ರಾಜೀಕರೆ" **(ಅರ್ಥ)** ''ನಾವು ಉಪವಾಸ ಸಾಯೋಣ ಆದರೆ ನಮ್ಮ ಪ್ರೇಮ ಪಾತ್ರ ಪರಮಾತ್ಮನು ಮಾತ್ರ ಪ್ರಸನ್ನನಿರಲಿ, ಈ ಸೂಫಿ ಸಂತರ ವಚನದಲ್ಲಿ ದಾಸ್ಯ ಭಕ್ತಿಯ ಮರ್ಮ ತುಂಬಿದೆ· ಭಗವಂತನ ದಾಸನು ಹೇಗೆ ಹೇಗೆ ಸೇವಾ ಪ್ರವೀಣನಾಗುತ್ತ ಹೋಗುವನೋ ಹಾಗೆ ಹಾಗೆ ಅವನ ಸ್ವಾಮಿ ಚರಾಚರ ಜಗತ್ತನ್ನು ವ್ಯಾಪಿಸಿ ಇರುವನು ಎಂಬ ಅನುಭವ ದಾಸನಿಗೆ ಬರುತ್ತದೆ. ಅನಂತರ ಸರ್ವಪ್ರಾಣಿ ಮಾತ್ರರನ್ನು ಪೂಜ್ಯ ಭಾವದಿಂದ, ಮನಃಪೂರ್ವಕದಿಂದ ಸೇವೆ ಮಾಡುವನು. ಅವನ ದಾಸ್ಯ ಸೇವೆಗೆ ಪ್ರತಿಯಾಗಿ ಸ್ವರೂಪ ಪ್ರಾಪ್ತಿಯಾಗುವದು. (ಸಿದ್ಧಪುರುಷರಾಗುವರು). ಇರಲಿ, ಮರಾಠಿ ವಾಙ್ಮಯ ಸಾಗರದಲ್ಲಿ ದಾಸ್ಯ ಭಕ್ತಿಯ ಪುಣ್ಯಸಲಿಲಾ ಗಂಗೆಯನ್ನು ತಂದು ಬಿಟ್ಟಿರುವ ಶ್ರೀ ಸಮರ್ಥರು ಭಕ್ತಿಯ ದೊಡ್ಡ ಆಚಾರ್ಯರಾಗಿ ಹೋದರೆಂಬುದು ನಿರ್ವಿವಾದವಾಗಿದೆ,

## ಸಮಾಸ ಸಪ್ತಮು : ದಾಸ್ಯ ಭಕ್ತಿ

॥ಶ್ರೀರಾಮ॥ ಮಾಗಾ ಜಾಲೇ ನಿರೂಪಣ । ಸಾಹವೇ ಭಕ್ತೀಚೇ ಲಕ್ಷಣ ।
ಆತಾ ಐಕಾ ಸಾವಧಾನ । ಸಾತವೀ ಭಕ್ತೀ ॥೧॥
ಸಾತವೆ ಭಜನ ತೇ ದಾಸ್ಯ ಜಾಣಾವೇ । ಪಡಿಲೇ ಕಾರ್ಯ ತಿತುಕೇ ಕರಾವೇ ।
ಸದಾ ಸನ್ನಿಧಚಿ ಅಸಾವೇ । ದೇವ ದ್ವಾರೀ ॥೨॥
ದೇವಾಚೆ ವೈಭವ ಸಾಂಭಾಳಾವೆ । ನ್ಯೂನಪೂರ್ಣ ಪಡೋಂಚಿ ನೇದಾವೆ ।
ಚಢತೆ ವಾಢತೆ ವಾಢವಾವೆ । ಭಜನ ದೇವಾಚೆ ॥೩॥
ಭಂಗಲಿ ದೇವಾಲಯೆ ಕರಾವಿ । ಮೋಡಲಿ ಸರೋವರೇ ಬಾಂಧಾವೀ ।
ಸೋಫೇ ಧರ್ಮಶಾಳಾ ಚಾಲವಾವೀ । ನೂತನಚಿ ಕಾರ್ಯೇಂ ॥೪॥
ನಾನಾ ರಚನಾ ಜೀರ್ಣ ಜರ್ಜರ । ತ್ಯಾಚೆ ಕರಾವೇ ಜೀರ್ಣೋದ್ಧಾರ ।
ಪಡಿಲೇ ಕಾರ್ಯ ತೇ ಸತ್ವರ । ಚಾಲವಿತ ಜಾವೆ ॥೫॥
ಗಜ ರಥ ತುರಂಗ ಸಿಂಹಾಸನೆ । ಚೌಕಿಯಾ ಸಿಬಿಕಾ ಸುಖಾಸನೆ ।
ಮಂಚಕ ಡೊಲ್ಹಾರೆ ವಿಮಾನೆ । ನೂತನಚಿ ಕರಾವಿ ॥೬॥
ಮೇಘ ಡಂಬ್ರೆ ಛತ್ರೆ ಚಾಮರೆ । ಸೂರ್ಯಪಾನೆ ನಿಶಾಣೆ ಅಪಾರೆ ।
ನಿತ್ಯ ನೂತನ ಅತ್ಯಾದರೇ । ಸಾಂಭಾಳಿತ ಜಾವೀ ॥೭॥
ನಾನಾ ಪ್ರಕಾರೀಚೀ ಯಾನೇ । ಬೈಸಾವಯಾಚಿ ಉತ್ತಮ ಸ್ಥಾನೆ ।
ಬಹುವಿಧ ಸುವರ್ಣಾಸನೆ । ಯೆತ್ನೇ ಕರೀತ ಜಾವೀ ॥೮॥
ಭುವನೆ ಕೊಠಡ್ಯಾ ಪೇಟ್ಯಾ ಮಾಂದುಸಾ ।
ರಾಂಝಣ ಕೊಹಳೀ ಘಾಗರೀ ಬಹುವಸಾ ।
ಸಂಪೂರ್ಣ ದ್ರವ್ಯಾಂಶ ಐಸಾ । ಅತಿಯೆತ್ನೆ ಕರಾವಾ ॥೯॥
ಭುಯೇರೀ ತಳಘರೇ ಆಣಿ ವಿವರೆ । ನಾನಾ ಸ್ಥಳೀ ಗುಪ್ತದ್ವಾರೆ ।
ಅನರ್ಘ್ಯೇ ವಸ್ತೂಚಿ ಭಾಂಡಾರೇ । ಯೆತ್ನೆ ಕರೀತ ಜಾವೀ ॥೧೦॥
ಅಳಂಕಾರ ಭೂಷಣೇ ದಿವ್ಯಾಂಬರೇ । ನಾನಾ ರತ್ನೆ ಮನೋಹರೆ ।
ನಾನಾ ಧಾತು ಸುವರ್ಣ ಪಾತ್ರೆ । ಯೆತ್ನೇ ಕರೀತ ಜಾವೀ ॥೧೧॥
ಪುಷ್ಪವಾಟಿಕಾ ನಾನಾ ವನೇ । ನಾನಾ ತರುವರಾಚೀ ಬನೆ ।
ಪಾವತೀ ಕರಾವೀ ಜೀವನೇಂ । ತಯಾ ವೃಕ್ಷಾಸೀ ॥೧೨॥
ನಾನಾ ಪಶೂಚಿಯಾ ಶಾಳಾ । ನಾನಾ ಪಕ್ಷೀ ಚಿತ್ರಶಾಳಾ ।
ನಾನಾ ವಾದ್ಯೇ ನಾಟ್ಯಶಾಳಾ । ಗುಣೀ ಗಾಯಕ ಬಹುಸಾಲ ॥೧೩॥

## ದಶಕ ೪. ಸಮಾಸ ೭. ದಾಸ್ಯ ಭಕ್ತಿ (ನುಡಿ ೨೮)

**ಮೊದಲು ದಾಸ್ಯ ಭಕ್ತಿಯ ವ್ಯಾಖ್ಯೆಯನ್ನು ಹೇಳುತ್ತಾರೆ:—** ಹಿಂದಿನ ಸಮಾಸದಲ್ಲಿ ಆರನೆಯ ಭಕ್ತಿಯ ವರ್ಣನೆ ಆಯಿತು. ಈಗ ಏಳನೆಯ ಭಕ್ತಿಯನ್ನು ಹೇಳುವೆ ಮನಗೊಟ್ಟು ಕೇಳಿರಿ. (೧) ದೇವರ ದಾಸ್ಯ ಮಾಡುವದೆಂದರೆ ಏಳನೆಯ ಭಕ್ತಿಯಾಗಿದೆ. ದೇವರ ಸೇವೆ ಮಾಡುವದಕ್ಕಾಗಿ ದೇವರ ಬಾಗಿಲ ಹತ್ತಿರ ಯಾವಾಗಲೂ ಇರಬೇಕು. ಮತ್ತು ದೇವರ ಕೆಲಸ ಯಾವುದೇ ಇದ್ದರೂ ಅದನ್ನು ಸ್ವತಃ ಮಾಡಬೇಕು. (೨) ದೇವರ ವೈಭವ, ಐಶ್ವರ್ಯ, ಇವುಗಳನ್ನು ನೀವು ರಕ್ಷಣೆ ಮಾಡಬೇಕು. ಇದರಲ್ಲಿ ಯಾವ ಕೊರತೆ ಆಗದಂತೆ ನೋಡಿಕೊಳ್ಳಬೇಕು. ಇಂದಿನಕ್ಕಿಂತ ದೇವರ ವೈಭವ, ಪೂಜೆ, ಪುನಸ್ಕಾರ, ಅವನ ಉತ್ಸವ ಇನ್ನೂ ಅನೇಕ ರೀತಿಯ ಸೇವೆ ಹೆಚ್ಚುವಂತೆ ನೀವು ಪ್ರಯತ್ನ ಮಾಡಬೇಕು. (೩) ದೇವರ ವೈಭವ ಹೆಚ್ಚು ಹೆಚ್ಚು ಹೇಗೆ ಅಭಿವೃದ್ಧಿಯಾಗಬೇಕೆಂಬುವದರ ಸವಿಸ್ತಾರ ವರ್ಣನೆ ಮಾಡುತ್ತಾರೆ. ಅರ್ಚನ ಭಕ್ತಿಯಲ್ಲಿ ಹೇಳಿದ ಮಾತುಗಳು ಇಲ್ಲಿ ಪುನಃ ಹೇಳಿದ್ದು ಕಂಡು ಬರುವದು:- ಮುರಕಳಿಗೆ ಬಂದ ಹಾಗೂ ಬಿದ್ದ ದೇವಾಲಯಗಳನ್ನು ದುರಸ್ತ ಮಾಡಬೇಕು. ನಾದುರಸ್ತ ಆದ ಸರೋವರ, ಹೊಂಡ, ಕೆರೆ, ಭಾವಿಗಳನ್ನು ದುರಸ್ತ ಮಾಡಬೇಕು, ಹಾಗೂ ಹೊಸದಾಗಿ ಧರ್ಮಶಾಲೆ, ಚಪ್ಪರ, ಬಂಕ, ಸಾದಾ ಕಟ್ಟಡ (ಇಮಲಾ) ಇದ್ದ ಇಳಿದಾಣಗಳನ್ನು ಹೊಸದಾಗಿ ನಿರ್ಮಿಸಬೇಕು. (೪) ಹಿಂದಿನ ಹಳೆಯ ದೇವರ ಕಟ್ಟಡಗಳು (ಇಮಾರತಿಗಳು) ಜೀರ್ಣವಾಗಿದ್ದರೆ, ಮುರಕಳಿಗೆ ಬಂದಿದ್ದರೆ, ಅವುಗಳ ಜೀರ್ಣೋದ್ಧಾರ ಮಾಡಬೇಕು. ಈ ಬಗೆಯಿಂದ ದೇವರ ಯಾವ ಯಾವ ಕೆಲಸಗಳನ್ನು ಮಾಡಬೇಕಾಗಿದೆಯೋ ಅವುಗಳನ್ನು ಕೂಡಲೇ ಪ್ರಾರಂಭಿಸಬೇಕು (೫) ಆನೆ, ಕುದುರೆ, ರಥ ಸಿಂಹಾಸನ, ಚೌಕಿ, ಚೌರಂಗ, ಪಾಲಖಿ, ಸುಖ ವಾಹನಗಳು,ಮಂಚ, ದೇವರ ಡೋಲಿ, ವಿಮಾನ, ಇತ್ಯಾದಿಗಳನ್ನು ಹೊಸದಾಗಿ ಬಣ್ಣ ವಗೈರೆ ಹಚ್ಚಿ ದುರಸ್ತಿ ಇಡಬೇಕು. ಕೇವಲ ನಿರುಪ ಯುಕ್ತವಾದವುಗಳನ್ನು ಬಿಟ್ಟು ಹೊಸವನ್ನು ನಿರ್ಮಿಸಬೇಕು. (೬) ಎತ್ತರ ಛತ್ರಿ (ನೆರಳಿಗಾಗಿ) ಸಣ್ಣ ಛತ್ರಿ, ಚಾಮರ, ಅಪ್ತಾಗಿರಿ, ಬಹಳಷ್ಟು ನಿಶಾನೆ ಇತ್ಯಾದಿಗಳನ್ನು ಅತಿ ಕಾಳಜಿಯಿಂದ ಸ್ವಚ್ಛ (ಸಾಫಸೂಫ) ಮಾಡಿ ತಿಕ್ಕಿ ಒರಿಸಿ ಇಡಬೇಕು. (೭) ದೇವರ ಅನೇಕ ಪ್ರಕಾರದ ವಾಹನಗಳು ಕೂಡುವದಕ್ಕಾಗಿ ಸಾಫಸೂಫ ಆಗಿರುವ ಸ್ಥಳ. ನಾನಾ ಬಗೆಯ ಬಂಗಾರದ ಆಸನ ದೇವರಿಗಾಗಿ, ಇತ್ಯಾದಿಗಳನ್ನು ಬಹು ಪರಿಶ್ರಮದಿಂದ ಸಂಪಾದಿಸಬೇಕು ಮಾಡಿಸ-ಬೇಕು. (೮) ಮನೆ, ಮಂದಿರ, ಖೋಲಿಗಳು, ಪೆಟ್ಟಿಗೆ, ದೊಡ್ಡ ಪೆಟ್ಟಿಗೆ, ಡೇರೆ, ಹೌದಿನಂತಹ ನೀರು ತುಂಬುವ ಭಾಂಡಿ, ಬಹಳಷ್ಟು ಕೊಡಗಳು, ಇಂಥ ಹೆಚ್ಚಿನ ಕಿಮ್ಮತ್ತಿನ ವಸ್ತುಗಳನ್ನು ಬಹು ಪ್ರಯತ್ನ ಮಾಡಿ ದೇವರಿಗಾಗಿ ಸಂಪಾದಿಸಬೇಕು. (೯) ಅನೇಕ ಅನುಕೂಲ ಸ್ಥಳಗಳಲ್ಲಿ,ಭೂಮಿಯಲ್ಲಿ ಅಥವಾ ಗುಡ್ಡದಲ್ಲಿ ಕೊರೆದು, ಅಗಿದು ತಯಾರಿಸಿದ ಗುಹೆ, ಅಥವಾ ಮನೆ, ಗೂಡು ನೆಲಮನೆ. ಇವಕ್ಕೆ ಹೊಂದಿಕೊಂಡಿರುವ ನೆಲದಲ್ಲಿ ಕೊರೆದು ತಯಾರಿಸಿದ ಗುಪ್ತ ಮಾರ್ಗ ಇದರಲ್ಲಿ ಹೋಗಿ ಬರುವದಕ್ಕೆ ಗುಪ್ತ ಬಾಗಿಲವಿರಬೇಕು. ಇಂಥ ನೆಲಮನೆಯಲ್ಲಿ ಗುಪ್ತ ಭಂಡಾರ, ಉಗ್ರಾಣ, ಕಬ್ಬಿಣದ ಪೆಟ್ಟಿಗೆ, ತಿಜೋರಿ, ಇರಬೇಕು. ಇದರಲ್ಲಿ ದೇವರಿಗೆ ಸಂಬಂಧಿಸಿದ ಬಹು ಬೆಲೆಯ ಮುತ್ತು ರತ್ನ ವಗೈರೆ ಕಿಮ್ಮತ್ತಿನ ಸಾಮಾನುಗಳನ್ನು ಇಡಬೇಕು. (೧೦) ದೇವರಿಗಾಗಿ ದಾಗೀನೆಗಳು, ಭೂಷಣದ ಸಾಮಾನು ಸಾಹಿತ್ಯ ಗಳು, ಭಾರಿ ಕಿಮ್ಮತ್ತಿನ ವಸ್ತ್ರಗಳು, ಅನೇಕ ಪ್ರಕಾರದ ಮುತ್ತು ರತ್ನಗಳು. ಅನೇಕ ಧಾತುವಿನ ಮತ್ತು ಬಂಗಾರದ ಭಾಂಡಿ ಇತ್ಯಾದಿಗಳನ್ನು ಖಟಪಟಿ ಮಾಡಿ ಸಂಗ್ರಹಿಸಿ ಇಡಬೇಕು. (೧೧) ಹೂವಿನ ತೋಟ, ವನ, ಅನೇಕ ಪ್ರಕಾರದ ಗಿಡಗಳ ಅಗಿಗಳನ್ನು ತಯಾರಿಸಿ ವನ ಮತ್ತು ತೋಟಗಳಲ್ಲಿ ಹಚ್ಚಿ ನೀರು ಹಾಯಿಸುವಂತೆ ಹಾಗೂ ಫಲ ಬರುವಂತೆ ಮಾಡಬೇಕು. (೧೨) ಅನೇಕ ಪ್ರಕಾರದ ಜನಾವರಗಳಿಗಾಗಿ ಮನೆ, ದನದ ಹಕ್ಕಿ, ಪಾಗಾ, ಮತ್ತು ಅನೇಕ ಪ್ರಕಾರದ ಪಕ್ಷಿಗಳು, ಅನೇಕ ಪ್ರಕಾರದ ಚಿತ್ರಗಳ ಸಂಗ್ರಹ ಅನೇಕ ಪ್ರಕಾರದ ವಾದ್ಯಗಳು, ನಾಟಕ ಮಾಡುವದಕ್ಕೆ ರಂಗಮಂದಿರ, ನಾಟ್ಯಶಾಲೆ, ಅನೇಕ ಉತ್ತಮ ಗಾಯಕರು. (೧೩)

ಸ್ವಯಂಪಾಕ ಗೃಹೇ ಭೋಜನಶಾಳಾ । ಸಾಮುಗ್ರಿ ಗೃಹೇ ಧರ್ಮಶಾಳಾ ।
ನಿದ್ರಿಸ್ತಾಕಾರಣೇ ಪಡಶಾಳಾ । ವಿಶಾಳ ಸ್ಥಳೆ ॥೧೪॥

ನಾನಾ ಪರಿಮಳ ದ್ರವ್ಯಾಚೀ ಸ್ಥಳೇ । ನಾನಾ ಖಾದ್ಯ ಫಳಾಚೀ ಸ್ಥಳೇ ।
ನಾನಾ ರಸಾಚೀ ನಾನಾ ಸ್ಥಳೇ । ಯೆತ್ನೇ ಕರೀತ ಜಾವೀ ॥೧೫॥

ನಾನಾ ವಸ್ತ್ರಾಂಚೀ ನಾನಾ ಸ್ಥಾನೇ । ಭಂಗಲೀ ಕರಾವೀ ನೂತನೇ ।
ದೇವಾಚೇ ವೈಭವ ವಚನೇ । ಕಿತೀ ವರ್ಣೂನಿ ಬೋಲಾವೆ ॥೧೬॥

ಸರ್ವಾ ಠಾಈ ಅತಿಸಾದರ । ಆಣೀ ದಾಸ್ಯತ್ವಾಸ ಹಿ ತತ್ಪರ ।
ಕಾರ್ಯ ಭಾಗಾಚಾ ವಿಸರ । ಪಡಣಾರ ನಾಹೀ ॥೧೭॥

ಜಯಂತ್ಯಾ ಪರ್ವೇ ಮೋಹೋತ್ಸಾವ । ಅಸಂಭಾವ್ಯ ಚಾಲವೀ ವೈಭವ ।
ಜೇ ದೇಖತಾ ಸ್ವರ್ಗೀಚೇ ದೇವ । ತಟಸ್ಥ ಹೋತೀ ॥೧೮॥

ಐಸೇ ವೈಭವ ಚಾಲವಾವೆ । ಆಣೀ ನೀಚ ದಾಸ್ಯತ್ವ ಹಿ ಕರಾವೆ ।
ಪಡಿಲೆ ಪ್ರಸಂಗೀ ಸಾವಧ ಅಸಾವೆ । ಸರ್ವಕಾಳ ॥೧೯॥

ಜೇ ಜೇ ಕಾಹಿ ಪಾಹಿಜೆ । ತೇ ತೇ ತತ್ಕಾಳಚಿ ದೇಜೆ ।
ಅತ್ಯಂತ ಆವಡೀ ಕೀಜೇ । ಸಕಳ ಸೇವಾ ॥೨೦॥

ಚರಣಕ್ಷಾಳಣೆ ಸ್ನಾನೇ ಆಚಮನೇ । ಗಂಧಾಕ್ಷತೇ ವಸನೇ ಭೂಷಣೇ ।
ಆಸನೇ ಜೀವನೇ ನಾನಾ ಸುಮನೇ । ಧೂಪ ದೀಪ ನೈವೇದ್ಯ ॥೨೧॥

ಶಯೆನಾಕಾರಣೇ ಉತ್ತಮ ಸ್ಥಳೇ । ಜಳೇ ಠೇವಾವೀ ಸುಸೀತಳೆ ।
ತಾಂಬೋಲ ಗಾಯನೇ ರಸಾಳೇ । ರಾಗರಂಗೇ ಕರಾವೀ ॥೨೨॥

ಪರಿಮಳ ದ್ರವ್ಯೇ ಆಣೀ ಫುಲೆಲೇ । ನಾನಾ ಸುಗಂಧೇಲ ತೇಲೇ ।
ಖಾದ್ಯ ಫಳೇ ಬಹುಸಾಲೇ। ಸನ್ನಿಧ ಚೀ ಅಸಾವೀ ॥೨೩॥

ಸಡೆ ಸಂಮಾರ್ಜನೇ ಕರಾವೀ । ಉದಕ ಪಾತ್ರೆ ಉದಕೆ ಭರಾವೀ ।
ವಸನೇ ಪ್ರಕ್ಷಾಲೂನ ಆಣಾವೀ । ಉತ್ತಮೋತ್ತಮೇ ॥೨೪॥

ಅಡುಗೆಯ ಮನೆ ಊಟ ಮಾಡುವದಕ್ಕಾಗಿ ವಿಶಾಲ ಸ್ಥಳ, ಅಡುಗೆಯ ಸಾಮಾನು ಸಾಹಿತ್ಯ ಇಡುವ ಕೋಠಿಮನೆ, ಧರ್ಮಶಾಲೆ, ಮಲಗುವದಕ್ಕಾಗಿ ಸಾಮಾನ್ಯ ಮನೆ ಇವೆಲ್ಲ ಸ್ಥಳಗಳು ವಿಶಾಲವಾಗಿರಬೇಕು. (೧೪) ಅನೇಕ ಪ್ರಕಾರದ ಸುವಾಸಿಕ ವಸ್ತುಗಳನ್ನಿಡುವದಕ್ಕಾಗಿ ಸ್ಥಳ, ನಾನಾ ಪ್ರಕಾರದ ತಿನ್ನುವ ವಸ್ತುಗಳನ್ನು ಮತ್ತು ಫಲಗಳನ್ನು ಇಡುವದಕ್ಕಾಗಿ ಸ್ಥಳ, ಅನೇಕ ಪ್ರಕಾರದ ರಸ ಪದಾರ್ಥಗಳಿಗಾಗಿ ಸ್ಥಳ ಇವುಗಳನ್ನು ಶ್ರಮವಹಿಸಿ ತಯಾರ ಮಾಡಬೇಕು. (೧೫) ಇಂಥ ಅನೇಕ ಪ್ರಕಾರದ ವಸ್ತುಗಳನ್ನಿಡುವ ಸ್ಥಳಗಳು ಹಳೆಯವಾಗಿ, ನಿರುಪಯೋಗಿ ಯಾಗಿದ್ದರೆ ಪುನಃ ಅವುಗಳನ್ನು ದುರಸ್ತಿ ಮಾಡಿಸಬೇಕು. ದೇವರ ವೈಭವಗಳನ್ನು ಶಬ್ದಗಳಿಂದ ವರ್ಣಿಸಬೇಕೆಂದರೆ ಅದು ಇನ್ನೂ ಕಡಿಮೆಯೇ ಎನಿಸುವದು. (೧೬) **"ನಾನು ದೇವರ ಸಲುವಾಗಿ ಇರುವೆ" ಈ ಭಾವನೆಯಿಂದ ಇದ್ದು ಯಾವ ಯಾವ ಕೃತಿಯಿಂದ ದೇವರ ವೈಭವ ಹೆಚ್ಚುವಂತೆ ಕಾಣುವದೋ ಆ ರೀತಿಯಿಂದ ದುಡಿಯಲು ಸಿದ್ಧರಿರಬೇಕು. ಅತ್ಯಂತ (ಅಗದೀ) ಕ್ಷುಲ್ಲಕದಲ್ಲಿ ಕ್ಷುಲ್ಲಕ ಕೆಲಸ ಮಾಡಲಿಕ್ಕೆ ಎಲ್ಲರಕ್ಕಿಂತ ಮೊದಲಿಗೆ ತಯಾರ ಇರಬೇಕು:—** ದೇವರಿಗೆ ಬರುವ ಯಾವತ್ತೂ ಜನರ ಬಗ್ಗೆ ಅತ್ಯಂತ ಆದರವಿರಬೇಕು. ಅವರ ಸೇವೆ ಮಾಡುವದಕ್ಕೆ ಸದಾ ತಯಾರ ಇರಬೇಕು. ನಿಮ್ಮ ಪಾಲಿಗೆ ಬಂದ ಕೆಲಸವನ್ನು ತತ್ಪರತೆಯಿಂದ ಮಾಡಬೇಕು. ಆದರೆ (ಪರಂತು) ದೇವರ ಮಂದಿರದ ಕಾರ್ಯಭಾಗದ ಭಾರ ಮರೆಯದಂತೆ ಕೆಲಸ ಮಾಡಬೇಕು(೧೭) ದೇವರ ಜಯಂತಿ ಮತ್ತು ಪರ್ವಣಿ ಪುಣ್ಯಕಾಲ ಮತ್ತು ಮಹೋತ್ಸವ ದಿನಗಳನ್ನು ಬಹಳಷ್ಟು ವೈಭವದಿಂದ ನಡೆಸಬೇಕು, ಕೂಡಿದ ಜನರಿಗೆ ಆಶ್ಚರ್ಯವಾಗುವಂತೆ ವಿಜೃಂಭಣೆಯಿಂದ ಆಚರಿಸಬೇಕು. ದೇವರ ಉತ್ಸವ ಮತ್ತು ಆ ವೈಭವ ನೋಡಿ ಸ್ವರ್ಗದಲ್ಲಿರುವ ದೇವತೆಗಳೂ ಚಕಿತರಾಗುವಂತೆ ಮಾಡಬೇಕು. ಇದೇ ಪ್ರಕಾರ ಸಾಧು ಸಂತ ಸದ್ಗುರು, ಸನ್ಯಾಸಿ ಮತ್ತು ಪೂಜ್ಯ ಪುರುಷರ ಜಯಂತಿಯನ್ನು ಮಾಡಬೇಕು. (೧೮) ದೇವರ ವೈಭವವು ಉತ್ತರೋತ್ತರ ಬೆಳವಣಿಗೆಯಲ್ಲಿರಬೇಕು. ಆದರೆ ನೀವು ಕ್ಷುಲ್ಲಕದಲ್ಲಿಯ ತೀರ ಕ್ಷುಲ್ಲಕ ಕೆಲಸವನ್ನೂ ಸಹ ದೇವರ ಸೇವೆಯೇ ಎಂದು ಅದನ್ನು ಮನಸಾ ಮಾಡಬೇಕು. ಈ ವೃತ್ತಿಯನ್ನು ಎಂದೂ ಬಿಡಬಾರದು. ಎಂಥದೇ ಪ್ರಸಂಗ ಬಂದರೂ ಅಲ್ಲಿ ಸೇವೆ ಮಾಡಲಿಕ್ಕೆ ಸದಾ ತಯಾರ ಇರಬೇಕು.(೧೯) ದೇವರ ಸಲುವಾಗಿ ಏನೇನು ಬೇಕಾಗುವದೋ ಅವನ್ನೆಲ್ಲ ತಡಮಾಡದೇ ಕೊಡಬೇಕು. ದೇವರ ಸರ್ವ ಪ್ರಕಾರದ ಸೇವೆಯನ್ನು ಒಳ್ಳೇ ಪ್ರೇಮದಿಂದ ಮಾಡಬೇಕು. (೨೦) **ದೇವರ ಸಲುವಾಗಿ ಯಾವ ಯಾವ ಸೇವೆ ಮಾಡಬೇಕೆಂಬುದನ್ನು ಸ್ವಲ್ಪದರಲ್ಲಿ ವರ್ಣಿಸುತ್ತಾರೆ:—** ಕಾಲು ತೊಳೆಯುವದಕ್ಕೆ, ಸ್ನಾನದ ಸಲುವಾಗಿ, ಆಚಮನಾದಿಗಳ ಸಲುವಾಗಿ ನೀರು ತಂದಿಡ ಬೇಕು. ಗಂಧ, ಅಕ್ಷತೆ, ವಸ್ತ್ರ, ದಾಗೀನು, ಆಸನ, ಕುಡಿಯುವ ನೀರು, ಹೂವು, ಪತ್ರಿ, ಧೂಪ, ದೀಪ, ನೈವೇದ್ಯ (೨೧) ಮಲಗುವದಕ್ಕಾಗಿ ಉತ್ತಮ ಸ್ಥಳ, ಮತ್ತು ಉತ್ತಮ ತಣ್ಣೀರು, ಈ ವಸ್ತುಗಳನ್ನು ತಯಾರ ಇಡಬೇಕು. (ಪಾನವೀಡಾದ) ಎಲೆ ಅಡಿಕೆಯ ತಾಂಬೂಲ ಸಾಮಾನು ಇಡಬೇಕು. ರಾಗಬದ್ಧವಾಗಿರುವ ರಸಾಳ ಗಾಯನ ಮಾಡಬೇಕು. (೨೨) ಪರಿಮಳ ದ್ರವ್ಯ, ಅತ್ತರ (ಹೂವಿನಿಂದ ತಯಾರಿಸಿದ್ದು) ಇನ್ನೂ ಅನೇಕ ಸುಗಂಧೀ ತೈಲ, ಅನೇಕ ಪ್ರಕಾರದ ತಿನ್ನುವ ವಸ್ತು ಮತ್ತು ಹಣ್ಣು ಫಲಗಳನ್ನು ಹತ್ತಿರ ಇಡಬೇಕು. ಮತ್ತು ಜನರಿಗೆ ಕೊಡಬೇಕು. (೨೩) ಕಸ ಊಡುಗುವದು, ಥಳಿ ಹಾಕುವದು, ನೀರು ಚಿಮುಕಿಸುವದು, ಸಾರಿಸುವದು, ನೀರಿನ (ಭಾಂಡಿ) ಪಾತ್ರೆಯಲ್ಲಿ ಸ್ವಚ್ಛ ನೀರನ್ನು ತುಂಬಿ ಇಡಬೇಕು. ವಸ್ತ್ರಗಳನ್ನು ಸ್ವಚ್ಛ ಒಗೆದು ತರಬೇಕು. (೨೪)

ಸಕಳಾಂಚೇ ಕರಾವೇ ಪಾರಪತ್ಯ । ಆಲಯಾಂಚೇ ಕರಾವೇ ಆತಿತ್ಯ ।
ಐಸೀ ಹೇ ಜಾಣಾವೀ ಸತ್ಯ । ಸಾತವೀ ಭಕ್ತೀ ॥೨೫॥
ವಚನೇ ಬೋಲಾವೀ ಕರುಣೇಚೀ । ನಾನಾ ಪ್ರಕಾರೇ ಸ್ತುತೀಚೀ ।
ಅಂತರೇ ನಿವತೀ ಸಕಳಾಂಚೀ । ಐಸೇ ವದಾವೇ ॥೨೬॥
ಐಸೀ ಹೇ ಸಾತವೀ ಭಕ್ತೀ । ನಿರೋಪಿಲೀ ಯಥಾಮತೀ।
ಪ್ರತ್ಯಕ್ಷ ನ ಘಡೇ ತರೀ ಚಿತ್ತೀ । ಮಾನಸ ಪೂಜಾ ಕರಾವೀ ॥೨೭॥
ಐಸೇ ದಾಸ್ಯ ಕರಾವೇ ದೇವಾಚೇ । ಯೇಣೇಚಿ ಪ್ರಕಾರೇ ಸದ್ಗುರೂಚೇ ।
ಪ್ರತ್ಯಕ್ಷ ನ ಘಡೇ ತರೀ ಮಾನಸ ಪೂಜೇಚೇ । ಕರಿತ ಜಾವೇ ॥೨೮॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
ದಾಸ್ಯಭಕ್ತಿನಿರೂಪಣ ನಾಮ ಸಮಾಸ ಸಪ್ತಮ ॥

● ●

ದೇವರ ದರ್ಶನಕ್ಕೆ ಬರುವಂಥವರೆಲ್ಲರ ಆದರ, ಸತ್ಕಾರ ಮಾಡಬೇಕು. ಅವರಿಗೆ ಏನು ಬೇಕು? ಏನ್ಬೇಡ? ಇದರ ಕಡೆಗೆ ಲಕ್ಷ್ಯ ಕೊಡಬೇಕು. ಬರ ಹೋಗುವವರ ಆತಿಥ್ಯ ಮಾಡಬೇಕು. ಏಳನೆಯು ಭಕ್ತಿಯೆಂದರೆ ನಿಜವಾಗಿಯೂ ಈಗ ಹೇಳಿದಂತೆ ಇರುವದು. (೨೫) ಯಾವ ರೀತಿಯಿಂದ ದೇವರ ವೈಭವ ಬೆಳೆಸುವೆವೋ ಆದರಂತೆ ಸದ್ಗುರುವಿನ ವೈಭವವನ್ನೂ ಬೆಳೆಸಬೇಕು. ಪ್ರತ್ಯಕ್ಷ ಮಾಡಲಿಕ್ಕೆ ಆಗದಿದ್ದರೆ ಮಾನಸ ಪೂಜೆಯಿಂದಾದರೂ ತಪ್ಪದೇ ಮಾಡಬೇಕು. ದೇವರ ದಾಸನ ಮಾತುಗಳು ಯಾವಾಗಲೂ ನಮ್ರತೆಯಿಂದ ದಯಾಪೂರಿತವಿರಬೇಕು. ಎರಡನೆಯವರ ಬಗ್ಗೆ ಯಾವಾಗಲೂ ನಮ್ರ ಮಾತುಗಳಿರಬೇಕು. ಕೇಳುವವರ ಅಂತಃಕರುಣಕ್ಕೆ ಸಮಾಧಾನವಾಗುವಂತೆ ಶಾಂತಿ ಸುಖವೆನಿಸುವಂತೆ ದಾಸನ ಮಾತುಗಳು ಇರಬೇಕು. (೨೬) ಈ ರೀತಿಯ ಏಳನೆಯ ಭಕ್ತಿಯ ಬಗ್ಗೆ ನನ್ನ ಬುದ್ಧಿಪ್ರಕಾರ ನಾನು ವರ್ಣನೆ ಮಾಡಿದೆನು. ಇದು ನಿಮ್ಮಿಂದ ಪ್ರತ್ಯಕ್ಷ ಘಟಿಸಿದರೆ ಉತ್ತಮವೇ ಸರಿ. ಆದರೆ ಹೀಗೆ ಮಾಡಲಿಕ್ಕೆ ಒಂದು ವೇಳೆ ಆಗದಿದ್ದರೆ ಕೊನೆಯು ಪಕ್ಷ ಮಾನಸ ಪೂಜೆಯನ್ನಾದರೂ ಅವಶ್ಯ ಮಾಡಿರಿ. (೨೭) ಮೇಲೆ ಹೇಳಿದ ಪ್ರಕಾರ ದೇವರ ದಾಸತ್ವ ಮಾಡಬೇಕು. ಇದೇ ಪ್ರಕಾರ ಸದ್ಗುರುವಿನ ದಾಸತ್ವವನ್ನೂ ಮಾಡಬೇಕು. ಇದು ಪ್ರತ್ಯಕ್ಷ ಮಾಡಲಿಕ್ಕೆ ಶಕ್ಯವಾಗದಿದ್ದರೆ ಮಾನಸ ಪೂಜೆಯಿಂದಾದರೂ ಮಾಡಿರಿ. (೨೮)

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದ ದಾಸ್ಯ ಭಕ್ತಿ
ಎಂಬ ಹೆಸರಿನ ನಾಲ್ಕನೆಯ ದಶಕದೊಳಗಿನ ಏಳನೆಯ ಸಮಾಸವು ಮುಗಿದುದು.

● ●

## ದಶಕ ೪. ಸಮಾಸ ೮. ಸಖ್ಯ ಭಕ್ತಿ (ನುಡಿ ೩೨)

ದಾಸ್ಯದಲ್ಲಿ ಭಕ್ತ ತನ್ನ ಸರ್ವಸ್ವವನ್ನು ಭಗವಂತನಿಗೆ ಕೊಡುತ್ತಾನೆ. ತನ್ನ ಕೈಯಲ್ಲಿ ಏನೂ ಇಟ್ಟು ಕೊಂಡಿರುವದಿಲ್ಲ. ಭಗವಂತನಿಂದ ಮುಚ್ಚಿಟ್ಟುಕೊಳ್ಳುವಂಥಹದು ಅವನಲ್ಲಿ ಏನೂ ಉಳಿದಿರುವದಿಲ್ಲ. ನಮ್ಮಲ್ಲಿರುವ ಗುಣದೋಷಗಳ ಬಗ್ಗೆ ಅವನಿಗೆ ಭಗವಂತನಿಗೆ ಎಲ್ಲವೂ ಗೊತ್ತಿರುವದು. ಭಗವಂತ, ಭಕ್ತ, ಈ ಇಬ್ಬರಲ್ಲಿ ಯಾವ ಅಡ್ಡ ಪರೆದೆಯೂ ಇರುವದಿಲ್ಲ. ಭಗವಂತನ ಸೇವೆ ಮಾಡದ ಹೊರತು ಊಟ ಉಡುಗೆಯಲ್ಲಿ ರುಚಿ ಇರುವದಿಲ್ಲ. ಅವನ ಸೇವೆ ಆಗದಿದ್ದರೆ ಚಿತ್ತವು ವ್ಯಾಕುಲವಾಗುವದು. ಇದು ದಾಸ್ಯ ಭಕ್ತಿಯ ಕೊನೆಯ ಸೀಮೆಯು. ಭಗವಂತ

ಅಥವಾ ಸದ್ಗುರುವಿನ ಕೀರ್ತಿ ಹೆಚ್ಚು ಬೆಳೆಯಲೆಂದು ನಿಜ ಭಕ್ತನು ಹಗಲು ರಾತ್ರಿ ಖಟಪಟಿ ಮಾಡುವನು. ಹೀಗೆ ದಾಸ್ಯ ಸೇವೆ ಮಾಡುತ್ತ ಮಾಡುತ್ತ ಇರುವಾಗಲೇ ಭಗವಂತನೊಂದಿಗೆ ಭಕ್ತನ ಅತಿ ಪರಿಚಯದ ಸ್ನೇಹವಾಗುವದು. ಹೀಗೆ ಅತಿ ಪರಿಚಯದಿಂದ ಭಗವಂತನ ಬಗ್ಗೆ (ಅವಜ್ಞೆ) ಅಲಕ್ಷ್ಯಉಂಟಾಗುವ ಬದಲು ಭಕ್ತನು ಅವನಲ್ಲಿ ಲೀನನೂ, ನಿಷ್ಕಾಮನೂ ಮತ್ತು ಅತಿ ಪ್ರೇಮಮಯನೂ ಆಗುವನು. ಜ್ಞಾನ ದೃಷ್ಟಿಯಿಂದ ನೋಡಿದರೆ ಜೀವಾತ್ಮಾ ಮತ್ತು ಶಿವಾತ್ಮಾ ಅಥವಾ ಈಶ್ವರ ಇವರು ಸಖ ಅಂದರೆ ಗೆಳೆಯ, ಸಮೀಪದವರೇ ಆಗಿರುವರು, ಮುಂಡಕ ಉಪನಿಷತ್ ದಲ್ಲಿ ಒಂದು ಮಂತ್ರವು ಹೀಗಿರುವದು.

"ದ್ವಾಸುಪರ್ಣಾ ಸಯುಜಾ ಸಖಾಯಾ, ಸಮಾನಂ ವೃಕ್ಷಂ ಪರಿಷಸ್ವ ಜಾತೆ"

**ಅರ್ಥ:**— "ಈ ಶರೀರ ರೂಪದ ವೃಕ್ಷದ ಮೇಲೆ ಎರಡು ಸುಂದರ ಸುರೇಖವಾದ ಪಕ್ಷಿಗಳು ಇರುವವು. ಅವು ಎರಡೂ ಯಾವಾಗಲೂ ಸದಾ ಒಟ್ಟಿಗೇ ಏಕತ್ರ ಇರುವವು. ಈ ಎರಡೂ ಒಬ್ಬರಿಗೊಬ್ಬರು ಗೆಳೆಯರಾಗಿರುವರು" ಭಗವಂತ ಎಲ್ಲ ಜೀವಗಳ ಮಿತ್ರನಾಗಿರುವನು. ದಾಸ್ಯದ ವಿಕಾಸವಾದ ಮೇಲೆ ದಾಸ–ಭಕ್ತ ತನ್ನ ದಾಸತನವನ್ನು ಮರೆಯುವದಿಲ್ಲ. ಆದರೆ ಭಗವಂತ ಮಾತ್ರ ತನ್ನ ಸ್ವಾಮಿತನವನ್ನು ಮರೆಯುತ್ತಾನೆ. ಮತ್ತು ದಾಸ ಭಕ್ತನನ್ನು ಸಖನಂತೆ ನೋಡುತ್ತಾನೆ. ಭಗವಂತನಲ್ಲಿ ಭಕ್ತನಿಗಿರುವ ಪ್ರೇಮವು ದಾಸ್ಯಪ್ರಧಾನವಾದದ್ದು ಇರುವದು. ದಾಸನಿಗೆ ಸಂಕೋಚವಾಗಲೀ, ಭೀತಿಯಾಗಲೀ ಆಗ ಉಳಿದಿರುವದಿಲ್ಲ, ಭಗವಂತನಿಗೆ ಇವನು ಪರಕೀಯನೆಂದಾಗಲೀ ತಾನು ದೊಡ್ಡವನೆಂದಾಗಲೀ ಅನಿಸುವದಿಲ್ಲ. ಭಗವಂತನ ನಿರಂತರ ನಾಮಸ್ಮರಣೆ, ಚಿಂತನ, ಪಾದಸೇವನ, ಅರ್ಚನ, ವಂದನ ಮತ್ತು ಸೇವನಗಳ ಉಪಾಸನೆ ಮಾಡುತ್ತಲಿರುವದರಿಂದ ಭಕ್ತನ ಮನಸ್ಸು ಭಗವಂತನನ್ನು ಬಿಟ್ಟು ಅನ್ಯತ್ರ ಹೋಗಲು ಅಸಮರ್ಥವಾಗುವದು. ಇಬ್ಬರೂ ಬೇರೆಯಾಗಿರುವದಿಲ್ಲ. ಬೇರೆಯಾಗಲು ಸಾಧ್ಯವೂ ಇಲ್ಲ. ಯಾವ ದಾಸ್ಯ ಭಕ್ತನು ಭಗವಂತನ ಮೋಹಪಾಶದಲ್ಲಿ ತನ್ನನ್ನು ಸಿಲುಕಿಸಿಕೊಂಡು ಬಂಧಿತನಾಗಿರುವನೋ ಜೀವವಿರುವವರೆಗೆ ಅವನ ಅನುಸಂಧಾನ ಹೊಂದುವನೋ, ಮತ್ತು ಅವನ ಸೇವೆಯಲ್ಲಿಯೇ ಜೀವವನ್ನು ಸವೆಸುವನೋ ಮತ್ತು ಆ ಭಗವಂತನ ಗುಣ, ಸ್ವಭಾವ, ಮತ್ತು ವಿಭೂತಿ ಅಷ್ಟಸಿದ್ಧಿ ಲೋಕೋತ್ತರ ತೇಜ, ಐಶ್ವರ್ಯ, ಶಕ್ತಿ ಇವು ಈ ಭಕ್ತನಲ್ಲಿ ಇಳಿದು (ಹರಿದು) ಬರುವವು. ಭಕ್ತನ ಶರೀರದ ಆಕೃತಿ, ಬಣ್ಣ, ಚಹರೆ, ಇವುಗಳು ಭಗವಂತನ ಹಾಗೆಯೇ ಕಾಣುವವು. ಈ ಭಕ್ತಿಯ ಸ್ಥಿತಿಯು ಬಹಳ ಮಧುರವಾಗಿರುವದು. ಒಟ್ಟಿನಲ್ಲಿ ಭಕ್ತನ ಪ್ರೇಮದಿಂದ ಪವಿತ್ರಗೊಂಡ ಆತ್ಮೀಯತೆ ಮತ್ತು ಭಗವಂತನ ಮಂಗಲಕರವಾದ ಮಿತ್ರತ್ವ ಇವುಗಳ ಮಧುರ ಸಂಗಮದಿಂದಲೇ ಸಖ್ಯ ಭಕ್ತಿಯ ಉದಯವೆಂದು ಹೇಳಬಹುದು. ಭಕ್ತನಿಗಂತೂ ಈ ಸಖ್ಯ ಭಕ್ತಿಯು ಬಹಳ ಪ್ರಿಯವಾದದ್ದಾಗಿದೆ. ನವವಿಧ ಭಕ್ತಿಯ ಎಲ್ಲ ಸಮಾಸಗಳಲ್ಲಿ ಈ ಸಖ್ಯ ಭಕ್ತಿಯ ಸಮಾಸವು ಕೇವಲ ಭಕ್ತಿಯ ಅನೇಕ ಗುಹ್ಯ ಸಿದ್ಧಾಂತಗಳಿಂದಲೇ ತುಂಬಿ–ರುವದು. ದಾಸ್ಯ ಭಕ್ತಿಯಲ್ಲಿ ಸ್ವಲ್ಪವಾದರೂ ಶಾಸ್ತ್ರದ, ವ್ಯವಹಾರದ ಮತ್ತು ಸಮಾಜದ ಬಂಧನವಿರುತ್ತದೆ,ಸಖ್ಯ ಭಕ್ತಿಯಲ್ಲಿ ಇವು ಇರುವದಿಲ್ಲ. ಸಖ್ಯ ಭಕ್ತಿಯಲ್ಲಿ ಭಗವಂತನ ಇಚ್ಛೆಯೇ ಭಕ್ತನಿಗೆ ಧರ್ಮ, ಅದೇ ಶಾಸ್ತ್ರ, ಅದೇ ಕರ್ತವ್ಯ. ಮತ್ತು ಅದೇ ವ್ಯವಹಾರವಾಗುತ್ತದೆ· ಭಗವಂತನ ಅಖಂಡ ಸಾನಿಧ್ಯದಲ್ಲಿ ಇರುವದರಿಂದ ಭಕ್ತ ಸಖನು ಸರ್ವಜೀವಿಗಳಿಗೂ ಮಿತ್ರನಾಗುವನು. ಅವನಲ್ಲಿ ಕಾಮವಿರುವದಿಲ್ಲ. ಕ್ರೋಧವಿಲ್ಲ. ಲೋಭವಿಲ್ಲ; ಮೋಹವಿಲ್ಲ, ದ್ವೇಷವಿಲ್ಲ, ಮತ್ಸರವಿಲ್ಲ, ಯೋಗವಿಲ್ಲ, ಭೋಗವಿಲ್ಲ, ತ್ಯಾಗವಿಲ್ಲ, ಸಂಗ್ರಹವಿಲ್ಲ, ಸುಖವಿಲ್ಲ, ದುಃಖವಿಲ್ಲ, ಇಂಥ ಸ್ಥಿತಿಯಲ್ಲಿ ಸಖ್ಯ ಭಕ್ತನು ಜಗತ್ತಿನ ಮಂಗಲಕ್ಕಾಗಿ ಕಾರ್ಯ ಮಾಡುತ್ತ ಜೀವಿಸಿರುವನು, ಭಗವಂತನಲ್ಲಿ ಅನುರಕ್ತಿ (ಪ್ರೇಮನಿಷ್ಠೆ)+ ದೇಹ ಸುಖದ ಬಗ್ಗೆ ವಿರಕ್ತಿ + ಪ್ರಾಣಿ ಮಾತ್ರರಲ್ಲಿ ಕರುಣಾವೃತ್ತಿ (ದಯಾಳುತನ) = ದಾಸ್ಯ ಭಕ್ತಿಯು ಒಟ್ಟಿನಲ್ಲಿ ಹೀಗೆ ಸಮೀಕರಣ ಮಾಡುವದು ಯೋಗ್ಯವೆನಿಸುವದು.

## ಸಮಾಸ ಅಷ್ಟಮ : ಸಖ್ಯ ಭಕ್ತಿ

॥ಶ್ರೀರಾಮ॥ ಮಾಗಾ ಜಾಲೇ ನಿರೂಪಣ । ಸಾತವೇ ಭಕ್ತೀಚೇ ಲಕ್ಷಣ ।
ಆತಾ ಏಕಾ ಸಾವಧಾನ । ಆಠವೀ ಭಕ್ತೀ ॥೧॥

ದೇವಾಸೀ ಪರಮಸಖ್ಯ ಕರಾವೇ । ಪ್ರೇಮ ಪ್ರೀತೀನೇ ಬಾಂಧಾವೇ ।
ಆಠವೇ ಭಕ್ತೀಚೇ ಜಾಣಾವೇ । ಲಕ್ಷಣ ಏಸೇ ॥೨॥

ದೇವಾಸ ಜಯಾಚೀ ಅತ್ಯಂತ ಪ್ರೀತೀ । ಆಪಣ ವರ್ತಾವೇ ತೇಣೇ ರೀತೀ ।
ಯೇಣೇ ಕರಿತಾ ಭಗವಂತೀ । ಸಖ್ಯ ಘಡೇ ನೇಮಸ್ತ ॥೩॥

ಭಕ್ತಿ ಭಾವ ಆಣೀ ಭಜನ । ನಿರೂಪಣ ಆಣೀ ಕಥಾ ಕೀರ್ತನ ।
ಪ್ರೇಮಳ ಭಕ್ತಾಚೇ ಗಾಯನ । ಆವಡೇ ದೇವಾ ॥೪॥

## ದಶಕ ೪. ಸಮಾಸ ೮. ಸಖ್ಯ ಭಕ್ತಿ (ನುಡಿ ೩೨)

**ಮೊದಲು ಸಖ್ಯ ಭಕ್ತಿಯ ವ್ಯಾಖ್ಯೆಯು:—** ಹಿಂದಿನ ಸಮಾಸದಲ್ಲಿ ಏಳನೆಯ ಭಕ್ತಿಯ ವರ್ಣನೆ ಮಾಡಿದೆನು. ಈಗ ಎಂಟನೆಯ ಭಕ್ತಿಯ ವಿಷಯವನ್ನು ಲಕ್ಷ್ಯಗೊಟ್ಟು ಕೇಳಿರಿ. (೧) ದೇವರ ಸಂಗಡ ಅತಿಶಯ ಮಿತ್ರತ್ವವನ್ನು ಬೆಳೆಸಬೇಕು. ಸ್ನೇಹ ಮಾಡಬೇಕು. ಅವನನ್ನು ಅತಿಶಯ ಪ್ರೇಮದಿಂದ ಕಾಣಬೇಕು. ಅತ್ಯಂತ ಆತ್ಮೀಯ ಭಾವನೆಯಿಂದ ಅವನಿಗೆ ಪ್ರೀತಿಯ ಬಂಧನ ಹಾಕಬೇಕು. ಎಂಟನೆಯ ಭಕ್ತಿಯ ಲಕ್ಷಣಗಳು ಹೀಗಿರುವವು (೨) ಭಗವಂತನನ್ನು ಪ್ರೇಮದಿಂದ ವಶಮಾಡಿಕೊಳ್ಳಬೇಕಾದರೆ ಮೊದಲು ನೀವು ಅವನಿಗೆ ಪ್ರಿಯವಾಗುವಂತೆ ನಡೆಯಬೇಕು. ದೇವರಿಗೆ ಯಾವುದು ಪ್ರೇಮದ್ದಾಗಿದೆಯೋ ಅಂಥದನ್ನೇ ನೀವು ಮಾಡಬೇಕು. ಹಾಗೂ ಅದರಂತೆ ನಡೆಯಬೇಕು. ನೀವು ಹೀಗೆ ನಡೆದದ್ದಾದರೆ ಅಗದೀ ನಿಶ್ಚಿತವಾಗಿ (ಖಾತ್ರಿಯಿಂದ) ಭಗವಂತನೊಂದಿಗೆ ನಿಮ್ಮ ಗೆಳೆತನ ಬೆಳೆಯುವದು. (೩) **ಭಗವಂತನಿಗೆ ಪ್ರಿಯವಾದವು ಯಾವವೆಂಬುದನ್ನು ಕೇಳಿರಿ:–** ಭಕ್ತಿ, ಭಾವ, ಭಜನ, ನಿರೂಪಣ, ವಿವೇಚನ, ಪ್ರವಚನ, ವ್ಯಾಖ್ಯಾನ, ಕಥಾ, ಕೀರ್ತನ ಮತ್ತು ಪ್ರೇಮಳ ಭಕ್ತರ ಗಾಯನ, ಅಭಂಗ, ದಾಸರ ಪದ, ವಚನ ಇತ್ಯಾದಿಗಳು. ಭಗವಂತನಿಗೆ ಪ್ರಿಯವಾದವುಗಳು ಇರುವವು. ದೇಹದ ಮೇಲಿನ ಆಸಕ್ತಿಯನ್ನು ಬಿಟ್ಟು ನಿಮ್ಮ ಮನಸ್ಸನ್ನು ಭಗವಂತನಲ್ಲಿ ಸ್ಥಿರವಾಗಿಟ್ಟ ಕೂಡಲೇ ಭಕ್ತಿಯ ಜನ್ಮವಾಗುವದು. ಭಗವಂತನ ಅಸ್ತಿತ್ವದ ಇರುವಿಕೆಯ ಬಗ್ಗೆ ಅತ್ಯಂತ ನಿಸ್ಸಂದೇಹ ಹೊಂದುವದೇ ಆಗಿದೆ. ಅಂದರೆ ಭಾವವು ಭಗವಂತ ಇರುವನೆಂಬ ನಂಬಿಗೆಯನ್ನು ಸಂಪಾದಿಸಿದಂತೆ ಆಗುವದು. ಮೂಲ ವಸ್ತುವು ಯಾವುದಿರುವದೋ ಅದು ಸಂಪೂರ್ಣ ನಿಜವಾದುದೇ ಇರುವದು. ಈ ವಸ್ತುವು ನಮ್ಮಲ್ಲಿಯೇ ಇರಬೇಕೆಂದು ನಮಗೆ ಮನಃಪೂರ್ವಕ ಅನಿಸುವುದು. ಇದಕ್ಕೆ ರಾಗ ಅಥವಾ ಪ್ರೇಮವೆಂದು ಅನ್ನುವರು. ಮತ್ತು ರಾಗ ಅಂದರೆ ಪ್ರೇಮ, ಪ್ರೀತಿ ಇದು ಸ್ಥಿರವಾದರೆ ಆಗ ಅನುರಾಗದ ನಿಷ್ಠೆ ನಿರ್ಮಾಣವಾಗುವದು. ಆ ವಸ್ತು ಬಹು ಪ್ರಿಯವಾಗುವದು. ಅದು ಸಿಗದ ಹೊರತು ಸಮಾಧಾನ ಆಗುವದಿಲ್ಲ, (ಚೈನ ಬೀಳುವದಿಲ್ಲ) ಆಗ ಅದನ್ನು ಪಡೆಯುವ ಮಾರ್ಗದ ಶೋಧ ಮಾಡುವ ಪ್ರವೃತ್ತಿ ಸುರುವಾಗುವದು. ಇದರ ಹೆಸರೇ ಅನುರಾಗವು. ಭಾವ ಅಂದರೆ ಮುಚ್ಚಿದ ಕಮಲವು. ಅನುರಾಗವೆಂದರೆ ಸಂಪೂರ್ಣ ಅರಳಿದ ಕಮಲವೆಂದು ತಿಳಿಯಿರಿ. ಭಗವಂತನ ಸ್ಮರಣ ಮಾಡಿ ಅದರ ರಸವನ್ನು ಪುನಃ ಪುನಃ ತೆಗೆದುಕೊಳ್ಳುವದೇ ಭಜನವೆಂದು ಅನಿಸುವದು. ಭಜನವು ಅನೇಕ ಪ್ರಕಾರದಿಂದ ಮಾಡಲ್ಪಡುವದು. ಜಪಮಾಲಿ ತೆಗೆದುಕೊಂಡು ಜಪ ಮಾಡುವದು ದೇವರ ಸ್ತೋತ್ರ ಅನ್ನುವದು, ಭಗವಂತನ ಚರಿತ್ರ ಓದುವದು. ಅವನ ಗ್ರಂಥ ಓದುವದು. ಅವನ ಪೂಜೆ ಮಾಡುವದು, ಅವನಿಗೆ ಮೇಲಿಂದ ಮೇಲೆ ನಮಸ್ಕಾರ ಮಾಡುವದು. ಅವನ ಸೇವೆ ಮಾಡುವದು, ಅವನ ಪದಗಳನ್ನು ಅನ್ನುವದು. ಇವೆಲ್ಲ ಭಜನೆಯ ಪ್ರಕಾರಗಳಿರುವವು. ಭಗವಂತನ ಸಗುಣ ಮತ್ತು ನಿರ್ಗುಣ ಸ್ವರೂಪದ ಬಗ್ಗೆ ಬುದ್ಧಿ ಪ್ರಧಾನವಾದ ಚರ್ಚೆ, ವಿವೇಚನ, ಅಥವಾ ಪ್ರತಿಪಾದನವೆಂದರೆ ನಿರೂಪಣವು· ಮನುಷ್ಯನು ಕಥಾ ಪ್ರಿಯನಾದುದರಿಂದ ಭಗವಂತನ ನಾಮಸ್ಮರಣಕ್ಕಿಂತ ಅವನ ಕಥಾ ಕೀರ್ತನಗಳಲ್ಲಿ ಅವನು ಕೂಡಲೇ ತಲ್ಲೀನನಾಗುತ್ತಾನೆ. ಕಥೆಯಲ್ಲಿ ಸಹಜವಾಗಿ ಅನಾಯಾಸವಾಗಿ ಸತ್‌ಸಂಗ ಘಟಿಸುತ್ತದೆ. ಮತ್ತು ಶ್ರವಣರಸದಿಂದ ಮನಸ್ಸು ಬೇಗ ಉದ್ದೀಪಿತವಾಗುವದು. ಭಗವಂತನ ಕಥೆಯಿಂದ ಅಂತಃಕರಣ ನಿರ್ಮಲವಾಗುವದು· ಹಾಗೂ ಭಗವಂತನ ಪ್ರೇಮದಲ್ಲಿ ತನ್ನಿಂದ ತಾನೇ (ಅಡಕಾಯಿಸಿಕೊಳ್ಳುವದು.) ಬಂಧಿಸಿಕೊಳ್ಳುವದು, ಅಂತರಂಗದಒಳಗೆ ನಾಮಸ್ಮರಣ ಹಾಗೂ ಹೊರಗೆ ಕಥಾ ಕೀರ್ತನಗಳೇ ಮುಖ್ಯವಾಗಿ ಭಕ್ತರ ಜೀವನದ ಸಾರವಿರುವದು. ಭಕ್ತನ ಪ್ರೇಮ ಉಕ್ಕೇರಿ ಬಂದಾಗ ಕವಿತೆ ಅಥವಾ ಸಂಗೀತ ರೂಪದಲ್ಲಿ ಅದು ಹೊರಬೀಳುತ್ತದೆ. (ಶ್ಲೋಕ, ಅಭಂಗ, ವಚನ, ದಾಸರಪದ ಇತ್ಯಾದಿ) ಅರ್ಥಾತ್ ಭಕ್ತನಿಗಾಗಲಿ ಭಗವಂತನನಿಗಾಗಲಿ ಕೇವಲ ಕವಿತೆ ಅಥವಾ ಸಂಗೀತ ಮುಖ್ಯವಲ್ಲ· ಪ್ರಿಯವಲ್ಲ, ಆ ಉದ್ಗಾರಗಳ ಹಿಂದೆ ಇರುವಂಥದು ಭಕ್ತನಲ್ಲಿ ಭಗವಂತನ ಬಗ್ಗೆ ಪ್ರೀತಿ ಎಷ್ಟಿದೆಯೆಂಬುದು ಮುಖ್ಯ. ಅವಕ್ಕಾಗಿ ಅವುಗಳ ಮೇಲೆ ಭಗವಂತನಿಗೆ ಪ್ರೀತಿ ಇರುವದು· ಈ ಎಲ್ಲ ಮಾತುಗಳು ಭಗವಂತನಿಗೆ ಪ್ರಿಯವಾದವು ಇರುವವು. (೪)

ಆಪಣ ತೈಸೇಚಿ ವರ್ತಾವೇ । ಆಪಣಾಸಿ ತೇಚ ಆವಡಾವೇ ।
ಮನಾಸಾರಿಖೇ ಹೋತಾ ಸ್ವಭಾವೇ । ಸಖ್ಯ ಘಡೇ ನೇಮಸ್ತ ॥೫॥

ದೇವಾಚ್ಯಾ ಸಖ್ಯತ್ವಾ ಕಾರಣೇ । ಆಪಲೇ ಸೌಖ್ಯ ಸೋಡೂನ ದೇಣೇ ।
ಅನನ್ಯ ಭಾವೇ ಜೀವೇ ಪ್ರಾಣೇ । ಶರೀರ ತೇಹಿ ವೇಚಾವೇ ॥೬॥

ಸಾಂಡೂನ ಆಪಲೀ ಸಂಸಾರ ವ್ಯಥಾ । ಕರೀತ ಜಾವೀ ದೇವಾಚೀ ಚಿಂತಾ ।
ನಿರೂಪಣ ಕೀರ್ತನ ಕಥಾ ವಾರ್ತಾ । ದೇವಾಚ್ಯಾಚೀ ಸಾಂಗಾವ್ಯಾ ॥೭॥

ದೇವಾಚ್ಯಾ ಸಖ್ಯತ್ವಾ ಸಾಠೀ । ಪಡಾವ್ಯಾ ಜೀವಲಗಾಸೀ ತುಟೀ ।
ಸರ್ವ ಅರ್ಪಾವೇ ಸೇವಟೀ । ಪ್ರಾಣ ತೋಹಿ ವೇಚಾವಾ ॥೮॥

ದೇವರಿಗೆ ಯಾವುದು ಪ್ರಿಯವಾಗಿರುವದೋ ಅದು ನಮಗೂ ಪ್ರಿಯವಾಗ ಹತ್ತಿದರೆ ಆಗ ದೇವರ ಕೂಡ ನಮ್ಮ ಸಖ್ಯತ್ವ ಉಂಟಾಯಿತೆಂದು ತಿಳಿಯಿರಿ. ದೇವರಿಗೆ ಯಾವುದು ಪ್ರಿಯವೆನಿಸುವದೋ ಅದು ನಮಗೂ ಸಹ ಪ್ರಿಯವೆನಿಸಬೇಕು, ನಿಮಗೆ ಪ್ರಿಯವೆನಿಸುವಂತೆಯೇ ನೀವು ಮಾಡಿರಿ. ಹೇಗಂದರೆ, ಭಗವಂತನ ಮನಸ್ಸಿಗೆ ಬರುವಂತೆ ನಾವು ನಡೆಯಹತ್ತಿದರೆ ಆಗ ಅವನಿಗೆ ಯಾವುದು ಪ್ರಿಯವಾದುದು ಇರುವದು, ಇದು ನಮಗೆ ತಿಳಿಯುತ್ತದೆ. ಆಗ ತನ್ನಿಂದ ತಾನೇ, ಆದರೆ ನಿಶ್ಚಿತವಾಗಿಯೂ ಅವನಕೂಡ ನಮ್ಮ ಸಖ್ಯವು ಕೂಡಿ ಬರುವದು, ಪರಮಾತ್ಮನು ಸಗುಣದಲ್ಲಿ ಇಳಿದು ಬಂದಾಗ ಅವನಲ್ಲಿ ಮನುಷ್ಯರ ಗುಣಧರ್ಮಗಳು ವ್ಯಕ್ತ (ಲಾಗೂ) ಆಗುವವು· ಇದರಿಂದ ಭಕ್ತನಿಗೆ ಅವನ ಕೂಡ ಸಂಬಂಧ ಹೊಂದಲಿಕ್ಕೆ ಸುಲಭವಾಗುವದು, ನಾವು ಮಾನವತೆಯ ಉಪಯೋಗ ಮಾಡಿಕೊಂಡು ಭಗವಂತನ ಕಡೆಗೆ ಹೋಗುವ ಮಾರ್ಗವನ್ನು ಸುಗಮಗೊಳಿಸುವ ಶಿಕ್ಷಣವನ್ನು ಪಡೆಯುವದೇ ಭಕ್ತಿ ಮಾರ್ಗದ ಮುಖ್ಯ ಗುಟ್ಟಾಗಿದೆ. (೫) ನಮ್ಮ ದೇಹಸುಖದ ದೂರೀಕರಣ (ಅಂದರೆ ದೇಹ ಸುಖದ ಬಗ್ಗೆ ನಿರಾಶೆ) ಮತ್ತು (ಅನನ್ಯ) ಏಕನಿಷ್ಠತೆ ಇವುಗಳಿಂದ ಸಖ್ಯತ್ವವಾಗುವದು:- ಭಗವಂತನ ಕೂಡ ಸಖ್ಯ ಬೆಳೆಸಬೇಕೆಂಬುವವರು ತಮ್ಮ ಸ್ವತಃದ ದೇಹ ಸುಖದ ಆಶೆ ಬಿಟ್ಟು ಬಿಡಬೇಕು. ಇಷ್ಟೇ ಅಲ್ಲ; ಪ್ರಸಂಗ ಬಿದ್ದರೆ (ಬಂದರೆ) ಆಗ ಪೂರ್ಣ ಮನಸ್ಸಿನಿಂದ ತನ್ನ ಶರೀರವನ್ನು ಕೂಡಾ ಭಗವಂತನ ಸಲುವಾಗಿ ಖರ್ಚು ಮಾಡಲಿಕ್ಕೆ ತಯಾರ ಇರಬೇಕು· ಆದರೆ "ದೇವರು ನನ್ನ ಸುಖಕ್ಕಾಗಿಯೇ ಇರುವನು. ಈ ದೃಷ್ಟಿಕೋನದ ಗ್ರಹಿಕೆ ಇರುವದು ಕೇವಲ ಸ್ವಾರ್ಥಬುದ್ಧಿಯ ದ್ಯೋತಕದಾಗಿದೆ. ಇದು ಹೋಗದ ಹೊರತು ಭಗವಂತನೊಂದಿಗೆ ಸಖ್ಯ ಹೊಂದುವದು ಶಕ್ಯವಿಲ್ಲ. ಆದ್ದರಿಂದ "ನಾನು ದೇವರ ಸಲುವಾಗಿ ಇದ್ದೇನೆ" ಎಂಬ ದೃಷ್ಟಿಕೋನ ಬರುವದೆಂದರೇ ಭಕ್ತನ ನಿಜಲಕ್ಷಣವೆಂದು ತಿಳಿಯಿರಿ(೬) ಭಕ್ತನ ಮನವು ಭಗವಂತನಿಂದ ತುಂಬಿ ಹೋಗುವದು. ಆದುದರಿಂದಲೇ ಅವನು ಹೋಗುವಾಗ, ಬರುವಾಗ, ಕುಳಿತಾಗ, ನಿಂತಾಗ, ಸದಾಕಾಲ ಭಗವಂತನ ವಿಷಯವಾಗಿಯೇ ಮಾತಾಡುತ್ತಲಿರುವನು:– ತನ್ನ ಪ್ರಪಂಚದ ಅಡಚಣಿಗಳನ್ನು ಬದಿಗಿಟ್ಟು ಭಕ್ತನಾದವನು ಭಗವಂತನ ಸ್ಮರಣೆ, ಚಿಂತನ, ಸದಾ ಮಾಡುವನು. ದೇವರ ಕೀರ್ತಿ ಹೇಗೆ ಆದರೆ ಬೆಳಗೀತು? ಇದೇ ಚಿಂತೆ ಅವನಿಗೆ ಇರುತ್ತದೆ. ಅಂತೆಯೇ ಅವನು ಅಡ್ಡಾಡುವಾಗ, ಮಾತಾಡುವಾಗ, ಹರಟೆ ಹೊಡೆಯುವಾಗ, ತಾತ್ವಿಕ ಚರ್ಚೆ ಈ ಎಲ್ಲವುಗಳಲ್ಲಿ ದೇವರನ್ನೇ ಕೇಂದ್ರೀಕರಿಸಿ ಮಾತಾಡುವನು. ಇದುವೇ ಭಕ್ತಿಯ ಏಕಾಗ್ರತೆ ಎನಿಸುವದು. ಯೋಗದ ಏಕಾಗ್ರತೆಯಲ್ಲಿ ಮನಸ್ಸು ಒಂದೇ ವಸ್ತುವಿನಲ್ಲಿ ಕೇಂದ್ರೀಕೃತವಾಗಿ, ಉಳಿದವುಗಳ ಮರೆವು ಆಗುತ್ತದೆ. ಆದರೆ ಭಕ್ತಿಯ ಏಕಾಗ್ರತೆಯಲ್ಲಿ ಜೀವದ ಸರ್ವ ಶಕ್ತಿಯು ಭಗವಂತನ ಮಾರ್ಗದಿಂದ ಸಾಗುವದು, (ಹರಿಯುವದು), ಇದರಿಂದಲೇ ನಡೆದಾಡುವಾಗ, ಮಾತಾಡುವಾಗ, ವ್ಯವಹಾರ ಮಾಡುವಾಗ, ಭಕ್ತನ ಚಿತ್ತವು ಭಗವಂತನಿಂದ ದೂರಾಗುವದಿಲ್ಲ. ಒಟ್ಟಿನಲ್ಲಿ ಯಾವಾಗಲೂ ಭಗವಂತನ ವಿಷಯಕ ಮಾತುಗಳನ್ನೇ ಆಡುವನು, (೭) "ಬಂದರೆ ನಿಮ್ಮನ್ನೊಳಗೊಂಡು, ಒಂದು ವೇಳೆ ಬರದಿದ್ದರೆ ನಿಮ್ಮನ್ನು ಬಿಟ್ಟು ಕೊಟ್ಟು ನಾನು ಭಗವಂತನ ಮಾರ್ಗದಲ್ಲಿಯೇ ಹೋಗುವವ" ಈ ಪ್ರಕಾರ ಭಕ್ತನ ನಿಶ್ಚಯವಿರುತ್ತದೆ. ಆದುದರಿಂದಲೇ ಅವನು ಒಮ್ಮೆ ಭಗವಂತನನ್ನು "ಇವನು ನಮ್ಮಪ"ನೆಂದು ನಂಬಿದ ನಂತರ ಎಂಥ ಪ್ರಸಂಗವೇ ಬರಲಿ, ಇವನು ತನ್ನ ನಂಬಿಗೆಯಿಂದ ಹಿಂದೆ ಸರಿಯುವದಿಲ್ಲ. ಸರಿಯುವ ವಿಚಾರವನ್ನೇ ಮಾಡುವದಿಲ್ಲ. ದೇವರೊಂದಿಗೆ ಸಖ್ಯ ಮಾಡಿಕೊಳ್ಳುವದಕ್ಕಾಗಿ ತನ್ನ ನಿಕಟದ ಮತ್ತು ಪ್ರೀತಿಯ ಆಪ್ತೇಷ್ಟರನ್ನೆಲ್ಲ ಬಿಡುವ ಪ್ರಸಂಗ ಬಂದರೂ ಬಿಟ್ಟು ಬಿಡಬೇಕು.ಇದಕ್ಕೆ ಹಿಂಜರಿಯಬಾರದು. ನಿಜ ಹೇಳುವದಾದರೆ ದೇವರಿಗೆ ನಮ್ಮ ಸರ್ವಸ್ವವನ್ನೂ ಅರ್ಪಿಸಬೇಕು. ಪ್ರಸಂಗ ಬಂದರೆ ಕೊನೆಗೆ ಅವನ ಸಲುವಾಗಿ ಪ್ರಾಣ ಕೊಡಲಿಕ್ಕೆ ತಯಾರ ಇರಬೇಕು. ಕೈ ಬಿಗಿಹಿಡಿದು,ಆಶೆ ಇಟ್ಟುಕೊಂಡು, ದೇವರ ಮೇಲೆ ಪ್ರೇಮ ಮಾಡಲಿಕ್ಕೆ ಬರುವದಿಲ್ಲ. ಅವನ ಹತ್ತರ ನಿಮ್ಮ ಕಪಟತನ ಸೋಗಿನ ಸೋಗಲಾಡಿ ಮಾತುಗಳು ನಡೆಯುವದಿಲ್ಲ. ಸ್ವಾರ್ಥ ಉಪಯೋಗ ಬೀಳುವದಿಲ್ಲ. ಸ್ವಲ್ಪ ಸ್ವಲ್ಪ ಕೊಡೋಣವೆಂಬ ಜಿಪುಣತನವೂ ಗೈರ ಉಪಯೋಗವಾಗಿದೆ. ಪ್ರಾಣವನ್ನು ಪಣಕ್ಕೆ ಜಿದ್ದಿಗೆ ಹಚ್ಚಿ ಅವನನ್ನು ಮಧುರ ಮಾತುಗಳಿಂದ ಪ್ರಸನ್ನ ಮಾಡಿಕೊಳ್ಳುವದು ಮುಖ್ಯವು. ಭಗವಂತನಂತಹ ಸಾಧ್ಯರು ಇನ್ನೊಬ್ಬರಿಲ್ಲ. (೮)

ಆಪುಲೇ ಆವಘೇ ಚಿ ಜಾವೇ । ಪರೀ ದೇವಾಸೀ ಸಖ್ಯ ರಾಹಾವೇ ।
ಐಸೀ ಪ್ರೀತೀ ಜಿವೇ ಭಾವೇ । ಭಗವಂತೀ ಲಾಗಾವೀ ॥೯॥

ದೇವ ಮ್ಹಣಿಜೇ ಆಪುಲಾ ಪ್ರಾಣ । ಪ್ರಾಣಾಸೀ ನ ಕರಾವೇ ನಿರ್ವಾಣ ।
ಪರಮ ಪ್ರೀತೀಚೇ ಲಕ್ಷಣ । ತೇಹೇ ಐಸೇ ಅಸೆ ॥೧೦॥

ಐಸೇ ಪರಮ ಸಖ್ಯ ಧರಿತಾ । ದೇವಾಸ ಲಾಗೇ ಭಕ್ತಾಚೀ ಚಿಂತಾ ।
ಪಾಂಡವ ಲಾಖಾ ಜೋಹರೀ ಜಳತಾ । ವಿವರ ದ್ವಾರೇ ಕಾಢಿಲೇ ॥೧೧॥

ನಾವು ಅಲ್ಪಜೀವಿಗಳು, ನನ್ನದು, ನನ್ನದು ಎಂಬುದು ಈ ಜಗತ್ತಿನಲ್ಲಿ ಎಷ್ಟು ಇರುತ್ತದೆ. ಒಂದು ವೇಳೆ ಇದ್ದುದೇ ಆದರೆ ಅದನ್ನೆಲ್ಲ ಭಗವಂತನ ಸಖ್ಯದ ಸಲುವಾಗಿ ತ್ಯಜಿಸಿ ಬಿಡುವ ತಯಾರಿ ಇರಬೇಕು. ಆದರೆ ಬಿಡಲೇಬೇಕೆಂಬುದೇನೂ ಇಲ್ಲ. ಬಹುಶಃ ಬಿಡುವ ಪ್ರಸಂಗವೂ ಬರಲಾರದು. ದೇವರ ಕೂಡ ನಮ್ಮ ಸಖ್ಯ ಗೆಳೆತನ ಪ್ರೇಮತ್ವವಿರುವದಕ್ಕಾಗಿ ನಾವು ನಮ್ಮದೆನ್ನುವದು ಈ ಜಗತ್ತಿನಲ್ಲಿ ಏನೇನು ಇರುವದೋ ಅದನ್ನೆಲ್ಲ ಕ್ಷಣಮಾತ್ರದಲ್ಲಿ ತ್ಯಜಿಸುವ ತಯಾರಿ ಇರಬೇಕು. ಇಂಥ ತ್ಯಾಗಮಯ ಮನೋಭಾವದಿಂದ ಹಾಗೂ ತನ್ನ ಜೀವಕ್ಕಿಂತ ಹೆಚ್ಚಿನ ಪ್ರೇಮ ಭಗವಂತನಲ್ಲಿಡಬೇಕು. ಒಂದು ದೃಷ್ಟಿಯಿಂದ ನೋಡಿದರೆ ಪ್ರೇಮವು ಬಹು ನಾಜೂಕ. ಸೂಕ್ಷ್ಮವಿರುವದು. ರಸಮಯವಿರುವದು. ಆದರೆ ಇನ್ನೊಂದು ದೃಷ್ಟಿಯಿಂದ ನೋಡಿದರೆ ಇದು ಬಹು ತ್ಯಾಗಮಯವಿರುವದು. ಪ್ರೇಮವು ಜೀವವನ್ನು ತನ್ನೆಡೆಗೆ ಸೆಳೆದುಕೊಳ್ಳುವಂಥಹದಿರುತ್ತದೆ. ಈ ಕಾರಣದಿಂದ ನಿಜವಾದ ಪ್ರೇಮ ಭಗವಂತನಲ್ಲಿ ನೆಲೆ ನಿಂತಾಗ ಮನುಷ್ಯನ ಮೂಲ ಮುಖ್ಯ ಕಲ್ಪನೆಗಳೆಲ್ಲ ಬದಲಾಯಿಸುವವು. (೯) ನಮ್ಮ ಜೀವ ಪ್ರಾಣಕ್ಕಿಂತ ಹೆಚ್ಚಿನ ಪ್ರೇಮದ ವಸ್ತುವು ಜಗತ್ತಿನಲ್ಲಿ ಇಲ್ಲವೇ ಇಲ್ಲ. ಇಂಥ ಪ್ರಿಯವಾದ ಪ್ರಾಣಕ್ಕಿಂತ ಹೆಚ್ಚಿನ ಪ್ರೇಮವನ್ನು ಭಗವಂತನಲ್ಲಿ ಇಡಬೇಕು. ಹಾಗೂ ಅವನನ್ನು ಪ್ರಾಣಕ್ಕಿಂತ ಹೆಚ್ಚು ಕಾಳಜಿಯಿಂದ (ಜೋಪಾನ) ಮಾಡಬೇಕು:- ದೇವರೆಂದರೆ ಕೇವಲ ನಮ್ಮ ಪ್ರಾಣವೆಂದೇ ತಿಳಿಯಬೇಕು. ದೇವರು ನಮ್ಮ ಪ್ರಾಣದಷ್ಟೇ ಪ್ರಿಯನೆಂದು ತಿಳಿಯಬೇಕು. ನಮ್ಮ ಪ್ರಾಣಕ್ಕೆ ಧಕ್ಕೆಯಾಗಬಾರದು. ನಮ್ಮ ಪ್ರಾಣ ನಾಶವಾಗಬಾರದೆಂದು ನೀವು ಹಗಲೂ ರಾತ್ರಿ ಹೇಗೆ ಕಾಳಜಿ ವಹಿಸುವಿರೋ ಹಾಗೆಯೇ ನಾವು ಭಗವಂತನನ್ನು ಇಪ್ಪತ್ನಾಲ್ಕು ತಾಸು ಜಪಿಸಬೇಕು. ಪ್ರೇಮದ ಸರ್ವೋತ್ತಮ ಲಕ್ಷಣವೆಂದರೆ ಈ ರೀತಿಯದೇ ಆಗಿದೆ. ನಮಗೆ ಯಾವ ವಸ್ತುವು ಅತ್ಯಂತ ಪ್ರೀತಿಯದೋ ಆ ವಸ್ತುವಿನ ಮೇಲೆ ನಮ್ಮ ಪ್ರೇಮ ಅಖಂಡವಾಗಿರುತ್ತದೆ. ಇಂಥದಕ್ಕೆ "ಪ್ರಾಣ ಪ್ರಿಯ" ಎಂದು ಸಂಬೋಧಿಸುತ್ತೇವೆ ಪ್ರಾಣ ಪ್ರಿಯ ಅಂದರೆ ಪ್ರಾಣದಷ್ಟೇ ಪ್ರಿಯನು. ಪ್ರಾಣದಂತೆಯೇ ಪ್ರಿಯನು. ಪ್ರಾಣಕ್ಕಿಂತ ಪ್ರಿಯನು. ಭಕ್ತನ ಪ್ರೇಮ ಭಗವಂತನಲ್ಲಿ ಸಾವಕಾಶವಾಗಿ ಬೆಳೆಯುತ್ತ ಬೆಳೆಯುತ್ತ ಎಷ್ಟೊಂದು ಬೆಳೆಯುತ್ತದೆಂದರೆ, ಭಕ್ತನ ಪ್ರಾಣ ಉಸಿರೇ ಭಗವಂತಮಯವಾಗುತ್ತದೆ. ಮತ್ತು ಭಗವಂತನೇ ಪ್ರಾಣಮಯನಾಗುತ್ತಾನೆ. ಇಂಥ ಸ್ಥಿತಿ ಉಂಟಾದ ನಂತರ ನಮ್ಮ ಹೃದಯದಲ್ಲಿ ಪ್ರಾಣವಿರುವದೋ ಅಥವಾ ಭಗವಂತನೇ ಇರುವನೋ ಎಂಬುದು ಅವನದುಅವನಿಗೇ ತಿಳಿಯದಂತೆ ಆಗುತ್ತದೆ. ಶ್ರೀ ಸಮರ್ಥರು ವರ್ಣನೆ ಮಾಡಿದ ಪರಮ ಪ್ರೇಮದ ಲಕ್ಷಣಗಳು ಹೀಗಿರುವವು. ಪ್ರೇಮದ ಪರಿಪಕ್ವಾವಸ್ಥೆ ಸಹಿತ ಇದೇ ಇರುವದು· ವೇದಾಂತದಲ್ಲಿಯ ಬ್ರಹ್ಮನು ಮನ ಮತ್ತು ವಾಣಿ ಇವುಗಳ ಅಳವಿನ ಹೊರಗಡೆ ಇರುವನು, ಅವರಂತೆ ಶ್ರೇಷ್ಠ ಪ್ರೇಮವೂ ಸಹ ಅನಿರ್ವಚನೀಯವಿದೆಯೆಂದು ಪ್ರೇಮಪಾರಂಗತ ಆಚಾರ್ಯ (ಶ್ರೀ ಚೈತನ್ಯ ಮೊದಲಾದವರು) ರು ಹೇಳುತ್ತಾರೆ. ಈ ಸಮಾಸದಲ್ಲಿ ಸಂಕ್ಷಿಪ್ತವಾಗಿ ತಿಳಿಸಿದ ಪವಿತ್ರ ಪ್ರೇಮದ ಸತ್ಯ, ಸೂಕ್ಷ್ಮ, ಸರಳ, ರಸಮಯವಾದ ಮತ್ತು ಸುಂದರ ವರ್ಣನೆಯನ್ನುಓದಿ ಮನತುಂಬಿ ಬರುತ್ತದೆ. ಸರ್ವಸಂಗ ಪರಿತ್ಯಾಗ ಮಾಡಿ ಭಗವಾ ವಸ್ತ್ರ ಧಾರಣ ಮಾಡಿದ ಸಜ್ಜನ ಗಡವಾಸಿ ಏಕಾಂತಪ್ರಿಯ ವೇದಾಂತಿಯಾದ ಈ ಸಂತ ಸನ್ಯಾಸಿಯಿಂದ, ಸಂಸಾರದಲ್ಲಿಯ ಮತ್ತು ಸಾಹಿತ್ಯದಲ್ಲಿಯ ಪ್ರೇಮಿಗಳು ಶುದ್ಧ ಪ್ರೇಮದ ಪಾಠವನ್ನು ಕಲಿಯಲು ಅಡ್ಡಿ ಇಲ್ಲವೆಂಬ ಆಲೋಚನೆ ಬಂದರೆ ಆಶ್ಚರ್ಯವಲ್ಲ. (೧೦) ದೇವರಿಗೆ ಭಕ್ತನ ಬಗ್ಗೆ ಯಾವಾಗಲೂ ಚಿಂತೆ ಇರುತ್ತದೆ. ದೇವರನ್ನು ಅತ್ಯಂತ ಉತ್ಕಟ ಪ್ರೇಮದಿಂದ ಒಲಿಸಿ ಅವನ ಕೂಡ ಸಖ್ಯ (ಭಕ್ತಿಯ ಸಖ್ಯ) ಉಂಟಾದರೆ ಆಗ ಆ ದೇವರು ಭಕ್ತನ ಬಗ್ಗೆ ಕಾಳಜಿ ಮಾಡುತ್ತಾನೆ· **ಉದಾ:**— ಪಾಂಡವರು ಭಗವಂತನ ಮೇಲೆ ನಿಜವಾದ ಪ್ರೇಮ ಮಾಡುತ್ತಿದ್ದರು, ಪಾಂಡವರನ್ನು ಅರಗಿನ ಮನೆಯಲ್ಲಿಳಿಸಿ ಸುಟ್ಟು ಭಸ್ಮ ಮಾಡಬೇಕೆಂಬ ಪ್ರಯತ್ನವನ್ನು ಕೌರವನು ಮಾಡಿದನು. ಆದರೆ ಭಗವಂತನಿಗೆ ನಿಜ ಪ್ರೇಮಿಗಳಾದ ಪಾಂಡವ ಭಕ್ತರ ಬಗ್ಗೆ ಕಾಳಜಿ ಇದ್ದದರಿಂದ ಅವನು ಪಾಂಡವರನ್ನು ನೆಲಮಾರ್ಗ(ಭೂಯಾರ)ದ ದಾರಿಯಿಂದ ಸುರಕ್ಷಿತವಾಗಿ ಹೊರಗೆತಂದನು(೧೧)

ದೇವ ಸಖ್ಯತ್ವೀ ರಾಹೇ ಆಪಣಾಸೀ । ತೇ ತೋ ವರ್ಮ ಆಪಣಾಚಿ ಪಾಸೀ ।
ಆಪಣ ವಚನೇ ಬೋಲಾವೀ ಜೈಸೀ । ತೈಸೀ ಯೇತೀ ಪಡಸಾದೇ ॥೧೨॥

ಆಪಣ ಅಸತಾ ಅನನ್ಯ ಭಾವೇ । ದೇವ ತತ್ಕಾಳಚಿ ಪಾವೇ ।
ಆಪಣ ತ್ರಾಸ ಘೇತಾ ಜೀವೇ । ದೇವಹಿ ತ್ರಾಸೇ ॥೧೩॥

॥ಶ್ಲೋಕ॥ ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ ।

ಜೈಸೇ ಜಯಾಚೇ ಭಜನ । ತೈಸಾಚೀ ದೇವಹೀ ಆಪಣ ।
ಮ್ಹಣೌನ ಹೇ ಆವಘೇ ಜಾಣ । ಆಪಣಾಚಿ ಪಾಸೀ ॥೧೪॥

ಆಪುಲ್ಯಾ ಮನಾಸಾರಿಖೇ ನ ಘಡೇ । ತೇಣೇ ಗುಣೇ ನಿಷ್ಠಾ ಮೋಡೇ ।
ತರೀ ಗೋಷ್ಟೀ ಆಪಣಾ ಕಡೇ । ಸಹಜಚಿ ಆಲೀ ॥೧೫॥

ಮೇಘ ಚಾತಕಾವರೀ ವೋಳೇನಾ । ತರೀ ಚಾತಕ ಪಾಲಟೇನಾ ।
ಚಂದ್ರ ವೇಳೇಸಿ ಉಗವೇನಾ । ತರ್ಹೀ ಚಕೋರ ಅನನ್ಯ ॥೧೬॥

ಐಸೇ ಅಸಾವೇ ಸಖ್ಯತ್ವ । ವಿವೇಕೇ ಧರಾವೇ ಸತ್ವ ।
ಭಗವಂತಾ ವರೀಲ ಮಮತ್ವ । ಸಾಂಡೂಚಿ ನಯೇ ॥೧೭॥

ನಾವು ಎಷ್ಟು ಶುದ್ಧ ಪ್ರೇಮವನ್ನು ಭಗವಂತನ ಮೇಲೆ ಮಾಡುವೆವೋ ಅಷ್ಟೇ ಶುದ್ಧ ಪ್ರೇಮವನ್ನು ಅವನು ನಮ್ಮ ಮೇಲೆ ಮಾಡುವನು. ನಾವು ನಿಷ್ಠೆಯಿಂದ ಅವನ ಸಂಗಡ ಅನನ್ಯವಾಗಿ ಇದ್ದರೆ ಅವನೂ ಸಹ ಅದೇ ರೀತಿ ನಮ್ಮ ಸಂಗಡ ಅನನ್ಯವಾಗಿರುವನು. ಅಂತೆಯೇ ನಾವು ಏನೇ ಬಂದರೂ ಅವನ ಮೇಲಿನ ಶುದ್ಧ ಪ್ರೇಮವನ್ನು ಇವನು ನಮ್ಮವನೆಂಬ ಸ್ಥಿರ ನಂಬಿಕೆಯನ್ನು ಕಡಿಮೆ ಮಾಡಬಾರದು. ನಾವು ಯಾವ ಶಬ್ದವನ್ನು ಮಾತಾಡುವೆವೋ ಅದೇ ಶಬ್ದವನ್ನು ಪ್ರತಿಧ್ವನಿಯ ರೂಪದಿಂದ ನಾವು ಕೇಳುತ್ತೇವೆ; ಇದೇ ಪ್ರಕಾರ ದೇವರೊಂದಿಗಿನ ಸಖ್ಯತ್ವವು ನಮ್ಮಲ್ಲಿ ಸ್ಥಿರ ಉಳಿಯಬೇಕಾದರೆ ಆ ಕೆಲಸ ನಮ್ಮ ಕೈಯಲ್ಲಿಯೇ ಇರುವದು.(೧೨) ನಮ್ಮ ಭಾವವು ಅನನ್ಯತೆಯು ಏಕನಿಷ್ಠೆಯಿಂದ ಕೂಡಿದ್ದರೆ, ಅರ್ಥಾತ್ ನಿಜವಾಗಿಯೂ ನಿಮಗೆ ಭಗವಂತನೊಬ್ಬನೇ ಆಧಾರನಾಗಿದ್ದರೆ, ಅವನ ಹೊರತು ಯಾರದೂ ಆಧಾರ ಇರದಿದ್ದರೆ,ಅವನೇ ನಿಮ್ಮ ಸರ್ವಸ್ವವಾಗಿದ್ದರೆ, ಆಗ ನೀವು ಭಗವಂತನನ್ನು ಆರ್ತರಾಗಿ ಕರೆದ ಕೂಡಲೇ ನಿಮ್ಮ ಸಹಾಯಕ್ಕೆ ಕ್ಷಣಮಾತ್ರದಲ್ಲಿ ಓಡಿ ಬರುವನು. ಇದರಲ್ಲಿ ಸಂಶಯವಿಲ್ಲ. ಆದರೆ ನೀವು ಅವನಲ್ಲಿ ಬೇಸರದಿಂದ, ಆಲಸ್ಯ ಹಾಗೂ ಕಾಟಾಚಾರದ ಮನೋಭಾವವಿಟ್ಟರೆ ನಿಮ್ಮ ಪ್ರೇಮ ಅವನಲ್ಲಿ ಕಡಿಮೆ ಆದರೆ ಆಗ ಅವನೂ ಬೇಸರದಿಂದ ಆಲಸ್ಯ ಹಾಗೂ ಅಲಕ್ಷ್ಯದಿಂದ ಇರುವನು· ಮತ್ತು ನಿಮ್ಮ ಕರೆಗೆ ಓಗೊಡುವ ದಿಲ್ಲ. (೧೩) **ಶ್ಲೋಕ :—** ಏ ಯಥಾ ಮಾಂ ಪ್ರಪದ್ಯಂತೆ ತಾಂಸ್ತಥೈವ ಭಜಾಮ್ಯಹಮ್ :ಭ: **ಶ್ಲೋಕಾರ್ಥ:-** ಯಾರು ನನ್ನನ್ನು ಯಾವ ಪ್ರಕಾರ ಭಜಿಸುವರೋ ಆ ಪ್ರಕಾರ ನಾನೂ ಸಹ ಅವರನ್ನು ಭಜಿಸುವೆ. ಅವರಿಗೆ ಅನುಗ್ರಹ ಮಾಡುವೆ. ಯಾವ ಭಾವದಿಂದ ನಾವು ಭಗವಂತನನ್ನು ಪ್ರೇಮಿಸುವೆವೋ ಅದೇ ಭಾವದಿಂದ ಭಗವಂತನು ನಮಗೆ ದೊರಕುವನು, ಪ್ರಾಪ್ತನಾಗುವನು. **ತಾತ್ಪರ್ಯ:-**ಈ ಒಳಿತು ಕೆಡಕುಗಳೆಲ್ಲವೂ ನಿಮ್ಮಲ್ಲಿಯೇ ಇರುವವೆಂಬುದನ್ನು ಮರೆಯಬೇಡಿರಿ. ಜಗತ್ತನ್ನೇ ಒಂದು ವೇಳೆ ಮೋಸಗೊಳಿಸಲು (ಫಸಾಯಿಸಲಿಕ್ಕೆ) ನಿಮಗೆ ಶಕ್ಯವಾಗಬಹುದು. ಆದರೆ ಭಗವಂತ ನಿಮ್ಮ ಅಂತರ್ಯದಲ್ಲಿಯೇ ಇರುವದರಿಂದ ಅವನನ್ನು ಮೋಸಗೊಳಿಸಲು (ಫಸಾಯಿಸಲಿಕ್ಕೆ) ನಿಮಗೆ ಯಾವ ಕಾಲಕ್ಕೂ ಶಕ್ಯವಿಲ್ಲ. ಒಟ್ಟಿನಲ್ಲಿ ನಿಮ್ಮ ಭಾವ ಎಷ್ಟು ಶುದ್ಧವಾಗುತ್ತ ಹೋಗು ವದೋ ಅಷ್ಟೇ ರೀತಿ, ಅದೇ ಪ್ರಕಾರದಿಂದ ಭಗವಂತ ಹೆಚ್ಚು ಸಮೀಪ ಬರುತ್ತ ಹೋಗುವನು. (೧೪) **ಉದಾ: — ತಿಳಿಯಿರಿ-ವಿಚಾರ ಮಾಡಿರಿ:-** ಯಾವುದಾದರೊಂದು ಕೆಲಸ ನಿಮ್ಮ ಇಷ್ಟದಂತೆ ಆಗಿಲ್ಲವೆಂದಾಗ ಆಗ ನಿಮಗೆ ಭಗವಂತನ ಮೇಲಿನ ವಿಶ್ವಾಸ ಮತ್ತು ಪ್ರೇಮ ಶ್ರದ್ಧೆಗಳಿಗೆ ಸ್ವಲ್ಪಾದರೂ ಧಕ್ಕೆ ಬಂದು ಬಂದರೆ ತತ್ಕಾಲ ದಲ್ಲಿ ಭಗವಂತನು ನಿಮ್ಮ ಮೇಲಿನ ಮಮತ್ವವನ್ನೂ ಕಡಿಮೆ ಮಾಡುವನು. ಅಥವಾ ನಿಮ್ಮಿಂದ ದೂರ ಸರಿಯು ವನು. ಅಂದ ಮೇಲೆ ಇದಕ್ಕೆ ನೀವೇ ಕಾರಣರೆಂಬ ಮಾತು ಸ್ಪಷ್ಟ ಸಿದ್ಧವಾಗುವದು. (೧೫) **ಉದಾಹರಣಾರ್ಥ:-** ಚಾತಕ ಮತ್ತು ಚಕೋರ ಪಕ್ಷಿಗಳನ್ನು ನೋಡಿದಾಗ ಚಾತಕವು ಮಳೆಯ ನೀರನ್ನೇ ಕುಡಿಯು ವದು. ಆದರೆ ಮಳೆಯೇ ಒಂದು ವೇಳೆ ಆಗದಿದ್ದರೆ ಅಥವಾ ಮೇಘವು ಕೃಪಾದೃಷ್ಟಿಯಿಂದ ಮಳೆಯನ್ನು ಸುರಿಸ ದಿದ್ದರೆ ಆ ಚಾತಕ ಪಕ್ಷಿಯು ನೀರಡಿಕೆ ಶಾಂತವಾಗುವದಿಲ್ಲ. ಆದರೂ ಆ ಚಾತಕವು ಮೇಘದ ಮೇಲಿನ ಮಮತ್ವ ಮತ್ತು ವಿಶ್ವಾಸವನ್ನು ಎಷ್ಟೂ ಕಡಿಮೆ ಮಾಡುವದಿಲ್ಲ. ಇದೇ ರೀತಿ ಚಕೋರವು ಕೇವಲ ಚಂದ್ರನ ಕಿರಣವೆಂಬ ಅಮೃತ ಪಾನ ಮಾಡಿಯೇ ಜೀವಿಸಿರುವದು ಕೇವಲ ಚಂದ್ರಕಿರಣ ಸೇವನೆಯೇ ಅದರ ಆಹಾರವಿರುವದು· ಆದರೆ ಚಕೋರಕ್ಕೆ ಹಸಿವೆ ಆಗಿದೆ. ಚಂದ್ರಮನಾದರೋ ಆ ಹೊತ್ತಿಗೆ ಉದಯನಾಗದಿದ್ದರೆ ಅದು ಹಸಿವೆಯಿಂದ ಬಳಲುತ್ತ ಕುಳಿತಿರುತ್ತ ದೆಯೇ ಹೊರತು ಆ ಚಂದ್ರನ ಮೇಲಿನ ಆದರ,ಮಮತ್ವ, ವಿಶ್ವಾಸ, ಎಳ್ಳಷ್ಟೂ ಕಡಿಮೆ ಆಗುವದಿಲ್ಲ. (೧೬) ಪ್ರೇಮ ವಿದ್ದರೆ ಹೀಗೆ ಇರಬೇಕು. ಪ್ರೇಮ,ಮಮತ್ವ,ನಮ್ಮವರೆಂಬ ಭಾವ ಇರುವುದಾದರೆ ಹೀಗೆ ಇರಬೇಕು. ಭಗವಂತನ ಸಖ್ಯ ವನ್ನು ವಿವೇಕದಿಂದ ಗಟ್ಟಿಯಾಗಿ ಹಿಡಿದಿರಬೇಕು. ಮತ್ತು ಸ್ಥಿರದಿಂದ ಏಕನಿಷ್ಠೆಯಿಂದ ಇದನ್ನು ಉಳಿಸಿಕೊಳ್ಳಬೇಕು· ಏನೇ ಅತ್ವ ಪ್ರಸಂಗಗಳು ಬರಲಿ, ಏನೇ ಅಡ್ಡಿ ಅಡಚಣೆಗಳು ಬರಲಿ, ಭಗವಂತನ ಮೇಲಿರುವ ಪ್ರೇಮ, ಮಮತ್ವ· ನಂಬಿಗೆಗಳನ್ನು ಕೈ ಬಿಡಬಾರದು. (೧೭)

ಸಖಾ ಮಾನಾವಾ ಭಗವಂತ । ಮಾತಾ ಪಿತಾ ಗಣ ಗೋತ।
ವಿದ್ಯಾ ಲಕ್ಷ್ಮೀ ಧನ ವಿತ್ತ । ಸಕಳ ಪರಮಾತ್ಮಾ ॥೧೮॥

ದೇವಾ ವೇಗಳೇ ಕೋಣೀ ನಾಹೀ । ಐಸೇ ಬೋಲತೀ ಸರ್ವಹಿ ।
ಪರಂತು ತ್ಯಾಚೀ ನಿಷ್ಠಾ ಕಾಹೀ । ತೈಸೀ ಚ ನಸೆ ॥೧೯॥

ಮ್ಹಣೌನಿ ಐಸೇ ನ ಕರಾವೇ । ಸಖ್ಯ ತರೀ ಖರೇ ಚಿ ಕರಾವೇ ।
ಅಂತರೀ ಸದೃಢ ಧರಾವೇ । ಪರಮೇಶ್ವರಾಸೀ ॥೨೦॥

ಆಪುಲಿಯಾ ಮನೋಗತಾ ಕಾರಣೇ । ದೇವಾವರೀ ಕ್ರೋಧಾಸ ಯೇಣೇ ।
ಐಸೀ ನವ್ಹೇತ ಕಿ ಲಕ್ಷಣೇ । ಸಖ್ಯ ಭಕ್ತೀಚೀ ॥೨೧॥

ದೇವಾಚೇ ಜೇ ಮನೋಗತ। ತೇ ಚೀ ಆಪುಲೇ ಉಚಿತ ।
ಇಚ್ಛೇ ಸಾಠೀ ಭಗವಂತ । ಅಂತರೂ ನಯೇ ಕೀ ॥೨೨॥

ಭಗವಂತನನ್ನು ಅಂತರ್ಯದಲ್ಲಿ ಸಂಪೂರ್ಣ (ಅಗದೀ) ಘಟ್ಟಿಯಾಗಿ ಹಿಡಿಯಬೇಕು. ಅವನೇ ಎಲ್ಲವೂ ಆಗಿದ್ದು ನನ್ನ ಸರ್ವಸ್ವವೂ ಅವನೇ ಆಗಿದ್ದಾನೆಂದು ತಿಳಿಯಬೇಕು. ಭಗವಂತನ ಸಂಗಡ ಸಖ್ಯತ್ವದ ಸಂಬಂಧವನ್ನು ಜೋಡಿಸಬೇಕು. ತಂದೆ-ತಾಯಿ, ಬೀಗರು, ಬಿಜ್ಜರು, ಆಪ್ತರು, ಇಷ್ಟರು, ಅಣ್ಣ-ತಮ್ಮಂದಿರು, ಅಕ್ಕ-ತಂಗಿಯರು, ಹೆಂಡರು-ಮಕ್ಕಳು, ವಿದ್ಯೆ, ಲಕ್ಷ್ಮೀ ಶೋಭೆ, ಅಲಂಕಾರ, ದುಡ್ಡು-ದುಗ್ಗಾಣಿ, ಐಶ್ವರ್ಯ ಮತ್ತು ಇರುವದೆಲ್ಲವೂ ನನ್ನ ಸ್ವಾಮಿಯದೇ ಆಗಿದೆಯೆಂಬ ನಿಜವಾದ ಏಕನಿಷ್ಠವಾದ ದೃಢಭಾವನೆ ಹೊಂದಿರಬೇಕು. ಇದರ ಅರ್ಥವೇನಂದರೆ ಮಾನವ ಜೀವನವು ಬಾಂಧವ್ಯ(ನಾತೆ)ಮಯವಾಗಿದೆ. ಮನುಷ್ಯನಿಗೆ ಯಾವ ಯಾವ ವ್ಯಕ್ತಿಗಳ ಸಂಗಡ ಅಥವಾ ವಸ್ತುವಿನ ಸಂಗಡ ಸಂಬಂಧ ಬರುವದೋ ಆಯಾ ವ್ಯಕ್ತಿ ಮತ್ತು ವಸ್ತುವಿನ ಮೇಲೆ ಅವನ ಪ್ರೇಮ, ಮಮತ್ವ ಉಂಟಾಗುತ್ತದೆ. ಇವು ಎಲ್ಲವುಗಳ ಹೊರತಾಗಿ ಉಳಿದದ್ದು ಭಗವಂತನ ಪಾಲಿಗೆ ಬರುತ್ತದೆ. ಶ್ರೀ ಸಮರ್ಥರು ಕೂಗಿ ಹೇಳುವದೇನಂದರೆ, ಯಾವನಿಗೆ ಭಗವಂತನ ಸಖ್ಯತ್ವದ ಆನಂದವನ್ನು ಸೂರೆಗೊಳ್ಳ(ಲುಟಾಯಿಸ)ಬೇಕಾಗಿದೆಯೋ ಅವನು ಇತರ ಎಲ್ಲದರ ಮೇಲಿನ ಪ್ರೇಮವನ್ನು ಒಟ್ಟುಗೂಡಿಸಿ ಅದನ್ನೆಲ್ಲ ಒಬ್ಬ ಭಗವಂತನ ಚರಣದಲ್ಲಿ ಕೇಂದ್ರಿತ ಮಾಡುವದು ಆವಶ್ಯವಿದೆ. (೧೮) ನಮಗೆ ದೇವರ ಹೊರತು ಯಾರೂ ಗತಿಯಿಲ್ಲ. ಹೀಗೆ ಎಲ್ಲರೂ ಅನ್ನುತ್ತಾರೆ. ಇದು ಒಂದು ಕೇವಲ ಮಾತಿನ ಮೋಡಿ ಅಥವಾ ಪದ್ಧತಿಯಾಗಿದೆ. ಯಾಕಂದರೆ ಅವನ ನಿಷ್ಠೆ ಅದರಂತೆ ನಿಜವಾದುದು ಆಗಿರುವದಿಲ್ಲ. ಸಂತ ಶರಣರು ಸಾಮಾನ್ಯ ಜನತೆಯ ಮುಂದೆ ಪರಮಾರ್ಥವನ್ನು ಸ್ಪಷ್ಟವಾಗಿ ಮಂಡಿಸಿದರು ಇದು ಅವರು ಜನತೆಗೆ ಮಾಡಿದ ದೊಡ್ಡ ಉಪಕಾರವಾಗಿದೆ. ಇದು ನಿಜವೇ ಇರುವದಾದರೂ ಇದರಿಂದ ಪರಮಾರ್ಥವೆಂಬ ಶುದ್ಧ ಹಾಲಿನಲ್ಲಿ ಪ್ರಪಂಚದ ನೀರು ಬಹಳಷ್ಟು ಕೂಡಿದ್ದರಿಂದ ನೋಡಲು ಬೆಳ್ಳಗಿನದಾಗಿ ಕಾಣುತ್ತದೆ. ಆದರೆ ಹಾಲು ತನ್ನ ಹಾಲುತನವನ್ನು ಕಳೆದುಕೊಂಡು ಬಿಟ್ಟಿತು. ಇತ್ತ ಶುದ್ಧ ನೀರೂ ಉಳಿಯಲಿಲ್ಲ. ಒಟ್ಟಿನಲ್ಲಿ ಪರಮಾರ್ಥದ ಭಾಷೆಯ ಆವರಣದ ಕೆಳಗೆ ಜನರು ಶುದ್ಧ ಪ್ರಪಂಚವನ್ನೇ ಮಾಡಹತ್ತಿದ್ದಾರೆ. ಪರಮಾರ್ಥವೆಂಬುದು ಪ್ರಪಂಚದ ಒಂದು ಸಾಧನವಾಗಿ ಕುಳಿತುಕೊಂಡು ಬಿಟ್ಟಿರುವದು, (೧೯) **ಆದುದರಿಂದಲೇ ಶ್ರೀ ಸಮರ್ಥರು ಸ್ಪಷ್ಟವಾಗಿ ಈ ಮಾತನ್ನು ನಿಮ್ಮ ದೃಷ್ಟಿಗೆ ತರುತ್ತಿದ್ದಾರೆ:-** ಮೇಲೆ ಹೇಳಿದ ಪ್ರಕಾರ ಬಾಯಿಯಿಂದ ಮಾತನಾಡಿದರೆ ಏನೂ ಸಾಧಿಸಿದಂತೆ ಆಗುವದಿಲ್ಲ, ಹಾಗೆ ಮಾಡಬಾರದು. ಭಗವಂತನ ಸಂಗಡ ಸಖ್ಯ ಬೆಳೆಸುವದನ್ನು ಮನಸ್ಸಿನಿಂದ ಮಾಡಬೇಕು. (ಖರೇ-ಖರೇ)ನಿಜವಾದ ಪ್ರೇಮ ಮಾಡಬೇಕು. ನಿಮ್ಮ ಅಂತರ್ಯದಲ್ಲಿ ಭಗವಂತನನ್ನು ಅಗದೀ ಘಟ್ಟಿಯಾಗಿ ಹಿಡಿದಿಡಬೇಕು, (೨೦) ನೀವು ಮನಸ್ಸಿನಲ್ಲಿ ಮಾಡಿಕೊಂಡಂತೆ ಒಂದು ಕೆಲಸ ಸಿದ್ಧಿಯಾಗಲಿಲ್ಲವೆಂದಾಗ ನೀವು ದೇವರ ಮೇಲೆ ಸಿಟ್ಟಾಗುವದು, ಅಸಂತುಷ್ಟರಾಗುವದು, ಇವೆಲ್ಲ ಸಖ್ಯ ಭಕ್ತಿಯ ಲಕ್ಷಣಗಳಲ್ಲ. ಹೀಗೆ ಯಾರು ಮಾಡುವರೋ ಅವರು ತಮ್ಮ ವಾಸನಾ ತೃಪ್ತಿಗಾಗಿ ಭಗವಂತನನ್ನು ಒಂದು ಸಾಧನವನ್ನಾಗಿ ಮಾಡಿಕೊಳ್ಳುವದಕ್ಕೆ ಕಲ್ಪಿಸಿಕೊಂಡಿರುವ ಒಂದು ಸ್ಥಾನ ಮಾತ್ರ ಭಗವಂತನೆಂದು ತಿಳಿದರೆ ಇದು ಅತಿ ಹೀನ ಕಲ್ಪನೆಯನ್ನು ಆ ಭಗವಂತನ ವಿಷಯದಲ್ಲಿ ಕಲ್ಪಿಸಿದಂತೆ ಆಗುತ್ತದೆ. (೨೧) ಭಗವಂತನಲ್ಲಿ ಶರಣು ಹೋಗುವದು ಭಕ್ತಿಯ ನಿಜವಾದ ಮರ್ಮವೇ ಆಗಿರುವದು, ಅವನ ಇಚ್ಛೆಯಲ್ಲಿ ತಮ್ಮ ಇಚ್ಛೆಯನ್ನು ವಿಲೀನ ಮಾಡುವದೇ ಶರಣಾಗತಿಯ ಗುರುಕೀಲಿ (ಅಂದರೆ ಗೂಢ ಉಕಲಣ್ಯಾಚಿ ಯುಕ್ತಿ) ಆಗಿರುವದು. ದೇವರ ಇಚ್ಛೆಯಂತೆ ಏನು ಆಗುವದೋ ಅದು ತನಗೂ ಯೋಗ್ಯವೆಂದು ತಿಳಿದು ಒಪ್ಪಿ ಸಮಾಧಾನದಿಂದ ಇರಬೇಕು. ನಿಮ್ಮ ಇಚ್ಛೆಯ ಆಗ್ರಹ ಹಿಡಿದು ಭಗವಂತನಿಂದ ನೀವು ದೂರ ಹೋಗಬೇಡಿರಿ. (೨೨)

ದೇವಾಚೇ ಇಚ್ಛೇನೇ ವರ್ತಾವೇ। ದೇವ ಕರೀಲ ತೇ ಮಾನಾವೇ।
ಮಗ ಸಹಜ ಚಿ ಸ್ವಭಾವೇ। ಕೃಪಾಳು ದೇವ ॥೨೩॥

ಪಾಹಾತಾ ದೇವಾಚಿ ಕೃಪೇಸೀ। ಮಾತೇಚೀ ಕೃಪಾ ಕಾಯಸೀ।
ಮಾತಾ ವಧೀ ಬಾಳಕಾಸೀ। ವಿಪತ್ತಿಕಾಳೀ ॥೨೪॥

ದೇವೇ ಭಕ್ತ ಕೋಣ ವಧಿಲಾ। ಕಧೀ ದೇಖಿಲಾ ನಾ ಐಕಿಲಾ।
ಶರಣಾಗತಾಸ ದೇವ ಜಾಲಾ। ವಜ್ರಪಂಜರು ॥೨೫॥

ದೇವ ಭಕ್ತಾಚಾ ಕೈವಾರೀ। ದೇವ ಪತಿತಾಸಿ ತಾರೀ।
ದೇವ ಹೋಯ ಸಾಹಾಕಾರೀ। ಅನಾಥಾಚಾ ॥೨೬॥

ದೇವ ಅನಾಥಾಚಾ ಕೈಪಕ್ಷೀ। ನಾನಾ ಸಂಕಟಾ ಪಾಸೂನ ರಕ್ಷೀ।
ಧಾವಿನ್ನಲಾ ಅಂತರಸಾಕ್ಷೀ। ಗಜೇಂದ್ರಾಕಾರಣೇ ॥೨೭॥

ದೇವ ಕೃಪೇಚಾ ಸಾಗರು। ದೇವ ಕರುಣೇಚಾ ಜಳಧರು।
ದೇವಾಸಿ ಭಕ್ತಾಚಾ ವಿಸರು। ಪಡಣಾರ ನಾಹೀ ॥೨೮॥

ನೀವು ದೇವರ ಇಚ್ಛೆಯಂತೆ ನಡೆಯಬೇಕು. ದೇವರು ಏನನ್ನು ಒದಗಿಸುವನೋ ಮತ್ತು ಎಂಥ ಪ್ರಸಂಗಗಳನ್ನು ತಂದೊಡ್ಡುವನೋ ಅದನ್ನೆಲ್ಲ ಮನಃಪೂರ್ವಕ ಪ್ರೀತಿಯಿಂದ ಸ್ವೀಕರಿಸಿರಿ. ನಿಮ್ಮ ಮನೋವೃತ್ತಿ ಹೀಗೆ ತಯಾರ ಆದರೆ ಆಗ ಭಗವಂತ ಸಹಜವಾಗಿಯೇ ನಿಮ್ಮ ಮೇಲೆ ಕೃಪೆ ಮಾಡುವನು. ಈ ತತ್ವವು ಬಹಳ ಅರ್ಥಗರ್ಭಿತವಿರುವದು. **ಬ್ರಹ್ಮಜ್ಞಾನಿ ಅದರಂತೆ ತತ್ವಜ್ಞಾನಿ ಪುರುಷರು ಹೇಳುವದೇನಂದರೆ:–** "ಜಗತ್ತಿನೊಳಗಿನ ಸರ್ವಜೀವರನ್ನು ಜಗದೀಶ್ವರನು ತನ್ನ ಕಡೆಗೆ ಎಳೆಯುತ್ತಾ ಜಗ್ಗುತ್ತಾ ಇರುವನು. ಪ್ರತಿಯೊಬ್ಬನ ಜೀವನದಲ್ಲಿ ಉಂಟಾಗುವ ಘಟನೆಗಳ ಮುಖವು ಭಗವಂತನ ಕಡೆಗೇ ಇರುತ್ತದೆ. ಒಂದು ವೇಳೆ ಮನುಷ್ಯನು ಜೀವನ ಪ್ರವಾಹದಲ್ಲಿ ಬಿನ್ ತಕರಾರ ತೇಲುತ್ತಾ ಹೋದರೆ ಅವನು ಶ್ರಮವಿಲ್ಲದೆ ಅಲ್ಪಕಾಲದಲ್ಲಿ ಭಗವಂತನವರೆಗೆ ಹೋಗಿ ಮುಟ್ಟುತ್ತಾನೆ. ಅನಂತನು ಯಾವ ಪರಿಸ್ಥಿತಿಯಲ್ಲಿ ನಮ್ಮನ್ನು ಇಟ್ಟಿರುವನೋ ಅದರಲ್ಲಿಯೇ ಯಾವನು ಸಮಾಧಾನ, ಶಾಂತಿ, ನಂಬಿಕೆಯಿಂದ ಆನಂದವಾಗಿರುವನೋ ಅಂಥವನ ಮೇಲೆ ದೇವರು ಕೃಪೆ ಮಾಡುತ್ತಾನೆ. ಅಂದರೆ ಅವನ ಜೀವನದಲ್ಲಿ ಅನಂತ ಭಗವಂತನ ಸತ್ತೆಯ ಅಧಿಕಾರ ಇರುವದು. ಇದು ಸ್ಪಷ್ಟವಾಗಿ ಅನುಭವಕ್ಕೆ ಬರುವದು. ಭಗವಂತನಲ್ಲಿ ಶರಣಾಗತಿಯ ಈ ಯುಕ್ತಿ ಯಾರಿಗೆ ಸಾಧಿಸುತ್ತಿದೆಯೋ ಅಂಥವರ ಜೀವನದಲ್ಲಿ ಅಶಕ್ಯವಾದುದು ಶಕ್ಯವಾಗಿ ಹೋಗುವದು. ಈಗ ಇಲ್ಲಿ ಹೇಳಿದ್ದು ಕೇವಲ ಪುಸ್ತಕದಲ್ಲಿಯ ಕಲ್ಪನೆಗಳಲ್ಲವೆಂದು ಸಾರಿ ಹೇಳುವೆವು. ಇವು ಭಕ್ತರಿಗೆ ಆದ ಅನುಭವದ ಸತ್ಯ ಕಥೆ ಇರುವದು. (೨೩) **ಈಗ ದೇವರು ಕೃಪೆ ಹೇಗೆ ಮಾಡುತ್ತಾನೆ ಎಂಬುದರ ಬಗ್ಗೆ ಉದಾಹರಣೆ ಕೊಡುತ್ತಾರೆ:-** ಭಗವಂತನು ನಿಜವಾಗಿಯೂ ಕೃಪೆಯ ಮಹಾಸಾಗರವಾಗಿದ್ದಾನೆ. ಇವನಕೃಪೆಯುಮುಂದೆ ತಾಯಿಯಕೃಪೆಯು ಅಗದೀಕ್ಷುಲ್ಲಕವೆನಿಸುವದು. ಯಾಕೆಂದರೆ ತಾಯಿಯುದೊಡ್ಡಸಂಕಟಬಂದಾಗ ಕೊನೆಯದಾಗಿ ಮಗುವಿನ ಜೀವ ತೆಗೆದುಕೊಳ್ಳಲಿಕ್ಕೂ ಸಹ ತಯಾರ ಆಗುವಳು. (೨೪) ಆದರೆ ಶರಣು ಬಂದಂಥ ಭಕ್ತರನ್ನು ದೇವರು ಕೊಂದು ಹಾಕಿದನೆಂಬುದನ್ನು ಯಾರೂ ನೋಡಿಲ್ಲ, ಮತ್ತು ಕೇಳಿಲ್ಲ. ಯಾವ ದಾಖಲೆಗಳೂ ಇಲ್ಲ. ವಿಚಾರ ಮಾಡಿ ನೋಡಿದರೆ ಯಾರು ದೇವರಿಗೆ ಶರಣು ಹೋಗಿದ್ದಾರೆಯೋ ಅವರನ್ನು ದೇವರು ಸರ್ವರೀತಿಯಿಂದ ಸಂಕಟ ಮುಕ್ತರನ್ನಾಗಿ ಮಾಡಿದ್ದಾನೆ. ಒಟ್ಟಿನಲ್ಲಿ ಅವನು ನಮಗೆ (ಭಕ್ತರಿಗೆ) ಬಲಿಷ್ಠನಾದ ಏಕೈಕ ಆಶ್ರಯ ದಾತನಿರುವನು. ಅಥಳ ಆಧಾರನಾಗಿರುವನು. (೨೫) ದೇವರು ಭಕ್ತರ ಕೈವಾರಿ ಅಂದರೆ ಕೃಪಾಪಕ್ಷಪಾತಿ ಇರುವನು. ದೇವರು ಪಾಪಿಗಳನ್ನೂ ಸಹ ಪಾಪಮುಕ್ತರನ್ನಾಗಿ ಮಾಡುವನು. ದೇವರು ಅನಾಥರಿಗೆ ನಾನಾ ರೀತಿಯಲ್ಲಿ ಸಹಾಯಕನಾಗಿ ವರ್ತಿಸುವನು. (೨೬) ದೇವರು ಅನಾಥರ ಪಕ್ಷಪಾತಿ ಆಗಿರುವನು. ಅಂತೆಯೇ ಅನೇಕ ಪ್ರಕಾರದ ಸಂಕಟದಿಂದ ಅವರ ರಕ್ಷಣ ಮಾಡುವನು, **ಉದಾ:-** ಭಕ್ತರ ಮನದಲ್ಲಿಯ ಭಾವವನ್ನು ಸರಿಯಾಗಿ ತಿಳಿಯುವಂಥ, ಭಗವಂತನು ಗಜೇಂದ್ರನ ಸಲುವಾಗಿ ಓಡಿ ಬರಲಿಲ್ಲವೇನು? ಇಲ್ಲಿ ಅನಾಥ ಅಂದರೆ ಶರಣಾಗತವೆಂದೇ ಅರ್ಥವಿರುವದು, ಜಗದೊಳಗಿನವರಿಂದ (ನಮ್ಮವರಿಂದ) (ಮಧ್ದತ) ಸಹಾಯ ಆಗುವದೆಂಬ ಆಶೆಯನ್ನು ಬಿಟ್ಟು ಯಾವನು ಅತ್ಯಂತ ದೀನನಾಗಿ ಭಗವಂತನ ಕಡೆಗೆ ತಿರುಗುವನೋ ಅವನೇ ನಿಜವಾದ ಅನಾಥ ಮತ್ತು ಅವನೇ ನಿಜವಾದ ಶರಣಾಗತನು. ಇಂಥ ದೀನ ಭಕ್ತರಿಗಾಗಿ ಭಗವಂತನು ಭಕ್ತರ ಕೈವಾರಿ ಎಂದು ಓಡಿ ಬರುವನು. (೨೭) ದೇವರು ಕೃಪಾಸಿಂಧು ಮತ್ತು ಕರುಣಾಸಿಂಧು ಇದ್ದೇ ಇರುವನು. ಆದರೆ ಪ್ರೇಮ ಸಂಪಾದನೆಯ ಕಲೆಯಲ್ಲಿ ದೇವರಷ್ಟು ಪ್ರವೀಣರು, ಕುಶಲರು ಯಾರೂ ಇಲ್ಲ. ಆದ್ದರಿಂದ ಅವನ ಮೇಲೆ ಅತ್ಯಂತ ಪ್ರೇಮ ಮಾಡಬೇಕು. ಅವನಲ್ಲಿ ಶರಣಾಗತರಾಗಬೇಕು. ನಿಮ್ಮ ಅಂತರಂಗವನ್ನೇ ಬಿಚ್ಚಿ ಅವನ ಮುಂದೆ ಇಡಬೇಕು. ದೇವರು ಕೃಪೆಯ ಸಾಗರನಾಗಿರುವನು. ಕರುಣೆಯ ಮೇಘನು. ಅವನಿಗೆ ತನ್ನ ಭಕ್ತರ ಮರೆವು ಎಂದೂ ಆಗುವದಿಲ್ಲ. ಭಕ್ತನಿಗೆ ಭಗವಂತನ ಬಗ್ಗೆ ಎಷ್ಟರ ಮಟ್ಟಿಗೆ ಜ್ಞಾಪಕ ಇರುವದೋ ಅಷ್ಟೇ ಪ್ರಮಾಣದಲ್ಲಿ ಭಗವಂತನಿಗೆ ಭಕ್ತನ ಬಗ್ಗೆ ಜ್ಞಾಪಕವಿರುವದು. ಈ ನಿಯಮ ಅನಾದಿಯು. ಈ ಅನುಭವದ ಮಾತು ನಿಜವಾಗಿಯೇ ಇದೆ. ಭಕ್ತನಿಗೆ ಭಗವಂತನ ಮರೆವು ಯಾವ ಕಾಲಕ್ಕೂ ಆಗಲಾರದು. ಎಂದ ಮೇಲೆ ಭಗವಂತನಿಗಾದರೂ ಭಕ್ತನ ಮರೆವು ಹೇಗಾದೀತು? ಎಂದೂ ಮರೆವು ಆಗುವದಿಲ್ಲ. (೨೮)

ದೇವ ಪ್ರೀತೀ ರಾಖೋ ಜಾಣೆ । ದೇವಾಸೀ ಕರಾವೇ ಸಾಜಣೇ ।
ಜಿವಲಗೇ ಆವಘೇ ಪಿಸುಣೆ । ಕಾವಮಾ ನ ಯೆತೀ ॥೨೯॥

ಸಖ್ಯ ದೇವಾಚೇ ತುಟೇನಾ । ಪ್ರೀತೀ ದೇವಾಚೀ ವಿಟೇನಾ ।
ದೇವ ಕದಾ ಪಾಲಟೇನಾ । ಶರಣಾಗತಾಸೀ ॥೩೦॥

ಮ್ಹಣೋನಿ ಸಖ್ಯ ದೇವಾಸೀ ಕರಾವೇ । ಹಿತಗುಜ ತಯಾಸೀ ಸಾಂಗಾವೇ ।
ಆಠವೇ ಭಕ್ತೀಚೇ ಜಾಣಾವೇ । ಲಕ್ಷಣ ಐಸೇ ॥೩೧॥

ಜೈಸಾ ದೇವ ತೈಸಾ ಗುರು । ಶಾಸ್ತ್ರೀ ಬೋಲಿಲಾ ಹಾ ವಿಚಾರು ।
ಮ್ಹಣೌನ ಸಖ್ಯತ್ವಾಚಾ ಪ್ರಕಾರು । ಸದ್ಗುರೂಸೀ ಅಸಾವಾ ॥೩೨॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಸಖ್ಯ ಭಕ್ತಿ-ನಿರೂಪಣ' ನಾವ ಸಮಾಸ ಅಷ್ಟಮ ॥

● ●

ತನ್ನ ಭಕ್ತರ ಪ್ರೇಮವನ್ನು ಹೇಗೆ ರಕ್ಷಿಸಬೇಕು· ಅವನನ್ನು ಪ್ರೇಮಾಂಕಿತನನ್ನಾಗಿ ಹೇಗೆ ಮಾಡಿ ಇಡಬೇಕು? ಅವನ ಪ್ರೇಮವನ್ನು ಜೋಪಾನ ಮಾಡಿ ಅದನ್ನು ಹೇಗೆ ಹೆಚ್ಚಿಗೆ ಬೆಳೆಸಬೇಕು? ಈ ಎಲ್ಲವನ್ನೂ ದೇವರು ಸರಿಯಾಗಿ ತಿಳಿದಿರುತ್ತಾನೆ. ಆದುದರಿಂದ ಅವನ ಕೂಡ (ಸಖ್ಯ, ಮೈತ್ರಿ) ಗೆಳೆತನ ಮಾಡಬೇಕು. ನಿಮ್ಮ ಅತಿ ಸಮೀಪದ ಆಪ್ತೇಷ್ಟರೆಲ್ಲರೂ ಸ್ವಾರ್ಥಿಗಳಿರುತ್ತಾರೆ. ಪರೀಕ್ಷಾ ಪ್ರಸಂಗದಲ್ಲಿ ಇವರು ನಮ್ಮ ಉಪಯೋಗಕ್ಕೆ ಬೀಳುವದಿಲ್ಲ. (೨೯) ದೇವರ ಸಂಗಡ ಒಮ್ಮೆ ಸಖ್ಯ ಉಂಟಾದರೆ ಸಾಕು, ಅದು ಎಂದೂ ಬಿಡುಗಡೆಯಾಗುವದಿಲ್ಲ. ದೇವರ ಪ್ರೇಮದ ರುಚಿ ಒಮ್ಮೆ ಹತ್ತಿತೆಂದರೆ ಆ ಮೇಲೆ ಅದು ಕಡಿಮೆ ಆಗುವದಿಲ್ಲ. ಇನ್ನೂ ಹೆಚ್ಚುತ್ತ ಹೋಗುತ್ತದೆ. ಭಗವಂತನಿಗೆ ಯಾರು ಶರಣು ಹೋಗುವರೋ ಅವರ ಕೂಡ ಭಗವಂತನು ನಿರಂತರ ಏಕರೂಪನಾಗಿರುತ್ತಾನೆ. ಸದಾ ಸರ್ವಕಾಲ ಅವನ ಕೈವಾರಿ ಆಗಿರುತ್ತಾನೆ. ಅವನ ಪಕ್ಷ ವಹಿಸುವನು. **ಉದಾ**:– ಕಾರಖಾನೆಯಲ್ಲಿ ದೊಡ್ಡ ಚಕ್ರ ತಿರುಗುತ್ತಲಿರುತ್ತದೆ. ಒಂದೇ ಒಂದು ಚಕ್ರದಲ್ಲಿ ಮನುಷ್ಯರು ಧರಿಸಿದ ವಸ್ತ್ರದ ತುದಿ ಸಿಕ್ಕಿಕೊಂಡದ್ದಾದರೆ ಇಡೀ ಮನುಷ್ಯನೇ ಚಕ್ರದಲ್ಲಿ ಸಿಕ್ಕು ಬೀಳುತ್ತಾನೆ. ಇದರಂತೆಯೇ ಒಂದು ಸಲ ಭಗವಂತನ ಪ್ರೇಮದ ಚಟ ಅರ್ಥಾತ್ ಇದರ ರುಚಿ ಹತ್ತಿತೆಂದರೆ, ಅದು ಹೆಚ್ಚುತ್ತಲೇ ಹೋಗುತ್ತದೆ. ಇಷ್ಟೇ ಅಲ್ಲ, ಕೊನೆಗೆ ಜೀವದ ಸರ್ವ ಭಾಗ (ಬಾಜೂ)ಕ್ಕೂ ವ್ಯಾಪಿಸಿ ನೆಲೆ ನಿಲ್ಲುತ್ತದೆ. "ದಿನ ದಿನ ಬಢತ ಸವಾಯೋ" (**ಅರ್ಥ**):- ದಿನ ದಿನಕ್ಕೂ ಆ ಪ್ರೇಮವು ಸವ್ವಾಪಟ್ಟಿನಿಂದ ಬೆಳೆಯುತ್ತ ನಡೆಯುತ್ತದೆ. ಹೀಗೆ ಶ್ರೀ ಕೃಷ್ಣಾನುರಾಗಿಣಿ ಸಂತ ಮೀರಾಬಾಯಿಯು ಭಗವತ್ ಪ್ರೇಮದ ಬಗೆಗಿನ ತನ್ನ ಅನುಭವವನ್ನು ಒಂದು ಕಡೆಗೆ ಹೇಳಿದ್ದಾಳೆ. (೩೦) ಕೊನೆಗೆ ಈ ಅಪ್ರತಿಮ ಸಮಾಸದ ಸಮಾರೋಪ ಮಾಡುವಾಗ ಶ್ರೀ ಸಮರ್ಥರು ಹೇಳುವದೇನೆಂದರೆ, "ನೀವು ನಿಮ್ಮ ಅಗದೀ ಅಂತರಂಗದ ಮಾತುಗಳನ್ನು ಭಗವಂತನ ಮುಂದೆ ತಪ್ಪದೇ ಹೇಳಿರಿ. ಅವನ ಸಖ್ಯವನ್ನು ಸಂಪಾದಿಸಿರಿ. ಈ ಸಖ್ಯವು ಹೇಗೆ ಭಗವಂತನ ಕೂಡ ಇರುವದೋ ಅದೇ ರೀತಿಯಾಗಿ ಶ್ರೀ ಸದ್ಗುರುವಿನ ಕೂಡ ಸಹ ಈ ಸಖ್ಯ ಭಕ್ತಿ ಇರಬೇಕು. ಅಂತೆಯೇ ದೇವರ ಕೂಡ ಖರೇ ಸಖ್ಯ ಪಡೆಯಬೇಕು. ನಿಮ್ಮ ಜೀವಕ್ಕಿಂತ ಹೆಚ್ಚಿನ ಗುಪ್ತ ಹಿತದ ಮಾತುಗಳನ್ನು ಭಗವಂತನ ಹತ್ತಿರವೇ ಹೇಳಬೇಕು. ಎಂಟನೆಯ ಭಕ್ತಿಯ ಲಕ್ಷಣಗಳು ಹೀಗೆ ಇರುವವು. (೩೧) ಹೇಗೆ ದೇವರೋ ಹಾಗೆಯೇ ಶ್ರೀ ಸದ್ಗುರು ಎಂದು ಶಾಸ್ತ್ರದಲ್ಲಿ ಹೇಳಿದ್ದಾರೆ. ಆದುದರಿಂದ ಯಾವ ಪ್ರಕಾರ ಭಗವಂತನ ಕೂಡ ಸಖ್ಯ ಹೊಂದುವಿರೋ ಅದೇ ರೀತಿಯಿಂದ, ಅದೇ ಭಾವದಿಂದ, ಅದೇ ನಿರ್ಧಾರದಿಂದ ಸದ್ಗುರುವಿನ ಕೂಡ ಸಹ ಸಖ್ಯ ಪಡೆಯಬೇಕು. (೩೨)

ಶ್ರೀ ದಾಸಬೋಧದ ಗುರು ಶಿಷ್ಯರ ಸಂವಾದದೊಳಗಿನ ನಾಲ್ಕನೆಯ ದಶಕದಲ್ಲಿಯ
"ಸಖ್ಯ ಭಕ್ತಿ" ಎಂಬ ಹೆಸರಿನ ಎಂಟನೆಯ ಸಮಾಸವು ಮುಗಿದುದು.

● ●

## ದಶಕ ೪. ಸಮಾಸ ೯. ಆತ್ಮನಿವೇದನ ಭಕ್ತಿ (ನುಡಿ ೩೦)

ಇಲ್ಲಿಯವರೆಗೆ ಭಕ್ತಿಯ ಎಂಟು ಪ್ರಕಾರದ ಬಗ್ಗೆ ವರ್ಣನೆ ಮಾಡಿದ್ದಾಯಿತು. ಭಕ್ತಿಯಲ್ಲಿ ಕೊನೆಯದಾದ ಒಂಭತ್ತನೆಯ ಭಕ್ತಿಯು "ಆತ್ಮನಿವೇದನ" ವೆಂಬುದು. ಈ ಭಕ್ತಿಯ ವರ್ಣನೆಯನ್ನು ಮಾಡುವಾಗ ಶ್ರೀಸಮರ್ಥರು ಜ್ಞಾನೀಭಕ್ತನ ಭೂಮಿಕೆಯನ್ನು ತೆಗೆದುಕೊಂಡಿದ್ದಾರೆ· ಅದ್ವೈತವನ್ನು ಬಿಡದೆ ಭಕ್ತಿಯನ್ನು ಹೇಗೆ ಮಾಡಬೇಕು. ಇದನ್ನು ಸಾಧನ ಚಾತುರ್ಯ ಎಂಬ ಸಮಾಸದಿಂದ ನಮಗೆ ಕಲಿಯಲಿಕ್ಕೆ ಬರುತ್ತದೆ. ವಾಸ್ತವಿಕವಾಗಿ ಭಕ್ತಿ ಮತ್ತು ಜ್ಞಾನ ಇವುಗಳನ್ನು ಬೇರ್ಪಡಿಸಲಿಕ್ಕೆ ಬರುವದಿಲ್ಲ. ಭಗವಂತನ ಸಾಮರ್ಥ್ಯ, ಸೌಂದರ್ಯ ಮಹಿಮೆ ಇವುಗಳ ಕಿಮ್ಮತ್ತು ತಿಳಿಯಿತೆಂದರೆ ಆ ತಿಳುವಳಿಕೆಯ ಮೇಲಿಂದ ಅಥವಾ ಜ್ಞಾನದಿಂದ ಭಗವಂತನ ಬಗ್ಗೆ ಶ್ರದ್ಧೆ ಭಾವನೆ, "ಇವ ನನ್ನವ" ಅನ್ನುವ ಆತ್ಮೀಯತೆ, ಮಮತ್ವ, ಇವು ನಿರ್ಮಾಣವಾಗುವವು· ಇದರ ಗರ್ಭದಿಂದಲೇ ಭಕ್ತಿಯ

ಉದಯವಾಗುತ್ತದೆ. ಇದೇ ಪ್ರಕಾರದಿಂದ ಭಗವಂತನ ದಿವ್ಯ ಮಂಗಲ ಮಧುರಮೂರ್ತಿಯ ಲೀಲೆ ಕಥೆ, ಮತ್ತು ನಾಮದ ಶ್ರವಣ, ಕೀರ್ತನ, ಸ್ಮರಣ ಮಾಡುತ್ತ ಹೋದರೆ ಮನಸ್ಸು ತದಾಕಾರ ಹೊಂದಿ ಭಗವಂತನ ಅಂತರಂಗದಲ್ಲಿ ಪ್ರವೇಶಿಸುತ್ತದೆ. ಯಾವ ಮಾನದಿಂದ ಮನಸ್ಸಿನ ತದಾಕಾರತೆಯ ಆಳವು ಬೆಳವಣಿಗೆ ಹೊಂದಿರುವದೋ ಆ ಮಾನ ದಿಂದ ಭಗವಂತನ ವಿಷಯಕವಾದ ಜ್ಞಾನ ಹೆಚ್ಚಿಗೆ ಆಗುತ್ತದೆ. ಅಂತೆಯೇ ಭಕ್ತಿಯು ಜ್ಞಾನದ ತಾಯಿಯು. ಭಗವಂತನು ಪರಮಾನಂದ ರೂಪನಿರುವನು, ರಸಸ್ವರೂಪನಿರುವನು. ಅವನ ಚಿಂತನದಲ್ಲಿ ಮಗ್ನನಾಗಿ ಭಕ್ತನು ತನ್ನನ್ನು ತಾನು ಸಂಪೂರ್ಣವಾಗಿ ಮರೆಯುವನು. ಆ ಸಮಯದಲ್ಲಿ ಅವನು ಆನಂದ ಸಮುದ್ರದಲ್ಲಿ ಮುಳುಗಿ ಏಳುತ್ತಲಿರುವನು. ಈ ಸ್ವಾನಂದದ ಅನುಭವವು ಭಕ್ತಿಯ ಅಂತಿಮ ಫಲವಿರುವದು· ಭಗವಂತನು ಶಾಶ್ವತನಿರುವ, ಸತ್ತಾ ರೂಪನಿರುವನು. ಸೂಕ್ಷ್ಮಕ್ಕಿಂತ ಅತಿ ಸೂಕ್ಷ್ಮನಿರುವನು. ಇವನ ಶೋಧಕ್ಕೆ ತೊಡಗಿದೆವೆಂದರೆ ಆಗ ವಿವೇಕದ ರಭಸದಲ್ಲಿ (ಜೋರಿನಲ್ಲಿ) ಅಶಾಶ್ವತ ಸ್ಥೂಲ ದೃಶ್ಯವು ಮನಸ್ಸಿನಿಂದ ಒಂದು ಕಡೆಗೆ ಸರಿದು ಬಿಡುತ್ತದೆ, ಅಲ್ಲಿ ವೈರಾಗ್ಯದ ಉದಯವಾಗಿ ದೇಹ ಬುದ್ಧಿ ನಾಶವಾಗಿ ಕಳಚಿಹೋಗಿ ಆತ್ಮಬುದ್ಧಿಯ ಉದಯವಾಗುತ್ತದೆ. "ನಾನು ಅವನೇ ಇರುವೆ" ಎಂಬ ವಿಲಕ್ಷಣ ಸಾಕ್ಷಾತ್ಕಾರವಾಗಿ ಜ್ಞಾನಿಯು ಆನಂದಸಾಗರದಲ್ಲಿ ಮುಳುಗಿ ಹೋಗುವನು· ಅಂತೆಯೇ ಈ ಸ್ವಾನಂದಾನುಭವವೇ ಜ್ಞಾನದ ಅಂತಿಮ ಫಲವು. ಜ್ಞಾನದಲ್ಲಾಗಲೀ ಅಥವಾ ಭಕ್ತಿಯಲ್ಲಾಗಲೀ ಎರಡರಲ್ಲಿಯೂ ಅವಿದ್ಯೆಯು ಸಂಪೂರ್ಣ ನಾಶ ಹೊಂದುವದು. ಆದರೆ ಇದರಲ್ಲಿರುವ ಫರಕ (ಅಂತರ) ಅಂದರೆ ಇಷ್ಟೇ: ಜ್ಞಾನಮಾರ್ಗದಲ್ಲಿ ಪರಮಾತ್ಮನು ಅಸ್ತಿತ್ವ, ಸತ್ತಾರೂಪದಿಂದ ಒಂದೇ ಸವನೆ ಸ್ಫುರಿಸುವನು. ಈ ಇಬ್ಬರ ಬಾಹ್ಯ ಸಾಕ್ಷಾತ್ಕಾರದಲ್ಲಿ ಎಳ್ಳಷ್ಟೂ ಅಂತರವಿರುವದಿಲ್ಲ· ಒಂದರ ಜೋರು ಜ್ಞಾನದ್ದು. ಇದು ಆಸಕ್ತಿರಹಿತ, ವೀತ ರಾಗ ಪ್ರಧಾನ ಶಾಂತರಸದ ಮೇಲೆ ಇರುವದು· ಹಾಗೂ ಇನ್ನೊಂದರ ಜೋರು ಭಕ್ತಿಯದು. ಇದು ಅನುರಾಗ ಪ್ರೇಮ ಪ್ರಧಾನ. ಸಖ್ಯ ರಸದ ಮೇಲೆ ಇರುವದು. ಜ್ಞಾನ ಮಾರ್ಗದಲ್ಲಿ ಸ್ವಸ್ವರೂಪದಲ್ಲಿ ತಾನು ಯಾರು ಎಂಬ ನಿಜರೂಪದ ಅರಿವಿನ ಉಪಮಾ ರಹಿತ, ನಿರ್ಗುಣ ನಿರಾಕಾರ ಪರಮಾತ್ಮನ ಅಮರ್ಯಾದತನದ ಅಸೀಮತನದ ಬಗ್ಗೆ ಸಾನಂದಾಶ್ಚರ್ಯವೆನಿಸುವದು. ಭಕ್ತಿಮಾರ್ಗದಲ್ಲಿಯಾದರೋ ಅದೇ ಸ್ವರೂಪದ ಸೀಮಾರಹಿತವಾದ ಸೌಂದರ್ಯದ ಮನೋಹರತೆಯ ಬಗ್ಗೆ ಆಕರ್ಷಣವೆನಿಸುವದು. ದೃಶ್ಯದ ಮೇಲೆ ಕಾಣುವಂಥ, ನಶ್ವರವಾದದ್ದರ ಮೇಲೆ ವ್ಯರ್ಥವಾಗಿ ಹೋಗುವ ಪ್ರೇಮವು ಜ್ಞಾನದಿಂದ ಭಗವಂತನ ಕಡೆಗೆ ಹೊರಳುತ್ತದೆ. ತಿರುಗುತ್ತದೆ. ಮತ್ತು ಅದರ ರೂಪಾಂತರವು ಭಕ್ತಿಯ ಉದಯದಲ್ಲಿ ಪರಿಣಮಿಸುವದು. ಭಕ್ತಿಯಿಂದ, ಅಭಿಮಾನವು ಕ್ಷೀಣಿಸಿ ನಾಶ ಹೊಂದಿ ಭಗವಂತನೊಡನೆ ತದಾತ್ಮ್ಯ ಸಾಧಿಸುವದು, ಅಭಿನ್ನತನದಿಂದ ಮತ್ತು ಇದರ ಸ್ವಾಭಾವಿಕ ಪರಿಣಾಮದಿಂದ ಜ್ಞಾನವು ವೇಗದಿಂದ ವೃದ್ಧಿ ಗೊಳ್ಳುತ್ತದೆ. ಕೊನೆಗೆ ಎರಡೂ ಒಂದರಲ್ಲೊಂದು ಕೂಡಿ ಏಕಾಗಿ ಭಕ್ತನು ಜ್ಞಾನಿಯಾಗುವನು, ಮತ್ತು ಜ್ಞಾನಿಯು ಭಕ್ತನಾಗುವನು. ಅಂದಮೇಲೆ ಮುಕ್ತಿಯು ಪ್ರತ್ಯೇಕವಾಗಿ ಎಲ್ಲಿ ಉಳಿಯುತ್ತದೆ? ಜ್ಞಾನ ಮತ್ತು ಮುಕ್ತಿ ಇವು ಭಕ್ತಿಯ ಹಿಂದೆ ಹಿಂದೆ ಹೋಗುತ್ತವೆಂದು ಸಂತರ ಅನುಭವವಿರುವದು. ಜ್ಞಾನ ಮತ್ತು ಭಕ್ತಿಯಲ್ಲಿ ತ್ಯಾಗ ಒಂದೇ ರೀತಿಯದು. ವೈರಾಗ್ಯ ಒಂದೇ ರೀತಿಯದು, ತನ್ಮಯತೆ ಸಹ ಒಂದೇ ರೀತಿಯದು. ಮತ್ತು (ತವತವಿತ) ಪ್ರಫುಲ್ಲಿತ ವಾದ, ತಾಜಾತನ ಮತ್ತು ನಾವೀನ್ಯಪೂರ್ಣ, ಹೊಸತನ ಇವೂ ಸಹ ಒಂದೇ ರೀತಿಯವಾಗಿರುತ್ತವೆ, ಆದರೆ ಇವರಲ್ಲಿ ಒಂದು ವ್ಯತ್ಯಾಸ ಇರುತ್ತದೆ. ಅದು ಯಾವದೆಂದರೆ, ಅಜ್ಞಾನ ನಾಶವಾಗಿ ಜ್ಞಾನಪ್ರಾಪ್ತಿಯಾದ ನಂತರ ಮುಂದೆ ಜ್ಞಾನಿಯು ಜ್ಞಾನವೂ ಸಹ ನಾಶವಾಗಿ ಹೋಗುವದು. ಇದರಿಂದ ಜ್ಞಾನಿಯು ಪರಬ್ರಹ್ಮದಲ್ಲಿ ಏಕರೂಪನಾಗಿ ಹೋಗು ವನು. ಆದರೆ ಭಕ್ತಿಯ ಬಾಬಿನಲ್ಲಿ ಹೀಗಾಗುವದಿಲ್ಲ. ಭಗವಂತನ ಉಪಾಸನೆಯಿಂದ ಭಕ್ತನಿಗೆ ವೈರಾಗ್ಯ ಸಾಧಿಸುತ್ತದೆ. ಮತ್ತು ತನ್ಮೂಲಕ ಅವನಿಗೆ ಬ್ರಹ್ಮಜ್ಞಾನ ಪ್ರಾಪ್ತವಾಗುವದು. ಆದರೂ ಸಹ ಅವನ ಭಕ್ತಿ ಮುಗಿದು ಹೋಗುವದಿಲ್ಲ. ನಿಲ್ಲುವದಿಲ್ಲ. ಇದಕ್ಕೆ ಅದ್ವೈತ ಭಕ್ತಿಯೆಂದು ಅನ್ನುವರು. (ಏಕತಾ ಭಕ್ತಿಯು) ಶ್ರೀ ಸಮರ್ಥರಂತಹ ಮುಕ್ತ ಮಹಾ ಮಾನವರು ಪರಮಾನಂದಮಯ ರಸ ಸಾಗರದಲ್ಲಿ ಕೇವಲ ಸ್ವಾನಂದಾಮೃತಕ್ಕಾಗಿ ವಿಹರಿಸುತ್ತಿರುವರು.

## ಸಮಾಸ ನವಮ : ಆತ್ಮನಿವೇದನ ಭಕ್ತಿ

॥ಶ್ರೀರಾಮ॥ ಮಾಗಾ ಜಾಲೇ ನಿರೂಪಣ । ಆಠವೇ ಭಕ್ತೀಚೇ ಲಕ್ಷಣ ।
ಆತಾ ಏಕಾ ಸಾವಧಾನ । ಭಕ್ತಿ ನವಮೀ ॥೧॥

ನವಮೀ ನಿವೇದನ ಜಾಣಾವೇ । ಆತ್ಮನಿವೇದನ ಕರಾವೇ ।
ತೇಹಿ ಸಾಂಗಿಜೇಲ ಸ್ವಭಾವೇ । ಪ್ರಾಂಜಳ ಕರೂನಿ ॥೨॥

ಏಕಾ ನಿವೇದನಾಚೇ ಲಕ್ಷಣ । ದೇವಾಸಿ ವಾಹಾವೇ ಆಪಣ ।
ಕರಾವೇ ತತ್ವವಿವರಣ । ಮ್ಹಣಿಜೇ ಕಳೇ ॥೩॥

ಮೀ ಭಕ್ತ ಏಸೇ ಮ್ಹಣಾವೇ । ಆಣೀ ವಿಭಕ್ತಪಣೇ ಚಿ ಭಜಾವೇ ।
ಹೇ ಆವಘೇ ಚಿ ಜಾಣಾವೇ। ವಿಲಕ್ಷಣ ॥೪॥

ಲಕ್ಷಣ ಅಸೋನ ವಿಲಕ್ಷಣ । ಜ್ಞಾನ ಅಸೋನ ಅಜ್ಞಾನ ।
ಭಕ್ತ ಅಸೋನ ವಿಭಕ್ತಪಣ । ತೇ ಹೇ ಏಸೇ ॥೫॥

ಭಕ್ತ ಮ್ಹಣಿಜೆ ವಿಭಕ್ತ ನವ್ಹೆ । ಆಣೀ ವಿಭಕ್ತ ಮ್ಹಣಿಜೆ ಭಕ್ತ ನವ್ಹೆ ।
ವಿಚಾರೇವಿಣ ಕಾಹೀಚ ನವ್ಹೆ । ಸಮಾಧಾನ ॥೬॥

## ದಶಕ ೪. ಸಮಾಸ ೯. ಆತ್ಮನಿವೇದನ

ಮೊದಲಿಗೆ ಆತ್ಮನಿವೇದನದ ಅರ್ಥವನ್ನು ಹೇಳುತ್ತಾರೆ. ಹಿಂದಿನ ಸಮಾಸದಲ್ಲಿ ಎಂಟನೆಯ ಭಕ್ತಿ ಯಾವ ಪ್ರಕಾರದ್ದೆಂಬುದನ್ನು ವರ್ಣಿಸಿದೆವು. ಈಗ ಒಂಭತ್ತನೆಯ ಭಕ್ತಿ ಅಂದರೇನು? ಹೇಗೆ ಇರುತ್ತದೆ? ಇದನ್ನು ತಿಳಿಸುವೆ. ಲಕ್ಷ್ಯಗೊಟ್ಟು ಕೇಳಿರಿ. (೧) **ನಿವೇದನಕ್ಕೆ ಒಂಭತ್ತನೆಯ ಭಕ್ತಿ ಎನ್ನುವರು. ಆತ್ಮನಿವೇದನ ಮಾಡಬೇಕು. ಇದನ್ನು ನಿಮಗೆ ಸ್ಪಷ್ಟಪಡಿಸಿ ಹೇಳುತ್ತೇನೆ:**- ನಿ+ವಿದ್ ಅಂದರೆ ಸಮರ್ಪಣ ಮಾಡುವದು. ತಾಬೆ ಅಥವಾ ಕೈಯಲ್ಲಿ ಕೊಡುವದು. ಅಂದರೆ ಯಾರ ಕೈಯಲ್ಲಿ ಕೊಡುವದು ? ಈ ಧಾತುವಿನಿಂದ ನಿವೇದನ ಶಬ್ದ ಉಂಟಾಗುವದು. ಆತ್ಮನಿವೇದನ ನಾವು ನಮ್ಮನ್ನೇ ಸರ್ವಸ್ವದಿಂದ ಭಗವಂತನಿಗೆ ಸಮರ್ಪಿಸಿಕೊಳ್ಳುವದು. ನಾವು ನಮ್ಮನ್ನೇ ಭಗವಂತನಿಗೆ ಒಪ್ಪಿಸುವದು. ಭಗವಂತನ ಕೈಯಲ್ಲಿ ಸಮರ್ಪಿಸುವದು ಅಥವಾ ಅವನ ತಾಬೆಯಲ್ಲಿ ಕೊಡುವದು. ಅವನ ಅಧೀನನಾಗುವದು ಇದು ಆತ್ಮನಿವೇದವು. (೨) ನಾವು ಸ್ವತಃ ನಮ್ಮ ಸರ್ವಸ್ವವನ್ನೂ ದೇವರಿಗೆ ಅರ್ಪಣ ಮಾಡುವದು. ಅಥವಾ ಅರ್ಪಣಗೊಳ್ಳುವದು. ಇದು ನಿ+ವೇದನದ ಲಕ್ಷಣವು. ಪೃಥಿವ್ಯಾದಿ ಇಪ್ಪತ್ತೈದು ತತ್ವಗಳ ಸವಿಸ್ತಾರ ವಿವೇಚನ ಮಾಡಿನೋಡಿದರೆ ಆಗ ನಿವೇದನದ ಬಗ್ಗೆ ಪೂರ್ಣ ತಿಳಿಯುವದು. ದೇವರಿಗೆ ಸಮರ್ಪಿತವಾಗುವ ಈ ಸಮರ್ಪಣದಲ್ಲಿ ಮೂರು ತರಹವಿರುವದು. (೧) ದೇವರಿಗೆ ಕೊಡುವಾಗ ನಾವು ಅತ್ಯಂತ ಆದರದಿಂದ ಪ್ರೇಮದಿಂದ ಕೊಡುತ್ತೇವೆ. (೨) ಒಮ್ಮೆ ದೇವರಿಗೆ ಕೊಟ್ಟನಂತರ ಆ ವಸ್ತುವಿನ ಮೇಲಿರುವ ಮಮತ್ವ, ಪ್ರೇಮ ಇದು ನನ್ನದು ಎಂಬ ಹಕ್ಕುದಾರಿಕೆ, ಅಧಿಕಾರ, ಆಸಕ್ತಿ ಮತ್ತು ಪ್ರೀತಿ ಇವೆಲ್ಲವನ್ನೂ ಸಂಪೂರ್ಣ ತ್ಯಜಿಸು(ಬಿಡು)ವೆವು. (೩) ಅರ್ಪಣ ಮಾಡಿದಂಥವುಗಳನ್ನು ಪುನಃ ನೆನೆಸುವದಿಲ್ಲ. ಮರೆತು ಬಿಡುತ್ತೇವೆ. ಹಾಗೂ ಆ ಸಮರ್ಪಿತ ಮಾಡಿದ್ದು ಏನಾಯಿತು ? ಎಂಬ ವಿಚಾರ ಸಹ ಮನಸ್ಸಿನಿಂದ ದೂರಿಕರಿಸುತ್ತೇವೆ. ತತ್ವ ವಿವರಣ ಅಂದರೇನು ? ಈಗಿರುವಂಥ ನಾನು ಯಾವುದರಿಂದ ಉಂಟಾಗಿರುವೆನೆಂಬುದರ ಶೋಧ ಮಾಡುತ್ತ ಮಾಡುತ್ತ ಹೋಗಿ ಕೊನೆಗೆ ಯಾವ ತತ್ವ ಉಳಿಯುತ್ತದೆಂಬುದನ್ನು ನೋಡಬೇಕು. ಈ ತತ್ವದ ವಿಚಾರ ತಿಳಿದರೆ ಆಗ ನಾವು ಸ್ವತಃ ದೇವರಿಗೆ ಸಮರ್ಪಣಗೊಳ್ಳುವದೆಂದರೆ ಏನು ಮಾಡಬೇಕೆಂಬುದು ತಿಳಿಯುತ್ತದೆ. (೩) **ನಾನು ಯಾವುದರಿಂದ, ಏತರಿಂದ ಉಂಟಾಗಿರುವೆನೆಂಬ ಶೋಧ ಮಾಡಲಿಕ್ಕೆ ಪ್ರಾರಂಭಿಸಿದೆವೆಂದರೆ ಒಂದು ಚಮತ್ಕಾರಿಕ ವಿರೋಧಾಭಾಸ ನಿರ್ಮಾಣವಾಗುವದು. ಅದು ಹೀಗಿರುವದು:**- ನಾನು ನಿಷ್ಠಾವಂತ ಭಕ್ತನಿದ್ದೇನೆಂದು ಒಮ್ಮೆ ಹೇಳುವದು. ಕೂಡಲೇ ಎರಡನೇ ಕಡೆಗೆ ಬೇರೆಯಾಗಿ ಭಗವಂತನ ಭಕ್ತಿ ಮಾಡುವದು ಹೀಗೆಲ್ಲಮಾಡುವವನು ವಿಲಕ್ಷಣವೆನಿಸುವದು. ಭಗವಂತನಿಂದ ಯಾರು ಬೇರೆಯಾಗಿರುವದಿಲ್ಲವೋ ಅವರೇ ಭಕ್ತರೆಂದು ಅನಿಸುವರು. ಯಾರು ಭಗವಂತನಿಂದ ಬೇರೆಯಾಗಿರುವರೋ ಅವರು ಭಕ್ತರೆನಿಸುವದಿಲ್ಲ. ಅಂತೆಯೇ "ಭಕ್ತನಿರುವನು" ಮತ್ತು ಅವನು "ಪ್ರತ್ಯೇಕನಾಗಿ ಭಗವಂತನ ಭಜನ, ಪೂಜನ ಮಾಡುವನು" ಈ ಎರಡೂ ಮಾತುಗಳು ಪರಸ್ಪರ ವಿರೋಧಉಳ್ಳವಿರುವವು. (೪) ಈ ವಿರೋಧಾಭಾಸ ಎಷ್ಟು ತರ್ಕ ದುಷ್ಟ ವಿದೆಯೆಂಬುದನ್ನು ಸ್ಪಷ್ಟಪಡಿಸಿ ಹೇಳುತ್ತಾರೆ. ಒಂದು ಕಡೆ ಇವರಲ್ಲಿ ಒಂದು ಲಕ್ಷಣ "ಇರುತ್ತದೆ" ಎಂದು ಅನ್ನುವದು, ಕೂಡಲೇ ಇನ್ನೊಂದು ಕಡೆ ಇವರಲ್ಲಿ ಆ ಲಕ್ಷಣ "ಇರುವದಿಲ್ಲ" ಅಥವಾ "ಜ್ಞಾನವಿರುತ್ತದೆ" ಮತ್ತು "ಆ ಜ್ಞಾನವಿರುವದಿಲ್ಲ" ಈ ಪರಸ್ಪರ ವಿರೋಧಿ ದ್ವಂದ್ವವು ಒಂದೇ ಕಾಲಕ್ಕೆ ಒಬ್ಬನೇ ಮನುಷ್ಯನಲ್ಲಿ ಹೀಗೆ ಜೊತೆಯಾಗಿ ಇರಲಿಕ್ಕೆ ಶಕ್ಯವಾಗುವದಿಲ್ಲ. ಇದರಂತೆಯೇ ಒಬ್ಬನೇ ಮನುಷ್ಯ ಒಂದೇ ಕಾಲಕ್ಕೆ "ಭಕ್ತ" ಮತ್ತು "ಅಭಕ್ತ" ಹೀಗೆ ಎರಡೂ ಇರಲಿಕ್ಕೆ ಶಕ್ಯವಿಲ್ಲ. (೫) ಈ ವಿರೋಧಾಭಾಸ ಇಲ್ಲದಂತೆ ಆಗಬೇಕಾದರೆ ಆತ್ಮಾನಾತ್ಮ ವಿಚಾರ ಮಾಡುವ ಮಾರ್ಗವೇ ಒಂದು ಸರಿಯಾದ ಯೋಗ್ಯವಾದ ಸರಳ ಮಾರ್ಗವು:- ವಿಭಕ್ತ ಅಂದರೆ ಪ್ರತ್ಯೇಕ ಬೇರೆಯಾದವನು. ಯಾವನು ಭಗವಂತನಿಂದ ಬೇರೆಯಾಗಿಲ್ಲವೋ ಅವನೇ ಭಕ್ತನು. ಯಾವನು ಭಗವಂತನಿಂದ ಬೇರೆಯಾಗಿಯೇ ದೂರ ಇರುವನೋ ಅವನು ವಿಭಕ್ತನು. ಯಾರು ಭಕ್ತರೋ ಅವರು ವಿಭಕ್ತರಲ್ಲ. ಮತ್ತು ಯಾರು ವಿಭಕ್ತರೋ ಅವರು ಭಕ್ತರಲ್ಲ. ಆದರೆ ಆತ್ಮಾನಾತ್ಮ ವಿಚಾರ ಮಾಡದ ಹೊರತು ಈ ವಿಚಾರ ಸಮಾಧಾನಕಾರಕವಾಗಿ ಪೂರ್ಣ ತಿಳಿಯುವದಿಲ್ಲ. ಇದನ್ನು ತಿಳಿಯುವದೇ ತತ್ವವಿವರಣವೆನಿಸುವದು. (೬)

ತಸ್ಮಾತ್ ವಿಚಾರ ಕರಾವಾ । ದೇವ ಕೋಣ ತೋ ವೊಳಖಾವಾ ।
ಆಪಲಾ ಆಪಣ ಶೋಧ ಘ್ಯಾವಾ । ಅಂತರ್ಯಾಮೀ ॥೭॥

ಮೀ ಕೋಣ ಐಸಾ ನಿವಾಡಾ । ಪಾಹೋ ಜಾತಾ ತತ್ವರ್ಝಾಡಾ ।
ವಿಚಾರ ಕರಿತಾ ಉಘಡಾ । ಆಪಣ ನಾಹೀ ॥೮॥

ತತ್ವೀ ತತ್ವ ಜೇವ್ಹಾ ಸರೇ। ತೇವ್ಹಾ ಆಪಣ ಕೈಚಾ ಉರೇ।
ಆತ್ಮನಿವೇದನ ಯೇಣೇ ಪ್ರಕಾರೇ । ಸಹಜ ಚಿ ಜಾಲೇ ॥೯॥

ತತ್ವರೂಪ ಸಕಳ ಭಾಸೆ । ವಿವೇಕ ಪಾಹಾತಾ ನಿರಸೇ।
ಪ್ರಕೃತಿ ನಿರಾಸೇ ಆತ್ಮಾ ಅಸೇ। ಆಪಣ ಕೈಚಾ ॥೧೦॥

ದೇವರು ಯಾರು? ನಾನು ಯಾರು? ಈ ಪ್ರಶ್ನೆಗಳನ್ನು ವಿಚಾರದಿಂದ ತಿಳಿಯಬೇಕು. ಇದೇ ಕಾರಣಕ್ಕಾಗಿ ಆತ್ಮಾನಾತ್ಮ ವಿಚಾರ ಮಾಡಬೇಕು. ನಿಜವಾದ ದೇವರು ಯಾವುದು? ಇದನ್ನು ವಿಜ್ಞಾನದಿಂದ ತಿಳಿಯಬೇಕು. ನೀವು ನಿಮ್ಮ ಸ್ವಂತದ್ದಾದ ಅಂತಃಕರುಣ (ಅಂತರ್ಯಾಮ) ದಲ್ಲಿಯ ರಹಸ್ಯ ಗುಟ್ಟನ್ನು ನೀವೇ ಶೋಧಿಸಬೇಕು. ಭಗವಂತ ಮತ್ತು ಭಕ್ತಿಯನ್ನು ಮಾಡುವ ಭಕ್ತ ಇವರ ಪರಸ್ಪರ ಸಂಬಂಧ ಚನ್ನಾಗಿ ತಿಳಿಯುವದಕ್ಕಾಗಿ ನಾನು ಯಾರು? ಅದರಂತೆ ಭಗವಂತನ ನಿಜವಾದ ಸ್ವರೂಪವೆಂಥದು? ಇದನ್ನು ತಿಳಿಯುವದು ಅವಶ್ಯವು. ಆದ್ದರಿಂದ ನೀವೇ ನಿಮ್ಮ ಅಂತರಂಗದಲ್ಲಿ ಇಳಿದು, ನಿಜವಾದ "ನಾನು" ಇದರ ಜ್ಞಾನವನ್ನು ನೀವೇ ಮಾಡಿಕೊಳ್ಳಬೇಕೆಂದು ಶ್ರೀ ಸಮರ್ಥರ ಆಗ್ರಹವಿದೆ. "ನಾನು" ಇದರ ಜ್ಞಾನವಾದ ಕೂಡಲೇ ಭಗವಂತನ ಜ್ಞಾನ ತನ್ನಷ್ಟಕ್ಕೆ ತಾನೇ ಸಂಭವಿಸುತ್ತದೆ. (೭) "ನಾನು ಯಾರು?" ಈ ಪ್ರಶ್ನೆಗೆ ಉತ್ತರ ಹುಡುಕುವ ಕ್ರಿಯೆಯಲ್ಲಿ ವಿಶ್ವದ ಮೂಲ ತತ್ವದ ಪರೀಕ್ಷೆ ಮಾಡಬೇಕಾಗುವದು. "ನಾನು ಯಾರಿರುವೆನು" ಈ ಪ್ರಶ್ನೆ ಮೇಲೆ, ಮೇಲೆ ನೋಡಲಿಕ್ಕೆ ಬಹಳ ಸಾದಾ ಕಾಣುವದು. ಆದರೆ ಅದರ ಉತ್ತರದ ಶೋಧಕ್ಕೆ ತೊಡಗಿದೆವೆಂದರೆ ಮೂಲ ತತ್ವದ ಬಗ್ಗೆ ಆಳವಾಗಿ ವಿಚಾರ ಮಾಡಬೇಕಾಗುತ್ತದೆ. ಈ ವಿಷಯದ ಬಗ್ಗೆ ಆಳವಾದ ವಿಚಾರ ಮಾಡುತ್ತ ಹೋದರೆ ಕೊನೆಗೆ ಆ "ನಾನು" ಇದಕ್ಕೆ ಇಂದು ನಾವು "ನಾನು" ಎಂದು ಗ್ರಹಿಸಿದ್ದು ನಿಜವಾಗಿಯೂ ತಪ್ಪು ಗ್ರಹಿಕೆ ಆಗಿದೆ ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ. (೮) ಹೀಗೇಕೆ ಆಗುವದೆಂಬುದಕ್ಕೆ ಕಾರಣಗಳನ್ನು ಹೇಳುತ್ತಾರೆ. ಒಂದು ತತ್ವದಿಂದ ಇನ್ನೊಂದು ತತ್ವದ ಪರಿಹಾರ (ನಿರಾಸ)ವಾಗುತ್ತ ಹೋಗುತ್ತದೆ. (ತತ್ವದಿಂದ ತತ್ವದ ಲಯ ಅಂದರೆ ನಾಶವಾಗುವದು) ಆಗ ನಾವು ಬೇರೆಯಾಗಿ ಪ್ರತ್ಯೇಕವಾಗಿ ಉಳಿಯುವದಿಲ್ಲ. ಈ ಪ್ರಕಾರವಾಗಿ ತತ್ವನಿರಸನ ಅಥವಾ ತತ್ವದ ನಾಶದಿಂದ ಆತ್ಮ ನಿವೇದನವು ಸಹಜವಾಗಿ ಘಟಿಸುವದು. ಮನುಷ್ಯ ಅಂದರೆ ದೇಹ + ಮನ + ಆತ್ಮಾ. ಆತ್ಮಾ ಇದೇ ನಿಜವಾದ "ನಾನು" ಆಗಿರುವದು. ಆದರೆ ಇಂದು ನಾವು ದೇಹ ಮತ್ತು ಮನ ಈ ಎರಡರ ಯುತಿಗೆ ಮಿಲನಕ್ಕೆ ಅಂದರೆ ಕೂಡುವಿಕೆಗೆ "ನಾನು" ಎಂದು ನಂಬುತ್ತೇವೆ. ತಿಳಿಯುತ್ತೇವೆ. ವೇದಾಂತದ ಅಭಿಪ್ರಾಯದ ಹೇಳಿಕೆಯು ದೇಹ ಮತ್ತು ಮನಸ್ಸು ಇವೆರಡೂ ಪಂಚ ಮಹಾಭೂತಗಳಿಂದ ಉಂಟಾಗುತ್ತವೆ. ವಿಶ್ವವು ನಿರ್ಮಾಣವಾಗುವಾಗ(ಹುಟ್ಟುವಾಗ) ಆಕಾಶದಿಂದ ವಾಯು (ಗಾಳಿ) ಉಂಟಾಯಿತು. ಮತ್ತು ವಾಯುದಿಂದ ತೇಜ (ಬೆಳಕು, ಅಗ್ನಿ)ಉಂಟಾಯಿತು. ತೇಜದಿಂದ ಆಪ (ನೀರು) ಉಂಟಾಯಿತು. ಮತ್ತು ಆಪ (ನೀರು)ದಿಂದ ಪೃಥ್ವಿ(ಭೂಮಿ)ಉಂಟಾಯಿತು. ವಿಶ್ವವು ಲಯ (ನಾಶ)ವಾಗುವಾಗ ಉಲಟ ಕ್ರಮದಿಂದ ಅಂದರೆ ಪೃಥ್ವಿಯು ಆಪ (ನೀರು)ದಲ್ಲಿ ಲಯವಾಗುವದು. ನೀರು ತೇಜದಲ್ಲಿ ಲಯವಾಗುವದು. ತೇಜವು ವಾಯುವಿನಲ್ಲಿ ಲಯವಾಗುವದು, ವಾಯುವು ಆಕಾಶದಲ್ಲಿ ಲಯವಾಗುವದು. ಈ ನಿಯಮವು ವಿಶ್ವಕ್ಕೆ ಅಥವಾ ಬ್ರಹ್ಮಾಂಡಕ್ಕೆ ಅನ್ವಯ(ಲಾಗೂ) ಬೀಳುವದು. ಅನ್ವಯಿಸುವದು. ಇದೇ ನಿಯಮ ಮಾನವ ದೇಹಕ್ಕೆ ಅಥವಾ ಪಿಂಡಕ್ಕೆ ಸಹ ಲಾಗೂ ಆಗುವದು. ನಾವು ನಮ್ಮ ಸ್ವತಃದ ಅಂತರ್ಯಾ (ಅಂತರ್ಯಾಮ)ದಲ್ಲಿ "ನಾನು" ಅನ್ನುವದರ ಶೋಧಕ್ಕೆ ತೊಡಗಿದೆವೆಂದರೆ ದೇಹ ತಯಾರಾಗುವ ಸ್ಥೂಲ ಪಂಚ ಮಹಾಭೂತ ಹಾಗೂ ಅದರ ಸೂಕ್ಷ್ಮ ರೂಪದವರೆಗೂ ಹೋಗಬೇಕಾಗುವದು. ನಂತರ ಸೂಕ್ಷ್ಮ ಮಹಾಭೂತ ಮತ್ತು ಮನಸ್ಸು ಇವು ಮೂಲ ಪ್ರಕೃತಿಯಲ್ಲಿ ವಿಲೀನವಾಗುವವು. ಅಂತೆಯೇ ದೇಹ ಬುದ್ಧಿಯ ಆಶ್ರಯದಿಂದ ಕಾರ್ಯ ಮಾಡುವ ತಿರುಗಾಡುವ "ನಾನು" ಇದು ತತ್ವ ವಿಚಾರದ ಖರೇ ಸ್ವರೂಪದ ಶೋಧದ ಮುಂದೆ ಸ್ಥಿರವಾಗಿ ನಿಲ್ಲುವದಿಲ್ಲ. (ಖೋಟಂ) ಅಸತ್ಯ "ನಾನು" ಇಲ್ಲದಂತೆ ಆಗುವದೇ ಆತ್ಮ ನಿವೇದನವಾಗಿರುವದು. (೯) "ದೇಹವೇ ನಾನಿರುವೆನು" ನಾನು ಎಂದು ಅಂದುಕೊಳ್ಳುವ ಅಹಂಕಾರವು ಸತ್ಯವಲ್ಲ. ನಿಜವಾದುದಲ್ಲ. ಇದನ್ನೇ ಪುನಃ ಹೇಳುತ್ತಾರೆ. ಯಾವತ್ತೂ ದೃಶ್ಯ ವಿಶ್ವವು ಪಂಚ ಮಹಾಭೂತಗಳಿಂದ ತಯಾರಾದದ್ದಿರುವದು. ಇವರ ಬಗ್ಗೆ ವಿವೇಕದಿಂದ ವಿವರಿಸಿ ತಿಳಿದರೆ ಎಲ್ಲದರ ಬಗೆಗಿನ ಶಂಕೆಗಳು ಇಲ್ಲದಾಗುವವು. ಅಂದರೆ ಈ ದೃಶ್ಯವು ಕೊನೆಯವರೆಗೆ ನಿಜವಾಗಿ, ಖರೆತನದಿಂದ, ಟಿಕಾಯಿಸಿ (ಎದುರಿಸಿ) ನಿಲ್ಲುವದಿಲ್ಲ. ಈ ಪ್ರಕಾರದಿಂದ ದೃಶ್ಯ ವಿಶ್ವದ ಅಥವಾ ಪ್ರಕೃತಿಯ, ಮಾಯೆಯ (ನಿರಸನ) ಪರಿಹಾರ ಆದನಂತರ ಕೇವಲ ಆತ್ಮಸ್ವರೂಪ ಮಾತ್ರ ಕೊನೆಗೆ (ಶಿಲ್ಲಕ) ಉಳಿಯುವದು. ಅಂದ ಮೇಲೆ ನಮ್ಮ "ನಾನು" ಪ್ರತ್ಯೇಕವಾಗಿ ಹೇಗೆ ಉಳಿಯುತ್ತದೆ? (೧೦)

ಯೇಕ ಮುಖ್ಯ ಪರಮೇಶ್ವರು। ದುಸರೀ ಪ್ರಕೃತಿ ಜಗದಾಕಾರು ।
ತಿಸರಾ ಆಪಣ ಕೈಚಾ ಚೋರು । ಆಣಿಲಾ ಮಧೇ ॥೧೧॥

ಐಸೇ ಹೇ ಸಿದ್ಧ ಚಿ ಅಸತಾ । ನಾಥಿಲೀ ಲಾಗೆ ದೇಹ ಅಹಂತಾ ।
ಪರಂತು ವಿಚಾರೇ ಪಾಹೋ ಜಾತಾ । ಕಾಹೀ ಚ ನಾಸೇ ॥೧೨॥

ಪಾಹಾತಾ ತತ್ವವಿವಂಚನಾ । ಪಿಂಡ ಬ್ರಹ್ಮಾಂಡ ತತ್ವರಚನಾ ।
ವಿಶ್ವಾಕಾರೇ ಪೆಕ್ತೀ ನಾನಾ । ತತ್ವೇ ವಿಸ್ತಾರಲೀ ॥೧೩॥

ತತ್ವೇ ಸಾಕ್ಷತ್ವೇ ವೋಸರತೀ । ಸಾಕ್ಷತ್ವ ಸುರೆ ಆತ್ಮಪ್ರಚೀತೀ ।
ಆತ್ಮಾ ಅಸೆ ಆದಿಅಂತೀ । ಆಪಣ ಕೈಚಾ ॥೧೪॥

ಆತ್ಮಾ ಯೇಕ ಸ್ವಾನಂದಘನ । ಆಣೀ ಅಹಮಾತ್ಮಾ ಹೇ ವಚನ ।
ತರೀ ಮಗ ಆಪಣ ಕೈಚಾ ಭಿನ್ನ । ಉರಲಾ ತೇಥೇ ॥೧೫॥

ಸೋಹಂ ಹಂಸಾ ಹೇ ಉತ್ತರ । ಯಾಚೇ ಪಾಹಾವೇ ಅರ್ಥಾಂತರ ।
ಪಾಹಾತಾ ಆತ್ಮಯಾಚಾ ವಿಚಾರ । ಆಪಣ ಕೈಚಾ ತೇಥೇ ॥೧೬॥

ಮುಖ್ಯವಾದ ಮೂಲ ತತ್ವಗಳು ಎರಡೇ ಇರುವವು. (ಒಂದು) ಪರಮೇಶ್ವರ, (ಎರಡು) ವಿಶ್ವದ ಆಕಾರ ಹೊಂದಿ ಕಾಣುವ ಪ್ರಕೃತಿ. (ಮಾಯೆ) ಇವರಿಬ್ಬರ ನಡುವೆ "ನಾನು" ಎಂಬ ಮೂರನೆಯ ಕಳ್ಳ ಎಲ್ಲಿಂದ ಬಂದನು, ಬರುವನು. ? (೧೧) ಪರಮಾತ್ಮ ಮತ್ತು ಪ್ರಕೃತಿ ಈ ಎರಡು ಮೂಲ ತತ್ವಗಳು ಸ್ವತಃಸಿದ್ಧವಾದವು. ಇರುವವು. ಪರಂತು ಮೂಲದಲ್ಲಿ ಇರದಂಥ ಮತ್ತು ಮೇಲಿನ ಕಾರಣಗಳಿಂದ ಖೋಟಾ ಇದ್ದ ದೇಹಾಹಂಕಾರವು ನಮಗೆ ಅಂಟಿಕೊಳ್ಳುತ್ತದೆ. ಆದರೂ ಸಹ ವಿಚಾರದಿಂದ ಶೋಧಿಸಿ ನೋಡಿದರೆ ಮೂಲದಲ್ಲಿ ಇದಕ್ಕೆ ಏನೂ ಆಧಾರ ವಿಲ್ಲವೆಂದು ಖಾತ್ರಿ ಆಗುವದು. (೧೨) ಸರ್ವ ದೃಶ್ಯ ವಿಶ್ವವು ಪಂಚ ಮಹಾಭೂತಗಳಿಂದ ತಯಾರಾಗಿದೆ. ನಾವು ಇದರ ಸಾಕ್ಷಿ ಆಗಿರುವೆವು. ಆದರೆ ಅಖೈರಕ್ಕೆ (ಕೊನೆಗೆ) ಸಕ್ಕರೆಯಲ್ಲಿ ಯಾವ ಪ್ರಕಾರ ಸಿಹಿಯೋ ಹಾಗೆಯೇ ಸಾಕ್ಷಿತ್ವವೂ ಕೂಡಾ ಆತ್ಮ ಸ್ವರೂಪದಲ್ಲಿ ಕರಗಿ ಹೋಗುವದು. **ತಾತ್ಪರ್ಯ:**— ದೇಹಾಹಂಕಾರಕ್ಕೆ ಎಲ್ಲಿಯೂ ಸ್ಥಾನ ವಿಲ್ಲ. ವ್ಯಕ್ತಿ ಮತ್ತು ವಿಶ್ವ ಇವುಗಳಲ್ಲಿಯ ತತ್ವಗಳ ವಾಸ್ತವಿಕ ರಚನೆಯನ್ನು ಶೋಧಿಸಿ ನೋಡಿದರೆ ಮತ್ತು ಇದೇ ಪ್ರಕಾರ ಮೂಲ ತತ್ವದ ಬಗ್ಗೆ ವಿಚಾರಿಸಿ ನೋಡಿದಾಗ ನಮಗೆ ತಿಳಿದು ಬರುವದೇನಂದರೆ, ಈ ವಿಶ್ವದಲ್ಲಿಯ ನಾನಾ ಪ್ರಕಾರದ ಅನೇಕ ಆಕಾರ ಅಥವಾ ದೃಶ್ಯ ವಸ್ತು ಇವುಗಳೆಲ್ಲವೂ ತತ್ವದ ವಿಸ್ತಾರವೇ ಇರುವವು. (೧೩) ನಮ್ಮ ದೇಹ ಸಹಿತವಾಗಿ ವಿಶ್ವದ ಕಡೆಗೆ ನಾವು ಸಾಕ್ಷಿತ್ವದಿಂದ ನೋಡಹತ್ತಿದರೆ ಆಗ ಕೇವಲ ನೋಡುವವನ ಭೂಮಿಕೆ ಯಿಂದ ಮಧ್ಯಸ್ಥಗಾರನಾಗಿ ನೋಡಹತ್ತಿದಾಗ ಈ ತತ್ವಗಳು ಸಹಜವಾಗಿ ಇಲ್ಲದಾಗುವವು. ಆ ಮೇಲೆ ಆತ್ಮನ ಪ್ರತ್ಯಕ್ಷ ಅನುಭವ ಪಡೆದಾಗ ಸಾಕ್ಷಿತ್ವವೂ ಸಹ ಉಳಿಯುವದಿಲ್ಲ. ವಿಶ್ವದ ಆರಂಭದಲ್ಲಿ ಕೇವಲ ಆತ್ಮನೊಬ್ಬನೇ ಇದ್ದನು. ಅದರಂತೆಯೇ ವಿಶ್ವದ ಕೊನೆಯಲ್ಲಿ ಕೂಡಾ ಕೇವಲ ಆತ್ಮನೊಬ್ಬನೇ ಕೊನೆಗೆ (ಶಿಲ್ಲಕ) ಉಳಿಯುವನು. ಇದು ನಿಜವಾದದ್ದೇ ಇರುವದು. ಅಂದ ಮೇಲೆ ನಮ್ಮ "ನಾನು"ತನಕ್ಕೆ ಪ್ರತ್ಯೇಕ ಅಸ್ತಿತ್ವವೇ ಉಳಿಯುವದಿಲ್ಲ. ಸಾಕ್ಷಾತ್ಕಾರಿ ಮಹಾಪುರುಷರು, ಸಾಧು ಸಂತರು ಹೇಳುವದೇನಂದರೆ, ಈ ವಿಶ್ವದ ರಚನೆಯಲ್ಲಿ ಆತ್ಮಾ, ಮತ್ತು ಅನಾತ್ಮಾ ಎಂಬ ಎರಡೇ ಮೂಲ ತತ್ವಗಳು ತುಂಬಿರುವವು. ಇವುಗಳಲ್ಲಿ (ಇದರ ಪೈಕಿ) ಆತ್ಮ ತತ್ವದಲ್ಲಿ (೧)ಆದ್ಯ (೨) ನಿರ್ಗುಣ, (೩) ಸ್ವಯಂಪ್ರಕಾಶ, (೪) ಸಸಂವೇದ್ಯ, (೫) ಶುದ್ಧ, (೬) ಬುದ್ಧ, ಮತ್ತು (೭) ಮುಕ್ತ ಸ್ವಭಾವ, ಇವು ಇರುವವು. ಇದರೊಳಗಿಂದಲೇ ನಿರ್ಮಾಣವಾದ ಅನಾತ್ಮ, ಭೂತ, ಸಗುಣ, ಪರಪ್ರಕಾಶ, ಪರ ಸಂವೇದ್ಯ, ಅಶುದ್ಧ, ಅಜ್ಞಾನ ಮತ್ತು ಪರತಂತ್ರ ಇವು ಇರುವವು. ಅನಾತ್ಮವೇ ಸಂಪೂರ್ಣ ಸತ್ಯವೆಂಬ ಭ್ರಮದಿಂದ ಜೀವವು ನಾನು [ಅಹಂ] ಎಂಬುದರಲ್ಲಿ ಸಿಕ್ಕಿಕೊಳ್ಳುತ್ತದೆ. ಇದರೊಳಗಿಂದ ಹೊರಗೆ ಬರಬೇಕಾದರೆ ಜೀವವು ಮೊದಲು ಸಾಕ್ಷಿತ್ವದ ಭೂಮಿಕೆಯನ್ನು ಅನುಸರಿಸಬೇಕು. ಇದರಿಂದ ದೃಶ್ಯವು ನಿಜದ ಮುಂದೆ [ಟಿಕಾವಾಗಿ, ಗಟ್ಟಿ ಯಾಗಿ] ನಿಲ್ಲುವದಿಲ್ಲ. ಅಸತ್ಯದಿಂದ ಇದ್ದ, ಇದು ಅಲ್ಲಿಂದ ಹಿಮ್ಮೆಟ್ಟುತ್ತದೆ. ಅದು ಹಿಮ್ಮೆಟ್ಟಿದ ಕೂಡಲೇ ಸಾಕ್ಷಿ ತ್ವವು ಮೂಲ ಆತ್ಮ ಸ್ವರೂಪದಲ್ಲಿ ಅಂತರ್ಧಾನವಾಗುವದು. ಈ ಎಲ್ಲ ಪ್ರಕ್ರಿಯೆಯ ರೀತಿಯಲ್ಲಿ ನಮ್ಮ "ನಾನು" ಎಂಬುದಕ್ಕೆ ಸ್ಥಾನವೆಲ್ಲಿಯೂ ಇರುವದಿಲ್ಲ. ಈ ವಿಷಯವನ್ನು ಶ್ರೀ ಸಮರ್ಥರು ಅತಿ ಸ್ಪಷ್ಟವಾಗಿ ಇಡುತ್ತಿದ್ದಾರೆ. ಯಾಕಂದರೆ "ನಾನು" ಎಂಬುದರ ನಾಶವಾಗುವದೇ ಆತ್ಮನಿವೇದನದ ಮರ್ಮವಾಗಿದೆ. [೧೪] ಆತ್ಮಸ್ವರೂಪದ ಬಗ್ಗೆ ಅನೇಕ ಕಡೆಗಳಿಂದ ವಿಚಾರ ಮಾಡಿದರೂ ಸಹ ನಮ್ಮ ದೇಹಾಹಂಕಾರಕ್ಕೆ "ನಾನು" ಎಂಬುದಕ್ಕೆ ಎಲ್ಲಿಯೂ ಸ್ಥಾನ ಉಳಿಯುವದಿಲ್ಲವೆಂಬುದನ್ನು ತಿಳಿಸುತ್ತಾರೆ. ಆತ್ಮನು ಎಲ್ಲ ಕಡೆಗೆ ವ್ಯಾಪಿಸಿರುವನು. ತನ್ನ ಆನಂದದಿಂದ ಅವನು ಸಂಪೂರ್ಣ ಎಲ್ಲದರಲ್ಲಿ ತುಂಬಿದ್ದಾನೆ. ಇದು ನಿಜವಿರುವದಾದರೆ "ನಾನು" ಎಂಬುದು ಮತ್ತೊಂದು ಪ್ರತ್ಯೇಕವಾಗಿ ಉಳಿಯಲು ಶಕ್ಯವಿಲ್ಲ. ಅಂತೆಯೇ ದೇಹಾಹಂಕಾರವು ಅಸತ್ಯವು. [೧೫] "ಕೋಽಹಮ್" ಈ ಪ್ರಶ್ನೆಗೆ ಉತ್ತರ "ಸೋಽಹಂ ಹಂಸಃ" ಅಂದರೆ "ನಾನು ಯಾರು" ಈ ಪ್ರಶ್ನೆಗೆ ಉತ್ತರ "ಅವನೇ ನಾನು ಮತ್ತು ನಾನೇ ಅವನು" ಹೀಗಿರುವದು. ಈ ಉತ್ತರದಲ್ಲಿ ತುಂಬಿರುವ ಎಲ್ಲ ಅರ್ಥವನ್ನು ವಿವರವಾಗಿ ವಿವೇಚಿಸಿ ನೋಡಬೇಕು. ಆತ್ಮ ವಿಷ ಯದ ವಿಚಾರದಲ್ಲಿ ಒಳಹೊಕ್ಕು ನೋಡಿದರೆ, "ನಾನು" ಇದೊಂದು ಪ್ರತ್ಯೇಕವಾದದ್ದಿರುವದೆಂದು ಸಿದ್ಧವಾಗುವದಿಲ್ಲ [ಬ್ರಹ್ಮವೇ ನಾನು ಎಂದು ಆಗುವದು.] [೧೬]

ಆತ್ಮಾ ನಿರ್ಗುಣ ನಿರಂಜನ । ತಯಾಸೀ ಅಸಾವೇ ಅನನ್ಯ ।
ಅನನ್ಯ ಮ್ಹಣಿಜೇ ನಾಹೀ ಅನ್ಯ । ಆಪಣ ಕೈಚಾ ತೇಥೇ ॥೧೭॥

ಆತ್ಮಾ ಮ್ಹಣಿಜೆ ತೋ ಅದ್ವೈತ । ಜೇಥೇ ನಾಹೀ ದ್ವೈತಾದ್ವೈತ ।
ತೇಥೇ ಮೀಪಣಾಚಾ ಹೇತ । ಉರೇಲ ಕೈಚಾ ॥೧೮॥

ಆತ್ಮಾ ಪೂರ್ಣತ್ವೇ ಪರಿಪೂರ್ಣ । ಜೇಥೇ ನಾಹೀ ಗುಣಾಗುಣ ।
ನಿಖಳ ನಿರ್ಗುಣೀ ಆಪಣ । ಕೋಣ ಕೈಚಾ ॥೧೯॥

ತ್ವಂಪದ ತತ್ಪದ ಅಸಿಪದ । ನಿರಸುನಿ ಸಕಳ ಭೇದಾಭೇದ ।
ವಸ್ತು ಠಾಈಚೀ ಅಭೇದ । ಆಪಣ ಕೈಚಾ ॥೨೦॥

"ಸೋಹಂ" ಅಂದರೆ ಆ ಆತ್ಮನೇ ನಾನಾಗಿರುವೆ. ಆತ್ಮಾ ನಿರ್ಗುಣ ಮತ್ತು ನಿರಂಜನ ಅಂದರೆ ನಿರ್ಮಲ ನಿಷ್ಕಲಂಕವು ಇದಕ್ಕಾಗಿ ದೃಶ್ಯವನ್ನು ದಾಟಬೇಕು. ಅಲ್ಲಿ (ದೃಶ್ಯದ ಆಚೆಗೆ) ಇದು ಮಲರಹಿತವಿರುವದು. ನಾನು ಅವನೇ ಇದ್ದದರಿಂದ ಅವನ ಕೂಡ ಅನನ್ಯ ಏಕರೂಪ ಇರುವೆನು. ಅನನ್ಯ ಅಂದರೆ ನಾನು ಮತ್ತು ಅವನು ಬೇರೆ ಅಲ್ಲ. ಅಗದೀ ಏಕರೂಪವಿರುವೆವು. ಇದು ನಿಜವಿರುವದಾದರೆ "ನಾನು" ಯಾವನೋ ಬೇರೆಯವ. ಇನ್ನೊಬ್ಬವ ಇರುವನೆಂದು ಹೇಗೆ ಅನ್ನಲಿಕ್ಕೆ ಬಂದೀತು?(ಬರಲಾರದು). ಅಂದ ಮೇಲೆ ದೇಹಾಹಂಕಾರವು ಇದು ಮೂಲದಲ್ಲಿಯೇ ಅಸತ್ಯವಿರುವದು. (೧೭) ಆತ್ಮಾ ಅದ್ವೈತವಿರುವದು, ಅದ್ವೈತವೆಂದರೆ ದ್ವೈತವಿಲ್ಲದ್ದು. ಇದರಲ್ಲಿ ಇನ್ನೊಂದಿಲ್ಲ. ಎರಡನೆಯವನೆಂಬುದು ಇಲ್ಲ. ಇದು ಅನಾತ್ಮನ ರಾಜ್ಯದಲ್ಲಿ ಅಲ್ಲಿ, ಇಲ್ಲಿ, ಎಲ್ಲೆಡೆಗೂ ದ್ವೈತ ವಿಭಿನ್ನತ್ವ, ಭೇದ ಭಾವ ಹೀಗೆ ಅನೇಕತ್ವವೇ ಹಬ್ಬಿರುತ್ತದೆ. "ನಾನು" ಮತ್ತು "ನೀನು" ಎಂಬ ದ್ವಿಭಾವ (ಭೇದಭಾವ) ಇಲ್ಲದ ವಿನಃ ಅನಾತ್ಮನ ಕಾಲು ಅಗಳಾಡಲು, ಅಲ್ಲಾಡಲು ಸಾಧ್ಯವೇ ಇಲ್ಲ, ಆತ್ಮನ ರಾಜ್ಯದಲ್ಲಿ"ನಾನು" "ನೀನೇ" ಇರುವದರಿಂದ ಅಲ್ಲಿ ಬೇಧ ಭಾವಕ್ಕೆ ಆಸ್ಪದವೇ ಇಲ್ಲ. ನಾವು ದ್ವೈತ ಸಾಮ್ರಾಜ್ಯದಲ್ಲಿ ಇರುವೆವು. ಆದುದರಿಂದಲೇ ಆತ್ಮನಿಗೆ ಅದ್ವೈತವೆನ್ನಬೇಕಾಗುವದು. ಯಾಕಂದರೆ ಆತ್ಮನು ದ್ವೈತದ ಸ್ಪರ್ಶ ಆಗಗೊಡುವದಿಲ್ಲ. ಖರೇ (ನಿಜ, ಸತ್ಯ) ವಿಚಾರದಿಂದ ನೋಡಿದರೆ ಆತ್ಮನಿಗೆ ದ್ವೈತ ಮತ್ತು ಅದ್ವೈತ ಎರಡರದೂ ಸ್ಪರ್ಶವಿಲ್ಲ. ಹೀಗೆ ಇರುವದು ನಿಜದೇ ಆದರೆ ಬೇರೆಯಾದ ಮತ್ತೊಂದು "ನಾನು" ಎಂಬುದು ಇರುವ ಕಾರಣವೇ ಇಲ್ಲ. (ಇರಲಿಕ್ಕೆ ಶಕ್ಯವೇ ಇಲ್ಲ) ಆದುದರಿಂದ ದೇಹಾಹಂಕಾರವು ಅಸತ್ಯವಿರುವದು. (೧೮) ಆತ್ಮಾ ಸರ್ವಕಡೆಯಿಂದ ಸರ್ವ ಭಾಗ (ಬಾಜೂ)ದಿಂದ ಪರಿಪೂರ್ಣವಿರುವದು, ಅದು ಮೂರ್ತಿವಂತ ಪರಿಪೂರ್ಣವಿರುವದು. ಇದರಲ್ಲಿ ಗುಣ ಮತ್ತು ಅವಗುಣ ಈ ಕಲ್ಪನೆ ಯಿಂದ ಸದಾ ಯಾವಾಗಲೂ ಮುಕ್ತವಿರುವದು. ಇಂಥ ಯಾವ ಶುದ್ಧ ನಿರ್ಗುಣ ಆತ್ಮ ಸ್ವರೂಪದಲ್ಲಿ "ನಾನು ದೇಹನಿರುವೆನು" ಈ ಕ್ಷುದ್ರವಾದ ಸಗುಣ ಕಲ್ಪನೆಯು ಹೇಗೆ ಇದ್ದೀತು? ಅರ್ಥಾತ್ ಇದು ಇರಲಿಕ್ಕೆ ಶಕ್ಯವಿಲ್ಲ. ಅಂದರೆ ದೇಹವೇ ನಾನು ಎಂಬ ಭಾವನೆ ದೇಹಾಹಂಕಾರ ಇದು ಅಸತ್ಯವಿರುವದು. ನಿಖಳ ಅಂದರೆ ಶುದ್ಧ ನಿರ್ಗುಣ ಇದು ಶ್ರೀ ಸಮರ್ಥರ ಶಬ್ದ ಪ್ರಯೋಗವು ಬಹಳ ಅರ್ಥಪೂರ್ಣವಿರುವದು.(೧೯) "ತತ್ + ತ್ವಂ + ಅಸಿ, ಅಂದರೆ ನೀನು ಆ ಬ್ರಹ್ಮ ಇರುವೆ" ಉಪನಿಷತ್‌ದಲ್ಲಿಯ ಸ್ವಾನುಭವದ ಮಹಾವಾಕ್ಯವಿರುವದು. ಇದರಲ್ಲಿಯ ಮೂರೂ ಪದಗಳ ಉಲ್ಲಂಘನ ಮಾಡಿ ಯಾವನು ಆತ್ಮಸ್ವರೂಪದ ವರೆಗೆ ಹೋಗಿ ಮುಟ್ಟುವನೋ ಅವನಿಗೆ ಭೇದ ಮತ್ತು ಅಭೇದ ಇವೆರಡೂ (ಖೋಟಾ) ಸುಳ್ಳು ಆಗುವವು, ವಾಸ್ತವಿಕವಾಗಿ ಆತ್ಮ ವಸ್ತುವು ಮೂಲದಲ್ಲಿಯೇ ಭೇದ ರಹಿತವಿದ್ದದರಿಂದ ಈ ವಸ್ತುವಿಗೆ ಭೇದ ಮತ್ತು ಅಭೇದಗಳು ಸ್ಪರ್ಶ ಮಾಡುವದಿಲ್ಲ. ಈ ಆತ್ಮ ವಸ್ತುವನ್ನು ಯಾವನು ತನ್ನಲ್ಲಿ ಹೊಂದಿರುವನೋ ಅವನಿಗೆ"ನಾನು ದೇಹವೇ ಇದ್ದೇನೆ"ಹೀಗೆ ನಾನು ಎಂಬ ಪ್ರತ್ಯೇಕ ಅವಸ್ಥೆಯು ಹೇಗೆ ಇದ್ದೀತು? ಅರ್ಥಾತ್ ಇರುವದಿಲ್ಲ. ಆದ್ದರಿಂದ "ನಾನು" ಎಂಬುದು ಅಸತ್ಯವಾಗಿದೆ. (೨೦)

ನಿರಸಿತಾ ಜೀವಶಿವ ಉಪಾಧೀ । ಜೀವಶಿವಚಿ ಕೈಚೆ ಆಧೀ ।
ಸ್ವರೂಪೀ ಹೋತಾ ದೃಢಬುದ್ಧಿ । ಆಪಣ ಕೈಚಾ ॥೨೧॥

ಆಪಣ ಮಿಥ್ಯಾ ಸಾಚ ದೇವ । ದೇವ ಭಕ್ತ ಅನನ್ಯ ಭಾವ ।
ಯಾ ವಚನಾಚಾ ಅಭಿಪ್ರಾವ । ಅನುಭವೀ ಜಾಣತೀ ॥೨೨॥

ಯಾ ನಾವ ಆತ್ಮನಿವೇದನ । ಜ್ಞಾನಿಯಾಚೇ ಸಮಾಧಾನ ।
ನವಮೆ ಭಕ್ತೀಚೆ ಲಕ್ಷಣ । ನಿರೋಪಿಲೇ ॥೨೩॥

ಪಂಚಭೂತಾ ಮಧ್ಯೇ ಆಕಾಶ । ಸಕಳ ದೇವಾಮಧ್ಯೇ ಜಗದೀಶ ।
ನವವಿಧಾ ಭಕ್ತೀ ಮಧೇ ವಿಶೇಷ । ಭಕ್ತಿ ನವಮೀ ॥೨೪॥

"ನಾನುಜೀವಇರುವೆನು"ಮತ್ತು"ಅವನು ಶಿವಇರುವನು"ಇದು ವಿದ್ಯಾ-ಅವಿದ್ಯಾದಿಂದನಿರ್ಮಾಣವಾದ ಭೇದವಿರುವದು. ಈ ಭೇದದ ಉಪಾಧಿಯ ಕಾರಣವನ್ನು ಇಲ್ಲದಂತೆ ಮಾಡಿದರೆ ಆಗ ಮೂಲ ಆತ್ಮ ಸ್ವರೂಪದಲ್ಲಿ ಜೀವ, ಶಿವ, ಎಂಬ ಭೇದವೇ ಇಲ್ಲವೆಂಬುದು ಲಕ್ಷ್ಯಕ್ಕೆ ಬರುತ್ತದೆ. ಜೀವ, ಶಿವ, ಭೇದರಹಿತವಾಗಿರುವಂಥ ಆತ್ಮಾ, ಇದೇ ನಮ್ಮ (ಖರೇ) ನಿಜ ಸ್ವರೂಪವಿರುವದೆಂಬ ನಿಶ್ಚಯವಾದ ನಂತರ ಆ ಮೇಲೆ "ನಾನು ದೇಹವಿರುವೆನು" ಎಂಬ ಪ್ರತ್ಯೇಕವಾದ ನಾನು ಎಂಬುದು ಉಳಿಯುವದೇ ಇಲ್ಲ. ಆದ್ದರಿಂದ ನಾನೊಬ್ಬ ಪ್ರತ್ಯೇಕವಾದವನು ಎಂಬ ದೇಹಾ ಹಂಕಾರ ಅಸತ್ಯವಿರುವದು. ದೃಶ್ಯ ಜಗತ್ತಿನಲ್ಲಿ ಸರ್ವಸಾಧಾರಣ[ಸಾಮಾನ್ಯ] ಮತ್ತು ವಿಶೇಷ[ಶ್ರೇಷ್ಠ, ಅಸಾಮಾನ್ಯ] ಇವುಗಳ ರಾಜ್ಯ ನಡೆಯುತ್ತದೆ. ಅನೇಕ ವ್ಯಕ್ತಿಗಳಿಗೆ ಒಂದೇ ಸಾಮಾನ್ಯವು ವ್ಯಾಪಿಸಿರುತ್ತದೆ. **ಉದಾ:-** ಅನೇಕ ಜನರು ಇದು ವಿಶೇಷವಾದರೆ ಅವರೆಲ್ಲರಲ್ಲಿ ವ್ಯಾಪಿಸಿರುವ ಮನುಷ್ಯತ್ವ[ಮನುಷ್ಯತನ]ವು ಸಾಮಾನ್ಯವು, ಇದೇ ರೀತಿ ಯಿಂದ ಜಗತ್ತಿನಲ್ಲಿ ವ್ಯಾಪಿಸಿರುವ ಸರ್ವಜೀವಗಳು ಇದು ವಿಶೇಷವು. ಆದರೆ ಅದಕ್ಕೆ [ಜೀವಕ್ಕೆ] ಚೈತನ್ಯತನದಿಂದ ವ್ಯಾಪಿಸಿ ಇರುವ ಮತ್ತು ಉಳಿಯುವಂಥ ಸಾಮಾನ್ಯ ಅಂದರೆ ಶಿವನೇ ಹೌದು. ಜೀವ ಮತ್ತು ಶಿವ ಇವು ಒಂದ ನ್ನೊಂದು ಅವಲಂಬಿಸಿ ಇರುತ್ತವೆ, ಇವೆರಡರಲ್ಲಿ ಭೇದವಿರುವದು. ಅದರಂತೆ ಅಭೇದವೂ ಇರುವದು. ಜೀವದ ಜೀವತನವು ಕರಗಿದರೆ ಇಲ್ಲವಾದರೆ ಶಿವನ ಶಿವತನವೂ ಕರಗುವದು. ಮೊದಲಿಗೆ ಜೀವವು ಸ್ವತಃ ಶಿವವಾಗುವದು. ಮತ್ತು ಆ ಮೇಲೆ ಪರಮಾತ್ಮ ಮಯವಾಗಿಯೇ ಹೋಗುವದು. ಆದ್ದರಿಂದ "ನಾನು" ಇವುಗಳಿಗಿಂತ ಭಿನ್ನನು ಎಂದು ಒಪ್ಪಿಕೊಳ್ಳಲು ಏನೂ ಆಧಾರವಿಲ್ಲ. [ಉಳಿಯುವದಿಲ್ಲ] [೨೧] ಇಲ್ಲಿಯವರೆಗೆ ಮಾಡಿದ ವಿವರದ ಸಾರಾಂಶ ವನ್ನು ಹೇಳುತ್ತಾರೆ. ಹೇಗೆಂದರೆ, ನಾನು ದೇಹ ಇರುವೆನು ಎಂಬುದು ಭ್ರಮೆ ಇರುವದು.ಇದು ಅಸತ್ಯವಿರುವದು ಒಬ್ಬನೇ ಒಬ್ಬ ಪರಮಾತ್ಮ ಮಾತ್ರ ಸತ್ಯ. ಅವನ ಕೂಡ ಅನನ್ಯರಾಗುವದು, ಏಕರೂಪವಾಗುವದು. ಬೇರೆಯಾಗಿ ಉಳಿಯದೇ ಇರುವದು. ಇದಕ್ಕೆ ಭಕ್ತಿ ಎಂದು ಹೆಸರು. ಈ ಆತ್ಮನಿವೇದನ ಭಕ್ತಿಯಿಂದ ನಿಜವಾದ ಸಮಾಧಾನ ಪ್ರಾಪ್ತವಾಗುವದು. "ನಾನು ದೇಹ ಇರುವೆನು" ಈ ಭಾವನೆಯು ಮೂಲಕ ನಾವು ಪ್ರತ್ಯೇಕರಿರುವೆವು. ಸ್ವತಂತ್ರರಿರು ವೆವು. ಸ್ವತಂತ್ರರಿರುವೆವು. ಹೀಗೆ ದೃಢವಿಶ್ವಾಸ ಹೊಂದಿರುವೆವು. ಇದು ಭ್ರಮೆಯು. ಇದು ಅಗದೀ ಅಸತ್ಯವಿದೆ. ಒಬ್ಬನೇ ಒಬ್ಬ ಭಗವಂತನು ಮಾತ್ರ ಸತ್ಯನಿರುವನು. ಅದರಂತೆ ಭಕ್ತ ಮತ್ತು ಭಗವಂತ ನೋಡಲಿಕ್ಕೆ ಬೇರೆಯಾಗಿ ಕಂಡರೂ ನಿಜಸ್ಥಿತಿ ಹಾಗಿರುವದಿಲ್ಲ. ಇಬ್ಬರೂ ಒಬ್ಬರಿಗೊಬ್ಬರು ಅನನ್ಯರಿರುತ್ತಾರೆ. ಏಕರೂಪರಿರುತ್ತಾರೆ. ನಾನು ಹೇಳುವ ಈ ಮಾತಿನ ಅರ್ಥವು ಕೇವಲ ಸ್ವಾನುಭವಿ ಪುರುಷನಿಗೆ ಮಾತ್ರ ತಿಳಿಯುವದು.[೨೨] ಭಕ್ತನು ಸಂಪೂರ್ಣ ತನ್ನ "ನಾನು" ಎಂಬುದನ್ನು ಭಗವಂತನಿಗೆ ಸ್ವಾಧೀನ ಮಾಡುವದು, ಅರ್ಪಣ ಮಾಡುವದು ಮತ್ತು ಅವನೊಂದಿಗೆ ಸಂಪೂರ್ಣವಾಗಿ, ಏಕರೂಪವಾಗಿ ಹೋಗುವದು. ಇದಕ್ಕೆ ಆತ್ಮನಿವೇದನವೆಂದು ಅನ್ನುವರು. ಆತ್ಮನಿವೇದನದಿಂದಲೇ ಜ್ಞಾನಿ ಪುರುಷನಿಗೆ ಸಮಾಧಾನ ಸಿಗುವದು. ಕೊನೆಯದಾದ ಒಂಭತ್ತನೆಯ ಭಕ್ತಿಯ ಲಕ್ಷಣಗಳನ್ನು ಇಲ್ಲಿಯವರೆಗೆ ಹೇಳಿದೆವು. ಸ್ವರೂಪದೊಂದಿಗೆ ಆತ್ಮಸ್ವರೂಪದ ಕೂಡ ತದಾತ್ಮ್ಯ ಅಂದರೆ ಏಕರೂಪ ಹೊಂದುವದರಲ್ಲಿಯೇ ಸಮಾಧಾನದ ಗುರುಕೀಲಿ (ಗೂಢವನ್ನು ಬಿಡಿಸುವ ಯುಕ್ತಿ) ಇರುವದು. ಒಟ್ಟಿನಲ್ಲಿ ಭಕ್ತಿಯಿಂದಾಗಲೀ ಅಥವಾ ಜ್ಞಾನದಿಂದಾಗಲೀ ಕೊನೆಗೆ ಆತ್ಮನಿವೇದನ ಹೊಂದಿ ಆತ್ಮಸ್ವರೂಪದೊಂದಿಗೆ ಅನನ್ಯರಾಗಬೇಕಾಗುವದು. ಸ್ವರೂಪ ಸಾಕ್ಷಾತ್ಕಾರ ಯಾವುದೇ ಮಾರ್ಗದಿಂದಾಗಲೀ ಆದರೆ ಸಾಕು. ಇದರಿಂದ ಸಮಾಧಾನದ ರೀತಿಯ ಗುರ್ತು ಒಂದೇ ಇರುವದು. ಈ ರೀತಿಯಿಂದ ಭಕ್ತಜ್ಞಾನಿಯಾಗುವನು. ಆದರೆ ಭಕ್ತನಾಗಿಯೇ ಆನಂದದಿಂದ ಇರುವನು. (೨೩) ಇಲ್ಲಿ ಆತ್ಮನಿವೇದನದ ಶ್ರೇಷ್ಠತನವನ್ನು ಅದರ ಉಚ್ಚ ಸ್ಥಾನದ ಬಗ್ಗೆ ಹೇಳುತ್ತಾರೆ. ಪಂಚಮಹಾಭೂತಗಳಲ್ಲಿ ಆಕಾಶವು ಶ್ರೇಷ್ಠ. ಎಲ್ಲ ದೇವರುಗಳಲ್ಲಿ ಜಗದೀಶ್ವರನು ಶ್ರೇಷ್ಠನು. ಇದೇ ಪ್ರಕಾರ ಭಕ್ತಿಯ ಒಂಭತ್ತುಪ್ರಕಾರಗಳಲ್ಲಿ ಒಂಭತ್ತನೆಯ ಭಕ್ತಿ ಅಂದರೆ ಆತ್ಮನಿವೇದನ ಭಕ್ತಿಯು ಸರ್ವಶ್ರೇಷ್ಠ ಭಕ್ತಿ ಇರುವದು. (೨೪)

ನವವೀ ಭಕ್ತಿ ಆತ್ಮನಿವೇದನ । ನ ಹೋತಾ ನ ಚುಕೇ ಜನ್ಮಮರಣ ।
ಹೇ ವಚನ ಸತ್ಯ ಪ್ರಮಾಣ । ಅನ್ಯಥಾ ನವ್ಹೇ ॥೨೫॥
ಐಸೀ ಹೆ ನವವಿಧಾ ಭಕ್ತೀ । ಕೇಲ್ಯಾ ಪಾವಿಜೆ ಸಾಯೋಜ್ಯ ಮುಕ್ತೀ ।
ಸಾಯೋಜ್ಯ ಮುಕ್ತೀಸ ಕಲ್ಪಾಂತೀ । ಚಳಣ ನಾಹೀ ॥೨೬॥
ತಿಹೀ ಮುಕ್ತೀಸ ಆಹೆ ಚಳಣ । ಸಾಯೋಜ್ಯ ಮುಕ್ತೀ ಅಚಳ ಜಾಣ ।
ತ್ರೈಲೋಕ್ಯಾಸ ಹೋತಾ ನಿರ್ವಾಣ। ಸಾಯೋಜ್ಯ ಮುಕ್ತೀ ಚಳೇನಾ ॥೨೭॥
ಅವಘೀಯಾ ಚತ್ವಾರ ಮುಕ್ತೀ । ವೇದಶಾಸ್ತ್ರೇ ಬೋಲತೀ ।
ತಯಾ ಮಧೆ ತೀನ ನಾಸತೀ । ಚೌಥೀ ತೇ ಅವಿನಾಶ ॥೨೮॥
ಪಹಿಲೀ ಮುಕ್ತೀ ತೆ ಸ್ವಲೋಕತಾ । ದುಸರೀ ತೇ ಸಮೀಪತಾ ।
ತಿಸರೀ ತೇ ಸ್ವರೂಪತಾ । ಚೌಥೀ ಸಾಯೋಜ್ಯ ಮುಕ್ತೀ ॥೨೯॥
ಐಸಿಯಾ ಚತ್ವಾರ ಮುಕ್ತೀ । ಭಗವದ್ಭಜನೇ ಪ್ರಾಣೀ ಪಾವತೀ ।
ಹೇ ಚಿ ನಿರೂಪಣ ಪ್ರಾಂಜಳ ಶ್ರೋತೀ । ಸಾವಧ ಪುಢೇ ಪರಿಸಾವೇ ॥೩೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಆತ್ಮನಿವೇದನ ಭಕ್ತಿ' ನಾಮ ಸಮಾಸ ನವಮ ॥

• •

ಒಂಭತ್ತನೆಯ ಭಕ್ತಿಯಾದ ಆತ್ಮನಿವೇದನವನ್ನು ಸಾಧಿಸಿಕೊಳ್ಳದಿದ್ದರೆ ಮನುಷ್ಯನ, ಭಕ್ತನ, ಜನ್ಮಮರಣ ತಪ್ಪುವದಿಲ್ಲ. ಈ ನನ್ನ ಮಾತು ಅಗದೀ (ಖರೇ) ಸತ್ಯ ಇರುವದು. ಅನುಭವಕ್ಕೆ ಹೊಂದಿಕೊಂಡು ಹೇಳಿದ್ದು, ಅನುಭವಿಸಿಯೇ ಹೇಳಿದ ಮಾತಾಗಿದೆ. ಇದು ಎಂದೂ ಸುಳ್ಳಾಗಲಾರದು. (೨೫) ಇನ್ನು ಮೇಲೆ ಮುಂದಿನ ಸಮಾಸದಲ್ಲಿ ಹೇಳಿದ ನಾಲ್ಕು ಮುಕ್ತಿಯ ವಿಷಯ ಮತ್ತು ಅದರ ಉಪಕ್ರಮ ಮಾಡುತ್ತಾರೆ. ನವವಿಧ ಭಕ್ತಿಯ ವಿಷಯ ಹೇಳಿದ್ದಾಯಿತು. ಇದರಂತೆ ಆಚರಣೆ ಮಾಡಿದರೆ ಸಾಯುಜ್ಯ ಮುಕ್ತಿ ಲಭಿಸುವದು. ಈ ಸಂಬಂಧ ವಿಶ್ವದ ಲಯವಾದರೂ ಸಹ ಸಾಯುಜ್ಯ ಮುಕ್ತಿ ಅಚಲ ಉಳಿಯುತ್ತದೆ. ಇದರಲ್ಲಿ ಏಷ್ಟೂ ಬದಲಾಗುವದಿಲ್ಲ. (೨೬) ಒಟ್ಟು ಮುಕ್ತಿಗಳು ನಾಲ್ಕು ಪ್ರಕಾರದವು. ಅದರ ಪೈಕಿ ಮೊದಲಿನ ಮೂರು ಮುಕ್ತಿಗಳಲ್ಲಿ ಹೆಚ್ಚು ಕಡಿಮೆ(ಫರಕ) ಆಗುತ್ತದೆ. ಸಾಯುಜ್ಯ ಮುಕ್ತಿ ಮಾತ್ರ ಅಚಲ ಉಳಿಯುತ್ತದೆ· ಇದರಲ್ಲಿ ಏನೂ ಫರಕ ಆಗುವದಿಲ್ಲ. ಮೂರೂ ಲೋಕಗಳ ಕೊನೆಯ ಅಂತ್ಯ ಆದರೂ ಸಹ ಸಾಯುಜ್ಯ ಮುಕ್ತಿಯಲ್ಲಿ ಯಾವ ಹೆಚ್ಚು ಕಡಿಮೆಯೂ ಆಗುವದಿಲ್ಲ. ಇದು ಹೇಗಿರುವದೋ ಹಾಗೇ ಕಾಯಂ ಇರುವದು. (೨೭) ವೇದ ಮತ್ತು ಶಾಸ್ತ್ರ ಇವು ನಾಲ್ಕು ಪ್ರಕಾರದ ಮುಕ್ತಿಯವರ್ಣನೆಯನ್ನು ಮಾಡಿದವು. ಈನಾಲ್ಕರಲ್ಲಿ ಮೊದಲಿನ ಮೂರುಮುಕ್ತಿಗಳು ನಶ್ವರ ಇರುವವು. ಅಶಾಶ್ವತ ವಿರುವವು. ಆದರೆ ನಾಲ್ಕನೆಯ ಮುಕ್ತಿಯು ಶಾಶ್ವತ ಮತ್ತು ಅವಿನಾಶಿ ಇರುವದು. (೨೮) ಮೊದಲನೆಯ ಮುಕ್ತಿ ಸಾಲೋಕ್ಯ (ಸಲೋಕತಾ), ಎರಡನೆಯದು ಸಾಮೀಪ್ಯ [ಸಮೀಪತಾ], ಮೂರನೆಯದು ಸಾರೂಪ್ಯ [ಸ್ವರೂಪತಾ] ನಾಲ್ಕನೆಯದು ಸಾಯುಜ್ಯ (ಸಾಯುಜ್ಯತಾ) [೨೯] ಹೀಗೆ ನಾಲ್ಕು ಮುಕ್ತಿಗಳು ಇರುವವು. ಭಗವಂತನ ಭಕ್ತಿಯಿಂದ ಮನುಷ್ಯನಿಗೆ ಇವು ಪ್ರಾಪ್ತವಾಗುವವು· ಈ ವಿಷಯವನ್ನು ಮುಂದಿನ ಸಮಾಸದಲ್ಲಿ ಸ್ಪಷ್ಟವಾಗಿ ಹೇಳುವೆವು. ಶ್ರೋತೃಗಳು ಏಕಚಿತ್ತದಿಂದ ಕೇಳಬೇಕು, (೩೦)

ಶ್ರೀ ದಾಸಬೋಧದ ಗುರು ಶಿಷ್ಯರ ಸಂವಾದದೊಳಗಿನ ನಾಲ್ಕನೆಯ ದಶಕದಲ್ಲಿಯ "ಆತ್ಮನಿವೇದನ" ಎಂಬ ಹೆಸರಿನ ಒಂಭತ್ತನೆಯ ಸಮಾಸವು ಮುಗಿದುದು.

● ●

## ದಶಕ ೪. ಸಮಾಸ ೧೦. ಮುಕ್ತಿ ಚತುಷ್ಟಯ (ನುಡಿ ೩೧)

"ಮೋಕ್ಷಯತಿ ದುಃಖಮ್ ಅನೇನ ಇತಿ ಮುಕ್ತಿ:" ಯಾವತ್ತೂ ಪ್ರಕಾರದ ದುಃಖದಿಂದ, ಬಂಧನ ದಿಂದ ವಾಸನಾ [ಆಶೆ, ಬಯಕೆ]ದಿಂದ ಮತ್ತು ಅಜ್ಞಾನದಿಂದ ಬಿಡುಗಡೆ ಹೊಂದುವದು, ಮುಕ್ತ ಸ್ವಾತಂತ್ರ್ಯ ಪಡೆಯುವ ಅವಸ್ಥೆಗೆ ಮುಕ್ತಿ ಅನ್ನುವರು. ಮುಕ್ತಿ, ಕೈವಲ್ಯ, ಮೋಕ್ಷ, ನಿರ್ವಾಣ, ಅಪವರ್ಗ, ಅಮೃತ, ನಿಃಶ್ರೇಯಸ, ಈ ಶಬ್ದಗಳೆಲ್ಲ ಸಮಾನಾರ್ಥ ಸೂಚಕಗಳಿರುವವು. ಆದರೂ ಸಹ ಭಾರತೀಯ ದರ್ಶನ [ತತ್ವಜ್ಞಾನ] ದಲ್ಲಿ ಮುಕ್ತಿಯ ಕಲ್ಪನೆಯ ತರ್ಕ, ಯುಕ್ತಿ, ವಿಚಾರಗಳಲ್ಲಿ ಒಂದೇ ಸಮ ಇರುವದಿಲ್ಲ **ಉದಾ:-** ಉಪನಿಷತ್ ಗಳಲ್ಲಿ "ಅಮೃತತ್ವದ ಪ್ರಾಪ್ತಿ" ಈ ಕಲ್ಪನೆಯನ್ನು ಮೇಲಿಂದ ಮೇಲೆ ಹೇಳಿದ್ದಾರೆ. ಬೌದ್ಧ, ಆಚಾರ್ಯರು, ನಿರ್ವಾಣ ಎಂಬ ಶಬ್ದ ಪ್ರಯೋಗ [ಕಲ್ಪನಾ] ಮಾಡಿದ್ದಾರೆ. ಅದರಂತೆ ಸಾಂಖ್ಯರು ಮತ್ತು ಯೋಗ ದರ್ಶನಕಾರರು "ಕೈವಲ್ಯ" ಇದು ಮೋಕ್ಷದ ಸ್ವರೂಪವೆಂದು ಹೇಳಿದ್ದಾರೆ. ನ್ಯಾಯ ದರ್ಶನಕಾರರು ಮೋಕ್ಷಕ್ಕೆ "ಅಪವರ್ಗ" ವೆನ್ನು

ತ್ತಾರೆ. ಆದರೆ ಮೀಮಾಂಸಕರದು "ಪ್ರಪಂಚ ಸಂಬಂಧ ವಿಲಯೋ ಮೋಕ್ಷಃ" ಎಂದು ಪ್ರತಿಪಾದಿಸುತ್ತದೆ. ಅದ್ವೈತ ವೇದಾಂತದ ಹೇಳಿಕೆ ಏನಂದರೆ, "ಅವಿದ್ಯಾಸ್ತಮಯೋ ಮೋಕ್ಷಃ ಸಾಚಬಂಧ ಉದಾಹೃತಃ" ಅಂದರೆ ಅವಿದ್ಯೆಯ ಅಥವಾ ಅಜ್ಞಾನದ ಬಂಧನದಿಂದ ಮುಕ್ತರಾಗುವದು. ಬಿಡುಗಡೆ ಹೊಂದುವದು; ಮುಕ್ತಿ ಅಂದರೆ ಮೋಕ್ಷವೇ ಆಗಿದೆ. ಭಕ್ತರೂಪನಾದ ಜೀವಾತ್ಮನು ಭಗವತ್ ಸ್ವರೂಪನಾದ ಪರಮಾತ್ಮನೊಂದಿಗೆ ತದಾತ್ಮ್ಯ ಹೊಂದುವದು ಅನುಭವಿಸುವದು. ಇದು ಮುಕ್ತಿಯ ಪ್ರಧಾನ ಲಕ್ಷಣವೆಂದು ತಿಳಿಯಬೇಕು. ಶ್ರೀ ಸಮರ್ಥರು ಅದ್ವೈತ ವೇದಾಂತಿಗಳು ಅಂತೆಯೇ ಅವರಿಗೆ ಮುಕ್ತಿಯ ಬಗ್ಗೆ ಮೇಲೆ ವಿವರಿಸಿದ ವ್ಯಾಖ್ಯೆ ಮಾನ್ಯವಿರುವದು. "ಮುಕ್ತ ಅವಸ್ಥೆ" ಅಂದರೆ ಪೂರ್ಣ ಜ್ಞಾನಾವಸ್ಥೆಯೇ ಆಗಿದೆ. ನಮ್ಮ ಸ್ವಸ್ವರೂಪ [ಆತ್ಮಸ್ವರೂಪ] ವು ಜ್ಞಾನಮಯವಿರುವದು. ಯಾಕಂದರೆ ಅಲ್ಲಿ ಅಜ್ಞಾನಕ್ಕೆ ಲವಲೇಶವೂ ಸ್ಥಳವಿಲ್ಲ. ಜ್ಞಾನವು ಅವಿನಾಶಿ ಇರುವದು. ಇದಕ್ಕೆ ಜನ್ಮ ಮರಣವಿಲ್ಲ ಅಂದರೆ ಜ್ಞಾನಕ್ಕೆ ಉದಯಾಸ್ತಗಳಿಲ್ಲ. ಜ್ಞಾನವು ಅನಂತವಾಗಿದೆ. ಅನಾದಿ ಆಗಿದೆ. ಸ್ವತಂತ್ರವಿರುವದು. ದೇಶ, ಕಾಲ ಮತ್ತು ವಸ್ತು ಇವುಗಳಿಂದ ಜ್ಞಾನವು ಬಂಧಿತವಾಗುವದಿಲ್ಲ. ಜ್ಞಾನವು ಸ್ವಯಂಪ್ರಕಾಶವಿದೆ. ಸ್ವತಃ ಸಿದ್ಧವಿದೆ. ಸ್ವಸಂವೇದ್ಯವಿದೆ. ಜ್ಞಾನವು ಪರಮಾತ್ಮ ಸ್ವರೂಪವಿದೆ. ಇಂಥ ಜ್ಞಾನವು ಯಾರ ಹೃದಯದಲ್ಲಿ ಶೋಭಿಸುವದೋ ಅಂಥವನು ಎಲ್ಲ ಪ್ರಕಾರದ ಬಂಧನಗಳಿಂದ ಮುಕ್ತನಾಗಿರುವನೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಕೆಲವು ವೇದಾಂತಿಗಳು ಮುಕ್ತಿಯಲ್ಲಿ ನಾಲ್ಕು ಪ್ರಕಾರಗಳಿರುಪವೆಂದು ಅನ್ನುವರು. (ಒಂದನೆಯದು) ಸಲೋಕತಾ-ಭಗವಂತನ ಭಕ್ತನು ಯಾವ ಲೋಕದಲ್ಲಿ ವಾಸ್ತವ್ಯ ಮಾಡಿರುವನೋ ಮತ್ತು ಎಲ್ಲಿ ಭಗವಂತನ ಸಗುಣ ದರ್ಶನ ಸತತ ಆಗುತ್ತಿರುವದೋ ಅಂಥದಕ್ಕೆ ಸಲೋಕತಾ ಮುಕ್ತಿ ಅನ್ನುವರು. (ಎರಡನೆಯದು) **ಸಮೀಪತಾ:-** ಪಶು, ಪಕ್ಷಿ, ಅಲಂಕಾರ, ಮಾಲಿ ಮುಂತಾದ ರೂಪದಿಂದ ಭಗವಂತನ ಹತ್ತಿರವಿರುವ ಸುಸಂಧಿ ಸಿಗುತ್ತದೆ. ಇದಕ್ಕೆ ಸಮೀಪತಾ ಮುಕ್ತಿಯೆನ್ನುವರು. (ಮೂರನೆಯದು) **ಸರೂಪತಾ:-** ಭಗವಂತನ ಚಿಂತನದಿಂದ ಭಗವಂತನ ರೂಪವೇ ಆಗಿ ಅವನ ಪಾರ್ಷದ ಗಣಗಳಲ್ಲಿ ಅಂದರೆ ಅಂತರಂಗದ [ಸಮೀಪದ] ಸೇವಕರ ಸ್ಥಳದಲ್ಲಿ ಸ್ಥಾನ ಸಿಗುವದು. ಇದಕ್ಕೆ ಸರೂಪತಾ ಮುಕ್ತಿ ಎನ್ನುವರು. [ನಾಲ್ಕನೆಯದು] **ಸಾಯುಜ್ಯತಾ:–** ಉಪಾಸನೆ, ಈಶ್ವರನ ಚಿಂತನೆ ಮಾಡಿ ಮಾಡಿ ನಮ್ಮ ಅಭಿಮಾನವು ಸಂಪೂರ್ಣ ನಾಶವಾಗುವದು. ಆಗ ಭಗವಂತನೊಂದಿಗೆ ಉಪಾಸಕ ಭಕ್ತ ತದಾಕಾರ ಹೊಂದುವನು. ಇದಕ್ಕೆ ಸಾಯುಜ್ಯ ಮುಕ್ತಿಯೆನ್ನುವರು. ಶ್ರೀ ಸಮರ್ಥರು ಈ ಮುಕ್ತಿಯೇ ನಿಜವಾದ ಮುಕ್ತಿ ಎಂದು ಒಪ್ಪಿದ್ದಾರೆ ತತ್ವಜ್ಞಾನದ ದೃಷ್ಟಿಯಿಂದ ಇದೇ ತರ್ಕಶುದ್ಧವಾಗಿದೆ. ಭಕ್ತಿಯು ಸಂಪೂರ್ಣ ಉತ್ಕರ್ಷ ಹೊಂದಬೇಕಾದರೆ ಅದ್ವೈತ ಸಿದ್ಧಾಂತವನ್ನು ಕೈ ಬಿಡಬೇಕಾಗುವದೆಂಬ ದೊಡ್ಡ [ಗೈರ ಸಮಜೂತದ] ತಪ್ಪು ತಿಳಿವಳಿಕೆ ಕೆಲವರಲ್ಲಿ ಇರುವದು. ನಿರತಿಶಯ ಪ್ರೇಮವೇ ಈ ಭಕ್ತಿಯ ಪ್ರಾಣವಾಗಿದೆ. ಪ್ರೇಮದ ವಸ್ತುವಿನೊಂದಿಗೆ ಸಂಪೂರ್ಣ ಏಕರೂಪವಾಗಿ ಹೋಗುವದಕ್ಕೆ ಪ್ರೇಮದ ಪರಮೋತ್ಕರ್ಷವೆಂದು ತಿಳಿಯುತ್ತಾರೆ. ಇದು ನಿಜವಿರುವದೇ ಆದರೆ ಭಗವಂತನ ಮೇಲೆ ಪ್ರೇಮ ಮಾಡುತ್ತಾ ಮಾಡುತ್ತಾ ಭಕ್ತನು ಭಗವತ್ ಸ್ವರೂಪನೇ ಆಗುವನು. ಭಗವಂತನೇ ಆಗುವನು ಎಂದು ಹೇಳಿದರೆ ಇದರಲ್ಲಿ ತಪ್ಪೇನೂ ಆಗಲಾರದು. ಇದರ ಹೊರತಾಗಿ ಮಹಾನ್ ಭಕ್ತರ ಅನುಭವವೂ ಸಹ ಇದೇ ರೀತಿ ಇರುವದು. ಆದುದರಿಂದ ಸಾಯುಜ್ಯ ಮುಕ್ತಿಯೇ ಸರ್ವ ಶ್ರೇಷ್ಠ ಮುಕ್ತಿಯೆಂದು ಎಲ್ಲರೂ ಒಪ್ಪುವರು. ಭಕ್ತಿಯಲ್ಲಿ ಬಹಳ ಮಾಧುರ್ಯವಿರುವದು–ಎಳ್ಳಷ್ಟೂ ಸುಳ್ಳಲ್ಲ. ಆದರೆ ಇದಕ್ಕೆ ಜ್ಞಾನದ ಹಿನ್ನೆಲೆ [ಪಾರ್ಶ್ವಭೂಮಿ] ಇಲ್ಲದ ಹೊರತು ಈ ಜಗತ್ತಿನಲ್ಲಿ ಕೇವಲ ಭಕ್ತಿಯಿಂದ ಎಷ್ಟು ಕಾರ್ಯವಾಗಬೇಕೋ ಅಷ್ಟು ಕಾರ್ಯಆಗಲಾರದು. ಇದನ್ನು ತಿಳಿದವರಾದ ಮಹಾರಾಷ್ಟ್ರೀಯ ಸಂತರು ಜನರಲ್ಲಿ ಬುದ್ಧಿ ಪ್ರಧಾನ ಭಕ್ತಿ ಮಾರ್ಗದ ಪ್ರಸಾರ ಮಾಡಿದರು ಶ್ರೀ ಸಮರ್ಥರಾದರೂ ದಾಸಬೋಧದಲ್ಲಿ ಇದೇ ಭೂಮಿಕಾದಿಂದ ನಮಗೆ ಬೋಧ ಮಾಡಿದ್ದಾರೆ. ಅವರಿಗೆ ಅಭಿಪ್ರೇತವಿದ್ದ ಭಕ್ತಿ ಎಂದೂ ಅವ್ಯವಹಾರಿಕ ಅಥವಾ ಅತಿರೇಕಿ ಎಂದು ಅನ್ನಿಸಿಕೊಳ್ಳಲಿಲ್ಲ. ಅನ್ನಿಸಿಕೊಳ್ಳಲಾರದು. ಅನ್ನಿಸಿಕೊಳ್ಳಲಿಕ್ಕೆ ಸಾಧ್ಯವೇ ಇಲ್ಲವೆಂಬುದು ತ್ರಿವಾರ ಸತ್ಯವಾಗಿದೆ. [ಸತ್ಯವಿರುವದು.]

## ಸಮಾಸ ದಶಮ : ಮುಕ್ತಿ ಚತುಷ್ಟಯ

॥ಶ್ರೀರಾಮ॥ ಮುಳೀ ಬ್ರಹ್ಮ ನಿರಾಕಾರ । ತೇಥೇ ಸ್ಫೂರ್ತಿರೂಪ ಅಹಂಕಾರ ।
ತೋ ಪಂಚಭೂತಾಂಚಾ ವಿಚಾರ । ಜ್ಞಾನದಶಕೀ ಬೋಲಿಲಾ ॥೧॥
ತೋ ಅಹಂಕಾರ ವಾಯೋರೂಪ । ತಯಾವರೀ ತೇಜಾಚೇ ಸ್ವರೂಪ ।
ತಯಾ ತೇಜಾಚ್ಯಾ ಆಧಾರೇ ಆಪ । ಆವರ್ಣೋದಕ ದಾಟಲೇ ॥೨॥
ತಯಾ ಆವರ್ಣೋದಕಾಚ್ಯಾ ಆಧಾರೇ । ಧರಾ ಧರಿಲೀ ಫಣಿವರೇ ।
ವರತೀ ಛಪನ್ನ ಕೋಟೀ ವಿಸ್ತಾರೇ । ವಸುಂಧರಾ ಹೇ ॥೩॥
ಇಯೇವರೀ ಪರಿಘ ಸಪ್ತಸಾಗರ । ಮಧ್ಯ ಮೇರು ಮಹಾಥೋರ ।
ಅಷ್ಟ ದಿಗ್ಪಾಳ ತೋ ಪರಿವಾರ । ಅಂತರೇ ವೇಷ್ಟಿತ ರಾಹಿಲಾ ॥೪॥
ತೋ ಸುವರ್ಣಾಚಾ ಮಹಾಮೇರು । ಪೃಥ್ವೀಸ ತಯಾಚಾ ಆಧಾರು ।
ಚೌರ್‍ಯ್ಯಾಸೀ ಸಹಸ್ರ ವಿಸ್ತಾರು । ರುಂದೀ ತಯಾಚೀ ॥೫॥
ಉಂಚ ತರೀ ಮರ್ಯಾದೆ ವೇಗಳಾ । ಭೂಮೀಮಧೇ ಸಹಸ್ರ ಸೋಳಾ ।
ತಯಾಭೋವತಾ ವೇಷ್ಟಿತ ಪಾಳಾ । ಲೋಕಾಲೋಕ ಪರ್ವತಾಚಾ ॥೬॥
ತಯಾಐಲಿಕಡೆ ಹಿಮಾಚಳ । ಜೇಥೇ ಪಾಂಡವ ಗಳಾಲೆ ಸಕಳ ।
ಧರ್ಮ ಆಣಿ ತಮಾಳನೀಳ । ಪುಢೇ ಗೇಲೇ ॥೭॥
ಜೇಥೇ ಜಾವಯಾ ಮಾರ್ಗ ನಾಹೀ । ಮಾರ್ಗೀ ಪಸರಲೆ ಮಹಾ ಅಹೀ ।
ಸಿತಸುಖೇ ಸುಖಾವಲೆ ತೇ ಹೀ। ಪರ್ವತರೂಪ ಭಾಸತೀ ॥೮॥
ತಯಾ ಐಲಿಕಡೆ ಸೇವಟೀ ಜಾಣ । ಬದ್ರಿಕಾಶ್ರಮ ಬದ್ರಿನಾರಾಯಣ ।
ತೇಥೇ ಮಹಾತಾಪಸೀ ನಿರ್ವಾಣ । ದೇಹತ್ಯಾಗಾರ್ಥ ಜಾತೀ ॥೯॥
ತಯಾಐಲಿಕಡೆ ಬದ್ರಿ ಕೇದಾರ । ಪಾಹೋನ ಯೇತಿ ಲಾಹಾನ ಥೋರ ।
ಐಸಾ ಹಾ ಅವಘಾ ವಿಸ್ತಾರ । ಮೇರುಪರ್ವತಾಚಾ ॥೧೦॥
ತಯಾ ಮೇರು ಪರ್ವತಾ ಪಾಠಾರೀ । ತೀನ ಶೃಂಗೇ ವಿಷಮಹಾರೀ ।
ಪರಿವಾರೇ ರಾಹಿಲೇ ತಯಾವರೀ। ಬ್ರಹ್ಮಾ ವಿಷ್ಣು ಮಹೇಶ ॥೧೧॥
ಬ್ರಹ್ಮಶೃಂಗ ತೋ ಪರ್ವತಾಚಾ । ವಿಷ್ಣುಶೃಂಗ ತೋ ಮರ್ಗಜಾಚಾ ।
ಶಿವಶೃಂಗ ತೋ ಸ್ಫಟಿಕಾಚಾ । ಕೈಳಾಸ ನಾಮ ತ್ಯಾಚೇ ॥೧೨॥

## ದಶಕ ೪. ಸಮಾಸ ೧೦. ಮುಕ್ತಿ ಚತುಷ್ಟಯ [ನುಡಿ ೩೨]

ಈ ಸಮಾಸದಲ್ಲಿ ಇಪ್ಪತ್ತೈದು ಓವಿವರೆಗೆ (ಶ್ಲೋಕ) ಶ್ರೀ ಸಮರ್ಥರು ಆಗಿನ ಕಾಲದಲ್ಲಿ ರೂಢವಾಗಿದ್ದ ವಿಶ್ವರಚನೆಯ ಕಲ್ಪನೆಯ ವಿಷಯವಾಗಿ ಉಪಯೋಗಿಸಿದ್ದಾರೆ.ಇದರ ಆಧಾರದಿಂದ ಭೂಲೋಕ ಮತ್ತು ಸ್ವರ್ಗಲೋಕ ಇವುಗಳ ವರ್ಣನೆಯುನ್ನು ಹೇಳಿದ್ದಾರೆ. ಮತ್ತು ಮೊದಲಿನ ಮೂರು ಮುಕ್ತಿಗಳ ಸ್ವರೂಪವನ್ನು ಸ್ಪಷ್ಟಪಡಿಸಿದ್ದಾರೆ.

ಮೂಲದಲ್ಲಿ ಬ್ರಹ್ಮನು ಅವ್ಯಕ್ತ ಮತ್ತು ಆಕಾರರಹಿತನಿರುವನು. ಆಗ ಅಲ್ಲಿ ಈ ವ್ಯಕ್ತ ಮತ್ತು ಸಾಕಾರ ಸೃಷ್ಟಿ ವಗೈರೆ ಇದ್ದಿಲ್ಲ. ಅಥವಾ ಇರಲಿಲ್ಲ. ಆ ನಿರಾಕಾರ ಬ್ರಹ್ಮನಲ್ಲಿ ಒಂದು ಸ್ಫುರಣ (ಸ್ಫೂರ್ತಿ) ಉದ್ಭವಿಸಿತು, ಅದೇ ಅಹಂಕಾರವು. ಇದರಿಂದ ಪಂಚಭೂತಾತ್ಮಕ ಸೃಷ್ಟಿ ಹೇಗೆ ನಿರ್ಮಾಣವಾಯಿತೆಂಬುದರ ವಿಚಾರವನ್ನು ಜ್ಞಾನ ದಶಕದಲ್ಲಿ ಅಂದರೆ ಎಂಟನೆಯ ದಶಕದಲ್ಲಿ ಸವಿಸ್ತರ ಹೇಳಿರುತ್ತದೆ. (೧) ಅಹಂಕಾರದ ಸ್ಫುರಣವು ಶಕ್ತಿರೂಪ (ವಾಯುರೂಪ)ವಿರುತ್ತದೆ. ಇದರಿಂದ ತೇಜ (ಪ್ರಕಾಶ) ಪ್ರಕಟವಾಯಿತು. ಮತ್ತು ಆ ತೇಜದ ಆಧಾರದಿಂದ ವಿಶ್ವವ್ಯಾಪಿಯಾಗಿ ನೀರು ತುಂಬಿಕೊಂಡಿತು. (೨) ಆ ನೀರಿನ ಆಧಾರ ಆಶ್ರಯದಿಂದ ಆದಿಶೇಷನು ತನ್ನ ತಲೆಯ ಮೇಲೆ ಪೃಥ್ವಿಯನ್ನು ಹೊತ್ತು ನಿಂತನು.ಈ ಪೃಥ್ವಿಯುಐವತ್ತಾರು ಕೋಟಿ ಯೋಜನದಷ್ಟು ವಿಸ್ತಾರವಾಗಿದೆ.(೩) ಇದನ್ನು ಸಪ್ತ ಸಮುದ್ರವು ಸುತ್ತುಗಟ್ಟಿದೆ. ಮಧ್ಯದಲ್ಲಿ ಬಹು ಪ್ರಚಂಡವಾದ ಮೇರು ಪರ್ವತವಿರುವದು. ಎಂಟು ದಿಕ್ಕಿಗೆ ಎಂಟು ಜನ ದಿಶಾ (ದಿಕ್) ಪಾಲಕರಿದ್ದು ಇವರು ಸುತ್ತು ಮುತ್ತು ಗಡಿ ರಕ್ಷಿಸುತ್ತಾರೆ. (೪) ಆ ಪ್ರಚಂಡವಾದ ಮೇರು ಪರ್ವತವು ಬಂಗಾರದ್ದಿರುವದು. ಪೃಥ್ವಿಗೆ ಇದೇ ಆಧಾರವು. ಎಂಭತ್ನಾಲ್ಕು ಸಾವಿರ ಯೋಜನ ಇದರ ಅಗಲವಿದೆ. (೫) ಇದರ ಎತ್ತರದ ಅಳತೆಯುನ್ನು ಹೇಳುವದು ಶಕ್ಯವಿಲ್ಲ. ಇದು ಭೂಮಿಯಲ್ಲಿ ಹದಿನಾರು ಸಾವಿರ ಯೋಜನ ಒಳಪಟ್ಟಿದೆ. (ಹುದಗಿದೆ) ಇದರ ರಕ್ಷಣೆಗಾಗಿ ಇದರ ಸುತ್ತು ಮುತ್ತು ಲೋಕಾಲೋಕ ಪರ್ವತಗಳು, ಸಾಲು ಗುಡ್ಡಗಳು ಹಬ್ಬಿ ಸುತ್ತುವರಿದಿವೆ. (೬) ಮೇರುಪರ್ವತದಈಚೆಗೆ ಹಿಮಾಲಯವಿದೆ. ಇಲ್ಲಿ ಎಲ್ಲ ಪಾಂಡವರು ಕ್ಷೀಣರಾಗಿ ನೆಲಕ್ಕೆ ಬಿದ್ದರು. ಕೇವಲ ಧರ್ಮ ಮತ್ತು ನಾಯಿ ರೂಪದಲ್ಲಿ ಬಂದಿದ್ದ ಯಮದೇವ ಇವರಿಬ್ಬರೇ ಮುಂದೆ ಸ್ವರ್ಗಕ್ಕೆ ಹೋದರು. (೭) ಹಿಮಾಲಯದಿಂದ ಹೋಗಲಿಕ್ಕೆ ದಾರಿ ಇಲ್ಲ. ಯಾಕೆಂದರೆ ಹಾದಿಯಲ್ಲಿ ಬಹುದೊಡ್ಡ ಪ್ರಚಂಡವಾದ ಸರ್ಪ ಅಡ್ಡ ಬಿದ್ದಿವೆ. ಬರ್ಫದ ಶೈತ್ಯಕ್ಕೆ (ಥಂಡಗಾರತನಕ್ಕೆ) ಸರ್ಪವು (ಆರಾಮ ಭೋಗಿಸುವದು) ನೋಡಲಿಕ್ಕೆ ಗುಡ್ಡದಂತೆ ಆನಂದದಿಂದ ಅಡ್ಡ ಬಿದ್ದಿರುತ್ತದೆ. (೮) ಅದರ ಇತ್ತ ಕಡೆಯ ತುದಿಗೆ ಬದರಿಕಾಶ್ರಮ ಮತ್ತು ಬದರೀನಾರಾಯಣ ಇರುವವು. ದೊಡ್ಡ ದೊಡ್ಡ ತಪಸ್ವಿಗಳು ಮೋಕ್ಷ ಪ್ರಾಪ್ತಿಗಾಗಿ ಕೊನೆಗೆ ಇಲ್ಲಿ ದೇಹವಿಡಲು ಬರುತ್ತಾರೆ. (೯) ಅದರ ಇತ್ತ ಕಡೆಗೆ ಬದರಿ ಕೇದಾರ ಇರುವದು. ಸಣ್ಣವರು, ದೊಡ್ಡವರು ಎಲ್ಲರೂ ಬಂದು ಇದನ್ನು ನೋಡಿ ಹೋಗುತ್ತಾರೆ. ಅಂತೂ ಮೇರು ಪರ್ವತದ ವಿಸ್ತಾರ ಈ ಪ್ರಕಾರವಿರುವದು. (೧೦) ಈ ಮೇರು ಪರ್ವತದ ಮೇಲ್ಭಾಗದಲ್ಲಿ ಅಂಕು ಡೊಂಕಾದ ಮೂರು ದಿಶೆಗಳಿಗೆ ಮೋರೆ ಮಾಡಿದ ಮೂರು ಶಿಖರಗಳಿರುವವು. ಇವುಗಳಲ್ಲಿ ತಮ್ಮ ಪರಿವಾರ ಸಹಿತವಾಗಿ ಬ್ರಹ್ಮ, ವಿಷ್ಣು, ಮಹೇಶ್ವರರು ಒಂದೊಂದು ಶಿಖರದಲ್ಲಿ ಇರುತ್ತಾರೆ. (೧೧) ಬ್ರಹ್ಮನಿಗಿರುವ ಶಿಖರವು ಸಾದಾ ಕಲ್ಲಿನದಿರುವದು, ವಿಷ್ಣು ಇರುವ ಶಿಖರವು ಪಚ್ಚೆ ರತ್ನದ್ದು ಇರುವದು, ಶಂಕರ ಇರುವ ಶಿಖರ ಸ್ಫಟಿಕದ್ದಿರುವದು. ಇದಕ್ಕೆ ಕೈಲಾಸವೆನ್ನುವರು. (೧೨)

ವೈಕುಂಠ ನಾವು ವಿಷ್ಣು ಶೃಂಗಾಚೇ । ಸತ್ಯಲೋಕ ನಾವು ಬ್ರಹ್ಮ ಶೃಂಗಾಚೇ ।
ಅಮರಾವತೀ ಇಂದ್ರಾಚೇ । ಸ್ಥಳ ಖಾಲತೇ ॥೧೩॥
ತೇಥೇ ಗಣ ಗಂಧರ್ವ ಲೋಕಪಾಳ । ತೇತಿಸ ಕೋಟೀ ದೇವ ಸಕಳ ।
ಚೌದಾ ಲೋಕ ಸುವರ್ಣಾಚಳ। ವೇಷ್ಟಿತ ರಾಹಿಲೇ ॥೧೪॥
ತೇಥೇ ಕಾಮಧೇನೂಚೀ ಖಿಲಾರೇ । ಕಲ್ಪತರೂಚೀ ಬನೇ ಅಪಾರೇ ।
ಅಮೃತಾಚೀ ಸರೋವರೇ । ಠಾಈ ಠಾಈ ಉಚಂಬಳತೀ ॥೧೫॥
ತೇಥೇ ಉದಂಡ ಚಿಂತಾಮಣೀ । ಹಿರೆ ಪರಿಸಾಂಚಿಯಾ ಖಾಣೀ ।
ತೇಥೇ ಸುವರ್ಣಮಯೀ ಧರಣೀ। ಲಖಲಖಾಯ ಮಾನ ॥೧೬॥
ಪರಮ ರಮಣೀಯೇ ಫಾಂಕತೀ ಕಿಳಾ। ನವರತ್ನಾಚಿಯಾ ಪಾಷಾಣ ಸಿಳಾ ।
ತೇಥೇ ಅಖಂಡ ಹರುಷ ವೇಳಾ । ಆನಂದಮಯೇ ॥೧೭॥
ತೇಥೇ ಅಮೃತಾಚೀ ಭೋಜನೇ । ದಿವ್ಯ ಗಂಧೇ ದಿವ್ಯ ಸುಮನೇ ।
ಅಷ್ಟ ನಾಯಕಾ ಗಂಧರ್ವ ಗಾಯನೇ । ನಿರಂತರ ॥೧೮॥
ತೇಥೇ ತಾರುಣ್ಯ ನೊಸರೇನಾ । ರೋಗವ್ಯಾಧೀ ಹಿ ಅಸೇನಾ ।
ವೃಧಾಪ್ಯ ಆಣೀ ಮರಣ ಯೇನಾ । ಕದಾಕಾಳೀ ॥೧೯॥
ತೇಥೇ ಯೇಕಾಹೂನಿ ಯೇಕ ಸುಂದರ । ತೇಥೇ ಯೇಕಾಹೂನಿ ಯೇಕ ಚತುರ ।
ಧೀರ ಉದಾರ ಆಣೀ ಶೂರ । ಮರ್ಯಾದೆ ವೆಗಳೇ ॥೨೦॥
ತೇಥೇ ದಿವ್ಯದೇಹ ಜ್ಯೋತಿರೂಪೇ । ವಿದ್ಯುಲ್ಲತೇ ಸಾರಿಖೀ ಸ್ವರೂಪೇ ।
ತೇಥೇ ಯೆಶಕೀರ್ತಿ ಪ್ರತಾಪೇ । ಸಿಮಾ ಸಾಂಡಿಲೀ ॥೨೧॥
ಐಸೇ ತೇ ಸ್ವರ್ಗಭುವನ । ಸಕಳ ದೇವಾಚೇ ವಸ್ತೀ ಸ್ಥಾನ ।
ತಯಾ ಸ್ಥಳಾಚೇ ಮಹಿಮಾನ । ಬೋಲಿಜೆ ತಿತುಕೇ ಥೋಡೇ ॥೨೨॥
ಯೇಥೇ ಜ್ಯಾ ದೇವಾಚೇ ಭಜನ ಕರಾವೇ । ತೇಥೇ ತೇ ದೇವಲೋಕೀ ರಾಹಾವೇ।
ಸ್ವಲೋಕತಾ ಮುಕ್ತೀಚೇ ಜಾಣಾವೇ । ಲಕ್ಷಣ ಐಸೇ ॥೨೩॥
ಲೋಕೀ ರಾಹಾವೇ ತೇ ಸ್ವಲೋಕತಾ। ಸಮೀಪ ಅಸಾವೇ ತೇ ಸಮೀಪತಾ ।
ಸ್ವರೂಪಚಿ ವ್ಹಾವೇ ತೇ ಸ್ವರೂಪತಾ । ತಿಸರೀ ಮುಕ್ತೀ ॥೨೪॥
ದೇವಸ್ವರೂಪ ಜಾಲಾದೇಹೀ । ಶ್ರೀವತ್ಸ ಕೌಸ್ತುಭ ಲಕ್ಷ್ಮೀನಾಹೀ ।
ಸ್ವರೂಪತೆಚೇ ಲಕ್ಷಣ ಪಾಹೀ । ಐಸೇ ಅಸೆ ॥೨೫॥
ಸುಕೃತ ಆಹೆ ತೋ ಭೋಗಿತೀ। ಸುಕೃತ ಸರತಾ ಚ ಢಕಲೂನ ದೇತೀ ।
ಆಪಣ ದೇವ ತೇ ಅಸತೀ । ಜೈಸೆ ತೈಸೆ ॥೨೬॥

ವಿಷ್ಣು ಇರುವ ಶಿಖರಕ್ಕೆ ವೈಕುಂಠ ಎಂದು ಹೆಸರು. ಬ್ರಹ್ಮದೇವ ಇರುವ ಶಿಖರಕ್ಕೆ ಸತ್ಯಲೋಕವೆಂದು ಹೆಸರು. ಇದರ ಕೆಳಗೆ ಅಮರಾವತಿಯೆಂಬ ಹೆಸರಿನ ಇಂದ್ರನ ಸ್ಥಾನವಿದೆ. (೧೩) ಇಲ್ಲಿ ಇವನ ಕೂಡ ಗಣ, ಗಂಧರ್ವ, ಲೋಕಪಾಲ, ಮೂವತ್ಮೂರು ಕೋಟಿ ದೇವತೆಗಳು ಇರುವರು. ಸಪ್ತಸ್ವರ್ಗ ಮತ್ತು ಸಪ್ತ ಪಾತಾಳ, ಹೀಗೆ ಹದಿನಾಲ್ಕು ಲೋಕಗಳು ಮೇರು ಪರ್ವತದ ಮೇಲೆ ವಸತಿ ಮಾಡಿರುವವು. (೧೪) ಇಲ್ಲಿ ಕಾಮಧೇನುವಿನ ಹಿಂಡು (ಗುಂಪು) ಇರುವದು· ಕಲ್ಪವೃಕ್ಷದ ಅಸಂಖ್ಯ ಜಂಗಲ್ (ಅರಣ್ಯ) ಇರುವವು. ಅಲ್ಲಲ್ಲಿ ಅಮೃತದಿಂದ ತುಂಬಿ ತುಳಕಾಡುವ ಸರೋವರಗಳಿರುವವು. (೧೫) ಪರ್ವತದಲ್ಲಿ ಬಹಳಷ್ಟು ಚಿಂತಾಮಣಿ ಇರುವವು· ರತ್ನ ಮತ್ತು ಪರಿಸ (ಪರುಷ) ಗಲ್ಲಿನ ಖಣಿಗಳಿರುವವು. ಇಲ್ಲಿನ ಭೂಮಿ ಬಂಗಾರದ್ದಿರುವದರಿಂದ ಒಂದೇ ಸವನೆ ಲಕಲಕಿಸುತ್ತದೆ· ಹೊಳೆಯುತ್ತದೆ. (೧೬) ಇಲ್ಲಿ ನವರತ್ನದ ಪಾಷಾಣ ಶಿಲೆಗಳು ಇರುವವು, ಇವುಗಳ ಅತಿ ಸುಂದರ ತೇಜ ಪ್ರಕಾಶವು ಸುತ್ತು ಮುತ್ತು ಹರಡಿರುತ್ತದೆ. ಇಲ್ಲಿ ಸದಾ ಸರ್ವಕಾಲ ಹರ್ಷ ಮತ್ತು ಆನಂದ ತುಂಬಿರುತ್ತದೆ. (೧೭) ಇಲ್ಲಿಯ ಊಟ ಅಮೃತದ್ದಿರುವದು. ದಿವ್ಯ ಸುವಾಸನೆಯ ದಿವ್ಯ ಹೂವುಗಳಿರುವವು. ಅಪ್ಸರೆಯರ ಪೈಕಿ ಅಷ್ಟನಾಯಿಕೆಯರ ಮತ್ತು ಗಂಧರ್ವರ ಗಾಯನ ಸದಾ ಚಾಲೂ ಇರುತ್ತದೆ. (೧೮) ಇಲ್ಲಿ ತಾರುಣ್ಯವು ಎಂದೂ ಕಡಿಮೆ ಆಗುವದಿಲ್ಲ. ಯಾರಿಗೂ ರೋಗ ರುಜಿ ಎಂದೂ ಬರುವದಿಲ್ಲ. ಯಾರಿಗೂ ಮುಪ್ಪು ಮತ್ತು ಮರಣ ಎಂದೂ ಬರುವದಿಲ್ಲ(೧೯) ಇಲ್ಲಿ ಎಲ್ಲವೂ ಒಂದಕ್ಕಿಂತ ಒಂದು ಹೆಚ್ಚು ಸುಂದರವಿರುವವು. ಚತುರವಿರುವವು. ಮತ್ತು ಇವರ ಧೈರ್ಯ ಔದಾರ್ಯ ಮತ್ತು ಶೌರ್ಯಕ್ಕೆ ಸೀಮೆಯೇ ಇಲ್ಲ. ಇಂಥ ಜನರೇ ಇಲ್ಲಿ ಇರುವರು. (೨೦) ಇಲ್ಲಿಯ ದೇಹವು ದಿವ್ಯ ಪ್ರಕಾಶ ಮಯವಿರುವದು, ಇಲ್ಲಿಯ ರೂಪ ವಿದ್ಯುತ್ ಪ್ರಕಾಶದಂತೆ ಲಕಲಕ ಹೊಳೆಯುವಂತಹದು. ಮತ್ತು ಯಶ ಕೀರ್ತಿ ಪ್ರತಾಪಗಳು ಅಪಾರ ಅಮರ್ಯಾದವಿರುವವು.(೨೧) ಈ ಸ್ವರ್ಗಭುವನ ಇಂಥದಿರುವದು: ಮೂವತ್ಮೂ ದೇವತೆಗಳು ಇರುವ ಸ್ಥಳವೇ ಇದಾಗಿದೆ. ಈ ಸ್ಥಳದ ಮಹಿಮೆಯನ್ನು ಎಷ್ಟು ಹೇಳಿದರೂ ಕಡಿಮೆಯೇ ಸರಿ. (೨೨) ಮೊದಲು ಸಲೋಕತಾ ಮುಕ್ತಿಯ ಬಗ್ಗೆ ಹೇಳುವರು. ಈ ಜಗತ್ತಿನಲ್ಲಿರುವ ಕಾಲದಲ್ಲಿ ಯಾವ ದೇವರ ಉಪಾಸನೆಯನ್ನು ನಾವು ಮಾಡಿರುವೆವೋ ಆ ದೇವರ ಲೋಕದಲ್ಲಿ ಮೃತ್ಯುವಿನ ನಂತರ ಇರಲಿಕ್ಕೆ ಸ್ಥಳ ಸಿಗುವದು. ಸಲೋಕತಾ ಮುಕ್ತಿಯ ಲಕ್ಷಣ ಹೀಗಿರುತ್ತದೆ. (೨೩) ಈಗ ಎರಡನೆಯ ಮತ್ತು ಮೂರನೆಯ ಮುಕ್ತಿಯ ಬಗ್ಗೆ ಸಮೀಪತಾ ಮತ್ತು ಸರೂಪತಾ ಇವುಗಳ ಬಗ್ಗೆ ಹೇಳುತ್ತಾರೆ. ದೇವಲೋಕದಲ್ಲಿ ಇರುವದಕ್ಕೆ ಸಿಗುವದು ಸಲೋಕತಾಅನಿಸಿವರೆ, ದೇವರ ಹತ್ತಿರ ಇರಲಿಕ್ಕೆ ಸಿಗುವದು ಇದು ಸಮೀಪತಾ ಮುಕ್ತಿ ಅನಿಸುವದು. ಇದು ಎರಡನೆಯ ಮುಕ್ತಿಯಾಗಿದೆ. ದೇವರ ರೂಪವೇ ನಿಮಗೆ ಬರುತ್ತದೆ, ದೇವರಂತೆ ಕಾಣುವಿರಿ. ಇದು ಸರೂಪತಾ ಎಂಬ ಹೆಸರಿನ ಮೂರನಯ ಮುಕ್ತಿಯು. (೨೪) ಉಪಾಸನಾ ಮಾಡುವ ಮಾನವ ಜೀವಕ್ಕೆ ದೇವರ ಸ್ವರೂಪ ಬಂದರೂ ಸಹ ಇವರಿಗೆ ಶ್ರೀವತ್ಸ, ಕೌಸ್ತುಭ, ಮತ್ತು ಲಕ್ಷ್ಮಿ ಇವು ಸಿಗುವದಿಲ್ಲ. ಸರೂಪತಾ ಮುಕ್ತಿಯ ಲಕ್ಷಣ ಹೀಗಿರುವದು. (೨೫) ಈ ಮೂರು ಮುಕ್ತಿಗಳನ್ನು ಸಾಧಿಸಿದ ಜೀವವು ಪುಣ್ಯವಾನವಾದದ್ದು ನಿಜ. ಇವುಗಳ ವಾಸ್ತವ್ಯ ಸ್ವರ್ಗಲೋಕದಲ್ಲಿರುವದೂ ನಿಜ. ಆದರೆ (ಪರಂತೂ) ಯಾವಾಗ ಅದರ ಪುಣ್ಯ ಕ್ಷಯವಾಗುವದೋ ಆಗ ಜೀವವು ಸ್ವರ್ಗದಿಂದ ಕೆಳಗೆ ಬರಬೇಕಾಗುವದು. ಪುಣ್ಯ ಸಂಚಯವಿರುವವರೆಗೆ ಸ್ವರ್ಗದಲ್ಲಿದ್ದು ಅಲ್ಲಿಯ ಸುಖ ಭೋಗಿಸಲಿಕ್ಕೆ ಬರುತ್ತದೆ. ಆದರೆ ಪುಣ್ಯ ಮುಗಿಯಿತೆಂದರೆ ದೇವರು ಜೀವವನ್ನು ಕೆಳಗೆ ದಬ್ಬುವನು. ದೇವರು ಮಾತ್ರ ಅಲ್ಲಿಯೇ ಕಾಯಂ ಆಗಿ ಇರುವನು. (೨೬)

ಮ್ಹಣೋನಿ ತಿನೀ ಮುಕ್ತಿ ನಾಸಿವಂತ । ಸಾಯೋಜ್ಯಮುಕ್ತಿ ತೇ ಶಾಶ್ವತ ।
ತೇಹಿ ನಿರೋಪಿಜೇಲ ಸಾವಚಿತ್ತ । ಏಕ ಆತಾ ॥೨೭॥
ಬ್ರಹ್ಮಾಂಡ ನಾಸೇಲ ಕಲ್ಪಾಂತೀ । ಪರ್ವತಾಸಹಿತ ಜಳೇಲ ಕ್ಷಿತೀ ।
ತೇವ್ಹಾ ಅವಘೇ ಚ ದೇವ ಜಾತೀ। ಮಗ ಮುಕ್ತಿ ಕೈಚ್ಯಾ ತೇಥೇ ॥೨೮॥
ತೇವ್ಹಾ ನಿರ್ಗುಣ ಪರಮಾತ್ಮಾ ನಿಶ್ಚಳ । ನಿರ್ಗುಣ ಭಕ್ತಿ ತೇ ಹೀ ಅಚಳ ।
ಸಾಯೋಜ್ಯಮುಕ್ತಿ ತೇ ಕೇವಳ । ಜಾಣಿಜೆ ಐಸೀ ॥೨೯॥
ನಿರ್ಗುಣೀ ಅನನ್ಯ ಅಸತಾ । ತೇಣೇ ಹೋಯ ಸಾಯೋಜ್ಯತಾ ।
ಸಾಯೋಜ್ಯತಾ ಮ್ಹಣಿಜೆ ಸ್ವರೂಪತಾ । ನಿರ್ಗುಣ ಭಕ್ತೀ ॥೩೦॥
ಸಗುಣ ಭಕ್ತಿ ತೇ ಚಳೇ । ನಿರ್ಗುಣ ಭಕ್ತಿ ತೇ ನ ಚಳೇ ।
ಹೇ ಅವಘೇ ಪ್ರಾಂಜಳ ಕಳೆ । ಸದ್ಗುರು ಕೇಲಿಯಾ ॥೩೧॥

● ●

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
ಮುಕ್ತಿಚತುಷ್ಟಯ ನಾಮ ಸಮಾಸ ದಶಮ ॥

ದಶಕ ಚವಥಾ ಸಮಾಪ್ತ

ಈ ಕಾರಣದಿಂದ ನೋಡಿದರೆ ಮೂರು ಮುಕ್ತಿಗಳು ನಾಶವಂತವಿರುವವು. ನಾಲ್ಕನೆಯದಾದ ಸಾಯುಜ್ಯ ಮುಕ್ತಿಯು ಮಾತ್ರ ಶಾಶ್ವತವಾದದ್ದಿರುವದು. (ಕಾಯಂ ಇರುವಂಥಾದ್ದು ಅದೆ) ಅದರ ವರ್ಣನೆ ಮಾಡುವೆ. ಲಕ್ಷ್ಯಗೊಟ್ಟು ಕೇಳಿರಿ, ಈ ಮುಕ್ತಿಯ ಭಾವಾರ್ಥವೇನೆಂದರೆ–ಉಪಾಸನೆಯು ಎಲ್ಲಿಯವರೆಗೆ ಮಾಯೆಯ ಅಥವಾ ಸಗುಣ ಅಥವಾ ವ್ಯಕ್ತ ಇಲ್ಲವೆ ದೃಶ್ಯದ ಅಳವಿನಲ್ಲಿ ನಡೆಯುವದೋ ಅಲ್ಲಿಯವರೆಗೆ ಜೀವದ ಬೆಳವಣಿಗೆಯಲ್ಲಿ ವೃದ್ಧಿಯಾಗುತ್ತಿದ್ದರೂ ಸಹ ಅದಕ್ಕೆ ಆತ್ಮಸಾಕ್ಷಾತ್ಕಾರವಾಗುವದಿಲ್ಲ. ಒಂದನೆಯ ಸಲೋಕತಾವಸ್ಥೆಯಲ್ಲಿ ಜೀವವು ಭಗವಂತನ ಸ್ಮರಣ ಮತ್ತು ಅಲ್ಲಿಯ ಅಲೋಕದ ವಾತಾವರಣದಲ್ಲಿ ಇರುತ್ತದೆ. ಎರಡನೆ ಸಮೀಪತಾವಸ್ಥೆಯಲ್ಲಿ ಅದು ಭಗವಂತನ ಸಾನ್ನಿಧ್ಯ ಸಮೀಪದಲ್ಲಿ ಮತ್ತು ಅವನ ಸಹವಾಸ (ಜೊತೆಯಲ್ಲಿ) ದಲ್ಲಿಯೇ ಇರುತ್ತದೆ. ಮೂರನೆಯ ಸರೂಪತಾವಸ್ಥೆಯಲ್ಲಿ ಅದು ಒಳಗೂ ಹೊರಗೂ ಭಗವಂತನಿಂದ ತುಂಬಿ ಭಗವಂತನಂತೆ ಕಾಣುತ್ತದೆ. ಒಟ್ಟಿನಲ್ಲಿ ಭಗವಂತನ ಮೇಲಿನ ಪ್ರೇಮದ ಬಗ್ಗೆ ಇರುವ ಒಂದಕ್ಕಿಂತ ಒಂದು ಹೆಚ್ಚಿನ ಶ್ರೇಷ್ಠ ತರಗತಿಯ ಮೂರು ಪಾವುಟಿಗೆಗಳಾಗಿವೆ. ಆದರೆ ಇದಕ್ಕೂ ಮುಂದೆ ಹೋಗಿಯೇ ಪರಮಾತ್ಮ ಸ್ವರೂಪದಲ್ಲಿ ಜೀವವು ವಿಲೀನಗೊಳ್ಳ ಬೇಕಾಗುವದು. (೨೭) ಸಗುಣದಿಂದ (ನಿರ್ಗುಣದಲ್ಲಿ) ಹೋಗಬೇಕಾಗುವದು. ದೇಹ ಬುದ್ಧಿಯಿಂದ ದೇವ ಬುದ್ಧಿಯಲ್ಲಿ ಹೋದ ಮೇಲೆ ಅಲ್ಲಿ ನಿಲ್ಲದೇ ಅದಕ್ಕೂ ಮುಂದಿರುವ ಆತ್ಮ ಬುದ್ಧಿಯಲ್ಲಿ ಹೋಗುವದು ಅವಶ್ಯ ವಾಗಿದೆ. ಕಲ್ಪಾಂತ್ಯದ ಸಮಯದಲ್ಲಿ ಈ ವಿಶ್ವನಾಶವಾಗುತ್ತದೆ. ಆಗ ಪರ್ವತ ಸಹಿತವಾಗಿ ಪೃಥ್ವಿಯು ಸುಟ್ಟು ಹೋಗುತ್ತದೆ. ಆ ವೇಳೆಯಲ್ಲಿ ಎಲ್ಲ ದೇವರು ಇಲ್ಲದಾಗುವರು. ಅಂದ ಮೇಲೆ ಆ ಸಂಹಾರದಲ್ಲಿ ಮೊದಲಿನ ಮೂರು ಮುಕ್ತಿಗಳು ಹೇಗೆ ಉಳಿಯಬಲ್ಲವು, ಅರ್ಥಾತ್ ಉಳಿಯಲಾರವು. (೨೮) ಆ ಕಾಲದಲ್ಲಿ ನಿರ್ಗುಣ ಪರಮಾತ್ಮ ಸ್ವರೂಪವು ಹೇಗೆ ಇರುವದೋ ಹಾಗೆಯೇ ನಿಶ್ಚಲವಾಗಿರುತ್ತದೆ. ಆ ನಿರ್ಗುಣದ ಭಕ್ತಿಯೂ ಸಹ ಹಾಗೇ ನಿಶ್ಚಲ ಉಳಿಯುತ್ತದೆ. ಸಾಯುಜ್ಯ ಮುಕ್ತಿಯೆಂದರೆ ಹೀಗಿರುತ್ತದೆ. (೨೯) ನಿರ್ಗುಣ ಪರಮಾತ್ಮ ಸ್ವರೂಪದಲ್ಲಿ ಅನನ್ಯತನದಿಂದ ಏಕರೂಪರಾಗಿ ವಿಲೀನ ಹೊಂದಿದ ಕೂಡಲೇ ಸಾಯುಜ್ಯ ಮುಕ್ತಿ ದೊರೆಯುತ್ತದೆ. ಸ್ವಸ್ವರೂಪದಲ್ಲಿ ಸಮರಸವಾಗುವದೇ ನಿರ್ಗುಣ ಭಕ್ತಿ. ಇದೇ ಸಾಯುಜ್ಯತಾ ಮುಕ್ತಿ ಎಂದು ತಿಳಿಯಿರಿ. (೩೦) ಸಗುಣವು ನಾಶವಂತವಿದ್ದು, ಸಗುಣಭಕ್ತಿಯೂ ನಾಶವಂತವಿರುತ್ತದೆ. ನಿರ್ಗುಣವು ಶಾಶ್ವತವೆಂದು ನಿರ್ಗುಣ ಭಕ್ತಿಯೂ ಶಾಶ್ವತ (ಕಾಯಂ) ಉಳಿಯುತ್ತದೆ. ಸದ್ಗುರುವಿನ ಸಹವಾಸದಿಂದ ಸದ್ಗುರುವಿಗೆ ಶರಣು ಹೋದಾಗ ಅವನಿಂದ ಎಲ್ಲವೂ ಸ್ಪಷ್ಟವಾಗಿ ತಿಳಿಯುತ್ತದೆ. ಅನುಭವಕ್ಕೂ ಬರುತ್ತದೆ. (೩೧) ಮೂಲ ಪರಮಾತ್ಮ ಸ್ವರೂಪಕ್ಕೆ ನಾಮ (ಹೆಸರು) ರೂಪ ಇಲ್ಲ. ಭಕ್ತನು ಯಾವಾಗ ಉಪಾಸ್ಯ ದೇವತೆಯನ್ನು ಭಜಿಸುವನೋ ಆಗ ಅವನ ಮುಂದೆ ಇರುವಂಥ ದೇವರ ರೂಪವು ಮಾನವೀ ಕಲ್ಪನೆಯಿಂದ ಉಂಟಾದದ್ದೇ ಇರುವದು. ಪ್ರೇಮದಜೋಪಾಸನೆ ಮಾಡಿ ಆ ರೂಪದೊಂದಿಗೆ ತದಾಕಾರ (ಏಕರೂಪ) ಹೊಂದುವದೇ ಈ ಮಾನವತೆಯ ಚರಮ ಸೀಮೆಯಾಗಿದೆ. ಇದು ನಮ್ಮ ಆದ್ಯ ಕರ್ತವ್ಯವೆಂಬುದರಲ್ಲಿ ಸಂಶಯವಿಲ್ಲ. ಆದರೆ ಅಲ್ಲಿಯೂ ಸ್ಥಳ ಕಾಲದ ಮರ್ಯಾದೆ ಇದ್ದೇ ಇರುವದು. ಅದನ್ನು ದಾಟಿ ಮುಂದೆ ಹೋಗದ ಹೊರತು ಅಪಾರವಾದ ಅನಂತದಲ್ಲಿ ಜಿಗಿಯಲಿಕ್ಕೆ, ಹಾರಲಿಕ್ಕೆ, ಮುಳುಗಲಿಕ್ಕೆ ಆಗುವದಿಲ್ಲ. ಮಾನವತಾ ಅಂದರೆ ಮನುಷ್ಯತ್ವವನ್ನು ಹಿಂದೆ ಹಾಕಿ ಮುನ್ನುಗ್ಗಿ ಅನಂತದಲ್ಲಿ ಇಲ್ಲದಂತೆ ಆಗದ ಹೊರತು ಪರಮಾತ್ಮ ಸ್ವರೂಪದ ಸಾಕ್ಷಾತ್ಕಾರವಾಗುವದಿಲ್ಲ. ಅಂತೆಯೇ ಸಗುಣಭಕ್ತಿ ಮತ್ತು ನಿರ್ಗುಣ ಭಕ್ತಿ ಎಂದು ಭೇದ ಮಾಡಿ ಶ್ರೀ ಸಮರ್ಥರು ಅವರಲ್ಲಿ ನಿರ್ಗುಣ ಭಕ್ತಿಗೆ ಅತಿ ಉನ್ನತ ಸ್ಥಾನ ಕೊಟ್ಟಿದ್ದಾರೆ. ನಿರ್ಗುಣ ಭಕ್ತಿಗೆ ಹೋಗಿ ಮುಟ್ಟಿದ ಭಕ್ತ, ಸಗುಣ ಭಕ್ತಿಯನ್ನು ಎಂದೂ ಹೀಗಳೆಯುವದಿಲ್ಲ. ಕೇವಲ (ಭಕ್ತ) ಸಗುಣ ಭಕ್ತಿಯ ಪ್ರೇಮರಸ ತೆಗೆದುಕೊಳ್ಳುವಾಗ ಅವನ ಮನದಲ್ಲಿ ಭ್ರಮದ ಲವಲೇಶವೂ ಇರುವದಿಲ್ಲ. ಇಷ್ಟೇ ಅಲ್ಲ, ಅವನಿಗೆ ಸಗುಣ ಭಕ್ತಿಯ ರುಚಿ ಎಷ್ಟೊಂದು ಹತ್ತಿರುವದೆಂಬುದು ಸಂತ ಸಾಮ್ರಾಟ್ ಶ್ರೀ ತುಕೋಬಾರಾಯರು ಹೇಳುತ್ತಾರೆ–"ಅದ್ವೈತಿ ತೋನಾಹಿ ಮಾಝೆ ಸಮಾಧಾನ: ಗೋಡಹೇ ಚರಣಸೇವಾ ತುಝಿ"– ಅರ್ಥ "ಅದ್ವೈತ ದಲ್ಲಿ ನನಗೆ ಸಮಾಧಾನವಿಲ್ಲ. ಹೇ! ಪಾಂಡುರಂಗಾ!! ನಿನ್ನ ಚರಣ ಸೇವೆ ಬಹಳ ರುಚಿಕರ"ವೆಂದು ಹೇಳಿದ್ದಾರೆ. ಇರಲಿ. ಭಕ್ತಿಯ ಈ ರಹಸ್ಯ ಗಂಟಲದಲ್ಲಿಳಿಯಬೇಕಾದರೆ, ತಿಳಿಯಬೇಕಾದರೆ ಶ್ರೀ ಸದ್ಗುರುವಿನ ಸಹವಾಸವು ಅವಶ್ಯವಾಗಿ ಬೇಕಾಗುವದು.

ಶ್ರೀ ದಾಸಬೋಧದಲ್ಲಿಯ ಗುರು ಶಿಷ್ಯರ ಸಂವಾದದಲ್ಲಿಯ "ಮುಕ್ತಿ ಚತುಷ್ಟಯ"
ಎಂಬ ಹೆಸರಿನ ಹತ್ತನೆಯ ಸಮಾಸವು ಮುಕ್ತಾಯವಾಯಿತು.

# ದಶಕ ೫. ಮಂತ್ರದ್ದು

ಮಾನವ ಜೀವನದಲ್ಲಿಯ ವಿವಿಧ ಕ್ಷೇತ್ರಗಳಲ್ಲಿ ಹಗಲೂ ರಾತ್ರಿ (ಬಿಟ್ಟೂ ಬಿಡದೆ) ಜ್ಞಾನ ಸಾಧನೆಯು ನಡೆಯುವದು. ಈ ಜ್ಞಾನದ ಹಿಂದಿನಿಂದಲೇ ಅಂದರೆ ಆ ಮೇಲೆ ಸಾಮರ್ಥ್ಯ(ಬಲ) ಬರುವದು. ಈ ಸಾಮರ್ಥ್ಯದ (ಜೋರಿನ) ಬಲದಿಂದಲೇ ಮನುಷ್ಯನು ತನಗೆ ಬೇಕಾದದ್ದನ್ನು ದೊರಕಿಸಿಕೊಳ್ಳುವ [ಧಡಪಡ] ಪ್ರಯತ್ನ ಮಾಡುವನು. ಪರಮಾರ್ಥ ಸಾಧನೆಯೂ ಸಹ ಆತ್ಮಜ್ಞಾನ ಅಥವಾ ಬ್ರಹ್ಮಜ್ಞಾನವನ್ನು ಮಾಡಿ ಕೊಡುವದಕ್ಕಾಗಿಯೇ ಇರುವದು. ಸರ್ವ ಪ್ರಕಾರದ ಜ್ಞಾನವು ಅನುಭವ ರೂಪವಿರುವದು, ಪರಂತೂ ದೃಶ್ಯ ಅಂದರೆ ಕಾಣುವಂಥ-ನೋಡುವಂಥ ವಸ್ತುವಿನ ಜ್ಞಾನವು ಲೌಕಿಕ [ಐಹಿಕ, ವ್ಯವಹಾರಿಕ] ವಿರುವದು, ಅದೇ ಅದೃಶ್ಯ (ಕಾಣದಿರುವ, ತೋರದಿರುವ) ವಸ್ತುವಿನ ಜ್ಞಾನವು ಅಲೌಕಿಕವಿರುವದು. ಲೌಕಿಕ ಜ್ಞಾನದಲ್ಲಿ ಜ್ಞಾತಾ [ತಿಳಿದುಕೊಳ್ಳುವವನು]ಅಥವಾ ದೃಷ್ಟಾ [ನೋಡುವವನು] ಜ್ಞೇಯ [ತಿಳಿಯಬೇಕಾದ ವಿಷಯ,ಚೈತನ್ಯ ಸ್ವರೂಪ-ಪರಬ್ರಹ್ಮ]ಕ್ಕಿಂತ ಅಥವಾ ದೃಶ್ಯ [ಕಾಣುವಂಥ, ನೋಡುವಂಥಹ]ಕ್ಕಿಂತ ಯಾವಾಗಲೂ ಭಿನ್ನ [ಬೇರೆ]ನಾಗಿರುವನು. ಬೇರೆಯಾಗಿದ್ದೇ ಅನುಭವ ಹೊಂದುವನು. ಅಲೌಕಿಕ ಜ್ಞಾನದಲ್ಲಿ ಜ್ಞಾತಾ [ತಿಳಿದುಕೊಳ್ಳುವವನು] ಅಥವಾ ದೃಷ್ಟಾ [ನೋಡುವವ] ನು ಜ್ಞೇಯಕ್ಕಿಂತ ಅಥವಾ ದೃಶ್ಯಕ್ಕಿಂತ ಪ್ರತ್ಯೇಕಿ [ಬೇರೆ] ಯಾಗಿ ಉಳಿಯುವದಿಲ್ಲ. [ಇರುವದಿಲ್ಲ] ಏಕರೂಪನಾಗಿ ಅನುಭವ ಹೊಂದುವನು. ಈಶ್ವರ, ಅಥವಾ ಆತ್ಮಾ ಅಥವಾ ಬ್ರಹ್ಮನು ಅದೃಶ್ಯನಿರುವನು. ಅತೀಂದ್ರಿಯ [ಇಂದ್ರಿಯಗಳಿಗೆ ಅಗೋಚರ] ನಿರುವನು. ಇವನ ಅನುಭವ ಅಲೌಕಿಕವಿರುವದರಿಂದ ಇದರಲ್ಲಿ ಜ್ಞಾತಾ[ತಿಳಿಯುವವನು] ಮತ್ತು ಜ್ಞೆಯ [ತಿಳಿಯಬೇಕಾದ ವಸ್ತು] ಏಕರೂಪವಾಗಿ ಹೋಗುವವು. ಇದು ಒದಗಿ ಬರಬೇಕಾದರೆ ಎರಡು ಮಾರ್ಗಗಳಿರುವವು, **ಒಂದನೇಯ ಮಾರ್ಗವೆಂದರೆ:**—"ನಾನು"ಎಂದು ನೋಡುವವ ಹಾಗೂ ತಿಳಿಯುವವನಾದ ದೃಷ್ಟಾ ಮತ್ತು"ನೀನು" ಎಂದು ಇರುವಂಥ ಈ ದೃಶ್ಯದ ಜೋಡಿಯ ಪೈಕಿ ದೃಷ್ಟಾನನ್ನು (ನೋಡುವವನನ್ನು) ದೃಶ್ಯ[ನೋಡುವಂಥ]ದಲ್ಲಿ ವಿಲೀನ ಮಾಡುವದಕ್ಕೇ ಭಕ್ತಿಮಾರ್ಗವೆನ್ನುವರು. **ಎರಡನೇಯ ಮಾರ್ಗವೆಂದರೆ:**—ದೃಷ್ಟಾ(ನೋಡುವವನು)ಮತ್ತು ದೃಶ್ಯದ [ನೋಡುವಂಥ] ಈ ಜೋಡಿಯಲ್ಲಿ ದೃಶ್ಯವನ್ನು ವಿಲೀನ ಮಾಡಿ ಕೇವಲ ದೃಷ್ಟಾನನ್ನು ಉಳಿಸುವದು. ಇದಕ್ಕೆ ಜ್ಞಾನಮಾರ್ಗವೆನ್ನುವರು. ಯಾವಯಾವುದು, ಏನೇನುಇರುವದೋ ಇದೆಲ್ಲ ನಮ್ಮ ಅನುಭವದಲ್ಲಿ ಬಂದು[ಬರುವದು] ಅದೆಲ್ಲದರಲ್ಲಿಯೂ ಭಗವಂತನನ್ನು ನೋಡುತ್ತ ನೋಡುತ್ತ ಕೊನೆಗೆ ಆ ಭಗವಂತನೇ ನಮ್ಮಲ್ಲಿಯೂ ಸಹ ಕಾಣಹತ್ತುವನು. ಮತ್ತು ಆತ್ಮ ಸಾಕ್ಷಾತ್ಕಾರವಾಗುವದು. ಇದೇ ಭಕ್ತಿ ಮಾರ್ಗವು. ಯಾವ ಯಾವುದು ಏನೇನು ಇರುವದೋ ಅದೆಲ್ಲವೂ ನಮ್ಮ ಅನುಭವದಲ್ಲಿ ಬರುತ್ತದೆ. ಅದು, ಅದು, ಇದಲ್ಲ-ಇದಲ್ಲ ("ನೇತಿ-ನೇತಿ") ಎಂದು ನಿಶ್ಚಯ ಮಾಡುತ್ತಾ ಸರ್ವ ದೃಶ್ಯದ ಪರಿಹಾರ [ದೃಶ್ಯವು ಸುಳ್ಳು ಎಂದು] ಮಾಡುವದು[ಮಾಡಬೇಕು] ಆಮೇಲೆ ನಿಮ್ಮ [ಸ್ವತಃದ] ದೇಹ, ಪ್ರಾಣ, ಮನಸ್ಸು ಮತ್ತು ಬುದ್ಧಿ ಇವೂ ಸಹ ದೃಶ್ಯದಲ್ಲಿಯೇ ಸಮಾವಿಷ್ಟ[ಸಮಾವೇಶ] ವಾಗುವವೆಂಬ ರಹಸ್ಯ ಗೊತ್ತಾಗಿ [ತಿಳಿದು] [ದೃಶ್ಯವೆಲ್ಲ ನಶ್ವರ ಎಂಬ ಜ್ಞಾನವಾಗಿ] ಶುದ್ಧ ಸ್ವಯಂ ಪ್ರಕಾಶ "ನಾನು" ಇದರ ಸಾಕ್ಷಾತ್ಕಾರ [ಅರಿವು] ಆಗುವದು. ಇದು ಜ್ಞಾನಮಾರ್ಗವಾಗಿದೆ. ವಾಸ್ತವಿಕ ವಿಚಾರ ಮಾಡಿದರೆ ಆತ್ಮಾ ನಿಮ್ಮ ಸ್ವರೂಪವೇ ಇರುವದು. ಅದು ಸಾಧ್ಯ [ಉದ್ದಿಷ್ಟ ಗುರಿ] ಅಲ್ಲ. ಅಥವಾ ಸಾಧನವೂ ಅಲ್ಲ.ಸ್ವತಃದ ದರ್ಶನ ಪಡೆಯುವದಕ್ಕೆ ಸಾಧನದ ಆವಶ್ಯಕತೆಯೇ ಇರುವದಿಲ್ಲ. ಸ್ವ-ಸ್ವರೂಪವನ್ನು ಯಥಾರ್ಥವಾಗಿ ಅನುಭವಕ್ಕೆ ಬರುವಂತೆ ಯಾವ ಗುರಿಯನ್ನಿಟ್ಟುಕೊಂಡು ಏನೂ ಮಾಡಬೇಕಾಗಿಲ್ಲ, ಏನೂ ಸಂಪಾದಿಸಬೇಕಾಗಿಲ್ಲ. ಏನೂ ಬಿಡಬೇಕಾಗಿಲ್ಲ, ಏನೂ ಹಿಡಿಯಬೇಕಾಗಿಲ್ಲ, ಅದು ಹೇಗೆ ಇರುವದೋ ಹಾಗೆಯೇ ಅದರ ಅನುಭವ ಹೊಂದುವದು ಅವಶ್ಯವು. ಇದಕ್ಕಾಗಿ ಅವಿದ್ಯಾ [ಅಜ್ಞಾನ, ಭ್ರಾಮಕ ಜ್ಞಾನ, ಮಾಯಾ] ನಾಶವಾಗಬೇಕು. [ತೊಲಗಬೇಕು] ಹಾಗೂ ಇದರ ನಿವೃತ್ತಿಯ ಸಲುವಾಗಿ ಭಕ್ತಿಮಾರ್ಗ ಅಥವಾ ಜ್ಞಾನ ಮಾರ್ಗವನ್ನು ಅವಲಂಬಿಸಬೇಕಾಗಿರುವದು. ಇದರ ಗುರಿ ಸಿದ್ಧಿಗಾಗಿ ಸದ್ಗುರುವಿನ ಆವಶ್ಯಕತೆಯು ಮುಖ್ಯವಾಗಿರುವದು, ಸದ್ಗುರುವೆಂದ ಕೂಡಲೇ ಜೊತೆಗೆ

ಸತ್‌ಶಿಷ್ಯ ಇರಲೇಬೇಕಲ್ಲವೇ? ಸದ್ಗುರುವು ಸತ್‌ಶಿಷ್ಯನಿಗೆ ಆತ್ಮಜ್ಞಾನ ಮಾಡಿಕೊಡುತ್ತಾನೆ. ಇವರಿಬ್ಬರಿದ್ದಲ್ಲಿ ಜ್ಞಾನದ ವಿಷಯು ಇದ್ದೇ ಇರುತ್ತದೆ· ಆದರೆ ಜ್ಞಾನದ ಅಧಿಕಾರ ಎಲ್ಲರಲ್ಲಿಯೂ ಒಂದೇ ಸಮನಾಗಿ ಇರುವದಿಲ್ಲ. ಅಂಶೆಯೇ ಇದರ ವಿವೇಚನ ಮಾಡುವಾಗ ಬದ್ಧ, ಮುಮುಕ್ಷು, ಸಾಧಕ, ಮತ್ತು ಸಿದ್ಧ ಹೀಗೆ ಮನುಷ್ಯರಲ್ಲಿ ನಾಲ್ಕು ಪ್ರಕಾರ ಗಳನ್ನು ಹೇಳಿದ್ದಾರೆ.

## ದಶಕ ೫. ಸಮಾಸ ೧. ಗುರುನಿಶ್ಚಯು (ನುಡಿ ೪೬)

ಜಗತ್ತಿನಲ್ಲಿಯ ಜೀವಗಳು ಜನ್ಮ ತಳೆದಾಗ ಅವು ಅತ್ಯಂತ (ಅಗದೀ) ಅಸಮರ್ಥ ಮತ್ತು ಅಸಹಾಯುಕ ವಿರುವವು. ಜೀವಿಸುವದಕ್ಕಾಗಿ ಕೆಲವೊಂದು ಕಾಲದವರೆಗೆ ಎರಡನೆಯುವರ ಮೇಲೆ ಅವಲಂಬಿಸಿಕೊಂಡು ಇರಬೇಕಾ ಗುವದು. ಎರಡನೆಯುವರಿಂದ ಕಲಿಯುಬೇಕಾಗುವದು. ಆಮೇಲೆ ಜೀವವು(ಆ ಪ್ರಾಣಿ) ಸ್ವತಂತ್ರವಾಗಿ ವರ್ತಿಸುವದು. ಮನುಷ್ಯರ ಬಗ್ಗೆ ವಿಚಾರ ಮಾಡಿದರೆ ಬಹಳಷ್ಟು ವಿಷಯುಗಳನ್ನು ಆವನ ಎರಡನೆಯುವರಿಂದಲೇ ಕಲಿಯುಬೇಕಾಗುವ ದೆಂಬ ಮಾತು ಎಲ್ಲರಿಗೂ ಕಂಡು ಬರುವದೇ ಆಗಿದೆ. **ಉದಾ:-** ತಿನ್ನುವದು, ಕುಡಿಯುುವದು, ಏಳುವದು, ಕೊಡುುವದು, ನಡೆಯುುವದು, ಓಡುವದು, ಶೌಚ, ಮುಖಮಾರ್ಜನ ಮಾಡುವದು, ಮಲಗುವದು, ಆಡುವದು, ವಸ್ತ್ರ ಧರಿಸುವದು, ಜನರ ಕೂಡ ವರ್ತಿಸುವ ರೀತಿ, ಭಾಷೆ, ಮಾತನಾಡುವದು, ಅಭ್ಯಾಸ ಮಾಡುವದು, ಬರೆಯುುವದು, ಓದುವದು, ಹಾಡುವದು, ಚಿತ್ರ ತೆಗೆಯುುವದು, ಯುುದ್ಧ ಮಾಡುವದು. ಯಂತ್ರ ತಯಾರಿಸು ವದು, ಯಂತ್ರದ ಉಪಯೋಗ ಮಾಡುವದು. ಜ್ಞಾನಾರ್ಜನೆ ಮಾಡುವದು, ಕೀರ್ತನ ಮಾಡುವದು, ಸೇವೆ ಮಾಡುವದು, ಪೂಜಾ ಮಾಡುವದು, ಪ್ರವಾಸ ಮಾಡುವದು, ಇತ್ಯಾದಿ ಇತ್ಯಾದಿ ಈ ಎಲ್ಲ ವಿಷಯುಗಳನ್ನು ಮನುಷ್ಯನು ಸಂಪೂರ್ಣವಾಗಿ ಅಥವಾ ಅಂಶತಃ ಎರಡನೆಯುವರಿಂದ ಕಲಿಯುುವನು, ಜನ್ಮ ಹೊಂದಿದಾಗಿನಿಂದ ಸಾಯುುವವರೆಗೆ ಮನುಷ್ಯ ಕಲಿಯುತ್ತಲೇ ಇರುವನು. ಅಂದರೆ ಗುರುವನ್ನು ಮಾಡಿಕೊಳ್ಳುತ್ತಲೇ ಇರುವನು. [ಕಲಿಯಲಿಕ್ಕೆ ಗುರು ಬೇಕಲ್ಲವೇ?] ಮಾನವ ಜೀವನವು ಯಾವನೇ ಒಬ್ಬ ಗುರುವಿಲ್ಲದೇ ನಡೆಯುುವದೇ ಇಲ್ಲ. ಇದು ನಿಜವಿರುವದಾದರೆ ಅತಿ ಮುಖ್ಯವಾದ ಈಶ್ವರ ದರ್ಶನ ಅಥವಾ ಆತ್ಮಜ್ಞಾನ ಮಾಡಿಕೊಳ್ಳುವದಕ್ಕಾಗಿ ಒಬ್ಬ ಗುರುವನ್ನು ಸ್ವೀಕರಿಸುವದು [ಮಾಡಿಕೊಳ್ಳುವದು] ಅವಶ್ಯವಿದೆ ಎಂಬುದನ್ನು ಯಾರೂ ಅಲ್ಲಗಳೆಯುುವಂತಿಲ್ಲ. ಜೀವನದಲ್ಲಿ ಇತರ ಜ್ಞಾನ ಅಥವಾ ಕಲಾ, ಅಥವಾ ವಿದ್ಯಾ ಕೊಡುವವನು [ವಿದ್ಯೆಯುನ್ನು ಕಲಿಸುವ ಪೂಜ್ಯನು] " ಗುರು " ವಾದರೆ ಭಗವಂತನ ಜ್ಞಾನ ಮಾಡಿಕೊಡುವಂಥವನನ್ನು ಅಂದರೆ ಈಶ್ವರ ಪ್ರಾಪ್ತಿಯು ಮಾರ್ಗದರ್ಶಕನನ್ನು "ಸದ್ಗುರು"ವೆಂದು ತಿಳಿಯುಬೇಕು. ಕೇವಲ ಗ್ರಂಥಗಳನ್ನೋದಿ ಇಲ್ಲವೆ ಸ್ವತಃ ಪ್ರಯುತ್ನ ಮಾಡಿ ಯಾವುದಾದರೊಂದು ವಿದ್ಯೆ ಅಥವಾ ಕಲೆ ಹಸ್ತಗತವಾಗಬಹುದು. ಆದರೂ ಸಹ ಪ್ರತ್ಯಕ್ಷ ತಿಳಿದ ಮನುಷ್ಯನೊಂದಿಗೆ ಸಹವಾಸ ಲಭಿಸಿದರೆ ಆಗ ದೊರಕುವ ಜ್ಞಾನವು ಕೇವಲ ಗ್ರಂಥದಿಂದ ಸಿಗಲಾರದು. ಅಥವಾ ಗ್ರಂಥವು ಕೊಡಲಾರದು ಅಂದ ಮೇಲೆ ಪರಮಾರ್ಥವು ಎಲ್ಲದಕ್ಕಿಂತ ಸೂಕ್ಷ್ಮ ಮತ್ತು ಅತೀಂದ್ರಿಯು ವಿಷಯುವಿರುತ್ತದೆ. ಸಾಮಾನ್ಯ ಮನುಷ್ಯನಿಗೆ ಇದು ಎಷ್ಟೂ ಗೊತ್ತಿರುವದಿಲ್ಲ. ಮತ್ತು ಇದು ಅಜ್ಞಾತವಿರುವದು. ನಾವು ಅವಿದ್ಯೆಯು ಕಕ್ಷೆಯುಲ್ಲಿ ಇರುವಂಥ ಮನುಷ್ಯರು. ನಾವು ನಮ್ಮ ಜಾಣತನ ಉಪಯೋಗಿಸಿ ಎಷ್ಟೇ ಪ್ರಯುತ್ನ ಮಾಡಿದರೂ ಸಹ ನಾವು ಅವಿದ್ಯೆಯು (ಅಜ್ಞಾನ) ಬಲೆಯಿಂದ ಹೊರಗೆ ಬರಲಿಕ್ಕೆ ಶಕ್ತರಾಗು ವದಿಲ್ಲ. ಇದರಿಂದ ಹೊರಬರಬೇಕಾದರೆ ಅವಿದ್ಯೆಯಿಂದ-ಮಾಯಾ-ಅಜ್ಞಾನಗಳಿಂದ ಹೊರಬಂದಂಥ ಸಮರ್ಥ ಪುರುಷನ ಮಾರ್ಗದರ್ಶನವು ನಮಗೆ ಅವಶ್ಯವಾಗಿ ಬೇಕಾಗುತ್ತದೆ. ಆದುದರಿಂದ ಸದ್ಗುರುವಿಲ್ಲದೆ ಪರಮಾರ್ಥ ಸಾಧಿಸುವದಿಲ್ಲವೆಂದೇ ಎಲ್ಲ ಸಂತರ ಮತವಿರುವದು. ಆತ್ಮಜ್ಞಾನ ಪ್ರಾಪ್ತಿ ಮಾಡಿಕೊಳ್ಳುವದಕ್ಕಾಗಿ ಸದ್ಗುರುವಿನ ಅವಶ್ಯಕತೆಯೇ ಇಲ್ಲವೆಂದು ಪ್ರತಿಪಾದನೆ ಮಾಡುವಂಥವರು ತಿಳಿಯದಲೇ ಸ್ವತಃದ ಕಡೆಗೆ ಗುರುತ್ವ ತೆಗೆದುಕೊಂಡು ಮತ್ತುಜನ್ಮವಿರುವವರೆಗೂ ಜನರಿಗೆ ಪರಮಾರ್ಥ ಹೇಳುತ್ತಾರೆ. ಇದೊಂದು ಮೋಜಿನ(ಗಮ್ಮತ್ತಿನ) ವಿರೋಧಾಭಾಸ (ಪರಸ್ಪರ ವಿರುದ್ಧವಾಗುವಂಥ)ವು ಆಧ್ಯಾತ್ಮದ ಕ್ಷೇತ್ರದಲ್ಲಿ ಕಂಡು ಬರುವದು.

## ಸಮಾಸ ಪ್ರಥಮ : ಗುರು ನಿಶ್ಚಯ

॥ಶ್ರೀರಾಮ॥ ಜಯ ಜಯಜೀ ಸದ್ಗುರು ಪೂರ್ಣಕಾಮಾ ।
ಪರಮಪುರುಷಾ ಆತ್ಮಯಾರಾಮಾ ।
ಅನಿರ್ವಾಚ್ಯ ತುಮಚಾ ಮಹಿಮಾ। ವರ್ಣಿಲಾ ನವಚೇ ॥೧॥

ಜೇ ವೇದಾಸ ಸಾಕಡೇ । ಜೇ ಶಬ್ದಾಸಿ ಕಾನಡೇ ।
ತೆ ಸತ್‌ಶಿಷ್ಯಾಸ ರೋಕಡೆ । ಅಲಭ್ಯ ಲಾಭೆ ॥೨॥

ಜೇ ಯೋಗಿಯಾಚೇ ನಿಜವರ್ಮ । ಜೇ ಶಂಕರಾಚೇ ನಿಜಧಾಮ ।
ಜೇ ವಿಶ್ರಾಂತೀಚೇ ನಿಜವಿಶ್ರಾಮ । ಪರಮ ಗುಹ್ಯ ಆಗಧ ॥೩॥

ತೇ ಬ್ರಹ್ಮ ತುಮಚೇನಿ ಯೋಗೇ । ಸ್ವಯೇ ಆಪಣಚಿ ಹೋಇಜೆ ಅಂಗೇ ।
ದುರ್ಘಟ ಸಂಸಾರಾಚೆನಿ ಪಾಂಗೇ । ಪಾಂಗಿಜನಾ ಸರ್ವಥಾ ॥೪॥

ಆತಾ ಸ್ವಾಮಿಚೆನಿ ಲಡಿವಾಳ ಪಣೆ । ಗುರುಶಿಷ್ಯಾಚೀ ಲಕ್ಷಣೇ ।
ಸಾಂಗಿಜೆತೀ ತೇಣೇ ಪ್ರಮಾಣೇ । ಮುಮುಕ್ಷೆ ಶರಣ ಜಾವೇ ॥೫॥

## ದಶಕ ೫ ಸಮಾಸ ೧. ಗುರು ನಿಶ್ಚಯ [ನುಡಿ ೪೬]

**ಶ್ರೀ ಸದ್ಗುರು ಬ್ರಹ್ಮಜ್ಞಾನಿ ಪುರುಷನಿರುತ್ತಾನೆ. ಇವನು ಪರಮಾತ್ಮನೊಂದಿಗೆ ಏಕರೂಪ ನಿರುವನು. ಇವನನ್ನು ನಡೆದಾಡುವ, ಮಾತಾಡುವ ಬ್ರಹ್ಮನೆಂದು ತಿಳಿಯಿರಿ, ಇವನು ಆದಿತತ್ವ ಸ್ವರೂಪ (ಸ್ವರೂಪ ಭೂತ) ಇರುವದರಿಂದ ಇವನ ವರ್ಣನೆಯನ್ನು ಯಾವ ರೀತಿ ಮಾಡುವದು? ಅರ್ಥಾತ್ ಮಾಡಲಿಕ್ಕೆ ಆಗುವದಿಲ್ಲ:–** ಹೇ ಸದ್ಗುರುರಾಯಾ!!, ನಿಮಗೆ ಜಯಜಯಕಾರವು. ನೀವು ಪೂರ್ಣ ಕಾಮರಿರುವಿರಿ, ಯಾಕೆಂದರೆ ನಿಮ್ಮ ಸರ್ವ ಕಾಮನೆ (ಇಚ್ಛೆ)ಗಳು ತೃಪ್ತವಾಗಿರುವವು. ನೀವು ಸರ್ವೋತ್ತಮ ಪುರುಷ ಅಂದರೆ ಈಶ್ವರನೇ ಇರುವಿರಿ. ಸಮಸ್ತರ ಹೃದಯದಲ್ಲಿ ವಾಸಿಸುವ ಆತ್ಮ ಸ್ವರೂಪರೇ ನೀವಾಗಿರುವಿರಿ. ನಿಮ್ಮ ಮಹಿಮೆಯನ್ನು ಶಬ್ದಗಳಿಂದ ವರ್ಣಿಸಲಿಕ್ಕೆ ಆಗುವದಿಲ್ಲ. ಅಂತೆಯೇ ನಿಮ್ಮ ವರ್ಣನೆ ಮಾಡಲಿಕ್ಕೆ ಬರುವದಿಲ್ಲ. (೧) **ಪರಮಾತ್ಮ ವಸ್ತುವು ಅತೀಂದ್ರಿಯ(ಇಂದ್ರಿಯಗಳಿಗೆ ಅಗೋಚರ)ಮತ್ತು ಅಚಿಂತ್ಯ (ಗೂಢ) ಅದೃಶ್ಯ [ಕಾಣಿಸದ] ಅಲಕ್ಷಣ [ಲಕ್ಷಣರಹಿತ]ವಿರುವದು. ಅತಿಗೂಢ ಹಾಗೂ ದುರ್ಲಭ ವಿರುವದು. ಸದ್ಗುರುವಿನ ಕೃಪೆಯಿಂದ ಶಿಷ್ಯನು ಆ ವಸ್ತುವನ್ನು ಏಕರೂಪನಾಗಿ ಅಂದರೆ ನಾನು ಆತ್ಮನೇ ಇರುವೆನೆಂಬ ನಿಶ್ಚಯದಿಂದ ಅನುಭವ ಹೊಂದುವನು:-** ಪರಮಾತ್ಮ ಸ್ವರೂಪವಾಗಿರುವಂಥ ವೇದಗಳಿಗೂ ಸಹ ಕಠಿಣ ದುಷ್ಕರವೆನಿಸಿರುವಂಥ ಶಬ್ದ ಕ್ಷೇತ್ರಗಳ ಅಳುವಿನಲ್ಲಿರದೇ ಅದರ ಹೊರಗಿರುವಂಥ, ಮತ್ತು ದುರ್ಲಭವಾದ ಪರಮಾತ್ಮ ವಸ್ತುವು. ಸತ್‌ಶಿಷ್ಯನಿಗೆ ಮಾತ್ರ (ಅಗದೀ, ರೋಖ, ಠೋಕ) ಸಂಪೂರ್ಣವಾಗಿ ಸಂಶಯವಿಲ್ಲದಂತೆ ಸ್ಪಷ್ಟವಾಗಿ ಪ್ರಾಪ್ತವಾಗುವದು. (೨) ಇದು ಪರಮಾತ್ಮ ಸ್ವರೂಪವೇ ಆಗಿರುವ ಯೋಗಿ ಜನರ ಪರಮ ರಹಸ್ಯವಿರುವದು. ಇದು. ಶ್ರೀ ಶಂಕರನ ಖಾಸ ವಾಸಸ್ಥಳವಿರುವದು. ಇಲ್ಲಿ ನಿಜವಾದ ವಿಶ್ರಾಂತಿಯೂ ಸಹ ಸಿಗುವದು, ಇದು ಅತೀ ಗೂಢ ಮತ್ತು ಅಷ್ಟೇ ಆಳವಾಗಿದೆ. (೩) ಇಂಥ ಈ ಬ್ರಹ್ಮನಲ್ಲಿ ಶ್ರೀಗುರು ನಾಥನ ಕೃಪೆಯಿಂದ ಶಿಷ್ಯನು ಸ್ವತಃ ಅವನಾಗಿ (ಬ್ರಹ್ಮನಾಗಿ) ಬಿಡುವನು. ಅವನೊಂದಿಗೆ ಶಿಷ್ಯನು ತದಾಕಾರನಾಗಿ ಬಿಡುವನು. ಆಮೇಲೆ ಈ ಅತೀ ಕಠಿಣ ಸಂಸಾರದ ಯಾತಾಯಾತ (ಆಸಕ್ತಿಯ ಮೂಲಕ ಬರುವ ಕಷ್ಟ–ಸುಖ) ದಿಂದ ಅವನು ಎಷ್ಟೂ ದುಃಖಿಯಾಗುವದಿಲ್ಲ. **ಈ ಮೂರು ಓವಿ [ಶ್ಲೋಕ]ಯಲ್ಲಿ ಶ್ರೀ ಸಮರ್ಥರು ನಾಲ್ಕು ಬಹು ಮಹತ್ವದ ಮಾತುಗಳನ್ನು ಹೇಳಿದ್ದಾರೆ. ಒಂದನೆಯದು:-** ದುರ್ಲಭನಾದ ಪರಮಾತ್ಮನು ಸತ್‌ಶಿಷ್ಯನಿಗೆ ಸಾಕ್ಷಾತ್ (ಪ್ರತ್ಯಕ್ಷವಾಗಿ) ಅನುಭವಕ್ಕೆ ಬರುವದು. **ಎರಡನೆಯದು:-** ಈ ಸ್ವರೂಪ (ನಿಜರೂಪ) ಅತಿಶಯ ಗೂಢವಿದ್ದು ಅತ್ಯಂತ ಸಮಾಧಾನ ಕೊಡುವಂಥದ್ದಾಗಿದೆ. **ಮೂರನೆಯದು:–** ಶಿಷ್ಯನು ಸ್ವತಃ ಅದೇ ಸ್ವರೂಪನಾಗುವನು, ಮತ್ತು **ನಾಲ್ಕನೆಯದು:–** ಆಮೇಲೆ ಅವನ ಜೀವನದಲ್ಲಿ ದುಃಖವೆಂಬುದು ಉಳಿಯುವದೇ ಇಲ್ಲ.(ಯಾವಾಗಲೂ ಆನಂದವೇಆನಂದ)(೪) **ಗುರುಶಿಷ್ಯರ ಲಕ್ಷಣದ ಉಪೋದ್ಘಾತ(ಆರಂಭ)ಮಾಡುತ್ತಾರೆ:–** ಶ್ರೋತೃಗಳು ಸ್ವಾಮಿಗೆ ಅನ್ನುವರು, ಗುರುದೇವಾ ಪ್ರೀತ್ಯಾಸ್ಪದವಾದ ಗುರು ಶಿಷ್ಯರ ಲಕ್ಷಣಗಳನ್ನು ನಮಗೆ ಹೇಳಿರಿ ಎಂದು ಕೇಳುತ್ತಾರೆ. ಇದರ ಶ್ರವಣದಿಂದ ಮೋಕ್ಷದ ತಳಮಳವಿದ್ದವರು ಕೂಡಲೇ ಸದ್ಗುರುವಿಗೆ ಶರಣು ಹೋಗಲಿಕ್ಕೆ ಸುಲಭವಾಗುವದು. ಆದ್ದರಿಂದ ಗುರುದೇವಾ ನಿನ್ನ ಕೃಪೆಗೆ ಪಾತ್ರರಾದ ನಮಗೆ ಸವಿಸ್ತಾರವಾಗಿ ಹೇಳುವ ಕೃಪೆ ಮಾಡಬೇಕೆಂದು ವಿನಂತಿಸಿಕೊಂಡರು. (೫)

ಗುರು ತೋ ಸಕಳಾಸೀ ಬ್ರಾಹ್ಮಣ । ಜರ್‍ಹೀ ತೋ ಜಾಲಾ ಕ್ರಿಯಾಹೀನ ।
ತರೀ ತಯಾಸೀಚ ಶರಣ । ಅನನ್ಯಭಾವೇ ಅಸಾವೇ ॥೬॥

ಅಹೋ ಯಾ ಬ್ರಾಹ್ಮಣಾ ಕಾರಣೇ। ಅವತಾರ ಘೇತಲಾ ನಾರಾಯೆಣೇ ।
ವಿಷ್ಣೂನೇ ಶ್ರೀವತ್ಸಮಿರವಿಣೆ । ತೇಥೇ ಇತರ ತೆ ಕಿತೀ ॥೭॥

ಬ್ರಾಹ್ಮಣವಚನೇ ಪ್ರಮಾಣ । ಹೋತೀ ಶೂದ್ರಾಚೆ ಬ್ರಾಹ್ಮಣ ।
ಧಾತು ಪಾಷಾಣೀ ದೇವಪಣ । ಬ್ರಾಹ್ಮಣಾಚೆ ನಿ ಮಂತ್ರೆ ॥೮॥

ಮುಂಜೀ ಬಂಧನೆ ವಿರಹಿತ । ತೋ ಶೂದ್ರಚಿ ನಿಭ್ರಾಂತ ।
ದ್ವಿಜನ್ಮೀ ಮ್ಹಣೋನಿ ಸಂತತ । ದ್ವಿಜ ಮ್ಹಣೇ ನಾಮ ತ್ಯಾಚೇ ॥೯॥

ಸಕಳಾಸಿ ಪೂಜ್ಯ ಬ್ರಾಹ್ಮಣ । ಹೇ ಮುಖ್ಯ ವೇದಾಜ್ಞಾ ಪ್ರಮಾಣ ।
ವೇದವಿರಹಿತ ತೇ ಅಪ್ರಮಾಣ । ಅಪ್ರಿಯೆ ಭಗವಂತಾ ॥೧೦॥

ಬ್ರಾಹ್ಮಣೀ ಯೋಗಯಾಗ ವ್ರತೆ ದಾನೇ । ಬ್ರಾಹ್ಮಣೀ ಸಕಳ ತೀರ್ಥಾಟಣೇ ।
ಕರ್ಮಮಾರ್ಗ ಬ್ರಾಹ್ಮಣಾವಿಣೇ । ಹೋಣಾರ ನಾಹೀ ॥೧೧॥

ಬ್ರಾಹ್ಮಣ ವೇದ ಮೂರ್ತಿಮಂತ । ಬ್ರಾಹ್ಮಣ ತೋ ಚಿ ಭಗವಂತ ।
ಪೂರ್ಣ ಹೋತೀ ಮನೋರಥ । ವಿಪ್ರವಾಕ್ಯೈಕರೂನೀ ॥೧೨॥

ಬ್ರಾಹ್ಮಣ ಪೂಜನೇ ಶುದ್ಧ ವೃತ್ತೀ । ಹೋಊನ ಜಡೇ ಭಗವಂತೀ ।
ಬ್ರಾಹ್ಮಣ ತೀರ್ಥೇ ಉತ್ತಮ ಗತೀ । ಪಾವತೀ ಪ್ರಾಣೀ ॥೧೩॥

ಲಕ್ಷಭೋಜನೀ ಪೂಜ್ಯ ಬ್ರಾಹ್ಮಣ । ಆನ ಯಾತಿಸಿ ಪುಸೆ ಕೋಣ ।
ಪರೀ ಭಗವಂತಾಸಿ ಭಾವ ಪ್ರಮಾಣ । ಯೆರಾ ಚಾಡ ನಾಹೀ ॥೧೪॥

ಅಸೋ ಬ್ರಾಹ್ಮಣಾ ಸುರವರ ವಂದಿತೀ । ತೇಥೇ ಮಾನವ ಬಾಪುಡೇ ಕಿತೀ ।
ಜರೀ ಬ್ರಾಹ್ಮಣ ಮೂಢಮತೀ । ತರೀ ತೋ ಜಗದ್ವಂದ್ಯ ॥೧೫॥

ಶ್ರೀ ಸಮರ್ಥರ ಕಾಲದಲ್ಲಿಯು ಸಮಾಜ ರಚನೆಯಲ್ಲಿ ಬ್ರಾಹ್ಮಣನಿಗೆ ಬಹಳ ಮಹತ್ವವಿದ್ದಿತು. ಇವನು ಬುದ್ಧಿವಂತನಿದ್ದು ಮತ್ತು ವಿದ್ಯೆಯಿಂದ ಮುಂದುವರಿದವನಾಗಿದ್ದನು. ವೈದಿಕ ಪರಂಪರೆಯು ಜೀವನ ಪದ್ಧತಿಯನ್ನು ಹೇಗಾದರೂ ಮಾಡಿ ನಡೆಸಿಕೊಂಡು ಅದಕ್ಕೆ ಆಧಾರನಾಗಿದ್ದನು. ವ್ಯವಹಾರದಲ್ಲಿಯು ಧರ್ಮ ಕರ್ಮಗಳ ಬಗ್ಗೆ ಇವನ ಮಾತಿಗೆ ಬಹಳ ಕಿಮ್ಮತ್ತು ಇದ್ದುದರಿಂದ ಒಂದು ರೀತಿಯಲ್ಲಿ ಗುರುತ್ವವನ್ನು ಹೊಂದಿದ್ದನು. ಪ್ರಸಿದ್ಧನೆನಿಸಿದ್ದನು. ಆದರೆ ಭಗವಂತನ ಬಗ್ಗೆ ಇವನು (ಕೇವಲ ವೈದಿಕ-ಕರ್ಮಠನಾದ್ದರಿಂದ) ಮಾರ್ಗದರ್ಶನ ಮಾಡಲು ಶಕ್ತನಾಗಲಿಲ್ಲ. ಭಗವಂತನ ವಿಷಯದ ಶ್ರೇಷ್ಠವಾದ ಜ್ಞಾನದ ಬಗ್ಗೆ ಮಾರ್ಗದರ್ಶನ ಮಾಡುವ ಸಂತರನ್ನು ವಿನಾಕಾರಣ ವಿರೋಧಿಸಿ ಹುಚ್ಚನೆನಿಸಿಕೊಂಡನು. ಮತ್ತು ತನ್ನಲ್ಲಿದ್ದ ಮಹತ್ವವನ್ನು ಕಳೆದುಕೊಂಡು ಕುಳಿತನು. ಆದರೆ ಸಂತರು ಮಾತ್ರ ಈ ವೈದಿಕರನ್ನು ಹಳಿಯದೆ ದುಃಖಕೊಡದೇ ಲೋಕಸಂಗ್ರಹ ಮತ್ತು ಜಾಗ್ರತಿಯನ್ನು ಮಾಡಿದರು. (ಇವರೇ ನಿಜವಾದ ಜ್ಞಾನಿ,ಭಕ್ತ, ಸಂತರಲ್ಲವೇ?) ಆದುದರಿಂದಲೇ ಶ್ರೀ ಸಮರ್ಥರು ಸಹ ವ್ಯವಹಾರದಲ್ಲಿ ಇವರ ದೊಡ್ಡಸ್ತನವನ್ನು ಮಾನ್ಯ ಮಾಡಿದಂತೆ ತೋರಿಸಿದರೂ ಸಹ ಪರಮಾರ್ಥದಲ್ಲಿ ಇದು ನಡೆಯಲಾರದೆಂದು ಬಹು ಚತುರತೆಯಿಂದ ಇಲ್ಲಿ ಸ್ಪಷ್ಟವಾಗಿ ಹೇಳಿರುತ್ತಾರೆ:- ಬ್ರಾಹ್ಮಣನು ಸರ್ವಜನರ ಗುರುವಿರುವನು. ಕ್ರಿಯಾಹೀನನಿದ್ದರೂ ಸಹ ಅಂದರೆ ಇವನು ಬ್ರಾಹ್ಮಣ ಧರ್ಮದಂತೆ ನಡೆಯದಿದ್ದರೂ ಸಹ ಇವನನ್ನೇ ಅಗದೀ ಮನಃಪೂರ್ವಕವಾಗಿ ವಂದಿಸಬೇಕು.(೬) ಈ ಬ್ರಾಹ್ಮಣರ ಸಲುವಾಗಿ ನಾರಾಯಣನು ಅವತಾರ ಮಾಡಿದನು· ವಿಷ್ಣುವು ಶ್ರೀವತ್ಸ ಅಂದರೆ ಬ್ರಾಹ್ಮಣನಾದ ಭೃಗುಋಷಿಯು ಪಾದದಿಂದ ಹೊಡೆದ [ಒದೆದ] ಗುರುತನ್ನು ಮೆರೆಯಿಸಿದನು. ಅಂದ ಮೇಲೆ ಇತರರ ಪಾಡೇನು? [೭] ಬ್ರಾಹ್ಮಣರ ವಚನವನ್ನು [ಖರೆ, ನ್ಯಾಯ] ಪ್ರಮಾಣವೆಂದು ಮನ್ನಿಸುತ್ತಾರೆ. ಇವನ ಆಧಾರಭೂತ ವಾಕ್ಯ ಅಥವಾ ಹೇಳಿದ [ನುಡಿದ]ಮಾತಿನಿಂದ ಶೂದ್ರರೂ ಸಹ ಬ್ರಾಹ್ಮಣನ ಯೋಗ್ಯತೆಗೆ ಬರುತ್ತಾರೆ. ಬ್ರಾಹ್ಮಣನ ಮಂತ್ರದಿಂದ, ವಚನದಿಂದ ಕಲ್ಲಿನಲ್ಲಿ ಸಹ ದೇವತ್ವ ಬರುವದು. [೮] ಯಾರ ಮುಂಜಿವಿ ಆಗಿಲ್ಲವೋ ಅವನು ಜನ್ಮದಿಂದ ಬ್ರಾಹ್ಮಣನಾಗಿದ್ದರೂ ಸಹ ನಿಸ್ಸಂಶಯವಾಗಿ ಶೂದ್ರನಿರುವನು. ತಾಯಿಯ ಹೊಟ್ಟೆಯಿಂದ ಹುಟ್ಟಿದ್ದು ಮೊದಲನೆಯ ಜನ್ಮ. ಮುಂಜಿವಿ ಅಂದರೆ ಎರಡನೆಯ ಜನ್ಮವು. ಅಂತೆಯೇ ಬ್ರಾಹ್ಮಣನಿಗೆ ಯಾವಾಗಲೂ ದ್ವಿಜ ಎಂದು ಅನ್ನುವರು. (೯) ಸರ್ವರೂ ಬ್ರಾಹ್ಮಣನನ್ನು ಪೂಜ್ಯ ಎಂದು ತಿಳಿಯಬೇಕು. ಹೀಗೆ ವೇದಾಜ್ಞೆ ಇರುವದು. ಇದು ಪ್ರಮಾಣವೆಂದು ಎಲ್ಲರೂ ಒಪ್ಪಬೇಕು. ಯಾವುದು ವೇದಕ್ಕೆ ವಿರುದ್ಧವಿರುವದೋ ಅದನ್ನು ಅಪ್ರಮಾಣವೆಂದು ತಿಳಿಯಿರಿ. ಇದು ಭಗವಂತನಿಗೆ ಸಹ ಪ್ರಿಯವಾಗುವದಿಲ್ಲ. (೧೦) ಬ್ರಾಹ್ಮಣರ ಸಹಾಯದಿಂದ ಜ್ಯೋತಿಷ್ಯದಲ್ಲಿಯ ಯೋಗ, ಹೋಮ, ಹವನ, ವ್ರತ, ದಾನ, ತೀರ್ಥಯಾತ್ರೆ ಮತ್ತು ಅಲ್ಲಿಯ ಕರ್ಮಗಳು ಸಹ ಆಗುವವು. ಬ್ರಾಹ್ಮಣರಿಲ್ಲದೆ ಕರ್ಮಮಾರ್ಗದ ಆಚರಣೆ ಮಾಡಲಿಕ್ಕೆ ಆಗುವದಿಲ್ಲ· (೧೧) ಬ್ರಾಹ್ಮಣ ಅಂದರೆ ಪ್ರತ್ಯಕ್ಷ ವೇದವೇ ಸರಿ· ಬ್ರಾಹ್ಮಣನಿಗೆ ವೇದವೆಂದು ತಿಳಿಯಬೇಕು. ಅವನ ವಚನದಿಂದ ಸರ್ವ ಇಚ್ಛೆಗಳು ಸಫಲವಾಗುವವು. (೧೨) ಬ್ರಾಹ್ಮಣರ ಪೂಜೆ ಮಾಡಿದರೆ ಮನಸ್ಸು ಶುದ್ಧವಾಗುವದು. ಹಾಗೂ ವೃತ್ತಿ ಭಗವಂತನಲ್ಲಿ ಸ್ಥಿರಗೊಳ್ಳುವದು. ಬ್ರಾಹ್ಮಣರ ತೀರ್ಥಪ್ರಾಶನ ಮಾಡಿದರೆ ಮನುಷ್ಯರಿಗೆ ಉತ್ತಮ ಗತಿ ಲಭಿಸುತ್ತದೆ. (೧೩) ಲಕ್ಷ ಭೋಜನ ಹಾಕುವದಕ್ಕೆ ಅಷ್ಟು ಜನ ಬ್ರಾಹ್ಮಣರೇ ಬೇಕಾಗುವದು. ಇತರ ಜಾತಿಯ ಜನರು ಉಪಯೋಗ ಬೀಳುವದಿಲ್ಲ. ಭಗವಂತನು ಕೇವಲ ಅಂತಃಕರಣದೊಳಗಿನ ಶುದ್ಧ ಭಾವವನ್ನಷ್ಟೇ ನೋಡುವನು. ಇತರ ವಿಷಯದ (ಮಾತಿನ) ಕಡೆಗೆ ಲಕ್ಷ್ಯ ಕೊಡುವದಿಲ್ಲ· (೧೪) ಬ್ರಾಹ್ಮಣರಿಗೆ ದೊಡ್ಡ ದೊಡ್ಡ ದೇವತೆಗಳೂ ಸಹ ನಮಸ್ಕಾರ ಮಾಡುವರು, ಅಂದಮೇಲೆ ಈ ಬಡ ಮನುಷ್ಯರದೇನು ಪಾಡು. ಬ್ರಾಹ್ಮಣ ಬುದ್ಧಿ ಹೀನವಾಗಿದ್ದರೂ ಸಹ ಅವನು ಸರ್ವರಿಗೂ ವಂದ್ಯನಿರುವನು. [೧೫]

ಅಂತ್ಯೈಜ ಶಬ್ದ ಜ್ಞಾತಾ ಬರವಾ । ಪರೀ ತೋ ನೇಊನ ಕಾಯೆ ಕರಾವಾ ।
ಬ್ರಾಹ್ಮಣಾಸನ್ನಿಧ ಪೂಜಾವಾ । ಹೇ ತೋ ನ ಘಡೆ ಕೀ ॥೧೬॥

ಜೇ ಜನಾವೇಗಳೇ ಕೇಲೇ । ತೇ ವೇದೇ ಅವ್ಹೇರಿಲೇ ।
ಮ್ಹಣೋನೀ ತಯಾಸಿ ನಾವ ಠೇವಿಲೇ। ಪಾಷಾಂಡ ಮತ ॥೧೭॥

ಅಸೋ ಜೇ ಹರಿಹರದಾಸ । ತಯಾಸ ಬ್ರಾಹ್ಮಣೀ ವಿಶ್ವಾಸ ।
ಬ್ರಾಹ್ಮಣ ಭಜನೇ ಬಹುತಾಸ । ಪಾವನ ಕೇಲೇ ॥೧೮॥

ಬ್ರಾಹ್ಮಣೀ ಪಾವಿಜೆ ದೇವಾಧಿದೇವಾ । ತರೀ ಸಮರ್ಥ ಸದ್ಗುರು ಕರಾವಾ ।
ಐಸೇ ಮ್ಹಣಾಲ ತರೀ ನಿಜಠೇವಾ । ಸದ್ಗುರುವಿಣ ನಾಹೀ ॥೧೯॥

ಸ್ವಧರ್ಮಕರ್ಮೀ ಪೂಜ್ಯ ಬ್ರಾಹ್ಮಣ । ಪರೀ ಜ್ಞಾನ ನವ್ಹೆ ಸದ್ಗುರುವಿಣ ।
ಬ್ರಹ್ಮಜ್ಞಾನ ನಸಾತಾ ಸೀಣ । ಜನ್ಮ ಮೃತ್ಯ ಚುಕೇನಾ ॥೨೦॥

ಸದ್ಗುರುವಿಣ ಜ್ಞಾನ ಕಾಹೀ । ಸರ್ವಥಾ ಹೋಣಾರ ನಾಹೀ ।
ಅಜ್ಞಾನ ಪ್ರಾಣೀ ಪ್ರವಾಹೀ। ವಾಹಾತ ಗೇಲೆ ॥೨೧॥

ಜ್ಞಾನ ವಿರಹಿತ ಜೇ ಜೇ ಕೇಲೇ । ತೇ ತೇ ಜನ್ಮಾಸಿ ಮೂಳ ಜಾಲೇ ।
ಮ್ಹಣೌನಿ ಸದ್ಗುರುಚೀ ಪಾಉಲೇ । ಸದೃಢ ಧರಾವೀ ॥೨೨॥

ಜಯಾಸ ವಾಟೆ ದೇವ ಪಾಹಾವಾ । ತೇಣೇ ಸತ್ಸಂಗ ಧರಾವಾ ।
ಸತ್ಸಂಗೇವಿಣ ದೇವಾಧಿದೇವಾ । ಪಾವಿಜೇತ ನಾಹೀ ॥೨೩॥

ಯಾವನೊಬ್ಬ ಅಂತ್ಯಜನಿಗೆ ಬಹಳಷ್ಟು ಶಬ್ದ ಜ್ಞಾನವಿದ್ದರೂ ಸಹ ಅವನು ಉಪಯೋಗಕ್ಕೆ ಬರುವದಿಲ್ಲ. ಬ್ರಾಹ್ಮಣನ ಜೊತೆಗೆ, ಅವನ ಪೂಜೆ ಮಾಡಲಿಕ್ಕೆ ಬರುವದಿಲ್ಲ. [೧೬] ಲೋಕ ರೂಢಿಯನ್ನು ಬಿಟ್ಟು ಏನಾದರೂ ಹೊಸದನ್ನು ಮಾಡಲಿಕ್ಕೆ ವೇದದ ಒಪ್ಪಿಗೆ ಇರುವದಿಲ್ಲ. ವೇದ ವಿರುದ್ಧವಾದದ್ದು ಪಾಖಂಡ [ನಾಸ್ತಿಕ] ಮತವೆನಿಸುವದು. [೧೭] ಇರಲಿ ಶಿವನ ಮತ್ತು ವಿಷ್ಣುವಿನ ಭಕ್ತರು ಯಾರು ಇರುವರೋ ಅವರದು ಬ್ರಾಹ್ಮಣರ ಮೇಲೆ ಶ್ರದ್ಧೆ ಇರುವದು. ಬ್ರಾಹ್ಮಣರನ್ನು ಪೂಜ್ಯ ಭಾವದಿಂದ ನೋಡಿದ ಬಹಳಷ್ಟು ಜನರು ಪಾವನರಾಗಿರುವರು.[೧೮] **ವೇದ ಪರಂಪರೆಯು ಮತ್ತು ಲೋಕ ಪರಂಪರೆಯು ವರ್ಣನೆಯು ಇಲ್ಲಿಯವರೆಗೆ ಆಯಿತು. ಇಲ್ಲಿ ಬ್ರಾಹ್ಮಣರ ಪಕ್ಷ ಎತ್ತಿ ಹಿಡಿಯಬೇಕೆಂಬ ಇಚ್ಛೆ ಶ್ರೀ ಸಮರ್ಥರದಾಗಿಲ್ಲ. ಲೋಕ ಪರಂಪರೆಯಲ್ಲಿ ಬ್ರಾಹ್ಮಣರಿಗೆ ಗುರುತ್ವ ಇರುತ್ತಿರಲಿಕ್ಕೆ ಮತ್ತೊಬ್ಬ ಸದ್ಗುರು ಯಾತಕ್ಕೆ ಬೇಕು? ಇದರಬಗ್ಗೆ ವಿವರಿಸುತ್ತಾರೆ** ಬ್ರಾಹ್ಮಣನನ್ನು ಪೂಜ್ಯರೆಂದು, ಗುರುವೆಂದು ನಂಬಿದ್ದಾದರೆ ಮುಖ್ಯ [ದೊಡ್ಡ] ದೇವರ ತನಕ ಹೋಗಿ ಮುಟ್ಟಬಹುದು. ಎಂದಾದರೆ ಸದ್ಗುರುವನ್ನು ಯಾಕೆ ಮಾಡಿಕೊಳ್ಳಬೇಕು ? ಇದರ ಅವಶ್ಯಕತೆ ಏನು ? ಹೀಗೆ ಪ್ರಶ್ನೆ ಉದ್ಭವವಾಗುವದು. ನಿಜವಾದದ್ದನ್ನು ಹೇಳುವದಾದರೆ ನಮ್ಮ ಆತ್ಮ ಸ್ವರೂಪದ ಯಾವ ನಿಜವಾದ ಇಡುಗಂಟಿದೆಯೋ ಅದು ಸದ್ಗುರುವಿಲ್ಲದೆ ಸಿಗಲಾರದು. ಅದಕ್ಕಾಗಿ ಸದ್ಗುರುವನ್ನು ಮಾಡಿಕೊಳ್ಳಬೇಕು. ಇದೇ ಅದಕ್ಕೆ ಉತ್ತರವು. [೧೯] ನಾವು ಮಾಡುವ ಧಾರ್ಮಿಕ ಕಾರ್ಯಗಳ ಮಟ್ಟಿಗೆ ಮಾತ್ರ ಬ್ರಾಹ್ಮಣ ಪೂಜ್ಯನೆಂದು ತಿಳಿಯುವದು ಸಯುಕ್ತಿಕವೆನಿಸುವದು. ಆದರೆ ಆತ್ಮಜ್ಞಾನ ಮಾತ್ರ ಸದ್ಗುರುವಿಲ್ಲದೆ ಪ್ರಾಪ್ತವಾಗಲಾರದು. ಬ್ರಹ್ಮಜ್ಞಾನ (ಆತ್ಮಜ್ಞಾನ) ಪ್ರಾಪ್ತವಾಗುವತನಕ ಜನ್ಮ ಮೃತ್ಯುವಿನ ಚಕ್ರ (ಫೇರಿ) ಏನೂ ತಪ್ಪುವದಿಲ್ಲ. ಅಲ್ಲದೆ ದುಃಖ ಮಾತ್ರ ಸುಮ್ಮನೆ ಅನುಭವಿಸಬೇಕಾಗುವದು. ಬ್ರಾಹ್ಮಣನು ಎಷ್ಟೇ ಉತ್ತಮನಾಗಿದ್ದರೂ (ವಿದ್ವಾಂಸನಾಗಿದ್ದರೂ) ಅವನು ದೇಹ ಬುದ್ಧಿ (ಪ್ರಾಪಂಚಿಕ ಬುದ್ಧಿ) ಯಿಂದ ಇರುವಂಥ ಸಾಮಾನ್ಯ ಸ್ವಾರ್ಥಿ ಮನುಷ್ಯನಾಗಿರುತ್ತಾನೆ. ಅವನು ಎಂದಾದರೂ ಯಾರನ್ನೇ ಆಗಲಿ ಭಗವತ್ ಸ್ವರೂಪದ ವರೆಗೆ ಒಯ್ದು ಮುಟ್ಟಿಸಲಿಕ್ಕೆ ಶಕ್ಯವೇ ಇಲ್ಲ. ಈ ಕೆಲಸವನ್ನು ಬ್ರಹ್ಮ ಜ್ಞಾನಿಯಾದ ಪುರುಷನೇ ಖಂಡಿತವಾಗಿ ಮಾಡಬಲ್ಲನು. [೨೦] ಸದ್ಗುರುವು ಕೃಪೆ ಮಾಡದ ಹೊರತು ಬ್ರಹ್ಮಜ್ಞಾನವಾಗುವದು ಶಕ್ಯವೇ ಇಲ್ಲ. ಮತ್ತು ಈ ಜ್ಞಾನವಾಗುವವರೆಗೆ ಅಜ್ಞಾನಿಯಾದ (ಕೇವಲ ಓದಿ ಪದವಿ ಪಡೆದವರೂ ಸಹ) ಮನುಷ್ಯರು ಈ ತೋರಿ ಅಡಗುವ ದೃಶ್ಯದ ಪ್ರವಾಹದಲ್ಲಿ ತೇಲಿ ಹೋಗುವರು. [೨೧] ಆತ್ಮಜ್ಞಾನ ಮಾಡಿಕೊಳ್ಳದೆ ಮನುಷ್ಯನು ಏನೇನು ಮಾಡುವನೋ ಅದೆಲ್ಲವೂ ಅಜ್ಞಾನದಿಂದಲೇ ಆಗುವದು. ಅಂತೆಯೇ ಪುನಃ ಜನ್ಮ ಹೊಂದುವದಕ್ಕೆ ಕಾರಣವಾಗುವದು. ಆದ್ದರಿಂದ ಜ್ಞಾನ ಪಡೆಯುವದಕ್ಕೆ ಸದ್ಗುರುವಿನ ಪಾದಗಳನ್ನು ಗಟ್ಟಿಯಾಗಿ ಹಿಡಿದು ಏಕನಿಷ್ಠೆಯಿಂದ ಜ್ಞಾನವನ್ನು ದಯಪಾಲಿಸಬೇಕೆಂದು ನಮ್ರವಾಗಿ ಪ್ರಾರ್ಥಿಸಬೇಕು. [೨೨] ಭಗವಂತನ ದರ್ಶನವಾಗಬೇಕೆಂದು ಯಾರಿಗೆ ನಿಜವಾದ ಕಳಕಳಿ ಇರುವದೋ ಅವರು ಸಂತರ ಸಂಗತಿಯನ್ನು ಹಿಡಿಯಬೇಕು. ಸತ್ಸಂಗ ಘಟಿಸದ ಹೊರತು ಭಗವಂತನವರೆಗೆ ಹೋಗಿ ಮುಟ್ಟಲಿಕ್ಕೆ ಸಾಧ್ಯವಾಗುವದಿಲ್ಲ. ಸಂತನೇ ಸದ್ಗುರುವಾಗಬಲ್ಲನು. ಆದ್ದರಿಂದ ಸತ್ಸಂಗ ಮಾಡಿರಿ ಎಂದು ಹೇಳುವವರ ಮುಖ್ಯ ಹಾಗೂ ಮಹತ್ವದ ಉದ್ದೇಶವು. ಸದ್ಗುರುವಿನ ಸಹವಾಸ ಮಾಡುವವೇ ಉದ್ದೇಶವಾಗಿದೆ. [೨೩]

ನಾನಾ ಸಾಧನೇ ಬಾಪುಡೀ । ಸದ್ಗುರುವಿಣ ಕರಿತೀ ವೇಡೀ ।
ಗುರುಕೃಪೆವಿಣ ಕುಡಕುಡೀ । ವೆರ್ಥ ಚಿ ಹೋತೀ ॥೨೪॥

ಕಾರ್ತಿಕ ಸ್ನಾನೇ ಮಾಘಸ್ನಾನೇ । ವ್ರತೇ ಉದ್ಯಾಪನೇ ದಾನೇ ।
ಗೋರಾಂಜನೇ ಧೂಮ್ರಪಾನೇ । ಸಾಧಿತೀ ಪಂಚಾಗ್ನೀ ॥೨೫॥

ಹರಿಕಥಾ ಪುರಾಣ ಶ್ರವಣ । ಆದರೇ ಕರಿತೀ ನಿರೂಪಣ ।
ಸರ್ವ ತೀರ್ಥೇ ಪರಮ ಕಠಿಣ । ಫಿರತೀ ಪ್ರಾಣೀ ॥೨೬॥

ಝುಳಫಳಿತ ದೇವತಾರ್ಚನೇ । ಸ್ನಾನಸಂಧ್ಯಾ ದರ್ಭಾಸನೇ ।
ಟಿಳೆ ಮಾಳಾ ಗೋಪೀಚಂದನೇ । ಠಸೇ ಶ್ರೀಮುದ್ರಾಂಚೇ ॥೨೭॥

ಅರ್ಘ್ಯಪಾತ್ರೇ ಸಂಪುಷ್ಟ ಗೋಕರ್ಣೇ । ಮಂತ್ರಯಂತ್ರಾಚೀ ತಾಂಬ್ರಪರ್ಣೇ ।
ನಾನಾ ಪ್ರಕಾರೀಚೀ ಉಪಕರ್ಣೇ । ಸಾಹಿತ್ಯಶೋಭಾ ॥೨೮॥

ಘಂಟಾ ಘಣಘಣಾ ವಾಜತೀ । ಸ್ತೋತ್ರೇ ಸ್ತವನೇ ಆಣೀ ಸ್ತುತೀ ।
ಆಸನೇ ಮುದ್ರಾ ಧ್ಯಾನೇ ಕರಿತೀ । ಪ್ರದಕ್ಷಣಾ ನಮಸ್ಕಾರ ॥೨೯॥

ಇಪ್ಪತ್ತನೇ ಶತಕವು ವಿಜ್ಞಾನ ಪ್ರಧಾನ (ಸಶಾಸ್ತ್ರ ಜ್ಞಾನ) ಯುಗವಿರುವದು. ಈ ಯುಗದಲ್ಲಿ ಪರಂಪರೆಯಿಂದ ನಡೆದು ಬಂದದ್ದನ್ನು ಮನ್ನಿಸದೇ ಸ್ವತಂತ್ರವಾಗಿ ಬುದ್ಧಿಯನ್ನು ಓಡಿಸುವದಕ್ಕೆ ಬಹಳ ಮಹತ್ವವಿದೆ. ರಾಜಕಾರಣಿ ಪುರುಷರಿಗೇ ಸಮಾಜದಲ್ಲಿ ದೊಡ್ಡಿಸ್ತನವಿದೆ. ಶ್ರೀ ಸಮರ್ಥರು ಯಾವ ಕಾಲದಲ್ಲಿ ಇದ್ದರೋ ಅದು ಧರ್ಮ ಪ್ರಧಾನ ಯುಗವಿತ್ತು. ಆಗ ಪರಂಪರೆಗೆ ಬಹಳ ಮಹತ್ವ ಕೊಡುತ್ತಿದ್ದು ಬಹು ಜನ ಸಮಾಜ ಶ್ರದ್ಧಾವಂತ ರಿದ್ದರು. ಧರ್ಮಾಚಾರ್ಯರಿಗೆ ಸಮಾಜದಲ್ಲಿ ಬಹಳ ಗೌರವವಿತ್ತು. ಬ್ರಾಹ್ಮಣರು ನಮ್ಮ ಮಠೀಯ (ನಮ್ಮ ಕಡೆಯು) ಧರ್ಮಾಚಾರ್ಯರಿದ್ದದರಿಂದ ವ್ಯಕ್ತಿಯು ಖಾಸಗಿ ಜೀವನದಲ್ಲಿ ಮತ್ತು ಸಾಮಾಜಿಕ ಸಮಾರಂಭಗಳಲ್ಲಿ ಇವರದು ಮಹತ್ವದ ಕಾರ್ಯಭಾಗವಿರುತ್ತಿತ್ತು. ಇವರ ನೇತೃತ್ವದಲ್ಲಿ (ದೇಖರೇಖದಲ್ಲಿ) ನಡೆಯುವ ಅನೇಕ ಕೃತ್ಯಗಳ ಉಲ್ಲೇಖ ಮಾಡಿ ಆ ಕರ್ಮದಿಂದ ಕದಾಚಿತ್ ಪುಣ್ಯ ಸಿಗಬಹುದು. ಆದರೆ ಆತ್ಮಜ್ಞಾನವಾಗಲಾರದೆಂದು ಶ್ರೀ ಸಮರ್ಥರು ಸ್ಪಷ್ಟವಾಗಿ ಹೇಳಿದ್ದಾರೆ:- ಅಜ್ಞಾನಿ ಹುಚ್ಚ ಮನುಷ್ಯರು ಸದ್ಗುರುವಿನ ಮಾರ್ಗದರ್ಶನವಿಲ್ಲದ್ದರಿಂದ ಬೇರೆ ಬೇರೆ ಬಗೆಯ ಕೀಳು (ಹಲಕಾ) ದರ್ಜೆಯ ಮಾಮೂಲಿ ಸಾಧನಗಳನ್ನು ಮಾಡುವರು. ಆದರೆ ಸದ್ಗುರುವಿನ ಕೃಪೆ ಇಲ್ಲ ದಿರುವದರಿಂದ ಅವರ ಶ್ರಮ ವ್ಯರ್ಥವಾಗುವದು. [೨೪] ಕೆಲವರು ಕಾರ್ತಿಕಸ್ನಾನ ಮತ್ತು ಮಾಘಸ್ನಾನಗಳನ್ನು ಮಾಡುವರು. ಕೆಲವರು ವ್ರತ ಉದ್ಯಾಪನ [ವ್ರತಾದಿಗಳ ಸಮಾಪ್ತಿಯ ವಿಧಿ] ಮತ್ತು ದಾನ ಮಾಡುವರು. ಕೆಲ ವರು ಗೋರಾಂಜನ, ಧೂಮ್ರಪಾನಗಳನ್ನು ಮಾಡುವರು, ಕೆಲವರು ಪಂಚಾಗ್ನಿ ಸಾಧನ ಸಾಧಿಸುವರು, **ಗೋರಾಂಜನ ಅಂದರೆ** ತನಗೆ ತಾನೇ ಬೆಂಕಿ ಹಚ್ಚಿಕೊಳ್ಳುವದು ಅಂದರೆ ಮೈ ಸುಟ್ಟುಕೊಳ್ಳುವದು ಅಗ್ನಿಭಕ್ಷಣ ಮಾಡುವದು. **ಧೂಮ್ರಪಾನ ಅಂದರೆ** ಗಿಡಕ್ಕೆ ಉಲಟ ಜೋತುಬಿದ್ದು ಕೆಳಗೆ ಮಾಡಿದ ಹೊಗೆಯನ್ನು ಕುಡಿದು ತಪಸ್ಸು ಮಾಡುವದು. **ಪಂಚಾಗ್ನಿ ಸಾಧನವೆಂದರೆ** ಭರತಿ ಬೇಸಿಗೆಯ ಬಿಸಲಿನಲ್ಲಿ ನಾಲ್ಕು ಕಡಿಗೆ ಅಗ್ನಿಕುಂಡ ಮಾಡಿ ಮಧ್ಯದಲ್ಲಿ ಕೂಡ್ರಬೇಕು. ತಲೆಗೆ ಸೂರ್ಯನ ಬಿಸಿಲು ಬಡಿಯಬೇಕು, ಹೀಗೆ ಮಾಡಿಕೊಂಡು ತಪಸ್ಸು ಮಾಡುವದು ಪಂಚಾಗ್ನಿ ಸಾಧನವೆನಿಸುವದು. ಆದರೆ ಇಂಥ ದೇಹ ಕಷ್ಟದಿಂದ ಪರಮಾರ್ಥ ಸಾಧಿಸುವದಿಲ್ಲ [೨೫] ಕೆಲವರು ಹರಿಕಥೆ, ಪುರಾಣ, ಹೇಳುವರು, ಕೇಳುವರು, ಕೆಲವರು ಮನಃಪೂರ್ವಕ ಪ್ರವಚನ ಮಾಡುವರು. ಕೆಲ ವರು ಅತಿ ಕಠಿಣವಾದ ತೀರ್ಥ ಯಾತ್ರೆಯನ್ನು ಮಾಡುವರು. [೨೬] ಕೆಲವರು ದೇವರ ಪೂಜೆಯನ್ನು ಝಗ ಝಗಿಸುವಂತೆ ಮಾಡುತ್ತಾರೆ. ಕೆಲವರು ಸ್ನಾನ ಸಂಧ್ಯಾ ತಪ್ಪದೇ ಮಾಡುವರು, ಕೆಲವರು ದರ್ಭಾಸನವನ್ನೇ ಉಪ ಯೋಗಿಸುವರು. ಕೆಲವರು ಗೋಪೀಚಂದನ ಮುದ್ರೆ ಹಾಗೂ ಕೊರಳಲ್ಲಿ ಜಪಮಾಲೆ ಧರಿಸುವರು, ಕೆಲವರು ವೈಷ್ಣವ ಮುದ್ರೆಯ ಚಿನ್ಹಗಳನ್ನು ಹಚ್ಚಿಕೊಳ್ಳುವರು, ಆದರೆ ಕೇವಲ ಇವುಗಳಿಂದ ಪರಮಾರ್ಥ ಸಾಧಿಸುವದಿಲ್ಲ. ಸಾಧ್ಯವೂ ಆಗುವದಿಲ್ಲ. [೨೭] ಅರ್ಘ್ಯ ಪಾತ್ರ ಅಂದರೆ ದೇವರಿಗೆ ಅರ್ಘ್ಯ ಕೊಡುವ ತಾಬಾಣ ಪಾತ್ರೆ, ಸಂಪುಷ್ಟ ಅಂದರೆ ದೇವರನ್ನು ಇಡುವ ಕರಡಿಗೆ [ಡಬ್ಬಿ], ಗೋಕರ್ಣ ಅಂದರೆ ಆಕಳ ಕಿವಿಯ ಆಕಾರದಂತಿರುವ ಬೆಳ್ಳಿಯ ಅಥವಾ ತಾಮ್ರದ ಭಾಂಡೆ, [ಪಾತ್ರೆ] ಯಂತ್ರ ಮಂತ್ರದ ತಾಮ್ರ ಪರ್ಣ ಅಂದರೆ ತಾಮ್ರದ ತಗಡಿನ ಮೇಲೆ ಶಾಸ್ತ್ರವಿಧಿಯಂತೆ ಬರೆದ ಮಂತ್ರ ಮತ್ತು ಆಕೃತಿಯು. ಈ ಆಕೃತಿಗೆ ದೇವರ ಯಂತ್ರವೆನ್ನುವರು. ಕೆಲವು ಜನರು ಮೇಲೆ ಹೇಳಿದ ಪಾತ್ರೆಗಳನ್ನು ಇನ್ನೂ ಅನೇಕ ಪ್ರಕಾರದ ಸಣ್ಣ ದೊಡ್ಡ ಪೂಜಾ ಪಾತ್ರೆಗಳನ್ನು ಮತ್ತು ಇತರ ಪೂಜಾ ಸಾಹಿತ್ಯಗಳನ್ನು ಯಾವಾಗಲೂ ಸುಂದರ ಮತ್ತು ಸುಶೋಭಿತವಿಡುತ್ತಾರೆ. ಆದರೆ ಇವಾವವೂ ನಮ್ಮನ್ನು ಭಗವಂತನವರೆಗೆ ಮುಟ್ಟಿಸುವದಿಲ್ಲ. [೨೮] ಕೆಲವರು ಘಣ ಘಣ ಗಂಟೆ ಬಾರಿಸುತ್ತಾರೆ. ಕೆಲವು ಜನರು ಸದಾ ಸ್ತೋತ್ರ ಮಾಡುವರು, ಭಗವಂತನ ಸ್ತುತಿ ಮಾಡುವರು, ಭಗವಂತನ ಸ್ತುತಿ ಪದಗಳನ್ನು ಹಾಡುವರು, ಕೆಲವು ಜನರು ಆಸನಗಳನ್ನು ಹಾಕುವರು. ಕೆಲವರು ಮುದ್ರಾ [ಅನೇಕ ಪ್ರಕಾರದ ಹಾವಭಾವ] ಮಾಡುವರು, ಧ್ಯಾನ ಹಚ್ಚಿ ಕೂಡ್ರುವರು. ಮತ್ತೆ ಕೆಲವರು ಕೇವಲ ಪ್ರದಕ್ಷಿಣೆ ಹಾಕುವರು. ಹೀಗೆ ಮಾಡುವವರಿಂದ ಮಾತ್ರ ಪರಮಾರ್ಥ ಪ್ರಾಪ್ತವಾಗುವದಿಲ್ಲ. [ಉಡಿಯಲ್ಲಿ ಬೀಳುವದಿಲ್ಲ] [೨೯]

ಪಂಚಾಯೆತ್ನಪೂಜಾ ಕೇಲೀ । ವ್ಯೃತ್ತಿಕೇಚೀ ಲಿಂಗೇ ಲಾಖೋಲೀ ।
ಬೇಲೇ ನಾರಿಕೇಳೇ ಭರಿಲೀ । ಸಂಪೂರ್ಣ ಸಾಂಗ ಪೂಜಾ ॥೩೦॥

ಉಪೋಷಣೇ ನಿಷ್ಠಾನೇಮ । ಪರಮ ಸಾಯಾಸೀ ಕೇಲೇ ಕರ್ಮ ।
ಫಳ ಚಿ ಪಾವತೀ ಪರ್ಮ । ಚುಕಲೆ ಪ್ರಾಣೀ ॥೩೧॥

ಯೆಜ್ಞಾದಿಕೇ ಕರ್ಮೇ ಕೇಲೀ । ಹೃದಈ ಫಳಾಶಾ ಕಲ್ಪಿಲೀ ।
ಆಪಲೆ ಇಚ್ಛೇನೇ ಘೇತಲೀ । ಸೂತಿ ಜನ್ಮಾಚೀ ॥೩೨॥

ಕರೂನಿ ನಾನಾ ಸಾಯಾಸ । ಕೇಲಾ ಚೌದಾ ವಿದ್ಯಾಂಚಾ ಅಭ್ಯಾಸ ।
ರಿದ್ಧಿ ಸಿದ್ಧಿ ಸಾವಕಾಸ । ವೊಳಲ್ಯಾ ಜರೀ ॥೩೩॥

ತರೀ ಸದ್ಗುರು ಕೃಪೆ ವಿರಹಿತ । ಸರ್ವಥಾ ನ ಘಡೆ ಸ್ವಹಿತ ।
ಯೆಮಪುರೀಚಾ ಅನರ್ಥ । ಚುಕೇನಾ ಯೇಣೇ ॥೩೪॥

ಕೆಲವರು ಪಂಚಾಯತನದ ಪೂಜೆ ಮಾಡುವರು. ಗಣಪತಿ, ಶಾಲಿಗ್ರಾಮ [ವಿಷ್ಣು] ಶಂಕರ, ಸೂರ್ಯ, ಮತ್ತು ದೇವಿ, ಈ ಐದು ದೇವರನ್ನು ಇಟ್ಟು ಪೂಜಿಸುವದು ಪಂಚಾಯತನ ಪೂಜೆಯು. ಕೆಲವರು ಮಣ್ಣಿನಿಂದ ಲಿಂಗದ ಲಕ್ಷ ಪೂಜೆ ಮಾಡುತ್ತಾರೆ, ಮಣ್ಣಿನ ಶಿವಲಿಂಗ ಮಾಡಿ ಅದಕ್ಕೆ ಬಿಲ್ವಪತ್ರ ಅಕ್ಕಿಕಾಳು (ಅಕ್ಷತೆ) ಹೂವುಗಳನ್ನು ಏರಿಸಿ ಹಣ್ಣು ಹಂಪಲ ಮತ್ತು ಟೆಂಗಿನಕಾಯಿ ವಗ್ಯೆರೆ ನೈವೇದ್ಯ ತೋರಿಸುವರು. ಹೀಗೆ ಒಂದು ಲಕ್ಷ ಲಿಂಗದ ಯಥಾವಿಧಿ ಪೂಜೆ ಮಾಡಿದರೆ ಲಿಂಗಲಾಖೋಲಿ ಪೂಜೆ ಆಗುವದು. (ಲಕ್ಷ ಪಾರ್ಥಿವ ಲಿಂಗ ಪೂಜೆ ಎಂದೂ ಅನ್ನುವರು) ಇಂಥ ಲಾಖೋಲಿ ಪೂಜೆಯಿಂದ ಭಗವಂತನ ದರ್ಶನವಾಗುವದಿಲ್ಲ. [೩೦] ಕೆಲವು ಜನರು ಉಪವಾಸ ಮಾಡುವರು. ಕೆಲವರು ಯಾವುದಾದರೂ ಒಂದು ನೇಮವನ್ನು ಹಿಡಿದು ಅದನ್ನು ನಿಷ್ಠೆಯಿಂದ ಪಾಲಿಸುವರು, ಅಂತೂ ಒಟ್ಟಿನಲ್ಲಿ ಹೇಳುವದೇನಂದರೆ ಬಹಳಷ್ಟು ಜನರು ಈ ರೀತಿಯ ಕರ್ಮಗಳನ್ನು ಅತಿಶಯ ಕಷ್ಟದಿಂದ ಆಚರಿಸುತ್ತಾರೆ. ಇದರಿಂದ ಕೆಲವೊಂದು ಪ್ರಮಾಣದಲ್ಲಿ ಫಲವೂ ಸಿಗುತ್ತದೆ. ಆದರೆ ಭಗವಂತನ ಪ್ರಾಪ್ತಿಯ (ಖರೇರಹಸ್ಯ) ಗುಟ್ಟು ಅಥವಾ ಮರ್ಮ ಈ ಜನರ ಕೈಗೆ ಸಿಗುವದಿಲ್ಲ(ಗೊತ್ತಾಗುವದಿಲ್ಲ). ಇವು ಕರ್ಮಗಳು. ಇವುಗಳಿಗೆ ಫಲವೂ ಅಲ್ಪವಿರುತ್ತದೆ. ಇಂಥ ಕರ್ಮದ ಮೂಲಕ ಆತ್ಮ ಜ್ಞಾನದ ಮರ್ಮ ತಿಳಿಯುವದಿಲ್ಲ. ಅದು ತಪ್ಪಿ ಹೋಗುವದು. ಇಲ್ಲಿಯ ವರೆಗೆ ಹೇಳಿದ ಎಲ್ಲ ಕರ್ಮಗಳು ಧರ್ಮದ ದೃಷ್ಟಿಯಿಂದ ಬಹು ಪುಣ್ಯಕರವಾದವುಗಳು ಇರಬಹುದು. ಪರಂತು ಇವೆಲ್ಲ ಒಂದೇ ಪ್ರಕಾರದ (ಸಜಾತಿಯ)ಅರ್ಥಾತ್ ಸಕಾಮದಲ್ಲಿಯವಿದ್ದು ದೇಹಬುದ್ಧಿಗೆ ಅಂಟಿಕೊಂಡಂಥವು ಇರುವವು. ಇದರಿಂದ ದೃಶ್ಯದ ಆಸಕ್ತಿ ಹೆಚ್ಚು ಸ್ಥಿರ ಪಡುತ್ತದೆ. ಇದರ ಮುಖಾಂತರ ಮನುಷ್ಯ ಭಗವಂತನನ್ನು ಪ್ರಾಪಂಚಿಕ ವಸ್ತುಗಳ ಪ್ರಾಪ್ತಿಗಾಗಿ ಒಂದು ಸಾಧನವೆಂದು ಬಳಿಸುವನು [ತಿಳಿಯುವನು]. ಆದ್ದರಿಂದ ಇಂಥ ಕರ್ಮವನ್ನು ಜನ್ಮವಿರುವವರೆಗೆ ಮಾಡಿದರೂ ಸಹ ಆತ್ಮಜ್ಞಾನದ ರಹಸ್ಯ ಗೊತ್ತಾಗುವದಿಲ್ಲ. [೩೧] ತಿಳಿಯಿರಿ, ಒಬ್ಬನು ಸ್ವಾಹಾ, ಸ್ವಧಾ ಇತ್ಯಾದಿ ಹೋಮ ಮಾಡಿದನು, ಹೋಮ ಹವನ ಇತ್ಯಾದಿ ವೈದಿಕ ಕರ್ಮಗಳನ್ನು ಮಾಡಿದನು. ಆದರೆ ಮನಸ್ಸಿನಲ್ಲಿ ಫಲಾಸೆಯನ್ನು ಹೊಂದಿದ್ದರೆ, **ಉದಾ:-** ಸ್ವರ್ಗ ಸುಖ ಸಿಗಬೇಕು, ಮಕ್ಕಳು ಮರಿ ಆಗಬೇಕು, ಜಗತ್ತಿನಲ್ಲಿ ನನ್ನ ಕೀರ್ತಿ ಬೆಳಗಬೇಕು. ನನಗೆ ಮರ್ಯಾದೆ ಸಿಗಬೇಕು. ಇತ್ಯಾದಿ ಇಚ್ಛೆ ಹೊಂದಿದ್ದರೆ ಒಂದು ವೇಳೆ ಈ ಇಚ್ಛೆಯು ಸಫಲ ಹೊಂದಬಹುದು. ಇದರಿಂದ ಆಗುವದೇನಂದರೆ ತಾನೇ ತನ್ನ ಜನ್ಮದ ಸಂಚಕಾರ [ಪುನಃ ಹುಟ್ಟುವ] ತೆಗೆದುಕೊಂಡಂತೆ ಆಗುವದು. ಇಲ್ಲಿ ಮೀಮಾಂಸಕರ ಮತದ ಅನುವಾದವನ್ನು ಮಾಡಲಾಗಿದೆ. [೩೨] ತಿಳಿಯಿರಿ. ಒಬ್ಬನು ಬಹಳಷ್ಟು ಕಷ್ಟಪಟ್ಟು ಹದಿನಾಲ್ಕು ವಿದ್ಯೆಗಳನ್ನು ಅಭ್ಯಾಸ ಮಾಡಿದನು. ಇಷ್ಟೇ ಅಲ್ಲ ಈ ಹದಿನಾಲ್ಕೂ ವಿದ್ಯೆಗಳನ್ನು ಹಸ್ತಗತ ಮಾಡಿಕೊಂಡನು, ಒಬ್ಬನು ಬಹಳ ಕಷ್ಟದಿಂದ ಯೋಗಸಾಧನ ಮಾಡಿಕೊಂಡು ಅದರಿಂದ ಕೆಲಕಾಲದ ಮೇಲೆ ಋದ್ಧಿ, ಸಿದ್ಧಿ, ಮೊದಲಾದ ಅಷ್ಟಸಾಧನಗಳು ಮತ್ತು ಅತೀಂದ್ರಿಯ ಶಕ್ತಿಯನ್ನು ಪ್ರಾಪ್ತ ಮಾಡಿಕೊಂಡನು. [೩೩] ಆದರೂ ಸಹ ಸದ್ಗುರು ಕೃಪೆ ಆಗದ ಹೊರತು ಅವನ ಆತ್ಮ ಹಿತವಾಗುವದಿಲ್ಲ. ಮತ್ತು ಅವನಿಗೆ ಆತ್ಮಜ್ಞಾನ ಪ್ರಾಪ್ತವಾಗುವದಿಲ್ಲ. ಒಟ್ಟಿನಲ್ಲಿ ಆತ್ಮ ಜ್ಞಾನವಾಗುವವರೆಗೆ ಉಳಿದೆಲ್ಲವೂ ವ್ಯರ್ಥ ಇಷ್ಟೇ ಅಲ್ಲ, ಯಮ ಪುರದ ಬಾಧೆ [ಯಾತನೆ] ತಪ್ಪಿದ್ದಲ್ಲ. ದೃಶ್ಯದೊಳಗಿನ ಯಾವತ್ತೂ ವಿದ್ಯೆಗಳು ಪ್ರಾಪ್ತವಾದರೂ ಸಹ ಮನುಷ್ಯನು ಅಜ್ಞಾನದ ಕಕ್ಷೆ [ಆವರಣ] ಯಿಂದ ಹೊರ ಬೀಳುವದಿಲ್ಲ. ಅಷ್ಟೇ ಅಲ್ಲ ಇನ್ನೂ ಚನ್ನಾಗಿ ತಿಳಿಯಿರಿ. ಪ್ರತ್ಯಕ್ಷ ಯೋಗದ ಅಭ್ಯಾಸ ಮಾಡಿ ಶರೀರದ ಹಾಗೂ ಮನಸ್ಸಿನ ಮತ್ತು ವಾಣಿಯ ಶಕ್ತಿಯನ್ನು ಅಗಾಧವಾಗಿ ಬೆಳೆಸಿದ್ದರೂ [ವಾಕ್‌ಸಿದ್ಧಿ ಮೊದಲಾದವು] ಸಹ ಅದರ ಪ್ರಭಾವವು ಅಜ್ಞಾನದ ಕ್ಷೇತ್ರದಲ್ಲಿ ಗಣನೆಯಾಗುವವರಿಂದ ಕೊನೆಯ ಗುರಿಯಾದ ಆತ್ಮ ಸಾಕ್ಷಾತ್ಕಾರವು ತಪ್ಪಿದ್ದು ಕೊನೆಯವರೆಗೂ ತಪ್ಪಿಯೇ ಹೋಗುವದು. [೩೪]

ಜವ ನಾಹೀ ಜ್ಞಾನಪ್ರಾಪ್ತೀ । ತವ ಚುಕೇನಾ ಯಾತಾಯಾತೀ ।
ಗುರುಕೃಪೆವಿಣ ಅಧೋಗತೀ । ಗರ್ಭವಾಸ ಚುಕೇನಾ ॥೩೫॥

ಧ್ಯಾನ ಧಾರಣಾ ಮುದ್ರಾ ಆಸನ । ಭಕ್ತೀಭಾವ ಆಣೀ ಭಜನ ।
ಸಕಳ ಹಿ ಫೋಲ ಬ್ರಹ್ಮಜ್ಞಾನ । ಜವ ತೇ ಪ್ರಾಪ್ತ ನಾಹೀ ॥೩೬॥

ಸದ್ಗುರು ಕೃಪಾ ನ ಜೋಡೇ । ಆಣೀ ಭಲತೀ ಚ ಕಡೆ ವಾವಡೇ ।
ಜೈಸೇ ಆಂಧಳೇ ಚಾಚರೋನ ಪಡೆ । ಗಾರೀ ಆಣೀ ಗಡಧರಾ ॥೩೭॥

ಜೈಸೇ ನೇತ್ರೀ ಘಾಲಿತಾ ಅಂಜನ । ಪಡೆ ದೃಷ್ಟೀಸ ನಿಧಾನ ।
ತೈಸೇ ಸದ್ಗುರುವಚನೇ ಜ್ಞಾನ । ಪ್ರಕಾಶ ಹೋಯೆ ॥೩೮॥

ಸದ್ಗುರುವಿಣ ಜನ್ಮ ನಿರ್ಫಳ । ಸದ್ಗುರುವಿಣ ದುಃಖ ಸಕಳ ।
ಸದ್ಗುರುವಿಣ ತಳಮಳ । ಜಾಣಾರ ನಾಹೀ ॥೩೯॥

**ಜ್ಞಾನವಿಲ್ಲದೆ ಮಾನವ ಜೀವನಕ್ಕೆ ಪೂರ್ಣತೆ ಎಂಬುದಿಲ್ಲ. ಈ ಮಾತನ್ನು ಶ್ರೀ ಸಮರ್ಥರು ತುಂಬಾ ಪ್ರಭಾವ ಪೂರ್ಣವಾಗಿ ಹೇಳಿದ್ದಾರೆ. ಆತ್ಮಜ್ಞಾನವೇ ಇರಲಿ ಅಥವಾ ವಿಜ್ಞಾನ ಅಂದರೆ ಸಾಯನ್ಸೇ ಇರಲಿ ಇವೆರಡರಲ್ಲೂ ಜ್ಞಾನದ ಸಾಮರ್ಥ್ಯವೇ ತುಂಬಿರುವದು. ಯಾವ ವ್ಯಕ್ತಿಯು ಮತ್ತು ಸಮಾಜದ ಜೀವನದಲ್ಲಿ ಜ್ಞಾನದ ಪ್ರಭಾವವಿಲ್ಲ. ಜ್ಞಾನದ ಉಪಾಸನೆಯಿಲ್ಲ, ಬೆಳವಣಿಗೆ ಇಲ್ಲ, ಮತ್ತು ಲಾಲಸೆ[ಉತ್ಕಟ ಇಚ್ಛೆ] ಇಲ್ಲ, ಅಂಥ ವ್ಯಕ್ತಿಯು ಮತ್ತು ಸಮಾಜವು ಈ ಜಗತ್ತಿನಲ್ಲಿ ಉತ್ತಮ ಜೀವನ ನಡೆಸಲು ಶಕ್ಯವೇ ಇಲ್ಲ.** ಎಲ್ಲಿಯವರೆಗೆ ಆತ್ಮಜ್ಞಾನವಾಗುವದಿಲ್ಲವೋ ಅಲ್ಲಿಯವರೆಗೆ ಜನನ ಮರಣದ ಚಕ್ರ ಏನು ಮಾಡಿದರೂ ಬಿಡುವದಿಲ್ಲ. (ಅದು ತಿರುಗುತ್ತಲೇ ಇರುವದು) ಸದ್ಗುರುವಿನ ಕೃಪೆಯು ಹೊರತು ಗರ್ಭವಾಸ ತಪ್ಪುವದಿಲ್ಲ. ಮತ್ತು ನರಕಕ್ಕೆ ಹೋಗುದದೂ ತಪ್ಪುವದಿಲ್ಲ. (೩೫) ಬ್ರಹ್ಮಜ್ಞಾನ ಎಲ್ಲಿಯವರೆಗೆ ಆಗುವದಿಲ್ಲವೋ ಅಲ್ಲಿಯವರೆಗೆ ನಾವು ಮಾಡುವ ಧ್ಯಾನ, ಪ್ರಾಣನಿರೋಧ, ಮುದ್ರಾ(ಹಾವಭಾವ), ಆಸನ, ಭಕ್ತಿಭಾವ ಮತ್ತು ಭಜನ ಇವೆಲ್ಲವೂ ವ್ಯರ್ಥವೆನಿಸುವವು. ನಿರುಪಯೋಗಿ ಆಗುವವು. **"ಭಕ್ತಿಚೇನಿ ಯೋಗೆ ದೇವ। ನಿಶ್ಚಯೇ ಪಾವತೀ ಮಾನವ ॥" ಅರ್ಥ:**- ಮಾನವನು ಭಕ್ತಿಯೋಗದಿಂದ ಮಾತ್ರ ನಿಶ್ಚಯವಾಗಿ ದೇವರನ್ನು ಹೊಂದುವನು. ಇದನ್ನು ತಿಳಿಸಿ ಹೇಳುವದಕ್ಕಾಗಿಯೇ ಶ್ರೀಮತ್ ದಾಸಬೋಧ ಬರೆಯುವಂಥ ಶ್ರೀ ಸಮರ್ಥರು ಆತ್ಮಜ್ಞಾನದ ಮಹತ್ವವೆಷ್ಟು ಎಂಬುದನ್ನು ಕೈಯತ್ತಿ ನಿಶ್ಚಿತ ರೂಪದಲ್ಲಿ ಸಾರಿ ಸಾರಿ ಹೇಳಿದ್ದಾರೆ. ಇದನ್ನು ಎಲ್ಲರೂ ಲಕ್ಷ್ಯದಲ್ಲಿ ಇಡಬೇಕು. ಪ್ರಪಂಚದಲ್ಲಾಗಲಿ ಮತ್ತು ಪಾರಮಾರ್ಥದಲ್ಲಿಯೇ ಆಗಲಿ ವಿವೇಕ ಮತ್ತು ಇದರೊಳಗಿಂದ ಹುಟ್ಟುವ ಜ್ಞಾನ ಇವುಗಳಿಗೆ ಮಾತ್ರ ಮಾನವ ಜೀವನದಲ್ಲಿ ನಿಜವಾದ ಮಹತ್ವ (ಖರೇ ಕಿಮ್ಮತ್ತು) ಇರುವದು. ಮನುಷ್ಯರ ಎಲ್ಲ ಕರ್ಮಗಳು ಜ್ಞಾನ ಪರ್ಯವಸಾಯಿ ಆಗಲಿಕ್ಕೇ ಬೇಕು. ಇಲ್ಲದಿದ್ದರೆ ಆ ಕರ್ಮದ ಕಷ್ಟವಷ್ಟೇ ನಮ್ಮ ಪದರಿನಲ್ಲಿ ಬೀಳುವದು. ಮತ್ತು ಜೀವನವು ಅರ್ಧ ವಿಕಸಿತವಾಗಿ ಉಳಿಯುವದು (ಪೂರ್ಣವಾಗುವದಿಲ್ಲ) [೩೬] ಕುರುಡ ಮನುಷ್ಯನು ಕಣ್ಣಿದ್ದವರ ಸಹಾಯವಿಲ್ಲವೇ ಎಡವುತ್ತ ಮುಗ್ಗರಿಸುತ್ತ ಕಾಲು ಎಳೆದುಕೊಳ್ಳುತ್ತ ನಡೆಯ ಹತ್ತಿದರೆ ಅವನು ಕೆಸರಿನಲ್ಲಾಗಲೀ, ಹಾಳ ಭಾವಿಯಲ್ಲಾಗಲೀ, ತಗ್ಗಿನಲ್ಲಾಗಲೀ ಬೀಳುತ್ತಾನೆ. ಇದೇ ಪ್ರಕಾರ ಜೀವನ ದಲ್ಲಿ ಸದ್ಗುರುವಿಲ್ಲದೆ, ಅವನ ಕೃಪೆಯಿಲ್ಲದೆ ಹೋದರೆ ಅಡ್ಡದಾರಿ ಬಿದ್ದು ಅತ್ತಿತ್ತ ಸುಮ್ಮನೆ ತಿರುಗಾಡಬೇಕಾಗುವದು. [೩೭] ಕಣ್ಣಿಗೆ ಅಂಜನ ಹಚ್ಚಿದರೆ ಭೂಮಿಯಲ್ಲಿ ಹುಗಿದಿಟ್ಟ ಗುಪ್ತದ್ರವ್ಯ ತನ್ನಷ್ಟಕ್ಕೆ ತಾನೇ ಕಾಣಿಸುವದು. ಇದರಂತೆಯೇ ಸದ್ಗುರುವಿನ ಅಂಜನರೂಪಿ ಉಪದೇಶಾಮೃತವು ಜ್ಞಾನ ದೃಷ್ಟಿಯನ್ನು ಕೊಟ್ಟು ತನ್ಮೂಲಕ ಹೃದಯದ ಗುಹೆಯಲ್ಲಿ ಗುಪ್ತವಿದ್ದಂಥ ಆತ್ಮಜ್ಞಾನವೆಂಬುದನ್ನು ಪ್ರತ್ಯಕ್ಷ ಅನುಭವಕ್ಕೆ ತಂದು ಕೊಡುವದು. ಸದ್ಗುರುವು ಕೃಪಾ ಮಾಡುವನೆಂದರೆ ಏನು ಮಾಡುವನೆಂಬುದನ್ನು ಇಲ್ಲಿ ಸ್ಪಷ್ಟಪಡಿಸಿದ್ದಾರೆ. ಪ್ರಾಪಂಚಿಕ ಬುದ್ಧಿ, ಅಜ್ಞಾನ ಬುದ್ಧಿ ಅಂದರೆ ದೇಹಬುದ್ಧಿಯಲ್ಲಿ ಸುಳಿದಾಡುವ ಜೀವವು ಅಹಂಕಾರದ ಕೇಂದ್ರವಾಗಿದ್ದುಕೊಂಡು ಸ್ವತಃ ತನ್ನ ಕಡೆಗೆ ಮತ್ತು ಜಗತ್ತಿನ ಕಡೆಗೆ ನೋಡುತ್ತದೆ. ಅಜ್ಞಾನದ ಈ ಸ್ವಾರ್ಥಮಯ ದೃಷ್ಟಿಕೋನವನ್ನು ಏನು ಮಾಡಿದರೂ ಸಹ ಅದಕ್ಕೆ ಬಿಡಲಾಗುವದಿಲ್ಲ. ಸದ್ಗುರು ಕೃಪಾ ಮಾಡುವನು ಅಂದರೆ ಜೀವವನ್ನು ಈಶ್ವರನಲ್ಲಿ ಕೇಂದ್ರೀಕರಿಸುವದು. ಅಥವಾ ಸ್ವಸ್ವರೂಪವನ್ನು ಕೇಂದ್ರಿತವಾಗಿ ಮಾಡಿಬಿಡುವದು. ಆ ಮೇಲೆ ಅವನು ಆತ್ಮಬುದ್ಧಿಯಿಂದ ಸ್ವತಃದ ಕಡೆಗೆ ಮತ್ತು ಜಗತ್ತಿನ ಕಡೆಗೆ ನೋಡತೊಡಗುವನು. ಜ್ಞಾನದ ಈ ನಿಸ್ವಾರ್ಥಮಯ ದೃಷ್ಟಿಕೋನವನ್ನು ಕೊಡುವದೇ ಸದ್ಗುರುವಿನ ನಿಜವಾದ ಕೃಪೆಯ ಲಕ್ಷಣವೆಂದು ತಿಳಿಯಬೇಕು. [೩೮] **ಸದ್ಗುರುವು ಜೀವದ ತಳಮಳವನ್ನು ಶಾಂತ ಮಾಡುವನು. ಈಶ್ವರನ ದರ್ಶನ ಒದಗಿಸುವನು. ಪೂರ್ವದಲ್ಲಿ ದೊಡ್ಡ ದೊಡ್ಡ ಸಂತರು ಆಗಿಹೋದರು. ಅವರೆಲ್ಲ ಗುರುವಿನ ದಾಸ್ಯತ್ವವನ್ನು ಸ್ವೀಕರಿಸಿದ್ದರು. ಅಂತೆಯೇ ಮೋಕ್ಷದ ಸಲುವಾಗಿ ಸದ್ಗುರುವನ್ನು ಮಾಡಿಕೊಳ್ಳಿರಿ ಎಂದು ಕೊನೆಯಲ್ಲಿ ಹೇಳುತ್ತಾರೆ:**- ಸದ್ಗುರುವನ್ನು ಮಾಡಿಕೊಳ್ಳದಿದ್ದರೆ ಜನ್ಮ ವ್ಯರ್ಥವೆಂದು ತಿಳಿಯಿರಿ. ಸದ್ಗುರುವು ನಮ್ಮ ಬೆನ್ನ ಹಿಂದೆ ಇರದಿದ್ದರೆ ನಮ್ಮ ಜೀವನವೆಲ್ಲ ದುಃಖಮಯವಾಗುವದು. ಸದ್ಗುರುವಿಲ್ಲದೇ ಜೀವದ ತಳಮಳ ಶಾಂತವಾಗುವದಿಲ್ಲ. [೩೯]

ಸದ್ಗುರುಚೆನಿ ಅಭಯಂಕರೇ । ಪ್ರಗಟ ಹೊಇಜೇ ಈಶ್ವರೇ ।
ಸಂಸಾರದುಃಖೇ ಅಸಾರೇ । ನಾಸೋನ ಜಾತೀ ॥೪೦॥
ಮಾಗೇ ಜಾಲೇ ಥೋರ ಥೋರ । ಸಂತ ಮಹಂತ ಮುನೇಶ್ವರ ।
ತಯಾಸ ಹಿ ಜ್ಞಾನ ವಿಜ್ಞಾನ ವಿಚಾರ । ಸದ್ಗುರುಚೆನೀ ॥೪೧॥
ಶ್ರೀರಾಮಕೃಷ್ಣ ಆದಿ ಕರೂನೀ । ಅತಿ ತತ್ಪರ ಗುರುಭಜನೀ ।
ಸಿದ್ಧ ಸಾಧೂ ಆಣೀ ಸಂತಜನೀ । ಗುರುದಾಸ್ಯ ಕೇಲೇ ॥೪೨॥
ಸಕಳ ಸೃಷ್ಟೀಚೆ ಚಾಳಕ । ಹರಿಹರ ಬ್ರಹ್ಮಾದಿಕ ।
ತೇ ಸದ್ಗುರುಪದೀ ರಂಕ । ಮಹತ್ವಾ ನ ಚಢೇತೀ ॥೪೩॥
ಅಸೋ ಜಯಾಸೀ ಮೋಕ್ಷ ವ್ಹಾವಾ । ತೇಣೇ ಸದ್ಗುರು ಕರಾವಾ ।
ಸದ್ಗುರುವಿಣ ಮೋಕ್ಷ ಪಾವಾವಾ । ಹೇ ಕಲ್ಪಾಂತೀ ನ ಘಡೇ ॥೪೪॥
ಆತಾ ಸದ್ಗುರು ತೇ ಕೈಸೆ । ನವ್ಹೇತಿ ಇತರಾ ಗುರು ಐಸೇ ।
ಜಯಾಚೆ ಕೃಪೆನೇ ಪ್ರಕಾಶೇ । ಶುದ್ಧ ಜ್ಞಾನ ॥೪೫॥
ತ್ಯಾ ಸದ್ಗುರೂಚೀ ವೋಳಖಣ । ಪುಢಿಲೇ ಸಮಾಸೀ ನಿರೂಪಣ ।
ಬೋಲಿಲೇ ಅಸೇ ಶ್ರೋತೀ ಶ್ರವಣ । ಅನುಕ್ರಮೋ ಕರಾವೇ ॥೪೬॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಗುರು ನಿಶ್ಚಯೆ' ನಾಮ ಸಮಾಸ ಪ್ರಥಮ ॥

● ●

ಸದ್ಗುರುವು ತನ್ನ ಅಭಯ ಹಸ್ತವನ್ನು ಶಿಷ್ಯನ ತಲೆಯ ಮೇಲೆ ಇಟ್ಟದ್ದಾದರೆ ಪ್ರತ್ಯಕ್ಷ ಈಶ್ವರನು ಪ್ರಕಟವಾಗುವನು. ಮತ್ತು ಈಶ್ವರ ದರ್ಶನವಾಗುತ್ತದೆ. ಮತ್ತು ಸಂಸಾರದ ಎಲ್ಲ ದುಃಖಿಗಳು ಇಲ್ಲದಂತಾಗು ವವು. ಜೀವವು ಮೇಲಿನ ಮಟ್ಟಕ್ಕೆ ಏರಿ ಈಶ್ವರ ದರ್ಶನಕ್ಕೆ ಯೋಗ್ಯವಾಗುವಂತೆ ಸದ್ಗುರುವು ತನ್ನ ಶಕ್ತಿಯನ್ನು ಶಿಷ್ಯರಿಗೆ ಕೊಡುವನೆಂಬುವದರಲ್ಲಿ ಸಂಶಯವಿಲ್ಲ. ಇಷ್ಟೇ ಅಲ್ಲ. ತನ್ನ ವಿಚಾರವನ್ನು ಇನ್ನೊಬ್ಬರಿಗೆ ಕೊಡುವದು ಅವರಿಗೆ ಮನಗಾಣಿಸುವದು ಕಲಿಸುವದು, ಇದರಲ್ಲಿ ಸಹ ಗೊತ್ತಾಗದೇ ಕೊಡುವಂಥ ಶಕ್ತಿಪಾತವೇ ಇದನ್ನು ಮಾಡುತ್ತದೆ. [೪೦] ಪೂರ್ವ ಕಾಲದಲ್ಲಿ ದೊಡ್ಡ ದೊಡ್ಡ ಸಂತರು, ಮಹಂತರು, ಮುನಿ ಶ್ರೇಷ್ಠರು ಇವರೆಲ್ಲ ಆಗಿ ಹೋಗಿರುವರು. ಆದರೆ ಇವರಿಗೆ ಸಹ ಆತ್ಮಜ್ಞಾನದ ವಿಚಾರ ಅವರವರ ಸದ್ಗುರುಗಳಿಂದಲೇ ಪ್ರಾಪ್ತ ವಾಗಿತ್ತು. [೪೧] ಶ್ರೀರಾಮ, ಶ್ರೀಕೃಷ್ಣ ವಗೈರೆ ಅವತಾರಿಕರು ಸದ್ಗುರುವಿನ ಸೇವೆಯನ್ನು ಮನಃಪೂರ್ವಕ ಮಾಡಿ ದರು. ಇದರಂತೆಯೇ ಅನೇಕ ಸಿದ್ಧರು, ಸಾಧುಗಳು, ಮತ್ತು ಸಂತರು, ಶರಣರು, ಸಹ ಸದ್ಗುರುವಿನ ದಾಸ್ಯತ್ವ ಮಾಡಿರುವರು. [೪೨] ಈ ಮಹತ್ತರವಾದ ವಿಶ್ವವನ್ನು ನಡೆಯಿಸುವಂಥ ಬ್ರಹ್ಮ, ವಿಷ್ಣು, ಮಹೇಶ್ವರರೂ ಸಹ ಸದ್ಗುರುವಿನ ಚರಣದಲ್ಲಿ ಲೀನರಾಗಿರುವರು. ಇವರು ಅಲ್ಲಿ ತಮ್ಮ ಮಹತ್ವವನ್ನು ಮೆರೆಯಿಸುವದಿಲ್ಲ. [೪೩] ಇರಲಿ, ಯಾರಿಗೆ ಮೋಕ್ಷವು ನಿಜವಾಗಿಯೂ ಬೇಕಾಗಿರುವದೋ ಅವರು ಸದ್ಗುರುವನ್ನು ಪ್ರಾಪ್ತ ಮಾಡಿಕೊಳ್ಳ ಬೇಕು. ಸದ್ಗುರು ಕೃಪೆ ಇಲ್ಲದೆ ಮೋಕ್ಷ ಪ್ರಾಪ್ತಿ ಯಾವ ಕಾಲಕ್ಕೂ ಅರ್ಥಾತ್ ಕಲ್ಪಾಂತ್ಯಕ್ಕೂ ಸಹ ಸಾಧ್ಯವಿಲ್ಲ. ಇದು ನಿಶ್ಚಯವು. [೪೪] **ಮುಂದಿನ ಸಮಾಸದಲ್ಲಿಯ ವಿಷಯದ ಉಪಕ್ರಮ:–** ಇನ್ನು ನೀವು ಸದ್ಗುರು ಹೇಗಿರುವನು? ಎಂದು ಪ್ರಶ್ನೆಮಾಡಿದರೆ ಅವನು ಇತರ ಗುರುಗಳಂತೆ ಇರುವದಿಲ್ಲ. ಸದ್ಗುರುವಿನ ಕೃಪೆಯಿಂದ ಶುದ್ಧ ಜ್ಞಾನ ಅಥವಾ ಆತ್ಮಜ್ಞಾನವು ಹೃದಯದಲ್ಲಿ ಉದಯವಾಗುತ್ತದೆ. [೪೫] ಇಂಥ ಸದ್ಗುರುವನ್ನು ಹೇಗೆ ಗುರುತಿಸ ಬೇಕು? ಇದರ ವಿವೇಚನೆಯನ್ನು (ಮುಂದಿನ ಸಮಾಸದಲ್ಲಿ ಮಾಡಿದೆ). ಅದನ್ನು ಶ್ರೋತೃಗಳು ಈ ಸಮಾಸದಲ್ಲಿಯ ಸಂದರ್ಭಗಳನ್ನು ನೆನಪಿಟ್ಟುಕೊಂಡು ಒಂದನ್ನೂ ಬಿಡದೆ ಮುಂದಿನ ಸಮಾಸದಲ್ಲಿ ವಿಷಯ ಶ್ರವಣ ಮಾಡಿರಿ. ಮುಖ್ಯ ವಾಗಿ ಸದ್ಗುರುವು ಆತ್ಮಜ್ಞಾನ ಮಾಡಿಕೊಡುವನು. ಎಂಬ ಮುಖ್ಯ ಸೂತ್ರವನ್ನು ಧ್ಯಾನದಲ್ಲಿಟ್ಟು ಕೇಳಿರಿ. [೪೬]

ಶ್ರೀ ದಾಸಬೋಧದ ಗುರು ಶಿಷ್ಯರ ಸಂವಾದದೊಳಗಿನ ಐದನೆಯ ದಶಕದಲ್ಲಿಯ
"ಗುರು ನಿಶ್ಚಯ" ಎಂಬ ಹೆಸರಿನ ಒಂದನೆಯ ಸಮಾಸವು ಮುಗಿದುದು.

೦ ೦

## ದಶಕ ೫. ಸಮಾಸ ೨. ಗುರು ಲಕ್ಷಣ (ನುಡಿ ೬೩)

ಮುಂದುವರಿದ ಪ್ರತಿಯೊಂದು ಸಮಾಜದಲ್ಲಿ ಜ್ಞಾನದ ಉಪಾಸನೆಯು ಸತತವಾಗಿ ನಡೆಯುತ್ತಬಂದಿದೆ. ಅನೇಕ ಜನರು ಅನೇಕ ವರ್ಷಗಳವರೆಗೆ ಸತತವಾಗಿ ಮನಸ್ಸುಗೊಟ್ಟು ಇದರ ಅಭ್ಯಾಸ ಮಾಡುತ್ತ ಬಂದಿದ್ದಾರೆ. ಹೀಗೆ ಮಾಡಿದಾಗ ಸಾವಕಾಶವಾಗಿ ಅವರಲ್ಲಿ ಜ್ಞಾನ ಸಂಚಯವಾಗುತ್ತದೆ. ಗುರುಶಿಷ್ಯ ಪರಂಪರೆಯು ಈ ಅಭ್ಯಾಸದ ಒಂದು ಪ್ರಧಾನ ಅಂಗವಿರುವದು, ಪಾಶ್ಚಾತ್ಯ ದೇಶದಲ್ಲೀಗ ವಿಜ್ಞಾನದ ಬಗ್ಗೆ ಹೇಗೆ ಸಂಘಟಿತ ಉಪಾಸನೆಯು ಪ್ರಚಲಿತವಿರುವದೋ, ಇಂಥದೇ ಸುವ್ಯವಸ್ಥಿತವಾದ ಉಪಾಸನೆಯು ಅಧ್ಯಾತ್ಮ ಜ್ಞಾನದ ಕ್ಷೇತ್ರದಲ್ಲಿ ಭಾರತದೊಳಗೆ ಬಹಳ ಪುರಾತನ ಕಾಲದಿಂದಲೂ ನಡೆದು ಬಂದದ್ದು ಕಂಡು ಬರುತ್ತದೆ, ಪ್ರಶ್ನೋಪನಿಷತ್ತದಲ್ಲಿಯ ಒಂದು ಕಡೆ ಹೀಗೆ ವರ್ಣನೆ ಮಾಡಿದ್ದಾರೆ:– ಭಾರದ್ವಾಜ, ಸುಕೇಶಾ, ಶೈಬ್ಯಾ, ಸತ್ಯಕಾಮ, ಗಾರ್ಗ್ಯ, ಸೌರ್ಯಾಯಣಿ, ಇತ್ಯಾದಿ ಪ್ರಮುಖರಾದ ಆರು ಜನ ಋಷಿಗಳು, ಪರಬ್ರಹ್ಮದ ಜ್ಞಾನ ಪ್ರಾಪ್ತವಾಗಬೇಕೆಂದು ಅತ್ಯಂತ ವಿನೀತರಾಗಿ ಶಿಷ್ಯ ಭಾವದಿಂದ ಭಗವಾನ್ ಪಿಪ್ಪಲಾದ ಮುನಿಯ ಹತ್ತಿರ ಬಂದರು. ಮುನಿಗಳು ಇವರನ್ನು ತಮ್ಮಲ್ಲಿಇಟ್ಟುಕೊಂಡರು. ಒಂದು ವರ್ಷದವರೆಗೂ ಇವರಿಂದ ಬ್ರಹ್ಮಚರ್ಯ ಮತ್ತು ಶ್ರದ್ಧೆ ಇವುಗಳ ಆಚರಣೆಯನ್ನು ಹೇಳಿ ಮಾಡಿಸಿಕೊಂಡ ಮೇಲೆ ಇವರಿಗೆ ಪರಬ್ರಹ್ಮದ ಜ್ಞಾನ ಮಾಡಿಕೊಟ್ಟು ಆಶೀರ್ವದಿಸಿದರು. ಈ ಮೇಲಿನ ಉಪನಿಷತ್ತಿನ ಕೊನೆಯಲ್ಲಿ ಹೇಳುವದೇನೆಂದರೆ:– "ತೇ ತಮ್ ಅರ್ಚಯಂತಃ ಯಃ ತ್ವಂ ಅಸ್ಮಾಕಂ ಅವಿದ್ಯಾಯಾಃ ಪರಂಪಾರಂ ತಾರಯಸಿ ಇತಿ ಸಃ ತ್ವಂ ಹಿನಃ ಪಿತಾ ಪರಮ ಋಷಿಭ್ಯಃ ನಮಃ ಪರಮ ಋಷಿಭ್ಯಃ ನಮಃ" **ಅರ್ಥ**:– ಆ ಶಿಷ್ಯರು ಅವರ ಅಂದರೆ ಪಿಪ್ಪಲಾದ ಮುನಿಯ ಪೂಜೆ ಮಾಡಿದರು. ಮತ್ತು ಶಿಷ್ಯರು ಮುನಿಗಳಿಗೆ ಅನ್ನುವರು "ತಾವು ನಮಗೆ ಅವಿದ್ಯೆಯ ಪರ ತೀರಕ್ಕೆ ಮುಟ್ಟಿಸಿದಿರಿ. [ಅವಿದ್ಯೆಯಿಂದ ಜ್ಞಾನದ ಕಡೆಗೆ ಒಯ್ದಿರಿ]. ನೀವೇ ನಮ್ಮ ತಂದೆಯಾಗಿರು ವಿರಿ. ಇಂಥ ಶ್ರೇಷ್ಠ ಮುನಿಗೆ ನಮಸ್ಕಾರವು" ಈ ಶ್ರೇಷ್ಠ ಪರಂಪರೆಯ ದಿಗ್ದರ್ಶನವನ್ನು ಶ್ರೀ ಸಮರ್ಥರು ಇಲ್ಲಿ ಮಾಡಿದ್ದಾರೆ. ವೈದ್ಯಕೀಯ ಶಿಕ್ಷಣ ಕಲಿಯಲು ವೈದ್ಯರ ಕಡೆಗೆ ಹೋಗಬೇಕಾಗುತ್ತದೆ. ಗಾಯಕನು ಗಾಯನ ಕಲಿಯ ಬೇಕಾದರೆ ಗವಾಯಿಯ ಕಡೆಗೆ ಹೋಗಬೇಕಾಗುತ್ತದೆ. ಇದರಂತೆ ಆತ್ಮಜ್ಞಾನ ಪ್ರಾಪ್ತವಾಗಲು ಆತ್ಮಜ್ಞಾನಿ ಪುರುಷನ ಕಡೆಗೇ ಹೋಗಬೇಕಾಗುವದು. ಇತರ ವಿದ್ಯೆಗಳು ದೃಶ್ಯದಲ್ಲಿಯವು ಇರುವದರಿಂದ ನಮಗೆ ಬೇಕಾದ ವಿದ್ಯೆಯು ಇವರಲ್ಲಿ ಇರುವದೋ ಇಲ್ಲವೋ ಎಂಬುದನ್ನು ಕಂಡು ಹಿಡಿಯುವದು ಕಠಿಣವೆನಿಸುವದಿಲ್ಲ. ಆದರೆ ಬ್ರಹ್ಮವಿದ್ಯೆ (ಆತ್ಮಜ್ಞಾನ) ಅತ್ಯಂತ ಸೂಕ್ಷ್ಮವಿರುವದರಿಂದ ಇದು ಯಾರಲ್ಲಿ ನಿಜವಾಗಿಯೂ ಇರುವದೆಂಬುದನ್ನು ಗುರುತಿಸಿ ಹುಡುಕುವದು ಬಹಳ ಕಠಿಣವು, ಈ ಕಾರಣದಿಂದ ಅಧ್ಯಾತ್ಮದಲ್ಲಿಯ ಗುರುತ್ವದಲ್ಲಿ ಬಹಳಷ್ಟು ಕೃತ್ರಿಮತೆ, ಡಾಂಭಿಕತನ, ಮೋಸ ಕಂಡು ಬರುವದು. ಆದ್ದರಿಂದ ಶ್ರೀ ಸಮರ್ಥರು ಮೊದಲಿಗೆ ಸದ್ಗುರುಗಳಲ್ಲದವರ (ಢೋಂಗಿ ಗುರುಗಳ) ಸವಿಸ್ತಾರ ವರ್ಣನೆ ಮಾಡಿದ್ದಾರೆ. ವಾಚಕರಿಗೆ ಎಲ್ಲವೂ ಸಹಜವಾಗಿ ತಿಳಿಯುವದು. ಸದ್ಗುರುವಿನ ಲಕ್ಷಣ ಗಳನ್ನು ಚನ್ನಾಗಿ ತಿಳಿದಿರುವದು ಅವಶ್ಯವು. ಸಂತ ಅಥವಾ ಸತ್ಪುರುಷರೇ ಸದ್ಗುರುಗಳಾಗಬಲ್ಲರು. ಸಂತ ಅಂದರೆ ಆತ್ಮಸಾಕ್ಷಾತ್ಕಾರೀ ವ್ಯಕ್ತಿಯು. ಸಂಪೂರ್ಣ ಮಾನವತೆ ಹಾಗೂ ದಿವ್ಯ ಈಶ್ವರತೆ (ದೇವತ್ವ) ಇವುಗಳ ಮಧುರ ಸಂಗಮವು ಸದ್ಗುರುವಿನಲ್ಲಿರುವದು. ಈಶ್ವರನನ್ನು ಗುರುತಿಸುವದೆಂದರೆ, ಸದ್ಗುರುವನ್ನೇ ಗುರುತಿಸುವದಾಗಿದೆ.

ಇಷ್ಟೇ ಏಕೆ? (ಕಿಂಬಹುನಾ) ಮೊದಲು ಈಶ್ವರನನ್ನು ಗುರುತಿಸಬೇಕು. ಆ ಮೇಲೆ ಸದ್ಗುರುವನ್ನು ಗುರುತಿಸಲಿಕ್ಕೆ ಬರುತ್ತದೆ. ಸದ್ಗುರುವಿನ ಪೈಕಿ ಕೆಲವರು ವಿರಕ್ತರು, ಕೆಲವರು ಗೃಹಸ್ಥಾಶ್ರಮಿಗಳಿರುವರು, ವ್ಯವಹಾರ ಮಾಡುವಾಗ ಇವರನ್ನು ಗುರುತಿಸುವದು ಬಹಳ ಕಠಿಣವಿರುತ್ತದೆ. ಸದ್ಗುರು ಮಹಾಪುರುಷನಿರುತ್ತಾನೆ. ಇವನ ಮೈಯಲ್ಲಿ ದೈವೀ ಸಂಪತ್ತು ಹೊಳೆಯುತ್ತದೆ. ಮಾತುಕತೆಯಾಡುವಾಗ ಭಗವತ್ ಪ್ರೇಮವು ಭರಪೂರ ತುಂಬಿ ಹರಿಯುತ್ತದೆ. ಇವರಲ್ಲಿ ಕಾಮ, ಕ್ರೋಧ. ದ್ವೇಷಾದಿಗಳ ಲವಲೇಶವೂ ಇರುವದಿಲ್ಲ. ಆದರೆ ವ್ಯವಹಾರ ಕಾರ್ಯ ಮಾಡುವಾಗ್ಗೆ ಇವನಲ್ಲಿ ಕಾಮ ಕ್ರೋಧಾದಿಗಳ ಆಭಾಸ (ಭಾಸಮಾತ್ರ) ತೋರುವದು. (ಹೊರತೋರಿಕೆಗೆ) ಇವನ್ನು ಬದಿಗೆ ಸರಿಸಿ ಗುರುತಿಸಬೇಕಾಗುವದು. ಸಂತರ ಅಥವಾ ಸತ್ಪುರುಷರಲ್ಲಿ ಮುಂದೆ ಹೇಳಿದ ಏಳು ಮಾತುಗಳ ಕಡೆಗೆ ಲಕ್ಷ್ಯ ಕೊಡಬಾರದು. ೧) ಶರೀರದ ರಂಗು (ಬಣ್ಣ) ೨) ಮೂಗು, ಕಣ್ಣು, ೩) ವಯಸ್ಸು ೪) ಲೌಕಿಕ ವಿದ್ಯೆ ಅಥವಾ ಶಿಕ್ಷಣ ೫) ಬಂಧು-ಬಳಗ ೬) ಭಾಷಾ ಶುದ್ಧಿತನ ೭) ಇರುವ ಮನೆ, ಇವೇ ಏಳು ಮಾತುಗಳು. ಸದ್ಗುರುವನ್ನು ಹೊರಗಿನಿಂದ ನೋಡುವದಿರುವದಿಲ್ಲ. ಅವನ ಅಂತರಂಗದ ಸ್ಥಿರತೆ, (ಧಾರಣಾ) ನೋಡಬೇಕು. ತನ್ನ ಸಹವಾಸದಲ್ಲಿರುವ ಮನುಷ್ಯರಲ್ಲಿಯ ದೇಹಬುದ್ಧಿಯನ್ನು ಕ್ಷೀಣಗೊಳಿಸುವದು, ಇವನ ವಾಸನಾ ಕಡಿಮೆ ಮಾಡುವದು, ಇವನಿಗಿರುವ ದೃಶ್ಯದ ಮೇಲಿನ ಪ್ರೇಮವನ್ನು ಭಗವಂತನ ಕಡೆಗೆ ಹೊರಳಿಸುವದು, ಮತ್ತು ಭಗವಂತನ ಅನುಸಂಧಾನ (ಧ್ಯಾನ) ಹೇಗೆ ಮಾಡಬೇಕು. ಇದನ್ನೆಲ್ಲ ಕಲಿಸುವದೇ ಸದ್ಗುರುವಿನ ನಿಜವಾದ ಕೆಲಸವಾಗಿದೆ. ಅಂತೂ ಸದ್ಗುರುವಿನ ಪರೀಕ್ಷೆ ಕೊನೆಯದಾಗಿ ನಮ್ಮ ಮೇಲೆಯೇ ಅವಲಂಬಿಸಿರುತ್ತದೆ. ನಾವು ಸದ್ಗುರುವಿನ ಸಹವಾಸದಲ್ಲಿ ಸದಾ ಇರಬೇಕು ಅಂದರೆ ಅವನ ಅಧ್ಯಾತ್ಮಿಕ ಶಕ್ತಿಯು ಕ್ರಮಕ್ರಮದಿಂದ ನಿಮ್ಮ ಅಂತಃಕರುಣದಲ್ಲಿ ಹರಿದು ಬರುತ್ತದೆ. (ಇಳಿದು ಬರುವದು) ಆಗ ನಿಮಗೆ ಇಂದ್ರಿಯ ನಿಗ್ರಹ ಸಾಧಿಸುವದು, ನಿಮ್ಮ ವಿಕಾರಗಳು ಶಾಂತವಾಗುವವು. ನಿಮ್ಮ ಕಾಳಜಿ ಕಡಿಮೆ ಆಗುತ್ತದೆ. ನಿಮಗೆ ಭಗವಂತನು ಹೆಚ್ಚು ಹೆಚ್ಚು ಪ್ರೀತ್ಯಾಸ್ಪದನಾಗುವನು. ಸರ್ವವಿಶ್ವಕ್ಕೆ ಭಗವಂತನ ಅಗಾಧ ಲೀಲೆ ತಿಳಿಯುವದು. ಸದ್ಗುರುವಿನಿಂದಲೇ ಎಲ್ಲ ಪ್ರಾಣಿ ಮಾತ್ರರಲ್ಲಿ ಆತ್ಮಸ್ವರೂಪದಿಂದ, ನಾನೇ ಇದ್ದೇನೆ ಎಂಬ ಆತ್ಮೀಯ ಆನಂದದಿಂದ ಅನುಭವಿಸುವವನೇ ಸದ್ಗುರುವು. ಜಗತ್ತಿನಲ್ಲಿಯ ದೀನ, ದರಿದ್ರ, ದುಃಖಿ ಜೀವರ ಬಗ್ಗೆ ಯಾರಿಗೆ ಅತ್ಯಂತ ಕರುಣೆ ಇರುವದೋ ಅವನೇ ಸದ್ಗುರುವು. ಜಗತ್ತಿನಲ್ಲಿಯ ಯಾವುದೇ ಒಂದು ವಸ್ತು ಸಹ ಇದು ನನಗೆ ಬೇಕು ಎಂದು ತಪ್ಪಿ ಕೂಡಾ ಒಮ್ಮೆಯೂ ಅನ್ನದವನೇ ಸದ್ಗುರುವು ಅಖಂಡನಿರ್ಭಯತನ, ನಿರ್ಭೀತಿಯನ್ನು ಅನುಭವಿಸಿಯೂ ಯಾವನು ಸದಾ ಪ್ರಸನ್ನನಾಗಿರುವನೋ ಅವನೇ ಸದ್ಗುರುವು. ಸುಖದಲ್ಲಾಗಲೀ, ದುಃಖದಲ್ಲಾಗಲೀ, ಸಂಪತ್ತಿದ್ದಾಗಾಗಲೀ, ಮತ್ತು ದೇಹಸುಖವಿದ್ದಾಗ್ಗೆ ಹಾಗೂ ದರಿದ್ರತನದಲ್ಲಿ ಮತ್ತು ಅಜಾರಿ ಇದ್ದಾಗ್ಗೆ ಅಥವಾ ಅಂತ್ಯ ಕಾಲದಲ್ಲಿ ಆಗಲೀ ಸದಾ ಸರ್ವದಾ ಭಗವಂತನ ಮೇಲಿನ ಭರವಸೆ ಒಂದೇ ಸವನೆ ಇದ್ದು ಅದು ಸತೇಜ ಇರುವದು, ಅವನೇ ಸದ್ಗುರು. ಇಂಥ ಸದ್ಗುರುವಿನ ಸಹವಾಸ ಲಭಿಸಲಿಕ್ಕೆ ಭಾಗ್ಯಬೇಕು. ಆದರೆ ಯಾರಿಗೆ ಈ ಭಾಗ್ಯ ಲಭಿಸುವದೋ ಅವರು ಆಮೂಲಾಗ್ರ ಬದಲಾಗುವರು. ಇವರ ಅಜ್ಞಾನ ನಾಶವಾಗುತ್ತಹೋಗುವದು. ಕಾಮ ನಾದದ ಜೋರು ಕಡಿಮೆಯಾಗುವದು. ಆಸಕ್ತಿ ಕಡಿಮೆ ಆಗುವದು. ಕಾಳಜಿ ದೂರಾಗುವವು. ಮತ್ತು ಸಂಶಯ ಹಾಗೂ ಮಾಯಾಭ್ರಮ ಉಂಟು ಮಾಡುವ ವಿಕ್ಷೇಪ (ಭ್ರಮೆಯು) ನಿರ್ನಾಮವಾಗುವದು. ಸದ್ಗುರುವಿನ ಮೇಲೆ ನಿಜವಾದ ಪ್ರೇಮ ಮಾಡಲಿಕ್ಕೆ ಬಂದರೆ ಉಳಿದ ಯಾವ ಸಾಧನಗಳನ್ನೂ ಮಾಡಲಿಕ್ಕೆ ಬೇಕಾಗುವದಿಲ್ಲ. ಅಗದೀ ಮನಃಪೂರ್ವಕವಾಗಿ ಗುರುವಿನ ಗುಲಾಮನಾಗಿರಬೇಕು. ಅವನು ಹೇಳಿದ್ದನ್ನು ಮನಃಪೂರ್ವಕವಾಗಿ ಕೇಳಬೇಕು. ಅವನು ಕೊಟ್ಟ ನಾಮವನ್ನು ತೆಗೆದುಕೊಳ್ಳಿರಿ. ಮತ್ತು ಜೀವನದಲ್ಲಿ ಏನೇನು ಘಟಿಸುವದೋ ಅವುಗಳೆಲ್ಲ ಸದ್ಗುರುವಿನ ಅಂಗವಿದೆಯೆಂದು ತಿಳಿದು ಸಮಾಧಾನದಿಂದ ಇರಲು ಕಲಿಯಿರಿ. ಇದೇ ಶ್ರೀ ಸಮರ್ಥರ ಪರಮಾರ್ಥವಿರುವದು.

### ಸಮಾಸ ದ್ವಿತೀಯ : ಗುರು ಲಕ್ಷಣ

॥ಶ್ರೀರಾಮ॥ ಜೇ ಕರಾಮತೀ ದಾಖವಿತೀ । ತೇ ಹಿ ಗುರು ಮ್ಹಣಿಜೇತೀ ।
ಪರಂತು ಸದ್ಗುರು ನವ್ಹೇತೀ । ಮೋಕ್ಷದಾತೇ ॥೧॥

ಸಭಾಮೋಹನ ಭುರರೀ ಚೇಟಕೇ। ಸಾಬರಮಂತ್ರಕೌಟಾಲೇ ಅನೇಕೇ ।
ನಾನಾ ಚಮತ್ಕಾರ ಕೌತುಕೇ । ಅಸಂಭಾವ್ಯ ಸಾಂಗತೀ ॥೨॥

ಸಾಂಗತೀ ಔಷಧೀ ಪ್ರಯೋಗ । ಕಾ ಸುವರ್ಣಧಾತೂಚಾ ಮಾರ್ಗ ।
ದೃಷ್ಟಿಬಂಧನೇ ಲಾಗವೇಗ । ಅಭಿಲಾಷಾಚಾ ॥೩॥

ಸಾಹಿತ ಸಂಗೀತ ರಾಗಜ್ಞಾನ । ಗೀತ ನೃತ್ಯ ತಾನಮಾನ ।
ನಾನಾ ವಾದ್ಯೇ ಸಿಕವಿತೀ ಜನ । ತೇ ಹಿ ಯೇಕ ಗುರು ॥೪॥

ವಿದ್ಯಾ ಸಿಕವಿತೀ ಪಂಚಾಕ್ಷರೀ । ತಾಡೆತೋಡೆ ನಾನಾಪರೀ ।
ಕಾ ಪೋಟ ಭರೆ ಜಯಾವರೀ । ತೇ ವಿದ್ಯಾ ಸಿಕವಿತೀ ॥೫॥

ಜೇ ಯಾತೀಚಾ ಜೋ ವ್ಯಾಪಾರ । ಸಿಕವಿತೀ ಭರಾವಯಾ ಉದರ ।
ತೇ ಹೀ ಗುರು ಪರೀ ಸಾಚಾರ । ಸದ್ಗುರು ನವ್ಹೇತೀ ॥೬॥

ಆಪಲೀ ಮಾತಾ ಆಣೀ ಪಿತಾ । ತೇ ಹೀ ಗೂರು ಚಿ ತತ್ವತಾ ।
ಪರೀ ಪೈಲಪಾರ ಪಾವವಿತಾ । ತೋ ಸದ್ಗುರು ವೇಗಳಾ ॥೭॥

ಗಾಈತ್ರೀ ಮಂತ್ರಾಚಾ ಉಚಾರು । ಸಾಂಗೇ ತೋ ಸಾಚಾರ ಕುಳಗುರು ।
ಪರೀ ಜ್ಞಾನೇವಿಣ ಪೈಲಪಾರು । ಪಾವಿಜೇತ ನಾಹೀ ॥೮॥

ಜೋ ಬ್ರಹ್ಮಜ್ಞಾನ ಉಪದೇಸೀ । ಅಜ್ಞಾನ ಅಂಧಾರೆ ನಿರಸೀ ।
ಜೀವಾತ್ಮಯಾ ಪರಮಾತ್ಮಯಾಸೀ । ಏಕ್ಯತಾ ಕರೀ ॥೯॥

## ದಶಕ ೫. ಸಮಾಸ ೨. ಗುರು ಲಕ್ಷಣ (ನುಡಿ ೭೩)

**ಈ ಸಮಾಸದ ಆರಂಭದಲ್ಲಿ ಗುರು ಮತ್ತು ಸದ್ಗುರು ಹೀಗೆ ವಿಭಾಗಿಸಿ, ಗುರು ಸದ್ಗುರು ಆಗಲಿಕ್ಕೆ ಶಕ್ಯವಿಲ್ಲವೆಂದು ಹೇಳುತ್ತಾರೆ** ಕೆಲವೊಂದು ಜನರು ವಿಶೇಷ (ವಿಶಿಷ್ಟ) ರೀತಿಯ ಕೃತಿ ಚಮತ್ಕಾರಗಳನ್ನು ಮಾಡಿ ತೋರಿಸುವರು. ಅವರಿಗೂ ಗುರು ಎಂದು ಅನ್ನುವರು. ಆದರೆ ಮೋಕ್ಷ ಕೊಡುವಂಥ ಸದ್ಗುರುಗಳು ಇವರಲ್ಲಿ (೧) ಜನ ಸಮುದಾಯವನ್ನು ಮುಗ್ಧಗೊಳಿಸುವ (ಕಣಕಟ್ಟು ಮಾಡುವ) ಮೋಹಿನಿ ವಿದ್ಯೆಯ ಪ್ರಯೋಗ ಕುಟಿಲ ಮಾಯೆ, ಮಾಟ, ಉನ್ಮಾದ ಮೊದಲಾದ ಭುಲಾಯಿಸುವ ಭ್ರಮಗೊಳಿಸುವ ವಿದ್ಯೆ, ಜಾದೂವಿದ್ಯೆ, ಶಾಬರ ಮಂತ್ರ, ಕೌಟಾಲೀ ಮಂತ್ರ ಮೊದಲಾದ ನಾಥಪಂಥದಲ್ಲಿಯ ಮಂತ್ರ ಪ್ರಯೋಗ ಮಾಡಿ ಚಮತ್ಕಾರ ಮಾಡುವದು, ಇವಲ್ಲದೇ ಇನ್ನೂ ಅನೇಕ ಅಶಕ್ಯವೆನಿಸುವಂಥವುಗಳನ್ನು ಶಕ್ಯವೆಂದು ಮಾಡಿತೋರಿಸುವದು. (೨) ಅನೇಕವನಸ್ಪತಿಗಳ ಹಾಗೂ ರಸಾಯನಾದಿ ಔಷಧಗಳಪ್ರಯೋಗಗಳನ್ನು ಬಹುವಾಗಿ ವರ್ಣಿಸುವದು,ತಾಮ್ರ ಇತ್ಯಾದಿ ಇತರ ಧಾತುಗಳಿಂದ ಬಂಗಾರ ಮಾಡುವ ಮಾರ್ಗ ಮತ್ತು ಭ್ರಮೆಗೊಳಿಸುವಿಕೆ, (ನಜರ) ದೃಷ್ಟಿ ಬಂಧನ ಮಾಡಿ ತತ್‌ಕ್ಷಣ ಇಚ್ಛೆ ಪೂರೈಸುವ ಮಾರ್ಗ ತೋರಿಸುವಂಥವರೆಲ್ಲರನ್ನು "ಗುರು ಎಂದು ತಿಳಿಯುತ್ತಾರೆ. **ಶ್ರೀ ಸಮರ್ಥರು ಇಲ್ಲಿ ಭಾರತೀಯ ಸಮಾಜದ ಬಹು ದೊಡ್ಡ ಘಾಯ ಅಥವಾ ರೋಗದ ಮೇಲೆ ಅಚೂಕಾಗಿ ಬೆರಳಿಟ್ಟಿದ್ದಾರೆ. ನಿಜವಾಗಿ ಆತ್ಮಜ್ಞಾನಿಯಾಗಿರುವಂಥವನು ಆ ಜ್ಞಾನವನ್ನೇ ನಮಗೆ ಕೊಡುವಂಥವನಾಗುತ್ತಾನೆ. ಅಂಥವನೇ ನಿಜವಾದ ಗುರು. ಇಷ್ಟೇ ಅಲ್ಲ,ಭಾರತದಲ್ಲಿ ಎಷ್ಟೊಂದು ಹೆಸರಾಂತ ಜ್ಞಾನಿ, ಮಹಾತ್ಮರಾಗಿ ಹೋಗಿದ್ದರೂ ಸಹ ಸಾಮಾನ್ಯ ಮನುಷ್ಯರು ಈಗ್ಯೂ ಸಹ ಮೇಲೆ ಹೇಳಿದ ಚಮತ್ಕಾರ ವಗೈರೆ ಮಾಡಿ ತೋರಿಸುವಂಥವರನ್ನೇ ಸಾಧು ಅಥವಾ ಜ್ಞಾನಿ ಎಂದು ತಿಳಿಯುತ್ತಾರೆ. ಭಾರತೀಯ ಸಮಾಜದಲ್ಲಿಯ ಈ (ಗೈರ ಸಮಜೂತ) ತಪ್ಪು ಅಭಿಪ್ರಾಯವು ನಿಜವಾಗಿ ದೊಡ್ಡ ಶಾಪವೇ ಇರುವದು.** (೩) ಸಾಹಿತ್ಯ, ಸಂಗೀತ, ರಾಗಜ್ಞಾನ, ಗಾಯನ, ನೃತ್ಯ, ರಾಗಗಳ ಪರಿಳಿತ ರಾಗಾಲಾಪ ಜ್ಞಾನ, ಅನೇಕ ವಾದ್ಯಗಳ ಶಿಕ್ಷಣ ಕೊಡುವಂಥ ಜನರೂ ಸಹ ಒಂದು ಪ್ರಕಾರದ ಗುರುಗಳೇ ಎಂದೆನಿಸುವರು. (೪) ಕೆಲವು ಮಂತ್ರ ಶಾಸ್ತ್ರಿಗಳು ಮಂತ್ರವಿದ್ಯಾ ಕಲಿಸುವರು. ತಾಯಿತ, ಮಂತ್ರಿಸಿದ ದಾರ ವಗೈರೆ ಕೊಡುವಂಥದರ ವಿದ್ಯೆ ಕಲಿಸುತ್ತಾರೆ. ಕೆಲವರು ಹೊಟ್ಟೆ ತುಂಬಿಕೊಳ್ಳುವಂಥ ವಿದ್ಯೆಯನ್ನು ಕಲಿಸುತ್ತಾರೆ. (೫) ಯಾವ ಜಾತಿಗೆ ಯಾವ ವ್ಯಾಪಾರ ಇರುವದೋ ಅಂಥ ಹೊಟ್ಟೆ ತುಂಬಿಕೊಳ್ಳುವ ವ್ಯಾಪಾರದ ವಿಷಯವನ್ನು ಆ ಜಾತಿಯ ಜನರಿಗೆ ಆ ಜನರೇ ಅದನ್ನು ಕಲಿಸುತ್ತಾರೆ. ಇವರೂ ಗುರುಗಳೇ ನಿಜ. ಆದರೆ ಸದ್ಗುರುವಲ್ಲ. (೬) ನಮ್ಮ ತಾಯಿ ತಂದೆಗಳು ಒಂದು ದೃಷ್ಟಿಯಿಂದ ನಮ್ಮ ಗುರುಗಳೇ ಇರುವರು. ಆದರೆ ಸಂಸಾರದಿಂದ ಪಾರುಗಾಣಿಸಿ ಸದ್ಗತಿಯ ದಂಡೆಗೆ ತಂದು ಮುಟ್ಟಿಸುವ ಸದ್ಗುರುವು ಬೇರೆಯೇ ಇರುತ್ತಾನೆ. (೭) ನಮಗೆ ಗಾಯತ್ರಿ ಮಂತ್ರ ಕಲಿಸಿಕೊಡುವ ವೈದಿಕ ಭಡಜಿಯೂ (ಭಟ್ಟನೂ) ಸಹ ಗುರುವೇ ಇರುವನು.ಆದರೆ ಆತ್ಮಜ್ಞಾನವಿಲ್ಲದೇಸಂಸಾರ ಸಾಗರದಿಂದ ಪಾರಾಗಲಿಕ್ಕೆ ಬರುವದಿಲ್ಲ. ಈ ವಿದ್ಯೆಯನ್ನು ಭಡಜಿ (ಭಟ್ಟ) ಕೊಡುವದಿಲ್ಲವಾದ್ದರಿಂದ ಇವನು ಸದ್ಗುರುವಲ್ಲ. (೮) ಇನ್ನು **ಸದ್ಗುರುವಿನ ಲಕ್ಷಣಗಳನ್ನು ಹೇಳುತ್ತಾರೆ:- ಶಿಷ್ಯನ ಅಜ್ಞಾನವನ್ನು ನಾಶಗೊಳಿಸಿ ಅವನನ್ನುಬ್ರಹ್ಮಪದದಲ್ಲಿ ಕೂಡಿಸುವಂಥ ಸಾಮರ್ಥ್ಯ ಯಾರಲ್ಲಿ ಇರುವದೋ ಅಂಥವರೇ ನಿಜವಾದ ಸದ್ಗುರುಗಳು. ಇನ್ನುಳಿದ ಎಲ್ಲ ಲಕ್ಷಣಗಳು ಈ ಮೂಲಭೂತ ಲಕ್ಷಣದಿಂದಲೇ ಪ್ರಕಟವಾಗುವವು:-** ಯಾವನು ಬ್ರಹ್ಮಜ್ಞಾನದ ಉಪದೇಶ ಮಾಡುವನೋ? ಯಾವನು ಅಜ್ಞಾನದ ಕತ್ತಲೆಯನ್ನು ದೂರ ಮಾಡಿ ಜೀವಾತ್ಮನಿಗೆ ಪರಮಾತ್ಮನ ಕೂಡ ಐಕ್ಯ ಮಾಡಿಸಿ (ಸಾಧಿಸಿ) ಕೊಡುವನೋ ಅವನೇ ನಿಜವಾದ ಸದ್ಗುರುವು. **ಇದು ಸದ್ಗುರುವಿನ ಅತಿ ಮುಖ್ಯ ಲಕ್ಷಣವಾಗಿದೆ. ಈ ಒಂದೇ ಒಂದು ಲಕ್ಷಣವು ಇತರ ಕೆಲವು ಯುಕ್ತಿ, ಚಾತುರ್ಯ, ಕರ್ತೃತ್ವ ಕೈಚಳಕ, ಕರಾಮತಿಗಳು ಇಲ್ಲದಿದ್ದರೂ ಸಹ ಅವನು ಸದ್ಗುರುವಾಗಿಯೇ ಇರುವನು. ಆದರೆ ಮೇಲೆ ಹೇಳಿದ ಮುಖ್ಯ ಲಕ್ಷಣವಿಲ್ಲದೆ ಇತರ ಕರಾಮತಿ ಕೈಚಳಕದ ಎಲ್ಲ ಲಕ್ಷಣಗಳಿದ್ದರೂ ಸಹ ಅವನು** ಸದ್ಗುರುವೆನಿಸಲಾರನು. (೯)

ನಿಘಡಲೇ ದೇವ ಆಣೀ ಭಕ್ತ । ಜೀವ ಶಿವಪಣೇ ದ್ವೈತ ।
ತಯಾ ದೇವಭಕ್ತಾ ಯೇಕಾಂತ । ಕರೀ ತೋ ಸದ್ಗುರು ॥೧೦॥

ಭವ ವ್ಯಾಘ್ರೇ ಘಾಲೂನಿ ಉಡೀ । ಗೋವತ್ಸಾಸ ತಡಾ ತೋಡೀ ।
ಕೇಲೀ ದೇಖೋನೀ ಸೀಘ್ರ ಸೋಡೀ । ತೋ ಸದ್ಗುರು ಜಾಣಾವಾ ॥೧೧॥

ಪ್ರಾಣೀ ಮಾಯಾಜಾಳೀ ಪಡಿಲೇ । ಸಂಸಾರ ದುಃಖೇ ದುಖವಲೇ ।
ಐಸೇ ಜೇಣೇ ಮುಕ್ತ ಕೇಲೇ । ತೋ ಸದ್‌ಗುರು ಜಾಣಾವಾ ॥೧೨॥

ವಾಸನಾ ನದೀ ಮಹಾಪುರೀ । ಪ್ರಾಣೀ ಬುಡತಾ ಗ್ಲಾಂತೀ ಕರೀ ।
ತೇಥೇ ಉಡೀ ಘಾಲೂನಿ ತಾರೀ । ತೋ ಸದ್ಗುರು ಜಾಣಾವಾ ॥೧೩॥

ಗರ್ಭವಾಸ ಅತಿಸಾಂಕಡೀ । ಇಚ್ಛಾ ಬಂಧನಾಚೀ ಬೇಡೀ ।
ಜ್ಞಾನ ದೇಊನ ಸೀಘ್ರ ಸೋಡೀ । ತೋ ಸದ್ಗುರು ಸ್ವಾಮೀ ॥೧೪॥

ದೇವ ಮತ್ತು ಭಕ್ತ ಇವರಿಬ್ಬರ ವಿಯೋಗವಾಗಿರುತ್ತದೆ. ಇದರಿಂದ ಒಂದು ಕಡೆಗೆ ಜೀವ, ಇನ್ನೊಂದು ಕಡೆಗೆ ದೇವ (ಶಿವ) ಆಗಿ ದ್ವೈತ ನಿರ್ಮಾಣವಾಗಿರುತ್ತದೆ. ಈ ವಿಯೋಗ ಅರ್ಥಾತ್ ದ್ವೈತವನ್ನು ನಿರ್ಮೂಲ ಮಾಡಿ ದೇವ ಮತ್ತು ಭಕ್ತ (ಜೀವ)ಇವರ ಭೆಟ್ಟಿ ಮಾಡಿಸಿ, ಇಬ್ಬರ ಐಕ್ಯವನ್ನು ಮಾಡಿಸಿಕೊಡುವವನೇ ಸದ್ಗುರು ವೆನಿಸುವನು. (೧೦) ಸಂಸಾರ (ಭವ) ರೂಪದ ಹುಲಿಯು ಆಕಳು (ಶಿವ) ಮತ್ತು ಕರುವಿನ (ಜೀವದ) ಮೇಲೆ ಹಾರಿ ಎರಡನ್ನೂ (ಜೀವ-ಶಿವಗಳನ್ನು) ಪ್ರತ್ಯೇಕಿಸಿದ್ದನ್ನು ನೋಡಿ ದಯೆ ಬಂದು ಯಾವನು ಆ ಹುಲಿಯ ದಾರುಣ ದವಡೆಯಿಂದ ಬಿಡಿಸಿ ಪುನಃ ಅವುಗಳನ್ನು ಕೂಡಿಸುವನೋ ಅವನೇ ನಿಜ ಸದ್ಗುರುವು ಈ ದೃಷ್ಟಾಂತವು ಬಹು ಅರ್ಥಪೂರ್ಣವಿರುವದು. ಆಕಳು ಅಂದರೆ ಈಶ್ವರ. ಕರು ಅಂದರೆ ಜೀವ. ಹುಲಿ ಅಂದರೆ ಅಶಾಶ್ವತ ಸಂಸಾರ. ವಾಸ್ತವಿಕವಾಗಿ ಜೀವವು ನಿರಂತರವಾಗಿ ಈಶ್ವರನ ಹತ್ತಿರ ಇರಲಿಕ್ಕೇ ಬೇಕು.ಆದರೆ ಮಾಯೆಯ ಅಥವಾ ಅವಿದ್ಯೆಯ ಆಘಾತವಾದ್ದರಿಂದ ಜೀವವು ಅಶಾಶ್ವತವಾದ ಜಂಜಡದಲ್ಲಿ ಸಿಲುಕಿಕೊಳ್ಳುತ್ತದೆ. ಅವಿದ್ಯೆಯ ಪ್ರಹಾರದಿಂದ ಹಿಡಿತದಿಂದ ಬಿಡುಸುವಂಥಹ ಸಮರ್ಥರು ಯಾರಾದರೂ ಇರುವದೇಆದರೆ ಅವನು ಸದ್ಗುರುವೇ ಆಗಿರುತ್ತಾನೆ.(೧೧) ಜೀವವು ಮಾಯೆಯ ಜಾಲದ ಬಲೆಯಲ್ಲಿ ತೊಡಕಿ-ಕೊಂಡಿರುವದರಿಂದ ಪ್ರಪಂಚದಲ್ಲಿಯ ದುಃಖದಿಂದ ಕ್ಲೇಶ ಪಡುವದು, ಒದ್ದಾಡುವದು. ಇಂಥ ದುಃಖೀ ಜೀವಕ್ಕೆ ಯಾವನು ಮಾಯೆಯ ಜಾಲದಿಂದ ಬಿಡಿಸಿ ಮುಕ್ತ ಗೊಳಿಸುವನೋ ಅವನೇ ಸದ್ಗುರುವು. ದೇಹ ಬುದ್ಧಿಯಿಂದ ವ್ಯಾಪ್ತವಾದ ಜೀವವು ಮಮತ್ವ ಇಟ್ಟುಕೊಂಡು ಅನೇಕ ಕಡೆಯಲ್ಲಿ ಸಿಕ್ಕಿಕೊಂಡಿರುತ್ತದೆ. ಅಲ್ಲಿ ಅನೇಕ ದುಃಖಗಳನ್ನು ಭೋಗಿಸುತ್ತದೆ. ಆದರೂ ಅದಕ್ಕೆ ಅದರೊಳ ಗಿಂದ ಹೊರಬಿದ್ದು ಬರಲಿಕ್ಕೆ ಸಾಧ್ಯವಾಗುವದಿಲ್ಲ. ಆ ವೇಳೆಗೆ ಅಲ್ಲಿ ಸದ್ಗುರುವು ಸಹಾಯಕ್ಕಾಗಿ ಬರುವನು.(೧೨) ವಾಸನಾ ರೂಪದ ನದಿಗೆ ಮಹಾಪೂರ ಬಂದ ವೇಳೆಯಲ್ಲಿ ಜೀವವು ಅದರಲ್ಲಿ ಮುಳುಗಿ ಏಳುತ್ತ ಚಡಪಡಿಸುತ್ತ ನೀರು ಕುಡಿದು ಕುಡಿದು ಮುಳುಗಿ ಹೋಗುವ ಸ್ಥಿತಿಗೆ ಬಂದಿರುತ್ತದೆ. ಆಗ ದೀನತನದಿಂದ ಅದು ಪಾರು ಮಾಡಬೇಕೆಂದು ಬೇಡಿಕೊಳ್ಳುತ್ತದೆ. ಆ ಕಠಿಣ ಪರಿಸ್ಥಿತಿಯಲ್ಲಿ ಅಲ್ಲಿಗೆ ಹಾರಿ ಯಾವನು ಮೇಲಕ್ಕೆತ್ತಿ ಪಾರು ಮಾಡುವನೋ ಅವನೇ ನಿಜವಾದ ಸದ್ಗುರುವಾಗಿರುವನು. ಈ ಜಗತ್ತಿನಲ್ಲಿ ರಾಜನಿರಲಿ ಅಥವಾ ರಂಕ (ಬಡವ)ನಿರಲಿ ಎಲ್ಲರೂ ಬೇಕು ಅನ್ನುವ ಇಚ್ಛೆಯಿಂದ ವಸ್ತುವಿನ ಬೆನ್ನು ಹತ್ತಿ ಧಾವಿಸುವವರೇ ಹೀಗಾಗಿ ವಾಸನಾ ಪ್ರವಾಹದಲ್ಲಿ ಅವರು ಮೇಲಿಂದ ಮೇಲೆ ತಳ್ಳಲ್ಪಡುತ್ತಿರುತ್ತಾರೆ. ವಾಸನಾ ಇದು ಎಂದೂ ನಿಲ್ಲುವದೇ ಇಲ್ಲ-ಮುಗಿಯುವದಿಲ್ಲ. ಮನುಷ್ಯನು ಮಾತ್ರ ನೋಡು ನೋಡುತ್ತಿರುವಂತೆ ಮೃತ್ಯುವಿನ ಛಾಯೆಯಲ್ಲಿ ಸಿಕ್ಕು ಬೀಳುತ್ತಾನೆ. ಇಂಥ ಪ್ರಸಂಗ ಗಳಲ್ಲಿ ಜಬರದಸ್ತಾದ ವಾಸನಾದ ಹಿಡಿತದಿಂದ ಜೀವವನ್ನು ಬಿಡಿಸುವವನೇ ಸದ್ಗುರು ಇರುವನು. (೧೩) ವಾಸನಾ ಎಂಬ ಬಂಧನದ ಬೇಡಿ ಬಿದ್ದಿದ್ದರಿಂದ ಜೀವಕ್ಕೆ ಗರ್ಭವಾಸದಂಥ-ಭಯಂಕರ ದುಃಖ ಭೋಗಿಸಬೇಕಾಗುತ್ತದೆ. ಈ ಬೇಡಿಯನ್ನು ಕಡಿದೊಗೆಯಬೇಕಾದರೆ ಆತ್ಮಜ್ಞಾನವೊಂದೇ ಉಪಾಯವು. ಇಂಥದನ್ನು ಕೊಟ್ಟು ಬಂಧನದಿಂದ ಮುಕ್ತಗೊಳಿಸುವವನು ಸದ್ಗುರುವು. ಅವಿದ್ಯೆಯಿಂದ ವಾಸನಾ ನಿರ್ಮಾಣವಾಗುತ್ತದೆ. ಮತ್ತು ವಾಸನಾದ ಮೂಲಕ ಕರ್ಮದ ಕಠಿಣ ಬಂಧನದಲ್ಲಿ ಜೀವವು ಅಡಕಾಯಿಸಿ [ಸಿಕ್ಕು] ಕೊಂಡಿರುತ್ತದೆ. ಕರ್ಮ ಭೋಗಿಸುವದಕ್ಕಾಗಿ ಜೀವವು ಪುನಃಪುನಃ ಜನ್ಮತಳೆಯಬೇಕಾಗುತ್ತದ. ಈ ಮೂಲಕ ಅವಿದ್ಯೆಯನ್ನೇ ಜ್ಞಾನದಿಂದ ಭೇದಿಸಿ ಇಲ್ಲದಂತೆ-ಮಾಡಿ ಮುಂದಿನ ದುಃಖ ಪರಂಪರೆಯನ್ನು ತಪ್ಪಿಸಿ ಮುಕ್ತಗೊಳಿಸುವ ದೊಡ್ಡ ಕೆಲಸವನ್ನು ಸದ್ಗುರು ಮಾತ್ರ ಮಾಡಬಲ್ಲನು. (೧೪)

ಘೋಡೂನಿ ಶಬ್ದಾಚೇ ಅಂತರ । ವಸ್ತು ದಾಖವಿ ನಿಜಸಾರ ।
ತೋ ಚಿ ಗುರು ಮಾಹೇರ। ಅನಾಥಾಚೇ ॥೧೫॥

ಜೀವ ಯೇಕ ದೇಸೀ ಬಾಪುಡೇ । ತಯಾಸ ಬ್ರಹ್ಮ ಚಿ ಕರೀ ರೋಕಡೇ ।
ಫೇಡಿ ಸಂಸಾರ ಸಾಂಕಡೇ । ವಚನ ಮಾತ್ರೇ ॥೧೬॥

ಜೇ ವೇದಾಚೆ ಅಭ್ಯಾಂತರೀ । ತೇ ಕಾಢೂನ ಅಪತ್ಯಾಪರೀ ।
ಶಿಷ್ಯಶ್ರವಣೀ ಕವಳ ಭರೀ । ಉದ್ಗಾರವಚನೇ ॥೧೭॥

ವೇದ ಶಾಸ್ತ್ರ ಮಹಾನುಭಾವ । ಪಾಹಾತಾ ಯೇಕ ಚೀ ಅನುಭವ ।
ತೋ ಚಿ ಯೇಕ ಗುರುರಾವ । ಐಕ್ಯರೂಪೇ ॥೧೮॥

ಸಂದೇಹ ನಿಃಶೇಷ ಜಾಳೀ । ಸ್ವಧರ್ಮ ಆದರೇ ಪ್ರತಿಪಾಳೀ ।
ವೇದವಿರಹಿತ ಟವಾಳೀ। ಕರೂಚ ನೇಣೇ ॥೧೯॥

**ಅಜ್ಞಾನವನ್ನು ನಾಶಗೊಳಿಸಿ ಆತ್ಮಜ್ಞಾನದ ಅರಿವನ್ನು ಪದರಿನಲ್ಲಿ ಕಟ್ಟಿಕೊಡುವ ಕಾರ್ಯವನ್ನು ಸದ್ಗುರುವು ಯಾವ ಪ್ರಕಾರವಾಗಿ ಅಥವಾ ಯಾವ ಪದ್ಧತಿಯಿಂದ ಮಾಡುವನೆಂಬುದರ ವರ್ಣನೆಯನ್ನು ಕೇಳಿರಿ:–** ಉಪದೇಶ (ಬೋಧ, ಹಿತೋಪದೇಶ, ಗುರುಮಂತ್ರ)ವನ್ನು ಶಬ್ದಗಳಿಂದಲೇ ಮಾಡಬೇಕಾಗುತ್ತದೆ. ಆದರೆ ಅರ್ಥವೆಂಬುದಾದು ಶಬ್ದದ ಅಂತರಂಗ ವಿರುವದು. ಸದ್ಗುರುವು ಮೊದಲು ಶಬ್ದಗಳ ಅರ್ಥದ ಕಡೆಗೆ ಒಯ್ಯುವನು. ಪರಮಾತ್ಮನೇ ಆ ಅರ್ಥದ ಲಕ್ಷ್ಯ (ಗುರಿ) ಇರುವನು. ಇದೇ ನಮ್ಮ ಸರ್ವಸ್ವವು. ಅಂದರೆ ಆತ್ಮ ಸ್ವರೂಪವು ನಮ್ಮನ್ನು ಆಮೇಲೆ (ನಂತರ) ಅರ್ಥದ ಮೇಲಿಂದ ಆತ್ಮಸ್ವರೂಪದ ಕಡೆಗೆ ಒಯ್ಯುವನು. ಈ ಪ್ರಕಾರವಾಗಿ ಸ್ವಸ್ವರೂಪದ ಕಡೆಗೆ ಒಯ್ಯುವಂಥ ಸದ್ಗುರುವು ಅನಾಥವಾದ ಜೀವಕ್ಕೆ ವಿಶ್ರಾಂತಿ ಸ್ಥಳವಾಗಿರುವನು. (೧೫) ಬಡ ದೀನ ಜೀವವು ಏಕದೇಶಿ ಇರುವದು. ಏಕದೇಶಿ ಅಂದರೆ– ಮರ್ಯಾದಿತ, ಅಲ್ಪ, ಅಪೂರ್ಣ, ಏಕಾಂಗಿ ಇದ್ದು ದೇಶ ಕಾಲ ಪರಿಸ್ಥಿತಿ ಇವುಗಳಿಂದ ಸುತ್ತುವರಿಯಲ್ಪಟ್ಟಂಥದು. ಇದು ಪರಿಚ್ಛಿನ್ನವಿರುತ್ತದೆ. ಸೀಮಿತವಿರುತ್ತದೆ. ಬ್ರಹ್ಮನು ಸರ್ವದೇಶಿ. ಸರ್ವಾಂಗಿ, ಪೂರ್ಣ, ಸ್ಥಳ, ಕಾಲ ಪರಿಸ್ಥಿತಿಗಳನ್ನು ಮೀರಿದವನು. ಮತ್ತು ಅಪರಿಚ್ಛಿನ್ನವಿರುವನು. ಕೇವಲ ತನ್ನ ಉಪದೇಶದಿಂದ ಸದ್ಗುರುವು ಜೀವನನ್ನು ಪ್ರತ್ಯಕ್ಷ ಬ್ರಹ್ಮಸ್ವರೂಪನನ್ನಾಗಿ ಮಾಡುವನು. ಜೀವದ ಸಂಸಾರದ ಸಂಕಟಗಳನ್ನು ಇಲ್ಲದಂತೆ ಮಾಡುವನು. ಸದ್ಗುರುವಿನ ಶಬ್ದದ ಹಿಂದೆ (ಶಬ್ದದಲ್ಲಿ) ಅವನ ತಪಶ್ಚರ್ಯದ ದೊಡ್ಡ ಸಾಮರ್ಥ್ಯವಿರುತ್ತದೆ. ಸದ್ಗುರುವು ಕೇವಲ ಶಬ್ದದಿಂದಲೇ ಶಕ್ತಿಪಾತ (ಶಿಷ್ಯನಿಗೆ ಗುರುವು ಕೊಡುವ ಅಧ್ಯಾತ್ಮ ಶಕ್ತಿಯನ್ನು ಉಪಯೋಗ ಮಾಡುವ ಸ್ವತಃದ ಸಾಮರ್ಥ್ಯ)ಮಾಡುವನು. ಇವನ ಶಬ್ದಗಳು ಜೀವದ ಸೂಕ್ಷ್ಮ ಶರೀರದಲ್ಲಿ ಪ್ರವೇಶಿಸುವವು. ಜೀವದ ಅಂತರಂಗ ರಚನೆಯಲ್ಲಿ ಸಹ ಬದಲಾವಣೆ ಕಂಡುಬರುವಂಥ ವಿಲಕ್ಷಣ ಕಾರ್ಯ ತೋರಿ ಬರುವದು. ಅಂತೆಯೇ ಸದ್ಗುರುವಿನ ಶಬ್ದಕ್ಕೆ ಬಹಳ ಕಿಮ್ಮತ್ತಿರುವದು. (೧೬) ವೇದದ ಅಂತರಂಗದಲ್ಲಿ ಅಂದರೆ ಅರ್ಥಾತ್ ಉಪನಿಷತ್ತುಗಳಲ್ಲಿ ಯಾವ ಬ್ರಹ್ಮಜ್ಞಾನವು ಗುಪ್ತ ರೀತಿಯಿಂದ ವಾಸವಾಡುವಂಥಹದಿರುವದೋ ಆ ಜ್ಞಾನವನ್ನು ಸದ್ಗುರುವು ಹೊರಗೆ ತೆಗೆಯುವನು. ಚಿಕ್ಕಮಕ್ಕಳಿಗೆ ಸಣ್ಣ ಸಣ್ಣ ತುತ್ತುಗಳನ್ನು ಹೇಗೆ ಉಣಿಸಬೇಕಾಗುವದೋ ಹಾಗೆ ಬ್ರಹ್ಮಜ್ಞಾನವನ್ನು ಸದ್ಗುರು ತನ್ನ ಸವಿಮಾತುಗಳಿಂದ ಸಾವಕಾಶವಾಗಿ ಶಿಷ್ಯನ ಕಿವಿಯಲ್ಲಿ ಹಾಕುವನು–ಅವನಿಗೆ ಶ್ರವಣ ಮಾಡಿಸುವನು. ಶಿಷ್ಯನ ಅಧಿಕಾರ ಯೋಗ್ಯತೆ ಮತ್ತು ಧಾರಣ ಶಕ್ತಿ (ಗ್ರಹಿಸುವ ಶಕ್ತಿ) ಇವುಗಳನ್ನು ನೋಡಿ ತಿಳಿದುಕೊಂಡು ಸದ್ಗುರುವು ಶಿಷ್ಯನಿಗೆ ಆತ್ಮಜ್ಞಾನದ ಗೂಢ ರಹಸ್ಯವನ್ನು ಬಹಳ ಸುಲಭ ರೀತಿಯಿಂದ ಹೇಳುವನು. (೧೭) ವೇದವೇ ಇರಲಿ ಶಾಸ್ತ್ರವೇ ಇರಲಿ ಅಥವಾ ಶ್ರೇಷ್ಠ ಸತ್ಪುರುಷರೇ ಇರಲಿ ಈ ಎಲ್ಲದರಲ್ಲಿಯ ಅತ್ಮಸ್ವರೂಪದ ಅನುಭವ ಒಂದೇ ಆಗಿರುತ್ತದೆ. ಜ್ಞಾನ ಈ ದೃಷ್ಟಿಯಿಂದ ಆತ್ಮಜ್ಞಾನವು ಒಂದೇ ರೀತಿಯದಿರುತ್ತದೆ. ಸಾಕ್ಷಾತ್ಕಾರ ಈ ದೃಷ್ಟಿಯಿಂದ ಸರ್ವರ ಆತ್ಮ ಸಾಕ್ಷಾತ್ಕಾರ ಒಂದೇ ಆಗಿರುತ್ತದೆ. ಸಂಪೂರ್ಣ ಅಗದೀಅದೇ ಅನುಭವ ಅದೇಜ್ಞಾನ ಮತ್ತು ಅದೇ ಸಾಕ್ಷಾತ್ಕಾರವು ಸದ್ಗುರುವಿಗೆ ಆದದ್ದಿರುತ್ತದೆ. ಅವನಲ್ಲಿ ವೇದ, ಶಾಸ್ತ್ರ ಮತ್ತು ಸತ್ಪುರುಷರೆಲ್ಲರ ಜ್ಞಾನಾನುಭವವು ಏಕರೂಪವಾಗಿರುತ್ತದೆ. ಅಂತೆಯೇ ವೇದದ ರಹಸ್ಯ, ಶಾಸ್ತ್ರದ ವಿವೇಚನೆ, ಸತ್ಪುರುಷರ ಅನುಭವ ಮತ್ತು ಸದ್ಗುರುವಿನ ಉಪದೇಶ ಇವೆಲ್ಲ ಅವನಲ್ಲಿ ಸಂಪೂರ್ಣ ಒಂದೇ ರೀತಿಯಲ್ಲಿ ಇರಲಿಕ್ಕೆ ಬೇಕು, ಇರುತ್ತವೆ. (೧೮) ಸದ್ಗುರುವು ಯಾವತ್ತೂ ಪ್ರಕಾರದ ಸರ್ವಸಂಶಯಗಳನ್ನು ಸಮೂಲವಾಗಿ ಛೇದಿಸಿಬಿಡುತ್ತಾನೆ. ಇವನು ಬಹು ಆದರದಿಂದ ಸ್ವಧರ್ಮದ ಆಚರಣೆಯನ್ನು ಮಾಡುವನು. ವೇದಕ್ಕೆ ವಿರುದ್ಧವಾಗಿರುವ ಅಂದರೆ ಆತ್ಮಜ್ಞಾನಕ್ಕೆ ಹೊರತಾದ ಮಿಥ್ಯಾ ಭಾಷಣ ವಗೈರೆ ಮಾಡುವದು ಇವನಿಗೆ ಗೊತ್ತೇ ಇರುವದಿಲ್ಲ. ಇದನ್ನು ಮುಖ್ಯವಾಗಿ ಧರ್ಮ ಪ್ರಚಾರಕರು ಲಕ್ಷದಲ್ಲಿಡತಕ್ಕ ಮಾತಾಗಿದೆ. (೧೯)

ಜೇ ಜೇ ಮನ ಅಂಗಿಕಾರೀ । ತೇ ತೇ ಸ್ವಯೇ ಮುಕ್ತಕರೀ ।
ತೋ ಗುರು ನವ್ಹೇ ಭಿಕಾರೀ । ಝುಡೇ ಆಲಾ ॥೨೦॥

ಶಿಷ್ಯಾಸ ನ ಲಾವಿತೀ ಸಾಧನ । ನ ಕರವಿತೀ ಇಂದ್ರಿಯೆದಮನ ।
ಏಸೇ ಗುರು ಅಡಕ್ಯಾಚೇ ತೀನ। ಮಿಳಾಲೇ ತರೀ ತ್ಯಜಾವೇ ॥೨೧॥

ಜೋ ಕೋಣೀ ಜ್ಞಾನ ಬೋಧೀ । ಸಮೂಳ ಅವಿದ್ಯಾ ಛೇದೀ ।
ಇಂದ್ರಿಯೆ ದಮನ ಪ್ರತಿಪಾದೀ । ತೋ ಸದ್ಗುರು ಜಾಣಾವಾ ॥೨೨॥

ಯೇಕ ದ್ರವ್ಯಾಚೆ ವಿಕಿಲೇ। ಯೇಕ ಶಿಷ್ಯಾಚೆ ಆಖಿಲೇ ।
ಅತಿ ದುರಾಶೇನೇ ಕೇಲೆ । ದೀನ ರೂಪ ॥೨೩॥

ಜೇ ಜೇ ರುಚೆ ಶಿಷ್ಯಾ ಮನೀ। ತೈಸೀ ಚ ಕರೀ ಮನಧರಣೀ ।
ಏಸೀ ಕಾಮನಾ ಪಾಪಿಣೀ । ಪಡಲೀ ಗಳಾ ॥೨೪॥

ಜೋ ಗುರು ಭೀಡಸಾರು । ತೋ ಅದ್ಧಮಾಹೂನ ಅದ್ಧಮು ಥೋರು ।
ಚೋರಟಾ ಭ್ಯೆಂದಪಾಮರು । ದ್ರವ್ಯಭೋಂದು ॥೨೫॥

ಜೈಸಾ ವೈದ್ಯ ದುರಾಚಾರೀ । ಕೇಲೀ ಸರ್ವಸ್ವೇ ಬೋಹರೀ ।
ಆಣೀ ಸೆಖೀ ಭೀಡ ಕರೀ । ಘಾತಘೇಣಾ ॥೨೬॥

**ಆತ್ಮಜ್ಞಾನವು ಬಹಳ ಸೂಕ್ಷ್ಮವಿರುವದರಿಂದ ಸದ್ಗುರುವಿನ ದೇಹದ ಮೇಲಿಂದ ಅಥವಾ ಅವನ ದೈನಂದಿನ ವ್ಯವಹಾರದಲ್ಲಿ ಅವನಲ್ಲಿಯ ಒಂದಾನೊಂದು ಗುರುತನ್ನು ತೋರಿಸಲಿಕ್ಕೂ ಬರುವದಿಲ್ಲ. ಇದರ ಲಾಭಪಡೆದು ಢೋಂಗಿ ಗುರುಗಳು ಜಗತ್ತಿನಲ್ಲಿ ಮೆರೆಯುತ್ತಾರೆ. ಅಂತೆಯೇ ಎಂಥವನು ಸದ್ಗುರು ಅಲ್ಲವೆಂಬುದನ್ನು ಮತ್ತೊಮ್ಮೆ ಶ್ರೀಸಮರ್ಥರು ಹೇಳುತ್ತಾರೆ:–** ಮನಸ್ಸಿಗೆ ಯಾವ ಯಾವುದು ಬರುವದೋ ಅದನ್ನು ಯಾರ ಭಿಡೆ ಮುರವತ್ತು, ಲಜ್ಜೆಗಳಿಗೆ ಅಂಜದೇ ಮನಸೋಕ್ತವಾಗಿ ಯಾವನು ಬಹಿರಂಗದಲ್ಲಿ ಮಾಡುತ್ತಾನೋ ಅವನು ಸದ್ಗುರುವಲ್ಲ. ಅವನೊಬ್ಬ ಭಿಕಾರಿಯು ನಮ್ಮ ಬೆನ್ನ ಹಿಂದೆ ಹತ್ತಿದ್ದಾನೆಂದು ತಿಳಿಯಬೇಕು. ಸದ್ಗುರು ಮುಕ್ತನಾಗಿರುತ್ತಾನೆ. ಅಂದರೆ ಬಂಧನ ರಹಿತನಿರುತ್ತಾನೆ. ಇದರ ಅರ್ಥ ಇವನು ತನ್ನ ಮನವನ್ನು ತುಡುಗು ದನದಂತೆ ಮುಕ್ತ ಮಾಡಿ ಬಿಟ್ಟಿರುವನೆಂದು ಮಾತ್ರ ತಿಳಿಯಬಾರದು. ಸತ್ಪುರುಷರ ಮುಕ್ತಾವಸ್ಥೆ. ಇದು ಆತ್ಮಜ್ಞಾನದೊಳಗಿಂದ ಪ್ರಕಟವಾಗುವ ಅತಿ ಮಾನವೀಯ ಅವಸ್ಥೆಯೇ ಇರುವದು. ವಾಸನಾಧೀನನಾಗಿ ಲಜ್ಜೆಗೇಡಿತನದಿಂದ ಇಂದ್ರಿಯ ಭೋಗ ಭೋಗಿಸುವಂಥ ಹೀನ ಮಾನವೀಯ ಪಶುವೃತ್ತಿ ಅವನಲ್ಲಿ ಇರುವದಿಲ್ಲ. (೨೦) ಯಾವನು ತನ್ನಶಿಷ್ಯನಿಗೆ ಸಾಧನಾ ಕಾಲದಲ್ಲಿಹೇಗೆ ಇರಬೇಕೆಂಬುದನ್ನು ಕಲಿಸದೇ ಇರುವಂಥವನು ಮತ್ತು ಇಂದ್ರಿಯ ದಮನಾದಿಗಳನ್ನು ಹೇಗೆ ಹಿಡಿತದಲ್ಲಿಡಬೇಕೆಂಬುದನ್ನು ತಿಳಿಸಿಕೊಡದಂಥವನು ಗುರುವಾಗಬಲ್ಲನೇ? ಇಂಥ ಗುರುಗಳು ದಂಬಡಿಗೆ ಮೂರು ದೊರೆತರೂ ಸಹ (ಸೋವಿ) ಅಲ್ಪಧನದಲ್ಲಿ ಸಿಕ್ಕರೆಂದು ಅಂಥವರ ಬೆನ್ನು ಹತ್ತಬಾರದು. ಅಂಥವರ ಸಹವಾಸ ಸಹ ಬೇಡ ದೂರದಿಂದಲೇ ಮರೆ ಆಗಿರಿ. **ಇಂದ್ರಿಯ ದಮನ ಮಾಡಿ ಸಾಧನದಲ್ಲಿ ಯಾವ ರೀತಿ ಇರಬೇಕೆಂಬ ಈ ಅನುಭವದ ವಿದ್ಯೆಯು ಸದ್ಗುರುವಿನ ಹತ್ತಿರ ಅವಶ್ಯ ಇರಲಿಕ್ಕೇ ಬೇಕು.** (೨೧) ಆತ್ಮಜ್ಞಾನವನ್ನು ತಿಳಿಸಿಕೊಡುವವನು ಅವಿದ್ಯೆ ಅಜ್ಞಾನದ ಸಮೂಲವನ್ನು ನಾಶಮಾಡಿಸುವವನು, ಇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಳ್ಳುವಂಥ ಅಭ್ಯಾಸ ಹೇಳುವಂಥವನು ಮಾತ್ರ ಅವನೇ ನಿಜವಾದ ಸದ್ಗುರುವೆಂದು ತಿಳಿಯಬೇಕು. ಅವಿದ್ಯೆಯ ಅಮಲು (ಅಧಿಕಾರ) ನಡೆಯುತ್ತಿರುವದರಿಂದ ದೃಶ್ಯ ಜಗತ್ತು ನಿಜವಾಗಿಯೂ ಸತ್ಯವೆಂದು ಅನಿಸುತ್ತದೆ. ಈ ಕಾರಣದಿಂದ ಇಂದ್ರಿಯಗಳ ಮೂಲಕ ಸುಖಪಡೆಯಬೇಕೆಂದು ಒಂದೇ ಸವನೆ ನಮ್ಮ ಪ್ರಯತ್ನ ನಡೆದಿರುತ್ತದೆ. ಅಂತೆಯೇ ಈ ಜಗತ್ತು ಪ್ರತ್ಯಕ್ಷ ಕಾಣಿಸುತ್ತಿದ್ದರೂ ಸಹ ಇದು ನಿಜವಲ್ಲವೆಂಬುದನ್ನು ಮನಸ್ಸಿಗೆ ಬಿಂಬಿಸಿ ಇಂದ್ರಿಯಗಳಿಗೆ(ಮೂಗುದಾಣ)ಪ್ರತಿಬಂಧ ಎಂಥದು ಎಂಬುದನ್ನು ತಿಳಿಸಿಕೊಡುವಂಥ ಶಕ್ತಿ ವ, ಯುಕ್ತಿಗಳನ್ನು ಶಿಷ್ಯನಿಗೆ ಕಲಿಸುವದೇ ಸದ್ಗುರುವಿನ ಪ್ರಧಾನ ಕಾರ್ಯವಾಗಿದೆ.(೨೨) ಹೇಳಲಿಕ್ಕೆ ಕಳವಳವಾಗುತ್ತದೆ! ಏನು ಮಾಡುವದು? ಕೆಲವು ಗುರುಗಳು ಸದ್ಗುರು ಎಂದು ಅನ್ನಿಸಿಕೊಳ್ಳುತ್ತಾರೆ. ಮತ್ತು ಹಣಕ್ಕಾಗಿ ಹಪಾಪಿಸುತ್ತಾರೆ. ದೀನರಾಗುತ್ತಾರೆ. ಇದಕ್ಕಾಗಿ ಶಿಷ್ಯರ ಅಧೀನರಾಗುತ್ತಾರೆ. ವಾಸನಾದ ನಾದಿಗೆ ಸೆಳೆತಕ್ಕೆ ಬಿದ್ದು ಲಾಚಾರ(ಹೀನ)ರಾಗುತ್ತಾರೆ. (೨೩) ಇಂಥ ಗುರುಗಳು ಕೇವಲ ಶಿಷ್ಯರ ಅಧೀನರಾಗುತ್ತಾರೆ. ಇಷ್ಟೇ ಅಲ್ಲ ಶಿಷ್ಯನ ಮನಸ್ಸಿಗೆ ಬಂದದ್ದೆಲ್ಲವನ್ನು ಮಾಡಿ ಅವನ ಪ್ರಸನ್ನತೆಗಾಗಿ ಧಡಪಡಿಸುತ್ತಾರೆ. ಇದರ ಕಾರಣ ಸ್ಪಷ್ಟವಿದೆ. ಇಂಥ ಗುರುವಿನ ಪಾಪಿಣಿ ವಾಸನಾ ಅವನ ಕುತ್ತಿಗೆಯನ್ನು ಹಿಡಿದಿರುತ್ತದೆ. ನಿಜವಾಗಿ ನೋಡಿದರೆ ಶಿಷ್ಯನೇ ಸದ್ಗುರುವಿನ ಅಧೀನನಿದ್ದು ಅವನ ಮನಸ್ಸನ್ನು ಒಲಿಸಿಕೊಳ್ಳಬೇಕು. ಆದರೆ ಇಲ್ಲಿ ಇದೊಂದುಆಭಾಸವಲ್ಲವೇ? ಶಿಷ್ಯನು ವಾಸನಾ ಅಧೀನನಿರಬಹುದು. (ಅವನು ಆಗ ಪೂರ್ಣನಿರುವದಿಲ್ಲ.) ಆದರೆ ಗುರುವೇ ವಾಸನಾಜಾಲದ ಪ್ರವಾಹದಲ್ಲಿ ತೊಡಕಿಕೊಂಡಿರುವನೆಂದ ಮೇಲೆಅಂಥವನಲ್ಲಿರುವ ಪರಮಾರ್ಥವೆಂತಹುದು? ಎಲ್ಲವೂಸ್ವಾರ್ಥದಬಾಜಾರವೇ ಆಗಿರುತ್ತದೆ(೨೪) ಶಿಷ್ಯನ ಭಿಡೆಗೆ ಬಲಿಬಿದ್ದು ಅವನ ಹಿಡಿತದಲ್ಲಿದ್ದು ಅವನ ಮರ್ಜಿ ಕಾಯುವ ಗುರುವು ಅಧಮರಲ್ಲಿ ಅತೀ ಅಧಮನಾಗಿರುವನು. ಇಂಥ ಗುರು ಚೋರ, ದ್ರವ್ಯದ ಲೋಭಿ, ದುಷ್ಟ ಹಾಗೂ ಮೋಸಗಾರ-ಮಾಟಗಾರ ಮತ್ತು ನೀಚನಿರುತ್ತಾನೆ. ಇಂಥ ಗುರುಬಾಜಿ–ಮೋಡಿಕಾರ, ಮೋಸಗಾರ, ಗುರುವಿಗೆ ಇವಕ್ಕಿಂತ ಯಾವ ಶಬ್ದದಿಂದ ಬಯ್ಯಬೇಕು? ಬಯ್ಯುವದರಲ್ಲಿ ಬಾಕಿ ಉಳಿದಿದೆಯೋ?(೨೫)ವೈದ್ಯಕೀಯ ಜ್ಞಾನವಿಲ್ಲದಂಥ ಒಬ್ಬದುಷ್ಟ ವೈದ್ಯನುರೋಗಿಯನ್ನು ಘಾಸಿಲಾಯಿಸಿ ಹಣ ಸೆಳೆಯುತ್ತಲೇ ಇರುತ್ತಾನೆ. ಮತ್ತು ಆಶ್ವಾಸನೆ ಕೊಡುತ್ತ ಕೊನೆಗೆ ಉಪಕಾರದ ಭಿಡೆಯನ್ನೇ ತೋರಿಸುತ್ತ–ತೋರಿಸುತ್ತ ರೋಗಿಯ ಸ್ವರ್ವಸ್ವದ ಘಾತ ಮಾಡುತ್ತಾನೆ. (೨೬)

ತೈಸಾ ಗುರು ನಸಾವಾ । ಜೇಣೇ ಅಂತರ ಪಡೆ ದೇವಾ ।
ಭೇಡ ಕರೂನಿಯಾ ಗೋವಾ । ಘಾಲೀ ಬಂಧನಾಚಾ ॥೨೭॥

ಜೇಥೇ ಶುದ್ಧ ಬ್ರಹ್ಮಜ್ಞಾನ । ಆಣೇ ಸ್ಥೂಳ ಕ್ರಿಯೆಚೇ ಸಾಧನ ।
ತೋಚಿ ಸದ್ಗುರು ನಿಧಾನ । ದಾಖವೀ ಡೋಳಾ ॥೨೮॥

ದೇಖಣೇ ದಾಖವಿತೀ ಆದರೆ । ಮಂತ್ರ ಫುಂಕಿತೀ ಕರ್ಣದ್ವಾರೇ ।
ಇತುಕೇಚ ಜ್ಞಾನತೇ ಪಾವರೇ । ಅಂತರಲೀ ಭಗವಂತಾ ॥೨೯॥

ಬಾಣೆ ತಿಹೀಚೇ ಖೂಣ । ತೋಚಿ ಗುರು ಸುಲಕ್ಷಣ ।
ತೇಥೇಚಿ ರಿಘಾವೇ ಶರಣ । ಅತ್ಯಾದರೇ ಮುಮುಕ್ಷೇ ॥೩೦॥

ಅದ್ವೈತ ನಿರೂಪಣೇ ಅಗಾಧ ವಕ್ತಾ । ಪರೀ ವಿಷಈ ಲೋಲಾಂಗತಾ ।
ಏಸಿಯಾ ಗುರೂಚೇನಿ ಸಾರ್ಥಕತಾ । ಹೋಣಾರ ನಾಹೀ ॥೩೧॥

ಇದರಂತೆಯೇ ಈ ಢೋಂಗಿ ದುಷ್ಟನುನಾಮಧಾರಿ ಗುರು ಇರುತ್ತಾನೆ. ಇವನಿಂದಲೇನಮ್ಮ ಮತ್ತು ದೇವರ ನಡುವಿನ ಅಂತರ ಹೆಚ್ಚುತ್ತದೆ. (ತನ್ಮೂಲಕ)ಭಕ್ತಿಭಾವದಲ್ಲಿ ಅಂತರ-ಕೊರತೆ ಉಂಟಾಗಿ ನಾವು ದೇವರಿಂದ ದೂರಾಗುತ್ತೇವೆ. ಮತ್ತು ಭಿಡೆಗೆ ಹಾಕಿ ನಮ್ಮನ್ನು ದೇಹ ಬುದ್ಧಿಯ ಬಂಧನದಲ್ಲಿ ಹೆಚ್ಚಾಗಿ ತೊಡಗಿಸುವಂತಹ ಗುರುವು ಇರಬಾರದು. (೨೭) ಯಾವನಲ್ಲಿ ಶುದ್ಧ ಬ್ರಹ್ಮಜ್ಞಾನವಿರುವದೋ ಮತ್ತು ಪ್ರತ್ಯಕ್ಷ ವ್ಯವಹಾರದಲ್ಲಿ ಸಾಧನೆಯ (ವ್ರತ,ಧ್ಯಾನ, ಅನುಷ್ಠಾನಾದಿ ಪುಣ್ಯಪ್ರಾಪ್ತಿಯ ಉಪಾಯಗಳು) ಆಚರಣೆ ಇರುವದೋ ಅಂಥಸದ್ಗುರುವೇ ನಿಮ್ಮ ಗುಪ್ತಆತ್ಮ ಸ್ವರೂಪವನ್ನು ತೋರಿಸಬಲ್ಲನು. ಅಂತರ್ಯಾಮ(ಅಂತಃಕರಣ)ದಲ್ಲಿ ಸತ್ಯವಾದ( ನಿಜವಾದ)ಬ್ರಹ್ಮಜ್ಞಾನ ಮತ್ತು ನಿತ್ಯದ ಬಾಹ್ಯಅಥವಾ ದೃಶ್ಯ ವ್ಯವಹಾರದಲ್ಲಿ ಸಾಧಕನಿಗೆ ಶೋಭಿಸುವಂಥ ಆಚರಣೆ ಈ ಎರಡು ವಿಷಯಗಳಲ್ಲಿ ಸಂಪನ್ನನಾದಂಥಪುರುಷನೇ ಶಿಷ್ಯನಿಗೆ ನಿಜವಾದ ಉಪಯೋಗಬೀಳುವನು. ಇವುಗಳಲ್ಲಿ ಒಂದರ ಕೊರತೆ ಇದ್ದುದಾದರೆ (ಅಂಥವನಿಂದ) ಸಾಮಾನ್ಯ ಪ್ರಾಪಂಚಿಕ ಶಿಷ್ಯನಿಗೆ ಪರಮಾರ್ಥ ಪ್ರಾಪ್ತವಾಗುವದು ಕಠಿಣ ಹೋಗುತ್ತದೆ. (೨೮) ಕೆಲವು ಗುರುಗಳು ತಮ್ಮ ಶಿಷ್ಯರಿಗೆ ಬಹುಕೌತುಕದಿಂದ ಪ್ರಕಾಶ, ನಾದ ಮತ್ತು ಸುಗಂಧ ಇವುಗಳ ಅತೀಂದ್ರಿಯ ಅನುಭವಗಳನ್ನು ತೋರಿಸುತ್ತಾರೆ. ಕೆಲವರು ಶಿಷ್ಯರ ಕಿವಿಯಲ್ಲಿ ಮಂತ್ರ ಮಾತ್ರಹೇಳುತ್ತಾರೆ. ಮಾಡುವದೇನು? ಅವರ ಹತ್ತರ ಅಷ್ಟೇ ಜ್ಞಾನವಿರುತ್ತದೆ. ಆ ದುರ್ದೈವಿ ಗುರುವು ತಾನೇ ಭಗವಂತನಿಂದ ದೂರವಾಗಿರುತ್ತಾನೆ. ಅಂದ ಮೇಲೆ ಅವನೇನು ಕೊಡಬಲ್ಲನು? (೨೯) ಶಾಸ್ತ್ರ ಪ್ರತೀತಿ (ಶಾಸ್ತ್ರಾನುಭವ) ಗುರು ಪ್ರತೀತಿ (ಗುರುವಿನ ಅನುಭವ) ಮತ್ತು ಆತ್ಮಪ್ರತೀತಿ (ಆತ್ಮಾನುಭವ) ಇವುಗಳ ಮನೋಹರವಾದ ಸಂಗಮ ಯಾವ ಪುರುಷನಲ್ಲಿ ಆದದ್ದು ಕಾಣುವದೋ ಅಂಥ ಈ ಉತ್ತಮ ಲಕ್ಷಣ ಸಂಪನ್ನತೆಯೇ ನಿಜವಾದ ಸದ್ಗುರುವಿನ ಖಾತ್ರಿಯ ಗುರುತಾಗಿರುವದು. ಇಂಥ ಸದ್ಗುರುವಿಗೆ ಯಾವನು ಮುಮುಕ್ಷು ಇರುವನೋ ಅಂದರೆ ನಿಜವಾಗಿಯೂ ಮೋಕ್ಷಬೇಕೆಂಬ ಜಿಜ್ಞಾಸುವು ಇರುವನೋ ಅಂಥವನು ಅನುಮಾನಿಸದೇ ಮನಃಪೂರ್ವಕವಾಗಿ ಆದರದಿಂದ ಶರಣು ಹೋಗಬೇಕು. ಅವನ ಚರಣ ಕಮಲದಲ್ಲಿ ಲೀನನಾಗಬೇಕು. ಮೂರು ಪ್ರತೀತಿಗಳ ಅರ್ಥ ಹೀಗಿರುವದು ಉದಾ:- ಶರದ್ ಋತುವಿನಲ್ಲಿಯ ಚಂದ್ರಮನ ಬಗ್ಗೆ ವಿಚಾರ ಮಾಡಿದಾಗ ವೇದಕಾಲದಿಂದಲೂ ಅನೇಕ ಸ್ತ್ರೀ ಪುರುಷರು ಇವನ ದರ್ಶನ ಪಡೆಯುತ್ತ ಬಂದಿದ್ದಾರೆ. ಈಗಲೂ ಅನೇಕ ಸ್ತ್ರೀ ಪುರುಷರು ಇವನ ದರ್ಶನ ಪಡೆಯುವರು. ನಾವೂ ಸಹ ಇವನ ದರ್ಶನ ತೆಗೆದುಕೊಳ್ಳುವೆವು. ಪ್ರತಿಯೊಬ್ಬರ ಮನವು ಚಂದ್ರಮನ ಸೌಂದರ್ಯದಿಂದ ತುಂಬಿ ಬರುವದು. ಆನಂದವಾಗುವದು. ಇದೇ ಪ್ರಕಾರವಾಗಿ ವೇದ ಕಾಲದಿಂದಲೂ ದೊಡ್ಡ ದೊಡ್ಡ ಆತ್ಮಜ್ಞಾನಿಗಳಾಗಿ ಹೋದರು. ಈಗಲೂ ದೊಡ್ಡ ಆತ್ಮಜ್ಞಾನಿಗಳಿರುವರು. ಮತ್ತು ಸಾಧನ ಮಾಡಿದರೆ ನಾವೂ ಆತ್ಮಜ್ಞಾನಿಗಳಾಗುವೆವು. ಒಟ್ಟಿನಲ್ಲಿ ಎಲ್ಲ ಆತ್ಮಜ್ಞಾನಿ ಪುರುಷರಿಗೆ ಆಗುವ ಸಚ್ಚಿದಾನಂದದ ದರ್ಶನವು ಒಂದೇ ಬಗೆಯದಾಗಿರಲಿಕ್ಕೇ ಬೇಕು. ಹುಣ್ಣಿಮೆಯ ಚಂಧ್ರಮನು ದೃಶ್ಯ ವಿಶ್ವದ ಭಾಗನಿರುವದರಿಂದ ಕದಾಚಿತ್ ಅಂತರ(ಫರಕ)ತೋರಬಹುದು. ಆದರೆ ಶಾಶ್ವತ ಸಚ್ಚಿದಾನಂದ ಸ್ವರೂಪದಲ್ಲಿ ಮಾತ್ರ ಯತ್ಕಿಂಚಿತ್ ಸಹ ಅಂತರ ಆಗುವದಿಲ್ಲ. ಅಂತೆಯೇ ಶೃತಿಯಲ್ಲಿ ಮತ್ತು ಸಂತರ ಗ್ರಂಥಗಳಲ್ಲಿ ವರ್ಣಿಸಿದ ಸ್ವರೂಪಾನುಭವ, ನಮ್ಮ ಸದ್ಗುರುವಿನ ಸ್ವಾನುಭವಮತ್ತು ನಮ್ಮ ಸ್ವಂತದ ಅನುಭವಗಳೆಲ್ಲ ಮೂಲತಃ ಒಂದೇ ಪ್ರಕಾರದವಾಗಿರುವವು. (೩೦) ಒಮ್ಮೊಮ್ಮೆ ಕಂಡು ಬರುವದೇನೆಂದರೆ ಒಬ್ಬಾನೊಬ್ಬ ಮನುಷ್ಯ ಅದ್ವೈತ ವೇದಾಂತ ಹೇಳುವದರಲ್ಲಿ ಪ್ರಕಾಂಡ ಪಂಡಿತನಾಗಿರುತ್ತಾನೆ. ಕೇಳುವವರು ಮನಸೋಲುವಂತೆ ಆಶ್ಚರ್ಯಕರವಾದ ರೀತಿಯಲ್ಲಿ ವಿಷಯ ತಿಳಿಸಿಕೊಡುತ್ತಾನೆ. ಆದರೆ ಮಾಡುವದೇನು? ಅವನ ಮನಸ್ಸು ಇಂದ್ರಿಯ ಸುಖದ ಕಡೆಗೆ ಯಾವಾಗಲೂ ಹಾತೊರೆಯುತ್ತದೆ. ಇಂಥವನ ಅದ್ವೈತ ವೇದಾಂತ ಕೇಳಿ ಅವನನ್ನು ಗುರುವಾಗಿ ಮಾಡಿಕೊಂಡರೆ ನಿಮ್ಮ ಜೀವನ ಸಾರ್ಥಕವಾದೀತೆ? ಎಂದಿಗೂ ಇಲ್ಲ. ವೇದಾಂತ ಉತ್ತಮ ರೀತಿಯಿಂದ ಹೇಳುವದು ಬುದ್ಧಿಯ ಕರಾಮತಿ (ಚಾತುರ್ಯ, ಕುಶಲತೆ) ಇರುವದು. ವೇದಾಂತವನ್ನು ಉತ್ತಮ ರೀತಿಯಿಂದ ಆಚರಿಸುತ್ತ ಜೀವಿಸುವದು ಪರಮಾರ್ಥದ ಗುರುಕೀಲಿ (ಕಿಲ್ಲಿ) ಯಾಗಿದೆ. ಎರಡೂ ಒಂದೇ ಸ್ಥಳದಲ್ಲಿ (ವಕ್ತೃತ್ವ-ಪಾಂಡಿತ್ಯ, ವ, ಆಚರಣೆ) ಇದ್ದರೆ ಬಹಳ ಉತ್ತಮವು. ಪರಮಾರ್ಥದಲ್ಲಿ ಮೊದಲಿನದು ಇಲ್ಲದಿದ್ದರೂ ನಡೆಯುತ್ತದೆ. ಎರಡನೆಯದು ಮಾತ್ರ ಇರಬೇಕು. (೩೧)

ಜೈಸಾ ನಿರೂಪಣ ಸಮಯೋ । ತೈಸೇಚಿ ಮನಹೀ ಕರೀವಾಯೋ ।
ಕೃತ ಬುದ್ಧೀಚಾ ಜಯೋ । ಜಾಲಾಚ ನಾಹೀ ॥೩೨॥

ನಿರೂಪಣೀ ಸಾಮರ್ಥ್ಯ ಸಿದ್ಧೀ । ಶ್ರವಣ ಹೋತಾ ದುರಾಶಾ ಬಾಧೀ ।
ನಾನಾ ಚಮತ್ಕಾರೀ ಬುದ್ಧೀ । ದಂಡಳೂ ಲಾಗೇ ॥೩೩॥

ಪೂರ್ವೀ ಜ್ಞಾತೇ ವಿರಕ್ತ ಭಕ್ತ । ತಯಾಸೀ ಸಾದೃಶ್ಯ ಭಗವಂತ ।
ಆಣೀ ಸಾಮರ್ಥ್ಯಹಿ ಅದ್ಭುತ । ಸಿದ್ಧೀಚೆನಿ ಯೋಗೇ ॥೩೪॥

ಐಸೇ ತಯಾಚೇ ಸಾಮರ್ಥ್ಯ । ಆಮುಚೆ ಜ್ಞಾನಚಿ ಮುಸದೇ ವ್ಯರ್ಥ ।
ಐಸಾ ಸಾಮರ್ಥ್ಯಾಚಾ ಸ್ವಾರ್ಥ । ಅಂತರೀ ವಸೇ ॥೩೫॥

ನಿಶೇಷ ದುರಾಶಾ ತುಟೆ । ತರೀ ಚ ಭಗವಂತ ಭೇಟೇ ।
ದುರಾಶಾ ಧರಿತೀ ತೇ ವ್ರೋಖಟೇ । ಶಬ್ದಜ್ಞಾತೇ ಕಾಮಿಕ ॥೩೬॥

ಬಹುತ ಜ್ಞಾತೀ ನಾಗವಲೀ । ಕಾಮನೇನೇ ವೇಡೀ ಕೇಲೀ ।
ಕಾಮನಾ ಇಚ್ಛಿತಾಚ ನೇಲೀ । ಬಾಪುಡೀ ಮೂರ್ಖೇ ॥೩೭॥

ಉತ್ತಮ ವಕ್ತಾರ (ವಾಗ್ಮಿ) ಶಬ್ದಪಾಂಡಿತ್ಯದವನು ಹೇಳುವ ಜಾಣ್ಮೆ ಹೇಗಿರುವದೆಂದರೆ ನಿರೂಪಣ (ಪ್ರವಚನ, ಭಾಷಣ) ಕೇಳಲಿಕ್ಕೆ ಬಂದ ಜನರ ಹಾಗೂ ಪ್ರಸಂಗದ ಮೇಲಿಂದ ನಿರೂಪಣದ ರಂಗು ಹೆಚ್ಚುತ್ತದೆ. ಪ್ರಸಂಗಕ್ಕನುಸಾರವಾಗಿ ಕಲ್ಪನೆಗಳು ಅವನ ಮನಸ್ಸಿನಲ್ಲಿ ತತ್‌ಕ್ಷಣ ಬರುವವು. ಪರಂತು ದೇಹಬುದ್ಧಿಯ ಎಲ್ಲ ಸಂಶಯಗಳ ನಿವಾರಣೆಯಾಗಿ ಅವನ ಅಂತರ್ಯಾಮಿ ಆತ್ಮಬುದ್ಧಿಯ ಜಯವಾಗದೇ ಇರುವದರಿಂದ ಆತ್ಮಜ್ಞಾನ ವಿಲ್ಲದ ಕೇವಲ ಭಾಷಣ ಪಾಂಡಿತ್ಯವು ನಿರರ್ಥಕವೆನಿಸುತ್ತದೆ. ಸ್ವಸ್ವರೂಪದ ಬಗ್ಗೆ ಇಂಥವನಿಗೆ ನಿಶ್ಚಯಾತ್ಮಕ ಜ್ಞಾನವಿರುವದಿಲ್ಲ. ಆತ್ಮಸಾಕ್ಷಾತ್ಕಾರವಾಗಿ ಸ್ವಸ್ವರೂಪದ ಬಗ್ಗೆ ಆಗುವ ಸಂಪೂರ್ಣ ಸಂಶಯರಹಿತ ಜ್ಞಾನವಾಗುವ ಈ ಜ್ಞಾನಕ್ಕೆ ಶ್ರೀ ಸಮರ್ಥರು "ನಿಶ್ಚಯ" ಎಂಬ ಶಬ್ದವನ್ನು ಉಪಯೋಗಿಸಿರುವರು. (೩೨) ಮೇಲಿಂದ ಮೇಲೆ ಕಂಡು ಬರುವದೇನೆಂದರೆ ನಿರೂಪಣದಲ್ಲಿ ವಕ್ತಾ ಆತ್ಮಜ್ಞಾನದ ಸಾಮರ್ಥ್ಯವನ್ನು ಹೊಗಳಿ ರಂಜಿಸಿ ಹೇಳುತ್ತಾನೆ. ಇದರಿಂದ ಪ್ರಾಪ್ತವಾಗುವ ಸಿದ್ಧಿಯ ಕರಾಮತಿನ ವರ್ಣನೆಯನ್ನು ಚೆನ್ನಾಗಿಯೇ ಮಾಡುತ್ತಾನೆ. ಈ ಚಮತ್ಕಾರದ ವರ್ಣನೆಯನ್ನು ಕೇಳಿ ಅವನ ಬುದ್ಧಿ ಆತ್ಮಜ್ಞಾನದಿಂದ ಅಲ್ಲಾಡುತ್ತದೆ. ಏನು ಮಾಡಲಿ, ಏನು ಬಿಡಲಿ, ಎಂಬ ವಿಚಾರದ ಗೊಂದಲದಲ್ಲಿ ತೊಳಲಾಡುವನು. ಆತ್ಮಜ್ಞಾನಿ ಪುರುಷರ ಕೈಯಿಂದ ಚಮತ್ಕಾರಗಳು ಘಟಿಸುತ್ತವೆ ಎಂಬ ಮಾತು ನಿಜ. ಆದರೆ ಅದು ಅವರ ಜ್ಞಾನದ ಒಂದು ಗೌಣ ಪರಿಣಾಮವಿರುವದು.ನಿರೂಪಣದಲ್ಲಿ ಚಮತ್ಕಾರಕ್ಕೆ ಮಹತ್ವಕೊಟ್ಟದ್ದಾದರೆ ಶ್ರೋತೃಗಳು ಚಮತ್ಕಾರದಕಡೆಗೆ ಆಕರ್ಷಿತರಾಗುವರು.ಆಮೇಲೆ ಯಾರು ಚಮತ್ಕಾರ ಮಾಡುವರೋ ಅವರೇ ಸಾಧು, ಸಂತ ಶರಣರೆಂದು ತಪ್ಪು (ತಿಳಿವಳಿಕೆಯಿಂದ) ಅಂಥವರ ಬೆನ್ನು ಹತ್ತುವರು. ಆತ್ಮಜ್ಞಾನದ ಬಗ್ಗೆ ಇರಬೇಕಾದ ಬುದ್ಧಿಯ ಸ್ಥಿರತೆ ಶ್ರೋತೃವಿನಲ್ಲಿ ಆಗ ಉಳಿಯುವದಿಲ್ಲ. (೩೩) ಒಮ್ಮೊಮ್ಮೆ ಸಾಧಕರ ಮನಸ್ಸಿನಲ್ಲಿ ಇಂಥ ವಿಚಾರಗಳು ಬರುವವು. ಪೂರ್ವದಲ್ಲಿ ದೊಡ್ಡ ಜ್ಞಾನಿಗಳು, ನಿಷ್ಠಾವಂತ ವಿರಕ್ತರು, ಶ್ರೇಷ್ಠ ಭಕ್ತರು ಇದ್ದರು. ಅವರೆಲ್ಲರ ಯೋಗ್ಯತೆಯು ಭಗವಂತನಿಗೆ ಸಮವಾಗಿತ್ತು. ಸಿದ್ಧಿಯನ್ನು ವಶಪಡಿಸಿ ಕೊಂಡಿದ್ದರಿಂದಲೇ ಅವರೆಲ್ಲರಲ್ಲಿ ಅದ್ಭುತ ಸಾಮರ್ಥ್ಯವಿದ್ದಿತು. (೩೪) ಅವನಲ್ಲಿದ್ದಂಥ ವಿಲಕ್ಷಣ ಸಾಮರ್ಥ್ಯವು ನಮ್ಮಲ್ಲಿ ಇಲ್ಲ. ಆದ್ದರಿಂದಲೇ ನಮ್ಮ ಈ ಕೇವಲ ಜ್ಞಾನವು ವ್ಯರ್ಥವಾದದ್ದು. ಈಬಗೆಯ ಸಾಮರ್ಥ್ಯಪ್ರಾಪ್ತಿಯ ಸ್ವಾರ್ಥಿ ವಿಚಾರ ಸಾಧಕನ ಮನದಲ್ಲಿ ದೃಢವಾಗಿ ನೆಲೆಸುವದು. ಇದು ಆತ್ಮಜ್ಞಾನಕ್ಕೆ ಮಾರಕವಾಗಿರುವದು. ಯಾಕಂದರೆ ಇದರಿಂದ ದೇಹಬುದ್ಧಿಯ ಬೆಳವಣಿಗೆಯಾಗುತ್ತದೆ. ಜ್ಞಾನದ ಬಗೆಗಿನ ನಿಷ್ಠೆ ಕಡಿಮೆ ಆಗಿ ದುರಾಸೆಯೇ ಪ್ರಬಲಗೊಳ್ಳುವದು. (೩೫) ಎದುರಿಟ್ಟು ಕಾಣುವ ದೃಶ್ಯದಿಂದ ಸುಖ ಪಡೆಯುವ ವಾಸನಾ ಯಾವಾಗ ಸಂಪೂರ್ಣ ನಾಶವಾಗುವದೋ ಆಗ ತಾನೇ ಭಗವಂತನ ಭೆಟ್ಟಿಯಾಗುವದು. ಆದರೆ ಇಂಥ ವಾಸನಾಧೀನನಾದ ಶಬ್ದಜ್ಞಾನಿ ಜನರು ಕಾಮಿನಿಯ ಆಧೀನರಾಗಿರುವರು. ಒಟ್ಟಿನಲ್ಲಿ ಇದು ಯೋಗ್ಯವಲ್ಲ. ಇಂಥ ವಾಸನಾಧೀನ ಪಂಡಿತರ ಹೇಳಿಕೆ ಯಿಂದ ಜನರಲ್ಲಿ ಪರಮಾರ್ಥದ ವಿಷಯದ ಬಗೆಗೆ ಖೊಟ್ಟಿ ಕಲ್ಪನೆಯು ಪ್ರಸಾರಗೊಳ್ಳುವದು. ಅಂತೆಯೇ ಶ್ರೀ ಸಮರ್ಥರು ಇಂಥವರಿಗೆ "ವೋಖಟೆ" ಅಂದರೆ ಕೆಟ್ಟವರು ಅಥವಾ ದುರಾಶೆಯುಳ್ಳವರು ಎಂಬ ಸೌಮ್ಯನಿಂದಾ ಯುಕ್ತ ವಿಶೇಷಣ ಹಚ್ಚಿದ್ದಾರೆ. (೩೬) ಯಾವುದಾದರೊಂದು ವಾಸನಾದ ಬೆನ್ನುಹತ್ತಿ ಹುಚ್ಚರಂತಿರುವ ಇಂದ್ರಿಯ ಜಯ ಗಳಿಸಲಿಕ್ಕೆ ಆಗದ ದುರ್ಬಲರಾದಂಥ ಅನೇಕ ಜನ ಶಬ್ದಜ್ಞಾನಿಗಳು ಪರಮಾರ್ಥ ಸಾಧಿಸಲಾರದೇ ವ್ಯರ್ಥವಾಗಿ ಹೋದರು. ಈ ಮೂರ್ಖರು ತಮ್ಮ ಇಚ್ಛಾತೃಪ್ತಿಗಾಗಿ ಧಡಪಡಿಸಿ ಕೊನೆಗೆ ಏನೂ ಗಳಿಸದೇ ಮರಣ ಹೊಂದಿದರು. (೩೭)

ನಿಶೇಷ ಕಾಮನಾರಹಿತ । ಐಸಾ ತೋ ವಿರೂಳಾ ಸಂತ ।
ಅವಘ್ಯಾ ವೇಗಳೇ ಮತ । ಅಕ್ಷೈ ಜ್ಯಾಚೇ ॥೩೮॥

ಅಕ್ಷೈ ಠೇವಾ ಸಕಳಾಚಾ । ಪರೀ ಪಾಂಗಡಾ ಫಿಟೇನಾ ಶರೀರಾಚಾ ।
ತೇಣೇ ಮಾರ್ಗ ಈಶ್ವರಾಚಾ । ಚುಕೋನಿ ಜಾತೀ ॥೩೯॥

ಸಿದ್ಧಿ ಆಣೀ ಸಾಮರ್ಥ್ಯ ಜಾಲೇ । ಸಾಮರ್ಥ್ಯೇ ದೇಹಾಸ ಮಹತ್ವ ಆಲೇ ।
ತೇಣೆ ಬೆಂಚಾಡ ಬಳಕಾವಲೆ । ದೇಹ ಬುದ್ಧೀಚೇ ॥೪೦॥

ಸಾಂಡೂನಿ ಅಕ್ಷೈ ಸುಖ । ಸಾಮರ್ಥ್ಯ ಇಚ್ಛಿತೀ ತೇ ಮೂರ್ಖ ।
ಕಾಮನೆ ಸಾರಿಖೇ ದುಃಖ । ಆಣೀಕ ಕಾಹೀಚ ನಾಹೀ ॥೪೧॥

ಈಶ್ವರೇವಿಣ ಜೇ ಕಾಮನಾ । ತೇಣೇ ಚಿ ಗುಣೇ ನಾನಾ ಯಾತನಾ ।
ಪಾವತೀ ಹೋತೀ ಪತನಾ । ವರಪಡೇ ಪ್ರಾಣೀ ॥೪೨॥

ಎಳ್ಳಷ್ಟೂ, ಯಾವುದರ ಬಗ್ಗೆಯೂ ಯತ್ಕಿಂಚಿತ್ ವಾಸನಾ ಇಲ್ಲದಂಥ ಸಂತ ಸಾಧುಗಳು ತೀರ ಕ್ವಚಿತ್ ಇರುವರು. ಎಲ್ಲ ಜನರ ಅಭಿಪ್ರಾಯಕ್ಕೆ ಇವರ ಮತ ಭಿನ್ನವಾಗಿಯೇ ಇರುವದು. ಈ ಸಂತನು ಯಾವಾಗಲೂ ಅಕ್ಷಯ (ನಾಶವಿಲ್ಲದ) ಭಗವಂತನ ವಿಷಯವಾಗಿಯೇ ಮಾತಾಡುವನು. ಸಂತರ ಬಗ್ಗೆ, ಇದೇ ಒಂದು ದೊಡ್ಡ ಗುರುತು ಇರುವದು. ಆ ಸಂತನನ್ನು ಯಾವಾಗ ನೋಡಿದರೂ, ಎಲ್ಲಿನೋಡಿದರೂ, ಎಂಥ ಪರಿಸ್ಥಿತಿಯಲ್ಲಿ ನೋಡಿದರೂ, ಯಾವುದೇ ಅವಸ್ಥೆಯಲ್ಲಿ ನೋಡಿದರೂ ಸಹ ಒಬ್ಬನೇ ಒಬ್ಬ ಭಗವಂತನ ಬಗ್ಗೆ ಶಾಶ್ವತ ಈಶ್ವರನ ಬಗ್ಗೆ ಮಾತ್ರ ಮಾತನಾಡುತ್ತಾನೆ. ವ್ಯರ್ಥ ಹರಟೆಗೆ ಎಷ್ಟೂ ಆಸ್ಪದವನ್ನೇ ಕೊಡುವದಿಲ್ಲ. ಇತರ ವಿಷಯ ಮಾತಾಡಲಾರ, ಹೇಳಲಾರ, ಮನಸ್ಸಿನಲ್ಲಿ ಸಹ ತರಲಾರ. ಇಷ್ಟೇ ಅಲ್ಲ, "ನನಗೆ ಇಂಥದು ಬೇಕು" ಎಂದು ಅವನ ಮುಖದಿಂದ ಯಾವ ಕಾಲಕ್ಕೂ ಶಬ್ದ ಹೊರಬೀಳಲಾರದು. ಅರ್ಥಾತ್ ಇಂಥ ಪುರುಷರು ನೋಡಲಿಕ್ಕೆ ಕ್ವಚಿತ್ತಾಗಿ ಸಿಗುವರು. (೩೮) ನಿಜವಾಗಿಯೂ ವಿಚಾರ ಮಾಡಿನೋಡಿದರೆ ಭಗವಂತನೊಬ್ಬನೇ ಎಂದೂ ನಾಶವಾಗದಂಥ ಕಳೆದುಹೋಗದಂಥ (ಕಾಯಂ ಇರುವಂಥ)ನಿತ್ಯಸ್ವರೂಪದ ಇಡುಗಂಟಾಗಿದ್ದಾನೆ.ಆದರೂ ಮಾನವನಿಗೆ ದೇಹದಿಂದಲೇ ಸುಖಪಡೆಯಬೇಕೆಂಬ ಲಾಲಸೆಯು ಮಾತ್ರ ಏನು ಮಾಡಿದರೂ ಕಡಿಮೆ ಆಗಲೊಲ್ಲದು. ಇದರಿಂದ ಭಗವಂತನ ಕಡೆಯ ಮಾರ್ಗ ಸರಿಯಾಗಿ ಸಿಗಲೊಲ್ಲದಾಗಿದೆ. ದೃಶ್ಯದಲ್ಲಿಯೆ ನನ್ನ ಸುಖವಿದೆ, ಅದು ಅಲ್ಲಿಂದಲೇ ಸಿಗುತ್ತದೆ ಎಂಬ ಕಲ್ಪನೆಯು ಎಲ್ಲಿಯವರೆಗೆ ನಮ್ಮಲ್ಲಿ ಗಟ್ಟಿಯಾಗಿರುವದೋ ಅಲ್ಲಿಯತನಕ ಅದೃಶ್ಯ ಭಗವಂತನ ಹತ್ತಿರ ಸುಖದ ಶೋಧವನ್ನು ಮನುಷ್ಯನು ಮಾಡುವದಿಲ್ಲ. ಮತ್ತು ಇದು ಹೊಳೆಯಬೇಕಾದರೆ ಖರೇ ಸದ್ಗುರುವಿನ ಹೊರತು ಅನ್ಯ ಉಪಾಯವಿಲ್ಲ. (೩೯) ಇತ್ತ ಲಕ್ಷ್ಯ ಕೊಡಿರಿ, ತಿಳಿಯಿರಿ, ಒಬ್ಬಾನೊಬ್ಬನು ಕೆಲವು ಸಾಧನೆ ಮಾಡಿದನು. ಅದರಿಂದ ಅವನಿಗೆ ಕೆಲವು ಸಿದ್ಧಿಗಳು ಪ್ರಾಪ್ತವಾದವು. ಇದರಿಂದ ಅವನ ಸಾಮರ್ಥ್ಯ ಬೆಳೆಯುವದೆಂಬುದರಲ್ಲಿ ಸಂಶಯವಿಲ್ಲ. ಸಿದ್ಧಿ ಸಾಮರ್ಥ್ಯದಿಂದ ಅವನ ದೇಹಕ್ಕೆ ಮಹತ್ವ ಬಂದ ಕಾರಣವಾಗಿ ಅವನ ದೇಹ ಬುದ್ಧಿಯ ವಾಸನಾ ಭ್ರಮೆ ಹೆಚ್ಚುತ್ತದೆ. ದೇಹಬುದ್ಧಿಯ ಜಂಗಲ್ ಬೆಳೆಯುತ್ತದೆ. ನಾನು ದೇಹವೇ ಇರುವೆನು ಈ ಭ್ರಮೆಯು ಭಗವಂತನ ಪ್ರಾಪ್ತಿಗೆ ಮತ್ತು ಜ್ಞಾನಕ್ಕೆ ಅಡ್ಡ ಬರುವದು. ಇದನ್ನು ಇಲ್ಲದಂತೆ ಮಾಡುವ ದಕ್ಕಾಗಿಯೇ ಎಲ್ಲ ಸಾಧನಗಳಿರುವವು. ಅಂದ ಮೇಲೆ ಸಾಧನೆ ಶುದ್ಧ ಹಾಗೂ ಪವಿತ್ರವಿರಬೇಕಲ್ಲವೇ? ಆದರೆ ಸಾಧನೆಯಿಂದಲೇ ಆ ದೇಹ ಬುದ್ಧಿಯ ಭ್ರಮೆಯು ಹೆಚ್ಚುಗಟ್ಟಿಯಾಗುವದಾದರೆ ನಾವು ಪರಮಾರ್ಥ ದೃಷ್ಟಿಯಿಂದ ಏನನ್ನು ಗಳಿಸಿದಂತಾಯಿತು? ಉತ್ತಮರಾದ ಸಾಧಕರಲ್ಲಿ ಸಹ ಇಂಥ ಅಧಃಪಾತವಾಗುವದೆಂದು ಶ್ರೀ ಸಮರ್ಥರು ನಮಗೆ ಸೂಚಿಸಿದ್ದಾರೆ. (೪೦) **ವಾಸನಾ ನಮ್ಮನ್ನು ಭಗವಂತನಿಂದ ದೂರ ಮಾಡುತ್ತದೆ. ಈ ವಾಸನಾ ಸಂಪೂರ್ಣ ನಾಶಗೊಳಿಸಿ (ಇಲ್ಲದಂತೆ–ಮಾಡಿ) ಭಗವಂತನಲ್ಲಿ ದೃಢ ನಿಷ್ಠೆಯನ್ನು ಹೊಂದಿ ಯಾವನು ಇರುವನೋ ಅವನೇಸದ್ಗುರುವಾಗಲಿಕ್ಕೆಯೋಗ್ಯನಿರುತ್ತಾನೆ:**- ಭಗವಂತನ ಸುಖ ಅಕ್ಷಯವಾದುದು. ಕಾಯಂ ಉಳಿಯುವಂಥದು. ಇದಕ್ಕೆ ಎಂದೂ ವಿನಾಶವಿಲ್ಲ. ಇಂಥ ಭಗವಂತನನ್ನು ಮಗ್ಗಲಿಗೆ ಸರಿಸಿ ಸಾಮರ್ಥ್ಯ ಸಂಪಾದಿಸುವದರ ಬೆನ್ನು ಹತ್ತುವವರು ಮೂರ್ಖರಲ್ಲದೇ ಮತ್ತೇನಾದಾರು? ವಾಸನಾದಂಥಹ ದುಃಖ ಮತ್ತಾವುದೂ ಇಲ್ಲ. (೪೧) "ನಮಗೆ ಭಗವಂತಬೇಕು" ಈ ಒಂದೇ ವಾಸನೆ ಮಾತ್ರ ತಾಪದಾಯಕವಲ್ಲ. ಈ ಒಂದು ವಾಸನಾ ಬಿಟ್ಟು ಇತರ ಸರ್ವವಾಸನಾ ಅನೇಕ ಪ್ರಕಾರದ ದುಃಖ ನಿರ್ಮಾಣ ಮಾಡುತ್ತದೆ. ಮನುಷ್ಯನು ಇದರ ಬೆನ್ನು ಹತ್ತುವದರಿಂದ ಕೊನೆಗೆಅಧಃಪಾತ ಹೊಂದುವನು. ಈಮಾತು ಬಹಳ ಮಹತ್ವದ್ದಿರುವದು. ಸಾಮಾನ್ಯ ಮನುಷ್ಯರಾದ ನಾವು ವಾಸನಾದ ಹೊರತಾಗಿ ಇರಲಿಕ್ಕೆ ಶಕ್ಯವಾಗುವದಿಲ್ಲ.ಈ ಮಾತು ನಿಜವೇಇದ್ದರೆ ನೀವು ವಾಸನಾ ಇಡುವದಾದರೆ ಕೇವಲ ಭಗವಂತನ ದರ್ಶನದ ವಾಸನಾ ಹಿಡಿಯಿರಿ. ಈ ಒಂದು ವಾಸನಾದಿಂದ ದುಃಖ ನಿರ್ಮಾಣವಾಗುವದಿಲ್ಲ. ಮತ್ತು ನಮ್ಮ ಜೀವನ ಸಾರ್ಥಕವಾಗುವದೆಂದು ಶ್ರೀಸಮರ್ಥರು ಹೇಳುತ್ತಾರೆ. (೪೨)

ಹೋತಾ ಶರೀರಾಸೀ ಅಂತ । ಸಾಮರ್ಥ್ಯಹಿ ನಿಘೋನ ಜಾತ ।
ಸೇಖೀ ಅಂತರಲಾ ಭಗವಂತ । ಕಾಮನಾಗುಣೇ ॥೪೩॥

ಮ್ಹಣೋನಿ ನಿಃಕಾಮತಾ ವಿಚಾರು । ದೃಢಬುದ್ಧೀಚಾ ನಿರ್ಧಾರು ।
ತೋಚಿ ಸದ್ಗುರು ಪೈಲಪಾರು । ಪಾವವೀ ಭವಾಚಾ ॥೪೪॥

ಮುಖ್ಯ ಸದ್ಗುರೂಚೇ ಲಕ್ಷಣ । ಆಧೀ ಪಾಹಿಜೆ ವಿಮಳಜ್ಞಾನ ।
ನಿಶ್ಚಯಾಚೇ ಸಮಾಧಾನ । ಸ್ವರೂಪಸ್ಥಿತೀ ॥೪೫॥

ಯಾಹಿವರೀ ವೈರಾಗ್ಯ ಪ್ರಬಳ । ವೃತ್ತಿ ಉದಾಸ ಕೇವಳ ।
ವಿಶೇಷ ಆಚಾರೇ ನಿರ್ಮಳ । ಸ್ವಧರ್ಮ ವಿಷಈ ॥೪೬॥

ಯಾಹಿವರೀ ಅಧ್ಯಾತ್ಮಶ್ರವಣ । ಹರಿಕಥಾ ನಿರೂಪಣ ।
ಜೇಥೇ ಪರಮಾರ್ಥವಿವರಣ । ನಿರಂತರ ॥೪೭॥

ಜೇಥೇ ಸಾರಾಸಾರ ವಿಚಾರ । ತೇಥೇ ಹೋಯ ಜಗೋದ್ಧಾರ ।
ನವವಿಧಾ ಭಕ್ತೀಚಾ ಆಧಾರ । ಬಹುತ ಜನಾಸೀ ॥೪೮॥

ಮ್ಹಣೋನಿ ನವವಿಧಾ ಭಜನ । ಜೇಥೇ ಪ್ರತಿಷ್ಠಿಲೇ ಸಾಧನ ।
ಹೇ ಸದ್ಗುರೂಚೇ ಲಕ್ಷಣ । ಶ್ರೋತೀ ವೋಳಖಾವೇ ॥೪೯॥

ಅಂತರೀ ಶುದ್ಧ ಬ್ರಹ್ಮಜ್ಞಾನ । ಬಾಹ್ಯ ನಿಷ್ಠೇಚೇ ಭಜನ ।
ತೇಥೇ ಬಹು ಭಕ್ತ ಜನ । ವಿಶ್ರಾಂತಿ ಪಾವತೀ ॥೫೦॥

ಮೃತ್ಯು ಮೂಲಕ ದೇಹದ ಕೊನೆಯಾದ ಕೂಡಲೇ ಆ ದೇಹದ ಕೂಡ ಅವರಲ್ಲಿರುವ ಸಾಮರ್ಥ್ಯ (ಶಕ್ತಿ) ಸಹ ಇಲ್ಲದಂತಾಗುತ್ತದೆ. ವಾಸನಾದ ಬೆನ್ನು ಹತ್ತಿದ್ದರಿಂದ ಕೊನೆಗೆ ಭಗವಂತ ಸಹ ದೂರಾಗುವನು. ವಾಸನಾ ಜೀವವನ್ನು ಅಶಾಶ್ವತ ವಸ್ತುವಿನಲ್ಲಿ ತೊಡಕಿಸುತ್ತದೆ, ಅಶಾಶ್ವತ ದೇಹದ ಕೊನೆಯಾದ ಕೂಡಲೇ ವಾಸನಾದ ಎಲ್ಲ ಪಸಾರವೂ ನಾಶಗೊಳ್ಳುವದು. ಮನಸ್ಸು ಭಗವಂತನ ಕಡೆಗೆ ಎಂದೂ ಎಷ್ಟೂ ತಿರುಗದೆ ಇದ್ದುದರಿಂದ ಅವನು ಭಗವಂತನಿಂದ ದೂರವಿರುವನು. ಈ ಪ್ರಕಾರ ಜೀವವು ಎರಡೂ ಕಡೆಯಿಂದ ದುರ್ದೆಶೆಗೀಡಾಗುವದು. (೪೩) ಇದರ ಮೇಲಿಂದ ನೋಡಿದರೆ ಅತ್ಯಂತ ನಿಷ್ಕಾಮಿಯಾದವನು, ವಾಸನಾರಹಿತನಾದವನು ಮತ್ತು ಆತ್ಮಸ್ವರೂಪದ ವಿಷಯದಲ್ಲಿ ದೃಢಬುದ್ಧಿಯ ನಿಶ್ಚಯವಿದ್ದವನು ಮತ್ತು ಸ್ವಾನುಭವಿ ಇರುವಂಥ ಸದ್ಗುರು ಮಾತ್ರ ಮನುಷ್ಯನನ್ನು ಈ ಅಶಾಶ್ವತ ದೃಶ್ಯಸಾಗರದಿಂದ ಪಾರು ಮಾಡಿ ದಂಡೆಗೆ ಮುಟ್ಟಿಸುವನು. (೪೪) **ಶ್ರೀ ಸಮರ್ಥರು ಈಗ ಸದ್ಗುರುವಿನ ಲಕ್ಷಣಗಳನ್ನು ವರ್ಣನೆ ಮಾಡುತ್ತಾರೆ. ಆತ್ಮಸಾಕ್ಷಾತ್ಕಾರವಾಗಿ ಸ್ವಚ್ಛ, ಸ್ಥಿರ್, ಬ್ರಹ್ಮಜ್ಞಾನವಾಗುವದೇಸದ್ಗುರುವಿನ ನಿಜವಾದ ಲಕ್ಷಣವುಉಳದೆಲ್ಲ ಲಕ್ಷಣಗಳು ಈ ಪ್ರಧಾನ ಲಕ್ಷಣವನ್ನೇ ಅವಲಂಬಿಸಿರುತ್ತವೆ.**ಸದ್ಗುರುವಿನ ಮುಖ್ಯ ಲಕ್ಷಣಗಳು ಹೀಗಿರುವವು– ಎಲ್ಲಕ್ಕೂ ಮೊದಲು ಅವನಲ್ಲಿ ಶುದ್ಧ ಬ್ರಹ್ಮಜ್ಞಾನವಿರಬೇಕು. ಈ ಜ್ಞಾನದಿಂದಾಗಿ ಅವನಲ್ಲಿ ಅಗದೀ ನಿಶ್ಚಲವಾದ ಸಮಾಧಾನವಿರಬೇಕು. ಆತ್ಮಸ್ವರೂಪದಲ್ಲಿ ಅವನು ಅಖಂಡವಾಗಿ ಸ್ಥಿರತ್ವದಿಂದ ಇರಬೇಕು. ಆತ್ಮಜ್ಞಾನದಿಂದ ಅವನ ಸರ್ವ ಸಂಶಯಗಳು ದೂರವಾಗಿರುವದರಿಂದ ಅವನು ಸಮಾಧಾನರೂಪನೇ ಆಗಿರುತ್ತಾನೆ. ಅವನು ಸ್ವಸ್ವರೂಪದಿಂದ ಯಾವ ಕಾಲಕ್ಕೂ ಹೊಯ್ದಾಡುವದಿಲ್ಲ [ಡಳಮಳಿಸುವದಿಲ್ಲ].(೪೫) ಇದರ ಜೊತೆಗೆ ಅವನು (ಸದ್ಗುರು) ಅತಿಶಯ ವೈರಾಗ್ಯಸಂಪನ್ನನಿರುತ್ತಾನೆ. ಇವನ ಮನಸ್ಸು ಯಾವುದರಲ್ಲಿಯೂ ಆಸಕ್ತವಾಗಿರುವದಿಲ್ಲ. ಮತ್ತು ಸ್ವಧರ್ಮದ ಬಗೆಗೆ ಅತಿ ನಿರ್ಮಲ ಆಚರಣೆ ಇರುವದು. ಜ್ಞಾನವು ಅಂತಃಕರಣದಲ್ಲಿ ವಾಸ ಮಾಡುತ್ತದೆ. ಆದರೆ ಇದರ ಪ್ರತಿ-ಬಿಂಬವು ಪ್ರತ್ಯಕ್ಷ ಆಚರಣೆಯಲ್ಲಿ ಕಂಡು ಬರಬೇಕು. ಸದ್ಗುರುವಿನ ಜೀವನದಲ್ಲಿ ಜ್ಞಾನ ಮತ್ತು ವ್ಯವಹಾರ ಇವುಗಳಲ್ಲಿ ಸುಸಂಗತಿ ಇರುತ್ತದೆ. (೪೬) ಇಷ್ಟೆಲ್ಲ ಇದ್ದೂ ಸಹ ಸದ್ಗುರುವಿನ ಹತ್ತಿರ ಅಧ್ಯಾತ್ಮ ವಿಷಯದ ಶ್ರವಣ ಯಾವಾಗಲೂ ನಡೆದಿರುತ್ತದೆ. ಇವನ ಹತ್ತಿರ ನಿತ್ಯ ಹರಿಕಥೆ ಮತ್ತು ಆತ್ಮಸ್ವರೂಪದ ನಿರೂಪಣಗಳು ನಡೆದಿರುತ್ತವೆ. ಎಲ್ಲಿ ಸತತ ಪರಮಾರ್ಥದ ವಿವರ ತಿಳಿಸಿಕೊಡುವದು ನಡೆದಿರುವದೋ (೪೭) ಅಲ್ಲಿ ನಿತ್ಯವೂ ಸಾರಾಸಾರ ವಿಚಾರ (ಶಾಶ್ವತ–ಅಶಾಶ್ವತ ವಿಚಾರ) ಅಥವಾ ಆತ್ಮಾನಾತ್ಮ ವಿವೇಕ ನಡೆದಿರುತ್ತದೆ. ಅಲ್ಲಿ ಜಗದ ಉದ್ಧಾರದ ಬಗ್ಗೆ ವಿಚಾರ ಸಹ ನಡೆದಿರುತ್ತದೆ. ಅಂಥಲ್ಲಿ ಜಗತ್ತಿನ ಉದ್ಧಾರ ಆಗುವದು. ಎಷ್ಟೋ ಜನರಿಗೆ ನವವಿಧ ಭಕ್ತಿಯ ಮರ್ಮ ತಿಳಿಸಿ ಈ ಭಕ್ತಿ ಹೇಗೆ ಮಾಡಬೇಕೆಂಬುದನ್ನು ಇಲ್ಲಿ ತಿಳಿಸಲಾಗುತ್ತದೆ ಯಾವುದೇ ಜ್ಞಾನವಿದ್ದರೂ ಅದು ಜೀವಂತವಿರುತ್ತದೆ.ಇದರ ವ್ಯವಹಾರ ನಡೆಯಿತೆಂದರೆ ಇದರಿಂದ ಬಹುಜನರಿಗೆಲಾಭವಾಗುತ್ತದೆ. ಸದ್ಗುರುವಿನ ಹತ್ತಿರ ಮುಖ್ಯವಾಗಿ ಆತ್ಮಜ್ಞಾನವಿರುತ್ತದೆ. ಶ್ರವಣ, ನಿರೂಪಣ ಮತ್ತು ವಿವರಣೆ ಈ ರೀತಿಯಿಂದ ಆತ್ಮಜ್ಞಾನ ವಸ್ತುವಿನ ವ್ಯವಹಾರವಾಗುತ್ತದೆ. ಅಂತೆಯೇ ಶ್ರವಣ, ನಿರೂಪಣ ಮತ್ತು ವಿವರಣೆ ಇವುಗಳ ವ್ಯವಹಾರವು ಸತತವಾಗಿ ನಡೆದಿರುತ್ತದೆ. ಇದರಿಂದ ಅನೇಕರ ಸಂದೇಹಗಳು ನಿವಾರಣವಾಗುವವು. ಮತ್ತು ಅನೇಕರ ಬುದ್ಧಿಯು ನಿಶ್ಚಯಗೊಂಡು ಅದು ಭಗವಂತನ ಪ್ರಾಪ್ತಿಯ ಮಾರ್ಗಕ್ಕೆ ಹತ್ತುವದು. (೪೮) ಮುಖ್ಯವಾಗಿ ಯಾವ ಸ್ಥಳದಲ್ಲಿ ನವವಿಧ (ಒಂಭತ್ತು ಪ್ರಕಾರದ) ಭಕ್ತಿಯ ಆಚರಣೆ ಇರುವದೋ ಅಲ್ಲಿಯ ಸಾಧನ ಮಾರ್ಗಕ್ಕೆ ಅತ್ಯಂತ ಮಹತ್ವವಿರುವದು. ಇವೆಲ್ಲ ಸದ್ಗುರುವಿನ ಲಕ್ಷಣಗಳೆಂದು ಶ್ರೋತೃಗಳು ತಿಳಿಯಬೇಕು. (೪೯)ಅಂತರ್ಯಾಮಿ ಶುದ್ಧ ಬ್ರಹ್ಮಜ್ಞಾನ ಮತ್ತು ಹೊರಗೆ (ಪ್ರಕಟದಲ್ಲಿ) ಅತ್ಯಂತ ಮನಃಪೂರ್ವಕವಾಗಿ ಮಾಡಿದ ಉಪಾಸನಾ ಈ ಜೋಡಿ (ಜೊತೆ) ಯಾವ ಪುಣ್ಯಾತ್ಮನಲ್ಲಿ ಇರುವವೋ ಅಂಥವನಿಂದ ಅನೇಕ ಸಾಧಕರಿಗೆ ಮತ್ತು ಉಪಾಸಕರಿಗೆ ಸಮಾಧಾನ ಪ್ರಾಪ್ತವಾಗುವದು. ಜ್ಞಾನದ ಕೂಡ ಆತ್ಮಜ್ಞಾನಕ್ಕೆ ಶೋಭಿಸುವಂಥ ಬಾಹ್ಯ ಆಚರಣೆ ಇರುವದು ಅತಿ ಅವಶ್ಯವಾಗಿದೆ. ಈ ಮಾತನ್ನು ಶ್ರೀ ಸಮರ್ಥರು ಪುನಃ ಪುನಃ ಹೇಳುತ್ತಾರೆ. (೫೦)

ನಾಹೀ ಉಪಾಸನೆಚಾ ಆಧಾರ । ತೋ ಪರಮಾರ್ಥ ನಿರಾಧಾರ ।
ಕರ್ಮೇವಿಣ ಅನಾಚಾರ । ಭ್ರಷ್ಟ ಹೋತೀ ॥೫೧॥

ಮ್ಹಣೋನಿ ಜ್ಞಾನ ವೈರಾಗ್ಯ ಆಣಿ ಭಜನ । ಸ್ವಧರ್ಮಕರ್ಮ ಆಣಿ ಸಾಧನ ।
ಕಥಾ ನಿರೂಪಣ ಶ್ರವಣ ಮನನ । ನೀತಿ ನ್ಯಾಯೆ ಮರ್ಯಾದಾ ॥೫೨॥

ಯಾಮಧೇ ಯೇಕ ಉಣೆ ಅಸೆ । ತೇಣೇ ತೇ ವಿಲಕ್ಷಣ ದಿಸೆ ।
ಮ್ಹಣೌನ ಸರ್ವಹಿ ವಿಲಸೆ । ಸದ್ಗುರುಪಾಸೀ ॥೫೩॥

ತೋ ಬಹುತಾಂಚೆ ಪಾಳಣ ಕರ್ತಾ । ತ್ಯಾಸ ಬಹುತಾಂಚೀ ಅಸೆ ಚಿಂತಾ ।
ನಾನಾ ಸಾಧನೇ ಸಮರ್ಥಾ । ಸದ್ಗುರುಪಾಸೀ ॥೫೪॥

ಸಾಧನೇವಿಣ ಪರಮಾರ್ಥ ಪ್ರತಿಷ್ಠೆ । ತೋ ಮಾಗುತಾ ಸವೇಚ ಭ್ರಷ್ಟೆ ।
ಯಾಕಾರಣೇ ದುರಿದೃಷ್ಟೆ । ಮಹಾನುಭಾವ ॥೫೫॥

ಆಚಾರ ಉಪಾಸನಾ ಸೋಡಿತೀ । ತೇ ಭ್ರಷ್ಟ ಅಭಕ್ತ ದಿಸತೀ ।
ಜಳೊ ತಯಾಂಚೀ ಮಹಂತೀ । ಕೋಣ ಪುಸೇ ॥೫೬॥

ಕರ್ಮ ಉಪಾಸನೆಚಾ ಅಭಾವ । ತೇಥೇ ಭಕಾಧೇಸಿ ಜಾಲಾ ಠಾವ ।
ತೋ ಕಾನಕೋಡಾ ಸಮುದಾವ । ಪ್ರಪಂಚೀ ಹಾಸತೀ ॥೫೭॥

ನೀಚ ಯಾತೀಚಾ ಗುರೂ । ತೋಹಿ ಕಾನಕೋಡಾ ವಿಚಾರು ।
ಬ್ರಹ್ಮಸಭೇಸ ಜೈಸಾ ಚೋರು । ತೈಸಾ ದಡೆ ॥೫೮॥

ಪರಮಾರ್ಥಕ್ಕೆ ಉಪಾಸನ ಮತ್ತು ಪ್ರತ್ಯಕ್ಷ ಆಚರಣೆಯಲ್ಲಿರುವ ಭಕ್ತಿ ಇವುಗಳ ಆಧಾರವಿಲ್ಲದಿದ್ದರೆ ಅಂಥ ಪರಮಾರ್ಥ ನಿರುಪಯೋಗಿ (ಕೆಲಸಕ್ಕೆಬಾರದ್ದೆಂದು) ಎಂದು ತಿಳಿಯಬೇಕು. ಕರ್ಮದಲ್ಲಿರುವ ಶಿಸ್ತು ಇಲ್ಲದಂತಾದರೆ ಅನಾಚಾರ, ಸ್ವೈರಾಚಾರಗಳು ಹೆಚ್ಚಿ ಮನುಷ್ಯನು ಭ್ರಷ್ಟನಾಗುವನು ಅಂತೆಯೇ ಸತ್ಕರ್ಮಾಚರಣೆಯನ್ನು ನಿರಾಕರಿಸಲುಬಾರದು.(೫೧) ಈ ಕಾರಣದಿಂದ ಆತ್ಮಜ್ಞಾನ, ವೈರಾಗ್ಯ, ಉಪಾಸನಾ, ಸ್ವಧರ್ಮ ಕರ್ಮದ ಆಚರಣೆ (ಸತ್ಕರ್ಮಗಳ ಆಚರಣೆ) ಭಗವಂತನ ಸಾಧನ ಹರಿಕಥೆ ನಿರೂಪಣ,ಶ್ರವಣ, ಮನನ, ನೀತಿ ನ್ಯಾಯಮರ್ಯಾದೆ(೫೩) ಈ ಮೇಲೆ ಹೇಳಿದವುಗಳಲ್ಲಿ ಒಂದೆ ಒಂದು ಕಡಿಮೆಯಿದ್ದರೂ ಸಹ ಪರಮಾರ್ಥದ ದೃಷ್ಟಿಯಿಂದ ವಿಪರೀತವೆಂದು ಕಂಡು ಬರುವದು. ಎಲ್ಲಿ ಸದ್ಗುರು ಇರುವನೋ ಅಲ್ಲಿ ಎಲ್ಲವೂ ಪ್ರಾಮುಖ್ಯದಿಂದ ಕಂಡು ಬರುವವು. (ಎದ್ದು ಕಾಣುವವು). ಸದ್ಗುರುವಿನ ಸುತ್ತಮುತ್ತ ಕೂಡಿರುವಂಥ ಜನರು ಸಾಮಾನ್ಯ ಯೋಗ್ಯತೆಯವರೇ ಇರುತ್ತಾರೆ. ಅವರ ವೈರಾಗ್ಯ, ಉಪಾಸನೆ ಮತ್ತು ಭಗವಂತನ ಪ್ರೇಮ ಇವುಗಳೆಲ್ಲವೂ ಸಾಮಾನ್ಯ ಮಟ್ಟದಲ್ಲಿಯೇ ಇರುತ್ತವೆ. ಇಂಥ ಜನರಿಗೆ ತಿಳಿಯುವಂಥ ಮತ್ತು ಸಾಧ್ಯವಾಗುವಂಥ ಸಾಧನ ಮಾರ್ಗವನ್ನೇ ಹೇಳಬೇಕಾಗುವದು. ಇಷ್ಟೇಅಲ್ಲ ಸ್ವತಃ ಆಚರಿಸಿ ತೋರಿಸಬೇಕಾಗುತ್ತದೆ. ಒಟ್ಟಿನಲ್ಲಿ ಸದ್ಗುರುವಿನ ಹತ್ತಿರ ಮೇಲೆ ಹೇಳಿದ ಮಾತುಗಳು ಅವಶ್ಯವಾಗಿ ಇರಬೇಕಾಗುವದು. (೫೩) **ಜ್ಞಾನಕ್ಕೆ ವ್ಯವಹಾರದ ಜೋಡು ಬಹಳ ಅವಶ್ಯವಿರುವದರಿಂದ ಶ್ರೀಸಮರ್ಥರು ಈ ಮಾತನ್ನು ಪುನಃ ಹೇಳುತ್ತಾರೆ:-** ಸದ್ಗುರು ತನ್ನ ಹತ್ತಿರ ಅನೇಕ ಜನರನ್ನು ಇಟ್ಟುಕೊಂಡಿರುತ್ತಾನೆ. ಅವರ ಪಾಲನೆ ಪೋಷಣೆ ಮಾಡುತ್ತಾನೆ. ಸದ್ಗುರುವಿಗೆ ಬಹಳಷ್ಟು ಜನರ ಕಾಳಜಿ ತೆಗೆದುಕೊಳ್ಳಬೇಕಾಗುವದು. ಇಂಥ ಸಾಮರ್ಥ್ಯವಾನ್ ಸದ್ಗುರುವಿನ ಹತ್ತಿರ ಪರಮಾರ್ಥದ ಅನೇಕ ಸಾಧನಗಳಿರುತ್ತವೆ. (೫೪) ಪರಮಾರ್ಥವನ್ನು ಉಳಿಸಿಬೆಳಿಸಿ ಪೋಷಿಸಬೇಕಾದರೆ ಸಾಧನೆಯ ಹೊರತಾಗಿ ಪ್ರಯತ್ನ ಮಾಡಿದರೆ ಅದುಅಲ್ಪಕಾಲ ಮಾತನಡೆದೀತು. ಬೇಗನೆ ಅದು ವಿಲಯನಹೊಂದುವದು.ಅಂತೆಯೇ ಮಹಾತ್ಮರಾದಂಥ ಆತ್ಮಜ್ಞಾನಿ ಸತ್ಪುರುಷರು ಅತ್ಯಂತಮುಂದಾಲೋಚನೆಯ ದೃಷ್ಟಿಯಿಟ್ಟುಕೊಂಡು ಸಾಧನದ ಪ್ರತಿಷ್ಠೆ ಬೆಳೆಸುವರು. (೫೫) ಪರಮಾರ್ಥದ ಪುಢಾರಿ [ಢೋಂಗಿ ಜ್ಞಾನಿ] ಅನ್ನಿಸಿಕೊಳ್ಳುವವನು. ಸದಾಚಾರ ಬಿಡುತ್ತಾನೆ. ಉಪಾಸನಾ ಮೂಲೆಗೆ ಒತ್ತುತ್ತಾನೆ. ಇಂಥವನು ಭ್ರಷ್ಟ ಮತ್ತು ಅಭಕ್ತನಂತೆ ಕಾಣುವನು. ಇಂಥ ಜನರ ಗುರುತ್ವಕ್ಕೆ ಬೆಂಕಿ ಬೀಳಲಿ ಇಂಥವರಿಗೆ ಕಿಮ್ಮತ್ತಿರುವದೇ? ಇವರನ್ನು ಯಾರು ಕೇಳುತ್ತಾರೆ? ಪರಮಾರ್ಥದಲ್ಲಿ ಯಾವನು ಗುರುತ್ವವನ್ನು ತೆಗೆದುಕೊಳ್ಳುವನೋ ಅವನು ತನ್ನ ಆಚರಣೆಗೆ ಎಷ್ಟು ಮಹತ್ವ ಕೊಡಬೇಕಾಗುವದೆಂಬುದನ್ನು ಶ್ರೀ ಸಮರ್ಥರು ಹೇಳಿದ ಈ ಮಾತುಗಳಿಂದ ಚನ್ನಾಗಿ ಧ್ಯಾನದಲ್ಲಿ ತರಬೇಕು. (೫೬) ಪರಮಾರ್ಥದಲ್ಲಿ ಕರ್ಮ ಮತ್ತು ಉಪಾಸನಾ ಇವೆರಡಕ್ಕೆ ಸ್ಥಳವಿಲ್ಲದಿದ್ದರೆ ಅಲ್ಲಿ ಭ್ರಷ್ಟಾಚಾರ ಉಂಟಾಗುವದಕ್ಕೆ ಸಹಜ ಅವಕಾಶವಿರುತ್ತದೆ. ಇಂಥ ಪರಮಾರ್ಥವು ಮರ್ಯಾದೆಗೇಡಿನದಾಗುವದು. ಪ್ರಾಪಂಚಿಕ ಜನರು ನೋಡಿ ನಗುವರು. (೫೭) ಶ್ರೀ ಸಂತ ಏಕನಾಥರು ಮತ್ತು ಶ್ರೀ ಸಮರ್ಥರುಗಳ ಕಾಲದಲ್ಲಿ ಗುರುಬಾಜಿ [ಢೋಂಗಿ ಗುರುತ್ವ] ಸಮಾಜದಲ್ಲಿ ಬಹಳ ಹೆಚ್ಚಾಗಿತ್ತು. ಸ್ವಧರ್ಮೀಯ ಮತ್ತು ಪರಧರ್ಮೀಯ ಗುರುಗಳ ಸುಳಸುಳಾಟ ಎಲ್ಲೆಂದರಲ್ಲೆಲ್ಲ ತಲೆಎತ್ತಿತ್ತು. ಮನೆತನದಲ್ಲಿಯಾವನೊಬ್ಬನು ಅಕಸ್ಮಾತ್ತಾಗಿ ಭುಲತಾಪೆಗೆ ಮರುಳಾಗಿ ಯಾವುದೋಒಂದು ಜಾತಿಯ ಗುರ ವನ್ನಾಗಿಮಾಡಿಕೊಂಡರೆಅವರಿಂದ ಮನೆಯಲ್ಲಿಯ ಉಳಿದಜನರಿಗೆ ಬಹಳತೊಂದರೆ ಯಾಗುತ್ತಿತ್ತು. ಅದರಲ್ಲಿಯೂ ಪರಧರ್ಮಿಯನಾಗಿದ್ದರಂತೂ ಮತ್ತಷ್ಟು ಅಡಚಣೆ ಅಸಮಾಧಾನಗಳು ನಿರ್ಮಾಣ ವಾಗುತ್ತಿದ್ದವು. ಈ ಪ್ರತ್ಯಕ್ಷ ಅನುಭವ ಲಕ್ಷ್ಯದಲ್ಲಿ ತೆಗೆದುಕೊಂಡು ಶ್ರೀ ಸಮರ್ಥರು ಹೇಳುವವನ್ನು ವಿಚಾರ ಪೂರ್ವಕ ಲಕ್ಷ್ಯದಲ್ಲಿಡಿರಿ:- ಕೆಳಗಿನ ಜಾತಿಯ ಗುರುವನ್ನು ಸ್ವೀಕರಿಸಿದರೆ ಅದರಿಂದ ಅಡಚಣೆಯ ಪರಿಸ್ಥಿತಿ ನಿರ್ಮಾಣ ವಾಗುವದು. ಸಂತರ ಸಭೆಯಲ್ಲಿ ಬ್ರಹ್ಮ ಸ್ವರೂಪದ ಚರ್ಚೆ ನಡೆದಾಗ ಒಬ್ಬಾನೊಬ್ಬ ಕಳ್ಳಬಂದರೆ ಅವನಿಗೆ ಹೇಗೆ ಹಿಡಿದು ಬಿಟ್ಟಂತಾಗುವದೋ (ಮುಖ ಮೇಲೆತ್ತದಂತೆ ಆಗುವದು.) ಅದೇ ರೀತಿ ಇಂಥ ಗುರುಗಳ ಶಿಷ್ಯರಿಗೆ ಸಮಾಜದಲ್ಲಿ ತಲೆಯೆತ್ತಿ ನಡೆಯದಂತೆ ಆಗುತ್ತದೆ. (೫೮)

ಬ್ರಹ್ಮಸಭೆ ದೇಖತಾ । ತ್ಯಾಚೇ ತೀರ್ಥ ನಯೇ ಘೇತಾ ।
ಅಥವಾ ಪ್ರಸಾದ ಸೇವಿತಾ । ಪ್ರಾಯಶ್ಚಿತ್ತ ಪಡೆ ॥೫೯॥

ತೀರ್ಥ ಪ್ರಸಾದಾಚೀ ಸಾಂಡೀ ಕೇಲೀ । ತೇಥೇ ನೀಚತಾ ದಿಸೋನ ಆಲೀ ।
ಗುರುಭಕ್ತಿ ತೆ ಸಟವಲೀ । ಯೇಕಾಯೇಕೀ ॥೬೦॥

ಗುರೂಚೀ ಮರ್ಯಾದಾ ರಾಖತಾ । ಬ್ರಾಹ್ಮಣ ಕ್ಷೋಭತೀ ತತ್ವತಾ ।
ತೇಥೇ ಬ್ರಾಹ್ಮಣ್ಯ ರಕ್ಷೂ ಜಾತಾ । ಗುರೂಕ್ಷೋಭ ಘಡೆ ॥೬೧॥

ಐಸೀ ಸಾಂಕಡೀ ದೋಹೀಕಡೆ । ತೇಥೇ ಪ್ರಸ್ತಾವಾ ಘಡೆ ।
ನೀಚಯಾತೀಸ ಗುರುತ್ವ ನ ಘಡೆ । ಯಾ ಕಾರಣೇ ॥೬೨॥

ತಥಾಪಿ ಆವಡೀ ಘೇತಲೀ ಜೀವೇ। ತರೀ ಆಪಣ ಚಿ ಭ್ರಷ್ಟಾವೇ ।
ಬಹುತ ಜನಾಸೀ ಭ್ರಷ್ಟವಾವೇ । ಹೇ ತೋ ದೂಷಣ ಚಿ ಕೀ ॥೬೩॥

ಆತಾ ಅಸೋ ಹಾ ವಿಚಾರು । ಸ್ವಯಾತೀಚಾ ಪಾಹಿಜೆ ಗುರು ।
ನಾಹೀ ತರೀ ಭ್ರಷ್ಟಾಕಾರು । ನೇಮಸ್ತ ಘಡೆ ॥೬೪॥

ಜೇ ಜೇ ಕಾಹೀ ಉತ್ತಮ ಗುಣ । ತೇ ತೇ ಸದ್ಗುರುಚೇ ಲಕ್ಷಣ ।
ತಥಾಪಿ ಸಾಂಗೋ ವೋಳಖಣ । ಹೋಯೆ ಜೇಣೇ ॥೬೫॥

ಯೇಕ ಗುರು ಯೇಕ ಮಂತ್ರಗುರು।ಯೇಕ ಯಂತ್ರಗುರು ಯೇಕ ತಾಂತ್ರಗುರು।
ಯೇಕ ವಸ್ತಾದಗುರು ಯೇಕ ರಾಜಗುರು । ಮ್ಹಣತೀ ಜನೀ ॥೬೬॥

ಯೇಕ ಕುಳಗುರು ಯೇಕ ಮಾನಿಲಾಗುರು ।
ಯೇಕ ವಿದ್ಯಾಗುರು ಯೇಕ ಕುವಿದ್ಯಾಗುರು ।
ಯೇಕ ಅಸದ್ಗುರು ಯೇಕ ಯಾತಿಗುರು । ದಂಡಕರ್ತೇ ॥೬೭॥

ಯೇಕ ಮಾತಾಗುರು ಯೇಕ ಪಿತಾಗುರು ।
ಯೇಕ ರಾಜಾಗುರು ಯೇಕ ದೇವಗುರು ।
ಯೇಕ ಬೋಲಿಜೆ ಜಗದ್ಗುರು । ಸಕಳ ಕಳಾ ॥೬೮॥

ಐಸೆ ಹೇ ಸತ್ರಾಗುರು । ಯಾಹಿ ವೇಗಳೆ ಆಣೇಕ ಗುರು ।
ಐಕ ತಯಾಚಾ ವಿಚಾರು । ಸಾಂಗಿಜೇಲ ॥೬೯॥

ಯೇಕ ಸ್ವಪ್ನಗುರು ಯೇಕ ದೀಕ್ಷಾಗುರು । ಯೇಕ ಮ್ಹಣತೀ ಪ್ರತಿಮಾಗುರು ।
ಯೇಕ ಮ್ಹಣತೀ ಸ್ವಯೇಗುರು । ಆಪಲಾ ಆಪಣ ॥೭೦॥

ಜನರ ಸಮಕ್ಷಮದಲ್ಲಿ ಗುರುವಿನ ಚರಣ ತೀರ್ಥ ತೆಗೆದುಕೊಳ್ಳಲಿಕ್ಕೆ ಆಗುವದಿಲ್ಲ. ಅಥವಾ ಗುರುವಿನ ಪ್ರಸಾದ ತಿಂದರೆ ಪ್ರಾಯಶ್ಚಿತ್ತ ಹೊಂದಬೇಕಾಗುವದು. [೫೯] ಇರಲಿ ಗುರುವಿನ ತೀರ್ಥ ಪ್ರಸಾದ ತೆಗೆದುಕೊಳ್ಳದೆ ಇದ್ದರೆ ಅಥವಾ ಚಲ್ಲಿಬಿಟ್ಟರೆ ಶಿಷ್ಯನಿಗೆ ನೀಚತ್ವ ಬರುವದು. ತತ್ಪರಿಣಾಮವಾಗಿ ಒಮ್ಮೆಲೇ ಗುರುಭಕ್ತಿ ನಾಶವಾಗುವದು. [೬೦] ಗುರುವಿನ ಮರ್ಯಾದೆ ಉಳಿಸುವ ಪ್ರಯತ್ನ ಮಾಡಿದರೆ ಬ್ರಾಹ್ಮಣರು ಸಿಟ್ಟಿಗೇಳುವರು, ತನ್ನ ಬ್ರಾಹ್ಮಣತನ ಉಳಿಸಿಕೊಳ್ಳುವ ಪ್ರಯತ್ನ ಮಾಡಿದರೆ ಗುರುವಿನ ಮನ ದುಃಖಿತಗೊಳಿಸಿದಂತಾಗುವದು. ಮತ್ತು ಅವನ ಅವಕೃಪೆಗೆ ಪಾತ್ರರಾಗುವರು.[ಏಕೆಂದರೆ ಗುರುವಿಗೆ ಕೋಪ ಬರುತ್ತದೆ].[೬೧] ಕೆಳಗಿನ ಜಾತಿಯ ಗುರುವನ್ನು ಮಾಡಿಕೊಂಡರೆ ಈ ದುಹೇರಿ [ಎರಡೂ ಕಡೆಯಿಂದ] ಅಡಚಣಿ ಉಂಟಾಗುವದು. ಹಾಗೂ ಪಶ್ಚಾತ್ತಾಪ ಪಡುವ ಪ್ರಸಂಗ ಬರುವದು. ಅಂತೆಯೇ ಕೆಳಜಾತಿಯವರಿಗೆ ಅಂದರೆ ಕೆಳಜಾತಿಯ ಗುರುವಿಗೆ ಮೇಲಿನ ಜಾತಿಯವರು ಗುರುತ್ವ ಹೊಂದುವ ಅಧಿಕಾರವಿರುವದಿಲ್ಲ. [೬೨] ಇದೆಲ್ಲ ನಿಜವಿದ್ದರೂ ಸಹ ಯಾರಾದರೊಬ್ಬರಿಗೆ ಕೆಳವರ್ಗದ ಗುರುವಿನಲ್ಲಿ ಪ್ರೇಮ ಉಂಟಾಗಿ ಗುರುಸ್ವೀಕಾರ ಮಾಡಿ ತಾನೊಬ್ಬನೇ ಭ್ರಷ್ಟನಾಗಬೇಕು, ತನ್ನ ಜೊತೆಗೆ ಇತರ ಜನರನ್ನೂ ಭ್ರಷ್ಟಗೊಳಿಸಲಿಕ್ಕೆ ಹೋಗಬಾರದು, ಹೀಗೆ ಮಾಡುವದು ಬಹಳ ಅಯೋಗ್ಯವಾದದ್ದು. [೬೩] ಈ ಜಾತಿಯ ಗುರುಗಳ ವಿವೇಚನೆ ಇಲ್ಲಿಗೆ ಸಾಕು ಮಾಡೋಣ. ಒಟ್ಟಿನಲ್ಲಿ ಹೇಳುವದಿಷ್ಟೇ ಗುರು ನಿಮ್ಮ ಜಾತಿಯವ ನಿರಬೇಕು. ಇಲ್ಲದಿದ್ದರೆ ಖಾತ್ರಿಯಿಂದ ಭ್ರಷ್ಟಾಚಾರ ಘಟಿಸುವದು. ಶ್ರೀ ಸಮರ್ಥರ ಕಾಲದಲ್ಲಿ ಇತ್ತ ಮಹಾರಾಷ್ಟ್ರ ಅತ್ತ ಉತ್ತರ ಹಿಂದುಸ್ಥಾನದಲ್ಲಿಯ ಕುಲೀನ ಹಿಂದೂ ಮನೆತನದಲ್ಲಿಯ ಬಹಳಷ್ಟು ಪುರುಷರು ಮುಸಲ್ಮಾನ ಫಕೀರರ ಶಿಷ್ಯರಾಗುತ್ತಿದ್ದರು. ಅನಂತರ ಕೆಲದಿನಗಳ ಮೇಲೆ ಯಾವತ್ತೂ ಕುಟುಂಬ ಪರಧರ್ಮದಲ್ಲಿ ಹೋಗಿ ಬಿಡುತ್ತಿತ್ತು. ಈ ಅನವಸ್ಥೆಯನ್ನು ತಪ್ಪಿಸುವದಕ್ಕಾಗಿಶ್ರೀ ಸಮರ್ಥರು ಮೇಲೆ ಹೇಳಿದಸೀಮೆಯನ್ನು [ಮರ್ಯಾದ] ತಿಳಿಸಿದ್ದಾರೆ. [೬೪] ವಾಸ್ತವಿಕದಲ್ಲಿ ಯಾವಯಾವುದು ಉತ್ತಮವಿರುವದೋ ಅದು ಭಗವಂತನಿಗೆ ಪೋಷಕವಿರುವದು. ಅಲ್ಲಿ ಸದ್ಗುರುವಿನ ಅಧಿಷ್ಠಾನ [ನೆಲೆ, ತಳಹದಿ]ಇರುವದು. ಆದರೂ ಸಹ ಸಮಾಜದಲ್ಲಿ ಅನೇಕ ಪ್ರಕಾರದ ಗುರುಗಳು ಪ್ರಚಲಿತವಿರುತ್ತಾರೆ. ಆದರೆ ಅವರೆಲ್ಲರೂ ಸದ್ಗುರುವೆನಿಸುವದಿಲ್ಲ. ಕೇವಲ ಮೋಕ್ಷ ಕೊಡುವಂಥ ಗುರುವೇ ಮಾತ್ರ ಸದ್ಗುರುವೆನಿಸುತ್ತಾನೆ. ಎಲ್ಲ ಪ್ರಕಾರದ ಉತ್ತಮ ಗುಣಗಳೂ ಸದ್ಗುರುವಿನ ಲಕ್ಷಣಗಳೆಂದು ತಿಳಿಯಲಡ್ಡಿ ಇಲ್ಲ. ಈ ಮಾತು ನಿಜವಿದ್ದರೂ ಸಹ ಸದ್ಗುರುವಿನ ಸರಿಯಾದ ಲಕ್ಷಣ ತಿಳಿಯಬೇಕಾದರೆ ಇತರ ಗುರುಗಳ ಬಗ್ಗೆ ಮಾಹಿತಿ ಹೇಳುವದು ಅವಶ್ಯವೆನಿಸುವದು. [೬೫] ಒಬ್ಬ ಸುಮ್ಮನೆ ಗುರು [ಕೇವಲ ಭಕ್ತ] ಒಬ್ಬ ಮಂತ್ರಗುರು, ಒಬ್ಬ ಯಂತ್ರಗುರು, ಒಬ್ಬ ತಂತ್ರಗುರು, ಒಬ್ಬ ವ್ಯಾಯಾಮ ಗುರು, ಒಬ್ಬ ರಾಜಗುರು, ಅಂದರೆ [ರಾಜ ಪುರೋಹಿತ] [೬೬] ಒಬ್ಬ ಕುಲಗುರು, ಒಬ್ಬ ಮನಸ್ಸಿನಿಂದ ಒಪ್ಪಿದ ಗುರು ಇರುವನು. ಒಬ್ಬ ವಿದ್ಯಾಗುರು, ಇನ್ನೊಬ್ಬ ಅವಿದ್ಯಾಗುರು, ಅಂದರೆ ಕೆಟ್ಟ ವಿದ್ಯೆ ತಿಳಿಸುವಂಥ ಗುರು, ಒಬ್ಬ ಸದ್ಗುರು ವೇಷದ ಅಸದ್ಗುರು[ಖೊಟ್ಟಾಗುರು], ಒಬ್ಬ ದಂಡ ಮಾಡುವ ಅಧಿಕಾರದ ಜಾತಿ ಗುರು ಇರುವನು. [೬೭] ಒಬ್ಬ ತಾಯಿ ಗುರು, ಒಬ್ಬ ತಂದೆ ಗುರು, ರಾಜನೇ ಗುರು ಅಥವಾ ರಾಜನಗುರು, ಒಬ್ಬ ದೇವನ ಗುರು, ಸಕಲಕಲಾ ಪ್ರವೀಣ ನಿರುವವನೂ ಒಬ್ಬ ಗುರು, ಇವನಿಗೆ ಜಗದ್ಗುರು ಅನ್ನುತ್ತಾರೆ. [೬೮] ಈ ಪ್ರಕಾರವಾಗಿ ಇರುವ ಹದಿನೇಳು ಗುರುವಿನ ಹೆಸರು ಹೇಳಿದೆವು. ಇದರ ಹೊರತಾಗಿ ಇರುವ ಕೆಲವು ಗುರುಗಳ ವರ್ಣನೆ ಕೇಳಿರಿ. [೬೯] ಒಬ್ಬ ಸ್ವಪ್ನ [ಕನಸಿನಲ್ಲಿಯ] ಗುರು ಒಬ್ಬ ದೀಕ್ಷಾಗುರು ಇರುವನು. ಕೆಲವರು ದೇವರ ಪ್ರತಿಮೆಗೆ ಗುರು ಎಂದು ಅನ್ನುವರು. ಒಬ್ಬನು ತನಗೆ ತಾನೇ ಗುರುವೆಂದೂ ಸಹ ಅನ್ನುತ್ತಾನೆ. [೭೦]

ಜೇ ಜೇ ಯಾತೀಚಾ ಜೋ ವ್ಯಾಪಾರು । ತೇ ತೇ ತ್ಯಾಚೆ ತಿತುಕೆ ಗುರು ।
ಯಾಚಾ ಪಾಹಾತಾ ವಿಚಾರು । ಉದಂಡ ಆಹೇ ॥೭೦॥
ಅಸೋ ಐಸೆ ಉದಂಡಗುರೂ । ನಾನಾ ಮತಾಚಾ ವಿಚಾರು ।
ಪರೀ ಜೋ ಮೋಕ್ಷದಾತಾ ಸದ್ಗುರು । ತೋ ವೇಗಳಾಚಿ ಅಸೆ ॥೭೨॥
ನಾನಾ ಸದ್ವಿದ್ಯೇಚೆ ಗುಣ । ಯಾಹಿವರೀ ಕೃಪಾಳೂಪಣ ।
ಹೇ ಸದ್ಗುರೂಚೇ ಲಕ್ಷಣ । ಜಾಣಿಜೆ ಶ್ರೋತೀ ॥೭೩॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಗುರು ಲಕ್ಷಣ' ನಾಮ ಸಮಾಸ ದ್ವಿತೀಯ ॥

● ●

ಇದಲ್ಲದೆ, ಎಷ್ಟು ಜಾತಿಮತಗಳಿರುವವೋ ಆಯಾ ಜಾತಿಯ ಉದ್ಯೋಗ [ಧಂದೆ]ಗಳನ್ನು ಕಲಿಸುವವರೆಲ್ಲರೂ ಅವರವರಿಗೆ ಗುರುಗಳೇ ಆಗಿರುತ್ತಾರೆ. ಈ ಬಗ್ಗೆ ವಿಚಾರ ಮಾಡಿ ನೋಡಿದರೆ ಅದರ ಲೆಕ್ಕ ಹೇಳಲು ಸಾಧ್ಯವೇ ಇಲ್ಲ. [೭೦] ಈ ಪ್ರಕಾರ ಗುರುವಿನ ಸಂಖ್ಯೆ ಬಹಳ ದೊಡ್ಡದಿರುವದು, ಇವುಗಳಲ್ಲಿಯೂ ಪ್ರತಿಗುರುವಿನ ಮತ ಬೇರೆ ಬೇರೆ ಇರುತ್ತದೆ. ಒಮ್ಮತ ಇರಲಿಕ್ಕೆ ಸಾಧ್ಯವೇ ಇಲ್ಲ. ಪರಂತು ಈ ಎಲ್ಲದಕ್ಕಿಂತ ಮೋಕ್ಷ ಕೊಡುವ ಸದ್ಗುರು ಮಾತ್ರ ಬೇರೆ ಇರುವನು. [೭೨] ಆತ್ಮಜ್ಞಾನದಿಂದ ಸ್ವಾಭಾವಿಕವಾಗಿ ದೇಹದಲ್ಲಿ ಬರತಕ್ಕ ಅನೇಕ ಗುಣ ಮತ್ತು ಇದಕ್ಕಿಂತ ಹೆಚ್ಚಾಗಿ ಅಜ್ಞಾನಿ ಜೀವದ ಬಗ್ಗೆ ಅತ್ಯಂತ ದಯೆ ಇರುವದೇ ಶ್ರೀ ಸದ್ಗುರುವಿನ ಮುಖ್ಯ ಲಕ್ಷಣವಿರುತ್ತದೆಂದು ಶ್ರೋತೃಗಳು ತಿಳಿದುಕೊಳ್ಳಬೇಕು. [೭೩]

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದ ಐದನೆಯ ದಶಕದಲ್ಲಿಯ
"ಸದ್ಗುರು ಲಕ್ಷಣ"ವೆಂಬ ಎರಡನೆಯ ಸಮಾಸವು ಮುಗಿದುದು.

● ●

## ದಶಕ ೫. ಸಮಾಸ ೩. ಶಿಷ್ಯ ಲಕ್ಷಣ (ನುಡಿ ೧೦೪)

ಮನುಷ್ಯ ನಿಜವಾಗಿಯೂ ಜ್ಞಾತಾ (ತಿಳಿಯಬೇಕೆಂದೆನ್ನುವವ, ತಿಳಿದುಕೊಳ್ಳುಕೊಳ್ಳುವವ, ತಿಳುವಳಿಕೆಯುಳ್ಳವನೇ) ಇರುವನು. ಸರ್ವ ಪ್ರಕಾರದ ಜ್ಞಾನ ಸಂಪಾದಿಸಿಕೊಳ್ಳುವ ಸಾಮರ್ಥ್ಯ ಇವನಲ್ಲಿ ಇರುವದು ಸಹಜವು. ಹೀಗಿದ್ದಾಗ್ಯೂ ಯಾವತ್ತೂ ಮಾನವರಿಗೆ ಆತ್ಮಜ್ಞಾನವಾಗುವದಿಲ್ಲವಲ್ಲಾ, ಏಕೆ? ಇದರ ಕಾರಣವು ಹೀಗಿದೆ. ಆತ್ಮಜ್ಞಾನವಾಗುವದಕ್ಕೆ ಇರಬೇಕಾದ ಕ್ಷಮತಾ [ಯೋಗ್ಯತೆ] ಸಾಮರ್ಥ್ಯ ಅಥವಾ ಶಕ್ತಿಯು ಪ್ರತಿಯೊಬ್ಬರ ಅಂತರ್ಯಾಮದಲ್ಲಿ ಇದ್ದೇ ಇರುವದು. ಆದರೆ ಬಹಳ ಕಡಿಮೆ ಜನರು ಇದರ ವಿಕಾಸ ಮಾಡಿಕೊಳ್ಳುವರು. ನಿತ್ಯದ ವ್ಯವಹಾರದಲ್ಲಿ ಎಲ್ಲವೂ ದೃಶ್ಯದ [ಅಶಾಶ್ವತ, ನಾಶವಾಗುವಂಥ] ಬಾಜಾರವೇ ಇರುವದು. ಅಲ್ಲಿ ಸಹ ಎಲ್ಲ ವಿದ್ಯಾರ್ಥಿಗಳಿಗೆ ಸರ್ವ ತರಹದ ಜ್ಞಾನವಾಗಲು ಸಾಧ್ಯವಾಗುವದಿಲ್ಲ. ಯಾಕೆಂದರೆ ಪ್ರತಿಯೊಂದು ಜ್ಞಾನ ಶಾಖೆಯಲ್ಲಿಯೂ ಪ್ರಗತಿ ಹೊಂದಬೇಕಾದರೆ ಆ ವಿದ್ಯಾರ್ಥಿಯಲ್ಲಿ ವಿಶೇಷಕ್ಷಮತೆ[ಯೋಗ್ಯತೆ] ಇರುವದು ಅವಶ್ಯವು. ಇದೇ ನಿಯಮವು ಆತ್ಮಜ್ಞಾನದ ಬಗ್ಗೆ ಸಹ ಇರುವದು. ಆತ್ಮಜ್ಞಾನ ಪ್ರಾಪ್ತಿಯಾಗಬೇಕಾದರೆ, ಜ್ಞಾನ ಪಡೆಯುವವನಲ್ಲಿ ಕೆಲವೊಂದು ಗುಣಗಳು ಅವಶ್ಯ ಇರಬೇಕಾಗುತ್ತದೆ. ಯಾವನಲ್ಲಿ ಈಗುಣ[ಯೋಗ್ಯತೆ]

ಇರುವದಿಲ್ಲವೋ ಅವನು ಸತತ ಅಭ್ಯಾಸ ಮಾಡಿ ಆ ಜ್ಞಾನವನ್ನು ಪಡೆಯಬೇಕಾಗುತ್ತದೆ.ಮುಂಡಕೋಪನಿಷತ್ತಿನಲ್ಲಿ ಈ ವಿಷಯದ ಬಗ್ಗೆ ಮೂರು ಮಂತ್ರಗಳು ಹೇಳಲ್ಪಟ್ಟಿವೆ. ಇವು ಅತಿ ಸುರೇಖ ಹಾಗೂ ಸ್ಪಷ್ಟ ರೀತಿಯಲ್ಲಿ ಇರುವವು. (ಮೊದಲ ಮಂತ್ರ) "ನಾಯಮಾತ್ಮಾ ಪ್ರವಚನೇನ ಲಭ್ಯಃ ನಮೇಧಯಾ ನ ಬಹುನಾ ಶ್ರುತೇನ" ಅರ್ಥಃ– ಈ ಆತ್ಮನು ಕೇವಲ ನಿರೂಪಣದಿಂದ, ಕುಶಾಗ್ರ ಬುದ್ಧಿಯ ಸಹಾಯದಿಂದ ಅಥವಾ ಬಹಳಷ್ಟು ಶ್ರವಣದಿಂದ ಪ್ರಾಪ್ತನಾಗುವದಿಲ್ಲ. [ಎರಡನೆಯ ಮಂತ್ರ] "ನಾಯಮಾತ್ಮಾ ಬಲಹೀನೇ ನ ಲಭ್ಯಃ" ಅರ್ಥ:– ಆತ್ಮಜ್ಞಾನದ ಸಾಧನ ಮಾಡುವದಕ್ಕೆ ಬೇಕಾಗುವ ದೃಢತೆ ದೀರ್ಘ ಪ್ರಯತ್ನ ಮತ್ತು ನಿಶ್ಚಯದ ಬಲ ಇವು ಯಾರಲ್ಲಿ ಇಲ್ಲವೋ ಅಂಥವರಿಗೆ ಆತ್ಮನು ಪ್ರಾಪ್ತವಾಗುವದಿಲ್ಲ. (ಮೂರನೆಯ ಮಂತ್ರ) "ಸತ್ಯೇನ ಲಭ್ಯಃ ತಪಸಾಹ್ಯೇಷ ಆತ್ಮಾ ಸಮ್ಯಗ್ ಜ್ಞಾನೇನ ಬ್ರಹ್ಮಚರ್ಯೇಣ ನಿತ್ಯಮ್।" ಅರ್ಥ:– ಈ ಆತ್ಮನು ಸತ್ಯದಿಂದ ತಪಾಚರಣೆಯಿಂದ ಯಥಾರ್ಥ ಅಥವಾ ನಿಜವಾದ ಜ್ಞಾನದಿಂದ ಮತ್ತು ನಿರಂತರ ಮಾಡುವ ಬ್ರಹ್ಮಚರ್ಯಾದಿ ಸಾಧನದಿಂದ ಪ್ರಾಪ್ತವಾಗುವನು. ಮನುಷ್ಯನಲ್ಲಿ ಅತೀಂದ್ರಿಯ [ಸೂಕ್ಷ್ಮವಾದ, ಇಂದ್ರಿಯಗಳಿಗೆ ಗೋಚರವಾಗದ] ವಸ್ತುವಿನ ಜ್ಞಾನ ಮಾಡಿಕೊಡುವ ಕೌಶಲ್ಯದ ಯುಕ್ತಿ [ಬುದ್ಧಿ ಚಾತುರ್ಯ] ಇದೆ. ಸಾಮಾನ್ಯ ಜನರಲ್ಲಿ ಇದು ಜೀವನ ಪರ್ಯಂತರ (ಆಜನ್ಮ) ಸುಪ್ತ [ಗೂಢ, ಗುಪ್ತ] ಇರುತ್ತದೆ. ಆತ್ಮವು ಅತೀಂದ್ರಿಯ ವಸ್ತು ಇರುವದರಿಂದ ಆತ್ಮಜ್ಞಾನವಾಗುವದಕ್ಕೆ ಈ ಕೌಶಲ್ಯ ಯುಕ್ತಿ ಉದಯವಾಗುವದು ಅತಿ ಅವಶ್ಯವಿರುವದು. ಸದ್ಗುರುವಿನ ಹತ್ತಿರ ಈ ಜ್ಞಾನ ಕಲೆಯು ಬಹಳಷ್ಟು ವೃದ್ಧಿಸಿರುತ್ತದೆ. ಸಂಪೂರ್ಣ ಅಧಿಕಗೊಂಡಿರುವದು. ಅಂತೆಯೇ ಅವನ ಮಾರ್ಗ ದರ್ಶನದಲ್ಲಿ ಆತ್ಮಜ್ಞಾನ ಹೊಂದುವದಕ್ಕಾಗಿ ಶಿಷ್ಯನು ಏಕಾಗ್ರಚಿತ್ತದಿಂದ ಅಭ್ಯಾಸ ಮಾಡಬೇಕೆಂದು ಸಂತರು ಶರಣರು ಮತ್ತು ಸ್ವಾನುಭವೀ ಮಹಾತ್ಮರು ಹೇಳುತ್ತಾರೆ. ಉದಾಹರಣಾರ್ಥ:–ಒಬ್ಬಾನೊಬ್ಬನು ತನ್ನ ಕಣ್ಣಿನ ಸಹಾಯದಿಂದ ಸ್ವತಃ ಎಷ್ಟೇ ಪ್ರಯತ್ನಿಸಿದರೂ ಗುರುವಿನ ಸುತ್ತ ಮುತ್ತ ತಿರುಗವಚಂದ್ರನು ಅವನಿಗೆ ಕಾಣುವದಿಲ್ಲ. ಆದರೆ ಒಬ್ಬ ಖಗೋಲ ಜ್ಯೋತಿಷಿಯು ಅತಿ ಶಕ್ತಿಮಾನ್ ದುರ್ಬೀನಿನಿಂದ ಆಕಾಶದಲ್ಲಿಯ ತಾರೆಗಳನ್ನು ನೋಡುವ ಕಲೆಯನ್ನು ಕಲಿಸಿದರೆ ಆಗ ಗುರು, ಚಂದ್ರರು ಕಾಣುತ್ತಾರೆ. ಇದರ ಜೊತೆಗೆ ಎಷ್ಟೋ ವಿಲಕ್ಷಣ ದೃಶ್ಯಗಳು ಆಕಾಶದಲ್ಲಿ ಸ್ವಚ್ಛವಾಗಿ ಕಾಣಸುವವು. ಇದೇ ಪ್ರಕಾರ [ತದ್ವತ್] ಸದ್ಗುರುವಿನ ಮಾರ್ಗದರ್ಶನದಲ್ಲಿ ಒಬ್ಬನು ತನ್ನ ದೇಹಕ್ಕೆ, ಇಂದ್ರಿಯಗಳಿಗೆ, ಮನಸ್ಸಿಗೆ,ಬುದ್ಧಿಗೆ, ವಿಶಿಷ್ಟ ಪ್ರಕಾರದ ಶಿಸ್ತು ಹಚ್ಚಿದರೆ ಮಾತ್ರ ಅವನ ಜೀವವು ಅತ್ಯಂತ ಸೂಕ್ಷ ಮತ್ತು ವ್ಯಾಪಕವಾಗುತ್ತದೆ. ಇದರಿಂದ ಅವನ ಸುಪ್ತಜ್ಞಾನ ಕಲೆಯು ಅಂದರೆ ಪ್ರತಿಭಾ[ಕೌಶಲ್ಯ] ಜಾಗೃತವಾಗುವದು. ಮತ್ತು ಅತೀಂದ್ರಿಯ [ಸೂಕ್ಷ್ಮವಾದ] ಸೃಷ್ಟಿಯಲ್ಲಿ ಅನಿರ್ಬಂಧ ಸಂಚಾರ ಮಾಡಲು ಶಕ್ಯವಾಗುವದು. ಕೊನೆಯಲ್ಲಿ ಆ ಪರಮಾತ್ಮ ವಸ್ತುವು ಸಾಕ್ಷಾತ್ತಾಗಿ ಮುಂದೆ ಬರುವದು. ಇದಕ್ಕೆ ಆತ್ಮ ಸಾಕ್ಷಾತ್ಕಾರವೆನ್ನುವರು. ಶಿಷ್ಯ ಲಕ್ಷಣಗಳೆಲ್ಲ ಒಂದೇ ಕಡೆಗೆ ಕೂಡಿದಾಗ ಈ ಗುರುತು ಪ್ರತ್ಯಕ್ಷದಲ್ಲಿ ಕಾಣುವದು. ಯಾವತ್ತೂ ಲಕ್ಷಣಗಳ ಪೈಕಿ [ಒಂದು] ದೃಶ್ಯದ ಬಗ್ಗೆ ಸಂಪೂರ್ಣ ಅನಾಸಕ್ತಿ [ಎರಡು] ಮನಸ್ಸಿನ ನಿಜವಾದ ದೊಡ್ಡಿಸ್ತನ ಅಥವಾ ಉದಾರತನ [ಮೂರು] ಸರ್ವಭಾವದಿಂದ ಸ್ವಾಭಾವಿಕವಾದಅತಿಲೀನತೆ [ನಮ್ರತೆ] [ನಾಲ್ಕು] ಸದ್ಗುರುವಿನ ಮೇಲೆ ನಿರ್ವ್ಯಾಜ್ಯ ಮತ್ತು ನಿಶ್ಚಲ ನಿಷ್ಠೆ [ಐದು] ಸಾಧನದಲ್ಲಿ ಸತತ ನಿಮಗ್ನತೆ ಮತ್ತು ಸಜ್ಜನರ ಸಂಗತಿ ಈ ಐದು ಪಂಚಪ್ರಾಣಗಳಂತೆ ಎಂದು ತಿಳಿಯಿರಿ.[ಸಾಧಕರು ಅವಶ್ಯ ತಿಳಿಯಬೇಕಾದುದು ಇಷ್ಟಿರುವದು.]

## ಸಮಾಸ ತೃತೀಯ : ಶಿಷ್ಯ ಲಕ್ಷಣ

॥ಶ್ರೀರಾಮ॥ ಮಾಗಾ ಸದ್‌ಗುರೂಚೇ ಲಕ್ಷಣ। ವಿಶದ ಕೇಲೇ ನಿರೂಪಣ।
ಆತಾ ಸಚ್ಛಿಷ್ಯಾಚೀ ವೋಳಖಣ। ಸಾವಧ ಏಕಾ ॥೧॥

ಸದ್‌ಗುರುವಿಣ ಸಚ್ಛಿಷ್ಯ। ತೋ ವಾಯಾ ಜಾಯ ನಿಶೇಷ।
ಕಾ ಸಚ್ಛಿಷ್ಯೇವಿಣ ವಿಶೇಷ। ಸದ್‌ಗುರು ಸಿಣೆ ॥೨॥

ಉತ್ತಮ ಭೂಮಿ ಶೋಧಿಲೀಶುದ್ಧ। ತೇಥೇ ಬೀಜ ಪೇರಿಲೆ ಕಿಡಖಾದ।
ಕಾ ತೇ ಉತ್ತಮ ಬೀಜ ಪರೀ ಸಮಂಧ। ಖಡಕೇಂಸೀ ಪಡಿಲಾ ॥೩॥

ತೈಸಾ ಸಚ್ಛಿಷ್ಯ ತೇ ಸತ್ಪಾತ್ರ। ಪರಂತು ಗುರು ಸಾಂಗೇ ಮಂತ್ರ ತಂತ್ರ।
ತೇಥೇ ಅರತ್ರ ನಾ ಪರತ್ರ। ಕಾಹೀ ಚ ನಾಹೀ ॥೪॥

ಅಥವಾ ಗುರು ಪೂರ್ಣ ಕೃಪಾ ಕರೀ। ಪರೀ ಶಿಷ್ಯ ಅನಾಧಿಕಾರೀ।
ಭಾಗ್ಯಪುರುಷಾಚಾ ಭಿಕಾರೀ। ಪುತ್ರ ಜೈಸಾ ॥೫॥

ತೈಸೇ ಯೇಕಾವಿಣ ಯೇಕ। ಹೋತ ಅಸೆ ನಿರಾರ್ಥಕ।
ಪರಲೋಕೀಚೇ ಸಾರ್ಥಕ। ತೇ ದುರ್ಾವೇ ॥೬॥

ಮ್ಹಣೌನಿ ಸದ್‌ಗುರು ಆಣೀ ಸಚ್ಛಿಷ್ಯ। ತೇಥೇ ನ ಲಗತೀ ಸಾಯಾಸ।
ತ್ಯಾ ಉಭಯತಾಂಚಾ ಹವ್ಯಾಸ। ಪುರೆ ಯೆಕಸರಾ ॥೭॥

ಸುಭೂಮಿ ಆಣೀ ಉತ್ತಮ ಕಣ। ಉಗವೇನಾ ಪ್ರಜನ್ಯೇವಿಣ।
ತೈಸೇ ಅಧ್ಯಾತ್ಮ ನಿರೂಪಣ। ನಸ್ತಾ ಹೋಯೆ ॥೮॥

## ದಶಕ ೫. ಸಮಾಸ ೩. ಶಿಷ್ಯ ಲಕ್ಷಣ (ನುಡಿ ೧೦೪)

ಈ ಸಮಾಸದ ಆರಂಭದಲ್ಲಿಯೇ ಶ್ರೀ ಸಮರ್ಥರು ಪರಮಾರ್ಥ ಜೀವನದಲ್ಲಿಯ ಒಂದು ಅತಿ ಮಹತ್ವದ ಪ್ರಮಾಣ [ಮುದ್ದೆ]ವನ್ನು ಹೇಳಿದ್ದಾರೆ. ಸದ್ಗುರು ಮತ್ತು ಸಚ್ಛಿಷ್ಯ [ಸತ್‌ಶಿಷ್ಯ] ಇವರಿಬ್ಬರೂ ಒಂದೇ ಸಂಬಂಧದ [ವಿಷಯದ] ಎರಡು ತುದಿಗಳಾಗಿವೆ. ಸತ್ ಅಂದರೆ ಚೆನ್ನಾದ,–ಒಳ್ಳೆ–ಉತ್ತಮ,ಯೋಗ್ಯ. ಇದರಂತೆ ಗುರುವು ಸತ್‌ಗುರು ಇರಬೇಕು. ಇದರಂತೆ ಶಿಷ್ಯನೂ ಸಹ ಸತ್‌ಶಿಷ್ಯನೇ ಇರಬೇಕು. ಇಂಥ ಜೋಡಿ ಪೂರ್ವ ಪುಣ್ಯದ ಭಾಗ್ಯದಿಂದ ಒದಗಿ ಬರುತ್ತದೆ. ಇದು ಹೊಂದಿದರೆ ಪರಮಾರ್ಥಕ್ಕೆ ಕಳೆ ಬರುತ್ತದೆ. [ಉಕ್ಕೇರುತ್ತದೆ]. ಶ್ರೀ ಏಕನಾಥರಿಗೆ ಜನಾರ್ದನ ಸ್ವಾಮಿಗಳನ್ನು ನೋಡಿದ ಕೂಡಲೇ ನಾನು ಧನ್ಯನೆಂದು ಅನಿಸಿತು. ಶ್ರೀ ಸಮರ್ಥರಿಗೆ ಕಲ್ಯಾಣಸ್ವಾಮಿ [ಅಂಬಾಜಿ]ಯನ್ನು ನೋಡಿದ ಕೂಡಲೇ ನಾನು ಧನ್ಯನಾದೆನೆಂದು ಅನಿಸಿತು. ಹೆಚ್ಚಾಗಿ ಸದ್ಗುರುವಿನಕ್ಕಿಂತ ಸತ್‌ಶಿಷ್ಯ ಸಿಗುವದೇ ಕಷ್ಟಕ್ಕೆ ಕಾರಣವಾಗಿದೆ. ಇದು ಅಧ್ಯಾತ್ಮ ಜೀವನದೊಳಗಿನ ದುಃಖದ ಸಂಗತಿಯಾಗಿದೆ.

ಹಿಂದಿನ ಸಮಾಸದಲ್ಲಿ ಸದ್ಗುರುವಿನ ಲಕ್ಷಣಗಳನ್ನು ಸ್ಪಷ್ಟವಾಗಿ ವರ್ಣನೆ ಮಾಡಿದ್ದಾಗಿದೆ. ಇನ್ನು ಸತ್‌ಶಿಷ್ಯನ ಗುರುತನ್ನು ಹೇಳುವೆನು ಲಕ್ಷಗೊಟ್ಟು ಕೇಳಿರಿ. [೧] ಸತ್‌ಶಿಷ್ಯನಿಗೆ ಸದ್ಗುರುವಿನ ಭೆಟ್ಟಿಯಾಗದಿದ್ದರೆ ಅವನ ಜೀವನ ಸಂಪೂರ್ಣ ವ್ಯರ್ಥವೆನಿಸುವದು. ಸದ್ಗುರುವಿಗೆ ಸತ್‌ಶಿಷ್ಯನ ಭೆಟ್ಟಿಯಾಗದಿದ್ದರೆ ಸದ್ಗುರುವಿಗೆ ಬಹಳ ಶ್ರಮವಾಗುವದು, ಚಿಂತೆಯಾಗುವದು. ಶಿಷ್ಯನನ್ನು ಸತ್‌ಶಿಷ್ಯನನ್ನಾಗಿ ಮಾಡುವದು ಬಹಳ ಕಷ್ಟದ ಕೆಲಸ. ಈಕೆಲಸ ಸದ್ಗುರುವೇ ಮಾಡಬೇಕಾಗುವದು. (೨) **ಭೂಮಿಯ ಅತಿ ಸಾರ್ಥಕ ದೃಷ್ಟಾಂತ ಕೊಟ್ಟು ಇದನ್ನು ತಿಳಿಸಿ ಹೇಳುತ್ತಾರೆ:-** ಉದಾ:– ಉತ್ತಮ ಭೂಮಿ ಇರುವದೆಂದು ತಿಳಿಯಿರಿ. ಅದರಲ್ಲಿಯ ಹರಳು, ಕಲ್ಲು, ಹುಲ್ಲು, ಕರಕಿ ತೆಗೆದ ಜಮೀನನ್ನು ಒಳ್ಳೆ ಚನ್ನಾಗಿ ಹದಗೊಳಿಸಿ ಸ್ವಚ್ಛ ಮಾಡಿ ಅದರಲ್ಲಿ ಹುಳುಕು ಬೀಜ ಬಿತ್ತಿದರೆ, ಅಥವಾ ಕಲ್ಲುಭೂಮಿ,ಮರುಭೂಮಿ, ಕೃಷಿ ಮಾಡದ ಭೂಮಿಯಲ್ಲಿಉತ್ತಮ ಬೀಜ ಬಿತ್ತಿದರೆ (೩) ಈ ಎರಡೂ ಜಮೀನುಗಳಲ್ಲಿಸರಿಯಾದಬೆಳೆ ಬರುವದಿಲ್ಲ. ಇದೇ ಪ್ರಕಾರ ಸತ್‌ಶಿಷ್ಯನೇ ಒಂದು ಉತ್ತಮ ಶುದ್ಧ ಭೂಮಿಯಾಗಿದ್ದು ಇಂಥ ಶಿಷ್ಯನಿಗೆ(ಕ್ಷುದ್ರ, ಹಲಕಾ ಪ್ರವೃತ್ತಿಯ) ಮಂತ್ರ ತಂತ್ರ ಹೇಳುವ ಗುರು ಭೆಟ್ಟಿಯಾದರೆ (ಗಂಟು ಬಿದ್ದರೆ) ಇತ್ತ ದೃಢ ಪ್ರಪಂಚವಿಲ್ಲ–ಅತ್ತ ದೃಢ ಪರಮಾರ್ಥವಿಲ್ಲ ಎಂಬ ಅವಸ್ಥೆ ಆಗಿಯಾವುದೂ ಸರಿಯಾಗಿ ಸಾಧಿಸುವದಿಲ್ಲ. ಬರಿಗೈ ಬಾಬೂ ಆಗುತ್ತಾನೆ. (೪) ಅಥವಾ ಸದ್ಗುರುವು ಉತ್ತಮ ಬೀಜದಂತೆ ಇದ್ದು ಪೂರ್ಣ ಕೃಪೆ ಮಾಡವಂಥ ವನಿದ್ದು, ನಿಜವಾದ ಬ್ರಹ್ಮಜ್ಞಾನಿಯಾಗಿದ್ದು. ಮತ್ತು ಅತ್ಯಂತ ಕೃಪಾಳು ಇರುವನು. ಆದರೆ ಇಂಥ ಉತ್ತಮ ಸದ್ಗುರುವಿಗೆ ಶಿಷ್ಯನು ಅನಧಿಕಾರಿ, ಅಪಾತ್ರ ಪರಮಾರ್ಥಕ್ಕೆ ನಾಲಾಯಖನಾದಂಥವನು ಭೆಟ್ಟಿಯಾದರೆ (ಗಂಟು ಬಿದ್ದರೆ) ಸದ್ಗುರುವಿಗೆ ವ್ಯರ್ಥ ಶ್ರಮವಾಗುವದು. ಒಬ್ಬ ಭಾಗ್ಯವಾನನಾದ ತಂದೆಯಲ್ಲಿ ದರಿದ್ರಮಗ ಇದ್ದಂತೆ ವ್ಯರ್ಥವಾಗುವದು. (೫) ಒಟ್ಟಿನಲ್ಲಿ ಸದ್ಗುರು ಮತ್ತು ಸತ್‌ಶಿಷ್ಯರು ಈ ಇಬ್ಬರಲ್ಲಿ ಒಬ್ಬರುಯೋಗ್ಯರು ಒಬ್ಬರು ಅಯೋಗ್ಯರು ಇದ್ದದ್ದಾದರೆ ಎಲ್ಲವೂ ವ್ಯರ್ಥವಾಗುವದು. ಇವರಲ್ಲಿ ಒಬ್ಬನು ಪರಮಾರ್ಥ ಸಾಧಿಸಿದರೂ ಅಗತಕ್ಕ ಪರಲೋಕಸಾಧನೆಯ ಸಾರ್ಥಕ್ಯವೂ ದೂರ ಉಳಿಯುವದು.(೬) ಸದ್ಗುರು ಮತ್ತು ಸತ್‌ಶಿಷ್ಯ ಇವರ ಜೋಡಿ ಕೂಡಿದರೆ ಸದ್ಗುರುವಿಗೆ ಆಯಾಸವಾಗದೆ ಶಿಷ್ಯ ತಯಾರ ಆಗುವನು. ಇಬ್ಬರ ಇಚ್ಛೆ (ಹೌಸು) ಏಕಕಾಲಕ್ಕೆ ಪೂರ್ಣವಾಗುವದು. ತನ್ನ ಜ್ಞಾನವನ್ನು ಪಡೆಯುವಂಥವನು ಭೆಟ್ಟಿಯಾದನೆಂದು ಸದ್ಗುರುವಿಗೆ ಸಮಾಧಾನ. ಅದರಂತೆಯೇ ತನಗೆಜ್ಞಾನ ಕೊಡುವಂಥ ಸದ್ಗುರುಭೆಟ್ಟಿಯಾದನೆಂದು ಸತ್‌ಶಿಷ್ಯನಿಗೂ ಸಮಾಧಾನವಾಗುವದು [೭] **ಭೂಮಿಯ ದೃಷ್ಟಾಂತವನ್ನು ಇನ್ನಷ್ಟು ಬೆಳೆಸಿ ಪರಮಾರ್ಥ ಜೀವನದ ಅಂಗ(ಬಾಜೂ) ಸ್ಪಷ್ಟಗೊಳಿಸುತ್ತಾರೆ:-** ಜಮೀನು ಉತ್ತಮವಿದೆ ಬೀಜವೂ ಉತ್ತಮವಿದೆ.ಆದರೆ ಮಳೆಯೇ ಆಗದಿದ್ದರೆ ಬೀಜ ಹುಟ್ಟುವದಿಲ್ಲ. ಇದೇ ಪ್ರಕಾರ ಸದ್ಗುರು ಇರುವನು. ಸದ್ಗುರುವಿಗೆ ಒಬ್ಬ ಸತ್‌ಶಿಷ್ಯನೂ ಇರಬಹುದು. ಆದರೆ ಇಬ್ಬರಲ್ಲಿ ಆತ್ಮಜ್ಞಾನದ ಬಗ್ಗೆ ಸುಖಸಂವಾದಗಳು ಆಗದಿದ್ದರೆ ಸತ್‌ಶಿಷ್ಯನಿಗೆ ಸ್ವಾನುಭವ ಬರುವದಿಲ್ಲ. (೮)

ಸೇತ ಪೇರಿಲೇ ಆಣೀ ಉಗವಲೇ। ಪರಂತು ನಿಗೇವಿಣ ಗೇಲೇ।
ಸಾಧನೇವಿಣ ತೈಸೇ ಜಾಲೇ। ಸಾಧಕಾಸೀ ॥೯॥

ಜವರೀ ಪೀಕ ಆಪಣಾಸ ಭೋಗೇ। ತವರೀ ಅವಘೇ ಚೀ ಕರಣೇ ಲಾಗೇ।
ಪೀಕ ಆಲಿಯಾಹಿ ಉಗೇ। ರಾಹೋ ಚಿ ನಯೇ ॥೧೦॥

ತೈಸೇ ಆತ್ಮಜ್ಞಾನ ಜಾಲೇ। ಪರೀ ಸಾಧನ ಪಾಹಿಜೇ ಕೇಲೇ।
ಯೇಕ ವೇಳ ಉದಂಡ ಜೇವಿಲೇ। ತರ್ಹೀ ಸಾಮುಗ್ರೀ ಪಾಹಿಜೇ ॥೧೧॥

ವ್ಹಾಣೌನ ಸಾಧನ ಅಭ್ಯಾಸ ಆಣೀ ಸದ್ಗುರು।
ಸಚ್ಛಿಷ್ಯ ಆಣೀ ಸಚ್ಛಾಸ್ತ್ರ ವಿಚಾರು।
ಸತ್ಕರ್ಮ ಸದ್ವಾಸನಾ ಪಾರು। ಪಾವವೀ ಭವಾಚಾ ॥೧೨॥

ಸದುಪಾಸನಾ ಸತ್ಕರ್ಮ। ಸತ್ಕ್ರಿಯಾ ಆಣೀ ಸ್ವಧರ್ಮ।
ಸತ್ಸಂಗ ಆಣೀ ನಿತ್ಯನೇಮು। ನಿರಂತರ ॥೧೩॥

ಐಸೇ ಹೇ ಅವಘೇ ಚೀ ಮಿಳೇ। ತರೀ ಚ ವಿಮಳ ಜ್ಞಾನ ನಿವಳೇ।
ನಾಹೀ ತರೀ ಪಾಷಾಂಡ ಸಂಚರೇ ಬಳೇ। ಸಮುದಾಈ ॥೧೪॥

ಯೇಥೇ ಶಬ್ದ ನಾಹೀ ಶಿಷ್ಯಾಸೀ। ಹೇ ಅವಘೇ ಸದ್ಗುರು ಪಾಸೀ।
ಸದ್ಗುರು ಪಾಲಟೀ ಅವಗುಣಾಸೀ। ನಾನಾ ಯತ್ನೇಕರೂನೀ ॥೧೫॥

ಸದ್ಗುರುಚೇನಿ ಅಸಚ್ಛಿಷ್ಯ ಪಾಲಟೇ। ಪರಂತು ಸಚ್ಛಿಷ್ಯೇ ಅಸದ್ಗುರುನ ಪಾಲಟೇ।
ಕಾ ಜೇ ಥೋರಪಣ ತುಟೇ। ವ್ಹಾಣೌನಿಯಾ ॥೧೬॥

ಯಾಕಾರಣೇ ಸದ್ಗುರು ಪಾಹಿಜೇ। ತರೀ ಚ ಸನ್ಮಾರ್ಗ ಲಾಹಿಜೇ।
ನಾಹೀ ತರೀ ಹೋಈಜೇ। ಪಾಷಾಂಡಾ ವರಪಡೇ ॥೧೭॥

ಯೇಥೇ ಸದ್ಗುರುಚಿ ಕಾರಣ। ಯೇರ ಸರ್ವ ನಿಃಕಾರಣ।
ತಥಾಪಿ ಸಾಂಗೋ ವೋಳಖಣ। ಸಚ್ಛಿಷ್ಯಾಚೀ ॥೧೮॥

ಉತ್ತಮ ಹೊಲದಲ್ಲಿ ಉತ್ತಮ ಬೀಜ ಬಿತ್ತಿದೆವು, ಅವು ಚೆನ್ನಾಗಿ ಹುಟ್ಟಿದವು. ಆದರೆ ಅದರಸಂರಕ್ಷಣ ಮಾಡದಿದ್ದರೆ, ಕಾವಲು ಕಾಯದಿದ್ದರೆ ಇತರ ಕಳೆ, ಕಸದ ಕಾಳಜಿ ತೆಗೆದುಕೊಳ್ಳದಿದ್ದರೆ ಆ ಪೀಕು ಹಾಳಾಗುವದು. ಇದರಂತೆ ಸದ್ಗುರುವು ಸತ್‌ಶಿಷ್ಯನಿಗೆ ಉತ್ತಮ ಭೋದ ಮಾಡಿದನು.ಶಿಷ್ಯನ ಅಂತಃಕರುಣದಲ್ಲಿ ಅದು ಮೂಡಿತು. ಮತ್ತು ಶಿಷ್ಯನಲ್ಲಿ ಸ್ವಲ್ಪ ಪ್ರಗತಿಯೂ ಆಯಿತು. ಆದರೆ ಸಾಧಕ [ಸತ್‌ಶಿಷ್ಯ]ನು ಮನಃಪೂರ್ವಕ ಸಾಧನೆಯಲ್ಲಿ ಒಂದೇ ಮನಸ್ಸಿನಿಂದ ನೆಲೆ ನಿಂತು' ಸಾಧನೆ ಮುಂದುವರಿಸದಿದ್ದರೆ ಆಗ ಆದ ಪ್ರಗತಿಯೂ ನಿರ್ಬಲವಾಗುತ್ತದೆ. (೯) ಹೊಲದಲ್ಲಿಯ ಪೀಕು ನಮ್ಮ ಮನೆಗೆ ಬಂದು ಬೀಳುವವರೆಗೂ ಅದರ ಬಗೆಗಿನ ಕರ್ತವ್ಯಗಳನ್ನು ಮಾಡುತ್ತಲೇ ಇರಬೇಕಾಗುತ್ತದೆ. ಪೀಕು ಬಂದು ಮನೆ ಸೇರಿದರೂ ಸಹ ಇಲ್ಲಿಗೆ ಮುಗಿಯಿತೆಂದು ತಿಳಿಯಬಾರದು. ಸ್ವಸ್ಥ ಕೂಡ್ರಬಾರದು. (ಮುಂದಿನ ಪೀಕಿನ ತಯಾರಿ ಈಗಿನಿಂದಲೇ ಮಾಡಬೇಕಾಗುವದು). (೧೦) ಒಮ್ಮೆ ಗಡದ್ದಾಗಿ ಹೊಟ್ಟೆ ತುಂಬ ಊಟ ಮಾಡಿದರೆ ಮುಗಿದೇ ಹೋಯಿತೇನು? ಇಲ್ಲ. ಒಮ್ಮೆಉಂಡರೂ ಪುನಃ ಕೆಲಹೊತ್ತಿನನಂತರ ಪುನಃ ಹಸಿವೆಯಾಗುತ್ತದೆ. ಆಗ ಊಟಕ್ಕಾಗಿ ಆಹಾರ ಸಾಮುಗ್ರಿ ನಮ್ಮ ಹತ್ತಿರ ಇರಲೇಬೇಕಾಗುವದು. ಇದೇ ಪ್ರಕಾರ ಸದ್ಗುರು ಹೇಳಿದ ಸಾಧನ ಮಾಡಿ ಆತ್ಮಜ್ಞಾನ ಪ್ರಾಪ್ತವಾಗಿದ್ದರೂ ಸಹ ಸಾಧಕನು ಸ್ವಸ್ಥ ಕೂಡ್ರಬಾರದು. ಯಾಕೆಂದರೆ ಅವಿದ್ಯೆಯ ಅಮಲು ಅಧಿಕಾರ ನಡಿಸುತ್ತಲೇ ಇರುವದು. ಅದರಿಂದ ಜ್ಞಾನವು ಮಂದಗೊಳ್ಳುವ ಸಂಭವವಿರುತ್ತದೆ. ಅಂತೆಯೇ ಸಾಧಕನು ಜ್ಞಾನ ಪ್ರಾಪ್ತಿಯ ನಂತರವೂ ಸಹ ತನ್ನ ಸಾಧನವನ್ನು ಚಾಲೂ ಇಡಬೇಕು. (೧೧) ಪರಮಾರ್ಥ ಸಾಧನೆಯು ಒಂದು ಸಮಗ್ರ ಜೀವನ ಪದ್ಧತಿ ಇರುತ್ತದೆ. ಸತ್ಸಂಗ, ಸತ್ಕರ್ಮ ಮತ್ತು ಸ್ವಧರ್ಮ ಇವು ಅವರ ಬಹಿರಂಗ(ಹೊರಗಿನ ಅಂಗ)ವಾಗಿದ್ದರೆಸಾಧನೆಯ ಇಟ್ಟೆ ಸದ್ವಾಸನಾ, ಸಮುಪಾಸನಾ ಇವು ಅದರ ಅಂತರಂಗವಾಗಿರುತ್ತವೆ. ಇವೆರಡೂ ಅಂಗಗಳು ಎಲ್ಲಿ ವಿಕಾಸಗೊಳ್ಳುವವೋ ಅಲ್ಲಿ ಆತ್ಮಜ್ಞಾನ ಬೆಳಗುತ್ತದೆ. [ವಿಲಾಸ ಮಾಡುತ್ತದೆ]: ಅಂತೆಯೇ ಸಾಧನೆ, ಅಭ್ಯಾಸ, ಸದ್ಗುರು, ಸತ್‌ಶಿಷ್ಯ, ಸತ್‌ಶಾಸ್ತ್ರವಿಚಾರ, ಸತ್ಕರ್ಮ ಆಚರಣೆ, ಸದ್ವಾಸನಾ (೧೨) ಸಮುಪಾಸನೆ, ಸತ್‌ಕ್ರಿಯಾ, ಸ್ವಧರ್ಮಾಚರಣೆ, ಸತ್ಸಂಗ, ಮತ್ತು ನಿತ್ಯನೇಮ. (೧೩) ಇವೆಲ್ಲವುಗಳು ಅಖಂಡವಾಗಿ (ಅವಿಚ್ಛಿನ್ನವಾಗಿ) ಏಕತ್ರವಾಗಿದ್ದರೆ ಮಾತ್ರ ನಿರ್ಮಲವಾದ ಆತ್ಮಜ್ಞಾನ ಉದಯ ಹೊಂದುತ್ತದೆ. ತತ್ಪರಿಣಾಮದಿಂದ ಸತ್‌ಶಿಷ್ಯ ಸಂಸಾರ ಸಾಗರದಿಂದ ಪಾರಾಗುವನು. ಇಲ್ಲದಿದ್ದರೆ ಜನಸಮುದಾಯದಲ್ಲಿ ಪಾಖಂಡತನ-ಧರ್ಮಲಂಡತನ ಜೋರಾಗಿ ಪ್ರಸಾರಗೊಳ್ಳುವದು. (೧೪) **ಸದ್ಗುರುವಿನ ಮೇಲೆ ದೊಡ್ಡ ಜವಾಬುದಾರಿ (ಹೊಣೆಗಾರಿಕೆ) ಇರುತ್ತದೆ.** ಈ ವಿಷಯದಲ್ಲಿ ಶಿಷ್ಯನಿಗೆ ದೋಷ ಕೊಡಲಿಕ್ಕೆ ಬರುವದಿಲ್ಲ. ಯಾಕೆಂದರೆ ಶಿಷ್ಯರನ್ನು ತಯಾರು ಮಾಡುವ ಜವಾಬುದಾರಿ ಸದ್ಗುರುವಿನ ಮೇಲಿರುತ್ತದೆ. ಅನೇಕ ಪ್ರಕಾರದ ಪ್ರಯತ್ನ ಮಾಡಿ ಸದ್ಗುರುವು ಶಿಷ್ಯನ ಅವಗುಣಗಳನ್ನು ತಿದ್ದಿ ತೆಗೆಯಬಲ್ಲನು.(೧೫) ಒಬ್ಬ ಶಿಷ್ಯ ಚೆನ್ನಾಗಿರದಿದ್ದರೆ ಅವನ ಅವಗುಣಗಳನ್ನು ಸದ್ಗುರು ತೆಗೆದು ಸುಧಾರಿಸುವನು ಆದರೆ ಉತ್ತಮ ಅಥವಾ ಸತ್‌ಶಿಷ್ಯನು ಕೆಟ್ಟ ಗುರುವಿನ ಅವಗುಣಗಳನ್ನು ತಿದ್ದಿ ಅವನನ್ನು ಉತ್ತಮನನ್ನಾಗಿಸಲು ಶಕ್ತನಾಗುವದಿಲ್ಲ. ಯಾಕೆಂದರೆ ಗುರುವಿಗೆ ದೊಡ್ಡಿಸ್ತನದ ಅಭಿಮಾನವಿರುತ್ತದೆ. ನಾನು ಶಿಷ್ಯನಿಂದ ಕಲಿಯಬೇಕೆ? ಇದು ತನ್ನ ಗುರುಪದದ ದೊಡ್ಡಸ್ತಿಕೆಗೆ ಧಕ್ಕೆ ಬಂದು ಗುರುಪದ ಇಲ್ಲದಾದೀತೆಂದು ಅವನು ಶಿಷ್ಯನಿಂದ ಮಾರ್ಗದರ್ಶನ ಹೊಂದಲಿಕ್ಕೆ ತಯಾರ ಆಗುವದಿಲ್ಲ. (೧೬) ಅಂತೂ ಸದ್ಗುರು ಇರಲೇಬೇಕು. ಅಂದರೆ ಮಾತ್ರ ಶಿಷ್ಯನಿಗೆ ಉತ್ತಮ ಮಾರ್ಗದರ್ಶನದ ಲಾಭ ದೊರಕುತ್ತದೆ. ಸದ್ಗುರುವು ಇಲ್ಲದಿದ್ದರೆ ಶಿಷ್ಯ ಪಾಖಂಡ ಮತದ ಅಧೀನನಾಗುವನು.(೧೭) ಒಟ್ಟಿನಲ್ಲಿ ಗುರುಶಿಷ್ಯ ಇವರ ಸಂಬಂಧವಲ್ಲಿ ಸದ್ಗುರುವೇ ಮುಖ್ಯ ಕಾರಣನು. ಇವನೇ ಸತ್‌ಶಿಷ್ಯನನ್ನು ಮುಂದಕ್ಕೆ ಕರೆದೊಯ್ಯುವನು. ಅಥವಾ ಹಿಂದಕ್ಕೆ ಜಗ್ಗುವನು. ಇನ್ನುಳಿದವುಗಳಿಗೆ ಮಹತ್ವವಿಲ್ಲ. ಇದು ನಿಜವೇ ಇರುವದು. ಈಗ ಸತ್‌ಶಿಷ್ಯನ ಲಕ್ಷಣಗಳನ್ನು ಹೇಳುತ್ತೇನೆ. (೧೮)

ಮುಖ್ಯ ಸಚ್ಛಿಷ್ಯಾಚೇ ಲಕ್ಷಣ । ಸದ್ಗುರುವಚನೀ ವಿಶ್ವಾಸ ಪೂರ್ಣ ।
ಅನನ್ಯಭಾವೇ ಶರಣ । ತ್ಯಾ ನಾವ ಸಚ್ಛಿಷ್ಯ ॥೧೯॥

ಶಿಷ್ಯ ಪಾಹಿಜೇ ನಿರ್ಮಳ । ಶಿಷ್ಯ ಪಾಹಿಜೇ ಆಚಾರಶೀಳ ।
ಶಿಷ್ಯ ಪಾಹಿಜೇ ಕೇವಳ । ವಿರಕ್ತ ಅನುತಾಪೀ ॥೨೦॥

ಶಿಷ್ಯ ಪಾಹಿಜೇ ನಿಷ್ಠಾವಂತ । ಶಿಷ್ಯ ಪಾಹಿಜೇ ಶುಚಿಷ್ಮಂತ ।
ಶಿಷ್ಯ ಪಾಹಿಜೇ ನೇಮಸ್ತ । ಸರ್ವ ಪ್ರಕಾರೀ ॥೨೧॥

ಶಿಷ್ಯ ಪಾಹಿಜೇ ಸಾಕ್ಷಪೀ ವಿಶೇಷ । ಶಿಷ್ಯ ಪಾಹಿಜೇ ಪರಮದಕ್ಷ ।
ಶಿಷ್ಯ ಪಾಹಿಜೇ ಅಲಕ್ಷ । ಲಕ್ಷೀ ಐಸಾ ॥೨೨॥

ಶಿಷ್ಯ ಪಾಹಿಜೇ ಅತಿಧೀರ । ಶಿಷ್ಯ ಪಾಹಿಜೇ ಅತಿಉದಾರ ।
ಶಿಷ್ಯ ಪಾಹಿಜೇ ಅತಿತತ್ಪರ । ಪರಮಾರ್ಥ ವಿಷಈ ॥೨೩॥

ಶಿಷ್ಯ ಪಾಹಿಜೇ ಪರೋಪಕಾರೀ । ಶಿಷ್ಯ ಪಾಹಿಜೇ ನಿರ್ಮತ್ಸರೀ ।
ಶಿಷ್ಯ ಪಾಹಿಜೇ ಅರ್ಥಾಂತರೀ । ಪ್ರವೇಶಕರ್ತಾ ॥೨೪॥

ಶಿಷ್ಯ ಪಾಹಿಜೇ ಪರಮಶುದ್ಧ । ಶಿಷ್ಯ ಪಾಹಿಜೇ ಪರಮಸಾವಧ ।
ಶಿಷ್ಯ ಪಾಹಿಜೇ ಅಗಾಧ । ಉತ್ತಮ ಗುಣಾಚಾ ॥೨೫॥

ಶಿಷ್ಯ ಪಾಹಿಜೇ ಪ್ರಜ್ಞಾವಂತ। ಶಿಷ್ಯ ಪಾಹಿಜೇ ಪ್ರೇಮಳ ಭಕ್ತ।
ಶಿಷ್ಯ ಪಾಹಿಜೇ ನೀತಿವಂತ। ಮರ್ಯಾದೇಚಾ ॥೨೬॥

ಶಿಷ್ಯ ಪಾಹಿಜೇ ಯುಕ್ತಿವಂತ । ಶಿಷ್ಯ ಪಾಹಿಜೇ ಬುದ್ಧಿವಂತ।
ಶಿಷ್ಯ ಪಾಹಿಜೇ ಸಂತಾಪಸಂತ। ವಿಚಾರಘೇತಾ ॥೨೭॥

ಇಲ್ಲಿಂದ ಮುಂದಿನ ಹದಿನಾಲ್ಕು ಹದಿನೈದು ಶ್ಲೋಕಗಳಲ್ಲಿ ಶ್ರೀ ಸಮರ್ಥರು ಖರೆ, ಮತ್ತು (ಉತ್ತಮ, ಲಾಯಖ) ಯೋಗ್ಯ ಶಿಷ್ಯನ ಬಗ್ಗೆ ಸಾಕಷ್ಟು ಲಕ್ಷಣಗಳನ್ನು ಹೇಳಿದ್ದಾರೆ. ಇವುಗಳಲ್ಲಿ ಮುಖ್ಯವಾದವುಗಳು ಎರಡು ಇರುವವು. ಒಂದನೆಯದು, ಸದ್ಗುರುವಿನ ವಚನದ ಮೇಲೆ ಸಂಪೂರ್ಣ ವಿಶ್ವಾಸವಿಡುವದು. ಎರಡನೆಯದು ಸದ್ಗುರುವಿಗೆ ಮನಃಪೂರ್ವಕ ಶರಣು ಹೋಗುವದು.ಇವೇ ಇರುವವು. ಚಿಕ್ಕಮಗುವು ತಾಯಿ ಏನು ಹೇಳುವಳೋ ಅದೆಲ್ಲವೂ ಸಂಪೂರ್ಣ ನಿಜವೆಂದು ನಂಬುತ್ತದೆ. ಮತ್ತು ಅವಳನ್ನೇ ಸರ್ವಸ್ವೀ ಅವಲಂಬಿಸಿರುತ್ತದೆ. ಇದೇ ಪ್ರಕಾರ ಸತ್‌ಶಿಷ್ಯನು ಸದ್ಗುರುವಿನ ವಿಷಯದಲ್ಲಿ ನಡೆಯಬೇಕು (ವರ್ತಿಸಬೇಕು). ದೊಡ್ಡವರಲ್ಲಿ ಇಂಥ ಬಾಲವೃತ್ತಿ ಸಾಧಿಸುವದು ಅದರಲ್ಲೂ ಪರಮಾರ್ಥದಲ್ಲಿ ಭಾಗ್ಯದಮಾತೇ ಸರಿಇದಕ್ಕೆ ಇನ್ನೊಂದು ಮಾತಿಲ್ಲ. ಶ್ರೀಕಲ್ಯಾಣಸ್ವಾಮಿ ಮತ್ತುಶ್ರೀರಾಮಕೃಷ್ಣಪರಮಹಂಸ ಈ ಇಬ್ಬರದೂ ಅಗದೀಚಿಕ್ಕಬಾಲಕರಂತೆ ಮನೋವೃತ್ತಿ ಇದ್ದಿತು.ಈ ಇಬ್ಬರೂ ಪರಮಾರ್ಥವನ್ನು ಕೈಗೊಂಬೆಯಂತೆ ಆಡಿಸಿದರು.(ಕುಣಿಸಿದರು).ಇದು ಅಭ್ಯಾಸದಿಂದ ವ ಸಾಧನದಿಂದ ಈ ಎರಡೂ ಲಕ್ಷಣಗಳನ್ನು ಪಡೆಯಲಿಕ್ಕೆಮನುಷ್ಯರಿಗೆ (ಶಿಷ್ಯರಿಗೆ) ಖಾತ್ರಿಯಿಂದ ಶಕ್ಯವಿದೆ. ದೃಢನಿಶ್ಚಯ ಮತ್ತು ದೀರ್ಘ ಪ್ರಯತ್ನದಿಂದ (ಪರಿಶ್ರಮದಿಂದ) ಸದ್ಗುರುವಿನ ಮಾರ್ಗದರ್ಶನದಲ್ಲಿ ಮಾತ್ರ ನಡೆಯಬೇಕಾಗುವದು;– ಸದ್ಗುರುವಿನ ವಚನದ ಮೇಲೆ ಸಂಪೂರ್ಣ ವಿಶ್ವಾಸವಿರುವದೇ ಸತ್‌ಶಿಷ್ಯನ ಮುಖ್ಯಲಕ್ಷಣವಾಗಿದೆ, ಮತ್ತು ಸದ್ಗುರುವಿಗೆ ಅಗದೀ ಅನನ್ಯಭಾವದಿಂದ ಶರಣಾಗಿರುವದೇ ನಿಜವಾದ ಶರಣಾಗತಿಯು. ಇವನೇ ಉತ್ತಮ ಶಿಷ್ಯನು. ಸತ್‌ಶಿಷ್ಯನ ವ್ಯಕ್ತಿತ್ವ (ಪರ್ಸನ್ಯಾಲಿಟಿ) ಒಂದು ವಿಶಿಷ್ಟ ಪ್ರಕಾರದ್ದಿರಬೇಕು. ಇವನು ಶಾಂತ ಹಾಗೂ ವಿನೀತನಿರಬೇಕು. ಇವನ ಸರ್ವ ಭಾವವೂ ಸದ್ಗುರುವಿನಲ್ಲಿಯೇ ಸ್ಥಿರಗೊಂಡಿರಬೇಕು. ಇವನ ಮನಸ್ಸು ಸದ್ಗುರುವಿನ ಶಬ್ದಗಳನ್ನು ಅತ್ಯಂತ ಸೂಕ್ಷ್ಮವಾಗಿ ಶಾಂತವಾಗಿ ಕೇಳಬೇಕು, ವಿಚಾರ ಮಾಡಬೇಕು. ಇವನ ಸರ್ವಲಕ್ಷ್ಯವೂ ಸದ್ಗುರುವಿನ ಸುತ್ತಮುತ್ತ ಕೇಂದ್ರೀಕೃತವಾಗಿರಬೇಕು. ಮತ್ತು ಸದ್ಗುರುವಿನ ವಿಷಯವಾಗಿ ಶಿಷ್ಯನಲ್ಲಿ ಅತ್ಯಂತ ಆತ್ಮೀಯತೆ ಇರಬೇಕು. ಇಂಥ ಶಿಷ್ಯನ ಮನಸ್ಸು ಶುದ್ಧ ಮೇಣದಂತೆ ಮೃದು ಹಾಗೂ ಸಂಸ್ಕಾರಕ್ಷಮವಾಗುವದು. ಆಮೇಲೆ ಆತ್ಮಜ್ಞಾನ ಪ್ರಕಟವಾಗುವದಕ್ಕೆ ಅವಶ್ಯವಿದ್ದ ಒಳಗಿನ ವ್ಯವಸ್ಥೆಯನ್ನು ಸದ್ಗುರು ಆ ಸಂಸ್ಕಾರಕ್ಷಮ ಮನಸ್ಸಿನಲ್ಲಿ ಆಯಾಸವಿಲ್ಲದೇ ತುಂಬುವನು (ಒಳಸೇರಿಸುವನು) (೧೯) ಇಂಥ ಆತ್ಮಜ್ಞಾನದ ಸೂಚನೆಗಳನ್ನು ಸಹಜ ಸುಲಭದಿಂದ ಗ್ರಹಿಸುವ ಅವಿರೋಧವಾದ **ಮನಸ್ಸು ಸಿದ್ಧವಾಗಲು–ಶಕ್ತವಾಗಲು ಮುಂದೆ ಹೇಳಿದ ಗುಣಗಳು ಸತ್‌ಶಿಷ್ಯನಲ್ಲಿ ಇರಬೇಕಾಗುವವು.** ಶಿಷ್ಯನು ನಿರ್ಮಲ, ಆಚಾರಶೀಲ, ಸಂಪೂರ್ಣ ವಿರಕ್ತ ಮತ್ತು ತಪ್ಪುನಡತೆಗೆ ಪಶ್ಚಾತ್ತಾಪ ಪಡುವವನಿರಬೇಕು.(೨೦) ಶಿಷ್ಯ ನಿಷ್ಠಾವಂತ, ಶುಚಿಷ್ಮಂತ (ನಿರ್ಮಲ)ಆಚರಣೆಯುಳ್ಳವ ಹಾಗೂ ಎಲ್ಲ ವಿಷಯಗಳಲ್ಲಿ ಪಾಪ ಘಟಿಸದಂತೆ ನಡೆಯಬೇಕು. (೨೧) ಶಿಷ್ಯನು ಅತಿ ಉದ್ಯೋಗಿ, ಬಹಳ ತತ್ಪರ ಮತ್ತು ಅತೀಂದ್ರಿಯ ವಸ್ತುವಿನ ಮೇಲೆ ಲಕ್ಷ್ಯ ಕೇಂದ್ರಿತ (ಕೇಂದ್ರೀಕರಿಸುವ)ಮಾಡುವ ಮನೋಬಲವಿರುವಂಥವನಿರಬೇಕು. ಅಮೂರ್ತ ಆಕಾರರಹಿತ-ನಿರಾಕಾರದಲ್ಲಿ ಸಂಚಾರ ಮಾಡಬಲ್ಲ ಸಾಮರ್ಥ್ಯವನ್ನು ತಂದುಕೊಳ್ಳಬಲ್ಲವನಿಗೆ ಮಾತ್ರ ಆತ್ಮದ ಅನುಸಂಧಾನ ಸಾಧ್ಯವಾಗುವದು. ಅಂದರೆ ಅದೃಶ್ಯವಸ್ತುವನ್ನು ಪರೀಕ್ಷಿಸಿ ಲಕ್ಷಿಸುವಂಥ ಸೂಕ್ಷ್ಮ ದೃಷ್ಟಿಯುಳ್ಳವವ ನಿರಬೇಕು. (೨೨) ಶಿಷ್ಯ ಅತಿ ಧೈರ್ಯವಂತ [ಧೀರ] ಅತಿ ಉದಾರ ಮತ್ತು ಪರಮಾತ್ಮ ವಿಷಯದಲ್ಲಿ ಅತಿ ತತ್ಪರನಾಗಿರಬೇಕು. ಪರಮಾರ್ಥವನ್ನು ಸಾಧಿಸುವದಕ್ಕಾಗಿಯೇ ಇವನು ಬದುಕಿರಬೇಕು. (೨೩) ಶಿಷ್ಯನು ಪರೋಪಕಾರಿ ನಿರ್ಮತ್ಸರಿಯಾಗಿರಬೇಕು. ಗ್ರಂಥಗಳ ಅಭ್ಯಾಸ ಮಾಡುವಾಗ ಶಬ್ದಾರ್ಥಗಳ ಗೂಢ ಅರ್ಥವನ್ನು ತಿಳಿಯುವವನು ಮತ್ತು ಗ್ರಂಥಕರ್ತನ ಖರೇ ಅಭಿಪ್ರಾಯ ರಹಸ್ಯ ಊಹಿಸುವವನಿರಬೇಕು. (೨೪) ಶಿಷ್ಯನು ಅತಿ-ಶುದ್ಧ ಅತಿಸಾವಧ ಮತ್ತು ಬಹಳಷ್ಟು ಉತ್ತಮ ಗುಣಗಳಿಂದ ಸಂಪನ್ನನಾಗಿರಬೇಕು. (೨೫) ಶಿಷ್ಯನು ಸ್ವತಂತ್ರವಿಚಾರ ಶಕ್ತಿಯುಳ್ಳವನಿರಬೇಕು.ಪ್ರೇಮಳ ಭಕ್ತ,ಮತ್ತು ನೀತಿಅನೀತಿಗಳನ್ನು ತಿಳಿಯುವಂಥ ಹಾಗೂ ಸುವಿಚಾರ ಯುತನಾಗಿರಬೇಕು. (೨೬) ಶಿಷ್ಯನು ಯುಕ್ತಿವಂತ, ಬುದ್ಧಿವಂತ ಮತ್ತು ಉತ್ತಮ–ಕೆಟ್ಟ ಇವುಗಳ ಸದಸತ್ ವಿಚಾರ ಚನ್ನಾಗಿ ತಿಳಿದವನಿರಬೇಕು. ಯುಕ್ತಿವಂತ ಅಂದರೆ ಚಾತುರ್ಯ ಅಥವಾ ಯುಕ್ತಿಯಿಂದ ಅಡಚಣಿ ಅಥವಾ ಕಷ್ಟಕಾಲದಲ್ಲಿ ಮಾರ್ಗ ಹುಡುಕುವ [ಕಂಡು ಹಿಡಿಯುವ] ಚತುರನಿರಬೇಕು. [೨೭]

ಶಿಷ್ಯ ಪಾಹಿಜೇ ಧಾರಿಷ್ಟ್ಯಾಚಾ । ಶಿಷ್ಯ ಪಾಹಿಜೇ ದೃಢವ್ರತಾಚಾ।
ಶಿಷ್ಯ ಪಾಹಿಜೇ ಉತ್ತಮ ಕುಳೀಚಾ । ಪುಣ್ಯಸೀಳ ॥೨೮॥

ಶಿಷ್ಯ ಅಸಾವಾ ಸಾತ್ವಿಕ । ಶಿಷ್ಯ ಅಸಾವಾ ಭಜಕ ।
ಶಿಷ್ಯ ಅಸಾವಾ ಸಾಧಕ । ಸಾಧನ ಕರ್ತಾ ॥೨೯॥

ಶಿಷ್ಯ ಅಸಾವಾ ವಿಶ್ವಾಸೀ । ಶಿಷ್ಯ ಅಸಾವಾ ಕಾಯಾಕ್ಲೇಶೀ ।
ಶಿಷ್ಯ ಅಸಾವಾ ಪರಮಾರ್ಥಾಸೀ । ವಾಢಉ ಜಾಣೇ ॥೩೦॥

ಶಿಷ್ಯ ಅಸಾವಾ ಸ್ವತಂತ್ರ । ಶಿಷ್ಯ ಅಸಾವಾ ಜಗಮಿತ್ರ ।
ಶಿಷ್ಯ ಅಸಾವಾ ಸತ್ಪಾತ್ರ । ಸರ್ವ ಗುಣೇ ॥೩೧॥

ಶಿಷ್ಯ ಅಸಾವಾ ಸದ್ವಿದ್ಯೇಚಾ । ಶಿಷ್ಯ ಅಸಾವಾ ಸದ್ಭಾವಾಚಾ ।
ಶಿಷ್ಯ ಅಸಾವಾ ಅಂತರೀಚಾ । ಪರಮ ಶುದ್ಧ ॥೩೨॥

ಶಿಷ್ಯ ನಸಾವಾ ಅವಿವೇಕೀ । ಶಿಷ್ಯ ನಸಾವಾ ಗರ್ಭ ಸುಖೀ ।
ಶಿಷ್ಯ ಅಸಾವಾ ಸಂಸಾರ ದುಃಖೀ । ಸಂತಪ್ತದೇಹೀ ॥೩೩॥

ಜೋ ಸಂಸಾರ ದುಃಖೇ ದುಃಖವಲಾ। ಜೋ ತ್ರಿವಿಧತಾಪೇ ಪೋಳಲಾ ।
ತೋ ಚಿ ಅಧಿಕಾರೀ ಜಾಲಾ । ಪರಮಾರ್ಥವಿಷೀ ॥೩೪॥

ಬಹು ದುಃಖ ಭೋಗಿಲೇ ಜೇಣೇ। ತಯಾಸೀ ಚ ಪರಮಾರ್ಥ ಬಾಣೇ ।
ಸಂಸಾರ ದುಃಖಾಚೆನೀ ಗುಣೇ । ವೈರಾಗ್ಯ ಉಪಜೇ ॥೩೫॥

ಜಯಾ ಸಂಸಾರಾಚಾ ತ್ರಾಸ । ತಯಾಸೀ ಚ ಉಪಜೆ ವಿಶ್ವಾಸ ।
ವಿಶ್ವಾಸಬಳೇ ದೃಢ ಕಾಸ । ಧರಿಲೀ ಸದ್ಗುರೂಚೀ ॥೩೬॥

ಶಿಷ್ಯನು ಧಾಡಸಿ, ನಿಷ್ಠಾಪೂರ್ವಕ ವ್ರತ ಪೂರೈಸುವವ ಹಾಗೂ ಉತ್ತಮ ಕುಲದಲ್ಲಿಯ ಪುಣ್ಯವಂತ [ಕುಲೀನ]ನಾಗಿರಬೇಕು. (೨೮) ಶಿಷ್ಯನು ಸಾತ್ವಿಕ, ಭಗವಂತನನ್ನು ಭಜಿಸುವವ [ಭಜನೆ ಮಾಡುವವ] ನಿರಬೇಕು. ಮತ್ತು ಮನಃಪೂರ್ವಕವಾಗಿ ಸಾಧನೆ ಮಾಡುವಂಥ ಸಾಧಕನಿರಬೇಕು. (೨೯) ಶಿಷ್ಯನು ನಿಜವಾದ ವಿಶ್ವಾಸ ಇಡುವಂಥವ, ಶರೀರ ಕಷ್ಟ ಸಹಿಸುವಂಥವ, ಮತ್ತು ಪರಮಾರ್ಥ ಹೇಗೆ ಬೆಳಸಬೇಕೆಂಬ ನಿಜವಾದ ಜ್ಞಾನ ಇರುವಂಥವನಿರಬೇಕು. (೩೦) ಶಿಷ್ಯನು ಸ್ವತಂತ್ರ ಜಗಮಿತ್ರ ಮತ್ತು ಸರ್ವಗುಣ ಸಂಪನ್ನ ಸತ್ಪಾತ್ರನಿರಬೇಕು.(೩೧) ಶಿಷ್ಯನು ಬ್ರಹ್ಮವಿದ್ಯೆಯ ಅಭ್ಯಾಸ ಮಾಡುವಂಥವ, ಭಗವಂತನ ನಿಜವಾದ ಇರುವಿಕೆಯನ್ನು [ಅಸ್ತಿತ್ವವನ್ನು] ಮನ್ನಿಸುವಂಥವ ಮತ್ತು ಅತಿ ಶುದ್ಧ ಅಂತಃಕರಣದವನಿರಬೇಕು. [೩೨] ಶಿಷ್ಯನು ಅವಿವೇಕಿ ಇರಬಾರದು. ಅಗರ್ಭ ಶ್ರೀಮಂತನಿರಬಾರದು. ಒಂದು ವೇಳೆ ಇದ್ದರೆ ಸಂಸಾರ ದುಃಖದಿಂದ ದುಃಖಿತನಾಗಿ ಮತ್ತು ಆ ದುಃಖದಿಂದ ಬೆಂದವನಾಗಿರಬೇಕು. ಅಗರ್ಭ ಶ್ರೀಮಂತ [ಹುಟ್ಟಾ ಶ್ರೀಮಂತ] ಮನುಷ್ಯನು ಮೇಲುನೋಟದ ಜೀವನದಲ್ಲಿ ಬಾಳುತ್ತಾನೆ. ಜೀವನದಲ್ಲಿಯ ಸುಖದಬಾಜೂ ಮಾತ್ರ ನೋಡಿದವನಿರುವನು. ಜೀವನದ ಕಷ್ಟ ಕೋಟಲೆಗಳ ಸ್ವರೂಪ ಪ್ರಕಟ ಮಾಡುವಂಥ ದುಃಖದಬಾಜೂ ಅವನು ಅನುಭವಿಸಿರುವದಿಲ್ಲ. ಈ ದೃಶ್ಯ ಜೀವನದಾಚೆಗೆ ಇರುವ ದಿವ್ಯ ಜೀವನದತ್ತ ನೋಡುವಪ್ರವೃತ್ತಿ ಇರುವದಿಲ್ಲ.ಸತ್‌ಶಿಷ್ಯ ಮತ್ತು ಕಾಯಕ್ಲೇಶಿ ಅಂದರೆ ಶರೀರವನ್ನು ದುಡಿಸುವವನಿರಬೇಕು. ಇದನ್ನು ಈಗಾಗಲೇ ಹೇಳಿದ ಅಗರ್ಭ ಶ್ರೀಮಂತನಿಗೆ ದೇಹ ಕಷ್ಟಪಡಿಸುವದು ಕಷ್ಟಸೋಸುವ ರೂಢಿ [ಅಭ್ಯಾಸ] ಇರುವದಿಲ್ಲ. ದುಡಿತದ ಶಕ್ತಿ ಇರುವದಿಲ್ಲ. ಇವನಿಗೆ ಸದ್ಗುರುವಿನ ಸೇವಾ ಮತ್ತು ಸದ್ಗುರು ಹೇಳಿದ ಸಾಧನ ಸಾಧಿಸಲಿಕ್ಕೆ ಕಠಿಣಹೋಗುವದು. [೩೩] ಯಾವನು ಸಂಸಾರದ ದುಃಖದಿಂದ ತ್ರಸ್ತನಾಗಿರುವನೋ ಹಾಗೂ ಶಾರೀರಿಕ ವ ಮಾನಸಿಕ ತಾಪದಿಂದ ಅಥವಾ ಮಾನಸಿಕವ್ಯಥೆ.ರೋಗ(ಅಧಿವ್ಯಾಧಿ–ಅಧಿ =ಮಾನಸಿಕ ವ್ಯಥೆ, ವ್ಯಾಧಿ=ದೈಹಿಕ ವ್ಯಥೆ)ದಿಂದ ತ್ರಸ್ತನಾದವನು ಮಾತ್ರ ಪರಮಾರ್ಥ ಮಾಡುವದಕ್ಕೆ ನಿಜವಾದ ಯೋಗ್ಯತೆಯುವನಾಗುವನು. ದೃಶ್ಯದ ಪ್ರೇಮ ಹೋಗದ ಹೊರತು ಭಗವಂತನ ಕಡೆಗೆ ಲಕ್ಷ ಹೋಗುವದಿಲ್ಲ. ವಿವೇಕದಿಂದ ಅಶಾಶ್ವತವನ್ನು ಗುರುತಿಸಿ (ತಿಳಿದು) ತಮ್ಮ ವೃತ್ತಿಯನ್ನು ಭಗವಂತನ ಕಡೆಗೆ ತಿರುಗಿಸುವಂಥ ಜನರು ಬಹಳ ಕ್ವಚಿತ್ತಾಗಿ ಕಾಣುವರು. ಸಾಮಾನ್ಯ ಮನುಷ್ಯನಿಗೆ ದುಃಖದ ತಡಾಖೆ (ಝಳ, ಬಿಸಿ) ಬಡಿದಾಗ ಅವನ ಮನಸ್ಸು ದೃಶ್ಯದ ಮೇಲಿಂದ ಹಾರುತ್ತದೆ. ಅಂತೆಯೇ ಯಾವನು ಸಂಸಾರ ದುಃಖದಿಂದ ಹುರಪಳಿಸಿರುವನೋ ಅವನೇ ಪರಮಾರ್ಥ ಮಾಡಲಿಕ್ಕೆ ಲಾಯಖನಾಗುತ್ತಾನೆಂದು ಶ್ರೀಸಮರ್ಥರು ಹೇಳುತ್ತಾರೆ. (೩೪)

**ಸಂಸಾರ ದುಃಖದಿಂದ ವೈರಾಗ್ಯ ಹುಟ್ಟುತ್ತದೆ.ಅನಂತರ ಸದ್ಗುರುವಿಗೆ ಶರಣಾಗಿ ಅವನನ್ನು ಗಟ್ಟಿಯಾಗಿ ಹಿಡಿದುಕೊಂಡು ಸಾಧನ ಮಾಡಿದರೆ ಮಾತ್ರ ಪರಮಾರ್ಥವು ಖಾತ್ರಿಯಿಂದ ಸಾಧಿಸುತ್ತದೆ:-** ಸಂಸಾರದಲ್ಲಿ ಬಹಳಷ್ಟು ದುಃಖ, ಕಷ್ಟಗಳನ್ನು ಯಾವನು ಭೋಗಿಸಿರುವನೋ ಅಂಥವನಿಗೇ ಪರಮಾರ್ಥ ಸಾಧಿಸುವದು. ಸಂಸಾರದಲ್ಲಿಯ ದುಃಖ ಭೋಗದಿಂದ ಅಂತಃಕರುಣದಲ್ಲಿ ವೈರಾಗ್ಯದ ಉದಯವಾಗುವದು (೩೫) ಯಾರಿಗೆ ಸಂಸಾರದಿಂದ ತೊಂದರೆ–ದುಃಖ ಆಗುವದೆಂದು ಅನಿಸುವದೋ ವ ಸಂಸಾರ ಇದು ಒಂದು ಕಟಕಟೆಯದು, ದುಃಖದ್ದು - [ದುಃಖ, ಭೂಯಿಷ್ಟದ್ದು] ಹೀಗೆ ಮನಃಪೂರ್ವಕ ಅನಿಸಿದಾಗ ಅವನ ಅಂತಃಕರಣದಲ್ಲಿ ಪರಮಾರ್ಥದ ಬಗ್ಗೆ ವಿಶ್ವಾಸ ಉತ್ಪನ್ನವಾಗುವದು. ಅನಂತರ ಇದೇ ವಿಶ್ವಾಸದ ಬಲದಿಂದ ಅವನು ಸದ್ಗುರುವಿನ ಬೆನ್ನು ಬೀಳುವನು.(ಸದ್ಗುರುವಿಗೆ ಶರಣಾಗತನಾಗುವನು). ಸಂಸಾರದಲ್ಲಿ ರಾಮ್ (ಅರ್ಥ:ಸುಖ) ಇಲ್ಲವೆಂದು ನಿಶ್ಚಯವಾಗಿ ಪರಿಣಾಮ (ಪಟಾಯಿಸಿತೆಂದರೆ) ವಾಯಿತೆಂದರೆ ಆಗಖರೇ ಸುಖ ಸಮಾಧಾನದರಾಮ. ಯಾರ ಹತ್ತರ ಇರುವನೋ ಅಂಥ ಸದ್ಗುರುವಿನ ಮೇಲೆ ಅವನ ಶ್ರದ್ಧೆ ಕೂಡ್ರುವದು. ಅವರಿಗೆ ಶರಣು ಹೋಗುವನು ಖರೇರಾಮನನ್ನು ಪಡೆಯುವನು (೩೬)

ಅವಿಶ್ವಾಸೇ ಕಾಸ ಸೋಡಿಲೀ । ಏಸೀ ಬಹುತೇಕ ಭವೀ ಬುಡಾಲೀ ।
ನಾನಾ ಜಳಚರೀ ತೋಡಿಲೀ। ಮಧ್ಯೇ ಚಿ ಸುಖದುಃಖೇ ॥೩೭॥

ಯಾ ಕಾರಣೇ ದೃಢ ವಿಶ್ವಾಸ। ತೋ ಚಿ ಜಾಣಾವಾ ಸಚ್ಛಿಷ್ಯ ।
ಮೋಕ್ಷಾಧಿಕಾರೀ ವಿಶೇಷ । ಅಗ್ರಗಣ್ಯ ॥೩೮॥

ಜೋ ಸದ್ಗುರುವಚನೇ ನಿವಾಲಾ । ತೋ ಸಾಯೋಜ್ಯತೇಚಾ ಆಂಖಿಲಾ ।
ಸಂಸಾರಪಾಂಗೇ ಪಾಂಗಿಲಾ । ನ ವಚೆ ಕದಾ ॥೩೯॥

ಸದ್ಗುರುಹೂನ ದೇವ ಮೋಠಾ । ಜಯಾಸ ವಾಟೆ ತೋ ಕರಂಟಾ ।
ಸುಟಲಾ ವೈಭವಾಚಾ ಫಾಂಟಾ । ಸಾಮರ್ಥ್ಯ ಪಿಸೇ ॥೪೦॥

ಸದ್ಗುರು ಸ್ವರೂಪ ತೇ ಸಂತ । ಆಣೀ ದೇವಾಸ ಮಾಂಡೇಲ ಕಲ್ಪಾಂತ ।
ತೇಥೇ ಕೈಂಚೇ ಉರೇಲ ಸಾಮರ್ಥ್ಯ । ಹರಿಹರಾಚೇ ॥೪೧॥

ಮ್ಹಣೌನ ಸದ್ಗುರು ಸಾಮರ್ಥ್ಯ ಅಧೀಕ । ಜೇಥೇ ಆಟತೀ ಬ್ರಹ್ಮಾದಿಕ ।
ಅಲ್ಪಬುದ್ಧೀ ಮಾನವೀ ರಂಕ । ತಯಾಸಿ ಹೇ ಕಳೇನಾ ॥೪೨॥

ಗುರುದೇವಾಸ ಬರಾಬರೀ । ಕರೀ ತೋ ಶಿಷ್ಯ ದುರಾಚಾರೀ ।
ಭ್ರಾಂತಿ ಬೈಸಲೀ ಅಭ್ಯಾಂತರೀ । ಸಿದ್ಧಾಂತ ನೇಣವೇ ॥೪೩॥

ದೇವ ಮನುಷೀ ಭಾವಿಲಾ । ಮಂತ್ರೀ ದೇವಪಣಾಸೀ ಆಲಾ ।
ಸದ್ಗುರು ನ ವಚೆ ಕಲ್ಪಿಲಾ । ಈಶ್ವರಾಚೆನೀ ॥೪೪॥

ಕೆಲವೊಂದು ಕಾರಣಗಳಿಂದ ಶ್ರದ್ಧಾ ಕಡಿಮೆ ಆಗಿ ಯಾರು ಸದ್ಗುರುವಿನ ಆಧಾರ ಬಿಡುವರೋ ಅವರು ಹೆಚ್ಚಾಗಿ ಸಂಸಾರದಲ್ಲಿ ಮುಳುಗುವರು. ಸಂಸಾರದ ಮಧ್ಯದಲ್ಲಿಯೇ ಸುಖದುಃಖರೂಪದ ಮೀನುಗಳು ಅವನನ್ನು ತಿಂದು ಬಿಡುವವು. ಜೀವನದಲ್ಲಿ ನಾನಾ ಪ್ರಕಾರದ ಸುಖದುಃಖದ ತೂಗಾಟದಲ್ಲಿ ಬಿದ್ದು ಇವರು ಕೊನೆಗೆ ಏನೂ ಸಾಧಿಸದೇ ವ್ಯರ್ಥ ಸತ್ತು ಹೋಗುವರು. (೩೭) ಅಂತೂ ಒಟ್ಟಿನಲ್ಲಿ ಯಾವನು ಸದ್ಗುರುವಿನಲ್ಲಿ ದೃಢವಿಶ್ವಾಸವಿಟ್ಟಿರುವನೋ(ಇಡುವನೋ)ಅವನೇ ಸತ್‌ಶಿಷ್ಯನೆಂದು ತಿಳಿಯಬೇಕು.ಮೋಕ್ಷಕ್ಕೆ ಯೋಗ್ಯರಾಗಿರುವಂಥ ಸಾಧಕರಲ್ಲಿ ಇಂಥ ಸತ್‌ಶಿಷ್ಯರು ಮೊದಲನೆಯ ಕ್ರಮಾಂಕದಲ್ಲಿರುತ್ತಾರೆ. ದೃಢ ಶ್ರದ್ಧೆ ಇಡುವದು ಮನಸ್ಸಿನ ಒಂದು ದೊಡ್ಡ ಶಕ್ತಿಯಾಗಿದೆ. ಹಾಗೂ ನಿಶ್ಚಲ ಶ್ರದ್ಧಾ ಇಡುವದೇ ಮಾನವೀ ಮನದ ಶಕ್ತಿಯು ಇದು ಎಲ್ಲದಕ್ಕಿಂತ ಶ್ರೇಷ್ಠವಾದುದು. ಜಗತ್ತಿನಲ್ಲಿ ಅತಿಬುದ್ಧಿವಂತ ಜನ ಭೆಟ್ಟಿಯಾಗುವದು ವಿಶೇಷ ಕಠಿಣವೇನೂ ಅಲ್ಲ. ಆದರೆ ನಿಶ್ಚಲ ಶ್ರದ್ಧೆಯ ಜನ ಭೆಟ್ಟಿಯಾಗುವದು ಮಾತ್ರ ಬಹಳ ಕಠಿಣವಿರುವದು. ಇಂಥ ಶ್ರದ್ಧೆ ಹುಟ್ಟಿತೆಂದರೆ ಆತ್ಮಜ್ಞಾನದ ಅರುಣೋದಯ ಕಾಲ ಒದಗಿತೆಂದು ತಿಳಿಯಿರಿ. (೩೮) ಇಂಥ ಶುದ್ಧ ದೃಢ ಶ್ರದ್ಧೆಯಿಂದ ಸತ್‌ಶಿಷ್ಯನ ಮನಸ್ಸು ಸದ್ಗುರುವಿನ ಬೋಧದಿಂದ ಮಾತ್ರ ಶಾಂತವಾಗುವದು. ಅವನು ಸಾಯುಜ್ಯ ಮುಕ್ತಿಗೆ ಲಾಯಖ (ಯೋಗ್ಯ)ನಾಗುವನು. ಆಮೇಲೆ ಸಂಸಾರದಲ್ಲಿಯ ಆಸಕ್ತಿ ಅಥವಾ ಪ್ರೇಮವು ಅವನನ್ನು ಪುನಃ ಅದರಲ್ಲಿ ಎಳೆಯಲಾರದು. ಸಂಸಾರದಲ್ಲಿ ತೊಡಗಿಸಿಕೊಳ್ಳುವದಿಲ್ಲ. (೩೯) ಸದ್ಗುರು ದೇವರಿಗಿಂತ ಶ್ರೇಷ್ಠವಿರುವನು. ಸದ್ಗುರುವು ಸತ್‌ಶಿಷ್ಯನಿಗೆ ಏನನ್ನು ಕೊಡಬಲ್ಲನೋ ಅದನ್ನು ದೇವರು ಕೊಡಲಿಕ್ಕೆ ಶಕ್ಯನಿರುವದಿಲ್ಲ. ಸದ್ಗುರುವಿನ ಕೃಪೆಯಿಂದ ಸತ್‌ಶಿಷ್ಯನು ಸ್ವತಃದೇವಪದವನ್ನು ಹೊಂದುವನು. ಸದ್ಗುರುವಿಗಿಂತ ದೇವರು ದೊಡ್ಡವನಿರುವನೆಂದು ಯಾವ ಶಿಷ್ಯನಿಗೆ ಅನಿಸುವದೋ ಅಂಥವನು ದುರ್ದೈವಿಯು ಈ ತಿಳುವಳಿಕೆಯು ಒಂದು ಭ್ರಮೆ ಇರುವದು. ವೈಭವದ ಅಭಿಮಾನದಿಂದ ಹೊರಬೀಳುವಂಥ ಇದು ಒಂದು ವಿಕಲ್ಪವಾಗಿದೆ. ಅಥವಾ ಅಧಿಕಾರ ದೊಡ್ಡಿಸ್ತನ (ಸಿದ್ಧಿವಗೈರೆ ಪವಾಡಗಳು) ಪಡೆಯುವ ಹವ್ಯಾಸದ ಒಂದು ಪರಿಣಾಮವಿರುತ್ತದೆ. ಶರೀರದ ದೃಷ್ಟಿಯಿಂದ ಅಂದರೆ ಸ್ಥೂಲ ದೃಷ್ಟಿಯಿಂದ ನೋಡಿದರೆ ಆಗ ಸದ್ಗುರು ಮನುಷ್ಯನಾಗಿ ಕಾಣುವನು. ಮತ್ತು ಇವನು ಮನುಷ್ಯನೇ ಇರುವನು. ಇದೇನೂ ಸುಳ್ಳಲ್ಲ. ಪರಂತು ಮನಸ್ಸಿನ ವ ಆತ್ಮದ ದೃಷ್ಟಿಯಿಂದಅಥವಾ ಅಥವಾ ಸೂಕ್ಷ್ಮದೃಷ್ಟಿಯಿಂದ ನೋಡಿದಾಗ ಮಾತ್ರ ಅವನು ಪ್ರತ್ಯಕ್ಷ ಪರಮಾತ್ಮ ಸ್ವರೂಪವೇ ಆಗಿರುವನು. ಇದೂ ಸಹ ಸುಳ್ಳಲ್ಲ. ಇರಲಿ ಯಾವ ಶಿಷ್ಯನು ಸದ್ಗುರುವನ್ನು ಕೇವಲ ಸ್ಥೂಲದೃಷ್ಟಿಯಿಂದ ಅಥವಾ ದೇಹಬುದ್ಧಿಯುದೃಷ್ಟಿಯಿಂದ ನೋಡುವನೋ ಅಂಥವನಿಗೆ ತನ್ನ ಶ್ರೀಮಂತಿಕೆಯು ಮತ್ತು ಅಧಿಕಾರ ವ ಪಾಂಡಿತ್ಯದ ಅಭಿಮಾನದಿಂದ ಹೀಗೆ ಅನಿಸುವದು ಸಹಜವೇ ಅಂಥವನು ಸದ್ಗುರುವನ್ನು ಬಡವನೆಂದು ತಿಳಿದು ದೇವರನ್ನು ದೊಡ್ಡವನೆಂದು ತಿಳಿಯುವನು. ಸದ್ಗುರು ಭೆಟ್ಟಿಯಾದಾಗ ಅವನನ್ನು ನೋಡುವ ದೇಹ ಬುದ್ಧಿಯ ಭ್ರಮಾತ್ಮಕ ದೃಷ್ಟಿಕೋನ ಬದಲಾಗದೇ ಇದ್ದದ್ದು ಅವನ ದುರ್ದೈವವೇ ಸರಿ. (೪೦) ಸದ್ಗುರುವಿನ ನಿಜವಾದ ಸ್ವರೂಪ ಸ್ಥಿರವಾಗಿ ಉಳಿಯುವದಾಗಿದೆ, ಅವಿನಾಶಿಯಾಗಿದೆ. ದೇವರ ಸ್ವರೂಪ ಅಶಾಶ್ವತವಿರುವದು. ಯಾಕೆಂದರೆ ಕಲ್ಪಾಂತ್ಯದ ಕಾಲದಲ್ಲಿ ದೇವರು ನಾಶವಾಗುವನು. ಆ ಸಮಯದಲ್ಲಿ ಹರಿಹರಾದಿಗಳ ಸಾಮರ್ಥ್ಯ ಸಹ ಉಳಿಯುವದಿಲ್ಲ. (೪೧) ಹರಿಹರ ಬ್ರಹ್ಮಾದಿ ದೇವ ದೇವತೆಗಳು ಇಲ್ಲದಾದರೂ ಸದ್ಗುರು ಮಾತ್ರ ಹೇಗಿರುವನೋ ಹಾಗೇ ಇರುವನು. ಅಂತೆಯೇ ಸರ್ವದೇವರಿಗಿಂತ ಸದ್ಗುರುವಿನ ಸಾಮರ್ಥ್ಯ ಅಧಿಕವಿರುವದು. ಕ್ಷುದ್ರ ಬುದ್ಧಿಯ ಮಾನವನಿಗೆ ಈ ವಿಷಯ ತಿಳಿಯಲೊಲ್ಲದಾಗಿದೆ. (೪೨) ಸದ್ಗುರು ಮತ್ತು ದೇವ ಇವರಿಬ್ಬರೂ ಸರಿಸಮವೆಂದು ಅನ್ನುವಂಥ ಶಿಷ್ಯನು ದುರಾಚಾರಿ ಎನಿಸುವನು.ಇವನ ಮನದಲ್ಲಿಸುಳ್ಳು ವ ಭ್ರಮಾತ್ಮಕ ಕಲ್ಪನೆ ಗಟ್ಟಿಯಾಗಿ ತಳಊರಿದೆ. ಇದರಿಂದನಿಜವಾದ ತತ್ವಏನಿದೆಯೆಂಬುದು ಇವನಿಗೆತಿಳಿದಿಲ್ಲ.(೪೩) ವಾಸ್ತವಿಕವಾಗಿ ವಿಚಾರ ಮಾಡಿದರೆ ಮನುಷ್ಯ ತನ್ನ ಕಲ್ಪನೆಯಿಂದ ದೇವರನ್ನು ತಯಾರಿಸುವನು. ಮಂತ್ರದಿಂದ ಅದಕ್ಕೆ ದೇವತ್ವ ಬರುವದು. ಆದರೆ ಈಶ್ವರನಿಗೆ ಸಹ ಸದ್ಗುರುವಿನ ಕಲ್ಪನೆ ಮಾಡಲಿಕ್ಕೆ ಬರಲಾರದು. (೪೪)

ವ್ಹಾಣೌನಿ ಸದ್ಗುರು ಪೂರ್ಣಪಣೇ। ದೇವಾಹೂನ ಅಧಿಕ ಕೋಟಿಗುಣೇ।
ಜಯಾಸಿ ವರ್ಣಿತಾ ಭಾಂಡಣೇ। ವೇದಶಾಸ್ತ್ರೇ ಲಾಗಲೀ ॥೪೫॥

ಅಸೋ ಸದ್ಗುರು ಪದಾಪುಢೇ। ದುಜೇ ಕಾಹೀ ಚ ನ ಚಢೇ।
ದೇವಸಾಮರ್ಥ್ಯ ತೇ ಕೇವಢೇ। ಮಾಯಾಜನಿತ ॥೪೬॥

ಅಹೋ ಸದ್ಗುರು ಕೃಪಾ ಜಯಾಸೀ। ಸಾಮರ್ಥ್ಯ ನ ಚಲೆ ತಯಾಪಾಸೀ।
ಜ್ಞಾನಬಳೇ ವೈಭವಾಸೀ। ತೃಣತುಚ್ಛ ಕೇಲೇ ॥೪೭॥

ಸದ್ಗುರು ಕೃಪೆಚೇನಿ ಬಳೇ। ಅಪರೋಕ್ಷಜ್ಞಾನಾಚೇನಿ ಉಸಾಳೇ।
ಮಾಯೆಸಹಿತ ಬ್ರಹ್ಮಾಂಡ ಸಗಳೇ। ದೃಷ್ಟೀಸ ನಯೇ ॥೪೮॥

ಐಸೆ ಸಚ್ಛಿಷ್ಯಾಚೇ ವೈಭವ। ಸದ್ಗುರುವಚನೀ ದೃಢಭಾವ।
ತೇಣೇ ಗುಣೇ ದೇವರಾವ। ಸ್ವಯೇಂಚಿ ಹೋತೀ ॥೪೯॥

ಅಂತರೀ ಅನುತಾಪೇ ತಾಪಲೇ। ತೇಣೇ ಅಂತರ ಶುದ್ಧ ಜಾಲೇ।
ಪುಢೇ ಸದ್ಗುರುವಚನೇ ನಿವಾಲೇ। ಸಚ್ಛಿಷ್ಯ ಐಸೇ ॥೫೦॥

ಲಾಗತಾ ಸದ್ಗುರುವಚನ ಪಂಥೇ। ಜಾಲೇ ಬ್ರಹ್ಮಾಂಡ ಪಾಲಥೇ।
ತರೀ ಜಯಾಚ್ಯಾ ಶುದ್ಧ ಭಾವಾರ್ಥೇ। ಪಾಲಟ ನ ಧರಿಜೇ ॥೫೧॥

ಶರಣ ಸದ್ಗುರೂಸ ಗೇಲೆ। ಸಚ್ಛಿಷ್ಯ ಐಸೆ ನಿವಡಲೇ।
ಕ್ರಿಯಾಪಾಲಟೇ ಜಾಲೆ। ಪಾವನ ಈಶ್ವರೀ ॥೫೨॥

ಅಂತೆಯೇ ಸದ್ಗುರು ದೇವರಿಗಿಂತ (ಸಂಪೂರ್ಣ) ನಿಶ್ಚಯವಾಗಿಯೂ ಕೋಟಿ ಪಟ್ಟಿಗಿಂತ ಅಧಿಕ ಶ್ರೇಷ್ಠನಾಗಿದ್ದಾನೆ. ಸದ್ಗುರುವಿನ ಸ್ವರೂಪವು ಕಲ್ಪನಾತೀತವಿರುವದರಿಂದ ಅವನ ವರ್ಣನೆ ಮಾಡುವ ವೇದ ಶಾಸ ಗಳಲ್ಲಿ. ಬಹಳಷ್ಟು ಮತ ಭಿನ್ನತೆ ಇರುವದು, ಕಂಡು ಬರುವದು. ಅವಸಾತಿನಲ್ಲಿ (ಒಳಗೊಳಗೆ) ಅವುಗಳ ಜಗಳವಾಗುವದೂ ಉಂಟು. (೪೫) **ದೇವರೇ ಇರಲಿ, ಇಡೀ ವಿಶ್ವವೇ ಇರಲಿ ಇದೆಲ್ಲ ದೃಶ್ಯದ ಬಾಜಾರವು, ಮಾಯೆಯ ಅಳವಿನಲ್ಲಿ (ಕಕ್ಷೆಯಲ್ಲಿ) ಬರುವಂಥವು. ಸದ್ಗುರುವಿನ ಸ್ವರೂಪಕ್ಕೆ ಮಾಯೆಯ ಸ್ಪರ್ಶವಿಲ್ಲ:**-ಸದ್ಗುರುವಿನ ಸ್ಥಾನ ಪರಮ ಶ್ರೇಷ್ಠವಿರುವದರಿಂದ ಇದಕ್ಕಿಂತ ಶ್ರೇಷ್ಠವಾದದ್ದು ಯಾವದೂ ಇಲ್ಲ. ದೇವರೆಲ್ಲ ಮಾಯೆಯಿಂದ ನಿರ್ಮಾಣವಾಗುವರು. ಅಂತೆಯೇ ದೇವರ ಸಾಮರ್ಥ್ಯ ಸದ್ಗುರುವಿನ ಮುಂದೆ (ಕಡಿಮೆಯೆನಿಸುವದು) ನಡೆಯಲಾರದು. (೪೬) ಇರಲಿ, ಯಾರ ಮೇಲೆ ಸದ್ಗುರುವಿನ ಕೃಪೆ ಇರುವದೋ ಅಂಥವರ ಮೇಲೆ ಯಾರ ಸತ್ತೆಯೂ ನಡೆಯುವದಿಲ್ಲ. ಇವನ ಕೃಪೆಯಿಂದ ಶಿಷ್ಯನಿಗೆ ಬ್ರಹ್ಮಜ್ಞಾನವಾಗುವದು. ತನ್ನ ಬ್ರಹ್ಮಜ್ಞಾನದ ಸಾಮರ್ಥ್ಯದಿಂದ ಅವನು ಯಾವತ್ತೂ ವೈಭವವನ್ನು ಕಃಪದಾರ್ಥವೆಂದು ತಿಳಿಯುವನು. ಬ್ರಹ್ಮಜ್ಞಾನವೊಂದೇ ಎಲ್ಲಕ್ಕಿಂತ ಸರ್ವಶ್ರೇಷ್ಠವೆಂದು ತಿಳಿದಿರುವನು. [೪೭] ಸದ್ಗುರುವಿನ ಕೃಪೆಯ ಬಲದಿಂದ ಸತ್‌ಶಿಷ್ಯನಿಗೆ ಆತ್ಮಸಾಕ್ಷಾತ್ಕಾರವಾಗುವದು. ಅಂದರೆ ಆತ್ಮದ ಪ್ರತ್ಯಕ್ಷ ಜ್ಞಾನವಾಗುವದು. ಈ ಜ್ಞಾನವು ಅವನ (ಶಿಷ್ಯನ) ಅಂತಃಕರಣದಲ್ಲಿ ಇಳಿದು ಸಜೀವವಾಗಿ ಜೋರಿನಿಂದ ಹೊರಬರುತ್ತದೆ. ಅರ್ಥಾತ್ ಗುರೂಪದೇಶ ಅನುಭವಕ್ಕೆ ಬರುತ್ತದೆ. ಕೂಡಲೇ ಸತ್‌ಶಿಷ್ಯನಿಗೆ ಆತ್ಮಸಾಕ್ಷಾತ್ಕಾರ ವಾಗುವದು. ಮಾಯೆಯಿಂದ ಮೊದಲು ಮಾಡಿ ಈ ಯಾವತ್ತೂ ದೃಶ್ಯದ ಪ್ರಚಂಡ ವಿಶ್ವವು ಖರೇತನದಿಂದ (ಶಾಶ್ವತವಾದದ್ದೆಂದು) ಕಾಣುವದಿಲ್ಲ. ತುಚ್ಛವೆನಿಸುವದು, ಮಿಥ್ಯಾ ಇರುವದೆಂದು ಅನುಭವಕ್ಕೆ ಬರುವದು ಇದು ಆತ್ಮಜ್ಞಾನದಿಂದ ಪುಟ್ಟಾಪೂರಾ (ಸಂಪೂರ್ಣವಾಗಿ) ವ್ಯಾಪಿಸಿರುತ್ತದೆ, ಒಳಗೂ ಹೊರಗೂ ಎಲ್ಲೆಂದರಲ್ಲೆಲ್ಲ ಕಡೆಗೆ ಆತ್ಮಸ್ವರೂಪದ ಹೊರತು ಉಳಿದ ಯಾವದೂ ಇವನಿಗೆ ಕಾಣುವದಿಲ್ಲ. (೪೮) ಉತ್ತಮ ಶಿಷ್ಯನ ಐಶ್ವರ್ಯ ಮತ್ತು ಜ್ಞಾನ ವೈಭವವು ಈ ಪ್ರಕಾರದ್ದಿರುತ್ತದೆ. ಸದ್ಗುರುವಿನ ಶಬ್ದದಮೇಲೆ ಶಿಷ್ಯನ ಪೂರ್ಣ ವಿಶ್ವಾಸವಿರುತ್ತದೆ. ಇದರಿಂದ ಸತ್‌ಶಿಷ್ಯನು ಸ್ವತಃ ಈಶ್ವರ ಸ್ವರೂಪನಾಗಿ ಹೋಗುವನು. **ತಾತ್ಪರ್ಯ:- "ನಾನು ಬ್ರಹ್ಮ ಇರುವೆ" ಈ ದಿವ್ಯ ಅವಸ್ಥೆಗೆ ಸತ್‌ಶಿಷ್ಯನು ಮುಟ್ಟುವನು. [೪೯] ಶಿಷ್ಯಸಮುದಾಯದಲ್ಲಿ ಸತ್‌ಶಿಷ್ಯ ಯಾವ ಪ್ರಕಾರ ಒಡೆದು ಕಾಣಿಸುವನು? ಮತ್ತು ಹೇಗಿರುವನು? ಇದರ ವರ್ಣನೆ ಕೇಳಿರಿ:-** ಯಾವನ ಅಂತಃ ಕರಣವು ಪಶ್ಚಾತ್ತಾಪಾಗ್ನಿಯಿಂದ ಬೆಂದು ಅದು ನಿರ್ಮಲವಾಗಿರುವದೋ? ಶುದ್ಧಗೊಂಡಿರುವದೋ? ಅಂಥ ಬೆಂದ ಅಂತಃಕರಣವು ಸದ್ಗುರುವಿನ ಬೋಧ ವಚನದಿಂದ ಶಾಂತವಾಗುವದು. ಇದು ಸತ್‌ಶಿಷ್ಯನ ನಿಜವಾದ ಇರುವಿಕೆಯು. (೫೦) ಸದ್ಗುರು ಹೇಳಿದ ಮಾರ್ಗದಿಂದ ಸಾಧನ ಮಾಡುತ್ತಿರುವಾಗ ಇಡೀ ಬ್ರಹ್ಮಾಂಡ (ಜಗತ್ತು) ಡಬ್ಬ ಬೀಳುವ ಪ್ರಸಂಗ ಬಂದರೂ ಸಹ ಸದ್ಗುರು ವಚನದ ಮೇಲಿಟ್ಟಿರುವ ಶುದ್ಧ, ಅಚಲ ವಿಶ್ವಾಸದಿಂದ ಸ್ವಲ್ಪವೂ ಸಹ (ಅಂತರಂಗ, ಬಹಿರಂಗಗಳಲ್ಲಿ) ಹೆಚ್ಚು ಕಡಿಮೆ ಆಗುವದಿಲ್ಲ. ಇದು ಸತ್‌ಶಿಷ್ಯನ ಲಕ್ಷಣವು [೫೧] ಈ ರೀತಿಯಿಂದ ಯಾವನು ನಿಜವಾಗಿಯೂ ಸದ್ಗುರುವಿಗೆ ಶರಣಾಗುವನೋ ಅಂಥವನೇ ಸತ್‌ಶಿಷ್ಯನೆಂದು ಅನಿಸಿ ಕೊಳ್ಳುವನು. ಸದ್ಗುರು ಸಹವಾಸದಿಂದ ಅವನ ಅಂತರಂಗ ವ ಬಹಿರಂಗಗಳಲ್ಲಿ ಬದಲಾವಣೆಯಾಗುವದು. ಮತ್ತು ಅವನು ಈಶ್ವರ ಸ್ವರೂಪನೇ ಆಗಿ ಪವಿತ್ರನಾಗಿ ಹೋಗುವನು. ಸದ್ಗುರುವು ಹೇಳಿದಂತೆ ಸಾಧನವನ್ನು ಮನಃ ಪೂರ್ವಕವಾಗಿ ಮಾಡುತ್ತ, ಮಾಡುತ್ತ ಸತ್‌ಶಿಷ್ಯನು ಮಾನವತೆಯಿಂದ, ದೇವತ್ವದ ಕಡೆಗೆ ತೀವ್ರಗತಿಯಿಂದ ನಡೆದು ಹೋಗುವನು. ಅರ್ಥಾತ್ ಇದರಿಂದ ಅವನಲ್ಲಿ ಆಮೂಲಾಗ್ರ ಬದಲಾವಣೆಯಾಗುತ್ತ ಹೋಗುವದು. ಇವನು ಸರ್ವದೃಷ್ಟಿಯಿಂದ ಬಹು ನಿರ್ಮಲ ವ ಪವಿತ್ರನಾಗುವನು. (೫೨)

ಐಸಾ ಸದ್ಭಾವ ಅಂತರೀ । ತೇಚಿ ಮುಕ್ತೀಚಿ ವಾಟೇಕರೀ ।
ಯೇರ ಮಾಈಕ ವೇಷಧಾರೀ । ಅಸಚ್ಛಿಷ್ಯ ॥೫३॥

ವಾಟೆ ವಿಷಯಾಚೇ ಸುಖ । ಪರಮಾರ್ಥ ಸಂಪಾದಣೇ ಲೌಕಿಕ ।
ದೇಖೋವೇಖೀ ಪಢತ ಮೂರ್ಖ। ಶರಣ ಗೇಲೇ ॥೫೪॥

ಜಾಲೀ ವಿಷಈ ವೃತ್ತಿಅನಾವರ । ದೃಢ ಧರಿಲಾ ಸಂಸಾರ ।
ಪರಮಾರ್ಥ ಚರ್ಚೇಚಾ ವಿಚಾರ । ಮಳಿಣ ಜಾಲಾ ॥೫೫॥

ಮೋಡ ಘೇತಲಾ ಪರಮಾರ್ಥಾಚಾ । ಹವ್ಯಾಸ ಧರಿಲಾ ಪ್ರಪಂಚಾಚಾ ।
ಭಾರ ವಾಹಿಲಾ ಕುಟುಂಬಾಚಾ । ಕಾಬಾಡೀ ಜಾಲಾ ॥೫೬॥

ಮಾನಿಲಾ ಪ್ರಪಂಚೀ ಆನಂದ । ಕೇಲಾ ಪರಮಾರ್ಥೀ ವಿನೋದ ।
ಭ್ರಾಂತ ಮೂಢ ಮತಿಮಂದ । ಲೋಧಲಾ ಕಾಮೀ ॥೫೭॥

ಸೂಕರ ಪೂಜಿಲೆ ವಿಲೇಪನೇ । ಮ್ಹೈಸಾ ಮರ್ದಿಲಾ ಚಂದನೇ ।
ತೈಸಾ ವಿಷಈ ಬ್ರಹ್ಮಜ್ಞಾನೇ । ವಿವೇಕೇ ಬೋಧಿಲಾ ॥೫೮॥

ರಾಸಭ ಉಕರಡಾ ಲೋಳೇ । ತಯಾಸಿ ಪರಿಮಳ ಸೋಹಳೇ ।
ಉಲೂಕ ಅಂಧಾರೀ ಪಳೇ । ತಯಾ ಕೇವೀ ಹಂಸಸಂಗತೀ ॥೫೯॥

ತೈಸಾ ವಿಷಯು ದಾರೀಚಾ ಬರಾಡೀ । ಘಾಲೀ ಅಧಃಪತನೀ ಉಡೀ ।
ತಯಾಸ ಭಗವಂತ ಆವಡೀ । ಸತ್ಸಂಗ ಕೈಂಚಾ ॥೬೦॥

ವರ್ತೀ ಕರೂನ ದಾಂತಾಳೀ । ಸ್ವಾನಪುತ್ರ ಹಾಡೇ ಚಗಳೀ ।
ತೈಸಾ ವಿಷಈ ತಳಮಳೀ । ವಿಷಯು ಸುಖಾಕಾರಣೇ ॥೬೧॥

ತಯಾ ಸ್ವಾನಮುಖೀ ಪರಮಾನ್ನ । ಕೀ ಮರ್ಕಟಾಸ ಸಿಂಹಾಸನ ।
ತೈಸೇ ವಿಷಯು ಶಕ್ತಾ ಜ್ಞಾನ । ಜಿರೇಲ ಕೈಚೇ ॥೬२॥

ರಾಸಭೇ ರಾಖತಾ ಜನ್ಮ ಗೇಲಾ । ತೋ ಪಂಡಿತಾ ಮಧ್ಯೇ ಪ್ರತಿಷ್ಠಿಲಾ ।
ನ ವಚೆ ತೈಸಾ ಆಶಕ್ತಾಲಾ । ಪರಮಾರ್ಥ ನಾಹೀ ॥೬३॥

ಸತ್‌ಶಿಷ್ಯನ ಚಿತ್ತದಲ್ಲಿ ಅಚಲವಾದ (ಅಢಳವಾದ) ಶ್ರದ್ಧೆ ಇರುತ್ತದೆ. ಇದರಿಂದಲೇ ಅವನು ಮೋಕ್ಷದ ಅಧಿಕಾರಿ (ಹಕ್ಕುದಾರ)ಯಾಗುವನು. ಇನ್ನುಳಿದ (ಬಾಕಿ) ಶಿಷ್ಯರು ಕೇವಲ ಶಿಷ್ಯವೇಷಧರಿಸಿದ ದುಷ್ಟ, ಲಬಾಡ ಶಿಷ್ಯರೆಂದು ಅನಿಸುವರು. (೫३) ಈ ಮುಂದಿನ ಹದಿನಾರು, ಹದಿನೇಳು ಓವಿಗಳಲ್ಲಿ ಶ್ರೀ ಸಮರ್ಥರು ನಾಮಧಾರಿ ಶಿಷ್ಯರ (ಹೆಸರಿಗೆ ಮಾತ್ರ ಶಿಷ್ಯರು) ವರ್ಣನೆಯನ್ನು ಮಾಡಿರುವರು. ಇವರ ಮನದೊಳಗೆ ಪ್ರಪಂಚದ ಬಗೆಗಿನ ಪ್ರೇಮ ಕಡಿಮೆ ಆಗಿರುವದಿಲ್ಲ. ಇಷ್ಟೇ ಅಲ್ಲ. ಪ್ರಾಪಂಚಿಕ ವಾಸನಾದಫಲ ಪಡೆಯುವದಕ್ಕಾಗಿಯೇ ಶಿಷ್ಯರಾಗುವರು. ಇಂಥ ಕಲಿತ, ತಿಳಿದ ಮೂರ್ಖರು ವಿನೋದಕ್ಕಾಗಿಯೇ ಪರಮಾರ್ಥ ಮಾಡುತ್ತಾರೆ:- ಯಾರು ಕಲಿತ (ತಿಳಿದವ, ಪಂಡಿತ) ಮೂರ್ಖ(ಪಢತಮೂರ್ಖ)ರಿರುವರೋ ಅವರ ಮನಸ್ಸಿನಲ್ಲಿ ಇಂದ್ರಿಯ ಭೋಗದೊಳಗೆ ಸುಖವಿದೆಯೆಂದು ಅನಿಸುತ್ತದೆ. ಕೇವಲ ಲೌಕಿಕದಲ್ಲಿಯ ದೊಡ್ಡಸ್ತಿಕೆಗಾಗಿ ಇವರು ಪರಮಾರ್ಥ ಮಾಡುವರು. ನಾವು ಪರಮಾರ್ಥದ ಜ್ಞಾನಿಗಳು ಎಂದು ಹೇಳಿಕೊಳ್ಳುವದಕ್ಕಾಗಿ, ಇದರ ಪ್ರದರ್ಶನ ಮಾಡುವದಕ್ಕಾಗಿ ಸದ್ಗುರುವಿಗೆ ಶರಣು ಹೋಗುವರು.(೫೪)ವಾಸನಾತೃಪ್ತಿಗಾಗಿ ಇಂದ್ರೀಯ ಭೋಗದಲ್ಲಿಯಥೇಚ್ಛ ರಮಿಸುವರು. ಇವರಿಗೆ ಪ್ರಪಂಚದಲ್ಲಿ ದೃಢಪ್ರೇಮವಿರುತ್ತದೆ. ಇದರಿಂದ ಪರಮಾರ್ಥದಲ್ಲಿಯ ಸೂಕ್ಷ್ಮ ವಿಚಾರವ ಜ್ಞಾನ (ಆಕಲನ) ಗ್ರಹಿಸುವದು ಆಗುವದಿಲ್ಲ ಸದಾ ಕಾಲ ಬಹಿರ್ಮುಖ ವೃತ್ತಿ ಹೊರಗಿನ ವಿಷಯದಲ್ಲಿ (ಆಸಕ್ತಿ)ಯೇ ಇರುವದರಿಂದ ಅವರಿಗೆ ಭಗವಂತನ ಬಗ್ಗೆ ವಿಚಾರ ಮಾಡಲಿಕ್ಕೆ ಬರುವದಿಲ್ಲ(ಆಗುವದಿಲ್ಲ.)(೫೫) ಕಲಿತ (ಪಂಡಿತ, ಜಾಣ) ಮೂರ್ಖ ಜನರು ಪರಮಾರ್ಥದ ಕಡೆಗೆ ಒಲಿಯುತ್ತಾರೆ. ಆದರೆಅವರ ಮನಸ್ಸು ಪ್ರಪಂಚದಲ್ಲಿ ಸಿಕ್ಕಿಕೊಂಡಿರುತ್ತದೆ. ಕೇವಲ ಪ್ರಾಪಂಚಿಕ ವಾಸನಾದಿಂದ ತುಂಬಿ ಹೋಗಿರುತ್ತದೆ. ಈ ಕಾರಣದಿಂದ ಕುಟುಂಬದ ಹೊರೆಯನ್ನು ಹೊತ್ತು, ಹೊತ್ತು ಹಮಾಲರಂತೆ ಅವರ ಸ್ಥಿತಿ ಆಗಿರುತ್ತದೆ. (೫೬) ಇವರ ನಿಜವಾದ ಸುಖವು ಪ್ರಪಂಚದಲ್ಲಿಯೇ ಅಡಕವಾಗಿರುತ್ತದೆ. ಕೇವಲ ಕರ್ಮಣೂಕ ಅಂದರೆ ಮನರಂಜನೆಗಾಗಿ ಇವರು ಪರಮಾರ್ಥ ಮಾಡುತ್ತಾರೆ. ಭ್ರಮೆಯಲ್ಲಿರುವ ಮತ್ತು ಮೂರ್ಖ ಹಾಗೂ ಮಂದಬುದ್ಧಿಯ ಈ ಮನುಷ್ಯರು ವಾಸನಾದಲ್ಲಿ ಸಿಕ್ಕಿ ಹಾಕಿಕೊಂಡಿರುತ್ತಾರೆ. (೫೭) ಹಂದಿಗೆ ಸುಗಂಧ ಲೇಪ ಹಚ್ಚಿ ಪೂಜಿಸಿದರೆ ಅಥವಾ ಒಂದು ಕೋಣಕ್ಕೆ ಚಂದನದ ಗಂಧ ಲೇಪಿಸಿದರೆ ಅವುಗಳಿಗೆ ಪೂಜೆಯ ಅಥವಾ ಸುಗಂಧದ ಮಹತ್ವ (ಕಿಮ್ಮತ್ತು) ತಿಳಿಯುವದಿಲ್ಲ. ಇದೇ ಪ್ರಕಾರ ಪ್ರಾಪಂಚಿಕ ವಾಸನಾದಲ್ಲಿ ಸುತ್ತುವರಿಯಲ್ಪಟ್ಟ ಮನುಷ್ಯನಿಗೆ ಬ್ರಹ್ಮಜ್ಞಾನ ಹೇಳಿದರೆ ಮತ್ತು ಆತ್ಮಾನಾತ್ಮ ವಿವೇಕ ಕಲಿಸಿದರೆ ಅದರ ಮಹತ್ವ ಅವರಿಗೆ ತಿಳಿಯುವದಿಲ್ಲ. ಅದು ನಿರುಪಯೋಗಿ ಆಗುವದು. (೫೮) ಅತಿ ದುರ್ಗಂಧ-ವಿರುವ ತಿಪ್ಪೆ (ಗೊಬ್ಬರ ಗುಂಡಿ)ಯೊಳಗೆ ಹೊರಳಾಡುವ ಕತ್ತೆಗೆ ಸುಗಂಧದ ಆನಂದ ಗೊತ್ತಾಗುವದಿಲ್ಲ. ಮತ್ತು ಕತ್ತಲೆಯಲ್ಲಿಯೇ ಜೀವನ ಕಳೆಯುವ ಗೂಗೆಗೆ ಸೂರ್ಯ ಪ್ರಕಾಶದದಲ್ಲಿ ಸ್ವಚ್ಛಂದವಾಗಿ ವಿಹಾರ ಮಾಡುವ ಹಂಸಪಕ್ಷಿಯ ಮುಕ್ತ ಜೀವನದ ಕಲ್ಪನೆ ಬರಲಿಕ್ಕೆ ಶಕ್ಯವಿಲ್ಲ.(೫೯) ಇದೇ ಮಾತು ಇಂದ್ರಿಯದ್ವಾರದಲ್ಲಿ ಕುಳಿತ ದೃಶ್ಯಭೋಗದ ಭಿಕಾರಿ ಮನುಷ್ಯನಿಗೆ ಭಗವಂತನ ಮೇಲೆ ಪ್ರೇಮವಿರುವದಿಲ್ಲ. ಸತ್ಸಂಗದ ಮಹತ್ವ (ಕಿಮ್ಮತ್ತು) ತಿಳಿಯುವದಿಲ್ಲ. ಇವನು ಸತತವಾಗಿ ಇಂದ್ರಿಯ ಭೋಗದ ದುರ್ಗಂಧ ಕೂಪದಲ್ಲಿ ಜಾರಿ ಬೀಳುತ್ತಾನೆ. (ಹಾರಿ ಬೀಳುತ್ತಾನೆ). (೬೦) ದವಡೆಯನ್ನು ಮೇಲೆ ಮಾಡಿ ನಾಯಿಯು ಎಲುಬನ್ನು ಕಡಿಯುವದರಲ್ಲಿಯೇ ಆನಂದ ಪಡೆಯುತ್ತಿರುವಂತೆ, ಇಂದ್ರಿಯಾಧೀನ ಮನುಷ್ಯನಿಗೆ ಇಂದ್ರಿಯ ಭೋಗದಲ್ಲಿಯೇ ಆನಂದವನಿಸುತ್ತದೆ. ಇಂದ್ರಿಯ ಸುಖಕ್ಕಾಗಿ ಸದಾ ಅವನು ಚಿಂತಾಮಗ್ನ (ಕಸಿವಿಸಿ ಪಡುವವ) ನಾಗಿರುವನು. (೬೧) ಎಲುಬು ಕಡಿಯುವ ನಾಯಿಯ ಬಾಯಿಯಲ್ಲಿ ಉತ್ತಮ ಪಾಯಸವನ್ನು ಹಾಕಿದರೂ ಸಹ ಅದಕ್ಕೆ ರುಚಿಸುವದಿಲ್ಲ. ಅಥವಾ ಮಂಗನನ್ನು ಸಿಂಹಾಸನದ ಮೇಲೆ ಕೂಡ್ರಿಸಿದರೂ ಅದಕ್ಕೆ ಸೊಗಸೆನಿಸುವದಿಲ್ಲ. ಇದೇ ಮಾತು ಇಂದ್ರಿಯಾಸಕ್ತ ಮನುಷ್ಯನಿಗೂ ಅನ್ವಯಿಸುವದು. ಅವನಿಗೆ ಆತ್ಮಜ್ಞಾನ ಅರಗುವದಿಲ್ಲ. (೬೨) ಕತ್ತೆ ಕಾಯುವ ಕೆಲಸವನ್ನೇ ಮಾಡುತ್ತ ಬಂದ ಕುಂಬಾರನಿಗೆ ಕತ್ತೆಯ ಸಹವಾಸವೇ ಸದಾ ಹೊಂದಿರುವದು-ಆ ಕುಂಬಾರನನ್ನು ಪಂಡಿತರ ಸಭೆಗೆ ಕರೆದೊಯ್ದು ಅವರ ಸರಿಜೋಡಿ ಕೂಡ್ರಿಸಿದರೆ ಅದು ಅವನಿಗೆ ಸರಿಹೋಗುವದಿಲ್ಲ. ಇದರಂತೆಯೇ ಇಂದ್ರಿಯಭೋಗದಲ್ಲಿ ಮಗ್ನನಾದ ಮನುಷ್ಯನಿಗೆ ಪರಮಾರ್ಥ ಸಾಧಿಸುವದಿಲ್ಲ. (೬३)

ಮಿಳಾಲಾ ರಾಜಹಂಸಾಚಾ ಮೇಳಾ । ತೇಥೇ ಆಲಾ ಡೊಂಬಕಾವಳಾ ।
ಲಕ್ಷೂನ ವಿಷ್ಟೇಚಾ ಗೋಳಾ । ಹಂಸ ಮ್ಹಣವೀ ॥೬೪॥

ತೈಸೆ ಸಜ್ಜನಾಚೆ ಸಂಗತೀ । ವಿಷಈ ಸಜ್ಜನ ಮ್ಹಣವಿತೀ ।
ವಿಷಯ ಆಮೋದ್ಯ ಚಿತ್ತೀ । ಗೋಳಾ ಲಕ್ಷಿಲಾ ॥೬೫॥

ಕಾಖೆ ಘೇಊನಿಯಾ ದಾರಾ । ಮ್ಹಣೆ ಮಜ ಸನ್ಯಾಸೀ ಕರಾ ।
ತೈಸಾ ವಿಷಯೀ ಸೈರಾ ವೈರಾ । ಜ್ಞಾನ ಬಡಬಡೀ ॥೬೬॥

ಅಸೋ ಏಸೆ ಪಢತ ಮೂರ್ಖ । ತೇ ಕಾಯ ಜಾಣತೀ ಅದ್ವೈತ ಸುಖ ।
ನಾರಕೀ ಪ್ರಾಣೀ ನರ್ಕ । ಭೋಗತೀ ಸ್ವಇಛಾ ॥೬೭॥

ವೈಷೇಚೀ ಕರೀಲ ಸೇವಾ । ತೋ ಕೈಸಾ ಮಂತ್ರೀ ಮ್ಹಣಾವಾ ।
ತೈಸಾ ವಿಷಯದಾಸ ಮಾನಾವಾ । ಭಕ್ತರಾಜ ಕೇವೀ ॥೬೮॥

ತೈಸೆ ವಿಷಈ ಬಾಪುಡೆ । ತ್ಯಾಸ ಜ್ಞಾನ ಕೋಣೀ ಕಡೆ ।
ವಾಚಾಳ ಶಾಬ್ದಿಕ ಬಡಬಡೇ । ಮರಪಡೆ ಜಾಲೆ ॥೬೯॥

ಏಸೇ ಶಿಷ್ಯ ಪರಮ ನಷ್ಟ । ಕನಿಷ್ಠಾ ಮಧೇ ಕನಿಷ್ಠ ।
ಹೀನ ಅವಿವೇಕ ಆಣೀ ದೃಷ್ಟ । ಖಳ ಖೋಟೆ ದುರ್ಜನ ॥೭೦॥

ಏಸೇ ಜೇ ಪಾಪರೂಪ । ದೀರ್ಘದೋಷೀ ವಜ್ರಲೇಪ ।
ತಯಾಂಸ ಪ್ರಾಶ್ಚಿೀತ ಅನುತಾಪ । ಉದ್ಭವತಾ ಆಹೆ ॥೭೧॥

ತೇಹಿ ಪುನ್ಹಾ ಶರಣ ಜಾವೇ । ಸದ್ಗುರೂಸ ಸಂತೋಷವಾವೇ ।
ಕೃಪಾದೃಷ್ಟೀ ಜಾಲಿಯಾ ವ್ಹಾವೇ । ಪುನ್ಹಾ ಶುದ್ಧ ॥೭೨॥

ಸ್ವಾಮೀದ್ರೋಹ ಜಯಾಘಡೆ । ತೋ ಯಾವಚ್ಚಂದ್ರ ನರಕೀಪಡೆ ।
ತಯಾಸ ಉಪಾವಚಿ ನ ಘಡೆ । ಸ್ವಾಮೀ ತುಷ್ಟಲ್ಯಾವಾಂಚುನೀ ॥೭೩॥

ರಾಜಹಂಸಗಳ ಸಮುದಾಯದಲ್ಲಿ ಒಂದು ಡೊಂಬ ಕಾಗೆ ಬಂದು ಸೇರಿಕೊಂಡಿತು. ಆದರೆ ಅದರ ಲಕ್ಷ್ಯ ಸದಾ ಹೇಸಿಕೆಯ ಮೇಲೆ ಇದ್ದರೂ ತಾನೂ ಹಂಸವೆಂದೇ ಅಂದುಕೊಳ್ಳಹತ್ತಿತು, [೬೪] ಇದೇ ರೀತಿಯಿಂದ ಸಂತ ಶರಣರ ಸಂಗತಿಯಲ್ಲಿ ಇದ್ದಂಥ ಇಂದ್ರಿಯದಾಸನು ತಾನೂ ಸಂತನೆಂದು ಹೇಳಿಕೊಳ್ಳುವವನು. ಆದರೆಅವನ ಸರ್ವ ಲಕ್ಷ್ಯವೂ ಇಂದ್ರಿಯಭೋಗ ರೂಪೀಹೊಲಸಿನಲ್ಲಿತೊಡಕಿಕೊಂಡಿರುತ್ತದೆ(೬೫) ಹೆಂಡತಿಯನ್ನು ಬಗಲಲ್ಲಿ ಎತ್ತಿಕೊಂಡು ಹೋಗಿ "ನನಗೆ ಸನ್ಯಾಸ ದೀಕ್ಷೆ ಕೊಡಿರಿ" ಎಂದು ಯಾರಾದರೂ ಅಂದರೆ ಅದು ಹೇಗೆ ಅರ್ಥಹೀನವಿರುವದೋ ಅದೇ ರೀತಿಯಾಗಿ ಇಂದ್ರಿಯಾಸಕ್ತ ಮನುಷ್ಯನು ಯದ್ವಾತದ್ವಾ ಭಾರೀ ಭಾರೀ ಜ್ಞಾನದ ಮಾತುಗಳನ್ನು ಆಡುತ್ತ ಅತ್ತಿತ್ತ ತಿರುಗುವನು. (೬೬) ಇರಲಿ, ತಿಳಿದವರಾದ ಇಂಥ ಮೂರ್ಖ (ಪಢತ ಮೂರ್ಖ)ರಿಗೆ ಭಗವಂತನೊಂದಿಗೆ ಏಕರೂಪ ಹೊಂದುವಂಥ ಸುಖದ ಕಲ್ಪನೆ ಬರುವದಿಲ್ಲ. ಇವರು ಅದ್ವೈತದ ಸುಖವನ್ನೇನು ಬಲ್ಲರು ? ಹೊಲಸಿನಲ್ಲಿರುವ ಹುಳಗಳಿಗೆ ಆ ಹೊಲಸಿನಲ್ಲಿರುವದೇ ಮಹದಾನಂದವೆನಿಸುತ್ತದೆ. ಅಂತೆಯೇ ಅವು ಒಳ್ಳೇ ಸ್ವೇಚ್ಛೆಯಿಂದ ಆ ಹೊಲಸಿನಲ್ಲಿ ಆನಂದದಿಂದ ಇರುವವು (೬೭) ವೇಶ್ಯಾ ಸ್ತ್ರೀಯ ಸೇವೆ ಮಾಡುವ ಲಾಲೂಗಿರಿ ಮನುಷ್ಯ ರಾಜ್ಯಭಾರವನ್ನು ಹೊತ್ತಿರುವ ರಾಜನ ಪ್ರಧಾನಿ ಆಗಲಿಕ್ಕೆ ಸಾಧ್ಯವಿಲ್ಲ. ಇದರಂತೆ ಇಂದ್ರಿಯಗಳ ಗುಲಾಮನಾದವನು ಉತ್ತಮ ಭಕ್ತ ಹೇಗಾಗುವನು ? (೬೮) ಇದೇ ಪ್ರಕಾರವಾಗಿ ಯಾರು ಇಂದ್ರಿಯ ಸುಖಕ್ಕಾಗಿ ಹಪಾಪಿಸುವರೋ ಅಂಥವರಿಗೆ ಆತ್ಮಜ್ಞಾನವಾಗುವದು ಹೇಗೆ ಶಕ್ಯವಿರುವದು? ಇಂಥವರು ಕೇವಲ ಮಾತಿನ ಚಾತುರ್ಯದಿಂದ ಶಾಬ್ದಿಕ ಜ್ಞಾನ ಬಡಬಡಿಸುತ್ತ ಜ್ಞಾನಿ ಎಂದು ಮೆರೆಯುತ್ತಾರೆ(೬೯) ಈ ತರಹದ ಶಿಷ್ಯರು ಕೆಲಸಕ್ಕೆ ಬಾರದವರು, ವ್ಯರ್ಥರು, ನೀಚರಲ್ಲಿ ಪರಮನೀಚರು, ಹೀನರು, ಅವಿವೇಕಿಗಳು, ದುಷ್ಟರು, ದುರ್ಜನರು, ಖಳರು ಮತ್ತು ಸುಳ್ಳುಗಾರರು ಇರುವರು. (೭೦) **ಇಲ್ಲಿ ಒಂದು ಪ್ರಶ್ನೆ ಉದ್ಭವಿಸುವದು. ಏನೆಂದರೆ, ಈ ಅಸತ್ ಶಿಷ್ಯರ ಗತಿ ಏನು ? ಇವರನ್ನು ಸತ್ ಶಿಷ್ಯರನ್ನಾಗಿ ಮಾಡುವದಕ್ಕೆ ಏನಾದರೂ ಉಪಾಯ ಅದೆಯೋ ? ಅಥವಾ ಇಲ್ಲವೋ ? ಇದಕ್ಕೆ ಉಪಾಯವಿದೆ. ಇಂಥ ಶಿಷ್ಯರು ನಿಜವಾಗಿಯೂ ಪಶ್ಚಾತ್ತಾಪ ಹೊಂದಿ ಅವರು ಸದ್ಗುರುವಿಗೆ ಪುನಃ ಶರಣು ಬಂದರೆ, ಸದ್ಗುರುವಿನ ಕೃಪಾ ಬಲದಿಂದ ಅವರಲ್ಲಿ ಬದಲಾವಣೆಯಾಗುತ್ತದೆ.** ಇಂಥ ಶಬ್ದಜ್ಞಾನಿ, ಪರಮನಷ್ಟ, ಸುಳ್ಳ, ದುರ್ಜನ, ದುಃಶ್ಶೀಲರಾದ ಪಾಪಮಯ ಶಿಷ್ಯರು ಬಹುದಿವಸದಿಂದ ದೋಷರೂಪೀ ಜೀವನ ನಡೆಸಿದ್ದರಿಂದ ಇವರಲ್ಲಿ ಆ ದೋಷಗಳು ಬಹು ಗಟ್ಟಿಯಾಗಿ ಮನಸ್ಸಿನಲ್ಲಿ ಕುಳಿತಿರುತ್ತವೆ. ಇವರಿಗೆ ಖರೇ ಪಶ್ಚಾತ್ತಾಪವಾಗಿದ್ದರೆ ಅಥವಾ ಆದರೆ ಅದೇ ಪ್ರಾಯಶ್ಚಿತ್ತವಾಗಿ ಅನುತಾಪದ ಅಗ್ನಿಯಿಂದ ಇವರ ದೋಷರೂಪೀ ಮಲ ಸುಟ್ಟು ಹೋಗಿ ಅಂತಃಕರಣವು ಪುನಃ ನಿರ್ಮಲವಾಗಿ ಬಿಡುತ್ತದೆ. (೭೧) ಇಂಥವರು ಸದ್ಗುರುವಿಗೆ ಪುನಃ ಶರಣಾಗಬೇಕು. ಅವನನ್ನು ಪ್ರಸನ್ನೀಕರಿಸಿಕೊಳ್ಳಬೇಕು. ಅವನ ಕೃಪೆಯನ್ನು ಸಂಪಾದಿಸಬೇಕು ಅಂದರೆ ಶುದ್ಧರಾಗುವರು. (೭೨) ಯಾರಿಂದ ಸ್ವಾಮಿದ್ರೋಹ, ಗುರುದ್ರೋಹ ಘಟಿಸಿರುವದೋ ಅಂದರೆ ಗುರುವಿನ ಕೂಡ ದ್ವೇಷ ಮಾಡುವದು ಮತ್ತು ಅವನಿಗೆ ವಿಶ್ವಾಸಘಾತ ಮಾಡುವದೇ ಆಗಿರುತ್ತದೆ. ಇಂಥ ಪಾಪವು ಕಾಯಂ ನರಕದಲ್ಲಿ ಕೆಡವುತ್ತದೆ. ಇದಕ್ಕೆ ಸದ್ಗುರುವನ್ನು ಪ್ರಸನ್ನೀಕರಿಸಿಕೊಳ್ಳದ ಹೊರತು ಗುರುದ್ರೋಹ, ಮೋಸಾದಿಗಳ ಪಾಪದಿಂದ ಪಾರಾಗಲು ಬೇರೆ ಉಪಾಯವೇ ಇಲ್ಲ. ಇದನ್ನು ಸದ್ಗುರು ಒಬ್ಬನೇ ಪರಿಹರಿಸಬಲ್ಲನು. (೭೩)

ಸ್ಮಶಾನ ವೈರಾಗ್ಯ ಆಲೇ । ಮ್ಹಣೌನ ಲೋಟಾಂಗಣ ಘಾತಲೇ ।
ತೇಣೇ ಗುಣೇ ಉಪತಿಷ್ಠಲೇ । ನಾಹೀ ಜ್ಞಾನ ॥೭೪॥

ಭಾವ ಆಣಿಲಾ ಜಾಯಾಚಾ । ಮಂತ್ರ ಘೇತಲಾ ಗುರೂಚಾ ।
ಶಿಷ್ಯ ಜಾಲಾ ದೋ ದಿಸಾಂಚಾ । ಮಂತ್ರಾಕಾರಣೇ ॥೭೫॥

ಐಸೇ ಕೇಲೆ ಗುರೂ ಉದಂಡ । ಶಬ್ದ ಸಿಕಲಾ ಪಾಷಾಂಡ ।
ಜಾಲಾ ತೋಂಡಾಳ ತಮರ್ಗುಂಡ । ಮಹಾ ಪಾಷಾಂಡೀ ॥೭೬॥

ಘಡೀ ಯೇಕ ರಡೆ ಆಣಿ ಪಡೆ । ಘಡೀ ಯೇಕ ವೈರಾಗ್ಯ ಚಢೆ ।
ಘಡೀ ಯೇಕ ಅಹಂಭಾವ ಜಡೆ । ಜ್ಞಾತೇ ಪಣಾಚಾ ॥೭೭॥

ಘಡೀ ಯೇಕ ವಿಶ್ವಾಸ ಧರೀ । ಸವೇಚ ಘಡೀಯೇಕ ಗುರ್ಗುರೀ ।
ಐಸೆ ನಾನಾ ಛಂದ ಕರೀ । ಪಿಸಾಟ ಜೈಸಾ ॥೭೮॥

ಕಾಮ ಕ್ರೋಧ ಮದ ಮತ್ಸರ । ಲೋಭ ಮೋಹ ನಾನಾ ವಿಕಾರ ।
ಅಭಿಮಾನ ಕಾಪಟ್ಯ ತಿರಸ್ಕಾರ । ಹೃದಈ ನಾಂದತೀ ॥೭೯॥

ಅಹಂಕಾರ ಆಣೀ ದೇಹಪಾಂಗ । ಅನಾಚಾರ ಆಣೀ ವಿಷಯಸಂಗ ।
ಸಂಸಾರ ಪ್ರಪಂಚ ಉದ್ವೇಗ । ಅಂತರೀ ವಸೆ ॥೮೦॥

ದೀರ್ಘಸೂತ್ರೀ ಕೃತಘ್ನ ಪಾಪೀ । ಕುಕರ್ಮೀ ಕುತರ್ಕೀ ವಿಕಲ್ಪೀ ।
ಅಭಕ್ತ ಅಭಾವ ಶೀಘ್ರಕೋಪೀ । ನಿಷ್ಠುರ ಪರಘಾತಕ ॥೮೧॥

ಹೃದಯಸುನ್ಯ ಆಣೀ ಆಳಸೀ । ಅವಿವೇಕೀ ಆಣಿ ಅವಿಶ್ವಾಸೀ ।
ಅಧೀರ ಅವಿಚಾರ ಸಂದೇಹಾಸೀ । ದೃಢ ಧರ್ತಾ ॥೮೨॥

ಆಶಾ ಮಮತಾ ತೃಷ್ಣಾ ಕಲ್ಪನಾ । ಕುಬುದ್ಧೀ ದುರ್ವೃತ್ತಿ ದುರ್ವಾಸನಾ ।
ಅಲ್ಪಬುದ್ಧಿ ವಿಷಯ ಕಾಮನಾ । ಹೃದಈ ವಸೆ ॥೮೩॥

ಈಷಣಾ ಅಸೂಯಾ ತಿರಸ್ಕಾರೆ । ನಿಂದೇಸಿ ಪ್ರವರ್ತೆ ಆದರೇ ।
ದೇಹಾಭಿಮಾನೇ ಹುಂಬರೇ । ಜಾಣಪಣೇ ॥೮೪॥

**ಮೊದಲಿಗೆ ಮಾಡಿದ (ಘಟಿಸಿದ) ತಪ್ಪುಗಳ ಬಗ್ಗೆ ಪಶ್ಚಾತ್ತಾಪವಾಯಿತು, ಸದ್ಗುರುವಿಗೆ ಪುನಃ ಶರಣು ಹೋದನು, ಹಾಗೂ ಅವನನ್ನು ಪ್ರಸನ್ನ ಮಾಡಿಕೊಂಡು ಅವನ ಕೃಪೆಯನ್ನೂ ಪಡೆದನೆಂದರೆ ಅವನು ಸತ್‌ಶಿಷ್ಯನಾಗುವ ಮಾರ್ಗ ಸರಳವಾಯಿತು. ಇಲ್ಲಿಯವರೆಗೆ ಬಹಳಷ್ಟು ಶಿಷ್ಯರು ಬರುವರು ಆದರೆ ಇದರ ಮುಂದೆ ಸದ್ಗುರುವಿಗೆ ಗಟ್ಟಿಯಾಗಿ ಅಂಟಿಕೊಂಡು ಅವನು ಹೇಳಿದ ಸಾಧನ ಮಾಡುವದಕ್ಕೆ ಬೇಕಾಗುವ ಏಕನಿಷ್ಠೆ ಮಾತ್ರ ಸ್ವಲ್ಪೇ (ಕೆಲವೇ) ಶಿಷ್ಯರಲ್ಲಿ ಇರುವದು ಕಂಡು ಬರುತ್ತದೆ. ಆದುದರಿಂದ ಪಶ್ಚಾತ್ತಾಪ ಹಾಗೂ ಶರಣಾಗತಿ ಇವು ಸ್ಮಶಾನ ವೈರಾಗ್ಯದಂತೆ ತಾತ್ಪೂರ್ತಿಕವೆನಿಸುವವು. ಇಂಥ ಶಿಷ್ಯನು ವ್ಯರ್ಥನಾಗುವನು. ಅವನಿಗೆ ಪರಮಾರ್ಥವೂ ಸಾಧಿಸುವದಿಲ್ಲ:**
ಒಬ್ಬ ಶಿಷ್ಯನಿಗೆ ಪಶ್ಚಾತ್ತಾಪವಾಗುವದು. ಮತ್ತು ಅವನು ಸದ್ಗುರುವಿನ ಮುಂದೆ ಬಂದು ಸಾಷ್ಟಾಂಗ ಹಾಕುವನು. ಆದರೆ ಅವನ ಮನಸ್ಸಿನ ಸ್ಥಿತಿಯು ಸ್ಮಶಾನ ವೈರಾಗ್ಯದಂತೆ ಬಹಳ ಹೊತ್ತು ಸ್ಥಿರ ಉಳಿಯುವದಿಲ್ಲ. ಅರ್ಥಾತ್ ಇಂಥ ತಾತ್ಪೂರ್ತಿಕ ಶರಣಾಗತಿಯಿಂದ ಅವನಿಗೆ ಆತ್ಮಜ್ಞಾನವಾಗುವದಿಲ್ಲ. (೭೪) ಕೇವಲ ಸ್ವಲ್ಪಕಾಲವಿರುವ ನಿಷ್ಠೆಯಿಂದ ಸದ್ಗುರುವಿನೊಡನೆ ಒಬ್ಬನು ಮಂತ್ರ ಉಪದೇಶ ತೆಗೆದುಕೊಂಡನು. ಆ ಮಂತ್ರದ ಪೂರ್ತಿ ತಾತ್ಪೂರ್ತಿಕ ಶಿಷ್ಯತ್ವ ವಹಿಸಿದನು. (೭೫) ಈ ಪ್ರಕಾರ ಬಹಳಷ್ಟು ಗುರುಗಳನ್ನು ಮಾಡಿಕೊಂಡರೂ ಪರಮಾರ್ಥ ಮಾತ್ರ ಸಾಧಿಸುವದಿಲ್ಲ. ಇಂಥ ಶಿಷ್ಯನಿಗೆ ಜನತೆಯಲ್ಲಿ ಠಾಕು ಠೀಕಿನಿಂದ ಶಬ್ದಜ್ಞಾನದ ಪ್ರದರ್ಶನ ಮಾಡಲಿಕ್ಕೆ ಬರುವದು. ಇವನು ಬಹಳ ಮಾತುಗಾರ (ಬಡಬಡ್ಯಾ), ತಲೆ ಅಲ್ಲಾಡಿಸುವವ ಮತ್ತು ದುಷ್ಟ ತರ್ಕವಾದೀ (ಕುತರ್ಕವಾದೀ)ಯಾಗಿ ತಿರುಗುವನು. (೭೬) ಪರಮಾರ್ಥದ ಸೋಗು ಹಾಕಿರುವ ಈ ಢೋಂಗಿ ಪಂಡಿತನು ನಿರೂಪಣಾದಿಗಳನ್ನು (ಪ್ರವಚನ ವಗ್ಯೆರೆ ಭಾಷಣ) ಮಾಡುವಾಗ ದೇವರ ಮೇಲಿನ ಪ್ರೇಮ ತೋರಿಸುವಲ್ಲಿ ಕಣ್ಣೀರು ತಂದು ಗದ್ಗದಿತನಾಗುವನು. ಮತ್ತೊಂದು ಕ್ಷಣದಲ್ಲಿ ದಡಬಡ [ಗಡಬಡ] ಹೊರಳಾಡುವನು. ಪುನಃ ಅಲ್ಪವೇಳೆಯಲ್ಲಿ ತನ್ನಲ್ಲಿ ವೈರಾಗ್ಯ ಉಕ್ಕೇರಿದಂತೆ ಮಾಡಿ ತೋರಿಸುವನು. ಮತ್ತೊಂದು ಘಳಿಗೆಯಲ್ಲಿ ತಾನು ದೊಡ್ಡ ಜ್ಞಾನಿಯಿರುವೆನೆಂದು ಅಹಂಕಾರವನ್ನು ವ್ಯಕ್ತಪಡಿಸುವನು.(೭೭) ಘಳಿಗೆಯಲ್ಲಿ ಅತ್ಯಂತ ಶ್ರದ್ಧಾವಂತನಂತೆ ನಟಿಸುವನು. ಮರುಕ್ಷಣದಲ್ಲಿ ಅವಿಶ್ವಾಸದಿಂದ ತಿರುಗುಬಿದ್ದು ಸಿಟ್ಟಿಗೇಳುತ್ತಾನೆ, ಮತ್ತು ತಂಟೆ ಮಾಡಲು ತಯಾರಾಗುತ್ತಾನೆ. ಹೀಗೆ ಅರೆಹುಚ್ಚು ಹಿಡಿದ ಮನುಷ್ಯನಂತೆ ಅನೇಕ ನಾಟಕ [ಸೋಗು] ಮಾಡುತ್ತಾನೆ. (೭೮) ಕಾಮ, ಕ್ರೋಧ. ಮದ, ಮತ್ಸರ, ಲೋಭ, ಮೋಹ, ಅಭಿಮಾನ, ಕಪಟತನ, ತಿರಸ್ಕಾರ, ವಗ್ಯೆರೆ ಅನೇಕ ದುಷ್ಟ ವಿಕಾರಗಳು ಈ ಢೋಂಗಿಯ ಹೃದಯದಲ್ಲಿ ಭರಪೂರ ಪ್ರಮಾಣದಲ್ಲಿ ಇರುವವು. (೭೯) ಅಹಂಕಾರ, ದೇಹಸುಖದ ಅಭಿಲಾಷೆ, ಮೋಹ, ಅನಾಚಾರ, ಇಂದ್ರಿಯ ಭೋಗದ ಲಾಲಸೆ, ಸಂಸಾರದ ಬಗ್ಗೆ ಪ್ರೇಮ ಮತ್ತು ಪ್ರಪಂಚದ ಬಗ್ಗೆ ಬೇಸರ ಇವೆಲ್ಲವೂ ಅವನ ಅಂತಃಕರಣದಲ್ಲಿ ವಾಸಮಾಡಿರುವವು. [೮೦] ಇವನು ಕೆಲಸ ಮಾಡುವಲ್ಲಿ ಮುಗ್ಗಲಗೇಡಿ, [ಆಲಸಿಯು], ಕೃತಘ್ನ, ಪಾಪಿ, ಕುಕರ್ಮಿ ಅಂದರೆ ಭ್ರಷ್ಟ ಕರ್ಮ ಮಾಡುವವ. ಕುತರ್ಕಿ, ಇಲ್ಲದ ತರ್ಕ ಮಾಡುವವ, ಮತ್ತು ಪ್ರತಿಯೊಂದರಲ್ಲಿ ಸಂಶಯ ತೆಗೆಯುವವ, ಮತ್ತು ಅಭಕ್ತ ಅಂದರೆ ಭಕ್ತಿಹೀನ, ಭಾವಹೀನ. ಶೀಘ್ರಕೋಪಿ, ನಿಷ್ಠುರ, ಪರಘಾತಕ. [೮೧] ಹೃದಯಶೂನ್ಯ, ಅಂದರೆ ಎರಡನೆಯವರ ಸುಖದುಃಖದ ಪರಿವೆ ಇಲ್ಲವದವ, ಆಲಸಿ, ಅವಿವೇಕಿ, ಅವಿಶ್ವಾಸಿ, ಅಂಜುಬರುಕ, ಅವಿಚಾರಿ, ಮತ್ತು ಸಂಶಯವನ್ನು ಗಟ್ಟಿಯಾಗಿ ಹಿಡಿದುಕೊಂಡವನಾಗಿರುತ್ತಾನೆ. (೮೨) ಆಶಾ, ಮಮತಾ, ತೃಷ್ಣಾ [ಬಯಕೆ], ಕಲ್ಪನಾ. ಕೆಟ್ಟಬುದ್ಧಿ. ಕೆಟ್ಟವೃತ್ತಿ, ಕೆಟ್ಟವಾಸನೆ, ಮಂಗಬುದ್ಧಿ, ಹಲಕಾಬುದ್ಧಿ, ಮತ್ತು ಇಂದ್ರಿಯ ಸುಖದ ಇಚ್ಛೆ ಇವೆಲ್ಲವೂ ಪರಮಾರ್ಥಕ್ಕೆ ಘಾತವಾಗುವಂಥವು, ಇವುಗಳು ಢೋಂಗಿಯಲ್ಲಿ ವಾಸವಾಗಿರುವವು. [೮೩] ಇವನಿಗೆ ಎಷ್ಟು ದೊರೆತರೂ ತೃಪ್ತಿ ಇರುವದಿಲ್ಲ. ಮತ್ಸರದಿಂದ ತುಂಬಿ ತುಳುಕುವನು,ತಿರಸ್ಕಾರ ಪೂರ್ವಕ ಎರಡನೆಯವರ ನಿಂದಾ ಚನ್ನಾಗಿಮಾಡುವನು. ಜ್ಞಾನದ ಮತ್ತು ದೇಹದ ಬಗ್ಗೆ ಬಹಳ ಅಭಿಮಾನ ಹೊಂದಿದವನಾಗಿ ಉದ್ಧಟತನದಿಂದ [ಸೊಕ್ಕಿನಿಂದ] ನಡೆಯುವನು. ಮೇಲೆ ವರ್ಣಿಸಿದ ದೇಹಬುದ್ಧಿಯ ಎಲ್ಲ ದುರ್ಗುಣಗಳು ನಾಲಾಯಕ [ಅಯೋಗ್ಯ] ಶಿಷ್ಯನಲ್ಲಿ ಕಂಡುಬರುವವು. [೮೪]

ಕ್ಷುಧಾ ತೃಷ್ಣಾ ಆವರೇನಾ । ನಿದ್ರಾ ಸಹಸಾ ಧರೇನಾ ।
ಕುಟುಂಬಚಿಂತಾ ವೋಸರೇನಾ । ಭ್ರಾಂತಿ ಪಡಿಲೀ ॥೮೫॥

ಶಾಬ್ದಿಕ ಬೋಲೆ ಉದಂಡ ವಾಚಾ । ಲೇಶ ನಾಹೀ ವೈರಾಗ್ಯಾಚಾ ।
ಅನುತಾಪ ಧಾರಿಷ್ಟ ಸಾಧನಾಚಾ । ಮಾರ್ಗ ನ ಧರೀ ॥೮೬॥

ಭಕ್ತಿ ವಿರಕ್ತಿ ನಾ ಶಾಂತೀ । ಸದ್ವೃತ್ತೀ ಲೀನತಾ ನಾ ದಾಂತೀ ।
ಕೃಪಾ ದಯಾ ನಾ ತೃಪ್ತೀ । ಸುಬುದ್ಧಿ ಅಸೇಚನಾ ॥೮೭॥

ಕಾಯಾಕ್ಲೇಶೀ ಶರೀರಹೀನ । ಧರ್ಮ ವಿಷಈ ಪರಮ ಕೃಪಣ ।
ಕ್ರಿಯಾ ಪಾಲಟೇನಾ ಕಠಿಣ । ಹೃದಯ ಜಯಾಚೇ ॥೮೮॥

ಆರ್ಜವ ನಾಹೀ ಜನಾಸೀ । ಜೋ ಅಪ್ರಿಯ ಸಜ್ಜನಾಸೀ ।
ಜಯಾಚೆ ಜಿವೀ ಅಹಿರ್ನಿಸೀ । ಪರನ್ಯೂನ ವಸೆ ॥೮೯॥

ಸದಾ ಸರ್ವಕಾಳ ಲಟಿಕಾ । ಬೋಲೆ ಮಾಈಕ ಲಾಪಣಿಕಾ ।
ಕ್ರಿಯಾ ವಿಚಾರ ಪಾಹತಾ ಯೇಕಾ । ವಚನೀ ಸತ್ಯನಾಹೀ ॥೯೦॥

ಪರಪೀಡೇ ವಿಷಈ ತತ್ಪರ । ಜೈಸೆ ವಿಂಚ ಆಣಿ ವಿಖಾರ ।
ತೈಸಾ ಕುಶಬ್ದೇ ಜಿವ್ಹಾರ । ಭೇದೀ ಸಕಳಾಂಚೇ ॥೯೧॥

ಆಪಲೆ ಝಾಂಕೀ ಅವಗುಣ । ಪುಢಿಲಾಸ ಬೋಲೆ ಕಠಿಣ ।
ಮಿಥ್ಯಾ ಗುಣದೋಷೇವಿಣ । ಗುಣದೋಷ ಲಾವೀ ॥೯೨॥

ಸ್ವಯೇ ಪಾಪಾತ್ಮಾ ಅಂತರೀ । ಪುಢಿಲಾಂಚೀ ಕಣವ ನ ಕರೀ ।
ಜೈಸಾ ಹಿಂಸಕ ದುರಾಚಾರೀ । ಪರದುಃಖೇ ಶಿಣೇನಾ ॥೯೩॥

ದುಃಖ ಪರಾವ್ಯಾಚೇ ನೇಣತೀ । ದುರ್ಜನ ಗಾಂಜಿಲೆಚಿ ಗಾಂಜಿತೀ ।
ಶ್ರಮ ಪಾವತಾ ಆನಂದತೀ । ಆಪುಲೆ ಮನೀ ॥೯೪॥

ಸ್ವದುಃಖೇ ಝುರೆ ಅಂತರೀ । ಆಣೀ ಪರದುಃಖೇ ಹಾಸ್ಯ ಕರೀ ।
ತಯಾಸ ಪ್ರಾಪ್ತ ಯಮಪುರೀ । ರಾಜದೂತ ತಾಡಿತೀ ॥೯೫॥

ಪರಮಾರ್ಥ ಸಾಧಿಸಿಕೊಳ್ಳಲು ಅಸಮರ್ಥರು, ಅಯೋಗ್ಯರು, ಆಗಿರುವ ಪ್ರಾಪಂಚಿಕರ ವರ್ಣನೆಯನ್ನು ಇನ್ನು ಮುಂದೆ ಕೊಡಲಾಗಿದೆ. ಇದರಿಂದ ಬಿಡುಗಡೆಯಾಗದ ಹೊರತು ಪರಮಾರ್ಥ ಕೈಗೆ ಸಿಗುವದಿಲ್ಲ.[ಸಾಧ್ಯವಾಗುವದಿಲ್ಲ]ವೆಂಬುದನ್ನು ಸ್ಪಷ್ಟಪಡಿಸುವ ಇಚ್ಛೆ ಶ್ರೀ ಸಮರ್ಥರದಾಗಿದೆ. ಹಸಿವೆ ನೀರಡಿಕೆಗಳನ್ನು ತಡೆದುಕೊಳ್ಳಲಿಕ್ಕೆ ಆಗದವನು, ನಿದ್ರೆ ಬಂದಾಗ್ಗೆ ಅದನ್ನು ತಡೆದುಕೊಳ್ಳಲಿಕ್ಕೆ ಆಗದವನು, ಮತ್ತು ಮಕ್ಕಳು ಮರಿ, ವ ಹೆಂಡತಿ ಇವರ ಬಗ್ಗೆ ಮನಸ್ಸಿನಲ್ಲಿ ಸದಾ ಚಿಂತಿಸುತ್ತಿರುವವನು, ಅಥವಾ ಚಿಂತಿಸುವದನ್ನು ಬಿಡಲಾಗ ದವನು. ಮತ್ತು ಸದಾ ಭ್ರಮೆಯಿಂದ ವ್ಯಾಪ್ತನಾದವನು, ಇಂಥ ಜನರಿಗೆ ಭಗವಂತನ ದರ್ಶನ [ಭೆಟ್ಟಿಯಾಗುವದು] ಶಕ್ಯವಿಲ್ಲ. [೮೫] ಯಾರು ಬಾಯಿಗೆ ಬಂದಂತೆ ಜೋರಾಗಿ ಶಬ್ದಜ್ಞಾನದಿಂದ ಮಾತಾಡುವರೋ ಅವರಲ್ಲಿ ವೈರಾಗ್ಯದ ಲವಲೇಶ ಇರುವದಿಲ್ಲ. ಯಾರಲ್ಲಿ ಅನುತಾಪ [ಕನಿಕರ]ವಿಲ್ಲ-ಧಾರ್ಷ್ಟ್ಯ – ಧೈರ್ಯವಿಲ್ಲ. ಮತ್ತು ಸಾಧನದ ಮಾರ್ಗ ಹಿಡಿಯುವದಿಲ್ಲ. ಇಂಥವರಿಗೆ ಭಗವಂತನ ದರ್ಶನವಾಗುವದಿಲ್ಲ. [೮೬] ಯಾರಲ್ಲಿ ಭಕ್ತಿ, ವಿರಕ್ತಿ, ಶಾಂತಿ, ಸದ್ವೃತ್ತಿ, ಲೀನತೆ, ಇಂದ್ರಿಯ ದಮನ, ಕೃಪೆ, ದಯೆ ಹಾಗೂ ತೃಪ್ತಿ, ಇವುಗಳಲ್ಲಿ ಯಾವವೂ ಇಲ್ಲವೋ ಮತ್ತು ಯಾರಲ್ಲಿ ಭಗವಂತನ ಕಡೆಗೆ ತಿರುಗುವ ಬುದ್ಧಿ ಇಲ್ಲವೋ ಅಂಥವರಿಗೆ ಭಗವಂತನ ದರ್ಶನವಾಗುವದಿಲ್ಲ. (೮೭) ಯಾರ ಶರೀರ ಪ್ರಕೃತಿಯುಕಷ್ಟ ಮಾಡಲು ಯೋಗ್ಯವಿಲ್ಲವೋ ಧರ್ಮ ಕಾರ್ಯದ ಬಗ್ಗೆ ಅತಿ ಕೃಪಣರಾಗಿರುವರೋ, ಯಾರ ನಡವಳಿಕೆಯಲ್ಲಿ ಸುಧಾರಣೆ ಆಗುವದಿಲ್ಲವೋ ಮತ್ತು ಯಾರ ಅಂತಃಕರಣ ಅತಿ ಕಠೋರವಿರುವದೋ ದುಷ್ಟಕೃತ್ಯ, ದುರ್ವರ್ತನೆ ಬಿಡಲಿಕ್ಕಾಗುವದಿಲ್ಲವೋ ಇಂಥ ಮನುಷ್ಯರಿಗೆ ಪರಮಾರ್ಥ ಸಾಧಿಸುವದಿಲ್ಲ. (೮೮) ಯಾರು ಜನರ ಸಂಗಡ ಸರಳ ಸಾದಾ ರೀತಿಯಿಂದ ನಡೆಯುವದಿಲ್ಲವೋ, ಯಾರಿಗೆ ಸಜ್ಜನರಲ್ಲಿ ಪ್ರೀತಿ ಇಲ್ಲವೋ. ಯಾರು ಹಗಲೂ ರಾತ್ರಿ ಸದಾ ಎರಡನೆಯವರ ಹುಳುಕನ್ನೆ ಗುರ್ತಿಸಿ ಹೇಳುವಲ್ಲಿ ಮಗ್ನರಾಗಿರುವರೋ (೮೯) ಯಾರು ಸದಾ ಸರ್ವಕಾಲ ಸುಳ್ಳು ಖೊಟ್ಟಿ ಮತ್ತು ಕಪಟತನದಿಂದ ನಡೆಯುವರೋ ಥಾಪ ಹೊಡೆಯುವ ಬಡಾಯಿಗಾರರಿರುವರೋ ಯಾರ ಮಾತುಗಳು ಮಾಯಾವಿ ಮುಚ್ಚುಮರೆಯದಾಗಿರುವವೋ ಯಾರ ಆಚಾರದಲ್ಲಿ ವ ವಿಚಾರದಲ್ಲಿ ಮೇಳವಿರುವದಿಲ್ಲವೋ, ಮತ್ತು ಯಾರ ಮಾತಿನಲ್ಲಿ ಒಂದೂ ಸತ್ಯವಿರುವದಿಲ್ಲವೋ ಇಂಥವರೆಲ್ಲರಿಗೆ ಭಗವಂತನ ದರ್ಶನವಾಗುವದು–ಶಕ್ಯವಿಲ್ಲ. [೯೦] ಚೇಳು-ಹಾವು ವಗೈರೆ ವಿಷಾರಿ ಪ್ರಾಣಿಗಳು ಯಾರನ್ನಾದರೂ ಕಚ್ಚಲು ಸದಾ ತಯಾರ ಇರುತ್ತವೆ. ಇದರಂತೆಯೇ ಕೆಟ್ಟ ಶಬ್ದಗಳನ್ನು ಮಾತಾಡಿ ಜನರ ಮನಸ್ಸಿಗೆ ಘಾಯ ಮಾಡಲಿಕ್ಕೆ ಯಾರು ಸದಾ ಸಿದ್ಧರಿರುವರೋ ಇನ್ನೊಬ್ಬರಿಗೆ ದುಃಖಕೊಡುವದಕ್ಕೆ ಚುಚ್ಚಿ ಚುಚ್ಚಿ ಮಾತನಾಡಲಿಕ್ಕೆ ಯಾವಾಗಲೂ ಮನಃಪೂರ್ವಕ ತಯಾರ ಇರುವರೋ [೯೧] ಮತ್ತು ಸ್ವತಃದ ಅವಗುಣ ಮುಚ್ಚಿಕೊಂಡು ಎರಡನೆಯವರ ದೋಷಗಳ ಬಗ್ಗೆ ಕಠಿಣ ಶಬ್ದ ಮಾತಾಡುವಂಥವರಿರುವರೋ ದೋಷವಿಲ್ಲದವರಲ್ಲಿ ದೋಷಗಳನ್ನು ವಿನಾಕಾರಣ ಆರೋಪಿಸುವರೋ [೯೨] ದುರಾಚಾರಿ, ಕ್ರೂರ ಮನುಷ್ಯರಿಗೆ, ಇನ್ನೊಬ್ಬರಿಗಾದ ದುಃಖವನ್ನು ನೋಡಿದಾಗ ಮನಮರಗುವದಿಲ್ಲವೋ ಕರಗುವದಿಲ್ಲವೋ ಇದರಂತೆಯೇ ಯಾರ ಅಂತಃಕರುಣದಲ್ಲಿ ಪಾಪ ತುಂಬಿರುವದೋ ಅಂಥವರಿಗೆ ಇನ್ನೊಬ್ಬರಿಂದ ಘಟಿಸಿದ ಪಾಪಗಳನ್ನು ನೋಡಿದಾಗ ಅವರ ಮನಸ್ಸು ಕರಗುವದಿಲ್ಲ, ಮರುಗುವದಿಲ್ಲ, ಸೊರಗುವದಿಲ್ಲ ಇಂಥವರಿಗೆ ಭಗವಂತನು ಭೆಟ್ಟಿಯಾಗುವದಿಲ್ಲ. [೯೩] ದುಷ್ಟ ಮನುಷ್ಯರಿಗೆ ಇನ್ನೊಬ್ಬರ ದುಃಖ ಗೊತ್ತಾಗುವದಿಲ್ಲ. ಇಷ್ಟೇ ಅಲ್ಲ ದುಃಖಿ ಮನುಷ್ಯನಿಗೆ ಅವರು ಮೇಲಿಂದ ಮೇಲೆ ಇನ್ನಷ್ಟು ದುಃಖ ಕೊಡುವರು. ನಿಜ ಹೇಳುವದಾದರೆ ದುಃಖ ಕೊಡುವವರನ್ನು ನೋಡಿ ಅವರಿಗೆ ಹೆಚ್ಚು ಆನಂದವಾಗುತ್ತದೆ. ಇದು ವಿರುದ್ಧ ಕ್ರಮವೇ ಸರಿ. ಇಂಥವರಿಗೆ ಭಗವಂತನು ಭೆಟ್ಟಿಯಾಗುವದಿಲ್ಲ. [೯೪] ದುರ್ಜನ ಮನುಷ್ಯರು ಸ್ವಂತದ ದುಃಖದಿಂದ ಕಷ್ಟದಿಂದಲೇ ಇರುವರು. ಆದರೆ ಆಗಲೂ ಸಹ ಎರಡನೆಯವರ ದುಃಖ ನೋಡಿ ನಗುವರು. ಮತ್ತು ಅವರಿಗೆ ಆನಂದವಾಗು ವದು. ಇಂಥ ಮನುಷ್ಯರು ಕೊನೆಗೆ ಯಮ ಪುರಿಗೆ ಹೋಗಬೇಕಾಗುವದು. ಅಲ್ಲಿ ಅವರಿಗೆ ಯಮರಾಜನ ದೂತರು ಹೊಡೆದು ಶಿಕ್ಷಿಸುವರು. (೯೫)

ಅಸೋ ಐಸೆ ಮದಾಂಧ ಬಾಪುಡೆ । ತಯಾಸೀ ಭಗವಂತ ಕೈಚಾ ಜೋಡೆ ।
ಜಯಾಸ ಸುಬುದ್ಧಿ ನಾವಡೆ। ಪೂರ್ವ ಪಾತಕೇ ಕರೂನೀ ॥೯೬॥
ತಯಾಸ ದೇಹಾಚಾ ಅಂತೀ । ಗಾತ್ರೇ ಕ್ಷೀಣತಾ ಪಾವತೀ ।
ಜಿವಲಗೇ ವೊಸಂಡಿತೀ । ಜಾಣವೇಲ ತೇವ್ಹಾ ॥೯೭॥
ಅಸೋ ಐಸೆ ಗುಣಾವೇಗಳೇ । ತೇ ಸಚ್ಛಿಷ್ಯ ಆಗಳೇ ।
ದೃಢ ಭಾವಾರ್ಥೇ ಸೋಹಳೆ । ಭೋಗಿತೀ ಸ್ವಾನಂದಾಚೆ ॥೯೮॥
ಜಯೆ ಸ್ಥಳೀ ವಿಕಲ್ಪ ಜಾಗೆ । ಕುಳಾಭಿಮಾನ ಪಾಠೀ ಲಾಗೆ ।
ತೇ ಪ್ರಾಣೀ ಪ್ರಪಂಚಸಂಗೇ । ಹಿಂಪುಟೇ ಹೋತೀ ॥೯೯॥
ಜೇಣೇ ಕರಿತಾ ದುಃಖ ಜಾಲೇ । ತೇಚೀ ಮನೀ ದೃಢ ಧರಿಲೇ ।
ತೇಣೇ ಗುಣೇ ಪ್ರಾಪ್ತ ಜಾಲೇ । ಪುನ್ಹಾ ದುಃಖ ॥೧೦೦॥
ಸಂಸಾರಸಂಗೇ ಸುಖ ಜಾಲೇ । ಐಸೇ ದೇಖಿಲೇ ನಾ ಐಕಿಲೇ ।
ಐಸೇ ಜಾಣೋನ ಅನಹಿತ ಕೇಲೇ । ತೇ ದುಃಖೀ ಹೋತೀ ಸ್ವಯೇ ॥೧೦೧॥
ಸಂಸಾರೀ ಸುಖ ಮಾನಿತೀ । ತೇ ಪ್ರಾಣೀ ಮೂಢಮತೀ ।
ಜಾಣೋನ ಡೋಳೆ ಝಾಂಕಿತೀ । ಪಢತ ಮೂರ್ಖ ॥೧೦೨॥
ಪ್ರಪಂಚ ಸುಖೇ ಕರಾವಾ । ಪರೀ ಕಾಹೀ ಪರಮಾರ್ಥ ವಾಢವಾವಾ ।
ಪರಮಾರ್ಥ ಅವಘಾ ಚಿ ಬುಡವಾವಾ । ಹೇ ವಿಹಿತ ನವ್ಹೆ ॥೧೦೩॥
ಮಾಗಾ ಜಾಲೇ ನಿರೂಪಣ । ಗುರುಶಿಷ್ಯಾಂಚೀ ವೊಳಖಣ ।
ಆತಾ ಉಪದೇಶಾಚೇ ಲಕ್ಷಣ । ಸಾಂಗಿಜೇಲ ॥೧೦೪॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಶಿಷ್ಯ ಲಕ್ಷಣ' ನಾಮ ಸಮಾಸ ತೃತೀಯ ॥

• •

ಇರಲಿ, ಇಂಥ ಮದೋನ್ಮತ್ತರೂ ಸಹ ಇರುವರು. ಇವರಿಗೂ ಭಗವಂತನ ಭೆಟ್ಟಿಯಾಗುವದಿಲ್ಲ. ಮೊದಲು ಮಾಡಿದ ಪಾಪದ ಕಾರಣ ಇವರ ಬುದ್ಧಿ ಭಗವಂತನ ಕಡೆಗೆ ತಿರುಗುವದಿಲ್ಲ.(೯೬) ದೇಹದ ಅಂತ್ಯಕಾಲ ಪ್ರಾಪ್ತವಾದಾಗ ಅವರಅಂಗಗಳು ತೀರ ಬಲಗುಂದುವವು·ತೀರ ಸಮೀಪದ ಬಂಧುಬಳಗದವರು ದೂರಾಗುವರು. ಆ ಸಮಯದಲ್ಲಿ ಅವರಿಗೆ ತಾವು ಮಾಡಿದ ಕೆಟ್ಟ ಕರ್ಮದ ನೆನಪಾಗುವದು. (೯೭) **ಸತ್‌ಶಿಷ್ಯನಾಗಿರುವವನು ಮೇಲೆ ಹೇಳಿದ ಅವಗುಣಗಳ ಕಡೆಗೆ ಲಕ್ಷ್ಯ ಕೊಟ್ಟು ಅವನ್ನು ದೂರ ಮಾಡುವನು. ತ್ಯಜಿಸುವನು. ಸಂಸಾರ ದಲ್ಲಿ ಸುಖವಿಲ್ಲವೆಂಬ ಅನುಭವ ಬಂದರೂ ಸಹ ಕಲಿತ ಪಂಡಿತ ಮೂರ್ಖನು ವಾಸನಾ ಪ್ರಪಂಚದ ಬೆನ್ನು ಹತ್ತುವನು. ಭಗವಂತನನ್ನು ಪೂರ್ಣ ಮರೆಯುವನ**-:- ಇರಲಿ, ಮೇಲೆ ಹೇಳಿದ ಅವಗುಣಗಳು ಯಾರಲ್ಲಿ ಇರುವದಿಲ್ಲವೋ ಅಂಥ ಸತ್‌ಶಿಷ್ಯರು ಬೇರೆ ಇರುವರು (ಕೆಲವು ಜನ ಮಾತ್ರ ಇರುವರು). ಇವರ ಶ್ರದ್ಧೆ ಬಹಳ ದೃಢವಾದದ್ದು. ಮತ್ತು ಭಾವಶುದ್ಧವಾದದ್ದಿರುವದು.ಇದರಿಂದ ಅಂಥ ಸತ್‌ಶಿಷ್ಯರಿಗೆ ಆತ್ಮಜ್ಞಾನವಾಗುವದು. ಆಮೇಲೆ ಅವರು ಆತ್ಮಾನಂದ-ಸ್ವರೂಪಾನಂದದ ಸುಖ ಅನುಭವಿಸುತ್ತಾರೆ. (೯೮) ಯಾರ ಮನದಲ್ಲಿ ಸಂಶಯ ಪ್ರವೃತ್ತಿ ಸದಾ ವಾಸವಾಗಿರುವದೋ ಮತ್ತು ಕುಲಾಭಿಮಾನ ಯಾರಲ್ಲಿ ಗಟ್ಟಿಯಾಗಿ ಅಂಟಿಕೊಂಡಿರುವದೋ ಇಂಥ ಮನುಷ್ಯರು ಪ್ರಪಂಚದ ಆಸಕ್ತಿಯಿಂದ ದುಃಖಿಗಳಾಗುವರು. ಕಷ್ಟಪಡುವವರಾಗುವರು ಮತ್ತು ನಿರಾಶರಾಗು ವರು. (೯೯) ಇಂಥ ಪ್ರಪಂಚದ ಸಂಗತಿಯಿಂದ ದುಃಖವಾದರೂ ಇಂಥ ಪ್ರಪಂಚವನ್ನೇ ಮನಸ್ಸಿನಿಂದ ಪುನಃ ಗಟ್ಟಿಯಾಗಿ ಹಿಡಿದರೆ ಅದು ಪುನಃ ದುಃಖವನ್ನೇ ಕೊಡುವದು ನಿಶ್ಚಯವು·(೧೦೦) ಸಂಸಾರದಲ್ಲಿ ಸುಖವಿದೆಯಂದು ತಿಳಿದು ಅದರಲ್ಲಿದ್ದವರಿಗೆ ಸುಖ ಸಿಕ್ಕಿದೆಯೆಂಬುದನ್ನು ಇವತ್ತಿನವರೆಗೆ ನಾವು ನೋಡಿಯೂ ಇಲ್ಲ. ಅಥವಾ ಕೇಳಿಯೂ ಇಲ್ಲ. ಇದನ್ನು ತಿಳಿದೂ ಜನ ಪ್ರಪಂಚದಲ್ಲಿ ಆಸಕ್ತರಾಗುವರು. ಇಂಥವರು ತಿಳಿದೂ ತಿಳಿದೂ ತಮ್ಮ ಹಾನಿಯನ್ನು ತಾವೇ ಮಾಡಿಕೊಳ್ಳುವರು. ತಾವೇ ದುಃಖ ನಿರ್ಮಾಣ ಮಾಡಿಕೊಂಡು ಅದರಲ್ಲಿ ಬಿದ್ದು ತೊಳಲುವರು. (೧೦೧) ಸಂಸಾರದಲ್ಲಿಯೇ ಸುಖವಿದೆ ಎಂದು ನಂಬುವ ಮನುಷ್ಯನು ಬಹುಶಃ ಮಂದ ಬುದ್ಧಿಯವನಾಗಿರಬೇಕು. ಅಥವಾ ಮೂರ್ಖನಾಗಿರಬೇಕು. ತಿಳಿದವರಾದ ಪಂಡಿತ ಮೂರ್ಖರು ತಿಳಿದೂ ತಿಳಿದೂ ಸಂಸಾರದಲ್ಲಿಯ ದು:ಖದ ಕಡೆಗೆ ಕಣ್ಣು ಮುಚ್ಚುತ್ತಾರೆ, (೧೦೨) ಪ್ರಪಂಚ ಮಾಡಲಿಕ್ಕೆ ಏನೂ ಹರಕತ್ತ ಇಲ್ಲ. ಇದನ್ನು ಆನಂದದಿಂದ ಮಾಡಿರಿ. ಆದರೆ ಅದರ ಜೊತೆಗೇನೇ ಸ್ವಲ್ಪಾದರೂ ಪರಮಾರ್ಥವನ್ನು ಮಾಡುತ್ತ ಅದನ್ನು ಬೆಳೆಸುತ್ತ ಹೋಗಬೇಕು. ಪರ ಮಾರ್ಥವನ್ನು ಪೂರ್ಣ ಮುಳುಗಿಸುವದು (ಬಿಡುವದು) ಎಷ್ಟೂ ಯೋಗ್ಯವಲ್ಲ. ಹೀಗೆ ಶ್ರೀ ಸಮರ್ಥರು ಸ್ಪಷ್ಟ ವಾಗಿ ಹೇಳುತ್ತಾರೆ, (೧೦೩) ಹಿಂದಿನ ಎರಡು ಸಮಾಸಗಳಲ್ಲಿ ಗುರುಶಿಷ್ಯರ ಲಕ್ಷಣದ ವಿವೇಚನೆ ಮತ್ತು ವರ್ಣನೆ ಯನ್ನು ಮಾಡಲಾಯಿತು. ಇನ್ನು ಮುಂದಿನ ಸಮಾಸದಲ್ಲಿ ಉಪದೇಶದ ಲಕ್ಷಣಗಳನ್ನು ಹೇಳುವೆನು· (೧೦೪)

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದ ಐದನೆಯ ದಶಕದಲ್ಲಿಯ
"ಶಿಷ್ಯ ಲಕ್ಷಣ"ವೆಂಬ ಮೂರನೆಯ ಸಮಾಸವು ಮುಗಿದುದು.

● ●

### ಸಮಾಸ ಚತುರ್ಥ : ಉಪದೇಶ ಲಕ್ಷಣ

॥ಶ್ರೀರಾಮ॥ ಏಕಾ ಉಪದೇಶಾಚೀ ಲಕ್ಷಣೆ । ಬಹುವಿಧೆ ಕೋಣ ಕೋಣೇ ।
ಸಾಂಗತಾ ತೇ ಅಸಾಧಾರಣೇ । ಪರೀ ಕಾಹೀ ಯೇಕ ಸಾಂಗೋ ॥೧॥
ಬಹುತ ಮಂತ್ರ ಉಪದೇಶಿತೀ । ಕೋಣೀ ನಾಮಮಾತ್ರ ಸಾಂಗತೀ ।
ಯೇಕ ತೇ ಜಪ ಕರವಿತೀ । ವೋಂಕಾರಾಚಾ ॥೨॥
ಶಿವಮಂತ್ರ ಭವಾನೀಮಂತ್ರ । ವಿಷ್ಣುಮಂತ್ರ ಮಹಾಲಕ್ಷ್ಮೀ ಮಂತ್ರ ।
ಅವಧೂತ ಮಂತ್ರ ಗಣೇಶ ಮಂತ್ರ । ಮಾರ್ತಂಡ ಮಂತ್ರ ಸಾಂಗತೀ ॥೩॥
ಮಚ್ಛಕೂರ್ಮ ವರ್‍ಹಾವಮಂತ್ರ । ನೃಸಿಂಹಮಂತ್ರ ವಾಮನಮಂತ್ರ ।
ಭಾರ್ಗವಮಂತ್ರ ರಘುನಾಥ ಮಂತ್ರ । ಕೃಷ್ಣಮಂತ್ರ ಸಾಂಗತೀ ॥೪॥
ಭೈರವಮಂತ್ರ ಮಲ್ಹಾರಿಮಂತ್ರ । ಹನುಮಂತ ಮಂತ್ರ ಯೆಕ್ಷಿಣೀ ಮಂತ್ರ ।
ನಾರಾಯೆಣಮಂತ್ರ ಪಾಂಡುರಂಗ ಮಂತ್ರ । ಅಘೋರಮಂತ್ರ ಸಾಂಗತೀ ॥೫॥
ಶೇಷಮಂತ್ರ ಗರುಡಮಂತ್ರ । ವಾಯೋಮಂತ್ರ ವೇತಾಳಮಂತ್ರ ।
ಝೋಟಿಂಗಮಂತ್ರ ಬಹುಧಾಮಂತ್ರ । ಕಿತೀ ವ್ಹಣೌನಿ ಸಾಂಗಾವೇ ॥೬॥

## ದಶಕ ೫. ಸಮಾಸ ೪. ಉಪದೇಶ ಲಕ್ಷಣ. (ನುಡಿ ೩೬)

ಆತ್ಮ ಸಾಕ್ಷಾತ್ಕಾರವಾಗಿ ಯಾರಿಗೆ ಆತ್ಮಜ್ಞಾನವಾಗಿರುವದೋ ಅವನೇ ಸದ್ಗುರುವಾಗಿರುವನು. ಅದರಂತೆ ಆತ್ಮ ಸಾಕ್ಷಾತ್ಕಾರವಾದ ಮೇಲೆ ಯಾರಿಗೆ ಆತ್ಮಜ್ಞಾನವಾಗಬೇಕೆಂಬ ತಳಮಳ ಇರುವದೋ ಅವನೇ ಸತ್‌ಶಿಷ್ಯನಾಗಿ ರುವನು. ಈ ಸತ್‌ಶಿಷ್ಯನ ತಳಮಳ ಅಥವಾ ಜಿಜ್ಞಾಸೆಯನ್ನು ಶಾಂತಗೊಳಿಸಿ, ಸಮಾಧಾನ ಮಾಡುವ ಉದ್ದೇಶದಿಂದ ಸದ್ಗುರುವು ಸತ್‌ಶಿಷ್ಯನ ಸಂಗಡ ಯಾವ ಸಂವಾದ ಸಂಭಾಷಣೆ ಮಾಡುವನೋ ಅದಕ್ಕೆ ಉಪದೇಶವೆಂದು ಅನ್ನುವರು. ಉಪ ದಿಶ್ ಅಂದರೆ ಹೇಳುವದು, ಬೋಧಿಸುವದು, ಅಥವಾ ಕಲಿಸುವದು· ಎಂದು ಆಗುತ್ತದೆ, ನಮ್ಮ ಅಂತಃ ಕರುಣದಲ್ಲಿ ಎಲ್ಲಿಯವರೆಗೆ ಪರಮಾತ್ಮನು ಪ್ರಕಟನಾಗುವದಿಲ್ಲವೋ ಅಲ್ಲಿಯತನಕ ನೀವು ಜ್ಞಾನಿಪುರುಷನಿಗೆ ಶರಣು ಹೋಗಲಿಕ್ಕೇಬೇಕು· ಗೀತೆಯಲ್ಲಿ "ತದ್‌ವಿದ್ಧಿ ಪ್ರಣಿಪಾತೇ ನ ಪರಿಪ್ರಶ್ನೇನ ಸೇವಯಾ। ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಃ ತತ್ವದರ್ಶಿನಃ॥" [ಅ. ೪. ಶ್ಲೋಕ ೩೪] **ಅರ್ಥ**. :– ಆ ಆತ್ಮಜ್ಞಾನವನ್ನು ಸದ್ಗುರುವಿನ ಹತ್ತಿರ ಹೋಗಿ ಅವರಿಗೆ ಸಾಷ್ಟಾಂಗ ನಮಸ್ಕಾರದಿಂದ ಆತ್ಮದ ಬಗ್ಗೆ ಪ್ರಶ್ನೆಮಾಡಿ ಮತ್ತು ಅವನ ಸೇವೆ ಮಾಡಿ ನೀನು ತಿಳಿದು ಕೊಳ್ಳುವವನಾಗು (ಸಂಪಾದಿಸುವವನಾಗು) ಆತ್ಮನನ್ನು ತಿಳಿದಂಥ ಜ್ಞಾನಿಯೇ ನಿನಗೆ ಆ ಜ್ಞಾನವನ್ನು ಹೇಳಬಲ್ಲನು. ಆತ್ಮಸ್ವರೂಪ ಇದು ಉಪದೇಶದ ಪ್ರಾಣವೇ ಆಗಿದೆ· ಪರಂತು ಇದರ ಕಡೆಗೆ ದುರ್ಲಕ್ಷ್ಯ ಮಾಡಿ ಮಾಮೂಲಿ (ಅಲ್ಪಜ್ಞ, ಸಾಮಾನ್ಯ) ಗುರು ಹಾಗೂ ಅವನ ಸ್ವಾರ್ಥಿಯಾದ ಅಜ್ಞಾನಿ ಶಿಷ್ಯ ಇವರಲ್ಲಿ ನಡೆಯುವ ನಾನಾ ಪ್ರಕಾರದ ಉಪದೇಶದ ರೀತಿ (ತರಹ)ಗಳು ಸಮಾಜದಲ್ಲಿ ಕಂಡು ಬರುವವು. ಇದರ ಸವಿಸ್ತಾರ ವರ್ಣನೆಯನ್ನು ಶ್ರೀ ಸಮರ್ಥರು ಈ ಸಮಾಸದಲ್ಲಿ ವಿವರಿಸಿದ್ದಾರೆ. ಕೊನೆಗೆ ಯಾವ ಉಪದೇಶದಲ್ಲಿ ಭಗವಂತನಬಗ್ಗೆ ಜ್ಞಾನವಿಲ್ಲವೋ ಆ ಉಪದೇಶವು ಉಪದೇಶವೇ ಅಲ್ಲವೆಂದು ಸ್ಪಷ್ಟವಾಗಿ ಎಚ್ಚರಿಸಿ ಹೇಳಿದ್ದಾರೆ,

### ದಶಕ ೫. ಸಮಾಸ ೪. ಉಪದೇಶ ಲಕ್ಷಣ

ಈಗ ಉಪದೇಶದ ಲಕ್ಷಣಗಳನ್ನು ಹೇಳುವೆನು ಕೇಳಿರಿ. ಉಪದೇಶದ ಲಕ್ಷಣಗಳು ನಾನಾ ರೀತಿಯ— ನಾನಾ ತರಹದವು ಇರುವವು, ಇವೆಲ್ಲವನ್ನೂ ಹೇಳಬೇಕಂದರೆ ಇವು ಅಸಂಖ್ಯವಿರುವವು. ಆದರೂ ಅವುಗಳಲ್ಲಿಯ ಕೆಲವನ್ನು ನಿಮ್ಮ ತಿಳುವಳಿಕೆಗಾಗಿ (ಕಲ್ಪನೆ ಬರಲೆಂದು) ಹೇಳುವೆನು. (೧) **ಬಹಳಷ್ಟು ಗುರುಗಳು ಮಂತ್ರದ ಉಪದೇಶ ಮಾಡುವರು. ಆ ಮಂತ್ರಗಳಾವವು? ಅವುಗಳ ಯಾದಿಯನ್ನು ಇಲ್ಲಿ ಕೊಟ್ಟಿದ್ದಾರೆ:–** ಉಪದೇಶ ಕೊಡುವ ಗುರುಗಳು ಅನೇಕ ಪ್ರಕಾರದ ಮಂತ್ರಗಳ ಉಪದೇಶ ಕೊಡುವರು. ಉದಾ:– ಕೆಲವರು ಕೇವಲ ನಾಮಸ್ಮರಣವನ್ನೇ ಉಪದೇಶವಾಗಿ ಕೊಡುವರು. ಕೆಲವರು ಓಂಕಾರದ ಜಪಮಾಡಿಸುವರು- (೨) ಕೆಲವರು ಶಿವಮಂತ್ರ, ಭವಾನಿಮಂತ್ರ, ವಿಷ್ಣುಮಂತ್ರ ಮತ್ತು ಸೂರ್ಯಮಂತ್ರ ಇವುಗಳನ್ನು ಉಪದೇಶ ಮಾಡುವರು (೩) ಕೆಲವರು ಮಚ್ಛ, ಕೂರ್ಮ, ವರಾಹ, ಮಂತ್ರ, ರಾಮ ಮಂತ್ರ, ಅಥವಾ ಕೃಷ್ಣಮಂತ್ರ ಹೇಳುವರು.(೪) ಕೆಲವರು ಭೈರವ ಮಂತ್ರ, ಮಲ್ಹಾರೀ ಮಂತ್ರ, ಹನುಮಂತನ ಮಂತ್ರ, ಯಕ್ಷಿಣೀ (ಅಂದರೆ ಓರ್ವ ಕ್ಷುದ್ರ ದೇವತೆ)ಮಂತ್ರ ಪಾಂಡುರಂಗ ಮಂತ್ರ, ಅಘೋರ ಮಂತ್ರ (ನರಮಾಂಸ, ನರಕ ಭಕ್ಷಣ. ಹಾಗೂ ನರರ ಕಪಾಲ ಹಿಡಿದು ತಿರುಗುವ ಪಂಥದ ಮಂತ್ರ, ಭೂತ ಪ್ರೇತ ವಶೀಕರಣ, ಜಾರಣ ಮಾರಣಾದಿ ವಶೀಕರಣಾದಿ ಘೋರ ಕೃತ್ಯಗಳನ್ನು ಸಾಧಿಸುವ ಮಂತ್ರ)ವನ್ನು ಹೇಳುವರು. (೫) ಶೇಷ (ನಾಗ, ಆದಿಶೇಷ) ಮಂತ್ರ, ಗರುಡ ಮಂತ್ರ, ಪಿಶಾಚಿ ಮಂತ್ರ (ವಾಯೋ ಮಂತ್ರ) ವೇತಾಳ ಮಂತ್ರ (ಭೂತರಾಜ ಮಂತ್ರ) ಝೋಟಿಂಗ್ ಮಂತ್ರ (ಮುಸಲ್ಮಾನ ಪಿಶಾಚ ವಿಷಯಕ ಮಂತ್ರ) ಈ ಪ್ರಕಾರ ನಾನಾ ಮಂತ್ರಗಳನ್ನು ಹೇಳುವರು. ಇವುಗಳ ವರ್ಣನೆ ಎಷ್ಟೆಂದು ಮಾಡುವನು? (೬)

ಬಾಳಾಮಂತ್ರ ಬಗುಳಾಮಂತ್ರ। ಕಾಳೀಮಂತ್ರ ಕಂಕಾಳಿಮಂತ್ರ ।
ಬಟುಕಮಂತ್ರ ನಾನಾಮಂತ್ರ । ನಾನಾ ಶಕ್ತೀಚೆ ॥೭॥
ಪೃಥಕಾಕಾರೇ ಸ್ವತಂತ್ರ । ಜಿತುಕೆ ದೇವ ತಿತುಕೆ ಮಂತ್ರ ।
ಸೋಪೆ ಅವಘಡ ವಿಚಿತ್ರ । ಖೇಚರ ದಾರುಣ ಬೀಜಾಚೆ ॥೮॥
ಪಾಹೋ ಜಾತಾ ಪೃಥ್ವೀವರೀ । ದೇವಾಂಚಿ ಗಣನಾ ಕೋಣ ಕರೀ ।
ತಿತುಕೆ ಮಂತ್ರ ವೈಖರೀ । ಕಿತೀ ಮ್ಹಣೌನಿ ವದವಾವೀ ॥೯॥
ಅಸಂಖ್ಯಾತ ಮಂತ್ರಮಾಳಾ । ಯೇಕಾಹೂನಿ ಯೇಕ ಆಗಳಾ ।
ವಿಚಿತ್ರ ಮಾಯೇಚೀ ಕಳಾ। ಕೋಣ ಜಾಣೇ ॥೧೦॥
ಕಿತ್ಯೇಕ ಮಂತ್ರಿ ಭೂತೇ ಜಾತೀ । ಕಿತ್ಯೇಕ ಮಂತ್ರೀ ವೆಥಾ ನಾಸತೀ ।
ಕಿತ್ಯೇಕ ಮಂತ್ರೀ ಉತರತೀ । ಸಿತೇ ವಿಂಚೂ ವಿಖಾರ ॥೧೧॥
ಐಸೆ ನಾನಾ ಪರೀಚೆ ಮಂತ್ರೀ । ಉಪದೇಶಿಶೀ ಕರ್ಣಪಾತ್ರೀ ।
ಜಪ ಧ್ಯಾನ ಪೂಜಾ ಯಂತ್ರೀ । ವಿಧಾನ ಯುಕ್ತ ಸಾಂಗತೀ ॥೧೨॥
ಯೇಕ ಶಿವ ಶಿವ ಸಾಂಗತೀ । ಯೇಕ ಹರಿಹರಿ ಮ್ಹಣವಿತೀ ।
ಯೇಕ ಉಪದೇಶಿತೀ । ವಿಠ್ಠಲ ವಿಠ್ಠಲ ಮ್ಹಣೌನೀ ॥೧೩॥
ಯೇಕ ಸಾಂಗತೀ ಕೃಷ್ಣ ಕೃಷ್ಣ । ಯೇಕ ಸಾಂಗತೀ ವಿಷ್ಣು ವಿಷ್ಣು ।
ಯೇಕ ನಾರಾಯಣ ನಾರಾಯಣ । ಮ್ಹಣೌನ ಉಪದೇಶಿತೀ ॥೧೪॥
ಯೇಕ ಮ್ಹಣತೀ ಅಚ್ಯುತ ಅಚ್ಯುತ । ಯೇಕ ಮ್ಹಣತೀ ಅನಂತ ಅನಂತ ।
ಯೇಕ ಸಾಂಗತೀ ದತ್ತದತ್ತ । ಮ್ಹಣತ ಜಾವೇ ॥೧೫॥
ಯೇಕ ಸಾಂಗತೀ ರಾಮರಾಮ । ಯೇಕ ಸಾಂಗತೀ ಓಂ ಓಂ ।
ಯೇಕ ಮ್ಹಣತೀ ಮೇಘಶ್ಯಾಮ । ಬಹುತಾ ನಾಮೀ ಸ್ಮರಾವಾ ॥೧೬॥
ಯೇಕ ಸಾಂಗತೀ ಗುರು ಗುರು । ಯೇಕ ಮ್ಹಣತೀ ಪರಮೇಶ್ವರು ।
ಯೇಕ ಮ್ಹಣತೀ ವಿಘ್ನಹರು । ಚಿಂತೀತ ಜಾವಾ ॥೧೭॥
ಯೇಕ ಸಾಂಗತೀ ಶಾಮರಾಜ । ಯೇಕ ಸಾಂಗತೀ ಗರುಡಧ್ವಜ ।
ಯೇಕ ಸಾಂಗತೀ ಅಧೋಕ್ಷಜ । ಮ್ಹಣತ ಜಾವೇ ॥೧೮॥
ಯೇಕ ಸಾಂಗತೀ ದೇವ ದೇವ । ಯೇಕ ಮ್ಹಣತೀ ಕೇಶವ ಕೇಶವ ।
ಯೇಕ ಮ್ಹಣತೀ ಭಾರ್ಗವ ಭಾರ್ಗವ । ಮ್ಹಣತ ಜಾವೇ ॥೧೯॥
ಯೇಕ ವಿಶ್ವನಾಥ ಮ್ಹಣವಿತೀ । ಯೇಕ ಮಲ್ಹಾರೀ ಸಾಂಗತೀ ।
ಯೇಕ ತೇ ಜಪ ಕರವಿತೀ । ತುಕಾಈ ತುಕಾಈ ಮ್ಹಣೌನೀ ॥೨೦॥

ಕೆಲವರು ಬಾಳಾ ಮಂತ್ರ, ಬಗುಳಾ ಮಂತ್ರ (ಪಕ್ಷಿಮಂತ್ರ), ಕಾಳಿಮಂತ್ರ, ಕಂಕಾಳಿ ಮಂತ್ರ (ಕ್ರೂರ ದೇವತಾ ಮಂತ್ರ) ಇವೆಲ್ಲ ಕಲಿಸುವರು (೭) ಎಷ್ಟು ದೇವರಿರುವರೋ ಅಷ್ಟು ಮಂತ್ರಗಳಿರುವವು. ಇವೆಲ್ಲ ಬೇರೆ ಬೇರೆ ಹಾಗೂ ಸ್ವತಂತವಿರುವವು. ಇವುಗಳಲ್ಲಿ ಕೆಲವು ಸರಳ, ಕೆಲವು ಅವಘಡ (ಕಠಿಣ, ಭಯಂಕರ), ಕೆಲವು ವಿಚಿತ್ರವೂ ಇರುವವು. ಕೆಲವು ಭಯಂಕರ ಬೀಜಮಂತ್ರದವು ಇರುವವು, ಇವುಗಳ ಸಂಬಂಧ ಭೂತ, ಖೇತ, ಪ್ರೇತ, ಪಿಶ್ಯಾಚ್ಯಾದಿಗಳ ಬಗೆಗೆ ಇರುವವು. (೮) ಹಾಗೆ ನೋಡಿದರೆ ಭೂಮಿಯ ಮೇಲಿನ ದೇವರುಗಳು ಲೆಕ್ಕ ಮಾಡಲಿಕ್ಕೆ ಯಾರಿಗೂ ಆಗುವದಿಲ್ಲ. ಅಂತೂ ಎಷ್ಟು ದೇವರಿರುವರೋ ಅಷ್ಟು ಮಂತ್ರಗಳಿರುವವು. ಇವನ್ನೆಲ್ಲ ಬಾಯಿಯಿಂದ ಹೇಳುವದು ಅಶಕ್ಯವಾದದ್ದು. (೯) ಮಂತ್ರ ಮಾಲೆಯ ಸರಗಳು ಅಸಂಖ್ಯಾತವಿರುವವು. ಇಷ್ಟೇ ಅಲ್ಲ. ಅವು ಒಂದಕ್ಕಿಂತ ಒಂದು ಹೆಚ್ಚು ಪರಿಣಾಮಕಾರಿ ಶಕ್ತಿಯವಿರುವವು. ಇವೆಲ್ಲ ಮಾಯೆಯ ವಿಚಿತ್ರ ಲೀಲೆಯೇ ಸರಿ. ಈ ವಿಚಿತ್ರ ಕಲೆಯನ್ನು ಮನುಷ್ಯರು ತಿಳಿಯಲು ಸಾಧ್ಯವಿಲ್ಲ. ಇವು ದುಸ್ತರವೂ ಕಠಿಣವೂ ಇರುವವು (೧೦) ಕೆಲವು ಮಂತ್ರಗಳಿಂದ ಭೂತಗಳು ಬಿಟ್ಟು ಹೋಗುವವು. ಕೆಲವು ಮಂತ್ರಗಳಿಂದ ರೋಗ ರುಜಿನಗಳು ನೆಟ್ಟಗಾಗುವವು. ಕೆಲವು ಮಂತ್ರಗಳಿಂದ ಚಳಿಜ್ವರ (ಥಂಡಿಜ್ವರ) ಇಲ್ಲದಾಗುವವು. ಕೆಲವು ಮಂತ್ರಗಳಿಂದ ಹಾವು-ಚೇಳು ವಗೈರೆ ವಿಷ ಜಂತುಗಳವಿಷ ಪರಿಹಾರವಾಗುವವು. (೧೧) ಇಂತಹ ನಾನಾ ಪ್ರಕಾರದ ಮಂತ್ರಗಳಿರುವವು. ಗುರು ಈ ಮಂತ್ರಗಳನ್ನು ಶಿಷ್ಯನ ಕಿವಿಯಲ್ಲಿ ಉಪದೇಶ ಮಾಡುವನು. (ಹೇಳುವನು). ಇವುಗಳ ಜೊತೆಗೆ ಆಯಾ ಮಂತ್ರಗಳ ಜಪ, ಧ್ಯಾನ, ಪೂಜೆ ಮತ್ತು ಯಂತ್ರ ಇವುಗಳ ಶಾಸ್ತ್ರೋಕ್ತ ಮಾಹಿತಿಯನ್ನು ಸಹ ತಿಳಿಸಿಕೊಡುವನು. (೧೨) ಮಂತ್ರಕ್ಕೂ ಸಹ ಒಂದು ಶಾಸ್ತ್ರವಿದೆ. ಮಂತ್ರದ ಉಪಯೋಗದಿಂದ ವ್ಯವಹಾರದಲ್ಲಿಯ ಕೆಲವೊಂದು ಕಾರ್ಯ ಸಾಧಿಸಿಕೊಳ್ಳಲು ಬರುತ್ತದೆಯೆಂಬುದೇನೂ ಸುಳ್ಳಲ್ಲ. ಆದರೆ ಮಂತ್ರ ಶಾಸ್ತ್ರಕ್ಕೆ ಆತ್ಮಜ್ಞಾನದ ಹಿನ್ನಲೆ (ಪಾರ್ಶ್ವಭೂಮಿ) ಇರದಿದ್ದರೆ ಈ ಎಲ್ಲ ಮಂತ್ರಗಳ ಬಳಕೆಯು (ಉಪಯೋಗವು) ವ್ಯವಹಾರದಲ್ಲಿಯ ಶುಭಾಶುಭ ವಾಸನಾದ ತೃಪ್ತಿಗಾಗಿ ಉಪಯೋಗಿಸುವವೇ ಇರುವವು. ಅಂತೂ ನೂರಕ್ಕೆ ತೊಂಭತ್ತೊಂಭತ್ತು ಮಂತ್ರವಾದಿಗಳು ಸ್ವಾರ್ಥಕ್ಕಾಗಿ ಮಂತ್ರಗಳನ್ನು ಉಪಯೋಗಿಸುವದನ್ನು ಕಾಣುತ್ತೇವೆ. ಇನ್ನು ಕೆಲವು ಗುರುಗಳು ಭಗವಂತನ ನಾನಾ ಹೆಸರುಗಳ ಜಪ ಮಾಡಲು ಹೇಳುತ್ತಾರೆ. ಈ ಜಪದ ಉಪದೇಶಕ್ಕೂ ಸಹ ಆತ್ಮಜ್ಞಾನದ ಹಿನ್ನೆಲೆ ಗಟ್ಟಿಮುಟ್ಟಾಗಿದ್ದರೆ ಒಳಿತು ಇಲ್ಲದಿದ್ದರೆ ಹೆಚ್ಚು ಉಪಯೋಗವಿಲ್ಲ;– ಒಬ್ಬ ಗುರು "ಶಿವಶಿವ" ಅನ್ನಲು ಹೇಳುವರು. ಒಬ್ಬರು "ಹರಿಹರಿ" ಎಂದು ಅನ್ನಲು ಹಚ್ಚುವರು. ಇನ್ನೊಬ್ಬರು "ವಿಠ್ಠಲ ವಿಠ್ಠಲ" ಅನ್ನು ಎಂದು ಉಪದೇಶ ಕೊಡುವರು. (೧೩) ಒಬ್ಬರು "ಕೃಷ್ಣ ಕೃಷ್ಣ", ಒಬ್ಬರು "ವಿಷ್ಣು ವಿಷ್ಣು" ಎಂದು ಹೇಳಿದರೆ, ಒಬ್ಬರು "ನಾರಾಯಣ ನಾರಾಯಣ" ಎಂದು ಉಪದೇಶ ಕೊಡುವರು. (೧೪) ಒಬ್ಬರು "ಅಚ್ಯುತ ಅಚ್ಯುತ", ಒಬ್ಬರು "ಅನಂತ ಅನಂತ" ಎಂದು ಹೇಳಿದರೆ, ಒಬ್ಬರು "ದತ್ತ ದತ್ತ" ಎಂದು ಅನ್ನುತ್ತ ಹೋಗಿರಿ ಅಂತಾ ಹೇಳುವರು. (೧೫) ಒಬ್ಬರು"ರಾಮರಾಮ" ಎಂದು, ಒಬ್ಬರು "ಓಂ ಓಂ" ಎಂದು ಅನ್ನಬೇಕೆಂದು ಹೇಳುವರು. ಒಬ್ಬರು ಮೇಘ ಶ್ಯಾಮ ಅಂದರೆ ಶ್ರೀ ಕೃಷ್ಣನ ಅನೇಕ ಹೆಸರುಗಳನ್ನು ಜಪಿಸಿರಿ ಅಂತಾ ಹೇಳುವರು. (೧೬) ಒಬ್ಬರು "ಗುರು-ಗುರು" ಎಂದು ಹೇಳಿದರೆ, ಒಬ್ಬರು ಪರಮೇಶ್ವರನನ್ನು ನೆನಿಸಿರಿ ಅಂತಾ ಹೇಳುವರು. ಒಬ್ಬರು ವಿಘ್ನಹರನಾದ ಗಣಪತಿಯ ಚಿಂತನ ಮಾಡಿರಿ ಎಂದು ಹೇಳುವರು. (೧೭) ಒಬ್ಬರು "ಶಾಮರಾಜ" (ಸೋಮರಾಜ), ಒಬ್ಬರು "ಗರುಡಧ್ವಜ" ಅಂದರೆ ಒಬ್ಬರು "ಅಧೋಕ್ಷಜ" ಎಂದು ಅನ್ನುತ್ತ ಹೋಗಿರಿ ಹೀಗೆ ಹಲವು ಹೆಸರು ಹೇಳುವರು. (೧೮) ಒಬ್ಬರು "ದೇವರು-ದೇವರು" ಎಂದು ಒಬ್ಬರು "ಕೇಶವ-ಕೇಶವ" ಎಂದು ಒಬ್ಬರು 'ಭಾರ್ಗವ ಭಾರ್ಗವ' ಅನ್ನುತ್ತ ಹೋಗಿರಿ ಎಂದು ಹೇಳುವರು. (೧೯) ಒಬ್ಬರು 'ವಿಶ್ವನಾಥ' ಎಂದು ಹೇಳುವರು. ಒಬ್ಬರು ಮಲ್ಲಾರಿ (ಖಂಡೋಬಾ, ಮೈಲಾರಲಿಂಗ), ಎಂದು ಅನ್ನಲು ಹೇಳುವರು. ಒಬ್ಬರು "ತುಕಾಈ-ತುಕಾಈ' (ತುಳಜಾಪುರದ ತುಳಜಾಭವಾನಿ) ಅಂತಾ ಜಪ ಮಾಡಿಸುವರು. (೨೦)

ಹೇ ಕಿತೀ ಮ್ಹಣೌನೀ ಸಾಂಗಾವೇ । ಶಿವಶಕ್ತೀಚೀ ಅನಂತ ನಾವೇ ।
ಇಚ್ಛೆಸಾರಿಖೀ ಸ್ವಭಾವೇ । ಉಪದೇಶಿತೀ ॥೨೦॥

ಯೇಕ ಸಾಂಗತೀ ಮುದ್ರಾಚ್ಯಾರೀ। ಖೇಚರೀ ಭೂಚರೀ ಚಾಚರೀ ಅಗೋಚರೀ।
ಯೇಕ ಆಸನೇ ಪರೋಪರೀ ಉಪದೇಶಿತೀ ॥೨೧॥

ಯೇಕ ದಾಖವಿತೀ ದೇಖಣೀ । ಯೇಕ ಅನುಹಾತ ಧ್ವನೀ ।
ಯೇಕ ಗುರು ಪಿಂಡಜ್ಞಾನೀ । ಪಿಂಡಜ್ಞಾನ ಸಾಂಗತೀ ॥೨೨॥

ಭಗವಂತನ ನಾಮ ಅನ್ನುವ ಪ್ರಕಾರಗಳು ಬಹುವಾಗಿವೆ. ಎಷ್ಟೆಂದು ಹೇಳುವದು. ಶಿವ-ಶಕ್ತಿಯರ ಅನಂತ ಹೆಸರು ಇರುವವು. ಯಾರಿಗೆ ಯಾವ ಹೆಸರು ಸ್ವಾಭಾವಿಕವಾಗಿ ಇಷ್ಟವಾಗುವದೋ ಆ ಹೆಸರಿನ ಉಪದೇಶವನ್ನು ಗುರುವು ಶಿಷ್ಯನಿಗೆ ಕೊಡುತ್ತಾನೆ. [೨೧] ಪರಮಾರ್ಥ ಸಾಧನೆ ಮಾಡುವಲ್ಲಿ ಅನೇಕ ಮಾರ್ಗಗಳಿರುವವು. ಅವುಗಳಲ್ಲಿ ಕೆಲವುದರ ಅನುಭವ ಬರುವದು. ಯಾರಿಗೆ ಯಾವ ಸಾಧನ ಸಾಧಿಸುತ್ತಿದೆಯೋ ಅಥವಾ ಅನುಭವಕ್ಕೆ ಬರುವದೋ ಅದನ್ನು ಅವನು[ಗುರು] ತನ್ನ ಶಿಷ್ಯನಿಗೆ ಹೇಳುವನು. ಹಾಗೆಯೇ ಸಾಧನೆ ಮಾಡುವಾಗ್ಗೆ ಮನಸ್ಸು ಮತ್ತು ದೇಹವೂ ಸೂಕ್ಷ್ಮಗೊಳ್ಳುವವು.ಇದರಿಂದ ಕೆಲವು ಅತೀಂದ್ರಿಯ[ಇಂದ್ರಿಯಗಳಿಗೆ ಅಗೋಚರವಾದ] ಅನುಭವ ಬರುವವು. ಯಾರಿಗೆ ನಾದ ಮತ್ತು ಪ್ರಕಾಶ ಇವುಗಳ ಅನುಭವ ಬರುವದೋ ಅದನ್ನೇ ಅವನು ತನ್ನ ಶಿಷ್ಯನಿಗೆ ಹೇಳುವನು. ಪರಮಾರ್ಥದ ಹಾದಿಯಲ್ಲಿ ಇವೆಲ್ಲವೂ ಇರುವವು. ಆದರೆ ಇವೆಲ್ಲವುಗಳಿಗೂ ಆತ್ಮಜ್ಞಾನದ ಅನುಭವದ ನೆಲೆ ಬೇಕೇಬೇಕು. ಇಲ್ಲದಿದ್ದರೆ ಪರಮಾರ್ಥವೆಂಬುದು ಇರುತ್ತದೆ. ಮತ್ತು ಅದು ಇಷ್ಟೇ ಇರುವದೆಂಬ ತಪ್ಪುಗ್ರಹಿಕೆ ಆಗುತ್ತದೆ. ಅಂತೆಯೇ ಆತ್ಮಜ್ಞಾನದ ಹೊರತು ಇತರ ಎಲ್ಲ ವಿಷಯಗಳೂ ವ್ಯರ್ಥವೆಂದು ತಿಳಿಯಿರಿ, ಎಂದು ಶ್ರೀ ಸಮರ್ಥರು ದೃಢವಾಗಿ ಸಾರಿ ಹೇಳುತ್ತಾರೆ. ಹಟಯೋಗದಲ್ಲಿಯು ನಾಲ್ಕು ಮುದ್ರೆ ಅಂದರೆ ಯೋಗ ಸಾಧನಾದಿಗಳಲ್ಲಿ ವಿಶಿಷ್ಟ ಪ್ರಕಾರದಿಂದ ಮಾಡುವ ಹಾವಭಾವ (ಕೈ, ಕಣ್ಣು, ಶರೀರ ಮೊದಲಾದವುಳಿಂದ ಮಾಡುವ) ಗಳು. ಇವು ನಾಲ್ಕು ಇರುತ್ತವೆ.[೧]ಖೇಚರಿ ಅಂದರೆ ಹಠಯೋಗದಲ್ಲಿ ಗುರು ಹೇಳಿದ ಮಾರ್ಗದಿಂದ ನಾಲಿಗೆಯ ತುದಿಯನ್ನು ಅತಿಸೂಕ್ಷ್ಮ ಹಾಗೂ ಉದ್ದ ಮಾಡಿ ಅದನ್ನು ಗಂಟಲದಲ್ಲಿಯ [ಬಾಯಿಯೊಳಗಿನ] ಛಿದ್ರ [ಅಂಗಳ]ವಲ್ಲಿ ಸೇರಿಸಿ ಅದನ್ನು ಭ್ರೂಮಧ್ಯದವರೆಗೆ ಹೊರಳಿಸಿ ಇಡುವ ಕ್ರಿಯೆ. [೨] ಭೂಚರಿ ಅಂದರೆ ನಾಶಿಕಾಗ್ರದ ಮೇಲೆ ದೃಷ್ಟಿ ಹಾಯಿಸಿ ಭೂಮಿಯ ಕಡೆಗೆ ನಜರ ಇಡುವ ಯೋಗ ಮುದ್ರೆಯು [೩]ಚಾಚರಿ:- ಅಂದರೆ ಕಣ್ಣಿನ ರೆಪ್ಪೆ ಹಾಗೂ ಗುಡ್ಡೆಗಳನ್ನು ತಿರುಗಿಸುತ್ತ ಹಾಲಚಾಲ ಮಾಡುತ್ತ ಭ್ರೂ [ಹುಬ್ಬಿನ] ಮಧ್ಯದಲ್ಲಿ ನಜರ ಇಟ್ಟು ನೋಡುವದು.[೪]ಅಗೋಚರಿ:-ಅಂದರೆ, ಕಣ್ಣಿನ ರೆಪ್ಪೆಗಳನ್ನು ಅರ್ಧ ಮುಚ್ಚಿ ದೃಷ್ಟಿಯನ್ನು ಆಕಾಶದ ಕಡೆಗೆ ಇಡುವದು. ಈ ನಾಲ್ಕು ಯೋಗ ಮುದ್ರೆಗಳನ್ನು ಮಾಡಿರಿ ಎಂದು ಹೇಳುವರು. ಕೆಲವರು ಅನೇಕ ಪ್ರಕಾರದ ಆಸನಗಳನ್ನು ಕಲಿಸಿ ಇವುಗಳನ್ನು ಮಾಡುತ್ತ ಹೋಗಿರಿ ಎಂದು ಹೇಳುವರು. [೨೨] ಕೆಲವರು ಕೆಂಪು, ಬೆಳಿ, ಕರಿ ಮತ್ತು ನೀಲಿ ಬಣ್ಣಗಳಲ್ಲಿ ಅತೀಂದ್ರಿಯ ಪ್ರಕಾಶ ತೋರಿಸುವರು. ಅನಾಹತನಾದ [ಅಂದರೆ ಅನುಹಾತ ಧ್ವನಿ = ದೇಹದಲ್ಲಿ ಆಘಾತವಿಲ್ಲದೆ ಸತತ ಚಾಲೂ ಇರುವಂಥ ಹಾಗೂ ಯೋಗ ಸಾಧನದಿಂದ ಕೇಳ ಬರುವ ಘುಂಗರು ನಾದ (ಚಿಣಿ ಚಿಂಚಿಣಿ) ಪೈಂಜಣನಾದ ಘಂಟಾ, ಶಂಖ, ವೀಣೆ, ತಾಳ, ಕೊಳಲು, ಮೃದಂಗ ನಗಾರಿ, ಘನಗರ್ಜನೆ [ಮೇಘ ಗರ್ಜನೆ, ಸಿಡಿಲು ಗದ್ದರಿಸುವ ಧ್ವನಿ] ಈ ಧ್ವನಿಯಲ್ಲಿ ಒಂದು ಅಥವಾ ಅನೇಕ ಪ್ರಕಾರವ ನಾದಗಳನ್ನು ಶಿಷ್ಯನಿಗೆ ಹೇಳುವನು. ಶರೀರ ರಚನೆಯ ಸಂಪೂರ್ಣ ಜ್ಞಾನವಿದ್ದವನೇ ಇದನ್ನು ಹೇಳುವನು. [೨೩]

ಯೇಕ ಸಾಂಗತೀ ಕರ್ಮಮಾರ್ಗ । ಯೇಕ ಉಪಾಸನಾ ಮಾರ್ಗ ।
ಯೇಕ ಸಾಂಗತೀ ಅಷ್ಟಾಂಗಯೋಗ । ನಾನಾ ಚಕ್ರೇ ॥೨೪॥

ಯೇಕ ತಪೇ ಸಾಂಗತೀ । ಯೇಕ ಅಜಪಾ ನಿರೋಪಿತೀ ।
ಯೇಕ ತತ್ವೇ ವಿಸ್ತಾರಿತೀ । ತತ್ವಜ್ಞಾನೀ ॥೨೫॥

ಯೇಕ ಸಾಂಗತೀ ಸಗುಣ । ಯೇಕ ನಿರೋಪಿತೀ ನಿರ್ಗುಣ ।
ಏಕ ಉಪದೇಶಿತೀ ತೀರ್ಥಾಟಣ । ಫಿರಾವೇ ಮ್ಹಣೂನೀ ॥೨೬॥

ಯೇಕ ಮಹಾವಾಕ್ಯೇ ಸಾಂಗತೀ । ತ್ಯಾಂಚಾ ಜಪ ಕರಾವಾ ಮ್ಹಣತೀ ।
ಯೇಕ ಉಪದೇಶ ಕರಿತೀ । ಸರ್ವ ಬ್ರಹ್ಮ ಮ್ಹಣೋನೀ ॥೨೭॥

ಯೇಕ ಶಾಕ್ತಮಾರ್ಗ ಸಾಂಗತೀ । ಯೇಕ ಮುಕ್ತಮಾರ್ಗ ಪ್ರತಿಷ್ಠಿತೀ ।
ಯೇಕ ಇಂದ್ರಿಯೆಪೂಜನ ಕರವಿತೀ । ಯೇಕಾ ಭಾವೇ ॥೨೮॥

ಕೆಲವರು ಕರ್ಮ ಮಾರ್ಗ, ಕೆಲವರು ಉಪಾಸನಾ ಮಾರ್ಗ, ಕೆಲವರು ಎಂಟು ಮೆಟ್ಟಲಿನ [ಅಷ್ಟಾಂಗ] ಪಾತಂಜಲಿ ಯೋಗ ಹೇಳುವರು. ಹಾಗೂ ಶರೀರದಲ್ಲಿರುವ ಆರು ಚಕ್ರಗಳನ್ನು ಭೇದಿಸುವ ವಿದ್ಯೆಯನ್ನು ಉಪದೇಶಿಸುವರು, ಪಾತಂಜಲದ ಎಂಟು ಮೆಟ್ಟಲಗಳೆಂದರೆ:- ೧. ಯಮ, ೨. ನಿಯಮ, ೩. ಆಸನ, ೪. ಪ್ರಾಣಾಯಾಮ, ೫. ಪ್ರತ್ಯಾಹಾರ, ೬. ಧಾರಣ, ೭. ಧ್ಯಾನ ಮತ್ತು ೮. ಸಮಾಧಿ. ಇವು ಎಂಟು ಪ್ರಕಾರಗಳು ಆರು ಚಕ್ರಗಳೆಂದರೆ:- ೧. ಮೂಲಾಧಾರ ೨. ಸ್ವಾಧಿಷ್ಠಾನ ೩. ಮಣಿಪುರ ೪. ಅನಾಹತ ೫. ವಿಶುದ್ಧ ಮತ್ತು ೬. ಆಜ್ಞಾ ಅಥವಾ ಸಹಸ್ರದಲ ಇವು ಆರು ಚಕ್ರಗಳು. ಪ್ರಾಣ ಮತ್ತು ಅಪಾನ ಇವುಗಳ ಮಿಲನ [ಕೂಡುವಿಕೆ] ಮಾಡಿ ಇಡಾ, ಪಿಂಗಳಾ ಅನ್ನುವ ಎರಡು ನಾಡಿಗಳ ಮಧ್ಯದಲ್ಲಿರುವ ಸುಷಮ್ನಾ ಎಂಬ ಬೆನ್ನಿನ ಮಣಿಕಟ್ಟಿನಲ್ಲಿರುವ ಸೂಕ್ಷ್ಮ ನಾಡಿಯ ಮಾರ್ಗದಿಂದ ಪ್ರತಿಯೊಂದು ಚಕ್ರದ ಭೇದನ ಮಾಡಿ ಪ್ರಾಣವನ್ನು ಮೂರ್ಧನಾಕಾಶದಲ್ಲಿ ಒಯ್ಯುವದಿರುತ್ತದೆ. **[ಚಕ್ರ ಸ್ಥಾನಗಳ ವಿವರ:-** ೧. ಮೂಲಾಧಾರ-ಗುದಸ್ಥಾನ, ೨. ಸ್ವಾಧಿಷ್ಠಾನ-ಲಿಂಗ, ೩. ಮಣಿಪುರ-ನಾಭಿ, ೪.ಅನಾಹತ-ಹೃದಯ, ೫. ವಿಶುದ್ಧ-ಕಂಠ, ೬.ಆಜ್ಞಾ-ಭ್ರೂಮಧ್ಯಸ್ಥಲ ಎರಡು ಹುಬ್ಬಿನ ನಡುವಿನ ಸ್ಥಳ, ೭. ಸಹಸ್ರದಲ-ಬ್ರಹ್ಮರಂಧ್ರ ತಲೆಯ ಮೇಲ್ಭಾಗದಲ್ಲಿರುವದು] ಇದಕ್ಕೆ ಚಕ್ರಭೇದವೆನ್ನುವರು. ಹಾಗೂ **ಈ ಪ್ರಕಾರ ಚಕ್ರದ ಸ್ಥಾನವಿರುವವು.** [೨೪] ಕೆಲವರು ಬೇರೆ ಬೇರೆ ಪ್ರಕಾರದ ತಪಸ್ಸಾಧನೆಗಳನ್ನು ಹೇಳುವರು. ಕೆಲವರು ಅಜಪಾಜಪ ಮಾಡಲು ಹೇಳುವರು. ಅಜಪಾಜಪ ಎಂದರೆ ಯೋಗಿಗಳ ಅಭಿಪ್ರಾಯ ಹೀಗಿರುವದು:-ನಮ್ಮ ಶ್ವಾಸೋಚ್ಛ್ವಾಸವು ಇಪ್ಪತ್ನಾಲ್ಕು ತಾಸು ನಡೆದಿರುತ್ತದೆ. ಇದು ತನ್ನಷ್ಟಕ್ಕೆ ತಾನೆ ಆಗುವ ಜಪವೇ ಇರುತ್ತದೆ. ಶ್ವಾಸವನ್ನು ಒಳಗೆ ಎಳೆಯುವಾಗ್ಗೆ 'ಸೋ' ಹಾಗೂ ಶ್ವಾಸ ಹೊರಗೆ ಬಿಡುವಾಗ 'ಹಮ್' ಹೀಗೆ ಸೂಕ್ಷ್ಮನಾದ ಆಗುತ್ತದೆ. ಈ ನಾದದ ಮೇಲೆ ಮನಸ್ಸನ್ನು ಏಕಾಗ್ರ ಮಾಡಿದ್ದಾದರೆ ಇಪ್ಪತ್ನಾಲ್ಕು ತಾಸೂ ವಿನಾಯಾಸ [ಶ್ರಮವಿಲ್ಲದೆ] ಜಪ ಸುರು ಇರುವದು[ನಡೆಯುವದು]. ಇದಕ್ಕೆ ಅಜಪಾ ಜಪವೆನ್ನುವರು. (ದಶಕ ೧೭ ಸಮಾಸ ೫ ನೋಡಿರಿ) ಇತರ ಕೆಲವು ತತ್ವ ಚಿಂತಕರು, ಜ್ಞಾನಿಗಳು ವಿಶ್ವದ (ಜಗತ್ತಿನ) ಮೂಲ ತತ್ವಗಳನ್ನು ವಿಸ್ತಾರವಾಗಿ ಬಿಡಿಸಿ ಹೇಳಿ ಬಹು ಚನ್ನಾಗಿ ವರ್ಣಿಸುವರು. [೨೫] ಕೆಲವರು ಸಗುಣದ ಉಪದೇಶ ಮಾಡಿದರೆ ಮತ್ತೆ ಕೆಲವರು ನಿರ್ಗುಣದ ವಿಷಯ ಉಪದೇಶ ಮಾಡುವರು. ಕೆಲವರು ತೀರ್ಥಾಟನ ಮಾಡುವ ಉಪದೇಶ ಕೊಡುವರು. [೨೬] ನಾಲ್ಕು ವೇದಗಳಲ್ಲಿ ಜೀವ, ಬ್ರಹ್ಮರ ಐಕ್ಯವನ್ನು ಬೋಧಿಸುವ ನಾಲ್ಕು ಮಹಾವಾಕ್ಯಗಳಿರುವವು. ಇವುಗಳ ಜಪಮಾಡಲಿಕ್ಕೆ ಕೆಲವರು ಹೇಳುವರು. ಮತ್ತೊಬ್ಬರು ಏನೇನು ಇರುವದೋ ಅದೆಲ್ಲವೂ ಬ್ರಹ್ಮವೇ ಇರುವದು 'ಸರ್ವಂ ಖಲು ಇದಂ ಬ್ರಹ್ಮ' ಇದನ್ನೇ ಉಪದೇಶ ಕೊಡುವರು. [೨೭] ಕೆಲವರು ಶಾಕ್ತ ಮಾರ್ಗ ಹೇಳುವರು. ಈ ಮಾರ್ಗದಲ್ಲಿ ಶಕ್ತಿಯ ಅಥವಾ ದೇವಿಯ ಉಪಾಸನಾ ಮಾಡಬೇಕಾಗುವದು. ಇದರಲ್ಲಿ ಉತ್ತಮ, ಮಧ್ಯಮ, ಮತ್ತು ಕನಿಷ್ಠ ಹೀಗೆ ಮುಖ್ಯವಾಗಿ ಮೂರು ಪ್ರಕಾರಗಳಿರುವವು.ಇನ್ನೂ ಅನೇಕ ಪ್ರಕಾರಗಳೂ ಇರುವವು. ಸಾತ್ವಿಕ ಕರ್ಮ ಮಾರ್ಗವನ್ನು ಬಿಟ್ಟರೆ ಉಳಿದ ಪ್ರಕಾರಗಳಲ್ಲಿ ಮದ್ಯ, ಮಾಂಸ, ಮತ್ಸ್ಯ ಮುದ್ರಾ, ಮತ್ತು ಮೈಥುನ ಹೀಗೆ ಪಂಚ ಮಕಾರಗಳ ಸೇವನೆಯೊಂದಿಗೆ ಪೂಜೆ ನಡೆಯುತ್ತದೆ. ಕೆಲವರು ಮುಕ್ತಮಾರ್ಗಾವಲಂಬಿಗಳಿರುತ್ತಾರೆ. ಅಂದರೆ ಎಲ್ಲ ಬಂಧನಗಳನ್ನು ಮುರಿದು ಸ್ವೈರಾಚಾರದಿಂದ ನಡೆಯುವ ಮಾರ್ಗ ಸ್ಥಾಪಿಸುತ್ತಾರೆ. ಮತ್ತೆ ಕೆಲವರು ಒಳ್ಳೇ ಮನಃಪೂರ್ವಕ ಇಂದ್ರಿಯಗಳ ಪೂಜೆ ಮಾಡುವದನ್ನು ಉಪದೇಶ ಕೊಡುತಾಡ್ತಾರೆ. ಮತ್ತು ತಾವೂ ಪೂಜೆ ಮಾಡಿಸಿಕೊಳ್ಳುವರು. ಈ ವಾಮ ಮಾರ್ಗದಲ್ಲಿ ಕೊನೆಯದಾಗಿ ಸ್ತ್ರೀ ಪುರುಷರ ಗುಹ್ಯ ಇಂದ್ರಿಯಗಳ ಪೂಜೆ ನಡೆಯುತ್ತದೆ. ಅರ್ಥಾತ್ ಮೈಥುನಾದಿ ಅನಾಚಾರಗಳುಂಟಾಗುವವು [೨೮]

ಯೇಕ ಸಾಂಗತೀ ವಶೀಕರ್ಣ । ಸ್ತಂಬನ ವೋಹನ ಉಚ್ಚಾಟಣ ।
ನಾನಾ ಚೆಟಕೇ ಆಪಣ । ಸ್ವಯೇ ನಿರೋಪಿತೀ ॥೨೯॥

ಏಸೀ ಉಪದೇಶಾಚೀ ಸ್ಥಿತೀ । ಪುರೆ ಆತಾ ಸಾಂಗೋ ಕಿತೀ ।
ಏಸೆ ಹೇ ಉಪದೇಶ ಅಸತೀ । ಅಸಂಖ್ಯಾತ ॥೩೦॥

ಏಸೆ ಉಪದೇಶ ಅನೇಕ । ಪರೀ ಜ್ಞಾನೇವಿಣ ನಿರಾರ್ಥಕ ।
ಯೇ ವಿಷಈ ಅಸೆ ಯೇಕ । ಭಗವದ್ವಚನ ॥೩೧॥

॥ಶ್ಲೋಕ॥ ನಾನಾ ಶಾಸ್ತ್ರಂ ಪಠೇಲ್ಲೋಕೊ ನಾನಾ ದೈವತ ಪೂಜನಮ್।
ಆತ್ಮಜ್ಞಾನಂ ವಿನಾ ಪಾರ್ಥ ಸರ್ವಕರ್ಮ ನಿರರ್ಥಕಮ್ ॥೪॥
ಶೈವ ಶಾಕ್ತಾಗಮಾದ್ಯಾಯೆ ಅನ್ಯೇಚ ಬಹವೋ ಮತಾಃ ।
ಅಪಭ್ರಂಶ ಸಮಾಸ್ತೇಽಪಿ ಜೀವಾನಾಂ ಭ್ರಾಂತಚೇತಸಾಮ್ ॥೪॥
ನ ಹಿ ಜ್ಞಾನೇನ ಸದೃಶಂ ಪವಿತ್ರಮಿದಮುತ್ತಮಮ್ ॥೪॥

ಯಾ ಕಾರಣೇ ಜ್ಞಾನಾ ಸಮಾನ । ಪವಿತ್ರ ಉತ್ತಮ ನ ದಿಸೆ ಅನ್ನ ।
ಮ್ಹಣೌನ ಆಧೀ ಆತ್ಮಜ್ಞಾನ । ಸಾಧಿಲೇ ಪಾಹಿಜೆ ॥೩೨॥

ಸಕಳ ಉಪದೇಶೀ ವಿಶೇಷ । ಆತ್ಮಜ್ಞಾನಾಚಾ ಉಪದೇಶ ।
ಯೇ ವಿಷಈ ಜಗದೀಶ । ಬಹುತಾ ಠಾಈ ಬೋಲಿಲಾ ॥೩೩॥

ಕೆಲವು ಗುರುಗಳು ವಶೀಕರಣ, ಸ್ತಂಭನ, ಮೋಹನ, ಉಚ್ಚಾಟನ ವಗ್ಯೆರೆ ಅನೇಕ ಚೇಡೆ ಚೇಟಕೆ [ಮಾಟ, ಮದ್ದು ಯಕ್ಷಿಣಿ ವಿದ್ಯೆ]ಗಳನ್ನು ಸ್ವತಃ ಮಾಡಿ ತೋರಿಸಿ, ಮಾಡಲಿಕ್ಕೆ ಶಿಷ್ಯರಿಗೆ ಹೇಳುವರು. ವಶೀಕರಣ ಅಂದರೆ ಮನುಷ್ಯನನ್ನು ಸಂಪೂರ್ಣವಾಗಿ ತನ್ನ ಆಧೀನ ಮಾಡಿಕೊಳ್ಳುವದು. ಸ್ತಂಭನ ಅಂದರೆ ಮನುಷ್ಯನ ಶರೀರದ ಮೇಲೆ ಮತ್ತು ಮನಸ್ಸಿನ ಮೇಲೆ ಪ್ರಯೋಗ ಮಾಡಿ ಅದರ ಪರಿಣಾಮದಿಂದ ಅವನನ್ನು ಸ್ತಬ್ಧ ಮಾಡುವದು. ಅಥವಾ ಸುಮ್ಮನಿರುವಂತೆ ತಟಸ್ಥ ಮಾಡುವಮ. ಮೋಹನ ಅಂದರೆ ಮನುಷ್ಯನನ್ನು ಭ್ರಮಿಷ್ಟಗೊಳಿಸುವದು. ಅಥವಾ ಬೇ-ಶುದ್ಧ-ಗೊಳಿಸುವದು. ಉಚ್ಚಾಟನೆ ಅಂದರೆ ಮನುಷ್ಯನನ್ನು ಸ್ಥಾನ ಭ್ರಷ್ಟಗೊಳಿಸುವದು,ಓಡಿಸುವದು, ಅವನನ್ನು ಹೊತ್ತೊಯ್ಯುವದು. ಅಥವಾ ಅವನನ್ನು ನಾಶ ಮಾಡುವದು, ಹುಚ್ಚು ಹಿಡಿಸುವದು ಇವೆಲ್ಲವೂ ತಂತ್ರವಿದ್ಯೆಯ ಅಘೋರ (ಕೆಟ್ಟ) ಕ್ರಿಯೆಯಾಗಿರುವವು. [೨೯] ಹೀಗೆ ಬಹುವಿಧವಾಗಿ ಉಪದೇಶಗಳ ರೀತಿ ಇರುವದು, ಎಷ್ಟೆಂದು ಹೇಳುವದು. ಇನ್ನೂ ಹೆಚ್ಚು ಹೇಳುದದನ್ನು ಈಗ ಮುಗಿಸೋಣ. ಒಟ್ಟಿನಲ್ಲಿ ಉಪದೇಶದ ಅಸಂಖ್ಯ ಪ್ರಕಾರಗಳು ಇರುವವು. [೩೦] **ಮುಖ್ಯವಾದ ಆತ್ಮಜ್ಞಾನದ ಹೊರತು ಈ ಉಪದೇಶದ ಎಲ್ಲ ಪ್ರಕಾರಗಳೂ ವ್ಯರ್ಥವೆನಿಸುವವು. ಆತ್ಮಜ್ಞಾನದಂಥ ಪವಿತ್ರವಾದದ್ದು ಇನ್ನೊಂದಿಲ್ಲ.** ಉಪದೇಶದ ಅನೇಕ ಪ್ರಕಾರಗಳಿದ್ದರೂ ಸಹ ಆತ್ಮಜ್ಞಾನದ ಹೊರತು ಇವುಗಳಿಗೆ ಯಾವ ಮಹತ್ವವೂ ಇಲ್ಲ. ಈ ಬಗ್ಗೆ ಭಗವಂತನ ಒಂದು ವಚನವಿರುವದು. [೩೧] **ಶ್ಲೋಕ:–** ನಾನಾ ಶಾಸ್ತ್ರಂ ಪಠೇಲ್ಲೋಕೋ ನಾನಾ ದೈವತ ಪೂಜನಮ್ । ಆತ್ಮಜ್ಞಾನಂ ವಿನಾ ಪಾರ್ಥ ಸರ್ವಕರ್ಮ ನಿರರ್ಥಕಮ್ ॥ಛ॥ **ಶ್ಲೋಕದ ಅರ್ಥ:–** ಜನರು ನಾನಾ ಶಾಸ್ತ್ರದ ಅಭ್ಯಾಸ ಮಾಡುತ್ತಾರೆ. ಮತ್ತು ನಾನಾ ದೇವತೆಗಳ ಪೂಜೆ ಮಾಡುವರು. ಆದರೆ ಅರ್ಜುನಾ,ಆತ್ಮಜ್ಞಾನವಿಲ್ಲದಿದ್ದರೆ ಆ ಎಲ್ಲ ಕರ್ಮಗಳೂ ವ್ಯರ್ಥವಾಗುವವು. **ಶ್ಲೋಕ:–** ಶೈವ ಶಾಕ್ತಾಗಮಾದ್ಯಾ ಯೇ ಅನ್ಯೇಚ ಬಹವೋ ಮತಾಃ । ಅಪಭ್ರಂಶ ಸಮಾಸ್ತೇಽಪಿ ಜೀವಾನಾಂ ಭ್ರಾಂತಚೇತಸಾಮ್ ॥ಛ॥ **ಭಾವಾರ್ಥ:-** ಶೈವಮತ, ಶಾಕ್ತ ಮತ, ಆಗಮ ಶಾಸ್ತ್ರ, ಮತ್ತು ಬೇರೆ ಬೇರೆ ಅನೇಕ ಮತಗಳೂ ಇರುವವು. ಭ್ರಮದಲ್ಲಿ ಇರುವಂಥ ಜೀವಿಗಳಿಗೆ ಇವು ಬುದ್ಧಿಭ್ರಂಶ ಮಾಡುವಂಥವೆಂದೇ ತಿಳಿಯಬೇಕು. **ಶ್ಲೋಕ:–** ನಹಿ ಜ್ಞಾನೇನ ಸದೃಶಂ ಪವಿತ್ರಮಿದ ಮುತ್ತಮಮ್ ॥ಛ॥ **ಅರ್ಥ:–** ಈ ಜಗತ್ತಿನಲ್ಲಿ ಆತ್ಮಜ್ಞಾನದಂಥ ಪವಿತ್ರ ವ ಉತ್ತಮವಾದದ್ದು ಇನ್ನೊಂದಿ ರುವದಿಲ್ಲ: ಅಂತೆಯೇ ಒಟ್ಟಿನಲ್ಲಿ ಆತ್ಮಜ್ಞಾನದಂಥ ಪವಿತ್ರ ಮತ್ತು ಉತ್ತಮವಾದುದು ಇನ್ನೊಂದಿಲ್ಲ. ಆದ್ದರಿಂದ ಮೊದಲು ಆತ್ಮಜ್ಞಾನ ಪ್ರಾಪ್ತ ಮಾಡಿಕೊಳ್ಳಲಿಕ್ಕೇ ಬೇಕು. [೩೨] ಎಲ್ಲ ಉಪದೇಶಗಳಲ್ಲಿ ಆತ್ಮಜ್ಞಾನದ ಉಪದೇಶವೇ ಸರ್ವ ಶ್ರೇಷ್ಠವಿರುವದು, ಈ ವಿಷಯದ ಬಗ್ಗೆ ಭಗವಂತನು ಅನೇಕ ಕಡೆಗೆ ಹೇಳಿದ್ದಾನೆ. [೩೩]

॥ಶ್ಲೋಕ॥ ಯಸ್ಯ ಕಸ್ಯ ಚ ವರ್ಣಸ್ಯ ಜ್ಞಾನಂ ದೇಹೇ ಪ್ರತಿಷ್ಠಿತಮ್ ।
ತಸ್ಯ ದಾಸಸ್ಯ ದಾಸೋಽಹಂ ಭವೆ ಜನ್ಮನಿ ಜನ್ಮನಿ ॥೪॥

ಆತ್ಮಜ್ಞಾನಾಚಾ ಮಹಿಮಾ । ನೇಣೇ ಚತುರ್ಮುಖ ಬ್ರಹ್ಮಾ ।
ಪ್ರಾಣೀ ಬಾಪುಡಾ ಜೀವಾತ್ಮಾ । ಕಾಯೇ ಜಾಣೇ ॥೩೪॥

ಸಕಳ ತೀರ್ಥಾಚೀ ಸಂಗತೀ । ಸ್ನಾನ ದಾನಾಚೀ ಫಳಶ್ರುತೀ ।
ತ್ಯಾಹೂನಿ ಜ್ಞಾನಾಚೀ ಸ್ಥಿತೀ । ವಿಶೇಷ ಕೋಟಿ ಗುಣೇ ॥೩೫॥

॥ಶ್ಲೋಕ॥ ಪೃಥಿವ್ಯಾಂ ಯಾನಿ ತೀರ್ಥಾನಿ । ಸ್ನಾನದಾನೇಷು ಯತ್ಫಲಮ್ ॥
ತತ್ಫಲಂ ಕೋಟಿ ಗುಣಿತಂ । ಬ್ರಹ್ಮಜ್ಞಾನ ಸಮೋಪಮಮ್ ॥೪॥

ಮ್ಹಣೌನೀ ಜೇ ಆತ್ಮಜ್ಞಾನ । ತೇ ಗಹನಾಹೂನಿ ಗಹನ ।
ಯೇಕ ತಯಾಚೇ ಲಕ್ಷಣ । ಸಾಂದಿಜೇಲ ॥೩೬॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
''ಉಪದೇಶ ಲಕ್ಷಣ'' ನಾಮ ಸಮಾಸ ಚತುರ್ಥ ॥

● ●

**ಶ್ಲೋಕ:**– ಯಸ್ಯ ಕಸ್ಯಚ ವರ್ಣಸ್ಯ ಜ್ಞಾನಂ ದೇಹೇ ಪ್ರತಿಷ್ಠಿತಮ್ । ತಸ್ಯ ದಾಸಸ್ಯ ದಾಸೋಹಂ ಭವೇ ಜನ್ಮನಿ ಜನ್ಮನಿ ॥ಛ॥ **ಭಾವಾರ್ಥ:**– ಮನುಷ್ಯ ಯಾವುದೇ ವರ್ಣದವನಿದ್ದರೂ ಅವನ ಶರೀರ [ದೇಹ]ದಲ್ಲಿ ಆತ್ಮಜ್ಞಾನ ಸ್ಥಿರಗೊಂಡಿದ್ದರೆ ನಾನು ಜನ್ಮ ಜನ್ಮಾಂತರದಲ್ಲಿ ಅಂಥ ಆತ್ಮಜ್ಞಾನಿಯ ದಾಸಾನುದಾಸನಾಗುವೆನು. ನಾಲ್ಕು ಮುಖದ ಬ್ರಹ್ಮದೇವರಿಗೂ ಸಹ ಆತ್ಮಜ್ಞಾನದ ಹಿರಿಮೆ ತಿಳಿದಿಲ್ಲ. ಅಂದ ಮೇಲೆ ಬಡಪಾಯಿಯಾದ ಅಜ್ಞಾನಿ ಜೀವವು ಹೇಗೆ ತಿಳಿದೀತು. ಅರ್ಥಾತ್ ತಿಳಿಯಲಾರದೆಂಬುದರಲ್ಲಿ ಸಂಶಯವಿಲ್ಲ. [೩೪] ತೀರ್ಥಯಾತ್ರೆ, ಸ್ನಾನ, ದಾನ, ಇತ್ಯಾದಿ ಸರ್ವ ಸಾಧನಗಳಿಂದ ದೊರಕಿಸಿದ ಪುಣ್ಯ ಬಹಳಷ್ಟು ಇರುತ್ತದೆ. ಆದರೆ ಆತ್ಮಜ್ಞಾನದ ಪುಣ್ಯವು ಈ ಎಲ್ಲವುಗಳಿಗಿಂತ ಕೋಟಿ ಪಟ್ಟು ಹೆಚ್ಚಾಗಿರುವದು. [೩೫] [ಈ ವಿಷಯದ ಬಗ್ಗೆ ಒಂದು ಶ್ಲೋಕ ಇಲ್ಲಿ ಹೇಳಿದೆ]. **ಶ್ಲೋಕ:**– ಪ್ರಥಿವ್ಯಾಂ ಯಾನಿ ತೀರ್ಥಾನಿ ಸ್ನಾನ ದಾನೇಷು ಯತ್ಫಲಮ್ । ತತ್ಫಲಂ ಕೋಟಿ ಗುಣಿತಂ । ಬ್ರಹ್ಮಜ್ಞಾನ ಸಮೋಪಮಮ್ ॥ಛ॥ **ಶ್ಲೋಕಾರ್ಥ:**– ಪೃಥ್ವಿಯ ಮೇಲೆ ಎಷ್ಟು ತೀರ್ಥಗಳಿರುವವೋ ಅವೆಲ್ಲವುಗಳ ಯಾತ್ರೆಯ ಫಲ. ಮತ್ತು ಸ್ನಾನ ದಾನಾದಿಗಳ ಫಲ ಇವೆಲ್ಲದರ ಬೇರೀಜನ್ನು ಕೋಟಿ ಪಟ್ಟಿನಿಂದ ಬೆಳಿಸಿದರೆ ಆಗ ಕದಾಚಿತ್ ಬ್ರಹ್ಮಜ್ಞಾನದ ಸರಿಸಮ ಆಗಬಹುದೇನೋ? ಅಂತೂ ಗಹನಕ್ಕಿಂತ ಗಹನ [ಎಲ್ಲಕ್ಕಿಂತ ಶ್ರೇಷ್ಠ] ಅಥವಾ ಅತ್ಯಂತ ಗೂಢವಾದ ಆತ್ಮಜ್ಞಾನದ ಲಕ್ಷಣಗಳನ್ನು ಇನ್ನು ಮುಂದೆ ಹೇಳುವೆವು, ಅವನ್ನು ಶ್ರೋತೃಗಳು ಕೇಳಬೇಕು. [೩೬]

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದ ಐದನೆಯ ದಶಕದಲ್ಲಿಯ
"ಉಪದೇಶ ಲಕ್ಷಣ"ವೆಂಬ ಹೆಸರಿನ ನಾಲ್ಕನೆಯ ಸಮಾಸವು ಮುಗಿದುದು.

● ●

## ಸಮಾಸ ಪಂಚಮ : ಬಹುಧಾ ಜ್ಞಾನ ನಿರೂಪಣ

॥ಶ್ರೀರಾಮ॥ ಜಮ ತೇ ಜ್ಞಾನ ನಾಹೀ ಪ್ರಾಂಜಳ। ತಮ ಸರ್ವ ಕಾಹೀ ನಿರ್ಫಳ।
ಜ್ಞಾನರಹಿತ ತಳಮಳ। ಜಾಣಾರ ನಾಹೀ ॥೧॥
ಜ್ಞಾನ ಮ್ಹಣತಾ ವಾಟೆ ಭರಮ। ಕಾಯೆ ರೇ ಬಾ ಅಸೇಲ ಮರ್ಮ।
ಮ್ಹಣೋನಿಹಾ ಅನುಕ್ರಮ। ಸಾಂಗಿಜೇಲ ಆತಾ ॥೨॥
ಭೂತ ಭವಿಷ್ಯ ವರ್ತಮಾನ। ಠಾಊಕೇ ಆಹೆ ಪರಿಚ್ಛಿನ್ನ।
ಯಾಸೀ ಹಿ ಮ್ಹಣಿಜೇತ ಜ್ಞಾನ। ಪರೀ ತೇ ಜ್ಞಾನ ನವ್ಹೇ ॥೩॥
ಬಹುತ ಕೇಲೇ ವಿದ್ಯಾಪಠಣ। ಸಂಗೀತ ಶಾಸ್ತ್ರ ರಾಗ ಜ್ಞಾನ।
ವೈದಿಕ ಶಾಸ್ತ್ರ ವೇದಾಧ್ಯೇನ। ಹೇ ಹಿ ಜ್ಞಾನ ನವ್ಹೇ ॥೪॥
ನಾನಾ ವೆವಸಾಯಾಚೇ ಜ್ಞಾನ। ನಾನಾ ದೀಕ್ಷೇಚೇ ಜ್ಞಾನ।
ನಾನಾ ಪರೀಕ್ಷೇಚೇ ಜ್ಞಾನ। ಹೇ ಜ್ಞಾನ ನವ್ಹೇ ॥೫॥
ನಾನಾ ವನಿತಾಚೀ ಪರೀಕ್ಷಾ। ನಾನಾ ಮನುಷ್ಯಾಚೀ ಪರೀಕ್ಷಾ।
ನಾನಾ ನರಾಚೀ ಪರೀಕ್ಷಾ। ಹೇ ಜ್ಞಾನ ನವ್ಹೇ ॥೬॥
ನಾನಾ ಅಶ್ವಾಚೀ ಪರೀಕ್ಷಾ। ನಾನಾ ಗಜಾಚೀ ಪರೀಕ್ಷಾ।
ನಾನಾ ಶ್ವಾಪದಾಚೀ ಪರೀಕ್ಷಾ। ಹೇ ಜ್ಞಾನ ನವ್ಹೇ ॥೭॥
ನಾನಾ ಪಶೂಚೀ ಪರೀಕ್ಷಾ। ನಾನಾ ಪಕ್ಷ್ಯಾಚೀ ಪರೀಕ್ಷಾ।
ನಾನಾ ಭೂತಾಚೀ ಪರೀಕ್ಷಾ। ಹೇ ಜ್ಞಾನ ನವ್ಹೇ ॥೮॥
ನಾನಾ ಯಾನಾಚೀ ಪರೀಕ್ಷಾ। ನಾನಾ ವಸ್ತ್ರಾಚೀ ಪರೀಕ್ಷಾ।
ನಾನಾ ಶಸ್ತ್ರಾಚೀ ಪರೀಕ್ಷಾ। ಹೇ ಜ್ಞಾನ ನವ್ಹೇ ॥೯॥
ನಾನಾ ಧಾತೂಚೀ ಪರೀಕ್ಷಾ। ನಾನಾ ನಾಣ್ಯಾಚೀ ಪರೀಕ್ಷಾ।
ನಾನಾ ರತ್ನಾಚೀ ಪರೀಕ್ಷಾ। ಹೇ ಜ್ಞಾನ ನವ್ಹೇ ॥೧೦॥
ನಾನಾ ಪಾಷಾಣ ಪರೀಕ್ಷಾ। ನಾನಾ ಕಾಷ್ಠಾಂಚೀ ಪರೀಕ್ಷಾ।
ನಾನಾ ವಾದ್ಯಾಂಚೀ ಪರೀಕ್ಷಾ। ಹೇ ಜ್ಞಾನ ನವ್ಹೇ ॥೧೧॥

# ದಶಕ ೫. ಸಮಾಸ ೫. ಬಹುಧಾ ಜ್ಞಾನ ನಿರೂಪಣ (ನುಡಿ ೩೯)

ಈ ವಿಶ್ವದಲ್ಲಿ ಎರಡು ಘಟಕ [ಅಂಗ, ವಿಭಾಗ]ಗಳು ಕಾಣಬರುವವು. ಒಂದು "ಆತ್ಮ"ವು ಹಾಗೂ ಇನ್ನೊಂದು "ಅನಾತ್ಮ"ವು. ಸೂಕ್ಷ್ಮ ಮತ್ತು ಸ್ವಯಂಪ್ರಕಾಶವಾದದ್ದು ಆತ್ಮವಾಗಿರುವದು·ಅದೇ ಅನಾತ್ಮವೆಂಬುದು ಸ್ಥೂಲ[ಜಡ] ಪರಪ್ರಕಾಶವುಳ್ಳದ್ದಾಗಿದೆ. ಸ್ಥೂಲ [ಪಂಚಭೂತಾತ್ಮಕ ಜಡಶರೀರ]ದಲ್ಲಿ ಎರಡು ಭೇದಗಳು. ಒಂದು ದೃಶ್ಯ ಸ್ಥೂಲ, ಮತ್ತೊಂದು ಅದೃಶ್ಯ ಸ್ಥೂಲವೆಂದು ಹೇಳುವರು. ಇಂದ್ರಿಯಗಳಿಗೆ ಕಾಣುವ ಜಗವೆಲ್ಲ ದೃಶ್ಯಸ್ಥೂಲವು. **ಉದಾ:**– ಪರ್ವತ, ಸಮುದ್ರ, ವೃಕ್ಷ, ದನಕರು, ಮನುಷ್ಯರು. ಮನೆ ವಗೈರೆ ಎಂದು ಹೇಳಬಹುದು. ಇಂದ್ರಿಯಗಳಿಗೆ ಕಾಣದೇ ಇರುವ ಆದರೆ ಮನಕ್ಕೆ ಮತ್ತು ಬುದ್ಧಿಗೆ ತಿಳಿಯುವಂಥ ಜಗ ಇದು ಅದೃಶ್ಯ ಸ್ಥೂಲವು. **ಉದಾ:**-ನಿಸರ್ಗದ ನಿಯಮ, ವಸ್ತುವಿನ ಅಂತರಂಗ, ಧ್ಯೇಯಗಳು. ಮೂಲ್ಯ [ಕಿಮ್ಮತ್ತು] ಅರ್ಥ, ಪರಮಾಣು, ವಾಸನಾ, ಭಾವನಾ ವಿಚಾರ ಇತ್ಯಾದಿಗಳು. ದೃಶ್ಯದ ಮತ್ತು ಅದೃಶ್ಯದ ಸ್ಥೂಲ ಅಭ್ಯಾಸ ಮಾಡಿ ಮನುಷ್ಯನು ಯಾವ ಜ್ಞಾನ ಸಂಪಾದಿಸುವನೋ ಅದಕ್ಕೆ ವಿಜ್ಞಾನ ಅಥವಾ ಸಾಯನ್ಸ ಎಂದು ಅನ್ನುವರು. ದೇಹ ಬುದ್ಧಿಯ ಜ್ಞಾನದ ಮೇರೆಯು ಸ್ಥೂಲದ ಪರ್ಯಂತ ಮುಟ್ಟುವದು, ಸಾಮಾನ್ಯ ಮನುಷ್ಯರು ಇದಕ್ಕೇ ಜ್ಞಾನವೆಂದು ತಿಳಿಯುವರು. ಆದರೆ ಇದು ಆತ್ಮಜ್ಞಾನವಲ್ಲ. ಜ್ಞಾನದ ಬಗ್ಗೆ ಸದ್ಯದ ನಮ್ಮ ಕಲ್ಪನೆ ಸರಿಯಾದುದಲ್ಲವೆಂಬುದನ್ನು ತೋರಿಸಿ ಕೊಡದ ಹೊರತು ನಿಜವಾದ ಜ್ಞಾನ ಯಾವುದು ಎಂಬುದು ತಿಳಿಯುವದಿಲ್ಲ, [ಲಕ್ಷ್ಯಕ್ಕೆ ಬರುವದಿಲ್ಲ]· ಅಂತೆಯೇ ಈ ಸಮಾಸದಲ್ಲಿ ಶ್ರೀ ಸಮರ್ಥರು ಯಾವುದು ಆತ್ಮಜ್ಞಾನವಲ್ಲವೆಂಬುದನ್ನು ಅನೇಕ ಉದಾಹರಣೆ ಕೊಟ್ಟು ಹೇಳಿದ್ದಾರೆ.

## ದಶಕ ೫. ಸಮಾಸ ೫. ಬಹುಧಾ ಜ್ಞಾನ ನಿರೂಪಣ (ನುಡಿ ೩೯)

**ಜೀವಕ್ಕೆ ಸ್ವಸ್ವರೂಪದ ಬಗ್ಗೆ ತಳಮಳವಿರುತ್ತದೆ. ಇದು ಆತ್ಮಜ್ಞಾನವಾಗದ ಹೊರತು ಶಾಂತವಾಗುವದು ಸಾಧ್ಯವಿಲ್ಲ:**– ಎಲ್ಲಿಯವರೆಗೆ ಸರಳ, ಸ್ವಚ್ಛ, ನಿರ್ಮಲ, ಆತ್ಮಜ್ಞಾನವಾಗುವದಿಲ್ಲವೋ ಅಲ್ಲಿಯವರೆಗೆ ಏನೆಲ್ಲವೂ ನಿರರ್ಥಕವಿರುವದು. ಆತ್ಮಜ್ಞಾನವಾಗದ ಹೊರತು. ಮನಸ್ಸಿನ ತಳಮಳ ಶಾಂತವಾಗುವದಿಲ್ಲ· [೧] ಜ್ಞಾನ ಶಬ್ದ ಕಿವಿಗೆ ಬಿದ್ದ ಕೂಡಲೇ ಸಾಮಾನ್ಯ ಮನುಷ್ಯ ಗೊಂದಲದಲ್ಲಿ ಬೀಳುತ್ತಾನೆ. ಆಗ ಅವನಿಗೆ ಈ ಜ್ಞಾನದ ಗೂಢ [ರಹಸ್ಯ] ಏನಿರಬೇಕೆಂಬ ಪ್ರಶ್ನೆ ಏಳುತ್ತದೆ. ಆದುದರಿಂದ ಇನ್ನು ಮುಂದೆ ಕ್ರಮಕ್ರಮವಾಗಿ ಜ್ಞಾನವೆಂದರೆ ಏನಿರುವದೆಂಬುದನ್ನು ಹೇಳುವೆವು. (೨) **ಈ ಇಡೀ ಸಮಾಸದಲ್ಲಿ ಜ್ಞಾನ ಯಾವುದಲ್ಲ ಅಂದರೆ ಸಾಮಾನ್ಯವಾಗಿ ನಾವು ತಿಳಿದಿರುವದು ನಿಜವಾದ ಜ್ಞಾನವಲ್ಲ. ಇವನ್ನು ತಿಳಿಸಿ ಹೇಳುತ್ತಾರೆ:**— ಭೂತ, ಭವಿಷ್ಯ, ವರ್ತಮಾನ ಇವುಗಳ ಬಗ್ಗೆ ಒಳ್ಳೆ ಸರಿಯಾದ ಮಾಹಿತಿ ಗೊತ್ತಿರುವದಕ್ಕೆ ಸಹ ಜ್ಞಾನವೆಂದು ಅನ್ನುವರು. ಆದರೆ ಇದು ಆತ್ಮಜ್ಞಾನವಲ್ಲ. (೩) ಬಹಳಷ್ಟು ವಿದ್ಯೆ ಕಲಿತಿದ್ದರೆ, ಸಂಗೀತ ಶಾಸ್ತ್ರದ ಮತ್ತು ಎಲ್ಲ ರಂಗದ ಜ್ಞಾನವಿದ್ದರೆ, ವೈದಿಕ ಶಾಸ್ತ್ರ ಪಾಂಡಿತ್ಯ ಮತ್ತು ವೇದಗಳ ಅಧ್ಯಯನ ಮಾಡಿದ್ದರೂ ಸಹ ಇವೆಲ್ಲ ಆತ್ಮಜ್ಞಾನವಲ್ಲ.(೪) ಅನೇಕ ವ್ಯವಸಾಯಗಳ, ದೀಕ್ಷೆಗಳ ಮತ್ತು ಯಾವುದೇ ವಿಷಯದ, ಪರೀಕ್ಷಾ ಜ್ಞಾನವು ಆತ್ಮಜ್ಞಾನವಲ್ಲ. [೫] ನಾನಾ ಪ್ರಕಾರದ ಸ್ತ್ರೀಯರು, ನಾನಾ ಪ್ರಕಾರದ ಮನುಷ್ಯರು, ಇವರ ಬಗ್ಗೆ ಇರುವ ಜ್ಞಾನವು ಆತ್ಮಜ್ಞಾನವಲ್ಲ (೬) ಇದೇ ಪ್ರಕಾರ ಕುದುರೆ, ಆನೆ, ಇತರ ಹಿಂಸಾ ಪಶುಗಳ ಬಗ್ಗೆ ಇರುವ ಜ್ಞಾನವು ಜ್ಞಾನವಲ್ಲ.[೭] ಪಶು, ಪಕ್ಷಿ, ಭೂತ, [ಸರ್ವ ಪ್ರಾಣಿ] ಇವುಗಳ ಬಗೆಗಿನ ಜ್ಞಾನವೂ ಜ್ಞಾನವಲ್ಲ. [೮] ವಾಹನ, ವಸ್ತ್ರ, ಶಸ್ತ್ರಗಳ ಜ್ಞಾನವೂ ನಿಜವಾದ ಜ್ಞಾನವಲ್ಲ. (೯) ಧಾತುಗಳ, ರತ್ನಗಳ ನಾಣ್ಯಗಳ ಬಗ್ಗೆ ಇರುವ ಜ್ಞಾನವು ಆತ್ಮಜ್ಞಾನವಲ್ಲ. (೧೦) ಕಲ್ಲು, ಕಟ್ಟಿಗೆ, ವಾದ್ಯಗಳ ಪರೀಕ್ಷಾ ಜ್ಞಾನವೂ ಆತ್ಮಜ್ಞಾನವಲ್ಲ· (೧೧)

ನಾನಾ ಭೂಮೀಚೀ ಪರೀಕ್ಷಾ । ನಾನಾ ಜಳಾಚೀ ಪರೀಕ್ಷಾ ।
ನಾನಾ ಸತೇಜ ಪರೀಕ್ಷಾ। ಹೇ ಜ್ಞಾನ ನವ್ಹೇ ॥೧೨॥
ನಾನಾ ರಸಾಚೀ ಪರೀಕ್ಷಾ । ನಾನಾ ಬೀಜಾಚೀ ಪರೀಕ್ಷಾ ।
ನಾನಾ ಅಂಕುರ ಪರೀಕ್ಷಾ। ಹೇ ಜ್ಞಾನ ನವ್ಹೇ ॥೧೩॥
ನಾನಾ ಪುಷ್ಪಾಂಚೀ ಪರೀಕ್ಷಾ । ನಾನಾ ಫಳಾಚೀ ಪರೀಕ್ಷಾ ।
ನಾನಾ ವಲ್ಲೀಚೀ ಪರೀಕ್ಷಾ । ಹೇ ಜ್ಞಾನ ನವ್ಹೇ ॥೧೪॥
ನಾನಾ ದುಃಖಾಂಚೀ ಪರೀಕ್ಷಾ । ನಾನಾ ರೋಗಾಂಚೀ ಪರೀಕ್ಷಾ ।
ನಾನಾ ಚಿನ್ಹಾಚೀ ಪರೀಕ್ಷಾ। ಹೇ ಜ್ಞಾನ ನವ್ಹೇ ॥೧೫॥
ನಾನಾ ಮಂತ್ರಾಚೀ ಪರೀಕ್ಷಾ । ನಾನಾ ಯಂತ್ರಾಚೀ ಪರೀಕ್ಷಾ ।
ನಾನಾ ಮೂರ್ತೀಚೀ ಪರೀಕ್ಷಾ । ಹೇ ಜ್ಞಾನ ನವ್ಹೇ ॥೧೬॥
ನಾನಾ ಕ್ಷೇತ್ರಾಂಚೀ ಪರೀಕ್ಷಾ । ನಾನಾ ಗೃಹಾಂಚೀ ಪರೀಕ್ಷಾ ।
ನಾನಾ ಪಾತ್ರಾಂಚೀ ಪರೀಕ್ಷಾ । ಹೇ ಜ್ಞಾನ ನವ್ಹೇ ॥೧೭॥
ನಾನಾ ಹೋಣಾರ ಪರೀಕ್ಷಾ । ನಾನಾ ಸಮಯಾಚೀ ಪರೀಕ್ಷಾ ।
ನಾನಾ ತರ್ಕಾಂಚೀ ಪರೀಕ್ಷಾ। ಹೇ ಜ್ಞಾನ ನವ್ಹೇ ॥೧೮॥
ನಾನಾ ಅನುಮಾನ ಪರೀಕ್ಷಾ । ನಾನಾ ನೇಮಸ್ತ ಪರೀಕ್ಷಾ ।
ನಾನಾ ಪ್ರಕಾರ ಪರೀಕ್ಷಾ । ಹೇ ಜ್ಞಾನ ನವ್ಹೇ ॥೧೯॥
ನಾನಾ ವಿದ್ಯೇಚೀ ಪರೀಕ್ಷಾ । ನಾನಾ ಕಳೇಚೀ ಪರೀಕ್ಷಾ ।
ನಾನಾ ಚಾತುರ್ಯ ಪರೀಕ್ಷಾ । ಹೇ ಜ್ಞಾನ ನವ್ಹೇ ॥೨೦॥
ನಾನಾ ಶಬ್ದಾಚೀ ಪರೀಕ್ಷಾ । ನಾನಾ ಅರ್ಥಾಚೀ ಪರೀಕ್ಷಾ ।
ನಾನಾ ಭಾಷಾಚೀ ಪರೀಕ್ಷಾ । ಹೇ ಜ್ಞಾನ ನವ್ಹೇ ॥೨೧॥
ನಾನಾ ಸ್ವರಾಚೀ ಪರೀಕ್ಷಾ । ನಾನಾ ವರ್ಣಾಚೀ ಪರೀಕ್ಷಾ ।
ನಾನಾ ಲೇಖನ ಪರೀಕ್ಷಾ । ಹೇ ಜ್ಞಾನ ನವ್ಹೇ ॥೨೨॥
ನಾನಾ ಮತಾಂಚೀ ಪರೀಕ್ಷಾ । ನಾನಾ ಜ್ಞಾನಾಂಚೀ ಪರೀಕ್ಷಾ ।
ನಾನಾ ವೃತ್ತೀಚಿ ಪರೀಕ್ಷಾ। ಹೇ ಜ್ಞಾನ ನವ್ಹೇ ॥೨೩॥
ನಾನಾ ರೂಪಾಂಚೀ ಪರೀಕ್ಷಾ । ನಾನಾ ರಸನೇಂಚೀ ಪರೀಕ್ಷಾ ।
ನಾನಾ ಸುಗಂಧ ಪರೀಕ್ಷಾ। ಹೇ ಜ್ಞಾನ ನವ್ಹೇ ॥೨೪॥
ನಾನಾ ಸೃಷ್ಟೀಂಚೀ ಪರೀಕ್ಷಾ । ನಾನಾ ವಿಸ್ತಾರ ಪರೀಕ್ಷಾ।
ನಾನಾ ಪದಾರ್ಥ ಪರೀಕ್ಷಾ। ಹೇ ಜ್ಞಾನ ನವ್ಹೇ ॥೨೫॥

ಭೂಮಿ,ನೆಲ,ನೀರು, ಬೆಂಕಿ(ಪ್ರಕಾಶ)ಗಳ ಬಗ್ಗೆ ಇರುವ ಜ್ಞಾನವೂ ಆತ್ಮಜ್ಞಾನವಲ್ಲ.(೧೨) ರಸ, ಬೀಜ, ಅಂಕುರ, ಇವುಗಳ ಜ್ಞಾನವೂ ಆತ್ಮಜ್ಞಾನವಲ್ಲ. (೧೩) ಹೂ, ಹಣ್ಣು, ಬಳ್ಳಿಗಳ ಜ್ಞಾನವೂ ಸಹ ಆತ್ಮಜ್ಞಾನವಲ್ಲ. (೧೪) ದುಃಖ-ನೋವು, ರೋಗ, ಲಕ್ಷಣ ಚಿನ್ಹಗಳ ಜ್ಞಾನವೂ ಆತ್ಮಜ್ಞಾನವಲ್ಲ. (೧೫) ಮಂತ್ರ, ಯಂತ್ರ, ಮೂರ್ತಿಗಳ ಜ್ಞಾನವೂಆತ್ಮಜ್ಞಾನವಲ್ಲ(೧೬)ಯೋದ್ಧಾ-ಸೈನಿಕ ವಿದ್ಯೆಯಜ್ಞಾನ,ಹೊಲ,ಮನೆ,ಪಾತ್ರೆಗಳಜ್ಞಾನಆತ್ಮಜ್ಞಾನವಲ್ಲ(೧೭) ಮುಂದಾಗುವ ಘಟನೆಗಳ ಜ್ಞಾನ, ಹೊತ್ತು ಗೊತ್ತುಗಳ-ಪ್ರಸಂಗ ಜ್ಞಾನ, ತೀಕ್ಷ್ಣ ಬುದ್ಧಿ–ತರ್ಕಗಳ ಜ್ಞಾನವೂ ಸಹ ಆತ್ಮಜ್ಞಾನವಲ್ಲ. (೧೮) ಅನುಮಾನ, ಸಂಶಯ, ಮತ್ತು ನಿಯಮ, ನಿಶ್ಚಯ (ಸಿದ್ಧಾಂತ)ಗಳ ಮತ್ತು ಅನೇಕ ಪ್ರಕಾರದ ವಸ್ತುಗಳ ಜ್ಞಾನ ಮತ್ತು ಅನೇಕ ಮಾತಿನ ವಿಷಯದ ಪರೀಕ್ಷೆ ಮಾಡುವ ಜ್ಞಾನವೂ ಆತ್ಮಜ್ಞಾನವಲ್ಲ. (೧೯) ವಿದ್ಯೆ, ಕಲೆ, ಜಾಣ್ಮೆ ಇವುಗಳ ಪರೀಕ್ಷಾ ಜ್ಞಾನವೂ ಆತ್ಮ ಜ್ಞಾನವಲ್ಲ. (೨೦) ಇದರಂತೆ ಶಬ್ದ ಅರ್ಥ, ಭಾಷೆಗಳ ಜ್ಞಾನ ಆತ್ಮಜ್ಞಾನವಲ್ಲ. (೨೧) ಸ್ವರ, ವರ್ಣ, ಲೇಖನ ಜ್ಞಾನ ಆತ್ಮಜ್ಞಾನವಲ್ಲ. (೨೨) ವಿವಿಧ ಮತ, ವಿದ್ಯೆ, ಮನಸ್ಥಿತಿ (ಭಾವ-ಮನೋವಿಕಾರ) ಇವುಗಳ ಜ್ಞಾನ ಆತ್ಮಜ್ಞಾನವಲ್ಲ. (೨೩) ರೂಪ, ರುಚಿ (ಸ್ವಾದ), ಸುಗಂಧ ಇವುಗಳ ಜ್ಞಾನ ಆತ್ಮಜ್ಞಾನವಲ್ಲ. (೨೪) ಜಗತ್ತು (ಸೃಷ್ಟಿ), ಅದರ ಬೆಳವಣಿಗೆ (ವಿಸ್ತಾರ) ಹಾಗೂ ಪದಾರ್ಥ ಇವೆಲ್ಲವುಗಳನ್ನು ಪರೀಕ್ಷಿಸುವ ಜ್ಞಾನವೂ ಸಹ ಆತ್ಮಜ್ಞಾನವಲ್ಲ. (೨೫)

ನೇಮಕ ಚಿ ಬೋಲಣೇ । ತತ್ಕಾಳಚಿ ಪ್ರತಿವಚನ ದೇಣೇ ।
ಶೀಘ್ರಚಿ ಕವಿತ್ವ ಕರಣೇ । ಹೇ ಜ್ಞಾನ ನವ್ಹೇ ॥೧೬॥
ನೇತ್ರ ಪಾಲವೀ ನಾದಕಳಾ । ಕರಪಾಲವೀ ಭೇದಕಳಾ ।
ಸ್ವರಪಾಲವೀ ಸಂಕೇತಕಳಾ । ಹೇ ಜ್ಞಾನ ನವ್ಹೇ ॥೧೭॥
ಕಾವ್ಯಕುಶಳ ಸಂಗೀತಕಳಾ । ಗೀತ ಪ್ರಬಂದ ನೃತ್ಯಕಳಾ ।
ಸಭಾಚಾತುರ್ಯ ಶಬ್ದಕಳಾ । ಹೇ ಜ್ಞಾನ ನವ್ಹೇ ॥೧೮॥
ವಾಗ್ವಿಲಾಸ ಮೋಹನಕಳಾ । ರಮ್ಯ ರಸಾಳ ಗಾಯನಕಳಾ ।
ಹಾಸ್ಯ ವಿನೋದ ಕಾಮಕಳಾ । ಹೇ ಜ್ಞಾನ ನವ್ಹೇ ॥೧೯॥
ನಾನಾ ಲಾಘವೇ ಚಿತ್ರಕಳಾ । ನಾನಾ ವಾದ್ಯೇ ಸಂಗೀತಕಳಾ ।
ನಾನಾ ಪ್ರಕಾರೇ ವಿಚಿತ್ರಕಳಾ । ಹೇ ಜ್ಞಾನ ನವ್ಹೇ ॥೨೦॥
ಆದಿಕರೂನಿ ಚೌಸಷ್ಟಿಕಳಾ । ಯಾಹಿ ವೇಗಳ್ಯಾ ನಾನಾಕಳಾ ।
ಚೌದಾ ವಿದ್ಯಾಸಿದ್ಧಿ ಸಕಳಾ । ಹೇ ಜ್ಞಾನ ನವ್ಹೇ ॥೨೧॥
ಅಸೋ ಸಕಳ ಕಳಾಪ್ರವೀಣ । ವಿದ್ಯಾ ಮಾತ್ರ ಪರಿಪೂರ್ಣ ।
ತರೀ ತೇ ಕೌಶಲ್ಯತಾ ಪರೀಜ್ಞಾನ । ಮ್ಹಣೋಚಿ ನಯೇ ॥೨೨॥
ಹೇ ಜ್ಞಾನ ಹೋಯೆಸೇ ಭಾಸೆ । ಪರಂತು ಮುಖ್ಯ ಜ್ಞಾನತೇ ಅನಾರಿಸೇ ।
ಜೇಥೇ ಪ್ರಕೃತೀಚೇ ಪಿಸೇ । ಸಮೂಳ ವಾವ ॥೨೩॥
ಜಾಣಾವೇ ದುಸರ್ಯಾಚೇ ಜೀವೀಚೇ । ಹೇ ಜ್ಞಾನ ವಾಟೆ ಸಾಚೇ ।
ಪರಂತು ಹೇ ಆತ್ಮಜ್ಞಾನಾಚೇ । ಲಕ್ಷಣ ನವ್ಹೇ ॥೨೪॥
ಮಾಹಾನುಭಾವ ಮಹಾಭಲಾ । ಮಾನಸಪೂಜಾ ಕರಿತಾ ಚುಕಲಾ ।
ಕೋಣೇ ಯೆಕೇ ಪಾಚಾರಿಲಾ। ಏಸೇ ನವ್ಹೆ ಮ್ಹಣೋನೀ ॥೨೫॥
ಏಸೀ ಜಾಣೆ ಅಂತರಸ್ಥಿತೀ । ತಯಾಸಿ ಪರಮ ಜ್ಞಾತಾ ಮ್ಹಣತೀ ।
ಪರಂತು ಜೇಣೇ ಮೋಕ್ಷಪ್ರಾಪ್ತೀ । ತೇ ಹೇ ಜ್ಞಾನ ನವ್ಹೇ ॥೨೬॥
ಬಹುತ ಪ್ರಕಾರೀಚೀ ಜ್ಞಾನೇ । ಸಾಂಗೋ ಜಾತಾ ಅಸಾಧಾರಣೇ ।
ಸಾಯುಜ್ಯ ಪ್ರಾಪ್ತಿ ಹೋಯೆ ಜೇಣೇ । ತೇ ಜ್ಞಾನ ವೇಗಳೇ ॥೨೭॥
ತರೀ ತೇ ಕೈಸೇ ಆಹೇಜ್ಞಾನ । ಸಮಾಧಾನಾಚೇ ಲಕ್ಷಣ ।
ಏಸೇ ಹೇ ವಿಶದ ಕರೂನ । ಮಜ ನಿರೋಪಾವೇ ॥೨೮॥
ಏಸೇ ಶುದ್ಧಜ್ಞಾನ ಪುಸಿಲೇ । ತೇ ಪುಢಿಲೆ ಸಮಾಸೀ ನಿರೋಪಿಲೇ ।
ಶ್ರೋತಾ ಅವಧಾನ ದಿಧಲೇ । ಪಾಹಿಜೆ ಪುಢೇ ॥೨೯॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ 'ಬಹುಧಾ ಜ್ಞಾನ' ನಾಮ ಸಮಾಸ ಪಂಚಮ ॥

ಮಿತವಾಗಿ ಸಮಯೋಚಿತ ಮಾತಾಡುವದು, ಕೂಡಲೇ ಪ್ರತ್ಯುತ್ತರ ಕೊಡುವದು, ಮತ್ತು ಶೀಘ್ರ ಕವಿತ್ವ ಮಾಡುವ ಜ್ಞಾನವೂ ಆತ್ಮಜ್ಞಾನವಲ್ಲ. (೨೬) ಕಣ್ಣು ಸನ್ನೆಯ ಭಾಷೆ, ತರತರಹದ ಆವಾಜಿನ ಧ್ವನಿ ಭಾಷೆ, ತರತರಹದ ಕೈಸನ್ನೆಯ ಭಾಷೆ, ರಹಸ್ಯ ತಿಳಿಯುವ ಕಲೆ, ನಾನಾರೀತಿಯ ಸ್ವರ ಹೊರಡಿಸುವಿಕೆ, ಸಂಕೇತ ಕಲಾ, ಅಂದರೆ ಚಿನ್ಹ ಸಂಕೇತ, ಸೂಚನೆಗಳಿಂದ ಒಾದು ವಿಷಯ ತಿಳಿಸಿಕೊಡುವ ಭಾಷೆ ಇವಾವವೂ ಆತ್ಮಜ್ಞಾನವಲ್ಲ. (೨೭) ಸುರೇಖ ಕಾವ್ಯ, ಜ್ಞಾನಯುಕ್ತ ಸಂಗೀತ ಕಲೆ, ಗೀತಗಳು, ಪ್ರಬಂಧಗಳು, ನೃತ್ಯಕಲಾ, ಸಭಾಚಾತುರ್ಯ, ಶಬ್ದ ಜ್ಞಾನ ಇರುವಿಕೆ, ಇವಾವವೂ ಆತ್ಮಜ್ಞಾನವಲ್ಲ. (೨೮) ಭಾಷಣ, ಕೀರ್ತನ, ನಿರೂಪಣ, ಪುರಾಣಾದಿಗಳಿಂದ ಜನರನ್ನು ಬೆರಗುಗೊಳಿಸುವ ವಕ್ತೃತ್ವ ಕಲೆ, ರಮ್ಯ ಹಾಗೂ ರಸಾಳ ಗಾಯನ ಕಲೆ, ವಾಣೀ ವಿಲಾಸದಿಂದ ಮೋಹಗೊಳಿಸುವ ಕಲೆ, ಹಾಸ್ಯ ವಿನೋದಾದಿ ನಗಚಾಟಿಕೆಯ ಕಲೆ, ಮತ್ತು ಶೃಂಗಾರಾದಿ ಕಾಮ ಕಲೆಯ ಜ್ಞಾನವೂ ಆತ್ಮಜ್ಞಾನವಲ್ಲ. (೨೯) ನಾನಾ ಪ್ರಕಾರದ ಕುಶಲತೆಯ ವ್ಯವಸಾಯ (ಕಸಬು) ಇರುವ ಚಿತ್ರಕಲೆ, ನಾನಾ ವಾದ್ಯಗಳಿಂದ ಕೂಡಿದ ಸಂಗೀತ ಬಾರಿಸುವ ಕಲೆ, ಇನ್ನೂ ಅನೇಕ ವಿಚಿತ್ರ ಕಲೆಗಳೂ ಆತ್ಮಜ್ಞಾನವಲ್ಲ. (೩೦) ಒಟ್ಟಿಗೆ ಅರವತ್ನಾಲ್ಕು ಮುಖ್ಯವಾದ ಕಲೆಗಳಿರುವವು. ಅಲ್ಲದೆ ಇನ್ನೂ ಅನೇಕ ಬೇರೆಬೇರೆ ಪ್ರಕಾರದ ಕಲೆಗಳೂ ಇರುವವು. ಈ ಎಲ್ಲ ಕಲೆಗಳು ಮತ್ತು ಹದಿನಾಲ್ಕು ವಿದ್ಯೆಗಳು ಹಾಗೂ ಎಲ್ಲ ಸಿದ್ಧಿಗಳು ಇವೆಲ್ಲವೂ ಆತ್ಮಜ್ಞಾನವಲ್ಲ (೩೧) ಒಬ್ಬ ಮನುಷ್ಯ ಎಲ್ಲ ಕಲೆಗಳಲ್ಲಿ ಒಳ್ಳೆ ಪ್ರವೀಣನಿರುವನು. ಮತ್ತು ಅವನು ಎಲ್ಲ ವಿದ್ಯೆಗಳಲ್ಲಿಯೂ ಪಾರಂಗತನಿರುವನು. ಮತ್ತು ಅವನು ಬಹಳ ಹುಷಾರ ಅಥವಾ ಚತುರನಾಗಿಯೂ ಇರುವನೆಂದು ತಿಳಿದರೂ ಸಹ ಆ ಎಲ್ಲ ವಿದ್ಯೆ ಚಾತುರ್ಯಗಳು ಆತ್ಮಜ್ಞಾನವನ್ನು ಸರಿಗಟ್ಟಲಾರವು. (೩೨) ಕಲೆಯಲ್ಲಿ ಮತ್ತು ವಿದ್ಯೆಯಲ್ಲಿ ಶ್ರೇಷ್ಠತ್ವ ಪಡೆದದ್ದು ಜ್ಞಾನವೆಂದು ಭಾಸವಾಗುವದು. ಆದರೆ ಖರೇ ಜ್ಞಾನವು ಬೇರೆಯೇ ಇದೆ. ಖರೇ ಜ್ಞಾನದಿಂದಲೇ ಮಾಯೆಯಿಂದ ನಿರ್ಮಾಣವಾದ ಭ್ರಮೆಯು ಸಂಪೂರ್ಣವಾಗಿ ನಾಶವಾಗುವದು. (ಇಲ್ಲದಾಗುವದು. (೩೩) ಎರಡನೆಯವರ ಮನಸ್ಸಿನಲ್ಲಿದ್ದುದನ್ನು ತಿಳಿಯುವ ಜ್ಞಾನವು ಖರೇ ಜ್ಞಾನವಿರುವದೆಂದು ಅನಿಸಿದರೂ ಅದೂ ಸಹ ಆತ್ಮಜ್ಞಾನದ ಲಕ್ಷಣವಲ್ಲ. (೩೪) ದೊಡ್ಡ ಭಕ್ತನೊಬ್ಬನು (ಸಾಧಕನು) ಭಗವಂತನ ಮಾನಸ ಪೂಜೆ ಮಾಡುತ್ತ ಕುಳಿತಾಗ್ಗೆ, ಅವನು ಏನೋ ಸ್ವಲ್ಪ ತಪ್ಪಿದನಂತೆ ಹತ್ತಿರವಿದ್ದ ಇನ್ನೊಬ್ಬನು ಅವನನ್ನು ಒದರಿ (ಕೂಗಿ) "ಹೀಗೆ ತಪ್ಪು ಮಾಡಬೇಡ" (ಈ ರೀತಿ ಮಾಡು) ಎಂದು ತಿಳಿಸಿದನಂತೆ. (೩೫) ಈ ಪ್ರಕಾರವಾಗಿ ಎರಡನೆಯವರ ಮನಸ್ಸಿನಲ್ಲಿಯದನ್ನು ತಿಳಿಯುವಂಥವನು ಯಾವನಿರುವನೋ ಅವನನ್ನು ದೊಡ್ಡ ಜ್ಞಾನಿಯೆಂದು ತಿಳಿಯುವ ರೂಢಿ ಇದೆ. ಆದರೆ ಸರ್ವಶ್ರೇಷ್ಠವಾದ ಮೋಕ್ಷ ಪ್ರಾಪ್ತಿಯ ಆತ್ಮಜ್ಞಾನವು ಇದಾಗಲಾರದು. (೩೬) ಇಲ್ಲಿಯ ವರೆಗೆ ವರ್ಣನೆ ಮಾಡಿದಂತೆ ಜ್ಞಾನದ ಪ್ರಕಾರಗಳು ಇನ್ನೂ ಬಹಳಷ್ಟು ಇರುವವು. ಇವೆಲ್ಲವನ್ನೂ ಹೇಳುವದು ಅಶಕ್ಯವಾದದ್ದು. ಮತ್ತು ಅವಶ್ಯವೂ ಇಲ್ಲ. ಇರಲಿ ಯಾವ ಜ್ಞಾನದಿಂದ ಸಾಯುಜ್ಯ ಮುಕ್ತಿ ಪದ ಪ್ರಾಪ್ತವಾಗುವದೋ ಆ ಜ್ಞಾನ ಇವೆಲ್ಲಕ್ಕಿಂತ ಮಾತ್ರ ಬೇರೆಯೇ ಇರುವದು. (೩೭) **ಇದನ್ನು ಕೇಳಿ ಶಿಷ್ಯನು ಪ್ರಶ್ನೆ ಮಾಡುತ್ತಾನೆ:**- ಹಾಗಾದರೆ ಸಮಾಧಾನವೇ ಯಾವ ಜ್ಞಾನದ ಪ್ರಧಾನ ಲಕ್ಷಣವಿರುವದೋ ಆ ಜ್ಞಾನ ಹೇಗಿರುವದೆಂಬುದನ್ನು ನನಗೆ ಸ್ಪಷ್ಟವಾಗಿ ಮತ್ತು ಸುಲಭವಾಗಿ ತಿಳಿಯುವಂತೆ ಹೇಳಿರಿ ಎಂದು ವಿನಯದಿಂದ ಕೇಳಿಕೊಳ್ಳುವನು. (೩೮) **ಅದಕ್ಕೆ ಸದ್ಗುರು ಹೇಳುವನು:**- ನೀನು ಕೇಳಿದ ಶುದ್ಧ ಜ್ಞಾನದ ವಿಚಾರವನ್ನು ಮುಂದಿನ ಸಮಾಸದಲ್ಲಿ ಹೇಳುವವರಾಗುವೆವು. ಶ್ರೋತೃಗಳು ಲಕ್ಷ್ಯಗೊಟ್ಟು ಕೇಳಬೇಕು. (೩೯)

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದ ಐದನೆಯ ದಶಕದಲ್ಲಿಯ
"ಬಹುಧಾ ಜ್ಞಾನ"ವೆಂಬ ಹೆಸರಿನ ಐದನೆಯ ಸಮಾಸವು ಮುಗಿದುದು.

## ದಶಕ ೫. ಸಮಾಸ ೬. ಶುದ್ಧ ಜ್ಞಾನ ನಿರೂಪಣ (ನುಡಿ ೭೫)

ಬ್ರಹ್ಮಜ್ಞಾನಿ ಸತ್ಪುರುಷರು ನಿಶ್ಚಯವಾಗಿ ಸ್ಪಷ್ಟಪಡಿಸುವವೇನೆಂದರೆ ಈ ಇಡೀ ವಿಶ್ವದಲ್ಲಿ ಆತ್ಮಸ್ವರೂಪವೇ ಒಳಗೂ ಹೊರಗೂ ತುಂಬಿಕೊಂಡಿದೆ. ಆತ್ಮದ ಲಕ್ಷಣಗಳನ್ನು ಹೇಳುವಾಗ ತೈತ್ತರೀಯ ಉಪನಿಷತ್ ಅನ್ನುತ್ತದೆ. "ಸತ್ಯಂ ಜ್ಞಾನಮ್ ಅನಂತಮ್ ಬ್ರಹ್ಮ"ಎಂದು ಹೇಳಿದೆ.ಐತರೇಯ ಉಪನಿಷತ್ ಸಹ ಅನ್ನುವದೇನೆಂದರೆ"ಪ್ರಜ್ಞಾನಂ ಬ್ರಹ್ಮ" ಆತ್ಮಸ್ವರೂಪ ಮತ್ತು ಜ್ಞಾನ ಇವು ಅಭಿನ್ನವಿರುವವು. ಅರ್ಥಾತ್ ಏಕರೂಪವಿರುವವು ಎಂದು ಸ್ಪಷ್ಟ ಅಭಿಪ್ರಾಯಪಟ್ಟಿರುವವು. ಮನುಷ್ಯನ ಹೃದಯದಲ್ಲಿ ಆತ್ಮವಾಸವಾಗಿರುವನು. ಅಂತೆಯೇ ಮನುಷ್ಯನಿಗೆ ಅವನೊಳಗಿಂದಲೇ ಜ್ಞಾನಬೇಕೆಂದು ಅನಿಸುತ್ತದೆ. ಅನ್ನಾಹಾರವಿಲ್ಲದೇ ದೇಹ ಜೀವಂತವಿರಲಾರದು.ಇದರಂತೆಯೇಜ್ಞಾನವಿಲ್ಲದೇ

ಮಾನವ ಜೀವನ ನಡೆಯಲಾರದು. ಮನುಷ್ಯ ಪ್ರಥಮದಲ್ಲಿ ಜ್ಞಾತಾ (ತಿಳಿಯುವವ)ನೇ ಇರುವನು. ಆಮೇಲೆ ಕರ್ತಾ (ಮಾಡುವವ), ಮತ್ತು ಭೋಕ್ತಾ ಅಂದರೆ ಉಪಭೋಗ ಮಾಡುವವ ಆಗುವನು. ಜ್ಞಾನಕ್ಕೆ ಪ್ರಧಾನ ಸಾಧನವು ಬುದ್ಧಿಯಾಗಿದೆ. ಜ್ಞಾನದ ಸ್ವರೂಪ, ಮಾರ್ಗ, ಕಕ್ಷೆ (ಪರಿಮಿತಿ, ವ್ಯಾಪ್ತಿ) ಮತ್ತು ಭಾಂಡಾರ (ಸಂಗ್ರಹ ಸ್ಥಾನ) ಇವು ಮನುಷ್ಯನ ಬುದ್ಧಿಯನ್ನು ಅವಲಂಬಿಸಿರುವವು. ಇವನ ಬುದ್ಧಿಯಲ್ಲಿ ಫರಕ (ಬದಲು, ಹೆಚ್ಚು ಕಡಿಮೆ) ಆದ ಕೂಡಲೇ ಅವನ ಜ್ಞಾನದಲ್ಲಿ ತನ್ನಿಂದ ತಾನೇ ಫರಕ ಆಗುತ್ತದೆ. ಉದಾ:– ಸಣ್ಣ ಮಗು ಭೂಮಿಯ ಮೇಲೆ (ಜಗದಲ್ಲಿ) ಆಡ್ಯಾಡುತ್ತದೆ. ಆಗ ಅದರಷ್ಟರ ಮಟ್ಟಿಗೇ ಅದಕ್ಕೆ ಜ್ಞಾನವಿರುತ್ತದೆ. ಅದು ವಯಸ್ಸಿಗೆ ಬಂದಂತೆ ಅದರ ಶರೀರದಲ್ಲಿ ಮನದಲ್ಲಿ ಮತ್ತು ಬುದ್ಧಿಯಲ್ಲಿ ಎಲ್ಲ ರೀತಿಯಿಂದ ಬದಲಾವಣೆಯಾಗುತ್ತದೆ. ಇದರ ಕೂಡ ಆ ಮಗುವಿನ ಜ್ಞಾನದಲ್ಲಿ ಸಹ ವಿಲಕ್ಷಣ ಬದಲಾವಣೆ ಆದದ್ದು ಕಂಡು ಬರುವದು. ಸಂತರ ಅಭಿಪ್ರಾಯ ಹೇಗೆ ಇರುವದೆಂದರೆ, ಮನುಷ್ಯರಲ್ಲಿ ಇರುವ ಅವಸ್ಥೆಗಳು ಕೇವಲ ಎರಡೇ ಎರಡು. ಒಂದು ಜ್ಞಾನದ್ದು ಇನ್ನೊಂದು ಅಜ್ಞಾನದ್ದು. ಇದಕ್ಕನುಸರಿಸಿ ಬುದ್ಧಿಯ ಅವಸ್ಥೆಯಲ್ಲಿ ಸಹ ಎರಡು ಮಾತ್ರ ಇರುವವು. ಒಂದು ಆತ್ಮಬುದ್ಧಿಯದು. ಇನ್ನೊಂದು ದೇಹ ಬುದ್ಧಿಯದು ಇರುವದು. ದೇಹ ಬುದ್ಧಿಯಲ್ಲಿ ಬುದ್ಧಿಯ ಮುಖವು ಇಂದ್ರಿಯಗಳ ಕಡೆಗೆ ಹಾಗೂ ಇಂದ್ರಿಯಗಳ ಮುಖವು ಹೊರಗಿನ ಪದಾರ್ಥಗಳ ಕಡೆಗೆ ಇರುವದು. ಆತ್ಮಬುದ್ಧಿಯಲ್ಲಿ ಇಂದ್ರಿಯಗಳ ಮುಖವು ಬುದ್ಧಿಯ ಕಡೆಗೆ ಮತ್ತು ಬುದ್ಧಿಯ ಮುಖವು ಆತ್ಮದ ಕಡೆಗೆ ಇರುವದು. ದೇಹ ಬುದ್ಧಿಯ ಚಳವಳಿಯಿಂದ ವಿಜ್ಞಾನ, ವಿದ್ಯಾ, ಮತ್ತು ಕಲಾ ಇವುಗಳ ಬೆಳವಣಿಗೆ ಆಗುವದು. ಇವರ ವರ್ಣನೆಯನ್ನು ಹಿಂದಿನ ಸಮಾಸದಲ್ಲಿ ಹೇಳಿರುತ್ತದೆ. ಇವೆಲ್ಲವೂ ಅಜ್ಞಾನದಲ್ಲಿಯೇ ಎಣಿಕೆಯಾಗುವವು. ಆತ್ಮಬುದ್ಧಿಯ ಉಪಯೋಗ ಮಾಡಿದರೆ ಅಜ್ಞಾನ ಕಡಿಮೆ ಆಗುತ್ತ ಆಗುತ್ತ ಕೊನೆಗೆ ಆತ್ಮಜ್ಞಾನವಾಗುವದು. ಈ ಸಮಾಸದಲ್ಲಿ ಇದರದೇ ವರ್ಣನೆ ಇರುವದು. ದೇಹಬುದ್ಧಿಯಿಂದ ಅವಿದ್ಯಾ ಮಿಶ್ರಿತ ಜ್ಞಾನವಾಗುವದು. ದೇಹ ಬುದ್ಧಿಯ ಜ್ಞಾನ ವ್ಯವಹಾರದಲ್ಲಿ ಜ್ಞಾತಾ (ತಿಳಿಯುವವನು) ತಿಳಿಯುವಂಥಾ (ಯೋಗ್ಯವಾದ)ದ್ದರಿಂದ ಯಾವಾಗಲೂ ಪ್ರತ್ಯೇಕ ಇರುವನು. ಅಲ್ಲದೇ ಜ್ಞೇಯದ ಸ್ವರೂಪ ಗೊತ್ತಾದರೂ ಸಹ ಜ್ಞಾತಾ (ತಿಳಿಯುವವ) ಹೇಗೆ ಇರುವನೆಂಬುದು ಮಾತ್ರ ತಿಳಿಯುವದೇ ಇಲ್ಲ. ಆತ್ಮ ಬುದ್ಧಿಯ ಜ್ಞಾನ ವ್ಯವಹಾರದಲ್ಲಿ ಜ್ಞಾತಾ (ತಿಳಿಯುವವ) ಜ್ಞೇಯ–ಅಂದರೆ ತಿಳಿಯಲು ಯೋಗ್ಯವಾದ ವಸ್ತುವಿನ ಸಂಗಡ ಗೂಡ ತದ್ರೂಪ ಹೊಂದಿ ಅಭಿನ್ನತೆಯಿಂದ ಜ್ಞೇಯ (ಯೋಗ್ಯವಸ್ತು-ಪರಬ್ರಹ್ಮ)ದ ಸ್ವರೂಪವನ್ನು ತಿಳಿಯುವನು. ಅಲ್ಲದೆ ಮೊದಲಿಗೆ ಜ್ಞಾತಾ ಅಂದರೆ ನಾನು ಯಾರು ಮತ್ತು ಹೇಗೆ ಇರುವೆನೆಂಬುದನ್ನು ಪೂರ್ಣವಾಗಿ ತಿಳಿದುಕೊಂಡ ಮೇಲೆ ಜಗತ್ತಿನ ಜ್ಞಾನ ಮಾಡಿಕೊಳ್ಳಲು ಅವನು ಪ್ರವೃತ್ತನಾಗುವನು. ದೇಹ ಬುದ್ಧಿಯ ಜ್ಞಾನವು ಮಾಯೆಯ ಅಳವಿನೊಳಗಿನದಿರುವದರಿಂದ ಅದು ಅನಿಶ್ಚಿತ ಹಾಗೂ ಸಂಶಯ ಯುಕ್ತ ಇರುವದು. ಇದರಿಂದ ಸಮಾಧಾನ ಸಿಗುವದಿಲ್ಲ. ಆತ್ಮ ಬುದ್ಧಿಯ ಜ್ಞಾನವು. ಮಾಯೆಯನ್ನು ದಾಟಿ (ಮೀರಿ) ಇರುವದರಿಂದ ಅದು ನಿಶ್ಚಿತ ಹಾಗೂ ಸಂಶಯರಹಿತವಿರುವದು. ಇದರಿಂದ ಸಂಪೂರ್ಣ ಸಮಾಧಾನ ದೊರೆತ ಮೇಲೆ ಇತರ ಯಾವುದನ್ನೂ ದೊರಕಿಸಿಕೊಳ್ಳುವದು (ಪಡೆಯುವದು) ಬಾಕಿ (ಶಿಲ್ಲಕ) ಉಳಿಯುವದಿಲ್ಲ. ಮಾಡುವದೂ ಇರುವದಿಲ್ಲ. ತಿಳಿಯುವದೂ ಇರುವದಿಲ್ಲ, ಭೋಗಿಸುವದೂ ಸಹ ಇರುವದಿಲ್ಲ. ಮತ್ತು ಬೇಕೆಂಬುದು ಮನಸ್ಸಿನಲ್ಲಿ ಬರುವದೇ ಇಲ್ಲ.

## ಸಮಾಸ ಷಷ್ಟ : ಶುದ್ಧ ಜ್ಞಾನ ನಿರೂಪಣ

॥ಶ್ರೀರಾಮ॥ ಏಕ ಜ್ಞಾನಾಚೇ ಲಕ್ಷಣ । ಜ್ಞಾನ ಮ್ಹಣಿಜೆ ಆತ್ಮಜ್ಞಾನ ।
ಪಾಹಾವೇ ಆಪಣಾಸಿ ಆಪಣ । ಯಾ ನಾಂವ ಜ್ಞಾನ ॥೧॥

ಮುಖ್ಯ ದೇವಾಸ ಜಾಣಾವೇ । ಸತ್ಯಸ್ವರೂಪ ವೋಳಖಾವೇ ।
ನಿತ್ಯಾನಿತ್ಯ ವಿಚಾರಾವೇ । ಯಾ ನಾವ ಜ್ಞಾನ ॥೨॥

ಜೇಥೇ ದೃಶ್ಯ ಪ್ರಕೃತಿ ಸರೇ । ಪಂಚಭೂತಿಕ ವೋಸರೇ ।
ಸಮೂಳ ದ್ವೈತ ನಿವಾರೇ । ಯಾ ನಾವ ಜ್ಞಾನ ॥೩॥

ಮನಬುದ್ಧಿ ಅಗೋಚರ । ನ ಚಲೆ ತರ್ಕಾಚಾ ವಿಚಾರ ।
ಉಲ್ಲೇಖ ಪರೇಹೂನಿ ಪರ । ಯಾ ನಾವ ಜ್ಞಾನ ॥೪॥

ಜೇಥೇ ನಾಹೀ ದೃಶ್ಯಭಾನ । ಜೇಥೇ ಜಾಣೀವ ಹೇ ಅಜ್ಞಾನ ।
ವಿಮಳ ಶುದ್ಧ ಸ್ವರೂಪಜ್ಞಾನ । ಯಾಸಿ ಬೋಲಿಜೆ ॥೫॥

## ದಶಕ ೫. ಸಮಾಸ ೬. ಶುದ್ಧ ಜ್ಞಾನ ನಿರೂಪಣ (ನುಡಿ ೭೫)

**ಜ್ಞಾನದ ಲಕ್ಷಣಗಳು ಯಾವವು? ಎಂಬುದನ್ನು ಮೊದಲಿಗೆ ಹೇಳುವರು.** ಶಿಷ್ಯನೇ ಜ್ಞಾನದ ಲಕ್ಷಣಗಳನ್ನು ಕೇಳು. ಜ್ಞಾನವೆಂದರೆ ಆತ್ಮಜ್ಞಾನವು. ತನ್ನನ್ನು ತಾನು ತಿಳಿಯುವದಕ್ಕೆ ಜ್ಞಾನವೆಂದು ಹೆಸರು. ತನ್ನ ನಿಜವಾದ ಸ್ವರೂಪವನ್ನು ತಾನು ನೋಡುವದೇ ನಿಜವಾದ ಜ್ಞಾನವು. (೧) ಯಾವ ಈಶ್ವರನು ಹರಿಹರ ಬ್ರಹ್ಮಾದಿಗಳಿಗೂ ಸಹ ಮುಖ್ಯ ದೇವನಾಗಿರುವನೋ ಅವನನ್ನು ಅರಿಯಬೇಕು. ನಮ್ಮಲ್ಲಿರುವ ನಿಜವಾದ ನಾನು ಅಂದರೆ ಆತ್ಮಾ ಇದೇ ನಮ್ಮ ನಿಜ ಸ್ವರೂಪವು. ಇದನ್ನು ಅರಿಯಬೇಕು. ಮತ್ತು ಶಾಶ್ವತವಾದದ್ದು ಯಾವುದು? ತಾತ್ಪೂರ್ತಿಕ (ಅಸ್ಥಿರ)ವಾದದ್ದು ಯಾವುದು ? (ಇದಕ್ಕೆ ನಿತ್ಯಾನಿತ್ಯ ವಿವೇಕವೆನ್ನುವರು). ಇದನ್ನು ವಿಚಾರದಿಂದ ತಿಳಿದು ನಿಶ್ಚಯ ಮಾಡಿಕೊಳ್ಳಬೇಕು. ಇದಕ್ಕೆ ಜ್ಞಾನವೆನ್ನುವರು. ನಿಜವಾಗಿಯೂ ನಾನು ಆತ್ಮಸ್ವರೂಪನಿರುವೆನು. ಇದೇ ಬ್ರಹ್ಮ ರೂಪವು. ಅಂತೆಯೇ ಈಶ್ವರನಿರುವನು. ಈ ಸ್ವರೂಪವೇ ಸ್ಥಿರವಾದದ್ದು ಇರುತ್ತದೆ. ಆದುದರಿಂದ ಒಂದೇ ಆತ್ಮಜ್ಞಾನದಲ್ಲಿ ಮೂರು ಅಭಿನ್ನ ಅಂಗಗಳಿರುವವು. (೨) ಯಾವ ಅವಸ್ಥೆಯಲ್ಲಿ ಪ್ರಕೃತಿಯ(ಮಾಯೆಯ) ದೃಶ್ಯ ವಿಸ್ತಾರ (ಪ್ರಸಾರ) ಮುಗಿಯುವದೋ, ಪಂಚ ಮಹಾಭೂತಗಳ ಬೆಳವಣಿಗೆ ಸಹ ಅದೃಶ್ಯವಾಗಿ-ಹಾರಿ ಹೋಗುವದೋ ಮತ್ತು ನಾನು ನೀನು ಎಂಬ ದ್ವೈತ ಭೇದ ಸಂಪೂರ್ಣ ನಾಶವಾಗುವದೋ ಅಂಥ ಅವಸ್ಥೆಗೆ ಜ್ಞಾನವೆನ್ನುವರು. ಪರಮಾತ್ಮ ಸ್ವರೂಪದಲ್ಲಿ ''ಅಹಂ" ಎಂಬ ಸ್ಫೂರ್ತಿ ಆಗುವದಕ್ಕಿಂತ ಮೊದಲಿನ ಆ ಯಾವ ಅವಸ್ಥೆಯಲ್ಲಿ ದೃಶ್ಯದ ಸುಳಿವು-ಗುರ್ತು ಇರುವದೇ ಇಲ್ಲ. ಆದ್ದರಿಂದ ಪಂಚ ಮಹಾ ಭೂತಗಳ ಹೆಸರು ಸಹ ಆಗ ಎಷ್ಟೂ ಇರುವದಿಲ್ಲ. ಈ ಕಾರಣದಿಂದ ಭೇದದ ಹೆಸರೇ ಇರುವದಿಲ್ಲ. ಇಂಥ ಈ ದೃಶ್ಯವು ಜನ್ಮ ತಳೆಯುವ ಪೂರ್ವದಲ್ಲಿರುವ ಸೂಕ್ಷ್ಮಾತಿ ಸೂಕ್ಷ್ಮವಾದ ಅಭೇದ ಸ್ಥಿತಿಗೆ ಜ್ಞಾನವೆನ್ನುವರು. ಜ್ಞಾನವೆಂದರೆ ಪ್ರತ್ಯಕ್ಷ ಪರಮಾತ್ಮ ಸ್ವರೂಪವೇ ಇರುವದು. (೩) ಯಾವ ಅನುಭವವು ಮನ ಮತ್ತು ಬುದ್ಧಿಗೆ ನಿಲುಕಲಾರದೋ (ಆಕಲನವಾಗುವ ದಿಲ್ಲವೋ) ಯಾವುದು ತರ್ಕದಿಂದ ವಿಚಾರದ ಅಳವಿನಲ್ಲಿ ತರಲಿಕ್ಕೆ ಆಗುವದಿಲ್ಲವೋ,ಮತ್ತು ಪರಾವಾಣಿಯ(ಮೊದಲ ನೆಯ ವಾಣಿ, ದಾ. ದ. ೧೭-ಸ ೧ ಓ ೧ ರಿಂದ ೩ ನೋಡಿ ಅಥವಾ ಶಬ್ದದ ಮೊದಲ ಸ್ಫುರಣ) ಆಚೆಗಿಂತ ಆಚೆಗೆ ಇರುವದು. ಎಂದು ಹೇಳುತ್ತಾರೆಯೋ ಆ ಸೂಕ್ಷ್ಮ ಅನುಭವಕ್ಕೇ ಜ್ಞಾನವೆಂದು ಅನ್ನುವರು. ಮನ, ಬುದ್ಧಿ, ವಾಣಿ, ಈ ಮೂರೂ ಆತ್ಮನ ಪ್ರಕಾಶದಿಂದ ಸಜೀವವಾಗಿರುವವು. ಹಾಗೂ ಆತ್ಮದ ಸತ್ತಾದಿಂದ ಕಾರ್ಯ ಕ್ಷಮವಾಗುವವು. ಜಾಗ್ರತಿ ಸ್ವಪ್ನ, ಸುಷುಪ್ತಿ, ಇವು ಅದರ ಪ್ರಾಂತದ ಹದ್ದು-ಸೀಮೆಗಳು. ಇಷ್ಟೇ ಅಲ್ಲ-ತುರ್ಯಾ ವಸ್ಥೆಯ ಆಚೆಗೆ ಜ್ಞಾನವಿರುವದು. ಆದ್ದರಿಂದ ಪರಾವಾಣಿಗೂ ಸಹ ಅಲ್ಲಿಯವರೆಗೆ ಹೋಗಲಿಕ್ಕೆ ಆಗುವದಿಲ್ಲ (೪) ಒಟ್ಟಿನಲ್ಲಿ ಎಲ್ಲಿ ದೃಶ್ಯದ ಭಾಸ (ಭಾನ) ಸಂಪೂರ್ಣ ಇಲ್ಲದಂತಾಗಿರುವದೋ, ಎಲ್ಲಿ ನಾನು ತಿಳಿಯುವೆನು, (ಅರಿಯು ವೆನು) ನನಗೆ ಜ್ಞಾನವಿದೆ, ಅಥವಾ ಜ್ಞಾನ ಆಗಿದೆ, ನಾನು ಬ್ರಹ್ಮ ಸ್ವರೂಪನಾಗಿರುವೆನು, ಈ ಎಲ್ಲ ತಿಳುವಳಿಕೆ (ಅರಿವು) ಸಹ ಅಜ್ಞಾನವೆಂದು ತಿಳಿಯಲಾಗುವದು. ಹೀಗೆ ಅತ್ಯಂತ ಮಲರಹಿತ ಹಾಗೂ ಶುದ್ಧವಾದ ಯಾವ ಸ್ವರೂಪ ಜ್ಞಾನವಿದೆಯೋ ಅದಕ್ಕೆ ಜ್ಞಾನವೆನ್ನುವರು. ಸ್ವರೂಪ ಜ್ಞಾನದಲ್ಲಿ ಮಾಯೆ ಅಡಗುತ್ತದೆ(ಮುಳುಗುತ್ತದೆ) ಆದುದರಿಂದ ದೃಶ್ಯದ ಭಾಸ ಉಳಿಯುವದಿಲ್ಲ. ಜ್ಞಾನದಿಂದ ಅಜ್ಞಾನದ ನಾಶವಾಗುವದು. ಮುಂದೆ ಆ ಜ್ಞಾನವೂ ಸಹ ಸ್ವರೂಪದಲ್ಲಿ ವಿಲೀನವಾಗುವದರಿಂದ "ನಾನು ತಿಳಿಯುತ್ತೇನೆ" ಇದುಸಹ ಉಳಿಯುವದಿಲ್ಲ.ಯಾವುದೇ ಭೇದದ ದೃಶ್ಯದ, ವಿಕಲ್ಪದ-ಮಲದ-ಸಂಪರ್ಕ ಇಲ್ಲದ್ದರಿಂದ ಆ ಸ್ವರೂಪವು ಅತಿ ನಿರ್ಮಲ ಮತ್ತು ಶುದ್ಧವಿರುವದು. (೫)

ಸರ್ವಸಾಕ್ಷೀ ಅವಸ್ಥಾ ತುರ್ಯಾ । ಜ್ಞಾನ ಏಸೇ ಮ್ಹಣತೀ ತಯಾ ।
ಪರೀ ತೇ ಜಾಣಿಜೇ ವಾಯಾ । ಪದಾರ್ಥಜ್ಞಾನ ॥೬॥

ದೃಶ್ಯ ಪದಾರ್ಥ ಜಾಣಿಜೇ । ತ್ಯಾಸ ಪದಾರ್ಥಜ್ಞಾನ ಬೋಲಿಜೆ ।
ಶುದ್ಧ ಸ್ವರೂಪ ಜಾಣಿಜೇ । ಯಾ ನಾವ ಸ್ವರೂಪಜ್ಞಾನ ॥೭॥

ಜೇಥೇ ಸರ್ವಚಿ ನಾಹೀ ಠಾಊಚೇ । ತೇಥೇ ಸರ್ವಸಾಕ್ಷತ್ವ ಕೈಂಚೇ ।
ಮ್ಹಣೌನಿ ಶುದ್ಧಜ್ಞಾನ ತುರ್ಯೇಚೇ । ಮಾನೂಚಿ ನಯೇ ॥೮॥

ಜ್ಞಾನ ಮ್ಹಣಿಜೆ ಅದ್ವೈತ । ತುರ್ಯಾ ಪ್ರತ್ಯಕ್ಷ ದ್ವೈತ ।
ಮ್ಹಣೌನಿ ಶುದ್ಧ ಜ್ಞಾನ ತೇ ಸತತ । ವೇಗಳೇಚಿ ಅಸೆ ॥೯॥

ಏಕ ಶುದ್ಧ ಜ್ಞಾನಾಚೇ ಲಕ್ಷಣ । ಶುದ್ಧ ಸ್ವರೂಪ ಚಿ ಆಪಣ।
ಯಾ ನಾವ ಶುದ್ಧಸ್ವರೂಪ ಜ್ಞಾನ । ಜಾಣಿಜೆ ಶ್ರೋತೀ ॥೧೦॥

ಮಹಾವಾಕ್ಯ ಉಪದೇಶ ಭಲಾ । ಪರೀ ತ್ಯಾಚಾ ಜಪ ನಾಹೀ ಬೋಲಿಲಾ ।
ತೇಥೀಚಾ ತೋ ವಿಚಾರ ಚಿ ಕೇಲಾ । ಪಾಹಿಜೆ ಸಾಧಕೇ ॥೧೧॥

ಮಹಾವಾಕ್ಯ ಉಪದೇಶ ಸಾರ । ಪರೀ ಘೇತಲಾ ಪಾಹಿಜೆ ವಿಚಾರ ।
ತ್ಯಾ ಚ್ಯಾ ಜಪೇ ಅಂಧಕಾರ । ನ ಫಿಟೇ ಭ್ರಾಂತೀಚಾ ॥೧೨॥

**ದೇಹ ಬುದ್ಧಿಯು ಜಾಗೃತಿ, ಸ್ವಪ್ನ, ಸುಷುಪ್ತಿ ಈ ಮೂರು ಅವಸ್ಥೆಗಳನ್ನು ದಾಟಿ ನಾಲ್ಕನೆಯದಾದ ತುರ್ಯಾ ಅವಸ್ಥೆಯಲ್ಲಿ ಪ್ರವೇಶ ಮಾಡಿದ ಕೂಡಲೇ ಆತ್ಮ ಬುದ್ಧಿಯು ಉದಯವಾಗುವದು. ಆದರೆ ಇದೂ ಸಹ ಅಡಗಿ ಇಲ್ಲದಾದ ಮೇಲೆ ಕೇವಲ ಸ್ವರೂಪ ಮಾತ್ರ ಉಳಿಯುವದು. ಇದೇ ನಿಜವಾದ ಜ್ಞಾನವೆಂದು ತಿಳಿಯಬೇಕು:-** ಎಲ್ಲವನ್ನು ನೋಡುವ ಸರ್ವಸಾಕ್ಷಿಯಾಗಿ ನೋಡುವ ನಾಲ್ಕನೆಯ ಅವಸ್ಥೆಯಾದ ತುರ್ಯಾವಸ್ಥೆಗೇ ಕೆಲವರು ಆತ್ಮಜ್ಞಾನವೆನ್ನುವರು. ಆದರೆ ಈ ಅವಸ್ಥೆಯಲ್ಲಿ ಸಾಕ್ಷಿತ್ವದಿಂದ ಪದಾರ್ಥ ಜ್ಞಾನವಿರುವದರಿಂದ ಇದೂ ಸಹ ಪೂರ್ಣ ಜ್ಞಾನವೆನಿಸಲಾರದು. (೬) ಪದಾರ್ಥ ಜ್ಞಾನವೆಂದರೆ ದೃಶ್ಯ ಪದಾರ್ಥ ತಿಳಿಯುವದೇ ಆಗಿದೆ. ದೃಶ್ಯರಹಿತ ಶುದ್ಧ ಸ್ವರೂಪ ತಿಳಿಯುವದೇ ಆತ್ಮ ಜ್ಞಾನವೆನಿಸುವದು. (೭) ಯಾವ ಆತ್ಮ ಸ್ವರೂಪದ ಸ್ಥಳದಲ್ಲಿ ಸ್ವರೂಪದ ಹೊರತಾಗಿ ಏನೂ ಉಳಿಯುವದಿಲ್ಲವೋ ಅಲ್ಲಿ ಸರ್ವ ಸಾಕ್ಷಿತ್ವತನ ಇರಲಿಕ್ಕೆ ಶಕ್ಯವಿಲ್ಲ. ಅಂತೆಯೇ ತುರ್ಯಾದಲ್ಲಿ ಆಗುವ ಜ್ಞಾನವನ್ನು ಆತ್ಮಜ್ಞಾನವೆಂದು ಗ್ರಹಿಸಲೇಬಾರದು. (೮) ಆತ್ಮ ಜ್ಞಾನದಲ್ಲಿ ಸಂಪೂರ್ಣ ಅದ್ವೈತವಿರುತ್ತದೆ. ತುರ್ಯಾದಲ್ಲಿಯಾದರೋ ಪ್ರತ್ಯಕ್ಷ ದ್ವೈತ ಕಂಡು ಬರುತ್ತದೆ. ಆದ್ದರಿಂದ ಶುದ್ಧ ಆತ್ಮಜ್ಞಾನವು ಸಂಪೂರ್ಣ ಸ್ವತಂತ್ರವಿದೆ. ಅದು ಬೇರೆಯಾಗಿಯೇ ಇರುವದು. "ನಾನು ದೇಹವೇ ಇರುವೆ" ಈ ದೃಢ ಭಾವನೆಯೇ ದೇಹ ಬುದ್ಧಿಯಾಗಿದೆ. "ನಾನು ಆತ್ಮನೇ ಇರುವೆ" ಈ ದೃಢಭಾವನೆಯೇ ಆತ್ಮಬುದ್ಧಿಯಾಗಿದೆ. ಜಾಗ್ರತಾವಸ್ಥೆ, ಸ್ವಪ್ನ ಮತ್ತು ಗಾಢ ನಿದ್ರೆ (ಸುಷುಪ್ತಿ) ಈ ಮೂರು ಅವಸ್ಥೆಗಳು ದೇಹ ಬುದ್ಧಿಯವಾಗಿವೆ. ಹಾಗೂ ತುರ್ಯಾವಸ್ಥೆಯು ಆತ್ಮಬುದ್ಧಿಯದಾಗಿದೆ. ದೇಹಬುದ್ಧಿಯ ಜ್ಞಾನದಲ್ಲಿ ಜ್ಞಾತಾ (ತಿಳಿಯುವವನು)ಜ್ಞೇಯ (ತಿಳಿಯಬೇಕಾದಂಥ) ದಿಂದ ಬೇರೆ ಇರುವನು. "ನಾನು'' ಅಂದರೆ ಜ್ಞಾತಾ ಮತ್ತು "ನೀನು" ಅಂದರೆ ಜ್ಞೇಯ ಅಂತೆಯೇ ಅಲ್ಲಿ ದ್ವೈತ ಕಂಡು ಬರುವದು. ತುರ್ಯಾವಸ್ಥೆಯ ಜ್ಞಾನದಲ್ಲಿ ಜ್ಞಾತಾ "ನಾನು" ಆತ್ಮವೇ ಆಗುವದು ಆ ಅವಸ್ಥೆಯಲ್ಲಿ "ನಾನು ದೇಹವೇ ಇರುವೆ" ಎಂಬ ಅರಿವು ಲೋಪವಾಗುತ್ತದೆಂಬುದು ನಿಜವಾದರೂ "ನಾನು ಆತ್ಮ ಇರುವೆ" ನಾನು ದೃಶ್ಯ ಪದಾರ್ಥಕ್ಕಿಂತ ಬೇರೆಯಾಗಿರುವೆನು. ನಾನು ಅವನನ್ನು ಬೇರೆ ರೀತಿಯಿಂದ ನೋಡುವೆನು ಹೀಗೆ ಭಾಸ (ಭಾನ) ವಿರುತ್ತದೆ. ಇದಕ್ಕೆ ಸರ್ವ ಸಾಕ್ಷಿಣಿ ಅವಸ್ಥೆ ಅನ್ನುವರು. ಇದರಲ್ಲಿ "ನಾನು ಜ್ಞಾತಾ ಆತ್ಮವೇ ಇರುವೆ" ಎಂಬ ಪ್ರತ್ಯಕ್ಷ ಅನುಭವ ಬರುವದು. ಅಂತೆಯೇ ಅಜ್ಞಾನವು ಉಳಿಯುವದಿಲ್ಲ. ಆದರೆ ದೃಶ್ಯಕ್ಕೆ ಸಾಕ್ಷಿಯಾಗಿ ನಿಂತು ಬೇರೇತನದಿಂದ ನೋಡುವದು ಉಳಿದಿರುತ್ತದೆ. ಒಟ್ಟಿನಲ್ಲಿ ಇದರ ಅರ್ಥವು ದೃಶ್ಯವು ಜ್ಞೇಯ ತನದಿಂದ ಜ್ಞಾತಾದಿಂದ ಬೇರೆ ಉಳಿಯುತ್ತದೆ. ಇದೇ ದ್ವೈತವು. ಆತ್ಮಜ್ಞಾನದಲ್ಲಿ ಸಂಪೂರ್ಣಅದ್ವೈತವಿರುವದರಿಂದ ದ್ವೈತವಾಗಿರುವ ತುರ್ಯಾವಸ್ಥೆಯು ಶುದ್ಧ ಆತ್ಮ ಜ್ಞಾನವಲ್ಲ. ಶುದ್ಧಆತ್ಮಜ್ಞಾನವು ತುರ್ಯಾವಸ್ಥೆಗಿಂತ ಎಂದಿಗೂ (ಯಾವಾಗಲೂ) ಬೇರೆ ಇರುವದು. (೯) **ಉಪನಿಷತ್ತಿನಲ್ಲಿಯು ಮಹಾವಾಕ್ಯದಲ್ಲಿ ಆತ್ಮಜ್ಞಾನದ ಎಲ್ಲ ರಹಸ್ಯವೂ ಸಂಗ್ರಹಿತವಿದೆ. ಆದರೆ ಕೇವಲ ಅದರ ಜಪ ಮಾಡಿದರೆ ಉಪಯೋಗವಿಲ್ಲ. ಅದರ ಬಗ್ಗೆ ಮನನ ಮಾಡಿ ಆ ಬಗ್ಗೆ ಪ್ರತ್ಯಕ್ಷ ಅನುಭವ ತೆಗೆದುಕೊಳ್ಳಬೇಕು:-** ಈಗ ಶುದ್ಧ ಜ್ಞಾನದ ಲಕ್ಷಣಗಳನ್ನು ಕೇಳುವವನಾಗು. ಯಾವುದು ಶುದ್ಧ ಪರಮಾತ್ಮ ಸ್ವರೂಪವಿರುವದೋ ಅದೇ ನಾವು ಆಗಿರುವೆವು. ಹೀಗೆ ಆ ಯಾವ ಸಾಕ್ಷಾತ್ ಅನುಭವ ಬರುವದೋ ಅದರ ಹೆಸರು ಶುದ್ಧ ಸ್ವರೂಪ ಜ್ಞಾನವೆಂದು ಶ್ರೋತೃಗಳು ತಿಳಿಯಬೇಕು(೧೦) ಮಹಾವಾಕ್ಯದ ಉಪದೇಶವು ಶ್ರೇಷ್ಠವಾದದ್ದೇ ಇರುವದು. ಆದರೆ ಅದರ ಜಪ ಮಾಡಲಿಕ್ಕೆ ಮಾತ್ರ ಹೇಳಿಲ್ಲ. ಸಾಧಕರು ಜಪ ಮಾಡದೇ ಮಹಾವಾಕ್ಯದ ಅರ್ಥದ ವಿಷಯವಾಗಿ ವಿಚಾರ ಮಾಡುವದೇ ಮುಖ್ಯವಿರುವದು. ಮನನ ಮಾಡುವದೂ ಅವಶ್ಯವಿರುವದು. (೧೧) ಮಹಾವಾಕ್ಯದಲ್ಲಿ ಪರಮಾರ್ಥದ ಉಪದೇಶ ವಿಷಯದ ಸಾರವಿರುವದೆಂಬುದರಲ್ಲಿ ಸಂಶಯವಿಲ್ಲ. ಆದರೆ ಇದರ ಮನನವನ್ನೇ ಮಾಡಲಿಕ್ಕೆ ಬೇಕು ಕೇವಲ ಮಹಾವಾಕ್ಯದ ಜಪ ಮಾಡಿದರೆ ಅಜ್ಞಾನದ ಭ್ರಾಂತಿಯಿಂದ ಉತ್ಪನ್ನವಾದ ಅಂಧಃಕಾರವು ನಾಶವಾಗುವದಿಲ್ಲ. (೧೨)

ಮಹಾವಾಕ್ಯಾಚಾ ಅರ್ಥ ಘೇತಾ । ಆಪಣ ವಸ್ತುಚಿ ತತ್ವತಾ ।
ತ್ಯಾಚಾ ಜಪ ಕರಿತಾ ವೃಥಾ । ಸೀಣ ಚಿ ಹೋಯೇ ॥೧೩॥

ಮಹಾವಾಕ್ಯಾಚೇ ವಿವರಣ । ಹೇ ಮುಖ್ಯಜ್ಞಾನಾಚೇ ಲಕ್ಷಣ ।
ಶುದ್ಧ ಲಕ್ಷ್ಯಾಂಶೇ ಆಪಣ । ವಸ್ತುಚ ಆಹೆ ॥೧೪॥

ಆಪಲಾ ಆಪಣಾಸಿ ಲಾಭ । ಹೇ ಜ್ಞಾನ ಪರಮ ದುಲ್ಲಭ ।
ಜೇ ಆದಿಅಂತೀ ಸ್ವಯಂಭ । ಸ್ವರೂಪ ಚಿ ಸ್ವಯೇ ॥೧೫॥

ಆತ್ಮವು ಬ್ರಹ್ಮ ಸ್ವರೂಪ ಅಥವಾ ಪರಮಾತ್ಮ ಸ್ವರೂಪ ಇರುವದು· ಮತ್ತು ನಾವು ವಾಸ್ತವಿಕವಾಗಿ (ನಿಜವಾಗಿ) ಆತ್ಮಸ್ವರೂಪರೇ ಇರುವೆವು. ಅಂತೆಯೇ ನಾವು ಬ್ರಹ್ಮಸ್ವರೂಪ ಅಥವಾ ಪರಮಾತ್ಮ ಸ್ವರೂಪರಾಗಿರುವೆವು. ಎಲ್ಲ ಮಹಾವಾಕ್ಯಗಳ ಉಪದೇಶವೂ ಇದೇ ಆಗಿರುವದು. ನಾನು ದೇಹನಲ್ಲ. ಕೇವಲ ಆತ್ಮನೇ ಇರುವೆನು. ಮತ್ತು ಆತ್ಮವು ಬ್ರಹ್ಮಸ್ವರೂಪವಿದ್ದದರಿಂದ ನಾನು ಬ್ರಹ್ಮಸ್ವರೂಪವೇ ಇರುವೆನೆಂಬ ಪ್ರತ್ಯಕ್ಷ ಅನುಭವ ಬರುವದೇ ಆತ್ಮಜ್ಞಾನ ಪ್ರಾಪ್ತವಾದದ್ದರ ಇರವು–ಲಕ್ಷಣ ಎಂದು ತಿಳಿಯಬೇಕು. ಈ ಜ್ಞಾನಕ್ಕೆ ಶುದ್ಧ ಹಾಗೂ ನಿರ್ಮಲವಾದ ಸ್ವರೂಪಜ್ಞಾನವೆಂದು ವೇದಾಂತದಲ್ಲಿ ಅನ್ನುವರು. ಈ ಜ್ಞಾನವು ಅತಿ ಸೂಕ್ಷ್ಮವಿಚಾರದಿಂದ ನಮ್ಮಲ್ಲಿಯೇ ಉದಯ ಹೊಂದುತ್ತದೆ. ಮತ್ತು ಇದರಲ್ಲಿ ಎಲ್ಲ ವಿರೋಧಗಳೂ ಅಡಗಿ ಹೋಗುವವು. ಉಪನಿಷತ್‌ದ ಮೂರು ನಾಲ್ಕು ಕಡೆಗೆ ಇದರ ಬಗ್ಗೆ ಬಹಳ ಸುಂದರ ವರ್ಣನೆ ಬಂದದ್ದು ಕಂಡು ಬರುವದು. **ಉದಾ:**-ಅಸೌ ಯಃ ಅಸೌ ಪುರುಷಃ ಸಃ ಅಹಂ ಅಸ್ಮಿ ॥ **ಅರ್ಥ:**- ಅವನು-ಆ ಯಾವ ಪುರುಷನಿರುವನೋ ಅವನೇ ನಾನಿರುವೆನು, (ಈಶಾವಾಸ್ಯ) "ಯದ್‌ಆತ್ಮ ತತ್ವೇನ ತು ಬ್ರಹ್ಮತತ್ವಂ ದೀಪೋಪಮೇನೇಹ ಯುಕ್ತಃ ಪ್ರಪಶ್ಯೇತ್ । ಅಜಂ ಧ್ರುವಂ ಸರ್ವ ತತ್ವೈರ್ವಿ ಶುದ್ಧಂ ಜ್ಞಾತ್ವಾದೇವಂ ಮುಚ್ಯತೇ ಸರ್ವ ಪಾಶೈಃ । **ಅರ್ಥ:**– ಮನುಷ್ಯನು ದೀಪದ ಸಹಾಯದಿಂದ ವಸ್ತುವನ್ನು ಯಾವ ಪ್ರಕಾರ ನೋಡುವನೋ ಇದರಂತೆಯೇ ಯೋಗಿ ಪುರುಷರು ಆತ್ಮ ತತ್ವದ ಸಹಾಯದಿಂದ ಅಜ, ಧ್ರುವ (ಅಢಳ, ಅಚಲ ಹಾಗೂ ಶಾಶ್ವತವಾದ) ಮತ್ತು ಪರಮಶ್ರೇಷ್ಠ ಹಾಗೂ ಕಾಂತಿಯುಕ್ತವಾದ ಬ್ರಹ್ಮ ತತ್ವವನ್ನು ನೋಡುವರು (ಶ್ವೇತಾಶ್ವತರ ೨.೧೫) ಯತ್ಪರಂ ಬ್ರಹ್ಮ ಸರ್ವಾತ್ಮಾ ವಿಶ್ವಸ್ಯಾಯತನಂ ಮಹತ್ । ಸೂಕ್ಷ್ಮಾತ್ ಸೂಕ್ಷ್ಮತರಂ ನಿತ್ಯಂ ಸ ತ್ವಮೇವ ತ್ವಮೇವ ತತ್ ॥ (೧೬) ಮಯಿ ಏವ ಸಕಲಂ ಜಾತಂ ಮಯಿ ಸರ್ವ ಪ್ರತಿಷ್ಠಿತಂ । ಮಯಿ ಸರ್ವಂ ಲಯಂ ಯಾತಿ ತದ್ ಬ್ರಹ್ಮ ಅದ್ವಯಿಮ್ ಅಸ್ಮಿ ಅಹಮ್ ॥ [೧೯] **ಅರ್ಥ:** — ಸರ್ವೋತ್ತಮ ಬ್ರಹ್ಮವು ಸರ್ವದರ ಆತ್ಮಾ ಇರುವದು. ವಿಶ್ವದ ಮೂಲ ಇರುವದು. ಅತಿಶಯ ಸೂಕ್ಷ್ಮವಿರುವದು, ಮತ್ತು ನಿತ್ಯವೂ (ಸದಾ, ಸರ್ವದಾ) ಇರುವದು. ಅದು ನೀನೇ ಇರುವಿ. ಅದು ನೀನೇ ಇರುವಿ (೧೬) ನನ್ನೊಳಗಿಂದಲೇ ಸರ್ವವು ಕಾಣಿಸಿಕೊಳ್ಳುವದು. ನನ್ನಲ್ಲಿಯೇ ಪಾಲಿಸಲ್ಪಡುವದು. (ಬೆಳೆಯುವದು) ಮತ್ತು ನನ್ನಲ್ಲಿಯೇ ಲಯ ಹೊಂದುವದು. ಆ ಏಕರೂಪ (ಅದ್ವಯ)ನಾದ ಬ್ರಹ್ಮ ನಾನೇ ಇರುವೆನು. (ಕೈವಲ್ಯ ೧೬-೧೯) ಮಹಾವಾಕ್ಯದ ಅರ್ಥ ನೋಡಿದ್ದಾದರೆ ಅದರ ಅಭಿಪ್ರಾಯ ಹೀಗಿರುವದು· ನಾವು ಪರಮಾತ್ಮ ಸ್ವರೂಪವೇ ಇರುವೆವು. ಆದರೆ ಅರ್ಥವನ್ನು ತಿಳಿಯದೆ ಕೇವಲ ಅದರ ಜಪ ಮಾಡಿದ್ದಾದರೆ ವ್ಯರ್ಥ ಶ್ರಮ (ಗಾಳಿಗುದ್ದಿ ಮೈ ನೋಯಿಸಿಕೊಂಡಂತೆ) ಆಗುವದು. (೧೩) ಒಟ್ಟಿನಲ್ಲಿ ಮಹಾವಾಕ್ಯದ (ತತ್ವ ಮಸ್ಯಾದಿಗಳ) ಮನನ ಮಾಡಿ ಅದರಲ್ಲಿಯ ಅರ್ಥವನ್ನು ಸ್ವತಃ ಅನುಭವ ಪಡೆದುಕೊಳ್ಳುವದೇ ಜ್ಞಾನದ ಪ್ರಮುಖ ಲಕ್ಷಣವಾಗಿದೆ· ನಾವು ಅಂದರೆ ನಾನು ಬ್ರಹ್ಮನೇ ಇರುವೆನು. ಇದು ಮಹಾವಾಕ್ಯದ ನಿಜವಾದ ಶುದ್ಧ ಮತ್ತು ಸೂಕ್ಷ್ಮ ಅರ್ಥವಿರುವದು· ಇದನ್ನು ಸಾರಾಸಾರ ವಿವೇಕದಿಂದ ನಿಶ್ಚಯಿಸಿ ಅನುಭವ ಪಡೆಯಬೇಕು. (೧೪) ನಮ್ಮ ಕಳೆದು ಹೋದ ಸ್ವಸ್ವರೂಪ ಅಥವಾ ಆತ್ಮಸ್ವರೂಪವು ನಮಗೆ ಪ್ರಾಪ್ತವಾಗುವಿಕೆ ಅಂದರೆ ತನ್ನ (ನನ್ನ) ನಿಜವೇ ತಾನು (ನಾನು) ಇದನ್ನು ತಿಳಿದುಕೊಳ್ಳುವದು ಅವಶ್ಯವು. ಈ ಜ್ಞಾನ ಬಹಳ ದುರ್ಲಭವಿದೆ. ಯಾಕಂದರೆ ಈ ಜ್ಞಾನವು ಆರಂಭದಿಂದ ಕೊನೆಯವರೆಗೆ ಸತ್ಯವಾಗಿಯೂ ಸ್ವಯಂಭೂ ಆತ್ಮಸ್ವರೂಪವೇ ಇರುತ್ತದೆ. ಸ್ವಯಂಭು ಅಂದರೆ ಸ್ವತಃ ಸಿದ್ಧ. ಆತ್ಮನನ್ನು ತಿಳಿಯುವ, ಆತ್ಮನೊಂದಿಗೆ ತಾದಾತ್ಮ್ಯ ಹೊಂದಿ ಆತ್ಮಜ್ಞಾನ ಪಡೆಯಬೇಕು. ಇದರಿಂದ ಅದರ ಜ್ಞಾನದ ಪ್ರಮಾಣ ಆ ಜ್ಞಾನದಲ್ಲಿಯೇ ಅಂತರ್ಭೂತವಿರುತ್ತದೆ. ಅಂತೆಯೇ ಆತ್ಮಜ್ಞಾನ ಸ್ವತಃ ಸಿದ್ಧವಿರುತ್ತದೆ. (೧೫)

ಜೇಥೂನ ಹೇ ಸರ್ವಹೀ ಪ್ರಗಟೇ । ಆಣೀ ಸಕಳಹೀ ಜೇಥೇ ಆಟೇ ।
ತೇ ಜ್ಞಾನ ಜಾಲಿಯಾ ಫಿಟೇ । ಭ್ರಾಂತಿ ಬಂಧನಾಚೀ ॥೧೬॥

ಮತೇ ಆಣೀ ಮತಾಂತರೇ । ಜೇಥೇ ಹೋತೀ ನಿರ್ವಿಕಾರೇ ।
ಅತಿ ಸೂಕ್ಷ್ಮ ವಿಚಾರೇ । ಪಾಹಾತಾ ಐಕ್ಯ ॥೧೭॥

ಜೇ ಯಾ ಚರಾಚರಾಚೇ ಮೂಳ । ಶುದ್ಧ ಸ್ವರೂಪ ನಿರ್ಮಳ ।
ಯಾ ನಾಂವ ಜ್ಞಾನ ಕೇವಳ । ವೇದಾಂತಮತೇ ॥೧೮॥

ಶೋಧಿತಾ ಆಪಲೇ ಮೂಳ ಸ್ಥಾನ । ಸಹಜ ಚಿ ಉಡೇ ಅಜ್ಞಾನ ।
ಯಾ ನಾಂವ ಮ್ಹಣಿಜೆ ಬ್ರಹ್ಮಜ್ಞಾನ । ಮೋಕ್ಷದಾಯೇಕ ॥೧೯॥

ಆಪಣಾಸಿ ವೋಳಖೋ ಜಾತಾ । ಅಂಗೀ ಬಾಣೆ ಸರ್ವಜ್ಞತಾ ।
ತೇಣೇ ಯೇಕದೇಸೀ ವಾರ್ತಾ । ನಿಶೇಷ ಉಡೇ ॥೨೦॥

ಮೀ ಕೋಣ ಐಸಾ ಹೇತ । ಧರೂನ ಪಾಹಾತಾ ದೇಹಾತೀತ ।
ಆವಲೋಕಿತಾ ನೇಮಸ್ತ । ಸ್ವರೂಪ ಚಿ ಹೋಯೇ ॥೨೧॥

ಅಸೋ ಪೂರ್ವೀ ಥೋರ ಥೋರ । ಜೇಣೇ ಜ್ಞಾನೇ ಪೈಲಪಾರ ।
ಪಾವಲೇ ತೇ ಸಾಚಾರ । ಐಕ ಆತಾ ॥೨೨॥

ವ್ಯಾಸ ವಸಿಷ್ಠ ಮಹಾಮುನೀ । ಶುಕ ನಾರದ ಸಮಾಧಾನೀ ।
ಜನಕಾದಿಕ ಮಹಾಜ್ಞಾನೀ । ಯೇಣೇಚಿ ಜ್ಞಾನೇ ॥೨೩॥

ಒಂದು ಮೂಲವಸ್ತು ಅಥವಾ ಮೂಲ ಸ್ವರೂಪದಿಂದ ಈ ಎಲ್ಲ ವಿಶ್ವವು ಉದಯುವಾಗುವದು. (ತೋರಿಬರುವದು). ಹಾಗೂ ಪುನಃ ಆ ಮೂಲ ಸ್ವರೂಪದಲ್ಲಿಯೇ ಅದು (ವಿಶ್ವದಲ್ಲಿ ತೋರಿದ್ದು) ಲಯ ಹೊಂದುವದು. ಇಂಥ ಆ ಆತ್ಮಸ್ವರೂಪದ ಜ್ಞಾನವಾದ ಕೂಡಲೇ ಅಜ್ಞಾನವು ನಾಶವಾಗುವದು. ಆಗಲೇ ನಾವು ಬಂಧನದಲ್ಲಿ ತೊಡಕಿಕೊಂಡಿರುವೆವು.ಎಂದು ಅಜ್ಞಾನದಿಂದ ನಿರ್ಮಾಣವಾಗಿರುವ ಭ್ರಮೆಯು ಹರಿದುದೂರಾಗುವದು. ನಾವು ವಿಶ್ವಕ್ಕಿಂತಲೂ ವಿಶಾಲ ಇದ್ದೂ ಸಹ ಸ್ಥಲ, ಕಾಲಗಳ ಬಂಧನದಿಂದ ಹೇಳಿಕೇಳಿ ಬದ್ಧರಾಗಿರುವೆವು. ಈವಿಶ್ವವೇ ಮೂಲ ಸ್ವರೂಪದಲ್ಲಿಲೀನವಾದದ್ದರಿಂದಆತ್ಮಜ್ಞಾನಿ ಪುರುಷನಿಗೆ ಬದ್ಧತನದಭಾವನೆಉಳಿಯುವುದಿಲ್ಲ.(೧೬) ಸ್ವಸ್ವರೂಪದ ಪ್ರತ್ಯಕ್ಷ ಅನುಭವ ಬರುವವರೆಗೆ ಅನೇಕ ಮತ ಮತಾಂತರಗಳಲ್ಲಿ ವಿರೋಧವಿದ್ದದ್ದು ಕಂಡುಬರುವದು. ಆದರೆ ಆತ್ಮಜ್ಞಾನವಾದ ಮೇಲೆ ಈ ಎಲ್ಲ ವಿರೋಧಗಳು ಇಲ್ಲದಾಗುವವು.ಅತಿಸೂಕ್ಷ್ಮವಿಚಾರ ಮಾಡಿ ನೋಡಿದಾಗ ನಮಗೆ ಸರ್ವದರಲ್ಲಿ ಐಕ್ಯವಿದೆ ಎಂಬುದು ತಿಳಿಯುವದು. ಆತ್ಮಸ್ವರೂಪವು ಅನಂತವಿದ್ದುದರಿಂದ ಯಾರಿಗೆ ಯಾವ ಅಂಗದ ದರ್ಶನವಾಗಿರುವದೋ ಅದಕ್ಕನುಸರಿಸಿ ಅವರು ತಮ್ಮ ಮತ ಮಂಡಿಸುವರು. ಆತ್ಮಜ್ಞಾನಿ ಪುರುಷನ ಅನುಭವದಲ್ಲಿ ಮಾತ್ರ ಸರ್ವ ಅಂಗಗಳು ಏಕತ್ವದಿಂದ ಒಂದೇ ಕಡೆಗೆ ಕೂಡುವವು.ಆದುದರಿಂದ ಈ ಬಗ್ಗೆ ಅತಿಶಯ ಸೂಕ್ಷ್ಮ ಅಂದರೆ ಆಳವಾಗಿ ಮತ್ತು ವ್ಯಾಪಕವಾಗಿ ವಿಚಾರ ಮಾಡಬೇಕಾಗುವದು. (೧೭) ಅಜ್ಞಾನದ ಮಲ ಇಲ್ಲದಂಥ ಅಗದೀ ಶುದ್ಧ ಆತ್ಮಸ್ವರೂಪವು ಈ ದೃಶ್ಯ ಚರಾಚರದ (ಸಜೀವ ವ ನಿರ್ಜೀವ ಜಗತ್ತಿನ ಅಂದರೆ ಸೃಷ್ಟಿಯ) ಮೂಲವಿರುವದು. ಹೀಗೆ ಪ್ರತ್ಯಕ್ಷ ನಮ್ಮ ಅನುಭವಕ್ಕೆ ಬಂದು ಯಾವ ಜ್ಞಾನವಾಗುವದೋ ಅದಕ್ಕೆ ವೇದಾಂತದಲ್ಲಿ ಶುದ್ಧಜ್ಞಾನವೆಂದು ಅನ್ನುವರು (೧೮) ನಮ್ಮ ಮೂಲಸ್ಥಾನದ ಅಂದರೆ ಸ್ವರೂಪದ ಶೋಧ ಮಾಡಿ-ದ್ದಾದರೆ ನಾವು ಆತ್ಮಸ್ವರೂಪದಲ್ಲಿ(ಸ್ವಸ್ವರೂಪದ) ಒಳಗೆ ಹೋಗುವೆವು. ಆ ಸ್ವರೂಪವು ಜ್ಞಾನಮಯವಿದ್ದದರಿಂದ ಅಲ್ಲಿಯ ಅಜ್ಞಾನವು ತನ್ನಷ್ಟಕ್ಕೆ ತಾನೇ ಅಡಗುವದು. ಅಂತೆಯೇ ಆತ್ಮಜ್ಞಾನಕ್ಕೆ ಮೋಕ್ಷ ಕೊಡುವಂಥ ಬ್ರಹ್ಮ ಜ್ಞಾನವೆಂಬ ಹೆಸರು ಇರುವದು. (೧೯) ನಮ್ಮಲ್ಲಿರುವ ನಿಜವಾದ "ನಾನು ಯಾರು ಇರುವೆನು" ಇದರ ಶೋಧ ಮಾಡಹತ್ತಿದರೆ ಆತ್ಮಜ್ಞಾನವಾಗುವದು. ಆತ್ಮಾ ಸರ್ವವ್ಯಾಪಿ ಇರುವದರಿಂದ ನಾವೂ ಸಹ ಆತ್ಮಜ್ಞಾನದ ಮೂಲಕ ಸರ್ವಜ್ಞರಾಗುವೆವು. ನಮಗೆ ಸರ್ವಜ್ಞಾನವೂ ಹಸ್ತಗತವಾಗುವದು. ಸರ್ವತ್ರದಲ್ಲಿ ನಾನೇ ವ್ಯಾಪಿಸಿ ಇರುವೆನು ಎಂಬ ಅನುಭವ ಬಂದಿದ್ದರಿಂದ ದೇಹದ ಮಟ್ಟಿಗೆ ನಾನು ಇರುವೆ ಎಂಬ ಸಂಕುಚಿತ ವೃತ್ತಿಯೇ ಎಳ್ಳಷ್ಟೂ ಉಳಿಯುವದಿಲ್ಲ. (೨೦) "ನಾನು ಯಾರು ಇರುವೆ" ಎಂಬುದನ್ನು ತಿಳಿಯುವ ಉದ್ದೇಶದಿಂದ ನಾವು ಶೋಧ ತೆಗೆಯಹತ್ತಿದರೆ, ಆಗ ನಿಜವಾದ ನಾನು ದೇಹದ ಆಚೆಗೆ ಇರುವೆ ಹೀಗೆ ಅನುಭವ ಬರುತ್ತದೆ. ದೇಹದ ಆಚೆಗಿರುವ "ನಾನು" ಎಂಬುದನ್ನು ನೋಡುತ್ತ ನೋಡುತ್ತ ನಾವು ಅಗದೀ ನಿಶ್ಚಿತವಾಗಿ ಆತ್ಮಸ್ವರೂಪವೇ ಆಗುವೆವು. (೨೧) ಈ ಪೂರ್ವದಲ್ಲಿ ಆಗಿ ಹೋದ ಎಲ್ಲ ದೊಡ್ಡ ಜ್ಞಾನಿ ಪುರುಷರಿಗೆ ಇಂಥ ಆತ್ಮಜ್ಞಾನ ಪ್ರಾಪ್ತವಾಗಿತ್ತು. ಆತ್ಮಜ್ಞಾನವೇ ಸರ್ವವೇದ ಶಾಸ್ತ್ರಗಳ ರಹಸ್ಯವಿರುವದು. ಸರ್ವಸಂತರ ಅಭಿಪ್ರಾಯ ಸಹ ಇದೇ ಇರುವದು. ಶ್ರದ್ಧಾವಂತಪುರುಷನಿಗೆ ಅವನ ಭಾಗ್ಯಕ್ಕನುಸಾರವಾಗಿ ಆತ್ಮಜ್ಞಾನವಾಗುವದಿರುತ್ತದೆ.ಇರಲಿ. ನಿಜವಾದ ದೊಡ್ಡ ಮಹಾಪುರುಷರು ಯಾರು? ಯಾವ ಜ್ಞಾನದಿಂದ ಇವರೆಲ್ಲ ಸಂಸಾರ ಸಾಗರ ದಾಟಿ ಪಾರಾದರು? (ಉದ್ಧಾರ ಹೊಂದಿದರು) ಎಂಬುದನ್ನು ಈಗ ಹೇಳುವೆವು, ಚನ್ನಾಗಿ ಕೇಳಿರಿ. (೨೨) ಮಹಾಋಷಿ ವ್ಯಾಸ, ವಸಿಷ್ಠರು, ಸಮಾಧಾನಿ ಶಾಂತಪುರುಷರಾದ ಶುಕ ನಾರದರು, ಮಹಾಜ್ಞಾನಿ ಜನಕಾದಿಗಳು ಈ ಆತ್ಮಜ್ಞಾನದಿಂದಲೇ ಮಹತಿ ಪಡೆದರು, ದೊಡ್ಡಪದವಿಗೇರಿದರು. (೨೩)

ವಾಮದೇವಾದಿಕ ಯೋಗೇಶ್ವರ । ವಾಲ್ಮೀಕ ಅತ್ರಿ ಋಷೀಂಶ್ವರ ।
ಶೋನಕಾದಿ ಅಧ್ಯಾತ್ಮಸಾರ । ವೇದಾಂತ ಮತೇ ॥೨೪॥
ಸನಕಾದಿಕ ಮುಖ್ಯಕರೂನೀ । ಆದಿನಾಥ ಮೀನ ಗೋರಕ್ಷಮುನೀ ।
ಆಣೀಕ ಬೋಲತಾ ವಚನೀ । ಅಗಾಧ ಅಸತೀ ॥೨೫॥
ಸಿದ್ಧ ಮುನೀ ಮಹಾನುಭಾವ । ಸಕಳಾಂಚಾ ಜೋ ಅಂತರ್ಭಾವ ।
ಜೇಣೇ ಸುಖೇ ಮಹಾದೇವ । ಡುಲ್ಲತ ಸದಾ ॥೨೬॥
ಜೇ ವೇದಶಾಸ್ತ್ರಾಚೇ ಸಾರ । ಸಿದ್ಧಾಂತ ಧಾದಾಂತ ವಿಚಾರ ।
ಜ್ಯಾಚೀ ಪ್ರಾಪ್ತೀ ಭಾಗ್ಯಾನುಸಾರ । ಭಾವಿಕಾಸ ಹೋಯೇ ॥೨೭॥
ಸಾಧು ಸಂತ ಆಣೀ ಸಜ್ಜನ । ಭೂತ ಭವಿಷ್ಯ ವರ್ತಮಾನ ।
ಸರ್ವ ತ್ರಾಂಚೆ ಗುಹ್ಯ ಜ್ಞಾನ । ತೇ ಸಾಂಗಿಜೇಲ ಆತಾ ॥೨೮॥
ತೀರ್ಥೇ ವ್ರತೇ ತಪೇ ದಾನೇ । ಜೇ ನ ಜೋಡೆ ಧೂಮ್ರಪಾನೇ ।
ಪಂಚಾಗ್ನೀ ಗೋರಾಂಜನೇ । ಜೇ ಪ್ರಾಪ್ತ ನವ್ಹೇ ॥೨೯॥
ಸಕಳ ಸಾಧನಾಚೇ ಫಳ । ಜ್ಞಾನಾಚೀ ಸೀಗ ಚಿ ಕೇವಳ ।
ಜೇಣೇ ಸಂಶಯಾಚೇ ಮೂಳ । ನಿಃಶೇಷ ತುಟೆ ॥೩೦॥
ಛಪ್ಪನ್ನ ಭಾಷಾ ತಿತುಕೆ ಗ್ರಂಥ । ಆದಿಕರೂನ ವೇದಾಂತ ।
ಯಾ ಇತುಕಿಯಾಂಚಾ ಗಹನಾರ್ಥ । ಯೇಕಚಿ ಆಹೇ ॥೩೧॥
ಜೇ ನೇಣವೆ ಪುರಾಣೇ । ಜೇಥೇ ಸಿಣಲ್ಯಾ ವೇದವಾಣೀ ।
ತೇ ಚಿ ಆತಾ ಯೇಚಿ ಕ್ಷಣೇ । ಬೋಧೀನ ಗುರುಕೃಪೇ ॥೩೨॥
ಪಾಹಿಲೆ ನಸ್ತಾ ಸಂಸ್ಕೃತೀ । ರೀಗ ನಾಹೀ ಮರ್ಹಾಷ್ಟ ಗ್ರಂಥೀ ।
ಹೃದಈ ವಸಲ್ಯಾ ಕೃಪಾ ಮೂರ್ತೀ । ಸದ್ಗುರು ಸ್ವಾಮೀ ॥೩೩॥
ಆತಾ ನಲಗೆ ಸಂಸ್ಕೃತ । ಅಥವಾ ಗ್ರಂಥ ಪ್ರಾಕೃತ ।
ಮಾಝಾ ಸ್ವಾಮೀ ಕೃಪೇಸಹಿತ । ಹೃದಈ ವಸೆ ॥೩೪॥
ನ ಕರಿತಾ ವೇದಾಭ್ಯಾಸ । ಅಥವಾ ಶ್ರವಣಸಾಯಾಸ ।
ಪ್ರೇತ್ನೇವಿಣ ಸೌರಸ । ಸದ್ಗುರು ಕೃಪಾ ॥೩೫॥
ಗ್ರಂಥ ಮಾತ್ರ ಮರ್ಹಾಷ್ಟ । ತ್ಯಾಹೂನ ಸಂಸ್ಕೃತ ಶ್ರೇಷ್ಠ ।
ತ್ಯಾ ಸಂಸ್ಕೃತಾ ಮಧೇ ಪಷ್ಟ । ಥೋರ ತೋ ವೇದಾಂತ ॥೩೬॥
ತ್ಯಾ ವೇದಾಂತಾಪರತೇ ಕಾಹೀ । ಸರ್ವಥಾ ಶ್ರೇಷ್ಠ ನಾಹೀ ।
ಜೇಥೇ ವೇದಗರ್ಭ ಸರ್ವಹೀ । ಪ್ರಗಟ ಜಾಲಾ ॥೩೭॥

ಯೋಗೀಶ್ವರ ವಾಮದೇವಾದಿಗಳು, ವಾಲ್ಮೀಕಿ, ಅತ್ರಿಋಷಿಶ್ವರರು, ಶೌನಕಾದಿ ಋಷಿಗಳೆಲ್ಲರು ಸರ್ವ ವೇದಾಂತ ತತ್ವಜ್ಞಾನದ ರಹಸ್ಯವೆನಿಸಿದ ಯಾವ ಆತ್ಮಜ್ಞಾನವಿರುವದೋ ಅದನ್ನು ತಿಳಿದೇ ಪರಮ ಪದಕ್ಕೆ ಮುಟ್ಟಿದರು. (೨೪) ಸನಕಾದಿ ಶ್ರೇಷ್ಠ ಜ್ಞಾನಿಗಳು ಮತ್ತು ಆದಿನಾಥ, ಮತ್ಸ್ಯೇಂದ್ರನಾಥ, ಗೋರಖನಾಥ ಮೊದಲಾದ ನಾಥ ಪಂಥದ ಮಹಾಯೋಗಿ ಸಿದ್ಧರು, ಮತ್ತು ಇನ್ನೂ ಅಸಂಖ್ಯ (ವ್ಯಾಸ, ವಶಿಷ್ಠ, ಶುಕ, ವಾಮದೇವ, ನಾರದ ಇತ್ಯಾದಿ ಮಹಾತ್ಮರು ಆತ್ಮಜ್ಞಾನದಿಂದಲೇ ಕೃತ ಕೃತ್ಯರಾಗಿಹೋದರು. (೨೫) ದೊಡ್ಡ ದೊಡ್ಡ ಸಿದ್ಧರು, ಮಹಾ ಮುನಿಗಳು ಹಾಗೂ ಮಹಾನ್ ಅನುಭವಿಗಳೆಲ್ಲರ ಅಂತರಂಗದ ರಹಸ್ಯವು (ಅವಸ್ಥೆಯು) ಆತ್ಮಜ್ಞಾನವೇ ಆಗಿದ್ದು ಈ ಜ್ಞಾನಾನಂದದಲ್ಲಿ ಮಹಾದೇವರೂ ಸಹ ಸದಾ ಓಲಾಡುತ್ತಿರುವರು. (೨೬) ಆತ್ಮಜ್ಞಾನವು ವೇದ ಶಾಸ್ತ್ರಗಳ ತಾತ್ಪರ್ಯವಾಗಿದೆ. ಇದು ಯೋಗ್ಯ ಪ್ರಮಾಣಗಳಿಂದ (ಗುರುಪ್ರಚೀತಿ–ಆತ್ಮಪ್ರಚೀತಿಗಳಿಂದ) ನಿಶ್ಚಿತಪಡಿಸಿದ ನಿರ್ಣಯುವಾಗಿದೆ. ಇದು ಸಾಕ್ಷಾತ್ ಅನುಭವಕ್ಕೆ ಬರುವಂಥದೇ ಆಗಿರುತ್ತದೆ. ಮತ್ತು ಇದು ಅತಿಸೂಕ್ಷ್ಮ ವಿಚಾರಾಂತ್ಯದಲ್ಲಿ ಯೋಗ್ಯವೆಂದು ಠರಾಯಿಸಿದ್ದಿರುತ್ತದೆ. ಇಂಥ ಆತ್ಮಜ್ಞಾನವು ಶ್ರದ್ಧಾವಂತರಿಗೆ ಅವರವರ ಭಾಗ್ಯದ ಪ್ರಕಾರ ಪ್ರಾಪ್ತವಾಗುವದು. (೨೭) ಪೂರ್ವಕಾಲದಲ್ಲಿ ಆಗಿ ಹೋದಂಥ ಸದ್ಯದಲ್ಲಿ ಇರುವಂಥವರು ಮತ್ತು ಮುಂದೆ ಸಹ ಆಗುವಂಥ ಸರ್ವ ಸಾಧು, ಸಂತ, ಶರಣ ಹಾಗೂ ಸಜ್ಜನರ ಗೂಢವಾದ (ಗುಹ್ಯ) ಈ ಆತ್ಮಜ್ಞಾನವನ್ನು ನಾನು ಈಗ ನಿಮಗೆ ಹೇಳುವೆನು. (೨೮) ಆತ್ಮಜ್ಞಾನವು ಸರ್ವಜ್ಞಾನಗಳ ಶಿಖರವಿರುವದು. ಇದು ಸದ್ಗುರುವಿನ ಕೃಪೆಯಿಂದ ಆಯಾಸವಿಲ್ಲದೆ,ವಿಶೇಷ ಶ್ರಮವಿಲ್ಲದೆ, ಪ್ರಾಪ್ತವಾಗುವದು. ಸದ್ಗುರುವಿನ ವಚನವೇ ಆತ್ಮಜ್ಞಾನದ ಬಗ್ಗೆ ಪರಮ ಶ್ರೇಷ್ಠ ಪ್ರಮಾಣವೆಂದು ತಿಳಿಯಬೇಕು. ಆ ವಚನವೆಂತಹುದು. ಅದರಲ್ಲಿ ಏನಿದೆಯೆಂಬುದನ್ನು ಹೇಳುತ್ತಾರೆ. ತೀರ್ಥ ತೀರ್ಥಾಟನ, ವ್ರತ, ತಪ, ಜ್ಞಾನ, ಧೂಮ್ರಪಾನ, ಪಂಚಾಗ್ನಿಸಾಧನ, ಗೋರಾಂಜನ ಇವುಗಳ ಸಾಧನದಿಂದ ಆತ್ಮಜ್ಞಾನ ಪ್ರಾಪ್ತವಾಗುವದಿಲ್ಲ. (೨೯) ಆತ್ಮಜ್ಞಾನ ಪಡೆಯುವದೇ ಎಲ್ಲ ಸಾಧನಗಳಿಗಿಂತ ಶ್ರೇಷ್ಠ ಫಲದಾಯಕ ಸಾಧನವಿರುವದು. ಇದೇ ಜ್ಞಾನದ ಪರಮ ಶಿಖರವಾಗಿದೆ. ಆತ್ಮಜ್ಞಾನದಿಂದಲೇ ಸಂಶಯಗಳ ಮೂಲವೇ ನಿರ್ಮೂಲನವಾಗಿ ಸಂಶಯವೇ ನಾಶವಾಗಿ ಹೋಗುವದು. (೩೦) ಜಗತ್ತಿನಲ್ಲಿ ಅನೇಕ ಭಾಷೆಗಳಿರುವವು. ಅದರಂತೆ ಪ್ರತಿಯೊಂದು ಭಾಷೆಯಲ್ಲಿ ಅನೇಕ ಗ್ರಂಥಗಳಿರುವವು. ಹೀಗೆ ಅನೇಕ ಭಾಷೆಯಲ್ಲಿ ಅನೇಕ ಗ್ರಂಥಗಳಿರುವವು. ಇವಲ್ಲದೇ ವೇದಾಂತದ ಮೇಲಿನ ಅನೇಕ ಗ್ರಂಥಗಳೂ ಇರುವವು. ಇವೆಲ್ಲವುಗಳ ಸೂಕ್ಷ್ಮ ಅರ್ಥವು ಒಂದೇ ಆಗಿದೆ. ಅದು ಯಾವುದೆಂದರೆ ಆತ್ಮಜ್ಞಾನವೇ ಆಗಿದೆ.(೩೧) ಕೇವಲ ಪುರಾಣಗಳ ಅಭ್ಯಾಸ ಮಾಡಿದರೆ ಆತ್ಮಜ್ಞಾನ ಪ್ರಾಪ್ತವಾಗುವದಿಲ್ಲ. ಈ ಆತ್ಮಜ್ಞಾನವನ್ನು ಹೇಳಹೋಗಿ ವೇದಗಳು ದಣಿದು ಹೋದವು. ಇಂಥ ವಿಲಕ್ಷಣವಾಗಿರುವ ಮಹಾ ರಹಸ್ಯವೆನಿಸಿದ ಆತ್ಮಜ್ಞಾನವನ್ನು ಈಗಲೇ ಗುರುಕೃಪೆಯಿಂದ ತಿಳಿಸಿ ಬೋಧಿಸುವೆವು.(೩೨) **ಶ್ರೀಸಮರ್ಥರಿಗೆ ಗುರುಕೃಪೆಯಾದದ್ದರಿಂದ ಆತ್ಮಜ್ಞಾನವು ಅವರ ಆಶ್ರಮದಲ್ಲಿ ನೀರು ತುಂಬುತ್ತಿರುವಷ್ಟು ಶ್ರೀ ಸಮರ್ಥರ ಗುರುಕೃಪೆ ಬಲವತ್ತರವಾಗಿತ್ತು. ಇವರ ಜ್ಞಾನಾವಸ್ಥೆ ಅಗಾಧವಾಗಿತ್ತು ಇದರ ವರ್ಣನೆ ಕೇಳಿರಿ.** ಶ್ರೀ ಸಮರ್ಥರು ಹೇಳುತ್ತಾರೆ. ನಾನು ಸಂಸ್ಕೃತ ಗ್ರಂಥಗಳಲ್ಲಿ ಏನಿರುವದೆಂಬುದನ್ನು ನೋಡಿಲ್ಲ. ಮರಾಠಿ ಗ್ರಂಥಗಳಲ್ಲಿ ನಾನು ಪ್ರವೇಶಿಸಿಲ್ಲ. ಆದರೆ ನನ್ನ ಹೃದಯದಲ್ಲಿ ಸದ್ಗುರು ಸ್ವಾಮಿ ಕೃಪಾಮೂರ್ತಿ ಮಾತ್ರ ಸ್ಥಿರವಾಗಿ ನಿಂತುಕೊಂಡಿದ್ದಾನೆ. ಅವನ ಕೃಪೆ ಅಪಾರ. (೩೩) ಅಂದ ಮೇಲೆ ನನಗೆ ಸಂಸ್ಕೃತ ಅಥವಾ ಪ್ರಾಕೃತ ಗ್ರಂಥಗಳ ಗರಜೀ (ಅವಶ್ಯಕತೆ) ಇಲ್ಲ, ಯಾಕೆಂದರೆ ನನ್ನ ಗುರುದೇವರು ಕೃಪೆಯ ಮಳೆಯನ್ನು ಸುರಿಸುತ್ತ ಸದಾಕಾಲಪೂ ಹೃದಯದಲ್ಲಿ ಸದಾ ವಾಸಮಾಡಿರುವರು. (೩೪) ವೇದದ ಅಭ್ಯಾಸ ಅಥವಾ ಶ್ರವಣಾದಿಗಳ ವಿಶೇಷ ಶ್ರಮವಿಲ್ಲದೇ ಹಾಗೂ ಹೆಚ್ಚಿನ ಪ್ರಯತ್ನವಿಲ್ಲದೆ ನನಗೆ ಅಮೃತಕ್ಕಿಂತ ಶ್ರೇಷ್ಠವಾದ ಸದ್ಗುರು ಕೃಪೆಯ ಲಾಭವಾಗಿದೆ.(೩೫) ಮರಾಠಿ ಭಾಷೆಯಲ್ಲಿ ಗ್ರಂಥಗಳಿರುವವು. ಆದರೆ ಇವಕ್ಕಿಂತ ಸಂಸ್ಕೃತ ಭಾಷೆಯಲ್ಲಿಯ ಗ್ರಂಥಗಳು ಶ್ರೇಷ್ಠವಾಗಿವೆ. ಅವರಲ್ಲೂ ಸಂಸ್ಕೃತ ಗ್ರಂಥದಲ್ಲಿಯ ವೇದಾಂತ ಗ್ರಂಥಗಳು ಬಹಳ ಶ್ರೇಷ್ಠವಾಗಿವೆ(೩೬) ವೇದಾಂತಕ್ಕಿಂತ ಬೇರಾವುದೂ ಶ್ರೇಷ್ಠವಲ್ಲ. ಯಾಕಂದರೆ ವೇದಗಳ ಎಲ್ಲ ರಹಸ್ಯಗಳೂ ವೇದಾಂತದಲ್ಲಿಪ್ರಕಟವಾಗಿವೆ. (೩೭)

ಅಸೋ ಏಸಾ ಜೋ ವೇದಾಂತ । ತ್ಯಾ ವೇದಾಂತಾಚಾ ಹಿ ಮಥಿತಾರ್ಥ।
ಅತಿ ಗಹನ ಜೋ ಪರಮಾರ್ಥ । ತೋ ತೂ ಏಕ ಆತಾ ॥೩೮॥

ಅರೇ ಗಹನಾಚೇ ಹೀ ಗಹನ । ತೇ ತೂ ಜಾಣ ಸದ್ಗುರುವಚನ ।
ಸದ್ಗುರುವಚನೇ ಸಮಾಧಾನ । ನೇಮಸ್ತ ಆಹೇ ॥೩೯॥

ಸದ್ಗುರುವಚನ ತೋ ಚಿ ವೇದಾಂತ । ಸದ್ಗುರುವಚನ ತೋ ಚಿ ಸಿದ್ಧಾಂತ ।
ಸದ್ಗುರುವಚನ ತೋ ಚಿ ಧಾದಾಂತ । ಸಪ್ರಚೀತ ಆತಾ ॥೪೦॥

ಜೇ ಅತ್ಯಂತ ಗಹನ । ಮಾಝ್ಯಾ ಸ್ವಾಮೀಚೇ ವಚನ ।
ಜೇಣೇ ಮಾಝೇ ಸಮಾಧಾನ । ಅತ್ಯಂತ ಜಾಲೇ ॥೪೧॥

ತೇ ಹೇ ಮಾಝೇ ಜೀವೀಚೇ ಗುಜ । ಮೀ ಸಾಂಗೈನ ಮ್ಹಣತೋ ತುಜ ।
ಜರೀ ಅವಧಾನ ದೇಸೀ ಮಜ । ತರೀ ಆತಾ ಯೇಚ ಕ್ಷಣೀ ॥೪೨॥

ಶಿಷ್ಯ ಮ್ಲಾನವದನೇ ಬೋಲೇ । ಧರಿಲೇ ಸದೃಢ ಪಾಉಲೇ ।
ಮಗ ಬೋಲೋ ಆರಂಭಿಲೇ । ಗುರುದೇವೇ ॥೪೩॥

ಅಹಂ ಬ್ರಹ್ಮಾಸ್ಮಿ ಮಹಾವಾಕ್ಯ । ಯೆಥೀಚಾ ಅರ್ಥ ಅತರ್ಕ್ಯ ।
ತೋ ಹೀ ಸಾಂಗತೋ ಏಕ್ಯ । ಗುರು ಶಿಷ್ಯ ಜೇಥೇ ॥೪೪॥

ಏಕ ಶಿಷ್ಯಾ ಯೆಥೀಚ ವರ್ಮ । ಸ್ವಯೇ ತೂ ಚಿ ಆಹೇಸಿ ಬ್ರಹ್ಮ ।
ಯೇ ವಿಷಈ ಸಂದೇಹ ಭ್ರಮ । ಧರೂಚಿ ನಕೋ ॥೪೫॥

ನವವಿಧಾ ಪ್ರಕಾರೆ ಭಜನ । ತ್ಯಾತ ಮುಖ್ಯ ತೇ ಆತ್ಮನಿವೇದನ ।
ತೇ ಸಮಗ್ರ ಪ್ರಕಾರೇ ಕಥನ । ಕೀಜೇಲ ಆತಾ ॥೪೬॥

ನಿರ್ಮಾಣ ಪಂಚಭೂತೇ ಯೀಯೆೇ । ಕಲ್ಪಾಂತೀ ನಾಸತೀ ಯಥಾನ್ವಯೇ ।
ಪ್ರಕೃತಿ ಪುರುಷ ಜೇಯೇ । ತೇಹೀ ಬ್ರಹ್ಮ ಹೋತೀ ॥೪೭॥

ದೃಶ್ಯ ಪದಾರ್ಥ ಆಟಿತಾ । ಆಪಣ ಹಿ ಮುರೆ ತತ್ತ್ವತಾ ।
ಏಕ್ಯರೂಪೇ ಏಕ್ಯತಾ । ಮುಳೀಚ ಆಹೇ ॥೪೮॥

ಇರಲಿ, ಇಂಥ ಗಹನ ವೇದಾಂತದ ಯಾವ ತಾತ್ಪರ್ಯಾರ್ಥವಿರುವದೋ ಅದನ್ನು ಮತ್ತು ಯಾವುದು ಅತ್ಯಂತ ಗಹನ ಗೂಢವಾದ ಪರಮಾರ್ಥವಿರುವದೋ ಅದನ್ನು ಈಗಹೇಳುವೆನು ಚಿತ್ತವಿಟ್ಟು ಕೇಳು.(೩೮) ಅತಿಶಯ ಗಹನ–ಆಳವಾದ ಮತ್ತು ಅರ್ಥಗರ್ಭಿತವಾದದ್ದು ಯಾವುದಾದರೂ ಇದ್ದುದೇ ಆದರೆ ಅದು ಕೇವಲ ಸದ್ಗುರು ವಚನವೇ ಇರುವದು. ಇಂಥ ವಚನದಿಂದ ನಿಶ್ಚಯವಾಗಿಯೂ ಸಂಶಯ ನಿವಾರಣೆಯಾಗಿ ಸಮಾಧಾನ ಸಿಗುವದು.(೩೯)ಸದ್ಗುರು ವಚನವೇ ನಿಜವಾದ ವೇದಾಂತವು (ಶಾಸ್ತ್ರಪ್ರಚೀತಿಯು) ಮತ್ತು ಸದ್ಗುರು ವಚನವೇ ಸಿದ್ಧಾಂತ ಅಂದರೆ ನಿರ್ಣಯಗೊಂಡ ನಿಶ್ಚಿತವಾದ ಪರಮತತ್ವವು (ಗುರು ಪ್ರಚೀತಿಯು). ಈ ಸದ್ಗುರು ವಚನವೇ ಆತ್ಮಪ್ರಚೀತಿ ಅಂದರೆ ಪ್ರತ್ಯಕ್ಷ ಅನುಭವಹೊಂದಿದ ಸಿದ್ಧಾಂತವು.ಅರ್ಥಾತ್ ಸ್ವಾನುಭವ ಜನ್ಯಜ್ಞಾನವು ಈಮೂರು ವಚನಗಳು ಸದ್ಗುರುವಚನಗಳೇಇರುವವು.ನನ್ನಸದ್ಗುರು ಸ್ವಾಮಿಯವಚನಗಳೆಲ್ಲವೂ ಆಳವಾದಅರ್ಥದಿಂದತುಂಬಿರುತ್ತವೆ. ಅವನ ಆ ವಚನದಿಂದ ನನಗೆ ಸಂಪೂರ್ಣ ಸಮಾಧಾನವಾಗಿರುವದು.(೪೦)ಈವಚನಗಳು ನಿಜವಾಗಿಯೂ ನನ್ನಜೀವನದ ರಹಸ್ಯವೇ ಆಗಿದೆ. ಇದು ಬಹಳ ಗುಪ್ತ–ಗುಟ್ಟಿನದೂ ಇರುವದು.ಇಂಥ ಗಹನ ಗುಟ್ಟನ್ನೇ ನಿಮಗೆ ಹೇಳಬೇಕೆಂದು ಹಂಬಲಿಸುತ್ತೇನೆ. ನನ್ನ ಹೇಳಿಕೆಯ ಕಡೆಗೆ ಲಕ್ಷ್ಯಗೊಟ್ಟು ಆಸ್ಥೆಯಿಂದ ಕೇಳಲು ಸಿದ್ಧರಿದ್ದರೆ ಇದೇ ಕ್ಷಣಕ್ಕೆ (ಈಗಲೇ) ಹೇಳಿಕೊಡುವೆನು. (೪೨) ಈ ದಯಾಪೂರಿತ ವಾಣಿಯನ್ನು ಕೇಳಿ ಶರಣಾಗತನಾದ ಶಿಷ್ಯನುಶ್ರೀಸಮರ್ಥರ ಪೂಜ್ಯ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಕೆಳಮುಖನಾಗಿ ದೀನತೆಯಿಂದ "ಸದ್ಗುರುವೇ ನಾನು ಚನ್ನಾಗಿ ಲಕ್ಷ್ಯಗೊಟ್ಟು ಕೇಳುವೆನು ಹೇಳುವ ಕೃಪೆ ಮಾಡಿರಿ" ಎಂದು ಬೆಸಗೊಂಡನು. ಆಗ ಕೃಪಾಸಾಗರನಾದ ಗುರುದೇವನು ಆನಂದದಿಂದ ಹೇಳಲಾರಂಭಿಸಿದನು. (೪೩) "ನೀನು ಸ್ವತಃ ಪರಮಾತ್ಮ ಸ್ವರೂಪನೇ ಇರುವಿ" ಎಂದು ಹೇಳಿ ಆಮೇಲೆ ಆತ್ಮಜ್ಞಾನದ ಬಗ್ಗೆ ಇರುವ ಎಲ್ಲ ಅಂಗಗಳಿಂದ (ಸರ್ವರೀತಿಯಿಂದ) ವರ್ಣಿಸಿ ತಿಳಿಸಿ ಹೇಳಿದರು. ಸದ್ಗುರುವಿನೊಂದಿಗೆ ಅನನ್ಯನಾದರೆ ಆತ್ಮಜ್ಞಾನ ಪ್ರಾಪ್ತವಾಗುವದು. ಮತ್ತು ಪೂರ್ಣ ಸಮಾಧಾನ ಸಿಗುವದು. ದೃಶ್ಯವೆಲ್ಲ ಲಯವಾಗಿ (ಕರಗಿ) ಆತ್ಮನಿವೇದನವಾಗುವದು ಮಾತ್ರ ಅವಶ್ಯವಿರುತ್ತದೆ. "ಅಹಂ ಬ್ರಹ್ಮಾಸ್ಮಿ" ಇದು ಮಹಾವಾಕ್ಯವಿರುವದು. "ನಾನು ಬ್ರಹ್ಮನೇ ಇರುವೆ" ಎಂಬುದೇ ಇದರ ಅರ್ಥವು ಈ ಅರ್ಥದ ರಹಸ್ಯವು ಕೇವಲ ತರ್ಕದಿಂದ ಗೊತ್ತಾಗುವದಿಲ್ಲ. ಆ ರಹಸ್ಯವನ್ನು ನಾನು ನಿನಗೆ ತಿಳಿಸಿ ಹೇಳುವೆನು. ಇದರ ಅರ್ಥದಲ್ಲಿ ಗುರುಶಿಷ್ಯರಿಬ್ಬರೂ ಏಕರೂಪರಾಗಿ ಹೋಗುವ ಗೂಢವಿರುವದು. (೪೪) "ಪ್ರಿಯ ಶಿಷ್ಯನೇ ಆ ಮಹಾ ವಾಕ್ಯ ದಲ್ಲಿರುವ ಮರ್ಮವನ್ನು ಸಮಾಧಾನದಿಂದ ಕೇಳುವವನಾಗು– **ನೀನು ಸ್ವತಃ ಬ್ರಹ್ಮರೂಪನಿರುವಿ** ಅರ್ಥಾತ್ ನೀನೇ ಬ್ರಹ್ಮನಿರುವಿ ಇದರ ಬಗ್ಗೆ ಎಳ್ಳಷ್ಟೂ ಸಂಶಯ ಹಿಡಿಯಬೇಡ. ಇದರ ಬಗ್ಗೆ ಭ್ರಮೆ ತಾಳಬೇಡ. (೪೪) ಭಕ್ತಿಯಲ್ಲಿ ಒಂಭತ್ತು ಪ್ರಕಾರ (ನವವಿಧ ಭಕ್ತಿ)ಗಳಿದ್ದು ಅವುಗಳ ಬಗ್ಗೆ ಹಿಂದೆಯೇ ಹೇಳಿರುವೆವು. ಅದರ ಪೈಕಿ ಕೊನೆಯದಾದ ಆತ್ಮನಿವೇದನವೇ ಮುಖ್ಯವಾದದ್ದು. ಅದನ್ನೇ ಪುನಃ ಈಗ ಸಂಪೂರ್ಣವಾಗಿ ವರ್ಣನೆ ಮಾಡುವೆವು. ಅದರಲ್ಲಿ ಸಹ "ಅಹಂ ಬ್ರಹ್ಮಾಸ್ಮಿ" ಎಂಬುದರ ಬಗ್ಗೆ ವಿವರವಿರುವದು, ಕೇಳುವವನಾಗು. (೪೬) ವಿಶ್ವನಿರ್ಮಾಣ ವಾದಾಗ ಪಂಚ ಮಹಾಭೂತಗಳೂ ಕ್ರಮದಿಂದ ನಿರ್ಮಾಣವಾದವು. ಆದರೆ ವಿಶ್ವವೇ ಅಶಾಶ್ವತವಾದದ್ದು. ಇದು ಕಲ್ಪಾಂತ್ಯದಲ್ಲಿ ನಾಶಗೊಳ್ಳುತ್ತದೆ. ಆಗ ಈ ಪಂಚ ಮಹಾಭೂತಗಳೂ ಯಾವ ಪ್ರಕಾರದಿಂದ ನಿರ್ಮಾಣವಾಗಿದ್ದವೋ ಅದೇ ಕ್ರಮದಿಂದ ಅವು ಲಯ ಹೊಂದುವವು. (ಅಂದರೆ ಪೃಥ್ವಿ, ಆಪ, ತೇಜ, ವಾಯು ಈ ಕ್ರಮದಿಂದ ಲಯ ಹೊಂದುವವು.) ಇಷ್ಟೇ ಅಲ್ಲ ಕೊನೆಗೆ ಉಳಿದಿರುವ ಇಬ್ಬರು ಅಂದರೆ ಪ್ರಕೃತಿ ಅಥವಾ ಮಾಯಾ ಮತ್ತು ಇದರ ಸಾಕ್ಷಿರೂಪ ಪುರುಷರೂ ಸಹ ತಮ್ಮ ವಿಶೇಷ ರೂಪವನ್ನು ನೀಗಿ ಪರಬ್ರಹ್ಮನಲ್ಲಿ ವಿಲೀನರಾಗಿ ಹೋಗುವರು· ಏಕರೂಪರಾಗುವರು. (೪೭) ಈ ರೀತಿಯಿಂದ ಸರ್ವ ದೃಶ್ಯ ವಸ್ತುಗಳು ನಾಶ ಹೊಂದಿದವೆಂದರೆ ವಾಸ್ತವಿಕವಾಗಿ ನಾನು ಎಂಬುದಾಗಿ ಕಾರ್ಯ ಮಾಡುವ ನಾನೂ ಸಹ ಉಳಿಯುವದಿಲ್ಲ. ಯಾಕೆಂದರೆ ಮೂಲದಲ್ಲಿಯೇ ಪರಮಾತ್ಮನು ಏಕರೂಪನಿರುವದರಿಂದ ಏಕ ಸ್ವರೂಪವಾಗಲು ಪ್ರತ್ಯೇಕವಾಗಿ ಏನೂ ಮಾಡಬೇಕಾಗಿಲ್ಲ. (ಮೂಲತಃ ತನ್ನ ಹಾಗೂ ಬ್ರಹ್ಮ ವಸ್ತುವಿನ ಏಕತ್ವವೇ ಇರುವದು!) [೪೮]

ಸೃಷ್ಟೀಚೀ ನಾಹೀ ವಾರ್ತಾ । ತೇಥೇ ಮೂಳೀಚ ಏಕ್ಯತಾ ।
ಪಿಂಡ ಬ್ರಹ್ಮಾಂಡ ಪಾಹೋ ಜಾತಾ । ದಿಸೇಲ ಕೋಠೇ ॥೪೯॥

ಜ್ಞಾನ ವಹ್ನೀ ಪ್ರಗಟೆ । ತೇಣೇ ದೃಶ್ಯ ಕೇರ ಆಟೇ ।
ತದಾಕಾರೇ ಮೂಳ ತುಟೆ । ಭಿನ್ನತ್ವಾಚೇ ॥೫೦॥

ಮಿಥ್ಯತ್ವೇ ವೃತ್ತಿ ಫಿರೇ । ತೋ ದೃಶ್ಯ ಅಸತಾ ಚ ವೋಸರೆ ।
ಸಹಜ ಚಿ ಯೇಣೇ ಪ್ರಕಾರೆ । ಜಾಲೇ ಆತ್ಮನಿವೇದನ ॥೫೧॥

ಅಸೊ ಗುರೂಚೆ ಠಾಈ ಅನನ್ಯತಾ । ತರೀ ತುಜ ಕಾಯೆಸೀ ರೇ ಚಿಂತಾ ।
ವೇಗಳಪಣೇ ಅಭಕ್ತಾ । ಉರೋ ಚಿ ನಕೋ ॥೫೨॥

ಆತಾ ಹೇಚಿ ದೃಢೀಕರಣ । ವ್ಹಾವಯಾ ಕರೀ ಸದ್ಗುರುಭಜನ ।
ಸದ್ಗುರುಭಜನೇ ಸಮಾಧಾನ । ನೇಮಸ್ತ ಆಹೇ ॥೫೩॥

ಯಾ ನಾವ ಶಿಷ್ಯಾ ಆತ್ಮಜ್ಞಾನ । ಯೇಣೆ ಪಾವಿಜೆ ಸಮಾಧಾನ ।
ಭವ ಭಯಾಚೇ ಬಂಧನ । ಸಮೂಳ ಮಿಥ್ಯಾ ॥೫೪॥

ದೇಹ ಮೀ ವಾಟೆ ಜ್ಯಾ ನರಾ । ತೋ ಜಾಣಾವಾ ಆತ್ಮಹತ್ಯಾರಾ ।
ದೇಹಾಭಿಮಾನೇ ಯೆರಝಾರಾ । ಭೋಗಿಲ್ಯಾ ಚ ಭೋಗೀ ॥೫೫॥

ಎಲ್ಲ ಸೃಷ್ಟಿಯೂ [ಜಗತ್ತು] ಮೂಲ ಸ್ವರೂಪದಲ್ಲಿ ವಿಲೀನವಾದ ಮೇಲೆ ಕೇವಲ ಏಕಸ್ವರೂಪ ಬ್ರಹ್ಮಮಾತ್ರ ಉಳಿಯುವದು. ಇದರಲ್ಲಿ ಪಿಂಡ ಮತ್ತು ಬ್ರಹ್ಮಾಂಡ [ಜಗತ್ತು ಮತ್ತು ದೇಹ-ಶರೀರ]ಗಳನ್ನು ನೋಡಬೇಕೆಂದರೂ ಅವು ಕಾಣುವದಿಲ್ಲ.[ಇದ್ದರಲ್ಲವೇ ಕಾಣುವದು?][೪೯] ಜ್ಞಾನವೆಂಬ ಅಗ್ನಿ ಒಮ್ಮೆ ಹೊತ್ತಿಕೊಂಡರೆ ದೃಶ್ಯವೆಂಬ ಕಳೆ-ಕಸಗಳು ಸಂಪೂರ್ಣ ಸುಟ್ಟು ಭಸ್ಮವಾಗುವವು. ಜ್ಞಾತಾ, ಜ್ಞೇಯದೊಂದಿಗೆ ತದಾಕಾರ [ಏಕರೂಪ] ನಾದದ್ದರಿಂದ ಜ್ಞಾತಾ ಸ್ವತಃ ಜ್ಞಾನರೂಪವೇ, ಆದ್ದರಿಂದ ಭಿನ್ನತೆಯ ಮೂಲ ಬೇರೇ ಸುಟ್ಟು ಹೋಗುವದು. ಲೌಕಿಕ (ವ್ಯವಹಾರಿಕ) ಜ್ಞಾನದಲ್ಲಿ ಜ್ಞಾತಾ ಜ್ಞೇಯವನ್ನು ತಿಳಿಯುತ್ತಿದ್ದರೂ ಅದರಿಂದ ಬೇರೆಯಾಗಿರುವನು. ತನ್ಮೂಲಕ ಅಜ್ಞಾನದಲ್ಲಿ ಭಿನ್ನತೆ (ಪ್ರತ್ಯೇಕತೆ)ಯ ಮೂಲವು ಕಾಯಂ ಇರುವದು. ಅಲೌಕಿಕ (ಅಪೂರ್ವವಾದ) ಜ್ಞಾನದಲ್ಲಿ ಜ್ಞಾತಾ-ಜ್ಞೇಯದೊಂದಿಗೆ ತದಾತ್ಮ್ಯ ಹೊಂದಿ ಅದನ್ನು ತಿಳಿಯುವನು, ಇದರಿಂದ ಅಲ್ಲಿ ಭಿನ್ನತ್ವ (ಪ್ರತ್ಯೇಕತಾ)ವು ಉಳಿಯುವದೇ ಇಲ್ಲ, ಇದರ ಹೊರತಾಗಿ ಜ್ಞಾತಾ-ಜ್ಞೇಯಗಳೆರಡೂ ಹೋದ ಮೇಲೆ ಕೇವಲ ಜ್ಞಾನವೊಂದೇ ಬಾಕಿ ಉಳಿಯುವದು. ಈ ಜ್ಞಾನವು ಆತ್ಮಸ್ವರೂಪವೇ ಇರುವದರಿಂದ ಇದರಲ್ಲಿ ದೃಶ್ಯಕ್ಕೆ ದೃಶ್ಯ ತನದಿಂದ ಇರಲಿಕ್ಕೆ ಶಕ್ಯವೇ ಇಲ್ಲ. ದೃಶ್ಯ ಭಾಸವು ಅಜ್ಞಾನದ ಪರಿಣಾಮವೇ ಇರುವದು. ಈ ಅಜ್ಞಾನದ ನಾಶ ವಾದ ಕೂಡಲೇ ದೃಶ್ಯವು ತನ್ನಿಂದ ತಾನೇ ಅಂತರ್ಧಾನ ಹೊಂದುವದು. (೫೦) ನಮ್ಮ ಇಂದ್ರಿಯಗಳಿಗೆ ಕಾಣುವ ದೃಶ್ಯ ಜಗತ್ತು ಮಿಥ್ಯವಿರುವದು, ಎಂಬುದು ಮನವರಿಕೆಯಾದರೆ ಆಗಅದು ಹೇಗೆ ಕಾಣುವದೋ ಅದರಂತೆ ಅದು ಇರುವದಿಲ್ಲವೆಂಬ ಖಾತ್ರಿ ಪಟಾಯಿಸಿದಾಗ ದೃಶ್ಯದ ಕಡೆಗೆ ಹರಿದಾಡುವ ವೃತ್ತಿ (ಮನಸ್ಸು) ತನ್ನಿಂದ ತಾನೇ ಹಿಂದಕ್ಕೆ ಸರಿಯುತ್ತದೆ. ಈ ರೀತಿಯಿಂದ ವೃತ್ತಿಯು ಹೊರಳಿ ಹೃದಯ ಮಧ್ಯದಲ್ಲಿರುವ ಆತ್ಮಸ್ವರೂಪದ ಕಡೆಗೆ ಧಾವಿಸಹತ್ತಿದರೆ ಆಗ ದೃಶ್ಯ ಇದ್ದರೂ ಇಲ್ಲದಂತಾಗುವದು. ಅದು ಇದ್ದೂ ಅನುಭವಕ್ಕೆ ಬರುವದಿಲ್ಲ. ಈ ರೀತಿ ಮನಸ್ಸು ಅಂತರ್ಮುಖವಾಗಿ ಸ್ವಸ್ವರೂಪದತನಕ ಹೋಗಿ ಮುಟ್ಟಿತೆಂದರೆ ನಾವು-ಚೈತನ್ಯರೂಪರೇ ಇರುವೆವೆಂಬ ಅನುಭವದಿಂದ ಆಗ ಸಹಜವಾಗಿ ಆತ್ಮನಿವೇದನೆ ಕೈಗೂಡುವದು. (೫೧) **ಶಿಷ್ಯನು ಸದ್ಗುರುವಿನೊಂದಿಗೆ ಅನನ್ಯ (ಏಕರೂಪ)ನಾಗಬೇಕು. ನಾನು ದೇಹಕ್ಕಿಂತ ಬೇರೆ ಇರುವೆನೆಂಬ ತಿಳುವಳಿಕೆಯನ್ನು ಹೊಂದಿರಬೇಕು. ಏಕಾಂತದಲ್ಲಿ ಕುಳಿತು, ಸ್ವಸ್ವರೂಪದಲ್ಲಿ ಲೀನವಾಗುವ ಅಭ್ಯಾಸ ಮಾಡಬೇಕು:-** ಇರಲಿ, ಯಾವ ಶಿಷ್ಯನು ಗುರುವಿನೊಂದಿಗೆ ಅನನ್ಯವಾಗಿರುವನೋ ಅವನಿಗೆ ಆತ್ಮನಿವೇದನದ ಬಗ್ಗೆ ಕಾಳಜಿ ಮಾಡುವ ಕಾರಣವೇ ಇರುವದಿಲ್ಲ ಅಭಕ್ತನು ಭಗವಂತನಿಂದ ಯಾವಾಗಲೂ ದೂರವಿರುವನು. ಇದರಂತೆ ಶಿಷ್ಯನು ಸದ್ಗುರುವಿನಿಂದ ಯಾವ ಕಾಲ-ದಲ್ಲಿಯೂ ದೂರವಿರಬಾರದು. ಮುಖ್ಯವಾಗಿ ಶಿಷ್ಯನ ಹಾಗೂ ಸದ್ಗುರುವಿನ ಮನೋಮಿಲನವಾಗಬೇಕು. ಗುರುವಿನಲ್ಲಿ ಏಕರೂಪ ಅನನ್ಯತೆ ಇರಬೇಕು. ಅಂದರೆ ಶಿಷ್ಯನ ಜೀವನದಲ್ಲಿ ಸದ್ಗುರುವು ಪೂರ್ಣವಾಗಿ ತುಂಬಿ ಹೊರಸೂಸುವಂತಿರಬೇಕು. ಆಗ ಆತ್ಮನಿವೇದನದ ಸಲುವಾಗಿ ಬೇರೆ ಏನೂ ಮಾಡಬೇಕಾದ ಕಾರಣ ಉಳಿಯುವದಿಲ್ಲ. (೫೨) ಆತ್ಮನಿವೇದನವು ಒಮ್ಮೆಲೇ ಸಾಧಿಸುವಂತಹದಲ್ಲ. ಇದನ್ನು ಪಡೆಯುವದಕ್ಕಾಗಿ ದೃಢತೆಯಿಂದ (ಅನುಭವ ಪಡೆಯುವದಕ್ಕಾಗಿ) ಪ್ರಾರಂಭದಲ್ಲಿ ಸದ್ಗುರುವಿನ ಚರಿತ್ರ, ಗುಣ, ಮಹಿಮಾ, ರೂಪ, ಇತ್ಯಾದಿಗಳ ಚಿಂತನೆಯನ್ನು ಮೇಲಿಂದ ಮೇಲೆ ಮನನ ಮಾಡಬೇಕು. ಗುರುವಚನದ ಅರ್ಥವನ್ನು ಲಕ್ಷಿಸಿ ಪುನಃ ಪುನಃ ಮನದಲ್ಲಿ ವಿಚಾರ ಮಾಡಬೇಕು. ಈ ರೀತಿಯಾಗಿ ಸದ್ಗುರು ಭಜನೆ ಮಾಡಿದರೆ ನಿಶ್ಚಯವಾಗಿ ಸಮಾಧಾನ ದೊರಕುವದು. (೫೩) ಶಿಷ್ಯೋತ್ತಮನೇ, ಇದಕ್ಕೇ ಆತ್ಮಜ್ಞಾನವೆನ್ನುವರು. ಆತ್ಮಜ್ಞಾನದಿಂದ ಸಮಾಧಾನ ಪ್ರಾಪ್ತವಾಗುವದು. ಹಾಗೂ ಸಂಸಾರದ ಚಿಂತೆ, ಭೀತಿಗಳ ಬಂಧನ ಸಂಪೂರ್ಣ ನಾಶವಾಗುವದು.(೫೪) ನಾನು ದೇಹವೇ ಇರುವೆ ಎಂಬ ವಿಶ್ವಾಸ ಯಾವ ಮನುಷ್ಯನಿಗೆ ಇರುವದೋ ಅವನು ಆತ್ಮಘಾತಕಿಯೆನಿಸುವನು, ನಾನು ದೇಹವೇ ಇರುವೆನೆಂಬ ಅಭಿಮಾನದ ಪರಿಣಾಮದಿಂದಾಗಿ ಜನನ-ಮರಣದ ಚಕ್ರದಲ್ಲಿ ಅದು ಸತತವಾಗಿ ತಿರುಗುವದೇ ಆಗಿದೆ. ತನ್ಮೂಲಕ ಮೇಲಿಂದ ಮೇಲೆ ದುಃಖ ಭೋಗಿಸಬೇಕಾಗುವದು. (೫೫)

ಅಸೋ ಚಹೂ ದೇಹಾ ವೇಗಳಾ । ಜನ್ಮ ಕರ್ಮಾಸೀ ನಿರಾಳಾ ।
ಸಕಳ ಆಬಾಳ ಗೋಬಳಾ । ಸಬಾಹ್ಯ ತೂ ॥೫೬॥

ಕೋಣಾಸೀ ಚ ನಾಹೀ ಬಂಧನ। ಭ್ರಾಂತಿಸ್ತವ ಭುಲಲೇ ಜನ।
ದೃಢ ಘೇತಲಾ ದೇಹಾಭಿಮಾನ । ವ್ಹಣೌನಿಯಾ ॥೫೭॥

ಶಿಷ್ಯಾ ಏಕಾಂತೀ ಬೈಸಾವೇ । ಸ್ವರೂಪೀ ವಿಶ್ರಾಂತೀಸ ಜಾವೇ ।
ತೇಣೇ ಗುಣೇ ದೃಢಾವೇ । ಪರಮಾರ್ಥ ಹಾ ॥೫೮॥

ಅಖಂಡ ಘಡೇ ಶ್ರವಣ ಮನನ । ತರೀಚ ಪಾವಿಜೆ ಸಮಾಧಾನ ।
ಪೂರ್ಣ ಜಾಲಿಯಾ ಬ್ರಹ್ಮಜ್ಞಾನ। ವೈರಾಗ್ಯ ಭರೇ ಆಂಗೀ ॥೫೯॥

ಶಿಷ್ಯಾ ಮುಕ್ತಪಣೇ ಅನರ್ಗಳ । ಕರಿಸೀ ಇಂದ್ರಿಯೇ ಬಾಷ್ಕಳ ।
ತೇಣೇ ತುಝೀ ತಳಮಳ । ಜಾಣಾರ ನಾಹೀ ॥೬೦॥

ವಿಷಈ ವೈರಾಗ್ಯ ಉಪಜಲೇ । ತಯಾಸೀ ಚ ಪೂರ್ಣ ಜ್ಞಾನ ಜಾಲೇ ।
ಮಣೀ ಟಾಕಿತಾಚಿ ಲಾಧಲೇ । ರಾಜ್ಯ ಜೇವಿ ॥೬೧॥

ನಿಜವಾದ ಜ್ಞಾನ ದೃಷ್ಟಿಯಿಂದ ನೋಡಿದರೆ ವಾಸ್ತವಿಕವಾಗಿ ನಾನು ಆತ್ಮಸ್ವರೂಪವೇ ಇರುವೆನು. ಅಂತೆಯೇ ನಾನು ಸ್ಥೂಲ, ಸೂಕ್ಷ್ಮ, ಕಾರಣ ಮಹಾಕಾರಣ ಈ ನಾಲ್ಕು ದೇಹಗಳಿಗಿಂತ ಬೇರೆಯಾಗಿಯೇ ಇರುವೆನು. "ನಾನು" ಅನ್ನುವ ಇದಕ್ಕೆ ಜನನ-ಮರಣವಿಲ್ಲ. ಕರ್ಮದ ಸ್ಪರ್ಶವಾಗುವದಿಲ್ಲ. ಈ ಎಲ್ಲ ದೃಶ್ಯರೂಪ ಕಿಚಡಿಗೆ, ಹದಿನೆಂಟು ಧಾನ್ಯಗಳಿಂದ ಕೂಡಿದ ಕೋಡಬಳಿಗೆ ದೃಶ್ಯ ವಸ್ತುವಿಗೆ ನಾನು ಹೊರಗೂ ಒಳಗೂ ವ್ಯಾಪಿಸಿರುವೆನು. ಆ ನಾನು ಅಂದರೆ ಆತ್ಮಾ (ಬ್ರಹ್ಮ) ನೀನೇ ಇರುವಿ (೫೬) ನಿಜವಾದ ಜ್ಞಾನ ದೃಷ್ಟಿಯಿಂದ ನೋಡಿದರೆ ಯಾವುದೇ ಜೀವಕ್ಕೂ ಬಂಧನವಿಲ್ಲ. ನಾನು ಬಾಂಧಾಯಿಸಲ್ಪಟ್ಟಿದ್ದೇನೆ ಎಂಬುದು ಕೇವಲ ಅಜ್ಞಾನದ ಅನಿಸಿಕೆ. ಅಷ್ಟೇ ಏಕೆ? ಇದು ಭ್ರಮೆಯೇ ಸರಿ. ಜನರು ಇದರಿಂದಲೇ (ಭ್ರಮೆಗೊಂಡಿದ್ದಾರೆ) ಭುಲಾಯಿಸಿದ್ದಾರೆ. ನಾನು ದೇಹವೇ ಇರುವೆ ಎಂಬ ದೇಹಾಭಿಮಾನವನ್ನು ಗಟ್ಟಿಯಾಗಿ ಹಿಡಿದುಕೊಂಡದ್ದರಿಂದಲೇ ನಾನು ಬಾಂಧಾಯಿಸಿದ್ದೇನೆಂಬ ಭ್ರಮೆ ನಿರ್ಮಾಣವಾಗುತ್ತದೆ. ಮತ್ತು ಜೀವವನ್ನು ಭ್ರಮೆಯಲ್ಲಿ ಕೆಡವುತ್ತದೆ. (ಮೋಹದಲ್ಲಿ ಕೆಡವುತ್ತದೆ.) (೫೭) ಈ ಭ್ರಮೆಯಿಂದ ಬಿಡುಗಡೆ ಹೊಂದಲು ಶಿಷ್ಯನೇ, ನಿನಗೆ ಒಂದು ಉಪಾಯವನ್ನು ಹೇಳುವೆ. ಅದನ್ನು ಮಾಡುವವನಾಗು. ನೀನು ಒಂದು ಏಕಾಂತ ಸ್ಥಳದಲ್ಲಿ ಕೂಡುವವನಾಗು. ಸ್ವಸ್ವರೂಪದಲ್ಲಿ ಲೀನನಾಗು (ಬ್ರಹ್ಮನಲ್ಲಿ ಒಂದಾಗು) ಅಲ್ಲಿ ವಿಶ್ರಾಂತಿ ಪಡೆಯುವವನಾಗು. ಹೀಗೆ ಅಭ್ಯಾಸ ಮಾಡುತ್ತ ಹೋದರೆ ಪರಮಾರ್ಥ ಸ್ಥಿರಗೊಳ್ಳುತ್ತದೆ. ಆತ್ಮಜ್ಞಾನದ ಉತ್ಕರ್ಷವಾಗುತ್ತದೆ. (೫೮) ಪರಮಾರ್ಥದ ಅಖಂಡ ಶ್ರವಣ ಮತ್ತು ಮನನ ಮಾಡುತ್ತ ಇದ್ದರೆನೇ ಪರಮಾರ್ಥ ದೃಢಪಡುವದು. ಸಮಾಧಾನ ಲಭಿಸುವದು. ಅಜ್ಞಾನ ಸಂಪೂರ್ಣ ನಾಶವಾಗುವದು. ತತ್‌ಪರಿಣಾಮದಿಂದ ಬ್ರಹ್ಮಜ್ಞಾನವು ಪೂರ್ಣ ಪರಿಪಕ್ವವಾದಾಗಲೇ ದೇಹದಲ್ಲಿ ವೈರಾಗ್ಯ ತುಂಬಿ ಹೋಗುವದು. ದೃಶ್ಯದ ವಿಷಯವಾಗಿ ಎಳ್ಳಷ್ಟು ವಾಸನಾ ಎಂಬುದು ಅಂತಃಕರಣದಲ್ಲಿ ಉಳಿಯುವದಿಲ್ಲ, ಹೀಗಾಗುವದೇ ನಿಜವೈರಾಗ್ಯವು. (೫೯) **ಆತ್ಮಜ್ಞಾನ ಹೊಂದಬೇಕಾದರೆ ಇಂದ್ರಿಯಗಳಿಗೆ ಕಟ್ಟುಪಾಡು(ಮುಗುದಾಣ) ಹಾಕಿ ಹಿಡಿತದಲ್ಲಿಡಬೇಕು. ಅಂದರೆ ವಾಸನಾ ನಿರ್ಮೂಲನವಾಗುವದು. ಆಗ ನಿನ್ನ ಕೆಲಸ ಸುಲಭವಾಗುವದು:-** ಯಾವ ಪ್ರಕಾರದ ಬಂಧನ ಹಾಕದೇ ಇಂದ್ರಿಯಗಳಿಗೆ ಮನಸೋಕ್ತ ಭೋಗ ಭೋಗಿಸಲು ಬಿಟ್ಟರೆ ಮನಸ್ಸಿನ ತಳಮಳ ಶಾಂತವಾಗುವದಿಲ್ಲ. ಇಂದ್ರಿಯಗಳು ಯಾವ ಭೋಗ ಬೇಡುವವೋ ಅವನ್ನು ಅವುಗಳಿಗೆ ಪೂರೈಸಿದ್ದಾದರೆ ಇವರಿಂದ ಅದು ಹೆಚ್ಚು ಹೆಚ್ಚು ಭೋಗಾಸಕ್ತವಾಗುವದು. ಅದಕ್ಕೆ ಎಷ್ಟೇ ಕೊಟ್ಟರೂ ಸಮಾಧಾನವಿರುವದಿಲ್ಲ. ಕೊಟ್ಟಷ್ಟೂ ಬೆಳೆಯುತ್ತಲೇ ಇರುವದು. [ಮುಕ್ತವಾಗಿ ಮನಬಂದಂತೆ ಭೋಗ ಭೋಗಿಸಿದರೂ ಸಹ ತಳಮಳವೇನೂ ಶಾಂತವಾಗುವದಿಲ್ಲ.](೬೦) ಇಂದ್ರಿಯಗಳ ಭೋಗದಿಂದ ಸಮಾಧಾನ ಸಿಗುವದಿಲ್ಲವೆಂದು ತಿಳಿದಾಗ ಯಾರ ಮನಸ್ಸು ಇವುಗಳ ಬಗ್ಗೆ ವಿರಕ್ತಿ ಹೊಂದುವದೋ ಅಂಥವರಿಗೆ ಮಾತ್ರ ಪೂರ್ಣ ಆತ್ಮಜ್ಞಾನವಾಗುವದು. ಉದಾ:- ಒಬ್ಬ ಮನುಷ್ಯನು ಒಂದು ಮಣೆ ಒಗೆದನು. ಆಗ ಅವನ ಹೋದ ರಾಜ್ಯ ಅವನಿಗೆ ಪರತ ಸಿಕ್ಕಿತು. (೬೧)

ಮಣೇ ಹೋತಾ ಸೀಗಟಾಚಾ । ಲೋಭ ಧರೂನಿಯಾ ತಯಾಚಾ ।
ಮೂರ್ಖಪಣೇ ರಾಜ್ಯಾಚಾ । ಅನ್ವೇರ ಕೇಲಾ ॥೬೨॥

ಏಕ ಶಿಷ್ಯಾ ಸಾವಧಾನ । ಆತಾ ಭವಿಷ್ಯ ಮೀ ಸಾಂಗೇನ ।
ಜಯಾ ಪುರೂಷಾಸ ಜೇ ಧ್ಯಾನ। ತಯಾಸಿ ತೇ ಚಿ ಪ್ರಾಪ್ತ ॥೬೩॥

ಮ್ಹಣೋನಿ ಜೆ ಅವಿದ್ಯಾ । ಸಾಂಡೂನ ಧರಾವೀ ಸುವಿದ್ಯಾ ।
ತೇಣೇ ಗುಣೇ ಜಗದ್ವಂದ್ಯಾ । ಪಾವಿಜೆ ಸೀಘ್ರ ॥೬೪॥

ಸನ್ಯಪಾತಾಚೇನಿ ದುಖೇ । ಭಯಾನಕ ದೃಷ್ಟೀಸ ದೇಖೆ ।
ಔಷಧ ಘೇತಾ ಚಿ ಸುಖೇ । ಆನಂದ ಪಾವೆ ॥೬೫॥

ತೈಸೇ ಅಜ್ಞಾನ ಸನ್ಯಪಾತೇ । ಮಿಥ್ಯಾ ದೃಷ್ಟೀಸ ದಿಸತೇ ।
ಜ್ಞಾನ ಔಷಧ ಘೇತಾ ತೇ । ಮುಳೀ ಚ ನಾಹೀ ॥೬೬॥

ಮಿಥ್ಯಾ ಸ್ವಪ್ನೇ ವೋಸಣಾಲಾ । ತೋ ಜಾಗೃತೀಸ ಆಣಿಲಾ ।
ತೇಣೇ ಪೂರ್ವದಶಾ ಪಾವಲಾ। ನಿರ್ಭಯ ಜೇ ॥೬೭॥

ಇದರ ವಿಷಯ ಕೇಳಿರಿ:– ಒಬ್ಬ ರಾಜನಿದ್ದನು. ಒಂದು ಸಲ ಒಬ್ಬ ಮನುಷ್ಯನು ಒಂದು ಕ್ಷುದ್ರ ಕೋಡಿನ (ಕೊಂಬಿನ) ಮಣಿಯನ್ನು ಅವನ ಹತ್ತಿರ ತಂದು ತೋರಿಸಿದನು. ಅದು ನೋಡಲಿಕ್ಕೆ ಒಳ್ಳೆ ಪ್ರಕಾಶವುಳ್ಳ ಹಾಗೂ ಮೋಹಕವಾದದ್ದೂ ಇದ್ದಿತು. ಅದನ್ನು ನೋಡಿದ ರಾಜನು ಪ್ರಭಾವಿತನಾದನು. ಆಗ ಆ ಮಣಿ ತಂದವನು ಚಾಣಾಕ್ಷತನದಿಂದ ರಾಜನಿಗೆ ಈ ಪ್ರಕಾರ ಹೇಳಿದನು. 'ಹುಣ್ಣಿಮೆಯ ದಿವಸ ಈ ಮಣಿಯು ಸ್ವರ್ಗ, ಮೃತ್ಯು, ಪಾತಾಳ ಈ ಮೂರೂ ಲೋಕದಲ್ಲಿರುವ ಯಾವುದೇ ವಸ್ತುವನ್ನು ನೀನು ಬೇಕೆಂದು ಕೇಳಿದರೆ ಆ ಮಣಿಯು ಆ ಎಲ್ಲ ವಸ್ತುಗಳನ್ನು ಕೊಡುವದು. ಎಂದು ಹೇಳಿದ ಕೂಡಲೇ ರಾಜನು "ಆ ಮಣಿಯ ಬೆಲೆ ಏನು" ಎಂದು ಕೇಳಲಾಗಿ ಮಣಿ ತಂದ ಮನುಷ್ಯನು ಅನ್ನುತ್ತಾನೆ."ನಿಮ್ಮ ಎಲ್ಲಾ ರಾಜ್ಯವನ್ನು ನನಗೆ ಕೊಟ್ಟರೆಮಾತ್ರ ನಾನು ಈ ಮಣಿ ಕೊಡುವೆ" ಎಂದನು. ಆಗ ರಾಜನು ಯಾವ ವಿಚಾರ ಮಾಡದೇ ಮಣಿಯಿಂದ ಪ್ರಭಾವಿತನಾದ ಅವನು ರಾಜ್ಯವನ್ನು ಕೊಟ್ಟು ಮಣಿಯನ್ನು ತೆಗೆದುಕೊಂಡನು. ಆಮೇಲೆ ಪೌರ್ಣಿಮೆಯ ದಿವಸ ರಾಜನು ಮಣಿಯನ್ನು ಪೂಜಿಸಿ ಪ್ರಾರ್ಥಿಸಿದನು. ಆದರೆ ಅವನಿಗೆ ಏನೂ ಸಿಗಲಿಲ್ಲ· ಪ್ರಾರ್ಥನೆ ವ್ಯರ್ಥವಾಯಿತು. ಆಗ ರಾಜನು ಆ ಮಣಿಯನ್ನು ಅವನಿಗೇ ಪರತ ಕೊಟ್ಟು ಪುನಃ ತನ್ನ ರಾಜ್ಯವನ್ನು ವಶಪಡಿಸಿಕೊಂಡನು. **ತಾತ್ಪರ್ಯ**:– ಇಂದ್ರಿಯಗಳ ಭೋಗ ನೋಟಕ್ಕೆ ಬಲು ಚಂದ ತೋರುವದು. ಆದರೆ ಇದರ ಆಶಾ ಮೋಹಗಳ ಪರಿಣಾಮವು ನಮ್ಮ ಸ್ವರಾಜ್ಯ-ಸ್ವಾನಂದ ಸಾಮ್ರಾಜ್ಯ ಅಥವಾ ಆತ್ಮಜ್ಞಾನವನ್ನು ಕಳೆದು ಕೊಳ್ಳುವದೇ ಆಗುತ್ತದೆ. ಈ ಆಶಾ ಮೋಹಾದಿಗಳ ಹಂಬಲ ಬಿಟ್ಟ ಕೂಡಲೇ ಕಳೆದುಕೊಂಡ ಸ್ವಸ್ವರೂಪ ಪರತ ಪ್ರಾಪ್ತವಾಗುವದು. (೬೨) ಅವಿದ್ಯೆಯಿಂದಲೇ ನಮಗೆ ಭ್ರಮೆ-ಭ್ರಾಂತಿ(ವಿಪರೀತ ಜ್ಞಾನ) ಉಂಟಾಗುವದು. ಯಾವುದು ಮಿಥ್ಯೆ ಆಗಿದೆಯೋ ಅದು ಸತ್ಯವೆನಿಸುವದು. ಈ ಅವಿದ್ಯೆ ನಾಶವಾಗಲು ಜ್ಞಾನವೊಂದೇ ನಿಜವಾದ ಉಪಾಯವಿರುವದು:– ನಾನು ನಿಮಗೆ ಒಂದು ನಿಶ್ಚಿತವಾದ ಭವಿಷ್ಯ ಹೇಳುವೆನು. ಹೇಳುವದನ್ನು ಲಕ್ಷ್ಯ ಕೊಟ್ಟು ಕೇಳಬೇಕು. ಮನುಷ್ಯನಿಗೆ ಯಾವುದರ ಧ್ಯಾಸ (ಧ್ಯಾನ) ಒಂದೇ ಸವನೆ (ಸತತ) ಹತ್ತಿರುವದೋ ಅದೇ ಅವನಿಗೆ ಪ್ರಾಪ್ತವಾಗುವದು. (೬೩) ಅಂತೆಯೇ ಎಲ್ಲರೂ ಅವಿದ್ಯೆಯನ್ನು ತೊರೆದು ಬಿಡಬೇಕು· ಮತ್ತು ಸದ್ವಿದ್ಯೆಯನ್ನು ಹಿಡಿಯಬೇಕು. ಭಗವಂತನ ಅಥವಾ ಆತ್ಮಸ್ವರೂಪದ ಬೆನ್ನು ಹತ್ತಬೇಕು. ಆತ್ಮಜ್ಞಾನವಾದ ಮೇಲೆ ಜಗವಂದ್ಯರಾಗುವ ಯೋಗ್ಯತೆ ನಿಮಗೆ ಬರುವದು ತಡವಾಗುವದಿಲ್ಲ. (೬೪) ಸನ್ನಿಪಾತಜ್ವರ ಬಹಳ ದೋಷಯುಕ್ತವಿರುವದು. ಇದರಲ್ಲಿ ರೋಗಿಗೆ ಭ್ರಮೆ(ಅಂದರೆ ವಾತ-ದೋಷ-ವಿಕಾರ)ಆಗುತ್ತದೆ. ಆಗ ರೋಗಿಗೆ ಏನಾದರೊಂದು ಪ್ರಕಾರದ ಭಯಂಕರ ದೃಶ್ಯ ತೋರಿ ಬರಹತ್ತುವದು. ಆ ವೇಳೆಯಲ್ಲಿ ರೋಗಿಗೆ– ಸರಿಯಾದ ಉಪಚಾರವಾಗಿ ಏರಿದ ಜ್ವರ ಇಳಿದ ಮೇಲೆಯೇ ಭ್ರಮೆ ದೂರಾಗುವದು. ಮತ್ತು ಅವನು ನಿಜವಾದ ಆನಂದ ಹೊಂದುವನು. (೬೫) ಇದರಂತೆಯೇ ಅಜ್ಞಾನ ರೂಪ ಸನ್ನಿಪಾತದಿಂದ ಜೀವಕ್ಕೆ ಭ್ರಮೆಯುಂಟಾಗುವದು ಆನಂತರ ಏನೇನೋ (ಭಾರಿ ಭಾರಿ) ಖೊಟ್ಟಿ ದೃಶ್ಯಗಳು ಕಾಣಹತ್ತುವವು. ಇದಕ್ಕೆ ಆತ್ಮಜ್ಞಾನವೆಂಬ ಔಷಧ ತೆಗೆದುಕೊಂಡ ಕೂಡಲೇ ಅಜ್ಞಾನದ ರೋಗ ನಾಶವಾಗುವದು. ಆಗ ಅವನು ತನಗೆ ಯಾವ ದೃಶ್ಯ ಕಾಣುತ್ತಿತ್ತೋ ಅದು ಮೂಲದಲ್ಲಿಯೇ ಇರಲಿಲ್ಲವೆಂಬುದರ ಪ್ರತ್ಯಕ್ಷಾನುಭವ ಪಡೆಯುವನು. (೬೬) ಅವಿದ್ಯೆಯು ಒಂದು ಪ್ರಕಾರದ ನಿದ್ರೆಯಾಗಿದೆ. ನಿದ್ರೆಯಲ್ಲಿ ಏನೇನೋ ಎಂಥದೋ ಭಯಾನಕ ಸ್ವಪ್ನಬಿದ್ದು ಮನುಷ್ಯ ಗಾಬರಿಗೊಳ್ಳುವನು. ಇದರಂತೆ ಅವಿದ್ಯೆಯ ಅಜ್ಞಾನದಿಂದ ಮಿಥ್ಯೆಯಾದ (ಸುಳ್ಳಾದ) ದೃಶ್ಯ ಕಂಡು ಮನುಷ್ಯನು ಗಾಬರಿಯಾಗುವನು. ಇದರ ಮೇಲೆ ಉಪಾಯವೇನೆಂದರೆ ಮನುಷ್ಯನನ್ನು ಎಚ್ಚರಗೊಳಿಸುವದೇ ಆಗಿದೆ· ದೃಶ್ಯವು ಮಿಥ್ಯೆಯಾಗಿರುವದು. ಈ ಮಾತು ಪಟಾಯಿಸಿ ಅದರ ಬಗ್ಗೆ ವಿರಕ್ತಿ ಉತ್ಪನ್ನವಾಗುವದೆಂದರೆ ಎಚ್ಚರಾಗುವದೆಂದು ಅನ್ನುತ್ತಾರೆ - ಒಬ್ಬ ನಿದ್ರೆ ಹತ್ತಿದ ಮನುಷ್ಯನಿಗೆ ಒಂದು ಬಹಳ ಕೆಟ್ಟ ಸ್ವಪ್ನಬಿದ್ದಿತು. ಈ ಸುಳ್ಳು ಅನಿಸುವ ಸ್ವಪ್ನದಿಂದ ಅವನು ಗಾಬರಿಗೊಂಡು ಚೀರಾಡ ಹತ್ತಿದನು. ಆಗ ಅವನನ್ನು ಎಚ್ಚರಗೊಳಿಸಿದರು. ಎಚ್ಚರಾದ ಮೇಲೆ ತನ್ನಷ್ಟಕ್ಕೆ ತಾನೇ ನಿರ್ಭಯನಾಗಿ ಮೊದಲಿನ ಸ್ಥಿತಿಗೆ ಬಂದನು. (೬೭)

ಮಿಥ್ಯಾಚ ಪರೀ ಸತ್ಯ ವಾಟಲೇ । ತೇಣೇ ಗುಣೇ ದುಃಖ ಜಾಲೇ ।
ಮಿಥ್ಯಾ ಆಣೇ ನಿರಸಲೇ । ಹೇ ತೋ ಘಡೇನಾ ॥೬೮॥
ಮಿಥ್ಯಾ ಆಹೆ ಜಾಗೃತಾಸೀ । ಪರೀ ವೇಢಾ ಲಾವಿಲೇ ನಿದ್ರಿಸ್ತಾಸೀ ।
ಜಾಗಾ ಜಾಲಿಯಾ ತಯಾಸೀ। ಭಯೇಂಚಿ ನಾಹೀ ॥೬೯॥
ಪರೀ ಅವಿದ್ಯಾಝೋಂಪ ಯೇತೆ ಭರೇ । ಭರೇ ಸರ್ವಾಂಗೀ ಕಾವಿರೇ ।
ಪೂರ್ಣ ಜಾಗೃತೀ ಶ್ರವಣದ್ವಾರೇ । ಮನನೇ ಕರಾವೀ ॥೭೦॥
ಜಾಗೃತೀಚೀ ವೋಳಖಣ । ಏಕ ತಯಾಚೇ ಲಕ್ಷಣ ।
ಜೋ ವಿಷಈ ವಿರಕ್ತ ಪೂರ್ಣ । ಅಂತರಾ ಪಾಸುನೀ ॥೭೧॥
ಜೇಣೇ ವಿರಕ್ತೀಸ ನ ಯಾವೇ । ತೋ ಸಾಧಕ ಏಸೇ ಜಾಣಾವೇ ।
ತೇಣೇ ಸಾಧನ ಕರಾವೇ । ಥೋರೀವ ಸಾಂಡುನಿ ॥೭೨॥
ಸಾಧನ ನ ಮನೆ ಜಯಾಲಾ । ತೋ ಸಿದ್ಧಪಣೆ ಬದ್ಧ ಜಾಲಾ ।
ತ್ಯಾಹೂನಿ ಮುಮುಕ್ಷು ಭಲಾ । ಜ್ಞಾನಾಧಿಕಾರೀ ॥೭೩॥
ತವ ಶಿಷ್ಯೇ ಕೇಲಾ ಪ್ರಶ್ನ । ಕೈಸೇ ಬದ್ಧ ಮುಮುಕ್ಷಾಚೇ ಲಕ್ಷಣ ।
ಸಾಧಕ ಸಿದ್ಧ ವೋಳಖಣ । ಕೈಸೀ ಜಾಣಾವೀ ॥೭೪॥
ಯಾಚೇ ಉತ್ತರ ಶ್ರೋತಯಾಸೀ । ದಿಧಲೇ ಪುಢಿಲೀಯೆ ಸಮಾಸೀ ।
ಸಾವಧ ಶ್ರೋತೀ ಕಥೇಸೀ । ಅವಧಾನ ದ್ಯಾವೇ ॥೭೫॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
''ಶುದ್ಧ ಜ್ಞಾನ'' ನಿರೂಪಣ ನಾಮ ಸಮಾಸ ಷಷ್ಠ ॥

ಅವನಿಗೆ ಬಿದ್ದ ಸ್ವಪ್ನವು ಮೂಲದಲ್ಲಿ ಸುಳ್ಳೇ ಆಗಿದ್ದರೂ ಅದು ಅವನಿಗೆ ನಿಜವೆನಿಸಿತು. ಮತ್ತು ಅವನಿಗೆ ದುಃಖವಾಯಿತು. ಯಾವುದು ಖೊಟ್ಟಿ ಇರುವದೋ ಅದರ ಸಂಪೂರ್ಣ ನಿರಸನ (ಪರಿಹಾರ) ಎಂದೂ ಆಗುತ್ತಿರುವದಿಲ್ಲ. ಅದರ ಪರಿಣಾಮ ಸ್ವಲ್ಪವಾದರೂ ಉಳಿದೇ ಉಳಿಯುತ್ತದೆ. (೬೮) ಯಾರು ಎಚ್ಚರಿರುವರೋ ಅವರಿಗೆ ಸ್ವಪ್ನವು ಸುಳ್ಳಾಗಿರುವದು. ಯಾರು ಮಲಗಿರುತ್ತಾರೋ ಅವರನ್ನು ಸ್ವಪ್ನವು ಎಲ್ಲ ಕಡೆಯಿಂದ ಆವರಿಸುತ್ತದೆ. ಆ ಮನುಷ್ಯನೇ ಎಚ್ಚರಾದರೆ ಆಗ ಅವನಿಗೆ ಅಂಜಿಕೆ ಉಳಿಯುವದೇ ಇಲ್ಲ. (೬೯) ಯಾವಾಗ ಅವಿದ್ಯಾ ರೂಪದ ನಿದ್ರೆ ಜೀವಕ್ಕೆ ಮುತ್ತಿಗೆ ಹಾಕುವದೋ ಆಗ ದೃಶ್ಯದ ಕೆಟ್ಟ ಸ್ವಪ್ನಗಳು ಬೀಳುವವು. ಇದರಿಂದ ಅವನು ಗಾಬರಿಯಾಗುವನು. ಮತ್ತು ಅವನ ಎಲ್ಲ ಶರೀರವು ಭಯದಿಂದ ನಡುಗ ಹತ್ತುವದು. ಈ ಅವಿದ್ಯಾ ರೂಪ ನಿದ್ರೆಯಿಂದ ಪೂರ್ಣ ಎಚ್ಚರಾಗಲು ಒಂದೇ ಸವನೆ ಶ್ರವಣ ಮತ್ತು ಮನನಾದಿಗಳನ್ನು ಮಾಡಬೇಕು.(೨೦) ಎಚ್ಚರಿಕೆಯ ಲಕ್ಷಣಗಳನ್ನು ಹೇಳುವೆ, ಲಕ್ಷ್ಯಗೊಟ್ಟು ಕೇಳು. ಯಾವನು ಮನಃ ಪೂರ್ವಕ ಇಂದ್ರಿಯ ಭೋಗ ವಿಷಯದಲ್ಲಿ ಪೂರ್ಣ ವಿರಕ್ತನಿರುವನೋ ಅಂಥ ವೈರಾಗ್ಯ ಸಂಪನ್ನನೇ ಎಚ್ಚತ್ತವನೆಂದು ತಿಳಿಯಬೇಕು. (೨೧) **ಮುಂದಿನ ನಾಲ್ಕು ಸಮಾಸಗಳ ಪ್ರಸ್ತಾವನೆ ಮಾಡುವರು.** ಸಂಪೂರ್ಣ ವಿರಕ್ತಿ ವೈರಾಗ್ಯ ಸಾಧಿಸದೇ ಇದ್ದವನು **ಸಾಧಕನೆಂದು** ಅನಿಸುವನು. ಇಂಥವನು ತನ್ನ ದೊಡ್ಡಿಸ್ತನವನ್ನು ತ್ಯಜಿಸಿ ಸಾಧನ ಮಾಡುತ್ತ ಮುಂದುವರಿಯಬೇಕು. ವಿರಕ್ತಿ ಸಾಧಿಸುವ ವರೆಗೆ ಸಾಧನ ಮಾಡುತ್ತಲೇ ಇರಬೇಕು. (೨೨) ವಿರಕ್ತಿ ಸಾಧಿಸದೆ ಇದ್ದವನು ಅದು ಸಿದ್ಧಿಸುವವರೆಗೆ ಸಾಧನೆ ಮಾಡಬೇಕೆಂದು ಅನಿಸದಿದ್ದರೆ ಅಂಥವನು ಒಣ ಸಿದ್ಧತನದ ಅಭಿಮಾನದಿಂದ ಬದ್ಧ ಸ್ಥಿತಿಗೆ ಇಳಿಯುತ್ತಾನೆ. ಅಂದರೆ ಸಿದ್ಧತನದ ಒಣ ಡೌಲು ಮತ್ತು ಸ್ವೈರ ಕ್ರಿಯಾದಿಗಳನ್ನು ಮನಸಾ ಮಾಡುವನು. ಇಂಥ ಅಹಂಕಾರಿ ಸಿದ್ಧನಿಗಿಂತ ಜ್ಞಾನ ಲಾಲಸೆಯ **ಮುಮುಕ್ಷುವೇ** ಹೆಚ್ಚು ಉತ್ತಮನು. ಯಾಕಂದರೆ ಅವನಿಗೆ ಜ್ಞಾನದ ತಳಮಳವಿರುತ್ತದೆ. ಇವನೇ ಜ್ಞಾನಕ್ಕೆ ಅಧಿಕಾರಿಯಾಗಿರುತ್ತಾನೆ. (೨೩) ಇದನ್ನು ಕೇಳಿ ಶಿಷ್ಯನು ಪ್ರಶ್ನೆ ಮಾಡಿದುದು ಏನಂದರೆ:– "ಬದ್ಧ" ಮತ್ತು "ಮುಮುಕ್ಷು" ಗಳ ಲಕ್ಷಣಗಳಾವವು ? ಸಾಧಕ ಹಾಗೂ ಸಿದ್ಧರಾರೆಂಬುದನ್ನು ಹೇಗೆ ಗುರುತು ಹಿಡಿಯಬೇಕು ? (೨೪) ಆಗ ಶ್ರೀ ಸದ್ಗುರು ಅನ್ನುತ್ತಾನೆ. ಈ ಪ್ರಶ್ನೆಗೆ ಉತ್ತರವನ್ನು ಮುಂದಿನ ನಾಲ್ಕು ಸಮಾಸದಲ್ಲಿ ಕ್ರಮವಾಗಿ ಹೇಳುತ್ತೇನೆ. ಏಕಾಗ್ರ ಚಿತ್ತದಿಂದ ಜಾಣ ಶ್ರೋತೃಗಳು ಕೇಳಬೇಕು. (೨೫)

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದ ಐದನೆಯ ದಶಕದಲ್ಲಿಯ
"ಶುದ್ಧ ಜ್ಞಾನ ನಿರೂಪಣ"ವೆಂಬ ಹೆಸರಿನ ಆರನೆಯ ಸಮಾಸವು ಮುಗಿದುದು.

● ●

ಸಮಾಸ ಸಪ್ತಮ : ಬದ್ಧ ಲಕ್ಷಣ

॥ಶ್ರೀರಾಮ॥ ಸೃಷ್ಟೀ ಜೇ ಕಾ ಚರಾಚರ । ಜೀವದಾಟಲೇ ಅಪಾರ ।
ಪರೀ ತೇ ಅವಘೇ ಚತ್ವಾರ । ಬೋಲಿ ಜೇತೀ ॥೧॥
ಏಕ ತಯಾಂಚೆ ಲಕ್ಷಣ । ಚತ್ವಾರ ತೇ ಕೋಣ ಕೋಣ ॥
ಬದ್ಧ ಮುಮುಕ್ಷು ಸಾಧಕ ಜಾಣ । ಚೌಥಾ ಸಿದ್ಧ ॥೨॥
ಯಾ ಚೌಥಾ ವಿರಹಿತಕಾಹೀ । ಸಚರಾಚರೀ ಪಾಂಚವಾ ನಾಹೀ ।
ಆತಾ ಅಸೋ ಹೇ ಸರ್ವಹೀ । ವಿಶದ ಕರೂ ॥೩॥
ಬದ್ಧ ಮ್ಹಣಿಜೇ ತೋ ಕೋಣ । ಕೈಸೆ ಮುಮುಕ್ಷಾಚೇ ಲಕ್ಷಣ ।
ಸಾಧಕಸಿದ್ಧ ವೋಳಖಣ । ಕೈಸೀ ಜಾಣಾವೀ ॥೪॥

# ದಶಕ ೫. ಸಮಾಸ ೭. ಬದ್ಧ ಲಕ್ಷಣ ನಿರೂಪಣ (ನುಡಿ ೪೯)

ಜಗತ್ತಿನಲ್ಲಿರುವ ಸರ್ವ ಮಾನವರನ್ನು ಎರಡು ವರ್ಗಗಳಲ್ಲಿ ವಿಂಗಡಿಸಬಹುದು. ಒಂದು ವರ್ಗದಲ್ಲಿ ಅಜ್ಞಾನಿ ಮನುಷ್ಯರು, ಹಾಗೂ ಎರಡನೆಯದರಲ್ಲಿ ಜ್ಞಾನಿ ಮನುಷ್ಯರು ಎಂದು ಹೇಳಬಹುದಾಗಿದೆ. ಈಗ ಒಂದು ಕಲ್ಪನೆ (ಊಹೆ) ಮಾಡಿಕೊಂಡು ಪೃಥ್ವಿಗೆ ಸಮಾಂತರವಾದ ಒಂದು ಸರಳ ರೇಷೆಯ ಮೇಲೆ ಸರ್ವ ಜನರೂ ನಿಂತುಕೊಂಡಿದ್ದಾರೆ. ರೇಷೆಯ ಆರಂಭ ಬಿಂದುವಿನಲ್ಲಿ ನಿಂತವರು ಅರ್ಥಾತ್ ರೇಷೆಯ ಆರಂಭ ಬಿಂದು ಅಂದರೆ ಅಜ್ಞಾನಿ ಜನರು, ಮತ್ತು ಅಂತ್ಯ ಬಿಂದುವಿನಲ್ಲಿ ನಿಂತವರು ಅರ್ಥಾತ್ ಕೊನೆಯ ಬಿಂದು ಅಂದರೆ ಜ್ಞಾನಿ ಜನರು ಎಂದು ತಿಳಿಯಿರಿ. ನೀವು ಪಾರಮಾರ್ಥಿಕ ಪ್ರಗತಿ ಹೊಂದಬೇಕಾದರೆ ಆರಂಭ ಬಿಂದುವಿನಲ್ಲಿಂದ ಅಂತ್ಯ ಬಿಂದುವಿನ ಕಡೆಗೆ ಸರಿಯುತ್ತ ಸರಿಯುತ್ತ ಕೊನೆಯ ಬಿಂದುವನ್ನು ಮುಟ್ಟುವದೇ ಆಗಿದೆ. ಅಜ್ಞಾನ ಅನ್ನುತ್ತದೆ: "ನಾನೇ ನಿಜವಿರುವೆ, ದೇವರು ನಿಜ ಅಲ್ಲವೆಂದು" ಜ್ಞಾನವು ಅನ್ನುತ್ತದೆ: "ನಾನು ನಿಜವಲ್ಲ,ದೇವರೇ ನಿಜ"ಎಂದು.ಮನುಷ್ಯ ನಲ್ಲಿಯ ನಾನು ಎಂಬ ಅಹಂಕಾರದ ಖರೇತನವು ಯಾವ ಪ್ರಮಾಣದಲ್ಲಿ ಕಡಿಮೆ ಆಗುತ್ತ ಆಗುತ್ತ ಹೋಗುವದೋ ಅದೇ ಪ್ರಮಾಣದಲ್ಲಿ ದೇವರ ಖರೇತನವು ಮನುಷ್ಯನ ಅನುಭವಕ್ಕೆ ಬರುತ್ತ ಹೋಗುವದು. ಅದರಗೂಡಾನೇ (ಅದರ ಜೊತೆಗೆ) ಅಜ್ಞಾನದ ಮುಖ್ಯ ಲಕ್ಷಣವಾದ ದೇಹಾಭಿಮಾನವು ಸಾವಕಾಶವಾಗಿ ಕಡಿಮೆ ಆಗುತ್ತ ಆಗುತ್ತ ಹೋಗುವದೇ ಒಂದು ಪಾರಮಾರ್ಥಿಕ ಪ್ರಗತಿಯ ಮುಖ್ಯ ಲಕ್ಷಣವೆಂದು ತಿಳಿಯಬೇಕು. ಅತ್ಯಂತ ಅಜ್ಞಾನಿಯಾದ ಮನುಷ್ಯನಿಗೆ ಶ್ರೀ ಸಮರ್ಥರು "ಬದ್ಧ (ಅಂದರೆ ಬಂಧಿತ-ಬಿಗಿಯಲ್ಪಟ್ಟವ) ಅಡಕಾಯಿಸಿದ" ಎಂದು ಹೆಸರಿಸಿದ್ದಾರೆ. ಅವರಂತೆ ಸಂಪೂರ್ಣ ಆತ್ಮಜ್ಞಾನಿಯಾದ ಮನುಷ್ಯನಿಗೆ ಶ್ರೀ ಸಮರ್ಥರು ಸಿದ್ಧ ಅಂದರೆ ಪಡೆದವ ಎಂದು ಹೆಸರಿಸಿ ದರು. ನೀವು ಕಲ್ಪನಾ ಮಾಡಿದ ರೇಖೆ (ಗೆರೆ)ಗೆ ಮಧ್ಯ ಬಿಂದುವೂ ಇರುವದು. ಇದರಿಂದ ಮನುಷ್ಯರಲ್ಲಿ ಇನ್ನೆರಡು ವರ್ಗ ಮಾಡಲು ಶಕ್ಯವಾಗುವದು. ಆರಂಭ ಬಿಂದುವನ್ನು ಬಿಟ್ಟು ಮಧ್ಯ ಬಿಂದುವಿನ ಕಡೆಗೆ ಸರಿಯುವ ವರ್ಗವು ಮೂರನೆಯದು, ಹಾಗೂ ಮಧ್ಯ ಬಿಂದುವಿನ ಕಡೆಯಿಂದ ಅಂತ್ಯ ಬಿಂದುವಿನ ಕಡೆಗೆ ಸರಿಯುವ ವರ್ಗ ನಾಲ್ಕ ನೆಯದು ಆಗುತ್ತದೆ. ಮೂರನೆಯ ವರ್ಗದ ಮನುಷ್ಯನಿಗೆ "ಮುಮುಕ್ಷು" ಎಂದರೆ ಮೋಕ್ಷದ ಇಚ್ಛೆ ಇರುವಂಥವ ನೆಂದು ಹೆಸರಿಸಿದರೆ, ನಾಲ್ಕನೆಯ ವರ್ಗದ ಮನುಷ್ಯನಿಗೆ "ಸಾಧಕ" ಅಂದರೆ ಸಾಧನಮಾಡುವವನೆಂದು ಹೆಸರಿಸಿದರು. ಪರಮಾರ್ಥದ ಪ್ರಗತಿ ಪಥದಲ್ಲಿ "ಬದ್ಧ"ನಿಗಿಂತ "ಮುಮುಕ್ಷು" ಉತ್ತಮ, ಮುಮುಕ್ಷುವಿನಕ್ಕಿಂತ "ಸಾಧಕನು"ಅಧಿಕ ಉತ್ತಮ ಹಾಗೂ ಸಾಧಕನಿಗಿಂತ ಸಿದ್ಧನು ಸರ್ವೋತ್ತಮನಿರುವನು. ಈ ನಾಲ್ವರ ಲಕ್ಷಣಗಳನ್ನು ಕ್ರಮವಾಗಿ ಹೇಳಲಾಗಿದೆ.

## ದಶಕ ೫. ಸಮಾಸ ೭. ಬದ್ಧ ಲಕ್ಷಣ ನಿರೂಪಣ (ನುಡಿ ೪೯)

**ಜಗತ್ತಿನಲ್ಲಿಯ ಮನುಷ್ಯರಲ್ಲಿ ನಾಲ್ಕು ವಿಕಾರಗಳನ್ನು ಹೇಳಿ ನಂತರ ಬದ್ಧರ ಲಕ್ಷಣಗಳನ್ನು ಹೇಳಲಾರಂಭಿಸುತ್ತಾರೆ:-** ಈ ಚರಾಚರ ಸೃಷ್ಟಿಯಲ್ಲಿ ಅಗಣಿತ ಜನರ ಗದ್ದಲವೇ ಗದ್ದಲ. ಈ ಎಲ್ಲರಲ್ಲಿಯೂ ಒಟ್ಟು ನಾಲ್ಕು ವರ್ಗಗಳಿರುವವು (೧) ಈ ನಾಲ್ಕು ವರ್ಗಗಳಾವವು. ಅವುಗಳ ಹೆಸರನ್ನು ಹೇಳುವೆ ಕೇಳಿರಿ. ಬದ್ಧ, ಮುಮುಕ್ಷು, ಸಾಧಕ, ಸಿದ್ಧ (೨) ಈ ಜಗದಲ್ಲಿ ಈ ನಾಲ್ಕು ವರ್ಗಗಳನ್ನು ಬಿಟ್ಟು ಐದನೆಯ ವರ್ಗದ ಮನುಷ್ಯರೇ ಇಲ್ಲ. ಈಗ ನಿಮಗೆ ಈ ವರ್ಗಗಳನ್ನು ಸ್ಪಷ್ಟೀಕರಿಸಿ ಹೇಳುವೆನು. (೩) ಬದ್ಧನೆಂದರೆ ಯಾರು ? ಮುಮುಕ್ಷುವಿನ ಲಕ್ಷಣಗಳಾವವು ? ಸಾಧಕ ಮತ್ತು ಸಿದ್ಧ ಇವರನ್ನು ಹೇಗೆ ಗುರುತಿಸಿ ತಿಳಿಯಬೇಕು ? (೪)

ಶ್ರೋತೀ ವ್ಹಾವೇ ಸಾವಧ। ಪ್ರಸ್ತುತ ಐಕಾ ಬದ್ಧ।
ಮುಮುಕ್ಷ ಸಾಧಕ ಆಣಿ ಸಿದ್ಧ। ಪುಢೇ ನಿರೋಪಿಲೇ ॥೫॥
ಆತಾ ಬದ್ಧತೋ ಜಾಣಿಜೆ ಐಸಾ। ಅಂಧಾರೀಚಾ ಅಂಧಜೈಸಾ।
ಚಕ್ಷುವೀಣ ದಾಹೀ ದಿಶಾ। ಸುನ್ಯಾಕಾರ ॥೬॥
ಭಕ್ತ ಜ್ಞಾತೇ ತಾಪಸೀ। ಯೋಗೀ ವೀತರಾಗೀ ಸನ್ಯಾಸೀ।
ಪುಢೇ ದೇಖತಾ ದೃಷ್ಟೀಸೀ। ಯೇಣಾರ ನಾಹೀ ॥೭॥
ನ ದಿಸೇ ನೇಣೇ ಕರ್ಮಾಕರ್ಮ। ನ ದಿಸೇ ನೇಣೇ ಧರ್ಮಾಧರ್ಮ।
ನ ದಿಸೇ ನೇಣೇ ಸುಗಮ। ಪರಮಾರ್ಥಪಂಥ ॥೮॥
ತಯಾಸ ನ ದಿಸೇ ಸಚ್ಛಾಸ್ತ್ರ। ಸತ್ಸಂಗತಿ ಸತ್ಪಾತ್ರ।
ಸನ್ಮಾರ್ಗ ಜೋಕಾ ಪವಿತ್ರ। ತೋಹೀ ನ ದಿಸೇ ॥೯॥
ನ ಕಳೇ ಸಾರಾಸಾರ ವಿಚಾರ। ನ ಕಳೇ ಸ್ವಧರ್ಮ ಆಚಾರ।
ನ ಕಳೇ ಕೈಸಾ ಪರೋಪಕಾರ। ದಾನಪುಣ್ಯ ॥೧೦॥
ನಾಹೀ ಪೋಟೀ ಭೂತದಯಾ। ನಾಹೀ ಸುಚಿಷ್ಮಂತ ಕಾಯಾ।
ನಾಹೀ ಜನಾಸಿನಿ ಮವಾಮಯಾ। ವಚನ ಮೃದ ॥೧೧॥
ನ ಕಳೇ ಭಕ್ತಿ ನ ಕಳೇ ಜ್ಞಾನ। ನ ಕಳೇ ವೈರಾಗ್ಯ ನ ಕಳೇ ಧ್ಯಾನ।
ನ ಕಳೇ ಮೋಕ್ಷ ನ ಕಳೇ ಸಾಧನ। ಯಾ ನಾವ ಬದ್ಧ ॥೧೨॥
ನ ಕಳೇ ದೇವ ನಿಶ್ಚಯಾತ್ಮಕ। ನ ಕಳೇ ಸಂತಾಚಾ ವಿವೇಕ।
ನ ಕಳೇ ಮಾಯೇಚೇ ಕೌತುಕ। ಯಾ ನಾವ ಬದ್ಧ ॥೧೩॥
ನ ಕಳೇ ಪರಮಾರ್ಥಾಚೀ ಖೂಣ। ನ ಕಳೇ ಅಧ್ಯಾತ್ಮ ನಿರೂಪಣ।
ನ ಕಳೇ ಆಪಣಾಸಿ ಆಪಣ। ಯಾ ನಾವ ಬದ್ಧ ॥೧೪॥
ನ ಕಳೇ ಜೀವಾಚೇ ಜನ್ಮಮೂಳ। ನ ಕಳೇ ಸಾಧನಾಚೇಫಳ।
ನ ಕಳೇ ತತ್ವತಾ ಕೇವಳ। ಯಾ ನಾವಬದ್ಧ ॥೧೫॥
ನ ಕಳೇ ಕೈಸೇ ತೇ ಬಂಧನ। ನ ಕಳೇ ಮುಕ್ತೀಚೇ ಲಕ್ಷಣ।
ನ ಕಳೇ ವಸ್ತು ವಿಲಕ್ಷಣ। ಯಾ ನಾವ ಬದ್ಧ ॥೧೬॥
ನ ಕಳೇ ಶಾಸ್ತ್ರಾರ್ಥ ಬೋಲಿಲಾ। ನ ಕಳೇ ನಿಜಸ್ವಾರ್ಥ ಆಪುಲಾ।
ನ ಕಳೇ ಸಂಕಲ್ಪೇಬಾಂಧಲಾ। ಯಾ ನಾವ ಬದ್ಧ ॥೧೭॥
ಜಯಾಸಿ ನಾಹೀ ಆತ್ಮಜ್ಞಾನ। ಹೇ ಮುಖ್ಯ ಬದ್ಧಾಚೇ ಲಕ್ಷಣ।
ತೀರ್ಥ ವ್ರತದಾನಪುಣ್ಯ। ಕಾ ಹೀಚ ನಾಹೀ ॥೧೮॥

ಇವನ್ನೆಲ್ಲ ತಿಳಿಸಿ ಕೊಡುವೆನು. ಶ್ರೋತೃವು ಲಕ್ಷ್ಯಗೊಟ್ಟು ಕೇಳಬೇಕು. ಈ ಸಮಾಸದಲ್ಲಿ ಬದ್ಧನಾರು? ಅವನು ಹೇಗಿರುವನು ? ಹೇಳುವೆ ಕೇಳಿರಿ. ಮುಮುಕ್ಷು, ಸಾಧಕ. ಸಿದ್ಧ ಇವರ ವರ್ಣನೆ ಕ್ರಮವಾಗಿ ಇದರ ನಂತರ ಮುಂದೆ ಬರುವದು. (೫) **ಇನ್ನು ಮುಂದೆ ಈ ಸಮಾಸ ಪೂರ್ತಿಯಾಗಿ ಬದ್ಧ ಲಕ್ಷಣಗಳಿಂದ ತುಂಬಿ ಹೋಗಿದೆ. ಆತ್ಮಜ್ಞಾನವಿಲ್ಲದಂಥ ಮತ್ತು ಪ್ರಪಂಚವೇ ಸರ್ವಸ್ವವೆಂದು ಗಟ್ಟಿಯಾಗಿ ತಿಳಿದು ಅದನ್ನೇ ನಂಬಿರುವ ಮನುಷ್ಯರ ಲಕ್ಷಣಗಳೇ ಇವು ಇರುವವು. ಹೆಚ್ಚಾಗಿ ಸಾಮಾನ್ಯ ಪ್ರಾಪಂಚಿಕ ಮನುಷ್ಯನು ಹೀಗೆಯೇ ಇರುವನು:–** ಕುರುಡು ಮನುಷ್ಯ ಕತ್ತಲೆಯಲ್ಲಿ ಹೇಗೆ ಧಡಪಡಿಸುವನೋ, ಮುಗ್ಗರಿಸುವನೋ, ಅದರಂತೆ ಬದ್ಧ ಮನುಷ್ಯನು ಅಜ್ಞಾನವೆಂಬ ಕತ್ತಲೆಯಲ್ಲಿ ಮುಗ್ಗರಿಸುತ್ತ ಜೀವನ ನಡೆಸುವನು. ಕುರುಡನಿಗೆ ಕಣ್ಣಿರದ್ದರಿಂದ ಅವನಿಗೆ ನಾಲ್ಕೂ ದಿಶೆಗಳು ಶೂನ್ಯವಾಗಿರುವವು. ಇದೇ ಅವಸ್ಥೆ ಬದ್ಧನದೂ ಇರುತ್ತದೆ. ಯಾಕೆಂದರೆ ಜ್ಞಾನ ದೃಷ್ಟಿ ಇಲ್ಲದ್ದರಿಂದ ಪರಮಾತ್ಮನು ಒಳಗೂ ಹೊರಗೂ ಇದ್ದರೂ ಸಹ ಬದ್ಧನಿಗೆ ಇಲ್ಲದಂತೆ ಆಗಿರುವದು. (೬) ಭಕ್ತ, ಜ್ಞಾನಿ, ಯೋಗಿ, ತಪಸ್ವಿ, ವಿರಕ್ತ, ಸನ್ಯಾಸಿ ಇವರು ಎದುರಿಗೆ ಬಂದರೂ ಬದ್ಧನಿಗೆ ಕಾಣಿಸುವದೇ ಇಲ್ಲ. ಕಂಡರೂ ಕಾಣಿಸದವರಂತೆ ದರಕಾರ ಮಾಡದೆ-ತುಚ್ಛೀಕರಿಸುವನು. ಹಾಗೂ ಅವರ ಯೋಗ್ಯತೆಯೂ ಇವನಿಗೆ ಗೊತ್ತಾಗುವದಿಲ್ಲ. (೭) ಉತ್ತಮ ಕರ್ಮ, ಕೆಟ್ಟ ಕರ್ಮ, ಧರ್ಮ, ಅಧರ್ಮಗಳನ್ನು ಇವನು ನೋಡನು, ತಿಳಿಯನು, ಇದೇ ಪ್ರಕಾರ ಸುಲಭವಾದ ಪರಮಾರ್ಥ ಮಾರ್ಗವನ್ನು ನೋಡಲಾರನು ಮತ್ತು ತಿಳಿಯಲಾರನು(೮) ನಿಜವಾದ ಶಾಸ್ತ್ರ ಯಾವುದು ? ಉತ್ತಮ ಮನುಷ್ಯರು ಯಾರು ? ಪವಿತ್ರವಾದ ಸನ್ಮಾರ್ಗ ಯಾವುದು ? ಇವುಗಳನ್ನು ಬದ್ಧ ಮನುಷ್ಯನು ಎಂದೂ ತಿಳಿಯುವದಿಲ್ಲ, ನೋಡುವದಿಲ್ಲ. ಇಷ್ಟೇ ಅಲ್ಲ. ವಿಚಾರ ಸಹ ಮಾಡುವದಿಲ್ಲ. (೯) **ಬದ್ಧನಿಗೆ ಯಾವುದು ತಿಳಿಯುವದಿಲ್ಲ ಇದರ ವರ್ಣನೆಯನ್ನು ಕೇಳಿರಿ:–** ಸಾರಾಸಾರ ವಿಚಾರ, ಸ್ವಧರ್ಮದ ಆಚಾರ, ಪರೋಪಕಾರ, ದಾನ ಮತ್ತು ಇತರ ಪುಣ್ಯಕಾರ್ಯ ಇವುಗಳಲ್ಲಿ ಯಾವವೂ ತಿಳಿಯವು(೧೦) "ಬದ್ಧ" ನ ಅಂತಃಕರಣದಲ್ಲಿ ಭೂತ ದಯೆ ಇರುವದಿಲ್ಲ. ದೇಹ ಸ್ವಚ್ಛತೆಯೂ ಇವನಲ್ಲಿ ಇರುವದಿಲ್ಲ. ಜನರ ಅಂತಃಕರಣ ಶಾಂತಗೊಳ್ಳುವಂತಹ ಮೃದುವಾಣಿಯೂ ಇರುವದಿಲ್ಲ. (೧೧) ಬದ್ಧನಿಗೆ ಈ ವಿಚಾರಗಳೂ ತಿಳಿದಿರುವದಿಲ್ಲ:- ಭಕ್ತಿ, ಜ್ಞಾನ, ವೈರಾಗ್ಯ, ಧ್ಯಾನ, ಮೋಕ್ಷ, ಸಾಧನ (೧೨) ದೇವರು ಯಾರು ? ಇದೂ ನಿಶ್ಚಿತವಾಗಿ ಗೊತ್ತಿಲ್ಲ. ಸಂತರ ವಿವೇಕ ವಿಚಾರ ಮಾಯೆಯ ಚಮತ್ಕಾರ ಗೊತ್ತಿಲ್ಲದವನು ಬದ್ಧನು. (೧೩) ಪರಮಾರ್ಥದ ರಹಸ್ಯ ಗೊತ್ತಿಲ್ಲ ಅಧ್ಯಾತ್ಮ ನಿರೂಪಣ ಕೇಳಿಲ್ಲ. ಗೊತ್ತೂ ಇಲ್ಲ. ನಿಜವಾಗಿಯೂ "ನಾನು ಯಾರು" ಇದನ್ನು ತಿಳಿಯಲು ಗೊತ್ತಿಲ್ಲದವನು ಬದ್ಧನು. (೧೪) ಜೀವದ ಜನ್ಮಕ್ಕೆ ಕಾರಣವಾವುದು ? ಸಾಧನಗಳಿಂದ ದೊರಕುವ ಫಲವಾವುದು ? ಕೇವಲ ಶುದ್ಧಬ್ರಹ್ಮ ತಿಳಿಯುವ ವಿಚಾರ ಗೊತ್ತಿಲ್ಲದವನು ಬದ್ಧನು. (೧೫) ಬಂಧನದ ಲಕ್ಷಣಗಳು ಮುಕ್ತಿಯ ಲಕ್ಷಣಗಳು ಹಾಗೂ ವಿಲಕ್ಷಣವಾದ ಪರಮಾತ್ಮ ವಸ್ತು ವಿಚಾರ (೧೬) ಶಾಸ್ತ್ರಾದಿಗಳಲ್ಲಿ ಹೇಳಿದ ವಿಚಾರ ತನ್ನ ನಿಜವಾದ ಸ್ವಾರ್ಥ ಅಂದರೆ ಆತ್ಮ ಹಿತ ಮತ್ತು ತಾನು ಇಲ್ಲದ ಕಲ್ಪನೆಯಿಂದ ಬಂಧನ ಹೊಂದಿರುವದು ಇವೆಲ್ಲವುಗಳನ್ನು ಅರಿಯದವನೇ ಬದ್ಧನು. ಅರ್ಥಾತ್ ಬದ್ಧನಿಗೆ ಇವುಗಳನ್ನು ತಿಳಿಯುವ ಮನಸ್ಸೇ ಇರುವದಿಲ್ಲ. (೧೭) **ಬದ್ಧ ಮನುಷ್ಯನಲ್ಲಿ ಯಾವ ಗುಣಗಳಿರುವದಿಲ್ಲ ಇದರ ವರ್ಣನೆಯನ್ನು ಕೇಳಿರಿ.** ನಾನು ಯಾರಿರುವೆನು ಎಂಬುದರ ಜ್ಞಾನ ಇರದಿರುವದೇ ಆತ್ಮಜ್ಞಾನದ ಅಭಾವವನ್ನು ತೋರಿಸುತ್ತದೆ. ಇದು ಬದ್ಧನ ಮುಖ್ಯ ಲಕ್ಷಣವೆಂದು ತಿಳಿಯಬೇಕು. ತೀರ್ಥ, ವ್ರತ, ದಾನ ಮತ್ತು ಪುಣ್ಯ ಇವುಗಳಲ್ಲಿಯ ಒಂದರ ಗುಣವೂ ಸಹ ಇರುವದಿಲ್ಲ(೧೮)

ದಯಾನಾಹೀ ಕರುಣಾನಾಹೀ । ಆರ್ಜವನಾಹೀ ಮಿತ್ರಿನಾಹೀ ।
ಶಾಂತಿನಾಹೀ ಕ್ಷಮಾನಾಹೀ । ಯಾ ನಾವ ಬದ್ಧ ॥೧೯॥
ಜೇ ಜ್ಞಾನ ವಿಶಿ ಉಣೇ । ತೇಥೇ ಕೈಚಿ ಜ್ಞಾನಾಚೀ ಲಕ್ಷಣೇ ।
ಬಹುಸಾಲ ಕುಲಕ್ಷಣೇ । ಯಾ ನಾವ ಬದ್ಧ ॥೨೦॥
ನಾನಾ ಪ್ರಕಾರೀಚೇ ದೋಷ ಕರಿತಾ । ವಾಟೇ ಪರಮ ಸಂತೋಷ ।
ಬಾಷ್ಕಳ ಪಣಾಚಾ ಹವ್ಯಾಸ । ಯಾ ನಾವ ಬದ್ಧ ॥೨೧॥
ಬಹುಕಾಮ ಬಹುಕ್ರೋಧ । ಬಹುಗರ್ವ ಬಹುಮದ ।
ಬಹುದ್ವಂದ ಬಹುಖೇದ । ಯಾ ನಾವ ಬದ್ಧ ॥೨೨॥
ಬಹುದರ್ಪ ಬಹುದಂಭ । ಬಹುವಿಷಯೀ ಬಹುಲೋಭ ।
ಬಹುಕರ್ಕಶ ಬಹುಅಶುಭ । ಯಾ ನಾವ ಬದ್ಧ ॥೨೩॥
ಬಹುಗ್ರಾಮಣಿ ಬಹುಮತ್ಸರ । ಬಹು ಅಸೂಯಾ ತಿರಸ್ಕಾರ ।
ಬಹುಪಾಪಿ ಬಹುವಿಕಾರ । ಯಾ ನಾವ ಬದ್ಧ ॥೨೪॥
ಬಹುಅಭಿಮಾನ ಬಹುತಾಠಾ । ಬಹುಅಹಂಕಾರ ಬಹುಘಾಂಟಾ ।
ಬಹುಕುಕರ್ಮಾಚಾ ಸಾಠಾ । ಯಾ ನಾವ ಬದ್ಧ ॥೨೫॥
ಬಹುಕಾಪಟ್ಯ ವಾದವೇವಾದ । ಬಹುಕುತರ್ಕ ಭೇದಾಭೇದ ।
ಬಹುಕ್ರೂರ ಕೃಪಾಮಂದ। ನಾನಾವ ಬದ್ಧ ॥೨೬॥
ಬಹುನಿಂದಾ ಬಹುದ್ವೇಷ । ಬಹುಅಧರ್ಮ ಬಹುಅಭಿಳಾಷ ।
ಬಹುಪ್ರಕಾರೀಚೇ ದೋಷ । ಯಾ ನಾವ ಬದ್ಧ ॥೨೭॥
ಬಹುಭ್ರಷ್ಟ ಅನಾಚಾರ । ಬಹುನಷ್ಟ ಏಕಕಾರ ।
ಬಹುಅನಿತ್ಯ ಅವಿಚಾರ । ಯಾ ನಾವ ಬದ್ಧ ॥೨೮॥
ಬಹುನಿಷ್ಠುರ ಬಹುಘಾತಕೀ । ಬಹುಹತ್ಯಾರಾ ಬಹುಪಾತಕೀ ।
ತಪೀಳ ಕುವಿದ್ಯಾ ಅನೇಕೀ । ಯಾ ನಾವ ಬದ್ಧ ॥೨೯॥
ಬಹುದುರಾಶಾ ಬಹು ಸ್ವಾರ್ಥೀ । ಬಹು ಕಳಹ ಬಹು ಅನರ್ಥೀ ।
ಬಹು ಡಾಈಕ ದುರ್ವೃತಿ । ಯಾ ನಾವ ಬದ್ಧ ॥೩೦॥
ಬಹು ಕಲ್ಪನಾ ಬಹು ಕಾಮನಾ । ಬಹು ತೃಷ್ಣಾ ಬಹು ವಾಸನಾ ।
ಬಹು ಮಮತಾ ಬಹು ಭಾವನಾ । ಯಾ ನಾವ ಬದ್ಧ ॥೩೧॥
ಬಹು ವಿಕಲ್ಪೀ ಬಹು ವಿಷಾದೀ । ಬಹು ಮೂರ್ಖ ಬಹು ಸಮಂಧೀ ।
ಬಹು ಪ್ರಪಂಚೀ ಬಹು ಉಪಾಧೀ । ಯಾ ನಾವ ಬದ್ಧ ॥೩೨॥

ದಯಾ, ಕರುಣಾ, ನಮ್ರತೆ, ಸರಳತನ, ಶಾಂತಿ ಹಾಗೂ ಕ್ಷಮೆ ಇವುಗಳ ಪೈಕಿ ಒಂದರ ಗುಣವೂ ಅವನಲ್ಲಿ ಇರುವದಿಲ್ಲ. ಯಾಕಂದರೆ ಅವನು ಬದ್ಧನಾಗಿರುತ್ತಾನೆ. (೧೯) ಎಲ್ಲಿ ಮೂಲ ಆತ್ಮಜ್ಞಾನದ ಅಭಾವ ಇರುವದೋ, ನ್ಯೂನತೆ ಇರುವದೋ, ಅಂಥಲ್ಲಿ ಜ್ಞಾನದ ಲಕ್ಷಣಗಳನ್ನು ಕಾಣುವದು ಅಶಕ್ಯವೇ ಇರುವದು. ಯಾರಲ್ಲಿ ಬಹಳಷ್ಟು ದುಷ್ಟ ಕೆಟ್ಟ ಲಕ್ಷಣಗಳಿರುವವೋ ಅಂಥವನು ಬದ್ಧನೇ ಆಗಿರುವನು. (೨೦) ಅನೇಕ ಪ್ರಕಾರದ ದೋಷಾಚರಣೆ ಮಾಡುವಾಗ, ಮಾಡುವದನ್ನು ನೋಡುವಾಗ, ಬಹಳ ಆನಂದಪಡುವವನು. ಫಾಜೀಲ-ಬಡಬಡ್ಯಾ, ಬಿಕ್ಯಾಳ್ಯಾ ಅಂದರೆ-ಒದರಬಡಕ ಇದ್ದು ಆಢ್ಯತೆ ಹಾಗೂ ಹೌಸಿನಿಂದ ಬಡಬಡಿಸುವವನು. ಇವರೆಲ್ಲ ಬದ್ಧರೇ ಇರುವರು. (೨೧) **ಬದ್ಧ ಮನುಷ್ಯನಲ್ಲಿ ಯಾವ ಮಾತಿನ ಅತಿರೇಕವಿರುವದೆಂಬುದನ್ನು ವರ್ಣಿಸುವೆ, ಕೇಳಿರಿ** ಅತಿ ಕಾಮ, ಕ್ರೋಧ, ಗರ್ವ, ಮದ, ಜಗಳ-ದುಃಖ ಇವುಗಳು ಅತಿಯಾಗಿ ಇರುವವು. (೨೨) ಅತಿ ದರ್ಪ, ಡಂಭ, ಅತಿ ಇಂದ್ರಿಯ ಭೋಗ, ಲೋಭ, ಅತಿ ಕರ್ಕಶತನ, ಅಮಂಗಲ, ಅಶುಭ ವೃತ್ತಿ ಇವುಗಳು ಅತಿಯಾಗಿರುವವು. (೨೩) ಹಳ್ಳಿಯಲ್ಲಿರುವ ಢೋಂಗಿ, ಉಪದ್ವ್ಯಾಪಿ, ಪುಢಾರಿ, ಮತ್ಸರ, ಹೇವ-ಜಿದ್ದು, (ದ್ವೇಷ)ಅಸಹನೆ, ತಿರಸ್ಕಾರ, ಪಾಪ, ಕೆಟ್ಟವಿಕಾರ, ಇವೆಲ್ಲ ಬದ್ಧನಲ್ಲಿ ಇರುವವು. (೨೪) ಅಭಿಮಾನ, ಅತಿಸಿಟ್ಟೆದುಕೊಂಡಿರುವದು, ಅಹಂಕಾರ, ವಿಕಲ್ಪ, ಕೆಟ್ಟ ಕರ್ಮದ ಸಂಚಯ ಇವೆಲ್ಲ ಬದ್ಧನಲ್ಲಿ ಇರುವವು. (೨೫) ಕಪಟತನ, ವಾದ ವಿವಾದ, ಕುತರ್ಕ, ಭೇದಾಭೇದ, ಕ್ರೂರತನ, ಕೃಪೆಯ ಅಭಾವ (೨೬) ನಿಂದೆ, ದ್ವೇಷ, ಅಧರ್ಮ, ಅಭಿಲಾಷೆ ಅಂದರೆ ಇನ್ನೊಬ್ಬರ ದ್ರವ್ಯದ ಅಥವಾ ವಸ್ತುವಿನ ಆಶೆ, ಅದಕ್ಕಾಗಿ ಕಪಟತನ, ಇವೆಲ್ಲ ಬದ್ಧನಲ್ಲಿ ಇರುವವು. ಇವಲ್ಲದೇ ಇನ್ನೂ ಅನೇಕ ಅತಿರೇಕಗಳೂ ಇರುವವು. ಅಂಥವನು ಬದ್ಧನೇ ಆಗಿರುವನು. (೨೭) ಭ್ರಷ್ಟತನ, ಅನಾಚಾರ, ನಷ್ಟತನ, ಏಕಂಕಾರ, ಅನೀತಿ, ಅವಿಚಾರ, ಇವೆಲ್ಲವೂ ಬದ್ಧನಲ್ಲಿ ಇರುವಂಥವು. (೨೮) ಅತಿ ನಿಷ್ಠುರತನ, ಅತಿ ಘಾತುಕತನ, ಅತಿ ಹತ್ಯಾಕಾರಿ, ಪಾತಕಿ, ಶೀಘ್ರ ಕೋಪಿಷ್ಟನ, ಕುವಿದ್ಯೆ, ಇವೆಲ್ಲ ಬದ್ಧನಲ್ಲಿ ಅತಿಯಾಗಿಯೇ ಇರುವವು. (೨೯) ಅತಿ ದುರಾಸೆ, ಅತಿ ಸ್ವಾರ್ಥಿ, ಕಲಹ ಪ್ರಿಯತೆ, ಅನರ್ಥಕಾರಿ, ದೀರ್ಘದ್ವೇಷಿ, (ಕುನಸು)ದುರ್ಬುದ್ಧಿ ಇವು ಅತಿಯಾಗಿದ್ದವನು ಬದ್ಧನು. (೩೦) ಕಲ್ಪನೆ, ಕಾಮನೆ, ತೃಷ್ಣಾ ಅಂದರೆ ಬಲವತ್ತರವಾದ ಆಶೆ, ಸೂಕ್ಷ್ಮ ವಾಸನೆ, ಮಮತೆ, ವಿಪರೀತ ಭಾವನೆ, ಇವೆಲ್ಲ ಅತಿಯಾಗಿದ್ದವನು ಬದ್ಧನಿರುತ್ತಾನೆ. (೩೧) ವಿಕಲ್ಪ, ಅನುಮಾನ ಪಡುವವ, ವಿಷಾದಪಡುವವ, ಮೂರ್ಖತನ, ರಿಪಿಗೇಡಿ, ಭೂತ ಪಿಶಾಚಿಗಳಂತೆ ವರ್ತಿಸುವವ, ಅತಿ ಪ್ರಪಂಚಾಸಕ್ತ, ಉಪಾಧಿಕೋರ, ಅಡ್ಡಗಾಲು ಹಾಕುವವ ಇವೆಲ್ಲ ಅತಿಯಾಗಿರುವವನು ಬದ್ಧನು. (೩೨)

ಬಹು ವಾಚಾಳ ಬಹು ಪಾಷಾಂಡೀ । ಬಹು ದುರ್ಜನ ಬಹು ಥೋತಾಂಡೀ ।
ಬಹು ಪೈಶೂನ್ಯ ಬಹು ಖೋಡಿ । ಯಾ ನಾವ ಬದ್ಧ ॥೩೩॥
ಬಹು ಅಭಾವ ಬಹು ಭ್ರಮು । ಬಹು ಭ್ರಾಂತಿ ಬಹು ತಮು ।
ಬಹು ವಿಕ್ಷೇಪ ಬಹು ವಿರಾಮು । ಯಾ ನಾವ ಬದ್ಧ ॥೩೪॥
ಬಹು ಕೃಪಣ ಬಹು ಖಂದಸ್ತೀ । ಬಹು ಆದಖಣಾ ಬಹು ಮುಸ್ತೀ ।
ಬಹು ಅಸತ್ಯಿಯಾ ವ್ಯಸ್ತೀ । ಯಾ ನಾವ ಬದ್ಧ ॥೩೫॥
ಪರಮಾರ್ಥ ವಿಷಈ ಅಜ್ಞಾನ । ಪ್ರಪಂಚಾಚೇ ಉದಂಡ ಜ್ಞಾನ ।
ನೇಣೇ ಸ್ವಯೇ ಸಮಾಧಾನ । ಯಾ ನಾವ ಬದ್ಧ ॥೩೬॥
ಪರಮಾರ್ಥಾಚಾ ಅನಾದರ । ಪ್ರಪಂಚಾಚಾ ಅತ್ಯಾದರ ।
ಸಂಸಾರ ಭಾರ ಜೋಜಾರ । ಯಾ ನಾವ ಬದ್ಧ ॥೩೭॥
ಸತ್ಸಂಗಾತೀ ನಾಹೀ ಗೋಡೀ । ಸಂತನಿಂದೇಚೀ ಆವಡೀ ।
ದೇಹೇ ಬುದ್ಧೀ ಚೀ ಘಾತಲೀ ಬೆಡೀ । ಯಾ ನಾವ ಬದ್ಧ ॥೩೮॥
ಹಾತೀ ದ್ರವ್ಯಾಚೀ ಜಪಮಾಳ । ಕಾಂತಾಧ್ಯಾನ ಸರ್ವಕಾಳ ।
ಸತ್ಸಂಗಾಚಾ ದುಷ್ಕಾಳ । ಯಾ ನಾವ ಬದ್ಧ ॥೩೯॥
ನೇತ್ರೀ ದ್ರವ್ಯ ದಾರಾಪಾಹಾವೀ । ಶ್ರವಣೇದ್ರವ್ಯದಾರಾ ಐಕಾವೀ ।
ಚಿಂತನೀ ದ್ರವ್ಯದಾರಾ ಚಿಂತಾವೀ । ಯಾ ನಾವ ಬದ್ಧ ॥೪೦॥
ಕಾಯಾ ವಾಚಾ ಆಣಿ ಮನ । ಚಿತ್ತವಿತ್ತ ಜೀವ ಪ್ರಾಣ ।
ದ್ರವ್ಯದಾರೆ ಚೇ ಕರೀ ಭಜನ । ಯಾ ನಾವ ಬದ್ಧ ॥೪೧॥
ಇಂದ್ರಿಯೇ ಕರೂನ ನಿಶ್ಚಳ । ಚಂಚಳ ಹೋಊ ನೆದೀ ಪಳ ।
ದ್ರವ್ಯದಾರೇ ಸೀ ಲಾವೀ ಸಕಳ । ಯಾ ನಾವ ಬದ್ಧ ॥೪೨॥
ದ್ರವ್ಯದಾರಾ ತೇ ಚಿ ತೀರ್ಥ । ದ್ರವ್ಯದಾರಾ ತೋಚಿ ಪರಮಾರ್ಥ ।
ದ್ರವ್ಯದಾರಾ ಸಕಳ ಸ್ವಾರ್ಥ । ಮ್ಹಣೆ ತೋ ಬದ್ಧ ॥೪೩॥
ವ್ಯರ್ಥಜಾಊ ನೆದೀ ಕಾಳ । ಸಂಸಾರ ಚಿಂತಾ ಸರ್ವಕಾಳ ।
ಕಥಾವಾರ್ತಾ ತೇಚಿ ಸಕಳ । ಯಾ ನಾವ ಬದ್ಧ ॥೪೪॥
ನಾನಾ ಚಿಂತಾ ನಾನಾ ಉದ್ವೇಗ । ನಾನಾ ದುಃಖಾಚೇ ಸಂಸರ್ಗ ।
ಕರೀಪರಮಾರ್ಥಾಚಾ ತ್ಯಾಗ । ಯಾ ನಾವ ಬದ್ಧ ॥೪೫॥
ಘಟಿಕಾ ಪಳ ನಿಮಿಷ್ಯ ಭರೀ । ದುಶ್ಚೀತ ನವ್ಹತಾ ಅಂತರೀ ।
ಸರ್ವಕಾಳ ಧ್ಯಾನ ಕರೀ । ದ್ರವ್ಯದಾರಾ ಪ್ರಪಂಚಾಚೇ ॥೪೬॥

ಬಹು ಬಾಯ್ಬಡಕ, ಪಾಖಂಡಿತನ, ದೌರ್ಜನ್ಯತನ, ವಿಪರೀತ ವಾದ ಮಾಡುವವ, ಲಬಾಡ ಖೋರ, ಚಾಡಿಖೋರ, ಕೆಟ್ಟಚ್ಯಾಳಿಯವ (೩೩) ನಾಸ್ತಿಕತನ, ಭ್ರಮೆಯುಳ್ಳವ, ಭ್ರಾಂತಿಷ್ಟ,ಅಜ್ಞಾನಾಂಧಕಾರ, ಸಂಶಯೀ, ಆಲಸೀ, ಇವೆಲ್ಲ ಅತಿಯಾಗಿರುವವನು ಬದ್ಧನು. (೩೪) ಅತಿ ಜೀನತನ, ಅತಿ ಹುಂಬತನ, ಲೋಕ ವಿರುದ್ಧದ ನಡೆ ಇರುವವ, ಮಸ್ತಿತನ, ಸೊಕ್ಕಿನವ, ಕುಕರ್ಮಿ, ಶಾಸ್ತ್ರ ವಿರುದ್ಧಾಚರಣೆ ಉಳ್ಳವ, (ಅವ್ಯವಸ್ಥಿತ, ಉಪರಾಟಿ, ಬೇಬಂದಶಾಹಿ) ಈ ಎಲ್ಲವುಗಳ ಅತಿರೇಕ ವಿರುವಂಥವರೆಲ್ಲರೂ ಬದ್ಧರಾಗಿರುತ್ತಾರೆ. (೩೫) **ದೇಹ ಬುದ್ಧಿಯ ಪ್ರಾಬಲ್ಯದಿಂದ ಯಾರ ಜೀವನದಲ್ಲಿ ಹಣ ಹಾಗೂ ಸ್ತ್ರೀ ಇವುಗಳಿಗೇ ಸರ್ವೋಚ್ಚ ಸ್ಥಾನವಿರುವದೋ ಅವರೆಲ್ಲ ಬದ್ಧರಿರುತ್ತಾರೆ.** ಯಾರಿಗೆ ಪರಮಾರ್ಥದ ವಿಷಯದಲ್ಲಿ ಅಜ್ಞಾನ ಮತ್ತು ಪ್ರಪಂಚದ ವಿಷಯದಲ್ಲಿ ಬಹಳಷ್ಟು ಜ್ಞಾನವಿರುವದೋ ಮತ್ತು ಯಾರಿಗೆ ಸ್ವತಃಹದ ಸಮಾಧಾನದ ಬಗ್ಗೆ ತಿಳುವಳಿಕೆ ಇರುವದಿಲ್ಲವೋ ಅಂಥ ವರು ಬದ್ಧರಿರುವರು. (೩೬) ಯಾರಲ್ಲಿ ಪರಮಾರ್ಥದ ಬಗ್ಗೆ ಅನಾದರ, ಹಾಗೂ ಪ್ರಪಂಚದ ಬಗ್ಗೆ ಅತಿ ಆದರ ಇರುತ್ತದೆಯೋ ಯಾರ ತಲೆಯ ಮೇಲೆ ಸಂಸಾರದ ಭಾರ ಇರುವದೋ ಅವರು ಬದ್ಧರು. (೩೭) ಸಾಧು, ಸಂತ, ಶರಣರ-ಸಹವಾಸವಿರಬೇಕೆಂಬ ಇಚ್ಛೆಯೇ ಇಲ್ಲದಿರುವಿಕೆ, ಮತ್ತು ಸಂತರ ನಿಂದೆ ಮಾಡುವಲ್ಲಿ ಪ್ರೇಮವಿದ್ದು ಯಾವನು ದೇಹ ಬುದ್ಧಿಯಿಂದ ಗಟ್ಟಿಯಾಗಿ ಬಿಗಿಯಲ್ಪಟ್ಟಿರುವನೋ ಅಂಥವರೆಲ್ಲ ಬದ್ಧರು.(೩೮) ಯಾರು ಸದಾ ಸರ್ವಕಾಲ ದ್ರವ್ಯದ ಚಿಂತನೆಯ ಜಪ ಮಾಡುವದು, ಮನಸ್ಸಿನಲ್ಲಿ ಯಾವಾಗಲೂ ಸ್ತ್ರೀಯ ಧ್ಯಾನ ಮಾಡುವದು, ಮತ್ತು ಸತ್ಸಂಗದ ಬರಗಾಲ ಅಂದರೆ ಸತ್ಸಂಗ ಮಾಡುವ ಮನಸ್ಸೇ ಇಲ್ಲದವರೆಲ್ಲರೂ ಬದ್ಧರು. (೩೯) ಕಣ್ಣಿನಿಂದ ಕನಕ,(ದ್ರವ್ಯ), ಕಾಮಿನಿಯರನ್ನೇ ನೋಡುವವನು, ಕಿವಿಯಿಂದ ಕನಕ, ಕಾಮಿನಿಯರ ವಿಷಯವನ್ನೇ ಕೇಳುವವನು, ಮತ್ತು ಮನಸ್ಸಿನಿಂದ ಅವುಗಳ ಚಿಂತನೆಯನ್ನೇ ಮಾಡುವವನು ಇವರೆಲ್ಲ ನಿಶ್ಚಯವಾಗಿ ಬದ್ಧರಾಗಿರುವರು. (೪೦) ಯಾರು ಕಾಯಾ(ಶರೀರ), ವಾಚಾ (ವಾಣಿ), ಮನಸಾ (ಮನಸ್ಸು), ಚಿತ್ತ, ಧನ, ಜೀವ, ಪ್ರಾಣ, ಈ ಸರ್ವಸ್ವ ವನ್ನೂ (ಎಲ್ಲವನ್ನೂ) ಕನಕ, ಕಾಂತಾ ಚಿಂತನೆಗಾಗಿಯೇ ಕಳೆಯುವರೋ ಅವರೆಲ್ಲ ಬದ್ಧರು. (೪೧) ಕನಕ–ಕಾಂತಾ ಇವರಿಗಾಗಿಯೇ ತನ್ನ ಎಲ್ಲ ಇಂದ್ರಿಯಗಳನ್ನು ಒಳ್ಳೇ ಏಕಾಗ್ರತೆಯಿಂದ ಹಗಲೂ ರಾತ್ರಿ ಒಂದು ಕ್ಷಣವೂ ಅತ್ತಿತ್ತ ಚಂಚಲವಾಗಗೊಡದೆ ವಿಷಯದ ಕಡೆಗೇ ಹಚ್ಚಿರುವನೋ ಒಟ್ಟಿನಲ್ಲಿ ಇಂದ್ರಿಯಗಳೆಲ್ಲವನ್ನೂ ಕಾಯಂ ಆಗಿ ಕನಕ–ಕಾಂತಾ ಸೇವೆಗಾಗಿಯೇ ಮೀಸಲಿಟ್ಟಂತೆ ಮಾಡಿರುತ್ತಾನೆ. ಈ ಬದ್ಧ ಶಿರೋಮಣಿಯು.(೪೨) ಹೊನ್ನು ಹೆಣ್ಣೆಂದರೇ ತೀರ್ಥ. ಹೊನ್ನು ಹೆಣ್ಣೆಂದರೇ ಪರಮಾರ್ಥ. ಹೊನ್ನು ಹೆಣ್ಣೆಂದರೇ ತನ್ನ ಸರ್ವ ಸಾರ್ಥಕತೆಯೆಂದು ತಿಳಿದಿರುವ ಸ್ವಾರ್ಥಿಗಳೆಲ್ಲ ಬದ್ಧರು. [೪೩] ತನ್ನ ವೇಳೆಯನ್ನು ಒಂದರಕ್ಷಣ ವ್ಯರ್ಥ ಕಳೆಯದೇ ಸದಾಕಾಲ ಸಂಸಾರದ ಚಿಂತೆ ಯನ್ನೇ ಮಾಡುವವನು. ಮತ್ತು ದಿನನಿತ್ಯದ ಮಾತುಕತೆಗಳಲ್ಲಿ ಸಹ ಸಂಸಾರಿಕ ವಿಷಯದ ಮಾತುಕತೆಗಳೇ ಹೆಚ್ಚಾ ಗಿರುವವು. ಇಂಥವರು ಬದ್ಧರು. [೪೪] ನಾನಾ ಪ್ರಕಾರದ ಚಿಂತೆ, ನಾನಾ ಪ್ರಕಾರದ ಚಿತ್ತದ ಅಸ್ವಸ್ಥತೆ ಮತ್ತು ಸಿಡಿಮಿಡಿತನ, ಅನೇಕ ದುಃಖದ ಪ್ರಸಂಗಗಳು ಇವೆಲ್ಲವುಗಳ ಭಾನಗಡಿಯಲ್ಲಿಯೇ ನಿಮಗ್ನರಾಗಿ ಪರಮಾರ್ಥವನ್ನೇ ಬಿಟ್ಟು ಬಿಡುವಂಥವರೆಲ್ಲ ಬದ್ಧರು. [೪೫] ಗಳಿಗೆ ಪಲ ನಿಮಿಷ ಅರ್ಥಾತ್ ತಾಸು, ಮಿನಿಟು, ಸೇಕಂದು ಸಹ ಮನಸ್ಸನ್ನು ಅತ್ತಿತ್ತ ಅಲಗಗೊಡದೆ ಯಾವಾಗಲೂ, ಧನ, ಸ್ತ್ರೀ, ಪುತ್ರ ಇತ್ಯಾದಿ ಪ್ರಪಂಚದ್ದೇ ಧ್ಯಾನ ಮಾಡು ವವನು ಬದ್ಧನು. [೪೬]

ತೀರ್ಥಯಾತ್ರಾ ದಾನಪುಣ್ಯ । ಭಕ್ತಿಕಥಾ ನಿರೂಪಣ ।
ಮಂತ್ರಪೂಜಾ ಜಪಧ್ಯಾನ । ಸರ್ವಹೀ ದ್ರವ್ಯದಾರಾ ॥೪೭॥
ಜಾಗೃತಿ ಸ್ವಪ್ನ ರಾತ್ರಿ ದಿವಸ । ಐಸಾ ಲಾಗಲಾ ವಿಷಯೊ ಧ್ಯಾಸ ।
ನಾಹೀ ಕ್ಷಣಾಚಾ ಅವಕಾಶ । ಯಾ ನಾವ ಬದ್ಧ ॥೪೮॥
ಐಸೇ ಬದ್ಧಾಚೇ ಲಕ್ಷಣ । ಮುಮುಕ್ಷ ಪಣೀ ಪಾಟಲೇ ಜಾಣ ।
ಏಕ ತೇಹೀ ವೋಳಖಣ । ಪುಢಿ ಲೀಯೋ ಸಮಾಸೀ ॥೪೯॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
''ಬದ್ಧ ಲಕ್ಷಣ'' ನಾಮ ಸಮಾಸ ಸಪ್ತಮ ॥

● ●

ಅಂತೂ, ತೀರ್ಥ, ಯಾತ್ರೆ, ದಾನ, ಪುಣ್ಯ, ಭಕ್ತಿ, ಹರಿಕಥೆ ನಿರೂಪಣ, ಮಂತ್ರ, ಪೂಜೆ, ಜಪ, ಧ್ಯಾನ, ವ್ರತ, ಇತ್ಯಾದಿಗಳೆಲ್ಲ. ಹೊಲ ಮನೆ, ದ್ರವ್ಯ, ಸ್ತ್ರೀ ಪುತ್ರಾದಿಗಳಿಗಾಗಿಯೇ ಇರುತ್ತದೆ. [೪೭] ಈ ರೀತಿ ಯಾಗಿ ಎಚ್ಚರದಲ್ಲಿ, ಕನಸಿನಲ್ಲಿ ರಾತ್ರಿಯಲ್ಲಿ, ಹಗಲಿನಲ್ಲಿ, ಸರ್ವಕಾಲವೂ ದೃಶ್ಯ ಸುಖದ ಚಿಂತೆ[ವಿಷಯ ಜ್ಞಾನ] ಹಚ್ಚಿಕೊಂಡು ಬಿಡುವಿಲ್ಲದವನೇ ಆಗುವನು. ಇದೆಲ್ಲದರ ಚಿಂತೆಯಲ್ಲಿ ಮುಳಿಗಿದ್ದರಿಂದ ಒಂದು ಕ್ಷಣವೂ ಸಹ ವಿಚಾರಕ್ಕಾಸ್ಪದ ಸಿಗದಂತೆ ಆದವನು ಬದ್ಧನು. [೪೮] ಶಿಷ್ಯನೇ, ಬದ್ಧನ ಲಕ್ಷಣಗಳು ಹೀಗಿರುವವು. ಇವು ಮುಮುಕ್ಷು ದಿಶೆಯಲ್ಲಿ ಬದಲಾಗುವವು. ಮುಮುಕ್ಷು ದಿಶೆಯ ವಿವರಗಳನ್ನು ಮುಂದಿನ ಸಮಾಸದಲ್ಲಿ ವಿವರಿಸುವೆವು. ಚಿತ್ತ ಗೊಟ್ಟು ಕೇಳುವವನಾಗು. [೪೯]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದೊಳಗಿನ ಐದನೆಯ ದಶಕದಲ್ಲಿಯ
"ಬದ್ಧ ಲಕ್ಷಣ" ಎಂಬ ಏಳನೆಯ ಸಮಾಸವು ಮುಗಿದುದು

• •

## ದಶಕ ೫. ಸಮಾಸ ೮. ಮುಮುಕ್ಷು ಲಕ್ಷಣ ನಿರೂಪಣ (ನುಡಿ ೪೪)

ಮಾನವ ಜೀವನದಲ್ಲಿ ಎರಡು ವಿಧಗಳಿರುವವು. ಒಂದನೆಯದು ಪಶುತ್ವ, ಎರಡನೆಯದು ದೇವತ್ವ. ಪಶುತ್ವದ ಅಂಗವು ಅಜ್ಞಾನದ ಅಮಲಿನ ಕೈಕೆಳಗೆ ವ್ಯವಹರಿಸುತ್ತದೆ. ಎರಡನೆಯದಾದ ದೇವತ್ವದ ಅಂಗವು ಆತ್ಮ ಜ್ಞಾನದ ಅಮಲಿನ ಕೈಕೆಳಗೆ ವ್ಯವಹರಿಸುತ್ತದೆ. ಬದ್ಧ ಮನುಷ್ಯನ ಜೀವನವು ಪಶುತ್ವ ಜೀವನವೆನಿಸುತ್ತದೆ. ಬದ್ಧ ಮನುಷ್ಯನ ಆಶೆ,ಆಕಾಂಕ್ಷೆ,ಭಾವನೆ, ಮತ್ತು ವಾಸನಾ,ಹೌಸು, ಗೀಳು, ಇಚ್ಛೆ, ಹವ್ಯಾಸ, ಹಂಬಲ, ಆಸಕ್ತಿ ಇತ್ಯಾದಿ ಗಳು ದೇಹ ಸುಖದ ಸುತ್ತು-ಮುತ್ತು [ಆಸಪಾಸ] ಕೇಂದ್ರಿತ [ಒಟ್ಟುಗೂಡಿದ] ವಾಗಿರುತ್ತವೆ. ದ್ರವ್ಯ, ಹೆಂಡತಿ, ಮಕ್ಕಳು ಮತ್ತು ಪ್ರಪಂಚ ಇವುಗಳಲ್ಲಿಯೇ ಬದ್ಧ ಮನುಷ್ಯನ ಬುದ್ಧಿ ಗಟ್ಟಿಯಾಗಿ ಅಂಟಿಕೊಂಡಿರುತ್ತದೆ. ಇದರ ಮೇಲೆ ಏನಾದರೂ ಆಘಾತವಾಗಿ ಬುದ್ಧಿಯು ಅಲ್ಲಿಂದ ಸ್ಥಳ ಕಿತ್ತದ ಹೊರತು ದೇವತ್ವದ ಕಡೆಗೆ ಅಥವಾ ಶಾಶ್ವತ ಆತ್ಮಜ್ಞಾನದ ಕಡೆಗೆ ಹೋಗುವ ಮಾರ್ಗ ಖುಲ್ಲಾ ಆಗುವದಿಲ್ಲ. ರೋಗ, ಬಡತನ, ದೀನತನ, ಅಪಘಾತ, ಮತ್ತು ಸ್ವಜನರ ಆಕಸ್ಮಿಕ ಮರಣ ಹಾಗೂ ಇಂಥವೇ ಇತರ ಪ್ರಬಲ ಆಪತ್ತುಗಳಿಂದ ಮನುಷ್ಯನ ಅಂತರಂಗವು ಗದಗದಾ ಅಲ್ಲಾಡಿ ಅಲ್ಲೋಲ ಕಲ್ಲೋಲವಾಗುತ್ತದೆ. ಆಗ ಅವನಲ್ಲಿಯ ದೇವತ್ವವು ಜಾಗ್ರುತಗೊಳ್ಳುವದು. ಅನಂತರ ಅವನು ಆ ಪಶುತ್ವ ಅಂದರೆ ಬದ್ಧತನದಿಂದ ಹೊರಬೀಳಬೇಕೆಂದು ತಳಮಳಗೊಳ್ಳುವನು[ಉದ್ಯುಕ್ತನಾಗುವನು].ಈ ಮನದ ತಳಮಳದ ಅವಸ್ಥೆಗೆ ಮುಮುಕ್ಷುತ್ವವೆಂದು ಅನ್ನುವರು. ಮುಮುಕ್ಷುತ್ವದ ಉದಯವಾಯಿತೆಂದರೆ ಅವನಿಗೆ ಅವನ ಪೂರ್ವಾಯುಷ್ಯದ ಆದದ್ದೆಲ್ಲ ಜ್ಞಾಪಕವಾಗಿ ಇಲ್ಲಿಯವರೆಗೆ ತನ್ನ ಕೈಯಿಂದ ಘಟಿಸಿದ ತಪ್ಪುಗಳು, ಕುಕರ್ಮದ ಕಾರ್ಯಗಳು ಸ್ಮರಣೆಗೆ ಬಂದು ಅವನಿಗೆ ಅತಿಶಯ ದುಃಖವಾಗುತ್ತದೆ, ತಳಮಳವಾಗುತ್ತದೆ. ಇದಕ್ಕೆ ಅನುತಾಪ, ಪಶ್ಚಾತ್ತಾಪವೆನ್ನುವರು. ಅನುತಾಪಗೊಳ್ಳದ ಹೊರತು ಪರಮಾರ್ಥ ಸಾಧಿಸುವದಿಲ್ಲ. ಇಲ್ಲಿಯವರೆಗೆ ಜೀವನದಲ್ಲಿ ಒದಗಿ ಬಂದ ವಿಷಯಗಳ ಬಗ್ಗೆ ಅನುತಾಪ ಒಂದು ಕಡೆಗೆ, ಇದರೊಂದಿಗೆ ಇನ್ನೊಂದು ಕಡೆಯಿಂದ ಆತ್ಮಜ್ಞಾನದ ಬಗ್ಗೆ ತಳಮಳ ಇವೆರಡೂ ಮುಮುಕ್ಷುತ್ವದ ಎರಡು ಅಂಗಗಳೆಂದು ಹೇಳಬಹುದು. ಒಂದನೆಯ ಅನುತಾಪದಿಂದ ಈ ವರೆಗಿದ್ದ ಜೀವನ ಪದ್ಧತಿಯಲ್ಲಿ ಆಮೂಲಾಗ್ರ ಬದಲಾವಣೆಯಾಗುತ್ತದೆ. ಅಂತೆಯೇ ಸಾಧು ಸಂತರು ಮುಮುಕ್ಷು ತನಕ್ಕೆ, "ಹೊಸ ಜನ್ಮ"ವೆನ್ನುತ್ತಾರೆ. ಎರಡನೆಯದಾದ ಆತ್ಮಜ್ಞಾನದ ತಳಮಳದಿಂದ ಮುಮುಕ್ಷುವು ಸಂತ ಸಾಧು ಶರಣರ ಸಹವಾಸ ಹಿಡಿಯುತ್ತಾನೆ. ಮತ್ತು ಆ ಸತ್ಪುರುಷರು ಹೇಳಿದಂತೆ ಸಾಧನೆ ಪ್ರಾರಂಭಿಸಿ ಸಾಧಕನಾಗುತ್ತಾನೆ.

## ಸಮಾಸ ಅಷ್ಟಮ : ಮುಮುಕ್ಷು ಲಕ್ಷಣ

॥ಶ್ರೀರಾಮ॥ ಸಂಸಾರ ಮದಾಚೇನಿ ಗುಣೇ । ನಾನಾ ಹೀನೇ ಕುಲಕ್ಷಣೇ ।
ಜಯಾಚೇನಿ ಮುಖಾವಲೋಕನೇ । ದೋಷ ಚಿ ಲಾಗೇ ॥೧॥

ಐಸಾ ಪ್ರಾಣೀ ಜೋ ಕಾ ಬದ್ಧ । ಸಂಸಾರೀ ವರ್ತತಾ ಅಬದ್ಧ ।
ತಯಾಸ ಪ್ರಾಪ್ತ ಜಾಲಾ ಖೇದ । ಕಾಳಾಂತರೀ ॥೨॥

ಸಂಸಾರ ದುಃಖೇ ದುಖವಲಾ । ತ್ರಿವಿಧತಾಪೇ ಪೋಳಲಾ।
ನಿರೂಪಣೇ ಪ್ರಸ್ತಾವಲಾ । ಅಂತರ್ಯಾಮೀ ॥೩॥

ಜಾಲಾ ಪ್ರಪಂಚೀ ಉದಾಸ । ಮನೇ ಘೇತಲಾ ವಿಷಯತ್ರಾಸ ।
ಮ್ಹಣೆ ಆತಾ ಪುರೆ ಸೋಸ । ಸಂಸಾರೀಚಾ ॥೪॥

ಪ್ರಪಂಚ ಜಾಈಲ ಸಕಳ । ಯೇಥೀಲ ಶ್ರಮ ತೋ ನಿರ್ಫಳ ।
ಆತಾ ಕಾಹೀ ಆಪುಲಾ ಕಾಳ । ಸಾರ್ಥಕ ಕರೂ ॥೫॥

ಐಸೀ ಬುದ್ಧಿ ಪ್ರಸ್ತಾವಲೀ । ಪೋಟೀ ಆವಸ್ತಾ ಲಾಗಲೀ ।
ಮ್ಹಣೆ ಮಾಝೀ ವಯೆಸಾ ಗೇಲೀ । ವ್ಯರ್ಥ ಚಿ ಆವಘೀ ॥೬॥

ಪೂರ್ವೀ ನಾನಾ ದೋಷ ಕೇಲೆ । ತೇ ಅವಘೇ ಚಿ ಆಠವಲೆ।
ಪುಢೇ ಯೆಊನಿ ಉಭೇಠೇಲೆ । ಅಂತರ್ಯಾಮೀ ॥೭॥

ಆಠವೇ ಯೆಮಾಚೀ ಯಾತನಾ। ತೇಣೇ ಭಯೆಂಚಿ ವಾಟೆ ಮನಾ।
ನಾಹೀ ಪಾಪಾಸಿ ಗಣನಾ । ಮ್ಹಣೌನಿಯಾ ॥೮॥

ನಾಹೀ ಪುಣ್ಯಾಚಾ ವಿಚಾರ । ಜಾಲೆ ಪಾಪಾಚೆ ಡೋಂಗರ ।
ಆತಾ ದುಸ್ತರ ಹಾ ಸಂಸಾರ । ಕೈಸಾ ತರೋ ॥೯॥

ಆಪಲೇ ದೋಷ ಆಚ್ಛಾದಿಲೇ । ಭಲ್ಯಾಸ ಗುಣದೋಷ ಲಾವಿಲೆ।
ದೇವಾ ಮ್ಯಾ ವ್ಯರ್ಥ ಚ ನಿಂದಿಲೇ। ಸಂತ ಸಾಧು ಸಜ್ಜನ ॥೧೦॥

ನಿಂದೇ ಐಸೆ ನಾಹೀ ದೋಷ। ತೇ ಮಜ ಘಡಲೆ ಕೀ ವಿಶೇಷ ।
ಮಾಝ್ಯೋ ಅವಗುಣೀ ಆಕಾಶ। ಬುಡೋ ಪಾಹೇ ॥೧೧॥

ನಾಹೀ ವೊಳಖಿಲೆ ಸಂತ । ನಾಹೀ ಅರ್ಚಿಲಾ ಭಗವಂತ ।
ನಾಹೀ ಅತಿತ ಅಭ್ಯಾಗತ । ಸಂತುಷ್ಟ ಕೇಲೇ ॥೧೨॥

ಪೂರ್ವ ಪಾಪ ವೋಢವಲೇ। ಮಜ ಕಾಹೀ ಚ ನಾಹೀ ಘಡಲೇ ।
ಮತ ಅವ್ಹಾಟೇ ಪಡಿಲೇ । ಸರ್ವಕಾಳ ॥೧೩॥

## ದಶಕ ೫. ಸಮಾಸ ೮. ಮುಮುಕ್ಷು ಲಕ್ಷಣ ನಾಮ ನಿರೂಪಣ (ನುಡಿ ೪೪)

**ಪ್ರಪಂಚದಲ್ಲಿ ಮಗ್ನರಾಗಿರುವ ಬದ್ಧರು ಸಂಸಾರಿಕ ಆಪತ್ತು ಬಂದ ಮೇಲೆಯೇ ಅವರು ಎಚ್ಚರಾಗುವರು. ಅವರಿಗೆ ಪಶ್ಚಾತ್ತಾಪವಾಗಿ ಅವರ ಮನಸ್ಸು ಪ್ರಪಂಚದ ಮೇಲಿಂದ ಹಾರುತ್ತದೆ:-** ಬದ್ಧ ಮನುಷ್ಯನು ಸಂಸಾರ ಮದದಿಂದ ಉನ್ಮತ್ತನಾಗಿರುವನು. ಇವನಲ್ಲಿ ಅನೇಕ ಹೀನ ಮತ್ತು ಕೆಟ್ಟ ಲಕ್ಷಣಗಳು ಉತ್ಪನ್ನವಾಗುವವು. ಇವನ ಮುಖಾವಲೋಕನದಿಂದ ಪಾಪ ಬರುವದು. (೧) ಇಂಥ ಉನ್ಮತ್ತ ಬದ್ಧನು ಸಂಸಾರದಲ್ಲಿ ಮನಸೋಕ್ತವಾಗಿ ಕಾಲ ಕಳೆಯುತ್ತಾನೆ. ಆದರೆ ಕಾಲಾಂತರದಲ್ಲಿ ಅವನಿಗೆ ದುಃಖಪಡುವ ಪ್ರಸಂಗವು ನಿಶ್ಚಿತವಾಗಿ ಬರುತ್ತದೆ. (೨) ಸಂಸಾರದಲ್ಲಿಯ ದುಃಖಗಳ ಹೊಡೆತ ಬಿದ್ದು ತ್ರಿವಿಧ ತಾಪಗಳಿಂದ ಹುರಪಳಿಸಿ ಹಣ್ಣಾಗುತ್ತಾನೆ. ಆಗ ಯಾವನೋ ಒಬ್ಬ ಸತ್ಪುರುಷನ ಉಪದೇಶ (ನಿರೂಪಣ) ಆಕಸ್ಮಾತ್ತಾಗಿ ಕಿವಿಗೆ ಬಿದ್ದು ಅವನ ಮನಸ್ಸಿನಲ್ಲಿ ಪಶ್ಚಾತ್ತಾಪ ಉತ್ಪನ್ನವಾಗುತ್ತದೆ. ಆಗ ಹಳಹಳಿಸುತ್ತಾನೆ. (೩) ಒಟ್ಟಿನಲ್ಲಿ ಪ್ರಪಂಚದ ಬಗ್ಗೆ ಬೇಸರಗೊಳ್ಳುತ್ತಾನೆ. ಉದಾಸೀನವಾದ ಅವನು ಮನದಲ್ಲಿ ಇಂದ್ರಿಯ ಭೋಗ ಲಾಲಸೆಯ ಬಗ್ಗೆ ಸಿಡಿಮಿಡಿಗೊಳ್ಳುತ್ತಾನೆ ಆಗ ಅವನ ಮನಸ್ಸಿನಲ್ಲಿ ಹೀಗೆ ವಿಚಾರ ಬರುತ್ತಗೆ. "ಇನ್ನು ಸಂಸಾರದ-ಪ್ರಪಂಚದ ಹವ್ಯಾಸ, ದುರಾಸೆಗಳು ಸಾಕು." ಅನ್ನುತ್ತಾನೆ. (೪) ಈ ಹಂಗಾಮಿಯಾದ ಪ್ರಪಂಚವು ಒಂದು ದಿನ ನಾಶವಾಗುತ್ತದೆ. ಇದರ ಸಲುವಾಗಿ ಮಾಡುವ ಶ್ರಮ (ದುಡಿತ) ವ್ಯರ್ಥವಾದದ್ದೇ ಸರಿ. ಆದ್ದರಿಂದ ಇನ್ನು ಮುಂದಿನ ಆಯುಷ್ಯವನ್ನು ಸಾರ್ಥಕ ಮಾಡಿಕೊಳ್ಳಬೇಕೆಂದು ಅನ್ನುವನು. (೫) **ಬದ್ಧನಿಗೆ ಪಶ್ಚಾತ್ತಾಪ ಆದ ನಂತರ ಅವನ ಮನಸ್ಸಿನಲ್ಲಿ ಎಷ್ಟೊಂದು ಘಾಲಮೇಲ (ಉಲಾಢಾಲ) ಆಗುವದೆಂಬುದರ ವರ್ಣನೆಯನ್ನು ಶ್ರೀ ಸಮರ್ಥರು ಯಥಾರ್ಥವಾಗಿ ಮುಂದಿನ ಓವಿಯಲ್ಲಿ ವರ್ಣಿಸಿದ್ದಾರೆ:-** ಈ ರೀತಿಯಾಗಿ ಅವನ ಬುದ್ಧಿಗೆ ಪಶ್ಚಾತ್ತಾಪವಾಗಿ ಮನಸ್ಸು ತಳಮಳಗೊಳ್ಳುತ್ತದೆ. ಆಗ ಅವನು ಕಳವಳದಿಂದ "ನನ್ನ ವಯಸ್ಸೆಲ್ಲವೂ ನಿರರ್ಥಕವಾಗಿ ಕಳೆಯಿತಲ್ಲ" ಎಂದು ಅನ್ನ ಹತ್ತುವನು. (೬) ಅವನಿಗೆ ತಾನು ಮೊದಲು ಮಾಡಿದ ದುಷ್ಕರ್ಮಗಳೆಲ್ಲ ನೆನಪಾಗಿ ಅವು ಕಣ್ಣು ಮುಂದೆ ಧುತ್ತೆಂದು ಬಂದು ನಿಲ್ಲ ಹತ್ತುವವು. ತಳಮಳ ಉಂಟಾಗುವದು. (೭) ಹಾಗೂ ಪೂರ್ವದಲ್ಲಿ ಅವನ ಕೈಯಿಂದ ಅಗಣಿತ ಪಾಪಗಳು ಘಟಿಸಿದ್ದರಿಂದಲೇ ಅವನಿಗೆ ತಾನು ಯಮಯಾತನೆ ಅನುಭವಿಸಬೇಕಾಯಿತಲ್ಲ. ಎಂಬ ಅರಿವು ಉಂಟಾದ ಕೂಡಲೇ ಬಹಳ ಭಯ ಉಂಟಾಗುತ್ತದೆ. (೮) ಅವನು ತನ್ನಷ್ಟಕ್ಕೆ ತಾನೇ "ನಾನು ಸ್ವಲ್ಪವೂ ಪುಣ್ಯ ವಿಷಯಗಳ ಬಗ್ಗೆ ವಿಚಾರ ಮಾಡಲಿಲ್ಲ. (ಪುಣ್ಯವನ್ನೇ ಮಾಡಲಿಲ್ಲ). ಆದರೆ ಪಾಪದ ಪರ್ವತ ಮಾತ್ರ ನನ್ನಿಂದ ರಚಿತವಾಯಿತು ಈ ಸಂಸಾರದಿಂದ ಪಾರಾಗುವದು ಬಹಳ ಕಠಿಣ. ಇನ್ನು ಇದರಿಂದ ಪಾರಾಗಿ ಉದ್ಧಾರ ಹೊಂದುವದು ಹೇಗೆ?(೯) ನಾನು ನನ್ನ ಕುಂದುಗಳನ್ನು ಮುಚ್ಚಿಟ್ಟಿನಲ್ಲದೇ ಒಳ್ಳೆಯ ಮನುಷ್ಯರಿಗೆ ಇಲ್ಲದ ದೋಷ ಹೊರಿಸಿದನು. ದೇವಾ ! ನಾನು ನಿಷ್ಕಾರಣವಾಗಿ ಸಂತ, ಸಾಧು, ಸಜ್ಜನರನ್ನು ನಿಂದಿಸಿದೆನು. (೧೦) ನಿಂದಿಸುವದರಂಥ ಪಾತಕ ಇನ್ನೊಂದಿಲ್ಲವೆಂದು ಹಿರಿಯರು ಹೇಳುತ್ತಾರೆ. ನಾನಾದರೋ ಇದನ್ನೇ ಬಹುವಾಗಿ ಮಾಡಿದ್ದೇನೆ. ನಾನು ಬಹು ಪಾಪಿ. ನನ್ನ ಅವಗುಣಗಳ ವಿಸ್ತಾರ ಎಷ್ಟಿದೆಯೆಂದರೆ ಇದರಲ್ಲಿ ಆಕಾಶವೂ ಮುಳುಗಿ ಹೋಗುತ್ತದೆ. (೧೧) ಸಂತರನ್ನು ಗುರುತಿಸಿ ನಮಸ್ಕರಿಸಲಿಲ್ಲ. ಅವರನ್ನು ಮನ್ನಿಸಲೂ ಇಲ್ಲ. ಭಗವಂತನ ಪೂಜೆಯನ್ನೂ ಸಹ ಮಾಡಲಿಲ್ಲ. ಅತಿಥಿ–ಅಭ್ಯಾಗತರ ಸೇವೆ ಮಾಡಿ ಅವರನ್ನು ಸಂತೋಷಪಡಿಸಲಿಲ್ಲ. (೧೨) ನನ್ನ ಪೂರ್ವ ಸಂಚಿತ ಪಾಪವು ಅಡ್ಡ ಬಂದದ್ದರಿಂದಲೇ ಏನೋ, ನನ್ನಿಂದ ಯಾವ ಸತ್ಕಾರ್ಯವೂ ಘಟಿಸಲಿಲ್ಲ. ನನ್ನ ಮನಸ್ಸು ಸರ್ವಕಾಲವೂ ಅಡ್ಡ ಮಾರ್ಗದಲ್ಲಿಯೇ ಹೋಯಿತು. (೧೩)

ನಾಹೀ ಕಷ್ಟವಿಲೇ ಶರೀರ । ನಾಹೀ ಕೇಲಾ ಪರೋಪಕಾರ ।
ನಾಹೀ ರಕ್ಷಿಲಾ ಆಚಾರ । ಕಾಮುಮುದೇ ॥೧೪॥

ಭಕ್ತಿಮಾತಾ ಹೇ ಬುಡವಿಲೀ । ಶಾಂತಿ ವಿಶ್ರಾಂತಿ ಮೋಡಿಲೀ ।
ಮೂರ್ಖಪಣೇ ಮ್ಯಾ ವಿಘಡಿಲೀ । ಸದ್‌ಬುದ್ಧಿ ಸದ್ವಾಸನಾ ॥೧೫॥

ಆತಾ ಕೈಸೇ ಘಡೇ ಸಾರ್ಥಕ । ದೋಷ ಕೇಲೆ ನಿರಾರ್ಥಕ ।
ಪಾಹೋ ಜಾತಾ ವಿವೇಕ । ಉರಲಾ ನಾಹೀ ॥೧೬॥

ಕೋಣ ಉಪಾಯೆ ಕರಾವಾ । ಕೈಸಾ ಪರಲೋಕ ಪಾವಾವಾ ।
ಕೋಣ್ಯಾ ಗುಣೇ ದೇವಾಧಿದೇವಾ । ಪಾವಿಜೇಲ ॥೧೭॥

ನಾಹೀ ಸದ್ಭಾವ ಉಪಜಲಾ । ಅವಘಾ ಲೋಕಿಕ ಸಂಪಾದಿಲಾ ।
ದಂಭ ವರಪಂಗೆ ಕೇಲಾ । ಖಟಾಟೋಪ ಕರ್ಮಾಚಾ ॥೧೮॥

ಕೀರ್ತನ ಕೇಲೇ ಪೋಟಾಸಾಟೀ । ದೇವ ಮಾಂಡಿಲೇ ಹಾಟವಟೀ ।
ಆಹಾ ದೇವಾ ಬುದ್ಧಿ ಖೋಟೀ । ಮಾಝೀ ಮೀಚ ಜಾಣೇ ॥೧೯॥

ಪೋಟೀ ಧರೂನಿ ಅಭಿಮಾನ । ಶಬ್ದೀ ಬೋಲೆ ನಿರಭಿಮಾನ ।
ಅಂತರೀ ವಾಂಛೂನಿಯಾ ಧನ । ಧ್ಯಾನಸ್ಥ ಜಾಲೋ ॥೨೦॥

ವ್ಯುತ್ಪತ್ತೀನೇ ಲೋಕ ಭೋಂದಿಲೆ । ಪೋಟಾಸಾಠೀ ಸಂತ ನಿಂದಿಲೆ ।
ಮಾಝೆ ಪೋಟೀ ದೋಷ ಭರಲೆ । ನಾನಾ ಪ್ರಕಾರೀಚೆ ॥೨೧॥

ಸತ್ಯ ತೇಚಿ ಉಚ್ಛೇದಿಲೇ । ಮಿಥ್ಯ ತೇಚಿ ಪ್ರತಿಪಾದಿಲೇ ।
ಐಸೇ ನಾನಾ ಕರ್ಮ ಕೇಲೇ । ಉದರಂಭರಾಕಾರಣೇ ॥೨೨॥

ಐಸಾ ಪೋಟೀ ಪ್ರಸ್ತಾವಲಾ। ನಿರೂಪಣೇ ಪಾಲಟಲಾ ।
ತೋಚಿ ಮುಮುಕ್ಷ ಬೋಲಿಲಾ। ಗ್ರಂಥಾಂತರೀ ॥೨೩॥

ಪುಣ್ಯಮಾರ್ಗ ಪೋಟೀ ಧರೀ । ಸತ್ಸಂಗಾಚೀ ವಾಂಛಾ ಕರೀ।
ವಿರಕ್ತ ಜಾಲಾ ಸಂಸಾರೀ । ಯಾ ನಾಂವ ಮುಮುಕ್ಷ ॥೨೪॥

ಗೇಲೇ ರಾಜೀ ಚಕ್ರವತೀ। ಮಾಝೋ ವೈಭವ ತೇ ಕಿತೀ ।
ಮ್ಹಣೆ ಧರೂ ಸತ್ಸಂಗತೀ। ಯಾ ನಾಂವ ಮುಮುಕ್ಷ ॥೨೫॥

ಆಪುಲೆ ಅವಗುಣ ದೇಖೆ । ವಿರಕ್ತಿಬಳೇ ಮೋಳಖೆ ।
ಆಪಣಾಸಿ ನಿಂದೀ ದುಃಖೇ । ಯಾ ನಾಂವ ಮುಮುಕ್ಷ ॥೨೬॥

ಉತ್ತಮ ಕೆಲಸ ಕಾರ್ಯಗಳಿಗೆ ಶರೀರವನ್ನು ದುಡಿಸಲಿಲ್ಲ. ಎಷ್ಟೂ ಪರೋಪಕಾರ ಮಾಡಲಿಲ್ಲ. ಕಾಮ ಮದದಿಂದ ನನ್ನ ನಡವಳಿಕೆಯನ್ನು (ಆಚಾರವನ್ನು) ಕಾಯಲಿಲ್ಲ. (೧೪) ನಾನು ಭಕ್ತಿ ಎಂಬ ತಾಯಿಯನ್ನು ಮುಳುಗಿಸಿ ಬಿಟ್ಟೆನು. ಶಾಂತಿ ಎಂಬ ವಿಶ್ರಾಂತಿಯನ್ನು ಮುರಿದು ಹದಗೆಡಿಸಿದೆನು. ಭಗವಂತನ ಕಡೆಗೆ ಕರೆದೊಯ್ಯುವ ಸದ್ಬುದ್ಧಿ ಮತ್ತು ಸದ್ವಾಸನೆಯನ್ನು ಮೂರ್ಖತನದಿಂದ ಕೆಡಿಸಿ ಅಸಮರ್ಥಗೊಳಿಸಿದೆನು. (೧೫) ನಾನು ವಿನಾಕಾರಣ ಪಾಪಾಚರಣೆ ಮಾಡಿದೆನು. ಇನ್ನು ಮೇಲೆ ನನ್ನ ಸಾರ್ಥಕತೆ ಹೇಗಾದೀತು ? ನಾನು ಬಹು ದೋಷ ಮಾಡಿದ್ದೇನೆ. ವಿವೇಕವೆಂಬುದು ನನ್ನಲ್ಲಿ ಉಳಿದೇ ಇಲ್ಲ. (೧೬) ಇದಕ್ಕೆ ನಾನೇನು ಉಪಾಯ ಮಾಡಬೇಕು ? ಪರಮಾರ್ಥ ಹೇಗೆ ಸಾಧಿಸಬೇಕು ? ಯಾವ ಮಾರ್ಗ ಹಿಡಿದರೆ ನನಗೆ ಭಗವಂತ ಸಿಕ್ಕುವನು ? (೧೭) ಭಗವಂತನ ವಿಷಯವಾಗಿ ನಿಜವಾದ ಶ್ರದ್ಧಾ ಮತ್ತು ನಿಜವಾದ ಪ್ರೇಮ ನನಗೆ ಎಂದೂ ಈ ವರೆಗೆ ಉಂಟಾಗಲೇ ಇಲ್ಲ. ಈ ವರೆಗೆ ನಾನು ಏನೇನು ಮಾಡಿದೆನೋ ಅದೆಲ್ಲ ಲೌಕಿಕದಲ್ಲಿ ಅಂದರೆ ನಾಲ್ಕು ಜನರಲ್ಲಿ ಹೊಗಳಿಸಿಕೊಳ್ಳಲಿಕ್ಕೆ, ಭಲೇ ಎನಿಸಿಕೊಳ್ಳಲಿಕ್ಕೆಂದೇ ಮಾಡಿದೆನು. ದಂಭದಿಂದ ತೋರಿಕೆಗಾಗಿ ಕರ್ಮಾಚರಣೆ ಮಾಡಿದೆನು. ಅದು ಕೇವಲ ಡಂಭಾಚಾರವೇ ಆಗಿದ್ದಿತು. (೧೮) ಹೊಟ್ಟೆಯ ಪಾಡಿಗಾಗಿ ಕೀರ್ತನೆ ಮಾಡಿದೆನು. ದೇವರನ್ನು ಸಂತೆ ಕಟ್ಟೆಯಲ್ಲಿಟ್ಟೆನು. ಅದರಿಂದ ಹಣ ಸಂಪಾದಿಸಿದೆನು. ಹೇ ದೇವಾ ! ನನ್ನ ಬುದ್ಧಿ ಎಷ್ಟು ಸುಳ್ಳಾಗಿತ್ತೆಂಬುದು ನನ್ನದು ನನಗೇ ಗೊತ್ತಿರುವದು, ನಾನು ಸರ್ವಾಪರಾಧಿ (೧೯) ಹೊಟ್ಟೆಯೊಳಗೆ ಅಭಿಮಾನ ಇಟ್ಟುಕೊಂಡು ಹೊರಗೆ ಮಾತ್ರ ನಿರಭಿಮಾನದ ಸೋಗು ಹಾಕಿ ಥಾಪ (ಸುಳ್ಳೊಂದು ಸೊಟ್ಟೊಂದು) ಹೊಡೆಯುತ್ತಿದ್ದೆನು. ಮನಸ್ಸಿನಲ್ಲಿ ಪೂರ್ಣ ಹಣದಾಸೆ ಇಟ್ಟುಕೊಂಡು ಬಹಿರಂಗದಲ್ಲಿ ಮಾತ್ರ ಧ್ಯಾನಕ್ಕೆ ಕುಳಿತಂತೆ ಸೋಗು ಹಾಕುತ್ತಿದ್ದೆನು. (೨೦) ಪುಸ್ತಕೀ ಶಾಸ್ತ್ರ ಪಾಂಡಿತ್ಯ ತೋರಿಸಿ ಜನರನ್ನು ಫಸಾಯಿಸಿದೆನು. ಕೇವಲ ಹೊಟ್ಟೆಯ ಪಾಡಿಗಾಗಿ ಸಾಧು ಸಂತರ ನಿಂದೆ ಮಾಡಿದೆನು. ಇಂಥ ಅನೇಕ ಪ್ರಕಾರದ ದೋಷಗಳು ನನ್ನಲ್ಲಿ ತುಂಬಿರುವವು. (೨೧) ನಾನು ಸತ್ಯದ ತಿರಸ್ಕಾರ ಮಾಡಿದೆನು. ಸತ್ಯದ ನಾಶಕ್ಕಾಗಿ ಪ್ರಯತ್ನಿಸಿದೆನು. ಸುಳ್ಳನ್ನೇ ಸತ್ಯವೆಂದು ಪ್ರತಿಪಾದಿಸಿದೆನು. ಇಷ್ಟೆಲ್ಲವೂ ಕೇವಲ ಹೊಟ್ಟೆಪಾಡಿಗಾಗಿ ದುರಭಿಮಾನಕ್ಕೆ ಬಿದ್ದು ಕೆಟ್ಟ ಕರ್ಮ ಮಾಡಿದೆನು. (೨೨) ಹೀಗೆ ಅಂತಃಕರಣದಲ್ಲಿ ನಿಜವಾದ ಪಶ್ಚಾತ್ತಾಪ ಯಾರಿಗೆ ಆಗುವದೋ ಅಂಥವರು ಮತ್ತು ಯಾರು ಸದ್ಗುರು ಉಪದೇಶದಿಂದ ಒಳಗೂ ಹೊರಗೂ ಪಲ್ಲಟಿಸುವರೋ (ಬದಲಾಗುವರೋ) ಅಂಥವರೆಲ್ಲರಿಗೂ ಪರಮಾರ್ಥದ ಗ್ರಂಥಗಳಲ್ಲಿ "ಮುಮುಕ್ಷು" ಎಂದು ಅಂದಿರುವರು. (೨೩) **ಇನ್ನು ಮುಂದೆ ಮುಮುಕ್ಷುವಿನ ಕೆಲವು ಲಕ್ಷಣಗಳನ್ನು ಹೇಳುವರು:–** ಮೇಲೆ ಹೇಳಿದಂತೆ ಅನುತಾಪ ಹೊಂದಿ ಮನಃಪೂರ್ವಕ ಪುಣ್ಯಮಾರ್ಗದ ಆಚರಣೆ ಮಾಡುವದನ್ನು ನಿಶ್ಚಯಿಸಿ ಅದರಂತೆ ನಡೆಯುವವನು, ಸತ್ಸಂಗದ ಇಚ್ಛೆ ಹೊಂದಿದವನು ಮತ್ತು ಅಸಾರವಾದ ಸಂಸಾರದ ಬಗ್ಗೆ ವೈರಾಗ್ಯ ಹುಟ್ಟಿದವನು ಮುಮುಕ್ಷು ಎನಿಸುವನು, (೨೪) "ದೊಡ್ಡ ದೊಡ್ಡ ರಾಜ ಮಹಾರಾಜ, ಚಕ್ರವರ್ತಿ ರಾಜರೆಲ್ಲರೂ ಹೇಳ ಹೆಸರಿಲ್ಲದೇ ಇಲ್ಲದಂತಾಗಿ ಹೋದ ಮೇಲೆ "ನನ್ನ ವೈಭವದ ಬಿಸಾಟವೇನು ?" ಹೀಗೆ ವಿವೇಕ ಉತ್ಪನ್ನವಾಗಿ ಸಂಸಾರದ ಮೇಲಿನ ನಂಬಿಗೆ ಹಾರಿ ಯಾರು "ಸತ್ಸಂಗತಿ ಮಾಡೋಣ"ವೆಂದು ಬಯಸುವರೋ ಅವರು ಮುಮುಕ್ಷುಗಳಾಗಿರುವರು. (೨೫) ಯಾರು ಸ್ವತಃದ ದೋಷಗಳನ್ನು ಕಂಡು ಹಿಡಿದು ವೈರಾಗ್ಯದ ಬಲದಿಂದ ಅವುಗಳನ್ನು ಸರಿಯಾಗಿ ತಿಳಿದುಕೊಂಡು ಆ ಮೇಲೆ ತನ್ನನ್ನು ತಾನೇ ಉದ್ವೇಗದಿಂದ ಹಳಿದುಕೊಳ್ಳುತ್ತಾರೋ ಅವರೆಲ್ಲ ಮುಮುಕ್ಷುಗಳು. (೨೬)

ಮ್ಹಣೆ ಮೀ ಕಾಯೆ ಅನೋಪಕಾರೀ । ಮ್ಹಣೆ ಮೀ ಕಾಯೆ ದಂಭಧಾರೀ ।
ಮ್ಹಣೆ ಮೀ ಕಾಯೆ ಅನಾಚಾರೀ । ಯಾ ನಾಂವ ಮುಮುಕ್ಷ ॥೧೭॥

ಮ್ಹಣೆ ಮೀ ಪತಿತ ಚಾಂಡಾಳ । ಮ್ಹಣೆ ಮೀ ದುರಾಚಾರೀ ಖಳ ।
ಮ್ಹಣೆ ಮೀ ಪಾಪೀ ಕೇವಳ । ಯಾ ನಾಂವ ಮುಮುಕ್ಷ ॥೧೮॥

ಮ್ಹಣೆ ಮೀ ಅಭಕ್ತ ದುರ್ಜನ । ಮ್ಹಣೆ ಮೀ ಹೀನಾಹೂನಿ ಹೀನ ।
ಮ್ಹಣೆ ಮೀ ಜನ್ಮಲೋ ಪಾಷಾಣ । ಯಾ ನಾಂವ ಮುಮುಕ್ಷ ॥೧೯॥

ಮ್ಹಣೆ ಮೀ ದುರಭಿಮಾನೀ । ಮ್ಹಣೆ ಮೀ ತಪೀಳ ಜನೀ ।
ಮ್ಹಣೆ ಮೀ ನಾನಾ ವ್ಯಸನೀ । ಯಾ ನಾಂವ ಮುಮುಕ್ಷ ॥೨೦॥

ಮ್ಹಣೆ ಮೀ ಆಳಸೀ ಆಂಗಚೋರ । ಮ್ಹಣೆ ಮೀ ಕಪಟೀ ಕಾತರ ।
ಮ್ಹಣೆ ಮೀ ಮೂರ್ಖ ಅವಿಚಾರ। ಯಾ ನಾಂವ ಮುಮುಕ್ಷ ॥೨೧॥

ಮ್ಹಣೆ ಮೀ ನಿಕಾಮೀ ವಾಚಾಳ । ಮ್ಹಣೆ ಮೀ ಪಾಷಾಂಡೀ ತೋಂಡಾಳ।
ಮ್ಹಣೆ ಮೀ ಕುಬುದ್ಧಿ ಕುಟಿಳ । ಯಾ ನಾಂವ ಮುಮುಕ್ಷ ॥೨೨॥

ಮ್ಹಣೆ ಮೀ ಕಾಂಹೀಚ ನೇಣೇ । ಮ್ಹಣೆ ಮೀ ಸಕಳಾಹೂನಿ ಉಣೇ ।
ಆಪಲೀ ವರ್ಣೀ ಕುಲಕ್ಷಣೇ । ಯಾ ನಾಂವ ಮುಮುಕ್ಷ ॥೨೩॥

ಮ್ಹಣೆ ಮೀ ಅನಾಧಿಕಾರೀ। ಮ್ಹಣೆ ಮೀ ಕುಶ್ಚಿಳ ಅಘೋರೀ ।
ಮ್ಹಣೆ ಮೀ ನೀಚ ನಾನಾಪರೀ । ಯಾ ನಾಂವ ಮುಮುಕ್ಷ ॥೨೪॥

ಮ್ಹಣೆ ಮೀ ಕಾಯೆ ಆಪಸ್ವಾರ್ಥೀ । ಮ್ಹಣೆ ಮೀ ಕಾಯೆ ಅನರ್ಥೀ ।
ಮ್ಹಣೆ ಮೀ ನಷ್ಟ ಪರಮಾರ್ಥೀ । ಯಾ ನಾವ ಮುಮುಕ್ಷ ॥೨೫॥

ಮ್ಹಣೆ ಮೀ ಅವಗುಣಾಚೀ ರಾಸೀ । ಮ್ಹಣೆ ಮೀ ವ್ಯರ್ಥ ಆಲೋ ಜನ್ಮಾಸೀ।
ಮ್ಹಣೆ ಮೀ ಭಾರ ಜಾಲ್ಯೋ ಭೂಮೀಸೀ । ಯಾ ನಾವ ಮುಮುಕ್ಷ ॥೨೬॥

ಆಪಣಾಸ ನಿಂದೀ ಸಾವಕಾಸ । ಪ್ರೋಟೀ ಸಂಸಾರಾಚಾ ತ್ರಾಸ ।
ಧರೀ ಸತ್ಸಂಗಾಚಾ ಹವ್ಯಾಸ । ಯಾ ನಾವ ಮುಮುಕ್ಷ ॥೨೭॥

ನಾನಾ ತೀರ್ಥೇ ಧುಂಡಾಳಿಲೀ । ಶಮದಮಾದಿ ಸಾಧನೇ ಕೇಲೀ ।
ನಾನಾ ಗ್ರಂಥಾಂತರೇ ಪಾಹಿಲೀ । ಶೋಧೂನಿಯಾ ॥೨೮॥

ತೇಣೇ ನಷ್ಟ ಸಮಾಧಾನ । ವಾಟೆ ಅವಘಾಚ ಅನುಮಾನ ।
ಮ್ಹಣೆ ರಿಘೋ ಸಂತಾಸ ಶರಣ । ಯಾ ನಾವ ಮುಮುಕ್ಷ ॥೨೯॥

**ತನ್ನಲ್ಲಿ ಕಂಡುಕೊಂಡ ದೋಷಗಳಿಗಾಗಿ ತನ್ನನ್ನು ತಾನೇ ನಿಂದಿಸಿಕೊಳ್ಳುವಾಗ ಮುಮುಕ್ಷುವು ತನಗೆ (ಸ್ವತಃಕ್ಕೆ) ಯಾವ ವಿಶೇಷಣ ಹಚ್ಚುತ್ತಾನೆಂಬುದರ ಒಂದು ಯಾದಿಯನ್ನೇ ಹೇಳುತ್ತಾರೆ. ಇದರ ಭಾವಾರ್ಥವು ಒಟ್ಟಿನಲ್ಲಿ ಹೀಗೆ ಇರುವದು:–** ನಾನು ಬಹಳ ಹೀನನು, ದೀನನು, ನಾಲಾಯಖನು, ಕೆಲಸಕ್ಕೆ ಬಾರದವನು ಮತ್ತು ಪಾಪಿ ಇರುವೆನೆಂದು ಮುಮುಕ್ಷುವಿಗೆ ನಿಜವಾಗಿಯೂ ಅನಿಸುತ್ತದೆ. ಪರಮಾರ್ಥದ ಸಾಧನದಲ್ಲಿ ಜೀವಕ್ಕೆ ಕೆಲವೊಂದು ಕಾಲದ ವರೆಗೆ ಇಂಥ ಅನುತಾಪದ ಅವಸ್ಥೆಯಲ್ಲಿ ಇರಬೇಕಾಗುತ್ತದೆ. ಅವನು ತನಗೆ ತಾನೇ ಹಚ್ಚಿಕೊಂಡ ವಿಶೇಷಣಗಳು ಬಹುಶಃ ಅತಿಶಯೋಕ್ತಿಯುವೇ ಇರುವವು. ಆದರೆ ಶರಣಾಗತ ಭಾವವು ಶರೀರದಲ್ಲಿ ಬರಲು ಇವು ಬಹಳ ಉಪಯೋಗ ಬೀಳುವವು. ಮುಮುಕ್ಷುವು ತನ್ನಷ್ಟಕ್ಕೆ ಪರಿತಪಿಸುತ್ತ ಅನ್ನುವದೇನಂದರೆ:– "ಅಯ್ಯೋ ! ನಾನು ಉಪಕಾರವೆಷ್ಟೂ ಮಾಡದೇ ಇದ್ದವನು, ಕೃತಘ್ನನು, ದಂಭದಿಂದ ಇದ್ದವನು, ಕೆಟ್ಟ ಕೆಲಸ ಅಂದರೆ ದುರಾಚಾರಿಯಾದ ನೀಚನು ಅರ್ಥಾತ್ ಕೇವಲ ಪಾಪಿಷ್ಠನು. (೨೭) ನಾನು ಅಧಮನು, ಭ್ರಷ್ಟ, ಚಾಂಡಾಲನು, ದುರಾಚಾರಿಯು, ದುಷ್ಟ ಮತ್ತು ಕೇವಲ ಪಾಪಿಯೇ ಆಗಿರುವೆನು (೨೮) ನಾನು ಭಕ್ತಿ ಹೀನನು, ದುರ್ಜನನು, ಹೀನರಿಗಿಂತ ಹೀನನು, ಮತ್ತು ಕೇವಲ ಕಲ್ಲಿನಂತಿದ್ದೇನೆ. (೨೯) ಮತ್ತು ನಾನು ದುರಭಿಮಾನಿಯು, ಜನರಲ್ಲಿ ಬಹಳ ಸಿಟ್ಟಿನವನೆಂದು ಪ್ರಸಿದ್ಧಿ ಪಡೆದವನು, ಅನೇಕ ದುಷ್ಟ ವ್ಯಸನಗಳ ಆಗರವಾಗಿದ್ದವನು. (೩೦) ನಾನು ಆಲಸಿಯು, ಮೈ ಉಳಿಸಿಕೊಳ್ಳುವ ಮುಗ್ಗಲಗೇಡಿಯು, ಕಪಟ ಶಿರೋಮಣಿಯು, ಅಂಜುಬುರುಕನು, ಅವಿಚಾರಿಯು, ಮೂರ್ಖನು ಆಗಿರುವೆನು. (೩೧) ನಾನು ನಾಲಾಯಖನು, ಕೆಲಸಕ್ಕೆ ಬಾರದವನು, ಬಾಯ್ಬಡಕ, ಪಾಖಂಡಿಯು, ಬಾಯಿಗೆ ಬಂದಂತೆ ಒದರುವವ, ಡೊಂಕು ಬುದ್ಧಿಯುವ, ಮತ್ತು ಕುಟಿಲ ವೃತ್ತಿಯುವನಾಗಿರುವೆನು.(೩೨) ನಾನು ಸಂಪೂರ್ಣ ಅಜ್ಞಾನಿಯಾಗಿರುವೆ, ಎಲ್ಲರಿಗಿಂತಲೂ ಕನಿಷ್ಠನಾಗಿರುವೆನು. ಈ ರೀತಿಯಾಗಿ ತನ್ನ ಕೆಟ್ಟ ಗುಣಗಳನ್ನು ವರ್ಣಿಸುವವನು ಮುಮುಕ್ಷುವೆಂದು ತಿಳಿಯಿರಿ. (೩೩) ಮುಮುಕ್ಷುವು ಮತ್ತೂ ಅನ್ನುವದೇನಂದರೆ:– "ನಾನು ಎಲ್ಲ ರೀತಿಯಿಂದ ಅಯೋಗ್ಯ ಹಾಗೂ ಅನಧಿಕಾರಿ ಇರುವೆನು. ಹೀನ ಕೆಲಸದ ಹೇಸಿ ಇರುವೆನು, ಭಯಂಕರ ಕರ್ಮ ಮಾಡುವ ಅಘೋರಿಯಾಗಿರುವೆನು. ಒಟ್ಟಿನಲ್ಲಿ ಎಲ್ಲ ತರಹದಿಂದ ನೀಚನಾಗಿರುವೆನು. (೩೪) ನಾನು ಅತ್ಯಂತ ಸ್ವಾರ್ಥಿಯು, ಅನೇಕ ಅನರ್ಥ ನಿರ್ಮಾಣ ಮಾಡುವಂಥ ಕಿಡಗೇಡಿಯು ನಾನು ಪರಮಾರ್ಥಿಯಂತೂ ಅಲ್ಲವೇ ಅಲ್ಲ. (೩೫)ನಾನು ನೀಚ, ಅವಗುಣಗಳ ರಾಶಿಯೇ ಆಗಿರುವೆನು. ನಾನು ವ್ಯರ್ಥವಾಗಿ ಹುಟ್ಟಿ ಬಂದಂತಾಗಿದೆ. ಕೇವಲ ಭೂಮಿಗೆ ಭಾರವಾಗಿರುವೆನು. (೩೬) ಮೇಲೆ ಹೇಳಿದಂತೆ ತನ್ನನ್ನು ತಾನು ಪರಿಪರಿಯಾಗಿ ನಿಂದಿಸಿಕೊಳ್ಳುತ್ತ ಸಂಸಾರದ ಬಗ್ಗೆ ಆಸ್ಥೆ ಇಲ್ಲದವನು, ಇದು ವಿಘ್ನಕಾರಿ ಎಂದು ಅನಿಸಿ ಸಂಸಾರವೇ ಬೇಡವೆಂದು ಅಂದುಕೊಳ್ಳುವವನು ಹಾಗೂ ಸಾಧು ಸಂತರ ಸತ್ಸಂಗತಿಯ ಅಭಿಲಾಷೆಯುಳ್ಳವನು ಮುಮುಕ್ಷುವೆಂದು ತಿಳಿಯಿರಿ. (೩೭) **ಮುಂದಿನ ನುಡಿಗಳಲ್ಲಿ ಮುಮುಕ್ಷುತನದ ಇನ್ನೂ ಕೆಲವು ಲಕ್ಷಣಗಳನ್ನು ಹೇಳುತ್ತಾರೆ.**- ಶಾಂತಿ ಪ್ರಾಪ್ತಿಗಾಗಿ ಅವನು ತೀರ್ಥದಿಂದ ತೀರ್ಥಕ್ಕೆ ಅಡ್ಡಾಡುವನು. ಶಮದಮಾದಿ ಸಾಧನಗಳನ್ನು ಅಭ್ಯಸಿಸಿದನು. ನಾನಾ ಗ್ರಂಥಗಳ ತಾತ್ಪರ್ಯ ಶೋಧಿಸಿದನು. (೩೮) ಆದರೆ ಯಾವುದರಲ್ಲಿಯೂ ಸಮಾಧಾನ ಸಿಗದೆ ಖೇದಗೊಂಡನು. ಆಗ ಅವನಿಗೆ ಇವೆಲ್ಲ ಬುದ್ಧಿಯ ಅನುಮಾನ ಹಾಗೂ ಕಲ್ಪನೆಯ ಆಟವೆಂದು ತಿಳಿಯಿತು. ಕೊನೆಗೆ ಸಂತರಿಗೇ ಶರಣು ಹೋಗಬೇಕೆಂದು ವಿಚಾರ ಮಾಡುವಂಥವನೇ ಮುಮುಕ್ಷುವು. ಶಮದಮಾದಿ ಸಾಧನಗಳು ಆರು ಇರುವವು. ಅವುಗಳ ವಿವರ:-೧) **ಶಮ** ಅಂದರೆ ಮನಸ್ಸು ಮೊದಲಾದ ಒಳಇಂದ್ರಿಯಗಳ ನಿಗ್ರಹ ೨) **ದಮ** ಅಂದರೆ ಬಾಹ್ಯ ಇಂದ್ರಿಯ ದಮನ ೩) **ತಿತಿಕ್ಷೆ** ಅಥವಾ ಸುಖದುಃಖಗಳನ್ನು ತಾಳ್ಮೆಯಿಂದ ಸಹಿಸುವದು. ೪) **ಉಪರತಿ** ಅಥವಾ ಅನಾಸಕ್ತಿ ೫) **ಶ್ರದ್ಧೆ** ಅಥವಾ ಶಾಸ್ತ್ರ ಹಾಗೂ ಸದ್ಗುರು ವಚನದಲ್ಲಿ ವಿಶ್ವಾಸ, ಸತ್ಯಬುದ್ಧಿ ಮತ್ತು ೬) **ಸಮಾಧಾನ** ಅಥವಾ ಮನಸ್ಸಿನ ಶಾಂತ ಸ್ಥಿತಿಯು, ಸುಖದುಃಖಗಳಿಂದ ದೂರ ಇರುವಂತಹ ಕಲೆ, ಅಂದರೆ ಸಮತೋಲನ ಸಾಧಿಸುವದು. (೩೯)

ದೇಹಾಭಿಮಾನ ಕುಳಾಭಿಮಾನ । ದ್ರವ್ಯಾಭಿಮಾನ ನಾನಾಭಿಮಾನ ।
ಸಾಂಡೂನಿ ಸಂತಚರಣೀ ಅನನ್ಯ । ಯಾ ನಾವ ಮುಮುಕ್ಷ ॥೪೦॥
ಅಹಂತಾ ಸಾಂಡೂನಿ ದೂರೀ । ಆಪಣಾಸ ನಿಂದೀ ನಾನಾಪರೀ ।
ಮೋಕ್ಷಾಚೀ ಅಪೇಕ್ಷಾ ಕರೀ । ಯಾ ನಾವ ಮುಮುಕ್ಷ ॥೪೧॥
ಜ್ಯಾಚೇ ಥೋರಪಣ ಲಾಜೆ । ಜೋ ಪರಮಾರ್ಥಾಕಾರಣೇ ಝಿಂಜೆ ।
ಸಂತಾಪಾಈ ವಿಶ್ವಾಸ ಉಪಜೆ । ಯಾ ನಾವ ಮುಮುಕ್ಷ ॥೪೨॥
ಸ್ವಾರ್ಥ ಸಾಂಡೂನ ಪ್ರಪಂಚಾಚಾ । ಹವ್ಯಾಸ ಧರಿಲಾ ಪರಮಾರ್ಥಾಚಾ ।
ಅಂಕಿತ ಹೋಈನ ಸಜ್ಜನಾಚಾ । ಮ್ಹಣೆ ತೋ ಮುಮುಕ್ಷ ॥೪೩॥
ಐಸಾ ಮುಮುಕ್ಷ ಜಾಣಿಜೆ । ಸಂಕೇತ ಚಿನ್ಹೇ ವೋಳಖಿಜೆ ।
ಪುಡೇ ಶ್ರೋತೀ ಅವಧಾನ ದೀಜೆ । ಸಾಧಕ ಲಕ್ಷಣೀ ॥೪೪॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
"ಮುಮುಕ್ಷು ಲಕ್ಷಣ" ನಾಮ ಸಮಾಸ ಅಷ್ಟಮ ॥

ದೇಹದ ದೊಡ್ಡಸ್ತನ, ಶ್ರೇಷ್ಠ ಕುಲವೆಂಬ ಅಹಂಕಾರ, ಶ್ರೀಮಂತಿಕೆಯ ಗರ್ವ ಮತ್ತು ಇನ್ನೂ ಅನೇಕ ಮಾನದ ಅಭಿಮಾನ ಇವನ್ನೆಲ್ಲ ಬದಿಗೊತ್ತಿ ಯಾರು ಸಾಧು ಸಂತರ ಚರಣದಲ್ಲಿ ಅನನ್ಯರಾಗಿ ಶರಣು ಹೋಗುವರೋ ಅವರೆಲ್ಲ ಮುಮುಕ್ಷುಗಳೇ ಇರುವರು. (೪೦) ಯಾರು ತಮ್ಮ ವೃಥಾ ಅಹಂಕಾರವನ್ನು ದೂರ ತ್ಯಜಿಸಿ ಸಂತರ ಸಮ್ಮುಖದಲ್ಲಿ ತನ್ನನ್ನು ತಾನೇ ಅನೇಕ ತರಹದಿಂದ ಹೀಯಾಳಿಸಿ ಹಳಿದುಕೊಳ್ಳುವನೋ ಮತ್ತು ಲೀನತನದಿಂದ ಮೋಕ್ಷ ಮಾರ್ಗ ವಿಚಾರಿಸಿ ತಿಳಿದುಕೊಳ್ಳಬೇಕೆಂಬ ಹಂಬಲ ಉಳ್ಳವನೋಅವನುಮಾತ್ರ ಮುಮುಕ್ಷು ಇರುತ್ತಾನೆ(೪೧)ಲೌಕಿಕ ದೊಡ್ಡಸ್ತನದ ಬಗ್ಗೆ ಯಾರಿಗೆ ಲಜ್ಜೆ ಎನಿಸುವದೋ ಸಂಪೂರ್ಣ ಗರ್ವರಹಿತರಾಗಿರುವರೋ ಯಾರು ಪರಮಾರ್ಥ ಮಾರ್ಗ ಪಡೆಯುವದಕ್ಕಾಗಿ ಕಷ್ಟಪಡಲು ಸಿದ್ಧರಿರುವರೋ ಮತ್ತು ಸಂತ ಚರಣದಲ್ಲಿ ನಿಜವಾದ ವಿಶ್ವಾಸ ಯಾರಿಗೆ ಹುಟ್ಟುವದೋ ಹಾಗೂ ಸಂತರ ಬಗ್ಗೆ ಯಾರಿಗೆ ಇವರು ನಮ್ಮವರು ನಿಜವಾದ ಹಿತ-ಚಿಂತಕರೇ ಇರುವರೆಂಬ ವಿಶ್ವಾಸ ಉಂಟಾಗುವದೋ ಅವರು ಮುಮುಕ್ಷುಗಳಿರುವರು. (೪೨) ಯಾರಿಗೆ ಪ್ರಪಂಚದ ಸ್ವಾರ್ಥ ಹಂಬಲ ಬಿಟ್ಟು ಪರಮಾರ್ಥದ ಉತ್ಕಟ ಇಚ್ಛೆ ಉಂಟಾಗುವದೋ ಮತ್ತು "ನಾನು ಸಂತರ ಆಜ್ಞಾಧಾರಕನಾಗಿಯೇ ಇರುವವನು" ಹೀಗೆ ಮನಃಪೂರ್ವಕ ನಿಶ್ಚಯಿಸುವವರೂ ಮುಮುಕ್ಷುಗಳಿರುತ್ತಾರೆ. (೪೩) ಶ್ರೋತೃಗಳೇ! ಈ ಉಕ್ತ ಲಕ್ಷಣಗಳಿಂದ ಮುಮುಕ್ಷುವನ್ನು ತಿಳಿಯಬೇಕು. ಇವೆಲ್ಲ ಮುಮುಕ್ಷುವಿನ ಸಂಕೇತಗಳಾಗಿರುವವು. ಅವರು ಈ ರೀತಿಯಾಗಿರುವರು. ಇನ್ನು ಮುಂದಿನ ಸಮಾಸದಲ್ಲಿ ಸಾಧಕ ಲಕ್ಷಣಗಳನ್ನು ಹೇಳುವೆವು ಶ್ರೋತೃಗಳು ಲಕ್ಷ್ಯಗೊಟ್ಟು ಕೇಳಬೇಕು. (೪೪)

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದೊಳಗಿನ ಐದನೆಯ ದಶಕದಲ್ಲಿಯ
"ಮುಮುಕ್ಷು ಲಕ್ಷಣ"ವೆಂಬ ಎಂಟನೆಯ ಸಮಾಸವು ಮುಗಿದುದು.

### ಸಮಾಸ ನವವಾ ; ಸಾಧಕ ಲಕ್ಷಣ

॥ಶ್ರೀರಾಮ॥ ಮಾಗಾ ಮುಮುಕ್ಷಾಚೇ ಲಕ್ಷಣ । ಸಂಕೇತೇ ಕೇಲೇ ಕಥನ ।
ಆತಾ ಪರಿಸಾ ಸಾವಧಾನ । ಸಾಧಕ ತೋ ಕೈಸಾ ॥೧॥

ಅವಗುಣಾಚಾ ಕರೂನಿ ತ್ಯಾಗ । ಜೇಣೇ ಧರಿಲಾ ಸಂತಸಂಗ ।
ತಯಾಸೀ ಬೋಲಿಜೆ ಮಗ । ಸಾಧಕ ಐಸಾ ॥೨॥

ಜೋ ಸಂತಾಸೀ ಶರಣ ಗೇಲಾ । ಸಂತಜನೀ ಆಶ್ವಾಸಿಲಾ ।
ಮಗ ತೋ ಸಾಧಕ ಬೋಲಿಲಾ । ಗ್ರಂಥಾಂತರೀ ॥೩॥

# ದಶಕ ೫. ಸಮಾಸ ೯. ಸಾಧಕ ಲಕ್ಷಣ ನಾಮ ನಿರೂಪಣ (ನುಡಿ ೬೨)

ಮುಮುಕ್ಷುವಿನ ಲಕ್ಷಣಗಳನ್ನು ಶ್ರೀ ಸಮರ್ಥರು ಹೇಳುವಾಗ ಕೊನೆಯಲ್ಲಿ ಸತ್ಸಂಗತಿ, ಸಂತ ಸಹವಾಸಗಳಿಗೇ ಹೆಚ್ಚು ಮಹತ್ವ ಕೊಟ್ಟು ಹೇಳಿದ್ದಾರೆಂಬುದು ನಿಮ್ಮ ಲಕ್ಷ್ಯಕ್ಕೆ ಈಗಾಗಲೇ ಬಂದಿರಬಹುದು. ಇದರ ಮುಖ್ಯ ಕಾರಣವೆಂದರೆ ಅದು ಹೀಗಿದೆ "ಪ್ರಾಪಂಚಿಕ ದುಃಖದ ಹೊಡೆತ (ಪೆಟ್ಟು)ಬಿದ್ದು ಸಂಸಾರವು ಅಪೂರ್ಣವಿದೆ. ಶಾಶ್ವತವಲ್ಲವೆಂಬ ತಿಳುವಳಿಕೆ ಬಂದ ಕೂಡಲೇ ಮುಮುಕ್ಷು ಪಣಕ್ಕೆ ಆರಂಭವಾಗುವದು. ಇದರೊಳಗಿಂದಲೇ ಸ್ವತಃದ ಅಪೂರ್ಣತೆಯ ತಿಳುವಳಿಕೆ ನಿರ್ಮಾಣವಾಗುವದು. ಆಗ ತನ್ನ ದೋಷಗಳೇ ತನಗೆ ಸ್ಪಷ್ಟವಾಗಿ ಕಂಡುಬರುವವು. ಪ್ರಾಪಂಚಿಕದ ಬಗ್ಗೆ ಇರುವ ಆಕಾಂಕ್ಷೆ, ಉದ್ದೇಶ ಇವೆಲ್ಲ ನಿರರ್ಥಕವೆನಿಸುವವು. ಆದರೆ ಆತ್ಮಜ್ಞಾನದ ಉದ್ದೇಶ (ಧ್ಯೇಯ) ನಿಶ್ಚಿತವಾಗಲು ಆತ್ಮಜ್ಞಾನೀ ಪುರುಷನ ಭೆಟ್ಟಿಯಾಗುವದು. ಅವಶ್ಯವಿರುತ್ತದೆ. ಅಂತೆಯೇ ಮುಮುಕ್ಷುವಿಗೆ ಸಂತರ ಸಹವಾಸ (ಸಂಗತಿ) ಮಾಡಬೇಕೆಂದು ತೀವ್ರ ಇಚ್ಛೆ ಆಗುವದು. ಸತ್ಸಂಗತಿಯಿಂದ ಮೊದಲಿಗೆ ಆತ್ಮಜ್ಞಾನದ ಧ್ಯೇಯ ನಿಶ್ಚಿತವಾಗುವದು. ಆನಂತರ ಈ ಧ್ಯೇಯವನ್ನು ಮುಟ್ಟಬಹುದಾದ ಮಾರ್ಗ ಯಾವುದೆಂಬುದು ನಿಶ್ಚಿತವಾಗಿ ಗೊತ್ತಾಗುತ್ತದೆ. ಇಂಥ ಮಾರ್ಗದಲ್ಲಿಯೇ ಇರಬೇಕೆಂದು ಅಭ್ಯಾಸ ಮಾಡುವಂಥವರಿಗೆ ಸಾಧಕರೆಂದು ಅನ್ನುವರು. ಸಾಧಕರು ಸಂತರಲ್ಲಿ ಅನುಸಂಧಾನ ವಿದ್ಯೆ ಕಲಿಯಬೇಕಿರುತ್ತದೆ. "ನಾನು ದೇಹವೇ ಇರುವೆ" ಎಂಬ ಭಾವನೆಯಿರುವ ಸಾಧಕನು "ನಾನು ಆತ್ಮನೇ ಇರುವೆ" ಈ ಭಾವನೆಯ ಅಭ್ಯಾಸ ಮಾಡುತ್ತ ಇರಬೇಕಾಗುವದು. ದೇಹದ ಅನುಸಂಧಾನವನ್ನು ಬದಿಗೆ ಸರಿಸಿ ಆತ್ಮಸ್ವರೂಪದ ಅನುಸಂಧಾನ ಮಾಡುವ ಯುಕ್ತಿಯನ್ನು ಸಾಧಿಸುವದೇ ಸಾಧಕನ ಎಲ್ಲ ಸಾಧನದ ಮರ್ಮವೆಂದು ತಿಳಿಯಬೇಕು. ಈ ಯುಕ್ತಿ ವಶವಾಗಬೇಕಾದರೆ ಮೊದಲಿನ "ಬೇಕು-ಬೇಡ" ಮತ್ತು "ಆಚಾರ-ವಿಚಾರ" ಗಳನ್ನು ಬದಲಿಸಿ ಹೊಸದಾಗಿ ಸ್ವರೂಪಾನುಕೂಲವಾದ (ಸದ್ಯದ ಪರಿಸ್ಥಿತಿಗನುಸರಿಸಿ) "ಬೇಕು-ಬೇಡ" ಮತ್ತು "ಆಚಾರ-ವಿಚಾರ" ಗಳನ್ನು ಅನುಸರಿಸಬೇಕಾಗುತ್ತದೆ. ದೇಹದ ಮೇಲೆ ಮತ್ತು ದೃಶ್ಯ ವಸ್ತುವಿನ ಮೇಲೆ ಸಹಜವಾಗಿ ಇರುವಂಥ ಮನಸ್ಸು ಸತತವಾಗಿ ಅಭ್ಯಾಸ ಮಾಡುವದರಿಂದ ಆತ್ಮನ ಹತ್ತಿರ ಅಥವಾ ಸ್ವಸ್ವರೂಪದ ಹತ್ತಿರ ಇರಬೇಕಾದರೆ ಅಖಂಡವಾಗಿ ಸ್ಥಿರಬುದ್ಧಿಯಿಂದ ಧೈರ್ಯದಿಂದ ಮುನ್ನಡೆಯಬೇಕಾಗುತ್ತದೆ. ಇಂದ್ರಿಯಗಳಲ್ಲಿ ತೊಡಗಿದ ಮನಸ್ಸನ್ನು ಏಕೀಕರಿಸಿ ಅಥವಾ ಗುಂಡಾಳಿಸಿ ಅದನ್ನು ಹೃದಯ ಕಮಲದಲ್ಲಿ ಗಟ್ಟಿಯಾಗಿ ಹಿಡಿದಿಡುವ ಪ್ರಯತ್ನವನ್ನು ದಿನಾಲೂ ತಪ್ಪದೇ ಮಾಡಿದರೆ ಧಾರಣಾ ಅಂದರೆ ಬುದ್ಧಿಯ ಗ್ರಹಣ ಶಕ್ತಿಗೆ ಸ್ಥಿರತ್ವ ಸಾಧಿಸುತ್ತದೆ. ಯಾರಿಗೆ ಸ್ಥಿರಬುದ್ಧಿಯ ಗ್ರಹಣ ಶಕ್ತಿ ಸಾಧಿಸುವದೋ ಅವರೇ ಸಾಧಕರಾಗಿರುವರು.

### ದಶಕ ೫. ಸಮಾಸ ೯. ಸಾಧಕ ಲಕ್ಷಣ ನಾಮ ನಿರೂಪಣ (ನುಡಿ ೬೨)

**ಈ ಸಮಾಸದ ಮೊದಲಿನ ಮೂವತ್ತೊಂದು ಓವಿ. (ನುಡಿ) ಗಳಲ್ಲಿ ಸಾಧಕನ ಲಕ್ಷಣಗಳನ್ನು ಹೇಳಿರುತ್ತಾರೆ:–** ಹಿಂದಿನ ಸಮಾಸದಲ್ಲಿ ಮುಮುಕ್ಷುವಿನ ಲಕ್ಷಣಗಳನ್ನು ಸ್ವಲ್ಪದರಲ್ಲಿ ಹೇಳಿದೆವು. ಈಗ ಸಾಧಕ ಹೇಗಿರುತ್ತಾನೆಂಬುದನ್ನು ಹೇಳುವೆವು, ಲಕ್ಷ್ಯಗೊಟ್ಟು ಕೇಳಿರಿ. (೧) ತಮ್ಮ ಅವಗುಣಗಳ ತ್ಯಾಗ ಮಾಡಿ ಸಂತರ ಸಂಗವನ್ನು ಹಿಡಿಯುವವನು ಸಾಧಕನೆನಿಸುವನು. (೨) ಯಾರು ಸಂತರಿಗೆ ಶರಣು ಹೋಗುವರೋ, ಮತ್ತು ಆ ಸಂತರು ಇವನು ನಮ್ಮವನು ಎಂದು ತಿಳಿದು, ಹಾಗೂ ಕಲ್ಯಾಣ ಮಾಡುವ ಆಶ್ವಾಸನೆ ಕೊಟ್ಟಂಥವರಿಗೆ ಪರಮಾರ್ಥಗಳಲ್ಲಿ ಸಾಧಕರೆಂದು ಉಲ್ಲೇಖಿಸಿದ್ದಾರೆ. [೩.]

ಉಪದೇಶಿಲೇ ಆತ್ಮಜ್ಞಾನ । ತುಟಲೇ ಸಂಸಾರ ಬಂಧನ ।
ದೃಢತೆಕಾರಣೇ ಕರೀ ಸಾಧನ । ಯಾ ನಾವ ಸಾಧಕ ॥೪॥

ಧರೀ ಶ್ರವಣಾಚೀ ಆವಡೀ । ಅದ್ವೈತನಿರೂಪಣಾಚೀ ಗೋಡೀ ।
ಮನನೇ ಅರ್ಥಾಂತರ ಕಾಢೀ । ಯಾ ನಾವ ಸಾಧಕ ॥೫॥

ಹೋತಾ ಸಾರಾಸಾರ ವಿಚಾರ । ಏಕೆ ಹೋಊನಿ ತತ್ಪರ ।
ಸಂದೇಹ ಛೇದೂನಿ ದೃಢೋತ್ತರ । ಆತ್ಮಜ್ಞಾನ ಪಾಹೆ ॥೬॥

ನಾನಾ ಸಂದೇಹ ನಿವೃತ್ತೀ । ವ್ಹಾವಯಾ ಧರೀ ಸತ್ಸಂಗತೀ ।
ಆತ್ಮಶಾಸ್ತ್ರಗುರು ಪ್ರಚೀತೀ । ಏಕ್ಯತೇಸಿ ಆಣೀ ॥೭॥

ದೇಹಬುದ್ಧಿ ವಿವೇಕೇ ವಾರೀ । ಆತ್ಮಬುದ್ಧಿ ಸದೃಢ ಧರೀ ।
ಶ್ರವಣ ಮನನ ಕೇಲೇಚಿ ಕರೀ । ಯಾ ನಾವ ಸಾಧಕ ॥೮॥

ವಿಸಂಚೂನಿ ದೃಶ್ಯಭಾನ । ದೃಢ ಧರೀ ಆತ್ಮಜ್ಞಾನ ।
ವಿಚಾರೇ ರಾಖೆ ಸಮಾಧಾನ । ಯಾ ನಾವ ಸಾಧಕ ॥೯॥

ತೋಡೂನಿ ದ್ವೈತಾಚೀ ಉಪಾಧೀ । ಅದ್ವೈತ ವಸ್ತು ಸಾಧನೇ ಸಾಧೀ ।
ಲಾವೀ ಏಕ್ಯತೇ ಚೀ ಸಮಾಧೀ । ಯಾ ನಾವ ಸಾಧಕ ॥೧೦॥

ಆತ್ಮಜ್ಞಾನ ಜೀರ್ಣ ಜರ್ಜರ । ತ್ಯಾಚಾ ಕರೀ ಜೀರ್ಣೋದ್ಧಾರ ।
ವಿವೇಕೇ ಪಾವೆ ಪೈಲಪಾರ । ಯಾ ನಾವ ಸಾಧಕ ॥೧೧॥

ಉತ್ತಮೋ ಸಾಧೂಚೀ ಲಕ್ಷಣೇ । ಅಂಗೀಕಾರೀ ನಿರೂಪಣೇ ।
ಬಳೇಚಿ ಸ್ವರೂಪಾಕಾರ ಹೋಣೇ । ಯಾ ನಾವ ಸಾಧಕ ॥೧೨॥

ಅಸತ್ಕ್ರಿಯಾ ತೇ ಸೋಡಿಲೀ । ಆಣೀ ಸತ್ಕ್ರಿಯಾ ತೇ ವಾಢವಿಲೀ ।
ಸ್ವರೂಪಸ್ಥಿತೀ ಬಳಾವಲೀ । ಯಾ ನಾವ ಸಾಧಕ ॥೧೩॥

ಸಂತರು ಯಾರಿಗೆ ಆತ್ಮಜ್ಞಾನದ ಉಪದೇಶವನ್ನು ಮಾಡಿರುವರೋ ಮತ್ತು ಆ ಉಪದೇಶದ ಶ್ರವಣದಿಂದ ತನಗೆ ಸಂಸಾರ ಬಂಧನ ಹರಿಯಿತು, ಅದು ನಿಜವಾಗಿಯೂ ಅನುಭವಕ್ಕೆ ಬಂದಿತು. ಅನ್ನುವವರು, ಮತ್ತು ಇಂಥ ಮಹತ್ವದ ಜ್ಞಾನವು ಹೃದಯದಲ್ಲಿ ಸ್ಥಿರವಾಗಬೇಕೆಂದು ನಿಶ್ಚಯಿಸಿ ಯಾರು ಸಾಧನ ಮಾಡುವರೋ ಅಂಥವರಿಗೆ ಸಾಧಕರೆನ್ನುತ್ತಾರೆ.[೪] ಯಾರಿಗೆ ಪರಮಾರ್ಥ ಕೇಳಬೇಕೆಂಬ ಹಂಬಲವಿರುತ್ತದೆಯೋ,ಮತ್ತು "ತತ್ತ್ವಮಸಿ" ಅಂದರೆ "ಅದೇ ನೀನು ಇರುತ್ತೀ" ಈ ಅದ್ವೈತಾನುಭವದ ವಿವೇಚನೆಯಲ್ಲಿ ಪ್ರೇಮವಿರುವದೋ, ಹಾಗೂ ವಿಷಯದ ಮನನವನ್ನು ಮೇಲಿಂದ ಮೇಲೆ ಮಾಡಿ ಮುಖ್ಯವಾದ ಲಕ್ಷ್ಯಾರ್ಥದ ಗೂಢ, ಮತ್ತು ನಿಜವಾದ ಅರ್ಥವನ್ನು ಸರಿಯಾಗಿ ಯಾರು ಹುಡಿಕಿ, ಶೋಧಿಸಿ ತಿಳಿಯುವರೋ ಅವರು ಸಾಧಕರೆಂದು ತಿಳಿಯಿರಿ. [೫] ಯಾರಾದರೂ ಆತ್ಮಜ್ಞಾನ ವಿವೇಕ ವಿಷಯದ ವಿವೇಚನೆ ಹೇಳುತ್ತಿದ್ದರೆ, ಯಾರು ಆ ವಿವೇಚನವನ್ನು ಮನಃಪೂರ್ವಕ ಏಕಾಗ್ರತೆಯಿಂದ ಕೇಳುವರೋ, ಮತ್ತು ಸಂಶಯಗಳನ್ನು ವಿಚಾರಿಸಿ, ಸಂಶಯರಹಿತರಾಗಿ ಹೆಚ್ಚು ಹೆಚ್ಚು ನಿಶ್ಚಿತ ಮನದಿಂದ ಆತ್ಮಜ್ಞಾನದ ಕಡೆಗೆ ಒಲಿಯುವರೋ [೬] ಮತ್ತು ಅನೇಕ ಪ್ರಕಾರದ ಸಂಶಯಗಳ ನಿವಾರಣೆಗಾಗಿ ಯಾರು ಸಂತರ ಸಹವಾಸ ಮಾಡಿ ಅವರಿಂದ ಶಾಸ್ತ್ರ ಪ್ರಚೀತಿ, ಶಾಸ್ತ್ರ ಸಿದ್ಧಾಂತ ಗುರುಪ್ರಚೀತಿ, ಅಂದರೆ ಗುರು ಬೋಧಿಸಿದ ಬೋಧ ಮತ್ತು ಆತ್ಮ ಪ್ರಚೀತಿ(ಸ್ವಾನುಭವ) ಅಂದರೆ ಶಾಸ್ತ್ರ ಸಿದ್ಧಾಂತ ಹಾಗೂ ಗುರು ಬೋಧಿಸಿದ ಬೋಧ ಇವೆರಡೂ ಒಂದೇ ಹಾಗೂ ನಿಜವೆಂದು ಖಾತ್ರಿಯಾಗಿ ಸಾಧಕನಿಗೆ ತೋರಿ ಬರುವದೇ ಸ್ವಾನುಭವವು. ಈ ಮೂರೂ ಪ್ರಚೀತಿ [ಅನುಭವ]ಗಳ ಏಕವಾಕ್ಯತೆಯನ್ನು ಮಾಡಿಕೊಂಡು ಸ್ವತಃ ಯಾವನು ಅನುಭವಿಸುತ್ತಾನೆಯೋ ಈ ಮೂರರಲ್ಲಿ ಏಕವಾಕ್ಯತೆಯ ಮಿಲಾಪ-ಮೇಳವು ಸರಿಗೂಡುತ್ತಿದೆಯೋ ಅಥವಾ ಇಲ್ಲವೋ, ಇದನ್ನು ಸ್ವತಃ ಯಾವನು ನೋಡುವನೋ, ಅವನು ಸಾಧಕನು. [೭] ನಾನು ದೇಹವೇ ಇರುವೆ ಎಂಬ ಸುಳ್ಳು ಭಾವನೆಯನ್ನು ಯಾರು ವಿವೇಕದಿಂದ ದೂರಮಾಡಿ "ನಾನು ಆತ್ಮನೇ ಇರುವೆ"ನೆಂಬ ಈ ಸತ್ಯ ಭಾವನೆಯಿಂದ ದೃಢವಾಗಿ ಆತ್ಮ ಬುದ್ಧಿಯನ್ನು ಹಿಡಿಯುವ ಅಭ್ಯಾಸ ಮಾಡುವನೋ ಮತ್ತು ಅದಕ್ಕಾಗಿ ಮತ್ತೆ ಮತ್ತೆ ಶ್ರವಣ, ಮನನ ಮಾಡುವನೋ ಅಂಥವನು ಮಾತ್ರ ಸಾಧಕನಿರುತ್ತಾನೆ. [೮] ಪ್ರತ್ಯಕ್ಷ ಕಣ್ಣಿಗೆ ಕಾಣಿಸುವ ದೃಶ್ಯ ಜಗತ್ತಿನ ಭಾಸವನ್ನು ಖಂಡನೆ ಮಾಡಿ ಆತ್ಮ ಜ್ಞಾನವನ್ನು ದೃಢವಾಗಿ ಹಿಡಿದು ಅದನ್ನು ನೆಲೆಗೊಳಿಸುವವನು. ಮತ್ತು "ನಾನು ಆತ್ಮ ಸ್ವರೂಪನಿರುವೆ" ಎಂಬ ವಿಚಾರದಿಂದ ತನ್ನ ಸಮಾಧಾನವನ್ನು ಕಾಯ್ದುಕೊಳ್ಳುವವನು ಸಾಧಕನೆನಿಸುತ್ತಾನೆ. [೯] ತನ್ನ ಹಿಂದೆ ಹತ್ತಿದ ದ್ವೈತ [ಭಿನ್ನತ್ವ]ದಿಂದ ಕೂಡಿದ ಉಪಾಧಿಯ ಲಚಾಂಡನ್ನು ಯಾರು ಕಡಿದು ಹಾಕಿ ಅಭೇದದಿಂದ ಶೋಭಿಸುವ [ಪ್ರಕಾಶಿಸುವ] ಸ್ವಸ್ವರೂಪ [ಅದ್ವೈತ] ವಸ್ತುವನ್ನು ಸಾಧನದಿಂದ ಸಾಧ್ಯ ಮಾಡಿಕೊಳ್ಳುವವನು, ಮತ್ತು "ನಾನು ಬ್ರಹ್ಮನೇ ಇರುವೆ ಇದರ ಅಭ್ಯಾಸದಿಂದ ಸಮರಸನಾಗಿ ಸಮಾಧಿ ಸ್ಥಿತಿಗೆ ಹೋಗುವವನು ಸಾಧಕನು. [೧೦] ಎಲ್ಲ ಜನರೂ ಹೆಚ್ಚಾಗಿ ದೃಶ್ಯ ಜ್ಞಾನದ ಬೆನ್ನು ಹತ್ತಿದ್ದರಿಂದ ಆತ್ಮಜ್ಞಾನದ ಅವಹೇಳನ [ದುರ್ಲಕ್ಷ್ಯ,ಅನಾದರ]ವಾಗಿ ಒಟ್ಟಿನಲ್ಲಿ ಹೇಳುವದಾದರೆ ಆತ್ಮಜ್ಞಾನವು ಹಳೆಯದಾಗಿ ಮುರಕಳಿಗೇ ಬಂದಿತು. ಇದು ಇಲ್ಲದಂತಾಗುವ ಪ್ರಸಂಗವೇ ಒದಗಿತು. ಸ್ವತಃ ಆತ್ಮ ಸಾಕ್ಷಾತ್ಕಾರ ಮಾಡಿಕೊಂಡು ಯಾರು ಆತ್ಮಜ್ಞಾನದ ಪುನರುಜ್ಜೀವನ ಮಾಡುವರೋ ಅದರ ಸ್ಥಾಪನೆ ಮಾಡಿ ಬಹಳಷ್ಟು ಜನರನ್ನು ಇದರ ಕಡೆಗೆ ಬರುವಂತೆ ಮಾಡುವರೋ ಮತ್ತು ಆತ್ಮಾನಾತ್ಮ ವಿವೇಕದಿಂದ ಯಾರು ಈ ಮಿಥ್ಯಾ ಪ್ರಪಂಚದಿಂದ ಪಾರಾಗುವರೋ ವಿವೇಕದಿಂದ ಭವಸಾಗರ ದಾಟುವರೋ ಅವರೆಲ್ಲ ಸಾಧಕರೆನಿಸುವರು [೧೧] ಯಾರು ಅಧ್ಯಾತ್ಮ ನಿರೂಪಣ ಕಾಲದಲ್ಲಿ ಕೇಳಿ, ಆ ಉತ್ತಮ ಸಾಧು ಲಕ್ಷಣಗಳನ್ನು ತನ್ನಲ್ಲಿ ತರುವಪ್ರಯತ್ನ ಮಾಡುವರೋ ಮತ್ತು ಅಭ್ಯಾಸ ಬಲದಿಂದ ತನ್ನ ವೃತ್ತಿಯನ್ನು ಆತ್ಮದಕೂಡ ತದಾಕಾರ ಹೊಂದುವಂತೆ ಮಾಡುವರೋ ಅಂಥವರೆಲ್ಲ ಸಾಧಕರು. (೧೨) ಯಾರು ತಮ್ಮ ಮೊದಲಿನ ಕೆಟ್ಟ [ಕರ್ಮದ] ನಡತೆಯನ್ನು ಬಿಟ್ಟುಕೊಟ್ಟು ಉತ್ತಮವಾದ ಕರ್ಮದ ನಡತೆಯನ್ನು ಬೆಳೆಸುವರೋ, ಮತ್ತು ಯಾರದು ಆತ್ಮನೊಂದಿಗೆ ತದಾಕಾರ ಹೊಂದುವ ಸ್ಥಿತಿ ದಿನದಿನಕ್ಕೂ ಹೆಚ್ಚು ದೃಢವಾಗುತ್ತ ಹೋಗುವದೋ ಅವರೆಲ್ಲ ಸಾಧಕರಾಗಿರುವರು. (೧೩)

ಅವಗುಣ ತ್ಯಾಗೀ ದಿವಸೇ ದಿವಸ । ಕರೀ ಉತ್ತಮ ಗುಣಾಚಾ ಅಭ್ಯಾಸ ।
ಸ್ವರೂಪೀ ಲಾವೀ ನಿಜಧ್ಯಾಸ । ಯಾ ನಾವ ಸಾಧಕ ॥೧೪॥

ದೃಢನಿಶ್ಚಯಾಚೇನಿ ಬಳೇ। ದೃಶ್ಯ ಅಸತಾಚ ನಾಡಳೆ ।
ಸದಾ ಸ್ವರೂಪೀ ಮಿಸಳೆ । ಯಾ ನಾವ ಸಾಧಕ ॥೧೫॥

ಪ್ರತ್ಯಕ್ಷ ಮಾಯಾ ಅಲಕ್ಷ್ಯ ಕರೀ । ಅಲಕ್ಷ್ಯ ವಸ್ತು ಲಕ್ಷ್ಯೀ ಅಂತರೀ ।
ಆತ್ಮ ಸ್ಥಿತೀಚೀ ಧಾರಣಾ ಧರೀ । ಯಾ ನಾವ ಸಾಧಕ ॥೧೬॥

ಜೇ ಯಾ ಜನಾಸಿ ಚೋರಲೇ । ಮನಾಸ ನ ವಚೆ ಅನುಮಾನಲೇ ।
ತೇಚಿ ಜೇಣೇ ದೃಢ ಕೇಲೇ । ಯಾ ನಾವ ಸಾಧಕ ॥೧೭॥

ಜೇ ಬೋಲ ತಾಚಿ ವಾಚಾ ಧರೀ । ಜೇ ಪಾಹಾತಾಚಿ ಅಂಧ ಕರೀ ।
ತೇ ಸಾಧೀ ನಾನಾ ಪರೀ । ಯಾ ನಾವ ಸಾಧಕ ॥೧೮॥

ಜೇ ಸಾಧೂ ಜಾತಾ ಸಾಧವೇನಾ । ಜೇ ಲಕ್ಷೂ ಜಾತಾ ಲಕ್ಷ್ಯವೇನಾ ।
ತೇಚಿ ಅನುಭವೇ ಆಣೀ ಮನಾ । ಯಾ ನಾವ ಸಾಧಕ ॥೧೯॥

ಜೇಥೇ ಮನಚಿ ಮಾವಳೆ। ಜೇಥೇ ತರ್ಕ ಚಿ ಪಾಂಗುಳೆ ।
ತೇಚಿ ಅನುಭವಾ ಆಣೀ ಬಳೇ । ಯಾ ನಾವ ಸಾಧಕ ॥೨೦॥

ಸ್ವಾನುಭವಾಚೇನಿ ಯೋಗೇ । ವಸ್ತು ಸಾಧೀ ಲಾಗವೇಗೇ ।
ತೇಚಿ ವಸ್ತು ಹೋಯೆ ಆಂಗೇ । ಯಾ ನಾವ ಸಾಧಕ ॥೨೧॥

ಅನುಭವಾಚೀ ಆಂಗೇ ಜಾಣೆ । ಯೋಗಿಯಾಚೆ ಖುಣೆ ಬಾಣೇ ।
ಕಾಂಹೀಚ ನಹೋನ ಅಸಣೇ । ಯಾ ನಾಂವ ಸಾಧಕ ॥೨೨॥

ದಿನದಿನಕ್ಕೆ ದುರ್ಗುಣಗಳನ್ನು ತ್ಯಾಗ ಮಾಡುತ್ತಾ ಹಾಗೂ ಅದರ ಕೂಡ ಉತ್ತಮಗುಣಗಳನ್ನು ಅಭ್ಯಸಿಸುತ್ತ ಯಾರು ಮುಖ್ಯವಾದ ಆತ್ಮಸ್ವರೂಪದ ಬಗೆಗೆ ಆಳವಾದ ಏಕಾಗ್ರ ಚಿಂತನ ಮಾಡುವಂಥವರಿರುವರೋ ಅವರು ಸಾಧಕರೆನಿಸುವರು. (೧೪) ಆತ್ಮಸ್ವರೂಪವೇ ಸತ್ಯವಿರುವದು. ದೃಶ್ಯವೆಲ್ಲವೂ ಮಿಥ್ಯವಾಗಿದೆ ಎಂಬ ಪಕ್ಕಾ ನಿಶ್ಚಯವಾದ್ದರಿಂದ ದೃಶ್ಯವು ಪ್ರತ್ಯಕ್ಷ ಇದ್ದರೂ ಸಹ ಅದು ಅವನ ಅನುಭವದಲ್ಲಿ ಕಂಡು ಬರುವದೇ ಇಲ್ಲ. ಯಾರು ನಿರಂತರವಾಗಿ ಆತ್ಮಸ್ವರೂಪದಲ್ಲಿ ಕೂಡಿಕೊಳ್ಳುತ್ತಿರುವರೋ ಅಥವಾ ಹಂಬಲಿಸುತ್ತಿರುವರೋ ಅವರು ಸಾಧಕರಿರುವರು. [೧೫] ಇಂದ್ರಿಯಗಳಿಗೆ ಪ್ರತ್ಯಕ್ಷವಾಗಿ ತೋರುವ ಮಾಯಾಮಯವಾದ ದೃಶ್ಯ ಜಗತ್ತನ್ನು ಯಾವನು ಮನಸ್ಸಿನಿಂದ ಕಿತ್ತೊಗೆಯುವನೋ, ಮತ್ತು ಅದರೊಳಗಿದ್ದ ತನ್ನ ಲಕ್ಷವನ್ನೂಸಹ ತೆಗೆದು ಬಿಡುವನೋ, ಮತ್ತು ಅತೀಂದ್ರಿಯವೆಂದರೆ ಇಂದ್ರಿಯಗಳಿಗೆ ಕಾಣದ ಬುದ್ಧಿಗೆನಿಲುಕದ ಆತ್ಮಸ್ವರೂಪವನ್ನು ತನ್ನ ಅಂತರ್ಯಾಮದಲ್ಲಿ ಏಕಾಗ್ರನಾಗಿ ನೋಡುವನೋ, ಹಾಗೂ ಆತ್ಮದೊಂದಿಗೆ ತದಾಕಾರ ಹೊಂದುವಂಥ ಅಭ್ಯಾಸ ಯಾರು ಮಾಡುವರೋ ಅವರು ಸಾಧಕರು. [೧೬] ಆತ್ಮಸ್ವರೂಪವು ಅತೀಂದ್ರಿಯ ಹಾಗೂ ಸೂಕ್ಷ್ಮವಿದ್ದುದರಿಂದ ಸಾಮಾನ್ಯ ಜನರಿಂದ ಅದು ಮರೆಯಾಗಿಯೇ ಇರುತ್ತದೆ. ನಮ್ಮ ಮನಸ್ಸಿಗೆ ಇದರ ಕಲ್ಪನೆ ಮಾಡಲಿಕ್ಕೆ ಬರುವದಿಲ್ಲ. ಈ ಸ್ವರೂಪವನ್ನು ಯಾರು ಅಭ್ಯಾಸದಿಂದ ಅಂತರಂಗದಲ್ಲಿ [ಅಂತರ್ಯಾಮದಲ್ಲಿ] ಗಟ್ಟಿಯಾಗಿ ಸ್ಥಿರಗೊಳಿಸುವರೋ, ಅವರು ಸಾಧಕರೆನಿಸುವರು. [೧೭] ಆತ್ಮಸ್ವರೂಪದ ವರ್ಣನೆಯನ್ನು ಮಾಡಹೋದರೆ ಬಾಯಿ ಕುಂಠಿತವಾಗುತ್ತದೆ. ಈ ಕಣ್ಣುಗಳಿಂದ ನೋಡ ಹೋದರೆ ದೃಷ್ಟಿಯೇ ಇಲ್ಲದಾಗುತ್ತದೆ. ಇಂಥ ಈ ಸ್ವರೂಪವನ್ನು ಅನೇಕ ರೀತಿಯಿಂದ ಪ್ರಯತ್ನ ಮಾಡಿ ಯಾರು ತನ್ನದನ್ನಾಗಿ ಮಾಡಿಕೊಳ್ಳುವರೋ, ಅವರು ಸಾಧಕರೆನಿಸುವರು. (೧೮) ಯಾವ ಸ್ವರೂಪವು ತನ್ನ ಅನುಭವಕ್ಕೆ ಬರಬೇಕೆಂದು ಜನರು ಪ್ರಯತ್ನ ಮಾಡುತ್ತಾರೆಯೋ ಅದರ ಅನುಭವವು ಅವರಿಗೆ ಬರುವದಿಲ್ಲ. ನೋಡಬೇಕೆಂದು ಪ್ರಯತ್ನ ಮಾಡಿದರೂ ನೋಡಲಿಕ್ಕೆ ಬರುವದಿಲ್ಲ.ಹೀಗಿರುವ ಆ ಆತ್ಮಸ್ವರೂಪವನ್ನು ಯಾರು ಸ್ವಾನುಭವದಿಂದ ಮನದಲ್ಲಿ ಹಿಡಿದು ಇಡುವರೋ ಅವರು ಸಾಧಕರಿರುವರು. [೧೯] ಈ ಸ್ವರೂಪದ ಹತ್ತಿರ ಮನವು ಮುಳುಗುವದು ಮನಸ್ಸು ಅಸ್ತವಾಗುವದು. ಅಂದರೆ ಮನಸ್ಸು ಸ್ವಚ್ಛಂದವಾಗಿ ಉಳಿಯುವದಿಲ್ಲ. ಇಲ್ಲಿ ತರ್ಕದ ಆಟ ನಡೆಯುವದಿಲ್ಲ. ತರ್ಕದ ಕಾಲುಗಳು ಮುರಿದೇ ಹೋಗುವವು. ಇಂಥ ಸ್ವರೂಪವನ್ನು ಅಭ್ಯಾಸ ಬಲದಿಂದ ಅನುಭವ ಪಡೆಯುವವರು ಸಾಧಕರಿರುವರು. (೨೦) ಸ್ವಸ್ವರೂಪದ ಅನುಭವವನ್ನು ಯಾರು ಸ್ವತಃ ಪಡೆಯುವರೋ ಮತ್ತು ಇದರಿಂದ ಯಾರಿಗೆ ಆತ್ಮವಸ್ತು ತ್ವರಿತವಾಗಿ ಪ್ರಾಪ್ತವಾಗುವದೋ, ಹಾಗೂ ಸ್ವತಃ ಯಾರು ಆತ್ಮಸ್ವರೂಪರಾಗಿ ಹೋಗುವರೋ ಅಂಥವರು ಸಾಧಕರೆನಿಸುವರು. (೨೧) ಸ್ವರೂಪಾನುಭವದ ಎಲ್ಲ ಅಂಗಗಳನ್ನು ಅಂದರೆ ತುರ್ಯಾ, ಉನ್ಮನಿ, ಚರಮದಶೆ [ಅಂತಿಮದಶೆ], ನಿರ್ವಿಕಲ್ಪ, ಸವಿಕಲ್ಪ ಇತ್ಯಾದಿಗಳನ್ನು ಸರಿಯಾಗಿ ಯಾರು ತಿಳಿಯುವರೊ, ಮತ್ತು ಈ ಸ್ವರೂಪಾನುಭವದ ಅಭ್ಯಾಸ ಮಾಡುವಾಗ ಬರುವ [ಮೆಟ್ಟಲು] ಹಂತಗಳು ಹಾಗೂ ಸ್ಥಿತಿ ಪ್ರಸಂಗಗಳು,ಅಡೆತಡೆ, ಅಡಚಣಿಗಳು ಮತ್ತು ಅತೀಂದ್ರಿಯ ಅನುಭವ ಈ ಎಲ್ಲ ಅಂಗಗಳ ಮರ್ಮವನ್ನು ಯಾರು ಸರಿಯಾಗಿ ತಿಳಿದಿರುವರೋ ಅಲ್ಲದೇ ಯೋಗಿಯ ಶಾಂತಿ, ಕ್ಷಮಾ, ವಿರಕ್ತಿ, ಲೀನತಾ ಇತ್ಯಾದಿ ಗುರುತುಗಳು ಯಾರಲ್ಲಿ ಕಂಡು ಬರುವವೋ, ಇದಲ್ಲದೆ ಯಾವುದೇ ಮಾರ್ಗದಿಂದಾಗಲೊಲ್ಲದೇಕೆ ವೃತ್ತಿಯ [ಮನಸ್ಥಿತಿಯ] ನಿರೋಧ ಸಾಧಿಸಿತ್ತೆಂದರೆ ಪ್ರಾಣ ಮತ್ತು ಅಪಾನಗಳು ಒಂದಾಗುವಿಕೆ. ಶ್ವಾಸದ ಮೇಲೆ ಪ್ರಣವ ಮಂತ್ರ ಜಪ ನಡೆಯುವಿಕೆ. ಸುಷುಮ್ನಾ ಅಂದರೆ ಶರೀರಾಂತರ್ಗತ ಇಡಾ ವ ಪಿಂಗಳಾ ಈ ಎರಡು ನಾಡಿಗಳ ಮಧ್ಯದಲ್ಲಿರುವ ನಾಡಿಯು ಖುಲ್ಲಾ ಆಗುವಿಕೆ [ಮೋಕಳೀಕ ಆಗುವದು] ಮನವು ಹೃದಯಾಕಾಶದಲ್ಲಿ ಅಡಕಾಯಿಸುವದು. ಪ್ರಾಣ ಮತ್ತು ಪ್ರಣಮೂರ್ಧ್ನಿಯನ್ನು ಆಕಾಶದಲ್ಲಿ [ಶಿರದ ಮೇಲ್ಭಾಗದಲ್ಲಿ] ಒಯ್ಯುವದು. ಅಲ್ಲಿ ಧಾರಣಾ [ಬುದ್ಧಿ ಹಾಗೂ ಮನೋಧೈರ್ಯ] ಬಲದಿಂದ ಅದನ್ನು ಹಿಡಿಯುವದು, [ತಡೆದು ನಿಲ್ಲಿಸುವದು] ಪ್ರಣವದ [ಅ, ಉ, ಮ,] ಮೂರು ಮಾತ್ರಾಗಳೂ ಅರ್ಧ [ಶೂನ್ಯ] ಮಾತ್ರೆಯಲ್ಲಿ ವಿಲೀನವಾಗುವದು, ಇತ್ಯಾದಿ ಯೋಗಿಯ ಗುರುತುಗಳನ್ನು ಯಾರು ತಿಳಿಯುವರೋ ಮತ್ತು ದೇಹ ಮೊದಲುಗೊಂಡು ಯಾವತ್ತೂ ದೃಶ್ಯಗಳಲ್ಲಿ ತನ್ನದೆಂಬ ಆಸಕ್ತಿ ಇಡದೇ ಯಾರು ಇರುವರೋ ಅವರು ಸಾಧಕರೆನಿಸುವರು. [೨೨]

ಪರತೀ ಸಾರೂನ ಉಪಾಧೀ । ಅಸಾಧ್ಯ ವಸ್ತು ಸಾಧನೇ ಸಾಧೀ ।
ಸ್ವರೂಪೀ ಕರೀ ದೃಢ ಬುದ್ಧೀ । ಯಾ ನಾವ ಸಾಧಕ ॥೨೩॥

ದೇವಾ ಭಕ್ತಾಚೇ ಮೂಳ । ಶೋಧೂನ ಪಾಹೆ ಸಕಳ ।
ಸಾಧ್ಯಚಿ ಹೋಯೆ ತತ್ಕಾಳ । ಯಾ ನಾವ ಸಾಧಕ ॥೨೪॥

ವಿವೇಕಬಳೇ ಗುಪ್ತ ಜಾಲಾ । ಆಪೇ ಆಪ ಮಾವಳಲಾ ।
ದಿಸತೋ ಪರೀ ದೇಖಿಲಾ । ನಾಹೀ ಚ ಕೋಣೇ ॥೨೫॥

ಮೀಪಣ ಮಾಗೇ ಸಾಂಡಿಲೇ । ಸ್ವಯೇ ಆಪಣಾಸ ಧುಂಡಿಲೇ ।
ತುರ್ಯೆ ಸಹಿ ವೋಲಾಂಡಿಲೇ । ಯಾ ನಾವ ಸಾಧಕ ॥೨೬॥

ಪುಢೇ ಉನ್ಮನೀಚಾ ಸೇವಟೀ । ಆಪಲೀ ಆಪಣಾ ಅಖಂಡ ಭೇಟೀ ।
ಅಖಂಡ ಅನುಭವೀಜ್ಯಾಚೀ ದೃಷ್ಟೀ । ಯಾ ನಾವ ಸಾಧಕ ॥೨೭॥

ದ್ವೈತಾಚಾ ತಟಕಾ ತೋಡಿಲಾ । ಭಾಸಾಚಾ ಭಾಸ ಮೋಡಿಲಾ ।
ದೇಹೀ ಅಸೋನಿ ವಿದೇಹ ಜಾಲಾ । ಯಾ ನಾವ ಸಾಧಕ ॥೨೮॥

ಜಯಾಸ ಅಖಂಡ ಸ್ವರೂಪಸ್ಥಿತೀ । ನಾಹೀ ದೇಹಾಚೀ ಅಹಂಕೃತೀ ।
ಸಕಳ ಸಂದೇಹ ನಿವೃತ್ತೀ । ಯಾ ನಾವ ಸಾಧಕ ॥೨೯॥

ಪಂಚಭೂತಾಚಾ ವಿಸ್ತಾರ । ಜಯಾಸಿ ವಾಟೆ ಸ್ವಪ್ನಾಕಾರ ।
ನಿರ್ಗುಣೀ ಜಯಾಚಾ ನಿರ್ಧಾರ । ಯಾ ನಾವ ಸಾಧಕ ॥೩೦॥

ಸ್ವಪ್ನೀ ಭಯೋ ಜೇ ವಾಟಲೇ । ತೇ ಜಾಗೃತೀಸ ನಾಹೀ ಆಲೇ ।
ಸಕಳ ಮಿಥ್ಯಾ ನಿರ್ಧಾರಿಲೇ । ಯಾ ನಾವ ಸಾಧಕ ॥೩೧॥

ದೃಶ್ಯ ಉಪಾಧಿಯ ಎಲ್ಲ ಬಂಧನಗಳನ್ನು ಯಾರು ದೂರೀಕರಿಸಿ ಹಾಗೂ ಸಾಧಿಸಲು ಕಠಿಣವೆನಿಸಿದ ಆತ್ಮವಸ್ತುವನ್ನು ಸಾಧನದಿಂದಸಾಧಿಸುವರೋ ಮತ್ತು ತನ್ನಬುದ್ಧಿಯನ್ನು ಸ್ವಸ್ವರೂಪದಲ್ಲಿ ನಿಶ್ಚಲವಾಗಿ ನೆಲೆನಿಲ್ಲಿಸುವರೋ ಅಂಥವರೇ ಸಾಧಕರೆನಿಸುವರು. [೨೩]ದೇವರಾರು, ಭಕ್ತರೆಂದರೆ ಯಾರು? ಇದರ ಮೂಲವನ್ನು ಯಾರು ಶೋಧಿಸಿನೋಡುವರೋ ಮತ್ತು ಸಾಧ್ಯವಾದ ಆ ಯಾವ ಆತ್ಮಸ್ವರೂಪದೊಂದಿಗೆ ತತ್ಕಾಲ [ತ್ವರಿತ]ದಲ್ಲಿ ಏಕರೂಪವಾಗಿ ಹೋಗುವರೋ ಅಂಥವರು ಸಾಧಕರೆನಿಸುವರು. [೨೪] ವಿವೇಕದ ಸಾಮರ್ಥ್ಯದಿಂದ ಯಾವ "ನಾನು" ಎಂಬುದು ಅದೃಶ್ಯ ವಾಗುವದೋ ಮತ್ತು ಯಾರ ಅಭಿಮಾನವು ತನ್ನಷ್ಟಕ್ಕೆ ತಾನೇ ಇಲ್ಲದಾಗುವದೋ "ನಾನು" ಎಂಬುದು ಬಾಕಿ ಉಳಿಯುವದಿಲ್ಲವೋ ಅವರು ದೇಹದಿಂದ ಜನರಿಗೆ ಒಂದು ವೇಳೆ ಕಂಡರೂ ಸಹ ಅವರ ಖರೇ [ನಿಜವಾದ] ಸ್ವರೂಪ ಯಾರಿಗೂ ಕಾಣಿಸುವದಿಲ್ಲ. ಯಾಕೆಂದರೆ ಅವರು ಆತ್ಮಸ್ವರೂಪರಿರುತ್ತಾರೆ. ಅವರ ಈ ಸ್ವರೂಪವನ್ನು ಯಾರು ತಿಳಿಯುವದಿಲ್ಲ. [೨೫] ಯಾರು ದೇಹಾಭಿಮಾನವನ್ನು ಬದಿಗೆ ಸರಿಸಿ [ಹಿಂದಿಟ್ಟು] ನಿಜವಾದ ತನ್ನ "ನಾನು" ಎಂಬುದನ್ನು ಶೋಧಿಸಿ ಗುರುತಿಸುವವರು ಮತ್ತು ಈ ಶೋಧದಲ್ಲಿ ಜಾಗೃತಿ, ಸ್ವಪ್ನ, ಸುಷುಪ್ತಿ ಈ ಮೂರು ಅವಸ್ಥೆಗಳನ್ನು ಅವರು ದಾಟಿ ಹೋಗಿಯೇ ಹೋಗುತ್ತಾರೆ. ಆದರೆ ನಾಲ್ಕನೆಯದಾದ ತುರ್ಯಾವಸ್ಥೆಯನ್ನು ದಾಟಿ ಯಾರು ಹೋಗುವರೋ ಮತ್ತು ನಾನು ಕೇವಲ ದೃಷ್ಟಾ [ನೋಡುವವ] ಇದ್ದು ಸರ್ವದೃಶ್ಯಕ್ಕೂ ಸಾಕ್ಷಿಯಾಗಿರುವೆನು ಎಂಬುದೂ ಸಹ ಯಾರದು ಇಲ್ಲದಾಗಿರುತ್ತದೆಯೋ ಅವರು ಸಾಧಕರೆನಿಸುವರು. [೨೬] ತುರ್ಯಾವಸ್ಥೆಯ ನಂತರ ಐದನೆಯದಾದ ಉನ್ಮನೀ ಅವಸ್ಥೆ ಅಂದರೆ ಮಾಯೆಯ ಉಪಾಧಿಯಿಂದ ವೃತ್ತಿಯು ಮುಕ್ತವಾಗಿ ಬ್ರಹ್ಮದಲ್ಲಿ ಲೀನವಾಗುವ ಅವಸ್ಥೆಯು ಈ ಉನ್ಮನಿಯಲ್ಲಿ ಮನಸ್ಸಿನ ವ್ಯಾಪಾರವೇ ಇರುವದಿಲ್ಲ. ಉನ್ಮನಿ ಸಾಧಿಸಿತೆಂದರೆ ಇದರ ಮುಂದೆ ಯಾವ ಅವಸ್ಥೆಗಳೂ ಇರುವದಿಲ್ಲ. ಅಂತೆಯೇ ಉನ್ಮನಿಯ ಕೊನೆಯಲ್ಲಿ ತನ್ನದು ತನಗೇ ನಿರಂತರ ಭೆಟ್ಟಿಯಾಗುವದು. ಅಂದರೆ ತನ್ನ "ನಾನು" ಎಂಬುದು ತನಗೇ ಎಂದೂ ಭಂಗ ಹೊಂದದಂಥ ಅಖಂಡ ಭೆಟ್ಟಿಯಾಗುವದು. ನಾನು ಅಂದರೆ ಆತ್ಮ ಈ ಸ್ವರೂಪ ಸಾಕ್ಷಾತ್ಕಾರ ಹೊಂದಬೇಕೆಂಬ ಬಗ್ಗೆ ಯಾರು ನಿರಂತರ ಲಕ್ಷ್ಯ ಹೊಂದಿರುವರೋ ಅವರು ಸಾಧಕರಿರುವರು. [೨೭] ಯಾರು ಈ ದೃಶ್ಯಮಯ ದ್ವೈತದ ಸಂಬಂಧವನ್ನು ಕಡಿದಿರುವರೋ ಮತ್ತು ಅವಿದ್ಯೆಯಿಂದ ಸ್ವರೂಪದ ಮೇಲೆ ಪ್ರತೀತ-ಪ್ರಚೀತ ಆಗುವ ದೃಶ್ಯದ ಭಾಸವನ್ನು ಯಾರು ಇಲ್ಲದಂತೆ ಮಾಡಿದರೋ ಹಾಗೂ ದೇಹವಿದ್ದರೂ ಸಹ ವಿದೇಹಿ ಎನಿಸುವರೋ ಇವರು ಸಾಧಕರೆನಿಸುವರು. [೨೮] ಯಾರು ಅಖಂಡ ಸ್ವರೂಪಾಕಾರ ಸ್ಥಿತಿಯುಳ್ಳವರು, ಎಳ್ಳಷ್ಟೂ ದೇಹಾಭಿಮಾನ ವಿಲ್ಲದವರು, ಎಲ್ಲ ಸಂಶಯಗಳ ಪರಿಹಾರವಾದವರು, ಇವರೆಲ್ಲ ಸಾಧಕರೆನಿಸುವರು.(೨೯) ಪಂಚಭೂತಗಳಿಂದ ಹೆಣೆಯ ಲ್ಪಟ್ಟಂಥ-[ಪಂಚಭೌತಿಕ ಸೃಷ್ಟಿಯ] ತ್ರೈಲೋಕ್ಯದ ಪ್ರಚಂಡ ವಿಶ್ವರೂಪದ ವಿಸ್ತಾರವು ಒಂದು ಸ್ವಪ್ನದಂತೆ ಸುಳ್ಳಾಗಿ-ಖೊಟ್ಟಿಯಾಗಿ ತೋರುವದೋ [ಅನಿಸುವದೋ] ಮತ್ತು ನಿರ್ಗುಣ ಬ್ರಹ್ಮವೊಂದೇ ಸತ್ಯಶಾಶ್ವತ ಅನ್ನುವ ದೃಢ ನಿಶ್ಚಯ ಇರುವವರೆಲ್ಲರೂ ಸಾಧಕರೆನಿಸುವರು (೩೦) ಒಬ್ಬನಿಗೆ ಒಂದು ಭಯಂಕರ ಸ್ವಪ್ನಬಿದ್ದಿತು. ಅವನು ಆ ಸ್ವಪ್ನದಲ್ಲಿಯೇ ಗಾಬರಿಗೊಂಡು ಅಂಜಿದನು. ಆಮೇಲೆ ಅವನು ಎಚ್ಚರವಾದನು. ಆಗಲೇ ಅವನ ಭಯವು ಇಲ್ಲದಾಗಿತ್ತು. ಇದರಂತೆಯೇ ಸರ್ವದೃಶ್ಯ ವಿಶ್ವವೂ ಸ್ವಪ್ನದಂತೆ ಸುಳ್ಳಿರುವದು. ಎಂಬ ದೃಢ ನಿಶ್ಚಯವಾದ ಮೇಲೆ ಯಾರು ಪೂರ್ಣ ನಿರ್ಭಯರಾಗಿರುವರೋ ಅವರು ಸಾಧಕರೆನಿಸುವರು. [೩೧]

ಮಾಯೇಚೇ ಜೇ ಪ್ರತ್ಯಕ್ಷಪಣ । ಜನಾಸ ವಾಟೇ ಹೇ ಪ್ರಮಾಣ ।
ಸ್ವಾನುಭವೇ ಅಪ್ರಮಾಣ । ಸಾಧಕೇ ಕೇಲೇ ॥೩೨॥

ನಿದ್ರಾ ಸಾಂಡೂನಿ ಜೆಇರಾ ಜಾಲಾ । ತೋ ಸ್ವಪ್ನಭಯಾ ಪಾಸೂನ ಸುಟಲಾ।
ಮಾಯಾ ಸಾಂಡೂನ ತೈಸಾ ಗೇಲಾ । ಸಾಧಕ ಸ್ವರೂಪೀ ॥೩೩॥

ಐಸೀ ಅಂತರಸ್ಥಿತೀ ಬಾಣಲೀ । ಬಾಹ್ಯ ನಿಸ್ಪೃಹತಾ ಅವಲಂಬಿಲೀ ।
ಸಂಸಾರ ಉಪಾಧೀ ತ್ಯಾಗಿಲೀ । ಯಾ ನಾವ ಸಾಧಕ ॥೩೪॥

ಕಾಮಾಪಾಸೂನ ಸುಟಲಾ । ಕ್ರೋಧಾಪಾಸೂನ ಪಳಾಲಾ ।
ಮದ ಮತ್ಸರ ಸಾಂಡಿಲಾ । ಯೇಕೀಕಡೆ ॥೩೫॥

ಆತ್ಮಸ್ವರೂಪವು ಅದೃಶ್ಯ ಮತ್ತು ಅತ್ಯಂತ ಸೂಕ್ಷ್ಮವು ಅದೇ ದೇಹ ಸಹಿತ ಎಲ್ಲ ವಿಶ್ವವು ಮತ್ತು ದೃಶ್ಯವು ಅತ್ಯಂತ ಸ್ಥೂಲವಿರುವದು. ಅಭ್ಯಾಸ ಮಾಡಿ ಮಾಡಿ ಅದರ ಸಾಮರ್ಥ್ಯದಿಂದ ಯಾರು ದೃಶ್ಯವಿರುವದೆಲ್ಲವನ್ನೂ ಬದಿಗೆ ಸರಿಸುವರೋ ಮತ್ತು ಸ್ವಸ್ವರೂಪಕ್ಕೆ ಅಂಟಿಕೊಳ್ಳುವರೋ ಅವರು ಸಾಧಕರಿರುತ್ತಾರೆಂಬ ಅಭಿಪ್ರಾಯ ಶ್ರೀ ಸಮರ್ಥರದಾಗಿರುತ್ತದೆ. ಮುಂದಿನ ಮೂರು ನುಡಿ [ಓವಿ]ಗಳಲ್ಲಿ ಇದೇ ಅರ್ಥವನ್ನು ಸಾರಾಂಶರೂಪದಿಂದ ಹೇಳುತ್ತಾರೆ. ದೃಶ್ಯವೇ ನಿಜವೆಂದು ನಂಬಿ ಅದಕ್ಕೇ ಅಂಟಿಕೊಳ್ಳುವ ಅನೇಕ ಜನ್ಮದ ರೂಢಿಯನ್ನು ಕಿತ್ತೊಗೆಯುವದೇನೂ ಅಷ್ಟೊಂದು ಸುಲಭದ ಕೆಲಸವಲ್ಲ. ಇದೇ ಪ್ರಕಾರ ಅದೃಶ್ಯವಾದ ಆತ್ಮಸ್ವರೂಪದಲ್ಲಿ ಸತತವಾಗಿ ಅಂಟಿಕೊಂಡಿರುವ ರೂಢಿಯ [ಸವಯ]ನ್ನು ಹೊಂದುವದೂ ಸಹ ಸುಲಭವಾದದ್ದಲ್ಲ. ಆದರೆ ಈ ಎರಡೂ ಅವಘಡ ಸವಯ-[ರೂಢಿ]ವನ್ನು ನಿಶ್ಚಯದಿಂದ, ಧೈರ್ಯದಿಂದ, ದೀರ್ಘ ಪ್ರಯತ್ನದಿಂದ ಮತ್ತು ಸತತ ಅಭ್ಯಾಸದಿಂದ ಯಾರು ಸಾಧಿಸುವರೋ ಅವರೇ ನಿಜವಾದ ಸಾಧಕ ಪದಕ್ಕೆ ಯೋಗ್ಯರಾಗಿರುವರು. ಮಾಯೆಯಿಂದ ನಿರ್ಮಾಣಗೊಂಡ ದೃಶ್ಯಜಗತ್ತು ಪ್ರತ್ಯಕ್ಷ ಕಾಣುತ್ತದೆ. ಅಂತೆಯೇ ಸಾಮಾನ್ಯ ಮನುಷ್ಯರಿಗೆ ಅದರ ನಿಜತ್ವವು ಪ್ರಮಾಣ ಸಿದ್ಧವೆಂದು ಅನಿಸುತ್ತದೆ. ಆದರೆ ಸಾಧಕರಿಗೆ ಸ್ವಸ್ವರೂಪದ ಪ್ರತ್ಯಕ್ಷ ಅನುಭವ ಬಂದ ಮೇಲೆ ಆತ್ಮವೊಂದೇ ನಿಜವಿರುವದೆಂಬ ಸ್ವಾನುಭವ ಪೂರ್ಣ ಪ್ರಚೀತಿ ಬರುತ್ತದೆ. ಈ ಪ್ರಚೀತಿ [ಅನುಭವ] ಬಂದ ಮೇಲೆ ಅವರು ದೃಶ್ಯಜಗತ್ತು ಪ್ರತ್ಯಕ್ಷ ಕಂಡರೂ ಸಹ ಇದು ಶಾಶ್ವತವಾದದ್ದೆಂದು ನಂಬುವದೇ ಇಲ್ಲ. ಜಗತ್ತಿನ ನಿಜತ್ವವನ್ನು ಅವರು ಅಪ್ರಮಾಣವೆಂದು ತಿಳಿಯುವರು. ಮತ್ತು ಸ್ವಸ್ವರೂಪವೇಶಾಶ್ವತ ವೆಂದು ನಂಬುವವರೇ ನಿಜವಾದ ಸಾಧಕರಿರುವರು[೩೨]ಒಬ್ಬ ಮಲಗಿದ ಮನುಷ್ಯನು ನಿದ್ರೆಯಿಂದಎಚ್ಚರವಾದನು. ಮಲಗಿದಾಗ ಬಿದ್ದ ಭಯದ ಸ್ವಪ್ನವು ಎಚ್ಚರವಾದ ಕೂಡಲೇ ತನ್ನಷ್ಟಕ್ಕೆ ತಾನೇ ಇಲ್ಲದಾಯಿತು. ಇದರಂತೆಯೇ ಮಾಯಾಮಯವಾದ ದೃಶ್ಯವನ್ನು ದಾಟಿ ಅದರಾಚೆಗೆ ಹೋದ ಸಾಧಕರು ಆತ್ಮಸ್ವರೂಪದಲ್ಲಿ ಕೂಡಿ ಹೋಗುವರು. ಅವರ ಮೇಲಿನ ದೃಶ್ಯದ ಒತ್ತಡವು ತನ್ನಷ್ಟಕ್ಕೆ ತಾನೇ ಇಲ್ಲದಾಗುವದು. ಸ್ವರೂಪ ಜಾಗೃತಿ ಹೊಂದಿ ಮಾಯಿಕ ದುಃಖವನ್ನು ನೀಗಿ ಬಿಟ್ಟಿರುವರು. [೩೩] ಈ ತರಹದಿಂದ ಯಾರು ಅಂತರ್ಯಾಮಿ [ಒಳಗೆ] ಆತ್ಮಸ್ವರೂಪದಲ್ಲಿ ನೆಲೆಗೊಂಡು ಸಾಧಕನು ಹೊರಗಿನ ವ್ಯವಹಾರದಲ್ಲಿ ಅತ್ಯಂತ ನಿರಾಶೆಯಿಂದ ಆಶಾರಹಿತರಾಗಿ ನಡೆಯುವರೋ ಮತ್ತು ಯಾರು ಸಂಸಾರ ಬಂಧನದಿಂದ ಬಾಧಾಯಿಸುವದಿಲ್ಲವೋ ಅವರು ಸಾಧಕರಿರುವದು. ಇವರು ಒಳಗೂ ಹೊರಗೂ ದೋಷರಹಿತರಾಗಿರುವರು. [೩೪] ಒಬ್ಬ ಶೂರನು ತನ್ನ ಅನೇಕ ಸಣ್ಣದೊಡ್ಡ ವೈರಿಗಳನ್ನು ಅತುಲ ಪರಾಕ್ರಮದಿಂದ ಪರಾಭವಗೊಳಿಸಿ ಯಾವ ಪ್ರಕಾರವಾಗಿ ಮೆರೆಯುವನೋ ಅದೇ ಪ್ರಕಾರವಾಗಿ ಸಾಧಕನೂ ಸಹ ಸ್ವಸ್ವರೂಪ ಸ್ಥಿತಿಯ ಪ್ರಾಪ್ತಿಗಾಗಿ ಅಡ್ಡಕಂಟಕರಾಗಿರುವ ಅನೇಕ ಸಣ್ಣ ದೊಡ್ಡ ಒಳಗಿರುವ ಶತ್ರುಗಳನ್ನು ಪೂರ್ಣವಾಗಿ ಇಲ್ಲದಂತೆ ಮಾಡಿ ಬಿಡುವನು. ಈ ಅವರ ಪರಾಕ್ರಮವನ್ನು ಶ್ರೀ ಸಮರ್ಥರು ಈಗ ವರ್ಣನೆ ಮಾಡಿ ಹೇಳುವರು. ಸಾಧಕರೆಂದು ತಯಾರಾಗಲು ಏನೇನು ಮಾಡಬೇಕಾಗುತ್ತದೆಂಬುದನ್ನು ಅವರು ಮಾಡುವ ವರ್ಣನೆಯಿಂದ ನಮಗೆ ತಿಳಿಯುವದು. ದೇಹ ಬುದ್ಧಿಯಿಂದ ಆತ್ಮಬುದ್ಧಿಯೊಳಗೆ ಹೋಗುವಾಗಲೇ [ಹೋಗುವ ಪೂರ್ವದಲ್ಲಿ] ದೇಹ ಬುದ್ಧಿ ಹಾಗೂ ಅದರ ಅಂಶ ಅಥವಾ ಪೀಳಿಗೆ ಸಹ ಇಲ್ಲದಂತೆ ಮಾಡಬೇಕಾಗುವದು. ದೇಹದ ಮೇಲಿನ ಅತೀ ಪ್ರೇಮದ ಕಾರಣದಿಂದ ಜೀವವು ಅತಿ ಸ್ವಾರ್ಥಿ, ಸಂಕುಚಿತ, ಆಸಕ್ತ ಮತ್ತು ಭೋಗಕ್ಕಾಗಿ ಹಪಾಹಿಸುವದು. ತನ್ಮೂಲಕವಾಗಿ ಅದು ಅನೇಕ ಭ್ರಾಮಕ ಕಲ್ಪನೆ, ಭಾವನೆ, ಆಕಾಂಕ್ಷೆ, ಯೋಗ್ಯತೆಯ ಮಹತ್ವ, ಗೌರವ, ಮರ್ಯಾದೆ, ವಿಚಾರ, ಮತ್ತು ವಿಕಾರ ಇವುಗಳನ್ನೆಲ್ಲ ಜೋಪಾನ ಮಾಡಿರುವದು. ಈ ಎಲ್ಲವನ್ನು ಸ್ವತಃ ಕಡಿದು ಮುರಿದು ನಿರ್ನಾಮಗೊಳಿಸುವದೇ ಸಾಧಕರ ವೀರಶೂರ ಭಾವವಿರುವದು. ಈ ಪರಾಕ್ರಮ ಮಾಡಿ ಮೆರೆವ ಸಾಧಕರೇ ಚಿದಾಕಾಶದಲ್ಲಿ ಸ್ವೈರ [ಸ್ವಚ್ಛಂದ] ಸಂಚಾರ ಮಾಡಬಲ್ಲವರಾಗಿರುವರು. ಸಾಧಕರಾದವರು ಕಾಮ ವಾಸನೆಯಿಂದ ಬಿಡುಗಡೆ ಹೊಂದಿರುವರು. ಕ್ರೋಧದಿಂದ ಬಹುದೂರ ಓಡಿರುವರು ಮತ್ತು ಮದ ಮತ್ಸರಗಳನ್ನು ಒತ್ತಟ್ಟಿಗೆ ಕಟ್ಟಿ ಒಗೆದಿರುವರು. (೩೫)

ಕುಳಾಭಿಮಾನಾಸಿ ಸಾಂಡಿಲೇ । ಲೋಕಲಾಜೇಸ ಲಾಜವಿಲೇ ।
ಪರಮಾರ್ಥಾಸ ಮಾಜವಿಲೇ । ವಿರಕ್ತಿಬಳೆ ॥೩೬॥

ಅವಿದ್ಯೆಪಾಸೂನ ಫಡಕಲಾ । ಪ್ರಪಂಚಾಪಾಸೂನ ನಿಷ್ಟಲಾ ।
ಲೋಭಾಚೆ ಹಾತೀ ಚಾ ಗೇಲಾ । ಅಕಸ್ಮಾತ್ ॥೩೭॥

ಥೋರಪಣಾಸಿ ಪಾಡಿಲೇ । ವೈಭವಾಸಿ ಲಿಥಾಡಿಲೇ ।
ಮಹತ್ವಾಸಿ ಝುಂಜಾಡಿಲೇ । ವಿರಕ್ತಿಬಳೇ ॥೩೮॥

ಭೇದಾಚಾ ಮಡಘಾ ಮೋಡಿಲಾ । ಅಹಂಕಾರ ಸೋಡೂನ ಪಾಡಿಲಾ ।
ಪಾಈ ಧರೂನಿ ಆಪಟಿಲಾ । ಸಂದೇಹ ಶತ್ರು ॥೩೯॥

ವಿಕಲ್ಪಾಚಾ ಕೇಲಾ ವಧು । ಥಾಪೇ ಮಾರಿಲಾ ಭವಸಿಂಧು ।
ಸಕಳ ಭೂತಾಚಾ ವಿರೋಧು । ತೋಡೂನ ಟಾಕಿಲಾ ॥೪೦॥

ಭವಭಯಾಸಿ ಭಡಕಾವಿಲೇ । ಕಾಳಾಚೇ ಟಾಂಗೇ ಮೋಡಿಲೇ ।
ಮಸ್ತಕ ಹಾಣೋನಿ ಫೋಡಿಲೇ । ಜನ್ಮ ಮೃತ್ಯಾಚೇ ॥೪೧॥

ಸಾಧಕರು ಕುಲಜಾತಿಗಳನ್ನು ಬಿಟ್ಟಿರುವರು. ಲೋಕಲಜ್ಜೆಯನ್ನು ಪರಾಭೂತಗೊಳಿಸಿ ನಾಚಿಸಿ ಬಿಟ್ಟಿರುವರು. ಹಾಗೂ ವೈರಾಗ್ಯದ ಬಲದಿಂದ ಪರಮಾರ್ಥವನ್ನು ಬಹಳಷ್ಟು ಬೆಳೆಸಿರುವರು. (೩೬) ಸಾಧಕರು ಅವಿದ್ಯೆ-ಅಜ್ಞಾನಜನಿತದ ಸಂಬಂಧವನ್ನು ತೊರೆಯುವರು. ಆಗ ಅಜ್ಞಾನವು ಇಲ್ಲದಾಗುವದು. ಪ್ರಪಂಚದಿಂದ ಜಾರಿ ಹೋಗುವರು. ಪ್ರಪಂಚದಲ್ಲಿ ಸಿಲುಕಿಕೊಂಡಿರುವದೇ ಇಲ್ಲ. ಲೋಭದ ಜಾಲದಿಂದ ಅವರು ಹಾ ಹಾ ಅನ್ನುವಷ್ಟರಲ್ಲಿ ಪಾರಾಗಿ ಹೋಗುವರು. (೩೭) ಸಾಧಕರು ಜನರಲ್ಲಿ ದೊಡ್ಡವರೆನಿಸಿಕೊಳ್ಳಬೇಕೆಂಬ ಒಣ ಹಮ್ಮನ್ನು ಒದ್ದು ಕೆಳಗೆ ಕೆಡವುವರು. ದೊಡ್ಡಿಸ್ತನಕ್ಕೆ ಎಷ್ಟೂ ಕಿಮ್ಮತ್ತು ಕೊಡುವದಿಲ್ಲ. ಜಗದ ವೈಭವವು ಅವರಿಗೆ ಕಾಲಕಸಕ್ಕಿಂತ ಕಡೆಯಾದ್ದರಿಂದ ಅದಕ್ಕೆ ಕೈ ಹಚ್ಚದೇ ಕಾಲಿನಿಂದಲೇ ಸರಿಸಿ ಬಿಡುವರು, ತುಚ್ಛವೆಂದು ಅಲಕ್ಷಿಸುವರು ಮತ್ತು ವೈರಾಗ್ಯದ ನಿಜವಾದ ಬಲದಿಂದಜಗತ್ತಿನಲ್ಲಿಯ ಮಾನಸನ್ಮಾನಗಳನ್ನು ಧಿಕ್ಕರಿಸುವರು. ಅವನ್ನು ತುಚ್ಛವಾಗಿ ಬದಿಗೆ ಸರಿಸಿಬಿಡುವರು. (೩೮) ಸಾಧಕರು ಭೇದಭಾವದ ನೆಲೆಯನ್ನೇ ಮುರಿದುಹಾಕುವರು. ಭೇದಕ್ಕೆ ನಿಲ್ಲಲೂ ಸಹ ಸ್ಥಳವಿಲ್ಲದಂತೆ ಮಾಡುವರು. ಸಾಧಕರು ಎಲ್ಲದರಲ್ಲಿಯೂ ಅಭೇದತನದಿಂದ ಸ್ವಸ್ವರೂಪ ಕಾಣುವರು. ತನ್ನ ಅಹಂಕಾರವನ್ನು ನೆಲಕ್ಕೆ ಕೆಡವಿ ಮಣ್ಣು ಮುಕ್ಕಿಸುವರು. ಹಾಗೂ ಸಂಶಯವೆಂಬ ಶತ್ರುವನ್ನು ಅನುಮಾನವಿಲ್ಲದೆ ಅವರ ಕಾಲು ಹಿಡಿದು ನೆಲಕ್ಕೆ ಅಪ್ಪಳಿಸಿ ಕೊಂದು ಹಾಕುವರು. ಸಂಶಯದ ಮೂಲವನ್ನೇ ಪೂರ್ಣ ನಷ್ಟಗೊಳಿಸಿ ಬಿಡುವರು. (೩೯) ಸಾಧಕರು ವಿಕಲ್ಪವನ್ನು ಸಹಜವಾಗಿ ವಧೆ ಮಾಡುವರು. ವಿಕಲ್ಪವೆಲ್ಲವನ್ನೂ ಎಷ್ಟು ಇಲ್ಲದಂತೆ ಮಾಡುವರು. ಒಳ್ಳೇ ಬಲವತ್ತರವಾದ ಪ್ರಹಾರ ಮಾಡಿ ಭವಸಾಗರವನ್ನು ಕೊಂದು [ನೀಗಿ] ಪಾರಾಗಿ ಬಿಡುವರು. ವಿಶ್ವದಲ್ಲಿ ಪ್ರತಿಕ್ಷಣಕ್ಕೂ ಘಟಿಸುವ ಅನಂತ ಘಟನೆಗಳಿಗೆ ಭವಸಾಗರವೆನ್ನುವರು ವಿಶ್ವವು ಎಲ್ಲಿಯವರೆಗೆ ನಿಜವೆನಿಸುವದೋ ಅಲ್ಲಿಯವರೆಗೆ ಭವಸಾಗರವೂ ಸಹ ನಿಜವೆಂದೇ ಅನಿಸುವದು. ಸಾಧಕರಿಗೆ ಆತ್ಮಜ್ಞಾನವಾದ ಕೂಡಲೇ ಅದೇ ಕ್ಷಣಕ್ಕೆ ವಿಶ್ವದ ದೃಶ್ಯರೂಪವು ಇಲ್ಲದಂತಾಗುವದು. ಶಾಶ್ವತವಾದದ್ದು ಯಾವುದೆಂಬುದು ಅನುಭವದಿಂದ ಗೊತ್ತಾದ ಕೂಡಲೇ ಅಶಾಶ್ವತ ದೃಶ್ಯ ಜಗವು ಇಲ್ಲದಂತೆಯೇ ಆಗಿ ಬಿಡುತ್ತದೆ. ಇದರಂತೆಯೇ ಪಂಚಮಹಾಭೂತಗಳಲ್ಲಿಯ ಅಪಸಾತೀ ವಿರೋಧ [ಪ್ರಾಣಿ ಮಾತ್ರರಲ್ಲಿರುವ ವೈರಭಾವ]ವನ್ನು ಸಾಧಕರು ಕಡಿದೊಗೆದು ಬಿಡುವರು. ತಾತ್ಪರ್ಯ:- ಆತ್ಮಜ್ಞಾನದ ಯೋಗದಿಂದ ಸರ್ವತ್ರವೂ ಆತ್ಮರೂಪ ನೋಡುವಂಥ ವಿಚಾರ ಬಲವತ್ತರವಾಗಿ ಜೋರಿನಿಂದ ಬೆಳೆದಾಗ ಸಾಧಕನಿಗೆ ಸರ್ವತ್ರವೂ ಆತ್ಮವೇ ತುಂಬಿದೆ ಅನ್ನುವ ಅನುಭವದ ನಿಶ್ಚಯವು ದೃಢಗೊಳ್ಳುವದು ಮತ್ತು ವೈರಾಗ್ಯದ ಜೋರಿನ ಬಲದಿಂದ ಎಲ್ಲ ದುರ್ಗುಣಗಳ ಸಂಹಾರ ಮಾಡುವನು [೪೦] ಸಾಧಕರು ಸಂಸಾರ ಭಯದ ಕಪಾಳಗಡ್ಡೆಗೆ ಹೊಡೆದು ಹರಿದೊಗೆಯುವರು. ಪ್ರಪಂಚದಲ್ಲಿಯ ಭಯದ ಅಂಜಿಕೆ ಅವರಿಗೆ ಈಗಿರುವದಿಲ್ಲ. ಅಷ್ಟೇಅಲ್ಲ ಜೀವನದಲ್ಲಿ ಭಯವೆಂಬುದೇ ಉಳಿದಿರುವದಿಲ್ಲ. ಕಾಲನ ಟೊಂಕವನ್ನು ಮುರಿದೊಗೆದರು. ಕಾಲ ಒಂದೇ ರೀತಿ ಪ್ರವಹಿಸುತ್ತಿರುವದು. ಜೀವವು ಕಾಲನ ಅಧಿಕಾರದಲ್ಲಿ ಕೆಲಸ ಮಾಡುವದು. ಅಂತೆಯೇ ಕಾಲನಕೂಡ ಜೀವವು ಸಹಪ್ರವಹಿಸುತ್ತ ಹೋಗುವದು. ಕಾಲನ ಟೊಂಕ ಮುರಿದ ಕೂಡಲೇ ಅದರ ಗತಿ ನಿಲ್ಲುತ್ತದೆ. ಆಗ ಸಾಧಕರು ಕಾಲನ ಅಧಿಕಾರವನ್ನು ಕಿತ್ತೊಗೆದು ಅಮರತ್ವದಲ್ಲಿ ಪ್ರವೇಶ ಮಾಡುವರು. ಸಾಧಕರು ಮೃತ್ಯುವಿನ ಮಸ್ತಕದ ಮೇಲೆ ಪ್ರಹಾರ ಮಾಡಿ ಅದನ್ನು ಒಡೆದು ಹಾಕುವರು. ಜನ್ಮ ಮತ್ತುಮೃತ್ಯು ಇವು ಕಾಲಸತ್ತೆಯ[ಅಧಿಕಾರದ]ಸಂಕೇತಗಳಾಗಿರುವವು. ಜನ್ಮ ಮೃತ್ಯುವಿನ ಅಧಿಕಾರವುದೇಹದ ಮೇಲೆ ಮಾತ್ರ ನಡೆಯುತ್ತದೆ. ಸಾಧಕರು ಆತ್ಮಸ್ವರೂಪರಾದ ಮೇಲೆ ಅವರಿಗೆ ಜನ್ಮವಿಲ್ಲ. ಅದರಂತೆ ಮೃತ್ಯುವೂ ಸಹ ಇರುವದಿಲ್ಲ. [೪೧]

ದೇಹ ಸಮಂಧಾವರೀ ಲೋಟಲಾ । ಸಂಕಲ್ಪಾವರೀ ಉಠಾವಲಾ ।
ಕಲ್ಪನೇಚಾ ಘಾತ ಕೇಲಾ । ಅಕಸ್ಮಾತ ॥೪೨॥

ಅಪಧಾಕಾಸಿ ತಾಡಿಲೇ । ಲಿಂಗದೇಹಾಸಿ ವಿಭಾಂಡಿಲೇ ।
ಪಾಷಾಂಡಾಸ ಪಛ್ಯಾಡಿಲೇ । ವಿವೇಕ ಬಳೇ ॥೪೩॥

ಗರ್ವಾವರೀ ಗರ್ವ ಕೇಲಾ । ಸ್ವಾರ್ಥ ಅನರ್ಥೀ ಘಾತಲಾ ।
ಅನರ್ಥ ತೋಹೀ ನಿರ್ದಾಳಿಲಾ । ನೀತಿ ನ್ಯಾಯೇ ॥೪೪॥

ಮೋಹಾಸೀ ಮಧೇಚಿ ತೋಡಿಲೇ । ದುಃಖಾಸಿ ದುಃಧಡ ಚಿ ಕೇಲೇ ।
ಶೋಕಾಸ ಖಂಡೂನ ಸಾಂಡಿಲೇ । ಯೇಕೀ ಕಡೆ ॥೪೫॥

ದ್ವೇಷ ಕೇಲಾ ದೇಶಧಡೀ । ಅಭಾವಾಚೀ ಘೇತಲೀ ನರಡೀ ।
ಧಾಕೇ ಉದರ ತಡಾಡೀ । ಕುತರ್ಕಾಚೆ ॥೪೬॥

ಜ್ಞಾನೆ ವಿವೇಕ ಮಾಜಲಾ । ತೇಣೇ ನಿಶ್ಚಯೋ ಬಳಾವಲಾ ।
ಅವಗುಣಾಚಾ ಸಂವ್ಹಾರ ಕೇಲಾ । ವೈರಾಗ್ಯ ಬಳೇ ॥೪೭॥

ಸಾಧಕರು ದೇಹರೂಪಿ ಪಿಶಾಚಿಯ ಮೇಲೆ ಹಲ್ಲೆ ಮಾಡಿ ಅವನ್ನು ಹೊರದಬ್ಬುವರು. ನಾನು ಆತ್ಮನೇ ಇರುತ್ತಿರಲು "ನಾನು ದೇಹವಿರುವೆ" ಎಂಬ ಪಿಶಾಚಿಯ ಬಾಧೆಯಾಯಿತು. ಸಾಧಕರು ಆ ಪಿಶಾಚಿಯನ್ನು ಬಿಡಿಸಿ ಅದನ್ನು ಕಾಯಂ ಆಗಿ ಹೊರಗಟ್ಟಿ ಓಡಿಸಿಬಿಟ್ಟರು. ಸಾಧಕರು ಸಂಕಲ್ಪರೂಪಿ ಶತ್ರುವಿನ ವಿರುದ್ಧ ಬಂಡೆದ್ದು ಅವನನ್ನು ನಿರ್ಮೂಲನ ಮಾಡಿದರು. ಮನುಷ್ಯನ ಅಂತರ್ಯಾಮದಲ್ಲಿ ಸಂಕಲ್ಪರೂಪದ ಒಂದು ದೊಡ್ಡ ಸೇನೆಯೇ ಇರುತ್ತದೆ. ಸಾಧಕರು ಈ ಸೈನ್ಯವನ್ನು ನಿರ್ನಾಮಗೊಳಿಸುವರು. ಎಲ್ಲ ಸಂಕಲ್ಪವನ್ನು ಹೊಡೆದು ಹಾಕುವರು. ಸಾಧಕನಾದವರು "ಕಲ್ಪನಾ" ಎಂಬುದರ ಮೇಲೆ ಅಚಾನಕ್ ಹಲ್ಲೆ ನಡೆಸಿ ಅದನ್ನು ವಧಿಸಿ ಬಿಡುವರು. ಆಶೆಯ ಕೈ ಹಿಡಿದ ಕಲ್ಪನೆಯು ಮನುಷ್ಯರನ್ನು ಅಶಾಶ್ವತವಾದ ದೃಶ್ಯದಲ್ಲಿ ತೊಡಗಿಸಿ ಬಿಡುವದು. ಅಂತೆಯೇ ಸಾಧಕರು ಕ ಲ್ಪ ನೆ ಮಾಡುವದನ್ನೇ ಬಂದು ಮಾಡಿ ಬಿಡುವರು. [೪೨] ತನ್ನಲ್ಲಿಯೇ ತನಗಿರುವ ಭವಭಯವನ್ನು ಥಳಿಸಿ ಹೊರಹಾಕಿದನು. ನಮ್ಮ ಗತಿ ಯಾವ ರೀತಿಯಲ್ಲಾದೀತು. ಎಂಬ ಭಯ ಸಾಮಾನ್ಯ ಮನುಷ್ಯರಿಗೆ ಇರುತ್ತದೆ. ಸಾಧಕನು ಇದನ್ನು ನಿವಾರಿಸುತ್ತಾನೆ. ಸಾಧಕನು ತನ್ನ ವಾಸನಾತ್ಮಕ ಸೂಕ್ಷ್ಮ ದೇಹವನ್ನು ಪರಾಭವಗೊಳಿಸುವನು. [ಗೆಲ್ಲುವನು] ನಮ್ಮ ವಾಸನೆಯು ಸೂಕ್ಷ್ಮ ದೇಹವಲ್ಲಿ ಇರುತ್ತದೆ. ಆದ್ದರಿಂದ ಸಾಧಕನಾದವನು ವಾಸನೆಯನ್ನು ಪರಾಭವಗೊಳಿಸುವನು. ಅದಕ್ಕೆ ಜೀವಿಸುವದೇ ಕಠಿಣವಾಗುವಂತೆ ಮಾಡುವನು. ವಿವೇಕ ಸಾಮರ್ಥ್ಯದ ಬಲದಿಂದ ಸಾಧಕನು ಪಾಖಂಡಮತವನ್ನು ಹರಿದೊಗೆದನು. ಅದರ ಬಾಯಿ ಬಂದಾಗಿ ಹೋಯಿತು. ಪಾಖಂಡಮತದ ತೇಜೋ ಭಂಗ ಮಾಡಿಬಿಟ್ಟನು. (೪೩) "ನಾನು ಬ್ರಹ್ಮನಿರುವೆ" ಈ ಅಭಿಮಾನದಿಂದ ಸಾಧಕನು "ನಾನು ದೇಹವಿರುವೆ" ಎಂಬ ತನ್ನಲ್ಲಿಯ ಅಭಿಮಾನವನ್ನು ಹೊಡೆದೋಡಿಸಿ ಬಿಡುವನು. ಒಂದು ಅಭಿಮಾನ ದೇವರದು. ಅದೇ ಇನ್ನೊಂದು ಅಭಿಮಾನ ದೇಹದ್ದು.; ಒಂದು ಸತ್ಯದ್ದು ಶಾಶ್ವತದ್ದಾದರೆ ಇನ್ನೊಂದು ಅಸತ್ಯದ್ದು, ಅಶಾಶ್ವತದ್ದು.; ಒಂದು ಪವಿತ್ರವಾದದ್ದು, ಇನ್ನೊಂದು ಅಪವಿತ್ರವಾದದ್ದು.; ಒಂದು ಕಲ್ಯಾಣಕಾರಕವಾದದ್ದು ಇನ್ನೊಂದು ಅಕಲ್ಯಾಣಕರವಾದದ್ದು ಇರುವದು. ಸಾಧಕನು ಎರಡನೆಯ ಅಭಿಮಾನವನ್ನು ಹೊಡೆದುಹಾಕುವನು. ಸಾಧಕನು ದೇಹಬುದ್ಧಿಯ ಸ್ವಾರ್ಥವನ್ನು ಸಂಕಟದಲ್ಲಿ ಹಾಕಿ ನೂಕಿಬಿಡುವನು. ತನ್ನ ಸ್ವಾರ್ಥವನ್ನೆಲ್ಲ ಹಾರಿಸಿ ಬಿಡುವನು. ಸಾಧಕನು ದುರ್ದೈವವನ್ನು ಸರಳ ಹಾಗೂ ಶಾಸ್ತ್ರ ಶುದ್ಧ ಮಾರ್ಗದಿಂದ ಕೊಂದುಬಿಡುವನು.(ಇಲ್ಲದಂತೆ ಮಾಡುವನು). ದುರ್ದೈವ ಮತ್ತು ಸುದೈವ ಇವು ದೇಹದ ಸುತ್ತಮುತ್ತ ತಿರುಗುತ್ತಿರುವವು. ಸಾಧಕನು ತನ್ನ ದೇಹವನ್ನು ಇದ್ದೂ ಇಲ್ಲದಂತೆ ಮಾಡುವನು. ಇದೇ ಅವಸ್ಥೆ ದೈವದ್ದೂಅಂದರೆ ಅದೃಷ್ಟ(ನಶೀಬ,ಹಣೆಬರಹ)ದ್ದುಆಗುತ್ತದೆ(೪೪)ಸಾಧಕನು ಮೋಹವನ್ನು ಎರಡುಹೋಳಾಗುವಂತೆ ಸೀಳುವನು. ದುಃಖವನ್ನು ಎರಡು ತುಂಡಾಗಿ ಕತ್ತರಿಸಿ ಹಾಕುವನು. ಶೋಕವನ್ನು ಕತ್ತರಿಸಿ ತುಂಡು ತುಂಡು ಮಾಡಿ ಬೀದಿಗೆ ಬಿಸಾಕುವನು. ಯಾಕಂದರೆ ಮೋಹ, ದುಃಖ, ಶೋಕ, ಇವು ಸಾಧಕನ ಶತ್ರುಗಳಾಗಿರುವರು. ಅಂತೆಯೇ ಸಾಧಕನು ಇವನ್ನು ನಿರ್ನಾಮ ಮಾಡುವನು. (೪೫) ಸಾಧಕನು ದ್ವೇಷವನ್ನು ದೇಶಬಿಟ್ಟು ಅಟ್ಟಿದನು. ಹದ್ದುಪಾರು ಮಾಡಿದನು. ನಾಸ್ತಿಕತನದ ಕುತ್ತಿಗೆಯನ್ನು ಹಿಚುಕಿ ಪ್ರಾಣತೆಗೆದುಕೊಂಡನು. ಸಾಧಕನು ಕುತರ್ಕಕ್ಕೆ ಜೋರಾಗಿ ಹೆದರಿಸಿದನು. ಅದರಿಂದ ಭೀತಿಗೊಂಡ ಕುತರ್ಕದ ಹೃದಯ ಧಡ ಧಡ ಹಾರಹತ್ತಿತು. ಹೊಟ್ಟೆಯುಬ್ಬಿ ಒಡೆಂದು ಚಟಪಡಿಸಿತು. ಆದರೆ ಕೇಳುವವರಾರು? ಸಾಧಕನ ಜೀವನದಲ್ಲಿ ದ್ವೇಷ, ನಾಸ್ತಿಕತನ, ಮತ್ತು ಕುತರ್ಕ ಇವುಗಳಿಗೆ ಎಳ್ಳಷ್ಟೂ ಸ್ಥಾನವಿರುವದಿಲ್ಲ. (೪೬) ಆತ್ಮಜ್ಞಾನದಿಂದ ಸಾಧಕನ ವಿವೇಕ ಬಹಳಷ್ಟು ಶಕ್ತಿಶಾಲಿ ಯಾಗುತ್ತದೆ. ಇದರ ಜೋರಿನಿಂದಲೇ ಸಾಧಕನ ಸ್ವಸ್ವರೂಪದ ಬಗ್ಗೆ ಇರುವ ನಿಶ್ಚಯವು ದೃಢಗೊಳ್ಳುತ್ತದೆ. ವೈರಾಗ್ಯ ಬಲದ ಸಾಮರ್ಥ್ಯದಿಂದ ಸಾಧಕನು ತನ್ನಲ್ಲಿಯ ಅವಗುಣಗಳ ಸಂಹಾರವನ್ನು ಮಾಡುವನು. ಆತ್ಮಾನಾತ್ಮ ವಿವೇಕವು ಭರದಿಂದ ಬೆಳೆಯಲು ಆತ್ಮಾನಾತ್ಮ ವಿವೇಕವೇ ಕಾರಣವಾಗಿರುವದು. ಮತ್ತು ಈ ವಿವೇಕವು ಬಹಳ ವ್ಯಾಪಕವಾದಾಗಲೇ ಸ್ವರೂಪ ನಿಶ್ಚಯವು ಅತ್ಯಂತ ಸ್ಥಿರಗೊಳ್ಳುತ್ತದೆ. ಶಕ್ತಿಯು ಎಲ್ಲ ಅವಗುಣಗಳ ತಾಯಿ ಇರುವಳು ವೈರಾಗ್ಯದಿಂದ ಈ ಅವಗುಣದ ತಾಯಿಯ ವಧೆ ಮಾಡಿದರೆ ಆಗ ಆಕೆಯ ಅವಗುಣ ಮಕ್ಕಳನ್ನು ನಷ್ಟ ಮಾಡಲಿಕ್ಕೆ ಬಹಳ ಕಷ್ಟವಾಗುವದಿಲ್ಲ. (೪೭)

ಅಧರ್ಮಾಸ ಸ್ವಧರ್ಮೇ ಲುಟಿಲೇ । ಕುಕರ್ಮಾಸಿ ಸತ್ಕರ್ಮೇ ಝುಂಗಟಿಲೇ ।
ಲಾಂಟೂನ ವಾಟಾ ಲಾವಿಲೇ । ವಿಚಾರೇ ಅವಿಚಾರಾಸೀ ॥೪೮॥

ತಿರಸ್ಕಾರ ತೋ ಚಿರಡಿಲಾ । ದ್ವೇಷ ಖಿರಡೂನಿ ಸಾಂಡಿಲಾ ।
ವಿಷಾದ ಅವಿಷಾದೇ ಘಾತಲಾ । ಪಾಯಾತಳೀ ॥೪೯॥

ಕೋಪಾವರೀ ಘಾಲಣೇ ಘಾತಲೇ । ಕಾಪಟ್ಯ ಅಂತರೀ ಕುಟಿಲೇ ।
ಸಖ್ಯ ಆಪುಲೇ ಮಾನಿಲೇ । ವಿಶ್ವಜನೀ ॥೫೦॥

ಪ್ರವೃತ್ತೀಚಾ ಕೇಲಾ ತ್ಯಾಗ । ಸುಹೃದಾಂಚಾ ಸೋಡಿಲಾ ಸಂಗ ।
ನಿವೃತ್ತಿಪಥೇ ಜ್ಞಾನಯೋಗ । ಸಾಧಿತಾ ಜಾಲಾ ॥೫೧॥

ವಿಷಯೆ ವ್ಯೆಂದಾಸ ಸಿಂತರಿಲೇ । ಕುವಿದ್ಯೇಸಿ ವೇಢಾ ಲಾವಿಲೇ ।
ಆಪಣಾಸ ಸೋಡವಿಲೇ । ಆಪ್ತತಶ್ಕರಾಪಾಸೂನೀ ॥೫೨॥

ಪರಾಧೀನತೇವರೀ ಕೋಪಲಾ । ಮಮತೇವರೀ ಸಂತಾಪಲಾ ।
ದುರಾಶೇಚಾ ತ್ಯಾಗ ಕೇಲಾ । ಯೆಕಾಯೆಕೀ ॥೫೩॥

ಸ್ವಧರ್ಮಾಚರಣೆಯಿಂದ ಸಾಧಕನು ಅಧರ್ಮದ ಸರ್ವಸ್ವವನ್ನೇ ಹೀರಿಬಿಡುವನು. ಆಗ ಅಧರ್ಮಕ್ಕೆ ಅಸ್ತಿತ್ವವೇ ಇರುವದಿಲ್ಲ. ಸಾಧಕನು ಸತ್ಕರ್ಮದಿಂದ ದುಷ್ಕರ್ಮವನ್ನು ಬಿಸಾಡಿ ಒಗೆದನು ಮತ್ತು ಸದ್ವಿಚಾರದಿಂದ ಅವಿಚಾರವನ್ನು ಹಿಸುಕಿಹೊಡೆದು ದಾರಿಗೆ ತಂದನು. ಸದ್ವಿಚಾರದ ಸಾಮರ್ಥ್ಯದ ಮುಂದೆ ಅವಿಚಾರವು ಅಲ್ಲಿ ನಿಲ್ಲಲು ಶಕ್ಯವೇ ಇಲ್ಲ. (೪೮) ಸಾಧಕನು ತಿರಸ್ಕಾರವನ್ನು ಸೀಳಿ ಒಗೆದನು. ಸಾಧಕನು ಯಾರನ್ನೂ ತುಚ್ಛವಾಗಿ ಕಾಣುವದಿಲ್ಲ. ಸಾಧಕನು ದ್ವೇಷವನ್ನು ಕೆತ್ತಿ, ಹೆರಜಿ ತೆಗೆದು ಹಿಂದಕ್ಕೆ ಬೀಸಿ ಒಗೆದನು. ಅದರ ಲವಲೇಶ ಸಹ ಅಂತಃಕರಣದಲ್ಲಿ ಉಳಿಯಗೊಡುವದಿಲ್ಲ[ಉಳಿಯಗೊಡಲಿಲ್ಲ].ಸಾಧಕನು ಖೇದವಿಷಾದಗಳನ್ನು ಸ್ವಾನಂದ ಸಮಾಧಾನಗಳ ಕಾಲಕೆಳಗೆ ಹಾಕಿ ತುಳಿದು ಗಿಜಿಗಿಜಿಯಾಗುವಂತೆ ಹೊಸಕಿ ಹಾಕಿದನು. ಆತ್ಮಾನಂದದ ಮಸ್ತಿಯಲ್ಲಿ ಖೇದದ ಇರುವಿಕೆಗೆ ಇಂಬೇ ಇರುವದಿಲ್ಲ. ಸರ್ವತ್ರ ಸಮಾಧಾನವೇ ಇರುವದು. (೪೯) ಸಾಧಕನು. ಕ್ರೋಧದ ಮೇಲೆ ದಾಳಿ ಮಾಡಿ ಅದನ್ನು ನಿರ್ನಾಮ ಮಾಡಿಬಿಟ್ಟನು. ಕಪಟವನ್ನು ಒಳಗಿಂದೊಳಗೇ [ಮನಸ್ಸಿನಲ್ಲಿಯೇ] ಕುಟ್ಟಿ, ಅದರ ಗುರುತು ಸಹ ಸಿಗದಂತೆ ಮಾಡಿದನು. ಸಾಧಕನು ಹೀಗೆ ಜೀವ ಗುಣಗಳ ಸಮಾಚಾರತಕ್ಕೊಂಡು ಸರ್ವರನ್ನೂ ಅಂದರೆ ಎಲ್ಲಪ್ರಾಣಿಮಾತ್ರರುಗಳನ್ನು ಮಿತ್ರತ್ವದ ಆತ್ಮೀಯತೆಯಿಂದ ನೋಡುವನು. ಒಟ್ಟಿನಲ್ಲಿ ಎಲ್ಲವನ್ನೂ ಆತ್ಮವತ್ ಕಾಣಹತ್ತಿದನು. [೫೦] ಸಾಧಕನು ದೃಶ್ಯ ಜಗದ ಕಡೆಗೆ ಓಡುವ ವೃತ್ತಿಯ ತ್ಯಾಗಮಾಡುವನು. ಇದು ಪ್ರವೃತ್ತಿಮಾರ್ಗದ ತ್ಯಾಗವು. ಲೌಕಿಕ ಆಪ್ತಮಿತ್ರರ ಸಂಗ ಬಿಟ್ಟು ಬಿಟ್ಟನು. ಮತ್ತು ವೃತ್ತಿ [ಮನಃಸ್ಥಿತಿ]ಯನ್ನು ಆತ್ಮಸ್ವರೂಪದ ಕಡೆಗೆ ತಿರುಗಿಸಿ ಚಿಂತನೆ ಮಾಡುತ್ತ ಮಾಡುತ್ತ ಕೊನೆಗೆ ಆತ್ಮಜ್ಞಾನ ಮಾಡಿಕೊಳ್ಳುವನು. ಮನಃಸ್ಥಿತಿ[ವೃತ್ತಿ]ಯನ್ನು ಒಳಗಡೆಗೆ ತಿರುಗಿಸಿದ ಕೂಡಲೇ ಮೊದಲಿಗೆ ಅನ್ನಮಯ ಕೋಶದಿಂದ ಸಾಧಕನು ನಿವೃತ್ತನಾಗುವನು. ಆಮೇಲೆ ವೃತ್ತಿಯು ಹೆಚ್ಚು ಅಂತರ್ ಮುಖವಾದ ಕೂಡಲೇ ಅದು ಪ್ರಾಣಮಯ ಕೋಶದಿಂದಲೂ ನಿವೃತ್ತವಾಗುವದು. ಆಮೇಲೆ ಮನಸ್ಸು [ವೃತ್ತಿ] ಸೂಕ್ಷ್ಮವಾಗಿ ಸ್ವಸ್ವರೂಪ ಧಾರಣಾ ಹಿಡಿತದಲ್ಲಿ ಇರಹತ್ತಿದ ಕೂಡಲೇ ಅದು ಮನೋಮಯ ಕೋಶದಿಂದ ನಿವೃತ್ತವಾಗುವದು ಇಲ್ಲಿಯೇ ಹೆಚ್ಚು ಅಭ್ಯಾಸಹೊಂದಿ ವೃತ್ತಿಯು ಮತ್ತಷ್ಟು ಸೂಕ್ಷ್ಮವಾಗುವದು. ಆಗಲೇ ಸ್ವಸ್ವರೂಪದ ಧ್ಯಾನ ಹತ್ತುವದು. ವೃತ್ತಿಯು ಆಗ ವಿಜ್ಞಾನಮಯ ಕೋಶದಲ್ಲಿ ಸ್ಥಿರವಾಗುವದು. ಕೊನೆಗೆ ಸಾಧ ಕನು ಇಲ್ಲಿಂದ ನಿವೃತ್ತನಾಗುವನು. ಹಾಗೂ ಆನಂದಮಯ ಕೋಶದಲ್ಲಿ ಪ್ರವೇಶ ಮಾಡುವನು. ಒಟ್ಟಿನಲ್ಲಿ ಮೂರು ಕೋಶಗಳಿಂದ ನಿವೃತ್ತನಾಗಿ ಅವನು ತುರೀಯ ಅವಸ್ಥೆಯೊಳಗೆ ಹೋಗುವನು. ಈ ಅವಸ್ಥೆಯಲ್ಲಿಯೇ ಅವನ ಸಾಧನವು ನಿಲ್ಲುತ್ತದೆ. ಮತ್ತು ಅವನು ತನ್ನಷ್ಟಕ್ಕೆ ತಾನೇ ಉನ್ಮನಿ ಅವಸ್ಥೆಗೆ ಮುಟ್ಟುವನು. ಇದಕ್ಕೇ ನಿವೃತ್ತಿ ಮಾರ್ಗವೆನ್ನುವರು. ಇದು ಅಧಿಕಾರಿ ಪುರುಷನ ಅಥವಾ ಸದ್ಗುರು ಕೃಪಾಪಾತ್ರ ಸಾಧಕನ ಮಾರ್ಗವಿರುವದು[೫೧] ಸಾಧಕನು ದೃಶ್ಯ ರೂಪಿ [ವಿಷಯ ರೂಪಿ] ಠಕ್ಕ, ಚೋರರನ್ನು ಮೋಸಗೊಳಿಸಿದನು. ದೃಶ್ಯದ ಆವರಣದಿಂದ ತಪ್ಪಿಸಿಕೊಂಡು ಇವನು ಪಾರಾದನು. ವಿಪರೀತ ಜ್ಞಾನ ಅಂದರೆ ಅವಿದ್ಯೆ, ಕೆಟ್ಟವಿದ್ಯೆಗೆ ಸುತ್ತಲಿನಿಂದಲೂ ಮುತ್ತಿಗೆ ಹಾಕಿ ಹಣಿದನು. ಭ್ರಮರೂಪದ ವಿಪರೀತ ಜ್ಞಾನವನ್ನು ಇಲ್ಲದಂತೆ ಮಾಡುವನು. ಮತ್ತು ಆಪ್ತಹಿತಚಿಂತಕರೆಂಬ ತುಡುಗರಿಂದ ತನ್ನನ್ನು ಬಿಡಿಸಿಕೊಂಡನು. ಯಾರು ನಿಜವಾಗಿ ತನ್ನವರಲ್ಲವೋ ಅವರಲ್ಲಿ ಮಮತ್ವವನ್ನು ಇಡದಿರು ವವನೇ ಸಾಧಕನು. [೫೨] ಸಾಧಕನು ಪರಾಧೀನತೆಯ ಮೇಲೆ ಸಿಟ್ಟಿಗೇಳುವನು. ಯಾಕಂದರೆ ಅವನು ಸ್ವ-ಅಧೀನ ನಾಗಿರುವನು. ಮಮತೆಯ ಮೇಲೆ ಉರಿದೇಳುವನು. ಯಾಕಂದರೆ ನಿಜವಾದ "ನಾನು" ಅವನಿಗೆ ಸಿಕ್ಕಿರುತ್ತದೆ. ಹಾಗೂ ನಿಜವಾದ "ನನ್ನದು" ಯಾವುದು, ಇದನ್ನು ಅವನು ಚಿಂತಿಸುತ್ತಾನೆ. [ತಿಳಿಯುತ್ತಾನೆ.] ಮತ್ತು ಒಮ್ಮಿಂ ದೊಮ್ಮೆಲೇ ದುರಾಸೆಯನ್ನು ತ್ಯಾಗ ಮಾಡುವನು. ಯಾಕಂದರೆ ಅದು ಇವನನ್ನು ಸ್ವಸ್ವರೂಪದಿಂದ ದೂರು ಮಾಡುವದು. [೫೩]

ಸ್ವರೂಪೀ ಘಾತಲೇ ಮನಾ । ಯಾತನೇಸಿ ಕೇಲೀ ಯಾತನಾ ।
ಸಾಕ್ಷೇಪ ಆಣಿ ಪ್ರೇತ್ನಾ । ಪ್ರತಿಷ್ಠಿಲೇ ॥೫೪॥

ಅಭ್ಯಾಸಾಚಾ ಸಂಗ ಧರಿಲಾ । ಸಾಕ್ಷ ಪಾಸರಿಸಾ ನಿಘಾಲಾ ।
ಪ್ರೇತ್ನ ಸಾಂಗಾತೀ ಭಲಾ । ಸಾಧನಪಂಥೇ ॥೫೫॥

ಸಾವಧ ದಕ್ಷ ತೋ ಸಾಧಕ । ಪಾಹೆ ನಿತ್ಯಾನಿತ್ಯ ವಿವೇಕ ।
ಸಂಗ ತ್ಯಾಗೂನಿ ಯೇಕ । ಸತ್ಸಂಗ ಧರೀ ॥೫೬॥

ಬಳೇಂಚಿ ಸಾರಿಲಾ ಸಂಸಾರ । ವಿವೇಕೇ ಟಾಕಿಲಾ ಜೋಜಾರ ।
ಶುದ್ಧಾಚಾರೇ ಅನಾಚಾರ । ಭ್ರಷ್ಟವಿಲಾ ॥೫೭॥

ವಿಸರಾಸ ವಿಸರಲಾ । ಆಳಸಾಚಾ ಆಳಸ ಕೇಲಾ ।
ಸಾವಧ ನಾಹೀ ದುಶ್ಚಿತ್ತ ಜಾಲಾ। ದುಶ್ಚಿತ್ತ ಪಣಾಸೀ ॥೫೮॥

ಆತಾ ಅಸೋ ಹೇ ಬೋಲಣೇ । ಅವಗುಣ ಸಾಂಡೀ ನಿರೂಪಣೇ ।
ತೋ ಸಾಧಕ ಐಸಾ ಯೇಣೇ ಪ್ರಮಾಣೇ । ಬುಝಾವಾ ॥೫೯॥

ಬಳೇಂಚಿ ಅವಘಾ ತ್ಯಾಗ ಕೀಜೆ । ಮ್ಹಣೌನಿ ಸಾಧಕ ಬೋಲಿಜೆ ।
ಆತಾ ಸಿದ್ಧ ತೋ ಜಾಣಿಜೆ । ಪುಢಿಲೆ ಸಮಾಸೀ ॥೬೦॥

ಸಾಧಕನು ಮನಸ್ಸನ್ನು ಸ್ವಸ್ವರೂಪದಲ್ಲಿ ಲೀನಗೊಳಿಸುವನು. ಇದರಿಂದ ದುಃಖವೇ ದುಃಖಕ್ಕೊಳಗಾಗುವದು. ಯಾಕೆಂದರೆ ಯಾತನೆಗೆ ದುಃಖ ಕಷ್ಟಗಳನ್ನು ಭೋಗಿಸಲು ಮನವೇ ಶಿಲ್ಲಕ ಉಳಿದಿರುವದಿಲ್ಲ. ಸಾಧಕನು ಉದ್ಯೋಗ ಕಷ್ಟ ಮತ್ತು ಪ್ರಯತ್ನ ಇವುಗಳ ಪ್ರತಿಷ್ಠೆಯನ್ನು ಬೆಳಿಸುವನು. ಯಾಕಂದರೆ ಸಾಧಕನ ಜೀವವು ಅಭ್ಯಾಸ, ಸತತೋದ್ಯೋಗ, ಯತ್ನ ಎಂಬವುಗಳಿಂದ ತುಂಬಿ ಹರಿಯುತ್ತಿರುವದು. (೫೪) ಸಾಧಕನು ತನ್ನ ಸಾಧನ ಮಾರ್ಗದ ಜೊತೆಗೆ ಅಭ್ಯಾಸದ ಸಂಗತಿ ಹಿಡಿಯುವನು. ಅವನು ಸತತೋದ್ಯೋಗ ಮತ್ತು ಕಷ್ಟ ಇವನ್ನು ತನ್ನ ಸಂಗಡ ತೆಗೆದುಕೊಂಡೇ ಹೊರಡುವನು. ಮತ್ತು ಪ್ರಯತ್ನ ರೂಪಿ ಉತ್ತಮ ಸಹಚಾರಿಯನ್ನು ಸಂಗಡ ಕರೆದುಕೊಳ್ಳುವನು. **ಅಭ್ಯಾಸಕ್ಕೆ ಮತ್ತು ಪ್ರಯತ್ನಕ್ಕೆ ಶ್ರೀ ಸಮರ್ಥರು ಪರಮಾರ್ಥ ಪ್ರಸಂಗದಲ್ಲಿ ಸಹ ಎಷ್ಟೊಂದು ಮಹತ್ವ ಕೊಟ್ಟಿರುವರೆಂಬುದನ್ನು ಪಕ್ಕಾ ಧ್ಯಾನದಲ್ಲಿಡಬೇಕು. ಆತ್ಮಜ್ಞಾನವೇ ಇರಲಿ, ವಿಜ್ಞಾನವೇ ಇರಲಿ ಇದರ ಪ್ರಾಪ್ತಿಗಾಗಿ ಹಗಲೂ ಇರುಳೂ ಅಭ್ಯಾಸ ಮತ್ತು ಪ್ರಯತ್ನದ ಅವಶ್ಯಕತೆ ಬಹಳವಿರುವದು. ಇದೆಲ್ಲ ಕಷ್ಟದಿಂದಲೇ ಸಾಧ್ಯವು.** (೫೫) ಸಾಧಕನು ಅತಿ ಹುಷಾರ, ಮತ್ತು ಅರಿವುಳ್ಳವ, ತತ್ಪರನಿರುತ್ತಾನೆ. ಶಾಶ್ವತ, ಅಶಾಶ್ವತ, (ನಿತ್ಯಾನಿತ್ಯ)ದ ವಿಚಾರವನ್ನು ಸರಿಯಾಗಿ ವಿವೇಕದಿಂದ ಮಾಡುವನು. ಹಾಗೂ ಇತರ ಎಲ್ಲ ಸಂಗ ಬಿಟ್ಟುಕೊಟ್ಟು ಕೇವಲ ಸತ್ಸಂಗವೊಂದನ್ನೇಹಿಡಿಯುವವನಾಗಿರುವನು.(೫೬) ಸಾಧಕನು ಪ್ರಪಂಚವನ್ನು ಜಬರದಸ್ತಿಯಿಂದ ಹಾಗೂ ಒಲುಮೆಯಿಂದ (ಒಳಜಬರಿನಿಂದ) ಬದಿಗೆ ಸರಿಸುವನು. ವಿವೇಕದಿಂದ ಸಂಸಾರದ ಹೊರೆಯನ್ನು ಬಿಸಾಡುವನು. ಸಾಧಕನು ತನ್ನ ಪರಿಶುದ್ಧಾಚರಣೆಯಿಂದ ಅನಾಚಾರವನ್ನು ದುರಾಚಾರವನ್ನು, ಅಧರ್ಮವಾದದ್ದನ್ನು ವ್ಯವಹಾರದೊಳಗಿಂದ ಪದಭ್ರಷ್ಟ ಮಾಡುವನು. ಅನಾಚಾರವನ್ನು ಅಲ್ಲಿಂದ ಓಡಿಸಿಬಿಡುವನು. ಇಲ್ಲದಂತೆ ಮಾಡುವನು. ಅಂದರೆ ಇವುಗಳನ್ನು ಶುದ್ಧ ಮಾರ್ಗಕ್ಕೆ ತಂದನು. ಬಹು ಜನ್ಮದಿಂದ ಬಂದ ಸಂಸಾರದ ಸವಯಿ(ಚ್ಯಾಳಿ)ಯನ್ನು ಸಂಸಾರಿಕ ಮನದೊಳಗಿಂದ ಹೊರತೆಗೆಯುವದು ಸುಲಭವಾದ ಕೆಲಸವೇನೂ ಅಲ್ಲ, ಅಂತೆಯೇ ಸಾಧಕನು ಅತಿ ಜೋರಿನಿಂದ ಅದನ್ನು ಹೊರಗೆಳೆಯುತ್ತಾನೆ. ಈ ಕ್ರಿಯೆಗೆ ವೃತ್ತಿ ನಿರೋಧವೆನ್ನುವರು. ವಿವೇಕದಿಂದ ನಾನು ಮಾಡುವವ (ಕರ್ತಾ) ಈ ಅಭಿಮಾನ ಕಡಿಮೆ ಆಗಹತ್ತಿತೆಂದರೆ ಪ್ರಪಂಚದ ಒಜ್ಜೆ ಹಗುರವಾಗುವದು.(೫೭)ಸಾಧಕನು ಸ್ವಸ್ವರೂಪದ ಅನುಸಂಧಾನದ ಮರೆವನ್ನೇ ಮರೆತನು.ಅಂದರೆ ಎಷ್ಟೂಮರೆಯದೇ ಅಖಂಡಸ್ಮರಿಸಹತ್ತಿದನು. ಸಾಧಕನು ಆಲಸ್ಯದಬಗ್ಗೆ ಆಲಸ್ಯ ಮಾಡಿದನು. ಅಂದರೆ ಆಲಸ್ಯವೆಂದರೆ ಮೈಗಳ್ಳತನ ಅರ್ಥಾತ್ ಆ ಆಲಸ್ಯದ ಸ್ವೀಕಾರ ಮಾಡಲಿಲ್ಲ. (ಆಲಸ್ಯ ತಂದುಕೊಳ್ಳದೇ, ಆಲಸ್ಯಕ್ಕೆ ಇಂಬುಗೊಡದೇ ನಿಯಮ ನಿಷ್ಠನಾದ) ಸಾಧಕನು ಚಿತ್ತವಿಕ್ಷೇಪ ಆಗಗೊಡಲು ಸಾವಧನಿರುವದಿಲ್ಲ. ಅಲ್ಲಿ ದುಶ್ಚಿತ್‌ವಿರುತ್ತದೆ. ಅಂದರೆ ಅವನು ಚಿತ್ತ ವಿಕ್ಷೇಪವಾಗಗೊಡುವದಿಲ್ಲ. ಸುಚಿತ್ತನಾಗಿಯೇ ಇರುವನು. ಸಾಧಕನ ಜೀವನದಲ್ಲಿ ಸ್ವಸ್ವರೂಪದ ವಿಸ್ಮರಣವಿರುವದಿಲ್ಲ. ಆಲಸ್ಯವಿರುವದಿಲ್ಲ. ಚಿತ್ತದ ವ್ಯಗ್ರತೆ ಇರುವದಿಲ್ಲ. ವ್ಯಗ್ರತೆ ಅಂದರೆ ಅನೇಕ ವಿಷಯದಲ್ಲಿ ಮನಸ್ಸು ಪಸರಿಸುವದು. (ಹರಿದಾಡುವದು) ಅರ್ಥಾತ್ ಏಕಾಗ್ರತೆಯ ಉಲಟ. (೫೮) ಸಾಧಕನು ಗುರೂಪದೇಶವನ್ನು ಮರೆಯದೆ, ಎಷ್ಟೂ ಆಲಸ್ಯ ಮಾಡದೇ, ಸುಚಿತ್ತತನದಿಂದ ಸತತವಾಗಿ ಆತ್ಮಚಿಂತನೆ (ರಾಮನಾಮ ಸ್ಮರಣಾದಿ ಸಾಧನೆ)ಯನ್ನು ನಿಯಮದಿಂದ ನಡೆಸಿದನು. ಸಾಧಕನಲ್ಲಿ ಚಿತ್ತವಿಕ್ಷೇಪ ಸ್ವಸ್ವರೂಪದ ಮರೆವು,ಆಲಸ್ಯತನ, ಚಿತ್ತದ ವ್ಯಗ್ರತೆ ಅಂದರೆ ಅನೇಕ ವಿಷಯದಲ್ಲಿ ಮನಸ್ಸು ಹರಿದಾಡುವದು ಇತ್ಯಾದಿ ಇರುವದಿಲ್ಲ.ಗುರು ಆಜ್ಞೆಯಲ್ಲಿ ಏಕನಿಷ್ಠನಾಗಿರುವದು, ಇನ್ನು ವರ್ಣಿಸಿ ಹೇಳುವದು ಸಾಕು. ಸಂತರ ಉಪದೇಶ ಕೇಳಿ ಯಾರು ತಮ್ಮ ಅವಗುಣಗಳನ್ನು ಬಿಡುವರೋ ಅವರು ಸಾಧಕರಿರುವರೆಂಬುದನ್ನು ಮೇಲೆ ವರ್ಣಿಸಿ ಹೇಳಿದ್ದರ ನೋಲಿಂದ ಗುರುತಿಸಬೇಕು. (೫೯) ಮುದ್ದಾಂ ಎಲ್ಲವನ್ನೂ ಜಬರದಸ್ತಿನಿಂದ ತ್ಯಜಿಸಿದವನು ಅರ್ಥಾತ್ ತನ್ನ ದೇಹಬುದ್ಧಿಯ ತ್ಯಾಗವನ್ನು ಬಲವತ್ತವಾಗಿ ಮಾಡುವವನೇ ಸಾಧಕನೆನಿಸಿಕೊಳ್ಳುವನು. ಇನ್ನು ಮುಂದಿನ ಸಮಾಸದಲ್ಲಿ ಸಿದ್ಧನೆಂದರೆ ಯಾರು ? ಅವನ ಲಕ್ಷಣಗಳ ವರ್ಣನೆ ಮಾಡುವೆವು. (೬೦)

ಯೇಥೇ ಸಂಶಯು ಉಠಿಲಾ । ನಿಸ್ಪೃಹ ತೋಚಿ ಸಾಧಕ ಜಾಲಾ ।
ತ್ಯಾಗ ನ ಘಡೆ ಸಂಸಾರಿಕಾಲಾ । ತರೀ ತೋ ಸಾಧಕ ನವ್ಹೇ ಕೀ ॥೬೧॥

ಐಸೇ ಶ್ರೋತ ಯಾಂಚೆ ಉತ್ತರ । ಯಾಚೇ ಕೈಸೇ ಪ್ರತ್ಯೋತ್ತರ ।
ಪುಢಿಲೆ ಸಮಾಸೀ ತತ್ಪರ । ಹೋಊನ ಐಕಾ ॥೬೨॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
''ಸಾಧಕ ಲಕ್ಷಣ'' ನಿರೂಪಣ ನಾಮ ಸಮಾಸ ನವಮ ॥

● ●

ಇಲ್ಲಿ ಸಿದ್ಧ ಸಾಧಕ ಲಕ್ಷಣದ ವಿಷಯವಾಗಿ ಒಂದು ಸಂಶಯ ಬರುತ್ತದೆ. ಅದೇನೆಂದರೆ, ನಿಸ್ಪೃಹಿ, ತ್ಯಾಗಿಯಾದವನೇ ಸಾಧಕನಾದರೆ, ಪ್ರಾಪಂಚಿಕನಿಗೆ ಸರ್ವತ್ಯಾಗ ಮಾಡಲಿಕ್ಕಾಗುವದಿಲ್ಲ. ಅಂದ ಮೇಲೆ, ಅವನು ಸಾಧಕನಾಗಲು ಶಕ್ಯವಿಲ್ಲವೇನು?(೬೧) ಶ್ರೋತೃವಿನ ಈ ಪ್ರಶ್ನೆಗೂ ಮುಂದಿನ ಸಮಾಸದಲ್ಲಿ ಉತ್ತರ ಕೊಡುವೆವು. ಲಕ್ಷಗೊಟ್ಟು ಕೇಳಿರಿ. (೬೨)

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದ ಐದನೆಯ ದಶಕದಲ್ಲಿಯ
ಸಾಧಕ ಲಕ್ಷಣ ಎಂಬ ಒಂಭತ್ತನೆಯ ಸಮಾಸವು ಮುಗಿದುದು.

## ದಶಕ ೫. ಸಮಾಸ ೧೦. ಸಿದ್ಧ ಲಕ್ಷಣ ನಾಮ ನಿರೂಪಣ (ನುಡಿ ೪೫)

ಸಿಧು (ಸಿಧೆ) ಅಂದರೆ ಸಾಧ್ಯಾಪ್ರತ ಪಾವಣೆ ಅಂದರೆ ಸಾಧಿಸಬೇಕಾದ ವಸ್ತುವನ್ನು ಹೊಂದುವದು. ಅದರಲ್ಲಿ ಯಶಸ್ವಿ ಆದವನು, ಗೆದ್ದವನು ಅರ್ಥಾತ್ ಯಾವನು ತನ್ನ ಧ್ಯೇಯವನ್ನು ಗೆದ್ದನೋ, ಯಾವನು ಸಂಪೂರ್ಣ ಆತ್ಮಜ್ಞಾನ ಹೊಂದಿದನೋ, ಯಾವನ ಅಜ್ಞಾನವು ಸಂಪೂರ್ಣ ನಷ್ಟ ಹೊಂದಿರುವದೋ ಅವನು ಸಿದ್ಧನೆನಿಸುವನು. ಸಾಧಕನು ಅನೇಕ ವರ್ಷವೂ ದೀರ್ಘ ಪ್ರಯತ್ನ ಮತ್ತು ಸ್ಥಿರ ಬುದ್ಧಿಯಿಂದ ಅಭ್ಯಾಸ ಮಾಡಿದ ನೆಂದರೆ ಅವನ ಸಾಧನೆಯ ಫಲ ಫಲಿಸುವದು. ಅರಗುವದು. ಸ್ವಸ್ವರೂಪವನ್ನು ಮುದ್ದಾಂ (ಜಬರದಸ್ತಿಯಿಂದ) ಸ್ಪರ್ಶ ಮಾಡುವ ಸಾಧಕನಿಗೆ ಸಹಜವಾಗಿ, ಸುಲಭವಾಗಿ, ಮತ್ತು ಸಮ್ಯಕ್‌ತನದಿಂದ-ಒಳ್ಳೆಯ ತಿಳವಳಿಕೆಯಿಂದ-ಜ್ಞಾನದಿಂದ-ಆತ್ಮಸ್ವರೂಪದಲ್ಲಿ ಲೀನವಾಗಲು ಶಕ್ಯವಾಗುವದು. ಈ ಪ್ರಕಾರದಿಂದ ಮಾಡುವ ಸಾಧನವು ಪರಿಪಕ್ವ ದಿಶೆಗೆ ಬಂದು ಮುಟ್ಟಿದ ಕೂಡಲೇ ಸಾಧಕನಿಗೆ ಪೂರ್ಣಾವಸ್ಥೆ ಅಥವಾ ಸಿದ್ಧಾವಸ್ಥೆ ಪ್ರಾಪ್ತವಾಗುವದು. ಇದು ಪರಮಾರ್ಥ ಮಾರ್ಗದಲ್ಲಿಯು ಕೊನೆಯ ಮೆಟ್ಟಲಾಗಿದೆ. ಮಾನವ ಜೀವನದಲ್ಲಿ ಇದಕ್ಕಿಂತ ಅಧಿಕ ದಿವ್ಯ, ಸಮೃದ್ಧ ಫಲದಾಯಿಯಾದ ಮತ್ತು ಆನಂದಮಯ ಅನುಭವ ಇನ್ನೊಂದಿಲ್ಲ. ಆತ್ಮಸಾಕ್ಷಾತ್ಕಾರ, ಬ್ರಹ್ಮಜ್ಞಾನ, ಅಪರೋಕ್ಷಾನುಭೂತಿ, ಈಶ್ವರ ದರ್ಶನ ಇತ್ಯಾದಿ ಅನೇಕ ಹೆಸರುಗಳು ಇದಕ್ಕೆ ಇರುವವು. ಈ ಅನುಭವದಲ್ಲಿ ಸಾಧಕನು ಪರಮಾತ್ಮ ಸ್ವರೂಪನಾಗುತ್ತಾನೆ. ಇಲ್ಲಿ ಚಿತ್ತವು ಚೈತನ್ಯ ರೂಪ ಹೊಂದುತ್ತದೆ. ದೃಷ್ಟಾ ದೃಷ್ಟಾರನಾಗಿ ಉಳಿಯುವದಿಲ್ಲ. ದೇಹಬುದ್ಧಿ ಸಂಪೂರ್ಣವಾಗಿ ಸುಟ್ಟು ಹೋಗುತ್ತದೆ. ಎಳ್ಳಿನಲ್ಲಿ ಎಣ್ಣೆ, ಹಾಲಿನಲ್ಲಿ ತುಪ್ಪ, ಹಾಗೂ ಪ್ರವಾಹದಲ್ಲಿ ನೀರು ಇವು ಹೇಗೆ ವ್ಯಾಪಿಸಿ ಗುಪ್ತವಿರುವವೋ ಅದರಂತೆ ಆತ್ಮಸ್ವರೂಪವು ಸರ್ವ ಭೂತದ ಅಂತ-ರ್ಯಾಮದಲ್ಲಿ ಓತಪ್ರೋತವಾಗಿ-ಹಾಸುಹೊಕ್ಕಾಗಿ ತುಂಬಿರುತ್ತದೆಂಬ ಪ್ರತ್ಯಕ್ಷ ಅನುಭವ ಬರುವದು. ಸರ್ವ ದೃಶ್ಯಗಳೂ ವಿರಾಮ ಹೊಂದಿ ಕೇವಲ ಬ್ರಹ್ಮನೊಬ್ಬನೇ ಕೊನೆಗೆ (ಶಿಲ್ಲಕ) ಉಳಿಯುತ್ತಾನೆ. ಈ ಅವಸ್ಥೆಗೆ ಬಂದು ಮುಟ್ಟಿದ ಸಿದ್ಧ ಪುರುಷನನ್ನು ಗುರುತಿಸಲು ಮೂರು ಚಿನ್ಹಗಳಿವೆ. ೧) ಅತ್ಯಂತ ಸಂಶಯರಹಿತವಾದ ನಿಶ್ಚಯಾತ್ಮಕವಾದ ಆತ್ಮಜ್ಞಾನವಾಗುವಿಕೆ ೨) ವಾಸನಾ ನಿಶ್ಶೇಷವಾಗಿ ಇಲ್ಲದಾಗುವಿಕೆ ೩) ಮತ್ತು ಅತ್ಯಂತ ನಿರ್ಭಯವಾಗಿ ಸ್ವಾನಂದದಲ್ಲಿ ಇರುವದು. ಈ ಸಮಾಸದಲ್ಲಿ ಶ್ರೀ ಸಮರ್ಥರು ಸಿದ್ಧ ಪುರುಷರ ಬಗ್ಗೆ ಸ್ವಲ್ಪದರಲ್ಲಿ ಆದರೆ ಸ್ಪಷ್ಟವಾಗಿ ವರ್ಣನೆ ಮಾಡಿದ್ದು ಕಂಡು ಬರುತ್ತದೆ.

### ಸಮಾಸ ದಶಮ : ಸಿದ್ಧ ಲಕ್ಷಣ

॥ಶ್ರೀರಾಮ॥ ಮಾಗೇ ಬೋಲಿಲಾ ಸಂಸಾರಿಕ । ತ್ಯಾಗೇವಿಣ ನವ್ಹೆ ಕೀ ಸಾಧಕ ।
ಏಕಾ ಹೋೀ ಯಾಚಾ ವಿವೇಕ । ಏಸಾ ಅಸೆ ॥೧॥

ಸನ್ಮಾರ್ಗ ತೋ ಜೀವೀ ಧರಣೇ । ಅನಮಾರ್ಗಾಚಾ ತ್ಯಾಗ ಕರಣೇ ।
ಸಂಸಾರಿಕಾತ್ಯಾಗ ಯೇಣೇ । ಪ್ರಕಾರೇ ಏಸಾ ॥೨॥

ಕುಬುದ್ಧಿತ್ಯಾಗೇವಿಣ ಕಾಹೀ । ಸುಬುದ್ಧಿ ಲಾಗಣಾರ ನಾಹೀ ।
ಸಂಸಾರಿಕಾ ತ್ಯಾಗ ಪಾಹೀ । ಏಸಾ ಅಸೆ ॥೩॥

ಪ್ರಪಂಚೀ ವೀಟ ಮಾನಿಲಾ । ಮನೇ ವಿಷಯೆತ್ಯಾಗ ಕೇಲಾ ।
ತರೀಚ ಪುಢೇ ಆವಲಂಬಿಲಾ । ಪರಮಾರ್ಥ ಮಾರ್ಗ ॥೪॥

ತ್ಯಾಗ ಘಡೆ ಅಭಾವಾಚಾ । ತ್ಯಾಗ ಘಡೆ ಸಂಶಯಾಚಾ ।
ತ್ಯಾಗ ಘಡೆ ಅಜ್ಞಾನಾಚಾ । ಶನೈ ಶನೈ ॥೫॥

ಏಸಾ ಸೂಕ್ಷ್ಮ ಅಂತರ್ತ್ಯಾಗ । ಉಭಯಾಸ ಘಡೆ ಸಾಂಗ ।
ನಿಸ್ಪೃಹಾಸ ಬಾಹ್ಯತ್ಯಾಗ । ವಿಶೇಷ ಆಹೆ ॥೬॥

ಸಂಸಾರಿಕಾ ಠಾಈ ಠಾಈ । ಬಾಹ್ಯತ್ಯಾಗ ಘಡೆ ಕಾಹೀ ।
ನಿತ್ಯ ನೇಮ ಶ್ರವಣ ನಾಹೀ । ತ್ಯಾಗೇವಿಣ ॥೭॥

ಫಿಟಲೀ ಆಶಂಕಾ ಸ್ವಭಾವೇ । ತ್ಯಾಗೇವಿಣ ಸಾಧಕ ನವ್ಹೆ ।
ಪುಢೇ ಕಥೇಚಾ ಅನ್ವಯು । ಸಾವಧ ಏಕಾ ॥೮॥

ಮಾಗಾ ಜಾಲೇ ನಿರೂಪಣ । ಸಾಧಕಾಚೀ ವೋಳಖಣ ।
ಆತಾ ಸಾಂಗಿಜೇಲ ಖೂಣ । ಸಿದ್ಧಲಕ್ಷಣಾಚೀ ॥೯॥

ಸಾಧು ವಸ್ತು ಹೋಊನ ಠೇಲಾ । ಸಂಶಯು ಬ್ರಹ್ಮಾಂಡಾ ಬಾಹೇರಿ ಗೇಲಾ ।
ನಿಶ್ಚಯೆ ಚಳೇನಾ ಏಸಾ ಜಾಲಾ । ಯಾ ನಾವ ಸಿದ್ಧ ॥೧೦॥

## ದಶಕ ೫. ಸಮಾಸ ೧೦. ಸಿದ್ಧ ಲಕ್ಷಣ ನಾಮ ನಿರೂಪಣ (ನುಡಿ ೪೫)

**ಹಿಂದಿನ ಸಮಾಸದ ಕೊನೆಯಲ್ಲಿ ವಿಚಾರಿಸಿದ ಪ್ರಶ್ನೆಗೆ ಮೊದಲು ಉತ್ತರ ಕೊಡುತ್ತಾರೆ:–** ಪ್ರಪಂಚದ ತ್ಯಾಗ ಮಾಡದ ಹೊರತು ಸಾಧಕನಾಗಲಿಕ್ಕೆ ಬರುವದಿಲ್ಲವೇ ಹೇಗೆ ? ಈ ಪ್ರಶ್ನೆಯನ್ನು ಹಿಂದಿನ ಸಮಾಸದ ಕೊನೆಗೆ ಶ್ರೋತೃವು ಮಾಡಿದ್ದಕ್ಕೆ ಈಗ ವಿವರಿಸುವೆವು. (೧) ಯಾರಿಗೆ ಸಾಧಕನಾಗುವ ಇಚ್ಛೆ ಇರುವದೋ ಅವರು ಮನಃಪೂರ್ವಕವಾಗಿ ಯಾವಾಗಲೂ ಸನ್ಮಾರ್ಗ ಹಿಡಿಯಬೇಕಾಗುವದು. ಹಾಗೂ ಇತರ ಅಸತ್ಯದ ಮಾರ್ಗವನ್ನು ನಿರಂತರ ಬಿಡಬೇಕಾಗುವದು. ಇದೂ ಸಹ ತ್ಯಾಗವೇ ಇರುವದು. ಈ ಪ್ರಕಾರದ ತ್ಯಾಗ ಮಾಡಲಿಕ್ಕೆ ಪ್ರಪಂಚಕನಿಗೆ ಖಂಡಿತವಾಗಿಯೂ ಶಕ್ಯವಿರುತ್ತದೆ. (೨) ಸಾಧಕನಾಗಲಿಕ್ಕೆ ಸದ್ಬುದ್ಧಿಯ ಅವಶ್ಯಕತೆ ಇರುವದು.ಆದರೆ ಕೆಟ್ಟ ಬುದ್ಧಿಯ ತ್ಯಾಗ ಮಾಡದ ಹೊರತು ಸದ್ಬುದ್ಧಿಯು ಹುಟ್ಟುವದೇ ಇಲ್ಲ. ದುಷ್ಟ ಬುದ್ಧಿಯ ತ್ಯಾಗವೆಂದರೆ ಇದೊಂದು ಮಹಾ ತ್ಯಾಗವೇ ಇರುವದು. ಪ್ರಾಪಂಚಿಕರಿಗೆ ಇಂಥ ಪ್ರಕಾರದ ತ್ಯಾಗ ಮಾಡಲಿಕ್ಕೆ ಬರುತ್ತದೆ. (೩) ಪ್ರಪಂಚದಲ್ಲಿ ನಿರಾಶೆ, ತಾತ್ಸಾರ ಬುದ್ಧಿ ಹುಟ್ಟಿ ಮನಸಾ ಮನಃಪೂರ್ವಕವಾಗಿ ಇಂದ್ರಿಯ ಭೋಗ ಲಾಲಸೆಯ ವಿಷಯವನ್ನು ತ್ಯಜಿಸಿದರೆ ಮಾತ್ರ ಸಾಧಕನಾಗಿ ಪರಮಾರ್ಥ ಮಾರ್ಗ ಹಿಡಿಯಲು ಸಾಧ್ಯವಾಗುವದು. **(೪) ಒಟ್ಟಿ**ನಲ್ಲಿ ಪ್ರತಿಯೊಬ್ಬ ಸಾಧಕರು ನಾಸ್ತಿಕತನದ ತ್ಯಾಗ ಮಾಡಬೇಕು. ಮತ್ತು ಸಂಶಯ ವೃತ್ತಿಯ ತ್ಯಾಗವನ್ನೂ ಸಹ ಮಾಡಬೇಕು. ಅಂದರೆ ಅವರಿಗೆ ಸ್ವಲ್ಪು ಸ್ವಲ್ಪಾಗಿ ಅಜ್ಞಾನದ ತ್ಯಾಗ ಮಾಡಲಿಕ್ಕೂ ಬರುವದು.(೫) **ಪ್ರಾಪಂಚಿಕನಾಗಿರುವ ಸಾಧಕನೇ ಇರಲಿ** ಅಥವಾ **ಪ್ರಪಂಚಕನಲ್ಲದ ಸಾಧಕನೇ ಇರಲಿ** ಇವರಿಬ್ಬರೂ ಈ ಪ್ರಕಾರದ **ಸೂಕ್ಷ್ಮ ಮತ್ತು ಒಳಗಿರುವ ತ್ಯಾಗ ಸಮನಾಗಿ ಮಾಡಲೇಬೇಕಾಗುತ್ತದೆ.** ಇದರಲ್ಲಿ ಪ್ರಪಂಚವಿಲ್ಲದ ಸಾಧಕ ಹೆಚ್ಚು ನಿಸ್ಪೃಹನಿರುವನು. ಅಂತೆಯೇ ಅವನು ಹೊರಗಿನ ವ್ಯವಹಾರ ವಿಷಯದ ತ್ಯಾಗವನ್ನೂ ಮಾಡುವನು. ಇದೊಂದು ಅವನ ಹೆಚ್ಚಿನ ವಿಷಯವೆಂದು ತಿಳಿಯಿರಿ. (೬) ಸಂಸಾರಿಕ ಸಾಧಕನಿಗೆ ಬಾಹ್ಯ ತ್ಯಾಗ ಎಷ್ಟೂ ಬೇಡವೇ ಬೇಡ ಎಂದು ತಿಳಿಯಬಾರದು. ಪ್ರಾಪಂಚಿಕ ಸಾಧಕನಿಗೆ ಪ್ರಪಂಚದಲ್ಲಿಯ ಬೇರೆ ಬೇರೆ ಪ್ರಸಂಗಗಳಲ್ಲಿ ಸ್ವಲ್ಪಾದರೂ ಹೊರಗಿನ ತ್ಯಾಗ ಮಾಡಲೇಬೇಕಾಗುತ್ತದೆ. ಉದಾ:– ಬಾಹ್ಯ ತ್ಯಾಗ ಮಾಡದ ಹೊರತು ಇಂಥ ನಿತ್ಯನೇಮ, ಪರಮಾರ್ಥ ಶ್ರವಣ ಇತ್ಯಾದಿ ಪರಮಾರ್ಥ ಸಾಧನಗಳನ್ನು ಆಚರಿಸಲಿಕ್ಕೆ ಆಗುವದಿಲ್ಲ.(೭) ಇರಲಿ, ಶ್ರೋತೃವು ಕೇಳಿದ ಶಂಕಾ ಪ್ರಶ್ನೆಗೆ ಉತ್ತರವನ್ನು ಮೇಲಿನಂತೆ ವಿವರಿಸಿ ಹೇಳಿತು. ಇದರಿಂದ ಅವನ ಸಂಶಯವು ಸಹಜವಾಗಿ ದೂರವಾಯಿತು. ತಾತ್ಪರ್ಯ:- ತ್ಯಾಗ ಮಾಡದ ಹೊರತು ಯಾರೂ ಸಾಧಕರಾಗಲು ಶಕ್ಯವೇ ಇಲ್ಲ. ಇದನ್ನು ಪಕ್ಕಾ ಧ್ಯಾನದಲ್ಲಿಡಿರಿ. ಮತ್ತು ಮುಂದಿನ ವಿಷಯದ ಸಂದರ್ಭದ ಕಡೆಗೆ ಪೂರ್ಣ ಲಕ್ಷ್ಯಗೊಟ್ಟು ಕೇಳಿರಿ (೮) **ಇನ್ನು ಮುಂದೆ ಸಿದ್ಧ ಲಕ್ಷಣಗಳನ್ನು ಹೇಳಲಿಕ್ಕೆ ಪ್ರಾರಂಭ ಮಾಡುವರು. ಆತ್ಮಸ್ವರೂಪದ ವಿಷಯದಲ್ಲಿ ಅತ್ಯಂತ ನಿಸ್ಸಂಶಯ ಜ್ಞಾನವಿರುವದು. ಸಿದ್ಧ ಪುರುಷನ ಮುಖ್ಯ ಲಕ್ಷಣವೆಂದು ತಿಳಿಯಿರಿ:-** ಹಿಂದಿನ ಸಮಾಸದಲ್ಲಿ ಸಾಧಕನನ್ನು ಹೇಗೆ ತಿಳಿಯಬೇಕು ಇದರ ಬಗೆಗೆ ಹೇಳಿದೆವು. ಈಗ ಸಿದ್ಧರನ್ನು ಹೇಗೆ ತಿಳಿಯಬೇಕೆಂಬುದರ ಗುರುತನ್ನು ತಿಳಿಸುವೆವು. (೯) ಸಿದ್ಧ ಪುರುಷನು ಸ್ವತಃ ಸಂಪೂರ್ಣವಾಗಿ ಬ್ರಹ್ಮರೂಪ (ಆತ್ಮವಸ್ತು)ವೇ ಆಗಿರುವನು. ಇದರಿಂದ ಅವನ ಸಂಶಯಗಳು ಬ್ರಹ್ಮಾಂಡದ [ವಿಶ್ವದ] ಆಚೆಗೆ ಹೋಗಿರುವವು. ಅಂದರೆ ಸಿದ್ಧನ ಸರ್ವ ಸಂಶಯಗಳು ನಾಶ ಹೊಂದಿರುವವು. "ನಾನು ಬ್ರಹ್ಮ ಇರುವೆ" ಈ ಅವನ ನಿಶ್ಚಯ ಏನೇ ಆದರೂ ಎಷ್ಟೂ ಢಳ ಮಳಿಸುವದಿಲ್ಲ. ಇವನಿಗೇ ಸಿದ್ಧನೆನ್ನುವರು. ಸದ್ಯದ ಸಾಂಸಾರಿಕ ಅವಸ್ಥೆಯಲ್ಲಿ "ನಾನು ದೇಹವಿರುವೆ" ಎಂದು ಹೇಗೆ ನಿಸ್ಸಂಶಯವಾಗಿ ಅನಿಸುವದೋ ಇದರಂತೆಯೇ ಸಿದ್ಧನಿಗೆ "ನಾನು ಪರಮಾತ್ಮ ಸ್ವರೂಪ ಇರುವೆ" ಎಂದು ಅಗದೀ ನಿಸ್ಸಂಶಯವಾಗಿ **ಅನಿಸುತ್ತದೆ. ಪೂರ್ಣ ಶಂಕಾರಹಿತನಾದವನೇ ಸಾಧುವು.** ಇವನೇ ಸಿದ್ಧ ಪುರುಷನು. (೧೦)

ಬದ್ಧಪಣಾಚೆ ಅವಗುಣ । ಮುಮುಕ್ಷ ಪಣೀ ನಾಹೀ ಜಾಣ ।
ಮುಮುಕ್ಷ ಪಣಾಚೇ ಲಕ್ಷಣ । ಸಾಧಕಪಣೀ ನಾಹೀ ॥೧೧॥

ಸಾಧಕಾಸಿ ಸಂದೇಹ ವೃತ್ತೀ । ಪುಢೇ ಹೋತಸೆ ನಿವೃತ್ತೀ ।
ಯಾ ಕಾರಣೇ ನಿಃಸಂದೇಹ ಶ್ರೋತೀ । ಸಾಧು ವೊಳಖಾವಾ ॥೧೨॥

ಸಂಶಯರಹಿತ ಜ್ಞಾನ । ತೇಚಿ ಸಾಧೂಚೇ ಲಕ್ಷಣ ।
ಸಿದ್ಧಾ ಆಂಗೀ ಸಂಶಯ ಹೀನ । ಲಾಗೇಲ ಕೈಸಾ ॥೧೩॥

ಕರ್ಮಮಾರ್ಗ ಸಂಶಯೇ ಭರಲಾ । ಸಾಧನೀ ಸಂಶಯೆ ಕಾಲವಲಾ ।
ಸರ್ವಾಮಧೇ ಸಂಶಯೆ ಭರಲಾ । ಸಾಧು ತೋ ನಿಃಸಂದೇಹ ॥೧೪॥

ಸಂಶಯಾಚೇ ಜ್ಞಾನ ಖೋಟೇ । ಸಂಶಯಾಚೇ ವೈರಾಗ್ಯ ಪೊರಟೇ ।
ಸಂಶಯಾಚೇ ಭಜನ ವೊಖಟೇ । ನಿರ್ಫಳ ಹೋಯ ॥೧೫॥

ಬದ್ಧಾವಸ್ಥೆಯಲ್ಲಿ ಇರುವ ದೋಷ-ಕೆಟ್ಟಗುಣಗಳು, ಮುಮುಕ್ಷು ಅವಸ್ಥೆಗೆ ಬಂದಾಗ ಇರುವದಿಲ್ಲ. ಮುಮುಕ್ಷು ಅವಸ್ಥೆಯಲ್ಲಿ ಕಂಡು ಬರುವ ಲಕ್ಷಣಗಳು ಸಾಧಕ ಅವಸ್ಥೆಗೆ ಬಂದಾಗ ಇರುವದಿಲ್ಲ. ಪರಮಾರ್ಥದಲ್ಲಿ "ದೇಹಬುದ್ಧಿ" ಇದೊಂದು ಮುಖ್ಯ ದೋಷವು. "ಸಂಶಯ" ಎಂಬುದು ಇದರ ಮರಿಗಳು. ಆದುದರಿಂದ "ದೇಹಬುದ್ಧಿ" ಕಡಿಮೆ ಆಗುವಿಕೆ ಅಥವಾ ಕ್ಷೀಣ ವ ನಿಸ್ತೇಜ ಆಗುತ್ತ ಹೋಗುವದೇ ಪ್ರಗತಿಯ ಸರ್ವೋತ್ತಮ ಗಮಕ (ಪುರಾವೆ-ಆಧಾರ) ವೆಂದು ತಿಳಿಯಬೇಕು. (೧೧) ಸಾಧಕಾವಸ್ಥೆಯಲ್ಲಿದ್ದಾಗ ಸಂಶಯದ ಶಿಲ್ಲಕ (ಶೇಷ) ಇರುತ್ತದೆ. ಮತ್ತು ಅನೇಕ ಸಂಶಯಗಳು ಉತ್ಪನ್ನವಾಗುತ್ತಿರುವವು ಇವೆಲ್ಲವು ನಿರಂತರ ಸಾಧನದಿಂದ ಸ್ವಲ್ಪ ಸ್ವಲ್ಪ ನಾಶವಾಗುತ್ತ ಹೋಗುವವು.ಆತ್ಮಸಾಕ್ಷಾತ್ಕಾರವಾದ ಕೂಡಲೇ ಎಲ್ಲ ಸಂಶಯಗಳೂ ಇಲ್ಲದಾಗುತ್ತವೆ.ಆಗ ಸಾಧಕನು ಸಿದ್ಧಾವಸ್ಥೆಗೆ ಬರುವನು. ಆಗ ಅವನು ನಿಃಸ್ಸಂದೇಹಿಯಾಗಿರುವನು. ಯಾರು ನಿಃಸ್ಸಂದೇಹಿಯಾಗಿರುವರೋ ಅವರು ಸಿದ್ಧರೆನಿಸುವರು. ಇದನ್ನು ಶ್ರೋತೃಗಳು ಗಮನಿಸಬೇಕು. (೧೨) ಅತ್ಯಂತ ಸಂಶಯರಹಿತ ಆತ್ಮಜ್ಞಾನವೇ ನಿಜವಾದ ಸಿದ್ಧನ ಲಕ್ಷಣವಿರುತ್ತದೆ. ಸಿದ್ಧ ಪುರುಷನಲ್ಲಿ ಸಂಶಯಪಡುವಂಥ ಹೀನ ದೋಷಗಳು ಇರಲಿಕ್ಕೆ ಶಕ್ಯವಿಲ್ಲ. (೧೩) ಬಹು ಪುರಾತನ ಕಾಲದ ಹಿಂದಿನ ಬ್ರಹ್ಮಜ್ಞಾನಿ ಪುರುಷರು ಪರಮಾರ್ಥದ ಬಗ್ಗೆ ನಿಃಸ್ಸಂಶಯದಿಂದ ಇದರ ಮಹತ್ವವನ್ನು ಹೊಗಳಿದ್ದಾರೆ. ಇಷ್ಟೇ ಅಲ್ಲ, ಆತ್ಮಜ್ಞಾನ ಮತ್ತು ನಿಃಸ್ಸಂಶಯತನ ಇವು ಜ್ಞಾನಮಯ ಅವಸ್ಥೆಯ ಎರಡು ಅಭಿನ್ನ ಅಂಗ(ಭಾಗ)ಗಳು ಇರುವವು. ಮುಂಡಕ ಉಪನಿಷತ್‌ದಲ್ಲಿ ಒಂದು ಮಂತ್ರ ಹೀಗಿರುವದು "ಭಿದ್ಯತೆ ಹೃದಯಗ್ರಂಥಿಃ ಛಿದ್ಯಂತೆ ಸರ್ವಸಂಶಯಾಃ। ಕ್ಷೀಯಂತೆ ಚಾಸ್ಯಕರ್ಮಾಣಿ ತಸ್ಮಿನ್‌ದೃಷ್ಟೆ ಪರಾವರೆ" ಅರ್ಥ:- ಪರಮ ಶ್ರೇಷ್ಠ ವಸ್ತುವಿಗಿಂತಲೂ ಶ್ರೇಷ್ಠವಾದಂಥ ಬ್ರಹ್ಮನನ್ನು ನೋಡಿದ್ದರಿಂದ ಅಂದರೆ ಅರ್ಥಾತ್ ಆ ವಸ್ತುವಿನ ಪ್ರತ್ಯಕ್ಷ ಅನುಭವ ಪಡೆದ ಕಾರಣವಾಗಿ ಸರ್ವ ಹೃದಯ ಗ್ರಂಥಿಗಳು ಕಳಚಿ ಬಿದ್ದು ಹೋಗುವವು. ಸರ್ವ ಸಂಶಯಗಳೂ ನಾಶಹೊಂದುವವು. ಮತ್ತು ಎಲ್ಲ ಕರ್ಮದ ಕ್ಷಯವಾಗುವವು" ಶ್ರೀ ಸಮರ್ಥರು ಇನ್ನೂ ಹೇಳುವವೇನಂದರೆ ಕರ್ಮ ಮಾರ್ಗವು ಸಂಶಯದಿಂದ ತುಂಬಿರುವದು. ಪರಮಾರ್ಥ ಸಾಧನೆಯಲ್ಲಿ ಸಂಶಯವೆಂಬ ವಿಷವು ಕಲೆತಿರುವದು. ಕೂಡಿರುವದು. ಮಾನವ ಜೀವನದಲ್ಲಿಯೂ ಸರ್ವತ್ರ ಸಂಶಯವೇ ತುಂಬಿ ಬಿಟ್ಟಿರುವದು. ಇಂಥದರಲ್ಲಿ ಒಬ್ಬನೇ ಒಬ್ಬ ಸಿದ್ಧಪುರುಷನು ಮಾತ್ರ ಆಗದೀ ಸಂಶಯರಹಿತನಿರುವನು. (೧೪) ಸಂಶಯ ಯುಕ್ತ ಜ್ಞಾನವು ಖೊಟ್ಟಿಯು, ಸಂಶಯ ಸಹಿತವಾಗಿರುವ ವೈರಾಗ್ಯವು ದೈನ್ಯತೆ ಮತ್ತು ಹುಡುಗಾಟಿಕೆಯದು ಮತ್ತು ತೇಜೋಹೀನವಿರುವದು. ಸಂಶಯದಿಂದ ಕೂಡಿದ ಭಜನೆ, ಪೂಜೆಗಳು ಅನಿಷ್ಟ,ಕೆಟ್ಟ ಮತ್ತು ನಿಷ್ಫಲವಾದವು.(೧೫)

ವೇರ್ಥ ಸಂಶಯಾಚಾ ದೇವ । ವೇರ್ಥ ಸಂಶಯಾಚಾ ಭಾವ ।
ವೇರ್ಥ ಸಂಶಯಾಚಾ ಸ್ವಭಾವ । ಸರ್ವ ಕಾಹೀ ॥೧೬॥

ವೇರ್ಥ ಸಂಶಯಾಚೇ ವ್ರತ । ವೇರ್ಥ ಸಂಶಯಾಚೇ ತೀರ್ಥ ।
ವೇರ್ಥ ಸಂಶಯಾಚಾ ಪರಮಾರ್ಥ । ನಿಶ್ಚಯೇವಿಣ ॥೧೭॥

ವೇರ್ಥ ಸಂಶಯಾಚೀ ಭಕ್ತೀ । ವೇರ್ಥ ಸಂಶಯಾಚೀ ಪ್ರೀತೀ ।
ವೇರ್ಥ ಸಂಶಯಾಚೀ ಸಂಗತೀ । ಸಂಶಯೋ ವಾಢವೀ ॥೧೮॥

ವೇರ್ಥ ಸಂಶಯಾಚೇ ಜಿಣೇ । ವೇರ್ಥ ಸಂಶಯಾಚೇ ಧರಣೇ ।
ವೇರ್ಥ ಸಂಶಯಾಚೇ ಕರಣೇ । ಸರ್ವ ಕಾಹೀ ॥೧೯॥

ವೇರ್ಥ ಸಂಶಯಾಚೀ ಪೋಥೀ । ವೇರ್ಥ ಸಂಶಯಾಚೀ ವ್ಯುತ್ಪತ್ತೀ ।
ವೇರ್ಥ ಸಂಶಯಾಚೀ ಗತೀ । ನಿಶ್ಚಯೇವಿಣ ॥೨೦॥

ವೇರ್ಥ ಸಂಶಯಾಚಾ ದಕ್ಷ । ವೇರ್ಥ ಸಂಶಯಾಚಾ ಪಕ್ಷ ।
ವೇರ್ಥ ಸಂಶಯಾಚಾ ಮೋಕ್ಷ । ಹೋಣಾರ ನಾಹೀ ॥೨೧॥

ವೇರ್ಥ ಸಂಶಯಾಚಾ ಸಂತ । ವೇರ್ಥ ಸಂಶಯಾಚಾ ಪಂಡಿತ ।
ವೇರ್ಥ ಸಂಶಯಾಚಾ ಬಹುಶ್ರುತ । ನಿಶ್ಚಯೇವಿಣ ॥೨೨॥

ವೇರ್ಥ ಸಂಶಯಾಚೀ ಶ್ರೇಷ್ಠತಾ । ವೇರ್ಥ ಸಂಶಯಾಚೀ ವಿತ್ಪನ್ನತಾ ।
ವೇರ್ಥ ಸಂಶಯಾಚಾ ಜ್ಞಾತಾ । ನಿಶ್ಚಯೇವಿಣ ॥೨೩॥

ನಿಶ್ಚಯೇವಿಣ ಸರ್ವ ಕಾಹೀ । ಅಣುಮಾತ್ರ ತೇ ಪ್ರಮಾಣ ನಾಹೀ ।
ವೇರ್ಥಚಿ ಪಡಿಲೆ ಪ್ರವಾಹೀ । ಸಂದೇಹಾಚೆ ॥೨೪॥

ಸಂಶಯ ಅಂದರೆ ಸಂದೇಹ ಅಂದರೆ ಶಂಕೆ ಉಂಟಾಗುವದು. ವಸ್ತುವು ನಿಜವಾಗಿಯೂ ಹೇಗೆ ಇರುವದೋ ಅದೇ ಪ್ರಕಾರ (ಅದರಂತೆ) ಅದನ್ನು ತಿಳಿಯುವದೇ ಜ್ಞಾನವಾದರೆ ಇದ್ದದ್ದನ್ನು ಇದ್ದಂತೆ ತಿಳಿಯದೇ ಇರುವದೇ ಅಜ್ಞಾನ ವೆನಿಸುವದು. ಜ್ಞಾನದಲ್ಲಿ ವಸ್ತುವಿನ ಸ್ವರೂಪದ ಬಗ್ಗೆ ಎಷ್ಟೂ ಸಂಶಯವಿರುವದಿಲ್ಲ. ಇದರಿಂದಲೇ ಆ ವಸ್ತುವಿನ ಬಗ್ಗೆ ಅತ್ಯಂತ ದೃಢ ಶ್ರದ್ಧಾ ನಿರ್ಮಾಣವಾಗುವದು. ಮತ್ತು ಅಲ್ಲಿ ಅದು ನಿಶ್ಚಿತವಾಗಿರುವದು. ಅಜ್ಞಾನದಲ್ಲಿ ವಸ್ತುವಿನ ಸ್ವರೂಪದ ಬಗ್ಗೆ ಸಂಶಯವಿರುವದು.ವಸ್ತುವು ಹಾಗಿರಬಹುದೇ,ಹೀಗಿರಬಹುದೇ ಅಥವಾ ಹಾಗಿರಲಿಕ್ಕಿಲ್ಲ, ಹೀಗಿರಲಿಕ್ಕಿಲ್ಲವೆಂಬ ಅನಿಶ್ಚಿತತನವಿರುವದು. ಇದರಿಂದ ದೃಢ ಶ್ರದ್ಧೆ ಉಂಟಾಗುವದಿಲ್ಲ. ಅಜ್ಞಾನದಲ್ಲಿಯ ಅನಿಶ್ಚಿತತನ ಶಂಕೆ ಅಥವಾ ಸಂಶಯದ ರೂಪಧರಿಸಿ ಪ್ರಕಟವಾಗುವದು. ಸಂಶಯವು ಯಾವಾಗಲೂ ಶ್ರದ್ಧೆಯ ವಿರುದ್ಧ (ಉಲಟ) ಇರುವದು. ಜ್ಞಾನದಲ್ಲಿಯ ಅನಿಶ್ಚಿತತನವು ಮನಸ್ಸನ್ನು ಅಸ್ಥಿರಗೊಳಿಸಿ ಅಸಮಾಧಾನವನ್ನು ನಿರ್ಮಾಣ ಗೊಳಿಸುವದು. ಅಸ್ಥಿರ ಮನಸ್ಸಿಗೆ ಚೈನ ಅಂದರೆ ಸುಖ ಅಥವಾ ಸಮಾಧಾನವಾಗುವದಿಲ್ಲ. ಆಗ ಅದು ದೃಶ್ಯದ ಬೆನ್ನು ಹತ್ತಿ ಸುಖದ ಶೋಧಕ್ಕೆ ತೊಡಗುವದು. ಮಾನವ ಜೀವನದ ಸರ್ವಕ್ಷೇತ್ರಗಳಲ್ಲಿ ಸಂಶಯದ ಸಾಮ್ರಾಜ್ಯವೇ ನಡೆಯುತ್ತದೆ. ಜಗತ್ತಿನಲ್ಲಿ ಬುದ್ಧಿವಂತ, ಬಲವಂತ, ವಿದ್ವಾನ, ಪರಾಕ್ರಮಿ, ಕಲಾವಂತ, ಪರೋಪಕಾರಿ, ಮತ್ತು ಸಾಧಕರೇ ಮೊದಲಾದ ಅನೇಕ ಜನರು ಕಾಣುತ್ತಾರೆ. ಪರಂತು ಇವರಲ್ಲಿ ಸ್ವತಃದ ಬಗ್ಗೆ ಮತ್ತು ಜೀವನದ ಬಗ್ಗೆ ಅತ್ಯಂತ ನಿಃಸ್ಸಂಶಯವಾಗಿರುವವರು ಬಹಳ ದುರ್ಮಿಳರಾಗಿರುವರು. ಸಂಶಯದಿಂದ ಶ್ರದ್ಧೆಗೆ ಆಘಾತವಾಗುವದು. ಸಂಶಯವು ಅಜ್ಞಾನದ ದೃಶ್ಯರೂಪವಿರುವದು. ಇದೇ ನಿಜವಾದ ಜ್ಞಾನಕ್ಕೆ ಖರೇ ಶತ್ರುವಾಗಿರುವದು. ಎಲ್ಲಿ ಸಂಶಯ ಪ್ರವೇಶ ಮಾಡುವದೋ ಅಲ್ಲಿ ಅದು ವ್ಯರ್ಥತನ ಕೆಲಸಕ್ಕೆ ಬಾರದನ್ನೂ ನಿರ್ಮಾಣಮಾಡುವದು:- ಯಾವ ದೇವರ ಬಗ್ಗೆ ಸಂಶಯ ಬರುವದೋ ಆ ದೇವರು ವ್ಯರ್ಥವಿರುವದು. ಅಂದರೆ ಸಂಶಯದಿಂದ ತುಂಬಿದ ಭಾವವು ಸಹ ವ್ಯರ್ಥವಾಗುವದು. ಸಂಶಯ ಹೊಂದುವ ಸ್ವಭಾವ ವ್ಯರ್ಥವೇ ಇರುತ್ತದೆ. ಒಟ್ಟಿನಲ್ಲಿ ಸಂಶಯದಿಂದ ತುಂಬಿದ್ದೆಲ್ಲವೂ ವ್ಯರ್ಥವೇ ಇರುವದು (೧೬) ಸಂಶಯದಿಂದ ಮಾಡುವ ವ್ರತ ವ್ಯರ್ಥವೇ ಸರಿ. ಯಾವ ತೀರ್ಥದ ಬಗ್ಗೆ ಸಂಶಯ ಬರುವದೋ ಆ ತೀರ್ಥವೂ ವ್ಯರ್ಥವೆನಿಸುವದು. ಸಂಶಯದಿಂದ ತುಂಬಿದ ಪರಮಾರ್ಥವು ನಿಶ್ಚಿತತನ ವಿಶ್ವಾಸಗಳ ಅಭಾವದಿಂದ ವ್ಯರ್ಥವೆನಿಸುವದು. (೧೭) ಸಂಶಯಗಳಿಂದ ಕೂಡಿದ ಅಥವಾ ನಿಶ್ಚಿತತನವಿಲ್ಲದ ಭಕ್ತಿಯೆ ಆಗಲಿ, ಪ್ರೀತಿಯೇ ಆಗಲಿ, ಮತ್ತು ಸಂತರ ಸಹವಾಸವೇ ಆಗಲಿ ಇವು ಮೂರೂ ವ್ಯರ್ಥವಾಗುವವು. ಇದರಲ್ಲಿ ಸಂಶಯ ಕಡಿಮೆ ಆಗುತ್ತ ಹೋಗುವದರ ಬದಲು ಅದು ಹೆಚ್ಚು ಹೆಚ್ಚು ಬೆಳೆಯುತ್ತ ಹೋಗುವದು.(೧೮) ಸಂಶಯದಿಂದ ಕೂಡಿದ ಜೀವನ ವ್ಯರ್ಥವೆನಿಸುವದು. ಸಂಶಯಹೊಂದಿ ಮಾಡಿದ್ದೆಲ್ಲವೂ ವ್ಯರ್ಥವೇ ಆಗಿರುವದು.(೧೯) ಸಂಶಯದಿಂದ ಕೂಡಿದ ಆಧ್ಯಾತ್ಮ ಗ್ರಂಥಗಳು ಮತ್ತು ಸಂಶಯದಿಂದ ಕೂಡಿದ ವಿದ್ಯೆ ಇವೆರಡೂ ವ್ಯರ್ಥವಾಗಿ ಹೋಗುವವು. ಸಂಶಯದಿಂದ ದೃಢ ನಿರ್ಧಾರದ ಅಭಾವ ಉಂಟಾಗುವದು. ಅಂದ ಮೇಲೆ ಮನುಷ್ಯನಿಗೆ ಉತ್ತಮ ಗತಿಯೂ ಸಹ ಸಿಗುವದಿಲ್ಲ. (೨೦) ಸಂಶಯದಿಂದ ಕೂಡಿದ ದಕ್ಷತೆಯು ವ್ಯರ್ಥವಿರುವದು. ಸಂಶಯವಿಟ್ಟುಕೊಂಡು ಈ ಪಕ್ಷವು ನನ್ನದೆಂದರೂ ಸಹ ಅದು ವ್ಯರ್ಥವೇ ಆಗುವದು. ಸಂಶಯವಿದ್ದರೆ ಮೋಕ್ಷವೂಸಹ ವ್ಯರ್ಥವಾಗುವದು. ಯಾಕಂದರೆ ಸಂಶಯದ ಮೂಲಕ ಅದು ಪ್ರಾಪ್ತವಾಗುವದಿಲ್ಲ. (೨೧) ಸಂಶಯದಿಂದ ಕೂಡಿದ ಸಂತರು ಸಂಶಯಿ ಪಾಂಡಿತ್ಯ, ಸಂಶಯಿ ವಿದ್ಯಾವಂತ ಇವರೆಲ್ಲರೂ ವ್ಯರ್ಥರೆನಿಸುವರು.ಯಾಕೆಂದರೆ ಇವರಲ್ಲಿ ನಿಶ್ಚಯವೇ ಇರುವದಿಲ್ಲ(೨೨) ಇದರಂತೆ ಸಂಶಯದ ಮೇಲೆ ಎದ್ದು ನಿಂತ ಶ್ರೇಷ್ಠತೆಯು, ಪಾಂಡಿತ್ಯವು, ಮತ್ತು ಜ್ಞಾನ ಇವೂ ಸಹ ದೃಢ ನಿಶ್ಚಯತನವಿಲ್ಲದ ಕಾರಣ ವ್ಯರ್ಥವಾಗಿ ಹೋಗುವವು. (೨೩) ಮಾನವ ಜೀವನದಲ್ಲಿಯ ಯಾವುದೇ ವಿಷಯವನ್ನೇ ತೆಗೆದುಕೊಂಡರೂ ಅದು ನಿಶ್ಚಿತ ಮತ್ತು ಸಂಶಯರಹಿತವಾಗಿರದಿದ್ದರೆ ಅದು ಖರೇ ಎಂದು ಸಿದ್ಧವಾಗುವದೇ ಇಲ್ಲ. ಸಂಶಯದ ಪ್ರವಾಹದಲ್ಲಿ ಬಿದ್ದದ್ದೆಲ್ಲವೂ ವ್ಯರ್ಥವಾಗಿ ಹೋಗುವದು. (೨೪)

ನಿಶ್ಚಯೇವಿಣ ಜೇ ಬೋಲಣೆ । ತೇ ಅವಘೇಚಿ ಕಂಟಾಳವಾಣೇ ।
ಬಾಷ್ಕಳ ಬೋಲಿಜೆ ವಾಚಾಳಪಣೇ । ನಿರಾರ್ಥಕ ॥೨೫॥

ಅಸೊ ನಿಶ್ಚಯೇವಿಣ ಜೇ ವಲ್ಗನಾ । ತೇ ಅವಘೀಚ ವಿಟಂಬನಾ ।
ಸಂಶಯೇ ಕಾಹೀ ಸಮಾಧಾನಾ । ಉರೀ ನಾಹೀ ॥೨೬॥

ಮ್ಹಣೋನಿ ಸಂದೇಹರಹಿತ ಜ್ಞಾನ । ನಿಶ್ಚಯಾಚೇ ಸಮಾಧಾನ ।
ತೇಚಿ ಸಿದ್ಧಾಚೇ ಲಕ್ಷಣ । ನಿಶ್ಚಯೇಸೀ ॥೨೭॥

ತವ ಶ್ರೋತಾ ಕರೀ ಪ್ರಶ್ನ । ನಿಶ್ಚಯು ಕರಾವಾ ಕವಣ ।
ಮುಖ್ಯ ನಿಶ್ಚಯಾಚೇ ಲಕ್ಷಣ । ಮಜ ನಿರೋಪಾವೇ ॥೨೮॥

ಏಕ ನಿಶ್ಚಯು ತೋ ಏಸಾ । ಮುಖ್ಯ ದೇವ ಆಹೆ ಕೈಸಾ ।
ನಾನಾ ದೇವಾಚಾ ವಳಸಾ । ಕರೂಚಿ ನಯೆ ॥೨೯॥

ಜೇಣೇ ನಿರ್ಮಿಲೇ ಸಚರಾಚರ । ತ್ಯಾಚಾ ಕರಾವಾ ವಿಚಾರ ।
ಶುದ್ಧವಿವೇಕೇ ಪರಮೇಶ್ವರ । ವೊಳಖಾವಾ ॥೩೦॥

ಮುಖ್ಯದೇವ ತೋ ಕವಣ । ಭಕ್ತಾಚೇ ಕೈಸೇ ಲಕ್ಷಣ ।
ಅಸತ್ಯ ಸಾಂಡೂನ ವೊಳಖಣ । ಸತ್ಯಾಚೀ ಧರಾವೀ ॥೩೧॥

ಆಪಲ್ಯಾ ದೇವಾಸ ವೊಳಖಾವೇ । ಮಗ ಮೀ ಕೋಣ ಹೇ ಪಾಹಾವೇ ।
ಸಂಗ ತ್ಯಾಗೂನ ರಾಹಾವೇ । ವಸ್ತುರೂಪ ॥೩೨॥

ವಕ್ತಾರನ ಮಾತಿನಲ್ಲಿ ನಿಶ್ಚಿತತನ ಮತ್ತು ಸಂಶಯರಹಿತವಾದ ವಿಷಯವಿರದಿದ್ದರೆ ಅದು ಬೇಸರ ತರುವಂಥದ್ದಾಗಿರುತ್ತದೆ. ಬಾಯ್ಬಡಕತನದಿಂದ ಅವನು ಏನೇ ಹೇಳಿದರೂ ಅದು ಅರ್ಥಹೀನವಾದ ಬಡಬಡಿಕೆಯೆಂದು ತಿಳಿಯಬೇಕು. (೨೫) ಇರಲಿ, ನಿಶ್ಚಯದಿಂದ ಯುಕ್ತವಾದ ಜ್ಞಾನವಿಲ್ಲದೆ ಯಾವ ವಕ್ತಾರನು ದೊಡ್ಡ ದೊಡ್ಡ ಮಾತಿನ ಡೊಂಬರಾಟ ಮಾಡಿದರೂ ಅವನು ನಿಜವಾದ ಜ್ಞಾನದ ವಿಡಂಬನ ಮಾಡುವನೆಂದು ತಿಳಿಯಬೇಕು. ಯಾಕೆಂದರೆ ಎಲ್ಲಿಯವರೆಗೆ ಮನಸ್ಸಿನಲ್ಲಿ ಸಂಶಯವಿರುವದೋ ಅಲ್ಲಿಯವರೆಗೆ ಅವನಲ್ಲಿ ಸಮಾಧಾನ ನೆಲೆಯೂರಲು ಶಕ್ಯವಿರುವದಿಲ್ಲ. [೨೬] ಅಂತೆಯೇ ಎಷ್ಟೂ [ಬಿಲ್‌ಕೂಲ] ಸಂದೇಹ ಇಲ್ಲದಂಥ ಜ್ಞಾನ ಮತ್ತು ಅತ್ಯಂತ ಖಾತ್ರಿಯ ಸಮಾಧಾನ ಇವು ಸಿದ್ಧನ ನಿಜವಾದ ನಿಶ್ಚಿತ ಲಕ್ಷಣಗಳೆಂದು ತಿಳಿಯಬೇಕು. [೨೭] ಎಲ್ಲ ಸಂಶಯಗಳನ್ನು ಇಲ್ಲದಂತೆ ಮಾಡಿ ಜೀವಕ್ಕೆ ಸಮಾಧಾನ ಕೊಡುವದೇ ಜ್ಞಾನದ ಮುಖ್ಯ ಕಾರ್ಯವಾಗಿರುವದು. ಸಾಧಕನು ಆತ ಸ್ವರೂಪದ ಬಗ್ಗೆ ಯಾವಾಗ್ಗೆ ಸಂಪೂರ್ಣ ಸಂಶಯ ರಹಿತನಾಗುವನೋ ಆಗ ಅವನಿಗೆ ಆತ್ಮಸಾಕ್ಷಾತ್ಕಾರವಾಗುವದು. ಆತ್ಮಜ್ಞಾನದಿಂದ ತುಂಬಿರುವವನೇ ಸಿದ್ಧನಾಗುವನು. ಅವನು ಸಮಾಧಾನ ರೂಪನೇ ಆಗುವನು. ಈ ಸಮಾಧಾನ [ಸಿದ್ಧತನ, ಆತ್ಮಜ್ಞಾನ] ಯಾರಿಗೆ ಬೇಕಾಗಿರುವದೋ ಅಂಥವರು [ಖರೇ ಸಾಧಕರು] ಯಾವ ಯಾವ ನಿಶ್ಚಯ ಮಾಡಬೇಕೆಂಬುದನ್ನು ಈಗ ಹೇಳುತ್ತಾರೆ· "ನಾನು ಆತ್ಮ ಸ್ವರೂಪ ಇರುವೆ· ಮತ್ತು ಆತ್ಮಾ ಮತ್ತು ಪರಮಾತ್ಮಾ ಒಂದೇ ಒಂದಾಗಿದೆ. ಆದುದರಿಂದ ನಾನು ಪರಮಾತ್ಮ ಸ್ವರೂಪ ಇರುವೆ" ಹೀಗೆ ದೃಢ ನಿಶ್ಚಯ ಮಾಡಿಕೊಂಡೇ ಸಾಧಕನು ಆತ್ಮಜ್ಞಾನವನ್ನು ಪಡೆಯಬೇಕು:— ಆಗ್ಗೆ ಶ್ರೋತೃವು ಕೇಳಿದ್ದೇನಂದರೆ, "ಯಾವ ನಿಶ್ಚಯವನ್ನು ಮಾಡಬೇಕು?ಸಿದ್ಧತ್ವ ಪಡೆಯುವ ಮುಖ್ಯ ನಿಶ್ಚಯದಲಕ್ಷಣಗಳೇನೆಂಬುದನ್ನು ನನಗೆ ದಯವಿಟ್ಟು ಹೇಳಿರಿ"ಎಂದನು.[೨೮] ಆಗ ಶ್ರೀ ಸದ್ಗುರುವು ಹಾಗಾದರೆ "ಚಿತ್ತಗೊಟ್ಟು ಕೇಳುವವನಾಗು" ಎಂದರು:— ಮುಖ್ಯ ದೇವರು ಹೇಗಿರುವನೆಂಬುದನ್ನು ನಿಶ್ಚಿತತನದಿಂದ ಸಂಶಯ ರಹಿತವಾಗಿ ಗುರುತು ಹಿಡಿಯುವದರ ಹೆಸರು ನಿಶ್ಚಯ [ಖರೇ ನಿರ್ಧಾರ] ವೆನಿಸುವದು. ಅನೇಕ ದೇವರ ಗೊಂದಲದಲ್ಲಿ ನಾವು ತೊಡಕಿಕೊಳ್ಳಬಾರದು. [೨೯] ಯಾವನು ಈ ಚರಾಚರ ವಿಶ್ವವನ್ನು ನಿರ್ಮಾಣ ಮಾಡಿರುವನೋ ಅವನ ಬಗ್ಗೆ ಮಾತ್ರ ವಿಚಾರ ಮಾಡಬೇಕು. ಅತ್ಯಂತ ಶುದ್ಧ, ನಿಃಸ್ಸಂದೇಹ ಮತ್ತು ನಿಸ್ವಾರ್ಥ ವಿವೇಕದಿಂದ ಪರಮೇಶ್ವರನ ಜ್ಞಾನ ಮಾಡಿಕೊಳ್ಳಬೇಕು· [೩೦] ಮುಖ್ಯ ದೇವರು ಯಾರು? ಭಕ್ತನ ಲಕ್ಷಣಗಳೇನು? ಈ ಪ್ರಶ್ನೆಯನ್ನು ವಿವೇಕದಿಂದ ಬಿಡಿಸಿ ತಿಳಿಯಬೇಕು. ಮಿಥ್ಯೆ ಎನಿಸಿದ ಅನಿತ್ಯ ದೃಶ್ಯವನ್ನು ಬದಿಗೆ ಸರಿಸಿ ಸತ್ಯ ಸ್ವರೂಪನಾದ ಪರಮಾತ್ಮನ ಜ್ಞಾನ ಮಾಡಿಕೊಳ್ಳಬೇಕು. [೩೧] ಮೊದಲಿಗೆ ತಾನು ಭಜಿಸುವ ಉಪಾಸ್ಯ ದೇವರನ್ನು ಗುರುತಿಸಿ ತಿಳಿಯಬೇಕು— ಆ ಮೇಲೆ "ನಾನು ಯಾರು ಇರುವೆ"ಇದರ ಜ್ಞಾನ ಮಾಡಿಕೊಳ್ಳಬೇಕು. ಅದರ ನಂತರ ಎಲ್ಲ ದೃಶ್ಯದಿಂದ ಹೊರಬಿದ್ದು ಬ್ರಹ್ಮಸ್ವರೂಪನಾಗಿರಬೇಕು. [೩೨]

ತೋಡಾವಾ ಬಂಧನಾಚಾ ಸಂಶಯೋ । ಕರಾವಾ ಮೋಕ್ಷಾಚಾ ನಿಶ್ಚಯೋ ।
ಪಾಹಾವಾ ಭೂತಾಂಚಾ ಅನ್ವಯೋ । ವಿತಿರೇಕೇಸೀ ॥೩೩॥

ಪೂರ್ವ ಪಕ್ಷೇಸೀ ಸಿದ್ಧಾಂತ । ಪಾಹಾವಾ ಪ್ರಕೃತೀಚಾ ಅಂತ ।
ಮಗ ಪಾವಾವಾ ನಿವಾಂತ । ನಿಶ್ಚಯು ದೇವಾಚಾ ॥೩೪॥

ದೇಹಾಚೆ ನಿಯೋಗೇ ಸಂಶಯೋ । ಕರೀ ಸಮಾಧಾನಾಚಾ ಕ್ಷಯೋ ।
ಚಳೋ ನೇದಾವಾ ನಿಶ್ಚಯೋ । ಆತ್ಮತ್ವಾಚಾ ॥೩೫॥

ಸಿದ್ಧ ಅಸತಾ ಆತ್ಮಜ್ಞಾನ । ಸಂದೇಹ ವಾಢವೀ ದೇಹಾಭಿಮಾನ ।
ಯಾ ಕಾರಣೇ ಸಮಾಧಾನ । ಆತ್ಮನಿಶ್ಚಯೇ ರಾಖಾವೇ ॥೩೬॥

ಆಠವತಾ ದೇಹಬುದ್ಧಿ । ಉಡೆ ವಿವೇಕಾಚೀ ಶುದ್ಧೀ ।
ಯಾ ಕಾರಣೇ ಆತ್ಮಬುದ್ಧೀ । ಸದೃಢ ಕರಾವೀ ॥೩೭॥

ಆತ್ಮಬುದ್ಧಿ ನಿಶ್ಚಯಾಚೀ । ತೇಚಿ ದಶಾ ಮೋಕ್ಷಶ್ರೀಚೀ ।
'ಅಹಮಾತ್ಮಾ' ಹೇ ಕಧೀ ಚಿ । ವಿಸರೋ ನಯೇ ॥೩೮॥

ನಾನು ಬಾಂಧಾಯಿಸಿದ್ದೇನೆ. (ಬಂದಿಯಾಗಿದ್ದನೆ) ಎಂಬ ವಿಕಲ್ಪವನ್ನು ಹರಿದೊಗೆಯಬೇಕು. ನಾನು ಸ್ವತಂತ್ರ ಮುಕ್ತನಿರುವೆ ಎಂಬ ನಿಶ್ಚಯ ಮಾಡಬೇಕು. ಮತ್ತು ಪಂಚ ಮಹಾ ಭೂತದ ಅನ್ವಯ ವ್ಯತಿರೇಕ ದಿಂದ ಬ್ರಹ್ಮಸ್ವರೂಪ (ಸ್ವಸ್ವರೂಪ)ವನ್ನು ತಿಳಿದು ಅನುಭವಿಸಬೇಕು. **ಅನ್ವಯ ಅಂದರೆ ಇರುವೆನು ಎಂಬುದರಿಂದ ಆತ್ಮಸ್ವರೂಪದವರೆಗೆ ಮುಟ್ಟುವಿಕೆ ಹಾಗೂ ವ್ಯತಿರೇಕ ಅಂದರೆ ಇಲ್ಲ ಎಂಬುದರಿಂದ ಅಲ್ಲಿಗೆ (ಆತ್ಮಸ್ವರೂಪದವರೆಗೆ) ಮುಟ್ಟುವದು.** ಯಾವ ಯಾವುದು ತನ್ನ ಅನುಭವದಲ್ಲಿ ಬಂದು ಸೇರುವದೋ ಅದೆಲ್ಲವೂ ಸ್ವಾನಂದ ಸಾಗರದಲ್ಲಿಯ ತರಂಗ (ತೆರೆ)ಗಳಿರುವವು. ಈ ಪ್ರಕಾರದ ಆತ್ಮೀಯ ಭಾವನೆಯಿಂದ ಚರಾಚರ ಜಗತ್ತನ್ನು ನೋಡುವದಕ್ಕೆ ಅನ್ವಯವೆನ್ನುವರು. ಯಾವ ಯಾವುದು ತನ್ನ ಅನುಭವದಲ್ಲಿ ಬಂದು ಸೇರುವದೋ ಅದೆಲ್ಲವೂ ಸ್ವಾನಂದ ಸಾಗರದಲ್ಲಿಯ ಬುಡಬುಡೆ ಅಂದರೆ ನೀರಗುಳ್ಳೆ ಇರುವದು. ಈ ಮಿಥ್ಯಾತನದ ಭಾವನೆಯಿಂದ ಚರಾಚರ ಜಗತ್ತನ್ನು ನೋಡುವದು, ಇದಕ್ಕೆ ವ್ಯತಿರೇಕವೆನ್ನುವರು. ೧. **ವ್ಯತಿರೇಕ** ಅಂದರೆ ಪಂಚಭೂತಾತ್ಮಕ ಸೃಷ್ಟಿಯಿಂದ ಬೇರೆಯಾಗಿರುವಂಥ ನಾನು ಚೈತನ್ಯರೂಪ ಇರುವೆನು ಹೀಗೆ ವಿಚಾರ ಮಾಡುವದು. **೨. ಅನ್ವಯ** ಅಂದರೆ ಸರ್ವತ್ರವೂ ನಾನೇ ಚೈತನ್ಯರೂಪದಿಂದ ತುಂಬಿರುವವನಾಗಿರುವೆನು ಹೀಗೆ ಭಾವನಾ ಮಾಡುವದು. (೩೩) "ನಾನು ದೇಹವಿರುವೆ"ಇದು**ಪೂರ್ವ ಪಕ್ಷ**."ನಾನು ಆತ್ಮಾ ಇರುವೆ" ಇದು **ಸಿದ್ಧಾಂತ**.ಸಾಧಕನು ಮೊದಲಿಗೆ ಪೂರ್ವ ಪಕ್ಷವನ್ನು ವಿಚಾರದಿಂದ ಖೊಟ್ಟಿ, ಸುಳ್ಳು ಎಂದು ನಿರ್ಣಯಿಸಿಕೊಂಡ ನಂತರ ಸಿದ್ಧಾಂತದವರೆಗೆ ವಿಚಾರ ಬಲದಿಂದ ಬರಬೇಕು. (೧೫–೪–೨೬ ಮತ್ತು ೨೦–೩–೨೦,೨೧ ನೋಡಿರಿ) ಅಲ್ಲಿ ಸರ್ವ ಸಾಕ್ಷಿಣಿ ಅವಸ್ಥೆ ಬರುವದು. ಯಾವ ದೃಶ್ಯದ "ನಾನು" ಸಾಕ್ಷಿ ರೂಪವಿರುವದೋ ಅದು ಪ್ರಕೃತಿಯೊಳಗಿಂದ ವ್ಯಕ್ತದಿಶೆಗೆ ಬಂದಿರುತ್ತದೆ. ಆದರೆ ಆತ್ಮಜ್ಞಾನವಾದ ಮೇಲೆ ದೃಶ್ಯವು ಪ್ರಕೃತಿಯಲ್ಲಿ ವಿಲೀನವಾಗುತ್ತದೆ. ಆಗ ಸಾಕ್ಷಿತ್ವರೂಪದ "ನಾನು" ಸಹಿತ ಉಳಿಯುವದಿಲ್ಲ. ಆಗ ಅಲ್ಲಿ ಪರಮಾತ್ಮ ಸ್ವರೂಪದ ಅನುಭವವು ಬರುತ್ತದೆ. ಮತ್ತು ದೇವರ ಖರೇ ಹಾಗೂ ಶುದ್ಧ ಸ್ವರೂಪದ ನಿಶ್ಚಿತ ಜ್ಞಾನವಾಗುವದು. (ತಿಳಿಯುವದು). **ಪೂರ್ವ ಪಕ್ಷ** ಅಂದರೆ ಜಗತ್ತು ಆಗಿರುವದು ಇದು ಸತ್ಯ ಇರುವದು, ಹೀಗೆ ಅನ್ನುವದು. **ಸಿದ್ಧಾಂತ ಪಕ್ಷ** ಅಂದರೆ ಜಗತ್ತು ಮಿಥ್ಯಾ ಇದ್ದು ಇದು ನಾಶ ವಾಯಿತು ಅಂತಾ ತಿಳಿಯುವದು. (೩೪) ದೇಹ ಬುದ್ಧಿಯ ಕಾರಣದಿಂದ ಮನಸ್ಸಿನಲ್ಲಿ ಸಂಶಯ ಉತ್ಪನ್ನವಾಗು ವದು. ಇದರಿಂದ ಸಮಾಧಾನ ಇಲ್ಲದಾಗುತ್ತದೆ. ಅಂತೆಯೇ ತನ್ನ ಸ್ವಸ್ವರೂಪದ ನಿಶ್ಚಯ.ವನ್ನು ಎಷ್ಟೂ ಚಲಿಸ ಗೊಡಬಾರದು. **''ನಾನು ದೇಹ ಅಲ್ಲ, ಆತ್ಮಸ್ವರೂಪ ಇರುವೆ''** ಇಂಥ ಅಗದೀ ದೃಢ ನಿಶ್ಚಯವಿರಬೇಕು[೩೫] ನಿಜವಾಗಿ ನೋಡಿದ್ದಾದರೆ, ನಮ್ಮ ಅಂತರ್ಯಾಮದಲ್ಲಿ "ನಾನು ಆತ್ಮಸ್ವರೂಪ" ಇರುವೆ ಈ ಜ್ಞಾನವು ಸ್ವತಃ ಸಿದ್ಧವೇ ಇರುವದು. ಆದರೆ ದೇಹ ಬುದ್ಧಿಯೊಳಗಿಂದ ಉತ್ಪನ್ನವಾಗುವ ದೇಹಾಭಿಮಾನವು ಇದರ ಬಗ್ಗೆ ಸಂಶಯ ನಿರ್ಮಾಣ ಮಾಡುತ್ತದೆ. ಇದರಿಂದ ನಮ್ಮ ಸಮಾಧಾನಕ್ಕೆ ಭಂಗ ಬರುತ್ತದೆ. ಆದ್ದರಿಂದ **'ನಾನು ಆತ್ಮನೇ ಇರುವೆ'** ಈ ದೃಢ ನಿಶ್ಚಯದಿಂದ ನಮ್ಮ ಸಮಾಧಾನವನ್ನು ಉಳಿಸಿಕೊಳ್ಳಬೇಕು. [೩೬] ದೇಹ ಬುದ್ಧಿಯ ಜೋರು ಆದರೆ "ನಾನು ಆತ್ಮಾ ಇರುವೆ" ಈ ವಿವೇಕವು ಬೇಶುದ್ಧ (ಅಶುದ್ಧ) ವಾಗುವದು. ಆಗ ಅಲ್ಲಿ ಸ್ವಸ್ವರೂಪದ ತಿಳುವಳಿಕೆ ಇಲ್ಲದಾ ಗುವದು. ಅದಕ್ಕಾಗಿ "ನಾನು ಆತ್ಮವೇ ಇರುವೆ" ಈ ಆತ್ಮ ಬುದ್ಧಿಯನ್ನು ಬಲವತ್ತರಗೊಳಿಸಬೇಕು. ತನ್ನ ಸ್ವಸ್ವರೂಪದ ತಿಳುವಳಿಕೆಯನ್ನು ಸತೇಜವಾಗಿಡಬೇಕು. [೩೭] ಆತ್ಮಬುದ್ಧಿಯ ನಿಶ್ಚಯ ಪಕ್ಕಾ ಆಗುವಿಕೆ ಅಂದರೆ "ನಾನು ಆತ್ಮ ಸ್ವರೂಪ ಇರುವೆ" ಇದು ನಿಸ್ಸಂಶಯವಾಗಿ ಅನುಭವಕ್ಕೆ ಬರುವಿಕೆ. ಇದೇ ಮೋಕ್ಷರೂಪಿ ಲಕ್ಷ್ಮಿಯ ಐಶ್ವರ್ಯವಾಗಿರುವದು· **"ನಾನು ಆತ್ಮನೇ ಇರುವೆ"** ಈ ತಿಳುವಳಿಕೆಯನ್ನು ಯಾವಾಗಲೂ ಜಾಗ್ರತ ಇಡಬೇಕು. ಲೋಪವಾಗಗೊಡಬಾರದು. [೩೮]

ನಿರೋಪಿಲೆ ನಿಶ್ಚಯಾಚೆ ಲಕ್ಷಣ । ಪರೀ ಹೇ ನ ಕಳೆ ಸತ್ಸಂಗೇವಿಣ ।
ಸಂತಾಸಿ ಗೇಲಿಯಾ ಶರಣ । ಸಂಶಯೋ ತುಟತೀ ॥೩೯॥
ಆತಾ ಅಸೊ ಹೇ ಬೋಲಣೆ । ಏಕಾ ಸಿದ್ಧಾಂಚೀ ಲಕ್ಷಣೆ ।
ಮುಖ್ಯ ನಿಃಸಂದೇಹ ಪಣೆ । ಸಿದ್ಧ ಬೋಲಿಜೆ ॥೪೦॥
ಸಿದ್ಧಸ್ವರೂಪೀ ನಾಹೀ ದೇಹೋ । ತೇಥೆ ಕೈಚಾ ಹೋ ಸಂದೇಹೋ ।
ಯಾ ಕಾರಣೇ ಸಿದ್ಧ ಪಾಹೋ । ನಿಃಸಂದೇಹೀ ॥೪೧॥
ದೇಹ ಸಮಂಧಾಚೆನಿ ಗುಣೆ । ಲಕ್ಷಣಾಸೀ ಕಾಯೆ ಉಣೆ ।
ದೇಹಾತೀತಾಚೀ ಲಕ್ಷಣೆ । ಕಾಯೆ ಮ್ಹಣೋನಿ ಸಾಂಗಾವೀ ॥೪೨॥
ಜೇ ಲಕ್ಷವೇನಾ ಚಕ್ಷೂಸೀ । ತ್ಯಾಚೀ ಲಕ್ಷಣೆ ಸಾಂಗಾವೀ ಕೈಸೀ ।
ನಿರ್ಮಳ ವಸ್ತು ಸಿದ್ಧ ತ್ಯಾಸೀ । ಲಕ್ಷಣೆ ಕೈಸೀ ॥೪೩॥
ಲಕ್ಷಣೇ ಮ್ಹಣಿಜೆ ಕೇವಳ ಗುಣ । ವಸ್ತು ತಾಈಚೀ ನಿರ್ಗುಣ ।
ತೇಚಿ ಸಿದ್ಧಾಂಚೇ ಲಕ್ಷಣ । ವಸ್ತುರೂಪ ॥೪೪॥
ತಥಾಪಿ ಜ್ಞಾನದಶಕೀ ಬೋಲಿಲೆ । ಮ್ಹಣೌನಿ ಮಗತ್ಯತ್ವ ಆಟೋಪಿಲೇ ।
ನ್ಯೂನಪೂರ್ಣ ಕ್ಷಮಾ ಕೇಲೆ । ಪಾಹಿಜೆ ಶ್ರೋತೀ ॥೪೫॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
"ಸಿದ್ಧ ಲಕ್ಷಣ" ನಾಮ ಸಮಾಸ ದಶಮ ॥

ಇಲ್ಲಿಯವರೆಗೆ ಏನೇನು ಹೇಳಿರುವೆವೋ ಅದೆಲ್ಲವೂ ಸರಿಯಾಗಿ ತಿಳಿಯಬೇಕಾದರೆ ಪಕ್ಕಾ ಲಕ್ಷ್ಯದಲ್ಲಿ ಬರಬೇಕಾದರೆ ಸಂತರಿಗೆ ಶರಣುಹೋಗಬೇಕು. ಅಂದರೆ ಸಂಶಯಗಳೆಲ್ಲ ನಾಶವಾಗಿ ಹೋಗುವವು. ಮತ್ತು ಆತ್ಮನಿಶ್ಚಯ ಉಂಟಾಗುವದು. ಸಿದ್ಧನು ದೇಹಾತೀತನಿರುವನು, ಸಿದ್ಧನ ಲಕ್ಷಣ ಹೇಳಲಿಕ್ಕೆ ಶಕ್ಯವಿರುವದಿಲ್ಲ. ಅವು ಅನುಭವದಿಂದಲೇ ತಿಳಿಯುವಂಥವಿರುವವು:- ಮುಖ್ಯ ನಿಶ್ಚಯದ ಲಕ್ಷಣಗಳನ್ನು ಹೇಳಿದೆವು. ಆದರೆ ಸತ್ಸಂಗ ಮಾಡದ ಹೊರತು ಇವುಗಳ ಸರಿಯಾದ ಅರ್ಥ ಲಕ್ಷ್ಯಕ್ಕೆ ಬರುವದಿಲ್ಲ. ಸಂತರಿಗೆ ಶರಣು ಹೋದರೆ ಸಂಶಯಗಳೆಲ್ಲ ತನ್ನಷ್ಟಕ್ಕೆ ತಾವೇ ದೂರಾಗುವವು. [೩೯] ಈಗ ಈ ಮಾತುಗಳು ಸಾಕು. ಸಿದ್ಧಪುರುಷನ ಲಕ್ಷಣಗಳನ್ನು ಸ್ವಲ್ಪದರಲ್ಲಿಯೇ ಹೇಳುವೆ ಕೇಳಿರಿ ಯಾವನು ಸಂಪೂರ್ಣ ನಿಸ್ಸಂಶಯವಾಗಿರುವನೋ ಅವನು ಸಿದ್ಧನಾಗಿರುವನು. [೪೦] ಸಿದ್ಧಾವಸ್ಥೆಯಲ್ಲಿ ದೇಹದ ಅರಿವು ಇರುವದಿಲ್ಲ. ಅಂದ ಮೇಲೆ ಅಲ್ಲಿ ಸಂಶಯಕ್ಕೆ ಸ್ಥಾನವೇ ಇರುವದಿಲ್ಲ. ಈ ಕಾರಣದಿಂದಲೇ ಸಿದ್ಧಪುರುಷನು ಯಾವಾಗಲೂ ಸಂದೇಹ ರಹಿತನಾಗಿಯೇ ಇರುವನು. ಸಂಶಯವು ದೇಹಬುದ್ಧಿಯ ಸಂತಾನವೇ ಆಗಿದೆ. ದೇಹಬುದ್ಧಿ ಕರಗಿ ದೇಹದ ಎಚ್ಚರವು ಇಲ್ಲದಾದರೆ [ಹಾರಿ ಹೋದರೆ] ಆಗಿಂದಾಗ ಎಲ್ಲ ಸಂಶಯಗಳೂ ನಾಶವಾಗಿ ಹೋಗುವವು. [೪೧] ಎಲ್ಲಿ ದೇಹದ ಹಾಗೂ ದೃಶ್ಯದ ಸಂಬಂಧವಿರುವದೋ ಅಲ್ಲಿ ಬಹಳಷ್ಟು ಲಕ್ಷಣಗಳನ್ನು ಹೇಳಲಿಕ್ಕೆ ಬರುವದು. ಆದರೆ ದೇಹಾತೀತ ಅವಸ್ಥೆಗೆ ಯಾರು ಮುಟ್ಟಿರುವರೋ ಅಂಥವರ ಲಕ್ಷಣಗಳನ್ನು ಹೇಳುವದಕ್ಕೆ ಶಕ್ಯವಾಗುವದಿಲ್ಲ. ಸಿದ್ಧನ ಅವಸ್ಥೆಯು ವಾಣಿಯ ಆಚೆಗೆ ಇರುವದರಿಂದ ಅದನ್ನು ಶಬ್ದಗಳಿಂದ ವರ್ಣನೆ ಮಾಡಲಿಕ್ಕೆ ಶಕ್ಯವಿಲ್ಲ. [೪೨] ಅದೃಶ್ಯವಾದ [ಕಣ್ಣಿಗೆ ಕಾಣಲಾರದ] ವಸ್ತುವಿನ ಲಕ್ಷಣಗಳನ್ನು ಹೇಳಲಿಕ್ಕೆ ಆಗುವದಿಲ್ಲ, ಸಿದ್ಧನು ಶುದ್ಧ ಬ್ರಹ್ಮ ಸ್ವರೂಪವೇ ಆಗಿರುವದರಿಂದ ಅವನ ಲಕ್ಷಣಗಳನ್ನು ವರ್ಣಿಸಲಿಕ್ಕೆ ಆಗುವದಿಲ್ಲ. ಯಾವುದನ್ನು ಇಂದ್ರಿಯಗಳು ಗ್ರಹಣ ಮಾಡುವವೋ ಅದನ್ನು ವರ್ಣಿಸಲಿಕ್ಕೆ ವಾಣಿಗೆ ಶಕ್ಯವಿದೆ, ಆದರೆ ಯಾವುದು ಅತೀಂದ್ರಿಯವಿದೆಯೋ ಅದನ್ನು ಶಬ್ದಗಳ ಅಳವಿನಲ್ಲಿ ತರಲಿಕ್ಕೆ ಬರುವದಿಲ್ಲ. ಅಂತೆಯೇ ಬ್ರಹ್ಮ ಸ್ವರೂಪ ಹೊಂದಿದ ಸಿದ್ಧನ ಲಕ್ಷಣಗಳನ್ನು ಹೇಳಲಿಕ್ಕೆ ಆಗುವದಿಲ್ಲ. [೪೩] ತ್ರಿಗುಣ [ಸತ್ವ, ರಜ, ತಮ]ಗಳಿಗೆ ಲಕ್ಷಣಗಳಿರುವವು. ಆದರೆ ಪರಮಾತ್ಮ ವಸ್ತುವಾದರೋ, ಗುಣಗಳ ಆಚೆಗೆ ಇರುವದು. ಮತ್ತು ಅದು [ವಸ್ತುವು] ಗುಣರಹಿತವಿರುತ್ತದೆ. ಸಿದ್ಧ ಪುರುಷ ಪರಮಾತ್ಮ ಸ್ವರೂಪನೇ ಇರುವದರಿಂದ ಅವನೂ ಗುಣರಹಿತನೇ ಇರುವನು, ಗುಣರಹಿತನಿರುವದೇ ಅವನ ಲಕ್ಷಣವಾಗಿದೆ. [೪೪] ತತ್ರಾಪಿ [ಆದರೂ] ಈ ವಿಷಯವನ್ನು ಮುಂದೆ ಜ್ಞಾನ ದಶಕ [೮ನೆಯ ದಶಕ]ದಲ್ಲಿ ವಿಸ್ತಾರವಾಗಿ ಹೇಳಿದ್ದರಿಂದ ಈಗ ಇಲ್ಲಿಯ ನಿರೂಪಣವನ್ನು ಆವರಿಸುವೆವು. ಇದರಲ್ಲಿಯ ಲೋಪದೋಷಗಳನ್ನು ಶ್ರೋತೃಗಳು ಕ್ಷಮಿಸಬೇಕು, [೪೫]

ಇತಿ ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದ ಐದನೆಯ ದಶಕದ "ಸಿದ್ಧ ಲಕ್ಷಣ ನಾಮ" ವೆಂಬ ಹತ್ತನೆಯ ಸಮಾಸವು ಮುಗಿದುದು.

## ದಶಕ ಪಂಚಮಾ ಸಮಾಪ್ತ

## ದಶಕ ೬. ಸಮಾಸ ೧. ದೇವ ಶೋಧನ

ಈ ದಶಕದಲ್ಲಿ ತತ್ವಜ್ಞಾನದಲ್ಲಿಯ ಕೆಲವೊಂದು ಮಹತ್ವದ ಪ್ರಶ್ನೆಗಳಿಗೆ ಉತ್ತರಿಸಿ ತಿಳಿಸಿ ಹೇಳಿರುವದು ಕಂಡು ಬರುವದು. ಶ್ರೀ ಸಮರ್ಥರು ಸಂಪೂರ್ಣ ಅದ್ವೈತ ತತ್ವಜ್ಞಾನಿಗಳಿರುವರು. ಅವರು ಪುನಃ ಪುನಃ ಹೇಳುವದೇನಂದರೆ:- ನಮ್ಮ ದೇಹ ಮೊದಲುಗೊಂಡು ಈ ದೃಶ್ಯರೂಪಿ ವಿಶ್ವವೆಲ್ಲವೂ ಸತತ (ಸದಾಕಾಲ) ಬದಲಾಗುತ್ತಲಿರುವದು. ಆದುದರಿಂದಲೇ ಇದು ಸರ್ವ ರೀತಿಯಿಂದ ನಿಜವಲ್ಲ (ಖರೇ ಅಲ್ಲ) ಇದರ ಹಿಂದೆ ಎಂದೂ ಬದಲಾಗದ ಮತ್ತು ಸರ್ವರೀತಿಯಿಂದಲೂ ನಿಜವಾದ (ಖರೇ) ಸತ್ಯವಾದಂಥ ಒಂದು ಸದ್ ವಸ್ತು ಇರುವದು. ಸ್ವತಃ ತಾನು ಅಚಲನಾಗಿದ್ದು ಈ ಚಲವಿಶ್ವಕ್ಕೆ ಆಧಾರ ಕೊಡುವವನಾಗಿದ್ದಾನೆ. ಈ ಸದ್ವಸ್ತು ಜ್ಞಾನಮಯ ಹಾಗೂ ಆನಂದಮಯನಾಗಿರುವನು. ಅಂತೆಯೇ ಈ ಸದ್ವಸ್ತುವಿನ ಸಾಕ್ಷಾತ್ಕಾರವಾಯಿತೆಂದರೆ ಆಗಲೇ ಸಂಪೂರ್ಣ ಸಮಾಧಾನ ದೊರಕುವದು ಮಾಯಾ ಎಂಬ ಹೆಸರಿನ ಸದ್ವಸ್ತುವು ಒಂದು ವಿಲಕ್ಷಣ ಶಕ್ತಿಯುಳ್ಳದ್ದಿರುವದು. ಇದರಿಂದಾಗಿ ಈ ದೃಶ್ಯದ (ಭಾಸಮಯ) ತೋರುವಿಕೆ ಕಂಡು ಬರುವದು. ಮತ್ತು ಅಜ್ಞಾನದ ಮೂಲಕ ಜೀವವು ಅದರ ಬೆನ್ನು ಹತ್ತುವದು (ಅದರಲ್ಲಿ ತೊಡಕಿಕೊಳ್ಳುವದು). ಸ್ವರೂಪತಃ (ಮೂಲದಲ್ಲಿಯೇ)ಮಿಥ್ಯೆಯಾಗಿರುವ ದೃಶ್ಯದ ತೋರುವಿಕೆಯು ಇಂದ್ರಿಯಗಳಿಗೆ ಪ್ರತ್ಯಕ್ಷ ಕಂಡುಬರುವದು ನಿಜವಿದ್ದರೂ ಸಹ ಇದು ಪರಮಸತ್ಯ (ಸರ್ವಸ್ವೀ ಸತ್ಯ)ವೆಂದು ತಿಳಿಯುವದು. ಕೇವಲ ಅಜ್ಞಾನದ ಲಕ್ಷಣವಾಗಿದೆ. ಸ್ವಸ್ವರೂಪಕ್ಕೆ ಅಡ್ಡವಾಗಿ ಬರುವ ದೃಶ್ಯದ ಜಂಜಾಳ (ಗುಂತಾ ಗುಂತ, ಕಗ್ಗಂಟ)ನ್ನು ಬಿಡಿಸಬೇಕಾದರೆ ಜೀವದ ಅಜ್ಞಾನ ಕಡಿಮೆ ಮಾಡುವದೇ ಮುಖ್ಯ ಉಪಾಯವಿರುವದು.

ಇದರ ಹೊರತು ಬೇರೆ ಯಾವ ಉಪಾಯಗಳೂ ಇಲ್ಲ. ಶಾಂತವಾಗಿ ವಿವೇಕದಿಂದ ದೃಶ್ಯದ ಶೋಧ ಮಾಡಲಿಕ್ಕೆ ಹತ್ತಿದರೆ ಆಗ ನಿಮಗೆ ದೃಶ್ಯವೆಲ್ಲವೂ ನಾಶ ಹೊಂದುವಂತಹದೆಂಬುದರ ತಿಳವಳಿಕೆಯಾಗಿ ಇದೆಲ್ಲ ವಿನಾಶಿ ತತ್ವದ ತಾತ್ಪೂರ್ತಿಕವಾದ (ಅಶಾಶ್ವತ) ಕಟ್ಟಡ, ಇಮಾರತಿ ಇರುವದರ ಖಾತ್ರಿಯಾಗುತ್ತದೆ. ಆಗ ಜೀವವು ಸಹಜವಾಗಿ ದೇಹದ ಅಹಂಕಾರವನ್ನು ಬದಿಗೆ ಸರಿಸುತ್ತದೆ. ಉಳಿದಿರುವಂಥ ನಿರ್ಗುಣವಾದ ಆತ್ಮಸ್ವರೂಪದಲ್ಲಿ ಸಮರಸವಾಗುತ್ತದೆ. ಈ ಅನುಭವಕ್ಕೇ ಆತ್ಮಜ್ಞಾನವೆನ್ನುವರು. ಎಲ್ಲಿಯವರೆಗೆ "ನಾನು ದೇಹ ಇರುವೆನು" ಈ ಭಾವನೆ ಇರುವದೋ ಅಲ್ಲಿಯವರೆಗೆ ಈ ದೃಶ್ಯವು ನಿಜವೆಂದು ಅನಿಸುತ್ತದೆ. ಅಂತೆಯೇ ಜ್ಞಾನಿಗಳು ಆತ್ಮಾನಾತ್ಮ ವಿವೇಕ, ಮತ್ತು ಸಗುಣೋಪಾಸನೆ ಈ ಎರಡು ಚಕ್ರ (ಗಾಲಿ)ಗಳನ್ನು ಸಾಧನೆ ಎಂಬ ರಥದೊಂದಿಗೆ ಚೆನ್ನಾಗಿ ಮತ್ತು ಸರಿಯಾಗಿ ಜೋಡಿಸಿ ಹೂಡಿ ನಡೆಸಿದ್ದಾದರೆ ಅನಾತ್ಮ ದೃಶ್ಯದ ನಿರಶನ (ಸಂಶಯದ ನಿವಾರಣೆ)ವಾಗುತ್ತ ಹೋಗುತ್ತದೆ. ಅಜ್ಞಾನದ ಮುಚ್ಚಳವು ಕರಗುತ್ತ ಹೋಗುವದು. ಕೊನೆಗೆ ಆತ್ಮದರ್ಶನವೇ ಒದಗಿ ಬರುತ್ತದೆ. ಅಂತೆಯೇ ಶ್ರೀ ಸಮರ್ಥರು ಮೇಲಿಂದ ಮೇಲೆ ವಿವೇಕ ಹಾಗೂ ಉಪಾಸನಾ ಇವುಗಳ ಮಹತ್ವವನ್ನು ಬೇಸರಪಟ್ಟುಕೊಳ್ಳದೆ ಹೇಳುತ್ತ ಬಂದಿರುವರು. ಬುದ್ಧಿಯಿಂದ ವಿವೇಕವನ್ನು ತಿಳಿಯಿರಿ. ಅದರಂತೆ ಮಾಡಿರಿ. ತನ್ಮೂಲಕ ಸ್ವಸ್ವರೂಪದೊಂದಿಗೆ ತನ್ಮಯರಾಗಿ ಹೋಗಿರಿ ಎಂಬುದಾಗಿ ನಮಗೆ ಶ್ರೀ ಸಮರ್ಥರು ಹೇಳುವವರಾಗಿದ್ದಾರೆ.

## ದಶಕ ೬. ಸಮಾಸ ೧. ದೇವ ಶೋಧನ (ನುಡಿ ೩೧)

ಶ್ರೀ ಸಮರ್ಥರ ದೃಷ್ಟಿಯಲ್ಲಿ ಆತ್ಮಜ್ಞಾನಿಯಾದ ಸಿದ್ಧಪುರುಷನೇ ಉತ್ತಮ [ಸರ್ವಶ್ರೇಷ್ಠ] ಪುರುಷನಾಗಿರುವನು. ನಿಜವಾದ ದೇವರ ಜ್ಞಾನದಿಂದ ಉತ್ತಮ ಪುರುಷರಿಗೆ ಅತ್ಯಂತ ಸಮಾಧಾನ ಲಭಿಸುತ್ತದೆ. ಈ ಆತ್ಮಸ್ವರೂಪವೇ ನಿಜವಾದ ದೇವರು ಇಂಥ ದೇವರ ಶೋಧ ಮಾಡಿ ಅವನ ಪ್ರತ್ಯಕ್ಷ ದರ್ಶನ ಹೊಂದುವದೇ ಮನುಷ್ಯನ ಪ್ರಥಮ ಕರ್ತವ್ಯವಾಗಿದೆ. ಈ ದೇವ ಶೋಧ ಹೇಗೆ ಮಾಡಬೇಕೆಂಬುದನ್ನು ಕಲಿಯುವದಕ್ಕಾಗಿ ಆತ್ಮಜ್ಞಾನಿ ಸಿದ್ಧ ಪುರುಷನ "ಅನುಗ್ರಹ" [ಉಪದೇಶ] ಪಡೆಯಬೇಕು. ಅನು + ಗ್ರಹ = ಕೃಪೆ ಮಾಡುವದು. ಸ್ವೀಕಾರ ಮಾಡುವದು, ಆಶ್ರಯ ಮತ್ತು ಆಧಾರ ಕೊಡುವದು. ಯಾರಿಂದ ಅನುಗ್ರಹ ಪಡೆಯುವೆವೋ ಅವರಿಗೆ ನಾವು ಸದ್ಗುರು ಪದವನ್ನು ಕೊಡುವೆವು. ಮತ್ತು ಸದ್ಗುರುವು ನಮ್ಮನ್ನು ತನ್ನ ಶಿಷ್ಯನೆಂದು ಸ್ವೀಕಾರ ಮಾಡುವನು. ಸ್ವಸ್ವರೂಪದ ಮಾರ್ಗವು ಅಂತರಂಗದ್ದು ಒಳಗಿನದು ಮತ್ತು ಸೂಕ್ಷ್ಮವಾದದ್ದಿರುವದು. ಇಂಥ ಬಿಕ್ಕಟ್ಟಿನ ಬಗ್ಗೆ ಮಾರ್ಗದರ್ಶನ ಮಾಡುವವನು ಸ್ವಾನುಭವಿ ಸಿದ್ಧ ಪುರುಷನೇ ಇರುವನು. ಸದ್ಗುರುವು ನಿಮ್ಮ ಮಾರ್ಗದರ್ಶಕನಾಗಿ ನಿಮ್ಮ ಗುಣ ದೋಷಗಳೆಲ್ಲವನ್ನು ಸ್ವೀಕರಿಸಿ ನಿಮ್ಮನ್ನು ಬೆನ್ನಿಗೆ ಹಾಕಿಕೊಂಡಿರುತ್ತಾನೆ. ಮತ್ತು ನೀವು ಸಾಧನ ಮಾಡುವಾಗ ಸದಾಕಾಲ ನಿಮ್ಮ ಬೆನ್ನ ಹಿಂದೆ ನಿಂತು ತಿಳಿಸಿಕೊಡುತ್ತಾನೆ. ಅನುಗ್ರಹವೆಂದರೆ ಒಂದು ಪ್ರಕಾರದ ಶಕ್ತಿಪಾತವೇ ಇರುವದು. ಅನುಗ್ರಹೀತನಾದ ಶಿಷ್ಯನು ಎಲ್ಲಿಯೇ ಇದ್ದರೂ ಸಹ ಸದ್ಗುರುವಿನಿಂದ ಹೊರ ಹೊಮ್ಮುವ ಕೃಪಾ ಶಕ್ತಿಯ ಸೂಕ್ಷ್ಮ ಪ್ರವಾಹವು ಶಿಷ್ಯನವರೆಗೆ ಹೋಗಿ ಮುಟ್ಟುವದು. ಶಿಷ್ಯನ ಸುತ್ತು ಮುತ್ತು ರಕ್ಷಣಾ ವಲಯವಾಗಿ ಸಾಧನದಲ್ಲಿ ಅವನಿಗೆ ಸದಾಕಾಲ ಸಹಾಯ ಮಾಡುತ್ತದೆ. ಸಾಮಾನ್ಯ ಜೀವವು ಅಲ್ಪವಿರುವದು. ಇದರ ಶಕ್ತಿ ಮತ್ತು ಸಾಧನ ಸಹ ಅಲ್ಪವಾದದ್ದೇ ಇರುವದು. ಕೇವಲ ಸ್ವಪ್ರಯತ್ನದಿಂದ ಸೂಕ್ಷ್ಮತ್ವದ ಮೇಲಿನ ಸ್ತರಕ್ಕೆ [ಮಟ್ಟಕ್ಕೆ] ಹೋಗುವದು. ಜೀವಕ್ಕೆ ಅಶಕ್ಯ ಅಲ್ಲದಿದ್ದರೂ ಬಹು ದುರ್ಘಟ, ದುಃಸಾಧ್ಯವಿರುವದು, ಅಂತೆಯೇ ಬ್ರಹ್ಮಜ್ಞಾನಿ ಸದ್ಗುರುವು ತನ್ನ ಶಕ್ತಿಯನ್ನು ಸಾಧನ ಮಾಡುವ ಶಿಷ್ಯಜೀವಕ್ಕೆ ಕೊಡುವನು. ಮತ್ತು ಅವನನ್ನು ಮೇಲಕ್ಕೆ ಎತ್ತುವನು. ದೃಶ್ಯದ ಪರಿಮಿತಿಯಿಂದ ಸೂಕ್ಷ್ಮದ ಸಾಮ್ರಾಜ್ಯದೊಳಗೆ ಒಯ್ಯುವನು. ಇದರಿಂದ ಜೀವದ ಅಹಂಕಾರ ಕ್ಷೀಣವಾಗುವದು. ಮತ್ತು ಸಾಧನಾ ಕಾರ್ಯ ತ್ವರಿತವಾಗಿ ಫಲದ್ರೂಪವಾಗುವದು.

## ಸಮಾಸ ಪ್ರಥಮ : ದೇವ ಶೋಧನ

॥ಶ್ರೀರಾಮ॥ ಚಿತ್ತ ಸುಚಿತ ಕರಾವೇ । ಬೋಲಿಲೆ ತೇ ಜೀವೀ ಧರಾವೇ ।
ಸಾವಧ ಹೋಊನ ಬೈಸಾವೇ । ನಿಮಿಷ್ಯ ಯೇಕ ॥೧॥
ಕೋಣೀ ಯೇಕೆ ಗ್ರಾಮೀ ಅಥವಾ ದೇಸೀ । ರಾಹಾಣೇ ಆಹೆ ಆಪಣಾಸೀ ।
ನ ಭೇಟತಾ ತೇಥಿಲ್ಯಾ ಪ್ರಭೂಸೀ । ಸೌಖ್ಯ ಕೈಚೇ ॥೨॥
ಮ್ಹಣೌನ ಜ್ಯಾಸ ಜೇಥೇ ರಾಹಾಣೇ । ತೇಣೆ ತ್ಯಾ ಪ್ರಭೂಚೀ ಭೇಟೀ ಘೇಣೆ।
ಮ್ಹಣಿಜೆ ಹೋಯ ಶ್ಲಾಘ್ಯ ವಾಣೇ । ಸರ್ವ ಕಾಂಹೀ ॥೩॥
ಪ್ರಭೂಚೀ ಭೇಟೀ ನ ಘೇತಾ । ತೇಥೇ ಕೈಚೀ ಮಾನ್ಯತಾ ।
ಆಪುಲೇ ಮಹತ್ವ ಜಾತಾ । ವೇಳ ನಾಹೀ ॥೪॥
ಮ್ಹಣೌನಿ ರಾಯಾಪಾಸೂನಿ ರಂಕ । ಕೋಣೀ ಯೇಕ ತರೀ ನಾಯೇಕ ।
ತ್ಯಾಸ ಭೇಟಣೇ ಹಾ ವಿವೇಕ । ವಿವೇಕೀ ಜಾಣತೀ ॥೫॥
ತ್ಯಾಸ ನ ಭೇಟತಾ ತ್ಯಾಚೆ ನಗರೀ । ರಾಹಾತಾ ಧರಿತೀಲ ಬೇಗಾರೀ ।
ತೇಥೇ ನ ಕರಿತಾ ಚೋರೀ । ಅಂಗೀ ಲಾಗೆ ॥೬॥
ಯಾ ಕಾರಣೇ ಜೋ ಶಾಹಾಣಾ । ತೇಣೆ ಪ್ರಭೂಸೀ ಭೇಟಾವೇ ಜಾಣಾ ।
ಏಸೇ ನ ಕರಿತಾ ದೈನ್ಯವಾಣಾ । ಸಂಸಾರ ತ್ಯಾಚಾ ॥೭॥
ಗ್ರಾಮೀ ಥೋರ ಗ್ರಾಮಾಧಿಪತೀ । ತ್ಯಾಹೂನಿ ಥೋರ ದೇಶಾಧಿಪತೀ ।
ದೇಶಾಧಿಪತೀಹೂನಿ ನೃಪತೀ । ಥೋರ ಜಾಣಾವಾ ॥೮॥
ರಾಷ್ಟ್ರಾಚಾ ಪ್ರಭು ತೋ ರಾಜಾ । ಬಹುರಾಷ್ಟ್ರ ತೋ ಮಹಾರಾಜಾ ।
ಮಹಾರಾಜಾಚಾಹೀ ರಾಜಾ । ತೋ ಚಕ್ರವತೀ ॥೯॥
ಯೇಕ ನರಪತಿ ಯೇಕ ಗಜಪತೀ । ಯೇಕ ಹಯಪತಿ ಯೇಕ ಭೂಪತೀ ।
ಸಕಳಾ ಮಧ್ಯೇ ಚಕ್ರವತೀ । ಥೋರ ರಾಜಾ ॥೧೦॥
ಅಸೊ ಏಸಿಯಾ ಸಮಸ್ತಾ । ಯೇಕ ಬ್ರಹ್ಮಾ ನಿರ್ಮಾಣಕರ್ತಾ ।
ತ್ಯಾ ಬ್ರಹ್ಮ್ಯಾಸಹಿ ನಿರ್ಮಿತಾ । ಕೋಣ ಆಹೆ ॥೧೧॥
ಬ್ರಹ್ಮ ವಿಷ್ಣು ಆಣಿ ಹರ । ತ್ಯಾಸೀ ನಿರ್ಮಿತಾ ತೋಚಿ ಥೋರ ।
ತೋ ವೋಳಖಾವಾ ಪರಮೇಶ್ವರ । ನಾನಾ ಯೆತ್ನೇ ॥೧೨॥
ತೋ ದೇವ ಠಾಈ ಪಡೇನಾ । ತರೀ ಯೆಮಯಾತನಾ ಚುಕೇನಾ ।
ಬ್ರಹ್ಮಾಂಡನಾಯೆಕ ಚೋಜವೇನಾ । ಹೇ ಬರೇ ನವ್ಹೆ ॥೧೩॥

## ಸಮಾಸ ೧. ದೇವ ಶೋಧನ (ನುಡಿ ೩೧)

**ನಾವು ಯಾವ ದೇಶದಲ್ಲಿ ವಾಸ್ತವ್ಯ ಮಾಡಿಕೊಂಡು ಇರಬೇಕಾಗಿದೆಯೋ ಆ ದೇಶದ ರಾಜನಿಗೆ ಭೆಟ್ಟಿಯಾಗಬೇಕು. ಮತ್ತು ಅವನ ಪರಿಚಯ ಮಾಡಿಕೊಳ್ಳಬೇಕು. ಅಂದರೆ ಉಳಿದವರಿಂದ ನಮಗೆ ತೊಂದರೆಯಾಗಲಾರದು:**– ಶುದ್ಧ ಚಿತ್ತದಿಂದ ಮೊದಲನೆಯದಾಗಿ ಮನಸ್ಸನ್ನು ಏಕಾಗ್ರ ಮಾಡಬೇಕು, ಈ ಸಮಾಸದಲ್ಲಿ ಹೇಳಿದ್ದೆಲ್ಲವನ್ನು ಸ್ವಸ್ಥನಾಗಿ ಕೇಳಿ ನಿನ್ನ ಹೃದಯದಲ್ಲಿ ಇಟ್ಟುಕೊಳ್ಳಬೇಕು. ಈಗ ನೀನು ಸಾವಧಾನನಾಗಿ ನಾನು ಹೇಳುವದನ್ನು ಕೇಳುವವನಾಗು. [೧] ನಿಮಗೆ ತಿಳಿಯಲೆಂದು ಒಂದು ಉದಾಹರಣೆ ಹೇಳುವೆನು.ಒಂದಾನೊಂದು ಊರಲ್ಲಿ ಅಥವಾ ದೇಶದಲ್ಲಿ ಹೋಗಿ ವಾಸ್ತವ್ಯ ಮಾಡುವ ಪ್ರಸಂಗ ಬಂದಿದೆ. ಅಲ್ಲಿಗೆ ಹೋದ ಕೂಡಲೇ ಆ ಊರಿನ ಅಥವಾ ದೇಶದ ಸತ್ತಾಧೀಶ-ವರಿಷ್ಠ ಮನುಷ್ಯನಿಗೆ ಭೆಟ್ಟಿಯಾಗಿ ಪರಿಚಯದ ವಿನಿಮಯ ಮಾಡಿಕೊಂಡು ಬಂದರೆ ಆ ಊರ ಅಥವಾ ದೇಶದ ಇತರ ಜನರಿಂದ ನಿಮಗೆ ತ್ರಾಸು-ತೊಂದರೆ ಆಗಲಾರದು. ಸುಖದಿಂದ ನೀವು ಅಲ್ಲಿ ಇರಬಹುದಾಗಿದೆ. [೨] ಅಂತೆಯೇ ಯಾರಿಗೆ ಎಲ್ಲಿ ಇರಬೇಕಾಗಿದೆಯೋ ಅಲ್ಲಿಯ ವರಿಷ್ಠರಿಗೆ, ಸತ್ತಾಧೀಶರಿಗೆ ಭೆಟ್ಟಿಯಾಗಿರಿ. ಹೀಗೆ ಮಾಡಿದ್ದಾದರೆ ಎಲ್ಲ ರೀತಿಯಿಂದ ಎಲ್ಲವೂ ಸುರಳೀತವಾಗಿ ನಡೆದು ಹೋಗುವವು.[೩] ವರಿಷ್ಠರ ಭೆಟ್ಟಿಯಾಗದಿದ್ದರೆ ಅಲ್ಲಿಯ ಉಳಿದವರು ನಿಮ್ಮನ್ನು ಮನ್ನಿಸುವದಿಲ್ಲ. ತತ್‌ಪರಿಣಾಮವು ನಿಮ್ಮ ಮಹತ್ವವೇ ಇಲ್ಲದಾಗಿ ಯಾರೂ ಕೇಳುವವರಿಲ್ಲದಾಗಿ ಕವಡಿಯ ಬೆಲೆಯೂ ನಿಮಗಿಲ್ಲದಾಗುತ್ತದೆ. (೪) ಒಟ್ಟಿನಲ್ಲಿ ರಾಜನಿಂದ ಕೆಳಗಿನವರವರೆಗೂ ಯಾರು ಯಾರು ವರಿಷ್ಠರಿರುವರೋ ಅವರಿಗೆ ಭೆಟ್ಟಿಯಾಗುವದೇ ಜಾಣತನದ್ದೆನಿಸುವದು· ಇದನ್ನು ವಿಚಾರವಂತರಾದವರು ಲಕ್ಷಿಸುತ್ತಾರೆ.(೫) ವರಿಷ್ಠರಿಗೆ ಭೆಟ್ಟಿಯಾಗದೇ ಅವರ ಶಹರದಲ್ಲಿದ್ದದ್ದಾದರೆ ಫುಕ್ಕಟೆ ಕೆಲಸ ಮಾಡಿಸಿಕೊಳ್ಳುವದಕ್ಕಾಗಿ ಬಿಟ್ಟಿ ಬಿಗಾರಿಯೆಂದು ಕೆಲಸಕ್ಕೆ ಹಿಡಿದುಕೊಂಡು ಹೋಗುತ್ತಾರೆ. ಅಥವಾ ಕಳ್ಳತನ ಮಾಡದೇ ಇದ್ದರೂ ಕಳ್ಳತನದ ಆರೋಪ ಹೊರಿಸುತ್ತಾರೆ. ಅನೇಕ ತರಹದ ತೊಂದರೆ ಕಷ್ಟಗಳು ಬರುವವು. (೬) ಸಾರಾಂಶವೇನಂದರೆ ಯಾವನು ಜಾಣನಿರುವನೋ ಅವನು ವರಿಷ್ಠ ಅಧಿಕಾರಿಗಳನ್ನು ಅವಶ್ಯ ಭೆಟ್ಟಿಯಾಗಬೇಕು. ಹೀಗೆ ಮಾಡದಿದ್ದರೆ ಪ್ರಪಂಚದಲ್ಲಿ ನಿಮಗೆ ನಾನಾ ತರಹದ ತ್ರಾಸು ತೊಂದರೆಗಳನ್ನು ಅನುಭವಿಸಬೇಕಾಗುವದು. [೭] ಇದರ ಮೇಲಿಂದ ಶ್ರೀ ಸಮರ್ಥರು ಒಂದು ಒಳ್ಳೇ ಮಹತ್ವದ ಅನುಮಾನ ಬಹಿರಂಗಪಡಿಸಿದ್ದಾರೆ. ಕೇವಲ ಸಾಮಾನ್ಯ ಇರುವಿಕೆಗಾಗಿ ಹಳ್ಳಿ ಅಥವಾ ಶಹರದ ವರಿಷ್ಠನಿಗೆ ಭೆಟ್ಟಿ ಆಗದೇ ಇದ್ದರೆ ಅಲ್ಲಿ ಸ್ವಸ್ಥರಾಗಿ ಇರಲಿಕ್ಕೆ ಆಗುವದಿಲ್ಲವೆಂಬುದು ಸತ್ಯವಾದದ್ದೇ. ಅಂದ ಮೇಲೆ ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕನ ಭೆಟ್ಟಿ ಪಡೆಯದಿದ್ದರೆ ಜೀವನವು ಸುಖಮಯವಾಗಲು ಶಕ್ಯವೇ ಇಲ್ಲ. ಗ್ರಾಮಕ್ಕೆ ಗ್ರಾಮಾಧಿಪತಿಯು ವರಿಷ್ಠನು, ಇವನಿಗಿಂತ ದೇಶಾಧಿಪತಿ ವರಿಷ್ಠನಿರುವನು, ದೇಶಾಧಿಪತಿಗಿಂತ ರಾಜನು ವರಿಷ್ಠನೆನಿಸುವನು. (೮) ಹೀಗೆಯೇ ಒಂದು ರಾಷ್ಟ್ರದ ಅಧಿಪತಿಯು ರಾಜನಾದರೆ ಅನೇಕ ರಾಷ್ಟ್ರಗಳ ಅಧಿಪತಿಯು ಮಹಾರಾಜನೆನಿಸುವನು. ಮತ್ತು ಇಂಥ ಮಹಾರಾಜರ ಅಧಿಪತಿಯು ಚಕ್ರವರ್ತಿಯೆನಿಸುವನು· (೯) ಒಬ್ಬ ನರಪತಿ ಯಾದರೆ, ಇನ್ನೊಬ್ಬ ಗಜಪತಿ, ಇರುವನು. ಮತ್ತೊಬ್ಬ ಹಯಪತಿ ಇರುವನು. ಮುಗನೊಬ್ಬ ಭೂಪತಿ ಇರುವನು. ಈ ಎಲ್ಲರಿಗಿಂತ ಚಕ್ರವರ್ತಿಯಾದವ ಶ್ರೇಷ್ಠನಿರುವನು. (೧೦) ಇರಲಿ, ಇವರೆಲ್ಲರನ್ನೂ ಬ್ರಹ್ಮದೇವನೇ ನಿರ್ಮಾಣ ಮಾಡಿರುತ್ತಾನೆ. ಆದರೆ ಬ್ರಹ್ಮದೇವರನ್ನು ಯಾರು ನಿರ್ಮಾಣ ಮಾಡಿದರು? (೧೧) ಬ್ರಹ್ಮ, ವಿಷ್ಣು, ಶಂಕರ ಇವರೆಲ್ಲರನ್ನು ಯಾರು ನಿರ್ಮಾಣ ಮಾಡಿರುವರೋ ಅವನೇ ನಿಜವಾದ ಶ್ರೇಷ್ಠನಾದ ಪರಮೇಶ್ವರನಾಗಿರುವನು. ಈ ಪರಮೇಶ್ವರನನ್ನು ಅನೇಕ ಪ್ರಯತ್ನದಿಂದ ಗುರುತಿಸಬೇಕು. ತಿಳಿಯಬೇಕು. (೧೨) ಈ ದೇವರನ್ನು ಗುರುತಿಸದಿದ್ದರೆ ನಮಗೆ ಯಮಯಾತನೆ ತಪ್ಪಿದ್ದಲ್ಲ. ಬ್ರಹ್ಮಾಂಡ ನಾಯಕನಾದ ಪರಮಾತ್ಮನನ್ನು ತಿಳಿಯಲಿಕ್ಕೆ ಆಗಲೊಲ್ಲದು ಎಂಬ ಮಾತು ಎಷ್ಟೂ ಒಳಿತಾದದ್ದಲ್ಲ. (೧೩)

ಜೇಣೇ ಸಂಸಾರೀ ಘಾತಲೇ। ಅವಘೇ ಬ್ರಹ್ಮಾಂಡ ನಿರ್ಮಾಣ ಕೇಲೇ।
ತ್ಯಾಸೀ ನಾಹೀ ವೊಳಖಿಲೆ। ತೋಚಿ ಪತಿತ ॥೧೪॥

ಮ್ಹಣೋನಿ ದೇವ ವೊಳಖಾವಾ। ಜನ್ಮ ಸಾರ್ಥಕಚಿ ಕರಾವಾ।
ನ ಕಳೆ ತರೀ ಸತ್ಸಂಗ ಧರಾವಾ। ಮ್ಹಣಿಜೆ ಕಳೆ ॥೧೫॥

ಜೋ ಜಾಣೇಲ ಭಗವಂತ। ತಯಾ ನಾವ ಬೋಲಿಜೆ ಸಂತ।
ಜೋ ಶಾಶ್ವತ ಆಣೀ ಅಶಾಶ್ವತ। ನಿವಾಡಾ ಕರೀ ॥೧೬॥

ಕಳೇನಾ ಢಳೇನಾ ದೇವ। ಏಸಾ ಜ್ಯಾಚಾ ಅಂತರ್ಭಾವ।
ತೋಚಿ ಜಾಣಿಜೆ ಮಹಾನುಭಾವ। ಸಂತ ಸಾಧು ॥೧೭॥

ಜೋ ಜನಾಮಧೇ ವಾಗೇ। ಪರಿ ಜನಾವೇಗಳೀ ಗೋಷ್ಟೀ ಸಾಂಗೆ।
ಜ್ಯಾಚೆ ಅಂತರೀ ಜ್ಞಾನ ಜಾಗೆ। ತೋಚಿ ಸಾಧು ॥೧೮॥

ಜಾಣಿಜೆ ಪರಮಾತ್ಮಾ ನಿರ್ಗುಣ। ತ್ಯಾಸೀಚ ಮ್ಹಣಾವೇ ಜ್ಞಾನ।
ತ್ಯಾವೇಗಳೇ ತೇ ಅಜ್ಞಾನ। ಸರ್ವ ಕಾಹೀ ॥೧೯॥

ಪೋಟ ಭರಾವ್ಯಾ ಕಾರಣೇ। ನಾನಾ ವಿದ್ಯಾ ಅಭ್ಯಾಸ ಕರಣೇ।
ತ್ಯಾಸೀ ಜ್ಞಾನ ಮ್ಹಣತೀ ಪರೀ ತೇಣೆ। ಸಾರ್ಥಕ ನವ್ಹೆ ॥೨೦॥

ದೇವ ವೋಳಖಾವಾ ಯೇಕ। ತೇಚಿ ಜ್ಞಾನ ತೇ ಸಾರ್ಥಕ।
ಯೇರ ಅವಘೇಚಿ ನಿರಾರ್ಥಕ। ಪೋಟ ವಿದ್ಯಾ ॥೨೧॥

ಜನ್ಮವರೀ ಪೋಟ ಭರಿಲೇ। ದೇಹಾಚೇ ಸಂರಕ್ಷಣ ಕೇಲೆ।
ಪುಢೆ ಅವಘೇಚಿ ವೇರ್ಥ ಗೇಲೇ। ಅಂತಕಾಳೀ ॥೨೨॥

ಯೆ ಮಂಪೋಟ ಭರಾವ್ಯಾಚೀ ವಿದ್ಯಾ। ತಯೇಸೀ ಮ್ಹಣೋನಯೆ ಸದ್ವಿದ್ಯಾ।
ಸರ್ವವ್ಯಾಪಕ ವಸ್ತು ಸದ್ಯಾ। ಪಾವಿಜೆ ತೇ ಜ್ಞಾನ ॥೨೩॥

ಏಸೆ ಜಯಾಪಾಸೀ ಜ್ಞಾನ। ತೋಚಿ ಜಾಣಾವಾ ಸಜ್ಜನ।
ತಯಾಪಾಸೀ ಸಮಾಧಾನ। ಪುಸಿಲೇ ಪಾಹಿಜೆ ॥೨೪॥

ಅಜ್ಞಾನಾಸ ಭೇಟತಾ ಅಜ್ಞಾನ। ತೇಥೇ ಕೈಚೆ ಸಾಪಡೇಲ ಜ್ಞಾನ।
ಕರಂಟ್ಯಾಸ ಕರಂಟ್ಯಾಚೇ ದರ್ಶನ। ಹೋತಾ ಭಾಗ್ಯ ಕೈಚೆ ॥೨೫॥

ಯಾವ ಪರಮಾತ್ಮನು ಸಂಸಾರದಲ್ಲಿ ನಮ್ಮೆಲ್ಲರನ್ನು ತಂದನೋ ಮತ್ತು ಈ ಅವಾಢವ್ಯ ವಿಶ್ವವನ್ನು ನಿರ್ಮಾಣ ಮಾಡಿದನೋ ಇಂಥವನನ್ನು ತಿಳಿಯದಿದ್ದರೆ ಅವನು ಪತಿತನೇ ಸರಿ. ಈ ವ್ಯಾಖ್ಯೆಗೆ ಅನುಸಾರವಾಗಿ ದೇಹ ಬುದ್ಧಿಯಿಂದ ಜೀವನ ಸಾಗಿಸುವ ಎಲ್ಲ ಮನುಷ್ಯರೂ ಅಥವಾ ಆತ್ಮಜ್ಞಾನವಿಲ್ಲದ ಎಲ್ಲ ಮನುಷ್ಯರೂ ಪತಿತರೇ ಇರುವರು. ಆತ್ಮಜ್ಞಾನ ಹೊಂದಿದ ಸಂತರು ಮಾತ್ರ ಪಾವನರಿರುತ್ತಾರೆ. (೧೪) ಆದುದರಿಂದ ಪ್ರತಿಯೊಬ್ಬರೂ ನಿಜವಾದ ದೇವರನ್ನು ತಿಳಿಯಬೇಕು. ತಮ್ಮ ಜನ್ಮದ ಸಾರ್ಥಕ್ಯವನ್ನು ಮಾಡಿಕೊಳ್ಳಬೇಕು. ದೇವರನ್ನು ಹೇಗೆ ತಿಳಿಯಬೇಕೆಂದು ಗೊತ್ತಿಲ್ಲದವರು ಸಂತ ಸದ್ಗುರುಗಳ ಸಹವಾಸ ಪಡೆಯಬೇಕು. ಅಂದರೆ ನಿಮಗೆ ಸುಲಭವಾಗಿ ತಿಳಿಯುವದು. (೧೫) ಸಂತರ ಸಂಗತಿ (ಸಹವಾಸ) ಹಿಡಿಯಬೇಕೆಂಬುದು ಯೋಗ್ಯವೇ. ಆದರೆ ಸಂತರನ್ನು ಗುರುತಿಸುವ ಬಗೆ ಹೇಗೆ? ಈಗ ಸಂತರ ಲಕ್ಷಣಗಳನ್ನು ಹೇಳುವರು:– ಯಾರಿಗೆ ಭಗವಂತನ ಬಗ್ಗೆ ಪರಿಪೂರ್ಣಜ್ಞಾನವಿರುವದೋ ಅವರಿಗೆ ಮಾತ್ರ ಸಂತ, ಸಾಧು ಶರಣರೆಂದು ಅನ್ನುವರು. ಶಾಶ್ವತವಾದದ್ದು ಯಾವುದು? ಮತ್ತು ಅಶಾಶ್ವತವಾದದ್ದು ಯಾವುದು? ಇದನ್ನು ಸರಿಯಾಗಿ ತಿಳಿದವನೇ ಸಂತನು. (೧೬) ನಿಜವಾದ (ಖರೇ) ದೇವನು ಎಂದೂ ಯಾವ ಕಾಲಕ್ಕೂ ಬದಲಾಗುವದಿಲ್ಲ. ಮತ್ತು ತನ್ನ ಸ್ಥಾನದಿಂದ ಭ್ರಷ್ಟ (ಚ್ಯುತ) ನಾಗುವದಿಲ್ಲವೆಂಬ ಅನುಭವದ ಪ್ರಚೀತಿ ಯಾರ ಹೃದಯಾಂತರದಲ್ಲಿ ಗಟ್ಟಿಯಾಗಿ ವಾಸವಾಗಿರುವದೋ ಅಂಥವರು ಶ್ರೇಷ್ಠ ಸಂತ ಅಥವಾ ಸಾಧು ಶರಣರೆಂದು ತಿಳಿಯಬೇಕು. (೧೭) ಯಾರು ದೇಹದಿಂದ ಸಾಮಾನ್ಯ ಜನರ ಮಧ್ಯದಲ್ಲಿ ಇದ್ದರೂ ಆ ಜನರಿಗೆ ಕಾಣುವದಿಲ್ಲ. ಅಂಥ ದೃಶ್ಯದಿಂದ ಅತೀತವಾಗಿರುವಂಥವನು ಸ್ವಸ್ವರೂಪದ ಬಗ್ಗೆ ಸದಾ ಕಾಲ ಹೇಳುತ್ತಲೇ ಇರುವಂಥವನು ಮತ್ತು ಯಾರ ಅಂತರ್ಯಾಮದಲ್ಲಿ (ಅಂತರಂಗದಲ್ಲಿ) ಆತ್ಮಜ್ಞಾನವು ಸದಾ ಸರ್ವಕಾಲ ಜಾಗ್ರತವಾಗಿರುವದೋ ಅಂಥವನೇ ಖರೇ ಸಾಧು ಸಂತನೆನಿಸುವನು. (೧೮) **ಜ್ಞಾನವೆಂದರೆ ಏನು? ಇದರ ಬಗ್ಗೆ ಹೇಳುತ್ತಾರೆ:–** ಪರಮಾತ್ಮನು ಮೂರೂ ಗುಣಗಳ ಆಚೆಗೆ ಇರುವನೆಂಬುದರ ಪ್ರತ್ಯಕ್ಷ ಅನುಭವದ ಹೊರತಾಗಿ ಉಳಿದೆಲ್ಲವೂ ಖಾತ್ರಿಯಿಂದ ಅಜ್ಞಾನವೆಂದು ತಿಳಿಯಬೇಕು. (೧೯) ಹೊಟ್ಟೆತುಂಬಿಕೊಳ್ಳುವದಕ್ಕಾಗಿ ಜನರು ಅನೇಕ ವಿದ್ಯೆಯ ಅಭ್ಯಾಸ ಮಾಡುತ್ತಾರೆ. ಸಾಮಾನ್ಯ ಜನರು ಇವಕ್ಕೆಲ್ಲ ಜ್ಞಾನವೆಂದು ಅನ್ನುತ್ತಾರೆ. ಆದರೆ ಇವುಗಳಿಂದ ಜೀವನದ ಸಾರ್ಥಕ್ಯ ಎಷ್ಟೂ ಆಗುವದಿಲ್ಲ. (೨೦) ಒಬ್ಬನೇ ಒಬ್ಬನಾದ ಸರ್ವಶ್ರೇಷ್ಠನಾದ ದೇವನ ಸಾಕ್ಷಾತ್ಕಾರ ಮಾಡಿಕೊಳ್ಳಬೇಕು. ಇದೇ ನಿಜವಾದ (ಖರೇ) ಜ್ಞಾನವು. ಇದರಿಂದಲೇ ಜೀವನದ ಸಾರ್ಥಕ್ಯವಾಗುವದು. ಇನ್ನುಳಿದ ಇತರೆ ವಿದ್ಯೆಗಳು ಹೊಟ್ಟೆ ಹೊರೆದುಕೊಳ್ಳುವ ವಿದ್ಯೆಗಳಾಗಿರುವವು. ಇವುಗಳಿಂದ ಯಾವ ಸಾರ್ಥಕವೂ ಆಗುವದಿಲ್ಲ. ಇವೆಲ್ಲ ವ್ಯರ್ಥವೇ ಸರಿ, ಎಂದು ಸಾರಿ ಹೇಳುವೆವು. (೨೧) ಹೊಟ್ಟೆಹೊರಕೊಳ್ಳುವ ವಿದ್ಯೆಯಿಂದ ಸಾಯುವವರೆಗೆ ಕೇವಲ ಹೊಟ್ಟೆ ತುಂಬೀತು. ಮತ್ತು ದೇಹದ ಸಂರಕ್ಷಣವಾದೀತು. ಆದರೆ ಅಂತ್ಯಕಾಲದಲ್ಲಿ ಇದೆಲ್ಲವ್ಯರ್ಥವಾಗಿಯೇ ಹೋಗುತ್ತದೆ. (೨೨) ಮುಖ್ಯವಾದ ತಾತ್ಪರ್ಯವೇನಂದರೆ ಹೊಟ್ಟೆ ತುಂಬಿಕೊಳ್ಳುವ ವಿದ್ಯೆಗೆ ಆತ್ಮವಿದ್ಯೆ, ಬ್ರಹ್ಮವಿದ್ಯೆ, ಎಂದು ಅನ್ನಲೇಬಾರದು. ಸರ್ವ ವ್ಯಾಪಕನಾದ ಪರಮಾತ್ಮ ವಸ್ತುವಿನ ಅನುಭವ ಬರುವ ವಿದ್ಯೆಯೇ ಖರೇ ಆತ್ಮವಿದ್ಯೆ–ಬ್ರಹ್ಮವಿದ್ಯೆಯು. ಯಾವ ವಿದ್ಯೆಯಿಂದ ತತ್ಕಾಲದಲ್ಲಿ ಜ್ಞಾನಾನುಭವ ಪ್ರಾಪ್ತವಾಗುವದೋ ಅದೇ ನಿಜವಾದಜ್ಞಾನವು. ಈ ಜನ್ಮದಲ್ಲಿ ಈ ಕ್ಷಣದಲ್ಲಿ ಈಗಿಂದೀಗಲೇ ಪ್ರಾಪ್ತವಾಗುವಜ್ಞಾನವೇ ನಿಜವಾದಜ್ಞಾನವು. (೨೩) **ಆತ್ಮಜ್ಞಾನ ಪಡೆಯಬೇಕೆಂಬ ಇಚ್ಛೆ ಇದ್ದವರು ಆತ್ಮಜ್ಞಾನಿ ಸತ್ಪುರುಷನ ಕಡೆಗೆ ಹೋಗಲಿಕ್ಕೆ ಬೇಕು. ಯಾಕಂದರೆ ಅಜ್ಞಾನಿ ಪುರುಷನು ನಿಮ್ಮ ಅಜ್ಞಾನವನ್ನು ಕಳೆಯಲಿಕ್ಕೆ ಶಕ್ಯವೇ ಇಲ್ಲ;**–ಪರಮಾತ್ಮ ವಸ್ತುವಿನ ಜ್ಞಾನ ಯಾರು ಪಡೆದಿರುವರೋ ಅವರೆಲ್ಲ ಸಜ್ಜನರು. ಸಾಧುಗಳು–ಸಂತರು ಇರುವರು. ನಿಮಗೆ ಖರೇ ಸಮಾಧಾನ ಶಾಂತಿಪಡೆಯುಕೊಳ್ಳುವ ಮಾರ್ಗ ಗೊತ್ತಾಗಬೇಕಾದರೆ ಇವರನ್ನೇವಿಚಾರಿಸಬೇಕು. ಇವರಿಗೇ ಶರಣುಹೋಗಬೇಕು(೨೪) ಒಬ್ಬ ಅಜ್ಞಾನಿಯು ಇನ್ನೊಬ್ಬ ಅಜ್ಞಾನಿಯ ಹತ್ತಿರ ಜ್ಞಾನ ಪಡೆಯಲು ಹೋದರೆ ಎಂದಿಗೂ ಜ್ಞಾನ ಪ್ರಾಪ್ತವಾಗಲಾರದು. ಅಭಾಗಿ ಅಥವಾ ದೈವಹೀನ ಮನುಷ್ಯನ ದರ್ಶನದಿಂದ ನಿಮ್ಮ ದೈವ ಎಂದಿಗೂ ತೆರೆಯಲಾರದು. (೨೫)

ರೋಗ್ಯಾ ಪಾಸೀ ರೋಗೀ ಗೇಲಾ। ತೇಥೇ ಕೈಚೆ ಆರೋಗ್ಯ ತ್ಯಾಲಾ।
ನಿರ್ಬಳಾ ಪಾಸೀ ನಿರ್ಬಳಾಲಾ। ಪಾಠೀ ಕೈಚೀ ॥೨೬॥

ಪಿಶಾಚ್ಯಾ ಪಾಸೀ ಪಿಶಾಚ್ಯ ಗೇಲೆ। ತೇಥೇ ಕೋಣ ಸಾರ್ಥಕ ಜಾಲೇ।
ಉನ್ಮತ್ತಾಸ ಉನ್ಮತ್ತ ಭೇಟಲೆ। ತ್ಯಾಸ ಉಮಜವೀ ಕವಣು ॥೨೭॥

ಭಿಕಾರ್‍ಯಾ ಪಾಸೀ ಮಾಗತಾ ಭಿಕ್ಷಾ। ದೀಕ್ಷಾಹೀನಾ ಪಾಸೀ ದೀಕ್ಷಾ।
ಉಜೇಡ ಪಾಹತಾ ಕೃಷ್ಣಪಕ್ಷಾ। ಪಾವಿಜೆ ಕೈಚಾ ॥೨೮॥

ಅಬದ್ಧಾ ಪಾಸೀ ಗೇಲಾ ಅಬದ್ಧ। ತೋ ಕೈಸೇನಿ ಹೋಈಲ ಸುಬದ್ಧ।
ಬದ್ಧಾಸ ಭೇಟತಾ ಬದ್ಧ। ಸಿದ್ಧ ನವ್ಹೆ ॥೨೯॥

ದೇಹಾಪಾಸೀ ಗೇಲಾ ದೇಹೀ। ತೋ ಕೈಸೇನಿ ಹೋಈಲ ವಿದೇಹೀ।
ಮ್ಹಣೌನಿ ಜ್ಞಾತ್ಯಾವಾಂಚೂನ ನಾಹೀ। ಜ್ಞಾನ ಮಾರ್ಗ ॥೩೦॥

ಯಾಕಾರಣೇ ಜ್ಞಾತಾ ಪಹಾವಾ। ತ್ಯಾಚಾ ಅನುಗ್ರಹ ಘ್ಯಾವಾ।
ಸಾರಾಸಾರ ವಿಚಾರೇ ಜೀವಾ। ಮೋಕ್ಷ ಪ್ರಾಪ್ತ ॥೩೧॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ದೇವ ಶೋಧನ' ನಾಮ ಸಮಾಸ ಪ್ರಥಮ

● ●

ಅಥವಾ ಒಬ್ಬ ರೋಗಿ ತನ್ನ ಆರೋಗ್ಯ ಲಾಭಕ್ಕಾಗಿ ಇನ್ನೊಬ್ಬ ರೋಗಿಯು ಕಡೆಗೆ ಹೋದರೆ ಅವನಿಗೆ ಆರೋಗ್ಯ ದೊರಕಲಾರದು. ಅಥವಾ ಒಬ್ಬ ಅಶಕ್ತ ದುರ್ಬಲ ಅಂಜುಗುಳಿಯು ಇನ್ನೊಬ್ಬದುರ್ಬಲನನ್ನು ರಕ್ಷಿಸಲಿಕ್ಕೆ ಶಕ್ಯವಿಲ್ಲ. [೨೬] ಅಥವಾ ಒಂದು ಪಿಶಾಚಿಯು ಇನ್ನೊಂದು ಪಿಶಾಚಿಯು ಕಡೆಗೆ ಹೋದರೆ ಅದು **ಪಿಶಾಚಿ** ಜನ್ಮದಿಂದ ಮುಕ್ತವಾಗುವದಿಲ್ಲ. ಅಥವಾ ಮದ್ಯಪಾನದಿಂದ ಮತ್ತನಾದವನು ಇನ್ನೊಬ್ಬ ಮದ್ಯಪಾನದಿಂದ ಮತ್ತನಾದವನಿಗೆ ಭೆಟ್ಟಿಯಾದರೆ ಯಾರಿಗೆ ಯಾರು ಬುದ್ಧಿ ಹೇಳುವರು? (೨೭) ಬೀದಿ ಭಿಕಾರಿಯು ಹತ್ತಿರ ಭಿಕ್ಷೆ ಕೇಳಿದರೆ ಅದು ಸಿಗಲಾರದು. ಅಥವಾ ಗುರುಹೀನನ ಹತ್ತಿರ ಗುರುದೀಕ್ಷೆ ಸಿಗುವದಿಲ್ಲ. ಅಥವಾ ಕೃಷ್ಣ ಪಕ್ಷದಲ್ಲಿ ಪೂರ್ಣ ಚಂದ್ರನ ಪ್ರಕಾಶ ದೊರೆಯಲಾರದು. [೨೮] ಒಬ್ಬ ಸ್ವೈರಾಚಾರಿಯ ಹತ್ತಿರ ಇನ್ನೊಬ್ಬ ಸ್ವೈರಾಚಾರಿ ಹೋದರೆ ಅವನು ಸದಾಚಾರಿ ಆಗಲಾರನು. ಅಥವಾ ಒಬ್ಬ ಪ್ರಾಪಂಚಿಕನಲ್ಲಿ ಇನ್ನೊಬ್ಬ ಪ್ರಾಪಂಚಿಕ ಹೋದರೆ ಅವನೇನೂ ಸಿದ್ಧ ಪುರುಷನಾಗಲು ಶಕ್ಯವಿಲ್ಲ. (೨೯) ಇದೇ ಪ್ರಕಾರ ಒಬ್ಬ ದೇಹಬುದ್ಧಿಯ ಮನುಷ್ಯನ ಹತ್ತಿರ ಇನ್ನೊಬ್ಬ ದೇಹ ಬುದ್ಧಿಯ ಮನುಷ್ಯ ಹೋದರೆ ಅವನು ವಿದೇಹಿಪುರುಷನಾಗಲು ಶಕ್ಯವಿಲ್ಲ. ಅಂತೆಯೇ ಆತ್ಮಜ್ಞಾನಿ ಸಿದ್ಧಪುರುಷನ ಹೊರತಾಗಿ ಆತ್ಮಜ್ಞಾನದ ಮಾರ್ಗ ದೊರಕಲಾರದು.[೩೦] **ಸದ್ಗುರುವಿನ ಬೆಂಬಲವಿಲ್ಲದೇ ಅವನ ಆಶೀರ್ವಾದ ವಿಲ್ಲದೇ ಪರಮಾರ್ಥ ಸಾಧಿಸಲಾರದು.** ಈ ಎಲ್ಲ ರೀತಿಯಿಂದ ನೋಡಿದರೆ ನಾವು ಆತ್ಮಜ್ಞಾನಿ ಸಿದ್ಧ ಪುರುಷ ನನ್ನು ಶೋಧಿಸಿ ಅವನಿಗೆ ಶರಣಾಗಿ ಅವನ ಅನುಗ್ರಹ ಪಡೆಯಬೇಕು. ಅವನ ಶಿಷ್ಯತ್ವವನ್ನು ಪದ್ಧತಿಯಂತೆ ಅಂಗೀ ಕರಿಸಬೇಕು. ಆನಂತರ ಅವನ ಮಾರ್ಗದರ್ಶನದ ಕೆಳಗೆ ಸಾರಾಸಾರ ವಿಚಾರದಿಂದ ದೇವರ ಶೋಧ ತಿಳಿದು ಅನುಭವಿಸಿ ಜೀವವು ಮೋಕ್ಷ ಪಡೆಯುವಂತೆ ಮಾಡಬೇಕು. (೩೧)

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಆರನೆಯ ದಶಕದಲ್ಲಿಯ
"ದೇವ ಶೋಧನ" ಎಂಬ ಮೊದಲನೆಯ ಸಮಾಸವು ಮುಗಿದುದು.

● ●

## ಸಮಾಸ ದ್ವಿತೀಯ : ಬ್ರಹ್ಮಪಾಲನ ನಿರೂಪಣ

॥ಶ್ರೀರಾಮ॥ ಏಕಾ ಉಪದೇಶಾಚೀಲಕ್ಷಣೇ । ಸಾಯೊಜ್ಯಪ್ರಾಪ್ತಿ ಹೋಯಜೇಣೇ।
ನಾನಾ ಮತಾಂಚೇ ಪೇಖಣೇ । ಕಾಮಾ ನಯೆ ಸರ್ವಥಾ ॥೧॥

ಬ್ರಹ್ಮಜ್ಞಾನೇವಿಣ ಉಪದೇಶ । ತೋ ವ್ಹಣೋ ನಯೇ ವಿಶೇಷ ।
ಧಾನ್ಯೇವಿಣ ಜೈಸೇ ಭೂಸ। ಖಾತಾ ನಯೇ ॥೨॥

# ದಶಕ ೬. ಸಮಾಸ ೨. ಬ್ರಹ್ಮ ಪಾವನ ನಿರೂಪಣ (ನುಡಿ ೪೫)

ಸದ್ಗುರುವಿನ ಹತ್ತಿರ ಬ್ರಹ್ಮವಿದ್ಯೆಯನ್ನು ಮಾತ್ರ ನಾವು ಅಭ್ಯಾಸ ಮಾಡುವದು ಇರುತ್ತದೆ. ಸದ್ಗುರುವು ಶಿಷ್ಯನಿಗೆ ಮೊದಲನೆಯದಾಗಿ ಶಾಶ್ವತ ಅಂದರೇನು? ಮತ್ತು ಅಶಾಶ್ವತ ಅಂದರೇನು? ಇದನ್ನು ಹೇಗೆ ನಿರ್ಣಯಿಸಿ ತಿಳಿಯಬೇಕೆಂಬುದನ್ನು ನಿಮಗೆ ಕಲಿಸುವನು. ಅನಂತರ ಶಾಶ್ವತವಾದ ಬ್ರಹ್ಮದ ಅನುಸಂಧಾನ ಅಂದರೆ ಲಕ್ಷ, ಯುಕ್ತಿ, ಧೋರಣ, ಧ್ಯಾನ, ವಿಮರ್ಶೆ ಇತ್ಯಾದಿ ಯಾವ ರೀತಿ ಇರಬೇಕು. ಹೇಗೆ ಮಾಡಬೇಕೆಂಬುದರ ಕಲೆಯ ಅಭ್ಯಾಸವನ್ನು ಸ್ವತಃ ಮಾಡಿಸುವನು. ಸಾರರೂಪನಾದ ಬ್ರಹ್ಮನು ಸರ್ವ ದೃಶ್ಯ ಸೃಷ್ಟಿಯನ್ನು ವ್ಯಾಪಿಸಿ ಕೊಂಡಿರುವನು. ಈ ದೃಶ್ಯ ಸೃಷ್ಟಿಯು ಪಂಚಮಹಾಭೂತಗಳಿಂದ ಆಗಿದೆ. ಇದರ ಹೆಸರು ಮತ್ತು ರೂಪ ಒಂದೇ ಸವನೇ ಬದಲಾಗುತ್ತ ಇರುವದು. ಆದರೆ ಶಾಶ್ವತನಾದ ಬ್ರಹ್ಮನು ಮಾತ್ರ ಅಚಲ ಮತ್ತು ಅಢಳನಾಗಿಯೇ ಇರುವನು. ನಾವೆಲ್ಲ ಇಂದ್ರಿಯಗಳ ಪರಿಮಿತಿ (ಕಕ್ಷೆ)ಯಲ್ಲಿ ಘಿರಿದಾಡುವೆವು. ಇದರಿಂದ ಇಂದ್ರಿಯಗಳಿಗೆ ಏನೇನು ಕಾಣುವದೋ ಅದೆಲ್ಲ ನಮಗೆ ನಿಜವೆನಿಸುವದು. ಆದರೆ ಇದು ಅಜ್ಞಾನದಲ್ಲಿ ಜನ್ಮ ತಳೆದದ್ದರ ಭ್ರಮೆ ಇರುವದು. ಇದನ್ನು ಒಂದು ಕಡೆಗೆ ಸರಿಸಿ ಸೂಕ್ಷ್ಮನಾದ ಬ್ರಹ್ಮನನ್ನು ಹೇಗೆ ನೋಡಬೇಕು? ತಿಳಿಯಬೇಕು? ಎಂಬ ವಿದ್ಯೆಯನ್ನು ಸದ್ಗುರುವು ಕಲಿಸಿಕೊಡುವನು ಮತ್ತು ತಿಳಿಸಿಕೊಡುವನು. ನಿಜ ಹೇಳುವದಾದರೆ ಸೂಕ್ಷ್ಮ, ಅದೃಶ್ಯ ಅತೀಂದ್ರಿಯ ಮತ್ತು ಅವಿನಾಶಿ ಎನಿಸಿದ ಸದ್ವಸ್ತು (ಬ್ರಹ್ಮ)ವನ್ನು ನೋಡುವ ಸಾಮರ್ಥ್ಯವನ್ನು ನಮ್ಮಲ್ಲಿ ತಂದುಕೊಳ್ಳುವದೇ ಅರ್ಥಾತ್ ಅನುಭವದಿಂದ ತಿಳಿದುಕೊಳ್ಳುವದೇ ಎಲ್ಲ ಪರಮಾರ್ಥ ಸಾಧನಗಳ ಮರ್ಮವಿರುವದು. ಯಾವ ಸದ್ವಸ್ತುವು ವಿಶ್ವದಲ್ಲೆಲ್ಲ ವ್ಯಾಪಿಸಿ ಇರುವದೋ ಅದೇ ಆತ್ಮರೂಪದಿಂದ ನಮ್ಮ ಅಂತರ್ಯಾಮದಲ್ಲಿ ವಾಸವಾಗಿ ರುತ್ತದೆ. ನಮ್ಮ ಶರೀರವು ಪಂಚಮಹಾಭೂತಗಳಿಂದ ಕೂಡಿದ ಒಂದು ಗಂಟಾಗಿದೆ. ಇದನ್ನು ವಿಚಾರದಿಂದ ಬದಿಗೆ ಸರಿಸಿದರೆ ಆಗ ಅಲ್ಲಿ ಸ್ವಸ್ವರೂಪ ಮಾತ್ರ ಬಾಕಿ (ಶಿಲ್ಲಕ) ಉಳಿಯುತ್ತದೆ. ಅಂತೆಯೇ ಶ್ರೀ ಸಮರ್ಥರು ಹೇಳುವ ದೇನೆಂದರೆ: ವಿವೇಕದಿಂದ ದೇಹಬುದ್ಧಿಯ ತೊಡಕನ್ನು ಬಿಡಿಸಿರಿ. ವಿಚಾರ ವಿವೇಚನದಿಂದ ಸ್ವಸ್ವರೂಪಾನುಸಂಧಾನ ಹೊಂದಿರಿ. ಅಂದರೆ ದೃಶ್ಯವು ಮಾಯಿಕವಾದದ್ದು, ಇದು ತನ್ನಷ್ಟಕ್ಕೆ ತಾನೇ ಸರಿದು ಹೋಗುವದು. ಮತ್ತು ಕೊನೆಗೆ ಮೋಕ್ಷವು ಸಿದ್ಧವಾಗುವದು. ಒಟ್ಟಿನಲ್ಲಿಯ ಸಾರಾಂಶವೇನಂದರೆ ಪ್ರಥಮದಲ್ಲಿ ಅಧ್ಯಾತ್ಮ ಶ್ರವಣ, ಅನಂತರ ಸದ್ಗುರು ವಚನಪಾಲನ, ಆಮೇಲೆ ಸದ್ಗುರು ಚರಣದಲ್ಲಿ ಶರಣಾಗತಿ, ಮತ್ತು ಕೊನೆಯಲ್ಲಿ ಆ ಗುರುವಿನ ಕೃಪೆಯಿಂದ ಸ್ವಸ್ವರೂಪಾನುಭವ ಹೊಂದುವದು. ಹೀಗೆ ಪರಮಾರ್ಥ ಸಾಧನದ ರೀತಿ ಇರುವದು. ಈ ಮಾರ್ಗದಿಂದ ಹೋಗಿ ಆತ್ಮಸಾಕ್ಷಾತ್ಕಾರ ಹೊಂದಿದ ಮೇಲೆ ದೇಹವನ್ನು ಪ್ರಾರಬ್ಧಕ್ಕೆ-ನಶೀಬಕ್ಕೆ ಬಿಟ್ಟುಬಿಡಬೇಕು. ಮತ್ತು ಸ್ವಾನಂದದಲ್ಲಿ ಕಾಲಕಳೆಯಬೇಕು.

## ದಶಕ ೬. ಸಮಾಸ ೨. ಬ್ರಹ್ಮ ಪಾವನ ನಿರೂಪಣ (ನುಡಿ ೪೫)

**ಪರಮಾರ್ಥದಲ್ಲಿ ಉಪದೇಶ ಅಂದರೆ ಕೇವಲ ಬ್ರಹ್ಮಜ್ಞಾನದ ಮಾರ್ಗ ತಿಳಿಸಿ ಕೊಡುವದು ಅಥವಾ ತೋರಿಸಿ ಕೊಡುವದೇ ಆಗಿದೆ. ಇನ್ನುಳಿದ ವಿಷಯ ಹೇಳುವದು ಉಪದೇಶವೆನಿಸುವದೇ ಇಲ್ಲ** ಯಾವ ಉಪದೇಶದಿಂದ, ಮತ್ತು ಅದರ ಆಚರಣೆಯಿಂದ ಮಾತ್ರ ಸಾಯುಜ್ಯ ಮುಕ್ತಿ ದೊರಕುವದೋ ಅಂಥವರ ಲಕ್ಷಣಗಳನ್ನು ಹೇಳುವೆನು ಕೇಳಿರಿ. ಈ ವಿಷಯದ ಬಗ್ಗೆ ಅನೇಕ ಮತ ಮತಾಂತರಗಳ ವಾಚನೀಯ ಜ್ಞಾನವು ಎಷ್ಟೂ ಉಪಯೋಗ ಬೀಳುವದಿಲ್ಲ. ತವಡು ಕುಟ್ಟಿದಂತೆ ವ್ಯರ್ಥವು(೧) ಧಾನ್ಯ ತೆಗೆದ ನಂತರ ಉಳಿದಂಥ ಹೊಟ್ಟು ತಿನ್ನಲಿಕ್ಕೆ ಹೇಗೆ ಬರಲಾರದೋ ಅದರಂತೆ ಧಾನ್ಯರೂಪಿ ಬ್ರಹ್ಮಜ್ಞಾನವಿಲ್ಲದ ಉಪದೇಶ ಹೊಟ್ಟಿನ ಸಮಾನವು. **ಅದರಿಂದ ಯಾವುದೂ ಸಾಧಿಸುವದಿಲ್ಲ. ವ್ಯರ್ಥವೆಂದು ತಿಳಿಯಿರಿ. (೨)**

ನಾನಾ ಕಾಬಾಡ ಬಡವಿಲೇ । ನಾತರೀ ತಕ್ರಚಿ ಗುಸಳಿಲೇ ।
ಅಥವಾ ಧುಣ ಚಿ ಸೇವಿಲೇ । ಸಾವಕಾಸ ॥೩॥

ನಾನಾ ಸಾಲೀ ಭಕ್ಷಿಲ್ಯಾ । ಅಥವಾ ಚೋಇಟ್ಯಾ ಚೋಖಿಲ್ಯಾ ।
ಖೋಬರೇ ಸಾಂಡೂನ ಖಾದಲ್ಯಾ । ನರೋಟ್ಯಾ ಜೈಶ್ಯಾ ॥೪॥

ತೈಸೇ ಬ್ರಹ್ಮಜ್ಞಾನೇವಿಣ । ನಾನಾ ಉಪದೇಶಾಚಾ ಸಿಣ ।
ಸಾರ ಸಾಂಡೂನ ಅಸಾರ ಕೋಣ । ಶಾಹಾಣಾ ಸೇವೀ ॥೫॥

ಆತಾ ಬ್ರಹ್ಮ ಜೇ ಕಾ ನಿರ್ಗುಣ । ತೇ ಚಿ ಕೇಲೇ ನಿರೂಪಣ ।
ಸುಚಿತ ಕರಾವೇ ಅಂತಃಕರ್ಣ । ಶ್ರೋತೇ ಜನೀ ॥೬॥

ಸಕಳ ಸೃಷ್ಟೀಚೀ ರಚನಾ । ತೇ ಹೇ ಪಂಚಭೂತಿಕ ಜಾಣಾ ।
ಪರಂತು ಹೇ ತಗೇನಾ । ಸರ್ವಕಾಳ ॥೭॥

ಆದೀ ಅಂತೀ ಬ್ರಹ್ಮನಿರ್ಗುಣ । ತೇ ಚಿ ಶಾಶ್ವತಾಚೀ ಖೂಣ ।
ಯೇರ ಪಂಚಭೂತಿಕ ಜಾಣ । ನಾಸಿವಂತ ॥೮॥

ಯೆರ್ಹವೀ ಹೇ ಪಾಹಾತಾ ಭೂತೇ । ದೇವ ಕೈಸೇ ಮ್ಹಣಾವೇ ತ್ಯಾತೇ ।
ಭೂತ ಮ್ಹಣತಾ ಮನುಷ್ಯಾತೇ । ವಿಷಾದ ವಾಟೇ ॥೯॥

ಮಾ ತೋ ಜಗಜ್ಜನಕ ಪರಮಾತ್ಮಾ । ತ್ಯಾಸ ಆಣಿ ಭೂತ ಉಪಮಾ ।
ಜ್ಯಾಚೀ ಕಳೇನಾ ಮಹಿಮಾ । ಬ್ರಹ್ಮಾದಿಕಾಸೀ ॥೧೦॥

ಭೂತಾ ಐಸಾ ಜಗದೀಶ । ಮ್ಹಣತಾ ಉತ್ಪನ್ನ ಹೋತೋ ದೋಷ ।
ಯಾಕಾರಣೇ ಮಹಾಪುರುಷ । ಸರ್ವ ಜಾಣತೀ ॥೧೧॥

ರಸರಹಿತವಾದ ಕಬ್ಬಿನ ಸಿಪ್ಪಿಯನ್ನು ಅಥವಾ ಜೋಳದ ದಂಟಿನ ಸಿಪ್ಪಿಯನ್ನು ಕುಟ್ಟುವದು ಅಥವಾ ಬೆಣ್ಣೆ ತೆಗೆದ ಮಜ್ಜಿಗೆಯನ್ನು ಕಡಡಿದರೆ ಬೆಣ್ಣೆ ಬರಲಾರದು ಅಥವಾ ಅಕ್ಕಿಯ ಅನ್ನ ತಿನ್ನುವೆನೆಂದು ಅಕ್ಕಿಯನ್ನು ತೊಳೆದ ನೀರು ಕುಡಿಯಲು ಬರುವದೇ ? ಇವು ಪ್ರಾಶನಕ್ಕೆ ಯೋಗ್ಯವಲ್ಲ. ಹೆಚ್ಚಿನ ಪ್ರಯೋಜನಕಾರಕವಲ್ಲ. (೩) ಹಣ್ಣಿನ ಸಿಪ್ಪಿಯನ್ನು ತಿಂದರೆ ಅಥವಾ ರಸಹೀನವಾದ ಕಬ್ಬಿನ ಸಿಪ್ಪಿಯನ್ನು ತಿಂದರೆ ಅಥವಾ ಕೊಬ್ಬರಿಯನ್ನು ತೆಗೆದ ಖಾಲಿ ಪರಟೆಯನ್ನು ತಿನ್ನುವ ಪ್ರಯತ್ನ ಮಾಡಿದರೆ ವ್ಯರ್ಥ ಶ್ರಮವೇ ಹೊರತು ಉಪಯೋಗವೆಷ್ಟೂ ಆಗಲಾರದು(೪) ಇದೇ ಪ್ರಕಾರ ಯಾವುದರಲ್ಲಿ ಬ್ರಹ್ಮಜ್ಞಾನವಿಲ್ಲವೋ ಅಂಥ ಉಪದೇಶವೆಂದರೆ ವ್ಯರ್ಥ ಶ್ರಮವೇ ಸರಿ. ಜಾಣ ನಾದವನು ಸಾರವಿರುವದನ್ನು ಬಿಟ್ಟು ಅಸಾರ ಸೇವನ ಮಾಡಲಾರನು. (೫) **ಬ್ರಹ್ಮವು ಮಾತ್ರ ಈ ಸರ್ವ ಸೃಷ್ಟಿಯ ಸಾರವಿರುವದು. ಅದು ಗುಣಾತೀತವಿರುವದು. ಪಂಚಮಹಾಭೂತಗಳಿಂದ ತುಂಬಿದ ದೃಶ್ಯ ವಿಶ್ವವು ಅಸಾರವಿರುವದು. ಮತ್ತು ಗುಣಮಯವಿರುವದು. ಸಾರಭೂತವಾದ ಬ್ರಹ್ಮನ ವರ್ಣನೆಯನ್ನು ಈಗ ಹೇಳುವದು:**– ಗುಣಾತೀತನಾದ ಯಾವ ಬ್ರಹ್ಮನಿರುವನೋ ಅವನ ವರ್ಣನೆಯನ್ನು ಹೇಳುವೆನು. ಶ್ರೋತೃ ಗಳು ತಮ್ಮ ಅಂತಃಕರಣವನ್ನು ಜಾಗ್ರತಗೊಳಿಸಿ ತತ್ಪರತೆಯಿಂದ ಕೇಳಬೇಕು. (೬) ಈ ಎಲ್ಲ ವಿಶ್ವವು ಪಂಚ ಮಹಾಭೂತಗಳಿಂದ ರಚಿಸಲ್ಪಟ್ಟಿದೆ. ಆದರೆ ಇದು ಕಾಯಂ ಸ್ಥಿರವಾಗಿ ಇರುವಂಥದಲ್ಲ. ೧) ಪೃಥ್ವಿ (ಭೂಮಿ) ೨) ಆಪ (ನೀರು) ೩) ತೇಜ (ಪ್ರಕಾಶ) ೪) ವಾಯು (ಗಾಳಿ) ೫) ಆಕಾಶ ಇವೇ ಪಂಚ ಮಹಾಭೂತಗಳು ಸತತ ವಾಗಿ ಬದಲಾಗುತ್ತಿರುವದೇ ವಿಶ್ವದ ಮೂಲ ಸ್ವಭಾವವಾಗಿದೆ. (೭) ಈ ವಿಶ್ವ ನಿರ್ಮಾಣವಾಗುವದಕ್ಕಿಂತ ಪೂರ್ವ ದಲ್ಲಿ ಮತ್ತು ವಿಶ್ವ ನಿರ್ಮಾಣವಾದ ನಂತರ ಮತ್ತು ಕೊನೆಗೆ ಅಂದರೆ ಮುಂದೆಯೂ ಸಹ ಗುಣಾತೀತನಾದ ಪರ ಬ್ರಹ್ಮನು ಮಾತ್ರ ಹೇಗಿದ್ದನೋ ಹಾಗೆಯೇ (ತ್ರಿಕಾಲದಲ್ಲಿ) ಇರುತ್ತಾನೆ. ಇದೊಂದೇ ಶಾಶ್ವತತನದ ಗುರುತು ಇರು ವದು. ಪಂಚ ಮಹಾಭೂತಗಳಿಂದ ಉಂಟಾದ ಇತರ ಸರ್ವವೂ ನಾಶವಾಗುವಂಥದಿರುವದೆಂದು ತಿಳಿಯಬೇಕು. ವಿಶ್ವ ಉಂಟಾಯಿತು. ಮತ್ತು ಅದು ಲಯವಾಗಿ ಹೋದರೂ ಇವರಲ್ಲಿ ಅಂದರೆ ಬ್ರಹ್ಮದಲ್ಲಿ ಎಳ್ಳಷ್ಟೂ ಹೆಚ್ಚು ಕಡಿಮೆ (ಫರಕ) ಆಗುವದಿಲ್ಲ. ಅಂತೆಯೇ ಇದು ಸದ್ವಸ್ತು ಇರುವದು. ಗುಣಾತೀತನಾದ ಬ್ರಹ್ಮ ಹೀಗೆಯೇ ಇರುವನು(೮) ಕೇವಲ ಸಾಮಾನ್ಯ ಮಾನವೀ ದೃಷ್ಟಿಯಿಂದ ವಿಶ್ವದ ಕಡೆಗೆ ನೋಡಿದರೆ ಇದು ಭೂತವಿರುವನೆಂದು ತೋರುತ್ತದೆ. ಭೂತ ಶಬ್ದಕ್ಕೆ ಎರಡು ಅರ್ಥಗಳಿರುವವು. ೧) ಭೂತ ಅಂದರೆ ಆದಂಥ, ಆಗಿದ್ದ, ಆದ ೨) ಭೂತ ಅಂದರೆ ಪಿಶಾಚಿ ಪ್ರಥಮ ಅರ್ಥದ ಪ್ರಕಾರ ಯಾವುದು ಆಗಿದೆಯೋ, ಆದದ್ದು ಇರುವದೋ ಅದು ಬದಲಾಗುತ್ತದೆ. ಅಂತೆಯೇ ಇದಕ್ಕೆ ದೇವ ಅನ್ನಲಿಕ್ಕೆ ಬರುವದಿಲ್ಲ. ಎರಡನೆಯ ಅರ್ಥವು ಪಿಶಾಚಿಗೆ ದೇವ ಎಂದು ಅನ್ನಲಿಕ್ಕೇ ಬರು ವದಿಲ್ಲ. ಯಾರಾದರೂ ಭೂತ ಎಂದು ಒದರಿದರೆ ಮನುಷ್ಯನಿಗೆ ಸಹ ಕೆಡಕೆನಿಸುವದು(೯) ಅಂದ ಮೇಲೆ ಯಾವನು ಬಹಳಷ್ಟು ದೊಡ್ಡವನಿರುವನೋ, ಅಂದರೆ ಇವನ ಮಹಿಮೆ ಬ್ರಹ್ಮಾದಿ ದೇವತೆಗಳಿಗೂ ಸಹ ತಿಳಿದಿಲ್ಲವೋ, ಮತ್ತು ಯಾವನು ಈ ಅಪಾರ ಜಗತ್ತನ್ನು ನಿರ್ಮಾಣ ಮಾಡಿದನೋ ಅಂಥ ಪರಮಾತ್ಮನಿಗೆ ಭೂತ ಅಂದರೆ ಅದು ಸರಿ ಅನಿಸದೆ ಮನಸ್ಸಿಗೆ ಏನೇನೋ ಅನಿಸುತ್ತದೆ. [೧೦] ಈ ಜಗತ್ತಿನ ನಿರ್ಮಾಪಕನೂ, ಅಧಿಕಾರ ನಡೆಸುವವನೂ ಆದ ಈಶ್ವರನು ಪಂಚ ಮಹಾಭೂತದ ಹಾಗೆ ಇರುವನೆಂದು ಅನ್ನುವದು ಬಹಳಷ್ಟು ಸದೋಷವಾಗಿದೆ. ಹೀಗೆ ಭಾವಿಸು ವನೂ ಸಹ ಬಹಳ ತಪ್ಪು ಇರುವನು. ಆದರೆ ಆತ್ಮಜ್ಞಾನಿ ಮಹಾಪುರುಷರು ಇವೆಲ್ಲವನ್ನು ತಿಳಿದುಕೊಂಡಿರುತ್ತಾರೆ[೧೧]

ಪೃಥ್ವೀ ಆಪ ತೇಜ ವಾಯೋ ಆಕಾಶ । ಯಾ ಸಬಾಹ್ಯ ಜಗದೀಶ ।
ಪಂಚಭೂತಾಸೀ ಆಹೆ ನಾಶ । ಆತ್ಮಾ ಅವಿನಾಶರೂಪೀ ॥೧೨॥

ಜೇ ಜೇ ರೂಪ ಆಣೀ ನಾಮ । ತೋ ತೋ ಅವಘಾ ಚಿ ಭ್ರಮ ।
ನಾಮರೂಪಾತೀತ ವರ್ಮ । ಅನುಭವೇ ಜಾಣಾವೇ ॥೧೩॥

ಪಂಚಭೂತೇ ಆಣಿ ತ್ರಿಗುಣ । ಐಸೀ ಅಷ್ಟಧಾ ಪ್ರಕೃತಿ ಜಾಣ ।
ಅಷ್ಟಧಾ ಪ್ರಕೃತೀಸ ನಾಮಾಭಿಧಾನ । ದೃಶ್ಯ ಐಸೇ ॥೧೪॥

ತೇ ಹೇ ದೃಶ್ಯ ನಾಸಿವಂತ । ಐಸೇ ವೇದಶ್ರುತೀ ಬೋಲತ ।
ನಿರ್ಗುಣ ಬ್ರಹ್ಮ ಶಾಶ್ವತ । ಜಾಣತೀ ಜ್ಞಾನೀ ॥೧೫॥

ಜೇ ಶಸ್ತ್ರೇ ತೋಡಿತಾ ತುಟೇನಾ । ಜೇ ಪಾವಕೇ ಜಾಳಿತಾ ಜಳೇನಾ ।
ಕಾಲವಿತಾ ಕಾಲವೇನಾ । ಆಪೇ ಕರೂನೀ ॥೧೬॥

ಜೇ ವಾಯೋಚೆನಿ ಉಡೇನಾ । ಜೇ ಪಡೇನಾ ನಾ ಝಡೇನಾ ।
ಜೇ ಘಡೇನಾ ನಾ ದಡೇನಾ । ಪರಬ್ರಹ್ಮ ತೇ ॥೧೭॥

ಜ್ಯಾಸೀ ವರ್ಣಚಿ ನಸೆ । ಜೇ ಸರ್ವಾಹೂನಿ ಅನಾರಿಸೇ ।
ಪರಂತು ಅಸತ ಚಿ ಅಸೇ । ಸರ್ವಕಾಳ ॥೧೮॥

ಮೂಲದಲ್ಲಿ ಶುದ್ಧ ನಿರ್ಮಲ ಮತ್ತು ಗುಣಾತೀತನಾದ ಪರಬ್ರಹ್ಮನಿಗೆ ಈ ವಿಶ್ವವು ಠಾವು-ಠಿಕಾಣ (ಥಾಂಗ-ಪತ್ತಾ) ಸಹ ಇರುವದಿಲ್ಲ. ಆದರೆ ಸಚ್ಚಿದಾನಂದ ಎಂಬುದು ಈ ಬ್ರಹ್ಮನ ಸ್ವಭಾವವೇ ಆಗಿದೆ. ಈ ಆನಂದದೊಳಗೆ ಸ್ಫೂರ್ತಿ (ಸ್ಫುರಣ) ಇರುವದು. ಇದಕ್ಕೆ ಮಾಯಾ ಅನ್ನುವರು. ಈ ಮಾಯೆಯ ಮೂಲಕ ಪರಮಾತ್ಮನು ಈಶ್ವರ ರೂಪದಿಂದ ಮನುಷ್ಯರ ಅಳವಿನಲ್ಲಿ ಬರುತ್ತಾನೆ. ಮಾಯೆಯಲ್ಲಿ ಅನಂತ ಶಕ್ತಿಗಳು ವಾಸ ಮಾಡಿರುವವು. ಅವುಗಳ ಪೈಕಿ ಪ್ರಕೃತಿ ಎಂಬುದು ಒಂದು ಶಕ್ತಿ ಇರುವದು. ಈ ಶಕ್ತಿಯು ದೃಶ್ಯವಿಶ್ವದ ನಿರ್ಮಾಣ ಮಾಡುತ್ತದೆ. ಇದು ಸ್ವತಃ ಅವ್ಯಕ್ತವಿದ್ದು ಎಲ್ಲ ವ್ಯಕ್ತಕ್ಕೆ ಮೂಲವಿರುವದು. ಈ ಶಕ್ತಿಯಲ್ಲಿ ಎಂಟು ಅಂಗಗಳು ವಾಸ ಮಾಡುವವು. ಸತ್ವ, ರಜ, ತಮ, ಇವು ಮೂರು ಗುಣಗಳೂ ಮತ್ತು ಪೃಥ್ವಿ, ಆಪ, ತೇಜ, ವಾಯು, ಆಕಾಶ ಈ ಐದು ಪಂಚಮಹಾಭೂತಗಳೂ ಒಟ್ಟುಗೂಡಿ ಎಂಟು ಆದವು. ಇವುಗಳಿಂದ ಪ್ರಕೃತಿಯು ತಯಾರ ಆಗುತ್ತದೆ. ಈ ಪ್ರಕೃತಿಯು ಸ್ವತಃ ವಿಶ್ವವ್ಯಾಪಿ ಇರುವದರಿಂದ ವ್ಯಕ್ತ ದಿಶೆಗೆ ಬರುವಾಗ ಆ ಸರ್ವವ್ಯಾಪಿ ತನವನ್ನು "ಸಾಮಾನ್ಯ" ರೂಪದಿಂದ ಕಾಯಂ ಇಡುವದು. ಆದುದರಿಂದಲೇ ಜಗತ್ತಿನಲ್ಲಿರುವ ಯಾವತ್ತೂ ವಸ್ತುಗಳಲ್ಲಿ ಪ್ರತಿ ವಸ್ತುವಿಗೆ ಎರಡು ಅಂಗಗಳಿರುವವು. ಒಂದು ಸಾಮಾನ್ಯದ ಅಂಗವು ಮತ್ತು ಇನ್ನೊಂದು **ವಿಶೇಷದ ಅಂಗವು. ವಿಶೇಷಕ್ಕೆ ವ್ಯಕ್ತಿ ಅಥವಾ ರೂಪ ಅನ್ನುವರು. ಅದೇ ಸಾಮಾನ್ಯ ಅಂಗಕ್ಕೆ ಜಾತಿ ಅಥವಾ ನಾಮವೆಂದು ಅನ್ನುವರು. ವ್ಯಕ್ತಿ ಅಥವಾ ರೂಪವು ವ್ಯಕ್ತವಿರುವದು. ಇಂದ್ರಿಯಗಳಿಗೆ ಕಾಣಿಸುವದು. ಆದರೆ ಅದೇ ಜಾತಿ ಅಥವಾ ನಾಮ ಅಥವಾ ಸಾಮಾನ್ಯವು ಅವ್ಯಕ್ತವಿರುವದು. ಇವು ಬುದ್ಧಿಗೆ ಆಕಲನವಾಗುವವು (ತಿಳಿಯುವವು). ಅವ್ಯಕ್ತದೊಳಗಿಂದ** ವ್ಯಕ್ತರೂಪ ಧರಿಸುವದು. ಕೆಲವೊಂದು ಕಾಲ ಇಲ್ಲಿ ಇದ್ದು ವ್ಯವಹರಿಸಿ ಪುನಃ ಅವ್ಯಕ್ತದಲ್ಲಿ ಇಲ್ಲದಾಗುತ್ತದೆ. ಒಂದುಗೂಡುತ್ತದೆ. ಮೂರುಗುಣ ಹಾಗೂ ಐದು ಮಹಾಭೂತ ಇವುಗಳ ಸಮುದಾಯದಲ್ಲಿ ಚೌಕಟ್ಟಿನಲ್ಲಿ ನಡೆಯುವ ಪ್ರಕೃತಿಯ ಆಟಕ್ಕೆ "ದೃಶ್ಯ"ವೆಂದು ಹೆಸರಿರುವದು. ಇದು ಅಂತಿಮ ಸತ್ಯವಲ್ಲದ್ದರಿಂದ ಪ್ರತ್ಯಕ್ಷ ಕಂಡರೂ ಇದು ಭ್ರಮ ರೂಪವಿರುವದು. ಇದನ್ನು ಒಂದು ಬದಿಗೆ ಸರಿಸಿ ಪರಮಾತ್ಮ ಸ್ವರೂಪದ ಅನುಭವ ಪಡೆಯಬೇಕಾಗುವದು. ಪೃಥ್ವಿ, ಆಪ, ತೇಜ, ವಾಯು, ಆಕಾಶ ಈ ಪಂಚಮಹಾಭೂತಗಳಲ್ಲಿ ಸಹ ಪರಮಾತ್ಮನು ಒಳಗೂ ಹೊರಗೂ ವ್ಯಾಪಿಸಿ ಇರುವನು. ತುಂಬಿರುವನು. ಪಂಚಮಹಾಭೂತಗಳು ನಾಶವಾಗುವವು. ಆದರೆ ಪರಮಾತ್ಮನು ಮಾತ್ರ ಅವಿನಾಶಿತನದಿಂದ ಇದ್ದಂತೆಯೇ ಇರುತ್ತಾನೆ. (೧೨) ಏನೇನು ರೂಪ ಮತ್ತು ನಾಮಗಳಿರುವವೋ ಅವೆಲ್ಲವೂ ಭ್ರಮರೂಪವಿರುವವು. ನಾಮ ಮತ್ತು ರೂಪ ಇವುಗಳಾಚೆ ಇರುವ ಯಾವ ಪರಮಾತ್ಮರೂಪಿ ರಹಸ್ಯವಿರುವದೋ ಅದನ್ನು ಸ್ವಾನುಭವದಿಂದ ತಿಳಿಯಬೇಕು. (೧೩) ಐದು ಮಹಾಭೂತಗಳು ಮತ್ತು ಮೂರು ಗುಣಗಳು ಕೂಡಿ ಒಟ್ಟು ಎಂಟು ಆಗುವವು. ಈ ಎಂಟು ಪ್ರಕಾರಗಳಿಂದ ಪ್ರಕೃತಿ ವ್ಯಕ್ತವಾಗುವದು. ಈ ಅಷ್ಟಧಾ ಪ್ರಕೃತಿಗೆ "ದೃಶ್ಯ" ಎಂದು ಇನ್ನೊಂದು ಹೆಸರು ಇರುವದು. (೧೪) **ನಿರ್ಗುಣ ಬ್ರಹ್ಮವು ದೃಶ್ಯದ ಆಚೆಗೆ ಇರುತ್ತದೆ. ದೃಶ್ಯದ ಯಾವುದೇ ಧರ್ಮ ಗುಣ ಇದಕ್ಕೆ ಲಾಗೂ ಆಗುವದಿಲ್ಲ** ವೇದ ಮತ್ತು ಶ್ರುತಿಗಳು ಹೇಳುವದೇನೆಂದರೆ ಈ ದೃಶ್ಯವು ನಾಶವಂತವಿರುವದು. ನಿರ್ಗುಣ ಬ್ರಹ್ಮನು ಮಾತ್ರ ಶಾಶ್ವತನು. ಇದನ್ನು ಜ್ಞಾನಿ ಪುರುಷರು ತಿಳಿದಿರುವರು. (೧೫) ಈ ಬ್ರಹ್ಮನನ್ನು ಶಸ್ತ್ರದಿಂದ ತುಂಡರಿಸಬೇಕೆಂದರೆ ತುಂಡರಿಸಲಿಕ್ಕೆ ಆಗುವದಿಲ್ಲ. ಬೆಂಕಿಯಿಂದ ಸುಡಬೇಕೆಂದರೆ ಸುಡಲಿಕ್ಕಾಗುವದಿಲ್ಲ. (ಸುಡುವದೇ ಇಲ್ಲ). ನೀರಿನಲ್ಲಿ ಕಲಿಸಿ ಬಿಡಬೇಕೆಂದರೆ ಕಲಿಸಲಿಕ್ಕೆ ಆಗುವದಿಲ್ಲ (ಕರಗುವದಿಲ್ಲ). (೧೬) ಗಾಳಿಯಿಂದ ಹಾರಸಲಿಕ್ಕಾಗುವದಿಲ್ಲ. ಇದನ್ನು ಕೆಡವಬೇಕೆಂದರೆ ಬೀಳುವದಿಲ್ಲ. ಮತ್ತು ಮುಚ್ಚಿ ಇಡಲಿಕ್ಕೆ ಸಾಧ್ಯವಿಲ್ಲ. (೧೭) ಇದಕ್ಕೆ ಯಾವ ರಂಗೂ ಇಲ್ಲ. ಇದು ಎಲ್ಲ ಪದಾರ್ಥಗಳಿಗಿಂತ ಭಿನ್ನವಾಗಿಯೇ ಇರುವದು. ಆದರೆ ಇದು ಸದಾ ಸರ್ವಕಾಲ ಇರುತ್ತದೆ. ಇದು ನಿರಂತರ, ಶಾಶ್ವತ ಇರುವದಾಗಿರುತ್ತದೆ. (೧೮)

ದಿಸೇನಾ ತರೀ ಕಾಯ ಜಾಲೇ। ಪರಂತು ತೇ ಸರ್ವತ್ರ ಸಂಚಲೇ।
ಸೂಕ್ಷ್ಮಚಿ ಕೋಂದಾಟಲೇ। ಜೇಥೇ ತೇಥೇ ॥೧೯॥

ದೃಷ್ಟೀಸ ಲಾಗಲೀ ಸವೆ। ಜೇ ದಿಸೇಲ ತೇಚಿ ಪಾಹಾವೇ।
ಪರಂತು ಗುಜತೇ ಜಾಣಾವೇ। ಗೋಪ್ಯ ಆಹೆ ॥೨೦॥

ಪ್ರಗಟ ತೇ ಜಾಣಾವೇ ಅಸಾರ। ಆಣೀ ಗುಪ್ತ ತೇ ಜಾಣಾವೇ ಸಾರ।
ಗುರುಮುಖೇ ಹಾ ವಿಚಾರ। ಉಮಜೋ ಲಾಗೆ ॥೨೧॥

ಜೇ ಉಮಜೇನಾ ತೇ ಉಮಜಾವೇ। ಜೇ ದಿಸೇನಾ ತೇ ಪಾಹಾವೇ।
ಜೇ ಕಳೇನಾ ತೇ ಜಾಣಾವೇ। ವಿವೇಕಬಳೇ ॥೨೨॥

ಗುಪ್ತ ತೇಚಿ ಪ್ರಗಟವಾವೇ। ಅಸಾಧ್ಯ ತೇಚಿ ಸಾಧಾವೇ।
ಕಾನಡೇಚಿ ಅಭ್ಯಾಸಾವೇ। ಸಾವಕಾಸ ॥೨೩॥

ವೇದ ವಿರಂಚೀ ಆಣಿ ಶೇಷ। ಜೇಥೇ ಸಿಣಲೆ ನಿಶೇಷ।
ತೇಚಿ ಸಾಧಾವೇ ವಿಶೇಷ। ಪರಬ್ರಹ್ಮ ತೇ ॥೨೪॥

ತರೀ ತೇ ಕೋಣೆಪರೀ ಸಾಧಾವೇ। ತೇಚಿ ಬೋಲಿಲೇ ಸ್ವಭಾವೇ।
ಅಧ್ಯಾತ್ಮ ಶ್ರವಣೇ ಪಾವಾವೇ। ಪರಬ್ರಹ್ಮ ತೇ ॥೨೫॥

ಪೃಥ್ವೀ ನವ್ಹೆ ಆಪ ನವ್ಹೆ। ತೇಜ ನವ್ಹೆ ವಾಯು ನವ್ಹೆ।
ವರ್ಣವ್ಯಕ್ತ ಐಸೇ ನವ್ಹೆ। ಅವ್ಯಕ್ತ ತೇ ॥೨೬॥

ತಯಾಸ ಮ್ಹಣಾವೇ ದೇವ। ವರಕಡ ಲೋಕಾಂಚಾ ಸ್ವಭಾವ।
ಜಿತುಕೆ ಗಾವ ತಿತುಕೆ ದೇವ। ಜನಾಕಾರಣೇ ॥೨೭॥

ಐಸಾ ದೇವಾಚಾ ನಿಶ್ಚಯೋ ಜಾಲಾ। ದೇವ ನಿರ್ಗುಣ ಪ್ರತ್ಯಯಾ ಆಲಾ।
ಆತಾ ಆಪಣಚಿ ಆಪಲಾ। ಶೋಧ ಘ್ಯಾವಾ ॥೨೮॥

ಬ್ರಹ್ಮ ಕಾಣುವದಿಲ್ಲವೆಂದರೆ ಏನಾಯಿತು ? ಇದು ಎಲ್ಲ ಕಡೆಗೂ ತುಂಬಿಕೊಂಡೇ ಇರುವದು. ಇದು ಸೂಕ್ಷ್ಮತ್ವದಿಂದ ಅಲ್ಲಿ ಇಲ್ಲಿ ಎಲ್ಲ ಕಡೆಗೂ ವ್ಯಾಪಿಸಿಯೇ ಇರುತ್ತದೆ. (೧೯) ನಮ್ಮ ದೃಷ್ಟಿಗೆ ಒಂದು ರೀತಿಯ ಸವಯ (ರೂಢಿ) ಅಂಟಿಕೊಂಡಿದೆ. ಅದು ಏನಂದರೆ, ಯಾವುದು ಕಾಣುವದೋ ಅದನ್ನು ನೋಡಬೇಕು. ಮತ್ತು ಅದೇ ನಿಜವಾದದ್ದು (ಖರೆ) ಎಂದು ನಂಬಬೇಕು. ಆದರೆ ಯಾವುದು ರಹಸ್ಯವಾದದ್ದಿರುವದೋ ಅದು ಯಾವಾಗಲೂ ಗುಪ್ತವಿರುವದು. ಇದನ್ನು ತಿಳಿಯಿರಿ. (೨೦) ಯಾವುದು ಇಂದ್ರಿಯಗಳಿಗೆ ಕಾಣುವದೋ ಮತ್ತು ಅದು ಉಘಡ (ಖುಲ್ಲಾ) ಇರುವದು. ಹಾಗೂ ಅದು ಅಸಾರವಿರುತ್ತದೆ. ಮಿಥ್ಯಾ ಇರುತ್ತದೆ. ಯಾವುದು ಗುಪ್ತವಿರುವದೋ ಮತ್ತು ಸೂಕ್ಷ್ಮವಿರುವದೋ ಅದು ಸಾರವಿದ್ದು ಸತ್ಯವೂ ಇರುವದು. ಸದ್ಗುರುವಿನಿಂದ ಪ್ರತ್ಯಕ್ಷ ಕೇಳಿಕೊಂಡ ಹಾಗೂ ತಿಳಿದುಕೊಂಡ ಉಪದೇಶದಿಂದ ಈ ಸಾರ ಹಾಗೂ ಅಸಾರದ ವಿವೇಚನವು ಸರಿಯಾಗಿ ತಿಳಿಯಹತ್ತುವದು. (೨೧) ಯಾವುದು ಬುದ್ಧಿಗೆ ಹೊಳೆಯುವದಿಲ್ಲವೋ ಅದನ್ನು ವಿವೇಚನ ಮಾಡಿ ತಿಳಿದುಕೊಳ್ಳಬೇಕು. ಯಾವುದು ಇಂದ್ರಿಯಗಳಿಗೆ ಗೋಚರಿಸುವದಿಲ್ಲವೋ ಅದನ್ನು ನೋಡಬೇಕು. ಯಾವುದು ತಿಳಿಯುವದಿಲ್ಲವೋ ಅದನ್ನು ವಿವೇಕದಿಂದ ಗುರುವಿನ ಕೃಪೆಯಿಂದ, ಆಸ್ಥೆಯಿಂದ ತಿಳಿದುಕೊಳ್ಳಬೇಕು. [೨೨] **ಸಾಧನೆ ಮಾಡಿ ಸೂಕ್ಷ್ಮ ಬ್ರಹ್ಮನನ್ನು ಕಾಣುವ ಮತ್ತು ಅನುಭವಿಸುವ ಸಾಮರ್ಥ್ಯವನ್ನು ದೇಹದಲ್ಲಿ ತಂದುಕೊಳ್ಳಬೇಕು. ಇದರ ಸಲುವಾಗಿ ದೇಹದ ಕಷ್ಟ ಬೇಕಾಗುವದಿಲ್ಲ. ಆದರೆ ಮನಸ್ಸಿನ ಕಷ್ಟ ಮಾತ್ರ ಬಹಳವಿರುವದು.** ಯಾವದು ಗುಪ್ತವಾದದ್ದು ಇರುವದೋ ಅದನ್ನು ಸ್ವತಃವೇ ಪ್ರಕಟಪಡಿಸಿಕೊಳ್ಳಬೇಕು. ನೋಡಬೇಕು. ಯಾವುದು ಅಸಾಧ್ಯವಿರುವದೋ, ಮತ್ತು ಕಷ್ಟ ಸಾಧ್ಯವಾದದ್ದಿರುವದೋ ಅಂಥ ಆತ್ಮಸ್ವರೂಪವನ್ನು ಸಾಧ್ಯ ಮಾಡಿಕೊಳ್ಳಬೇಕು. ಯಾವುದು ಅವಘಡ [ಕಠಿಣ] ಇದೆಯೋ ಅದನ್ನು ದೀರ್ಘ ಪ್ರಯತ್ನದಿಂದ ಸತತವಾಗಿ ಅಭ್ಯಾಸ ಮಾಡಬೇಕು[೨೩] ವೇದ, ಬ್ರಹ್ಮದೇವ, ಮತ್ತು ಆದಿಶೇಷ ಇವರೆಲ್ಲರೂ ಆ ಪರಬ್ರಹ್ಮನ ವರ್ಣನೆ ಮಾಡಿ ಮಾಡಿ ಕೊನೆಗೆ ದಣಿದು ಹೋದರು. ಪೂರ್ಣ ಪರಾಭೂತರಾದರು. ಅಂಥ ಪರಬ್ರಹ್ಮನನ್ನು ನೀವು ವಿಶೇಷ ಪ್ರಯತ್ನದಿಂದ ಸಾಧಿಸಿಕೊಳ್ಳಬೇಕು. ನೀವು ಆ ಬ್ರಹ್ಮನ ಸಾಕ್ಷಾತ್ ಅನುಭವ ಪಡೆಯಬೇಕು. [೨೪] ಆ **ಪರಬ್ರಹ್ಮ ಸ್ವರೂಪದ ಅನುಭವ ಬರಬೇಕಾದರೆ ಯಾವ ಮತ್ತು ಎಂಥ ಪ್ರಯತ್ನ ಮಾಡಬೇಕೆಂಬುದನ್ನು ಹೇಳುತ್ತಾರೆ.** ಆದರೆ ಆ ಪರಬ್ರಹ್ಮವನ್ನು ಹೇಗೆ ಅನುಭವ ಮಾಡಿಕೊಳ್ಳಬೇಕೆಂದು ನೀವು ಕೇಳುವದಾದರೆ ಅದರ ಬಗ್ಗೆ ಸ್ವಾಭಾವಿಕ ಸಾಧನೆ ಹೇಳುವೆನು:- ಅಧ್ಯಾತ್ಮ ಶ್ರವಣದಿಂದ ಆ ಪರಬ್ರಹ್ಮವನ್ನು ಪ್ರಾಪ್ತ ಮಾಡಿಕೊಳ್ಳಬೇಕು. [೨೫] ಅದು ಪೃಥ್ವಿ [ಭೂಮಿ] ಅಲ್ಲ, ನೀರೂ ಅಲ್ಲ. ಅಥವಾ ತೇಜವೂ ಅಲ್ಲ, ವಾಯುವೂ ಅಲ್ಲ, ಮತ್ತು ಯಾವುದೇ ಒಂದು ರಂಗ (ಬಣ್ಣ)ದ್ದೂ ಅಲ್ಲ, ಅದು ವ್ಯಕ್ತವೂ ಅಲ್ಲ. ಇಂದ್ರಿಯಗಳಿಗೆ ಕಾಣುವಂಥದೂ ಅಲ್ಲ. ಅದು ಅವ್ಯಕ್ತವಿರುವದು. ಅತೀಂದ್ರೀಯವಿರುವದು. [೨೬] ಯಾವುದು ವ್ಯಕ್ತವಿರುವದೋ ಅದಕ್ಕೆ ದೇವರೆಂದು ಅನ್ನಬೇಕು, ಹೀಗೆ ಸಾಮಾನ್ಯ ದೃಷ್ಟಿಗೆ ಅನಿಸುವದು. ಅಜ್ಞಾನಿ ಜನರ ತಿಳುವಳಿಕೆಯೂ ಸಹ ಇದೇ ಇರುವದು. ಆದ್ದರಿಂದ ಸಾಮಾನ್ಯ ಜನತೆಗೆ ಎಷ್ಟು ಗ್ರಾಮಗಳೋ ಅಷ್ಟು ದೇವರಿರುತ್ತವೆ. (೨೭) **ಈ ರೀತಿಯಿಂದ ನಿಜವಾದ ದೇವರು ಯಾರು? ಇದನ್ನು ತಿಳಿದ ನಂತರ (ಆಮೇಲೆ) ನಿಜವಾಗಿ ನಾನು ಯಾರು ? ಇದರ ಶೋಧ ಮಾಡಬೇಕು:-** ಈ ಪ್ರಕಾರದಿಂದ ನಿಜವಾದ ದೇವರು ಯಾರು? ಇದು ನಿಶ್ಚಿತ ಗೊತ್ತಾದ ಮೇಲೆ ಅಂದರೆ ದೇವರು ನಿರ್ಗುಣ ನಿರಾಕಾರ ಇರುವನೆಂಬ ಪ್ರತ್ಯಕ್ಷ ಅನುಭವ ಆದಮೇಲೆ ಅವರೆ ನೀವೇ ನಿಮ್ಮ ಅಂತರ್ಯಾಮದಲ್ಲಿ ಸ್ವತಃದ ಶೋಧ ಮಾಡಬೇಕು. (೨೮)

ಮಾರ್ಥೋ ಶರೀರ ಐಸೇ ಮ್ಹಣತೋ।ತರೀ ತೋ ಜಾಣ ದೇಹಾವೇಗಳಾ ಚಿ ತೋ।
ಮನ ಮಾರ್ಥೋ ಐಸೇ ಜಾಣತೋ। ತರೀ ತೋ ಮನಹಿ ನವ್ಹೇ ॥೨೯॥

ಪಾಹಾತಾ ದೇಹಾಚಾ ವಿಚಾರ । ಅನಘಾ ತತ್ವಾಚಾ ವಿಸ್ತಾರ ।
ತತ್ವೇ ತತ್ವ ಝಾಡಿತಾ ಸಾರ। ಆತ್ಮಚ ಚಉರೇ ॥೩೦॥

ಆಪಣಾಸೀ ಠಾವ ಚಿ ನಾಹೀ । ಯೇಥೇ ಪಾಹಾಣೇ ನಲಗೆ ಕಾಹೀ ।
ತತ್ವೇ ಠಾಈಚಾ ಠಾಈ । ವಿಭಾಗೂನ ಗೇಲೀ ॥೩೧॥

ಬಾಂಧಲೀ ಆಹೆ ತೋ ಗಾಠೋಡೀ । ಜೋ ಕೋಣೇ ವಿಚಾರೇ ಸೋಡೀ ।
ವಿಚಾರ ಪಾಹಾತಾ ಹೀ ಗಾಠೋಡೀ । ಆಡಳೇನಾ ॥೩೨॥

ತತ್ವಾಚೇ ಗಾಂಠೋಡೇ ಶರೀರ । ಯಾಚಾ ಪಾಹಾತಾ ವಿಚಾರ ।
ಯೇಕ ಆತ್ಮಾ ನಿರಂತರ । ಆಪಣ ನಾಹೀ ॥೩೩॥

ಆಪಣಾಸೀ ಠಾವ ಚಿ ನಾಹೀ । ಜನ್ಮಮೃತ್ಯ ಕೈಚೇ ಕಾಈ ।
ಪಾಹಾತಾ ವಸ್ತುಚಾ ಠಾಈ । ಪಾಪಪುಣ್ಯ ನಸೆ ॥೩೪॥

ಪಾಪಪುಣ್ಯ ಯೆಮಯಾತನಾ । ಹೇ ನಿರ್ಗುಣೀ ತೋ ಅಸೇನಾ ।
ಆಪಣ ತೋಚಿ ತರೀ ಜನ್ಮಮರಣಾ । ಠಾವ ಕೈಂಚಾ ॥೩೫॥

ದೇಹೇಬುದ್ಧೀನೇ ಬಾಂಧಲಾ । ತೋ ವಿವೇಕೇ ಮೋಕಳಾ ಕೇಲಾ ।
ದೇಹಾತೀತ ಹೋತಾ ಪಾವಲಾ । ಮೋಕ್ಷಪದ ॥೩೬॥

ಜಾಲೇ ಜನ್ಮಾಚೇ ಸಾರ್ಥಕ । ನಿರ್ಗುಣ ಆತ್ಮಾ ಆಪಣ ಯೇಕ ।
ಪರಂತು ಹಾ ವಿವೇಕ । ಪಾಹಿಲಾಚ ಪಾಹಾವಾ ॥೩೭॥

ಜಾಗೇ ಹೋತಾ ಸ್ವಪ್ನಸರೆ । ವಿವೇಕ ಪಾಹಾತಾ ದೃಶ್ಯ ವೋಸರೇ ।
ಸ್ವರೂಪಾನುಸಂಧಾನೇ ತರೇ । ಪ್ರಾಣಿಮಾತ್ರ ॥೩೮॥

"ಶರೀರ ನನ್ನದು" (ನನ್ನ ದೇಹ) ಎಂದು ನಾವು ಅನ್ನುತ್ತೇವೆ. ಇದರ ಖರೇ ಅರ್ಥವು:- ನಿಜವಾದ ನಾನು ದೇಹದಿಂದ ಪ್ರತ್ಯೇಕನಾದವನೇ ಇರುವೆ ಎಂದು ಆಗುವದಿಲ್ಲವೇ? "ನನ್ನ ಮನಸ್ಸು" (ಮನವು ನನ್ನದು) ಎಂಬುದಾಗಿ ನನಗೆ ತಿಳುವಳಿಕೆ ಇರುತ್ತದೆ. ಇದರ ಅರ್ಥ ನಿಜವಾದ ನಾನು ಮನಸ್ಸೂ ಅಲ್ಲ ಎಂದೇ ಆಗುವದಲ್ಲವೇ? (೨೯) ನಮ್ಮ ದೇಹದ ಬಗ್ಗೆ ವಿಚಾರ ಮಾಡಿದ್ದೇ ಆದರೆ ಈ ದೇಹವು ಪಂಚಭೂತಗಳ ಮಿಶ್ರಣದ ವಿಸ್ತಾರವಿದೆ. ಇವೆಲ್ಲಾ ನಾಶವಾಗತಕ್ಕವೇ ಇರುವವು ಇದಕ್ಕಿಂತ ಮತ್ತೇನೂ ಅಲ್ಲವೆಂದು ಕಂಡು ಬರುವದು. ಒಂದು ಭೂತದಲ್ಲಿ ಇನ್ನೊಂದು ಭೂತವನ್ನು ವಿಲೀನಗೊಳಿಸುತ್ತ ಹೋದರೆ ಕೊನೆಗೆ ಎಲ್ಲ ಭೂತಗಳೂ ಇಲ್ಲದಾಗಿ (ನಾಶವಾಗಿ) ಕೊನೆಯಲ್ಲಿ ಸಾರರೂಪಿ ಅವಿನಾಶಿಯಾದ ಆತ್ಮವೊಂದೇ ಉಳಿಯುವದು. (೩೦) ದೇಹ ಬುದ್ಧಿಯ ನಾನು ಎಂಬುದು ಎಲ್ಲಿ ವಾಸಮಾಡಿರುವದೆಂಬುದನ್ನು ಶೋಧಿಸಿ ತಿಳಿಯಬೇಕೆಂದು ಪ್ರಯತ್ನ ಮಾಡಿದರೆ ಅದಕ್ಕೆ ಸ್ಥಾನವೇ ಇಲ್ಲವೆಂಬುದು ಕಂಡು ಬರುತ್ತದೆ. ಅಂದ ಮೇಲೆ ಅದನ್ನು ಶೋಧಿಸಿ ನೋಡುವ ಕಾರಣವೇ ಇರುವದಿಲ್ಲ. ಯಾವ ಐದು ಭೂತಗಳಿಂದ ಈ ದೇಹ ಉಂಟಾಗಿರುತ್ತದೆಯೋ ಈ ಭೂತಗಳು ತಮ್ಮ ತಮ್ಮ ಸ್ಥಳದಲ್ಲಿ ವಿಭಾಗ ಹೊಂದಿ ಇಲ್ಲದಾಗುತ್ತವೆ. (೩೧) ಶರೀರವೆಂದರೆ ಪಂಚಮಹಾಭೂತಗಳನ್ನು ಒಂದು ಕಡೆಗೆ ಬಂಧಿಸಿ ಬಿಗಿದು ತಯಾರಿಸಿದ ಒಂದು ಗಂಟು ಇರುವದು. ಯಾರಾದರೂ ಒಂದು ವೇಳೆ ವಿಚಾರದ ಸಾಧನದಿಂದ ಈ ಗಂಟನ್ನು ಬಿಚ್ಚಲಿಕ್ಕೆ ಹೋದರೆ ಆ ಗಂಟೇ ಸಿಗುವದಿಲ್ಲ. ಇಲ್ಲದಾಗಿರುತ್ತದೆ. (ಕರಗಿ ಹೋಗಿರುತ್ತದೆ). ಅದು ವಿಲೀನವಾಗಿ ಹೋಗಿರುತ್ತದೆ. (೩೨) ನಮ್ಮ ಶರೀರವು ಪಂಚಮಹಾಭೂತಗಳ ಒಂದು ಗಂಟಾಗಿರುತ್ತದೆ. ವಿಚಾರದಿಂದ ಇದರ ವಿವರಣೆ ಮಾಡಿ ನೋಡಿದರೆ ಇಲ್ಲಿ ಇಂದು "ನಾನು" ಎಂದು ಹೆಮ್ಮೆಯಿಂದ ಓಡಾಡುವ "ನಾನು" ಅನ್ನುವದು ಉಳಿಯುವದಿಲ್ಲ. ಕೇವಲ ನಿರಂತರ (ಸದಾಕಾಲ) ಇರುವಂಥ ಆತ್ಮವೊಂದೇ ಉಳಿಯುತ್ತದೆ, (೩೩) ಎಲ್ಲಿ "ನಾನು" ಎಂಬುದಕ್ಕೆ ಸ್ಥಳವೇ ಉಳಿಯುವದಿಲ್ಲವೋ ಅಲ್ಲಿ ಜನ್ಮ ಯಾವುದು? ಯಾರದು? ಮತ್ತು ಮರಣ ಯಾವುದು? ಯಾರದು? ಅಲ್ಲಿ ಜನ್ಮ ಎಂಥದು? ಮತ್ತು ಮರಣ ಎಂಥದು? ನಿಜ ತಿಳಿದು ನೋಡಿದರೆ ಪರಮಾತ್ಮ ವಸ್ತುವಿಗೆ ಪಾಪ ಪುಣ್ಯದ ಸ್ಪರ್ಶವೇ ಆಗುವದಿಲ್ಲ. (೩೪) ಪಾಪ ಪುಣ್ಯ ಮತ್ತು ಯಮ ಯಾತನೆ ಇವು ಯಾವವೂ ನಿರ್ಗುಣ ನಿರಾಕಾರನಿಗೆ ಎಷ್ಟೂ ಸಂಬಂಧವಿಲ್ಲ. ನಮ್ಮ ನಿಜವಾದ ನಾನು ನಿರ್ಗುಣನಿರುವನು. ಆದುದರಿಂದಲೇ ಅವನ ಇರುವಿಕೆಯಲ್ಲಿ(ನಿರ್ಗುಣನಿಗೆ)ಜನ್ಮ ಮರಣಕ್ಕೆ ಸ್ಥಾನವೇ ಇಲ್ಲ. (೩೫) ನಾನು ದೇಹವಿರುವೆನು. ಈ ದೃಢಭಾವನೆಯು ನಮ್ಮ ಬಂಧನಕ್ಕೆ ಕಾರಣವಾಗುತ್ತದೆ. ಇದನ್ನು ವಿವೇಕದಿಂದ ಬಿಡಿಸಿ(ಉಲಗಡಿಸಿ) ತಿಳಯಬೇಕು. "ನಾನು ನಿರ್ಗುಣ ಆತ್ಮಾ ಇರುವೆನು" ಎಂಬುದು ವಿವೇಕದಿಂದ ಸ್ಮರಣೆಗೆ ಬಂದ ಮೇಲೆ ಇದರ ಅಖಂಡ ಅನುಸಂಧಾನವ ಧ್ಯಾನ,ಲಕ್ಷ್ಯ ಅವಧಾನವಿಡುವ ಅಭ್ಯಾಸ ಮಾಡಬೇಕು. ಇದರೊಳಗಿಂದ ಸ್ವರೂಪಾನುಭವ ಉದಯ ಹೊಂದುತ್ತದೆ. ಆತ್ಮಜ್ಞಾನ ದಿಂದ ಆತ್ಮಸ್ವರೂಪ ಪ್ರಾಪ್ತವಾದಮೇಲೆ ದೇಹವನ್ನು ಪ್ರಾರಬ್ಧಕ್ಕೆ ಬಿಟ್ಟು ಸ್ವಾನಂದದಲ್ಲಿ ಈಪ್ರಕಾರದಿಂದಇರಬೇಕು ದೇವಮತ್ತುಭಕ್ತ ಇವರ ಐಕ್ಯವು ಒದಗಿ ಬರುತ್ತದೆ."ನಾನು ದೇಹವೇ ಇರುವೆನು"ಈ ದೃಢಭಾವನೆಯಿಂದ ಜೀವವು ಬಂಧಿಸಲ್ಪಟ್ಟಿರುತ್ತದೆ. ವಿವೇಕದಿಂದ ವಿಚಾರ ಮಾಡಿದಾಗ ಈ ಬಂಧನದಿಂದ ಜೀವವು ಮುಕ್ತವಾಗುತ್ತದೆ. ದೇಹ ಬುದ್ಧಿ ಬಿಟ್ಟುಕೊಟ್ಟು ಜೀವವು ದೇಹದ ಆಚೆಗೆ ಹೋಯಿತೆಂದರೆ ಮೋಕ್ಷಪದಕ್ಕೆ ಮುಟ್ಟುತ್ತದೆ (೩೬) ನಿರ್ಗುಣ ಆತ್ಮವೇ ನಿಜವಾದ "ನಾನು" ಇರುವೆನೆಂಬ ಸಾಕ್ಷಾತ್ (ಪ್ರತ್ಯಕ್ಷ) ಅನುಭವ ಹೊಂದುವದರಲ್ಲಿಯೇ ಜನ್ಮದ ಸಾರ್ಥಕ್ಯವಿರುವದು. ಆದರೆ ಈ ಅನುಭವ ಹೊಂದಲು ಪುನಃಪುನಃ ವಿವೇಕ ವಿಚಾರ ಮಾಡಬೇಕು. (೩೭) **ನಿದ್ರೆಯಿಂದ ಎಚ್ಚರನಾದ ಮೇಲೆ ಸ್ವಪ್ನವು ಹೇಗೆ ತನ್ನಷ್ಟಕ್ಕೆ ತಾನೇ ಕರಗಿ ಹೋಗುವದೋ, ಇಲ್ಲದಾಗುವದೋ ಇದೇ ರೀತಿಯಲ್ಲಿ ಒಂದೇ ಸವನೇ ವಿವೇಕ ವಿಚಾರ ಮಾಡಿದ್ದಾದರೆ ದೃಶ್ಯವು ಹಿಂದೆ ಸರಿಯುತ್ತದೆ. ಕರಗುತ್ತದೆ. ಸ್ವಸ್ವರೂಪಾನುಸಂಧಾನದಿಂದ ಜೀವದ ಉದ್ಧಾರವಾಗುವದು.** ಸಂಧಾನದಿಂದ ಹಿಂದೆ ಹಿಂದೆ ಇರುವದರ ಹೆಸರೇ ಅನುಸಂಧಾನವು. ಸ್ವಸ್ವರೂಪ ಅಥವಾ ಆತ್ಮಸ್ವರೂಪ ಇದು ನಮ್ಮ ಸಂಧಾನವಿರುವದು. ಇದರ ಹಿಂದೆ ಇರುವದು ಅಂದರೆ ಇದರ ಚಿಂತನೆಯನ್ನು ಸದಾಕಾಲ ಮಾಡುವದು. ಸತತ ಚಿಂತನದಿಂದ ಮನವು ತದಾಕಾರವಾಗುವದು. ಕೊನೆಗೆ "ನಾನು ಆತ್ಮಸ್ವರೂಪ ಇರುವೆ" ಎಂಬ ಸಾಕ್ಷಾತ್ಕಾರವಾಗುತ್ತದೆ. [೩೮]

ಆಪಣಾಸ ನಿವೇದಾವೇ। ಆಪಣ ವಿವೇಕೇ ನುರಾವೇ।
ಆತ್ಮನಿವೇದನ ಜಾಣಾವೇ। ಯಾಚೇ ನಾವ ॥೩೯॥
ಆಧೀ ಅಧ್ಯಾತ್ಮಶ್ರವಣ। ಮಗ ಸದ್ಗುರು ಪಾದಸೇವನ।
ಪುಢೇ ಆತ್ಮನಿವೇದನ। ಸದ್ಗುರು ಪ್ರಸಾದೇ ॥೪೦॥
ಆತ್ಮನಿವೇದನಾ ಉಪರೀ। ನಿಖಳ ವಸ್ತು ನಿರಂತರೀ।
ಆಪಣ ಆತ್ಮಾ ಅಂತರೀ। ಬೋಧ ಜಾಲಾ ॥೪೧॥
ತ್ಯಾ ಬ್ರಹ್ಮಬೋಧೇ ಬ್ರಹ್ಮಚಿ ಜಾಲಾ। ಸಂಸಾರಖೇದ ತೋ ಉಡಾಲಾ।
ದೇಹೋ ಪ್ರಾರಬ್ಧೀ ಟಾಕಿಲಾ। ಸಾವಕಾಸ ॥೪೨॥
ಯಾಸೀ ಮ್ಹಣಿಜೆ ಆತ್ಮಜ್ಞಾನ। ಯೇಣೇ ಪಾವಿಜೇ ಸಮಾಧಾನ।
ಪರಬ್ರಹ್ಮೀ ಅಭಿನ್ನ। ಭಕ್ತ ಚಿ ಜಾಲಾ ॥೪೩॥
ಆತಾ ಹೋಣಾರ ತೇ ಹೋಯೆನಾ ಕಾ। ಆಣಿ ಜಾಣಾರ ತೇ ಜಾಯೆನಾ ಕಾ।
ತುಟಲೀ ಮನಾಂತೀಲ ಆಶಂಕಾ। ಜನ್ಮಮೃತ್ಯಾಚೀ ॥೪೪॥
ಸಂಸಾರೀ ಪುಂಡಾವೇ ಚುಕಲೇ। ದೇವಾ ಭಕ್ತಾ ಐಕ್ಯ ಜಾಲೇ।
ಮುಖ್ಯ ದೇವಾಸ ವೋಳಖಿಲೆ। ಸತ್ಸಂಗೇ ಕರೂನೀ ॥೪೫॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
"ಬ್ರಹ್ಮ ಪಾವನ" ನಾಮ ಸಮಾಸ ದ್ವಿತೀಯ॥

ನಾನು ದೇಹ ಇರುವೆ ಅನ್ನುವ ಬುದ್ಧಿಯನ್ನು ದೇವರಿಗೆ–ಸದ್ಗುರುವಿಗೆ ಅರ್ಪಣ ಮಾಡಿರಿ ಮತ್ತು ನೀವು ನಿಮ್ಮ ಸ್ವತಃವನ್ನು ಸ್ವಸ್ವರೂಪದಲ್ಲಿ ಲೀನ ಮಾಡಿರಿ. ವಿವೇಕದ ಅಭ್ಯಾಸದಿಂದ ನೀವು ಸ್ವಸ್ವರೂಪದಿಂದ ಬೇರೆಯಾಗಿ ಉಳಿಯಬೇಡಿರಿ. ಸ್ವಸ್ವರೂಪದಲ್ಲಿ ಲೀನ ಹೊಂದುವ ಈ ಅವಸ್ಥೆಗೆ ಆತ್ಮನಿವೇದನವೆನ್ನುತ್ತಾರೆ. [೩೯] ಮೊದಲಲ್ಲಿ ಅಧ್ಯಾತ್ಮ ಶ್ರವಣ ಮಾಡಬೇಕು. ಆಮೇಲೆ ಶ್ರೀ ಗುರುವಿನ ಚರಣಗಳಲ್ಲಿ ಲೀನತನದಿಂದ ಸೇವೆ ಮಾಡಬೇಕು. ಆಮೇಲೆ ಸದ್ಗುರುವಿನ ಕೃಪಾ ಪ್ರಸಾದದಿಂದ ಆತ್ಮನಿವೇದನವನ್ನು ಸಾಧಿಸಿಕೊಳ್ಳಬೇಕು [೪೦] **ಆತ್ಮನಿವೇದನ ಹೊಂದಿದ ಮೇಲೆ ನಿಮ್ಮಳ ಶಾಶ್ವತ ಆತ್ಮವಸ್ತು ಒಂದು ಮಾತ್ರ ಉಳಿಯುತ್ತದೆ. ಆಗ ನಾನು ಮತ್ತು ಆತ್ಮಾ ಒಂದೇ ಇರುವೆವು ಎಂಬ ಜ್ಞಾನವಾಗುವದು. ಶ್ರವಣ, ಮನನ, ನಿಧಿದ್ಯಾಸ ಮತ್ತು ಸಾಕ್ಷಾತ್ಕಾರ ಹೀಗೆ ನಾಲ್ಕು ಪಾವುಟಿಗೆಗಳು ಉಪನಿಷತ್‌ದಲ್ಲಿ ಹೇಳಿದ ಪರಮಾರ್ಥ ಸಾಧನವನ್ನೇ ಶ್ರೀ ಸಮರ್ಥರು ನಮಗೆ ತಿಳಿಯುವಂತೆ ಬೇರೆ ಬೇರೆ ಶಬ್ದಗಳಲ್ಲಿ ಈ ದಾಸಬೋಧದ ಮುಖಾಂತರ ಹೇಳಿದ್ದಾರೆ.** [೪೧] ಇಂಥ ಆತ್ಮಜ್ಞಾನದಿಂದ ಜೀವವು ಬ್ರಹ್ಮರೂಪ ಆಗುವದು. ಇದರಿಂದ ಸಂಸಾರದಲ್ಲಿಯ ದುಃಖ ನಾಶವಾಗುತ್ತದೆ. ಆನಂತರ ದೇಹವನ್ನು ಪ್ರಾರಬ್ಧದ ಸ್ವಾಧೀನಕ್ಕೆ ಬಿಟ್ಟು ಜೀವನು ಮನಸ್ಸಿನಿಂದ ಸ್ವಸ್ಥನಾಗಿ ಇರುವನು. ಜ್ಞಾನಿಯದಾಗಲೀ, ಅಜ್ಞಾನಿಯದಾಗಲೀ ಜೀವನ ಯಾತ್ರೆ ಪ್ರಾರಬ್ಧಗತಿಗನುಸಾರವಾಗಿ ನಡೆಯುವದು. ಆತ್ಮಜ್ಞಾನಿ ಮನುಷ್ಯರಿಗೆ ಇದು ತಿಳಿಯುತ್ತದೆ. ಅಜ್ಞಾನಿ ಮನುಷ್ಯನಿಗೆ ತಿಳಿಯುವದಿಲ್ಲ. ಆದುದರಿಂದ ಜ್ಞಾನವಾದ ಮೇಲೆ ಜ್ಞಾನಿ ಮನುಷ್ಯ ತನ್ನ ದೇಹವನ್ನು ಪ್ರಾರಬ್ಧದ ಸ್ವಾಧೀನ ಮಾಡುವನು. ಬರುವ ಸುಖ ದುಃಖಗಳನ್ನು ಸ್ವಸ್ಥ ಚಿತ್ತದಿಂದ ಶಾಂತವಾಗಿ ಭೋಗಿಸುವನು. [೪೨] ಸಾರಾಂಶ, ಆತ್ಮಜ್ಞಾನವೆಂದು ಇದಕ್ಕೇ ಅನ್ನುತ್ತಾರೆ. ಆತ್ಮಜ್ಞಾನದಿಂದ ಸಮಾಧಾನ ಸಿಗುತ್ತದೆ. ಜೀವವು ಪರಬ್ರಹ್ಮದಲ್ಲಿ ಲೀನವಾಗಿ ಏಕರೂಪ ಆಗುವದು. ಇಂಥವನೇ ನಿಜವಾದ ಭಕ್ತನೆನಿಸುವನು. [೪೩] "ಅಂತೂ ಏನು ಆಗುವದಿದೆಯೋ ಅದು ಆಗಿ ಹೋಗಲಿ, ಏನು ಹೋಗುವದಿದೆಯೋ ಅದು ಹೋಗಿ ಬಿಡಲಿ" ಎಂಬ ಮನದ ನಿರ್ಭಯ ಮತ್ತು ನಿಶ್ಚಿಂತ ಅವಸ್ಥೆ ಉಂಟಾಗುತ್ತದೆ. ಒಟ್ಟಿನಲ್ಲಿ ಜನನ ಮರಣದ ಭಯವೇ ಮನಸ್ಸಿನಿಂದ ಸಂಪೂರ್ಣವಾಗಿ ನಾಶವಾಗಿ ಬಿಡುವದು. [೪೪] ಸಂತರ ಸಂಗತಿಯ ಲಾಭವಾಯಿತೆಂದರೆ ಮುಖ್ಯ ದೇವರ ಗುರುತು ಗೊತ್ತಾಗುವದು. ಇದಾದ ನಂತರ ದೇವ ಮತ್ತು ಭಕ್ತ ಏಕರೂಪರಾಗಿ ಬಿಡುವರು. ಮತ್ತು ಆಮೇಲೆ ಈ ಸಂಸಾರದಲ್ಲಿಯ ಜಗ್ಗಾಟ, ನುಗ್ಗಾಟದ ಲಚಂಡ (ಸಂಕಟ)ವು ಪೂರ್ಣ ವಿರಾಮ ಹೊಂದುವದು. (೪೫)

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಆರನೆಯ ದಶಕದಲ್ಲಿಯ
"ಬ್ರಹ್ಮಪಾವನ" ಎಂಬ ಎರಡನೆಯ ಸಮಾಸವು ಮುಗಿದುದು.

● ●

## ಸಮಾಸ ತೃತೀಯ : ಮಾಯೋದ್ಭವ ನಿರೂಪಣ

॥ಶ್ರೀರಾಮ॥ ನಿರ್ಗುಣ ಆತ್ಮಾ ತೋ ನಿರ್ಮಳ । ಜೈಸೇ ಆಕಾಶ ಅಂತರಾಳ ।
ಘನದಾಟ ನಿರ್ಮಳ ನಿಶ್ಚಳ । ಸದೋದಿತ ॥೧॥
ಜೇ ಖಂಡಲೇಚಿ ನಾಹೀ ಅಖಂಡ । ಜೇ ಉದಂಡಾಹೂನಿ ಉದಂಡ ।
ಜೇ ಗಗನಾಹೂನಿ ವಾಡ । ಆಣಿ ಸೂಕ್ಷ್ಮ ॥೨॥
ಜೇ ದಿಸೇನಾ ನಾ ಭಾಸೇನಾ । ಜೇ ಉಪಜೇನಾ ನಾ ನಾಸೇನಾ ।
ಜೇ ಯೇಯೇನಾ ನಾ ಜಾಯೇನಾ । ಪರಬ್ರಹ್ಮ ತೇ ॥೩॥

## ದಶಕ ೬. ಸಮಾಸ ೩. ಮಾಯೋದ್ಭವ ನಿರೂಪಣ

ಹಿಂದಿನ ಸಮಾಸದಲ್ಲಿಯ ವಿಷಯವನ್ನೇ ಈ ಸಮಾಸದಲ್ಲಿ ಪುನಃ ಹೇಳಲಾಗಿದೆ. ಪರಮಾತ್ಮನ ಸ್ವರೂಪವು ಅತ್ಯಂತ ವ್ಯಾಪಕ ಎಲ್ಲ ಕಾಲಕ್ಕೂ ಸತ್ಯವಾಗಿರುವ, ನಿತ್ಯವಾಗಿರುವ ಸೂಕ್ಷ್ಮ ಮತ್ತು ಶಾಶ್ವತವಾಗಿರುವದು. ಆದರೆ ದೃಶ್ಯವಿಶ್ವವು ಏಕದೇಶಿಯ ಮರ್ಯಾದಿತ ಸ್ಥೂಲ ಜಡ ಮತ್ತು ಅಶಾಶ್ವತವಿರುವದು. ಆದರೂ ಸಹಈಎಲ್ಲದೃಶ್ಯವು ಆ ಪರಮಾತ್ಮ ಸ್ವರೂಪದೊಳಗಿಂದಲೇ ಉತ್ಪನ್ನವಾಗಿರುವದೆಂದು ತೋರುವದು. ಇದು ಇದರಲ್ಲಿಯೇ ಇದ್ದುಕೊಂಡು ಕೊನೆಗೆ ಇದರಲ್ಲಿಯೇ ಲೀನವಾಗಿ ಹೋಗುವದು. ಮಾಯಾ ಎಂಬ ಹೆಸರಿನ ಪರಮಾತ್ಮ ಸ್ವರೂಪದ ಶಕ್ತಿಯು ಈ ದೃಶ್ಯದ ಎಲ್ಲ ಆಟವನ್ನು ಉಂಟು ಮಾಡುವದು. ಪರಮಾತ್ಮನು ಕೇವಲ ಚೈತನ್ಯಮಯನಾಗಿರುವನು. ಅದೇ ದೃಶ್ಯವಿಶ್ವವು ಪಂಚಭೂತಗಳಿಂದ ತುಂಬಿರುತ್ತದೆ. ಪರಮಾತ್ಮನು ಕೇವಲ ನಿರ್ಗುಣ ನಿರಾಕಾರನಿರುವನು. ಆದರೆ ಅದೇ ವಿಶ್ವವು ಸಗುಣ ಮತ್ತು ನಿರ್ಗುಣ ಇವುಗಳ ಮಿಶ್ರಣವಿರುವದು. ನಮ್ಮ ದೇಹವು ಪಂಚಭೂತಗಳಿಂದ ತಯಾರಾದದ್ದಿರುವದು. ಯಾಕಂದರೆ ಅದು ವಿಶ್ವದ ಭಾಗ (ಅಂಶ)ವಿರುವದು. ವಿವೇಕದಿಂದ ದೇಹದ ಬಗ್ಗೆ ಶೋಧ ಮಾಡಿದ್ದಾದರೆ ಅದು "ತತ್ವಗಳ ಒಂದು ಗಂಟು" ಇರುವದೆಂಬುದರ ತಿಳವಳಿಕೆ ಅನುಭವ ಬರುವದು. ಆಮೇಲೆ ದೇಹಬುದ್ಧಿ ಇಲ್ಲದಾಗಿ ಶುದ್ಧ ಆತ್ಮಸ್ವರೂಪವು ಮಾತ್ರ ಉಳಿಯುವದು. ಇದೇ "ನಾನು ಇರುವೆ" ಹೀಗೆ ಅನುಭವ ಬಂದ ಕೂಡಲೇ ಆತ್ಮಜ್ಞಾನವಾಗುವದು. ಇದರಿಂದ ಸಮಾಧಾನ ಪ್ರಾಪ್ತವಾಗುವದು.

### ದಶಕ ೬. ಸಮಾಸ ೩. ಮಾಯೋದ್ಭವ ನಿರೂಪಣ (ನುಡಿ ೩೭)

ಮೊದಲು ಬ್ರಹ್ಮಸ್ವರೂಪ ಹೇಗಿರುವದೆಂಬುದನ್ನು ಹೇಳುತ್ತಾರೆ. ಇದನ್ನು ಹೇಳುವಾಗ "ಇಲ್ಲ ಅಥವಾ ಅಲ್ಲವೆಂಬ" ("ನಾಹೀ ಪಣಾಚಿ") ಪದ್ಧತಿಯನ್ನು ಉಪಯೋಗಿಸಿದ್ದಾರೆ. ಇದಕ್ಕೆ ಕಾರಣ ವೆಂದರೆ ನಮ್ಮ ಈಗಿನ ಸದ್ಯದ ಇರುವಿಕೆಯಲ್ಲಿ ದೃಶ್ಯದ ಗುಣಧರ್ಮ ನಮಗೆ ಗೊತ್ತಿರುತ್ತದೆ. (ದೃಶ್ಯವು ನಮಗೆ ಗೊತ್ತಿರುತ್ತದೆ.) ದೃಶ್ಯವು ನಮಗೆ ಜ್ಞಾತವಿರುವದು. ಆದರೆ ಪರಮಾತ್ಮ ಸ್ವರೂಪವು ಅಜ್ಞಾತ ವಿರುವದು. ಆದ್ದರಿಂದ ನಾವು ಜ್ಞಾತದಿಂದ ಅಜ್ಞಾತದ ಕಡೆಗೆ ಹೋಗಬೇಕಾಗುವದು. ಅಂತೆಯೇ ದೃಶ್ಯದ ಗುಣಧರ್ಮಗಳು ಪರಮಾತ್ಮನಲ್ಲಿ ಇಲ್ಲವೆಂದು ನಕಾರಾತ್ಮಕ ವರ್ಣನೆಯನ್ನು ಶ್ರೀ ಸಮರ್ಥರು ಮಾಡಬೇಕಾಯಿತು:- ಗುಣಮಯ ಪ್ರಕೃತಿಯ ಆಚೆಗೆ ಇರುವಂಥ ಆತ್ಮವು ಅತ್ಯಂತ ನಿರ್ಮಲವಿರುತ್ತದೆ. ಆಕಾಶದ ಪೊಳ್ಳು (ಪೋಕಳ, ರಿಕಾಮಿ) ಸ್ಥಳವು ಯಾವಾಗಲೂ (ಸದೋದಿತ) ತುಂಬಿರುತ್ತದೆ. ಮತ್ತು ಮಲರಹಿತವಾಗಿ ಅತಿಶುದ್ಧ ಮತ್ತು ಚಲನರಹಿತವಾಗಿ ಇರುವದು. ಇದರಂತೆಯೇ ಆತ್ಮಸ್ವರೂಪವು ಸದಾ ಸರ್ವಕಾಲ ಘನದಾಟ- ಸಂಪೂರ್ಣ ತುಂಬಿದ ನಿರ್ಮಲ ಮತ್ತು ನಿಶ್ಚಲ ಇರುವದು. [೧] ಇದು ಅಖಂಡ (ಪೂರ್ಣ)ವಾದದ್ದಿರುವದು ಯಾಕಂದರೆ ಇದರಲ್ಲಿ ಭಾಗಗಳನ್ನು ಮಾಡಲಿಕ್ಕೆ ಬರುವದಿಲ್ಲ. ಇಡೀ ವಿಶ್ವದಲ್ಲಿ ಯಾವ ಯಾವುದು ವಿಶಾಲವಾಗಿದೆ ಯಂದು ಅನ್ನುವರೋ ಅವೆಲ್ಲಕ್ಕಿಂತಲೂ ಅತಿ ವಿಶಾಲವಿರುವದು. ಇದು ಆಕಾಶದಕ್ಕಿಂತಲೂ ವ್ಯಾಪಕವಾದ ಮತ್ತು ಅಧಿಕ ಸೂಕ್ಷ್ಮವಿರುವದು. [೨] ಇದು ಇಂದ್ರಿಯಗಳಿಗೆ ಕಾಣಸುವದಿಲ್ಲ. ಮನಸ್ಸಿಗೆ ಭಾಸ [ಹೊಳೆ] ವಾಗುವದಿಲ್ಲ. ಇದು ಹುಟ್ಟುವದಿಲ್ಲ. ಉತ್ಪನ್ನವಾಗುವದಿಲ್ಲ. ಮತ್ತು ನಾಶವೂ ಆಗುವದಿಲ್ಲ. ಇದು ಎಲ್ಲಿಯೂ ಹೋಗುವದಿಲ್ಲ. ಮತ್ತು ಬರುವದಿಲ್ಲ. ಅಂತೂ ಒಟ್ಟಿನಲ್ಲಿ ಪರಬ್ರಹ್ಮವೆಂಬುದು ಈ ರೀತಿಯಾಗಿರುತ್ತದೆ. [೩]

ಜೇ ಚಳೇನಾ ನಾ ಢಳೇನಾ । ಜೇ ತುಟೇನಾ ನಾ ಫುಟೇನಾ ।
ಜೇ ರಚೇನಾ ನಾ ಖಚೇನಾ । ಪರಬ್ರಹ್ಮ ತೇ ॥೪॥

ಜೇ ಸನ್ಮುಖ ಚಿ ಸರ್ವಕಾಳ । ಜೇ ನಿಃಕಳಂಕ ಆಣಿ ನಿಖಳ ।
ಸರ್ವಾಂತರ ಆಕಾಶ ಪಾತಾಳ । ವ್ಯಾಪೂನಿ ಅಸೇ ॥೫॥

ಅವಿನಾಶ ತೇ ಬ್ರಹ್ಮ ನಿರ್ಗುಣ । ನಾಸೆ ತೇ ಮಾಯಾ ಸಗುಣ ।
ಸಗುಣ ಆಣಿ ನಿರ್ಗುಣ । ಕಾಲವಲೇ ॥೬॥

ಯಾ ಕರ್ದಮಾಚಾ ವಿಚಾರ । ಕರೂ ಜಾಣತೀ ಯೋಗೇಶ್ವರ ।
ಜೈಸೇ ಕ್ಷೀರ ಆಣಿ ನೀರ । ರಾಜಹಂಸ ನಿವಡಿತೀ ॥೭॥

ಜಡ ಸಬಳ ಪಂಚಭೂತಿಕ । ತ್ಯಾಮಧ್ಯೇ ಆತ್ಮಾ ವ್ಯಾಪಕ ।
ತೋ ನಿತ್ಯಾನಿತ್ಯ ವಿವೇಕ । ಪಾಹಾತಾ ಕಳೇ ॥೮॥

ಉಸಾಮಧ್ಯೇ ಘೇಈಜೆ ರಸ । ಯೇರ ತೇ ಸಾಂಡಿಜೆ ಬಾಕಸ ।
ತೈಸಾ ಜಗಾಮಧ್ಯೇ ಜಗದೀಶ । ವಿವೇಕೇ ವೊಳಖಾವಾ ॥೯॥

ರಸ ನಾಸಿವಂತ ಪಾತಳ । ಆತ್ಮಾ ಶಾಶ್ವತ ನಿಶ್ಚಳ ।
ರಸ ಅಪೂರ್ಣ ಆತ್ಮಾ ಕೇವಳ । ಪರಿಪೂರ್ಣ ಜಾಣಾವಾ ॥೧೦॥

ಆತ್ಮ್ಯಾಸಾರಿಖೇ ಯೇಕ ಅಸಾವೇ । ಮಾ ತೇ ದೃಷ್ಟಾಂತಾಸಿ ದ್ಯಾವೇ ।
ದೃಷ್ಟಾಂತಮಿಸೇ ಸಮಜಾವೇ । ಕೈಸೇ ತರೀ ॥೧೧॥

ಐಸೀ ಆತ್ಮಸ್ಥಿತಿ ಸಂಚಲೀ । ತೇಥೇ ಮಾಯಾ ಕೈಸೀ ಜಾಲೀ ।
ಜೈಸೀ ಆಕಾಶೀ ವಾಹಿಲೀ । ಝುಳೂಕ ವಾಯೋಚೀ ॥೧೨॥

ಹಾಲಚಾಲ ಅಥವಾ ಅಲ್ಲಾಡುವದಿಲ್ಲ. ಅಂದರೆ ಬದಲಾಗುವದಿಲ್ಲ. ಇದ್ದದ್ದು ಇದ್ದಂತೆಯೇ ಇರುವಂಥಾದ್ದು ಅಂದರೆ ದೃಶ್ಯದ ಧರ್ಮವು ಇದರಲ್ಲಿ ಇರುವದಿಲ್ಲ. ಅರ್ಥಾತ್ ಚಲಿಸುವದಿಲ್ಲ. ಅಲ್ಲಾಡುವದಿಲ್ಲ. ಇದು ಮುರಿಯುವದಿಲ್ಲ. ಮತ್ತು ಒಡೆಯುವದಿಲ್ಲ. ಇದರಲ್ಲಿ ವಿಭಾಗವೇ ಇಲ್ಲದ್ದರಿಂದ ಇದರ ರಚನೆ ಮಾಡಲಿಕ್ಕೆ ಬರುವದಿಲ್ಲ. ಇದು ಅಕ್ಷಯವಿರುವದರಿಂದ ಇದು ನಾಶ ಹೊಂದುವದಿಲ್ಲ. ಪರಬ್ರಹ್ಮವೆಂಬುದು ಈ ರೀತಿ ಇರುವದು. [೪] ಇದು ಎಲ್ಲ ಕಡೆಗೂ ಇರುವದರಿಂದ ಸರ್ವಕಾಲದಲ್ಲಿಯೂ ಎದುರಿಗೇ ಇರುತ್ತದೆ. ಇದು ಅತ್ಯಂತ ದೋಷರಹಿತ [ನಿರ್ದೋಷ] ಮತ್ತು ಕೇವಲ ಶುದ್ಧವಾದದ್ದಿರುವದು. ಇದು ಆಕಾಶ, ಪಾತಾಳದಲ್ಲೆಲ್ಲ ವ್ಯಾಪಿಸಿರುವದರಿಂದ ಇದು ಎಲ್ಲದರ ಅಂತರ್ಯಾಮದಲ್ಲಿ ವಾಸ ಮಾಡುವದು. (೫) ಎಂದೂ ನಾಶವಾಗದಿರುವ ಈ ಬ್ರಹ್ಮವು ನಿರ್ಗುಣವಿರುವದು. ಯಾವುದು ನಾಶ ಹೊಂದುವದೋ ಅದು ಮಾಯೆಯೆಂದು ತಿಳಿಯಬೇಕು. ಮಾಯೆ ಸಗುಣವಿರುವದು. ಮಾಯೆಯಲ್ಲಿ ಸಗುಣ ಹಾಗೂ ನಿರ್ಗುಣದ ಮಿಶ್ರಣವಿರುವದು. (೬) **ಈ ದೃಶ್ಯ ಜಗತ್ತಿನಲ್ಲಿ ನಾವು ಜನ್ಮ ಹೊಂದುವೆವು. ಸಗುಣ ಮತ್ತು ನಿರ್ಗುಣ ಇದರ ಮಿಶ್ರಣದೊಳಗೆ ನಾವು ಇರಲೇಬೇಕಾಗುವದು. ರಾಜ ಹಂಸವು ಹೇಗೆ ನೀರು ಹಾಲನ್ನು ಪ್ರತ್ಯೇಕಿಸಿಕೊಂಡು ಹಾಲನ್ನೇ ಕುಡಿಯುವದೋ ಅದರಂತೆ ಸಾಧಕನು ವಿವೇಕದಿಂದ ದೃಶ್ಯವನ್ನು ಪ್ರತ್ಯೇಕಗೊಳಿಸಿ ಬಾಜೂಕ್ಕೆ ಸರಿಸಬೇಕು. ಮತ್ತು ಕೇವಲ ಆತ್ಮಸ್ವರೂಪವನ್ನು ಸೇವಿಸಬೇಕು:-** ಈ ಸಗುಣ ನಿರ್ಗುಣಗಳ ಮಿಶ್ರಣದ ಬಗ್ಗೆ ಯೋಗ್ಯ ವ ಸರಿಯಾದ ವಿಚಾರ ಮಾಡುವ ರೀತಿಯನ್ನು ಶ್ರೇಷ್ಠ ಜ್ಞಾನಿ ಸಂತ ಸತ್ಪುರುಷರು ತಿಳಿದಿರುತ್ತಾರೆ. ರಾಜಹಂಸವು ಹಾಲು ಮತ್ತು ನೀರಿನ ಮಿಶ್ರಣವಿದ್ದ ಹಾಲಿನಲ್ಲಿ ಅದು ನೀರನ್ನು ಬೇರ್ಪಡಿಸಿಕೊಂಡು ಹಾಲನ್ನು ಮಾತ್ರ ಕುಡಿಯುತ್ತದೆ. ಇದೇ ಪ್ರಕಾರ ಜ್ಞಾನಿ ಸಂತರು ಮಾಯೆಯಲ್ಲಿಯ ಸಗುಣ ನಿರ್ಗುಣ ಮಿಶ್ರಣದೊಳಗಿಂದ ಸಗುಣವನ್ನು ಬೇರ್ಪಡಿಸಿ ಬಾಜೂಕ್ಕೆ ಸರಿಸಿ(ಬೇರೆ ತೆಗೆದು) ನಿರ್ಗುಣವನ್ನು ಮಾತ್ರ ಸೇವಿಸುತ್ತಾರೆ. (೭) ಪಂಚ ಮಹಾಭೂತಗಳಿಂದ ಯಾವ ಯಾವುದು ನಿರ್ಮಾಣವಾಗುವದೋ, ಅದೆಲ್ಲವೂ ಮಿಶ್ರಿತ ಮತ್ತು ಜಡ[ಅಚೇತನ] ಕ್ರಿಯಾಶೂನ್ಯವಿರುತ್ತದೆ. ಸರ್ವ ವ್ಯಾಪಕ ಆತ್ಮನು ಇವುಗಳ ಅಂತರ್ಯಾಮಿಯಾಗಿ ಇರುವನು. ಶಾಶ್ವತವಾದದ್ದು ಯಾವುದು? ಮತ್ತು ಅಶಾಶ್ವತವಾದದ್ದು ಯಾವುದು? ಇದರ ವಿಷಯದಲ್ಲಿ ವಿವೇಕದಿಂದ ತಿಳಿದು ವಿಚಾರ ಮಾಡಿದರೆ ಎಲ್ಲವೂ ತಿಳಿಯುವದು. (೮) ಕಬ್ಬನ್ನು ತಿನ್ನುವಾಗ ರಸವನ್ನು ಮಾತ್ರ ಸೇವಿಸಿ ಸಿಪ್ಪೆಯನ್ನು ಒಗೆಯಬೇಕಾಗುವದು. ಇದರಂತೆಯೇ ಜಗವು ಕಬ್ಬು ಎಂದು ಕಲ್ಪನೆ ಮಾಡಿದರೆ ಪರಮಾತ್ಮನು ಕಬ್ಬಿನ ರಸ ಎಂದು ತಿಳಿಯಬೇಕು. ಸಾಧಕನು ವಿವೇಕದಿಂದ ಜಗದೊಳಗಿಂದ ಜಗದಾತ್ಮನನ್ನು ಗುರುತಿಸಿ ತಿಳಿಯಬೇಕು. (೯) ಆತ್ಮನು "ರಸ" ಇರುವನೆಂದು ಕಲ್ಪನೆ ಮಾಡಿದೆವು. ಆದರೆ ಈ ದೃಷ್ಟಾಂತವೂ (ಉಪಮೆಯು) ಸಹ ಅಪೂರ್ಣವೇ ಇರುವದು. ಹೇಗೆಂದರೆ:- ರಸವು ನೀರಿನಂತೆ ದ್ರವ ವಸ್ತು ಮತ್ತು ನಾಶವಾಗುವಂಥಾದ್ದು ಇರುವದು. ಆದರೆ ಅದೇ ಆತ್ಮವು ನಿಶ್ಚಲ ಮತ್ತು ಶಾಶ್ವತವಿರುವದು. ಇದಲ್ಲದೇ "ರಸ" ಅಪೂರ್ಣವಿರುವದು. ಅದೇ ಆತ್ಮನು ಸರ್ವ ದೃಷ್ಟಿಯಿಂದ ಪರಿಪೂರ್ಣನಿರುವನು. ಇದನ್ನೂ ಸಹ ನೀವು ವಿವೇಕದಿಂದ ತಿಳಿಯಿರಿ. (೧೦) ಈ ದೃಶ್ಯ ಜಗದಲ್ಲಿ ಆತ್ಮನಂತಹ ಒಂದಾದರೂ ವಸ್ತುವು ಇದ್ದದ್ದಾಗಿದ್ದರೆ ಅದರ ಮೇಲಿಂದ ಆತ್ಮನು ಹೇಗಿರುವನೆಂಬುದನ್ನು ಸರಿಯಾಗಿ ಹೇಳಲಿಕ್ಕೆ ಬರಬಹುದಾಗಿತ್ತು. ಆದರೆ ಜಗತ್ತಿನಲ್ಲಿ ಆತ್ಮನಂಥ ವಸ್ತು ಇನ್ನೊಂದು ಇಲ್ಲವೇ ಇಲ್ಲ. ಅಂತೆಯೇ ನಾವು ದೃಷ್ಟಾಂತದ ಕೆಲವೊಂದು ಹೋಲಿಕೆಯ ಮೇಲಿಂದ ಆತ್ಮನು ಹೇಗಿರುವನೆಂಬುದನ್ನು ಹೇಗಾದರೂ ಮಾಡಿ ವಿವೇಕದಿಂದ ತಿಳಿದುಕೊಳ್ಳಬೇಕು. (೧೧) **ಮೂಲ ಶುದ್ಧ ಸ್ವರೂಪದಲ್ಲಿ ಮಾಯಾ ಹೇಗೆ ಉಂಟಾಯಿತೆಂಬುದನ್ನು ಸ್ವಲ್ಪದರಲ್ಲಿ ವರ್ಣನೆ ಮಾಡುತ್ತಾರೆ:-** ಹೀಗೆ ಕೇವಲ ಆತ್ಮಸ್ವರೂಪವೇ ಎಲ್ಲ ಕಡೆಗೂ ತುಂಬಿರುವಾಗ ಇದರೊಳಗೆ ಮಾಯಾ ಹೇಗೆ ಉತ್ಪನ್ನವಾಯಿತೆಂಬುದು ಒಂದು ಪ್ರಶ್ನೆ ಇದಕ್ಕೆ ಉತ್ತರ ಈ ರೀತಿ ಇರುವದು. ಆಕಾಶದಲ್ಲಿ ವಾಯುವಿನ ಒಂದು ಝುಳಕು ಕಿಂಚಿತ್ ಭಾಸ ಹೇಗೆ ಉಂಟಾಗುವದೋ ಇದೇ ಪ್ರಕಾರ ಶುದ್ಧ ಆತ್ಮಸ್ಥಿತಿಯೊಳಗಿಂದ ಸ್ಫುರಣ ರೂಪದಿಂದ ಮಾಯಾ ಉತ್ಪನ್ನವಾದಳು. (೧೨)

ವಾಯೋಪಾಸೂನಿ ತೇಜ ಜಾಲೇ । ತೇಜಾಪಾಸೂನಿ ಆಪ ನಿಪಜಲೇ ।
ಆಪಾಪಾಸೂನಿ ಆಕಾರಲೇ । ಭೂಮಂಡಳ ॥೧೩॥

ಭೂಮಂಡಳಾಪಾಸೂನಿ ಉತ್ಪತ್ತೀ । ಜೀವ ನೇಣೋ ಜಾಲೆ ಕಿತೀ ।
ಪರಂತು ಬ್ರಹ್ಮ ಆದಿಅಂತೀ । ವ್ಯಾಪೂನಿ ಆಹೇ ॥೧೪॥

ಜೇ ಜೇ ಕಾಹೀ ನಿರ್ಮಾಣ ಜಾಲೇ । ತೇ ತೇ ಅವಘೇಚಿ ನಾಸಲೇ ।
ಪರೀ ಮುಳೀ ಬ್ರಹ್ಮ ತೇ ಸಂಚಲೇ । ಜೈಸೇ ತೈಸೇ ॥೧೫॥

ಘಟಾಪೂರ್ವೀ ಆಕಾಶ ಅಸೇ। ಘಟಾಮಧೇ ಆಕಾಶ ಭಾಸೇ।
ಘಟ ಫುಟತಾ ನ ನಾಸೇ। ಆಕಾಶ ಜೈಸೇ ॥೧೬॥

ತೈಸೇ ಪರಬ್ರಹ್ಮ ಕೇವಳ । ಅಚಳ ಆಣೀ ಅಢಳ ।
ಮಧೇ ಹೋತ ಜಾತ ಸಕಳ । ಸಚರಾಚರ ॥೧೭॥

ಜೇ ಜೇ ಕಾಹೀ ನಿರ್ಮಾಣ ಜಾಲೇ । ತೇ ತೇ ಆಧೀಚ ಬ್ರಹ್ಮೀ ವ್ಯಾಪಿಲೇ ।
ಸರ್ವ ನಾಶತಾ ಉರಲೇ । ಅವಿನಾಶ ಬ್ರಹ್ಮ ॥೧೮॥

ಐಸೇ ಬ್ರಹ್ಮ ಅವಿನಾಶ । ತೇಚಿ ಸೇವಿತೀ ಜ್ಞಾತೆ ಪುರುಷ ।
ತತ್ತ್ವ ನಿರ್ಶನೇ ಆಪಣಾಸ । ಆಪಣ ಲಾಭೇ ॥೧೯॥

ತತ್ತ್ವೇ ತತ್ತ್ವ ಮೇಳವಿಲೇ । ತ್ಯಾಸೀ ದೇಹ ಹೇ ನಾಮ ಠೇವಿಲೇ ।
ತೇ ಜಾಣತೆ ಪುರುಷೀ ಶೋಧಿಲೇ । ತತ್ತ್ವೇ ತತ್ತ್ವ ॥೨೦॥

ತತ್ತ್ವಝಾಡಾ ನಿಶೇಷ ಹೋತಾ । ತೇಥೇ ನಿಮಾಲೀ ದೇಹ ಅಹಂತಾ ।
ನಿರ್ಗುಣ ಬ್ರಹ್ಮೀ ಐಕ್ಯತಾ । ವಿವೇಕೇ ಜಾಲೀ ॥೨೧॥

ವಿವೇಕೇ ದೇಹಾಕಡೆ ಪಾಹಿಲೇ । ತೊ ತತ್ತ್ವೇ ತತ್ತ್ವ ವೊಸರಲೇ ।
ಆಪಣ ಕಾಹೀ ನಾಹೀ ಆಲೇ । ಪ್ರತ್ಯಯಾಸೀ ॥೨೨॥

ಆಪಲಾ ಆಪಣ ಶೋಧ ಘೇತಾ । ಆಪಲೀ ತೋ ಮಾಈಕ ವಾರ್ತಾ ।
ತತ್ತ್ವಾಂತೀ ಉರಲೇ ತತ್ತ್ವತಾ । ನಿರ್ಗುಣ ಬ್ರಹ್ಮ ॥೨೩॥

ವಾಯುವಿನಿಂದ ಅಗ್ನಿ ಉತ್ಪನ್ನನಾದನು. ಅಗ್ನಿಯಿಂದ ನೀರು ಉಂಟಾಯಿತು. ನೀರಿನಿಂದ ಭೂಮಿ (ಪೃಥ್ವಿ) ಆಕಾರ ಹೊಂದಿತು. (೧೩) ಪೃಥ್ವಿಯಿಂದ ಜೀವಸೃಷ್ಟಿ ನಿರ್ಮಾಣವಾಯಿತು. ಎಷ್ಟು ಜೀವಗಳು ನಿರ್ಮಾಣಗೊಂಡವೆಂದು ಕೇಳಿದರೆ ಇದಕ್ಕೆ ಗಣನೆಯೇ ಇಲ್ಲ. ಆದರೆ ಸರ್ವಕ್ಕಿಂತ ಹಾಗೂ ಜೀವದ ಪ್ರಾರಂಭಕ್ಕಿಂತ ಮೊದಲು ಮತ್ತು ಕೊನೆಯಲ್ಲಿ ಬ್ರಹ್ಮಮಾತ್ರ ಸರ್ವತ್ರ ವ್ಯಾಪಿಸಿಕೊಂಡೇ ಇರುತ್ತಾನೆ.(೧೪) **ವಿಶ್ವ-(ಸೃಷ್ಟಿ) ನಿರ್ಮಾಣಗೊಂಡಿತು. ಮತ್ತು ಇದು ಇಲ್ಲದಾಗಿ ಹೋದರೂ ಬ್ರಹ್ಮನು ಅವಿನಾಶಿತನದಿಂದ ಹೇಗೆ ಸರ್ವವನ್ನೂ ವ್ಯಾಪಿಸಿರುವನೆಂಬುದನ್ನು ಈಗ ಹೇಳುವರು:-** ಏನೇನು ನಿರ್ಮಾಣವಾಗುವದೋ ಅದೆಲ್ಲವೂ ನಾಶ ಹೊಂದುವದು. ಆದರೆ ವಿಶ್ವದ ಮೂಲದಲ್ಲಿರುವ ಬ್ರಹ್ಮನು ಸರ್ವದರಲ್ಲಿಯೂ ವ್ಯಾಪಿಸಿರುವದರಿಂದ ಬ್ರಹ್ಮನು ಮಾತ್ರ ಹೇಗಿರುವನೋ ಹಾಗೆಯೇ ಇರುವನು. (೧೫) ದೃಷ್ಟಾಂತ:-ಕುಂಬಾರನು ಒಂದು ಕೊಡ ತಯಾರಿಸಿದನೆಂದು ತಿಳಿಯಿರಿ. ಈ ಕೊಡವು ತಯಾರಾಗುವ ಪೂರ್ವದಲ್ಲಿ ಆಕಾಶವು ಇರುತ್ತದೆ. ಕೊಡ ತಯಾರಾದ ಮೇಲೆಯೂ ಅದರ ಒಳಗಿನ ಪೊಳ್ಳಿನಲ್ಲಿ ಆಕಾಶವು ಇರುತ್ತದೆ. ಮತ್ತು ಕೊಡ ಒಡೆದ ನಂತರವೂ ಸಹ ಮೂಲದಲ್ಲಿದ್ದ ಆಕಾಶವು ನಾಶ ಹೊಂದುವದಿಲ್ಲ ಅದು ಹೇಗೆ ಇದ್ದಿತೋ ಹಾಗೆಯೇ ಯಾವಾಗಲೂ ಇರುವದು. (೧೬) ಇದೇ ಪ್ರಕಾರ ಕೇವಲ ಒಬ್ಬನೇ ಒಬ್ಬನಿರುವ ಪರಬ್ರಹ್ಮನು ಹೇಗಿರುವನೋ ಹಾಗೆಯೇ ಸದಾಸರ್ವಕಾಲ ಇರುವನು. ಇವನಲ್ಲಿಯೇ ಇಷ್ಟೆಲ್ಲ ಚರಾಚರ ವಿಶ್ವ ಉತ್ಪನ್ನವಾಗುವದು. ಮತ್ತು ನಾಶವಾಗುವದು ಆದರೂ ಪರಬ್ರಹ್ಮ ಅಗದೀ ನಿಶ್ಚಲ ಮತ್ತು ಸ್ಥಿರನಾಗಿಯೇ ಇರುವನು. (೧೭) ಏನೆಲ್ಲ ನಿರ್ಮಾಣವಾಗುವದೋ ಮತ್ತು ಆಗಿರುವದೋ ಅದರಲ್ಲಿ ಬ್ರಹ್ಮವು ಮೊದಲಿಗೆ ವ್ಯಾಪಿಸಿರುತ್ತದೆ. ಮತ್ತು ಉತ್ಪನ್ನವಾದದ್ದೆಲ್ಲ ನಾಶ ಹೊಂದಿದ ಮೇಲೆಯೂ ಸಹ ಶಾಶ್ವತ ಬ್ರಹ್ಮವು ಪುನಃ ಹೇಗಿದ್ದಿತೋ ಹಾಗೆಯೆ ಶಿಲುಕು ಉಳಿಯುವದು. (೧೮) ಹೀಗೆ ಯಾವುದು ಎಂದೂ ನಾಶ ಹೊಂದದ ಬ್ರಹ್ಮವಿರುವದೋ ಅಂಥದರ ಆಶ್ರಯವನ್ನು ಜ್ಞಾನಿ ಸಂತರು ಮಾಡುತ್ತಾರೆ. ಹಾಗೂ ದೃಶ್ಯದ ಪೂರ್ಣ ನಿರಸನ (ಪರಿಹಾರ) ಮಾಡಿದ ಕೂಡಲೇ ಆಗ ನಮ್ಮ ನಿಜವಾದ "ನಾನು" ಇದರ ಲಾಭ ನಮಗೆ ಆಗುತ್ತದೆ. (೧೯) ದೇಹಬುದ್ಧಿಯ ನಾದಿಗೆ ಹವ್ಯಾಸಕ್ಕೆ ಬಿದ್ದು ನಾವು ದೇಹಕ್ಕೆ ಬಹಳ ಮಹತ್ವಕೊಟ್ಟಿರುವೆವು. ವಿವೇಕದಿಂದ ದೇಹದ ಕಡೆಗೆ ನೋಡಿದರೆ ಆಗ ಪಂಚಭೂತಗಳ ನಿರಸನ (ಪರಿಹಾರ)ವಾಗಿದೇಹ ಅಹಂತಾ(ಅಹಂಕಾರ) ತನ್ನಷ್ಟಕ್ಕೆ ತಾನೇ ಕರಗಿ ಹೋಗುವದು. ಅಹಂಕಾರ ಹೋದ ಕೂಡಲೇ ನಿಜವಾದ "ನಾನು" ಇದರ ಅನುಭವ ಬರುತ್ತದೆ. ಮತ್ತು ನಿರ್ಗುಣ ಬ್ರಹ್ಮನಿಂದ ಇರುವಂಥ ನಮ್ಮ ಮೂಲದಲ್ಲಿಯ ಐಕ್ಯವು ಅನುಭವಕ್ಕೆ ಬರುವದು. ಈ ಅನುಭವದಲ್ಲಿ ಸೋಹಂಭಾವವು ಉದಯವಾಗುವದು. ಅವನೇ (ಪರಮಾತ್ಮನೇ)ನಾನಾಗಿರುವೆ ಎಂಬ ಭಾವ ಉದಯವಾಗುವದು. ಮತ್ತು ದೇವ-ಭಕ್ತ ಇವರ ಐಕ್ಯವಾಗುವದು. ತತ್ವದಲ್ಲಿ (ಪಥ್ವ್ಯಾದಿ ಐದು ತತ್ವಗಳು) ತತ್ವ ಕೂಡಿಕೊಂಡು ಯಾವ ಆಕಾರವಾಗುವದೋ ಅದಕ್ಕೆ ದೇಹವೆಂದು ಹೆಸರಿಸಿದ್ದಾರೆ. ತಿಳಿವಂಥ ಮತ್ತು ವಿಚಾರಿ ಮನುಷ್ಯರು ಒಂದು ತತ್ವದ ಆಧಾರ ಹಿಡಿದುಕೊಳ್ಳುತ್ತಾರೆ. ಮತ್ತು ಅದರೊಳಗಿಂದ ಇತರ ತತ್ವಗಳನ್ನು ಶೋಧಿಸಿ ತೆಗೆಯುವರು ಅರ್ಥಾತ್ ತಿಳಿಯುವರು. (೨೦) ನಾಶ ಹೊಂದತಕ್ಕ ತತ್ವಗಳ (ಮಾಯಿಕವಿರುವ ಸರ್ವತತ್ವಗಳ) ಸೂಕ್ಷ್ಮ ತಪಾಸಣೆ ಮಾಡಿ ಇವು ನಾಶವಂತ ನಶ್ವರವಾದವು ಎಂಬ ಖಾತ್ರಿ ಆದ ಮೇಲೆ ಆಗ ದೇಹವೇ ನಾನು ಇರುವೆ ಎಂಬ ಭಾವನೆಯೂ ಇಲ್ಲದಾಗುತ್ತದೆ.ಈ ಪ್ರಕಾರ ನಿರ್ಗುಣ ಬ್ರಹ್ಮನೊಂದಿಗೆ ಕೇವಲ ವಿವೇಕದಿಂದ ಜೀವಕ್ಕೆ ಐಕ್ಯ ಪ್ರಾಪ್ತವಾಗುವದು.(೨೧)ವಿವೇಕದಿಂದ ದೇಹದ ಶೋಧ (ಸೂಕ್ಷ್ಮ ತಪಾಸಣೆ) ಮಾಡಿದ್ದಾದರೆ ಒಂದು ವಿನಾಶಿ ತತ್ವದಿಂದ ಇನ್ನೊಂದು ವಿನಾಶಿ ತತ್ವವು ಅದೃಶ್ಯವಾಗುವದು.ಹಾಗೂ ನಾನು ದೇಹಬುದ್ಧಿಯವನು ಅಲ್ಲವೇಅಲ್ಲವೆಂಬ ಪ್ರತ್ಯಕ್ಷ ಅನುಭವ ಬರುತ್ತದೆ. (೨೨) ನಾವೇ ನಮ್ಮ ಬಗ್ಗೆ ಸೂಕ್ಷ್ಮ ಶೋಧ ಮಾಡಿದ್ದಾದರೆ "ನಾವು" ಕೇವಲ ಭ್ರಮೆಯಿಂದ ಕೂಡಿದವರಾಗಿದ್ದೇವೆ. ಅಥವಾ ನಾವೆಂಬುದೇ ಸುಳ್ಳು ಎಂದು ತಿಳಿಯುತ್ತದೆ. ಈ ರೀತಿಯಾಗಿ ತತ್ವಗಳ ನಿರಸನವಾದ ಕೂಡಲೇ ಕೊನೆಗೆ ಶುದ್ಧ ಮತ್ತು ನಿಜವಾದ ನಿರ್ಗುಣ ಬ್ರಹ್ಮ ಮಾತ್ರ ಉಳಿಯುವದು.(೨೩)

ಆಪಣಾವಿಣ ನಿರ್ಗುಣ ಬ್ರಹ್ಮ। ಹೇಚಿ ನಿವೇದನಾಚೇ ವರ್ಮ।
ತತ್ವ ಸರಿಸಾ ಗೇಲಾ ಭ್ರಮು। ಮೀತೂ ಪಣಾಚಾ ॥೨೪॥

ಮೀ ಪಾಹಾತಾ ಆಡಳೇನಾ। ನಿರ್ಗುಣ ಬ್ರಹ್ಮ ತೇ ಚಳೇನಾ।
ಆಪಣ ತೇಚಿ ಪರೀ ಕಳೇನಾ। ಸದ್ಗುರೂವಿಣ ॥೨೫॥

ಸಾರಾಸಾರ ಅವಘೇ ಶೋಧಿಲೇ। ತೋ ಅಸಾರ ತೇ ನಿಘೋನ ಗೇಲೇ।
ಪುಢೇ ಸಾರ ತೇ ಉರಲೇ। ನಿರ್ಗುಣ ಬ್ರಹ್ಮ ॥೨೬॥

ಆಧೀ ಬ್ರಹ್ಮ ನಿರೋಪಿಲೇ। ತೇಚಿ ಸಕಳಾ ಮಧೇ ವ್ಯಾಪಲೇ।
ಸಕಳ ಆವಘೇಚಿ ನಾಸಲೇ। ಉರಲೇ ತೇ ಕೇವಳ ಬ್ರಹ್ಮ ॥೨೭॥

ಹೋತಾ ವಿವೇಕೇ ಸಂವ್ಹಾರ। ತೇಥೇ ನಿವಡೆ ಸಾರಾಸಾರ।
ಆಪಲಾ ಆಪಣಾಸಿ ವಿಚಾರ। ಠಾಈ ಪಡೆ ॥೨೮॥

ಆಪಣ ಕಲ್ಪಿಲೇ ಮೀಪಣ। ಮೀಪಣ ಶೋಧಿತಾ ಮರೇ ಜಾಣ।
ಮೀಪಣ ಗೇಲಿಯಾ ನಿರ್ಗುಣ। ಆತ್ಮಾ ಸ್ವಯೇ ॥೨೯॥

ಜಾಲಿಯಾ ತತ್ವಾಚೇ ನಿರ್ಶನ। ನಿರ್ಗುಣ ಆತ್ಮಾ ತೋಚಿ ಆಪಣ।
ಕಾದಾಖವಾವೇ ಮೀಪಣ। ತತ್ವನಿರ್ಶನಾ ಉಪರೀ ॥೩೦॥

ತತ್ವಾಮಧ್ಯೇ ಮೀಪಣ ಗೇಲೇ। ತರೀ ನಿರ್ಗುಣ ಸಹಜ ಚಿ ಉರಲೇ।
ಸೋಹಂಭಾವೇ ಪ್ರತ್ಯಯಾ ಆಲೇ। ಆತ್ಮನಿವೇದನ ॥೩೧॥

ಆತ್ಮನಿವೇದನ ಹೋತಾ। ದೇವಾಭಕ್ತಾಸೀ ಏಕ್ಯತಾ।
ಸಾಚಾರ ಭಕ್ತ ವಿಭಕ್ತತಾ। ಸಾಂಡೂನಿ ಜಾಲಾ ॥೩೨॥

ನಿರ್ಗುಣಾಸೀ ನಾಹೀ ಜನ್ಮಮರಣ। ನಿರ್ಗುಣಾಸೀ ನಾಹೀ ಪಾಪಪುಣ್ಯ।
ನಿರ್ಗುಣೀ ಅನನ್ಯ ಹೋತಾ ಆಪಣ। ಮುಕ್ತ ಜಾಲಾ ॥೩೩॥

ದೇಹವೆ "ನಾನು (ದೇಹಾಹಂತಾ) ಅಥವಾ ಮಿಥ್ಯೆಯಾದ ನಾನು ಎಂಬುದು ಗೊತ್ತಾಗಿ ಅಥವಾ ಇಲ್ಲದಾಗಿ ನಾನಿರದೆ ನಿರ್ಗುಣ ನಿರಾಕಾರ ಬ್ರಹ್ಮ ಮಾತ್ರ ಇರುವದೆಂಬುದೇ ಆತ್ಮಸಮರ್ಪಣ (ಆತ್ಮ ನಿವೇದನ)ದ ರಹಸ್ಯವಿರುವದೆಂದು ತಿಳಿಯಿರಿ. (ಕಾರಣ) ಯಾಕೆಂದರೆ ತತ್ವಗಳು ವಿನಾಶಿ-ನಾಶವಂತವಾದವು ಎಂಬ ಖಾತ್ರಿ ಆದನಂತರ ಆ ಕ್ಷಣದಲ್ಲಿ ನಾನು ನೀನು ಎಂಬ ದ್ವೈತದ ಭ್ರಮೆಯೂ ಸಹ ನಾಶವಾಗಿ ಇಲ್ಲದಾಗಿ ಹೋಗುವದು. (೨೪) "ನಾನು" ಎಂದು ಮೆರೆದಾಡುವ ಅಹಂಕಾರದ ಶೋಧ ಮಾಡಲಿಕ್ಕೆ ಹತ್ತಿದರೆ ಅದು ಸಿಗುವದಿಲ್ಲ. ನಿರ್ಗುಣ ಬ್ರಹ್ಮ ಮಾತ್ರ ಅಗದೀ ಇದ್ದಂತೆಯೇ ಇರುವದು. ನಾವು ಕೂಡಾ ಅಗದೀ ಇದೇ (ಪರಬ್ರಹ್ಮ) ಆಗಿದ್ದೇವೆ. ಆದರೆ ಇದರ ರಹಸ್ಯ ಸದ್ಗುರು ಸಂತರ ಮಾರ್ಗದರ್ಶನವಿಲ್ಲದೆ ತಿಳಿಯುವದಿಲ್ಲ. (೨೫) ಈ ಎಲ್ಲ ವಿಶ್ವದೊಳಗೆ ತತ್ವ ಯಾವುದು? ಮತ್ತು ಭ್ರಮೆ ಯಾವುದು? ಅಥವಾ ನೈಜ-ಅಸ್ಸಲ್ ಯಾವುದು? ಮತ್ತು ಕೃತ್ರಿಮ (ನಕಲು) ಯಾವುದು? ಇದರ ಸೂಕ್ಷ್ಮ ಶೋಧ-ವಿಚಾರ ಮಾಡಿದರೆ ಆಗ ಭ್ರಮರೂಪ ಮತ್ತು ಕೃತ್ರಿಮ (ನಕಲು) ಇರುವದೆಲ್ಲ ಇಲ್ಲದಾಗಿ ಹೋಗುತ್ತದೆ. ನಂತರ ಅಸಲ್ ತತ್ವವೆನಿಸಿದ ನಿರ್ಗುಣ ಬ್ರಹ್ಮವೊಂದೇ ಶಿಲ್ಲಕ ಉಳಿಯುವದು. (೨೬) ಆರಂಭದಲ್ಲಿ ಬ್ರಹ್ಮನ ವರ್ಣನೆ ಹೇಳಿತು. ಇದೇ ಸರ್ವವಿಶ್ವಕ್ಕೂ ವ್ಯಾಪಿಸಿರುವದೆಂಬುದನ್ನು ಹೇಳಿಯಾಗಿದೆ. ಬ್ರಹ್ಮವೇ ವಿಶ್ವವನ್ನು ವ್ಯಾಪಿಸಿದೆ. ವಿಶ್ವವು ನಾಶವಾದ ಮೇಲೆ ಸಹ ಯಾವುದು ಉಳಿಯುವದೋ ಅದು ನಿವ್ವಳ ಬ್ರಹ್ಮವೇ ಉಳಿದಿರುತ್ತದೆ. (೨೭) ಸೂಕ್ಷ್ಮ ವಿವೇಕದಿಂದ ಜಗತ್ತಿನ ಶೋಧ ಮಾಡಹತ್ತಿದರೆ ಆಗ ದೃಶ್ಯದ ನಿರಸನವಾಗುವದು. ತಪ್ಪುತಿಳವಳಿಕೆ ದೂರಾಗುವದು. ಇದರಿಂದಾಗಿ ಸ್ಥಿರವಾಗಿ ಉಳಿಯುವದು ಯಾವುದು? ಮತ್ತು ತಾತ್ಪೂರ್ತಿಕ ಗಿರುವದು. ಯಾವದು ಇದರ ಅನುಭವ ತನ್ನಿಂದ ತಾನೇ ಉಂಟಾಗುವದು(ತಿಳಿಯುವದು). ವಿವೇಕಪ್ರಳಯವೆಂದರೆ ಇದೇ ಇರುವದು. ಆಮೇಲೆ ನಾನು ನಿಜವಾಗಿಯೂ ಯಾರು ಎಂಬುದರ ಶೋಧವು ಅಂದರೆ ಬೋಧವು ನಿಮ್ಮೊಳಗಿಂದಲೇ ನಿಮಗೆ ಗೊತ್ತಾಗುವದು. (೨೮) ನಮ್ಮ ಕಲ್ಪನೆಯಿಂದಲೇ ನಾವು "ನಾನು" ಎಂಬುದನ್ನು ನಿರ್ಮಾಣ ಮಾಡಿಕೊಂಡಿರುವೆವು. ವಿವೇಕದಿಂದ ಇದರ ಶೋಧ ಮಾಡಿದ್ದಾದರೆ ಅದು ಉಳಿಯುವದಿಲ್ಲ. ಈ ಕಾಲ್ಪನಿಕ ನಾನು ಎಂಬುದು ಹೋದಕೂಡಲೇ ಉಳಿಯುವ [ಇರುವ] ಶುದ್ಧ "ನಾನು" ಎಂಬುದೇ ನಿರ್ಗುಣ ಆತ್ಮಸ್ವರೂಪವಾಗಿದೆ. [೨೯] ನಾಶವಾಗುವ ವಿನಾಶೀ ತತ್ವಗಳನ್ನು ವಿವೇಕದಿಂದ ಇಲ್ಲದಾಗಿ ಮಾಡಿದ ಕೂಡಲೇ ನಿರ್ಗುಣ ಆತ್ಮನೇ ನಾನು ಇರುವೆ ಎಂಬ ಸಾಕ್ಷಾತ್ಕಾರವಾಗುವದು. ವಿನಾಶಿಯಾದ ತತ್ವಗಳು ಮರೆಯಾದ ನಂತರ ದೇಹಾಹಂಕಾರದ"ನಾನು"ಎಂಬುದನ್ನು ಪ್ರತ್ಯೇಕವಾಗಿ ತೋರಿಸಲು ಶಕ್ಯವಾಗುವದಿಲ್ಲ.[೩೦]ತತ್ವಗಳು ಮತ್ತು ನಾನು ಎಂಬುದು ಈಎರಡೂ ನಾಶವಂತ[ವಿನಾಶೀ]ಮತ್ತುದೃಶ್ಯ(ತೋರಿಬರುವಂಥ)ವಿರುವದರಿಂದ ಇವು ವಿವೇಕದಿಂದತತ್ವದ ನಿರಾಸ (ಪರಿಹಾರ) ಆದ ಕೂಡಲೇ "ನಾನು" ಎಂಬುದು ಅದರ ಜೊತೆಗೆ ಹೋಗಿ ಬಿಡುತ್ತದೆ. ಆಮೇಲೆ ಕೇವಲ ನಿರ್ಗುಣ ಆತ್ಮವೊಂದೇ ಶಿಲುಕು ಉಳಿಯುವದು. ಆ ಸ್ಥಳದಲ್ಲಿ **'ಸೋಽಹಂ' ("ಸಃ ಅಹಂ") ಅಂದರೆ "ನಾನು ಅವನೇ ಇರುವೆ"ನು** ಎಂಬ ಆತ್ಮನಿವೇದನದ ಅನುಭವ ಬರುವದು. (೩೧) ಈ ರೀತಿಯ ಆತ್ಮನಿವೇದನ ಆಯಿತೆಂದರೆ ದೇವ ಮತ್ತು ಭಕ್ತ ಏಕರೂಪರಾಗಿ ಹೋಗುವರು. ನಿಜವಾಗಿಯೂ ದ್ವೈತಭಾವ (ಬೇರೆಬೇರೆ ಎಂಬ ಭಾವ) ಬಾಜೂಕ್ಕೆ ಸರಿಸಿ ಭಕ್ತನು ದೇವರೊಂದಿಗೆ ಏಕರೂಪ ಹೊಂದುವನು. (೩೨) ನಿರ್ಗುಣ ಸ್ವರೂಪಕ್ಕೆ ಜನನ (ಜನ್ಮ) ಮರಣವಿರುವದಿಲ್ಲ. ಪಾಪಪುಣ್ಯವಿಲ್ಲ. ಯಾರು ನಿರ್ಗುಣದಲ್ಲಿ ಸಮರಸ ಆಗುವರೋ ಅವರು ಮುಕ್ತರಾಗುವರು.(೩೩)

ತತ್ವೀ ವೆಟಾಳೂನ ಘೇತಲಾ । ಪ್ರಾಣೀ ಸಂಶಯೆ ಗುಂಡಾಳಲಾ ।
ಆಪಣಾಸೀ ಆಪಣ ಭುಲಲಾ । ಕೋಽಹಂ ಮ್ಹಣೇ ॥೩೪॥

ತತ್ವೀ ಗುಂತಲಾ ಮ್ಹಣೆ ಕೋಽಹಂ । ವಿವೇಕ ಪಾಹಾತಾ ಮ್ಹಣೆ ಸೋಽಹಂ ।
ಅನನ್ಯ ಹೋತಾ ಅಹಂ ಸೋಽಹಂ । ಮಾವಳಲೀ ॥೩೫॥

ಯಾ ಉಪರೀ ಉರ್ವರಿತ । ತೇ ಚಿ ಸ್ವರೂಪ ಸಂತ ।
ದೇಹೀ ಅಸೋನಿ ದೇಹಾತೀತ । ಜಾಣಿಜೆ ಐಸಾ ॥೩೬॥

ಸಂದೇಹ ವೃತ್ತಿ ತೇನ ಭಂಗೇ । ಮ್ಹಣೋನಿ ಬೋಲಿಲೇ ಚಿ ಬೋಲಾವೇ ಲಾಗೆ ।
ಅನ್ವಾಸಿ ಹೇ ಘಡಲೇ ಪ್ರಸಂಗೇ । ಶ್ರೋತೀ ಕ್ಷಮಾ ಕರಾವೆ ॥೩೭॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಮಾಯೋದ್ಭವ' ನಾಮ ಸಮಾಸ ತೃತೀಯ

• • •

ಜೀವವು ವಿನಾಶೀ ತತ್ವಗಳಿಂದ ಸುತ್ತುವರಿಯಲ್ಪಟ್ಟಿದೆ. ಇದರಿಂದ ಜೀವವು ಸಂಶಯದ ಚಕ್ರದಲ್ಲಿ ತೊಡಕಿಕೊಳ್ಳುವದು. ಆಗ ಜೀವವು ಸ್ವತಃದ ಸ್ವರೂಪವನ್ನು ಮರೆಯುವದು. ಮತ್ತು ಕೋಹಂ ಅಂದರೆ ನಾನು ಯಾರು ಇರುವೆನು ಎಂದು ವಿಚಾರ ಮಾಡಹತ್ತುವದು.(೩೪) ಜೀವ ಎಲ್ಲಿಯವರೆಗೆ ಪಂಚತತ್ವದೊಳಗೆ ಅಡಕಾಯಿ ಸಲ್ಪಟ್ಟಿರುವದೋ "ನಾನು ಯಾರು ಇರುವೆನು" ಎಂದು ವಿಚಾರಿಸುವದು. ವಿವೇಕದಿಂದ ಸೂಕ್ಷ್ಮ ಶೋಧ ಮಾಡಿ ತತ್ವಗಳನ್ನು ಅಲ್ಲಗಳೆದ ಕೂಡಲೇ "ನಾನು ಅವನೇ ಇರವೆನು" ಎಂಬ ಅನುಭವ ಜೀವಕ್ಕೆ ಬರುವದು ಕೊನೆಯಲ್ಲಿ ಆತ್ಮಸ್ವರೂಪದೊಂದಿಗೆ ಏಕರೂಪವಾಗಿ "ನಾನು" ಮತ್ತು "ನೀನು" ಎಂಬುವ ಭೇದ ಹಾರಿಹೋಗುತ್ತದೆ. ಮತ್ತು "ಅಹಂ, ಸೋಹಂ" ಈ ಭೂಮಿಕೆ ಉಳಿಯುದಿಲ್ಲ. (೩೫) ಈ ರೀತಿಯಲ್ಲಿ ಎಲ್ಲ ಅವಸ್ಥೆಗಳ ಆಚೆಗೆ ಯಾವ ನಿವ್ವಳ ಶುದ್ಧ ಸ್ವರೂಪವಿರುವದೋ ಅದೇ ಸಂತಶರಣರು ಸಮಾಧಾನಿಯಾಗಿರುವ ಸ್ವರೂಪ-ಸ್ಥಿತಿಯು. ಇವರು ದೇಹದಲ್ಲಿ ಕಂಡರೂ ಇದ್ದರೂ ದೇಹದ ಆಚೆಗೆ ಇರುವರು.(ದೇಹಾತೀತರು)ಸಂತರೆಂಬುವರು ಹೀಗೆ ಇರುವರೆಂದು ವಿವೇಕದಿಂದ ತಿಳಿಯಿರಿ. ಗುರ್ತಿಸಿರಿ. ಇದೇ ತ್ರಿಕಾಲಾಭಾಧಿತ ಬ್ರಹ್ಮವಾಗಿರುವದು. (೩೬) ಸಾಧಕನ ಸಂಶಯ ವೃತ್ತಿ ಒಮ್ಮೆಲೆ ಹೋಗುವದಿಲ್ಲವಾದ್ದರಿಂದ ಪುನಃಪುನಃ ಹೇಳಿದ್ದನ್ನೇ ಹೇಳಬೇಕಾಗುತ್ತದೆ. ಈ ವಿಷಯ ಮಹತ್ವದ್ದು. ಇದನ್ನು ಹೇಳುವ ಪ್ರಸಂಗವು ನನಗೆ ಬಂದದ್ದರಿಂದ ನಿಮಗೆ ಮನದಟ್ಟಾಗಲೆಂದು ಹೀಗೆ ಹೇಳಿದ್ದೇನೆ. ಶ್ರೋತೃಗಳು ಇದರ ಬಗ್ಗೆ ಕ್ಷಮೆ ಮಾಡಬೇಕು. (೩೭)

ಶ್ರೀ ದಾಸಬೋಧದ ಗುರು ಶಿಷ್ಯರ ಸಂವಾದದಲ್ಲಿಯ ಆರನೆಯ ದಶಕದೊಳಗಿನ
ಮಾಯೋದ್ಭವವೆಂಬ ಮೂರನೆಯ ಸಮಾಸ ಮುಗಿದುದು.

• •

## ದಶಕ ೬. ಸಮಾಸ ೪. ಬ್ರಹ್ಮ ನಿರೂಪಣ (ನುಡಿ ೨೪)

ಮನುಷ್ಯನಿಗೆ ಜೀವವಿರುವದರಿಂದ ಅಲ್ಪನಿರುವನು. ಅಂತ ವಂತ, ನಾಶವಾಗುವವನಿರುವನು. ಪರಿಮಿತ (ಅಳತೆಗೊಳಪಟ್ಟು) ಇರುವನು. ಇದರ ವಿರುದ್ಧ (ಉಲಟ) ಪರಮಾತ್ಮನು ಸರ್ವವ್ಯಾಪಕನಿರುವನು. ಅನಂತ, (ಅಂತ್ಯವಿಲ್ಲದವ)ನಿರುವನು. ಮತ್ತು ಅಪರಿಮಿತ (ಅಳತೆಗೊಳಪಡದವ)ನಿರುವನು. ಪರಿಮಿತ ಜೀವವು ಅಪರಿಮಿತ ಪರಮಾತ್ಮ ಸ್ವರೂಪದ ಬಗ್ಗೆ ಎಷ್ಟೇ ಕಲ್ಪನಾ ಮಾಡಿದರೂ ಸಹ ಅದು ಕಡಿಮೆಯನಿಸುವದು. ಉದಾಹರಣಾರ್ಥ:- ಮಾನವೀ ದೃಷ್ಟಿಯಿಂದ ನೋಡಿದರೆ ಕಾಲವು ಅನಂತವಾಗಿದೆ. ಈ ಹಿಂದೆ ಎಷ್ಟು ಕಾಲ ಹೋಯಿತು (ಗತಿಸಿತು), ಎಂಬುದು ಯಾರಿಗೆ ಗೊತ್ತಿರುವದು ? ಮತ್ತು ಇನ್ನು ಮುಂದೆ ಎಷ್ಟು ಕಾಲ ಬರುವದು ? ಇದು ಯಾರಿಗೆ ತಿಳಿದಿದೆ ? ಅನಂತ ಕಾಲದ ದೃಷ್ಟಿಯಿಂದ ಈ ಜಗತ್ತಿನಲ್ಲಿಯ ಮಾನವೀ ಜೀವನವು ಒಂದು ಸ್ವಪ್ನದಂತೆ ಅಲ್ಪವಾಗಿದೆ. ಪರಬ್ರಹ್ಮನು ಕಾಲದಿಂದ ಆಚೆಗೆ ಇರುವನು. (ಕಾಲಾತೀತನು) ಇಂಥ ಪರಬ್ರಹ್ಮನ ಜ್ಞಾನ ಮಾಡಿಕೊಳ್ಳುವ ಆತ್ಮಜ್ಞಾನಿ ಸತ್ಪುರುಷನೇ ನಿಜವಾದ ದೊಡ್ಡವನು, ಶ್ರೇಷ್ಠನು, ಎಂದು ಹೇಳಲು ಯಾವ ಅಡ್ಡಿಯೂ ಇಲ್ಲ.

## ಸಮಾಸ ಚತುರ್ಥ : ಬ್ರಹ್ಮ ನಿರೂಪಣ

॥ಶ್ರೀರಾಮ॥ ಕೃತಾಯುಗ ಸತ್ರಾ ಲಕ್ಷ ಅಠಾವಿಸ ಸಹಸ್ರ ।
ತ್ರೇತಾಯುಗ ಬಾರಾ ಲಕ್ಷ ಶಹಾಣೌ ಸಹಸ್ರ ।
ದ್ವಾಪಾರ ಆಠ ಲಕ್ಷ ಚೌಸಷ್ಟೀ ಸಹಸ್ರ । ಆತಾ ಕಲಯುಗ ಐಕಾ ॥೧॥

ಕಲಯುಗ ಚ್ಯಾರಿ ಲಕ್ಷ ಬತೀಸ ಸಹಸ್ರ ।
ಚತುರ್ಯುಗೇ ತ್ರೇತಾಳಿಸ ಲಕ್ಷ ವೀಸ ಸಹಸ್ರ ।
ಐಸೀ ಚತುರ್ಯುಗೆ ಸಹಸ್ರ । ತೋ ಬ್ರಹ್ಮಯಾಚಾ ಯೇಕ ದಿವಸ ॥೨॥

ಐಸೆ ಬ್ರಹ್ಮೆ ಸಹಸ್ರ ದೇಖಾ । ತೇವ್ಹಾ ವಿಷ್ಣೂಚೀ ಯೇಕ ಘಟಿಕಾ ।
ವಿಷ್ಣೂ ಸಹಸ್ರ ಹೋತಾ ಐಕಾ। ಪಳ ಯೇಕ ಈಶ್ವರಾಚೀ ॥೩॥

ಈಶ್ವರ ಜಾಯೆ ಸಹಸ್ರ ವೇಳ । ತೇ ಶಕ್ತೀಚೇ ಅರ್ಧ ಪಳ ।
ಐಸೀ ಸಂಖ್ಯಾ ಬೋಲಿಲೀ ಸಕಳ । ಶಾಸ್ತ್ರಾಂತರೀ ॥೪॥

ಶ್ಲೋಕ : ಚತುರ್ಯುಗ ಸಹಸ್ರಾಣಿ । ದಿನಮೇಕಂ ಪಿತಾಮಹಮ್ ॥
ಪಿತಾಮಹ ಸಹಸ್ರಾಣಿ । ವಿಷ್ಣೋರ್ಘಟಿಕಮೇವಚ ॥೧॥
ವಿಷ್ಣೋರೇಕ ಸಹಸ್ರಾಣಿ । ಪಲಮೇಕಂ ಮಹೇಶ್ವರಮ್ ॥
ಮಹೇಶ್ವರ ಸಹಸ್ರಾಣಿ । ಶಕ್ತೇರರ್ಧ ಪಲಂ ಭವೇತ್ ॥೨॥

ಐಶಾ ಅನಂತ ಶಕ್ತೀ ಹೋತೀ । ಅನಂತ ರಚನಾ ಹೋತಿ ಜಾತೀ ।
ತರೀ ಅಖಂಡ ಖಂಡೇನಾ ಸ್ಥಿತೀ । ಪರಬ್ರಹ್ಮಾಚೀ ॥೫॥

ಪರಬ್ರಹ್ಮಾಸೀ ಕೈಚೀ ಸ್ಥಿತೀ । ಪರೀ ಹೇ ಬೋಲಾವಯಾಚೀ ರಿತೀ ।
ವೇದಶ್ರುತಿ ನೇತಿ ನೇತಿ । ಪರಬ್ರಹ್ಮೀ ॥೬॥

## ದಶಕ ೬. ಸಮಾಸ ೪. ಬ್ರಹ್ಮ ನಿರೂಪಣ

**ಶಾಸ್ತ್ರದಲ್ಲಿ ಹೇಳಿದ ಕಾಲ ಗಣನೆಯನ್ನು ತಿಳಿಸಿ ಕೊಡುತ್ತಾರೆ.** (ಒಂದನೇ) ಕೃತ ಯುಗದ ಕಾಲ ಹದಿನೇಳು ಲಕ್ಷ ಇಪ್ಪತ್ತೆಂಟು ಸಾವಿರ ವರ್ಷಗಳು (೧೭,೨೮,೦೦೦ ವರ್ಷಗಳು).(ಎರಡನೇ)ತ್ರೇತಾಯುಗದ ಕಾಲವು ಹನ್ನೆರಡು ಲಕ್ಷ ತೊಂಭತ್ತಾರು ಸಾವಿರ ವರ್ಷಗಳು (೧೨,೯೬,೦೦೦ ವರ್ಷಗಳು) (ಮೂರನೇ) ದ್ವಾಪರ ಯುಗ ದಲ್ಲಿಯ ಕಾಲವು ಎಂಟು ಲಕ್ಷ ಅರವತ್ತುನಾಲ್ಕು ಸಾವಿರ ವರ್ಷಗಳು(೮,೬೪,೦೦೦ ವರ್ಷಗಳು) (ನಾಲ್ಕನೆಯದಾದ) ಕಲಿಯುಗ (ಸದ್ಯಕ್ಕೆ ಇರುವ ಯುಗ)ದ ವರ್ಣನೆಯನ್ನು ಕೇಳಿರಿ. (೧) ಕಲಿಯುಗದ ಕಾಲ. ನಾಲ್ಕು ಲಕ್ಷ ಮೂವ ತ್ತೆರಡು ಸಾವಿರ ವರ್ಷಗಳು (೪,೩೨,೦೦೦ ವರ್ಷಗಳು) ಅಂತೂ ಈ ನಾಲ್ಕೂ ಯುಗಗಳ ಒಟ್ಟು ಕಾಲವು ನಾಲ್ವ ತ್ಮೂರು ಲಕ್ಷ ಇಪ್ಪತ್ತು ಸಾವಿರ ವರ್ಷಗಳಾಗುವವು. (೪೩,೨೦,೦೦೦ ವರ್ಷಗಳು) ಈ ನಾಲ್ಕು ಯುಗಗಳ ಕಾಲ ಅಂದರೆ ಬ್ರಹ್ಮದೇವರ ಆಯುಷ್ಯ ಗಣತಿಗೆ ಒಂದು ದಿವಸವಾಗುವದು. [೨] ಬ್ರಹ್ಮದೇವಗೆ ಇಂಥ ಸಾವಿರ ದಿವಸ ಗಳಾದರೆ, ಶ್ರೀ ವಿಷ್ಣುವಿನ ಗಣತಿಗೆ ಒಂದು ಘಳಿಗೆ ಕಾಲವಾಗುವದು. ವಿಷ್ಣುವಿಗೆ ಇಂಥ ಸಾವಿರ ಘಳಿಗೆಗಳಾದರೆ ಮಹಾದೇವರ ಆಯುಷ್ಯ ಗಣತಿಗೆ ಪಳ ಕಾಲವಾಗುವದು. [೩] ಈಶ್ವರ ಅಥವಾ ಮಹಾದೇವರ ಆಯುಷ್ಯದಲ್ಲಿ ಒಂದು ಸಾವಿರ ಪಳ ಕಾಲವಾದರೆ ಆದಿಶಕ್ತಿಗೆ ಅಂದರೆ ಮೂಲ ಮಾಯೆಯ ಆಯುಷ್ಯ ಗಣತಿಗೆ ಅರ್ಧ ಪಳ ಕಾಲ ವಾಗುವದು. ಬೇರೆ ಬೇರೆ ಶಾಸ್ತ್ರದಲ್ಲಿ ಹೀಗೆ [ಈ ಪ್ರಕಾರ] ಕಾಲ ಗಣನೆಯನ್ನು ಹೇಳಿರುವರು.[೪] **ಓವಿ ಶ್ಲೋಕ ಎರಡರ ಉತ್ತರಾರ್ಧ ಮತ್ತು ಓವಿ (ಶ್ಲೋಕ) ಮೂರು, ಮತ್ತು ನಾಲ್ಕು ಇದರಲ್ಲಿ ವರ್ಣನೆ ಮಾಡಿದ ಕಾಲ ಗಣನೆಯನ್ನು ಎರಡು ಸಂಸ್ಕೃತ ಶ್ಲೋಕದಲ್ಲಿ ಹೇಳಿದ್ದಾರೆ. ಆದರೆ ಆ ಶ್ಲೋಕಗಳು ಅಶುದ್ಧವಿರು ವವು. ಮೂಲ ದಾಸಬೋಧದಲ್ಲಿ ನೋಡಿರಿ. ಅದನ್ನು ಇಲ್ಲಿಯೂ ಕೊಡಲಾಗಿದೆ.**

ಚತುರ್ಯುಗ ಸಹಸ್ರಾಣಿ ದಿನಮೇಕಂ ಪಿತಾಮಹಮ್ ।
ಪಿತಾಮಹ ಸಹಸ್ರಾಣಿ ವಿಷ್ಣೋರ್ಘಟಿಕ ಮೇವಚ ॥೧॥
ವಿಷ್ಣೋರೇಕ ಸಹಸ್ರಾಣಿ ಪಲ ಮೇಕಂ ಮಹೇಶ್ವರಮ್ ।
ಮಹೇಶ್ವರ ಸಹಸ್ರಾಣಿ ಶಕ್ತೇರರ್ಧ ಪಲಂ ಭವೇತ್ ॥೨॥

ಆದಿ ಶಕ್ತಿಯಂಥ ಅನಂತ ಶಕ್ತಿಗಳಿರುವವು. ಅನಂತ ಬ್ರಹ್ಮಾಂಡಗಳ ರಚನೆ ಆಗುವದು. ಮತ್ತು ಹೋಗುವದು. [ಇದು ಒಂದೇ ಸವನೆ ನಡೆದಿರುತ್ತದೆ]. ಆದರೂ ಸಹ ಪರಬ್ರಹ್ಮನ ಸ್ಥಿತಿಯು ಹೇಗಿರುವದೋ ಅದೇ ರೀತಿ ಇರು ವದು. ಇವನ ಸ್ಥಿತಿಯಲ್ಲಿ ಯತ್ ಕಿಂಚಿತ್‌ನಷ್ಟೂ ಸ್ಥಿತ್ಯಂತರವಾಗುವದಿಲ್ಲ.[ಅಖಂಡವಾಗಿಯೇ ಉಳಿಯುವದು] [೫] ವಾಸ್ತವಿಕವಾಗಿ ಪರಬ್ರಹ್ಮನಿಗೆ ಸ್ಥಿತಿಯಲ್ಲಿಯದು?ಅರ್ಥಾತ್ ಯಾವ ಸ್ಥಿತಿಯೂ ಇಲ್ಲ. ಆದರೆ ಇದೊಂದು ಮಾತಾ ಡುವ ರೀತಿ [ಪದ್ಧತಿ] ಇರುವದು. ವೇದ ಮತ್ತು ಶ್ರುತಿ ಶಾಸ್ತ್ರಗಳು "ನೇತಿ ನೇತಿ" ಅಂದರೆ [ ನ ಇತಿ=ನೇತಿ ] "ಇದಲ್ಲ", "ಇದಲ್ಲ" ಎಂದು ಅನ್ನುತ್ತ ಪರಬ್ರಹ್ಮನ ವಿಷಯದಲ್ಲಿ ಕೈ ಚೆಲ್ಲುವವು. ಕೈ ಊರುವವು. ಯಾವ ಯಾವುದು ಬದಲಾಗುವದೋ [ಸ್ಥಿತ್ಯಂತರ ಹೊಂದುವದೋ] ಇಂಥದರ ಗಣನೆಯನ್ನು ಕಾಲನು ಮಾಡುತ್ತಾನೆ. ದೃಶ್ಯ [ತೋರುವ] ವಿಶ್ವವು ಒಂದೇ ಸವನೆ ಸ್ಥಿತ್ಯಂತರ ಹೊಂದುವದು. ಇದರ ಸ್ಥಿತಿ ಮೇಲಿಂದ ಮೇಲೇ ಒಂದೇ ಸವನೆ ಬದಲಾಗುವದು. ಅಂತೆಯೇ ಕೇವಲ ವಿಶ್ವ ರಚನೆಗೆ ಮಾತ್ರ ಕಾಲನು ಮಾಡಿದ ಗಣನೆಯು ಲಾಗೂ ಬೀಳು ವದು. ವಿಶ್ವದ ಸ್ಥಿತಿಯ ಬಗ್ಗೆ ಕಾಲನು ಹೇಳಲು ಶಕ್ತನಿರುವನು. ಆದರೆ ಪರಬ್ರಹ್ಮನು ಬದಲಾಗುವದಿಲ್ಲ. [ಪಲ್ಲಟ ವಾಗುವದಿಲ್ಲ] ಹಾಗೂ ಇವನು ಬದಲಾಗುವದಿಲ್ಲವೆಂದೇ ಇವನಿಗೆ ಸ್ಥಿತಿ, ರೀತಿ, ಅವಸ್ಥೆಗಳು ಇರುವದಿಲ್ಲ. ಎಲ್ಲಿ ಅವಸ್ಥೆ [ಸ್ಥಿತಿ]ಯೇ ಇಲ್ಲವೋ ಅಲ್ಲಿ ಕಾಲನಿಗೆ ಇರಲು ಸ್ಥಳವೇ ಇರುವದಿಲ್ಲ. ಆದ್ದರಿಂದ ಶ್ರೀ ಸಮರ್ಥರು ಅನ್ನುವ ದೇನಂದರೆ "**ಪರಬ್ರಹ್ಮನ ಸ್ಥಿತಿಯಲ್ಲಿ ಖಂಡ, ಭಾಗ, ತುಣುಕು, ತುಕಡಿ, ಇಲ್ಲ. ಅಖಂಡ ಇರುವನು.**" ಇದೊಂದು ಮಾತನಾಡುವ ರೀತಿ ಇರುವದು. ಇರಲಿ. ಪರಬ್ರಹ್ಮನ ವರ್ಣನೆಯನ್ನು ಮಾಡಲಿಕ್ಕೆ ಬರುವದಿಲ್ಲವೆಂದ **ಮೇಲೆ** ಅವನ ಸ್ಥಿತಿ ರೀತಿಗಳ ವರ್ಣನೆಯನ್ನು ಯಾರು ಯಾರಿಗೆ ಹೇಗೆ ಹೇಳಲಿಕ್ಕೆ ಬಂದೀತು ? [೬]

ಚಾರಿ ಸಹಸ್ರ ಸಾತಸೇ ಸಾಠೀ । ಇತುಕೀ ಕಲಯುಗಾಚೀ ರಾಹಾಟೀ ।
ಉರಲ್ಯಾ ಕಲಯುಗಾಚೀ ಗೋಷ್ಟೀ । ಐಸೀ ಅಸೆ ॥೭॥

ಚಾರಿ ಲಕ್ಷ ಸತ್ತಾವಿಸ ಸಹಸ್ರ । ದೋನಿಸೇ ಚಾಳೀಸ ಸಂವಚ್ಛರ ।
ಪುಢೇ ಅನ್ಯೋಏನ್ಯ ವರ್ಣಸಂಕರ । ಹೋಣಾರ ಆಹೇ ॥೮॥

ಐಸೇ ರಚಲೇ ಸಚರಾಚರ । ಯೇಥೇ ಯೇಕಾಹೂನಿ ಯೇಕ ಥೋರ ।
ಪಾಹಾತಾ ಯೇಥೀಚಾ ವಿಚಾರ । ಅಂತ ನ ಲಗೆ ॥೯॥

ಯೇಕ ಮ್ಹಣತೀ ವಿಷ್ಣು ಥೋರ । ಯೇಕ ಮ್ಹಣತೀ ರುದ್ರ ಥೋರ ।
ಯೇಕ ಮ್ಹಣತೀ ಶಕ್ತಿ ಥೋರ । ಸಕಳಾಮಧೇ ॥೧೦॥

ಐಸೇ ಆಪುಲಾಲೇ ಪರೀ ಬೋಲತೀ । ಪರಂತು ಅವಘೇಚಿ ನಾಸೇಲ ಕಲ್ಪಾಂತೀ ।
ಯದೃಷ್ಟಂ ತಂ ನಷ್ಟಂ ಹೇ ಶ್ರುತೀ । ಬೋಲತಸೆ ॥೧೧॥

ಆಪುಲಾಲೀ ಉಪಾಸನಾ । ಅಭಿಮಾನ ಲಾಗಲಾ ಜನಾ ।
ಯಾಚಾ ನಿಶ್ಚಯೊ ನಿವಡೇನಾ । ಸಾಧುವಿಣ ॥೧೨॥

ಸಾಧು ನಿಶ್ಚಯು ಕರಿತೀ ಯೇಕ । ಆತ್ಮಾ ಸರ್ವತ್ರ ವ್ಯಾಪಕ ।
ಯೇರ ಹೇ ಅವಘೇ ಚಿ ಮಾಇಕ । ಸಚರಾಚರ ॥೧೩॥

ಚಿತ್ರೀ ಲಿಹಿಲೀ ಸೇನಾ । ತ್ಯಾತ ಕೋಣ ಥೋರ ಕೋಣ ಸಾನಾ ।
ಹೇ ತುಮ್ಹೀ ವಿಚಾರಾನಾ। ಆಪುಲೇ ಠಾಈ ॥೧೪॥

ಸ್ವಪ್ನೀ ಉದಂಡ ದೇಖಿಲೇ । ಲಹಾನಥೋರ ಹೀ ಕಲ್ಪಿಲೇ।
ಪರಂತು ಜಾಗೆ ಜಾಲಿಯಾ ಜಾಲೇ। ಕೈಸೇ ಪಾಹಾ ॥೧೫॥

ಪಾಹಾತಾ ಜಾಗೃತೀಚಾ ವಿಚಾರ । ಕೋಣ ಲಹಾನ ಕೋಣ ಥೋರ ।
ಜಾಲಾ ಅವಘಾಚಿ ವಿಸ್ತಾರ । ಸ್ವಪ್ನರಚನೇಚಾ ॥೧೬॥

ಅವಘಾ ಚಿ ಮಾಇಕ ವಿಚಾರ । ಕೈಚೆ ಲಾಹಾನ ಕೈಚೆ ಥೋರ ।
ಲಾಹಾನಥೋರಾಚಾ ನಿರ್ಧಾರ। ಜಾಣತೀ ಜ್ಞಾನೀ ॥೧೭॥

ಜೋ ಜನ್ಮಾಸೀ ಯೇಊನ ಗೇಲಾ । ತೋ ಮೀ ಥೋರ ಮ್ಹಣತಾಚ ಮೇಲಾ।
ಪರೀ ಯಾಚಾ ವಿಚಾರ ಪಾಹಿಲಾ । ಪಾಹಿಜೆ ಶ್ರೇಷ್ಟೀ ॥೧೮॥

ಜಯಾಸಿ ಜಾಲೇ ಆತ್ಮಜ್ಞಾನ । ತೇಚಿ ಥೋರ ಮಹಾಜನ ।
ವೇದಶಾಸ್ತ್ರೇ ಪುರಾಣ । ಸಾಧುಸಂತ ಬೋಲಿಲೆ ॥೧೯॥

ಕಲಿಯುಗದಲ್ಲಿ ಈ ತನಕ ನಾಲ್ಕುಸಾವಿರದಾ ಏಳನೂರಾ ಅರವತ್ತು ವರ್ಷಗಳು (೪೭೬೦ ವರ್ಷಗಳು) ಗತಿಸಿದವು. ಬಾಕಿ ಉಳಿದ ವರ್ಷಗಳ ಬಗ್ಗೆ ವಿವರ ಹೇಳುವೆ ಕೇಳಿರಿ. ಈ ಉಲ್ಲೇಖದ ಮೇಲಿಂದ ನೋಡಿದರೆ ಶಕೆ ೧೫೮೧ ಸಾಲಿನಲ್ಲಿ ಈ ಸಮಾಸದವರೆಗೆ ದಾಸಬೋಧದ ರಚನೆಯಾಗಿರಬೇಕೆಂದು ಅನಿಸುವದು. (೭) ಕಲಿಯುಗದವು ನಾಲ್ಕು ಲಕ್ಷ ಇಪ್ಪತ್ತೇಳು ಸಾವಿರದಾ ಎರಡುನೂರಾ ನಾಲ್ವತ್ತು ವರ್ಷಗಳು (೪೨೭೨೪೦ ವರ್ಷಗಳು) ಶಿಲ್ಲಕ ಉಳಿದಿರುವವು. ಇನ್ನು ಮುಂದೆ ಬರುವ ಕಾಲದಲ್ಲಿ ವರ್ಣಗಳು ಒಂದರಲ್ಲೊಂದು ಸಂಕರವಾಗುವವು. (೮) ಈ ವಿನಾಶಿ ವಿಶ್ವರಚನೆಯಲ್ಲಿ ಒಂದಕ್ಕಿಂತ ಇನ್ನೊಂದು ದೊಡ್ಡದಿರುವದು. ಆದರೆ ಈ ಎಲ್ಲ ದೃಶ್ಯಗಳು ಸ್ವಪ್ನದಂತೆ ತಾತ್ಪೂರ್ತಿಕವಾಗಿರುವವು ಇದಕ್ಕೆ ಆಧಾರಕೊಡುವ ಆತ್ಮಸ್ವರೂಪವು ಮಾತ್ರ ಶಾಶ್ವತ ಮತ್ತು ಸಮಾಧಾನ ರೂಪವಿರುವದು. ಇದರ ಜ್ಞಾನ ಮಾಡಿಕೊಳ್ಳುವವನೇ ನಿಜವಾದ ಜಾಣನು ಎಂದು ಹೇಳಬಹುದು. (೯) ಒಬ್ಬ ಅನ್ನುತ್ತಾನೆ. ವಿಶ್ವದಲ್ಲಿ ವಿಷ್ಣುವೇ ಶ್ರೇಷ್ಠನು, ಇನ್ನೊಬ್ಬ ಅನ್ನುತ್ತಾನೆ ಶಂಕರನು ಶ್ರೇಷ್ಠನಿರುವನು,ಮತ್ತೊಬ್ಬನು ಅನ್ನುತ್ತಾನೆ ಎಲ್ಲರಿಗಿಂತ ಈ ಆದಿಶಕ್ತಿಯೇ ದೊಡ್ಡವಳು. (೧೦) ಜನರು ತಮಗನಿಸಿದ್ದನ್ನು ತಮ್ಮ ಇಷ್ಟದಂತೆ ಹೀಗೆ ಅಂದರೂ ಕಲ್ಪಾಂತ್ಯದ (ಪ್ರಳಯಕಾಲದ) ಸಮಯದಲ್ಲಿ ಈ ಎಲ್ಲವೂ ನಾಶವಾಗಿ ಹೋಗುವದು. ಯದ್‌ದೃಷ್ಟಂ ನಷ್ಟಂ ಅಂದರೆ ಯಾವುದು ಕಾಣಿಸುವದೋ ಅದೆಲ್ಲವೂ ನಾಶವಾಗುವದು ಹೀಗೆ ಶೃತಿ ಶಾಸ್ತ್ರದ ಹೇಳಿಕೆ ಇದೆ.(೧೧) ಯಾವನು ಯಾವ ಉಪಾಸನೆಯನ್ನು ಮಾಡುವನೋ ಅವನಿಗೆ ಆ ಉಪಾಸನೆಯ ಅಭಿಮಾನವಿರುತ್ತದೆ. ಆದರೆ ನಿಜವಾದ (ಖರೇ) ದೇವರು ಯಾರು? ಇದನ್ನು ಸರಿಯಾಗಿ (ಪರಿಪೂರ್ಣ) ತಿಳಿದವರೆಂದರೆ ಕೇವಲ ಸಂತ ಸಾಧು ಶರಣರು ಇವರೇ ಇದನ್ನು ನಿಶ್ಚಯಿಸಬಲ್ಲವರಾಗಿದ್ದಾರೆ. (೧೨) ಸಾಧು ಸಂತರು ಒಂದೇ ದೃಢನಿಶ್ಚಯದವರಿರುತ್ತಾರೆ. ಒಂದೇ ಒಂದು ಆತ್ಮವು ಮಾತ್ರ ಸರ್ವತ್ರ ವ್ಯಾಪಿಸಿರುವದರಿಂದ ಆತ್ಮವೇ ದೇವರು ಇದರ ಹೊರತಾಗಿ ಚರಾಚರ ವಿಶ್ವವೆಲ್ಲ ಮಾಯೆಯ ಆಟವಿದೆ, ಖೊಟ್ಟಿಯಾಗಿದೆ. (೧೩) ಒಂದು ಉದಾಹರಣೆ:- ಒಂದು ಚಿತ್ರದಲ್ಲಿ ಸೇನೆ ಸೈನಿಕರ ಚಿತ್ರರಚನೆ ಇದೆ. ಅದರಲ್ಲಿ ದೊಡ್ಡವರಾರು, ಸಣ್ಣವರಾರು. ಇದನ್ನು ನೀವೇ ನಿಮ್ಮ ಮನಸ್ಸಿನಲ್ಲಿ ವಿಚಾರಿಸಿ ನಿರ್ಣಯಿಸಿರಿ. ಚಿತ್ರವೂ ಖೊಟ್ಟಿ ಚಿತ್ರದಲ್ಲಿದ್ದವರೂ ಖೊಟ್ಟಿ ಅಂದ ಮೇಲೆ ನಿರ್ಣಯಿಸುವದು ಹೇಗೆ? (೧೪) ಒಬ್ಬ ಬಹು ದೊಡ್ಡ ಸ್ವಪ್ನ ಕಂಡನು. ಅದರಲ್ಲಿಯ ವ್ಯಕ್ತಿಗಳನ್ನು ಸಣ್ಣವರು ಮತ್ತು ದೊಡ್ಡವರು ಎಂದು ಗುರುತಿಸಿ ನಿಶ್ಚಯಿಸಿದನು. ಆದರೆ ಎಚ್ಚರಾದ ಮೇಲೆ ಎಲ್ಲಿ ಎಂದು ಎಲ್ಲ ಕಡೆಗೆ ನೋಡುತ್ತಾನೆ. ಯಾವುದೂ ಇಲ್ಲವೆಂದು ತಿಳಿಯಿತು. (೧೫) ಎಚ್ಚರಗೊಂಡ ನಂತರದ ದೃಷ್ಟಿಯಿಂದ ವಿಚಾರ ಮಾಡಿದರೆ ಯಾರು ದೊಡ್ಡವರು ಯಾರು ಸಣ್ಣವರು ಇದೆಲ್ಲ ಸ್ವಪ್ನದಲ್ಲಿ ಕಾಣಿಸಿದ ಮಿಥ್ಯಾವಿಸ್ತಾರವೆಂದು ಲಕ್ಷ್ಯಕ್ಕೆ ಬರುತ್ತದೆ. [೧೬] ಇದರಂತೆಯೇ ಈ ದೃಶ್ಯ ಜಗತ್ತಿನ ವಿಚಾರವೂ ಸಹ ಸ್ವಪ್ನದಂತೆಯೇ ಮಾಯಿಕವಾಗಿದೆ. ಇದರಲ್ಲಿ ಶ್ರೇಷ್ಠತನ ಮತ್ತು ಕನಿಷ್ಠತನ [ದೊಡ್ಡಿಸ್ತನ, ಸಣ್ಣತನ] ಇವು ನಿಜವಲ್ಲ. ನಿಜವಾಗಿ ದೊಡ್ಡವ ಯಾರು? ಮತ್ತು ಸಣ್ಣವ ಯಾರು? ಎಂಬುದನ್ನು ಜ್ಞಾನಿ ಸಂತ ಸತ್ಪುರುಷರು ಬರೋಬರಿತೋರಿಸಲು ಶಕ್ತರಾಗಿರುವರು(೧೭) ಯಾರು ಜನ್ಮ ಪಡೆದು ಮರಣ ಹೊಂದುವರೋ ಅಂಥವರು ಜನ್ಮ ಮರಣದ ಚಕ್ರದಲ್ಲಿ ಸಿಕ್ಕಿಕೊಂಡಿರುವರೆಂದು ತಿಳಿಯಬೇಕು. ದೇಹಬುದ್ಧಿಯ ಕಾರಣದಿಂದ ದೇಹದ ಶ್ರೇಷ್ಠತನವೇ ತನ್ನ ಸ್ವತಃದ ದೊಡ್ಡಿಸ್ತನವೆಂದು ಯಾರು ತಿಳಿದಿರುವರೋ ಅಂಥ ದೇಹ ಜೀವಂತವಿದ್ದರೂ ಸಹ ಸತ್ತಂತೆಯೇ ಎಂದು ತಿಳಿಯಿರಿ. ಜನ್ಮಕ್ಕೆ ಬಂದ ಮೇಲೆ ಯಾರು ಆತ್ಮಜ್ಞಾನ ಮಾಡಿಕೊಳ್ಳುವರೋ ಅವರು ಸಾಯುವದಿಲ್ಲ. ಅಂಥವರು ಅಮರರಾಗುವರು. ಯಾರು ನಿಜವಾದ ಖರೇವಿಚಾರದಿಂದ ಶ್ರೇಷ್ಠರಿರುವರೋ ಅಂಥವರು ಇದರ ವಿಚಾರವನ್ನು ವಿವೇಕದಿಂದ ಮಾಡಬೇಕು.(೧೮) ಯಾರಿಗೆ ನಿಜವಾದ ಆತ್ಮಜ್ಞಾನವಾಗಿರುವದೋ ಅವರೇ ಖರೇ ಶ್ರೇಷ್ಠ ಪುರುಷರೆನಿಸುವರು. ಅವರೇ ಮಹಾಜನ ಸಂತರಿರುವರು. ಹೀಗೆ ಇದರ ನಿರ್ಣಯವನ್ನು ವೇದಶಾಸ್ತ್ರ ಪುರಾಣ ಮತ್ತು ಸಾಧು, ಸಂತ, ಶರಣರುಅನುಭವರು ಸಾರಿ ಹೇಳಿದ್ದಾರೆ. (೧೯)

ಏವಂ ಸಕಳಾಂಮಧ್ಯೇ ಥೋರ । ತೋ ಯೇಕ ಚಿ ಪರಮೇಶ್ವರ ।
ತಯಾಮಧೇ ಹರಿಹರ । ಹೋತಿ ಜಾತೀ ॥೨೦॥
ತೋ ನಿರ್ಗುಣ ನಿರಾಕಾರ । ತೇಥೇ ನಾಹೀ ಉತ್ಪತ್ತೀ ವಿಸ್ತಾರ ।
ಸ್ಥಾನ ಮಾನಾಚಾ ವಿಚಾರ । ಏಲಿಕಡೆ ॥೨೧॥
ನಾವ ರೂಪ ಸ್ಥಾನಮಾನ । ಹಾ ತೋ ಅವಘಾ ಚಿ ಅನುಮಾನ ।
ತಥಾಪಿ ಹೋಈಲ ನಿದಾನ । ಬ್ರಹ್ಮ ಪ್ರಳಈ ॥೨೨॥
ಬ್ರಹ್ಮ ಪ್ರಳಯಾ ವೇಗಳೇ । ಬ್ರಹ್ಮ ನಾಮರೂಪಾನಿರಾಳೇ ।
ಬ್ರಹ್ಮ ಕೋಣೇ ಯೇಕಾ ಕಾಳೇ । ಜೈಸೇ ತೈಸೇ ॥೨೩॥
ಕರಿತೀ ಬ್ರಹ್ಮನಿರೂಪಣ । ಜಾಣತೀ ಬ್ರಹ್ಮ ಸಂಪೂರ್ಣ ।
ತೇ ಚಿ ಜಾಣಾವೆ ಬ್ರಾಹ್ಮಣ । ಬ್ರಹ್ಮವಿದ ॥೨೪॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಬ್ರಹ್ಮನಿರೂಪಣ' ನಾಮ ಸಮಾಸ ಚತುರ್ಥ॥.

ಇದರ ಪ್ರಕಾರ ಒಬ್ಬನೇ ಒಬ್ಬ ಪರಮಾತ್ಮನು ಮಾತ್ರ ಎಲ್ಲದರಕ್ಕಿಂತ ದೊಡ್ಡವನಿರುವನು. ಇದರೊಳಗೆ ವಿಷ್ಣು ಮತ್ತು ಶಂಕರ ಇವರೂ ಬರುವರು ಹಾಗೂ ಹೋಗುವರು. ಹುಟ್ಟುವರು ಮತ್ತು ಸಾಯುವರು. (೨೦) ಪರಮೇಶ್ವರನು ನಿರ್ಗುಣ ನಿರಾಕಾರ ನಿರಾಲಂಬನಿರುವನು. ಇವನಲ್ಲಿ ಏನೂ ಹುಟ್ಟುವದಿಲ್ಲ. ಉತ್ಪನ್ನವಾಗುವದಿಲ್ಲ. ಮತ್ತು ಬೆಳೆಯುವದೂ ಇಲ್ಲ. ನಾಶವೂ ಆಗುವದಿಲ್ಲ. ಸ್ಥಳ, ಕಾಲ ಮತ್ತು ಆಕಾರ ಇವುಗಳ ವಿಚಾರವಂತೂ ಇತ್ತೀಚಿನದು. ಇದರ ಬಗ್ಗೆ ಹೇಳುವದೇ ಬೇಡ. [೨೧] ನಾಮ, ರೂಪ, ಸ್ಥಳ, ಕಾಲ ಆಕಾರ ಇತ್ಯಾದಿಗಳೆಲ್ಲ ಮನುಷ್ಯನ ಬುದ್ಧಿಯಕಲ್ಪನೆಯಲ್ಲಿಂದ ಬಂದವುಗಳಾಗಿರುವವು, ಅನುಮಾನದಿಂದ ಬಂದವುಗಳಾಗಿರುವವು ಇದರ ಬಗ್ಗೆ ಬ್ರಹ್ಮ [ಪ್ರಳಯ] ಕಾಲದಲ್ಲಿ ನಿರ್ಣಯವಾಗುತ್ತದೆ. ಅರ್ಥಾತ್ ಎಲ್ಲ ಘಟನೆಗಳೂ ನಾಶವಾಗಿ ಹೋಗುವವು. [೨೨] ಪರಬ್ರಹ್ಮನಿಗೆ ಪ್ರಳಯ ಸ್ಪರ್ಶಿಸಲು ಶಕ್ಯವಾಗುವದಿಲ್ಲ. ಇವನು ನಾಮರೂಪಗಳ ಆಚೆಗೆ ಇರುವನು. ಯಾವ ಕಾಲದಲ್ಲಿಯೂ ಬ್ರಹ್ಮ ಹೇಗಿರುವನೋ ಹಾಗೆಯೇ ಇರುವನು. ಇದರಲ್ಲಿ ಎಳ್ಳಷ್ಟೂ ಬದಲಾಗುವದಿಲ್ಲ. [೨೩] ಯಾರು ಸದಾಸರ್ವಕಾಲವೂ ಬ್ರಹ್ಮ ಸ್ವರೂಪದ ಬಗ್ಗೆ ಮಾತನಾಡುವರೋ, ಹೇಳುವರೋ, ಮತ್ತು ಯಾರು ಬ್ರಹ್ಮನನ್ನು ಸಂಪೂರ್ಣವಾಗಿ ತಿಳಿದಿರುವರೋ [ಬ್ರಹ್ಮಜಾನಾತಿ ಬ್ರಾಹ್ಮಣಃ॥ಸ್ಮೃತಿ] ಅಂಥ ಬ್ರಹ್ಮಜ್ಞ ಪುರುಷನೇ ಬ್ರಾಹ್ಮಣನೆಂದು ತಿಳಿಯಬೇಕು. [೨೪]

**ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಆರನೆಯ ದಶಕದ ಬ್ರಹ್ಮನಿರೂಪಣವೆಂಬ ನಾಲ್ಕನೆಯ ಸಮಾಸವು ಮುಗಿದುದು.**

## ದಶಕ ೬. ಸಮಾಸ ೫. ಮಾಯಾ ಬ್ರಹ್ಮ ನಿರೂಪಣ (ನುಡಿ ೨೬)

ಈ ಸಮಾಸದಲ್ಲಿ ಶ್ರೀ ಸಮರ್ಥರು ಮಾಯೆಮತ್ತು ಬ್ರಹ್ಮ ಇವರ ಸಂಬಂಧ ಯಾವರೀತಿಯದಾಗಿದೆ? ಇವುಗಳ ಲಕ್ಷಣ ಯಾವ ರೀತಿಯದಾಗಿರುವದು? ಇದನ್ನು ವಿವರಿಸಿ ಹೇಳಿದ್ದಾರೆ. ಮಾಯಾ ಅಂದರೆ ಏನು? ಮಾಯಾ ಶಬ್ದವು ಮಾ.ಧಾತುವಿನಿಂದ ಆಗುವದು. ಮಾ ಅಂದರೆ ಅಳೆಯುವದು, ಸಮಾವೇಶವಾಗುವದು, ಪ್ರವೇಶವಾಗುವದು. ಸಂಗ್ರಹವಾಗುವದು.

ಮಾಯಾ ಅಂದರೆ "ವಿಶ್ವಮಾತಿಯಸ್ಯಾಮ್-ಯಾವದರಲ್ಲಿ ವಿಶ್ವವು ಸಮಾವೇಶವಾಗುವದೋ ಅದು" ಯಾವುದು ಪರಬ್ರಹ್ಮನನ್ನು ಅಳತೆ (ಮೋಜಮಾಪದಲ್ಲಿ)ಯಲ್ಲಿ ತರುವದೋ ಆ ಶಕ್ತಿಯು ಮಾಯಾ ಅನಿಸುವದು. ವೇದಾಂತದಲ್ಲಿ"ಮಹಾಮಾಯಾ" ಎಲ್ಲಿಂದ ಬಂದಳು? ಎಲ್ಲಿಂದ ಒಳಗೆ ಪ್ರವೇಶಿಸಿದಳು? ಬೃಹದಾರಣ್ಯಕಉಪನಿಷತ್‌ದಲ್ಲಿ ಯಾಜ್ಞವಲ್ಕ್ಯರು ಮೈತ್ರೇಯಿಗೆ ಸ್ಪಷ್ಟವಾಗಿ ಹೇಳಿದ್ದಾರೆ. "ಇದಂ ಸರ್ವ ಯದಯಮಾತ್ಮಾ" ಏನು ಅದೆಯೋ ಅದೆಲ್ಲವೂ ಆತ್ಮರೂಪವಿರುವದು". ಅದ್ವೈತ ದರ್ಶನಕಾರರ ಅರ್ಥಾತ್ ಶ್ರೀಸಮರ್ಥರ ಹೇಳಿಕೆಯೂ ಸಹ ಹೀಗೇ ಇರುವದು. ಅಂದರೆ ವಿಶ್ವದ ಮೂಲತತ್ವ ಒಂದೇ ಒಂದು ಆತ್ಮವೇ ಇರುವದು. ಇದರಲ್ಲಿ ಅನೇಕತ್ವವೇ ಇರುವದಿಲ್ಲ. ನೇಹನಾನಾಸ್ತಿಕಿಂಚನ-ಇದರಲ್ಲಿ ಎಳ್ಳಷ್ಟೂ ಅನೇಕತ್ವತನವಿರುವದಿಲ್ಲ" ಅಂದ ಮೇಲೆ ಅನೇಕತನದಿಂದ ತುಂಬಿದ ಈ ಜಗತ್ತು ಹೇಗೆ ನಿರ್ಮಾಣವಾಯಿತು?. ಇದಕ್ಕೆ ಒಂದು ಉತ್ತರ ಹೀಗೆ ಇರುವದು. ಆತ್ಮನ ಹೊರತಾಗಿ ಇತರ ವಸ್ತುಗಳೇ ಇಲ್ಲ. ಆದ್ದರಿಂದ ಆತ್ಮನೇ ಅನೇಕತ್ವದಿಂದ ಕಾಣುವನು. "ಈ ಉತ್ತರದ ಪ್ರಕಾರ ನೋಡಿದರೆ ದ್ವೈತ ಮತ್ತು ಅದ್ವೈತಗಳೆರಡೂ ಒಂದೇ ಬಗೆಯಿಂದ ತೋರಿಕೆಯಲ್ಲಿ ಸತ್ಯವೆನಿಸುವವು. ಆದರೆ ಏಕತನ ಮತ್ತು ಅನೇಕತನ ಇವು ಪರಸ್ಪರ ವಿರುದ್ಧವಿರುವದರಿಂದ ಎರಡೂ ಒಂದೇ ವಸ್ತುವಿನ ವಿಷಯದಲ್ಲಿ ಒಂದೇ ಸಮನಾದ ಒಂದೇ ರೀತಿಯ ಸತ್ಯವಿರಲು ಶಕ್ಯವಿಲ್ಲ. ಅದ್ವೈತವು ಸತ್ಯವಿರುವದೆಂದು ಆತ್ಮಜ್ಞಾನಿ ಸತ್ಪುರುಷರ ಪ್ರತ್ಯಕ್ಷ ಅನುಭವ ವಿರುವದು. ಅವರ ಈ ಪ್ರಮಾಣವನ್ನು ಮನ್ನಿಸಲೇ ಬೇಕಾಗುವದು. ಈಗ ಇಲ್ಲಿ ಇನ್ನೊಂದು ದೊಡ್ಡ ಪ್ರಶ್ನೆ ಏಳುತ್ತದೆ. ಅದು ಯಾವುದೆಂದರೆ, "ಆತ್ಮನು ಒಬ್ಬನೇ ಒಬ್ಬನಿದ್ದಾನೆ" ಸಂಪೂರ್ಣ ಸತ್ಯನಿದ್ದಾನೆ ಮತ್ತು ಸರ್ವವ್ಯಾಪಿ ಇರುವನು. ಅನಂತ ಮತ್ತು ಅವಿನಾಶಿ ಇದ್ದು ನಿರಾಕಾರನಿರುವನು. ಈ ಮಾತು ನಿಜವಾಗಿಯೂ ಸತ್ಯವಿದ್ದುದಾದರೆ ಇಂಥ ಈ ಆತ್ಮನಲ್ಲಿ ಅನೇಕತ್ವದಿಂದ ತುಂಬಿರುವಂಥ ಮತ್ತು ಒಂದೇ ಸಮನೆ ಬದಲಾಗುತ್ತಿರುವ, ನಾಶವಂತ (ಅಂತವಂತ), ಅಪೂರ್ಣವಾಗಿರುವ ದ್ವೈತಮಯ ಜಗತ್ತು ಹೇಗೆ ಉಂಟಾಯಿತು? ಇದಕ್ಕೆ ಉತ್ತರವೇನೆಂದರೆ, ಪ್ರಥಮದ ವಿಚಾರವೇನೆಂದರೆ,ಈ ಪ್ರಶ್ನೆ ಯಾರಿಗೆ ಬರುವದು? ಆತ್ಮಜ್ಞಾನಿ ಸತ್ಪುರುಷರಿಗಂತೂ ಈ ಪ್ರಶ್ನೆ ಬರುವದೇ

ಇಲ್ಲ. ಯಾಕಂದರೆ ಇವರಿಗೆ ಒಂದೇ ಒಂದು ಆತ್ಮಸ್ವರೂಪದ ಹೊರತಾಗಿ ಇತರ (ಬೇರೆ) ಯಾವದೂ ಏನೂ ಅನುಭವಕ್ಕೆ ಬರುವದೇ ಇಲ್ಲ. (ಬಂದಿರುವದೇ ಇಲ್ಲ) ಅರ್ಥಾತ್ ಆತ್ಮಜ್ಞಾನವಿಲ್ಲದವನಿಗೆ ಮಾತ್ರ ಈ ಪ್ರಶ್ನೆ ಬರುವದು. ಬ್ರಹ್ಮ ಬೇರೆ–ಜಗತ್ತು ಬೇರೆ–ಇವನ್ನು ನೋಡುವ ನಾನು ಕೂಡಾ ಬೇರೆ ಮತ್ತು ನನ್ನ ಹಾಗಿರುವ ಇನ್ನುಳಿದವರಿಂದ ಸಹ ನಾನು ಬೇರೆ ಈ ಭೇದ ಬುದ್ಧಿಯಿಂದ ಅನೇಕತ್ವದಲ್ಲಿ ಬಾಳಿ ಬದುಕುವ ಜೀವಕ್ಕೆ ಮಾತ್ರ ಈ ಪ್ರಶ್ನೆ ನಿರ್ಮಾಣವಾಗುವದು. ಅದು ಹೇಗೆ ಇರುವದೆಂಬುದನ್ನು ಹೇಳುವೆ ಕೇಳಿರಿ "ನಾನು" ಖರೋಖರ ಆತ್ಮವೇ ಇರುವದು. ಆದರೆ ಅಜ್ಞಾನವು ಕಾರಣವಾಗಿ ಅಡ್ಡಬಂದದ್ದರಿಂದ ದೇಹಬುದ್ಧಿಯ ಉದಯವಾಯಿತು. ಮತ್ತು ನಿಜವಾದ ಖರೇ "ನಾನು" ಎಂಬ ಜೀವಕ್ಕೆ ಮರೆವು ಉಂಟಾಗಿ ಅದು (ಜೀವವು) ಸ್ವತಃವನ್ನೇ ದೇಹ ರೂಪದಲ್ಲಿ ಭಾವಿಸಹತ್ತಿತು. ಇದರಿಂದಲೇ ಅದಕ್ಕೆ ದೃಶ್ಯವಿಶ್ವವೆಲ್ಲ ನಿಜವೆಂದು ಅನಿಸಹತ್ತಿತು. ಒಂದು ಕಡೆ ಆತ್ಮಸ್ವರೂಪಕ್ಕೆ ಮುಸುಕು ಬಿದ್ದಿತು. (ಆತ್ಮಸ್ವರೂಪವನ್ನು ಮುಚ್ಚಲಾಯಿತು). ಮತ್ತು ಇನ್ನೊಂದು ಕಡೆಗೆ ಅನೇಕತ್ವದಿಂದ ತುಂಬಿದಂಥ ಮತ್ತು ಸತತ ಬದಲಾವಣೆ ಹೊಂದುತ್ತಿರುವ ಜಗತ್ತು ಅದಕ್ಕೆ (ಜೀವಕ್ಕೆ) ಸರ್ವಸ್ವೀ ನಿಜವೆಂದು ಅನಿಸಹತ್ತಿತ್ತು. ಯಾವ ಅಜ್ಞಾನದ ಮೂಲಕ ಇಷ್ಟೊಂದು ಅನರ್ಥವಾಯಿತೋ ಇದಾದರೂ ಎಲ್ಲಿಂದ ಬಂದಿತು? ಈ ಪ್ರಶ್ನೆಗೆ ಉತ್ತರ ಹೀಗಿರುವದು:– ಶುದ್ಧ, ನಿರ್ಗುಣ,ನಿರಾಕಾರ ಹಾಗೂ ನಿರ್ಮಲವಿರುವ ಪರಬ್ರಹ್ಮದೊಳಗೆ ಅಕ್ಷರಶಃ (ಸತ್ಯವಾಗಿಯೂ) ಅನಂತ ಶಕ್ತಿಗಳು ವಾಸಮಾಡುವವು. ಇದರ ಪೈಕಿ ದೃಶ್ಯ ಅಥವಾ ನಾಮರೂಪಗಳು ಅಥವಾ ಆಕಾರ ನಿರ್ಮಾಣ ಮಾಡುವ ಒಂದು ಅತಿ ವಿಲಕ್ಷಣಶಕ್ತಿ ಇರುವದು. ಪೂರ್ಣ ನಿರಾಕಾರ ಮತ್ತು ಸ್ವತಂತ್ರವಾದ ಪರಮಾತ್ಮ ವಸ್ತುವಿಗೆ ಅನಂತ ಆಕಾರಗಳನ್ನು ಕೊಡುವ ಮತ್ತು ದೃಶ್ಯದ ಅಳವಿನಲ್ಲಿ ತೊಡಕಿಕೊಂಡಿರುವಂಥ ಈ ಶಕ್ತಿಯು ಮೊದಲು ಆತ್ಮಸ್ವರೂಪದ ಮೇಲೆ ಆಚ್ಛಾದನ (ಮುಸುಕು ಮುಚ್ಚುವಿಕೆ) ಹಾಕುವದು. ಈ ಶಕ್ತಿಯ ಹೆಸರು ಮಾಯಾ ಎಂದು ಆ ಆಚ್ಛಾದನದ ಹೆಸರು ಅಜ್ಞಾನ ಅಥವಾ ಅವಿದ್ಯಾ ಎಂದು ಅನ್ನುವರು. ಅಜ್ಞಾನ, ಅವಿದ್ಯಾ, ಭ್ರಮ. ಅಧ್ಯಾಸ (ಆರೋಪ), ದೇಹಬುದ್ಧಿ, ಇವೆಲ್ಲವೂ ಮಾಯೆಯ ಪ್ರಜೆಗಳಿರುವವು. ಆತ್ಮಜ್ಞಾನಿ ಪುರುಷನಿಗೆ ಪರಮಾತ್ಮ ವಸ್ತು ಹೇಗಿರುವದೋ ಅದೇ ರೀತಿಯಲ್ಲಿ ಅನುಭವಕ್ಕೆ ಬರುತ್ತದೆ. ಅನಂತ ನಾಮರೂಪಗಳಿಂದ ತುಂಬಿದ ಮತ್ತು ಕ್ಷಣ ಕ್ಷಣಕ್ಕೂ ಬದಲಾವಣೆ ಹೊಂದುತ್ತಿರುವ ಚರಾಚರ ವಿಶ್ವವೂ ಸಹ ಆತ್ಮಜ್ಞಾನಿಗೆ ಇದು ಪರಬ್ರಹ್ಮನ ಸ್ವಾನಂದ ಲೀಲೆಯೇ ಇರುತ್ತದೆ, ಎಂದು ಅನಿಸುವದು. ಮಾಯೆಯ ಪ್ರಭಾವದಿಂದ ಮೋಸಕ್ಕೆ ಬಿದ್ದು (ಮರುಳಾಗಿ)ಜ್ಞಾನಿಯು ಆತ್ಮಸ್ವರೂಪವನ್ನು ಮರೆಯುವದಿಲ್ಲ. ಮತ್ತು ದೃಶ್ಯವನ್ನು ನಿಜವೆಂದು ತಿಳಿಯುವದಿಲ್ಲ. ಆದರೆ ಮಾಯೆಯ ಅಧೀನವಾಗಿ ಅಜ್ಞಾನದಲ್ಲಿ ಜೀವಿಸುವ ಜೀವವು ಸ್ಥಳಕಾಲಗಳ ನಿಮಿತ್ತದಿಂದ (ಮಾಡಿಕೊಂಡು) ಬಂಧನದಲ್ಲಿ ತೊಡಕಿ ಕೆಲಸ ಮಾಡುತ್ತದೆ. ಇದರಿಂದಲೇ ಆತ್ಮಸ್ವರೂಪವನ್ನು ಮರೆಯುವದಲ್ಲದೇ ಇದರ ಜೊತೆಗೆ ಈ ಚರಾಚರ ನಶ್ವರ ವಿಶ್ವವನ್ನುಸಂಪೂರ್ಣ ಸತ್ಯವೆಂದು ನಂಬುತ್ತದೆ.ಆತ್ಮಜ್ಞಾನದ ಭೂಮಿಕೆಯುಮೇಲಿಂದ ನೋಡಿದ್ದಾದರೆ ಬ್ರಹ್ಮಮತ್ತು ಅವನ ಶಕ್ತಿ-ಮಾಯಾ ಇವೆರಡೂ ಅಗದೀ ಏಕರೂಪವೇ ಇರುವವು. ಇದರ ಉಲಟ ಅಜ್ಞಾನದ ಭೂಮಿಕೆಯ ಮೇಲಿಂದ ನೋಡಿದ್ದಾದರೆ ಬ್ರಹ್ಮ ಮತ್ತು ಮಾಯಾ ಇವು ಬೇರೆ ಎನಿಸುವವು. ಅಂತೆಯೇ ಮಾನವೀಬುದ್ಧಿಯ ಪದ್ಧತಿಯಿಂದ ಜ್ಞಾನಮಯ ಬ್ರಹ್ಮ ಮತ್ತು ಅಜ್ಞಾನಮಯವಾದ ಮಾಯಾ ಇವುಗಳ ತುಲನೆ[ಸಾದೃಶ್ಯ]ಮಾಡಿ ನೋಡಿಕೊಳ್ಳಲು ಬರುವದು ಇವುಗಳ ಪರಸ್ಪರ ವಿರೋಧಿ ಲಕ್ಷಣಗಳನ್ನು ಈ ಸಮಾಸದಲ್ಲಿ ಶ್ರೀಸಮರ್ಥರು ಹೇಳಿರುತ್ತಾರೆ. ಪರಮಾತ್ಮ ವಸ್ತುವಿನ ಬಗ್ಗೆ ವಿವಿಧ ಪ್ರಕಾರಗಳಿಂದ ತಿಳಿಯುವಂತೆ ಸುಲಭ ಹಾಗೂ ಸರಳವಾದ ವರ್ಣನೆಯು ಮರಾಠಿ ಭಾಷೆಯಲ್ಲಿಯ ಇತರ ಗ್ರಂಥಗಳಲ್ಲಿ ಎಲ್ಲಿಯೂ ಇಲ್ಲ. ಇವುಗಳಲ್ಲಿ ಉಪನಿಷತ್ತಿನ ಸಾರವನ್ನೇ [ಅಮೃತ ಧಾರೆಯನ್ನು] ತುಂಬಿದ್ದಾರೆ. ಶ್ರೀ ಸಮರ್ಥರ ತತ್ವಜ್ಞಾನದ ದೃಷ್ಟಿಯಿಂದ ಈ ಸಮಾಸವು ಅತಿ ಮಹತ್ವದ ಸಮಾಸವೆಂದು ತಿಳಿಯಬೇಕು.

## ಸಮಾಸ ಪಂಚಮು : ಮಾಯಾ ಬ್ರಹ್ಮ ನಿರೂಪಣ

॥ಶ್ರೀರಾಮ॥ ಶ್ರೋತೇ ಪುಸತೀ ಐಸೇ । ಮಾಯಾ ಬ್ರಹ್ಮ ತೇ ಕೈಸೆ ।
ಶ್ರೋತ್ಯಾ ವಕ್ತಯಾಚ್ಯಾ ಮಿಸೇ । ನಿರೂಪಣ ಐಕಾ ॥೧॥
ಬ್ರಹ್ಮ ನಿರ್ಗುಣ ನಿರಾಕಾರ । ಮಾಯಾ ಸಗುಣ ಸಾಕಾರ ।
ಬ್ರಹ್ಮಾಸಿ ನಾಹೀ ಪಾರಾವಾರ । ಮಾಯೇಸಿ ಆಹೆ ॥೨॥
ಬ್ರಹ್ಮ ನಿರ್ಮಳ ನಿಶ್ಚಳ । ಮಾಯಾ ಚಂಚಳ ಚಪಳ ।
ಬ್ರಹ್ಮ ನಿರೋಪಾಧೀ ಕೇವಳ । ಮಾಯಾ ಉಪಾಧಿರೂಪೀ ॥೩॥
ಮಾಯಾ ದಿಸೆ ಬ್ರಹ್ಮ ದಿಸೇನಾ । ಮಾಯಾ ಭಾಸೆ ಬ್ರಹ್ಮ ಭಾಸೇನಾ ।
ಮಾಯಾ ನಾಸೆ ಬ್ರಹ್ಮ ನಾಸೇನಾ । ಕಲ್ಪಾಂತಕಾಳೀ ॥೪॥
ಮಾಯಾ ರಚೇ ಬ್ರಹ್ಮ ರಚೇನಾ । ಮಾಯಾ ಖಚೇ ಬ್ರಹ್ಮ ಖಚೇನಾ ।
ಮಾಯಾ ರುಚೇ ಬ್ರಹ್ಮ ರುಚೇನಾ । ಅಜ್ಞಾನಾಸೀ ॥೫॥
ಮಾಯಾ ಉಪಜೇ ಬ್ರಹ್ಮ ಉಪಜೇನಾ। ಮಾಯಾ ಮರೇ ಬ್ರಹ್ಮ ಮರೇನಾ ।
ಮಾಯಾ ಧರೇ ಬ್ರಹ್ಮ ಧರೇನಾ । ಧಾರಣೇಸೀ ॥೬॥
ಮಾಯಾ ಘುಟೇ ಬ್ರಹ್ಮ ಘುಟೇನಾ। ಮಾಯಾ ತುಟೇ ಬ್ರಹ್ಮ ತುಟೇನಾ ।
ಮಾಯಾ ವಿಟೇ ಬ್ರಹ್ಮ ವಿಟೇನಾ। ಅವಿನಾಶ ತೇ ॥೭॥
ಮಾಯಾ ವಿಕಾರೀ ಬ್ರಹ್ಮ ನಿರ್ವಿಕಾರೀ ।
ಮಾಯಾ ಸರ್ವ ಕರೀ ಬ್ರಹ್ಮ ಕಾಹೀಚ ನ ಕರೀ ।
ಮಾಯಾ ನಾನಾ ರೂಪೇ ಧರೀ । ಬ್ರಹ್ಮ ತೇ ಅರೂಪ ॥೮॥
ಮಾಯಾ ಪಂಚಭೂತಿಕ ಅನೇಕ । ಬ್ರಹ್ಮ ತೇ ಶಾಶ್ವತ ಯೇಕ ।
ಮಾಯಾ ಬ್ರಹ್ಮಾಚಾ ವಿವೇಕ । ವಿವೇಕೀ ಜಾಣತೀ ॥೯॥
ಮಾಯಾ ಲಹಾನ ಬ್ರಹ್ಮ ಥೋರ । ಮಾಯಾ ಅಸಾರ ಬ್ರಹ್ಮ ಸಾರ।
ಮಾಯಾ ಅರ್ತಿ ಪಾರ । ಬ್ರಹ್ಮಾಸೀ ನಾಹೀ ॥೧೦॥
ಸಕಳ ಮಾಯಾ ವಿಸ್ತಾರಲೀ । ಬ್ರಹ್ಮಸ್ಥಿತಿ ಆಚ್ಛಾದಲೀ।
ಪರೀ ತೇ ನಿವಡೂನಿ ಘೇತಲೀ । ಸಾಧು ಜನೀ ॥೧೧॥
ಗೊಂಡಾಳ ಸಾಂಡೂನ ನೀರ ಘೇಇಜೆ । ನೀರ ಸಾಂಡೂನಿ ಕ್ಷೀರ ಸೇವಿಜೇ ।
ಮಾಯಾ ಸಾಂಡೂನಿ ಅನುಭವಿಜೆ । ಬ್ರಹ್ಮ ತೈಸೇ ॥೧೨॥
ಬ್ರಹ್ಮ ಆಕಾಶಾ ಐಸೇ ನಿವಳ । ಮಾಯಾ ವಸುಂಧರಾ ಡಹುಳ।
ಬ್ರಹ್ಮ ಸೂಕ್ಷ್ಮ ಕೇವಳ। ಮಾಯಾ ಸ್ಥೂಳರೂಪೀ ॥೧೩॥

## ದಶಕ ೬. ಸಮಾಸ ೫. ಮಾಯಾ ಬ್ರಹ್ಮ ನಿರೂಪಣ (ನುಡಿ ೨೬)

**ಶ್ರೀಸಮರ್ಥರು ಪ್ರಾರಂಭದಲ್ಲಿ ಹೀಗೆ ಹೇಳುವರು. ಏನಂದರೆ ಶ್ರೋತಾ-ವಕ್ತಾ ಸಂವಾದವು ಸಾಂಕೇತಿಕವಿರುವದು. ನನಗೆ(ನಿಮಗೆ)ಮಾಯಾ ಮತ್ತು ಬ್ರಹ್ಮ ಇದರ ವಿವೇಚನೆ ಮಾಡಬೇಕಾಗಿದೆ** ಶ್ರೋತೃವು ಒಂದು ಪ್ರಶ್ನೆ ಮಾಡಿದನು. "ಮಾಯಾ ಮತ್ತು ಬ್ರಹ್ಮ ಇವರು ಹೇಗಿರುವರು? ಶ್ರೋತಾ ಮತ್ತು ವಕ್ತಾ ಇವರ ಸಂವಾದದ ನಿಮಿತ್ತ ಮಾಡಿಕೊಂಡು ಮಾಯಾ ಮತ್ತು ಬ್ರಹ್ಮ ಇವರ ವಿವೇಚನೆ ಕೇಳಿರಿ. (೧) **ಬ್ರಹ್ಮ** ನಿರ್ಗುಣ ನಿರಾಕಾರನಾದರೆ **ಮಾಯಾ** ಸಗುಣ ಸಾಕಾರವಿರುವದು. **ಬ್ರಹ್ಮ** ಅನಂತ (ಅಂತಪಾರವಿಲ್ಲದವ) ನಾದರೆ **ಮಾಯಾ** ಪರಿಮಿತ (ಮಿತಿಯುಳ್ಳದ್ದು) ಇರುವದು. (೨) **ಬ್ರಹ್ಮ** ನಿರ್ಮಲ, ನಿಶ್ಚಲ (ಅಚಲ) ನಾದರೆ ಮಾಯಾ ಚಂಚಲ ಚಪಲವಿರುವದು. ಬ್ರಹ್ಮ ಕೇವಲ ನಿವ್ವಳಅಮರ್ಯಾದಿತನಾದರೆ **ಮಾಯಾ** ಮರ್ಯಾದಾ (ಅಳತೆಗೊಳಪಟ್ಟ) ರೂಪದ್ದೇ ಇರುವದು. (೩) **ಬ್ರಹ್ಮ** ಕಾಣಿಸುವದಿಲ್ಲ, **ಮಾಯಾ** ಕಾಣಿಸುವದು. **ಬ್ರಹ್ಮ** ಹೊಳೆಯುವದಿಲ್ಲ, ತೋಚುವದಿಲ್ಲ. ಭಾಸವಾಗುವದಿಲ್ಲ. **ಮಾಯಾ** ಹೊಳೆಯುವದು, ಭಾಸವಾಗುವದು. **ಬ್ರಹ್ಮನು** ಕಲ್ಪಾಂತ್ಯಕಾಲದಲ್ಲಿ ಸಹ ನಾಶ ಹೊಂದುವದಿಲ್ಲವಾದರೆ ಮಾಯಾ ನಾಶವಾಗುವದು. (೪) **ಬ್ರಹ್ಮ** ನಿರ್ಮಾಣ ವಾಗುವದಿಲ್ಲವಾದರೆ, ಮಾಯಾ ನಿರ್ಮಾಣ ಹೊಂದುವದು. **ಬ್ರಹ್ಮ** ಕ್ಷಯ ಹೊಂದುವದಿಲ್ಲವಾದರೆ, ಮಾಯಾ ಕ್ಷಯ ಹೊಂದುತ್ತದೆ. ಅಜ್ಞಾನಿ ಜೀವವು **ಬ್ರಹ್ಮನನ್ನು** ಪ್ರೀತಿಸುವದಿಲ್ಲವಾದರೆ ಅದೇ ಅಜ್ಞಾನಿ ಜೀವವು ಮಾಯೆಯನ್ನು ಆದರ ಪೂರ್ವಕ ಪ್ರೀತಿಸುವದು. (೫) ಬ್ರಹ್ಮ ಹುಟ್ಟುವದಿಲ್ಲ,ಆದರೆ ಮಾಯೆ ಹುಟ್ಟುವದು. ಬ್ರಹ್ಮ ಸಾಯುವದಿಲ್ಲ ಆದರೆ ಮಾಯೆ ಸಾಯುವದು. ಬ್ರಹ್ಮವು ಧಾರಣಶಕ್ತಿ (ಸ್ಮರಣಶಕ್ತಿ)ಯ ಆಳವಿನಲ್ಲಿ ಬರುವದಿಲ್ಲ. ಅಥವಾ ಹಿಡಿಸುವದಿಲ್ಲ ಮಾಯೆಯು ಸ್ಮರಣ ಮಾಡಲಿಕ್ಕೆ ಬರುವದು. (ಧಾರಣಾ ಶಕ್ತಿಗೆ ಹಿಡಿಸುವದು) ಅಂದರೆ ಒಳಪಡುವದು. (೬) ಬ್ರಹ್ಮವು ಒಡೆಯುವದಿಲ್ಲ, ಮಾಯೆಯು ಒಡೆಯುತ್ತದೆ. ಬ್ರಹ್ಮವು ಹರಿಯುವದಿಲ್ಲ ಆದರೆ ಮಾಯೆಯು ಹರಿಯುವದು. ಬ್ರಹ್ಮನು ಅವಿನಾಶಿ ಆಗಿರುವದರಿಂದ ಬೇಸರಗೊಳ್ಳುವದಿಲ್ಲ, ಬಿಗಡಾಯಿಸುವದಿಲ್ಲ. ಹಳಸುವದಿಲ್ಲ, ನಾಶವಾಗುವದಿಲ್ಲ. ಆದರೆ ಮಾಯೆ ವಿನಾಶಿ ಇರುವದರಿಂದ ಬೇಸರಗೊಳ್ಳುವದು ಬಿಗಡಾಯಿಸುವದು ನಾಶವಾಗುವದು.ಹಳಸುವದು(೭)ಬ್ರಹ್ಮವು ವಿಕಾರರಹಿತವು ಮಾಯೆಯು ವಿಕಾರಯುಕ್ತವಿರುವದು.ಬ್ರಹ್ಮನುಏನನ್ನೂ ಮಾಡಲಾರದವನು. ಆದರೆ ಮಾಯೆಯು ಎಲ್ಲವನ್ನೂ ಮಾಡುವದು. ಬ್ರಹ್ಮನು ರೂಪ ರಹಿತನು. ಮಾಯೆಯು ನಾನಾ ರೂಪಗಳನ್ನು ಧರಿಸುವದು. (೮) ಬ್ರಹ್ಮನು ಶಾಶ್ವತನು ಮತ್ತು ಒಬ್ಬನೇ ಒಬ್ಬನಿರುವನು. ಆದರೆ ಮಾಯೆಯು ಪಂಚಭೂತಾತ್ಮಕ, ಅಶಾಶ್ವತ ಮತ್ತು ಅನೇಕತ್ವದಿಂದ ತುಂಬಿರುವದು. ಯಾರು ಆತ್ಮಾನಾತ್ಮ ವಿವೇಕಿಗಳಾಗಿರುವರೋ,ಅಂಥವರು ಮಾತ್ರ ಬ್ರಹ್ಮ ಮತ್ತು ಮಾಯಾ ಇವುಗಳ ನಿಜವಾದ ಸ್ವರೂಪತಿಳಿಯುವರು.(೯) ಬ್ರಹ್ಮ ವಿಶಾಲನಾದರೆ ಮಾಯಾ ಸಣ್ಣದಿರುವದು, ಮರ್ಯಾದಿತವಿರುವದು. ಬ್ರಹ್ಮ ಸಾರಸರ್ವಸ್ವವಿದ್ದರೆ ಮಾಯೆ ಸಾರಹೀನವಿರುವದು. ಬ್ರಹ್ಮ ಸ್ಥಲಾತೀತನು, ಮಾಯೆ ಸ್ಥಲಯುಕ್ತವಿದೆ. ಹಾಗೂ ಇದರಲ್ಲಿ ಅತ್ತಕಡೆ ಮತ್ತು ಇತ್ತಕಡೆ ಹೀಗೆ ಸ್ಥಲಭೇದವೂ ಇರುವದು (೧೦) ವಿಶ್ವದಲ್ಲಿ ಇತ್ತಕಡೆಗೆ ಅತ್ತಕಡೆಗೆ ಸುತ್ತೂ ಕಡಿಗೆ ಮಾಯಾ ಪಸರಿಸಿದೆ. (ವ್ಯಾಪಿಸಿದೆ) ಇದರಿಂದಾಗಿ ಬ್ರಹ್ಮನು ಮುಚ್ಚಲ್ಪಟ್ಟಿದ್ದಾನೆ. ಆದರೆ ಜ್ಞಾನಿ ಸಾಧುಪುರುಷರು ಮಾಯೆ ಆವರಣವನ್ನು ತೆಗೆದು ಆ ಶುದ್ಧ ಬ್ರಹ್ಮನನ್ನು ಗುರುತಿಸಿ ಗ್ರಹಣ ಮಾಡುತ್ತಾರೆ. (೧೧) ನೀರಿನ ಮೇಲೆ ಪಸರಿಸಿದ ಹಾವಸೆಯನ್ನು ಬದಿಗೆ (ಮಗ್ಗಲಿಗೆ) ಸರಿಸಿ ಕೆಳಗಿನ ನೀರನ್ನು ತೆಗೆದುಕೊಳ್ಳುವಂತೆ ಅಥವಾ ಹಾಲು ನೀರು ಮಿಶ್ರವಾಗಿದ್ದರೆ ನೀರನ್ನು ಬೇರ್ಪಡಿಸಿ ಹಂಸವು ಹಾಲನ್ನೇ ಕುಡಿಯುವಂತೆ ಈ ವಿಶ್ವದಲ್ಲಿ ಮಾಯಾಬ್ರಹ್ಮದ ಮಿಶ್ರಣವೇ ಇರುವದರಿಂದ ಇದರಲ್ಲಿಯ ಮಾಯೆಯನ್ನು ಹಿಂದಕ್ಕೆ ಅಥವಾ ಬದಿಗೆ ಸರಿಸಿ ಶುದ್ಧ ಬ್ರಹ್ಮನ ಅನುಭವ ಹೊಂದಬೇಕು. (೧೨) ಬ್ರಹ್ಮನು ಆಕಾಶದಂತೆ ನಿರ್ಮಲನು. ಮಾಯೆಯು ಪೃಥ್ವಿಯಂತೆ ಹೊಲಸಾದ ರಾಡಿ ರೊಜ್ಜಿನಂತೆ ಕಲಬೆರಕಿಯಾದದ್ದು ಬ್ರಹ್ಮ ಅತ್ಯಂತ ಸೂಕ್ಷ್ಮವಾದರೆ ಮಾಯಾ ಒಳಗೂ ಹೊರಗೂ ಅತಿಸ್ಥೂಲ ಜಡವಿರುವದು. (೧೩)

ಬ್ರಹ್ಮ ತೇ ಅಪ್ರತ್ಯಕ್ಷ ಅಸೆ । ಮಾಯಾ ತೇ ಪ್ರತ್ಯಕ್ಷ ದಿಸೆ ।
ಬ್ರಹ್ಮ ತೇ ಸಮಚಿ ಅಸೆ । ಮಾಯಾ ತೇ ವಿಷಮರೂಪೀ ॥೧೪॥

ಮಾಯಾ ಲಕ್ಷ ಬ್ರಹ್ಮ ಅಲಕ್ಷ । ಮಾಯಾ ಸಾಕ್ಷ ಬ್ರಹ್ಮ ಅಸಾಕ್ಷ ।
ಮಾಯೆ ಮಧ್ಯೇ ದೋನಿ ಪಕ್ಷ । ಬ್ರಹ್ಮೀ ಪಕ್ಷ ಚಿ ನಾಹೀ ॥೧೫॥

ಮಾಯಾ ಪೂರ್ವ ಪಕ್ಷ ಬ್ರಹ್ಮ ಸಿದ್ಧಾಂತ । ಮಾಯಾ ಅಸಂತ ಬ್ರಹ್ಮ ಸಂತ ।
ಬ್ರಹ್ಮಾಸಿ ನಾಹೀ ಕರಣೇ ಹೇತ । ಮಾಯೇಸಿ ಆಹೇ ॥೧೬॥

ಬ್ರಹ್ಮ ಅಖಂಡ ಘನದಾಟ । ಮಾಯಾ ಪಂಚಭೂತಿಕ ಪೋಚಟ ।
ಬ್ರಹ್ಮ ತೇ ನಿರಂತರ ನಿಘೋಟ । ಮಾಯಾ ತೇ ಜುನೀ ಜರ್ಜರೀ ॥೧೭॥

ಮಾಯಾ ಘಡೇ ಬ್ರಹ್ಮ ಘಡೇನಾ । ಮಾಯಾ ಪಡೇ ಬ್ರಹ್ಮ ಪಡೇನಾ ।
ಮಾಯಾ ವಿಘಡೇ ಬ್ರಹ್ಮ ವಿಘಡೇನಾ । ಜೈಸೇ ತೈಸೇ ॥೧೮॥

ಬ್ರಹ್ಮ ಅಸತಚಿ ಅಸೆ । ಮಾಯಾ ನಿರಸಿತಾಚ ನಿರಸೆ ।
ಬ್ರಹ್ಮಾಸ ಕಲ್ಪಾಂತ ನಸೆ । ಮಾಯೇಸಿ ಆಹೆ ॥೧೯॥

ಮಾಯಾ ಕಠಿಣ ಬ್ರಹ್ಮ ಕೋಮಳ । ಮಾಯಾ ಅಲ್ಪ ಬ್ರಹ್ಮ ವಿಶಾಳ ।
ಮಾಯಾ ನಾಸೆ ಸರ್ವಕಾಳ । ಬ್ರಹ್ಮಚಿ ಅಸೆ ॥೨೦॥

ವಸ್ತು ನವ್ಹೆ ಬೋಲಿಜೆ ಐಸೀ । ಮಾಯಾ ಜೈಸೀ ಬೋಲಿಜೆ ತೈಸೀ ।
ಕಾಳ ಪಾವೇನಾ ವಸ್ತೂಸೀ । ಮಾಯೇಸಿ ಝಡಪೀ ॥೨೧॥

ನಾನಾ ರೂಪ ನಾನಾ ರಂಗ । ತಿತುಕಾ ಮಾಯೇಚಾ ಪ್ರಸಂಗ ।
ಮಾಯಾ ಭಂಗೆ ಬ್ರಹ್ಮ ಅಭಂಗ । ಜೈಸೇ ತೈಸೇ ॥೨೨॥

ಆತಾ ಅಸೋ ಹಾ ವಿಸ್ತಾರ । ಚಾಲತ ಜಾತೇ ಸಚರಾಚರ ।
ತಿತುಕೀ ಮಾಯಾ ಪರಮೇಶ್ವರ । ಸಬಾಹ್ಯ ಅಭ್ಯಂತರೀ ॥೨೩॥

ಬ್ರಹ್ಮ ಪ್ರತ್ಯಕ್ಷ ಇರಲಾರದ್ದು (ಅತೀಂದ್ರಿಯ) ಆದರೆ ಮಾಯಾಪ್ರತ್ಯಕ್ಷವಾಗಿ ಕಾಣಿಸುವಂತಹದು. (ಇಂದ್ರಿಯ ಗಮ್ಯ) ಇರುವದು. ಬ್ರಹ್ಮವು ಇಂದ್ರಿಯಗಳ ಅಳವಿಗೆ ಒಳಪಡದಂತಹುದು ಆದರೆ ಮಾಯಾ ಎಲ್ಲ ಕಡೆಗೂ ವಿಷಮ ಅಥವಾ ಹೆಚ್ಚು ಕಡಿಮೆಯುಳ್ಳದ್ದು, ನ್ಯೂನತೆ ಇರುವಂತಹುದು, ಇರುವದು. (೧೪) ಬ್ರಹ್ಮನು ಧ್ಯಾನದ ವಿಷಯನಾಗರಾಲನು. ಆದರೆ ಮಾಯಾ ಧ್ಯಾನದ ವಿಷಯವಾಗಬಲ್ಲದು ಬ್ರಹ್ಮನನ್ನು ಪುರಾವೆಯಿಂದ (ಆಧಾರದಿಂದ) ಸಿದ್ಧಮಾಡಲಿಕ್ಕೆ ಬರುವದಿಲ್ಲ. ಆದರೆ ಮಾಯೆಯನ್ನು ಪುರಾವೆಯಿಂದ ಸಿದ್ಧ ಮಾಡಲಿಕ್ಕೆ ಬರುತ್ತದೆ. ಬ್ರಹ್ಮನು ತರ್ಕದ ಆಚೆಗೆ ಇರುವವನಾದ್ದರಿಂದ ವಾದ ಮಾಡಲಿಕ್ಕೆ ಪ್ರತಿಪಕ್ಷವೇ ಇಲ್ಲದಂತಹದು. ಆದರೆ ಮಾಯಾ ತರ್ಕದ ಕಕ್ಷೆಯಲ್ಲಿ ಇರುವದರಿಂದ ಇದರಲ್ಲಿ ಪೂರ್ವ ಪಕ್ಷ ಮತ್ತು ಉತ್ತರ ಪಕ್ಷ ಎಂದು ವಾದದ ಎರಡು ಪಕ್ಷಗಳು ಇರುವವು. (೧೫) ಬ್ರಹ್ಮನು ಒಂದೇ ಒಂದಾದ ನಿಶ್ಚಿತ ಸಿದ್ಧಾಂತ (ನಿರ್ಣಾಯಕ)ನು ಆದರೆ ಮಾಯಾ ಅನೇಕ ಪೂರ್ವ ಪಕ್ಷವುಳ್ಳದು. ಬ್ರಹ್ಮ ಶಾಶ್ವತ ಮತ್ತು ಸತ್ಯವಾದರೆ ಮಾಯಾ ಕರ್ಮಯುಕ್ತ(ಕರ್ಮಮಯ) ಹೇತುಯುಕ್ತ (ಕಾಮನಾಯುಕ್ತ) ಇರುವದು (೧೬) ಬ್ರಹ್ಮವು ಅಖಂಡವು ಮಾಯಾ ಖಂಡ ಅಂದರೆ ಅನೇಕ ತತ್ವದಿಂದಕೂಡಿದ್ದು. ಬ್ರಹ್ಮ ಎಲ್ಲ ಕಡೆಗೂ ಘನದಾಟ (ಭರಗಚ್ಚ) ಇರುವನು. ಮಾಯಾ ಪಂಚಭೂತಾತ್ಮಕ ಪೊಳ್ಳು [ಪೋಕಳ] ನಿಃಸ್ಸಾರವುಳ್ಳದ್ದು. ಬ್ರಹ್ಮನು ಕಾಯಂ ಇರುವಂಥವನು ಪರಿಪೂರ್ಣರೂಪನು. ಆದರೆ ಮಾಯೆಯು ಹಳೇ ಜೀರ್ಣವಾದದ್ದು. ಹರಕು ಚಿಂದಿ, ಹಳೇ ಡಗ್ಗು ಇರುವದು. ಕೊಳಕು ನಾಶವಾಗುವಂತಹದೂ ಇರುವದು. [೧೭] ಬ್ರಹ್ಮ ಸ್ವಯಂ ಭೂ (ಸ್ವಯಂಸಿದ್ಧ) ಇರುವದರಿಂದ ಇದನ್ನು ಯಾರೂ ತಯಾರಿಸಿಲ್ಲ. ಮತ್ತು ಮಾಡಿಲ್ಲವಾದರೆ ಮಾಯೆಯನ್ನು ತಯಾರ ಮಾಡಲಿಕ್ಕೆ ಬರುವದು. ನಿರ್ಮಾಣ ಮಾಡಲಿಕ್ಕೂ ಬರುವದು. ಬ್ರಹ್ಮ ಬೀಳುವದಿಲ್ಲ. ಸ್ಥಾನಭ್ರಷ್ಟವೂ ಆಗುವದಿಲ್ಲ.ಮಾಯಾ ಬೀಳುವದು ಸ್ಥಾನಭ್ರಷ್ಟವಾಗುವದು.ಇದರ ಮಾಯಾತನವೂ ಇಲ್ಲದಾಗುತ್ತದೆ. ಆದರೆ ಬ್ರಹ್ಮನ ಬ್ರಹ್ಮತನವು ಎಂದೂ ಇಲ್ಲದಾಗುವದಿಲ್ಲ. ಮತ್ತು ನಾಶವಾಗುವದಿಲ್ಲ, ಬ್ರಹ್ಮ ಎಂದೂ ಕೆಡುವದಿಲ್ಲ. ತೊಂದರೆ ಹಿಂಸೆಗೆ ಒಳಗಾಗುವದಿಲ್ಲ.ಮಾಯಾ ಕೆಡುವದು. ಹಿಂಸೆಗೆ ತೊಂದರೆಗೆ ಒಳಗಾಗುವದುಬ್ರಹ್ಮಹೇಗಿರುವದೋ ಹಾಗೆಯೆ ಇರುವದು. ಆದರೆ ಮಾಯೆ ಹೇಗಿರುವದೋ ಹಾಗಿರುವದಿಲ್ಲ. ಬದಲಾಗುತ್ತಿರುವದು. (೧೮) ಬ್ರಹ್ಮನು ಇಲ್ಲವೆಂದು ಯಾವ ಕಾಲಕ್ಕೂ ಆಗುವದಿಲ್ಲ. ಸದಾಕಾಲ ಇದ್ದೇ ಇರುವನು. ಮಾಯೆಯು ಸೂಕ್ಷ್ಮ ವಿವೇಕ[ವಿಚಾರ] ದಿಂದ ನಿರಸನ (ನಿರಾಸ)ವಾಗಿ ಇಲ್ಲದಾಗುವದು. ಬ್ರಹ್ಮಪ್ರಲಯರಹಿತನಿರುವನು. ಇವನಿಗೆ ಕೊನೆಯೇ ಇಲ್ಲ. ಆದರೆ ಮಾಯೆ ಪ್ರಲಯಯುಕ್ತವಿರುವದು.ಇದಕ್ಕೆ ಕೊನೆ ಇರುವದು.ಬ್ರಹ್ಮ ಅನಂತವು ಮಾಯೆಅಂತವಂತವಿರುವದು.(೧೯) ಬ್ರಹ್ಮ ಅತ್ಯಂತ ಕೋಮಲ, ಮೃದು, ನಾಜೂಕ. ಆದರೆ ಮಾಯೆ ಅತ್ಯಂತ ಕಠಿಣವಿದೆ, ಜಡವಿದೆ. ನಾಜೂಕು ಇಲ್ಲದ್ದು. ಬ್ರಹ್ಮ ವಿಶಾಲ ಆದರೆ ಮಾಯಾ ಅತಿ ಆಕುಂಚಿತವಿರುವದು. ಬ್ರಹ್ಮ ಸದಾಸರ್ವಕಾಲ ಇದ್ದೆ ಇರುವಂಥದು. ಮಾಯಾ ನಾಶ ಹೊಂದತಕ್ಕದ್ದಾಗಿದೆ. (೨೦) ಬ್ರಹ್ಮನನ್ನು ಬಾಯಿಂದ (ವಾಣಿಯಿಂದ) ಮಾತಿನಿಂದ, ಶಬ್ದದಿಂದ ವರ್ಣನೆ ಮಾಡಿ ಹೇಳಲಿಕ್ಕೆ ಬರುವದಿಲ್ಲ. ಆದರೆ ಮಾಯಾ ಹೇಗೆ ಇದರ ವರ್ಣನೆ ಮಾಡುವಿರೋ ಹಾಗೆ ಕಾಣಿಸು ವಂಥದು. [ಇರುವಂಥದು]. ಬ್ರಹ್ಮವು ಕಾಲನ ಸತ್ತಾ (ಅಧಿಕಾರ)ದಿಂದ ಆಚೆಗೆ (ಬೇರೆ) ಇರುವದು, ಸ್ವತಂತ್ರ ವಿರುವದು, ಮಾಯಾ ಕಾಲನ ಭಕ್ಷ್ಯ [ಆಹಾರ]ವಿದೆ. (೨೧) ಬ್ರಹ್ಮ ಅಭಂಗವಿರುವದರಿಂದ ಮುರಿಯುವದಿಲ್ಲ. ಹೇಗಿದೆಯೋ ಹಾಗೆಯೇ ಇರುವದು. ಆದರೆ ಮಾಯಾ ಮುರಿಯುತ್ತದೆ. ಇದ್ದಂತೆ ಇರುವದಿಲ್ಲ.ಅನೇಕ ಪ್ರಕಾರದ ರಂಗರೂಪ ನಿರ್ಮಾಣ ಮಾಡುವ ಈ ಎಲ್ಲ ಆಟವೂ ಮಾಯೆಯದಾಗಿದೆ.[೨೨] ಇನ್ನು ಮಾಯಾ ಬ್ರಹ್ಮ ಇವರ ಲಕ್ಷಣಗಳ ವಿಸ್ತಾರವು ಸಾಕು. ಸಾಕಷ್ಟು ವಿಸ್ತಾರವಾಗಿ ಹೇಳಲಾಗಿದೆ. ಇರಲಿ, ಈ ವಿಶ್ವದಲ್ಲಿ ಎಷ್ಟೆಲ್ಲ [ಯಾವತ್ತೂ] ಸಚೇತನ ಮತ್ತು ಅಚೇತನವು ಕಾಣುವದೋ ಇದು ಬದಲಾಗುತ್ತ ಹೋಗಿ ಕೊನೆಗೆ ನಾಶವಾಗುವದು, ಇವೆಲ್ಲವೂ ಮಾಯೆಯಾಗಿದೆ. ಈ ಚರಾಚರ ವಿಶ್ವವನ್ನೆಲ್ಲ ಪರಮಾತ್ಮನು ಒಳಗೂ ಹೊರಗೂ ವ್ಯಾಪಿಸಿರುವನು. (೨೩)

ಸಕಳ ಉಪಾಧೀ ವೆಗಳಾ । ತೋ ಪರಮಾತ್ಮಾ ನಿರಾಳಾ ।
ಜಳೀ ಅಸೋನಿ ನಾತಳೆ ಜಳಾ । ಆಕಾಶ ಜೈಸೇ ॥೨೪॥
ಮಾಯಾ ಬ್ರಹ್ಮಾಚೇ ವಿವರಣ । ಕರಿತಾ ಚುಕೆ ಜನ್ಮಮರಣ ।
ಸಂತಾಸ ಗೇಲಿಯಾ ಶರಣ । ಮೋಕ್ಷ ಲಾಭೇ ॥೨೫॥
ಅರೆ ಯಾ ಸಂತಾಚಾ ಮಹಿಮಾ । ಬೋಲಾವಯಾ ನಾಹೀ ಸೀಮಾ ।
ಜಯಾಚೆನಿ ಜಗದಾತ್ಮಾ । ಅಂತರ ಚಿ ಹೋಇಜೆ ॥೨೬॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
''ಮಾಯಾ ಬ್ರಹ್ಮ ನಿರೂಪಣ'' ನಾಮ ಸಮಾಸ ಪಂಚಮ ॥

• •

ದೃಶ್ಯವಿಶ್ವದ ಎಲ್ಲ ಬಂಧನದ ಆಚೆಗೆ ಅಂದರೆ ಸೀಮಾ, ಹದ್ದು ಮೇರೆಅಳತೆಯ ಆಚೆಗೆ ಪರಮಾತ್ಮನು ಪ್ರತ್ಯೇಕನಾಗಿ ಸ್ವತಂತ್ರನಾಗಿ ಬೇರೆಯೇ ಇರುವನು. ಆಕಾಶದ ಪ್ರತಿಬಿಂಬವು ನೀರಿನಲ್ಲಿ ಕಾಣಿಸಿದರೂ (ಬಿದ್ದರೂ) ಸಹ ಆಕಾಶವು ನೀರಿನಿಂದ ಅಲಿಪ್ತವಾಗಿಯೇ ಇರುವದು. ಇದರಂತೆಯೇ ಪರಮಾತ್ಮನು ಎಲ್ಲದರಲ್ಲಿ ವ್ಯಾಪಿಸಿ ಇದ್ದರೂ ಸಹ ಅಲಿಪ್ತನಾಗಿಯೇ ಇರುವನು. (೨೪) ವಿವೇಕದಿಂದ ಸೂಕ್ಷ್ಮ ವಿಚಾರದಿಂದ ಮಾಯಾ ಮತ್ತು ಬ್ರಹ್ಮ ಇವನ್ನು ಬೇರ್ಪಡಿಸಿ ಒಂದರಿಂದ ಇನ್ನೊಂದನ್ನು ಪ್ರತ್ಯೇಕಿಸಿ ತಿಳಿದರೆ ಜನ್ಮ ಮರಣ ತಪ್ಪುತ್ತದೆ. ಸಾಧು, ಸಂತ, ಜ್ಞಾನಿ ಪುರುಷರಿಗೆ ಶರಣು ಹೋದರೆ ಅವರ ಕೃಪೆಯಿಂದ ಎಲ್ಲವೂ ತಿಳಿದು ಮೋಕ್ಷ ಲಭಿಸುವದು. (೨೫) ಎಲೈ, ಶ್ರೋತೃಗಳೇ ಈ ಸಂತ, ಶರಣ, ಜ್ಞಾನಿ ಸತ್ಪುರುಷರ ಮಹಿಮೆ ಮಹತಿಯನ್ನು, ದೊಡ್ಡಿಸ್ತನವನ್ನು ಎಷ್ಟು ಹೊಗಳಿ ಹೇಳಿದರೂ ಕಡಿಮೆಯೇ ಇರುವದು. ಇದನ್ನು ಹೇಳಹತ್ತಿದರೆ ಅದಕ್ಕೆ ಕೊನೆಯೇ ಇಲ್ಲ. ಯಾಕೆಂದರೆ ಜಗತ್ತಿನೊಳಗೆ ತುಂಬಿ ತುಳುಕುತ್ತಿರುವ ಪರಮಾತ್ಮನು ಸಂತ, ಸಾಧು, ಶರಣರ ಕೃಪೆಯಿಂದ ಮಾತ್ರ ನಮ್ಮ ಅಂತರ್ಯಾಮದಲ್ಲಿ ಪ್ರಕಟವಾಗುವನು.ಅರ್ಥಾತ್ ಇತರ ಎಲ್ಲಕಲ್ಪನೆಗಳು ಮಾಯವಾಗುವವು. ನಮ್ಮ ಅಂತಃಕರಣವು ಆತ್ಮಾರಾಮರೂಪವಾಗುವದು. (೨೬)

ಶ್ರೀದಾಸಬೋಧದ ಗುರುಶಿಷ್ಯರ ಸಂವಾದದ ಆರನೆಯ ದಶಕದಲ್ಲಿಯ
"ಮಾಯಾ ಬ್ರಹ್ಮ ನಿರೂಪಣ"ವೆಂಬ ಐದನೆಯ ಸಮಾಸವು ಮುಗಿದುದು.

• •

### ಸಮಾಸ ಸಹಾವಾ : ಸೃಷ್ಟಿ ಕಥನ

॥ಶ್ರೀರಾಮ॥ ಸೃಷ್ಟೀಪೂರ್ವೀ ಬ್ರಹ್ಮ ಅಸೆ । ತೇಥೇ ಸೃಷ್ಟಿ ಮುಳೀಂಚ ನಸೆ ।
ಆತಾ ಸೃಷ್ಟಿ ದಿಸತ ಅಸೆ । ತೇ ಸತ್ಯ ಕಿ ಮಿಥ್ಯಾ ॥೧॥

ತುಮ್ಹೀ ಸರ್ವಜ್ಞ ಗೋಸಾವೀ । ಮಾಝೀ ಆಶಂಕಾ ಫೇಡಾವೀ ।
ಐಸಾ ಶ್ರೋತಾ ವಿನವೀ । ವಕ್ತಯಾಸೀ ॥೨॥

ಆತಾ ಐಕಾ ಪ್ರತ್ಯೋತ್ತರ । ಕಥೇಸೀ ವ್ಹಾವೇ ತತ್ಪರ ।
ವಕ್ತಾ ಸರ್ವಜ್ಞ ಉದಾರ । ಬೋಲತಾ ಜಾಲಾ ॥೩॥

# ದಶಕ ೬. ಸಮಾಸ ೬. ಸೃಷ್ಟಿ ಕಥನ

ಹಿಂದಿನ ಸಮಾಸದಲ್ಲಿ ಬ್ರಹ್ಮ ಮತ್ತು ಮಾಯಾ ಇವುಗಳ ವರ್ಣನೆ ಮಾಡಿದ್ದನ್ನು ಓದಿದಾಗ ಒಂದು ಮಾತು ಲಕ್ಷದಲ್ಲಿ ಬಂದಿರಬಹುದು. ಅದೇನಂದರೆ ಮಾಯೆಯಲ್ಲಿ ಇರುವವೆಂಬ ಗುಣಗಳು ಬ್ರಹ್ಮನಲ್ಲಿ ಇಲ್ಲ ಎಂಬ ಪದ (ಶಬ್ದ) ಪ್ರಯೋಗವಾಗಿದೆ ಇದರ ಕಾರಣ ಹೀಗಿರುವದು. ಪರಮಾರ್ಥದ ದೃಷ್ಟಿಯಿಂದ ಈ ಜಗತ್ತಿನಲ್ಲಿಯ ಮನುಷ್ಯರೊಳಗೆ ಕೇವಲ ಎರಡು ವರ್ಗ (ಪ್ರಕಾರ)ವಿರುವವು. ಒಂದು ತಿಳಿದವರು, ಇನ್ನೊಂದು ತಿಳಿಯದೇ ಇದ್ದವರು ಎಂದು. ತಿಳಿದ ಪುರುಷರು ಆತ್ಮಜ್ಞಾನಿ, ಆದರೆ ತಿಳಿಯದ ಪುರುಷರು ಮಾಯಾ ಜ್ಞಾನಿ ಇರುವರು. ಆತ್ಮಜ್ಞಾನಿ ಪುರುಷನಿಗೆ ಬ್ರಹ್ಮದ ಸಾಕ್ಷಾತ್ ಅನುಭವ ಬರುವದು. ಆದರೆ ಅಜ್ಞಾನಿ ಪುರುಷನಿಗೆ ಬ್ರಹ್ಮಸಾಕ್ಷಾತ್‌ದ ಅನುಭವ ಬರುವದಿಲ್ಲ. ಅಂದರೆ ಅಜ್ಞಾನಿ ಪುರುಷರಿಗೆ ಕೇವಲ ಮಾಯೆಯ ಪ್ರತ್ಯಕ್ಷ ಅನುಭವ ಮಾತ್ರ ಬರುವದು. ದೃಶ್ಯರೂಪ ಇದ್ದಂಥ ಈ ಜಗತ್ತು ಅಜ್ಞಾನಿ ಜನರಿಗೆ ಎಷ್ಟೇ ಖರೇ ಅನಿಸಿದರೂ ಸಹ ಜಗತ್ತು ನಿಜವಾಗಿಯೂ ಇವರು ತಿಳಿದಂತೆ ಇರುವದಿಲ್ಲ. ಬ್ರಹ್ಮನಿಗೆ ಇದರ ಸ್ಪರ್ಶವಾಗುವದಿಲ್ಲ. ಇದೆಲ್ಲ ಒಂದು ವೇಳೆ ಬರೋಬರಿ (ಸರಿ) ಇದ್ದರೂ ಕೂಡಾ ಜ್ಞಾನಿ, ಸಾಧು, ಸಂತ ಪುರುಷರು ಅಜ್ಞಾನಿ ಜನರಿಗೆ ಬ್ರಹ್ಮ ಹೇಗಿರುವದೆಂದು ಹೇಳುವ ಪ್ರಸಂಗ ಬಂದಾಗ ಆ ವೇಳೆಯಲ್ಲಿ ಜ್ಞಾನಿಗಳು ಮಾಯೆಯ ಒಂದೊಂದು ಲಕ್ಷಣ ತೆಗೆದುಕೊಂಡು ಮತ್ತು ಆ ಲಕ್ಷಣಗಳು ಬ್ರಹ್ಮನಲ್ಲಿ ಇಲ್ಲವೆಂದು ತಿಳಿಸಿ ಹೇಳುವರು. ಅಂತೆಯೇ ಬ್ರಹ್ಮನು ಅನಾಮ, ಅರೂಪ, ಅಕ್ರಿಯ, ಅಸಾಕ್ಷ್ಯ, ಅಲಕ್ಷ, ಅಪಾರ, ಅಪ್ರತ್ಯಕ್ಷ, ನಿರ್ವಿಕಾರ, ನಿರಾಕಾರ, ನಿರಾಭಾಸ, ನಿರ್ಗುಣ, ನಿರುಪಾಧಿಕ, ವರ್ಣಹೀನ, ಅವಿನಾಶ, ಅವ್ಯಕ್ತ, ಅಕರ್ತಾ, ಮತ್ತು ಅದ್ವೈತವಿರುವನೆಂದು ಹೇಳುವರು. ಈ ಸಮಾಸದಲ್ಲಿ ಜಗತ್ತು ಮಿಥ್ಯಾ ಇರುವದು. ಎಂಬ ಮತವನ್ನು ಪುನಃ ನಿಮ್ಮ ಮುಂದೆ ಇಟ್ಟಿದ್ದಾರೆ. (ಹೇಳಿದ್ದಾರೆ). ಖರೆ (ಸತ್ಯ) ಮತ್ತು ಖೊಟ್ಟಿ (ಸುಳ್ಳು) ಇವುಗಳ ಮಿಶ್ರಣವೆಂದರೆ ಮಿಥ್ಯಾ ಇರುವದು. ಜ್ಞಾನಿ, ಸಾಧು,ಸಂತರಿಗೆ ಜಗತ್ತು ಪರಮಾತ್ಮ ರೂಪದಲ್ಲಿ ತೋರುತ್ತದೆ. ಆದರೆ ಅಜ್ಞಾನಿ ಜನರಿಗೆ ಇದೇ ದೃಶ್ಯರೂಪದಲ್ಲಿ ಕಾಣುವದು. ಈ ಇಬ್ಬರ ಭೂಮಿಕೆಯ ಪ್ರಕಾರ ಇಬ್ಬರದೂ ಅನುಭವ ನಿಜವೇ ಇರುತ್ತದೆ. ಆದರೆ ಮೊದಲನೆಯ ಅನುಭವ ಯಥಾರ್ಥವಾದುದು. ಎರಡನೆಯ ಅನುಭವ ಅಯಥಾರ್ಥಉಳ್ಳದ್ದು. ಆದ್ದರಿಂದ ಅಜ್ಞಾನಿ ಮನುಷ್ಯರು ಸದ್ಯದ ಅನುಭವ ಕೈಯಲ್ಲಿ ಹಿಡಿದು ಜ್ಞಾನಿ ಸತ್ಪುರುಷನ ಸಹಾಯದಿಂದ, ಹಾಗೂ ಸಾರಾಸಾರ ವಿಚಾರದಿಂದ, ಸೂಕ್ಷ್ಮ ವಿವೇಕದಿಂದ ಎಲ್ಲರೂ ಆತ್ಮ ಜ್ಞಾನಿಗಳಾಗಬೇಕೆಂದೇ ಶ್ರೀ ಸಮರ್ಥರು ಕೊನೆಯದಾಗಿ ಉಪದೇಶ ಮಾಡುವರು.

## ದಶಕ ೬. ಸಮಾಸ ೬. ಸೃಷ್ಟಿ ಕಥನ. (ನುಡಿ ೬೦)

**ಶ್ರೋತಾ ಪ್ರಶ್ನೆ ಮಾಡುವನು:**-ವಿಶ್ವವು ನಿರ್ಮಾಣವಾಗುವದಕ್ಕಿಂತ ಮೊದಲು ಬ್ರಹ್ಮ ಇರುವದು. ಆ ಸ್ಥಳದಲ್ಲಿ ವಿಶ್ವದ ಹುಟ್ಟೇ ಇರಲಿಲ್ಲ. ಜಗತ್ತೆನ್ನುವದೇ ಇರಲಿಲ್ಲ, ಆ ಮೇಲೆ ಇದರಲ್ಲಿ (ಬ್ರಹ್ಮನಲ್ಲಿ) ವಿಶ್ವ ಕಾಣಿಸಿಕೊಂಡಿತು. ಈ ಮಾತು ನಿಜವೇ ಅಥವಾ ಸುಳ್ಳೇ? (೧) "ಸ್ವಾಮಿ ಗುರುದೇವಾ! ತಾವು ಸರ್ವಜ್ಞರಿರುವಿರಿ. ನನ್ನ ಈ ಪ್ರಶ್ನೆಯನ್ನು ತಿಳಿಸಿ ಹೇಳಿರಿ. ನನ್ನ ಸಂಶಯ (ಶಂಕೆ) ವನ್ನು ಬಿಡಿಸಿ ಹೇಳಿರಿ. ಮತ್ತು ಸಮಾಧಾನ ಮಾಡಿರಿ. ಎಂದು ಶ್ರೋತಾ, ವಕ್ತಾರನಿಗೆ ವಿನಂತಿ ಮಾಡಿಕೊಂಡನು. (೨) ಈಗ ನಿನ್ನ ಪ್ರಶ್ನೆಗೆ ಉತ್ತರ ಹೇಳುವೆ ಕೇಳು. ಈ ವಿಷಯ ಕೇಳಲು ಲವಲವಿಕೆಯಿಂದ ಸಿದ್ಧನಾಗಿ (ತಯಾರಾಗಿ) ಏಕಾಗ್ರಮನದಿಂದ ಕೇಳಿ ತಿಳಿಯುವವನಾಗು. ಆಮೇಲೆ ಉದಾರನೂ ಸರ್ವಜ್ಞನೂ ಆದ ವಕ್ತಾ ಗುರುದೇವ ಹೇಳಹತ್ತಿದನು. (೩)

''ಜೀವ ಭೂತಃ ಸನಾತನ'' । ಏಸೇ ಗೀತೇಚೇ ವಚನ ।
ಯೇಣೇ ವಾಕ್ಯೇ ಸತ್ಯಪಣ । ಸೃಷ್ಟೀಸ ಆಲೇ ॥೪॥

''ಯದ್ದೃಷ್ಟಂ ತನ್ನಷ್ಟಂ'' ಯೇಣೇ । ವಾಕ್ಯ ಸೃಷ್ಟೀ ಮಿಥ್ಯಾಪಣೇ ।
ಸತ್ಯ ಮಿಥ್ಯಾ ಏಸೇ ಕೋಣೇ । ನಿವಡಾವೇ ॥೫॥

ಸತ್ಯ ಮ್ಹಣೋ ತರೀ ನಾಸೇ । ಮಿಥ್ಯಾ ಮ್ಹಣೋ ತರೀ ದಿಸೇ ।
ಆತಾ ಜೈಸೇ ಆಹೆ ತೈಸೇ । ಬೋಲಿಲೇ ಜೇಲ ॥೬॥

ಸೃಷ್ಟೀ ಮಧ್ಯೇ ಬಹು ಜನ । ಅಜ್ಞಾನ ಆಣೇ ಸಜ್ಞಾನ ।
ಮ್ಹಣೌನಿಯಾ ಸಮಾಧಾನ । ಹೋತ ನಾಹೀ ॥೭॥

ಏಕಾ ಅಜ್ಞಾನಾಚೇ ಮತ । ಸೃಷ್ಟಿ ಆಹೆ ತೇ ಶಾಶ್ವತ ।
ದೇವ ಧರ್ಮ ತೀರ್ಥ ವ್ರತ। ಸತ್ಯಚಿ ಆಹೇ ॥೮॥

ಬೋಲಲೆ ಸರ್ವಜ್ಞಾಚಾ ರಾಜಾ । ಮೂರ್ಖಸ್ಯ ಪ್ರತಿಮಾಪೂಜಾ ।
ಬ್ರಹ್ಮಪ್ರಳಯಾಚ್ಯಾ ಪೈಜಾ । ಘಾಲೂ ಪಾಹೆ ॥೯॥

ತವ ಬೋಲಲೆ ತೋ ಅಜ್ಞಾನ । ತರೀ ಕಾ ಕರಿಸೀ ಸಂಧ್ಯಾಸ್ನಾನ ।
ಗುರು ಭಜನ ತೀರ್ಥಾಟಣ । ಕಾಸಯಾ ಫಿರಾವೇ ॥೧೦॥

॥ಶ್ಲೋಕ॥ ತೀರ್ಥೆ ತೀರ್ಥೆ ನಿರ್ಮಲಂ ಬ್ರಹ್ಮವೃಂದಂ ।
ವೃಂದೇ ವೃಂದೇ ತತ್ವ ಚಿಂತಾನುವಾದಃ
ವಾದೇ ವಾದೇ ಜಾಯತೆ ತತ್ವ ಬೋಧಃ ।
ಬೋಧೆ ಬೋಧೆ ಭಾಸತೆ ಚಂದ್ರಚೂಡಃ ॥

ಚಂದ್ರಚೂಡಾಚೇ ವಚನ । ಸದ್ಗುರೂಚೇ ಉಪಾಸನ ।
ಗುರುಗೀತಾ ನಿರೂಪಣ । ಬೋಲಿಲೇ ಹರೇ ॥೧೧॥

ಗುರೂಸೀ ಕೈಸೇ ಭಜಾವೇ । ಆಧೀ ತಯಾಸಿ ವೊಳಖಾವೇ ।
ತ್ಯಾಚೇ ಸಮಾಧಾನ ಘ್ಯಾವೇ । ವಿವೇಕೇ ಸ್ವಯೇ ॥೧೨॥

**ಶಾಸ್ತ್ರದ ವಚನಗಳಲ್ಲಿಯು ವಿರೋಧವನ್ನು ತೋರಿಸುತ್ತಾರೆ:- "ಜೀವಭೂತಃ ಸನಾತನಃ"** (ಭ.ಗೀ.ಅ. ೧೫-೭ ರಲ್ಲಿ) ಅಂದರೆ ಈ ಸಂಸಾರದಲ್ಲಿ (ನನ್ನದೇ) ಪರಮಾತ್ಮ ಸ್ವರೂಪದ ಸನಾತನ ಅಂಶವು ಜೀವ ವೆಂದು ಆಗಿರುವದು. ಹೀಗೆ ಗೀತೆಯ ವಚನವಿರುವದು.ಈ ವಚನದ ಪ್ರಕಾರ ಜಗತ್ತಿಗೆ ಖರೇತನ ಬರುವದು.ಸೃಷ್ಟಿ ಯಲ್ಲಿ ಜೀವರೂಪದ್ದಾದ ಏನೆಲ್ಲವೂ ಇರುವದೋ ಅದು ನನ್ನ ಅನಾದಿ ಸಿದ್ಧ ಅಂಶವಿರುವದು[೪]ಆದರೆ**"ಯದ್ ದೃಷ್ಟಂ ತದ್ ನಷ್ಟಂ"** ಅಂದರೆ ಯಾವುದು ಕಾಣುವದೋ ಅದು ನಾಶವಾಗುವದು. ಈ ವಚನದಿಂದ ಜಗತ್ತು ಮಿಥ್ಯಾ ಎಂದು ಗೊತ್ತಾಗುತ್ತದೆ. ಅಂದ ಮೇಲೆ ಇದರಲ್ಲಿ ಖರೇ ಯಾವುದು?ಖೋಟಾ ಯಾವುದು? ಎಂಬುದನ್ನು ಯಾರು ನಿಶ್ಚಯಿಸುವರು. ? (೫) ಜಗತ್ತು ಸತ್ಯವೆಂದು ಅಂದರೆ ಇದು ನಾಶ ಹೊಂದುವದಾಗಿದೆ. ಇದನ್ನು ಸತ್ಯ ವೆಂದು ಅನ್ನಲಿಕ್ಕೆ ಬರುವದಿಲ್ಲ. ಹಾಗಾದರೆ ಇದು ಸುಳ್ಳು ಅನ್ನಬೇಕೆಂದರೆ ಕಣ್ಣಿಗೆ ಪ್ರತ್ಯಕ್ಷ ಕಾಣುವದು. ಆದ್ದರಿಂದ ಇದನ್ನು ಸುಳ್ಳು ಎಂದೂ ಅನ್ನಲಿಕ್ಕೆ ಬರುವದಿಲ್ಲ. ಅಂತೆಯೇ ನಿಮಗೆ ಸರಿಯಾಗಿ ತಿಳಿಯಲೆಂದು ಅದು ನಿಜವಾಗಿ ಹೇಗೆ ಇರುವದೋ ಅದನ್ನೇ ನಾನು ಈಗ ನಿಮಗೆ ಹೇಳುವೆನು. (೬) **ಈಗ ಜ್ಞಾನಿಗಳು ಏನು ಅನ್ನುವರು ? ಮತ್ತು ಅಜ್ಞಾನಿಗಳು ಏನು ಅನ್ನುವರು ? ಇದರ ವರ್ಣನೆ ಮಾಡುತ್ತಾರೆ.** ಜಗತ್ತಿನಲ್ಲಿ ಎಷ್ಟೆಷ್ಟೋ ಜನ ರಿದ್ದಾರೆ. ಇವರಲ್ಲಿ ಕೆಲವರು ಜ್ಞಾನಿಗಳೂ ಕೆಲವರು ಅಜ್ಞಾನಿಗಳೂ ಇರುವರು. ಇವರ ಅಭಿಪ್ರಾಯ (ಮತ) ದಲ್ಲಿ ಸಹ ಹೆಚ್ಚುಕಡಿಮೆ ಇರುತ್ತದೆ. ಇದರಿಂದ ಸಮಾಧಾನವಾಗುವದಿಲ್ಲ. (೭) ಮೊದಲಿಗೆ **ಅಜ್ಞಾನಿ** ಏನೆನ್ನುತ್ತಾನೆ. ಎಂಬುದನ್ನು ಕೇಳಿರಿ. ಅವನ ಅಭಿಪ್ರಾಯ ಹೀಗಿರುವದು:- "ಈ ವಿಶ್ವವು ಶಾಶ್ವತವಿರುವದು. ದೇವ, ಧರ್ಮ, ತೀರ್ಥ ವ್ರತಾದಿಗಳೆಲ್ಲವೂ ಸತ್ಯವಿರುವವು." (೮) ಅದಕ್ಕೆ **ಜ್ಞಾನಿ** ಹೇಳುವದೇನಂದರೆ:- ಸರ್ವಜ್ಞ (ಪೂರ್ಣಜ್ಞಾನಿ) ಆದ ಕೃಷ್ಣನು ಅನ್ನುತ್ತಾನೆ. **"ಮೂರ್ಖಸ್ಯ ಪ್ರತಿಮಾ ಪೂಜಾ"** ಅಂದರೆ ಮೂರ್ಖರು ಮತ್ತು **ಅಜ್ಞಾನಿ** ಯಾದವರಿಗೆ ಮಾತ್ರ ಮೂರ್ತಿ ಪೂಜೆ ಇರುವದು. ಈ ವಿಶ್ವದ ಪ್ರಳಯವಾದರೂ ಸಹ ಸತ್ಯ ವಸ್ತು ಹೇಗಿರು ವದೋ ಹಾಗೆಯೇ ಶಿಲ್ಲಕು ಉಳಿದಿರುತ್ತದೆ. ಅದೇ ಬ್ರಹ್ಮವು ಕೇವಲ ಸ್ವಾನುಭವದ ಈ ಜ್ಞಾನದ ಮೇಲೆ (ಬಗ್ಗೆ) ಜಿದ್ದಂ ಕಟ್ಟಲು ಜ್ಞಾನಿಯಂತ ಯಾರು ಇರುತ್ತಾನೆ.?(೯) ಇದನ್ನು ಕೇಳಿ **ಅಜ್ಞಾನಿಯು** ಪುನಃ ಕೇಳುವನು. "ವಿಶ್ವವು ಒಂದು ವೇಳೆ ಸುಳ್ಳೇ ಇದ್ದುದಾದರೆ ನೀನು ಸ್ನಾನ ಸಂಧ್ಯೆಯನ್ನು ಏಕೆ ಮಾಡುವಿ ? (ಆಚರಿಸುವಿ) ಎಲ್ಲ ಸುಳ್ಳೇ ಇದ್ದರೆ ಗುರುಭಜನೆ ಮತ್ತು ಭಕ್ತಿ ಏಕೆ ಮಾಡುವೆ ? ತೀರ್ಥಯಾತ್ರೆ ಮಾಡುತ್ತ ಏಕೆ ಅಡ್ಡಾಡುವಿ?"[೧೦]

**ಶ್ಲೋಕ:**- ತೀರ್ಥೇ ತೀರ್ಥೇ ನಿರ್ಮಲಂ ಬ್ರಹ್ಮ ವೃಂದಂ । ವೃಂದೇ ವೃಂದೇ ತತ್ವ ಚಿಂತಾನುವಾದಃ ॥
ವಾದೇ ವಾದೇ ಜಾಯತೇ ತತ್ವ ಬೋಧಃ । ಬೋಧೇ ಬೋಧೇ ಭಾಸತೇ ಚಂದ್ರ ಚೂಡಃ ॥ಭ॥

**ಶ್ಲೋಕಾರ್ಥ:**- ಬೇರೆ ಬೇರೆ ತೀರ್ಥಕ್ಷೇತ್ರಗಳಲ್ಲಿ ಪರಿಶುದ್ಧರಾದ ಪವಿತ್ರ ಬ್ರಾಹ್ಮಣರ, ತಿಳಿದವರ, ಜ್ಞಾನಿಗಳ ಸಮುದಾಯವಿರುವದು. ಆ ಸಮುದಾಯದಲ್ಲಿ ತತ್ವಜ್ಞಾನದಲ್ಲಿಯ ಪ್ರಶ್ನೆಗಳ ಬಗ್ಗೆ ಚರ್ಚೆ ನಡೆ ದಿರುತ್ತದೆ. ಆ ಚರ್ಚೆಯಿಂದ ಆತ್ಮದ ಸ್ವರೂಪವು ನಿಶ್ಚಿತಪಡುತ್ತದೆ. ಆ ನಿಶ್ಚಯದೊಳಗಿಂದ ಶಂಕರನ ಜ್ಞಾನವು ಪ್ರಾಪ್ತವಾಗುವದು.

ತೀರ್ಥಯಾತ್ರೆ **ಮಾಡುತ್ತ** ಯಾಕೆ ಅಡ್ಡಾಡುವಿ ? ಎಂಬ ಅಜ್ಞಾನಿಯ ಪ್ರಶ್ನೆಗೆ **ಜ್ಞಾನಿಯು** ಈಗ ಹೀಗೆ ಉತ್ತರ **ಕೊಡುವನು.** "ನಾನು ಹೇಳಿದ ಈ ವಚನವು ಶಂಕರನ ವಚನವಿದೆ. ಇದರಲ್ಲಿ ಸದ್ಗುರುವಿನ ಉಪಾಸನೆ ಮಾಡಲು ತಿಳಿಸಿದ್ದಾರೆ. ಶ್ರೀ ಶಂಕರನೇ ಗುರುಗೀತೆಯನ್ನು ಹೇಳಿದ್ದಾನೆ. [೧೧] ಆದರೆ ಗುರುವಿನ ಭಜನೆಯನ್ನು ಹೇಗೆ ಮಾಡ ಬೇಕು ? ಇದಕ್ಕೆ **ಜ್ಞಾನಿಯ** ಉತ್ತರ ಹೀಗಿರುವದು. ಮೊದಲು ಅವನನ್ನು ಹುಡುಕಬೇಕು. [ಶೋಧ ಮಾಡ ಬೇಕು.] ಕೇವಲ ಅವನೇನೂ ಮೂಳೆ ಮಾಂಸಗಳ ಗೊಂಬೆ ಅಲ್ಲ. ಆದ್ದರಿಂದ ಅವನ ಸ್ವರೂಪವನ್ನು ಗುರುತಿಸ ಬೇಕು. ವಿಶ್ವಾಸ ವ, ದೃಢಭಕ್ತಿಯಿಂದ ಸೇವೆ ಮಾಡಬೇಕು. ಅವನಲ್ಲಿ ಆತ್ಮಜ್ಞಾನದಿಂದ ಸಿಗುವ ಸಮಾಧಾನವಿರು ತ್ತದೆ. ಈ ಸಮಾಧಾನವನ್ನು ವಿವೇಕದಿಂದ ಸೂಕ್ಷ್ಮ ವಿಚಾರದಿಂದ ನೀವು ಸ್ವತಃ ಅವನಿಂದ ಪಡೆಯಬೇಕು. [೧೨]

॥ಶ್ಲೋಕ॥ ಬ್ರಹ್ಮಾನಂದಂ ಪರಮ ಸುಖದಂ । ಕೇವಲಂ ಜ್ಞಾನಮೂರ್ತಿಂ ॥
ದ್ವಂದ್ವಾತೀತಂ ಗಗನ ಸದೃಶಂ । ತತ್ವಮಸ್ಯಾದಿ ಲಕ್ಷ್ಯಂ ॥
ಏಕಂ ನಿತ್ಯಂ ವಿಮಲ ಮಚಲಂ । ಸರ್ವಧೀ ಸಾಕ್ಷಿ ಭೂತಂ ॥
ಭಾವಾತೀತಂ ತ್ರಿಗುಣರಹಿತಂ । ಸದ್ಗುರುಂ ತಂ ನಮಾಮಿ ॥೧॥

ಗುರು ಗೀತೇಚೇ ವಚನ । ಏಸೇ ಸದ್ಗುರೂಚೇ ಧ್ಯಾನ ।
ತೇಥೇ ಸೃಷ್ಟಿಮಿಥ್ಯಾಭಾನ । ಉರೇಲ ಕೈಚೇ ॥೧೩॥

ಏಸಾ ಸಜ್ಞಾನ ಬೋಲಿಲಾ । ಸದ್ಗುರು ತೋ ವೊಳಖಿಲಾ ।
ಸೃಷ್ಟಿ ಮಿಥ್ಯಾ ಏಸಾ ಕೇಲಾ । ನಿಶ್ಚಿತಾರ್ಥ ॥೧೪॥

ಶ್ರೋತಾ ಏಸೇ ನ ಮನೀ ಕದಾ । ಆಧೀಕ ಉಠಿಲಾ ವೆವಾದಾ ।
ಮ್ಹಣೆ ಕೈಸಾ ರೇ ಗೋವಿಂದಾ। ಅಜ್ಞಾನ ಮ್ಹಣತೋಸೀ ॥೧೫॥

ಜೀವಭೂತಃ ಸನಾತನಃ । ಏಸೇ ಗೀತೇಚೇ ವಚನ ।
ತಯಾಸಿ ತೂ ಅಜ್ಞಾನ । ಮ್ಹಣತೋಸಿ ಕೈಸಾ ॥೧೬॥

ಏಸಾ ಶ್ರೋತಾ ಆಕ್ಷೇಪ ಕರೀ । ವಿಷಾದ ಮಾನಿಲಾ ಅಂತರೀ ।
ಯಾಚೇ ಪ್ರತ್ಯೋತ್ತರ ಚತುರೀ । ಸಾವಧ ಪರಿಸಾವೇ ॥೧೭॥

ಗೀತೇಸ ಬೋಲಿಲಾ ಗೋವಿಂದ । ತ್ಯಾಚಾ ನ ಕಳೆ ತುಜ ಭೇದ ।
ಮ್ಹಣೌನಿಯಾ ವೆರ್ಥ ಖೇದ । ವಾಹಾತೋಸೀ ॥೧೮॥

॥ಶ್ಲೋಕ॥ "ಅಶ್ವತ್ಥಃ ಸರ್ವವೃಕ್ಷಾಣಾಂ" ॥೪॥ ಮಾಝ್ಯಾ ವಿಭೂತಿ ಪಿಂಪಳ ।
ಮ್ಹಣೌನಿ ಬೋಲಿಲಾ ಗೋಪಾಳ । ವೃಕ್ಷ ತೋಡಿತಾ ತತ್ಕಾಳ ।
ತುಟತ ಆಹೇ ॥೧೯॥

॥ಶ್ಲೋಕ॥ ನೈನಂ ಛಿಂದಂತಿ ಶಸ್ತ್ರಾಣಿ । ನೈನಂ ದಹತಿ ಪಾವಕಃ ॥
ನ ಚೈನಂ ಕ್ಲೇದಯಂತ್ಯಾಪೋ । ನ ಶೋಷಯತಿ ಮಾರುತಃ॥

ಶಸ್ತ್ರಾಚೇನಿ ತುಟೇನಾ । ಅಗ್ನಿಚೇನಿ ಜಳೇನಾ ।
ಉದಕಾಮಧ್ಯೇ ಕಾಲವೇನಾ । ಸ್ವರೂಪ ಮಾಝೇ ॥೨೦॥

ಪಿಂಪಳ ತುಟೆ ಶಸ್ತ್ರಾನೆ । ಪಿಂಪಳ ಜಳೆ ಪಾವಕಾನೆ ।
ಪಿಂಪಳ ಕಾಲವೆ ಉದಕಾನೆ । ನಾಶಿವಂತ ॥೨೧॥

ಸದ್ಗುರುವಿನ ಖರೇ ಸ್ವರೂಪವನ್ನು ವರ್ಣನೆ ಮಾಡುವ **ಶ್ಲೋಕ:-** ಬ್ರಹ್ಮಾನಂದಂ ಪರಮ ಸುಖದಂ ಕೇವಲಂ ಜ್ಞಾನ ಮೂರ್ತಿಂ। ದ್ವಂದ್ವಾತೀತಂ ಗಗನ ಸದೃಶಂ ತತ್ವಮಸ್ಯಾದಿ ಲಕ್ಷ್ಯಂ॥ ಏಕಂ ನಿತ್ಯಂ ವಿಮಲ ಮಚಲಂ ಸರ್ವಧೀ ಸಾಕ್ಷಿ ಭೂತಂ। ಭಾವಾ ತೀತಂ ತ್ರಿಗುಣ ರಹಿತಂ ಸದ್‌ಗುರುಂ ತಂ ನಮಾಮಿ ॥1॥ **ಶ್ಲೋಕಾರ್ಥ:-** ಸದ್ಗುರು ಸದಾ ಬ್ರಹ್ಮಾನಂದ ಭೋಗಿಸುತ್ತಾನೆ. ಹಾಗೂ ಅತ್ಯಂತ ಶ್ರೇಷ್ಠ ಸುಖ ಕೊಡುತ್ತಾನೆ. ಇವನು ಕೇವಲ ಜ್ಞಾನದ ಮೂರ್ತಿಯೇ ಆಗಿರುತ್ತಾನೆ. ಇವನು ಸುಖ ದುಃಖಾದಿ ದ್ವಂದ್ವಗಳ ಆಚೆಗೆ ಹೋಗಿರುವನು. ಇವನು ಆಕಾಶದಂತೆ ವಿಶಾಲ ಮತ್ತು ಅಲಿಪ್ತನಿರುವನು. ಇವನು 'ತತ್ ತ್ವಮ್ ಅಸಿ'-"ಆ ಬ್ರಹ್ಮ ನೀನು ಇರುತ್ತೀ'' ಇಂಥ ಮಹಾ ವಾಕ್ಯಗಳ ಅನುಭವವನ್ನು ಕಂಡು ಅನುಭವಿಸಿದವನಿರುವನು. ಇವನು ಕೇವಲ ಏಕರೂಪ ನಿತ್ಯ ನಿರ್ಮಲ, ಪವಿತ್ರ ಮತ್ತು ಅಚಲನಿರುವನು. ಇವನು ಎಲ್ಲರ ಹೃದಯದಲ್ಲಿ ಸಾಕ್ಷೀ ರೂಪದಿಂದ ವಾಸ ಮಾಡಿರುವನು. ಇವನು ಮಾನವೀ [ಮನುಷ್ಯ] ಕಲ್ಪನೆಯ ಆಚೆಗೆ ಇರುವನು. ಇವನು ನಿರ್ಗುಣನಿರುವದರಿಂದ ತ್ರಿಗುಣ [ಸತ್ವ, ರಜ, ತಮ] ರಹಿತ ಇರುವನು. ಇಂಥ ಸದ್ಗುರುವಿಗೆ ನಾನು ನಮಸ್ಕಾರ ಮಾಡುವೆನು. ಇದ್ಠು ಗುರುಗೀತೆಯ ವಚನವಿದೆ. ಈ ಗುರುಗೀತೆಯಲ್ಲಿ ಈ ತರಹದ ಸದ್ಗುರುವಿನ ಸ್ವರೂಪ ವರ್ಣನೆಮಾಡಿದ ವಚನಗಳು ಬಹಳವಿರುವವು. ಸದ್ಗುರು ಸ್ವರೂಪದ ಇಂಥ ವಚನಗಳ ಅನುಭವ, ವಿವೇಕ. ವಿಚಾರಗಳಿಂದ ಆ ಸ್ವರೂಪದ ಧ್ಯಾನ ಹತ್ತಿದ ಮೇಲೆ ಎಲ್ಲ ದೃಶ್ಯವೂ ಹೋಗಿ ಬಿಡುತ್ತದೆ. ಆಗ ಅಲ್ಲಿ **"ಇದು ವಿಶ್ವವಿದೆ ಮತ್ತು ಇದು ಮಿಥ್ಯಾ ಇದೆ''** ಎಂಬ ತಿಳುವಳಿಕೆ [ಎಚ್ಚರ] ಸಹ ಉಳಿಯುವದಿಲ್ಲ. [೧೩] ಗುರು ಗೀತೆಯ ವಾಕ್ಯದಂತೆ **ಜ್ಞಾನಿಯು** ಅನ್ನುವದೇನಂದರೆ, ಮೊದಲು ಸದ್ಗುರುವನ್ನು ಶೋಧ ಮಾಡಬೇಕು, [ಎಲ್ಲಿರುವನೆಂದು ಶೋಧ ಮಾಡಬೇಕು] ಎಲ್ಲಿರುವನೆಂದು ಹುಡುಕಬೇಕು. ಅವನನ್ನು ಗುರುತಿಸಬೇಕು. ತಿಳಿಯಬೇಕು. ಇದರಿಂದ ಅವನ ಸಾನ್ನಿಧ್ಯ ದೊರೆಯುವದು. ಮತ್ತು ಅವನ ಉಪದೇಶದಿಂದ ಈ ವಿಶ್ವವು ಮಿಥ್ಯಾ ಎಂದು, ಖೊಟ್ಟಿಯೆಂದು ಹೃದಯದಲ್ಲಿ ನಿಶ್ಚಿತ ಅರ್ಥ ಬಿಂಬಿಸುವದು. [೧೪] ಜ್ಞಾನಿ ಹೇಳಿದ ಈ ಮಾತು ಶ್ರೋತಾರನಿಗೆ ಎಷ್ಟೂ ಒಪ್ಪಿಗೆ ಯಾಗಲಿಲ್ಲ. ಅವನು ಅಧಿಕ ವಾದ ಮಾಡಲು ಪ್ರಾರಂಭಿಸಿದನು. 'ಸ್ವಾಮೀ ಶ್ರೀಕೃಷ್ಣನಿಗೆ ಅಜ್ಞಾನಿಯೆಂದು, ಹೇಗೆ ಅನ್ನುವಿರಿ?' ಎಂದು ಕೇಳಿದನು. [೧೫] **"ಜೀವ ಭೂತಃ ಸನಾತನಃ''** "ಹೀಗೆ ಗೀತೆಯ ವಚನವಿದೆ. ಈ ವಚನ ಹೇಳಿದ ಶ್ರೀಕೃಷ್ಣನಿಗೆ ನೀವು ಅಜ್ಞಾನಿಯೆಂದು ಅನ್ನುವಿರಾದರೂ ಹೇಗೆ?' [೧೬] ಶ್ರೋತಾ ಈ ರೀತಿ ಆಕ್ಷೇಪ ವೆತ್ತಿದನು. ಶ್ರೋತಾರನು ಮನದಲ್ಲಿ ದುಃಖಿಪಡುವಂತೆ ಕಂಡು ಬಂದನು. ಈ ಪ್ರಶ್ನೆಗೆ ಕೊಡುವ ಉತ್ತರವನ್ನು ಚತುರ ಶ್ರೋತಾರರು ಲಕ್ಷ್ಯಗೊಟ್ಟು ಕೇಳಿರಿ. [೧೭] **ಗೀತೆಯಲ್ಲಿ** ಶ್ರೀಕೃಷ್ಣನು ಏನೇನು ಹೇಳಿದ್ದಾನೆಯೋ ಅದರ ನಿಜವಾದ ಅರ್ಥದ ಮರ್ಮ, ರಹಸ್ಯ ನಿನಗೆ ಸರಿಯಾಗಿ ತಿಳಿದಿಲ್ಲ. ಅಂತೆಯೇ ನೀನು ವಿನಾಕಾರಣ ದುಃಖ ಮಾಡುತ್ತಿರುವೆ. [೧೮] ಇದೇ ಶ್ರೀ ಕೃಷ್ಣನು ಒಂದು ಕಡೆಗೆ ಹೀಗೆ ಅನ್ನುವನು. **"ಅಶ್ವತ್ಥಃ ಸರ್ವ ವೃಕ್ಷಾಣಾಂ'(ಖ) ಅರ್ಥ:- "ಎಲ್ಲ ವೃಕ್ಷಗಳಲ್ಲಿ ಅರಳೀ ಮರವು ನಾನೇ ಇರುವೆ"** ನನ್ನ ವಿಭೂತಿಯೇ ಇರುವದು ಎಂದು ಹೇಳಿಲ್ಲವೇ ಆದರೆ ಅರಳಿಗಿಡ ಕಡಿದರೆ ಆಗಲೇ ಉರುಳಿ ಬೀಳುವದು. [೧೯] ಈ ಶ್ರೀಕೃಷ್ಣನು ಇನ್ನೊಂದು ಕಡೆಗೆ ಹೇಳುವದೇನಂದರೆ:- **ಶ್ಲೋಕ:-** ನೈನಂ ಛಿಂದನ್ತಿಶಸ್ತ್ರಾಣಿ ನೈನಂ ದಹತಿ ಪಾವಕಃ। ನ ಚೈನಂ ಕ್ಲೇದ ಯನ್ತ್ಯಾಪೋ ನಶೋಷಯತಿ ಮಾರುತಃ ॥1॥ **ಇದರ ಅರ್ಥ:-** ನನ್ನ ಸ್ವರೂಪ-ಇದನ್ನು ಶಸ್ತ್ರಗಳು ಕಡಿಯಲು ಶಕ್ತವಲ್ಲ. ಅಗ್ನಿಯು ಸುಡಲು [ಭಸ್ಮ ಮಾಡಲು] ಶಕ್ತನಲ್ಲ. ನೀರಿನಿಂದ ಕರಗುವದಿಲ್ಲ. ತೊಯ್ಯುವದಿಲ್ಲ. ಗಾಳಿಯಿಂದ ಒಣಗುವದಿಲ್ಲ, ಹಾರುವದಿಲ್ಲ. ಶ್ರೀಕೃಷ್ಣ ಹೇಳುವದೇನಂದರೆ ತನ್ನ ಸ್ವರೂಪ ಇಂಥದು. ಅಂದರೆ ಇದು ಶಸ್ತ್ರದಿಂದ ತುಂಡಾಗುವದಿಲ್ಲ. ಅಗ್ನಿಯಿಂದ ಸುಡುವದಿಲ್ಲ, ಹಾಗೂ ನೀರಿನಿಂದ ಕರಗುವದಿಲ್ಲ. ಮತ್ತು ನೀರಲ್ಲಿ ಕಲಿಸಲು [ಮಿಶ್ರ ಮಾಡಲು] ಬರುವದಿಲ್ಲ. [೨೦] ಆದರೆ ಅರಳಿ ಮರವು ಶಸ್ತ್ರದಿಂದ ತುಂಡಾಗುತ್ತದೆ. ಖಂಡವಾಗುತ್ತದೆ. ಅಗ್ನಿಯಿಂದ ಸುಟ್ಟು ಹೋಗುತ್ತದೆ. ಮತ್ತು ನೀರಿನಿಂದ ಕರಗುವದು, ಕೊಳೆಯುವದು. ಅರ್ಥಾತ್ ಕಟ್ಟಿಗೆ,ಗಿಡ ಇವೆಲ್ಲ ನಾಶವಾಗುವಂಥವೇ ಇರುವವು. [೨೧]

ತುಟಿ ಜಳೆ ಬುಡೆ ಮಡೆ । ಆತಾ ಐಕ್ಯ ಕೈಸೇ ಘಡೇ।
ಮ್ಹಣೋನಿ ಹೇ ಉಜೇಡೆ । ಸದ್ಗುರು ಮುಖೇ ॥೨೨॥

"ಇಂದ್ರಿಯಾಣಾಂ ಮನಶ್ಚಾಸ್ಮಿ" । ಕೃಷ್ಣ ಮ್ಹಣೆ ಮನ ತೋ ಮೀ।
ತರೀ ಕಾ ಆವರಾವೀ ಉರ್ಮೀ । ಚಂಚಳ ಮನಾಚೀ ॥೨೩॥

ಐಸೇ ಕೃಷ್ಣ ಕಾ ಬೋಲಿಲಾ । ಸಾಧನಮಾರ್ಗ ದಾಖವಿಲಾ ।
ಖಡೆ ಮಾಂಡೂನಿ ಸಿಕವಿಲಾ । ಮೊನಾಮಾ ಜೇವೀ ॥೨೪॥

ಐಸಾ ಆಹೆ ವಾಕ್ಯ ಭೇದ । ಸರ್ವ ಜಾಣೆ ತೋ ಗೋವಿಂದ ।
ದೇಹ ಬುದ್ಧೀಚಾ ವೆವಾದ । ಕಾಮಾ ನಯೇ ॥೨೫॥

ವೇದಶಾಸ್ತ್ರ ಶ್ರುತಿ ಸ್ಮೃತೀ । ತೇಥೇ ವಾಕ್ಯಭೇದ ಪಡತೀ ।
ತೇ ಸರ್ವ ಹಿ ನಿವಡತೀ । ಸದ್ಗುರೂಚೇನಿ ವಚನೇ ॥೨೬॥

ವೇದಶಾಸ್ತ್ರಾಂಚೇ ಭಾಂಡಣ । ಶಸ್ತ್ರೇ ತೋಡೀ ಐಸಾ ಕೋಣ ।
ಹೇ ನಿವಡೇನಾ ಸಾಧುವಿಣ । ಕದಾ ಕಲ್ಪಾಂತೀ ॥೨೭॥

ಅರಳಿಗಿಡ ಖಂಡವಾಗುವದು, ಸುಡುವದು, ಮುಳುಗುವದು, ಹಾರುವದು ಅಂದ ಮೇಲೆ ಶ್ರೀಕೃಷ್ಣನೇ ಹೇಳಿದ ಈ ಎರಡೂ ವಚನಗಳ ಮೇಳ (ಏಕ ವಾಕ್ಯತೆ) ಹೇಗೆ ಮಾಡುವದು? ಶ್ರೀ ಸದ್ಗುರುವಿನ ಮುಖಾಂತರ ಶ್ರವಣ ಮಾಡಿದರೆ ಮಾತ್ರ ಇಂಥ ವಚನಗಳ ಅರ್ಥ ಸಮನ್ವಯ ಹೇಗೆ ಮಾಡಬೇಕೆಂಬುದು ತನ್ನಷ್ಟಕ್ಕೆ ತಾನೇ ಹೊಳೆಯುವದು. [೨೨] ಇನ್ನೂ ಒಂದು ಉದಾಹರಣೆ ಕೊಟ್ಟು ಶ್ರೀಸಮರ್ಥರು ಹೀಗೆತೋರಿಸಿಕೊಟ್ಟಿದ್ದಾರೆ. ಪರಮಾರ್ಥದ ವಾಙ್ಮಯಗಳಲ್ಲಿ ದೇಹಬುದ್ಧಿಯನ್ನು ಉಪಯೋಗಿಸುವ ಪ್ರಯತ್ನ ಮಾಡಿದಾಗ ವಿಷಯದ ನಿಜವಾದ ಭಾವಾರ್ಥ ಲಕ್ಷ್ಯದಲ್ಲಿ ಬರುವದಿಲ್ಲ. ಇದು ತಿಳಿಯಬೇಕಾದರೆ ಜ್ಞಾನಿ ಸತ್ಪುರುಷರಹತ್ತಿರ ಹೋಗಿಯೇ ಏಕಾಗ್ರದಿಂದ ಶ್ರವಣ ಮಾಡಬೇಕಾಗುವದು. ಗೀತೆಯಲ್ಲಿ ಶ್ರೀ ಕೃಷ್ಣನು ಅನ್ನುವದೇನಂದರೆ **"ಇಂದ್ರಿಯಾಣಾಂ ಮನಶ್ಚಾಸ್ಮಿ"** ಅಂದರೆ **"ಮನುಷ್ಯನ ಮನವೇ ನಾನಿರುತ್ತೇನೆ."** ಇದು ನಿಜವಿದ್ದರೆ ಮನಸ್ಸಿನ ಚಂಚಲ ತರಂಗ (ಊರ್ಮಿ,ತೆರೆ) ಗಳನ್ನು ನಾವು ಏಕೆ ಆವರಿಸಬೇಕು? ಒಂದು ಕಡೆ ಮನವು ಭಗವಂತನ ವಿಭೂತಿ [ಶಕ್ತಿ, ತೇಜ] ಇರುವದೆಂದು ಹೇಳುವದು. ಮತ್ತೊಂದು ಕಡೆಗೆ ಈ ಮನವನ್ನು ಆವರಿಸಿರಿ, ಹತೋಟಿಯಲ್ಲಿಡಿರಿ ಎಂದು ಹೇಳುವದು. ಇವುಗಳಲ್ಲಿ ವಿರೋಧ ಕಾಣುತ್ತದೆ. (೨೩) ಇನ್ನು ಶ್ರೀ ಕೃಷ್ಣನು ಹೀಗೆ ಏಕೆ ಹೇಳಿರುವನೆಂದರೆ, ಅವನು ನಿಮಗೆ ಸಾಧನ ಮಾರ್ಗವನ್ನು ತೋರಿಸಿದ್ದಾನೆ. ಸಣ್ಣ ಮಕ್ಕಳು ಹರಳು, ಕಲ್ಲು ತೆಗೆದುಕೊಂಡು ಆಡುವವು, ಈ ಹರಳಿನ ಸಹಾಯ ದಿಂದ ತಾಯಿಯು ಹುಡುಗರಿಗೆ ಅಕ್ಷರಗಳನ್ನು ಕಲಿಸಿ ಕೊಡುವಳು. ಇದರಂತೆಯೇ ಅಜ್ಞಾನಿ ಮನುಷ್ಯನ ಮನವು ದೃಶ್ಯಜಗದಲ್ಲಿ ರಮಣವಾಗುವದು. ಈ ಜಗದಲ್ಲಿಯ ವಸ್ತುಗಳನ್ನು ತೆಗೆದುಕೋಡೇ ಪರಮಾತ್ಮನ ಚಿಂತನ ಹೇಗೆ ಮಾಡಬೇಕೆಂಬುದನ್ನು ವಿಭೂತಿ ರೂಪದ=ಲೋಕೋತ್ತರ ಪುರುಷ ಶ್ರೀಕೃಷ್ಣನು ತೋರಿಸಿಕೊಟ್ಟಿದ್ದಾನೆ. (ತಿಳಿಸಿ ದ್ದಾನೆ) [೨೪] ಶ್ರೀಕೃಷ್ಣನು, ಸರ್ವಜ್ಞನು. ಇವನು ತಪ್ಪು-ಸುಳ್ಳು ಹೇಳಲಾರನು. ಇವನ ವಚನದಲ್ಲಿ ಯಾವ ವಿರೋಧ ಕಾಣುವದೋ ಅದರ ಕಾರಣ ಹೇಳುವೆ ಕೇಳಿರಿ. ಇವನ ಹೇಳಿಕೆಯು (ವಚನಗಳ) ಸಮನ್ವಯ ಮಾಡಲು ನಾವು ದೇಹಬುದ್ಧಿಯ ವಾದ ವಿವಾದಕ್ಕಿಳಿದರೆ ಉಪಯೋಗ ಬೀಳುವದಿಲ್ಲ. [೨೫] ವೇದ, ಶಾಸ್ತ್ರ, ಶ್ರುತಿ, ಸ್ಮೃತಿ, ಇವುಗಳಲ್ಲಿಯ ವಚನದಲ್ಲಿ ಪರಸ್ಪರ ವಿರೋಧ ಕಂಡು ಬರುತ್ತದೆ.ಆದರೆ ಇವೆಲ್ಲ ಸದ್ಗುರುವಿನ ವಚನಾಮೃತದಿಂದಲೇ ವಿರೋಧಗಳೆಲ್ಲದರ ಅರ್ಥ ಸರಿಯಾಗಿ ತಿಳಿದು ಎಲ್ಲರಿಗೂ ಸರಿಯಾದ ಸಮಾಧಾನ ಸಿಗುವದು. [೨೬] ವೇದ,ಶಾಸ್ತ್ರ ಇವುಗಳೊಳಗಿನ ಜಗಳವೇನೂ, ಶಸ್ತ್ರಗಳನ್ನು ಉಪಯೋಗಿಸಿ ತೊಡೆದು ಹಾಕುವಂಥದೇನೂ ಅಲ್ಲ. ಮತ್ತು ಇದನ್ನು ಶಬ್ದಾರ್ಥ ತಂಟೆಯಿಂದ ಮತ್ತು ಶಬ್ದಗಳ ಚತುರತೆಯಿಂದ ಸಾಮಾನ್ಯನು ಬಿಡಿಸಲಾರನು. ಇದನ್ನು ಕಲ್ಪಾಂತ್ಯದ ವರೆಗೆ ಪ್ರಯತ್ನ ಮಾಡಿದರೂ ಸಾಧು ಸತ್ಪುರುಷರ ಹೊರತು ಇತರರಿಂದ ಈ ಮತ ಭೇದದ ನಿರ್ಣಯ (ನಿಕಾಲ) ಮಾಡಲಿಕ್ಕೆ ಆಗುವದಿಲ್ಲ. (೨೭)

ಪೂರ್ವಪಕ್ಷ ಆಣಿ ಸಿದ್ಧಾಂತ । ಶಾಸ್ತ್ರೇ ಬೋಲಿಲಾ ಸಂಕೇತ ।
ಯಾಚಾ ಹೋಯೆ ನಿಶ್ಚಿತಾರ್ಥ । ಸಾಧುಮುಖೇ ॥೨೮॥

ಯೆರವೀ ವಾದಾಚೀ ಉತ್ತರೇ । ಯೇಕಾಹೂನಿ ಯೇಕ ಥೋರೇ ।
ಬೋಲೋ ಜಾತಾ ಅಪಾರೇ । ವೇದಶಾಸ್ತ್ರೇ ॥೨೯॥

ವ್ಯುಣೋನಿ ವಾದ ವೆವಾದ । ಸಾಂಡೂನ ಕೀಜೆ ಸಂವಾದ ।
ತೇಣೇ ಹೋಯೆ ಬ್ರಹ್ಮಾನಂದ । ಸ್ವಾನುಭವೆ ॥೩೦॥

ಯೇಕೇ ಕಲ್ಪನೇಚೆ ಪೋಟೀ । ಹೋತಿ ಜಾತೀ ಅನಂತ ಸೃಷ್ಟೀ ।
ತಯಾ ಸೃಷ್ಟೀಚೀ ಗೋಷ್ಟೀ । ಸಾಚ ಕೇವೀ ॥೩೧॥

ಕಲ್ಪನೇಚಾ ಕೇಲಾ ದೇವ । ತೇಥೇ ಜಾಲಾ ದೃಢ ಭಾವ ।
ದೇವಾಲಾಗೀ ಯೇತಾ ಖೇವ । ಭಕ್ತ ದುಃಖೇ ದುಃಖವಲಾ ॥೩೨॥

ವಾದದಿಂದ ವಾದವು ಇನ್ನೂ ಹೆಚ್ಚು ಬೆಳೆಯುತ್ತದೆ. ಇದಕ್ಕೆ ಅಂತಪಾರ ಇರುವದಿಲ್ಲ. ಅಂತೆಯೇ ಚತುರರಾದವರು ಸಂವಾದ (ಚರ್ಚೆ) ಮಾಡಬೇಕು· ಮತ್ತು ಬ್ರಹ್ಮಾನಂದ ಭೋಗಿಸಬೇಕು:— ಪೂರ್ವ ಪಕ್ಷ ಮತ್ತು ಸಿದ್ಧಾಂತ ಇವು ಶಾಸ್ತ್ರದಲ್ಲಿಯ ಸಂಕೇತಗಳಿರುವವು. ನಿಜವಾದ (ಖರೇ) ಅರ್ಥವನ್ನು ಸಾಧು ಸಂತರ ಮುಖದಿಂದ, ಶ್ರವಣ ಮಾಡಿದ ಉಪದೇಶದಿಂದ ಮಾತ್ರ ನಿಶ್ಚಯುವಾದ ಮತ್ತು ನಿರ್ಣಾಯಕವಾದ ಅರ್ಥ ತಿಳಿಯುತ್ತದೆ. ತತ್ವಜ್ಞಾನ ಇದು ತರ್ಕದ ಒಂದು ಆಟವಿದೆ. ಇದರಲ್ಲಿ ಒಂದು ಪದ್ಧತಿ ಇದೆ. ಅದು ಈ ರೀತಿ ಇರುವದು. ಈಗ ಹೇಳುವೆ ತಿಳಿಯಿರಿ· ನಿಮಗೆ ಒಂದು ಸಿದ್ಧಾಂತವನ್ನು ಮಂಡಿಸುತ್ತಿದೆ. ಆ ಸಿದ್ಧಾಂತದ ಬಗ್ಗೆ ಎಷ್ಟೆಷ್ಟು ಶಂಕೆ (ಸಂಶಯ)ಗಳನ್ನು ಮತ್ತು ಎಷ್ಟೆಷ್ಟು ಆಕ್ಷೇಪಗಳನ್ನು ಎತ್ತಲು ಸಾಧ್ಯವಿದೆಯೋ ಆ ಎಲ್ಲ ಶಂಕೆ ಮತ್ತು ಆಕ್ಷೇಪಗಳನ್ನು ನೀವು ಸ್ವತಃ (ಖುದ್ದಾಗಿ) ಕಲ್ಪನೆ ಮಾಡಿದವುಗಳಿಗೆಲ್ಲ ಅಂದರೆ ಶಂಕಾ ಮತ್ತು ಆಕ್ಷೇಪಗಳಿಗೆ **ಪೂರ್ವ ಪಕ್ಷವೆನ್ನುವರು.** ಈ ಆಕ್ಷೇಪ ಶಂಕಾಗಳಿಗೆ ಸಮರ್ಪಕವಾಗಿ ಉತ್ತರ ನೀಡಿ ತರ್ಕದಿಂದ ಆಕ್ಷೇಪ ಮತ್ತು ಶಂಕೆಗಳನ್ನು ನಿವಾರಣೆ (ನಿರಾಸ) ಮಾಡುವದಕ್ಕೆ **ಉತ್ತರಪಕ್ಷವೆನ್ನುವರು. ಅಥವಾ ಸಿದ್ಧಾಂತ ಪಕ್ಷವೆನ್ನುವರು.** ಆಕ್ಷೇಪಕನ ಕಲ್ಪನಾ ಸಾಮರ್ಥ್ಯವು ಎಷ್ಟೊಂದು ಪ್ರಬಲವಿರುವದೋ ಅದರ ಪ್ರಕಾರ ಹೆಚ್ಚೆಚ್ಚು ಶಂಕೆಗಳು ಹುಟ್ಟುವವು. ಇವು ಉತ್ತರ ಕೊಡಲು ಬಹಳ ಕಷ್ಟವಾಗುವಷ್ಟು ಪ್ರಬಲವಿರುವವು. ಉತ್ತರ ಪಕ್ಷದವನು ಈ ಎಲ್ಲ ಶಂಕೆಗಳಿಗೂ ಸಾಧಾರವಾಗಿ ಸ್ಪಷ್ಟ ಉತ್ತರ ಕೊಟ್ಟು ಶಂಕಾ ನಿರಸನ ಮಾಡಬೇಕಾಗುತ್ತದೆ. ಎಷ್ಟೋ ಸಲ ಈ ವಾದ ವಿವಾದಗಳ ಪ್ರಕಾರಕ್ಕೆ ಕೊನೆಯೇ ಇರುವದಿಲ್ಲ. (೨೮) ವಾದವಿವಾದಗಳಲ್ಲಿ ಹೆಚ್ಚಾಗಿ ಒಂದಕ್ಕಿಂತ ಒಂದು ಕಠಿಣವಾದ ಶಂಕೆಗಳು ಹೊರಡುವವು. ಮತ್ತು ಇದಕ್ಕೆ ಅಷ್ಟೇ ಸಮರ್ಥ ರೀತಿಯಲ್ಲಿ ಉತ್ತರವೂ ಕೊಡಲ್ಪಡುವದು. ಈ ರೀತಿಯ ಪೂರ್ವ ಪಕ್ಷ ಹಾಗೂ ಉತ್ತರ ಪಕ್ಷಗಳು ವೇದ ಶಾಸ್ತ್ರಗಳಲ್ಲಿ ಬಹಳಷ್ಟು ತುಂಬಿ ಹೋಗಿವೆ. ಇವು ಎಷ್ಟೆಂದು ಹೇಳಲು ಶಕ್ಯವಾಗುವದಿಲ್ಲ. (೨೯) ಇರಲಿ, ನೀವು ವಾದ ವಿವಾದದ ಹವ್ಯಾಸವನ್ನು ಬಿಟ್ಟುಕೊಟ್ಟು ಸಂವಾದ ಅಂದರೆ ಸುಖಸಂವಾದ ಮಾಡುವದರಿಂದ ಆತ್ಮಸ್ವರೂಪದ ನಿಶ್ಚಯವಾಗಿ ಅದರ ಅನುಭವ ಬರುವದಕ್ಕಾಗಿ ಯಾವ ಚರ್ಚೆಯಾಗುವದೋ ಅದಕ್ಕೆ **ಸಂವಾದವೆನ್ನುವರು.** ಸಂವಾದ ಮಾಡುವದರಿಂದ ಆತ್ಮಸ್ವರೂಪದ ಅನುಭವ ಬರುವದು. ಸಮಾಧಾನ ಸಿಗುವದು. ಮತ್ತು ಈ ಅನುಭವವೇ ಬ್ರಹ್ಮಾನಂದದ ಪ್ರಾಪ್ತಿಗೆ ಮುಖ್ಯವು. ಇದೇ ಬ್ರಹ್ಮಾನಂದವು. (೩೦) ಕಲ್ಪನಾ ಇದೊಂದು ಮಾಯೆಯ ದೊಡ್ಡ ಶಸ್ತ್ರವಿರುವದು. ಮನುಷ್ಯನಿಗೆ ಪ್ರಾಪ್ತವಾದ ಒಂದು ದೊಡ್ಡ ಶಕ್ತಿ ಇರುವದು. ಇದನ್ನು ಒಂದು ಯೋಗ್ಯ ರೀತಿಯಲ್ಲಿ ಉಪಯೋಗಿಸಿದ್ದಾದರೆ ಇದು ಸ್ವಸ್ವರೂಪದವರೆಗೂ ನಿಮ್ಮನ್ನು ಒಯ್ದು ಮುಟ್ಟಿಸುತ್ತದೆ. ಆದರೆ ಇದಕ್ಕೆ ಅಯೋಗ್ಯ ದಾರಿ ಹತ್ತಿದರೆ ಇದು ಭ್ರಮೆಯ ಅನೇಕ ಪ್ರಕಾರಗಳನ್ನು ನಿರ್ಮಾಣ ಮಾಡುವದು. ಶ್ರೀ ಸಮರ್ಥರು ಏನು ತೋರಿಸಿರುವರೆಂದರೆ:– ದೇವರ ಬಗ್ಗೆ ಮನುಷ್ಯನು ಬಹಳಷ್ಟು ಭ್ರಾಮಕ ಕಲ್ಪನೆಗಳನ್ನು ಹೊಂದಿದ್ದಾನೆ. ಇದರಿಂದ ಮನುಷ್ಯನಿಗೆ ಆತ್ಮಸ್ವರೂಪದ ದರ್ಶನವಾಗುವದಿಲ್ಲ. ಅಥವಾ ಸಾಧಿಸುವದಿಲ್ಲ:– ಮೂಲ, ಶುದ್ಧ, ನಿರ್ಗುಣ ಮತ್ತು ನಿರಾಕಾರ ಬ್ರಹ್ಮ ಸ್ವರೂಪದಲ್ಲಿ "ನಾನು ಒಬ್ಬನು. ಆದರೆ ನಾನು ಅನೇಕವಾಗಬೇಕು." ಹೀಗೆ ಒಂದು ಕಲ್ಪನೆ ಉಂಟಾಯಿತು. ಈ ಒಂದು ಕಲ್ಪನೆಯ ಉದರದಿಂದ ಅನಂತ ವಿಶ್ವಗಳು (ಜಗತ್ತು) ಆಗುವವು. ಮತ್ತು ಹೋಗುವವು. ಮೂಲದಲ್ಲಿಯ ಕಲ್ಪನೆಯ ನೆಲಗಟ್ಟಿನ ಮೇಲೆ ಉಂಟಾದ ಜಗತ್ತು ಖರೇತನದ್ದಲ್ಲ. ನಶಿಸುವಂಥದು. (ನಾಶಿವಂತ) ಮಿಥ್ಯಾ ಇರುತ್ತದೆ. (೩೧) ಅಜ್ಞಾನಿ ಜನರು ತಯಾರಿಸಿದ ಸಗುಣ ದೇವರನ್ನು ಕೇವಲ ಕಲ್ಪನೆಯಿಂದ ತಯಾರಿಸಿರುವರು. ಇರಲಿ ಒಂದು ಮಾತು:– ಒಬ್ಬನು ಕಲ್ಪನೆಯಿಂದ ಒಂದು ದೇವರನ್ನು ತಯಾರಿಸಿದನು. ಮತ್ತು ಆ ದೇವರಲ್ಲಿ ಮನಃಪೂರ್ವಕ ಶ್ರದ್ಧೆಯನ್ನೂ ಇಟ್ಟನು. ಆದರೆ ಆ ದೇವರಿಗೆ ಆಕಸ್ಮಾತ್ ಏನಾದರೂ ಅಪಾಯವಾದರೆ ಆ ಭಕ್ತನಿಗೆ ದುಃಖವಾಗುತ್ತದೆ. [೩೨]

ಪಾಷಾಣಾಚಾ ದೇವ ಕೇಲಾ। ಯೇಕೇ ದಿವಸೀ ಭಂಗೋನ ಗೇಲಾ।
ತೇಣೇ ಭಕ್ತ ದುಃಖವಲಾ। ರಡೆ ಪಡೆ ಆಕ್ರಂದೇ ॥೩೩॥
ದೇವ ಹಾರಪಲಾ ಘರೀ। ಯೇಕ ದೇವ ನೇಲಾ ಚೋರೀ।
ಯೇಕ ದೇವ ದುರಾಚಾರೀ। ಫೋಡಿಲಾ ಬಳೇ ॥೩೪॥
ಯೇಕ ದೇವ ಜಾಪಾಣಿಲಾ। ಯೇಕ ದೇವ ಉದಕೀ ಟಾಕಿಲಾ।
ಯೇಕ ದೇವ ನೇಊನ ಘಾತಲಾ। ಪಾಯಾತಳೀ ॥೩೫॥
ಕಾಯ ಸಾಂಗೋ ತೀರ್ಥ ಮಹಿಮಾ। ಮೋಡೂನಿ ಗೇಲಾ ದುರಾತ್ಮಾ।
ಥೋರ ಸತ್ವ ಹೋತೇ ತೇ ಮಾ। ಕಾಯ ಜಾಲೇ ಕಳೇನಾ ॥೩೬॥
ದೇವ ಘಡಿಲಾ ಸೋನಾರೀ। ದೇವ ಮೊತಿಲಾ ಮೊತಾರೀ।
ಯೇಕ ದೇವ ಘಡಿಲಾ ಪಾಥರೀ। ಪಾಷಾಣಾಚಾ ॥೩೭॥
ನರ್ಬದಾ ಗಂಡಿಕಾ ತೀರೀ। ದೇವ ಪಡಿಲೆ ಲಕ್ಷವರೀ।
ತ್ಯಾಚೀ ಸಂಖ್ಯಾ ಕೋಣ ಕರೀ। ಅಸಂಖ್ಯಾತ ಗೋಟೆ ॥೩೮॥
ಚಕ್ರತೀರ್ಥೀ ಚಕ್ರಾಂಕಿತ। ದೇವ ಅಸತೀ ಅಸಂಖ್ಯಾತ।
ನಾಹೀ ಮನೀ ನಿಶ್ಚಿತಾರ್ಥ। ಯೇಕ ದೇವ ॥೩೯॥
ಬಾಣ ತಾಂದಳೆ ತಾಂಬ್ರನಾಣೇ। ಸ್ಫಟಿಕ ದೇವಾದ್ವಾರಾ ಪೂಜಣೇ।
ಏಸೆ ದೇವ ಕೋಣ ಜಾಣೇ। ಖರೇ ಕೀ ಖೋಟೇ ॥೪೦॥
ದೇವ ರೇಸಿಮಾಚಾ ಕೇಲಾ। ತೋಹಿ ತುಟೋನಿಯಾ ಗೇಲಾ।
ಆತಾ ನವಾ ನೇಮ ಧರಿಲಾ। ಮೃತ್ತಿಕೇಚಾ ॥೪೧॥
ಆಮಚಾ ದೇವ ಬಹು ಸತ್ಯ। ಆಮ್ಹಾ ಅಕಾಂತೀ ಪಾವತ।
ಪೂರ್ಣ ಕರೀ ಮನೋರಥ। ಸರ್ವಕಾಳ ॥೪೨॥
ಆತಾ ಯಾಚೇ ಸತ್ವ ಗೇಲೇ। ಪ್ರಾಪ್ತ ಹೋತೇ ತೇ ಜಾಲೇ।
ಪ್ರಾಪ್ತ ನ ವಚೆ ಪಾಲಟಿಲೆ। ಈಶ್ವರಾಚೆನೀ ॥೪೩॥
ಧಾತು ಪಾಷಾಣ ಮೃತ್ತಿಕಾ। ಚಿತ್ರಲೇಪ ಕಾಷ್ಠ ದೇಖಾ।
ತೇಥೇ ದೇವ ಕೈಚಾ ಮೂರ್ಖಾ। ಭ್ರಾಂತಿ ಪಡಿಲೀ ॥೪೪॥
ಹೇ ಆಪುಲೀ ಕಲ್ಪನಾ। ಪ್ರಾಪ್ತಾಏಸೀ ಫಳೇ ಜಾಣಾ।
ಪರೀ ತ್ಯಾ ದೇವಾಚಿಯಾ ಖುಣಾ। ವೇಗಳ್ಯಾಚೀ ॥೪೫॥
ಮ್ಹಣೌನಿ ಹೇ ಮಾಯಾಭ್ರಮಣೇ। ಸೃಷ್ಟಿ ಮಿಥ್ಯಾ ಕೋಟಿ ಗುಣೇ।
ವೇದಶಾಸ್ತ್ರೇ ಪುರಾಣೇ। ಏಸೀ ಚ ಬೋಲತೀ ॥೪೬॥

ಇನ್ನೂ ಒಂದು ಉದಾಹರಣೆ:- ಒಬ್ಬನು ಒಂದು ಕಲ್ಲಿನ ದೇವರನ್ನು ಮಾಡಿದನು. ಒಂದು ದಿನ ಅದು ಭಂಗವಾಯಿತು, ಭಗ್ನಗೊಂಡಿತು. ಒಡೆಯಿತು, ಸೀಳಿತು. ಇದರಿಂದ ಆ ಭಕ್ತನಿಗೆ ಬಹಳಷ್ಟು ದುಃಖವಾಗಿ ಕೊನೆಗೆ ಅಳುತ್ತಾನೆ. ಭೂಮಿಯ ಮೇಲೆ ಬಿದ್ದು ಹೊರ ಳಾಡುತ್ತಾನೆ. ಆಕ್ರೋಶ ಮಾಡುತ್ತಾನೆ. (೩೩) ಕಲ್ಪನೆಯಿಂದ ಮಾಡಿದ ದೇವರು ಒಮ್ಮೊಮ್ಮೆ ಮನೆಯಲ್ಲಿಯೇ ಕಳೆದು ಹೋಗುತ್ತದೆ, ಅಥವಾ ಕಳ್ಳರು ಕದ್ದೊಯ್ಯುತ್ತಾರೆ. ಒಮ್ಮೊಮ್ಮೆ ದುಷ್ಟ ಜನರು ಒಡೆದು ಒಗೆದು ಬಿಡು ತ್ತಾರೆ. (೩೪) ಒಬ್ಬರು ದೇವರನ್ನು ಭ್ರಷ್ಟಗೊಳಿಸುತ್ತಾರೆ. ಒಬ್ಬರು ಆ ದೇವರನ್ನು ನೀರಿನಲ್ಲಿ ಒಗೆಯುತ್ತಾರೆ. ಒಬ್ಬರು ದೇವರ ಮೂರ್ತಿಯನ್ನು ಕಾಲಕೆಳಗೆ ಹಾಕಿ ತುಳಿದಾಡುತ್ತಾರೆ. ಅಥವಾ ಕಟ್ಟಡ ಕಟ್ಟುವ ಪಾಯಾದಲ್ಲಿ, ಬುನಾದಿಯಲ್ಲಿ ಹಾಕಿ ಕಟ್ಟಿ ಬಿಡುತ್ತಾರೆ. (೩೫) ಕೆಲವು ದುಷ್ಟ ಜನರು ಒಂದಾನೊಂದು ಶ್ರೇಷ್ಠ ತೀರ್ಥಸ್ಥಾನವನ್ನೆಲ್ಲ ಕೆಡವಿ ಹಾಳುಮಾಡಿ ಹೋಗುತ್ತಾರೆ. ಆಗ ಸಾಮಾನ್ಯ ಜನರು ಅನ್ನುವದೇನಂದರೆ:- "ಈ ತೀರ್ಥದ ಮಹಿಮೆ ಹೇಳ ಲಸದಳವಾದದ್ದಿತ್ತು. ಈ ದುಷ್ಟರು ಎಲ್ಲವನ್ನೂ ಹಾಳುಮಾಡಿಬಿಟ್ಟರು. ಸ್ಥಾನ ಬಹಳ ಜಾಗ್ರತವಿತ್ತು. ಆದರೆ ಅದರ ಸಾಮರ್ಥ್ಯ ಈಗ ಎಲ್ಲಿ ಹೋಯಿತೋ ಏನೋ ತಿಳಿಯುವದಿಲ್ಲ." (೩೬) ಒಂದು ದೇವರನ್ನು ಅಕ್ಕಸಾಲಿಗ ತಯಾ ರಿಸುವನು. ಒಂದು ದೇವರನ್ನು ಎರಕ ಹೊಯ್ಯುವವನು ಮೂಸಿಯಲ್ಲಿ ಹಾಕಿ ತಯಾರಿಸುವನು. ಒಂದು ದೇವರನ್ನು ಕಲ್ಲುಕುಟಿಕ [ಒಡ್ಡರವ] ಕಲ್ಲಿನಿಂದ ತಯಾರಿಸುವನು. (೩೭) ನರ್ಮದಾ ಮತ್ತು ಗಂಡಕೀ ಈ ನದಿಗಳ ದಂಡೆಗೆ ಲಕ್ಷಾವಧಿ ದೇವರು ಬಿದ್ದಿರುತ್ತವೆ. ಅಲ್ಲಿ ಅಸಂಖ್ಯವಾದ ಗುಂಡುಕಲ್ಲೇ ಕಲ್ಲುಗಳು ಇವನ್ನು ಎಣಿಸಲು ಶಕ್ಯವೇ ಇಲ್ಲ. (೩೮) ಚಕ್ರ ತೀರ್ಥಗಳಲ್ಲಿ ಚಕ್ರದ ಗುರುತುಗಳಿದ್ದ ಅಸಂಖ್ಯ ದೇವರು ಅಲ್ಲಿ ಬಿದ್ದಿರುತ್ತವೆ. ನಿಜವಾಗಿ ನೋಡಿ ದರೆ ಖರೇ ದೇವರು ಒಬ್ಬನೇ ಇರುವನು. ಎಂಬ ನಿಶ್ಚಯವು ಮಾತ್ರ ಆಗುವದೇ ಇಲ್ಲ. (೩೯) ಬಾಣ (ನರ್ಮ ದಾದಲ್ಲಿಯ ಶಿವಲಿಂಗ) ತಾಂದಳೆ ಅಂದರೆ ಹುರುಬುರುಕಾದ ವ ಸಿಂಧೂರ ಹಚ್ಚಿದ ಅವಯವರಹಿತವಾದ ಒಂದು ಕಲ್ಲು ದೇವರು, ಪವಿತ್ರ ಅಕ್ಕಿಕಾಳು, ಒಂದು ಮಣಿ, ತಾಮ್ರದ ನಾಣ್ಯ, ಸ್ಫಟಿಕ ವಗೈರೆ ವಸ್ತುಗಳನ್ನು ದೇವರೆಂದು ದೇವರ ಜಗಲಿಯಲ್ಲಿಟ್ಟು ಪೂಜೆ ಮಾಡುವರು. ಇಂಥ ದೇವರು ಖರೇ ಇರುವವೋ ಅಥವಾ ಖೊಟ್ಟಿ ಇರುವವೋ ಆ ದೇವರಿಗೇ ಗೊತ್ತು. ಒಟ್ಟಿನಲ್ಲಿ (ಅರ್ಥಾತ್) ಇವು ಖೊಟ್ಟಿಯೇ ಇರುವವು. (೪೦) ಒಬ್ಬನು ರೇಸಿಮೆಯ ದಾರ (ಅನಂತನ ದಾರ, ಗೌರೀ ದಾರ, ಶಿವದಾರ, ಕಾಶೀ ದಾರ)ವನ್ನು ದೇವರನ್ನಾಗಿ ಮಾಡಿದನು. ಆದರೆ ಅದು ಹರಿದು ಹೋಯಿತು. ಆಗ ಅವನು ಮಣ್ಣಿನ ದೇವರನ್ನು ಮಾಡಿ ಹೊಸ ನಿಯಮವನ್ನು ಹಿಡಿದನು. (೪೧) ಕೆಲ ವೊಂದು ಜನರು ಒಂದು ಗೈರ ಸಮಜೂತ [ತಪ್ಪು ತಿಳುವಳಿಕೆ] ಮಾಡಿಕೊಳ್ಳುತ್ತಾರೆ. ಅದು ಯಾವುದೆಂದರೆ:- "ಏನರೀ ನಮ್ಮ ದೇವರು ಅಗದೀ ಖರೇ ಇರುವನು. ನಮ್ಮ ಸಂಕಟಗಳ ಕಾಲದಲ್ಲಿ ಈ ದೇವರು ಯಾವಾಗಲೂ ನಮ್ಮನ್ನು ಪಾರುಮಾಡಿದನು. ನಮ್ಮ ಎಲ್ಲ ಇಚ್ಛೆಗಳನ್ನು ಪೂರೈಸಿದ್ದಾನೆ. ಸಫಲಗೊಳಿಸಿದ್ದಾನೆ. [೪೨] ಆದರೆ ಮಾಡುವದೇನು ? ಈಗ ಅವನ ಸತ್ವ ಹೋಗಿಬಿಟ್ಟಿದೆ ಅವನು ಶಕ್ತಿಹೀನನಾಗಿದ್ದಾನೆ, ಆದುದರಿಂದಲೇ ನಮ್ಮ ನಶೀಬ ದಲ್ಲಿ ಏನಿತ್ತೋ ಅದು ಈಗ ಆಗಿದೆ. ಯಾವುದು ಆಗಬೇಕಾಗಿದೆಯೋ ಅದನ್ನು ನಶೀಬದಲ್ಲಿದ್ದದ್ದನ್ನು ಆ ಈಶ್ವರ ನಿಗೂ ಸಹ ಬದಲಿಸಲಿಕ್ಕೆ ಬರುವದಿಲ್ಲ." ಅನ್ನುವರು. [೪೩] ಶ್ರೀ ಸಮರ್ಥರು ಒಂದು ದೊಡ್ಡ ಮಾರ್ಮಿಕ ಪ್ರಶ್ನೆ ಯನ್ನು ಕೇಳುತ್ತಾರೆ. ಅದೇನಂದರೆ:- "ಏ ಮೂರ್ಖಾ, ಧಾತು, ತಾಮ್ರ, ಪಿತ್ತಾಳಿ, ವಗೈರೆ ಮತ್ತು ಕಲ್ಲು, ಮಣ್ಣು, ಚಿತ್ರ, ಕಟ್ಟಿಗೆ, ದಾರ, ಮೊದಲಾದವುಗಳಲ್ಲಿ ದೇವರು ಹೇಗೆ ಇದ್ದಾನು ? ಇವುಗಳಲ್ಲಿ ದೇವರಿರುವನು ಎಂದು ತಿಳಿಯುವದೇ ನಿನ್ನ ಭ್ರಮೆ ಆಗಿದೆ. [೪೪] ಇದೆಲ್ಲವೂ ನಿನ್ನ ಕಲ್ಪನೆ ಇರುವದು. ನಿಮ್ಮ ಪ್ರಾರಬ್ಧಾನುಸಾರ ನೀವು ಸುಖ ದುಃಖಗಳನ್ನು ಭೋಗಿಸಲೇಬೇಕಾಗ.ವದೆಂಬುದನ್ನು ಮರೆಯಬೇಡಿರಿ. ಇನ್ನು ಖರೇ ದೇವರ ಗುರುತು ಬೇರೆಯೇ ಇರುವವು. [೪೫] ಒಟ್ಟಿನಲ್ಲಿ ಹೇಳುವದಾದರೆ ಇವೆಲ್ಲವೂ ಮಾಯೆಯ ಚಕ್ಕರ-ವಾಗಿರುತ್ತವೆ. ಮಾಯೆಯು ನಿರ್ಮಾಣ ಮಾಡಿದ ಭ್ರಮೆ ಇರುವದು. ಈ ದೃಶ್ಯ ವಿಶ್ವವು ಕೋಟಿ ಪಟ್ಟು ಅಂದರೆ ಕೋಟಿ ಗುಣದಿಂದ ಸುಳ್ಳಿ ರುತ್ತದೆ. ವೇದ, ಶಾಸ್ತ್ರ, ಪುರಾಣಾದಿಗಳೆಲ್ಲ ಇದನ್ನೇ ಹೇಳುವವು. [೪೬]

ಸಾಧು ಸಂತ ಮಹಾನುಭಾವ । ತ್ಯಾಚಾ ಐಸಾ ಚಿ ಅನುಭವ ।
ಪಂಚಭೂತಾತೀತ ದೇವ । ಸೃಷ್ಟಿ ಮಿಥ್ಯಾ ॥೪೭॥

ಸೃಷ್ಟೀ ಪೂರ್ವೀ ಸೃಷ್ಟಿ ಚಾಲತಾ । ಸೃಷ್ಟಿ ಅವಘೀ ಸಂವ್ಹಾರತಾ ।
ಶಾಶ್ವತ ದೇವ ತತ್ವತಾ । ಆದಿ ಅಂತೀ ॥೪೮॥

ಐಸಾ ಸರ್ವಾಂಚಾ ನಿಶ್ಚಯೋ । ಯೇದರ್ಥೀ ನಾಹೀ ಸಂಶಯೋ ।
ವೀತರೇಕ ಆಣಿ ಅನ್ವಯೋ । ಕಲ್ಪನಾರೂಪ ॥೪೯॥

ಯೇಕೆ ಕಲ್ಪನೇಚಿ ಪೋಟೀ । ಬೋಲಜೇತೀ ಅಷ್ಟಸೃಷ್ಟೀ ।
ತಯಾ ಸೃಷ್ಟೀಚೀ ಗೋಷ್ಟೀ । ಸಾವಧ ಐಕಾ ॥೫೦॥

ಯೇಕೀ ಕಲ್ಪನೇಚೀ ಸೃಷ್ಟೀ । ದುಜೀ ಶಾಬ್ದಿಕ ಸೃಷ್ಟೀ ।
ತಿಜೀ ಪ್ರತ್ಯಕ್ಷ ಸೃಷ್ಟೀ । ಜಾಣತೀ ಸರ್ವ ॥೫೧॥

ಚೌಥೀ ಚಿತ್ರಲೇಪ ಸೃಷ್ಟೀ । ಪಾಂಚವೀ ಸ್ವಪ್ನಸೃಷ್ಟೀ ।
ಸಾಹಾವೀ ಗಂಧರ್ವ ಸೃಷ್ಟೀ । ಜ್ವರ ಸೃಷ್ಟೀ ಸಾತವೀ ॥೫೨॥

ಆಠವೀ ದೃಷ್ಟಿಬಂಧನ । ಐಶಾ ಅಷ್ಟ ಸೃಷ್ಟೀ ಜಾಣ ।
ಯಾಮಧೇ ಶ್ರೇಷ್ಠ ಕೋಣ । ಸತ್ಯ ಮಾನಾವೀ ॥೫೩॥

ಸಾಧು, ಸಂತ, ಶರಣ ಹಾಗೂ ಅನುಭವಿ ಶ್ರೇಷ್ಠ ಮಹಾತ್ಮರು ಇವರೆಲ್ಲರ ಅನುಭವವೂ ಇದೇ ಆಗಿದೆ. ಇವರೆಲ್ಲರ ಒಟ್ಟಾರ್ಥವೇನೆಂದರೆ ನಿಜವಾದ ದೇವರು ಪಂಚಭೂತಾತೀತನು. ಹಾಗೂ ಈ ದೃಶ್ಯ ಸೃಷ್ಟಿಯು ಮಿಥ್ಯಾ (ಖೊಟ್ಟಿ) ಇರುವದು. (೪೭) ವಿಶ್ವನಿರ್ಮಾಣವಾಗುವ ಪೂರ್ವದಲ್ಲಿ ವಿಶ್ವವು ಚಾಲೂ ಇರುವಾಗ ಮತ್ತು ವಿಶ್ವದ ಸಂಪೂರ್ಣ ಕೊನೆ (ಅಂತ್ಯ) ಆದ ಮೇಲೆ ಸಹ ಶಾಶ್ವತನಾದ ದೇವರು ಇದ್ದಕ್ಕಿದ್ದಂತೆಯೇ ಇರುವನು. ಇವನು ಆರಂಭದಲ್ಲಿ ಮತ್ತು ಕೊನೆಯಲ್ಲಿ ಹೇಗಿದ್ದನೋ ಹಾಗೆ ಕಾಯಂ ಆಗಿಯೇ ಇರುವನು. (೪೮) ಎಲ್ಲ ಸ್ವಾನುಭವಿ ಸತ್ಪುರುಷರ ಸಿದ್ಧಾಂತವೂ ಇದೇ ಇರುವದು. ಈ ಬಗ್ಗೆ ಯಾರಿಗೂ (ಅನುಭವಿಗಳಿಗೆ) ಎಳ್ಳಷ್ಟೂ ಸಂಶಯವಿಲ್ಲ. ಅನ್ವಯ ಮತ್ತು ವ್ಯತಿರೇಕ ಇವೆರಡೂ ಕಲ್ಪನಾಮಯವಿರುವವು. ಎತ್ತನೋಡಿದರೂ ಅತ್ತಕಡೆಗೆ (ಎಲ್ಲ ಕಡೆಗೂ) ಯಾವತ್ತೂ ದೃಶ್ಯವಿಶ್ವದಲ್ಲಿ ಆತ್ಮಸ್ವರೂಪ ಒಂದೇ ತುಂಬಿರುತ್ತದೆ. ಈ ರೀತಿಯ ಪದ್ಧತಿಯಿಂದ ವಿಚಾರ ಉಪಯೋಗಿಸುವದಕ್ಕೆ **ಅನ್ವಯವೆನ್ನುವರು** [ಅಷ್ಟದೇಹದ ಉತ್ಪತ್ತಿ ರಚನೆಯ ಬಗ್ಗೆ, ಕಲ್ಪನೆ ಅಥವಾ ವಿಚಾರ ಮಾಡುವದು ಅನ್ವಯ ಮತ್ತು ಉದ್ಭವದ ಉತ್ಪತ್ತಿಯ ಸಂಹಾರವು ಹೇಗಾಗುತ್ತದೆ. ಇದರ ಬಗ್ಗೆ ಕಲ್ಪನಾಅಥವಾ ವಿಚಾರ ಮಾಡುವದು ವ್ಯತಿರೇಕವು. ಆತ್ಮನು ಉಪಾಧಿಯಿಂದ ಬೇರೆ ಇರುವನು. ಇದರ ವಿಚಾರ ಮಾಡುವದು ವ್ಯತಿರೇಕವು ಮತ್ತು ಆತ್ಮನು ಸರ್ವದರಲ್ಲಿಯೂ ವ್ಯಾಪಿಸಿರುವನು. ಇದರ ವಿಚಾರ ಮಾಡುವದು ಅನ್ವಯವು ಇನ್ನೊಂದು ಉದಾಹರಣೆ :- ಮಣ್ಣು ಅದೆಯಾದರೆ ಘಟ (ಗಡಿಗಿ) ಅದೆ, ಇದು ಅನ್ವಯವು. ಮಣ್ಣು ಇಲ್ಲವಾದರೆ ಘಟವೂ ( ಗಡಿಗಿ ) ಇಲ್ಲ ಇದು ವ್ಯತಿರೇಕವು. ಯಾವುದು ಅದೆಯೋ ಅದು ಇರುವದು ಅನ್ವಯವು. ಯಾವುದು ಇಲ್ಲವೋ, ಅದು ಇರುವದಿಲ್ಲ ಇದು ವ್ಯತಿರೇಕವು.] ಆದರೆ ಯಾವ ಯಾವುದು ದೃಶ್ಯವಿರುವದೋ ಅದೆಲ್ಲವೂ ಕಲ್ಪನೆಯಲ್ಲಿ ಬರುತ್ತದೆ. ಮನಸ್ಸಿಗೆ ಭಾಸವಾಗುತ್ತದೆ, ಬುದ್ಧಿಗೆ ಹಿಡಿಯುತ್ತದೆ, ತಿಳಿಯುತ್ತದೆ. ಈ ಎಲ್ಲವೂ ಅನಾತ್ಮ ಇದ್ದುದರಿಂದ ಇವುಗಳ ನಿರಾಸ ಮಾಡಿ (ವಿವೇಕ, ವ, ಸೂಕ್ಷ್ಮ ವಿಚಾರಗಳಿಂದ) ಯಾವುದು ಕೇವಲ ಶುದ್ಧ ರೂಪದಿಂದ ಶಿಲ್ಲಕ ಉಳಿಯುವದೋ ಅದೇ ಆತ್ಮ ಸ್ವರೂಪವೆಂದು ತಿಳಿಯಿರಿ. ಈ ಪದ್ಧತಿಯಿಂದ ವಿಚಾರ ಮಾಡುವದೇ ವ್ಯತಿರೇಕವೆನಿಸುವದು.(೪೯) ಈಗ ಕಲ್ಪನೆಯು ಯಾವ ಯಾವ ಸೃಷ್ಟಿನಿರ್ಮಾಣ ಮಾಡುವದು ಇದರಯಾದಿಯನ್ನು ಹೇಳುವರು:-ಮೂಲದಲ್ಲಿ ಕಲ್ಪನೆಯು ಒಂದೇಇರುವದು.ಆದರೆ ಇದರ ಖಟಪಟಿಯಿಂದ ಎಂಟು ಪ್ರಕಾರದ ಸೃಷ್ಟಿಗಳು ಹುಟ್ಟಿರುವವು. ಈ ಸೃಷ್ಟಿಯ ಕಥೆಯನ್ನು ಹೇಳುವೆ ಸಾವಧಾನರಾಗಿ ಕೇಳಿರಿ. (೫೦) ಒಂದು ಕಲ್ಪನೆಯ ಸೃಷ್ಟಿ=ಮನೋರಾಜ್ಯದ ಸೃಷ್ಟಿ. (ಎರಡು) ಶಬ್ದ ಸೃಷ್ಟಿ. (ಶಬ್ದಚಾತುರ್ಯದ ಜಾಣ್ಮೆಯಿಂದ ಎಲ್ಲವೂ ಪ್ರತ್ಯಕ್ಷ ಇದ್ದಂತೆ ಭಾಸವಾಗುತ್ತದೆ). (ಮೂರು) ಎಲ್ಲರಿಗೂ ಗೊತ್ತಿರುವ ಪ್ರತ್ಯಕ್ಷ ಸೃಷ್ಟಿ. (೫೧) (ನಾಲ್ಕು) ಚಿತ್ರಲೇಪ ಸೃಷ್ಟಿ. ಕಾಗದ, ಅರಿವೆ, ಕಟ್ಟಿಗೆ ಮತ್ತು ಗೋಡೆ ಇವುಗಳ ಮೇಲೆ ಬಣ್ಣದಿಂದ ಮಾಡಿದ ಸೃಷ್ಟಿ. (ಐದು) ಸ್ವಪ್ನ ಸೃಷ್ಟಿ. [ಸ್ವಪ್ನದಲ್ಲಿ ರಚನೆಯಾದ ಸೃಷ್ಟಿ] (ಆರು) ಗಂಧರ್ವ ಸೃಷ್ಟಿ, ಆಕಾಶದಲ್ಲಿ ಕಾಣುವ ಬೇರೆ ಬೇರೆ ಆಕಾರದ ಸೃಷ್ಟಿ. (ಏಳು) ಜ್ವರ ಸೃಷ್ಟಿ. ಜ್ವರವೇರಿದಾಗ ಉಂಟಾಗುವ ಭ್ರಮೆಯಿಂದಾಗುವ ಪ್ರಕಾರಗಳು (೫೨) (ಎಂಟು) ದೃಷ್ಟಿ ಬಂಧನ.ನಜರ ಬಂದಿಯಿಂದ ಉಂಟಾಗುವ ಜಾದೂ ವಿದ್ಯೆ ಇತ್ಯಾದಿಸೃಷ್ಟಿ.ಹೀಗೆ ಇವು ಕಲ್ಪನೆಯಿಂದ ನಿರ್ಮಾಣವಾಗುವ ಸೃಷ್ಟಿಯ ಎಂಟು ಪ್ರಕಾರಗಳಿರುವವು. ಇವುಗಳಲ್ಲಿ ಯಾವುದು ಶ್ರೇಷ್ಠ ಹಾಗೂ ಸತ್ಯವೆಂದು ನಂಬಬೇಕು? ಅರ್ಥಾತ್ ಇವು ಎಂಟೂ ಸತ್ಯವಲ್ಲ. (೫೩)

ಮ್ಹಣೋನಿ ಸೃಷ್ಟೀ ನಾಸಿವಂತ। ಜಾಣತೀ ಸಂತ ಮಹಂತ।
ಸಗುಣೇ ಭಜಾವೇ ನಿಶ್ಚಿತ। ನಿಶ್ಚಯೋ ಲಾಗೀ ॥೫೪॥

ಸಗುಣಾಚೇನಿ ಆಧಾರೇ। ನಿರ್ಗುಣ ಪಾವಿಜೆ ನಿರ್ಧಾರೇ।
ಸಾರಾಸಾರವಿಚಾರೇ। ಸಂತ ಸಂಗೇ ॥೫೫॥

ಆತಾ ಅಸೋ ಹೇ ಬಹುತ। ಸಂತಸಂಗೇ ಕಳೆ ನೇಮಸ್ತ।
ಯೇರ್ಹವೀ ಚಿತ್ತ ದುಶ್ಚಿತ। ಸಂಶಈ ಪಡೆ ॥೫೬॥

ತವ ಶಿಷ್ಯೇ ಆಕ್ಷೇಪಿಲೇ। ಸೃಷ್ಟೀ ಮಿಥ್ಯಾ ಐಸೇ ಕಳಲೆ।
ಪರೀ ಹೇ ಅವಘೇ ನಾಥಿಲೇ। ತರೀ ದಿಸತೇ ಕಾ ॥೫೭॥

ದೃಶ್ಯ ಪ್ರತ್ಯಕ್ಷ ದಿಸತೇ। ಮ್ಹಣೋನ ಸತ್ಯಚಿ ವಾಟತೇ।
ಯಾಸಿ ಕಾಯ ಕರಾವೇ ತೇ। ಸಾಂಗಾ ಸ್ವಾಮೀ ॥೫೮॥

ಯಾಚೇ ಪ್ರತ್ಯೋತ್ತರ ಭಲೇ। ಪುಢಿಲೇ ಸಮಾಸೀ ಬೋಲಿಲೇ।
ಶ್ರೋತಾ ಶ್ರವಣ ಕೇಲೇ। ಪಾಹಿಜೆ ಪುಢೇ ॥೫೯॥

ಐಸೀ ಸೃಷ್ಟೀ ಮಿಥ್ಯಾ ಜಾಣ। ಜಾಣೋನಿ ರಕ್ಷಾವೇ ಸಗುಣ।
ಐಸೀ ಹೆ ಅನುಭವಾಚೀ ಖೂಣ। ಅನುಭವೀ ಜಾಣತೀ ॥೬೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಸೃಷ್ಟಿ ಕಥನ' ನಾಮ ಸಮಾಸ ಷಷ್ಠಮ॥

• •

**ಇನ್ನು ಈ ಎಲ್ಲ ವಿವೇಚನೆಯ ಸಮಾರೋಪ ಮಾಡುತ್ತಾರೆ. ಸೃಷ್ಟಿಯು ಮಿಥ್ಯಾ ಎಂಬುದು ನಿಜವೇ ಆದರೆ ಖರೇ ದೇವರ ಅನುಭವ ಬರುವದಕ್ಕಾಗಿ ಇವುಗಳ ಉಪಯೋಗ ಮಾಡಿಕೊಳ್ಳಬೇಕು.** ಈ ಸೃಷ್ಟಿ ನಾಶವಂತವಿದೆ (ನಶಿಸುವಂತಹದು) ಎಂಬುದನ್ನು ಸಂತ–ಮಹಂತ, ಸದ್ಗುರುಗಳೆಲ್ಲರೂ ಬಲ್ಲರು. ಈ ಮಾತು ನಿಜವಾದರೂ ಖರೇ ದೇವರ ನಿಶ್ಚಿತವಾದ ಅನುಭವ ಬರುವದರ ಸಲುವಾಗಿ ಸಗುಣದ ಭಜನೆ, ಪೂಜೆ ಮಾಡಬೇಕೆಂದು ನಾನು ನಿಶ್ಚಿತವಾಗಿ ನಿಮಗೆ ಹೇಳುತ್ತೇನೆ. ಇಂದಿನ ನಮ್ಮ ಈ ಅವಸ್ಥೆಯಲ್ಲಿ ಸಗುಣದ ಅವಲಂಬನ ಮಾಡದ ಹೊರತು ನಮ್ಮ ಮನವು ಒಂದೇ ಕಡೆಗೆ ಸ್ಥಿರವಾಗುವದಿಲ್ಲ, ಆದಕ್ಕಾಗಿ ಮನಸ್ಸನ್ನು ಸಗುಣದಲ್ಲಿ ತೊಡಗಿಸಿ ದೇಹದ ಮರೆವಾಗುವಂತೆ ಮಾಡಿದಾಗ ಆಮೇಲೆ ನಿಮಗೆ ನಿರ್ಗುಣದ ಸ್ಥಿರತ್ವ ಅಥವಾ ನಿರ್ಗುಣವನ್ನು ಸಾಧಿಸಲು ಬೇಕಾಗುವ ಬುದ್ಧಿಯ ಗ್ರಹಣ ಶಕ್ತಿ ಉಂಟಾಗುವದು. ಅದಕ್ಕಾಗಿಯೇ ಶ್ರೀ ಸಮರ್ಥರು ಹೇಳುವದೇನೆಂದರೆ, ಮಿಥ್ಯಾ ಸೃಷ್ಟಿಯಲ್ಲಿಯು ಮಿಥ್ಯೆಯಾದ ಸಗುಣದ ಉಪಾಸನೆ ಮಾಡಬೇಕೆಂದು ಒತ್ತಿ ಹೇಳಿದ್ದಾರೆ. (ಸಗುಣದ ಭಜನೆ, ಉಪಾಸನೆ ಮಾಡುವಾಗಲೂ ಸಹ ನಿರ್ಗುಣದ ಕಡೆಗೆ ಅನುಸಂಧಾನವಿಡಬೇಕು. (೫೪) ಸಗುಣೋಪಾಸನೆಯ ಆಧಾರದಿಂದ ನಿರ್ಗುಣದವರೆಗೆ ಹೋಗಲು ಬರುವದೆಂಬ ಮಾತು ನಿಸ್ಸಂಶಯವಾಗಿಯೂ ಖರೇ ಇರುವದು. ಅರ್ಥಾತ್ ಸಗುಣ ಉಪಾಸನೆಯ ಜೊತೆಗೆ ಸಾರಾಸಾರ ವಿಚಾರ ಮತ್ತು ಸತ್ಸಂಗ ಇವೆರಡೂ ಇರಲಿಕ್ಕೇ ಬೇಕು. ತಾತ್ಪರ್ಯ:– ಮನುಷ್ಯ ಎಷ್ಟೇ ಅಜ್ಞಾನಿ ಇರಲಿ, ಮತ್ತು ಆತ್ಮಸ್ವರೂಪವು ಎಷ್ಟೇ ನಿರ್ಗುಣವಿರಲಿ, **ಸಗುಣೋಪಾಸನೆ, ಸಾರಾಸಾರ ವಿಚಾರ** ಹಾಗೂ **ಸತ್ಸಂಗ** ಈ ಮೂರರ (ಮುಪ್ಪುರಿ ಹಗ್ಗದ) ಆಧಾರದಿಂದ ಮಾತ್ರ ಮನುಷ್ಯ ಆತ್ಮಜ್ಞಾನಿಯಾಗಬಲ್ಲನು. ಅರ್ಥಾತ್ ಆಗಿಯೇ ಆಗುತ್ತಾನೆಂದು ಶ್ರೀ ಸಮರ್ಥರ ಸ್ಪಷ್ಟ ಅಭಿಪ್ರಾಯವಿರುವದು. (೫೫) **ಈಗ ಮುಂದಿನ ಸಮಾಸದ ಬಗ್ಗೆ ಸೂಚನೆ ಕೊಡುವರು:-** ಈ ವಿಷಯದ ಬಗ್ಗೆ ಇನ್ನು ಹೆಚ್ಚು ವಿಸ್ತಾರಬೇಡ ಸಂತ, ಸಾಧು, ಶರಣರ ಸಂಗತಿ ಮಾಡುವದರಿಂದ ಇದೆಲ್ಲವೂ ಖಾತ್ರಿಯಿಂದ ಮನದಟ್ಟಾಗುವದು. ಇಲ್ಲದಿದ್ದರೆ ಮನದಲ್ಲಿ ಗೊಂದಲ ಉಂಟಾಗಿ ಅನೇಕ ಸಂಶಯಗಳು ನಿರ್ಮಾಣವಾಗುವವು. (೫೬) ಆಗ ಶಿಷ್ಯನು ಒಂದು ಆಕ್ಷೇಪವೆತ್ತಿದನು. ಸೃಷ್ಟಿ ಮಿಥ್ಯಾ ಇರುವದೆಂಬ ವಿಷಯ ನನಗೆ ಬರೋಬರಿ **[ಸರಿಯಾಗಿ]** ತಿಳಿಯಿತು. ಆದರೆ ಈ ದೃಶ್ಯ ವಿಶ್ವವು ಮೂಲದಲ್ಲಿಯೇ ಇರದಿದ್ದರೆ ಕಾಣಿಸುವದೇಕೆ? [೫೭] ದೃಶ್ಯವು ಪ್ರತ್ಯಕ್ಷ ಕಾಣುವದರಿಂದ ಅದು ಖರೇ ಅನಿಸುತ್ತದೆ. ಸ್ವಾಮೀ ಇದಕ್ಕೇನು ಉಪಾಯ ಮಾಡಬೇಕೆಂಬುದನ್ನು ಈಗ ನೀವು ಹೇಳಬೇಕು. [೫೮] ಇದಕ್ಕೆ ಸಮಾಧಾನಕರವಾಗಿ ಮುಂದಿನ ಸಮಾಸದಲ್ಲಿ ಉತ್ತರಕೊಡುವೆವು. ಶ್ರೋತೃಗಳು ಸಾದರದಿಂದ ಕೇಳಬೇಕು. [೫೯] ಸಧ್ಯಕ್ಕೆ ಈ ದೃಶ್ಯ ಸೃಷ್ಟಿ ಮಿಥ್ಯವಾಗಿದೆ. ಖರೇ ಅಲ್ಲ. ಇದನ್ನು ಜ್ಞಾಪಕದಲ್ಲಿ ಟ್ಟುಕೊಂಡು ಸಗುಣದ ರಕ್ಷಣೆ ಮಾಡಬೇಕು. ಸಗುಣೋಪಾಸನೆ ಮಾಡಬೇಕು. ಇದು ನನ್ನ ಸ್ವಾನುಭವದ ಸಂಗತಿ ಯಾಗಿದ್ದು ಇದನ್ನು ಸ್ವಾನುಭವಿ ಪುರುಷನೇ ತಿಳಿಯುವನು. ಲೋಕದ ಜನತೆಗೆ ಮಾರ್ಗದರ್ಶನವಾಗಲೆಂದು ಸಿದ್ಧನಾದವನೂ ಸಹ ಸಗುಣೋಪಾಸನೆಯ ಮಾರ್ಗಬಿಡಬಾರದು. [೬೦]

ಶ್ರೀ ದಾಸಬೋಧದ, ಗುರುಶಿಷ್ಯರ ಸಂವಾದದ ಆರನೆಯ ದಶಕದಲ್ಲಿಯ
"ಸೃಷ್ಟಿಕಥನ"ವೆಂಬ ಆರನೆಯ ಸಮಾಸವು ಮುಗಿದುದು.

● ●

### ಸಮಾಸ ಸಪ್ತಮ : ಸಗುಣ ಭಜನ

॥ಶ್ರೀರಾಮ॥ ಜ್ಞಾನೇ ದೃಶ್ಯ ಮಿಥ್ಯಾ ಜಾಲೇ । ತರೀ ಕಾ ಪಾಹಿಜೆ ಭಜನ ಕೇಲೇ।
ತೇಣೇ ಕಾಯಿ ಪ್ರಾಪ್ತ ಜಾಲೇ । ಹೇ ಮಜ ನಿರೋಪಾವೇ ॥೧॥
ಜ್ಞಾನಾಹೂನಿ ಶ್ರೇಷ್ಠ ಅಸೇನಾ । ತರೀ ಕಾ ಪಾಹಿಜೆ ಉಪಾಸನಾ ।
ಉಪಾಸನೇನೇ ಜನಾ। ಕಾಯೋ ಪ್ರಾಪ್ತ ॥೨॥

# ದಶಕ ೬. ಸಮಾಸ ೭. ಸಗುಣ ಭಜನ (ನುಡಿ ೪೫)

ಶ್ರೀ ಸಮರ್ಥರು ಹೇಳುತ್ತಾರೆ. ಈ ವಿಶ್ವದಲ್ಲಿ ಮಾಯಾ ಮತ್ತು ಬ್ರಹ್ಮ, ಅಥವಾ ಅನಾತ್ಮಾ ಮತ್ತು ಆತ್ಮಾ ಎಂಬ ಎರಡು ವಸ್ತುಗಳು ಇರುವವು. ಅನಾತ್ಮ ವಸ್ತುವು ದೃಶ್ಯ, ಸ್ಥೂಲ, ಅನೇಕ, ವಿನಾಶೀ, ವಿಕಾರೀ, ಇರುವದು. ಉದಾ:- ನಮ್ಮ ಆತ್ಮಾ ಅಥವಾ ಸ್ವಸ್ವರೂಪ ಇದರಿಂದ ಮಾನವೀ ಜೀವನದಲ್ಲಿ ಎರಡು ಮೆಟ್ಟಲುಗಳು ಇರುವವೆಂದು ಅನಿಸುವದು.ಮೊದಲಿನಮೆಟ್ಟಲಲ್ಲಿದ್ದಮನುಷ್ಯನು ದೃಶ್ಯಮತ್ತು ದೇಹ ಇವನ್ನು ಸಂಪೂರ್ಣಸತ್ಯವೆಂದು ನಂಬಿರುತ್ತಾನೆ. ಇಂಥವರಿಗೆ ಆತ್ಮವಿದ್ದೂ ಇಲ್ಲದಂತೆ ಎಂದು ಅನ್ನಬಹುದು. ಇನ್ನೊಂದು ಮೆಟ್ಟಲ ಮೇಲಿದ್ದ ಮನುಷ್ಯನು. ಒಂದೇ ಒಂದಾದ ಆತ್ಮವನ್ನೇ ಸಂಪೂರ್ಣ ಸತ್ಯವೆಂದು ನಂಬಿರುತ್ತಾನೆ. ಇವನಿಗೆ ದೃಶ್ಯವಿಶ್ವ ಹಾಗೂ ಸ್ವತಃದ ದೇಹವೂ ಸಹ ಇದ್ದೂ ಇಲ್ಲದಂತೆ ಆಗಿರುವದು ಜೀವನದ ಮೊದಲನೆಯ ಮೆಟ್ಟಲಿಂದ ಎರಡನೆಯ ಮೆಟ್ಟಲು ಏರುವದಕ್ಕೆ ಪರಮಾರ್ಥವೆಂದು ಹೆಸರು. ಬ್ರಹ್ಮವು ಆತ್ಮಸ್ವರೂಪ ಇದ್ದುದರಿಂದ ಸ್ವತಃದಲ್ಲಿಯ [ನಮ್ಮ ದೇಹದಲ್ಲಿಯ] ಆತ್ಮದ ಗುರುತು ಆದ ಕೂಡಲೇ ವಿಶ್ವದಲ್ಲೆಲ್ಲ ವ್ಯಾಪಿಸಿ ಉಳಿದಂಥ ಬ್ರಹ್ಮಸ್ವರೂಪದ ಗುರುತು [ಜ್ಞಾನ] ಆಗುತ್ತದೆ. ಸ್ವತಃದಲ್ಲಿಯ ಆತ್ಮದ ಗುರುತು ಆಗಬೇಕಾದರೆ ಅದರ ಮೇಲೆ ಆವರಿಸಿಕೊಂಡ [ಸ್ವತಃದ ಪೈಕಿ ಅನಾತ್ಮ] ಭಾಗವನ್ನು ಬದಿಗೆ ಸರಿಸಬೇಕಾಗುವದು. "ದೇಹವೇ ನಾನು ಇರುವೆ" ಎಂಬ ದೃಢಭಾವವನ್ನು ಪೋಷಿಸುವ ದೇಹಬುದ್ಧಿಯೇ ಸ್ವತಃದಲ್ಲಿಯ ಅನಾತ್ಮ ಭಾಗವಾಗಿದೆ. ದೇಹಬುದ್ಧಿಯನ್ನು ಬಾಜೂಕ್ಕೆ ಸರಿಸಲಿ ದೇಹಬುದ್ಧಿಯ ಆಶ್ರಯವನ್ನೇ ತೆಗೆದುಕೊಳ್ಳಬೇಕು. ನಮ್ಮ ದೇಹ ಸಗುಣ ಇರುವದರಿಂದಲೇ ನಮ್ಮ ದೇವರೂ ಸಹ ಸಗುಣನು. ನಮ್ಮ ದೇಹ ನಮಗೆ ಎಷ್ಟರ ಮಟ್ಟಿಗೆ ನಿಜವೋ ಅದೇ ಪ್ರಕಾರ ಅದರಷ್ಟೇ ನಮ್ಮ ದೇವರೂ ಸಹ [ಸಗುಣ ದೇವರು] ಖರೇ ಇರುವನು. ಹೀಗೆ ದೃಢಭಾವನೆ ಹೊಂದಿ ಶ್ರದ್ಧೆಯಿಂದ ಮತ್ತು ಪ್ರೇಮದಿಂದ ಸಗುಣೋಪಾಸನೆ ಮಾಡಿದ್ದಾದರೆ ದೇಹ ಬುದ್ಧಿ ತನ್ನಷ್ಟಕ್ಕೆ ತಾನೇ ಕ್ಷೀಣವಾಗುತ್ತ ಹೋಗುವದು. ಭಗವಂತನ ಸೇವೆ ಮಾಡುವದರಲ್ಲಿ ನಮ್ಮ "ನಾನು" ಎಂಬುದರ ಹಾಗೂ ದೇಹದ ವಿಸ್ಮರಣವಾಗುವದು. ಮರೆವು ಉಂಟಾಗುವದು ಈ ಪ್ರಕಾರ ಭಗವಂತನ ಸಗುಣ ರೂಪದ ಸತತ ಚಿಂತನೆ [ಧ್ಯಾನ] ಆಗಹತ್ತಿತೆಂದರೆ ಇದರ ಬಲದಿಂದ ಅತಿಶಯ ಶ್ರದ್ಧಾ ಉಂಟಾಗುತ್ತದೆ. ನಿರಂತರ ಚಿಂತನದಿಂದ ಭಗವಂತನ ಅಖಂಡ ಜ್ಞಾನ ಹತ್ತುವದು. ಇಂಥ ಧ್ಯಾನದ ಪರಾಕಾಷ್ಠವಾದ ಕೂಡಲೇ ದಿವ್ಯ ಪ್ರೇಮವು ಉತ್ಪನ್ನವಾಗುವದು. ಇಂಥ ಪ್ರೇಮದಿಂದ ಸಂಪೂರ್ಣ ಆತ್ಮನಿವೇದನ ಘಟಿಸಿ[ಒದಗಿ] ಪ್ರತ್ಯಕ್ಷ ಸಾಕ್ಷಾತ್ಕಾರದ ಅನುಭವವಾಗುವದು. ಶ್ರೀ ಸಮರ್ಥರು ಇದಕ್ಕೆ ಭಕ್ತಿ ಮಾರ್ಗವೆಂದು ಹೆಸರು ಕೊಟ್ಟಿರುವರು. ಈ ಸಮಾಸದಲ್ಲಿ ಶ್ರೀ ಸಮರ್ಥರು ಸ್ವಲ್ಪ ಮಟ್ಟಿಗೆ ತಮ್ಮ ಆತ್ಮ ಚರಿತ್ರವನ್ನು ಹೇಳಿದಂತೆ ತೋರುತ್ತದೆ. ಭಗವಾನ ಶ್ರೀರಾಮಚಂದ್ರನ ಉಪಾಸನಾ ಮಾಡುತ್ತಿರುವಾಗ ಭಗವಂತ ತಮಗೆ ಹೇಗೆ ಪ್ರತ್ಯಕ್ಷ ಮಾರ್ಗದರ್ಶನ ಮಾಡಿದನೆಂಬುದರ ಸೂತ್ರಮಯ ಆದರೆ ಅರ್ಥಪೂರ್ಣ ವರ್ಣನೆಯನ್ನು ಶ್ರೀಗಳು ಇಲ್ಲಿ ಮಾಡಿ ನಿಮ್ಮ ಮುಂದೆ ಇಟ್ಟಿದ್ದಾರೆ. ಯಾವತ್ತೂ ಸಾಧಕರ ಮೇಲೆ ಇದೊಂದು ಬಹುದೊಡ್ಡ ಉಪಕಾರವಾಗಿರುದದು.

### ದಶಕ ೬. ಸಮಾಸ ೭. ಸಗುಣ ಭಜನ (ನುಡಿ ೪೫)

ಆತ್ಮಸಾಕ್ಷಾತ್ಕಾರದಿಂದ ಅಂತಿಮ ಸತ್ಯದ ದರ್ಶನವಾಗುವದು. ಅಂತಿಮ ಸತ್ಯದ ದೃಷ್ಟಿಯಿಂದ ಈ ಪಂಚಭೌತಿಕ ದೃಶ್ಯವಿಶ್ವ ಮಿಥ್ಯಾ ಇರುವದು, ಇದ್ದು ಇಲ್ಲದಂತಿರುವದು. ಈ ಮಾತು [ವಿಷಯ] ಖರೇ ಇದ್ದುದಾದರೆ ಪರಮಾರ್ಥದಲ್ಲಿ ಸಗುಣೋಪಾಸನೆಗೆ ಸ್ಥಾನವೇ ಇರುವದಿಲ್ಲ [ಉಳಿಯುವದಿಲ್ಲ]ವೆಂಬ ಶಂಕೆ ಹುಟ್ಟುತ್ತದೆ.ಸಮಾಸದ ಆರಂಭದಲ್ಲಿ ಈ ಶಂಕಾದ ವಿಷಯವಾಗಿ ಶ್ರೋತೃವು ಬೇರೆಬೇರೆ ಶಬ್ದಗಳಿಂದವಿಚಾರಿಸುತ್ತಾನೆ. ಶ್ರೀ ಸಮರ್ಥರು ಈ ಸಮಾಸದಲ್ಲಿ ಇವನ ಶಂಕಾ ನಿವಾರಣ ಮಾಡುತ್ತಾರೆ. ಶ್ರೋತೃವು ಅನ್ನುತ್ತಾನೆ, ಆತ್ಮ ಜ್ಞಾನವಾದ ಮೇಲೆ ಈ ಎಲ್ಲ ದೃಶ್ಯ ವಿಶ್ವವು ಮಿಥ್ಯಾ [ಖೊಟ್ಟಿ] ಎಂದು ಅನುಭವಕ್ಕೆ ಬರುವದು. ಅಂದ ಮೇಲೆ ಭಜನೆಯನ್ನು ಏಕೆ ಮಾಡಬೇಕು? ಭಜನೆಯಿಂದ ಏನುಸಿಗುವದು? ಇದನ್ನು ನನಗೆ ಸರಿಯಾಗಿ ತಿಳಿಸಿ ಹೇಳಿರಿ. [೧]
ಆತ್ಮಜ್ಞಾನಕ್ಕಿಂತ ಬೇರೆ ಯಾವುದೂ ಶ್ರೇಷ್ಠವಿಲ್ಲವೆಂಬುದು ನಿಜವಾದದ್ದಿದೆ. ಇತರ ಉಪಾಸನೆ ಏಕೆ ಮಾಡಬೇಕು. ಉಪಾಸನೆ ಮಾಡುವದರಿಂದ ಜನರಿಗೆ ಏನು ಸಿಗುವದು. [೨]

ಮುಖ್ಯ ಸಾರ ತೇ ನಿರ್ಗುಣ । ತೇಥೇ ದಿಸೇ ಚಿನಾ ಸಗುಣ ।
ಭಜನ ಕೇಲಿಯಾ ಚಾ ಗುಣ । ಮಜ ನಿರೋಪಾವಾ ॥೩॥
ಜೇ ಸಮಸ್ತ ನಾಸಿವಂತ । ತ್ಯಾಸಿ ಭಜಾವೇ ಕಿಂನಿಮಿತ್ತ ।
ಸತ್ಯ ಸಾಂಡೂನ ಅಸತ್ಯ । ಕೋಣೇ ಭಜಾವೇ ॥೪॥
ಅಸತ್ಯಾಚಾ ಪ್ರತ್ಯಯೊ ಆಲಾ । ತರೀ ಮಗ ನೇಮು ಕಾ ಲಾಗಲಾ ।
ಸತ್ಯ ಸಾಂಡೂನ ಗಲ್ಬಲಾ । ಕಾಸಯಾ ಕರಾವಾ ॥೫॥
ನಿರ್ಗುಣಾನೇ ಮೋಕ್ಷ ಹೋತೋ । ಪ್ರತ್ಯಕ್ಷ ಪ್ರತ್ಯಯಾಯೇತೋ ।
ಸಗುಣ ಕಾಯೆ ದೇಊ ಪಾಹಾತೋ । ಸಾಂಗಾ ಸ್ವಾಮೀ ॥೬॥
ಸಗುಣ ನಾಸಿವಂತ ಏಸೇ ಸಾಂಗತಾ । ಪುನ್ಹಾ ಭಜನ ಕರಾವೇ ಮ್ಹಣತಾ ।
ತರೀ ಕಾಶಾಸಾಠೀ ಆತಾ । ಭಜನ ಕರೂ ॥೭॥
ಸ್ವಾಮೀಚೆ ಭಿಡೇನೇ ಬೋಲವೇನಾ । ಯೇರ್ಹವೀ ಹೇ ಕಾಹೀಚ ಮಾನೇನಾ ।
ಸಾಧ್ಯಚಿ ಜಾಲಿಯಾ ಸಾಧನಾ । ಕಾ ಪ್ರವರ್ತಾವೇ ॥೮॥
ಏಸೇ ಶ್ರೋತಯಾಚೇ ಬೋಲಣೇ । ಶಬ್ದ ಬೋಲೆ ನಿರ್ಬುಜಲೆಪಣೇ ।
ಯಾಚೇ ಉತ್ತರ ಏಕಣೇ । ಮ್ಹಣೇ ವಕ್ತಾ ॥೯॥
ಗುರೂಚೇ ವಚನ ಪ್ರತಿಪಾಳಣೆ । ಹೇ ಮುಖ್ಯ ಪರಮಾರ್ಥಾಚೇ ಲಕ್ಷಣ ।
ವಚನ ಭಂಗ ಕರಿತಾ ವಿಲಕ್ಷಣ । ಸಹಜೇಚಿ ಜಾಲೇ ॥೧೦॥
ಮ್ಹಣೋನೀ ಆಜ್ಞೇಸೀ ವಂದಾವೇ । ಸಗುಣ ಭಜನ ಮಾನಾವೇ ।
ಶ್ರೋತಾ ಮ್ಹಣೆ ಹೇ ದೇವೇ । ಕಾ ಪ್ರಯೋಜಿಲೆ ॥೧೧॥
ಕಾಯ ಮಾನಿಲಾ ಉಪಕಾರ । ಕೋಣ ಜಾಲಾ ಸಾಕ್ಷಾತ್ಕಾರ ।
ಕಿಂವಾ ಪ್ರಾರಬ್ಧಾಚೇ ಅಕ್ಷರ । ಪುಸಿಲೇ ದೇವೇ ॥೧೨॥
ಹೋಣಾರ ಹೇ ತೋ ಪಾಲಟೇನಾ । ಭಜನೇ ಕಾಯ ಕರಾವೇ ಜನಾ ।
ಹೇ ತೋ ಪಾಹಾತಾ ಅನುಮಾನಾ । ಕಾಹೀಚ ನಯೆ ॥೧೩॥
ಸ್ವಾಮೀಚೀ ಆಜ್ಞಾ ಪ್ರಮಾಣ । ಕೋಣ ಕರೀಲ ಅಪ್ರಮಾಣ ।
ಪರಂತು ಯಾಚಾ ಕಾಯ ಗುಣ । ಮಜ ನಿರೋಪಾವಾ ॥೧೪॥

ಇದೂ ಅಲ್ಲದೇ ಕೊನೆಯು ಸತ್ಯವು ನಿರ್ಗುಣವಿರುವದೆಂದ ಮೇಲೆ ಅಲ್ಲಿ ಸಗುಣಕ್ಕೆ ಸ್ಥಾನವೇ ಇಲ್ಲ. ಅಂದ ಮೇಲೆ ಸಗುಣದ ಭಜನೆ ಮಾಡುವದರಿಂದ ಯಾವ ವಿಶೇಷ ಗುಣ ಪ್ರಾಪ್ತವಾಗುವದು. ಇದನ್ನೂ ನನಗೆ ತಿಳಿಸಿ ಹೇಳಿರಿ. [೩] ದೃಶ್ಯವೆಲ್ಲ ನಶಿಸಿ ಹೋಗುವದಾದರೆ, ನಾಶಿವಂತವಿರುವದಾದರೆ [ನಾಶಹೊಂದುವದಾದರೆ] ಸಗುಣದ ಭಜನೆಯ ಕಾರಣ ವೇನು? ಸತ್ಯವಾದ ನಿರ್ಗುಣವನ್ನು ಬಿಟ್ಟು ಇಲ್ಲದ ಸಗುಣವೆನಿಸುವ ಭಜನೆಯನ್ನು ಯಾರು ಮಾಡುವರು? ಏಕೆ ಮಾಡಬೇಕು? [೪] ದೃಶ್ಯವು ಅಸತ್ಯವಿರುವದೆಂದು ಅನುಭವಕ್ಕೆ ಬಂದ ಮೇಲೆ ಪುನಃ ಸಗುಣ ದೇವರ ಭಜನೆ, ಪೂಜಾದಿಗಳ ನಿಯಮವನ್ನು ಯಾಕೆ ಹಚ್ಚಿಕೊಳ್ಳಬೇಕು? ಸ್ವಾಮೀ ಸತ್ಯವನ್ನೇ ಬದಿಗಿರಿಸಿ, ಅಸತ್ಯ ಭಜನೆ.ಪೂಜೆಯ ಗೊಂದಲ ಮತ್ತು ಇಲ್ಲದ ಹೆಚ್ಚಿನ ಗೋಳನ್ನು ಏಕೆ ಕಟ್ಟಿಕೊಳ್ಳಬೇಕು? [೫] ನಿರ್ಗುಣದಿಂದ ಮೋಕ್ಷ ಸಿಗುವದು. ಇದು ಪ್ರತ್ಯಕ್ಷ ಅನುಭವವೇ ಇರುವದು. ಅಂದ ಮೇಲೆ ಸಗುಣೋಪಾಸನೆಯಿಂದ ಹೆಚ್ಚಿನದೇನು ಪ್ರಾಪ್ತವಾಗುವದು ಇದನ್ನೆಲ್ಲ ಗುರುನಾಥಾ ತಿಳಿಸಿ ಹೇಳುವವನಾಗು [೬] ತಾವು ಒಂದು ಕಡೆಗೆ ಸಗುಣವು ನಾಶವಂತವೆಂದು ಹೇಳುವಿರಿ. ಮತ್ತು ಈಗ ಪುನಃ ಸಗುಣದ ಭಜನೆ ಮಾಡಿರಿ ಎಂದು ಅನ್ನುವಿರಿ. ನಾನು ಯಾವುದರ ಸಲುವಾಗಿ ಭಜನೆಯನ್ನು ಮಾಡಬೇಕು? [೭] ಸ್ವಾಮಿ ನಿಮ್ಮ ಭಿಡೆಗೆ [ಪ್ರಭಾವಕ್ಕೆ] ಅಧೀನನಾದ ನನಗೆ ನಿಮ್ಮ ಮುಂದೆ ನಿಂತು ಸ್ಪಷ್ಟವಾಗಿ ಹೇಳಲಿಕ್ಕೆ ಆಗಲೊಲ್ಲದು. ನೀವು ಈಗ ನನಗೆ ಹೇಳಿದ್ದು ಎಷ್ಟೂ ಒಪ್ಪಿಗೆಯಾಗಲೊಲ್ಲದು. ಸಾಧ್ಯವು (ಸದ್ವಸ್ತುವು) ಪದರಿನಲ್ಲಿ ಬಿದ್ದ ಮೇಲೆ ಸಾಧನ ಮಾಡುವ ಕಾರಣವೇನು? [೮] **ಇದಕ್ಕೆ ಸದ್ಗುರು ಸ್ವಾಮಿಯು ಉತ್ತರ ಕೊಡುವರು** ಶ್ರೋತಾರನು ಹೀಗೆ ಮಾತನಾಡಿದನು. "ಅತಿಶಯ ಗೊಂದಲದಲ್ಲಿ ಬಿದ್ದದ್ದರಿಂದ ಈ ಪ್ರಕಾರದ ಶಬ್ದಗಳು ನನ್ನಿಂದ ಹೊರಬಂದವು" ಇದಕ್ಕೆ ವಕ್ತಾ [ಶ್ರೀಸಮರ್ಥರು] ಉತ್ತರ ಕೊಡುವದನ್ನು ಕೇಳಿರಿ. [೯] **ಸದ್ಗುರು ಏನು ಹೇಳುವನೋ ಅದರ ಮೇಲೆ ಪೂರ್ಣ ವಿಶ್ವಾಸವಿಡಬೇಕು ಮತ್ತು ಆ ಪ್ರಕಾರ ನಿಃಶಂಕವಾಗಿ ವರ್ತಿಸಬೇಕು.** ಇದು ಪರಮಾರ್ಥದ ಮುಖ್ಯ ಹಾಗೂ ಮಹತ್ವದ ಲಕ್ಷಣವಾಗಿದೆ. ಗುರು ವಚನವನ್ನು ಭಂಗಿಸಿದರೆ ಆಗ ಇಲ್ಲದ್ದೊಂದು ಏನಾದರೂ ತನ್ನಷ್ಟಕ್ಕೆ ತಾನೇ ಘಟಿಸುತ್ತದೆ. ಆಗಬಾರದ್ದು ಆಗುತ್ತದೆ. [೧೦] ಆದ್ದರಿಂದ ಗುರುವಿನ ಆಜ್ಞೆಯನ್ನು ಶಿರಸಾ ವಂದ್ಯವೆಂದು ತಿಳಿಯಬೇಕು. ಹಾಗೂ ಸಗುಣೋ ಪಾಸನಾ ಮನಃಪೂರ್ವಕ ಮಾಡಬೇಕು. ಈ ಉತ್ತರ ಕೇಳಿ ಶ್ರೋತಾ ಅನ್ನುತ್ತಾನೆ. ಗುರುದೇವಾ ಸಗುಣ ಭಜನೆ ಮಾಡುವದರಲ್ಲಿಯ ಉದ್ದೇಶ ಯಾವುದು? [೧೧] ಶ್ರೋತಾನು ಇವೇ ಆಕ್ಷೇಪಗಳನ್ನು ಬೇರೆ ಬೇರೆ ರೀತಿಯಲ್ಲಿ ಮತ್ತಿಷ್ಟು ನಮ್ರತೆಯಿಂದ ಕೇಳುತ್ತಾನೆ, ಸಗುಣೋಪಾಸನೆಯಲ್ಲಿ ಏನಾದರೂ ಲಾಭ (ಉಪಕಾರ) ಉಂಟೇ? ಇದರಲ್ಲಿಯೂ ಸಾಕ್ಷಾತ್ಕಾರವಾಗುವದೇ? ಅಥವಾ ನಮ್ಮ ಪ್ರಾರಬ್ಧದಲ್ಲಿ ಏನು ಬರೆದಿದೆಯೋ, ಅದನ್ನು ಉಪಾಸ್ಯ ದೇವತೆಯು [ ಸಗುಣ ದೇವರು ] ಎಂದಾದರೂ ಅಳಿಸಿರುವಳೇನು ? [೧೨] ನಮ್ಮ ನಶೀಬದಲ್ಲಿ ಏನು ಆಗಬೇಕಾಗಿದೆಯೋ ಅದನ್ನು ಏನು ಮಾಡಿದರೂ ತಪ್ಪಿಸಲಿಕ್ಕೆ ಆಗದಿದ್ದರೆ ಸಗುಣ ದೇವರ-ಭಜನೆ ಪೂಜೆಗಳಿಂದ ಜನರಿಗೆ ಏನು ಪ್ರಯೋಜನ? ಈ ಪ್ರಕಾರ ವಿಚಾರಮಾಡಿ ನೋಡಿದ್ದಾದರೆ ಸಗುಣೋಪಾಸನೆಯು ಬುದ್ಧಿಗೆ ಎಷ್ಟೂ ಪಟಾಯಿಸುವದಿಲ್ಲ. [ಒಪ್ಪಿಗೆ ಆಗುವದಿಲ್ಲ]. ಇಲ್ಲಿ ಶ್ರೀ ಸಮರ್ಥರು ಸಾಮಾನ್ಯ ಮನುಷ್ಯರ ದೃಷ್ಟಿಕೋನದ ಬಗ್ಗೆ ಸರಿಯಾಗಿ ವರ್ಣನೆ ಮಾಡಿದ್ದಾರೆ. ಸಾಮಾನ್ಯ ಜನರಿಗೆ ದೇವರು ಬೇಕಾಗಿರುವನು. ಆದರೆ ಅವನು ಪ್ರಪಂಚದಲ್ಲಿಯ ಅಡಚಣೆ ಆಪತ್ತುಗಳ ನಿವಾರಣೆಗಾಗಿ ಮಾತ್ರ ಬೇಕಾಗಿರುತ್ತಾನೆ. ಆತ್ಮಜ್ಞಾನವಾಗುವದಕ್ಕಾಗಿ ದೇವರು ಬೇಡಾಗಿರುವನು. [೧೩] ಸ್ವಾಮಿಯ ಆಜ್ಞೆ ನನಗೆ ಸರ್ವಸ್ವೀ ಮಾನ್ಯವಿದೆ. ಖರೇ ಹಾಗೂ ನ್ಯಾಯವಿದೆ. ಸಪ್ರಮಾಣವಿದೆ, ಯಾವ ಶಿಷ್ಯನೂ ಇದನ್ನು ಅಪ್ರಮಾಣವೆಂದು ಮುರಿಯಲಾರನು. ಯಾರೂ ಇದಕ್ಕೆ ಪುರಾವೆ ಇಲ್ಲವೆಂದು ಅನ್ನಲಾರರು. ಆದರೂ ಸಹ ಸಗುಣ ಭಜನೆಯಿಂದ ಯಾವ ಫಲಸಿಗುವದು ಇದನ್ನು ವಿವರಿಸಿ ಹೇಳಿರಿ. [೧೪]

ವಕ್ತಾ ವ್ಹಣೆ ಸಾವಧ ಪಣೆ । ಸಾಂಗ ಜ್ಞಾನಾಚೀ ಲಕ್ಷಣೇ ।
ತುಜ ಕಾಹೀ ಲಾಗೇ ಕರಣೇ। ಕಿಂವಾ ನಾಹೀ ॥೧೫॥

ಕರಣೇ ಲಾಗೇ ಭೋಜನ । ಕರಣೇ ಲಾಗೇ ಉದಕ ಪ್ರಾಶನ ।
ಮಳಮೂತ್ರತ್ಯಾಗ ಲಕ್ಷಣ । ತೇಹಿ ಸುಟೇನಾ ॥೧೬॥

ಜನಾಚೇ ಸಮಾಧಾನ ರಾಹಾವೇ । ಆಪುಲೇ ಪಾರಿಖೇ ವೊಳಖಾವೇ ।
ಆಣಿ ಭಜನ ಚಿ ಮೋಡಾವೇ। ಹೇ ಕೋಣ ಜ್ಞಾನ ॥೧೭॥

ಜ್ಞಾನ ವಿವೇಕೇ ಮಿಥ್ಯಾ ಜಾಲೇ । ಪರಂತು ಅವಘೇ ನಾಹೀ ಟಾಕಿಲೆ ।
ತರೀ ಮಗ ಭಜನೇಚಿ ಕಾಯ ಕೇಲೆ । ಸಾಂಗ ಬಾಪಾ ॥೧೮॥

ಸಾಹೇಬಾಸ ಲೋಟಾಂಗಣೇ ಜಾವೆ । ನೀಚಾಸಾರಿಖೇ ವ್ಹಾವೆ ।
ಆಣಿ ದೇವಾಸ ನ ಮನಾವೆ । ಹೇ ಕೋಣ ಜ್ಞಾನ ॥೧೯॥

ಹರಿಹರ ಬ್ರಹ್ಮಾದಿಕ । ಹೇ ಜಯಾಚೆ ಆಜ್ಞಾಧಾರಕ ।
ತೂ ಯೇಕ ಮಾನವೀ ರಂಕ । ಭಜೇಸಿನಾ ತರೀ ಕಾಯ ಗೇಲೇ ॥೨೦॥

ಆಮುಚೆ ಕುಳೀ ರಘುನಾಥ । ರಘುನಾಥೇ ಆಮುಚಾ ಪರಮಾರ್ಥ ।
ಜೋ ಸಮರ್ಥಾಚಾ ಹಿ ಸಮರ್ಥ । ದೇವಾ ಸೋಡ ಮಿತಾ ॥೨೧॥

ತ್ಯಾಚೆ ಆಮ್ಹೀ ಸೇವಕ ಜನ । ಸೇವೇಕರಿತಾ ಜಾಲೇ ಜ್ಞಾನ ।
ತೇಥೇ ಅಭಾವ ಧರಿತಾ ಪತನ । ಪಾವಿಜೇಲ ಕೀ ॥೨೨॥

ಈಗ ಈ ಸಂಪೂರ್ಣ ಆಕ್ಷೇಪಗಳಿಗೆ ಶ್ರೀ ಸಮರ್ಥರು ಉತ್ತರ ಕೊಡುತ್ತಾರೆ. ವಕ್ತಾ ಉತ್ತರ ಕೊಡುವನು. ಇಲ್ಲಿ ಕೇಳು ಆತ್ಮಜ್ಞಾನದ ಲಕ್ಷಣಗಳನ್ನು ಹೇಳುವೆ. ನೀನು ಲಕ್ಷ್ಯಪೂರ್ವಕ ಕೇಳು. ಹಾಗೂ ವಿಚಾರಮಾಡು ದೇಹದಿಂದ ಅಂದರೆ ಸಗುಣದಿಂದ ನೀನು ಕೆಲವೊಂದು ಕರ್ಮಗಳನ್ನು ಮಾಡಬೇಕಾಗುವದೋ ಅಥವಾ ಇಲ್ಲವೋ ಎಂಬುದನ್ನು ಹೇಳು. ಆತ್ಮಜ್ಞಾನ ಆದ ಕೂಡಲೇ ಕರ್ಮನಾಶವಾಗುತ್ತದೆ. ನಿರ್ಗುಣ ಆತ್ಮಸ್ವರೂಪ ಮಾತ್ರ ಖರೇ ಎಂದು ಸಾಕ್ಷಾತ್ ಪ್ರತ್ಯಯ (ಅನುಭವ)ವೂ ಬರುತ್ತದೆ. ಆದರೆ ಈ ಅನುಭವ ಬಂದ ಮೇಲೆ ಸಹ ಜ್ಞಾನಿ ಪುರುಷನಿಗೆ ದೇಹದ ನಿತ್ಯಕರ್ಮ ಹಾಗೂ ಪ್ರಾಥಮಿಕ ಅವಶ್ಯಕತೆ [ಗರಜ] ಮತ್ತು ದೈನಂದಿನ ಲೋಕ ವ್ಯವಹಾರಗಳೇನೂ ಬಿಟ್ಟಿದ್ದವಲ್ಲ. ಇದರ ಅರ್ಥವೇನೆಂದರೆ, ಜ್ಞಾನಿ ಪುರುಷನ ದೇಹದ ಹಾಲಚಾಲಿನಂತೆ (ವರ್ತನ) ಅಜ್ಞಾನಿ ಪುರುಷನ ದೇಹದ ಹಾಲಚಾಲ ಒಂದೇ ತರಹದ್ದಿರುವದು. ಇದರಲ್ಲಿ ಜ್ಞಾನಿ ಪುರುಷನು ಸಗುಣದ ಭಜನ ಪೂಜನ ಮಾಡಿದರೆ ಏನು ಕೆಡುತ್ತದೆ? ನಿಜವಾದ ಅಂತರವು ಅಂತರ್ಯಾಮದಲ್ಲಿ ಇರುವದು. ಜ್ಞಾನಿ ಪುರುಷ ಸಗುಣವನ್ನು ಭಜಿಸುವನು. ಆದರೆ ಅವನ ಭಜನೆಯಲ್ಲಿ ಭ್ರಮೆಯು ಲೇಶವೂ ಇರುವದಿಲ್ಲ. ಅದೇ ಅಜ್ಞಾನಿ ಪುರುಷನ ಸಗುಣ ಭಜನದಲ್ಲಿ ಕೇವಲ ಭ್ರಮೆಯೇ ತುಂಬಿರುವದು. ಭೀತಿಯಿಂದ ಅಂಜಿ ದೇವರ ಉಪಾಸನೆ ಮಾಡುವದು ಅಥವಾ ಪ್ರಪಂಚದಲ್ಲಿ ಅವನಿಂದ ಸಹಾಯವಾಗಲಿ ಎಂದು ಭಜನೆ ಮಾಡುವದು ಸರಿಯೇ? ಹೀಗೆ ಮಾಡುವದು ಭ್ರಮೆ ಅಲ್ಲವೇ ಮತ್ತೇನು? [೧೫] ನಿಮಗೆ ಊಟಮಾಡ ಬೇಕಾಗುವದು. ನೀರು ಕುಡಿಯಬೇಕಾಗಿರುವದು. ಮಲಮೂತ್ರದ ತ್ಯಾಗ (ವಿಸರ್ಜನೆ) ಮಾಡಬೇಕಾಗಿರುವದು. ಇವಾವವೂ ಬಿಟ್ಟಿದ್ದವಲ್ಲ. [೧೬] ನಮ್ಮ ಸಂಬಂಧದವರು ಚನ್ನಾಗಿರಲಿ, ಅವರ ಸಮಾಧಾನವು ಸ್ಥಿರವಿರಲಿ ಎಂದು ನಿನಗೆ ಅನಿಸುವದು. "ನಾನು ನನ್ನದು" "ನೀನು ನಿನ್ನದು" "ಇದು ನನ್ನದು" "ಇದು ಎರಡನೆಯವರದು". ಎಂಬ ಭಾವವನ್ನು ಹೊಂದಿರುವಿ (ದ್ವೈತಭಾವ)ಎಂದು ನಿನಗೆ ತಿಳಿಯುತ್ತದೆ. ಇವೆಲ್ಲವೂ ನಿನ್ನ ಜೀವನದಲ್ಲಿ ನಡೆದಿರುವವು ಕೇವಲ(ಫಕ್ತ)ಸಗುಣದ ಭಜನೆ, ಪೂಜೆ ಇವನ್ನಷ್ಟು ಮಾತ್ರ ಬಿಟ್ಟು ಬಿಡಬೇಕೆಂಬುದು ಯಾವಜ್ಞಾನವೆನಿಸೀತು?[೧೭] ಆತ್ಮಜ್ಞಾನದೊಳಗೆ ನಿರ್ಮಾಣವಾಗುವ ವಿವೇಕದಿಂದ ದೃಶ್ಯವೆಲ್ಲ (ಮಿಥ್ಯಾ) ಖೊಟ್ಟಿ ಇರುವದೆಂದು ಖಾತ್ರಿಯಿಂದ ತಿಳಿಯುವದು. ಆದರೂ ಸಹ ದೇಹವಿರುವವರೆಗೆ ದೃಶ್ಯದ ತ್ಯಾಗ ಮಾಡಲಿಕ್ಕೆ ಬರುವದಿಲ್ಲ. ಅಂದ ಮೇಲೆ ಭಜನೆ, ಪೂಜೆ ಇಷ್ಟೇ ಯಾವಪಾಪಮಾಡಿವೆ ಎಂಬುವನ್ನು ಹೇಳುವೆಯಾ?ಭಜನೆ,ಪೂಜೆ ಇಷ್ಟನ್ನೇ ಏಕೆಬಿಟ್ಟುಬಿಡುವಿ.[೧೮] ಸಾಹೇಬರಿಗೆ [ಅಧಿಕಾರಿಗೆ] ಅಥವಾ ಮಾಲಕ (ಧನಿ)ನ ಮುಂದೆ ಅಡ್ಡಬೀಳುವಿ, (ಬಗ್ಗಿ ನಮಸ್ಕರಿಸುವಿ) ತೀರ ಕ್ಷುದ್ರನಾಗಿ ನರ್ತಿಸುವಿ, ಆವಾಗ ಅವೇ ಸಗುಣ ದೇವರನ್ನುಮಾತ್ರ ಮನ್ನಿಸುವದಿಲ್ಲವೆನ್ನುವದು ಎಲ್ಲಿಯಜ್ಞಾನವು?(೧೯) ಬ್ರಹ್ಮ, ವಿಷ್ಣು, ಮತ್ತು ಮಹೇಶ್ವರ ಈ ದೇವರೂ ಸಹ ಈಶ್ವರನ ಆಜ್ಞಾ ಪ್ರಕಾರ ನಡೆಯುವರು. ನಿನ್ನಂತಹ ಒಬ್ಬ ಕಃಪದಾರ್ಥ ಬಡ ಮನುಷ್ಯ ದೇವರ ಭಜನೆ, ಪೂಜೆ ಮಾಡದಿದ್ದರೆ ಇಷ್ಟರಿಂದ ಆ ದೇವರದೇನು ನಷ್ಟವಾಗುವದು?[೨೦]ಇಲ್ಲಿ **ಸ್ವತಃದ ಸಗುಣೋಪಾಸನೆಯ ಸಂದರ್ಭದ ಬಗ್ಗೆ ಹೇಳುವರು.** ನಮ್ಮ ಕುಲದ (ವಂಶದ)ದೈವತವು ಶ್ರೀರಾಮಚಂದ್ರನಿರುವನು. ಅವನ ಕೃಪೆಯಿಂದ ನನ್ನಪರಮಾರ್ಥವು ನಡೆಯುವದು. ಶ್ರೀರಾಮನು ರಾವಣನ ಬಂದೀಖಾನೆಯಿಂದ ದೇವತೆಗಳನ್ನು ಬಿಡಿಸಿದನು. ಇವನು ಸಮರ್ಥರಿಗಿಂತ ಸಮರ್ಥನಿರುವನು. ಇವನು ಸಾಮರ್ಥ್ಯರ ಸಾಮ್ರಾಟನಿರುವನು. ಇವನಷ್ಟು ಸಮರ್ಥರು ಯಾರೂ ಇಲ್ಲ. [೨೧] ಇಂಥ ರಘುವೀರನ ಸೇವಕನು ನಾನಿರುವೆ. ಇವನ ಸೇವೆ ಮಾಡಿದ್ದರಿಂದಲೇ ದೇಹಬುದ್ಧಿ ಹೋಗಿ ನನಗೆ ಆತ್ಮಜ್ಞಾನವಾಯಿತು. ಈ ನನ್ನ ಹೇಳಿಕೆಯನ್ನು ನೀನು ಸತ್ಯ (ಖರೇ) ಎಂದು ನಂಬಬೇಕು. ಆದರೆ ನೀನು ವಿಶ್ವಾಸವಿಡದಿದ್ದರೆ ನಿನ್ನ ಅಧಃಪಾತ ಆಗದೇ ಇರಲಾರದು. ಹಾಳಾಗಿ ಹೋಗುವಿಯೆಂದು ನಿಶ್ಚಿವಾಗಿ ತಿಳಿಯುವವನಾಗು. [೨೨]

ಗುರೂ ಸಾಂಗತೀ ಸಾರಾಸಾರ। ತ್ಯಾಸ ಕೈಸೇ ಮ್ಹಣಾವೇ ಅಸಾರ।
ತುಜ ಕಾಯ ಸಾಂಗಣೇ ವಿಚಾರ। ಶಾಹಾಣೇ ಜಾಣತೀ ॥೨೩॥

ಸಮರ್ಥಾಚಿ ಮನೀಚೇ ತುಟಿ। ತೇ ಚಿ ಜಾಣಾವೇ ಅದೃಷ್ಟ ಖೋಟೇ।
ರಾಜ್ಯಪದಾಪಾಸೂನ ಕರಟೇ। ಚೇವಲೇ ಜೈಸೇ ॥೨೪॥

ಮೀ ಥೋರ ವಾಟೆ ಮನೀ। ತೋ ನವ್ಹೆ ಬ್ರಹ್ಮಜ್ಞಾನೀ।
ವಿಚಾರ ಪಾಹಾತಾ ದೇಹಾಭಿಮಾನೀ। ಪ್ರತ್ಯಕ್ಷ ದಿಸೆ ॥೨೫॥

ವಸ್ತುಭಜನ ಕರೀನಾ। ನ ಕರೀ ಐಸೇ ಹೀ ಮ್ಹಣೇನಾ।
ತರೀ ಹೆ ಜಾಣಾವೀ ಕಲ್ಪನಾ। ದಡೋನ ರಾಹಿಲೀ ॥೨೬॥

ನಾ ತೇ ಜ್ಞಾನ ನಾ ತೆ ಭಜನ। ಉಗಾ ಚಿ ಆಲಾ ದೇಹಾಭಿಮಾನ।
ಯೇಥೇ ನಾಹೀ ಕೀ ಅನುಮಾನ। ಪ್ರತ್ಯಯ ತುಝಾ ॥೨೭॥

ತರೀ ಆತಾ ಐಸೇ ನ ಕರಾವೆ। ರಘುನಾಥ ಭಜನೀ ಲಾಗಾವೆ।
ತೇಣೇ ಚಿ ಜ್ಞಾನ ಬೋಲಾವೆ। ಚಳೇನಾ ಐಸೇ ॥೨೮॥

ಕರೀ ದುರ್ಜನಾಚಾ ಸಂಹಾರ। ಭಕ್ತ ಜನಾಸೀ ಆಧಾರ।
ಐಸಾ ಹಾ ತೋ ಚಮತ್ಕಾರ। ರೋಕಡಾ ಚಾಲೇ ॥೨೯॥

ಮನೀ ಧರಾವೇ ತೇ ಹೋತೇ। ವಿಘ್ನ ಅವಘೇಚಿ ನಾಸೋನ ಜಾತೇ।
ಕೃಪಾ ಕೇಲಿಯಾ ರಘುನಾಥೇ। ಪ್ರಚೀತ ಯೇತೇ ॥೩೦॥

ಪರಮಾರ್ಥ ಇದುಅತೀಂದ್ರಿಯ ಅನುಭವದ ಪ್ರಾಂತವಾಗಿದೆ[ಪ್ರದೇಶ]. ಇದರ ಬಗ್ಗೆ ಈವರೆಗೆ ನಮ್ಮ ಗಮನಹರಿದಿಲ್ಲ. ಅಂತೆಯೇ ನಾವು ಶ್ರೀಸದ್ಗುರು ಅಥವಾ ಜ್ಞಾನಿ,ಸಂತ, ಸಾಧುಶರಣರು ಏನನ್ನುಹೇಳುವರೋ ಅದರಮೇಲೆ ಸಂಪೂರ್ಣ ವಿಶ್ವಾಸವಿಟ್ಟು ಹೇಳಿದ್ದನ್ನು ಆಸ್ಥೆಯಿಂದ ಕೇಳಿ ಅದರಂತೆ ನಡೆಯಬೇಕು. ದೇಹಬುದ್ಧಿಯಿಂದ ಇಲ್ಲದ್ದೊಂದು ವಿಕಲ್ಪ ತೆಗೆದು ಶ್ರದ್ಧೆಯನ್ನು ಭಂಗಗೊಳಿಸಬೇಡ "ನನಗೆ ತಿಳಿಯುತ್ತದೆ" ಈ ಭಾವನೆ (ಅಹಂಕಾರಯುಕ್ತವಾದ ಭಾವನೆ)ಯು ಪರಮಾರ್ಥದಲ್ಲಿ ಅತಿಶಯ ಬಾಧಕವೆನಿಸುವದು. ಇದು ಸಾಧಕನನ್ನು ಅಧಃಪಾತಕ್ಕಿಳಿಸುವದು. ಇದರಿಂದ ಇತ್ತ ಸರಿಯಾದ ಜ್ಞಾನವೂ ಇಲ್ಲ, ಅತ್ತ ಸರಿಯಾದ ಭಕ್ತಿಯೂ ಇಲ್ಲ. ಕೇವಲ ದೇಹಾಭಿಮಾನದ ಗುರುತು ಮಾತ್ರ ಇರುವದು. ಜಾಣರಾದವರು ಇದರ ಆಧೀನರಾಗಬಾರದು. ಸದ್ಗುರುವು ಸಾರಾಸಾರ ವಿಚಾರದಿಂದ, ಸಾರ ಯಾವುದು? ಮತ್ತು ಅಸಾರ ಯಾವುದು? ಇದನ್ನು ಸ್ಪಷ್ಟವಾಗಿ ಹೇಳುವೆನು. ಇಂಥ ಸದ್ಗುರುವಿನ ಹೇಳಿಕೆಗೆ ಅಸಾರವೆಂದು ಅನ್ನುವದು ತೀರ ಅಯೋಗ್ಯವು. ನೀನು ಅಯೋಗ್ಯ ಮತ್ತು ಅಜ್ಞಾನಿ ಹಾಗೂ ವಿಕಲ್ಪಿಯಾಗಿರುವಿ. ಆದ್ದರಿಂದ ನನ್ನ ಈ ಹೇಳಿಕೆಯು ನಿನಗೆ ಒಪ್ಪಿಗೆಯಾಗಲೊಲ್ಲದು. ಅಂತೂ ನಿನಗೆ ಹೇಳುವದರಲ್ಲಿ ವಿಶೇಷ ಅರ್ಥವಿಲ್ಲ. [ಡಬ್ಬ ಹಾಕಿದ ಕೊಡದ ಮೇಲೆ ನೀರು ಸುರುವಿದಂತೆ ವ್ಯರ್ಥ]. ವಿಚಾರವಂತ ಜಾಣರು ಮಾತ್ರ ನನ್ನ ಈ ಮಾತುಗಳನ್ನು ತಿಳಿದುಕೊಳ್ಳಬಲ್ಲರು. [೨೩] ದೊಡ್ಡವರು, ತಿಳಿದವರು,ಮತ್ತು ಜ್ಞಾನೀ ಪುರುಷರ ಮನದೊಳಗಿಂದ ಹೊರಬೀಳು ವದೆಂದರೆ [ಸಂಶಯ ಉಳ್ಳವರಾಗಿ ಅವರಿಂದ ದೂರಾಗುವದೆಂದರೆ] ನಮ್ಮ ದುರ್ದೈವದ ಮಾತೇ ಸರಿ. ರಾಜ್ಯ ಪದಕ್ಕೆ ವಾರಸ [ಹಕ್ಕು]ದಾರ ಇರುವ ರಾಜಪುತ್ರನೊಬ್ಬನು ತನ್ನ ದುರಾಚಾರದಿಂದ (ಬುದ್ಧಿವಂತರ ಮಾತು ಕೇಳದ್ದರಿಂದ) ತನ್ನ ಹಕ್ಕನ್ನು ಕಳೆದುಕೊಂಡು ಕೂಡ್ರುವನು. ಇದು ತಿಳಿದೂತಿಳಿದೂ ತಂದುಕೊಂಡ ದುರ್ದೈವವೆಂದು ತಿಳಿಯಬೇಕು. ಇದರಂತೆಯೇ ದೊಡ್ಡವರ [ಸತ್ಪುರುಷರ] ಮನಸ್ಸಿನಿಂದ ದೂರಾಗುವ ತಿಳಿಗೇಡಿಯ ಅವಸ್ಥೆಯೂ ಹೀಗೆಯೇ ಆಗುವದು. [೨೪] "ನಾನು ದೊಡ್ಡವನು" "ನಾನು ಜ್ಞಾನಿಯು" ಹೀಗೆ ಯಾರಿಗೆ ಅನಿಸುವದೋ ಅಂಥವನು ಖರೇ ಆತ್ಮಜ್ಞಾನಿಯಲ್ಲ. ಇವನ ಇರುವಿಕೆಯ ಸೂಕ್ಷ್ಮ ನಿರೀಕ್ಷಣ ಮಾಡಿದ್ದಾದರೆ ಇವನು ಜ್ಞಾನಿಯಲ್ಲ. ಕೇವಲ ದೇಹಾಭಿಮಾನಿ ಇರುವನೆಂದು ಖಾತ್ರಿಯಿಂದ ಕಂಡು ಬರುವದು. [೨೫] ತಿಳಿಯಿರಿ, ಒಬ್ಬ ಮನುಷ್ಯನು ಆತ್ಮಸ್ವರೂಪದ ಅನುಸಂಧಾನ ಇಡುವದಿಲ್ಲ ಮತ್ತು ಇಟ್ಟಿಲ್ಲವೆಂದೂ ಅನ್ನುವದಿಲ್ಲ. ಇಂಥ ಸ್ಥಿತಿ ಎಲ್ಲಿ ಇರುವದೋ ಅಲ್ಲಿ ದೇಹಾಭಿಮಾನದ ಕಲ್ಪನೆಯು ಅವನ ಅಂತರ್ಯಾಮದಲ್ಲಿ ಗುಪ್ತ ರೀತಿಯಿಂದ ವಾಸಮಾಡುತ್ತದೆಂದು ಖಾತ್ರಿ ಪೂರ್ವಕ ತಿಳಿಯಿರಿ. [೨೬] ಇಂಥ ಜನರಲ್ಲಿ ದೃಢ (ಪೂರ್ಣ) ಆತ್ಮ ಜ್ಞಾನವಿಲ್ಲ. ಅಥವಾ ದೃಢ (ಪೂರ್ಣ) ಸಗುಣದ ಭಕ್ತಿ, ಭಜನೆಯೂ ಇಲ್ಲ. ಇದು ತೇಲನಹೀ ತೂಪನಹೀ ಎಂಬಂತೆ ಆಗುವದು. ಇಂಥವರಲ್ಲಿ ಕೇವಲ ದೇಹಾಭಿಮಾನ ಮಾತ್ರ ಖಾತ್ರಿಯಿಂದ ಇರುವದೆಂದು ತಿಳಿಯಬೇಕು. ಈ ಬಗ್ಗೆ ಕಲ್ಪನಾ ಮಾಡುವ ಅವಶ್ಯಕತೆಯೇ ಇರುವದಿಲ್ಲ. ಯಾಕಂದರೆ ಈಗ ನಿನ್ನದೇ ಪ್ರತ್ಯಕ್ಷ ಅನುಭವದ ಉದಾಹರಣೆ ಇರುವದು. (೨೭) **ಈಗ ಮುಂದಿನ ಹತ್ತು ಓವಿಗಳಲ್ಲಿ ತಾವು ಸ್ವತಃ [ಶ್ರೀ ಸಮರ್ಥರು] ಶ್ರೀ ರಾಮಚಂದ್ರನ ಸಗುಣೋಪಾಸನೆಯನ್ನು ಹೇಗೆ ಮಾಡಿದರು, ಮತ್ತು ಇದರಿಂದ ತಮಗೆ ಯಾವ ಅನುಭವ ಬಂದಿತು. ಇದರ ಅಗದೀ ಸ್ಪಷ್ಟ ಮತ್ತು ನಿಶ್ಚಿತ ವರ್ಣನೆಯನ್ನು ಶ್ರೀ ಸಮರ್ಥರು ಮಾಡುತ್ತಿದ್ದಾರೆ:**— ಇರಲಿ, ನೀನು ಇನ್ನು ಮುಂದೆ ಹೀಗೆ ವರ್ತಿಸ ಬೇಡ. ಶ್ರೀ ರಾಮಚಂದ್ರನ ಉಪಾಸನೆಗೆ ಆರಂಭ ಮಾಡಬೇಕು. ಸಗುಣದ ಉಪಾಸನೆಯೊಳಗಿಂದಲೇ ಅತ್ಯಂತ ಸತ್ಯ ಹಾಗೂ ಶಾಶ್ವತ ಆತ್ಮಜ್ಞಾನವು ಪ್ರಾಪ್ತವಾಗುವದು. ಇದರಿಂದ ನಿನಗೆ ಅನುಭವದ ಆತ್ಮಜ್ಞಾನದ ಬಗ್ಗೆ ಮಾತನಾ ಡುವ ಅಧಿಕಾರ ಬರುವದು. [೨೮] ಸಗುಣ ಈಶ್ವರ ದುರ್ಜನರ ಸಂಹಾರ ಮಾಡುವನು. ಮತ್ತು ತನ್ನ ಭಕ್ತರನ್ನು ಸಂಭಾಳಿಸುವನು. ಇದು ಅವನ (ಶ್ರೀರಾಮನ) ಚಮತ್ಕಾರ, ಕೌಶಲ್ಯ, ಆಶ್ಚರ್ಯಕರವೂ ಇರುವದು. ಅನುಭವ ಬಂದವರಿಗೆ ಮತ್ತು ಯೋಗ್ಯರಾದ ಎಲ್ಲರಿಗೂ ಹೊಳೆಯುವ ಮಾತಾಗಿದೆ. [೨೯] ನಾವು ಮನದಲ್ಲಿ ಯಾವ ಸಂಕಲ್ಪ ಮಾಡಿಕೊಂಡಿರುವೆವೋ ಅದು ಪ್ರಾಪ್ತವಾಗುವದು. ಎಲ್ಲ ವಿಘ್ನಗಳೂ ತಮ್ಮಷ್ಟಕ್ಕೆ ತಾವೇ ದೂರಾಗುವವು. ರಘು ನಾಥನು ಕೃಪೆ ಮಾಡಿದನೆಂದರೆ, ಹೀಗೆ ನಿಮಗೇ ಪ್ರತ್ಯಕ್ಷ ಅನುಭವ ಬರುವದು. (೩೦)

ರಘುನಾಥ ಭಜನೇ ಜ್ಞಾನ ಜಾಲೇ। ರಘುನಾಥ ಭಜನೇ ಮಹತ್ವ ವಾಢಲೇ।
ಮ್ಹಣೌನಿಯಾ ತುವಾ ಕೇಲೇ। ಪಾಹಿಜೆ ಆಧೀ ॥೩೧॥

ಹೇ ತೋ ಆಹೆ ಸಪ್ರಚಿತ। ಆಣೀ ತುಜ ವಾಟೇನಾ ಪ್ರಚಿತ।
ಸಾಕ್ಷಾತ್ಕಾರೇ ನೇಮಸ್ತ। ಪ್ರತ್ಯಯೋ ಕರಾವಾ ॥೩೨॥

ರಘುನಾಥ ಸ್ಮರೋನಿ ಕಾರ್ಯ ಕರಾವೇ। ತೇ ತತ್ಕಾಳ ಚಿ ಸಿದ್ಧೀ ಪಾವೇ।
ಕರ್ತಾ ರಾಮು ಹೇ ಅಸಾವೆ। ಅಭ್ಯಾಂತರೀ ॥೩೩॥

ಕರ್ತಾ ರಾಮು ಮೀ ನವ್ಹೆ ಆಪಣ। ಐಸೇ ಸಗುಣ ನಿವೇದನ।
ನಿರ್ಗುಣೀ ತೇ ಅನನ್ಯ। ನಿರ್ಗುಣಚಿ ಹೋಇಜೆ ॥೩೪॥

ಮೀ ಕರ್ತಾ ಐಸೇ ಮ್ಹಣತಾ। ಕಾಹೀಚ ಘಡೇನಾ ಸರ್ವಥಾ।
ಪ್ರಚೀತ ಪಾಹಾಸೀ ತರೀ ಆತಾ। ಸೀಘ್ರಚಿ ಪಾಹೇ ॥೩೫॥

ಮೀ ಕರ್ತಾ ಐಸೇ ಮ್ಹಣಸೀ। ತೇಣೇ ತೂ ಕಷ್ಟೀ ಹೋಸೀ।
ರಾಮು ಕರ್ತಾ ಮ್ಹಣತಾ ಪಾವಸೀ। ಯೆಶ ಕೀರ್ತಿ ಪ್ರತಾಪ ॥೩೬॥

ಯೇಕೇ ಭಾವನೇಸಾಠೀ। ದೇವಾಸೀ ಪಡೆ ತುಟೀ।
ಕಾ ತೇ ಹೋಯೆ ಕೃಪಾದೃಷ್ಟೀ। ದೇವ ಕರ್ತಾ ಭಾವಿತಾ ॥೩೭॥

ಶ್ರೀ ರಾಮಚಂದ್ರನ ಉಪಾಸನೆಯನ್ನು ಮಾಡಿದ್ದರಿಂದ ನನಗೆ ಆತ್ಮಜ್ಞಾನವಾಯಿತು. ಇವನ ಉಪಾಸನೆಯನ್ನು ಮಾಡಿದ್ದರಿಂದ ನನ್ನ ಮಹತ್ವ ಹೆಚ್ಚಾಯಿತು. ಇದು ನನ್ನ ಸ್ವಂತ ಅನುಭವವಿದೆ. ಆದ್ದರಿಂದಲೇ ನಿನಗೆ ಹೇಳುವೆ. ನೀನು ಮೊದಲು ಸಗುಣದ ಉಪಾಸನೆಯನ್ನು ಮಾಡು. [೩೧] ಸಗುಣೋಪಾಸನೆಯನ್ನು ಮಾಡಿದ್ದರಿಂದಲೇ ನನಗೆ ಆತ್ಮಜ್ಞಾನವಾಗಿರುವದು. ಇದು ನನ್ನ ಸ್ವಂತದ ಅನುಭವವಿರುವದು. ನಿನಗೆ ಇದು ಈ ಅನುಭವ ಒಂದು ವೇಳೆ ಖರೇ ಅನಿಸಲಿಕ್ಕಿಲ್ಲ. ಆದರೆ ನೀನು ಗೊಳ್ಳುವಿಚಾರ ನಿರರ್ಥಕ ವಿಚಾರ ಬಿಟ್ಟು ಸ್ವತಃ ಸಗುಣ ಉಪಾಸನೆ ಮಾಡು. ಮನಃಪೂರ್ವಕ ಮಾಡು ಅಂದರೆ ಖಾತ್ರಿಯಿಂದ ಆತ್ಮಜ್ಞಾನದ ಅನುಭವಾಮೃತವನ್ನು ಪಡೆಯುವಿ. ಈ ರೀತಿಯಿಂದ ಆತ್ಮಸಾಕ್ಷಾತ್ಕಾರವಾದ ಮೇಲೆ ನನ್ನ ಹೇಳಿಕೆ ನಿನಗೆ ಖರೇ ಅನಿಸುವದು. [೩೨] ಶ್ರೀ ರಾಮರಾಯನ ಸ್ಮರಣೆ ಮಾಡಿ ಯಾವ ಕಾರ್ಯ ಪ್ರಾರಂಭಿಸಿದರೂ ಅದು ತ್ವರಿತ ಹಾಗೂ ಸುಲಭವಾಗಿ ನೆರವೇರುವದು. ಇದೂ ಸಹ ನನ್ನ ಸ್ವತಃದ ಅನುಭವವೇ ಇರುವದು. ನನ್ನ ನಿಶ್ಚಿತ ಮತವೇನಂದರೆ **"ಕರ್ತಾ ರಾಮನಿರುವನು"** ಈ ಅನುಸಂಧಾನವನ್ನು ನಿರಂತರವಾಗಿ ಅಂತರ್ಯಾಮದಲ್ಲಿ ಸಂಭಾಳಿಸು. ವಾಸ್ತವಿಕವಾಗಿ ಜಗದೊಳಗಿನ ಎಲ್ಲ ಘಟನೆಗಳೂ ಈಶ್ವರನ ಸತ್ತೆಯಿಂದಲೇ ಘಟಿಸುವವು. ದೇಹಬುದ್ಧಿಯಿಂದ ಅವನ [ಈಶ್ವರನ] ಅಧಿಕಾರವನ್ನು [ಹಿರಿಯತನವನ್ನು] ನಾವು ನಮ್ಮ ಕಡೆಗೆ ತೆಗೆದುಕೊಂಡಿದ್ದೇವೆ. ಆ ಅಧಿಕಾರ [ಹಿರಿಯತನ] ಯಾರದಿರುವದೋ ಅವರಿಗೆ ಒಪ್ಪಿಸಿ ಬಿಡುವದೇ ಸಗುಣೋಪಾಸನೆಯ ಬೀಜ ಮಂತ್ರವಾಗಿದೆ. ಯಾವುದೇ ಕೆಲಸ ಕಾರ್ಯದ ಹಿರಿಯತನವನ್ನು ಯಾರು ಅಗದೀ ಮನಃಪೂರ್ವಕವಾಗಿ ಭಗವಂತನಿಗೆ ಒಪ್ಪಿಸುವರೋ ಅಂಥವರ ಜೀವನದಲ್ಲಿ ಈಶ್ವರೀ ಸತ್ತಾದಿಂದ ಕಲ್ಪನಾತೀತವಾಗಿ ಅನೇಕ ಸಂಗತಿಗಳು ಒದಗಿಬಂದವೆಂಬುದು ಸತ್ಯಸಂಗತಿಯಾಗಿವೆ. ಇದು ನನ್ನಸ್ವತಃದ ಅನುಭವವೂಹೌದು. ಈ ಅನುಭವದ ಉಲ್ಲೇಖವನ್ನು ಶ್ರೀ ಸಮರ್ಥರು ಈ ಓವಿಯಲ್ಲಿ ಮಾಡುವರು. [೩೩] ರಾಮನು ಕರ್ತಾ, ನಾನು ಕರ್ತಾ ಅಲ್ಲ ಹೀಗೆ ದೃಢಭಾವದಿಂದ ಇರುವದೇ ಸಗುಣ ನಿವೇದನವು, ನಿರ್ಗುಣದಲ್ಲಿ ನಿರ್ಗುಣದೊಂದಿಗೆ ಸಾಧಕನು ಏಕರೂಪಹೊಂದಿ ನಿರ್ಗುಣವೇ ಆಗಿಬಿಡುವನು. ಸಗುಣ-ನಿರ್ಗುಣ ಉಪಾಸನೆಯ ಸೂಕ್ಷ್ಮಭೇದವನ್ನು ಶ್ರೀಸಮರ್ಥರು ಇಲ್ಲಿ ತಿಳಿಸಿಹೇಳುತ್ತಾರೆ. ದೇಹಬುದ್ಧಿ ನೀಗಿದ ಮನುಷ್ಯನು, ಜ್ಞಾನಮಾರ್ಗದ ಅಧಿಕಾರಿ ಎನಿಸುವನು. ಅಂತರ್ಯಾಮದಲ್ಲಿ ನಿರ್ಗುಣ ಆತ್ಮಸ್ವರೂಪದ ಅನುಸಂಧಾನವನ್ನು ಹೊಂದಿ ಅದನ್ನು ಕಾಪಾಡಿಕೊಂಡು ಅದು ಸಿದ್ಧಿಸಿದಾಗಲೇ ಅವನು ಸ್ವಸ್ವರೂಪದೊಂದಿಗೆ ಸಮರಸನಾಗಿ ಹೋಗುವವನು. ಸಗುಣ ಮತ್ತು ನಿರ್ಗುಣ ನಿವೇದನ ಎರಡರಲ್ಲಿಯೂ ಅಹಂಕಾರದ ನಾಶವಾಗಿ ಹೋಗುತ್ತದೆ. ದೇಹಬುದ್ಧಿ ಇದ್ದಂಥ ಮನುಷ್ಯನು ಉಪಾಸನೆಯ ಅಧಿಕಾರಿ ಇರುವನು. "ಕರ್ತಾ ಈಶ್ವರನಿರುವನು" ಈ ದೃಢಭಾವದಿಂದಲೇ ಜೀವನದಲ್ಲಿಯ ಎಲ್ಲ ಕರ್ಮಗಳನ್ನು ಮಾಡುತ್ತ ಹೋದರೆ ಇದರ ವಾಸನಾ ಕ್ಷೀಣವಾಗುತ್ತ ಹೋಗುವದು. ಹಾಗೂ ಮನಸ್ಸು ತನ್ನಿಂದ ತಾನೇ ಅಂತರ್ಮುಖ ಹೊಂದುವದು. ಮತ್ತು ನಾವು ಭಗವಂತನ ಕೈಯಲ್ಲಿಯ ಗೊಂಬೆಗಳಿರುವೆವೆಂಬ ದೃಢಶ್ರದ್ಧೆ ಹೊಂದಿದವರು ನಾವಾಗಿರುವದರಿಂದ ವಿಶ್ವದಲ್ಲಿಯ ಈಶ್ವರ ಶಕ್ತಿಯು ಇವನ ಕಡೆಯಿಂದ ದೊಡ್ಡಕಾರ್ಯ ಮಾಡಿಸುತ್ತದೆ. [೩೪] "ನಾನು ಕರ್ತಾ ಇರುವೆ" ಈ ಭಾವನೆಯಿಂದ ಹಿರಿಯತನವನ್ನು ಸ್ವತಃ ತನ್ನ ಕಡೆಗೆ ತೆಗೆದುಕೊಂಡು ಕಾರ್ಯ [ಕರ್ಮ] ಮಾಡಿದ್ದಾದರೆ ನಮ್ಮ ಮನಪಸಂತ [ಮನಸ್ಸಿಗೆ ಸಮಾಧಾನ] ವಾಗುವದಿಲ್ಲ. ಯಾಕೆಂದರೆ ನಾನು ಕರ್ತಾ ಅನ್ನುವ ಅಭಿಮಾನ ಇರುವದರಿಂದ ನಿಜವಾದ ಸಮಾಧಾನದ ಕೆಲಸ ಕಾರ್ಯವಾಗುವದಿಲ್ಲ. ಇದರ ಅನುಭವ ಪಡೆಯಬೇಕಾದರೆ ನಮ್ಮ ಜೀವನದಲ್ಲಿಯೇ ಇದನ್ನು ನೋಡಲಿಕ್ಕೆ ಬರುತ್ತದೆ. [೩೫] "ನಾನು ಕರ್ತಾ ಇರುವೆನು" ಈ ಭಾವನೆಯಿಂದ, ಹೇಗೆ ಆದೀತು? ಏನು ಆದೀತು? ಎಂಬ ಕಾಳಜಿ ಹತ್ತುವದು. ಹಾಗೂ ಇದರಿಂದ ಮನಸ್ಸು ಖಿನ್ನ ಮತ್ತು ಉದಾಸೀನವಾಗುವದು. ಆದರೆ ಇದರ ಉಲಟ "ಈಶ್ವರ ಕರ್ತಾ ಇರುವನು" ಈ ಭಾವನೆಯಿಂದ ಅನಂತ ಈಶ್ವರ ಶಕ್ತಿಯೊಂದಿಗೆ ನಾವು ಸಮರಸವಾಗಿ (ಸಾಮರಸ್ಯವಾಗಿ) ಮತ್ತು ನಮ್ಮ ಕರ್ಮ [ಕಾರ್ಯ]ದಲ್ಲಿ ಹೆಚ್ಚಿನ ತೇಜ [ಶಕ್ತಿ] ಉತ್ಪನ್ನವಾಗಿ ಯಶ, ಕೀರ್ತಿ. ಹಾಗೂ ಪ್ರತಾಪ ಇವು ನಮ್ಮ ಉಡಿಯಲ್ಲಿ ಬೀಳುವವು. [೩೬] "ನಾನು ಕರ್ತಾ ಇರುವೆನು" ಈ ಭಾವನೆಯ ಮೂಲಕ ನಾವು ನಮ್ಮ ಕೈಯಲ್ಲಿದ್ದ ಭಗವಂತನನ್ನು ಕಳೆದುಕೊಂಡು ಕೂಡುವೆವು "ಆದೇ ಈಶ್ವರ ಕರ್ತಾ ಇರುವನು" ಈ ಭಾವನೆಯ ಮೂಲಕ ಭಗವಂತನು ನಮ್ಮ ಮೇಲೆ ಕೃಪೆ ಮಾಡುವನು. ಅವನ ಕೃಪಾ ದೃಷ್ಟಿ ಸದಾ ನಮ್ಮ ಮೇಲೆ ಇರುವದು. [೩೭]

ಆಪಣ ಆಹೆ ದೋ ದಿಸಾಂಚಾ । ಆಣೀ ದೇವ ಬಹುತಾ ಕಾಳಾಚಾ ।
ಆಪಣ ಥೋಡೆ ಮೊಳ ಖಿಚಾ । ದೇವಾಸಿ ತ್ರೈಲೋಕ್ಯ ಜಾಣೇ ॥೩೮॥
ಯಾಕಾರಣೇ ರಘುನಾಥ ಭಜನ । ತ್ಯಾಸಿ ಮಾನಿತೀ ಬಹುತ ಜನ ।
ಬ್ರಹ್ಮಾದಿಕ ಆದಿಕರೂನ । ರಾಮ ಭಜನೀ ತತ್ಪರ ॥೩೯॥
ಜ್ಞಾನಬಳೇ ಉಪಾಸನಾ । ಆಮ್ಹೀ ಭಕ್ತ ಜರೀ ಮಾನೂ ನಾ ।
ತರೀ ಯಾ ದೋಷಾಚ್ಯಾ ಪತನಾ । ಪಾವೋ ಅಭಕ್ತಪಣೇ ॥೪೦॥
ದೇವ ಉಪೇಕ್ಷೀ ಥೋರಪಣೇ । ತರೀ ಮಗ ತ್ಯಾಚೇ ತೋ ಜಾಣೇ ।
ಅಪ್ರಮಾಣ ತೇ ಶ್ಲಾಘ್ಯ ನಾಣೇ । ನಷ್ಟ ಕಿ ಶ್ರೇಷ್ಠ ॥೪೧॥
ದೇಹಾಸ ಲಾಗಲೀ ಉಪಾಸನಾ । ಆಪಣ ವಿವೇಕೇ ಉರೇನಾ ।
ಐಸೀ ಸ್ಥಿತಿ ಸಜ್ಜನಾ । ಅಂತರೀಚೀ ॥೪೨॥
ಸಕಳ ಮಿಥ್ಯಾ ಹೋಊನ ಜಾತೇ । ಹೇ ರಾಮ ಭಜನೇ ಕಳೋ ಯೇತೇ ।
ದೃಶ್ಯ ಜ್ಞಾನಿಯಾಂಚೆನಿ ಮತೇ । ಸ್ವಪ್ನ ಜೈಸೇ ॥೪೩॥
ಮಿಥ್ಯಾ ಸ್ವಪ್ನ ವಿವಂಚನಾ । ತೈಸೀ ಸೃಷ್ಟೀಚೀ ರಚನಾ ।
ದೃಶ್ಯ ಮಿಥ್ಯಾ ಸಾಧು ಜನಾ । ಕಳೋ ಆಲೇ ॥೪೪॥
ಆಕ್ಷೇಪ ಜಾಲಾ ಶ್ರೋತಯಾಸೀ । ಮಿಥ್ಯಾ ತರೀ ಕಾ ದಿಸತೇ ಆಮ್ಹಾಸೀ ।
ಯಾಚೇ ಉತ್ತರ ಪುಢಿಲೆ ಸಮಾಸೀ । ಬೋಲಿಲೇ ಅಸೇ ॥೪೫॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ಸಗುಣ ಭಜನ' ನಾಮ ಸಮಾಸ ಸಪ್ತಮ ॥

ಭಗವಂತ ಶಾಶ್ವತನಿರುವನು ಅರ್ಥಾತ್ ಅವನ ದೃಷ್ಟಿಯಿಂದನಮ್ಮ ಜೀವನ ಎಷ್ಟೊಂದುಸಣ್ಣದಿರುವದು. ಇದರಂತೆಯೇ ಭಗವಂತನ ಪ್ರಚಾರ ಎಷ್ಟೊಂದು ದೊಡ್ಡದಿದೆ. ಇದರ ಮಾನದಿಂದ ನಮ್ಮದು ಎಳ್ಳಷ್ಟೂ ಇಲ್ಲ. ಆದ್ದರಿಂದ ಜ್ಞಾನಿಯಾದರೂ ಸಹ ಅವನು ಉಪಾಸನೆಯನ್ನು ಬಿಡಬಾರದು. ನಿಜವಾಗಿ ಹೇಳಬೇಕೆಂದರೆ, ಉಪಾಸನೆಯಿಂದ ದೃಶ್ಯದ ಮಿಥ್ಯತ್ವವು ಸದಾ ಲಕ್ಷ್ಯಕ್ಕೆ ಬರುವದು. ಮತ್ತು ನಮ್ಮ ದೇಹ ಬುದ್ಧಿ ನಾಶವಾಗುವದು. (ಸತ್ತು ಹೋಗುವದು). ಅಂತೆಯೇ ದೇಹಕ್ಕೆ ಉಪಾಸನೆಯನ್ನು ಹಚ್ಚಬೇಕು. ಹಾಗೂ ವಿವೇಕದಿಂದ ನಾನು ಎಂಬುದನ್ನು ಹೊಡೆದು ಹಾಕಬೇಕು. ಅಂದರೆ ಖರೇ ಆತ್ಮಜ್ಞಾನದ ಉದಯವಾಗುವದು. ಈ ಜಗ (ವಿಶ್ವ)ದಲ್ಲಿ ಬಾಳುವ ನಮ್ಮ ಜೀವನದ ಕಾಲ ಅಲ್ಪವಿರುವದು. ಆದರೆ ಇದರ ಉಲಟ ಭಗವಂತನ ಇರುವಿಕೆಯು ಕಾಲಕ್ಕೆ ಗಣನೆ (ಅಂತ) ಇಲ್ಲ. ನಮ್ಮನ್ನು ಗುರುತಿಸುವ ಜನ ಅಲ್ಪ ಸ್ವಲ್ಪು ಇರುವರು. ಆನೇ ಇದರ ಉಲಟಾ ಇಡೀ ತ್ರೈಲೋಕ್ಯದವರೆಲ್ಲರೂ ಭಗವಂತನನ್ನು ಗುರುತಿಸುತ್ತಾರೆ. (೩೮) ಆದ್ದರಿಂದ ಸರ್ವಶ್ರೇಷ್ಠನಾದ ಭಗವಂತನ ಉಪಾಸನಾ ಮಾಡಬೇಕು. ಯಾರು ಭಗವಂತನ ಉಪಾಸನೆ ಮಾಡುವರೋ ಅಂಥವರನ್ನು ಬಹು ಜನರು ಮಾನ ಮರ್ಯಾದೆಯಿಂದ, ಗೌರವದಿಂದ ಕಾಣುವರು. ಬ್ರಹ್ಮಾದಿಕ ದೇವರೆಲ್ಲ ಈಶ್ವರನ ಉಪಾಸನೆಯಲ್ಲಿ ಮನಃಪೂರ್ವಕ ಮಗ್ನರಾಗಿರುವರು. ನಿಜವಾಗಿಯೂ ಅಪಾಥವ್ಯವಾಗಿರುವ ಈ ವಿಶ್ವದಲ್ಲಿ ಭಗವಂತನ ಶಕ್ತಿಯು ಕೆಲಸ ಮಾಡುತ್ತದೆ. ಇಂಥ ಪ್ರಚಂಡ ಶಕ್ತಿಯ ಕೃಪೆಯಿಂದ ನಾವು ಜೀವಿಸುವೆವು. ಕರ್ಮ ಮಾಡುವೆವು. ಭೋಗಗಳನ್ನು ಭೋಗಿಸುವೆವು ಮತ್ತು ನಮ್ಮ ಧ್ಯೇಯಗಳನ್ನು ಸಾಧಿಸಿಕೊಳ್ಳುವೆವು. ಈ ಎಲ್ಲ ವಿಷಯಗಳನ್ನು ಲಕ್ಷದಲ್ಲಿಟ್ಟುಕೊಂಡು ಜೀವನವನ್ನು ಕಳೆಯುವದೇ ಉಪಾಸನೆಯ ಮರ್ಮವಿರುವದು. (೩೯) ಶ್ರೀಸಮರ್ಥರು ಕಳಕಳಿಯಿಂದ ಅನ್ನುವದೇನೆಂದರೆ, ನಾವು ಭಕ್ತರಿರುವೆವು.ನಮಗೆ ಆತ್ಮಜ್ಞಾನವೂ ಆಗಿರುವದು.ಆದರೆ ಆ ಜ್ಞಾನದ ಬಲದಿಂದ ನಾವು ಒಂದು ವೇಳೆ ಉಪಾಸನೆಯನ್ನು ಅನಾದರ ಮಾಡಿದರೆ ಮತ್ತು ಬಿಟ್ಟು ಬಿಟ್ಟರೆ ಆಗ ಅಭಕ್ತತನದಿಂದ ನಮ್ಮ ಜೀವನದಲ್ಲಿ ದೋಷ ನಿರ್ಮಾಣವಾಗಬಹುದು. ಆದ್ದರಿಂದ ದೇಹಕ್ಕೆ ಉಪಾಸನೆ ಬೇಕೇಬೇಕು. (೪೦) "ನಾನು ಜ್ಞಾನಿ ಇರುವೆ" ಎಂಬದೊಡ್ಡಸ್ತನದ ದುರಭಿಮಾನದಿಂದ ಉನ್ಮತ್ತ (ಉರ್ಮಟ)ರಾಗಿ ಯಾರಾದರೂ ಈಶ್ವರನ ಉಪಾಸನೆಯನ್ನು ತುಚ್ಛೀಕರಿಸಿದರೆ ಅದರ (ಫಲಭೋಗದ) ಪರಿಣಾಮವನ್ನು ಅಂಥವರು ಅನುಭವಿಸಲೇಬೇಕಾಗುವದು. ಇದನ್ನು ಅವರವರದನ್ನು ಅವರೇ ನೋಡಿಕೊಳ್ಳಬೇಕು. ಇಂಥದು ಸ್ವಾನುಭವದ ಉಲಟ ಇರುವದು. ಅಯೋಗ್ಯವಾದದ್ದು ಯಾವುದು ಇರುವದೋ ಅದು ಶ್ರೇಷ್ಠಪುರುಷರಿಗೆ ಎಂದೂ ಭೂಷಣವಲ್ಲ. ಶ್ರೇಷ್ಠತ್ವಕ್ಕೆ ಕಲಂಕವೇ ಸರಿ, ಸುಜ್ಞಾನಿಗೆ ಇದು ಎಂದೂ ಮಾನ್ಯವಾಗುವದಿಲ್ಲ. (೪೧) ಒಟ್ಟಿನಲ್ಲಿ ದೇಹವನ್ನು ಸಗುಣದ ಉಪಾಸನೆಯಲ್ಲಿ ತೊಡಗಿಸಿ ಇಡಬೇಕು. ವಿವೇಕ ವ ಸೂಕ್ಷ್ಮ ವಿಚಾರದಿಂದ ನಾನು ಎಂಬುದನ್ನು ಇಲ್ಲದಂತೆ ಮಾಡಬೇಕು, ನಾಶಗೊಳಿಸಬೇಕು. ಸತ್ಪುರುಷರಾದವರ ಜೀವನದಲ್ಲಿ ಒಳಗೂ ಹೊರಗೂ ಈ ಅವಸ್ಥೆ ಇರುವದು. ದೇಹದಿಂದ ಭಗವಂತನ ಭಜನೆ, ಪೂಜೆ ಇತ್ಯಾದಿ ಮತ್ತು ಮನದಿಂದ ಸ್ವಸ್ವರೂಪದ ಅನುಸಂಧಾನ, ಇದೇ ಸಾಧು, ಸಂತ, ಶರಣರ ಜೀವನದ ರಹಸ್ಯವಿರುತ್ತದೆ. (೪೨) ಭಗವಂತನ ಉಪಾಸನೆಯಿಂದ ಯಾವತ್ತೂ ದೃಶ್ಯವು ಮಿಥ್ಯಾ ಇರುವದೆಂಬ ಪ್ರಚೀತಿ (ಅನುಭವ) ಉಂಟಾಗುವದು) ಜ್ಞಾನಿ, ಸಾಧು, ಸಂತರ ಅಭಿಪ್ರಾಯವು ಈ ಯಾವತ್ತೂ ದೃಶ್ಯ ವಿಶ್ವವು ಸ್ವಪ್ನದಂತೆ ಇರುವದು. (೪೩. ಸ್ವಪ್ನದಲ್ಲಿಯ ವ್ಯವಹಾರವು ಹೇಗೆ ಸುಳ್ಳು ಇರುವದೋ [ಖೊಟ್ಟಿಯೋ] ಅದರಂತೆಯೇ ಈ ಸೃಷ್ಟಿಯ ರಚನೆಯೂ ಮಿಥ್ಯಾ ಇರುವದು. ಸಾಧು ಸತ್ಪುರುಷರಿಗೆ ದೃಶ್ಯದ ಮಿಥ್ಯತ್ವ-ಖೊಟ್ಟಿತನ ಗೊತ್ತಿರುವದು. (೪೪) ಶ್ರೋತೃವಿನ ಒಂದು ಶಂಕೆ ಹೀಗಿತ್ತು. ದೃಶ್ಯವು ಒಂದು ವೇಳೆ ಮಿಥ್ಯಾ-ಖೊಟ್ಟಿ ಇದ್ದದ್ದೇ ಆದರೆ ಅದು ನಮಗೆ ಕಾಣುವದೇಕೆ? ಈ ಪ್ರಶ್ನೆಗೆ ಉತ್ತರವನ್ನು ಮುಂದಿನ ಸಮಾಸದಲ್ಲಿ ಹೇಳಲಾಗಿದೆ. (೪೫)

ಶ್ರೀ ದಾಸಬೋಧವಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಆರನೆಯದಶಕದ "ಸಗುಣ ಭಜನ"ವೆಂಬ ಏಳನೆಯ ಸಮಾಸವು ಮುಗಿದುದು.

● ●

### ಸಮಾಸ ಅಷ್ಟಮ : ದೃಶ್ಯ ನಿರೂಪಣ

॥ಶ್ರೀರಾಮ॥ ಮಾಗಾ ಶ್ರೋತೀ ಪುಸಿಲೇ ಹೋತೇ ।
ದೃಶ್ಯ ಮಿಥ್ಯಾ ತರೀ ಕಾ ದಿಸತೇ ।
ಯಾಚೇ ಉತ್ತರ ಬೋಲಿಜೇಲ ತೇ । ಸಾವಧ ಏಕಾ ॥೧॥

ದೇಖಿಲೇ ತೇ ಸತ್ಯ ಚಿ ಮಾನಾವೇ । ಹೇ ಜ್ಞಾತ್ಯಾಚೇ ದೇಖಣೇ ನವ್ಹೇ।
ಜಡ ಮೂಢ ಅಜ್ಞಾನ ಜೀವೇ। ಹೇ ಸತ್ಯ ಮಾನಿಜೇ ॥೨॥

## ದಶಕ ೬. ಸಮಾಸ ೮. ದೃಶ್ಯ ನಿರಸನ (ನುಡಿ ೫೦)

ಪ್ರತಿಯೊಬ್ಬ ಮನುಷ್ಯನು ಕ್ಷಣಕ್ಷಣಕ್ಕೂ ಅನುಭವಗಳನ್ನು ಪಡೆಯುವನು.ಅನುಭವದ ಕ್ರಿಯೆಯಲ್ಲಿ ಎರಡುಭಾಗಗಳು ಕಂಡು ಬರುವವು. ೧) ಅನುಭವ ಪಡೆಯುವವನಿಗೆ ವಸ್ತುವು ಪ್ರತ್ಯಕ್ಷ ಕಾಣುವದು. ಇದು ಮೊದಲನೆಯ ಭಾಗವು. ೨) ಸರ್ವಸಾಮಾನ್ಯ ಜನರ ಇಂದ್ರಿಯಗಳ ರಚನೆ ಒಂದೇ ಪ್ರಕಾರದವು ಇರುವದರಿಂದ ಎಲ್ಲ ಜನರಿಗೂ ಜಗತ್ತಿನೊಳಗಿನ ವಸ್ತುಗಳು ಒಂದೇ ಪ್ರಕಾರದಲ್ಲಿ ಕಾಣುವವು. ಉದಾ:- ತನ್ನ ಹಳ್ಳಿಯನ್ನೇ ಬಿಟ್ಟು ಎಲ್ಲಿಯೂ ಹೋಗದ ರೈತನಿಗೆ ಚಂದ್ರ ಹೇಗೆ ಕಾಣುವನೋ ಅದೇ ಪ್ರಕಾರ ಪ್ರತ್ಯಕ್ಷ ಚಂದ್ರನವರೆಗೆ ಹೋಗಿ ಬಂದಂಥ ವ್ಯಕ್ತಿಗೂ ಅದು ಕಂಡಿರುವದು. ನೋಡುವವನಿಗೆ ವಸ್ತುವನ್ನು ನೋಡಿದ ಕೂಡಲೇ ಅದರ ಅರ್ಥ ಅವನಿಗೆ ತಿಳಿಯುವದು. ಇದು ಅನುಭವದೊಳಗಿನ ಎರಡನಯ ಭಾಗವು ಸಾಮಾನ್ಯವಾಗಿ ಒಂದೇ ಪ್ರಕಾರದ ಸಾಮಾಜಿಕ ವಾತಾವರಣದಲ್ಲಿ ಬೆಳೆದ ಮನುಷ್ಯನ ಮನೋರಚನೆಯು ಒಂದೇ ತರಹ (ನಮೂನೆ) ದ್ದಿರುವದು. ಆದ್ದರಿಂದಲೇ ನೂರರಲ್ಲಿ ತೊಂಭತ್ತು ಜನರಿಗೆ ಅದೇ ವಸ್ತುವಿನ ಅದೇ ಘಟನೆಯ, ಅದೇ ಅರ್ಥ ತಿಳಿಯುವದು. (ಮನುಷ್ಯರ ಮನಕ್ಕೆ ಅರ್ಥ ತಿಳಿಯುವದು)ಮನದ ರೂಪ ಹೇಗೆ ಬದಲಾಗುತ್ತ ಹೋಗುವದೋ ಆ ಪ್ರಕಾರ ಅದೇವಸ್ತುವಿನ ಅರ್ಥ ತಿಳಿಯಲು ಫರಕ (ಅಂತರ) ಆಗುವದು. ಉದಾ:- ಚಿಕ್ಕ ಹುಡುಗಿಗೆ ತಾಯಿಯ ಅರ್ಥವಾಗುತ್ತದೆ. ಆದರೆ ಆ ಹುಡುಗಿ ವಯಸ್ಸಿಗೆ ಬಂದು ಲಗ್ನವಾಗಿ ಅವಳು ಪ್ರಪಂಚ ಮಾಡಿ ಗರ್ಭಿಣಿಯಾಗಿ ಹಡೆದ ಮೇಲೆ ಅಂದರೆ ತಾನು ತಾಯಿಯಾದ ಮೇಲೆ ಅವಳು ತಾಯಿಯ ಬಗ್ಗೆ ಬೇರೆಯೇ ಅರ್ಥವನ್ನು ಹೊಂದುವಳು. ಮನಸ್ಸಿನ ಸ್ವರೂಪ ಬಹಳಷ್ಟು ಬದಲಾಯಿಸಿಬಿಟ್ಟರೆ ಆಗ ಆ ವಸ್ತುವಿನ ಬಗ್ಗೆ ತೀರ ಹೊಸ ಅರ್ಥ ತಿಳಿಯುವದು.ಅಂದ ಮೇಲೆ ಈ ಹೊಸಅರ್ಥದ ದೃಷ್ಟಿಯಿಂದ ಹಳೇ ಅರ್ಥವು ಖೊಟ್ಟಿ ಅಥವಾ ಭ್ರಮೆ, ಇಲ್ಲವೆ ಕೇವಲ ಕೇವಲ ಭಾಸ, ಭ್ರಾಂತಿಯಾಗಿತ್ತು. ಎಂದು ಅನಿಸುವದು. ಯಾವ ಮನುಷ್ಯಸಾಧನದಿಂದ ತನ್ನಮನೋರಚನೆಯನ್ನು ಆಮೂಲಾಗ್ರ ಬದಲಾಯಿಸುವನೋ ಅಂಥವನಿಗೆ ಸಂತ, ಸಾಧು ಅನ್ನುವರು. ಜಗದಲ್ಲಿಯ ವಸ್ತು ನಮಗೆ ಹೇಗೆ ಕಾಣುವದೋ ಅದೇ ರೀತಿ ಆ ವಸ್ತು ಸಂತಸಾಧುಗಳಿಗೂ ಕಾಣುವದು.ಆದರೆ ಅವರಿಗೆ ತಿಳಿದಿರುವವಸ್ತುವಿನ ಅರ್ಥಮಾತ್ರ ಪೂರ್ಣ ಬೇರೆಯೇ ಇರುವದು. ಅವನು ಸ್ವತಃ ಅಂತರ್ಯಾಮಿ ಆತ್ಮಸ್ವರೂಪನೇ ಆಗಿರುವದರಿಂದ ಸರ್ವವಿಶ್ವವು ಅವನಿಗೆ ಪರಮಾತ್ಮ ಸ್ವರೂಪವಾಗಿ ಕಾಣುವದು. ಅರ್ಥಾತ್ ಯಾವ ಪಂಚಭೂತಾತ್ಮಕ ದೃಶ್ಯವಿಶ್ವವೆಲ್ಲ ನಮಗೆ ಅಗದೀ ಖರೇ ಅನಿಸುವದೋ ಅದೇ ಸಂತ, ಸಾಧುಗಳಿಗೆ ಮಿಥ್ಯಾ ಅನಿಸುವದು. ಸಂತ, ಸಾಧು,ಸತ್ಪುರುಷರ ಸಂಗತಿಯಿಂದ ಜೀವದ ಅವಿದ್ಯೆಯುಕಡಿಮೆ ಆಗುತ್ತ ಹೋಗುವದು. ಅವಿದ್ಯೆ, ಅಜ್ಞಾನ, ಭ್ರಮೆ ಇವು ಕಡಿಮೆ ಆದಂತೆ ನಮ್ಮ ಕಲ್ಪನೆಯಲ್ಲಿ ಬದಲಾವಣೆಯಾಗುತ್ತ ಹೋಗುವದು. ಕಲ್ಪನಾ ಬದಲಾಯಿತೆಂದರೆ ಸದ್ಯಕ್ಕೆ ಕಾಣುವ ಜಗತ್ತಿನ ಸ್ವರೂಪವೂ ಬದಲಾಗುವದು. ಮತ್ತು ಆಮೇಲೆ ವಸ್ತು ಹೇಗೆ ಖರೇ ಇರುವದೋ ಅದರಂತೆಯೇ ಅನುಭವಕ್ಕೆ ಬರುವದು.

### ದಶಕ ೬. ಸಮಾಸ ೮. ದೃಶ್ಯ ನಿರಸನ (ನುಡಿ ೫೦)

ದೃಶ್ಯವು ಮಿಥ್ಯವಿದ್ದರೂ ಅದು ಕಾಣಿಸುವದೇಕೆ? ಇದು ನಿಜವಾಗಿಯೂ ವಿಚಾರ ಮಾಡಬೇಕಾದ ಪ್ರಶ್ನೆ ಇರುವದು, ಇದಕ್ಕೆ ಉತ್ತರ ಹೀಗೆ ಇರುವದು:- ಜಡ, ಮೂಢ ಮತ್ತು ಅಜ್ಞಾನಿ ಜೀವ ಇವುಗಳಿಗೂ ಸಹ ಅನುಭವ ಬರುವದು. ಹಾಗೂ ಸಂತ, ಮಹಂತ, ಸಾಧು, ಜ್ಞಾನಿ ಪುರುಷ ಇವರಿಗೂ ಅನುಭವ ಬರುವದು. ಇದರಲ್ಲಿ ಯಾರ ಅನುಭವವನ್ನು ನಂಬಬೇಕು. ಅರ್ಥಾತ್ ಸಂತ ಸತ್ಪುರುಷಾದಿಗಳ ಅನುಭವವೇ ಖರೇ ಇರುವದು. ಇದನ್ನೇ ಸಂಪೂರ್ಣ ಮನ್ನಿಸಬೇಕು. ಹಿಂದಿನ ಸಮಾಸದಲ್ಲಿ ಶ್ರೋತಾನು (ಕೇಳುಗನು)ವಿಚಾರಿಸಿದ ಪ್ರಶ್ನೆ "ದೃಶ್ಯವು ಖೊಟ್ಟಿ ಇರುವದಾದರೆ ಅದು ಕಾಣಿಸುವದೇಕೆ?" ಈ ಪ್ರಶ್ನೆಗೆ ಉತ್ತರ ಹೇಳುವೆನು. ಲಕ್ಷಗೊಟ್ಟು ಕೇಳಿರಿ. (೧) ಇಂದ್ರಿಯಗಳಿಗೆ ಯಾವುದು ಕಾಣುತ್ತದೆಯೋ ಅದೆಲ್ಲವೂ ಖರೇ ಸತ್ಯವೆಂದು ಜಡ, ಮೂಢ, ಅಜ್ಞಾನಿ ಮನುಷ್ಯನು ನಂಬುವನು. ಆದರೆ ಜ್ಞಾನಿ ಮನುಷ್ಯನ ನೋಟಕ್ಕೆ ಅಲ್ಲ. ಅವನಿಗೆ ಇವು ಅಸತ್ಯ, ಖೊಟ್ಟಿ ಎಂದು ಕಾಣುವವು. (೨)

ಯೇಕ್ಯಾ ದೇಖಿಲ್ಯಾ ಸಾಠೀ । ಲಟಿಕ್ಯಾ ಕರಾವ್ಯಾ ಗ್ರಂಥ ಕೋಟೀ ।
ಸಂತಾ ಮಹಂತಾಚ್ಯಾ ಗೋಷ್ಟೀ । ತ್ಯಾಹೀ ಮಿಥ್ಯಾ ಮಾನಾವ್ಯಾ ॥೩॥

ಮಾರ್ಯೀ ದಿಸತೇ ಹೇ ಚಿ ಖರೇ । ಯೇಥೇ ಚಾಲೇನಾ ದುಸರೇ ।
ಏಶಿಯಾ ಸಂಶಯಾಚ್ಯಾ ಭರೇ । ಭರೋ ಚಿ ನಯೇ ॥೪॥

ಮೃಗೇ ದೇಖಿಲೇ ಮೃಗಜಳ । ತೇಥೇ ಧಾವತೇ ಬರಳ ।
ಜಳ ನವ್ಹೆ ಮಿಥ್ಯಾ ಸಕಳ । ತ್ಯಾ ಪಶೂಸ ಕೋಣೇ ಮ್ಹಣಾವೇ ॥೫॥

ರಾತ್ರೌ ಸ್ವಪ್ನ ದೇಖಿಲೇ । ಬಹುತ ದ್ರವ್ಯ ಸಾಂಪಡಲೇ ।
ಬಹುತ ಜನಾಸೀ ವೆವ್ಹಾರಿಲೇ । ತೇ ಖರೇ ಕೈಸೇನಿ ಮಾನಾವೆ ॥೬॥

ಕುಶಳ ಚಿತಾರೀ ವಿಚಿತ್ರ । ತೇಣೇ ನಿರ್ಮಾಣ ಕೇಲೇ ಚಿತ್ರ ।
ದೇಖತಾ ಉಠೇ ಪ್ರೀತಿ ಮಾತ್ರ । ಪರಂತು ತೇಥೇ ಮೃತ್ತಿಕಾ ॥೭॥

ನಾನಾ ವನಿತಾ ಹಸ್ತಿ ಘೋಡೆ । ರಾತ್ರೌ ದೇಖ ತಾ ಮನ ಬುಡೆ ।
ದಿವಸಾ ಪಾಹಾತಾ ಕಾತಡೇ । ಕಂಟಾಳವಾಣೇ ॥೮॥

ಕಾಷ್ಠೀ ಪಾಷಾಣೀ ಪುತಳ್ಯಾ । ನಾನಾ ಠಕಾರೇ ನಿರ್ಮಿಲ್ಯಾ ।
ಪರಮ ಸುಂದರ ವಾಟಲ್ಯಾ । ಪರಂತು ತೇಥೇ ಪಾಷಾಣ ॥೯॥

ನಾನಾ ಗೋಪುರೀ ಪುತಳ್ಯಾ ಅಸತೀ । ವಕ್ರಾಂಗೇ ವಕ್ರದೃಷ್ಟೀ ಪಾಹಾತೀ ।
ಲಾಘವ ದೇಖತಾ ಭರೇ ವೃತ್ತೀ । ಪರಂತು ತೇಥೇ ತ್ರಿಭಾಗ ॥೧೦॥

ಖೇಳತಾ ನೇಟಕೆ ದಶಾವತಾರೀ । ತೇಥೇ ಯೆತಿ ಸುಂದರ ನಾರೀ ।
ನೇತ್ರ ಮೋಡಿತೀ ಕಳಾ ಕುಸರೀ । ಪರಂತು ಅವಘೇ ಘಟಿಂಗಣ ॥೧೧॥

ಸೃಷ್ಟೀ ಬಹುರಂಗೀ ಅಸತ್ಯ । ಬಹುರೂಪಾಚೇ ಹೇ ಕೃತ್ಯ ।
ತುಜ ವಾಟೇ ದೃಶ್ಯ ಸತ್ಯ । ಪರೀ ಹೇ ಜಾಣ ಅವಿದ್ಯಾ ॥೧೨॥

ಕೇವಲ ಇಂದ್ರಿಯಗಳಿಗೆ ಕಾಣುವದೆಂದು ಅವನ್ನು ಖರೇ ಎಂದು ನಂಬುವದಾದರೆ ಅಪಾರವಾಗಿರುವ ವೇದಾಂತ ಗ್ರಂಥಗಳೆಲ್ಲ ಸುಳ್ಳೆಂದು ತಿಳಿಯಬೇಕಾಗುವದು. ಇಷ್ಟೇ ಅಲ್ಲ, ಸಾಧು ಸತ್ಪುರುಷರ ವಚನಗಳೂ ಸುಳ್ಳೆಂದು ಅನ್ನಬೇಕಾಗುವದು. (3) "ನನ್ನ ಇಂದ್ರಿಯಗಳಿಗೆ ಕಾಣುತ್ತದೆ ಆದ್ದರಿಂದ ಅದೇ ನಿಜವು ಈ ಪ್ರಕಾರ ಪ್ರತ್ಯಕ್ಷ ಪ್ರಮಾಣದ ಮುಂದೆ ಇನ್ನುಳಿದವುಗಳೆಲ್ಲವೂ ಮಹತ್ವದವಲ್ಲ" ಇಂಥ ಸಂಶಯದ ಆಗ್ರಹಕ್ಕೆ ಬಿದ್ದು ಹಾಳಾಗಬೇಡ. (೪) ಈಗ ಅನೇಕ ದೃಷ್ಟಾಂತ ಹೇಳಿ ಶ್ರೀ ಸಮರ್ಥರು ನಮಗೆ ತೋರಿಸಿಕೊಡುವದೇನೆಂದರೆ ಇಂದ್ರಿಯಗಳಿಗೆ ಯಾವುದು ಕಾಣುವದೋ ಅದು ಖರೇ ಇರುವದಿಲ್ಲ. ಖೊಟ್ಟಿಯಾಗಿರುವದೇ ನಿಜದಂತೆಕಾಣುವದು. ಆದ್ದರಿಂದ ಇದು ಖರೇತನದ ಕೇವಲ ಭಾಸ ಮಾತ್ರ ಇರುವದು. ಒಂದು ಚಿಗರಿಯು ನೀರಡಿಸಿರುತ್ತದೆ. ಅದು ಮೃಗ ಜಲವನ್ನು ನೋಡುವದು. ಮತ್ತು ಅಲ್ಲಿ ನಿಜವಾಗಿಯೂ ನೀರಿರುವದೆಂದು ತಿಳಿದು ಹುಚ್ಚೆದ್ದು ಭರದಿಂದ ಓಡಹತ್ತುವದು. ಅಲ್ಲಿ ನೀರಿಲ್ಲ, ಕೇವಲ ನೀರಿನ ಭಾಸವಿದೆ. ಇದನ್ನು ಆ ಪ್ರಾಣಿಗೆ ಯಾರು ತಿಳಿಸಿಕೊಡಬೇಕು. (೫) ಒಬ್ಬನಿಗೆ ರಾತ್ರಿ ಸ್ವಪ್ನ ಬಿದ್ದಿತು. ಆ ಸ್ವಪ್ನದಲ್ಲಿ ಅವನಿಗೆ ಬಹಳಷ್ಟು ದ್ರವ್ಯ ದೊರಕಿತು. ಮತ್ತು ಇಷ್ಟೇ ಅಲ್ಲ, ಆ ಸ್ವಪ್ನದಲ್ಲಿ ಅವನು ಅನೇಕ ಜನರ ಕೂಡ ಹಣದ ವ್ಯವಹಾರ ಮಾಡಿದನು. ಆದರೆ ಇದೆಲ್ಲವನ್ನು ಪ್ರತ್ಯಕ್ಷದಲ್ಲಿ ನಿಜವಾದದ್ದೆಂದು ತಿಳಿಯಲಿಕ್ಕೆ ಬಂದೀತೆ? ಹಣಕೊಟ್ಟವರನ್ನು ಕೇಳಿದರೆ ಅವರು ಕೊಟ್ಟಾರೆಯೇ?ಅಂದ ಮೇಲೆ ಖರೇ ಎಂದು ಹೇಗೆ ಒಪ್ಪಬೇಕು.[೬] ಒಬ್ಬ ಕುಶಲನಾದ ಚಿತ್ರಕಾರನಿದ್ದನು. ಅವನು ಒಂದು ದೊಡ್ಡ ಸುಂದರ ಚಿತ್ರ ತೆಗೆದನು.ಅದು ಒಳ್ಳೇ ಆಕರ್ಷಕವೂ ಮೋಹಕವೂ ಆಗಿತ್ತು.ಈಚಿತ್ರನೋಡಿದವನೊಬ್ಬನಿಗೆ ಬಹಳ ಹಿಡಿಸಿತು.ಅದರ ಮೇಲೆ ಅವನಪ್ರೇಮ ಕೂಳಿತಿತು. ಇರಲಿ,ಈ ಚಿತ್ರದ ನಿಜಸ್ಥಿತಿ ಏನಿದ್ದಿತೆಂದರೆ, ಅದು ಸಾಮಾನ್ಯಮಣ್ಣಿನಿಂದ ಮಾಡಿದ್ದಾಗಿತ್ತು. ಅದು ಕೈ ಆಡಿಸಿದರೆ ತಿಳಿಯುತ್ತಿತ್ತು. [೭] ರಾತ್ರಿ ಕಾಲದಲ್ಲಿ ದೀಪದ ಪ್ರಕಾಶದಲ್ಲಿ ಕಲಾಕಾರನು ತಯಾರಿಸಿದ ಸ್ತ್ರೀಯರು, ಆನೆ, ಕುದುರೆ, ಇವುಗಳನ್ನು ನೋಡಿ ಮನಸ್ಸು ಅಗದೀ ಪ್ರಸನ್ನವಾಗುತ್ತಿತ್ತು. ಆದರೆ ಹಗಲಿನಲ್ಲಿ ಅವುಗಳನ್ನು ನೋಡಿದರೆ ಅದರ ಹಿಂದಿನ ಚರ್ಮ ಕುಡು ಮನಸ್ಸು ಬೇಜಾರುಗೊಳ್ಳುವದು. [೮] ಕೇಳಿರಿ, ಒಬ್ಬನು ಕಟ್ಟಿಗೆಯ ಮತ್ತು ಕಲ್ಲಿನ ಅನೇಕ ತರಹದ ಸುಂದರ ಪ್ರತಿಮೆಗಳನ್ನು ತಯಾರ ಮಾಡಿದನು. ಅವು ಬಹಳ ಸುಂದರವಾಗಿದ್ದವು ಮತ್ತುಮನಸ್ಸು ಮೋಹಹೊಂದುವಂಥ ಅಪ್ರತಿಮವಾಗಿದ್ದವು.ಆದರೆ ಹತ್ತಿರ ಹೋಗಿ ನೋಡಿದರೆ ಕೇವಲ ಕಟ್ಟಿಗೆ ಮತ್ತು ಮತ್ತು ಕಲ್ಲಿನವೇ ಸರಿ ಅಂದ ಮೇಲೆ ಕೈಗೆ ಕಲ್ಲಿನ ಮತ್ತು ಕಟ್ಟಿಗೆಯ ಹೊರತು ಮತ್ತೇನು ಹತ್ತಬೇಕು ? [೯] ಮಂದಿರದ ಬಾಗಿಲ ಮೇಲೆ ಅನೇಕ ಗೋಪುರ ಅಥವಾ ಮಜಲುಗಳು ಇರುವವು ಅದರ ಮೇಲೆ ಸುಂದರ ಗೊಂಬೆಗಳಿರುವವು. ಆ ಗೊಂಬೆಗಳ ಶರೀರಾವಯುವಗಳ ಹಾವಭಾವ ಮತ್ತು ಕಣ್ಣಿನ [ನಜರಿನ] ತಿರುನೋಟಗಳು ಮನಸ್ಸನ್ನುಮೋಹದಲ್ಲಿ ಕೆಡವುವವು. ಇವುಗಳ ಸೌಂದರ್ಯ ನೋಡಿ ಮನಸ್ಸುತದಾಕಾರವಾಗುವದು. ಆದರೆ ಇವು ಯಾವುದರಿಂದ ಆಗಿವೆ, ಇದರ ವಿಚಾರ ಮಾಡಿದರೆ ಕೇವಲ ಸುಣ್ಣ, ಉಸುಕು, ತಟ್ಟು (ನಾರು) ಈ ಮೂರು ಮುಖ್ಯ ಪದಾರ್ಥಗಳ ಮಿಶ್ರಣವೇ ಕಾಣುವದು. (೧೦) ದಶಾವತಾರದ ಆಟ ಮಾಡುವಾಗ ಅನೇಕ ಪಾತ್ರಗಳಿರುವವು.ಅವುಗಳಲ್ಲಿ ಕೆಲವೊಂದು ಸುಂದರಸ್ತ್ರೀಯರೂ ಇರುವರು. ಪುರುಷರ ಕಡೆಗೆ ನೋಡಿ ಅವರು ಬಹಳ ಚತುರತೆಯಿಂದ ಓರೆಗಣ್ಣಿನಿಂದ ನೋಡುವರು. ಹುಬ್ಬು ಹಾರಿಸುವದನ್ನು ಮಾಡುವರು ಮನಸ್ಸು ಸೂರೆಗೊಳ್ಳುವ ಹುಚ್ಚು ಹಿಡಿಸುವಂತಹ ನಟನೆ ಮಾಡುವ ಆ ಸ್ತ್ರೀಯರು ಖರೇ ಸ್ತ್ರೀಯರಿರುವದಿಲ್ಲ. ಗಟ್ಟಿ ಮುಟ್ಟಾದ ಪುರುಷರೇ ಇರುವರು. [ ಆಕಾಲದಲ್ಲಿ ಸ್ತ್ರೀ ಪಾತ್ರವನ್ನು ಪುರುಷರೇ ಮಾಡುತ್ತಿದ್ದರು. ] [ ೧೧ ] ಒಬ್ಬನೇ ಬಹುರೂಪಿಯು ಅನೇಕ ಪಾತ್ರ [ಸೋಗು]ಗಳನ್ನು ಆಯಾ ರೀತಿ ಮಾಡಿ ತೋರಿಸುವನು. ಅರ್ಥಾತ್ ಆಗ ಅವನು ತೋರಿಸಿದ ಸೋಗು ಮಿಥ್ಯಾ ಇರುತ್ತದೆ. ಮೂಲದಲ್ಲಿಯ ಅವನು ಮಾತ್ರ ನಿಜ[ಖರೆ]. ಇದೇ ಪ್ರಕಾರ ಅನಂತ ನಾಮರೂಪಗಳಿಂದ ತೋರಿ ಬರುವ ಈ ಸೃಷ್ಟಿಯೂ ಮಿಥ್ಯಾ ಇರುವದು. ಒಟ್ಟಿನಲ್ಲಿ ತಾತ್ಪರ್ಯವೇನೆಂದರೆ, ಮೂಲದ ಒಂದೇ ಒಂದಾದ ಆತ್ಮಸ್ವರೂಪವು ಮಾತ್ರ ಖರೇ ಇರುವದು. ನಮಗೆ ಈ ದೃಶ್ಯವು ನಿಜವೆನಿಸುವದು. ಇದು ಅವಿದ್ಯೆಯ ಪರಿಣಾಮದಿಂದ ಹೀಗೆ ಆಗುವದೆಂದು ತಿಳಿಯಿರಿ. [೧೨]

ಮಿಥ್ಯಾ ಸಾಚಾಸಾರಿಖೇ ದೇಖಿಲೇ । ಪರಿ ತೇ ಪಾಹಿಜೆ ವಿಚಾರಿಲೇ ।
ದೃಷ್ಟಿ ತರಳ ತಾ ಭಾಸಲೇ । ತೇ ಸಾಚ ಕೈಸೇ ಮಾನಾವೇ ॥೧೩॥

ವರೀ ಪಾಹಾತಾ ಪಾಲಥೇ ಆಕಾಶ। ಉದಕೀ ಪಾಹಾತಾ ಉತಾಣೇ ಆಕಾಶ ।
ಮಧ್ಯೇ ಚಾಂದಿಣ್ಯಾಹಿ ಪ್ರಕಾಶ । ಪರೀ ತೇ ಅವಘೇ ಮಿಥ್ಯಾ ॥೧೪॥

ನೃಪತೀನೇ ಚಿತಾರೀ ಆಣಿಲೇ। ಜ್ಯಾಚೇ ತ್ಯಾ ಐಸೆ ಪುತಳೇ ಕೇಲೇ।
ಪಾಹಾತಾ ತೇಚಿ ಐಸೆ ಗಮಲೇ। ಪರೀ ಅವಘೇ ಮಾಈಕ ॥೧೫॥

ನೇತ್ರೀ ಕಾಹೀ ಬಾಹೋಲಿ ನಸೇ। ಜೇವ್ಹಾ ಜೇ ಪಾಹಾವೇ ತೇವ್ಹಾ ತೇ ಭಾಸೇ।
ಡೋಳಾ ಪ್ರತಿಬಿಂಬ ದಿಸೆ । ತೇ ಸಾಚ ಕೈಸೇನೀ ॥೧೬॥

ಜಿತುಕೆ ಬುಡಬುಡೆ ಉಠತೀ । ತಿತುಕ್ಯಾಮಧ್ಯೇ ರೂಪೇ ದಿಸತೀ ।
ಕ್ಷಣಾಮಧ್ಯೇ ಫುಟೋನ ಜಾತೀ । ರೂಪೇ ಮಿಥ್ಯಾ ॥೧೭॥

ಲಘುದರ್ಪಣೇ ದೋನಿ ಚಾರೀ ಹಾತೀ । ತಿತುಕೀ ಮುಖೇ ಪ್ರತಿಬಿಂಬತೀ ।
ಪರೀ ತೇ ಮಿಥ್ಯಾ ಆದಿ ಅಂತೀ। ಯೇಕ ಚಿ ಮುಖ ॥೧೮॥

ಯಾವಾಗಇದು ಖೊಟ್ಟಿ ಸುಳ್ಳು ಇದು ಖರೇ [ನಿಜ] ಎಂಬಂತೆ ಕಾಣುವದೋ ಆಗ ಇದು ನಿಜವಾಗಿಯೂ ಖರೇ ಇರುವದೋಹೇಗೆ? ಇದರಬಗ್ಗೆ ವಿವೇಕದಿಂದ ಸರಿಯಾಗಿ ವಿಚಾರಮಾಡಬೇಕು. ನಮ್ಮಸದೋಷ ದೃಷ್ಟಿಗೆ ಯಾವುದು ಕಾಣುವದೋ ಅದೇ ಖರೇ ಎಂದು ಒಪ್ಪುವದು [ನಂಬುವದು] ಸರ್ವಥಾ ಯೋಗ್ಯವಲ್ಲ. [೧೩] ನಮ್ಮ ಇಂದ್ರಿಯಗಳಿಗೆ ಯಾವುದು ಕಾಣುವದೋ ಅದು ಹೇಗೆ ಭ್ರಾಮಕ [ಫಸವೆ] ಇರುವದೆಂಬ ಬಗ್ಗೆ ಅನೇಕ ಉದಾಹರಣೆಗಳನ್ನು ಕೊಟ್ಟಿರುವರು. ಮೇಲೆ ನೋಡಿದರೆ ಆಕಾಶವು ಡಬ್ಬಾಗಿ ಕಾಣುವದು. ಇದೇ ಆಕಾಶವನ್ನು ನೀರಿನಲ್ಲಿ ನೋಡಿದರೆ ಅಂಗಾತಾಗಿ ಕಾಣುವದು. ಅವೆರಡೂ ಕೂಡಿದ್ದರ ಮಧ್ಯದಲ್ಲಿ (ಮುಗಿಲಿನ ಗೋಲದಲ್ಲಿ ಬೆಳದಿಂಗಳು ಪ್ರಕಾಶಿಸುತ್ತದೆ. ಆದರೆ ಇದೆಲ್ಲ ಮಿಥ್ಯಾ ಇರುವದು. ಯಾಕೆಂದರೆ ನಮ್ಮ ಕಣ್ಣಿಗೆ ಯಾವುದು ಹೇಗೆ ಕಾಣುವದೋ ಅದು ಹಾಗೆ ಇರುವದಿಲ್ಲ. [೧೪] ಒಬ್ಬ ರಾಜನು ಶಿಲ್ಪಕಾರನನ್ನು ಕರೆಯಿಸಿದನು. ಅವನ ಕಡೆಯಿಂದ ಕೆಲವು ಜನರ ಹುಬೇಹೂಬ (ತದ್ರೂಪ) ಪ್ರತಿಮೆಗಳನ್ನು ಮಾಡಿಸಿದನು. ನೋಡಿದವರಿಗೆ ಪ್ರತ್ಯಕ್ಷ ಆ ವ್ಯಕ್ತಿಯೇ ಇರುವನೆಂದು ಅನಿಸುತ್ತಿತ್ತು. ಆದರೂ ಅದು ಪ್ರತಿಮೆ. ಅದು ಕೊನೆಗೂ ಪ್ರತಿಮೆಯಾಗಿಯೇ ಇರುವದಲ್ಲವೇ? [೧೫] ಕಣ್ಣಿನಲ್ಲಿ ಗೊಂಬೆಯೇನೂ ನಿಜವಾಗಿ ಅಲ್ಲಿ ಇರುವದಿಲ್ಲ. ಆದರೆ ನಾವು ಯಾವಾಗ ಯಾವುದನ್ನು ನೋಡುವೆವೋ ಆಗ ಅದು ನಮ್ಮ ಕಣ್ಣಲ್ಲಿ ಕಾಣುವದು. ನಾವು ಯಾವುದನ್ನು ನೋಡುವೆವೋ ಅದರ ಪ್ರತಿಬಿಂಬವು ನಮ್ಮ ಕಣ್ಣಲ್ಲಿ ಮೂಡುವದು. ಇದನ್ನು ನಿಜವೆಂದು ನಂಬಲು ಬರುವದಿಲ್ಲ. [೧೬] ನೀರಿನಲ್ಲಿ ಬಹಳಷ್ಟು ಗುಳ್ಳಿಗಳು [ನೀರಗುಳ್ಳಿಗಳು] ಏಳುವವು. ಪ್ರತಿಯೊಂದು ಗುಳ್ಳಿಯಲ್ಲಿ ಪ್ರತಿಬಿಂಬ ಕಾಣುವದು. ಬುಡಬುಡೆಗಳು ಆಗಲೇ ಒಡೆದು ಹೋಗುವವು. ತತ್‌ಪರಿಣಾಮ ಪ್ರತಿ-ಬಿಂಬಗಳೂ ಸಹ ಒಡೆದು ಹೋಗುವವು. ಆದ್ದರಿಂದ ಪ್ರತಿ-ಬಿಂಬದಲ್ಲಿ ರೂಪ ಮಿಥ್ಯಾ ಇರುವದು. [೧೭] ನಿಮ್ಮ ಕೈಯಲ್ಲಿ ನೀವು ಮೂರು ನಾಲ್ಕು ಚಿಕ್ಕ ಕನ್ನಡಿಗಳನ್ನು ತೆಗೆದುಕೊಂಡು ಅದರಲ್ಲಿ ನಿಮ್ಮ ಮುಖವನ್ನು ನೋಡಿರಿ. ಎಷ್ಟು ಕನ್ನಡಿಗಳಿರುವವೋ ಅಷ್ಟು ಮುಖಗಳು ಕಾಣುವವು. ಆದರೆ ಇದು ಮೊದಲಿನಿಂದ ಕೊನೆಯವರೆಗೂ ಸುಳ್ಳಿರುವದು. ಯಾಕೆಂದರೆ ನಿಮ್ಮ ಮುಖ ಒಂದೇ ಇರುವದು. [೧೮]

ನದೀತೀರೀ ಭಾರ ಜಾತಾ । ದುಸರಾ ಭಾರ ದಿಸೆ ಪಾಲಥಾ ।
ಕಾಪಡಸಾದಾಚಾ ಅವಚಿತಾ । ಗಜರ ಉಠೇ ॥೧೯॥

ವಾಪೀಸರೋವರಾಚೇ ತೀರ । ತೇಥೇ ಪಶುಪಕ್ಷೀ ನರ ವಾನರ ।
ನಾನಾ ಪಾತ್ರೀ ವೃಕ್ಷವಿಸ್ತಾರ । ದಿಸೆ ದೋಹಿ ಸವಾ ॥೨೦॥

ಯೇಕ ಶಸ್ತ್ರ ಝಾಡೂ ಜಾತಾ । ದೋನಿ ದಿಸತೀ ತತ್ವತಾ ।
ನಾನಾ ತಂತು ಟಣತ್ಕಾರಿತಾ । ದ್ವಿಧಾ ಭಾಸತೀ ॥೨೧॥

ಕಾತೇ ದರ್ಪಣಾಚೇ ಮಂದಿರೀ । ಬೈಸಲೀ ಸಭಾ ದಿಸೆ ದುಸರೀ ।
ಬಹುತ ದೀಪಾಂಚಿಯೇ ಹಾರೀ । ಬಹುತ ಛಾಯಾ ದಿಸತೀ ॥೨೨॥

ಐಸೇ ಹೇ ಬಹುವಿಧ ಅಸೆ । ಸಾಚಾಸಾರಿಖೇಂಚಿ ದಿಸೆ ।
ಪರೀ ಹೇ ಸತ್ಯ ಮ್ಹಣೋನಿ ಕೈಸೇ । ವಿಶ್ವಾಸಾವೇ ॥೨೩॥

ಮಾಯಾ ಮಿಥ್ಯಾ ಬಾಜೀಗರೀ । ದಿಸೇ ಸಾಚಾಚಿಯೇ ಪರೀ ।
ಪರೀ ಹೇ ಜಾಣತ್ಯಾನೇ ಖರೀ । ಮಾನೂಚಿ ನಯೇ ಕೀ ॥೨೪॥

ಪರಂಪರಾಗತವಾಗಿ ಬಂದ ಅದ್ವೈತ ವೇದಾಂತದ ಪ್ರಕಾರ ಹೇಳಬೇಕೆಂದರೆ ಶ್ರೀಸಮರ್ಥರು ಕೊಟ್ಟ ಉದಾಹರಣೆಗಳಲ್ಲಿ ಬಿಂಬ ಪ್ರತಿಬಿಂಬವಾದ ಮತ್ತು ಆಭಾಸವಾದ ಇವನ್ನು ಪ್ರಾಮುಖ್ಯವಾಗಿ ಸ್ವೀಕರಿಸಿದ್ದಾರೆ. ಮೊದಲನೆಯ ವಾದವು ಹೇಳುವದೇನಂದರೆ, ನಿರ್ಮಲ ವಸ್ತುವಿನಲ್ಲಿ ಪ್ರತಿಬಿಂಬ ಬೀಳುತ್ತದೆ. ಬಿಂಬವೇ ಸಹಜವೆನಿಸುವ ರೀತಿಯಲ್ಲಿ ಪ್ರತಿಬಿಂಬಿಸಿದಂತೆ ಕಾಣುವದು. ಪ್ರತಿಬಿಂಬ ಅಂದರೆ ಅದೇನು ಹೊಸದಾಗಿ ನಿರ್ಮಾಣಗೊಂಡ ಎರಡನೇ ವಸ್ತುವಲ್ಲ. ಪ್ರತಿಬಿಂಬ ಬೀಳುವ ಮೊದಲು ಪ್ರತಿಬಿಂಬ ಬಿದ್ದಾಗ ಮತ್ತು ಪ್ರತಿಬಿಂಬ ಇಲ್ಲದಾದ ಮೇಲೆಯೂ ಸಹ ಮೂಲ ಬಿಂಬವು ಅಗಸೇ ಹೇಗಿದ್ದಿತೋ ಹಾಗೆ ಇರುವದು. ಇನ್ನು ಎರಡನೆಯ ವಾದವು ಹೀಗೆ ಹೇಳುತ್ತದೆ:- ಮನುಷ್ಯನ ಮನಸ್ಸು ಅಜ್ಞಾನದಿಂದ ಆವರಿಸಿದೆ. [ಬಿಗಿಯಲ್ಪಟ್ಟಿದೆ]. [ಅಜ್ಞಾನವೆಂಬ ಭೂತ ಹಿಡಿದುಕೊಂಡಿದೆ]. ಇಂದ್ರಿಯಗಳ ಸಹಾಯದಿಂದ ಅದು ವಸ್ತುವಿನ ಜ್ಞಾನ ಮಾಡಿಕೊಳ್ಳಲಿಕ್ಕೆ ಧಡಪಡಿಸುತ್ತದೆ. ಆದರೆ ಇಂದ್ರಿಯಗಳು ಮತ್ತು ಮನಸ್ಸು ಇವೆರಡೂ ಅಜ್ಞಾನದೊಳಗಿಂದಲೇ ಜನ್ಮ ಹೊಂದಿವೆಯಾದ್ದರಿಂದ ವಸ್ತು (ಆತ್ಮವಸ್ತು) ನಿಜವಾಗಿ ಹೇಗಿರುವದೋ ಅದರಂತೆ ಇವುಗಳಿಗೆ ಯಾವ ಕಾಲಕ್ಕೂ ಕಾಣುವದಿಲ್ಲ. ಅಂದ ಮೇಲೆ ಯಾವುದು ನಿಜವಾಗಿ ಖರೇ ಇರುವದಿಲ್ಲವೋ ಅದು ನಿಜವೆಂದು ಅನಿಸಹತ್ತುತ್ತದೆ. ಇದರಿಂದಾಗಿ ಇಡೀ ಜೀವನವು ಭ್ರಮದಿಂದ ತುಂಬಿ ವ್ಯರ್ಥವಾಗಿ ಹೋಗುತ್ತದೆ. ಒಮ್ಮೊಮ್ಮೆ ಶ್ರೀ ಸಮರ್ಥರು ಕಲ್ಪನಾವಾದದ ಅನುವಾದ ಮಾಡುವರು. ಸ್ಪಷ್ಟೀಕರಣ ಮಾಡುವರು. ಈ ವಾದವು ಹೇಳುವದೇನಂದರೆ ಜೀವವು ಮೂಲದಲ್ಲಿ ಸಚ್ಚಿದಾನಂದ ಸ್ವರೂಪವಿದೆ. ಇದು ವಿಪರೀತ ಕಲ್ಪನಾ ಮಾಡಿದ್ದರಿಂದ ಜೀವವು ತನ್ನ ಮೂಲ ಸ್ವರೂಪವನ್ನು ಮರೆಯಿತು. ಮತ್ತು ಅದು ದೇಹವೇ ನಾನೆಂದು ಭಾವಿಸಿದ್ದರಿಂದ ಕ್ಷುದ್ರ(ಅಲ್ಪ)ವಾಯಿತು."ನಾನು ಕರ್ತಾ ಇರುವೆ"ಎಂಬ ಮಿಥ್ಯಾಭಿಮಾನವು ಜೀವದ ತಲೆಯ ಮೇಲೆ ಕುಳಿತಿತು. ಸತ್ಸಂಗತಿಯಿಂದ ಶ್ರವಣ ಮತ್ತು ಮನನ ಇವೆರಡನ್ನೂ ಸಾಧಿಸಿ ತಿಳಿದುಕೊಂಡರೆ ಜೀವದ ಕಲ್ಪನೆ ಬದಲಾಗುವದು. ಇದರ ನಾನು ಎಂಬ ಕರ್ತಾತನದ ಅಭಿಮಾನ ದೂರವಾಗುವದು, ಕ್ಷೀಣವಾಗುವದು.ಮತ್ತುದೇಹಬುದ್ಧಿ ಇಲ್ಲವಾಗಿನಾಶವಾಗಿಹೋಗುತ್ತದೆ.ಅದ್ವೈತವನ್ನುತಿಳಿಸಿಕೊಡುವದೇಶ್ರೀಸಮರ್ಥರ ಮುಖ್ಯ ಹೇತು ಇದ್ದುದರಿಂದ ಇದು ಸಾಧ್ಯವಾಗಲಿಕ್ಕೆ ಈ ಯುಕ್ತಿಗಳು ಉಪಯೋಗ ಬೀಳುವವು:— ನದಿ ತೀರದಿಂದ ನಾವು ಅಥವಾ ಹಡಗು ಒಜ್ಜೆಯನ್ನು ತೆಗೆದುಕೊಂಡು ಹೊರಟರೆ ಅದರ ಪ್ರತಿಬಿಂಬ ನೀರಿನಲ್ಲಿ ತಿರುವು ಮುರುವಾಗಿ ಕಾಣುವದು. ಅಥವಾ ನಮ್ಮ ಧ್ವನಿಯಷ್ಟೇ ದೊಡ್ಡದಾದ ಪ್ರತಿಧ್ವನಿ ಬರುವದು. (೧೯) ಭಾವಿ, ಕೆರೆಗಳ ದಂಡೆಗೆ ಪಶು, ಪಕ್ಷಿ, ಮನುಷ್ಯ, ವಾನರ (ಮಂಗ) ಹಾಗೂ ಇತರ ವಸ್ತು ಮತ್ತು ದೊಡ್ಡ ದೊಡ್ಡ ಗಿಡಗಳು ಇರುವವು. ನೀರಿನಲ್ಲಿ ಇವುಗಳ ಪ್ರತಿಬಿಂಬ ಬೀಳುತ್ತದೆ. ಹಾಗೂ ಆ ವಸ್ತುವಿನ ಬಿಂಬವು ನೀರಿನೊಳಗೂ ಮತ್ತು ಹೊರಗೂ ಹೀಗೆ ಎರಡೂ ಕಡೆಗೆ ಕಾಣುವದು. ಅದರ ಪ್ರತಿಬಿಂಬವು ಖರೇ ಅಲ್ಲ. (೨೦) ಒಂದು ಶಸ್ತ್ರವನ್ನು ಜೋರಿನಿಂದ ಅಲ್ಲಾಡಿಸಿದರೆ (ಝಳಪಿಸು, ಬೀಸು) ಆಗ ಎರಡು ಶಸ್ತ್ರಗಳಿದ್ದಂತೆ ಕಾಣುವವು. ಒಂದು ಹಗ್ಗವನ್ನು ಜೋರಾಗಿ ಜಗ್ಗಿಬಿಟ್ಟರೆ (ಮೀಟಿದರೆ) ಅದು ಎರಡಾಗಿ ತೋರುವದು. (೨೧) ತಿಳಿಯಿರಿ, ಕನ್ನಡಿಯ ಮಹಲಿನಲ್ಲಿ ಒಂದು ಸಭೆ ಕೂಡಿತು, ಅಲ್ಲಿಯ ಕನ್ನಡಿಯಲ್ಲಿ ಇದನ್ನು ನೋಡಿದರೆ ಮತ್ತೊಂದು ಸಭೆ ಕೂಡಿದಂತೆ ಕಾಣುವದು. ಇದರಂತೆಯೇ, ಅನೇಕ ದೀಪದ ಸಾಲುಗಳಿಗೆ ದೀಪ ಹಚ್ಚಿದರೆ ಒಂದೇ ವಸ್ತುವಿನ ಅನೇಕ ನೆರಳು (ಛಾಯೆ) ಕಾಣುವವು. (೨೨) ಇಂಥ ಅನೇಕ ಪ್ರಕಾರಗಳು ನಿಜವಾದವುಗಳಲ್ಲ. ನಿಜವೇ ಎಂಬಂತೆ ಅನಿಸುವದು. (ಭಾಸವಾಗುವದು). ಇವು ಖರೇ ಇರದಿದ್ದರೂ ಖರೇ ಇರುವವೆಂಬ ತಿಳುವಳಿಕೆಯಿಂದ ವಿಶ್ವಾಸವಿಡಲಿಕ್ಕೆ ಹೇಗೆ ಬರುವದು? [೨೩] ಭಗವಂತನ ಮಾಯೆ ಅವಿದ್ಯೆಯ ರೂಪ ತಳೆದು ಜೀವವನ್ನು ಭ್ರಮೆಯಲ್ಲಿ ಕೆಡುವುವದು:— ಈ ಎಲ್ಲವುಗಳ ಅರ್ಥ ಹೀಗೆ ಇರುವದು. ಮಾಯೆಯು ಜಾದೂಗಿರಿಯನ್ನು ಮಾಡುವದು. ಮತ್ತು ಖರೇಎಂಬಂತೆ ತೋರುವ ಖೊಟ್ಟಿ ವಸ್ತುವನ್ನು ನಿರ್ಮಾಣ ಮಾಡುವದು. ಆದರೆ ತಿಳಿದವರು ಇದನ್ನು ಖರೇ ಎಂದು ತಿಳಿಯಬಾರದು. [೨೪]

ಲಟಿಕೇ ಸಾಚಾಐಸೇ ಭಾವಾವೇ । ತರೀ ಪಾರಖೀ ಕಾಸಯಾ ಅಸಾವೇ ।
ಯೇಣೇಂ ಅವಿದ್ಯೇಚಿ ಯಾವೇ । ಐಸೇಚಿ ಅಸತೀ ॥೨೫॥

ಮನುಷ್ಯಾಚೀ ಬಾಜೀಗರೀ । ಬಹುತ ಜನಾಸ ವಾಟೇ ಖರೀ ।
ಸೇವಟ ಪಾಹಾತಾ ನಿರ್ಧಾರೀ । ಮಿಥ್ಯಾ ಹೋಯೇ ॥೨೬॥

ತೈಸೀ ಚ ಮಾವ ರಾಕ್ಷೇಸಾಂಚೀ । ದೇವಾಂಸ ಹೀ ವಾಟೇ ಸಾಚೀ।
ಪಂಚವಟಿಕೇಸಿ ಮೃಗಾಚೀ । ಪಾಠೀ ಘೇತಲೀ ರಾಮೇಂ ॥೨೭॥

ಪೂರ್ವ ಕಾಯಾ ಪಾಲಟಿತೀ । ಯೇಕಾಚೇ ಚಿ ಬಹುತ ಹೋತೀ ।
ರಕ್ತಬಿಂದೀ ಚ ಜನ್ಮತೀ । ರಜನೀಚರ ॥೨೮॥

ನಾನಾ ಪದಾರ್ಥ ಫಳೇಚಿ ಜಾಲೆ । ದ್ವಾರಕೇಮಧೇ ಪ್ರವೇಶಲೇ ।
ಕೃಷ್ಣೇಂ ದೈತ್ಯ ಕಿತೀ ವಧಿಲೇ । ಕಪಟ ರೂಪೀ ॥೨೯॥

ಕೈಸೇ ಕಪಟ ರಾವಣಾಚೇ । ಸಿರ ಕೇಲೇ ಮಾವೇಚೇ ।
ಕಾಳನೇಮೀಚ್ಯಾ ಆಶ್ರಮಾಚೇ । ಅಪೂರ್ವ ಕೈಸೇ ॥೩೦॥

ನಾನಾ ದೈತ್ಯ ಕಪಟಮತೀ । ಜೆ ದೇವಾಂಸ ಹಿ ನಾಟೋಪತಿ ।
ಮಗ ನಿರ್ಮಾಣ ಹೋಊನ ಶಕ್ತೀ । ಸಂವ್ಹಾರ ಕೇಲಾ ॥೩೧॥

ಐಸೀ ರಾಕ್ಷೇಸಾಂಚೀ ಮಾವ । ಜಾಣೋ ನ ಸಕತೀ ದೇವ ।
ಕಪಟ ವಿದ್ಯೇಚೇ ಲಾಘವ । ಅಘಟಿತ ಜ್ಯಾಂಚೇ ॥೩೨॥

ಮನುಷ್ಯಾಂಚೀ ಬಾಜೀಗರೀ । ರಾಕ್ಷಸಾಂಚೀ ವೋಡಂಬರೀ ।
ಭಗವಂತಾಚೀ ನಾನಾಪರೀ । ವಿಚಿತ್ರ ಮಾಯಾ ॥೩೩॥

ಹೇ ಸಾಚಾಸಾರಿಖೀ ಚ ದಿಸೇ । ವಿಚಾರಿತಾಂಚ ನಸೇ ।
ಮಿಥ್ಯಾಚಿ ಆಭಾಸೇ । ನಿರಂತರ ಪಾಹಾತಾ ॥೩೪॥

ಸಾಚ ಮ್ಹಣಾವೀ ತರೀ ಹೇ ನಾಸೇ । ಮಿಥ್ಯಾ ಮ್ಹಣಾವೀ ತರೀ ಹೇ ದಿಸೇ ।
ದೋಹೀ ಪದಾರ್ಥೀ ಅವಿಶ್ವಾಸೇ । ಸಾಂಗತಾ ಮನ ॥೩೫॥

ಪರಂತು ಹೇ ನವ್ಹೆ ಸಾಚಾರ । ಮಾಯೇಚಾ ಮಿಥ್ಯಾ ವಿಚಾರ ।
ದಿಸತೇ ಹೇ ಸ್ವಪ್ನಾಕಾರ । ಜಾಣ ಬಾಪಾ ॥೩೬॥

ಯಾವುದು ನಿಜವಲ್ಲವೋ ಅದನ್ನೇ ನಿಜವೆಂದು ನಂಬುವದಾದರೆ, ಖರೇ ಯಾವುದು ? ಖೊಟ್ಟಿ ಯಾವುದು? ಇದನ್ನು ಪರೀಕ್ಷಿಸುವ ಪರೀಕ್ಷಕನ ಅವಶ್ಯಕತೆಯೇ ಉಳಿಯುವದಿಲ್ಲ. ಒಟ್ಟಿನಲ್ಲಿ ಅವಿದ್ಯೆ ಆವರಿಸಿತೆಂದರೆ ಅದರ ಪ್ರಭಾವದಿಂದ ಇಂಥ ಪ್ರಕಾರಗಳು ಉಂಟಾಗುವವು (೨೫) ಒಬ್ಬ ಜಾದೂಗಾರ ಯಾವಾಗ ಜಾದೂದ ಆಟ ಮಾಡುವನೋ ಆಗ ಅವನು ನಿರ್ಮಾಣ ಮಾಡಿದ ಅನೇಕ ವಸ್ತುಗಳು ಖರೆ ಎಂದೇ ಅನಿಸುವವು.ಆದರೆ ಆಟ ಮುಗಿದ ಮೇಲೆ ನೋಡಿದರೆ ಆ ಎಲ್ಲವೂ ಖೊಟ್ಟಿಯೇ ಇದ್ದುವೆಂದು ಖಾತ್ರಿಯಾಗುವದು.(೨೬)ರಾಕ್ಷಸರೂ ಸಹ ಮಾಯೆಯನ್ನು ರಚಿಸುವರು,ಮತ್ತು ಅದು ದೇವತೆಗಳಿಗೂ ಸಹ ಖರೇ ಎನಿಸುವದು. ಸೀತಾಮಾತೆಗೂ ಸಹ ಮಾಯಾ ಜಿಂಕೆ ಖರೇ ಅನಿಸಿತು.ಇದರಿಂದಾಗಿ ಪಂಚವಟಿಯಲ್ಲಿದ್ದಾಗ ಶ್ರೀರಾಮನೂ ಸಹ ಭ್ರಾಂತಿಗೊಳಗಾಗಿ ಖೊಟ್ಟಿಯಾದ ಜಿಂಕೆಯ ಬೆನ್ನು ಹತ್ತಿದನು (೨೭) ರಾಕ್ಷಸರು ಮಾಯೆಯಿಂದ ತಮ್ಮ ಶರೀರ (ರೂಪ)ವನ್ನೇ ಬದಲಿಸುವರು. ಒಬ್ಬರಿದ್ದು ಅನೇಕರಾಗಿ ಕಾಣುವರು. ಮತ್ತು ಯುದ್ಧದಲ್ಲಿ ರಕ್ತದ ಒಂದು ಹನಿಯಲ್ಲಿ ಅನೇಕ ಹೊಸ ರಾಕ್ಷಸರು ಜನ್ಮ ಹೊಂದುವರು. ಇದನ್ನು ಅಹಿರಾವಣ ಮಹಿರಾವಣರ ಕಥೆಯಲ್ಲಿ ಕೇಳಿರುವೆವು. ರಕ್ತಬೀಜ ರಾಕ್ಷಸನ ಕಥೆಯಲ್ಲಿ ಕೇಳಿರು ವೆವು(೨೮)ಅನೇಕ ವಸ್ತು ಮತ್ತು ಫಲಗಳ ರೂಪ ತಳೆದು ರಾಕ್ಷಸರು ದ್ವಾರಕೆಯಲ್ಲಿ ಪ್ರವೇಶ ಮಾಡಿದರು. ಇಂಥ ಕಪಟ ರಾಕ್ಷಸರನ್ನು ಸರ್ವಜ್ಞನಾದ ಶ್ರೀ ಕೃಷ್ಣನು ಸಂಹಾರ ಮಾಡಿದನು. ಇವನ್ನೆಲ್ಲ ಘಟೋದ್ಗಜನ ಮಾಯಾ ಬಜಾರ ಮತ್ತು ಪೂತನೆ, ಅಘ,ಬಕ ಶಕಟಾಸುರರ ಕಥೆಗಳಲ್ಲಿ ಕೇಳಿರುವೆವು. (೨೯) ರಾವಣನ ಕಪಟತನ, ಕೂಟತನವೆಂಥದು ನೋಡಿರಿ.ಇವನು ಯುದ್ಧಕಾಲದಲ್ಲಿ ಶ್ರೀರಾಮನ ಕಪಟ ಶಿರವನ್ನೇ ಮಾಡಿ ಅದನ್ನು ಸೀತಾದೇವಿಗೆ ತೋರಿಸಿದನು.ಇದ ರಂತೆಯೇ ಕಾಲನೇಮಿಯ ಮಾಯೆಯಿಂದ ಆಶ್ರಮ ನಿರ್ಮಾಣ ಮಾಡಿದನು. ಆಶ್ರಮ ಬಹಳಷ್ಟು ವಿಲಕ್ಷಣ ಹಾಗೂ ಅಪೂರ್ವವಾಗಿತ್ತು. ಮಾರುತಿಯು ದ್ರೋಣಗಿರಿಯನ್ನು ಒಯ್ಯುವಾಗ ಅವನಿಗೆ ಪರ್ವತವನ್ನು ಒಯ್ಯಗೊಡಬಾರದು, ತಡೆಯಬೇಕು, ಕೊನೆಗೆ ತಡವಮಾಡಿಯಾದರೂ ಒಯ್ಯಗೊಡಬೇಕು ಎಂದು ದುಷ್ಟ ಹೇತುವಿನಿಂದ ಮೋಸಗೊಳಿಸಲು ಸಿದ್ಧನಾಗಿಕಾಲನೇಮಿಯು ಋಷಿಯಸೋಗು[ವೇಷ]ಹಾಕಿ ಸುಂದರ ಆಶ್ರಮದಲ್ಲಿತಾನು ಸುಳ್ಳೇ ಧ್ಯಾನಾಸಕ್ತನಾದವನಂತೆ ಕುಳಿತನು. ಮೊದಲು ಮಾರುತಿಯು ಅಲ್ಲಿ ಅಲ್ಪಕಾಲ ಮೋಸ ಹೋದರೂ ಕೂಡಲೇ ಅವನ ಕಪಟತನವನ್ನು ತಿಳಿದು ಕಾಲನೇಮಿಯನ್ನು ಮುಷ್ಟಿಪ್ರಹಾರದಿಂದ ಕೊಂದು ಹಾಕಿದನು. (೩೦) ಕಪಟ ಬುದ್ಧಿಯ ಎಷ್ಟೋ ದೈತ್ಯರು ದೇವರಿಗೂ ಬಗ್ಗುತ್ತಿರಲಿಲ್ಲ. ಆಗ ಭಗವಂತನ ಶಕ್ತಿಯು ಅವತಾರ ತಾಳಿ ದೈತ್ಯರ ಸಂಹಾರ ಮಾಡಿತು.(೩೧) ರಾಕ್ಷಸರ ಇಂಥ ಮಾಯೆಯು ದೇವರಿಗೆ ಸಹ ತಿಳಿಯಲಿಕ್ಕೆ ಆಗುತ್ತಿರಲಿಲ್ಲ. ರಾಕ್ಷಸರ ಕಪಟ ಮಾಯಾ ವಿದ್ಯೆಯ ಪ್ರಾವೀಣ್ಯವು ಕಲ್ಪನೆಗೆ ಮೀರಿ ಇರುತ್ತಿತ್ತು. (೩೨) ಮನುಷ್ಯನು ಮಾಡುವ ಕೃತ್ರಿಮ ನಿರ್ಮಾಣಕ್ಕೆ ಬಾಜಿಗಿರಿ ಅಥವಾ ಜಾದೂಗಿರಿ ಅನ್ನುವರು. ರಾಕ್ಷಸರು ನಿರ್ಮಾಣ ಮಾಡುವ ಕೃತ್ರಿಮಕ್ಕೆ ಮೋಡಿಂಬರಿ ಅಥವಾ ಇಂದ್ರಜಾಲ ವೆನ್ನುವರು. ಆದರೆ ಭಗವಂತನಿಂದ ಯಾವ ಕೃತ್ರಿಮ ನಿರ್ಮಾಣವಾಗುವದೋ ಅವಕ್ಕೆ ಮಾಯಾ ಎಂದುಅನ್ನುವರು. ಈ ಮಾಯೆಯು ಬಹಳ ವಿಚಿತ್ರವಿರುವದು. ಅದರಂತೆ ಇದೂಅನೇಕ ಪ್ರಕಾರಗಳನ್ನು ನಿರ್ಮಾಣ ಮಾಡುವದು.(೩೩) ಭಗವಂತನ ಮಾಯೆ ಅಗದೀ ನಿಜವೆಂಬಂತೆ ಕಾಣುವದು ಆದರೆ ಇದರ ಬಗ್ಗೆ ವಿವೇಕದಿಂದ ವಿಚಾರ ಮಾಡಿದರೆ ಅದು ಇಲ್ಲದಾಗುವದು. ಇದು ಒಂದೇ ಸವನೆ [ಯಾವಾಗಲೂ] ಕಣ್ಣಿಗೆ ಬೀಳುವವರಿಂದ-ಕಾಣುವದರಿಂದ ಅದು ಖೊಟ್ಟಿ ಇದ್ದರೂ ಸಹ ಅಜ್ಞಾನಿಗೆ [ಖರೇ] ನಿಜವೆಂಬಂತೆ ಭಾಸವಾಗುವದು. [೩೪] ಮಾಯಾ ಖರೆ ಅಂದರೆ ಅದು ಪ್ರತ್ಯಕ್ಷ ನಾಶವಾಗುವದು. ಮಾಯಾ ಖೊಟ್ಟಿ ಅಂದರೆ ಅದು ಪ್ರತ್ಯಕ್ಷ ಕಾಣುವದು. ಆದ್ದರಿಂದ ಮಾಯಾ ಖರೇ ಇರುವದೆಂದು ಹೇಳಿದರೆ ಮನಸ್ಸು ವಿಶ್ವಾಸವನ್ನು ಹೊಂದುವದಿಲ್ಲ. ಅದೇ ರೀತಿ ಮಾಯಾ ಖೊಟ್ಟಿ ಇರುವದು. ಹೀಗೆ ಹೇಳಿದರೆ ಅವಕ್ಕೂ ಮನಸ್ಸು ವಿಶ್ವಾಸ ತೋರುವದಿಲ್ಲ.[ನಂಬುವದಿಲ್ಲ].ಇದು ಒಳ್ಳೇ ಫಜೀತಿ ಅಲ್ಲವೇ?[೩೫] ಏನೇ ಇರಲಿ ಮಾಯೇ ಖರೇ ಅಲ್ಲ. ಮಾಯೆಯ ವಿಚಾರ ಅಂದರೆ ಖೊಟ್ಟಿ [ಮಿಥ್ಯೆಯ] ವಿಚಾರವು. ಈ ಎಲ್ಲ ದೃಶ್ಯವು ಕೇವಲ ಸ್ವಪ್ನದಂತೆ ಇರುವದು. ಇದನ್ನು ಪೂರ್ಣ ತಿಳಿದು ನಂಬಿರಿ. [೩೬]

ತಥಾಪಿ ಅಸೋ ತುಜಲಾ । ಭಾಸ ಚಿ ಸತ್ಯ ವಾಟಲಾ ।
ತರೀ ತೇಥೇ ಚುಕಾ ಪಡಿಲಾ । ಏಕ ಬಾಪಾ ॥೩೭॥

ದೃಶ್ಯಭಾಸ ಅವಿದ್ಯಾತ್ಮಕ । ತುಝಾ ಹೀ ದೇಹೋ ತದಾತ್ಮಕ ।
ಮ್ಹಣೌನಿ ಹಾ ಅವಿವೇಕ । ತೇಥೇ ಸಂಚಾರಲಾ ॥೩೮॥

ದೃಷ್ಟೀನೇ ದೃಶ್ಯ ದೇಖಿಲೇ । ಮನ ಭಾಸಾವರೀ ಬೈಸಲೇ ।
ತರೀ ತೇ ಲಿಂಗದೇಹ ಜಾಲೇ । ಅವಿದ್ಯಾತ್ಮಕ ॥೩೯॥

ಅವಿದ್ಯೇನೇ ಅವಿದ್ಯಾ ದೇಖಿಲೀ। ಮ್ಹಣೋನಿ ಗೋಷ್ಟೀ ವಿಶ್ವಾಸಲೀ ।
ತುಝೀ ಕಾಯಾ ಅವಘೀ ಸಂಚಲೀ । ಅವಿದ್ಯೇಚೀ ॥೪೦॥

ತೇ ಚಿ ಕಾಯಾ ಮೀ ಆಪಣ । ಹೇ ದೇಹಬುದ್ಧೀಚೇ ಲಕ್ಷಣ ।
ಯೇಣೇ ಕರಿತಾ ಜಾಲೇ ಪ್ರಮಾಣ । ದೃಶ್ಯ ಆವಘೇ ॥೪೧॥

ಇಕಡೆ ಸತ್ಯ ಮಾನಿಲಾ ದೇಹೋ । ತಿಕಡೆ ದೃಶ್ಯ ಸತ್ಯ ಹಾ ನಿರ್ವಾಹೋ ।
ದೋಹೀಮಧೇ ಮಹಾ ಸಂದೇಹೋ । ಪೈಸಾವಲಾ ಬಳೇ ॥೪೨॥

ದೇಹ ಬುದ್ಧಿ ಕೇಲೀ ಬಳಕಟ । ಆಣೇ ಬ್ರಹ್ಮ ಪಾಹೋ ಗೇಲಾ ಧೀಟ ।
ತೋ ದೃಶ್ಯಾನೇ ರುಧಿಲೀ ವಾಟ । ಪರಬ್ರಹ್ಮಾಚೀ ॥೪೩॥

ತೇಥೇ ಸಾಚ ಮಾನೀ ದೃಶ್ಯಾಲಾ । ನಿಶ್ಚಯಚಿ ಬಾಣೋನಿ ಗೇಲಾ ।
ಪಾಹಾ ಹೋ ಕೇವಢಾ ಚುಕಾ ಪಡಿಲಾ । ಅಕಸ್ಮಾತ ॥೪೪॥

ಆತಾ ಅಸೋ ಹೇ ಬೋಲಣೇ । ಬ್ರಹ್ಮ ನ ಪವಿಜೆ ಮೀಪಣೇ ।
ದೇಹಬುದ್ಧೀಚೀ ಲಕ್ಷಣೇ । ದೃಶ್ಯ ಭಾವಿತೀ ॥೪೫॥

ಮನುಷ್ಯರ ವಿಚಾರದಲ್ಲಿ ಈ ಯಾವ ತೊಡಕು ಗೊಂದಲ ನಿರ್ಮಾಣವಾಗುವದೋ ಇದಕ್ಕೆ ಕಾರಣ ಬೇರೆ ಯಾವುದೂ ಅಲ್ಲ. ಕೇವಲ ಅವಿದ್ಯೆಯೇ ಆಗಿದೆ. ಅವಿದ್ಯೆಯಿಂದ ನಾನು "ದೇಹವೇ ಇರುವೆ" ಈ ದೇಹ ಬುದ್ಧಿ ಜನ್ಮ ಹೊಂದುವದು. ದೇಹಬುದ್ಧಿಯಿಂದಲೇ ದೃಶ್ಯವು ಖರೇ ಅನಿಸುವದು. ಇದರಿಂದಾಗಿ ಬ್ರಹ್ಮದವರೆಗೆ ಹೋಗಿ ಮುಟ್ಟಲಿಕ್ಕೆ ಬರುವದಿಲ್ಲ. [ಆಗುವದಿಲ್ಲ]. ಈ ದೃಶ್ಯದ ವಿಸ್ತಾರ [ ಪಸಾರ ]ವು ನಿಜವಲ್ಲ ಇದು ಕೇವಲ ಭಾಸ-ಭ್ರಾಂತಿ[ಅನಿಶ್ಚಿತಜ್ಞಾನ]ಇರುವದೆಂಬ ಬಗ್ಗೆ ಅನೇಕ ಪ್ರಕಾರದಿಂದ ತಿಳಿಸಿ ಹೇಳಿದ್ದಾಗಿದೆ.ಆದರೂ ನಿನಗೆ ಭಾಸವೇ ನಿಜವಿರುವದೆಂದು ಅನಿಸುವದು. ಈ ಭ್ರಮೆಯು ನಿನಗೆ ಏಕೆ ಆಗುವದು. ಇದರ ಕಾರಣವನ್ನು ಹೇಳುವೆನು. ಚನ್ನಾಗಿ ಕೇಳುವವನಾಗು. [೩೬] ದೃಶ್ಯದ ವಿಸ್ತಾರವು ಅವಿದ್ಯೆಯಿಂದ ತುಂಬಿರುತ್ತದೆ. ನಮ್ಮ ದೇಹವು ಅವಿದ್ಯೆಯಲ್ಲಿಯೇ ಜನ್ಮ ಹೊಂದುವದು.ಇದು ಹೊರಗೂ ಒಳಗೂ ಪೂರ್ತಿ ಅವಿದ್ಯೆಯಿಂದ ತುಂಬಿರುವದು. ಅಂತೆಯೇ ಮಿಥ್ಯಾ ಇರುವ ದೃಶ್ಯವು ಸತ್ಯವೇ ಇರುವದೆಂಬ ಅವಿವೇಕದ ಅಥವಾ ತಪ್ಪು ವಿಚಾರವು ನಮ್ಮ ಅಂತರ್ಯಾಮದಲ್ಲಿ ಸಂಚರಿಸುತ್ತದೆ. [೩೭] ನಾವು ಕಣ್ಣಿನಿಂದ ಹೊರಗಿನ ವಸ್ತುಗಳನ್ನು ನೋಡುವೆವು. ಆವಸ್ತುವಿನ ಮೇಲೆ ನಮ್ಮ ಮನಸ್ಸು ಹೋಗುವದು ಮತ್ತು ಅದರ ರೂಪ ತೆಗೆದುಕೊಳ್ಳುವದು. (ಗ್ರಹಿಸುವದು). ನಮ್ಮ ಸೂಕ್ಷ್ಮ [ಲಿಂಗ] ದೇಹದಲ್ಲಿ ವಸ್ತುವಿನ ಪ್ರತಿಮೆ ತಯಾರ ಆಗುವದು. ಅವಿದ್ಯೆಯು ನಿರ್ಮಾಣ ಮಾಡಿದ ದೃಶ್ಯವನ್ನು ಧಾರಣ ಮಾಡುವ ಸೂಕ್ಷ್ಮ ದೇಹವೂ ಸಹ ಈ ಕಾರಣದಿಂದಾಗಿ ಅವಿದ್ಯಾಮಯವೇ ಇರುವದು. ಅರ್ಥಾತ್ ಕಣ್ಣು ಮತ್ತು ಮನ ಇವುಗಳ ದ್ವಾರದಿಂದ ಬರುವ ಅನುಭವವು ಹೇಗೆ ಖರೇ ಇದ್ದಿತು? [೩೯] ನೋಡುವವನಾದ ದೃಷ್ಟಾ ಅವಿದ್ಯಾಮಯನು. ಮತ್ತು ನೋಡಿದ ದೃಶ್ಯವೂ ಸಹ ಅವಿದ್ಯಾಮಯವಾಗಿಯೇ ಇರುವದು. ಅವಿದ್ಯಾಮಯನಾದ ದೃಷ್ಟಾ ಅವಿದ್ಯಾಮಯನಾದ ದೃಶ್ಯವನ್ನು ನೋಡುವನು. ಅಂತೆಯೇ ದೃಷ್ಟಾರನಿಗೆ ದೃಶ್ಯದ ಖರೇತನದ ಬಗ್ಗೆ ವಿಶ್ವಾಸ ಕೊಡುವದು.ನಮ್ಮ ದೇಹದ ಒಳಗೂ ಹೊರಗೂ ಸಂಪೂರ್ಣವಾಗಿ ಅವಿದ್ಯೆಯು ವ್ಯಾಪಿಸಿರುತ್ತದೆ. ದೇಹಬುದ್ಧಿಯಿಂದಾಗಿ ಈ ಅವಿದ್ಯಾತ್ಮಕ ಮಿಥ್ಯಾ ದೃಶ್ಯ ಜಗತ್ತು ನಿಜವೆಂದು ಅನಿಸುವದು ಸಹಜವಾಗಿರುವದು. [೪೦] ಆ ದೇಹವೇ ನಾನಿರುವೆ ಎಂಬ ದೃಢವಾದ ತಿಳವಳಿಕೆಯು ದೇಹಬುದ್ಧಿಯ ಲಕ್ಷಣವಿರುವದು. ಅರ್ಥಾತ್ ಅವಿದ್ಯಾಮಯ ದೇಹವು ನಾನೇ ಇರುವೆ. ಈ ದೃಢಭಾವದಿಂದ ದೃಶ್ಯ ಪ್ರಸಾರ ನೋಡಿದೆವೆಂದರೆ ಅದು ಪೂರ್ಣ ನಿಜವೆಂದು ಅನಿಸುವದು. ಇದೇನೂ ಆಶ್ಚರ್ಯವಲ್ಲ ಬರೋಬರಿ[ಸರಿ]ಯೇ ಇರುವದು.[೪೧] ದೃಷ್ಟ್ಯಾನ ಬಾಜೂದಿಂದ[ದೃಷ್ಟಿಯಿಂದ]ದೇಹ ನಿಜವೆಂದು ತಿಳಿಯಿತು. ಮತ್ತು ದೃಶ್ಯದ ಬಾಜೂ ದಿಂದ ದೇಹ ನಿಜವೆಂದು ತಿಳಿಯಿತು. ಈ ಕಾರಣದಿಂದ ದೃಷ್ಟಾ ಮತ್ತು ದೃಶ್ಯ ಇವುಗಳಲ್ಲಿ ಪ್ರತ್ಯೇಕತ್ವ [ಭಿನ್ನತ್ವ] ನಿರ್ಮಾಣವಾಗುವದು. ಮತ್ತು ಆಗ ದೃಶ್ಯದ ಬಗ್ಗೆ ದೃಷ್ಟ್ಯಾನ ಮನದಲ್ಲಿ ಬಹುದೊಡ್ಡ ಸಂಶಯ ಒಳ್ಳೆದೃಢತರವಾಗಿ ಜಬರದಸ್ತಾಗಿ ಪಸರಿಸುವದು. [೪೨] ನಾವು ನಮ್ಮ ದೇಹಬುದ್ಧಿಯನ್ನು ಪೂರ್ಣ ಗಟ್ಟಿಗೊಳಿಸಿ [ಮಜಬೂತ ಮಾಡಿ] ಹೆಚ್ಚು ಧೈರ್ಯದಿಂದ ಬ್ರಹ್ಮನನ್ನು ನೋಡುವ ಪ್ರಯತ್ನ ಮಾಡಲಿಕ್ಕೆ ಹತ್ತಿದರೆ ಪರಬ್ರಹ್ಮನವರೆಗೆ ಒಯ್ಯುವ ದಾರಿಯನ್ನು ದೃಶ್ಯವು ತಡೆದಿದೆ. ಅಡ್ಡಿಯಾಗಿದೆ ಅಥವಾ ಅಡ್ಡಾಗಿದೆ ಎಂದು ನಮಗೆ ಕಂಡು ಬರುವದು. ಪರಮಾತ್ಮ ಸ್ವರೂಪ ಸೂಕ್ಷ್ಮವಿರುವದರಿಂದ ಅವನತನಕ ಹೋಗಿ ಮುಟ್ಟಬೇಕಾದರೆ ಯಾವತ್ತೂ ಸ್ಥೂಲ ಮತ್ತು ದೃಶ್ಯಗಳನ್ನು ಹಿಂದೆ ಬಿಟ್ಟು [ಬಾಜೂಕ್ಕೆ ಸರಿಸಿ] ಹೋಗಬೇಕಾಗುವದು. [೪೩] ಆತ್ಮಜ್ಞಾನದ ಕ್ಷೇತ್ರದಲ್ಲಿ ನಾವು ದೃಶ್ಯವನ್ನು ಸತ್ಯವೆಂದು ತಿಳಿಯುತ್ತೇವೆ. ಇಷ್ಟೇ ಅಲ್ಲ. ದೃಶ್ಯವು ಸತ್ಯವಿದೆಯೆಂದು ನಾವು ಪೂರ್ಣ ನಿಶ್ಚಯ ಮಾಡಿಕೊಂಡಿರುತ್ತೇವೆ. ಅಂದಮೇಲೆ ನೀವೆ ನೋಡಿರಲ್ಲ! ಈ ಭ್ರಮದಿಂದ ಎಷ್ಟೋಂದು ಗೊಂದಲ (ತೊಡಕು)ವಾಗಿ ಬಿಟ್ಟಿದೆ. (೪೪) ನಾನು ಎಂಬದರಿಂದ ಬ್ರಹ್ಮ ಪ್ರಾಪ್ತಿ ಆಗುವದು ಶಕ್ಯವೇ ಇಲ್ಲ. ಇರಲಿ ಈಗ ಹೆಚ್ಚಿಗೆ ಹೇಳುವದು ಸಾಕು. ದೃಶ್ಯದ ಮೇಲೆ ಖರೇತನದ ವಿಶ್ವಾಸ ಇರುವವೇ ದೇಹಬುದ್ಧಿಯ ಮುಖ್ಯ ಲಕ್ಷಣವಾಗಿದೆ. (೪೫)

ಅಸ್ತಿಚಾ ದೇಹೀ ಮಾಂಷಾಚಾ ಡೋಳಾ।ಸಾಹೇನ ಮ್ಹಣೇ ಬ್ರಹ್ಮಾಚಾ ಗೋಳಾ।
ತೋ ಜ್ಞಾತಾ ನವ್ಹೆ ಆಂಧಳಾ। ಕೇವಳ ಮೂರ್ಖ ॥೪೬॥
ದೃಷ್ಟೀಸಿ ದಿಸೆ ಮನಾಸಿ ಭಾಸೇ। ತಿತುಕೇ ಕಾಳಾಂತರೀ ನಾಸೇ।
ಮ್ಹಣೋನಿ ದೃಶ್ಯಾತೀತ ಅಸೆ। ಪರಬ್ರಹ್ಮ ತೇ ॥೪೭॥
ಪರಬ್ರಹ್ಮ ತೇ ಶಾಶ್ವತ। ಮಾಯಾ ತೇ ಚಿ ಅಶಾಶ್ವತ।
ಐಸಾ ಬೋಲಿಲಾ ನಿಶ್ಚಿತಾರ್ಥ। ನಾನಾ ಶಾಸ್ತ್ರೀ ॥೪೮॥
ಆತಾ ಪುಢೇ ನಿರೂಪಣ। ದೇಹಬುಧೀಚೇ ಲಕ್ಷಣ।
ಚುಕಾ ಪಡಿಲಾ ತೋ ಮೀ ಕೋಣ। ಬೋಲಿಲೇ ಅಸೇ ॥೪೯॥
ಮೀ ಕೋಣ ಹೇ ಜಾಣಾವೇ। ಮೀ ಪಣ ತ್ಯಾಗೂನಿ ಅನನ್ಯ ವ್ಹಾವೇ।
ಮಗ ಸಮಾಧಾನ ತೇ ಸ್ವಭಾವೇ। ಆಂಗೀ ಬಾಣೇ ॥೫೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
''ದೃಶ್ಯ ನಿರಸನ'' ನಾಮ ಸಮಾಸ ಅಷ್ಟಮ ॥

● ●

ನಮ್ಮ ದೇಹ ಕೇವಲ ಎಲುಬಿನ ಹಂದರವಾಗಿದೆ. ಇದರಲ್ಲಿ ಮಾಂಸದ ಕಣ್ಣು ಇರುವದು. "ಈ ಕಣ್ಣಿನಿಂದ ನಾನು ಬ್ರಹ್ಮಗೋಲ (ಬ್ರಹ್ಮಾಂಡ) ನೋಡುವೆನು" ಹೀಗೆ ಯಾರು ಅನ್ನುವರೋ ಅವರೇನೂ ಜ್ಞಾನಿಗಳಲ್ಲ. ಅವರು ಕುರುಡರು. ಹಾಗೂ ಕೇವಲ ಅಜ್ಞಾನಿಗಳಿರುವರು. ಬ್ರಹ್ಮನನ್ನು ಚರ್ಮ ಚಕ್ಷುಳಿಂದ ನೋಡಲು ಸಾಧ್ಯವಿಲ್ಲ. ಆದರೆ ಜ್ಞಾನ ಚಕ್ಷುಗಳಿಂದ ಬ್ರಹ್ಮನ ಅನುಭವ ಪಡೆಯುವದಿರುತ್ತದೆ. ಅನುಭವ ಹೊಂದುವದಿರುವದು. ಅಜ್ಞಾನಿ ಮನುಷ್ಯ ಅಧ್ಯಾತ್ಮಿಕ ಅಂಧನಿರುವನು. (೪೬) ನಿಮ್ಮ ಇಂದ್ರಿಯಗಳಿಗೆ ಏನೇನೂ ಕಾಣುವದೋ ಮತ್ತು ನಿಮ್ಮ ಮನಕ್ಕೆ ಯಾವ ಯಾವುದು ಭಾಸವಾಗುವದೋ ಅವೆಲ್ಲವೂ ಕಾಲಾಂತರದಲ್ಲಿ ನಾಶವಾಗುವವು. ಆದ್ದರಿಂದ ಅವಿನಾಶನಾದ ಪರಬ್ರಹ್ಮನು ದೃಶ್ಯದ ಆಚೆಗೆ ಇರುವನು. ಇವನಿಗೆ ನಾಶವೇಇಲ್ಲ. [೪೭] ಪರಬ್ರಹ್ಮನು ಶಾಶ್ವತನಾದರೆ ಮಾಯೆಯು ಅಶಾಶ್ವತವಿದೆ ಎಂಬ ನಿಶ್ಚಿತ ನಿರ್ಣಯವನ್ನು ಅನೇಕ ಶಾಸ್ತ್ರಗಳು ಹೇಳಿರುವವು. [೪೮] ಇನ್ನು ಮುಂದಿನ ಸಮಾಸದಲ್ಲಿ ದೇಹಬುದ್ಧಿಯ ಲಕ್ಷಣಗಳ ನಿರೂಪಣವಿದೆ. ಯಾವುದರ ಬಗ್ಗೆ ಭ್ರಮೆ ಉಂಟಾಗಿ ಎಲ್ಲವನ್ನೂ ಗೊಂದಲಗೆಡಿಸಿ ಘೋಟಾಳ ನಿರ್ಮಾಣ ಮಾಡಿದೆಯೋ ಮತ್ತು ಸಂಶಯಕ್ಕೆಡೆ ಮಾಡಿದೆಯೋ ಆ"ನಾನು" ಯಾರು? ಎಂಬ ಬಗ್ಗೆ ಹೇಳಲಾಗಿದೆ. [೪೯] ನಾನು ಯಾರು ಇದನ್ನು ಚನ್ನಾಗಿ ತಿಳಿದುಕೊಳ್ಳಬೇಕು. ಆಮೇಲೆ "ದೇಹವೇ ನಾನು" ಎಂಬ "ನಾನು" ಇದನ್ನು ತ್ಯಾಗ ಮಾಡಿ ನಿಜವಾದ "ನಾನು" ಎಂಬುದರೊಂದಿಗೆ ಅನನ್ಯ ರಾಗಬೇಕು. ಏಕರೂಪರಾಗಬೇಕು. ಇದು ಸಾಧಿಸಿದರೆ ಸಮಾಧಾನವು ಸಹಜವಾಗಿ ನಮ್ಮಲ್ಲಿ ನೆಡುವದು. [ಬರುವದು] [೫೦]

ಶ್ರೀ ದಾಸಬೋಧದ, ಗುರುಶಿಷ್ಯರ ಸಂವಾದದ ಆರನೆಯ ದಶಕದಲ್ಲಿಯ
"ದೃಶ್ಯ ನಿರಸನ ನಿರೂಪಣ"ವೆಂಬ ಎಂಟನೆಯ ಸಮಾಸವು ಮುಗಿದುದು.

• •

### ಸಮಾಸ ನವಮು : ಸಾರ ಶೋಧನ

॥ಶ್ರೀರಾಮ॥ ಗುಪ್ತ ಆಹೆ ಉದಂಡ ಧನ। ಕಾಯ ಜಾಣತೀ ಸೇವಕ ಜನ।
ತಯಾಸ ಆಹೆ ತೇ ಜ್ಞಾನ। ಬಾಹ್ಯಾಕಾರಾಚೇ ॥೧॥

ಗುಪ್ತ ಠೇವಿಲೇ ಉದಂಡ ಅರ್ಥ। ಆಣೀ ಪ್ರಗಟ ದಿಸತೀ ಪದಾರ್ಥ।
ಶಾಹಾಣೇ ಶೋಧಿತೀ ಸ್ವಾರ್ಥ। ಅಂತರೀ ಅಸೇ ॥೨॥

## ದಶಕ ೬. ಸಮಾಸ ೯. ಸಾರ ಶೋಧನ (ನುಡಿ ೩೪)

ಏಳನೆಯ ಸಮಾಸದಲ್ಲಿ ಶ್ರೀ ಸಮರ್ಥರು ಉಪಾಸನೆಯ ಮಹತ್ವವನ್ನು ಹೇಳುವಾಗ ತಾವು ಸ್ವತಃ ಆಚರಿಸಿದ [ಮಾಡಿದ] ಉಪಾಸನೆಯ [ರಾಮೋಪಾಸನೆಯ] ಮಹತ್ವವನ್ನು ಸ್ವಲ್ಪದರಲ್ಲಿ ಹೇಳಿರುವದಾದರೂ ಬಹಳ ಸಾರಮಯ ವರ್ಣನೆಯನ್ನು ಮಾಡಿರುವರು. ಈ ಸಮಾಸದಲ್ಲಿ ಸ್ವತಃದ ಆತ್ಮಾನುಭವದ ಬಗ್ಗೆ ಸ್ವಲ್ಪದರಲ್ಲಿ ಆದರೂ ಅತಿ ರಹಸ್ಯ ಪೂರ್ಣವಾದ ವರ್ಣನೆಯನ್ನು ಮಾಡಿರುತ್ತಾರೆ. ಶ್ರೀಸಮರ್ಥರು ನಿಃಸ್ಸಂಶಯದಿಂದ ಕೈಯೆತ್ತಿ ಹೇಳುವದೇನಂದರೆ ಸಂಸಾರವನ್ನು ಬಿಡದೆ ಮತ್ತು ಪ್ರಪಂಚದ ವ್ಯಾಪವನ್ನು ತ್ಯಜಿಸದೆ ಮನುಷ್ಯನು ಕೇವಲ ಸೂಕ್ಷ್ಮ ವಿಚಾರ, ವಿವೇಕದಿಂದ ಆತ್ಮಜ್ಞಾನವನ್ನು ಅನುಭವಿಸಬಲ್ಲನು, ಅನುಭವಿಸುವನು. ಶ್ರೀಸಮರ್ಥರು ಸ್ವತಃ ಇದರ ಅನುಭವ ತೆಗೆದುಕೊಂಡರು. ಇದೇ ಜನ್ಮದಲ್ಲಿ ಮನಸ್ಸಿನಿಂದ ಸಂಸಾರದೊಳಗಿಂದ ಬೇರೆಯಾಗಿ ಸ್ವಸ್ವರೂಪಾಕಾರವನ್ನು ಹೊಂದಲಿಕ್ಕೆ ಬರುತ್ತದೆ. ಇಷ್ಟೇ ಅಲ್ಲ, ದೇಹಾಭಿಮಾನಿ ಜೀವವು ವಿದೇಹ ದೆಸೆಯನ್ನು ಭೋಗಿಸಲೂ ಬರುವದು. ನಿರ್ಗುಣ ದೇವರೊಂದಿಗೆ ಅನನ್ಯ [ಏಕರೂಪ]ತನದಿಂದ ಇರಲಿಕ್ಕೂ ಬರುವದು. ಎಲ್ಲದಕ್ಕಿಂತ ಹೆಚ್ಚಿನದೆಂದರೆ ಎಲ್ಲವನ್ನು ಮಾಡಿಯೂ ಸಹ ಪುನಃ ತನ್ನ ಅಕರ್ತಾತನವನ್ನು ಹೇಗಿದ್ದಿತೋ ಹಾಗೆಯೇ ಕಾಯಂ ಇಡಲೂ ಬರುವದು. ಶ್ರೀಸಮರ್ಥರ ಸ್ವಾನುಭವದ ಈ ಸೂತ್ರಮಯ ವರ್ಣನೆಯು ಸಾಧಕರಿಗೆ ದೀಪಗ್ರಹದಂತೆ ಸದಾಕಾಲ ಮಾರ್ಗದರ್ಶಕವಾಗುವದು. ಸಾಮಾನ್ಯ ಜನರಿಗೆ ಮಾತ್ರ ಇದು ಸ್ವಲ್ಪ ವಿಲಕ್ಷಣವೆನಿಸಬಹುದು. ಅಂತೆಯೇ ಶ್ರೀ ಸಮರ್ಥರು ಕೊನೆಯಲ್ಲಿ ಹೇಳುವದೇನಂದರೆ "ಯಾರಾದರೂ ನಾನು ಹೇಳಿದ್ದು ಸುಳ್ಳು" ಎಂದು ಅಂದದ್ದಾದರೆ "ಅವರಿಗೆ ನನ್ನ ಉಪಾಸನೆಯ ಶಪಥ ಆಣೆ ಇರುವದು."ಇರಲಿ ಈ ನಮ್ಮ ವಿಶ್ವದಲ್ಲಿ ಸಗುಣ ವ, ನಿರ್ಗುಣ ದೃಶ್ಯ,ವ ಅದೃಶ್ಯ, ಸ್ಥೂಲ, ವ ಸೂಕ್ಷ್ಮ, ವಿಶೇಷ ವ, ಸಾಮಾನ್ಯ ಮಾಯಾ, ವ ಬ್ರಹ್ಮ, ಅಸಾರ, ವ ಸಾರ ಇವೆಲ್ಲ ಏಕತ್ರ [ಒಂದರ ಹತ್ತಿರ ಇನ್ನೊಂದು] ಇರುವವು. ಕೂಡುವವು. ಜೀವನದ ಪ್ರತಿಕ್ಷಣಕ್ಕೂ ಅಸಾರವನ್ನು ತ್ಯಜಿಸಿ ಸಾರ (ಸತ್ಯ ವ ಶಾಶ್ವತ)ವನ್ನು ಸ್ವೀಕರಿಸಬೇಕಾಗುವದು. ಅಸಾರವು ಮೇಲಿನ ಕವಚವಿರುವದು. ಆದರೆ ಸಾರವು ಅಂತರಂಗದಲ್ಲಿಯ ರಹಸ್ಯವಿರುವದು. ಅಸಾರ ಮತ್ತು ಸಾರ ಈ ಎರಡರ ಲಕ್ಷಣ ನಿಶ್ಚಿತಪಡಿಸುವವೇ ಮನುಷ್ಯನ ಬುದ್ಧಿಯ ಕೆಲಸವಿರುವದು. ಇದಕ್ಕೆ ಸಾರಾಸಾರ ವಿಚಾರವೆನ್ನುವರು. ಹೀಗೆ ವಿಚಾರ ಮಾಡಿದ ನಂತರ ಸಾರ (ಸತ್ಯ-ಶಾಶ್ವತ)ದ ಬೆನ್ನು ಹತ್ತಿ ಅಸಾರದ ಅಧೀನ(ಬಂಧನ)ದಿಂದ ಬಿಡುಗಡೆ ಹೊಂದುವ ಪ್ರಯತ್ನಕ್ಕೆ ಪರಮಾರ್ಥ ಸಾಧನೆ ಎಂದು ಅನ್ನುವರು.ಪರಮಾತ್ಮನು ದೃಶ್ಯದಿಂದ ಬೇರೆ ಇರುವನೆಂಬುದೇನೋ ನಿಜವೇಆದರೆ ದೃಶ್ಯದಲ್ಲಿಯೂ ಅವನು ಅಂತರ್ಯಾಮಿ ರೂಪದಿಂದ ವ್ಯಾಪಿಸಿಯೇ ಇರುವನು, ಸಂತರ ಸತತಸಹವಾಸದಲ್ಲಿ ಇದ್ದು ಆ ಗುಪ್ತವಿರುವ ಪರಮಾತ್ಮನನ್ನು ಶೋಧಿಸಿ ನೋಡುವದನ್ನು ಕಲಿಯಬೇಕು.

### ದಶಕ ೬. ಸಮಾಸ ೯. ಸಾರ ಶೋಧನ (ನುಡಿ ೩೪)

ಆತ್ಮಸ್ವರೂಪ ಅಥವಾ ಇತರ ಜ್ಞಾನ ಮಾಡಿಕೊಡುವ ಪರಮಾರ್ಥವು ಗುಪ್ತವಿರುವದು. ಅದೃಶ್ಯ ವಿರುವದು. ಯಾರು ನಿಜವಾದ ತಿಳವಳಿಕೆಯವರಿರುವರೋ ಅರ್ಥಾತ್ ಸಂತ-ಸಾಧುಗಳು ಮಾತ್ರ ಆತ್ಮರೂಪಿ ಗುಪ್ತ ಧನವನ್ನು ಶೋಧಿಸಿರುವರು:- ಒಬ್ಬ ಶ್ರೀಮಂತ ಮನುಷ್ಯನು ಧನಕನಕಾದಿ ದ್ರವ್ಯವನ್ನು ಗುಪ್ತವಾಗಿ ಇಟ್ಟಿರುವನು. ಇದು ಅವನ ನೌಕರನಿಗೆ ಗೊತ್ತಿರುವದಿಲ್ಲ. ಮನೆಯ ಒಳಗೆ ಹಾಗೂ ಹೊರಗೆ ಕಾಣಿಸುವ ಸಂಪತ್ತು ಮಾತ್ರ ಅವನಿಗೆ ಗೊತ್ತಿರುವದು. (೧) ಆ ಯಾವ ಶ್ರೀಮಂತ ಧನಿಕನು ಅತಿ ಮಹತ್ವದ ಬಹಳಷ್ಟು ದ್ರವ್ಯವನ್ನು ಗುಪ್ತವಾಗಿ ಬಚ್ಚಿಟ್ಟಿರುವನೋ ಆ ಪ್ರಮಾಣದಿಂದ ನೋಡಿದರೆ ಸ್ವಲ್ಪವೇ ವಸ್ತುಗಳು ಮೇಲೆ ಕಾಣುವವು. ಇದರಂತೆಯೇ ದೃಶ್ಯದ ಒಳಗಡೆ ಯಾವ ಖರೇ ನಾನು ಎಂಬುದು ಇರುವದೋ ಅದರ ಶೋಧವನ್ನು ತಿಳಿದವರು ಮಾಡುವರು. ದೃಶ್ಯವನ್ನು ಸಂಗ್ರಹಿಸುವದು ಸ್ವಾರ್ಥವು. ಇದು ಖೊಟ್ಟಿಯಾದರೆ ಅದೃಶ್ಯವಿರುವ "ನಾನು" ಎಂಬುದನ್ನು ನೋಡುವದು. ಖರೇ ಸ್ವಾರ್ಥವೆಂದು ತಿಳಿಯಬೇಕು. (೨)

ತೈಸೇ ದೃಶ್ಯ ಹೇ ಮಾಈಕ । ಪಾಹಾತ ಅಸತೀ ಸಕಳ ಲೋಕ ।
ಪರೀ ಜಯಾಸ ಠಾಉಕಾ ವಿವೇಕ । ತೇ ತದನಂತರ ಜಾಣತೀ ॥೩॥

ದ್ರವ್ಯ ಠೇಊನ ಜಳ ಸೋಡಿಲೇ । ಲೋಕ ಮ್ಹಣತೀ ಸರೋವರ ಭರಲೇ ।
ತಯಾಚೇ ಅಭ್ಯಾಂತರ ಕಳಲೇ। ಸಮರ್ಥ ಜನಾಸೀ ॥೪॥

ತೈಸೆ ಜ್ಞಾತೆತೇ ಸಮರ್ಥ । ತೇಹೀ ವೋಳಖಿಲಾ ಪರಮಾರ್ಥ ।
ಇತರ ತೇ ಕರಿತೀ ಸ್ವಾರ್ಥ । ದೃಶ್ಯ ಪದಾರ್ಥಾಚಾ ॥೫॥

ಕಾಬಾಡೀ ವಾಹಾತೀ ಕಾಬಾಡ । ಶ್ರೇಷ್ಠ ಭೋಗಿತೀ ರತ್ನೇ ಜಾಡ ।
ಹೇ ಜಯಾಚೇ ತಯಾಸ ಗೋಡ । ಕರ್ಮಯೋಗೇ ॥೬॥

ಯೇಕ ಕಾಷ್ಠಸ್ವಾರ್ಥ ಕರಿತೀ । ಏಕ ಶುಭಾ ಯೇಕ ವಾಟಿತೀ ।
ತೈಸೆ ನವ್ಹೇತ ಕೀ ನೃಪತೀ । ಸಾರಭೋಕ್ತೇ ॥೭॥

ಜಯಾಸ ಆಹೇ ವಿಚಾರ । ತೇ ಸುಖಾಸನೀ ಜಾಲೆ ಸ್ವಾರ ।
ಇತರ ಜನಳೀಲ ಭಾರ । ವಾಹಾತ ಚಿ ಮೇಲೇ ॥೮॥

ಯೇಕ ದಿವ್ಯಾನ್ನೇ ಭಕ್ಷಿತೀ । ಯೇಕ ವಿಷ್ಠಾ ಸಾವಡಿತೀ ।
ಆಪಣ ವರ್ತಲ್ಯಾಚಾ ಘೇತೀ । ಸಾಭಿಮಾನ ॥೯॥

ಸಾರ ಸೇವಿಜೇ ಶ್ರೇಷ್ಠೀ । ಅಸಾರ ಘೇಯಿಜೇ ವೃಥಾಪೃಷ್ಠೀ ।
ಸಾರಾ ಅಸಾರಾಚೀ ಗೋಷ್ಟೀ । ಸಜ್ಞಾನ ಜಾಣತೀ ॥೧೦॥

ಗುಪ್ತ ಪರೀಸ ಚಿಂತಾಮಣೀ । ಪ್ರಗಟ ಖಡೆ ಕಾಂಚಮಣೀ ।
ಗುಪ್ತ ಹೇಮ ರತ್ನಖಾಣೀ । ಪ್ರಗಟ ಪಾಷಾಣ ಮೃತಿಕಾ ॥೧೧॥

ಅಮ್ಹಾಶಂಖ ಅಮ್ಹಾವೇಲ । ಗುಪ್ತ ವನಸ್ಪತಿ ಅಮೋಲ ।
ಯೆರಂಡ ಧೋತ್ರೇ ಬಹು ಸಾಲ । ಪ್ರಗಟ ಸಿಂಪೀ ॥೧೨॥

ಈ ಮಾಯಾಮಯ ದೃಶ್ಯ ಜಗತ್ತನ್ನು ಎಲ್ಲ ಜನರೂ ನೋಡುವವರಾಗಿರುವರು· ಆದರೆ ಯಾರಿಗೆ ಸಾರಾಸಾರ ವಿಚಾರ, ಸೂಕ್ಷ್ಮ ವಿವೇಕ ಇರುವದೋ ಅವರಿಗೆ ಮಾತ್ರ ದೃಶ್ಯದ ಒಳಗಿರುವ ಆತ್ಮಸ್ವರೂಪವು ಗೊತ್ತಾಗುವದು. (೩) ಒಬ್ಬ ಮನುಷ್ಯನು ಒಂದು ದೊಡ್ಡ ಉದ್ದಗಲವಿರುವ ತಗ್ಗು ತಯಾರ ಮಾಡಿದನು. ಮತ್ತು ಅದರಲ್ಲಿ ನೀರು ತುಂಬಿದನು. ಸಾಮಾನ್ಯ ಜನರು ಇದನ್ನು ನೋಡಿ ನೀರಿನಿಂದ ಹೊಂಡ (ಕೆರೆ) ತುಂಬಿದೆ. ಎಂದು ಅನ್ನುವರು. ಆದರೆ ಕೆರೆಯ (ಹೊಂಡದ) ಬುಡದಲ್ಲಿ ಅವನು ದ್ರವ್ಯವಿಟ್ಟ ಗುಪ್ತವಿಚಾರ ಅವರಿಗೆ ಗೊತ್ತಿರುವದಿಲ್ಲ. ಇದು ಕೇವಲ ಚತುರ ಹಾಗೂ ತಿಳಿದಂಥ ಪುರುಷರಿಗೆ ಗೊತ್ತಾಗುವದು. (೪) ಇದೇ ಪ್ರಕಾರ ಯಾವ ಪುರುಷನ ಹತ್ತಿರ ಜ್ಞಾನದ (ಗಂಟು) ಸಾಮರ್ಥ್ಯವಿರುವದೋ ಅವನಿಗೇ ಪರಮಾರ್ಥವು ಬರೋಬರ (ಸರಿಯಾಗಿ) ತಿಳಿಯಲಿಕ್ಕೆ ಶಕ್ಯವಾಗುವದು. ಪರಮಾರ್ಥ ಅಂದರೆ ಮಾಯೆಯಲ್ಲಿಯ ಗುಪ್ತ ಬ್ರಹ್ಮವನ್ನು ತಿಳಿಯುವದು. ಈ ಸಾಮರ್ಥ್ಯ ಯಾರ ಹತ್ತಿರ ಇರುವದಿಲ್ಲವೋ ಅಂಥವರು ಮಾತ್ರ ದೃಶ್ಯ ಪದಾರ್ಥಗಳನ್ನು ಸಂಗ್ರಹ ಮಾಡುವದರಲ್ಲಿಯೇ ತಮ್ಮ ಸ್ವಾರ್ಥ ಸಾಧಿಸುವದೆಂಬ ತಿಳುವಳಿಕೆ ಹೊಂದಿರುವರು.(೫)ಜಗತ್ತಿನಲ್ಲಿ ಸಾರ ವ ಅಸಾರ ಇವೆರಡೂ ಇರುವವು. ಭಾಗ್ಯವಾನನಾದವನು ಮಾತ್ರ ಸಾರವನ್ನು ಸೇವಿಸುವನು. ಅದೇ ಭಾಗ್ಯ ಹೀನನಾದವನು ಅಸಾರವನ್ನು ಸೇವಿಸುವನು. ಒಜ್ಜೆ ಹೊರುವವನು (ಹಮಾಲನು) ಒಜ್ಜೆ ಹೊರುವದರಲ್ಲಿಯೇ ಜನ್ಮ ಕಳೆಯುವನು. ಅದೇ ಶ್ರೇಷ್ಠ ಪುರುಷನು ಅಮೌಲ್ಯವಾದ ರತ್ನಾದಿಗಳ ಉಪಭೋಗ ಪಡೆಯುವನು. ಪ್ರತಿಯೊಬ್ಬರ ವ್ಯಕ್ತಿತ್ವದ ಯಾವ ಪೂರ್ವೇತಿಹಾಸ ಇರುವದೋ ಅದರ ಪ್ರಕಾರ ಅವರವರದು ಅವರಿಗೇ ಒಳ್ಳೆಯದೆನಿಸುತ್ತದೆ·(೬) ಒಬ್ಬನು ಅರಣ್ಯದಿಂದ ಕಟ್ಟಿಗೆ ತಂದು ಹೊರಿ ಕಟ್ಟಿ ಮಾರುವನು, ಇನ್ನೊಬ್ಬ ಬೆರಣೀ (ಕುರುಳು,ಕುಳ್ಳು)ಮಾರಿ ಹೊಟ್ಟೆ ತುಂಬಿಕೊಳ್ಳುವನು. ಆದರೆ ರಾಜಭೋಗ ಭೋಗಿಸುವ ರಾಜ ಹೀಗೆ ಇರುವದಿಲ್ಲ. ಅವನು ಅಮೌಲ್ಯವಾದ ವಸ್ತುಗಳ ಉಪಭೋಗ ಪಡೆಯುವನು. (೭) ಯಾರಲ್ಲಿ ಸಾರಾಸಾರ ವಿಚಾರ [ವಿವೇಕಯುಕ್ತ ವಿಚಾರ] ವಿರುವದೋ ಅಂಥ ಮನುಷ್ಯರು ರಾಜನಂತೆ ಸ್ವಾನಂದ ಸಿಂಹಾಸನದ ಮೇಲೇರಿ ಕೂಡುವರು. ಯಾರಲ್ಲಿ ಇಂಥ ವಿವೇಕಯುಕ್ತವಿಚಾರವಿರುವದಿಲ್ಲವೋ ಅಂಥವರು ಮಾತ್ರ ಹತ್ತಿರವಿರುವ ದೃಶ್ಯದ ಒಜ್ಜೆಯನ್ನೇ ಹೊತ್ತು ಹೊತ್ತು ಸತ್ತು ಹೋಗುವರು· [೮] ಆತ್ಮಜ್ಞಾನ ಸಂಪನ್ನ ಮನುಷ್ಯನು ಉತ್ತಮೋತ್ತಮ ಅನ್ನ ಸೇವಿಸುವನು. ಆದರೆ ಅಜ್ಞಾನಿ ಮನುಷ್ಯನು ಕೇವಲ ಹೊಲಸನ್ನು ಕೂಡಿ ಹಾಕುತ್ತಾನೆ. ಇಷ್ಟೇ ಅಲ್ಲ, ತಾನು ಮಾಡುತ್ತಿರುವದರ ಬಗ್ಗೆ ಅಭಿಮಾನವನ್ನು ಪಡುತ್ತಾನೆ. [೯] ಯಾರು ಖರೇ ಜ್ಞಾನಿಗಳಿರುವರೋ ಅವರು ವಿಶ್ವದ ಗುಪ್ತಾರ್ಥಗಳನ್ನು ಸ್ವಾಧೀನ ಮಾಡಿಕೊಂಡಿರುತ್ತಾರೆ· [ತಿಳಿದಿರುತ್ತಾರೆ]. ಅಸಾರವು ಮಾತ್ರ ಸಾಮಾನ್ಯ ಜನರಿಗೆ ಕಾಣುತ್ತದೆ· ಸಾರವು ಮಾತ್ರ ಗುಪ್ತವಿರುವದು. ಹೊಟ್ಟೆಪಾಡಿನ ಜನರು ಮತಾಂತರಗಳನ್ನು ಹುಡುಕುತ್ತ ತಿರುಗಾಡುವರು:-ಯಾರು ಖರೋಖರ ಶ್ರೇಷ್ಠರಿರುತ್ತಾರೋ ಅಂಥವರು ಮಾತ್ರ ಕೇವಲ ಸಾರವನ್ನು ಸ್ವೀಕರಿಸುವರು. [ಸೇವಿಸುವರು]. ಅದೇ ಆಲಸಿಗಳು, ಹಾಗೂ ದುಡಿಯದೇ ಕುಳಿತು ತಿನ್ನುವವರು ಅಸಾರವನ್ನು ಮಾತ್ರ ಸೇವಿಸುವರು. ಸಾರ-ಅಸಾರ ಸೇವನದ ವಿವೇಕವನ್ನು ಜಾಣರು[ತಿಳಿದವರು] ಮಾಡುವರು[೧೦] ಪರಿಸ ಹಾಗೂ ಚಿಂತಾಮಣಿಗಳಂಥ ಕಿಮ್ಮತ್ತಿನ ರತ್ನಗಳು ಗುಪ್ತವಿರುವವು. ಅದೇ ಹರಳು ಕಲ್ಲು,ಕಾಜಿನ ಮಣಿಗಳಂಥವು ಎಲ್ಲಿ ಬೇಕಾದಲ್ಲಿ ಬೈಲಿಗೇ ಬಿದ್ದಿರುವವು. ಬಂಗಾರದ ಮತ್ತು ರತ್ನದ ಖಣಿಗಳು ಗುಪ್ತವಿರುವವು. ಅದೇ ಕಲ್ಲು-ಮಣ್ಣುಗಳು ರಸ್ತೆಯಲ್ಲಿಯೇ ಬಿದ್ದಿರುವದನ್ನು ನಾವು ಕಾಣುತ್ತೇವೆ. [೧೧] ಬಲಮುರಿ [ಬಲಗಡೆ ಮುಖ] ಶಂಖ ಅಥವಾ ಬಲಗಡೆಯಿಂದ ಸುತ್ತಿರುವ (ಬಲಮುರಿ) ಬಳ್ಳಿ, ಅಥವಾ ಅಮೌಲ್ಯವಾದ ವನಸ್ಪತಿಗಳು ಇವು ಗುಪ್ತವಿರುವವು. ಆದರೆ ಅದೇ ಔಡಲ, ಮದಗುಣಿಕಿ, ಗೊಳಗೊಳಕಿ ಗಿಡ ಮತ್ತು ಸಾದಾ ಸಿಂಪುಗಳು ಬೇಕಾದಷ್ಟು ಬೇಕಾದಲ್ಲಿ ಸಿಗುವವು. [೧೨]

ಕೋಠೇಂ ದಿಸೇನಾ ಕಲ್ಪತರು । ಉದಂಡ ಸೇರಾಂಚಾ ವಿಸ್ತಾರು ।
ಪಾಹಾತಾ ನಾಹೀಂ ಮಳಿಯಾಗರು। ಬೋರೀ ಬಾಭಳಾ ಉದಂಡೀ ॥೧೩॥

ಕಾಮಧೇನು ಜಾಣಿಜೆ ಇಂದ್ರೀ । ಸೃಷ್ಟೀತ ಉದಂಡ ಖಿಲ್ಲಾರೇ ।
ಮಹದ್ಭಾಗ್ಯ ಭೋಗಿಜೆ ನೃಪವರೇ । ಇತರ ಕರ್ಮಾನುಸಾರ ॥೧೪॥

ನಾನಾ ವ್ಯಾಪಾರ ಕರಿತೀ ಜನ । ಆವಘೇಚಿ ಮ್ಹಣತೀ ಸಕಾಂಚನ ।
ಪರಂತು ಕುಬೇರಾಚೇ ಮಹಿಮಾನ । ಕೋಣಾಸೀಚಿ ನಯೇ ॥೧೫॥

ತೈಸಾ ಜ್ಞಾನೀ ಯೋಗೇಶ್ವರ । ಗುಪ್ತಾರ್ಥಲಾಭಾಚಾ ಈಶ್ವರ ।
ಇತರ ತೇಪ್ರೋಟಾಚೆ ಕಿಂಕರ । ನಾನಾ ಮತೇಂ ಧುಂಡಿತೀ ॥೧೬॥

ತಸ್ಮಾತ್ ಸಾರ ತೇಂ ದಿಸೇನಾ । ಆಣೀ ಅಸಾರ ತೇಂ ದಿಸೆ ಜನಾ ।
ಸಾರಾಸಾರ ವಿವಂಚನಾ । ಸಾಧು ಜಾಣತೀ ॥೧೭॥

ಇತರಾಸ ಹೇಂ ಕಾಯೆ ಸಾಂಗಣೇಂ । ಖರೇಂ ಖೋಟೇಂ ಕೋಣ ಜಾಣೇ ।
ಸಾಧು ಸಂತಾಚಿಯೇಂ ಖುಣೆ । ಸಾಧುಸಂತ ಜಾಣತೀ ॥೧೮॥

ದಿಸೇನಾ ಜೇಂ ಗುಪ್ತ ಧನ । ತಯಾಸಿ ಕರಣೇಂ ಲಾಗೆ ಅಂಜನ ।
ಗುಪ್ತ ಪರಮಾತ್ಮಾ ಸಜ್ಜನ । ಸಂಗತೀ ಶೋಧಾವಾ ॥೧೯॥

ರಾಯಾಚೆ ಸನ್ನಿಧ ಹೋತಾ । ಸಹಜ ಚಿ ಲಾಭೆ ಶ್ರೀಮಂತತಾ ।
ತೈಸಾ ಹಾ ಸತ್ಸಂಗ ಧರಿತಾ। ಸದ್ವಸ್ತು ಲಾಭೇ ॥೨೦॥

ಸದ್ವಸ್ತೂಸ ಲಾಭೇ ಸದ್ವಸ್ತು । ಅವ್ಯಾವೆಸ್ತಾಸ ಅವ್ಯಾವೆಸ್ತು ।
ಪಾಹಾತಾ ಪ್ರಶಸ್ತಾಸ ಪ್ರಶಸ್ತು । ವಿಚಾರ ಲಾಭೇ ॥೨೧॥

ಮ್ಹಣೌನಿ ಹೇಂ ದೃಶ್ಯಜಾತ । ಆವಘೇಂ ಚಿ ಆಹೆ ಅಶಾಶ್ವತ ।
ಪರಮಾತ್ಮಾ ಅಚ್ಯುತ ಅನಂತ । ತೋ ಯಾ ದೃಶ್ಯಾ ವೇಗಳಾ ॥೨೨॥

ದೃಶ್ಯಾವೇಗಳಾ ದೃಶ್ಯಾ ಅಂತರೀಂ । ಸರ್ವಾತ್ಮಾ ತೋ ಸಚರಾಚರೀಂ ।
ವಿಚಾರ ಪಾಹಾತಾ ಅಂತರೀಂ । ನಿಶ್ಚಯೆ ಬಾಣೇ ॥೨೩॥

ಶಿರಸ (ಶೇರ) ಎಲೆ ಇಲ್ಲದ ಮತ್ತು ಬಿಳಿ ಜಿಗಟು ರಸ ಇರುವ ಕಡ್ಡಿಕಡ್ಡಿಯಾಗಿರುವ ಸಾಮಾನ್ಯ ಗಿಡಗಳು ಸಾಕಷ್ಟು ಕಂಡು ಬರುವವು. ಆದರೆ ಕಲ್ಪತರು ವೃಕ್ಷವು ಮಾತ್ರ ಎಲ್ಲಿಯೂ ಕಂಡು ಬರುವದಿಲ್ಲ. ಬಾರಿ, ಜಾಲಿಯ ಗಿಡಗಳು ಸಾಕಷ್ಟು ಕಾಣುವವು. ಆದೇ ಚಂದನ (ಗಂಧ)ದ ಗಿಡಗಳು ಹುಡುಕಿದರೂ ಬೇಗ ಸಿಗುವದಿಲ್ಲ. (ಕಾಣುವದಿಲ್ಲ) (೧೩) ಜಗತ್ತಿನಲ್ಲಿ ಆಕಳದ ಹಿಂಡುಗಳು ಬಹಳಷ್ಟು ಇರುವವು. ಆದರೆ ಕಾಮಧೇನು ಮಾತ್ರ ಇಂದ್ರನ ಹತ್ತಿರವೇ ಇರುವದು· ರಾಜನೊಬ್ಬ ಮಾತ್ರ ನಿಜವಾದ ಖರೇ ಭೋಗ ಭಾಗ್ಯಗಳನ್ನು ಅನುಭವಿಸುವನು. ಇನ್ನುಳಿದವರು ಅವರವರ ಕರ್ಮದಂತೆ ಅಲ್ಪಸ್ವಲ್ಪ ಭಾಗ್ಯಗಳನ್ನು ಅನುಭವಿಸುವರು.ಅರ್ಥಾತ್ ಇವರು ಅಲ್ಪಭಾಗ್ಯ ಭೋಗಿಗಳು(೧೪)ಜಗತ್ತಿನೊಳಗೆ ಅನೇಕಪ್ರಕಾರದ ವ್ಯಾಪಾರ ಮಾಡುವ ಜನರಿರುವರು.ಈ ವ್ಯಾಪಾರಿಗಳೆಲ್ಲರೂ ತಾವು ಧನಿಕರು (ಶ್ರೀಮಂತರು) ಎಂದು ಅನಿಸಿಕೊಳ್ಳುವರು. ಆದರೆ ಕುಬೇರನ ಶ್ರೀಮಂತಿಕೆಗೆ ಇವರಾರೂ ಸರಿಯಾಗಲು ಎಂದಿಗೂ ಶಕ್ಯವಿಲ್ಲ. (೧೫) ಇದರಂತೆಯೇ ಯಾವನು ಖರೇ ಜ್ಞಾನಿ ಇರುವನೋ, ಯೋಗೇಶ್ವರನಿರುವನೋ, ಅವನು ದೃಶ್ಯದಲ್ಲಿ ಗುಪ್ತವಾಗಿರುವಂಥ ಪರಮಾತ್ಮರೂಪಿ ಧನ ಸಂಪತ್ತು ಪಡೆದು ಅದರ ಮಾಲಕನೇ ಆಗುವನು. ಇನ್ನುಳಿದವರು ಕೇವಲ ಹೊಟ್ಟೆಯದಾಸರಾಗಿರುವ ಹೊಟ್ಟೆಬಾಕ-ಜನರು.ಇವರು ಭಿನ್ನ ಮತ್ತು ಮತಾಂತರಗಳಲ್ಲಿಯ ಭಿನ್ನತನವನ್ನು ಶೋಧಿಸುತ್ತ ಕೂಡ್ರುವರು. (೧೬) ಸಾರಾಂಶ:- ಸಾರ ಇದ್ದುದು ಕಾಣುವದಿಲ್ಲ. ಕೇವಲ ಅಸಾರ ಇರುವದು ಮಾತ್ರ ಸಾಮಾನ್ಯ ಜನರಿಗೆ ಕಾಣುವದು. ಅಸಾರದೊಳಗಿಂದ ಸಾರವಾದದ್ದನ್ನು ಹೇಗೆ ಗುರುತಿಸಿ ಬೇರೆ ಮಾಡಬೇಕೆಂಬ ಕಲೆಯನ್ನು ಸಂತ ಸಾಧು ಶರಣರು ಮಾತ್ರ ತಿಳಿದಿರುತ್ತಾರೆ.(೧೭) ಸಾಮಾನ್ಯರಾದ ಜನರಿಗೆ ಇದನ್ನು ಹೇಳಿ ಉಪಯೋಗವಿಲ್ಲ. ಯಾಕೆಂದರೆ ಇವರಿಗೆ ಅಂದರೆ ಸಾಮಾನ್ಯರಿಗೆ ಖರೇ ಮತ್ತು ಖೊಟ್ಟಿ ಯಾವದೆಂಬುದನ್ನು ತಿಳಿಯುವ ಕಲಾ (ಜ್ಞಾನ) ಇರುವದಿಲ್ಲ. ಅಂತೆಯೇ ಸಾಧು ಸಂತ ಶರಣರ ಗುರುತನ್ನು ಕೇವಲ ಸಾಧು ಸಂತ ಶರಣರೇ ಗುರುತಿಸುವರು. (೧೮) ಸರ್ವ ದೃಶ್ಯದ ಅಂತರ್ಯಾಮದಲ್ಲಿ ಇರುವ ಗುಪ್ತ ಪರಮಾತ್ಮನನ್ನು ಸತ್ಸಂಗತಿಯಲ್ಲಿದ್ದು ಶೋಧಿಸಬೇಕು ತಿಳಿಯಬೇಕು. ಇದಕ್ಕಾಗಿ ಪ್ರಪಂಚದಲ್ಲಿ ಯಾವ ಬದಲಾವಣೆಯನ್ನೂ ಮಾಡುವದು ಅವಶ್ಯವಿಲ್ಲ. ಆದರೆ ಸೂಕ್ಷ್ಮ ವಿವೇಕ ಸಾರಾಸಾರ ವಿಚಾರ ಮಾತ್ರ ಬೇಕಾಗುವದು. ಗುಪ್ತವಾಗಿ ಇಟ್ಟಿರುವ ಧನ ಕಾಣುವದಿಲ್ಲ. ಆದರೆ ಕಣ್ಣಿಗೆ ಅಂಜನ ಹಾಕಿಕೊಂಡರೆ ಆ ಧನವು ಕಾಣುವದು. ಇದರಂತೆ ದೃಶ್ಯದೊಳಗೆ ಗುಪ್ತವಿರುವ ಪರಮಾತ್ಮನು ಮೇಲ್ನೋಟದ ಚರ್ಮ ದೃಷ್ಟಿಗೆ ಕಾಣುವದಿಲ್ಲ. ಇದಕ್ಕಾಗಿ ಜ್ಞಾನಾಂಜನದ ದೃಷ್ಟಿಬೇಕಾಗುವದು. ಇದು ಸಂತ ಸಾಧು ಜನರಲ್ಲಿ ಇರುವದು. ಇದನ್ನು ಪಡೆಯುವದಕ್ಕಾಗಿ ಇವರ ಆಶ್ರಯದಲ್ಲಿದ್ದುಕೊಂಡು ಶೋಧಿಸಬೇಕು ತಿಳಿಯಬೇಕು (೧೯) ಯಾರು ರಾಜರ ಸಂಗತಿಯಲ್ಲಿರುವರೋ ಅವರಿಗೆ ಸುಲಭವಾಗಿ ತನ್ನಷ್ಟಕ್ಕೆ ತಾನೇ ವೈಭವ ಭೋಗಿಸಲಿಕ್ಕೆ ಸಿಗುವದು. ಇದೇ ಪ್ರಕಾರ ಯಾರು ಸಾಧು ಸಂತರ ಸಂಗತಿಯಲ್ಲಿರುವರೋ ಅವರಿಗೆ ಸುಲಭವಾಗಿ ತನ್ನಷ್ಟಕ್ಕೆತಾನೇ ಪರಮಾತ್ಮ ವಸ್ತು ಪ್ರಾಪ್ತವಾಗುವದು.(೨೦)ಯಾರಿಗೆ ಪರಮಾತ್ಮ ವಸ್ತುವಿನ ನಿಜವಾದ ತಳಮಳವಿರುವದೋ ಅವರಿಗೆ ಮಾತ್ರ ಆ ವಸ್ತು ಸಿಗುವದು. ಯಾರ ಜೀವನ ಅವ್ಯವಸ್ಥಿತವಿರುವದೋ ಅಂಥವರ ಜೀವನದ ತುಂಬೆಲ್ಲ ಗೊಂದಲವೇ ಇರುವದು. ದೊಡ್ಡವರ ಸಹವಾಸ ಮಾಡಿದರೆ ನಿಮಗೆ ದೊಡ್ಡ-ಶ್ರೇಷ್ಠ ವಿಚಾರಗಳು. ಬರುವವು ಅಥವಾ ಶ್ರೇಷ್ಠವಸ್ತು ಅಂದರೆ ಪರಮಾತ್ಮವಸ್ತು ಕಾಣಬೇಕೆಂಬ ಹಂಬಲವಿದ್ದರೆ ಶ್ರೇಷ್ಠ (ದೊಡ್ಡ)ವಿಚಾರಗಳ ಸದ್ವಸ್ತುವಿನ ಲಾಭವೇ ಆಗುವದು. (೨೧) ಒಟ್ಟಿನಲ್ಲಿ ಈ ಎಲ್ಲ ದೃಶ್ಯವೂ ವಿನಾಶಿ ಇರುವದು. ಆದರೆ ಅಚ್ಯುತ ವ-ಅನಂತಪರಮಾತ್ಮನು ಮಾತ್ರ ಈ ನಾಶಿವಂತವಾದ ದೃಶ್ಯದಿಂದ ಪ್ರತ್ಯೇಕವಾಗಿಯೇ ಇರುವನು. (೨೨) ಈ ಪರಮಾತ್ಮನು ದೃಶ್ಯದಿಂದ ಬೇರೆಯಾಗಿದ್ದರೂ ಸಹ ದೃಶ್ಯದ ಅಂತರಂಗದಲ್ಲಿ ವಾಸ ಮಾಡಿರುವನು. ಯಾವತ್ತೂ ಚರಾಚರ ಸಜೀವ-ನಿರ್ಜೀವ,·ಅಲ್ಲಾಡುವವ ಅಲ್ಲಾಡದಿರುವ ಯಾವತ್ತೂ ಜಗವನ್ನೆಲ್ಲ ತುಂಬಿಯೇ ಇರುವವನಾಗಿರುವದರಿಂದ ಇವನು ಸರ್ವದರ ಆತ್ಮನಿರುವನು. ವಿವೇಕದಿಂದ ಸೂಕ್ಷ್ಮ ವಿಚಾರ ಮಾಡಿದರೆ, ಪರಮಾತ್ಮನು ಸರ್ವಾಂತರ್ಯಾಮಿ ಆಗಿರುವನೆಂಬುದರ ನಿಶ್ಚಯವು ಹೃದಯದಲ್ಲಿ ನೆಡುವದು. ನಿಶ್ಚಯಗೊಳ್ಳುವದು. (೨೩)

ಸಂಸಾರತ್ಯಾಗ ನ ಕರಿತಾ । ಪ್ರಪಂಚ ಉಪಾಧೀ ನ ಸಾಂಡಿತಾ ।
ಜನಾಮಧ್ಯೇ ಸಾರ್ಥಕತಾ । ವಿಚಾರೆಚಿ ಹೋಯೆ ॥೨೪॥
ಹೇ ಪ್ರಚೀತೀಚೇ ಬೋಲಣೇ । ವಿವೇಕೇ ಪ್ರಚೀತ ಪಾಹಾಣೇ ।
ಪ್ರಚೀತ ಪಾಹೆ ತೇ ಶಾಹಾಣೇ । ಅನ್ಯಥಾ ನವ್ಹೇ ॥೨೫॥
ಸಪ್ರಚಿತ ಆಣೀ ಅನುಮಾನ । ಉಧಾರ ಆಣೀ ರೋಕಡೇ ಧನ ।
ಮಾನಸಪೂಜಾ ಪ್ರತ್ಯಕ್ಷ ದರ್ಶನ । ಯಾಸ ಮಹದಾಂತರ ॥೨೬॥
ಪುಢೇ ಜನ್ಮಾಂತರೀ ಹೋಣಾರ । ಹಾ ತೋ ಅವಘಾ ಚ ಉಧಾರ ।
ತೈಸಾ ನವ್ಹೆ ಸಾರಾಸಾರ । ತತ್ಕಾಳ ಲಾಭೆ ॥೨೭॥
ತತ್ಕಾಳ ಚಿ ಲಾಭ ಹೋತೋ । ಪ್ರಾಣೀ ಸಂಸಾರೀ ಸುಟತೋ ।
ಸಂಶಯ ಅವಘಾ ಚಿ ತುಟತೋ । ಜನ್ಮ ಮರಣಾಚಾ ॥೨೮॥
ಯಾಚಿ ಜನ್ಮೀ ಯೇಣೆ ಚಿ ಕಾಳೇ । ಸಂಸಾರೀ ಹೋಈಜೆ ನಿರಾಳೇ ।
ಮೋಕ್ಷ ಪಾವಿಜೆ ನಿಶ್ಚಳೇ । ಸ್ವರೂಪಾಕಾರೇ ॥೨೯॥
ಯೇ ಗೋಷ್ಟೀಸ ಕರೀ ಅನುಮಾನ । ತೋ ಸಿದ್ಧಚಿ ಪಾವೇಲ ಪತನ ।
ಮಿಥ್ಯಾ ವದೆ ತ್ಯಾಸ ಆಣ । ಉಪಾಸನೇಚೀ ॥೩೦॥
ಹೇ ಯಥಾರ್ಥಚಿ ಆಹೆ ಬೋಲಣೇ । ವಿವೇಕೇ ಸೀಘ್ರಚಿ ಮುಕ್ತ ಹೋಣೆ ।
ಅಸೋ ನೀ ಕಾಹೀ ಚ ನಸಣೇ । ಜನಾಮಧೇ ॥೩೧॥
ದೇವಪದ ಆಹೆ ನಿರ್ಗುಣ । ದೇವಪದೀ ಅನನ್ಯಪಣ ।
ಹಾ ಚಿ ಅರ್ಥ ಪಾಹಾತಾ ಪೂರ್ಣ । ಸಮಾಧಾನ ಬಾಣೇ ॥೩೨॥
ದೇಹೀ ಚ ವಿದೇಹ ಹೋಣೇ । ಕರೂನ ಕಾಹೀ ಚ ನ ಕರಣೇ ।
ಜೀವನ್ಮುಕ್ತಾಚೀ ಲಕ್ಷಣೇ। ಜೀವನ್ಮುಕ್ತ ಜಾಣೇ ॥೩೩॥
ಯೆರವೀ ಹೇ ಖರೇ ನ ವಟೇ । ಅನುಮಾನೇ ಚಿ ಸಂದೇಹ ವಾಟೇ ।
ಸಂದೇಹಾಚೇ ಮೂಳ ತುಟೇ । ಸದ್ಗುರು ವಚನೇ ॥೩೪॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ಸಾರ ಶೋಧನ' ನಾಮ ಸಮಾಸ ನವಮ ॥

ಹೆಂಡರು, ಮಕ್ಕಳು, ಹೊಲಮನೆಯ ಸಂಸಾರ ಬಿಡಬೇಕಾಗುವದಿಲ್ಲ. ಸಾಮಾಜಿಕ ಪ್ರಪಂಚದ ಖಟಪಟಿಬಿಡಬೇಕಾಗಿಲ್ಲ. ವಿಚಾರ ವಿವೇಕದ ಸಾಮರ್ಥ್ಯದಿಂದ ಸಂಸಾರದಲ್ಲಿದ್ದುಕೊಂಡೇ ಆತ್ಮಜ್ಞಾನ ವಾಗುವದು. ಜನ್ಮದ ಸಾರ್ಥಕವಾಗುವದು. (೨೪) ನನ್ನ (ಶ್ರೀಸಮರ್ಥರ) ಸ್ವತಃದ ಅನುಭವವು ಹೀಗಿರುವದು. ಇದನ್ನು ನಾನು ನಿಮಗೆ ಹೇಳಿರುವೆನು. ಸೂಕ್ಷ್ಮ ವಿವೇಕ ಮಾರ್ಗದಿಂದ ಹೋಗಿ ನೀವೂ ಆ ಅನುಭವ ಪಡೆಯಿರಿ. ಈ ಅನುಭವ ಯಾರು ಪಡೆಯುವರೋ ಅವರು ನಿಜವಾದ ಜಾಣರು. ಅವರು ಧನ್ಯರು. ಯಾರು ಈ ಅನುಭವ ಪಡೆಯುವದಿಲ್ಲವೋ ಅವರು ಜಾಣರಲ್ಲ, ಮೂರ್ಖರು. ( ೨೫ ) ಉದ್ದರಿ ಹಣ ಮತ್ತು ರೋಖ ಹಣ ಅಥವಾ ಮಾನಸ ಪೂಜೆಯಲ್ಲಿ ದೇವರದರ್ಶನ ಮತ್ತು ಪ್ರತ್ಯಕ್ಷ ದೇವರ ದರ್ಶನ ಇವುಗಳಲ್ಲಿ ಯಾವ ಪ್ರಕಾರ ವಿಶೇಷವಾದ ಅಂತರವಿರುವದೋ ಇದರಂತೆ ಕೇವಲ ಕಲ್ಪನೆ ಮತ್ತು ಸಾಕ್ಷಾತ್ಕಾ (ಪ್ರತ್ಯಕ್ಷ)ದ ಅನುಭವ ಇವುಗಳಲ್ಲಿ ಬಹಳ ಅಂತರವಿರುವದು. (೨೬) ಮುಂದೆ ಬರುವ ಅನೇಕ ಜನ್ಮಗಳ ಪೈಕಿ ಯಾವುದಾದರೊಂದು ಜನ್ಮದಲ್ಲಿ ಎಂದಾದರೂ ಒಮ್ಮೆ ಭಗವಂತನ ದರ್ಶನವಾಗುವದಿದೆ ಎಂಬುದು ಅಥವಾ ಇಂಥ ಒಂದು ಸಾಧನೆ ಇರುವದು ಅಂದರೆ ಅದು ಉದ್ದರಿಯ ವ್ಯವಹಾರವೆಂದು ತಿಳಿಯಬೇಕು.ಸಾರಾಸಾರ (ಪರಮಾತ್ಮವಸ್ತು)ವನ್ನುಶೋಧಿಸುವ ವಿದ್ಯೆ.ಹೀಗೆ ಅವಿದ್ಯೆಯಿಂದಈ ಜನ್ಮದಲ್ಲಿಯೇಆತ್ಮಜ್ಞಾನವು ಪ್ರಾಪ್ತವಾಗುವದು ಸಮಾಧಾನದೊರಕುವದು. (೨೭)ಸಾರಾಸಾರ ವಿವೇಕ ವಿಚಾರದಿಂದ ನೋಡುತ್ತ ನೋಡುತ್ತಹೋದರೆ ಆತ್ಮಜ್ಞಾನದ ಲಾಭವಾಗುವದು. ಜೀವವು ಸಂಸಾರದ ಬಂಧನದಿಂದ ಬಿಡುಗಡೆ ಹೊಂದುವದು. ಅದು ಜನ್ಮ ಮರಣದಚಕ್ರದಿಂದ ಪಾರಾಗುವದು. ಮತ್ತು ಅದು ಅಗದೀ ಸಂಶಯರಹಿತವಾಗುವದು. (೨೮) ಇದೇ ಜನ್ಮದಲ್ಲಿ ಮತ್ತು ಇದೇ ಕಾಲಕ್ಕೆ ಇದೇ ಪರಿಸರದಲ್ಲಿ ಈಗಲೇ ಮನಸಾ ಸಂಸಾರದಿಂದ ಬೇರೆಯಾಗಿರಿ. (ಬಾಜೂಕ್ಕೆ ಸರಿಯಿರಿ). ಸ್ವಸ್ವರೂಪದೊಂದಿಗೆ ಏಕರೂಪರಾಗಿ ನಿಶ್ಚಲರಾಗಿರಿ ಮತ್ತು ಮೋಕ್ಷಪ್ರಾಪ್ತ ಮಾಡಿಕೊಳ್ಳಿರಿ.(೨೯) ಶ್ರೀ ಸಮರ್ಥರು ಹೇಳುವದೇನಂದರೆ,ನಾನು ಈವರೆಗೆ ಏನು ಹೇಳಿರುವನೋ ಇದರಲ್ಲಿಯ ಸಿದ್ಧಾಂತಗಳ ಬಗ್ಗೆ ಯಾರಾದರೂ ಸಂಶಯ ತೆಗೆದರೆ ಅವರು ಒಂದು ವೇಳೆ ಸಿದ್ಧಪುರುಷರಿದ್ದರೂ ಸಹ ಅವರು ತಮ್ಮ ಸಿದ್ಧತನದಿಂದಪತನ[ಭ್ರಷ್ಟ]ರಾಗುವರು. ಸಂಶಯ ತಳೆದವರಿಗೆ ಅಧೋಗತಿ ಪ್ರಾಪ್ತವಾಗುವದು. ಯಾರಾದರೂ ಇದು ಸುಳ್ಳು ಇರುವದೆಂದು ಅಂದದ್ದಾದರೆ ಅವರಿಗೆ ನನ್ನ ಉಪಾಸನೆಯ ಆಣೆ(ಶಪಥ)ಇರುವದು.(೩೦) ನಾನು ಹೇಳಿದ ಮಾತುಗಳು ಅಗದೀ ಖರೇ ಇರುವವು. ಅದು ಹೇಗೆಂದರೆ ಸಾರಾಸಾರ ವಿವೇಕ ವಿಚಾರದಿಂದ ಬೇಗ ಮುಕ್ತರಾಗಲು ಬರುವದು. ಮತ್ತು ಜನರ ಮಧ್ಯ ದಲ್ಲಿದ್ದರೂ ಇಲ್ಲದಂತೆ ವೃತ್ತಿಯನ್ನು ನಡವಳಿಕೆಯನ್ನು ಇಡಲಿಕ್ಕೂ ಬರುವದು. (೩೧) ಖರೇ ದೇವರೆಂದರೆ ಪರಮಾತ್ಮ ಸ್ವರೂಪವು ನಿರ್ಗುಣವೇ ಇರುವದು. ಈ ಸ್ವರೂಪದೊಂದಿಗೆ ತದಾಕಾರ (ಏಕರೂಪ) ವಾಗುವದೇ ಮುಖ್ಯವಾದದ್ದು. ಈ ಅರ್ಥವನ್ನು ಸರಿಯಾಗಿ ಸಂಪೂರ್ಣವಾಗಿ ತಿಳಿದು ನಾವು ನಿರ್ಗುಣರಾದೆವೆಂದರೆ ತತ್ಕಾಲದಲ್ಲಿ ಸಂಪೂರ್ಣ ಸಮಾಧಾನ ಪ್ರಾಪ್ತವಾಗುವದು. (೩೨) ದೇಹದಲ್ಲಿದ್ದು ದೇಹವಿಲ್ಲದಂತಹ ವೃತ್ತಿ ಇಡುವದು ಮತ್ತು ಬಹಳಷ್ಟು ಕರ್ಮ ಮಾಡಿದರೂ ಅಕರ್ತಾತನದಿಂದ ಅಂದರೆ ನಾನು ಮಾಡಿದೆನು ಎಂಬ ಅಹಂ ಇಲ್ಲದೆ ಅದನ್ನು ಎಷ್ಟೂ ನಾನು ಮಾಡಿಲ್ಲವೆಂಬಂತಹ ಅವಸ್ಥೆಯನ್ನು ಸಂಭಾಳಿಸುವದು ಇವು ಜೀವನ್ಮುಕ್ತರ ಲಕ್ಷಣಗಳು. ಇವನ್ನು ಜೀವನ್ಮುಕ್ತರಿದ್ದವರೇ ತಿಳಿಯುವರು. (೩೩) ಇವರ ಹೊರತಾಗಿ ಬೇರೆಯವರಿಗೆ ಖರೆ ಎನಿಸುವದಿಲ್ಲ. ಅನುಭವದ ಅಭಾವದಿಂದ ಕೇವಲ ಕಲ್ಪನೆ ಮಾಡುವದರಿಂದ ಈ ಅವಸ್ಥೆಯ (ಜೀವನ್ಮುಕ್ತನ) ಬಗ್ಗೆ ಸಂದೇಹ ಬರುವದು. ಪರಂತು ಸದ್ಗುರುವಿನ ಮುಖದಿಂದ ಶ್ರವಣ ಮಾಡಿದರೆ ಮತ್ತು ಅವರ ಹೇಳಿಕೆಯ ಬಗ್ಗೆ ಸೂಕ್ಷ್ಮ ವಿವೇಕದಿಂದ ವಿಚಾರ ಮಾಡಿದರೆ ಸಂಶಯವೆಲ್ಲ ಸಮೂಲನಾಶವಾಗುವದು. (೩೪)

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದೊಳಗಿನ ಆರನೆಯದಶಕದಲ್ಲಿಯ
"ಸಾರ ಶೋಧನ"ವೆಂಬ ಒಂಭತ್ತನೆಯ ಸಮಾಸವು ಮುಗಿದದು.

ಸಮಾಸ ದಶಮ : ಅನಿರ್ವಾಚ್ಯ

॥ಶ್ರೀರಾಮ॥ ಸಮಾಧಾನ ಪುಸತಾ ಕಾಹೀ । ಮ್ಹಣತೀ ಬೋಲಿಜೆ ಐಸೇ ನಾಹೀ।
ತರೀ ತೇ ಕೈಸೇ ಆಹೆ ಸರ್ವ ಹಿ । ನಿರೋಪಾವೇ ॥೧॥

ಮುಕ್ಯಾನೇ ಗೂಳ ಖಾದಲಾ । ಗೋಡೀ ನ ಯೆ ಸಾಂಗಾವ್ಯಾಲಾ ।
ಯಾಚಾ ಅಭಿಪ್ರಾಯ ಮಜಲಾ । ನಿರೋಪಣ ಕೀಜೆ ॥೨॥

## ದಶಕ ೬. ಸಮಾಸ ೧೦. ಅನಿರ್ವಾಚ್ಯ ನಿರೂಪಣ (ನುಡಿ ೬೧)

ಮಾನವೀ ಜ್ಞಾನವನ್ನು ಶಬ್ದರೂಪದಿಂದ ವ್ಯಕ್ತ ಮಾಡಲಿಕ್ಕೆ ಬರುತ್ತದೆ. ಬ್ರಹ್ಮ ಜ್ಞಾನವು ಮನುಷ್ಯನಿಗೆ ಆಗುವ ಜ್ಞಾನವಿರುವದೆಂಬುದೂ ನಿಜವೇ ಇರುವದು. ಆದರೆ ಈ ಬ್ರಹ್ಮಜ್ಞಾನದ ಮಟ್ಟವು ಅತಿ-ಮಾನವೀಯ-ವಿರುವದರಿಂದ ಇದನ್ನು ಶಬ್ದರೂಪದಿಂದ ಹೇಳಲಿಕ್ಕೆ ಬರುವದಿಲ್ಲ.ಅಂತೆಯೇ ಇದು ಅನಿರ್ವಾಚ್ಯ ವೆನಿಸಿದೆ. ಸದ್ಗುರುವಿನ ಮಾರ್ಗದರ್ಶನದಲ್ಲಿ ಸಾಧಕನು ಸ್ವತಃದ ಶೋಧವನ್ನು ಮಾಡಿಕೊಳ್ಳಲು ಪ್ರಯತ್ನಿಸುವನು. ಈ ಶೋಧದಲ್ಲಿ ಮೊದಲಿಗೆ ನಾನು ನಿಜವಾಗಿಯೂ ದೇಹಬುದ್ಧಿಯವನೆಂಬುದು ಖರೇ ಅಲ್ಲ. ಇದು ಅವನ ಲಕ್ಷ್ಯಕ್ಕೆ ಬರುವದು. ಆನಂತರ ಹೃದಯದಲ್ಲಿ ವಾಸಮಾಡಿಕೊಂಡಿರುವ ಸ್ವಸ್ವರೂಪದ ಬಗ್ಗೆ ಅನುಭವ ಬರುವದು. ಇದೇ ಸರ್ವಸಾಕ್ಷಿ ಅವಸ್ಥೆ ಇರುವದು. ಇದರೊಳಗೆ "ನಾನು" ಇದೂ ಇರುವದು. ಆದರೆ ಅದು ಕೇವಲ ದ್ರಷ್ಟಾತನದಿಂದ ಸಾಕ್ಷೀರೂಪತನದಿಂದ ಇರುವದು. ಇದಕ್ಕೆ ತುರ್ಯಾ ಅವಸ್ಥೆ ಎಂದು ಅನ್ನುವರು. ಒಂದು ಕಡೆಗೆ "ನಾನು ಆತ್ಮಾ ಇರುವೆನು" ಎಂಬ ಶುದ್ಧ ಜ್ಞಾನದ ತಿಳುವಳಿಕೆ ಇರುವದು. ಅದೇ ಎರಡನೆಯ ಕಡೆಗೆ (ಇನ್ನೊಂದು ಕಡೆಗೆ "ನಾನು ಈ ಎಲ್ಲ ದೃಶ್ಯದಿಂದ ಬೇರೆ ಇರುವೆನು" ಅನ್ನುವ ಜ್ಞಾನ (ತಿಳುವಳಿಕೆ) ಇರುತ್ತದೆ. ಆದರೆ ಮುಂದೆ ಕೇವಲದ್ರಷ್ಟಾ (ನೋಡುವವ) ಕೂಡಾ ದ್ರಷ್ಟಾತನದಿಂದ (ನೋಡುವವನಾಗಿ) ಉಳಿಯುವದಿಲ್ಲ. "ನಾನು ಆತ್ಮಸ್ವರೂಪವೇ ಇರುವೆನು. ಅನ್ನುವದೂ ಸಹ ಹೋಗುತ್ತದೆ, (ಕರಗುವದು). ಮತ್ತು ಶುದ್ಧ, ನಿರ್ಮಲ, ನಿರ್ಗುಣ, ನಿರಾಕಾರ ಬ್ರಹ್ಮಸ್ವರೂಪ ಮಾತ್ರ ಶಿಲ್ಲಕ ಉಳಿಯುತ್ತದೆ. ಇದು ಉನ್ಮನೀ ಅವಸ್ಥೆ ಇರುವದು. ಅಲ್ಲಿ ಆಗ ಸಂಪೂರ್ಣ ಸಮಾಧಾನದ ಲಾಭವಾಗುವದು. ಇದು ಮಾತ್ರ ಶಬ್ದದ ಕಕ್ಷೆಯಲ್ಲಿ ಅಂದರೆ ಪರಿಮಿತಿ, ವ್ಯಾಪ್ತಿಯಲ್ಲಿ ಬರಲಿಕ್ಕೆ ಸಾಧ್ಯವಿಲ್ಲ. (ಆಗುವದಿಲ್ಲ). ಶಬ್ದವು ಸ್ಥೂಲವಿರುವದು. ಆದರೆ ಶಬ್ದದ ಅರ್ಥಮಾತ್ರ ಸೂಕ್ಷ್ಮವಿರುವದು. ಅರ್ಥವು ಹೆಚ್ಚೆಚ್ಚು ಸೂಕ್ಷ್ಮವಾದಂತೆ ಅದು ಕೊನೆಗೆ ಓಂಕಾರದವರೆಗೆ ಹೋಗಿ ಮುಟ್ಟುವದು ಆಗ ಓಂಕಾರವೇ ಸ್ವತಃ ಯಾವುದರಲ್ಲಿ ಲೀನವಾಗುವದೋ ಆ ಪರಮಾತ್ಮ ಸ್ವರೂಪದಲ್ಲಿ ಶಬ್ದಗಳಿಲ್ಲ. ಅರ್ಥಗಳಿಲ್ಲ. ಭಾಷೆ ಇಲ್ಲ, ಮೌನವೂ ಇಲ್ಲ, ಅಲ್ಲಿ ಕೇವಲ ಸಮಾಧಾನ ಮಾತ್ರ ಇರುವದು. ಇದನ್ನು ಶಬ್ದದಿಂದ ಹೇಳಲಿಕ್ಕೆ ಬರುವದಿಲ್ಲ. ಅನುಭವದ ವಿಕಾಸವಾಗುವಾಗ ಮೊದಲಿಗೆ ದೃಶ್ಯವು ಜಡಸ್ಥೂಲವೆಂದು ಹೋಗುತ್ತದೆ. ಆಮೇಲೆ ಅದೃಶ್ಯವು ಸೂಕ್ಷ್ಮವೆಂದು ಇಲ್ಲದಾಗುತ್ತದೆ. ಮುಂದೆ ಶೂನ್ಯ ಒಂದೇ ಮಾತ್ರ ಉಳಿಯುವದು. ಆದರೆ ಶೂನ್ಯವನ್ನು ನೋಡುವ ಸ್ವರೂಪದಲ್ಲಿ ಈ ಶೂನ್ಯವೂ ಸಹ ಇಲ್ಲದಾಗುವದು.(ಕರಗುವದು). ಆಮೇಲೆ ಸಮಾಧಾನ ರೂಪದ ಕೇವಲ ಬ್ರಹ್ಮನು ಮಾತ್ರ ಶಿಲ್ಲಕ ಉಳಿಯುವನು. ಸದ್ಗುರುವಿನ ಅಜ್ಞೆಯ ಪ್ರಕಾರ ಜಾಗೃತಿ, ಸ್ವಪ್ನ ಮತ್ತು ಸುಷುಪ್ತಿ ಈ ಮೂರು ಅವಸ್ಥೆಗಳನ್ನು ಹಿಂದೆ ಹಾಕಿ ನಾಲ್ಕನೆಯದಾದ ತುರ್ಯಾವಸ್ಥೆಯೊಳಗಿನ ಪ್ರವೇಶ ಮಾಡುವದೇ ಮಾಯೆಯ ಕಕ್ಷೆಯಲ್ಲಿಯ ವ್ಯವಹಾರವಿರುವದು. ಆದರೆ ಇದು ಅವಶ್ಯವಿರುವದೆಂಬುದು ಮಾತ್ರ ನಿಜವು.

### ದಶಕ ೬. ಸಮಾಸ ೧೦. ಅನಿರ್ವಾಚ್ಯ (ನುಡಿ ೬೧)

ಸಮಾಧಾನದ ಸ್ವರೂಪವಾದರೂ ಹೇಗಿದೆ? ಯಾವ ಪ್ರಕಾರದ್ದಿರುವದು? ಹೀಗೆ ಶ್ರೋತ್ಯಾ ಪ್ರಶ್ನೆ ಕೇಳುತ್ತಾನೆ. ಸಾಧು ಸಂತರ ಹತ್ತಿರ ಸಮಾಧಾನವಿರುವದೆಂದು ಅನ್ನುವರು. ಆ ಸಮಾಧಾನ ಹೇಗಿರುವದೆಂಬುದನ್ನು ಹೇಳಿರಿ ಎಂದು ಯಾರಿಗಾದರೂ ವಿಚಾರಿಸಿದ್ದೇ ಆದರೆ ಆಗ ಅವರಿಗೆ ಸಮಾಧಾನದ ಬಗ್ಗೆ ಶಬ್ದಗಳಿಂದ ಹೇಳಲಿಕ್ಕೆ ಬರುವದಿಲ್ಲವೆಂದೇ ಅದಕ್ಕೆ ಅವರು ಉತ್ತರ ಕೊಡುವರು. ಹಾಗಾದರೆ ಸಮಾಧಾನ ಇರುವದಾದರೂ ಹೇಗೆ ಇದರ ಬಗ್ಗೆ ಪೂರ್ಣ ತಿಳಿಸಿ ಹೇಳಿರಿ. (೧) ತಿಳಿಯಿರಿ (ಉದಾ), ಒಬ್ಬ ಮೂಕನು ಬೆಲ್ಲ ತಿಂದರೆ ಆ ಬೆಲ್ಲದ ರುಚಿ ಹೇಗಿರುವದೆಂದು ಕೇಳಿದರೆ ಅವನಿಗೆ ಹೇಳಲಿಕ್ಕೆ ಬರುವದಿಲ್ಲ. ಇದರಂತೆಯೇ ಸಮಾಧಾನದ ಬಗ್ಗೆ ಇರುವದೆಂದು ಅನ್ನುವರು. ಈ ಅನ್ನುವಿಕೆಯ (ಅಂಬೋಣದ) ಬಗ್ಗೆ ನಿಜವಾದ ಅರ್ಥವು ಏನಿರುವದು. ಇದರ ಬಗ್ಗೆ ನನಗೆ ತಿಳಿಯುವಂತೆ ಹೇಳಿರಿ. (೨)

ಅನುಭವ ಹೀ ಪುಸೋ ಜಾತಾ । ವ್ಹಾಣತೀ ನ ಯೆ ಕೀ ಸಾಂಗತಾ ।
ಕೋಣಾಪಾಸೀ ಪುಸೋ ಆತಾ । ಸಮಾಧಾನ ॥೩॥

ಜೇ ತೇ ಅಗಮ್ಯ ಸಾಂಗತೀ। ನ ಯೆ ಮಾಝಿಯೇ ಪ್ರಚೀತೀ।
ವಿಚಾರ ಬೈಸೆ ಮಾಝೆ ಚಿತ್ತೀ । ಐಸೇ ಕರಾವೇ ॥೪॥

ಐಸೇ ಶ್ರೋತ್ಯಾಚೇ ಉತ್ತರ । ಯಾಚೇ ಕೈಸೇ ಪ್ರತ್ಯೋತ್ತರ ।
ನಿರೋಪಿಜೆಲ ತತ್ಪರ । ಹೋಊನ ಐಕಾ ॥೫॥

ಜೇ ಸಮಾಧಾನಾಚೇ ಸ್ಥಳ । ಕೀ ತೋ ಅನುಭವಚಿ ಕೇವಳ ।
ತೇ ಸ್ವರೂಪ ಪ್ರಾಂಜಳ । ಬೋಲೋನ ದಾಊ ॥೬॥

ಜೇ ಬೋಲಾಸ ಆಕಳೇನಾ । ಬೋಲಿಲ್ಯಾವಿಣ ಹಿ ಕಳೇನಾ ।
ಜಯಾಸಿ ಕಲ್ಪಿತಾ ಕಲ್ಪನಾ । ಹಿಂಪುಟೇ ಹೋಯೇ ॥೭॥

ತೇ ಜಾಣಾವೇ ಪರಬ್ರಹ್ಮ । ಜೇ ವೇದಾಚೇ ಗುಹ್ಯ ಪರಮ ।
ಧರಿತಾ ಸಂತ ಸಮಾಗಮ । ಸರ್ವಹಿ ಕಳೆ ॥೮॥

ತೇಚಿ ಆತಾ ಸಾಂಗಿಜೇಲ । ಜೇ ಸಮಾಧಾನ ಸಖೋಲ ।
ಐಕ ಅನುಭವಾಚೆ ಬೋಲ । ಅನುರ್ವಾಚ್ಯ ವಸ್ತು ॥೯॥

ಸಾಂಗತಾ ನಯೆ ತೇ ಸಾಂಗಣೇ। ಗೋಡೀ ಕಳಾಯಾ ಗೂಳ ದೇಣೇ ।
ಐಸೇ ಹೇ ಸದ್ಗುರುವಿಣೇ । ಹೋಣಾರ ನಾಹೀ ॥೧೦॥

ಸದ್ಗುರುಕೃಪಾ ಕಳೇ ತ್ಯಾಸೀ। ಜೋ ಶೋಧೀಲ ಆಪಣಾಸೀ ।
ಪುಢೇ ಕಳೆ ಅನುಭವಾಸೀ । ಆಪೇಆಪ ವಸ್ತು ॥೧೧॥

ದೃಢ ಕರೂನಿಯಾ ಬುದ್ಧೀ । ಆಧೀ ಘ್ಯಾವೀ ಆಪಶುದ್ಧೀ ।
ತೇಣೇ ಲಾಗೆ ಸಮಾಧೀ । ಆಕಸ್ಮಾತ ॥೧೨॥

ಆಪಲೇ ಮೂಳ ಬರೇ ಶೋಧಿತಾ । ಆಪಲೀ ತೋ ಮಾಈಕ ವಾರ್ತಾ ।
ಪುಢೇ ವಸ್ತುಚ ತತ್ವತಾ । ಸಮಾಧಾನ ॥೧೩॥

ನಾನು ಒಬ್ಬನನ್ನು ಇದರ ಬಗ್ಗೆ "ನಿನ್ನ ಅನುಭವ ಏನಿರುವದು" ಎಂದು ಕೇಳಿದೆನು. ಅದಕ್ಕೆ ಅವನು "ಅನುಭವದ ಬಗ್ಗೆ ಶಬ್ದಗಳಿಂದ ವಿವರಿಸಿ ಹೇಳಲಿಕ್ಕೆ ಬರುವದಿಲ್ಲ"ವೆಂದು ಹೇಳಿದನು. ಅಂದ ಮೇಲೆ ಸಮಾಧಾನ ಹೇಗಿರುವದೆಂಬುದನ್ನು ನಾನು ಯಾರನ್ನು ಕೇಳಿ ತಿಳಿಯಲಿ? (೩) ಪ್ರತಿಯೊಬ್ಬರೂ ಅನ್ನುವದೇನೆಂದರೆ ಸಮಾಧಾನ ಇದನ್ನು ತಿಳಿಯಲು ಅಶಕ್ಯವಿರುವದು. ಆದರೆ ಇದಾವುದೂ ನನ್ನ ಮನಸ್ಸಿಗೆ ಒಪ್ಪಿಗೆಇಲ್ಲ. ಅಂತೆಯೇ ಸಮಾಧಾನದ ಸ್ವರೂಪವು ನನ್ನ ಮನಸ್ಸಿನಲ್ಲಿ ನಾಟಬೇಕು, ಈ ರೀತಿಯಿಂದ ಸದ್ಗುರು ಸ್ವಾಮಿಗಳು ಹೇಳಬೇಕು. (೪) ಶ್ರೋತಾನ ಮೇಲಿನ ಪ್ರಶ್ನೆಗೆ ನಾವು ಈಗ ಉತ್ತರ ಕೊಡುವೆವು. ಈ ಮಹತ್ವದ ವಿವರವನ್ನು ಪುನಃಪೂರ್ವಕ ಕೇಳಬೇಕು.(೫) ಸಮಾಧಾನವೆಂದರೆ ಬ್ರಹ್ಮಜ್ಞಾನವು, ಅನುಭವದ ರೂಪವು ಶುದ್ಧ ಬ್ರಹ್ಮವೇ ಹೌದು, ವೇದಗಳ ಈ ರಹಸ್ಯವು ಸತ್ಸಮಾಗಮ ಸಂತ ಸಾಧುಗಳ ಸಹವಾಸದಿಂದ ಮಾತ್ರ ತಿಳಿಯುವದು. ಕೇವಲ ಅನುಭವ, ಅಗದೀ ಶುದ್ಧಜ್ಞಾನ, ಇದೇ ಸಮಾಧಾನದ ಸ್ಥಳವಾಗಿದೆ. ಈ ಶುದ್ಧ ಅನುಭವದ ಸ್ವರೂಪವನ್ನು ಸ್ಪಷ್ಟವಾಗಿ ಹೇಳುವೆನು. (೬) ಸಮಾಧಾನದ ಬಗ್ಗೆ ಶಬ್ದಗಳಿಂದ ಹೇಳಬೇಕೆಂದರೆ, ಶಬ್ದದಲ್ಲಿ ತೊಡಗಿಸಿ ಸೇರಿಸಿ ಹೊಂದಿಸಿ ಹೇಳಲಿಕ್ಕೆ ಬರುವದಿಲ್ಲ. ಆದರೆ ಶಬ್ದಗಳಿಂದ ಹೇಳದ ಹೊರತು ತಿಳಿಯುವದೂ ಇಲ್ಲ. ಇದರ ಬಗ್ಗೆ ಕಲ್ಪನಾ ಮಾಡಬೇಕೆಂದರೆ ಕಲ್ಪನಾ ಶಕ್ತಿಯೇ ಪರಾಭೂತವಾಗುವದು. (೭) ಈ ಸಮಾಧಾನವೇ ಬ್ರಹ್ಮರೂಪವಿರುವದು. ವೇದಗಳ ಪರಮ ರಹಸ್ಯ ವಿರುವದು. ಸಂತರ ಸಂಗತಿ(ಸಹವಾಸ)ಹಿಡಿದರೆ ಇದೆಲ್ಲದರ ಬಗ್ಗೆ ತಿಳುವಳಿಕೆಯಾಗುವದು. ಗೊತ್ತಾಗುವದು. (೮) ಅತ್ಯಂತ ಸೂಕ್ಷ್ಮವಿರುವಂಥ ಈ ಸಮಾಧಾನದ ಬಗ್ಗೆಯೇ ನಾನು ಈಗ ವರ್ಣನೆ ಮಾಡಿ ಹೇಳುವೆನು. ಸಮಾಧಾನ ಇದು ಶಬ್ದಗಳಿಂದ ಹೇಳಲಿಕ್ಕೆ ಬರುವಂತಹ ವಸ್ತುವಲ್ಲ. ನನ್ನ ಸ್ವಂತ ಅನುಭವದ ಈ ಮಾತುಗಳನ್ನು ಕೇಳುವವನಾಗು. (೯) ಶಬ್ದಗಳಿಂದ ಯಾವುದನ್ನು ಹೇಳಲಿಕ್ಕೆ ಬರುವದಿಲ್ಲವೋ ಅದನ್ನು ಎಷ್ಟೇ ರೀತಿಯಿಂದ ವರ್ಣನೆ ಮಾಡಿ ಹೇಳಿದರೂ ಸಹ ನಿಜವಾದ ಖರೇ ಅರ್ಥದಲ್ಲಿ ತಿಳಿಯುವದಿಲ್ಲ. ಈ ರಹಸ್ಯ ತಿಳಿಯಲು ಒಬ್ಬನಿಗೆ ರುಚಿ ಹೇಗಿರುವದೆಂಬುದನ್ನು ತಿಳಿಯಲು ಬೆಲ್ಲವನ್ನು ಕೊಡಬೇಕಾಗುವದು.(ತಿಂದವನಿಗೆ ಅದರ ರುಚಿಗೊತ್ತಾಗುವದು) ಇದೇ ಪ್ರಕಾರ ಸದ್ಗುರುವು ಸಮಾಧಾನವೆಂಬುವ(ಬೆಲ್ಲವನ್ನು)ದನ್ನು ಕೊಡದ ಹೊರತು ಸಮಾಧಾನವು ಏನಿರುವದು? ಹೇಗಿರುವದೆಂಬುದು ಸರಿಯಾಗಿ ತಿಳಿಯುವದಿಲ್ಲ. (೧೦) ಸದ್ಗುರುವು ಯಾವ? ಎಂಥ? ಮಾರ್ಗದರ್ಶನ ಮಾಡುವನೆಂದರೆ ಮೊದಲಿಗೆ ನಾನು ಯಾರು ಇರುವೆ? ಇದರ ಶೋಧ ಮಾಡುತ್ತ ಮಾಡುತ್ತ ಅನುಭವ ಹೊಂದುತ್ತ ಹೋದೆವೆಂದರೆ ಸ್ವಸ್ವರೂಪದ ಸಾಕ್ಷಾತ್ಕಾರವಾಗುವದು. ಆಗ ಖೊಟ್ಟಿಯಾದ ನಾನು ಇಲ್ಲದಾಗಿ ನಶಿಸಿ ಹೋಗಿ ಸಮಾಧಿ ಹತ್ತುವದು. ಹಾಗೂ "ನಾನು ಬ್ರಹ್ಮನಿರುವೆ" ಈ ಅನುಭವ ಉಂಟಾಗುವದು. ಸರ್ವ ಸಾಕ್ಷಿತ್ವದ ಈ ಅವಸ್ಥೆ ಹೊರಟು ಹೋಗಿ "ಇತ್ತ ಅತ್ತ ಸುತ್ತ ಮುತ್ತ ಬ್ರಹ್ಮವೇ ಬ್ರಹ್ಮ" ಇಂಥ ಸ್ಥಿತಿ ಬರುವದು. ಅಲ್ಲಿ ಆಗ ಸಂಪೂರ್ಣ ಸಮಾಧಾನವಾಗುವದು. (ಇರುವದು). ಯಾರು ಸ್ವತಃದ ಶೋಧ ಮಾಡುವರೋ ಅವರಿಗೆ ಏನು? ಇದು ತಿಳಿಯುವದು. [ಗೊತ್ತಾಗುವದು]. ತದನಂತರ ನಾಮರೂಪಗಳಿಲ್ಲದ ಆತ್ಮವಸ್ತುವು ಸ್ವಾನುಭವದಿಂದ ತನ್ನಷ್ಟಕ್ಕೆ ತಾನೇ ತಿಳಿಯಹತ್ತುವದು. (೧೧) ಬುದ್ಧಿಯ ದೃಢತೆಯ ಘಟ್ಟಿತನದ ನಿಶ್ಚಯ ಮಾಡಿಕೊಳ್ಳಬೇಕು. ಮತ್ತು ಮೊದಲಿಗೆ"ನಾನು ಯಾರು ಇರುವೆನು"ಇದರ ಶೋಧ ಮಾಡಬೇಕು. ಈ ಶೋಧ ಮಾಡುತ್ತ ಹೋದ ಹೋದಂತೆ ಒಮ್ಮೆಲೇ [ಏಕದಂ] ಸಮಾಧಿ ಹತ್ತುವದು. [೧೨] ನಮ್ಮ ಮೂಲ ಸ್ವರೂಪವನ್ನು ಚನ್ನಾಗಿ ಶೋಧ ಮಾಡಲಿಕ್ಕೆ ಹತ್ತಿದರೆ ಆಗ ದೇಹಬುದ್ಧಿಯಲ್ಲಿಯ ನಾವು ಮಾಯಾ ನಿರ್ಮಿತರಾದವರಿರುವೆವು, ಎಂಬ ಜ್ಞಾನ ವಾಗುವದು. ದೇಹಬುದ್ಧಿಯ ಅಶಾಶ್ವತವಾದ ನಾನು ಇದು ಒಂದು ಬದಿಗೆ [ಬಾಜೂಕ್ಕೆ] ಸರಿದ ಕೂಡಲೇ ಆಗ ಶುದ್ಧ ಆತ್ಮವಸ್ತು ಅಲ್ಲಿ ಶಿಲುಕು [ಬಾಕಿ] ಉಳಿಯುವದು. ಹಾಗೂ ಇದೇ ಸಮಾಧಾನದ ಸ್ಥಳವಾಗಿರುವದು.[೧೩]

ಆತ್ಮಾ ಆಹೆ ಸರ್ವಸಾಕ್ಷೀ। ಹೇ ಬೋಲಿಜೆ ಪೂರ್ವಪಕ್ಷೀ।
ಜೋ ಕೋಣೇ ಸಿದ್ಧಾಂತ ಲಕ್ಷೀ। ತೋ ಚಿ ಸಿದ್ಧ ॥೧೪॥

ಸಿದ್ಧಾಂತ ವಸ್ತು ಲಕ್ಷೂ ಜಾತಾ। ಸರ್ವಸಾಕ್ಷೀ ತೇ ಅವಸ್ಥಾ।
ಆತ್ಮಾ ತೀಹೂನ ಪರ್ತಾ। ಅವಸ್ಥಾತೀತ ॥೧೫॥

ಪದಾರ್ಥಜ್ಞಾನ ಜೇವ್ಹಾ ಸರೇ। ದೃಷ್ಟಾ ದೃಷ್ಟೇಪಣೇ ನುರೇ।
ತೇ ಸಮಂಈ ಉತರೇ। ಪುಂಜ ಮೀಪಣಾಚಾ ॥೧೬॥

ಜೇಥೇ ಮುರಾಲೇ ಮೀಪಣ। ತೇಚಿ ಅನುಭವಾಚೀ ಖೂಣ।
ಅನುರ್ವಾಚ್ಯ ಸಮಾಧಾನ। ಯಾ ಕಾರಣೇ ಬೋಲಿಜೆ ॥೧೭॥

ಅತ್ಯಂತ ವಿಚಾರಾಚೆ ಬೋಲ। ತರೀ ತೇ ಮಾಈಕ ಫೋಲ।
ಶಬ್ದ ಸಬಾಹ್ಯ ಸಖೋಲ। ಅರ್ಥ ಚಿ ಅವಘಾ ॥೧೮॥

ಶಬ್ದಾಕರಿತಾ ಕಳೇ ಅರ್ಥ। ಅರ್ಥ ಪಾಹಾತಾ ಶಬ್ದ ವ್ಯರ್ಥ।
ಶಬ್ದ ಸಾಂಗೇ ತೇ ಯಥಾರ್ಥ। ಪರೀ ಆಪಣ ಮಿಥ್ಯಾ ॥೧೯॥

ಶಬ್ದಾಕರಿತಾ ವಸ್ತು ಭಾಸೇ। ವಸ್ತು ಪಾಹಾತಾ ಶಬ್ದ ನಾಸೇ।
ಶಬ್ದ ಫೋಲ ಅರ್ಥ ಅಸೇ। ಘನವಟ ಪಣೇ ॥೨೦॥

ಭುಸಾಕರಿತಾ ಧಾನ್ಯ ನಿಪಜೆ। ಧಾನ್ಯೆ ಘೇಊನ ಭೂಸ ಟಾಕಿಜೆ।
ತೈಸೇ ಶಬ್ದ ಭೂಸ ಜಾಣಿಜೆ। ಅರ್ಥ ಧಾನ್ಯ ॥೨೧॥

"ನಾನು ಬ್ರಹ್ಮ ಇರುವೆ" "ನಾನು ಸರ್ವಸಾಕ್ಷಿ ಇರುವೆ" ಈ ಅವಸ್ಥೆ [ಸ್ಥಿತಿ]ಯೂ ಸಹ ಆಖೈರದ [ಕೊನೆಯ]ಸ್ಥಿತಿಅಲ್ಲ. ಯಾರಾದರೊಬ್ಬರು ಈ[ಅವಸ್ಥೆಯನ್ನು ಉಲ್ಲಂಘಿಸಿ[ದಾಟಿ]ಅದರ ಮುಂದೆ ನೋಡುವರೋ] ಅವಸ್ಥೆಯ ಆಚೆಗೆ ಲಕ್ಷ್ಯ ಕೊಡುವರೋ ಮತ್ತು ಅತ್ತ ಹೋಗುವರೋ ಅವರೇ ಖರೇ ಸಿದ್ಧ ಪುರುಷರು ಎಂದು ತಿಳಿಯಬೇಕು. [೧೪] ಆಖೈರದ ಅನುಭವದ ದೃಷ್ಟಿಯಿಂದ ನೋಡಿದ್ದೇ ಆದರೆ "ನಾನು ಸರ್ವ ಸಾಕ್ಷಿ ಇರುವೆ" ಈ ಅವಸ್ಥೆಯೂ ಒಂದು "ಅವಸ್ಥೆ" ಇರುವದು. ಈ ಅವಸ್ಥೆಯ ಆಚೆಗೆ [ದಾಟಿ] ಇರುವ ಆತ್ಮಸ್ವರೂಪವು ಸರ್ವಸಾಕ್ಷಿತ್ವದಕ್ಕಿಂತ ಆಚೆಗೆ ಇರುತ್ತದೆ. [೧೫] ತಿಳಿಯಬೇಕಾದ ಮಾಯಿಕ ಜ್ಞೇಯ ರೂಪ ವಸ್ತುವಿನ[ಪದಾರ್ಥದ] ಜ್ಞಾನ ಯಾವಾಗ ನಿಃಶೇಷವಾಗಿ ಮುಗಿಯುತ್ತದೆಯೋ ಮತ್ತು ದೃಷ್ಟಾನ ದೃಷ್ಟೇತನ [ನೋಡುವವನ ನೋಡುವಿಕೆಯು] ಸಂಪೂರ್ಣ ಇಲ್ಲದಾಗುವದೋ ಆ ಹೊತ್ತಿಗೆ ನಾನು ಎಂಬ ಭ್ರಮೆಯೂ ಸಹ ಸಂಪೂರ್ಣ ಕರಗಿ ಹೋಗುವದು. ದೇಹಬುದ್ಧಿಯಲ್ಲಿ "ನಾನು ದೇಹ ಇರುವೆನು" ಈ ನಾನು ಎನ್ನುವದು ಮತ್ತು ದೃಶ್ಯದ ಸ್ಥೂಲ ದ್ರಷ್ಟಾತನ ಇರುವದು. ಇದು ಹೋಗಿ ಆತ್ಮಬುದ್ಧಿ ಬಂದ ಕೂಡಲೇ "ನಾನು ಆತ್ಮನಿರುವೆ" ಈ ಸೂಕ್ಷ್ಮ ನಾನು ಅನ್ನುವದು ಮತ್ತು ಸರ್ವಸಾಕ್ಷಿತನದ ದ್ರಷ್ಟಾತನವಿರುವದು. ಇದು ಸಾಧಕನು ಸಾಧನ ಮಾಡಿದಾಗ ಬರುವದು. (೧೬) "ನಾನು ದೇಹ ಅಥವಾ ನಾನು ಬ್ರಹ್ಮ" ಈ ಎರಡೂ ಪ್ರಕಾರದ ನಾನು ಎಂಬುವ ಅಭಿಮಾನವು ಸಂಪೂರ್ಣ ಇಲ್ಲದಾಗುವಿಕೆ [ಕರಗಿ ಹೋಗುವಿಕೆ]ಯೇ ಪರಮಾತ್ಮ ವಸ್ತುವಿನ ಅನುಭವದ ಸಂಕೇತವಿರುವದು. ಆದುದರಿಂದ ಸಮಾಧಾನದ ಬಗ್ಗೆ ಶಬ್ದದಿಂದ ಹೇಳಲಿಕ್ಕೆ ಸಾಧ್ಯವಿಲ್ಲವೆಂದು ತಿಳಿದವರು ಅನ್ನುವರು. ಹೇಳುವವನು ಶಿಲುಕು ಇದ್ದರಲ್ಲವೇ [ಶೇಷ ಅಥವಾ ಬಾಕಿಯಾಗಿ ಉಳಿದರಲ್ಲವೇ], ಸಮಾಧಾನದ ವರ್ಣನೆ ಮಾಡಲು ಹೇಳಲು ಶಕ್ಯವಾದೀತು? ಇಲ್ಲಿ ಅವನು ಸಂಪೂರ್ಣವಾಗಿ ಸಮಾಧಾನ ರೂಪ ಹೊಂದಿ ಹೋಗಿರುತ್ತಾನೆ. ಅಂದಮೇಲೆ ಅವನು ಪ್ರತ್ಯೇಕನಾಗಿ ಬೇರೆ ಉಳಿದು ಸಮಾಧಾನದ ವರ್ಣನೆ ಹೇಗೆ ಮಾಡಲಿಕ್ಕೆ ಬಂದೀತು? ಅರ್ಥಾತ್ ವರ್ಣನೆ ಮಾಡಲಿಕ್ಕೆ ಬರುವದಿಲ್ಲ. [ಆಗುವದಿಲ್ಲ] [೧೭] ಶಬ್ದ ಮತ್ತು ಅರ್ಥ ಇವುಗಳ ಸಂಬಂಧವು ಧಾನ್ಯ ಮತ್ತು ಹೊಟ್ಟು [ತವಡು] ಇದರಂತೆ ಇರುವದು. ಶಬ್ದವು ಸ್ಥೂಲವಾದರೆ ಅರ್ಥವು ಸೂಕ್ಷ್ಮವಿರುವದು. ಅರ್ಥಗ್ರಹಣಮಾಡುವದಕ್ಕಾಗಿ ಶಬ್ದದ ಉಪಯೋಗ ಮಾಡಬೇಕು. ಹಾಗೂ ಅನಂತರ ಶಬ್ದವನ್ನು ಬದಿಗಿಟ್ಟು ಬಿಡಬೇಕು. ಸ್ಥೂಲಶಬ್ದವು ಸೂಕ್ಷ್ಮಾತಿ ಸೂಕ್ಷ್ಮವಿರುವ ಆತ್ಮಸ್ವರೂಪದವರೆಗೆ ಹೋಗಿ ಮುಟ್ಟಲು ಶಕ್ಯವೇ ಇಲ್ಲ. ಅತಿಶಯ ಅರ್ಥಗರ್ಭಿತ ವಿಚಾರದಿಂದ ತುಂಬಿದ ಶಬ್ದಗಳಿಂದ ಮಾತಾಡಿದರೂ ಸಹ ಅದು ದೃಶ್ಯವೇ ಇರುವದು. ಹೊರಗಿನದೇ ಇರುವದು. ಆದ್ದರಿಂದ ಅದು ಮಾಯೆಯ ಕ್ಷೇತ್ರದಲ್ಲಿಯದೇ ಇರುವದು. ಅಸಾರವಿರುವದು. ಅದು ನಾಶವಂತವಿರುವದು. ಪರಂತು ಅದರ ಅರ್ಥ ಏನಿರುವದೋ ಅದು ಸೂಕ್ಷ್ಮವಿರುವದು, ಅದೃಶ್ಯವಿರುವದು. ಹಾಗೂ ಅದು ಆ ಶಬ್ದಗಳ ಹೊರಗೂ ಒಳಗೂ ವ್ಯಾಪಿಸಿಕೊಂಡಿರುವದು. [೧೮] ಶಬ್ದದ ಮಾಧ್ಯಮದಿಂದ (ಸಹಾಯದಿಂದ) ಅರ್ಥ ತಿಳಿಯುವದು. ಅರ್ಥವು ಧ್ಯಾನದಲ್ಲಿ ಬಂದ ಮೇಲೆ ಶಬ್ದದ ಅವಶ್ಯಕತೆ(ಗರಜ)ಮುಗಿಯುವದು. ಶಬ್ದದ ಅರ್ಥ ಯಾವುದಿರುವದೋ ಅದು ಸತ್ಯ ಮತ್ತು ಶಾಶ್ವತವಿರುವದು. ಆದರೆ ಸ್ವತಃ ಶಬ್ದವುಮಾತ್ರ ಅಸತ್ಯ ಹಾಗೂ ಅಶಾಶ್ವತವಿರುವದು. (೧೯) ಶಬ್ದದ ಮೂಲಕ ಪರಮಾತ್ಮ ವಸ್ತುವಿನ ಇರುವಿಕೆಯ (ಅಸ್ತಿತ್ವದ) ಜ್ಞಾನಮಾತ್ರವಾಗುವದು. ಆದರೆ ಆ ವಸ್ತುವಿನ ಸಾಕ್ಷಾತ್ ದರ್ಶನವಾದ ಮೇಲೆ ತನ್ನಿಂದ ತಾನೇ ಶಬ್ದಗಳು ನಾಶ ಹೊಂದುವವು. ಶಬ್ದವು ಅಸಾರ ಕವಚ (ಹೊದಿಕೆ) ಇದ್ದು ಅದರ (ಶಬ್ದದ) ಅರ್ಥವು ಒಳಗೆ ತುಂಬಿದ ಸಾರವಿರುವದು. (೨೦) ಧಾನ್ಯಕ್ಕೆ ಆವರಣ ಇರುವದರಿಂದ ಸಿಪ್ಪೆಯೊಂದಿಗಿನ ಧಾನ್ಯ (ಕಾಳು) ಹುಟ್ಟುತ್ತದೆ. (ಕವಚ ಹೋದಂಥ ಧಾನ್ಯ ಮೊಳಕೆಯೊಡೆಯುವದಿಲ್ಲ). ನಾವು ಕಾಳು ತೆಗೆದುಕೊಂಡು ಹೊಟ್ಟು (ಸಿಪ್ಪೆ, ತವಡು, ಸುಂಕಗಳ)ನ್ನು ಚಲ್ಲಿ ಬಿಡುತ್ತೇವೆ. ಇದರಂತೆಯೇ ಶಬ್ದವು ಹೊಟ್ಟು ಇದ್ದಂತೆ ಮತ್ತು ಅರ್ಥವು ಧಾನ್ಯವಿದ್ದಂತೆ ಎಂದು ತಿಳಿಯಬೇಕು. ಶಬ್ದದ ಹೊದಿಕೆ ಹೊದ್ದುಕೊಂಡೇ ಅರ್ಥ ಹುಟ್ಟುತ್ತದೆ. ಆದರೆ ನಾವು ಅರ್ಥಗ್ರಹಣ ಮಾತ್ರ ಮಾಡಬೇಕು. ಮತ್ತು ಶಬ್ದವನ್ನು ಬಿಟ್ಟು ಬಿಡಬೇಕು. (೨೧)

ಫೋಂಚಟಾಮಧೇ ಘನವಟ। ಘನವಟೀ ಉಡೆ ಫೋಂಚಟ।
ತೈಸಾ ಶಬ್ದ ಹಾ ಫಲಗಟ। ಪರಬ್ರಹ್ಮೀಂ ॥೨೨॥

ಶಬ್ದ ಬೋಂಲೋಂನಿ ರಾಹೇ। ಅರ್ಥ ಶಬ್ದಾ ಪೂರ್ವೀಂಚ ಆಹೇ।
ಯಾ ಕಾರಣೇ ನ ಸಾಹೇ। ಉಪಮಾ ತಯಾ ಅರ್ಥಾಸೀ ॥೨೩॥

ಭೂಸ ಸಾಂಡೂನ ಕಣ ಘ್ಯಾವಾ। ತೈಸಾ ವಾಚ್ಯಾಂಶ ತ್ಯಜಾವಾ।
ಕಣ ಲಕ್ಷ್ಯಾಂಶ ಲಕ್ಷಾವಾ। ಶುದ್ಧ ಸ್ವಾನುಭವೇ ॥೨೪॥

ದೃಶ್ಯಾವೇಗಳೇ ಬೋಂಲಿಜೆ। ತ್ಯಾಸೀ ವಾಚ್ಯಾಂಶ ಮ್ಹಣಿಜೆ।
ತ್ಯಾಚಾ ಅರ್ಥ ತೋ ಜಾಣಿಜೆ। ಶುದ್ಧ ಲಕ್ಷ್ಯಾಂಶ ॥೨೫॥

ಟೊಳ್ಳು (ಪೊಳ್ಳು, ಪೋಕಳ) ಕವಚದಲ್ಲಿ ತುಂಬಿದ ಧಾನ್ಯದ (ಭರ್ತಿ ಇರುವ ಸಾರ ಸಿಗುತ್ತದೆ. ಸಾರವನ್ನು ಆರಿಸಿ ತೆಗೆದುಕೊಂಡ ಮೇಲೆ ಅಸಾರವಾದ (ಸಿಪ್ಪಿ) ಕವಚ ಹಾರಿಹೋಗುತ್ತದೆ. ಅರ್ಥಾತ್ ಖಾಲಿ ಕವಚವನ್ನು ಬಿಟ್ಟು ಬಿಡುವರು. ಇದರಂತೆಯೇ ಪರಬ್ರಹ್ಮರೂಪಿ ಅರ್ಥವನ್ನು ಗ್ರಹಣ ಮಾಡಿದ ಮೇಲೆ ವ್ಯರ್ಥ ಶುಷ್ಕ, ಅಸತ್ಯ, ನಿರುಪಯುಕ್ತ ಶಬ್ದವು ತನ್ನಿಂದ ತಾನೇ ಉದುರಿ (ಕಳಚಿ) ಬೀಳುತ್ತದೆ. ಅಂತೆಯೇ ಆತ್ಮ ಸಾಕ್ಷಾತ್ಕಾರದ ಹತ್ತಿರ ಶಬ್ದಗಳು ಹೋಗಲು ಶಕ್ಯವಾಗುವದಿಲ್ಲ. ಅರ್ಥಾತ್ ಆತ್ಮಸಾಕ್ಷಾತ್ಕಾರದ ವರ್ಣನೆಯನ್ನು ಮಾಡಲಿಕ್ಕೆ ಬರುವದಿಲ್ಲ. (ಆಗುವದಿಲ್ಲ). (೨೨) ಶಬ್ದ ಮತ್ತು ಅರ್ಥ ಇವುಗಳ ಸಂಬಂಧ ತಿಳಿಸಿಕೊಡುವದಕ್ಕಾಗಿ ಹೊಟ್ಟು (ತವಡು-ಗೊಳಲಿ) ಮತ್ತು ಧ್ಯಾನ ಇವುಗಳ ಉಪಮೆ ಕೊಟ್ಟಿವೆ.ಆದರೆ ಇದೂ ಸಹ ಅರ್ಥಕ್ಕೆ ಅಷ್ಟೊಂದು ಆಗದೇ ಸರಿಬೀಳುವದಿಲ್ಲ. ಇದರ ಕಾರಣವೇನೆಂದರೆ-ಉಚ್ಚಾರ ಮಾಡುವದಕ್ಕಿಂತ ಮೊದಲು ಶಬ್ದವೇ ಇರುವದಿಲ್ಲ. ಅದೇ ಉಚ್ಚಾರ ಮಾಡುವಾಗ ಇರುವದು. ಹಾಗೂ ಉಚ್ಚಾರದ ನಂತರ ಇಲ್ಲದಾಗುವದು. ಇದರ ಉಲಟ ಅರ್ಥವು ಶಬ್ದ ಉಚ್ಚರಿಸುವದಕ್ಕಿಂತ ಮೊದಲೇ ಇರುತ್ತದೆ. ಶಬ್ದಗಳ ಉಚ್ಚಾರ ಆಗುತ್ತಿರುವಾಗಲೂ ಅರ್ಥ ಇರುತ್ತದೆ. ಆದರೆ ಶಬ್ದೋಚ್ಚಾರವಾಗಿ ಶಬ್ದ ಇಲ್ಲವಾದರೂ ಅರ್ಥವು ಉಳಿಯುತ್ತದೆ. ಆದ್ದರಿಂದ ಶಬ್ದದ ಉಪಮೆಯನ್ನು ಅರ್ಥದ ಬಗ್ಗೆ ಕೊಡಲಿಕ್ಕೆ ಬರುವದಿಲ್ಲ. ಈ ಎಂಟು-ಹತ್ತು ಓವಿಗಳಲ್ಲಿ ಶ್ರೀ ಸಮರ್ಥರು ತಮ್ಮ ಭಾಷೆಯಲ್ಲಿಯೇ ತತ್ವಜ್ಞಾನ ಹೇಳಿದ್ದಾರೆ. ಐದು ಪ್ರಶ್ನೆಗಳಿಗೆ ಅವರು ಉತ್ತರವನ್ನು ಕೊಟ್ಟಿದ್ದಾರೆ. ಅವು ಯಾವವೆಂದರೆ (೧) ಭಾಷೆಯ ಪ್ರಧಾನ ಕಾರ್ಯ ಯಾವುದು? (೨) ಶಬ್ದ ಮತ್ತು ಅರ್ಥ ಇವುಗಳ ಸಂಬಂಧ ಯಾವುದು? (೩) ಅರ್ಥದ ಸ್ವರೂಪ ಯಾವುದು? (೪) ಅರ್ಥ ಹಾಗೂ ಸದ್ವಸ್ತು ಇವುಗಳ ಸಂಬಂಧ ಯಾವುದು? (೫) ಮತ್ತು ಯಾವುದು ಅನಿರ್ವಾಚ್ಯ ಅಂದರೆ ವಿವರಿಸಿ ಹೇಳಲು ಸಾಧ್ಯವಿಲ್ಲದ್ದಾಗಿರುವದೋ ಅದನ್ನು ಭಾಷೆಯಲ್ಲಿ ಎಷ್ಟು ಮತ್ತು ಹೇಗೆ ತರಲಿಕ್ಕೆ ಬರುತ್ತದೆ. (೨೩) ಯಾವ ಪ್ರಕಾರ ತವಡು ಚೆಲ್ಲಿ ಅದರಲ್ಲಿಯ ಧಾನ್ಯದ ಕಾಳುಗಳನ್ನು ತೆಗೆದುಕೊಳ್ಳುವರೋ ಇದರಂತೆ ಶಬ್ದದ ವಾಚ್ಯಾಂಶ ಅಂದರೆ ಶಬ್ದದ ಮುಖಾಂತರ ತಿಳಿಯುವ ಹಾಗೂ ಮಾತನಾಡಿ ತೋರಿಸಲಿಕ್ಕೆ ಬರುವಂಥ ಅರ್ಥ ಮಾತನಾಡುವದು, ಇದನ್ನು ಬಿಟ್ಟು ಬಿಡಿರಿ, ಅದು ತವಡೇ ಇರುವದು. ಅದರಲ್ಲಿಯ ಲಕ್ಷ್ಯಾಂಶ ಅಂದರೆ ಗರ್ಭಿತಾರ್ಥ, ರಹಸ್ಯಾರ್ಥ ಅಂದರೆ ವಾಚ್ಯಾಂಶದತ್ಯಾಗ ಮಾಡಿದ ಮೇಲೆ ಶೇಷ ಉಳಿಯುವ ಅಧಿಷ್ಠಾನರೂಪಿ ಬ್ರಹ್ಮಾತ್ಮಾ ಶಬ್ದಜ್ಞಾನ ಲೋಪವಾದ ಮೇಲೆ ಅನುಭವಕ್ಕೆ ಬರುವ ಆತ್ಮಸ್ವರೂಪವೇ ಕಾಳು (ಧಾನ್ಯ) ಇರುವದು. ಇದರ ಕಡೆಗೆ ಲಕ್ಷ್ಯಕೊಡಬೇಕು ಅದನ್ನು ಗ್ರಹಿಸಬೇಕು. ಶುದ್ಧ ಆತ್ಮಸಾಕ್ಷಾತ್ಕಾರದಿಂದಲೇ ಅದು ಸಂಪೂರ್ಣವಾಗಿ ಗ್ರಹಣವಾಗುವದು. (೨೪) "ಆತ್ಮವಸ್ತುವು ದೃಶ್ಯಕ್ಕಿಂತ ಬೇರೆ ಇರುವದು" ಈ ಶಬ್ದ ಸಮೂಹವೇ ವಾಚ್ಯಾಂಶವು ಮೇಲಿನ ಶಬ್ದ ಸಮೂಹಕ್ಕೆ ಯಾವ ಅರ್ಥವಿರುವದೋ ಅದು ಲಕ್ಷ್ಯಾಂಶವಿರುವದು. ಭಾಷೆಗೆ ಎರಡು ಅಂಗ (ಭಾಗ, ಬಾಜು) ಇರುವವು. ಶಬ್ದೋಚ್ಚಾರ ಇದು ಭಾಷೆಯ ಬಾಹ್ಯಾಂಗವು ಮತ್ತು ಶಬ್ದದ ಅರ್ಥವು ಭಾಷೆಯ ಅಂತರಂಗವಿರುವದು. ಯಾವನೋ ಮನುಷ್ಯ ನಮ್ಮ ಸಂಗಡ ಮಾತನಾಡುವನು. ಆಗ ಅವನ ಮಾತಿನ ಶಬ್ದವು ಧ್ವನಿ ರೂಪದಿಂದ ನಮ್ಮ ಕಿವಿಯ ಮೇಲೆ ಬೀಳುತ್ತದೆ. ಇದು ಭಾಷೆಯಲ್ಲಿಯ ವಾಚ್ಯಾಂಶವೆಂದು ತಿಳಿಯಬೇಕು. ಶಬ್ದ ಕಿವಿಯ ಮೇಲೆ ಬೀಳುತ್ತಿದ್ದರೆ ಇದರಿಂದ ಮನಸ್ಸಿಗೆ ಏನಾದರೂ ಬೋಧವಾಗುವದು. ಈ ತಿಳಿಯುವದಕ್ಕೆ ಬೋಧಕ್ಕೆ ಅರ್ಥವೆನ್ನುವರು. ಇದು ಭಾಷೆಯಲ್ಲಿಯ ಲಕ್ಷ್ಯಾಂಶವೆಂದು ತಿಳಿಯಬೇಕು. ಶಬ್ದ ಮತ್ತು ಅರ್ಥ ಇವುಗಳಲ್ಲಿ ಬಹಳ ನಿಕಟಸಂಬಂಧವಿರುವದು. ಶಬ್ದವು ಅರ್ಥದವಾಹಕವಿರುತ್ತದೆ. ಅಂದರೆ ಶಬ್ದ ಕಿವಿಗೆ ಬಿದ್ದಕೂಡಲೇ ಅದರ ಅರ್ಥವು ಮನದಲ್ಲಿ ಉದಯ ಹೊಂದುವದು. ಶಬ್ದವು ದೃಶ್ಯವಿದ್ದು ಅದು ಇಂದ್ರಿಯ ಗಮ್ಯವಿರುವದು. ಅರ್ಥವಾದರೋ ಅದೃಶ್ಯವಿದ್ದು ಅದು ಅತೀಂದ್ರಿಯವಿರುವದು. ಶಬ್ದದ ಸಂಬಂಧ ಶರೀರದೊಂದಿಗೆ ಹೆಚ್ಚಾಗಿರುವದು. ಅದೇ ಅರ್ಥದ ಸಂಬಂಧ ಹೆಚ್ಚಾಗಿ ಮನಸ್ಸಿನೊಂದಿಗೆ ಇರುವದು. ನಮ್ಮ ಮನಸ್ಸಿನಲ್ಲಿಯ ವಿಚಾರಗಳು ಅರ್ಥರೂಪವಿರುವವು. ನಾವು ಅವುಗಳನ್ನು ಶಬ್ದರೂಪದಿಂದ ಪ್ರಕಟಪಡಿಸುವೆವು.ಇದರಿಂದ ನಮ್ಮ ಮನದಲ್ಲಿಯ ಅರ್ಥ ಇನ್ನೊಬ್ಬರಿಗೆತಿಳಿಯುವದು. ಅರ್ಥಾತ್ ಸಂವಾದದಲ್ಲಿಯ ಶಬ್ದಗಳು ಗೌಣವಾದರೆ ಅರ್ಥವು ಪ್ರಧಾನ (ಮುಖ್ಯ)ವಿರುತ್ತವೆ. ಅಂತೆಯೇ ಶ್ರೀಸಮರ್ಥರು ಹೇಳುವದೇನೆಂದರೆ ವಾಚ್ಯಾಂಶವನ್ನು ತ್ಯಜಿಸಿರಿ. ಲಕ್ಷ್ಯಾಂಶವನ್ನು ತಿಳಿದುಕೊಳ್ಳಿರಿ ಹಾಗೂ ಇದನ್ನು ಸ್ವಾನುಭವದಲ್ಲಿ ರೂಪಾಂತರ ಮಾಡಿರಿ. (೨೫)

ಐಸಾ ಜೊ ಶುದ್ಧ ಲಕ್ಷ್ಯಾಂಶ । ತೋಚಿ ಜಾಣಾವಾ ಪೂರ್ವಪಕ್ಷ ।
ಸ್ವಾನುಭವ ತೋ ಅಲಕ್ಷ । ಲಕ್ಷಿಲಾ ನ ವಚೆ ॥೨೬॥

ಜೇಥೇ ಗಾಳೂನ ಸಾಂಡಿಲೇ ನಭಾ । ಜೋ ಅನುಭವಾಚಾ ಗಾಭಾ ।
ಐಸಾ ತೋಹೀ ಉಭಾ । ಕಲ್ಪಿತ ಕೇಲಾ ॥೨೭॥

ಮಿಥ್ಯಾ ಕಲ್ಪನೆ ಪಾಸೂನಿ ಜಾಲಾ । ಖರೇಪಣ ಕೈಚೇ ಅಸೇಲ ತ್ಯಾಲಾ ।
ವೃಣೌನಿ ತೇಥೇ ಅನುಭವಾಲಾ । ಠಾವ ಚಿ ನಾಹೀ ॥೨೮॥

ಶಬ್ದ ಕೇಳಿದ ಮೇಲೆ ಅರ್ಥಮಯ ಶುದ್ಧಬೋಧ-ಜ್ಞಾನ ಅಥವಾ ಲಕ್ಷ್ಯಾಂಶವು ಮನಸ್ಸಿನಲ್ಲಿ ಉದಯವಾಗುತ್ತದೆ. ಆದರೆ ಇದೂ ಸಹ ಆತ್ಮವಸ್ತುವಿನ ಈಚೆಗೇ ನಿಲ್ಲುತ್ತದೆ. ನಮ್ಮ ಮನಸ್ಸು ಸ್ವಸ್ವರೂಪದ ಅನುಭವದವರೆಗೆ ಹೋಗಲು ಶಕ್ಯವಾಗುವದಿಲ್ಲ. ಈ ಕಾರಣದಿಂದಾಗಿ ಸಂಪೂರ್ಣ ಅರ್ಥವು ಜ್ಞಾಪಕ (ಸ್ಮರಣ–ಲಕ್ಷ) ದಲ್ಲಿ ಬಂದರೂ ಸಹಿತ ಆತ್ಮವಸ್ತುವು ಅನುಭವಕ್ಕೆ ಬರುದಿಲ್ಲ. (೨೬) ಸಾಮಾನ್ಯ ಮನುಷ್ಯನ ಎಲ್ಲ ವ್ಯವಹಾರವು ದೇಹಬುದ್ಧಿಯಿಂದ ಆಗುತ್ತದೆ. ದೇಹಬುದ್ಧಿಯಲ್ಲಿ ದ್ರಷ್ಟಾ (ನೋಡುವವ), ದೃಶ್ಯ (ನೋಡಲು ಯೋಗ್ಯವಾದ), ಮತ್ತು ದರ್ಶನ (ನೋಡುವದು.) ಈ ಮೂರೂ ಅಂಗಗಳು ಬೇರೆಬೇರೆಯಾಗಿ ತೋರುವವು [ಬೇರೆ ಬೇರೆಯೆಂದು ಅನಿಸುವವು] ದೃಶ್ಯವು ಸಂಪೂರ್ಣ ಖರೆ ಎಂದು ಅನಿಸುವದು. ಇವುಗಳನ್ನು ಬೇರೆಬೇರೆಯಾಗಿ ನೋಡುವಂಥ ದೃಷ್ಟಾನಿಗೆ ನಾನು ಇದೂ ಸಹ ಅಗದೀ ಖರೇ ಅನಿಸುವದು. ದೃಷ್ಟಾನಿಗೆ ದೃಶ್ಯದ ಅನುಭವ ಬರುವದು, ಈ ಅನುಭವದಲ್ಲಿ ದ್ವೈತವಿರುತ್ತದೆ. ಈಅನುಭವ ಪ್ರಕಟಮಾಡುವದಕ್ಕೆ ಮನುಷ್ಯನು ಭಾಷೆಯನ್ನು ಉಪಯೋಗಿಸುವನು. ಅನುಭವದ ಬಗ್ಗೆ ಯಾವ ಕ್ಷೇತ್ರ ಇರುವದೋ ಅದೇ ಭಾಷೆಯ ಕ್ಷೇತ್ರವೂ ಇರುವದು. ಈ ದೃಷ್ಟಿಯಿಂದ ಈ ದೃಶ್ಯವಿಶ್ವ ಮತ್ತು ಇದರಲ್ಲಿರುವ ವಸ್ತುಗಳು ಮಾನವೀ ಭಾಷೆಯ ಕ್ಷೇತ್ರವೆಂದು ತಿಳಿಯಬೇಕು. ಸಂತ ಶರಣರು ಆತ್ಮಬುದ್ಧಿಯ ಭೂಮಿಕೆ [ಅಂತಸ್ತು ಮೆಟ್ಟಲು]ಯ ಮೇಲೆ ಇರುತ್ತಾರೆ. ಇವರಿಗೆ ಆತ್ಮಸಾಕ್ಷಾತ್ಕಾರವಾಗಿರುವದು. ಇವರು ಆತ್ಮಸ್ವರೂಪದ ಅನುಭವ ಪಡೆಯುವರು. ಆದರೆ ಇವರ ಅನುಭವದ ರೀತಿ [ಪ್ರಕಾರ] ತೀರ ಭಿನ್ನವಿರುವದು. ಆತ್ಮಸ್ವರೂಪವು ದೃಶ್ಯಕ್ಕಿಂತ ಸರ್ವಸ್ವೀ [ಅಗದೀ] ಬೇರೆ ಇರುವದು. ಇಂಥ ಸಂತ ಶರಣರ ಅನುಭವದಲ್ಲಿ ದ್ರಷ್ಟಾನು ಆತ್ಮಸ್ವರೂಪದೊಂದಿಗೆ ಅಗದೀ ಸಂಪೂರ್ಣ ಸಮರಸನಾಗುವನು. ತಾದಾತ್ಮ್ಯ ಅಂದರೆ ಅದೇ ಆಗುವಿಕೆ, ಅಭಿನ್ನತೆ, ಏಕರೂಪವಾಗುವಿಕೆಯು ಇದನ್ನು ಹೊಂದುವನು."ನಾನು ಅವನೇ ಇರುವೆನು" ಈ ಭಾವ (ಅರಿವು) ಸಹ ಶಿಲ್ಲಕ ಉಳಿಯುವದಿಲ್ಲ. ಸರ್ವ–ಎಲ್ಲ–ದ್ವೈತ ಭೇದ ಭಿನ್ನತ್ವವೂ ಇಲ್ಲದಾಗಿ ಹೋಗುವದು. ಅರ್ಥಾತ್ ಕೇವಲ ಅದ್ವೈತ (ಏಕತ್ವ) ಇರುವದು. ಈ ಸ್ಥಿತಿಯಲ್ಲಿ "ಅನುಭವ ಹೊಂದುವೆ" ಎಂಬ ಭಾಷೆಯನ್ನು ಸಹ ಉಪಯೋಗಿಸಲಿಕ್ಕೆ ಬರುವದಿಲ್ಲ. ಇರಲಿ. ಇದೆಲ್ಲ ನಿಜವೇ ಆದರೆ ಸ್ವಸ್ವರೂಪದೊಂದಿಗೆ ಆದಂಥ ಸಮರಸತೆ (ಏಕತ್ವ) ಯಾವಾಗ ಭಾಷೆಯು ಮುಖಾಂತರ ಹೇಳುವ ಪ್ರಸಂಗ ಬರುವದೋ ಆಗ ಖರೇ ಅಡಚಣಿಉಂಟಾಗುವದು. ಈ ಅಡಚಣಿ ನಿವಾರಿಸುವದಕ್ಕಾಗಿ ಮನುಷ್ಯನ ಕಲ್ಪನೆ ಉಪಯೋಗ ಬೀಳುವದು. ದೃಶ್ಯದಲ್ಲಿಯ ಸೂಕ್ಷ್ಮ ಅನುಭವ ತೆಗೆದುಕೊಂಡು ಸ್ವಸ್ವರೂಪ ಸಾಕ್ಷಾತ್ಕಾರದೊಂದಿಗೆ ಇದರ ಸಾಮ್ಯತ್ವ ತೋರಿಸಬೇಕಾಗುವದು. ಇದು ಕಲ್ಪನೆಯ ಪ್ರಕಾರ (ರೀತಿ) ಇರುವದರಿಂದ ಇದೇನೂ ಖರೇ ಇರುವದಿಲ್ಲ. ಆದರೆ ಇದರ ಹೊರತು ಗತ್ಯಂತರವೇ ಇರುವದಿಲ್ಲ ವೆಂಬುದೂ ನಿಜವೇ. ಆದ್ದರಿಂದ ಸಂತ ಸಾಧುಗಳು ತಮ್ಮ ಭಾಷೆಯನ್ನು ಉಪಯೋಗಿಸುತ್ತಾರೆ. ಆದರೆ ಅವುಗಳ ಅರ್ಥ ಸ್ವಸ್ವರೂಪೋನ್ಮುಖವಿರುವದು. ದಾಸಬೋಧದಂಥ ಗ್ರಂಥ ಓದುವಾಗ ಈ ಮಾತನ್ನು ಯಾವಾಗಲೂ ಮರೆಯಬಾರದು:- ಆತ್ಮಸ್ವರೂಪವು ಅತಿಶಯ ಸೂಕ್ಷ್ಮವಿದೆ. ನಮ್ಮ ಅನುಭವದಲ್ಲಿ ಆಕಾಶವು ಅತಿ ಸೂಕ್ಷ್ಮವಿರು ವದು ನಿಜವು. ಪರಂತು ಆಕಾಶವನ್ನು ಹೇಗಾದರೂ ಮಾಡಿ ಸೋಸಿ ತೆಗೆದರೆ ಅದಕ್ಕೆ ಆತ್ಮಸ್ವರೂಪದ ಸೂಕ್ಷ್ಮತನದ ಹೋಲಿಕೆ ಬರಬಹುದೋ, ಏನೋ? ಅರ್ಥಾತ್ ಆಕಾಶಕ್ಕಿಂತಲೂ ಬಹಳಷ್ಟು ಆತ್ಮಸ್ವರೂಪವು ಸೂಕ್ಷ್ಮವಿರುವದು. ಇಂಥ ಈ ಪರಿಪೂರ್ಣ ಸ್ವರೂಪವು ಸರ್ವ ಅನುಭವದ ಅಂತರ್ಭಾಗವಿರುವದು. ಇದರ ಸತ್ತಾದಿಂದ (ಅಸ್ತಿತ್ವದಿಂದ) ಎಲ್ಲ ಅನುಭವವೂ ಬರುವದು. ಆದರೆ ಇದೆಲ್ಲವೂ ಸ್ವರೂಪ ವರ್ಣನೆಯು ಅಂದರೆ ಮನುಷ್ಯನು ತನ್ನಕಲ್ಪನೆಯನ್ನು ಹಿಗ್ಗಿಸಿ ನಿರ್ಮಾಣ ಮಾಡಿದ ಶೃಂಗರಿಸಿದ ಎತ್ತರದಲ್ಲಿಯ ತೂಗಾಡುವ ಮನೆಯು. (೨೭) ಮೂಲದಲ್ಲಿ ಕಲ್ಪನೆಯೇ ನಿಜವಿರುವದಿಲ್ಲ. ಅಂತೆಯೇ ಕಲ್ಪನೆಯಿಂದ ಯಾವದು ಹುಟ್ಟುವದೋ ಅದು ಖರೇ ಇರಲು ಸಾಧ್ಯವಿಲ್ಲ. ಇದರಿಂದ (ಈ ಕಾರಣದಿಂದ) ಆತ್ಮಸ್ವರೂಪದ ಗುರುತು (ಸ್ಥಾನ) ಎಂದು ನಾವು ಯಾವುದಕ್ಕೆ ಅನುಭವವೆನ್ನುವೆವೋ ಅದಕ್ಕೆ ಸ್ಥಾನವಿಲ್ಲ. (೨೮)

ದುಜೆವಿಣ ಅನುಭವ । ಹೇ ಬೋಲಣೇ ಚಿ ತೋ ವಾವ ।
ಯಾಕಾರಣೇ ನಾಹೀ ಠಾವ । ಅನುಭವಾಸೀ ॥೨೯॥

ಅನುಭವೇ ತ್ರಿಪುಟೀ ಉಪಜೆ । ಅದ್ವೈತೀ ದ್ವೈತ ಚಿ ಲಾಜೇ ।
ಮ್ಹಣೌನಿ ಬೋಲಣೇ ಸಾಜೇ । ಅನುರ್ವಾಚ್ಯ ॥೩೦॥

ದಿವಸರಜನೀಚೇ ಪರಮಿತ್ಯ । ಕರಾವಯಾ ಮೂಳ ಆದಿತ್ಯ ।
ತೋ ಆದಿತ್ಯ ಗೇಲಿಯಾ ಉರ್ವರಿತ । ತ್ಯಾಸೀ ಕಾಯೆ ಮ್ಹಣಾವೇ ॥೩೧॥

ಶಬ್ದ ಮೌನ್ಯಾಚಾ ವಿಚಾರ । ಮ್ಹಾವಯಾ ಮೂಳ ಓಂಕಾರ ।
ತೋ ಓಂಕಾರ ಗೇಲಿಯಾ ಉಚ್ಚಾರ । ಕೈಸಾ ಕರಾವಾ ॥೩೨॥

ಅನುಭವ ಆಣಿ ಅನುಭವಿತಾ । ಸಕಳ ಯೇ ಮಾಯೇ ಚಿ ಕರಿತಾ ।
ತೇ ಮಾಯಾ ಮುಳೀ ನಸ್ತಾ । ತ್ಯಾಸೀ ಕಾಯೆ ಮ್ಹಣಾವೇ ॥೩೩॥

ವಸ್ತು ಯೇಕ ಆಪಣ ಯೇಕ । ಏಸೀ ಅಸ್ತಿ ವೇಗಳಿಕ ।
ತರೀ ಅನುಭವಾಚಾ ವಿವೇಕ । ಬೋಲೋ ಯೆತಾ ಸುಖೇ ॥೩೪॥

ವೇಗಳೇ ಪಣಾಚೀ ಮಾತಾ । ತೇ ಲಟಿಕೆ ವಂಧ್ಯೇಚೀ ಸುತಾ ।
ಮ್ಹಣೋನಿಯಾ ಅಭಿನ್ನತಾ । ಮುಳೀ ಚ ಆಹೆ ॥೩೫॥

ಅಜನ್ಮಾ ಹೋತಾ ನಿಜೇಲಾ । ತೇಣೇ ಸ್ವಪ್ನೀ ಸ್ವಪ್ನ ದೇಖಿಲಾ ।
ಸದ್ಗುರೂಸ ಶರಣ ಗೇಲಾ । ಸಂಸಾರ ದುಃಖೇ ॥೩೬॥

ಅನುಭವ ಬರಬೇಕಾದರೆ ಅನುಭವ ಹೊಂದುವವ [ಪಡೆಯುವವ] ಮತ್ತು ಯಾವುದರ ಅನುಭವ ಪಡೆಯುವದಿದೆಯೋ ಅದು ಹೀಗೆ ದ್ವಿತ್ವ (ಎರಡುತನ) ಅವಶ್ಯವಿರುವದು. ಆದರೆ ಆತ್ಮಸ್ವರೂಪದಲ್ಲಿ ಅನುಭವ ಹೊಂದುವವನೇ ಶಿಲ್ಲಕ ಉಳಿಯುವದಿಲ್ಲ. ಅಲ್ಲಿ ದ್ವಿತ್ವತನ (ಎರಡುತನ) ಇರುವದಿಲ್ಲ. ಆದ್ದರಿಂದ "ನಾನು ಸ್ವರೂಪದ ಅನುಭವ ತೆಗೆದುಕೊಳ್ಳುವೆ" ಈ ಅವಸ್ಥೆಗೆ ಸ್ವರೂಪ ಸಾಕ್ಷಾತ್ಕಾರದಲ್ಲಿ ಸ್ಥಳವಿಲ್ಲ. (೨೯) "ನಾನು ಅನುಭವ ತೆಗೆದುಕೊಂಡೆನು" ಹೀಗೆ ಅಂದ ಕೂಡಲೇ, ಅನುಭವ ತೆಗೆದುಕೊಳ್ಳುವವನಾದ ನಾನು, ಯಾವುದರ ಅನುಭವ ತೆಗೆದುಕೊಂಡೆನೋ ಆ ವಸ್ತು ಈ ಎರಡರ ಸಂಬಂಧ ಉಂಟಾದ ಮೇಲೆ ಬಂದಂಥ ಅನುಭವ ಹೀಗೆ ಮೂರು ಅಂಗಗಳು. ಉತ್ಪನ್ನವಾಗುವವು. ಇದಕ್ಕೆ ತ್ರಿಪುಟಿ ಎಂದು ಅನ್ನುವರು. ತ್ರಿಪುಟಿಯು ದ್ವೈತವಿರುವದು. ದ್ವೈತ ಭಾಷೆಯ ಕಕ್ಷೆಯಲ್ಲಿ ಬರುವದು. ಆದರೆ ಸ್ವಸ್ವರೂಪದ ಸ್ಥಳದಲ್ಲಿ ಕೇವಲ ಅದ್ವೈತವಿರುವದರಿಂದ ಅಲ್ಲಿ ದ್ವೈತವು ಅಂತರ್ಧಾನ ಹೊಂದುವದು, (ಅದೃಶ್ಯವಾಗುವದು). ಇದು ದ್ವೈತವಲ್ಲದ ಮೂಲಕ ಅಲ್ಲಿಗೆ ಭಾಷೆಯು ಹೋಗಿ ಮುಟ್ಟಲು ಆಗುವದಿಲ್ಲ. ಅಂತೆಯೇ ಸ್ವಸ್ವರೂಪವು ಅನಿರ್ವಾಚ್ಯವಿದೆ. ಶಬ್ದಗಳಿಂದ ಇದನ್ನು ಹೇಳಲಿಕ್ಕೆ ಬರುವದಿಲ್ಲ. ಇದರ ಬಗ್ಗೆ ಹೆಚ್ಚಿಗೆ ಹೇಳುವದು ಬೇಡ. ಇದರ ಬಗ್ಗೆ ಶೋಭಿಸುವಂತಹ ಮಾತೆಂದರೆ ಇಷ್ಟೇ ಎಂದು ತಿಳಿಯಬೇಕು· [೩೦] ಸೂರ್ಯನಿರುವದರಿಂದಲೇ ನಮಗೆ ಹಗಲು ರಾತ್ರಿ ಇವುಗಳನ್ನು ಬೇರೆ-ಬೇರೆಯಾಗಿ ಎಣಿಸಲಿಕ್ಕೆ ಸಾಧ್ಯವಾಗಿರುವದು. ಅದೇ ಸೂರ್ಯನೇ ಇಲ್ಲದಾಗಿದ್ದರೆ ಆಗ ಇದು ಹಗಲು ಮತ್ತು ಇದು ರಾತ್ರಿ ಎಂಬ ಭೇದವೇ ಇರುತ್ತಿರಲಿಲ್ಲ. (೩೧) ನಾಲ್ಕೂ ವಾಣಿಯಿಂದ ಉತ್ಪನ್ನವಾಗುವ ಎಲ್ಲ ಶಬ್ದ ಸೃಷ್ಟಿಯ ಮೂಲವು ಓಂಕಾರವಿರು-ವದು. ಶಬ್ದ ಮಾತಾಡುವಿಕೆ, ಅಥವಾ ಮೌನ ಧರಿಸುವಿಕೆ, ಅಂದರೆ ಶಬ್ದ ಮಾತಾಡದಿರುವದು. ಈ ವಿಚಾರದ ಮೂಲವು, ಕೊನೆಯಲ್ಲಿ ಓಂಕಾರದ ಅಸ್ತಿತ್ವದಲ್ಲಿರುವದು. ಆ ಓಂಕಾರವೇ ಲಯ ಹೋದಿತೆಂದರೆ ಶಬ್ದ ಮಾತಾಡುವದು ಮತ್ತು ಶಬ್ದ ಮಾತಾಡದೇ ಇರುವದು ಇವೆರಡೂ ಇಲ್ಲದಾಗಿ ಹೋಗುವವು. (೩೨) ಇದೇ ಪ್ರಕಾರ ಅನುಭವ ಹಾಗೂ ಅನುಭವ ಪಡೆಯುವವ ಈ ದ್ವಿತ್ವ (ಎರಡುತನ, ದ್ವೈತ) ತನವು ಮಾಯೆಯಿಂದ ನಿರ್ಮಾಣವಾಗುವದು. ಈ ಮಾಯೆಯೇ ಮೂಲದಲ್ಲಿ ಒಂದು ವೇಳೆ ಇಲ್ಲದಾದರೆ ಆ ಮೇಲೆ ಅನುಭವಕ್ಕೆ ಸ್ಥಳ ಹೇಗೆ ಶಿಲ್ಲಕ ಉಳಿದೀತು? ಅರ್ಥಾತ್ ಉಳಿಯುವದಿಲ್ಲ. (೩೩) ಆತ್ಮ ವಸ್ತು ಬೇರೆ, ಮತ್ತು ಅದರ ಅನುಭವ ಪಡೆಯುವ ನಾನು ಬೇರೆ, ಹೀಗೆ ಪೃಥಕ್ಕರಿಸಿದರೆ ಆಗ "ನಾನು ಆತ್ಮನನ್ನು ಅನುಭವಿಸಿದೆನು" ಎಂಬ ಶಬ್ದವನ್ನು ಸಹಜವಾಗಿ ಹೇಳಲಿಕ್ಕೆ ಬರುತ್ತಿತ್ತು· ಮತ್ತು ಆ ಅನುಭವದ ಚಿಕಿತ್ಸೆಯನ್ನು ಸುಖಸಂತೋಷದಿಂದ ಮಾಡಲಿಕ್ಕೆ ಬರುತ್ತಿತ್ತು.(೩೪) ಬೇರೆತನ ಅಥವಾ ಎರಡು (ದ್ವಿತ್ವ)ತನ ಅಥವಾ "ನಾನು ಬೇರೆ ಇರುವೆನು" ಈ ಭಾವನೆಯ ತಾಯಿ ಮಾಯೆಯೇ ಇರುವಳು. ಮಾಯೆಯ ಮೂಲಕವೇ ಈ ಭಾವನೆಯು ಹುಟ್ಟಿಕೊಂಡಿತು. ಆದರೆ ಬಂಜೆಯ ಮಗಳೆಂದರೆ ಹೇಗೆ ಅಗದೀ ಸುಳ್ಳೋ ಅದರಂತೆ ಈ ಮಾಯೆ ಪೂರ್ಣ ಖೊಟ್ಟಿ ಇದೆ. ಅಂತೆಯೇ ಮಾಯೆಯಿಂದ ಹುಟ್ಟಿದ ಭಾವನೆಯೂ ಖೊಟ್ಟಿಇರುವದು. ಜೀವವು ಮೂಲದಲ್ಲಿಯೇ ಪರಮಾತ್ಮನೊಂದಿಗೆ ಅಭಿನ್ನವಿದೆ (ಐಕ್ಯತೆ ಇರುವದು). (೩೫) ಮಾಯೆಯ ಅಸ್ತಿತ್ವ ಒಪ್ಪಿಕೊಂಡು ಅಧ್ಯಾತ್ಮ ಹೇಳುವ ಒಂದು ಪದ್ಧತಿ (ಸಂಪ್ರದಾಯ ರೂಢಿ)ಇರುವದು. ಮತ್ತು ಮಾಯೆ ಇಲ್ಲವೇಇಲ್ಲವೆಂದು ಮನ್ನಿಸಿ ಸ್ವರೂಪಜ್ಞಾನ ಹೇಳುವ ಇನ್ನೊಂದು ಪದ್ಧತಿಯೂ (ಸಂಪ್ರದಾಯ) ಇರುವದು. ದೇಹಬುದ್ಧಿ ಇರುವ ಅಜ್ಞಾನಿ ಜನರಿಗೆ ವಿಷಯ ತಿಳಿಯಲು (ಗ್ರಹಿಸಲು) ಮೊದಲನೆಯ ಪದ್ಧತಿ ಉಪಯೋಗ ಬೀಳುತ್ತದೆ. ಆದರೆ ಆತ್ಮಸಮ್ಮುಖ (ಆತ್ಮದ ಕಡೆಗೆ ಮುಖ ಮಾಡಿದವ, ಅಧ್ಯಾತ್ಮ ತಿಳಿಯಬೇಕೆಂಬ ಹಂಬಲಉಳ್ಳವ)ನಾದ ಸಾಧಕನಿಗೆ ಸ್ವತಃದ ಸ್ವರೂಪ ಕಲ್ಪನೆ· ಸ್ವಚ್ಛವಾಗುವದಕ್ಕೆ ತಿಳಿಯಲಿಕ್ಕೆ ಎರಡನೆಯ ಪದ್ಧತಿ ಸಹಾಯಕವಾಗುವದು. ಶ್ರೀ ಸಮರ್ಥರು ಇಲ್ಲಿ ಎರಡನೆಯ ಪದ್ಧತಿಯ ಬಗ್ಗೆ ಸ್ವಲ್ಪದರಲ್ಲಿ ತಿಳಿಸಿ ಹೇಳುತ್ತಾರೆ:- ಮೂಲತಃ ಜನ್ಮ ಮರಣವಿಲ್ಲದಂತಹ ಒಬ್ಬ ಅಜನ್ಮನಿದ್ದನು. ಅವನು ನಿದ್ರೆ ಹೋದನು. ಆ ನಿದ್ರೆಯಲ್ಲಿ ಅವನಿಗೆ ಒಂದು ಸ್ವಪ್ನ ಬಿದ್ದಿತು ಸ್ವಪ್ನದಲ್ಲಿ ಅವನು ಕಂಡದ್ದೇನೆಂದರೆ ತನಗೆ ಬಹಳಷ್ಟು ಸಂಸಾರ ದುಃಖವಾಯಿತು. ಆದ್ದರಿಂದ ತಾನು ಸದ್ಗುರುವಿಗೆ ಶರಣು ಹೋದೆನು. (೩೬)

ಸದ್ಗುರು ಕೃಪೇಸ್ತವ । ಜಾಲಾ ಸಂಸಾರ ವಾವ ।
ಜ್ಞಾನ ಜಾಲಿಯಾ ಠಾವ । ಪುಸೆ ಅಜ್ಞಾನಾಚಾ ॥೩೭॥

ಆಹೆ ತಿತುಕೇ ನಾಹೀ ಜಾಲೇ । ನಾಹೀ ನಾಹೀಪಣೇ ನಿಮಾಲೇ ।
ಆಹೆ ನಾಹೀ ಜಾಊನ ಉರಲೇ । ನಸೋನ ಕಾಹೀ ॥೩೮॥

ಸುನ್ಯತ್ವಾತೀತ ಶುದ್ಧಜ್ಞಾನ । ತೇಣೇ ಜಾಲೇ ಸಮಾಧಾನ ।
ಐಕ್ಯರೂಪೇ ಅಭಿನ್ನ । ಸಹಜಸ್ಥಿತೀ ॥೩೯॥

ಆಮೇಲೆ ಸದ್ಗುರುವಿನ ಕೃಪೆ ತನ್ನ ಮೇಲೆ ಆಯಿತು. ಇದರಿಂದ ಸಂಸಾರ ಖೊಟ್ಟಿ ಸುಳ್ಳು ಎನಿಸಿತು. ಮತ್ತು ಇದು (ಸಂಸಾರ) ಮಿಥ್ಯೆ ಇರುವದು. ಎಂಬ ಅನುಭವವೂ ಬಂದಿತು. ಆನಂತರ "ನಾನು ಆತ್ಮನೇ ಇರುವೆ" ಎಂಬ ಜ್ಞಾನವಾಯಿತು. ಇದರಿಂದ "ನಾನು ದೇಹವೇ ಇರುವೆ" ಎಂಬ ಅಜ್ಞಾನವೂ ಸಹ ಸ್ವಚ್ಛವಾಗಿ ಇಲ್ಲದಾಗಿ ಹೋಯಿತು. (೩೭) ಯಾವುದು ಇರುವದು ಎಂದು ಅನಿಸುತ್ತಿದ್ದಿತೋ ಅದೆಲ್ಲವೂ ಇಲ್ಲವೆಂದಾಯಿತು. ಯಾವುದು ಇಲ್ಲವೆಂಬುದಾಗಿ ಗೊತ್ತಿದ್ದಿತೋ ಅದು ಎಂದೂ (ಯಾವಾಗಲೂ) ಇದ್ದಿರಲಿಲ್ಲವೆಂದೇ ತಿಳಿದು ಇಲ್ಲದಾಗಿ ಹೋಯಿತು. ಈ ರೀತಿಯಿಂದ ಇರುವದು (ಅದೆ) ಮತ್ತು ಇಲ್ಲದಿರುವದು (ಇಲ್ಲ) ಈ ಎರಡೂ ಇಲ್ಲದಾಗಿ ಹೋದವು. ಆಗ ಯಾವುದಕ್ಕೂ"ಅದು ಇಂಥದು ಅದೆ ಅಥವಾ ಅದು ಇಂಥದುಅಲ್ಲ"ಹೀಗೇನೂ ಅನ್ನಲಿಕ್ಕೆ ಬರುವದಿಲ್ಲ ಅದು ಕೇವಲ ಅಸ್ತಿತ್ವ ರೂಪದಲ್ಲಿ ಮಾತ್ರ ಉಳಿಯಿತು. ಶುದ್ಧ ಸ್ವರೂಪದಲ್ಲಿ ಉಳಿಯಿತು. ಇರಲಿ ಈ ೩೬, ೩೭, ೩೮, ಈ ಮೂರು ಶ್ಲೋಕಗಳ (ಓವಿಗಳ) ಭಾವಾರ್ಥ ಹೀಗಿರುವದು.-ಮೂಲ ಸ್ವಯಂ ಪ್ರಕಾಶ ಆತ್ಮಸ್ವರೂಪವು ಸ್ವಾನಂದದಲ್ಲಿದ್ದಿತು. ಅದಕ್ಕೆ ನಿದ್ರೆ ಹತ್ತಿತು. ಅಂದರೆ ಅದಕ್ಕೆ ತನ್ನ ಸ್ವತಃದ ಸ್ವರೂಪದ ಮರೆವಾಯಿತು. ಈ ಮರೆವಿನ ನಿದ್ರೆಯುಲ್ಲಿ ಅದಕ್ಕೆ ಸ್ವಪ್ನ ಬಿದ್ದಿತು ಅಂದರೆ ನಾನು ದೇಹರೂಪ ಇರುವೆನು ಎಂಬ ಭಾಸವಾಗಿ ಅದಕ್ಕೆ ಅತ್ತ ಇತ್ತ ಸುತ್ತಮುತ್ತೂ ಭೇದದಿಂದ (ಭಿನ್ನತ್ವದಿಂದ) ತುಂಬಿದ ದೃಶ್ಯ (ಕಾಣುವ) ವಿಶ್ವ ತೋರಹತ್ತಿತ್ತು. ಈ ಸ್ವಪ್ನದಲ್ಲಿ ಸಂಸಾರದ ದುಃಖವಾಯಿತು. ಅಂದರೆ ದೃಶ್ಯದಲ್ಲಿಯ ದ್ವೈತ (ಭಿನ್ನತ್ವ)ದ ಮೂಲಕ ಅವನಿಗೆ ಭಯವೆನಿಸಹತ್ತಿತು. ಆಮೇಲೆ ಆ ಸ್ವಪ್ನದಲ್ಲಿಯೇ ಇನ್ನೊಂದು ಸ್ವಪ್ನ ಅವನಿಗೆ ಬಿದ್ದಿತು. ಅದರಲ್ಲಿ ಅವನು ಸದ್ಗುರುವಿಗೆ ಶರಣು ಹೋದನು. ಅವರು ಇವನ ಮೇಲೆ ಕೃಪೆ ಮಾಡಿದರು. ಮತ್ತು ಯಾವ ಸಂಸಾರಕ್ಕೆ ತಾನು ಗಾಬರಿ (ಅಂಜಿ)ಪಟ್ಟಿದ್ದನೋ ಅದು ಸ್ವಪ್ನವೇ ಇದ್ದಿತು ಎಂಬುದಾಗಿ ತಿಳಿದು ಬಿಟ್ಟಿತು. ಅಂದರೆ ಈ ದೃಶ್ಯ ವಿಶ್ವವೆಲ್ಲ ಮೂಲದಲ್ಲಿ ಸ್ವಪ್ನವತ್ (ಸ್ವಪ್ನದಂತೆ) ಇರುವದು. ಇದನ್ನು ಖರೆ ಎಂದು ತಿಳಿದು ಇದರಲ್ಲಿ ಏನೇನು ಕಲ್ಪನೆಯ ವ್ಯವಹಾರಗಳಾಗುವವೋ ಅವೆಲ್ಲ ಸ್ವಪ್ನದೊಳಗಿನ ಸ್ವಪ್ನದಂತೆ ಇರುವವು. "ನಾನು ಬೇರೆ ಮತ್ತು ಅಜ್ಞಾನಿಯು ಸದ್ಗುರು ಬೇರೆ ಮತ್ತು ಇವರೆ ಜ್ಞಾನಿಗಳು ಇವರಿಗೆ(ಸದ್ಗುರು ಮತ್ತು ಜ್ಞಾನಿಗೆ) ನಾನು ಶರಣು ಹೋಗುವೆನು. ಆಮೇಲೆ ಅವರು ಕೃಪೆ ಮಾಡುವರು" ಇದೆಲ್ಲವೂ ದೃಶ್ಯದಲ್ಲಿಯ ನಮ್ಮ ಕಲ್ಪನೆಯ ವ್ಯವಹಾರವಿರುವದು. ನಿದ್ರೆಹತ್ತಿದ ಮನುಷ್ಯನನ್ನು ಎಬ್ಬಿಸಿದೆವೆಂದರೆ ಸ್ವಪ್ನದಲ್ಲಿ ಏನೇನುಪ್ರತ್ಯಕ್ಷ ನೋಡಿದನೋ ಅದೆಲ್ಲಇಲ್ಲೆಂದು(ಸುಳ್ಳೆಂದು) ವ್ಯರ್ಥವೆನಿಸುವದು. ಇದರಂತೆ ದೇಹ ಬುದ್ಧಿ ಸತ್ತು (ನಾಶವಾಗಿ, ಇಲ್ಲದಾಗಿ) ಅಜ್ಞಾನವೆಂಬುದು ಕರಗಿ ಇಲ್ಲದಾಗಿ ಹೋದಾಗ ಈ ಸಂಸಾರದ ಬಗೆಗೂ ಹೀಗೆಯೇ ಅನಿಸುವದು. ಮಾನವೀ ಜ್ಞಾನದಲ್ಲಿ ವಸ್ತುವಿನ ಬಗ್ಗೆ ಎರಡು ಬಾಜು (ಪಕ್ಷ ಭಾಗ) ಇರುವವು. ವಸ್ತು ಇರುವದು. ಇದು ಒಂದು ಬಾಜು ಇರುವದು, ವಸ್ತು ಇಲ್ಲ ಎಂಬುದು ಎರಡನೇ ಬಾಜು ಇರುವದು. ಒಂದರ ಅನುಭವ ವಸ್ತುವಿನ ಬಗ್ಗೆ "ಇರುವದು" ಎಂಬುದು ಮತ್ತು ಎರಡನೆಯುದರ ಅನುಭವ ವಸ್ತುವಿನ ಬಗ್ಗೆ "ಇಲ್ಲ" ಎಂಬುದು. ಆದರೆ ಈ ಎರಡೂ ಅನುಭವ ಅಜ್ಞಾನದ ಕ್ಷೇತ್ರದಲ್ಲಿಯು ಇರುವದರಿಂದ ದೃಶ್ಯವು ವಿನಾಶಿ ವಿಶ್ವಕ್ಕೆ ಮಾತ್ರ ಲಾಗು ಆಗುವದು. ಆತ್ಮಸ್ವರೂಪ ಇರುವದು. ಮತ್ತು ಇಲ್ಲ ಎಂಬುದು ಈ ಮಾನವೀ ಕಲ್ಪನೆಯ ಆಚೆಗೆ ಇರುವದು. ಅದು ಕೇವಲ ಇರುವದು. ಶುದ್ಧವಿರುವದೇ ಅದರ ಸ್ವಭಾವವಿರುವದು. ಇದಕ್ಕೆ ಸತ್ತಾ ಸತ್ತಾ ಎಂದು ಅನ್ನುವರು. (೩೮) ಇರುವದು ಮತ್ತು ಇಲ್ಲ ಇವುಗಳಲ್ಲಿ ಸಿಲುಕಿಕೊಂಡಿರುವ ಯಾವತ್ತೂ ದೃಶ್ಯ ವಿಶ್ವವು ಲಯ ಹೊಂದಿದ ಕೂಡಲೇ ಶೂನ್ಯವೇ ಉಳಿಯುವದು. ಈ ಶೂನ್ಯದ ಆಚೆಗೆ ಶುದ್ಧ ಆತ್ಮಜ್ಞಾನವಿರುವದು. ಈ ಜ್ಞಾನದಿಂದಲೇ ಸಮಾಧಾನವಾಗುವದು. ನಾವು ಮತ್ತು ಆತ್ಮಾ ಏಕರೂಪರಿರುವೆವು. ಈ ಅಭಿನ್ನತನದ ಅನುಭವದಿಂದ ಸಹಜ ಸ್ಥಿತಿ ಪ್ರಾಪ್ತವಾಗುವದು. ಈ ಅವಸ್ಥೆಯಲ್ಲಿ ದೇಹದ ಎಲ್ಲ ವ್ಯವಹಾರಗಳು ಆಗುವವು ಆದರೂ ಸ್ವರೂಪದೊಂದಿಗೆ ಆದಂಥ ಐಕ್ಯವು ಇದ್ದದ್ದು ಇದ್ದಂತೆಯೇ ಉಳಿಯುವದು. (ಇರುವದು). ಅಂತೆಯೇ ಇದು ಸಹಜ ಸ್ಥಿತಿ ಎನಿಸುವದು. [೩೯]

ಅದ್ವೈತ ನಿರೂಪಣ ಹೋತಾ । ನಿವಾಲೀ ದ್ವೈತಾಚೀ ವಾರ್ತಾ ।
ಜ್ಞಾನಚರ್ಚಾ ಬೋಲೋ ಜಾತಾ । ಜಾಗ್ರತೀ ಆಲೀ ॥೪೦॥

ಶ್ರೋತಾ ವ್ಹಾವೇ ಸಾವಧಾನ । ಅರ್ಥೀ ಘಾಲಾವೇ ಮನ ।
ಋಣೇ ಪಾವತಾ ಸಮಾಧಾನ । ಅಂತರೀ ಕಳೇ ॥೪೧॥

ತೇಣೇ ಜಿತುಕೇ ಜ್ಞಾನ ಕಥಿಲೇ । ತಿತುಕೇ ಸ್ವಪ್ನಾವಾರೀ ಗೇಲೇ ।
ಅನುವಾಚ್ಯ ಸುಖ ಉರಲೇ । ಶಬ್ದಾತೀತ ॥೪೨॥

ತೇಥೇ ಶಬ್ದೇವಿಣ ಐಕ್ಯತಾ । ಅನುಭವ ನಾ ಅನುಭವಿತಾ ।
ಐಸಾ ನಿವಾಂತ ತೋ ಮಾಗುತಾ । ಜಾಗ್ರತೀ ಆಲಾ ॥೪೩॥

ತೇಣೇ ಸ್ವಪ್ನೀ ಸ್ವಪ್ನ ದೇಖಿಲಾ । ಜಾಗಾ ಹೋಊನಿ ಜಾಗ್ರತೀ ಆಲಾ ।
ತೇಥೇ ಶಬ್ದ ಕುಂಠಿತ ಜಾಲಾ । ಅಂತ ನಲಗೆ ॥೪೪॥

ಶುದ್ಧ ಮತ್ತು ಸರಳವಾದ ತರ್ಕದಿಂದ ಈ ಅದ್ವೈತಮಯ ಸಹಜ ಸ್ಥಿತಿಯ ಚರ್ಚೆ ಹಾಗೂ ಚಿಕಿತ್ಸೆ ಮಾಡಿದ್ದಾದರೆ ನಾವು ಈಗ ಭ್ರಮದಲ್ಲಿ ಕೆಲಸ ಮಾಡುವಷ್ಟರ ಮಟ್ಟಿಗೆ (ಅಡ್ಡಾಡುವ, ಓಡಾಡುವ ಇತ್ಯಾದಿಗಳ ಮಟ್ಟಿಗೆ) ಜಾಗೃತಿ ಬರುವದು. "ನಾನು ಅಜ್ಞಾನಿ ಇರುವೆನು" ಇದರ ಖಾತ್ರಿ ಮಾಡಿಕೊಡುವದೇ ಪರಮಾರ್ಥದ ದೃಷ್ಟಿಯಲ್ಲಿ ಮನುಷ್ಯನ ಬುದ್ಧಿಯ ದೊಡ್ಡ ಕರ್ತೃತ್ವವಿರುವದು. ಆದ್ದರಿಂದ ಶ್ರೋತೃಗಳು ತಮ್ಮ ಮನವನ್ನು ಅರ್ಥರೂಪ ಮಾಡಬೇಕು. ಹೀಗೆ ಆಯಿತೆಂದರೆ ಖೂಣ (ಸಂಕೇತ) ದಿಂದಲಾದರೂ ಸಹ ಆತ್ಮಜ್ಞಾನದಿಂದ ದೊರಕುವ ಸಮಾಧಾನ ಸ್ವರೂಪವು ಬರೋಬರ ಲಕ್ಷ್ಯದಲ್ಲಿ ಬರುವದು. ಅನಂತರ ಸಾಧಕನು ಆತ್ಮಾನುಸಂಧಾನ ಸಾಧನ ಮಾಡುವನು. ಸಾಧನವು ಪರಿಪಕ್ವಸ್ಥಿತಿಗೆ ಬಂದ ಕೂಡಲೇ ಅದು ದೇಹ ಬುದ್ಧಿಯನ್ನು ಸಂಪೂರ್ಣವಾಗಿ ಹಿಂದಕ್ಕೆ ಒಗೆಯುವದು. (ಹಾಕುವದು). ಅಗದೀ ನಿಶ್ಶೇಷ ಮಾಡಿ ಝಾಡಿಸಿ ಬಿಡುವದು. ಕೊನೆಗೆ ಸ್ವಸ್ವರೂಪ ದೊಂದಿಗೆ ಸಮರಸವಾಗಿ ಅನಿರ್ವಾಚ್ಯ ಸ್ವಾನಂದದ ಸಾಕ್ಷಾತ್(ಪ್ರತ್ಯಕ್ಷ)ಅನುಭವ ಪಡೆಯುವನು. ಅದ್ವೈತಚರ್ಚೆಯ ನಿಜವಾದ ಲಾಭವೆಂದರೆ ಇದೇ ಇರುವದು. ಇಲ್ಲದಿದ್ದರೆ ವೇದಾಂತದ ಚರ್ಚೆಯೇ ಶುಷ್ಕ (ಹುರುಳಿಲ್ಲ)ದಾಗುವದು. ಬೇಸರ ಬರುವಂತಹದ್ದಾಗುವದು. ಈ ರೀತಿಯಿಂದ ಅದ್ವೈತದ ವಿವೇಚನೆ ಮತ್ತು ವರ್ಣನೆ ಕೇಳಿದರೆ, ಇಂದ್ರಿಯ ಗಳಿಗೆ ಪ್ರತ್ಯಕ್ಷ ಕಾಣುವಂಥ, ದ್ವೈತದಿಂದ ತುಂಬಿದ ದೃಶ್ಯವು ನಿಜವಲ್ಲವೆಂಬುದು ಖಾತ್ರಿಯಾಗುತ್ತದೆ. ಆತ್ಮಜ್ಞಾನದ ವರ್ಣನೆಯನ್ನು ಕೇಳಿದೆವೆಂದರೆ "ನಾವು ಅಜ್ಞಾನದಲ್ಲಿಯೇ ಇರುವೆವು. ಕೆಲಸ ಕಾರ್ಯ ಮಾಡುವೆವು" ಎಂಬ ಸ್ಪಷ್ಟ ಅರಿವು ಉಂಟಾಗುವದು. ಪರಮಾರ್ಥವು ಜಾಗೃತಿಯ ಒಂದು ಚಿನ್ಹ (ಸಂಕೇತ)ವಿರುವದು. (೪೦) ಶ್ರೋತೃಗಳು ಈಗ ಸಾವಧಾನರಾಗಬೇಕು. ಮತ್ತು ಸಹಜ ಸ್ಥಿತಿಯ ಬಗ್ಗೆ ಯಾವ ತರದಿಂದ ವರ್ಣಿಸಲಾಗಿದೆಯೋ ಅದರ ಅರ್ಥವನ್ನು ನಿಮ್ಮ ಮನದಲ್ಲಿ ತುಂಬಿಬಿಡಬೇಕು. (ಗ್ರಹಿಸಬೇಕು). ಹೀಗೆ ಆಯಿತೆಂದರೆ ಆತ್ಮಜ್ಞಾನದಿಂದ ದೊರಕುವಂಥ ಸಮಾಧಾನವು ಹೇಗಿರುವದೆಂಬುದರ ಸಂಕೇತ (ಖೂಣ, ಗುರುತು)ವು ನಿಮ್ಮ ಅಂತರ್ಯಾಮಕ್ಕೆ ಸರಿಯಾಗಿ ತಿಳಿಯುವದು. (೪೧) ಜಾಗೃತಿ ಐಕ್ಯರೂಪ, ಶೂನ್ಯತ್ವಾತೀತ, ಶುದ್ಧಜ್ಞಾನ ಇತ್ಯಾದಿ ಅದ್ವೈತದ ವಿವೇಚನೆಯಲ್ಲಿ ಎಷ್ಟೊಂದು ತರದಿಂದ ಜ್ಞಾನ ಹೇಳಿದೆಯೋ ಅವೆಲ್ಲ ಶಬ್ದರೂಪವಿದ್ದದರಿಂದ ಮಾಯೆಯ ಕ್ಷೇತ್ರದಲ್ಲಿಯನೇ ಇರುವದು. ದೇಹಬುದ್ಧಿಗೆ ಇದು ಖರೇ ಅನಿಸಿದರೂ, ಸ್ವರೂಪಾನುಭವದ ದೃಷ್ಟಿಯಿಂದ ಇದೆಲ್ಲ ಸ್ವಪ್ನದಲ್ಲಿ ಬಡಬಡಿಸಿದ ಜ್ಞಾನದಂತೆಯೇ ಇರುವದು. ಆತ್ಮಸಾಕ್ಷಾತ್ಕಾರವಾಯಿತೆಂದರೆ ಇದು ತನ್ನಷ್ಟಕ್ಕೆ ತಾನೇ ಹೋಗುತ್ತದೆ. (ಇಲ್ಲದಾಗುತ್ತದೆ.) ಅನಂತರ ಶಬ್ದದ ಆಚೆಗಿರುವ ಶಬ್ದಾತೀತವಾದ ಅನಿರ್ವಾಚ್ಯವಾದ ಸ್ವಾನಂದ ಸುಖವಷ್ಟೇ ಉಳಿಯುವದು. (೪೨) ಆತ್ಮಜ್ಞಾನದಲ್ಲಿ ಸಂಪೂರ್ಣ ಏಕರೂಪತನವಿರುವದು. ಅನುಭವ ಮತ್ತು ಅನುಭವ ಪಡೆಯುವವ ಈ ದ್ವಿತ್ವ (ಎರಡು) ತನ ಇರುವದಿಲ್ಲ. ಅಲ್ಲಿ ಶಬ್ದಜ್ಞಾನಕ್ಕೆ ಸ್ಥಳ (ಪ್ರವೇಶ)ವೇ ಇರುವದಿಲ್ಲ. ಜ್ಞಾನದ ಈ ಜಾಗೃತಿಯಲ್ಲಿ ಸಾಧಕನು ಅತ್ಯಂತ ಶಾಂತ ಮತ್ತು ಸ್ವಸ್ಥ ಅಂದರೆ ತೃಪ್ತವ ಸುಖಿ ಇರುವನು. (೪೩) ಜೀವವು ಸ್ವಪ್ನದಲ್ಲಿ ಮತ್ತೊಂದು ಸ್ವಪ್ನ ನೋಡಿತ್ತು. ಮೊದಲು ಗುರುವಿನ ಉಪದೇಶದಿಂದ ಆ ಸ್ವಪ್ನದಲ್ಲಿಯ ಸ್ವಪ್ನ ಹೋಗಿ ಬಿಟ್ಟಿತು. ಮತ್ತು ಸ್ವಪ್ನದಲ್ಲಿ ಎಚ್ಚರ ಬಂದಿತು. ಅನಂತರ ಮೂಲ (ಮೊದಲಿನ) ಸ್ವಪ್ನ ಇಲ್ಲದಾಗಿ ನಿಜವಾದ ಎಚ್ಚರವಾಯಿತು. ಇದರಲ್ಲಿ ಮೊದಲಿನ ಎಚ್ಚರಿಕೆಯಲ್ಲಿಯ ಶಬ್ದಗಳಿಗೆ ಸ್ಥಳವಿದ್ದಿತು. ಆದರೆ ನಿಜವಾದ ಅಂದರೆ ಎರಡನೇ ಎಚ್ಚರ ತನದಲ್ಲಿ ಶಬ್ದಗಳ ಶಕ್ತಿ ಕುಂಠಿತಗೊಂಡಿತು, ನಿರರ್ಥಕವೆನಿಸಿತು. ಯಾಕೆಂದರೆ ಈ ಎಚ್ಚರತನವು ಅನಂತ ಅಪಾರವಿದ್ದಿತು. ದೃಶ್ಯವು ಅಗದೀ ಮಿಥ್ಯಾ ಇರುವದೆಂಬ ಭಾವನೆ ದೃಢವಾಗುವಿಕೆಯೇ ಮೊದಲಿನ ಎಚ್ಚರತನವಿರುವದು. ಸ್ಥಳ, ಕಾಲ, ಇವುಗಳ ಬಂಧನದಲ್ಲಿ ಓಡಾಡುವ ದೃಶ್ಯವು ಶಬ್ದ ಶಕ್ತಿಗೆ ವಶವಾಗುತ್ತದೆ. ದೃಶ್ಯವು ದೃಶ್ಯತನದಿಂದ ಇಲ್ಲದಾಗಿ ಆತ್ಮಸ್ವರೂಪವೇ ಎಲ್ಲ ಕಡೆಗೆ ತುಂಬಿರುವದೇ ಎರಡನೇ ಎಚ್ಚರತನವಾಗಿದೆ. ಇದು ಕೇವಲ ಸ್ವರೂಪವು ಇದು ಅನಂತ ಅಪಾರ ಇದ್ದುದರಿಂದ ಅಲ್ಲಿ ಶಬ್ದ ಶಕ್ತಿ ಸೋಲುತ್ತದೆ. ಈ ಅನಿರ್ವಾಚ್ಯ ಸಮಾಧಾನವನ್ನು ಶಬ್ದದಿಂದ ಹೇಳಲು ಶಕ್ಯವಿಲ್ಲ. (೪೪)

ಯಾ ನಿರೂಪಣಾಚೇ ಮೂಳ । ಕೇಲೇ ಚಿ ಕರೂ ಪ್ರಾಂಜಳ ।
ತೇಣೇ ಅಂತರೀ ನಿವಳ । ಸಮಾಧಾನ ಕಳೆ ॥೪೫॥

ತವ ಶಿಷ್ಯೇ ವಿನವಿಲೇ । ಜೀ ಹೇ ಆತಾ ನಿರೋಪಿಲೇ ।
ತೇ ಪಾಹಿಜೆ ಬೋಲಿಲೇ । ಮಾಗುತೇ ಸ್ವಾಮೀ ॥೪೬॥

ಮಜ ಕಳಾಯಾ ಕಾರಣ । ಕೇಲೇ ಚಿ ಕರಾವೇ ನಿರೂಪಣ ।
ಯೇಥೀಲ ಜೇ ಕಾ ನಿಜಖೂಣ । ತೇ ಮಜ ಅನುಭವಾವೀ ॥೪೭॥

ಅಜನ್ಮಾ ತೋ ಸಾಂಗ ಕವಣ । ತೇಣೇ ದೇಖಿಲಾ ಕೈಸಾ ಸ್ವಪ್ನ ।
ತೇಥೇ ಕೈಸೇ ನಿರೂಪಣ । ಬೋಲಿಲೇ ಆಹೇ ॥೪೮॥

ಜಾಣೋನೀ ಶಿಷ್ಯಾಚಾ ಆದರ । ಸ್ವಾಮೀ ದೇತೀ ಪ್ರತ್ಯೋತ್ತರ ।
ತೇ ಚಿ ಆತಾ ಅತಿ ತತ್ಪರ । ಶ್ರೋತೀ ಯೇಥೇ ಪರಿಸಾವೇ ॥೪೯॥

ಏಕ ಶಿಷ್ಯಾ ಸಾವಧಾನ । ಅಜನ್ಮಾ ತೋ ತೂಚ ಜಾಣ ।
ತುವಾ ದೇಖಿಲಾ ಸ್ವಪ್ನೀ ಸ್ವಪ್ನ । ತೋ ಹೀ ಆತಾ ಸಾಂಗತೋ ॥೫೦॥

ಸ್ವಪ್ನೀ ಸ್ವಪ್ನಾಚಾ ವಿಚಾರ । ತೋ ತೂ ಜಾಣ ಹಾ ಸಂಸಾರ ।
ಯೇಥೇ ತುವಾ ಸಾರಾಸಾರ । ವಿಚಾರ ಕೇಲಾ ॥೫೧॥

ರಿಘೋನಿ ಸದ್ಗುರೂಸ ಶರಣ । ಕಾಢೂನ ಶುದ್ಧ ನಿರೂಪಣ।
ಯಾಚೀ ಕರಿಸೀ ಊಣಖೂಣ । ಪ್ರತ್ಯಕ್ಷ ಆತಾ ॥೫೨॥

ಯಾಚಾ ಚಿ ಘೇತಾ ಅನುಭವ । ಬೋಲಣೇ ತಿತುಕೇ ಹೋತೇ ವಾವ ।
ನಿವಾಂತ ವಿಶ್ರಾಂತೀಚಾ ಠಾವ । ತೇ ತೂ ಜಾಣ ಜಾಗ್ರತೀ ॥೫೩॥

ಜ್ಞಾನಗೋಷ್ಟೀಚಾ ಗಲ್ಬಲಾ । ಸರೋನ ಅರ್ಥ ಪ್ರಗಟಲಾ ।
ಯಾಚಾ ವಿಚಾರ ಘೇತಾ ಆಲಾ । ಅಂತರೀ ಅನುಭವ ॥೫೪॥

ತುಜ ವಾಟೆ ಹೇ ಜಾಗ್ರತೀ । ಮಜ ಜಾಲೀ ಅನುಭವ ಪ್ರಾಪ್ತೀ ।
ಯಾ ನಾವ ಕೇವಳ ಭ್ರಾಂತೀ । ಫಿಟಲೀ ಚ ನಾಹೀ ॥೫೫॥

ಇಲ್ಲಿಯವರೆಗೆ ಹೇಳಿದ ವಿಷಯವು ಬಹಳ ಸೂಕ್ಷ್ಮ ಮತ್ತು ಗಹನ-ವಿದ್ದುದರಿಂದ ಇದನ್ನೆಲ್ಲ ಪುನಃ ಕೇಳಬೇಕೆಂದು ಶಿಷ್ಯನು ಇಚ್ಛೆ ವ್ಯಕ್ತಮಾಡಿದನು. ಶ್ರೀ ಸಮರ್ಥರು ಸಂಕ್ಷಿಪ್ತವಾಗಿ ಪುನಃ ಸಾರಾಂಶರೂಪದಲ್ಲಿ ಹೇಳುತ್ತಾರೆ. ಇಲ್ಲಿಯವರೆಗೆ ಏನೇನು ವಿವೇಚನೆ ಮಾಡಿರುವದೋ ಅದರೊಳಗಿನ ಮುಖ್ಯ ಮುಖ್ಯ ವಿಷಯಗಳನ್ನು ಪುನಃ ಸ್ಪಷ್ಟವಾಗಿ ಹೇಳುವೆನು. ಇದರಿಂದ ಶುದ್ಧ ಸಮಾಧಾನ ಹೇಗಿರುವದೆಂಬುದು ನಿನ್ನ ಅಂತರ್ಯಾಮಕ್ಕೆ ತಿಳಿದು ಬರುವದು. (೪೫) ಆಗ ಶಿಷ್ಯನು ವಿನಂತಿಸುತ್ತಾನೆ. ಸ್ವಾಮಿ ಸದ್ಗುರುನಾಥನೇ ಇಲ್ಲಿಯವರೆಗೆ ಏನೇನು ಹೇಳಿರುವಿರೋ ಅದನ್ನೆಲ್ಲ ಪುನಃ ಸ್ಪಷ್ಟೀಕರಿಸಿ ಹೇಳಿರಿ ಎಂದು ಅಂದನು. [೪೬] ಮತ್ತು ಈ ವಿಷಯಗಳೆಲ್ಲ ನನಗೆ ಚನ್ನಾಗಿ ತಿಳಿಯುವಂತೆ ಈಗ ಹೇಳಿದ್ದನ್ನೆಲ್ಲ ಪುನಃ ಹೇಳಿರಿ. ಇದರಲ್ಲಿಯ ಆತ್ಮಜ್ಞಾನದ ಬಗ್ಗೆ ಯಾವ ರಹಸ್ಯ ಇರುವದೋ ಅದು ನನ್ನ ಅನುಭವಕ್ಕೆ ಬರುವಂತೆ ಮಾಡಿರಿ(೪೭)ಯಾವುದಕ್ಕೆ ಯಾರಿಗೆ ಜನ್ಮಮರಣ ಅಥವಾ ಕಾಲಾಧೀನ ಘಟನೆಗಳಿಲ್ಲವೋ ಅಂಥ ಅಜನ್ಮ ಯಾರು?ಅವನಿಗೆ ಸ್ವಪ್ನ ಹೇಗೆ ಬಿದ್ದಿತು? ಈ ಪ್ರಶ್ನೆಗಳಿಗೆ ಉತ್ತರ ಯಾವುದು ಇವುಗಳ ಬಗ್ಗೆ ಪುನಃ ವಿವೇಚಿಸಿ ಹೇಳಿರಿ.[೪೮] ಶಿಷ್ಯರ ಈ ಜಿಜ್ಞಾಸೆಯನ್ನು ಕಂಡು ಸ್ವಾಮಿಯು ಪ್ರಶ್ನೆಗೆ ಉತ್ತರವನ್ನು ಕೊಟ್ಟನು. ಶ್ರೋತೃಗಳು ಈ ಉತ್ತರವನ್ನು ಅಗದೀ ಮನಸ್ಸುಗೊಟ್ಟು ಕೇಳಬೇಕು.[೪೯]ಶಿಷ್ಯನೇ, ಅಗದೀ ಲಕ್ಷ್ಯಗೊಟ್ಟು ಕೇಳುವವನಾಗು ಯಾವನು ಅಜನ್ಮಾ ಎಂದು ಹೇಳಿದೆನೋ ಅವನು ನಿಜವಾಗಿ ನೀನೇ ಇರುವಿ.ಇದನ್ನು ಲಕ್ಷ್ಯದಲ್ಲಿಡುವವನಾಗು. ನೀನು ಯಾವ ಸ್ವಪ್ನದಲ್ಲಿ ಸ್ವಪ್ನವನ್ನು ನೋಡಿದೆಯೋ ಅದನ್ನು ಸಹ ಈಗ ನಿನಗೆ ಹೇಳುವೆನು.(೫೦)ಸ್ವಪ್ನದಲ್ಲಿಸ್ವಪ್ನ ನೋಡಿದನು. ಅಂದರೆ ಏನು?ಇದರ ಅರ್ಥವು ಸಂಸಾರವೇ ಇರುವದು.“ನಾನು ಆತ್ಮವೇ ಇರುವೆನು” ಈ ಎಚ್ಚರ[ಜಾಗೃತ]ತನ ಹೋಗಿ “ನಾನು ದೇಹವೇ ಇರುವೆನು” ಇದು ಸ್ವಪ್ನವಿರುವದು. “ನನ್ನ ಸಂಸಾರ ಇರುವದು.” ಇದು ಸ್ವಪ್ನದಲ್ಲಿಯ ಸ್ವಪ್ನವಾಗಿದೆ. ಸಂಸಾರವು ಸ್ವಪ್ನಮಯವೆಂಬುದು ನಿಜವು. ಆದರೆ ಇದರಲ್ಲಿ ನೀನು ಸಾರ ಯಾವುದು ? ಮತ್ತು ಅಸಾರ ಯಾವುದು? ಇದರ ವಿಚಾರ ಮಾಡಿರುವಿಯೋ ಹೇಗೆ? (೫೧) ನೀನು ಸದ್ಗುರುವಿಗೆ ಶರಣು ಹೋದ ನಂತರ ಸದ್ಗುರುವಿನ ಬಾಯಿಂದ ಶುದ್ಧ ಆತ್ಮಸ್ವರೂಪದ ವಿವೇಚನವನ್ನು ಕೇಳಿದ ಮೇಲೆ “ನಾವು ಸ್ವಪ್ನದಲ್ಲಿ ಇರುವೆವು” ಎಂಬ ನಿಜವಾದ (ಖರೆ) ಗುರುತು ಸಂಕೇತ ನಿನಗೆ ಪಟಾಯಿಸಿತು. ಇದರಿಂದ ಸ್ವಪ್ನದಲ್ಲಿಯ ಸ್ವಪ್ನ ಇಲ್ಲದಾಗಿ ಹೋಯಿತು. ಎಂಬ ಪ್ರತ್ಯಕ್ಷ ಅನುಭವ ಈಗ ನಿನಗೆ ಬಂದಿತು. (೫೨) ಇದರ ನಂತರ ಆತ್ಮಸ್ವರೂಪದ ಸಾಕ್ಷಾತ್ ಅನುಭವ ಪಡೆದುಕೊಂಡೆವೆಂದರೆ ಆಗ ಸ್ವಸ್ವರೂಪದ ಬಗೆಗಿನ ಶಬ್ದಜ್ಞಾನ ತನ್ನಿಂದ ತಾನೇ ಮುರಿದು ಕಳಿಚಿ ಬೀಳುವದು. (ಶಕ್ತಿಹೀನವಾಗಿ ಬಿಡುವದು).ಅತ್ಯಂತ ಪ್ರಶಾಂತವೆನಿಸುವ ವಿಶ್ರಾಂತಿ ಸ್ಥಾನವು ನಿನಗೆ ಸಿಗುವದು. ಇದೇ ನಿಜವಾದ ಎಚ್ಚರ(ಜಾಗ್ರತ)ತನವಿರುವದೆಂದು ತಿಳಿಯಬೇಕು. (೫೩) ಮೊದಲಿಗೆ ಶಬ್ದಗಳಿಂದ ಪರಾಮರಿಸಲ್ಪಟ್ಟು ಶಬ್ದದ ಎಲ್ಲ ರೂಪಗಳನ್ನು ಉಪಯೋಗಿಸಿಕೊಂಡು ನಡೆದ ಜ್ಞಾನದ ವಿವೇಚನೆ (ಚರ್ಚೆ)ಯ ಗೊಂದಲ ಗಡಬಿಡಿಯು ನಿಲ್ಲುವದು. ಅನಂತರ ಇದರ (ನಿಜ ವಿಶ್ರಾಂತಿ ಸ್ಥಾನದ) ಅರ್ಥ ಪ್ರಕಟವಾಗುವದು. ನಿಜವಾದ ಖರೇ ಅರ್ಥ ತಿಳಿಯುವದು. ಇದರ ಬಗ್ಗೆ ಒಂದೇ ಸವನೇ (ಸದಾ) ವಿಚಾರ ಮಾಡಿದೆಯೆಂದರೆ ಚಿತ್ತದ ಏಕಾಗ್ರತೆ ಉಂಟಾಗುವದು ಮತ್ತು ಸಾಧಕನಿಗೆ ಅಂತರಂಗದೊಳಗೆ ಅನುಭವ ಬಂದಿತು ಎಂದು ಅನಿಸುವದು. (೫೪) ನಿನಗೆ ಹೀಗೆ ಅನಿಸಬಹುದು?“ಜಾಗೃತಿ ಎಂದು ಅನ್ನುವರು, ಅದು ಇದೇ ಇರುವದು. ನನಗೆ ಅನುಭವದ ಪ್ರಾಪ್ತಿಯಾಯಿತು.” ಆದರೆ ಇದು ಕೇವಲ ಭ್ರಮೆಯೇ ಇರುವದು. ಅದು (ಭ್ರಾಂತಿ) ಇನ್ನೂ ಹೋಗಿರುವದಿಲ್ಲ. (೫೫)

ಅನುಭವ ಅನುಭವೀ ವಿರಾಲಾ । ಅನುಭವೇವಿಣ ಅನುಭವ ಆಲಾ ।
ಹಾ ಹೀ ಸ್ವಪ್ನೀಚಾ ಚೆಈಲಾ । ನಾಹೀಸ ಬಾಪಾ ॥೫೬॥
ಜಾಗಾ ಜಾಲಿಯಾ ಸ್ವಪ್ನಉಪರ್ಮೇ । ಸ್ವಪ್ನೀ ಮ್ಹಣಸೀ ಅಜನ್ಮಾ ತೋ ಮೀ ।
ಜಾಗೆಪಣೇ ಸ್ವಪ್ನಉಪರ್ಮೇ । ಗೇಲೀಚ ನಾಹೀ ॥೫೭॥
ಸ್ವಪ್ನೀ ವಾಟೆ ಜಾಗೇಪಣ । ತೈಸೀ ಅನುಭವಾಚೀ ಖೂಣ ।
ಆಲೀ ಪರೀ ತೇ ಸತ್ಯ ಸ್ವಪ್ನ । ಭ್ರಮರೂಪ ॥೫೮॥
ಜಾಗ್ರತೀ ಯಾ ಪೈಲಿಕಡೆ । ತೇ ಸಾಂಗಣೇ ಕೇವಿ ಘಡೇ।
ಜೇಥೇ ಧಾರಣಾ ಚಿ ಮೋಡೇ । ವಿವೇಕಾಚೀ ॥೫೯॥
ಮ್ಹಣೋನೀ ತೇ ಸಮಾಧಾನ । ಬೋಲತಾ ಚಿ ನಯೆ ಐಸೇ ಜಾಣ।
ನಿಶಬ್ದಾಚೀ ಐಸೀ ಖೂಣ । ಒಳಖಾವೀ ॥೬೦॥
ಐಸೇ ಆಹೇ ಸಮಾಧಾನ । ಬೋಲತಾ ಚ ನಯೆ ಜಾಣ ।
ಇತುಕೇನ ಬಾಣಲೀ ಖೂಣ । ನಿಶಬ್ದಾಚೀ ॥೬೧॥

ಇತಿ ಶ್ರೀ ದಾಸಬೋಧೇ ಗುರುಶಿಷ್ಯ ಸಂವಾದೇ
‘ಅನಿರ್ವಾಚ್ಯ ನಿರೂಪಣ’ ನಾಮ ಸಮಾಸ ದಶಮ ॥

ದಶಕ ಷಷ್ಠಮ ಸಮಾಪ್ತ

ದೃಶ್ಯದ ಅನುಭವವು ಲಯದ-ಚಿತ್ತದ ಏಕಾಗ್ರತೆಯ ಅನುಭವದಲ್ಲಿ ಕರಗುವದು ಲಯವು ಶೂನ್ಯ ರೂಪವಿರುವದು. ಶೂನ್ಯದ ಅನುಭವವು ಅನುಭವ ರೂಪದ ಮಧ್ಯದಲ್ಲಿ ಕರಗಿ ಹೋಗುವದು. "ನಾನು ಅನುಭವ ಪಡೆಯುವೆನು" ಈ ವೃತ್ತಿಯು ಹೋಗಿ ಕೇವಲ ಅನುಭವ ರೂಪವು ಮಾತ್ರ ಶಿಲ್ಲಕ ಉಳಿಯಿತು. ಅಂದರೆ ಅಪ್ಪಾ ನೀನು ಇನ್ನೂ ಸ್ವಪ್ನದೊಳಗಿಂದ ಎಚ್ಚರವಾಗಿಲ್ಲ. (೫೬) ನೀನು ಎಚ್ಚರಾಗಿದ್ದರೂ ಸಹ ಇನ್ನೂ ನಿನ್ನ ಸ್ವಪ್ನ ಸಂಪೂರ್ಣ ಇಲ್ಲದಂತೆ ಆಗಿಲ್ಲವೆಂದು ತಿಳಿ. "ನಾನೇ ಆ ಅಜನ್ಮಾ ಇರುವೆನು." ಹೀಗೆ ಇನ್ನೂ ನೀನು ಸ್ವಪ್ನದಲ್ಲಿಯೇ ಅನ್ನುವಿ. ಇದರ ಅರ್ಥ ನಿನ್ನ ಎಚ್ಚರತನದಲ್ಲಿ ಇನ್ನೂ ಸ್ವಪ್ನದ ವೃತ್ತಿ ಶಿಲ್ಲಕ ಇರುವದು. [೫೭] ಸ್ವಪ್ನದಲ್ಲಿಯೇ "ನಾನು ಎಚ್ಚರಾದೆನು" ಹೀಗೆ ಯಾವ ಪ್ರಕಾರದಿಂದ ಅನಿಸುವದೋ ಅದೇ ಪ್ರಕಾರ "ನಾನು ಆ ಅಜನ್ಮಾ ಇರುವೆನು" ಇದು ಅನುಭವದ ಲಕ್ಷಣವಿರುವದು. ಈ ಅನುಭವವು ಖರೇ ಇರುವದು. ಇದರಲ್ಲಿ ಸಂಶಯವಿಲ್ಲ. ಆದರೂ ಸಹ ಇದರಲ್ಲಿ ಸ್ವಲ್ಪುಮಟ್ಟಿಗೆ ಭ್ರಮವು ಶಿಲ್ಲಕ ಇರುತ್ತದೆ. (೫೮) ಸಂಪೂರ್ಣ ಎಚ್ಚರತನವು ಈ ಅನುಭವದ ಆಚೆಗೆ ಇರುವದು. ಶಬ್ದದಿಂದ ಇದನ್ನು ಹೇಳಲಿಕ್ಕೆ ಬರುವದಿಲ್ಲ. ಶಕ್ಯವೂ ಇಲ್ಲ. ಇದು ಸಹಜ ಸ್ಥಿತಿ ಇರುವದು. ಇಲ್ಲಿ ವಿವೇಕದ ನೆಲೆಗಟ್ಟನ್ನೇ ತೆಗೆದುಬಿಡುವರು. (೫೯) ಅಂತೆಯೇ ಆ ಸಮಾಧಾನದ ವರ್ಣನೆಯನ್ನು ಮಾಡಲು ಹೇಳಲು ಬರುವದಿಲ್ಲ. ಶಕ್ಯವಾಗುವದಿಲ್ಲ. ನಿಜವಾದ ಪರಿಸ್ಥಿತಿ ಹೀಗಿರುವದು. ಅನಿರ್ವಾಚ್ಯವೆಂದು ಅನ್ನುವದರ ಅರ್ಥ ಇದೇ ಇರುವದು. ಇದನ್ನು ಲಕ್ಷ್ಯದಲ್ಲಿಡಿರಿ. (೬೦) ಸಮಾಧಾನ ಇದು ಹೀಗಿರುವದು. ಎಂದು ಶಬ್ದಗಳಿಂದ ಹೇಳಲಿಕ್ಕೆ ಬರುವದಿಲ್ಲ. ಹೇಳಬೇಕೆಂದರೂ ಬರುವಂಥದೂ ಅಲ್ಲ. ಸಮಾಧಾನವು ಅನಿರ್ವಾಚ್ಯವಿರುವದು. ಇದರ ಅರ್ಥ ನಿಮ್ಮ ಲಕ್ಷ್ಯದಲ್ಲಿ ಬಂದಿರಬಹುದು. (೬೧)

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಆರನೆಯ ದಶಕದ
"ಅನಿರ್ವಾಚನೀಯ" ಎಂಬ ಹತ್ತನೆಯ ಸಮಾಸವು ಮುಗಿದುದು.

● ●

# ದಶಕ ೭. ಚತುರ್ದಶ ಬ್ರಹ್ಮದ ಬಗ್ಗೆ

ಈ ದಶಕದಲ್ಲಿ ಶ್ರೀ ಸಮರ್ಥರು ತಾವು ಕಲಿತುಕೊಂಡ ಮತ್ತು ತಿಳಿದುಕೊಂಡದ್ದನ್ನು ಸಾರಾಂಶ ರೂಪದಲ್ಲಿ (ಸ್ವಲ್ಪದರಲ್ಲಿ) ಹೇಳಿದ್ದಾರೆಂದು ಅಂದರೆ ತಪ್ಪಾಗಲಾರದು. ಪ್ರಾರಂಭದಲ್ಲಿಯೇ ಮರಾಠಿ ಭಾಷೆಯಲ್ಲಿ ಅಧ್ಯಾತ್ಮ ಜ್ಞಾನವನ್ನು ಹೇಳಬೇಕೇ ಅಥವಾ ಹೇಳಬಾರದೇ ? ಎಂಬ ಪ್ರಶ್ನೆಯನ್ನು ಬಹು ಧೂರ್ತತನದಿಂದ ದೂರ ದೃಷ್ಟಿಯಿಂದ, ಜಾಣ್ಮೆಯಿಂದ ವಿವೇಕದಿಂದ ಬಿಡಿಸಿದ್ದಾರೆ. ಸಮರ್ಥರ ಕಾಲದಲ್ಲಿ ಈ ಪ್ರಶ್ನೆಗೆ ಬಹಳ ಮಹತ್ವವಿದ್ದಿತು. ಇರಲಿ, ಸದ್ವಸ್ತುವಿನ ಅಥವಾ ಪರಬ್ರಹ್ಮನ ಅಂತಿಮ ಸ್ವರೂಪವನ್ನು ನಿಶ್ಚಯಿಸುವದೇ ಅಧ್ಯಾತ್ಮ ದರ್ಶನದ ಅತಿ ಮುಖ್ಯ (ಗುರಿಯ) ವಿಷಯವಾಗಿರುತ್ತದೆ. ಇದರ ಸಲುವಾಗಿಯೇ ಶುದ್ಧ ನಿರ್ಭೇಳ ಅಂದರೆ ಯಾವುದೇ ಮಿಶ್ರಣವಿಲ್ಲದ, ಕೇವಲ ಪರಿಶುದ್ಧವಾಗಿರುವ ಪರಬ್ರಹ್ಮ ಸ್ವರೂಪ ಹೇಗಿರುವದೆಂಬುದನ್ನು ಹೇಳಲು ಉಪಕ್ರಮಿಸಿದ್ದಾರೆ. ಆದರೆ ಈ ಪರಬ್ರಹ್ಮ ಸ್ವರೂಪದವರೆಗೆ ಹೋಗಿ ಮುಟ್ಟಬೇಕಾದರೆ ಮೊದಲು ಹದಿನಾಲ್ಕು ಬ್ರಹ್ಮಗಳ ಬಗ್ಗೆ ಹೇಳಿ ಅವುಗಳ ನಿರಸನ ಮಾಡಿರುವರು. ಅಂದರೆ ಈ ಬ್ರಹ್ಮಗಳು ಪರಬ್ರಹ್ಮವಲ್ಲವೆಂಬುದನ್ನು ಸವಿಸ್ತಾರವಾಗಿ ತಿಳಿಸಿ ಹೇಳಿರುವರು. ಶುದ್ಧ ಪರಬ್ರಹ್ಮವು ಅತ್ಯಂತ ಸೂಕ್ಷ್ಮ, ಅತೀಂದ್ರಿಯ, ಅನಂತ, ಮತ್ತು ಅಪರಂಪಾರವಿರುವದು. ಇದರ ಒಂದು ಭಾಗದ ಮೇಲೆ ಈ ಇಡೀ ವಿಶ್ವವು ಕಾಣುತ್ತದೆ. ವಿಶ್ವವನ್ನು ವ್ಯಾಪಿಸಿರುವ ಮತ್ತು ಅದರ ಆಚೆಗೆ ಅಪರಿಮಿತವಾಗಿ ಇರುವಂಥ ಅನಂತ ಅಪಾರನಾದ ಪರಬ್ರಹ್ಮನನ್ನು ಜ್ಞಾನ ದೃಷ್ಟಿಯಿಂದಲೇ ನೋಡಬೇಕಾಗುವದು. ಇಲ್ಲದಿದ್ದರೆ ಶಕ್ಯವೇ ಇಲ್ಲ. ಮನುಷ್ಯರಲ್ಲಿ ಈ ಜ್ಞಾನ ದೃಷ್ಟಿಯ ಬೀಜ ಖಾತ್ರಿಯಿಂದ ಇರುವದು. ಪರಂತು ದೇಹಬುದ್ಧಿಯಿಂದ ಹೊರ ಬರುವ "ನಾನು" ಎಂಬುದರಿಂದ ಮನುಷ್ಯರಲ್ಲಿಯ ಜ್ಞಾನ ದೃಷ್ಟಿ ಕುಂಠಿತವಾಗುತ್ತದೆ, "ನಾನು" ಎಂಬ ಅಹಂಕಾರದಿಂದ ವಿಚಾರ ಮಾಡುವ ವ್ಯಾವಹಾರಿಕ ಬುದ್ಧಿಗೆ ಪರಬ್ರಹ್ಮನ ಅತೀಂದ್ರಿಯ ವಿಶಾಲ, ಮತ್ತು ಸೂಕ್ಷ್ಮ ಅನುಭವವು ಸರ್ವಸ್ವೀ ಸತ್ಯವೆಂದು ಅನಿಸುವದಿಲ್ಲ. ನಮಗೆ ಈ ಮಾತು ನಿಜವೆಂದು ಅನಿಸುವದಿಲ್ಲವೆಂಬ ಕಾರಣದಿಂದ ಇದು ಅಂದರೆ ಪರಬ್ರಹ್ಮ ವಸ್ತುವಿನ ವಿಷಯವು ನಿಜವೇ ಅಲ್ಲವೆಂದು ಅನ್ನಲಿಕ್ಕೆ ಬಾರದು. ಯಾಕಂದರೆ ಈ ಹಿಂದೆ ಮತ್ತು ಈ ವರೆಗೆ ಆಗಿ ಹೋದಂಥ ಶುಕ, ವಾಮದೇವ, ನಾರದ, ವ್ಯಾಸ, ವಶಿಷ್ಠ, ಭೀಷ್ಮ, ಶ್ರೀರಾಮ, ಶ್ರೀ ಕೃಷ್ಣ ವಗೈರೆ ಮಹಾಜ್ಞಾನಿ ಪುರುಷರು ಅತ್ಯಂತ ಪ್ರಾಮಾಣಿಕತನದಿಂದ ತಮ್ಮ ಸ್ವತಃದ ಬ್ರಹ್ಮಾನುಭವದ ವರ್ಣನೆಯನ್ನು ಸ್ಪಷ್ಟವಾಗಿ ಹೇಳಿರುವರು. ಇವರ ಮಾತಿನ ಹೇಳಿಕೆಯ ಮೇಲೆ ವಿಶ್ವಾಸ ವಿಡಲೇಬೇಕು. ಇವರ ಮಾತುಗಳು ನಿಜವೆಂದು ನಂಬಿ ನಡೆಯಬೇಕು. ಈ ದೃಶ್ಯ ವಿಶ್ವವು ಕಲ್ಪನೆಯೊಳಗಿಂದ ಜನ್ಮ ಹೊಂದಿರುವದು. ಅಂತೆಯೇ ವಿಶ್ವದ ಎಲ್ಲ ವ್ಯವಹಾರವೂ ಕಲ್ಪನೆಯ ಜೋರಿನಿಂದಲೇ ನಡೆದಿರುವದು. "ನಾನು ದೇಹವೇ ಇರುವೆ" ಈ ನಮ್ಮ ಕಲ್ಪನೆಯನ್ನು ಕಿತ್ತಿ ಒಗೆಯಲು "ನಾನು ಆತ್ಮವೇ ಇರುವೆ" ಎಂಬ ಕಲ್ಪನೆಯು ನಮಗೆ ಬಹಳಷ್ಟು ಉಪಯೋಗ ಬೀಳುವದು. ಆದರೆ ಇವರಲ್ಲಿರುವ ನಿಜವಾದ ಅಡ್ಡಿ-ಅಡಚಣೆ-ಯಾವದಿರುವದೆಂದರೆ ನಾವು ದೃಶ್ಯದ ಎದುರಿಟ್ಟು ತೋರುವ ಕ್ಷೇತ್ರದಲ್ಲಿ ತಿರವು ಮುರವು (ಉಲಟಾ ಪಲಟಾ) ಕಲ್ಪನೆಯನ್ನು ಮಾಡಹತ್ತುವೆವು. ಪರಂತು ಯಾವುದು ಅದೃಶ್ಯ ಮತ್ತು ಅತೀಂದ್ರಿಯ ಅನಂತವಿರುವದೋ ಇದರ ಕಲ್ಪನೆಯನ್ನು ಯಾವ ರೀತಿ ಹೇಗೆ ಮಾಡಬೇಕು ? ಶ್ರೀ ಸಮರ್ಥರು ಈ ಪ್ರಶ್ನೆಗೆ ಅಗದೀ ಸ್ಪಷ್ಟ ಮತ್ತು ನಿಶ್ಚಿತ(ಖಂಡಿತ)ವಾದ ಉತ್ತರ ಕೊಟ್ಟಿರುವರು. ಅದು ಹೀಗಿರುವದು:- ಮಾನವೀ ಬುದ್ಧಿಯೊಳಗೆ ಸೂಕ್ಷ್ಮಾತಿ ಸೂಕ್ಷ್ಮದ ಚಿಂತನ(ವಿಚಾರ, ಧ್ಯಾನ) ಮಾಡುವ ಶಕ್ತಿ ಇರುವದು. ಆದರೆ ನಾನು ಎಂಬುದರ ಅಮಲು (ಸತ್ತಾ, ಅಧಿಕಾರ)ದಿಂದ ಈ ಚಿಂತನ, ಬುದ್ಧಿ ಸದಾಕಾಲ ಸ್ಥೂಲವಿರುವ ನಶ್ವರದಲ್ಲಿಯೇ ತೊಡಕಿ ಶಿಕ್ಕುಕೊಂಡು ಇರುವದು. ಇದಕ್ಕೆ ಉಪಾಯವೆಂದರೆ-ವಿವೇಕದಿಂದ "ನಾನು" ಎಂಬುದನ್ನು ಕಡಿಮೆ ಮಾಡಿ ಅಚಿಂತ್ಯನ,ಗೂಢನಾದ, ತರ್ಕಮಾಡಲಿಕ್ಕೆ ಬರದಂಥವನ ಚಿಂತನ (ಧ್ಯಾನ, ವಿಚಾರ) ಮಾಡುವ ಅಭ್ಯಾಸವನ್ನು ಸತತವಾಗಿ ಮಾಡಬೇಕು. ಇವರ ಹೊರತು ಇನ್ನಾವುದೇ ಬೇರೆ ಉಪಾಯವಿಲ್ಲ. "ಅಭ್ಯಾಸ ಸಾರಣೀ ವಿದ್ಯಾ"ಅಂದರೆ "ವಿದ್ಯೆಯು ಅಭ್ಯಾಸವನ್ನು ಅನುಸರಿಸಿ ಬರುವದಾಗಿದೆ."(ಸತತ ವ್ಯಾಸಂಗ, ಬಲ್ಲವರಾದ ಸಂತರ ಸಹವಾಸ, ಮತ್ತು ಯಾವ ರೀತಿಯಲ್ಲಿ ನಾವು ಅಭ್ಯಾಸ ಮಾಡುವೆವೋ ಆ ರೀತಿಯಲ್ಲಿ ಅದು [ಪ್ರಾಪ್ತವಾಗುವಂಥದು] ಯೆಂಬ ಈ ಸಮರ್ಥರ ವಚನವು ಪೃಥ್ವಿಯ ಮೌಲ್ಯದ್ದಾಗಿದೆಯೆಂಬುದನ್ನು ತಿಳಿಯಿರಿ. ನಂಬಿ ನಡೆಯಿರಿ. ಉತ್ತಮ ಅಭ್ಯಾಸ ಗ್ರಂಥಗಳನ್ನು ಶ್ರವಣ ಮಾಡಿ ಆ ಪ್ರಕಾರ ಸಾಧನ ಮಾಡುವ

ದಕ್ಕೆ ಅಭ್ಯಾಸವೆಂದು ಹೆಸರು. ಉತ್ತಮ ಅಧ್ಯಾತ್ಮ ಗ್ರಂಥ ವಾಙ್ಮಯ ಹೇಗೆ ಇರಬೇಕೆಂಬುದನ್ನು ಮೊದಲು ಹೇಳಿ ಅನಂತರ ಜೀವನ್ಮುಕ್ತನಾದ ಜ್ಞಾನೀ ಪುರುಷನ ಜೀವನ ಕ್ರಮ ಹೇಗೆ ನಡೆಯುವದು. ಹೇಗೆ ಇರುವದು. ಇದರ ವರ್ಣನೆಯನ್ನು ಶ್ರೀ ಸಮರ್ಥರು ಮಾಡಿದ್ದಾರೆ. ಇದೆಲ್ಲವಾದ ಮೇಲೆ ಗ್ರಂಥದ ಕೊನೆಯ ಮುಕ್ತಾಯ ಬಂದಿತು. ಯೆಂದು ಸೂಚಿಸಿ ದಶಕವನ್ನು ಪೂರ್ಣ ಮಾಡಿದ್ದಾರೆ.

## ದಶಕ ೭. ಸಮಾಸ ೧. ಮಂಗಲಾಚರಣ (ನುಡಿ ೬೧)

ಶುದ್ಧ ಪರಮಾತ್ಮ ಸ್ವರೂಪವು ಮಾನವೀ ಕಲ್ಪನೆಗೆ ಮೀರಿದ್ದಾಗಿದೆ. ನಿಲುಕದ್ದಾಗಿದೆ. ವಿಶ್ವನಿರ್ಮಾಣ ಮಾಡುವ ಕಾಲಕ್ಕೆ ಮಾತ್ರ ಇದು ಮಾನವೀ ಕಲ್ಪನೆಯ ಕಕ್ಷೆ(ಅಳವಿನಲ್ಲಿ)ಯಲ್ಲಿ ಬರುವದು. ಆ ಹೊತ್ತಿನಲ್ಲಿ ಜ್ಞಾನ ಮತ್ತು ಕರ್ತೃತ್ವ ಈ ಎರಡು (ಅಂಶ, ಭಾಗ) ಅಂಗಗಳ ವಿಲಾಸ ಅಂದರೆ ಚೇಷ್ಟೆ, ವಿನೋದ, ಕ್ರೀಡೆ, ಇವುಗಳ ಸ್ಥಳದಲ್ಲಿ ಅನುಭವಕ್ಕೆ ಬರುತ್ತದೆ. ಜ್ಞಾನದ ಅಂಗಕ್ಕೆ ಮಂಗಲಮೂರ್ತಿ ಅನ್ನುವರು. ಹಾಗೂ ಕರ್ತೃತ್ವದ ಅಂಗಕ್ಕೆ ಶಾರದೆ ಅನ್ನುವರು. ಈ ಅಂಗಗಳು ನೋಡಲು ಎರಡು ಅನಿಸಿದರೂ ಸಹ ನಿಜವಾಗಿ ವಿಚಾರದಿಂದ ನೋಡಿ ಹೇಳು ವದಾದರೆ ಎರಡೂ ಒಂದೇ ಇರುವವು. ಮೂಲದಲ್ಲಿಯೇ ಇವು ಅದ್ವೈತವಿರುವವು. ಈ ಕಾರಣದಿಂದಲೇ ಮಾನವೀ ಜೀವನದಲ್ಲಿ ಜ್ಞಾನ ಮತ್ತು ಕರ್ಮ. ಸಿದ್ಧಾಂತ ಅಂದರೆ (ನಿಶ್ಚಿತ ಮತ, ನಿರ್ಣಾಯಕ ಮತವು) ಮತ್ತು ವ್ಯವ ಹಾರ, ವಿಚಾರ ಮತ್ತು ಆಚಾರ ಇವುಗಳ ಅವಿರೋಧತ್ವವು ಉತ್ತಮ ಪ್ರಕಾರದ ಲಕ್ಷಣವೆಂದು ತಿಳಿಯುವರು. ಯಾವ ಜ್ಞಾನದಿಂದ ಮನುಷ್ಯನ ವಾಸನಾ ಅಂದರೆ ಇಚ್ಛೆ, ಅಥವಾ ಕರ್ಮದಿಂದ ಮನಸ್ಸಿನ ಮೇಲೆ ವಾಸವಾಗಿರುವ ಸಂಸ್ಕಾರವು ಶುದ್ಧವಾಗಿ ಮನುಷ್ಯ ಜೀವನದಲ್ಲಿ ಸತ್ಕರ್ಮಗಳ ಹೆಚ್ಚಳವಾಗುವದಿಲ್ಲವೋ ಅಂಥ ಜ್ಞಾನ ಮಾತ್ರ ಗೊಳ್ಳು, ಸುಳ್ಳು, ನಿರರ್ಥಕವಾದದ್ದು. ಇದರಂತೆಯೇ ಕರ್ಮದಲ್ಲಿ ಮನುಷ್ಯನ ಜ್ಞಾನದ ಪ್ರತಿಬಿಂಬ ಬಿದ್ದು ಅದು ಭಗವಂತನ ಚರಣದಲ್ಲಿ ಮಾನ್ಯವಾಗದಿದ್ದರೆ ಅಂಥ ಕರ್ಮ ವ್ಯರ್ಥವೆಂದೇ ತಿಳಿಯಬೇಕು. ಸಚ್ಚಿದಾನಂದ ಸ್ವರೂಪದ ಸಾಕ್ಷಾತ್ ಅನುಭವವಾದದ್ದರಿಂದ ಸಂಪೂರ್ಣ ಜ್ಞಾನ ಮತ್ತು ಉತ್ತಮ ಕರ್ಮ ಇವೆರಡರ ಮನೋಹರ (ಸುಂದರ) ಸಂಗಮವು ಯಾರ ಜೀವನದಲ್ಲಿ ಕಂಡುಬರುವದೋ ಅಂಥವನೇ ಸದ್ಗುರುವೆನಿಸುವನು. (ಸದ್ಗುರುವೇ ಇರುವನು.) ಈ ಸಮಾಸದ ಆರಂಭದಲ್ಲಿ ಶ್ರೀ ಸಮರ್ಥರು ಮಂಗಲಮೂರ್ತಿ, ಶಾರದೆ, ಮತ್ತು ಸದ್ಗುರು ಈ ಮೂವರಿಗೆ ವಂದನೆ ಮಾಡಿದ್ದಾರೆ. ಜ್ಞಾನವು ಯಾವುದೇ ಇರಲಿ, ಕೊನೆಗೆ ಮನುಷ್ಯನ ಬುದ್ಧಿಯೇ ಜ್ಞಾನಕ್ಕೆ ಪ್ರಧಾನ ಸಾಧನ ವಿರುವದು. ಆದರೆ ದೃಶ್ಯದಲ್ಲಿ ಸ್ವೈರ (ಸ್ವೇಚ್ಛಾ) ಸಂಚಾರ ಮಾಡುವ ಬುದ್ಧಿಯು ಸ್ವಸ್ವರೂಪದ ಅತೀಂದ್ರಿಯ ಕ್ಷೇತ್ರದಲ್ಲಿ ನಿರರ್ಥಕವಿರುವದು. (ಕೆಲಸಕ್ಕೆ ಬರುವದಿಲ್ಲ) ವ್ಯವಹಾರಿಕ ಬುದ್ಧಿಯಿಂದ ಪರಮಾರ್ಥದ ಬಗ್ಗೆ ವಿಚಾರ ಮಾಡಲಿಕ್ಕೆ ಹೋದರೆ ಕೆಲವೊಂದು ಭ್ರಮೆ, ಶಂಕೆ ನಿರ್ಮಾಣವಾಗುವವು. "ಆತ್ಮಜ್ಞಾನ ವಿಷಯವನ್ನು ಸಂಸ್ಕೃತ ಭಾಷೆಯಲ್ಲಿಯೇ ಬರೆಯುವದು ಅವಶ್ಯವಿರುವದು. ಪ್ರಾಕೃತ ಭಾಷೆ ಅಂದರೆ ಸಂಸ್ಕೃತದ ಹೊರತಾಗಿರುವ ಇತರ ಭಾಷೆಯಲ್ಲಿ ಬರೆಯುವದು ಪಾಪಕಾರಕವಿರುವದು" ಇದೂ ಒಂದು ಬಹು ದೊಡ್ಡ ಹಾಗೂ ದುರ್ಭೇದ್ಯವಾದ ಒಂದು ಭ್ರಮೆಯು ಇದು ಆ ಕಾಲದಲ್ಲಿಯ ಅನೇಕ ಭ್ರಮೆಗಳಲ್ಲಿ ಒಂದಾಗಿತ್ತು. ಯಾವುದೇ ಒಂದು ಪ್ರಾಕೃತ ಭಾಷೆಯಲ್ಲಿ ಅಲಂಕಾರಿ ಶಬ್ದ ವೈಖರಿ ಸಂಪತ್ತುಗಳಿಲ್ಲದಿದ್ದರೆ ಜ್ಞಾನಕ್ಕೆ ಜ್ಞಾನತನ ಬರುವದಿಲ್ಲ. ಅಂತೆಯೇ ಸಮಾಜ ದಲ್ಲಿ ಪ್ರಚಲಿತ (ರೂಢಿ) ದಲ್ಲಿರುವ ಸಾರ್ವತ್ರಿಕ ಸರ್ವಜನ ಬಹು ಜನರ ಬಳಿಕೆಯ ಭಾಷೆಯಲ್ಲಿಯೇ ಅಲಂಕಾರ ಯುಕ್ತ ಶಬ್ದ ಸಂಪತ್ತುಗಳನ್ನು ಬಳಿಸಿ-ಬೆಳಿಸಿ ಜ್ಞಾನವನ್ನು ಪ್ರಕಟಪಡಿಸುವದು ಸರ್ವೋತ್ತಮ ಮಾರ್ಗವಾಗಿದೆ. ಇದರಿಂದ ಸಾಮಾನ್ಯರಿಗೂ ಸಹ ಹೆಚ್ಚು ಉಪಯೋಗವಾಗುವದು. [ಭಕ್ತಿಜ್ಞಾನ ವೈರಾಗ್ಯಾದಿಗಳ ಬಗ್ಗೆ ಎಲ್ಲರಿಗೂ ತಿಳುವಳಿಕೆ ಉಂಟಾಗಿ ಸನ್ಮಾರ್ಗ ಹಿಡಿಯಲು ಸುಲಭವಾಗುವದು). ಸಂತರು, ದಾಸರು, ಶರಣರು, ಇದೇ ಮಾರ್ಗ ವನ್ನು ಅವಲಂಬಿಸಿದರು. ಪರಂಪರೆಯ ಅಭಿಮಾನಿಗಳು, ಪ್ರಾಕೃತ ಭಾಷೆಯಲ್ಲಿ ಹೇಳಿದ ಸಂತಾದಿಗಳಿಗೆ ಈ ಬಗ್ಗೆ ಅನೇಕ ರೀತಿಯಿಂದ ಕಾಡಿದರು. ತೊಂದರೆ ಕೊಟ್ಟರು. ಇದನ್ನೆಲ್ಲ ಸಂತಾದಿಗಳು ಶಾಂತ ರೀತಿಯಿಂದ ಸಹಿಸಿದರು. ಅನುಭವಿಸಿದರು. ಅಧ್ಯಾತ್ಮ ವಿಷಯದ ವಿಚಾರ ಮಾಡಲಿಕ್ಕೆ ಬುದ್ಧಿಯನ್ನು ಶುದ್ಧ ಮಾಡಿಕೊಳ್ಳುವದು ಅತಿ ಅವಶ್ಯ ವಿರುವದು. ಈ ಮಾತನ್ನು ಶ್ರೀ ಸಮರ್ಥರು ಈ ಸಮಾಸದಲ್ಲಿ ನಮಗೆ ತಿಳಿಸಿದ್ದಾರೆ. (ತೋರಿಸಿ ಕೊಟ್ಟಿದ್ದಾರೆ).

## ಸಮಾಸ ಪ್ರಥಮ ; ಮಂಗಳಾಚರಣ

॥ಶ್ರೀರಾಮ॥ ವಿದ್ಯಾವಂತಾಚಾ ಪೂರ್ವಜು । ಮತ್ತಾನನು ಯೇಕದ್ವಿಜು ।
ತ್ರಿನಯೆನ ಚತುರ್ಭುಜು । ಫರಶಪಾಣೀ ॥೧॥

ಕುಬೇರಾಪಾಸೂನಿ ಅರ್ಥ । ವೇದಾಪಾಸೂನ ಪರಮಾರ್ಥ ।
ಲಕ್ಷ್ಮೀಪಾಸೂನ ಸಮರ್ಥ । ಭಾಗ್ಯಾಸಿ ಆಲೆ ॥೨॥

ತೈಸೀ ಮಂಗಳಮೂರ್ತೀ ಆದ್ಯಾ । ಪಾಸೂನಿ ಜಾಲ್ಯಾ ಸಕಳ ವಿದ್ಯಾ ।
ತೇಣೇ ಕವೀ ಲಾಘವ ಗದ್ಯಾ । ಸತ್ಪಾತ್ರೆ ಜಾಲೆ ॥೩॥

ಜೈಸೀ ಸಮರ್ಥಾಚೀ ಲೇಕುರೇ । ನಾನಾ ಅಳಂಕಾರೀ ಸುಂದರೇ ।
ಮೂಳ ಪುರುಷಾಚೆನಿ ದ್ವಾರೇ । ತೈಸೇ ಕವೀ ॥೪॥

ನಮೂ ಐಸಿಯಾ ಗಣೇಂದ್ರಾ । ವಿದ್ಯಾಪ್ರಕಾಶೇ ಪೂರ್ಣಚಂದ್ರಾ ।
ಜಯಾಚೆನಿ ಬೋಧಸಮುದ್ರಾ । ಭರಿತೇ ದಾಟೆ ಬಳೇ ॥೫॥

ಜೋ ಕರ್ತೃತ್ವಾಸ ಆರಂಭ । ಮೂಳಪುರುಷ ಮುಳಾರಂಭ ।
ಜೋ ಪರಾತ್ಪರ ಸ್ವಯಂಭ । ಆದಿಅಂತೀ ॥೬॥

ತಯಾಪಾಸೂನ ಪ್ರಮದಾ । ಇಚ್ಛಾಕುಮಾರೀ ಶಾರದಾ ।
ಆದಿತ್ಯಾಪಾಸೂನ ಗೋದಾ । ಮೃಗಜಳ ವಾಹೇ ॥೭॥

ಜೇ ಮಿಥ್ಯಾ ಮ್ಹಣತಾಚ ಗೋವೀ । ಮಾಈಕಪಣೇ ಲಾಘವೀ ।
ವಕ್ತಯಾಸ ವೇಢಾ ಲಾವೀ । ವೇಗಳೇಪಣೇ ॥೮॥

ಜೇ ದ್ವೈತಾಚೀ ಜನನೀ । ಕಿ ತೇ ಅದ್ವೈತಾಚೀ ಖಾಣೀ ।
ಮೂಳಮಾಯಾ ಗವಸಣೀ । ಅನಂತ ಬ್ರಹ್ಮಾಂಡಾಚೀ ॥೯॥

## ದಶಕ ೭. ಸಮಾಸ ೧. ಮಂಗಲಾಚರಣ (ನುಡಿ ೬೧)

**ಗಣೇಶ ವಂದನ:—** ಮದ ಬಂದ ಆನೆಯ ಮುಖ, ತಲೆ, ಮತ್ತು ಬಾಯಿಯಂತೆ ಇರುವವನಾದ ಗಜಾನನನು ಎಲ್ಲ ವಿದ್ಯಾವಂತರ ಮೂಲ ಪುರುಷನಿರುವನು. ಇವನಿಗೆ ಒಂದೇ ಹಲ್ಲು ಇರುವದು. ಮೂರು ಕಣ್ಣು ಮತ್ತು ನಾಲ್ಕು ಕೈಗಳು ಇರುವವು. ಇವನ ಕೈಯಲ್ಲಿ ಪರಶು (ಕೊಡಲಿ) ಇರುವದು. (೧) ಕುಬೇರನಿಂದ ಧನ ಪ್ರಾಪ್ತಿಯಾಗುವದು. ವೇದಗಳಿಂದ ಪರಮಾರ್ಥ ಅಂದರೆ ಸದ್ಗತಿ, ಮೋಕ್ಷ, ಅತ್ಯಂತ ಶ್ರೇಷ್ಠವಾದ ಸತ್ಯ, ಪ್ರಾಪ್ತಿಯಾಗುವದು, ಲಕ್ಷ್ಮಿಯಿಂದ ಐಶ್ವರ್ಯ ಪ್ರಾಪ್ತವಾಗಿ ಮನುಷ್ಯನು ಭಾಗ್ಯ ಪದಕ್ಕೇರುವನು. (೨) ಇದರಂತೆ ಮಂಗಲ ಮೂರ್ತಿಯು ಎಲ್ಲ ವಿದ್ಯೆಯ ಮೂಲಾರಂಭ ಸ್ಥಾನದಲ್ಲಿರುವನು· ಇವನಿಂದ ಎಲ್ಲ ವಿದ್ಯೆಗಳೂ ಉತ್ಪನ್ನವಾಗುವವು. ಇವನ ಕೃಪೆಯಿಂದ ಕವಿಗಳು ಉತ್ತಮ ಗದ್ಯ ಪದ್ಯದ ರಚನೆ ಮಾಡಲು ಶಕ್ತರಾಗುವರು. ಮತ್ತು ಶ್ರೇಷ್ಠ ಯೋಗ್ಯತೆಯವರಾಗುವರು. (೩) ಒಬ್ಬ ಶ್ರೀಮಂತನ ಮಕ್ಕಳು ಅನೇಕ ದಾಗೀನು (ಒಡವೆ, ವಸ್ತು)ಗಳನ್ನು ಹಾಕಿಕೊಂಡಾಗ ಯಾವ ರೀತಿಯಿಂದ ಸುಂದರರಾಗಿ, ಮೋಹಕರಾಗಿ, ಕಾಣುವರೋ, ಅದೇ ರೀತಿಯಲ್ಲಿ ಆದಿ ಪುರುಷನಾದ (ಮೂಲ ಗಣಪತಿಯ) ಕೃಪೆಯಿಂದ ಕವಿಯೂ (ಸಣ್ಣವನಿರಲಿ, ದೊಡ್ಡವನಿರಲಿ) ಸಹ ಒಳ್ಳೇ ಶೋಭಾಯಮಾನನಾಗಿ ಕಾಣುವನು. (೪) ವಿದ್ಯೆಯ ಬೆಳದಿಂಗಳಿಂದ ಶೋಭಿಸುವಂಥವನಾದ ಈ ಪೂರ್ಣ-ಚಂದ್ರ ಗಣಪತಿಗೆ ನಾನು ನಮಸ್ಕಾರ ಮಾಡುವೆನು. ಗಣಪತಿಯು ಪೂರ್ಣ ಚಂದ್ರನಿರುವದರಿಂದ ತತ್‌ಪರಿಣಾಮವೆಂದರೆ ಜ್ಞಾನವೆಂಬ ಸಮುದ್ರಕ್ಕೆ ಅಪಾರ ಭರತಿ (ಭರ್ತಿ, ಉಕ್ಕೇರುವಿಕೆ. ಉಬ್ಬರಿಸುವದು) ಬರುವದು. (೫) ಗಣಪತಿಯ ಹತ್ತಿರ ಎಲ್ಲ ಕೃತುಶಕ್ತಿಯ (ಕರ್ತೃತ್ವದ) ಉಗಮವಿರುವದು. ಇವನೇ ಆದಿ ಪುರುಷ. (ಮೂಲಪುರುಷ)ನಿರುವನು. ಸರ್ವ ವಿಶ್ವದ ಉಗಮ ಸ್ಥಾನನೂ ಇವನೇ ಇರುವನು. ಸರ್ವ ವಿಶ್ವದ ಆಚೆಗೆ ಇರುವ ಸರ್ವಶ್ರೇಷ್ಠ ಸ್ವರೂಪನೂ ಇವನೇ ಇರುವನು. ಎಲ್ಲದರ ಮೊದಲಿಗನೂ ಮತ್ತು ಎಲ್ಲದರ ನಂತರವೂ ಸಹ ಮೊದಲಿಗೆ ಹೇಗಿದ್ದನೋ ಹಾಗೆಯೇ ಸ್ವಯಂಭೂ ಆಗಿ (ಸ್ವಯಂ ಸಿದ್ಧ) ಇವನೇ ಇರುವನು. (೬) **ಶಾರದೆಯ ವಂದನ:—** ಸೂರ್ಯನಿಂದ ಮೃಗ ಜಲದ ದೊಡ್ಡ ಪ್ರವಾಹವೇ ನಿರ್ಮಾಣವಾಗಿ ಹರಿಯ ಹತ್ತುವದು. ಇದರಂತೆ ಆ ಸ್ವಯಂಭೂ ಸ್ವರೂಪದಲ್ಲಿ ಶಾರದೆಯೆಂಬ ಹೆಸರಿನ ಕನ್ಯೆ ಉತ್ಪನ್ನವಾದಳು. ಇವಳು ಸ್ಫುರಣರೂಪ ಅಂದರೆ ಬುದ್ಧಿಗೆ ಗೋಚರಿಸುವ ರೂಪ. ಒಮ್ಮೆಲೇ ತಿಳಿಯುವ ರೂಪವು. ಸ್ಫೂರ್ತಿರೂಪ ಅಂದರೆ ಬುದ್ಧಿಗೆ ಪ್ರೇರಣೆ, ಉತ್ತೇಜನ ಪ್ರೋತ್ಸಾಹ ಕೊಡುವಂಥ ರೂಪದವಳಿರುವಳು. ಸ್ಫುರಣ ರೂಪಳಿರುವದರಿಂದ ಸ್ವ ಇಚ್ಛೆಯಿಂದ ಇರುವಂಥವಳು. ಸ್ಫೂರ್ತಿರೂಪಳಿರುವದರಿಂದ ಗತಿಮಾನ್ ಅಂದರೆ ಜಾಣೆ, ಭಾಗ್ಯವಂತೆ ಚಪಲೆ ಚಂಚಲೆ ಇರುವಳು. ಇವಳೇ ಮೂಲ ಮಾಯೆಯು, ಆದಿಶಕ್ತಿಯಾಗಿರುವಳು. (೭) "ಮಾಯೆ ಮಿಥ್ಯೆ ಇರುವದು" ಎಂದು ಅನ್ನುವದಾದರೆ ಮೊದಲು ಮಾಯೆಯ ಅಸ್ತಿತ್ವ [ಇರುವಿಕೆ] ಒಪ್ಪಬೇಕಾಗುವದು. ಇದಲ್ಲದೇ ಇವಳನ್ನು [ಮಾಯೆ] ಪೃಥಕ್ಕಾಗಿ [ಬೇರೆಯಾಗಿ] ನೋಡದ ಹೊರತು ಇವಳ ಬಗ್ಗೆ ಏನೂ ಮಾತಾಡಲಿಕ್ಕೆ ಬರುವದಿಲ್ಲ. (ಸಾಧ್ಯವಾಗುವದಿಲ್ಲ). ಉದಾ:- ಬ್ರಹ್ಮ ನಿರೂಪಣ ಮಾಡುವ ವಕ್ತಾ, ಬ್ರಹ್ಮನಿರೂಪಣ ಮಾಡುವವನು ಅಂದರೆ ಅವನು ಬ್ರಹ್ಮನಿಂದ ಬೇರೆ ಇದ್ದಾನೆಂದು ಅನಿಸುವದು. ಒಟ್ಟಿನಲ್ಲಿ ಹೀಗೆ (ಈ ಪ್ರಕಾರ) ಪೃಥಕ್ಕಾಗಿ ನೋಡುವದು. ಅಂದರೇನೇ ಮಾಯೆಯ ಅಮಲ (ಅಧಿಕಾರ ವ್ಯಾಪ್ತಿ)ದಲ್ಲಿ ತೊಡಕಿ [ಸಿಕ್ಕಿ] ಕೊಳ್ಳುವದೇ ಆಗಿರುವದು. ಈ ತರದ ವಿಲಕ್ಷಣ ರೀತಿಯಿಂದ ಇವಳು[ಮಾಯೆ] ಹೇಳುವವರನ್ನು ತನ್ನ ಜಾಲದಲ್ಲಿ ಹಿಡಿದು ಬಿಡುವಳು. [ಕೆಡವಿಕೊಂಡು ಬಿಡುವಳು.] [೮] ಈ ಮಾಯೆಯು ದ್ವೈತಕ್ಕೆ ಜನ್ಮ ಕೊಡುವಳಾದರೂ ತಾನು ಸ್ವತಃ ಅದ್ವೈತದ ಖಣಿಯಾಗಿರುವಳು. ಇವಳು ಆದಿಪುರುಷ ಪರಮಾತ್ಮನಿಂದ ಯಾವಾಗಲೂ ಬೇರೆಯಾಗಿರುವದೇ ಇಲ್ಲ. ಸದಾ ಸಂಗಡವೇ ಇರುವಳು. [ಅವನಲ್ಲಿಯೇ ಇರುವಳು]. ಇಂಥ ವಿಲಕ್ಷಣ ಈ ಮೂಲ ಮಾಯೆಯು ಅನಂತ ವಿಶ್ವವನ್ನು ವ್ಯಾಪಿಸಿರುವಳು. [ಮುಸುಕು ಹಾಕಿರುವಳು].ಇವಳು ತನ್ನ ಉದರದಲ್ಲಿ ಅನಂತ ಬ್ರಹ್ಮಾಂಡವನ್ನೇ ಇಟ್ಟುಕೊಂಡಿದ್ದಾಳೆ. ಸಂಚಯಿಸಿದ್ದಾಳೆ. [ಅನಂತ ಬ್ರಹ್ಮಾಂಡವೆಲ್ಲವೂ ಇವಳಲ್ಲಿಯೇ ಇರುವದೆಂಬ ಭಾವವು.] [೯]

ಕೀ ತೇ ಔದಂಬರೀ ವಲ್ಲಿ । ಅನಂತ ಬ್ರಹ್ಮಾಂಡೀ ಲಗಡಲೀ ।
ಮೂಳ ಪುರುಷಾಚೀ ಮಾಊಲೀ । ದುಹಿತಾ ರೂಪೇ ॥೧೦॥

ಮಂದೂ ಐಸೀ ವೇದಮಾತಾ । ಆದಿ ಪುರುಷಾಚೀ ಜೇ ಸತ್ತಾ ।
ಆತಾ ಆಠವೀನ ಸಮರ್ಥಾ । ಸದ್ಗುರೂಸೀ ॥೧೧॥

ಜಯಾಚೆನಿ ಕೃಪಾದೃಷ್ಟೀ । ಹೋಯ ಆನಂದಾಚೀ ವೃಷ್ಟೀ ।
ತೇಣೇ ಸುಖೇ ಸರ್ವ ಸೃಷ್ಟೀ । ಆನಂದಮಯೀ ॥೧೨॥

ಕೀ ತೋ ಆನಂದಾಚಾ ಜನಕ । ಸಾಯೋಜ್ಯ ಮುಕ್ತೀಚಾ ನಾಯಕ ।
ಕೈವಲ್ಯ ಪದದಾಯಕ । ಅನಾಥ ಬಂಧು ॥೧೩॥

ಮುಮುಕ್ಷ ಚಾತಕೀ ಸುಸ್ವರ । ಕರುಣಾ ಪಾಹಿಜೆ ಅಂಬರ ।
ವೋಳೆ ಕೃಪೇಚಾ ಜಳಧರ । ಸಾಧಕಾ ವರೀ ॥೧೪॥

ಕೀ ತೇ ಭವಾರ್ಣವೀಚೇ ತಾರೂ । ಬೋಧೇ ಪಾವವೀ ಪೈಲಪಾರೂ ।
ಮಹಾ ಆವರ್ತೀ ಆಧಾರೂ । ಭಾವಿಕಾಸೀ ॥೧೫॥

ಈ ಮೂಲ ಮಾಯೆ ಎಂದರೆ ನಮ್ಮ ಕಲ್ಪನೆಗೆ ಬಾರದಂಥ ರೀತಿಯಲ್ಲಿ ವಿಲಕ್ಷಣವಾಗಿ ವ್ಯಾಪಿಸಿ [ಪಸರಿಸಿ]ಕೊಳ್ಳುವಂತಹ ಒಂದು ಬಗೆಯ ಬಳ್ಳಿ ಇರುವದು. ಇದರ ಮೇಲೆ ಅನಂತ ವಿಶ್ವವು ವಿಕಸಿತಗೊಂಡಿದೆ. ವಿಸ್ತಾರಗೊಂಡಿದೆ. ಇವಳು ಮೂಲ ಪುರುಷನ ಪ್ರಥಮ ಮಗಳು ಮತ್ತು ಅನಂತರ ತಾಯಿ ಎನಿಸಿರುವಳು. ಈ ಮೂಲ ಮಾಯೆಯು ಭಗವತ್ ಸ್ವರೂಪದ ಒಂದು ಅತರ್ಕ್ಯ ಶಕ್ತಿಯಾಗಿರುವಳು. ಪರಬ್ರಹ್ಮನೊಂದಿಗೆ ಬಹಳಷ್ಟು ಸಮರಸವಿರುವ ಈ ಮಾಯೆ ಅರ್ಥಾತ್ ಶಕ್ತಿಯು ಪರಬ್ರಹ್ಮನಷ್ಟೇ ಅನಂತ, ಅಪಾರ ಅದ್ಭುತ. ವಿಲಕ್ಷಣ ಮತ್ತು ಅತರ್ಕ್ಯವಿರುವಳು. ಅಕ್ಷರಶಃ ಅನಂತ ವಿಶ್ವನಿರ್ಮಾಣ ಮಾಡಿ ಪರಮಾತ್ಮನ ಸ್ವರೂಪಕ್ಕೆ ಮುಸುಕು ಹಾಕಿದಂತೆ ಮಾಡುವ ಶಕ್ತಿ ಸಾಮರ್ಥ್ಯವು ಇವಳಲ್ಲಿ ಇರುವದು. ಪರಂತು ಈ ಯಾವತ್ತೂ ಉಚಾಪತಿ(ವ್ಯವಹಾರ) ಆಗುತ್ತಿರುವಾಗ ಸಹ ಇವಳು ಪರಮಾತ್ಮನಿಂದ ಒಂದು ಕ್ಷಣ ಸಹಿತ ಅತ್ತಿತ್ತ ಸರಿಯುವದಿಲ್ಲ. ಪರಮಾತ್ಮ ಸ್ವರೂಪದಿಂದ ಇವಳು (ಮಾಯೆ, ಶಕ್ತಿ) ಹೊರಗೆ ಬರುವಳೆಂಬ ಕಾರಣದಿಂದ ಪರಮಾತ್ಮನ ಮಗಳಾಗಿರುವಳು. ನಂತರ ಅವನನ್ನು ಸಾಕ್ಷಿ ಎಂದು ತಯಾರಿಸುವಳು. [ತೋರಿಸಿ ಕೊಡುವಳು] ಅದಕ್ಕಾಗಿ ಅವನ ತಾಯಿ[ಆಯಿ]ಯೆನಿಸಿರುವಳು. [೧೦] ಇಂಥ ಈ ವೇದಮಾತೆಯು ಶಾರದೆ ಇರುವಳು. ಆದಿ ಪುರುಷನ ಅಂದರೆ ಈಶ್ವರನ ಅಸ್ತಿತ್ವ[ಇರುವಿಕೆ]ವು ಇವಳ ಸಾಮರ್ಥ್ಯದಿಂದಲೇ ಅನುಭವಕ್ಕೆ ಬರುವದು. ಇಂಥ ಮಹಾತಾಯಿಗೆ ನಾನು ವಂದಿಸುವೆ. ಇನ್ನು ಮೇಲೆ ಸಮರ್ಥ ಸದ್ಗುರುವಿನ ಸ್ಮರಣವನ್ನು ನಾನು ಮಾಡುವೆನು. [೧೧] **ಶ್ರೀ ಸದ್ಗುರುವಿನ ವಂದನ:—** ಸದ್ಗುರುವಿನ ಕೃಪಾದೃಷ್ಟಿಯಾದರೆ ಆನಂದದ ಮಳೆಯೇ ಸುರಿಯುವದು. ಇಂಥ ನಿರತಿಶಯವಾದ ಸುಖದಿಂದ ಇಡೀ ವಿಶ್ವವೇ ಆನಂದದಿಂದ ತುಂಬಿ ಹೋಗುವದು. ಆತ್ಮಸಾಕ್ಷಾತ್ಕಾರವಾದರೆ ನಮ್ಮ ನಿಮ್ಮ ಅಂತಃಕರಣ ಆನಂದದಿಂದ ತುಂಬಿ ತುಳುಕುವದರಲ್ಲಿ ಆಶ್ಚರ್ಯವಿಲ್ಲ. ಈ ದೃಶ್ಯ ವಿಶ್ವವೆಲ್ಲವೂ ಆನಂದದ ವಿಲಾಸ [ಚಮತ್ಕಾರ]ವೇ ಇರುವದೆಂಬುದರ ಪ್ರತ್ಯಕ್ಷ ಅನುಭವವೇ ಉಂಟಾಗುವದು. [೧೨] ಶ್ರೀ ಸದ್ಗುರುವು ಆನಂದವೆಂಬ ಜನ್ಮದಲ್ಲಿ ನಮ್ಮನ್ನು ಹಾಕುವ [ಕಳಿಸುವ, ಹುಟ್ಟಿಸುವ] ತಂದೆಯಾಗಿರುವನು. ಸಾಯುಜ್ಯ ಮುಕ್ತಿಯವರೆಗೆ ಒಯ್ದು ಮುಟ್ಟಿಸುವಂಥ ಮಾರ್ಗದರ್ಶಕನಿರುವನು. ಇವನು ಅನಾಥರ ಸಹಾಯಕನಾಗಿರುವನಲ್ಲದೇ ಕೈವಲ್ಯ ಪದದ ಪ್ರಾಪ್ತಿ ಮಾಡಿಕೊಡುವವನಾಗಿರುವನು. [೧೩] ಮುಮುಕ್ಷುವು ಚಾತಕ ಪಕ್ಷಿಯಂತೆ ಇರುವನೆಂಬುದು ತಿಳಿಯುವದು. ಚಾತಕ ಪಕ್ಷಿಯು ಕೇವಲ [ಆಗದೀ] ಅನನ್ಯತನದಿಂದ ಆಕಾಶದ ಕಡೆಗೇ ದೃಷ್ಟಿ ಇಟ್ಟು ಕಾತುರತೆಯಿಂದ [ಕರುಣಾರೂಪದಿಂದ] ಆಕಾಶದ ಕಡೆಗೇ ನೋಡುತ್ತ ಕೂಡುವದು. ಅಲ್ಲಿ ಮೋಡ ಬಂದು ಮಳೆ ಬೀಳಹತ್ತಿದ ಕೂಡಲೇ ಆಜಲಬಿಂದುಗಳನ್ನು ಕುಡಿಯುವದು. ಇದೇ ರೀತಿಯಲ್ಲಿ ಮುಮುಕ್ಷುವು ಅತ್ಯಂತ ವಿನಯ[ದೀನ] ಸ್ವರದಿಂದ ಆರ್ತಚಿತ್ತನಾಗಿ ಸದ್ಗುರುವನ್ನು ಬೇಡಿಕೊಳ್ಳಬೇಕು. ಸೇವಿಸಬೇಕು. ಶ್ರೀ ಗುರುವಿನ ಕರುಣಾರೂಪ ಆಕಾಶದಕಡೆಗೆ ಏಕಚಿತ್ತದಿಂದ ನೋಡುತ್ತಲಿರಬೇಕು. ಕೃಪೆಯಾಗುವವರೆಗೂ ದಾರಿ ಕಾಯುತ್ತ ಕೂಡ್ರಬೇಕು. ಅಂದರೆ ಆಗ ಆ ಸಾಧಕನ ಮೇಲೆ ಸದ್ಗುರುವಿನ ಕೃಪಾರೂಪದ ಮೋಡದಿಂದ ಆನಂದಾಮೃತದ ವೃಷ್ಟಿ (ಮಳೆ) ಸುರಿಯುತ್ತದೆ. ಸಾಧಕನು ಅನನ್ಯನಾಗಿ ಪ್ರಾರ್ಥಿಸುತ್ತ ವಿಶ್ವಾಸದಿಂದ ಕಾಯ್ದು ಕುಳಿತರೆ ಅಂಥ ನಿಷ್ಠಾವಂತ ಸಾಧಕನ ಮೇಲೆ ಸದ್ಗುರುವಿನ ಕೃಪೆಯು ನಿಶ್ಚಯದಿಂದ ಆಗಿಯೇ ತೀರುತ್ತದೆ. ಮತ್ತು ಅವನು ಸ್ವಾನಂದಾನುಭವವನ್ನು ಪಡೆಯುವನು. (ಸತ್ಯ, ಶ್ರೇಷ್ಠ, ಆನಂದದ ಅನುಭವ ಬರುವದು) (೧೪) ಸದ್ಗುರುವು ಈ ಭವಸಾಗರ ಅಂದರೆ ಪ್ರಪಂಚವೆಂಬ ಸಮುದ್ರದಿಂದ ದಾಟಿಸುವ ಪಾರುಗಾಣಿಸುವ ನೌಕೆಯೇ ಆಗಿರುವನು. ಆತ್ಮಜ್ಞಾನದ ಸಹಾಯದಿಂದ ಈ ಗುರುನಾಥನು ಭವಸಾಗರದಾಚೆಗೆ ಇರುವ ದಂಡೆಗೆ [ಮೋಕ್ಷ ಮಾರ್ಗ, ಮೋಕ್ಷ ಪದಕ್ಕೆ] ತಂದು ಮುಟ್ಟಿಸುವನು. ಈ ಪ್ರಪಂಚದಲ್ಲಿಯ ದೊಡ್ಡ ದೊಡ್ಡ ವಿಪತ್ತು, ಅಡಚಣೆ, ಅನ್ಯಾಯ, ಆಪತ್ತುಗಳೆಂಬ ತಿರಗಣಿಮಡುವಿನಲ್ಲಿ ಸಿಕ್ಕು ತೊಳಲಾಡುವ ದೀನಜೀವವು ಶ್ರದ್ಧಾಭಕ್ತಿ ಇಟ್ಟಿದ್ದಾದರೆ ಸದ್ಗುರುವು ಖಾತ್ರಿಯಿಂದ ಸುಖರೂಪವಾಗಿ ಪಾರು ಮಾಡುವನು. ಪಾರಾಗುವ ಉಪಾಯ ಸೂಚಿಸುವನು. [೧೫]

ಕೀ ತೋ ಕಾಳಾಚಾ ನಿಯಂತಾ । ನಾಂತರೀ ಸಂಕಟೀ ಸೋಡವಿತಾ ।
ಕೀ ತೇ ಭಾವಿಕಾಂಚೀ ಮಾತಾ । ಪರಮ ಸ್ನೇಹಾಳು ॥೧೬॥

ಕೀ ಜೋ ಪರತ್ರೀಚಾ ಆಧಾರ । ಕೀ ತೇ ವಿಶ್ರಾಂತೀಚೀ ಥಾರ ।
ನಾಂತರೀ ಸುಖಾಚೇ ಮಾಹೇರ । ಸುಖ ಸ್ವರೂಪ ॥೧೭॥

ಐಸಾ ಸದ್ಗುರು ಪೂರ್ಣಪಣೇ । ತುಟೆ ಭೇದಾಚೀ ಕಡಸಣೇ ।
ದೇಹವಿಣ ಲೋಟಾಂಗಣೇ । ತಯಾ ಪ್ರಭೂಸೀ ॥೧೮॥

ಸಾಧು ಸಂತ ಆಣೀ ಸಜ್ಜನ । ವಂದೂನಿಯಾ ಶ್ರೋತೇಜನ ।
ಆತಾ ಕಥಾನುಸಂಧಾನ । ಸಾವಧ ಏಕಾ ॥೧೯॥

ಸಂಸಾರ ಹಾ ಚಿ ದೀರ್ಘ ಸ್ವಪ್ನ । ಲೋಭೇ ವೋಸಣಾತೀ ಜನ ।
ಮಾಝೀ ಕಾಂತಾ ಮಾಝೇ ಧನ। ಕನ್ಯಾಪುತ್ರ ಮಾಝೇ ॥೨೦॥

ಜ್ಞಾನ ಸೂರ್ಯ ಮಾವಳಲಾ । ತೇಣೇ ಪ್ರಕಾಶ ಲೋಪಲಾ ।
ಅಂಧಕಾರೇ ಪೂರ್ಣ ಜಾಲಾ । ಬ್ರಹ್ಮಗೋಳ ಅವಘಾ ॥೨೧॥

ನಾಹೀ ಸತ್ವಾಚೇ ಚಾಂದಿಣೇ । ಕಾಹೀ ಮಾರ್ಗ ದಿಸೆ ಜೇಣೇ ।
ಸರ್ವ ಭ್ರಾಂತೀಚೆನಿ ಗುಣೇ । ಆಪೇ ಆಪ ನ ದಿಸೇ ॥೨೨॥

ದೇಹಬುದ್ಧಿ ಅಹಂಕಾರೇ । ನಿಜೇಲೇ ಘೋರತೀ ಘೋರೇ ।
ದುಃಖೇ ಆಕ್ರಂದತೀ ಥೋರೇ । ವಿಷಯ ಸುಖಾಕಾರಣೇ ॥೨೩॥

ನಿಜೇಲೇ ಅಸತಾಚ ಮೇಲೇ । ಪುನ್ಹಾ ಉಪಜತಾಚ ನಿಜೇಲೇ ।
ಐಸೆ ಆಲೆ ಆಣೀ ಗೇಲೇ । ಬಹುತ ಲೋಕ ॥೨೪॥

ನಿದಸುರೇಪಣೇ ಚಿ ಸೈರಾ । ಬಹುತೀ ಕೇಲ್ಯಾ ಯೇರಝಾರಾ ।
ನೇಣೋನಿಯಾ ಪರಮೇಶ್ವರಾ । ಭೋಗಿಲೇ ಕಷ್ಟ ॥೨೫॥

ಸದ್ಗುರುವು ಕಾಲಯಮನ ಮೇಲೆ ಅಧಿಕಾರ ನಡೆಸುವನು. ಸಂಕಟದಿಂದ ಬಿಡಿಸುವನು. ಸದ್ಗುರು ಅಂದರೆ ಶರಣು ಬಂದಂಥ ಶ್ರದ್ಧಾವಂತ ಜೀವದ ಮೇಲೆ ನಿರತಿಶಯ ಪ್ರೇಮ ಮಾಡುವಂಥ ಮತ್ತು ಶ್ರದ್ಧಾವಂತ ನನ್ನು ಸಂರಕ್ಷಣೆ ಮಾಡುವಂಥ ತಾಯಿಯೇ ಎಂದು ತಿಳಿಯಬೇಕು. (೧೬) ಸದ್ಗುರು ಪರಮಾರ್ಥದ ಮಾರ್ಗದರ್ಶಕ ನಿರುವನು. ಜೀವಕ್ಕೆ ನಿಜವಾದ ವಿಶ್ರಾಂತಿ ಸ್ಥಾನವೆಂದರೆ ಸದ್ಗುರುವೇ ಆಗಿರುವನು. ಆನಂದದಿಂದ ಒಳಗೂ ಹೊರಗೂ ತುಂಬಿ ತುಳುಕುತ್ತಿರುವ ಸದ್ಗುರುವು ಸುಖದ ತವರುಮನೆಯಾಗಿರುವನು. (೧೭) ಒಟ್ಟಿನಲ್ಲಿ ಹೇಳುವದಾದರೆ ಸದ್ಗುರು ಎಲ್ಲ ಬಾಜೂದಿಂದ ಎಲ್ಲ ತರಹದಿಂದ ಪರಿಪೂರ್ಣವಾಗಿರುವನು. ಇಂಥವನ ಸಂಗ ಮಾಡಿದರೆ ಮಾತ್ರ ಬಂಧನದ, ಭೇದಭಾವದ ಘೋಟಾಳೆ, ತೊಡಕು, ಗೂಢತ್ವ ಇವುಗಳು ಬಯಲಾಗುತ್ತವೆ. ಅನುಭವಕ್ಕೆ ಬರುತ್ತವೆ. ಇಂಥ ಶ್ರೀ ಸದ್ಗುರು ಸ್ವಾಮಿಗೆ ನಾನು ದೇಹರಹಿತನಾಗಿ ದೇಹಬುದ್ಧಿಯನ್ನು ಬಿಟ್ಟುಕೊಟ್ಟು ಸಾಷ್ಟಾಂಗ ನಮಸ್ಕಾರ ಮಾಡುವೆನು. "ನಾನು ದೇಹವಿರುವೆನು" ಈ ಭಾವನೆಯನ್ನು ಮರೆತು ಸಮರಸ ಭಾವದಿಂದ (ಜೀವ ಶಿವೈಕ್ಯಭಾವ ದಿಂದ) ಕೂಡಿದವನಾಗಿ ಸ್ವಾಮಿಗೆ ವಂದನೆ ಮಾಡುವೆನು. (೧೮) ಆತ್ಮಜ್ಞಾನರಹಿತನಾಗಿ ಜೀವನ ನಡೆಸುವದೆಂದರೆ ಎಲ್ಲವೂ ಕುರುಡನ ಸಂಸಾರವಿದ್ದಂತೆ ಎಂದು ತಿಳಿಯಬೇಕು. ಅಜ್ಞಾನವು ಒಂದು ಪ್ರಕಾರದ ನಿದ್ದೆ ಇದ್ದು ಇದರಲ್ಲಿ ಜೀವಕ್ಕೆ ಒಂದು ಪ್ರಕಾರದ ಸ್ವಪ್ನ ಬೀಳುತ್ತದೆ. ಈ ನಿದ್ರೆಯಲ್ಲಿಯೇ ಜನ್ಮ ಮರಣದ ಫೇರಿ (ಹೋಗುವದು-ಬರುವದು) ನಡೆಯುವದು. ಇದೆಲ್ಲವೂ ಆತ್ಮಜ್ಞಾನದಿಂದ ನಿಂತು ಹೋಗುವದು. ಇನ್ನು ಸಾಧು, ಸಂತ, ಶರಣ, ಸಜ್ಜನ ಮತ್ತು ಶ್ರೋತಾರರು ಇವರಿಗೆಲ್ಲ ನಮಸ್ಕಾರ ಮಾಡಿ ಮೂಲವಿಷಯವನ್ನು ಹೇಳಲು ನಾನು ಆರಂಭ ಮಾಡುವೆನು. ಇದನ್ನು ಲಕ್ಷ್ಯಪೂರ್ವಕವಾಗಿ ಕೇಳಿರಿ. (೧೯) ಸಂಸಾರವೆಂಬುದೇ ಒಂದು ದೊಡ್ಡ ಮತ್ತು ದೀರ್ಘ ಸ್ವಪ್ನವಿರುವದು. ಈ ಸ್ವಪ್ನದಲ್ಲಿ ಆಸಕ್ತಿ ಅನುರಾಗಗಳ ವಶರಾಗಿ "ನನ್ನ ಹೆಂಡತಿ, ನನ್ನ ಮಕ್ಕಳು, ನನ್ನ ಮನೆ, ನನ್ನ ಹಣ" ಎಂದು ಜನರು ಬಡಬಡಿಸುವರು. (೨೦) ಆತ್ಮಜ್ಞಾನವೆಂಬ ಸೂರ್ಯ ಅಸ್ತನಾದ್ದರಿಂದ ಅದೃಶ್ಯನಾದ್ದರಿಂದ ಜ್ಞಾನವೆಂಬ ಪ್ರಕಾಶ ಇಲ್ಲದಾಯಿತು. ಎಲ್ಲ ವಿಶ್ವವು ಅಜ್ಞಾನರೂಪಿ ಕತ್ತಲೆಯಿಂದ ತುಂಬಿ ಹೋಯಿತು. ಜೀವದ ಒಳ ಹೊರಗೆಲ್ಲವೂ ಅಜ್ಞಾನದಿಂದ ವ್ಯಾಪಿಸಿ ಬಿಟ್ಟಿತು. (೨೧) ನೋಡಿರಿ, ಸೂರ್ಯನ ಪ್ರಕಾಶವಿಲ್ಲದಿದ್ದರೆ ಇಲ್ಲ. ಆದರೆ ಅಂತಃಕರಣದಲ್ಲಿ ಸತ್ವಗುಣರೂಪದ ಬೆಳದಿಂಗಳೂ ಸಹಕಾಣದಾಯಿತು ಆಚಂದ್ರನ ಬೆಳದಿಂಗಳಲ್ಲಿ ಸ್ವಲ್ಪಾದರೂ ಮಾರ್ಗ ಕಾಣುತ್ತಿತ್ತು. ಒಟ್ಟಿನಲ್ಲಿ ಸರ್ವಪ್ರಕಾರದ ಭ್ರಮದಿಂದ ಜೀವವು ಬಿಗಿಯಲ್ಪಟ್ಟಿದ್ದರಿಂದ (ಸುತ್ತಿ, ಕಟ್ಟಿ ಹಾಕಿಕೊಂಡಿದ್ದರಿಂದ) ಸ್ವಾಭಾವಿಕವಾಗಿ ಅದಕ್ಕೆ ಏನೂ ಕಾಣದಂತಾಗಿದೆ. ದೃಶ್ಯ ಕಾಣುತ್ತಿರುವದರಿಂದ ಮತ್ತು ಕಣ್ಣಿಗೆ ಕಾಣುವದೆಲ್ಲ ಸತ್ಯ-ಖರೇ ಅನಿಸಹತ್ತಿದ್ದರಿಂದ ನಿಜವಾದ ಸ್ವಸ್ವರೂಪದ ಅನುಭವವು ಬರದಂತೆ ಆಗಿದೆ. (೨೨) ನಾನು ದೇಹವೇ ಇರುವೆನು. ಎಂಬ ದೃಢಭಾವನೆಯಿಂದ ದೇಹಾಭಿಮಾನ ಅಂದರೆ ಅಹಂಕಾರ, ನಾನು ಎಂಬ ದುರಭಿಮಾನ ಉತ್ಪನ್ನವಾಯಿತು. ಅಜ್ಞಾನ ರೂಪದ ನಿದ್ರೆಯಲ್ಲಿಯ ಜೀವವು ಈ ದೇಹಾಭಿಮಾನದಿಂದ ಭಯಂಕರ ಗೊರಕೆ ಹೊಡೆಯಹತ್ತಿತು. ಇದರಂತೆಯೇ ಅಭಿಮಾನಿ ಜೀವವು ಇಂದ್ರಿಯಗಳಿಂದ ಸುಖ ದೊರಕಲೊಲ್ಲವೆಂದು ಅದಕ್ಕೆ ದುಃಖವೂ ಆಗಹತ್ತಿತು. ಮತ್ತು ಈ ದುಃಖದ ಭರದಲ್ಲಿ ಬಹುದೊಡ್ಡದಾಗಿ ಹಾಡಾಡಿಕೊಂಡು ಅಳುತ್ತದೆ. (ಅಜ್ಞಾನದ ನಿದ್ರೆಯಲ್ಲಿ) (೨೩) ಅಜ್ಞಾನೀ ಜೀವವು ಈ ರೀತಿಯಿಂದ ನಿದ್ರೆಯಲ್ಲಿಯೇ ಸಾಯುವದು. ಮತ್ತು ಪುನಃ ಜನ್ಮಕ್ಕೆ ಬಂದ ಕೂಡಲೇ ಮಲಗಿಬಿಡುವದು. ಹೀಗೆ (ಇಂಥ) ಅಗಣಿತ ಜೀವಗಳು ಇವತ್ತಿನ ವರೆಗೆ ಇಲ್ಲಿ (ಭೂಮಿಗೆ) ಬರುವವು ಮತ್ತು ಹೋಗುವವು. (೨೪) ಅಜ್ಞಾನವೆಂಬ ನಿದ್ರೆಯಲ್ಲಿಯೇ ಬಹಳಷ್ಟು ಜೀವಗಳು ಮರಣಗಳ ಸ್ವಚ್ಛಂದದ ಯಡತಾಕಪಟ್ಟಿ ಮಾಡಿದವು. ಭಗವಂತನ ಗುರುತು (ಭಗವಂತನನ್ನು ತಿಳಿಯುವವಕ್ಕೆ) ಆಗದೆ ಇದ್ದದರಿಂದ ಇಷ್ಟೆಲ್ಲ ಕಷ್ಟವನ್ನು ಭೋಗಿಸಿತು. [೨೫]

ತಯಾ ಕಷ್ಟಾಚೇ ನಿರ್ಶನ । ವ್ಹಾವಯಾ ಪಾಹಿಜೆ ಆತ್ಮಜ್ಞಾನ ।
ಮ್ಹಣೋನಿ ಹೇ ನಿರೂಪಣ । ಅಧ್ಯಾತ್ಮ ಗ್ರಂಥ ॥೨೬॥

ಸಕಳ ವಿದ್ಯೆಮಧ್ಯೇ ಸಾರ । ಅಧ್ಯಾತ್ಮವಿದ್ಯೇಚಾ ವಿಚಾರ ।
ದಶಮೋಧ್ಯಾಯೀ ಸಾರಂಗಧರ । ಭಗವದ್ಗೀತೇಸಿ ಬೋಲಿಲಾ ॥೨೭॥

॥ಶ್ಲೋಕ॥ ಅಧ್ಯಾತ್ಮ ವಿದ್ಯಾ ವಿದ್ಯಾನಾಂ । ವಾದಃ ಪ್ರವದತಾ ಮಹಮ್ ॥೪॥

ಯಾಕಾರಣೇ ಅದ್ವೈತ ಗ್ರಂಥ । ಅಧ್ಯಾತ್ಮವಿದ್ಯೇಚಾ ಪರಮಾರ್ಥ ।
ಪಾಹಾ ವಯಾ ತೋ ಚಿ ಸಮರ್ಥ। ಜೋ ಸರ್ವಾಂಗೇ ಶ್ರೋತಾ ॥೨೮॥

ಜಯಾಚೇ ಚಂಚಳ ಹೃದಯ । ತೇಣೇ ಗ್ರಂಥ ಸೋಡೂಚಿ ನಯೇ ।
ಸೋಡಿತಾ ಅಲಭ್ಯ ಹೋಯ । ಅರ್ಥ ಯೆಥೀಚಾ ॥೨೯॥

ಜಯಾಸ ಜೋಡಲಾ ಪರಮಾರ್ಥ । ತೇಣೇ ಪಾಹಾವಾ ಹಾ ಗ್ರಂಥ ।
ಅರ್ಥ ಶೋಧಿತಾ ಪರಮಾರ್ಥ । ನಿಶ್ಚಯೇ ಬಾಣೇ ॥೩೦॥

ಜಯಾಸಿ ನಾಹೀ ಪರಮಾರ್ಥ । ತಯಾಸಿ ನ ಕಳೆ ಯೆಥೀಚಾ ಅರ್ಥ ।
ನೇತ್ರೇವಿಣ ನಿಧಾನ ಸ್ವಾರ್ಥ । ಅಂಧಾಸ ಕಳೇನಾ ॥೩೧॥

ಯೇಕ ಮ್ಹಣತೀ ಮರ್ಹಾಟೇ ಕಾಯ । ಹೇ ತೋ ಭಲ್ಯಾಸಿ ಐಕೋ ನಯೆ ।
ತೀ ಮೂರ್ಖೇ ನೇಣತೀ ಸೋಯ । ಅರ್ಥಾನ್ವಯಾಚೀ ॥೩೨॥

ಈ ಕಷ್ಟ ಆಗಬಾರದೆಂಬ ಉದ್ದೇಶದಿಂದ ಆತ್ಮಜ್ಞಾನವನ್ನು ಮಾಡಿಕೊಳ್ಳಬೇಕು. ಈ ಜ್ಞಾನವನ್ನು ಹೇಗೆ ಮಾಡಿಕೊಳ್ಳಬೇಕು. ಈ ಜ್ಞಾನವನ್ನು ಹೇಗೆ ಮಾಡಿಕೊಳ್ಳಬೇಕೆಂಬುದಕ್ಕಾಗಿ ಮತ್ತು ತಿಳಿದು ತಿಳಿಸಿಹೇಳುವದಕ್ಕಾಗಿಯೇ ಅಧ್ಯಾತ್ಮ ಗ್ರಂಥಗಳು ಇರುವವು. (೨೬) ಆತ್ಮಜ್ಞಾನ ಮಾಡಿಕೊಡುವ ಅಧ್ಯಾತ್ಮ ವಿದ್ಯೆಯು ಎಲ್ಲಕ್ಕಿಂತ ಶ್ರೇಷ್ಠ ವಿರುವದು. ಆದರೆ ಈ ವಿದ್ಯೆ ತಿಳಿಯಬೇಕಾದರೆ ಸ್ಥಿರಬುದ್ಧಿಯ ಅವಶ್ಯಕತೆ ಬಹಳ ಇರುವದು. ಯಾರಲ್ಲಿ ಈ ಸ್ಥಿರಬುದ್ಧಿ ಅಚಲವಾಗಿರುವದೋ ಅಂಥವರಿಗೆ ಅದ್ವೈತದ ಅಧ್ಯಾತ್ಮದ ಗ್ರಂಥಗಳು ತಿಳಿಯುವವು;- ಜಗತ್ತಿನಲ್ಲಿರುವ ಸರ್ವವಿದ್ಯೆಗಳಲ್ಲಿ ಅಧ್ಯಾತ್ಮ ವಿದ್ಯೆಯೊಂದೇ ಸರ್ವಶ್ರೇಷ್ಠ ವಿದ್ಯೆ ಇರುವದೆಂದು ಭಗವಾನ್ ಶ್ರೀ ಕೃಷ್ಣನು ಗೀತೆಯ ಹತ್ತನೆಯ ಅಧ್ಯಾಯದಲ್ಲಿ ಹೇಳಿರುವನು. (೨೭) "ಶ್ಲೋಕ:-" ಅಧ್ಯಾತ್ಮ ವಿದ್ಯಾ ವಿದ್ಯಾನಾಂ ವಾದಃ ಪ್ರವದತಾ ಮಹಮ್ ॥೮॥ ಶ್ಲೋಕಾರ್ಥ:– ಸರ್ವವಿದ್ಯೆಗಳಲ್ಲಿ ಅಧ್ಯಾತ್ಮ ವಿದ್ಯಾ ಅಂದರೆ ನಾನೇ ಇರುವೆನು. ಪ್ರವಕ್ತಾನ ಅಂದರೆ ವಾದಮಾಡುವವನ ವಾದವೂ ನಾನೇ ಇರುವೆನು. ಅಂತೆಯೇ ಅಧ್ಯಾತ್ಮ ವಿದ್ಯೆಯಲ್ಲಿ ಪ್ರತಿಪಾದಿಸಿದ ಪರಮಾರ್ಥ ತಿಳಿಸಿಕೊಡುವ ಅದ್ವೈತ ಗ್ರಂಥವನ್ನು ಸುಲಭವಾಗಿ ತಿಳಿದುಕೊಳ್ಳುವೆವು ಎಂಬ ಮಾತು ನಾವು ತಿಳಿದುಕೊಂಡಷ್ಟು ಸುಲಭ (ಸರಳ)ವಿರುವದಿಲ್ಲ. ತನ್ನ ಸರ್ವಾಂಗಗಳನ್ನು ಕಿವಿ ಮಾಡಿಕೊಂಡು ಕೇಳುವ ಶ್ರೋತಾನಿಗೆ ಮಾತ್ರ ಅದ್ವೈತ ಗ್ರಂಥಗಳನ್ನು ತಿಳಿಯುವಶಕ್ತಿ ಅಥವಾ ಪಾತ್ರತೆ ಇರುವದು.ಇಂಥ ಗ್ರಂಥಗಳ ವಿಷಯ ಪ್ರತಿಪಾದನ ಕೇಳುವಾಗ ಯಾವನ ಮನಸ್ಸು ಅತ್ಯಂತ ಏಕಾಗ್ರವಾಗುವದೋ ಅಂಥವರಿಗೆ ಮಾತ್ರ ಪರಮಾರ್ಥದಲ್ಲಿಯ ಅದ್ವೈತ ಗ್ರಂಥಗಳು ತಿಳಿಯುವವು. (೨೮) ಯಾವ ಮನುಷ್ಯನಿಗೆ ಚಿತ್ತವನ್ನು ಸ್ಥಿರಗೊಳಿಸಿ ಏಕಾಗ್ರನಾಗಲು ಬರುವುದಿಲ್ಲವೋ ಅಂಥವನು ಅದ್ವೈತಗ್ರಂಥ ಓದುವ ಗೊಡವೆಗೆ (ಭಾನಗಡಿಯಲ್ಲಿ) ಬೀಳಬಾರದು. ಅಸ್ಥಿರ ಬುದ್ಧಿಯವನಿಂದ ಇದು ಸಾಧ್ಯವಿಲ್ಲ. ಒಂದು ವೇಳೆ ಓದುವ ಪ್ರಯತ್ನ ಮಾಡಿದರೂ ಸಹ ಅವನಿಗೆ (ಚಂಚಲನಿಗೆ) ಗ್ರಂಥಾರ್ಥವು ಸರಿಯಾಗಿ ತಿಳಿಯಲಾರದು. (೨೯) ನಿಜವಾದ ತಳಮಳವು ಪರಮಾರ್ಥದ ಬಗ್ಗೆ ಇದ್ದರೆ ಅಂಥವರು ಮಾತ್ರ ಅದ್ವೈತ ಗ್ರಂಥಗಳನ್ನು ಓದಬೇಕು. ಓದುತ್ತ ಓದುತ್ತ ಹೋದಂತೆ ಗ್ರಂಥದಲ್ಲಿಯ ಅರ್ಥದ ಶೋಧ ಮಾಡುತ್ತ ಹೋದಂತೆ ಗ್ರಂಥಗಳಲ್ಲಿಯ ಅರ್ಥ ಸರಿಯಾಗಿ ತಿಳಿಯುವದು, ಅಂದರೆ ಅರ್ಥ ಬರೋಬರಿ ತಿಳಿದ ಕೂಡಲೇ ಅವನಲ್ಲಿ ಪರಮಾರ್ಥವು ನಿಶ್ಚಿತವಾಗಿ ಅನುಭವಕ್ಕೆ ಬರುವದು. (೩೦) ಯಾವನಿಗೆ ಪರಮಾರ್ಥದ ಬಗ್ಗೆ ಪ್ರೇಮ (ಇಚ್ಛೆ, ಹವ್ಯಾಸ) ಇಲ್ಲವೋ, ಆಸ್ಥೆ ಇಲ್ಲವೋ ಅಂಥವನಿಗೆ ಪರಮಾರ್ಥ ಗ್ರಂಥಗಳ ಅರ್ಥ ಸರಿಯಾಗಿ ತಿಳಿಯಲಾರದು. ಕುರುಡ ಮನುಷ್ಯನಿಗೆ ದೃಷ್ಟಿ ಇಲ್ಲದ್ದರಿಂದ ಹಿರಿಯರು ಸಂಗ್ರಹಿಸಿಟ್ಟ ದ್ರವ್ಯವು ಹೇಗೆ ಸಿಗಲಾರದೋ ಅದೇ ಪ್ರಕಾರ ಪರಮಾರ್ಥದ ದೃಷ್ಟಿ ಇಲ್ಲದವನಿಗೆ ಇಂಥ ಗ್ರಂಥ ಗಳಲ್ಲಿಯ ಅರ್ಥ ಸರಿಯಾಗಿ ತಿಳಿಯಲಾರದು. (೩೧) ಪರಮಾರ್ಥ ದೃಷ್ಟಿ ಅಥವಾ ಅಧ್ಯಾತ್ಮ ದೃಷ್ಟಿ ಇಲ್ಲದ ಜನರು ಸಂತ ಸಾಧುಗಳ ಗ್ರಂಥದ ಬಗ್ಗೆ ಅನೇಕ ಆಕ್ಷೇಪ (ಶಂಕಾ)ಗಳನ್ನು ಎತ್ತುವರು (ತೆಗೆಯುವರು). ಇಂಥ ಆಕ್ಷೇಪಗಳಲ್ಲಿ ಭಾಷೆಯ ಬಗೆಗಿನ ಆಕ್ಷೇಪವೂ ಒಂದಾಗಿದೆ. ವಾಸ್ತವಿಕ ವಿಚಾರ ಮಾಡಿದರೆ ಭಾಷೆ ಇದು ಜ್ಞಾನದ ವಾಹಕ (ಒಯ್ಯುವ ಸಾಧನ)ಇರುವದರಿಂದ ಜ್ಞಾನವು ಪ್ರವಹಿಸುವ (ಹರಿಯುವ) ಮಟ್ಟಿಗೆ ಮಾತ್ರ ಇದು ಉಪಯೋಗ ವಾಗುವದೋ ಇಲ್ಲವೋ ಅನ್ನುವ ಮಟ್ಟಿಗೆ ನೋಡಿದರೆ ಸಾಕು. ಆದರೆ ಯಾರ ಲಕ್ಷ್ಯವು ನಿಜವಾದ ಜ್ಞಾನದ ಕಡೆಗೆ ಇಲ್ಲವೋ, ಅಂಥ ಕೆಲವೊಂದು ಪರಂಪರಾಭಿಮಾನಿ ಮತ್ತು ದುರಾಗ್ರಹಿ ಜನರು ಕೇವಲ ಭಾಷೆಯ ಪ್ರಶ್ನೆಯ ಮೇಲೆಯೇ ವಾದ ವಿವಾದಕ್ಕಿಳಿದು ಗೊಂದಲ, ರಂಬಾಟ ಮಾಡುವರು. ಇಂಥವರನ್ನು ಉದ್ದೇಶಿಸಿ ಶ್ರೀಸಮರ್ಥರು ಈ ಮುಂದಿನ ಹತ್ತುನುಡಿಗಳನ್ನು ಬರೆದಿರುವರು:– ಕೆಲವು ಜನರು ಮರಾಠಿಯಲ್ಲಿ ಏನೂ ಅರ್ಥವಿಲ್ಲವಾದ್ದರಿಂದ ತಿಳಿದವರು ದೊಡ್ಡವರು ಉತ್ತಮ ಜನರು ಮರಾಠಿಯಲ್ಲಿರುವ ಗ್ರಂಥಗಳನ್ನು ಕೇಳಬಾರದೆಂದು ಅನ್ನುವರು. (ಓದ ಬಾರದು). ಹೀಗೆ ಅನ್ನುವ ಜನರು ಮೂರ್ಖರಿರುವರು. ಶಬ್ದಾ ಶಬ್ದಗಳಲ್ಲಿಯ ಪರಸ್ಪರ ಸಂಬಂಧವನ್ನು ಹೊಂದಿಸಿ ಕೊಂಡು ನಿಜವಾದ ಖರೇ ಅರ್ಥವನ್ನು ತಿಳಿದುಕೊಳ್ಳುವ ವಿದ್ಯೆ,ಜ್ಞಾನ್ಯ ಇವರಿಗೆ ಎಷ್ಟು ಬರುವದಿಲ್ಲ.(ಇರುವದಿಲ್ಲ)(೩೨)

ಲೋಹಾಚೀ ಮಾಂದುಸ ಕೇಲೀ । ನಾನಾ ರತ್ನೇ ಸಾಠವಿಲೀ ।
ತೇ ಅಭಾಗ್ಯಾನೇ ತ್ಯಾಗಿಲೀ । ಲೋಖಂಡ ಮ್ಹಣೌನೀ ॥೩೩॥

ತೈಸೀ ಭಾಷಾ ಪ್ರಾಕೃತ । ಅರ್ಥ ವೇದಾಂತ ಆಣಿ ಸಿದ್ಧಾಂತ ।
ನೇಣೋನಿ ತ್ಯಾಗೀ ಭ್ರಾಂತ । ಮಂದಬುದ್ಧಿಸ್ತವ ॥೩೪॥

ಆಹಾಚ ಸಾಪಡತಾ ಧನ । ತ್ಯಾಗ ಕರಣೇ ಮೂರ್ಖಪಣ ।
ದ್ರವ್ಯ ಘ್ಯಾವೇ ಸಾಠವಣ । ಪಾಹೋ ಚಿ ನಯೆ ॥೩೫॥

ಪರಿಸ ದೇಖಿಲಾ ಆಂಗಣೀ । ಮಾರ್ಗೀ ಪಡಿಲಾ ಚಿಂತಾಮಣೀ ।
ಆವ್ಹಾವೇಲ ಮಹಾಗುಣೀ । ಕೂಪಾಮಧ್ಯೇ ॥೩೬॥

ತೈಸೇ ಪ್ರಾಕೃತೀ ಅದ್ವೈತ । ಸುಗಮ ಆಣೀ ಸಪ್ರಚಿತ ।
ಅಧ್ಯಾತ್ಮ ಲಾಭೆ ಅಕಸ್ಮಾತ್ । ತರೀ ಅವಶ್ಯ ಘ್ಯಾವೇ ॥೩೭॥

ನ ಕರಿತಾ ವಿತ್ಪತ್ತೀಚಾ ಶ್ರಮ । ಸಕಳ ಶಾಸ್ತ್ರಾರ್ಥ ಹೋಯೆ ಸುಗಮ ।
ಸತ್ಸಮಾಗಮಾಚೇ ಮರ್ಮ । ತೇ ಹೇ ಐಸೇ ಅಸೆ ॥೩೮॥

ಜೇ ವ್ಯುತ್ಪತ್ತೀನೇ ನ ಕಳೆ । ತೇ ಸತ್ಸಮಾಗಮೋ ಕಳೆ ।
ಸಕಳ ಶಾಸ್ತ್ರಾರ್ಥ ಆಕಳೆ । ಸ್ವಾನುಭವಾಸೀ ॥೩೯॥

ಮ್ಹಣೌನಿ ಕಾರಣ ಸತ್ಸಮಾಗಮ । ತೇಥೇ ನಲಗೆ ವಿತ್ಪತ್ತೀಶ್ರಮ ।
ಜನ್ಮ ಸಾರ್ಥಕಾಚೇ ಮರ್ಮ । ವೇಗಳೇಚಿ ಆಹೇ ॥೪೦॥

॥ಶ್ಲೋಕ॥ ಭಾಷಾಭೇದಾಶ್ಚ ವರ್ತಂತೆ । ಹ್ಯರ್ಥ ಏಕೋ ನ ಸಂಶಯಃ ॥
ಪಾತ್ರದ್ವಯೆ ಯಥಾ ಖಾದ್ಯಂ । ಸ್ವಾದಭೇದೋ ನ ವಿದ್ಯತೆ ॥

ಭಾಷಾ ಪಾಲಟೇ ಕಾಹೀ । ಅರ್ಥ ವಾಯಾ ಜಾತ ನಾಹೀ ।
ಕಾರ್ಯಸಿದ್ಧಿ ತೇ ಸರ್ವ ಹೀ। ಅರ್ಥಾಚ ಪಾಸೀ ॥೪೧॥

ಒಂದು ಕಬ್ಬಿಣದ ಪೆಟ್ಟಿಗೆ ಮಾಡಿ ಅನೇಕ ರತ್ನಗಳನ್ನು ಅದರಲ್ಲಿ ಹಾಕಿ ಒಂದು ಕಡೆಗೆ ಇಟ್ಟುಬಿಟ್ಟಿತ್ತು. ಆದರೆ ಒಬ್ಬ ದುರ್ದೈವಿ (ನಶಿಬಹೀನ) ಮನುಷ್ಯನಿಗೆ ಅದು ಸಿಕ್ಕಿತು. ಅವನು ಇದು ಕೇವಲ ಕಬ್ಬಿಣದ ಪೆಟ್ಟಿಗೆ ಯೆಂದು ಅದನ್ನು ತೆಗೆಯದೆ ಒಗೆದು ಹೋದನು. (೩೩) ಇದರಂತೆ ಮರಾಠಿ ಭಾಷೆಯ ಬಗ್ಗೆ ಪಂಡಿತ ಜನರು ವರ್ತಿಸುವರು. ಮರಾಠಿಯಲ್ಲಿ ಅಮೌಲ್ಯ ಅರ್ಥ ತುಂಬಿದೆ. ವೇದಾಂತ ಮತ್ತು ಸಿದ್ಧಾಂತ ವಿಷಯಗಳ ಸಾಹಿತ್ಯ ಭರ ಪೂರ ಇರುವದು. ಇದು ತಿಳಿಯದವರು ವಿಚಾರಶೂನ್ಯರು. ಮೂರ್ಖ ಮತ್ತು ಖೊಟ್ಟಿ ಕಲ್ಪನೆ ಇರುವವರು ಮಾತ್ರ ಮರಾಠಿಯ ತ್ಯಾಗ ಮಾಡುವರು. (೩೪) ಶ್ರಮ (ಆಯಾಸ) ಪಡದೆ ಸಹಜವಾಗಿ ದ್ರವ್ಯ ದೊರೆತರೆ ಅದರ ತ್ಯಾಗ ಮಾಡುವದು ಮೂರ್ಖತನವೆನಿಸುವದು. ಆ ದ್ರವ್ಯ ಯಾವುದರಲ್ಲಿ ಸಂಗ್ರಹಿಸಿರುವರು ಎಂಬುದನ್ನು ನೋಡದೆ ಅದನ್ನು ತೆಗೆದುಕೊಂಡು ಬಿಡಬೇಕು.(೩೫)ನಿಮ್ಮ ತಿಳುವಳಿಕೆಗಾಗಿ ಒಂದುಉದಾಹರಣೆ ಕೊಡುವರು.ಪರಿಸ[ಪರುಪ]ವು ನಿಮ್ಮ ಅಂಗಳದಲ್ಲಿ ಬಿದ್ದಿರುವದು. ಚಿಂತಾಮಣಿ ರತ್ನವು ನಿಮ್ಮ ದಾರಿಯ ರಸ್ತೆಯಲ್ಲಿ ಬಿದ್ದಿರುವದು. ಅಥವಾ ಬಲ ಮುರಿಗೊಂಡು ಬೆಳೆಯುವ ಒಂದು ಅಪರೂಪದ ಬಳ್ಳಿ (ದಕ್ಷಿಣಾವರ್ತಿ ಬಳ್ಳಿ) ನಿಮ್ಮ ಬಾವಿಯಲ್ಲಿ (ಬಾವಿಯ ಹತ್ತಿರ) ಹುಟ್ಟಿದೆ. ಪರಿಸ, ಚಿಂತಾಮಣಿ ಮತ್ತು ಬಲಮುರಿ ಬಳ್ಳಿ ಇವು ಅಯೋಗ್ಯ ಸ್ಥಳದಲ್ಲಿ ಕಂಡವೆಂದು(ಇರು ವದೆಂದು) ಇವುಗಳನ್ನು ತಿರಸ್ಕರಿಸಬಾರದು. (೩೬) ಇದರಂತೆಯೇ ಮರಾಠಿಯಲ್ಲಿ ಸರಳವಾದ ಮತ್ತು ಅನುಭವ ಸಿದ್ಧ ಅದ್ವೈತ ಆತ್ಮಜ್ಞಾನವು ಅನಾಯಾಸವಾಗಿ ಸಿಗುತ್ತಿದ್ದರೆ ಮರಾಠಿ ಭಾಷೆಯಲ್ಲಿಯದನ್ನು ಅವಶ್ಯವಾಗಿ ತೆಗೆದು ಕೊಳ್ಳಬೇಕು. (ಇದು ತೀರ ಸಾಮಾನ್ಯರಿಗೂ ಸಹ ಓದಲು, ಓದಿ ತಿಳಿಯಲು ಮತ್ತು ಆಚರಿಸಲೂ ಸಹ ಉಪ ಯುಕ್ತವೆನಿಸುವದು.) [೩೭] **ವೇದಾಂತ ಅಥವಾ ಅಧ್ಯಾತ್ಮ ಜ್ಞಾನವು ಸಂಸ್ಕೃತದಲ್ಲಿ ಅಥವಾ ಮರಾಠಿ ಯಲ್ಲಿಯೇ ಇದ್ದರೂ ಸಹ ಇದರ ಯಥಾರ್ಥ ಆಕಲನ (ಅರ್ಥವಾಗುವಿಕೆ, ತಿಳಿಯುವಿಕೆ) ವಾಗಬೇಕಾ ದರೆ ಸತ್ಸಮಾಗಮ (ಸಂತ ಸಾಧುಗಳ ಸಹವಾಸವು) ಅತಿ ಅವಶ್ಯವೇ ಇರುತ್ತದೆ.** ಅಸಲ (ಅತಿಮುಖ್ಯ) ಮಾತು ಹೇಳುವದಾದರೆ ವಿದ್ಯೆಯನ್ನು ಪಡೆಯುವ ಶ್ರಮಮಾಡದೆ ಕೇವಲ ಸತ್ಸಮಾಗಮವನ್ನು ಮನಃ ಪೂರ್ವಕ ಮಾಡಿದರೆ ಎಲ್ಲ ಶಾಸ್ತ್ರಗಳು ಸಹಜ ಸುಲಭವಾಗಿ ತಿಳಿಯುವವು. ಇದೇ ಸತ್ಸಮಾಗಮದ ರಹಸ್ಯವಿರುವದು. [೩೮] ಕೇವಲ ವಿದ್ವತ್ತಿನಿಂದ ತಿಳಿಯದಂತಹದೂ ಸಹ ಸತ್ಸಮಾಗಮದಿಂದ ತಿಳಿಯುವದು. ಇಷ್ಟೇ ಅಲ್ಲ ಎಲ್ಲ ಶಾಸ್ತ್ರಾರ್ಥ ಗಳು ನಿಮ್ಮ ಅನುಭವದ ಕಕ್ಷೆಯಲ್ಲಿ ಬರುವವು. [೩೯] ಪರಮಾರ್ಥದಲ್ಲಿಯ ನಿಜವಾದ ಲಾಭ ನಮ್ಮ ಪದರಿನಲ್ಲಿ ಬೀಳಬೇಕಾದರೆ ಸತ್ಸಮಾಗಮದ ಉಪಯೋಗ ಬಹಳಷ್ಟಿರುವದು. ಇಲ್ಲಿ ವಿದ್ಯೆ ದೊರಕಿಸಿಕೊಳ್ಳುವ ಸಲುವಾಗಿ ಪಡ ಬೇಕಾದ ಶ್ರಮದ ಅಗತ್ಯವಿಲ್ಲ. ಯಾಕಂದರೆ ಯಾವುದರಿಂದ ಜನ್ಮದ ಸಾರ್ಥಕವಾಗುವದೋ, ಆ ರಹಸ್ಯವು ಒಂದು ಬೇರೆ ಪ್ರಕಾರದ್ದೇ ಇರುವದು. (೪೦) **ಶ್ಲೋಕ**:- ಭಾಷಾ ಭೇದಾಶ್ಚ ವರ್ತಂತೆ। ಹ್ಯರ್ಥ ಏಕೋನ ಸಂಶಯಃ । ಪಾತ್ರದ್ವಯೇ ಯಥಾ ಖಾದ್ಯಂ । ಸ್ವಾದ ಭೇದೋ ನವಿದ್ಯತೇ ॥೧॥ **ಶ್ಲೋಕಾರ್ಥ**:- ಭಾಷೆಯಲ್ಲಿ ಭೇದವಿರು ವದು. ಆದರೆ ಆ ಭೇದದಲ್ಲಿಯ ಅರ್ಥ ಮಾತ್ರ ಒಂದೇ ಇರುವದು. ಒಂದೇ ಬಗೆಯ ತಿನ್ನುವ ಪದಾರ್ಥವನ್ನು ಎರಡು ಪಾತ್ರೆಗಳಲ್ಲಿ ಇಟ್ಟಿದ್ದಾದರೆ ಅದರ (ಪದಾರ್ಥದ) ರುಚಿಯಲ್ಲಿ ಯಾವ ಫರಕೂ (ಹೆಚ್ಚು ಕಡಿಮೆ) ಆಗುವದಿಲ್ಲ. ಭಾಷೆ ಭಿನ್ನ ಭಿನ್ನವಿದ್ದರೂ ಸಹ ಅವುಗಳಲ್ಲಿಯ ಅರ್ಥ ಒಂದೇ ಇರುವದು, ಭಾಷೆ ಬದಲಿ (ಬೇರೆ) ಯಾದರೆ ಅರ್ಥಾತ್ ಭಾಷೆ ಬದಲಿ ಇರುವದೆಂದ ಮಾತ್ರಕ್ಕೆ ಅರ್ಥದಲ್ಲಿ ಏನೂ ಬದಲಾಗುವದಿಲ್ಲ. ಒಟ್ಟಿನಲ್ಲಿ ಅರ್ಥದಲ್ಲಿ ಕಡಿಮೆ ಮತ್ತು ಹೆಚ್ಚು ಆಗುವದಿಲ್ಲ. ಮತ್ತು ಭಾಷೆ ಬದಲಾದರೆ ಅರ್ಥಕ್ಕೆ ಎಷ್ಟೂ ಹಾನಿಯಾಗುವದಿಲ್ಲ. ನಮ್ಮ ಕಾರ್ಯದಲ್ಲಿ ಯಶಬರಬೇಕಾದರೆ ಅರ್ಥವೇ ಉಪಯೋಗ ಬೀಳುತ್ತದೆ. (೪೧)

ತಥಾಪಿ ಪ್ರಾಕೃತಾ ಕರಿತಾ । ಸಂಸ್ಕೃತಾಚೀ ಸಾರ್ಥಕತಾ ।
ಯೆರ್ಹವೀ ತ್ಯಾ ಗುಪ್ತಾರ್ಥಾ। ಕೋಣ ಜಾಣೇ ॥೪೨॥

ಆತಾ ಅಸೋ ಹೇ ಬೋಲಣೇ । ಭಾಷಾ ತ್ಯಾಗೂನಿ ಅರ್ಥ ಘೇಣೇ ।
ಉತ್ತಮ ಘೇಊನ ತ್ಯಾಗ ಕರಣೇ । ಸಾಲೀಟರಫಲಾಚಾ ॥೪೩॥

ಅರ್ಥ ಸಾರ ಭಾಷಾ ಪೋಚಟ । ಅಭಿಮಾನೇ ಕರಾವೀ ಖಟಪಟ ।
ನಾನಾ ಅಹಂತೇನೇ ವಾಟ । ರುಧಿಲೀ ಮೋಕ್ಷಾಚೀ ॥೪೪॥

ಶೋಧ ಘೇತಾ ಲಕ್ಷ್ಯಾಂಶಾಚಾ । ತೇಥೆ ಆಧೀ ವಾಚ್ಯಾಂಶ ಕೈಚಾ ।
ಅಗಾಧ ಮಹಿಮಾ ಭಗವಂತಾಚಾ। ಕಳಲಾ ಪಾಹಿಜೇ ॥೪೫॥

ಮುಕೆ ಪಣಾಚೇ ಬೋಲಣೇ । ಹೇ ಜಯಾಚೇ ತೋಚಿ ಜಾಣೇ।
ಸ್ವಾನುಭವಾಚಿಯೆ ಖುಣೇ। ಸ್ವಾನುಭವೀ ಪಾಹಿಜೇ ॥೪೬॥

ಅರ್ಥ ಜಾಣೆ ಅಧ್ಯಾತ್ಮಾಚಾ । ಏಸಾ ಶ್ರೋತಾ ಮಿಳೇಲ ಕೈಚಾ ।
ಜಯಾಸೀ ಬೋಲತಾ ವಾಚೇಚಾ । ಹವ್ಯಾಸ ಚಿ ಪುರೆ ॥೪೭॥

ಪರೀಕ್ಷವಂತಾ ಪುಢೇ ರತ್ನ । ಠೇವಿತಾ ಹೋಯೆ ಸಮಾಧಾನ ।
ತೈಸೇ ಜ್ಞಾನಿಯಾ ಪುಢೇ ಜ್ಞಾನ । ಬೋಲಾವೇ ವಾಟೆ ॥೪೮॥

ಮಾಯಾಜಾಳೇ ದುಶ್ಚೀತ ಹೋಯೆ । ತೇ ನಿರೂಪಣೇ ಕಾಮಾ ನ ಯೇ ।
ಸಂಸಾರಿಕಾ ಕಳೆ ಕಾಯೆ । ಅರ್ಥ ಯೆಥೀಚಾ ॥೪೯॥

ಖರೇ ಹೇಳುವದಾದರೆ ಮರಾಠಿ ಭಾಷೆಯಲ್ಲಿ ಅಂದರೆ ಪ್ರಾಕೃತ ಭಾಷೆಯಲ್ಲಿ (ಬಹುಜನರಾಡುವ ಭಾಷೆಯಲ್ಲಿ ಈ ಗ್ರಂಥವಿರುವದು) ಬರೆದದ್ದರಿಂದ ಸಂಸ್ಕೃತದಲ್ಲಿ ಎಷ್ಟೊಂದು ಅರ್ಥ ತುಂಬಿದೆಯೆಂಬುದು ಎಲ್ಲರ ಲಕ್ಷ್ಯಕ್ಕೆ ಬರುವದು. [ಪ್ರಾಕೃತದ್ವಾರದಿಂದ ಸಂಸ್ಕೃತದ ಮಹತ್ವ ತಿಳಿಯುವದು]. ಮರಾಠಿಯಲ್ಲಿ ಗ್ರಂಥ ರಚನೆ ಆಗಿರದಿದ್ದರೆ ಸಂಸ್ಕೃತ ಭಾಷೆಯಲ್ಲಿ ಗುಪ್ತವಾಗಿ ವಾಸಮಾಡಿರುವ ಕಠಿಣವಾದ ಅರ್ಥ ಯಾರಿಗೂ [ಅದರಲ್ಲಿ ಹೆಚ್ಚಾಗಿ ಜನ ಸಾಮಾನ್ಯರಿಗೆ] ಗೊತ್ತಾಗುತ್ತಿರಲಿಲ್ಲ. [೪೨] ಈಗ ಇಷ್ಟೇ ಮಾತು ಸಾಕು. ಒಟ್ಟಿನಲ್ಲಿಯ ತಾತ್ಪರ್ಯವಿಷ್ಟೇ ಯಾವ ಪ್ರಕಾರವಾಗಿ ಹಣ್ಣುಗಳನ್ನು ತಿನ್ನುವಾಗ ಅದರಲ್ಲಿಯ ಉತ್ತಮ ಭಾಗವನ್ನಷ್ಟೇ ನಾವು ತಿನ್ನುವೆವು. ಮತ್ತು ಸಿಪ್ಪೆ ಹಾಗೂ ಬೀಜಗಳನ್ನು ಚಲ್ಲಿ ಬಿಡುತ್ತೇವೆ. ಇದರಂತೆ ವೇದಾಂತ ಗ್ರಂಥಾದಿಗಳ ಭಾಷೆ (ಇವೆಲ್ಲ ಸಂಸ್ಕೃತದಲ್ಲಿಯೇ ಇರುವವು)ಯನ್ನು ಬಾಜೂಕ್ಕೆ ಸರಿಸಿ ಗ್ರಂಥದಲ್ಲಿಯ ಅರ್ಥವನ್ನಷ್ಟೇ ತಿಳಿದುಕೊಳ್ಳಬೇಕು. (೪೩) ಅಧ್ಯಾತ್ಮ ಇದು ಅನುಭವ ಪಡೆಯುವ ವಿಷಯವಿರುವದು. ಯಾರಿಗೆ ಇದರ ತಳಮಳ ಇರುವದೋ ಅವರಿಗೆ ಮಾತ್ರ ಅರ್ಥವು ಲಕ್ಷಕ್ಕೆ ಬರುವದು. ಪರಮಾರ್ಥವು ಯಥಾರ್ಥವಾಗಿ (ಸರಿಯಾಗಿ) ತಿಳಿಯಬೇಕಾದರೆ ಮೊದಲು ಬುದ್ಧಿ ಶುದ್ಧವಾಗಿರಲಿಕ್ಕೇಬೇಕು. ಪ್ರಪಂಚದಲ್ಲಿ ಮನಬಂದಂತೆ ಉಲ್ಟಾ ಪಲ್ಟಾ ಧಂದೆ ಮಾಡಿ (ಭಾನಗಡಿ) ಪ್ರಪಂಚದಲ್ಲಿಯ ಬಿಡುವಿನ ವೇಳೆಯಲ್ಲಿ ಅಧ್ಯಾತ್ಮದ ರುಚಿ ಪಡೆಯಬೇಕೆನ್ನುವವರಿಗೆ ಪರಮಾರ್ಥವು ಸರಿಯಾಗಿ ತಿಳಿಯುವದಿಲ್ಲ. ಮತ್ತು ಅನುಭವಕ್ಕೂ ಬರುವದಿಲ್ಲ:- ಅರ್ಥವು (ತಾತ್ಪರ್ಯ) ಸಾರವಿದ್ದು ಭಾಷೆ ಅಸಾರವಿರುವದು. ಕೇವಲ ಅಭಿಮಾನದಿಂದ ಮನುಷ್ಯ ವಾದವನ್ನು ಬೆಳೆಸುವನು. ಅಹಂಕಾರದ ಇಂಥ ಅನೇಕ ಪ್ರಕಾರಗಳು ಮೋಕ್ಷದ ಹಾದಿಯನ್ನು ತಡೆದು ಹಿಡಿಯುವವು. (೪೪) ಶಬ್ದವು ವಾಚ್ಯಾಂಶ (ಮಾತಾಡುವಿಕೆ)ವಿದ್ದರೆ ಅರ್ಥವು ಲಕ್ಷ್ಯಾಂಶ ವಾಗಿದೆ. ಆರಂಭದಲ್ಲಿ ಶಬ್ದವೇ ಇರುವದು ನಿಜವಾದರೂ ಅರ್ಥದ ಶೋಧ ತೆಗೆಯಹತ್ತಿದ (ಮಾಡಹತ್ತಿದ) ಕೂಡಲೇ ಶಬ್ದವು ಹಿಂದೆ ಬೀಳುತ್ತದೆ. ಇದರ ಶಿವಾಯ ಭಗವತ್ ಸ್ವರೂಪವು ಇವೆರಡರ ಆಚೆಗೆ ಇರುತ್ತದೆ. ಈ ಸ್ವರೂಪವು ಬುದ್ಧಿಯಿಂದ ಆಕಲನ (ಗ್ರಹಣ ಮಾಡುವ) ಮಾಡುವದರ ಆಚೆಗೆ ಇರುವದೆಂಬುದನ್ನು ಚನ್ನಾಗಿ ತಿಳಿದುಕೊಳ್ಳಬೇಕು. (೪೫) ಮೂಕ ಮನುಷ್ಯರದು ಒಂದು ಸಾಂಕೇತಿಕ ಭಾಷೆ ಇರುವದು. ಇದು ಎಲ್ಲರಿಗೂ ತಿಳಿಯುವದಿಲ್ಲ. ಕೇವಲ ಅವನ ನಿಕಟವರ್ತಿ ಜನರಿಗೆ ಮಾತ್ರ ತಿಳಿಯುತ್ತದೆ. ಇದರಂತೆಯೇ ಸ್ವಾನುಭವಿಯಾದ ಸಿದ್ಧ ಪುರುಷನ ಮಾತಿನ ಅರ್ಥವನ್ನು ಯಾವನು ಸ್ವಾನುಭವಿ ಸಿದ್ಧ ಇರುವನೋ ಅವನಿಗೆ ಮಾತ್ರ ತಿಳಿಯುತ್ತದೆ.(೪೬) ಶ್ರೀ ಸಮರ್ಥರು ತಮ್ಮ ಮನದಲ್ಲಿಯ ಗುಪ್ತವಿರುವ ರಹಸ್ಯವನ್ನು ಅನುಭವಿಸಿದ ಮಾತನ್ನು ಹೇಳುತ್ತಾರೆ. ಹೇಳಿದ ಅಧ್ಯಾತ್ಮದ ಅರ್ಥ ಸರಿಯಾಗಿ ಯಾರಿಗೆ ತಿಳಿಯುವದೋ ಅಂಥ ಶ್ರೋತಾ (ಕೇಳುವವ)ಸಿಗುವದು ಕಠಿಣವು. ಒಂದು ವೇಳೆ ಭೆಟ್ಟಿಯಾದರೆ ಆ ಪ್ರಸಂಗ ನಿಜವಾಗಿಯೂ ಒಳ್ಳೆ ಗಮ್ಮತ್ತಿನ (ಮೋಜಿನ, ಮಜಾದ, ಸಂತೋಷದ) ದ್ದಾಗಿರುತ್ತದೆ. ಯಾಕಂದರೆ ತಿಳಿದುಕೊಳ್ಳುವಂಥ ಶ್ರೋತಾನ ಸಂಗಡ ಮಾತಾಡಲಿಕ್ಕೆ ಹುರುಪು ಬರುತ್ತದೆ. ಮತ್ತು ಮಾತಾಡುವ (ಅಧ್ಯಾತ್ಮ ವಿಷಯ ಹೇಳುವ ಗೂಢಾರ್ಥ ತಿಳಿಸಿಕೊಡುವ) ಹುರುಪು ಪೂರ್ಣವಾಗುತ್ತದೆ. (೪೭) ರತ್ನ ಪರೀಕ್ಷಕನ ಮುಂದೆ ನಮ್ಮ ರತ್ನವಿಟ್ಟು ಪರೀಕ್ಷಿಸಿಕೊಂಡರೆ ಮನಸ್ಸಿಗೆ ಸಮಾಧಾನವೆನಿಸುವದು. ಇದೇ ಮಾತು ಆತ್ಮಜ್ಞಾನಿ ಪುರುಷನ ಮುಂದೆ ಅಧ್ಯಾತ್ಮ ಜ್ಞಾನದ ಬಗ್ಗೆ ಮಾತಾಡಬೇಕೆಂದು ಅನಿಸುವದು ಸ್ವಾಭಾವಿಕವು. (೪೮) ಮಾಯೆಯ ಜಾಲದಲ್ಲಿ ತೊಡಕಿಕೊಂಡಿದ್ದರಿಂದ ಯಾರ ಮನಸ್ಸು ಅಸ್ಥಿರಗೊಂಡಿರುವದೋ ಅಂಥವರಿಗೆ ಅಧ್ಯಾತ್ಮ ವಿವೇಚನೆ (ಸಾರಾಸಾರದ ಅರ್ಥ) ಸರಿಯಾಗಿ ತಿಳಿಯಬಾರದು. ಪ್ರಾಪಂಚಿಕ ಜನರಿಗೆ ಅದ್ವೈತ ಗ್ರಂಥದಲ್ಲಿಯ ಅರ್ಥ ತಿಳಿಯುವದು-ಬಹಳ ಕಠಿಣವಿರುವದು. (೪೯)

॥ಶ್ಲೋಕ॥ ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ ॥
ಬಹುಶಾಖಾ ಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಮ್ ॥ಛ॥

ವೆವಸಾಈ ಜೋ ಮಳಿಣ । ತ್ಯಾಸೀ ನ ಕಳೆ ನಿರೂಪಣ ।
ಯೇಥೇ ಪಾಹಿಜೆ ಸಾವಧ ಪಣ । ಅತಿಶಯೇಸೀ ॥೫೦॥

ನಾನಾ ರತ್ನೇ ನಾನಾ ನಾಣೇ । ದುಶ್ಚೀತಪಣೇ ಘೇತಾ ಹಾನೀ ।
ಪರೀಕ್ಷಾ ನೇಣತಾ ಪ್ರಾಣೀ । ಠಕಲಾ ತೇಥೇ ॥೫೧॥

ತೈಸೇ ನಿರೂಪಣೀ ಜಾಣಾ । ಆಹಾಚ ಪಾಹಾತಾ ಕಳೇನಾ ।
ಮುರ್ಡ್ಪಾಟೀಚಿ ಉಮಜೇನಾ । ಕಾಹೀ ಕೇಲ್ಯಾ ॥೫೨॥

ಜೇಥೇ ನಿರೂಪಣಾಚೆ ಬೋಲ । ಆಣೀ ಅನುಭವಾಚೀ ವೋಲ ।
ತೇ ಸಂಸ್ಕೃತಾ ಪರೀಸ ಖೋಲ । ಅಧ್ಯಾತ್ಮಶ್ರವಣ ॥೫೩॥

ಮಾಯಾಬ್ರಹ್ಮ ವೊಳಖಾವೇ । ತಯಾಸೀ ಅಧ್ಯಾತ್ಮ ಮ್ಹಣಾವೇ ।
ತರೀ ತೇ ಮಾಯೇಚೇ ಜಾಣಾವೇ । ಸ್ವರೂಪ ಆಧೀ ॥೫೪॥

ಮಾಯಾ ಸಗುಣ ಸಾಕಾರ । ಮಾಯಾ ಸರ್ವಸ್ವ ವಿಕಾರ ।
ಮಾಯಾ ಜಾಣಿಜೆ ವಿಸ್ತಾರ । ಪಂಚಭೂತಾ ಚಾ ॥೫೫॥

ಮಾಯಾ ದೃಶ್ಯ ದೃಷ್ಟೀಸ ದಿಸೆ । ಮಾಯಾಭಾಸ ಮನಾಸಿ ಭಾಸೆ ।
ಮಾಯಾ ಕ್ಷಣಭಂಗುರ ನಾಸೆ । ವಿವೇಕ ಪಾಹಾತಾ ॥೫೬॥

ಮಾಯಾ ಅನೇಕ ವಿಶ್ವರೂಪ । ಮಾಯಾ ವಿಷ್ಣೂಚೇ ಸ್ವರೂಪ ।
ಮಾಯೆಚೀ ಸೀಮಾ ಅನುರೂಪ । ಬೋಲಿಜೆ ತಿತುಕೀ ॥೫೭॥

ಶ್ಲೋಕ:- ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ । ಬಹು ಶಾಖಾ ಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಮ್ [ಗೀ. ಅ. ೨-೪೧] ಶ್ಲೋಕಾರ್ಥ:- ಅರ್ಜುನಾ, ಸ್ವರೂಪನಿಶ್ಚಯ ಮಾಡುವ ಬುದ್ಧಿ ಒಂದೇ ಇರುವದು. ಆದರೆ ಯಾರಿಗೆ ಸ್ವರೂಪ ನಿಶ್ಚಯ ಮಾಡಲಿಕ್ಕೆ ಬರುವದಿಲ್ಲ-ಆಗುವದಿಲ್ಲವೋ ಅಂಥ ಜನರ ಬುದ್ಧಿಗೆ ಅನಂತ (ಅಪಾರ) ಟಿಸಿಲುಗಳು (ಶಾಖೆಗಳು) ಇರುವವು:- ವ್ಯವಸಾಯ ಅದರಲ್ಲೂ ಮಲಿನ ವ್ಯವಸಾಯದಿಂದ ಯಾರ ಮನಸ್ಸು ಹಿಡಿತದಲ್ಲಿ ಇರುವುದಿಲ್ಲವೋ ಮತ್ತು ಯಾರಲ್ಲಿ ಚಂಚಲತನ ಅತಿ ಇರುವದೋ ಯಾರಿಗೆ ದೃಢ ನಿಶ್ಚಯ ಮಾಡಲಿಕ್ಕೆ ಆಗುವದಿಲ್ಲವೋ, ಮಾಡಿದರೂ ಅದರಂತೆ ನಡೆಯುವದಿಲ್ಲವೋ ಯಾರು ಅಸ್ಥಿರ ಚಿತ್ತರಿರುವರೋ ಇಂಥವರೆಲ್ಲರಿಗೆ ಆತ್ಮಸ್ವರೂಪದ ವಿವೇಚನೆ ತಿಳಿಯುವದಿಲ್ಲ. ಇದನ್ನು ತಿಳಿಯಬೇಕಾದರೆ ತಿಳಿಯುವ ಹಂಬಲವಿರಬೇಕು. ಜೊತೆಗೆ ಅತಿಶಯ ಸಾವಧಾನತೆಯೂ ಇರಬೇಕಾಗುವದು. ಯಾಕಂದರೆ ಚಿತ್ತವನ್ನು ಒಂದೇ ವಿಷಯದ ಕಡೆಗೆ ತೊಡಗಿಸುವ ಶಕ್ತಿ ಇರಬೇಕು. ದೃಢ ಸಂಕಲ್ಪದೊಂದಿಗೆ ಪ್ರಯತ್ನ ಮಾಡಬೇಕು. (೫೦) ಒಂದು ಮಾತು ನಿಮಗೆ ಹೇಳುವೆನು ಉದಾ:- ಒಬ್ಬ ಮನುಷ್ಯನ ಎದುರಿಗೆ ಅನೇಕ ಪ್ರಕಾರದ ರತ್ನ ಅಥವಾ ನಾಣ್ಯಗಳು ಬಿದ್ದಿರುವವು. ವಿಚಾರ ಮಾಡದೇ ಅಲಕ್ಷ್ಯತನದಿಂದ ದುಡುಕಿ ಅವುಗಳಲ್ಲಿಯ ಕೆಲವನ್ನು ತೆಗೆದುಕೊಂಡದ್ದಾದರೆ ಲುಕ್ಸಾನಕ್ಕೆಪಾತ್ರರಾಗಬಹುದು. ಇವುಗಳ ಪರೀಕ್ಷೆ ಮಾಡಲಿಕ್ಕೆ ಬರದಿದ್ದರೆ ಮನುಷ್ಯ ಫಸಗಿಗೆ-ಮೋಸಕ್ಕೆ ಬೀಳುವನು. (೫೧) ಇದು ಅಧ್ಯಾತ್ಮ ನಿರೂಪಣದ ವಿಷಯದಲ್ಲಿಯೂ ಸಹ ಇದೇ ನಿಯಮ ಅನ್ವಯವಾಗುವದು. ಅಧ್ಯಾತ್ಮ ಗ್ರಂಥಗಳ (ಅದರಲ್ಲೂ ಅದ್ವೈತ ಗ್ರಂಥಗಳ) ಸಾಮಾನ್ಯ (ಮೇಲಮೇಲಿನ) ಅರ್ಥ ನೋಡಿದರೆ ಗ್ರಂಥದಲ್ಲಿ ನಿಜವಾದ ರಹಸ್ಯವಾದ ಅರ್ಥ ತಿಳಿಯಲಿಕ್ಕೆ ಶಕ್ಯವಾಗುವದಿಲ್ಲ. ಗ್ರಂಥ ಮರಾಠಿ ಭಾಷೆಯಲ್ಲಿ ಇದ್ದರೂ ಸಹ ಚಂಚಲ ಮತಿಗಳು ಪೂರ್ಣ ವಿಶ್ವಾಸವಿಲ್ಲದವರು, ಯೋಗ್ಯ ವಿಚಾರ ಮಾಡದವರಿಗೆ ಇದರ ಅರ್ಥ ಏನು ಮಾಡಿದರೂ ಹೊಳೆಯುವದಿಲ್ಲ, ತಿಳಿಯುವದಿಲ್ಲ. (೫೨) ಅಧ್ಯಾತ್ಮ ವಿಷಯ ವಿವೇಚನೆಯಲ್ಲಿ ಸ್ವಾನುಭವದ ಸಹೃದಯತೆ ಅನುಭವದ ಝುರಿ ಯಾರಲ್ಲಿ ಇರುವದೋ ಅಂಥವರ ಅಧ್ಯಾತ್ಮ ಶ್ರವಣವು ಸಂಸ್ಕೃತ ಭಾಷೆಯಲ್ಲಿಯ ವಿವೇಚನೆಯಷ್ಟೇ ಆಳವಾಗಿರುತ್ತದೆ. ಅರ್ಥಪೂರ್ಣವಾಗಿರುತ್ತದೆ ಇದರಲ್ಲಿ ಸಂಶಯವಿಲ್ಲ. (೫೩) ಕೊನೆಯಲ್ಲಿ ಅಧ್ಯಾತ್ಮ ಅಂದರೆ ಏನು? ಇದನ್ನು ಹೇಳಿ, ಮಾಯೆ ಹೇಗೆ ಇರುವದು ಅನ್ನುವದರ ಬಗ್ಗೆ ಸ್ವಲ್ಪದರಲ್ಲಿವಿವರಿಸುತ್ತಾರೆ:- ಮಾಯೆ ಎಂಥದು? ಬ್ರಹ್ಮ ಅಂದರೆ ಯಾವುದು? ಇದನ್ನು ತಿಳಿಯುವದೇ ಅಧ್ಯಾತ್ಮವೆನಿಸುವದು. ಇದೆಲ್ಲ ತಿಳಿಯಬೇಕಾದರೆ ಮಾಯಾ ಹೇಗಿರುವದು? ಮತ್ತು ಮಾಯೆಯ ಸ್ವರೂಪಾದಿಗಳನ್ನು ಮೊದಲಿಗೆ ಏಕಾಗ್ರಚಿತ್ತದಿಂದ ತಿಳಿದುಕೊಳ್ಳಿರಿ. (೫೪) ಮಾಯೆಯಲ್ಲಿ ಮೂರು ಗುಣಗಳು ಇರುವವು. ಸತ್ವ. ರಜ, ತಮವೆಂಬುವು ಮತ್ತು ಇವು ಸಾಕಾರವಿರುವವು.ಮಾಯಾ ಅಂದರೆ ಒಂದೇ ಸವನೆ(ಸಮ)ಬದಲಾಗುವಿಕೆಯು ಪಂಚಮಹಾಭೂತದ ಪ್ರಸಾರವಿಸ್ತಾರಗೊಳ್ಳುವಿಕೆ, ಅಂದರೇನೆ ಮಾಯೆಯು. (೫೫) ದೃಷ್ಟಿಗೆ (ಕಣ್ಣಿಗೆ) ಯಾವ ದೃಶ್ಯ ಕಾಣುವದೋ ಅದು ಮತ್ತು ಮನಸ್ಸಿಗೆ ಯಾವುದು (ಹೊರಗಿನ ಸಾದೃಶ್ಯವು) ತೋರಿ ಸ್ಫುರಿಸುವದೋ ಅದು ಭಾಸವಾಗುವದು. ಇವೆರಡೂ ಮಾಯೆಯೇ ಸರಿ. ಮಾಯೆಯು ಕ್ಷಣಭಂಗುರ ಅಲ್ಪಕಾಲದಲ್ಲಿ ನಾಶವಾಗುವದೇ ಇರುವದು. ವಿವೇಕದಿಂದ ಇದರ ಶೋಧ ವಿಚಾರ ಮಾಡಿದ್ದಾದರೆ ಮಾಯೆ ಇಲ್ಲದಾಗುತ್ತದೆ. (೫೬) ಮಾಯೆ ಅನೇಕ ಪ್ರಕಾರವಾಗಿ ತುಂಬಿದೆ. ವಿಶ್ವರೂಪದಿಂದ ಇದು ಪ್ರಕಟವಾಗುವದು. ಮಾಯೆ ವಿಷ್ಣು ಸ್ವರೂಪ ಇರುವದು ವಿಷ್ಣು ಅಂದರೆ [ಸಗುಣ ಬ್ರಹ್ಮ ಸ್ವರೂಪ] ವಿಷ್ಣುವಿನಂತೆ ಮೋಹಿನೀ ರೂಪದಿಂದ[ಮನಮೋಹಕ, ಇಚ್ಛಾನುರೂಪ] ಮರಳುಗೊಳಿಸುವವಳು ಮಾಯೆಯೇ ಇರುವಳು. [ಬ್ರಹ್ಮನ ಸಗುಣರೂಪವೆಂದರೆ ಮಾಯೆಯು]. ಮಾಯೆಯ ವಿಸ್ತಾರಕ್ಕೆ ಅಂತ್ಯವೇ ಇಲ್ಲ. ಇವಳ ಬಗ್ಗೆ ಎಷ್ಟೇ ಹೇಳಿದರೂ ಅದು ಅಪೂರ್ಣವೆನಿಸುವದು. (೫೭)

ಮಾಯಾ ಬಹುರೂಪೀ ಬಹುರಂಗ । ಮಾಯಾ ಈಶ್ವರಾಚಾ ಸಂಗ ।
ಮಾಯಾ ಪಾಹಾತಾ ಅಭಂಗ । ಅಖಿಳನಾಟಿ ॥೫೮॥

ಮಾಯಾ ಸೃಷ್ಟೀಚೀ ರಚನಾ । ಮಾಯಾ ಆಪುಲೀ ಕಲ್ಪನಾ ।
ಮಾಯಾ ತೋಡಿತಾ ತುಟೇನಾ । ಜ್ಞಾನೇವಿಣ ॥೫೯॥

ಏಸೀ ಮಾಯಾ ನಿರೋಪಿಲೀ । ಸ್ವಲ್ಪ ಸಂಕೇತೇ ಬೋಲಿಲೀ ।
ಪುಢೇ ವೃತ್ತಿ ಸಾವಧ ಕೇಲೀ । ಪಾಹಿಜೆ ಶ್ರೋತೀ ೬೦॥

ಪುಢೇ ಬ್ರಹ್ಮನಿರೋಪಣ । ನಿರೋಪಿಲೇ ಬ್ರಹ್ಮಜ್ಞಾನ ।
ಜೇಣೇ ತುಟೇ ಮಾಯಾಭಾನ । ಯೇಕಸರೇ ॥೬೧॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಮಂಗಳಾಚರಣ' ನಾಮ ಸಮಾಸ ಪ್ರಥಮ ॥

● ●

ಮಾಯೆಯು ಬಹುರೂಪಿಯಂತೆ ಅನೇಕ ಸೋಗು ಹಾಕುವಳು. ಅನೇಕ ಪ್ರಕಾರದಿಂದ ವ್ಯಕ್ತವಾಗುವಳು. ಮಾಯೆ ಈಶ್ವರನ ಆಶ್ರಯದಲ್ಲಿ ಇರುವಳು. ಈಶ್ವರನಿಗೆ ಮಾಯೆಯ ಸಹವಾಸವಿರುವದು. ಮೇಲ್ನೋಟಕ್ಕೆ ಮಾಯೆಗೆ ಎಂದೂ ಭಂಗವಿಲ್ಲ. ಮತ್ತು ಇವಳು ಪರಿಪೂರ್ಣಳೆಂದೇ ಅನಿಸುತ್ತದೆ. (೫೮) ಈ ಎಲ್ಲ ಸೃಷ್ಟಿಯ ರಚನೆ ಮಾಯೆಯಿಂದಲೇ ಆಗಿರುವದು ನಮ್ಮ ಕಲ್ಪನೆಯೂ ಮಾಯೆಯೇ ಇರುವದು. ಮಾಯೆಯನ್ನು ಇಲ್ಲದಂತೆ ಮಾಡಬೇಕೆಂದು ಎಷ್ಟೇ ಪ್ರಯತ್ನ ಮಾಡಿದರೂಸಹ ಜ್ಞಾನದ ಹೊರತಾಗಿ ಇದನ್ನು ಇಲ್ಲದಾಗಿಸಲು ಸಾಧ್ಯವಿಲ್ಲ.(೫೯) ಇಲ್ಲಿಯವರೆಗೆ ಸ್ವಲ್ಪದರಲ್ಲಿ ಮತ್ತು ಸಂಕೇತದಿಂದ ಮಾಯೆಯ ವರ್ಣನೆ ಮಾಡಿದ್ದಾಯಿತು. ಮುಂದಿನ ವಿಷಯ ಕೇಳಿ ತಿಳಿಯಲು ಶ್ರೋತೃಗಳು ತಮ್ಮ ಚಿತ್ತವನ್ನು ಏಕೀಕರಿಸಿಕೊಳ್ಳಬೇಕು. (೬೦) ಮುಂದೆ ಬ್ರಹ್ಮನ ಮತ್ತು ಬ್ರಹ್ಮಜ್ಞಾನದ ನಿರೂಪಣ ಮಾಡುವೆವು. ಇದರಿಂದ ಮಾಯೆಯ ಇರುವಿಕೆಯ ಬಗೆಗಿನ ತಿಳುವಳಿಕೆ ತತ್ಕಾಲದಲ್ಲಿ ನಷ್ಟವಾಗುವದು. (೬೧)

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದ ಏಳನೆಯ ದಶಕದ
ಮಂಗಲಾಚರಣವೆಂಬ ಒಂದನೆಯ ಸಮಾಸವು ಮುಗಿದುದು.

● ●

### ಸಮಾಸ ದ್ವಿತೀಯ : ಬ್ರಹ್ಮ ನಿರೂಪಣ

॥ಶ್ರೀರಾಮ॥ ಬ್ರಹ್ಮ ನಿರ್ಗುಣ ನಿರಾಕಾರ। ಬ್ರಹ್ಮ ನಿಃಸಂಗ ನಿರ್ವಿಕಾರ।
ಬ್ರಹ್ಮಾಸಿ ನಾಹೀ ಪಾರಾವಾರ। ಬೋಲತೀ ಸಾಧು ॥೧॥

ಬ್ರಹ್ಮ ಸರ್ವಾಸ ವ್ಯಾಪಕ। ಬ್ರಹ್ಮ ಅನೇಕೀ ಯೇಕ।
ಬ್ರಹ್ಮ ಶಾಶ್ವತ ಹಾ ವಿವೇಕ। ಬೋಲಿಲಾ ಶಾಸ್ತ್ರೀ ॥೨॥

## ದಶಕ ೭. ಸಮಾಸ ೨. ಬ್ರಹ್ಮ ನಿರೂಪಣ

ತತ್ವಚಿಂತಕ ಮತ್ತು ತತ್ವಜ್ಞಾನಿ ಈ ಇಬ್ಬರಲ್ಲಿ ಭೇದವಿರುತ್ತದೆ. ತತ್ವಚಿಂತಕನು ಬುದ್ಧಿಯ ಭೂಮಿಕೆಯ ಮೇಲೆ ಇರುವವನು. ಇವನು ಬಹಳ ವಿಚಾರ ಮಾಡುವವನಾಗಿರುವನೆಂಬುದರ ಬಗ್ಗೆ ಸಂಶಯವಿಲ್ಲ. ಆದರೆ ಶುದ್ಧ ವಿಚಾರದಿಂದ ತರ್ಕದಿಂದ ಸತ್ಯವಸ್ತುವಿನ ಸ್ವರೂಪವು ಒಮ್ಮೆ ನಿಶ್ಚಿತ-ಗೊಂಡ ಮೇಲೆ ಈ ತತ್ವಚಿಂತಕನು ಅಲ್ಲಿಗೇ ನಿಲ್ಲುವನು ಇದರ ವಿರುದ್ಧ [ಉಲಟ] ತತ್ವಜ್ಞಾನಿಯು ಪ್ರತಿಭೆಯ ಭೂಮಿಕೆಯ ಮೇಲೆ ಇರುವನು. ತರ್ಕದಿಂದ ಸತ್ಯವಸ್ತುವಿನ ಸ್ವರೂಪವು ನಿಶ್ಚಿತಗೊಂಡ ಮೇಲೆ ಅಲ್ಲಿಗೇ ನಿಲ್ಲದೆ, ಈ ತತ್ವಜ್ಞಾನಿಯು ಸ್ವಸ್ವರೂಪದ ಅನುಸಂಧಾನ ದಲ್ಲಿಯೇ ಸತತ ಅಭ್ಯಾಸ ಮಾಡುವನು. ಕೆಲಕಾಲದ ನಂತರ ಇವನಿಗೆ ಸತ್ಯವಸ್ತುವಿನ ಪ್ರತ್ಯಕ್ಷ ಅನುಭವ ಬರುವದು. [ಆಗುವದು]. ಈ ರೀತಿಯಲ್ಲಿ ಸ್ವರೂಪ ಸಾಕ್ಷಾತ್ಕಾರವಾದ ಪುರುಷನಿಗೆ ಸಂತ, ಶರಣ, ಸಾಧು, ದಾಸನೆಂದು ಅನ್ನುವರು ಈ ಸಂತನ ಪ್ರತಿಭೆ ಅಖಂಡ ಜಾಗ್ರತವಿರುವದು. ಇವನು ಬರೆದಂಥ ಗ್ರಂಥಗಳಿಗೆ ಅಧ್ಯಾತ್ಮ ಗ್ರಂಥಗಳೆಂದು ಅನ್ನುವರು. ಸದ್ವಸ್ತುವಿಗೆ ಬ್ರಹ್ಮವೆಂದು ಅನ್ನುವರು. ಸಂತರ ಅನುಭವವು ಹೀಗಿರುವದು : ಬ್ರಹ್ಮವು ಸರ್ವ ಮಾನವೀ ಕಲ್ಪನೆಯ ಆಚೆಗೆ ಇರುವದು. ಸ್ಥಳ ಕಾಲ ನಿಮಿತ್ತ (ಕಾರಣ, ಉದ್ದೇಶ, ಹೇತು) ಇವುಗಳ ಕಕ್ಷೆಯಲ್ಲಿ ಅಡ್ಡಾಡುವ ದೃಶ್ಯವಾಗಿ ತೋರುವ ವಿಶ್ವದ ಜ್ಞಾನ ಮಾಡಿಕೊಡುವ ಬುದ್ಧಿಯೂ ಸಹಿತ ಮರ್ಯಾದಿತವೇ ಇರುವದು. ವಿಶ್ವದ ಬಂಧನವನ್ನು ದಾಟಿ ಪಾರಾಗಿ ಅನಂತವಾಗಿ ಶೋಭಿಸುವ ಹರಡಿರುವ ಬ್ರಹ್ಮವು ಮಾನವೀ ಬುದ್ಧಿಯ ಆಳದಲ್ಲಿ ಪರಬ್ರಹ್ಮನ ಜ್ಞಾನದ ವಿಷಯವು ಹೇಗೆ ಬಂದೀತು? ಅಂತೆಯೇ ಬ್ರಹ್ಮದರ್ಶನವಾಗಲಿಕ್ಕೆ ಬುದ್ಧಿಯ ಮೇರೆ ಮೀರಿ ಆಚೆಗೆ ಇರುವಂಥ ಪ್ರತಿಭಾ ಎಂಬ ಹೆಸರಿನ ಸ್ಫೂರ್ತಿ, ಪ್ರಕಾಶ, ವಿಶೇಷ ಪ್ರಜ್ಞೆಯ ಶಕ್ತಿಯು ಮನುಷ್ಯನಲ್ಲಿ ಉದಯ ಹೊಂದಬೇಕಾಗುವದು. ಈ ಪ್ರತಿಭೆಯು ಸದ್ಗುರುವಿನ ಕೃಪೆಯಿಂದಲೇ ಜಾಗೃತ ವಾಗುವದು. ಅದಕ್ಕಾಗಿಯೇ ಪಾರಮಾರ್ಥದಲ್ಲಿ ಸದ್ಗುರುವಿಗೆ ವಿಲಕ್ಷಣ ಮಹತ್ವವಿರುವದು. "ನಾನು ದೇಹವೇ ಇರುವೆ" ಈ ದೃಢ ಭಾವನೆಯಿಂದಾಗಿ ನಾವು ಸದ್ವಸ್ತುವಿನಿಂದ ದೂರವಾಗಿರುವೆವು. ಈ ದೇಹವೇ ನಾನೆಂಬ ಬುದ್ಧಿ ಹಾರಿ ಹೋಗುವ ಮಾರ್ಗವನ್ನು ಸದ್ಗುರುವು ತೋರಿಸುವನು, ದೇಹ ಬುದ್ಧಿಯು ಕಡಿಮೆ ಆಗಹತ್ತಿತೆಂದರೆ ಜೀವತನ ಅಂದರೆ ದೇಹಾತ್ಮ ಬುದ್ಧಿ, ದೇಹ ಬುದ್ಧಿ ಕಡಿಮೆ ಆಗುತ್ತ ಹೋಗುವದು. ಜೀವತನವು ಕಡಿಮೆ ಆದಂತೆ- ಆದಂತೆ ಅಜ್ಞಾನವು ಕ್ಷೀಣವಾಗುತ್ತ ಹೋಗುವದು. ಮತ್ತು ಅಜ್ಞಾನ ಇಲ್ಲವಾದ ಕೂಡಲೇ "ನಾನು ಬ್ರಹ್ಮನೇ ಇರುವೆ" ಎಂಬುದರ ಪ್ರತ್ಯಕ್ಷ ಅನುಭವ ಬರುವದು. ಈ ಅನುಭವ ಎಲ್ಲಿ ಯಾವ ಸ್ಥಳದಲ್ಲಿ ಹೇಗೆ ಮತ್ತು ಯಾರಿಗೆ ಬರಬಹುದು ಅಥವಾ ಬಂದೀತು? ಎಂಬುದನ್ನು ಹೇಳಲಿಕ್ಕೆ ಬರುವದಿಲ್ಲ. ಈ ಅನುಭವದಲ್ಲಿ ಯಾವ (ಫರಕೂ) ವ್ಯತ್ಯಾಸವೂ ಇರುವದಿಲ್ಲವಾದ್ದರಿಂದ ಸ್ವಾನುಭವೀ ಪುರುಷರೆಲ್ಲರೂ ಒಂದೇ ಭೂಮಿಕೆಯ ಮೇಲೆ ಇರುವರು. ಇವರ ಬಾಹ್ಯರಂಗದಲ್ಲಿ ತೋರಿ ಬರುವ ಭಿನ್ನತ್ವವು ಕೇವಲ ಬಹಿರಂಗ ಸ್ವರೂಪದ್ದಿರುವದು. ವಾಸ್ತವಿಕ ಬ್ರಹ್ಮಸ್ವರೂಪವು ನಾಮರೂಪಾತೀತ ಇರುವದು. ಆದರೆ ಇದನ್ನು ಅನೇಕ ಪ್ರಕಾರದ ಹೆಸರಿನಿಂದ ಕರೆಯುವರು. [ಸಂಬೋಧಿಸುವರು].

### ದಶಕ ೭. ಸಮಾಸ ೨. ಬ್ರಹ್ಮ ನಿರೂಪಣ [ನುಡಿ ೫೫]

ಮಾನವೀ ಅನುಭವ ಕ್ಷೇತ್ರದ ದೃಶ್ಯವು ವಿಶ್ವದವರೆಗೆ ಮಾತ್ರ ಪಸರಿಸಿರುತ್ತದೆ. ಆದರೆ ಅದೇ ಬ್ರಹ್ಮಸ್ವರೂಪವು ಈ ಕ್ಷೇತ್ರದ ಆಚೆಗೆ ಇರುವದರಿಂದ ಇದರ ವರ್ಣನೆಯನ್ನು ಸಹ ಅತೀತತನ (ಎಲ್ಲೆಯನ್ನು ಮೀರಿದ)ದಿಂದಲೇ ಮಾಡಬೇಕಾಗುವದು:- ಸಾಧು ಸಂತರು ಹೇಳುವದೇನೆಂದರೆ ಬ್ರಹ್ಮನು ಗುಣರಹಿತ, ಆಕಾರ-ರಹಿತ ಸಂಗ-ರಹಿತ, ನಾನು ನನ್ನದು ಎಂಬ ಪ್ರಪಂಚದ ವಿಕಾರರಹಿತ ಮತ್ತು ಮರ್ಯಾದಾರಹಿತ (ಅಳತೆಗೆ ಮೀರಿದವ) ನಿರುವನು. (೧) ಬ್ರಹ್ಮ ಸರ್ವವನ್ನು ವ್ಯಾಪಿಸಿ ಇರುವನು. ಅನೇಕದರದಲ್ಲಿ ಏಕತನ (ಒಂದೇರೀತಿ)ದಿಂದ ಇರುವನು. ಬ್ರಹ್ಮ ಶಾಶ್ವತ ಇರುವನು. ಹೀಗೆ ಇವನ ವರ್ಣನೆಯನ್ನು ಶಾಸ್ತ್ರಗಳಲ್ಲಿ ಹೇಳಿದ್ದು ಕಂಡು ಬರುವದು. (೨)

ಬ್ರಹ್ಮ ಅಚ್ಯುತ ಅನಂತ। ಬ್ರಹ್ಮ ಸದೋದಿತ ಸಂತ।
ಬ್ರಹ್ಮ ಕಲ್ಪನೆರಹಿತ। ನಿರ್ವಿಕಲ್ಪ ॥೩॥

ಬ್ರಹ್ಮ ಯಾ ದೃಶ್ಯಾವೇಗಳೇ। ಬ್ರಹ್ಮ ಸುನ್ಯತ್ವಾಸ ನಿರಾಳೇ।
ಬ್ರಹ್ಮ ಇಂದ್ರಿಯಾಂಚ್ಯಾ ಮೇಳೇ। ಚೋಜವೇನಾ ॥೪॥

ಬ್ರಹ್ಮ ದೃಷ್ಟೀಸ ದಿಸೇನಾ। ಬ್ರಹ್ಮ ಮೂರ್ಖಾಸೀ ಅಸೇನಾ।
ಬ್ರಹ್ಮ ಸಾಧುವಿಣ ಯೇನಾ। ಅನುಭವಾಸೀ ॥೫॥

ಬ್ರಹ್ಮ ಸಕಳಾಹೂನಿ ಥೋರ। ಬ್ರಹ್ಮಾ ಐಸೇ ನಾಹೀ ಸಾರ।
ಬ್ರಹ್ಮ ಸೂಕ್ಷ್ಮ ಅಗೋಚರ। ಬ್ರಹ್ಮಾದಿಕಾಸೀ ॥೬॥

ಬ್ರಹ್ಮ ಶಬ್ದೀ ಐಸೇ ತೈಸೇ। ಬೋಲಿಜೆ ತ್ಯಾಹೂನಿ ಅನಾರಿಸೇ।
ಪರೀ ತೇ ಶ್ರವಣ ಅಭ್ಯಾಸೇ। ಪಾವಿಜೆ ಬ್ರಹ್ಮ ॥೭॥

ಬ್ರಹ್ಮಾಸ ನಾಮೇ ಅನಂತ। ಪರೀ ತೇ ಬ್ರಹ್ಮ ನಾಮಾತೀತ।
ಬ್ರಹ್ಮಾಸ ಹೇತ ದೃಷ್ಟಾಂತ। ದೇತಾ ನ ಶೋಭತೀ ॥೮॥

ಬ್ರಹ್ಮಾ ಸಾರಿಖೇ ದುಸರೇ। ಪಾಹಾತಾ ಕಾಯ ಆಹೆ ಖರೇ।
ಬ್ರಹ್ಮ ದೃಷ್ಟಾಂತ ಉತ್ತರೇ। ಕದಾ ನ ಸಾಹೇ ॥೯॥

॥ಶೃತಿ॥ ಯತೋ ವಾಚೋ ನಿವರ್ತಂತೇ। ಅಪ್ರಾಪ್ಯ ಮನಸಾ ಸಹ ॥ಛ॥

ಜೇಥೇ ವಾಚಾ ನಿವರ್ತತೀ। ಮನಾಸೀ ನಾಹೀ ಬ್ರಹ್ಮಪ್ರಾಪ್ತೀ।
ಐಸೀ ಬೋಲಿಲೀ ಶ್ರುತೀ। ಸಿದ್ಧಾಂತ ವಚನ ॥೧೦॥

ಬ್ರಹ್ಮನು ನಾಶರಹಿತ, ಚ್ಯುತಿ ಇಲ್ಲದವ, ಅಲ್ಲಾಡದೆ ಸ್ಥಿರವುಳ್ಳವ, ಅಂತ ಪಾರವಿಲ್ಲದವ, ಸದಾಸರ್ವಕಾಲವೂ ಸ್ಥಿರವಿರುವವ, ಅಂತೂ ಬ್ರಹ್ಮನ ಬಗ್ಗೆ ಕಲ್ಪನೆ ಮಾಡಲಿಕ್ಕೆ ಬರುವದಿಲ್ಲ. ಇವನು ಕಲ್ಪನಾರಹಿತನಿರುವನು.(೩) ಬ್ರಹ್ಮನು ದೃಶ್ಯಕ್ಕಿಂತ ತೀರ ಬೇರೆ ಆಗಿರುವನು. ದೃಶ್ಯವೆಲ್ಲ ಎದುರಿಟ್ಟು ತೋರುವವೆಲ್ಲ [ಕಾಣುವದೆಲ್ಲವೂ] ಲಯವಾದ ಮೇಲೆ ಶೂನ್ಯ ಉಳಿಯುವದು. ಈ ಶೂನ್ಯಕ್ಕಿಂತಲೂ ಬ್ರಹ್ಮ ಬೇರೆಯೇ ಇರುವನು. ಬ್ರಹ್ಮನು ಅತೀಂದ್ರಿಯನಿರುವದರಿಂದ ಎಲ್ಲ ಇಂದ್ರಿಯಗಳೂ ಒಟ್ಟಾಗಿ ಇವನನ್ನು ತಿಳಿಯುವ ಪ್ರಯತ್ನ ಮಾಡಿದರೂ ಸಹ ಅವುಗಳಿಗೆ ತಿಳಿಯದಂಥವನಿರುವನು. (೪) ಬ್ರಹ್ಮನು ಕಣ್ಣಿಗೆ ಕಾಣಿಸುವದಿಲ್ಲ. ಅಂತೆಯೇ ಕೇವಲ ಇಂದ್ರಿಯ ದೃಷ್ಟಿಯಿಂದ ನೋಡುವ ಮೂಢ ಜನರಿಗೆ ಬ್ರಹ್ಮ ಇಲ್ಲದಂತೆ ಅನಿಸುವದು. ಸಾಧು ಸಂತರ ಮಾರ್ಗದರ್ಶನವಿಲ್ಲದೆ ಬ್ರಹ್ಮನು ಅನುಭವಕ್ಕೆ ಬರುವದಿಲ್ಲ. (೫) ಬ್ರಹ್ಮವು ಎಲ್ಲಕ್ಕಿಂತ ಶ್ರೇಷ್ಠವಿರುವದು. ಬ್ರಹ್ಮದಂತೆ ಶ್ರೇಷ್ಠವಾದದ್ದು ಸರಳವಾದದ್ದು ಇನ್ನೊಂದಿಲ್ಲ. ಬ್ರಹ್ಮವು ಬಹಳವೆಂದರೆ ಬಹಳಷ್ಟು ಸೂಕ್ಷ್ಮವಿರುವದು. ಹರಿಹರ ಬ್ರಹ್ಮಾದಿದೇವತೆ ಗಳಿಗೆ ಸಹ ಇದರ ಸೂಕ್ಷ್ಮತನವನ್ನು ತಿಳಿಯಲು ಕಠಿಣ ಹೋಗುವದು. (೬) ಬ್ರಹ್ಮವು ಹೀಗೆ ಇರುವದು, ಹಾಗೆ ಇರುವದು "ಈ ರೀತಿಯಲ್ಲಿ" ಶಬ್ದಗಳಿಂದ ಎಷ್ಟೇ ವರ್ಣನೆ ಮಾಡಿದರೂ ಸಹ ಈ ವರ್ಣನೆಗಿಂತ ಬೇರೆ ತರವೇ ಇರುತ್ತದೆ. ಅದ್ದರಿಂದ ಶಾಸ್ತ್ರ, ವಚನ-ಗುರುವಚನದಲ್ಲಿ ವಿಶ್ವಾಸವಿಟ್ಟು ಶ್ರವಣ ಮಾಡಿ ಮನನ ಮಾಡಿ ಸಾಧನಾಭ್ಯಾಸ ಮಾಡಬೇಕು. ಈ ಉಪಾಯವೊಂದೇ ಬ್ರಹ್ಮದರ್ಶನ ಮಾಡಿಸುವದು. (೭) ಬ್ರಹ್ಮನಿಗೆ ಅಸಂಖ್ಯ ಹೆಸರುಗಳಿರುವ ವೆಂಬುದು ನಿಜವಿದ್ದರೂ ಸಹ ಈ ಎಲ್ಲ ಹೆಸರಿಗಿಂತ ಆಚೆಗೆ ಇರುವನು. ಯಾವುದೇ ಹೆಸರು ಇವನ ಸ್ವರೂಪ ಹೀಗಿರುವದು ಅಥವಾ ಹಾಗಿರುವದು ಎಂದು ಹೇಳಲು ಶಕ್ಯವಾಗುವದಿಲ್ಲ. ದೃಶ್ಯದಲ್ಲಿಯ ವಸ್ತುವಿನ ಸಾಮ್ಯತೆ (ಹೋಲಿಕೆ) ದೃಷ್ಟಾಂತಗಳು ಬ್ರಹ್ಮನಿಗೆ ಲಾಗೂ ಆಗುವದಿಲ್ಲ. (೮) ಈ ಬ್ರಹ್ಮಾಂಡದಲ್ಲಿ ಬ್ರಹ್ಮನಂತಹ ಇನ್ನೊಂದು ನಿಜವಾಗಿ ಯಾವುದೂ ಇಲ್ಲ., ಒಟ್ಟಿನಲ್ಲಿ ಏನೇ ದೃಷ್ಟಾಂತಕೊಟ್ಟು ಬ್ರಹ್ಮನ ವರ್ಣನೆ ಮಾಡುವ ಶಬ್ದಗಳಯೋಜನೆಯ ಪ್ರಯತ್ನವು ಸಹ ವ್ಯರ್ಥವಾಗಿ ಹೋಗುವದು. [೯] ಶ್ರುತಿ:- ಯತೋ ವಾಚೋ ನಿವರ್ತನ್ತೆ ಅಪ್ರಾಪ್ಯ ಮನಸಾಸಹ ॥ಛ॥ ಶ್ಲೋಕಾರ್ಥ:- ವಾಣಿಯಿಂದ [ಮಾತು, ನುಡಿ] ಮತ್ತು ಮನಸ್ಸಿನಿಂದ ಇದು ಅಪ್ರಾಪ್ಯ ಅಂದರೆ ದೊರಕದಂಥದ್ದು, ಸಿಗದಂಥದ್ದು ಇರುವದು "ಹೀಗೆ ಅಂದು ಅಲ್ಲಿಂದ ತಿರುಗಿ ಬರುವವು. ಬ್ರಹ್ಮನ ಹತ್ತರ ವಾಣಿ (ಮಾತು, ನುಡಿ) ಹೋಗದೆ ಹಿಂದಿರುಗುವದು. ಮನಕ್ಕೆ ಬ್ರಹ್ಮ ಪ್ರಾಪ್ತಿ ಆಗುವದಿಲ್ಲ. ಹೀಗೆಂದು ಅಂತಿಮ ಸತ್ಯವನ್ನು ಶ್ರುತಿಯು ಹೇಳಿರುವದು. (೧೦)

ಕಲ್ಪನಾರೂಪ ಮನ ಪಾಹೀ । ಬ್ರಹ್ಮೀ ಕಲ್ಪನಾ ಚಿ ನಾಹೀ ।
ಮ್ಹಣೌನಿ ವಾಕ್ಯ ಕಾಹೀ । ಅನ್ಯಥಾ ನವ್ಹೇ ॥೧೧॥

ಆತಾ ಮನಾಸಿ ಜೇ ಅಪ್ರಾಪ್ತ । ತೇ ಕೈಸೇ ಹೋಈಲ ಪ್ರಾಪ್ತ ।
ಐಸೇ ಮ್ಹಣಾಲ ತರೀ ಕೃತ್ಯ । ಸದ್ಗುರುವಿಣ ನಾಹೀ ॥೧೨॥

ಭಾಂಡಾರ ಗೃಹೇ ಭರಲೀ । ಪರೀ ಅಸತೀ ಆಡಕಿಲೀ ।
ಹಾತಾಸ ನ ಯೇತಾ ಕಿಲೀ । ಸರ್ವಹೀ ಅಪ್ರಾಪ್ತ ॥೧೩॥

ತರೀ ತೇ ಕಿಲೀ ತೇ ಕವಣ । ಮಜ ಕರಾವೀ ನಿರೂಪಣ ।
ಐಸಾ ಶ್ರೋತಾ ಪುಸೇಖೂಣ । ವಕ್ತಯಾಸೀ ॥೧೪॥

ಒಂದೇ ಸವನೆ ಕಲ್ಪನೆ ಮಾಡುತ್ತ ಇರುವದೇ ಮನಸ್ಸಿನ ಸ್ವರೂಪ ಸ್ವಭಾವ ಇರುವದು. ಆದರೆ ಬ್ರಹ್ಮನಲ್ಲಿ ಕಲ್ಪನೆಗೆ ಅವಕಾಶವೇ ಇಲ್ಲ. ಅಂತೆಯೇ ಶ್ರುತಿಯು ಹೇಳಿದ ಸಿದ್ಧಾಂತ ಎಷ್ಟೂ ಸುಳ್ಳಲ್ಲ. ನಮ್ಮ ಇಂದ್ರಿಯಗಳಿಗೆ ಬಾಹ್ಯ (ಹೊರಗಿನ) ಪದಾರ್ಥಗಳೊಂದಿಗೆ ಸಂಬಂಧ ಬಂದ ಕೂಡಲೇ ಆ ಪದಾರ್ಥದ ಬಗ್ಗೆ ಸ್ವಲ್ಪ ಮಾಹಿತಿ ತಿಳವಳಿಕೆ, ಅರಿವು ವಿವರಣೆಗಳು ಮನಸ್ಸಿನ ಮುಂದೆ ಬರುವವು. ಕೇವಲ ಇದಿಷ್ಟೇ ಮಾಹಿತಿಯಿಂದ ಪದಾರ್ಥ ಜ್ಞಾನವಾಗುವದಿಲ್ಲ. ಮನಸ್ಸು ತನ್ನ ಕಲ್ಪನೆಯಿಂದ ಆ ಮಾಹಿತಿಯಲ್ಲಿ ಹೆಚ್ಚಿನ ವಿವರವನ್ನು ಕೂಡಿಸುವದು. (ಭರ್ತಿ ಮಾಡುವದು.) ಆಮೇಲೆ ನಮಗೆ ಆ ಪದಾರ್ಥಗಳ ಜ್ಞಾನವಾಗುವದು. ಈ ಪ್ರಕಾರ ಇಂದ್ರಿಯಗಳು ಎಲ್ಲಿಯವರೆಗೆ ಜಾಗ್ರತವಾಗಿರುವವೋ ಅಲ್ಲಿಯವರೆಗೆ ಮನಸ್ಸು ಒಂದೇ ಸವನೆ ಕಲ್ಪನಾ ಮಾಡುತ್ತಲಿರುವದು. ಸ್ವಪ್ನ ಬೀಳುವಾಗ ಮನವು ಕೇವಲ ಕಲ್ಪನೆಯನ್ನೇ ಮಾಡುತ್ತಿರುವದು. ಜಾಗ್ರತಿ, ಸ್ವಪ್ನ ಸುಷುಪ್ತಿ, ಈ ಮೂರು ಅವಸ್ಥೆಗಳ ಪೈಕಿ ಎರಡರಲ್ಲಿಯೂ (ಜಾಗ್ರತಿ, ಸ್ವಪ್ನ) ಕಲ್ಪನೆಗೇ ಮುಖ್ಯ ಪ್ರಾಧಾನ್ಯ ವಿರುವದನ್ನು ನೋಡಿ "ಮನವು ಕಲ್ಪನಾರೂಪವಿರುವದು" ಎಂದು ವೇದಾಂತವು ಹೇಳುತ್ತದೆ. ಅಂತೂ ಜಾಗ್ರತಾ ವಸ್ಥೆಯೇ ಇರಲಿ ಅಥವಾ ಸ್ವಪ್ನದ ಅವಸ್ಥೆಯೇ ಇರಲಿ, ಎರಡೂ ಜೀವದ ಸೀಮಿತ ಅವಸ್ಥೆಯಲ್ಲಿ ಇರುವವು. ಇದರಲ್ಲಿ ಉಪಯೋಗ ಬೀಳುವ ಜೀವದ ಶಕ್ತಿಯು ಅಸೀಮಿತ ಮತ್ತು ಅನಂತ ಅಪಾರನಾದ ಬ್ರಹ್ಮನ ಅನುಭವ ತೆಗೆದುಕೊಳ್ಳಲು ಉಪಯೋಗ ಬೀಳುವಲ್ಲಿ ಮೂಲತಃ ಅಶಕ್ಯವಿರುವದು. ಅಂತೆಯೇ ಕಲ್ಪನೆ ಸ್ಮೃತಿ, ವಿಚಾರ, ಲಕ್ಷ್ಯ, ಇಚ್ಛಾಶಕ್ತಿ, ಭಾವನಾ, ಇತ್ಯಾದಿ ಮನಸ್ಸಿನ ವಿವಿಧ ಅಂಗಗಳು ಸ್ವಸ್ವರೂಪದ ಆಳವಿನ [ಕಕ್ಷೆಯ]ಲ್ಲಿ ಸುಳ್ಳಾಗಿ ಹೋಗುವವು. ನಿರರ್ಥಕವೆನಿಸುವವು ಒಟ್ಟಿನಲ್ಲಿ ಹೇಳಬೇಕೆಂದರೆ, ಇಲ್ಲಿ ಜೀವತನ [ಜೀವಪಣ] ಎಷ್ಟೂ ಇಲ್ಲದಂತೆ ಆಗಬೇಕಾಗುವದು. ಜೀವತನ ದ್ವೈತಮಯವಿರುತ್ತದೆ. ಇದು ಇಲ್ಲದಂತೆ ಆಗಬೇಕಾದರೆ ಸದ್ಗುರುವಿಗೆ ಶರಣು ಹೋಗುವದೊಂದೇ ರಾಜ ಮಾರ್ಗವಿರುವದು. [೧೧] ಸಾಮಾನ್ಯ ಮನುಷ್ಯ ಬಹಿರ್ಮುಖನಿರುವನು. "ನಾನು ದೇಹವೇ ಇರುವೆನು" ಅವನ ಈ ದೃಢ ಭಾವನೆಯಿಂದಾಗಿ ಜೀವನದಲ್ಲಿಯ ಎಲ್ಲ ಚಲನವಲನಗಳಲ್ಲಿ "ನಾನು" ಇದು ಕೇಂದ್ರಸ್ಥಾನದಲ್ಲಿ ಇರುತ್ತದೆ.ಇದನ್ನು ಇಲ್ಲದಂತೆಮಾಡುವ ವಿದ್ಯೆಯನ್ನು ನಾವು ಹಸ್ತಗತ ಮಾಡಿಕೊಳ್ಳದವಿನಃ ಪರ ಮಾರ್ಥದ ಸಾಧನೆಯು ಯಶಸ್ವಿಯಾಗುವದಿಲ್ಲ. ನಮ್ಮದೇ ಆದ "ನಾನು" ಇದನ್ನು ನಾವೇ ಉಚ್ಚಾಟನೆ ಮಾಡುವ ಕೆಲಸವು ಬಹುಗೂಢ ವ ಕಠಿಣವಿರುತ್ತದೆ.ಇದನ್ನು ಸದ್ಗುರುವಿನ ಹತ್ತಿರದಲ್ಲಿ ಇದ್ದು ಕಲಿಯಬೇಕಾಗುವದು. ಇದನ್ನು ಹೇಗೆ ಕಲಿಯಬೇಕೆಂಬುದನ್ನು ಈಗ ಸಮರ್ಥರು ಹೇಳುತ್ತಾರೆ:- ಮನಸ್ಸಿಗೆ ಯಾವುದನ್ನು ಪ್ರಾಪ್ತಮಾಡಿಕೊಳ್ಳಲಿಕ್ಕೆ ಬರುವದಿಲ್ಲವೋ, ಅದನ್ನು ಹೇಗೆ ಪ್ರಾಪ್ತಮಾಡಿಕೊಳ್ಳಬೇಕೆಂಬ ಪ್ರಶ್ನೆಯನ್ನು ಈಗ ನೀವು ವಿಚಾರಿಸಿದ್ದಾದರೆ ಅವಕ್ಕೆ ನಾವು ಕೊಡುವ ಉತ್ತರವೆಂದರೆ,ಶ್ರೀ ಸದ್ಗುರುವಿನ ಹೊರತು ಈ ಕಾರ್ಯ ಸಾಧ್ಯವಾಗುವದಿಲ್ಲವೆಂದು ಖಾತ್ರಿಪೂರ್ವಕ ಹೇಳುವೆವು. [೧೨] ಉದಾಹರಣೆ ಹೇಳುವೆ. ಉಗ್ರಾಣ [ಕೊಠಡಿ]ಗಳು ಧಾನ್ಯಾದಿ ಅನೇಕ ವಸ್ತುಗಳಿಂದ ಪೂರ್ಣ ತುಂಬಿವೆ. ಮತ್ತು ಅವಕ್ಕೆಲ್ಲ ಕೀಲಿಹಾಕಿ ಮುಚ್ಚಿ ಬಿಟ್ಟಿದ್ದಾರೆ. ಇವುಗಳ ಕೀಲಿಕೈ ನಿಮ್ಮ ಹತ್ತಿರ ಇಲ್ಲದಿದ್ದರೆ ಅದರಲ್ಲಿಯ ಎಲ್ಲ ವಸ್ತುಗಳು ನಿಮಗೆ ಅಪ್ರಾಪ್ತವೇ ಇರುವವು. ಇದರಿಂದ ನಿಮಗೆ ಏನೂ ಉಪಯೋಗ ವಾಗುವದಿಲ್ಲ. [೧೩] ಈ ಮಾತನ್ನು ಕೇಳಿ ಶ್ರೋತಾರನೊಬ್ಬ ಅನ್ನುತ್ತಾನೆ:- "ಈಗ ತಾವು ಆ ಕೀಲಿ ಎಂಥದು? ಅದನ್ನು ನನಗೆ ಹೇಳಿರಿ" [೧೪]

ಸದ್ಗುರುಕೃಪಾ ತೇ ಚಿ ಕಿಲೀ। ಜೇಣೇ ಬುದ್ಧಿ ಪ್ರಕಾಶಲೀ।
ದ್ವೈತ ಕಪಾಟೇ ಉಘಡಲೀ। ಯೇಕಸರೀ ॥೧೫॥

ತೇಥೇ ಸುಖ ಅಸೆ ವಾಡ। ನಾಹೀ ಮನಾಸ ಪವಾಡ।
ಮನೇವಿಣ ಕೈವಾಡ। ಸಾಧನಾಚಾ ॥೧೬॥

ತ್ಯಾಚೀ ಮನೇವಿಣ ಪ್ರಾಪ್ತೀ। ಕೀ ವಾಸನೇವಿಣ ತೃಪ್ತೀ।
ತೇಥೇ ನ ಚಲೆ ವಿತ್ಪತ್ತೀ। ಕಲ್ಪನೇಚೀ ॥೧೭॥

ತೇ ಪರೇಹೂನಿ ಪರ। ಮನಬುದ್ಧೀ ಅಗೋಚರ।
ಸಂಗ ಸೋಡಿತಾ ಸತ್ವರ। ಪಾವಿಜೇತೇ ॥೧೮॥

ಸಂಗ ಸೋಡಾವಾ ಆಪುಲಾ। ಮಗ ಪಾಹಾವೇ ತಯಾಲಾ।
ಅನುಭವೀ ತೋ ಯಾ ಬೋಲಾ। ಸುಖಾವೇಲ ಗಾ ॥೧೯॥

ಆಪಣ ಮ್ಹಣಿಜೆ ಮೀಪಣ। ಮೀಪಣ ಮ್ಹಣಿಜೆ ಜೀವಪಣ।
ಜೀವಪಣ ಮ್ಹಣಿಜೆ ಅಜ್ಞಾನ। ಸಂಗ ಜಡಲಾ ॥೨೦॥

ಆಗ ವಕ್ತೃನು "ಸದ್ಗುರು ಕೃಪೆಯೇ ಇದಕ್ಕೆ ಕೀಲಿಕೈ ಆಗಿರುವದು. ಸದ್ಗುರು ಕೃಪೆಯಿಂದ ಬುದ್ಧಿಯಲ್ಲಿ ಆತ್ಮಜ್ಞಾನದ ಪ್ರಕಾಶ ಬೀಳುತ್ತದೆ. ಮತ್ತು ದ್ವೈತದ ಬಾಗಿಲುಗಳು ಒಮ್ಮೆಲೇ ತೆರೆಯುವವು. ಇವನ ಕೃಪೆಯಿಂದ ದೇಹ ಬುದ್ಧಿ ಹೋಗಿ ಆತ್ಮಬುದ್ಧಿ ಪ್ರಕಟವಾಗುವದು. ದೇಹಬುದ್ಧಿಯಲ್ಲಿ ಅಜ್ಞಾನದ ಅಂಧಃಕಾರ [ಕತ್ತಲೆ] ತುಂಬಿರುತ್ತದೆ. ಆತ್ಮಬುದ್ಧಿಯಲ್ಲಿ ಮಾತ್ರ ಜ್ಞಾನದ ಪ್ರಕಾಶವೇ ಇರುತ್ತದೆ. ದೇಹಬುದ್ಧಿಯಿಂದಾಗಿ ಜೀವವು ದ್ವೈತದ ಹಿಡಿತದಲ್ಲಿ ಮತ್ತು ಭೇದಗಳ ಬಾಜಾರದಲ್ಲಿ ಕೈದಿಯಾಗಿರುವದು. ಅಂದರೆ ಸತ್ಯ-ಮಿಥ್ಯಾ, ಹರ್ಷ-ಶೋಕ, ನಾನು-ನೀನು, ನನ್ನದು-ನಿನ್ನದು ಅನ್ನುವ ದ್ವೈತ ಕಲ್ಪನೆಗಳೆಲ್ಲವೂ ಆತ್ಮಬುದ್ಧಿ ನಿರ್ಮಾಣವಾದ ಕೂಡಲೇ [ಉದಯವಾದ ಕೂಡಲೇ] ಮಾಯವಾಗುವವು ಜೀವದ ದ್ವೈತ ಕಲ್ಪನೆ ಭೇದ ಬುದ್ಧಿ ಭಿನ್ನ ಭಾವ, ಅಂದರೆ ಜೀವ ಶಿವರಲ್ಲಿ ಭೇದವನ್ನು ಕಲ್ಪಿಸುವ ಭಾವ ತತ್ಕಾಲದಲ್ಲಿ ಕಳಚಿ ಬೀಳುತ್ತದೆ. ಜೀವಕ್ಕೆ ಭೇದದಲ್ಲಿಯ ಅಭೇದತ್ವದ ಸಾಕ್ಷಾತ್‌ಜ್ಞಾನವಾಗುವದು. ಒಟ್ಟಿನಲ್ಲಿ ಅದ್ವೈತದ ಅನುಭವ ಬರುವದು. [೧೫] ಆತ್ಮಬುದ್ಧಿ (ಜೀವಬುದ್ಧಿ)ಯಲ್ಲಿ ಸುಖಕ್ಕೆ ಯಾವ ಕೊರತೆಯೂ ಇಲ್ಲ. ಅಪಾರ ಸುಖವು ಅಲ್ಲಿ ಸಿಗುತ್ತದೆ. [ಲಭಿಸುತ್ತದೆ] ಅಲ್ಲಿ ಮನಸ್ಸಿನ ಪ್ರವೇಶ [ಧುಡಂ ಪ್ರವೇಶ]ವಾಗುವದಿಲ್ಲ. ಆದರೆ ಮನದ ಹೊರತಾಗಿ ಸಾಧನೆಯು ಚಾಲೂ ಇರುತ್ತದೆ. [ಮನವಿಲ್ಲದೆ ಸಾಧನ ಮಾಡುವದು ಒಂದು ಯುಕ್ತಿ ಇರುವದು] ಎಲ್ಲಿಯವರೆಗೆ ಜೀವತನ ವಿರುವದೋ ಅಲ್ಲಿಯವರೆಗೆ ಮನವು ಮನಸ್ತತ್ವದಿಂದ-ಮನತನದಿಂದ ಇರುತ್ತದೆ. ಸುಖ ಭೋಗಿಸುವ ವಿಷಯದಲ್ಲಿ ಮನಸ್ಸಿನ ಶಕ್ತಿಯು ನಿಶ್ಚಯಿಸಿದ್ದಿರುವದು. ಇದರಿಂದ ಜೀವದ ಸುಖವೂ ಸಹ ಠರಾಯಿಸಿದ್ದಿರುತ್ತದೆ. [ಅಳತೆ ಮಾಡಿದ್ದಿರುವದು]. ಇದರಂತೆ ಮನವು ಮನಸ್ತತ್ವ [ಮನತನ]ದಿಂದ ಇರುವವರೆಗೆ "ನಾನು ಸಾಧನೆ ಮಾಡುವೆನು. ಈ ಭೂಮಿಕೆಯಿಂದ ಸಾಧಕನು ಅನುಸಂಧಾನದ ಧ್ಯಾನ,ಲಕ್ಷ್ಯ, ಅವಧಾನಗಳ ಅಭ್ಯಾಸ ಮಾಡುವನು. ಆದರೆ ಆತ್ಮಬುದ್ಧಿ ಪ್ರಕಾಶವಾದ ಮೇಲೆ ಜೀವವು ಶಿವವಾಗುವದು. ಅಲ್ಲಿ ಆಗ ಸುಖಕ್ಕೆ ಕೊರತೆಯೇ ಇಲ್ಲ. ಇದೆಲ್ಲವೂ ಅನುಸಂಧಾನ ರೂಪ ಇರುವದರಿಂದ ಭಿನ್ನ [ಪ್ರತ್ಯೇಕ]ತನದಿಂದ ಸಾಧನೆ ಇರುವದಿಲ್ಲ. (ಅಭಿನ್ನತನ ದಿಂದಲೇ ಸಾಧನೆ ಮಾಡಬೇಕಾಗುವದು. [೧೬] ಸ್ವಸ್ವರೂಪದ ಪ್ರಾಪ್ತಿಗಾಗಿ ಮನಸ್ಸು ಬೇಕಾಗುವದಿಲ್ಲ. ವಾಸನಾ ತೃಪ್ತಿ ಮಾಡದೇ ಅಲ್ಲಿ ತೃಪ್ತಿಯು ಲಾಭವಾಗುವದು. ಇಂಥ ಅವಸ್ಥೆಯ ಬಗ್ಗೆ ಕಲ್ಪನಾ ಮಾಡಿ ಅದನ್ನು ತಿಳಿಯುವದು-ಶಕ್ಯವೇ ಇಲ್ಲದ ಸತ್ಯ ಸಂಗತಿ ಇರುವದು ಸದ್ಯದ ಅವಸ್ಥೆಯಲ್ಲಿ ಮನಸ್ಸಿನ ಹೊರತು ನಮಗೆ ಅನುಭವ ಪಡೆಯಲು ಬರುವದಿಲ್ಲ. ವಾಸನಾ ತೃಪ್ತ ಮಾಡದ ಹೊರತು ಸಮಾಧಾನ ಸಿಗುವದಿಲ್ಲ. ಆದರೆ ಸ್ವರೂಪ ಸಾಕ್ಷಾತ್ಕಾರದಲ್ಲಿ ಮನವಿರದೆ ಅನುಭವ ಬರುತ್ತದೆ. ಮತ್ತು ವಾಸನಾ ಇಲ್ಲದೆ ಸಮಾಧಾನ ಸಿಗುತ್ತದೆ. [೧೭] ಸದ್ಯದ ಅನುಭವದ ಪ್ರಕಾರ ಯಾವುದು ಅಗದೀ ಅಖೈರದ್ದೆಂದು ನಾವು ತಿಳಿಯುವೆವೋ ಅವಕ್ಕಿಂತಲೂ ಆಚೆಗೆ ಬ್ರಹ್ಮಸ್ವರೂಪವಿರುವದು. ಪರಾವಾಣಿಯು ಆಚೆಗೆ ಇರುವದೂ ಅದರಂತೆಯೇ ಅದು ನಮ್ಮ ಮನದ ಮತ್ತು ಬುದ್ಧಿಯ ಅಳವನ್ನು ಮೀರಿ ಇರುತ್ತದೆ. ಆದರೆ ಮನುಷ್ಯನು ದೇಹದ ಸಂಬಂಧ ನಾನು [ಅನ್ನುವವನ್ನು] ಬಿಟ್ಟಿದ್ದಾದರೆ ಆ ಬ್ರಹ್ಮವು ತತ್ಕಾಲಕ್ಕೇ [ತಾಬಡ ತೋಬಡ] ಪ್ರಾಪ್ತವಾಗುವದು. [೧೮] ನಾವು ನಮ್ಮ ದೇಹ ಬುದ್ಧಿಯ ಸಂಬಂಧ ನಾನು ದೇಹ ಇರುವೆನು ಅನ್ನುವಕಲ್ಪನೆಯನ್ನು ಬಿಟ್ಟುಬಿಟ್ಟರೆ ಮಾತ್ರ ಬ್ರಹ್ಮಸ್ವರೂಪವನ್ನು ನೋಡಲಿಕ್ಕೆ[ಅನುಭವಿಸಲಿಕ್ಕೆ]ಬಂದೀತು? ಯಾರು ಸ್ವಾನುಭವಿಗಳಿರುವರೋ ಅವರು ನನ್ನ ಈ ಮಾತನ್ನು[ಹೇಳಿಕೆ] ಕೇಳಿ ಆನಂದ ಪಡುವರು. [೧೯] ಯಾವುದರ ಸಂಘ ತ್ಯಜಿಸಬೇಕಾಗಿದೆಯೋ ಅದು ನಾವು ಅಂದರೆ "ನಾನು" ಅನ್ನುವ ಅಹಂ ಎಂಬುದೇ ಇರುವದು.ಪರಂತು ನಾನು ಅಂದರೆ ಜೀವ ಪಣ [ಜೀವತನ]ವೆಂದು ಬೇರೆಹೇಳಬೇಕಾಗಿಲ್ಲ. ಸ್ವರೂಪಕ್ಕೆ ನಿಜರೂಪಕ್ಕೆಅಜ್ಞಾನದ ಸಂಬಂಧ ಬರುವಿಕೆಯು ಅಂದರೆ ಜೀವಪಣ[ಜೀವತನ] ಬರುವದೇ ಆಗಿರುವದೆಂದು ತಿಳಿಯಿರಿ. ವಾಸ್ತವಿಕವಾಗಿ ಸ್ವಸ್ವರೂಪವು ಸ್ವಯಂ ಪ್ರಕಾಶವುಳ್ಳದ್ದಾಗಿದೆ. ಪರಂತು ಅಜ್ಞಾನದೊಂದಿಗೆ ಸಂಬಂಧ ಬಂದದ್ದರಿಂದ ಅದರ ಜ್ಞಾನಕ್ಕೆ ಮುಸುಕು ಹಾಕಿದೆ.ಕತ್ತಲೆ ಆವರಿಸಿದೆ.ಮತ್ತು ಅದರ ವಿಶ್ವವ್ಯಾಪಿತ್ವ ಲೋಪವಾಗಿದೆ. "ನಾನು ಜೀವವಿರುವೆ, ಅಜ್ಞಾನಿ ಇರುವೆ, ದೇಹದ ಮಟ್ಟಿಗೆ ಮರ್ಯಾದಿತ ಇರುವೆ ಈ ಪ್ರಕಾರದಿಂದ ದೇಹಬುದ್ಧಿ ಹೆಚ್ಚುತ್ತದೆ.ದೇಹಬುದ್ಧಿಯನ್ನು[ಹಿಂದಕ್ಕೆ]ಬಾಜೂಕ್ಕೆ ಸರಿಸುವದೆಂದರೆ"ಅಹಂ"ದ ಸಂಗಬಿಡುವದೇ ಆಗಿರುವದು.[೨೦]

ಸೋಡಿತಾ ತಯಾ ಸಂಗಾಸೀ । ಏಕ್ಯ ಹೋಯೆ ನಿಃಸಂಗಾಸೀ ।
ಕಲ್ಪನೆವಿಣ ಪ್ರಾಪ್ತೀಸೀ । ಅಧಿಕಾರ ಐಸಾ ॥೨೦॥

ಮೀ ಕೋಣ ಐಸೇ ನೇಣಿಜೆ । ತಯಾ ನಾವ ಅಜ್ಞಾನ ಬೋಲಿಜೆ ।
ಅಜ್ಞಾನ ಗೇಲಿಯಾ ಪಾವಿಜೆ । ಪರಬ್ರಹ್ಮ ತೇ ॥೨೨॥

ದೇಹ ಬುದ್ಧೀಚೇ ಥೋರಪಣ । ಪರಬ್ರಹ್ಮೀ ನ ಚಲೇ ಜಾಣ ।
ತೇಥೇ ಹೋತಸೆ ನಿರ್ವಾಣ । ಅಹಂಭಾವಾಸೀ ॥೨೩॥

ಉಂಚ ನೀಚ ನಾಹೀ ಪರೀ । ರಾಯಾ ರಂಕಾ ಯೇಕೀಚ ಸರೀ ।
ಜಾಲಾ ಪುರುಷ ಅಥವಾ ನಾರೀ। ಯೇಕ ಚಿ ಪದ ॥೨೪॥

ಬ್ರಾಹ್ಮಣಾಚೇ ಬ್ರಹ್ಮ ತೇ ಸೋವಳೇ । ಶೂದ್ರಾಚೇ ಬ್ರಹ್ಮ ತೇ ವೋವಳೇ ।
ಐಸೇ ವೇಗಳೇ ಆಗಳೇ । ತೇಥೇ ಅಸೇಚಿನಾ ॥೨೫॥

ಉಂಚ ಬ್ರಹ್ಮ ತೇ ರಾಯಾಸೀ । ನೀಚ ಬ್ರಹ್ಮ ತೇ ಪರಿವಾರಾಸೀ ।
ಐಸಾ ಭೇದ ತಯಾಪಾಸೀ । ಮುಳೀ ಚ ನಾಹೀ ॥೨೬॥

ಸಕಳಾಸಿ ಮಿಳೋನ ಬ್ರಹ್ಮ ಯೇಕ । ತೇಥೇ ನಾಹೀ ಹೇ ಅನೇಕ ।
ರಂಕ ಅಥವಾ ಬ್ರಹ್ಮಾದಿಕ। ತೇಥೇ ಚಿ ಜಾತೀ ॥೨೭॥

ಸ್ವರ್ಗ ಮೃತ್ಯು ಆಣಿ ಪಾತಾಳ । ತಿಹೀ ಲೋಕೀಚೆ ಜ್ಞಾತೇ ಸಕಳ ।
ಸಕಳಾಸಿ ಮಿಳೋನ ಯೇಕ ಚಿ ಸ್ಥಳ । ವಿಶ್ರಾಂತೀಚೇ ॥೨೮॥

ಗುರೂಶಿಷ್ಯಾ ಯೇಕ ಚಿ ಪದ । ತೇಥೇ ನಾಹೀ ಭೇದಾಭೇದ ।
ಪರೀ ಯಾ ದೇಹಾಚಾ ಸಮಂಧ । ತೋಡಿಲಾ ಪಾಹಿಜೆ ॥೨೯॥

ದೇಹ ಬುದ್ಧೀಚಾ ಅಂತೀ । ಸಕಳಾಸಿ ಯೇಕಚಿ ಪ್ರಾಪ್ತೀ ।
ಯೇಕ ಬ್ರಹ್ಮ ದ್ವಿತೀಯಂ ನಾಸ್ತಿ । ಹೇ ಶ್ರುತಿ ವಚನ ॥೩೦॥

ಸಾಧು ದಿಸತೀ ವೇಗಳಾಲೆ । ಪರೀ ತೇ ಸ್ವರೂಪೀ ಮಿಳಾಲೇ।
ಅವಘೆ ಮಿಳೋನ ಯೇಕ ಚಿ ಜಾಲೆ। ದೇಹಾತೀತ ವಸ್ತು ॥೩೧॥

ಜೀವತನದ ಸಂಬಂಧ ಬಿಟ್ಟುಕೊಡಲೇ ಸಂಬಂಧರಹಿತವಾದ ಬ್ರಹ್ಮಸ್ವರೂಪದೊಂದಿಗೆ ಐಕ್ಯತ್ವವು ಒದಗಿ ಬರುವದು. ಕಲ್ಪನೆಯನ್ನು ಹಿಂದಕ್ಕೆ ಕಿತ್ತೆಸೆದರೆ ಆಗ ಮೇಲೆ ಹೇಳಿದ ರೀತಿಯಿಂದ ಸ್ವರೂಪದೊಂದಿಗೆ ತದಾತ್ಮ್ಯ ಹೊಂದುವ ಅಧಿಕಾರ ಬರುವದು. ಸಾಮರ್ಥ್ಯ ಪ್ರಾಪ್ತವಾಗುವದು. (೨೧) "ನಾನು ನಿಜವಾಗಿ ಯಾರಿರುವೆನು?" ಇದು ತಿಳಿಯದಿರುವದಕ್ಕೇ ಅಜ್ಞಾನವೆನ್ನುವರು. ಈ ಅಜ್ಞಾನ ಇಲ್ಲದಂತಾದ ಕೂಡಲೇ ಪರಬ್ರಹ್ಮವು ಹಸ್ತಗತ ವಾಗುವದು. (೨೨) ದೇಹಬುದ್ಧಿಯ ದೊಡ್ಡಿಸ್ತನವು ಅದು ಎಷ್ಟೇ ಮಹತ್ವದ್ದಿದ್ದರೂ ಸಹ ಬ್ರಹ್ಮ ಸ್ವರೂಪದ ಮುಂದೆ ಅದಕ್ಕೆ ಎಷ್ಟೂ ಕಿಮ್ಮತ್ತಿಲ್ಲ ಯಾಕಂದರೆ ಬ್ರಹ್ಮಸ್ವರೂಪದ ವಿಷಯದಲ್ಲಿ ದೇಹದ ಅಹಂಭಾವವನ್ನು ಎಷ್ಟೂ ಇಲ್ಲದಂತೆ ಸಾಫ ಮಾಡಬೇಕಾಗುತ್ತದೆ. (೨೩) ಬ್ರಹ್ಮ ಸ್ವರೂಪದಲ್ಲಿ ಉಚ್ಚ ನೀಚ (ಶ್ರೇಷ್ಠ-ಕನಿಷ್ಠ) ಎಂಬ ಭೇದವಿಲ್ಲ. ಅಲ್ಲಿ ರಾಜ ಮತ್ತು ರಂಕ ಎಲ್ಲರೂ ಒಂದೇ ಆಗಿರುವರು. ಸ್ತ್ರೀ ಅಥವಾ ಪುರುಷರೆಂಬ ಭೇದವಿಲ್ಲದೆ ಎಲ್ಲರಿಗೂ ಬ್ರಹ್ಮಪದ ಒಂದೇ ಆಗಿರುವದು. (೨೪) ಬ್ರಾಹ್ಮಣರ-ಬ್ರಹ್ಮ ಮಡಿವಂತ, ಮತ್ತು ಶೂದ್ರರ-ಬ್ರಹ್ಮ ಮೈಲಿಗೆಯದು ಎಂಬ ಹಲಕಾ ಪ್ರಕಾರದ ಸಣ್ಣ ದೊಡ್ಡ ಭೇದ ಸಹ ಬ್ರಹ್ಮದಲ್ಲಿ ಇರುವದಿಲ್ಲ. (೨೫) ರಾಜನಿಗೆ ಉತ್ತಮ ಬ್ರಹ್ಮ ಮತ್ತು ಅವನ ಪರಿವಾರದಲ್ಲಿಯ ನೌಕರರಿಗೆ ಕಡಿಮೆ ತರಗತಿಯ ಅಥವಾ ಹಗುರಾದ (ಹಲಕಾ) ಬ್ರಹ್ಮ ಈ ಪ್ರಕಾರದ ಭೇದವೆಂಬುದು ಇಲ್ಲವೇ ಇಲ್ಲ. (೨೬) ಎಲ್ಲ ಜೀವಗಳಿಗೂ ಒಬ್ಬನೇ ಒಬ್ಬ ಬ್ರಹ್ಮನಿರುತ್ತಾನೆ. ಇದರಲ್ಲಿ ಅನೇಕ ಪ್ರಕಾರಗಳಿಲ್ಲ. ಅಗದೀ ರಂಕ (ಬಡವ) ಇರಲಿ, ಬ್ರಹ್ಮಾದಿಕ ದೇವರೇ ಇರಲಿ ಸರ್ವಜನರೂ (ಇವರೆಲ್ಲರೂ) ಒಬ್ಬನೇ ಒಬ್ಬನಾದ ಪರಬ್ರಹ್ಮನಲ್ಲಿ ಹೋಗಿ ಕೂಡುವರು. ಶ್ರೀ ಸಮರ್ಥರ ತತ್ವದ ದೃಷ್ಟಿಯು ಎಷ್ಟು ವ್ಯಾಪಕ,ಭೇದರಹಿತ, ಸೂಕ್ಷ್ಮ ಮತ್ತು ಅತಿ ಮಾನವಿ ಇರುವದೆಂಬುದರ ಕಲ್ಪನೆ ಇಲ್ಲಿ ಬರುತ್ತದೆ. ಮಾನವೀ ಜೀವನವು ಅನೇಕ ಭೇದ ಭಿನ್ನತ್ವ ಪ್ರಕಾರಗಳಿಂದ ತುಂಬಿದೆ. ಆದರೆ ಅದೇ ಸ್ವಸ್ವರೂಪಾನುಭವವು ಅಭೇದ (ಏಕತ್ವ) ದಿಂದ ತುಂಬಿರುವದು. ಇವೆರಡರ ಸಾದೃಶ್ಯ ತೋರಿಸುವಲ್ಲಿ ಶ್ರೀಸಮರ್ಥರ ಖರೇ ಚತುರತನ ಪ್ರಕಟಗೊಂಡಿದೆ.(೨೭) ಸ್ವರ್ಗ, ಮೃತ್ಯು, ಪಾತಾಳ ಈ ಮೂರು ಲೋಕದಲ್ಲಿಯ ಸರ್ವ ಆತ್ಮಜ್ಞಾನಿ ಪುರುಷರಿಗೆಲ್ಲ ಕೂಡಿ ವಿಶ್ರಾಂತಿಯ ಒಂದೇ ಒಂದು ಸ್ಥಾನವಿರುವದು. ಅದು ಯಾವುದೆಂದರೆ ಪರಬ್ರಹ್ಮನೇ ಎಂದು ತಿಳಿಯಬೇಕು (೨೮) ಸದ್ಗುರುವಿಗೆ ಯಾವ ಬ್ರಹ್ಮಪದ ದೊರಕಿದೆಯೋ ಅದೇ ಬ್ರಹ್ಮಪದವು ಸತ್‌ಶಿಷ್ಯ (ಕೃಪೆ ಪಡೆದವ)ನಿಗೆ ಸಹ ಪ್ರಾಪ್ತವಾಗುವದು. ಇದರಲ್ಲಿ ಭೇದಭಾವವಿರುವದಿಲ್ಲ. ಇರಲಿ, ಯಾರೇ ಇರಲಿ, ಅವರಿಗೆ ಬ್ರಹ್ಮಪದ ಪ್ರಾಪ್ತವಾಗಬೇಕಾದರೆ ಶರೀರದ "ನಾನು, ನನ್ನದು" ಎಂಬ ತನ್ನತನದ ಸಂಬಂಧ ಕಡಿಯದ ಹೊರತು ಸಾಧ್ಯವಿಲ್ಲ. (೨೯) ಯಾರ ದೇಹಬುದ್ಧಿಯ ಅಂತ್ಯ, ಕೊನೆ, ಒದಗಿ ಬರುವದೋ ಆ ಎಲ್ಲರಿಗೂ ಒಂದೇ ಬ್ರಹ್ಮ ಪ್ರಾಪ್ತವಾಗುವದು. "ಬ್ರಹ್ಮವು ಒಂದೇ ಒಂದಾದ ಅದ್ವಿತೀಯ ಇರುವದು" [ಏಕಂ ಬ್ರಹ್ಮ ದ್ವಿತೀಯಂ ನಾಸ್ತಿ] ಇದು ಶ್ರುತಿಯ ಪ್ರಸಿದ್ಧ ವಚನವಿರುವದು. (೩೦) ಸಾಧು ಸಂತರು (ಪುರುಷರು, ಸ್ತ್ರೀಯರು) (ದೇಹದಿಂದ ದೇಹ, ಪಂಥ, ನಡತೆ ನಡಾವಳಿ ಗಳಿಂದ) ಬೇರೆ ಬೇರೆಯಾಗಿ ಕಂಡರೂ ಅಂತರಂಗದ ದೃಷ್ಟಿಯಿಂದ ಇವರೆಲ್ಲ ಒಂದೇ ಆತ್ಮ ಸ್ವರೂಪದಲ್ಲಿ ಕೂಡಿ ಹೋಗುವರು. ಸ್ವರೂಪದಲ್ಲಿ ಕೂಡಿ (ಒಂದಾದ)ದ ಕೂಡಲೇ ಎಲ್ಲರೂ ಕೂಡಿ ಒಂದೇ ದೇಹದ ಆಚೆಗೆ ಇರುವ ಬ್ರಹ್ಮ ವಸ್ತುವೇ ಆಗಿ ಹೋಗುವರು. (೩೧)

ಬ್ರಹ್ಮ ನಾಹೀ ನವೇ ಜುನೇ। ಬ್ರಹ್ಮ ನಾಹೀ ಅಧಿಕ ಉಣೇ।
ಉಣೇ ಭಾವಿಲ ತೇ ಸುಣೇ। ದೇಹ ಬುದ್ಧೀಚೇ ॥೩೨॥

ದೇಹ ಬುದ್ಧೀಚಾ ಸಂಶಯೋ। ಕರೀ ಸಮಾಧಾನಾಚಾ ಕ್ಷಯೋ।
ಚುಕೆ ಸಮಾಧಾನ ಸಮುಯೋ। ದೇಹ ಬುದ್ಧೀಯೋಗೇ ॥೩೩॥

ದೇಹಾಚೇ ಜೇ ಥೋರಪಣ। ತೇಚಿ ದೇಹ ಬುದ್ಧೀಚೇ ಲಕ್ಷಣ।
ಮಿಥ್ಯಾ ಜಾಣೋನಿ ವಿಚಕ್ಷಣ। ನಿಂದಿತೀ ದೇಹೋ ॥೩೪॥

ದೇಹ ಪಾವೆ ಜವರೀ ಮರಣ। ತವರೀ ಧರೀ ದೇಹಾಭಿಮಾನ।
ಪುನ್ಹಾ ದಾಖವೀ ಪುನರಾಗಮನ। ದೇಹಬುದ್ಧಿ ಮಾಗುತೀ ॥೩೫॥

ದೇಹಾಚೆನಿ ಥೋರಪಣೇ। ಸಮಾಧಾನಾಸೀ ಆಲೇ ಉಣೇ।
ದೇಹೋ ಪಡೇಲ ಕೋಣ್ಯಾ ಗುಣೇ। ಹೇ ಹಿ ಕಳೇನಾ ॥೩೬॥

ಹಿತ ಆಹೆ ದೇಹಾತೀತ। ಮ್ಹಣೌನಿ ನಿರೋಪಿತೀ ಸಂತ।
ದೇಹ ಬುದ್ಧೀನೇ ಅನ್ಹಿತ। ಹೋ ಚಿ ಲಾಗೇ ॥೩೭॥

ಸಾಮರ್ಥ್ಯಬಳೇ ದೇಹಬುದ್ಧೀ। ಯೋಗಿಯಾಸಿ ತೇ ಹಿಬಾಧೀ।
ದೇಹ ಬುದ್ಧೀಚೀ ಉಪಾಧೀ। ಪೈಸಾವೋ ಲಾಗೇ ॥೩೮॥

ಮ್ಹಣೌನಿ ದೇಹ ಬುದ್ಧಿ ಹೇ ಝುಡೇ। ತರೀ ಚ ಪರಮಾರ್ಥ ಘಡೇ।
ದೇಹ ಬುದ್ಧೀನೆ ವಿಘಡೇ। ಐಕ್ಯತಾ ಬ್ರಹ್ಮೀಚೀ ॥೩೯॥

ಬ್ರಹ್ಮವು ಹೊಸದಲ್ಲ, ಹಳೆಯದೂ ಅಲ್ಲ ಹೊಸದು ಹಳೆಯದೆಂಬುದು ಕಾಲಭೇದ ಸೂಚಕ ವಿರುವದು. ಇದುಸದ್ವಸ್ತುವಿನ ವಿಷಯದಲ್ಲಿ ಇಲ್ಲ. (ಇದಕ್ಕೆ ಲಾಗೂ ಇಲ್ಲ).ಬ್ರಹ್ಮ ಅಧಿಕವಿಲ್ಲ.ಕಡಿಮೆಯೂ ಇಲ್ಲ. ಹೆಚ್ಚು ಕಡಿಮೆಎಂಬುದು ಪ್ರಮಾಣಭೇದವಿರುವದು. ಇದು ಸದ್ವಸ್ತುವಿನಲ್ಲಿ ಇಲ್ಲ. ಬ್ರಹ್ಮದಲ್ಲಿ ನ್ಯೂನತೆ ಅಪೂರ್ಣತೆ ಇರುವದೆಂದು ಯಾರಿಗೆ ಅನಿಸುವದೋ ಅವರು ಎಂಥವರೇ ಇರಲಿ ದೇಹಬುದ್ಧಿಯ ನಾಯಿ ಆಗಿರುವರು. ಸದ್ವಸ್ತುವಿನಲ್ಲಿ ಅಪೂರ್ಣತೆಯನ್ನು ಕಾಣುವ ನೋಡುವ ಮನುಷ್ಯನು ಸ್ವತಃ ಅಜ್ಞಾನಿ ಆಗಿರುವನು. (೩೨) ದೇಹಬುದ್ಧಿಯಲ್ಲಿ ಅವಿದ್ಯೆ, ಅಜ್ಞಾನ, ಭ್ರಾಮಕ ಜ್ಞಾನದ ವಿಲಾಸದ ಬೆಡಗಿರುವದು ಅವಿದ್ಯೆ ಅನೇಕ ಸಂಶಯಗಳಿಗೆ ಜನ್ಮ ಕೊಡುವದು. ಈ ಸಂಶಯವೇ ಸಮಾಧಾನ,ತೃಪ್ತಿ,ಸಂಶಯದ ನಿವೃತ್ತಿ,ಯೋಗದ ಒಂದು ಅವಸ್ಥೆ,ಇವುಗಳನ್ನು ನಾಶಮಾಡುವದು ನಿಜ ಹೇಳುವದಾದರೆ ದೇಹಬುದ್ಧಿಯ ಯೋಗದಿಂದ ಸಮಾಧಾನದ ಸಂಧಿ ಅನುಕೂಲ ಕಾಲದ ಅರ್ಥಾತ್-ಸುಯೋಗದ ಸಮಯ ತಪ್ಪಿ ಹೋಗುತ್ತದೆ. (೩೩) "ನಾನು ದೇಹವೇ ಇರುವೆನು" ಈ ದೃಢಭಾವನೆ ಇರುವದೇ ದೇಹಬುದ್ಧಿಯನಿಸುವದು. "ನಾನು ಆತ್ಮವೇ ಇರುವೆನು" ಈ ರೀತಿಯ ದೃಢಭಾವನೆ ಆಗುವದೇ ಆತ್ಮ ಬುದ್ಧಿ ಎನಿಸುವದು. ದೇಹಬುದ್ಧಿ, ಇದು ಜ್ಞಾನದ ಪ್ರಮುಖ ಲಕ್ಷಣವಿರುವದು. ಅದೇ ಆತ್ಮಬುದ್ಧಿ ಇದು ಆತ್ಮಜ್ಞಾನದ ಪ್ರಧಾನ ಲಕ್ಷಣವಿರುವದು. ದೇಹಬುದ್ಧಿಯ ಪ್ರಾಬಲ್ಯ [ಜೋರು]ದಿಂದ ಜೀವ ಆಕುಂಚಿತವಾಗಿ ದೃಶ್ಯದ ಬೆನ್ನು(ನಾದಿಗೆ)ಹತ್ತುವದು. ಆದರೆ ಇದೇ ಜೀವವು ಆತ್ಮಬುದ್ಧಿಯ ಪ್ರಭಾವದಿಂದ ವಿಶಾಲವಾಗುವದಲ್ಲದೆ ಬ್ರಹ್ಮಸ್ವರೂಪದೊಂದಿಗೆ ಸಮರಸವಾಗಿ ಹೋಗುತ್ತದೆ. ದೇಹ ಬುದ್ಧಿ ಇದು ಬಹು ಹಳೆಯದು.ಇದು ಬಿಡಬೇಕೆಂದರೆ ಬಿಡುವದೂ ಇಲ್ಲ. ಬಹು ಹಟಮಾರಿ.ಇನ್ನೂ ಸ್ಪಷ್ಟವಾಗಿ ಹೇಳುವದಾದರೆ ಇದು ಆತ್ಮಬುದ್ಧಿಯ ನಿರ್ಮಾಣವಾಗುವ ಸಮಯದಲ್ಲಿ ಬಾರಿಬಾರಿಗೆ-ಹೆಜ್ಜೆ ಹೆಜ್ಜೆಗೆ ಅಡ್ಡ ಬರುತ್ತದೆ. ಅಡ್ಡಿಪಡಿಸುವ ಪ್ರಯತ್ನವನ್ನು ಸತತ ಮಾಡುತ್ತದೆ. ಅಂತೆಯೇ ಏನಾದರೂ ಮಾಡಿ ಜಿದ್ದಿನಿಂದ ದೇಹ ಬುದ್ಧಿಯನ್ನು ಇಲ್ಲದಂತೆ ಮಾಡಬೇಕೆಂದು ಶ್ರೀಸಮರ್ಥರು ಹೇಳುವರು:- ದೇಹವೇ ಸರ್ವಸ್ವವಿರುವದೆಂದು ಅನಿಸುವದೇ ದೇಹಬುದ್ಧಿಯ ಮುಖ್ಯ ಲಕ್ಷಣವಿರುವದು. ಪರಂತು ವಿಚಾರವಂತ (ಜಾಣ) ಜನರು ದೇಹದ ಅಸತ್ಯತೆ, ಖೋಟಾತನ ಮತ್ತು ಇದರ ಅಶಾಶ್ವತತನ ಇತ್ಯಾದಿಗಳನ್ನು ಅಗದೀ ಸರಿಯಾಗಿ ಗುರುತಿಸುವರು. ಮತ್ತು ಇದರಲ್ಲಿಯ ದೋಷಗಳನ್ನು ಹುಡುಕಿ ನೋಡುತ್ತಾರೆ. (೩೪) ದೇಹ ಬುದ್ಧಿಯು ದೇಹಕ್ಕೆ ಸಾಕಾಗಿ ಉಳಿಯುತ್ತದೆ. ಅದು ಹೇಗೆ ಉಳಿಯುವದೆಂಬುದನ್ನು ನೋಡಿರಿ. ದೇಹ ಜೀವಂತ ಇರುವಾಗ [ಜೀವ ಇರುವವರೆಗೆ] ಜೀವವು "ದೇಹವೆ ನಾನು" ಎಂಬ ಅಭಿಮಾನ ತಳೆಯುತ್ತದೆ. ದೇಹವು ಮರಣಾಧೀನವಾದ ನಂತರ ಇದೇ ದೇಹಬುದ್ಧಿಯು ಜೀವವುಪುನಃ ಜನ್ಮ ಹೊಂದುವದಕ್ಕೆ ಹಚ್ಚುವದು.[೩೫] ದೇಹ ಬುದ್ಧಿಯಿಂದಾಗಿ ದೇಹಕ್ಕೆ ವಿಶೇಷ ಮಹತ್ವ ಬಂದಿದೆ. [ಬರುವದು] ಆದರೆ ಈ ಕಾರಣದಿಂದಲೇಸಮಾಧಾನಕ್ಕೆ ನ್ಯೂನತೆ ಬರುವದು. ಇರಲಿ, ಯಾವ ದೇಹಕ್ಕೆ ಇಷ್ಟೊಂದು ಮಹತ್ವ ಕೊಡಲಾಗುವದೋ ಆ ದೇಹವು ಯಾವ ಕಾಲಕ್ಕೆ ಹೇಗೆ ಬಿದ್ದು ಹೋಗುವದೆಂಬುದನ್ನು ಹೇಳಲಿಕ್ಕೆ ಬರುವದಿಲ್ಲ. (೩೬) ದೇಹದ ಆಚೆಗೆ ಹೋಗುವದರಲ್ಲಿಯೇ ಜೀವದ ಕಲ್ಯಾಣವಿರುವದೆಂದು ಸಾಧು, ಸಂತರು ಹೇಳುವರು ಇದು ತ್ರಿಕಾಲಾಬಾಧಿತ ಸತ್ಯಮಾತಾಗಿದೆ. ದೇಹ ಬುದ್ಧಿ ಹೆಚ್ಚುವದರಿಂದ ನಮಗೇ ಹಾನಿ ಆಗುವ ದೆಂಬುದು ತೆರೆದಿಟ್ಟ ಮಾತಾಗಿದೆ. (೩೭) ದೇಹ ಬುದ್ಧಿಯಲ್ಲಿ ವಿಲಕ್ಷಣ ಅಗಾಧ ಶಕ್ತಿ ಇರುವದು ಯೋಗಿ ಜನರಿಗೆ ಸಹ ಇದು ತೊಂದರೆ ತ್ರಾಸು ಕೊಡುವದು ತನ್ನ ಅಧಿಕಾರ [ಛಾಪ, ವಜನ,ಹಿಡಿತ]ದ ಅಳವಿನಲ್ಲಿ ತಂದುಕೊಳ್ಳುತ್ತದೆ. ಅವರಿಂದ ಸಿದ್ಧಿಯ ಉಪಯೋಗ ಮಾಡಿಸಿ ಉಪಾಧಿ ಅಥವಾ ವ್ಯಾಪ ಬೆಳೆಸುವದು. ಇದೂ ಸಹ ದೇಹಬುದ್ಧಿಯ ಪ್ರಭಾವವಿರುವದು. (೩೮) ಒಟ್ಟಿನಲ್ಲಿ ದೇಹಬುದ್ಧಿ ಕ್ಷೀಣವಾದರೆ ಮಾತ್ರ ನಿಮ್ಮ ಕೈಯಿಂದ ಪರಮಾರ್ಥಸಾಧಿಸಲು ಸಾಧ್ಯವಾಗುವದು.ಇಲ್ಲದಿದ್ದರೆ ಇಲ್ಲ. ದೇಹಬುದ್ಧಿ ಇದ್ದರೆ ಬ್ರಹ್ಮನೊಂದಿಗೆ ಸಮರಸ ಹೊಂದಲುಸಾಧ್ಯವೇ ಇಲ್ಲ.(೩೯)

ವಿವೇಕ ವಸ್ತೂಕಡೆ ವೋಢೀ । ದೇಹಬುದ್ಧಿ ತೇಥೂನಿ ಸಾಡೀ ।
ಅಹಂತಾ ಲಾಊನ ನಿವಡೀ । ವೇಗಳೀ ಪಣೇ ॥೪೦॥

ವಿಚಕ್ಷಣೇ ಯಾಕಾರಣೇ । ದೇಹಬುದ್ಧಿ ತ್ಯಜಾವೀ ಶ್ರವಣೇ ।
ಸತ್ಯಬ್ರಹ್ಮೀ ಸಾಚಾರಪಣೇ । ಮಿಳೋನ ಜಾವೇ ॥೪೧॥

ಸತ್ಯಬ್ರಹ್ಮ ತೇ ಕವಣ । ಐಸಾ ಶ್ರೋತಾ ಕರೀ ಪ್ರಶ್ನ ।
ಪ್ರತ್ಯೋತ್ತರ ದೇ ಆಪಣ । ವಕ್ತಾ ಶ್ರೋತಯಾಸೀ ॥೪೨॥

ಮ್ಹಣೆ ಬ್ರಹ್ಮ ಯೇಕ ಚಿ ಅಸೇ। ಪರೀ ತೇ ಬಹುವಿಧ ಭಾಸೇ।
ಅನುಭವ ದೇಹೀ ಅನಾರಿಸೇ । ನಾನಾ ಮತೀ ॥೪೩॥

ಜೇ ಜೇ ಜಯಾ ಅನುಭವಲೇ । ತೇ ಚಿ ತಯಾಸಿ ಮಾನಲೇ ।
ತೇಥೇ ಚಿ ತ್ಯಾಚೇ ವಿಸ್ವಾಸಲೇ । ಅಂತಃಕರ್ಣ ॥೪೪॥

ಬ್ರಹ್ಮ ನಾಮರೂಪಾತೀತ । ಅಸೋನಿ ನಾಮೇ ಬಹುತ ।
ನಿರ್ಮಳ ನಿಶ್ಚಳ ನಿವಾಂತ । ನಿಜಾನಂದ ॥೪೫॥

ಆತ್ಮಾನಾತ್ಮ ವಿವೇಕ (ಸಾರಾಸಾರ ವಿವೇಕವು) ಜೀವನನ್ನು (ಸಾಧಕನನ್ನು) ಪರಮಾತ್ಮ ವಸ್ತುವಿನ ಕಡೆಗೆ ಬರುವಂತೆ ಜಗ್ಗುತ್ತದೆ. ಎಳೆಯುತ್ತದೆ. ಆದರೆ ದೇಹಬುದ್ಧಿಯು ಇದನ್ನು ತಡೆದು ಹಿಂದಕ್ಕೆ ಎಳೆಯುತ್ತದೆ. ಇದರಿಂದ ಜೀವವು ಅಲ್ಲಿಯವರೆಗೆ [ವಸ್ತುವಿನತನಕ] ಬಂದು ಮುಟ್ಟಲು ಶಕ್ಯವಾಗುವದಿಲ್ಲ. ದೇಹ ಬುದ್ಧಿಯಿಂದ ಅಹಂಕಾರ ನಿರ್ಮಾಣವಾಗುವದು. ಮತ್ತು ಅದು ಜೀವವನ್ನು ಸದ್ವಸ್ತುವಿನಿಂದ ಬೇರೆ ಮಾಡುವದು. ಮತ್ತು ವಸ್ತುವಿನಿಂದ ನಿಜವಾಗಿಯೂ ಅದನ್ನು ಬದಿಗೆ ಕಿತ್ತೆಸೆಯುವದು. ಇದರ ಒಟ್ಟಾರ್ಥವು:-ಮೂಲತಃ ಜೀವವು ಬ್ರಹ್ಮ ಸ್ವರೂಪವೇ ಇದ್ದರೂ ಸಹ ಕೇವಲ ಅಹಂಕಾರದಿಂದ ಜೀವಕ್ಕೆ ಸದ್ವಸ್ತುವಿನಲ್ಲಿ ಕೂಡಿಕೊಂಡು ಹೋಗಲಿಕ್ಕೆ ಆಗುವದಿಲ್ಲ. "ಅಹಂ" ಇದು ಜೀವವನ್ನು ಶಿವದೊಂದಿಗೆ ಏಕರೂಪವಾಗಗೊಡುವದಿಲ್ಲ. [೪೦] ಮೇಲೆ ವಿವರಿಸಿದ್ದೆಲ್ಲವನ್ನು ಚನ್ನಾಗಿ ಲಕ್ಷ್ಯದಲ್ಲಿಟ್ಟುಕೊಂಡು ಜಾಣನಾದ [ಶಹಾಣೆ] ಸಾಧಕನು ಆಧ್ಯಾತ್ಮ ಶ್ರವಣ ಮಾಡಬೇಕು. ಹಾಗೂ ತನ್ನ ದೇಹಬುದ್ಧಿಯನ್ನು ಸಂಪೂರ್ಣವಾಗಿ ಬಿಡಬೇಕು. ಈ ಪ್ರಕಾರವಾಗಿ ನಡೆದು ಬ್ರಹ್ಮಸ್ವರೂಪದಲ್ಲಿ ಖರೋಖರ [ನಿಜವಾಗಿ, ಸತ್ಯವಾಗಿ] ಕೂಡಿ ಏಕರೂಪರಾಗಬೇಕು. ಅದರಲ್ಲಿ ಐಕ್ಯವಾಗಬೇಕು. [೪೧] ಈ ಸದ್ವಸ್ತು ಹೇಗೆ ಇರುವದು? ಎಂಬ ಪ್ರಶ್ನೆಯನ್ನು ಶ್ರೋತಾ ಪ್ರಶ್ನೆ ಮಾಡಿದನು. ಶ್ರೀ ಸಮರ್ಥರು ಅದರ ಬಗ್ಗೆ ಹೇಳುವದೇನೆಂದರೆ:- [೪೨] ವಾಸ್ತವಿಕವಾಗಿ ಪರಮಾತ್ಮ ವಸ್ತು ಅಗದೀ ಅಂದರೆ ಅಗದೀ ಒಬ್ಬನೇ ಒಬ್ಬನಿರುವನು. ಆದರೆ ಈ ವಸ್ತುವಿನ ಅನುಭವದಲ್ಲಿ ಎರಡು ಮಾತುಗಳನ್ನು ಅವಶ್ಯವಾಗಿ ಲಕ್ಷ್ಯದಲ್ಲಿಟ್ಟುಕೊಳ್ಳಬೇಕು. ಮೊದಲನೆಯ ಮಾತೆಂದರೆ:- ಬ್ರಹ್ಮವು ಸರ್ವದೃಷ್ಟಿಯಿಂದ ಅನಂತವಿರುವದು. ಇವನಲ್ಲಿ ಅನಂತ ಗುಣ ಮತ್ತು ಶಕ್ತಿಯೂ ಸಹ ಅನಂತ ಪ್ರಮಾಣದಲ್ಲಿ ವಾಸ ಮಾಡುವದು. ಪ್ರತಿಯೊಬ್ಬ ಮನುಷ್ಯನ ಮನೋರಚನೆಯಲ್ಲಿ ಭಿನ್ನ-ಭಿನ್ನ ಪ್ರಕಾರಗಳಿರುವದರಿಂದ ಪ್ರತಿಯೊಬ್ಬ ಮನುಷ್ಯನಿಗೆ ಬ್ರಹ್ಮನ ಬೇರೆ ಬೇರೆ ಅಂಗಗಳ ಬಗ್ಗೆ ವಿಶೇಷ ಪ್ರಕಾರದ ಅನುಭವ ಬರುವದು ಕೆಲವರಿಗೆ ಇವನ ಅನಂತಪಣ[ತನ]ದ ಬಗ್ಗೆ ಅನುಭವ ಬಂದರೆ ಕೆಲವರಿಗೆ ಇವನ ಅಲಿಪ್ತತನದ ಬಗ್ಗೆಯೇ ಅನುಭವ ಆಗುತ್ತದೆ. ಕೆಲವರಿಗೆ ಇವನ ನಿವಾಂತತನದ ಬಗ್ಗೆ ಅನುಭವವು ಬರುವದು ಕೆಲವರಿಗೆ ಇವನ ಸರ್ವಜ್ಞತ್ವದ ಬಗ್ಗೆ ಅನುಭವವಾಗುತ್ತದೆ. ಮತ್ತೆ ಕೆಲವರಿಗೆ ಇವನ ಸತ್ತಾ [ಅಧಿಕಾರ]ರೂಪದ ಜಬರದಸ್ತ ಶ್ರೇಷ್ಠ-ಪ್ರಚೀತಿಯ-ಅನುಭವ ಬರುತ್ತದೆ. ಈ ಅನುಭವ ಬಂದ ಮೇಲೆ [ಅನುಭವಿಗಳು, ಸಾಧು ಸಂತರು] ತಮಗೆ ಅನುಭವ ಬಂದಂತೆ ಆಯಾ ಹೆಸರನ್ನು ಬ್ರಹ್ಮನಿಗೆ ಕೊಟ್ಟರು. ಇನ್ನು ಎರಡನೆಯ ಮಾತೆಂದರೆ ಅತ್ಯಂತ ಶುದ್ಧ ಮತ್ತು ಕೇವಲ ಸ್ವರೂಪದಲ್ಲಿ ಬ್ರಹ್ಮನ ಅನುಭವ ಹೊಂದುವವರು ಬಹಳ ಕಡಿಮೆ ಇರುವರು. ಯಾರ ಅನುಭವ ಯಾವ ಮಟ್ಟದಲ್ಲಿ ಸ್ಥಿರವಾಗುವದೋ ಆ ಮಟ್ಟದ ಮೇಲಿಂದ ಆ ಮನುಷ್ಯರು ಬ್ರಹ್ಮನ ವರ್ಣನೆ ಮಾಡುವರು. ಇಂಥವರಲ್ಲಿ ಕೆಲವರು ಬ್ರಹ್ಮವು ನಾದರೂಪನೆಂದು ಕೆಲವರು ಜ್ಯೋತಿರೂಪನೆಂದು ಕೆಲವರು ಸಾಕ್ಷಿರೂಪನೆಂದು ಕೆಲವರು ಚೈತನ್ಯರೂಪ ಇರುವನೆಂದು ಹೇಳುವರು:- ಖರೇ ಹೇಳುವದಾದರೆ ವಾಸ್ತವಿಕವಾದ ಬ್ರಹ್ಮವು ಅಗದೀ ಒಂದೇ ಇರುವದು. ಈ ಒಂದೇ ಬ್ರಹ್ಮವು ಅನೇಕ ಪ್ರಕಾರಗಳಿಂದ ಭಾಸವಾಗುವದು. [ಸ್ಫುರಿಸು, ತೋಚು, ಹೊಳೆ, ಪ್ರಕಾಶಿಸು]. ಬೇರೆ ಬೇರೆ ಮನುಷ್ಯನ ಮನೋರಚನೆ ಬೇರೆ ಬೇರೆ ಪ್ರಕಾರದ್ದಾಗಿರುವದು. ಇದರಿಂದ ಅದೇ ಬ್ರಹ್ಮವು ಭಿನ್ನ ಪ್ರಕಾರದಿಂದ ಅನುಭವಕ್ಕೆ ಬರುವದು. [೪೩] ಮನುಷ್ಯನಿಗೆ ಯಾವ ಪ್ರಕಾರದಿಂದ ಬ್ರಹ್ಮವು ಅನುಭವಕ್ಕೆ ಬರುವದೋ ಅದೇ ಪ್ರಕಾರವು ಅವನಿಗೆ[ಅನುಭವ ಹೊಂದಿದವನಿಗೆ]ಖರೇ ಅನಿಸುವದು. ಅದೇ ಆ ಸ್ವರೂಪದ ಬಗ್ಗೆ ಅವನ ಅಂತಃಕರಣದಲ್ಲಿ ಖಾತ್ರಿ ಸಂಬಿಕೆ ನಿರ್ಮಾಣವಾಗುವದು. [೪೪] ನಿಜವಾಗಿಯೂ ಬ್ರಹ್ಮವು ನಾಮರೂಪಾದಿಗಳಿಂದ ಬೇರೆ [ನಾಮರೂಪಾತೀತ] ಇರುವದು. ಹೀಗೆ ಇರುವದು ನಿಜವಿದ್ದರೂ ಸಹ ಬ್ರಹ್ಮಗೆ ಅನೇಕ ಹೆಸರುಗಳಿರುವದು ಕಂಡು ಬರುವದು. (ಈ ಹೆಸರುಗಳನ್ನು ಅನೇಕ ಋಷಿಮುನಿಗಳು, ಸಾಧುಸಂತರು, ಶರಣರು ಅನೇಕ ಮತಪಂಥಗಳವರು ಇಟ್ಟಿರುವರು) ಉದಾ:- ಇವನು ನಿರ್ಮಲ, ನಿಶ್ಚಲ, ಅತ್ಯಂತ ಶಾಂತ ಮತ್ತು ಸದಾ ಸ್ವತಃದ ಆನಂದದಲ್ಲಿ ರಮಮಾಣ (ಆಸಕ್ತ)ವಾಗಿರುವಂಥ. (೪೫)

ಅರೂಪ ಅಲಕ್ಷ ಅಗೋಚರ। ಅಚ್ಯುತ ಅನಂತ ಅಪರಂಪಾರ।
ಅದೃಶ್ಯ ಅತರ್ಕ್ಯ ಅಪಾರ। ಐಸೀ ನಾಮೇ ॥೪೬॥
ನಾದರೂಪ ಜ್ಯೋತಿರೂಪ। ಚೈತನ್ಯರೂಪ ಸತ್ತಾರೂಪ।
ಸಾಕ್ಷರೂಪ ಸಸ್ವರೂಪ। ಐಸೀ ನಾಮೇ ॥೪೭॥
ಸುನ್ಯ ಆಣೀ ಸನಾತನ। ಸರ್ವೇಶ್ವರ ಆಣೀ ಸರ್ವಜ್ಞ।
ಸರ್ವಾತ್ಮಾ ಜಗಜೀವನ। ಐಸೀ ನಾಮೇ ॥೪೮॥
ಸಹಜ ಆಣೀ ಸದೋದಿತ। ಶುದ್ಧಬುದ್ಧ ಸರ್ವಾತೀತ।
ಶಾಶ್ವತ ಆಣೀ ಶಬ್ದಾತೀತ। ಐಸೀ ನಾಮೇ ॥೪೯॥
ವಿಶಾಳ ವಿಸ್ತೀರ್ಣ ವಿಶ್ವಂಭರ। ವಿಮಳ ವಸ್ತು ವ್ಯೋಮಾಕಾರ।
ಆತ್ಮಾ ಪರಮಾತ್ಮಾ ಪರಮೇಶ್ವರ। ಐಸೀ ನಾಮೇ ॥೫೦॥
ಪರಮಾತ್ಮಾ ಜ್ಞಾನ ಘನ। ಯೇಕರೂಪ ಪುರಾತನ।
ಚಿದ್ರೂಪ ಚಿನ್ಮಾತ್ರ ಜಾಣ। ನಾಮೇ ಅನಾಮ್ಯಾಚೀ ॥೫೧॥
ಐಸೀ ನಾಮೇ ಅಸಂಖ್ಯಾತ। ಪರೀ ತೋ ಪರೇಶ ನಾಮಾತೀತ।
ತ್ಯಾಚಾ ಕರಾವಾ ನಿಶ್ಚಿತಾರ್ಥ। ಠೇವಿಲೀ ನಾಮೇ ॥೫೨॥
ತೋ ವಿಶ್ರಾಂತೀಚಾ ವಿಶ್ರಾಮು। ಆದಿಪುರುಷ ಆತ್ಮಾರಾಮು।
ತೇ ಯೇಕ ಚಿ ಪರಬ್ರಹ್ಮ। ದುಸರೇ ನಾಹೀ ॥೫೩॥
ತೇಚಿ ಕಳಾಯಾ ಕಾರಣೇ। ಚೌದಾ ಬ್ರಹ್ಮಾಂಚೀ ಲಕ್ಷಣೇ।
ಸಾಂಗಿಜೇತೀ ತೇಣೇ ಶ್ರವಣೇ। ನಿಶ್ಚಯೋ ಬಾಣೇ ॥೫೪॥
ಖೋಟೇ ನಿವಡಿತಾ ಯೇಕ ಸರೇ। ಉರಲೇ ತೇ ಜಾಣಿಜೆ ಖರೇ।
ಚೌದಾ ಬ್ರಹ್ಮೇ ಶಾಸ್ತ್ರಾಧಾರೇ। ಬೋಲಿಜೇತೀ ॥೫೫॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಬ್ರಹ್ಮ ನಿರೂಪಣ' ನಾಮ ಸಮಾಸ ದ್ವಿತೀಯು ॥

ಬ್ರಹ್ಮ ಅಪರೂಪದ್ದಿರುವದು, ಯಾಕಂದರೆ ಇದಕ್ಕೆ ರೂಪವಿಲ್ಲ. ಅಲಕ್ಷ್ಯ ಇರುವದು. ಯಾಕಂದರೆ ಇದಕ್ಕೆ ನೋಡಲಿಕ್ಕೆ ಬರುವದಿಲ್ಲ. ಅಗೋಚರ ಇರುವದು. ಯಾಕಂದರೆ-ಇಂದ್ರಿಯಗಳಿಗೆ ಹೊಳೆಯುವದಿಲ್ಲ. ಅಚ್ಯುತ ಇರುವದು ಯಾಕಂದರೆ-ಸ್ಥಾನ ಬಿಡುವದಿಲ್ಲ. ಅನಂತ ಇರುವದು-ಯಾಕಂದರೆ ಇದರ ಆದಿ ಮತ್ತು ಅಂತವು ತಿಳಿಯುವದಿಲ್ಲ. ಅಪರಂಪಾರ-ಇರುವದು, ಯಾಕಂದರೆ-ಇದಕ್ಕೆ ಯಾವ ಮರ್ಯಾದೆ ಸೀಮೆ, ಹದ್ದು ಇರುವದಿಲ್ಲ ಅದೃಶ್ಯ ಇರುವನು-ಯಾಕಂದರೆ-ಯಾರಿಗೂ ಕಾಣುವದಿಲ್ಲ, ಅತರ್ಕ್ಯ ಇರುವನು ಯಾಕೆಂದರೆ-ತರ್ಕ ಮಾಡಲಿಕ್ಕೆ ಶಕ್ಯವಿಲ್ಲ. ಮತ್ತು ಅಪಾರ ಇರುವನು ಯಾಕಂದರೆ ಪಾರವಿಲ್ಲದ, ಆಳತೆ ಇಲ್ಲದವ ಇರುವನು. ಬ್ರಹ್ಮನಿಗೆ ಹೀಗೆ ಹೆಸರುಗಳಿರುವವು. (೪೬) ಬ್ರಹ್ಮವು ನಾದರೂಪವಿರುವದು, ಜ್ಯೋತಿ ರೂಪವಿರುವದು, ಚೈತನ್ಯರೂಪವಿರುವದು ಸತ್ತಾರೂಪ ಇರುವದು. ಸಾಕ್ಷಿರೂಪ ಇರುವದು, ಸ್ವಸ್ವರೂಪ ಇರುವದು.(೪೭)ಇದು ಶೂನ್ಯ ಇರುವದು. ಸನಾತನ ಇರುವದು. ಸರ್ವೇಶ್ವರ ಇರುವದು, ಸರ್ವಜ್ಞ ಇರುವದು.ಸರ್ವಾತ್ಮ ಇರುವದು.ಜಗದ ಜೀವನ ಇರುವದು.(೪೮) ಇದು ಸಹಜ ಸ್ವಾಭಾವಿಕ (ನೈಜವಾದದ್ದು) ಇರುವದು, ಸದೋದಿತ (ಯಾವಾಗಲೂ) ಇರುವದು, ಶುದ್ಧ, ಬುದ್ಧ ಚೈತನ್ಯ ಜ್ಞಾನ, ಜ್ಞಾತಾ ಇರುವದು, ಸರ್ವಾತೀತ ಇರುವದು, ಶಾಶ್ವತವಾದದ್ದಿರುವದು. ಶಬ್ದದ ಆಚೆಗೆ (ಶಬ್ದಕ್ಕೆ ನಿಲುಕದ್ದು) ಇರುವದು, (೪೯) ಇದು ವಿಶಾಲವಿರುವದು, ವಿಸ್ತೀರ್ಣ ಇರುವದು. ವಿಶ್ವವನ್ನೆಲ್ಲ ತುಂಬಿರುವದು. ಆಕಾಶದಂತೆ ಶುಭ್ರ ಸ್ವಚ್ಛ ಇರುವದು. ಆತ್ಮಾ, ಪರಮಾತ್ಮಾ, ಮತ್ತು ಪರಮೇಶ್ವರ ಇರುವದು. (೫೦) ಇದು ಪರಾತ್ಪರ ಪರಮಾತ್ಮಾ ಇರುವದು, ಇದು ಒಳಗೂ ಹೊರಗೂ ಜ್ಞಾನದಿಂದ ತುಂಬಿ ಕೊಂಡಿರುವದು. ಅಗದೀ ಏಕರೂಪ ಇರುವದು. ಬಹಳ ಪುರಾತನ ಇರುವದು. ಚಿದ್ರೂಪ (ಚೈತನ್ಯ ಸ್ವರೂಪ) ಇರುವದು. ಚಿನ್ಮಾತ್ರ (ಜ್ಞಾನ ಸ್ವರೂಪ) ಇರುವದು. ಯಾವ ಬ್ರಹ್ಮಗೆ ಹೆಸರು ಇಡಲಿಕ್ಕೆ ಬರುವದಿಲ್ಲವೋ ಅಂಥ ಅನಾಮ (ಹೆಸರಿಲ್ಲದ) ಬ್ರಹ್ಮಗೆ ಇಷ್ಟೆಲ್ಲ ಹೆಸರುಗಳು ಇರುವವು. ಇದನ್ನು ಜ್ಞಾಪಕದಲ್ಲಿಟ್ಟುಕೊಳ್ಳಿರಿ.[೫೧] ಬ್ರಹ್ಮಗೆ ಇಷ್ಟೆಲ್ಲ ಅಸಂಖ್ಯ ಹೆಸರುಗಳಿರುವವು. ಇದೆಲ್ಲ ನಿಜವಿದ್ದರೂ ಬ್ರಹ್ಮವು ಪರಮೇಶ್ವರ ಎಂಬ ಹೆಸರಿನ ಆಚೆಗೆ ಇರುವದು. ಆದರೆ ಇವನ ಸ್ವರೂಪದ ಬಗ್ಗೆ ಏನಾದರೂ ಸ್ವಲ್ಪ ನಿಶ್ಚಿತ ಕಲ್ಪನೆ ಬರಲೆಂದು ಇಷ್ಟೆಲ್ಲ ಹೆಸರನ್ನು ಬ್ರಹ್ಮದ ಬಗೆಗೆ ಹೇಳಿದ್ದಾರೆ. [೫೨] ಎಲ್ಲಿ ವಿಶ್ರಾಂತಿಗೆ ಆರಾಮ ದೊರಕುವದೋ ಸಮಾಧಾನ ವಿರುವದೋ ಅಂಥ ಆದಿಪುರುಷನೇ ಈ ಬ್ರಹ್ಮ ಇರುವದು. ಆತ್ಮಾರಾಮನೇ ಇರುವನು. ಈ ಹೆಸರುಗಳು ಭಿನ್ನ ಭಿನ್ನ ಕಂಡರೂ ಒಬ್ಬನೇ ಒಬ್ಬ ಪರಬ್ರಹ್ಮವಿರುವದು. ಇದರ ಶಿವಾಯ [ಹೊರತು] ಎರಡನೆಯದು ಯಾವದೂ ಇರುವದಿಲ್ಲ. (೫೩) ಇದೆಲ್ಲ ತಿಳಿಯುವದಕ್ಕಾಗಿ ಈಗ ಹದಿನಾಲ್ಕು ಬ್ರಹ್ಮದ ಲಕ್ಷಣಗಳನ್ನು ಹೇಳುವೆನು. ಇವುಗಳ ಶ್ರವಣದಿಂದ ಬ್ರಹ್ಮಗೆ ಅನೇಕ ಹೆಸರುಗಳಿದ್ದರೂ ಸಹ ಬ್ರಹ್ಮವೆಂಬುದು ಒಂದೇ ಒಂದು ಮಾತ್ರ ಇರುವದೆಂಬ ತತ್ವವು ಮನದಲ್ಲಿ ದೃಢಗೊಳ್ಳುವದು. (೫೪) ಎಷ್ಟು ಖೊಟ್ಟಿ ಇರುವವೋ ಅಷ್ಟನ್ನೆಲ್ಲ ಆರಿಸಿ ತೆಗೆದು ಬಾಜೂಕ್ಕೆ ಸರಿಸಿ ಬಿಟ್ಟರೆ ಆನಂತರ ಯಾವುದು ಉಳಿಯುವದೋ ಅದೇ ಖರೇ ಇರುವದು. ಈಗ ಹದಿನಾಲ್ಕು ಬ್ರಹ್ಮಗಳ ವರ್ಣನೆಯನ್ನು ಶಾಸ್ತ್ರಾಧಾರದಿಂದಲೇ ಮಾಡುವೆನು. (೫೫)

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಏಳನೆಯ ದಶಕದೊಳಗಿನ
"ಬ್ರಹ್ಮ ನಿರೂಪಣ"ವೆಂಬ ಎರಡನೆಯ ಸಮಾಸವು ಮುಗಿದುದು.

### ಸಮಾಸ ತೃತೀಯ : ಚತುರ್ದಶ ಬ್ರಹ್ಮ ನಿರೂಪಣ

॥ಶ್ರೀರಾಮ॥ ಶ್ರೋತಾ ವ್ಹಾವೇ ಸಾವಧಾನ । ಆತಾ ಸಾಂಗತೋ ಬ್ರಹ್ಮಜ್ಞಾನ ।
ಜೇಣೇ ಹೋಯ ಸಮಾಧಾನ । ಸಾಧಕಾಚೇ ॥೧॥

ರತ್ನೆ ಸಾಧಾಯಾಕಾರಣೇ । ವ್ಯುತ್ಪತ್ತಿಕಾ ಲಾಗೆ ಯೇಕವಟಣೇ ।
ಚೌದಾ ಬ್ರಹ್ಮಾಂಚೀ ಲಕ್ಷಣೇ । ಜಾಣಿಜೆ ತೈಸೀ ॥೨॥

## ದಶಕ ೭. ಸಮಾಸ ೩. ಚತುರ್ದಶ ಬ್ರಹ್ಮ ನಿರೂಪಣ (ನುಡಿ ೫೩)

ಜಗತ್ತಿನಲ್ಲಿ ಅನೇಕ ವಸ್ತುಗಳಿರುವವು. ಆದರೆ ಇವೆಲ್ಲ ವಸ್ತುಗಳಲ್ಲಿ ಏಕತ್ವ (ಒಂದು, ಏಕತನ, ಏಕಪಣ) ಇರುವದು. ಇದನ್ನು ಶೋಧಿಸಿ ತೆಗೆಯುವದೇ ಮನುಷ್ಯನ ಜ್ಞಾನದ ಪ್ರಧಾನ ಉದ್ದೇಶವಿರುವದು. ಪ್ರತಿವಸ್ತುವು ಪ್ರತ್ಯೇಕತನದಿಂದ ಇರುವದು.[ಬೆಳಗುವದು]. ಪ್ರತಿಯೊಂದಕ್ಕೂ ಅದರದೇ ಆದ ಆಕಾರವಿರುವದು. ರಂಗ(ವರ್ಣ) ರೂಪ ಇರುವದು. ಕಾಲದ ಕೂಡ ಇದರಲ್ಲಿ ಬದಲಾವಣೆ ಆಗುತ್ತದೆ. ಹಾಗೂ ಕಾಲಾಂತರದಿಂದ ನಾಶವೂ ಆಗಿ ಹೋಗುತ್ತದೆ. ಇದರ ಉಲಟ (ವಿರುದ್ಧವಾಗಿ) ಅನೇಕ ವಸ್ತುಗಳಲ್ಲಿಯ ಏಕತ್ವವು ಸರ್ವ (ಎಲ್ಲ) ವಸ್ತುಗಳನ್ನು ವ್ಯಾಪಿಸಿರುತ್ತದೆ. ಈ ಏಕತ್ವಕ್ಕೆ (ಏಕತನಕ್ಕೆ) ಆಕಾರ ಇರುವದಿಲ್ಲ. ರಂಗ ರೂಪವಿರುವದಿಲ್ಲ. ಇದು ಕಾಲದಗೂಡ ಬದಲಾಗುತ್ತ ಹೋಗುವದಿಲ್ಲ. ಹಾಗೂ ಕಾಲಾಂತರದಲ್ಲಿ ನಾಶವಾಗುವದೂ ಇಲ್ಲ. ವಸ್ತುವು ಆಕಾರ ತಳೆದಿರುವದು. ಆದರೆ ವಸ್ತುವಿನಲ್ಲಿ ವ್ಯಾಪಿಸಿರುವ ಏಕತ್ವವು ಅಮೂರ್ತ ಆಕಾರವಿಲ್ಲದ್ದು ಇರುವದು. ಅನೇಕ ವಸ್ತುಗಳನ್ನು ವ್ಯಾಪಿಸಿ ಇರುವ ಏಕತ್ವದ ಕ್ಷೇತ್ರವನ್ನು ವಿಶಾಲ ಮಾಡ ಮಾಡುತ್ತ ಕೊನೆಯಲ್ಲಿ ಸರ್ವವಸ್ತುಗಳನ್ನು ಏಕತ್ವದಿಂದ ಹೊಟ್ಟೆಯಲ್ಲಿ ತೆಗೆದುಕೊಳ್ಳುವ ಬ್ರಹ್ಮದವರೆಗೆ ನಾವು ಹೋಗಿ ಮುಟ್ಟುತ್ತೇವೆ. ಮನುಷ್ಯ ಬುದ್ಧಿಯ ಭೂಮಿಕೆಯ ಮೇಲಿಂದ ಈ ಪರಬ್ರಹ್ಮದ ವರ್ಣನೆ ಮಾಡುವದಕ್ಕೆ ದೃಶ್ಯವಿಶ್ವದಲ್ಲಿಯ ವಸ್ತುಗಳ ಶೋಧ ಮಾಡಬೇಕಾಗುವದು. ಈ ದೃಷ್ಟಿಯಿಂದ ವಿಚಾರ ಮಾಡಿದಾಗ ಹದಿನಾಲ್ಕು ಪ್ರಕಾರಗಳಿಂದ ಬ್ರಹ್ಮನ ವರ್ಣನೆ ಮಾಡಿದ್ದು ಯೋಗ್ಯವೇ ಇರುವದು. ಪರಂತು ಆತ್ಮಸಾಕ್ಷಾತ್ಕಾರೀ ಪುರುಷರು ಮಾನವೀ ಬುದ್ಧಿಯ ಮೇರೆಯನ್ನು ದಾಟಿ ಹೋಗುವರು. ಅರ್ಥಾತ್ ಇವರ ದೃಷ್ಟಿಯಲ್ಲಿ ಈ ಹದಿನಾಲ್ಕೂ ಬ್ರಹ್ಮಲಕ್ಷಣಗಳು ಪೂರ್ಣಬ್ರಹ್ಮ (ಪರಬ್ರಹ್ಮ)ನ ವರ್ಣನೆ ಮಾಡಲಿಕ್ಕೆ ಕಡಿಮೆ ಅನಿಸುವವು. (ಅಪೂರ್ಣವೆನಿಸುವವು).ಇವು ಹೇಗೆ ಕಡಿಮೆ ಬೀಳುವವೆಂಬುದನ್ನು ಈಸಮಾಸದಲ್ಲಿ ಶ್ರೀಸಮರ್ಥರು ವಿಶದವಾಗಿ ತೋರಿಸಿಕೊಟ್ಟಿದ್ದಾರೆ.

### ದಶಕ ೭. ಸಮಾಸ ೩. ಚತುರ್ದಶ ಬ್ರಹ್ಮ ನಿರೂಪಣ (ನುಡಿ ೫೪)

ಕೆಲವೊಂದು ವಿಷಯವನ್ನು ತರ್ಕದಿಂದ ತಿಳಿಸಿಕೊಡಬೇಕಾಗುವದು. ಆಗ ಆ ವಿಷಯದ ಮೇಲಿನ ಆಕ್ಷೇಪ (ಶಂಕೆ)ಗಳು ಯಾವವಿರುವವೋ ಅವುಗಳ ವರ್ಣನೆಯನ್ನು ಮೊದಲಿಗೆ ಮಾಡಬೇಕಾಗುವದು. ಇದಕ್ಕೆ ಪೂರ್ವಪಕ್ಷವೆನ್ನುವರು.ವಿರೋಧಿಸುವವರು ನಿರ್ಮಾಣಮಾಡಿದ ಆಕ್ಷೇಪಗಳಿಗೆ ಸಮಾಧಾನ ವಿವರ ಹೇಳಿ ಶಂಕೆಯನ್ನು ದೂರ ಮಾಡಿದೆವೆಂದರೆ ನಮ್ಮವಿಷಯವನ್ನು ಸೂಚಿಸುವ ಮಾರ್ಗ ಮುಕ್ತವಾಗುತ್ತದೆ. ಇದಕ್ಕೆ ಸಿದ್ಧಾಂತವೆನ್ನುವರು. ಇಲ್ಲಿ ಹದಿನಾಲ್ಕೂ ಬ್ರಹ್ಮವೇ ಪೂರ್ವಪಕ್ಷವಿದ್ದು ಶುದ್ಧ ಬ್ರಹ್ಮವೇ ಕೊನೆಯ ಸಿದ್ಧಾಂತವಿರುವದು:- ಶ್ರೋತೃಗಳು ಈಗ ಲಕ್ಷ್ಯಪೂರ್ವಕ ಕೇಳಿರಿ ನಾನು ಶುದ್ಧ ಬ್ರಹ್ಮ ಸ್ವರೂಪದ ಬಗ್ಗೆ ವಿವರಿಸಿ ಹೇಳುವವನಿರುವೆ. ಇದನ್ನು ಕೇಳಿದರೆ ಖಾತ್ರಿಯಿಂದ ಸಾಧಕರಿಗೆ ಸಮಾಧಾನವಾಗುವದು. (೧) ರತ್ನಗಳು ಖಣಿಗಳಲ್ಲಿ ಸಿಗುವವು. ಇವುಗಳನ್ನು ಪಡೆಯಬೇಕಾದರೆ ಮೊದಲು ಖಣಿಯಲ್ಲಿಯ ಮಣ್ಣನ್ನು ಬಹಳಷ್ಟು ಕಡಿದು (ಅಗೆದು) ತೆಗೆದು ಒತ್ತಟ್ಟಿಗೆ ಹಾಕಬೇಕು. ಆಮೇಲೆ ಅದರಲ್ಲಿ ಸೋಸಿ ಹುಡುಕಬೇಕು. ಅಂದರೆ ಆಗ ರತ್ನಗಳು ನಮ್ಮ ಕೈಯಲ್ಲಿ ಬರುವವು. ಇದರಂತೆಯೇ ಮೊದಲು ಹದಿನಾಲ್ಕೂ ಬ್ರಹ್ಮಗಳು ಯಾವವು? ಅವುಗಳ ವರ್ಣನೆಗಳನ್ನೆಲ್ಲ ಒಂದು ಸ್ಥಳದಲ್ಲಿ ತಂದು ಇಡಬೇಕು. ಆಮೇಲೆ ಇವುಗಳ ಬಗ್ಗೆ ವಿವೇಚನೆ ಮಾಡಬೇಕು. ಅಂದರೆ ಇವರೊಳಗಿಂದ (ವಿಚಾರದ ಶೋಧದಿಂದ) ಶುದ್ಧ ಬ್ರಹ್ಮ-(ಪರಬ್ರಹ್ಮ)ವು ನಮ್ಮ ಕೈಗೆ ಸಿಗುವದು. [ತಿಳಿಯುವದು] (೨)

ಪದಾರ್ಥೇವಿಣ ಸಂಕೇತ । ದ್ವೈತಾವೇಗಳಾ ದೃಷ್ಟಾಂತ ।
ಪೂರ್ವಪಕ್ಷೇವಿಣ ಸಿದ್ಧಾಂತ । ಬೋಲತಾಚಿ ನ ಯೆ ॥೩॥
ಆಧೀ ಮಿಥ್ಯಾ ಉಭಾರಾವೇ । ಮಗ ತೇ ವೋಳಖೋನ ಸಾಂಡಾವೇ ।
ಪುಢೇ ಸತ್ಯ ತೇ ಸ್ವಭಾವೇ । ಅಂತರೀ ಬಾಣೇ ॥೪॥
ಮ್ಹಣೌನ ಚೌದಾ ಬ್ರಹ್ಮಾಚಾ ಸಂಕೇತ । ಬೋಲಿಲಾ ಕಳಾ ಯಾ ಸಿದ್ಧಾಂತ ।
ಯೇಥೇ ಶ್ರೋತೀ ಸಾವಚಿತ । ಕ್ಷಣ ಯೇಕ ಅಸಾವೇ ॥೫॥
ಪಾಹಿಲೇ ತೇ ಶಬ್ದಬ್ರಹ್ಮ । ದುಜೇ ಮೀತಿಕಾಕ್ಷರ ಬ್ರಹ್ಮ ।
ತಿಸರೇ ಖಂಬ್ರಹ್ಮ । ಬೋಲಿಲೀ ಶ್ರುತೀ ॥೬॥
ಚೌಥೇ ಜಾಣ ಸರ್ವಬ್ರಹ್ಮ । ಪಾಂಚವೇ ಚೈತನ್ಯ ಬ್ರಹ್ಮ ।
ಸಾಹಾವೇ ಸತ್ತಾಬ್ರಹ್ಮ । ಸಾಕ್ಷ ಬ್ರಹ್ಮ ಸಾತವೇ ॥೭॥
ಆಠವೇ ಸಗುಣ ಬ್ರಹ್ಮ । ನವೇ ನಿರ್ಗುಣ ಬ್ರಹ್ಮ ।
ದಾಹಾವೇ ವಾಚ್ಯ ಬ್ರಹ್ಮ । ಜಾಣಾವೇ ಪೈ ॥೮॥
ಅನುಭವ ತೇ ಅಕ್ರಾವೇ । ಆನಂದಬ್ರಹ್ಮ ತೇ ಬಾರಾವೇ ।
ತದಾಕಾರ ತೇರಾವೇ । ಚೌದಾವೇ ಅನುರ್ವಾಚ್ಯ ॥೯॥
ಐಸೀ ಹೇ ಚೌದಾ ಬ್ರಹ್ಮೇ । ಯಾ ಚೀ ನಿರೋಪಿಲೀ ನಾಮೇ ।
ಆತಾ ಸ್ವರೂಪಾಚೀ ವರ್ಮೇ । ಸಂಕೇತ ದಾಊ ॥೧೦॥
ಅನುಭವೇವಿಣ ಭ್ರಮ । ಯಾ ನಾವ ಶಬ್ದಬ್ರಹ್ಮ ।
ಆತಾ ಮೀತಿಕಾಕ್ಷರ ಬ್ರಹ್ಮ । ತೇ ಯೇಕಾಕ್ಷರ ॥೧೧॥
ಖಂಶಬ್ದೇ ಆಕಾಶಬ್ರಹ್ಮ । ಮಹದಾಕಾಶ ವ್ಯಾಪಕಧರ್ಮ ।
ಆತಾ ಬೋಲಿಲೇ ಸೂಕ್ಷ್ಮ । ಸರ್ವಬ್ರಹ್ಮ ॥೧೨॥
ಪಂಚಭೂತಾಚೇ ಕುವಾಡೇ । ಜೇ ಜೇ ತತ್ವ ದೃಷ್ಟೀ ಪಡೇ ।
ತೇ ತೇ ಬ್ರಹ್ಮಚಿ ಚೋಖಡೇ । ಬೋಲಿಜೇತ ಆಹೇ ॥೧೩॥
ಯಾ ನಾವ ಸರ್ವಬ್ರಹ್ಮ । ಶ್ರುತಿ ಆಶ್ರಯಾಚೇ ವರ್ಮ ।
ಆತಾ ಚೈತನ್ಯ ಬ್ರಹ್ಮ । ಬೋಲಿಜೇಲ ॥೧೪॥
ಪಂಚಭೂತಾದಿ ಮಾಯೆತೇ । ಚೈತನ್ಯ ಚಿ ಚೇತವಿತೇ ।
ಮ್ಹಣೌನಿ ತ್ಯಾ ಚೈತನ್ಯಾತೇ । ಚೈತನ್ಯ ಬ್ರಹ್ಮ ಬೋಲಿಜೆ ॥೧೫॥
ಚೈತನ್ಯಾಸ ಜ್ಯಾಚೀ ಸತ್ತಾ । ತೇ ಸತ್ತಾಬ್ರಹ್ಮ ತತ್ವತಾ ।
ತಯೇ ಸತ್ತೇಸ ಜಾಣತಾ । ಯಾ ನಾವ ಸಾಕ್ಷಬ್ರಹ್ಮ ॥೧೬॥

ಸೂಕ್ಷ್ಮ ಮತ್ತು ಅತೀಂದ್ರಿಯವಿರುವಂತಹದು ಯಾವುದು ಇರುವದೋ ಅದರ ಲಕ್ಷಣಗಳನ್ನು ತಿಳಿಸಿ ಹೇಳಿಕೊಡಬೇಕಾದರೆ ಯಾವುದಾದರೂ ದೃಶ್ಯಪದಾರ್ಥದ ಸಂಕೇತದ ಸಹಾಯ ಪಡೆಯಬೇಕಾಗುವದು. ಇದಕ್ಕೆ ದೃಷ್ಟಾಂತ (ಉದಾಹರಣೆ) ಎಂದು ಅನ್ನುವರು. ದೃಷ್ಟಾಂತ ಕೊಡುವದಾದರೆ ದ್ವೈತದ ಹೊರತು ಸಾಧ್ಯವಿಲ್ಲ. ಮತ್ತು ಪೂರ್ವ ಪಕ್ಷವನ್ನು ವ್ಯವಸ್ಥಿತವಾಗಿ ಮಂಡಿಸದ ಹೊರತು ಸಿದ್ಧಾಂತವನ್ನು ಹೇಳಲಿಕ್ಕೆ ಬರುವದಿಲ್ಲ (३) ಯಾವುದು ಮಿಥ್ಯೆ ಇರುವದೋ ಹಾಗೂ ಖೊಟ್ಟಿ ಇರುವದೋ ಅಂಥದರ ಬಗ್ಗೆ ಸವಿಸ್ತಾರವಾಗಿ ಮೊದಲು ಪ್ರತಿಪಾದಿಸಬೇಕು. ಅದರಲ್ಲಿಯ ದೋಷವನ್ನು ಶೋಧಿಸಿ ತಿಳಿದು ಅವನ್ನೆಲ್ಲ ಒಂದು ಕಡೆಗೆ ಒಂದು ಬದಿಗೆ ಸರಿಸಿ ಬಿಡಬೇಕು. ಹೀಗೆ ಮಾಡಿದರೆ ಆಗ ಯಾವುದು ಖರೇ ಸತ್ಯ ಇರುವದೋ ಅದು ತನ್ನಿಂದ ತಾನೇ ಅಂತಃಕರಣದಲ್ಲಿ ಬಿಂಬಿಸಿಬಿಡುವದು. (೪) ಈ ದೃಷ್ಟಿ ಇಟ್ಟುಕೊಂಡು ಶುದ್ಧ ಬ್ರಹ್ಮ ಹೇಗಿರುವನೆಂಬುದು ನಿಮ್ಮ ಧ್ಯಾನ (ಲಕ್ಷ್ಯ)ದಲ್ಲಿ ಬರುವದಕ್ಕಾಗಿ ಹದಿನಾಲ್ಕೂ ಬ್ರಹ್ಮದಲಕ್ಷಣ ಹೇಳುವೆನು ಶ್ರೋತೃಗಳು ಕ್ಷಣಹೊತ್ತು ಸ್ವಸ್ಥಚಿತ್ತರಾಗಿ ಲಕ್ಷ್ಯಕೊಟ್ಟು ಕೇಳಿರಿ. (೫) ಹದಿನಾಲ್ಕು ಬ್ರಹ್ಮಗಳ ಹೆಸರು ಹೇಳುವರು:– ೧)ಒಂದನೇಯದು **ಶಬ್ದ ಬ್ರಹ್ಮ** ೨)ಎರಡನೇಯದು **ಓಂ ಏಕಾಕ್ಷರಬ್ರಹ್ಮ** ३)ಮೂರನೇಯದು ಶೃತಿಯುಹೇಳಿದ **ಖಂ ಬ್ರಹ್ಮ(೬ನೇ ಓವಿ)** ೪)ನಾಲ್ಕನೇಯದು **ಸರ್ವ ಬ್ರಹ್ಮ** ೫)ಐದನೆಯದು **ಚೈತನ್ಯಬ್ರಹ್ಮ** ೬)ಆರನೇಯದು **ಸತ್ತಾಬ್ರಹ್ಮ (೭ನೇ ಓವಿ)** ೭) ಏಳನೇಯದು **ಸಾಕ್ಷಿ ಬ್ರಹ್ಮ** ೮) ಎಂಟನೇಯದು **ಸಗುಣ ಬ್ರಹ್ಮ** ೯) ಒಂಭತ್ತನೇಯದು **ನಿರ್ಗುಣ ಬ್ರಹ್ಮ** ೧೦) ಹತ್ತನೇಯದು **ವಾಚ್ಯ ಬ್ರಹ್ಮ (೮ನೇ ಓವಿ)** ೧೧) ಹನ್ನೊಂದನೇಯದು **ಅನುಭವ ಬ್ರಹ್ಮ** ೧೨) ಹನ್ನೆರಡನೇಯದು **ಆನಂದ ಬ್ರಹ್ಮ** ೧३) ಹದಿಮೂರನೇಯದು **ತದಾಕಾರ ಬ್ರಹ್ಮ** ೧೪) ಹದಿನಾಲ್ಕನೇಯದು **ಅನಿರ್ವಾಚ್ಯ ಬ್ರಹ್ಮ (೯ನೇ ಓವಿ)** (೬ನೆಯ (ಶ್ಲೋಕ) ಓವಿಯಿಂದ ಒಂಭತ್ತನೆಯ (ಶ್ಲೋಕ) ಓವಿ ಪೂರ್ಣ) ಹೀಗೆ ಹದಿನಾಲ್ಕು ಬ್ರಹ್ಮ ಇರುವವು. ಇವುಗಳ ಹೆಸರು ಹೇಳಿದ್ದಾಯಿತು. ಇನ್ನು ಮುಂದೆ ಪ್ರತಿಯೊಂದು ಬ್ರಹ್ಮದ [ಸ್ವರೂಪ] ರಹಸ್ಯವನ್ನು ಸಂಕೇತಗಳಿಂದ ತಿಳಿಸಿಕೊಡುವೆನು. [೧೦] ಪ್ರತಿಯೊಂದು ಬ್ರಹ್ಮದ ಸ್ವರೂಪವನ್ನು ಈಗ ಸ್ಪಷ್ಟ ರೀತಿಯಿಂದ ಹೇಳುವರು:– ಸ್ವರೂಪದ ಪ್ರತ್ಯಕ್ಷ ಅನುಭವ ಇರದೇ ಕೇವಲ ಶಬ್ದಗಳಿಂದ ಅದು "ಹೀಗೆ ಅದೆ ಮತ್ತು ಹಾಗೆ ಅದೆ"ಯೆಂದು ಹೇಳುವದೇ ೧.ನೇ ಶಬ್ದಬ್ರಹ್ಮವು. ಅನುಭವವಿಲ್ಲದ ಶಬ್ದಜ್ಞಾನ. ಇದು ಕೇವಲ ಭ್ರಮೆಯೇ ಆಗಿರುವದು. ೨.ನೇ ಓಂ ಈ ಏಕಾಕ್ಷರದಿಂದ ತೋರಿಸುವ[ಓಂ ಬ್ರಹ್ಮವು ಒಂದು ಅಕ್ಷರ ಮಾತ್ರ ಇರುತ್ತದೆ]. ಇದು ೨ನೇ ಮಿತಿಕಾಕ್ಷರ ಅರ್ಥಾತ್ ಏಕಾಕ್ಷರ ಬ್ರಹ್ಮವೇ ಇರುವದು. ಇದು ವಿನಾಶಿ ಅಲ್ಲ, ಅದರಂತೆ ಅವಿನಾಶಿಯೂ ಅಲ್ಲ. [೧೧] ३.ನೇ ಖಂ ಶಬ್ದದಿಂದ ಆಕಾಶವೇ ಬ್ರಹ್ಮವೆಂದು ತಿಳಿಯಬೇಕು. [ಖಂ ಅಂದರೆ ಆಕಾಶವು] ಇಲ್ಲಿ ಆಕಾಶ ಅಂದರೆ ಸರ್ವವಿಶ್ವವನ್ನೇ ವ್ಯಾಪಿಸಿರುವ ಮಹದಾಕಾಶವು [ಇದು ವ್ಯಾಪಕ ಗುಣ ಉಳ್ಳದ್ದು]. ಈಗ ಸೂಕ್ಷ್ಮವಿರುವಂಥ ೪.ನೇ ಸರ್ವ ಬ್ರಹ್ಮದ ಬಗ್ಗೆ ಹೇಳುವೆನು. [೧೨]ಪಂಚಭೂತಗಳ ಅವಾಢವ್ಯದ, ಗುಂತಾಗುಂತದ, ಗೊಂದಲ (ಘೊಟಾಳೆ)ದಲ್ಲಿ ಯಾವ ಯಾವ ತತ್ವಗಳುದೃಷ್ಟಿಗೆ ಬೀಳುವವೋ ಅವು ಖರೇ ಬ್ರಹ್ಮವೇ ಇರುವವು ಎಂದು ಅನ್ನುವರು. ಪಂಚಭೂತಗಳ ದೃಶ್ಯ ಪದಾರ್ಥಗಳೆಲ್ಲವೂ ಖರೇ ಬ್ರಹ್ಮವೇ. ಇದಕ್ಕೆ ಶುದ್ಧ ಬ್ರಹ್ಮವೆಂದು ವರ್ಣಿಸಲಾಗಿದೆ. [೧३] ಇದರ ಹೆಸರು ೪.ನೇ ಸರ್ವಬ್ರಹ್ಮವು. "ಸರ್ವಂಖಲು ಇದಂ ಬ್ರಹ್ಮ" ಶೃತಿಯ ಆಧಾರವು ಈ ಬ್ರಹ್ಮಗೆ ಇರುವದು. ಇನ್ನು ೫ ನೇ ಚೈತನ್ಯ ಬ್ರಹ್ಮವೆಂದರೆ ಏನು ಎಂಬುವನ್ನು ಹೇಳುವೆ. (೧೪) ಮಾಯಾ ಮತ್ತು ಇದರೊಳಗಿಂದ ಪ್ರಕಟವಾಗಿರುವ ಪಂಚಮಹಾಭೂತಾದಿ ತತ್ವಗಳಿಗೆಲ್ಲ ಪ್ರಾಣ ಕೊಟ್ಟು ನಡೆಸುವಂಥ ಮೂಲ ಚೈತನ್ಯವೇ ಇದಾದ್ದರಿಂದ ಈ ಮೂಲ ಚೈತನ್ಯಕ್ಕೆ ೫.ನೇ ಚೈತನ್ಯ ಬ್ರಹ್ಮವೆನ್ನುವರು. (೧೫) ಚೈತನ್ಯಕ್ಕೆ ಯಾರ ಅಧಿಕಾರ (ಸತ್ತಾ)ದ ಆಧಾರವಿರುವದೋ ಅದು ೬.ನೇ ಸತ್ತಾಬ್ರಹ್ಮವು ಈ ೬.ನೇ ಸತ್ತೆಯನ್ನು ತಿಳಿಯುವಂಥವೇ ೭.ನೇ ಸಾಕ್ಷ ಬ್ರಹ್ಮವು. (೧೬)

ಸಾಕ್ಷತ್ವ ಜಯಾ ಪಾಸುನೀ । ತೇಹಿ ಆಕಳಿಲೇ ಗುಣೀ ।
ಸಗುಣ ಬ್ರಹ್ಮ ಹೇ ವಾಣೀ । ತಯಾಸಿ ವದೇ ॥೧೭॥

ಜೇಥೇ ನಾಹೀ ಗುಣವಾರ್ತಾ । ತೇ ನಿರ್ಗುಣ ಬ್ರಹ್ಮ ತತ್ವತಾ ।
ವಾಚ್ಯಬ್ರಹ್ಮ ತೇ ಹೀ ಆತಾ । ಬೋಲಿಜೇಲ ॥೧೮॥

ಜೇ ವಾಚೆ ಬೋಲತಾ ಆಲೇ । ತೇ ವಾಚ್ಯಬ್ರಹ್ಮ ಬೋಲಿಲೇ ।
ಅನುಭವಾಸಿ ಕಥಿಲೇ । ನವಚೆ ಸರ್ವಥಾ ॥೧೯॥

ಯಾ ನಾವ ಅನುಭವ ಬ್ರಹ್ಮ । ಆನಂದವೃತ್ತೀಚಾ ಧರ್ಮ ।
ಪರಂತು ಯಾಚೇ ಹೀ ವರ್ಮ । ಬೋಲಿಜೇಲ ॥೨೦॥

ಏಸೇ ಹೇ ಬ್ರಹ್ಮ ಆನಂದ । ತದಾಕಾರ ತೇ ಅಭೇದ ।
ಅನುವಾರ್ಚೀ ಸಂವಾದ । ತುಟೋನ ಗೇಲಾ ॥೨೧॥

ಏಸೀ ಹೇ ಚೌದಾ ಬ್ರಹ್ಮೇ । ನಿರೋಪಿಲೀ ಅನುಕ್ರಮೇ ।
ಸಾಧಕೇ ಪಾಹಾತಾ ಭ್ರಮೇ । ಬಾಧಿಜೇನಾ ॥೨೨॥

ಬ್ರಹ್ಮ ಜಾಣಾವೇ ಶಾಶ್ವತ । ಮಾಯಾ ತೇ ಚಿ ಅಶಾಶ್ವತ ।
ಚೌದಾ ಬ್ರಹ್ಮಾಚಾ ಸಿದ್ಧಾಂತ । ಹೋಈಲ ಆತಾ ॥೨೩॥

ಶಬ್ದಬ್ರಹ್ಮ ತೇ ಶಾಬ್ದಿಕ । ಅನುಭವೇವಿಣ ಮಾಈಕ ।
ಶಾಶ್ವತಾಚಾ ವಿವೇಕ । ತೇಥೇ ನಾಹೀ ॥೨೪॥

ಜೇ ಕ್ಷರ ನಾ ಅಕ್ಷರ । ತೇಥೇ ಕೈಚೇ ಮಿಂತಿಕಾಕ್ಷರ ।
ಶಾಶ್ವತಾಚಾ ವಿಚಾರ । ತೇಥೇ ಹೀ ನ ದಿಸೇ ॥೨೫॥

ಖಂ ಬ್ರಹ್ಮ ಏಸೇ ವಚನ । ತರೀ ಸುನ್ಯಾತೇ ನಾಸೀ ಜ್ಞಾನ ।
ಶಾಶ್ವತಾಚೇ ಅಧಿಷ್ಠಾನ । ತೇಥೇ ಹಿ ನ ದಿಸೆ ॥೨೬॥

ಸಾಕ್ಷಿತ್ವ ಅಂದರೆ ಬೇರೆಯಾಗಿ ನೋಡುವದು. (ತ್ರಯಸ್ಥ ವ ತಿರಾಯತ ತನದಿಂದ ನೋಡುವದು) ಅಥವಾ ತಿಳಿಯುವದು. ಇದು ಗುಣವೇ ಆಗಿರುವದರಿಂದ ಸಾಕ್ಷ್ಯ ಬ್ರಹ್ಮನಿಗೆ (೮ನೇ) **ಸಗುಣ ಬ್ರಹ್ಮವೆಂಬ** ಶಬ್ದ ಹಚ್ಚುವರು. (೧೭) ಎಲ್ಲಿ ಗುಣಗಳಿಗೆ ಸ್ಥಾನವೇ ಇಲ್ಲವೋ ಅಂಥದು ಖರೋಖರ (೯ನೇ) **ನಿರ್ಗುಣ ಬ್ರಹ್ಮವು.** ಇನ್ನು ವಾಚ್ಯ ಬ್ರಹ್ಮ ಯಾವುದು ಅದನ್ನು ಹೇಳುವೆನು. (೧೮) ವಾಣಿ (ಮಾತು, ನುಡಿ) ಯಿಂದ ಯಾವುದರ ವರ್ಣನೆ ಮಾಡಲಿಕ್ಕೆ ಬರುವದೋ ಅದು (೧೦ನೇ) **ವಾಚ್ಯ ಬ್ರಹ್ಮವು.** ಬ್ರಹ್ಮದ ಅನುಭವ ಸ್ವತಃ ಹೊಂದಬೇಕಾಗುವದು. ಮತ್ತು ಆ ಅನುಭವವನ್ನು ಏನು ಮಾಡಿದರೂ ಶಬ್ದಗಳಿಂದ ಹೇಳಲಿಕ್ಕೆ ಬರುವದಿಲ್ಲ. (೧೯) ಶಬ್ದಗಳಿಂದ ಹೇಳಲಿಕ್ಕೆ ಬಾರದ ಅನುಭವವು ಅಂದರೆ ಶಬ್ದದ ಆಚೆಗೆ ಇರುವಂಥ ಅದು ಕೇವಲ ಅನುಭವ ಗಮ್ಯವೆಂಬುದು (೧೧ನೇ) **ಅನುಭವ ಬ್ರಹ್ಮವು.** ಆನಂದ ಇದು ವೃತ್ತಿಯ ಗುಣವಿರುವದು. ಆನಂದ ಅನುಭವಿಸುವದು ಅಂದರೆ ವೃತ್ತಿಯ (ಮನದ ಸ್ಥಿತಿ) ಒಂದು ಅವಸ್ಥೆ ಇರುವದು. ಇದರ ರಹಸ್ಯವನ್ನು ಹೇಳುವೆನು. (೨೦) ಆನಂದದ ಅನುಭವ ಪಡೆಯುವ ವೃತ್ತಿ ಎಲ್ಲಿ ಇರುವದೋ ಅದು (೧೨ನೇ) **ಆನಂದ ಬ್ರಹ್ಮವು.** (ಆನಂದ ಇದು ಮನಸ್ಸಿನ ಒಂದು ವೃತ್ತಿ ಇರುವದು.) ಸಮರಸ(ಹೊಂದಿ)ವಾದಾಗ ಅಭೇದವು ಘಟಿಸುವದು. ಇದೇ (೧೩ ನೇ) **ತದಾಕಾರ ಬ್ರಹ್ಮವು.** ಎಲ್ಲಿಂದ ವಾಣಿ ಮತ್ತು ಮನ ಇವು ಹಿಂದಕ್ಕೆ ತಿರುಗುವವೋ, ಮತ್ತು ಯಾವುದು ಹೇಳಲಿಕ್ಕೆ ಬರುವದೇ ಇಲ್ಲವೋ ಅಥವಾ ಹೇಳಲಿಕ್ಕೆ ಆಗುವದಿಲ್ಲವೋ ಅದು (೧೪ನೇ) **ಅನಿರ್ವಾಚ್ಯ ಬ್ರಹ್ಮವು.** ಇಲ್ಲಿ ಸಂವಾದ ಎಂಬುದು ಮುಗಿದು ಬಿಡುತ್ತದೆ. ಮಾತು ಬಂದಾಗುವವು. (೨೧) ಈ ಪ್ರಕಾರ ಹದಿನಾಲ್ಕು ಬ್ರಹ್ಮದ ಬಗ್ಗೆ ಅನುಕ್ರಮವಾಗಿ ತಿಳಿಸಿ ಹೇಳಿದೆನು. ಸಾಧಕನಾದವನು ಚನ್ನಾಗಿ ಇವನ್ನೆಲ್ಲ ಲಕ್ಷ್ಯದಲ್ಲಿಟ್ಟುಕೊಂಡರೆ ಅವನಿಗೆ ಅಜ್ಞಾನದ ಹಾಗೂ ಅದರಿಂದ ಉಂಟಾಗುವ ಭ್ರಮ ಬಾಧಿಸಲಾರವು. (೨೨) **ಈ ಹದಿನಾಲ್ಕು ಬ್ರಹ್ಮದ ಬಗ್ಗೆ ಪ್ರತಿ ಒಂದು (ಪ್ರತ್ಯೇಕ) ಬ್ರಹ್ಮವು ಪರಬ್ರಹ್ಮದ ದೃಷ್ಟಿಯಿಂದ ಹೇಗೆ ಕಡಿಮೆ ಇರುವವು, ಇದರ ವಿವೇಚನೆ ಈಗ ಮಾಡುವರು:-** ಶುದ್ಧ ಬ್ರಹ್ಮ ಇದು ಅತ್ಯಂತ ಶಾಶ್ವತವಿರುವದು. ಮತ್ತು ಮಾಯೆಯು ಅತ್ಯಂತ ಅಶಾಶ್ವತವಿರುವದು. ಈ ಎರಡು ಮೂಲ ಮುಖ್ಯ ಮಾತುಗಳನ್ನು ಗಟ್ಟಿಯಾಗಿ ನೆನಪಿನಲ್ಲಿಟ್ಟುಕೊಳ್ಳಿರಿ. ಇದರಲ್ಲಿ ಎಷ್ಟೂ ಬದಲಾವಣೆ ಆಗುವದಿಲ್ಲ. ಇದು ನಿಶ್ಚಿತವು. ಅಂದರೆ ಈ ಮುಂದೆ ವಿವರಿಸಿಹೇಳುವಂಥ ಹದಿನಾಲ್ಕೂಬ್ರಹ್ಮಗಳ ಗುಟ್ಟು ತಿಳಿದು ಸಂಶಯ ಪರಿಹಾರವಾಗುವದು. ವಿಷಯವು ಉತ್ತಮ ರೀತಿಯಿಂದ ತಿಳಿದು ಬರುವದು[೨೩] ೧] **ಶಬ್ದ ಬ್ರಹ್ಮ:-** ಸದ್ವಸ್ತುವಿನ ಬಗ್ಗೆ ಕೇವಲ ಶಬ್ದ ಪಾಂಡಿತ್ಯ ಯಾವುದರಲ್ಲಿ ಇರುವದೋ ಅದು ಶಬ್ದ ಬ್ರಹ್ಮವೆನಿಸುವದು. ಇಲ್ಲಿ ಆ ಪರಬ್ರಹ್ಮನ ಸ್ವರೂಪದ ಪ್ರತ್ಯಕ್ಷ ಅನುಭವ ಇರುವದಿಲ್ಲ. ಇದು ಮಾಯೆಯ ಪದ್ಧತಿನಲ್ಲಿಯೇ ಬರುವದು. ಶಾಶ್ವತದ ವಿಚಾರ ಇಲ್ಲಿ ಇರುವದಿಲ್ಲ. ಯಾವ ಸದ್ವಸ್ತುವನ್ನು ಶಬ್ದಗಳಿಂದ ಹೇಳಲಿಕ್ಕೇ ಬರುವದಿಲ್ಲವೋ ಅಂಥಲ್ಲಿ ಅದರ ವರ್ಣನೆ ಮಾಡಲಿಕ್ಕೆ ಶಬ್ದಗಳ ಚಾತುರ್ಯದ ಪಾಂಡಿತ್ಯ ಮಾಡುವವೆಂದರೆ ಹೇಳುವವ ಮತ್ತು ಕೇಳುವವರಿಬ್ಬರೂ ಭ್ರಮೆಯಲ್ಲಿ ತಿರುಗಾಡುವರು ಹಾಗೂ ಅಶಾಶ್ವತದ ಗೊಂದಲದಲ್ಲಿ ಮುಳುಗಿರುವರೆಂದು ತಿಳಿಯಬೇಕು. [೨೪] ೨] **ಏಕಾಕ್ಷರ [ಮಿತಿಕಾಕ್ಷರ] ಬ್ರಹ್ಮ:-** ಸದ್ವಸ್ತು ವಿನಾಶಿಯಲ್ಲ ಮತ್ತು ಅವಿನಾಶಿಯೂ ಅಲ್ಲ. ಅದು ಕೇವಲ ಇರುವದು. ಆದ್ದರಿಂದ ಅದನ್ನು ಒಂದು ಗೊತ್ತುಪಡಿಸಿದ ನಿಶ್ಚಯಿಸಿದ ಅಕ್ಷರದಿಂದ ವರ್ಣಿಸುವದು ಯೋಗ್ಯವಲ್ಲ. ಅಕ್ಷರ ಇದು ಮನುಷ್ಯನ ಕಲ್ಪನೆಯಿಂದ ಹುಟ್ಟಿರುವದು. ಅಂದಮೇಲೆ ಈ ಬ್ರಹ್ಮದಲ್ಲಿಯೂ ಶಾಶ್ವತದ ವಿಚಾರ ಇರುವದಿಲ್ಲ. [೨೫] ೩] **ಖಂ ಬ್ರಹ್ಮ:-** ಖಂ ಬ್ರಹ್ಮ ಅಂದರೆ, ಆಕಾಶವೇ ಬ್ರಹ್ಮವು ಹೀಗೆ ಶ್ರುತಿ ವಚನವಿರುವದು. ಆಕಾಶವು ಶೂನ್ಯರೂಪವಿರುವದು. ಬ್ರಹ್ಮಜ್ಞಾನದಿಂದ ಶೂನ್ಯವು ಇಲ್ಲವಾಗುತ್ತದೆ. ಅಂದಮೇಲೆ ಇದರಲ್ಲಿ ಸಹ ಶಾಶ್ವತದ ಅಧಿಷ್ಠಾನ ಇಲ್ಲ. [೨೬]

ಸರ್ವ ತ್ರ್ಯಾಸ ಆಹೆ ಅಂತ । ಸರ್ವ ಬ್ರಹ್ಮ ನಾಸಿವಂತ ।
ಪ್ರಳಯೀ ಬೋಲಿಲಾ ನಿಶ್ಚಿತ । ವೇದಾಂತ ಶಾಸ್ತ್ರೀ ॥೨೭॥

ಬ್ರಹ್ಮ ಪ್ರಳಯೆ ಮಾಂಡೇಲ ಜೇಥೇ । ಭೂತಾನ್ವಯು ಕೈಚಾ ತೇಥೇ ।
ಮ್ಹಣೌನಿಯಾ ಸರ್ವ ಬ್ರಹ್ಮಾತೇ । ನಾಶ ಆಹೇ ॥೨೮॥

ಅಚಳಾಸಿ ಆಣೀ ಚಳಣ । ನಿರ್ಗುಣಾಸ ಲಾವಿತಾ ಗುಣ ।
ಆಕಾರಾಸ ವಿಚಕ್ಷಣ । ಮಾನೀತನಾ ॥೨೯॥

ಜೇ ನಿರ್ಮಾಣ ಪಂಚಭೂತ । ತೇ ಪ್ರತ್ಯಕ್ಷ ನಾಸಿವಂತ ।
ಸರ್ವಬ್ರಹ್ಮ ಹೇ ಮಾತ । ಘಡೇ ಕೇವೀ ॥೩೦॥

ಅಸೋ ಆತಾ ಹೇ ಬಹುತ । ಸರ್ವಬ್ರಹ್ಮ ನಾಸಿವಂತ ।
ವೇಗಳೇಪಣಾಸ ಅಂತ । ಪಾಹಾಣೇ ಕೈಚೇ ॥೩೧॥

ಆತಾ ಜಯಾಸ ಚೇತವಾವೇ । ತೇ ಚಿ ಮಾಈಕ ಸ್ವಭಾವೇ ।
ತೇಥೇ ಚೈತನ್ಯಾಚ್ಯಾ ನಾವೇ । ನಾಸ ಆಲಾ ॥೩೨॥

ಪರಿವಾರೇವಿಣ ಸತ್ತಾ । ತೇ ಸತ್ತಾ ನವ್ಹೇ ತತ್ವತಾ ।
ಪದಾರ್ಥೇವಿಣ ಸಾಕ್ಷತಾ । ತೇಹಿ ಮಿಥ್ಯಾ ॥೩೩॥

ಸಗುಣಾಸ ನಾಶ ಆಹೇ । ಪ್ರತ್ಯಕ್ಷಾಸ ಪ್ರಮಾಣ ಕಾಯೇ ।
ಸಗುಣ ಬ್ರಹ್ಮ ನಿಶ್ಚಯೇ । ನಾಸಿವಂತ ॥೩೪॥

ನಿರ್ಗುಣ ಐಸೇ ಜೇ ನಾವ । ತ್ಯಾ ನಾವಾಸ ಕೈಚಾ ಠಾವ ।
ಗುಣೇವಿಣ ಗೌರವ । ಯೇಈಲ ಕೈಚೇ ॥೩೫॥

ಮಾಯಾ ಜೈಸೇ ಮೃಗಜಳ । ಐಸೇ ಬೋಲತೀ ಸಕಳ ।
ಕಾ ತೇ ಕಲ್ಪನೇಚೇ ಆಭಾಳ । ನಾಥಿಲೇ ಚಿ ॥೩೬॥

(೪) **ಸರ್ವಬ್ರಹ್ಮ**:- ವಿಶ್ವರೂಪದಿಂದ ಕಾಣುವ ಎಲ್ಲ ದೃಶ್ಯವೂ ನಿಶ್ಚಯವಾಗಿ, ಸತ್ಯವಾಗಿಯೂ ನಶ್ವರ-ನಾಶಿವಂತವಾಗಿರುವದು. ಈ ದೃಷ್ಟಿಯಿಂದ ನೋಡಿದರೆ ಸರ್ವಬ್ರಹ್ಮವು ವಿಶ್ವದ (ಜಗತ್ತಿನ) ಸಂಗಡ ಲಯ ಹೊಂದುವದು. ವೇದಾಂತ ಶಾಸ್ತ್ರಗಳಲ್ಲಿ ಈ ವಿಶ್ವದ ಪ್ರಳಯವಾಗುವಾಗಿನ ಕಲ್ಪನೆಯನ್ನು ಅಗದೀ ಬರೋಬರ ಕೊಟ್ಟಿರುವರು. (೨೭) ಬ್ರಹ್ಮದೇವ (ತ್ರಿಮೂರ್ತಿಗಳಲ್ಲಿಯ ಒಬ್ಬ)ನ ರಾತ್ರಿಯು ಪ್ರಾರಂಭವಾಗಿ (ಬ್ರಹ್ಮಾಂಡದ ಪ್ರಳಯಕಾಲ) ಬಿಟ್ಟಿತೆಂದರೆ ಬ್ರಹ್ಮ ಭುವನದಿಂದ ಸೀದಾ (ಸರಳವಾಗಿ) ಭೂಲೋಕದವರೆಗಿನ ಸರ್ವ ಪಂಚಮಹಾ ಭೂತಗಳು ಉಳಿಯುವದಿಲ್ಲ. ಲಯವಾಗಬೇಕಾಗುವದು. ಇಲ್ಲಿ ಪಂಚಭೂತಗಳ ವ್ಯವಸ್ಥೆಯೆಲ್ಲ ಹೇಳಹೆಸರಿಲ್ಲದಂತೆ ಮುರಿದು ಬೀಳುವವೆಂದಮೇಲೆ ಸರ್ವಬ್ರಹ್ಮಕ್ಕೂ ನಾಶವಿರುವದು. (೨೮) ಯಾವ ಯಾವುದು ಅನುಭವಕ್ಕೆ ಬರುವದೋ ಅದೆಲ್ಲ ಬ್ರಹ್ಮವೇ ಇರುವದು. ಹೀಗೆ ಸರ್ವಬ್ರಹ್ಮದ ಬಗೆಗೆ ನಿಜವಾದ ಕಲ್ಪನೆ ಇರುವದು. ಆದರೆ ಈ ಅನುಭವದಲ್ಲಿ ಯಾವುದು ಮೂಲ, ಅಚಲ, ಸ್ಥಿರ ಇರುವದೋ ಅದಕ್ಕೆ ಚಂಚಲತನ, ಅಸ್ಥಿರತನವನ್ನು ಹಚ್ಚುತ್ತಾರೆ. (ಆರೋಪಿಸುವರು). ಯಾವುದು ಗುಣಗಳ ಆಚೆಗೆ ಇರುವದೋ ಅದಕ್ಕೆ ಗುಣಗಳನ್ನು ಹಚ್ಚುವರು. ಆದರೆ ಜ್ಞಾನಿ ಪುರುಷರು ಆಕಾರವನ್ನು ಹೊಂದಿದ ವಸ್ತುವಿಗೆ ಅಂದರೆ ಸಾಕಾರ ವಸ್ತುವಿಗೆ ಶಾಶ್ವತ ಬ್ರಹ್ಮವೆಂದು ಒಪ್ಪುವದಿಲ್ಲ.(೨೯) ಯಾವುದು ಭೂತ ಅದೆಯೋ, ಜನನವಾಗಿದೆಯೋ, ಸೃಷ್ಟಿಸಲಾಗಿದೆಯೋ, ಅಂದರೆ ನಿರ್ಮಾಣ ಆಗಿರುವದೋ, ಅಂಥ ಪಂಚಭೂತಾತ್ಮಕ ವಿಶ್ವವು ನಶ್ವರ (ನಾಶವಂತ) ಇರುವದು ಇದು ಪ್ರತ್ಯಕ್ಷ ಅನುಭವಕ್ಕೆ ಬರುವದು ಅಂದ ಮೇಲೆ ಈ ನಾಶವಂತವಾಗುವದೆಲ್ಲ ಸರ್ವವೂ ಬ್ರಹ್ಮವೇ ಇರುವದೆಂಬ ಮಾತನ್ನು ಹೇಗೆ ಮಾನ್ಯ ಮಾಡಲಿಕ್ಕೆ ಬರುವದು? (೩೦) ಇದಕ್ಕಿಂತ ಹೆಚ್ಚಿಗೆ ಹೇಳುವ ಕಾರಣವಿಲ್ಲ. ಒಟ್ಟಿನಲ್ಲಿಯ ತಾತ್ಪರ್ಯವೆಂದರೆ ಸರ್ವಬ್ರಹ್ಮ ನಾಶವಂತವಿರುವದು. ಇದನ್ನು ಪ್ರತ್ಯೇಕಿಸಿ (ಬೇರೆ ರೀತಿಯಿಂದ) ನೋಡುವವನಾದ ದೃಷ್ಟಾ ಇವನೇ ನಾಶವಂತನಾಗಿರುವಾಗ ನಾಶವಂತವಾದ ಸರ್ವ ಬ್ರಹ್ಮವನ್ನು ನೋಡುವವನು ಉಳಿಯುವದೇ ಇಲ್ಲ (ಇರುವದೇ ಇಲ್ಲ). (೩೧) (೫) **ಚೈತನ್ಯ ಬ್ರಹ್ಮ**:- ಈ ದೃಶ್ಯವಿಶ್ವವನ್ನೇ ಚೈತನ್ಯವು ಜೀವಂತವಿಡುವದು. ಈ ವಿಶ್ವವೇ ಶಾಶ್ವತವಲ್ಲ, ನಿಜವಲ್ಲ, ಆದ್ದರಿಂದ ಖೊಟ್ಟಿತನದಿಂದ ಭಾಸವಾಗುವ ವಿಶ್ವಕ್ಕೆ ಚಾಲನೆ ಕೊಡುವ ಚೈತನ್ಯವು ಎಂದಾದರೊಂದುದಿನ ನಾಶವಾಗುವ ವಿಶ್ವದ ಜೊತೆಗೇ ಚೈತನ್ಯವೂ ನಾಶಹೊಂದುವದೆಂದ ಮೇಲೆ ಇದು ಬ್ರಹ್ಮವಲ್ಲ. (೩೨) (೬) **ಸತ್ತಾ ಬ್ರಹ್ಮ**:-ವರಿಷ್ಠನ ಅಧಿಕಾರ ಕನಿಷ್ಠನ ಮೇಲೆ ನಡೆಯುವದು. ಆದರೆ ಕನಿಷ್ಠನೇ ಇಲ್ಲದಿದ್ದರೆ ಅಧಿಕಾರಕ್ಕೆ ಏನೂ ಅರ್ಥವಿರುವದಿಲ್ಲ. ಆದ್ದರಿಂದ ಸತ್ತಾಬ್ರಹ್ಮ ಖರೇ ಅಲ್ಲ. ಮೂಲ ಪರಬ್ರಹ್ಮವು ಸರ್ವ ಭೇದಗಳ ಆಚೆಗೆ ಇರುವದರಿಂದ ಅಲ್ಲಿ ಮಾಲಕ-ನೌಕರ, ಧಣಿ-ಪರಿವಾರ, ವರಿಷ್ಠ-ಕನಿಷ್ಠ ಇಂಥ ಭೇದಗಳೇ ಇಲ್ಲ. ಅಂದ ಮೇಲೆ ಸತ್ತಾಬ್ರಹ್ಮ ಇದು ಕಲ್ಪನೆಯೆಂದು ಅನಿಸುತ್ತದೆ. (೭) **ಸಾಕ್ಷ ಬ್ರಹ್ಮ**:- ಸಾಕ್ಷಿತ್ವದಲ್ಲಿ ಪದಾರ್ಥಗಳನ್ನು ವಿಂಗಡಿಸಿ ನೋಡುವದಿರುತ್ತದೆ. ಆದರೆ ಎಲ್ಲಿ ಪದಾರ್ಥಗಳೇ ಇಲ್ಲವೋ ಅಲ್ಲಿ ಸಾಕ್ಷಿತ್ವಕ್ಕೆ ಅವಸರ (ಅವಕಾಶ)ವೇ ಉಳಿಯುವದಿಲ್ಲ. ಅಂತೆಯೇ ಸಾಕ್ಷ ಬ್ರಹ್ಮವು ನಿಜವಾದದ್ದಲ್ಲ (೩೩) (೮) **ಸಗುಣ ಬ್ರಹ್ಮ**:-ಯಾವ ಯಾವುದು ಗುಣ (ತ್ರಿಗುಣ)ಗಳಿಂದ ಆವರಿಸಿದೆಯೋ ಅದೆಲ್ಲ ನಾಶವಂತವಿರುದದು. ಸಗುಣಕ್ಕೆ ನಾಶಕಟ್ಟಿಟ್ಟದ್ದೇ ಇರುವದು. ಅಂದ ಮೇಲೆ ಸಗುಣಬ್ರಹ್ಮ ನಾಶವಂತ ಎಂಬುವದರಲ್ಲಿ ಸಂಶಯವೇ ಇಲ್ಲ.(೩೪) (೯) **ನಿರ್ಗುಣಬ್ರಹ್ಮ**:- ಗುಣಮಯವಾದ ದೃಶ್ಯ ಸೃಷ್ಟಿ ಇದು ಶಬ್ದದ ರಾಜ್ಯವಿದೆ. ಎಲ್ಲಿ "ಗುಣವೇ" ಇಲ್ಲವೋ ಅಲ್ಲಿ ಶಬ್ದ ಹುಟ್ಟುವದಿಲ್ಲ. ಶಬ್ದ ಪ್ರಯೋಗವೇ ಆಗುವದಿಲ್ಲ ಅರ್ಥಾತ್ ಶಬ್ದವೇ ಹುಟ್ಟುವದಿಲ್ಲ. "ನಿರ್ಗುಣ" ಇದೂ ಒಂದು ಶಬ್ದವೇ ಇರುವದೆಂದ ಮೇಲೆ ವಸ್ತುವೂ ಇಲ್ಲ ಮತ್ತು ವಸ್ತು ಇಲ್ಲವೆಂದ ಮೇಲೆ ಯಾವುದರ ವರ್ಣನೆ ಮಾಡುವಿರಿ?(೩೫) ಜ್ಞಾನಿ ಪುರುಷರು ಹೇಳುವದೇನೆಂದರೆ, ಮಾಯಾ ಇದು ಮೃಗಜಲದಂತೆ ಇರುವದು. ಈ ದೃಶ್ಯವಿಶ್ವ ಅಂದರೆ ಎಂದೂ ನಿರ್ಮಾಣವಾಗದೇ ಇರುವಂಥ ಕಲ್ಪನೆಯ ಆಚ್ಛಾದನೆ (ಮುಸುಕು) ಇರುವದು. (೩೬)

"ಗ್ರಾಮೋ ನಾಸ್ತಿ ಕುತಃಸೀಮಾ" ಜನ್ಮೇವಿಣ ಜೀವಾತ್ಮಾ ।
ಅದ್ವೈತಾಸೀ ಉಪಮಾ । ದ್ವೈತಾಚೀ ॥೩೭॥

ಮಾಯೆವಿರಹಿತ ಸತ್ತಾ । ಪದಾರ್ಥೇವಿಣ ಜಾಣತಾ ।
ಅವಿದ್ಯೇವಿಣ ಚೈತನ್ಯತಾ । ಕೋಣಾಸ ಆಲೀ ॥೩೮॥

ಸತ್ತಾ ಚೈತನ್ಯತಾ ಸಾಕ್ಷೀ । ಸರ್ವ ಹೀ ಗುಣಾಚಪಾಸೀ ।
ಠಾಈಚೇ ನಿರ್ಗುಣ ತ್ಯಾಸೀ । ಗುಣ ಕೈಚೇ ॥೩೯॥

ಐಸೇ ಜೇ ಗುಣರಹಿತ । ತೇಥೇ ನಾಮಾಚಾ ಸಂಕೇತ ।
ತೋ ಚಿ ಜಾಣಾವಾ ಅಶಾಶ್ವತ । ನಿಶ್ಚಯೇಸೀ ॥೪೦॥

ನಿರ್ಗುಣ ಬ್ರಹ್ಮಾಸಿ ಸಂಕೇತೇ । ನಾಮೇ ಠೇವಿಲೀ ಬಹುತೇ ।
ತೇ ವಾಚ್ಯಬ್ರಹ್ಮ ತ್ಯಾತೇ। ನಾಶ ಆಹೇ ॥೪೧॥

ಆನಂದಾಚಾ ಅನುಭವ । ಹಾ ಹಿ ವೃತ್ತೀಚಾ ಚಿ ಭಾವ ।
ತದಾಕಾರೀ ಠಾವ । ವೃತ್ತೀಸ ನಾಹೀ ॥೪೨॥

ಊರು [ಗ್ರಾಮ] ಇಲ್ಲವೆಂದ ಮೇಲೆ ಆಗ್ರಾಮದ ಸೀಮೆ (ಹದ್ದು, ಮೇರೆ) ಹೇಗೆ ತೋರಿಸಲಿಕ್ಕೆ ಬರುವದು? ತಾತ್ಪರ್ಯ:–ತ್ರಿಗುಣಾತ್ಮಕ-ಗುಣಮಾಯ ದೃಶ್ಯವಿಶ್ವವೇ ಮೃಗಜಲದಂತೆ ಇರುವದು. ಇದು ನಿಜವಾದ ಅರ್ಥದಿಂದ ಎಂದೂ ಅಸ್ತಿತ್ವದಲ್ಲಿಯೇ ಇಲ್ಲವೆಂದ ಮೇಲೆ ಆ ಗುಣಗಳನ್ನು ದಾಟಿ ಇರುವಂಥ ನಿರ್ಗುಣ ಬ್ರಹ್ಮವನ್ನು ಶಬ್ದದಿಂದ ಹೇಳಿದರೆ ಖರೇ ಎಂದು ನಂಬಲಿಕ್ಕೆ ಬರುವದಿಲ್ಲ. ಜನ್ಮತಳೆಯಿತು ಅಂದರೆ ಅಲ್ಲಿ ಜೀವಾತ್ಮವಿರುವದು ಎಂದು ನಾವು ಅನ್ನುವೆವು. ಆದರೆ ಜನ್ಮವೇ ಹೊಂದಿಲ್ಲವೆಂದ ಮೇಲೆ ಅಲ್ಲಿ ಜೀವಾತ್ಮವಿರುವದೆಂದು ಅನ್ನಲಿಕ್ಕೆ ಹೇಗೆ ಬರುವದಿಲ್ಲವೋ ಇದರಂತೆ ಮೂಲದಲ್ಲಿ ಸಗುಣ ಬ್ರಹ್ಮವೆಂಬುದೇ ನಮ್ಮ ಕಲ್ಪನೆ ಇರುವದು. ಮೂಲದಲ್ಲಿ ಇದು ಇಲ್ಲವೇ ಇಲ್ಲ. ಅಂತೆಯೇ ನಿರ್ಗುಣ ಬ್ರಹ್ಮಶಬ್ದರೂಪದ್ದು. ಇದೂ ಸಹ ನಮ್ಮ ಕಲ್ಪನೆಯೇ ಇರುವದು. ಬ್ರಹ್ಮ ಸಗುಣವಲ್ಲ ಅದರಂತೆ ನಿರ್ಗುಣವೂ ಅಲ್ಲ. ದೃಶ್ಯವಿಶ್ವದ ಅಂದರೆ ದ್ವೈತದ ಅನುಭವದಲ್ಲಿ ಯಾವ ಕಲ್ಪನೆಗಳನ್ನು ಕಲ್ಪಿಸಿ ನಾವು ಉಪಯೋಗಿಸುವೆವೋ ಅದೇ ಕಲ್ಪನೆಯನ್ನು ನಾವು ಅದ್ವೈತವಿರುವ ಪರಮ ವಸ್ತುವಿನ ಬಗ್ಗೆ ಹೇಳುವಾಗ ಉಪಯೋಗಿಸುವೆವು. ಆದರೆ ಇದರಿಂದ ಸದ್ವಸ್ತು ಹೇಗೆ ಇರುವದೋ ಹಾಗೆ ಗ್ರಹಣ ಮಾಡಲಿಕ್ಕೆ (ಗ್ರಹಿಸಲಿಕ್ಕೆ) ಆಗುವದಿಲ್ಲ. (೩೭) ಮಾಯೆಯ ಪಸಾರ (ಜಾಲ)ದ ಅಳವಿನಲ್ಲಿ ಸತ್ತಾ ಕೆಲಸಮಾಡುತ್ತದೆ. ಪದಾರ್ಥದ ವಸ್ತುವಿನ-ಅಳವಿನಲ್ಲಿ (ಗುಣಜ್ಞತೆ) ತಿಳುವಳಿಕೆ ಕೆಲಸ ಮಾಡುತ್ತದೆ. ಅವಿದ್ಯೆಯ ಪಸಾರದಲ್ಲಿ ಚಿತ್ಶಕ್ತಿಯ ಆಟ ನಡೆಯುತ್ತದೆ. (೩೮) ಸತ್ತಾ, ಸಾಕ್ಷಿತ್ವ ಮತ್ತು ಚಿತ್‌ಶಕ್ತಿ ಈ ಕಲ್ಪನೆಗಳು ಮಾಯಾ ದೃಶ್ಯಪದಾರ್ಥ, ಮತ್ತು ಅಜ್ಞಾನ ಇವುಗಳಲ್ಲಿಂದ ನಿರ್ಮಾಣವಾಗುವವು. ಆದರೆ ಇವು ಈ ಮೂರು ಗುಣದ ಕಕ್ಷೆಯೊಳಗಿನವಿರುವವು. ಯಾವ ಸ್ವರೂಪಕ್ಕೆ ಗುಣದ ಸಂಪರ್ಕವೇ ಇಲ್ಲವೋ ಅಲ್ಲಿ ಇವೆಲ್ಲ ಕಲ್ಪನೆ (ಸಗುಣ ನಿರ್ಗುಣ ಮುಂತಾದ)ಗಳು ನಿರರ್ಥಕ, ಖೊಟ್ಟಿಯಾಗುವವು.(೩೯)ಅಂತೂ ಗುಣರಹಿತನಾದಪರಬ್ರಹ್ಮ ಯಾವನೋ ಅವನಿಗೆ"ನಿರ್ಗುಣ"ಎಂಬ ಶಬ್ದದ ಸಂಕೇತ ದಿಂದ ಹೇಳಬಹುದಾಗಿದೆಯಲ್ಲವೇ? ಆದರೆ ಆ ಶಬ್ದ ಮತ್ತು ಅದರಿಂದ ತೋರಿಸಿಕೊಟ್ಟ (ತಿಳಿಸಿಕೊಟ್ಟ) ಸಂಕೇತ ಎರಡೂ ಅಶಾಶ್ವತವಿರುವವು. ಇದನ್ನು ನಿಶ್ಚಿತವಾಗಿ ನಂಬಿರಿ. (೪೦) (೧೦) **ವಾಚ್ಯಬ್ರಹ್ಮ:**– ಗುಣರಹಿತನಾದ ಬ್ರಹ್ಮನನ್ನು ಸಂಕೇತಗಳಿಂದ ಗುರುತಿಸುವಂಥ ಅನೇಕ ಹೆಸರುಗಳಿರುವವು. ಅರ್ಥಾತ್ ಅನೇಕ ಹೆಸರುಗಳನ್ನು ಕೊಟ್ಟಿರುವರು. ಅಂತೆಯೇ ವಾಚ್ಯಬ್ರಹ್ಮನೆಂದು ಅನ್ನುವರು. ಇದೆಲ್ಲವೂ ನಾಶವಂತವಾಗಿರುವವು. (೪೧) (೧೧) **ಅನುಭವ ಬ್ರಹ್ಮ:**- (೧೨) **ಆನಂದಬ್ರಹ್ಮ:**– ಮನುಷ್ಯನಿಗೆ ಆನಂದದ ಅನುಭವ ಬರುವದು. ಆ ಹೊತ್ತಿನಲ್ಲಿ "ನಾನು ಆನಂದದ ಅನುಭವ ಪಡೆಯುತ್ತಿರುವೆನು" ಈ ರೀತಿಯ ತ್ರಿಪುಟಿ ಇವರಲ್ಲಿ ಇರುವದು. ಅನುಭವ ಪಡೆಯುವ ನಾನು ಯಾವುದರ ಅನುಭವ ಪಡೆಯಬೇಕಾಗಿರುವದೋ ಅದು (ಆನಂದ) ಮತ್ತು ಪ್ರತ್ಯಕ್ಷ (ಸ್ವತಃಕ್ಕೆ ಆಗುವ) ಅನುಭವ ಹೀಗೆ ಮೂರು ಅಂಗಗಳು ಬೇರೆತನದಿಂದ (ಪ್ರತ್ಯೇಕವಾಗಿ) ಭಾಸವಾಗುವವು. ಅಂತೆಯೇ ಇದು ಆನಂದ ಬ್ರಹ್ಮವು ಮತ್ತು ಅನುಭವ ಬ್ರಹ್ಮವಾದರೂ ತ್ರಿಪುಟಿಯಲ್ಲಿಯೇ ಬರುವದು. ಇವೆರಡೂ ಮನುಷ್ಯನ ವೃತ್ತಿಯ ದ್ಯೋತಕ-ಸೂಚಕವೆನಿಸುವವು. ಅರ್ಥಾತ್ ಇವೆರಡೂ ವೃತ್ತಿಯ ಕೂಡ ನಾಶವಾಗುವವು. (೧೩) **ತದಾಕಾರ ಬ್ರಹ್ಮ:**- ಬ್ರಹ್ಮದೊಂದಿಗೆ ಏಕರೂಪ (ತದಾಕಾರ) ವಾದ ನಂತರ ಅಲ್ಲಿ ಸ್ಥಿತಿ (ವೃತ್ತಿ) ಇರಲಿಕ್ಕೆ ಶಕ್ಯವಿಲ್ಲ. ಅರ್ಥಾತ್ ಉಳಿಯುವದಿಲ್ಲ. ಎಲ್ಲಿಯವರೆಗೆ ಅವಿದ್ಯೆಯ ಲೇಶ (ಸ್ವಲ್ಪ) ಇರುವದೋ ಅಲ್ಲಿಯವರೆಗೆ ವೃತ್ತಿಯ ನಿರ್ಮಾಣವಾಗುವದು. ಆ ವೃತ್ತಿಗೆ (ಸ್ಥಿತಿಗೆ) ಅಭ್ಯಾಸದಿಂದ ತದಾಕಾರ ಹೊಂದುವ (ಸವಯ) ಅಭ್ಯಾಸ (ರೂಢಿ) ಹಚ್ಚಿದರೆ ಅದು ಬ್ರಹ್ಮದೊಂದಿಗೆ ತದಾಕಾರವಾಗುವದು. ಆದರೆ ಅವಿದ್ಯೆಯು ಲವಲೇಶವೂ ಇಲ್ಲದಂತೆ (ಸಂಪೂರ್ಣ ಇಲ್ಲದಂತೆ) ಆಗುವವರೆಗೂ ವೃತ್ತಿಯು ಪುನಃ ಕೆಳಗೆ ಬರುತ್ತದೆ. ಈ ವೃಷ್ಟಿಯಿಂದ ಜ್ಞಾನಿ ಪುರುಷರಲ್ಲಿ ಸಹ ಜ್ಞಾನದ ಮೆಟ್ಟಲುಗಳಿರುವವು. ಅಂತೆಯೇ ತದಾಕಾರ ಬ್ರಹ್ಮವೂ ಸಹ ಪರಬ್ರಹ್ಮವಲ್ಲ. (೪೨)

ಅನುವಾಚ್ಯ ಯಾಕಾರಣೇ । ಸಂಕೇತ ವೃತ್ತೀಚ್ಯಾ ಗುಣೇ ।
ತಯಾ ಸಂಕೇತಾಸ ಉಣೇ । ನಿವೃತ್ತೀನೇ ಆಣಿಲೇ ॥೪೩॥

ಅನುವಾಚ್ಯ ತೇ ನಿವೃತ್ತೀ। ತೇಚಿ ಉನ್ಮನೀಚೀ ಸ್ಥಿತೀ ।
ನಿರೋಪಾಧೀ ವಿಶ್ರಾಂತಿ । ಯೋಗಿಯಾಂಚೀ ॥೪೪॥

ವಸ್ತು ಜೇ ಕಾ ನಿರೋಪಾಧೀ । ತೇ ಚಿ ಸಹಜ ಸಮಾಧೀ ।
ಜೇಣೇ ತುಟೆ ಆದಿವ್ಯಾಧೀ । ಭವದುಃಖಾಚೀ ॥೪೫॥

ಜೋ ಉಪಾಧೀಚಾ ಅಂತ । ತೋಚಿ ಜಾಣಾವಾ ಸಿದ್ಧಾಂತ ।
ಸಿದ್ಧಾಂತ ಆಣೀ ವೇದಾಂತ । ಧಾದಾಂತ ಆತ್ಮಾ ॥೪೬॥

ಅಸೊ ಐಸೇ ಜೇ ಶಾಶ್ವತ ಬ್ರಹ್ಮ । ಜೇಥೇ ನಾಹೀ ಮಾಯಾ ಭ್ರಮು ।
ಅನುಭವೀ ಜಾಣೆ ವರ್ಮ । ಸ್ವಾನುಭವೇ ॥೪೭॥

ಆಪುಲೇನ ಅನುಭವೇ । ಕಲ್ಪನೇಸಿ ಮೋಡಾವೇ ।
ಮಗ ಸುಕಾಳೀ ಪಡಾವೇ । ಅನುಭವಾಚೇ ॥೪೮॥

ನಿರ್ವಿಕಲ್ಪಾಸ ಕಲ್ಪಾವೇ । ಕಲ್ಪನಾ ಮೋಡೆ ಸ್ವಭಾವೇ ।
ಮಗ ನಸೋನಿ ಅಸಾವೇ । ಕಲ್ಪಕೋಟೀ ॥೪೯॥

೧೪] ಅನಿರ್ವಾಚ್ಯ ಬ್ರಹ್ಮ:- ಬ್ರಹ್ಮಕ್ಕೆ ಯಾವಾಗ್ಗೆ ಅನಿರ್ವಾಚ್ಯವೆಂದು ಅನ್ನುವರೋ ಆಗ ವೃತ್ತಿಯ ಅನುರೋಧದಿಂದ [ಪ್ರೇರಕ ಶಕ್ತಿ, ಧೋರಣ] ಗುರುತಿಗಾಗಿ ಈ ಶಬ್ದವನ್ನು ಯೋಜಿಸುವರು. ಸರ್ವ ಸಾಧಾರಣವಾಗಿ ನಮ್ಮ ಪದಾರ್ಥ ಜ್ಞಾನವು ವೃತ್ತಿ ಪ್ರಧಾನವಿರುವದು. ವೃತ್ತಿ ಪ್ರಧಾನ ಜ್ಞಾನವು ಅರ್ಥರೂಪ ವಿರುವದರಿಂದ ಸ್ವಲ್ಪ ಹೆಚ್ಚು ಕಡಿಮೆ ಪ್ರಮಾಣದ ಶಬ್ದಗಳಿಂದ ವ್ಯಕ್ತ ಮಾಡಲಿಕ್ಕೆ ಬರುತ್ತದೆ. ಇದು ವಾಚ್ಯವಿರುವದು. ಪರಂತು ಬ್ರಹ್ಮನೊಂದಿಗೆ ತದಾಕಾರ ಹೊಂದಿದ ಮೇಲೆ ವೃತ್ತಿಯು ಉಳಿಯುವದೇ ಇಲ್ಲ. ಎಲ್ಲಿ ವೃತ್ತಿಯು ಉಳಿಯುವದಿಲ್ಲವೋ ಅಲ್ಲಿ ವಾಚ್ಯತೆ ಇರುವದಿಲ್ಲ. ಯಾವುದು ವಾಚ್ಯವಲ್ಲವೋ ಅದು ಅನಿರ್ವಾಚ್ಯವಿರುವದು. ಅನಿರ್ವಾಚ್ಯ ಶಬ್ದವನ್ನು ಕೊನೆಗೆ ವೃತ್ತಿಯ ಸಂಬಂಧವಾಗಿಯೇ ಯೋಜಿಸುವರು. [ವಾಪರಿಸುವರು]. ಅಂತೆಯೇ ಬ್ರಹ್ಮ ಅನಿರ್ವಾಚ್ಯ ಇರುವದು ಅಂತಾ ಅನ್ನುವದೂ ಸಹ ಗೌಣವೆನಿಸುವದೆಂದು ತಿಳಿಯಬೇಕು. [೪೩] ಮನವು ವೃತ್ತಿಮಯವಿರುವದು. ಇದರಲ್ಲಿ ಬುಡದಿಂದ ತುದಿಯವರೆಗೆ[ಆಮೂಲಾಗ್ರ] ಬದಲಾಗಿ ಅದರ ಮನೋವೃತ್ತಿ "ನಾನು" ಎಂಬ "ಅಹಂ"ತನ ಪೂರ್ಣ ಹೋದ ಕೂಡಲೇ ನಿವೃತ್ತಿಯು ಅನುಭವಕ್ಕೆ ಬರುವದು. ಈ ನಿವೃತ್ತಿ ಅವಸ್ಥೆಗೇನೇ ಉನ್ಮನಿ ಸ್ಥಿತಿ, ತುರ್ಯಾವಸ್ಥೆಯನ್ನು ದಾಟಿದ ಐದನೆಯ ಅವಸ್ಥೆಯು, ಬ್ರಹ್ಮನಲ್ಲಿ ಲಯವಾಗುವದು ಅನ್ನುವರು. ಇದು ಶಬ್ದದ ಆಚೆಗೆ ಇರುವದು. ಉನ್ಮನಿಯಲ್ಲಿ ಯಾವುದೇ ಬಂಧನವಿರುವದಿಲ್ಲ. ಮರ್ಯಾದಾ [ಸೀಮೆ,ನಿಯಮ] ಇಲ್ಲ. ಭೇದವಿಲ್ಲ. ಪರಿಚ್ಛಿನ್ನತನವಿಲ್ಲ. [ಪ್ರಕಟತನವಿಲ್ಲ]. ದೃಶ್ಯದ ಸರ್ವಧರ್ಮವು ಇಲ್ಲಿ ಕಳಚಿ ಬೀಳುವವು. ಉನ್ಮನಿಯಲ್ಲಿ ಯೋಗಿಯು ವಿಶ್ರಾಂತಿ ಹೊಂದುವನು. ಯೋಗೀ ಜನರ ಉಪಾಧಿರಹಿತ ವಿಶ್ರಾಂತಿ ಅಂತಾ ಅನ್ನುವದು ಇದೇ ಇರುವದು. ಇದು ಅನಿರ್ವಚನೀಯವಿರುವದು. [೪೪] ಉಪಾಧಿ ಶೂನ್ಯವಾದ ಸದ್ವಸ್ತು ಸ್ವತಃ ಆಗುವದೇ ಸಹಜ ಸಮಾಧಿಯಾಗಿದೆ. ಈ ಸಮಾಧಿಯಿಂದ ಸಂಸಾರದಲ್ಲಿಯ ದುಃಖ ದುಮ್ಮಾನ ಉಂಟು ಮಾಡುವ ಆಧಿವ್ಯಾಧಿಗಳೆಲ್ಲ ಕಳಚಿ ಬೀಳುವವು. ಅರ್ಥಾತ್ ಎಲ್ಲ ಉಪಾಧಿಗಳು ನಾಶವಾಗಿ ಹೋಗುವವು. ಸ್ವತಃ ಬ್ರಹ್ಮಾನುಭವ ಹೊಂದುವದೇ ಸಹಜ ಸಮಾಧಿಯಾಗಿದೆ. [೪೫] ಎಲ್ಲ ಉಪಾಧಿಯು ಅಂತ್ಯವಾಗುವದೇ ಬ್ರಹ್ಮ ಸಾಕ್ಷಾತ್ಕಾರವೆನಿಸುವದು. ವೇದಾಂತದ ಕೊನೆಯ ಸಿದ್ಧಾಂತ ಅಂದರೆ ಸದ್ಗುರುವಚನ, ಶಾಸ್ತ್ರವಚನ, ಸ್ವಾನುಭವ ಈ ಮೂರರ ಏಕಾಭಿಪ್ರಾಯವೂ ಇದೇ ಇರುವದು. ಪೂರ್ವ ಪಕ್ಷ, ಉತ್ತರಪಕ್ಷಗಳಿಂದ ಸಿದ್ಧವಾಗುವ ನಿಶ್ಚಿತ ತತ್ವವು ಆತ್ಮವೇ ಇರುವದು. ಸರ್ವ ಪ್ರಸ್ಥಾನತ್ರಯ ಅಂದರೆ ಉಪನಿಷತ್ತು ಬ್ರಹ್ಮಸೂತ್ರ, ಮತ್ತು ಭಗವದ್ಗೀತೆ ಇವುಗಳ ಪ್ರಮೇಯ (ಸಿದ್ಧಾಂತ-ತಾತ್ಪರ್ಯ ಸಾರಾಂಶ) ಆತ್ಮ ಸ್ವರೂಪವೇ ಇರುವದು. ಇದಲ್ಲದೆ ಪ್ರತ್ಯಕ್ಷ ಅನುಭವ ಸಹ ಹೀಗೆಯೇ ಇರುವವು. (೪೬) ಈ ಪ್ರಕಾರ ಹದಿನಾಲ್ಕು ಬ್ರಹ್ಮಗಳ ನಿರಶನ ಮಾಡಿದ ನಂತರ ಉಪಾಧಿರಹಿತ, ಕೇವಲ, ಶುದ್ಧ ಬ್ರಹ್ಮದ ಬಗೆಗೆ ಸ್ವಲ್ಪದರಲ್ಲಿ ದಿಗ್ದರ್ಶನ ಮಾಡುವರು. ಇರಲಿ. ಹೀಗಿರುವ ಶಾಶ್ವತಬ್ರಹ್ಮದಲ್ಲಿ ಮಾಯೆಯ ಭ್ರಮೆ ಎಷ್ಟೂ ಇರುವದಿಲ್ಲ. ಅಜ್ಞಾನವಿಲ್ಲ. ದೃಶ್ಯದ ಸ್ಪರ್ಶಸಹ ಇಲ್ಲ. ಕಲ್ಪನೆ ಇಲ್ಲ. ಯಾವ ಪುರುಷನು ಈ ಬ್ರಹ್ಮನ ಸಾಕ್ಷಾತ್ ಅನುಭವ ಪಡೆಯುವನೋ ಅವನಿಗೇ ಮಾತ್ರ ಪರಬ್ರಹ್ಮನ ಸ್ವರೂಪ ಬರೋಬರ ಅನುಭವಕ್ಕೆ ಬರುವದು. (ತಿಳಿಯುವದು) (೪೭) ಸ್ವರೂಪದ ಅನುಭವದಿಂದ "ನಾನು ದೇಹವೇ ಇರುವೆನು" ಎಂಬ ಕಲ್ಪನೆಯನ್ನು ಕಿತ್ತೊಗೆಯಬೇಕು. ದೇಹಬುದ್ಧಿ ನಷ್ಟವಾದ ಕೂಡಲೇ ಆಗ ಎಲ್ಲ ಕಡೆಗೂ ಬ್ರಹ್ಮಸ್ವರೂಪವೇ ಅನುಭವಕ್ಕೆ ಬರುವದು. ಅನುಭವದ ಸುಕಾಳವೇ ಸುಕಾಳ ಕಾಣುವದು. (೪೮) ದೇಹಬುದ್ಧಿಯ ಕಲ್ಪನೆ ವಿಚಾರ, ತರ್ಕ, ಇವನ್ನು ಇಲ್ಲದಂತೆ ಮಾಡಲು ನಿರ್ವಿಕಲ್ಪ-ಬ್ರಹ್ಮಸ್ವರೂಪದ ಕಲ್ಪನೆ ಮಾಡಬೇಕು. ಇದರ ಸತತ ಅಭ್ಯಾಸದಿಂದ ಕಲ್ಪನೆ ತನ್ನಿಂದ ತಾನೇ ನಷ್ಟವಾಗುವದು. ಈ ರೀತಿಯಿಂದ ನಿರ್ವಿಕಲ್ಪರಾದ ಮೇಲೆ ನಾವು ನಾವೇ ಆಗಿ (ಉಳಿಯದಿದ್ದರೂ) ಇಲ್ಲದಿದ್ದರೂ ಸಹ ಆತ್ಮಸ್ವರೂಪದಿಂದ ಅನಂತಂಕಾಲ ಇರುವೆವು. (೪೯)

ಕಲ್ಪನೇಚೇ ಯೋಕ ಬರೇ । ಮೊಹಿರಿತಾಚ ಮೊಹರೇ ।
ಸ್ವರೂಪೀ ಘಾಲಿತಾ ಭರೆ । ನಿರ್ವಿಕಲ್ಪೀ ॥೫೦॥

ನಿರ್ವಿಕಲ್ಪಾಸೀ ಕಲ್ಪಿತಾ । ಕಲ್ಪನೇಚೀ ನುರೇ ವಾರ್ತಾ ।
ನಿಃಸಂಗಾಸ ಭೇಟೋ ಜಾತಾ । ನಿಃಸಂಗ ಹೊಇಜೆ ॥೫೧॥

ಪದಾರ್ಥಾ ಏಸೇ ಬ್ರಹ್ಮ ನವ್ಹೇ । ಮಾ ತೇ ಹಾತೀ ಧರೂನ ದ್ಯಾವೇ ।
ಅಸೋ ಹೇ ಅನುಭವಾವೇ । ಸದ್ಗುರು ಮುಖೇ ॥೫೨॥

ಪುಢೇ ಕಥೇಚಾ ಅನ್ವಯೋ । ಕೇಲಾ ಚಿ ಕರೂ ನಿಶ್ಚಯೋ ।
ಜೇಣೇ ಅನುಭವಾಸಿ ಯೋ । ಕೇವಳ ಬ್ರಹ್ಮ ॥೫೩॥

ಇತಿ ಶ್ರೀ ದಾಸಬೋಧ ಗುರುಶಿಷ್ಯ ಸಂವಾದೆ
'ಚತುರ್ದಶ ಬ್ರಹ್ಮ ನಿರೂಪಣ' ನಾಮ ಸಮಾಸ ತೃತೀಯ ॥

● ●

ಕಲ್ಪನೆಯಲ್ಲಿ ಸಹ ಒಂದು ಉತ್ತಮ ಗುಣವಿರುವದು. ಅದು ಯಾವುದೆಂದರೆ ಯಾವುದರ ಕಡೆಗೆ ಇದರ ಮುಖ ಆಗುವದೋ [ಮಾಡುವದೋ] ಅದರೊಂದಿಗೆ ಇದು[ಮನಸ್ಸು] ತದಾಕಾರ ಹೊಂದಿಬಿಡುವದು. ಆದ್ದರಿಂದ ಇದನ್ನು ಸ್ವಸ್ವರೂಪದ ಕಡೆಗೆ ಒಯ್ದಿದ್ದಾದರೆ ಇದು ನಿರ್ವಿಕಲ್ಪದಲ್ಲಿ ವ್ಯಾಪಿಸಿ ಕೂಡಿ ಹೋಗುವದು.[೫೦] ಅಂತೂ ಯಾವುದು ನಿರ್ವಿಕಲ್ಪ ಇದೆಯೋ ಅದರಕಲ್ಪನೆ ಮಾಡಹತ್ತಿದರೆ ಆಗ ಕಲ್ಪನೆಯೇ ಕರಗಿ ವಿಲೀನವಾಗಿ ಹೋಗುವದು. ಯಾವುದು ನಿಃಸಂಗವಿರುವದೋ ಅದರ ಭೆಟ್ಟಿಗೆ ಹೋದದ್ದು ಸ್ವತಃ ತಾನು ನಿಃಸಂಗವೇ ಆಗಿ ಬಿಡುವದು. ಇದರಂತೆಯೇ ನಿರ್ವಿಕಲ್ಪವು ಕಲ್ಪನಾರಹಿತ ಇರುವದರಿಂದ ಇದರ ಬಗ್ಗೆ ಕಲ್ಪನೆ ಮಾಡಹೋದರೆ ಸ್ವತಃ ಕಲ್ಪನೆಯೇ ನಿರ್ವಿಕಲ್ಪವಾಗಿ ಬಿಡುವದು. [೫೧] ಪರಬ್ರಹ್ಮವು ಯಾವುದೇ ದೃಶ್ಯಪದಾರ್ಥಗಳಂತೆ ಇಲ್ಲ. ಅರ್ಥಾತ್ ಇದನ್ನು ವಸ್ತುವಿನಂತೆ ಎತ್ತಿ ಕೈಯಲ್ಲಿ ಕೊಡಲು ಬರುವದಿಲ್ಲ. ಸದ್ಗುರುವಿನ ಮುಖದಿಂದ ಬ್ರಹ್ಮಸ್ವರೂಪದ ವಿಷಯ ಶ್ರವಣಮಾಡಿ ಆಮೇಲೆ ಸ್ವತಃ ಇದರ ಅನುಭವ ತಾನೇ ಹೊಂದುವದಿರುವದು.[೫೨] ಇಲ್ಲಿಯವರೆಗೆ ಬ್ರಹ್ಮಸ್ವರೂಪ ಹೇಗಿರುವದು, ಇದರ ಬಗೆಗೆ ನಿಮಗೆ ತಿಳಿಸಿ ಹೇಳಿದೆನು. ನಾನು ಹೇಳಿದ್ದು ಅಗದೀ ನಿಶ್ಚಿತವಾಗಿರುವದೆಂಬುದನ್ನು ನಂಬಿರಿ. ಈ ವಿಷಯವೇ ಇನ್ನೂ ಹೆಚ್ಚು ಸ್ಪಷ್ಟವಾಗಿ ತಿಳಿಯಲಿ ಎಂದು ಇನ್ನು ಮುಂದೆ ಹೇಳುವ ವಿವೇಚನೆಯನ್ನು ಶ್ರವಣ ಮಾಡಿರಿ. ಅಂದರೆ ಕೇವಲ ಶುದ್ಧ ಹಾಗೂ ಶಾಶ್ವತ ಬ್ರಹ್ಮವು ಅನುಭವಕ್ಕೆ ಬರುವದು. ಗಟ್ಟಿಗೊಳ್ಳುವದು. [೫೩]

ಈ ಪ್ರಕಾರ ದಾಸಬೋಧದೊಳಗಿನ ಗುರುಶಿಷ್ಯ ಸಂವಾದದಲ್ಲಿಯ ಏಳನೆಯ ದಶಕದೊಳಗಿನ "ಚತುರ್ದಶ ಬ್ರಹ್ಮ" ನಿರೂಪಣವೆಂಬ ಮೂರನೆಯ ಸಮಾಸವು ಮುಗಿದುದು.

● ●

### ಸಮಾಸ ಚತುರ್ಥ : ವಿಮಳ ಬ್ರಹ್ಮ ನಿರೂಪಣ

॥ಶ್ರೀರಾಮ॥ ಬ್ರಹ್ಮ ನಭಾಹೂನ ನಿರ್ಮಳ । ಪಾಹಾತಾ ತೈಸೇಚಿ ಪೋಕಳ ।
ಅರೂಪ ಆಣೀ ವಿಶಾಳ । ಮರ್ಯಾದೇವೇಗಳೇ ॥೧॥

ಯೇಕವಿಸ ಸ್ವರ್ಗೇ ಸಪ್ತ ಪಾತಾಳ । ಮಿಳೋನ ಯೇಕ ಬ್ರಹ್ಮಗೋಳ ।
ಐಸೀ ಅನಂತ ತೇ ನಿರ್ಮಳ । ವ್ಯಾಪೂನ ಅಸೆ ॥೨॥

# ದಶಕ ೭. ಸಮಾಸ ೪. ವಿಮಲ ಬ್ರಹ್ಮ ನಿರೂಪಣ (ನುಡಿ ೫೨)

ನಮ್ಮ ಅನುಭವಕ್ಕೆ ಬಂದಂಥವುಗಳೆಲ್ಲ ಸಂಪೂರ್ಣವಾಗಿ ನಿಜವೇ ಇರುವವೆಂದು ಅನ್ನಲಿಕ್ಕೆ ಬರುವದಿಲ್ಲ. ಆದರೂ ಸಹ ನಮಗೆ ಯಾವ ಯಾವುದು ಎಷ್ಟರ ಮಟ್ಟಿಗೆ ಅನುಭವಕ್ಕೆ ಬರುವದೋ ಅದರ ಮೇಲೆ ಬುದ್ಧಿಯನ್ನು ಉಪಯೋಗಿಸಿ ಅಸಾರದಿಂದ ಸಾರವಾದದ್ದನ್ನು ಆರಿಸಿ ಒಂದು ಕಡೆಗೆ ಇಡುವದೇ ಮಾನವೀ ಜ್ಞಾನದ ಪ್ರಧಾನ ಲಕ್ಷಣವಿರುವದು. ಆದರೆ ಎಲ್ಲರ ಅನುಭವ ಒಂದೇ ಪ್ರಕಾರದ್ದಿರುವದಿಲ್ಲ. ಅನುಭವದಲ್ಲಿ ಸಹ ಶ್ರೇಷ್ಠ ಮತ್ತು ಕನಿಷ್ಠ ಪ್ರಕಾರಗಳಿರುವವು. ಕನಿಷ್ಠ ಅನುಭವದ ಮೇಲೆ ವಿಚಾರ ಮಾಡಿ ನಿಶ್ಚಿತ ಮಾಡಿಕೊಂಡ ಸಾರ-ಸ್ವರೂಪವು ಕೊನೆಯವರೆಗೆ ಸತ್ಯತನದಿಂದ ಟಿಕಾಯಿಸಿ ಇರುವದೆಂದು ಹೇಳಲಿಕ್ಕೆ ಬರುವದಿಲ್ಲ. ಉದಾ :- ದೇಹ ಬುದ್ಧಿಯ ಹಿಡಿತದಲ್ಲಿಯ ಅನುಭವದಿಂದ ನಿಶ್ಚಿತಪಡಿಸಿಕೊಂಡ ವಸ್ತು ಸ್ವರೂಪವು ಆತ್ಮಬುದ್ಧಿಯ ಅನುಭವದ ಮುಂದೆ ಟಿಕಾಯಿಸುವದಿಲ್ಲವೆಂದು ಎಲ್ಲ ಆತ್ಮಜ್ಞಾನಿ ಪುರುಷರು ಹೇಳುತ್ತಾರೆ. ಬ್ರಹ್ಮಸ್ವರೂಪದ ಸಾಕ್ಷಾತ್ಕಾರವಾಗುವಿಕೆಯು ಸರ್ವ ಅನುಭವಗಳ ಚಕ್ರವರ್ತಿ ಇರುವದು. ಅರ್ಥಾತ್ ಈ ಅನುಭವದಿಂದ ನಿಶ್ಚಿತವಾದಂಥ ಆತ್ಮಸ್ವರೂಪ ಮತ್ತು ವಿಶ್ವಸ್ವರೂಪ ಇವು ಅಂತಿಮ ಸತ್ಯವೆಂದು ಒಪ್ಪಲೇಬೇಕಾಗುವದು. ಬ್ರಹ್ಮಜ್ಞಾನಿ ಪುರುಷರು ಖಾತ್ರಿಯಿಂದ ಹೇಳುವದೇನಂದರೆ:– ಪರಮಾತ್ಮ ವಸ್ತುವು ಅಪರಂಪಾರವಿರುವದು. ಇದರ ಒಂದು ತೀರ ಸಣ್ಣ ಭಾಗದ ಮೇಲೆ ದೃಶ್ಯ ವಿಶ್ವದ ದೇಖಾವಾ [ರೂಪ] ಕಾಣುವದು. ಮೂಲದಲ್ಲಿಯೇ ಪರಮಾತ್ಮ ಸ್ವರೂಪವಿರುವ ವಿಶ್ವವು ನಮ್ಮ ಇಂದ್ರಿಯಗಳಿಗೆ ಪದಾರ್ಥ ರೂಪದಲ್ಲಿ ಕಾಣುವದು. ವಾಸ್ತವಿಕವಾಗಿ ಅದು ಹೀಗಿರುವದಿಲ್ಲ. ಯಾಕೆಂದರೆ ಇಂದ್ರಿಯಗಳ ದೃಷ್ಟಿಯು ಅಜ್ಞಾನದ್ದಾಗಿರುವದು. ಇಂದ್ರಿಯಗಳಿಗೆ ಕಾಣುವಂಥ ಪದಾರ್ಥಗಳಲ್ಲಿ ಒಳಗೂ ಹೊರಗೂ ಬ್ರಹ್ಮವು ವ್ಯಾಪಿಸಿಯೇ ಇರುವದು. ಪರಂತು ಈ ವಿಶ್ವದ ಹೊರಗೆ ಅದು [ಬ್ರಹ್ಮವು] ಇನ್ನೂ ಎಷ್ಟಿರುವದೆಂಬುದರ ಪತ್ತೆ ಯಾರಿಗೂ ಹತ್ತುವದಿಲ್ಲ. ಅಥವಾ ಹತ್ತಿಲ್ಲ. ಬ್ರಹ್ಮವು ಅತಿ ಸೂಕ್ಷ್ಮವಿರುವದು, ಅತೀಂದ್ರಿಯವಿರುವದು. ಸದಾ ಸರ್ವಕಾಲ ನಮ್ಮ ಹತ್ತಿರ ಇರುವದು. ಇದು ಸಂಪೂರ್ಣ ಖರೇ ಇದ್ದುದರಿಂದ, ಇದರ ಮಾನದಿಂದ ನೋಡಿದರೆ, ನಮ್ಮ ಈ ವಿಶ್ವವು ನಿದ್ರೆಯಲ್ಲಿಯ ಸ್ವಪ್ನದಂತೆ ಇರುವದೆಂದು ಅನಿಸುವದು. ನಾವು ದೇಹ ಬುದ್ಧಿಯಲ್ಲಿ ಇರುವವರೆಗೆ ಇದು ಖರೇ ಅನಿಸುವದು. ಮತ್ತು ಜಡತ್ವದಿಂದ ಅನುಭವಕ್ಕೆ ಬರುವದು. ಆದರೆ ಜ್ಞಾನ ದೃಷ್ಟಿಯು ಉದಯ ಹೊಂದಿದ ಮೇಲೆ ಅದೇ ಪರಮಾತ್ಮ ಸ್ವರೂಪವು ಹೀಗೆ ಅನುಭವಕ್ಕೆ ಬರುವದು. ಇಂಥ [ಈ] ಜ್ಞಾನ ದೃಷ್ಟಿಯನ್ನು ಸಾಧಿಸಿಕೊಳ್ಳುವದೆಂದರೆ ಪರಮಾರ್ಥವೇ ಆಗಿರುವದು.

### ದಶಕ ೭. ಸಮಾಸ ೪. ವಿಮಲ ಬ್ರಹ್ಮ ನಿರೂಪಣ (ನುಡಿ ೫೨)

[ವಿಮಲ ಅಂದರೆ ನಿಷ್ಕಳಂಕವಾದ, ನಿರ್ಮಲವಾದ, ಸ್ವಚ್ಛವಾದ ಪವಿತ್ರವಾದ ಬ್ರಹ್ಮವು]

ಆರಂಭದಲ್ಲಿ ಬ್ರಹ್ಮ ಸ್ವರೂಪ ಬಹಳಷ್ಟು ವಿಶಾಲ ಇರುವದು. ಸರ್ವ ವಿಶ್ವವನ್ನು ಎಲ್ಲ ಕಡೆಯಿಂದ ವ್ಯಾಪಿಸಿರುವದು. ಜೀವಕ್ಕೆ ಒಳಗೂ, ಹೊರಗೂ ಅಗದೀ ಹೊಂದಿಕೊಂಡು [ಅಂಟಿಕೊಂಡು] ಇರುವದು. ಎಂದು ಹೇಳುವರು. ಪರಂತು ಈ ರೀತಿಯಿಂದ ಅಖಂಡವಾದ, ಸಮೀಪ ಇರುವ [ಹತ್ತಿರ ಇರುವ] ಬ್ರಹ್ಮವು ಹತ್ತಿರದಲ್ಲಿಯೇ ಇರುವದು ಎನ್ನುವ ತಿಳುವಳಿಕೆ [ಎಚ್ಚರ] ನಮಗೆ ಇರುವದಿಲ್ಲ:- ಬ್ರಹ್ಮವು ಹೇಗಿರುವದು ? ಹೀಗೆ ವಿಚಾರ ಮಾಡಿದರೆ ಇದು ಆಕಾಶಕ್ಕಿಂತ ನಿರ್ಮಲವಿರುವದೆಂದು ಅನ್ನಲಿಕ್ಕೆ ಬರುವದು. [ಆಕಾಶವು ಸಪ್ತಗುಣಗಳಿಂದ ಕೂಡಿದೆ. ದ. ೮–೫–೪೧]ನೋಡಲು ಹೋದರೆ ಇದು ಆಕಾಶದಂತೆಯೇ ಪೊಳ್ಳು(ರಿಕಾಮಿ ಜಾಗಾ ಅವಕಾಶಮಯ, ಪ್ರಶಾಂತ, ಪೋಕಳ) ಇರುವದು. ಯಾವುದೇ ರೂಪವಿಲ್ಲದ್ದು ಇರುವದು. ಮತ್ತು ಅಮರ್ಯಾದಿತವಾಗಿ ವಿಶಾಲವಿರುವದು. (೧) ಇಪ್ಪತ್ತೊಂದು ಸ್ವರ್ಗಗಳು, ಏಳು ಪಾತಾಳಗಳು ಕೂಡಿ ಒಂದು ಬ್ರಹ್ಮ ಗೋಲವಾಗುವದು. ಇಂತಹ ಎಷ್ಟೋ ಬ್ರಹ್ಮ ಗೋಲಗಳನ್ನು ಆ ನಿರ್ಮಲ ಬ್ರಹ್ಮವು ವ್ಯಾಪಿಸಿ ಬಿಟ್ಟಿರುವದು. (೨)

ಅನಂತ ಬ್ರಹ್ಮಾಂಡಾ ಖಾ ಲತೇ । ಅನಂತ ಬ್ರಹ್ಮಾಂಡಾ ವರುತೇ ।
ತೇಣೇವಿಣ ಸ್ಥಳ ರಿತೇ । ಅಣುಮಾತ್ರ ನಾಹೀ ॥೩॥

ಜಳೀ ಸ್ಥಳೀ ಕಾಷ್ಠೀ ಪಾಷಾಣೀ । ಐಸೀ ವದೇ ಲೋಕವಾಣೀ।
ತೇಣೇವಿಣ ರಿತಾ ಪ್ರಾಣೀ । ಯೇಕ ಹೀ ನಾಹೀ ॥೪॥

ಜಳಚರಾಸ ಜೈಸೇ ಜಳ । ಬಾಹ್ಯಾಭ್ಯಾಂತರೀ ನಿಖಳ ।
ತೈಸೇ ಬ್ರಹ್ಮ ಹೇ ಕೇವಳ । ಜೀವ ಮಾತ್ರಾಸೀ ॥೫॥

ಜಳಾ ವೇಗಳಾ ಠಾವ ಆಹೇ । ಬ್ರಹ್ಮಾ ಬಾಹೇರೀ ಜಾತಾ ನಯೇ ।
ಮ್ಹಣೌನಿ ಉಪಮಾ ನ ಸಾಹೇ । ಜಳಾಚೀ ತಯಾ ॥೬॥

ಆಕಾಶಾಬಾಹೇರೀ ಪಳೋ ಜಾತಾ । ಪುಢೇ ಆಕಾಶ ಚಿ ತತ್ವತಾ ।
ತೈಸೆ ತಯಾ ಅನಂತಾ । ಅಂತ ಚಿ ನಾಹೀ ॥೭॥

ಪರೀ ಜೇ ಅಖಂಡ ಭೇಟಲೇ । ಸರ್ವಾಂಗಾಸ ಲಿಗಟಲೇ ।
ಅತಿ ನಿಕಟ ಪರೀ ಚೋರಲೇ । ಸಕಳಾಂಸಿ ಜೇ ॥೮॥

ತಯಾಮಧೇ ಚಿ ಅಸಿಜೆ । ಪರೀ ತಯಾಸ ನೇಣಿಜೆ ।
ಉಮಜೆ ಭಾಸ ನುಮಜೆ । ಪರಬ್ರಹ್ಮ ತೇ ॥೯॥

ಆಕಾಶಾಮಧೇ ಆಭಾಳ । ತೇಣೇ ಆಕಾಶ ವಾಟೆ ಡಹುಳ ।
ಪರೀ ತೇ ಮಿಥ್ಯಾ ನಿವಳ । ಆಕಾಶ ಚಿ ಅಸೇ ॥೧೦॥

ನೇಹಾರ ದೇತಾ ಆಕಾಶೀ । ಚಕ್ರೇ ದಿಸತೀ ಡೋಳ್ಯಾಸೀ ।
ತೈಸೇ ದೃಶ್ಯ ಜ್ಞಾನಿಯಾಸೀ । ಮಿಥ್ಯಾರೂಪ ॥೧೧॥

ಅನಂತ ಬ್ರಹ್ಮಾಂಡದ ಮೇಲೆ ಮತ್ತು ಕೆಳಗೆ ಹಾಗೂ ಸುತ್ತು ಮುತ್ತಲೂ ಸಹ ಅಂದರೆ ಎಲ್ಲ ಕಡೆಗೂ ಬ್ರಹ್ಮವು ವ್ಯಾಪಿಸಿರುತ್ತದೆ. ಇಂಥಲ್ಲಿ ಬ್ರಹ್ಮ ಇಲ್ಲವೇದು ಹೇಳಲಿಕ್ಕೆ ಸಾಧ್ಯವಿಲ್ಲ. (ತೋರಿಸಲಿಕ್ಕೆ ಖಾಲೀ ಸ್ಥಳನೇ ಸಿಗುವದಿಲ್ಲ.) (೩) ಜಲದಲ್ಲಿ, ಸ್ಥಳದಲ್ಲಿ, ಕಟ್ಟಿಗೆಯಲ್ಲಿ, ಕಲ್ಲಿನಲ್ಲಿಯೂ ಸಹ ಬ್ರಹ್ಮ ತುಂಬಿರುವದು. (ವ್ಯಾಪಿಸಿ ರುವದು) ಎಂದು ಲೋಕದ ಜನ ಅನ್ನುವರು. ಬ್ರಹ್ಮವಿಲ್ಲದ ಒಂದೂ ಪ್ರಾಣಿ ಜೀವವಿರುವದಿಲ್ಲ. (೪) ಸಮುದ್ರ ದಲ್ಲಿರುವ ಮೀನ (ಜಲಚರ ಪ್ರಾಣಿ)ಗಳಿಗೆ ಅಲ್ಲಿಯ ನೀರು ಯಾವ ಪ್ರಕಾರ ಒಳಗೂ, ಹೊರಗೂ ನೀರೇ ಆಗಿ ವ್ಯಾಪಿಸಿರುವದೋ ಇದರಂತೆ ಸರ್ವಜೀವಕ್ಕೂ ಬ್ರಹ್ಮವು ಒಳಗೂ ಹೊರಗೂ ಅಖಂಡವಾಗಿ ವ್ಯಾಪಿಸಿಕೊಂಡಿ ರುವದು. (೫) ಆದರೂ ಸಹ ನೀರಿನ ದೃಷ್ಟಾಂತವು ಬ್ರಹ್ಮಕ್ಕೆ ಪೂರ್ಣವಾಗಿ ಲಾಗೂ ಬೀಳುವದಿಲ್ಲ. ಯಾಕೆಂದರೆ ನೀರಿನ ಮತ್ತು ಬ್ರಹ್ಮದ ವ್ಯಾಪಕತನದಲ್ಲಿ ಅಂತರ (ಫರಕ) ಇರುವದು ಕಂಡು ಬರುತ್ತದೆ. ನೀರು ಎಲ್ಲಿಯಾದರೂ ಒಂದು ಕಡೆ ಮುಗಿಯುತ್ತದೆ. ಮತ್ತು ನೀರಿನ ಹೊರಗೆ ಸ್ಥಳ (ಜಾಗಾ) ಇರುವದು. ನೀರಿನ ಎರಡೂ ಕಡೆಗೆ ಜಮೀನು ಇರುವದನ್ನು ನೀವು ಕಾಣುವಿರಿ. ಮತ್ತು ನೀರನ್ನು ದಾಟಿ ಹೋಗಲು ಬರುತ್ತದೆ. ಆದರೆ ಬ್ರಹ್ಮವು ಎಲ್ಲಿಯೂ ಮುಗಿಯುವದಿಲ್ಲ. ಹಾಗೂ ಬ್ರಹ್ಮವನ್ನು ದಾಟಿ ಆಚೆಗೆ ಹೋಗಲಿಕ್ಕೆ ಬರುವದಿಲ್ಲ. (೬) ಆಕಾಶದ ಆಚೆಗೆ [ಹೊರಗೆ] ಹೋಗಬೇಕೆಂದು ಯಾರಾದರೂ ಓಡುವ ಪ್ರಯತ್ನ ಮಾಡಿದರೆ ಎತ್ತ ಕಡೆಗೆ ಹೋದರೂ ಅತ್ತಕಡೆಗೆ ಆಕಾಶವು ಅವನ ಮುಂದೆಯೇ ಇರುತ್ತದೆ. ಇದರಂತೆ ಅನಂತ ಬ್ರಹ್ಮವನ್ನು ಎಂದೂ ಎಲ್ಲಿಂದಲೂ ದಾಟಲೂ ಶಕ್ಯವಿಲ್ಲ. ಇವನಿಗೆ ಕೊನೆಯೇ ಇಲ್ಲ. (೭) ಹುಟ್ಟಿದಂದಿನಿಂದ ಸಾಯುವವರೆಗೂ ನಮಗೂ ನಿಮಗೂ ಎಲ್ಲರಿಗೂ ಮತ್ತು ಬ್ರಹ್ಮಕ್ಕೂ ಕಗ್ಗಂಟು ಬಿದ್ದಿರುವದು. ಒಂದೇ ಸವನೇ ಸರ್ವಾಂಗಕ್ಕೆ ಅಂಟಿಕೊಂಡಿರುವದು. ಹೀಗೆ ಸದಾ ಹತ್ತಿರವಿರುವ ಬ್ರಹ್ಮವು ಎಲ್ಲರಿಂದ ಅಡಗಿ ಇರುವದು. [ಕಾಣದಂತಿರುವದು]. ಎಲ್ಲರಿಗೂ ಇಷ್ಟೊಂದು ನಿಕಟವಾಗಿರುತ್ತಿದ್ದರೂ ಇದು ಇರುವದು ಎಂಬುದರ ಅರಿವು [ತಿಳುವಳಿಕೆ] ಬಹಳ ಕಡಿಮೆ ಜನರಿಗೆ ಮಾತ್ರ ಇರುವದು. (೮) ಹೀಗಿರುವ ಸೂಕ್ಷ್ಮ ಮತ್ತು ಸರ್ವವ್ಯಾಪಿ ಬ್ರಹ್ಮದಲ್ಲಿ ಅಜ್ಞಾನಿ ಜೀವಿಗಳಿಗೆ ದೃಶ್ಯವಿಶ್ವದ ಭಾಸ [ಭ್ರಾಂತಿ, ಅನಿಶ್ಚಿತಜ್ಞಾನ]ವಾಗುವದು. ಜ್ಞಾನಿ ಜನರಿಗೆ ಯಾವ ಬ್ರಹ್ಮಸ್ವರೂಪ ಕಾಣುವದೋ ಅದು ಅಜ್ಞಾನಿ ಜನರಿಗೆ ದೃಶ್ಯರೂಪದಲ್ಲಿ ಪ್ರತೀತ (ಖಾತ್ರಿ, ಅನುಭವ)ವಾಗುವದು. ಎಲ್ಲ ಜನರೂ ಆ ಬ್ರಹ್ಮದಲ್ಲಿಯೇ ಜೀವಿಸು ತ್ತಿದ್ದರೂ ನಾವು ಇದರಲ್ಲಿ ಇರುವೆವು ಅನ್ನುವ ತಿಳುವಳಿಕೆ [ಅರಿವು] ಮನುಷ್ಯರಿಗೆ ಇರುವದಿಲ್ಲ. ಒಂದು ವೇಳೆ [ಇದರಲ್ಲಿ] ಭ್ರಮದಿಂದ ನಿರ್ಮಾಣವಾಗುವ ವಿಶ್ವದ ಭಾಸ ತಿಳಿಯುತ್ತದೆ. ಆದರೆ ಯಾವುದರಲ್ಲಿ ಮತ್ತು ಯಾರ ಸತ್ತಾದಿಂದ ಈ ಭಾಸ ನಿರ್ಮಾಣವಾಗುವದೋ ಆ ಬ್ರಹ್ಮದ ಬಗೆಗೆ ಏನೂ ತಿಳಿಯುವದಿಲ್ಲ. (೯) ಬ್ರಹ್ಮ ಮತ್ತು ಇದರಲ್ಲಿ ಭಾಸವಾಗುವ ವಿಶ್ವ ಇವುಗಳ ಸಂಬಂಧ ಹೀಗಿರುವದು:- ಆಕಾಶದಲ್ಲಿ ಮೋಡ ಬರುವವು. ಮಳೆಯು ಸೆಳಕುಗಳೂ ಬರುವವು. ಮೋಡದಿಂದ ಆಕಾಶ ಮಲಿನವಾದಂತೆ ಕಾಣುತ್ತದೆ. ಪರಂತು ಮೋಡದಿಂದ ಕಂಡು ಬರುವ ಮಾಲಿನ್ಯವು [ಹೊಲಸು] ಖೋಟಾ ಇರುವದು. [ಆಕಾಶಕ್ಕೆ ಮೋಡ ಮುಟ್ಟಿರುವದೇ ಇಲ್ಲ. ದೂರದಿಂದ ನಮಗೆ ಹಾಗೆ ಕಾಣುವದು]. ಆಕಾಶಕ್ಕೆ ಮೋಡ ಅದರ ಮಾಲಿನ್ಯ ಅಂಟಿಕೊಂಡಿರುವದಿಲ್ಲ. ಆಕಾಶವು ಸದಾ ಸರ್ವ ಕಾಲವೂ ನಿರ್ಮಲವಾಗಿರುತ್ತದೆ. (೧೦) ಆಕಾಶದ ಕಡೆಗೆ ಒಂದೇ ಸವನೇ ಏಕಾಗ್ರ ದೃಷ್ಟಿಯಿಂದ ನೋಡಿದ್ದಾದರೆ ನಮ್ಮ ಕಣ್ಣಿಗೆ ಪ್ರಕಾಶದ ಚಕ್ರಗಳು ಕಾಣುವವು. ಆದರೆ ಇವೇನೂ ನಿಜವಾದವುಗಳಲ್ಲ [ಖರೇ ಅಲ್ಲ]. ಇದರಂತೆಯೇ ಅಜ್ಞಾನಿ ಮನುಷ್ಯರ ಅನುಭವಕ್ಕೆ ಬರುವಂಥ ದೃಶ್ಯವಿಶ್ವವು ಜ್ಞಾನಿ ಪುರುಷರ ಅನುಭವದಲ್ಲಿ ಇದು ಮಿಥ್ಯೆಯಾಗಿ ತೋರುವದು. (೧೧)

ಮಿಥ್ಯಾಚಿ ಪರೀ ಆಭಾಸೇ । ನಿದ್ರಿಸ್ತಾಸ ಸ್ವಪ್ನ ಜೈಸೇ ।
ಜಾಗಾ ಜಾಲಿಯಾ ಅಪೈಸೇ। ಬುಝೋಂ ಲಾಗೇ ॥೧೨॥

ತೈಸೇ ಆಪುಲೇನ ಅನುಭವೇ । ಜ್ಞಾನೇ ಜಾಗೃತೀಸಿ ಯಾವೇ ।
ಮಗ ಮಾಈಕ ಸ್ವಭಾವೇ । ಕಳೋಂ ಲಾಗೇ ॥೧೩॥

ಆತಾ ಅಸೋ ಹೇ ಕುವಾಡೇ । ಜೇ ಬ್ರಹ್ಮಾಂಡಾಪೈಲೀಕಡೇ ।
ತೇ ಚಿ ಆತಾ ನಿವಾಡೇ । ಉಮಜೋನ ದಾಊ ॥೧೪॥

ಬ್ರಹ್ಮ ಬ್ರಹ್ಮಾಂಡೀ ಕಾಲವಲೇ । ಪದಾರ್ಥಾಸೀ ವ್ಯಾಪೂನ ಠೇಲೇ ।
ಸರ್ವಾಮಧೇ ವಿಸ್ತಾರಲೇ । ಅಂಶಮಾತ್ರೇ ॥೧೫॥

ಬ್ರಹ್ಮಾಮಧೇ ಸೃಷ್ಟೀ ಭಾಸೇ । ಸೃಷ್ಟೀ ಮಧೇ ಬ್ರಹ್ಮ ಅಸೇ ।
ಅನುಭವ ಘೇತಾ ಆಭಾಸೇ । ಅಂಶ ಮಾತ್ರೇ ॥೧೬॥

ಅಂಶ ಮಾತ್ರೇ ಸೃಷ್ಟೀ ಭೀತರೀ । ಬಾಹೇರೀ ಮರ್ಯಾದಾ ಕೋಣ ಕರೀ ।
ಸಗಳೇ ಬ್ರಹ್ಮ ಬ್ರಹ್ಮಾಂಡೋದರೀ । ಮಾಈಲ ಕೈಸೇ ॥೧೭॥

ಅಮೃತೀ ಮಧೇ ಆಕಾಶ । ಸಗಳೇ ಸಾಠವತಾ ಪ್ರಯಾಸ ।
ಮ್ಹಣೌನ ತಯಾಚಾ ಅಂಶ । ಬೋಲಿಜೇ ತೋ ॥೧೮॥

ಬ್ರಹ್ಮ ತೈಸೇ ಕಾಲವಲೇ । ಪರೀ ತೇ ನಾಹೀ ಹಾಲವಲೇ ।
ಸರ್ವಾಮಧೇ ಪರೀ ಸಂಚಲೇ । ಸಂಚಲೇಪಣೇ ॥೧೯॥

ದೃಶ್ಯವು ಸುಳ್ಳು ಖೊಟ್ಟಿ, ಅಂತಾ ಅಂದರೂ ಸಹ ಇಂದ್ರಿಯಗಳಿಗೆ ಪ್ರತ್ಯಕ್ಷವಾಗಿ ಕಾಣುವದೆಂಬಲ್ಲಿ ಏನೂಸಂಶಯವಿಲ್ಲ. ಆದರೆ ಯಾವುದು ಕಾಣುವದೋ ಅದು ಪ್ರತ್ಯಕ್ಷನೋಡಲಿಕ್ಕೆ ಕಾಣಿಸಿದರೂ ಸಹ ಅದು ನಿಜವೇ ಇರುವದೆಂದು ಅನ್ನಲಿಕ್ಕೆ ಬರುವದಿಲ್ಲ. ಉದಾ:- ಮಲಗಿ ನಿದ್ರಿಸುತ್ತಿರುವ ಮನುಷ್ಯನಿಗೆ ಸ್ವಪ್ನ ಬೀಳುತ್ತದೆ. ನಿದ್ರೆಯಲ್ಲಿದ್ದಾಗಿನ ಸ್ವಪ್ನದಲ್ಲಿ ಏನೇನು ನೋಡುವನೋ ಅದೆಲ್ಲ ಅವನಿಗೆ (ನಿದ್ರಿತನಿಗೆ) ಖರೇ ಎಂದೇ ಅನಿಸುವದು. ಆದರೆ ಅವನು ಎಚ್ಚರವಾದಮೇಲೆ ಸ್ವಪ್ನ ಮತ್ತು ಅದರಲ್ಲಿಯ ದೃಶ್ಯಗಳು ನಿಜವಲ್ಲವೆಂದು ಅವನಿಗೆ ತನ್ನಿಂದ ತನಗೆ ತಿಳಿಯುತ್ತದೆ.(೧೨) ಇದು ಹೇಗೆ ಘಟಿಸುವದೋ ಇದರಂತೆಯೇ ಯಾವನು ಸ್ವಸ್ವರೂಪದ ಅನುಭವವನ್ನು ಸ್ವತಃ ತೆಗೆದುಕೊಳ್ಳುವನೋ ಅವನಿಗೆ ಮಾತ್ರ ಆತ್ಮಜ್ಞಾನವಾಗುವದು. ಈ ಜ್ಞಾನದಿಂದ ಅವನ ಅಜ್ಞಾನವೆಂಬ ನಿದ್ರೆ ಇಲ್ಲದಂತಾಗುವದು. ಅವನು ಬ್ರಹ್ಮಸ್ವರೂಪದ ಬಗ್ಗೆ ಎಚ್ಚರಾಗುವನು. ಅನಂತರ ಈ ದೃಶ್ಯ ವಿಶ್ವವು ಮಾಯಿಕ ವಿರುವದು. ಇದು ಎಷ್ಟೂ (ಸರ್ವಸ್ವೀ) ಖರೇ ಅಲ್ಲವೆಂದು ಅವನಿಗೆ ನಿಶ್ಚಿತವಾಗಿ[ಬರೋಬರಿ]ತಿಳಿಯುವದು.(೧೩) ಇನ್ನು ಮೇಲೆ ಶುದ್ಧ ವಿಮಲ ಬ್ರಹ್ಮವು ಹೇಗೆ ಇರುವದೆಂಬುದನ್ನು ನಿಮಗೆ ತಿಳಿಸಿಕೊಡುವ ಪ್ರಯತ್ನ ಮಾಡು ತ್ತಾರೆ:- ಸದ್ಯಕ್ಕೆ ಈ ಗಹನ ಮತ್ತು ಗೂಢ ದುರ್ಬೋಧ ಭಾಷೆಯ ಹೇಳಿಕೆ ಇಲ್ಲಿಗೆ ನಿಲ್ಲಿಸೋಣ. ಬ್ರಹ್ಮಾಂಡಕ್ಕೆಲ್ಲ ವ್ಯಾಪಿಸಿಯೂ ಪುನಃ ಶಿಲ್ಲಕ ಉಳಿಯುವಂಥ ಆ ಪರಬ್ರಹ್ಮದ ಬಗೆಗೆ ಉತ್ತಮ ರೀತಿಯಿಂದ ತಿಳಿಯುವಂತೆ ವಿವರವಾಗಿ ತಿಳಿಸಿಕೊಡುವೆವು. (೧೪) ಬ್ರಹ್ಮವು ಸರ್ವವಿಶ್ವದಲ್ಲಿ ಬೆರೆತುಕೊಂಡಿದೆ. [ಮಿಶ್ರವಾಗಿದೆ, ಕೂಡಿದೆ] ಎಲ್ಲ ಪದಾರ್ಥಗಳಲ್ಲಿ ಮಿಶ್ರವಾಗಿ ಕೂಡಿ ಹೋಗಿದೆ. ಸರ್ವ ಪದಾರ್ಥಗಳಿಗೆ ಇದು ವ್ಯಾಪಿಸಿಕೊಂಡು ಬಿಟ್ಟಿದೆ. ಸರ್ವ ಪದಾರ್ಥಗಳಲ್ಲಿ ಇದು ವ್ಯಾಪಿಸಿಕೊಂಡು ಇದ್ದರೂ ಆದರ ಒಂದು ಸಣ್ಣ ಅಂಶದಿಂದ ಮಾತ್ರ ಇಷ್ಟೆಲ್ಲ ಹರಡುವಿಕೆ, ವ್ಯಾಪಿಸುವಿಕೆ ಇವೆಲ್ಲ ಆಗಿವೆ. ಇಷ್ಟಕ್ಕೆ ಇದು ಮುಗಿಯುವದಿಲ್ಲ. ಇನ್ನೂ ಬಹಳವೆಂದರೆ ಬಹಳಷ್ಟು ವ್ಯಾಪಿಸಿಯೂ ಇದು ಉಳಿದಿರುತ್ತದೆ. (೧೫) ಇದರಲ್ಲಿ (ಬ್ರಹ್ಮದಲ್ಲಿ) ಯಾವತ್ತೂ ವಿಶ್ವವೇ ತುಂಬಿರುತ್ತದೆ. ಇದರಿಂದ ಬ್ರಹ್ಮವು ಎಷ್ಟೊಂದು ವಿಶಾಲವಾಗಿದೆ ನೋಡಿರಿ. ಅಲ್ಲದೇ ವಿಶ್ವದಲ್ಲಿಯ ಪ್ರತ್ಯೇಕ ಪದಾರ್ಥಗಳಲ್ಲಿಯೂ ಸಹ ಇದು ಇದ್ದೇ ಇರುತ್ತದೆ. ಇದೇ ಈ ವಿಶ್ವದಲ್ಲಿ ಬ್ರಹ್ಮವು ಎಷ್ಟು ಇರುವವು? ಇದನ್ನು ಶೋಧಿಸಲಿಕ್ಕೆ ಹೋದರೆ ನಿಮಗೆ ಆ ಪರಬ್ರಹ್ಮದ ಒಂದು ಸಣ್ಣ ಅಂಶದಲ್ಲಿ ಇಷ್ಟೆಲ್ಲ ಇಲ್ಲಿ ಇರುವದು, ಎಂಬ ಅನುಭವ ಬರುತ್ತದೆ. (ಬ್ರಹ್ಮದಲ್ಲಿ ಸೃಷ್ಟಿ ಮತ್ತು ಸೃಷ್ಟಿಯಲ್ಲಿ ಬ್ರಹ್ಮದ ಭಾಸವಾಗುವದು. ಇದರ ಅನುಭವ ಪಡೆಯಲು ಹೋದರೆ ಅಲ್ಪು ಸ್ವಲ್ಪು ಭಾಸ ವಾಗುವದು). (೧೬) ಈ ಅವಾಢವ್ಯ ವಿಶ್ವದಲ್ಲಿ ಬ್ರಹ್ಮದ ಒಂದು ಸಣ್ಣ ಅಂಶ ಮಾತ್ರ ಇದರಲ್ಲಿ ಇರುವದೆಂಬುದು ಖರೇ ಇರುವದೇ ಆದರೆ ವಿಶ್ವದ ಹೊರಗೆ ಈ ಬ್ರಹ್ಮ ಎಷ್ಟಿರುವದೆಂಬುದರ ಅಳತೆ ಮಾಡುವದು ಯಾರಿಗೂ ಶಕ್ಯವಿಲ್ಲದ್ದಾಗಿದೆ. ಇದು ಅಪರಂಪಾರ ಅನಂತವಿರುವ ಬ್ರಹ್ಮವು ವಿಶ್ವದ ಹೊಟ್ಟೆಯಲ್ಲಿ [ಸಂಪೂರ್ಣ ಬ್ರಹ್ಮವು] ಹಿಡಿಸುವದಾದರೂ ಹೇಗೆ? ಅರ್ಥಾತ್ ಶಕ್ಯವಿಲ್ಲ.[೧೭] ದೇವರ ಚರಣತೀರ್ಥ ಹಾಕುವ ಸಣ್ಣಗಿಂಡಿಯಲ್ಲಿ ಎಲ್ಲ ಆಕಾಶ ವನ್ನು ಹಾಕಿ ತುಂಬಿ ಇಡುವ ಪ್ರಯತ್ನ ಯಾರಾದರೂ ಮಾಡಿದರೆ ಅದು ವ್ಯರ್ಥ ಶ್ರಮವೇ ಆಗಿ ಹೋಗುವದು. ಇದರಂತೆಯೇ ವಿಶ್ವದಲ್ಲಿ ಸಂಪೂರ್ಣ ಬ್ರಹ್ಮವನ್ನು ಸಮಾವೇಶಗೊಳಿಸುವ ಪ್ರಯತ್ನವೂ ವ್ಯರ್ಥವೇ ಆಗುವದು. ಅರ್ಥಾತ್ ತೀರ್ಥಗಿಂಡಿಯಲ್ಲಿ ಆಕಾಶವು ಅಂಶಮಾತ್ರದಿಂದ ಇರುವಂತೆ ವಿಶ್ವದಲ್ಲಿ ಬ್ರಹ್ಮದ ಅಂಶವು ಮಾತ್ರ ವ್ಯಾಪಿಸಿ ಇರುವದೆಂದು ಅನ್ನಬೇಕಾಗುವದು. [೧೮] ಒಂದು ದೃಷ್ಟಿಯಿಂದ ಸರ್ವದೃಶ್ಯ ಪದಾರ್ಥಗಳಲ್ಲಿಯೂ ಬ್ರಹ್ಮವು ಕೂಡಿರುವದು. ವ್ಯಾಪಿಸಿರುವದು.ಆದರೂ ಇದು ಅಂದರೆ ಬ್ರಹ್ಮವು ಅಖಂಡ ಸ್ಥಿರವಾಗಿಯೇ ಇರುವದು. [ಚಲಿಸುವದಿಲ್ಲ]. ಹೇಗಿತ್ತೊ ಹಾಗೆಯೇ ಇರುವದು. ಒಟ್ಟಿನಲ್ಲಿ ಇದು ಸ್ಥಳಾಂತರ ಹೊಂದುವದಿಲ್ಲ, ಹಾರುವದಿಲ್ಲ, ಜಗಿಯುವದಿಲ್ಲ, ಅಲ್ಲಾಡುವದಿಲ್ಲ. ಎಲ್ಲ ಕಡೆಗೂ ಇದು ಎಷ್ಟೊಂದು ಗಟ್ಟಿಯಾಗಿ ಕೂಡಿಕೊಂಡಿದೆ [ಹತ್ತಿಕೊಂಡಿದೆ, ಜಮಾಯಿಸಿದೆ] ಎಂದರೆ ಇದನ್ನು ಅಲ್ಲಾಡಿಸಲು ಶಕ್ಯವೇ ಇಲ್ಲ. [೧೯]

ಪಂಚಭೂತೀ ಅಸೆ ಮಿಶ್ರಿತ। ಪರಂತು ತೇ ಪಂಚಭೂತಾತೀತ।
ಪಂಕೀ ಆಕಾಶ ಅಲಿಪ್ತ। ಅಸೋನಿ ಜೈಸೇ ॥೨೦॥

ಬ್ರಹ್ಮಾಸ ದೃಷ್ಟಾಂತ ನ ಘಡೇ। ಬುಝಾವಯಾ ದೇಣೇ ಘಡೇ।
ಪರೀ ದೃಷ್ಟಾಂತೀ ಸಾಹಿತ್ಯ ಪಡೇ। ವಿಚಾರಿತಾ ಆಕಾಶ ॥೨೧॥

ಖಂ ಬ್ರಹ್ಮ ಐಸೀ ಶೃತೀ। ಗಗನ ಸದೃಶಂ ಹೇ ಸ್ಮೃತೀ।
ಮ್ಹಣೌನಿ ಬ್ರಹ್ಮಾಸ ದೃಷ್ಟಾಂತೀ। ಆಕಾಶ ಘಡೇ ॥೨೨॥

ಕಾಳಿಮಾ ನಸ್ತಾ ಪಿತಳ। ಮಗ ತೇ ಸೋನೇ ಚಿ ಕೇವಳ।
ಸುನ್ಯತ್ವ ನಸ್ತಾ ನಿವಳ। ಆಕಾಶ ಬ್ರಹ್ಮ ॥೨೩॥

ಮ್ಹಣೌನಿ ಬ್ರಹ್ಮ ಜಸೇ ಗಗನ। ಆಣಿ ಮಾಯಾ ಜೈಸಾ ಪವನ।
ಆಡಳೇ ಪರೀ ದರ್ಶನ। ನವ್ಹೇ ತ್ಯಾಚೇ ॥೨೪॥

ಶಬ್ದಸೃಷ್ಟೀಚೀ ರಚನಾ। ಹೋತ ಜಾತ ಕ್ಷಣಕ್ಷಣಾ।
ಪರಂತು ತೇ ಸ್ಥಿರಾವೇನಾ। ವಾಯುಉ ಚ ಐಸೀ ॥೨೫॥

ಅಸೋ ಐಸೀ ಮಾಯಾ ಮಾಈಕ। ಶಾಶ್ವತ ತೇ ಬ್ರಹ್ಮ ಯೇಕ।
ಪಾಹೋ ಜಾತಾ ಅನೇಕ। ವ್ಯಾಪೂನ ಆಹೆ ॥೨೬॥

ಪೃಥ್ವೀಸೀ ಭೇದೂನ ಆಹೆ। ಪರೀ ತೇ ಬ್ರಹ್ಮ ಕಠೀಣ ನವ್ಹೆ।
ದುಜೀ ಉಪಮಾ ನ ಸಾಹೆ। ತಯಾ ಮೃದತ್ವಾಸೀ ॥೨೭॥

ಪೃಥ್ವೀಹೂನಿ ಮೃದ ಜಳ। ಜಳಾಹೂನಿ ತೋ ಅನಳ।
ಅನಳಾಹೂನಿ ಕೋಮಳ। ವಾಯೋ ಜಾಣಾವಾ ॥೨೮॥

ಪಂಚ ಮಹಾಭೂತಗಳಲ್ಲಿ ಇದು ಒಳಗೂ ಹೊರಗೂ ಕೂಡಿರುವದಾದರೂ ಅವುಗಳಿಗೆ ಅಂಟಿಕೊಂಡಿಲ್ಲ. ಮತ್ತು ಇವುಗಳಿಂದ ಅಲಿಪ್ತವಿರುವದು. ಪಂಚ ಮಹಾಭೂತಗಳನ್ನು ದಾಟಿ [ಆಚೆಗೆ] ಇರುವದು. ಕೆಸರಿನಲ್ಲಿ ಆಕಾಶ ಕಾಣುವದು. ಆದರೆ ಏನು ಮಾಡಿದರೂ ಕೆಸರು ಆಕಾಶಕ್ಕೆ ಹತ್ತಲಿಕ್ಕೆ ಶಕ್ಯವಿಲ್ಲ. ಆಕಾಶವು ಎಲ್ಲದರಿಂದ ಅಲಿಪ್ತ ಇರುವದು. ಇದರಂತೆಯೇ ಪಂಚಭೂತಾತ್ಮಕ ದೃಶ್ಯವಿಶ್ವದಲ್ಲಿ ಒಳಗೂ ಹೊರಗೂ ಬ್ರಹ್ಮವು ಕೂಡಿದ್ದರೂ ವ್ಯಾಪಿಸಿದಂತೆ ಕಂಡರೂ ಸಹ ದೃಶ್ಯದ **ಲೇಪ ಅದಕ್ಕೆ** ಹತ್ತುವದಿಲ್ಲ. [೨೦] ವಾಸ್ತವಿಕವಾಗಿ ಬ್ರಹ್ಮವು ಹೇಗಿರುವದು ಇದನ್ನು ಹೇಳಲಿಕ್ಕೆ ಯಾವುದೇ ದೃಷ್ಟಾಂತದ ಉಪಯೋಗವಾಗುವದಿಲ್ಲ. ಪರಂತು ಇದು ಹೇಗೆ ಇರುವದೆಂಬುದರ ಬಗೆಗೆ ಸ್ವಲ್ಪವಾದರೂ ಕಲ್ಪನಾ ಬರಬೇಕೆಂದು ದೃಶ್ಯವಿಶ್ವದಲ್ಲಿಯ ದೃಷ್ಟಾಂತಗಳನ್ನು ಕೊಡಬೇಕಾಗುವದು. ದೃಷ್ಟಾಂತ ಕೊಡುವದಕ್ಕೆ ವಾಙ್ಮಯದ ಸಹಾಯ ಪಡೆದುಕೊಳ್ಳಬೇಕಾಗುವದು. ವಾಙ್ಮಯದ ದೃಷ್ಟಿಯಿಂದ ವಿಚಾರ ಮಾಡಿದರೆ ಆಗ ಆಕಾಶದ ದೃಷ್ಟಾಂತ ಕೊಟ್ಟು ಬ್ರಹ್ಮ ಸ್ವರೂಪದ ಬಗೆಗೆ ಹೇಳುವ ಪ್ರಯತ್ನ ಮಾಡಬೇಕಾಗುವದು. [೨೧] **"ಖಂ ಬ್ರಹ್ಮ"** ಅಂದರೆ ಆಕಾಶ ಇದು ಬ್ರಹ್ಮ ಇರುವದು, ಹೀಗೆ ಶ್ರುತಿಯು ಹೇಳುವದು. **"ಗಗನ ಸದೃಶಂ ಬ್ರಹ್ಮ"** ಅಂದರೆ ಆಕಾಶದ ಹಾಗೆ ಬ್ರಹ್ಮವು ಇರುವದು ಹೀಗೆ ಸ್ಮೃತಿಯು ಹೇಳುವದು. ಶ್ರುತಿ ಸ್ಮೃತಿಗಳು ಬ್ರಹ್ಮನಿಗೆ ಆಕಾಶದಂತೆ [ಆಕಾಶದ ಹಾಗೆ] ಎಂದು ಅಂದಿರುವಕಾರಣ ಬ್ರಹ್ಮನಿಗೆ ಆಕಾಶದ ದೃಷ್ಟಾಂತವನ್ನು ಕೊಡುವರು. [೨೨] ಬಂಗಾರವು ಹೇಗೆ ಹಳದಿ ಬಣ್ಣದ್ದಿರುವದೋ ಅದರಂತೆ ಹಿತ್ತಾಳಿಯೂ ಸಹ ಹಳದಿ ಬಣ್ಣದ್ದಾಗಿಯೇ ಇರುವದು. ಆದರೆ ಹಿತ್ತಾಳಿಯ ಹಳದಿ ಬಣ್ಣದಲ್ಲಿ ಕಿಂಚಿತ್ [ಸ್ವಲ್ಪವಾದರೂ] ಕರಿಯ ಛಾಯೆ ಕಂಡು ಬರುವದು ಇದು ಇದ್ದಿದ್ದಿಲ್ಲವಾದರೆ ಹಿತ್ತಾಳಿಯು ಶುದ್ಧ ಬಂಗಾರವೇ ಇರುವದು ಎಂದು ನಿಶ್ಚಿತ ತಿಳುವಳಿಕೆ ಆಗುತ್ತಿತ್ತು. ಇದರಂತೆಯೇ ಆಕಾಶವು ಅತ್ಯಂತ ಸೂಕ್ಷ್ಮ ಹಾಗೂ ವಿಶಾಲವಿರುವದು. ಬ್ರಹ್ಮವೂ ಸಹ ಹೀಗೆಯೇ ಇರುವದು. ಆದರೆ ಆಕಾಶದಲ್ಲಿ ಶೂನ್ಯತ್ವವಿರುವದು. ಇದು ಬ್ರಹ್ಮದಲ್ಲಿ ಇಲ್ಲ. ಈ ಶೂನ್ಯತ ಒಂದು ಇರದಿದ್ದರೆ ಆಕಾಶವೂ ಸಹ ಬ್ರಹ್ಮ ಸ್ವರೂಪವಾಗಿ ಬಿಡುತ್ತಿತ್ತು. ಬ್ರಹ್ಮವೆಂದು ಆಕಾಶಕ್ಕೆ ಅನ್ನಲು ಬರುತ್ತಿತ್ತು. [೨೩] ಬ್ರಹ್ಮ ಸೂಕ್ಷ್ಮದಕ್ಕಿಂತ ಸೂಕ್ಷ್ಮ ಇದ್ದುದರಿಂದ ಎಲ್ಲ ಪದಾರ್ಥಗಳಿಗೆ ಸಹಜವಾಗಿ ವ್ಯಾಪಿಸಿ ಇರುತ್ತದೆ. ಬ್ರಹ್ಮ ಆಕಾಶದಂತೆ ಇರುವದು. ಮತ್ತು ಮಾಯಾ ಇದು ಆಕಾಶದಲ್ಲಿಯ ವಾಯುವಿನಂತೆ ಇರುವದೆಂದು ಅನ್ನುತ್ತಾರೆ. ವಾಯುವು ಇರುವದೆಂಬುದು ನಮಗೆ ತಿಳಿಯುವದು. ಆದರೆ ಅದು ಪ್ರತ್ಯಕ್ಷವೇನೂ ಕಾಣುವದಿಲ್ಲ, ಇದರಂತೆಯೇ ಮಾಯೆಯ ಪ್ರಭಾವ ಕಾಣುವದು. ಆದರೆ ಇವಳ ಪ್ರತ್ಯಕ್ಷದರ್ಶನವೇನೂ ಆಗುವದಿಲ್ಲ. ಒಟ್ಟಿನಲ್ಲಿ ವಾಯು ಮತ್ತು ಮಾಯೆ ಇವೆರಡೂ ದೃಶ್ಯ ಪದಾರ್ಥಗಳಂತೆ ನೋಡಲಿಕ್ಕೆ ಬರುವದಿಲ್ಲ. [೨೪] ಜನರೆಲ್ಲರೂ ಒಂದೇ ಸವನೆ ಶಬ್ದ ಮಾಡುತ್ತಲೇ ಇರುತ್ತಾರೆ. ಆದರೆ ಮಾತಾಡಿದ ಶಬ್ದಗಳು ಕರಗಿ ಹೋಗುವವು, ಇಲ್ಲದಾಗಿ ಬಿಡುವವು. ಅಂದರೆ ಕ್ಷಣ ಕ್ಷಣಕ್ಕೂ ಶಬ್ದ ಸೃಷ್ಟಿಯು ಹೊಸ ಹೊಸ ಗದ್ಯಪದ್ಯಪ್ರಬಂಧಾದಿಗಳ ರಚನೆಗಳುಆಗುತ್ತಲೇ ಇರುವವು. ಆದರೆ ಇವು ಅತ್ಯಂತ ಅಶಾಶ್ವತ ಇರುವವು. ವಾಯುವಿಗೆ [ಗಾಳಿಗೆ] ಸ್ಥಿರತ್ವ ಹೇಗೆ ಇರುವದಿಲ್ಲವೋ ಇದರಂತೆ ಶಬ್ದ ಸೃಷ್ಟಿಗೂ ಸಹ ಸ್ಥಿರತ್ವ ಇರುವದಿಲ್ಲ.[೨೫]ಮಾಯಾ ಸಹ ಇದರಂತೆಯೇ ಅಸ್ಥಿರಮತ್ತು ಅಶಾಶ್ವತ ಇರುವದು. ಫಕ್ತ [ಕೇವಲ] ಬ್ರಹ್ಮವಷ್ಟೇ ಶಾಶ್ವತವಿರುವದು. ಸೂಕ್ಷ್ಮ ದೃಷ್ಟಿಯಿಂದ ನೋಡಿದರೆ ಒಂದೇ ಒಂದಾದ ಬ್ರಹ್ಮವು ಅನೇಕಕ್ಕೆ ವ್ಯಾಪಿಸಿ ಇರುವದು ತಿಳಿದು ಬರುತ್ತದೆ. [೨೬] ಜಡವಿರುವ ಪೃಥ್ವಿಯನ್ನು ಭೇದಿಸಿ ಅದರಲ್ಲಿ ವಾಸಮಾಡಿರುವ ಬ್ರಹ್ಮವು ಪೃಥ್ವಿಯಂತೆ ಜಡವಾಗಿಲ್ಲ. ಇಷ್ಟೇ ಅಲ್ಲ ಈ ಬ್ರಹ್ಮವು ಎಷ್ಟೊಂದು ಸೂಕ್ಷವಿರುವದೆಂದರೆ ಇದರಷ್ಟು ಸೂಕ್ಷವಾದದ್ದು ಇನ್ನೊಂದು ಯಾವುದೂ ಇಲ್ಲ. ಇದು ಅತಿ ಎಂದರೆ-ಅತಿಸೂಕ್ಷ್ಮವಿರುವದು. [೨೭] ಜಡ ಪೃಥ್ವಿಗಿಂತಲೂ ನೀರು [ಜಲ] ಸೂಕ್ಷ್ಮವಿರುವದು, ನೀರಿಗಿಂತ ತೇಜ [ಅಗ್ನಿ] ಸೂಕ್ಷ್ಮವಿರುವದು, ತೇಜಕ್ಕಿಂತ ವಾಯುವು ಸೂಕ್ಷ್ಮವಿರುವದು. [೨೮]

ವಾಯೋಹೂನ ತೇ ಗಗನ । ಅತ್ಯಂತ ಚಿ ಮೃದ ಜಾಣ ।
ಗಗನಾಹೂನ ಮೃದ ಪೂರ್ಣ । ಬ್ರಹ್ಮ ಜಾಣಾವೇ ॥೨೯॥

ವಜ್ರಾಸ ಅಸೆ ಭೇದಿಲೇ । ಪರೀ ಮೃದತ್ವ ನಾಹೀ ಗೇಲೇ ।
ಉಪಮೇರಹಿತ ಸಂಚಲೇ । ಕಠಿಣ ನಾ ಮೃದ ॥೩೦॥

ಪೃಥ್ವೀಮಧೇ ವ್ಯಾಪೂನ ಅಸೆ । ಪೃಥ್ವೀ ನಾಸೆ ತೇ ನ ನಾಸೆ ।
ಜಳ ಶೋಷೆ ತೇ ನ ಶೋಷೆ । ಜಳೀ ಅಸೋನೀ ॥೩೧॥

ತೇಜೀ ಅಸೆ ಪರೀ ಜಳೇನಾ । ಪವನೀ ಅಸೆ ಪರೀ ಚಳೇನಾ ।
ಗಗನೀ ಅಸೆ ಪರೀ ಕಳೇನಾ । ಪರಬ್ರಹ್ಮ ತೇ ॥೩೨॥

ಶರೀರ ಅವಘೇ ವ್ಯಾಪಲೇ । ಪರೀ ತೇ ನಾಹೀ ಆಡಳಲೇ ।
ಜವಳಿ ಚ ದುರಾವಲೇ । ನವಲ ಕೈಸೇ ॥೩೩॥

ಸನ್ಮುಖ ಚಿ ಚಹುಕಡೆ । ತಯಾಮಧೇ ಪಾಹಾಣೇ ಘಡೆ ।
ಬಾಹ್ಯಾಭ್ಯಾಂತರೀ ರೋಕಡೇ । ಸಿದ್ಧ ಚಿ ಆಹೆ ॥೩೪॥

ತಯಾಮಧೇ ಚಿ ಆಪಣ । ಆಪಣಾ ಸಬಾಹ್ಯ ತೇ ಜಾಣ ।
ದೃಶ್ಯಾವೇಗಳೀ ಖೂಣ । ಗಗನಾಸಾರಿಖೀ ॥೩೫॥

ಕಾಹೀ ನಾಹೀಸೇ ವಾಟಲೇ । ತೇಥೇ ಚಿ ತೇ ಕೋಂದಾಟಲೇ ।
ಜೈಸೇ ನ ದಿಸೆ ಆಪಲೇ । ಆಪಣಾಸಿ ಧನ ॥೩೬॥

ಜೊ ಜೊ ಪದಾರ್ಥ ದೃಷ್ಟೀ ಪಡೆ । ತೇ ತ್ಯಾ ಪದಾರ್ಥಾ ಐಲೀಕಡೆ ।
ಅನುಭವೇ ಹೇ ಕುವಾಡೇ । ಉಕಲಾವೇ ॥೩೭॥

ವಾಯುವಿಗಿಂತ ಆಕಾಶವು ಅತ್ಯಂತ ಸೂಕ್ಷ್ಮವಿರುವದು, ಮತ್ತು ಆಕಾಶದಕ್ಕಿಂತಲೂ ಬ್ರಹ್ಮ ಸಂಪೂರ್ಣವಾಗಿ ಅತಿಸೂಕ್ಷ್ಮವಿರುವದು. ಶ್ರೀ ಸಮರ್ಥರು ಈ ಸ್ಥಳದಲ್ಲಿ ವಿಶ್ವದಲ್ಲಿಯ ಘಟಕದ ಸೂಕ್ಷ್ಮತನದ ಕ್ರಮವನ್ನು ಹೇಳಿದ್ದಾರೆ. ಸೂಕ್ಷ್ಮದ ಜ್ಞಾನವಾಗಬೇಕಾದರೆ ಜೀವವು ಸೂಕ್ಷ್ಮವಾಗುತ್ತ ಹೋಗ ಬೇಕಾಗುವದು. ಕೊನೆಗೆ ಅದು [ಜೀವವು] ಯಾವಾಗ ಅತಿಸೂಕ್ಷ್ಮವಾಗುವದೋ ಆಗ ಅದಕ್ಕೆ ಬ್ರಹ್ಮಸ್ವರೂಪದ ಜ್ಞಾನ ಹೊಂದುವದಕ್ಕೆ ಯೋಗ್ಯತೆ ಬರುವದು. ಅಲ್ಲಿವರೆಗೆ ಸೂಕ್ಷ್ಮಬ್ರಹ್ಮವು ನಿರ್ಲೇಪತನದಿಂದ ಸರ್ವವಿಶ್ವಕ್ಕೆ ಹೇಗೆ ವ್ಯಾಪಿಸಿರುವದು ಎಂಬುದರ ಗೂಢ ತಿಳಿಯಲಿಕ್ಕೆ ನಮಗೆ ಕಠಿಣವಾಗುವದು. [೨೯] ವಜ್ರವು ಅತ್ಯಂತ ಕಠಿಣ ವಿರುವದೆಂಬುದು ನಿಜ. ಇಂಥ ಕಠಿಣವನ್ನು ಸಹ ಬ್ರಹ್ಮವು ಭೇದಿಸಿ ಹೋಗುವದು. ಆದರೆ ವಜ್ರದಂಥ ಕಠಿಣವಸ್ತು ಭೇದಿಸಿದರೂ ಸಹ ಬ್ರಹ್ಮದ ಸೂಕ್ಷ್ಮತನದ ಮೃದುತನದಲ್ಲಿ ಎಳ್ಳಷ್ಟಾದರೂ ಕಡಿಮೆ ಆಗುವದಿಲ್ಲ. ನಿಜಹೇಳಬೇಕೆಂದರೆ ಬ್ರಹ್ಮನಿಗೆ ಉಪಮೆ ಕೊಡಲಿಕ್ಕೆ ಸಾಧ್ಯವೇ ಇಲ್ಲ. ಇದು ಜಡ ಅಥವಾ ಸೂಕ್ಷ್ಮವಾಗಿಲ್ಲ. ಸರ್ವಸ್ಥಳದಲ್ಲಿ ಭರಪೂರವಾಗಿ ತುಂಬಿರುವದು. [೩೦] ಇನ್ನು ಮುಂದೆ ಬ್ರಹ್ಮಶಾಶ್ವತವು ಹೇಗೆ? ಮತ್ತು ಸರ್ವದರಲ್ಲಿ ಅದು ಹೇಗೆ ವ್ಯಾಪಿಸಿದೆ? ಇದನ್ನು ಹೇಳುವರು:- ಬ್ರಹ್ಮವು ಪೃಥ್ವಿಯನ್ನು ವ್ಯಾಪಿಸಿರುವದು ನಿಜವಿದೆ. ಆದರೆ ಪೃಥ್ವಿಯು ನಾಶವಾದರೂ ಸಹ ಬ್ರಹ್ಮನಾಶವಾಗುವದಿಲ್ಲ. ಬ್ರಹ್ಮ ನೀರಿನಲ್ಲಿ ವ್ಯಾಪಿಸಿರುವದು ನಿಜ. ಆದರೆ ನೀರು ಹೀರಿ (ಇಂಗಿ) ಹೋಗುತ್ತದೆ. ಇಲ್ಲದಾಗುತ್ತದೆ ಆದರೆ ಬ್ರಹ್ಮ ಇಂಗಿ [ಶೋಷಿಸಿ] ಹೋಗುವದಿಲ್ಲ ಎಂದೂ ಇಲ್ಲದಾಗುವದಿಲ್ಲ. [೩೧] ಬ್ರಹ್ಮವು ತೇಜ [ಅಗ್ನಿ] ವನ್ನು ವ್ಯಾಪಿಸಿ ಇರುವದು. ಆದರೆ ಇದು ತೇಜ [ಅಗ್ನಿ]ದಿಂದ ಸುಡುವದಿಲ್ಲ. ಬ್ರಹ್ಮವು ವಾಯು ವಿನಲ್ಲಿ ಸಹ ವ್ಯಾಪಿಸಿರುತ್ತದೆ. ಆದರೆ ಅದು ವಾಯುವಿನಂತೆ ಚಲಿಸುವದಿಲ್ಲ ಹರಿದಾಡುವದಿಲ್ಲ. ಬ್ರಹ್ಮವು ಆಕಾಶವನ್ನು ವ್ಯಾಪಿಸಿ ಇರುತ್ತದೆ. ಆದರೆ ಅದು ಹೀಗೆ ಇದ್ದದ್ದು ನಮಗೆ ತಿಳಿಯುವದಿಲ್ಲ. (೩೨) ನಮ್ಮ ಶರೀರದ ತುಂಬೆಲ್ಲ ಬ್ರಹ್ಮ ವ್ಯಾಪಿಸಿರುವದು. ಅದು ಹೀಗೆ ವ್ಯಾಪಿಸಿದೆಯೆಂಬುದು ನಮಗೆ ತಿಳಿಯುವದಿಲ್ಲ. (ಗೊತ್ತಾಗುವದಿಲ್ಲ) ನೋಡಿರಿ. ಇಷ್ಟು ಸಮೀಪವಿದ್ದರೂ ನಮ್ಮಲ್ಲೇ ಇದ್ದರೂ ದೂರವಿದ್ದಂತೆ (ಎರವಾದಂತೆ) ಆಗಿದೆ. ಇದು ಬಹಳ ಆಶ್ಚರ್ಯದ ಮಾತಲ್ಲವೇ? (೩೩) ಎತ್ತ ನೋಡಿದತ್ತ (ಸುತ್ತ ಮುತ್ತು) ಬ್ರಹ್ಮವು ಎದುರಿಗೆ ಇರುತ್ತದೆ. ನಮ್ಮ ಇಂದ್ರಿಯಗಳ ವ್ಯವಹಾರವೆಲ್ಲ ಬ್ರಹ್ಮದಲ್ಲಿಯೇ ನೆರವೇರುವವು (ಘಟಿಸುವವು) ನಮ್ಮ ಒಳಗೂ ಹೊರಗೂ ವ್ಯಾಪಿಸಿರುವ ಬ್ರಹ್ಮವು ಸ್ವಯಂ ಸಿದ್ಧವಿದೆ, ಪ್ರತ್ಯಕ್ಷವಿದೆ. ಆದರೆ ಇದನ್ನು ನೋಡುವ ಶಕ್ತಿಮಾತ್ರ ಇರಬೇಕು. ಇಲ್ಲವೇ ಆ ಶಕ್ತಿಯನ್ನು ಪಡೆಯಬೇಕು. (೩೪) ನಾವೆಲ್ಲ ಬ್ರಹ್ಮದಲ್ಲಿಯೇ ಜೀವಿಸುವೆವು. ಮತ್ತು ಇರುವೆವು, ನಮ್ಮ ಒಳಗೂ ಹೊರಗೂ ಬ್ರಹ್ಮವೇ ಇರುವದು. ಅವಕಾಶದಲ್ಲಿಯ (ಪೊಳ್ಳಿನಲ್ಲಿಯ) ಎಲ್ಲ ದೃಶ್ಯವಿಶ್ವವನ್ನು ವಿಲೀನಗೊಳಿಸಿದ ಮೇಲೆ ಕೇವಲ ನಿವ್ವಳ ಆಕಾಶ ಉಳಿಯುತ್ತದೆ. ಇದರಂತೆ ಬ್ರಹ್ಮವಿರುವದು. ಈ ಮಾತನ್ನು ಸಂಕೇತದಿಂದ ತಿಳಿಯಬೇಕು. ಇದಕ್ಕಿಂತ ಹೆಚ್ಚಿಗೆ ಒಡೆದು ಹೇಳಲಿಕ್ಕೆ - ತಿಳಿಸಿಹೇಳಲಿಕ್ಕೆ ಬರುವದಿಲ್ಲ (೩೫) ಇಲ್ಲಿ ಏನೂ ಇಲ್ಲ. ಹೀಗೆ ಅನಿಸುವಲ್ಲೆಲ್ಲ ಬ್ರಹ್ಮವು ಭರಪೂರ ತುಂಬಿರುವದು. ನಾವು ಸ್ವತಃ ಇಟ್ಟ ದ್ರವ್ಯವು ಕೆಲವು ಕಾಲದ ನಂತರ ನಮಗೇ ಕಾಣಿಸುವದಿಲ್ಲ. ಇದರಂತೆಯೇ ಬ್ರಹ್ಮದ ವಿಷಯದಲ್ಲಿ ಸಹ ಹೀಗಾಗುವದುಂಟು. ದೃಶ್ಯ ತನದಿಂದ ಇರುವದು. ಅಂದರೇನೇ ಖರೇ ಇರುವದೆಂಬ ನಮ್ಮ ತಿಳುವಳಿಕೆಗೆ ಜಡ ದೃಷ್ಟಿಯೇ ಕಾರಣವಾಗಿದೆ.ಮತ್ತು ಸೂಕ್ಷ್ಮವಿರುವದೆಂದು ಅನಿಸಿ ಮಾನವನು ಅದೃಶ್ಯದಲ್ಲಿ ಪ್ರವೇಶಿಸುವ ಕಲೆಯನ್ನು ಸದ್ಗುರುವಿನಿಂದ ತಿಳಿದು ಸಾಧಿಸಿ ಕೊಳ್ಳಬೇಕು. ಅಂದರೆ ಅವನಿಗೆ ಸರ್ವಸ್ಥಳದಲ್ಲಿ ಪಸರಿಸಿರುವ ಸೂಕ್ಷ್ಮ ಬ್ರಹ್ಮವು ಅನುಭವಕ್ಕೆ ಬರುವದು. (೩೬) ಯಾವ ಯಾವ ಪದಾರ್ಥಗಳು ಕಣ್ಣಿಗೆ ಕಾಣಿಸುವವೋ ಮೊದಲೇ ಅದರಲ್ಲಿ ಬ್ರಹ್ಮವಿರುವದು. ಆದರೆ ಸ್ಥೂಲ ದೃಷ್ಟಿಗೆ ಅದು ಕಾಣುವದಿಲ್ಲ. ಆದ್ದರಿಂದ ಈ ಗೂಢವನ್ನು ಸ್ವರೂಪಾನುಭವದಿಂದ ಸ್ಪಷ್ಟಪಡಿಸಿಕೊಳ್ಳಬೇಕು.ಸ್ವರೂ ಪಾನುಭವ ಬರುವಷ್ಟರ ಮಟ್ಟಿಗೆ ದೃಷ್ಟಿಯು ಸೂಕ್ಷ್ಮ ಆಗಲಿಕ್ಕೆ ಬೇಕು.ಅಂದರೆ ಪದಾರ್ಥಗಳಿಗೆ ಒಳಗೂ ಹೊರಗೂ ವ್ಯಾಪಿಸಿರುವ ಬ್ರಹ್ಮದ ಪ್ರತೀತಿ (ಅನುಭವ) ಬರುವದು. ಇಷ್ಟಾದ ನಂತರ ಇದರಲ್ಲಿ ಗೂಢವೇನೂ ಉಳಿಯು ವದಿಲ್ಲ. (೩೭)

ಮಾಗೇ ಪುಢೇ ಆಕಾಶ । ಪದಾರ್ಥೇವಿಣ ಜೋ ಪೈಸ ।
ಪೃಥ್ವೀವಿಣ ಭಕಾಸ । ಯೇಕರೂಪ ॥೩೮॥

ಜೇ ಜೇ ರೂಪ ಆಣೀ ನಾಮ । ತೋ ತೋ ನಾಥಿಲಾ ಚ ಭ್ರಮ ।
ನಾಮರೂಪಾತೀತ ವರ್ಮ । ಅನುಭವೀ ಜಾಣೇ ॥೩೯॥

ನಭೀ ಧೂಮ್ರಾಚೆ ಡೋಂಗರ । ಉಚಲತೀ ಥೋರ ಥೋರ ।
ತೈಸೇ ದಾವೀ ಮೊಡಂಬರ । ಮಾಯಾ ದೇವೀ ॥೪೦॥

ಏಸೀ ಮಾಯಾ ಅಶಾಶ್ವತ । ಬ್ರಹ್ಮ ಜಾಣಾವೇ ಶಾಶ್ವತ ।
ಸರ್ವಾ ಠಾಈ ಸದೋದಿತ । ಭರಲೇ ಅಸೆ ॥೪೧॥

ಪೋಥೀ ವಾಚೂ ಜಾತಾ ಪಾಹೆ । ಮಾತ್ರಿಕಾಮಧೇ ಚಿ ಆಹೆ ।
ನೇತ್ರೀ ನಿಘೋನಿ ರಾಹೆ । ಮೃದಪಣೇ ॥೪೨॥

ಶ್ರವಣೇ ಶಬ್ದ ಏಕತಾ । ಮನೇ ವಿಚಾರ ಪಾಹಾತಾ ।
ಮನಾ ಸಬಾಹ್ಯ ತತ್ವತಾ । ಪರಬ್ರಹ್ಮ ತೇ ॥೪೩॥

ಚರಣೇ ಚಾಲತಾ ಮಾರ್ಗೀ । ಜೇ ಆಡಳೆ ಸರ್ವಾಂಗೀ ।
ಕರೇ ಘೇತಾ ವಸ್ತುಲಾಗೀ । ಆಡವೇ ಬ್ರಹ್ಮ ॥೪೪॥

ಅಸೊ ಇಂದ್ರಿಯೇಸಮುದಾವ । ತಯಾಮಧೇ ವರ್ತೆ ಸರ್ವ ।
ಜಾಣೋ ಜಾತಾ ಮೋಡೆ ಹಾವ । ಇಂದ್ರಿಯಾಚೀ ॥೪೫॥

ತೇ ಜವಳಿ ಚ ಅಸೆ । ಪಾಹೋ ಜಾತಾ ನ ದಿಸೆ ।
ನ ದಿಸೋನ ವಸೆ । ಕಾಹೀ ಯೇಕ ॥೪೬॥

ಜೇ ಅನುಭವೇ ಚಿ ಜಾಣಾವೇ । ಸೃಷ್ಟೀಚೆನಿ ಅಭಾವೇ ।
ಆಪುಲೇನ ಸ್ವಾನುಭವೇ । ಪಾವಿಜೆ ಬ್ರಹ್ಮ ॥೪೭॥

ಸರ್ವ ಪದಾರ್ಥಗಳಿಗೆ ಆಕಾಶವು ಹಿಂದೂ ಮುಂದೂ ವ್ಯಾಪಿಸಿ ಇರುತ್ತದೆ. ಉದಾ:- ತಿಳಿಯಿರಿ, ಎಲ್ಲ ಪದಾರ್ಥಗಳು ನಾಶವಾದರೆ ಆಗ ಕೇವಲ ಅವಕಾಶ [ಪೊಳ್ಳು] ಉಳಿಯುವದು. ಇದರಲ್ಲಿ ಪೃಥ್ವಿಯೂ ಇಲ್ಲದಂತಾದರೆ ಅತ್ತ ಇತ್ತಲೆಲ್ಲ ಕಡೆಗೂ ಕೇವಲ ಪೋಕಳ (ನಿರ್ಜನ, ರಿಕಾಮಿಜಾಗಾ) ಕಾಣುವದು. ಅಂದರೆ ಸರ್ವ ಪದಾರ್ಥಗಳು ಇದ್ದಾಗಲೂ ಅವಕಾಶದ ಪೋಕಳಿ (ರಿಕಾಮಿ ಜಾಗಾ) ಇದ್ದೇ ಇದ್ದಿತು. ಸರ್ವಪದಾರ್ಥಗಳು ಇಲ್ಲದಾದಾಗ ಸಹ ಅದು ಹಾಗೆಯೇ ಇರುವದು. ಬ್ರಹ್ಮದ ಪ್ರಕಾರ [ರೀತಿ]ವೂ ಹೀಗೆಯೇ ಇರುವದು. ಈ ದೃಶ್ಯವಿಶ್ವ ಬಂದಿತು ಹೋಯಿತು. ಆದರೂ ಇದರ ಅಂದರೆ ಬ್ರಹ್ಮದ ಸ್ವರೂಪದಲ್ಲಿ ಎಳ್ಳಷ್ಟೂ ಹೆಚ್ಚು ಕಡಿಮೆ ಆಗುವದಿಲ್ಲ. [೩೮] ಇಂದ್ರಿಯಗಳಿಗೆ ಅನುಭವವಾಗುವ [ಗೊತ್ತಾಗುವ] ದೃಶ್ಯ ವಿಶ್ವವೆಲ್ಲ ನಾಮ [ಹೆಸರು] ರೂಪ [ಆಕಾರ] ಇವುಗಳಿಂದ ತುಂಬಿರುವದು. ರೂಪ ಅಂದರೆ ಇಂದ್ರಿಯಗಳಿಗೆ ಪ್ರತ್ಯಕ್ಷ ಕಾಣುವಂಥ ವಸ್ತುವಿನಆಕಾರವು. ನಾಮವೆಂದರೆ ಆ ವಸ್ತುವಿನ ಹೆಸರನ್ನು ಸೂಚಿಸುವ ಸಾಮಾನ್ಯ ಪದವು. ಬ್ರಹ್ಮ ಒಂದೇ ಒಂದಾಗಿದೆ. ಅಂತೆಯೇ ಇಂದ್ರಿಯಗಳಿಗೆ ಕಾಣುವ ನಾಮರೂಪಗಳ ನೋಡುವಿಕೆಯ ಮೂಲದಲ್ಲಿ ಇಲ್ಲದೇ ಇರುವಂಥ ತಾತ್ಪೂರ್ತಿಕ ಭ್ರಮೆ ಇರುವದು. ನಾಮ ರೂಪಗಳನ್ನು ದಾಟಿ ಆಚೆಗೆ ಇರುವಂಥ ಬ್ರಹ್ಮ ಸ್ವರೂಪದ ರಹಸ್ಯವು ಕೇವಲ ಸಾಕ್ಷಾತ್ಕಾರೀ ಪುರುಷರಿಗೆ ಮಾತ್ರ ಗೊತ್ತಿರುವದು. (೩೯) ಆಕಾಶದಲ್ಲಿ ಹೊಗೆ–ಮೋಡದ ದೊಡ್ಡ ದೊಡ್ಡ ಗುಡ್ಡಗಳು ಕಾಣಿಸುವವು. ಆದರೆ ಇದೆಲ್ಲ ತಾತ್ಪೂರ್ತಿಕವಾಗಿರುವದು. ಮತ್ತು ಆಕಾಶಕ್ಕೆ ಇವುಗಳ ಸ್ಪರ್ಶವಾಗುವದಿಲ್ಲ. ಇದರಂತೆಯೇ ಶುದ್ಧ ಬ್ರಹ್ಮದಲ್ಲಿ ಮಾಯೆಯ ಕರಾಮತಿಯಿಂದ ವಿಶ್ವದ ಆಡಂಬರ (ಚಮತ್ಕಾರ) ತೋರಿಬರುವದು. ಇದು ಅರ್ಥಾತ್ ಮಿಥ್ಯವೇ ಇರುವದು. (೪೦) ಹೀಗೆ ಮಾಯೆಯು ಅಶಾಶ್ವತವಿದ್ದು ಬ್ರಹ್ಮವು ಮಾತ್ರ ಶಾಶ್ವತವಾಗಿದೆ. ಎಲ್ಲ ಸ್ಥಳದಲ್ಲಿಯೂ ಸದಾ ಸರ್ವಕಾಲ ತುಂಬಿರುತ್ತದೆ. (೪೧) ಗ್ರಂಥ ಓದುವಾಗ ಬ್ರಹ್ಮವೇ ಓದುವದು. ಪ್ರತಿ ಅಕ್ಷರದಲ್ಲಿಯೂ ಅಕ್ಷರಗಳಕಾನಾಮಾತ್ರಗಳಲ್ಲಿಯೂ ಸಹ ಇರುತ್ತದೆ. ಸೂಕ್ಷ್ಮತನದಿಂದ ಕಣ್ಣಲ್ಲಿ ಇದ್ದುಕೊಂಡು ನೋಡುವ ಕ್ರಿಯೆಯನ್ನೂ ಇದು ಮಾಡುತ್ತದೆ. (೪೨) ಕಿವಿಯಿಂದ ಶಬ್ದ ಕೇಳುವಾಗ ಕಿವಿಯ ಒಳಗೆ ಹೊರಗೆ ಬ್ರಹ್ಮವೇ ಇರುವದು. ಮನಸ್ಸಿನಿಂದ ಏನಾದರೂ ವಿಚಾರ ಮಾಡುವಾಗ ಮನದ ಒಳ ಹೊರಗೆ ನಿಜವಾಗಿಯೂ ಬ್ರಹ್ಮವೇ ಇರುವದು. (೪೩) ಕಾಲಿನಿಂದ ಹಾದೀ ನಡೆಯುತ್ತಿರುವಾಗ ಸಹ ಬ್ರಹ್ಮವು ಸರ್ವ ಶರೀರದಲ್ಲಿ ವ್ಯಾಪಿಸಿ ರುವದು. ಕೈಯಿಂದ ಪದಾರ್ಥಗಳನ್ನು ತೆಗೆದುಕೊಳ್ಳುವಾಗ, ಇಡುವಾಗ, ಕೊಡುವಾಗ, ಸಹ ಬ್ರಹ್ಮವು ಆ ವಸ್ತುವಿನಲ್ಲಿ ವ್ಯಾಪಿಸಿರುವದು. (೪೪) ನಿಜವಾಗಿ ಹೇಳುವದಾದರೆ ನಮ್ಮ ಸರ್ವ ಇಂದ್ರಿಯಗಳ ಒಳಗೂ, ಹೊರಗೂ ಬ್ರಹ್ಮ ವ್ಯಾಪಿಸಿಯೇ ಇರುವದು. ಒಟ್ಟಿನಲ್ಲಿ ಇಂದ್ರಿಯಗಳ ಸಮೂಹದಲ್ಲೆಲ್ಲ. ಬ್ರಹ್ಮ ವ್ಯಾಪಿಸಿದ್ದರಿಂದ ಬ್ರಹ್ಮದಲ್ಲಿ ಇದ್ದುಕೊಂಡೇ ಎಲ್ಲ ಇಂದ್ರಿಯಗಳು– ತಮ್ಮ ತಮ್ಮ ಕಾರ್ಯ ಮಾಡುತ್ತವೆ. ಇದು ಹೀಗಿದ್ದರೂ ಸಹ ಇಂದ್ರಿಯ ಗಳು ಬ್ರಹ್ಮವನ್ನು ತಿಳಿಯುವಪ್ರಯತ್ನಮಾಡಿದ್ದಾದರೆ ಇಂದ್ರಿಯಗಳಹವ್ಯಾಸ(ಪ್ರವೃತ್ತಿ)ಅಳಿಯುವದು.ಮುರಿದುಬೀಳು ವದು.ಬ್ರಹ್ಮವು ಅತೀಂದ್ರಿಯ ಇದ್ದುದರಿಂದ ಇಂದ್ರಿಯಗಳಗತಿಯೇ ಅಲ್ಲಿ ನಿಲ್ಲುತ್ತದೆ (೪೫)ಅತ್ಯಂತ ಸೂಕ್ಷ್ಮವಿರುವಂಥ ಬ್ರಹ್ಮವು ಇದ್ದೂ ಇಲ್ಲದಂತಾಗಿದೆ. ಅದರ ಅನುಭವ ಬರಬೇಕಾದರೆ ನಮ್ಮಲ್ಲಿಯೇ ಬದಲಾವಣೆ [ಮಾರ್ಪಾಡು,] ಆಗುವದು ಅತೀ ಅವಶ್ಯವು. ನಮ್ಮ ಜ್ಞಾನ ವೃತ್ತಿಯು ಅತ್ಯಂತ ಸೂಕ್ಷ್ಮವಾಯಿತೆಂದರೆ ಆಗಲೇ ಬ್ರಹ್ಮದ ಅನುಭವ ಬರುವದು. ಬ್ರಹ್ಮವು ಅಗದೀ ನಮ್ಮ ಹತ್ತರವೇ ಇರುವದು. ಆದರೆ ಅದನ್ನು ನೋಡಬೇಕೆಂದರೂ ಕಾಣಿಸುವದಿಲ್ಲ. ಅರ್ಥಾತ್ ಇದರ ಅನುಭವ ಪ್ರತ್ಯಕ್ಷವಾಗದಿದ್ದರೂ ಬ್ರಹ್ಮ ಇರುವದೆಂಬುದರಲ್ಲಿ ಏನೂ [ಫರಕ] ಬದಲಾವಣೆ, ವ್ಯತ್ಯಾಸ ಆಗುವದಿಲ್ಲ. [೪೬] ಪ್ರಥಮದಲ್ಲಿ ಈ ದೃಶ್ಯವಿಶ್ವವೆಲ್ಲ ಮನಸ್ಸಿನಿಂದ ಮೊದಲು ದೂರವಾಗಬೇಕು. (ಇಲ್ಲದಾಗಬೇಕು) ನಮ್ಮ ದೇಹವೂ ಸಹಿತ ಎಲ್ಲ ದೃಶ್ಯ ಸೃಷ್ಟಿಯು ಎಷ್ಟೂ ಸತ್ಯವಲ್ಲವೆಂಬ ಖಾತ್ರಿ ಆಯಿತೆಂದರೆ ಆಗ ಬ್ರಹ್ಮದ ಅನುಭವ ಹೊಂದುವ(ಪಡೆಯುವ) ಪಾತ್ರತೆಯು ವಿವೇಕ ಪ್ರಳಯದಿಂದ ಮಾಯೆಯ ನಾಶ ಮಾಡಿದ ಮೇಲೆ ನಮ್ಮಲ್ಲಿ ಬರುವದು. ಅನಂತರ ಬ್ರಹ್ಮದ ಸಾಕ್ಷಾತ್ಕಾರವು ಸ್ವತಃ ಸಮಗೆ ಆಗುತ್ತದೆ. ಹಾಗೂ ಜೀವವು ಬ್ರಹ್ಮ ಸ್ವರೂಪ ಹೊಂದಿ ಬಿಡುತ್ತದೆ. ಅರ್ಥಾತ್ ಬ್ರಹ್ಮಸ್ವರೂಪವೇ ಆಗಿ ಹೋಗುವದು. (೪೭)

ಜ್ಞಾನ ದೃಷ್ಟೀಚೇ ದೇಖಣೇ । ಚರ್ಮದೃಷ್ಟೀ ಪಾಹೋ ನೇಣೇ ।
ಅಂತರವೃತ್ತೀಚಿಯೆ ಖುಣೇ । ಅಂತರವೃತ್ತೀ ಸಾಕ್ಷ ॥೪೮॥

ಜಾಣೇ ಬ್ರಹ್ಮ ಜಾಣೇ ಮಾಯಾ । ಜಾಣೇ ಅನುಭವಾಚ್ಯಾ ಠಾಯಾ ।
ತೇ ಯೇಕ ಜಾಣಾವೀ ತುರ್ಯಾ । ಸರ್ವಸಾಕ್ಷಿಣೀ ॥೪೯॥

ಸಾಕ್ಷತ್ವ ವೃತ್ತೀಚೇ ಕಾರಣ । ಉನ್ಮನೀ ತೇ ನಿವೃತ್ತಿ ಜಾಣ ।
ಜೇಥೇ ವಿರೆ ಜಾಣಪಣ । ವಿಜ್ಞಾನ ತೇ ॥೫೦॥

ಜೇಥೇ ಅಜ್ಞಾನ ಸರೆ । ಜ್ಞಾನ ತೇ ಹಿ ಮುರೆ ।
ವಿಜ್ಞಾನ ವೃತ್ತಿ ಮುರೆ । ಪರಬ್ರಹ್ಮೀ ॥೫೧॥

ಐಸೇ ಬ್ರಹ್ಮ ಶಾಶ್ವತ । ಜೇಥೇ ಕಲ್ಪನೇಸೀ ಅಂತ ।
ಯೋಗೀಜನಾ ಯೇಕಾಂತ । ಅನುಭವೇ ಜಾಣಾವಾ ॥೫೨॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
"ವಿಮಳ ಬ್ರಹ್ಮ" ನಿರೂಪಣ ನಾಮ ಸಮಾಸ ಚತುರ್ಥ ॥

● ●

ಜ್ಞಾನ ದೃಷ್ಟಿ ಸೂಕ್ಷ್ಮವಿರುವದು. ಆದರೆ ಇಂದ್ರಿಯ ದೃಷ್ಟಿ (ಚರ್ಮದೃಷ್ಟಿ) ಸ್ಥೂಲ, (ಜಡ) ವಿರುವದು. ಅಂತೂ ಒಟ್ಟಿನಲ್ಲಿ ಜ್ಞಾನ ದೃಷ್ಟಿಯಿಂದ ಯಾವ ಬ್ರಹ್ಮ ಸ್ವರೂಪವನ್ನು ತಿಳಿಯಲಿಕ್ಕೆ ಬರುವದೋ ಆ ಸ್ವರೂಪವನ್ನು ಜಡ ಸ್ವರೂಪದ ಇಂದ್ರಿಯ ದೃಷ್ಟಿಯಿಂದ ತಿಳಿಯಲಿಕ್ಕೆ ಎಂದೂ ಶಕ್ಯವಿಲ್ಲ. ಅಂತರಂಗದಲ್ಲಿಯ ವೃತ್ತಿ (ಭಾವನೆ, ಮನ, ಸ್ಥಿತಿ)ಯು ಅತ್ಯಂತ ಸೂಕ್ಷ್ಮವಾಗುವದೇ ಜ್ಞಾನ ದೃಷ್ಟಿಯು ನಿಜವಾದ ಗುರುತು ಇರುವದು. ವೃತ್ತಿಯು ನಿಜವಾಗಿ ಸೂಕ್ಷ್ಮವಾಗಿದೆಯೋ ಅಥವಾ ಇಲ್ಲವೇ? ಎಂಬುದು ಅವರವರ ಅಂತಃಕರುಣ (ಅಂತರಂಗ)ದಲ್ಲಿ ಅಂತರ್ವೃತ್ತಿಯಿಂದಲೇ ಬರೋಬರ ತಿಳಿಯುವದು. ಬ್ರಹ್ಮಜ್ಞಾನವು ಸ್ವಯಂ ಪ್ರಮಾಣವಿರುವದು. (ಅದಕ್ಕೆ ಇನ್ನೊಂದು ಪ್ರಮಾಣವೇ ಬೇಕಿಲ್ಲ).ಅಂತೆಯೇ ಜ್ಞಾನಪ್ರಚೀತಿ (ಪ್ರತೀತಿ)ಯು ಸಚೇತವಾಗಿದೆಯೋ?ಅಥವಾ ಮಂದವಾಗಿದೆಯೋ ಎಂಬುದು ಅವರವರದು ಅವರವರಿಗೇ ಚನ್ನಾಗಿ ತಿಳಿಯುವದು. (೪೮) ಜಾಗೃತಿ, ಸ್ವಪ್ನ, ವ, ಸುಷುಪ್ತಿ ಇವು ಮೂರು ಅಜ್ಞಾನತನದ ಅವಸ್ಥೆಗಳಿರುವವು. ನಾಲ್ಕನೆಯ ಅವಸ್ಥೆ ಅಂದರೆ ತುರ್ಯಾವಸ್ಥೆ ಇದು ಜ್ಞಾನ ವೃತ್ತಿಯ ಅವಸ್ಥೆ ಇರುವದು. ತುರ್ಯಾವಸ್ಥೆಯಲ್ಲಿ ಒಂದು ಕಡೆ ಬ್ರಹ್ಮದ ಕಡೆಗೆ ಲಕ್ಷ್ಯ (ಅಂತಃಕರುಣ ದಲ್ಲಿಯ ಜಾಗೃತ ಸ್ಥಿತಿ) ಇರುತ್ತದೆ. ಮತ್ತು ಇನ್ನೊಂದು ಕಡೆಗೆ ದೃಶ್ಯವಿಶ್ವ (ಅಶಾಶ್ವತ ಜಗತ್ತು)ದ ಕಡೆಗೆ ಸಹ ಲಕ್ಷ್ಯವಿರುತ್ತದೆ. ಮುಖ್ಯವಾಗಿ ಸ್ವರೂಪಾನುಭವ ಬರುವದಕ್ಕಾಗಿ ವೃತ್ತಿ (ನಡವಳಿಕೆ) ಎಲ್ಲಿ ಇಡಬೇಕು, ಹೇಗೆ ಇಡಬೇಕು. ಎಂಬುದೆಲ್ಲವೂ ತುರ್ಯಾವಸ್ಥೆಯಲ್ಲಿ ಬರೋಬರ ತಿಳಿಯುತ್ತದೆ.ಇದು ಎಲ್ಲವನ್ನು ತಿಳಿಯುವದು. ಅಂತೆಯೇ ಇದು ಸರ್ವಸಾಕ್ಷಿಣಿ ಅವಸ್ಥೆ ಇರುವದು. ದೇಹ ಸಹಿತವಾಗಿ ಸರ್ವ ದೃಶ್ಯವಿಶ್ವವನ್ನು ತುರ್ಯಾವಸ್ಥೆಯಲ್ಲಿ ಪ್ರತ್ಯೇಕತನದಿಂದ ನೋಡಲಿಕ್ಕೆ ಬರುತ್ತದೆ.(ತುರ್ಯೆಗೆ ಬ್ರಹ್ಮಾನುಭವದ ಆಶ್ರಯ ಸ್ಥಾನವೆಂದು ಹೇಳುವರು)(೪೯) "ನಾನು ಆತ್ಮ ಸರ್ವದೃಶ್ಯದಿಂದ ಅತೀತ (ಎಲ್ಲ ಇಂದ್ರಿಯಗಳ ಹಿಡಿತಕ್ಕೆ ಮೀರಿದವ) ಇರುವೆ ನಾನು ಕೇವಲ ಅದರ ಸಾಕ್ಷಿ ಇರುವೆ" ಈ ಪ್ರಕಾರದ ಅವಸ್ಥೆ ಇದ್ದರೂ ಸಹ ಇದರಲ್ಲಿ ಸಾಕ್ಷಿತ್ವದ ಸೂಕ್ಷ್ಮ ವೃತ್ತಿ ಇರುತ್ತದೆ. ಈ ಸಾಕ್ಷಿತ್ವ ಇಲ್ಲದಂತಾಗಿ ಅಳಿದು ವೃತ್ತಿ–ಭಾವನೆ ಇದೂ ಸಹ ವಿಲೀನ ಆಯಿತೆಂದರೆ ಆಗ ಉನ್ಮನಿ ಅವಸ್ಥೆ ಪ್ರಾಪ್ತವಾಯಿತೆಂದು ತಿಳಿಯಬೇಕು. ಸಂಪೂರ್ಣ ವೃತ್ತಿರಹಿತ ಅವಸ್ಥಾ ಅಂದರೆ ಉನ್ಮನಿಯೇ ಆಗಿದೆ. ಈ ನಿವೃತ್ತಿ (ಉನ್ಮನಿ) ಅವಸ್ಥೆಯಲ್ಲಿ ಸರ್ವ ಜಾಣೀವ ತಿಳುವಳಿಕೆ, ಜ್ಞಾನ ಇವೂ ಸಹ ಇಲ್ಲದಾಗುತ್ತವೆ. ಇದೇ ವಿಜ್ಞಾನ ವೆನಿಸುವದು. (೫೦) ತಾತ್ಪರ್ಯ:– ಮೊದಲು ಅಜ್ಞಾನವು ಇಲ್ಲದಾಗುತ್ತದೆ. ಆಗ ಜ್ಞಾನ ಉದಯ ಹೊಂದುವದು. ಮುಂದೆ ಜ್ಞಾನ ಇಲ್ಲದಾಗಿ ವಿಜ್ಞಾನ ಬರುತ್ತದೆ. ಅಖೈರದಲ್ಲಿ ವಿಜ್ಞಾನವೂ ಸಹ ಪರಬ್ರಹ್ಮದಲ್ಲಿ ಕೂಡಿ ಹೋಗು–ವದು. (ಮುಳುಗಿ ಹೋಗುವದು). ಆಮೇಲೆ ಕೇವಲ ಶುದ್ಧ ಮತ್ತು ವಿಮಲ ಪರಬ್ರಹ್ಮವು ಮಾತ್ರ ಶಿಲುಕು ಉಳಿಯುತ್ತದೆ. ನಾನು ಯಾರು ಅಥವಾ ಬ್ರಹ್ಮ ಅಂದರೆ ಹೇಗಿರುವದು. ಇದು ತಿಳಿಯದ ಅವಸ್ಥೆಗೆ ಅಜ್ಞಾನವೆನ್ನುವರು. ಈ ಅಜ್ಞಾನವು ಅಳಿದು ನನಗೆ ಬ್ರಹ್ಮ ತಿಳಿಯಿತು ಅನ್ನುವ ಅವಸ್ಥೆಗೆ ಜ್ಞಾನವೆನ್ನುವರು. ಇದರ ನಂತರ ನಾನು ಅಭಿಮಾನರಹಿತನಿರುವೆ ಅಂದರೆ-ವಿಜ್ಞಾನಿ ಇರುವೆ ಅನ್ನುವದು ಬರುವದು. ಇದು ಉನ್ಮನಿಯ ನಂತರ ಬರುವದು. ಇದೂ ಇಲ್ಲದಂತೆ ಆದ ಮೇಲೆ ಬರುವದೇ ಕೇವಲ ಶುದ್ಧ ವಿಮಲ ಪರಬ್ರಹ್ಮವಿರುವದು.(೫೧) ಈ ರೀತಿ ಇರುವದೇ ಶಾಶ್ವತ ಪರಬ್ರಹ್ಮವು ಈ ಪರಬ್ರಹ್ಮದಲ್ಲಿ ಸರ್ವ ಕಲ್ಪನೆಗಳೂ ನಾಶವಾಗಿ ಬಿಡುವವು. ಇಲ್ಲ ದಾಗುವವು ಯೋಗಿಗಳಿಗೆ ಇದು ಏಕಾಂತವಿರುವದು. ಇದನ್ನು ಅನುಭವದಿಂದ ಎಲ್ಲರೂ ಏಕಾಂತ=ಏಕತ್ವದ= ನಾನು ಅನ್ನುವದರ ಮರೆವು ಯಾವಲ್ಲಿ ಆಗುವದೋ ಅದು ಏಕಾಂತವೆನಿಸುವದು. ಅರ್ಥಾತ್ ಇದೇ ಬ್ರಹ್ಮ ಜ್ಞಾನಿಯ ನಿವಾಂತಸ್ಥಳವು. (೫೨)

ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದ ಏಳನೆಯ ದಶಕದಲ್ಲಿಯ
"ವಿಮಲ ಬ್ರಹ್ಮನಿರೂಪಣ"ವೆಂಬ ನಾಲ್ಕನೆಯ ಸಮಾಸವು ಮುಗಿದುದು.

● ●

ಸಮಾಸ ಪಂಚಮ : ದ್ವೈತ ಕಲ್ಪನಾ ನಿರಸನ

॥ಶ್ರೀರಾಮ॥ ಕೇವಳ ಬ್ರಹ್ಮ ಜೇ ಬೋಲಿಲೇ । ತೇ ಅನುಭವಾಸ ಆಲೇ ।
ಆಣೀ ಮಾಯೆಚೇ ಹೀ ಲಾಗಲೇ । ಅನುಸಂಧಾನ ॥೧॥

ಬ್ರಹ್ಮ ಅಂತರೀ ಪ್ರಕಾಶೇ । ಆಣೀ ಮಾಯಾ ಹಿ ಪ್ರತ್ಯಕ್ಷ ದಿಸೆ ।
ಆತಾ ಹೇ ದ್ವೈತ ನಿರಸೆ । ಕವಣೆಪರೀ ಹೋ ॥೨॥

# ದಶಕ ೭. ಸಮಾಸ ೫. "ದ್ವೈತ ಕಲ್ಪನಾ ನಿರಸನ" ನಾಮ ನಿರೂಪಣ

ಸಾಧಕರಾಗಿರುವವರ ದೃಷ್ಟಿಯಿಂದ ಈ ಸಮಾಸ ಬಹಳ ಮಹತ್ವದ್ದಿರುವದು. ಪ್ರತಿಯೊಬ್ಬ ಮನುಷ್ಯನು ಸ್ವತಃದ ಬಗ್ಗೆ ಮತ್ತು ಜಗತ್ತಿನ ಬಗ್ಗೆ ಕೆಲವೊಂದು ವಿಚಾರ ಕಲ್ಪನೆಗಳನ್ನು ನಿಶ್ಚಿತ ಮಾಡಿಕೊಂಡಿರುವನು. ಅವನ ಶ್ರದ್ಧೆ, ಅವನ ತರ್ಕ, ಅವನ ಶಕ್ತಿ (ಹಿಮ್ಮತ್ತು), ಅವನ ಉತ್ತಮ ಜೀವನದ ನಡವಳಿಕೆ ಮತ್ತು ಅವನ ಧಡಪಡಿಸುವ (ಖಟಪಟಿಯ) ಮಾರ್ಗ ಇತ್ಯಾದಿ ವಿಷಯಗಳು ಸಾಧಕತನದಲ್ಲಿ ನಡೆಯಬೇಕೆನ್ನುವವನ ಕಲ್ಪನಾ ಸಮೂಹವನ್ನು ಅವಲಂಬಿಸಿರುವದು. ಮನುಷ್ಯನ ಕಲ್ಪನೆ ಬದಲಾಯಿತೆಂದರೆ ಅವನ ಜೀವನ ಪದ್ಧತಿಯೂ ತನ್ನಿಂದ ತಾನೇ ಬದಲಾಗುವದು. ಇದನ್ನು ಲಕ್ಷ್ಯದಲ್ಲಿ ಇಟ್ಟಿರಬೇಕು. ಕಲ್ಪನಾ ಇದು ಮಾಯೆಯ ಶಕ್ತಿಯೇ ಇರುವದರಿಂದ ಇದು ಬಹಳ ಬಲಾಢ್ಯವಿರುವದು. ದೇಹಬುದ್ಧಿಯಲ್ಲಿ ಇದು ದೃಶ್ಯಪದಾರ್ಥದ ಕಡೆಗೆ ಹೊರಳುವದು. ಅಲ್ಲಿ ಇದು ಬಹು ಚಮತ್ಕಾರ ಮಾಡಿರುವದು. ವಿಜ್ಞಾನದ ಪಂಡಿತರು ನಿರ್ಮಾಣ ಮಾಡಿದ ವಿಲಕ್ಷಣವಾದ ಸೂಕ್ಷ್ಮಯಂತ್ರಗಳು ಮತ್ತು ದೈನಂದಿನ (ನಿತ್ಯದ) ಜೀವನದಲ್ಲಿ ರಚಿಸಿ ತಂದಂಥ ಸುಧಾರಣೆಗಳು ಸಹ ಕಲ್ಪನೆಯ ಸಾಮರ್ಥ್ಯದಿಂದ ಸಿದ್ಧವಾದವುಗಳಿರುವವು. ಶ್ರೀ ಸಮರ್ಥರು ಅರ್ಥಾತ್ ಆತ್ಮಜ್ಞಾನಿ ಸಂತರು ಹೇಳುವದೇನೆಂದರೆ:– ಈ ಕಲ್ಪನಾಶಕ್ತಿಯನ್ನು ಅಸ್ಥಿರ, ಹಾಗೂ ನಾಶವಂತವಿರುವ ದೃಶ್ಯದ ಮೇಲೆ ವ್ಯರ್ಥಗೊಳಿಸುವದಕ್ಕಿಂತ ಸ್ವತಃದ ಸುಧಾರಣೆಯ ಕಡೆಗೆ ತಿರುಗಿಸಿರಿ. ಜಗತ್ತು ಬದಲಿಸುವದಕ್ಕಿಂತ ಮನುಷ್ಯ ಬದಲಾಗುವದು ಹೆಚ್ಚು ಅವಶ್ಯವಿದೆ. ಮನುಷ್ಯನು ಬದಲಾವಣೆ ಹೊಂದಬೇಕಾದರೆ ಮೊದಲು ಅವನ ಮನಸ್ಸು ಬದಲಾಗುವದು ಅವಶ್ಯವಿರುವದು. ಮನವು ಕಲ್ಪನಾ ಪ್ರಧಾನವಿರುವದರಿಂದ ಕಲ್ಪನೆಯ ರಚನೆ ಹಾಗೂ ರೀತಿ (ಪ್ರಕಾರ) ಇವು ಬದಲಾದವೆಂದರೆ ಮನಸ್ಸು ಬದಲಾಗುವದು. ಮನಸ್ಸು ಬದಲಾಯಿತೆಂದಕೂಡಲೇ ಮನುಷ್ಯನು ಅಂತರಂಗದಿಂದಲೂ ಬದಲಾಗುತ್ತಾನೆ. ಆಗ ಸ್ವತಃದ ಕಡೆಗೆ ಮತ್ತು ಜಗತ್ತಿನ ಕಡೆಗೆ ನೋಡುವ ಅವನ ದೃಷ್ಟಿಕೋನವೂ ಸಹ ಬದಲಾಗುವದು. "ನಾನು ದೇಹವೇ ಇರುವೆ" ಈ ಕಲ್ಪನೆ ನಷ್ಟ ಮಾಡುವದಕ್ಕೆ "ನಾನು ಆತ್ಮವೇ ಇರುವೆ" ಹೀಗೆ ಕಲ್ಪನೆಯನ್ನು ಮಾಡಬೇಕು. ಮೊದಲನೆಯ ಕಲ್ಪನೆಯಿಂದ ದೃಶ್ಯ ಹಾಗೂ ದ್ವೈತದಿಂದ ತುಂಬಿದ ವಿಶ್ವವು ನಿಜವೆಂದು ಅನಿಸುತ್ತದೆ. ಎರಡನೆಯ ಕಲ್ಪನೆಯನ್ನು ಸಾಧನೆಯಿಂದ ದೃಢಪಡಿಸಿಕೊಂಡರೆ ಮೊದಲನೆಯ ಕಲ್ಪನೆ ದ್ವೈತ ಕಲ್ಪನೆ ಇದ್ದುದು ತಿಳಿದು ಬರುವದು. ಇದು ಖರೇ ಅನಿಸದೆ, ಅದ್ವೈತ ಬ್ರಹ್ಮ ನಿಜವೆಂದು ಅನಿಸುವದು. ಇದು ಎಲ್ಲ ಸಂತ ಸಾಧುಗಳ ಅಭಿಪ್ರಾಯವಿರುವದು. ದೇಹಬುದ್ಧಿಯಿಂದ ಅನೇಕ ದುಃಖಗಳು ನಿರ್ಮಾಣವಾಗುವವು. ಆದರೆ ಅದೇ ಆತ್ಮ ಬುದ್ಧಿಯಿಂದ ಆನಂದವೇ ಅನುಭವಕ್ಕೆ ಬರುವದು. ಈ ರೀತಿಯಿಂದ ಶುದ್ಧ ಕಲ್ಪನೆಯಿಂದ ಸ್ವತಃದ ಅಜ್ಞಾನ ಇಲ್ಲವಾತೆ ಮಾಡಬೇಕು. ಮತ್ತು ಜಗತ್ತಿಗೆ (ಪ್ರಪಂಚಕ್ಕೆ, ಲೋಕಕ್ಕೆ) ಉಪಯೋಗ-ಬೀಳಬೇಕು.

### ದಶಕ ೭. ಸಮಾಸ ೫. ದ್ವೈತ ಕಲ್ಪನಾ ನಿರಸನ. (ನುಡಿ ೪೪)

ಮಾನವನ ಜೀವನದಲ್ಲಿ ಮನಕ್ಕೆ ವಿಶೇಷವಾದ ಸ್ಥಾನವಿರುವದು ಯಾಕೆಂದರೆ ದ್ವೈತ ಮತ್ತು ಅದ್ವೈತ ಜ್ಞಾನ ಮತ್ತು ಅಜ್ಞಾನ ಬ್ರಹ್ಮ ಮತ್ತು ಮಾಯಾ ಇತ್ಯಾದಿ ವಿಷಯಗಳನ್ನು ಮನಸ್ಸೇ ನಿರ್ಮಾಣ ಮಾಡುವದು. ಆದರೆ ಈ ಮನವನ್ನು ಮಾಯೆಯೇ ಉತ್ಪನ್ನ ಮಾಡುವವಳಾದ್ದರಿಂದ ಮಾಯೆಯಂತೆ ಈ ಮನವೂ ಮಿಥ್ಯ ಎಂದು ತಿಳಿಯಬೇಕು. ಶ್ರೋತಾ ಅನ್ನುತ್ತಾನೆ: ಹಿಂದಿನ ಸಮಾಸದಲ್ಲಿ ಶುದ್ಧ (ವಿಮಲ) ಬ್ರಹ್ಮಸ್ವರೂಪದ ಬಗೆಗೆ ಹೇಳಿದಿರಿ. ಅದು ಸಂಪೂರ್ಣವಾಗಿ ಮನವರಿಕೆ ಆಯಿತು. ಆದರೆ ಮಾಯೆಯ ಸ್ಮರಣೆ (ಧ್ಯಾಸ)ಯು ಬಿಡುವದಿಲ್ಲ ಅದು ಬೆನ್ನು ಹತ್ತಿಯೇ ಇದೆ. ಅದು ಏನು ಮಾಡಿದರೂ ಬಿಡಲೊಲ್ಲದು (೧) ಅಂತರ್ಯಾಮಿ ಶುದ್ಧ ಬ್ರಹ್ಮವು ಪ್ರಕಾಶಿಸುತ್ತಲಿದೆ. ಮತ್ತು ಹೊರಗೆ ಇಂದ್ರಿಯಗಳಿಗೆ ಮಾಯೆ ಪ್ರತ್ಯಕ್ಷ ಕಾಣುತ್ತಲಿದೆ. ಈ ಬಗೆಯ ದ್ವೈತದ ನಿರಸನ (ಪರಿಹಾರ)ವನ್ನು ಯಾವ ರೀತಿಯಿಂದ ಮಾಡಬೇಕೆಂಬುದನ್ನು ಹೇಳಿರಿ.(೨)

ತರೀ ಆತಾ ಸಾವಧಾನ । ಯೇಕಾಗ್ರ ಕರೂನಿಯಾ ಮನ ।
ಮಾಯಾ ಬ್ರಹ್ಮ ಹೇ ಕವಣ । ಜಾಣತಾಹೇ ॥೩॥

ಸತ್ಯ ಬ್ರಹ್ಮಾಚಾ ಸಂಕಲ್ಪ । ಮಿಥ್ಯಾ ಮಾಯೇಚಾ ವಿಕಲ್ಪ ।
ಐಸಿಯಾ ದ್ವೈತಾಚಾ ಜಲ್ಪ । ಮನ ಚಿ ಕರೀ ॥೪॥

ಜಾಣೆ ಬ್ರಹ್ಮ ಜಾಣೆ ಮಾಯಾ । ತೇ ಯೇಕ ಜಾಣಾವೀ ತುರ್ಯಾ ।
ಸರ್ವ ಜಾಣೆ ಮ್ಹಣೋನಿಯಾ । ಸರ್ವ ಸಾಕ್ಷಿಣೀ ॥೫॥

ಯೇಕ ತುರ್ಯೇಚೇ ಲಕ್ಷಣ । ಜೇಥೇ ಸರ್ವ ಜಾಣಪಣ ।
ಸರ್ವಚಿ ನಾಹೀ ಕವಣ । ಜಾಣೇಲ ಗಾ ॥೬॥

ಸಂಕಲ್ಪ ವಿಕಲ್ಪಾಚೀ ಸೃಷ್ಟೀ । ಜಾಲೀ ಮನಾಚಿಯೆ ಪೋಟೀ ।
ತೇ ಮನ ಚಿ ಮಿಥ್ಯಾ ಸೇವಟೀ । ಸಾಕ್ಷೀ ಕವಣು ॥೭॥

ಸಾಕ್ಷತ್ವ ಚೈತನ್ಯತ್ವ ಸತ್ತಾ । ಹೇ ಗುಣ ಬ್ರಹ್ಮಾಚಿಯಾ ಮಾಥಾ ।
ಆರೋಪಲೇ ಜಾಣ ವೃಥಾ । ಮಾಯಾಗುಣೇ ॥೮॥

ಘಟ ಮಠಾಚೆನಿ ಗುಣೇ । ತ್ರಿವಿಧಾ ಆಕಾಶ ಬೋಲಣೇ ।
ಮಾಯೆಚೆನಿ ಖರೇಪಣೇ । ಗುಣ ಬ್ರಹ್ಮೀ ॥೯॥

ಜವ ಖರೇಪಣ ಮಾಯೇಸೀ । ತವಚಿ ಸಾಕ್ಷತ್ವ ಬ್ರಹ್ಮಾಸೀ ।
ಮಾಯೆ ಅವಿದ್ಯೇಚೆ ನಿರಾಸೀ । ದ್ವೈತ ಕೈಚೇ ॥೧೦॥

ಮ್ಹಣೋನಿ ಸರ್ವಸಾಕ್ಷೀಮನ । ತೇಚಿ ಜಾಲಿಯಾ ಉನ್ಮನ ।
ಮಗ ತುರ್ಯಾರೂಪ ಜ್ಞಾನ । ತೇ ಮಾವಳೋನ ಗೇಲೇ ॥೧೧॥

ಜಯಾಸ ದ್ವೈತ ಭಾಸಲೇ । ತೇ ಮನ ಉನ್ಮನ ಜಾಲೇ ।
ದ್ವೈತಾದ್ವೈತಾಚೇ ತುಟಲೇ । ಅನುಸಂಧಾನ ॥೧೨॥

ಇದನ್ನು ಇದನ್ನು ಕೇಳಿ ವಕ್ತಾರನು ಅನ್ನುತ್ತಾನೆ. ಹಾಗಾದರೆ ಈಗ ಮನ ಏಕಾಗ್ರ ಮಾಡಿ ಸಾವಧನಾಗಿ ಕೇಳುವವನಾಗು. ನಿನಗೆ ದ್ವೈತದ ನಿರಸನ ಹೇಗೆ ಮಾಡಬೇಕು? ಇದನ್ನು ಹೇಳುವೆನು. ಪ್ರಥಮದಲ್ಲಿ ಮಾಯಾ ಹಾಗೂ ಬ್ರಹ್ಮ ಇವನ್ನು ತಿಳಿಯುವಂಥವರು ಯಾರಿರುವರು? (೩) ಮನಸ್ಸೇ ಸಂಕಲ್ಪ ಹಾಗೂ ವಿಕಲ್ಪಗಳನ್ನು ಮಾಡುತ್ತದೆ. ಮನಸ್ಸು ಬ್ರಹ್ಮದ ಬಗೆಗೆ ಕಲ್ಪನೆ ಮಾಡಿದಾಗ ಅದು ಶುದ್ಧ ಅಥವಾ ಸತ್ಯ (ಖರೇ) ಇರುವದು. ಇದಕ್ಕೆ ಸಂಕಲ್ಪ ಅನ್ನುತ್ತಾರೆ. ಅದೇ ಮನಸ್ಸು ಯಾವಾಗ ಮಾಯೆಯ ಬಗ್ಗೆ ಕಲ್ಪನೆ ಮಾಡಿದಾಗ ಅದು ಅಶುದ್ಧ ಅಥವಾ ಶಬಲ (ಖೊಟ್ಟಿ) ಇರುವದು. ಇದಕ್ಕೆ ವಿಕಲ್ಪವೆನ್ನುವರು. "ಸತ್ಯವಾದ ಬ್ರಹ್ಮದ ಸಂಕಲ್ಪ" ಹಾಗೂ "ಮಿಥ್ಯವಾದ ಮಾಯೆಯ ವಿಕಲ್ಪ" ಈ ಎರಡೂ ತರಹದ ಸಂಕಲ್ಪ ವಿಕಲ್ಪಗಳ ಕಲ್ಪನೆಯನ್ನು ಮನಸ್ಸೇ ಮಾಡುವದು. ಈದ್ವಂದ್ವದ ದ್ವೈತದ ಗೊಂದಲವನ್ನು ಮನವೇ ಮಾಡುತ್ತದೆ. (ಸಂಕಲ್ಪದಿಂದ ವಿಕಲ್ಪ ನಾಶವಾದ ಮೇಲೆ ಆ ಸಂಕಲ್ಪವೂ ಬ್ರಹ್ಮದಲ್ಲಿ ಲೀನವಾಗಿ ಹೋಗುವದು) (೪) ಒಂದು ಕಡೆಗೆ ಬ್ರಹ್ಮದ ಬಗೆಗೆ ಜ್ಞಾನ, ಮತ್ತು ಇನ್ನೊಂದು ಕಡೆಗೆ ಮಾಯೆಯ ಬಗೆಗೆ ಸಹ ಜ್ಞಾನವಿರುತ್ತದೆ. ಇಂಥ ಅವಸ್ಥೆಗೆ "ತುರ್ಯಾವಸ್ಥೆ" (೪ನೇ ಅವಸ್ಥೆ) ಅನ್ನುವರು. ಇದು ಬ್ರಹ್ಮವನ್ನು ತಿಳಿಯುವದು, ಹಾಗೂ ಮಾಯೆಯನ್ನೂ ಸಹ ತಿಳಿಯುವದು. ಅಂದರೆ ಸರ್ವವನ್ನೂ ತಿಳಿಯುವದೆಂದೇ ಇದಕ್ಕೆ ಸರ್ವಸಾಕ್ಷಿಣಿ ಎಂದು ಹೆಸರಿದೆ. (೫) **ತುರ್ಯಾವಸ್ಥೆಯ ಲಕ್ಷಣಗಳನ್ನು ವಿವರಿಸುವರು.** ಯಾವುದು ಎಲ್ಲವನ್ನು ತಿಳಿಯುವದೋ ಅದು ತುರ್ಯಾವಸ್ಥೆ ಎಂಬುದನ್ನು ಲಕ್ಷ್ಯದಲ್ಲಿ ಇಟ್ಟುಕೊಳ್ಳಿರಿ. ಆದರೆ ಎಲ್ಲವೂ ಎಲ್ಲಿ ಇಲ್ಲವಾಗಿ ಬಿಡುವವೋ ಅಲ್ಲಿ ತಿಳಿಯಲು ಏನು ಉಳಿದಿರುವದು? ಅರ್ಥಾತ ಏನೂ ಇಲ್ಲ. (೬) ಮನವೆಂಬುದು ಯಾವುದು ಇದೆಯೋ ಅದರ ಹೊಟ್ಟೆಯೊಳಗಿಂದ ಸಂಕಲ್ಪ-ವಿಕಲ್ಪದ ಸೃಷ್ಟಿಯು ಹೊರಬೀಳುತ್ತದೆ. ಕೊನೆಗೆ ಮನವೆಂಬುದೇ ಅಖೈರದಲ್ಲಿ ಮಿಥ್ಯೆಯೆಂದು ಗೊತ್ತಾಗುತ್ತದೆ. ಮನವೇ ಇಲ್ಲದಂತಾದ ಮೇಲೆ ಸಾಕ್ಷಿತ್ವ ತನದಿಂದ ನೋಡಲಿಕ್ಕೆ ಅಲ್ಲಿ ಯಾರೂ ಉಳಿದಿರುವದಿಲ್ಲ. (೭) ಖರೇ ಅಂದರೆ ದೃಶ್ಯದ ಯಾವುದೇ ಗುಣವು ಶುದ್ಧ ಬ್ರಹ್ಮದ ಸ್ಥಳದಲ್ಲಿ ಇಲ್ಲ. ಆದರೆ ಸಾಕ್ಷಿತ್ವ [ಸಾಕ್ಷೀತನ], ಚೈತನ್ಯ ಹಾಗೂ ಸತ್ತಾ ಈ ಗುಣಗಳನ್ನು ಮಾಯೆಯು ಸುಮ್ಮನೇ ಬ್ರಹ್ಮನ ತಲೆಗೆ ಕಟ್ಟುತ್ತಾಳೆ, ಬ್ರಹ್ಮದ ಮೇಲೆ ಈ ಗುಣಗಳ ಆರೋಪವನ್ನು ಇವಳೇ ಮಾಡುವಳು.(೮) ನಿಜವಾಗಿಯೂ ಆಕಾಶ ಒಂದೇ ಇರುವದು. ಆದರೆ ಘಟಾಕಾಶ ಅಂದರೆ ಭಾಂಡಿ [ಪಾತ್ರೆ]ಯಲ್ಲಿಯ ಆಕಾಶ, ಮಠಾಕಾಶ ಅಂದರೆ ಮನೆಯಲ್ಲಿಯ ಆಕಾಶ ಮತ್ತು ಮಹದಾಕಾಶ ಅಂದರೆ ವಿಶ್ವದಲ್ಲಿಯ ಆಕಾಶ [ನಿಜವಾದ ಆಕಾಶ] ಹೀಗೆ ಇದರಲ್ಲಿ ಮೂರು ಭೇದ ಮಾಡುವರು. ಇದರಂತೆ ಮಾಯಾ ಖರೆ ಎಂದು ಒಪ್ಪಿದೆವೆಂದರೆ ಬ್ರಹ್ಮದ ಮೇಲೆ ಗುಣಗಳ ಆರೋಪ ಮಾಡಿದಂತೆ ಆಯಿತು. ನಿಜವೆಂದರೆ ಮೂಲ ಬ್ರಹ್ಮದಲ್ಲಿ ಯಾವ ಗುಣಗಳೂ ಇರುವದಿಲ್ಲ. [೯] ಎಲ್ಲಿಯವರೆಗೆ ಮಾಯೆಯು ಖರೇ ಎಂದು ಅನಿಸುವದೋ ಅಲ್ಲಿಯವರೆಗೆ ಬ್ರಹ್ಮನಿಗೆ ಸಾಕ್ಷಿತ್ವವಿರುವದು. "ನಾನು ಸಾಕ್ಷೀತನದಿಂದ ಅಂದರೆ ಮಧ್ಯಸ್ಥ. ತ್ರಯಸ್ಥ, ತಿರಾಯಿತ ತನದಿಂದ ನೋಡುವೆನು. "ಹೀಗೆ ಇದು ದ್ವೈತವಿರುವದು. ಆದರೆ ಅದೇ ಮಾಯಾ ಮತ್ತು ಅವಿದ್ಯೆ ಇವೆರಡೂ [ನಿರಾಸ] ಇಲ್ಲವಾದರೆ ದ್ವೈತತನ ಹೋಗಿ ಬಿಡುತ್ತದೆ. ಮತ್ತು ಇದರೊಂದಿಗೆ ಸಾಕ್ಷಿತ್ವತನವೂ ಸಹ ವಿಲೀನವಾಗಿ ಬಿಡುತ್ತದೆ. ಎಲ್ಲ ಗುಣಗಳೂ ಲೋಪವಾಗುವವು. [೧೦] ಮನವೇ ವ್ಯಾಪಕವಾಗುತ್ತ ಆಗುತ್ತ ಸರ್ವಸಾಕ್ಷಿ ಅವಸ್ಥೆ ಹೊಂದುವದು. ಇದು ಯಾವಾಗ ಉನ್ಮನವಾಗುವದೊ ಆಗ ತುರ್ಯಾವಸ್ಥೆ ಇಲ್ಲದಾಗುತ್ತದೆ. [ಈ ಅವಸ್ಥೆ ಅದೃಶ್ಯವಾಗುವದು] ಇದರ ಸಂಗಡವೇ "ನಾನು ಎಲ್ಲವನ್ನೂ ತಿಳಿಯುವೆನು" ಈ ಜ್ಞಾನದ ಅರಿವು ಸಹ ಇಲ್ಲದಾಗುತ್ತದೆ.[೧೧] ಯಾವ ಮನಸ್ಸಿಗೆ ದ್ವೈತದ ಅನುಭವ ಬರುತ್ತಿತ್ತೋ ಆ ಮನವೇ ಉನ್ಮನವಾಗಿ ಬಿಟ್ಟಾಗ ದ್ವೈತ ಉಳಿದೀತೆ? ದ್ವೈತ ಉಳಿಯಲಾರದು. ಕೇವಲ ಅದ್ವೈತ ಮಾತ್ರ ಉಳಿಯುತ್ತದೆ. ಆಮೇಲೆ ದ್ವೈತ ಅದ್ವೈತ ಅನ್ನುವ ಇದರ ಚಿಂತನವೂ ಸಹ ತನ್ನಿಂದತಾನೇ ನಿಂತು ಬಿಡುತ್ತದೆ. [೧೨]

ಯೆವಂದ್ವೈತ ಆಣೀ ಅದ್ವೈತ । ಹೋಯೆ ವೃತ್ತೀಚಾ ಸಂಕೇತ ।
ವೃತ್ತಿ ಜಾಲಿಯಾ ನಿವೃತ್ತ । ದ್ವೈತ ಕೈಚೇ ॥೧೩॥

ವೃತ್ತಿರಹಿತ ಜೇ ಜ್ಞಾನ । ತೇಚಿ ಪೂರ್ಣ ಸಮಾಧಾನ ।
ಜೇಥೇ ತುಟೆ ಅನುಸಂಧಾನ । ಮಾಯಾ ಬ್ರಹ್ಮೀಚೇ ॥೧೪॥

ಮಾಯಾಬ್ರಹ್ಮ ಏಸಾ ಹೇತ । ಮನೇ ಕಲ್ಪಿಲಾ ಸಂಕೇತ ।
ಬ್ರಹ್ಮ ಕಲ್ಪನೆರಹಿತ । ಜಾಣತೀ ಜ್ಞಾನೀ ॥೧೫॥

ಜೇ ಮನಬುದ್ಧಿ ಅಗೋಚರ । ಜೇ ಕಲ್ಪನೆಹೂನ ಪರ ।
ತೇ ಅನುಭವಿತಾ ಸಾಚಾರ । ದ್ವೈತ ಕೈಚೇ ॥೧೬॥

ದ್ವೈತ ಪಾಹಾತಾ ಬ್ರಹ್ಮ ನಸೆ । ಬ್ರಹ್ಮ ಪಾಹಾತಾ ದ್ವೈತ ನಾಸೇ ।
ದ್ವೈತಾದ್ವೈತ ಭಾಸೇ । ಕಲ್ಪನೇಸೀ ॥೧೭॥

ಕಲ್ಪನಾ ಮಾಯಾ ನಿವಾರೀ । ಕಲ್ಪನಾ ಬ್ರಹ್ಮ ಥಾವರೀ ।
ಸಂಶಯು ಧರೀ ಆಣೀ ವಾರೀ । ತೇಹಿ ಕಲ್ಪನಾ ॥೧೮॥

ಹೇಳಬೇಕಾದ ತಾತ್ಪರ್ಯವೇನೆಂದರೆ ದ್ವೈತ ಮತ್ತು ಅದ್ವೈತ ಇವೆರಡೂ ಕಲ್ಪನಾ ವೃತ್ತಿಯ ಸಂಜ್ಞೆ ಅಂದರೆ ಮನಸ್ಥಿತಿಯ ಸಂಕೇತಗಳಾಗಿರುವವು. ಈ ವೃತ್ತಿಯೇ ಸಂಪೂರ್ಣವಾಗಿ ಇಲ್ಲದಂತೆ ಆದಮೇಲೆ ಅಲ್ಲಿ ಆಗ ದ್ವೈತ ಉಳಿಯುವದಿಲ್ಲ. ಉನ್ಮನ ಈ ಶಬ್ದವು ಉದ್+ಮನ= ಕೂಡಿ ಉನ್ಮನ ಎಂದಾಗುವದು. ಉದ್ ಅಂದರೆ ಊರ್ಧ್ವಗತಿ, ಶ್ರೇಷ್ಠ ಗತಿ ಪೂರ್ಣತೆ ಅಥವಾ ಮುಕ್ತ ಮಾಡುವದು. ಉನ್ಮನ ಅಂದರೆ ಮನದ ಪರಿಪೂರ್ಣ ಅವಸ್ಥೆಯಾಗಿದೆ. ದೃಶ್ಯದಿಂದ ಸಂಪೂರ್ಣವಾಗಿ ಹೊರಗೆ ಬಂದು ಮುಕ್ತರಾಗಿ ಪರಮ ಶ್ರೇಷ್ಠ ಬ್ರಹ್ಮದಲ್ಲಿ ವಿಲೀನ ವಾಗುವದಕ್ಕೆ ಉನ್ಮನವೆನ್ನುವರು ಸಾದಾ (ಸರಳ) ಮನವು ವೃತ್ತಿ ಪ್ರಧಾನ ಹಾಗೂ ಕಲ್ಪನಾಮಯ ಇರುವದು. ಅದೇ ಉನ್ಮನವು ವೃತ್ತಿವಿಹೀನ ಮತ್ತು ಕಲ್ಪನಾರಹಿತವಿರುವದು.(೧೩) ಜ್ಞಾನವೆಂಬಲ್ಲಿ ವೃತ್ತಿಗೆ ಎಳ್ಳಷ್ಟೂ ಸ್ಥಾನ ವಿಲ್ಲ. ಇಂಥ ಜ್ಞಾನವೇ ಖರೇ ಬ್ರಹ್ಮಜ್ಞಾನವಾಗಿದೆ. ಈ ಜ್ಞಾನವೇ ಸಂಪೂರ್ಣ ಸಮಾಧಾನ ಕೊಡುವದು. ಈ ಜ್ಞಾನವಾಯಿತೆಂದರೆ ಮಾಯಾ ಮತ್ತು ಬ್ರಹ್ಮ ಇವುಗಳ ಚಿಂತನ (ವಿಚಾರ)ದ ಮುಕ್ತಾಯವಾಗುವದು. (೧೪) ಮಾಯೆಯು ಮನಸ್ಸಿನ ತಾಯಿ ಇರುವಳು. ಕಲ್ಪನಾ ಇದು ಮಾಯೆಯ ಮೂಲವಾಗಿದೆ. ಅಂತೆಯೇ ಮಾನವ ಮನಸ್ಸೂ ಸಹ ಕಲ್ಪನಾಮಯವಿರುವದು. ಮಾಯೆಯ ಕ್ಷೇತ್ರದಲ್ಲಿಯ ಎಲ್ಲ ಸ್ಥಳಗಳಲ್ಲಿಯೂ ಕಲ್ಪನೆಯ ಸಾಮ್ರಾಜ್ಯವೇ ನಡೆಯುವದು. ಇದು ಯೋಗ್ಯವೂ ಆಗಿದೆ. ಆದರೆ ಈ ಕಲ್ಪನೆಯು ತನ್ನ ಮರ್ಯಾದೆಯನ್ನು(ಸೀಮೆಯನ್ನು) ದಾಟಿ ಬ್ರಹ್ಮನಿಗೇ ಮುಸುಕುಹಾಕುವ ಪ್ರಯತ್ನ ಮಾಡುತ್ತದೆ.ಆಗ ಅನವಸ್ಥಾ ಅಂದರೆ ಅನಿಶ್ಚಿತತನದ ಘೋಟಾಳೆಯ ತೊಡಕಿನಪ್ರಸಂಗ ಬರುತ್ತದೆ.ದೇಹಬುದ್ಧಿಯ ಮನಕ್ಕೆ ದೃಶ್ಯವು ಖರೇಅನಿಸುತ್ತದೆ.ಆದರಿದರ ಬಗ್ಗೆ ಶುದ್ಧತರ್ಕದಿಂದ ವಿಚಾರಮಾಡಿದ್ದಾದರೆ ಖರೆ ಅನಿಸಿದ ದೃಶ್ಯವು ಅಶಾಶ್ವತವೆಂದು ಅನಿಸಿ ದೃಶ್ಯವು ಖೋಟಾ ಎಂದು ಮನಕ್ಕೆ ಖಾತ್ರಿ ಆಗುತ್ತದೆ. ಆಮೇಲೆ ದೃಶ್ಯವು ಮಾಯಾಮಯವಾದರೆ ಶುದ್ಧ ಬ್ರಹ್ಮವು ಮಾಯೆಯ ಆಚೆಗೆ (ಮಾಯೆಯನ್ನು ದಾಟಿ) ಶಾಶ್ವತವಾಗಿ ಇರುವಂಥದು. ಹೀಗೆ ಕಲ್ಪನೆ ಮಾಡಿ ಮನವು ತನ್ನಲ್ಲಿಯೇ ಗುರುತಿಸಿಕೊಂಡು ಎರಡರ ಅಸ್ತಿತ್ವವನ್ನು ಒಪ್ಪುತ್ತದೆ. ಆದರೆ ಬ್ರಹ್ಮವು ಕಲ್ಪನಾರಹಿತ ಇರುವದೆಂಬ ನಿಜ ಸತ್ಯವನ್ನು ಜ್ಞಾನಿ ಪುರುಷರು ಮಾತ್ರ ತಿಳಿದಿರುವರು. (ಶುದ್ಧ) ಬ್ರಹ್ಮವು ಮನ ಮತ್ತು ಬುದ್ಧಿಯ ಅಳವಿಗೆ ನಿಲುಕದ್ದಾಗಿದೆ ಹಾಗೂ ಇದು ಕಲ್ಪನೆಯ ಆಚೆಗೆ ಇರುತ್ತದೆ. ಅಂತೆಯೇ ಕಲ್ಪನೆಯು ಬ್ರಹ್ಮದವರೆಗೆ ಹೋಗಿ ಮುಟ್ಟಲು ಶಕ್ಯವಾಗುವದಿಲ್ಲ. ಇಂಥ ಬ್ರಹ್ಮದ ಸಾಕ್ಷಾತ್ ಅನುಭವ ಪಡೆದರೆ ಆಗ ದ್ವೈತವು ಶಿಲ್ಲಕ ಉಳಿಯುವದೇ ಇಲ್ಲ. (೧೭) ದ್ವೈತದ ಕಲ್ಪನೆ ಇರುವವರೆಗೂ ಬ್ರಹ್ಮದ ಅನುಭವ ಬರುವದಿಲ್ಲ. ಅದೇ ಬ್ರಹ್ಮದ ಅನುಭವ ಬಂದ ಕೂಡಲೇ ದ್ವೈತವು ಶಿಲ್ಲಕ ಉಳಿಯುವದಿಲ್ಲ. ದ್ವೈತ ಮತ್ತು ಅದ್ವೈತ ಇವು ಕಲ್ಪನೆಯೇ ಇರುವವು. ಅಂತೆಯೇ ಇವು ಮನಸ್ಸಿಗೆ ಭಾಸವಾಗುವವು. ತೋರುವವು. (೧೭) ಕಲ್ಪನಾ, ಇದು ಜೀವನಕ್ಕೆ ಹೇಗೆ ವ್ಯಾಪಿಸಿ ಇರುವದೆಂಬ ಬಗ್ಗೆ ಈಗ ವರ್ಣನೆ ಮಾಡುವರು. ಉತ್ತಮವಾದದ್ದು ಮತ್ತು ಕೆಟ್ಟದ್ದು ಹೀಗೆ ಕಲ್ಪನೆಯಲ್ಲಿ ಎರಡು ಪ್ರಕಾರಗಳಿರುವವು. ಚಿಂತೆ, ಭಯ ಹೀನತನದ ವಿಚಾರ ಮುಂದೆ ಏನಾದೀತೆಂಬ ಬಗ್ಗೆ ಚಿಂತೆ, ಆಲಸ್ಯತನ, ಮನೋರಾಜ್ಯ ಇತ್ಯಾದಿಗಳು ಕೆಟ್ಟ ಕಲ್ಪನೆಗಳೆಂದು ತಿಳಿಯಬೇಕು. ಈಶ್ವರನ ಮೇಲೆ ನಂಬಿಕೆ, ನಿರ್ಭಯತನ, ಒಳ್ಳೆಯ ಕೆಲಸದ ಭಾವನೆ, ಆಶಾವಾದಿತ್ವತನ, ಯಶದ ಬಗ್ಗೆ ನಂಬಿಕೆ ಇತ್ಯಾದಿಗಳು ಒಳ್ಳೆಯ ಕಲ್ಪನೆಗಳೆಂದು ತಿಳಿಯಬೇಕು. ಕೆಟ್ಟ ಕಲ್ಪನೆಗಳನ್ನು ದೇಹಬುದ್ಧಿ ಸಂರಕ್ಷಿಸುತ್ತದೆ. ಹಾಗೂ ಮನವನ್ನು ಹೆಚ್ಚು ಆಕುಂಚಿತಗೊಳಿಸುತ್ತದೆ. ಅದೇ ಒಳ್ಳೆಯ ಕಲ್ಪನೆಗಳನ್ನು ಆತ್ಮಬುದ್ಧಿ ಸಂರಕ್ಷಿಸುತ್ತದೆ. ಹಾಗೂ ಮನವನ್ನು ಬಹಳ ವಿಶಾಲಗೊಳಿಸುತ್ತದೆ. ಯಾರಿಗೆ ಸಂತರಾಗಬೇಕೆಂಬ ಇಚ್ಛೆ ಇದೆಯೋ ಅವರು ಒಳ್ಳೆಯ ಕಲ್ಪನೆಗಳನ್ನು ಆತ್ಮಸಾತ್ ಮಾಡಿಕೊಳ್ಳಬೇಕಾಗುವದು:- ಕಲ್ಪನೆಯ ಸಾಮರ್ಥ್ಯ ಹೇಗಿರುವದೆಂದರೆ ಕಲ್ಪನೆಯು ಮಾಯೆಯ ನಿರ್ಮಾಣ ಮಾಡುವದು. ಕಲ್ಪನೆ ಬ್ರಹ್ಮನಿಗೆ ಆಶ್ರಯ ಕೊಡುವದು. ಮತ್ತು ಅವನನ್ನು ಸ್ಥಿರಗೊಳಿಸುವದು. ಮತ್ತು ಸ್ಥಾಪಿಸುವದು ಕಲ್ಪನೆಯೇ ಸಂಶಯವನ್ನು ನಿರ್ಮಾಣ ಮಾಡುವದು. ಮತ್ತು ಕಲ್ಪನೆಯೇ ಸಂಶಯವನ್ನು ನಿವಾರಿಸುವದು. (೧೮)

ಕಲ್ಪನಾ ಕರೀ ಬಂಧನ । ಕಲ್ಪನಾ ದೇ ಸಮಾಧಾನ ।
ಬ್ರಹ್ಮೀ ಲಾವೀ ಅನುಸಂಧಾನ । ತೇಹಿ ಕಲ್ಪನಾ ॥೧೯॥

ಕಲ್ಪನಾ ದ್ವೈತಾಚೀ ಮಾತಾ । ಕಲ್ಪನಾ ಜ್ಞಪ್ತೀ ತತ್ವತಾ ।
ಬದ್ಧತಾ ಆಣೀ ಮುಕ್ತತಾ । ಕಲ್ಪನಾಗುಣೇ ॥೨೦॥

ಕಲ್ಪನಾ ಅಂತರೀ ಸಬಳ । ನಸ್ತೆ ದಾವೀ ಬ್ರಹ್ಮಗೋಳ ।
ಕ್ಷಣಾ ಯೇಕಾತೇ ನಿರ್ಮಳ । ಸ್ವರೂಪ ಕಲ್ಪೀ ॥೨೧॥

ಕ್ಷಣಾ ಯೇಕಾ ಧೋಕಾ ವಾಹೆ । ಕ್ಷಣಾ ಯೇಕಾ ಸ್ಥಿರ ರಾಹೆ ।
ಕ್ಷಣಾ ಯೇಕಾ ಪಾಹೆ । ವಿಸ್ಮಿತ ಹೋಉನೀ ॥೨೨॥

ಕ್ಷಣಾ ಯೇಕಾತೇ ಉಮಜೆ । ಕ್ಷಣಾ ಯೇಕಾತೇ ನಿರ್ಬುಜೆ ।
ನಾನಾ ವಿಕಾರ ಕರಿಜೆ । ತೇ ಕಲ್ಪನಾ ಜಾಣಾವೀ ॥೨೩॥

ಕಲ್ಪನಾ ಜನ್ಮಾಚೇ ಮೂಳ । ಕಲ್ಪನಾ ಭಕ್ತೀಚೇ ಫಳ ।
ಕಲ್ಪನಾ ತೇಚಿ ಕೇವಳ । ಮೋಕ್ಷದಾತೀ ॥೨೪॥

ಅಸೋ ಐಸೀ ಹೇ ಕಲ್ಪನಾ । ಸಾಧನೇ ದೇ ಸಮಾಧಾನಾ ।
ಯೆರವೀ ಹೇ ಪತನಾ । ಮೂಳ ಚ ಕೀ ॥೨೫॥

ಮ್ಹಣೌನ ಸರ್ವಾಚೇ ಮೂಳ । ತೇ ಹೆ ಕಲ್ಪನಾಚ ಕೇವಳ ।
ಇಚೆ ಕೇಲಿಯಾ ನಿರ್ಮೂಳ । ಬ್ರಹ್ಮ ಪ್ರಾಪ್ತೀ ॥೨೬॥

ಶ್ರವಣ ಆಣೀ ಮನನ । ನಿಜಧ್ಯಾಸೇ ಸಮಾಧಾನ ।
ಮಿಥ್ಯಾ ಕಲ್ಪನೇಚೇ ಭಾನ । ಉಡೋನ ಜಾಯೆ ॥೨೭॥

ಶುದ್ಧ ಬ್ರಹ್ಮಾಚಾ ನಿಶ್ಚಯೋ । ಕರೀ ಕಲ್ಪನೇಚಾ ಜಯೋ ।
ನಿಶ್ಚಿತಾರ್ಥೇ ಸಂಶಯೋ । ತುಟೋನ ಗೇಲಾ ॥೨೮॥

ಕಲ್ಪನೆಯೇ ಬಂಧವನ್ನು ನಿರ್ಮಾಣ ಮಾಡುವದು. ಮತ್ತು ಕಲ್ಪನೆಯೇ ಸಮಾಧಾನ ನೀಡುವದು. ಇಷ್ಟೇ ಅಲ್ಲ ಬ್ರಹ್ಮದ ಚಿಂತನ ಮಾಡುವ ಕಲೆಯನ್ನೂ ಸಹ ಕಲ್ಪನೆಯೇ ಕಲಿಸುವದು. (೧೯) ಕಲ್ಪನೆಯು ದ್ವೈತವನ್ನು ಹುಟ್ಟಿಸುವದು. ನಿಜವಾಗಿ ನೋಡಿದರೆ ಅರ್ಥಾತ್ ಹೇಳುವದಾದರೆ ಜ್ಞಾನವೂ ಸಹ ಕಲ್ಪನೆಯೇ ಇರುವದು. ನಾನು ಬದ್ಧನಿರುವೆನು, ಮತ್ತು ನಾನು ಮುಕ್ತನಿರುವೆನು. ಈ ಅವಸ್ಥೆ (ಸ್ಥಿತಿ)ಯು ಕಲ್ಪನೆಯ ಯೋಗ(ಸಹಾಯ) ದಿಂದಲೇ ಅನುಭವಕ್ಕೆ ಬರುವದು. (೨೦) ನಮ್ಮ ಅಂತರ್ಯಾಮದಲ್ಲಿ ವಾಸಮಾಡುವ ಕಲ್ಪನೆಯು ಶಬಲ(ಮಿಶ್ರ) ವಾಗಿದ್ದರೆ ಹಾಗೂ ಅದು ದೇಹಬುದ್ಧಿಗೆ ಮತ್ತು ಅವಿದ್ಯೆಯನ್ನು ಹಿಡಿದುಕೊಂಡಿದ್ದರೆ ಆಗ ಮೂಲದಲ್ಲಿ ಇರದೇ ಇದ್ದ ದೃಶ್ಯ ವಿಶ್ವವು ಅನುಭವಕ್ಕೆ ಬರುವದು. ಇದೇ ಕಲ್ಪನೆಯನ್ನು ಏಕಾಂತದಲ್ಲಿ ಕುಳಿತು ನಿರ್ಮಲ ಶಂಕಾರಹಿತ ಮಾಡಿದ್ದಾದರೆ ದೃಶ್ಯರಹಿತವಾಗಿರುವ ನಿರ್ಮಲ ಸ್ವರೂಪವನ್ನು ಅನುಭವಕ್ಕೆ ಈಕಲ್ಪನೆಯೇ ತಂದುಕೊಡುವದು.(೨೧) ಕಲ್ಪನೆಯು ಬಹು ದೊಡ್ಡ ವಿಲಕ್ಷಣವಿರುವದು. ಈಗ ಸಂಕಟದ ನೆನಪು ಮಾಡಿಕೊಟ್ಟು ಚಿಂತೆಯಲ್ಲಿ ಇರುವಂತೆ ಮಾಡಿದರೆ ಕ್ಷಣದಲ್ಲಿ ಅದನ್ನು ಮರೆತು ಮನವನ್ನು ಸ್ಥಿರ ಮಾಡುವಳು. (ಸ್ಥಿರಗೊಳಿಸುವಳು). ಮತ್ತೆ ಮರುಕ್ಷಣದಲ್ಲಿ ನಿಮ್ಮನ್ನು ಆಶ್ಚರ್ಯಗೊಳಿಸುವಳು. (೨೨) ಒಂದು ಕ್ಷಣ ಕಲ್ಪನೆಯ ಸ್ಥಿತಿಯು ಈ ಬಗೆಯದಾಗಿ ರುತ್ತದೆ. ಆಗ ಇದಕ್ಕೆ ಅಗದೀ ಸ್ವಚ್ಛಜ್ಞಾನವಾದಂತೆ ಆಗುವದು. ಆದರೆ ಮರುಕ್ಷಣದಲ್ಲಿ ಈ (ಕೂಡಲೇ) ಈ ಜ್ಞಾನ ವೃತ್ತಿ ಲೋಪವಾಗಿ ಕಲ್ಪನೆಯು ಅಜ್ಞಾನವನ್ನು ಧಾರಣ ಮಾಡುವದು. ಹೀಗೆ ಅನೇಕ ಪ್ರಕಾರದ ವೃತ್ತಿಗಳನ್ನು ಉತ್ಪನ್ನ ಮಾಡುವದೇ ಕಲ್ಪನೆಯೆಂದು ತಿಳಿಯಿರಿ.(೨೩) ಈ ಕಲ್ಪನೆಯು ನಮ್ಮ ಜನ್ಮಕ್ಕೆ ಮೂಲ ಕಾರಣವಿರುವದು. ಭಕ್ತಿಯ ಫಲವನ್ನು ನಮ್ಮ ಪದರಿನಲ್ಲಿ ಹಾಕುವದೂ ಕಲ್ಪನೆಯೇ ಇರುವದು. ಇಷ್ಟೇ ಅಲ್ಲ ಕೊನೆಗೆ ಕೈವಲ್ಯ ಮೋಕ್ಷ ಕೊಡುವವರು ಯಾರಾದರೂ ಇದ್ದದ್ದಾದರೆ ಅದು ಕಲ್ಪನೆಯೇ ಇರುವದು. (೨೪) ಕಲ್ಪನೆಯಲ್ಲಿ ಅದ್ಭುತ ಸಾಮರ್ಥ್ಯ ತುಂಬಿರುವದು. ಇದು ದೃಶ್ಯದ ಕಡೆಗೆ ಹೊರಳಿದರೆ ಪ್ರಪಂಚದಲ್ಲಿ ದುಃಖ ಭೋಗಿಸುವದಕ್ಕೆ ಹಚ್ಚು ವದು. ಆದರೆ ಇದು ಅದೃಶ್ಯ ಸ್ವರೂಪದ ಕಡೆಗೆ ಹೊರಳಿದರೆ ಸಮಾಧಾನವನ್ನು ಕೊಡುವದು. ಅದೃಶ್ಯದಲ್ಲಿ ವಿಹರಿಸುವ ಕಲ್ಪನೆಯು ಶುದ್ಧವಾದದ್ದು ಇರುವದು. ಆದರೆ ದೃಶ್ಯದಲ್ಲಿ ಹೊರಳಾಡುವ ಕಲ್ಪನೆಯು ಶಬಲ [ಮಿಶ್ರ] ಅಥವಾ ಅಶುದ್ಧವೆಂದು ತಿಳಿಯಬೇಕು. ಆದ್ದರಿಂದ ಶುದ್ಧ ಕಲ್ಪನೆಯಿಂದ ಅಶುದ್ಧ ಕಲ್ಪನೆಯನ್ನು ದೂರಮಾಡ ಬೇಕು. ಇಲ್ಲದಂತೆ ಮಾಡಬೇಕು. ಮತ್ತು ಸದಾಕಾಲ ಸ್ವಸ್ವರೂಪದ ಅನುಸಂಧಾನದಲ್ಲಿ ಮಗ್ನವಾಗಿರಬೇಕು. ಶ್ರವಣ· ಮನನ, ಹಾಗೂ ನಿದಿಧ್ಯಾಸ ಈ ಮಾರ್ಗದಿಂದ ಹೋದರೆ ದೇಹಬುದ್ಧಿಯ ಖೊಟ್ಟಿ – ಮಿಥ್ಯಾ ಕಲ್ಪನೆಯು ಹಾರಿ ಹೋಗುವದು. ಮತ್ತು ಸ್ವಸ್ವರೂಪದ ದರ್ಶನವಾಗಿ ಸಮಾಧಾನವು ಲಭಿಸುವದು. ಇರಲಿ, ಹೀಗಿರುವ ಈ ಕಲ್ಪನೆ ಯನ್ನು ಪರಮಾರ್ಥ ಸಾಧನದಲ್ಲಿ ತೊಡಗಿಸಿದರೆ ಇದು ಸಮಾಧಾನವನ್ನು ತಂದುಕೊಡುವದು. ಹೀಗೆ ಮಾಡದಿದ್ದರೆ ಇದು [ಕಲ್ಪನೆಯು] ಮನುಷ್ಯನನ್ನು ಅಧಃಪಾತಕ್ಕೆಳೆಸುವದು–ಒಯ್ಯುವದು. [೨೫] ಅಂತೆಯೇ ಈ ವಿಶ್ವರಚನೆಯ ಮೂಲದಲ್ಲಿ ಯಾರಾದರೂ ಇರುವದಾದರೆ ಅದು ಈ ಕಲ್ಪನೆಯೇ ಆಗಿರುವದು, ಇದನ್ನು ಬೇರು ಸಹಿತ ತಳದಿಂದ ಕಿತ್ತು ಒಗೆದರೆ ಮಾತ್ರ ಬ್ರಹ್ಮಪ್ರಾಪ್ತಿ ಆಗುವದಕ್ಕೆ ವೇಳೆ ಹಿಡಿಯಲಾರದು. [೨೬] ಶ್ರವಣ, ಮನನ, ಹಾಗೂ ನಿದಿಧ್ಯಾಸ ಈ ಸಾಧನ ಮಾರ್ಗದಿಂದ ಹೋದದ್ದಾದರೆ ಆತ್ಮಸಾಕ್ಷಾತ್ಕಾರವಾಗಿ ಖಾತ್ರಿಯಿಂದ ಸಮಾಧಾನದ ಲಾಭ ಉಂಟಾಗುವದು. ಈ ಸಾಧನದಿಂದ ದೃಶ್ಯದಲ್ಲಿ ಸಿಕ್ಕಿಕೊಂಡಿರುವ [ತೊಡಕಿಕೊಂಡಿರುವ] ಖೊಟ್ಟಿ—ಮಿಥ್ಯಾ ಕಲ್ಪ ನೆಯ ತಿಳವಳಿಕೆ ಪೂರ್ಣ ಹಾರಿ ಹೋಗಿ ಬಿಡುವದು. [೨೭] ಶುದ್ಧ ಬ್ರಹ್ಮ ಸ್ವರೂಪದ ಅನುಭವ ಬಂದು ಪ್ರಜ್ಞೆ ತಿಳುವಳಿಕೆ, ಅರಿವು, ಜ್ಞಾನ ಸ್ಥಿರಗೊಂಡ ಕೂಡಲೇ ಎಲ್ಲ ಕಲ್ಪನೆಯೂ ಪರಾಭೂತವಾಗಿ ಹೋಗುವದು. ಅದು ಇಲ್ಲದಾಗಿಯೇ ಹೋಗುವದು. ಬ್ರಹ್ಮಜ್ಞಾನದಿಂದ ಮನಸ್ಸಿನಲ್ಲಿ ಸ್ವಸ್ವರೂಪದನಿಶ್ಚಯ ಅರ್ಥಾತ್–ನಿರ್ವಿಕಲ್ಪ ಸ್ಥಿತಿಯು ಸ್ಥಿರಗೊಂಡಿತೆಂದರೆ ದೇಹಬುದ್ಧಿಯ ಸರ್ವಸಂಶಯಗಳು ಸಂಪೂರ್ಣವಾಗಿ ನಾಶವಾಗಿ ಬಿಡುವವು. [೨೮]

ಮಿಥ್ಯಾ ಕಲ್ಪನೇಚೇ ಕೋಡೇ। ಕೈಸೇ ರಾಹೆ ಸಾಚಾಪುಢೇ।
ಜೈಸೇ ಸೂರ್ಯಾಚೆನಿ ಉಜೇಡೇ। ನಾಸೆ ತಮ ॥೨೯॥

ತೈಸೇ ಜ್ಞಾನಾಚೆನಿ ಪ್ರಕಾಶೇ। ಮಿಥ್ಯಾ ಕಲ್ಪನಾ ಹೇ ನಾಸೆ।
ಮಗ ಹೇ ತುಟೆ ಅಪೈಸೇ। ದ್ವೈತಾನುಸಂಧಾನ ॥೩೦॥

ಕಲ್ಪನೇನೇ ಕಲ್ಪನಾ ಉಡೆ। ಜೈಸಾ ಮೃಗೇ ಮೃಗ ಸಾಪಡೆ।
ಕಾ ಶರೇಶರ ಆತುಡೆ। ಆಕಾಶ ಮಾರ್ಗೀ ॥೩೧॥

ಶುದ್ಧ ಕಲ್ಪನೇಚೇ ಬಳ। ಜಾಲಿಯಾ ನಾಸೆ ಸಬಳ।
ಹೇ ಚಿ ವಚನ ಪ್ರಾಂಜಳ। ಸಾವಧ ಏಕಾ ॥೩೨॥

ಶುದ್ಧ ಕಲ್ಪನೇಚೀ ಖೂಣ। ಸ್ವಯೆ ಕಲ್ಪಿಜೆ ನಿರ್ಗುಣ।
ಸಸ್ವರೂಪೀ ವಿಸ್ಮರಣ। ಪಡೋ ಚಿ ನೆದೀ ॥೩೩॥

ಸದಾ ಸ್ವರೂಪಾನುಸಂಧಾನ। ಕರೀ ದ್ವೈತಾಚೇ ನಿರ್ಶನ।
ಅದ್ವಯನಿಶ್ಚಯಾಚೇ ಜ್ಞಾನ। ತೇ ಚಿ ಶುದ್ಧ ಕಲ್ಪನಾ ॥೩೪॥

ಅದ್ವೈತ ಕಲ್ಪೀ ತೇ ಶುದ್ಧ। ದ್ವೈತ ಕಲ್ಪೀ ತೇ ಅಶುದ್ಧ।
ಅಶುದ್ಧ ತೇ ಚಿ ಪ್ರಸಿದ್ಧ। ಸಬಳ ಜಾಣಾವೀ ॥೩೫॥

ಶುದ್ಧ ಕಲ್ಪನೇಚಾ ಅರ್ಥ। ಅದ್ವೈತಾಚಾ ನಿಶ್ಚಿತಾರ್ಥ।
ಆಣೀ ಸಬಳ ವೆರ್ಥ। ದ್ವೈತ ಕಲ್ಪೀ ॥೩೬॥

ಅದ್ವೈತ ಕಲ್ಪನಾ ಪ್ರಕಾಶೆ। ತೇಚಿ ಕ್ಷಣೀ ದ್ವೈತ ನಾಸೆ।
ದ್ವೈತಾಸರಿಸೀ ನಿರಸೆ। ಸಬಳ ಕಲ್ಪನಾ ॥೩೭॥

ಕಲ್ಪನೇನೆ ಕಲ್ಪನಾಸರೆ। ಏಸೀ ಜಾಣಾವೀ ಚತುರೇ।
ಸಬಳ ಗೇಲಿಯಾ ನಂತರೇ। ಶುದ್ಧ ಉರಲೀ ॥೩೮॥

ಹೇಗೆ ಸೂರ್ಯನ ಪ್ರಕಾಶದ ಮುಂದೆ ಕತ್ತಲೆಯು ನಿಲ್ಲಲಾರದೋ [ಇರಲಾರದೋ] ಇದರಂತೆ ನಿಜವಾದ ಶುದ್ಧ ಬ್ರಹ್ಮಸ್ವರೂಪ ಪ್ರಕಾಶದ ಮುಂದೆ ಖೊಟ್ಟಿ ಮಿಥ್ಯಾ ಕಲ್ಪನೆಯ ಆಟ ಗೂಢತ್ವ ನಿಲ್ಲುವದಿಲ್ಲ. (೨೯) ಸೂರ್ಯನ ಬೆಳಕಿನಿಂದ ಕತ್ತಲೆಯು ಇಲ್ಲದಾಗುತ್ತದೆ. ಇದರಂತೆ ಬ್ರಹ್ಮಜ್ಞಾನದ ಪ್ರಕಾಶದಿಂದ ಖೊಟ್ಟಿ ಕಲ್ಪನೆಯು ನಾಶ ಹೊಂದುವದು. ಕಲ್ಪನೆಯು ನಾಶಹೊಂದಿದ ಕೂಡಲೆ ದ್ವೈತದ ಅರಿವು (ತಿಳುವಳಿಕೆ) ಹಾಗೂ ಚಿಂತನ (ಧ್ಯಾಸ)ತನ್ನಷ್ಟಕ್ಕೆ ತಾನೇ ಇಲ್ಲದಾಗಿ ಹೋಗುವವು. (೩೦) ಜಾನುವಾರು(ದನಕರು)ಗಳ ಸಹಾಯದಿಂದ ಜಾನುವಾರುಗಳನ್ನು ಹಿಡಿಯುವಂತೆ, (ಉದಾ:- ಬೇಟೆಗಾರ ಹಸಿರು ಹುಲ್ಲಿನ ಜೊತೆಗೆ ಸಾಕಿದ ಚಿಗರೆಯನ್ನು ಬಲೆಯಲ್ಲಿಟ್ಟು ಅಡವಿಯ ಚಿಗರೆಗಳನ್ನು ಹಿಡಿಯುವಂತೆ ಅಥವಾ ಕುರಿಯನ್ನು ಕಟ್ಟಿ ಹುಲಿಯನ್ನು ಹಿಡಿಯುವಂತೆ) ಅಥವಾ ಆಕಾಶದಿಂದಬರುವ ಬಾಣವನ್ನು ಪ್ರತಿಯಾಗಿ ಬಾಣಬಿಟ್ಟು ಅದನ್ನು ಮುರಿಯುವಂತೆ ಇಲ್ಲಿಯೂ ಕಲ್ಪನೆಯಿಂದಲೇ ಕಲ್ಪನೆಯನ್ನು ಇಲ್ಲದಂತೆ ಮಾಡಬೇಕು. ಅಂದರೆ "ನಾನು ದೇಹ ಅಥವಾ ದೇಹಿ ಈ ಕಲ್ಪನೆಯನ್ನು ನಾನು ಬ್ರಹ್ಮ ಈ ಕಲ್ಪನೆಯಿಂದ ಇಲ್ಲದಂತೆ ಮಾಡಬೇಕು. (೩೧) ಕಲ್ಪನೆಯನ್ನು ಪರಿಶುದ್ಧ ಮಾಡಿದರೆ ಅದರ ಬಲದಿಂದ ಅಶುದ್ಧ ಕಲ್ಪನೆಯನ್ನು ಹೇಗೆ ನಾಶಗೊಳಿಸಲಿಕ್ಕೆ ಬರುವದೆಂಬುದರ ವರ್ಣನೆಯನ್ನು ಮಾಡುವರು:- ಕಲ್ಪನೆಯನ್ನು ಶುದ್ಧ ಮಾಡಿದರೆ ಆಗ ಅದರಲ್ಲಿ ದೊಡ್ಡ ಸಾಮರ್ಥ್ಯ ನಿರ್ಮಾಣವಾಗುವದು. ಇದರಿಂದ ಶಬಲ ಅಥವಾ ಅಶುದ್ಧ ಕಲ್ಪನೆಯನ್ನು ಇಲ್ಲದಂತೆ ಮಾಡಿ ಬಿಡಲಿಕ್ಕೆ ಬರುತ್ತದೆ. ನಾನು ಹೇಳುವದರ ಅರ್ಥವನ್ನು ಹೆಚ್ಚು ಸ್ಪಷ್ಟಗೊಳಿಸಿ ಈಗ ಪುನಃ ಹೇಳುವೆನು ಚಿತ್ತಗೊಟ್ಟು ಕೇಳಿರಿ. (೩೨) ಶುದ್ಧವಾದ ಕಲ್ಪನೆಯ ಗುರುತು ಹೇಗಿರುವದೆಂದರೆ ಅದು ಸ್ವತಃ ನಿರ್ಗುಣ ಸ್ವರೂಪದೊಳಗೆ ಸ್ಥಿರವಾಗಿ ಇರುವದು. ಸ್ವಸ್ವರೂಪದ ಆತ್ಮಸ್ವರೂಪದ ವಿಸ್ಮರಣವನ್ನು ಅದು ಯಾವಾಗಲೂ ಆಗಗೊಡುವದಿಲ್ಲ ಸ್ವಸ್ವರೂಪದಲ್ಲಿ ಅಖಂಡ, ಅಕ್ಷಯ, ಸದಾಕಾಲವೂ ಇರುವ ಅನುಸಂಧಾನ ಅಥವಾ ಸ್ಮರಣ, ಧ್ಯಾನ ಇವೇ ಶುದ್ಧ ಕಲ್ಪನೆಯ ಮುಖ್ಯ ಗುರುತುಗಳಾಗಿವೆಯೆಂದು ತಿಳಿಯಿರಿ. (೩೩) ಸದೈವ (ಯಾವಾಗಲೂ) ಸ್ವಸ್ವರೂಪದಲ್ಲಿ ಲೀನ, ದ್ವೈತಮಯ ದೃಶ್ಯದ ಸಂಪೂರ್ಣ ವಿಸ್ಮರಣ (ಮರೆವು) ಮತ್ತು ಅದ್ವಿತೀಯ ಬ್ರಹ್ಮದ ಸಾಕ್ಷಾತ್ ಜ್ಞಾನ ಈ ಮೂರು ಮಾತುಗಳು ಎಲ್ಲಿ ಕಾಣುವವೋ ಅಲ್ಲಿ ಶುದ್ಧ ಕಲ್ಪನೆ ಇರುವದೆಂದು ಖಾತ್ರಿಪೂರ್ವಕ ತಿಳಿಯಿರಿ. (೩೪) ಯಾವ ಕಲ್ಪನೆಯು ಅದ್ವೈತದಲ್ಲಿ ಲೀನವಾಗುವದೋ, ಏಕರೂಪವಾಗುವದೋ ರಮಿಸುವದೋ ಅದು ಶುದ್ಧ ಕಲ್ಪನೆಯೆಂದೂ, ಮತ್ತು ಯಾವುದು ದ್ವೈತದಲ್ಲಿ ಬೆರೆಯುವದೋ ರಮಿಸುವದೋ ಅದು ಅಶುದ್ಧ ಕಲ್ಪನೆಯೆಂದೂ ತಿಳಿಯಿರಿ. ಅಶುದ್ಧ ಕಲ್ಪನೆಗೇನೇ ಶಬಲ ಕಲ್ಪನೆಯೆಂದು ಅನ್ನುವರು. (೩೫) ಒಬ್ಬನೇ ಒಬ್ಬ ಬ್ರಹ್ಮನು ಸತ್ಯವಿರುವನೆಂದು ಖಾತ್ರಿ (ನಿಶ್ಚಯ) ಯಾಗುವದೇ ಶುದ್ಧ ಕಲ್ಪನೆಯ ಭಾವಾರ್ಥವಿರುವದು, ಶಬಲ ಕಲ್ಪನೆಯು ಮಾತ್ರ ಸುಮ್ಮನೆ ಯಾವಾಗಲೂ ದ್ವೈತದ ಕಲ್ಪನೆಯನ್ನು ಮಾಡುತ್ತಲಿರುವದು.(೩೬) ಅದ್ವೈತ ಕಲ್ಪನೆಯ ಪ್ರಕಾಶವು ಉದಯವಾಯಿತೆಂದಕೂಡಲೇ ತತ್‌ಕ್ಷಣದಲ್ಲಿ ದ್ವೈತವು ಹೋಗಿ ಬಿಡುತ್ತದೆ ನಾಶವಾಗಿ ಬಿಡುತ್ತದೆ. ದ್ವೈತನಾಶ ಹೊಂದಿದ ಕೂಡಲೇ ಅದರ ಸಂಗಡ ಶಬಲ ಕಲ್ಪನೆಯೂ ಸಹ ಇಲ್ಲದಾಗಿ ಬಿಡುವದು. (೩೭) ಶುದ್ಧ ಕಲ್ಪನೆಯಿಂದಲೇ ಅಶುದ್ಧ ಕಲ್ಪನೆಯನ್ನು ನಾಶಮಾಡಲಿಕ್ಕೆ ಬರುತ್ತದೆ ಎಂಬ ಈ ನಿಯಮವುಸತ್ಯವಾದುದು. ಈ ಮಾತನ್ನು ಚತುರ ಪುರುಷರುಯಾವಾಗಲೂ ಲಕ್ಷದಲ್ಲಿಡಬೇಕು. ಒಮ್ಮೆ ಅಶುದ್ಧ ಕಲ್ಪನೆ ನಾಶವಾಯಿತೆಂದರೆ ಆಮೇಲೆ ಕೇವಲಶುದ್ಧ ಕಲ್ಪನೆ ಮಾತ್ರ ಶಿಲ್ಲಕ ಉಳಿಯುವದು. (೩೮)

ಶುದ್ಧ ಕಲ್ಪನೇಚೇ ರೂಪ । ತೇ ಚಿ ಜೇ ಕಲ್ಪೀ ಸ್ವರೂಪ।
ಸ್ವರೂಪ ಕಲ್ಪಿತಾ ತದ್ರೂಪ । ಹೋಯೆ ಆಪಣ ॥೩೯॥

ಕಲ್ಪನೇಸೀ ಮಿಥ್ಯತ್ವ ಆಲೇ । ಸಹಜಚಿ ತದ್ರೂಪ ಜಾಲೇ ।
ಆತ್ಮನಿಶ್ಚಯೇ ನಾಸಿಲೇ । ಕಲ್ಪನೇಸೀ ॥೪೦॥

ಜೇ ಚಿ ಕ್ಷಣೀ ನಿಶ್ಚಯೇ ಚಳೇ । ತೇ ಚಿ ಕ್ಷಣೀ ದ್ವೈತ ಉಫಾಳೇ ।
ಜೈಸಾ ಅಸ್ತಮಾನೀ ಪ್ರಬಳೇ । ಅಂಧಕಾರ ॥೪೧॥

ತೈಸೇ ಜ್ಞಾನ ಹೋತಾ ಮಳಿಣ । ಅಜ್ಞಾನ ಪ್ರಬಳೇ ಜಾಣ ।
ಯಾಕಾರಣೇ ಶ್ರವಣ । ಅಖಂಡ ಅಸಾವೇ ॥೪೨॥

ಆತಾ ಅಸೋ ಹೇ ಬೋಲಣೇ ಜಾಲೇ । ಆಶಂಕಾ ಫೇಡೂ ಯೇಕಾ ಬೋಲೇ ।
ಜಯಾಸ ದ್ವೈತ ಭಾಸಲೇ । ತೇ ತೂ ನವ್ಹೇಸೀ ಸರ್ವಥಾ ॥೪೩॥

ಮಾಗೀಲ ಆಶಂಕಾ ಫಿಟಲೀ । ಇತುಕೇನ ಹೇ ಕಥಾ ಸಂಪಲೀ ।
ಪುಢೇ ವೃತ್ತಿ ಸಾವಧ ಕೇಲೀ । ಪಾಹಿಜೇ ಶ್ರೋತೀ ॥೪೪॥

ಇತಿ ಶ್ರೀ ದಾಸಬೋಧೇ ಗುರುಶಿಷ್ಯ ಸಂವಾದೇ
''ದ್ವೈತ ಕಲ್ಪನಾ ನಿರ್ಶನ'' ನಾಮ ಸಮಾಸ ಪಂಚಮ ॥

● ●

ಶುದ್ಧ ಕಲ್ಪನೆಯು ಯಾವುದರ ಕಲ್ಪನೆಯನ್ನು ಮಾಡುವದೋಅದು ತನ್ನ ಸ್ವಸ್ವರೂಪವೇ ಆಗಿರುವದು. (ಅಂದರೆ ನಮ್ಮ ಸ್ವರೂಪವೇ ಇರುವದು)ಈ ಸ್ವರೂಪದ ಕಲ್ಪನೆ ಮಾಡಲಿಕ್ಕೆ ಹತ್ತಿದ ಕೂಡಲೇ ಇದು(ಕಲ್ಪನೆಯು) ಸ್ವರೂಪವನೊಂದಿಗೆ ತದ್ರೂಪವಾಗಿ ಬಿಡುವದು. ಸ್ವಸ್ವರೂಪದ ಅನುಸಂಧಾನ (ಧ್ಯಾನ) ಇದು ಶುದ್ಧ ಕಲ್ಪನೆಯ ಗುರುತಾಗಿರುವದು. ಇದರಲ್ಲಿ ಕಲ್ಪನೆ ಮಾಡುವವನೇ ಸ್ವರೂಪದೊಂದಿಗೆ ಸಮರಸವಾಗಿ ಹೋಗುವನು. [೩೯] ಅಶುದ್ಧವೆಂದರೆ ದೃಶ್ಯದ ಕಲ್ಪನೆ ಇದು ಖೊಟ್ಟಿ ಇರುವದು ಅನ್ನುವ ಈ ಮಾತನ್ನು ನಿಜವಾದ ಮನ ಒಪ್ಪಿತೆಂದರೆ ಸ್ವಸ್ವರೂಪದೊಂದಿಗೆ ತನ್ನಿಂದ ತಾನೇ ತದ್ರೂಪವಾಗಲು ಬರುತ್ತದೆ. ತದ್ರೂಪವಾಗಿ ಆತ್ಮಸಾಕ್ಷಾತ್ಕಾರವಾದ ಕೂಡಲೇ ಒಂದೇ ಒಂದು ಆತ್ಮಸ್ವರೂಪದ ಹೊರತು ಇನ್ನಿತರ ಸತ್ಯವಿಲ್ಲ. ಹೀಗೆ ನಿಶ್ಚಯವಾಗುವದು. ಇದರಿಂದ ಶಬಲ ಕಲ್ಪನೆಗಳೆಲ್ಲ ಸಂಪೂರ್ಣ ನಾಶ ಹೊಂದುವವು. (೪೦) ಯಾವ ಕ್ಷಣವಲ್ಲಿ ತದ್ರೂಪಕ್ಕೆ [ಏಕರೂಪಕ್ಕೆ-ಏಕಾಗ್ರತೆಗೆ] ಆಘಾತ, ಅಪಾಯ, ತೊಂದರೆ ಉಂಟಾಗಿ ಆತ್ಮನಿಶ್ಚಯ ಢಳಮಳಿಸುವದೋ ಅದೇ ಕ್ಷಣಕ್ಕೆ ದ್ವೈತದ ದೃಶ್ಯ ಪ್ರಬಲಗೊಂಡು, ಉಕ್ಕೇರಿ ಮೇಲೆ ಬರುವದು. ಹೇಗೆಂದರೆ ಸೂರ್ಯ ಅಸ್ತನಾಗಲು ಹೊರಟನೆಂದರೆ ಕತ್ತಲೆಯು ಬಲವಂತವಾಗಿ ಸುತ್ತೂ ಕಡೆಯಿಂದ ಪಸರಿಸುವದು. ಇದರಂತೆ ದೃಶ್ಯವು ಪ್ರಬಲಗೊಂಡು ಮೇಲೆ ಬರುವದು(೪೧) ಇದರಂತೆಯೇ ಆತ್ಮಜ್ಞಾನ ಮಲಿನಗೊಂಡ ಕೂಡಲೇ ಅಜ್ಞಾನದ ಜೋರು (ತೀವ್ರತೆ) ಹೆಚ್ಚಾಗುವದು. ಇದನ್ನು ತಪ್ಪಿಸುವದಕ್ಕಾಗಿ ಅಖಂಡವಾಗಿ ಅಧ್ಯಾತ್ಮದ ಶ್ರವಣ ಮಾಡುತ್ತಲೇ ಇರಬೇಕು.(೪೨) ಈಗ ಇಲ್ಲಿಗೆ ಈ ಮಾತನ್ನು ಮುಗಿಸುವೆವು. ಇದಕ್ಕೂ ಮೊದಲು ಒಂದೇ ವಾಕ್ಯದಿಂದ ನಿಮ್ಮ ಸಂಶಯ (ಶಂಕೆ) ನಿವಾರಿಸುವೆವು· ಲಕ್ಷ್ಯ ಕೊಡಿರಿ. ಈ ಯಾವ ಕಲ್ಪನಾರೂಪದ ಮನಸ್ಸಿಗೆ ಈ ದ್ವೈತಮಯ ದೃಶ್ಯ ರೂಪವು ಅನುಭವಕ್ಕೆ ಬರುವದೋ ಆ ಮನವು ನಿನ್ನ ಖರೇ ಸ್ವರೂಪ ಅಲ್ಲವೇ ಅಲ್ಲ. ನಿಜವಾಗಿರುವ ನೀನು ಅದರ ಆಚೆಗೆ (ಅದನ್ನು ದಾಟಿ) ಇರುವವನಾಗಿರುವೆ, ಎಂಬುದನ್ನು ಗಟ್ಟಿಯಾಗಿ ತಿಳಿಯುವವನಾಗು. (೪೩) ಹಿಂದಿನ ಎಲ್ಲ ಸಂಶಯಗಳೂ ನಿವಾರಣೆಯಾದವು. ಆದ್ದರಿಂದ ಈ ವಿಷಯ ಇಲ್ಲಿಗೆ ಮುಗಿಯಿತು. ಮುಂದಿನ ವಿಷಯ ಕೇಳುವದಕ್ಕಾಗಿ ಶ್ರೋತಾನು ಮನಸ್ಸನ್ನು ಏಕಾಗ್ರಗೊಳಿಸಿ ಕೇಳುವವನಾಗಬೇಕು. (೪೪)

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದ ಏಳನೆಯ ದಶಕದೊಳಗಿನ
“ದ್ವೈತ ಕಲ್ಪನಾ ನಿರಸನ” ನಾಮವೆಂಬ ೫ನೆಯ ಸಮಾಸವು ಮುಗಿಯಿತು.

• •

ಸಮಾಸ ಷಷ್ಠ : ಬದ್ಧಮುಕ್ತ ನಿರೂಪಣ

॥ಶ್ರೀರಾಮ॥ ಅದ್ವೈತ ಬ್ರಹ್ಮ ನಿರೋಪಿಲೇ । ಜೇ ಕಲ್ಪನೇರಹಿತ ಸಂಚಲೇ ।
ಕ್ಷಣ ಯೇಕ ತದಾಕಾರ ಕೇಲೇ । ಮಜ ಯಾ ನಿರೂಪಣೇ ॥೧॥
ಪರೀ ಮ್ಯಾ ತದಾಕಾರ ವ್ಹಾವೇ । ಬ್ರಹ್ಮಚಿ ಹೋಊನ ಅಸಾವೇ ।
ಪುನ್ಹಾ ಸಂಸಾರಾಸ ನ ಯಾವೇ । ಚಂಚಳ ಪಣೇ ಸರ್ವಥಾ ॥೨॥

## ದಶಕ ೭. ಸಮಾಸ ೬. ಬದ್ಧ ಮುಕ್ತ ನಿರೂಪಣ (ನುಡಿ ೬೫)

ಈ ಸಮಾಸದಲ್ಲಿ ಶ್ರೋತಾ ಗುರುಗಳಿಗೆ ಬಹಳ ಮಹತ್ವದ ಪ್ರಶ್ನೆ ಕೇಳಿದ್ದಾನೆ. ಸದ್ಗುರು ಸಮರ್ಥ ಸ್ವಾಮಿಯೆ! ತಮ್ಮ ಅಧ್ಯಾತ್ಮ ನಿರೂಪಣ ಕೇಳುತ್ತಿರುವಾಗ ಮನವು ಬ್ರಹ್ಮಾಕಾರವಾಗುವದು. ಆದರೆ ನಿತ್ಯದ ವ್ಯವಹಾರ ಮಾಡಹತ್ತಿದ ನಂತರ ಅದೇ ಮನವು ಒಮ್ಮೆಲೇ ಕೆಳಗಿನ ಮಟ್ಟಕ್ಕೆ ಬರುತ್ತದೆ. ಮತ್ತು ನಿರೂಪಣದಲ್ಲಿ ನಾನು ಏನು ಕೇಳಿದೆನೆಂಬುದು ಸಂಪೂರ್ಣ ಮರೆತು ಹೋಗುವದು. ಇರಲಿ ಇನ್ನೊಂದು ಪ್ರಶ್ನೆಯಂದರೆ:- ವ್ಯವಹಾರ ಬಿಟ್ಟರೆ ಏನೂ ನಡೆಯುವಂತಿಲ್ಲ. ಒಟ್ಟಿನಲ್ಲಿ ಇದರ ಪರಿಣಾಮವೇನಾಗುವದೆಂದರೆ (ನನ್ನ ತಿಳುವಳಿಕೆಯ ಪ್ರಕಾರ) ಪರಮಾರ್ಥದ (ನಾದದಿಂದ) ಹವ್ಯಾಸಕ್ಕೆ ಬಿದ್ದು ಪ್ರಪಂಚ ಸರಿಯಾಗಿ ನಡೆಯುವದಿಲ್ಲ. ಮತ್ತು ಪ್ರಪಂಚ ದೊಳಗಿದ್ದ ಮನಸ್ಸು ಹೊರಬಿದ್ದು ಹೋಗದ್ದರಿಂದ ಇತ್ತ ಪರಮಾರ್ಥವೂ ಸಾಧಿಸದಾಗಿದೆ. ಇದಕ್ಕೆ ಏನುಮಾಡಬೇಕು? ನನಗಷ್ಟೇ ಅಲ್ಲ, ಪರಮಾರ್ಥ ಮಾಡುವದಕ್ಕೆ ಆರಂಭ ಮಾಡಿದಂಥ, ಮಾಡುವಂಥ ಎಲ್ಲ ಸಾಧಕರಿಗೂ ಈ ಅಡಚಣೆಯು-ತ್ರಾಸು ಕೊಡುವದು. ಸತ್ಸಂಗದಿಂದ ಹಾಗೂ ಸದ್ಗುರುವಿನ ಮುಖದಿಂದ ಶ್ರವಣ ಮಾಡಿದಾಗ ಮಾತ್ರ ಸ್ವಸ್ವರೂಪದ ಖರೇ ಆಕರ್ಷಣದ ಒಲವು ಉಂಟಾಗುವದು. ಆದರೆ ಪ್ರಪಂಚದ ಮೇಲಿನ ಪ್ರೇಮ ಹೋಗದ್ದರಿಂದ ಪ್ರಾಪಂಚಿಕ ವ್ಯವಹಾರ ಮಾಡಹತ್ತಿದ ಕೂಡಲೇ ಅದರಲ್ಲಿ ಮನಸ್ಸು ಒಮ್ಮೆಲೇ ರಮಿಸಿ ಹೋಗುವದು" ಶ್ರೀ ಸಮರ್ಥರು ಈ ಪ್ರಶ್ನೆಗೆ ಸರಿಯಾದ ಉತ್ತರವನ್ನು ಕೊಟ್ಟಿರುವರು. ಅವರು ಕೊಟ್ಟ ಉತ್ತರದ ಭಾವಾರ್ಥ ಹೀಗಿರುವದು:- ಪ್ರಪಂಚ ಮತ್ತು ಪರಮಾರ್ಥ ಅಥವಾ ಬದ್ಧ ಮತ್ತು ಮುಕ್ತ ಇವು ದೇಹದ ಪರಿಸ್ಥಿತಿಗೆ ಸಂಬಂಧಿಸಿದವಲ್ಲ, ಎಂಬುದನ್ನು ಮೊದಲಿಗೆ ನಿಮ್ಮ ಧ್ಯಾನ (ಲಕ್ಷ್ಯ)ದಲ್ಲಿ ಇಟ್ಟುಕೊಳ್ಳಿರಿ. ಬದ್ಧತನ ಅಥವಾ ಮುಕ್ತತನ ಇವು ಜೀವದ ಅವಸ್ಥೆಗಳಿರುವವು. ಇವು ಅಂತರ್ಯಾಮದಲ್ಲಿ ಅನುಭವಿಸುವಂಥವು ಗಳಿರುವವು. ಆದರೆ ದೊಡ್ಡ ಸತ್ಪುರುಷನೇ ಇದ್ದರೂ ಸಹ ಅವನಿಗೆ ದೇಹದಿಂದಲೇ ಜಗತ್ತಿನಲ್ಲಿ ಇರಬೇಕಾಗುವದು. ತಿರುಗಾಡಬೇಕಾಗುವದು.ಯಾವ ಜಗತ್ತಿನಲ್ಲಿ ಬದ್ಧನು ಬದ್ಧತನದಿಂದ ಇರುವನೋ ಅದೇಜಗತ್ತಿನಲ್ಲಿ ಮುಕ್ತನುಮುಕ್ತ ತನಕ್ಕೆ ಬಾಧೆ ಬರದಂತೆ ಇರುವನು.ಜಗತ್ತಿನಲ್ಲಿ ಇರುವದರಿಂದ,ತಿರುಗಾಡುವದರಿಂದ ಮುಕ್ತಾವಸ್ಥೆಯು ಭ್ರಷ್ಟವಾಗುವ ದಿಲ್ಲ.ಜಗತ್ತಿನೊಳಗೆ ಆಸಕ್ತವಾದರೆ ಮಾತ್ರ ಭ್ರಷ್ಟವಾಗುವದು.ಬದ್ಧನಿಗೆ ದೇಹಬುದ್ಧಿಯ ಬಲದಿಂದಾಗಿ ಸ್ವಸ್ವರೂಪದ ಸ್ಪರ್ಶವಿರುವದಿಲ್ಲ. ಆದರೆ ಮುಕ್ತನಿಗೆ ಆತ್ಮಬುದ್ಧಿಯ ಬಲದಿಂದಾಗಿ ದೃಶ್ಯವಿಶ್ವದ ಸ್ಪರ್ಶವಿರುವದಿಲ್ಲ. ದೃಶ್ಯವಿಶ್ವನೇ ಸಂಪೂರ್ಣ ಸತ್ಯವೆಂದು ನಂಬಿರುವ ಬದ್ಧನ ಮನವು "ನಾನು" ಎಂಬ ಅಹಂದಿಂದ ಇರುತ್ತದೆ. ವ್ಯವಹರಿಸುತ್ತದೆ. ಆದರೆ ಆತ್ಮಸ್ವರೂಪ ಬ್ರಹ್ಮವು ಇದೇ ಸಂಪೂರ್ಣ ಸತ್ಯವಾದದ್ದೆಂದು ನಂಬಿರುವ ಮುಕ್ತನ ಮನವು ಉನ್ಮನ ಹೊಂದಿ ವ್ಯವಹರಿಸುತ್ತದೆ. ವಾಸ್ತವಿಕ ಸಂಗತಿ ಎಂದರೆ ಶುದ್ಧ ಬ್ರಹ್ಮಸ್ವರೂಪದಲ್ಲಿ ದೇಹಬುದ್ಧಿ ಇರುವದಿಲ್ಲ. ಇದರಂತೆ ಆತ್ಮಬುದ್ಧಿಯೂ ಸಹ ಇರುವದಿಲ್ಲ. ಯಾಕೆಂದರೆ ಇದು ಸ್ವತಃ ಸಿದ್ಧವೇ, ಶುದ್ಧ ಸ್ವರೂಪವೇ ಇರುವ ದರಿಂದ ಇದಕ್ಕೆ (ಬ್ರಹ್ಮ ಸ್ವರೂಪಕ್ಕೆ) ಬದ್ಧತನವಿಲ್ಲ. ಮತ್ತು ಮುಕ್ತತನವೂ ಇಲ್ಲ. ಇವೆಲ್ಲ ಮಾನವನ ದೃಷ್ಟಿ ಕೋನದಿಂದ ನಿರ್ಮಾಣಗೊಂಡ ಭೇದಗಳಾಗಿವೆ. ನಮಗೆ ದೃಶ್ಯದ ಮಾಯಾ ತಿಳಿಯದಕೊಳ್ಳದೆ, ದೃಶ್ಯದ ನೆಲೆ ತಿಳಿದು ಕೊಳ್ಳದೆ ವಿಚಾರ ಮಾಡಲಿಕ್ಕೆ ಬರುವದಿಲ್ಲ. ಅಂತೂ ಬದ್ಧ ಮತ್ತು ಮುಕ್ತ ಈ ಅವಸ್ಥೆಯ ಬಗೆಗೆ ನಾವು ದೇಹದ ದೃಷ್ಟಿಯಿಂದ ಮಾತ್ರ ವಿಚಾರ ಮಾಡುವೆವು. ಇದು ಸರಿಯಲ್ಲ-ತಪ್ಪಾಗಿದೆ.

### ದಶಕ ೭. ಸಮಾಸ ೬. ಬದ್ಧ ಮುಕ್ತ ನಿರೂಪಣ (ನುಡಿ ೬೫)

ಶ್ರೋತಾ ಮೊದಲೇ ಕೇಳಿದ(ವಿಚಾರಿಸಿದ)ಸಂಶಯ (ಶಂಕೆ)ಗಳನ್ನು ಈಗ ಸವಿಸ್ತಾರವಾಗಿ ಮಂಡಿಸುತ್ತಾನೆ- ಶ್ರೋತಾ ಅನ್ನುತ್ತಾನೆ.ಕಲ್ಪನೆಗೆ ಸ್ಥಳವೇ ಇಲ್ಲದ, ಎಲ್ಲ ಸ್ಥಳಗಳಲ್ಲಿಯೂ ತುಂಬಿಕೊಂಡಿರುವ ಅದ್ವೈತ ಬ್ರಹ್ಮದ ಬಗೆಗೆ ತಾವು ವರ್ಣನೆಯನ್ನು ಮಾಡಿದಿರಿ. ತಾವು ಮಾಡಿದ ವರ್ಣನೆಯನ್ನು ಕೇಳಿದ ಕೂಡಲೇ ಒಂದು ಕ್ಷಣ ಹೊತ್ತು ಆ ಬ್ರಹ್ಮದೊಂದಿಗೆ ನಾನು ತದಾಕಾರನಾಗಿ ಹೋದೆನು. (೧) ಈಗ ನನಗೆ ಅನಿಸುವದೇನೆಂದರೆ ನಾನು ಬ್ರಹ್ಮನೊಂದಿಗೆ ತದಾಕಾರ ಹೊಂದಿಯೇ ಸದಾ ಇರಬೇಕು, ನಾನು ಬ್ರಹ್ಮವೇ ಆಗಿರಬೇಕು, ವೃತ್ತಿ ಚಂಚಲವಾಗಿ ಪುನಃ ಎಂದಿಗೂ ಸಂಸಾರದ ತೊಳಲಾಟಕ್ಕೆ ಬರಬಾರದು. (೨)

ಕಲ್ಪನಾರಹಿತ ಜೇ ಸುಖ । ತೇಥೇ ನಾಹೀ ಸಂಸಾರ ದುಃಖ ।
ಮ್ಹಣೋನಿ ತೇ ಚಿ ಯೇಕ । ಹೊಊನ ಅಸಾವೇ ॥೩॥

ಬ್ರಹ್ಮ ಚಿ ಹೊಈಜೆ ಶ್ರವಣೇ । ಪುನ್ಹಾ ವೃತ್ತೀವರೀಲಾಗೆ ಯೇಣೇ ।
ಐಸೇ ಸದಾ ಯೇಣೇ ಜಾಣೇ । ಚುಕೇನಾ ಕೀ ॥೪॥

ಮನೇ ಅಂತರಿಕ್ಷ ಜಾವೇ । ಕ್ಷಣಯೇಕ ಬ್ರಹ್ಮ ಚಿ ವ್ಹಾವೇ ।
ಪುನ್ಹಾ ತೇಥೂನ ಕೋಸಳಾವೇ । ವೃತ್ತೀವರೀ ಮಾಗುತೇ ॥೫॥

ಪ್ರತ್ಯಾವೃತ್ತೀ ಸೈರಾವೈರಾ । ಕಿತೀ ಕರೂ ಯೇರಝಾರಾ ।
ಪಾಈ ಲಾಊನಿಯಾ ದೋರಾ । ಕೀಟಕ ಜೈಸಾ ॥೬॥

ಉಪದೇಶಕಾಳೀ ತದಾಕಾರ । ಹೋತಾ ಪಡೆ ಹೇ ಶರೀರ ।
ಅಥವಾ ನೇಣೆ ಆಪಪರ । ಐಸೇ ಜಾಲೇ ಪಾಹಿಜೆ ॥೭॥

ಐಸೇ ನಸ್ತಾ ಜೇ ಬೋಲಣೇ । ತೇ ಚಿ ವಾಟೇ ಲಾಜಿರವಾಣೇ ।
ಬ್ರಹ್ಮ ಹೋಊನ ಸಂಸಾರ ಕರಣೇ । ಹೇ ಹಿ ವಿಪರೀತ ದಿಸೆ ॥೮॥

ಜೊ ಸ್ವಯೇ ಬ್ರಹ್ಮ ಚಿ ಜಾಲಾ । ತೋ ಮಾಗುತಾ ಕೈಸಾ ಆಲಾ ।
ಐಸೇ ಜ್ಞಾನ ಮಾರ್ಗೋ ಮಜಲಾ । ಪ್ರಶಸ್ತ ನ ವಟೆ ॥೯॥

ಬ್ರಹ್ಮ ಚಿ ಹೋಊನ ಜಾವೇ । ಕಾ ತೇ ಸಂಸಾರೀ ಚ ಅಸಾವೇ ।
ದೋಹೀ ಕಡೆ ಭರಂಗಳಾವೇ । ಕಿತೀ ಮ್ಹಣೂನೀ ॥೧೦॥

ನಿರೂಪಣೇ ಜ್ಞಾನ ಪ್ರಬಳೆ । ಉಠೋನ ಜಾತಾ ತೇ ಮಾವಳೆ ।
ಮಾಗುತಾ ಕಾಮಕ್ರೋಧ ಖವಳೆ । ಬ್ರಹ್ಮರೂಪಾಸೀ ॥೧೧॥

ಐಸಾ ಕೈಸಾ ಬ್ರಹ್ಮ ಜಾಲಾ । ದೋಹೀಕಡೆ ಅಂತರಲಾ ।
ವೊಡಗಸ್ತಪಣೇ ಚಿ ಗೇಲಾ । ಸಂಸಾರ ತ್ಯಾಚಾ ॥೧೨॥

ಘೇತಾ ಬ್ರಹ್ಮಸುಖಾಚೀ ಗೋಡೀ । ಸಂಸಾರಿಕ ಮಾಗೇ ವೋಡೀ ।
ಸಂಸಾರ ಕರಿತಾ ಆವಡೀ । ಬ್ರಹ್ಮೀ ಉಪಜೆ ಮಾಗುತೀ ॥೧೩॥

ವೃತ್ತಿ ಕಲ್ಪನಾರಹಿತವಾದ ನಂತರ ಯಾವ ಶ್ರೇಷ್ಠ ಪರಮಾನಂದ ಸುಖ ಸಿಗುವದೋ ಅದರಲ್ಲಿ ಸಂಸಾರದ ದುಃಖಕ್ಕೆ ಎಡೆಯೇ ಇರುವದಿಲ್ಲವಾದ್ದರಿಂದ ಆ ಪರಮ ಸುಖದಲ್ಲಿಯೇ ಕಾಯಂ ಇರಬೇಕೆಂದು ಅನಿಸುತ್ತದೆ. (೩) ಆದರೆಪ್ರತ್ಯಕ್ಷದಲ್ಲಿಕಂಡುಬಂದಿರುವ ಅನುಭವವು ಅಧ್ಯಾತ್ಮ ವಿಷಯದ ಶ್ರವಣದಿಂದ ಮನವು ಬ್ರಹ್ಮಾಕಾರವಾಗುವದು.ಅನಂತರ ಮತ್ತೆ ಅದೇ ಮನವು ಪುನಃ ದೇಹಬುದ್ಧಿಯ ವೃತ್ತಿಯ ಮೇಲೆ ಬರುವದು.ಇಂಥ ಪ್ರಕಾರದ ಎಡತಾಕಪಟ್ಟಿಯು ಒಂದೇ ಸವನೆ ನಡೆಯುವದು ಇದು ತಪ್ಪಲೊಲ್ಲದು. (೪) ಶ್ರವಣದಿಂದ ಅಂದರೆ ಅಧ್ಯಾತ್ಮ ವಿಷಯದ ವಿವರಣೆ ಕೇಳಿ ಮನವು ಅಂತರಾಕಾಶದಲ್ಲಿ ವಿಹಾರ ಮಾಡುವದು. ಮತ್ತೆ ಒಂದು ಕ್ಷಣ ಬ್ರಹ್ಮರೂಪವಾಗಿ ಹೋಗುವದು. ಆದರೆ ಅದು ಅಲ್ಲಿ ಕಾಯಂ ಸ್ಥಿರ ಆಗಿ ಇರುವದಿಲ್ಲ.(ಉಳಿಯುವದಿಲ್ಲ) ಅಲ್ಲಿಂದ ಅದು ಪುನಃ ಕೆಳಗಿನ ವೃತ್ತಿಯ ಮೇಲೆ ಕುಪ್ಪಳಿಸುವದು. ನಿವೃತ್ತಿ ಅವಸ್ಥೆಯಲ್ಲಿಂದ ವೃತ್ತಿಮಯ (ಸಂಸಾರಮಯ) ಅವಸ್ಥೆಗೆ ಇಳಿದು ಬರುವದು. (೫) ಇದು ಹೀಗೆ ಮೇಲೆ ಹೋಗುವದು ಹಾಗೂ ಪುನಃ ಕೆಳಗೆ ಸರಿಯುವ ಸ್ವಚ್ಛಂದ ವೃತ್ತಿಯು ಅತ್ತಿತ್ತ ಸುತ್ತಾಡುವ ಎಡತಾಕಪಟ್ಟಿಯು ಬಹಳವಾಯಿತು. ಇದನ್ನು ಹೆಚ್ಚಿಸುವ ಇಚ್ಛೆ ಇಲ್ಲ. ಯಾವುದಾದರೊಂದು ಹುಳ (ಬೋರಂಗಿ, ಪಾತರಗಿತ್ತಿ, ಇತ್ಯಾದಿ)ದ ಕಾಲಿಗೆ ದಾರ ಕಟ್ಟಿ ಅದನ್ನು ಮೇಲಕ್ಕೆ ಹಾರಿಬಿಡುವದು, ಪುನಃ ದಾರವನ್ನು ಎಳೆದು ಕೆಳಗೆ ತರುವದು ಅಥವಾ ದಾರವನ್ನು ಕೆಳಗೂ ಮೇಲೂ ತಿರುಗಿಸುವದು ಹೀಗೆ ನನ್ನ ಅವಸ್ಥೆ ಆಗಿರುವದು. (೬) ಉಪದೇಶಾಮೃತ ಕೇಳುತ್ತಿರುವಾಗ ಮನವು ಬ್ರಹ್ಮಾಕಾರ ವಾಗುವದು. ಈ ಅವಸ್ಥೆಯಲ್ಲಿಯೇ ಈ ನನ್ನ ದೇಹ ಬಿದ್ದು ಹೋದರೆ (ಸತ್ತರೆ) ಬಹಳ ಒಳ್ಳೆಯದಾಗುವದು. ಅಥವಾ ದೇಹ ಬೀಳದೆ ಇದ್ದದ್ದಾದರೆ ನನ್ನದು–ನಿನ್ನದು ಎಂಬ ಭೇದ ಭಾವವು ಮನದೊಳಗಿಂದ ಅಳಿದು ಹೋಗಿ ಬಿಟ್ಟರೆ ಅಥವಾ ನಾಶವಾಗಿ ಬಿಟ್ಟರೆ ಬಹಳ ಒಳಿತಾಗುವದು. (೭) ಇಂಥ ಸಮಾಧಾನದ ಅವಸ್ಥೆ ಬರುವವರೆಗೆ ಬ್ರಹ್ಮಜ್ಞಾನದ ಮಾತು ಮಾತಾಡಲು ನನಗೆ ನಾಚಿಕೆಯಾಗುತ್ತದೆ. ಬ್ರಹ್ಮಸ್ವರೂಪ ಆದ ಮೇಲೆ ಪುನಃ ಸಂಸಾರದಲ್ಲಿ ತೊಡಗುವದು. ಅದರಲ್ಲಿ ಮುಳಗುವದು ಮತ್ತು ಸಾಮಾನ್ಯ ವ್ಯವಹಾರ ಮಾಡುವದೂ ಸಹ ವಿಪರೀತವೆನಿಸುವದು. (೮) ಯಾರು ಸ್ವತಃ ಬ್ರಹ್ಮ ಸ್ವರೂಪರಾಗುವರೋ ಅವರು ಪುನಃ ದೇಹಬುದ್ಧಿಯ ಕಡೆಗೆ ಹೇಗೆ ತಿರುಗಿ ಬರುವರು? ಬ್ರಹ್ಮಜ್ಞಾನಿಯಾದ ಪುರುಷನು. ಒಂದು ವೇಳೆ ಹಿಂತಿರುಗಿ ದೇಹ ಬುದ್ಧಿಯ ಕಡೆಗೆ ಬಂದರೆ ಅವನ ಆ ಬ್ರಹ್ಮಜ್ಞಾನ ವುಪಕ್ಕಾ ಬ್ರಹ್ಮಜ್ಞಾನವಲ್ಲವೆಂದು ನನಗೆ ಅನಿಸುವದು. (೯) ನನ್ನ ಸ್ಪಷ್ಟ ಅಭಿಪ್ರಾಯವೆಂದರೆ ಒಂದು ಬ್ರಹ್ಮಸ್ವರೂಪವಾದರೂ ಆಗಿರಬೇಕು. ಇಲ್ಲವೆ ಒಂದು ಸಂಸಾರದಲ್ಲಿ ಸಂಸಾರಿಯಾಗಿಯಾದರೂ ಇರಬೇಕು. ಎರಡೂ ಕಡೆಯ ಅಡಬಡದಿಂಗಿಯಂತೆ ಹೋಗು ಹಾಗೂ ಬಾ, ಇದು ನಿಲ್ಲುವದೇ ಒಳಿತು. (೧೦) ಬ್ರಹ್ಮ ವಿವೇಚನೆ ಪ್ರಾರಂಭವಿದ್ದಾಗ ಬ್ರಹ್ಮಜ್ಞಾನದ್ದೇ ಜೋರು ಇರುವದು. ಇದರಿಂದ ವೃತ್ತಿ ತದಾಕಾರವಾಗಿ ಹೋಗುವದು. ಅದೇ ನಿರೂಪಣ (ವಿವೇಚನೆ) ಮುಗಿದು ಅಲ್ಲಿಂದ ಎದ್ದು ಬಂದ ಕೂಡಲೇ ಆಗ ಆ ಜ್ಞಾನವು ಮರೆಯಾಗಿ ಬಿಡುವದು. ನಿರೂಪಣದಲ್ಲಿ ನಿರೂಪಣ ಕೇಳುವ ನಾನು ಬ್ರಹ್ಮರೂಪವಾಗಿ ಬಿಡುತ್ತೇನೆ. ಅದೇ "ನಾನು" ಎನ್ನುವವನಲ್ಲಿ ಕಾಮ ಕ್ರೋಧಾದಿಗಳು ಮುತ್ತುವವು.ಗೊಂದಲ ಹಾಕುವವು. (೧೧) ಅಂದ ಮೇಲೆ ನನಗನಿಸುವದೇನಂದರೆ, "ಇದು ಎಂಥ ಬ್ರಹ್ಮರೂಪವಾಗುವಿಕೆ" ಕೊನೆಗೆ ಜ್ಞಾನವು ಅದೃಶ್ಯವಾಯಿತೆಂದರೆ ಬ್ರಹ್ಮ ಕೈಬಿಟ್ಟು ಹೋಗುವದು. ಮತ್ತು ಪರಮಾರ್ಥದ ಹೆಸರಿನ ಕೆಳಗೆ ಸಂಸಾರವೂ ಸಹ ಕೈ ಬಿಟ್ಟು ಹೋಗುವದು.ಒಟ್ಟಿನಲ್ಲಿ ಇದರ ಬೆನ್ನು ಹತ್ತಿದ ಮನುಷ್ಯನು ಎರಡಕ್ಕೂ ಎರವಾಗುವನು (ಪೋರತಾಗುವನು) ಈ ಜಗ್ಗಾಟದಲ್ಲಿ ಮನುಷ್ಯನು ಸಂಸಾರಗೇಡಿಯಾಗಿ ಕೂಡುವನು. (೧೨) ಬ್ರಹ್ಮ ಸುಖದ ರುಚಿ ಪಡೆಯುವ ಪ್ರಯತ್ನ ಮಾಡ ಹತ್ತಿದರೆ ಸಂಸಾರ ಸುಖವು ನಮ್ಮನ್ನು ಹಿಂದಕ್ಕೆ ಜಗ್ಗುವದು. ಇನ್ನು ಸಂಸಾರವನ್ನೇ ಮಾಡಬೇಕೆಂದು ಅದರಲ್ಲಿ ಮನಸ್ಸು ಹಾಕಿದ್ದಾದರೆ ಬ್ರಹ್ಮ ಸುಖದ ರುಚಿ ಮನಸ್ಸನ್ನು ಪುನಃ ತನ್ನ ಕಡೆಗೆ ಜಗ್ಗುವದು. (೧೩)

ಬ್ರಹ್ಮಸುಖ ನೇಲೇ ಸಂಸಾರೇ। ಸಂಸಾರ ಗೇಲಾ ಜ್ಞಾನದ್ವಾರೇ।
ದೋನೀ ಅಪುರೀ ಪುರೇ। ಯೇಕ ಹೀ ನಾಹೀ ॥೧೪॥

ಯಾಕಾರಣೇ ಮಾಝೇ ಚಿತ್ತ। ಚಂಚಳ ಜಾಲೇ ದುಶ್ಚಿತ।
ಕಾಯೇ ಕರಣೇ ನಿಶ್ಚಿತ। ಯೇಕ ಹೀ ನಾಹೀ ॥೧೫॥

ಐಸಾ ಶ್ರೋತಾ ಕರೀ ವಿನತೀ। ಆತಾ ರಾಹಾವೇ ಕೋಣೇ ರೀತೀ।
ಮ್ಹಣೆ ಅಖಂಡ ಮಾಝೀ ಮತೀ। ಬ್ರಹ್ಮಾಕಾರ ನಾಹೀ ॥೧೬॥

ಆತಾ ಯಾಚೇ ಪ್ರತ್ಯೋತ್ತರ। ವಕ್ತಾ ದೇಈಲ ಸುಂದರ।
ಶ್ರೋತೀ ವ್ಹಾವೇ ನಿರೋತ್ತರ। ಕ್ಷಣ ಯೇಕ ಆತಾ ॥೧೭॥

ಬ್ರಹ್ಮಚಿ ಹೋಊನ ಜೇ ಪಡಿಲೆ। ತೇ ಚಿ ಮುಕ್ತಪದಾಸ ಗೇಲೆ।
ಯೇರ ತೆ ಕಾಯ ಬುಡಾಲೆ। ವ್ಯಾಸಾದಿಕ ॥೧೮॥

ಶ್ರೋತಾ ವಿನತೀ ಕರೀ ಪುಢತೀ। ಶುಕೋಮುಕ್ತೋ ವಾಮದೇವೋ ವಾ ಹೇ ಶ್ರುತೀ।
ದೋಘೇ ಚಿ ಮುಕ್ತ ಆದಿ ಅಂತೀ। ಬೋಲತಸೆ ॥೧೯॥

ವೇದೇ ಬದ್ಧ ಕೇಲೆ ಸರ್ವ। ಮುಕ್ತ ಶುಕ ವಾಮದೇವ।
ವೇದವಚನೀ ಅಭಾವ। ಕೈಸಾ ಧರಾವಾ ॥೨೦॥

ಐಸಾ ಶ್ರೋತಾ ವೇದಾಧಾರೇ। ದೇತಾ ಝಾಲಾ ಪ್ರತ್ಯೋತ್ತರೇ।
ದೋಘೇ ಚಿ ಮುಕ್ತ ಅತ್ಯಾದರೇ। ಪ್ರತಿಪಾದ್ಯ ಕೇಲೇ ॥೨೧॥

ವಕ್ತಾ ಬೋಲೆ ಯಾಉಪರೀ। ದೋಘೇ ಚಿ ಮುಕ್ತ ಸೃಷ್ಟೀವರೀ।
ಐಸೇ ಬೋಲತಾ ಉರೀ। ಕೋಣಾಸ ಆಹೆ ॥೨೨॥

ಬಹು ಋಷಿ ಬಹು ಮುನೀ। ಸಿದ್ಧ ಯೋಗೀ ಆತ್ಮಜ್ಞಾನೀ।
ಜಾಲೆ ಪುರುಷ ಸಮಾಧಾನೀ। ಅಸಂಖ್ಯಾತ ॥೨೩॥

ತಾತ್ಪರ್ಯ:- ಸಂಸಾರದ ಒಲವಿನಿಂದ ಬ್ರಹ್ಮ ಸುಖ ಕೈತಪ್ಪಿ ಹೋಗುತ್ತದೆ. ಅದೇ ಪ್ರಕಾರ ಬ್ರಹ್ಮ ಜ್ಞಾನದ ಜೋರಿನಿಂದ ಸಂಸಾರ ಕೈಬಿಟ್ಟು ಹೋಗುತ್ತದೆ. ಈ ರೀತಿಯಿಂದ ಸಂಸಾರ ಮತ್ತು ಬ್ರಹ್ಮಜ್ಞಾನ ಎರಡೂ ಅರ್ಧ ಮರ್ಧ ಆಗಿ ಬಿಡುವವು. ಇವುಗಳಲ್ಲಿ ಒಂದೂ ಸಹ ಸಂಪೂರ್ಣ ಸಾಧಿಸಲಿಕ್ಕೆ ಆಗುವದಿಲ್ಲ [೧೪] ಪುನಃ ಶ್ರೋತಾ ಅನ್ನುವದೇನಂದರೆ ಇಂಥ ಪರಿಸ್ಥಿತಿಯಲ್ಲಿ ನಾನು ಸಿಲುಕಿಕೊಂಡಿರುವೆನು. ನನ್ನ ಮನಸ್ಸು ಅಸ್ವಸ್ಥತೆ, ಉದ್ವಿಗ್ನಗಳ ಗೊಂದಲದಲ್ಲಿ ಶಿಲುಕಿ ಹೋಗಿದೆ. ಬ್ರಹ್ಮ ಜ್ಞಾನವನ್ನು ಸಾಧಿಸಿಕೊಳ್ಳಬೇಕೇ ಅಥವಾ ಸರಳ ಸಂಸಾರ ಮಾಡಬೇಕೆ? ಏನು ಮಾಡಬೇಕು?ಈ ಎರಡರಲ್ಲಿ ಯಾವುದಾದರೊಂದನ್ನು ಮಾಡುವ ಬಗ್ಗೆ ಮನಸ್ಸಿನ ನಿಶ್ಚಯವಾಗಲೊಲ್ಲದು(೧೫) ಅನಂತರ ಶ್ರೋತಾ ವಿನಂತಿ ಮಾಡಿಕೊಳ್ಳುತ್ತಾನೆ. "ನಾನು ಈಗ ಯಾವ ರೀತಿಯಿಂದ ಜೀವನ ಸಾಗಿಸಬೇಕು ?" ನನ್ನ ಮನವು ಅಖಂಡ ಬ್ರಹ್ಮಾಕಾರವಾಗಿ ಇರಲೊಲ್ಲದಾಗಿದೆ."[೧೬] ಶ್ರೋತಾನ ಈ ಪ್ರಶ್ನೆಗೆ ವಕ್ತಾ [ಶ್ರೀ ಸಮರ್ಥರು] ಈಗ ಒಳ್ಳೆಯ ಮತ್ತು ಯೋಗ್ಯವಾದ ಉತ್ತರ ಕೊಡುವವರಿರುವರು. ಶ್ರೋತಾ ಜನ ಕ್ಷಣಹೊತ್ತು ಮನಸ್ಸನ್ನು ಸ್ವಸ್ಥಗೊಳಿಸಿ ಹೇಳುವದನ್ನು ಕೇಳಬೇಕು. [೧೭] **ವಕ್ತಾ ಉತ್ತರ ಕೊಡುವನು.** ಬ್ರಹ್ಮದೊಂದಿಗೆ ತದಾಕಾರವಾದ ಕೂಡಲೇ ಯಾರು ದೇಹವಿಟ್ಟರೋ ಅವರಷ್ಟೇ ಆಗ ಮುಕ್ತರಾದರು. ಮತ್ತು ವ್ಯಾಸಾದಿಕ ವಗೈರೆ ಪುರುಷರು ಮುಕ್ತರಾಗಲಿಲ್ಲವೆಂದು ಅನ್ನಲು ಬಂದೀತೆ ? [೧೮] **ಇದರ ನಂತರವೂ ಶ್ರೋತಾ ಮತ್ತೆ ವಿಚಾರಿಸುವನು:-** ಶ್ರೋತಾ ಪುನಃ ನಮ್ರತನದಿಂದ ವಿನಂತಿ ಮಾಡಿಕೊಳ್ಳುವದೇನಂದರೆ : ಶುಕ ಅಥವಾ ವಾಮದೇವ ಇವರು ಮುಕ್ತರಾದರು ಅಂತಾ ವೇದ ವಚನವಿರುವದು. ಆರಂಭದಿಂದ ಕೊನೆಯವರೆಗೂ ಈ ಇಬ್ಬರೇ ಮುಕ್ತರಾದವರು ಹೀಗೆ ಆ ವಚನದ ಅರ್ಥವಿದೆ. [೧೯] ವೇದದ ಹೇಳಿಕೆಯ ಪ್ರಕಾರ ಶುಕ ಮತ್ತು ವಾಮದೇವ ಈ ಇಬ್ಬರೇ ಮುಕ್ತರಾದರು. ಬಾಕೀ ಉಳಿದವರೆಲ್ಲರೂ ಬದ್ಧರೆಂದೇ ತಿಳಿಯಬೇಕಾಗುವದು. ವೇದ ವಚನವು ತಪ್ಪು ಇರುವದೆಂದು ಅನ್ನಲು ಬರುವದಿಲ್ಲ. [೨೦] ಈ ಪ್ರಕಾರ ವೇದ ವಚನದ ಆಧಾರ ತೋರಿಸಿ ಶ್ರೋತಾನು ಹೊಸ ಶಂಕೆ[ಸಂಶಯ]ಯನ್ನು ಮುಂದಿಟ್ಟನು. ಶುಕ, ಮತ್ತು ವಾಮದೇವ ಈ ಇಬ್ಬರೇ ಮುಕ್ತರಿರುವರು. ಬಾಕಿ ಉಳಿದವರೆಲ್ಲ ಬದ್ಧರೇ ಇರುತ್ತಾರೆ. ಆದ್ದರಿಂದ ವೇದ ವಚನದ ಮೇಲೆ ಅವಿಶ್ವಾಸ ಪಡಲು ಬರಲಾರದು. ಹೀಗೆ ಒಳ್ಳೆಯ ಉತ್ಸಾಹ ಹಾಗೂ ಆದರದಿಂದ ಶ್ರೋತಾ ಪ್ರತಿಪಾದನ ಮಾಡಿದನು.[೨೧] **ಈ ಶಂಕಾ ಕೇಳಿ ಶ್ರೋತಾನಿಗೆ ವಕ್ತಾ ಉತ್ತರ ಕೊಡುವನು:-** ಶಂಕಾ ತೆಗೆದದ್ದನ್ನು ಕೇಳಿ ವಕ್ತಾ ಅನ್ನುವನು. ನಿನ್ನ ಅಭಿಪ್ರಾಯದ ಪ್ರಕಾರ ಈ ಜಗತ್ತಿನಲ್ಲಿ ಕೇವಲ ಇಬ್ಬರೇ ಮುಕ್ತ ಪುರುಷರು ಆಗಿಹೋದರು ಎಂಬ ಮಾತನ್ನು ಒಂದು ವೇಳೆ ನಿಜವೆಂದು ಒಪ್ಪಿದ್ದಾದರೆ ಇನ್ನುಳಿದ ದೊಡ್ಡ ದೊಡ್ಡ ಬ್ರಹ್ಮಜ್ಞಾನಿ ಪುರುಷರಿಗೆ ಮುಕ್ತರಾದವರ ವರ್ಗದಲ್ಲಿ ಸ್ಥಳವೇ ಇಲ್ಲದಂತಾಯಿತು. [೨೨] ಬಹಳಷ್ಟು ಋಷಿ, ಮುನಿ, ಸಿದ್ಧ, ಯೋಗಿ, ಹಾಗೂ ಆತ್ಮಜ್ಞಾನಿ, ಸಂತ, ಶರಣ ಸಾಧುಗಳು ಇಲ್ಲಿಯವರೆಗೆ ಆಗಿ ಹೋಗಿರುವರು. ಅವರೆಲ್ಲ ಬ್ರಹ್ಮಜ್ಞಾನಿಗಳೇ ಇದ್ದರು. ಮುಕ್ತರೂ ಇದ್ದರು. ಹೀಗೆ ಸಮಾಧಾನಿ, ಜ್ಞಾನಿ ಮತ್ತು ಮುಕ್ತರಾದ ಅಗಣಿತ ಪುರುಷರು ಎಷ್ಟೋ ಆಗಿ ಹೋಗಿದ್ದಾರೆ. (೨೩)

॥ಶ್ಲೋಕ॥ ಪ್ರಹ್ಲಾದ ನಾರದ ಪರಾಶರ ಪುಂಡರೀಕ ।
ವ್ಯಾಸಾಂಬರೀಷ ಶುಕಶೌನಕಭೀಷ್ಮ ದಾಲ್ಭ್ಯಾನ್ ॥
ರುಕ್ಮಾಂಗದಾರ್ಜುನ ವಸಿಷ್ಠ ವಿಭೀಷಣಾದೀನ್ ।
ಪುಣ್ಯಾನಿಮಾನ್‌ಪರಮಭಾಗವತಾನ್‌ಸ್ಮರಾಮಿ ॥೧॥
ಕವಿರ್ಹರಿರಂತರಿಕ್ಷಃ ಪ್ರಬುದ್ಧಃ ಪಿಪ್ಪಲಾಯನಃ ।
ಆವಿರ್ಹೋತ್ರೋಥದ್ರುಮಿಲಶ್ಚಮಸಃ ಕರಭಾಜನಃ ॥೨॥

ಯಾ ಹಿ ವೇಗಳೆ ಥೋರ ಥೋರ । ಬ್ರಹ್ಮಾವಿಷ್ಣು ಮಹೇಶ್ವರ ।
ಆದಿಕರೂನ ದಿಗಂಬರ । ವಿದೇಹಾದಿಕ ॥೨೪॥

ಶುಕವಾಮದೇವ ಮುಕ್ತ ಜಾಲೆ । ಯೇರ ಹೇ ಅವಘೇ ಚಿ ಬುಡಾಲೆ ।
ಯಾ ವಚನಾ ವಿಶ್ವಾಸಲೆ । ತೇ ಪಢತ ಮೂರ್ಖ ॥೨೫॥

ತರೀ ವೇದ ಕೈಸೇ ಬೋಲಿಲಾ । ತೋ ಕಾಯ ತುಮ್ಹೀ ಮಿಥ್ಯಾ ಕೇಲಾ ।
ಏಕೋನ ವಕ್ತಾ ದೇತಾ ಜಾಲಾ । ಪ್ರತ್ಯೋತ್ತರ ॥೨೬॥

ವೇದ ಬೋಲಿಲಾ ಪೂರ್ವಪಕ್ಷ । ಮೂರ್ಖ ತೇಥೇ ಚಿ ಲಾವೀ ಲಕ್ಷ ।
ಸಾಧು ಆಣೀ ವಿತ್ಪನ್ನ ದಕ್ಷ । ತ್ಯಾಸ ಹೇ ನ ಮನೆ ॥೨೭॥

ತಥಾಪೀ ಹೇ ಜರೀ ಮಾನಲೇ । ತರೀ ವೇದಸಾಮರ್ಥ್ಯ ಬುಡಾಲೇ ।
ವೇದಾಚೆನಿ ಉದ್ಧರಿಲೇ । ನ ವಚೆ ಕೊಣಾ ॥೨೮॥

ವೇದಾಅಂಗೀ ಸಾಮರ್ಥ್ಯ ನಸೆ । ತರೀ ಯಾ ವೇದಾಸ ಕೋಣಪುಸೆ ।
ವ್ಹಾಣೌನಿ ವೇದೀ ಸಾಮರ್ಥ್ಯ ಅಸೆ । ಜನ ಉಧರಾವಯಾ ॥೨೯॥

ವೇದಾಕ್ಷರ ಘಡೆ ಜ್ಯಾಸೀ । ತೋ ಬೋಲೆಜೆ ಪುಣ್ಯರಾಸೀ ।
ವ್ಹಾಣೌನ ವೇದೀ ಸಾಮರ್ಥ್ಯಾಸೀ । ಕಾಯ ಉಣೇ ॥೩೦॥

ವೇದ ಶಾಸ್ತ್ರ ಪುರಾಣ । ಭಾಗ್ಯೇ ಜಾಲಿಯಾ ಶ್ರವಣ ।
ತೇಣೇ ಹೊಈಜೆ ಪಾವನ । ಹೇ ಬೋಲತೀ ಸಾಧು ॥೩೧॥

ಶ್ಲೋಕ ಅಥವಾ ಶ್ಲೋಕಾರ್ಧ । ನಾಹೀ ತರೀ ಶ್ಲೋಕ ಪಾದ ।
ಶ್ರವಣ ಹೋತಾ ಯೇಕ ಶಬ್ದ । ನಾನಾ ದೋಷ ಜಾತೀ ॥೩೨॥

**ಶ್ಲೋಕ:**-ಪ್ರಲ್ಹಾದ ನಾರದ ಪರಾಶರ ಪುಂಡರೀಕ। ವ್ಯಾಸಾಂಬರೀಷ ಶುಕ ಶೌನಕ ಭೀಷ್ಮದಾಲ್ಭ್ಯಾನ್॥ ರುಕ್ಮಾಂಗದಾರ್ಜುನವಸಿಷ್ಠ ವಿಭೀಷಣಾದೀನ್। ಪುಣ್ಯಾನಿಮಾನ್ ಪರಮ ಭಾಗವತಾನ್ ಸ್ಮರಾಮಿ॥೧॥ (ಭಾಗವತ) ಕವಿರ್ಹರಿರಂತರಿಕ್ಷಃ ಪ್ರಬುದ್ಧಃ ಪಿಪ್ಪಲಾಯನಃ। ಆವಿರ್ಹೋತ್ರೋಽಥ ದ್ರುಮಿಲಶ್ಚಮಸಃ ಕರಭಾಜನಃ ॥೨॥ (ಭಾಗವತ) **ಶ್ಲೋಕದ ಅರ್ಥ:**- ಪ್ರಲ್ಹಾದ, ನಾರದ, ಪರಾಶರ, ಪುಂಡರೀಕ, ವ್ಯಾಸ,ಅಂಬರೀಷ ಶುಕ, ಶೌನಕ ಭೀಷ್ಮ, ದಾಲ್ಭ್ಯ, ರುಕ್ಮಾಂಗದ, ಅರ್ಜುನ, ವಶಿಷ್ಠ, ವಿಭೀಷಣ ಮುಂತಾದ ಭಗವದ್ಭಕ್ತರಾದ ಪುಣ್ಯ ಪುರುಷರು ಆಗಿ ಹೋದವರನ್ನು ನಾನು ಸ್ಮರಿಸುವೆನು ॥೧॥ ಕವಿ, ಹರಿ, ಅಂತರಿಕ್ಷ, ಪ್ರಬುದ್ಧ, ಪಿಪ್ಪಲಾಯನ, ಅವಿರ್ಹೋತ್ರ ದ್ರುಮಿಲ, ಚಮಸ, ಹಾಗೂ ಕರಭಾಜನ, ಈ ಒಂಭತ್ತು ಜನರು ನಾರಾಯಣ ಸ್ವರೂಪಿ ದೊಡ್ಡ ಮಹಾತ್ಮರಿದ್ದು ಮುಕ್ತರು ಮತ್ತು ಜ್ಞಾನಿಗಳಾದ ಇಂಥ ಪುರುಷರು ಆಗಿ ಹೋದರು. (ಇವರು ಜನಕರಾಜನ ಸಭೆಗೆ ಬಂದು ಬ್ರಹ್ಮಜ್ಞಾನದ ಉಪದೇಶ ಮಾಡಿದವರಿರುವರು)॥೨॥ ಇವರ ಹೊರತಾಗಿ ಬ್ರಹ್ಮ, ವಿಷ್ಣು,ಶಂಕರ, ದತ್ತಾತ್ರೇಯ, ಶ್ರೀಕೃಷ್ಣ, ವೈದೇಹೀ, ಜನಕರೇ ಮುಂತಾದ ಇನ್ನೂ ಎಷ್ಟೆಷ್ಟೋ ದೊಡ್ಡ ದೊಡ್ಡ ಮುಕ್ತ ಜ್ಞಾನಿಗಳೂ ಆಗಿ ಹೋಗಿರುವರು.(೨೪)"ಶುಕ ಮತ್ತು ವಾಮದೇವ ಇವರಿಬ್ಬರೇ ಮುಕ್ತರಾದರು ಮತ್ತು ಇನ್ನುಳಿದವರೆಲ್ಲ ವ್ಯರ್ಥ ರಾವರು,ಮುಕ್ತರಾಗಲಿಲ್ಲ" ಈ ವಚನವನ್ನು ನಂಬುವವರು ಕೇವಲ ಪಂಡಿತ(ಪಢತ) ಮೂರ್ಖರೆಂದು ತಿಳಿಯಬೇಕು. ಖರೇ ಹೇಳಬೇಕೆಂದರೆ "ಶುಕೋ ಮುಕ್ತೋ ವಾಮದೇವೋವಾ" ಈ ವಚನವು ಉಪನಿಷತ್‌ದಲ್ಲಿ ಇದ್ದುದು ಕಂಡು ಬರುವದಿಲ್ಲ. ಆದರೆ ಇವರಿಬ್ಬರೂ ಬಹು ದೊಡ್ಡ ಬ್ರಹ್ಮಜ್ಞಾನಿಗಳಿದ್ದರೆಂಬುದರಲ್ಲಿ ಸಂಶಯವೇ ಇಲ್ಲ. ಆದರೆ ಇನ್ನುಳಿದ ಜ್ಞಾನಿ ಪುರುಷರು ಇವರ ಸರಿಸಮಕ್ಕೆ ಬರುವದಿಲ್ಲವೆಂದು ಅಂದರೆ ಅನ್ನುವವರಿಗೆ ಬ್ರಹ್ಮ ಜ್ಞಾನದ ನಿಜವಾದ ಸ್ವರೂಪವೇ ತಿಳಿದಿಲ್ಲವೆಂದು ಹೇಳಬೇಕಾಗುವದು. ಕಲಿತವರ ಮೂರ್ಖತನವೆಂದರೆ ಇದೇ ಇರು ವದು. [೨೫] **ಇದನ್ನು ಕೇಳಿ ಶ್ರೋತಾ ಪುನಃ ಶಂಕಾ ಎತ್ತಿ ಪ್ರಶ್ನೆ ಮಾಡುವನು.** ವೇದ ವಚನವನ್ನು ತಾವು ಸುಳ್ಳು ಎಂದು ಅನ್ನುವಿರೇನು ? ಈ ಆಕ್ಷೇಪಕ್ಕೆ ವಕ್ತಾ ಉತ್ತರ ಕೊಡುವನು. [೨೬] **ವಕ್ತಾ ಮೇಲಿನ ಆಕ್ಷೇಪಕ್ಕೆ ಉತ್ತರ ಕೊಟ್ಟು ಅದರ ನಿರಸನ ಮಾಡುವರು:**- ವೇದವು ಈ ಮಾತನ್ನು ಪೂರ್ವ ಪಕ್ಷವೆಂದು ಹೇಳಿದೆ. (ಮಂಡಿಸಿದೆ) ಮೂರ್ಖ ಮನುಷ್ಯರು ಇದನ್ನೇ ಖರೇ ಎಂದು ತಿಳಿದು ಬಿಡುವರು. ಸಾಧು, ನಿಜವಾದ ವಿದ್ವಾನ್ ಮತ್ತು ಚತುರ ಮನುಷ್ಯರು, ಸಂತ, ಶರಣ, ದಾಸ ಇಂಥವರು ಇಷ್ಟನ್ನೇ (ಪೂರ್ವ ಪಕ್ಷವನ್ನು) ಖರೇ ಎಂದು ಒಪ್ಪುವದಿಲ್ಲ. ವೇದವು ಸಹಜವಾಗಿ (ಉದಾಹರಣೆಗಾಗಿ) ಒಂದು ಬಾಜು ಮಂಡಿಸಿರುವದು. ಸಂಪೂರ್ಣ ಸತ್ಯ ತಿಳಿಯಬೇಕಾದರೆ ಇನ್ನೊಂದು [ಎರಡನೇ] ಬಾಜೂ ಸಹ ನೋಡಿ ತಿಳಿಯುವದು ಅವಶ್ಯವಿರುವದು [೨೭] ಇರಲಿ, ಹೇಳುವದನ್ನು ತಿಳಿದುಕೋ, ಮೇಲಿನ ವೇದ ವಚನ ಖರೆ ಇರುವದು, ಇದನ್ನೇ ನಾವು ಖರೇ ಎಂದು ಮನ್ನಿಸಿದ್ದಾದರೆ ವೇದದ ಸಾಮರ್ಥ್ಯವೇ ನಾಶವಾಗಿ ಹೋಗುವದು. ಯಾಕಂದರೆ ವೇದದ ಸಾಮರ್ಥ್ಯದಿಂದ ಯಾರೊ ಬ್ಬರ ಉದ್ಧಾರವಾಗುವದು ಶಕ್ಯವೇ ಇಲ್ಲ. ಅರ್ಥಾತ್ ವೇದಗಳಿಗೆ ಯಾರನ್ನೂ [ಇಬ್ಬರನ್ನು ಬಿಟ್ಟು] ಉದ್ಧರಿಸು ವದು ಶಕ್ಯವಿಲ್ಲವೆಂದಂತಾಗುವದು. (೨೮) ವೇದದಲ್ಲಿ ಬ್ರಹ್ಮಜ್ಞಾನ ಮಾಡಿಕೊಟ್ಟು ಜೀವವನ್ನು ಮುಕ್ತ ಮಾಡುವ ಸಾಮರ್ಥ್ಯ ಇಲ್ಲದಿದ್ದರೆ ವೇದವನ್ನು ಯಾರೂ ವಿಚಾರಿಸಲಾರರು. ಮತ್ತು ಮಹತ್ವ ಕೊಡಲಾರರು. ಆದರೆ ವಸ್ತು ಸ್ಥಿತಿ ಹೀಗಿರುವದಿಲ್ಲ. ಅಂತೆಯೇ ಜೀವವನ್ನು ಮುಕ್ತ ಮಾಡುವ ಸಾಮರ್ಥ್ಯ ವೇದದಲ್ಲಿ ಖಂಡಿತವಾಗಿಯೂ ಇರು ವದು. ಇದರಲ್ಲಿ ಎಷ್ಟೂ ಸಂಶಯವಿಲ್ಲ. (೨೯) ವೇದಗಳ ಅಭ್ಯಾಸವನ್ನು ಯಾರು ಮಾಡುವರೋ ಅವರು ಪುಣ್ಯದ ರಾಶಿಯೇ ಇರುವರೆಂದು ತಿಳಿಯಲ್ಪಡುವರು. ಈ ಎಲ್ಲ ಕಾರಣಗಳಿಂದ ವೇದದ ಸಾಮರ್ಥ್ಯದಲ್ಲಿ ಎಳ್ಳಷ್ಟೂ ಕಡಿಮೆ ಇಲ್ಲ. (೩೦) ಸಾಧು ಸತ್ಪುರುಷರು ಹೇಳುವದೇನೆಂದರೆ ವೇದ ಶಾಸ್ತ್ರ ಮತ್ತು ಪುರಾಣ ಇವುಗಳ ಶ್ರವಣ ಮಾಡು ವದು ತಮ್ಮ ಭಾಗ್ಯವೆಂದು ಜನರು ತಿಳಿಯಬೇಕು. ಇದರಿಂದ ಮನುಷ್ಯ ಪವಿತ್ರನಾಗಿ ಬಿಡುವನು. (೩೧) ಇಷ್ಟೇ ಅಲ್ಲ, ಕೇವಲ ಒಂದು ಸಂಪೂರ್ಣ ಶ್ಲೋಕ, ಅಥವಾ ಅರ್ಧ ಶ್ಲೋಕ ಇಲ್ಲವೆ ಇವುಗಳಲ್ಲಿಯ ಒಂದು ಭಾಗ ಅಥವಾ ಒಂದು ಶಬ್ದ ಶ್ರವಣ ಮಾಡಿದರೂ ಸಹ ಅನೇಕ ದೋಷಗಳು ನಾಶವಾಗುವವು. (೩೨)

ವೇದಶಾಸ್ತ್ರೀ ಪುರಾಣೀ । ಐಸಾ ವಾಕ್ಯಾಚ್ಯಾ ಆಈಣೀ ।
ಅಗಾಧ ಮಹಿಮಾ ವ್ಯಾಸವಾಣೀ । ವದೋನ ಗೇಲೀ ॥೩೩॥

ಯೇಕಾಕ್ಷರ ಹೋತಾ ಶ್ರವಣ । ತತ್ಕಾಳ ಚಿ ಹೋಈಜೆ ಪಾವನ ।
ಐಸೇ ಗ್ರಂಥಾಚೇ ಮಹಿಮಾನ। ಠಾಈ ಠಾಈ ಬೋಲಿಲೇ ॥೩೪॥

ದೋಹೀ ವೇಗಳಾ ತಿಜಾ ನುಧರೆ। ತರೀ ಮಹಿಮಾ ಕೈಚಾ ಉರೆ ।
ಅಸೊ ಹೇ ಜಾಣಿಜೆ ಚತುರೇ । ಯೆರಾ ಗಥಾಗೋವೀ ॥೩೫॥

ವೇದಶಾಸ್ತ್ರೇ ಪುರಾಣೇ । ಕೈಸೀ ಹೋತೀ ಅಪ್ರಮಾಣೇ ।
ದೋಘಾವಾಂಚೂನ ತಿಸರಾ ಕೋಣೇ । ಉದ್ಧರಾವಾ ॥೩೬॥

ಮ್ಹಣಸೀ ಕಾಷ್ಠೀ ಲಾಗೋನ ಪಡಲಾ । ತೋ ಚಿ ಯೇಕ ಮುಕ್ತ ಜಾಲಾ ।
ಶುಕ ತೋ ಹಿ ಅನುವಾದಲಾ । ನಾನಾ ನಿರೂಪಣೇ ॥೩೭॥

ಶುಕ ಮುಕ್ತ ಐಸೇ ವಚನ । ವೇದ ಬೋಲಿಲಾ ಹೇ ಪ್ರಮಾಣ ।
ಪರೀ ತೋ ನವ್ಹತಾ ಅಚೇತನ । ಬ್ರಹ್ಮಾಕಾರ ॥೩೮॥

ಅಚೇತನ ಬ್ರಹ್ಮಾಕಾರ । ಆಸತಾ ಶುಕ ಯೋಗೇಶ್ವರ ।
ತರೀ ಸಾರಾಸಾರ ವಿಚಾರ । ಬೋಲಣೇ ನ ಘಡೆ ॥೩೯॥

ಜೋ ಬ್ರಹ್ಮಾಕಾರ ಜಾಲಾ । ತೋ ಕಾಷ್ಠ ಹೋಊನ ಪಡಿಲಾ ।
ಶುಕ ಭಾಗವತ ಬೋಲಿಲಾ । ಪರೀಕ್ಷಿತೀ ಪುಢೇ ॥೪೦॥

ನಿರೂಪಣ ಹೇ ಸಾರಾಸಾರ । ಬೋಲಿಲಾ ಪಾಹಿಜೆ ವಿಚಾರ ।
ಧಾಂಡೋಳಾವೇ ಸಚರಾಚರ । ದೃಷ್ಟಾಂತಾಕಾರಣೇ ॥೪೧॥

ಕ್ಷಣ ಯೇಕ ಬ್ರಹ್ಮಚಿ ವ್ಹಾವೇ । ಕ್ಷಣ ಯೇಕ ದೃಶ್ಯ ಧಾಂಡೋಳಾವೇ ।
ನಾನಾ ದೃಷ್ಟಾಂತೀ ಸಂಪಾದಾವೇ । ವಗತ್ರೃತ್ವಾಸೀ ॥೪೨॥

ಅಸೋ ಭಾಗವತ ನಿರೂಪಣ । ಶುಕ ಬೋಲಿಲಾ ಆಪಣ ।
ತಯಾ ಆಂಗೀ ಬದ್ಧಪಣ । ಲಾವೂ ನಯೆ ಕೀ ॥೪೩॥

ಮ್ಹಣೋನೀ ಬೋಲತಾ ಚಾಲತಾ । ನಿಚೇಷ್ಟಿತ ಪಡಿಲೇ ನಸ್ತಾ ।
ಮುಕ್ತಿ ಲಾಭೆ ಸಾಯೋಜ್ಯತಾ । ಸದ್ಗುರುಬೋಧೇ ॥೪೪॥

ವೇದ, ಶಾಸ್ತ್ರ, ಮತ್ತು ಪುರಾಣಗಳಲ್ಲಿ ಇಂಥ ವಾಕ್ಯಗಳ ಮಾಲಿಕೆ (ಕ್ರಮದ ಪ್ರಕಾರ.)ಯೇ ಕಂಡುಬರುವದು. ಇವುಗಳಅಗಾಧ ಮಹಿಮೆಯನ್ನು ವ್ಯಾಸರು ಮೊದಲೇ ಹೇಳಿಬಿಟ್ಟಿದ್ದಾರೆ. (೩೩) ಇದರಲ್ಲಿಯ (ವೇದ ಶಾಸ್ತ್ರಾದಿಗಳ) ಒಂದು ಅಕ್ಷರವು ಕಿವಿಯ ಮೇಲೆ ಬಿದ್ದರೂ ಸಹ ಮನುಷ್ಯ ಪಾವನವಾಗುವದಕ್ಕೆ ತಡವಾಗುವದಿಲ್ಲ. ಇಂಥ ಅನೇಕ ಗ್ರಂಥಾದಿಗಳ ಶ್ರೇಷ್ಠತೆಯನ್ನು ಅನೇಕ ಕಡೆಗೆ ದೊಡ್ಡವರು ಹೇಳಿರುವದನ್ನು ನೋಡಲಿಕ್ಕೆ ಸಿಗುವವು.(೩೪) ಶುಕ ಮತ್ತು ವಾಮದೇವ ಇವರಿಬ್ಬರ ಹೊರತು ಮೂರನೆಯವರಾರೂ ಉದ್ಧಾರವಾಗಿ ಮುಕ್ತರಾಗಲಿಕ್ಕೆ ಶಕ್ಯವಿಲ್ಲದಿದ್ದರೆ ವೇದಶಾಸ್ತ್ರ ಪುರಾಣಾದಿ ಗ್ರಂಥಗಳ ಮಹಿಮೆ ಶಿಲ್ಲಕ ಉಳಿಯುವದಕ್ಕೆ ಸಾಧ್ಯವಿಲ್ಲ. ಇರಲಿ, ಚತುರ ರಾದ ಪುರುಷರಿಗೆ ಇದು ಸರಿಯಾಗಿ ತಿಳಿಯುವದು. ಉಳಿದವರಿಗೆ ಅಂದರೆ ಜಿಜ್ಞಾಸುಗಳಲ್ಲದವರಿಗೆ, ಬದ್ಧರಿಗೆ ಇದೆಲ್ಲ ಗೊಂದಲದ ಅಥವಾ ಘೋಟಾಳೆಯದಾಗಿ ಕಂಡು ಬರುವದು. (೩೫) ಈಗ ಜ್ಞಾನಿ ಮತ್ತು ಮುಕ್ತ ಪುರುಷರು ದೇಹದಿಂದ ಜಗದಲ್ಲಿ ಅಡ್ಡಾಡುತ್ತಿದ್ದರೂ ವ್ಯವಹರಿಸುತ್ತಿದ್ದರೂ ತಮ್ಮ ಬ್ರಹ್ಮಾಕಾರದ ಸ್ಥಿತಿಯನ್ನು ಅಲ್ಲಾಡಿಸಗೊಡುವದಿಲ್ಲ. ಸ್ಥಿತಿಗೆ ಚ್ಯುತಿ ಬರದಂತೆ ಇರುವರು. ದೇಹದ ದೃಷ್ಟಿಯಿಂದ ಇವರ ಕೆಲಸ ಸಜ್ಜನರಂತೆಯೇ ಇರುವವು. ಅವರ ಕರ್ಮದಂತೆ ಇವರವೂ ಇರುವವು. ಆದರೆ ಇದರಲ್ಲಿ ಅವರವರ ಅಂತರಂಗದ ಅಧಿಕಾರದ ಪ್ರಕಾ ರದ ಮೇಲಿಂದ ಹೆಚ್ಚು ಕಡಿಮೆ ಕಂಡು ಬರುವದು. ಒಟ್ಟಿನಲ್ಲಿ ಅಂತರ್ಯಾಮದ ಅವಸ್ಥೆ ಸ್ಥಿರವಿರುವದು. ಮುಕ್ತ ಪುರುಷನಿಗೆ ಅವನ ದೇಹಾವಸ್ಥೆಯ ಮೇಲಿಂದ ನೋಡುವದಿರುವದಿಲ್ಲ. ಆದರೆ ಅವನ ಬ್ರಹ್ಮರೂಪದ ಸ್ಥಿತಿಯ ಮೇಲಿಂದ ಗುರುತಿಸಬೇಕಾಗುವದು:- ವೇದ ಶಾಸ್ತ್ರ ಪುರಾಣಾದಿಗಳು ಹೇಳುವದೆಲ್ಲ ವಿಶ್ವಾಸವಿಡುವಂಥವುಗಳೇ ಇರು ವವು. ಶುಕ ವಾಮದೇವ ಈ ಇಬ್ಬರ ಹೊರತಾಗಿ ಇತರ ಅನೇಕ ಲೋಕ ಜನ ಇದರ ಮೂಲಕ ಉದ್ಧಾರ ಹೊಂದಿ ರುವರು. [೩೬] ಬ್ರಹ್ಮ ಸ್ವರೂಪರಾದ ಮೇಲೆ ಕಟ್ಟಿಗೆಯಂತೆ ಅಂದರೆ ಕಾಷ್ಟವತ್ ನಿಶ್ಚೇಷ್ಟವಾಗಿ ಬಿದ್ದುಕೊಂಡಿ ರುವವನೇ ಖರೇ ಮುಕ್ತನು. ಹೀಗೆ ತಿಳಿಯುವದು ಅಗದೀ ತಪ್ಪಾಗುವದು. ಸ್ವತಃ ಶುಕರೇ ಅನೇಕ ವಿಷಯಗಳ ವಿವೇಚನೆ ಮಾಡಿದ್ದಾರೆ. ಉಪದೇಶ ಮಾಡಿದ್ದಾರೆ. [೩೭] ಶುಕರು ಮುಕ್ತರಾಗಿದ್ದರು. ಈ ವೇದ ವಚನ ಖರೇ ಎಂದು ಮನ್ನಿಸಲೇಬೇಕು. ಇಂಥ ಮುಕ್ತ ಶುಕರು ಕೇವಲ ಕಟ್ಟಿಗೆಯಂತೆ ನಿರ್ಜೀವ ಬ್ರಹ್ಮ ಸ್ವರೂಪರಾಗಿ ಇರ ಲಿಲ್ಲ. [೩೮] ಈ ಯೋಗೀಶ್ವರ ಶುಕರು ಒಂದು ವೇಳೆ ಕಟ್ಟಿಗೆಯಂತೆ ನಿರ್ಜೀವ ಬ್ರಹ್ಮಸ್ವರೂಪರೇ ಆಗಿದ್ದರೆ ಇವ ರಿಗೆ ಆತ್ಮಾನಾತ್ಮ ವಿವೇಕವನ್ನು ಬಾಯಿಂದ ಉಚ್ಚರಿಸಿ ಹೇಳಲಿಕ್ಕೆ ಬರುತ್ತಿರಲಿಲ್ಲ [೩೯] ಯಾರು ಬ್ರಹ್ಮಸ್ವರೂಪ ರಾಗುವರೋ ಅವರೆಲ್ಲ ಕಟ್ಟಿಗೆಯಂತೆ ಕರ್ಮರಹಿತರಾಗಿ ಕೇವಲ ಬಿದ್ದುಕೊಂಡಿರುವರೆಂಬ ತಿಳುವಳಿಕೆಯು ತೀರ ತಪ್ಪು ತಿಳುವಳಿಕೆ ಇರುವದು. ಶುಕರು ಬ್ರಹ್ಮಸ್ವರೂಪರಿದ್ದೂ ಅವರು ಪರೀಕ್ಷಿತನಿಗೆ ಭಾಗವತದಂಥ ದೊಡ್ಡವಿಷಯ ವನ್ನು ಬೋಧ ಮಾಡಿದರು. ಇದನ್ನು ನೆನಪಿಗೆ ತಂದುಕೊಂಡು ನೋಡುವವನಾಗು.[೪೦] ಆತ್ಮಸ್ವರೂಪದ ವರ್ಣನೆ ಮಾಡುವದಾದರೆ ಸಾರಾಸಾರ ವಿಚಾರ ಮಾಡಬೇಕಾಗುವದು. ಈ ವಿಚಾರವನ್ನು ಶಬ್ದಗಳಿಂದ [ಬಾಯಿಯಿಂದ ಮಾತನಾಡುತ್ತ] ಹೇಳಬೇಕಾಗುವದು. ವಿಷಯವನ್ನು ತಿಳಿಯುವಂತೆ ಹೇಳುವದಕ್ಕಾಗಿ ಚರಾಚರ[ಸಜೀವ,ನಿರ್ಜೀವ] ವಿಶ್ವವನ್ನೇ ಶೋಧಿಸಿ ಯೋಗ್ಯ ದೃಷ್ಟಾಂತಗಳನ್ನು ಕೊಟ್ಟು ನಿರೂಪಣ ಮಾಡಬೇಕಾಗುವದು. [೪೧] ಮುಕ್ತ ಪುರುಷನು ಅಧ್ಯಾತ್ಮ ವಿಷಯವನ್ನು ಹೇಳುವಾಗ ಒಮ್ಮೊಮ್ಮೆ ಒಂದು ಕ್ಷಣಹೊತ್ತು ಬ್ರಹ್ಮಾಕಾರವಾಗುವನು. ಕ್ಷಣ ಹೊತ್ತು ದೃಶ್ಯ ವಿಶ್ವವನ್ನು ಶೋಧಿಸುವನು. ಅನಂತರ ತನ್ನ ಭಾಷಣವನ್ನು ಅನೇಕ ಯೋಗ್ಯ ಹಾಗೂ ಉಚಿತವಾದ ದೃಷ್ಟಾಂತಗಳಿಂದ ಕೂಡಿದ ಸಹಜ ಸುಂದರ ರೀತಿಯಲ್ಲಿ ತಯಾರಿಸಿ ಹೇಳುವನು. (೪೨) ಇರಲಿ. ಬಹುದೀರ್ಘವಾದ ದೊಡ್ಡದಾದ ಮತ್ತು ಅಧ್ಯಾತ್ಮದಿಂದ ತುಂಬಿದ ಹಾಗೂ ಅನೇಕ ದೃಷ್ಟಾಂತಗಳಿಂದ ವಿವೇಚಿಸಿದ ಭಾಗವತ ಎಂಬ ಗ್ರಂಥವನ್ನು ಸ್ವತಃ ಶುಕಾಚಾರ್ಯರು ಬಂದು ಪರೀಕ್ಷಿತ ರಾಜನಿಗೆ ಬೋಧಿಸಿದರು. ಮತ್ತು ಅವನನ್ನು ಮುಕ್ತಗೊಳಿ ಸಿದರು. ಇಂಥವರಿಗೆ ಬದ್ಧತನದ ಆರೋಪ ಹೊರಿಸಲು ಬಂದೀತೆ ? ಅರ್ಥಾತ್ ಬರುವದಿಲ್ಲ. (೪೩) ಸಾರಾಂಶ:- ಕಟ್ಟಿಗೆಯಂತೆ ನಿಶ್ಚೇಷ್ಟವಾಗಿ ಬಿದ್ದುಕೊಂಡು ಇರದೆ, ನಡೆಯುತ್ತ, ಮಾತನಾಡುತ್ತ, ವ್ಯವಹಾರ ಮಾಡುತ್ತಲೇ ಸದ್ಗುರುವು ಕೊಟ್ಟಂಥ ಜ್ಞಾನ ಬೋಧದಿಂದ ಸಾಯುಜ್ಯ ಮುಕ್ತಿಯನ್ನು ಹೊಂದಲು ಬರುತ್ತದೆ. (೪೪)

ಯೇಕ ಮುಕ್ತ ಯೇಕ ನಿತ್ಯಮುಕ್ತ । ಯೇಕ ಜಾಣಾವೆ ಜೀವನ್ಮುಕ್ತ ।
ಯೇಕ ಯೋಗೀ ವಿದೇಹಮುಕ್ತ । ಸಮಾಧಾನೀ ॥೪೫॥

ಸಚೇತನ ತೇ ಜೀವನ್ಮುಕ್ತ । ಅಚೇತನ ತೇ ವಿದೇಹಮುಕ್ತ ।
ದೋಹಿವೇಗಳೆ ನಿತ್ಯಮುಕ್ತ । ಯೋಗೇಶ್ವರ ಜಾಣಾವೆ ॥೪೬॥

ಕೆಲವರು ಮುಕ್ತರಿರುವರು. ಕೆಲವರು ನಿತ್ಯ ಮುಕ್ತರಿರುವರು. ಕೆಲವರು ಜೀವನ್ಮುಕ್ತರಿರುವರು. ಕೆಲವು ಯೋಗಿಗಳು ಸಮಾಧಾನಿಗಳಾದ ವಿದೇಹ ಮುಕ್ತರಿರುವರು. ಸಾಂಖ್ಯ ಶಾಸ್ತ್ರದಲ್ಲಿ ವಿದೇಹ ಮುಕ್ತಿ ಮತ್ತು ಜೀವನ್ಮುಕ್ತಿ ಹೀಗೆ ಭೇದವಿರುವದು ಕಂಡುಬರುತ್ತದೆ. ಜ್ಞಾನದಿಂದ ಅವಿದ್ಯೆಯು ನಾಶವಾಗುವದು. ಮತ್ತು ವಿವೇಕಬುದ್ಧಿ ಉಂಟಾಗುವದು. ಮತ್ತು ಮಾನವ (ಪುರುಷ) ಸ್ವಸ್ವರೂಪವನ್ನು ತಿಳಿಯುವನು. ಆದರೆ ಪ್ರಾರಬ್ಧ ಕರ್ಮ ಶಿಲ್ಲಕ ಉಳಿದದ್ದರಿಂದ ಅವನ ಶರೀರ ಬೀಳುವದಿಲ್ಲ. ಅರ್ಥಾತ್ ಸಾಯುವದಿಲ್ಲ. ಎಲ್ಲಿಯವರೆಗೆ ಪ್ರಾರಬ್ಧ ಕರ್ಮವಿರುವದೋ ಅಲ್ಲಿಯವರೆಗೆ ಜೀವನ್ಮುಕ್ತಿಯ ಅವಸ್ಥೆಯಲ್ಲಿ ಪುರುಷ (ಮನುಷ್ಯ) ಇರುವನು. ಇವನಿಗೆ ಪ್ರಕೃತಿಯ ಬಂಧನವು ಇರುವದಿಲ್ಲ. ಪ್ರಾರಬ್ಧ ಕರ್ಮದ ಭೋಗ ಪೂರ್ಣವಾದ ಕೂಡಲೇ ದೇಹ ಬಿದ್ದು ಹೋಗುವದು. ಹಾಗೂ ಅದು ವಿದೇಹ ಮುಕ್ತಿಯನ್ನು ಹೊಂದುವದು. (ಪ್ರಾಪ್ತ ಮಾಡಿಕೊಳ್ಳುವದು). ಯೋಗದಲ್ಲಿ ಅಸಂಪ್ರಜ್ಞಾತ ಸಮಾಧಿಯ ವರ್ಣನೆ ಮಾಡುವಾಗ ಅಲ್ಲಿ ವಿದೇಹಾವಸ್ಥೆಯ ವರ್ಣನೆಯೂ ಬಂದದ್ದು ಕಾಣುವದು. ಇದರಲ್ಲಿ ಎಲ್ಲ ವೃತ್ತಿಯ ಸಂಪೂರ್ಣ ನಿರೋಧ-ನಿಯಂತ್ರಣ ಸಾಧಿಸಿರುವದು. (ಸಾಧಿಸಲಾಗಿರುವದು). ಅದ್ವೈತ ವೇದಾಂತದಲ್ಲಿ ಜೀವನ್ಮುಕ್ತಿಯನ್ನು ಒಪ್ಪಿರುವರು. ಬ್ರಹ್ಮಜ್ಞಾನ ಆಯಿತೆಂದರೆ (೧) ಸಂಚಿತ ಅಂದರೆ ಪೂರ್ವ ಜನ್ಮದಲ್ಲಿಯ ಕರ್ಮಸಂಗ್ರಹ (೨) ಕ್ರಿಯಾಮಾಣ ಅಂದರೆ ಈಗಿನ ಜನ್ಮದಲ್ಲಿಯ ಕರ್ಮ ಸಂಗ್ರಹ ಇವು ಭಸ್ಮವಾಗುವವು. ಪ್ರಾರಬ್ಧ ಕರ್ಮವು ಮಾತ್ರ ಶಿಲ್ಲಕ ಉಳಿಯುವದು. ಈ ಪ್ರಾರಬ್ಧ ಕರ್ಮ ಕ್ಷಯವಾಗುವವರೆಗೆ ಜ್ಞಾನಿ ಪುರುಷನಿಗೆ ದೇಹ ವಿಸರ್ಜಿಸಲು ಬರುವದಿಲ್ಲ. ಜ್ಞಾನಿಯು ದೇಹ ಬಿಡುವದಿಲ್ಲ. (ಕರ್ಮ ಕ್ಷಯವಾಗದೆ ದೇಹ ಬಿಡುವದಿಲ್ಲ) ವೆಂದು ಅನ್ನುವದು ಹೆಚ್ಚು ಯೋಗ್ಯವೆನಿಸುವದು. ಇದಕ್ಕೇ ಜೀವನ್ಮುಕ್ತಿಯೆಂದು ಅನ್ನುವರು ರಾಮಾನುಜಾಚಾರ್ಯರು ಮುಕ್ತ ಮತ್ತು ನಿತ್ಯ ಮುಕ್ತ ಹೀಗೆ ಎರಡು ತರಹದ ಮುಕ್ತರಿರುವರೆಂದು ಅಂದಿದ್ದಾರೆ. ಒಪ್ಪಿದ್ದಾರೆ. ಭಗವಂತನಿಗೆ ಶರಣು ಹೋಗಿ ಅವನ ಕೃಪೆಯನ್ನು ಭೋಗಿಸುವವನು ಮುಕ್ತನೆನಿಸುವನು. ಮತ್ತು ಯಾರು ಅಖಂಡವಾಗಿ ಭಗವಂತನ ಹತ್ತಿರವೇ ಇರುವರೋ ಅವರು ನಿತ್ಯಮುಕ್ತರು. ಇವರು ಸಂಸಾರದಲ್ಲಿ ಎಂದೂ ಬರುವದೇ ಇಲ್ಲವೆಂದು ಅಂದಿದ್ದಾರೆ. ಶ್ರೀ ಸಮರ್ಥರು ೧. ಮುಕ್ತ ೨. ಜೀವನ್ಮುಕ್ತ ೩. ವಿದೇಹ ಮುಕ್ತ ೪. ನಿತ್ಯಮುಕ್ತ ಹೀಗೆ ನಾಲ್ಕು ಪ್ರಕಾರದ ಮುಕ್ತರೆಂದು ತಾವು ಒಪ್ಪಿ ನಮಗೂ ಹೇಳಿದ್ದಾರೆ. ಇವುಗಳ ಬಗ್ಗೆ ಮುಂದಿನ ಓವಿ (ನುಡಿ)ಗಳಲ್ಲಿ ತಿಳಿಸಿ ಹೇಳುವರು. (೪೫) ೧] ಮುಕ್ತನೆಂದರೆ ಭಗವಂತನ ಕೃಪೆಯನ್ನು ಆನಂದದಿಂದ ಭೋಗಿಸುವವನು ಮುಕ್ತನು ೨] ಮುಕ್ತನಾಗಿದ್ದು ಜೀವಂತನಿರುವವನು ಜೀವನ್ಮುಕ್ತನೆಂದು ತಿಳಿಯಬೇಕು. ಇವನು ಸಚೇತನನು. ೩] ಮುಕ್ತನಾಗಿದ್ದು ದೇಹ ಬಿಟ್ಟವನು ವಿದೇಹ ಮುಕ್ತನೆಂದು ತಿಳಿಯಬೇಕು. ಇವನು ಅಚೇತನನು. ೪] ನಿತ್ಯ ಮುಕ್ತನು ಮಾತ್ರ ಇವರಿಬ್ಬರಿಗಿಂತ ಬೇರೆ ಇರುವನು. ಇವನನ್ನು ಯೋಗೀಶ್ವರನೆಂದು ತಿಳಿಯಬೇಕು. ಈ ವಿಶ್ವದಲ್ಲಿ ಅಧ್ಯಾತ್ಮ ವಿದ್ಯೆಯನ್ನು ಉಳಿಸಿ ತಿಳಿಸಿಕೊಡುವ ಕೆಲಸವನ್ನು ಮುಕ್ತ ಪುರುಷನು ಮಾಡುವನು. ಒಮ್ಮೊಮ್ಮೆ ಕಾಲ ಕಠಿಣ ವಿದ್ದು - ದುರ್ದೈವದ್ದಾಗಿ ಬರುವದು. ಆ ಸಮಯದಲ್ಲಿ – ಜನರನ್ನು ಅಧ್ಯಾತ್ಮದ ಕಡೆಗೆ ತಿರುಗಿಸುವದಕ್ಕೆ ವಿಲಕ್ಷಣ ಸಾಮರ್ಥ್ಯವುಳ್ಳ ಸತ್ಪುರುಷನ ಅವಶ್ಯಕತೆ ಬಹಳ ಇರುತ್ತದೆ. ಅಂಥ ಹೊತ್ತಿನಲ್ಲಿ ನಿತ್ಯ ಮುಕ್ತ ಪುರುಷನು ಜನ್ಮ ಹೊಂದುವನು. ಅವನಿಗೆ ಅವತಾರೀ ಸಂತನೆಂದು ಕರೆಯುವರು. ಇವನಲ್ಲಿ ಬ್ರಹ್ಮಜ್ಞಾನದ ಜೊತೆಗೇ ಯೋಗ ವಿದ್ಯಾ ಜ್ಞಾನವೂ ಸಹ ಅಚಾಟ (ಅದ್ಭುತ, ವಿಲಕ್ಷಣ) ಸಾಮರ್ಥ್ಯವಲ್ಲಿರುವದು. ಅಂತೆಯೇ ಶ್ರೀ ಸಮರ್ಥರು ಇವನಿಗೆ ಯೋಗೀಶ್ವರನೆಂದು ವಿಶೇಷ ರೂಪದಲ್ಲಿ ಕರೆದಿರುವರೆಂದು ಅನ್ನಬಹುದು. ನಿತ್ಯ ಮುಕ್ತನು ಮಾಡಿದ ಕಾರ್ಯ ಅನೇಕ ಶತಕಗಳ ವರೆಗೆ ನಿತ್ಯನೂತನವಾಗಿರುವದು. (೪೬)

ಸ್ವರೂಪಬೋಧೇ ಸ್ತಬ್ಧತಾ । ತೇ ಜಾಣಾವೀ ತಾಟಸ್ತತಾ ।
ತಾಟಸ್ತತಾ ಆಣೀ ಸ್ತಬ್ಧತಾ । ಹಾ ದೇಹಸಮಂಧು ॥೪೭॥

ಯೇಥೇ ಅನುಭವಾಸೀ ಕಾರಣ । ಯೇರ ಸರ್ವ ನಿಃಕಾರಣ ।
ತೃಪ್ತೀ ಪಾವಾವೀ ಆಪಣ । ಆಪುಲ್ಯಾ ಸ್ವಾನುಭವೇ ॥೪೮॥

ಕಂಠ ಮರ್ಯಾದ ಜೇವಿಲಾ । ತ್ಯಾಸ ಮ್ಹಣತೀ ಭುಕೇಲಾ ।
ತೇಣೇ ಶಬ್ದೇ ಜಾಜಾವಲಾ । ಹೇ ತೋ ಘಡೇನಾ ॥೪೯॥

ಸ್ವರೂಪೀ ನಾಹೀ ದೇಹೋ । ತೇಥೇ ಕಾಈಸಾ ಸಂದೇಹೋ ।
ಬದ್ಧಮುಕ್ತ ಐಸಾ ಭಾವೋ । ದೇಹಾಚಕಡೆ ॥೫೦॥

ದೇಹಬುದ್ಧಿ ಧರೂನ ಚಿಂತೀ । ಮುಕ್ತ ಬ್ರಹ್ಮಾದಿಕ ನವ್ಹೇತೀ ।
ತೇಥೇ ಶುಕಾಚಿ ಕೋಣ ಗತೀ । ಮುಕ್ತಪಣಾಚೀ ॥೫೧॥

ಮುಕ್ತಪಣ ಹೇ ಚಿ ಬದ್ಧ । ಮುಕ್ತ ಬದ್ಧ ಹೇ ಅಬದ್ಧ ।
ಸಸ್ವರೂಪ ಸ್ವತಸಿದ್ಧ । ಬದ್ಧ ನಾ ಮುಕ್ತ ॥೫೨॥

ಮುಕ್ತ ಪಣಾಚೀ ಫೋಟೀ ಶಿಳಾ । ಬಾಂಧತಾ ಜಾಈಜೆ ಪಾತಾಳಾ ।
ದೇಹಬುದ್ಧೀಚಾ ಆಗಳಾ । ಸ್ವರೂಪೀ ನ ಸಟೆ ॥೫೩॥

ಮೀಪಣಾ ಪಾಸೂನ ಸುಟಲಾ । ತೋ ಚಿ ಯೇಕ ಮುಕ್ತ ಜಾಲಾ ।
ಮುಕಾ ಅಥವಾ ಬೋಲಿಲಾ । ತರೀ ತೋ ಮುಕ್ತ ॥೫೪॥

ಸ್ವಸ್ವರೂಪಾನುಭವ ಇದು ಜ್ಞಾನೀ ಪುರುಷನ ಮುಖ್ಯ ಲಕ್ಷಣವಿರುವದು. ದೇಹದ ಮೇಲೆ ಇವುಗಳ ಕೆಲವೊಂದು ಪರಿಣಾಮವಾಗುವದೆಂಬ ಮಾತು ನಿಜವಿದ್ದರೂ ಕೇವಲ ದೇಹದ ಲಕ್ಷಣಗಳ ಮೇಲಿಂದ ಮನುಷ್ಯನಿಗೆ ಸ್ವಸ್ವರೂಪಾನುಭವ ಬಂದಿದೆ. ಎಂದು ಅನ್ನಲಿಕ್ಕೆ ಬರುವದಿಲ್ಲ. ಅಹಂಕಾರದ ಕ್ಷಯವಾಗಿ ದೇಹದ ಬಗ್ಗೆ ಸಂಪೂರ್ಣ ವಿಸ್ಮರಣವಾಗದ ಹೊರತು ಆತ್ಮಸಾಕ್ಷಾತ್ಕಾರವಾಗುವದಿಲ್ಲ. ಅಂತೆಯೇ ಜ್ಞಾನಿ ಪುರುಷನ ದೇಹ ಇಂಥದೇ ಒಂದು ಅವಸ್ಥೆಯಲ್ಲಿ ಇರುವದೆಂದು ಹೇಳಲಿಕ್ಕೆ ಶಕ್ಯವಿಲ್ಲ. ಮತ್ತು ಇದಕ್ಕೆ ಇಂಥದೇ ಎಂಬ ನಿಯಮವೂ ಇಲ್ಲ. ಪ್ರಾರಬ್ಧ ಕರ್ಮ ಹೇಗಿರುವದೋ ಅದರಂತೆ ವರ್ತನೆ ಅವನಿಂದ ಘಟಿಸುತ್ತದೆ. ಅರ್ಥಾತ್ ಒಬ್ಬಾನೊಬ್ಬ ಜ್ಞಾನಿ ಮೌನ ಧಾರಣ ಮಾಡಿದರೆ ಇನ್ನೊಬ್ಬ ಜ್ಞಾನಿ ನಿರೂಪಣ ಹೇಳಬಹುದು. ಈ ಇಬ್ಬರೂ ಮುಕ್ತರೇ ಇರುವರು.ಯಾಕಂದರೆ ಇವರ ಸ್ವಾನುಭವದಲ್ಲಿ ಎಳ್ಳಷ್ಟು ಅಂತರ (ಹೆಚ್ಚು ಕಡಿಮೆ) ಇರುವದಿಲ್ಲ:– ಒಂದು ಸಲ ಸ್ವರೂಪ ಸಾಕ್ಷಾತ್ಕಾರ ವಾಗಿ ಆತ್ಮಜ್ಞಾನವಾಯಿತೆಂದರೆ ದೇಹ ಸ್ತಬ್ಧವಾಗುತ್ತದೆ. ಅದರ ಕರ್ಮ ಮಾಡುವದು ನಿಲ್ಲುವದು. ಇದಕ್ಕೆ ತಟಸ್ಥ ಅವಸ್ಥೆ ಎಂದು ಅನ್ನುವರು. ಆದರೆ ತಟಸ್ಥತನ ಮತ್ತು ಸ್ಥಬ್ಧತನ ಇವುಗಳು ದೇಹಕ್ಕೆ ಮಾತ್ರ ಸಂಬಂಧ ಪಟ್ಟವುಗಳಾಗಿರುವವು. ಸ್ವರೂಪಾನುಭವಕ್ಕೆ ಇವುಗಳ ಸಂಬಂಧವಿರುವದಿಲ್ಲ. (೪೭) ಪರಮಾರ್ಥದಲ್ಲಿ ಮುಖ್ಯವಾಗಿ ಸ್ವರೂಪದ ಅನುಭವಕ್ಕೆ ಮಾತ್ರ ಪರಮಶ್ರೇಷ್ಠಸ್ಥಾನವಿರುವದು. ಬಾಕಿಉಳಿದಎಲ್ಲ ಮಾತುಗಳು ನಿರರ್ಥಕವಿರುವವು. ಅಂತೆಯೇ ನೀವು ಸ್ವತಃ ಸ್ವರೂಪಾನುಭವ ತೆಗೆದುಕೊಳ್ಳಿರಿ, ಪಡೆಯಿರಿ. ಮತ್ತು ಸಮಾಧಾನ ಹೊಂದಿರಿ. (೪೮) ಉದಾ:– ತಿಳಿಯಿರಿ, ಒಬ್ಬ ಮನುಷ್ಯನು ಚನ್ನಾಗಿ ಹೊಟ್ಟೆ ತುಂಬ ಊಟ ಮಾಡಿದ್ದಾನೆ. ಅವನಿಗೆ "ನೀನು ಹಸಿದಿರುವೆ" ಎಂದು ಯಾರಾದರೂ ಅಂದರೆ ಹೀಗೆ ಅಂದದ್ದಕ್ಕೆ ಅವನೇನೂ ಉದ್ವಿಗ್ನ ಅಥವಾ ಅಸ್ವಸ್ಥನಾಗುವದಿಲ್ಲ. ಕಾರಣವೆಂದರೆ ಅವನು ಹಸಿವೆಯಿಂದ ಇರುವದಿಲ್ಲ. ಉಂಡು ತೃಪ್ತನಾಗಿರುವನು ಇದರಂತೆಯೇ ಒಬ್ಬ ಮನುಷ್ಯನು ಸ್ವಸ್ವರೂಪದ ಅನುಭವ ಪಡೆದು ಸಂಪೂರ್ಣ ಸಮಾಧಾನಿಯಾಗಿರುವನು, ಮುಕ್ತನಾಗಿರುವನು. ಇಂಥವನಿಗೆ ಯಾರಾ ದರೂ ಬದ್ಧನಿರುವೆ ಅಂದರೆ. ಅಜ್ಞಾನಿ ಇರುವೆ ಅಂದರೆ ಇಷ್ಟರಿಂದ ಅವನ ಸಮಾಧಾನವೇನೂ ಭಂಗಗೊಳ್ಳುವದಿಲ್ಲ. ಇದನ್ನು ನಿಶ್ಚಿತವೆಂದು ತಿಳಿಯಿರಿ. (೪೯) ಸ್ವಸ್ವರೂಪದ ಸಾಕ್ಷಾತ್ಕಾರದಲ್ಲಿ ದೇಹಭಾವ ಎಷ್ಟೂ ಇರುವದಿಲ್ಲ. ಅಂದಮೇಲೆ ಅಲ್ಲಿ "ನಾನು ಬದ್ಧನೆ ಅಥವಾ ಮುಕ್ತನೇ" ಅನ್ನುವ ಸಂದೇಹವಿರಲು ಶಕ್ಯವಿಲ್ಲ. ಯಾವಲ್ಲಿ ದೇಹದ ಮೇಲೆ ಮಮತೆ ಇರುವದೋ ಅಲ್ಲಿ ಬದ್ಧತನ ಮತ್ತು ಮುಕ್ತತನವೆಂಬ ಭೇದ ಕಂಡು ಬರುವದು. (೫೦) ಎಲ್ಲಿಯುವರೆಗೆ ಅಂತಃಕರುಣದಲ್ಲಿ ದೇಹಬುದ್ಧಿ ಇರುವದೋ ಅಲ್ಲಿಯುವರೆಗೆ ಬ್ರಹ್ಮಾದಿಕ ದೇವರಿಗೂ ಸಹ ಮುಕ್ತ ರಾಗಲು ಶಕ್ಯವಿಲ್ಲ. ಅಂದಮೇಲೆ ದೇಹಬುದ್ಧಿ ಇದ್ದದ್ದಾದರೆ ಶುಕಮುನಿಯು ಸಹ ಮುಕ್ತನಾಗಲು ಶಕ್ಯವಿಲ್ಲ. ಅಂದಮೇಲೆ ಇದರಲ್ಲಿ ಆಶ್ಚರ್ಯಪಡುವಂಥದೇನಿರುವದು.?(೫೧) "ನಾನು ಮುಕ್ತ ಇರುವೆ" ಈ ತಿಳುವಳಿಕೆ ಇರುವದೂ ಸಹ ಬದ್ಧತ್ವದ ಲಕ್ಷಣವಿರುವದು. ಆತ್ಮಸ್ವರೂಪದ ದೃಷ್ಟಿಯಿಂದ ಮುಕ್ತ ಮತ್ತು ಬದ್ಧ ಎಂಬ ಮಾತುಗಳು ವ್ಯರ್ಥ. ಇಂಥ ಭಾಷೆಯ ಉಪಯೋಗ ಯೋಗ್ಯವೆನಿಸುವದಿಲ್ಲ. ಸ್ವಸ್ವರೂಪವು ಸ್ವತಃ ಸಿದ್ಧವಿರುವ ದೆಂತಲೇ ಅದು ಬದ್ಧವಲ್ಲ. ಅದರಂತೆ ಮುಕ್ತವೂ ಅಲ್ಲ. (೫೨) "ನಾನು ಮುಕ್ತ ಇರುವೆ" ಅನ್ನುವದು ಇದೂ ಒಂದು ಅಪಂಕಾರವೇ ಇರುವದು. ಇಂಥ ಅಪಂಕಾರ ರೂಪದ ಕಲ್ಲನ್ನು ಹೊಟ್ಟೆಗೆ ಕಟ್ಟಿಕೊಂಡು ಯಾರಾವರೂ ಒಂದು ವೇಳೆ ಜೀವನ ಸಾಗರದಲ್ಲಿ ಇಳಿದರೆ ರಸಾತಳಕ್ಕೆ ಹೋಗದೇ ಗತ್ಯಂತರವಿಲ್ಲ. ದೇಹಬುದ್ಧಿಯೆಂಬ (ವಿಶೇಷ ದೇಹಬುದ್ಧಿಯುಳ್ಳವನು) ಕಟ್ಟಿಗೆಯ ತುಂಡನ್ನು (ಅಗಳಿಯನ್ನು) ತೆಗೆದುಕೊಂಡು, ಸ್ವಸ್ವರೂಪದ ಕಡೆಗೆ (ರಸವಿಲ್ಲ ದ್ದನ್ನು ತೆಗೆದುಕೊಂಡು) ಹೊರಟರೆ ಅವನಿಗೆ ಸ್ವರೂಪದವರೆಗೆ ಹೋಗಿ ಮುಟ್ಟಲಿಕ್ಕೆ ಬರುವದಿಲ್ಲ. (ರಸವೆಂದರೆ ಜ್ಞಾನವೆಂಬ ರಸವು) (೫೩) ನಾನು ಎಂಬ ಅಹಂದಿಂದ ಯಾರು ಸಂಪೂರ್ಣ ಮುಕ್ತರಾಗಿರುವರೋ. ಅವರೇ ಮಾತ್ರ ಮುಕ್ತದಶೆಗೆ ಮುಟ್ಟುತ್ತಾರೆ. ಅಂಥವರು ಮೌನಿಗಳಾಗಿರಲಿ ಅಥವಾ ಸಂಭಾಷಣ ಮಾಡುವವರಾಗಿರಲಿ ಒಟ್ಟಿನಲ್ಲಿ ಏನಿದ್ದರೂ ಅವರು ಮುಕ್ತರೇ ಸರಿ. (೫೪)

ಜಯಾಸ ಬಾಧಾವೇ ತೇ ನಾವ । ತೇಥೇ ಕೈಚಾ ಮುಕ್ತಭಾವ ।
ಪಾಹೋ ಜಾತಾ ಸಕಳ ವಾವ । ಗುಣವಾರ್ತಾ ॥೫೫॥

॥ಶ್ಲೋಕ॥ ಬದ್ಧೋ ಮುಕ್ತ ಇತಿ ವ್ಯಾಖ್ಯಾ । ಗುಣತೋ ಮೇ ನ ವಸ್ತುತಃ॥
ಗುಣಸ್ಯ ಮಾಯಾಮೂಲತ್ವಾನ್ನ। ಮೇ ಮೋಕ್ಷೋ ನ ಬಂಧನಮ್॥ ॥ಭಾ॥

ತತ್ವಜ್ಞಾತಾ ಪರಮಶುದ್ಧ । ತಯಾಸೀ ನಾಹೀ ಮುಕ್ತ ಬದ್ಧ ।
ಮುಕ್ತ ಬದ್ಧ ಹಾ ವಿನೋದ । ಮಾಯಾಗುಣೇ ॥೫೬॥

ಜೇಥೇ ನಾಮರೂಪ ಹೇ ಸರೆ । ತೇಥೇ ಮುಕ್ತಪಣ ಕೈಚೇಉರೆ ।
ಮುಕ್ತ ಬದ್ಧ ಹೇ ವಿಸರೆ । ವಿಸರಲೇ ಪಣೇಸೀ ॥೫೭॥

ಬದ್ಧ ಮುಕ್ತ ಜಾಲಾ ಕೋಣ । ತೋ ತರೀ ನವ್ಹೇ ಕೀ ಆಪಣ ।
ಬಧಕ ಜಾಣಾವೇ ಮೀಪಣ । ಧರ್ತ್ಯಾಸ ಬಾಧೀ ॥೫೮॥

ಏವಂ ಹಾ ಅವಘಾ ಭ್ರಮ । ಅಹಂತೇಚಾ ಜಾಲಾ ಶ್ರಮ ।
ಮಾಯಾತೀತ ಜೋ ವಿಶ್ರಾಮ । ಸೇವಿಲಾ ನಾಹೀ ॥೫೯॥

ಅಸೋ ಬದ್ಧತಾ ಆಣೀ ಮುಕ್ತತಾ । ಆಲೀ ಕಲ್ಪನೇಚ್ಯಾ ಮಾಥಾ ।
ತೇ ಕಲ್ಪನಾ ತರೀ ತತ್ವತಾ । ಸಾಚ ಆಹೇ ॥೬೦॥

ಮ್ಹಣೌನಿ ಹೇ ಮೃಗಜಳ । ಮಾಯಾ ನಾಥಿಲೇ ಆಭಾಳ ।
ಸ್ವಪ್ನ ಮಿಥ್ಯಾ ತತ್ಕಾಳ । ಜಾಗೃತೀಸ ಹೋಯ ॥೬೧॥

ಸ್ವಪ್ನೀ ಬದ್ಧ ಮುಕ್ತ ಜಾಲಾ । ತೋ ಜಾಗೃತೀಸ ನಾಹೀ ಆಲಾ ।
ಕೈಚಾ ಕೋಣ ಕಾಯೆ ಜಾಲಾ । ಕಾಹೀ ಕಳೇನಾ ॥೬೨॥

ಮ್ಹಣೋನಿ ಮುಕ್ತ ವಿಶ್ವಜನ । ಜಯಾಸ ಜಾಲೇ ಆತ್ಮಜ್ಞಾನ ।
ಶುದ್ಧಜ್ಞಾನೇ ಮುಕ್ತಪಣ । ಸಮೂಳ ನಾವ ॥೬೩॥

ಸತ್ವ, ರಜ, ತಮ, ಈ ಮೂರೂ ಗುಣಗಳಿಂದ ಬಂಧನ (ಆಸಕ್ತಿ) ಉತ್ಪನ್ನವಾಗುವದು. ಆದರೆ ಸ್ವರೂಪದಲ್ಲಿ (ಆತ್ಮಸ್ವರೂಪದಲ್ಲಿ) ತ್ರಿಗುಣಕ್ಕೆ ಪ್ರವೇಶ ಮಾಡಲು ಆಗುವದಿಲ್ಲ. ಅಂದಮೇಲೆ ಎಲ್ಲಿ ಬಂಧನವೇ ಹುಟ್ಟುವದಿಲ್ಲವೋ ಅಲ್ಲಿ ಮುಕ್ತತನವಿರಲು ಹೇಗೆ ಶಕ್ಯವಾದೀತು? ಸ್ವಸ್ವರೂಪವಿರುವಲ್ಲಿ ತ್ರಿಗುಣಗಳಿಗೆ ಎಳ್ಳಷ್ಟೂ ಸ್ಥಾನವಿರುವದಿಲ್ಲ. (೫೫) **ಶ್ಲೋಕ:-** ಬದ್ಧೋ ಮುಕ್ತ ಇತಿ ವ್ಯಾಖ್ಯಾ ಗುಣತೋ ಮೇನ ವಸ್ತುತಃ! ಗುಣಸ್ಯ ಮಾಯಾ ಮೂಲತ್ವಾನ್ ಮೇ ಮೋಕ್ಷೋ ನ ಬಂಧನಮ್ ॥೪॥ (ಭಾಗವತ) **ಶ್ಲೋಕದ ಅರ್ಥ:-**ಬದ್ಧ ಮತ್ತು ಮುಕ್ತನೆಂದು ವರ್ಣಿಸಿ ಹೇಳುವದು ಗುಣಗಳ ಮೂಲಕವಾಗಿಯೇ ಇರುವದು. ಆತ್ಮವಸ್ತುವಿನ ದೃಷ್ಟಿಯಿಂದ ಇದು ಖರೇ ಇರುವದಿಲ್ಲ. ಗುಣವೇ ಮಾಯೆಯಿಂದ ಉತ್ಪನ್ನವಾಗಿದೆ. ಅರ್ಥಾತ್ ಮಾಯೆಯೇ ಗುಣಗಳಿಗೆ ಮೂಲ ಕಾರಣಳಿರುವಳು. ಆದರೆ ಮಾಯಾ ಇದೇ ಮೂಲತಃ ಖರೇ ಅಲ್ಲ. ಆದ್ದರಿಂದ ಗುಣಗಳ ವ್ಯವಹಾರವೂ ಸಹ ಖರೇ ಅಲ್ಲ. ಅಂತೆಯೇ ಆತ್ಮಸ್ವರೂಪಕ್ಕೆ ಹೇಗೆ ಬಂಧನವಿಲ್ಲವೋ ಅದರಂತೆ ಬಂಧನದಿಂದ ಮುಕ್ತವಾಗುವದೆಂದುಹೇಳುವದೂ ಸರಿಯಲ್ಲ;- ಅತ್ಯಂತ ಶುದ್ಧ ಬ್ರಹ್ಮಜ್ಞಾನಿಯಾದವನೊಬ್ಬನಿರುವನು. ಅವನಲ್ಲಿ ಬದ್ಧತನ ಅಥವಾ ಮುಕ್ತತನ ಎಂಬ ಭೇದವೇ ಇರುವದಿಲ್ಲ. ಇಂಥವನು ಬದ್ಧ, ಇಂಥವನು ಮುಕ್ತ ಈ ಮಾತು ಮಾಯೆಯ ಅಧಿಕಾರದಲ್ಲಿರುವ ತ್ರಿಗುಣಗಳ ಕರಾಮತ್, ಚಮತ್ಕಾರ, ವಿನೋದ, ಇರುವದು. (೫೬) ಯಾವತ್ತೂ ನಾಮರೂಪಮಯವಾದ ದೃಶ್ಯ ವಿಶ್ವವು ಎಲ್ಲಿ ಅಂತರ್ಧಾನ ಹೊಂದುವದೋ ಅಲ್ಲಿ "ನಾನು ಮುಕ್ತ ಇರುವೆ" ಈ ಭಾವನೆ ಉಳಿಯುವದು ಶಕ್ಯವೇ ಇಲ್ಲ. ಹಾಗೂ ಸ್ವಸ್ವರೂಪದ ಅನುಭವದಲ್ಲಿ ಬದ್ಧತನ ಮತ್ತು ಮುಕ್ತತನ ಇವೆರಡರ ಮರವಾಗುವದು. ಮರೆತು ಹೋಗುವವು. ಇಷ್ಟೇ ಅಲ್ಲ ಈ ಮರೆತುಬಿಟ್ಟೆ ಎಂಬ ಮರವಿನ ಅರಿವೂ ಸಹ ಇರುವದಿಲ್ಲ· (೫೭) ಖರೇ "ನಾನು" ಇದರ ಜ್ಞಾನ ಆದ ಮೇಲೆ ಜ್ಞಾನಿ ಅನ್ನುವದೇನಂದರೆ:- ಯಾರು ಬದ್ಧರಿದ್ದರೋ ಅವರು ಮುಕ್ತರಾದರು ಅವರು ಯಾರಿದ್ದರೂ ಅವರೆಲ್ಲ ಮುಕ್ತರಾದರು. ಅವರು ಯಾರೇ ಇದ್ದರೂ ಇರಲಿ, ಆದರೆ ನಾನು ಮಾತ್ರ ಖಾತ್ರಿಯಿಂದ ಅವನು ಅಲ್ಲವೇ ಅಲ್ಲ. "ನಾನು" ಎಂಬುದು ನಿಜವಾಗಿ ಬಂಧನಕ್ಕೆ ಕಾರಣವಿರುವದು. ಯಾವನು ನಾನು ಎಂಬ ಅಹಂ ಹಿಡಿಯುವನೋ ಅವನಿಗೆ ಅದು ಬಂಧಿಸುವದು.ಬಂಧನದಲ್ಲಿಕೆಡವುವದು.(೫೮)ಸ್ವಲ್ಪದರಲ್ಲಿಯೇ ಹೇಳುವದೇನೆಂದರೆ, ನಾನು ಬದ್ಧನಿದ್ದೆನು ಮತ್ತು ಮುಕ್ತನಾದೆನು. ಇದೆಲ್ಲವೂ ಭ್ರಮೆಯೆಂದು ತಿಳಿಯಬೇಕು. "ನಾನು" ಎಂಬುದರಿಂದ ಇದೆಲ್ಲ ಕಷ್ಟ ಇರುವದು. (ಆಗುವದು). ಮಾಯೆಯ ಆಚೆಗೆ ಸಮಾಧಾನ ರೂಪಿಯಾದ ಯಾವ ಬ್ರಹ್ಮ ಇರುವನೋ, ಅವನ ಅನುಭವವನ್ನು ಪಡೆಯದ ಮೂಲಕ ಈ ಕಷ್ಟ ಅನುಭವಿಸಬೇಕಾಗುವದು.(೫೯) ಬದ್ಧತನ ಹಾಗೂ ಮುಕ್ತತನ ಇವೆರಡರ ಮೂಲವು ಕಲ್ಪನೆಯಲ್ಲಿರುವದು. ಈ ಕಲ್ಪನೆಯಾದರೂ ನಿಜವಾಗಿ ಖರೇ ಇರುವದೋ ಹೇಗೆ? ಅರ್ಥಾತ್ ಖರೇ ಇರುವದಿಲ್ಲ. (೬೦) ಒಟ್ಟಿನಲ್ಲಿ ಬದ್ಧ ಅವಸ್ಥೆ ಮತ್ತು ಮುಕ್ತ ಅವಸ್ಥೆ ಇವು ಮಾಯಾಮಯವಿರುವವು. ಮೃಗಜಲದಂತೆ ಅಥವಾ ಆಕಾಶದಲ್ಲಿಯ ಮೋಡದಂತೆ ಇವೂ ಮಿಥ್ಯೆ ಇರುವವು. ನಿದ್ರೆಯಲ್ಲಿ ಸ್ವಪ್ನ ಬಿದ್ದಂಥ ಮನುಷ್ಯನನ್ನು ಎಚ್ಚರಗೊಳಿಸಿದ ಕೂಡಲೇ ಅವನ ಸ್ವಪ್ನ ಆಗಿಂದಾಗಲೇ ಸುಳ್ಳು ಎನಿಸುವದು. ಇದರಂತೆ ಬದ್ಧ ಮತ್ತು ಮುಕ್ತತನದ ಮಿಥ್ಯಾ ಕಲ್ಪನೆಯನ್ನು ಮಾಡುವವನಿಗೆ ಬ್ರಹ್ಮ ಸಾಕ್ಷಾತ್ಕಾರ ವಾದ ಕೂಡಲೇ ಅವನ ಮೊದಲಿನ ಆ ಕಲ್ಪನೆಗಳೆಲ್ಲವೂ ಒಮ್ಮಿಂದೊಮ್ಮೆಲೇ ಕರಗಿ ಹೋಗುವವು. ಇಲ್ಲದಾಗಿ ಬಿಡುವವು. (೬೧) ಒಬ್ಬ ಮನುಷ್ಯನಿಗೆ ಸ್ವಪ್ನ ಬಿದ್ದಿತು. ಅದರಲ್ಲಿ ತಾನು ಬದ್ಧ ಇದ್ದೆನು. ಈಗ ನಾನು ಮುಕ್ತ ನಾದೆನು ಎಂಬ ಸ್ವಪ್ನ ಕಂಡನು. ಎಚ್ಚರವಾದ ಮೇಲೆ ಅವನು ಬದ್ಧನೂ ಇರುವದಿಲ್ಲ. ಮತ್ತು ಮುಕ್ತನೂ ಇರುವದಿಲ್ಲ. ಸ್ವಪ್ನದಲ್ಲಿ ಏನು?ಹೇಗೆ? ಏಕೆ ಆಯಿತು? ಇದೆಲ್ಲ ಎಚ್ಚರದಲ್ಲಿ ಎಷ್ಟೂ ಜ್ಞಾಪಕಕ್ಕೆ ಬರುವದಿಲ್ಲ.(೬೨) ಆದ್ದರಿಂದ ಆತ್ಮಸಾಕ್ಷಾತ್ಕಾರವಾಗಿ ಆತ್ಮಜ್ಞಾನ ಪ್ರಾಪ್ತವಾದವರೆಲ್ಲರೂ ಮುಕ್ತರೆಂದು ತಿಳಿಯಬೇಕು. ಈ ಜ್ಞಾನವೇ ಪರಿಪಕ್ವವಾಯಿತೆಂದರೆ ನಾನು ಮುಕ್ತ ಇರುವೆ ಎಂಬ ಅರಿವೂ ಸಹ ಇಲ್ಲದಾಗುತ್ತದೆ. (೬೩)

ಬದ್ಧ ಮುಕ್ತ ಹಾ ಸಂದೇಹೋ । ಧರೀ ಕಲ್ಪನೇಚಾ ದೇಹೋ ।
ಸಾಧು ಸದಾ ನಿಃಸಂದೇಹೋ । ದೇಹಾತೀತ ವಸ್ತು ॥೬೪॥

ಆತಾ ಅಸೋ ಹೇ ಪುಢತೀ । ಪುಢೇ ರಾಹಾವೇ ಕೋಣೇ ರಿತೀ ।
ತೇ ಚಿ ನಿರೂಪಣ ಶ್ರೋತೀ । ಸಾವಧ ಪರಿಸಾವೇ ॥೬೫॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
''ಬದ್ಧ ಮುಕ್ತ ನಿರೂಪಣ'' ನಾಮ ಸಮಾಸ ಷಷ್ಠಮ ॥

● ●

ದೇಹಬುದ್ಧಿಯಿಂದನಿರ್ಮಾಣವಾಗುವ ಕಲ್ಪನೆಯು ಬದ್ಧ ಮತ್ತು ಮುಕ್ತ ಎಂಬ ಭೇದವನ್ನು ಹುಟ್ಟಿಸುತ್ತದೆ. ಆದರೆ ಆತ್ಮಜ್ಞಾನಿ ಸಾಧುಪುರುಷರು ದೇಹದ ಆಚೆಗೆ ಇರುವಂಥ ಬ್ರಹ್ಮದೊಂದಿಗೆ ಸಮರಸವಾಗಿರುವದರಿಂದ ಇವರು ಯಾವಾಗಲೂ ಭೇದಾತೀತರು ಮತ್ತು ಸಂದೇಹರಹಿತರೂ ಇರುವರು. (೬೪) ಈ ವಿಷಯವನ್ನೇ ಪುನಃ ಪುನಃ ಹೇಳುವದು ಸಾಕು. ಬ್ರಹ್ಮಸ್ವರೂಪರಾಗುವದಕ್ಕಾಗಿ ಯಾವ ರೀತಿಯಿಂದ ಇರಬೇಕು ಎಂಬುದರ ಬಗ್ಗೆ ಇನ್ನು ಮುಂದೆ ಹೇಳುವೆನು. ಶ್ರೋತಾ ಇದನ್ನು ಲಕ್ಷ್ಯಪೂರ್ವಕ ಕೇಳಬೇಕು. (೬೫)

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದ ಏಳನೆಯ ದಶಕದ
"ಬದ್ಧ ಮುಕ್ತ ನಿರೂಪಣ ನಾಮ"ವೆಂಬ ಆರನೆಯ ಸಮಾಸವು ಮುಗಿದುದು.

● ●

### ಸಮಾಸ ಸಪ್ತಮ : ಸಾಧನ ಪ್ರತಿಷ್ಠಾ ನಿರೂಪಣ

॥ಶ್ರೀರಾಮ॥ ವಸ್ತೂಸಿ ಜರೀ ಕಲ್ಪಾವೇ । ತರೀ ತೇ ನಿರ್ವಿಕಲ್ಪ ಸ್ವಭಾವೇ ।
ತೇಥೇ ಕಲ್ಪನೇಚ್ಯಾ ನಾವೇ । ಸುನ್ಯಾಕಾರ ॥೧॥

ತಥಾಪಿ ಕಲ್ಪೂ ಜಾತಾ । ನ ಯೆ ಕಲ್ಪನೇಚ್ಯಾ ಹಾತಾ ।
ವೋಳಖೀ ಠಾಈ ನ ಪಡೆ ಚಿತ್ತಾ । ಭ್ರಂಶ ಪಡೆ ॥೨॥

## ದಶಕ ೭. ಸಮಾಸ ೭. ಸಾಧನ ಪ್ರತಿಷ್ಠಾ ನಿರೂಪಣ

ಪ್ರಪಂಚದಿಂದ ಪರಮಾರ್ಥವನ್ನು ಬೇರ್ಪಡಿಸಬೇಕೆಂದು ಅಂದದ್ದಾದರೆ ಜ್ಞಾನದ ಅಭ್ಯಾಸ ಮಾಡಲಿಕ್ಕೆ ಬೇಕು. ಪ್ರಪಂಚದಲ್ಲಿಯಾಗಲೀ ಅಥವಾ ಪರಮಾರ್ಥದಲ್ಲಿಯಾಗಲೀ ಜ್ಞಾನದಿಂದ ಧ್ಯೇಯವು ಸಾಧ್ಯವಾಗುವದು. ಆದರೆ ಪ್ರಪಂಚದಲ್ಲಿಯ ಜ್ಞಾನ ಮತ್ತು ಪರಮಾರ್ಥದಲ್ಲಿಯ ಜ್ಞಾನ ಇವುಗಳಲ್ಲಿ ಮೂಲತಃ ಭೇದವಿರುವದು. ಪ್ರಾಪಂಚಿಕ ಜ್ಞಾನವು ಜ್ಞಾತಾ ಅಂದರೆ ತಿಳಿದುಕೊಳ್ಳುವವ ಮತ್ತು ಜ್ಞೇಯ ಅಂದರೆ ತಿಳಿಯಬೇಕಾದ ವಸ್ತು. ಈ ಎರಡು ಗಾಲಿಗಳಿಂದ [ಚಕ್ರಗಳಿಂದ] ನಡೆಯುವದು. ಪಾರಮಾರ್ಥಿಕ ಜ್ಞಾನವು. ಜ್ಞಾತಾನು ಜ್ಞೇಯದೊಂದಿಗೆ ತದಾಕಾರ ಹೊಂದುವದರಿಂದ ಒಂದೇ ಗಾಲಿಯಿಂದಲೇ ನಡೆಯುವದು. ಈ ಎರಡು ಜ್ಞಾನದಲ್ಲಿಯ ಸ್ವರೂಪ, ಕ್ಷೇತ್ರ ಹಾಗೂ ಫಲ ಇವುಗಳಲ್ಲಿ ಭಿನ್ನತ್ವವಿರುವದು. ಆದರೆ ನಾವು ನಿತ್ಯದ ರೂಢಿಯಂತೆ ಪ್ರಾಪಂಚಿಕ ಜ್ಞಾನವನ್ನು ಪರಮಾರ್ಥದಲ್ಲಿ ಉಪಯೋಗಿಸುವ ಪ್ರಯತ್ನ ಮಾಡುವೆವು. ಆಗ್ರಹ ಹಿಡಿಯುವೆವು, ಇದರಿಂದಾಗಿ ಆಗ ಅಲ್ಲಿ ವಿಪರೀತ ಜ್ಞಾನ ಉತ್ಪನ್ನವಾಗುವದು. ಉದಾ:- ಆತ್ಮಜ್ಞಾನಿ-ಪುರುಷರು ಬ್ರಹ್ಮವಸ್ತು. ತಮ್ಮ ಮೂಲ ಸ್ವರೂಪ ಇರುತ್ತದೆಂದು ನಿಸ್ಸಂಶಯವಾಗಿ ಹೇಳಿರುವರು. ಅಂದ ಬಳಿಕ ನಾವು. ಅದು ಹೇಗೆ ಇರುವದು. ಇದರ ಬಗೆಗೆ ಕಲ್ಪನೆ ಮಾಡಹತ್ತುವೆವು. ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧ ಹಾಗೂ ನಾನಾ ಪ್ರಕಾರದ ಕಲ್ಪನೆಗಳೆಲ್ಲ ಕೂಡಿ ನಮ್ಮ ಅನುಭವ ವಿಶ್ವವು ಸಿದ್ಧವಾಗುವದು. ನಾಮ ರೂಪಗಳಿಂದ ತುಂಬಿದ ದೃಶ್ಯ ವಿಶ್ವದ ಜ್ಞಾನವಾಗು ವದಕ್ಕೆ ಮೇಲೆ ಹೇಳಿದ್ದೆಲ್ಲ ಉಪಯೋಗ ಬೀಳುವದು. ಆದರೆ ಸ್ಥಳ-ಕಾಲಾತೀತ, ನಿರ್ಗುಣ, ಅದೃಶ್ಯ, ನಿರ್ವಿಕಲ್ಪ ನಿರಾಕಾರ, ಅವ್ಯಕ್ತ, ಅಚಿಂತ್ಯ, ಅಸಂಗ ಮತ್ತು ಅನಂತ ಇರುವಂಥ ಬ್ರಹ್ಮ ವಸ್ತುವು ಇಂದ್ರಿಯಗಳಿಂದ ಮತ್ತು ಕಲ್ಪನೆಯಿಂದ ತಿಳಿಯಲಿಕ್ಕೆ ಆಗುವದಿಲ್ಲ. ನಾನು ಎಂಬ ಅಹಂ ದ ಪಾರ್ಶ್ವ ಭೂಮಿಯ ಮೇಲೆ ಜೀವಂತವಿರುವಂಥ ಪ್ರಾಪಂಚಿಕ ಜ್ಞಾನವು. ವೃತ್ತಿಮಯ, ಭಾವನಾಮಯ ಇರುತ್ತದೆ. ಇದು ದ್ವೈತದಿಂದ ಕೂಡಿದ್ದು ಇರುವದು. ಅಂದ ಮೇಲೆ ಇದರಿಂದ ಬ್ರಹ್ಮವು ಹೇಗೆ ಹಸ್ತಗತವಾದೀತು? ಬ್ರಹ್ಮದಲ್ಲಿ ವೃತ್ತಿಗೆ ಪ್ರವೇಶವಿಲ್ಲ. ನಾನು ಎಂಬ ಅಹಂಕ್ಕೆ ಸ್ಥಳವಿಲ್ಲ. ಅವಕಾಶವಿಲ್ಲ, ಕಲ್ಪನೆಗೆ ಸಹ ಸ್ಥಳವಿಲ್ಲ. ಎಲ್ಲವನ್ನು ಕೆಡಿಸುವ [ಹೊಲಸು ಮಾಡುವ] ನಾನು ಎಂಬು ದನ್ನು ನಾಶ ಮಾಡಿ, ಇಲ್ಲವಂತೆ ಮಾಡಿ, ವಿವೇಕದಿಂದ ದೃಶ್ಯವನ್ನು ಬದಿಗೆ [ಬಾಜೂಕ್ಕೆ] ಸರಿಸಿ, ಕಲ್ಪನೆಯ ಆಟವನ್ನು ನಿಲ್ಲಿಸಿ, ನೀವು ಸ್ವತಃ ಬ್ರಹ್ಮರಾಗಿಯೇ ಬ್ರಹ್ಮಜ್ಞಾನವನ್ನು ಪ್ರಾಪ್ತ ಮಾಡಿಕೊಳ್ಳಬೇಕು. ಶ್ರೋತಾರರೇ, ನೀವೂ ಇದನ್ನು ಪ್ರಾಪ್ತ ಮಾಡಿಕೊಳ್ಳುವ ಪ್ರಯತ್ನ ಮಾಡಿರಿ.

### ದಶಕ ೭. ಸಮಾಸ ೭. ಸಾಧನ ಪ್ರತಿಷ್ಠಾ ನಿರೂಪಣ [ನುಡಿ ೭೪]

ದೃಶ್ಯ ವಿಶ್ವದ ಈಗಿನ ನಮ್ಮ ಜ್ಞಾನವು "ಇರುವದು" ಎಂಬುದಾಗಿದೆ. ವಸ್ತು ಹೀಗೆ ಇರುವದು,ಮತ್ತು ಹಾಗೆ ಇರುವದು ಎಂದು ಜ್ಞಾನ ಹೇಳುವದು. ಆದರೂ ಬ್ರಹ್ಮ ವಸ್ತು ಅತೀಂದ್ರಿಯ ಇರುವದರಿಂದ ಇದರ ವರ್ಣನೆ ಯನ್ನು "ಇಲ್ಲ" ಎಂಬುದರಿಂದಲೇ ಮಾಡಬೇಕಾಗುವದು:- ಸದ್ಯದ ನಮ್ಮ ಮನವು ಕಲ್ಪನೆ ಮಾಡುತ್ತ ಇರುವದು. ದೃಶ್ಯವಿಶ್ವವು ಕಲ್ಪನೆಯ ಆಳವಿನಲ್ಲಿ ಬರುವಂತಹದಿರುವದು. ಆದರೆ ಕಲ್ಪನೆಯು ಬ್ರಹ್ಮ ವಸ್ತುವನ್ನು ತಿಳಿಯಲು ಶಕ್ಯವಾಗುವದಿಲ್ಲ. ಕಲ್ಪನೆಯು ಬ್ರಹ್ಮ ವಸ್ತುವಿನತನಕ ಮುಟ್ಟಲು ಶಕ್ಯವಾಗುವದಿಲ್ಲ. ಕಲ್ಪನೆಯು ಅಲ್ಲಿ ಶೂನ್ಯವತ್ ಆಗುವದು. ನಿರರ್ಥಕವಾಗುವದು. ಯಾಕಂದರೆ ಬ್ರಹ್ಮವು ಸ್ವಭಾವತಃ ನಿರ್ವಿಕಲ್ಪ ಇರುವದು· [೧] ವಸ್ತು ಸ್ಥಿತಿ ಹೀಗಿದ್ದರೂ ಸಹ ನಾವು ಬ್ರಹ್ಮದ ಬಗೆಗೆ ಕಲ್ಪನೆ ಮಾಡಹೋದರೆ ಅದು ಕಲ್ಪನೆಯ ಆಳವಿನಲ್ಲಿ ಬರುವದಿಲ್ಲ. ಮನಸ್ಸಿಗೆ ಇದರ ಗುರುತು ಸರಿಯಾಗಿ ಆಗುವದಿಲ್ಲ. ಇಷ್ಟೇ ಏಕೆ? ಇದರ ವಿರುದ್ಧ ಮನದ ಗೊಂದಲ ಮಾತ್ರ ಜಾಸ್ತಿ ಆಗುವದು. [೨]

ಕಾಹೀ ದೃಷ್ಟೀಸಚಿ ನ ದಿಸೆ। ಮನಾಸ ತೇ ಹಿ ನ ಭಾಸೆ।
ನ ಭಾಸೆ ನ ದಿಸೆ ಕೈಸೇ। ವೊಳಖಾವೇ ॥೩॥
ಪಾಹೋ ಜಾತಾ ನಿರಾಕಾರ। ಮನಾಸಿ ಪಡೆ ಸುನ್ಯಾಕಾರ।
ಕಲ್ಪೂ ಜಾತಾ ಅಂಧಕಾರ। ಭರಲಾ ವಾಟೆ ॥೪॥
ಕಲ್ಪೂ ಜಾತಾ ವಾಟೆ ಕಾಳೇ। ಬ್ರಹ್ಮ ಕಾಳೇ ನಾ ಪಿವಳೇ।
ಆರಕ್ತ ನಿಳೇ ನಾ ಧವಳೇ। ವರ್ಣ ರಹಿತ ॥೫॥
ಜಯಾ ವರ್ಣವೆಕ್ತೀ ನಸೆ। ಭಾಸಾಹೂನ ಅನಾರಿಸೇ।
ರೂಪ ಚಿ ನಾಹೀ ಕೈಸೇ। ವೊಳಖಾವೇ ॥೬॥
ನ ದಿಸತಾ ವೊಳಖಣ। ಕಿತೀ ಧರಾವೀ ಆಪಣ।
ಹೇ ತೋ ಶ್ರಮಾಸೀ ಚ ಕಾರಣ। ಹೋತಸೆ ॥೭॥
ಜೋ ನಿರ್ಗುಣ ಗುಣಾತೀತ। ಜೋ ಅದೃಶ್ಯ ಅವೆಕ್ತ।
ಜೋ ಅಚಿಂತ್ಯ ಚಿಂತನಾತೀತ। ಪರಮ ಪುರುಷ ॥೮॥
॥ಶ್ಲೋಕ॥ ಅಚಿಂತ್ಯಾವ್ಯಕ್ತರೂಪಾಯ। ನಿರ್ಗುಣಾಯ ಗುಣಾತ್ಮನೆ ॥
ಸಮಸ್ತ ಜಗದಾಧಾರ। ಮೂರ್ತಯೆ ಬ್ರಹ್ಮಣೇ ನಮಃ ॥
ಅಚಿಂತ್ಯ ತೇಚಿ ಚಿಂತಾವೇ। ಅವ್ಯಕ್ತಾಸ ಆಠವಾವೇ।
ನಿರ್ಗುಣಾಸ ವೊಳಖಾವೇ। ಕೋಣೇಪರೀ ॥೯॥
ಜೇ ದೃಷ್ಟೀಸ ಚಿ ನ ಪಡೆ। ಜೇ ಮನಾಸ ಹೀ ನಾತುಡೆ।
ತಯಾ ಕೈಸೇ ಪಾಹಾಣೇ ಘಡೆ। ನಿರ್ಗುಣಾಸೀ ॥೧೦॥
ಅಸಂಗಾಚಾ ಸಂಗ ಧರಣೇ। ನಿರಾವಲಂಬೀ ವಾಸ ಕರಣೇ।
ನಿಶಬ್ದಾಸೀ ಅನುವಾದಣೇ। ಕೋಣೇಪರೀ ॥೧೧॥
ಅಚಿಂತ್ಯಾಸೀ ಚಿಂತೂ ಜಾತಾ। ನಿರ್ವಿಕಲ್ಪಾಸೀ ಕಲ್ಪಿತಾ।
ಅದ್ವೈತಾಚೇ ಧ್ಯಾನ ಕರಿತಾ। ದ್ವೈತ ಚಿ ಉಠೆ ॥೧೨॥
ಆತಾ ಧ್ಯಾನಚಿ ಸೋಡಾವೇ। ಅನುಸಂಧಾನ ತೇ ಮೋಡಾವೇ।
ತರೀ ಮಾಗುತೇ ಪಡಾವೇ। ಮಹಾ ಸಂಶಈ ॥೧೩॥
ದ್ವೈತಾಚ್ಯಾ ಭೇಣೇ ಅಂತರೀ। ವಸ್ತು ನ ಪಾಹಿಜೆ ತರೀ।
ತೇಣೇ ಸಮಾಧಾನಾ ಉರೀ। ಕದಾ ಅಸೇಚಿನಾ ॥೧೪॥
ಸವೆ ಲಾವಿತಾ ಸವೇ ಪಡೆ। ಸವೇ ಪಡತಾ ವಸ್ತು ಆತುಡೆ।
ನಿತ್ಯಾನಿತ್ಯ ವಿಚಾರೇ ಘಡೆ। ಸಮಾಧಾನ ॥೧೫॥

ಬ್ರಹ್ಮವು ದೃಷ್ಟಿಗೇನೂ ಕಾಣುವದಿಲ್ಲ. ಇದು ಮನಸ್ಸಿಗೆ ಏನೂ ಹೊಳೆಯುವದಿಲ್ಲ. ಅಂದ ಮೇಲೆ ಇಂದ್ರಿಯಗಳಿಗೆ ಯಾವುದು ಕಾಣುವದಿಲ್ಲವೋ ಮತ್ತು ಮನಸ್ಸಿಗೆ ಯಾವುದು ಹೊಳೆಯುವದಿಲ್ಲವೋ ಅಂಥದನ್ನು ತಿಳಿಯುವದು ಹೇಗೆ? ಅನ್ನುವ ಪ್ರಶ್ನೆ ಮುಂದೆ ಬರುತ್ತದೆ. (೩) ಮನಸ್ಸಿಗೆ ಆಕಾರ ನೋಡುವ ಅಭ್ಯಾಸದ ರೂಢಿ, ಸವಯ ಇರುವದು. ಬ್ರಹ್ಮನಿಗೆ ಆಕಾರವೇ ಇಲ್ಲವೆಂದ ಮೇಲೆ ಬ್ರಹ್ಮನನ್ನು ನೋಡಲಿಕ್ಕೆ ಹೊರಟ ಮನಸ್ಸು ಶೂನ್ಯಾಕಾರವಾಗಿ ಹೋಗುವದು. ಇದರಂತೆಯೇ ಕಲ್ಪನೆಯಿಂದ ಬ್ರಹ್ಮವನ್ನು ನೋಡಲಿಕ್ಕೆ ಹೋದರೆ ಕಲ್ಪನೆಯೇ ನಿರರ್ಥಕವಾಗುವದು ಸುಳ್ಳಾಗುವದು ಮತ್ತು ಇದೆಲ್ಲ ಅಜ್ಞಾನದ ಕತ್ತಲೆಯೆಂದು ಅನುಭವಕ್ಕೆ ಬರುವದು. (೪) ಇರಲಿ, ಕಲ್ಪನೆಗೆ ಬ್ರಹ್ಮ ಕರ್ರಗೆ ಇರುವನೆಂದು ಅನಿಸಿದ್ದಾದರೆ ಬ್ರಹ್ಮನಿಗೆ ರಂಗ (ಬಣ್ಣ)ವೇ ಇಲ್ಲ. ಬ್ರಹ್ಮವು ಕರ್ರಗಿಲ್ಲ, ಹಳದಿ ಇಲ್ಲ, ಕೆಂಪು ಇಲ್ಲ, ನೀಲಿ ಇಲ್ಲ, ಅಥವಾ ಬಿಳಿಯದಾಗಿಯೂ ಇಲ್ಲ. (೫) ಇಲ್ಲಿ ಬರುವ ಅಡಚಣೆ ಏನಂದರೆ, ಬ್ರಹ್ಮನಿಗೆ ಇಂಥದೇ ರಂಗ ಇದೆ ಎಂಬುದು ಸ್ಪಷ್ಟಪಟ್ಟಿಲ್ಲ. ಅಂದಮೇಲೆ ಯಾರಿಗೆ ಇಂಥ ರಂಗುರೂಪವಿಲ್ಲವೋ ಮತ್ತು ಯಾವನು ಊಹೆಗಿಂತ ಬೇರೆ ಆಗಿರುವನೋ ಅಂಥವನ ಜ್ಞಾನ ಪಡೆಯುವದು ಹೇಗೆ? (೬) ಬ್ರಹ್ಮವಾದರೋ ಕಾಣುವದಿಲ್ಲ. ಇಂಥ ಅವ್ಯಕ್ತ-ಅದೃಶ್ಯನ ಗುರುತು ಮನದಲ್ಲಿ ಬಹಳಕಾಲ ಸ್ಥಿರ ಉಳಿಯುವದಿಲ್ಲ. ಹೀಗೆ ಮಾಡಹೋದರೆ ಸುಮ್ಮನೆ ಶ್ರಮ ಮಾತ್ರವಾಗುವದು. (೭) ಆ ಪರಮ ಪುರುಷ ಪರಬ್ರಹ್ಮನು ನಿರ್ಗುಣ ಮತ್ತು ಗುಣಾತೀತ ಇರುವನು. ಅದೃಶ್ಯ ಹಾಗೂ ಅವ್ಯಕ್ತ ಇರುವನು. ಅಚಿಂತ್ಯ ಮತ್ತು ಚಿಂತನೆಯ ಆಚೆಗೆ ಇರುವನು. (೮) **ಶ್ಲೋಕ:**— ಅಚಿಂತ್ಯಾ-ವ್ಯಕ್ತ ರೂಪಾಯ ನಿರ್ಗುಣಾಯ ಗುಣಾತ್ಮನೇ। ಸಮಸ್ತ ಜಗದಾಧಾರ ಮೂರ್ತಯೇ ಬ್ರಹ್ಮಣೇ ನಮಃ॥ **ಶ್ಲೋಕದ ಅರ್ಥ:**—ಅಚಿಂತ್ಯಾ, ಅವ್ಯಕ್ತರೂಪ, ನಿರ್ಗುಣ ಗುಣಾತ್ಮ, ಸಮಸ್ತ ಜಗತ್ತಿಗೆ ಆಧಾರನಾದಂಥ ಬ್ರಹ್ಮಮೂರ್ತಿಗೆ ನಾನು ನಮಸ್ಕಾರ ಮಾಡುವೆನು:— ಅಚಿಂತ್ಯ ನನ್ನು, ಚಿಂತಿಸಲಿಕ್ಕೆ ಆಗದಂಥವನೇ ಇರುವವನನ್ನು ಚಿಂತಿಸುವದು ಹೇಗೆ? ಅವ್ಯಕ್ತ-ಕಾಣಸದಿರುವಂಥವನಾಗಿರುವವನನ್ನು ಹೇಗೆ ಸ್ಮರಣೆ ಮಾಡುವದು? ನಿರ್ಗುಣ (ಗುಣರಹಿತ)ನನ್ನು ಹೇಗೆ ಗುರುತಿಸಬೇಕು? (೯) ಯಾವನು ದೃಷ್ಟಿಗೆ ಬೀಳುವದಿಲ್ಲವೋ, ಮನಸ್ಸಿಗೆ ಸಿಗುವದಿಲ್ಲವೋ ಅಂಥ ನಿರ್ಗುಣ ಬ್ರಹ್ಮವನ್ನು ಯಾವ ರೀತಿಯಿಂದ ನೋಡಲಿಕ್ಕೆ ಸಾಧ್ಯವಾದೀತು? (೧೦) ಯಾವುದು ಏತಕ್ಕೂ ಅಂಟಿಕೊಂಡಿಲ್ಲವೋ ಅಂಥದರ ಸಂಗತಿ (ಭೆಟ್ಟಿ) ಯಾಗುವದು ಹೇಗೆ? ಆಧಾರವಿಲ್ಲದೇ ಇರುವಂಥದರಲ್ಲಿ ವಸತಿ(ವಾಸ) ಮಾಡುವದು ಹೇಗೆ? ಮತ್ತು ಎಲ್ಲಿ ಶಬ್ದವು ಸೋಲೊಪ್ಪಿ ಹಿಂದಕ್ಕೆ ಬರುವದೋ ಅಂಥದನ್ನು ಹೇಗೆ ವರ್ಣಿಸುವದು? (೧೧) ಸದ್ಯದ ಅವಸ್ಥೆ (ಸ್ಥಿತಿ)ಯಲ್ಲಿ ಅಚಿಂತ್ಯ ಬ್ರಹ್ಮದ ಚಿಂತನ ಮಾಡಹತ್ತಿದರೆ, ನಿರ್ವಿಕಲ್ಪ ಬ್ರಹ್ಮದ ಕಲ್ಪನೆ ಮಾಡಹತ್ತಿದರೆ ಮತ್ತು ಅದ್ವೈತ ಬ್ರಹ್ಮದ ಧ್ಯಾನ ಮಾಡಹತ್ತಿದರೆ ಆಗ ಜ್ಞಾತಾ ಮತ್ತು ಜ್ಞೇಯ, ಧ್ಯಾತಾ ಮತ್ತು ಧ್ಯೇಯ, ಮನ ಮತ್ತು ವಸ್ತು ಹೀಗೆ ದ್ವೈತದ್ದೇ ಜೋರಾಗುವದು. (೧೨) ಸರಿ, ಧ್ಯಾನ ಮಾಡುವದನ್ನೇ ಬಿಡಬೇಕೆಂದರೆ ಅಥವಾ ಚಿಂತನ ಮಾಡುವದನ್ನೇ ಬಂದು ಮಾಡಬೇಕೆಂದರೆ ಮನಸ್ಸಿನಲ್ಲಿ ಪುನಃ ಅನೇಕ ದೊಡ್ಡ ಸಂಶಯಗಳು ನಿರ್ಮಾಣವಾಗುವವು. ನಾವು ಮೋಸ ಹೋದೆವೋ, ಹೇಗೆ? ಎಲ್ಲಿ ತಪ್ಪಿದೆವೋ, ಏನೋ ಈ ವರೆಗೆ ನಾವು ಮಾಡಿದ್ದೆಲ್ಲ ವ್ಯರ್ಥವಾಗಿ ಹೋಯಿತೋ ಹೇಗೆ? ಬ್ರಹ್ಮವಸ್ತು ಎಂಬುದು ಇರುವದೋ ಅಥವಾ ಇಲ್ಲವೋ? ಹೀಗೆ ಅನೇಕ ಸಂದೇಹಗಳು ಹುಟ್ಟಿ ಮನಸ್ಸನ್ನು ಗೊಂದಲಗೆಡಿಸಿ ಅಸ್ವಸ್ಥ ಮಾಡಿಬಿಡುವವು. (೧೩) ಬ್ರಹ್ಮ ಚಿಂತನ ಅಥವಾ ಬ್ರಹ್ಮಧ್ಯಾನ ಅದ್ವೈತದ ಧ್ಯಾನಮಾಡಹೋದರೆ ದ್ವೈತ ನಿರ್ಮಾಣವಾಗುವದು. ಇದು ಆಗಬಾರದೆಂದೇ ಬ್ರಹ್ಮಧ್ಯಾನಅಥವಾಚಿಂತನ ಮಾಡುವದನ್ನು ನಾವು ಬಿಟ್ಟು ಬಿಟ್ಟರೆ ಆಮೇಲೆ ಸಮಾಧಾನದ ಪ್ರಾಪ್ತಿಯಾಗುವ ಸಂಭವವೇ ಉಳಿಯುವದಿಲ್ಲ. (೧೪) ಮನಸ್ಸಿಗೆ ಯಾವ ಸವಯ (ರೂಢಿ) ಹೇಗೆ ಹಚ್ಚುವವೋ ಹಾಗೆ ಹತ್ತುವದು. ಬ್ರಹ್ಮ ಚಿಂತನದ ಸವಯ ಮನಸ್ಸಿಗೆ ಹಚ್ಚಿದರೆ ಕಾಲಾಂತರದಲ್ಲಾದರೂ ಬ್ರಹ್ಮಸಾಕ್ಷಾತ್ಕಾರವಾದೀತು. ಇದರ ಜೊತೆಗೆ ನಿತ್ಯಾನಿತ್ಯ ವಿಚಾರ (ವಿವೇಕ) ಇಟ್ಟಿದ್ದಾದರೆ ಸಮಾಧಾನ ಖಾತ್ರಿಯಿಂದ ಪ್ರಾಪ್ತವಾಗುವದು. ದೃಶ್ಯ ಚಿಂತನ ಬಿಟ್ಟು ಬ್ರಹ್ಮ ಚಿಂತನವನ್ನು ಮನಸ್ಸಿನಿಂದ ಮಾಡಿಕೊಳ್ಳಬೇಕು. ಹೀಗೆ ಮಾಡುವದೇ ರಾಜಮಾರ್ಗವಿರುವದು. (೧೫)

ವಸ್ತು ಚಿಂತಿತಾ ದ್ವೈತ ಉಪಜೆ । ಸೋಡೀ ಕರಿತಾ ಕಾಹೀಚ ನುಮಜೆ ।
ಸುನ್ಯತ್ವ ಸಂದೇಹೀ ಪಡಿಜೆ । ವಿವೇಕೇ ವಿಣ ॥೧೬॥

ಮ್ಹಣೋನಿ ವಿವೇಕ ಧರಾವಾ । ಜ್ಞಾನೇ ಪ್ರಪಂಚ ಸಾರಾವಾ ।
ಅಹಂಭಾವ ವೊಸರಾವಾ । ಪರೀ ತೋ ವೊಸರೇನಾ ॥೧೭॥

ಪರಬ್ರಹ್ಮ ತೇ ಅದ್ವೈತ । ಕಲ್ಪಿತಾ ಚ ಉಠೆ ದ್ವೈತ ।
ತೇಥೇ ಹೇತ ಆಣೀ ದೃಷ್ಟಾಂತ । ಕಾಹೀ ಚ ನ ಚಲೇ ॥೧೮॥

ತೇ ಆಠವಿತಾ ವಿಸರಿಜೆ । ಕಾ ತೇ ವಿಸರೋನಿ ಆಠವಿಜೆ ।
ಜಾಣೋನಿಯಾ ನೇಣಿಜೆ । ಪರಬ್ರಹ್ಮ ತೇ ॥೧೯॥

ತ್ಯಾಸ ನ ಭೇಟತಾ ಹೋಯೆ ಭೇಟೀ । ಭೇಟೋ ಜಾತಾ ಪಡೆ ತುಟೀ ।
ಐಸೀ ಹೇ ನವಲಗೋಷ್ಟೀ । ಮುಕೆಪಣಾಚೀ ॥೨೦॥

ತೇ ಸಾಧೂ ಜಾತಾ ಸಾಧವೇನಾ । ನಾತರೀ ಸೋಡಿತಾ ಸುಟೇನಾ ।
ಲಾಗಲಾ ಸಮಂಧ ತುಟೇನಾ । ನಿರಂತರ ॥೨೧॥

ನಮ್ಮ ಮನವು ದೃಶ್ಯದಿಂದ ನಿರ್ಮಾಣವಾಗಿದೆ. ಅಲ್ಲದೆ ಇದಕ್ಕೆ ನಾವು ದೃಶ್ಯದ್ದೇ ಚಿಂತನ ಮಾಡುವ ದೃಢವಾದ ಸವಯ [ರೂಢಿ] ಹಚ್ಚಿ ಬಿಟ್ಟಿರುವೆವು. ಇದರ ಪರಿಣಾಮುವೇನಾಗಿದೆಯೆಂದರೆ ದೃಶ್ಯವಸ್ತು ಎದುರಿಗೆ ಹಿಡಿಯದ ಹೊರತು ಮನಸ್ಸಿಗೆ ಚಿಂತನ ಮಾಡಲು ಆಗುವದಿಲ್ಲ. ಹೀಗೆ ಚಿಂತನ ಮಾಡಲಿಕ್ಕೆ ಹತ್ತಿದೆವೆಂದರೆ ಚಿಂತನ ಮಾಡುವ ನಾನು, ಚಿಂತನ ಮಾಡುವ ವಸ್ತು ಹೀಗೆ ದ್ವೈತ ಹುಟ್ಟುತ್ತದೆ. ಇನ್ನು ಚಿಂತನಕ್ಕೆ ವಸ್ತುವನ್ನು ಇಟ್ಟು ಕೊಳ್ಳದಿದ್ದರೆ ಮನವು ಶೂನ್ಯಾಕಾರವಾಗುವದು. ಆಗ ಅಲ್ಲಿ ಅಹಂಭಾವ ಕಾಯಂ ಇದ್ದೇ ಇರುತ್ತದೆ. ಅಂತೆಯೇ ಅದು ಬ್ರಹ್ಮ ಚಿಂತನವಾಗುವದೇ ಇಲ್ಲ. ದೇಹಬುದ್ಧಿಯ "ನಾನು" ಇದು ಕಾಯಂ ಇರುವವರೆಗೆ ಮನಸ್ಸು ಒಂದೇ ಸವನೆ ವೃತ್ತಿಯ ನಿರ್ಮಾಣ ಮಾಡುವದು. [ಮನಸ್ಸಿನ ಸ್ಥಿತಿ ಹರಿದಾಡುತ್ತಲಿರುವದು]. ಮನ ನಿವೃತ್ತ ಆಗದ ಹೊರತು ಬ್ರಹ್ಮ ಚಿಂತನ ನಡೆಯುವದಿಲ್ಲ. (ಘಟಿಸುವದಿಲ್ಲ). ವೃತ್ತಿಮಯವಾದ ಚಿಕ್ಕ ಮನದಲ್ಲಿ ಅನಂತ ವಾಗಿರುವ ಬ್ರಹ್ಮವು ಅದು ಹೇಗೆ ಹಿಡಿಸೀತು? ಅರ್ಥಾತ್ ಇದು ಶಕ್ಯವಿಲ್ಲ. ನಾವು ವಸ್ತುವಿನ ಪರಬ್ರಹ್ಮನ ಚಿಂತನವನ್ನು ಯಾವಾಗ ಮಾಡುವೆವೋ ಆಗ್ಗೆ ಚಿಂತನ ಮಾಡುವ "ನಾನು" ಮತ್ತು ಚಿಂತನ ಮಾಡುವ ವಸ್ತು ಹೀಗೆ ದ್ವೈತ ಹುಟ್ಟುತ್ತದೆ. ಆದರೆ ಈ ಕಾರಣದಿಂದ ಚಿಂತನ ಮಾಡುವದನ್ನೇ ಬಿಟ್ಟು ಬಿಟ್ಟಿದ್ದಾದರೆ ನಮ್ಮಿಂದ ಏನೂ ಸಾಧನ ಮಾಡಲಿಕ್ಕೆ ಆಗುವದಿಲ್ಲ. ಏನೂ ಪ್ರಗತಿಯಾಗುವದಿಲ್ಲ. ವಿವೇಕವನ್ನು ಬಿಟ್ಟು ಬಿಟ್ಟರೆ ಶೂನ್ಯತನ ಉಂಟಾಗಿ ಅನೇಕ ಸಂಶಯ ನಿರ್ಮಾಣವಾಗಬಹುದು. ಇದಕ್ಕೆ ಕಾರಣ ಯಾವದೆಂದರೆ, ವಿವೇಕವಿಲ್ಲದಿರುವದು– ಮಾಡದಿರುವದು.(೧೬)ಅಂತೆಯೇ ಆತ್ಮಾನಾತ್ಮ ವಿವೇಕ. "ಈ ಜಗತ್ತು ಹೇಗೆ ಉಂಟಾಯಿತು.ಇದರಕರ್ತಾ ಯಾರು. ಇದರ ಘಟಕಗಳು ಯಾವವು ಮತ್ತು ಮುಖ್ಯವಾಗಿ ನಾನು ಯಾರು" ಇದರ ಬಗ್ಗೆ ವಿಚಾರವನ್ನಂತೂ ಮಾಡಲೇ ಬೇಕು. ಇದೇ ಸಾರಾಸಾರ ವಿವೇಕವಿರುವಬು. ಇದರಿಂದ ಉಂಟಾಗುವ ಸಾರಜ್ಞಾನ (ಜ್ಞಾನಸಾರ)ದಿಂದ ದೃಶ್ಯ ಪ್ರಪಂಚವನ್ನು ಮನಸ್ಸಿನಿಂದ ಬದಿಗೆ ಸರಿಸಬೇಕು. ಅಂದರೆ ಇದನ್ನು ಸಾಧಿಸಲು ಆದೀತು. ಆದರೆ ಅಂತರ್ಯಾಮಾ ದಲ್ಲಿ ವಾಸ ಮಾಡಿಕೊಂಡಿರುವ ಅಹಂಭಾವವು ಮಾತ್ರ ಏನು ಮಾಡಿದರೂ ಕ್ಷೀಣವಾಗುವದಿಲ್ಲ. ಇದಕ್ಕೇನು ಮಾಡಬೇಕು. (೧೭) ವಾಸ್ತವಿಕವಾಗಿ ಪರಬ್ರಹ್ಮವು ಪರಿಪೂರ್ಣ ಅದ್ವೈತವಿರುವದು. ಅಹಂತನ ಇಟ್ಟುಕೊಂಡು ಇದರ ಬಗೆಗೆ ಕಲ್ಪನೆ ಮಾಡಲಿಕ್ಕೆ ಹತ್ತಿದ ಕೂಡಲೇ ಅಲ್ಲಿ ದ್ವೈತವೇ ಹುಟ್ಟುವದು. ದ್ವೈತದ ಕ್ಷೇತ್ರದಲ್ಲಿಯ ಕಾರ್ಯ ಕಾರಣ ಮತ್ತು ದಾಖಲೆ ದೃಷ್ಟಾಂತಗಳು ಪರಬ್ರಹ್ಮನಿಗೆ ಲಾಗೂ ಆಗುವದಿಲ್ಲ. (೧೮) ಪರಬ್ರಹ್ಮ ಹೇಗೆ ಇರುವದು? ಇದನ್ನು ನೋಡಿರಿ (ತಿಳಿಯಿರಿ). ಇದರ ಸ್ಮರಣೆ ಮಾಡಲಿಕ್ಕೆ ನಿನ್ನನ್ನೇ ನೀನು ಮರೆಯಬೇಕು. ಹೀಗೆ ಸ್ವತಃದ ಮರೆವಾದಾಗಲೇ ಇದರ ಸ್ಮರಣೆ ಮಾಡಲಿಕ್ಕೆ ಬರುವದು. ಆಗ ಇದನ್ನು ತಿಳಿದರೂ ಸಹ "ನಾನು ಅದನ್ನು ತಿಳಿದೆನು" ಅನ್ನುವ ಈ ತಿಳುವಳಿಕೆ ಇರುವದಿಲ್ಲ. ನೆನೆಸುವದು, ಮರೆಯುವದು. ಅಥವಾ ತಿಳಿಯುವದು ತಿಳಿಯದೇ ಇರುವದು ಇದೆಲ್ಲ ದೇಹಬುದ್ಧಿಯ ಅನುಭವ ಕ್ಷೇತ್ರದೊಳಗಿನ ಮನದ ವ್ಯಾಪಾರ ಇರುವದು. ಅದು ವೃತ್ತಿ ಇರುವದು. ಬ್ರಹ್ಮದ ಜ್ಞಾನ ಆಗುವದಕ್ಕೆ ಅದರೊಂದಿಗೆ ಬ್ರಹ್ಮದೊಂದಿಗೆ ತದಾಕಾರ (ಏಕರೂಪ) ವಾಗಬೇಕಾಗುವದು. ತದಾಕಾರವಾದ ಮೇಲೆ ನಿವೃತ್ತಿ ಇರುವದು ಮನವು ಮನವಾಗಿ ಉಳಿಯುವದಿಲ್ಲ. ಜ್ಞಾಪಿಸು ವದಕ್ಕಾಗಲಿ, ಮತ್ತು ತಿಳಿಯುವದಕ್ಕಾಗಿಯಾಗಲಿ ಅಲ್ಲಿ "ನಾನು" ಬೇರೆಯಾಗಿ ಇರುವದಿಲ್ಲ. ಆದ್ದರಿಂದ ಈ ವಿರೋಧಾಭಾಸದ ಭಾಷೆಯನ್ನು ಉಪಯೋಗಿಸಿ ಬ್ರಹ್ಮಾನುಭವವನ್ನು ತಿಳಿಸಿ ಹೇಳಬೇಕಾಗುವದು. (೧೯) "ನಾನು ಬ್ರಹ್ಮನ ಭೆಟ್ಟಿಯನ್ನು ತೆಗೆದುಕೊಳ್ಳುತ್ತೇನೆ" ಎಂಬ ಭೂಮಿಕೆಯಿಂದ ಅವನ ಭೆಟ್ಟಿಯು ಭಗ್ನವಾಗುವದು. ಮತ್ತು ಭೆಟ್ಟಿ ತೆಗೆದುಕೊಳ್ಳುವಾಗ "ನಾನು ಭೆಟ್ಟಿ ತೆಗೆದುಕೊಳ್ಳುತ್ತೇನೆ" ಎಂಬ ಅರಿವು ಇರುವದಿಲ್ಲ. ಒಟ್ಟಿನಲ್ಲಿ ಬ್ರಹ್ಮನ ಅನುಭವವು ಒಂದು ವಿಲಕ್ಷಣವಾಗಿರುವದು. ಇದರ ಬಗೆಗೆ ಏನೂ ಮಾತಾಡಲು ಬರುವದಿಲ್ಲ. (೨೦) "ನಾನು ಬ್ರಹ್ಮನನ್ನು ಸಾಧಿಸುತ್ತೇನೆ" ಇಂಥ ಅಹಂತನದಿಂದ ಸಾಧನ ಮಾಡುವವನಿಗೆ ಅದು ಸಾಧಿಸುವದಿಲ್ಲ. ಆದರೆ ಅದು ಸಾಧಿಸುವದಿಲ್ಲ. ಆದರೆ ಅದು ಒಳಗೂ ಹೊರಗೂ ವ್ಯಾಪಿಸಿ ಇರುವದರಿಂದ ಅದನ್ನು ಬಿಡಬೇಕೆಂದರೂ ಸಹ ಅದು ಬಿಡುವದಿಲ್ಲ. ಅದರದು ಹಾಗೂ ನಮ್ಮದು ನಿರಂತರವಾದ ಕಾಯಂ ಸಂಬಂಧ ಇರುವದು. ಇದು ಏನು ಮಾಡಿದರೂ ಬಿಡುವದಿಲ್ಲ (ಹರಿಯುವದಿಲ್ಲ). (೨೧)

ತೇ ಅಸತ ಚಿ ಸದಾ ಅಸೆ । ನಾತರೀ ಪಾಹಾತಾ ದುರಾಸೆ ।
ನ ಪಾಹಾತಾ ಪ್ರಕಾಶೆ । ಜೇಥೇ ತೇಥೇ ॥೨೨॥

ಜೇಥೇ ಉಪಾಯೆ ತೋ ಚಿ ಅಪಾಯೆ। ಆಣೀ ಅಪಾಯೆ ತೋ ಚಿ ಉಪಾಯೆ।
ಹೇ ಅನುಭವೇವಿಣ ಕಾಯೆ । ಉಮಜೊ ಜಾಣೇ ॥೨೩॥

ತೇ ನುಮಜತಾ ಚ ಉಮಜೆ । ಉಮಜೋನ ಕಾಹೀಚ ನುಮಜೆ ।
ತೇ ವೃತ್ತೀವಿಣ ಪಾವಿಜೆ । ನಿವೃತ್ತಿಪದ ॥೨೪॥

ತೇ ಧ್ಯಾನೀ ಧರಿತಾ ನಯೆ । ಚಿಂತನೀ ಚಿಂತಾವೇ ತೇ ಕಾಯೆ ।
ಮನಾಮಧೇ ನ ಸಮಾಯೆ । ಪರಬ್ರಹ್ಮ ತೇ ॥೨೫॥

ತ್ಯಾಸ ಉಪಮೇ ದ್ಯಾವೇ ಜಳ । ತರೀ ತೇ ನಿರ್ಮಳ ನಿಶ್ಚಳ ।
ವಿಶ್ವ ಬುಡಾಲೇ ಸಕಳ । ತರೀ ತೇ ಕೊರಡೇ ಚಿ ಅಸೆ ॥೨೬॥

ನವ್ಹೆ ಪ್ರಕಾಶಾಸಾರಿಖೇ । ಅಥವಾ ನವ್ಹೆ ಕಾಳೋಖೇ ।
ಆತಾ ತೇ ಕಾಸಯಾಸಾರಿಖೇ । ಸಾಂಗಾವೇ ಹೋ ॥೨೭॥

ಐಸೇ ಬ್ರಹ್ಮ ನಿರಂಜನ । ಕದಾ ನವ್ಹೆ ದೃಶ್ಯಮಾನ ।
ಲಾವಾವೇ ತೇ ಅನುಸಂಧಾನ । ಕೋಣೇಪರೀ ॥೨೮॥

ಅನುಸಂಧಾನ ಲಾವೂ ಜಾತಾ । ಕಾಹೀ ನಾಹೀ ವಾಟೆ ಆತಾ ।
ತೇಣೇ ಮನಾಚಿಯಾ ಮಾಥಾ । ಸಂದೇಹ ವಾಜೆ ॥೨೯॥

ಲಟಿಕೇ ಚಿ ಕಾಯೆ ಪಾಹಾವೆ । ಕೋಠೇ ಜಾಊನ ರಾಹಾವೇ ।
ಅಭಾವ ಘೇತಲಾ ಜೀವೇ । ಸತ್ಯಸ್ವರೂಪಾಚಾ ॥೩೦॥

ಬ್ರಹ್ಮವು ನಿರಂತರ ಸತತವೂ ಇದ್ದೇ ಇರುತ್ತದೆ ಅದು ಇಲ್ಲವೆಂದು ಎಂದೂ ಆಗುವದಿಲ್ಲ. ಪ್ರತ್ಯೇಕ ವಾಗಿ ಅದನ್ನು ನೋಡ ಹೋದರೆ ಅದು ದೂರವಾಗುವದು. ಹಾಗೆ ನೋಡದೆ ಇದ್ದರೆ, ನಾನು ಅನ್ನುವದನ್ನು ಬಿಟ್ಟು ನೋಡಿದರೆ ಅತ್ತ ಇತ್ತ ಎಲ್ಲ ಕಡೆಗೂ ಅದರದೇ ಪ್ರಕಾಶವು ಭಾಸಮಾನವಾಗುವದು. (೨೨) ದ್ವೈತದಲ್ಲಿ ಸಫಲವಾಗುವ ಉಪಾಯಗಳು ಬ್ರಹ್ಮದ ವಿಷಯದಲ್ಲಿ ಅಪಾಯವೆನಿಸುವವು. ಅದರಂತೆಯೇ ದ್ವೈತವಲ್ಲಿ ವಿಫಲ ವಾಗುವ ಅಪಾಯಗಳು ಬ್ರಹ್ಮದ ಬಾಬತಿನಲ್ಲಿ (ವಿಷಯದಲ್ಲಿ) ಉಪಾಯವಾಗಿ ಪರಿಣಮಿಸುವವು. ಈ ಮಾತು ಅರ್ಥಾತ್ ಅನುಭವದ ಹೊರತು ತಿಳಿಯಲಾರದು. ದ್ವೈತದಲ್ಲಿ ನಾನು ಎಂಬ ಅಹಂತನದಿಂದ ಸಾಧನ ಮಾಡಿದರೇ ಫಲ ಸಾಧ್ಯವಾಗಿ ಪದರಿನಲ್ಲಿ ಬೀಳುವದು. ಬ್ರಹ್ಮದ ವಿಷಯದಲ್ಲಿ ನಾನು ಎಂಬ ಅಹಂತನದ ಸಾಧನವೇ ಫಲ ಪ್ರಾಪ್ತಿಗೆ ಅಡ್ಡ ಬರುತ್ತದೆ. ದ್ವೈತದಲ್ಲಿ ವೃತ್ತಿರಹಿತವಾದ ಕರ್ಮ ನಿಂತು ಬಿಟ್ಟರೆ ಜೀವನಯಾತ್ರೆಯೂ ಸಹ ನಡೆಯಲಾರದು. ಬ್ರಹ್ಮದ ಬಾಬತಿನಲ್ಲಿ ನಿವೃತ್ತಿಯಾಗಿ ಕರ್ಮ ನಾಮಶೇಷವಾದರೆ ತತ್ಕಾಲದಲ್ಲಿ ತದಾಕಾರವಾಗಲು ಬರುತ್ತದೆ. (೨೩) "ಬ್ರಹ್ಮವೇನೂ ತಿಳಿಯುವದಿಲ್ಲ" ಹೀಗೆ ನಮಗೆ ಅಗದೀ ನಿಜವಾಗಿಯೂ ಒಳಗಿನಿಂದ ಅನಿಸು ವದು. ಆ ಹೊತ್ತಿಗೆ ಅದು ತಿಳಿಯುವದು. "ನನಗೆ ಬ್ರಹ್ಮ ತಿಳಿಯಿತು ಎಂದು ಅನಿಸುತ್ತದೆ. ಆಗ ಅದು ಎಷ್ಟೂ ತಿಳಿದಿರುವದಿಲ್ಲ.ಸಂಪೂರ್ಣ ವೃತ್ತಿರಹಿತಆದರೆ ಆಗ ನಿವೃತ್ತಿಬ್ರಹ್ಮಪದ ಪ್ರಾಪ್ತವಾಗುವದು.(೨೪)ಬ್ರಹ್ಮದಧ್ಯಾನವನ್ನು ಹಿಡಿಯಲಿಕ್ಕೆ ಬರುವದಿಲ್ಲ.ಯಾಕೆಂದರೆ ಧ್ಯಾನ ಮಾಡುವದು.ಮನಸ್ಸಿನ ವೃತ್ತಿಯೇ ಇರುವದು.ಬ್ರಹ್ಮದಚಿಂತನ ಮಾಡ ಲಿಕ್ಕೆಬರುವದಿಲ್ಲ. ಯಾಕಂದರೆ ಅದು ಸಂಪೂರ್ಣ ಗುಣರಹಿತವಿರುವದು. ದೃಶ್ಯದ ಅಂದರೆ ಸ್ಥಳ ಕಾಲದ ಅಳವಿನಲ್ಲಿ ಇರುವ ಮನಸ್ಸಿನಲ್ಲಿ ಸ್ಥಳ ಕಾಲಾತೀತ ಇರುವ ಅನಂತ ಬ್ರಹ್ಮ ಹಿಡಿಸುವದು ಶಕ್ಯವಲ್ಲ. (೨೫) ಬ್ರಹ್ಮವು ನೀರಿನಂತೆ ಇರುವದೆಂದು ಅನ್ನಬೇಕೆಂದರೆ ಈ ಉಪಮೆ ಅಪೂರ್ಣವೆನಿಸುವದು. ಬ್ರಹ್ಮವು ಅತ್ಯಂತ ನಿರ್ಮಲ ಹಾಗೂ ನಿಶ್ಚಲ ಇರುವದು. ಯಾವತ್ತೂ ವಿಶ್ವವೆಲ್ಲ ನೀರಿನಲ್ಲಿ ಮುಳುಗಿತು ಮತ್ತು ತೊಯ್ದಿತು ಎಂದು ಅಂದರೂ ಸಹ ಬ್ರಹ್ಮ ಮುಳುಗುವದಿಲ್ಲ ಮತ್ತು ತೊಯ್ಯುವದಿಲ್ಲ. ಅದು ಹೇಗಿದ್ದಿತೋ ಹಾಗೆಯೇ ಒಣದಾಗಿಯೇ ಇರುವದು. (೨೬) ಬ್ರಹ್ಮವುಪ್ರಕಾಶದಂತೆ ಇಲ್ಲ. ಅಥವಾ ಕತ್ತಲೆಯಂತೆಯೂ ಇಲ್ಲ. ಬ್ರಹ್ಮವು ಇಂಥದರ ಹಾಗೆ ಇರುವದೆಂದು ನಾನು ಹೇಗೆಹೇಳಲಿ,(೨೭)ಹೇಳಬೇಕೆಂದರೆ ಒಂದು ಅಡ್ಡಿ ಅಡಚಣಿ ಬರುತ್ತದೆ.ಅದೇನಂದರೆ ನಮಗೆ ಯಾವುದರ ಪರಿಚಯ ಇರುವದೋ ಆ ದೃಶ್ಯ ವಿಶ್ವದಲ್ಲಿಯ ಯಾವುದೇ ವಸ್ತುವಿನಂತೆ ಬ್ರಹ್ಮವು ಇಲ್ಲ. ಅದು ಎಂದೂ ದೃಶ್ಯದ ಕ್ಷೇತ್ರದ ಮೇಲೆ ಬರುವದೇ ಇಲ್ಲ. ಇಂಥ ಬ್ರಹ್ಮನ ಕಡೆಗೆ ಲಕ್ಷ್ಯಹಚ್ಚಿ ಅದರ ಧ್ಯಾನ ಅಥವಾ ಚಿಂತನ ಮಾಡುವದಾದರೂ ಹೇಗೆ? (೨೩) ಲಕ್ಷ್ಯ ಹಚ್ಚಿ ಏಕಚಿತ್ತದಿಂದ ಚಿಂತನ ಮಾಡುವ ಪ್ರಯತ್ನ ಮಾಡಿದ್ದಾದರೆ ಮನಸ್ಸಿನ ಮುಂದೆ ಏನೂ ಬರುವದಿಲ್ಲ. ಇಂಥ ಬ್ರಹ್ಮದ ಕಡೆಗೆ ಲಕ್ಷ್ಯಕೊಟ್ಟು (ಲಕ್ಷ್ಯವಿಟ್ಟು) ಅದರ ಧ್ಯಾನ ಅಥವಾ ಚಿಂತನ ಮಾಡುವದಾದರೂ ಹೇಗೆ? ಏಕಲಕ್ಷ್ಯವಿಟ್ಟು ಚಿಂತನ ಮಾಡುವ ಪ್ರಯತ್ನ ಮಾಡಿದರೆ ಮನಸ್ಸಿನ ಮುಂದೆ ಏನೂ ಬರುವದಿಲ್ಲ. ಆಗ ಮಾತ್ರ ಮನದಲ್ಲಿ ಬ್ರಹ್ಮನ ಅಸ್ತಿತ್ವದ ಬಗ್ಗೆ ಸಾಧಕನ ಅಂತಃಕರುಣದಲ್ಲಿ ಬರಹತ್ತುವದು.(೨೯) ಮನಸ್ಸಿನಲ್ಲಿ ಏನು ಬರುತ್ತದೆಂದರೆ, ಯಾವುದು ಮೂಲದಲ್ಲಿ ಇರಲೇ ಇಲ್ಲವೋ ಅಂಥವನ್ನು ಯಾಕೆ ನೋಡಬೇಕು? ಬ್ರಹ್ಮವು ಇಂಥ ಸ್ಥಳದಲ್ಲಿ ಇರುವದೆಂಬುದು ಇಲ್ಲವೇ ಇಲ್ಲವೆಂದ ಮೇಲೆ ಅದನ್ನು ನೋಡಲಿಕ್ಕೆ ಎಲ್ಲಿ ಹೋಗಿ ಇರಬೇಕು? ಹೀಗೆ ಸಾಧಕನಲ್ಲಿ ಬ್ರಹ್ಮಸ್ವರೂಪದ ಅಭಾವ ಇರುವ ಸಂಶಯವು ಅಂತಃಕರಣವಲ್ಲಿ ಉತ್ಪನ್ನವಾಗುವದು. ಸಾರಾಂಶ;- ನಮ್ಮ ಖರೇ ಸ್ವರೂಪ ಯಾವುದಿರುವದೋ ಅದು ಇಲ್ಲವೇ ಇಲ್ಲವೆಂದು ಜೀವಕ್ಕೆ ಅನಿಸುತ್ತದೆ. [೩೦]

ಅಭಾವಚಿ ಮ್ಹಣೋ ಸತ್ಯ । ತರೀ ವೇದಶಾಸ್ತ್ರ ಕೈಸೇ ಮಿಥ್ಯ ।
ಆಣೀ ವ್ಯಾಸಾದಿಕಾಚೆ ಕೃತ್ಯ । ವಾಉಗೇ ನವ್ಹೆ ॥೩೧॥

ಮ್ಹಣೋನಿ ಮಿಥ್ಯಾ ಮ್ಹಣತಾ ನಯೆ । ಬಹುತ ಜ್ಞಾನಾಚೆ ಉಪಾಯೆ ।
ಬಹುತೀ ನಿರ್ಮಿಲೇ ತೇ ಕಾಯೆ । ಮಿಥ್ಯಾ ಮ್ಹಣಾವೇ ॥೩೨॥

ಅದ್ವೈತ ಜ್ಞಾನಾಚಾ ಉಪದೇಶ । ಗುರುಗೀತಾ ತೋ ಮಹೇಶ ।
ಸಾಂಗತಾ ಹೋಯೆ ಪಾರ್ವತೀಶ । ಪಾರ್ವತೀಪ್ರತೀ ॥೩೩॥

ಅವಧೂತಗೀತಾ ಕೇಲೀ । ಗೋರಕ್ಷೀಸ ನಿರೋಪಿಲೀ ।
ತೇ ಅವಧೂತ ಗೀತಾ ಬೋಲಿಲೀ । ಜ್ಞಾನಮಾರ್ಗ ॥೩೪॥

ವಿಷ್ಣು ಹೋಊನ ರಾಜಹಂಸ । ವಿಧೀಸ ಕೇಲಾ ಉಪದೇಶ ।
ತೇ ಹಂಸಗೀತಾ ಜಗದೀಶ । ಬೋಲಿಲಾ ಸ್ವಮುಖೇ ॥೩೫॥

ಬ್ರಹ್ಮಾ ನಾರದಾ ಉಪದೇಶಿತ । ಚತುಃಶ್ಲೋಕೀ ಭಾಗವತ ।
ಪುಢೇ ವ್ಯಾಸಮುಖೇ ಬಹುತ । ವಿಸ್ತಾರಲೇ ॥೩೬॥

ವಸಿಷ್ಠಸಾರ ವಸಿಷ್ಠಋಷೀ । ಸಾಂಗತಾ ಜಾಲಾ ರಘುನಾಥಾಸೀ ।
ಕೃಷ್ಣ ಸಾಂಗೆ ಅರ್ಜುನಾಸೀ । ಸಪ್ತಶ್ಲೋಕೀ ಗೀತಾ ॥೩೭॥

ಐಸೇ ಸಾಂಗಾವೇ ತೇ ಕಿತೀ । ಬಹುತ ಋಷೀ ಬೋಲಿಲೆ ಬಹುತೀ ।
ಅದ್ವೈತ ಜ್ಞಾನ ಆದಿ ಅಂತೀ । ಸತ್ಯ ಚಿ ಅಸೇ ॥೩೮॥

ಮ್ಹಣೋನಿ ಮಿಥ್ಯಾ ಆತ್ಮಜ್ಞಾನ । ಮ್ಹಣತಾ ಪಾವಿಜೆ ಪತನ ।
ಪ್ರಜ್ಞಾ ರಹಿತ ಜೇ ಜನ । ತಯಾಸೀ ಹೇ ಕಳೇನಾ ॥೩೯॥

ಜೇಥೇ ಶೇಷಾಚೀ ಪ್ರಜ್ಞಾ ಮಂದಲೀ । ಶ್ರುತೀಸ ಮೌನ್ಯಮುದ್ರಾ ಪಡಿಲೀ ।
ಜಾಣಪಣೇ ನ ವಚೆ ವದಲೀ । ಸ್ವರೂಪಸ್ಥಿತೀ ॥೪೦॥

ಆಪಣಾಸ ಮಮಜೆ ಬರವೇ । ಮ್ಹಣೋನಿ ಮಿಥ್ಯಾ ಕೈಸೇ ಕರಾವೇ ।
ನಾತರೀ ಸದೃಢ ಧರಾವೇ । ಸದ್ಗುರುಮುಖೇ ॥೪೧॥

ಈ ಪ್ರಕಾರ ಸ್ವಸ್ವರೂಪದ ಅಭಾವ ಅನಿಸಹತ್ತಿದರೆ ಇವತ್ತಿನವರೆಗೆ ನಡೆದು ಬಂದ ಆತ್ಮಜ್ಞಾನದ ದೊಡ್ಡ [ಶ್ರೇಷ್ಠ] ಪರಂಪರೆ ವ್ಯರ್ಥವೆನಿಸೀತು ಎಂದು ಹೇಳುವರು, ಪರಬ್ರಹ್ಮನಿಗೆ ಅಸ್ತಿತ್ವವೇ ಇಲ್ಲವೆಂದು ಅನ್ನುವದು, ಒಂದು ವೇಳೆ ಖರೇ ಇದ್ದದ್ದಾದರೆ ವೇದ ಶಾಸ್ತ್ರಗಳು ಖೊಟ್ಟಿ ಇರುವವೆಂದು ಅನ್ನಬೇಕಾಗುವದು. ಇದು ಎಷ್ಟೂ ಸರಿ ಎನಿಸುವದಿಲ್ಲ. ಇದರಂತೆಯೇ ವ್ಯಾಸಾದಿಕರಂತಹ ಬ್ರಹ್ಮಜ್ಞಾನಿ ಪುರುಷರ ಕಾರ್ಯ ವ್ಯರ್ಥ ಶ್ರಮದ್ದೆಂದು ಅನ್ನಬೇಕಾಗುವದು ಇದೂ ಸಹ ಯೋಗ್ಯವೆನಿಸುವದಿಲ್ಲ. (೩೧) ಆತ್ಮಜ್ಞಾನ ಖೊಟಿಯೆಂದು ಅನ್ನಲು ಬರುವದಿಲ್ಲ. ಬ್ರಹ್ಮಜ್ಞಾನಿ ಪುರುಷರು ಇವತ್ತಿನವರೆಗೆ ಆತ್ಮಜ್ಞಾನದ ಬಗ್ಗೆ ಅನೇಕ ಸಾಧನ್ನಗಳನ್ನು ನಿರ್ಮಾಣ ಮಾಡಿರುವರು. ಅವೆಲ್ಲವನ್ನೂ ಖೊಟ್ಟಿ ನಿರರ್ಥಕ ಅನ್ನುವ ಪ್ರಸಂಗ ಬರುವದು. ಇದೂ ಸಹ ಯೋಗ್ಯವೆನಿಸವದಿಲ್ಲ. (೩೨) ಆತ್ಮಜ್ಞಾನದ ವಿಷಯ ಪ್ರತಿಪಾದನ ಮಾಡುವಂಥ ಸರ್ವಮಾನ್ಯ ಗ್ರಂಥಗಳ ಹೆಸರನ್ನು ಈಗ ಹೇಳುವರುಃ– ಗುರುಗೀತೆಯಲ್ಲಿ ಅದ್ವೈತಜ್ಞಾನದ ಉಪದೇಶವಿರುವದು. ಶ್ರೀ ಶಂಕರನು ಇದನ್ನು ಪಾರ್ವತಿಗೆ ಹೇಳಿರುವನು. (೩೩) ಗೋರಕ್ಷಕನಿಗೆ ಅವಧೂತ ಗೀತೆಯನ್ನು ಹೇಳಿರುವನು. ಅವಧೂತ ಗೀತೆಯಲ್ಲಿ ಕೇವಲ ಜ್ಞಾನಮಾರ್ಗವಿರುವದು. (೩೪) ವಿಷ್ಣುವು ರಾಜ ಹಂಸದ ರೂಪ ಧರಿಸಿ ಬ್ರಹ್ಮದೇವನಿಗೆ ಉಪದೇಶ ಮಾಡಿದನು. ಜಗದೀಶನಾದ ಈಶ್ವರನು ಸ್ವಮುಖದಿಂದ ಈ ಉಪದೇಶ ಮಾಡಿದನು. ಇದಕ್ಕೆ ಹಂಸಗೀತೆಯನ್ನುವರು. (೩೫) ಬ್ರಹ್ಮದೇವರು ನಾರದರಿಗೆ ಚತುಃಶ್ಲೋಕೀ ಭಾಗವತ ಹೇಳಿದರು. ಆಮೇಲೆ ವ್ಯಾಸರು ಇದನ್ನೇ ಬಹುವಿಸ್ತಾರವಾಗಿ ಹೇಳಿದರು. (೩೬) ವಶಿಷ್ಠರು ಶ್ರೀರಾಮಚಂದ್ರನಿಗೆ ಯೋಗವಾಶಿಷ್ಠ ಹೇಳಿದರು. ಶ್ರೀ ಕೃಷ್ಣನು ಅರ್ಜುನನಿಗೆ ಸಪ್ತಶ್ಲೋಕದ ಗೀತೆಯನ್ನು ಹೇಳಿದನು. (೩೭) ಇಂಥವುಗಳು ಬಹಳಷ್ಟಿವೆ. ಅವುಗಳ ಹೆಸರೂ ಹೇಳಬಹುದು. ಬಹಳಷ್ಟು ಋಷಿಗಳು ಬಹಳಷ್ಟು ರೀತಿಯಿಂದ ಉಪದೇಶ ಮಾಡಿದ್ದು ಇನ್ನೂ ಅನೇಕ ಗ್ರಂಥಗಳಿಂದ ತಿಳಿದು ಬರುವದು. ಅರ್ಥಾತ್ ಅದ್ವೈತ ಜ್ಞಾನವು ಆರಂಭದಿಂದ ಕೊನೆಯವರೆಗೆ ಎಲ್ಲ ಸ್ವಾನುಭವಿ ಪುರುಷರಿಂದ ಖರೇ ಇರುವದೆಂದು ಮಾನ್ಯತೆ ಪಡೆದಿರುವದು. (೩೮) ಆದ್ದರಿಂದ ಆತ್ಮಜ್ಞಾನವು ಖರೇ ಅಲ್ಲ–ಸುಳ್ಳು ಇರುವದು ಎಂದು ಅಂದರೆ ಅದು ನಮ್ಮ ದುರ್ದೈವವೇ ಸರಿ ಇಷ್ಟೇ ಅಲ್ಲ ನಮ್ಮ ಅಧಃಪಾತಕ್ಕೆ ಕಾರಣವಾಗುವದು. ಬುದ್ಧಿಹೀನ ಮತ್ತು ವಿಚಾರಹೀನ ಮನುಷ್ಯರಿಗೆ ಇದು ತಿಳಿಯುವದಿಲ್ಲ. (೩೯) ಖರೇ ಮಾತು ಏನಿರುವವೆಂದರೆ ಸ್ವರೂಪ ಸಾಕ್ಷಾತ್ಕಾರವು ಇತರ ಅನುಭವಗಳಂತೆ ಕೇವಲ ಶಬ್ದಗಳಿಂದಲೇ ತಿಳಿಸಿಕೊಡಲಿಕ್ಕೆ ಬರುವದಿಲ್ಲ. ಅಂತೆಯೇ ಸದ್ಗುರುವಿನ ಮುಖದಿಂದ ಇದರ ವಿಷಯವನ್ನು ಶ್ರವಣ ಮಾಡಬೇಕು. ಮತ್ತು ಇದನ್ನು ನಂಬಿ ಸ್ಥಿರ ಮನಸ್ಸಿನಿಂದ ಸಾಧನ ಮಾಡಬೇಕು. ಆತ್ಮ ಸಾಕ್ಷಾತ್ಕಾರವಾಗಿ ಅನುಭವಕ್ಕೆ ಬರುವ ಸ್ವರೂಪದ ಸ್ಥಿತಿಯು ಬಹು ಸೂಕ್ಷ್ಮವಾಗಿದೆ. ಎಷ್ಟೆಂಬುದನ್ನು ಹೇಳಲು ಆದಿಶೇಷನಿಗೂ ಸಾಧ್ಯವಿಲ್ಲ. ಅವನ ಬುದ್ಧಿ ಸಹ ಸೋತು ನಿಲ್ಲುತ್ತದೆ. ಶ್ರುತಿಗಳು ಮೌನವನ್ನು ಧರಿಸುವವು. "ನನಗೆ ಅದು ತಿಳಿಯಿತು" ಎಂದು ಯಾರಾದರೂ ಬ್ರಹ್ಮದ ವರ್ಣನೆ ಮಾಡಹೋದರೆ ಅವರಿಂದ ಸಾಧ್ಯವಾಗುವದಿಲ್ಲ. (೪೦) ಸ್ವರೂಪ ಸ್ಥಿತಿಯು ಹೇಗಿರುವದು? ಇದರ ಬಗ್ಗೆ ನಮಗೆ ಚನ್ನಾಗಿ ತಿಳಿಯುಲೊಲ್ಲದು, ತಿಳಿದಿಲ್ಲ ಹಾಗೂ ಗೊತ್ತಿಲ್ಲ. ಆದ್ದರಿಂದಲೇ ಇದು ಖರೇ ಇಲ್ಲವೇ ಇಲ್ಲವೆಂದು ಅನ್ನುವದು ಯೋಗ್ಯವೆನಿಸಲಾರದು. ನಿಮಗೆ ಆ ಸ್ಥಿತಿಯ ಬಗ್ಗೆ ತಿಳಿಯದಿದ್ದರೆ ಸದ್ಗುರುವಿನ ಮುಖದಿಂದ ಈ ಬಗ್ಗೆ ಶ್ರವಣ ಮಾಡಬೇಕು. ಶ್ರವಣ ಮಾಡಿದ್ದನ್ನು ಮನದಲ್ಲಿ ದೃಢಪಡಿಸಿಕೊಂಡು ನಿರ್ಧಾರ ಮನದಿಂದ ಸಾಧನ ಮಾಡಬೇಕು. (೪೧)

ಮಿಥ್ಯ ತೇ ಚಿ ಸತ್ಯಜಾಲೇ । ಸತ್ಯ ಅಸೋನ ಮಿಥ್ಯ ಕೇಲೇ ।
ಸಂದೇಹಸಾಗರೀ ಬುಡಾಲೇ । ಅಕಸ್ಮಾತ ಮನ ॥೪೨॥

ಮನಾಸ ಕಲ್ಪಾಯಾಚೀ ಸವೆ । ಮನೇ ಕಲ್ಪಿಲೇ ತೇ ನವ್ಹೆ ।
ತೇಣೆ ಗುಣೇ ಸಂದೇಹ ಧಾವೆ । ಮೀಪಣಾಚೆನಿ ಪಂಥೇ ॥೪೩॥

ತರೀ ತೋ ಪಥ ಚಿ ಮೋಡಾವಾ । ಮಗ ಪರಮಾತ್ಮಾ ಜೋಡಾವಾ ।
ಸಮೂಳ ಸಂದೇಹ ತೋಡಾವಾ । ಸಾಧುಚೆನಿ ಸಂಗತೀ ॥೪೪॥

ಮೀಪಣ ಶಸ್ತ್ರೇ ತುಟೇನಾ । ಮೀಪಣ ಫೋಡಿತಾ ಫುಟೇನಾ ।
ಮೀಪಣ ಸೋಡಿತಾ ಸುಟೇನಾ । ಕಾಹೀ ಕೇಲ್ಯಾ ॥೪೫॥

ಮೀಪಣೇ ವಸ್ತು ನಾಕಳೆ । ಮೀಪಣೇ ಭಕ್ತಿ ಮಾವಳೆ ।
ಮೀಪಣೇ ಶಕ್ತಿ ಗಳೆ । ವೈರಾಗ್ಯಾಚೀ ॥೪೬॥

ಮೀಪಣೇ ಪ್ರಪಂಚ ನ ಘಡೆ । ಮೀಪಣೆ ಪರಮಾರ್ಥ ಬುಡೆ ।
ಮೀಪಣೆ ಸಕಳಹೀ ಉಡೆ । ಯಶಕೀರ್ತಿಪ್ರತಾಪ ॥೪೭॥

ದೇಹಬುದ್ಧಿಯ ಹೊಟ್ಟೆಯಲ್ಲಿ ಜನ್ಮ ಹೊಂದುವ "ನಾನು" ಎಂಬ ಅಹಂತನವು ಈ ಎಲ್ಲ ಭಾನಗಡಿ ಗೊಂದಲ ಉತ್ಪನ್ನ ಮಾಡುತ್ತದೆ. ಅದು ಖರೇ ಇದ್ದದ್ದನ್ನು ಸುಳ್ಳು, ಖೊಟ್ಟಿ ಮತ್ತು ಸುಳ್ಳು ಇದ್ದದ್ದನ್ನು ಖರೇ ಎಂದು ಮಾಡುವದು.ಅದು ಅನೇಕ ಪ್ರಕಾರದ ನಾನಾ ಸಂದೇಹಗಳನ್ನು ನಿರ್ಮಾಣ ಮಾಡುವದು. ಅದು ಪ್ರಪಂಚ ಮಾಡಗೊಡುವದಿಲ್ಲ. ಮತ್ತು ಪರಮಾರ್ಥವನ್ನು ನಡೆಯಗೊಡುವದಿಲ್ಲ. ಬಹಳ ಪ್ರಯತ್ನ ಮಾಡಿದರೂ ಸಹ ಅದು ಇಲ್ಲದಂತೆ ಆಗುವದಿಲ್ಲ. ಇದನ್ನು ಇಲ್ಲದಂತೆ ಮಾಡುವ ಬಗ್ಗೆ ಸಾಧು ಸಂತರಲ್ಲಿಯೇ ಖರೇ ಗುಟ್ಟು ಇರುವದು. ಇವರು ಆಶ್ಚರ್ಯಪಡುವಂತೆ "ನಾನು" ಎಂಬ ಅಹಂತನ ಬಿಟ್ಟುಬಿಟ್ಟಿರುತ್ತಾರೆ. ಇದನ್ನು ಬಿಟ್ಟವರೇ ಖರೇ ಸಮಾಧಾನಿಗಳಾಗುವರು:– ದೇಹಬುದ್ಧಿಯಿಂದಾಗಿ ಆ ಯಾವ ದೃಶ್ಯವು ಖೊಟ್ಟಿ ಇರುವದೋ ಅದು ಖರೇ ಎನಿಸುವದು. ಯಾವ ಬ್ರಹ್ಮವು ಖರೇ ಇರುವದೋ ಆ ಬ್ರಹ್ಮವು ಸುಳ್ಳು, ಖೊಟ್ಟಿ ಅಂತಾ ಅನಿಸುವದು ಅನೇಕ ಪ್ರಕಾರದ ನಾನಾ ಸಂಶಯಗಳ ಮಧ್ಯದಲ್ಲಿ ಮನವು ಮುಳಮುಳಗಿ ಏಳುವದು. (೪೨) ಕಾರಣವಿಲ್ಲದೆ ಸುಮ್ಮನೆ ಕಲ್ಪನೆ ಮಾಡುತ್ತ ಇರುವ ಸವಯ (ರೂಢಿ) ಮನಸ್ಸಿಗೆ ಹತ್ತಿಬಿಟ್ಟಿದೆ. ಆದರೆ ಮನವು ಏನೇನು ಕಲ್ಪನೆ ಮಾಡುವದೋ ಅದೇ ಬ್ರಹ್ಮ ಸ್ವರೂಪವಲ್ಲ. ಹೀಗೆ (ಈ ರೀತಿಯಿಂದ) ಕಲ್ಪನೆ ಸುಳ್ಳು ಬಿದ್ದಕೂಡಲೇ ನಾನು ಎಂಬ ಅಹಂತನದ ಜೋರು ಜಾಸ್ತಿ ಆಗುವದು. ಇದರಿಂದ ಆಮೇಲೆ ಅನೇಕ ಸಂಶಯಗಳು ಹುಟ್ಟಿ ಮನದಲ್ಲಿ ಬಹಳ ಗೊಂದಲ ಹಾಕುವವು. ಹುಡದೀ ಎಬ್ಬಿಸುವವು. (೪೩) ಆದ್ದರಿಂದ ನಾನು ಎಂಬ ಅಹಂತನದ ಯಾವ ಮಾರ್ಗವಿರುವದೋ ಆ ಮಾರ್ಗವನ್ನು ಸಮೂಲವಾಗಿ ಭಂಗಗೊಳಿಸಿ ಬಿಡಬೇಕು. ಅಂದರೆ ಪರಮಾತ್ಮ ಸ್ವರೂಪದೊಂದಿಗೆ ತದಾಕಾರಗೊಳ್ಳಲು ಸಾಧ್ಯವಾಗುವದು. ಸತ್ಪುರುಷರ ಸಂಗತಿಯಿಂದ ಸಂದೇಹ ವೃತ್ತಿಯನ್ನು ಬೇರು ಸಹಿತ ಕಿತ್ತು ಹಾಕಬೇಕು. ಈ ನಾನು ಎಂಬ ಅಹಂತನದ ಸ್ವರೂಪ ಬಹಳ ವಿಲಕ್ಷಣವಿರುವದು. "ನಾನು" ಅನ್ನುವ ಅಹಂತನವನ್ನು ಕೇವಲ ಶಸ್ತ್ರದಿಂದ ಕಡಿದು ಹಾಕಲು ಬರುವದಿಲ್ಲ. ಸುತ್ತಿಗೆಯಿಂದ ಕಲ್ಲು ಒಡೆದು ಪುಡಿ ಪುಡಿ ಮಾಡಿ ಒಗೆದಂತೆ ಮಾಡಬೇಕೆಂದರೆ ಈ ಅಹಂತನವನ್ನು ಒಡೆಯಲಿಕ್ಕೆ ಬರುವದಿಲ್ಲ. ನಾನು ಅನ್ನುವದನ್ನು ಬಿಟ್ಟು ಬಿಡಬೇಕೆಂದು ಬಹಳ ಪ್ರಯತ್ನ ಮಾಡಿದರೂ ಸಹ ಅದು ಬಿಟ್ಟು ಬಿಡಲೊಲ್ಲದಾಗಿದೆ. (೪೫) ಇರಲಿ, ಈ ನಾನು ಎಂಬ ಅಹಂತನದ ಪರಿಣಾಮ ಮಾತ್ರ ಬಹಳ ಭಯಂಕರವಿರುವದು. "ನಾನು" ಇದರಿಂದ ಪರಮಾತ್ಮ ವಸ್ತು ಆಕಲನವಾಗುವದಿಲ್ಲ. ಬ್ರಹ್ಮವಸ್ತುವಿನ ಸಾಕ್ಷಾತ್ಕಾರವಾಗುವದಿಲ್ಲ. "ನಾನು" ಇದರಿಂದ ಭಕ್ತಿ ಇಲ್ಲದಂತೆ ಆಗಿಹೋಗುವದು. ಭಗವಂತನ ಇಚ್ಛೆಯಲ್ಲಿ ನಮ್ಮ ಇಚ್ಛೆಯನ್ನು ಕೂಡಿಸಿಕೊಂಡು ಹೋಗುವದೇ ಭಕ್ತಿಯ ಮರ್ಮವಿರುವದು. "ನಾನು" ಎಂಬ ಅಹಂತನ ಬಂದ ಕೂಡಲೇ ನಮ್ಮ ಇಚ್ಛೆ ಬೇರೆಯಾಗಿ ಬಿಡುವದು.ಇದರಿಂದ ಭಕ್ತಿಯು ಮರೆಯಾಗುವದು. ವೈರಾಗ್ಯದ ಶಕ್ತಿಪಾತವಾಗುವದು. ವೈರಾಗ್ಯ, ಇದು ಮನದ ನಿರಾಸಕ್ತದೆಶೆ ಇರುವದು. "ನಾನು" ಇದು ಬಂದ ಕೂಡಲೇ ವಾಸನಾ (ಇಚ್ಛೆ) ನಿರ್ಮಾಣವಾಗಿ ಜೀವವು ದೃಶ್ಯ ಪದಾರ್ಥಗಳಿಗೆ ಮನದಿಂದ ಅಂಟಿಕೊಳ್ಳುತ್ತದೆ. (ಆಸಕ್ತವಾಗುವದು). ಹೀಗೆ ದೃಶ್ಯ ಪದಾರ್ಥದಲ್ಲಿ ಆಸಕ್ತಿ ಉಂಟಾದ ಕೂಡಲೇ ತನ್ನಷ್ಟಕ್ಕೆ ತಾನೇ ಬಂಧನಕ್ಕೆ ಒಳಗಾಗುವದು. ಬಂಧನದಿಂದ ಸ್ವಾತಂತ್ರ್ಯ ಕಳೆದುಕೊಂಡು ಜೀವವು ಜಡತ್ವ ಹೊಂದುವದು. ಇದರಿಂದ ಅದರ ಬಲವು ತನ್ನಿಂದ ತಾನೇ ಕಡಿಮೆ ಆಗುವದು. (೪೬) ಅಹಂತನದಿಂದ ಗರ್ವ, ಅಭಿಮಾನ, ಉದ್ಧಟತನ, ಅಥವಾ ಅಹಂಕಾರ ಬರುವದು. ಇದರಿಂದ ಪ್ರಪಂಚವೂ ಸಹ ಚನ್ನಾಗಿ ಘಟಿಸುವದಿಲ್ಲ. ಅಂದಮೇಲೆ ಅಹಂತನದಿಂದ ಪರಮಾರ್ಥ ಮುಳುಗಿ ಹೋಗುವದೇನೂ ಆಶ್ಚರ್ಯವಲ್ಲ. ಅತ್ಯಂತ ಸೂಕ್ಷ್ಮವಾಗಿ ಸ್ವಸ್ವರೂಪದೊಂದಿಗೆ ನಿಕಟ ಸ್ಪರ್ಶ ಹೊಂದುವದರ ಹೆಸರೇ ಪರಮಾರ್ಥವು. ಅಹಂತನದಿಂದ ಜೀವವು ದೃಶ್ಯದ ಕಡೆಗೆ ಸರಿಯುತ್ತದೆ. ಅರ್ಥಾತ್ ಜೋರಿನಿಂದ ಎಳೆಯಲ್ಪಡುವದು (ನುಗ್ಗಿ ಬರುವದು).ಆದ್ದರಿಂದ ಅದು ಸ್ವಸ್ವರೂಪದಿಂದ ದೂರ ಹೋಗುತ್ತದೆ. ಅರ್ಥಾತ್ ಇದರಿಂದ ಪರಮಾರ್ಥವೆಲ್ಲ ಮುಳುಗಿ ಹೋಗುವದು. ಯಶ, ಕೀರ್ತಿ ಹಾಗೂ ಪ್ರತಾಪ ಇವೆಲ್ಲವೂ ಅಹಂತನದಿಂದ ನಾಶ ಹೊಂದುವವು. (೪೭)

ಮೀಪಣೆ ಮೀತ್ರೀ ತುಟೆ। ಮೀಪಣೆ ಪ್ರೀತಿ ಆಟೆ।
ಮೀಪಣೆ ಲಿಗಟೆ। ಅಭಿಮಾನ ಆಂಗೀ ॥೪೮॥

ಮೀಪಣೆ ವಿಕಲ್ಪ ಉಠೆ। ಮೀಪಣೆ ಕಳಹ ಸುಟೆ।
ಮೀಪಣೆ ಸಂಮೋಹ ಫುಟೆ। ಏಕ್ಯತೇಚಾ ॥೪೯॥

ಮೀಪಣ ಕೊಣಾಸಿ ಚ ನ ಸಾಹೇ। ತೇ ಭಗವಂತೀ ಕೈಸೇನಿ ಸಾಹೇ।
ಮ್ಹಣೌನಿ ಮೀಪಣ ಸಾಂಡೂನ ರಾಹೇ। ತೋಚಿ ಸಮಾಧಾನೀ ॥೫೦॥

ಮೀಪಣ ಕೈಸೆ ತ್ಯಾಗಾವೇ। ಬ್ರಹ್ಮ ಕೈಸೆ ಅನುಭವಾವೇ।
ಸಮಾಧಾನ ಕೈಸೆ ಪಾವಾವೇ। ಕೋಣಾ ಪ್ರಕಾರೇ ॥೫೧॥

ಮೀಪಣ ಜಾಣೋನಿ ತ್ಯಾಗಾವೇ। ಬ್ರಹ್ಮ ಹೋಊನ ಅನುಭವಾವೇ।
ಸಮಾಧಾನ ತೇ ಪಾವಾವೇ। ನಿಃಸಂಗಪಣೇ ॥೫೨॥

ಅನೇಕ ಯೇಕ ಸಮಾಧಾನ। ಮೀಪಣೆವಿಣ ಸಾಧನ।
ಕರೂ ಜಾಣೇ ತೋಚಿ ಧನ್ಯ। ಸಮಾಧಾನೀ ॥೫೩॥

ಅಹಂತನದಿಂದ ಮಿತ್ರರಲ್ಲಿಯು ಸ್ನೇಹ ದೂರಾಗುವದು. ಅಹಂತನದಿಂದ ನಮ್ಮ ನಮ್ಮವರಲ್ಲಿಯು ಪ್ರೇಮ ಕಡಿಮೆ ಆಗುವದು. ಅಹಂತನದಿಂದ ಮನುಷ್ಯರಲ್ಲಿ ಅಭಿಮಾನ ಅಂಟಿಕೊಳ್ಳುವದು. ದುರಭಿಮಾನಿ ಆಗುವನು. (೪೮) ನಾನು ಎಂಬ ಅಹಂಕಾರದಿಂದ ಮನಸ್ಸಿನಲ್ಲಿ ಸಂಶಯ, ವಿಪರೀತ ಕಲ್ಪನೆಗಳು ನಿರ್ಮಾಣ ವಾಗುವವು. ಈ ಅಹಂದಿಂದಲೇ ಜಗಳ ತಂಟೆ ಉತ್ಪನ್ನವಾಗುವವು. ಇಷ್ಟೇ ಅಲ್ಲ ಜಗಳದ ಸುಕಾಳದ ಕಣವೇ ಉಂಟಾಗುವದು. ಈ ಅಹಂತನದಿಂದಲೇ ಸಮೂಹ (ಸಮುದಾಯ)ದಲ್ಲಿಯು ಜನರಲ್ಲಿ ಪರಸ್ಪರ ಐಕ್ಯತೆಗೆ ಧಕ್ಕೆ ಬಂದು ಅದು ವಿಧ್ವಂಸವಾಗುವದು. ಅಥವಾ ಒಡಕು ಉಂಟಾಗುವದು. ಮತ್ತು ನಾವು ಒಕ್ಕಟ್ಟಿನಿಂದ ಇರುವೆವೆಂಬ ಭ್ರಮೆಯೂ ಹಾರಿ ಹೋಗುವದು. (೪೯) ಈ ರೀತಿಯಿಂದ ಜೀವನದ ಯಾವುದೇ ಕ್ಷೇತ್ರದಲ್ಲಿ "ನಾನು" ಅನ್ನುವ ಅಹಂತನ ಯಾರಿಗೂ ಸಹನವಾಗುವದಿಲ್ಲ. ಅಂದಮೇಲೆ ಭಗವಂತನಿಗಾದರೂ ಇದು ಹೇಗೆ ಸಹನವಾದೀತು? ಅಂತೆಯೇ ಯಾರೇ ಆಗಲಿ "ನಾನು" ಅನ್ನುವ ಅಹಂಕಾರವನ್ನು ನಾಶಗೊಳಿಸಿ, ಇಲ್ಲದಂತೆ ಮಾಡಿ ಜೀವನ ಸಾಗಿಸು ವರೋ ಅವರು ಮಾತ್ರ ಸಮಾಧಾನ ಹೊಂದುವರು. (೫೦) ಎಲ್ಲ ಸಮಸ್ಯೆಯ ಮೂಲವು ನಾನು ಎಂಬ ಅಹಂ ತನದಲ್ಲಿ ಸಿಗುವದು ಅಥವಾ ಇರುವದು ಎಂದು ಎಲ್ಲ ಸಾಕ್ಷಾತ್ಕಾರಿ ಸಂತ ಸಾಧುಗಳು ಇವತ್ತಿನವರೆಗೂ ಹೇಳುತ್ತ ಬಂದಿದ್ದಾರೆ. ಒಂದು ವೇಳೆ ಇದು ಖರೇ ಇದ್ದದ್ದಾದರೆ ಎಲ್ಲ ಪರಮಾರ್ಥ ಮತ್ತು ಎಲ್ಲ ಸಾಧನೆಗಳು "ನಾನು" ಎಂಬ ಅಹಂತನವನ್ನು ಸಂಪೂರ್ಣ ತ್ಯಾಗ ಮಾಡುವಲ್ಲಿಯೇ ಇರುವದು. ಇದು ನಿಶ್ಚಯವಾಗಿಯೂ ಯೋಗ್ಯವೆನಿಸು ವದು. ಆದ್ದರಿಂದ ಮೊದಲು ನಾನು ಅನ್ನುವ ಈ ಮೊಂಡ ಅಹಂತನವನ್ನು ಹೇಗೆ ತ್ಯಾಗಮಾಡಬೇಕು? ಈ ಪ್ರಶ್ನೆಗೆ ಶ್ರೀಸಮರ್ಥರು ಈಗ ಉತ್ತರ ಹೇಳುವರು. ಇಲ್ಲಿ ಉದ್ಭವಿಸುವ ಪ್ರಶ್ನೆಗಳು ಯಾವವೆಂದರೆ:- **(ಒಂದು)** ನಾನು ಅನ್ನುವದನ್ನು ಹೇಗೆ ತ್ಯಾಗ ಮಾಡಬೇಕು? **(ಎರಡು)** ಬ್ರಹ್ಮನ ಅನುಭವ ಹೇಗೆ ಪಡೆಯಬೇಕು? **(ಮೂರು)** ಯಾವ ರೀತಿಯಿಂದ ಸಮಾಧಾನ ಹೊಂದಬೇಕು? (೫೧) ಈ ಮೂರು ಪ್ರಶ್ನೆಗಳಿಗೆ ಉತ್ತರ ಹೀಗಿರುವದು:- **(ಒಂದು)** ನಾನು ಎಂಬ ಅಹಂತನವನ್ನು ಸರಿಯಾಗಿ ತಿಳಿದು ದೃಢ ನಿಶ್ಚಯದಿಂದ ಇದರ ಸಂಪೂರ್ಣ ತ್ಯಾಗಮಾಡ ಬೇಕು. **(ಎರಡು)** ನಾವು ಬ್ರಹ್ಮದೊಂದಿಗೆ ತದಾಕಾರವಾಗಬೇಕು. ಈ ರೀತಿಯಲ್ಲಿ ನಾವು ಸ್ವತಃ ಬ್ರಹ್ಮಸ್ವರೂಪ ರಾಗಿ ಅನುಭವ ಪಡೆಯಬೇಕು. **(ಮೂರು)** ನಾನು-ನನ್ನದು ಎಂದು ಯಾವುದೇ ದೃಶ್ಯವಸ್ತುವಿನಲ್ಲಿ ಆಸಕ್ತರಾಗಿ ಅದಕ್ಕೆ ಅಂಟಿಕೊಳ್ಳಬೇಡಿರಿ. ಇಂಥ ಸಂಗರಹಿತವಾದ ಮನಸ್ಸಿಗೆ ಖರೇ ಸಮಾಧಾನ ಅನುಭವ ಬರುವದು."ನಾನು" ಈ ಅಹಂದ ತ್ಯಾಗವಾಗಲಿಕ್ಕೆ ವಿವೇಕದ ಅವಶ್ಯಕತೆ ಇರುವದು. ಬ್ರಹ್ಮಾನುಭವ ಬರಬೇಕಾದರೆ ಸಮರಸತೆಯ ಅವಶ್ಯಕತೆ ಇರುವದು. ಮತ್ತು ಸಮಾಧಾನ ಹೊಂದುವದಕ್ಕೆ ವಾಸನಾರಹಿತರಾಗಬೇಕು. ಇದರ ಅವಶ್ಯಕತೆ ಹೆಚ್ಚು ಮುಖ್ಯವಿರುತ್ತದೆ. (೫೨) ಸಮಾಧಾನ ಪಡೆಯುವಲ್ಲಿ ಇನ್ನೊಂದು ರಹಸ್ಯವಿದೆ. ಅದು ಯಾವುದೆಂದರೆ ಸಾಧನೆ ಮಾಡುವದು ಚಾಲೂ ಇರುತ್ತದೆ. ಆದರೆ ಅವರಲ್ಲಿ "ನಾನು" ಅನ್ನುವ ಅಹಂತನ ಇಲ್ಲ. "ನಾನು ಸಾಧನೆ ಮಾಡು ತ್ತೇನೆ ಎಂಬ ಭಾವನೆಯೂ ಇಲ್ಲ. ಈ ಪ್ರಕಾರದ ಯುಕ್ತಿಯಿಂದ ಯಾವನು ಸಾಧನೆ ಮಾಡುವನೋ ಅಂಥವರಲ್ಲಿ ಬರುವ ಸಮಾಧಾನವು ಒಂದು ಪ್ರತ್ಯೇಕ ವಿಚಿತ್ರ ಮತ್ತು ಹೆಚ್ಚಿನವೇ ಆಗಿರುತ್ತದೆ. ಇಂಥ ಸಮಾಧಾನ ಸಾಧಿಸಿ ದವನು ನಿಜವಾಗಿಯೂ ಧನ್ಯನೆಂದು ಅನ್ನಬಹುದು. ದೇಹಬುದ್ಧಿ ಇರುವವರೆಗೆ ನಾನು-ನನ್ನದು ಎಂಬ ಅಹಂತನ ಇದ್ದೇ ಇರುತ್ತದೆ. ನಾನು ಎಂಬುದು ಇರುವವರೆಗೆ "ನಾನು ಸಾಧನೆ ಮಾಡುತ್ತೇನೆ" ಅನ್ನುವ ಭಾವನೆಯೂ ಇರು ವದು. ಸಾಧನೆ ಮಾಡುತ್ತ ಮಾಡುತ್ತ ಪ್ರಗತಿ ಸಾಧಿಸಿದಂತೆಲ್ಲ "ನಾನು" ಎಂಬುದು ಕ್ಷೀಣವಾಗುತ್ತ ಹೋಗುವದು. ದೇಹಬುದ್ಧಿ ಕ್ಷಯ ಹೊಂದ ಹತ್ತುವದು. ಆಗ "ನಾನು ಸಾಧನೆ ಮಾಡುವದಿಲ್ಲ. ಅವು ಅವನ್ನು ನನ್ನ ಕಡೆಯಿಂದ ಮಾಡಿಸಿಕೊಳ್ಳುವದು. ಹೀಗೆ ಭಾವನೆ ಆಗಿ ಅದು ದೃಢವಾಗಹತ್ತುವದು. ಮುಂದೆ ಸಾಧನೆ ಪರಿಪಕ್ವವಾಯಿತೆಂದರೆ ಅದು ಯಥಾ ಸ್ಥಿತಿಯಲ್ಲಿ ಮುನ್ನಡೆದರೂ ಸಹ ಸಾಧಕನು ನಾನು ಎಂಬುವದರಲ್ಲಿ ಉಳಿಯುವದಿಲ್ಲ. ಅವನು (ಸಾಧಕನು) ಸ್ವಸ್ವರೂಪದೊಂದಿಗೆ ತದಾಕಾರನಾಗಿ ಇರುವನು. "ರಾಮ ಹಮಾರಾ ಜಪಕರೆ, ಹಮ್ ಬೈಠೇ ಆರಾಮ" (ಕಬೀರ) ಹೀಗೆ ಅದು ಒಂದು ವಿಲಕ್ಷಣ ಅವಸ್ಥೆ ಇರುವದು. ಇಂಥ ಅವಸ್ಥೆಯಲ್ಲಿಯ ಸಮಾಧಾನವು ಮಾತ್ರ ವಿಶಿಷ್ಟತನದ್ದೇ ಇರುವದು. (೫೩)

ಮೀ ತೋ ಬ್ರಹ್ಮ ಚಿ ಜಾಲೋ ಸ್ವತಾ । ಸಾಧನ ಕೋಣ ಕರೀಲ ಆತಾ ।
ಐಸೇ ಮನೀ ಕಲ್ಪೂ ಜಾತಾ। ಕಲ್ಪನಾ ಚಿ ಉಠೇ ॥೫೪॥

ಬ್ರಹ್ಮೀ ಕಲ್ಪನಾ ನ ಸಾಹೆ । ತೇಚಿ ತೇಥೇ ಉಭೀ ರಾಹೆ ।
ತಯೇಸಿ ಶೋಧೂನ ಪಾಹೆ। ತೋ ಚಿ ಸಾಧು ॥೫೫॥

ನಿರ್ವಿಕಲ್ಪಾಸೀ ಕಲ್ಪಾವೇ । ಪರೀ ಕಲ್ಪಿತೆ ಆಪಣ ನ ವ್ಹಾವೇ ।
ಮೀಪಣಾಸಿ ತ್ಯಾಗಾವೇ। ಯೇಣೆ ರಿತೀ ॥೫೬॥

ಯಾ ಬ್ರಹ್ಮವಿದ್ಯೇಚ್ಯಾ ಲಪಣೀ । ಕಾಹೀ ಚ ನಸಾವೇ ಅಸೋನೀ ।
ದಕ್ಷ ಆಣೀ ಸಮಾಧಾನೀ । ತೋಚಿ ಹೇ ಜಾಣೆ ॥೫೭॥

ಜಯಾಸೀ ಆಪಣ ಕಲ್ಪಾವೇ । ತೇ ಚಿ ಆಪಣ ಸ್ವಭಾವೇ ।
ಯೇಥೇ ಕಲ್ಪನೇಚ್ಯಾ ನಾವೇ । ಸುನ್ಯ ಆಲೇ ॥೫೮॥

ಪದೀಹೂನ ಚಳೇ ನಯೆ । ಕರಾವೇ ಸಾಧನ ಉಪಾಯೇ ।
ತರೀ ಚ ಸಾಪಡೆ ಸೋಯೇ । ಅಲಿಪ್ತಪಣಾಚೀ ॥೫೯॥

ತಿಳಿಯಿರಿ ಉದಾ:- ಸಾಧನೆ ಮಾಡುತ್ತ ಮಾಡುತ್ತ ಒಬ್ಬ ಸಾಧಕನು ಸ್ವಸ್ವರೂಪಾಕಾರವಾದನು. "ನಾನಾದರೋ ಈಗ ಸ್ವತಃ ಬ್ರಹ್ಮ ಆದೆನು. ನನಗೆ ಸಾಧನೆ ಮಾಡುವ ಅವಶ್ಯಕತೆ ಏನಿರುವದು?" ಹೀಗೆ ಒಂದು ವೇಳೆ ಅವನು ಅನ್ನಹತ್ತಿದರೆ, ಇಂಥ ಸಂಕಲ್ಪ ಅವನ ಮನಸ್ಸಿನಲ್ಲಿ ಬಂದದ್ದಾದರೆ ಅವನು ನಿಜವಾಗಿಯೂ ಕಲ್ಪನೆಯ ಮಡುವಿನಲ್ಲಿ ಬೀಳುವನು. [೫೪] ವಾಸ್ತವಿಕವಾಗಿ ಬ್ರಹ್ಮ ಸ್ವರೂಪದಲ್ಲಿ ಕಲ್ಪನೆಗೆ ಸ್ಥಾನವಿಲ್ಲ. ಆದರೆ ಮೇಲೆ ಹೇಳಿದ ಪ್ರಕಾರ ಒಂದು ವೇಳೆ ಸಂಕಲ್ಪ ಹುಟ್ಟಿದ್ದಾದರೆ, ಅಲ್ಲಿ ಕಲ್ಪನೆಯು ಮುಂದೆ ಬಂದು ನಿಲ್ಲುತ್ತದೆ. ಇದರ ಶೋಧ ಮಾಡಿ ಅದರ ಮೇಲೆ ಲಕ್ಷ್ಯವಿಟ್ಟು ಅದನ್ನು ಯಾರು ಇಲ್ಲದಂತೆ ಮಾಡುವರೋ ಅವರೇ ಖರೇ ಸಾಧು ಸಂತರೆಂದು ಅನ್ನಬೇಕು. ನಾನು ಎಂಬ ಅಹಂಕಾರ ಎಷ್ಟೂ ಇಲ್ಲದೆ ಸಾಧನ ಮಾಡುವವನು ಇಂಥ ಭಾಗ್ಯಶಾಲಿ ಇರುವನು. [೫೫] ಸಾಧನೆಯಲ್ಲಿ ನಿರ್ವಿಕಲ್ಪದ ಕಲ್ಪನೆಯನ್ನು ಮಾಡತಕ್ಕದ್ದೇ ಆದರೆ, "ನಾನು ಕಲ್ಪನಾ ಮಾಡುತ್ತೇನೆ" ಎಂಬ ದೇಹ ಬುದ್ಧಿಯ ಭಾವನೆ ಮಾತ್ರ ಅಲ್ಲಿ ಇರಬಾರದು. ಈ ಪ್ರಕಾರದಿಂದ "ನಾನು" ಅನ್ನುವ "ಅಹಂ"ಅನ್ನು ತ್ಯಾಗ ಮಾಡಬೇಕು. ಸಂತರು ಹೇಳುವದೇನೆಂದರೆ ಅವಿದ್ಯೆಯ ಛಾಯೆಯ ಕೆಳಗೆ ಜೀವವು ಎಲ್ಲಿಯವರೆಗೆ ಇರುವದೋ ಅಲ್ಲಿಯವರೆಗೆ ಅದರ ಮನದ ವ್ಯಾಪಾರ ಸ್ಮೃತಿ [ನೆನಪು] ಲಕ್ಷ್ಯ, ವಿಚಾರ, ಭಾವನೆ ಮತ್ತು ಕಲ್ಪನೆ ಇವೆಲ್ಲವು ಆಕುಂಚಿತವಾದ "ನಾನು" ಎಂಬ ಅಹಂಕಾರದಲ್ಲಿ ಕೇಂದ್ರೀಕೃತವಾಗಿರುವವು. ಆದ್ದರಿಂದ ಬ್ರಹ್ಮ ಸ್ವರೂಪವನ್ನು ತಿಳಿಯಲು ಅದು [ಜೀವವು] ನಿರುಪಯೋಗಿ ಎಂದು ಅನಿಸಿಕೊಂಡಿದೆ. ಇಷ್ಟೇ ಅಲ್ಲ, ಅದು ಬ್ರಹ್ಮದ ಬಗ್ಗೆ ವಿಪರೀತಜ್ಞಾನವನ್ನು ನಿರ್ಮಾಣ ಮಾಡುವದು. ಆದರೆ ಜೀವ ಯಾವಾಗ ಬ್ರಹ್ಮದ ಕಡೆಗೆ ಕೇಂದ್ರಿತವಾಗುವದೋ ಆಗ ಅದೇ ಮನಸ್ಸಿನ ವ್ಯಾಪಾರವು ವಿದ್ಯೆಯ ಛಾಯೆಯ ಕೆಳಗೆ ಕಾರ್ಯ ಮಾಡಹತ್ತುವದು. ಬ್ರಹ್ಮದೊಂದಿಗೆ ಸಾಕ್ಷಾತ್ ಸ್ಪರ್ಶವಾಗಿ ಅದಕ್ಕೆ ವಿಶಾಲತೆ ಬರಲಿಕ್ಕೆ ಹತ್ತುವದು. ಉದಾ:- ವಿಚಾರ ಮಾಡುತ್ತ ಮಾಡುತ್ತ "ನಾನು ವಿಚಾರ ಮಾಡುತ್ತೇನೆ" ಈ ದ್ವೈತದ ಅವಸ್ಥೆ ಹೋಗುವದು ಮತ್ತು "ನಾನು" ಇದು ಸ್ವರೂಪದಲ್ಲಿ ವಿಲೀನ ಆಗಿ ಖರೇ ವಿಚಾರ ಮಾತ್ರ ನಡೆಯುವದು. ಕಲ್ಪನೆಯಲ್ಲಿಯೂ ಹೀಗೆಯೇ ಆಗುತ್ತದೆ. ಸಾಧನೆಯದೂ ಇದೇ ರೀತಿ ಆಗುವದು. ಈ ಅವಸ್ಥೆಯಲ್ಲಿ ಪ್ರತಿಭೆಯು ಜಾಗ್ರತಗೊಂಡು ಸಾಕ್ಷಾತ್ಕಾರ ಆಗುವದರ ಪೂರ್ವ ತಯಾರಿ ಸಿದ್ಧವಾಗುತ್ತದೆ. [೫೬] ಇತರ ವಿದ್ಯೆಗಳಿಗೂ ಈ ಬ್ರಹ್ಮವಿದ್ಯೆಗೂ ಅಂತರವಿರುತ್ತದೆ. ಇತರ ವಿದ್ಯೆಗಳಲ್ಲಿ ತಿಳಿಯುವವನಾದ ಜ್ಞಾತಾನು ಸತತವಾಗಿ ಹಾಜರ ಇದ್ದು ಪ್ರತ್ಯೇಕತನದಿಂದ [ಏಕರೂಪನಾಗದೆ] ಯಾವುದನ್ನು ತಿಳಿಯಬೇಕಾಗಿತ್ತೋ ಆ ಜ್ಞೇಯವನ್ನು ತಿಳಿಯುವ ಪ್ರಯತ್ನ ಮಾಡುವನು. ಆದರೆ ಬ್ರಹ್ಮವಿದ್ಯೆಯಲ್ಲಿ ತಿಳಿಯುವವನಾದ ಜ್ಞಾತಾ ತಿಳಿಯಬೇಕಾದ ಯಾವ ಜ್ಞೇಯವಿರುವದೋ ಅದರಲ್ಲಿ ಹೋಗಿ ಅಡಗಿ ಬಿಡುವನು, ವಿಲೀನವಾಗುವನು. ಮತ್ತು ಪುನಃ ಪ್ರತ್ಯೇಕತನದಿಂದ ಪ್ರಕಟವಾಗುವನು. ಆದ್ದರಿಂದ ಬ್ರಹ್ಮವಿದ್ಯಾ ಅಂದರೆ ಒಂದು ಕಣ್ಣು ಮುಚ್ಚಾಲೆಯಂತೆ ಇರುವದು. ಈ ವಿದ್ಯೆಯಲ್ಲಿ ನೋಡಲಿಕ್ಕೆ ಮಾತ್ರ ನಾವು "ನಾನು ಅನ್ನುವ ಅಹಂತನದಿಂದ ಇರಬೇಕು. ಆದರೆ ಖರೇ ಅರ್ಥದಲ್ಲಿ ಸಂಪೂರ್ಣ ಇರಬಾರದು ಯಾರು ಹೀಗೆ ತತ್ಪರರಿರುವರೋ ಮತ್ತು ಸಮಾಧಾನಿ ಇರುವರೋ ಅವರಿಗೆ ಈ ಗುಟ್ಟು ತಿಳಿಯುವದು. [೫೭] ಯಾವ ಬ್ರಹ್ಮ ಸ್ವರೂಪದ ಬಗ್ಗೆ ನಾವು ಕಲ್ಪನೆ ಮಾಡುವದಿರುವದೋ ಆ ಸ್ವರೂಪವೇ ಸ್ವತಃ ನಾವೇ ಆದರೆ ಆಮೇಲೆ ಕಲ್ಪನೆಯು ತನ್ನಷ್ಟಕ್ಕೆ ತಾನೇ ಶೂನ್ಯವತ್ ಆಗಿ ಹೋಗುವದು. [೫೮] ನಾವು ಬ್ರಹ್ಮ ಸ್ವರೂಪರೇ ಇರುವೆವು. ಇದು ನಮ್ಮ ಮೂಲ ಸ್ಥಳ ಇರುವದು. ಅಲ್ಲಿಂದ ಅತ್ತಿತ್ತ ಬಾಜೂಕ್ಕೆ ಸರಿಯದೆ ನಾವು ಸಾಧನ ಮಾಡಲಿಕ್ಕೆ ಹತ್ತಬೇಕು. ಕಲಿಯಬೇಕು. ಇದು ಸಾಧಿಸಿದರೇ ಮಾತ್ರ ಅಲಿಪ್ತತನದ ಯುಕ್ತಿಯು ಸ್ವಾಧೀನವಾಗುವದು. ಏನೆಲ್ಲವನ್ನೂ ಮಾಡಿ ಯಾವುದರಲ್ಲಿಯೂ ಸಿಗದಂತೆ, ಆಸಕ್ತಿ ಹೊಂದದೆ, ನಾನು ಅನ್ನುವ ಅಹಂತನದಲ್ಲಿ ಇರದೆ ಇರುವದು.ಮುಖ್ಯವಾದದ್ದು ಈ ಕಲೆಯು ಅಲಿಪ್ತತನದ ಯುಕ್ತಿ ಇರುವದು. [೫೯]

ರಾಜಾ ರಾಜಪದೀ ಅಸತಾ । ಉಗೀ ಚ ಚಾಲೆ ಸರ್ವಸತ್ತಾ ।
ಸಾಧ್ಯಚಿ ಹೋಊನ ತತ್ವತಾ। ಸಾಧನ ಕರಾವೇ ॥೬೦॥

ಸಾಧನ ಆಲೆ ದೇಹಾಚ್ಯಾ ಮಾಥಾ । ಆಪಣ ದೇಹ ನವ್ಹೇ ಸರ್ವಥಾ ।
ಐಸಾ ಕರೂನಿ ಅಕರ್ತಾ । ಸಹಜಚಿ ಜಾಲಾ ॥೬೧॥

ದೇಹ ಆಪಣ ಐಸೇ ಕಲ್ಪಾವೇ । ತರೀ ಚ ಸಾಧನ ತ್ಯಾಗಾವೇ ।
ದೇಹಾತೀತ ಅಸ್ತಾ ಸ್ವಭಾವೇ। ದೇಹ ಕೈಚಾ ॥೬೨॥

ನಾ ತೇ ಸಾಧನ ನಾ ತೇ ದೇಹ । ಆಪಲಾ ಆಪಣ ನಿಃಸಂದೇಹ ।
ದೇಹೀಂಚ ಅಸೋನ ವಿದೇಹ । ಸ್ಥಿತೀ ಐಸೀ ॥೬೩॥

ಸಾಧನೇವಿಣ ಬ್ರಹ್ಮ ಹೋತಾ । ಲಾಗೋ ಪಾಹೇ ದೇಹಮಮತಾ।
ಆಳಸ ಪ್ರಬಳೇ ತತ್ವತಾ । ಬ್ರಹ್ಮಜ್ಞಾನಮಿಸೇ ॥೬೪॥

ಪರಮಾರ್ಥಮಿಸೇ ಅರ್ಥ ಜಾಗೆ । ಧ್ಯಾನಮಿಸೇ ನಿದ್ರಾ ಲಾಗೆ ।
ಮುಕ್ತಿಮಿಸೇ ದೋಷ ಭೋಗೇ । ಅನರ್ಗಳತಾ ॥೬೫॥

ನಿರೂಪಣಮಿಸೇ ನಿಂದಾ ಘಡೇ । ಸಂವಾದಮಿಸೇ ವೆವಾದ ಪಡೇ।
ಉಪಾಧೀಮಿಸೇ ಯೇಊನ ಜಡೇ । ಅಭಿಮಾನ ಅಂಗೀ ॥೬೬॥

ತೈಸಾ ಬ್ರಹ್ಮಜ್ಞಾನಮಿಸೇ । ಆಳಸ ಅಂತರೀ ಪ್ರವೇಶೇ।
ಮ್ಹಣೆ ಸಾಧನಾಚೆ ಪಿಸೇ । ಕಾಯ ಕರಾವೇ ॥೬೭॥

॥ಶ್ಲೋಕ॥ ಕಿಂ ಕರೋಮಿ ಕ್ವ ಗಚ್ಛಾಮಿ । ಕಿಂ ಗೃಹ್ಣಾಮಿ ತ್ಯಜಾಮಿ ಕಿಮ್ ।
ಆತ್ಮನಾ ಪೂರಿತಂ ಸರ್ವಂ । ಮಹಾಕಲ್ಪಾಂಬುನಾ ಯಥಾ ॥

ವಚನ ಆಧಾರೀ ಲಾವಿಲೇ । ಜೈಸೆ ಶಸ್ತ್ರ ಫಿರಾವಿಲೇ ।
ಸ್ವತಾ ಹಾಣೋನ ಘೇತಲೇ । ಜಯಾಪರೀ ॥೬೮॥

ರಾಜನು ರಾಜಪದದ ಮೇಲೆ ಆರೂಢನಾಗಿರುವನು. ಆದರೆ ಅವನೇನೂ ಸ್ವತಃ ತಾನೇ ಏನೂ ಮಾಡದಿದ್ದರೂ ರಾಜ ಅನ್ನುವ ಸತ್ತಾಧಿಕಾರವು ಎಲ್ಲ ಕಡೆಗೂ ನಡೆಯುವದು. ಇದರಂತೆಯೇ ನಾವೂ ಸಾಧ್ಯರೂಪರಾಗಬೇಕು. ಬ್ರಹ್ಮ ಸ್ವರೂಪ ಹೊಂದಬೇಕು. ಆನಂತರವೂ ಸಾಧನೆ ತನ್ನಷ್ಟಕ್ಕೆತಾನೇ ನಡೆಯುತ್ತಲಿರಲಿ, [೬೦] ಸಾಧನೆಯ ಸಂಬಂಧವು ದೃಶ್ಯದ ಮತ್ತು ದೇಹದೊಂದಿಗೆ ಬರುವದು ಮತ್ತು ನಾನು ದೇಹವಲ್ಲ, "ನಾನು ಬ್ರಹ್ಮಸ್ವರೂಪ ಇರುವೆ" ಇದು ಸಾಧಕನ ಪ್ರತ್ಯಕ್ಷ ಅನುಭವ ಇರುವದು. ಆದ್ದರಿಂದ ಏನೆಲ್ಲವನ್ನೂ ಮಾಡಿಯೂ ಸಹ ಆತ್ಮನ ಅಥವಾ ಬ್ರಹ್ಮಸ್ವರೂಪಿಯ ಅಕರ್ತಾತನಕ್ಕೆ ಚ್ಯುತಿ ಬಾರದೇ ಇದ್ದಂತೆಯೇ ಉಳಿಯುವದು [೬೧] "ನಾನು ದೇಹವಿರುವೆ" ಈ ಭಾವನೆ ಎಲ್ಲಿಯವರೆಗೆ ಇರುವದೋ ಅಲ್ಲಿಯವರೆಗೆ ಸಾಧನ ಮಾಡುವದು ಅಥವಾ ಬಿಡುವದು ಈ ಕ್ರಿಯೆಗೆ ಅರ್ಥವಿರುವದು. ಆದರೆ ನಾವು ದೇಹಾತೀತವಾದ ಆತ್ಮಸ್ವರೂಪ ಇರುವೆವು ಎಂಬ ಪ್ರಚೀತಿ (ಅನುಭವ) ಬಂದ ಬಳಿಕ ದೇಹದ ಸ್ಮರಣವೇ ಉಳಿಯುವದಿಲ್ಲ. ಆಗ ಸಾಧನ ಮಾಡುವದು ಅಥವಾ ಬಿಡುವದು ಅನ್ನುವದೇ ಉಳಿಯುವದಿಲ್ಲ. [೬೨] ಬ್ರಹ್ಮಸ್ವರೂಪ ಆದಮೇಲೆ ಸಂಪೂರ್ಣ ಸಂದೇಹರಹಿತರಾಗಿ ಯಾರು ಇರುವರೋ ಅಂಥವರಿಗೆ ದೇಹದ ಭಾನ [ಎಚ್ಚರ] ಇರುವದಿಲ್ಲ. ಸಾಧನ ಮಾಡುವೆಯೆಂಬುದರ ಅರಿವೂ ಇರುವದಿಲ್ಲ. ದೇಹ ದಲ್ಲಿ ಇದ್ದೂ ವಿದೇಹ ಅವಸ್ಥೆ ಹೊಂದುವದು [ಭೋಗಿಸುವದು] ಅಂದರೆ ಇದೇ ಇರುವದು. [೬೩]ಪರಮಾರ್ಥ ದಲ್ಲಿ ಸಾಧನ ಮಾಡುವದಕ್ಕೆ ಬಹಳ ಮಹತ್ವವಿರುವದು. ಸಾಧನೆ ಚನ್ನಾಗಿ ನಡೆದು ಅನುಭವ ಬರಹತ್ತಿತೆಂದರೆ ಆಗ ಸಾಧನವಲ್ಲಿ ಸಡಿಲುತನ ಬರುವದು. ಇದರಿಂದ ಕರ್ತವ್ಯದ ಕಡೆಗೆ ಲಕ್ಷ್ಯ ಕಡಿಮೆ ಆಗುವದು. ಇದು ಪ್ರಗತಿಗೆಅಡ್ಡಿ ಮಾಡುವದು. ಆದರೂ ಇದಕ್ಕಿಂತಲೂ ಇನ್ನೊಂದು ಮಾತು ಹೇಳುವದೇನಂದರೆ ಸಾಧನೆ ಪರಿಪಕ್ವವಾಗಿ ಸ್ವರೂಪ ಸಾಕ್ಷಾತ್ಕಾರವೂ ಸಹ ಆದ ಮೇಲೆ ಸಾಧನೆ ನಿಂತು ಹೋಗುತ್ತದೆ. ಹೀಗೆ ಆಗುವದು ಹೆಚ್ಚು ಹಾನಿಕಾರಕವಿರುವದು. ಜಿಗುಟುತನದಿಂದ ಅಖಂಡ ಹಾಗೂ ಸತತ ಪರಿಶ್ರಮದಿಂದ ಉತ್ತಮ ಸಾಧನೆ ಆಗದ ಹೊರತು ಬ್ರಹ್ಮಾಕಾರವು ಪ್ರಾಪ್ತವಾದರೆ ದೇಹದ ಮಮತ್ವವು ಅಂಟಿಕೊಳ್ಳುವ ಸಂಭಂಧವಿರುವದು. ಇದರ ಸಂಗಡ"ಬ್ರಹ್ಮಜ್ಞಾನ ಹೊಂದಿದೆ, ಎಂಬ ಭ್ರಮೆಯಲ್ಲಿ ಆಲಸ್ಯ ಪ್ರಬಲವಾಗುವದು [೬೪] ಪರಮಾರ್ಥದ ಹೆಸರಿನ ಕೆಳಗೆ ಸ್ವಾರ್ಥದ ವ್ಯವಹಾರವು ಪ್ರಾರಂಭವಾಗುವದು. ಅಂತಃಕರಣದಲ್ಲಿ ಸ್ವಾರ್ಥವು ಎದ್ದು ನಿಲ್ಲುವದು. ಧ್ಯಾನದ ಹೆಸರಿನಲ್ಲಿ ನಿದ್ರೆ ಹತ್ತುವದು. ಮತ್ತು ಮುಕ್ತ ಪಣದ ಹೆಸರಿನಲ್ಲಿ ಸ್ವೈರಾಚಾರದ ಜೋರು ಪ್ರಾರಂಭವಾಗುವದು. ಮುಂದೆ ಅದೂ ಢೋಂಗಿ ಗುರುವಿನ ಸೈತಾನೀಲೀಲೆಯಾಗಿ ಪರಿಣಮಿಸುವದು. [೬೫] ನಿರೂಪಣ ಹೇಳುವ ನಿಮಿತ್ತದಿಂದ ನಿಂದೆ ಮಾಡುವ ಕಡೆಗೆ ಮನಸ್ಸು ಧಾವಿಸುವದು. ಸುಖ ಸಂವಾದದ ಹೆಸರಿನಿಂದ ವಾದ ವಿವಾದ ಮಾಡುವ ಪ್ರವೃತ್ತಿ ಹೆಚ್ಚುವದು. ಈ ಎಲ್ಲ ಢೋಂಗಿತನದಿಂದ ವ್ಯಾಪ ಹೆಚ್ಚುವದು. ಇದರಿಂದ ಅಭಿಮಾನ ಉಂಟಾಗಿ ದುರಭಿಮಾನಿ ಎನಿಸಿ ಕೊಳ್ಳುವನು. [೬೬] ಇಂಥ ಹಸಿಬಿಸಿ ಜ್ಞಾನಿ ಮನುಷ್ಯನು ಬ್ರಹ್ಮಜ್ಞಾನ ಪಡೆದ ಮೇಲೆ ಸಾಧನದ ಹುಚ್ಚನ್ನು ತೆಗೆದುಕೊಂಡು ಮಾಡುವದೇನು? ಅರ್ಥಾತ್ ಬ್ರಹ್ಮಜ್ಞಾನದ ಹೆಸರಿಗೆ ಕೆಳಗೆ ಅವನಲ್ಲಿ ಆಲಸ್ಯ ಸೇರುವದು. [೬೭]

**ಶ್ಲೋಕ:**– ಕಿಂ ಕರೋಮಿ ಕ್ವಗಚ್ಛಾಮಿ ಕಿಂ ಗೃಹ್ಣಾಮಿ ತ್ಯಜಾಮಿ ಕಿಮ್। ಆತ್ಮನಾ ಪೂರಿತಂ ಸರ್ವಂ ಮಹಾ ಕಲ್ಪಾಂ ಬುನಾ ಯಥಾ॥ **ಶ್ಲೋಕದಅರ್ಥಃ**– ಕಲ್ಪಾಂತ ಬಂದ ಕೂಡಲೇ ಮಹಾಪ್ರಳಯವು ಆಗುವದು. ಆ ಹೊತ್ತಿನಲ್ಲಿ ಎಲ್ಲಿ ನೋಡಿದರಲ್ಲಿ ನೀರೇ ನೀರಾಗಿ ತುಂಬಿ ಬಿಡುವದು. ಇದರಂತೆಯೇ ಆತ್ಮನು ಸರ್ವತ್ರದಲ್ಲಿಯೂ ವ್ಯಾಪಿಸಿ ಇದ್ದಾನೆ. ಅಂದ ಮೇಲೆ ನಾನು ಏನು ಮಾಡಲಿ? ಎಲ್ಲಿ ಹೋಗಲಿ? ಏನು ತೆಗೆದುಕೊಳ್ಳಲಿ? ಏನು ಬಿಡಲಿ? ತಿಳಿಯಿರಿ. ಒಬ್ಬ ಮನುಷ್ಯನು ತನ್ನ ಕೈಯಲ್ಲಿ ಹಿಡಿದ ಹತ್ಯಾರ [ಕತ್ತಿ]ದಿಂದ ತನ್ನನ್ನು ತಾನೇ ಹೊಡೆದುಕೊಂಡರೆ ಏನಾಗುವದು? ಅವನು ಸ್ವತಃ ತನ್ನ ಘಾತವನ್ನು ತನ್ನ ಕೈಯಿಂದ ತಾನೇ ಮಾಡಿಕೊಂಡಂತಾಗುತ್ತನೆ. ಇದರಂತೆ ಮೇಲಿನ ಶ್ಲೋಕದ ಉಕ್ತಿಯನ್ನು ನಮ್ಮ ವರ್ತಣೂಕಿಗೆ ಆಧಾರ ಪಡೆದ ಮನುಷ್ಯನು ತಾನೇ ತನ್ನ ಘಾತವನ್ನು ಮಾಡಿಕೊಳ್ಳುವನು. [೬೮]

ತೈಸಾ ಉಪಾಯಾಚಾ ಅಪಾಯೊ। ವಿಪರೀತಪಣೇ ಸ್ವಹಿತ ಜಾಯೊ।
ಸಾಧನ ಸೋಡಿತಾ ಹೋಯೊ। ಮುಕ್ತಪಣೇ ಬದ್ಧ ॥೬೯॥

ಸಾಧನ ಕರಿತಾ ಚ ಸಿದ್ಧಪಣ। ಹಾತೀಚೇ ಜಾಈಲ ನಿಘೋನ।
ತೇಣೇ ಗುಣೆ ಸಾಧನ। ಕರೂ ಚ ನಾವಡೆ ॥೭೦॥

ಲೋಕ ಮ್ಹಣತೀ ಹಾ ಸಾಧಕ। ಹೇ ಚಿ ಲಜ್ಜಾ ವಾಟೆ ಯೇಕ।
ಸಾಧನ ಕರಿತೀ ಬ್ರಹ್ಮಾದಿಕ। ಹೇ ಠಾಉಕೇ ನಾಹೀ ॥೭೧॥

ಆತಾ ಅಸೋ ಹೇ ಅವಿದ್ಯಾ। ಅಭ್ಯಾಸ ಸಾರಣೇ ವಿದ್ಯಾ।
ಅಭ್ಯಾಸೇ ಪಾವಿಜೆ ಅದ್ಯಾ। ಪೂರ್ಣ ಬ್ರಹ್ಮ ॥೭೨॥

ಅಭ್ಯಾಸ ಕರಾವಾ ಕವಣ। ಐಸಾ ಶ್ರೋತಾ ಕರೀ ಪ್ರಶ್ನ।
ಪರಮಾರ್ಥಾಚೇ ಸಾಧನ। ಬೋಲಿಲೇ ಪಾಹಿಜೆ ॥೭೩॥

ಯಾಚೇ ಉತ್ತರ ಶ್ರೋತಯಾಸೀ। ದಿಧಲೇ ಪುಢಿಲೆ ಸಮಾಸೀ।
ನಿರೋಪಿಲೇ ಸಾಧನಾಸೀ। ಪರಮಾರ್ಥಾಚಾ ॥೭೪॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
"ಸಾಧನ ಪ್ರತಿಷ್ಠಾನ ನಿರೂಪಣ" ನಾಮ ಸಮಾಸ ಸಪ್ತಮ ॥

ಉಪಾಯವಿದ್ದು ಅಪಾಯವಾಗುವದು. ಅಂದರೆ ಅದು ಹೀಗೆ ಉಲಟತನದಿಂದ ನಡೆದದ್ದಾರೆ ಮನುಷ್ಯನು ಸ್ವಹಿತವನ್ನು ಕಳೆದುಕೊಳ್ಳಬೇಕಾಗುವದು. ಮನುಷ್ಯನು ಸಾಧನ ಬಿಟ್ಟರೆ ಅವನ ಮುಂಕ್ತನಡತೆಯು ಮಾತ್ರ ಸ್ವೈರಾಚರಣೆಯೇ ಅವನ ಬಂಧನಕ್ಕೇ ಕಾರಣವಾಗುವದು. [೬೯] ನಾವು ಸಾಧನ ಮಾಡಿದ್ದಾದರೆ ನಮ್ಮ ಸಿದ್ಧತನ ಎಲ್ಲಿ ಕೈಬಿಟ್ಟು ಹೋಗುವದೋ ಎಂಬ ಭಯದಿಂದ ಅವನಿಗೆ ಸಾಧನ ಮಾಡಬೇಕೆಂದು ಅನಿಸುವದಿಲ್ಲ. (೭೦) ಯಾಕಂದರೆ, ಇವನು ಇನ್ನೂ ಸಾಧನ ಮಾಡುತ್ತಲಿದ್ದರೆ "ಇವನು ಸಿದ್ಧನಲ್ಲ ಇನ್ನೂ ಸಾಧಕನಿರುವನು" ಹೀಗೆ ಜನರು ಅನ್ನಬಹುದೆಂಬ ಕಾರಣದಿಂದ ಅವನಿಗೆ ಅಂಜಿಕೆ ಹುಟ್ಟುವದು. ಹೀಗೆ ಅನ್ನುವದು ಬಹಳ ನಾಚಿಗೇಡಿತನದ್ದಲ್ಲವೇ? ಅರ್ಥಾತ್ ಹೌದು ಎಂದು ಅನ್ನಬೇಕಾಗುವದು. ಆದರೆ ಈ ಬುದ್ಧಿಹೀನ ಮಂದರಿಗೆ ಗೊತ್ತಿಲ್ಲ. ಏನಂದರೆ, ಬ್ರಹ್ಮಾದಿ ದೇವತೆಗಳೆಲ್ಲರೂ ಸಹ ಸಾಧನ ಮಾಡುವರೆಂಬುದರ ಅರಿವು ಇಲ್ಲವೆಂಬ ಮಾತು (೭೧) ಈವರೆಗೆ ಹೇಳಿದ್ದೆಲ್ಲವೂ ದೇಹಬುದ್ಧಿಯು ಅಥವಾ ಅವಿದ್ಯೆಯು ಚಿತ್ರವಿರುವದು. ಅಭ್ಯಾಸ ಯಾರು ಮಾಡುವರೋ ಅವರ ಹಿಂದೆ ವಿದ್ಯೆ ಹೋಗುತ್ತದೆ. ಕೇವಲ ಅಭ್ಯಾಸದಿಂದ ಅಥವಾ ಸಾಧನೆಯಿಂದಲೇ ಸರ್ವದರ ಮೂಲವಾಗಿರುವ ಪೂರ್ಣ ಬ್ರಹ್ಮವು ಹಸ್ತಗತವಾಗುವದು. (೭೨) ಇದನ್ನು ಕೇಳಿ ಶ್ರೋತಾ ಪ್ರಶ್ನೆ ಕೇಳುತ್ತಾನೆ:- ಯಾವ ಅಭ್ಯಾಸ ಮಾಡಬೇಕು? ಪರಮಾರ್ಥದ ಸಾಧನೆಯ ಬಗೆಗೆ ನಮಗೆ ಹೇಳಿರಿ. (೭೩) ಈ ಪ್ರಶ್ನೆಗೆ ಮುಂದಿನ ಸಮಾಸದಲ್ಲಿ ಉತ್ತರ ಕೊಡುವರು. ಪರಮಾರ್ಥದ ಸಾಧನವನ್ನು ಹೇಗೆ ಮಾಡಬೇಕು? ಎಂಬುದನ್ನು ಚೆನ್ನಾಗಿ ತಿಳಿಸಿಕೊಡುತ್ತಾರೆ (೭೪)

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಏಳನೆಯ ದಶಕದಲ್ಲಿಯ
"ಸಾಧನ ಪ್ರತಿಷ್ಠಾ ನಿರೂಪಣ" ಎಂಬ ಹೆಸರಿನ ಏಳನೆಯ ಸಮಾಸವು ಮುಗಿಯಿತು.

● ●

### ಸಮಾಸ ಅಷ್ಟಮ : ಶ್ರವಣ ನಿರೂಪಣ

॥ಶ್ರೀರಾಮ॥ ಏಕಾ ಪರಮಾರ್ಥಾಚೇ ಸಾಧನ । ಜೇಣೇ ಹೋಯೆ ಸಮಾಧಾನ ।
ತೇ ತೂ ಜಾಣ ಗಾ ಶ್ರವಣ । ನಿಶ್ಚಯೇಸೀ ॥೧॥

ಶ್ರವಣೇ ಆತುಡೆ ಭಕ್ತೀ । ಶ್ರವಣೇ ಉದ್ಭವೆ ವಿರಕ್ತೀ ।
ಶ್ರವಣೇ ತುಟೆ ಆಸಕ್ತೀ । ವಿಷಯಾಂಚೀ ॥೨॥

## ದಶಕ ೭. ಸಮಾಸ ೮. ಶ್ರವಣ ನಿರೂಪಣ (ನುಡಿ ೫೦)

ಬೃಹದಾರಣ್ಯಕ ಉಪನಿಷತ್ತಿನಲ್ಲಿ ಯಾಜ್ಞವಲ್ಕ್ಯ–ಮೈತ್ರೇಯಿ ಸಂವಾದ ಇರುವದು. ಅದರಲ್ಲಿ । "ನವಾಅರೇ ಸರ್ವಸ್ಯ ಕಾಮಾಯ ಸರ್ವಂ ಪ್ರಿಯಂ ಭವತಿ । ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ ॥ **ಅರ್ಥ**:– "ಎಲ್ಲ ವಸ್ತುಗಳೂ ನಮಗೆ ಪ್ರಿಯವೆನಿಸುವವು.ಬೇಕೆನಿಸುವವು. ಆ ವಸ್ತುವಿಗಾಗಿ ಅವು ಬೇಕೆನಿಸುವದಿಲ್ಲ. ಆದರೆ ನಮ್ಮ ಆತ್ಮದ ಸಲುವಾಗಿ ಅವು ನಮಗೆ ಬೇಕೆನಿಸುವವು" ಈ ಪ್ರಕಾರದ ಒಂದು ದೊಡ್ಡ ಮಹತ್ವದ ನಿಷ್ಕರ್ಷವನ್ನು ಯಾಜ್ಞವಲ್ಕ್ಯರು ಹೊರಗೆಡವಿದರು. ಮತ್ತು ಕೊನೆಗೆ ಮೈತ್ರೇಯಿಗೆ ಹೇಳಿದ್ದೇನಂದರೆ॥ "ಆತ್ಮಾವಾ ಅರೇ ದ್ರಷ್ಟವ್ಯಃ ಶ್ರೋತವ್ಯಃ ಮಂತ್ರವ್ಯಃ ನಿದಿಧ್ಯಾಸಿತವ್ಯಃ।" **ಅರ್ಥ**:– ಅರ್ಥಾತ್ ಸರ್ವದರಲ್ಲಿ ಪ್ರಿಯವಾಗಿರುವ ಈ ಆತ್ಮವೇ ದರ್ಶನಕ್ಕೆ ಯೋಗ್ಯವಿರುವದು. ಇದರ ಬಗ್ಗೆ **ಶ್ರವಣ** ಮಾಡಬೇಕು, ಮನನ ಮಾಡಬೇಕು. ಮತ್ತು ಪುನಃ ಪುನಃ ಧ್ಯಾನ ಮಾಡಬೇಕು". ಶ್ರವಣ ಎಂಬ ಶಬ್ದವನ್ನು ಶ್ರೀ ಸಮರ್ಥರು ಬಹಳ ವ್ಯಾಪಕ ಅರ್ಥದಲ್ಲಿ ಉಪಯೋಗಿಸಿಕೊಂಡಿದ್ದಾರೆ. ಉಪನಿಷತ್ತಿನಲ್ಲಿ ಹೇಳಲಾಗಿರುವ ಆತ್ಮದರ್ಶನದ ಮಾರ್ಗವನ್ನೇ ಶ್ರೀ ಸಮರ್ಥರು ತಮ್ಮ ಗ್ರಂಥಗಳಲ್ಲಿ ಅದರಲ್ಲೂ ವಿಶೇಷವಾಗಿ ದಾಸಬೋಧದಲ್ಲಿ ನಿಃಸಂದೇಹವಾಗಿ ಪ್ರತಿಪಾದನ ಮಾಡಿದ್ದಾರೆ. ಆದ್ದರಿಂದ ಅವರ ಶ್ರವಣ ವಿಷಯದ ನಿರೂಪಣದಲ್ಲಿ ಮನನ,ಮತ್ತು ನಿಧಿಧ್ಯಾಸ್ಯದ ವಿಷಯ ಅಂತರ್ಭೂತವಾಗಿವೆ. ಇದನ್ನು ಎಲ್ಲರೂ ಗಟ್ಟಿಯಾಗಿ ನೆನಪಿಡಬೇಕು.ಜ್ಞಾನ ಮಾರ್ಗವೇ ಇರಲಿ, ಭಕ್ತಿಮಾರ್ಗವೇ ಇರಲಿ, ಯೋಗ ಮಾರ್ಗವೇ ಇರಲಿ, ಅಥವಾ ಶಕ್ತಿಮಾರ್ಗವೇ ಇರಲಿ, ಮನಸ್ಸಿನ ಸಂಪೂರ್ಣ ಏಕಾಗ್ರತೆಯಾಗಿ ಧ್ಯಾನಾವಸ್ಥೆ ಸಾಧ್ಯವಾಗುವದೇ ಇಲ್ಲಿ ಧ್ಯೆಯವಿರುವದು.ಧ್ಯಾನಾವಸ್ಥೆಯಲ್ಲಿ ಒಂದುಕಡೆಗೆ ಜವಾಯಿಸುವ ಮನಸ್ಸು ಒಮ್ಮೆಲೆ(ಏಕಾಏಕಿ)ತಯಾರಆಗುವದಿಲ್ಲ ಅದಕ್ಕಾಗಿ ಮನಕ್ಕೆ ಧ್ಯೇಯದ ಸಂಸ್ಕಾರವನ್ನು ಒಂದೇ ಸವನೆ ಕೊಡಬೇಕಾಗುವದು.ವ.ಮಾಡಬೇಕಾಗುವದುಈ ಕೆಲಸವು ಸತತ ಶ್ರವಣ ಮಾಡುವದರಿಂದ ಮಾತ್ರ ಸಾಧ್ಯವಾಗುವದು. ಆದರೂ ಆದಂಥ ಸಂಸ್ಕಾರವು ಆಳವಾಗಿ ಬೇರು ಬಿಟ್ಟಂತೆ ಆಗಿ ಮನದ ಅವಿಭಾಜ್ಯ ಅಂಗವಾಗುವಂತೆ ಸಂಸ್ಕಾರದ ಘೋಕು ಹಾಕಬೇಕಾಗುವದು. (ಪಶುಗಳು ತಾವು ಮೊದಲಿಗೆ ತಿಂದ ಆಹಾರವನ್ನು ನಿವಾಂತವಾಗಿ ಮತ್ತು ಸಾವಕಾಶವಾಗಿ ಮೆಲುಕಾಡಿಸಿ ಆ ಮೊದಲಿನ ಆಹಾರ ವನ್ನು ಚರ್ವಿತ ಚರ್ವಣ ಮಾಡುವವು. ಅದರಂತೆ ಇಲ್ಲಿ ಮಾಡಬೇಕಾಗುವದು) ಒಂದೇ ವಿಷಯವು ಮನದಲ್ಲಿ ಬಹಳಷ್ಟು ಸಲ ಜ್ಞಾಪಿಸಿಕೊಳ್ಳುವ (ಘೋಕು ಹಾಕುವದು. ಉರೂ ಹೊಡೆಯುವದು. ಚರ್ಚೆ ಮಾಡುವದು. ಉಜಳಣೆ ಮಾಡುವದು) ಕಾರ್ಯವು ಮನನ ಮಾಡುವದರಿಂದ ಮಾತ್ರ ಸಾಧ್ಯವಾಗುವದು. ಮತ್ತು ಅಧಿಕಾರಿ ಪುರುಷ (ಸಂತ, ಸಾಧು, ಸಿದ್ಧ, ಶರಣ ಇತ್ಯಾದಿ)ರಿಂದ ನಿತ್ಯದಲ್ಲಿಯೂ ಶ್ರವಣ ಮಾಡಿದರೆ ಖಾತ್ರಿಯಿಂದ ಮನನಕ್ಕೆ ಸತತವಾಗಿ ಪ್ರೇರಣೆ ಸಿಗುವದು. ಸಾಧು ಪುರುಷರ ಶಬ್ದವು ಶ್ರೋತೃದಲ್ಲಿ (ಇಲೆಕ್ಟ್ರಿಫಾಯ್) ಪ್ರಸ್ಫುರಿತ ಮಾಡು ವದು (ವಿದ್ಯುತ್ ಸಂಚಾರವಾದಂತೆ ಆಗುವದು). ಅಂತೆಯೇ ಪರಮಾರ್ಥದಲ್ಲಿ ಶ್ರವಣಕ್ಕೆ ಇಷ್ಟೊಂದು (ಬಹಳಷ್ಟು) ಮಹತ್ವವಿರುವದು.

### ದಶಕ ೭. ಸಮಾಸ ೮. ಶ್ರವಣ ನಿರೂಪಣ [ನುಡಿ ೫೦]

ಪರಮಾರ್ಥಕ್ಕೆ ಅತ್ಯಂತ ಅವಶ್ಯವಿರುವ ಐದು ಪ್ರಕಾರಗಳು:– ೧) ಸಂಶಯ ಮತ್ತು ಶಂಕೆ (ಆಕ್ಷೇಪ) ಗಳ ನಿರಸನವಾಗುವಿಕೆ (ದೂರಾಗುವಿಕೆ) ೨) ದೃಶ್ಯದಲ್ಲಿಯ ಆಸಕ್ತಿ ಕಡಿಮೆ ಆಗುವಿಕೆ ೩) ಭಗವಂತಬೇಕು, ಭಗವಂತನ ಸಾನಿಧ್ಯಬೇಕು ಎಂದು ಮನಸ್ಸಿಗೆ ಅನಿಸುವಿಕೆ ೪) ಪ್ರತಿಭಾ (ಬುದ್ಧಿ, ಸ್ವರೂಪ) ಜಾಗೃತಗೊಳ್ಳುವಿಕೆ ೫) ಮನವನ್ನು ಏಕಾಗ್ರ (ಏಕಚಿತ್ತ) ಮಾಡುವ ಕಲೆ ಸಾಧ್ಯವಾಗುವಿಕೆ – ಇವೆಲ್ಲವೂ ಸತ್ಪುರುಷರ ಕಡೆಯಿಂದ ಶ್ರವಣ ಮಾಡಿದ್ದಾದರೆ ಅನಾಯಾಸವಾಗಿ ಸಾಧ್ಯವಾಗುವವು. ಈ ಮಾತನ್ನು ಶ್ರೀ ಸಮರ್ಥರು ಮೊದಲಿಗೇ ಹೇಳುತ್ತಾರೆ. ಯಾವ ಸಾಧನದ ಯೋಗದಿಂದ ಖರೇ ಸಮಾಧಾನವಾಗುವದೋ ಅಂಥ ಪರಮಾರ್ಥ ಸಾಧನವೆಂದರೆ ಶ್ರವಣವೇ ಆಗಿರುವದು. ಈ ಶ್ರವಣವು ಬಹಳ ಶ್ರೇಷ್ಠವಾದ ಸಾಧನವಿರುವದೆಂಬ ಬಗ್ಗೆ ಎಷ್ಟೂ ಸಂಶಯವಿಲ್ಲ.(೧) ಸತತ ಶ್ರವಣದಿಂದ ಭಕ್ತಿಯು ಕೈವಶವಾಗುವದು, ವಿರಕ್ತಿ ಉಂಟಾಗುವದು, ಮತ್ತು ದೃಶ್ಯದ ಮೇಲಿನ ಆಸಕ್ತಿ ಕಡಿಮೆ ಆಗುತ್ತ ಕೊನೆಗೆ ಬಿಟ್ಟು ಹೋಗುವದು. (೨)

ಶ್ರವಣೇ ಘಡೆ ಚಿತ್ತಶುದ್ಧೀ। ಶ್ರವಣೇ ಹೋಯೆ ದೃಢಬುದ್ಧೀ।
ಶ್ರವಣೇ ತುಟೆ ಉಪಾಧೀ। ಅಭಿಮಾನಾಚೀ ॥೩॥

ಶ್ರವಣೇ ನಿಶ್ಚಯೋ ಘಡೆ। ಶ್ರವಣೇ ಮಮತಾ ಮೋಡೆ।
ಶ್ರವಣೇ ಅಂತರೀ ಜಡೆ। ಸಮಾಧಾನ ॥೪॥

ಶ್ರವಣೇ ಆಶಂಕಾ ಫಿಟೆ। ಶ್ರವಣೇ ಸಂಶಯು ತುಟೆ।
ಶ್ರವಣ ಹೋತಾ ಪಾಲಟೆ। ಪೂರ್ವಗುಣ ಆಪುಲಾ ॥೫॥

ಶ್ರವಣೇ ಆವರೆ ಮನ। ಶ್ರವಣೇ ಘಡೆ ಸಮಾಧಾನ।
ಶ್ರವಣೇ ತುಟೆ ಬಂಧನ। ದೇಹಬುದ್ಧೀಚೇ ॥೬॥

ಶ್ರವಣೇ ಮೀಪಣ ಜಾಯೆ। ಶ್ರವಣೇ ಧೋಕಾ ನ ಯೆ।
ಶ್ರವಣೇ ನಾನಾ ಅಪಾಯೆ। ಭಸ್ಮ ಹೋತೀ ॥೭॥

ಶ್ರವಣೇ ಹೋಯೆ ಕಾರ್ಯಸಿದ್ಧೀ। ಶ್ರವಣೇ ಲಾಗೆ ಸಮಾಧೀ।
ಶ್ರವಣೇ ಘಡೆ ಸರ್ವಸಿದ್ಧೀ। ಸಮಾಧಾನಾ ಸೀ ॥೮॥

ಸತ್ಸಂಗಾವರೀ ಶ್ರವಣ। ತೇಣೇ ಕಳೆ ನಿರೂಪಣ।
ಶ್ರವಣೇ ಹೊಈಜೆ ಆಪಣ। ತದಾಕಾರ ॥೯॥

ಶ್ರವಣೇ ಪ್ರಬೋಧ ವಾಢೆ। ಶ್ರವಣೇ ಪ್ರಜ್ಞಾ ಚಢೆ।
ಶ್ರವಣೇ ವಿಷಯಾಚೆ ಮೋಢೆ। ತುಟೋನ ಜಾತೀ ॥೧೦॥

ಶ್ರವಣೇ ವಿಚಾರ ಕಳೆ। ಶ್ರವಣೇ ಜ್ಞಾನ ಹೇ ಪ್ರಬಳೇ।
ಶ್ರವಣೇ ವಸ್ತು ನಿವಳೆ। ಸಾಧಕಾಸೀ ॥೧೧॥

ಶ್ರವಣೇ ಸದ್‌ಬುದ್ಧೀ ಲಾಗೆ। ಶ್ರವಣೇ ವಿವೇಕ ಜಾಗೆ।
ಶ್ರವಣೇ ಮನ ಹೇ ಮಾಗೆ। ಭಗವಂತಾಸೀ ॥೧೨॥

ಶ್ರವಣೇ ಕುಸಂಗ ತುಟೆ। ಶ್ರವಣೇ ಕಾಮು ಮೋಹಟೆ।
ಶ್ರವಣೇ ಧೋಕಾ ಆಟೆ। ಯೆಕಸರಾ ॥೧೩॥

ಶ್ರವಣೇ ಮೋಹ ನಾಸೆ। ಶ್ರವಣೇ ಸ್ಫೂರ್ತಿ ಪ್ರಕಾಶೆ।
ಶ್ರವಣೇ ಸದ್ವಸ್ತು ಭಾಸೆ। ನಿಶ್ಚಯಾತ್ಮಕ ॥೧೪॥

ಶ್ರವಣೇ ಹೋಯೆ ಉತ್ತಮ ಗತೀ। ಶ್ರವಣೇ ಆತುಡೆ ಶಾಂತೀ।
ಶ್ರವಣೇ ಪಾವಿಜೆ ನಿವೃತ್ತೀ। ಅಚಳ ಪದ ॥೧೫॥

ಶ್ರವಣದಿಂದ ಚಿತ್ತ ಶುದ್ಧಿಯಾಗುವದು. ಬುದ್ಧಿಗೆಸ್ಥಿರತ್ವ ಬರುವದು. ಅಂದರೆ ಚಂಚಲತನ ಇಲ್ಲದಾಗಿ ಹೋಗುವದುಮತ್ತು ಅಭಿಮಾನದಉಪಾಧಿ ಇಲ್ಲದಾಗುವದು.(ದುರಭಿಮಾನ ದೂರಾಗುವದು)ದೇಹವಿಷಯಕಅಹಂತಾ ಇಲ್ಲದಾಗುವದು. (೩) ಶ್ರವಣದಿಂದ ನಿಶ್ಚಯ ಮಾಡುವ (ದೃಢನಿಶ್ಚಯ) ಶಕ್ತಿ ಬರುವದು. ನಾನು ನನ್ನದು ಅನ್ನುವದುಇಲ್ಲದಾಗುವದು. ಮತ್ತು ಮನಸ್ಸಿಗೆ ಸಮಾಧಾನ ಬರಲಿಕ್ಕೆ ಹತ್ತುವದು. (೪) ಶ್ರವಣದಿಂದ ಶಂಕೆ, ಅನುಮಾನಗಳೆಲ್ಲವೂ ಬಗೆಹರಿಯುವವು.ಸಂಶಯಗಳು ದೂರಾಗುವವು.ನಮ್ಮ ಅಂತರಂಗದಲ್ಲಿಯ ದೋಷಗಳು ಹೋಗಿ ನಮ್ಮ ಸ್ವಭಾವದಲ್ಲಿ ಬದಲಾವಣೆ ಆಗುವದು. (೫) ಶ್ರವಣದಿಂದ ಪ್ರೇಮ ಉಂಟಾಗಿ ಮನವು ಕೈವಶವಾಗುವದು. ಮತ್ತು ಅದು ಸಮಾಧಾನ ಹೊಂದುವದು, ಶ್ರವಣದಿಂದ ದೇಹ ಬುದ್ಧಿಯ(ಅಹಂತನ)ಬಂಧನ ನಾಶವಾಗುವದು.(೬) ಶ್ರವಣದಿಂದ ನಾನು, ನನ್ನದು ಅನ್ನುವದರ ಅಂತ್ಯ (ಮರಣ)ವಾಗುವದು.ಅನೇಕ ಘಾತುಕ ಅಪಾಯಗಳು ದೂರಾಗುವವು. ಹಾಗೂ ಅನೇಕ ಪ್ರಕಾರದ ಸಂಕಟಗಳು ಸಮೂಲ ನಾಶ ಹೊಂದುವವು. (೭) ಶ್ರವಣದಿಂದ ಕಾರ್ಯ ಸಿದ್ಧಿಯಾಗುವದು. ಸಮಾಧಿ ಸಾಧ್ಯವಾಗುವದು. ಮತ್ತು ಸಂಪೂರ್ಣ ಸುಖ ಸಮಾಧಾನ ಪ್ರಾಪ್ತವಾಗುವದಕ್ಕಾಗಿ ಅವಶ್ಯವಿರುವ ಅದರ ಪೂರ್ವ ತಯಾರಿಯು ಸಿದ್ಧವಾಗುವದು. (೮) ಸತ್ಸಂಗತಿ, ಸಾಧು ಸಂತರ ಸಹವಾಸದಲ್ಲಿ ಇದ್ದು ಶ್ರವಣ ಮಾಡಿದರೆ ಆತ್ಮಾನಾತ್ಮ ವಿವೇಕದ ನಿರೂಪಣವು ತಿಳಿಯ ಹತ್ತುವದು. ಶ್ರವಣದಿಂದ ಮನವು ತದಾಕಾರವಾಗುವದು. (೯) ಶ್ರವಣದಿಂದ ನಮ್ಮ ಜ್ಞಾನದ ವೃದ್ಧಿಯಾಗುವದು. ಪ್ರಜ್ಞೆಯ (ಬುದ್ಧಿ)ಯ ಉತ್ಕರ್ಷವಾಗುವದು. ಮತ್ತು ಇಂದ್ರಿಯಗಳಿಂದ ಸುಖ ಪಡೆಯಬೇಕೆನ್ನುವ ಹವ್ಯಾಸ ಕಡಿಮೆಆಗುತ್ತ ಹೋಗುವದು.(೧೦) ಶ್ರವಣದಿಂದ ಪರಬ್ರಹ್ಮ ವಿಚಾರ ತಿಳಿಯಹತ್ತುವದು. ಅಂದರೆ ಜ್ಞಾನ ಶಕ್ತಿ ಹೆಚ್ಚುವದು. ಮತ್ತು ಸಾಧಕನಿಗೆ ಆತ್ಮವಸ್ತುವು ಸ್ವಚ್ಛವಾಗಿ ಅನುಭವಕ್ಕೆ ಬರಹತ್ತುವದು. ಶ್ರವಣದಿಂದ ಅವಿದ್ಯೆಯು ಕಡಿಮೆಯಾಗುತ್ತ ಹೋದಂತೆ ಆತ್ಮಜ್ಞಾನವನ್ನು ಧಾರಣ ಮಾಡುವ [ಪಡೆಯುವ] ಶಕ್ತಿ ಪ್ರಾಪ್ತವಾಗುವದು. ಆಗ ಮನವು ಸೂಕ್ಷ್ಮವಾಗುವದರಿಂದ ಆತ್ಮವಿಚಾರ ತಿಳಿಯುವದು. ಮತ್ತು ಕೊನೆಯಲ್ಲಿ [ಆಖೈರದಲ್ಲಿ] ಆತ್ಮದರ್ಶನವೂ ಒದಗುವದು. [೧೧] ಶ್ರವಣದಿಂದ ಭಗವಂತನ ಇರುವಿಕೆಯ ಬಗ್ಗೆ ನಿಶ್ಚಿತ ಬುದ್ಧಿ ಪ್ರಾಪ್ತವಾಗುವದು. ಸಾರಾಸಾರ ವಿಚಾರವಲ್ಲಿ ಜಾಗೃತಿ ಉಂಟಾಗುವದು. ಮತ್ತು ನನಗೆ ಭಗವಂತ ಬೇಕು ಅನ್ನುವ ತಳಮಳವು ಮನದಲ್ಲಿ ತೀವ್ರವಾಗುವದು. [೧೨] ಶ್ರವಣದಿಂದ ಕೆಟ್ಟ ದುಷ್ಟರ ಸಂಗತಿಯು ಬಿಡುವದು. ವಾಸನಾ [ಬೇಕು ಅನ್ನುವದು] ಹಿಮ್ಮೆಟ್ಟುವದು. ಮತ್ತು ಆಯುಷ್ಯದಲ್ಲಿಯ ದುರ್ಧರ ಅನಿಷ್ಟಕಾರಕ ಪ್ರಸಂಗಗಳು ಕಡಿಮೆ ಆಗಿಯೇ ಬಿಡುವವು. [೧೩] ಶ್ರವಣದಿಂದ ಮೋಹದ ನಾಶವಾಗಿ ಹೋಗುವದು. ಸ್ಫೂರ್ತಿ, ಪ್ರಕಾಶಗಳು ಬೆಳಗುವವು. ಮತ್ತು ಆತ್ಮವಸ್ತುವಿನ ನಿಶ್ಚಯಾತ್ಮಕ ಅನುಭವ ಬರುತ್ತದೆ. [೧೪] ಶ್ರವಣದಿಂದ ಉತ್ತಮ ಗತಿ ಪ್ರಾಪ್ತವಾಗುವದು. ಮನಸ್ಸಿಗೆ ಶಾಂತಿ ದೊರಕುವದು. ಮತ್ತು ಅಚಲವಾದ ವೃತ್ತಿರಹಿತವಾದ ನಿವೃತ್ತಿ ಪದ ಕೈವಶವಾಗುವದು. (೧೫)

ಶ್ರವಣಾ ಐಸೇ ಸಾರ ನಾಹೀ । ಶ್ರವಣೇ ಘಡೆ ಸರ್ವಕಾಹೀ ।
ಭವನದೀಚಾ ಪ್ರವಾಹೀ । ತರಣೋಪಾವ ಶ್ರವಣೇ ॥೧೬॥
ಶ್ರವಣ ಭಜನಾಚಾ ಆರಂಭ । ಶ್ರವಣ ಸರ್ವೀ ಸರ್ವಾರಂಭ ।
ಶ್ರವಣೇ ಹೋಯ ಸ್ವಯಂಭ । ಸರ್ವ ಕಾಹೀ ॥೧೭॥
ಪ್ರವೃತ್ತೀ ಅಥವಾ ನಿವೃತ್ತೀ । ಶ್ರವಣೇವಿಣ ನ ಘಡೆ ಪ್ರಾಪ್ತೀ ।
ಹೇ ತೋ ಸಕಳಾಸ ಪ್ರಚೀತೀ । ಪ್ರತ್ಯಕ್ಷ ಆಹೆ ॥೧೮॥
ಐಕಿಲ್ಯಾವಿಣ ಕಳೇನಾ । ಹೇ ಠಾಊಕೇ ಆಹೆ ಜನಾ ।
ಯಾಕಾರಣೇ ಮೂಳ ಪ್ರೆತ್ನಾ । ಶ್ರವಣ ಆಧೀ ॥೧೯॥
ಜೇ ಜನ್ಮೀ ಐಕಿಲೇ ಚಿ ನಾಹೀ । ತೆಥೇ ಪಡಿಜೆ ಸಂದೇಹೀ ।
ಮ್ಹಣೋನಿಯಾ ದುಜೇ ಕಾಹೀ । ಸಾಮ್ಯತಾ ನ ಘಡೆ ॥೨೦॥
ಬಹುತ ಸಾಧನೇ ಪಾಹಾತಾ । ಶ್ರವಣಾಸ ನ ಘಡೆ ಸಾಮ್ಯತಾ ।
ಶ್ರವಣೇವಿಣ ತತ್ವತಾ । ಕಾರ್ಯ ನ ಚಲೆ ॥೨೧॥
ನ ದೇಖತಾ ದಿನಕರ । ಪಡೆ ಅವಘಾ ಅಂಧಕಾರ ।
ಶ್ರವಣೇವಿಣ ಪ್ರಕಾರ । ತೈಸಾ ಹೋಯೆ ॥೨೨॥
ಕೈಸೀ ನವವಿಧಾ ಭಕ್ತೀ । ಕೈಸೀ ಚತುರ್ವಿಧಾ ಮುಕ್ತೀ ।
ಕೈಸೀ ಆಹೆ ಸಹಜಸ್ಥಿತೀ । ಹೇ ಶ್ರವಣೇವಿಣ ನ ಕಳೆ ॥೨೩॥
ನ ಕಳೆ ಶಡಕರ್ಮಾಚರಣ । ನ ಕಳೆ ಕೈಸೇ ಪುರಶ್ಚರಣ ।
ನ ಕಳೆ ಕೈಸೇ ಉಪಾಸನ । ವಿಧಿಯುಕ್ತ ॥೨೪॥
ನಾನಾ ವ್ರತೇ ನಾನಾ ದಾನೇ । ನಾನಾ ತಪೇ ನಾನಾ ಸಾಧನೇ ।
ನಾನಾ ಯೋಗ ತೀರ್ಥಾಟಣೇ । ಶ್ರವಣೇವಿಣ ನ ಕಳತೀ ॥೨೫॥
ನಾನಾ ವಿದ್ಯಾ ಪಿಂಡಜ್ಞಾನ । ನಾನಾ ತತ್ವಾಂಚೇ ಶೋಧನ ।
ನಾನಾ ಕಳಾ ಬ್ರಹ್ಮಜ್ಞಾನ । ಶ್ರವಣೇವಿಣ ನ ಕಳೆ ॥೨೬॥
ಅಠರಾಭಾರ ವನಸ್ಪತೀ । ಯೇಕಾಜಳೇ ಪ್ರಬಳತೀ ।
ಯೇಕಾ ರಸೇ ಉತ್ಪತ್ತೀ । ಸಕಳ ಜೀವಾಚೀ ॥೨೭॥
ಸಕಳ ಜೀವಾ ಯೇಕ ಪೃಥ್ವೀ । ಸಕಳ ಜೀವಾ ಯೇಕ ರವೀ ।
ಸಕಳ ಜೀವಾ ವರ್ತವೀ । ಯೇಕ ವಾಯೋ ॥೨೮॥
ಸಕಳ ಜೀವಾ ಯೇಕ ಪೈಸ । ಜಯಾಸ ಬೋಲಿಜೆ ಆಕಾಶ ।
ಸಕಳ ಜೀವಾಚಾ ವಾಸ । ಯೇಕಾ ಪರಬ್ರಹ್ಮೀ ॥೨೯॥

ಪ್ರಪಂಚದಲ್ಲಿಯೇಆಗಲಿ ಪರಮಾರ್ಥದಲ್ಲಿಯೇಆಗಲಿ, ಶ್ರವಣ ಮಾಡದಹೊರತು ಏನು ಮಾಡಬೇಕು? ಮತ್ತು ಹೇಗೆ ಮಾಡಬೇಕು?ಎಂಬುದು ಮನುಷ್ಯನಿಗೆ ತಿಳಿಯುವದಿಲ್ಲ.ಸರ್ವದೇಶದಲ್ಲಿ ಮತ್ತು ಸರ್ವ ಸಮಾಜದಲ್ಲಿ ಶ್ರವಣದಿಂದಲೇ ಜೀವನ ನಡೆಯುವದು(ಸಾಗುವದು). ಶ್ರವಣದಂಥ ಸಾರಭೂತವಾದ ಹೆಚ್ಚಿನ ವಸ್ತು ಮತ್ತಾವುದೂ ಇಲ್ಲ. ಶ್ರವಣದಿಂದ ಎಲ್ಲವೂ ಕೈಗೂಡುವದು. ಈ ಸಂಸಾರವೆಂಬ ನದಿಯ ಪ್ರವಾಹದಿಂದ ಸುರಕ್ಷಿತವಾಗಿ ಪಾರಾಗಲು ಶ್ರವಣವೇ ಉಪಯೋಗ ಬೀಳುತ್ತದೆ. [೧೬] ಭಗವಂತನ ನವವಿಧ ಭಕ್ತಿಯ ಆರಂಭವು ಶ್ರವಣದಿಂದಲೇ ಆಗುವದು. ಜಗತ್ತಿನಲ್ಲಿಯ ಸರ್ವ ಕೆಲಸ ಕಾರ್ಯಗಳ ಆರಂಭ ಶ್ರವಣದಿಂದಲೇ ಆಗುವದು. ಶ್ರವಣದಿಂದ ಸರ್ವವೂ ಸ್ವಾಭಾವಿಕವಾದ ರೀತಿಯಲ್ಲಿ ಅಥವಾ ಸಹಜವಾಗಿ ಆಗುತ್ತ ಹೋಗುವವು. [೧೭] ಪ್ರವೃತ್ತಿ ಅಥವಾ ಪ್ರಪಂಚವೇ ಇರಲಿ, ನಿವೃತ್ತಿ ಅಥವಾ ಪರಮಾರ್ಥವೇ ಇರಲಿ ಎರಡೂ ಕಡೆಗೂ ಶ್ರವಣದ ಹೊರತು ಅವುಗಳಿಗೆ ಸಫಲತೆ ಇಲ್ಲ. ಇದೇ ರೀತಿಯ ಅಭಿಪ್ರಾಯ ಅರ್ಥಾತ್ ಎಲ್ಲರ ಪ್ರತ್ಯಕ್ಷ ಅನುಭವವಿರುವದು. [೧೮] ಯಾರಿಂದಲಾದರೂ ಕೇಳದ ಹೊರತು ನಮಗೆ ತಿಳಿಯುವದಿಲ್ಲ. ಇದು ಎಲ್ಲ ಜನರಿಗೆ ತಿಳಿದ ಮಾತೇ ಇರುವದು. ಆದ್ದರಿಂದಲೇ ಯಾವದೇ ರೀತಿಯ ಮಾನವೀ ಪ್ರಯತ್ನದ ಮೂಲವು ಶ್ರವಣದಲ್ಲಿಯೇ ಇರುವದು. [೧೯] ಯಾವುದನ್ನು ನಾವು ಜನ್ಮದಲ್ಲಿಯೇ ಕೇಳಿರುವದಿಲ್ಲವೋ ಅದರ ಬಗೆಗೆ ಸಂದೇಹ ನಿರ್ಮಾಣವಾಗುವದುಂಟು. ಅಂತೆಯೇ ಶ್ರವಣದೊಂದಿಗೆ ಇತರ ಯಾವುದೇ ಜ್ಞಾನ ಸಾಧನದ ತುಲನೆ ಮಾಡಲಿಕ್ಕೆ ಬರುವದಿಲ್ಲ. (೨೦) ಜಗತ್ತಿನೊಳಗೆ ಇಷ್ಟೊಂದು ಜ್ಞಾನವಿರುವದು, ಇಷ್ಟೊಂದು ವಸ್ತುಗಳು ಪಸರಿಸಿರುವವು. ಆದರೆ ಶ್ರವಣದ ಹೊರತು ಇವುಗಳ ಅಂಥಜ್ಞಾನ ಪ್ರಾಪ್ತವಾಗುವದಿಲ್ಲ. ಆ ವಸ್ತುವಿನ ಮಾಹಿತಿ ತಿಳಿಯುವದಿಲ್ಲ. ಶ್ರವಣ ಇಲ್ಲದಿದ್ದರೆ ಸರ್ವತ್ರದಲ್ಲಿಯೂ ಅಜ್ಞಾನದ ಅಂಧಕಾರ ಪಸರಿಸಿರುವದು. ಅನೇಕ ಸಾಧನಗಳನ್ನು ನೋಡಿದ್ದಾಯಿತು. ಆದರೆ ಶ್ರವಣದ ಸರಿಜೋಡಿಯ ಒಂದು ಸಾಧನವೂ ಕಂಡು ಬಂದಿಲ್ಲ. ನಿಜವಾಗಿಯೂ ಶ್ರವಣದ ಹೊರತಾಗಿ ಯಾವ ಕಾರ್ಯವೂ ಆಗುವದು ಶಕ್ಯವಿಲ್ಲ. (೨೧) ಸೂರ್ಯನು ಉದಯನಾಗದೇ ಇದ್ದರೆ ಎಲ್ಲ ಕಡೆಗೂ ಕತ್ತಲೆಯೇ ಪಸರಿಸಿರುತ್ತದೆ. ಇದರಂತೆಯೇ ಶ್ರವಣವಿಲ್ಲದ ಮಾನವ ಜೀವನದಲ್ಲಿ ಎಲ್ಲ ಕಡೆಗೂ ಅಜ್ಞಾನದ ಕತ್ತಲೆಯು ಪಸರಿಸುವದು. (೨೨) ನವವಿಧ ಭಕ್ತಿ (ಒಂಭತ್ತು ಪ್ರಕಾರದ ಭಕ್ತಿ)ಯ ಮರ್ಮ ಎಂಥದು ? ನಾಲ್ಕು ಪ್ರಕಾರದ ಮುಕ್ತಿಯ ರಹಸ್ಯ ಎಂಥದು ? ಸಹಜ ಸ್ಥಿತಿ ಅಂದರೇನು? ಅದು ಹೇಗಿರುವದು, ಇವೆಲ್ಲ ಶ್ರವಣವಿಲ್ಲದೆ ತಿಳಿಯಲಾರವು. (೨೩) ಅಧ್ಯಯನ, ಅಧ್ಯಾಪನ, ಯಜನ, ಯಾಜನ, ದಾನ, ಮತ್ತು ಪ್ರತಿಗ್ರಹ ಈ ಆರು ಕರ್ಮಗಳ ಆಚರಣೆ ಹೇಗೆ ಮಾಡಬೇಕು. ಮತ್ತು ಪುರಶ್ಚರಣೆ ಹೇಗೆ ಮಾಡಬೇಕು, ಸರ್ವವಿಧಿಯಿಂದ ಯುಕ್ತವಿರುವಂಥ ಸಗುಣ ಉಪಾಸನೆಯನ್ನು ಹೇಗೆ ಮಾಡಬೇಕು? ಇದೆಲ್ಲ ಶ್ರವಣದಿಂದಲೇ ತಿಳಿಯುವದು (೨೪) ಅನೇಕ ಪ್ರಕಾರದ ವ್ರತ, ದಾನ, ತಪ, ಸಾಧನೆ, ಯೋಗ ಮತ್ತು ತೀರ್ಥಾಟನಗಳು ಇವೆಲ್ಲವೂ ಶ್ರವಣವಿಲ್ಲದೆ ತಿಳಿಯಲಾರವು. (೨೫) ಅನೇಕ ಪ್ರಕಾರದ ವಿದ್ಯೆ, ಮಾನವೀ ಶರೀರದ ಜ್ಞಾನ ಅನೇಕ ತತ್ವಗಳ ಜ್ಞಾನ, ಅನೇಕ ಪ್ರಕಾರದ ಕಲೆ, ಮತ್ತು ಸ್ವತಃದ (ಖುದ್ದ) ಬ್ರಹ್ಮಜ್ಞಾನವೂ ಸಹ ಶ್ರವಣವಿಲ್ಲದೇ ತಿಳಿಯುವದಿಲ್ಲ. (೨೬) ಎಲ್ಲ ತರಹದ ವನಸ್ಪತಿಗಳು ಒಂದೇ ನೀರಿನಿಂದ ಬೆಳೆಯುವವು. ಎಲ್ಲ ಜೀವಂತ ಪ್ರಾಣಿಗಳೂ ಒಂದೇ ರಸದಿಂದ ಉತ್ಪನ್ನವಾಗುವವು. (೨೭) ಸರ್ವಜೀವಿಗಳೂ ಭೂಮಿಯ ಮೇಲೆಯೇ ಜೀವನ ನಡೆಸುವವು. ಸರ್ವರಿಗೂ ಸರ್ವಕ್ಕೂ ಒಬ್ಬನೇ ಸೂರ್ಯ-ಪ್ರಕಾಶ ಕೊಡುವನು. ಸರ್ವಜೀವಕ್ಕೂ ಒಂದೇ ಗಾಳಿ (ವಾಯು) ಜೀವಂತ ಇಡುವದು, ಇವುಗಳಿಂದ ಚಲನವಲನ ಮಾಡಿಸುವದು. (೨೮) ಯಾವುದಕ್ಕೆ ಆಕಾಶವೆನ್ನುವರೋ ಅದು ಒಂದು ವಿಶಾಲವಾದ ಪೊಳ್ಳು ಇರುವದು. ಇದು ಎಲ್ಲ ಜೀವಕ್ಕೂ ಒಂದೇ ಇರುವದು. ಸರ್ವ ಜೀವಕ್ಕೂ ಪರಬ್ರಹ್ಮವೊಂದೇ ಒಂದು ವಸತಿ ಸ್ಥಾನವಿರುವದು. (೨೯)

ತೈಸೇ ಸಕಳ ಜೀವಾಸ ಮಿಳೋನ। ಸಾರ ಯೇಕಚಿ ಸಾಧನ।
ತೇ ಹೇ ಜಾಣ ಶ್ರವಣ। ಪ್ರಾಣಿಮಾತ್ರಾಸೀ ॥೩೦॥

ನಾನಾ ದೇಶ ಭಾಷಾ ಮತೇ। ಭೂಮಂಡಳೀ ಅಸಂಖ್ಯಾತೇ।
ಸರ್ವಾಂಸ ಶ್ರವಣಾಪರತೇ। ಸಾಧನ ಚಿ ನಾಹೀ ॥೩೧॥

ಶ್ರವಣೇ ಘಡೆ ಉಪರತೀ। ಬದ್ಧಾಚೆ ಮುಮುಕ್ಷ ಹೋತೀ।
ಮುಮುಕ್ಷಾಚೆ ಸಾಧಕ ಅತೀ। ನೇಮೋಸೀ ಚಾಲತೀ ॥೩೨॥

ಸಾಧಕಾಚೆ ಹೋತೀ ಸಿದ್ಧ। ಆಂಗೀ ಬಾಣತಾ ಪ್ರಬೋಧ।
ಹೇ ತೋ ಆಹೆ ಪ್ರಸಿದ್ಧ। ಸಕಳಾಸ ಠಾಉಕೇ ॥೩೩॥

ಠಾಈಚೆ ಖಳ ಚಾಂಡಾಳ। ತೇ ಚಿ ಹೋತೀ ಪುಣ್ಯಸಿಳ।
ಐಸಾ ಗುಣ ತತ್ಕಾಳ। ಶ್ರವಣಾಚಾ ॥೩೪॥

ಜೋ ದುರ್ಬುದ್ಧಿ ದುರಾತ್ಮಾ। ತೋ ಚಿ ಹೊಯೆ ಪುಣ್ಯಾತ್ಮಾ।
ಅಗಾಧ ಶ್ರವಣಾಚಾ ಮಹಿಮಾ। ಬೋಲಿಲಾ ನ ವಚೆ ॥೩೫॥

ತೀರ್ಥಾ ವ್ರತಾಂಚೀ ಫಳಶ್ರುತೀ। ಪುಢೇ ಹೋಣಾರ ಸಾಂಗತೀ।
ತೈಸೇ ನವ್ಹೆ ಹಾತೀಚಾ ಹಾತೀ। ಸಪ್ರಚಿತ ಶ್ರವಣ ॥೩೬॥

ನಾನಾ ರೋಗ ನಾನಾ ವ್ಯಾಧೀ। ತತ್ಕಾಳ ತೋಡಿಜೆ ಔಷಧೀ।
ತೈಸೀ ಆಹೆ ಶ್ರವಣಸಿದ್ಧೀ। ಅನುಭವೀ ಜಾಣತೀ ॥೩೭॥

ಶ್ರವಣಾಚಾ ವಿಚಾರ ಕಳೆ। ತರೀ ಚ ಭಾಗ್ಯಶ್ರೀ ಪ್ರಗಟೆ ಬಳೇ।
ಮುಖ್ಯ ಪರಮಾತ್ಮಾ ಚ ಆಕಳೆ। ಸ್ವಾನುಭವಾಸೀ ॥೩೮॥

ಯಾ ನಾವ ಜಾಣಾವೇ ಮನನ। ಅರ್ಥಾಲಾಗೀ ಸಾವಧಾನ।
ನಿಜಧ್ಯಾಸೇ ಸಮಾಧಾನ। ಹೋತ ಅಸೆ ॥೩೯॥

ಬೋಲಿಲ್ಯಾಚಾ ಅರ್ಥ ಕಳೆ। ತರೀ ಚ ಸಮಾಧಾನ ನಿವಳೆ।
ಅಕಸ್ಮಾತ ಅಂತರೀ ವೋಳೆ। ನಿಃಸಂದೇಹತಾ ॥೪೦॥

ಇದರಂತೆಯೇ ಎಲ್ಲ ಜೀವಗಳಿಗೂ ಕೂಡಿ ಮುಖ್ಯ ಸಾರಭೂತವಾದಂಥ ಒಂದೇ ಒಂದು ಸಾಧನವಿದೆ. ಅದು ಯಾವುದೆಂದರೆ ಶ್ರವಣವೇ ಇರುವದು (೩೦) ಈ ಪೃಥ್ವಿಯ ಮೇಲೆ ಎಷ್ಟೋ ದೇಶಗಳಿರುವವು. ಅದರಂತೆ ಎಷ್ಟೋ ಭಾಷೆಗಳಿರುವವು. ಆದರೆ ಈ ಎಲ್ಲದಕ್ಕೂ ಶ್ರವಣವನ್ನು ಬಿಟ್ಟರೆ ಬೇರೊಂದು ಸಾಧನವೇ ಇಲ್ಲ. (೩೧) ಶ್ರವಣದಿಂದ ಅಂತರಂಗದಲ್ಲಿ ಬದಲಾವಣೆ ಉಂಟಾಗುವದು. ದುಷ್ಟರ ದುಷ್ಟಬುದ್ಧಿ ನಾಶವಾಗುತ್ತದೆ. ಶ್ರವಣದಿಂದ ಮನನ ಮತ್ತು ಮನನದಿಂದ ನಿಧಿಧ್ಯಾಸನ ಉತ್ಪನ್ನವಾಗುವವು.ಈ ನಿಧಿಧ್ಯಾಸನದಿಂದಲೇ ಆತ್ಮಸಾಕ್ಷಾತ್ಕಾರದ ಯೋಗ ಒದಗಿ ಬಂದು ಸಾಕ್ಷಾತ್ಕಾರವಾಗುವದು:– ಶ್ರವಣದಿಂದ ವೈರಾಗ್ಯದ ಪೂರ್ವ ಚಿಹ್ನಗಳು ಕಂಡು ಬರುವವು. ಅವ ಗುಣಗಳನ್ನು ತ್ಯಜಿಸುವ ಮನಸ್ಸಾಗುವದು. ಸದಾಚಾರದ ವರ್ತನೆ ಆರಂಭವಾಗುವದು. ಇದರಿಂದ ಬದ್ಧರಿದ್ದವರು ಮುಮುಕ್ಷುಗಳಾಗುವರು.ಮತ್ತು ಯಾರುಮುಮುಕ್ಷಗಳಿರುವರೋ ಅವರು ಸಾಧಕರಾಗಿ ಅತಿನಿಯಮಪೂರ್ವಕ ಸಾಧನೆ ಮಾಡಹತ್ತುವರು. (೩೨) ಶ್ರವಣದಿಂದ ಸಾಧಕನು ಆಮೇಲೆ ಸಿದ್ಧನಾಗುವನು. ಇಂಥ ಸಿದ್ಧರಲ್ಲಿ ಆತ್ಮಜ್ಞಾನವು ನೆಲೆಗೊಳ್ಳುವದು. ಶ್ರವಣದಿಂದ ಇಷ್ಟೆಲ್ಲ ಮಹತ್ತರ ಪರಿಣಾಮಗಳು ಆಗುವವು. ಇದು ಎಲ್ಲೆಲ್ಲೂ ಪ್ರಸಿದ್ಧವೇ ಇರುವದು. ಎಲ್ಲರಿಗೂ ಗೊತ್ತಿರುವದು. (೩೩) ಸ್ವಭಾವತಃ ನೀಚ, ದುಷ್ಟ, ವ ಚಂಡಾಳ ಇರುವಂಥವರಲ್ಲಿಯೂ ಸಹ ಶ್ರವಣದಿಂದ ಅವರ ಸ್ವಭಾವದಲ್ಲಿ ಸುಧಾರಣೆಯಾಗಿ ಪುಣ್ಯಶೀಲ, ಪುಣ್ಯಾತ್ಮರೆನಿಸುವರು. ಶ್ರವಣದಿಂದ ಕೂಡಲೇ ಅನುಭವ ತೋರಿಬರುವದು. ಇಂಥ ಅಗಾಧ ಗುಣದ ಮಹಿಮೆಯನ್ನು ಶಬ್ದಗಳಿಂದ ವರ್ಣಿಸಲಿಕ್ಕೆ ಆಗುವದಿಲ್ಲ. (೩೪) ದುಷ್ಟ ಬುದ್ಧಿಯ ದುಷ್ಟಾತ್ಮನಿದ್ದವನು ಶ್ರವಣದಿಂದ ಪುಣ್ಯಾತ್ಮನೆನಿಸುವನು. ಶ್ರವಣದ ಈ ಅಗಾಧ ಮಹಿಮೆಯನ್ನು ಶಬ್ದಗಳಿಂದ ಹೇಳಲಿಕ್ಕೆ ಆಗುವದಿಲ್ಲ. (೩೫) ತೀರ್ಥವೇ ಇರಲಿ, ವ್ರತವೇ ಇರಲಿ, ಇವುಗಳ ಫಲ ಮುಂದೆ ಎಂದಾದರೂ ಸಿಗುವದು ಎಂದು ಹೇಳುವರು. ಶ್ರವಣದ್ದು ಮಾತ್ರ ಹಾಗಲ್ಲ. ಇದರ ಫಲವು ಉದ್ದರಿಯದಲ್ಲ. ಅದು ರೋಖಡಿ ವ್ಯವಹಾರವು ಅಂದರೆ ಕೂಡಲೇ ಅನುಭವಕ್ಕೆ ಬರುವಂಥದ್ದಾಗಿದೆ. (೩೬) ಅನೇಕ ಪ್ರಕಾರದ ರೋಗಗಳು, ನಾನಾ ಪ್ರಕಾರದ ವ್ಯಾಧಿಗಳು ಇರುವವು. ಉತ್ತಮ ಔಷಧದಿಂದ ಇವು ಬಹುಬೇಗ ನೆಟ್ಟಗಾಗುವವು. ಇದರಂತೆ ಶ್ರವಣ ದಿಂದ ದೇಹ ಬುದ್ಧಿ ಕೂಡಲೇ ನಾಶವಾಗುವದು. ಹೀಗೆ ಅನುಭವಿ ಸಾಧು ಸಂತಾದಿಗಳು ಹೇಳುವರು. (೩೭) ಶ್ರವಣದ ಮಹತ್ವ ತಿಳಿದದ್ದಾದರೆ ಜಬರದಸ್ತಿಯಿಂದ ಭಾಗ್ಯದ ಉದಯವಾಗುವದು. ಮತ್ತು ಪರಮಾತ್ಮ ಸ್ವರೂಪದ ಸಾಕ್ಷಾತ್ಕಾರವಾಗುವದು.(೩೮)ನಾವುಯಾವುದನ್ನು ಶ್ರವಣ ಮಾಡುವೆವೋ ಅದರ ಅರ್ಥದ ಕಡೆಗೆ ವಿಚಾರ ಪೂರ್ವಕ ಲಕ್ಷ್ಯಕೊಡುವದಕ್ಕೆ ಮನನ ಅನ್ನುವರು.ಈ ಅರ್ಥದ ಮೇಲೆ ಮನವು ಅಥವಾ ಲಕ್ಷ್ಯವು ಏಕಾಗ್ರವಾಯಿತೆಂದರೆ ನಿಧಿ ಧ್ಯಾಸನವು ಸಾಧಿಸುವದು. ನಿಧಿಧ್ಯಾಸನದಿಂದ ಸಾಕ್ಷಾತ್ಕಾರವಾಗಿ ಸಮಾಧಾನ ಪ್ರಾಪ್ತವಾಗುದದು. (೩೦) ನಾವು ದೇಹಬುದ್ಧಿಯಲ್ಲಿ ಇರುವಂಥ ಮನುಷ್ಯರಿರುವೆವು ಅಂತೆಯೇ ನಮ್ಮ ಮನವು ಮೇಲಿಂದ ಮೇಲೆ ಸಂಶಯದಿಂದ ಗ್ರಸ್ತವಾಗುವದು. ಇದರ ನಿವಾರಣೆಗಾಗಿ ಪುನಃ ಪುನಃ ಸಂತ ಸಾಧುಗಳ ಕಡೆಯಿಂದ ಶ್ರವಣ ಮಾಡುವದು ಅವಶ್ಯ ವಿರುವದು. ಎಲ್ಲಿ ಶ್ರವಣಕ್ಕೆ ಎಡೆಇಲ್ಲವೋ ಅಥವಾ ಶ್ರವಣ ನಡೆಯುವದಿಲ್ಲವೋ ಅಂಥಲ್ಲಿ ಸಾಧಕರು ಇರಬಾರದು. ಯಾಕೆಂದರೆ ಅಲ್ಲಿ ಖರೇ ಪರಮಾರ್ಥವು ಇರುವದಿಲ್ಲ. ಶ್ರವಣ ಇಲ್ಲದಲ್ಲಿ ಆಲಸ್ಯದ ಜೋರು ಹೆಚ್ಚಾಗುವದು, ಮತ್ತು ಪರಮಾರ್ಥವು ಮುಳುಗಿ ಹೋಗುವದು. ಮಾನವನ ಉದ್ಧಾರದ ಮಾತಂತೂ ದೂರೇ ಉಳಿಯಿತು. ಸಂತ,ಸಾಧು,ಸದ್ಗುರು ಮತ್ತು ಸದ್‌ಗ್ರಂಥ ಏನನ್ನೂ ಹೇಳುವರೋ ಅಥವಾ ಉಪದೇಶ ಮಾಡುವರೋ ಅವನ್ನು ಲಕ್ಷ್ಯಗೊಟ್ಟು ಕೇಳಿ ಅದರ ಅರ್ಥವನ್ನು ಸರಿಯಾಗಿ ತಿಳಿದುಕೊಂಡು ಅದು ಧ್ಯಾನದಲ್ಲಿ ಸರಿಯಾಗಿ ಬಂದರೆ ಮನವು ಸಮಾಧಾನ ಹೊಂದುವದು. ನಮ್ಮ ಅಂತರ್ಯಾಮದಲ್ಲಿ ಇರುವಂಥ ಸಂದೇಹಗಳು ವಿಶೇಷ ಆಯಾಸವಿಲ್ಲದೇ ಕೂಡಲೇ ಇಲ್ಲವಾಗಿ ಹೋಗುವವು. ಮತ್ತು ಮನವು ನಿಃಸಂದೇಹವಾಗಿ ಹೋಗುವದು. (೪೦)

ಸಂದೇಹ ಜನ್ಮಾಚೆ ಮೂಳ। ತೇ ಶ್ರವಣೇ ಹೋಯೆ ನಿರ್ಮೂಳ।
ಪುಢೇ ಸಹಜ ಚಿ ಪ್ರಾಂಜಳ। ಸಮಾಧಾನ ॥೪೧॥
ಜೆಥೇ ನಾಹೀ ಶ್ರವಣ ಮನನ। ತೆಥೇ ಕೈಚೇ ಸಮಾಧಾನ।
ಮುಕ್ತಪಣಾಚೇ ಬಂಧನ। ಜಡಲೇ ಪಾಹೀ ॥೪೨॥
ಮುಮುಕ್ಷು ಸಾಧಕ ಅಥವಾ ಸಿದ್ಧ। ಶ್ರವಣೇವಿಣ ತೋ ಅಬದ್ಧ।
ಶ್ರವಣಮನನೇ ಶುದ್ಧ। ಚಿತ್ತವೃತ್ತಿ ಹೋಯೆ ॥೪೩॥
ಜೆಥೇ ನಾಹೀ ನಿತ್ಯಶ್ರವಣ। ತೇ ಜಾಣಾವೇ ವಿಲಕ್ಷಣ।
ತೆಥೇ ಸಾಧಕೇ ಯೇಕ ಕ್ಷಣ। ಕ್ರಮೂ ನಯೆ ಸರ್ವಥಾ ॥೪೪॥
ಜೆಥೇ ನಾಹೀ ಶ್ರವಣ ಸ್ವಾರ್ಥ। ತೆಥೇ ಕೈಚಾ ಹೋ ಪರಮಾರ್ಥ।
ಮಾಗೇ ಕೆಲೇ ತಿತುಕೇ ವೆರ್ಥ। ಶ್ರವಣೇವಿಣ ಹೋಯೆ ॥೪೫॥
ತಸ್ಮಾತ್ ಶ್ರವಣ ಕರಾವೇ। ಸಾಧನ ಮನೀ ಧರಾವೇ।
ನಿತ್ಯನೇಮೇ ತರಾವೇ। ಸಂಸಾರಸಾಗರೀ ॥೪೬॥
ಸೇವಿಲೇ ಚ ಸೇವಾವೇ ಅನ್ನ। ಘೇತಲೇ ಚಿ ಘ್ಯಾವೇ ಜೀವನ।
ತೈಸೇ ಶ್ರವಣ ಮನನ। ಕೇಲೇಚಿ ಕರಾವೆ ॥೪೭॥
ಶ್ರವಣಾಚಾ ಅನಾದರ। ಆಳಸೇ ಕರೀ ಜೋ ನರ।
ತ್ಯಾಚಾ ಹೋಯೆ ಅಪಹಾರ। ಸ್ವಹಿತಾ ವಿಷಈ ॥೪೮॥
ಆಳಸಾಚೆ ಸಂರಕ್ಷಣ। ಪರಮಾರ್ಥಾಚೀ ಬುಡವಣ।
ಯಾ ಕಾರಣೇ ಶ್ರವಣ। ಕೇಲೇ ಚಿ ಪಾಹಿಜೆ ॥೪೯॥
ಆತಾ ಶ್ರವಣ ಕೈಸೇ ಕರಾವೇ। ಕೋಣ್ಯಾ ಪಂಥಾಸ ಪಾಹಾವೇ।
ಪುಢಿಲೇ ಸಮಾಸೀ ಆಘವೇ। ಸಾಂಗಿಜೆಲ ॥೫೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
"ಶ್ರವಣ ನಿರೂಪಣ" ನಾಮ ಸಮಾಸ ಅಷ್ಟಮ ॥

ಸ್ವಸ್ವರೂಪ ವಿಷಯದ ಸಂದೇಹ ಸಂಶಯಗಳೇ ಜನ್ಮಕ್ಕೆ ಮೂಲವಿರುವದು. ಶ್ರವಣದಿಂದ ಇದು ನಿರ್ಮೂಲವಾಗುವದು. ಮನವು ಸಂದೇಹರಹಿತವಾಯಿತೆಂದರೆ ಆಗ ಸ್ವಚ್ಛರೂಪದ ಖರೇ ಸಮಾಧಾನದ ಅನುಭವ ಸ್ವತಃಕ್ಕೆ (ಖುದ್ದಾಗಿ) ಬರುವದು. (೪೧) "ನಾನು ಮುಕ್ತನಿದ್ದೇನೆ" ಈ ಭಾವನೆಯಿಂದ ಎಲ್ಲಿ ನಿತ್ಯ ಶ್ರವಣ,ಮನನ ಇರುವದಿಲ್ಲವೋ ಅಂಥಲ್ಲಿ ಸಮಾಧಾನವು ಹೇಗೆ ಇದ್ದೀತು? (ಇರಲಿಕ್ಕೆ ಆಗುವದೇ ಇಲ್ಲ). ಮುಕ್ತತನದ ಭಾವನೆಯ ಬಂಧನವೇ ಅಲ್ಲಿ ತಳವೂರಿದ್ದು ಕಂಡು ಬಂದೀತು. ಇದಕ್ಕೆಲ್ಲ ನಾನು ಮುಕ್ತನಿರುವೆ ಅನ್ನುವ ಕಲ್ಪನೆಯೇ ಕಾರಣ ವಿರುವದು. ಈ ಕಲ್ಪನಾ ಬಂಧನವೇ ಸಾಧನಿಗೆ ತೊಡಕು ಹಾಕಿರುವದು.(೪೨) ಮುಮುಕ್ಷು ಇರಲಿ, ಸಾಧಕನಿರಲಿ, ಅಥವಾ ಸಿದ್ಧನೇ ಇರಲಿ ಇವರೆಲ್ಲರೂ ನಿತ್ಯ ಶ್ರವಣ ಮಾಡದಿದ್ದರೆ ಅವರೆಲ್ಲ ಮೂಢರೆಂದು ತಿಳಿಯಬೇಕು. ಶ್ರವಣ ಮನನದಿಂದ ಚಿತ್ತವೃತ್ತಿಯು ಶುದ್ಧವಾಗುವದು. (೪೩) ಪರಮಾರ್ಥದ ಸ್ಥಾನಗಳಲ್ಲಿ ನಿತ್ಯನಿಯಮದಿಂದ ಶ್ರವಣ ನಡೆಯಲೇ ಬೇಕು. ಇದು ಇಲ್ಲದ ಸ್ಥಳವು ವಿಲಕ್ಷಣ ಅವಲಕ್ಷಣದ ಪರಮಾರ್ಥದ ಸ್ಥಾನವೇ ಆಗುವದು. ಇಂಥಲ್ಲಿ ಸಾಧಕರು ಒಂದು ಕ್ಷಣವೂ ಸಹ ಇರಬಾರದು. (೪೪) ಸ್ವಾರ್ಥವಿಲ್ಲದ ಶ್ರವಣದ ಸ್ಥಳದಲ್ಲಿ ಅಂದರೆ ಪರಮಾರ್ಥದ ಶ್ರವಣ ನಿತ್ಯವೂ ನಡೆಯದಿರುವ ಸ್ಥಳದಲ್ಲಿ ಪರಮಾರ್ಥದ ಅಸ್ತಿತ್ವ ಸಿಗಲಾರದು. ನಿತ್ಯ ಶ್ರವಣ ಇಡದಿದ್ದರೆ ಇಲ್ಲಿಯವರೆಗೆ ಮಾಡಿದ ಸಾಧನವು ವ್ಯರ್ಥವಾಗಿ ಹೋಗುವದು. (೪೫) ಆದ್ದರಿಂದ ನಾನು ಆಗ್ರಹದಿಂದ ಮುದ್ದಾಂ ಹೇಳುವದೇನಂದರೆ ನೀವೆಲ್ಲ ನಿತ್ಯನೇಮದಿಂದ ಶ್ರವಣ ಮಾಡಬೇಕು. ಮನನ ಮಾಡಬೇಕು. ಮನಃಪೂರ್ವಕ ಸಾಧನೆ ಮಾಡಬೇಕು. ಈ ರೀತಿಯ ನಿತ್ಯನಿಯಮದ ಬಲದಿಂದ ಸಂಸಾರ ಸಾಗರವನ್ನು ಸುಲಭವಾಗಿ ದಾಟಿ ಹೋಗಬೇಕು ಹೋಗುವಿರಿ. (೪೬) ಒಂದೇ ಸಲ ಊಟ ಮಾಡಿದರೆ ನಡೆಯು ವದಿಲ್ಲ. ಪುನಃ ಪುನಃ ಊಟ ಮಾಡಬೇಕಾಗುವದು. ಇದೇ ಪ್ರಕಾರ ನೀರನ್ನೂ ಸಹ ಮೇಲಿಂದ ಮೇಲೆ ಕುಡಿಯ ಬೇಕಾಗುವದು. ಅಗದೀ ಇದರಂತೆಯೇ ಪುನಃ ಪುನಃ ಶ್ರವಣ ಮತ್ತು ಮನನ ಮಾಡುವದೂ ಸಹ ಆವಶ್ಯ ವಿರುವದು. [೪೭] ಕೇವಲ ಆಲಸ್ಯದಿಂದ ಶ್ರವಣವನ್ನು ದುರ್ಲಕ್ಷಿಸಿದರೆ, ಅನಾದರ ಮಾಡಿದರೆ ಅಂಥವರು ಸ್ವಹಿತವನ್ನು ಆತ್ಮ ಕಲ್ಯಾಣವನ್ನು ಅಂದರೆ ಕೊನೆಯ ಗುರಿ ಎನಿಸಿದ ಆತ್ಮಜ್ಞಾನವನ್ನು ಖಾತ್ರಿಯಿಂದ ಪಡೆಯ ಲಾರರು, ಮತ್ತು ಅದರಿಂದ ದೂರಾಗುವರು. [೪೮] ಆಲಸ್ಯವನ್ನು ಅಂಟಿಸಿಕೊಂಡವನು ಅಂದರೆ ಆಲಸಿಯು ಪರಮಾರ್ಥವನ್ನು ಖಾತ್ರಿಯಿಂದ ಕಳೆದುಕೊಳ್ಳುವನು. ಸಾರಾಂಶ:- ಒಟ್ಟಿನಲ್ಲಿ ಆಲಸ್ಯವನ್ನು ಸಂಪೂರ್ಣ ತ್ಯಜಿಸಿ ಪ್ರತಿಯೊಬ್ಬರೂ ಶ್ರವಣ ಮಾಡಲೇಬೇಕು. [೪೯] ಇನ್ನು ಮೇಲೆ ಶ್ರವಣವನ್ನು ಮಾಡುವದಾದರೂ ಹೇಗೆ?ಯಾವ ಯಾವ ಗ್ರಂಥಗಳನ್ನು ಅಭ್ಯಾಸ ಮಾಡಬೇಕು. ಇದೆಲ್ಲ ವಿಷಯವನ್ನು ಮುಂದಿನ ಸಮಾಸದಲ್ಲಿ ಹೇಳುವೆವು. [೫೦]

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದ ಏಳನೆಯ ದಶಕದೊಳಗಿನ
"ಶ್ರವಣ ನಿರೂಪಣ"ವೆಂಬ ಎಂಟನೆಯ ಸಮಾಸವು ಮುಗಿಯಿತು.

● ●

## ದಶಕ ೭. ಸಮಾಸ ೯. ಶ್ರವಣ ನಿರೂಪಣ (ನುಡಿ ೬೦)

ಮನುಷ್ಯನ ಜೀವನದಲ್ಲಿಯು ಎಲ್ಲ ಅಂಗಗಳಿಗೂ ಸಮಾಜವು ಸಂಪರ್ಕ ಮಾಡದೆ ಇರುವದಿಲ್ಲ. ಕೇವಲ ಅಂತರಂಗದೊಂದಿಗೆ ಸಂಬಂಧ ಇರುವ ಆಧ್ಯಾತ್ಮಿಕ ಜೀವನವೇ ಆಗಿದ್ದರೂ ಸಹ ಈ ಜೀವನದಲ್ಲಿ ಸಹ ಸದ್ಗುರು ದೊರಕುವದು. ಮತ್ತು ಅವನ ಸಹವಾಸದಲ್ಲಿರುವ ಭಾಗ್ಯ ಸಿಗುವದು. ಇದೂ ಸಹ ಸಮಾಜದ ದೇಣಿಗೆಯೇ [ಕೊಡುಗೆ] ಇರುವದು. ವಸ್ತು ಸ್ಥಿತಿ ಹೀಗೆ ಇರುವದರಿಂದ ಸ್ವತಃ ದೊರಕಿದ ಜ್ಞಾನವನ್ನು ಪ್ರತಿಯೊಬ್ಬರೂ ಸಮಕಾಲೀನ ಸಮಾಜಕ್ಕೆ ಮುಕ್ತ ಹಸ್ತದಿಂದ ಕೊಡಬೇಕು. ಹೀಗೆ ಶ್ರೀ ಸಮರ್ಥರ ಆಗ್ರಹದ ಅಭಿಪ್ರಾಯ ವಿರುವದು. ಈ ಜ್ಞಾನದಾನ ಮಾಡುವಲ್ಲಿ ಎರಡು ಮುಖ್ಯ ಮಾರ್ಗಗಳು ರೂಢಿಯಲ್ಲಿ ನಡೆದು ಬಂದಿರುವವು. ವ್ಯಾಖ್ಯಾನ ಮತ್ತು ಪ್ರವಚನಗಳಿಂದ ತಮ್ಮ ಜ್ಞಾನವನ್ನು ಜನ ಸಮುದಾಯಕ್ಕೆ ಶ್ರವಣ ಮಾಡಲಿಕ್ಕೆ ಹಚ್ಚಿ ಅವ ರನ್ನು ಜ್ಞಾನ ಸಂಪನ್ನರನ್ನಾಗಿ ಮಾಡುವದು. ಇದುಒಂದು ಮಾರ್ಗವು ಮತ್ತು ತಮ್ಮ ಜ್ಞಾನವನ್ನು ಭಾಷಾಬದ್ಧ ಮಾಡಿ ಗ್ರಂಥ, ಲೇಖನಗಳನ್ನು ತಯಾರಿಸಿ ಜನರಲ್ಲಿ ಪ್ರಸಾರ ಮಾಡುವದು, ಪ್ರಸಿದ್ಧಗೊಳಿಸುವದು ಇದು ಎರಡನೆಯ ಮಾರ್ಗವಿರುವದು. ಯಾವುದೇ ಜ್ಞಾನದ ಉಪಾಸನೆ ಮಾಡಲಿಕ್ಕೆ ಒಂದು ವಿಶಿಷ್ಟ ಪದ್ಧತಿ ಸ್ಥಿರತೆ ಇರಬೇಕಾಗು ವದು. ಅರ್ಥಾತ್ ಆತ್ಮಜ್ಞಾನದ ಉಪಾಸನೆ ಮಾಡುವದಕ್ಕಾಗಿ ಸಹ ಕೆಲವೊಂದು ಪೂರ್ವ ತಯಾರಿಯ ಅವಶ್ಯಕತೆ

ಇರುವದು. ಆದರೆ ಮಾನವೀ ಸಮಾಜವು ಅಪಾರ ಬಹು ದೊಡ್ಡದು ಇರುವದು. ಯಾವುದೇ ಸ್ತ್ರೀ ಅಥವಾ ಪುರುಷರ ಹತ್ತಿರ ಈ ಪೂರ್ವ ತಯಾರಿ ಇದೆ ಅನ್ನುವದು ನಮಗೆ ಗೊತ್ತಿರುವದಿಲ್ಲ. ಆದ್ದರಿಂದ ಸರ್ವ ಸಮಾಜದ ವ್ಯವಹಾರಿಕ ಭಾಷೆ ಯಾವುದಿರುವದೋ ಆ ಭಾಷೆಯಲ್ಲಿಯೇ ಅಧ್ಯಾತ್ಮವನ್ನು ಹೇಳಬೇಕು. ಸದಾ ಹೇಳುತ್ತಲಿರ ಬೇಕು. ಮತ್ತು ಆ ಭಾಷೆಯಲ್ಲಿ ಬರೆಯಬೇಕು. ಮತ್ತು ವ್ಯವಹರಿಸಬೇಕು. ಅಂದರೆ ಅಧಿಕಾರಿ ಇರುವವನು ಇವು ಗಳ ಸಹಾಯದಿಂದ ಅಧ್ಯಾತ್ಮದ ಲಾಭ ಪಡೆದೇ ಪಡೆಯುವನು. ಯಾರು ಅಧಿಕಾರಿ ಇರುವದಿಲ್ಲವೋ ಅಂಥ ಸಾಮಾ ನ್ಯನೂ ಸಹ ಗ್ರಂಥಾದಿಗಳಲ್ಲಿಯ ವಿಚಾರದ ಪ್ರಭಾವದಿಂದ ಅಧಿಕಾರಿಯಾಗಿ ಆವನು ತನ್ನ ಕಲ್ಯಾಣ ಸಾಧಿಸಿಕೊಳ್ಳು ವನು. ಸಂತ ಸಾಧುಗಳ ದೃಷ್ಟಿಕೋನ ಒಂದು ಅರ್ಥದಿಂದ ವಿಜ್ಞಾನದ ಜೊತೆಗೆ ಹೊಂದುವಂಥದಿರುವದು. ನಿರೀ ಕ್ಷಣ ಮತ್ತು ಪ್ರಯೋಗ ಇವುಗಳಿಂದ ಸಿದ್ಧವಾದ ಸಿದ್ಧಾಂತ ತಯಾರಿಸುವ ಮತ್ತು ಅವುಗಳ ಸಹಾಯದಿಂದ ಆಗುವ ಕ್ರಿಯೆ (ಉಂಟಾಗುವ ಕ್ರಿಯೆ) ಯ ಜೊತೆಗೆ ಅರ್ಥ ಹಚ್ಚುವದೇ ವಿಜ್ಞಾನದ ಕೆಲಸವಿರುವದು. ಸಂತಾದಿಗಳು ಮಾನವೀ ಜೀವನದ ಸೂಕ್ಷ್ಮ ನಿರೀಕ್ಷಣ ಮಾಡಿದರು. ಸ್ವತಃದ ಜೀವನದ ಮೇಲೆ ನಿರ್ಭಯದಿಂದ ಪ್ರಯೋಗ ಮಾಡಿದರು. ಮತ್ತು ಈ ಜಗತ್ತಿನಲ್ಲಿಯ ಜೀವನದ ಬಗೆಗೆ ಸಂಪೂರ್ಣ ಅರ್ಥ ಶೋಧಿಸಿ ತೆಗೆದರು. ಅಂತೆಯೇ ಸಂತಾದಿಗಳ ಅನುಭವ ವಿಶ್ವವು ಬಹಳ ವ್ಯಾಪಕ ಮತ್ತು ಸರ್ವ ಸ್ಪರ್ಶಿ ಇರುತ್ತದೆ. ಇದು ಅತಿ ಜೀವಂತ, ತಾಜಾ ಮತ್ತು ರಸರಸಿತ (ಪ್ರಜ್ವಲಿತ) ಇರುವದು. ಇವರ ಬುದ್ಧಿಯು ಸೂಕ್ಷ್ಮ ಇದ್ದೇ ಇರುವದು.ಅದರಂತೆ ಇವರ ಪ್ರತಿ ಭೆಯು ಅಖಂಡವಾಗಿ ಜಾಗೃತವಿರುವದು, ಸಂತಾದಿಕರು ಸ್ವತಃವ ಜೀವನ ದರ್ಶನವನ್ನು ಗ್ರಂಥಗಳಲ್ಲಿ ಭಾಷಾಬದ್ಧ ಮಾಡುವರು. ಅಂದರೆ ಗ್ರಂಥದಲ್ಲಿ ಬರೆಯುವರು. ಅರ್ಥಾತ್ ಗ್ರಂಥ ಹೇಗೆ ಇರಬೇಕು ? ಇದರ ಬಗೆಗೆ ಅವರ ವಿಚಾರಗಳು ಇತರರಕ್ಕಿಂತ ಸ್ವಲ್ಪ ಭಿನ್ನವಿರುವವು. ಶ್ರೀ ಸಮರ್ಥರ ಅಂಬೋಣವೇನಂದರೆ, ಗ್ರಂಥದ ಬಹಿರಂಗತನ ಕ್ಕಿಂತಲೂ (ಇದರಲ್ಲಿ ಗ್ರಂಥದ ಭಾಷೆ ಸಹ ಬರುವದು.) ಅದರ ಅಂತರಂಗಕ್ಕೆ ಬಹಳ ಮಹತ್ವವಿರಬೇಕು. ಸಂತರು ಯಾವ ಭಾಷೆಯನ್ನು ಉಪಯೋಗಿಸುವರೋ ಆ ಭಾಷೆಯಲ್ಲಿ ಸ್ವತಃದ ಅಮೌಲ್ಯ ವ ಅಪಾರವಾದ ಅನುಭವವನ್ನು ಸಾಕಷ್ಟು ಬರೆದು ಗ್ರಂಥದಲ್ಲಿ ಭರಪೂರ ತುಂಬುವ ಪ್ರಯತ್ನ ಮಾಡುವರು. ಅಂತೆಯೇ ಸಂತಾದಿಕರ ಗ್ರಂಥಗಳಲ್ಲಿ ಅಲ್ಲಲ್ಲಿ ಅನಂತನಿಗೆ ಮುಸಕು (ಮರೆ ಮಾಡುವ) ಹಾಕುವ ಕಲ್ಪನೆಯ ಸುಕಾಳತನ ಕಂಡು ಬರುವದು. ಗ್ರಂಥದಲ್ಲಿಯ ಶಬ್ದದ ಆಧಾರ ಪಡೆದು ವಾಚಕರು ಅತೀಂದ್ರಿಯ, ಅವ್ಯಯ, ಅವ್ಯಕ್ತ, ಮತ್ತು ಅನಂತ ಈ ಸದ್ವಸ್ತುವಿನ ಅನು ಭವ ಕ್ಷೇತ್ರದಲ್ಲಿ ಒಳ ಹೊಕ್ಕದ್ದಾದರೆ ಅದರಲ್ಲಿ ಪ್ರವೇಶಿಸಲು ಸಾಧ್ಯವಾದರೆ ಮಾತ್ರ ಆ ಗ್ರಂಥವು ಗ್ರಂಥವೆಂಬ ಹೆಸ ರಿಗೆ ಪಾತ್ರವೆಂದು ತಿಳಿಯಬೇಕು. ಎಂಥ ಗ್ರಂಥ ಉತ್ತಮವೆಂದರೆ,ಅಭ್ಯಾಸ ಮಾಡುವವರಿಂದ ವಾಚಕನ ಅಂತರಂಗದ ಮೇಲೆ ಆಳವಾದ ಪರಿಣಾಮವನ್ನು ಉಂಟು ಮಾಡುವದು. ಮತ್ತು ಅವನ[ವಾಚಕನ] ಜೀವನಕ್ಕೆ ತಾಬಡತೋಬಡ ಅಧ್ಯಾತ್ಮದಲ್ಲಿ ಸೆಳೆತ, ಒಲವು, ಆಸಕ್ತಿ ಹತ್ತುವದು. ಅದರಲ್ಲಿ ಪ್ರಗತಿ ಆಗುವದು. ಇನ್ನೂ ಹೇಳುವದಾದರೆ ವಾಚ ಕರ ಅನೇಕ ಸಂಶಯಗಳು ದೂರಾಗಿ ಆತ್ಮಸ್ವರೂಪದ ಬಗೆಗೆ ಅವನಿಗೆ ನಿಶ್ಚಿತತನ[ಖಾತ್ರಿ] ಆಗಲಿಕ್ಕೇಬೇಕು. ಮುಖ್ಯ ವಾಗಿ ಹೇಳುವ ಸಾರಾಂಶ ಹೀಗಿರುವದು: ಸಾಮಾನ್ಯ ಮನುಷ್ಯನ ಸ್ವಾರ್ಥಿ ಮತ್ತು ಅಹಂಕಾರಿ ಜೀವನವು ಅನೇಕ ಅಶುಭ ವಾಸನಾದಿಗಳಿಂದ ಸುತ್ತಿಕೊಂಡಿರುತ್ತದೆ. ಶ್ರವಣದಿಂದ ಅಥವಾ ಗ್ರಂಥ ವಾಚನದ ಅಭ್ಯಾಸದಿಂದ ಆ ಜೀವನ ದೊಳಗೆ ಆಮೂಲಾಗ್ರ ಬದಲಾವಣೆ ಉಂಟಾಗುವದು ಅವಶ್ಯವಿರುವದು. ಇದಕ್ಕಾಗಿ ಮನುಷ್ಯನು ಪುನಃ ಪುನಃ ಶ್ರವಣ ಮಾಡಬೇಕು. ಅಥವಾ ಒಂದೇ ಒಂದು ಗ್ರಂಥವನ್ನು ಹಗಲಿರುಳು ಅಭ್ಯಾಸ ಮಾಡಬೇಕು.

### ಸಮಾಸ ನವಮು : ಶ್ರವಣ ನಿರೂಪಣ ನಾಮು

॥ಶ್ರೀರಾಮ॥ ಆತಾ ಶ್ರವಣ ಕೈಸೆ ಕರಾವೆ । ತೇ ಹಿ ಸಾಂಗಿಜೇಲ ಅಘವೆ।
ಶ್ರೋತಾ ಅವಧಾನ ದ್ಯಾವೇ । ಯೇಕ ಚಿತ್ತೇ ॥೧॥

ಯೇಕ ವಗತೃತ್ವ ಶ್ರವಣೀ ಪಡೆ। ತೇಣೇ ಜಾಲೇ ಸಮಾಧಾನ ಮೋಡೆ।
ಕೇಲಾ ನಿಶ್ಚಯು ವಿಘಡೆ। ಅಕಸ್ಮಾತ ॥೨॥

ತೇ ವಗತೃತ್ವ ತ್ಯಾಗಾವೇ । ಜೇ ಮಾಈಕ ಸ್ವಭಾವೇ ।
ಜೇಥೇ ನಿಶ್ಚಯಾಚ್ಯಾ ನಾವೇ । ಸುನ್ಯಾಕಾರ ॥೩॥

ಯೇಕ್ಯಾ ಗ್ರಂಥೇ ನಿಶ್ಚಯು ಕೇಲಾ । ತೋ ದುಜಯಾನೇ ಉಡವಿಲಾ ।
ತೇಣೇ ಸಂಶಯೋ ಚಿ ವಾಢಲಾ। ಜನ್ಮವರೀ ॥೪॥

ಜೇಥೇ ಸಂಶಯು ತುಟತೀ । ಹೋಯೆ ಆಶಂಕಾ ನಿವೃತ್ತೀ ।
ಅದ್ವೈತ ಗ್ರಂಥ ಪರಮಾರ್ಥೀ । ಶ್ರವಣ ಕರಾವೇ ॥೫॥

ಜೋ ಮೋಕ್ಷಾಚಾ ಅಧಿಕಾರೀ। ತೋ ಪರಮಾರ್ಥ ಪಂಥ ಧರೀ ।
ಪ್ರೀತಿ ಲಾಗಲೀ ಅಂತರೀ । ಅದ್ವೈತ ಗ್ರಂಥಾಚೀ ॥೬॥

ಜೇಣೇ ಸಾಂಡಿಲಾ ಇಹಲೋಕ । ಜೋ ಪರಲೋಕೀಚಾ ಸಾಧಕ।
ತೇಣೆ ಪಾಹಾವಾ ವಿವೇಕ । ಅದ್ವೈತ ಶಾಸ್ತ್ರೀ ॥೭॥

ಜಯಾಸ ಪಾಹಿಜೆ ಅದ್ವೈತ । ತಯಾಪುಢೇ ಠೇವಿತಾ ದ್ವೈತ ।
ತೇಣೇ ಕ್ಷೋಭಲೆ ಉಠೇ ಚಿತ್ತ । ತಯಾ ಶ್ರೋತಯಾಚೇ ॥೮॥

ಆವಡೀಸಾರಿಖೇ ಮಿಳೆ । ತೇಣೇ ಸುಖ ಚಿ ಉಚಂಬಳೆ ।
ನಾಹೀ ತರೀ ಕಂಟಾಳೆ । ಮಾನಸ ಏಕತಾ ॥೯॥

ಜ್ಯಾಚೀ ಉಪಾಸನಾ ಜೈಸೀ । ತ್ಯಾಸೀ ಪ್ರೀತಿ ವಾಟೆ ತೈಸೀ ।
ತೇಥೇ ವರ್ಣಿತಾ ದುಜಯಾಸೀ । ಪ್ರಶಸ್ತ ನ ವಟೆ ॥೧೦॥

ಪ್ರೀತಿಚೇ ಲಕ್ಷಣ ಏಸೇ । ಅಂತರೀ ಉಠೆ ಅನಾಯಾಸೇ ।
ಪಾಣೀ ಪಾಣವಾಟೆ ಜೈಸೇ । ಆಪಣಚಿ ಧಾವೇ ॥೧೧॥

ತೈಸಾ ಜೋ ಆತ್ಮಜ್ಞಾನೀ ನರ । ತಯಾಸ ನಾವಡೆ ಇತರ ।
ತೇಥೇ ಪಾಹಿಜೆ ಸಾರಾಸಾರ । ವಿಚಾರಣಾ ತೇ ॥೧೨॥

## ದಶಕ ೭ : ಸಮಾಸ ೯ : ಶ್ರವಣ ನಿರೂಪಣ [ನುಡಿ ೬೦]

ಯಾವ ಗ್ರಂಥದಲ್ಲಿ ಯೋಗ್ಯ ರೀತಿಯಿಂದ ಪದ್ಧತಿ ಪ್ರಕಾರ. ಮತ್ತು ತರ್ಕ ಶುದ್ಧವಾದ ಅಧ್ಯಾತ್ಮ ಹೇಳಿರುವದೋ ಅಂಥವೇ ಗ್ರಂಥಗಳನ್ನು ಓದಬೇಕು. ಗ್ರಂಥದ ವಾಚನದಿಂದ ನಮ್ಮ ಮನವು ಭಗವಂತನಲ್ಲಿ ಸ್ಥಿರಗೊಳ್ಳುವದಕ್ಕೆ ಸಹಾಯವಾಗಬೇಕು. ಗ್ರಂಥವನ್ನು ಓದಿದರೆ ನಮ್ಮಲ್ಲಿ ಬುದ್ಧಿಯಲ್ಲಿ ಭೇದವಾಗಬಾರದು.ಗ್ರಂಥದ ವಾಚನದಿಂದ ಅಥವಾ ಶ್ರವಣದಿಂದ ನಮ್ಮ ಶಂಕಾ ಸಂದೇಹಗಳ ನಿವಾರಣೆ ಆಗಬೇಕು. ಇಂಥ ಪ್ರಕಾರದ ಯಾವ ಅದ್ವೈತದ ಗ್ರಂಥಗಳು ಇರುವವೋ ಅಂಥವನ್ನು ಓದಬೇಕು :— ಶ್ರವಣ ಹೇಗೆ ಮಾಡಬೇಕು? ಅದನ್ನೆಲ್ಲಚನ್ನಾಗಿ ಹೇಳುವೆನು. ಶ್ರೋತಾರನು ಏಕಾಗ್ರ ಮನದಿಂದ ಲಕ್ಷ್ಯಗೊಟ್ಟು ಕೇಳಬೇಕು. (೧) ಒಂದೊಂದು ಪ್ರವಚನಗಳು ಹೇಗಿರುವವೆಂದರೆ ಅವನ್ನು ಕೇಳಿದ ಮೇಲೆ ಇದ್ದಂಥ ಸಮಾಧಾನವು ಭಂಗವಾಗುವದು. ಮನಸ್ಸಿನಲ್ಲಿ ಆದ ನಿಶ್ಚಯ ಕೂಡಲೇ ಹಾರಿ ಹೋಗುವದು. (೨) ಇಂಥ ಭ್ರಾಮಕ ಮತ್ತು ಹಾನಿಕಾರಕ ಭಾಷಣ ಪ್ರವಚನಗಳನ್ನು ಸಂಪೂರ್ಣ ತ್ಯಜಿಸಬೇಕು. ಯಾಕಂದರೆ ಅಂಥದರಲ್ಲಿ ನಿಶ್ಚಯಾತ್ಮಕ ನಿರ್ಣಯದ ಅಭಾವವಿರುವದು. (೩) ನಿಮಗೆ ಒಂದು ಮೋಜಿನ ವಿಷಯ [ಗಮ್ಮತ್] ತಿಳಿಸುವೆ. ಒಂದು ಗ್ರಂಥ ಓದಿದನಂತರ ಮನಸ್ಸಿನಲ್ಲಿ ಅದರಲ್ಲಿಯ ವಿಷಯ ನಿರೂ-ಪಣೆಯ ಬಗ್ಗೆ ಅಗದೀ ಸಮಾಧಾನದ ನಿಶ್ಚಯವಾಗುತ್ತದೆ. ಆದರೆ ಅದೇ ವಿಷಯದ ಮೇಲೆ ಬರೆದಂಥ ಇನ್ನೊಂದು ಗ್ರಂಥ ಓದಿದ ಕೂಡಲೇ ಮೊದಲಿನ ನಿಶ್ಚಯ ಹಾರಿ ಹೋಗುತ್ತದೆ. ಯಾಕಂದರೆ ಅದು ನಿಜವೇ? ಇದು ನಿಜವೇ? ಎಂಬ ಬಗ್ಗೆ ಸಂಶಯ ಉಂಟಾಗುವದು. ಈ ರೀತಿಯಿಂದ ಕೊನೆಯ ವರೆಗೂ ಅನಿಶ್ಚಿತತನವು ಕಾಯಂ ಉಳಿಯುವದು (೪) ಆದ್ದರಿಂದ ಯಾವ ಗ್ರಂಥಗಳಿಂದ ಸಂಶಯವು ಕಾಯಂ ನಾಶವಾಗಿ ಹೋಗುವದೋ ಶಂಕಾ ಸಂದೇಹಗಳು ನಿವಾರಣೆ ಹೊಂದುವವೋ. ಅಂಥ ಪರಮಾರ್ಥ ತಿಳಿಸಿಕೊಡುವ ಮತ್ತು ಅನುಭವ ಕೊಡುವಂಥ [ಪರಮಾರ್ಥಪರ ಇರುವ] ಅದ್ವೈತ ಗ್ರಂಥಗಳನ್ನು ತಪ್ಪದೇ ಶ್ರವಣ ಮಾಡಬೇಕು. (೫) ಪರಮಾರ್ಥದ ತಳಮಳ ಯಾರಿಗೆ ಇರುವದೋ ಹಾಗೂ ಮೋಕ್ಷಾಪೇಕ್ಷೆ ಬಲವತ್ತರ-ವಾಗಿರುವದೋ ಅಂಥವರು ಪರಮಾರ್ಥದ ಮಾರ್ಗಹಿಡಿಯುವರು ಅವರ ಮನದಲ್ಲಿ ಅದ್ವೈತ ಗ್ರಂಥಗಳ ಬಗ್ಗೆ ನಿಜವಾದ ಪ್ರೇಮ ಉಂಟಾಗುವದು. (೬) ಈ ಅಶಾಶ್ವತ ಜಗತ್ತಿನ ಆಸಕ್ತಿಯನ್ನು ಬಿಟ್ಟು ಯಾರು ಪರಮಾರ್ಥ ಸಾಧಿಸಿಕೊಳ್ಳುವಂಥ ತಯಾರಿ ಮಾಡುವರೋ ಅಂಥವರು ಅದ್ವೈತ ಗ್ರಂಥಗಳಲ್ಲಿಯ ಆತ್ಮಾನಾತ್ಮ ವಿವೇಕವಿಷಯಓದಿ ಅದರ ಅಭ್ಯಾಸ ಮಾಡಬೇಕು.(೭) ಅದ್ವೈತವು ಖರೇ ಇರುವದು. ಆದ್ದರಿಂದ ಇದು ಬೇಕೆಂದು ಅನಿಸುವ ಸಾಧಕನ ಮುಂದೆ ದ್ವೈತದ ವಿವೇಚನೆ ಮಾಡಿದರೆ ಅವನಿಗೆ ಅದು ಅಗದೀ ಸೇರುವದಿಲ್ಲ. ಸಿಡಿಮಿಡಿಗೊಳ್ಳುವನು ಶ್ರವಣದಲ್ಲಿ ಮನಸ್ಸು ಏಕಾಗ್ರವಾಗುವದಿಲ್ಲ.(೮) ನಮಗೆ ಆಸಕ್ತಿ ಇರುವಂಥದು ಕೇಳಲಿಕ್ಕೆ ದೊರೆತರೆ ಮನುಷ್ಯನ ಅಂತಃಕರಣದಲ್ಲಿ ಸುಖದ ತೆರೆಗಳು ಏಳುವವು, ಇಲ್ಲದಿದ್ದರೆ ಗ್ರಂಥ ಕೇಳುವಾಗ ಮನಸ್ಸಿಗೆ ಬೇಸರ ಬರುವದು ತೂಕಡಿಕೆ ಬರುವದು. (೯) ಯಾರು ಯಾವ ದೇವತಾ ಉಪಾಸನೆ ಮಾಡುವರೋ ಆ ದೇವರ ಬಗೆಗೆ ಪ್ರೇಮ ಅವನ ಅಂತರ್ಯಾಮದಲ್ಲಿ ಇರುವದು. ಅವನ ಮುಂದೆ ಇತರ ದೇವತೆಗಳ ವರ್ಣನೆ ಮಾಡಿದರೆ ಅವನಿಗೆ ಸರಿ ಬರುವದಿಲ್ಲ ಬೇಸರ ತೋರುವನು. (೧೦) ಮುದ್ದಾಂ ಪ್ರಯತ್ನ ಮಾಡದೆ ತನ್ನಷ್ಟಕ್ಕೆ ತಾನೇ ಮನದಲ್ಲಿ ಉತ್ಪನ್ನವಾಗುವಂಥ ಪ್ರೀತಿಯು ಖರೇ ಪ್ರೀತಿ ಅನಿಸುವದು ನೀರು ಇಳಿಜಾರಿನ ಕಡೆಗೆ ಹೇಗೆ ಜುಳು ಜುಳು ಎಂದು ಅನಾಯಾಸವಾಗಿ ಹರಿದು ಹೋಗುತ್ತದೆಯೋ ಇದರಂತೆ ಪ್ರೀತಿಯು ಸ್ವಭಾವವಿರುವದು. (೧೧) ಆತ್ಮಜ್ಞಾನಿ ಪುರುಷನಿಗೆ ಸಾರಾಸಾರ ವಿಚಾರದಲ್ಲಿಯೇ ಖರೇ ಪ್ರೇಮವಿರುತ್ತದೆ: ಯಾರಿಗೆ ಯಾವುದರಲ್ಲಿ ಪ್ರೇಮವೋ ಅದನ್ನೇ ಅವರ ಮುಂದೆ ಇಡುವಲ್ಲಿ ಜಾಣತನ ಅಥವಾ ಗಮ್ಮತ್ತು ಇರುವದು. ಪರಮಾರ್ಥದ ಮಾರ್ಗದಲ್ಲಿ ನಡೆಯಬೇಕಾದವರಿಗೆ ಪ್ರಾಪಂಚಿಕ ಗ್ರಂಥ ಅಥವಾ ವ್ರತ ವೈಕಲ್ಯ ದಾನ ಇವುಗಳ ಫಲ ವರ್ಣನೆ ಮಾಡುವ ಗ್ರಂಥವು ನಿರುಪಯುಕ್ತ [ಕುಚಕಾಮದವು] ವೆನಿಸುವವು. ಸಾಧಕನಿಗೆ ಅದ್ವೈತದ ಗ್ರಂಥವೇ ಬೇಕೆನಿಸು-ವವು. ಆತ್ಮ ಜ್ಞಾನಿಯಾದ ಮನುಷ್ಯನಿಗೆ ಇತರ ವಿಷಯದ ಗ್ರಂಥಗಳು ಬೇಡವೆನಿಸುವವು. ಅವನಿಗೆ ಆತ್ಮಜ್ಞಾನದ ವಿಚಾರಗಳಿಂದ ಭರಪೂರ ತುಂಬಿದ ಆತ್ಮಾನಾತ್ಮ ವಿಚಾರದ ಗ್ರಂಥಗಳೇ ಬೇಕೆನಿಸುವವು [೧೨]

ಜೇಥೇ ಕುಳದೇವ್ಯಾ ಭಗವತೀ । ತೇಥೇ ಪಾಹಿಜೆ ಸಪ್ತಶತೀ ।
ಇತರ ದೇವಾಚೀ ಸ್ತುತೀ । ಕಾವಾ ನಯೆ ಸರ್ವಥಾ ॥೧೩॥

ಘೇತಾ ಅನಂತಾಚ್ಯಾ ವ್ರತಾ । ತೇಥೇ ನಲಗೆ ಭಗವದ್ಗೀತಾ।
ಸಾಧುಜನಾಸೀ ನಾತರ್ಾ । ಫಳಾಶೇಚೀ ನಾಹೀ ॥೧೪॥

ವೀರಕಂಕಣ ಘಾಲಿತಾ ನಾಕೀ । ಪರೀ ತೇ ಶೋಭಾ ಪಾವೇನಾ ಕೀ ।
ಜೇಥೀಲ ತೇಥೇ ಆಣಿಕೀ । ಕಾವಾ ನ ಯೆ ಸರ್ವಥಾ ॥೧೫॥

ನಾನಾ ಮಹಾತ್ಮೇ ಬೋಲಿಲೀ । ಜೇಥೀಲ ತೇಥೇ ವಂದ್ಯ ಜಾಲೀ ।
ವಿಪರೀತ ಕರೂನ ವಾಚಿಲೀ । ತರೀ ತೇ ವಿಲಕ್ಷಣ ॥೧೬॥

ಮಲಾರ ಮಾಹಾತ್ಮ ದ್ವಾರಕೇಸೀ । ದ್ವಾರಕಾಮಾಹಾತ್ಮ ನೇಲೇಕಾಸೀ ।
ಕಾಸೀ ಮಾಹಾತ್ಮ ವೆಂಕಟೆಸೀ । ಶೋಭಾ ನ ಪವೆ ॥೧೭॥

ಐಸೇ ಸಾಂಗತಾ ಅಸೆ ವಾಡ । ಪರೀ ಜೇಥೀಲ ತೇಥೇ ಚಿ ಗೋಡ ।
ತೈಸೀ ಜ್ಞಾನೀಯಾಸ ಚಾಡ । ಅದ್ವೈತ ಗ್ರಂಥಾಚೀ ॥೧೮॥

ಯೋಗಿಯಾ ಪುಢೇ ರಾಹಾಣ । ಪರೀಕ್ಷವಂತಾ ಪುಢೇ ಪಾಷಾಣ ।
ಪಂಡಿತಾ ಪುಢೇ ಡಫಗಾಣ । ಶೋಭಾ ನ ಪವೇ ॥೧೯॥

ವೇದಜ್ಞಾಪುಢೇ ಜತೀ । ನಿಸ್ಪೃಹಾಪುಢೇ ಫಳಶ್ರುತೀ ।
ಜ್ಞಾನಿಯಾಪುಢೇ ಪೋಥೀ । ಕೋಕ ಶಾಸ್ತ್ರಾಚೀ ॥೨೦॥

ಬ್ರಹ್ಮಚರ್ಯಾಪುಢೇ ನಾಚಣೀ । ರಾಸಕ್ರೀಡಾ ನಿರೂಪಣೀ ।
ರಾಜಹಂಸಾಪುಢೇ ಪಾಣೀ । ಠೇವಿಲೇ ಜೈಸೇ ॥೨೧॥

ತೈಸೇ ಅಂತರ್ನಿಷ್ಠಾಪುಢೇ । ಠೇವಿಲೇ ಶೃಂಘಾರಿಕ ಟಿಪಡೆ ।
ತೇಣೇ ತ್ಯಾಚೇ ಕೈಸೇ ಘಡೆ । ಸಮಾಧಾನ ॥೨೨॥

ಕೇಳಿರಿ, ಯಾರ ಮನೆತನದಲ್ಲಿ ಕುಲದೇವತೆ ದೇವಿ ಇರುವಳೋ ಅವರಿಗೆ ದೇವಿ ಉಪಾಸನೆಯು ಸಪ್ತ ಶತಿಯೇ ಬೇಕು. ಅವರಿಗೆ ದೇವಿಯ ಸ್ತುತಿಯೇ ಬೇಕು. ಅದರಲ್ಲಿಯೇ ಅವರಿಗೆ ಪ್ರೇಮ ಭಕ್ತಿ ಇರುವದು. ಇತರ ದೇವಸ್ತುತಿ ಅವರಿಗೆ ಅಷ್ಟೊಂದು ಪಸಂತ ಬೀಳುವದಿಲ್ಲ. [೧೩] ಒಬ್ಬನು ಅನಂತನ ವ್ರತವನ್ನು ಹಿಡಿದರೆ, ಅವನಿಗೆ ಆವ್ರತ ಕಾಲದಲ್ಲಿ ಭಗವದ್ಗೀತಾ ಹೇಳಿದರೆ ನಡೆಯುವದಿಲ್ಲ. ಅನಂತನ ವ್ರತವು ಸಕಾಮುದ್ದಿರುವದು. ಇಂಥದೇ ಒಂದು ಫಲ ದೊರಕಬೇಕೆಂಬ ಅಭಿಲಾಷೆಯಿಂದ ವ್ರತವನ್ನು ಮಾಡುವರು. ಅಲ್ಲಿ ಭಗವದ್ಗೀತೆಯಾದರೋ ಸರ್ವ ಫಲದ ಆಶೆ ಬಿಡಬೇಕೆಂದು ಹೇಳುವದು. ಇರಲಿ ಸಾಧು ಸಂತರ ಹತ್ತಿರ ಫಲದಾಶೆಗೆ ಎಡೆಯೇ ಇರುವದಿಲ್ಲ. [೧೪] ಕೈಯಲ್ಲಿ ಧರಿಸುವ ವೀರ ಕಂಕಣವನ್ನು ಯಾರಾದರೊಬ್ಬರು ನತ್ತಿನಂತೆ ಮೂಗಿನಲ್ಲಿ ಹಾಕಿ ಇಳಿಬಿಟ್ಟುಕೊಂಡರೆ ಅದು ಎಷ್ಟೂ ಶೋಭಿಸಲಾರದು. ಯಾವ ವಸ್ತುವಿಗೆ ಎಲ್ಲಿ ಸ್ಥಾನವಿರುವದೋ ಅಲ್ಲಿ ಅದು ಇದ್ದರೆ ಶೋಭಿಸುವದು. ಇತರ ಸ್ಥಳದಲ್ಲಿ ಅದು ಎಷ್ಟೂ ಶೋಭಿಸಲಾರದು. [೧೫] ದೇಶದಲ್ಲಿ ಅನೇಕ ತೀರ್ಥ ಕ್ಷೇತ್ರಗಳಿರುವವು. ಪ್ರತಿಯೊಂದು ತೀರ್ಥಕ್ಕೂ ಅದರ ಮಹಾತ್ಮೆ ಹೇಳಲ್ಪಟ್ಟಿರುತ್ತದೆ. ಯಾವ ತೀರ್ಥದ ಮಹಾತ್ಮೆ ಇರುವದೋ ಅದನ್ನು ಆ ತೀರ್ಥದಲ್ಲಿಯೇ ಓದಬೇಕಾಗುತ್ತದೆ. ಅಲ್ಲಿ ಅದು ವಂದ್ಯವೆಂದು ತಿಳಿಯಲಾಗುವದು. ಒಂದು ತೀರ್ಥದ ಮಹಾತ್ಮೆಯನ್ನು ಇನ್ನೊಂದು ಯಾವುದೋ ತೀರ್ಥದಲ್ಲಿ ಓದಿದರೆ ಅದು ವಿಪರೀತವಾಗಿ ವಿಲಕ್ಷಣವೆನಿಸುವದು.[೧೬] ಮಲ್ಹಾರಿ ಮಹಾತ್ಮೆಯನ್ನು ದ್ವಾರಕಾಕ್ಕೆ ಒಯ್ದರೆ, ದ್ವಾರಕಾ ಮಹಾತ್ಮೆಯನ್ನು ಕಾಶಿಗೆ ಒಯ್ದರೆ, ಮತ್ತು ಕಾಶೀ ಮಹಾತ್ಮೆಯನ್ನು ತಿರುಪತಿಯ ವೆಂಕಟೇಶನಲ್ಲಿ ಒಯ್ದರೆ ಅದು ಶೋಭಿಸುವದಿಲ್ಲ. [೧೭] ಇಂಥವುಗಳನ್ನು ಹೇಳ ಹತ್ತಿದರೆ ಅದು ತೀವ್ರ ಮುಗಿಯಲಾರದು. ತಾತ್ಪರ್ಯವೇನಂದರೆ, ಎಲ್ಲಿಯದೋ ಅದು ಅಲ್ಲಿಯೇ ಶೋಭಿಸುವದು. ಇದರಂತೆಯೇ ಜ್ಞಾನಿಯಾದ ಮನುಷ್ಯನಿಗೆ ಅದ್ವೈತ ಗ್ರಂಥಗಳಲ್ಲಿಯೇ ಪ್ರೇಮ ಹಾಗೂ ಆಸಕ್ತಿ ಇರುವದು. ಅವರಿಗೆ ಕೇವಲ ಅದ್ವೈತ ಗ್ರಂಥಗಳಷ್ಟೇ ಬೇಕೆನಿಸುವವು. [೧೮] [ಭಲತ್ಯಾ] ಯಾವನೋ ಗೊತ್ತಿಲ್ಲದವನ ಮುಂದೆ [ಭಲತೆ] ಯಾವುದೋ ಒಂದನ್ನು ಇಟ್ಟಿದ್ದಾದರೆ ಹೇಗೆ ವಿಪರೀತವಾಗುವದೆಂಬುದನ್ನು ಹೇಳುವರು;— ಯೋಗಿಯ ಮುಂದೆ ಭೂತ ಪಿಶಾಚಿಯ ಪ್ರಯೋಗ ಮಾಡಿದರೆ, ರತ್ನ ಪರೀಕ್ಷಕನಾದ ರತ್ನದ ವ್ಯಾಪಾರಿಯ ಮುಂದೆ ರತ್ನದ ಬದಲಾಗಿ ಯಾವುದೋ ಒಂದು ಕಲ್ಲನ್ನಿಟ್ಟರೆ ಅಥವಾ ವಿದ್ವಾನ ಮನುಷ್ಯನ ಮುಂದೆ ತಮಾಸೆಯ [ಡಫ್‌ಗಾಯನ] ಪದವನ್ನು ಹಾಡಿದರೆ ಅದು ಶೋಭಿಸುವದಿಲ್ಲ. [೧೯] ವೈದಿಕ ಕರ್ಮಾನುಷ್ಠಾನ ಮಾಡುವವನ ಮುಂದೆ ಒಬ್ಬ ಕರ್ಮಸನ್ಯಾಸ ಮಾಡಿದಂಥ ಸನ್ಯಾಸಿಯನ್ನು ಮುಂದೆ ತಂದು ನಿಲ್ಲಿಸಿದರೆ, ಯಾವನು ಖರೇ ನಿಸ್ಪೃಹ ಇರುವನೋ ಅವನ ಮುಂದೆ ಕರ್ಮಫಲದ ವರ್ಣನೆಯನ್ನು ಮಾಡಿದರೆ ಅಥವಾ ಒಬ್ಬ ಆತ್ಮಜ್ಞಾನಿ [ಬ್ರಹ್ಮಜ್ಞಾನಿ] ಮಹಾಪುರುಷನ ಮುಂದೆ ಕಾಮಶಾಸ್ತ್ರದ ಪುಸ್ತಕ ಇಟ್ಟಿದ್ದಾದರೆ ಅದು ಶೋಭಿಸುವದಿಲ್ಲ. [೨೦] ಒಬ್ಬ ಬ್ರಹ್ಮಚಾರಿ ಇದ್ದಾನೆಂದು ತಿಳಿಯುವಾ, ಅವನ ಮುಂದೆ ನಾಚು ನೃತ್ಯ ಮಾಡುವ ಒಬ್ಬ ಕಲಾವಂತಿಣಿ [ವೇಶ್ಯೆ]ಯನ್ನು ತಂದು ನಿಲ್ಲಿಸಿದರೆ ಅಥವಾ ನಿರ್ಗುಣ, ನಿರ್ವಿಕಾರ, ಬ್ರಹ್ಮಸ್ವರೂಪದ ವರ್ಣನೆ ಮಾಡುವಾಗ ಮಧ್ಯದಲ್ಲಿ ಶೃಂಗಾರ ಪ್ರಧಾನವಿರುವ ರಾಸಕ್ರೀಡೆಯ ಬಗ್ಗೆ ಹೇಳಲಿಕ್ಕೆ ಆರಂಭ ಮಾಡಿದರೆ, ಅಥವಾ ಒಂದು ರಾಜಹಂಸದ ಮುಂದೆ ಕೇವಲ ನೀರು ತಂದು ಇಟ್ಟರೆ, ಅದು ಹೇಗೆ ಶೋಭಿಸೀತು? ಅರ್ಥಾತ್ ಶೋಭಿಸುವದಿಲ್ಲ. (೨೧) ಇದರಂತೆ ಅಂತರಂಗದ ಸ್ವಸ್ವರೂಪದಲ್ಲಿ ಮುಳುಗಿ ಆನಂದಾನುಭವದಲ್ಲಿ ಇದ್ದ ಆತ್ಮನಿಷ್ಠನ ಮುಂದೆ ಒಂದು ಶೃಂಗಾರದಿಂದ ರಚಿತವಿರುವ, ಶೃಂಗಾರದಿಂದ ತುಂಬಿರುವ ಲಾವಣಿ ಪದದ ವಹಿ [ಟಿಪ್ಪಣ, ಜೋಪಡಾಬುಕ್ಕು]ಯನ್ನು ಇಟ್ಟರೆ ಅವನ ಮನಸ್ಸಿಗೆ ಸಮಾಧಾನ ಆಗುವದಿಲ್ಲ. [೨೨]

ರಾಯಾಸ ರಂಕಾಚೀ ಆಶಾ । ತಕ್ರ ಸಾಂಗಣೇ ಪೀಯೂಷಾ ।
ಸನ್ಯಾಶಾಸೀ ವೊವಸಾ । ಉಚಿಷ್ಟ ಚಾಂಡಾಳೀ ॥೨೩॥

ಕರ್ಮನಿಷ್ಠಾ ವಶೀಕರ್ಣ । ಪಂಚಾಕ್ಷರೀ ನಿರೂಪಣ ।
ತೇಥೆ ಭಂಗೇ ಅಂತಃಕರ್ಣ । ಸಹಜ ಚಿ ತ್ಯಾಚೇ ॥೨೪॥

ತೈಸೆ ಪಾರಮಾರ್ಥಿಕ ಜನ । ತಯಾಸ ನಸ್ತಾ ಆತ್ಮಜ್ಞಾನ ।
ಗ್ರಂಥ ವಾಚಿತಾ ಸಮಾಧಾನ । ಹೋಣಾರ ನಾಹೀ ॥೨೫॥

ಆತಾ ಅಸೋ ಹೇ ಬೋಲಣೇ । ಜಯಾಸಿ ಸ್ವಹಿತ ಕರಣೆ ।
ತೇಣೇ ಸದಾ ವಿಚರಣೇ । ಅದ್ವೈತ ಗ್ರಂಥೀ ॥೨೬॥

ಆತ್ಮಜ್ಞಾನೀ ಯೇಕಚಿತ್ತ । ತೇಣೇ ಪಾಹಾಣೇ ಅದ್ವೈತ ।
ಯೇಕಾಂತ ಸ್ಥಳೀ ನಿವಾಂತ । ಸಮಾಧಾನ ॥೨೭॥

ಬಹುತ ಪ್ರಕಾರೇ ಪಾಹಾತಾ । ಗ್ರಂಥ ನಾಹೀ ಅದ್ವೈತಾ ಪರತಾ ।
ಪರಮಾರ್ಥಾಸ ತತ್ವತಾ । ತಾರೂಚ ಕೀ ॥೨೮॥

ಇತರ ಜೆ ಪ್ರಪಂಚಿಕ । ಹಾಸ್ಯ ವಿನೋದ ನವರಸಿಕ ।
ಹಿತ ನವ್ಹೆ ತೇ ಪುಸ್ತಕ । ಪರಮಾರ್ಥಾಸೀ ॥೨೯॥

ಜೇಣೇ ಪರಮಾರ್ಥ ವಾಢೆ । ಅಂಗೀ ಅನುತಾಪ ಚಢೆ ।
ಭಕ್ತಿಸಾಧನ ಆವಡೆ । ತ್ಯಾ ನಾವ ಗ್ರಂಥ ॥೩೦॥

ಜೋ ಐಕತಾ ಚ ಗರ್ವ ಗಳೆ । ಕಾ ತೇ ಭ್ರಾಂತೀ ಚ ಮಾವಳೇ।
ನಾತರೀ ಯೇಕಸರೇ ವೊಳೆ । ಮನ ಭಗವಂತೀ ॥೩೧॥

ಜೇಣೇ ಹೋಯೆ ಉಪರತೀ । ಅವಗುಣ ಪಾಲಟತೀ ।
ಜೇಣೇ ಚುಕೆ ಅಧೋಗತೀ । ತ್ಯಾ ನಾವ ಗ್ರಂಥ ॥೩೨॥

ಜೇಣೇ ಧಾರಿಷ್ಟ ಚಢೆ । ಜೇಣೇ ಪರೋಪಕಾರ ಘಡೆ ।
ಜೇಣೇ ವಿಷಯವಾಸನಾ ಮೋಡೆ । ತ್ಯಾ ನಾವ ಗ್ರಂಥ ॥೩೩॥

ಒಬ್ಬ ಭಿಕಾರಿಯಾಗಿರುವವ್ಯಕ್ತಿಗೆ ಕ್ಷುದ್ರವಸ್ತುವಿನ ಆಶೆ ತೋರಿಸಹೋಗುವದು.ಸರಿ ಅನಿಸುವದು.ಆದರೆ ಒಬ್ಬ ರಾಜನಿಗೆ ಇಂಥ ಕ್ಷುದ್ರವಸ್ತುವಿನ ಆಮಿಷ ಆಶೆ ತೋರಿಸುವದು ಹುಚ್ಚುತನವೆನಿಸುವದು. ಅಥವಾ ಅಮೃತದ ಮುಂದೆ ಮಜ್ಜಿಗೆಯ ಸ್ತುತಿ ಮಾಡಹೋಗುವದು ಅಯೋಗ್ಯವೆನಿಸುವದು. ಅಥವಾ ಒಬ್ಬ ವೈರಾಗ್ಯ ಸಂಪನ್ನ ಮತ್ತು ಪವಿತ್ರ ಸನ್ಯಾಸಿಗೆ ಉಚ್ಚಿಷ್ಟ ಚಾಂಡಿಳಿ ವ್ರತ ಅಂದರೆ ಕ್ಷುದ್ರ ದೇವತೆ, ಅಥವಾ ಎಂಜಲ ನೈವೇದ್ಯ ದೇವತೆಯ ವ್ರತಗಳಿಗೆ ಉಷ್ಟಾ ಜಂಡಾಳಿ ವ್ರತ ಅನ್ನುವರು. ಇದನ್ನು ಮಾಡಲಿಕ್ಕೆ ಆಗ್ರಹ ಮಾಡುವದು ಶೋಭಿಸುವದಿಲ್ಲ. ಉಷ್ಟೀ ಚಂಡಾಳೀ ಹೆಸರಿನ ಅಗದೀ ಹಲಕಾ ಪ್ರತಿಯ ದೇವತೆ ಇದೆ, ಅವಳ ವ್ರತ ಹಿಡಿಯುವ ಪ್ರಕಾರ ಹೀಗಿರುವದು. ಎರಡು ಊಟದ ಮಧ್ಯದಲ್ಲಿಯ ಕಾಲದಲ್ಲಿ ವ್ರತ ಆಚರಿಸುವವನ ಬಾಯಿಯಲ್ಲಿ ರೊಟ್ಟಿಯ ತುಣಕನ್ನು [ಸತತ] ಇಡುವದು. ಮತ್ತು ಇವಳ ಮಂತ್ರದ ಜಪ ಮಾಡುವದು. [೨೩] ಒಬ್ಬ ವೇದ ವಿಹಿತ ಕರ್ಮಾನುಷ್ಠಾನ ಮಾಡುವ ಪವಿತ್ರ ಮನುಷ್ಯನಿಗೆ ವಶೀಕರಣದ ಪ್ರಯೋಗ ಮಾಡಲು ಹೇಳಿದರೆ ಅಥವಾ ಜಾರಣ, ಮಾರಣ, ಉಚ್ಚಾಟನ [ಮಾಟ ಮದ್ದು, ವಶೀಕರಣ] ಇತ್ಯಾದಿ ಹೀನ ಮಂತ್ರದ ಬೆನ್ನುಹತ್ತಿದ ಪಂಚಾಕ್ಷರಿ ಮಾಂತ್ರಿಕನಿಗೆ ಬ್ರಹ್ಮ ಹಾಗೂ ಮಾಯೆಯ ನಿರೂಪಣ ಹೇಳಿದ್ದಾದರೆ ಅವರ ಅಂತಃಕರಣವು ಬೇಸರಗೊಳ್ಳದೆ ಇರಲಾರದು. [೨೪] ಇದರಂತೆ ಖರೆ ಪರಮಾರ್ಥದಲ್ಲಿ ಪ್ರೀತಿ ಯಾರಿಗೆ ಇರುವದೋ ಅಂಥ ಸಾಧಕ ವೃತ್ತಿಯ ಮನುಷ್ಯನಿಗೆ ಆತ್ಮಜ್ಞಾನವೇ ಪಸಂತ ಬೀಳುವದು. ಈ ವಿಷಯವಿಲ್ಲದ ಗ್ರಂಥ ಓದಿದರೆ ಅವನಿಗೆ ಸಮಾಧಾನವಾಗುವದಿಲ್ಲ.[೨೫] ಸಾಧಕ ವೃತ್ತಿಯ ಮನುಷ್ಯನಿಗೆ ಗ್ರಂಥಗಳು ಉಪಯೋಗ ಬೀಳುವವೆಂಬಲ್ಲಿ ಸಂಶಯವಿಲ್ಲ. ಆದರೆ ಇವರಿಗೆ ಉಪಯೋಗ ಬೀಳುವ ಗ್ರಂಥಗಳ ಲಕ್ಷಣಗಳು ಎಂಥವು? ಇದರ ಬಗೆಗೆ ಹೇಳುತ್ತಾರೆ. ಆತ್ಮಜ್ಞಾನದ ಸುಸ್ಪಷ್ಟ ಮತ್ತು ಸರಳ ವರ್ಣನೆ ಮಾಡಿರುವ ಮತ್ತು ಸಾಧನ ಮಾರ್ಗದ ಬಗ್ಗೆ ಯಥೋಚಿತ ಸುಸ್ಪಷ್ಟ ವರ್ಣನೆ ಇರುವ ಗ್ರಂಥವೇ ಪರಮಾರ್ಥಿ ಮನುಷ್ಯನಿಗೆ ಉಪಯೋಗ ಬೀಳುವವು. ಈಗ ಹೇಳುವದು ಸಾಕು. ಆತ್ಮ ಕಲ್ಯಾಣ ಸಾಧಿಸಿಕೊಳ್ಳುವದು ಯಾರಿಗೆ ಬೇಕಾಗಿರುವದೋ ಅವರು ನಿರಂತರ ಅದ್ವೈತ ಗ್ರಂಥದ ಪರಿಶೀಲನೆಯನ್ನು ಮಾಡುತ್ತಲೇ ಇರಬೇಕು. (೨೬) ಆತ್ಮಜ್ಞಾನದ ಸಾಧನೆ ಮಾಡುವಂಥ ಸಾಧಕನು (ಏಕಾಗ್ರತೆಯುಳ್ಳ ಸಾಧಕರು) ಶಾಂತವಾದ ಏಕಾಂತ ಸ್ಥಳಕ್ಕೆ ಹೋಗಬೇಕು. ಅಲ್ಲಿ ಅಗದೀ ಏಕಾಗ್ರಮನದಿಂದ ಅದ್ವೈತ ಗ್ರಂಥವನ್ನು ಸಾವಧಾನದಿಂದ ಅಭ್ಯಾಸ ಮಾಡಬೇಕು. ಹೀಗೆ ಮಾಡುವದರಿಂದ ಸಾಧಕನಿಗೆ ಸಮಾಧಾನವಾಗುವದು. (೨೭) ಯಾವ ರೀತಿಯಿಂದ ವಿಚಾರ ಮಾಡಿ ನೋಡಿದರೂ ಅದ್ವೈತ ಗ್ರಂಥದಂಥ ಬೇರೆ ಗ್ರಂಥಗಳೇ ಇಲ್ಲವೆಂಬ ಅನುಭವ ಬರುವದು. ಇಂಥ ಗ್ರಂಥಗಳು ಪರಮಾರ್ಥ ಮಾರ್ಗ (ಪಥ)ದಲ್ಲಿ ಹಡಗದಂತೆ ಉಪಯೋಗ ಬೀಳುವವು. (೨೮) ಇತರ ಪ್ರಾಪಂಚಿಕ ವಿಷಯದ ಮೇಲಿನ ಮತ್ತು ಹಾಸ್ಯ ವಿನೋದ, ಶೃಂಗಾರ ಇತ್ಯಾದಿ ನವರಸಗಳಿಂದ ತುಂಬಿದ ಗ್ರಂಥಗಳು ಚನ್ನಾಗಿರಬಹುದು.ಆದರೆ ಪರಮಾರ್ಥ ಮಾರ್ಗದೊಳಗೆ ಇವುಗಳ ಉಪಯೋಗ ಆಗುವದಿಲ್ಲ. ಇವುಗಳ ಪರಿಶೀಲನೆಯಿಂದ ಸಾಧಕನಿಗೆ ಸಾಧನದಲ್ಲಿ ಮಾರ್ಗ ದರ್ಶನವಾಗುವದಿಲ್ಲ. (೨೯) ಓದುವದರಿಂದ ಸಾಧಕನ ಪರಮಾರ್ಥ ಬೆಳೆಯಬೇಕು. ಅವನಲ್ಲಿ ಅನುತಾಪ ಉತ್ಪನ್ನವಾಗಿ ಮನವು ಶುದ್ಧವಾಗಬೇಕು. ಅವನಿಗೆ ಭಕ್ತಿಯ ಸಾಧನೆ ಮಾಡಬೇಕು ಅನ್ನುವ ಇಚ್ಛೆ ತೀವ್ರವಾಗಬೇಕು. ಅಥವಾ ಓದುವದರಿಂದ ಮನವು ಒಮ್ಮಿಂದೊಮ್ಮೆಲೇ ಭಗವಂತನ ಕಡೆಗೆ ಹರಿಯಬೇಕು. ಇಂಥ ಗ್ರಂಥಗಳೇ ಸದ್‌ಗ್ರಂಥಗಳೆಂದು ಅನ್ನಲಿಕ್ಕೆ ಯೋಗ್ಯವೆನಿಸುವವು. (೩೦) ಅದನ್ನು ಕೇಳುವದರಿಂದ ಮನುಷ್ಯನ ಅಭಿಮಾನ ಇಲ್ಲದಂತಾಗುವದು. ಅವನ ಭ್ರಮೆ ನಾಶವಾಗುವದು. ಅಥವಾ ಅದನ್ನು ಓದಿದರೆ ಮನವು ತತ್‌ಕ್ಷಣವೇ ಭಗವಂತನ ಕಡೆಗೆ ತಿರುಗುವದು. ಇಂಥ ಗ್ರಂಥಗಳೇ ನಿಜವಾದ ಗ್ರಂಥಗಳಾಗಿರುವವು. (೩೧) ಇದರ ಪರಿಶೀಲನೆಯಿಂದ ಮನುಷ್ಯನಲ್ಲಿ ವಿರಕ್ತಿ ಹುಟ್ಟುವದು. ಇವನ ದೋಷಗಳು ಸುಧಾರಿಸುವವು. ಮತ್ತು ಅಧೋಗತಿಯು ತಪ್ಪುತ್ತದೆ. ಇಂಥ ಗ್ರಂಥವೇ ನಿಜವಾದ ಪರಮಾರ್ಥ ಗ್ರಂಥವು (೩೨) ಇದರ ಅಭ್ಯಾಸ ಮಾಡಿದ್ದಾದರೆ ಮನುಷ್ಯನಲ್ಲಿ ಧೈರ್ಯ ಉತ್ಪನ್ನವಾಗುವದು. ಇವನಿಗೆ ಪರೋಪಕಾರ ಮಾಡಬೇಕೆಂಬ ಸದ್ಬುದ್ಧಿ ಆಗುವದು. ಮತ್ತು ಇದರ ವಾಚನದಿಂದ ದೇಹದಿಂದ ಸುಖಪಡೆಯಬೇಕೆಂಬ ಇಚ್ಛೆ ನಾಶವಾಗುವದು. ಅಂತೂ ಇಂಥ ಗ್ರಂಥಗಳೇ ನಿಜವಾದ ಗ್ರಂಥಗಳು.(೩೩)

ಜೇಣೆ ಪರತ್ರ ಸಾಧನ। ಜೇಣೇ ಗ್ರಂಥೇ ಹೋಯೆ ಜ್ಞಾನ।
ಜೇಣೆ ಹೊಈಜೆ ಪಾವನ। ಯಾ ನಾವ ಗ್ರಂಥ ॥೩೪॥

ಗ್ರಂಥ ಬಹುತ ಅಸತೀ। ನಾನಾ ವಿಧಾನೇ ಫಳಶ್ರುತೀ।
ಜೇಥೆ ನುಪಜೆ ವಿರಕ್ತೀ ಭಕ್ತೀ। ತೋ ಗ್ರಂಥ ಚಿ ನವ್ಹೆ ॥೩೫॥

ಮೋಕ್ಷೇವಿಣ ಫಳಶ್ರುತೀ। ತೇ ದುರಾಶೇಚೀ ಪೋಥೀ।
ಏಕತಾ ಏಕತಾ ಪುಢತೀ। ದುರಾಶಾ ಚಿ ವಾಢೇ ॥೩೬॥

ಶ್ರವಣೇ ಲೋಭ ಉಪಜೇಲ ಜೇಥೇ। ವಿವೇಕ ಕೈಚಾ ಅಸೇಲ ತೇಥೇ।
ಬೈಸಲೀ ದುರಾಶೇಚೀ ಭೂತೇ। ತಯಾ ಅಧೋಗತೀ ॥೩೭॥

ಏಕೋನಿ ಚ ಫಳಶ್ರುತೀ। ಪುಢೇ ತರೀ ಪಾವೋನ ಮ್ಹಣತೀ।
ತಯಾ ಜನ್ಮ ಅಧೋಗತೀ। ಸಹಜ ಚಿ ಜಾಲೀ ॥೩೮॥

ನಾನಾ ಫಳೇ ಪಕ್ಷೀ ಖಾತೀ। ತೇಣೇ ಚಿ ತಯಾ ಹೋಯ ತೃಪ್ತಿ।
ಪರೀ ತ್ಯಾ ಚಕೋರಾಚೆ ಚಿತ್ತೀ। ಅಮೃತ ವಸೆ ॥೩೯॥

ತೈಸೆ ಸಂಸಾರೀ ಮನುಷ್ಯ। ಪಾಹೆ ಸಂಸಾರಾಚೀ ವಾಸ।
ಪರೀ ತೆ ಭಗವಂತಾಚೆ ಅಂಶ। ಭಗವಂತ ಚಿ ಇಚ್ಛಿತೀ ॥೪೦॥

ಜ್ಞಾನಿಯಾಸ ಪಾಹಿಜೆ ಜ್ಞಾನ। ಭಜಕಾಸ ಪಾಹಿಜೆ ಭಜನ।
ಸಾಧಕಾಸ ಪಾಹಿಜೆ ಸಾಧನ। ಇಚ್ಛೆಸಾರಿಖೇ ॥೪೧॥

ಇದನ್ನು ಓದಿದ ಮನುಷ್ಯರಿಗೆ ಪರಮಾರ್ಥ ಸಾಧನೆಯ ಗುಟ್ಟು ತಿಳಿಯುವದು. ಇದರ ನಿತ್ಯ ಸಹವಾಸ ದಿಂದ ಸಾಧಕನಿಗೆ ಆತ್ಮಜ್ಞಾನ ಪ್ರಾಪ್ತವಾಗುವದು, ಮತ್ತು ಇದರಿಂದ ಮನುಷ್ಯ ಕೃತಕೃತ್ಯನಾಗುವನು. ಇಂಥ ಗ್ರಂಥವೇ ಖರೇ ಅರ್ಥದಲ್ಲಿ ಗ್ರಂಥವೆಂದು ಅನಿಸಿಕೊಳ್ಳುವದು. [೩೪] ಮಾನವ ಜೀವನದಲ್ಲಿಯ ಸರ್ವ ಶ್ರೇಷ್ಠ ಮೌಲ್ಯ ಯಾವುದು ? ಮತ್ತು ಇದನ್ನು ಸಾಧಿಸುವದು ಅಥವಾ ಅನುಭವ ಹೊಂದುವ ಮಾರ್ಗ ಯಾವುದು ? ಈ ಎರಡು ಪ್ರಕಾರಗಳ ಬಗ್ಗೆ ಪದ್ಧತಿಶೀರವಾಗಿ ಹೇಳುವದೇ ಖರೇ ವಾಙ್ಮಯದ ಕಾರ್ಯವಿರುವದೆಂದು ಶ್ರೀ ಸಮರ್ಥರ ಮತವಿರುವದು. ಈ ಪೃಥ್ವಿಯ ಮೇಲೆ ಶೋಭಿಸುವ [ಪ್ರಕಾಶಿಸುವ] ಜೀವನವು ಹೇಗೆ ಇರುವದು ಇದನ್ನಷ್ಟೇ ಚಿತ್ರಿಸುವ [ಬರೆಯುವ] ಕಾರ್ಯವು ಖರೇ ವಾಙ್ಮಯದ ಕೆಲಸವಲ್ಲ. ವಾಙ್ಮಯದಲ್ಲಿ ಮನುಷ್ಯನ ಅಂತರಂಗದಲ್ಲಿ ಬದಲಾವಣೆ ತಂದು ಯೋಗ್ಯ ಮಾರ್ಗದಲ್ಲಿ ಸಾಗುವಂತೆ ಮಾಡುವ ಸಾಮರ್ಥ್ಯವಿರಬೇಕು. ಮನುಷ್ಯನನ್ನು ಆತ್ಮಜ್ಞಾನದವರೆಗೂ ತಂದು ಮುಟ್ಟಿಸುವ ಶಕ್ತಿಯು ಗ್ರಂಥದಲ್ಲಿರಬೇಕು. ಇದು ಯಾವುದರಲ್ಲಿ ಇಲ್ಲವೋ ಅದಕ್ಕೆ ಗ್ರಂಥವೆನ್ನುವದು ಕೇವಲ ನಾಮಮಾತ್ರಕ್ಕಾಗಿ:- ಹಿಂದಿನ ಕಾಲದಿಂದಲೂ ಬಹಳಷ್ಟು ಗ್ರಂಥಗಳು ಇರುತ್ತವೆ. ಮತ್ತು ಈಗಲೂ ಇರುವವು. ಅವುಗಳಲ್ಲಿ ಅನೇಕ ಕರ್ಮಾನುಷ್ಠಾನದವು ವ್ರತ ವೈಕಲ್ಯ ಮತ್ತು ಇವುಗಳ ಫಲ ಹೇಳಿದಂಥವು ಇರುವವು. ಆದರೆ ಯಾವ ಗ್ರಂಥಗಳ ಅಭ್ಯಾಸದಿಂದ ವಿರಕ್ತಿ ಹುಟ್ಟಿ ಮನವು ಭಕ್ತಿಯ ಕಡೆಗೆ ಒಲೆಯುವದಿಲ್ಲವೋ ಅಂಥದಕ್ಕೆ ಗ್ರಂಥ ಅನ್ನಲಿಕ್ಕೆ ಬರುವದಿಲ್ಲ. [೩೫] ಮೋಕ್ಷದ ಮಾರ್ಗವನ್ನು ತೋರಿಸದೆ ಕೇವಲ ಫಲ, ಪುಣ್ಯದ ವರ್ಣನೆ ಇರುವಂಥ ಗ್ರಂಥವು [ಪೋಥಿ ಪುಸ್ತಕ] ಯಾವುದಿದ್ದರೂ ಅದು ಅಶುಭ ವಾಸನೆ (ಅಹಂ ತನದಿಂದ) ಉಂಟು ಮಾಡುವಂಥ, ಬಯಕೆ - ಇಚ್ಛೆ - ನಿರ್ಮಾಣ ಮಾಡುವಂಥದಿರುವದರಿಂದ, ಅಂಥದು ತಾಜ್ಯವೇ ಸರಿ. ಇಂಥದನ್ನು ಕೇಳುವದರಿಂದ ಶ್ರೋತಾನ ವಾಸನೆ ಪ್ರಾಪಂಚಿಕ ವಾಸನೆ ಬೆಳೆಯುತ್ತ ಹೋಗುವವು. (೩೬) ಇಂಥ ಗ್ರಂಥ ಶ್ರವಣದಿಂದ ಪ್ರಪಂಚದಲ್ಲಿ ಲೋಭವೇ ಬೆಳೆಯುವದು. ಇಂಥ ಸ್ಥಳದಲ್ಲಿ ಆತ್ಮಾನಾತ್ಮ ವಿವೇಕ ವಿಚಾರ ಹೇಗೆ ಸಿಗಬಹುದು? ಇಂಥದನ್ನು ಓದುವವನ ಕುತ್ತಿಗೆಯ ಮೇಲೆ ವಾಸನಾ ಭೂತವೇ ಕುಳಿತಿದೆ. ಅಂದಮೇಲೆ ಅವನಿಗೆ ಅಧೋಗತಿಯ ಪ್ರಾಪ್ತಿಯು ಕಟ್ಟಿಟ್ಟ ಬುತ್ತಿಯೇ ಆಗಿರುವದೆಂಬುದು ಅಗದಿ ನಿಶ್ಚಿತವಾದದ್ದು ಇರುವದು. (೩೭) ಸಕಾಮ ಗ್ರಂಥಗಳಲ್ಲಿ ಹೇಳಿದ ಫಲವ ವಿಷಯ ಕೇಳಿ ಸಕಾಮ ಮನುಷ್ಯನಿಗೆ ಫಲವು ಈ ಜನ್ಮದಲ್ಲಿ ಸಿಗದಿದ್ದರೂ ಮುಂದಿನ ಜನ್ಮದಲ್ಲಿ ಸಿಕ್ಕೇ ಸಿಗುವದು ಎಂಬ ಭಾವನೆಯಿಂದಾಗಿ ಅವನು ಪುನಃ ಜನ್ಮ ಪಡೆಯುವ ವಾಸನಾದ ಅಧೋಗತಿಯನ್ನು ಪಥಕರಿಸಬೇಕಾಗುವದು. ತನ್ನ ಅಧೋಗತಿಯ ತಯಾರಿ ತಾನೇ ಆಗಾವ ಮಾಡಿ ಇಟ್ಟುಕೊಂಡಂತಾಯಿತು. (೩೮) ಇತರ ಪಕ್ಷಿಗಳು ಅನೇಕ ಪ್ರಕಾರದ ಫಲಗಳನ್ನು ತಿಂದು ತೃಪ್ತಿ ಹೊಂದುವವು. ಆದರೆ ಚಕೋರ ಪಕ್ಷಿ ಮಾತ್ರ ಮನದಲ್ಲಿ ಅಮೃತವೇ ಬೇಕೆಂಬ ಹಟವನ್ನು ಹಿಡಿದು ಕೂಡುತ್ತದೆ. (೩೯) ಇದರಂತೆಯೇ ಸಂಸಾರದಲ್ಲಿ ಮಗ್ನರಾದ ಜನರು ಸಂಸಾರಿಕ ವಾಸನಾ ಹಿಡಿದೇ ಕೂಡುವರು. ಆದರೆ ದೈವೀ ಸಂಪತ್ತಿನಿಂದ ಸಂಪನ್ನರಾದವರು-ಭಗವಂತನ ಮೇಲೆ ಖರೇ ಪ್ರೇಮ ಮಾಡುವಂಥ ಪುರುಷರು ಮಾತ್ರ ಭಗವಂತನ ಅಪೇಕ್ಷೆಯ ಹಟವನ್ನೇ ಹಿಡಿದು ಕೂಡುವರು. ಇವರ ವಾಸನಾ ಒಬ್ಬನೇ ಒಬ್ಬ ಭಗವಂತನ ಹೊರತಾಗಿ ಇನ್ನಾವುದರ ಮೇಲೂ ಹೋಗುವದಿಲ್ಲ. (೪೦) ಸಮಾಜದಲ್ಲಿ ಎಷ್ಟೆಷ್ಟೋ ಜನರು ಇರುವರು. ಅವರಲ್ಲಿ ಬಹಳಷ್ಟು ಜನ ತಮೋಗುಣಗಳಿರುವರು. ಇವರಿಗಿಂತ ಕಡಿಮೆ ಪ್ರಮಾಣದಲ್ಲಿ ರಜೋ ಗುಣಗಳಿರುವರು. ಮತ್ತು ಇವರಿಗೀತಲೂ ಕಡಿಮೆ ಸತ್ವಗುಣಗಳಿರುವರು. ಈ ಸತ್ವಗುಣ ಜನರಲ್ಲಿಯೂ ಸಹ ಕೇವಲ ಶುದ್ಧ ಭಗವಂತನ ಮೇಲೆ ಪ್ರೇಮ-ವಿರುವಂಥವರು ಎಲ್ಲಕ್ಕಿಂತ ಕಡಿಮೆ ಇರುವರು. ಇಂಥವರಿಗಷ್ಟೇ ಖರೇ ಪರಮಾರ್ಥ ಸಾಧಿಸಬೇಕೆನ್ನುವ ಇಚ್ಛೆ-ಹೌಸು ಇರುವದು. ಅಂತೆಯೇ ಇವರಿಗೆ ಆತ್ಮಜ್ಞಾನದ ಪ್ರತಿಪಾದನ ಮಾಡುವ ಅದ್ವೈತ ಗ್ರಂಥಗಳ ಮೇಲೆ ಅಗದೀ ಪ್ರೇಮವಿರುವದು. ಇನ್ನುಳಿದವರಿಗೆ ಇತರ ವಿಷಯಗಳ ಕಡೆಗೆ ಒಲವು ಇರುವದು. ಜ್ಞಾನ ಮಾರ್ಗಿಯಾಗಿರುವವನಿಗೆ ಜ್ಞಾನದಲ್ಲಿಯೇ ಅವನಿಗೆ ಪ್ರೇಮವಿರುವದು. ಭಕ್ತನಿಗೆ ಭಜನೆಯಲ್ಲಿ ಪ್ರೇಮವಿರುವದು. ಸಾಧಕನಿಗೆ ಮನ ಒಪ್ಪುವಂತೆ ಸಾಧನವಾಗಬೇಕೆಂಬುವಲ್ಲಿ ಪ್ರೇಮವಿರುವದು (೪೧)

ಪರಮಾರ್ಥ್ಯಾಸ ಪರಮಾರ್ಥ । ಸ್ವಾರ್ಥ್ಯಾಸ ಪಾಹಿಜೆ ಸ್ವಾರ್ಥ ।
ಕೃಪಣಾಸ ಪಾಹಿಜೆ ಅರ್ಥ । ಮನಾಪಾಸುನೀ ॥೪೨॥
ಯೋಗಿಯಾಸ ಪಾಹಿಜೆ ಯೋಗ । ಭೋಗಿಯಾಸ ಪಾಹಿಜೆ ಭೋಗ ।
ರೋಗಿಯಾಸ ಪಾಹಿಜೆ ರೋಗ । ಹರ್ತಿ ಮಾತ್ರಾ ॥೪೩॥
ಕವೀಸ ಪಾಹಿಜೆ ಪ್ರಬಂದ । ತಾರ್ಕಿಕಾಸ ತರ್ಕವಾದ ।
ಭಾವಿಕಾಸ ಸಂವಾದ । ಗೋಡ ವಾಟೆ ॥೪೪॥
ಪಂಡಿತಾಸ ಪಾಹಿಜೆ ವಿತ್ಪತ್ತೀ । ವಿದ್ವಾಂಸಾಸ ಅಧೇನ ಪ್ರೀತೀ ।
ಕಳಾವಂತಾ ಆವಡತೀ । ನಾನಾ ಕಳಾ ॥೪೫॥
ಹರಿದಾಸಾ ಆವಡೆ ಕೀರ್ತನ । ಸುಚಿಷ್ಮಂತಾ ಸಂಧ್ಯಾಸ್ನಾನ ।
ಕರ್ಮನಿಷ್ಠಾ ವಿಧಿವಿಧಾನ । ಪಾಹಿಜೆ ತೇ ॥೪೬॥
ಪ್ರೇಮಳಾಸ ಪಾಹಿಜೆ ಕರುಣಾ । ದಕ್ಷತಾ ಪಾಹಿಜೆ ವಿಚಕ್ಷಣಾ ।
ಚಾತುರ್ಯ ಪಾಹೆ ಶಾಹಾಣಾ । ಆದರೇಸೀ ॥೪೭॥
ಭಕ್ತ ಪಾಹೆ ಮೂರ್ತಿಧ್ಯಾನ । ಸಂಗೀತ ಪಾಹೆ ತಾಳಜ್ಞಾನ ।
ರಾಗಜ್ಞಾನೀ ತಾನಮಾನ । ಮೂರ್ಛನಾ ಪಾಹೆ ॥೪೮॥
ಯೋಗಾಭ್ಯಾಸೀ ಪಿಂಡಜ್ಞಾನ । ತತ್ವಜ್ಞಾಸಿ ತತ್ವಜ್ಞಾನ ।
ನಾಡಿಜ್ಞಾನೀ ಮಾತ್ರಾಜ್ಞಾನ । ಪಾಹಾತಸೆ ॥೪೯॥
ಕಾಮಿಕ ಪಾಹೆ ಕೋಕಶಾಸ್ತ್ರ । ಚೇಟಕೀ ಪಾಹೆ ಚೇಟಕಮಂತ್ರ ।
ಯಂತ್ರೀ ಪಾಹೆ ನಾನಾ ಯಂತ್ರ । ಆದರೇಸೀ ॥೫೦॥
ಟವಾಳಾ ಆವಡೆ ವಿನೋದ । ಉನ್ಮತ್ತಾಸ ನಾನಾ ಛಂದ ।
ತಾಮಸಾಸ ಅಪ್ರಮಾದ । ಗೋಡ ವಾಟೆ ॥೫೧॥
ಮೂರ್ಖ ಹೋಯೆ ನಾದಲುಬ್ಧೀ । ನಿಂದಕ ಪಾಹೆ ಉಣೀ ಸಂಧೀ ।
ಪಾಪೀ ಪಾಹೆ ಪಾಪಬುದ್ಧಿ । ಲಾಊನ ಅಂಗೀ ॥೫೨॥
ಯೇಕಾ ಪಾಹಿಜೆ ರಸಾಳ । ಯೇಕಾ ಪಾಹಿಜೆ ಪಾಲ್ಹಾಳ ।
ಯೇಕಾ ಪಾಹಿಜೆ ಕೇವಳ । ಸಾಬಡೀ ಭಕ್ತೀ ॥೫೩॥
ಆಗಮೀ ಪಾಹೆ ಆಗಮ । ಶೂರ ಪಾಹೆ ಸಂಗ್ರಾಮ ।
ಯೇಕ ಪಾಹಾತೀ ನಾನಾ ಧರ್ಮ । ಇಚ್ಛೆ ಸಾರಿಖೆ ॥೫೪॥
ಮುಕ್ತ ಪಾಹೆ ಮುಕ್ತಲೀಳಾ । ಸರ್ವ ಪಾಹೆ ಸರ್ವಕಳಾ ।
ಜೋತಿಷೀ ಭವಿಷ್ಯ ಪಿಂಗಳಾ । ವರ್ಣೂ ಪಾಹೆ ॥೫೫॥

ಪರಮಾರ್ಥಿ ಇದ್ದವನಿಗೆ ಪರಮಾರ್ಥದಲ್ಲಿ ಪ್ರೇಮವಿರುವದು–ಸ್ವಾರ್ಥಿ ಮನುಷ್ಯನಿಗೆ ತನ್ನ ಸ್ವಾರ್ಥ-ವೊಂದೇ ಬೇಕಾದದ್ದು ಕೃಪಣನಿಗೆ ದ್ರವ್ಯದಲ್ಲಿಯೇ ಪ್ರೀತಿ. (೪೨) ಯೋಗಿಗೆ ಯೋಗವೇ ಪ್ರೀತಿಯದು. ಭೋಗಿಯಾದ ವಿಷಯಾಸಕ್ತ ಪುರುಷನಿಗೆ ಭೋಗದಲ್ಲಿಯೇ ಪ್ರೀತಿ. ಅದೇ ರೋಗಿ ಮನುಷ್ಯನಿಗೆ ರೋಗ ಹರಣಮಾಡುವ ಮಾತ್ರೆಗಳ ಮೇಲೆ ಪ್ರೀತಿ (೪೩) ಕವಿಗೆ ಕಾವ್ಯವೇ ಪ್ರೇಮದ್ದಾಗಿರುವದು, ತರ್ಕಶಾಸ್ತ್ರ ಪಂಡಿತನಿಗೆ ತರ್ಕ ಪ್ರಧಾನ ವಾದದಲ್ಲಿ ಪ್ರೀತಿಯು. ಶ್ರದ್ಧಾಳು ಮನುಷ್ಯನಿಗೆ ಸುಸಂವಾದ [ಪ್ರವಚನ. ನಿರೂಪಣ] ದಲ್ಲಿಯೇ ಪ್ರಿತಿಯು. [೪೪] ವಿದ್ವಾನನಿಗೆ ವಿದ್ವತ್ ವಿಷಯದಲ್ಲಿಯೇ ಪ್ರೇಮವು. ಅಭ್ಯಾಸಿ ಮನುಷ್ಯನಿಗೆ ಅಧ್ಯಯನದಲ್ಲಿಯೇ ಆಸಕ್ತಿ ಇರುವದು ಕಲಾವಂತನಿಗೆ ಅನೇಕ ಪ್ರಕಾರದ ಕಲೆಗಳಲ್ಲಿ ಪ್ರೇಮವು. (೪೫) ಹರಿದಾಸ [ಕೀರ್ತನಕಾರ]ನಿಗೆ ಕೀರ್ತನವೇ ಪ್ರೇಮದ್ದಾಗಿರುವದು. ಶುಚಿರ್ಭೂತ ಮನುಷ್ಯನಿಗೆ ಸ್ನಾನ ಸಂಧ್ಯೆಗಳಲ್ಲಿಯೇ ಆಸಕ್ತಿ, ಅದೇ ಕರ್ಮನಿಷ್ಠನಿಗೆ ಅನೇಕಪ್ರಕಾರದ ಕರ್ಮವಿಧಿಗಳಲ್ಲಿಯೇ ಆಸಕ್ತಿಯು. (೪೬) ಪ್ರೇಮಳ ಮನುಷ್ಯನಿಗೆ ದಯಾ, ಕರುಣಾ ಇವುಗಳಲ್ಲಿ ಪ್ರಿತಿಯು. ಚತುರ ಮನುಷ್ಯನಿಗೆ ಬುದ್ಧಿವಂತಿಕೆಯಲ್ಲಿ ಪ್ರೇಮವು, ಜಾಣ ಮನುಷ್ಯನು ವ್ಯವಹಾರ ಕೌಶಲ್ಯವನ್ನು ಆಸಕ್ತಿಯಿಂದ ನೋಡುವನು.[೪೭] ಭಕ್ತನು ಮೂರ್ತಿ ಧ್ಯಾನದಲ್ಲಿ ಪ್ರೀತಿ ಇಡುವನು. ಗಾಯನಕಾರ ತಾಳ ಜ್ಞಾನವನ್ನು ಪ್ರೇಮದಿಂದ ನೋಡುವನು, ರಾಗ ಜ್ಞಾನಿಯು ತಾನ, ಆಲಾಪ, ಧ್ವನಿ, (ರಾಗ, ತಾಳ, ಸೂರು) ಮತ್ತು ಮೂರ್ಛನ (ಸ್ವರ ಆರೋಹಣ ಮತ್ತು ಅವರೋಹಣ) ಕ್ರಮ ಇವ್ರಗಳ ಬಗೆಗೆ ಆಸಕ್ತಿ ಹೊಂದಿರುವನು. (೪೮) ಯೋಗಾಭ್ಯಾಸದ ಮನುಷ್ಯನಿಗೆ ಶರೀರ ರಚನೆಯ ಜ್ಞಾನದಲ್ಲಿ ಪ್ರೀತಿ ಇರುವದು.ತತ್ವಜ್ಞಾನದ ಅಭ್ಯಾಸಕನಿಗೆ ಭಿನ್ನತತ್ವತನದ ಬಗ್ಗೆ ಪ್ರೇಮವಿರುವದು. ನಾಡೀ ಪರೀಕ್ಷೆ ಮಾಡುವ ವೈದ್ಯನಿಗೆ ಔಷಧ ಮಾತ್ರೆಗಳಲ್ಲಿ ಪ್ರೇಮವು. (೪೯) ಶೃಂಗಾರ ಪ್ರಿಯನಿಗೆ ಕಾಮ ಶಾಸ್ತ್ರದಲ್ಲಿ ಆಸಕ್ತಿ ಇರುವದು. ಚೇಟಕ-ಮಾಟ ಮದ್ದು ಮಾಡುವವನಿಗೆ ಅದರ ಮಂತ್ರದಲ್ಲಿ ದೆವ್ವ, ಭೂತ, ಮದ್ದು, ಜಾದು-ಗೀದು ಮಾಡುವವನಿಗೆ ಅನೇಕ ಪ್ರಕಾರದ ಯಂತ್ರ, ತಂತ್ರಗಳಲ್ಲಿ ಪ್ರೇಮವಿರುವದು, ಶಕ್ತಿಯ ಉಪಾಸಕನು ಕಾಗದದ ಮೇಲೆ ಅಥವಾ ತಾಂಬ್ರದ ತಗಡಿನ ಮೇಲೆ ಕೆಲವು ಆಕೃತಿ ಬರೆಯುವನು. ನಂತರ ಅದರಲ್ಲಿ ಜಾರಣ, ಮಾರಣ, ಪ್ರಯೋಗದ ಮಂತ್ರ ಬರೆಯುವನು. ಈ ಆಕೃತಿಗೆ ಯಂತ್ರವೆನ್ನುವರು.(೫೦) ಕುಚೋದ್ಯಗಾರ[ಹಾಸ್ಯಗಾರ]ಮನುಷ್ಯನಿಗೆ ವಿನೋದದಲ್ಲಿ ಪ್ರೇಮವಿರುವದು. ಮಸ್ತಿಖೋರ [ಉನ್ಮತ್ತ]ನಿಗೆ ಅನೇಕ ವ್ಯಸನಗಳಲ್ಲಿ ಪ್ರೀತಿಯಿರುವದು. ತಮೋಗುಣಿಗೆ ನೀಚ ಕೆಲಸ ಮಾಡುವದರಲ್ಲಿಯೇ ಆಸಕ್ತಿ ಇರುವದು. (೫೧) ಮೂರ್ಖನಿಗೆ ಏನಾದರೊಂದು ನಾದದಲ್ಲಿ ವ್ಯಸನದಲ್ಲಿ ಆಸಕ್ತಿ ಇರುವದು. ನಿಂದಕನಿಗೆ ಇನ್ನೊಬ್ಬರ ಕುಂದು ಹುಡುಕುವದರಲ್ಲಿ ಆಸಕ್ತಿ ಇರುವದು. ಮತ್ತು ಪಾಪಿಯು ಇನ್ನೊಬ್ಬರ ಮೇಲೆ ಪಾಪ ಬುದ್ಧಿಯ ಆರೋಪ ಮಾಡಿ ನೋಡುವದರಲ್ಲಿ ಆಸಕ್ತಿ ಇರುವದು. [೫೨] ಒಬ್ಬನಿಗೆ ರಸಭರಿತವಾದದ್ದರಲ್ಲಿ ಆಸಕ್ತಿ ಇರುವದು. ಒಬ್ಬನಿಗೆ ರಗಳೆ [ಕಾಡುಹರಟೆ]ಯಲ್ಲಿ ಆಸಕ್ತಿ. ಒಬ್ಬನಿಗೆ ತನ್ನ ಮುಗ್ಧ ಭಕ್ತಿಯ ಮೇಲೆಯೇ ಪ್ರೇಮವಿರುವದು. [೫೩] ತಂತ್ರ ಸಂಪ್ರದಾಯಿ-ಆಗಮ ಸಂಪ್ರದಾಯಿ ಮನುಷ್ಯನಿಗೆ ತಂತ್ರಾಗಮ ಶಾಸ್ತ್ರದಲ್ಲಿಯೇ ಆಸಕ್ತಿ ಇರುವದು. ಶೂರನಿಗೆ ಯುದ್ಧವೇ [ಲಡಾಯಿ] ಪ್ರೀತಿಯದಾಗಿರುವದು. ಒಬ್ಬನಿಗೆ ಅನೇಕ ಧರ್ಮಗಳ ಅಭ್ಯಾಸ ಮಾಡುವಲ್ಲಿ ಪ್ರೇಮವಿರುವದು. [೫೪] ಮುಕ್ತನಾಗಬೇಕೆಂಬ ಇಚ್ಛೆ ಇರುವವನು ಮುಕ್ತನೆನಿಸಿದ ಮನುಷ್ಯನ ನಡವಳಿಕೆ [ವರ್ತನೆ] ಬಗ್ಗೆ ಆಸಕ್ತಿ ವಹಿಸಿ ನೋಡಿ ತಿಳಿಯುವಲ್ಲಿ ಆಸಕ್ತಿ ವಹಿಸುವನು, ಎಲ್ಲವನ್ನೂ ತಿಳಿಯಬೇಕೆಂಬ ಹಂಬಲ-ವುಳ್ಳವನು ಎಲ್ಲ ವಿಷಯದ ಬಗೆಗೆ ಆಸಕ್ತಿ ವಹಿಸಿ ತಿಳಿಯಲುದ್ಯುಕ್ತನಾಗುವನು. ಜ್ಯೋತಿಷಿ (ಬುಡಬುಡಕಿ) ಯು ಪಿಂಗಳಾ ಎಂಬ ಪಕ್ಷಿಯ ಧ್ವನಿಯ ಮೇಲಿಂದ ಭವಿಷ್ಯ ಹೇಳುವ ಬಗ್ಗೆ ಆಸಕ್ತನಾಗಿರುವನು. (೫೫)

ಏಸೇ ಸಾಂಗಾವೇ ತೇ ಕಿತೀ । ಆವಡೀ ಸಾರಿಖೆ ಏಕತೀ ।
ನಾನಾ ಪುಸ್ತಕೇ ವಾಚಿತೀ । ಸರ್ವಕಾಳ ॥೩೬॥

ಪರೀ ಪರತ್ರ ಸಾಧನೇವಿಣ । ಮ್ಹಣೋ ನಯೆ ತೇ ಶ್ರವಣ ।
ಜೇಥೇ ನಾಹೀ ಆತ್ಮಜ್ಞಾನ । ತಯಾ ನಾವ ಕರ್ಮಣಾ ॥೩೭॥

ಗೋಡೀವಿಣ ಗೋಡಪಣ । ನಾಕೇವಿಣ ಸುಲಕ್ಷಣ ।
ಜ್ಞಾನೇವಿಣ ನಿರೂಪಣ । ಬೋಲೋ ಚಿ ನಯೆ ॥೩೮॥

ಆತಾ ಅಸೋ ಹೇ ಬಹುತ । ಏಕಾವಾ ಪರಮಾರ್ಥ ಗ್ರಂಥ ।
ಪರಮಾರ್ಥ ಗ್ರಂಥೇವಿಣ ವ್ಯರ್ಥ । ಗಥಾಗೋವಿ ॥೩೯॥

ಮ್ಹಣೋನೀ ನಿತ್ಯಾನಿತ್ಯವಿಚಾರ । ಜೇಥೇ ಬೋಲಿಲಾ ಸಾರಾಸಾರ ।
ತೋ ಚಿ ಗ್ರಂಥ ಪೈಲಪಾರ । ಪಾವವೀ ವಿವೇಕೇ ॥೬೦॥

ಇತಿ ಶ್ರೀ ದಾಸಬೋಧೇ ಗುರುಶಿಷ್ಯ ಸಂವಾದೆ
''ಶ್ರವಣ ನಿರೂಪಣ'' ನಾಮ ಸಮಾಸ ನವಮ ॥

• •

ಜಗತ್ತಿನೊಳಗಿರುವಮನುಷ್ಯರಲ್ಲಿಯ ಬೇಕುಬೇಡಗಳಬಗ್ಗೆ ಎಷ್ಟೊಂದು ಹೇಳುವದು. ಎಲ್ಲರೂ ತಮ್ಮತಮ್ಮ ಪ್ರೀತಿಯ ವಿಷಯುವಲ್ಲಿಆಸಕ್ತರಾಗಿ ಅವನ್ನೇಶ್ರವಣಮಾಡುತ್ತಹೋಗುವರು.ತಮ್ಮತಮ್ಮಪ್ರೀತಿಗನುಸಾರವಾದ ಅನೇಕಪುಸ್ತಕಗಳನ್ನು ಒಂದೇ ಸವನೆ ಓದುತ್ತಲೇ ಇರುವರು. (೫೬) ಶ್ರವಣದಲ್ಲಿ ಪರಮಾರ್ಥ ಹೇಗೆ ಸಾಧಿಸಬೇಕೆಂಬ ಬಗೆಗೆ ವಿವೇಚನೆ ಇಲ್ಲದಿದ್ದರೆ ಅದಕ್ಕೆ ಶ್ರವಣ ಎಂಬ ಹೆಸರೇ ಯೋಗ್ಯವಲ್ಲ. ಆತ್ಮಜ್ಞಾನದ ಪ್ರತಿಪಾದನವಿಲ್ಲದಂಥ ಶ್ರವಣ ಕೇವಲ ಮನರಂಜನೆಯುನಿಸುವದು, (೫೭) ಸಿಹಿ ಇಲ್ಲದ್ದರಲ್ಲಿಯ ಸಿಹಿಯ ರುಚಿ (ಸಿಹಿ ಇಲ್ಲದ ರುಚಿ) ಸುಂದರ ಮೂಗು ಇಲ್ಲದ ಅಥವಾ ಮೂಗೇ ಇಲ್ಲದ ಸೌಂದರ್ಯ. ಇದರಂತೆಯೇ ನಿರೂಪಣದಲ್ಲಿ ಆತ್ಮಜ್ಞಾನದ "ವಿವೇಚನೆ ಮತ್ತು ಪ್ರತಿಪಾದನೆ ಇಲ್ಲದಿದ್ದರೆ ಅಂಥದು ನಿರೂಪಣವೇ ಅಲ್ಲವೆಂದು ತಿಳಿಯಬೇಕು. (೫೮) ಇನ್ನು ಹೆಚ್ಚಿಗೆ ಹೇಳುವದು ಸಾಕು. ಒಟ್ಟಿನಲ್ಲಿ ಪರಮಾರ್ಥದ ಗ್ರಂಥಗಳನ್ನೇ ಸಾಧಕನು ಶ್ರವಣ ಮಾಡಬೇಕು. ಅಭ್ಯಾಸ ಮಾಡಬೇಕು, ಪರ–ಮಾರ್ಥ ಗ್ರಂಥದ ಹೊರತು ಇತರ ಗ್ರಂಥಗಳು ಉತ್ತಮವಿದ್ದರೂ ಸಹ ಆತ್ಮಜ್ಞಾನದ ದೃಷ್ಟಿಯಿಂದ ಅವು ಏನೂ ಉಪಯೋಗ ಬೀಳುವದಿಲ್ಲ. (೫೯) ಆದ್ದರಿಂದ ಯಾವ ಗ್ರಂಥದಲ್ಲಿ ಶಾಶ್ವತವಾವುದು? ಮತ್ತು ಅಶಾಶ್ವತವಾವುದು? ಇದರ ಬಗೆಗೆ ವಿವೇಚನೆ ಇರುವದೋ ಸಾರ ಯಾವುದು ? ಸಾರ ಅಂದರೇನು? ಮತ್ತು ಅಸಾರ ಯಾವುದು ? ಇದರ ಬಗೆಗೆ ವಿವೇಚನೆ ಇರುವಂಥ ಗ್ರಂಥಗಳ ಪರಿಶೀಲನೆಯಿಂದ ವಿವೇಕ ನಿರ್ಮಾಣ ಹೊಂದುವದು. ಮತ್ತು ಇದರ ಬಲಧಿಂದಲೇ ಮನುಷ್ಯನು ಸಂಸಾರ ಸಮುದ್ರದಿಂದ ಪಾರಾಗಿ ಪರಮತೀರಕ್ಕೆ ಅಂದರೆ ಆತ್ಮ ಜ್ಞಾನದವರೆಗೆ ಹೋಗಿ ಮುಟ್ಟುವನು. (ದಾ.ಬೋ.ದ ೧೩–೧-೨೩ ಮತ್ತು ದಾ.ಬೋ.ದ ೧೩–೬–೧೫ ಇವನ್ನು ಅವಶ್ಯ ಅಭ್ಯಾಸ ಮಾಡಿರಿ) (೬೦)

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದ ಏಳನೆಯ ದಶಕದಲ್ಲಿಯ
"ಶ್ರವಣ ನಿರೂಪಣ"ವೆಂಬ ಒಂಭತ್ತನೆಯ ಸಮಾಸವು ಮುಗಿದುದು.

● ●

## ದಶಕ ೭. ಸಮಾಸ ೧೦. ದೇಹಾಂತ ನಿರೂಪಣ (ನುಡಿ ೫೦)

ಈ ಸಮಾಸದ ಶೀರ್ಷಿಕೆ (ತಲೆಬರಹ)ವೇ "ದೇಹಾಂತ ನಿರೂಪಣ" ಎಂದು ಇರುವದು. ಪರಮಾರ್ಥದಲ್ಲಿ ಮನುಷ್ಯನ ಅಂತ್ಯಕಾಲವು ಬಹಳ ಮಹತ್ವದ್ದಿರುವದು. ಇಲ್ಲಿಯವರೆಗೆ ಅನೇಕ ವಿಷಯಗಳ ಬಗ್ಗೆ ಹೇಳಿದ್ದಾಯಿತು. ಇನ್ನುಳಿದ ಎರಡು ಮುದ್ದೇ ಆಧಾರ ಪ್ರಮಾಣಗಳನ್ನು ಶ್ರೀ ಸಮರ್ಥರು ಈ ಸಮಾಸದಲ್ಲಿ ಮಂಡಿಸಿದ್ದಾರೆ(ಒಂದು) ನಮ್ಮ ಮನದಲ್ಲಿ ದೃಶ್ಯದ ಮೇಲಿರುವ ಪ್ರೇಮವು ಬಹು ಆಳವಾಗಿ ಬೇರೂರಿದೆ. ನಾವು ಸಂತರ ಸಹವಾಸವನ್ನು ಮಾಡುವೆವು. ಬಹಳಷ್ಟು ಶ್ರವಣ ಮತ್ತು ವಾಚನವನ್ನು ಮಾಡುವೆವು. ಅಲ್ಪ ಸ್ವಲ್ಪ (ಹೆಚ್ಚು-ಕಡಿಮೆ)ಸಾಧನೆ

ಸಹ ಮಾಡುವೆವು. ಆದರೂ ಸಹ ನಮ್ಮ ಮನವು ದೃಶ್ಯ ವಸ್ತುವಿನ ಹಿಡಿತದಿಂದ ಏನು ಮಾಡಿದರೂ ಹೊರಬೀಳಲೊಲ್ಲದು. ದೃಶ್ಯ ಖರೇ ಅಲ್ಲವೆಂದು ಎಷ್ಟೋ ಸಲ ಬಹುದಿನದಿಂದ ಶ್ರವಣ ಮಾಡಿದರೂ ಸಹ ಅದರ ಪ್ರಚೀತಿ ಅಂತರ್ಯಾಮದಲ್ಲಿ ಬರಲೊಲ್ಲದಾಗಿದೆ. ಸ್ವಸ್ವರೂಪದ ದರ್ಶನವೇ ನಮ್ಮ ಖರೇ ಧ್ಯೇಯವಾಗಿದೆ. ಸ್ವಸ್ವರೂಪವು ಅತ್ಯಂತ ಸೂಕ್ಷ್ಮವಿರುವದು.ಇದರ ಸ್ವೀಕಾರ ಮಾಡಲಿಕ್ಕೆ ನಮ್ಮ ಮನವೂ ಸಹ ಅತ್ಯಂತ ಸೂಕ್ಷ್ಮವಾಗಬೇಕಾಗುವದು. ದೃಶ್ಯವು ಅತ್ಯಂತ ಸ್ಥೂಲವಿರುವದರಿಂದ ಇದಕ್ಕೆ ಖರೇತನದಿಂದ (ನಂಬಿ) ಅಂಟಿಕೊಂಡು ಬಿಟ್ಟಿರುವ ನಮ್ಮ ಮನವೂ ಸಹ ಸ್ಥೂಲತ್ವ ಹೊಂದಿದೆ. ಸಂತರ ಸಂಗತಿಯಲ್ಲಿ ಇದ್ದು ಸತತ ಪ್ರಯತ್ನದಿಂದ ಸಾಧನೆ ಮಾಡಿದರೆ ಮಾತ್ರ ಮನವು ಸೂಕ್ಷ್ಮವಾಗುವದು. (ಎರಡು) ಈ ಅಭ್ಯಾಸವು ಒಂದೇ ಜನ್ಮದಲ್ಲಿ ಮುಗಿದೀತೆಂದು ಹೇಳಲು-ಬಾರದು, ಅದು ಅನೇಕ ಜನ್ಮಗಳ ವರೆಗೂ ನಡೆಯುವದು. ಜೀವದ ಭವಿಷ್ಯ ಕಾಲವು ಅದರ ಅಂತ್ಯ ಕಾಲದ ಮನಸ್ಥಿತಿಯ ಮೇಲೆಯೇ ಸರ್ವಸ್ವೀ ಅವಲಂಬನಗೊಂಡಿರುವದು. ಅಂತೆಯೇ ಮನುಷ್ಯರ ಅದರಲ್ಲಿಯೂ ಸಾಧಕರ ಅಂತ್ಯಕಾಲಕ್ಕೆ ಬಹಳ ಮಹತ್ವವಿರುವದು. ಸಾಮಾನ್ಯ ಮನುಷ್ಯ ಕೇವಲ ದೇಹದ ಅವಸ್ಥೆಯ ಮೇಲಿಂದ ಅಂತ್ಯ ಕಾಲದ ಚಲೋ ಮತ್ತು ಕೆಟ್ಟ ಎಂಬುದನ್ನು ಅವಲಂಬಿಸಿ ನಿಶ್ಚಯಿಸುವರು, ಇದು ಸರಿಯಲ್ಲ. ದೇಹಕ್ಕೆ ವಿಶೇಷ ಕಷ್ಟವಾಗದೇ ಯಾರಿಗೆ ಮರಣ ಬರುವದೋ ಅವರ ಅಂತ್ಯಕಾಲ ಚನ್ನಾಗಿ ಒದಗಿತು (ಪುಣ್ಯವಂತ) ಎಂದು ಜನ ಅನ್ನುತ್ತಾರೆ. ಇದರ ಇನ್ನೊಂದು ಮುಖವೆಂದರೆ, ದೇಹಕ್ಕೆ ಎಷ್ಟೇ ಕಷ್ಟ ಆದರೂ ಸಹ ಅಡ್ಡಿಯಿಲ್ಲ. ಆದರೆ ಮೃತ್ಯುವಿನ ಸಮಯದಲ್ಲಿ ಯಾರ ಮನಸ್ಸು ಭಗವಂತನ ಸ್ಮರಣದಲ್ಲಿ ಅಖಂಡ ಸ್ಥಿರವಿರುವದೋ ಅಂಥವರ ಅಂತ್ಯಕಾಲ ಚಲೋ ಆಯಿತು. (ಅವರು ಪುಣ್ಯವಂತರು) ಎಂದು ಸಾಧು ಸಂತರು ಅನ್ನುತ್ತಾರೆ. ಈ ಸಾಧುಸಂತರ ದೃಷ್ಟಿಕೋನವೇ ನಿಜವಾದದ್ದಿರುವದು. ಆತ್ಮ ಜ್ಞಾನಕ್ಕೂ ಮತ್ತು ಮೃತ್ಯುವಿಗೂ ಅಂಥ ಸಂಬಂಧವಿಲ್ಲ. ಅಜ್ಞಾನ ಇಲ್ಲದಂತಾಗಿ ಹೋದರೆ, ವಾಸನಾ ಕ್ಷಯ ಹೊಂದಿತೆಂದರೆ, ಕೂಡಲೇ ಸ್ವಸ್ವರೂಪದ ಸಾಕ್ಷಾತ್ಕಾರವಾಗುವದು. ಇಂಥ ಜ್ಞಾನಿ ಪುರುಷ ಒಂದು ರೀತಿಯಿಂದ ಮರಣದ ಮೊದಲಿಗೆ ಸತ್ತಿರುವನು.ಜ್ಞಾನಸಂಪನ್ನ ಆದ ಮೇಲೆ,ಅವನ ದೇಹ ಕೇವಲ ಪ್ರಾರಬ್ಧಾನುಸಾರ ವರ್ತನ (ಕೆಲಸ) ಮಾಡುವದು ಪ್ರಾರಬ್ಧವು ಹೇಗೆ ಇರುವದೋ ಅದರ ಪ್ರಕಾರ ಜ್ಞಾನಿಗೆ ಮೃತ್ಯು ಒದಗುವದು. ಜೀವಂತವಿರುವಾಗಲೇ ಯಾರು ಬ್ರಹ್ಮ ಸ್ವರೂಪರಾಗಿರುವರೋ ಅವರ ದೇಹ ಬೀಳುವಾಗ ಆ ದೇಹದ ಅವಸ್ಥೆ ಏನಿತ್ತು ? ಮತ್ತು ಹೇಗಿತ್ತು?ಇದರದು ಅವನಿಗೆ (ಜ್ಞಾನಿಗೆ) ಪತ್ತೆ ಇರುವದಿಲ್ಲ. ವಿಧಿ ನಿಷೇಧವೂ ಸಹ ಅವನಿಗೆ ಇರುವದಿಲ್ಲ. ದಿನ, ರಾತ್ರಿ ಮತ್ತು ಹುಣ್ಣಿವೆ, ಅಮಾವಾಸ್ಯೆ, ವ, ದಕ್ಷಿಣಾಯಣ ಉತ್ತರಾಯಣ, ರೋಗ, ಆರೋಗ್ಯ, ಮನೆ, ಅರಣ್ಯ ಮತ್ತು ಏಕಾಂತ, ಲೋಕಾಂತ ಇವೆಲ್ಲ ಅವನಿಗೆ ಒಂದೇ ಆಗಿರುವವು. ಸಂತರು ದೇಹದಿಂದ ಇರುವವರೆಂಬುದು ನಿಜವೇ ಇರುವದು. ಆದರೆ ರೋಗ ಮತ್ತು ಇತರ ದೇಹದ ದೋಷ, ಆಲಸ್ಯ ಬೇಸರಾದಿಗಳು, ಮಡಿ ಮೈಲಿಗೆ ಇತ್ಯಾದಿ ಜ್ಞಾನಿಗೆ ಆಗುವದಿಲ್ಲ. ಈ ಗೂಢ ಅವಸ್ಥೆಯ ಆಕಲನ ಗ್ರಹಣವಾಗಲು ಮತ್ತು ಅದನ್ನು ಸಾಧಿಸಲು ಸತ್ಸಂಗದಲ್ಲಿ ಇದ್ದು ಚನ್ನಾಗಿ ಸಾಧನೆ ಮಾಡಿಕೊಳ್ಳಬೇಕಾಗುವದು. ಆದ್ದರಿಂದ ಸಾಧಕರು ಸದ್ಗುರುವಿನ ಸಹವಾಸದಲ್ಲಿದ್ದು ಅವರ ಮುಖದಿಂದ ಶ್ರವಣ ಮಾಡಬೇಕು, ಮತ್ತು ಅವರು ಹೇಳಿದಂತೆ ತಪ್ಪದೇ ಸಾಧನೆ ಮಾಡಬೇಕು. ಅಂದರೆ ಆತ್ಮ ಸಾಕ್ಷಾತ್ಕಾರದ ಖಾತ್ರಿಯಿಂದ ಆಗುವದು.

### ಸಮಾಸ ದಶಮ : ದೇಹಾಂತ ನಿರೂಪಣ

॥ಶ್ರೀರಾಮ॥ ಮಿಥ್ಯಾ ತೇ ಚಿ ಜಾಲೇ ಸತ್ಯ । ಸತ್ಯ ತೇ ಚಿ ಜಾಲೆ ಅಸತ್ಯ ।
ಮಾಯಾವಿ ಭ್ರಮಾಚೇ ಕೃತ್ಯ । ಐಸೇ ಅಸೆ ಪಾಹಾತಾ ॥೧॥

ಸತ್ಯ ಕಳಾಯಾ ಕಾರಣೇ । ಬೋಲಿಲೀ ನಾನಾ ನಿರೂಪಣೇ ।
ತರೀ ಉಠೇನಾ ಧರಣೇ । ಅಸತ್ಯಾಚೇ ॥೨॥

ಅಸತ್ಯ ಅಂತರೀ ಬಿಂಬಲೇ । ನ ಸಾಂಗತಾ ತೇ ದೃಢ ಜಾಲೇ ।
ಸತ್ಯ ಅಸೋನ ಹಾರಪಲೇ। ಜೇಥೀಲ ತೇಥೇ ॥೩॥

ವೇದಶಾಸ್ತ್ರೇ ಪುರಾಣೇ ಸಾಂಗತೀ । ಸತ್ಯಾಚಾ ನಿಶ್ಚಯು ಕರಿತೀ ।
ತರೀ ನಯೆ ಆತ್ಮಪ್ರಚೀತೀ । ಸತ್ಯಸ್ವರೂಪ ॥೪॥

ಸತ್ಯ ಅಸೋನ ಆಚ್ಛಾದಲೇ । ಮಿಥ್ಯಾ ನಸೋನ ಸತ್ಯ ಜಾಲೇ ।
ಐಸೇ ವಿಪರೀತ ವರ್ತಲೇ । ದೇಖತ ದೇಖತಾ ॥೫॥

ಐಸೀ ಮಾಯೇಚೀ ಕರಣೀ । ಕಳೋ ಆಲೀ ತತ್ಕ್ಷಣೀ ।
ಸಂತಸಂಗೇ ನಿರೂಪಣೀ । ವಿಚಾರ ಘೇತಾ ॥೬॥

ಮಾಗಾ ಜಾಲೇ ನಿರೂಪಣ । ದೇಖಿಲೇ ಆಪಣಾಸಿ ಆಪಣ ।
ತೇಣೇ ಬಾಣಲೀ ಖೂಣ । ಪರಮಾರ್ಥಾಚೀ ॥೭॥

ತೇಣೇ ಸಮಾಧಾನ ಜಾಲೇ । ಚಿತ್ತ ಚೈತನೀ ಮಿಳಾಲೇ ।
ನಿಜಸ್ವರೂಪೇ ವೋಳಖಿಲೇ । ನಿಜನಸ್ತ್ಯಾಸೀ ॥೮॥

ಪ್ರಾರಬ್ಧೀ ಟಾಕಿಲಾ ದೇಹೊ । ಬೋಧೇ ಫಿಟಲಾ ಸಂದೇಹೊ ।
ಆತಾಚೀ ಪಡೊ ಅಥವಾ ರಾಹೊ । ಮಿಥ್ಯಾ ಕಳೇವರ ॥೯॥

## ಸಮಾಸ ೧೦· : ದೇಹಾಂತ ನಿರೂಪಣ (ನುಡಿ ೫೦)

ನಮ್ಮ ಮನದ ಮೇಲೆ ದೃಶ್ಯದ ಜಬರದಸ್ತ ವರ್ಚಸ್ಸು ಕುಳಿತಿರುವದು. ಇದರಿಂದ ಖರೇ ಅಲ್ಲದಂಥ ದೃಶ್ಯವು ಖರೇ ಎಂದು ಅನಿಸುವದು.ಮತ್ತು ಖರೇ ಇರುವಂಥ ಸೂಕ್ಷ್ಮ ಸ್ವಸ್ವರೂಪವು ಖೊಟ್ಟಿ ಅನಿಸುವದು.ಇದೆಲ್ಲ ಮಾಯೆಯ ಪರಿಣಾಮವಿರುವದು. ಸತ್ಸಂಗದಲ್ಲಿ ಇದ್ದುಕೊಂಡು ವಿಚಾರ ಮಾಡಿದ್ದಾದರೆ ಮಾತ್ರ ಆಗ ನಮ್ಮ ಮನವು ಖರೇ ದಾರಿಯ ಮೇಲೆ ಬರುವದು:- ಖರೇ ಅಲ್ಲದಂಥ ದೃಶ್ಯವು ನಮಗೆ ಖರೇ ಎನಿಸುವದು. ನಿಜವಾಗಿಯೂ ಖರೇ ಇರುವಂಥ ಅದೃಶ್ಯವಾದ ಆತ್ಮಸ್ವರೂಪವು ಖರೇ ಇರುವದೆಂದು ಅನಿಸುವದಿಲ್ಲ. ವಿಚಾರ ಮಾಡಿ ನೋಡಿದರೆ ಇದೆಲ್ಲವೂ ಮಾಯೆಯಿಂದ ನಿರ್ಮಾಣವಾಗುವ ಭ್ರಮದ ಪರಿಣಾಮವಿರುವದೆಂದು ಕಂಡುಬರುವದು. (೧) ಸತ್ಯ ಏನಿರುವದು ಇದು ಬರೋಬರ ತಿಳಿಯಲೆಂದು ಅನೇಕ ಪ್ರಕಾರದ ನಿರೂಪಣ, ಮತ್ತು ವಿವೇಚನೆಗಳನ್ನು ಮಾಡಿರುವರು. ಆದರೂ ಸಹ ಮನಸ್ಸಿನ ಮೇಲೆ ಬಿದ್ದ ಅಸತ್ಯದ ಜಬರದಸ್ತ ಹಿಡಿತವೇನೂ ಸಡಿಲಾಗಲೊಲ್ಲದು.(೨) ಅಸತ್ಯವು ಸತ್ಯರೂಪದಿಂದ ಒಮ್ಮೆ ಮನದಲ್ಲಿ ಬಿಂಬಿಸಿತೆಂದರೆ ಆಮೇಲೆ ಯಾರೂ ಕಲಿಸದೇ (ಹೇಳದೆ) ಅದು ಮನದಲ್ಲಿ ಅಗದೀ ಗಟ್ಟಿಯಾಗಿ ದೃಢಗೊಳ್ಳುವದು. ಅರ್ಥಾತ್ ಅಂತರ್ಯದಲ್ಲಿ (ಒಳಗೆ) ಸತ್ಯವು ಇದ್ದರೂ ಸಹ ಅದು ಇದ್ದಲ್ಲಿಯೇ ಇಲ್ಲದಾಗುವದು. ಮನದಲ್ಲಿ ದೃಶ್ಯದ ಭರ್ತಿ ಆದ ಕೂಡಲೇ ಸ್ವಸ್ವರೂಪದ ಮೇಲೆ ಒಂದು ಆಚ್ಛಾದನವು ಮುಸುಕು ಬಂದು ಅದರ (ಸ್ವಸ್ವರೂಪದ) ಅಸ್ತಿತ್ವ ಕಾಣದಾಗುವದು. ಮರೆಯಾಗುವದು. (೩) ವೇದ, ಶಾಸ್ತ್ರ, ಪುರಾಣಗಳು ಅನೇಕ ಪ್ರಕಾರದ ವಿವೇಚನೆ ಮಾಡಿ ಸತ್ಯಸ್ವರೂಪದ ನಿಶ್ಚಿತ ವಿವರ ಹೇಳುವವು. ಆದರೂ ಆ ಸತ್ಯಸ್ವರೂಪದ ಸಾಕ್ಷಾತ್ ಪ್ರಚೀತಿಯು ಸ್ವತಃ ನಮಗೆ ಬರಲೊಲ್ಲದು. ಆಗಲೊಲ್ಲದು.(೪)ಸತ್ಯವುಪ್ರತ್ಯಕ್ಷವಿದ್ದರೂ ಅದು ಕಾಣದಂತೆ ಮರೆಯಾಯಿತು. ಹಾಗೂ ಯಾವುದು ಸತ್ಯವಾಗಿರುವದಿಲ್ಲವೋ ಅದು ಅಂದರೆ ನಶ್ವರವಾದ ಅಸತ್ಯವು ಮಾತ್ರ ಸತ್ಯತಸಕ್ಕೇರಿ ಕುಳಿತಿದೆ.ಈ ರೀತಿಯ ವಿಪರೀತ ಪ್ರಕಾರವು ನೋಡ ನೋಡುವಷ್ಟರಲ್ಲಿ ನಡೆದು ಹೋಯಿತು. (೫) ಮಾಯೆಯ ಆಟವೇ ಹೀಗಿರುವದು. ಮನುಷ್ಯ ಸಂತ ಸಾಧುಗಳ ಸಂಗತಿಯಲ್ಲಿ ಇದ್ದು ಶ್ರವಣ ಮಾಡಿ ಮತ್ತು ಅದನ್ನು ಮನನ ಮಾಡಿದನೆಂದರೆ ಇದು ಮಾಯೆಯ ಪರಿಣಾಮವೆಂಬುದು ಕೂಡಲೇ ಲಕ್ಷ್ಯಕ್ಕೆ ಬರುವದು.(೬)ಇರಲಿ,ಇಲ್ಲಿಯವರೆಗೆ ತಿಳಿಸಿಹೇಳಿದ ಪರಮಾರ್ಥ ವಿಷಯದಿಂದ ಸಾಧಕರಿಗೆ ಆತ್ಮಜ್ಞಾನವಾಗಿದೆ ಎಂದು ತಿಳಿದು ಮುಂದೆ ಹೋಗಲಿಕ್ಕೆ ಅಡ್ಡಿ ಇಲ್ಲ. ಜೀವವು ಪರಮಾತ್ಮ ಸ್ವರೂಪದೊಂದಿಗೆ ತದಾಕಾರವಾದ ಮೇಲೆ ಸಾಧಕನ ಚಿತ್ತವು ಚೈತನ್ಯಮಯವಾಗುವದು. ಇಂಥ ಸಾಧಕ ಅತ್ಯಂತ ಸಮಾಧಾನಿ ಆಗುವನು. ಆಮೇಲೆ ಅವನ ದೇಹ ಪ್ರಾರಬ್ಧದಗತಿ ಇದ್ದಂತೆ ಜೀವಿಸಿ ಇರುವದು. ಇದೇ ಪ್ರಕಾರ ಇರುವಷ್ಟು ದಿನ ಇದ್ದು ಇವರಲ್ಲಿಯೇ ಅವನ ಅಂತ್ಯಕಾಲ ಬರುವದು. ಅದು ಹೇಗೆ ಬರುವದು? ಎಲ್ಲಿ ಬರುವದು? ಮತ್ತು ಯಾವಾಗ ಬರುವದು? ಇದೂ ಸಹ ಪ್ರಾರಬ್ಧದ ಮೇಲೆಯೇ ಅವಲಂಬಿಸಿರುವದು. ಆದರೆ ಅದು ಹೇಗೆ ಇದ್ದರೂ ಸಹ ಜ್ಞಾನಿ ಪುರುಷನ ಸಮಾಧಾನ ಮಾತ್ರ ಕಾಯಂ [ಅಭಂಗ] ಇರುತ್ತದೆ:- ಇಲ್ಲಿಯವರೆಗೆ ಈ ಗ್ರಂಥದಲ್ಲಿ ಆತ್ಮಜ್ಞಾನದ ಬಗ್ಗೆ ಸುರಳೀತವಾದ ವಿವೇಚನೆ ಮಾಡಿದ್ದಾಯಿತು. ಇದರಿಂದ ಸಾಧಕರಿಗೆ ಸ್ವಸ್ವರೂಪದ ಜ್ಞಾನವು ಖಾತ್ರಿಯಿಂದ ಆಗಿರಲೇಬೇಕು. ಅರ್ಥಾತ್ ಪರಮಾರ್ಥದ ಗುರುತು (ಚಿನ್ಹ, ಸಂಕೇತ) ಸಾಧಕರಲ್ಲಿ ಬಿಂಬಿಸಿರಲೇಬೇಕು. (೭) ಸ್ವರೂಪ ಜ್ಞಾನದಿಂದ ಮನಸ್ಸಿಗೆ ಸಂಪೂರ್ಣ ಸಮಾಧಾನ ದೊರಕುವದು. ಚಿತ್ತವು ಚೈತನ್ಯದಲ್ಲಿ ಸಮರಸ ಹೊಂದಿ ಹೋಗುವದು. ಮತ್ತು ಖರೇ "ನಾನು ಯಾರಿರುವೆನು," ಇದು ತಿಳಿದದ್ದರಿಂದ ಬ್ರಹ್ಮಸ್ವರೂಪವನ್ನು ತಿಳಿಯಲು ಗುರುತಿಸಲು ಬರುವದು. (೮) ಜ್ಞಾನಿ ಪುರುಷರು ತಮ್ಮ ದೇಹವನ್ನು ಪ್ರಾರಬ್ಧಕ್ಕೆ ಒಪ್ಪಿಸಿ ಬಿಡುವರು. ಆತ್ಮಜ್ಞಾನದಿಂದ ಅವರ ಎಲ್ಲ ಸಂಶಯಗಳು ನಾಶವಾಗಿ ಹೋಗುವವು. ದೇಹದ ನಶ್ವರತೆ (ಖೊಟ್ಟಿ ಎಂಬುದು) ತಿಳಿದದ್ದರಿಂದ ಈ ದೇಹದ ಬಗೆಗೆ ಜ್ಞಾನಿ ಪುರುಷನು ಅನಾಸಕ್ತ ಅಥವಾ ಉದಾಸೀನವಾಗಿರುವನು. ಅಂದಮೇಲೆ ದೇಹ ಇಂದೇ ಬಿದ್ದರೂ ಅಷ್ಟೇ ಅಥವಾ ಬಹಳಕಾಲ ಇದ್ದರೂ ಅಷ್ಟೇ ಈ ಎರಡರ ಬಗ್ಗೆ (ದೇಹ ಬೀಳಲಿ, ಅಥವಾ ಇರಲಿ) ಅವನಿಗೆ ಸುಖ ಅಥವಾ ದುಃಖ ಎರಡೂ ಉಳಿದಿರುವದಿಲ್ಲ. (೯)

ಜ್ಞಾನಿಯಾಚೇ ಜೇ ಶರೀರ । ತೇ ಮಿಥ್ಯತ್ವೇ ನಿರ್ವಿಕಾರ ।
ಜೇಥೇ ಪಡೆ ತೇ ಚಿ ಸಾರ । ಪುಣ್ಯಭೂಮೀ ॥೧೦॥

ಸಾಧುದರ್ಶನೇ ಪಾವನ ತೀರ್ಥ । ಪುರತೀ ತ್ಯಾಚೆ ಮನೋರಥ ।
ಸಾಧು ನ ಯೇತಾ ಜಿಣೇ ವ್ಯರ್ಥ। ತಯಾ ಪುಣ್ಯಕ್ಷೇತ್ರಾ ಚೇ ॥೧೧॥

ಪುಣ್ಯ ನದೀಚೇ ಜೇ ತೀರ । ತೇಥೇ ಪಡಾವೇ ಶರೀರ ।
ಹಾ ಇತರ ಜನಾಚಾ ವಿಚಾರ । ಸಾಧು ನಿತ್ಯಮುಕ್ತ ॥೧೨॥

ಉತ್ತರಾಯೆಣ ತೇ ಉತ್ತಮ । ದಕ್ಷಿಣಾಯೆಣ ತೇ ಅಧಮ ।
ಹಾ ಸಂದೇಹೀ ವಸೆ ಭ್ರಮ । ಸಾಧು ತೋ ನಿಃಸಂದೇಹ ॥೧೩॥

ಶುಕ್ಲಪಕ್ಷ ಉತ್ತರಾಯೆಣ । ಗೃಹೀ ದೀಪ ದಿವಾ ಮರಣ ।
ಅಂತೀ ರಾಹಾವೇ ಸ್ಮರಣ । ಗತೀಕಾರಣೇ ॥೧೪॥

ಇತುಕೇ ನಲಗೆ ಯೋಗಿಯಾಸೀ । ತೋ ಜೀತ ಚಿ ಮುಕ್ತ ಪುಣ್ಯರಾಸೀ।
ತಿಳಾಂಜುಳೀ ಪಾಪ ಪುಣ್ಯಾಸೀ । ದಿಧಲೀ ತೇಣೇ ॥೧೫॥

ದೇಹಾಚಾ ಅಂತ ಬರಾ ಆಲಾ । ದೇಹ ಸುಖರೂಪ ಗೇಲಾ ।
ತ್ಯಾಸೀ ಮ್ಹಣತೀ ಧನ್ಯ ಜಾಲಾ । ಅಜ್ಞಾನ ಜನ ॥೧೬॥

ಜ್ಞಾನಿ ಪುರುಷರಿಗೆ ಶರೀರವು ಅಸತ್ಯ ನಶ್ವರ ಎಂಬುದು ಗೊತ್ತಿರುವದರಿಂದ ಅವನ ಶರೀರದ ವಿಕಾರಗಳು ಜ್ಞಾನಿಗೆ ಎಳ್ಳಷ್ಟೂ ಭಾಧಿಸುವದಿಲ್ಲ. ಪ್ರಾರಬ್ಧಯೋಗದಿಂದ ಅವರ ಶರೀರವು ಎಲ್ಲಿ ಬೀಳುವದೋ ಆಸ್ಥಳವೇ ದೊಡ್ಡ ಪುಣ್ಯಭೂಮಿಯಾಗಿ ಬಿಡುವದು. (೧೦) ನಿಜ ಹೇಳಬೇಕೆಂದರೆ, ಸಾಧು ಸಂತರು ಬಂದು ತೀರ್ಥಗಳಲ್ಲಿ ಇದ್ದದ್ದರಿಂದಲೇ ಅವಕ್ಕೆ ಹೆಚ್ಚು ಪವಿತ್ರತನ ಬಂದಿದೆ. ಸಾಧು ಸಂತರ ವಸತಿಯಿಂದ ತೀರ್ಥ ಮಹಾತ್ಮೆ ಹೆಚ್ಚುವದು. ಸಾಧು ಸಂತರು ತೀರ್ಥಗಳಲ್ಲಿ ಹೋಗಿ ಇರದಿದ್ದರೆ ಪುಣ್ಯಕ್ಷೇತ್ರಗಳಿಗೆ ಅಂಥ ಮಹತ್ವ ಬರಲಾರದು.ಯಾರೂ ಅವನ್ನು ವಿಚಾರಿಸಲಾರರು. (ಪುಂಡರೀಕನ ದರ್ಶನಕ್ಕಾಗಿ ನದಿಗಳು ಸ್ತ್ರೀರೂಪದಿಂದ ಮನೆಯ ಅಂಗಳಕ್ಕೆ ನೀರು ಹಾಕುವದಕ್ಕೆ ಬರುತ್ತಿದ್ದರೆಂಬುದನ್ನು ನಾವು ಜ್ಞಾಪಿಸಿಕೊಳ್ಳಬಹುದು) (೧೧) "ಯಾವುದಾದರೊಂದು ಪುಣ್ಯನದಿಯ ದಡದಲ್ಲಿ ತಮ್ಮ ದೇಹ ಬೀಳಬೇಕು. ಅಂದರೆ ತಮಗೆ ಮುಕ್ತಿ ಲಭಿಸುವದು" ಈ ವಿಚಾರವು ಅಜ್ಞಾನಿಗಳಾಗಿರುವ ಸಾಮಾನ್ಯ ಜನರಲ್ಲಿ ಇರುವದು. ಸಾಧು ಸಂತರು ಯಾವಾಗಲೂ ಮುಕ್ತತನದ ಅವಸ್ಥೆಯಲ್ಲಿಯೇ ಇರುವರು. ಅವರು ಇದ್ದದ್ದೇ ಪುಣ್ಯಸ್ಥಳವು (೧೨)ದೇಹಕ್ಕೆ ಮೃತ್ಯು ಬರಲು ಉತ್ತರಾಯಣ ಕಾಲವು ಉತ್ತಮ ಪುಣ್ಯಕರವೆನಿಸಿದರೆ, ದಕ್ಷಿಣಾಯಣ ಕಾಲವು ಅಧಮಕರವಾಗಿದೆ. ಇದು ದೇಹಬುದ್ಧಿಯ ಭ್ರಮವೆಂದು ತಿಳಿಯಬೇಕು. ಯಾಕೆಂದರೆ ಅಂತರ್ಯಾಮದಲ್ಲಿ ಆತ್ಮಬುದ್ಧಿಯು ಸ್ಥಿರವಾಗಿರುವದರಿಂದ ಸಾಧು ಸಂತರು ಕಾಲನ ಸತ್ತೆಯ ಆಚೆಗೆ ನಿಸ್ಸಂದೇಹವಾಗಿ ವಿಹರಿಸುವರು. ಭಗವದ್ಗೀತೆಯ ಎಂಟನೆಯ ಅಧ್ಯಾಯದಲ್ಲಿ ಮುಂದಿನ ಶ್ಲೋಕ ಕಂಡು ಬರುವದು:- ಅಗ್ನಿಃ ಜ್ಯೋತಿ ರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್। ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ॥೨೪॥ ಧೂಮೋ ರಾತ್ರಿಃ ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯಣಮ್-। ತತ್ರ ಚಾಂದ್ರಮಾಸಂ ಜ್ಯೋತಿಃ ಯೋಗಿ ಪ್ರಾಪ್ಯ ನಿವರ್ತತೆ॥೨೫॥ **ಅರ್ಥ**:- ಒಳಗೆ ಅಗ್ನಿಯು ಹೊರಗೆ ಜ್ಯೋತಿಯ ಪ್ರಕಾಶವು, ಹಗಲು ಶುಕ್ಲ (ಶುದ್ಧ) ಪಕ್ಷವು ಮತ್ತು ಉತ್ತರಾಯಣ ಕಾಲದ ಆರು ತಿಂಗಳು ಈ ಸ್ಥಿತಿಯು ಇದ್ದಾಗ ಯಾರ ದೇಹಾವಸಾನ(ಮರಣ)ವಾಗುವದೋ ಅಂಥವರು ಅಂದರೆ ಬ್ರಹ್ಮವನ್ನು ತಿಳಿದಿರುವಂಥ ಜ್ಞಾನಿಯು ಬ್ರಹ್ಮನ ಹತ್ತಿರ (ಬ್ರಹ್ಮವರ್ಗ ಸೇರುವನು) ಹೋಗುವನು. ॥೨೪॥ ಒಳಗೆ ಹೊಗೆ ಇರುವಂಥ ಅಗ್ನಿಯು, ಹೊರಗೆ ರಾತ್ರಿಯು ಮತ್ತುಕತ್ತಲು, ಕೃಷ್ಣ ಪಕ್ಷವು,ಮತ್ತು ದಕ್ಷಿಣಾಯಣ ಆರು ತಿಂಗಳು ಇಂಥ ಸ್ಥಿತಿಯಲ್ಲಿ ಯಾರದು ದೇಹಾವಸಾನವಾಗುವದೋ ಅಂಥ ಯೋಗಿ ಜನ ಚಂದ್ರ ಲೋಕದವರೆಗೆ ಹೋಗಿ ಪುನಃ ಪರತ ಬರುವರು ॥೨೫॥ ಶ್ರೀಸಮರ್ಥರು ಇಲ್ಲಿ ಅಗದೀ ಸ್ಪಷ್ಟವಾಗಿ ತಿಳಿಸಿಕೊಟ್ಟಿರುವರು. ಅದು ಏನಂದರೆ, ದೇಹಬುದ್ಧಿ ನಾಶವಾದದ್ದರಿಂದ (ಸುಟ್ಟದ್ದರಿಂದ) ಜೀವಿಸಿರುವಾಗಲೇ ಯಾರು ಬ್ರಹ್ಮ ಸ್ವರೂಪರಾಗಿರುವರೋ ಅಂಥವರಿಗೆ ಅಂತ್ಯಕಾಲದ (ಮರಣಕಾಲದ) ಭಯ ಉಳಿಯುವದೇ ಇಲ್ಲ. ಇವರಿಗೆ ಕಾಲದ ಬಂಧನವೂ ಇಲ್ಲ. ಬ್ರಹ್ಮಸ್ವರೂಪಿಯು ಯಾವ ಹೊತ್ತಿಗೆ ದೇಹ ಬಿಡುವನೋ ಆ ಸಮಯವೇ ಪುಣ್ಯಕಾಲವೆಂದು ಅನಿಸುವದು. (೧೩) ಶಾಸ್ತ್ರ ಹೇಳುವದೇನಂದರೆ ಉತ್ತರಾಯಣದಲ್ಲಿ, ಶುಕ್ಲಪಕ್ಷದಲ್ಲಿ, ಮನೆಯಲ್ಲಿ, ದೀಪಉರಿಯುತ್ತಿರುವಾಗ ಹಗಲಿನಲ್ಲಿ ಮರಣ ಬರಬೇಕು. ಅದರಲ್ಲಿಯೂ ಅಂತ್ಯಕಾಲದಲ್ಲಿ ಭಗವಂತನ ಸ್ಮರಣೆ ಇರಬೇಕು. ಅಂದರೆ ಜೀವಕ್ಕೆ ಉತ್ತಮ ಗತಿ ಸಿಗುವದು. (೧೪) ಆದರೆ ಯೋಗಿಗೆ ಅರ್ಥಾತ್ ಆತ್ಮಜ್ಞಾನಿ ಪುರುಷನಿಗೆ ಇವುಗಳ ಪೈಕಿ ಯಾವುದರ ಅವಶ್ಯಕತೆಯೂ (ಗರಜೂ) ಇರುವದಿಲ್ಲ.ಅವನು ಮಹಾಪುಣ್ಯವಂತ ಪುರುಷನು. ಜೀವಂತವಿರುವಾಗಲೇ ಮುಕ್ತನಾಗಿರುವನು. ಪಾಪ ಪುಣ್ಯಗಳ ಮೇಲೆ ಅವನು ನೀರು ಬಿಟ್ಟು (ತಿಲಾಂಜಲಿ) ಬಿಟ್ಟಿರುತ್ತಾನೆ.ಅವನು ಪಾಪ ಪುಣ್ಯ ಇವೆರಡನ್ನೂ ದಾಟಿ ಅವರ ಆಚೆಗೆ ಹೋಗಿರುವನು. (೧೫) ದೇಹದ ಅಂತ್ಯವು ಚನ್ನಾಗಿ ಆಯಿತು. ಏನೂ ಕಷ್ಟವಾಗದೇ ದೇಹಬಿಟ್ಟನೆಂದರೆ ಸಾಯುವ ಮನುಷ್ಯನು ಧನ್ಯನಾದನು ಸುಖದಿಂದ ಸತ್ತನು.ಹೀಗೆ ಅಜ್ಞಾನಿ ಜನರು ಅನ್ನುವರು. (೧೬)

ಜನಾಚೇ ವಿಪರೀತ ಮತ। ಅಂತೀ ಭೇಟತೋ ಭಗವಂತ।
ಐಸೇ ಕಲ್ಪೂನ ಘಾತ। ಕರಿತೀ ಆಪುಲಾ ಸ್ವಯೇ ॥೧೭॥

ಜಿತಾ ಸಾರ್ಥಕ ನಾಹೀ ಕೇಲೇ। ವೆರ್ಥ ಆಯುಷ್ಯ ನಿಘೋನ ಗೇಲೇ।
ಮುಳೀ ಧಾನ್ಯೇ ಚಿ ನಾಹೀ ಪೇರಿಲೇ। ತೇ ಉಗವೆಲ ಕೈಚೇ ॥೧೮॥

ಜರೀ ಕೇಲೇ ಈಶ್ವರ ಭಜನ। ತರೀ ಚ ಹೋಈಜೆ ಪಾವನ।
ಜೈಸೇ ವೆವ್ಹಾರಿತಾ ಧನ। ರಾಸಿ ಮಾಥಾ ಲಾಭೆ ॥೧೯॥

ದಿಧಲ್ಯಾವಿಣ ಪಾವಿಜೆನಾ। ಪೇರಿಲ್ಯಾವಿಣ ಉಗವೆನಾ।
ಐಸೇ ಹೇ ವಾಕ್ಯ ಜನಾ। ಠಾಉಕೇ ಚಿ ಆಹೆ ॥೨೦॥

ನ ಕರಿತಾ ಸೇವೆಚ್ಯಾ ವ್ಯಾಪಾರಾ। ಸ್ವಾಮೀಸ ಮ್ಹಣೆ ಕೊಠೇ ಮುಶಾರಾ।
ತೈಸೇ ಅಂತೀ ಅಭಕ್ತ ನರಾ। ಸ್ವಹಿತ ನ ಘಡೆ ॥೨೧॥

ಜಿತಾ ನಾಹೀ ಭಗವದ್ಭಕ್ತೀ। ಮೇಲ್ಯಾ ಕೈಚೀ ಹೋಈಲ ಮುಕ್ತೀ।
ಅಸೋ ಜೆ ಜೆ ಜೈಸೇ ಕರಿತೀ। ತೇ ತೇ ಪಾವತೀ ತೈಸೇ ॥೨೨॥

ಏವಂ ನ ಕರಿತಾ ಭಗವದ್ಭಜನ। ಅಂತೀ ನವ್ಹಿಜೆ ಪಾವನ।
ಜರೀ ಆಲೇ ಬರೇ ಮರಣ। ತರೀ ಭಕ್ತೀವಿಣ ಅಧೋಗತಿ ॥೨೩॥

ಮ್ಹಣೌನ ಸಾಧೂನೇ ಆಪಲೇ। ಜೀತ ಅಸ್ತಾಂ ಚ ಸಾರ್ಥಕ ಕೇಲೇ।
ಶರೀರ ಕಾರಣೀ ಲಾಗಲೇ। ಧನ್ಯ ತ್ಯಾಚೇ ॥೨೪॥

ಜೇ ಕಾ ಜೀವನ್ಮುಕ್ತ ಜ್ಞಾನೀ। ತ್ಯಾಚೇ ಶರೀರ ಪಡೋ ರಾನೀ।
ಅಥವಾ ಪಡೋ ಸ್ಮಶಾನೀ। ತರೀ ಧನ್ಯ ಜಾಲೇ ॥೨೫॥

ಸಾಧೂಚಾ ದೇಹ ಖಿತಪಲಾ। ಅಥವಾ ಶ್ವಾನಾದಿಕೀ ಭಕ್ಷಿಲಾ।
ಹೇ ಪ್ರಶಸ್ತ ನ ವಟೆ ಜನಾಲಾ। ಮಂದ ಬುದ್ಧೀಸ್ತವ ॥೨೬॥

ಅಂತ ಬರಾ ನವ್ಹೇಚಿ ಮ್ಹಣೋನ। ಕಷ್ಟೀ ಹೋತೀ ಇತರ ಜನ।
ಪರೀ ಬಾಪುಡೆ ಅಜ್ಞಾನ। ನೇಣತೀ ಮರ್ಮ ॥೨೭॥

ಅಂತ್ಯಕಾಲಕ್ಕೆ ಭಗವಂತನ ಸ್ಮರಣೆ ಬಂದು (ಆಗಿ) ಶಾಂತವಾಗಿ ಮರಣ ಬರಬೇಕಾದರೆ ಇಡೀ ಆಯುಷ್ಯವೂ ಅಭ್ಯಾಸ ಮಾಡಬೇಕಾಗುವದು. ಸತ್ಕರ್ಮ-ಸದಾಚಾರ ಮಾಡಬೇಕಾಗುವದು. ಇದರ ಕಲ್ಪನೆಯು ಬುದ್ಧಿಗೇಡಿ ಜನರಿಗೆ ಇರುವದಿಲ್ಲ:- ಜೀವಿಸಿ ಇರುವವರೆಗೆ ಸ್ವಚ್ಛಂದವಾಗಿ ಸ್ವೈರವಾಗಿ ವರ್ತಿಸಿ ಅಂತ್ಯಕಾಲದಲ್ಲಿ ಮಾತ್ರ ಭಗವಂತನ ಸ್ಮರಣೆ ಮಾಡಿದರೆ ಭಗವಂತ ಭೆಟ್ಟಿಯಾಗುವನು. ಎಂದು ಅಜ್ಞಾನೀ ಜನರ ಅಗದೀ ತಪ್ಪು ಅಭಿಪ್ರಾಯವಿರುವದು. ಇಂಥವರು ತಮ್ಮದೇ ಖರೇ ಎಂದು ತಿಳಿಯುವರು. ಮತ್ತು ಅದರಂತೆ ನಡೆಯುವರು. ಅಂತೂ ತಮ್ಮ ಹಾನಿಯನ್ನು ತಾವೇ ಮಾಡಿಕೊಂಡಂತೆ ಎಂದು ಹೇಳಬಹುದು. (೧೭) ಜೀವಿಸಿರುವಾಗ ಯಾವುದೇ ಪರಮಾರ್ಥ ಸಾಧನೆ ಮಾಡದೇ ಇದ್ದದ್ದಾದರೆ ಇಡೀ ಆಯುಷ್ಯ ಏನೂ ಸಾಧಿಸದೇ ವ್ಯರ್ಥ ಕಳೆದಂತೆ ಆಗಿಹೋಗುವದು. ಭೂಮಿಯಲ್ಲಿ ಧಾನ್ಯ [ಕಾಳು] ಬಿತ್ತದೇ ಇದ್ದರೆ ಅದರಲ್ಲಿ ಧಾನ್ಯದ ಸಸಿಗಳು ಹುಟ್ಟುವದಾದರೂ ಹೇಗೆ? ಇದರಂತೆ ಮಾನವ ಜೀವನದಲ್ಲಿಯೂ ಆಗುವದು.[೧೮] ಮನುಷ್ಯನು ಜೀವಿಸಿದ್ದಾಗ ಈಶ್ವರನ ಭಕ್ತಿ ಮಾಡಿದ್ದಾದರೆ ಅವನು ಪವಿತ್ರನಾಗುವನು. ಒಬ್ಬ ಮನುಷ್ಯ ತನ್ನಲ್ಲಿದ್ದ ಹಣದ ವ್ಯವಹಾರ ಚನ್ನಾಗಿ ಬುದ್ಧಿವಂತಿಕೆಯಿಂದ ಮಾಡಿದರೆ ಅವನ ಸಂಪತ್ತು ಬೆಳೆಯುವದು ಹಣ ವೃದ್ಧಿಯಾಗುವದು. ಇದೇ ರೀತಿಯು ಜೀವನದ್ದೂ ಇರುವದು.[೧೯] ನಾವು ಕೊಡದ ಹೊರತು ನಮಗೆ ಪರತ ಏನೂ ಸಿಗಲಾರದು. ಬಿತ್ತದ ಹೊರತು ಬೆಳೆ ಕಾಣಲಾರದು. ಈ ಮಾತುಗಳು ಎಲ್ಲರಿಗೂ ತಿಳಿದಂಥವೇ ಇರುವವು. [೨೦] ಸೇವೆಯ ಶ್ರಮ ಮಾಡದವನು ದುಡಿಯದವನು ಮಾಲಕನ ಹತ್ತಿರ ಪಗಾರ [ಸಂಬಳ] ಕೇಳಲು ಬರಲಾರದು. ಇದರಂತೆಯೇ ಜೀವಂತವಿರುವಾಗ ಯಾರು ಭಗವಂತನ ಭಕ್ತಿ ಮಾಡುವದಿಲ್ಲವೋ ಅಂಥ ಆ ಅಭಕ್ತರಿಗೆ ಅಂತ್ಯಕಾಲದಲ್ಲಿ ಭಗವಂತನ ಸ್ಮರಣೆಯೂ ಇಲ್ಲ, ಆತ್ಮಕಲ್ಯಾಣವೂ ಆಗುವದಿಲ್ಲ. (೨೧) ಜೀವಿಸಿರುವಾಗ ಯಾರು ಭಗವಂತನ ಭಕ್ತಿ ಮಾಡುವದಿಲ್ಲವೋ ಅವರು ಅಂತ್ಯಕಾಲಕ್ಕೆ ಉತ್ತಮ ಅವಸ್ಥೆಗೆ ಮುಟ್ಟಲಾರರು.ಮತ್ತು ಮರಣದನಂತರ ಅವರಿಗೆ ಮುಕ್ತಿ ಸಿಗಲಾರದು.ಯಾರು ಹೇಗೆ ಮಾಡಿರುವರೋ ಅದರ ಪ್ರಕಾರ ಅವರಿಗೆ ಒಳ್ಳೆ ಅಥವಾ ಕೆಟ್ಟ ಫಲ ಸಿಗುವದು. [೨೨] ಸಾರಾಂಶ:- ಭಗವಂತನ ಭಕ್ತಿ ಮಾಡದಿದ್ದರೆ ಅಂತ್ಯಕಾಲದಲ್ಲಿ ಅವನು ಪಾವನನಾಗುವದಿಲ್ಲ. ದೇಹದ ದೃಷ್ಟಿಯಿಂದ ಸುಖದ ಮರಣ ಬಂದರೂ ಸಹ ಭಕ್ತಿ ಮಾಡದೇ ಇದ್ದದ್ದರಿಂದ ಅವನು ಕೆಟ್ಟ ಗತಿಗೇ ಹೋಗುವನು. [೨೩] ಆದ್ದರಿಂದ ಜೀವಿಸಿರುವಾಗಲೇ ಸಾಧು ಸಂತರು ತಮ್ಮ ಜನ್ಮ ಸಾರ್ಥಕ ಮಾಡಿಕೊಳ್ಳುವರು. ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳುವರು. ಈ ರೀತಿಯಲ್ಲಿ ಅವರ ಶರೀರವು ಭಗವಂತನ ಕಾರ್ಯದಲ್ಲಿ ಸೇರಿ ಸಾರ್ಥಕವಾಗಿ ಹೋಗುವದು. ಆದ್ದರಿಂದಲೇ ಸಾಧು ಸಂತರು ಧನ್ಯರು. (೨೪) ಸಾಧು-ಸಂತರು ಬಹಿರಂಗದಲ್ಲಿ ಎಲ್ಲರಂತೆಯೇ ಇರುವರು. ಇದು ನಿಜವಿದ್ದರೂ ಇವರ ಒಳಗಿನ (ಅಂತರಂಗ) ಅವಸ್ಥೆ ಬಹಳಷ್ಟು ಬೇರೆ ಬಗೆಯದಾಗಿರುವದು ಇವರ ದೇಹಕ್ಕೆ ಕಷ್ಟ ಒದಗಿತು, ಅಥವಾ ದುಃಖವಾಯಿತು ಅನ್ನುವ ಪರಿವೆಯೇ ಇವರಿಗೆ ಇರುವದಿಲ್ಲ. ಇವರು ಸ್ವಾನಂದಾನುಭವದಲ್ಲಿಯೇ ಮಗ್ನರಾಗಿರುವರು."ನಾನು ದೇಹವಿರುವೆನು"ಈ ಮಲೀನ ಭಾವನೆಯ ಕಿಂಚಿತ್(ಸ್ವಲ್ಪವಾದರೂ)ಸ್ಪರ್ಶವೂ ಇವರಿಗೆ ಇರುವದಿಲ್ಲ:-ಯಾವನು ಜೀವನ್ಮುಕ್ತ ಆತ್ಮಜ್ಞಾನಿ ಇರುವನೋ ಅವನ ಶರೀರವು ಅಂತ್ಯಕಾಲದಲ್ಲಿ ಅರಣ್ಯದೊಳಗೆ ಬೀಳಲಿ ಅಥವಾ ಸ್ಮಶಾನದೊಳಗೆ ಬೀಳಲಿ,ಬಿದ್ದರೂ ಎಲ್ಲಿ ಅವನು ಧನ್ಯನು.ಪಾವನನು ಇದರಲ್ಲಿ ಸಂಶಯವಿಲ್ಲ. (೨೫) ಒಬ್ಬ ಸಾಧು [ಆತ್ಮಜ್ಞಾನಿ]ಯ ದೇಹವು ಕ್ಷೀಣವಾಗುತ್ತ,ಆಗುತ್ತ, ನೆಲ ಹಿಡಿದು ಬಿದ್ದಿತೆ. ಅಥವಾ ನಾಯಿ, ನರಿ, ಬೆಕ್ಕು ಇಂಥವುಗಳು ತಿನ್ನಹತ್ತಿದವು. ತಿನ್ನಲು ಕಚ್ಚಾಡಹತ್ತಿದವು. ಇದನ್ನು ನೋಡಿದ ಆ ಅಜ್ಞಾನಿ ಜನರಿಗೆ ಅವರ ಅಜ್ಞಾನದಿಂದಾಗಿ ಕೆಡಕೆನಿಸುವದು. [೨೬] ಈ ಸಾಧುವಿನ ಅಂತ್ಯವು ಸರಿಯಾಗಿ ಆಗಲಿಲ್ಲವೆಂದು ಮರಗುವರು, ದುಃಖಪಡುವರು. ಆದರೆ ಈ ಸಾಧುವಿನ ಅಂತರಂಗದಲ್ಲಿಯ ಅವಸ್ಥೆಯ ಮರ್ಮವು ಆ ಅಜ್ಞಾನಿ ಜನರಿಗೆ ಆಕಲನವಾಗುವದಿಲ್ಲ. [೨೭]

ಜೋ ಜನ್ಮಲಾ ಚ ನಾಹೀ ಆಲಾ। ತ್ಯಾಸ ಮೃತ್ಯ ಯೆಈಲ ಕೈಚಾ।
ವಿವೇಕಬಳೇ ಜನ್ಮ ಮೃತ್ಯಾಚಾ। ಘೋಟ ಭರಿಲಾ ಜೇಣೇ ॥೨೮॥

ಸ್ವರೂಪಾನುಸಂಧಾನಬಳೇ। ಸಗಳೀ ಮಾಯಾ ಚ ನಾಡಳೆ।
ತಯಾಚಾ ಪಾರ ನ ಕಳೆ। ಬ್ರಹ್ಮಾದಿಕಾಸೀ ॥೨೯॥

ತೋ ಜೀತ ಚಿ ಅಸತಾ ಮೇಲಾ। ಮರಣಾಸ ಮಾರೂನ ಜ್ಯಾಲಾ।
ಜನ್ಮಮೃತ್ಯ ನ ಸ್ಮರೆ ತ್ಯಾಲಾ। ವಿವೇಕ ಬಳೇ ॥೩೦॥

ತೋ ಜನೀ ದಿಸತೊ ಪರೀ ವೇಗಳಾ। ವರ್ತತಾ ಭಾಸೆ ನಿರಾಳಾ।
ದೃಶ್ಯ ಪದಾರ್ಥ ತ್ಯಾ ನಿರ್ಮಳಾ। ಸ್ಪರ್ಶಲಾ ಚಿ ನಾಹೀ ॥೩೧॥

ಅಸೋ ಐಸೆ ಸಾಧುಜನ। ತ್ಯಾಚೇ ಘಡಲಿಯಾ ಭಜನ।
ತೇಣೇ ಭಜನೇ ಪಾವನ। ಇತರ ಜನ ಹೋತೀ ॥೩೨॥

ಸದ್ಗುರೂಚಾ ಜೋ ಅಂಕಿತ ಸಾಧಕ। ತೇಣೇ ಕೇಲಾ ಚಿ ಕರಾವಾ ವಿವೇಕ।
ವಿವೇಕ ಕೇಲಿಯಾ ತರ್ಕ। ಫುಟೇ ನಿರೂಪಣೇ ॥೩೩॥

ಹೇ ಚಿ ಸಾಧಕಾಸೀ ನಿರವಣೇ। ಅದ್ವೈತ ಪ್ರಾಂಜಳ ನಿರೂಪಣೇ।
ತುಮಚೇ ಹಿ ಸಮಾಧಾನ ಬಾಣೇ। ಸಾಧೂಚ ಐಸೇ ॥೩೪॥

ಜೋ ಸಂತಾಸ ಶರಣ ಗೇಲಾ। ತೋ ಸಂತಚಿ ಹೋಊನ ಠೇಲಾ।
ಇತರ ಜನಾಸ ಉಪೇಗಾ ಆಲಾ। ಕೃಪಾಳೂಪಣೇ ॥೩೫॥

ಐಸೇ ಸಂತಾಚೇ ಮಹಿಮಾನ। ಸಂತಸಂಗೇ ಹೋತೇ ಜ್ಞಾನ।
ಸತ್ಸಂಗಾಪರತೇ ಸಾಧನ। ಆಣೀಕ ನಾಹೀ ॥೩೬॥

"ನಾನು ಆತ್ಮವೇ ಇರುವೆ" ಈ ಭಾವನೆ ಅಗದೀ ದೃಢಗೊಂಡ ಸಾಧುವಿಗೆ ಅವನ ಆಗಿನ ದೃಷ್ಟಿಯ ಪ್ರಕಾರ ಯಾವ ಆತ್ಮನಿಗೆ ಮೂಲದಲ್ಲಿ ಜನ್ಮವೇ ಇರುವದಿಲ್ಲವೋ ಅಂಥವನಿಗೆ ಮೃತ್ಯು ಬರುವದು ಶಕ್ಯವೇ ಇಲ್ಲ. ಅರ್ಥಾತ್ ಆತ್ಮಾನಾತ್ಮ ವಿವೇಕದ ಸಾಮರ್ಥ್ಯದಿಂದ ಸಾಧು ಪುರುಷನು ಹುಟ್ಟು ಸಾವುಗಳನ್ನು ಒಂದು ಗುಟುಕು ನೀರು ಕುಡಿದಂತೆ ಕುಡಿದು ನಿರಂಬಳಾಗಿ ಕುಳಿತು ಬಿಡುವನು. ಇವನ ಜನನ ಮರಣಗಳ ಆಚೆ ಹೋಗಿರುವನು. [೨೮] ಆತ್ಮಸ್ವರೂಪದೊಂದಿಗೆ ತದಾಕಾರ ಹೊಂದಿದ್ದರಿಂದ ಸುತ್ತು ಮುತ್ತು, ಅತ್ತ ಇತ್ತ, ಸರ್ವತ್ರವೂ ಅವನಿಗೆ ಪರಮಾತ್ಮನೇ ತುಂಬಿಕೊಂಡಿದ್ದಾನೆಂದು ತೋರುವದು. [ಕಾಣುವದು]. ಅಂತೆಯೇ ಅವನಿಗ ಮಾಯೆಯು ಎಲ್ಲಿಯೂ, ಎಷ್ಟೂ ಕಾಣುವದೇ ಇಲ್ಲ. ಯಾವ ಮಾಯೆಯ ಆಟವೂ ಅವನಲ್ಲಿ ನಡೆಯುವದಿಲ್ಲ. ಬ್ರಹ್ಮಾದಿ ದೇವತೆಗಳಂಥವರಿಗೂ ಇವನ ಅಂತರಂಗದ ಸ್ವರೂಪದ ಅಂದಾಜ ಕಟ್ಟಲಿಕ್ಕೆ ಆಗುವದಿಲ್ಲ. [೨೯] ದೇಹ ಬುದ್ಧಿಯು ಸತ್ತದ್ದರಿಂದ ಅವನು ಜೀವಂತವಿದ್ದರೂ ಸತ್ತಂತೆಯೇ ಇರುವನು. ವಾಸನಾ [ಇಚ್ಛೆ] ಸತ್ತದ್ದರಿಂದ ಇವನು ಮೃತ್ಯುವನ್ನು ಕೊಂದು ಜೀವಂತವಿರುವನು. "ನಾನು ಆತ್ಮವೇ ಇರುವೆ" ಎಂಬ ಸ್ವಚ್ಛ ವಿವೇಕದ ಬಲ ದಿಂದ ಇವನಿಗೆ ಜನ್ಮ ಮತ್ತು ಮರಣ ಇವುಗಳ ಸ್ಮರಣೆ ಉಳಿಯುವದಿಲ್ಲ. [೩೦] ಇವನು ಅಂದರೆ ಸಾಕ್ಷಾತ್ಕಾರಿಯು ಸಾಮಾನ್ಯ ಜನರಿದ್ದಲ್ಲಿಯೇ ಇರುವನು. ಆದರೆ ಸಾಮಾನ್ಯ ಜನರಂತೆ ಇರುವದಿಲ್ಲ. ಇವನ ಇರುವಿಕೆಯ ರೀತಿಯು ಬೇರೆಯೇ ಇರುವದು. ಇವನ ಎಲ್ಲ ನಡವಳಿಕೆಗಳನ್ನು ನೋಡಿದ್ದಾದರೆ ಆಗ ಇವನ ಪ್ರತ್ಯೇಕ ನಡವಳಿಕೆಯ ಅನುಭವ ಬರುವದು.ಇವನು ಕೇವಲಶುದ್ಧನಿರ್ಮಲ ಆತ್ಮಸ್ವರೂಪವೇ ಇರುವದರಿಂದ ದೇಹಾದಿಗಳ ಅಶಾಶ್ವತೆ,ಅಶುದ್ಧ,ಮಲಿನ ಮತ್ತು ದೃಶ್ಯಪದಾರ್ಥಗಳು ಇವನಿಗೆ ಸ್ಪರ್ಶ ಮಾಡಲಿಕ್ಕೆ ಆಗುವದೇ ಇಲ್ಲ. (೩೧) ಇರಲಿ, ಇಂಥ ಸಾಧು ಸಂತರು ಯಾರಿರುವರೋ ಅವರ ಭಕ್ತಿ ಮಾಡಿದರೆ ಅಂಥ ಭಕ್ತಿಯಿಂದ ಇತರ ಸಾಮಾನ್ಯ ಜನರೂ ಸಹ ಪವಿತ್ರರಾಗುವರು. ಮತ್ತು ಉದ್ಧಾರರಾಗಿ ಹೋಗುವರು. [೩೨] ಸತ್ಪುರುಷರ ಸಂಗತಿ ಸಹವಾಸ ಮತ್ತು ಸದ್ಗುರುವಿನ ಸಂಗತಿ, ಸಹವಾಸ ಇವೆರಡೂ ಒಂದೇ ಇರುವವು ಎಂದು ತಿಳಿಯಿರಿ, ಯಾರಿಗೆ ಆತ್ಮಜ್ಞಾನ ಬೇಕಾಗಿದೆಯೋ ಅವರು ಸಾಧಕರಾಗುವದು ಅವಶ್ಯ ಹಾಗೂ ಯೋಗ್ಯವು. ಸಾಧಕನು ಸದ್ಗುರುವಿಗೆ ಶರಣು ಹೋಗಬೇಕು. ಅವನ ಮುಖ ದಿಂದ ಶ್ರವಣ ಮಾಡಬೇಕು. ಪರಮಾರ್ಥವನ್ನು ಸರಿಯಾಗಿ ತಿಳಿದುಕೊಳ್ಳಬೇಕು. ಅದರಂತೆ ಸರಿಯಾಗಿ ಸಾಧನೆ ಮಾಡಬೇಕು. ಅಂದರೆ ಸಾಧಕನಿಗೆ ಆತ್ಮಜ್ಞಾನವಾಗುವದು. ಆಮೇಲೆ ಇವನು ಇತರ ಅಜ್ಞ ಜನರಿಗೆ ಯೋಗ್ಯ ಮಾರ್ಗದರ್ಶನ ಮಾಡಲಿಕ್ಕೆ ಅಧಿಕಾರಿಯಾಗುವನು. ಸಾಧಕ ವೃತ್ತಿಯವರು ಸದ್ಗುರುವಿನ ಆಜ್ಞೆಯಂತೆ ನಡೆದು ಕೊಂಡು ಅದನ್ನು ರೂಢಿಸಿಕೊಳ್ಳಬೇಕು. ಅವನಿಂದ ಶ್ರವಣ ಮಾಡಿದ್ದನ್ನು ಮನನ ಮಾಡಿಕೊಂಡು ಪುನಃಪುನಃ ಆತ್ಮಾನಾತ್ಮ ವಿವೇಕ ಚಾಲೂ ಇಡಬೇಕು. ಅಂದರೆ ಸತತ ಪ್ರಯತ್ನದಿಂದ ವಿಷಯ ವಿವೇಚನೆಯ ಮಧ್ಯದಲ್ಲಿ ಹೊಸ ಹೊಸ ವಿಚಾರಗಳು ಸ್ಫುರಿಸುವವು. (೩೩) ಸಾಧಕರಿಗೆ ನಾನು ಸೂಚನೆ ಕೊಡುವದೇನೆಂದರೆ ನೀವು ಶುದ್ಧ ಅದ್ವೈತ ವಿವೇಚನೆಯನ್ನು (ಸಾರಾಸಾರ ವಿಚಾರ, ವಿವೇಕ) ಮಾಡಬೇಕು. (ಮತ್ತು ದೋಷಗಳನ್ನು ನಿವಾರಿಸಿ ಸ್ವಮತ ಪ್ರತಿಪಾದನೆಯನ್ನು ಸ್ಪಷ್ಟವಾಗಿ ತಿಳಿಸುವ ಕಾರ್ಯ ಮಾಡಬೇಕು). ಹೀಗೆ ಮಾಡಿದರೆ ನಿಜವಾದ ಸಾಧುವಿಗೆ ಯಾವ ಅನುಭವ ಬರುವದೋ ಅಂಥ ಅನುಭವ ನಿಮಗೂ ಬರುವದು. ಸಾಧಕರಿಗೂ ಬರುವದು. (೩೪) ಯಾವ ಸಾಧಕನು ಸಂತ ಸಾಧುಗಳಿಗೆ ಶರಣು ಹೋಗುವನೋ ಅವನು ಸ್ವತಃ ಸಂತ ಸಾಧು ಪದಕ್ಕೆ ಮುಟ್ಟುವನು. ಅರ್ಥಾತ್ ಶಿಷ್ಯನು ಗುರುವಿನಂತೆ ಆಗುವನು. ಸಂತನೆನಿಸುವನು. ಆಮೇಲೆ ದಯಾವಂತನಾಗಿ ಇವನು ಇತರ ಜನರಿಗೆ ಮಾರ್ಗದರ್ಶನವನ್ನು ಮಾಡುವನು. [೩೫] ಸಂತರ ಶ್ರೇಷ್ಠತ್ವ ವ ದೊಡ್ಡಗುಣ ಅಂದರೆ ಇವರ ಸಂಗತಿಯಿಂದ ಆತ್ಮ ಜ್ಞಾನವಾಗುವದು. ಇದಕ್ಕಿಂತಲೂ ಹೆಚ್ಚಿನದು ಯಾವುದೂ ಇಲ್ಲ ಆದ್ದರಿಂದ ಜೀವದ ಕಲ್ಯಾಣವಾಗಬೇಕೆನ್ನು ವವರಿಗೆ ಸಂತರ ಸಂಗತಿಯಂತಹ ಸಾಧನವು ಇನ್ನೊಂದಿಲ್ಲ. (೩೬)

ಗುರುಭಜನಾಚೇನಿ ಆಧಾರೇ। ನಿರೂಪಣಾಚೇನಿ ವಿಚಾರೇ।
ಕ್ರಿಯಾಶುದ್ಧ ನಿರ್ಧಾರೇ। ಪಾವಿಜೆ ಪದ ॥೩೭॥

ಪರಮಾರ್ಥಾಚೇ ಜನ್ಮಸ್ಥಾನ। ತೇ ಚಿ ಸದ್ಗುರೂಚೇ ಭಜನ।
ಸದ್ಗುರುಭಜನೇ ಸಮಾಧಾನ। ಅಕಸ್ಮಾತ ಬಾಣೆ ॥೩೮॥

ದೇಹ ಮಿಥ್ಯಾ ಜಾಣೋನಿ ಜೀವೇ। ಯಾಚೇ ಸಾರ್ಥಕ ಚಿ ಕರಾವೇ।
ಭಜನಭಾವೇ ತೋಷವಾವೇ। ಚಿತ್ತ ಸದ್ಗುರೂಚೇ ॥೩೯॥

ಶರಣಾಗತಾಚೀ ನಾಹೆ ಚಿಂತಾ। ತೋ ಯೇಕ ಸದ್ಗೂರು ದಾತಾ।
ಜೈಸೇ ಬಾಳಕ ವಾಢವೀ ಮಾತಾ। ನಾನಾ ಯೆತ್ನೇ ಕರೂನಿ ॥೪೦॥

ಮ್ಹಣೌನ ಸದ್ಗುರುಚೇ ಭಜನ। ಜಯಾಸಿ ಘಡೆ ತೋ ಚಿ ಧನ್ಯ।
ಸದ್ಗುರುವಿಣ ಸಮಾಧಾನ। ಆಣೀಕ ನಾಹೀ ॥೪೧॥

ಸರಲೀ ಶಬ್ದಾಚೀ ಖಟಪಟ। ಆಲಾ ಗ್ರಂಥಾಚಾ ಸೇವಟ।
ಯೇಥೇ ಸಾಂಗಿತಲೇ ಸ್ಪಷ್ಟ। ಸದ್ಗುರುಭಜನ ॥೪೨॥

ಸದ್ಗುರುಭಜನಾಪರತೇ ಕಾಹೀ। ಮೋಕ್ಷದಾಯೆಕ ದುಸರೇ ನಾಹೀ।
ಜಯಾಸ ನ ಮನೆ ತೇಹೀ। ಅವಲೋಕಾವೀ ಗುರುಗೀತಾ ॥೪೩॥

ತೇಥೇ ನಿರೋಪಿಲೇ ಬರವೇ। ಪಾರ್ವತೀಪ್ರತಿ ಸದಾಶಿವೇ।
ಯಾಕಾರಣೇ ಸದ್ಭಾವೇ। ಸದ್ಗುರುಚರಣ ಸೇವಾವೇ ॥೪೪॥

ಜೊ ಯೆ ಗ್ರಂಥೀಚಾ ವಿವೇಕ। ವಿವಂಚೂನಿ ಪಾಹೆ ಸಾಧಕ।
ತಯಾಸ ಸಾಂಪಡೆ ಯೇಕ। ನಿಶ್ಚಯು ಜ್ಞಾನಾಚಾ ॥೪೫॥

ಜೆ ಗ್ರಂಥೀ ಬೋಲಿಲೇ ಅದ್ವೈತ। ತೋ ಮ್ಹಣೋ ನಯೆ ಪ್ರಾಕೃತ।
ಸತ್ಯ ಜಾಣಾವಾ ವೇದಾಂತ। ಅರ್ಥ ವಿಷಈ ॥೪೬॥

ಸದ್ಗುರುವಿನ ಭಕ್ತಿಯಂತಹ ಆಧಾರವನ್ನು ಹಿಡಿಯಬೇಕು. ಸದಾಕಾಲ ಆತ್ಮಾನಾತ್ಮ ವಿಚಾರ ಮಾಡಬೇಕು. ಮತ್ತು ಶುದ್ಧ ಆಚರಣೆ ಇಡಬೇಕು. ಈ ಮೂರು ನಿಯಮಗಳು ಮನುಷ್ಯನನ್ನು ಅರ್ಥಾತ್ ಸಾಧಕನನ್ನು ಖಾತ್ರಿಯಿಂದ ಬ್ರಹ್ಮ ಪದಕ್ಕೆ ಒಯ್ಯುವವು. (೩೭) ಸದ್ಗುರುವಿನ ಭಕ್ತಿಯಲ್ಲಿ ಪರಮಾರ್ಥ ಜನ್ಮ ಆಗುವದು. ಸದ್ಗುರುವಿನ ಭಕ್ತಿಯಿಂದ ಮನುಷ್ಯನಿಗೆ ಸಮಾಧಾನದ ಲಾಭ ತ್ವರಿತವಾಗಿ ದೊರೆಯುವದು. (೩೮) ನಮ್ಮ ಈ ದೇಹವು ನಿಜವಾದದ್ದಲ್ಲ. ಈ ಮಾತನ್ನು ಅಗದೀ ಮನಃಪೂರ್ವಕ ನಂಬಿರಿ, ತಿಳಿಯಿರಿ, ಹಾಗೂ ಇದನ್ನು ಸಾರ್ಥಕ ಮಾಡಿಕೊಳ್ಳಿರಿ. ಅತ್ಯಂತ ಶುದ್ಧಭಾವದಿಂದ ಮನಃಪೂರ್ವಕ ಭಕ್ತಿ ಮಾಡಿ ಸದ್ಗುರುವಿನ ಚಿತ್ತವನ್ನು ಪ್ರಸನ್ನಗೊಳಿಸಿರಿ. (೩೯) ಶರಣು ಬಂದವರನ್ನು ಸರಿಯಾಗಿ ನೋಡಿಕೊಂಡು ಕಾಳಜಿಯಿಂದ ಕೃಪೆಮಾಡುವವನು ಸದ್ಗುರುವೇ ಆಗಿರುವನು. ಇವನು ಮಾಡುವಂಥದನ್ನು ಬೇರೆ ಯಾರೂ ಮಾಡಲಾರರು. ಯಾವ ಪ್ರಕಾರ ತಾಯಿ ತನ್ನ ಸಣ್ಣ ಮಗನನ್ನು ಅನೇಕ ಪ್ರಕಾರದಿಂದ ಸಂಭಾಳಿಸಿ ತನ್ನ ಕಷ್ಟವನ್ನು ಬದಿಗಿಟ್ಟು ಮಗುವಾಗಿರುವವನನ್ನು ದೊಡ್ಡವನನ್ನಾಗಿ ಮಾಡುವಳೋ ಅದರಂತೆ ಸದ್ಗುರುವಾದರೂ ಶರಣು ಬಂದ ಶಿಷ್ಯನನ್ನು ಅನೇಕ ಪ್ರಕಾರದಿಂದ ಸಂಭಾಳಿಸಿ ಪರಮಾರ್ಥದಲ್ಲಿ ಸಣ್ಣವನಿದ್ದವನನ್ನು ದೊಡ್ಡವನನ್ನಾಗಿ ಮಾಡುವರು ಶಿಷ್ಯನ ಅಧ್ಯಾತ್ಮ ಶಕ್ತಿ ಬೆಳೆಯು ವಂತೆ ಮಾಡುವರು ಅವನನ್ನು ಅಜ್ಞಾನದಿಂದ ಬಿಡಿಸಿ ಜ್ಞಾನಿಯನ್ನಾಗಿ ಮಾಡುವರು. (೪೦) ಸದ್ಗುರುವಿನ ಭಕ್ತಿ ಯಾರ ಕಡೆಯಿಂದ ಘಟಿಸುವದೋ ಅವರ ಜೀವನವು ಧನ್ಯವಾಗುವದು. ಸದ್ಗುರುವಿನ ಹೊರತಾಗಿ ಸಮಾಧಾನ ಹೊಂದುವ ಬೇರೆ ಮಾರ್ಗಗಳು ಯಾವವೂ ಇಲ್ಲ. (೪೧) ಈ ಪ್ರಕಾರ ಪರಮಾರ್ಥದ ಸಿದ್ಧಾಂತ ಮತ್ತು ವ್ಯವಹಾರ ಇವುಗಳನ್ನು ಸ್ಪಷ್ಟವಾಗಿ ತಿಳಿಸಿದ ಎಪ್ಪತ್ತು ಸಮಾಸಗಳು ಮುಗಿದುದನ್ನು ಕಂಡು ಅಂತರ್ಮುಖ ಶಿರೋಮಣಿಗಳಾದ ಶ್ರೀಸಮರ್ಥರಿಗೆ ಇನ್ನು ಗ್ರಂಥ ಹೇಳುವದು ಸಾಕು ಎಂದು ಅನಿಸಿತು. ಮೂಲ ವಿಷಯಕ ಗ್ರಂಥ ಪೂರ್ಣವಾ ದನ್ನದರ ಹೇಳಿಕೆಯು ಭಾಷೆಯು ಈ ಸಮಾಸದ ಕೊನೆಯಲ್ಲಿ ಕಂಡು ಬರುವದು. ಆದರೆ ಶ್ರೀ ಸಮರ್ಥರು ಇಲ್ಲಿಗೇ ನಿಲ್ಲಲಿಲ್ಲವೆಂಬುದು ನಮ್ಮೆಲ್ಲರ ಭಾಗ್ಯವೆಂದು ತಿಳಿಯಬೇಕು:- ಈಗ ಶಬ್ದದ ಖಟಪಟಿ ಮುಗಿಯಿತು. ಅಂದರೆ ಎಲ್ಲ ವಿವರಣೆಯನ್ನು ಹೇಳಿ ಮುಗಿಸಿಯಾಯಿತು. ವಿವರಿಸಿ ವಿವರಿಸಿ ಶಬ್ದಗಳ ಆಟ ಮುಗಿದು ಈ ಗ್ರಂಥದ ಕೊನೆಯು ಬಂದಿತು. ಈ ಗ್ರಂಥದಲ್ಲಿ ಸದ್ಗುರುವಿನ ಭಕ್ತಿ ಮಾಡಬೇಕೆಂಬುದನ್ನು ಅಗದೀ ಸ್ಪಷ್ಟ ರೀತಿಯಿಂದ ಹೇಳಲಾಗಿದೆ.[೪೨] ಸದ್ಗುರುವಿನ ಭಕ್ತಿಯು ಹೊರತಾದ ಇತರ ಸಾಧನಗಳು ಮೋಕ್ಷ ಕೊಡಲಿಕ್ಕೆ ಸಮರ್ಥವಾಗುವದಿಲ್ಲ. [ಭಕ್ತಿಯು ಸಾಧನವು ಮುಕ್ತಿಗೆ ಮಾರ್ಗವು] ನನ್ನ ಈ ಹೇಳಿಕೆಯು ಯಾರಿಗೆ ಒಪ್ಪಿಗೆ ಇಲ್ಲವೋ ಅವರು ಗುರುಗೀತಾದ ಅಭ್ಯಾಸ ಮಾಡಬೇಕು. [೪೩] ಗುರುಗೀತೆಯಲ್ಲಿ ಶ್ರೀ ಶಂಕರನು ಪಾರ್ವತಿಗೆ ಭಕ್ತಿ ಸಾಧನವೇ ಯೋಗ್ಯವಾದದ್ದು ಎಂದು ಉತ್ತಮ ರೀತಿಯಲ್ಲಿ ತಿಳಿಸಿ ಹೇಳಿದ್ದಾನೆ. ಆದ್ದರಿಂದ ಅಗದೀ ಮನಃಪೂರ್ವಕ ನಿಜವಾದ ಶ್ರದ್ಧೆಯಿಂದ ಶ್ರೀ ಸದ್ಗುರುವಿನ ಪಾದಸೇವೆ ಮಾಡಬೇಕು. [೪೪] ಈ ಗ್ರಂಥದಲ್ಲಿ ಯಾವ ಯಾವ ವಿಚಾರಗಳನ್ನು ಹೇಳಲಾಗಿದೆಯೋ ಅವುಗಳನ್ನು ಯಾವ ಸಾಧಕ ಚನ್ನಾಗಿ ಮನನ ಮಾಡುವನೋ ಅವನಿಗೆ ಈ ಗ್ರಂಥದಲ್ಲಿ ಈವರೆಗೆ ಹೇಳಿದ್ದೆಲ್ಲವೂ ಆತ್ಮಜ್ಞಾನದ ವಿಷಯವೇ ಹೇಳಲಾಗಿದೆ ಎಂಬ ಮನವರಿಕೆಯಾಗುವದು. [೪೫] ಅದ್ವೈತ ಗ್ರಂಥಗಳು ಅಥವಾ ಈ ಗ್ರಂಥವು ಮರಾಠಿ ಭಾಷೆಯಲ್ಲಿ ಇರುವದೆಂದು, ಇದರ ಮಹತ್ವ (ಕಿಮ್ಮತ್ತು, ಬೆಲೆ) ಕಡಿಮೆ ಎಂಬ ಭಾವನೆ ಯಿಂದ ನೋಡಬಾರದು. ಗ್ರಂಥದ ಅರ್ಥ ಕೇವಲ ಅದ್ವೈತ ಇರುವದಾದರೆ ಆ ತತ್ವಜ್ಞಾನದ ಗ್ರಂಥವು ಯಾವ ಭಾಷೆಯದೇ ಇರಲಿ, ಅದನ್ನು ಅಗದೀ ನಿಜವೆಂದು ನಂಬಬೇಕು.(೪೬)

ಪ್ರಾಕೃತೇ ವೇದಾಂತ ಕಳೆ । ಸಕಳ ಶಾಸ್ತ್ರೇ ಸಾಹಾತಾ ಮಿಳೆ ।
ಆಣೀ ಸಮಾಧಾನ ನಿವಳೆ । ಅಂತರ್ಯಾಮೀ ॥೪೭॥

ತೇ ಪ್ರಾಕೃತ ಮ್ಹಣೋ ನಯೆ । ಜೇಥೇ ಜ್ಞಾನಾಚೆ ಉಪಾಯೆ ।
ಮೂರ್ಖಾಸಿ ಹೇ ಕಳೆ ಕಾಯೆ । ಮರ್ಕಟಾ ನಾರಿಕೇಳ ಜೈಸೇ ॥೪೮॥

ಆತಾ ಅಸೋ ಹೇ ಬೋಲಣೇ । ಅಧಿಕಾರ ಪರತ್ವೇ ಘೇಣೇ ।
ಶಿಂಪೀ ಮಧೀಲ ಮುಕ್ತ ಉಣೇ । ಮ್ಹಣೋ ನಯೆ ॥೪೯॥

ಜೇಥೇ ನೇತಿ ನೇತಿ ಶ್ರುತೀ । ತೇಥೇ ನ ಚಲೆ ಭಾಷಾವಿತ್ಪತ್ತೀ ।
ಪರಬ್ರಹ್ಮ ಆದಿಅಂತೀ । ಅನುವಾಚ್ಯ ॥೫೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
''ದೇಹಾಂತ ನಿರೂಪಣ'' ನಾಮ ಸಮಾಸ ದಶಮ ॥

ದಶಕ ಸಪ್ತಮ ಸಮಾಪ್ತ

ಮರಾಠಿಯಲ್ಲಿ ಬರೆದ ವೇದಾಂತವು ಸಾಮಾನ್ಯ ಜನರಿಗೆ ಸಹ ತಿಳಿಯಲು ಸುಲಭವಾಗುವದು. ಇದರ ಹೊರತಾಗಿ ಸಂಸ್ಕೃತದ ಅದ್ವೈತ ಗ್ರಂಥಗಳಲ್ಲಿ ಹೇಳಲಾಗಿರುವ ಅವೇ ವೇದಾಂತವನ್ನು ಈ ಇತರ ಭಾಷೆಯ ಗ್ರಂಥ ಗಳಲ್ಲಿ ಸಹ ಹೇಳಲಾಗಿವೆ ಎಂಬುದರ ಬಗ್ಗೆ ಖಾತ್ರಿಯಾಗುವದು. ಮತ್ತು ಈ ಖಾತ್ರಿ ಪಟಾಯಿಸಿತೆಂದಾಗ ಅಂತ ರ್ಯಾಮದಲ್ಲಿ ಸಮಾಧಾನ ಪ್ರಾಪ್ತವಾಗುವದು. (೪೭) ಯಾವ ಗ್ರಂಥದಲ್ಲಿ ಆತ್ಮಜ್ಞಾನದ ವಿವರ ಮತ್ತು ಉಪಾಯ ಸರಿಯಾಗಿ ಹೇಳಲಾಗಿದೆಯೋ ಆ ಗ್ರಂಥವು ಸಂಸ್ಕೃತದಲ್ಲಿ ಇಲ್ಲವದ್ದಕ್ಕೆ ಅಂದರೆ ನಾಡ ಭಾಷೆಯಲ್ಲಿ ಇದ್ದರೆ ಅದು ಕಡಿಮೆಯದು, ವ್ಯರ್ಥವು ಎಂದು ಅನ್ನಬಾರದು. ಹಾಗೆ ಅಂದವರನ್ನು ನಂಬಬಾರದು. ಮಂಗನಿಗೆ ಟೆಂಗಿನಕಾಯಿಯ ಕಿಮ್ಮತ್ತು ತಿಳಿಯುವದಿಲ್ಲ. ಯಾಕೆಂದರೆ ಟೆಂಗಿನ ಕಾಯಿಯ ಚಿಪ್ಪು ಬಹಳ ಗಟ್ಟಿ ಇರುವದು. ಇದರಂತೆ ಮೂರ್ಖ ರಿಗೂ ಬುದ್ಧಿಗೇಡಿಗಳಿಗೂ ಇದು ತಿಳಿಯುವದಿಲ್ಲ. ಹೊಳೆಯುವದೂ ಇಲ್ಲ. (೪೮) ಈಗ ಈ ಮಾತುಗಳು ಸಾಕು. ಪ್ರತಿಯೊಬ್ಬರೂ ತಮ್ಮ ಬುದ್ಧಿಯ ಶಕ್ತ್ಯಾನುಸಾರವಾಗಿ ಗ್ರಂಥಗಳಿಂದ ಯಾವುದನ್ನು ಗ್ರಹಣ ಮಾಡಬೇಕೋ ಅದನ್ನು ಗ್ರಹಿಸಬೇಕು. ಶಿಂಪಿನಲ್ಲಿ ಮುತ್ತು ತಯಾರಾಗುವದೆಂದು ಮುತ್ತನ್ನು ಯಾರೂ ಕಿಮ್ಮತ್ತಿನದಲ್ಲವೆಂದು ತಿಳಿಯುವದಿಲ್ಲ. (೪೯) ಬ್ರಹ್ಮಸ್ವರೂಪ ತಿಳಿಯುವದಿಲ್ಲವೆಂದು ವೇದಗಳು ಸೋಲನ್ನೊಪ್ಪಿಕೊಂಡವು. ಅಂಥಲ್ಲಿ ಭಾಷೆಯ ಚಾತುರ್ಯವು ಎಷ್ಟೂ ಉಪಯೋಗ ಬೀಳುವದಿಲ್ಲ. ಆರಂಭದಿಂದ ಕೊನೆಯವರೆಗೆ ಪರಬ್ರಹ್ಮವು ಶಬ್ದದ ಆಳವಿನಲ್ಲಿ ಬರಲಾರದ್ದೇ ಇರುವದು. ಇದು ಶಬ್ದದ ಆಳವಿನ ಆಚೆಗೆ ಇರುವಂಥದಾಗಿದೆ. ಅಂದರೆ ಪರಬ್ರಹ್ಮವು ಎಂದೆಂದಿಗೂ ಅನಿರ್ವಾಚ್ಯವು. ನಮ್ಮ ಆಳವಿನ ಆಚೆಗೆ ಇರುವಂಥವೇ ಆಗಿರುವದು. (೫೦)

ಶ್ರೀ ದಾಸಬೋಧದಲ್ಲಿಯ ಏಳನೆಯ ದಶಕದ ಗುರುಶಿಷ್ಯರ ಸಂವಾದದ
"ದೇಹಾಂತ ನಿರೂಪಣ"ವೆಂಬ ಹತ್ತನೆಯ ಸಮಾಸವು ಮುಗಿದುದು.

## ದಶಕ ೮. 'ಮಾಯೋದ್ಭವ'

ಈ ದಶಕದ ಹೆಸರು ಮಾಯೋದ್ಭವವೆಂದು ಕಂಡು ಬರುವದು. ಆದರೆ ಶ್ರೀ ಸಮರ್ಥರು ಇದಕ್ಕೆ "ಜ್ಞಾನದರ್ಶಕ" ಎಂದಿದ್ದಾರೆ. ಈ ಹೆಸರೇ ಅಗದೀ ಯೋಗ್ಯವಿರುವದೆಂದು ಅನಿಸುವದು. ವಾಸ್ತವಿಕವಾಗಿ ಈ ಈ ವಿಶ್ವವು ದೃಶ್ಯ ಪರಿಚ್ಛಿನ್ನ (ಪ್ರಕಟ) ನಶ್ವರ, ನಾಶವಂತ, ಭೇದಗಳಿಂದ ತುಂಬಿದ, ವಿಕಾರಿ, ಸಗುಣ ಮತ್ತು ಮೃತ್ಯುವಿನ ಆಧೀನ ಉಳ್ಳದ್ದಿರುವದು. ಈ ವಿಶ್ವಕ್ಕೆ ಆಧಾರವಾಗಿರುವ ಮತ್ತು ಇದಕ್ಕೆ ಮೂಲವಾಗಿರುವ ಪರ ಬ್ರಹ್ಮವು ಅದೃಶ್ಯ, ಅನಂತ ಅವಿನಾಶಿ, ಒಂದೇ ಒಂದಾದದ್ದು, ಅವಿಕಾರಿ, ಗುಣರಹಿತ ಮತ್ತು ಅಮೃತತ್ವವುಳ್ಳದ್ದಿರುವದು. ಇದರಲ್ಲಿ ಮೂರು ಪ್ರಕಾರಗಳು ಸಂಭವಿಸುವವು. (ಪರ್ಯಾಯ ಒಂದು) ವಿಶ್ವವು ಸತ್ಯವಿರುವದು. ಪರಬ್ರಹ್ಮವು ಸತ್ಯ ಅಲ್ಲ: ಇದು ಜ್ಞಾನಿ ಪುರುಷರಿಗೆ ಮಾನ್ಯವಿಲ್ಲ. (ಪರ್ಯಾಯ ಎರಡು) ವಿಶ್ವಸತ್ಯವಿರುವದು. ಮತ್ತು ಪರಬ್ರಹ್ಮವೂ ಸಹ ಸತ್ಯವಿರುವದು: ಜ್ಞಾನಿ ಪುರುಷರಿಗೆ ಇದೂ ಸಹ ಮಾನ್ಯವಿಲ್ಲ. ಸ್ಥಳ, ಕಾಲದಿಂದ ಗೊತ್ತುಪಡಿಸಿದ (ಬಿಗಿಯಲ್ಪಟ್ಟ) ವಿಶ್ವವು ಮೃತ್ಯುವಿನ ಸ್ವಾಧೀನವಿರುವದು. ಆದ್ದರಿಂದ ಇದು ಸತ್ಯವಿರಲು ಶಕ್ಯವಿಲ್ಲ. ಇದರ (ಪರಬ್ರಹ್ಮದ) ಸತ್ಯತ್ವವು ವಿಶ್ವದ ಆಚೆಗೆ ಇರಬಹುದಾಗಿದೆ. (ಪರ್ಯಾಯ ಮೂರು) ವಿಶ್ವ ಸತ್ಯವಲ್ಲ. ಪರಬ್ರಹ್ಮ ಮಾತ್ರ ಸತ್ಯವಿರುವದು: ಜ್ಞಾನಿಪುರುಷರಿಗೆ ಇದು ಪೂರ್ಣ ಮಾನ್ಯವಿರುವದು. ವಿಶ್ವಸತ್ಯವಲ್ಲ ಆದರೆ ಇದು ಅಸತ್ಯವೂ ಸಹ ಅಲ್ಲ ಇಲ್ಲಿ ಇರುವ ಖರೆ ಪ್ರಶ್ನೆ ಯಾವುದೆಂದರೆ ಅನಾದಿ, ಏಕರಸ, ಏಕಜಿನಸಿ, (ಒಂದೇವಸ್ತು) ನಿಷ್ಕ್ರಿಯ, ನಿರ್ಗುಣ, ಅವ್ಯಯ, (ಶಾಶ್ವತ) ಮತ್ತು ಅವ್ಯಕ್ತ (ಅದೃಶ್ಯ)ವಿರುವ ಪರಬ್ರಹ್ಮದಲ್ಲಿ (ಪರಬ್ರಹ್ಮದೊಳಗೆ) ಅಗದೀ ಹುಬೇಹೂಬ ಸರಿಯಾಗಿ ಇದರ ವಿರುದ್ಧವಿರುವಂಥ ಅಂತವಂತ (ನಾಶವಂತ), ಬಹುರಸ, ಬಹುಜಿನಸಿ, (ಅನೇಕ ವಸ್ತು) ಸಕ್ರಿಯ, ಸಗುಣ, ವ್ಯಯಯುಕ್ತ [ಸವೆಯುವಂಥ] ಮತ್ತು ವ್ಯಕ್ತವುಳ್ಳ ಈ ವಿಶ್ವವು ಹೇಗೆ ನಿರ್ಮಾಣವಾಯಿತು? ಈ ಪ್ರಶ್ನೆಯನ್ನು ಬಿಡಿಸಿ ನೋಡಿದರೆ ನಮಗೆ ಅನಿಸುವದೇನಂದರೆ ಅಖಂಡ ಉಳ್ಳವನಲ್ಲಿ ಖಂಡ [ಭಾಗ, ತುಂಡು] ಹೇಗೆ ಆಯಿತು? ಒಂದೇ ವಸ್ತುವು ಬಹುರೂಪಿ ವಸ್ತು ಹೇಗೆ ಆಯಿತು? ಅದ್ವೈತದಲ್ಲಿ ದ್ವೈತ ಹೇಗೆ ಬಂದಿತು? ಅಮೃತ ಬ್ರಹ್ಮಕ್ಕೆ ಮೃತ್ಯುವು ವ್ಯಾಪಿಸಿದ್ದರ ದೃಶ್ಯ ಹೇಗೆ ಉಂಟಾಯಿತು? ಇವೆಲ್ಲವನ್ನೂ ಚನ್ನಾಗಿ ತಿಳಿದುಕೊಂಡು ಮನಸ್ಸಿನ ಸಮಾಧಾನವಾಗಲಿಕ್ಕೇ ಬೇಕು. ಆದ್ದರಿಂದ ಈ ಗೂಢವನ್ನು

ಬಿಡಿಸಲು ವೇದಾಂತದಲ್ಲಿ ಎರಡು ಪ್ರಕಾರದಿಂದ (ಎರಡು ದೃಷ್ಟಿಕೋನದಿಂದ) ವಿಚಾರ ಮಾಡುವರು. ಒಂದನೆಯ ದೃಷ್ಟಿಕೋನವು ಆತ್ಮಸಾಕ್ಷಾತ್ಕಾರಿಯಾದಬ್ರಹ್ಮಜ್ಞಾನಿಪುರುಷರದಿರುವದು. ಅದೇ ಎರಡನೇ ದೃಷ್ಟಿಕೋನವು ದೃಶ್ಯ – ಸಾಕ್ಷಾತ್ಕಾರಿಅಜ್ಞಾನಿಪುರುಷರದಿರುವದು. ನಿರಂತರ ಧ್ಯಾನದಿಂದ – ಅಖಂಡ ಉಪಾಸನೆಯಿಂದ ಅಥವಾ ಅತ್ಯಂತ ಆಳವಾದ ಮತ್ತು ಸತತವಾಗಿ ಬ್ರಹ್ಮವಿಚಾರದಿಂದ ಯಾರ ಮನವು ಕೇವಲ ಬ್ರಹ್ಮಸ್ವರೂಪದಲ್ಲಿ ಇರುವ ದನ್ನು ಕಲಿಯುವದೋ [ಕಲಿತಿರುವದೋ] ಅವರಿಗೆ "ನಾನು ಬ್ರಹ್ಮವೇ ಇರುವೆ" ಅನ್ನುವ ಪ್ರತ್ಯಕ್ಷ ಸಾಕ್ಷಾತ್ಕಾರ ವಾಗುವದು. ಇಂಥ ಬ್ರಹ್ಮಜ್ಞಾನಿ ಪುರುಷರಿಗೆ ಒಂದೇ ಒಂದು ಪರಬ್ರಹ್ಮದ ಹೊರತಾಗಿ ಇತರ ಯಾವುದರದೂ ಪ್ರಚೀತಿ (ಅನುಭವ) ಆಗುವದಿಲ್ಲ. ಇವರ ದೃಷ್ಟಿಯಲ್ಲಿ ಈ ವಿಶ್ವವು ಆಗಿಯೇ ಇಲ್ಲ. ಮತ್ತು ಇವರು ಅನ್ನುವ ದೇನಂದರೆ ಸತ್ಯಜ್ಞಾನಮಯ, ಅನಂತ, ಅಪಾರ, ನಿರ್ಗುಣ, ನಿರ್ವಿಕಾರ ಪರಬ್ರಹ್ಮವೇ ನಿಜವಾದ ಅರ್ಥದಲ್ಲಿ ಇರುವಂಥದ್ದಾಗಿದೆ. ಇನ್ನೊಂದು ನಿಜವಾದ ಅಸ್ತಿತ್ವ ಅನ್ನುವದೇ ಇಲ್ಲ.ಅರ್ಥಾತ್ ಒಬ್ಬನು ಇನ್ನೊಂದನ್ನು ಅಥವಾ ಎರಡನೆಯದನ್ನು ನಿರ್ಮಾಣ ಮಾಡಿದನು ಅನ್ನುವ ಮಾತೇ ನಿಜವಲ್ಲ. ಆದರೆ ಯಾವನ ಮನಸ್ಸು ಈ ಸತ್ಯ ಜ್ಞಾನದ ಅವಸ್ಥೆಗೆ ಮುಟ್ಟಿಲ್ಲವೋ ಅಂಥ ಸಾಮಾನ್ಯ ವ ಅಜ್ಞಾನೀ ಮನುಷ್ಯನಿಗೆ ನಾನು ಖರೆ ಮತ್ತು ಜಗತ್ತು ಖರೆ ಮತ್ತು ಆ ಬ್ರಹ್ಮವೂ ಖರೆ ಎಂದು ಅವನಿಗೆ ಪ್ರಾಮಾಣಿಕವಾಗಿ ಅನಿಸುವದು. ಸ್ಥಳ, ಕಾಲ, ಮತ್ತು ಕಾರ್ಯ ಕಾರಣ ಈ ತ್ರಿವಿಧ ಚೌಕಟ್ಟಿನಲ್ಲಿ ಹರಿದಾಡುವ ಅಜ್ಞಾನಿ ಮನಸ್ಸು ಸ್ವಸ್ಥ ಸುಮ್ಮನೆ ಕೂಡ್ರುವದಿಲ್ಲ. "ನಿರ್ಗುಣ ಬ್ರಹ್ಮದಲ್ಲಿಈ ದೃಶ್ಯ ಸಗುಣ ವಿಶ್ವ ಹೇಗೆ ನಿರ್ಮಾಣವಾಯಿತು? ಇದರ ಬಗ್ಗೆ ಹೇಳು"ಎಂದು ತನ್ನ ವಿಚಾರ ತಿಳಿಸು ತ್ತದೆ ಕೇಳುತ್ತದೆ. ಅಜ್ಞಾನ ಮನದ ಈ ಜಿಜ್ಞಾಸೆಯನ್ನು ತೃಪ್ತಿ ಮಾಡುವದಕ್ಕಾಗಿ ಅದಕ್ಕೆ ವಿಶ್ವ ನಿರ್ಮಾಣದ ಕಥೆಯನ್ನು ಹೇಳಬೇಕಾಗುವದು. ಆ ಕಥೆಯ ಸಾರಾಂಶ ಹೀಗಿರುವದು:- ಮೊದಲು ಒಂದು ಮಾತನ್ನು ಹೇಳುವೆ ಅದನ್ನು ಪೂರ್ಣ ಲಕ್ಷ್ಯದಲ್ಲಿಡಬೇಕು. ವಿಶ್ವದ ನಿರ್ಮಾಣ ಮತ್ತು ವಿಶ್ವದ ರಚನೆ ಇವುಗಳ ವರ್ಣನೆ ಮಾಡಬೇಕಾದರೆ ದೃಶ್ಯದ ಆಧಾರವನ್ನೇ ಆಶ್ರಯಿಸಬೇಕಾಗುವದು. ದ್ವೈತದ ಭಾಷೆಯನ್ನೇ ಬಳಿಸಬೇಕಾಗುವದು. ಯಾವುದೇ ಒಂದು ವಸ್ತು ನಿರ್ಮಿತವಾಗಬೇಕಾದರೆ ಚಲನ ವಲನ ಆಗಬೇಕಾಗುವದು. ಚಲನವಲನ ಉಂಟು ಮಾಡುವದು ಶಕ್ತಿಯ ಗುಣವಿರುವದು. ಆದ್ದರಿಂದ ವಿಶ್ವನಿರ್ಮಾಣ ಮಾಡುವದರ ಮೂಲದಲ್ಲಿ ಒಂದು ಶಕ್ತಿ ಇರಲಿಕ್ಕೆ ಬೇಕು. ಪರಬ್ರಹ್ಮನಲ್ಲಿ ಅನಂತ ಶಕ್ತಿಗಳು ಇರುವವು. ಇವುಗಳ ಪೈಕಿ ಮಾಯಾ ಎಂಬ ಹೆಸರಿನ ಒಂದು ಅತಿ ಅದ್ಭುತ ಮತ್ತು ವಿಲಕ್ಷಣ ಶಕ್ತಿ ಇರುವದು. ಪರಬ್ರಹ್ಮದಿಂದ ಇದು ಪ್ರತ್ಯೇಕವಾದದ್ದಲ್ಲವೆಂಬುದುನಿಜವೇ ಸರಿ. ಆದರೆ ಮೂಲ ಬ್ರಹ್ಮದ ಒಂದು ಭಾಗದ ಮೇಲೆ ಇದು ಮುಸುಕು ಹಾಕುವದು ಇದರಿಂದ ನಿರ್ಗುಣ ಮತ್ತು ಏಕಜಿನಸಿ (ಏಕಾಕಿ)ಬ್ರಹ್ಮ ವುಸಗುಣ ದೃಶ್ಯ ಮತ್ತು ಭೇದ, ಭಿನ್ನತ್ವ, (ನಾನಾಪ್ರಕಾರ)ಗಳಿಂದ ತುಂಬಿದೆಯೆಂದು ಅನಿಸುತ್ತದೆ. ಮಾಯೆಯ ಆವರಣ (ಜಾಲ) ದಲ್ಲಿ ಕೆಲಸ ಮಾಡುವ ಓಡಾಡುವ ಜೀವಗಳಿಗೆ ಈ ದೃಶ್ಯ ವಿಶ್ವವು [ತೋರುವ ಜಗತ್ತು] ಸಂಪೂರ್ಣ ನಿಜವೆನಿಸುವದು. ಅಜ್ಞಾನದ ಮೂಲಕ ಇಂದ್ರಿಯಗಳ ವ್ಯಾಪಾರದ ಮೇಲೆ ಅವಲಂಬಿಸಿರುವ ಜೀವನವು ನಿಜವೆನಿಸುವದು. ಜೀವದ ಅವಸ್ಥೆಯು ಹೇಗೆ ಹೇಗೆ ಬದಲಾಗುತ್ತ ಹೋಗುವದೋ ಅದರದರಂತೆ ವಿಶ್ವದ ಸ್ವರೂಪವು ಅದರ ಮಟ್ಟಿಗೆ ಅಂದರೆ [ಆಯಾ ಜೀವದ ಮಟ್ಟಿಗೆ] ಬದಲಾಗುತ್ತ ಹೋಗುವದು. ಜೀವವು ಬ್ರಹ್ಮ ರೂಪ ಹೊಂದಿದ ಕೂಡಲೇ ಅದಕ್ಕೆ ವಿಶ್ವವೂ ಸಹ ಬ್ರಹ್ಮರೂಪಕಾಣುವದು. ಅಜ್ಞಾನ ನಿರ್ಮಾಣ ಮಾಡಿ ವಿಶ್ವ ಭ್ರಮ ಉಂಟು ಮಾಡುವಿಕೆ ಮತ್ತು ಅದೇ ಅಜ್ಞಾನವನ್ನು ಕಡಿಮೆ ಮಾಡಿ ವಿಶ್ವವನ್ನು ಬ್ರಹ್ಮ ರೂಪದಲ್ಲಿ ತೋರಿಸುವ ಆಟ ಇದು ಮೂಲ ಮಾಯೆಯದೇ ಆಗಿದೆ. ಇದು ಹಾಗೇಕೆ? ಈ ಪ್ರಶ್ನೆಗೆ ಉತ್ತರವನ್ನು ಮನುಷ್ಯ ಬುದ್ಧಿಯು ಕೊಡಲು ಶಕ್ಯವಿರುವದಿಲ್ಲ. ಅಂತೆಯೇ ಭಗವದ್ಗೀತೆಯು ಇದಕ್ಕೆ "ದೈವೀ ಮಾಯಾ" ಅನ್ನುತ್ತದೆ. ಮೂಲ ಮಾಯೆಯಿಂದ ಗುಣ ಮಾಯೆ ನಿರ್ಮಾಣವಾಗುವದು. ಮತ್ತು ಗುಣ ಮಾಯೆಯಿಂದ ಯಥಾ ಪ್ರಕಾರ ಈ ದೃಶ್ಯವಿಶ್ವವು ಆಕಾರ ಹೊಂದುವದು.ನಮ್ಮ ಜ್ಞಾನದ ಮಟ್ಟ ಎಷ್ಟಿರುವದೋ ಅದರ ಮೇಲಿಂದ ವಿಶ್ವದ ಅರ್ಥ ಅವಲಂಬಿಸಿಕೊಂಡಿರುವದು. ಆದ್ದರಿಂದ ಇದು ಜ್ಞಾನದ ದಶಕವೇ ಆಗಿದೆ.

### ಸಮಾಸ ೧ : ದೇವ ದರ್ಶನ

॥ಶ್ರೀರಾಮ॥ ಶ್ರೋತೀ ವ್ಹಾವೇ ಸಾವಧ। ವಿಮಳ ಜ್ಞಾನ ಬಾಳಬೋಧ।
ಗುರು ಶಿಷ್ಯಾಚಾ ಸಂವಾದ। ಅತಿಸುಗಮ ಪರಿಯೆಸಾ ॥೧॥

ನಾನಾ ಶಾಸ್ತ್ರೇ ಧಾಂಡೋಳಿತಾ। ಆಯುಷ್ಯ ಪುರೇನಾ ಸರ್ವಥಾ।
ಅಂತರೀ ಸಂಶಯಾಚೀ ವೇಥಾ। ವಾಢೋಂಚಿ ಲಾಗೆ ॥೨॥

ನಾನಾ ತೀರ್ಥೇ ಥೋರಥೋರೇ। ಸೃಷ್ಟೀ ಮಧ್ಯೇ ಅಪಾರೇ।
ಸುಗಮೇ ದುರ್ಗಮೇ ದುಷ್ಕರೇ। ಪುಣ್ಯದಾಯಕೇ ॥೩॥

ಐಸೀ ತೀರ್ಥೇ ಸರ್ವ ಹಿ ಕರೀ। ಐಸಾ ಕೋಣಾರೇ ಸಂಸಾರೀ।
ಫಿರೋ ಜಾತಾ ಜನ್ಮವರೀ। ಆಯುಷ್ಯ ಪುರೇನಾ ॥೪॥

# ದಶಕ ೮. ಸಮಾಸ ೧. ದೇವ ದರ್ಶನ (ನುಡಿ ೬೦)

ನಮ್ಮ ಈ ಭೂಮಿಗೆ ಕರ್ಮಭೂಮಿ ಎನ್ನುವರು. ಇಲ್ಲಿಯ ನಿಸರ್ಗ ಸೃಷ್ಟಿಯ ನಿಯಮವೆಂದರೆ ಕಷ್ಟ ಕರ್ಮ (ಪರಿಶ್ರಮ)ವನ್ನು ಯಾವನು ಮಾಡುವನೋ ಅವನ ಕರ್ಮ ಸಿದ್ಧವಾಗುವದು. ಅವನ ಉದ್ದೇಶವು ಕೈಗೂಡುವದು. ಅಜ್ಞಾನಿ ಜನರು ಈ ನಿಯಮವನ್ನು ಆತ್ಮಜ್ಞಾನದಅಥವಾ ದೇವದರ್ಶನದ ವಿಷಯದಲ್ಲಿಯೂ ಸಹ ನಿಜವೆಂದು ತಿಳಿಯುವರು. ಕಷ್ಟವಿಲ್ಲದೇ ದೇವರ ದರ್ಶನವಾಗುವದಿಲ್ಲವೆಂದು ಇವರು ಅನ್ನುವರು. ಇವರ ಅಭಿಪ್ರಾಯ ತಪ್ಪು ಇರುವದು. ದೇವರ ದರ್ಶನವೆಂದರೆ (ಗುಡಿ ಗುಂಡಾರಗಳಲ್ಲಿಯ ಮೂರ್ತಿಗಳಲ್ಲ). ಆತ್ಮಜ್ಞಾನವು. ಜ್ಞಾನವು ಅನುಭವದ್ದಿರುವದು ಮನುಷ್ಯನಿಗೆ ಬರುವ ಅನುಭವದಲ್ಲಿ ಸ್ವಸ್ವರೂಪದ ಅನುಭವವು ಪರಮ ಶ್ರೇಷ್ಠವಾದದ್ದಿರುವದು. ಇಂಥ ಅನುಭವದಿಂದ ಪರಬ್ರಹ್ಮ ಸ್ವರೂಪದ ಆಕಲನವಾಗುವದು. ನಿಜವಾದ ದೇವರು ಅತೀಂದ್ರಿಯ ಮತ್ತು ಅದೃಶ್ಯವಿರುವದು. ಪಂಚಭೂತಮಯ ವಿಶ್ವದಲ್ಲಿಯ ಪದಾರ್ಥಗಳಂತೆ ಇದು ಇರುವದಿಲ್ಲ. ಇಷ್ಟೇ ಅಲ್ಲ ಈ ದೃಶ್ಯ ವಿಶ್ವಕ್ಕೆ ಇದು ನಿಜವಾದ ಆಧಾರವಾಗಿದೆ. ಈ ಮಾತಿನ ಜ್ಞಾನವಾಗುವದೆಂದರೆ ನಿಜವಾದ ದೇವ ದರ್ಶನವೆಂದು ತಿಳಿಯಬೇಕು. ಆದರೆ ಸಮಾಜದ ಕಡೆಗೆ ಸಹಜವಾಗಿ ನೋಡಿದರೆ ಅನೇಕ ದೇವರುಗಳು ಅನೇಕ ಉಪಾಸನೆಗಳು, ಅನೇಕ ಶಾಖೆಗಳಲ್ಲಿಯ ನಾನಾ ಪ್ರಕಾರದವಾದಗಳು ಮತ್ತು ಅನೇಕ ಜನರ ಅನೇಕ ತರಹದ ನಾನಾ ಅನುಭವಗಳ ದೊಡ್ಡ ಗಡಿಬಿಡಿಯೇ ಕಾಣುವದು. ಈ ಎಲ್ಲ ಘೋಟಾಳೆಯಿಂದ ಹೊರಬಂದು ಕ್ವಚಿತ್ತಾಗಿ ಯಾವನೋ ಒಬ್ಬ ಅದೃಷ್ಟವಂತ (ನಿಜವಾದ ಬುದ್ಧಿವಂತ) ಮನುಷ್ಯನು ನಿಜವಾದ ದೇವರ ಬಗೆಗೆ ನಿಜವಾದ ಶೋಧ ಮಾಡುವನು. ಈ ಸೃಷ್ಟಿಯಲ್ಲಿ ಏನೋ ಒಂದು ಗೂಢವಿರುವದು. ಚಕಿತಗೊಳಿಸುವಂತಹದಿರುವದೆಂಬ ಬಗೆಗೆ ಸಂಶಯವೇ ಇಲ್ಲ. ಆದ್ದರಿಂದ ಇಲ್ಲಿ ಒಂದು ಪ್ರಶ್ನೆ ನಿರ್ಮಾಣವಾಗುವದು. ಅದು ಯಾವುದೆಂದರೆ : ಈ ಸೃಷ್ಟಿಯನ್ನು ಯಾರು ಹೇಗೆ ಮತ್ತು ಯಾಕೆ ಮಾಡಿದರು?

### ದಶಕ ೮ : ಸಮಾಸ ೧ : ದೇವ ದರ್ಶನ [ನುಡಿ ೬೦]

ಶರೀರಕ್ಕೆ ಕಷ್ಟಕೊಡದ ಹೊರತು ದೇವರ ದರ್ಶನವಾಗುವದಿಲ್ಲ. ಹೀಗೆ ತಪ್ಪು ತಿಳುವಳಿಕೆ ಮಾಡಿಕೊಂಡು ಸಾಮಾನ್ಯ ಮನುಷ್ಯ ವೃಥಾ (ವ್ಯರ್ಥ) ಶ್ರಮಪಡುತ್ತಾನೆ. ಶ್ರೋತಾರರು ಈಗ ಲಕ್ಷ್ಯಕೊಟ್ಟು ಕೇಳಬೇಕು. ಇದು ಗುರು ಶಿಷ್ಯರ ಸಂವಾದವಿರುವದು. ಇದರಲ್ಲಿ ಶುದ್ಧ ಆತ್ಮಜ್ಞಾನವನ್ನು ಹೇಳಿರುವದು. ಮತ್ತು ಇದನ್ನು ಅಗದೀ ಸುಲಭ ಹಾಗೂ ಸರಳ ರೀತಿಯಲ್ಲಿ ಹೇಳಿದ್ದರಿಂದ ಸಣ್ಣ ಮಕ್ಕಳಿಗೂ ಮಂದಮತಿಗಳಿಗೂ ಸಹ ತಿಳಿಯುವದು. [೧] ಶಾಸ್ತ್ರಗಳು ಬಹಳಷ್ಟು ಇರುವವು. ಇವೆಲ್ಲವುಗಳ ಅಭ್ಯಾಸ ಮಾಡಲಿಕ್ಕೆ ಇಡೀ ಆಯುಷ್ಯ ಸಾಲಲಾರದು. ಅಲ್ಲದೇ ಈ ಅಭ್ಯಾಸದಿಂದ ಮನವು ನಿಃಶಂಕವಾಗಲಾರದು. ಅನೇಕ ಸಂದೇಹಗಳು ಹುಟ್ಟಿ ಮನಸ್ಸಿಗೆ ತಾಪ ಕೊಡುವವು. (೨) ಇರಲಿ, ಜಗತ್ತಿನಲ್ಲಿ ಅನೇಕ ಮಹತ್ವದ ದೊಡ್ಡ ದೊಡ್ಡ ಕ್ಷೇತ್ರಗಳು ಅಪಾರವಿರುವವು. ಇವುಗಳಲ್ಲಿ ಕೆಲವು ಸುಲಭ, ಕೆಲವು ಕಠಿಣ, ಕೆಲವು ಬಹಳಷ್ಟು ಕಠಿಣವಿರುವವು. ತೀರ್ಥಯಾತ್ರೆ ಮಾಡುವದರಿಂದ ನಿಜವಾಗಿಯೂ ಪುಣ್ಯ ಸಂಚಯವಾಗುವದು. [೩] ಆದರೆ ಈ ಎಲ್ಲ ತೀರ್ಥ ಕ್ಷೇತ್ರಗಳ ಯಾತ್ರೆ ಮಾಡುವಂಥವರು ಈ ಜಗತ್ತಿನಲ್ಲಿ ಯಾರಿರುವರು? ಎಷ್ಟು ಜನರಿರುವರು? ಮನುಷ್ಯನು ತೀರ್ಥಯಾತ್ರಾ ಮಾಡುತ್ತ ಸಾಯುವವರೆಗೂ ತಿರುಗಾಡಿದರೂ ಸಹ ಈ ತೀರ್ಥಗಳು ಮುಗಿಯಲಾರವು. [೪]

ನಾನಾ ತಪೇ ನಾನಾ ದಾನೇ । ನಾನಾ ಯೋಗ ನಾನಾ ಸಾಧನೇ ।
ಹೇ ಸರ್ವ ಹಿ ದೇವಾಕಾರಣೇ । ಕರಿಜೇತ ಆಹೆ ॥೫॥

ಪಾವಾವಯಾ ದೇವಾಧಿದೇವಾ । ಬಹುವಿಧ ಶ್ರಮ ಕರಾವಾ ।
ತೇಣೇ ದೇವ ಠಾಈ ಪಾಡಾವಾ । ಹೇ ಸರ್ವಮತ ॥೬॥

ಪಾವಾವಯಾ ಭಗವಂತಾತೇ । ನಾನಾ ಪಂಥ ನಾನಾ ಮತೇ ।
ತಯಾ ದೇವಾಚೇ ಸ್ವರೂಪ ತೇ । ಕೈಸೇ ಆಹೆ ॥೭॥

ಬಹುತ ದೇವ ಸೃಷ್ಟೀವರೀ । ತ್ಯಾಂಚೀ ಗಣಣಾ ಕೋಣ ಕರೀ ।
ಯೇಕ ದೇವ ಕೋಣೆಪರೀ । ಠಾಈ ಪಡೇನಾ ॥೮॥

ಬಹುವಿಧ ಉಪಾಸನಾ । ಜ್ಯಾಚೀ ಜೇಥೇ ಪುರೆ ಕಾಮನಾ ।
ತೋ ತೇಥೇ ಚಿ ರಾಹಿಲಾ ಮನಾ । ಸದೃಢ ಕರೂನಿ ॥೯॥

ಬಹುದೇವ ಬಹುಭಕ್ತ । ಇಛ್ಯಾ ಜಾಲೆ ಆಸಕ್ತ ।
ಬಹುಋುಷೀ ಬಹುಮತ । ವೆಗಳಾಲೇ ॥೧೦॥

ಬಹು ನಿವಡಿತಾ ನಿವಡೇನಾ । ಯೇಕ ನಿಶ್ಚಯು ಘಡೇನಾ ।
ಶಾಸ್ತ್ರೇ ಭಾಂಡತೀ ಪಡೇನಾ । ನಿಶ್ಚಂಯು ಠಾಈ ॥೧೧॥

ಬಹುತ ಶಾಸ್ತ್ರೀ ಬಹುತ ಭೇದ । ಮತಾ ಮತಾಸ ವಿರೋಧ ।
ಐಸಾ ಕರಿತಾ ವೆವಾದ । ಬಹುತ ಗೇಲೆ ॥೧೨॥

ಸಹಸ್ತ್ರಾಮಧೇ ಕೋಣೀ ಯೇಕ । ಪಾಹೆ ದೇವಾಚಾ ವಿವೇಕ ।
ಪರೀ ತ್ಯಾ ದೇವಾಚೇ ಕೌತುಕ । ಠಾಈ ನ ಪಡೆ ॥೧೩॥

ಠಾಈ ನ ಪಡೆ ಕೈಸೇ ಮ್ಹಣತಾ । ತೇಥೇ ಲಾಗಲೀ ಅಹಂತಾ ।
ದೇವ ರಾಹಿಲಾ ಪರತಾ । ಅಹಂತಾಗುಣೇ ॥೧೪॥

ಆತಾ ಅಸೊ ಹೇ ಬೋಲಣೇ । ನಾನಾ ಯೋಗ ಜ್ಯಾಕಾರಣೇ ।
ತೋ ದೇವ ಕೋಣ್ಯಾ ಗುಣೇ। ಠಾಈ ಪಡೆ ॥೧೫॥

ದೇವ ಕೊಣಾಸೀ ಮ್ಹಣಾವೇ । ಕೈಸೇ ತಯಾಸೀ ಜಾಣಾವೇ ।
ತೇ ಚಿ ಬೋಲಣೇ ಸ್ವಭಾವೇ । ಬೋಲಿಜೇಲ ॥೧೬॥

ದೇವರ ದರ್ಶನವಾಗಬೇಕೆಂದು ಮನುಷ್ಯರು ಅನೇಕ ತಪ, ಅನೇಕದಾನ, ಅನೇಕ ಯೋಗ, ಅನೇಕ ಸಾಧನಗಳನ್ನು ಮಾಡುತ್ತಲಿರುವರು. (೫) ದೇವರದೇವನು ಪ್ರಾಪ್ತವಾಗಬೇಕಾದರೆ ಅನೇಕ ಪ್ರಕಾರದ ನಾನಾ ಶ್ರಮದ ಕೆಲಸ ಮಾಡಬೇಕಾಗುವದು. ಶ್ರಮಪಟ್ಟರೇ ದೇವರ ದರ್ಶನವಾಗುವದು ಇದು ಸಾರ್ವಜನಿಕರ ಮತವೂ ಆಗಿದೆ.[೬] **ದೇವರ ದರ್ಶನ ಪಡೆಯಬೇಕೆಂಬುದು ಯೋಗ್ಯವೇ ಸರಿ. ಆದರೆ ನಿಜವಾದ ದೇವರು ಇರುವದಾದರೂ ಹೇಗೆ ? ಜಗತ್ತಿನಲ್ಲಿ ನೋಡಿದರೆ ದೇವರುಗಳಿಗೇನೂ ಕೊರತೆ ಇಲ್ಲ. ಯಾವನ ಇಚ್ಛೆ ಕೈಗೂಡುವದೋ ಅವನು ತನ್ನ ದೇವರ ಮಹಿಮೆಯ ಗುಲ್ಲೆಬ್ಬಿಸುವನು. ವಿಶ್ವಕ್ಕೇ ಆಧಾರವುಳ್ಳ ಈ ಮುಖ್ಯ ಹಾಗೂ ಸರ್ವಶ್ರೇಷ್ಠ ದೊಡ್ಡ ದೇವರನ್ನು ಶೋಧಿಸುವವರು ಮತ್ತು ತಿಳಿಯುವ ಹಂಬಲ ಉಳ್ಳವರು ಬಹಳ ಕ್ವಚಿತ್ತಾಗಿ ಕಂಡುಬರುವರು.** ಭಗವಂತನ ಪ್ರಾಪ್ತಿಗಾಗಿ ಏನು ಮಾಡಬೇಕೆಂಬುದನ್ನು ಹೇಳುವ ಅನೇಕ ಪಂಥಗಳಿವೆ, ಅನೇಕ ಮತಗಳಿವೆ, ಆದರೆ ಭಗವಂತನ ನಿಜವಾದ ಸ್ವರೂಪವಾದರೂ ಹೇಗೆ ಇರುವದು? ಇದನ್ನು ಮೊದಲು ತಿಳಿಯಲಿಕ್ಕೇ ಬೇಕು. [೭] ದೇವರ ಎಣಿಕೆ ಮಾಡಲಿಕ್ಕೆ ಬರುವದಿಲ್ಲ. ಇಷ್ಟೊಂದು ಅಪಾರ ದೇವರುಗಳು ಜಗತ್ತಿನಲ್ಲಿ ಇರುವವು. ಆದ್ದರಿಂದ ಇವುಗಳಲ್ಲಿ ನಿಜವಾದ ಒಬ್ಬ ದೇವರು ಯಾರು ಆ ಒಬ್ಬನಾದರೂ ಸಿಗಲಾರದಾಗಿದೆ[೮] ಇರಲಿ, ಉಪಾಸನೆಯ ಪ್ರಕಾರಗಳೂ ಬಹಳವಿರುವವು. ಯಾವ ಮನುಷ್ಯನ ಇಚ್ಛೆ, ಯಾವ ಉಪಾಸನೆಯಿಂದ ಸಫಲವಾಗುವದೋ ಅವನು ಆ ಉಪಾಸನೆಯನ್ನು ಮನಃಪೂರ್ವಕ ಗಟ್ಟಿಯಾಗಿ (ದೃಢವಾಗಿ) ಹಿಡಿದು ಸಾಗುವನು.[೯] ಅಸಂಖ್ಯಾತ (ಬಹಳಷ್ಟು) ದೇವರಿರುವವು. ಅದೇ ಪ್ರಕಾರ ಅಸಂಖ್ಯಾತ ಭಕ್ತರೂ ಇರುವರು. ಈ ಭಕ್ತರು ತಮ್ಮ ಇಚ್ಛೆಯ ಪೂರ್ತಿಗಾಗಿ ದೇವರಿಗೆ ಅಂಟಿಕೊಂಡಿರುವರು. ಅದಕ್ಕಾಗಿ ಅವನನ್ನು ಭಜಿಸುವರು. ಇದರಂತೆ ಬಹಳಷ್ಟು ಋಷಿಗಳೂ ಆಗಿ ಹೋಗಿರುವರು. ಹಾಗೂ ಇವರ ಮತಗಳೂ ಸಹ ಭಿನ್ನ ಭಿನ್ನವಾಗಿರುವವು. [೧೦] ಇದೆಲ್ಲವನ್ನು ನೋಡಿ ಇದರೊಳಗಿಂದ ನಮಗೆ ಬೇಕಾದದ್ದನ್ನು ಹುಡುಕಿ ತೆಗೆಯುವದು ಸಾಧ್ಯವಾಗುವದಿಲ್ಲ(ಜಮಾಯಿಸುವದಿಲ್ಲ). ಯಾವುದೇ ಒಂದು ದೇವರ ಬಗ್ಗೆ, ಉಪಾಸನೆಯ ಬಗ್ಗೆ, ಅಥವಾ ಮತ ಪಂಥಗಳ ಬಗ್ಗೆ, ನಿಶ್ಚಯ ಮಾಡಲಿಕ್ಕೆ ಆಗುವದಿಲ್ಲ. ಶಾಸ್ತ್ರಗಳಲ್ಲಿ ಸಹ ಪರಸ್ಪರ ಮತ ಭೇದಗಳಿರುವದರಿಂದ ಒಂದೂ ನಿಶ್ಚಯಕ್ಕೆ ಬರಲು ಇವುಗಳ ಸಹಾಯ (ಉಪಯೋಗ)ವಾಗುವದಿಲ್ಲ. [೧೧] ಅದರಲ್ಲಿಯೂ ಶಾಸ್ತ್ರಗಳ ಸಂಖ್ಯೆ ಬಹಳಷ್ಟು ಇರುವವು. ಇವುಗಳಲ್ಲಿ ಭೇದಗಳೂ ಬಹಳಷ್ಟು ಇರುವವು. ಇವುಗಳ ಅಭಿಪ್ರಾಯ (ಮತ) ದಲ್ಲಿಯೂ ಮತಭೇದ (ವಿರೋಧ)ಗಳಿರುವವು. ಈ ಶಾಸ್ತ್ರಗಳನ್ನು ಹಿಡಿದು ವಾದಮಾಡಿ ಬಹಳಷ್ಟು ಜನರು ಇಲ್ಲವಾದರು. (ಯಾವ ನಿರ್ಣಯವೂ ಆಗಲಿಲ್ಲ.) [೧೨] ಸಾವಿರಾರು ಜನರಲ್ಲಿ ಒಬ್ಬ ಮಾತ್ರ ಖರೇ ದೇವರನ್ನು ಶೋಧಿಸುವ ವಿವೇಕಯುಕ್ತ ಪ್ರಯತ್ನ ಮಾಡುವನು. ಆದರೂ ಸಹ ಖರೇ ದೇವರ ಸ್ವರೂಪ ಮತ್ತು ಅವನ ಸಾಮರ್ಥ್ಯ ಇವನಿಗೆ ಆಕಲನವಾಗುವದಿಲ್ಲ. (ಈ ಮಾತನ್ನು ಗೀತೆಯ ೭-೩ ರಲ್ಲಿ ಹೇಳಲಾಗಿದೆ). [೧೩] **ದೇವರ ಆಕಲನವಾಗುವದು ಬಹಳ ಕಠಿಣವಿರುವದಾದರೆ ಇದರ ಸ್ವರೂಪ ಹೇಗೆ ಇರಬಹುದು ? ಇದನ್ನು ತಿಳಿಯುವ ಮಾರ್ಗವು ಎಂಥದು ? ಇದನ್ನು ಈಗ ತಿಳಿಯುವದು ಅವಶ್ಯವಿದೆ.** ನೀವು ಹೀಗೆ ಹೇಗೆ ಅನ್ನುವಿರಿ ? ನನ್ನ ವಿಚಾರ ಸರಿಯಾಗಿ ಇದೆ. ಯಾಕಂದರೆ ಮನುಷ್ಯರೆಲ್ಲರಿಗೂ ಅಹಮಿಕೆ, ಅಹಂ ಅನ್ನುವದು ಹತ್ತಿಬಿಟ್ಟಿರುತ್ತದೆ. ಈ ಅಹಮಿಕೆಯ ಗುಣ ಹೇಗಿರುವದೆಂದರೆ: ಇದರಿಂದ ದೇವರು ದೂರ ಸರಿಯುವನು. ಅಹಂಕಾರಿ ಮನುಷ್ಯ ದೇವರ ವರೆಗೆ ಹೋಗಿ ಮುಟ್ಟಲು ಶಕ್ತನಾಗುವದಿಲ್ಲ. [೧೪] ಇರಲಿ. ಈಗ ಈ ಮಾತುಗಳು ಸಾಕು ಯಾರ ದರ್ಶನವಾಗಬೇಕು ? ಹೇಗೆ ಆಗಬೇಕು. ಇದರ ಬಗ್ಗೆ ಅನೇಕ ಪ್ರಕಾರದ ಯೋಗಗಳು ಇರುವವು. ಆ ಖರೇ ದೇವನು ಯಾವ ಉಪಾಯದಿಂದ ಯಾವ ಯೋಗದಿಂದ ದೊರಕುವನು?[೧೫] ದೇವರೆಂದು ಅನ್ನುವದಾದರೂ ಯಾರಿಗೆ ? ಆ ಖರೇ ದೇವರನ್ನು ಗುರುತು ಹಿಡಿಯುವದಾದರೂ ಹೇಗೆ? ಈ ಪ್ರಶ್ನೆಗಳಿಗೆ ಉತ್ತರವನ್ನು ಸುಲಭ ರೀತಿಯಿಂದ ತಿಳಿಸಿ ಹೇಳುವೆನು. [೧೬]

ಜೇಣೇ ಕೇಲೇ ಚರಾಚರ । ಕೇಲೆ ಸೃಷ್ಟ್ಯಾದಿ ವ್ಯಾಪಾರ ।
ಸರ್ವಕರ್ತಾ ನಿರಂತರ । ನಾಮ ಜ್ಯಾಚೇ ॥೧೭॥

ತೇಣೆ ಕೇಲ್ಯಾ ಮೇಘಮಾಳಾ । ಚಂದ್ರಬಿಂಬೀ ಅಮೃತಕಳಾ ।
ತೇಜ ದಿಧಲೇ ರವಿಮಂಡಳಾ । ಜಯಾ ದೇವೇ ॥೧೮॥

ಜ್ಯಾಚೀ ಮರ್ಯಾದಾ ಸಾಗರಾ । ಜೇಣೇ ಸ್ಥಾಪಿಲೇ ಫಣಿವರಾ।
ಜಯಾಚೆನಿ ಗುಣೇ ತಾರಾ । ಅಂತರಿಕ್ಷ ॥೧೯॥

ಚ್ಯಾರೀ ಖಾಣೀ ಚ್ಯಾರೀ ವಾಣೀ । ಚೌರ್‍ಯಾಸಿ ಲಕ್ಷ ಜೀವಯೋನೀ ।
ಜೇಣೇ ನಿರ್ಮಿಲೆ ಲೋಕತಿನೀ । ತಯಾ ನಾವ ದೇವ ॥೨೦॥

ಬ್ರಹ್ಮಾ ವಿಷ್ಣು ಆಣೀ ಹರ । ಹೇ ಜಯಾಚೆ ಅವತಾರ ।
ತೋಚಿ ದೇವ ಹಾ ನಿರ್ಧಾರ । ನಿಶ್ಚಯೇಸೀ ॥೨೧॥

ದೇವ್ಹಾರಾಚಾ ಉಠೋನಿ ದೇವ । ಕರೂ ನೇಣೆ ಸರ್ವ ಜೀವ ।
ತಯಾಚೆನಿ ಬ್ರಹ್ಮಕಟಾವ । ನಿರ್ಮಿಲಾ ನ ವಚೆ ॥೨೨॥

ಠಾಈ ಠಾಈ ದೇವ ಅಸತೀ । ತೇಹೀ ಕೇಲೀ ನಾಹೀ ಕ್ಷಿತೀ ।
ಚಂದ್ರ ಸೂರ್ಯ ತಾರಾ ಜೀಮೂತೀ । ತಯಾಚೆನಿ ನವ್ಹೆ ॥೨೩॥

ಸರ್ವಕರ್ತಾ ತೋ ಚಿ ದೇವ । ಪಾಹೋ ಜಾತಾ ನಿರಾವೇವ ।
ಜ್ಯಾಚೀ ಕಳಾ ಲೀಳಾ ಲಾಘವ । ನೇಣತೀ ಬ್ರಹ್ಮಾದಿಕ ॥೨೪॥

ಯೇಥೇ ಆಶಂಕಾ ಉಠಿಲೀ । ತೇ ಪುಢಿಲಿಯೆ ಸಮಾಸೀ ಫಿಟಲೀ।
ಆತಾ ವೃತ್ತಿ ಸಾವಧ ಕೇಲೀ । ಪಾಹಿಜೆ ಶ್ರೋತೀ ॥೨೫॥

ಈ ಅಪರಂಪಾರ ವಿಶ್ವವು ಮತ್ತು ಅದರಲ್ಲಿಯ ಅನಂತ ಪ್ರಕಾರದ ಜೀವ ಪ್ರಾಣಿಗಳು ಯಾರ ಸತ್ತಾ (ಅಧಿಕಾರ)ದಿಂದ ನಿರ್ಮಾಣವಾಗುವವೋ ಮತ್ತು ಜೀವಿಸಿರುವವೋ ಅಂಥಸತ್ತಾಧಿಕಾರಿಯೇ ಖರೇ ದೇವರಿರುವನು. ಯಾವ ದೇವನ ಸತ್ತಾದಿಂದ ಸಮಗ್ರ ದೃಶ್ಯ ವಿಶ್ವವು ಆಧರಿಸಿ ನಿಂತಿರುವದೋ [ಆಧರಿಸಿದೆಯೋ] ಅಂಥ ದೇವನು ಸ್ವತಃ ಅದೃಶ್ಯನೂ ನಾಮ ರಹಿತನೂ, ರೂಪರಹಿತನೂ, ಇರುವನು. ಇದೇ ಆವನ ದೊಡ್ಡ ಚಮತ್ಕಾರವಿರುವದು, (ಅಂತೆಯೇ ಅವನಿಗೆ ಕಪಟ ನಾಟಕ ಸೂತ್ರಾಧಾರನೆಂದು ಅನ್ನುವರು):– ಯಾರ ಸತ್ತಾ ಮಾತ್ರದಿಂದ ಈ ಸಂಬಂಧ (ವಿಶ್ವ) ಚರಾಚರ (ಸಜೀವ, ನಿರ್ಜೀವ)ವು ರಚನೆಗೊಂಡಿತೋ, ಹಾಗೂ ಯಾರ ಸತ್ತಾದಿಂದ ವಿಶ್ವದಲ್ಲಿಯ ಘಡಾಮೋಡಿ, ಉಲಟಾಪಲಟಾ, ಉಲಾಢಾಲ, ಹುಟ್ಟು ಸಾವು ಮೊದಲು ಮಾಡಿಕೊಂಡು ಎಲ್ಲ ಆಗು ಹೋಗು ಗಳು ನಡೆಯುವವೋ, ಅಂಥ ಸತ್ತಾಧಾರಿಯೇ ಖರೇ ದೇವರಿರುವನು. ಇವನು ಕಾಯಂ ಇರುವಂಥ, ಅಖಂಡನಾದ ಸರ್ವಕರ್ತಾ ಎನ್ನುವ ಹೆಸರಿನಿಂದ ಜ್ಞಾನಿಗಳು ಇವನನ್ನು ಗುರುತಿಸುವರು. (೧೭) ಇವನು ಆಕಾಶದಲ್ಲಿಯ ಮೇಘ ಮಂಡಲ ರಚಿಸಿದನು. ಚಂದ್ರನ ಚಂದ್ರ ಬಿಂಬದಲ್ಲಿ ಅಮೃತವನ್ನು ಇಟ್ಟನು, (ಚಂದ್ರ ಬಿಂಬದ ಪ್ರಕಾಶದಿಂದ ಅಮೃತದ ವೃಷ್ಟಿಯಾಗುತ್ತಿರುತ್ತದೆ. ಇದರಿಂದಾಗಿ ವನಸ್ಪತ್ಯಾದಿಗಳ ಪೋಷಣವಾಗುವದು. ಇದರ ಪರಿಣಾಮದಿಂದಾಗಿ ಎಲ್ಲರಿಗೂ ಆಲ್ಹಾದ-ಆನಂದ ಪ್ರಾಪ್ತವಾಗುವದು ಹೀಗೆ ಪ್ರಾಚೀನ ಮತವಿರುವದು). ಇವನೇ ಸೂರ್ಯ ಮಂಡಲದಲ್ಲಿ ತೇಜ (ಪ್ರಕಾಶ)ವನ್ನು ತುಂಬಿದನು. (೧೮) ಇವನು ಸಮುದ್ರಕ್ಕೆ ಮರ್ಯಾದೆ [ಸೀಮೆ, ಹದ್ದು] ಹಾಕಿಕೊಟ್ಟನು. ಇವನೇ ಶೇಷನನ್ನು ಪೃಥ್ವಿ ಕೆಳಗೆ ಸ್ಥಾಪಿಸಿ ಪೃಥ್ವಿಯು ಸ್ಥಿರಗೊಳ್ಳುವಂತೆ ಮಾಡಿದನು. ಇವನು ಆಕಾಶದಲ್ಲಿ ಅನಂತ ತಾರೆ [ನಕ್ಷತ್ರ]ಗಳನ್ನು ಯಾವ ಆಧಾರವಿಲ್ಲದೇ ಸ್ಥಾಪಿಸಿ ಅವು ನಿಲ್ಲುವಂತೆ ಮಾಡಿ ಆಕಾಶಕ್ಕೆ ಶೋಭೆ ತಂದು ಕೊಟ್ಟಿ ರುವನು. [೧೯] ಜೀವ ಪ್ರಾಣಿಗಳ ಉತ್ಪತ್ತಿ ಸ್ಥಾನಗಳಲ್ಲಿ ನಾಲ್ಕು ಪ್ರಕಾರಗಳು ಇರುವವು. ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ ಇವು ನಾಲ್ಕು ಉಗಮ [ಉತ್ಪತ್ತಿ] ಸ್ಥಾನಗಳು. ವಾಣಿಯಲ್ಲಿ ನಾಲ್ಕು ಪ್ರಕಾರಗಳು:- ಪರಾ, ಪಶ್ಯಂತಿ, ಮಾಧ್ಯಮಾ, ವೈಖರಿ ಎಂದು ಇರುವವು. ಪ್ರಾಣಿಗಳಲ್ಲಿ ಎಂಭತ್ತುನಾಲ್ಕುಲಕ್ಷ ಜೀವಯೋನಿಗಳು. ಮತ್ತು ಸ್ವರ್ಗ, ಮೃತ್ಯು, ಮತ್ತು ಪಾತಾಳ ಇವು ಮೂರು ಲೋಕಗಳು, ಇವನ್ನೆಲ್ಲ ಇವನೇ ಈ ದೇವನೇ ತನ್ನ ಸತ್ತಾ ಮಾತ್ರದಿಂದ ನಿರ್ಮಿಸಿರುವನು. ಇಂಥವನಿಗೆ ಮಾತ್ರ ನಿಜವಾದ ದೇವ ಅನ್ನುವ ಹೆಸರಿರುವದು. [೨೦] ಬ್ರಹ್ಮ, ವಿಷ್ಣು, ಮತ್ತು ಶಂಕರ ಇವರೆಲ್ಲ ಇವನ ಅವತಾರವೇ ಇರುವರು. ಇವನೇ ನಿಜವಾದ ದೇವನು, ಇದನ್ನು ಅಗದೀ ನಿಶ್ಚಿತತನದಿಂದ ತಿಳಿಯಿರಿ. [೨೧] ದೇವ ಜಗಲಿಯಲ್ಲಿರುವ ದೇವರುಗಳು ನಿಜವಾದ ದೇವರಲ್ಲ. ಯಾಕಂದರೆ ಇವು ಯಾವವೂ ಅವನಂತೆ ಸರ್ವ ಜೀವ ಪ್ರಾಣಿಗಳನ್ನು ನಿರ್ಮಾಣ ಮಾಡಲು ಶಕ್ತವಲ್ಲ. ಈ ಬ್ರಹ್ಮಾಂಡವನ್ನು ಉತ್ಪನ್ನ ಮಾಡುವಂಥ ಶಕ್ತಿವಂತರೂ ಅಲ್ಲ. [೨೨] ಅಲ್ಲಲ್ಲಿ [ಕಂಡ ಕಂಡಲ್ಲಿ] ಎಷ್ಟೋ ದೇವರು ಕಾಣುವವು. ಆದರೆ ಅವು ಗಳಲ್ಲಿ [ಒಬ್ಬನೂ] ಒಂದು ದೇವರೂ ಪೃಥ್ವಿಯನ್ನು ನಿರ್ಮಿಸಿಲ್ಲ. ಅಥವಾ ಚಂದ್ರ ಸೂರ್ಯ ನಕ್ಷತ್ರ ಮತ್ತು ಮೇಘ ಇವುಗಳಲ್ಲಿ ಒಂದೂ ಸಹ ಇವರ ಸಾಮರ್ಥ್ಯದಿಂದ ಅಸ್ತಿತ್ವದಲ್ಲಿ ಬಂದಿಲ್ಲ. [೨೩] ಒಟ್ಟಿನಲ್ಲಿ ಸರ್ವವನ್ನೂ ನಿರ್ಮಾಣ ಮಾಡಿದ ಯಾವ ಕರ್ತಾ ಇರುವನೋ ಅವನೇ ನಿಜವಾದ ಮತ್ತು ಸರ್ವ ಶ್ರೇಷ್ಠ ದೇವನು. ಆಗಲಿ, ಈ ದೇವನು ಕರ್ತಾ ಇರುವನು ಇವನನ್ನು ನೋಡಬೇಕೆಂದು ಹೋದರೆ ಇವನಿಗೆ ಅವಯುವವೇ ಇಲ್ಲ. ಮತ್ತು ಆಕಾರವೂ ಇಲ್ಲ. ಇಂಥ ಅವಯುವರಹಿತ ಮತ್ತು ನಿರಾಕಾರ [ಆಕಾರರಹಿತ] ದೇವನು. ಇಷ್ಟೆಲ್ಲ ಅಫಾಟ ವಿಶ್ವ ನಿರ್ಮಾಣ ಮಾಡುವನು. ಈ ಅವನ ಕಲಾ, ಹಾಗೂ ಅವನ ಚಾತುರ್ಯ ಮತ್ತು ಆವನ ಆಟವು ಬ್ರಹ್ಮಾದಿ ದೇವತೆಗಳಿಗೂ ಸಹ ಆಕಲನವಾಗುವದಿಲ್ಲ. [ತಿಳಿದುಕೊಳ್ಳಲಿಕ್ಕೆ ಆಗುವದಿಲ್ಲ]. [೨೪] ದೇವರ ಈ ವರ್ಣನೆ ಕೇಳಿ ಶ್ರೋತಾರನ ಮನದಲ್ಲಿ ಒಂದು ಶಂಕಾ ನಿರ್ಮಾಣವಾಯಿತು. ಇದರ ಮುಂದಿನ ಸಮಾಸದಲ್ಲಿ ಅದರ ನಿರಸನ ಮಾಡು ವೆವು. ಅಲ್ಲಿಯವರೆಗೆ ಈ ಸಮಾಸದಲ್ಲಿಯ ವಿಷಯದ ಕಡೆಗೆ ಶ್ರೋತಾರರು ಸಾವಧಾನದಿಂದ ಲಕ್ಷ್ಯಗೊಟ್ಟು ಕೇಳಬೇಕು[೨೫]

ಪೈಸ ಅವಕಾಶ ಆಕಾಶ। ಕಾಹೀ ಚ ನಾಹೀ ಜೇ ಭಕಾಸ।
ತಯೆಂ ನಿರ್ಮಾಳೀ ವಾಯೋಸ। ಜನ್ಮ ಜಾಲಾ ॥೨೬॥

ವಾಯೋ ಪಾಸೂನ ಜಾಲಾ ವನ್ಹೀ। ವನ್ಹೀಪಾಸುನೀ ಜಾಲೇ ಪಾಣೀ।
ಐಸೀ ಜಯಾಚೀ ಕರಣೀ। ಅಘಟಿತ ಘಡಲೀ ॥೨೭॥

ಉದಕಾಪಾಸೂನ ಸೃಷ್ಟಿ ಜಾಲೀ। ಸ್ತಂಭೇವಿಣ ಉಭಾರಲೀ।
ಐಸೀ ವಿಚಿತ್ರ ಕಳಾ ಕೇಲೀ। ತ್ಯಾ ನಾವ ದೇವ ॥೨೮॥

ದೇವೆಂ ನಿರ್ಮಿಲೀ ಹೆ ಕ್ಷಿತೀ। ತಿಚೇ ಪೋಟೀ ಪಾಷಾಣ ಹೋತೀ।
ತಯಾಸ ಚಿ ದೇವ ಮ್ಹಣತೀ। ವಿವೇಕಹೀನ ॥೨೯॥

ಜೋ ಸೃಷ್ಟಿ ನಿರ್ಮಾಣ ಕರ್ತಾ। ತೋ ಯೆ ಸೃಷ್ಟಿಪೂರ್ವಿ ಹೋತಾ।
ಮಗ ಹೇ ತಯಾಚೀ ಸತ್ತಾ। ನಿರ್ಮಾಣ ಜಾಲೀ ॥೩೦॥

ಕುಲಾಳ ಪಾತ್ರಾಪೂರ್ವಿ ಆಹೆ। ಪಾತ್ರೇ ಕಾಹೀ ಕುಲಾಳ ನವ್ಹೆ।
ತೈಸಾ ದೇವ ಪೂರ್ವೀಚ ಆಹೆ। ಪಾಷಾಣ ನವ್ಹೆ ಸರ್ವಥಾ ॥೩೧॥

ಈ ವಿಶ್ವದಲ್ಲಿ ಒಂದೇ ಸಮನೆ ಸತತವೂ ಘಟನೆಗಳು ಘಟಿಸುತ್ತವೆ. (ರಚನೆ ಆಗುತ್ತವೆ). ಇದರ ಕೆಲಸವೇ ಇದಾಗಿದೆ. ಪ್ರತಿಯೊಂದು ಕಾರ್ಯಕ್ಕೆ ಕಾರಣವು ಅವಶ್ಯವಿರುವದು. ಯಾವ ದ್ರವ್ಯದಲ್ಲಿ ಬದಲಾವಣೆಯಾಗಿ (ರೂಪಾಂತರ ಹೊಂದಿ) ಕಾರ್ಯ ಕಾಣಹತ್ತುವದೋ ಆ ದ್ರವ್ಯಕ್ಕೆ ಉಪಾದಾನ ಕಾರಣವೆನ್ನುವರು. ಉದಾ;- ಗಡಿಗೆ ಇದು ಮಣ್ಣಿನದು, ಮೂರ್ತಿ ಇದು ಕಲ್ಲಿನದು, ಬರ್ಫ ಇದು ನೀರಿನದು, ವಸ್ತ್ರ ಇದು ಹತ್ತಿಯದು, ಇವು ಉಪಾದಾನ ಕಾರಣವೆನಿಸುವವು. ದ್ರವ್ಯದಲ್ಲಿ ಬದಲು ಆಗಿ (ರೂಪಾಂತರ) ಬರುವ ಹಾಲಚಾಲ ಆಗುವದಕ್ಕೆ ಮತ್ತು ಆ ಹಾಲಚಾಲಿಗೆ ನಿಶ್ಚಿತ ದಿಶೆ ಹತ್ತಲು ಯಾವ ಶಕ್ತಿ ಮಾರ್ಗದರ್ಶನ ಮಾಡುವದೋ ಅದಕ್ಕೆ ನಿಮಿತ್ತ ಕಾರಣ ಅನ್ನುವರು. ಉದಾ:- ಕುಂಬಾರ-ಮಡಿಕೆಯುವ, ಶಿಲ್ಪಕಾರಮೂರ್ತಿಯುವ, ನೇಕಾರ-ವಸ್ತ್ರದವ, ಇವು ನಿಮಿತ್ತ ಕಾರಣವೆಂದು ತಿಳಿಯಬೇಕು. ಶ್ರೀ ಸಮರ್ಥರ ಅಂಬೋಣವೇನಂದರೆ-ಬ್ರಹ್ಮಸ್ವರೂಪದ ಕಡೆಯಿಂದ ವಿಚಾರ ಮಾಡಿದ್ದಾದರೆ ಪರಮಾತ್ಮಾ ವಿಶ್ವದ ಉಪಾದಾನ ಕಾರಣವಿರುವನು. ಮತ್ತು ನಿಮಿತ್ಯ ಕಾರಣನೂ ಸಹ ಅವನೇ ಇರುವನು. ವಿಶ್ವವು ಅವನಿಂದಲೇ ತಯಾರಾಗಿದೆ. ಮತ್ತು ಅವನ ಇಚ್ಛೆಯ ಪ್ರಕಾರವೇ ತಯಾರಾಗಿದೆ. ಈ ತಿಳುವಳಿಕೆಯು ಜ್ಞಾನ ಭೂಮಿಕೆಯ ಮೇಲೆ, ಕಾರ್ಯ ಮತ್ತು ಕಾರಣ ಇವು ಅಭಿನ್ನವಿರುವವು. ಆದರೆ ದೃಶ್ಯ ವಿಶ್ವದ ಮೇಲಿಂದ ವಿಚಾರ ಮಾಡಿದ್ದಾದರೆ ಪಂಚ ಮಹಾಭೂತಗಳು ವಿಶ್ವದ ಉಪಾದಾನ ಕಾರಣವಿರುವವು. ಮತ್ತು ಈಶ್ವರನು ವಿಶ್ವದ ನಿಮಿತ್ತ ಕಾರಣವೆನಿಸುವನು. ಇದು ಮಾನವ ಬುದ್ಧಿಯ ಭೂಮಿಕೆ ಇರುವದು. ಈ ಭೂಮಿಕೆಯಲ್ಲಿ ಉಪಾದಾನ ಕಾರಣವು ಕಾರ್ಯದಿಂದ ಅಭಿನ್ನವಿರುವದು. ಆದರೆ ನಿಮಿತ್ತ ಕಾರಣವು ಕಾರ್ಯದಿಂದ ಸದೈವ ಭಿನ್ನವಾಗಿರುವದು. ಈ ದೃಷ್ಟಿಯಿಂದ ನೋಡಿದರೆ ಈ ಪಂಚಭೌತಿಕ ವಿಶ್ವವನ್ನು ನಿರ್ಮಾಣ ಮಾಡುವ ದೇವನು ಆ ವಿಶ್ವದ ಮಾರ್ಗ ದರ್ಶಕ ಮತ್ತು ನಿಯಂತಾ (ಶಾಸನ, ನಿಗ್ರಹ) ಇರುವದು ನಿಜವದೆ. ಆದರೆ ಇವನು ಅವುಗಳಿಂದಲೂ ಸಹ ಯಾವಾಗಲೂ ಬೇರೆಯೇ ಇರುವನು. ಈ ವಿಶ್ವದ ನಿರ್ಮಾಣ ಕಥೆಯು ಹೀಗಿರುವದು. ಪ್ರಥಮದಲ್ಲಿ ಅತ್ತ ಇತ್ತ ಸುತ್ತು ಮುತ್ತು, ಎಲ್ಲೆಲ್ಲಿಯೂ ಪಸರಿಸಿದ (ಹಬ್ಬಿದ) ಅಗದೀ ಬಟ್ಟ ಬಯಲು ಖುಲ್ಲಾ ಜಾಗೆಯೇ ಇದ್ದಿತು. ಇದೇ ಆಕಾಶವೆನಿಸಿತು. ಇದು ಶೂನ್ಯಮಯವಿದ್ದಿತು. ಈ ಶುದ್ಧ ಆಕಾಶದಲ್ಲಿ ವಾಯು (ಗಾಳಿ)ವಿನ ಜನ್ಮವಾಯಿತು. (೨೬) ವಾಯುವಿನಿಂದ ಅಗ್ನಿ ನಿರ್ಮಾಣವಾದನು. ಅಗ್ನಿಯಿಂದ ಜಲ (ನೀರು) ಉತ್ಪನ್ನವಾಯಿತು. ಇಷ್ಟೆಲ್ಲ ಯಾರ ಸತ್ತೆಯಿಂದ ಈ ವಿಲಕ್ಷಣ ಘಟನೆ ಆಯಿತೋ ಅವನೇ ನಿಜವಾದ ದೇವರು. (೨೭) ಜಲದಿಂದ ಪೃಥ್ವಿ (ಭೂಮಿ) ನಿರ್ಮಾಣವಾಯಿತು. ಕಂಬಗಳ ಆಧಾರವಿಲ್ಲದೆ ಇದನ್ನು ಅವಕಾಶ(ಆಕಾಶ)ದಲ್ಲಿ ಇಟ್ಟನು. ಇಂಥ ವಿಲಕ್ಷಣ ಕರ್ತೃ(ಕಲಾ) ಇರುವವನಾವನೋ ಅವನೇ ನಿಜವಾದ ದೇವರು. (೨೮) ದೇವರು ಪೃಥ್ವಿಯನ್ನು ನಿರ್ಮಾಣ ಮಾಡಿದನು. ಈ ಪೃಥ್ವಿಯ ಮೇಲೆ ಕಲ್ಲುಗಳು ನಿರ್ಮಾಣವಾದವು. ಅಜ್ಞಾನಿ ಹಾಗೂ ವಿವೇಕ ಶೂನ್ಯ ಜನರು ಈ ಕಲ್ಲುಗಳನ್ನೇ ದೇವರೆಂದು ನಂಬುವರು. ಇದಕ್ಕೆ ಏನು ಮಾಡುವದು? (೨೯) ಯಾವ ದೇವನು ಈ ಸೃಷ್ಟಿಯನ್ನು ನಿರ್ಮಾಣ ಮಾಡಿದನೋ ಅವನು ಈ ಸೃಷ್ಟಿಯ ಮೊದಲೇ ಇದ್ದನು. ಆಮೇಲೆ ಅವನೇ ತನ್ನ ಸತ್ತೆಯಿಂದ ಈ ವಿಶ್ವವನ್ನು ನಿರ್ಮಾಣ ಮಾಡಿದನು. (೩೦) ಕುಂಬಾರನು ಮಣ್ಣಿನ ಮಡಿಕೆಗಳನ್ನು ರಚಿಸುವನು (ತಯಾರ ಮಾಡುವನು). ಮಡಿಕೆ (ಗಡಿಗೆ) ತಯಾರ ಆಗುವ ಪೂರ್ವದಲ್ಲಿ ಇವನು ಇರುವನು. ಆದರೆ ಕುಂಬಾರನೇನೂ ಮಡಿಕೆಯಾಗುವದಿಲ್ಲ. ಅಥವಾ ಗಡಿಗೆ ಏನೂ ಕುಂಬಾರನಲ್ಲ ಇದರಂತೆಯೇ ಈ ವಿಶ್ವನಿರ್ಮಾಣ ಮಾಡುವ ದೇವನು ವಿಶ್ವದಕ್ಕಿಂತ ಮೊದಲೇ ಇದ್ದವನು. ವಿಶ್ವ ನಿರ್ಮಾಣವಾದ ಮೇಲೆ ಸಹ ಇವನು ಬೇರೆಯೇ ಇರುವನು. ಆದ್ದರಿಂದ ಪೃಥ್ವಿಯ ಮೇಲಿನ ಕಲ್ಲುಗಳು ದೇವರಲ್ಲ. (೩೧)

ವೃತ್ತಿಕೇಚೇ ಶೈನ್ಯ ಕೇಲೇ । ಕರ್ತೆ ವೇಗಳೇ ರಾಹಿಲೇ ।
ಕಾರ್ಯ ಕಾರಣ ಯೇಕ ಕೇಲೇ । ತರೀ ಹೋಣಾರ ನಾಹೀ ॥೩೨॥

ತಥಾಪಿ ಹೋಈಲ ಪಂಚಭೂತಿಕ । ನಿರ್ಗುಣ ನವ್ಹೆ ಕಾಂಹೀ ಯೇಕ ।
ಕಾರ್ಯಾಕಾರಣಾಚಾ ವಿವೇಕ । ಭೂತಾಪರತಾ ನಾಹೀ ॥೩೩॥

ಅವಘೀ ಸೃಷ್ಟಿ ಜೋ ಕರ್ತಾ । ತೋ ತೇ ಸೃಷ್ಟೀಹೂನಿ ಪರ್ತಾ ।
ತೇಥೇ ಸಂಶಯಾಚೀ ವಾರ್ತಾ । ಕಾಢೂ ಚಿ ನಯೇ ॥೩೪॥

ಖಾಂಬ ಸೂತ್ರೀ ಚೀ ಬಾಹುಲೀ । ಜೇಣೇ ಪುರುಷೇ ನಾಚವಿಲೀ ।
ತೋ ಚಿ ಬಾಹುಲೀ ಹೇ ಬೋಲೀ । ಘಡೇ ಕೆವೀ ॥೩೫॥

ಛಾಯಾಮಂಡಪೀ ಚೀ ಸೇನಾ । ಸೃಷ್ಟೀಸಾರಿಖೀ ಚ ರಚನಾ ।
ಸೂತ್ರೇ ಚಾಳೀ ಪರೀ ತೋ ನಾನಾ । ವೆಕ್ತಿ ನವ್ಹೇ ॥೩೬॥

ತೈಸಾ ಸೃಷ್ಟಿಕರ್ತಾ ದೇವ । ಪರೀ ತೋ ನವ್ಹೆ ಸೃಷ್ಟಿಭಾವ ।
ಜೇಣೇ ಕೇಲೆ ನಾನಾ ಜೀವ । ತೋ ಜೀವ ಕೈಸೆ ನೀ ॥೩೭॥

ಜೇ ಜೇ ಜಯಾ ಕರಣೇ ಪಡೆ । ತೇ ತೇ ತೋ ಹೇ ಕೈಸೇ ಘಡೇ।
ಮ್ಹಣೋನಿ ಮಾಯಾ ಚಿ ಬಾಪುಡೆ । ಸಂದೇಹೀ ಪಡತೀ ॥೩೮॥

ಸೃಷ್ಟಿ ಏಸೇ ಚಿ ಸ್ವಭಾವೇ । ಗೋಪುರ ನಿರ್ಮಿಲೇ ಬರವೇ ।
ಪರೀ ತೋ ಗೋಪುರ ಕರ್ತಾ ನವ್ಹೇ । ನಿಶ್ಚಯೇಸೀ ॥೩೯॥

ತೈಸೇ ಜಗ ನಿರ್ಮಿಲೇ ಜೇಣೇ । ತೋ ವೇಗಳಾ ಪೂರ್ಣಪಣೇ ।
ಯೇಕ ಮ್ಹಣತೀ ಮೂರ್ಖಪಣೇ। ಜಗ ತೋ ಚಿ ಜಗದೀಶ ॥೪೦॥

ಏವಂ ಜಗದೀಶ ತೋ ವೇಗಳಾ । ಜಗನಿರ್ಮಾಣ ತ್ಯಾಚೀ ಕಳಾ ।
ತೋ ಸರ್ವಾಮಧೇ ಪರೀ ನಿರಾಳಾ । ಅಸೋನ ಸರ್ವೀ ॥೪೧॥

ಮ್ಹಣೋನಿ ಭೂತಾಚಾ ಕರ್ದಮು । ಯಾಸೀ ಅಲಿಪ್ತ ಆತ್ಮಾರಾಮು ।
ಅವಿದ್ಯಾಗುಣೇ ಮಾಯಾಭ್ರಮು । ಸತ್ಯ ಚಿ ವಾಟೇ ॥೪೨॥

ತಿಳಿಯಿರಿ. ಒಬ್ಬನು ಮಣ್ಣಿನ ಗೊಂಬೆಗಳಿಂದ ಶಿಪಾಯಿ ಚಿತ್ರದ ಸೈನ್ಯ ತಯಾರಿಸಿದನು. ಸೈನ್ಯ ತಯಾರ ಮಾಡಿದ ಶಿಲ್ಪಕಾರನು ಆ ಸೈನ್ಯದಿಂದ ಬೇರೆಯೇ ಇರುವನು.ಅರ್ಥಾತ್ ಕಾರಣ ಮತ್ತು ಕಾರ್ಯ (ಕಾರ್ಯ ಅಂದರೆ ಗೊಂಬಿ ಚಿತ್ರ ಅಥವಾ ಸೃಷ್ಟಿಯು ಮತ್ತು ಕಾರಣ ಅಂದರೆ ಚಿತ್ರ ತಯಾರಕ ಅಥವಾ ಈಶ್ವರ) ಇವನ್ನು ಏಕರೂಪ ಮಾಡ ಬೇಕೆಂದರೂ ಮಾಡಲಿಕ್ಕೆ ಬರುವದಿಲ್ಲ(೩೨)ಯಾಕೆಂದರೆ ಕಾರ್ಯಮತ್ತುಕಾರಣ ಈಘಟನಾ ಸಂಬಂಧವು ದೃಶ್ಯ ಪಂಚಭೌತಿಕವಾದ ವಿಶ್ವದಲ್ಲಿಯದಿರುವದು.ಇದರ ಆಚೆಗೆ ಇರುವವನಾದ ನಿರ್ಗುಣಸ್ವರೂಪವಲ್ಲಿ ಕಾರ್ಯವೂ ಇಲ್ಲ.ಅದರಂತೆಕಾರಣವೂ ಇಲ್ಲ.ಕಾರ್ಯಕಾರಣ ಸಂಬಂಧವು ಪಂಚಭೂತಾತ್ಮಕ ವಿಶ್ವದಲ್ಲಿಯ ಘಟನೆಗಳಿಗೆ ಲಾಗೂಬೀಳುವದು.ಆದರ ಆಚೆಗೆ ಇದರ ಆಟ ನಡೆಯಲಾರದು.[ಸುಳ್ಳು ಬೀಳುವದು](೩೩)ಈ ಯಾವತ್ತೂ ವಿಶ್ವವನ್ನು ಯಾವನು ನಿರ್ಮಾಣ ಮಾಡಿದನೋ ಆ ದೇವನು ತಾನು ನಿರ್ಮಿಸಿದ ವಿಶ್ವಕ್ಕಿಂತ ಬೇರೆಯೇಇರುವನು.ವಿಶ್ವದ ಆಚೆಗೇಇರುವನು.ಇದರಬಗ್ಗೆ ಯಾರೂವಿಳ್ಳಷ್ಟು ಸಹ ಸಂಶಯ ತೆಗೆಯಬಾರದು. (೩೪) ಯಾವ ಮನುಷ್ಯ ಸೂತ್ರದ (ಕಳಸೂತ್ರಿ ದಾರಕಟ್ಟಿ ಗೊಂಬೆ ಕುಣಿಸುವವ) ಗೊಂಬೆಗಳನ್ನು ಕುಣಿಸುವವನೋ ಅವನೇ ಗೊಂಬೆ ಆಗಿರುವನೆಂದು ಅನ್ನುವದೂ ಸಹ ತಪ್ಪಾಗುವದು. [೩೫] ತಿಳುವಾದ ಅರಿವೆಯ ಪಡದೆಯ ಹಿಂದೆ ದೀಪವನ್ನು ಇಡುತ್ತಾರೆ. ಆ ದೀಪದ ಬೆಳಕಿನಲ್ಲಿ ಕಾಗದದ (ರಟ್ಟಿನ) ಶಿಪಾಯಿ ಚಿತ್ರದ ಗೊಂಬೆಗಳ ನೆರಳನ್ನು ಪರದೆಯ ಮೇಲೆ ತೋರಿಸುತ್ತಾರೆ.ಇದಕ್ಕೆ ಛಾಯಾ ಮಂಟಪ ಅನ್ನುವರು ಛಾಯಾ ಮಂಟಪದಲ್ಲಿ ಸಿಪಾಯಿ ಸೈನ್ಯ ತೋರಿಸುವರು.[ಕುಣಿಸುವರು]ನೋಡಲಿಕ್ಕೆ ಇದು ನಿಜವಾದ ಸೈನ್ಯದಂತೆ ಕಾಣಿಸುವದು.ಒಬ್ಬನೇ ಮನುಷ್ಯ ಅನೇಕ ಚಿತ್ರಗಳನ್ನುಕುಣಿಸುವನು.ಪ್ರತಿಯೊಂದು ಚಿತ್ರವನ್ನು ಪ್ರತ್ಯೇಕ ಮನುಷ್ಯ ಕುಣಿಸುವದಿಲ್ಲ.ಅಲ್ಲಿಮತ್ತೆ ಬೇರೆಜನರು ಇರುವದೇ ಇಲ್ಲ.ಒಬ್ಬನೇ ಎಲ್ಲವನ್ನೂಮಾಡುವನು,ಇಂದವೆ ಲೆ ಸೈನ್ಯ ರಚಿಸಿ ಓಡಾಡಿಸುವಸೂತ್ರಧಾರನು ಗೊಂಬೆ ಆಗಲಾರನು.[ಗೊಂಬೆ ಸೂತ್ರಧಾರನಾಗಲಾರದು] [೩೬]ಇದರಂತೆಯೇ ಈ ವಿಶ್ವವನ್ನು ನಿರ್ಮಾಣ ಮಾಡುವ ದೇವನು ಒಬ್ಬನೇ ಇರುವನು. ಆದರೆ ವಿಶ್ವದಲ್ಲಿಯ ಪದಾರ್ಥಗಳಿಗಿಂತ ಇವನು ಬೇರೆಯೇ ಇರುವನು. ಯಾವ ದೇವನು ಅನೇಕ ಜೀವನಿರ್ಮಾಣ ಮಾಡಿರುವನೋ ಅವನು ಸ್ವತಃ ಜೀವವೇ ಹೇಗಾದಾನು? ಆಗಲಾರನು. [೩೭] ಯಾವ ಯಾವ ಕರ್ಮಗಳನ್ನು ಮನುಷ್ಯನು ಮಾಡಬೇಕಾಗುವದೋ ಆ ಆ ಕರ್ಮವೇ ಆ ಮನುಷ್ಯ ಎಂದೂ ಆಗಲಾರನು. ಕರ್ಮ ಮತ್ತು ಅದನ್ನು ಮಾಡುವ ಕರ್ತಾ ಯಾವಾಗಲೂ ಭಿನ್ನವೇ ಇರುವರು.ಇದೆಲ್ಲಯಾರಲಕ್ಷ್ಯಕ್ಕೆ ಬರುವದಿಲ್ಲವೋ ಆ ಬಡಪಾಯಿ ಅಜ್ಞಜನರು ವಿನಃಕಾರಣ ಸಂಶಯದಲ್ಲಿ ಬೀಳುವರು[೩೮] ಒಬ್ಬ ಶಿಲ್ಪಿ ದೇವಸ್ಥಾನದ ಮಹಾದ್ವಾರದ ಮೇಲೆ ಒಂದು ಸುಂದರ ಗೋಪುರ ನಿರ್ಮಿಸಿದನು. ಅದರಲ್ಲಿ ನಿರ್ಮಿಸಿದ ಚಿತ್ರಗಳು ಸ್ತ್ರೀ ಪುರುಷರ ಗೊಂಬೆಗಳು ಪುತ್ಥಳಿಗಳು ತದ್ರೂಪ ನಿಜವೆನಿಸುವಂತೆ ಮಾಡಿದನು. ಆದರೆಗೋಪುರ ಮತ್ತು ಅದನ್ನು ನಿರ್ಮಿಸಿದ ಶಿಲ್ಪಿ ಒಬ್ಬನೇ ಇರಲಿಕ್ಕೆ ಶಕ್ಯವಿಲ್ಲ. [೩೯] ಇದರಂತೆ ಯಾವನು ಈ ಜಗವನ್ನು ನಿರ್ಮಾಣ ಮಾಡಿದನೋ ಆ ದೇವನು ಜಗತ್ತಿಗಿಂತ ಸಂಪೂರ್ಣವಾಗಿ ಬೇರೆ ಇವರುವವನಾಗಿರುವನು.ಜಗತ್ತು ಮತ್ತು ಜಗದೀಶ ಒಂದೇ ಇರುವದೆಂದು [ಆಗಿರುವರೆಂದು] ಕೇವಲ ಮೂರ್ಖತನದಿಂದ ತಿಳುವಳಿಕೆ ಇಲ್ಲದ ಜನರು ಅನ್ನುವರು. [೪೦] ಸಾರಾಂಶ:– ಜಗತ್ತನ್ನು ನಿರ್ಮಾಣ ಮಾಡುವ ಜಗದೀಶನಾದ ದೇವರು ಜಗತ್ತಿಗಿಂತ ಬೇರೆಯೇ ಇರುವನು. ಜಗತ್ತನ್ನು ನಿರ್ಮಾಣ ಮಾಡುವದು ಅವನ ಒಂದು ದೊಡ್ಡ ಕಲೆಯಾಗಿರುವದು. ಇವನು ಸರ್ವದರಲ್ಲಿ ಇದ್ದರೂ ಸಹ ಸರ್ವಕ್ಕಿಂತ ಬೇರೆಯೇ ಇರುವನು. [೪೧] ಈಗ ದೇವರ ನಿಜಸ್ವರೂಪ ಹೇಗೆ ಇವೆ ಎಂಬುವನ್ನು ಇನ್ನು ಹೇಳುವರು.ಯಾವತ್ತು ದೃಶ್ಯ ವಿಶ್ವ ಮತ್ತು ಸರ್ವ ದೃಶ್ಯ ಪದಾರ್ಥಗಳೆಲ್ಲವೂ ಮಿಥ್ಯಾ ಇರುವವು.ನಾಶವಂತ ಇರುವವು. ಇದಕ್ಕೆ ಪಾಯಾಭೂತ [ಅಡಿಪಾಯ] ವಾಗಿರುವ ಅಮೃತ ತತ್ವ ಅಂದರೆ ಆ ದೇವನೇ ಇರುವನು. ಯಾವತ್ತೂ ದೃಶ್ಯ ಪದಾರ್ಥಗಳು ನಾಶ ಹೊಂದಿದರೂ ಯಾವನು ಹೇಗಿರುವನೋ ಹಾಗೆಯೇ ಉಳಿಯುವವನು. ಶಾಶ್ವತವಾಗಿ ಇರುವವನು ಅಂದರೆ ಆ ದೇವನೊಬ್ಬನೇ ಸರಿ:- ಆದ್ದರಿಂದ ವಿಶ್ವದಲ್ಲಿ ಕಾಣುವ ಪಂಚಭೂತಗಳ ಮಿಶ್ರಣ [ಕಲಬೆರಿಕೆ]ದಿಂದ ಆತ್ಮಾರಾಮನು ಆಗದೀ ತೀರ ಅಲಿಪ್ತ ಇರುವನು. ಅವಿದ್ಯೆಯ ಪರಿಣಾಮ ಆದದ್ದರಿಂದ ಮಾಯೆಯು ನಿರ್ಮಾಣ ಮಾಡಿದ ಈ ವಿಶ್ವ ಭ್ರಮೆಯು ಸಂಪೂರ್ಣವಾಗಿ ನಿಜವೆನಿಸುವದು. [೪೨]

ಮಾಯೋಪಾಧೀ ಜಗಡಂಬರ। ಆಹೆ ಸರ್ವಹಿ ಸಾಚಾರ।
ಏಸಾ ಹಾ ವಿಪರೀತ ವಿಚಾರ। ಕೋಣೇ ಚಿ ನಾಹೀ ॥೪೩॥

ಮ್ಹಣೋನಿ ಜಗ ಮಿಥ್ಯಾ ಸಾಚ ಆತ್ಮಾ। ಸರ್ವಾಂಪರ ಜೋ ಪರಮಾತ್ಮಾ।
ಅಂತರ್ಬಾಹ್ಯ ಅಂತರಾತ್ಮಾ। ವ್ಯಾಪೂನಿ ಅಸೇ ॥೪೪॥

ತಯಾಸ ಮ್ಹಣಾವೇ ದೇವ। ಯೇರ ಹೇ ಅವಘೇ ಚಿ ವಾವ।
ಏಸಾ ಆಹೆ ಅಂತರ್ಭಾವ। ವೇದಾಂತೀಚಾ ॥೪೫॥

ಪದಾರ್ಥವಸ್ತು ನಾಶಿವಂತ। ಹೇ ತೋ ಅನುಭವಾಸ ಯೇತ।
ಯಾಕಾರಣೇ ಭಗವಂತ। ಪದಾರ್ಥಾವೇಗಳಾ ॥೪೬॥

ದೇವ ವಿಮಳ ಆಣೀ ಅಚಳ। ಶಾಸ್ತ್ರೇ ಬೋಲತೀ ಸಕಳ।
ತಯಾ ನಿಶ್ಚಳಾಸ ಚಂಚಳ। ಮ್ಹಣೋ ನಯೆ ಸರ್ವಥಾ ॥೪೭॥

ದೇವ ಆಲಾ ದೇವ ಗೇಲಾ। ದೇವ ಉಪಜಲಾ ದೇವ ಮೇಲಾ।
ಏಸೇ ಬೋಲತಾ ದುರಿತಾಲಾ। ಕಾಯೆ ಉಣೇ ॥೪೮॥

ಜನ್ಮಮರಣಾಚೀ ವಾರ್ತಾ। ದೇವಾಸ ಲಾಗೇನಾ ಸರ್ವಥಾ।
ದೇವ ಅಮರ ಜ್ಯಾಚೀ ಸತ್ತಾ। ತ್ಯಾಸೀ ಮೃತ್ಯ ಕೈಸೆನೀ ॥೪೯॥

ಉಪಜಣೇ ಆಣೀ ಮರಣೇ। ಯೇಣೇ ಜಾಣೇ ದುಃಖ ಭೋಗಣೇ।
ಹೇ ತ್ಯಾ ದೇವಾಚೇ ಕರಣೇ। ತೋ ಕಾರಣ ವೇಗಳಾ ॥೫೦॥

ಅಂತಃಕರಣ ಪಂಚಪ್ರಾಣ। ಬಹುತತ್ವೀ ಪಿಂಡಜ್ಞಾನ।
ಯಾ ಸರ್ವಾಸ ಆಹೆ ಚಳಣ। ಮ್ಹಣೋನಿ ದೇವ ನವ್ಹೇತೀ ॥೫೧॥

ಯೇವಂ ಕಲ್ಪನೆರಹಿತ। ತಯಾ ನಾವ ಭಗವಂತ।
ದೇವಪಣಾಚೀ ಮಾತ। ತೇಥೇ ನಾಹೀ ॥೫೨॥

ತವ ಶಿಷ್ಯೇ ಆಕ್ಷೇಪಿಲೇ। ತರೀ ಕೈಸೇ ಬ್ರಹ್ಮಾಂಡ ಕೇಲೇ।
ಕರ್ತೇಪಣೇ ಕಾರಣ ಪಡಿಲೇ। ಕಾಯಾಮುಳೇ ॥೫೩॥

ವಿಶ್ವದ ಈ ತೋರಿಕೆಯು ಬಾಜಾರವು ಮಾಯೆಯು ನಿರ್ಮಾಣ ಮಾಡಿದ ಅಶಾಶ್ವತ ದೃಶ್ಯ ಇರುವದು. ಇದು ಅಗದೀ ಖರೇ ಇರುವದೆಂದು ಯಾವುದೇ ಅದ್ವೈತ ಗ್ರಂಥಗಳಲ್ಲಿ ಎಲ್ಲಿಯೂ ಹೇಳಿಲ್ಲ. [೪೩] ಅರ್ಥಾತ್ ಈ ದೃಶ್ಯ ವಿಶ್ವವು ಮಿಥ್ಯಾ ಇರುವದು. ಮತ್ತು ಆತ್ಮಸ್ವರೂಪ ಒಂದೇ ಸರ್ವಸ್ವೀ ನಿಜವಿರುವದು. ಇದರ ಆಚೆಗೆ ಪರಮಾತ್ಮಾ ಇರುವನು. ಈ ಪರಮಾತ್ಮನೇ ಸರ್ವರಿಗಿಂತ ಶ್ರೇಷ್ಠನಿರುವನು. ಅಂತರಾತ್ಮಾ ಇದು ಸರ್ವದರಲ್ಲೂ ಒಳಗೂ ಹೊರಗೂ ವ್ಯಾಪಿಸಿ ಇರುವದು.(೪೪) ಜೀವದ ಅಂತರ್ಯಾಮದಲ್ಲಿ ಸ್ವರೂಪವಿರುವದು. ಇದೇ ಆತ್ಮಾ ಎನಿಸುವದು. ಚರಾಚರ ವಿಶ್ವದಲ್ಲೆಲ್ಲ ಒಳಗೂ ಹೊರಗೂ ತುಂಬಿ ಇರುವವನು ಅಂತರಾತ್ಮಾ ಅನಿಸುವನು. ಮತ್ತು ವಿಶ್ವವನ್ನು ದಾಟಿ ಕೇವಲ ಅಂದರೆ ಅಗದೀ ಸ್ವತಂತ್ರನಾಗಿ ಇರುವವನು ಮಾತ್ರ ಪರಮಾತ್ಮಾ ಅನಿಸುವನು. ಒಂದೇ ಸದ್ವಸ್ತು ಜೀವ ಮತ್ತು ಜಗತ್ತು ಇವುಗಳ ಉಪಾಧಿಯಿಂದಾಗಿ ಹೆಸರಿನಲ್ಲಿ ಭಿನ್ನವೆನಿಸುವವು. ಆದರೆ ವಾಸ್ತವಿಕದಲ್ಲಿ ಹೀಗಿಲ್ಲ. ಆ ಶುದ್ಧ ಆತ್ಮಸ್ವರೂಪಕ್ಕೆ ಮಾತ್ರ ದೇವರೆನ್ನಬೇಕು. ಇದರ ಹೊರತಾಗಿ ಬಾಕಿ ಸರ್ವ ದೃಶ್ಯವು ವ್ಯರ್ಥವಿರುವದು.ಇದು ವೇದಾಂತ ರಹಸ್ಯವಿರುವದು.(೪೫) ಎಲ್ಲ ವಸ್ತುಗಳೂ,ಎಲ್ಲ ಪದಾರ್ಥಗಳೂ ನಾಶವಂತವಿರುವವು.ಇದು ಎಲ್ಲರಿಗೂ ಗೊತ್ತಿರುವ ಪ್ರತ್ಯಕ್ಷದ ಅನುಭವವಿರುವದು.ಮತ್ತು ಭಗವಂತನು ಮಾತ್ರ ಅವಿನಾಶಿ ಇರುವನು ಆದ್ದರಿಂದ ಭಗವಂತನು ಎಲ್ಲಪದಾರ್ಥ ವಸ್ತುಗಳಿಂದ ಬೇರೆ ಇರಲಿಕ್ಕೇಬೇಕೆಂದು ಅನಿಸುವದು(೪೬) ಎಲ್ಲ ಶಾಸ್ತ್ರಗಳು ಹೇಳುವದೇನಂದರೆ ದೇವರು ಅಗದೀ ಶುದ್ಧ ವ, ಶಾಶ್ವತನಿರುವನು.ಇಂಥ ನಿಶ್ಚಲ ಮತ್ತುಶಾಶ್ವತ ದೇವನಿಗೆ ಎಂದೂ ಅಶಾಶ್ವತ,ಚಂಚಲ ಎಂದು ಅನ್ನಬಾರದು.(೪೭)ದೇವ ಬಂದನು,ದೇವ ಹೋದನು,ದೇವ ಹುಟ್ಟಿದನು, ದೇವ ಸತ್ತನು ಅಂತಾ ಅಂದದ್ದಾದರೆ ಪಾಪವನ್ನು ಸಂಚಯಿಸಿದಂತೆ ಆಗುವದು. (೪೮) ದೇವನಿಗೆ ಜನನ ಮರಣ ಇವುಗಳ ಸಂಬಂಧ ಎಳ್ಳಷ್ಟು ಇಲ್ಲ. ಯಾವನ ಸಾಮರ್ಥ್ಯದಿಂದ ದೇವಾನುದೇವತೆಗಳು ಅಮರರಾಗುವರೋ ಅಂಥ ನಿಜವಾದ ದೇವನಿಗೆ ಮೃತ್ಯುವಿನ ಬಾಧೆ ಉಂಟಾಗುವದು ಶಕ್ಯವೇ ಇಲ್ಲ. "ನಾಸತೊ ವಿದ್ಯತೆ ಭಾವೋ ನಾಭಾವೋ ವಿದ್ಯತೆ ಸತಃ॥[ಭ. ಗೀ ಅ. ೨ ಶ್ಲೋ ೧೬][೪೯]ಹುಟ್ಟುವದು. ಸಾಯುವದು,ಬರುವದು ಹೋಗುವದು ಮತ್ತು ದುಃಖ ಭೋಗಿಸುವದು.ಇವೆಲ್ಲ ಆ ನಿಜವಾದ ದೇವನ ಸತ್ತಾ ಮಾತ್ರದಿಂದ ಆಗುವವು.ನಡೆಯುವವುಇವನೇ ಸರ್ವಕ್ಕೂ ಕಾರಣನಾಗಿರುವನು. ಅಂತೆಯೇ ಇವನು ಎಲ್ಲವುಗಳಿಗಿಂತ ಬೇರೆಯೇ ಇರುವನು. (೫೦) ಅಂತಃಕರಣ ಪಂಚಪ್ರಾಣ (ಪ್ರಾಣ, ಉದಾನ, ಸಮಾನ, ವ್ಯಾನ, ಅಪಾನ)ಗಳು, ಪಿಂಡ (ದೇಹ)ದಲ್ಲಿ ನಮಗೆ ಗೊತ್ತಿರುವಂಥ ಅನೇಕ ತತ್ವ, ಇವೆಲ್ಲವೂ ಅಶಾಶ್ವತವಿರುವವು.ರೂಪಾಂತರ ಹೊಂದುವಂಥವಿರುವವು. ಆದಕ್ಕಾಗಿ ಇವುದೇವರಲ್ಲ.(೫೦) ಇಷ್ಟೇ ಏಕೆ? ಒಟ್ಟಿನಲ್ಲಿ ಹೇಳುವದಾದರೆ, ಎಲ್ಲಿ ಮಾನವೀ ಕಲ್ಪನೆಯು ಹಿಂದಕ್ಕೆ ತಿರುಗುವವೋ ಅಂಥ ಸ್ವರೂಪಕ್ಕೆ ದೇವ ಅಥವಾ ಭಗವಂತ ಎಂದು ಹೆಸರಿರುವದು. ಈ ಸ್ವರೂಪದಲ್ಲಿ ದೇವತ್ವದ ಕಲ್ಪನೆಗೂ ಸಹ ಸ್ಥಾನವಿಲ್ಲ. [೫೨] ಈ ಪ್ರಕಾರ ದೇವತ್ವದ ಸವಿಸ್ತಾರ ವರ್ಣನೆ ಆಯಿತು. ಇದನ್ನು ಕೇಳಿ ಶ್ರೋತಾ ಕೇಳುತ್ತಾನೆ:-ಮೂಲ ಭಗವಂತನ ಸ್ವರೂಪವು ನಿರ್ಗುಣವಿರುವದು.ಭಗವಂತನೇ ಚರಾಚರಜಗತ್ತನ್ನು ರಚಿಸಿದನು ಎಂದು ಅಂದದ್ದಾದರೆ.ಅವನಿಗೆ ಕರ್ತೃತನ ಯಜಮಾನತ್ವ ಬರುವದು.ಯಜಮಾನತ್ವಕರ್ತೃತನ ಇದು ಒಂದು ಗುಣವಿರುವದು. ನಿರ್ಗುಣನಾದವನಿಗೆ ಗುಣವನ್ನು ಹೇಗೆ ಆರೋಪಿಸಲು ಬರುವದು ? ಈಗ ದೇವನು ಸಗುಣನೋ?ನಿರ್ಗುಣನೋ?ಮತ್ತು ವಿಶ್ವದ ಕರ್ತಾ ಯಾರು ಇರುವರು?ಇವನನ್ನು ಗುರುತಿಸುವ ಬಗೆ ಯಾವುದು? ಇದರ ಮೇಲೆ ಸಮರ್ಥರು ತಮ್ಮ ಉತ್ತರದಲ್ಲಿ ಬ್ರಹ್ಮಸ್ವರೂಪದಲ್ಲಿ ಮಾಯಾ ಹೇಗೆ ಉದ್ಭವಿಸಿತು ಅನ್ನುವ ವಿಷಯ ವಿವೇಚನೆಯನ್ನು ಇಲ್ಲಿ ಮಾಡುವರು;- ಇದರ ಮೇಲೆ ಶಿಷ್ಯನು ಶಂಕಾ ತೆಗೆದನು. [ಸಂಶಯ ವಿಚಾರಿಸಿದನು] ಕರ್ತೃತನ ಅಂದರೆ ಯಜಮಾನತ್ವವು ಒಂದು ಕಾರಣವಿರುವದು. ಒಂದು ವೇಳೆ, ಇದೂ ಸಹ ಕಾರ್ಯ ಅಂತಾ ನಿಶ್ಚಯವಾದರೆ ಆಗ ಈ ವಿಶ್ವ ನಿರ್ಮಾಣವಾದದ್ದು ಹೇಗೆ? [೫೩]

ದೃಷ್ಟೀಪಣೇ ದೃಷ್ಟಾ ದೃಶ್ಯೀ । ಜೈಸಾ ಪಡೆ ಅನಾಯಾಸೀ ।
ಕರ್ತೇಪಣೇ ನಿರ್ಗುಣಾಸೀ । ಗುಣ ತೈಸೇ ॥೫೪॥

ಬ್ರಹ್ಮಾಂಡಕರ್ತಾ ಕವಣ । ಕೈಸೀ ತ್ಯಾಚೀ ವೊಳಖಣ ।
ದೇವ ಸಗುಣ ಕಿ ನಿರ್ಗುಣ । ಮಜ ನಿರೋಪಾವಾ ॥೫೫॥

ಯೇಕ ಮ್ಹಣತೀ ತ್ಯಾ ಬ್ರಹ್ಮಾತೇ । ಇಚ್ಛಾಮಾತ್ರೇ ಸೃಷ್ಟಿಕರ್ತೆ ।
ಸೃಷ್ಟಿಕರ್ತೆ ತ್ಯಾಪರತೇ । ಕೋಣ ಆಹೆ ॥೫೬॥

ಆತಾ ಅಸೋ ಹೇ ಬಹು ಬೋಲೀ । ಸಕಳ ಮಾಯಾ ಕೊಠೂನ ಜಾಲೀ ।
ತೆ ಹೆ ಆತಾ ನಿರೋಪಿಲೀ । ಪಾಹಿಜೆ ಸ್ವಾಮೀ ॥೫೭॥

ಐಸೇ ಏಕೋನಿ ವಚನ । ವಕ್ತಾ ಮ್ಹಣೆ ಸಾವಧಾನ ।
ಪುಢಿಲೆ ಸಮಾಸೀ ನಿರೂಪಣ । ಸಾಂಗಿಜೇಲ ॥೫೮॥

ಬ್ರಹ್ಮೀ ಮಾಯಾ ಕೈಸೀ ಜಾಲೀ । ಪುಢೇ ಅಸೆ ನಿರೋಪಿಲೀ ।
ಶ್ರೋತೀ ವೃತ್ತಿ ಸಾವಧ ಕೇಲೀ । ಪಾಹಿಜೆ ಆತಾ ॥೫೯॥

ಪುಢೇಹೇ ಚಿ ನಿರೂಪಣ । ವಿಶದ ಕೇಲೇ ಶ್ರವಣ ।
ಜೇಣೇ ಹೋಯ ಸಮಾಧಾನ । ಸಾಧಕಾಂಚೇ ॥೬೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
"ದೇವ ದರ್ಶನ" ನಾಮ ಸಮಾಸ ಪ್ರಥಮ ॥

ದೃಷ್ಟಾ ದೃಶ್ಯ ನೋಡುವನು. ಆದರೆ ನಾನು ದೃಷ್ಟಾ ಇರುವೆನು. ಈ ಅರಿವು ಆಯಿತೆಂದರೆ ನಾವು ದೃಷ್ಟಾನನ್ನೇ ನೋಡುವೆವು. ಅಂದರೆ ಇದರಿಂದ ದೃಷ್ಟಾನೇ ದೃಶ್ಯವಾಗುವನು. ಇದರಿಂದ ದೃಷ್ಟಾ ಯಾವರೀತಿಯ ಶ್ರಮವಿಲ್ಲದೇ ದೃಶ್ಯದ ವರ್ಗದಲ್ಲಿ ಹೋಗಿ ಬೀಳುವನು. ಇದರಂತೆಯೇ ನಿರ್ಗುಣ ಸ್ವರೂಪದಲ್ಲಿ ಕರ್ತಾತನದ ಕಾರಣವಾಗಿ ಗುಣರೂಪ ಕಾಣಹತ್ತುವದು. [೫೪] ಈ ವಿಶ್ವದ ಕರ್ತಾ ಯಾರು? ಅವನನ್ನು ಗುರುತಿಸುವದು ಹೇಗೆ ? ದೇವ, ಸಗುಣನೋ ಅಥವಾ ನಿರ್ಗುಣನೋ ಇದೆಲ್ಲವನ್ನೂ ನನಗೆ ತಿಳಿಯುವಂತೆ ಹೇಳಿರಿ. [೫೫] ಒಬ್ಬರೆನ್ನುವರು,ಪರಬ್ರಹ್ಮನು ಕೇವಲ ತನ್ನ ಸಂಕಲ್ಪ ಮಾತ್ರದಿಂದ ವಿಶ್ವವನ್ನು ನಿರ್ಮಾಣ ಮಾಡಿದನು.ಇದು ನಿಜ ವಲ್ಲವಾದರೆ ಇವನ ಹೊರತು ವಿಶ್ವವನ್ನು ನಿರ್ಮಾಣ ಮಾಡಿದವರು ಯಾರಿರುವರು? [೫೬] ಹೆಚ್ಚು ಮಾತುಗಳು ಈಗ ಸಾಕು. ಈ ಎಲ್ಲ ಮಾಯೆಯು ಎಲ್ಲಿಂದ ಬಂದಿತು? ಹೇಗೆ ನಿರ್ಮಾಣವಾಯಿತು? ಇದರ ಬಗ್ಗೆ ಸ್ವಾಮಿ ಸಮರ್ಥರು ಸ್ಪಷ್ಟವಾಗಿ ತಿಳಿಸಿಕೊಡಬೇಕು. [೫೭] ಶಿಷ್ಯನ ಈ ಮಾತು ಕೇಳಿ ವಕ್ತಾ ಅನ್ನುತ್ತಾನೆ. ನೀನು ಸ್ವಲ್ಪ ಇತ್ತ ಲಕ್ಷ ಕೊಡುವವನಾಗು.ಮುಂದಿನ ಸಮಾಸದಲ್ಲಿ ಈ ಎಲ್ಲ ಪ್ರಶ್ನೆಗಳಿಗೆ ನಾನು ಉತ್ತರವನ್ನು ಕೊಡುವೆನು.[೫೮] ಪರಬ್ರಹ್ಮದಲ್ಲಿ ಮಾಯಾ ಹೇಗೆ ನಿರ್ಮಾಣವಾಯಿತು? ಇದರ ಬಗೆಗೆ ಸಹ ಮುಂದೆ ತಿಳಿಸಿ ಹೇಳುವೆನು. ಶ್ರೋತಾ ರರು ಲಕ್ಷ್ಯಗೊಟ್ಟು ಶ್ರವಣ ಮಾಡಬೇಕು.[೫೯] ಮುಂದಿನ ಸಮಾಸದಲ್ಲಿ ಇವೇ ವಿಷಯಗಳ ವಿವೇಚನೆ ಇರುವದು. ಇವನ್ನು ಏಕಾಗ್ರ ಮನದಿಂದ ಶ್ರವಣ ಮಾಡಿದರೆ ಸಾಧಕನ ಮನಸ್ಸಿಗೆ ಸಮಾಧಾನವಾಗುವದು. [೬೦]

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ
ಎಂಟನೆಯ ದಶಕದ "ದೇವ ದರ್ಶನ"ವೆಂಬ ಒಂದನೆಯ ಸಮಾಸವು ಮುಗಿದುದು?

## ದಶಕ ೮. ಸಮಾಸ ೨. ಸೂಕ್ಷ್ಮ ಆಶಂಕಾ ನಿರೂಪಣ (ನುಡಿ ೫೫)

ಅದ್ವೈತ ತತ್ವಜ್ಞಾನ ಮಾನ್ಯ ಮಾಡಬೇಕೆಂಬುವಲ್ಲಿ ತರ್ಕ ದೃಷ್ಟಿಯಿಂದ ಮುಖ್ಯವಾಗಿ ಯಾವ ಅಡಚಣಿಗಳು ಬರುವವೋ ಅವುಗಳ ಬಗೆಗೆ ಸವಿಸ್ತರವಾಗಿ, ಸುಸ್ಪಷ್ಟವಾಗಿ ಶ್ರೀಸಮರ್ಥರು ತಮ್ಮ ಅನಿಸಿಕೆಗಳನ್ನು ಈ ಸಮಾಸದಲ್ಲಿ ತಿಳಿಸಿ ತೋರಿಸಿಕೊಟ್ಟಿದ್ದಾರೆ. ಪ್ರಶ್ನೆ ಯಾವದಿರುವದೆಂಬುದರ ಬಗ್ಗೆ ಸಂಪೂರ್ಣವಾಗಿ ಆಕಲನವಾಯಿತೆಂದರೆ–ತಿಳಿಯಿತೆಂದರೆ. ಅದರ ಉತ್ತರವೂ ಸಹ ಚನ್ನಾಗಿ ಲಕ್ಷ್ಯದಲ್ಲಿ ಬರುವದು. ಪ್ರಶ್ನೆಗೆ ಸುಸ್ಪಷ್ಟವಾದ

ಉತ್ತರ ದೊರಕುವದು. ಪ್ರಶ್ನೆಯ ಮೂಲ ಸ್ವರೂಪ ಹೀಗೆ ಇರುವದು, ಪರಮಾರ್ಥದಲ್ಲಿ ಕೇವಲ ಬುದ್ಧಿಯ ಜೋರಿನ ಮೇಲೆಯೇ ಪರಮಾತ್ಮ ವಸ್ತುವಿನ ಸ್ವರೂಪವನ್ನು ನಿಶ್ಚಿತಪಡಿಸಲಿಕ್ಕೆ ಬರುವದಿಲ್ಲ.ಅದಕ್ಕಾಗಿ ಆತ್ಮಜ್ಞಾನದ ಅವಶ್ಯಕತೆಯೇ ಮುಖ್ಯವಾಗಿ ಇರುವದು.ಈ ಮಾತನ್ನು ಆತ್ಮಜ್ಞಾನಿ ಸಾಧು ಸಂತರೇ ನಿಃಸಂಶಯವಾಗಿ ಹೇಳಿದ್ದಾರೆ. ಈಗಲೂ ಹೇಳುವವರು ಇರುವರು. "ನೇಹ ನಾನಾಸ್ತಿ ಕಿಂಚನ" [ಬೃಹದಾರಣ್ಯಕ ಉಪನಿಷತ್] ಅರ್ಥ:– "ಈ ವಿಶ್ವದಲ್ಲಿ ಯಾವುದೇ ಪ್ರಕಾರದ ಅನೇಕತ್ವ ಇಲ್ಲ" ಇದರ ಅರ್ಥವು ಎಂತೆಂದರೆ, ಪರಮಾತ್ಮ ಸ್ವರೂಪವು ಶುದ್ಧ, ನಿತ್ಯ, ಕೇವಲ, ಒಂದೇ ಒಂದು ಸರ್ವವ್ಯಾಪಿ, ಅವಿಕಾರಿ, ನಿರ್ಗುಣ, ಸೂಕ್ಷ್ಮ ಮತ್ತು ಅದೃಶ್ಯವಿರುವದು. ಆದರೆ ನಮ್ಮ ಅನುಭವವು ಹೇಗಿರುವದೆಂದರೆ ಈ ವಿಶ್ವವು ಅನಿತ್ಯ ಇರುವದು. ಭೇದಗಳಿಂದ ತುಂಬಿದ್ದಾಗಿದೆ. ವಿಕಾರಿ ಇರುವದು. ಸಗುಣ, ಸ್ಥೂಲ ಮತ್ತು ದೃಶ್ಯವಿರುವದು. ಆದರೂ ಸಹ ಇದು ನಮಗೆ ನಿಜವೆನಿಸುವದು. ಜ್ಞಾನಿ ಸಾಧು ಸಂತರಿಗೆ ಈ ದೃಶ್ಯವಿಶ್ವವು ಹೀಗಿದ್ದೂ ಇಲ್ಲದಂತೆ ಅನಿಸುವದು. ಅದರಂತೆ ಅದೃಶ್ಯ ಪರಬ್ರಹ್ಮವು ನಮಗೆ ನಿಜವಿದ್ದೂ ಇಲ್ಲದಂತಾಗಿದೆ. ಜ್ಞಾನಿ ಪುರುಷರ ಅನುಭವವು ಯಾವಾಗಲೂ ಸರ್ವಸ್ವೀ ನಿಜವಿರುವದು. ಆದರೆ ನಮ್ಮ ಅನುಭವ ಮಾತ್ರ ಸರ್ವಸ್ವೀ ಖೊಟ್ಟಿಇರುವದಿಲ್ಲ–ಸಂಪೂರ್ಣ ನಿಜವೂಇರುವದಿಲ್ಲ.[ಇದಕ್ಕೆ ಅಜ್ಞಾನವೇ ಕಾರಣವು] ಆದ್ದರಿಂದ ಮೂಲ ಅವಿಕಾರಿ ಬ್ರಹ್ಮನಿಂದ ವಿಕಾರಿ ಮತ್ತು ಸಾಕಾರ, ನಶ್ವರ ದೃಶ್ಯ ವಿಶ್ವವು ನಿರ್ಮಾಣವಾದದ್ದಾದರೂ ಹೇಗೆ?ಇದನ್ನೇ ಅದ್ವೈತ ವೇದಾಂತವು ನಮಗೆ ಈಗ ತಿಳಿಸಿ ಹೇಳುವ ಪ್ರಸಂಗ ಬಂದಿದೆ. ನಿರ್ಗುಣ ಬ್ರಹ್ಮವು ನಿಷ್ಕ್ರೀಯ ಮತ್ತು ನಿರ್ವಿಕಾರಿ ಇರುವನೆಂದು ಅಂದದ್ದಾದರೆ ಅವನು ಈ ಸಗುಣ, ಸಕ್ರಿಯ, ಮತ್ತು ಸವಿಕಾರಿ, ವಿಶ್ವದ ನಿರ್ಮಾಣ ಮಾಡಿದನು ಎಂದು ಅನ್ನಲಿಕ್ಕೆ ಬರುವದಿಲ್ಲ. ಈ ವಿಶ್ವದ ಕರ್ತೃತ್ವ (ಯಜಮಾನತ್ವ) ಬ್ರಹ್ಮದ ಮೇಲೆ ಹಾಕಿದರೆ ಆ ಬ್ರಹ್ಮನಿಗೆ ನಿಷ್ಕ್ರಿಯ ಮತ್ತು ನಿರ್ಗುಣನೆಂದು ಅನ್ನಲಿಕ್ಕೆ ಬರಲಾರದು. ಇವನ ಇಚ್ಛೆಯಿಂದಾಗಲೀ ಅಥವಾ ಸಂಕಲ್ಪದಿಂದಾಗಲೀ ವಿಶ್ವ ನಿರ್ಮಾಣ ಆಗಿಯೇ ಇಲ್ಲವೆಂದು ಅನ್ನಬೇಕೆಂದರೆ ಇವನು ನಿರಪೇಕ್ಷ ಮತ್ತು ಕಲ್ಪನಾ ರಹಿತನಾಗಿ ಉಳಿಯುವದಿಲ್ಲ. ಇರಲಿ, ವಿಶ್ವ ನಿರ್ಮಾಣ ಆಯಿತು ಎಂದು ಅನ್ನುವದಾದರೆ ಗುರು ವ ಶಿಷ್ಯ, ಶ್ರೋತಾ ವ ವಕ್ತಾ, ಮತ್ತು ಸ್ವತಃ ದಾಸಬೋಧ ಇವುಗಳಿಗೆ ಯಾವ ಸ್ಥಾನವೂ ಉಳಿಯುವದಿಲ್ಲ. ವಿಚಾರದ ಭೂಮಿಕೆಯ ಮೇಲೆ ನಿರ್ಗುಣ ಬ್ರಹ್ಮ ಮತ್ತು ಸಗುಣ ವಿಶ್ವ ಇವುಗಳ ಸಂಬಂಧವನ್ನು ಬಿಡಿಸಿ ವಿವೇಚನ ಮಾಡಿ ಪ್ರತ್ಯೇಕಿಸಿ ನೋಡುವ ಪ್ರಯತ್ನ ಮಾಡಿದರೆ ಆಗ ಯಾವ ಅಡಚಣಿಗಳು ಮುಂದೆ ಬಂದು ನಿಲ್ಲುವವು? ಅನ್ನುವದರ ಬಗೆಗೆ ಈ ಸಮಾಸವಲ್ಲಿ ವಿವೇಚನೆ ಮಾಡಿದ್ದು ಕಂಡು ಬರುವದು.

## ಸಮಾಸ ದ್ವಿತೀಯ : ಸೂಕ್ಷ್ಮ ಆಶಂಕಾ ನಿರೂಪಣ

॥ಶ್ರೀರಾಮ॥ ಮಾಗಾ ಶ್ರೋತೀ ಆಕ್ಷೇಪಿಲೇ । ತೇ ಪಾಹಿಜೆ ನಿರೋಪಿಲೇ ।
ನಿರಾವೇವೀ ಕೈಸೇ ಜಾಲೇ । ಚರಾಚರ ॥೧॥

ಯಾಚೇ ಐಸೇ ಪ್ರತಿವಚನ । ಬ್ರಹ್ಮ ಜೇ ಕಾ ಸನಾತನ ।
ತೇಥೇ ಮಾಯಾ ಮಿಥ್ಯಾಭಾನ । ವಿವರ್ತ ರೂಪ ಭಾಸೆ ॥೨॥

ಆದಿ ಯೇಕ ಪರಬ್ರಹ್ಮ । ನಿತ್ಯಮುಕ್ತ ಅಕ್ರಿಯ ಪರಮ ।
ತೇಥೇ ಅವ್ಯಾಕೃತ ಸೂಕ್ಷ್ಮ । ಜಾಲೀ ಮೂಳಮಾಯಾ ॥೩॥

॥ಶ್ಲೋಕ॥ ಆದ್ಯಮೇಕಂ ಪರಬ್ರಹ್ಮ ನಿತ್ಯಮುಕ್ತಮವಿಕ್ರಿಯಮ್ ।
ತಸ್ಯ ಮಾಯಾ ಸಮಾವೇಶೋ ಜೀವಮವ್ಯಾಕೃತಾತ್ಮಕಮ್ ॥೪॥

ಆಶಂಕಾ ॥ ಯೇಕ ಬ್ರಹ್ಮ ನಿರಾಕಾರ । ಮುಕ್ತ ಅಕ್ರಿಯೆ ನಿರ್ವಿಕಾರ ।
ತೇಥೇ ಮಾಯಾ ವೊಡಂಬರ । ಕೋಠೂನ ಜಾಲೀ ॥೪॥

## ದಶಕ ೮ : ಸಮಾಸ ೨ : ಸೂಕ್ಷ್ಮ ಶಂಕಾ ನಿರೂಪಣ [ನುಡಿ ೫೫]

ಹಿಂದಿನ ಸಮಾಸದ ಕೊನೆಯಲ್ಲಿ ಶ್ರೋತಾನು ವಿಚಾರಿಸಿದ ಶಂಕೆಗಳಿಗೆ ಈಗ ಉತ್ತರ ಕೊಡುವರು:- ಹಿಂದಿನ ಸಮಾಸದಲ್ಲಿ ಶ್ರೋತಾ ಆಕ್ಷೇಪ ತೆಗೆದು ವಿಚಾರಿಸಿದ್ದೇನಂದರೆ "ನಿರ್ಗುಣ ಬ್ರಹ್ಮದಲ್ಲಿ ಈ ಚರಾಚರ ವಿಶ್ವ ಹೇಗೆ ನಿರ್ಮಾಣವಾಯಿತು?" ಈಗ ನಾವು ಇದಕ್ಕೆ ಉತ್ತರ ಕೊಡುವೆವು. (೧) ಆ ಉತ್ತರವು ಹೀಗೆ ಇರುವದು. ಬ್ರಹ್ಮವು ಸನಾತನವಿರುವದು. ಈ ಬ್ರಹ್ಮನಲ್ಲಿ ವಿವರ್ತರೂಪ (ವಿಲಕ್ಷಣ)ದ ಮಾಯಾ ಉತ್ಪನ್ನವಾದಳು. ಇವಳು ಖರೇ ಇರದಿದ್ದರೂ ಸಹ ಖರೇತನದಿಂದ ಭಾಸವಾಗಹತ್ತಿದಳು. ಮುಸ್ಸಂಜೆಯ ಹೊತ್ತಿನಲ್ಲಿ ಒಂದು ಖೋಲಿಯಲ್ಲಿ ಹಗ್ಗ ಬಿದ್ದಿರುವದು. ಒಬ್ಬನು ಬಾಗಿಲು ತೆಗೆದು ಒಳಗೆ ಹೋಗುವಾಗ ನೋಡಿದರೆ ಹಗ್ಗವು ಹಗ್ಗವಾಗಿ ಕಾಣದೇ ಅದು ಸರ್ಪ (ಹಾವು) ಎಂದೇ ಭಾಸವಾಯಿತು. ಇದರಿಂದ ಅವನು ಗಾಬರಿಯಾದನು. ಆಗ ದೀಪ ತಂದು ನೋಡಿದಾಗ ಅದು ಸರ್ಪವಲ್ಲ, ಹಗ್ಗವೇ ಬಿದ್ದಿದೆಯೆಂದು ಕಂಡು ಬಂದಿತು. ಮೂಲದಲ್ಲಿ ಇಲ್ಲದಂಥ ಆದರೆ ದೃಷ್ಟಿ ದುರ್ಬಲತೆಯಿಂದ ಕಂಡ ಸರ್ಪ (ಬೆಳಕಿನಿಂದ) ಇಲ್ಲದಾಯಿತು. ಇದರ ಜೊತೆಗೇ ಅವನ ಭಯವೂ ಹಾರಿ ಹೋಯಿತು. ಇದರಂತೆಯೇ ಶುದ್ಧ ಪರಮಾತ್ಮ ಸ್ವರೂಪ ಎಲ್ಲ ಕಡೆಗೂ ಪಸರಿಸಿರುವದು. ಅಜ್ಞಾನದ ಅಮಲಿನಿಂದಾಗಿ ಪ್ರತಿಭಾ ಹೆಚ್ಚಿನ ಬುದ್ಧಿವಂತಿಕೆ ಅಥವಾ ವಿಶೇಷ ಪ್ರಜ್ಞೆ ಮಂದವಾಗಿ [ಮಸಕಾಗಿ] ಇಂದ್ರಿಯಗಳು ಮತ್ತು ಇವನ್ನು ಅನುಸರಿಸುವ ಸಾಮಾನ್ಯ ಬುದ್ಧಿ ಇವು ಪ್ರಬಲಗೊಂಡು ಇಂದ್ರಿಯಗಳ ಮುಖಾಂತರ [ಇಂದ್ರಿಯಗಳ ಕಿಂಡಿಯಿಂದ]ಸ್ವರೂಪದ ಕಡೆಗೆ ನೋಡಿದಾಗ ಆ ಮೂಲ ಸ್ವರೂಪವು ಮರೆಯಾಗಿತ್ತು.ಮಸಕಾಗಿತ್ತುಮುಚ್ಚಿತ್ತು ವ, ಅಲ್ಲಿ ಅಂದರೆ ಅದರ ಮೇಲೆ ದೃಶ್ಯ ವಿಶ್ವ ಕಾಣಹತ್ತಿತು.ಹಾಗೂ ಇದು ನಿಜವೆಂದು ಅಜ್ಞಾನಿಗೆ ಅನಿಸಿತು ಮತ್ತು ಭಯಚಿಂತೆಗಳು ನಿರ್ಮಾಣವಾದವು. ನಾನು ದೇಹ ಅಲ್ಲ. ನಾನು ಆತ್ಮವೇ ಇರುವೆ ಅನ್ನುವ ಜ್ಞಾನದೀಪ ಅವನಲ್ಲಿ ಬೆಳಗಿದ ಮೇಲೆ ಭೇದಗಳಿಂದ ತುಂಬಿದ ವಿಶ್ವದ ಸ್ಥಳದಲ್ಲಿ ಚೈತನ್ಯ ಘನ ಪರಮಾತ್ಮನು ಕಾಣತೊಡಗಿದನು.ಇದರ ಸಂಗಡ ಒಮ್ಮೆಲೇ ಸಂಪೂರ್ಣ ನಿರ್ಭಯತೆ ಪ್ರಾಪ್ತವಾಯಿತು. ದೃಷ್ಟಿಯ ಭ್ರಮದಿಂದ ಹಗ್ಗದಲ್ಲಿ ಹಾವಿನ ಭಾಸವಾದದ್ದಕ್ಕೆ "ವಿವರ್ತ" ಎಂದು ಅನ್ನುವರು. "ನಾನು ಆತ್ಮಾ ಇರುವೆ" ಇದನ್ನು ಮರೆತು"ನಾನು ದೇಹವೇ ಇರುವೆ" ಎಂದು ಆಗುವ ಭಾವನೆಗೆ ವಿವರ್ತ ಅನ್ನುವರು. ಇದೆಲ್ಲ ಅವಿದ್ಯೆಯಿಂದ ಆಗುತ್ತದೆ. ಸರ್ವತ್ರ ಪರಮಾತ್ಮ ಸ್ವರೂಪ ತುಂಬಿದ್ದರೂ ಸಹ ಅದು ಮುಚ್ಚಿ ಹೋಗಿ ಅಲ್ಲಿ ದೃಶ್ಯ ಹಾಗೂ ಅಶಾಶ್ವತ ವಿಶ್ವ ಕಂಡು ಬರುವದಕ್ಕೆ ವಿವರ್ತ ಅನ್ನುವರು. ಇವೆಲ್ಲ ಮಾಯೆಯಿಂದ ಆಗುವದು. [೨] ಮೂಲದಲ್ಲಿ ಒಬ್ಬ ಪರಬ್ರಹ್ಮ ಮಾತ್ರ ಇದ್ದನು. ಅವನು ನಿತ್ಯ ಮುಕ್ತ ನಿಷ್ಕ್ರಿಯ ಮತ್ತು ಸರ್ವ ಶ್ರೇಷ್ಠನಾಗಿರುವನು. ಇವನಲ್ಲಿ ಯಾವುದೇ ವಿಕಾರ ಇಲ್ಲದ ಮತ್ತು ಅತ್ಯಂತ ಸೂಕ್ಷ್ಮವಾಗಿರುವ ಮೂಲ ಮಾಯಾ ಉತ್ಪನ್ನವಾದಳು. [೩] ಶ್ಲೋಕ:– ಆದ್ಯಮೇಕಂ ಪರಬ್ರಹ್ಮ ನಿತ್ಯ ಮುಕ್ತಮವಿಕ್ರಿಯಮ್। ತಸ್ಯ ಮಾಯಾ ಸಮಾವೇಶೋ ಜೀವಮವ್ಯಾಕೃತಾತ್ಮಕಮ್॥೪॥ [೪] ಶ್ಲೋಕದ ಅರ್ಥ:-ಮೂಲದಲ್ಲಿ ಸರ್ವಕ್ಕೂ ಮೊದಲು ಒಂದು ಪರಬ್ರಹ್ಮವಿರುವದು. ಇದು ನಿತ್ಯ ಮುಕ್ತವಿರುವದು. ಇದರಲ್ಲಿ ಯಾವುದೇ ಬದಲಾವಣೆಯಾಗುವದಿಲ್ಲ. ಇಂಥ ಪರಬ್ರಹ್ಮದಲ್ಲಿ ಅತ್ಯಂತ ಸೂಕ್ಷ್ಮ ಮಾಯಾ ಉತ್ಪನ್ನವಾಗುವದು.ಇವುಗಳಲ್ಲಿ ಬೀಜರೂಪದಿಂದ ಜೀವವು ವಾಸ ಮಾಡುವದು ಇದರ ಬಗ್ಗೆ ಶ್ರೋತಾ ಶಂಕಾ ತೆಗೆಯುವನು. ಪರಬ್ರಹ್ಮವು ನಿರಾಕಾರ ಮತ್ತು ನಿರ್ವಿಕಾರವಿರುವದಾದಲ್ಲಿ ಅಂಥ ಸ್ಥಳದಲ್ಲಿ ಮಾಯೆಯು ಕೋಲಾಹಲ ಹೇಗೆ ಉತ್ಪನ್ನವಾಯಿತು? ಸ್ವಾಮಿ ಸಮರ್ಥಾ! ನನ್ನ ಶಂಕೆ ಯಾವುದೆಂದರೆ: ಬ್ರಹ್ಮ ಒಬ್ಬನಿದ್ದಾನೆ. ಇವನು ನಿರಾಕಾರ, ಮುಕ್ತ, ನಿಷ್ಕ್ರಿಯ ಮತ್ತು ನಿರ್ವಿಕಾರವಿರುವನು. ಇದು ನಿಜವಿರುವದಾದರೆ ಇಂಥವನಲ್ಲಿ ಸಾಕಾರ, ಸಕ್ರಿಯ, ಮತ್ತು ಸವಿಕಾರವಿರುವ ಮಾಯೆಯ ಥಳಕು ಬೆಳಕಿನ ಗಾರುಡಿಯ-ಡೊಂಬರಾಟದ ಬಾಜಾರವು ಅದು ಹೇಗೆ ನಿರ್ಮಾಣವಾಯಿತು? (೪)

ಬ್ರಹ್ಮ ಅಖಂಡ ನಿರ್ಗುಣ । ತೇಥೇ ಇಛ್ಛಾ ಧರೀ ಕೋಣ ।
ನಿರ್ಗುಣೀ ಸಗುಣೇವಿಣ । ಇಛ್ಛಾ ನಾಹೀ ॥೫॥
ಮುಳೀ ಅಸೇಚಿನಾ ಸಗುಣ । ಮ್ಹಣೌನಿ ನಾಮೇ ನಿರ್ಗುಣ ।
ತೇಥೇ ಜಾಲೇ ಸಗುಣ । ಕೋಣೇಪರೀ ॥೬॥
ನಿರ್ಗುಣ ಚಿ ಗುಣಾ ಆಲೇ । ಐಸೇ ಜರೀ ಅನುವಾದಲೇ ।
ಲಾಗೋ ಪಾಹೆ ಯೇಣೇ ಬೋಲೇ । ಮೂರ್ಖಪಣ ॥೭॥
ಯೇಕ ಮ್ಹಣತೀ ನಿರಾವೇವ । ಕರೂನ ಅಕರ್ತಾ ತೋ ದೇವ ।
ತ್ಯಾಚೀ ಲೀಳಾ ಬಾಪುಡೆ ಜೀವ । ಕಾಯೆ ಜಾಣತೀ ॥೮॥
ಯೇಕ ಮ್ಹಣತೀ ತೋ ಪರಮಾತ್ಮಾ । ಕೋಣ ಜಾಣೆ ತ್ಯಾಚಾ ಮಹಿಮಾ ।
ಪ್ರಾಣೀ ಬಾಪುಡಾ ಜೀವಾತ್ಮಾ । ಕಾಯೆ ಜಾಣೆ ॥೯॥
ಉಗಾ ಚ ಮಹಿಮಾ ಸಾಂಗತೀ । ಶಾಸ್ತ್ರಾರ್ಥ ಅವಘಾ ಲೋಪಿತೀ ।
ಬಳೇ ಚಿ ನಿರ್ಗುಣಾಸ ಮ್ಹಣತೀ । ಕರೂನಿ ಅಕರ್ತಾ ॥೧೦॥
ಮುಳೀ ನಾಹೀ ಕರ್ತವ್ಯತಾ । ಕೋಣ ಕರೂನ ಅಕರ್ತಾ ।
ಕರ್ತಾ ಅಕರ್ತಾ ಹೆ ವಾರ್ತಾ । ಸಮೂಳ ಮಿಥ್ಯಾ ॥೧೧॥
ಜೇ ಠಾಈಚೇ ನಿರ್ಗುಣ । ತೇಥೇ ಕೈಚೇ ಕರ್ತೇಪಣ ।
ತರೀ ಹೆ ಇಛ್ಛಾ ಧರೀ ಕೋಣ । ಸೃಷ್ಟಿ ರಚಾವ್ಯಾಚೀ ॥೧೨॥
ಇಛ್ಛಾ ಪರಮೇಶ್ವರಾಚೀ । ಐಸೀ ಯುಕ್ತೀ ಬಹುತೇಕಾಚೀ ।
ಪರೀ ತ್ಯಾ ನಿರ್ಗುಣಾಸ ಇಛ್ಛಾ ಕೈಚೀ । ಹೇ ಕಳೇನಾ ॥೧೩॥
ತರೀ ಹೇ ಇತುಕೇ ಕೋಣೇ ಕೇಲೇ । ಕಿಂವಾ ಆಪಣ ಚಿ ಜಾಲೇ ।
ದೇವೇವಿಣ ಉಭಾರಲೇ । ಕೋಣೆಪರೀ ॥೧೪॥
ದೇವೇವಿಣ ಜಾಲೇ ಸರ್ವ । ಮಗ ದೇವಾಸ ಕೈಚಾ ಠಾವ ।
ಯೇಥೇ ದೇವಾಚಾ ಅಭಾವ । ದಿಸೋನ ಆಲಾ ॥೧೫॥
ದೇವ ಮ್ಹಣೋ ಸೃಷ್ಟಿಕರ್ತಾ । ತರೀ ಯೇವಂ ಪಾಹೆ ಸಗುಣತಾ ।
ನಿರ್ಗುಣಪಣಾಚೀ ವಾರ್ತಾ । ದೇವಾಚೀ ಬುಡಾಲೀ ॥೧೬॥
ದೇವ ಠಾಈಚಾ ನಿರ್ಗುಣ । ತರೀ ಸೃಷ್ಟೀಕರ್ತಾ ಕೋಣ ।
ಕರ್ತೇಪಣಾಚೇ ಸಗುಣ । ನಾಸಿವಂತ ॥೧೭॥

ಇವನ ಸಂಕಲ್ಪದಿಂದ ವಿಶ್ವ ನಿರ್ಮಾಣವಾಯಿತೆಂದು ಅನ್ನುವದಾದರೆ ಬ್ರಹ್ಮನಾದರೋ ಅಖಂಡ ವ ನಿರ್ಗುಣ ನಾಗಿರುವವನು. ಇಂಥವನಲ್ಲಿ ಇಚ್ಛಾ ಹೇಗೆ ಹುಟ್ಟಿತು (ಆಯಿತು) ? ಇವನಿಗೆ ಸಂಕಲ್ಪ ಮಾಡಲು ಸಾಧ್ಯವೇ? ಬ್ರಹ್ಮವು ಸಗುಣವಿರುವದೆಂದು ಅನ್ನುವದಾದರೆ ಮಾತ್ರ ಅವನಲ್ಲಿ ಇಚ್ಛಾ ಅಥವಾ ಸಂಕಲ್ಪ ಉಂಟಾಗಬಹುದು. ಸಗುಣವನ್ನು ಒಪ್ಪದೇ ಇಚ್ಛಾ, ಸಂಕಲ್ಪಗಳು ಹುಟ್ಟಲು ಸಾಧ್ಯವಿಲ್ಲ. (೫) ಮೂಲ ಪರಬ್ರಹ್ಮನಲ್ಲಿ ಸಗುಣಕ್ಕೆ ಸ್ಥಳವೇ ಇಲ್ಲ. ಅಂತೆಯೇ ಅವನು ನಿರ್ಗುಣನಿರುವನು. ಹೀಗೆ ಇದ್ದರೂ ನಿರ್ಗುಣ ಬ್ರಹ್ಮದಲ್ಲಿ ಸಗುಣದ ನಿರ್ಮಾಣ ಆದದ್ದು ಹೇಗೆ? (೬) ನಿರ್ಗುಣ ಬ್ರಹ್ಮವೇ ಸಗುಣವಾಯಿತು ಎಂದು ಅಂದದ್ದಾದರೆ ಈ ಮಾತು ಮೂರ್ಖತನ ದ್ದಾಗುವದು. ಯಾಕೆಂದರೆ ಹೀಗಾದ ಮೇಲೆ ಆ ಬ್ರಹ್ಮ ನಿತ್ಯ ಮತ್ತು ಅವಿಕಾರಿಯಾಗಿ ಉಳಿಯಲಾರದು. (೭) ಬ್ರಹ್ಮದ ಕಡೆಗೆ ವಿಶ್ವರಚನೆಯ ಕರ್ತಾತನ (ಯಜಮಾನಿಕೆ) ಕೊಡಲಿಕ್ಕೆ ಬರುವದಿಲ್ಲ. ಕೆಲವರು ಅನ್ನುವದೇನಂದರೆ, ದೇವರು ನಿಜವಾದ ನಿರಾಕಾರನೇ ಇರುವನು. ಮತ್ತು ಎಲ್ಲವನ್ನೂ ಮಾಡಿಯೂ ಅಕರ್ತಾ ಅನ್ನಿಸಿಕೊಳುವನು. ಇವನ ಈ ಲೀಲೆ ಬಹು ವಿಚಿತ್ರ ವಿಲಕ್ಷಣವಾಗಿದೆ. ಇದು ಅಜ್ಞಾನಿ ಬಡ ಜೀವಕ್ಕೆ ತಿಳಿಯುವಂಥದಲ್ಲ. (೮) ಕೆಲವ ರನ್ನುವರು "ನಿಜವಾದ ದೇವರು ಪರಮ ಆತ್ಮಾ ಇರುವನು. ಇವನ ಮಹಿಮೆ ಅಗಾಧವಾಗಿದೆ. ಅದು ಯಾರಿಗೂ ತಿಳಿಯುವಂಥದ್ದಲ್ಲವೆಂದ ಮೇಲೆ ಅಜ್ಞಾನಿ ಜೀವಾತ್ಮನಿಗೆ ಇದು ತಿಳಿಯುವದು ಶಕ್ಯವೇ ಇಲ್ಲ."(೯) ಇಂಥ ಜನರಿಗೆ ದೇವನ ನಿಜವಾದ ಸ್ವರೂಪವು ತಿಳಿದಿರುವದಿಲ್ಲ. ಇವರು ಸುಮ್ಮನೆ ಅವನ ಮಹಿಮೆಯನ್ನು ಹೊಗಳುತ್ತ ತಿರುಗಾ ಡುವರು. ಇಷ್ಟೇ ಅಲ್ಲ,ವೇದಾಂತ ಶಾಸ್ತ್ರದಲ್ಲಿಯ ಪ್ರತಿಪಾದನವನ್ನು ಬದಿಗಿಟ್ಟು ತಮ್ಮತಮ್ಮ ಅಭಿಪ್ರಾಯ(ದುರಾಗ್ರಹ) ದಿಂದ ನಿರ್ಗುಣ ಬ್ರಹ್ಮನನ್ನಾಗಿ ಮಾಡಿ ಇವನು ಅಕರ್ತಾ ಇರುವನೆಂದು ಅನ್ನುವರು. (೧೦) ಮೂಲ ನಿರ್ಗುಣ ಸ್ವರೂಪದಲ್ಲಿ ಏನಾದರೂ ಒಂದು ಮಾಡಬೇಕು ಅನ್ನುವ ಲಹರಿ (ಊರ್ಮಿ, ತರಂಗ) ಅರ್ಥಾತ್ ಸಂಕಲ್ಪವಿರುವದಿಲ್ಲ. ಇಲ್ಲಿ ಇವನು ಮಾಡಿಯೂ ಅಕರ್ತಾ ಇರುವನೆಂದು ಅನ್ನಲಿಕ್ಕೂ ಬರುವದಿಲ್ಲ. ಬ್ರಹ್ಮನು ಮಾಡಿಯೂ ಅಕರ್ತಾ ಇರುವನೆಂದು ಹೇಳುವದು ಅಗದೀ ಖೊಟ್ಟಿ ಇರುವದು. (೧೧) ದೇವರ ಇಚ್ಛೆಯಿಂದ ಈ ವಿಶ್ವ ಉಂಟಾಯಿತು ಅನ್ನುವದೂ ಸಹ ನಿಜವಲ್ಲ. ಮೂಲದಲ್ಲಿ ಯಾವುದು ನಿರ್ಗುಣವಿರುವದೋ ಅಲ್ಲಿ ಕರ್ತಾತನ (ಯಜಮಾನತ್ವ) ದ, ಮತ್ತು ಕರ್ಮ ಮಾಡಬೇಕೆನ್ನುವ ಭಾವವಿರಲು ಶಕ್ಯವೇ ಇಲ್ಲ. ನಿರ್ಗುಣವೇ ಖರೇ ಇದ್ದರೆ ಅದಕ್ಕೆ ನಾನು ವಿಶ್ವ ರಚಿಸಬೇಕು ಅನ್ನುವ ಇಚ್ಛೆ ಉತ್ಪನ್ನವಾಗುವದೂ ಶಕ್ಯವಿಲ್ಲ. ಇಚ್ಛೆಗೆ ಸಗುಣದ ಅಧಿಷ್ಠಾನ ಬೇಕಾಗುವದು. ಇದು ಎಲ್ಲಿ ಇಲ್ಲವೋ ಅಲ್ಲಿ ಇಚ್ಛಾ ಉತ್ಪನ್ನವಾಗುವದು ಸಾಧ್ಯವೇ ಇಲ್ಲ. (೧೨) ಪರಮೇಶ್ವರನ ಇಚ್ಛೆಯಿಂದ ಈ ವಿಶ್ವ ಹುಟ್ಟಿತು ಎಂದು ಬಹಳಷ್ಟು ಜನರು ಅನ್ನುವರು. ಪರಮೇಶ್ವರನಾದರೋ ನಿರ್ಗುಣನಿರುವನು. ಆ ನಿರ್ಗುಣದಲ್ಲಿ ಈ ಇಚ್ಛೆ ಹೇಗೆ ಉತ್ಪನ್ನವಾಯಿತು ಎಂದು ಕೇಳಿದರೆ ಇದರ ಬಗ್ಗೆ ಅವರಿಗೆ ಏನೂ ಹೇಳಲಿಕ್ಕೆ ಬರುವದಿಲ್ಲ. (೧೩) ಈ ರೀತಿಯಿಂದ ನೋಡಿದರೆ ದೇವರ ಇಚ್ಛೆ ಅನ್ನುವ ಪಕ್ಷವು ಸದೋಷವಿರುವದು. ಇದರ ಶಿವಾಯ ಗುಂತಾಗುಂತಿ (ಘೋಟಾಳೆ-ತೊಡಕು)ಯ ಅನೇಕ ಅಡಚಣಿ ಹೇಗೆ ನಿರ್ಮಾಣವಾಗುವವು ಇದರ ವರ್ಣನೆ ಯನ್ನು ಮಾಡುವರು. ಅಂದ ಮೇಲೆ ಈ ಅಘಾದ ವಿಶ್ವವನ್ನು ಯಾರು ಮಾಡಿದರು? ಏಕೆ ಮಾಡಿದರು? ಅಥವಾ ಇದು ತನ್ನಿಂದತಾನೇ ರಚಿತವಾಯಿತೇ ಹೇಗೆ? ದೇವ ಇದರ ಕರ್ತಾ ಅಲ್ಲವಾದರೆ ಇದು ಹೇಗೆ ಹುಟ್ಟಿತು? (೧೪) ದೇವರ ಹೊರ ತಾಗಿ ಈ ವಿಶ್ವ ಹುಟ್ಟಿನ್ದರೆ (ಆಗಿದ್ದರೆ) ದೇವರ ಅಸ್ತಿತ್ವವೇ ಉಳಿಯುವದಿಲ್ಲ. ಇಷ್ಟೇ ಅಲ್ಲ ಕೊನೆಗೆ ದೇವರೇ ಇಲ್ಲವೆಂದು ಅನ್ನುವ ಪ್ರಸಂಗ ಬರಬಹುದು. (೧೫) ದೇವನು ವಿಶ್ವರಚನೆಯ ಕರ್ತಾ ಎಂದು ಒಪ್ಪಿದ್ದಾದರೆ ದೇವನು ಸಗುಣ ಇರುವನೆಂದು ಅನ್ನಬೇಕಾಗುವದು. ಇದರಿಂದ ದೇವನಿರ್ಗುಣ ಅನ್ನುವ ಸಿದ್ಧಾಂತ ಸುಳ್ಳಾಗು ವದು. (೧೬) ದೇವರು ನಿಜವಾಗಿಯೂ ನಿರ್ಗುಣನೇ ಆಗಿರುವನೆಂದು ಅನ್ನುವದಾದರೆ ಈ ವಿಶ್ವದ ನಿರ್ಮಾಪಕ [ಕರ್ತಾ]ಯಾರುಅನ್ನುವ ಪ್ರಶ್ನೆಯು ಅನುತ್ತರಿತವಾಗಿಯೇ ಉಳಿಯುವದು. ಕರ್ತಾ ಇರಬೇಕಾದರೆ ಸಗುಣತನ ಬೇಕಾ ಗುವದು. ಆದರೆ ಸಗುಣತನವು ನಾಶವಂತ ಇರುವದರಿಂದ ಕರ್ತಾ ಎಂದು ಅನ್ನುವ ದೇವನೂ ಸಹ ನಾಶವಂತ ನಾಗುವನು. [೧೭]

ಯೇಥೇ ಪಡಿಲೆ ವಿಚಾರ । ಕೈಸೇ ಜಾಲೇ ಸಚರಾಚರ ।
ಮಾಯಾ ಮ್ಹಣೋ ಸ್ವತಂತರ । ತರೀ ಹೇ ಹಿ ವಿಪರೀತ ದಿಸೆ ॥೧೮॥

ಮಾಯಾ ಕೋಣೇ ನಾಹೀ ಕೇಲೀ । ಹೇ ಆಪಣಚಿ ವಿಸ್ತಾರಲೀ ।
ಐಸೇ ಬೋಲತಾ ಬುಡಾಲೀ । ದೇವಾಚೀ ವಾರ್ತಾ ॥೧೯॥

ದೇವ ನಿರ್ಗುಣ ಸ್ವತಸಿದ್ಧ । ತ್ಯಾಸೀ ಮಾಯೇಸಿ ಕಾಯ ಸಮಂಧ ।
ಐಸೇ ಬೋಲತಾ ವಿರುದ್ಧ । ದಿಸೋನ ಆಲೇ ॥೨೦॥

ಸಕಳ ಕಾಹೀ ಕರ್ತವ್ಯತಾ । ಆಲೀ ಮಾಯೆಚ್ಯಾ ಚಿ ಮಾಥಾ ।
ತರೀ ಭಕ್ತಾಸ ಉದ್ಧರಿತಾ । ದೇವ ನಾಹೀ ಕೀ ॥೨೧॥

ದೇವೇವಿಣ ನುಸ್ತೀ ಮಾಯಾ । ಕೋಣ ನೇಈಲ ವಿಲಯಾ ।
ಆಮ್ಹಾ ಭಕ್ತಾ ಸಾಂಭಾಳಾಯಾ । ಕೋಣೀ ಚ ನಾಹೀ ॥೨೨॥

ಮ್ಹಣೋನಿ ಮಾಯಾ ಸ್ವತಂತರ । ಐಸಾ ನ ಘಡೆ ಕೀ ವಿಚಾರ ।
ಮಾಯೇಸ ನಿರ್ಮಿತಾ ಸರ್ವೇಶ್ವರ । ತೋ ಯೇಕ ಚಿ ಆಹೆ ॥೨೩॥

ತರೀ ತೋ ಕೈಸಾ ಆಹೇ ಈಶ್ವರ । ಮಾಯೇಚಾ ಕೈಸಾ ವಿಚಾರ ।
ತರೀ ಹೇ ಆತಾ ಸವಿಸ್ತರ । ಬೋಲಿಲೇ ಪಾಹಿಜೆ ॥೨೪॥

ಶ್ರೋತಾ ವ್ಹಾವೇ ಸಾವಧಾನ । ಯೇಕಾಗ್ರ ಕರೂನಿಯಾ ಮನ ।
ಆತಾ ಕಥಾನುಸಂಧಾನ । ಸಾವಧ ಐಕಾ ॥೨೫॥

ಯೇಕೇ ಆಶಂಕೇಚಾ ಭಾವ । ಜನೀ ವೇಗಳಾಲೆ ಅನುಭವ ।
ತೇ ಹಿ ಬೋಲಿಜೇತೀ ಸರ್ವ । ಯಥಾನುಕ್ರಮೇ ॥೨೬॥

ಯೇಕ ಮ್ಹಣತೀ ದೇವೇ ಕೇಲೀ । ಮ್ಹಣೋನಿ ಹೇ ವಿಸ್ತಾರಲೀ ।
ದೇವಾಸ ಇಚ್ಛಾ ನಸ್ತೀ ಜಾಲೀ । ತರೀ ಹೇ ಮಾಯಾ ಕೈಚೀ ॥೨೭॥

ಯೇಕ ಮ್ಹಣತೀ ದೇವ ನಿರ್ಗುಣ । ತೇಥೇ ಇಚ್ಛಾ ಕರೀ ಕೋಣ ।
ಮಾಯಾ ಮಿಥ್ಯಾ ಹೇ ಆಪಣ । ಜಾಲೀ ಚ ನಾಹೀ ॥೨೮॥

ಈ ಚರಾಚರ ವಿಶ್ವವು ಹೇಗೆ ಆಯಿತು? ಇದರ ಬಗ್ಗೆ ಇನ್ನಷ್ಟು ವಿಚಾರ ಮಾಡಿದ್ದಾದರೆ ನಮಗೆ ಅನಿಸುವದೇನಂದರೆ ಮಾಯಾ ಸ್ವತಂತ್ರವಿರುವದು. ಇವಳೇ ಈ ವಿಶ್ವ ರಚಿಸಿದಳು. ಅಂದರೆ ಇದೂ ಸಹ ವಿಪರೀತವೆನಿಸುವದು. [೧೮] ಮಾಯಾ ಸ್ವತಂತ್ರವಿರುವದು. ಇದನ್ನು [ಇವಳನ್ನು] ಯಾರೂ ಮಾಡಿಯೇ ಇಲ್ಲ. ಇದೇ [ಇವಳೇ] ಸ್ವತಃ ತನ್ನ ದೃಶ್ಯ ಬಾಜಾರವನ್ನು [ಪ್ರಪಂಚ] ವಿಸ್ತಾರ-ಗೊಳಿಸಿತು, ಅಂತಾ ಒಂದು ವೇಳೆ ಒಪ್ಪಿಕೊಂಡರೆ ಅಲ್ಲಿ ಸರ್ವಶಕ್ತ ದೇವನ ದೇವತ್ವದ ಸ್ಥಾನ ಉಳಿಯಲಾರದು. [೧೯] ದೇವರು ಸ್ವಯಮೇವ ನಿರ್ಗುಣನಿರುವನೆಂಬುದು ಸ್ವತಃ ಸಿದ್ಧ ಮಾತಾಗಿದೆ. ಮಾಯೆಯೊಂದಿಗೆ ಇವನ ಸಂಬಂಧವೇನೂ ಇಲ್ಲವೆಂದು ಅಂದರೆ ಇದೂ ಸಹ ಘಾತಕವಿರುವದು. ಅದ್ವೈತಕ್ಕೆ ವಿರುದ್ಧವಿರುವದು. ಒಂದೇ ಒಂದಾಗಿ ಪ್ರಕಾಶಿಸುವ [ಮೆರೆಯುವ] ಪರಬ್ರಹ್ಮದಲ್ಲಿ ಈ ಅನೇಕತ್ವ [ದೃಶ್ಯ ಜಗತ್ತು] ಹೇಗೆ ನಿರ್ಮಾಣವಾಯಿತೆನ್ನುವದೇ ಮೂಲ ಪ್ರಶ್ನೆ ಇರುವದು. ಸಾಂಖ್ಯ ದರ್ಶನದಿಂದ ಈ ಪ್ರಶ್ನೆಯನ್ನು ಬಿಡಿಸುವದಕ್ಕೆ ಸರಳವಾದ ದ್ವೈತದ ಆಶ್ರಯ ತೆಗೆದುಕೊಳ್ಳಬೇಕು. ಸಾಂಖ್ಯನು ಅನ್ನುವದೇನಂದರೆ ವಿಶ್ವರಚನೆಯ ಮೂಲದಲ್ಲಿ ಎರಡು ಸ್ವತಂತ್ರ ತತ್ವಗಳು ಇರುವವು. ಒಂದು ನಿರ್ಗುಣ, ಮತ್ತು ನಿತ್ಯ ಪುರುಷ. ಎರಡನೆಯದು ನಿತ್ಯ ಮತ್ತು ಸ್ವತಂತ್ರ ಪ್ರಕೃತಿ ಇರುವವು. ಇದರಿಂದ ಸಾಂಖ್ಯನು ಕೇವಲ ದ್ವೈತಿಯೇ ಇರುವನು. ಶ್ರೀಸಮರ್ಥರು ಹೇಳುವದೇನಂದರೆ, ಮಾಯಾ ಸ್ವತಂತ್ರವೆಂದು ಒಪ್ಪಿದ್ದಾದರೆ ಸಾಂಖ್ಯನ ದ್ವೈತವನ್ನು ಒಪ್ಪಬೇಕಾಗುವದು. ಇದರಿಂದ ಅದ್ವೈತದ ಮೂಲಕ್ಕೇ ಹೊಡೆತ ಬೀಳುವದು. (೨೦) ಇರಲಿ, ಎಲ್ಲಕರ್ತಾತನವನ್ನು ಮಾಯೆಯ ಕಡೆಗೆ ಕೊಟ್ಟರೆ ಇನ್ನೊಂದು ಹೊಸ ಅಡಚಣೆ ಉಂಟಾಗುವದು. ಮಾಯಾ ಏನೆಲ್ಲವನ್ನೂ ಮಾಡುವವಳು-ಇರುವಳು, ಎಂದಾದರೆ ಭಕ್ತರ ಉದ್ಧಾರ ಮಾಡುವಂಥ ದೇವ ಅನ್ನುವವನೊಬ್ಬನು ಇರುವನೋ ಇಲ್ಲವೋ ಅನ್ನುವ ಸಂದೇಹ ಉತ್ಪನ್ನವಾಗುವದು. (೨೧) ದೇವನೊಬ್ಬ ಇದ್ದು ಅವನ ಸತ್ತಾ ಮಾಯೆಯ ಮೇಲೆ ನಡೆಯುವದೇ ನಿಜವಿದ್ದರೆ ಅವನು ಮಾಯೆಯನ್ನು ಇಲ್ಲದಂತೆ ಮಾಡಲು ಶಕ್ತನಾಗಿರಲೇ ಬೇಕು. ಹೀಗೆ ಮಾಡಲಾಗದವನಿದ್ದರೆ ಅಜ್ಞಾನಿ ಜೀವರನ್ನು ಮಾಯೆಯಿಂದ ಯಾರು ಬಿಡಿಸುವರು? ಇಷ್ಟೇ ಅಲ್ಲ ನಮ್ಮೆಲ್ಲ ಭಕ್ತರನ್ನು ಸಂಭಾಳಿಸುವವನು ಯಾರೂ ಇಲ್ಲವೆಂದು ಹೇಳುವ ಪ್ರಸಂಗ ಬರುವದು. (೨೨) ಆದ್ದರಿಂದ ಮಾಯಾ ಸ್ವತಂತ್ರವಿರುವದೆಂದು ಅನ್ನುವ ವಿಚಾರವೇನೂ ಸರಿಯೆನಿಸುವದಿಲ್ಲ. ಮಾಯೆಯನ್ನು ನಿರ್ಮಾಣ ಮಾಡುವವನು ಮತ್ತು ನಿಯಂತ್ರಣ ಮಾಡುವವನೊಬ್ಬ ಪರಮೇಶ್ವರನೆಂಬುವನು ಇರುವದರಲ್ಲಿ-ಯಾವ ಸಂಶಯ ವಿಲ್ಲ. (೨೩) ಆ ಪರಮೇಶ್ವರನು ಹೇಗಿರುವನು? ಮಾಯೆಯ ಹಾಗೂ ಅವನ ಸಂಬಂಧ ಎಂತಹದು? ಇದೆಲ್ಲವನ್ನು ವಿಸ್ತಾರದಿಂದ ಹೇಳುವದು ಈಗ ಅವಶ್ಯವಿದೆ. (೨೪) ಶ್ರೋತಾಜನ ತಮ್ಮ ಮನ ಏಕಾಗ್ರ ಮಾಡಿ ಸಾವಧಾನದಿಂದ ಈಗ ಹೇಳುವ ವಿಷಯವನ್ನು ಚನ್ನಾಗಿ ಶ್ರವಣ ಮಾಡಬೇಕು. (೨೫) ಈಶ್ವರ ಇರುವನು ಅವನ ಮಾಯೆಯೂ ಇರುವದು. ಪರಸ್ಪರ ಸಂಬಂಧವಿರುವದು. ಈ ಮಾತು ಮಾನ್ಯವಿದ್ದರೂ ಸಹ ನಾನಾ ಪ್ರಕಾರದ ಜನ, ನಾನಾ ಪ್ರಕಾರದ ಪರಸ್ಪರ ವಿರುದ್ಧವಿರುವ ಮತ-ಅಭಿಪ್ರಾಯ ಹೇಗೆ ಪ್ರತಿಪಾದನ ಮಾಡುತ್ತಿರುವರು ಮತ್ತು ಕೊನೆಗೂ ಈ ಪ್ರಶ್ನೆಯ ನಿರ್ಣಯವಾಗುವದೇ ಇಲ್ಲವೆಂಬುದೂ ತಿಳಿದ ಮಾತೇ ಇರುವದು. ಇದರ ಬಗೆಗಿನ ಸವಿಸ್ತಾರವಾದ ವರ್ಣನೆಯನ್ನು ಈಗ ಕೇಳಿರಿ:- ವಾಸ್ತವಿಕವಾಗಿ ವಿಚಾರ ಮಾಡಿದರೆ ಮೂಲ ಶಂಕಾ ಒಂದೇ ಒಂದು ಮುಖ್ಯವಾದ ದ್ದಿರುವದು. ಆದರೆ ಜನರು ಬೇರೆ ಬೇರೆ ದೃಷ್ಟಿಕೋನದಿಂದ ಇದನ್ನು ವಿವೇಚಿಸುವ (ಪರಿಹಾರದ) ಪ್ರಯತ್ನ ಮಾಡುವರು. ಇದರಿಂದಾಗಿ ಪ್ರತಿಯೊಬ್ಬರೂ ತಮ್ಮ ಭಿನ್ನ ಅನುಭವವನ್ನು ಹೇಳುವರು. ಈ ಎಲ್ಲ ಅನುಭವದ ವಿವರವನ್ನು ಕ್ರಮವಾಗಿ ಹೇಳುವೆನು. (೨೬) ಒಬ್ಬನು ಮಾಯೆಯನ್ನು ದೇವನೇ ಮಾಡಿದ್ದಾನೆ. ಅಂತೆಯೇ ಇವಳ ಅಧಿಕಾರದ ವಿಸ್ತಾರ ಅಪಾರವಿರುವದು. ಇವಳ ವಿಸ್ತಾರ ವಿಲಕ್ಷಣವಿರುವದು. ದೇವನಿಗೆ ಇಚ್ಛೆಯೇ ಆಗದಿದ್ದರೆ ಆಗ ಮಾಯಾ ಸಹ ನಿರ್ಮಾಣವಾಗುತ್ತಿರಲಿಲ್ಲ. (೨೭) ಒಬ್ಬನು ಅನ್ನುವನು, ದೇವ ನಿರ್ಗುಣ ಇರುವನು ಆದ್ದರಿಂದ ದೇವನಲ್ಲಿ ಇಚ್ಛಾ ಉತ್ಪನ್ನವಾಗುವದಿಲ್ಲ. ಅರ್ಥಾತ್ ಮಾಯಾ ಖೊಟ್ಟಿ ಇರುವದು. ಅಂತೆಯೇ ಇದು ಎಂದೂ ಜನ್ಮಕ್ಕೆ ಬಂದೇ ಇಲ್ಲ. [೨೮]

ಯೇಕ ಮ್ಹಣತೀ ಪ್ರತ್ಯಕ್ಷ ದಿಸೆ । ತಯೇಸೀ ನಾಹೀ ಮ್ಹಣತಾ ಕೈಸೇ ।
ಮಾಯಾ ಹೇ ಅನಾದಿ ಅಸೆ । ಶಕ್ತೀ ಈಶ್ವರಾಚೀ ॥೨೯॥

ಯೇಕ ಮ್ಹಣತೀ ಸಾಚ ಅಸೆ । ತರೀ ಹೇ ಜ್ಞಾನೇ ಕೈಸೀ ನಿರಸೆ ।
ಸಾಚಾ ಸಾರಿಖೀ ಚ ದಿಸೆ । ಪರೀ ಹೇ ಮಿಥ್ಯಾ ॥೩೦॥

ಯೇಕ ಮ್ಹಣತೀ ಮಿಥ್ಯಾ ಸ್ವಭಾವೇ । ತರೀ ಸಾಧನ ಕಾಸಯಾ ಕರಾವೇ ।
ಭಕ್ತಿಸಾಧನ ಬೋಲಿಲೇ ದೇವೇ । ಮಾಯಾತ್ಯಾಗಾಕಾರಣೇ ॥೩೧॥

ಯೇಕ ಮ್ಹಣತೀ ಮಿಥ್ಯಾ ದಿಸತೇ । ಭಯೇ ಅಜ್ಞಾನ ಸನ್ನಿಪಾತೇ ।
ಸಾಧನ ಔಷಧ ಹೀ ಘೇಈಜೆತೇ । ಪರೀ ತೇ ದೃಶ್ಯ ಮಿಥ್ಯಾ ॥೩೨॥

ಅನಂತ ಸಾಧನೇ ಬೋಲಿಲೀ । ನಾನಾ ಮತೇ ಭಾಂಬಾವಲೀ ।
ತರೀ ಮಾಯಾ ನವಚೆ ತ್ಯಾಗಿಲೀ । ಮಿಥ್ಯಾ ಕೈಸೀ ಮ್ಹಣಾವೀ ॥೩೩॥

ಮಿಥ್ಯಾ ಬೋಲೆ ಯೋಗವಾಣೀ । ಮಿಥ್ಯಾ ವೇದಶಾಸ್ತ್ರೀ ಪುರಾಣೀ ।
ಮಿಥ್ಯಾ ನಾನಾ ನಿರೂಪಣೀ । ಬೋಲಿಲೀ ಮಾಯಾ ॥೩೪॥

ಮಾಯಾ ಮಿಥ್ಯಾ ಮ್ಹಣತಾ ಗೇಲೀ । ಹೇ ವಾರ್ತಾ ನಾಹೀ ಏಕಿಲೀ ।
ಮಿಥ್ಯಾ ಮ್ಹಣತಾ ಚ ಲಾಗಲೀ । ಸಮಾಗಮೇ ॥೩೫॥

ಜಯಾಚೆ ಅಂತರೀ ಜ್ಞಾನ । ನಾಹೀ ವೋಳಖಿಲೆ ಸಜ್ಜನ ।
ತಯಾಸ ಮಾಯಾ ಮಿಥ್ಯಾಭಾನ । ಸತ್ಯ ಚಿ ವಾಟೆ ॥೩೬॥

ಜೇಣೇ ಜೈಸಾ ನಿಶ್ಚಯೊ ಕೇಲಾ । ತಯಾಸೀ ತೈಸಾ ಚಿ ಫಳಲಾ ।
ಪಾಹೆ ತೋ ಚಿ ದಿಸೆ ಬಿಂಬಲಾ । ತೈಸೀ ಮಾಯಾ ॥೩೭॥

ಯೇಕ ಮ್ಹಣತೀ ಮಾಯಾ ಕೈಚೀ । ಆಹೆ ತೇ ಸರ್ವ ಬ್ರಹ್ಮ ಚಿ ।
ಥಿಜಲ್ಯಾ ವಿಘುರಲ್ಯಾ ಘೃತಾಚೀ । ಏಕ್ಯತಾ ನ ಮೋಡೆ ॥೩೮॥

ಥಿಜಲೇ ಆಣೀ ವಿಘುರಲೇ । ಹೇ ಸ್ವರೂಪೀ ನಾಹೀ ಬೋಲಿಲೇ ।
ಸಾಹಿತ್ಯ ಭಂಗಲೇ ಯೇಣೇ ಬೋಲೇ । ಮ್ಹಣತೀ ಯೇಕ ॥೩೯॥

ಯೇಕ ಮ್ಹಣತೀ ಸರ್ವ ಬ್ರಹ್ಮ । ಹೇ ನ ಕಳೆ ಜಯಾಸ ವರ್ಮ ।
ತಯಾಚೆ ಅಂತರೀಚಾ ಭ್ರಮು । ಗೇಲಾ ಚ ನಾಹೀ ॥೪೦॥

ಒಬ್ಬ ಅನ್ನುವನು, ಮಾಯಾ ಪ್ರತ್ಯಕ್ಷ ಕಾಣುವದು. ಅಂದಮೇಲೆ ಮಾಯಾ ಇಲ್ಲವೆಂದರೆ ನಡೆಯಲಾರದು.ಮಾಯಾ ಇದು ಈಶ್ವರನ ಅನಾದಿ ಶಕ್ತಿ ಇರುವದು.[೨೯] ಒಬ್ಬ ಅನ್ನುವನು,ಮಾಯಾ ಇದು ನಿಜವಿದ್ದದ್ದಾಗಿದ್ದರೆ, ಅಥವಾ ಇರುವದೆಂದು ಒಪ್ಪಿಕೊಂಡರೆ ಇದು ಜ್ಞಾನದಿಂದ ನಾಶವಾಗುತ್ತಿರಲಿಲ್ಲ. ಜ್ಞಾನದಿಂದ ಇದರ ನಾಶವಾಗೇ ಆಗುವದು. ಮಾಯಾ ನಿಜವೆಂಬಂತೆ ನಮಗೆ ಕಂಡರೂ ಇದು ನಿಜವಲ್ಲ. [೩೦] ಒಬ್ಬ ಅನ್ನುವನು, ಮಾಯಾ ಇದು ಸ್ವಾಭಾವಿಕವಾಗಿಯೇ ಖೊಟ್ಟಿ ಇರುವದಾದರೆ ಜೀವದ ಉದ್ಧಾರದ ಸಲುವಾಗಿ ಸಾಧನ ಮಾಡುವ ಅವಶ್ಯಕತೆ ಇಲ್ಲ. ಆದರೆ ಮಾಯಾ ಇಲ್ಲದಂತೆ ಆಗುವದಕ್ಕಾಗಿಯೇ ಭಗವಂತನು ಭಕ್ತಿಯ ಸಾಧನ ಮಾಡಲು ಹೇಳಿದ್ದಾನೆ. [೩೧] ಒಬ್ಬ ಅನ್ನುವನು ಮಾಯಾ ವಾಸ್ತವಿಕವಾಗಿ ಮಿಥ್ಯೆಯೇ ಇರುವದು ಜೀವಕ್ಕೆ ಅಜ್ಞಾನ ರೂಪದ ಸನ್ನಿಪಾತ ಜ್ವರ ಬಂದಿರುವವು. ಇದರಿಂದಾಗಿ ಜೀವಕ್ಕೆ ಭಯವೆನಿಸುವದು–ಚಿಂತೆ ಉಂಟಾಗುವದು. ಆದರೆ ಜೀವವು ಸಾಧನರೂಪಿ ಔಷಧ ತೆಗೆದುಕೊಂಡದ್ದಾದರೆ ಈ ಎಲ್ಲ ದೃಶ್ಯವೂ ಮಿಥ್ಯೆಯಾಗಿದೆ ಎಂಬ ಅನುಭವ ಬರುವದು–ಭವರೋಗ ಹಿಂಗುವದು. [೩೨] ಮಾಯೆಯ ಹಿಡಿತದಿಂದ ಪಾರಾಗಿ ಹೊರಗೆ ಬರಬೇಕೆಂದು ಅನೇಕ ಸಾಧನಗಳನ್ನು ಹೇಳಲಾಗಿದೆ. ಆದರೆ ಇವುಗಳ ಬಗ್ಗೆ ಅನೇಕಾನೇಕ ಮತಗಳ ಗೊಂದಲವೂ ಇರುವದು. ಏನೇ ಇರಲಿ, ಇಷ್ಟೆಲ್ಲ ಸಾಧನಗಳನ್ನು ಮಾಡಿಯೂ ಮಾಯೆಯನ್ನು ಬಿಟ್ಟು ಎತ್ತಕಡೆಗೂ ಸರಿದಾಡಲಿಕ್ಕೆ ಬರಲೊಲ್ಲದು. ಇಂಥ ಹಟಮಾರಿ ಮಾಯೆಗೆ ಖೊಟ್ಟಿ, ಸುಳ್ಳು ಎಂದು ಹೇಗೆ ಅನ್ನಬೇಕು? [೩೩] ಇದು ಒಂದು ವೇಳೆ ನಿಜವೆಂದು ಅಂದರೂ ಯೋಗಶಾಸ್ತ್ರ, ಪುರಾಣ, ಮತ್ತು ಅನೇಕ ತತ್ವಚಿಂತಕರು, ಉಪನ್ಯಾಸಕರು, ಸಂತರು, ಮಾಯಾ ಮಿಥ್ಯಾ ಇರುವದೆಂದು ಅನ್ನುವರು. (೩೪) ಮಾಯೆ ನಿಜವಲ್ಲವೆಂದು ಹೇಳಿದಷ್ಟಕ್ಕೇ ಮಾಯಾ ಇಲ್ಲವೇ ಇಲ್ಲ ಅಥವಾ ಮಾಯಾ ಹೋದಂತಾದ ಸುದ್ದಿಯನ್ನು ಯಾರಾದರೂ ಯಾವ ಕಾಲಕ್ಕಾದರೂ ಹೇಳಿದ್ದಾರೆಯೇ? ಅಥವಾ ಕೇಳಿದ್ದಾರೆಯೇ? ಅರ್ಥಾತ್ ಇಲ್ಲ! ಇದರ ಉಲಟ ಮಿಥ್ಯೆ ಇರುವದೆಂದು ಅನ್ನುವವರನ್ನೂ, ಹೇಳುವವರನ್ನೂ ಈ ಮಾಯೆ ಬಿಟ್ಟಿರುವದೇ ಇಲ್ಲ. ಅವರ ಜೊತೆಯಲ್ಲಿಯೇ ಇರುತ್ತದೆ. "ಮಾಯಾ ನಿಜವಲ್ಲ" ಹೀಗೆ ಅನ್ನುವವರು ಮೊದಲು ಇವಳ ಅಸ್ತಿತ್ವ [ಇರುವಿಕೆ]ವನ್ನು ಒಪ್ಪಿಕೊಂಡೇ ಹೇಳುವರು. ಆಮೇಲೆ ಮಾಯೆ ಖರೇ ಅಲ್ಲವೆಂದು ಸುಮ್ಮನೆ ಅನ್ನುತ್ತಾರೆ. ಕೇವಲ ಅಲ್ಲ–ಇಲ್ಲ ಎಂದಾಕ್ಷಣ ಇದು ಹಾರಿ ಓಡಿ ಹೋಗುವದಿಲ್ಲ. ಅನ್ನುವವನ ಜೀವಕ್ಕೆ ಇದು ಸುತ್ತಿಕೊಂಡೇ ಇರುವದು. [೩೫] ಯಾರಿಗೆ ಆತ್ಮಜ್ಞಾನ ಇರುವದಿಲ್ಲವೋ ಮತ್ತು ಯಾರು ಸಂತ ಸಾಧುಗಳನ್ನು ಗುರುತಿಸಲಾರರೋ ಅಂಥ ಮನುಷ್ಯರಿಗೆ ಮಾಯೆಯ ಮಿಥ್ಯಾತನವು ನಿಜವೆನಿಸುವದು. ಮಾಯಾ ಖರೇ ಅಲ್ಲವೆಂಬ ಜ್ಞಾನವು [ನಿಜ ಇರುವಿಕೆಯು] ಇವರಿಗೆ ಮಾಯಾ ಖರೇ ಇರುವದೆಂದು ಅನಿಸುವದು. [೩೬] ಯಾರ ಭಾವ ಹೇಗಿರುವದೋ ಅದರಂತೆಯೇ ಅದರ ಪರಿಣಾಮ ಅವರ ಮೇಲೆ ಆಗುವದು. ಯಾರು ಕನ್ನಡಿ ನೋಡುವರೋ ಅವರಿಗೆ ಅವರದೇ ಪ್ರತಿಬಿಂಬವು ಅಲ್ಲಿ ಕಾಣುವದು. ಮಾಯೆಯ ವಿಷಯದಲ್ಲಿ ಇದೇ ರೀತಿ ಆಗುವದು. ಯಾರ ಭಾವನೆ ಹೇಗೆ ಇರುವದೋ ಆ ಭಾವನೆಯ ಪ್ರಕಾರ ಮಾಯಾ ಅವರಿಗೆ ಕಾಣಿಸುವದು.(೩೭) ಒಬ್ಬ ಅನ್ನುವನು ಮಾಯೆ ಎಂಬುದು ಮೂಲದಲ್ಲಿ ಇಲ್ಲವೇ ಇಲ್ಲ. ಯಾವಾವುದು ಇರುವದೋ ಅವೆಲ್ಲವೂ ಪರಬ್ರಹ್ಮವೇ ಇರುವದು. ತುಪ್ಪವು ಕರಗಿದ್ದಾಗಿರಲಿ, ಗಟ್ಟಿಯಾದದ್ದಿರಲಿ ತುಪ್ಪವೇದೇ ಅನಿಸುವದು. ಇವರಲ್ಲಿ ವ್ಯತ್ಯಾಸ ಇರುವದಿಲ್ಲ. ಇದರಂತೆ ಬ್ರಹ್ಮವು ಅದೃಶ್ಯವಾಗಿದ್ದರೇನು ? ಅಥವಾ ದೃಶ್ಯ ವಿಶ್ವರೂಪದಿಂದ ಕಾಣಿಸಿದರೇನು ? ಮೂಲ ಬ್ರಹ್ಮಸ್ವರೂಪದಲ್ಲಿ ಎಷ್ಟೂ ವ್ಯತ್ಯಾಸವಿರುವದಿಲ್ಲ. (೩೮) ನಿಜವೆಂದರೆ, ಗಟ್ಟಿಯಾಗಿರುವದು, ಮತ್ತು ಕರಗಿರುವದು ಅನ್ನುವ ಈ ಭಾಷೆಯು ಬ್ರಹ್ಮಸ್ವರೂಪಕ್ಕೆ ಹೊಂದುವದಿಲ್ಲ. ಆದ್ದರಿಂದ ಒಬ್ಬ ಅನ್ನುವವನೇನಂದರೆ ದೃಷ್ಟಾಂತವನ್ನು ಬ್ರಹ್ಮಸ್ವರೂಪಕ್ಕೆ ತಪ್ಪು ಸಮಜೂತಿನಿಂದ ಹಚ್ಚಿರುವರು. [೩೯] ಒಬ್ಬ ಅನ್ನುವನು, ಬ್ರಹ್ಮಸ್ವರೂಪದ ಮರ್ಮವು ಯಾರಿಗೆ ತಿಳಿದಿಲ್ಲವೋ ಅವರ ಅಂತರಂಗದಲ್ಲಿಯ ಭ್ರಮೆ ಇನ್ನೂ ಹೋಗಿಯೇ ಇಲ್ಲವೆಂದು ತಿಳಿಯಬೇಕು. [೪೦]

ಯೇಕ ಮ್ಹಣತೀ ಯೇಕ ಚಿ ದೇವ । ತೇಥೇ ಕೈಚೇ ಆಣಿಲೇ ಸರ್ವ ।
ಸರ್ವ ಬ್ರಹ್ಮ ಹೇ ಅಪೂರ್ವ । ಆಶ್ಚರ್ಯ ವಾಟೆ ॥೪೧॥

ಯೇಕ ಮ್ಹಣತೀ ಯೇಕ ಚಿ ಖರೇ । ಆನು ಹಿ ನಾಹೀ ದುಸರೇ ।
ಸರ್ವ ಬ್ರಹ್ಮ ಯೇಣೇ ಪ್ರಕಾರೇ । ಸಹಜ ಚೀ ಜಾಲೇ ॥೪೨॥

ಸರ್ವ ಮಿಥ್ಯಾ ಯೇಕಸರೇ । ಉರಲೇ ತೇ ಚಿ ಬ್ರಹ್ಮ ಖರೇ ।
ಐಸೀ ವಾಕ್ಯೇ ಶಾಸ್ತ್ರಾಧಾರೇ । ಬೋಲತೀ ಯೇಕ ॥೪೩॥

ಅಳಂಕಾರ ಆಣೀ ಸುವರ್ಣ । ತೇಥೇ ನಾಹೀ ಭಿನ್ನಪಣ ।
ಆಟಾಆಟೀ ವೆರ್ಥ ಸೀಣ । ಮ್ಹಣತೀ ಯೇಕ ॥೪೪॥

ಹೀನ ಉಪಮಾ ಯೇಕದೇಸೀ । ಕೈಸೀ ಸಾಹೇಲ ವಸ್ತೂಸೀ ।
ವರ್ಣವ್ಯಕ್ತೀ ಅವ್ಯಕ್ತಾಸೀ । ಸಾಮ್ಯತಾ ನ ಘಡೇ ॥೪೫॥

ಸುವರ್ಣೀ ದೃಷ್ಟೀ ಘಾಲಿತಾ । ಮುಳೀ ಚ ಆಹೆ ವೆಕ್ತತಾ ।
ಅಳಂಕಾರ ಸೋನೇ ಪಾಹಾತಾ । ಸೋನೇ ಚಿ ಅಸೆ ॥೪೬॥

ಮುಳೀ ಸೋನೇಂಚಿ ಹೇ ವೆಕ್ತ । ಜಡ ಯೇಕದೇಸೀ ಪೀತ ।
ಪೂರ್ಣಾಸ ಅಪೂರ್ಣಾಚಾ ದೃಷ್ಟಾಂತ । ಕೇವೀ ಘಡೆ ॥೪೭॥

ದೃಷ್ಟಾಂತ ತಿತುಕಾ ಯೇಕದೇಸೀ । ದೇಣೇ ಘಡೇ ಕಳಾಯಾಸಿ ।
ಸಿಂಧು ಆಣೀ ಲಹರೀಸೀ । ಭಿನ್ನತ್ವ ಕೈಚೇ ॥೪೮॥

ಉತ್ತಮ ಮಧೆಮ ಕನಿಷ್ಠ । ಯೇಕಾ ದೃಷ್ಟಾಂತೇ ಕಳೇ ಪಷ್ಟ ।
ಯೇಕಾ ದೃಷ್ಟಾಂತೇ ನಷ್ಟ । ಸಂದೇಹ ವಾಢೆ ॥೪೯॥

ಕೈಚಾ ಸಿಂಧು ಕೈಚೀ ಲಹರೀ । ಅಚಳಾಸ ಚಳಾಚೀ ಸರೀ ।
ಸಾಚಾಐಸೀ ವೊಡಂಬರೀ । ಮಾನೂ ಚ ನಯೇ ॥೫೦॥

ವೊಡಂಬರೀ ಹೇ ಕಲ್ಪನಾ । ನಾನಾ ಭಾಸ ದಾಖವೀ ಜನಾ ।
ಯೆರವೀ ಹೇ ಜಾಣಾ । ಬ್ರಹ್ಮ ಚಿ ಅಸೇ ॥೫೧॥

ಒಬ್ಬ ಅನ್ನುವನು ದೇವ ಏಕಮೇವ ಒಬ್ಬನೇ ಒಬ್ಬ ಅದ್ವಿತೀಯನಿರುವನು. ಇವನ ಹೊರತು ಎರಡನೆಯದು ಯಾವುದೂ ಇಲ್ಲವೇ ಇಲ್ಲ. ಹಾಗಾದರೆ "ಸರ್ವವೆಲ್ಲವೂ ಬ್ರಹ್ಮವೇ ಇರುವದು. ದೇವರೇ ಇರುವದು"ಈ ಮಾತಿನಲ್ಲಿಯು ಎಲ್ಲ ಶಬ್ದಗಳೂ ಏನೂ ಪ್ರಯೋಜನವಿಲ್ಲದವು. "ಸರ್ವವೆಲ್ಲ ಬ್ರಹ್ಮವೇ ಇರುವದು" ಈ ಅಂಬೋಣವೇ ವಿಲಕ್ಷಣವೆನಿಸುವದು. ಆಶ್ಚರ್ಯವಾಗುವದು [೪೧] ಒಬ್ಬ ಅನ್ನುವನು:ಸದ್ವಸ್ತುವು ಕೇವಲ ಒಂದೇ ಒಂದು ಇರುವದು . ಇದು ಮಾತ್ರ ಖರೇ ಸದ್ವಸ್ತುವಿನ ಹೊರತಾದ ಬೇರೆ ಯಾವುದೂ ಎಳ್ಳಷ್ಟೂ ಸಹ ಇಲ್ಲವೇ ಇಲ್ಲ. ಅಂದ ಮೇಲೆ ಯಾವುದು ಇರುವದೋ ಅದೆಲ್ಲವೂ ಬ್ರಹ್ಮವೇ ಇರುವದೆಂದು ತನ್ನಿಂದ ತಾನೇ ಸಿದ್ಧವಾಗುವದು. ಪ್ರತ್ಯೇಕವಾಗಿ ಸಿದ್ಧಮಾಡುವ ಕಾರಣವೇ ಇಲ್ಲ. [೪೨] ಒಬ್ಬನು ಶಾಸ್ತ್ರದಲ್ಲಿಯು ವಾಕ್ಯಗಳ ಆಧಾರ ತೋರಿಸಿ ಅನ್ನುವದೇನಂದರೆ ಈ ಕಣ್ಣಿಗೆ ಕಾಣುವ ಯಾವತ್ತೂ ದೃಶ್ಯವು ಮಿಥ್ಯಾ ಇರುವದಾದರೆ ಮಿಥ್ಯೆ ಅನ್ನುವದು ಹೋಗಿ ಯಾವುದು ಉಳಿಯುವದೋ ಆ ಬ್ರಹ್ಮವೇ ಮಾತ್ರ ನಿಜವಿರುವದು. (೪೩) ಒಬ್ಬನು ಅನ್ನುವನು: ಬಂಗಾರ ಮತ್ತು ಬಂಗಾರದ ದಾಗೀನೆ (ಒಡವೆ) ಇವುಗಳಲ್ಲಿ ಬಂಗಾರವೆನ್ನುವ ದೃಷ್ಟಿಯಲ್ಲಿ ಏನೂ ಫರಕ(ವ್ಯತ್ಯಾಸ) ಇರುವದಿಲ್ಲ. ಇದರಂತೆಯೇ ಬ್ರಹ್ಮ ಮತ್ತು ಜಗತ್ತು ಇವುಗಳಲ್ಲಿ ಮೂಲತಃ ಭೇದವೇ ಇಲ್ಲ. ಹೀಗೆ ಇರುವದು ಸ್ಪಷ್ಟವಿದ್ದಾಗ ಇದು ಸತ್ಯ–ಇದು ಮಿಥ್ಯೆ ಎಂದು ಹೇಳುವ ಖಟಪಟಿ ಲಟಪಟಿಗೆ ಕಾರಣವೇ ಇಲ್ಲ. [೪೪] ಆದರೆ ಇವೆಲ್ಲವುಗಳ ಮೇಲೆ ಕೆಲವರು ಆಕ್ಷೇಪ ತೆಗೆಯುವರು. ಯಾವುದೇ ಉಪಮೆ [ಹೋಲಿಕೆ, ಸಾದೃಶ್ಯ] ಕೊಡುವದಾದರೆ ಅದು ದೃಶ್ಯ ವಸ್ತುವಿನಿಂದಲೇ ಸೂಚಿಸಬೇಕಾಗುವದು. ದೃಶ್ಯವಸ್ತುವು ಏಕದೇಶೀ [ಕೇವಲ ಒಂದು ಬಾಜುದಿಂದ] ಇರುವದು, ಅದೇ ಬ್ರಹ್ಮವು ಸರ್ವದೇಶೀ [ಎಲ್ಲ ಬಾಜೂದಿಂದ] ಇರುವದಾಗಿದೆ. ಅರ್ಥಾತ್ ಪ್ರತಿಯೊಂದು ಉಪಮೆಯೂ ಬ್ರಹ್ಮದ ವಿಷಯದಲ್ಲಿ ಹೋಲಿಕೆಗೆ ಸರಿ ಹೊಂದುವದಿಲ್ಲ. ಇದರಿಂದ ಬ್ರಹ್ಮದ ವರ್ಣನೆ ಮಾಡಲಿಕ್ಕೆ ಶಕ್ಯವಿಲ್ಲ. ಉದಾ:– ಬಂಗಾರ ವ್ಯಕ್ತ ವ ರಂಗಯುಕ್ತವಿರುವದು. ಅದೇ ಬ್ರಹ್ಮವು ಅವ್ಯಕ್ತ ಮತ್ತು ರಂಗರಹಿತ ಇರುವದು. ಆದ್ದರಿಂದ ಇವೆರಡರ ತುಲನೆ ಮಾಡಲಿಕ್ಕೆ ಆಗುವದಿಲ್ಲ. [೪೫] ಬಂಗಾರದ ಉಪಮೆಯಲ್ಲಿ ಬಂಗಾರವು ಮೂಲದಲ್ಲಿಯೇ ವ್ಯಕ್ತವಿರುವದು. ದಾಗೀನೆ ಮತ್ತು ಬಂಗಾರ ಇವೆರಡರಲ್ಲಿಯೂ ಮೂಲದಲ್ಲಿ ವ್ಯಕ್ತವಿರುವ ಬಂಗಾರವು ಇದ್ದೇ ಇರುವದು. [೪೬] ಬಂಗಾರವು ದೃಶ್ಯ, ವ್ಯಕ್ತ, ಹಳದಿ, ಜಡ ಮತ್ತು ಏಕದೇಶೀ ಇರುವದು. ಮತ್ತು ಬ್ರಹ್ಮವು ಅದೃಶ್ಯ, ಅವ್ಯಕ್ತ, ರಂಗರಹಿತ, ಸೂಕ್ಷ್ಮ ಮತ್ತು ಸರ್ವದೇಶಿ ಇರುವದು. ಬಂಗಾರವು ಅಪೂರ್ಣವಾದರೆ, ಬ್ರಹ್ಮವು ಪೂರ್ಣವಿರುವದು. ಅಂದಮೇಲೆ ಪೂರ್ಣಕ್ಕೆ ಅಪೂರ್ಣದ ದೃಷ್ಟಾಂತ ಹೇಗೆ ಸರಿ ಹೋಲುವದು? [೪೭] ದೃಷ್ಟಾಂತ ಕೊಡುವವನು ಮತ್ತೆ ಅನ್ನುವದೇನಂದರೆ, ಯಾವುದೇ ದೃಷ್ಟಾಂತ ಏಕದೇಶಿ ಮತ್ತು ಅಪೂರ್ಣವಿರುವದೆಂದು ಅನ್ನುವದು ನನಗೂ ಮಾನ್ಯವಿದೆ. ಆದರೆ ಬ್ರಹ್ಮಸ್ವರೂಪದ ಕಲ್ಪನಾ ಬರುವದಕ್ಕಾಗಿ ಈ ದೃಷ್ಟಾಂತಗಳನ್ನು ಉಪಯೋಗಿಸಬಹುದು. ಸಾಗರ ಮತ್ತು ಅದರ ಮೇಲೆ ಏಳುವ ನೀರಿನ ತೆರೆಗಳು ಇವು ಏಕರೂಪವೇ ಇರುವವು, ಇದರಲ್ಲಿ ಭೇದ ಇರುವದಿಲ್ಲ. [೪೮] ದೃಷ್ಟಾಂತ ಕೊಡುವಲ್ಲಿ ಒಂದು ಖುಬಿ [ಮರ್ಮ, ಸೊಗಸು] ಇರುವದು. ಏನೆಂದರೆ ಒಂದು ದೃಷ್ಟಾಂತದಿಂದ ಉತ್ತಮ ಮತ್ತು ಮಧ್ಯಮ, ಮತ್ತು ಕನಿಷ್ಟ ಪ್ರಕಾರಗಳಲ್ಲಿ ಇವುಗಳ ಸ್ಪಷ್ಟ ಜ್ಞಾನವಾಗುವದು. ಆದರೆ ಕೆಲವೊಂದು ದೃಷ್ಟಾಂತಗಳಿಂದ ಜ್ಞಾನವಂತೂ ದೊರಕುವದಿಲ್ಲ. ಅಥವಾ ಘಟಿಸುವದಿಲ್ಲ. ಇಷ್ಟೇ ಅಲ್ಲ ಇದರ ವಿರುದ್ಧ ಭಲತೆ-ವಿಪರೀತ ಇಲ್ಲದ ವಿಕಲ್ಪ ಮಾತ್ರ ಬೆಳೆಯುತ್ತದೆ[೪೯] ಸಾಗರದ ದೃಷ್ಟಾಂತವನ್ನು ನೋಡಿದರೆ ಅಹಾ ! ಎಂಥ ಅದ್ಭುತ ! ಸಮುದ್ರ ಮತ್ತು ಅದರ ಮೇಲಿನ ತೆರೆಗಳು ಎಷ್ಟೊಂದು ಅಪಾರ !! ಈ ದೃಷ್ಟಾಂತವು ವಾಸ್ತವಿಕವಾಗಿ ಅಚಲವಿರುವ ಬ್ರಹ್ಮನಿಗೆ ಸದಾ ಹರಿಯುತ್ತಿರುವ ಅಥವಾ ಚಲಿಸುತ್ತಿರುವ ಮತ್ತು ಗತಿ ಬದಲಿಸುತ್ತಿರುವ ಸಮುದ್ರದ ದೃಷ್ಟಾಂತ ಕೊಡುವದು ಸರಿಯಾಗಲಾರದು. ಜಾದೂದಿಂದ ನಿರ್ಮಾಣ ಮಾಡಿದ ವಸ್ತು ಸಂಪೂರ್ಣ ನಿಜವೆಂದು ತಿಳಿಯಬಾರದು. [೫೦] ಒಬ್ಬ ಅನ್ನುವನು ಜಾದೂಗಾರನು ತನ್ನ ಕಲ್ಪನೆಯಿಂದ ಜನರ ಮುಂದೆ ಅನೇಕ ಪ್ರಕಾರದ ಭಾಸಗಳನ್ನು ನಿರ್ಮಿಸುವನು. ಇವೆಲ್ಲ ನಿಜವಿರುವದಿಲ್ಲ. ಆದರೆ ಏನಿದ್ದರೂ ಇವೆಲ್ಲ ಬ್ರಹ್ಮವೇ ಇರುವದು. (೫೦)

ಏಸಾ ವಾದ ಯೇಕಮೇಕಾ । ಲಾಗತಾ ರಾಹಿಲೀ ಆಶಂಕಾ ।
ತೇ ಚಿ ಆತಾ ಪುಢೇ ಏಕಾ । ಸಾವಧ ಹೋಉನೀ ॥೫೨॥

ಮಾಯಾ ಮಿಥ್ಯಾ ಕಳೋ ಆಲೀ । ಪರೀ ತೇ ಬ್ರಹ್ಮೀ ಕೈಸೀ ಜಾಲೀ ।
ಮ್ಹಣಾವೀ ತೇ ನಿರ್ಗುಣೇ ಕೇಲೀ । ತರೀ ತೇ ಮೂಳೀ ಚ ಮಿಥ್ಯಾ ॥೫೩॥

ಮಿಥ್ಯಾ ಶಬ್ದೀ ಕಾಹೀ ಚ ನಾಹೀ । ತೇಥೇ ಕೇಲೇ ಕೋಣೇ ಕಾಈ ।
ಕರಣೇ ನಿರ್ಗುಣಾಚಾ ಠಾಈ । ಹೇ ಹಿ ಅಘಟಿತ ॥೫೪॥

ಕರ್ತಾ ಠಾಈಚಾ ಅರೂಪ । ಕೇಲೇ ತೇ ಹಿ ಮಿಥ್ಯಾರೂಪ ।
ತಥಾಪಿ ಫೇಡೂ ಆಕ್ಷೇಪ । ಶ್ರೋತಯಾಚಾ ॥೫೫॥

ಇತಿ ಶ್ರೀ ದಾಸಬೋಧೇ ಗುರುಶಿಷ್ಯ ಸಂವಾದೇ
"ಸೂಕ್ಷ್ಮ ಆಶಂಕಾ ನಿರೂಪಣ" ನಾಮ ಸಮಾಸ ದ್ವಿತೀಯ ॥

● ●

ಈ ಪ್ರಕಾರ ಒಬ್ಬರಿಗೊಬ್ಬರಿಗೆ ವಾದ ವಿವಾದ. ಕೂಡಿದ ಜನರಲ್ಲಿ ನಡೆದ ವಾದ ವಿವಾದ ಬಹಳವಾಗಿ ನಡೆದರೂ ಮೂಲ ಪ್ರಶ್ನೆಯು ಹಾಗೆಯೇ ಉಳಿಯಿತು. ಅದಕ್ಕೆ ಸರಿಯಾದ ಉತ್ತರ ದೊರೆಯದೇ ಉಳಿಯಿತು. ಇಲ್ಲಿಯೂ ಸಹ ಮೂಲ ಶಂಕೆಯೂ ಹಾಗೆಯೇ ಉಳಿಯಿತು. ಈಗ ಇದರ ವಿವರಣೆಯನ್ನು ಮಾಡುವೆವು. ಲಕ್ಷ್ಯ ಗೊಟ್ಟು ಕೇಳಿರಿ. [೫೨] ಮಾಯಾ ನಿಜವಲ್ಲ ಅನ್ನುವದು ತಿಳಿಯಿತು. ಆದರೆ ಬ್ರಹ್ಮನಲ್ಲಿ ಇದರ ನಿರ್ಮಾಣ ಹೇಗಾಯಿತು ? ಇದನ್ನು ಈಗ ಹೇಳಲಿಕ್ಕೇಬೇಕಾಗಿದೆ. ಮಾಯೆಯನ್ನು ನಿರ್ಗುಣನೇ ನಿರ್ಮಾಣ ಮಾಡಿದನು. ಅಂತಾ ಅಂದದ್ದಾದರೆ ಇದು ಸಂಪೂರ್ಣವಾಗಿ ಮೂಲದಲ್ಲೇ ಮಿಥ್ಯಾ ಇರುವದೆಂದು ಅನಿಸುವದು. ನಿರ್ಗುಣನು ಏನನ್ನೂ ನಿರ್ಮಾಣ ಮಾಡಲಾರನು. ಮತ್ತು ಅದರಲ್ಲಿಯೂ ಯಾವುದು ಸಂಪೂರ್ಣ ಮಿಥ್ಯಾ ಇರುವದೋ ಅಂಥದನ್ನು ನಿರ್ಗುಣನು ನಿರ್ಮಾಣ ಮಾಡುವನೆಂಬ ಮಾತಂತೂ ಅಗದೀ ಅಯೋಗ್ಯವಿರುವದು.(೫೩)"ಏನೂ ಇಲ್ಲ"(ವಿಲಕ್ಷಣ-ಅನಿರ್ವಚನೀಯ) ಅನ್ನುವದೇ ಮಿಥ್ಯಾ ಶಬ್ದದ ಭಾವಾರ್ಥವಿರುವದು. ಯಾವುದು ಇಲ್ಲವೇ ಇಲ್ಲವೋ ಅಂಥದನ್ನು ಯಾವನೋ ಒಬ್ಬನು ನಿರ್ಮಾಣ ಮಾಡಿದನು ಎಂದು ಅನ್ನುವದೂ ಸಹ ಸರಿಯಲ್ಲ. ನಿರ್ಗುಣ ಬ್ರಹ್ಮವೇ ಮೂಲದಲ್ಲಿ ಇಲ್ಲದಂತಹದು. ಅದು ಮಾಯಾ ನಿರ್ಮಾಣ ಮಾಡುತ್ತದೆ. ಈ ಮಾತು ವಿಚಿತ್ರವ, ಅಘಟಿತವೆನಿಸುವದು. [೫೪] ಅಘಟಿತ ಹೇಗೆ?ಅಂದರೆ ಈಗ ಕೇಳಿರಿ, ನಿರ್ಮಾಣ ಮಾಡುವ ಕರ್ತಾ ಮೂಲದಲ್ಲಿಯೇ ನಿರಾಕಾರನಿರುವನು ಮತ್ತು ಅವನು ಯಾವುದನ್ನು ನಿರ್ಮಾಣ ಮಾಡಿದನೋ ಅದೆಲ್ಲ ಮಿಥ್ಯಾ ಇರುವದು. ಇದೆಲ್ಲ ನೋಡಿದರೆ, ಕೇಳಿದರೆ ಏನೇನೋ ವಿಲಕ್ಷಣವಾಗಿ ತೋರುವದು. (ಅನಿಸುವದು). ಹೀಗೆ ಇದ್ದರೂ ಸಹ ಶ್ರೋತಾರನ ಶಂಕಾ ನಿವಾರಿಸಲಿಕ್ಕೇಬೇಕಾಗಿದೆ. (೫೫)

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಎಂಟನೆಯ ದಶಕದಲ್ಲಿಯ
"ಸೂಕ್ಷ್ಮ ಆಶಂಕಾ ನಿರೂಪಣ" ಎಂಬ ಹೆಸರಿನ ಎರಡನೆಯ ಸಮಾಸವು ಮುಗಿದುದು.

## ದಶಕ ೮. ಸಮಾಸ ೩. ಸೂಕ್ಷ್ಮ ಆಶಂಕಾ ನಿರೂಪಣ (ನುಡಿ ೬೭)

ಪರಮಾರ್ಥದ ದೃಷ್ಟಿಯಿಂದ ಮನುಷ್ಯರಲ್ಲಿ ಎರಡು ಪ್ರಕಾರಗಳು. ಒಂದು ಜ್ಞಾನಿ ಮನುಷ್ಯರದು. ಮತ್ತು ಎರಡನೆಯದು ಅಜ್ಞಾನಿ ಮನುಷ್ಯರದು. ಜ್ಞಾನಿ ಮನುಷ್ಯರ [ಪುರುಷರ] ಅನುಭವದ ರೀತಿ ವ ವಿಚಾರಗಳು ಒಂದು ಬಗೆಯವು. ಮತ್ತು ಅಜ್ಞಾನಿ ಪುರುಷರ ಅನುಭವದ ರೀತಿ ವಿಚಾರಗಳು ಇನ್ನೊಂದು ಬಗೆಯವು ಇರುವವು. ಜ್ಞಾನ ದಶೆಯಲ್ಲಿ ದೇಹಬುದ್ಧಿಯು ಸಮೂಲ ನಾಶವಾಗುವದು. ಮತ್ತು ಒಬ್ಬನೇ ಒಬ್ಬ ಪರಬ್ರಹ್ಮನ ಸ್ವರೂಪದ ಹೊರತಾಗಿ ಎರಡನೆಯದಾವುದೂ ಅನುಭವಕ್ಕೆ ಬರುವದೇ ಇಲ್ಲ. ಅಜ್ಞಾನದ ದಶೆಯಲ್ಲಿ ಆತ್ಮಬುದ್ಧಿಯು ಸಮೂಲ ಲೋಪವಾಗುವದು. ಮತ್ತು ದೃಶ್ಯ ವಿಶ್ವದ ಹೊರತಾಗಿ ಎರಡನೆಯದಾವುದೂ ಅನುಭವಕ್ಕೆ ಬರುವದೇ ಇಲ್ಲ. ಜ್ಞಾನದ ದಶೆಯಲ್ಲಿ ಪ್ರತಿಭೆಯು (ಬುದ್ಧಿಯು) ಬೆಳಗುತ್ತದೆ. ಅದೇ ಅಜ್ಞಾನದ ದಶೆಯಲ್ಲಿ ಬುದ್ಧಿಯು ಮೋಜಿನ ವಿಹಾರದಲ್ಲಿ ತೊಡಗಿರುವದು. ಜ್ಞಾನದಶೆಯಲ್ಲಿ ಪರಮಾತ್ಮ ವಸ್ತುವಿನೊಂದಿಗೆ ತದಾಕಾರ ಹೊಂದುವದರಿಂದ ಯಾವುದೇ ಪ್ರಶ್ನೆ ಅಥವಾ ಸಂಶಯಗಳು ಉಳಿಯುವದಿಲ್ಲ. ಆದರೆ ಅಜ್ಞಾನದ ದಶೆಯಲ್ಲಿ ದೃಶ್ಯ ವಿಶ್ವದೊಂದಿಗೆ (ದೂರ ನಿಂತು) ಪ್ರತ್ಯೇಕವಾಗಿ ವ್ಯವಹಾರ ಆಗುತ್ತಲಿರುವದರಿಂದ ಹೆಜ್ಜೆ ಹೆಜ್ಜೆಗೆ ಪ್ರಶ್ನೆಗಳು ಮತ್ತು ಸಂಶಯಗಳು ನಿರ್ಮಾಣವಾಗುವವು. ಪರಮಾತ್ಮ ಸ್ವರೂಪದ ಸಾಕ್ಷಾತ್ಕಾರ ಮಾಡಿಕೊಳ್ಳುವದೇ ಎಲ್ಲ ಸಂಶಯಗಳ ನಿವಾರಣೆಗೆ ರಾಜಮಾರ್ಗವಿರುವದು. ಆದರೆ ಇದು ಎಲ್ಲಿಯವರೆಗೆ ಸಾಧಿಸುವದಿಲ್ಲವೋ ಅಥವಾ ಪರಿಪಕ್ವವಾಗುವದಿಲ್ಲವೋ ಅಲ್ಲಿಯವರೆಗೆ ಬುದ್ಧಿಯ ಭೂಮಿಕೆಯ ಮೇಲೆ ಸ್ಥಿರಗೊಂಡು ತರ್ಕ ಶುದ್ಧ ವಿಚಾರ ಮಾಡುವದು ಬಹಳ ಉಪಯುಕ್ತವೆನಿಸುವದು. ಈ ದೃಷ್ಟಿಯನ್ನಿಟ್ಟುಕೊಂಡೇ ಸಂತರು ತಮ್ಮ ಗ್ರಂಥಗಳನ್ನು ರಚಿಸಿದ್ದಾರೆ. ಸಂತರಗ್ರಂಥಗಳ ಸಹಾಯಪಡೆದು ಸಾಧಕರು ಸೂಕ್ಷ್ಮ ವಿಚಾರ ಮಾಡಿದ್ದಾದರೆ ಜ್ಞಾನ ಕಲಾ ಉತ್ಪನ್ನವಾಗಲು ಸುಲಭವಾಗುವದು. ಮತ್ತು ಜ್ಞಾನದಿಂದಲೇ ಕೊನೆಗೆ ಮೋಕ್ಷವೂ ಸಾಧ್ಯವಾಗುವದು. ಪ್ರಸ್ತುತ ಸಮಾಸದಲ್ಲಿಯ ಪ್ರಶ್ನೆ ಏನೆಂದರೆ ಬ್ರಹ್ಮಜ್ಞಾನಿ ಪುರುಷರಿಗೆ ಸುತ್ತೂಮುತ್ತೂ ಎಲ್ಲ ಕಡೆಗೂ ಕೇವಲ ಬ್ರಹ್ಮ ಸ್ವರೂಪದ ಹೊರತಾಗಿ ಎರಡನೆಯದಾವುದೂ ಅನುಭವಕ್ಕೆ ಬರುವದಿಲ್ಲ. ಅಜ್ಞಾನಿ ಪುರುಷರಿಗೆ ಇದೇ ಬ್ರಹ್ಮ ಸ್ವರೂಪದಲ್ಲಿ ದೃಶ್ಯಜಗತ್ತಿನ ಅನುಭವ ಬರುವದು. ಯಾವ ಬ್ರಹ್ಮದ ಆಧಾರದ ಮೇಲೆ (ಆಧಾರದಿಂದ) ಜಗತ್ತಿನ ಅನುಭವ ಬರುವದೋ ಆ ಜಗತ್ತಿನಲ್ಲಿಯ ಯಾವದೊಂದು ಗುಣಧರ್ಮವೂ ಬ್ರಹ್ಮದಲ್ಲಿ ಇರುವದಿಲ್ಲ. ಇಂಥ ವಿರುದ್ಧ ಗುಣಧರ್ಮದ ಜಗತ್ತು ಬ್ರಹ್ಮದಲ್ಲಿ ಹೇಗೆ ಕಾಣುವದು? ಈ

ಪ್ರಶ್ನೆಗೆ ಉತ್ತರ ಹೀಗಿರುವದು. ಜ್ಞಾನಿ ಪುರುಷರ ಅನುಭವವೇ ಸರ್ವಸ್ವೀ ನಿಜವಿರುವದು. ವೇದಾಂತದಲ್ಲಿ ಇದಕ್ಕೆ "ಅಜಾತವಾದ"ವೆನ್ನುವರು. ಈ ಅಜಾತವಾದವು ವಾದ-ತರ್ಕ ಅಲ್ಲ. ಬ್ರಹ್ಮಜ್ಞಾನಿ ಪುರುಷರ ಪರಮ ಶ್ರೇಷ್ಠ ಅನುಭವದ ಅಮೃತವೇ ಇರುವದು. ಈ ದೃಷ್ಟಿಯಿಂದ ನೋಡಿದರೆ ಜಗತ್ತು [ಮೂಲದಲ್ಲಿ] ನಿರ್ಮಾಣವಾಗಿಯೇ ಇಲ್ಲ. ತತ್ವದೃಷ್ಟಿಯಿಂದ ಇದನ್ನು ನೋಡಿದರೂ ಸಹ ಅಜ್ಞಾನಿ ಪುರುಷರ ಜಗತ್ತಿನ ಬಗೆಗಿನ ಅನುಭವವನ್ನು ನಿರಾಕರಿಸಲು ಬರುವದಿಲ್ಲ. ಅಜ್ಞಾನಿ ಮನುಷ್ಯರು ಇಂದ್ರಿಯಗಳ ಮುಖಾಂತರ ತಮ್ಮ ಬುದ್ಧಿಯನ್ನು ಓಡಿಸುವರು [ನಡೆಸುವರು] ಮತ್ತು ಜಗತ್ತಿನಲ್ಲಿಯ ಘಟನೆಗಳಿಗೆ ಅರ್ಥ ಹಚ್ಚುವರು. [ರಚನೆಯ ಸಂಬಂಧವಾಗಿ, ಉತ್ಪತ್ತಿ, ಸ್ಥಿತಿ, ಲಯ ಇವುಗಳ ಸಂಬಂಧವಾಗಿ] ಎಲ್ಲರ ಇಂದ್ರಿಯಗಳು ಮತ್ತು ಬುದ್ಧಿಯ ರಚನೆ ಇವು ಮೂಲತಃ ಒಂದೇ ಪ್ರಕಾರದವು ಇರುವವು. ಅಂತೆಯೇ ಪ್ರತಿಯೊಬ್ಬರ ಅಜ್ಞಾನ ಒಂದೇ ಪ್ರಕಾರದಲ್ಲಿ ಕಂಡು ಬರುವದು. ಪ್ರತಿಯೊಂದು ಪ್ರಾಣಿಯಲ್ಲಿ ಅಜ್ಞಾನ ಹರಡಿರುವದು. ಮತ್ತು ಇದು ಎಲ್ಲಿಂದ ಬರುವದು. ಇದು ಒಂದು ದೊಡ್ಡ ಅಜ್ಞಾನವು. ಇದು ವಿಶ್ವವ್ಯಾಪಿ ಇರುವದು. ಇತರ ಪ್ರಾಣಿಗಳಲ್ಲಿ [ಮಾನವನನ್ನು ಬಿಟ್ಟು] ಅಜ್ಞಾನದ ಶುದ್ಧ ಸ್ವರೂಪ ಕಂಡು ಬರುವದು. ಆದರೆ ಮಾನವರಲ್ಲಿ ಮಾತ್ರ ಇದು ಜ್ಞಾನ ಮಿಶ್ರಿತವಾಗಿರುವದೆಂದು ಕಂಡು ಬರುವದು. "ನಾನು ಅಜ್ಞಾನಿ ಇರುವೆ-ನನಗೆ ಜ್ಞಾನ ಬೇಕು" ಈ ತಿಳುವಳಿಕೆ [ಅರಿವು] ಕೇವಲ ಮಾನವರಲ್ಲಿ ಮಾತ್ರ ಪ್ರಕಟವಾಗಿ ಕಾಣುವದು. ಅರ್ಥಾತ್ ಈ ದೃಶ್ಯ ವಿಶ್ವವನ್ನು ವ್ಯಾಪಿಸಿರುವ ಶಕ್ತಿಯಲ್ಲಿ ಜ್ಞಾನ ಮತ್ತು ಅಜ್ಞಾನ ಇವೆರಡರ ಮಿಶ್ರಣವಿರಲೇ-ಬೇಕೆಂದು ತಿಳಿಯುವದು. ಈ ವಿಲಕ್ಷಣ ಶಕ್ತಿಗೆ ಮಾಯಾ ಎಂದು ಅನ್ನುವರು.ಯಾವುದೇ ಶಕ್ತಿ ಇದ್ದರೂ ಅದಕ್ಕೆ ಅಧಿಷ್ಠಾನ [ಸತ್ತಾ ಮತ್ತು ವಾಸಸ್ಥಾನ] ಬೇಕಾಗುವದು. ಜ್ಞಾನ ಮತ್ತು ಅಜ್ಞಾನ ಇವುಗಳಿಗೆ ಚೇತನದ ಅಥವಾ ತಿಳುವಳಿಕೆಯ [ಅರಿವಿನ] ಗುಣವಿರುವದು. ಆದ್ದರಿಂದಲೇ ಈ ಯಾವತ್ತೂ ವಿಶ್ವಕ್ಕೆಲ್ಲ ವ್ಯಾಪಿಸಿರುವ ಯಾವ ಚೇತನ ಅಥವಾ ಶುದ್ಧ ಅರಿವು[ತಿಳುವಳಿಕೆ]ಇರುವದೋ ಇದೇ ಮಾಯೆಯ ನಿಜವಾದ ಅಧಿಷ್ಠಾನವಿರುವದು. ಇದಕ್ಕೆ ಈಶ್ವರವೆಂದು ಅನ್ನುವರು. ಮೂಲ ಪುರುಷ ಮತ್ತು ಮೂಲ ಮಾಯಾ ಇವರೇ ವಿಶ್ವಕ್ಕೆ ಮೂಲವಿರುವರು. ಅಜ್ಞಾನ ದಿಶೆಯಲ್ಲಿ ಮಾಯೆಯು ಅನಿರ್ವಚನೀಯ, ಭಾವರೂಪಾ, ಮತ್ತು ಅವಿದ್ಯಾ ಪೋಷಕವಿರುವಳು. ಸದ್ಗುರುವಿನ ಕೃಪಾ ಛತ್ರದಲ್ಲಿ ಮಾತ್ರ ಇದೇ ಮಾಯಾ ಈಶ್ವರನ ಶಕ್ತಿ ಅಂತಾ ಅನುಭವಕ್ಕೆ ಬರುವದು. ಹಾಗೂ ವಿದ್ಯಾ ಪೋಷಕಳಾಗಿ ಪರಮಾರ್ಥ ಮಾರ್ಗದಲ್ಲಿಯ ಸಾರಾಸಾರ ವಿಚಾರಗಳನ್ನೆಲ್ಲ ಬಿಡಿಸಿ ತೋರಿಸುವಳು. ಮತ್ತು ನಿರ್ಮಲವಾದ ಸ್ಫೂರ್ತಿಯನ್ನು ಕಾಣಿಕೆ ಕೊಡುವಳು. ಮತ್ತು ಜೀವನ್ಮುಕ್ತ ದಿಶೆಯಲ್ಲಿ ನಿರ್ಗುಣದ ಗುರುತಾದ ಮೇಲೆ ನಿಶ್ಚಲ (ಸ್ಥಿರ) ನಿವಾಂತ [ಪ್ರಶಾಂತ, ಶಾಂತ] ಸಮಾಧಾನ ಸ್ವರೂಪ ಸ್ಥಿತಿಯು ಪರಿಪಕ್ವವಾಗಿ ಅರಗಿದ ಮೇಲೆ ಇವಳು ಇಲ್ಲದಾಗುವಳು. ಆರಂಭದಲ್ಲಿಯ ಅಜ್ಞಾನ ದಶೆಯಲ್ಲಿ ದೇಹಬುದ್ಧಿಯಿಂದ ಬಂಧನ ಮಾಡುವ ಮಾಯಾ ಸಾಧಕಾವಸ್ಥೆಯಲ್ಲಿ ವಿವೇಕ ವೈರಾಗ್ಯ ಪ್ರದಾನ ಮಾಡುವ ಈಶ್ವರೀ ಶಕ್ತಿಯಾಗುವಳು. ಮತ್ತು ಸಿದ್ಧಾವಸ್ಥೆಯಲ್ಲಿ ಬಂಜೆಯ ಮಗನಂತೆ [ವಂಧ್ಯಾ ಪುತ್ರವತ್] ಇಲ್ಲದಾಗಿ ಹೋಗುವಳು. ಜ್ಞಾನಮಯ ಈಶ್ವರನ ಅಹಮ್ ಈ ಸ್ಫೂರ್ತಿಯು ಮಾಯೆಯೇ ಇರುವದು. ಇದು ಸತ್ಯ ಸಂಕಲ್ಪವಾಗಿರುವದು. ಅಜ್ಞಾನ ಮಯ ಜೀವದ "ಅಹಮ್" ಈ ಉರ್ಮಿ [ಲಹರಿ] ಅವಿದ್ಯೆ ಎನಿಸುವದು. ಇದು ಮಿಥ್ಯಾ ಸಂಕಲ್ಪವಿರುವದು. ಸುಖದುಃಖಗಳಿಗೆ ಕಾರಣವಾಗಿರುವದು. ಮತ್ತು ಹುಟ್ಟಿನ ಬಂಧನದಲ್ಲಿ ಒಡೆದು ಹಾಕುವದು.

## ಸಮಾಸ ತೃತೀಯ : ಸೂಕ್ಷ್ಮ ಆಶಂಕಾ ನಿರೂಪಣ

॥ಶ್ರೀರಾಮ॥ ಅರೆ ಜೇ ಜಾಲೇಚಿ ನಾಹೀ । ತ್ಯಾಚೀ ವಾರ್ತಾ ಪುಸಸೀ ಕಾಈ ।
ತಥಾಪಿ ಸಾಂಗೋ ಜೇಣೇ ಕಾಹೀ । ಸಂಶಯ ನುರೆ ॥೧॥

ದೋರೀಕರಿತಾ ಭುಜಂಗ । ಜಳಾಕರಿತಾ ತರಂಗ ।
ಮಾರ್ತಂಡಾ ಕರಿತಾ ಚಾಂಗ । ಮೃಗಜಳ ವಾಹೆ ॥೨॥

ಕಲ್ಪನೇಕರಿತಾ ಸ್ವಪ್ನ ದಿಸೆ । ಸಿಂಪೀಕರಿತಾ ರೂಪೇ ಭಾಸೆ ।
ಜಳಾಕರಿತಾ ಗಾರ ವಸೆ । ನಿಮಿಷ ಯೇಕ ॥೩॥

ಮಾತೀಕರಿತಾ ಭಿಂತೀ ಜಾಲೀ । ಸಿಂಧುಕರಿತಾ ಲಹರೀ ಆಲೀ ।
ತಿಳಾಕರಿತಾ ಪುತಳೀ । ದಿಸೋ ಲಾಗೇ ॥೪॥

ಸೋನ್ಯಾಕರಿತಾ ಅಳಂಕಾರ । ತಂತುಕರಿತಾ ಜಾಲೇ ಚೀರ ।
ಕಾಸವಾ ಕರಿತಾ ವಿಸ್ತಾರ । ಹಾತಾ ಪಾಯಾಂಚಾ ॥೫॥

ತೂಪ ಹೋತೇ ತರೀ ಥಿಜಲೇ । ತರೀಕರಿತಾ ಮೀಠ ಜಾಲೇ ।
ಬಿಂಬಾಕರಿತಾ ಬಿಂಬಲೇ । ಪ್ರತಿಬಿಂಬ ॥೬॥

ಪೃಥ್ವೀಕರಿತಾ ಜಾಲೇ ಝಾಡ । ಝಾಡಾಕರಿತಾ ಛಾಯಾ ವಾಡ ।
ಧಾತುಕರಿತಾ ಪವಾಡ । ಉಂಚ ನೀಚ ವರ್ಣಾಚಾ ॥೭॥

ಆತಾ ಅಸೋ ಹಾ ದೃಷ್ಟಾಂತ । ಅದ್ವೈತಾಸ ಕೈಚೇ ದ್ವೈತ ।
ದ್ವೈತೇವಿಣ ಅದ್ವೈತ । ಬೋಲತಾ ಚ ನ ಯೆ ॥೮॥

ಭಾಸಾಕರಿತಾ ಭಾಸ ಭಾಸೆ । ದೃಶ್ಯಾಕರಿತಾ ಅದೃಶ್ಯ ದಿಸೆ ।
ಅದೃಶ್ಯಾಸ ಉಪಮಾ ನಸೆ । ಮ್ಹಣೋನಿ ನಿರೋಪಮ ॥೯॥

## ಸಮಾಸ ೩ : ಸೂಕ್ಷ್ಮ ಆಶಂಕಾ ನಿರೂಪಣ

ಪರಬ್ರಹ್ಮನು ಹೇಗಿರುವನೋ ಹಾಗೆಯೇ ಇರುವನು. ಇವನಲ್ಲಿಂದ ಏನೂ ಉತ್ಪನ್ನವಾಗುವದಿಲ್ಲ. ಇವನಿಂದ ಏನೂ ನಾಶ ಹೊಂದಿಲ್ಲ. ಆದರೆ ಈ ಮಾತು ಜ್ಞಾನಿಗಳ ಅನುಭವದ ಮಾತಾಗಿದೆ. ಅಜ್ಞಾನಿ ಮನುಷ್ಯರಿಗೆ ಇದನ್ನು ಹೇಳಿದರೆ ಅವರಿಗೆ ಸಮಾಧಾನವಾಗುವದಿಲ್ಲ. ಅಂತೆಯೇ ಶ್ರೀಸಮರ್ಥರು ವಿವರ್ತವಾದ (ರೂಪಾಂತರವಾದ)ದಿಂದ ಅನೇಕ ದೃಷ್ಟಾಂತಗಳನ್ನು ಹೇಳುವರು:– ಎಲೋ ಶಿಷ್ಯನೇ ಯಾವುದು ಉತ್ಪನ್ನವಾಗಿಯೇ ಇಲ್ಲವೋ ಆ ವಿಶ್ವದ ಬಗ್ಗೆ ತಿಳಿಸಿ ಹೇಳಿರಿ, ಎಂದು ಕೇಳುವಿ. ಅದನ್ನು ಹೇಗೆ ವಿವೇಚಿಸಲು ಬಂದೀತು? ಆದರೂ ನಿನ್ನ ಶಂಕಾ ನಿವಾರಣೆಯಾಗುವಂತೆ ಆದಷ್ಟು ವಿವೇಚಿಸುವೆನು. (೧) ಹಗ್ಗದ ಅಸ್ತಿತ್ವದಲ್ಲಿ ಹಾವಿನ ಭಾಸವಾಗುವದು. ನೀರಿನ ಅಸ್ತಿತ್ವದಲ್ಲಿ ತೆರೆಗಳ ಭಾಸವಾಗುವದು, ಸೂರ್ಯನ ಅಸ್ತಿತ್ವದಿಂದ ಮೃಗಜಲದ ಭಾಸವಾಗುವದು. (೨) ಕಲ್ಪನೆಯ ಮೂಲಕ ಸ್ವಪ್ನ ತೋರುವದು. ಸಿಂಪಿನ ಅಸ್ತಿತ್ವದಿಂದ ಬೆಳ್ಳಿಯ ಭಾಸವಾಗುವದು, ನೀರಿನ ಅಸ್ತಿತ್ವದಿಂದ ಒಂದು ಕ್ಷಣ ಬರ್ಫ (ಆಣಿಕಲ್ಲು) ಆಗುವದು.(೩) ಮಣ್ಣು ಇದ್ದು ಗೋಡೆಯ ಭಾಸವಾಗುವದು. ಸಮುದ್ರ ಇದ್ದೂ ತೆರೆಗಳ ಭಾಸವಾಗುವದು. ಕಣ್ಣೊಳಗಿನ ಕರೆಗುಡ್ಡಿಯಿಂದ ಅರ್ಥಾತ್ ಗೊಂಬೆಯಿಂದ ಪದಾರ್ಥ ಕಾಣುವದು. (೪) ಬಂಗಾರದ ಇರುವಿಕೆಯಿಂದ ದಾಗೀನುಗಳ ಭಾಸವಾಗುವದು. ನೂಲಿನಿಂದ ಅರಿವೆ [ಬಟ್ಟೆ]ಯ ಭಾಸವಾಗುವದು. ಆವೆಯು ಕೈಕಾಲುಗಳನ್ನು ಪಸರಿಸಿದಾಗ ಹೊಸದೊಂದು ಏನೋ ಭಾಸವಾಗುವದು. (೫) ಕರಗಿರುವ ತುಪ್ಪವು ಗಟ್ಟಿಯಾದರೆ ಹೊಸದೇನೋ ಉತ್ಪನ್ನವಾಯಿತೆಂಬ ಭಾಸವಾಗುವದು. ಸಮುದ್ರದ ನೀರು ಉಪ್ಪಿನ ಮಾಳದಲ್ಲಿ ನಿಂತು ಒಣಗಿದಾಗ ಉಪ್ಪು ತಯಾರಾಗುವದು, ಆಗ ಹೊಸದೊಂದು ಏನೋ ನಿರ್ಮಾಣವಾದ ಭಾಸವಾಗುವದು. ಬಿಂಬದಿಂದ ಪ್ರತಿಬಿಂಬ ಬಿದ್ದ ಕೂಡಲೇ ಆಗ ಹೊಸದೇನೋ ಆಯಿತು ಅನ್ನುವ ಭಾಸವಾಗುವದು. (೬) ಭೂಮಿಯಿಂದ ಗಿಡ ಹುಟ್ಟಿ ಬರುವದು. ಆಗ ಅದು ಬೇರೆ ಇರುವದೆಂಬ ಭಾಸವಾಗುವದು. ಸಣ್ಣ ಗಿಡವೇ ಮರವಾಗಿ ನೆರಳು ಬೀಳುವದು. ಧಾತು ಅಂದರೆ ಧಾತುತನದಿಂದ ಒಂದೇ ಆಗಿರುವದು. ಆದರೆ ಆಯಾ ಧಾತುವಿನ ರಂಗದಿಂದ (ಬಂಗಾರ, ಕಬ್ಬಿಣ, ತಾಮ್ರ ಇತ್ಯಾದಿ) ಅವುಗಳ ಮೂಲ್ಯದಲ್ಲಿ ಹೆಚ್ಚು ಕಡಿಮೆಯವಾಗಿ ತಿಳಿಯಲ್ಪಡುವವು. (೭) ದೃಷ್ಟಾಂತ ಕೊಡುವದನ್ನು ಈಗ ಸಾಕು ಮಾಡೋಣ. ಯಾವುದು ಅದ್ವೈತ ಇರುವದೋ ಅದರಲ್ಲಿ ದ್ವೈತ ಇರಲಿಕ್ಕೆ ಸಾಧ್ಯವೇ ಇಲ್ಲ. ಆದರೆ ಅಲ್ಲಿ ದ್ವೈತವಿರುವ ಭಾಸ ಮಾತ್ರ ಆಗುವದು. ನಿಜವಾದ ಅಡಚಣೆ ಏನಂದರೆ ಅದ್ವೈತವನ್ನು ತಿಳಿಸಿ ಹೇಳಬೇಕಾದರೆ ದ್ವೈತದ ನೆರವು ಪಡೆಯದೆ ಗತ್ಯಂತರವಿಲ್ಲ. (೮) ಮೂಲ ಪುರುಷನಾದ ಈಶ್ವರನಲ್ಲಿ ಅನಂತ ಶಕ್ತಿಗಳು ಇರುವವು. ಮೂಲ ಮಾಯಾ ಇದೂ ಸಹ ಅವನ ಶಕ್ತಿಯೇ ಇರುವದು. ಇವಳ ಅಗಾಧ ವ್ಯಾಪಾರದಿಂದಾಗಿ ಈ ವಿಲಕ್ಷಣ ವಿಶ್ವವು ಅವತರಿಸಿತು:- ನಮ್ಮ ಮೇಲೆ ಅಜ್ಞಾನದ ಆವರಣ ವಿರುವದು. ಇದರಿಂದಾಗಿ ಯಾವುದು ಮೂಲದಲ್ಲಿ ಇಲ್ಲವೋ ಅದು ಕಾಣುವದು. ಈ ರೀತಿಯ ಭ್ರಮದಿಂದಾಗಿ ಭ್ರಮ ರೂಪದ ವಿಶ್ವವು ನಮಗೆ ಭಾಸವಾಗುವದು. ದೃಶ್ಯವಿಶ್ವವು ನಮ್ಮ ಅನುಭವಕ್ಕೆ ಬರುವದು. ಅದ್ದರಿಂದ ಅದೃಶ್ಯವಿರುವ ಬ್ರಹ್ಮರೂಪದ ಬಗ್ಗೆ ವಿಚಾರಮಾಡಲಿಕ್ಕೆ ಬರುವದು. ಮತ್ತು ಇದರ ಶೋಧ ತೆಗೆದುಕೊಳ್ಳಲಿಕ್ಕೂ ಬರುವದು. ನಿಜವಾಗಿ ಹೇಳಬೇಕೆಂದರೆ ಅದೃಶ್ಯ ಸ್ವರೂಪಕ್ಕೆ ಸಾಮ್ಯವಿರುವ ವಸ್ತುವೇ ಇಲ್ಲ ಅಂತೆಯೇ ಇದು ನಿರುಪಮವಿರುವದು. ಉಪಮಾ ಕೊಡಲಿಕ್ಕೆ ಸಾಧ್ಯವಿಲ್ಲದಂಥದ್ದಿರುವದು. (೯)

ಕಲ್ಪನೇವಿರಹಿತ ಹೇತ । ದೃಶ್ಯಾವೇಗಳಾ ದೃಷ್ಟಾಂತ ।
ದ್ವೈತಾವೇಗಳೇ ದ್ವೈತ । ಕೈಸೇ ಜಾಲೇ ॥೧೦॥

ವಿಚಿತ್ರ ಭಗವಂತಾಚೀ ಕರಣೀ । ವರ್ಣವೇನಾ ಸಹಸ್ರಫಣೀ ।
ತೇಣೇ ಕೇಲೀ ಉಭವಣೀ । ಅನಂತ ಬ್ರಹ್ಮಾಂಡಾಚೀ ॥೧೧॥

ಪರಮಾತ್ಮಾ ಪರಮೇಶ್ವರು । ಸರ್ವಕರ್ತಾ ಜೋ ಈಶ್ವರು ।
ತಯಾಪಾಸೂನಿ ವಿಸ್ತಾರು । ಸಕಳ ಜಾಲಾ ॥೧೨॥

ಐಸೀ ಅನಂತ ನಾಮೇ ಧರೀ । ಅನಂತ ಶಕ್ತೀ ನಿರ್ಮಾಣ ಕರೀ ।
ತೋ ಚಿ ಜಾಣಾವಾ ಚತುರೀ । ಮೂಳ ಪುರುಷ ॥೧೩॥

ತ್ಯಾ ಮೂಳ ಪುರುಷಾಚೀ ವೊಳಖಣ । ತೇ ಮೂಳಮಾಯಾ ಚಿ ಆಪಣ ।
ಸಕಳ ಕಾಹೀ ಕರ್ತೇಪಣ । ತೇಥೇ ಚಿ ಆಲೇ ॥೧೪॥

॥ಶ್ಲೋಕ॥ ಕಾರ್ಯಕಾರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೆ ॥ ೬ ॥

ಹೇ ಉಘಡ ಬೋಲತಾ ನಯೆ । ಮೋಡೇ ಪಾಹಾತೊ ಉಪಾಯೆ ।
ಯೆರವೀ ಹೇ ಪಾಹಾತಾ ಕಾಯ । ಸಾಚ ಆಹೆ ॥೧೫॥

ದೇವಾಪಾಸೂನ ಸಕಳ ಜಾಲೇ । ಹೇ ಸರ್ವಾಸ ಮಾನಲೇ ।
ಪರೀ ತ್ಯಾ ದೇವಾಸ ವೊಳಖಿಲೇ । ಪಾಹಿಜೆ ಕೀ ॥೧೬॥

ಸಿದ್ಧಾಚೇ ಜೇ ನಿರೂಪಣ । ತೇ ಸಾಧಕಾಸ ನ ಮನೆ ಜಾಣ ।
ಪಕ್ಕ ನಾಹೀ ಅಂತಃಕರ್ಣ । ಮ್ಹಣೋನಿಯಾ ॥೧೭॥

ಅವಿದ್ಯಾಗುಣೇ ಬೋಲಿಜೆ ಜೀವ । ಮಾಯಾಗುಣೇ ಬೋಲಿಜೆ ಶಿವ ।
ಮೂಳ ಮಾಯಾಗುಣೇ ದೇವ । ಬೋಲಿಜೇತೊ ॥೧೮॥

ಮ್ಹಣೌನಿ ಕಾರಣ ಮೂಳಮಾಯಾ । ಅನಂತ ಶಕ್ತೀ ಧರಾವಯಾ ।
ತೇಥೀಚಾ ಅರ್ಥ ಜಾಣಾವಯಾ । ಅನುಭವೀ ಪಾಹಿಜೆ ॥೧೯॥

ಮೂಳಮಾಯಾ ತೋ ಚಿ ಮೂಳಪುರುಷ । ತೋ ಚಿ ಸರ್ವಾಚಾ ಈಶ।
ಅನಂತನಾಮೀ ಜಗದೀಶ । ತಯಾಸೀ ಚಿ ಬೋಲಿಜೆ ॥೨೦॥

ಈ ದೃಶ್ಯ ವಿಶ್ವದ ಕ್ಷೇತ್ರದಲ್ಲಿ ಕಲ್ಪನೆಯು ಹೊರತಾಗಿ ಯಾವ ಉದ್ದೇಶ(ಇಚ್ಛಾ)ಇರಲಿಕ್ಕೆ ಶಕ್ಯವಿಲ್ಲ.ದೃಶ್ಯ ಪದಾರ್ಥಗಳ ಹೊರತಾಗಿ ದೃಷ್ಟಾಂತ ಕೊಡಲಿಕ್ಕೆ ಬರುವದಿಲ್ಲ. ದ್ವೈತ ಇರದ ಹೊರತು ದ್ವೈತದ ಅನುಭವ ಬರಲಿಕ್ಕೆ ಶಕ್ಯವಿಲ್ಲ. (ಅದ್ವೈತದಲ್ಲಿ ದೃಶ್ಯ ದ್ವೈತಗಳಿಗೆ ಆಸ್ಪದವೇ ಇರುವದಿಲ್ಲ).(೧೦) ಭಗವಂತನ ಕೆಲಸಕಾರ್ಯ (ಅಘಟಿತ ಘಟನಾ ಸಾಮರ್ಥ್ಯ) ಬಹಳ ವಿಲಕ್ಷಣವಿರುವದು. ಸಾವಿರ ಬಾಯಿ ಇರುವ ಶೇಷನಿಗೂ ಸಹ ವರ್ಣನೆ ಮಾಡುವದು ಕಠಿಣವಿದೆ. ಅಂಥ ಭಗವಂತನು ಈ ಅನಂತ ವಿಶ್ವದ ನಿರ್ಮಾಣವನ್ನು ಮಾಡಿದನು. (೧೧) ಪರಮಾತ್ಮಾ, ಪರಮೇಶ್ವರ, ಅನ್ನಿಸಿಕೊಳ್ಳುವ ಯಾವ ಸರ್ವಕರ್ತಾ ಈಶ್ವರ ಇರುವನೋ ಅವನಿಂದ ಈ ಯಾವತ್ತೂ ವಿಶ್ವದ ವಿಸ್ತಾರವಾಗಿರುವದು. (೧೨) ಈಶ್ವರನಿಗೆ ಇಂಥ ಅನೇಕ ಹೆಸರುಗಳಿರುವವು. ಇವನಲ್ಲಿ ಅನಂತ ಪ್ರಕಾರದ ಶಕ್ತಿಗಳೂ ಇರುವವು. ಅನಂತ ಶಕ್ತಿಯಿಂದ ಸಂಪನ್ನನಾದ ಈ ಯಾವ ಈಶ್ವರನಿರುವನೋ ಅವನೇ **"ಮೂಲ ಪುರುಷ"**ನಾಗಿರುವನು. ಇದನ್ನು ಬುದ್ಧಿವಂತರು ತಿಳಿಯಬೇಕು.(೧३) **"ಮೂಲಮಾಯಾ"** ಇದು ಆ ಮೂಲಪುರುಷನ ಎರಡನೆಯ ಹೆಸರಿರುವದು.ಯಾಕೆಂದರೆ ಮೂಲಮಾಯೆಯನ್ನು ತಿಳಿಯುವದು (ಗುರುತಿಸುವದು). ಅಂದರೇನೇ ಮೂಲಪುರುಷನನ್ನು ತಿಳಿಯುವದೆಂದೇ ಅರ್ಥವಿರುವದು. ಎಲ್ಲ ಕರ್ತಾತನವು ಮೂಲ ಮಾಯೆಯಲ್ಲಿಯೇ ಇರುವದು. (೧४) ಶ್ಲೋಕ:- ಕಾರ್ಯಕಾರಣ ಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ ॥ಭ॥ (ಭ.ಗೀ.ಅ.೧३-२೦ ಶ್ಲೋಕದ ಅರ್ಥ:- ಕಾರ್ಯಕಾರಣ ಮತ್ತು ಕರ್ತೃತ್ವ ಇವುಗಳಿಗೆ ಮೂಲವು ಪ್ರಕೃತಿಯೇ (ಮೂಲ ಮಾಯೆಯೇ) ಕಾರಣವಾಗಿರುವದು. ಸಾಧಕರು ಮತ್ತು ಸಿದ್ಧರು ಇವರ ದೃಷ್ಟಿಯಲ್ಲಿ ಅಂತರವಿರುವದರಿಂದ ಸಾಧಕರಿಗೆ ತಿಳಿಯು ವಂತೆ, ತಿಳಿದದ್ದು ಅರಗುವಂತೆ ಮತ್ತು ಆಚರಿಸಲಿಕ್ಕೆ ಬರುವಂತೆ ಅಂತಿಮ ತತ್ವವನ್ನು ಸುಲಭ ರೀತಿಯಿಂದ ಹೇಳ ಬೇಕಾಗುವದು. ಅಂತಿಮ ತತ್ವವನ್ನು ಉಘಡ ರೀತಿಯಿಂದ (ಬಹಿರಂಗವಾಗಿ) ಹೇಳಿದರೆ ಸಾಧಕನಿಗೆ ಬಾಧೆ ಬರುವ ಸಂಭವವಿರುವದು. ಸಿದ್ಧರಿಗೆ ಬರುವ ಶುದ್ಧ ಪರಮಾತ್ಮ ತತ್ವದ ಅನುಭವವನ್ನು ಎದುರಾ ಎದುರಿಗೇ (ಬಹಿರಂಗ ವಾಗಿ) ಹೇಳಲಿಕ್ಕೆ ಬರುವದಿಲ್ಲ. ಹಾಗೆ ಬಹಿರಂಗವಾಗಿ ಹೇಳಿದರೆ ಸಾಧನದಲ್ಲಿ ಹಾನಿ ಆಗುವ ಸಂಭವವಿರುವದು. ಇದರ ಹೊರತು ವಿಚಾರ ಮಾಡಿದರೆ ಈ ದೃಶ್ಯವಿಶ್ವವು ನಿಜ ಅಲ್ಲ. (೧೫) ದೇವರಿಂದ ಈ ಎಲ್ಲ ವಿಶ್ವ ನಿರ್ಮಾಣ ವಾಯಿತೆಂಬ ವಿಚಾರವು ಎಲ್ಲರಿಗೂ ಮಾನ್ಯವಿರುವದು. ಆದರೆ ಯಾವ ದೇವನು ಈ ವಿಶ್ವವನ್ನು ನಿರ್ಮಿಸಿದನೋ ಅವನನ್ನು ತಿಳಿಯಲೇಬೇಕಲ್ಲವೇ? (೧೬) ಸಿದ್ಧ ಪುರುಷರ ಭೂಮಿಕೆಯ ಮೇಲಿಂದ ಮಾಡಿದ (ವಿವರಿಸಿದ) ಬ್ರಹ್ಮ ನಿರೂಪಣವು ಸಾಧಕರಿರುವವರೆಗೆ ಆಕಲನವಾಗುವದಿಲ್ಲ. ಸಾಧಕರ ಬುದ್ಧಿಗೆ ಗ್ರಹಿಸಲಾಗುವದಿಲ್ಲ. ಯಾಕೆಂದರೆ,ಸಾಧಕರ ಅಂತಃಕರಣವು ಪೂರ್ಣ ಪಕ್ವವಾಗಿರುವದಿಲ್ಲ. ತಯಾರಾಗಿರುವದಿಲ್ಲ (೧೭) ಮೂಲ ಆತ್ಮಸ್ವರೂಪ ಚೈತನ್ಯವು ಒಂದೇ ಇರುವದು. ಅವಿದ್ಯೆಯ ಆವರಣದಿಂದ ಅದಕ್ಕೆ ಜೀವ ಅನ್ನುವರು. ಇದು (ಜೀವವು) ದೇಹದಲ್ಲಿ ಇರು ವದು, ವಿದ್ಯಾ ಮತ್ತು ಅವಿದ್ಯಾ ಇವುಗಳಿಂದ ಸಂಪನ್ನವಾದ (ಕೂಡಿದ) ಮಾಯೆಯ ಸಹವಾಸದಿಂದ ಇದೇ ಚೈತ ನ್ಯಕ್ಕೆ ಶಿವ ಅನ್ನುವರು. ಇದು ವಿಶ್ವದಲ್ಲಿ ಇರುವದು. ಮತ್ತು ಕೇವಲ ಜ್ಞಾನಮಯ ಮತ್ತು ಶಕ್ತಿಮಯ ಚೈತ ನ್ಯಕ್ಕೆ ದೇವ ಅಥವಾ ಪರಮೇಶ್ವರ ಅನ್ನುವರು. ಇವನ ಜ್ಞಾನಮಯ ಅಂಶಕ್ಕೆ (ಅಂಗಕ್ಕೆ) ಮೂಲ ಪುರುಷ ಹಾಗೂ ಶಕ್ತಿಮಯ ಅಂಗಕ್ಕೆ ಮೂಲ ಮಾಯಾ ಅನ್ನುವರು. (೧೮) ಸೃಷ್ಟಿಯಲ್ಲಿಯ ಅನಂತರಚನಾದಿ ಕಾರ್ಯಗಳಾ ಗುವದಕ್ಕೆ ಅನಂತ ಶಕ್ತಿಗಳು ಬೇಕಾಗುವವು. ಆದ್ದರಿಂದ ವಿಶ್ವದಲ್ಲಿ ಅನಂತ ಶಕ್ತಿಗಳು ಇರುವವು. ಇವೆಲ್ಲ ಶಕ್ತಿಗಳಿಗೆ ಮೂಲ ಕಾರಣಳು ಮೂಲ ಮಾಯೆಯೇ ಇರುವಳು. ಇವೆಲ್ಲ ಮಾತಿನ ಅರ್ಥ ಸರಿಯಾಗಿ ಲಕ್ಷ್ಯದಲ್ಲಿ ಬರಬೇಕಾ ದರೆ ಸಾಧಕರಿಗೆ ಸ್ವಾನುಭವೀ ಪುರುಷನೇ ಬೇಕು. ನಿಜವಾದ ಸದ್ಗುರು, ಸಂತ ಸಾಧುಗಳೇ ಬೇಕು. (೧೯) ಮೂಲ ಮಾಯಾ ಮತ್ತು ಮೂಲಪುರುಷ ಇವೆರಡೂ ಒಂದೇ ಎಂದು ನಿಶ್ಚಯವಾಗಿ ತಿಳಿಯಿರಿ. ಇವನೇ ಸರ್ವಾಂತರ್ಯಾಮಿ ಮತ್ತು ಸ್ವಾಮಿ ಈಶ್ವರನು. ಇವನಿಗೆ ಅನಂತ ಹೆಸರುಗಳು ಇರುವವು. ಈಶ್ವರನೇ ಜಗದೀಶ ಅನ್ನುವ ಹೆಸರಿನಿಂದ ಪ್ರಸಿದ್ಧವಿರುವನು. (२೦)

ಅವಘೀ ಮಾಯಾ ವಿಸ್ತಾರಲೀ। ಪರೀ ಹೆ ನಿಶೇಷ ನಾಥಿಲೀ।
ಐಸಿಯಾ ವಚನಾಚೀ ಖೋಲೀ। ವಿರುಳಾ ಜಾಣೆ ॥೨೧॥

ಐಸೇ ಅನುವರ್ಣಾಚ್ಯ ಬೋಲಿಜೆ। ಪರೀ ಹೇ ಸ್ವಾನುಭವೇ ಜಾಣಿಜೇ।
ಸಂತಸಂಗೇವಿಣ ನುಮಜೆ। ಕಾಹೀ ಕೇಲ್ಯಾ ॥೨೨॥

ಮಾಯಾ ತೋ ಚಿ ಮೂಳಪುರುಷ। ಸಾಧಕಾ ನ ಮನೆ ಹೇ ನಿಶೇಷ।
ಪರೀ ಅನಂತನಾಮೀ ಜಗದೀಶ। ಕೋಣಾಸ ಮ್ಹಣಾವೇ ॥೨೩॥

ನಾಮರೂಪ ಮಾಯೆ ಲಾಗಲೇ। ತರೀ ಹೇ ಬೋಲಣೇ ನೀಟ ಚಿ ಜಾಲೇ।
ಯೇಥೇ ಶ್ರೋತೀ ಅನುಮಾನಿಲೇ। ಕಾಸಯಾಸೀ ॥೨೪॥

ಆತಾ ಅಸೋ ಹೇ ಸಕಳ ಬೋಲೀ। ಮಾಗೀಲ ಆಶಂಕಾ ರಾಹಿಲೀ।
ನಿರಾಕಾರೀ ಕೈಸೀ ಜಾಲೀ। ಮೂಳಮಾಯಾ ॥೨೫॥

ದೃಷ್ಟೀಬಂಧನ ಮಿಥ್ಯಾ ಸಕಳ। ಪರೀ ತೋ ಕೈಸಾ ಜಾಲಾ ಖೇಳ।
ಹೇ ಚಿ ಆತಾ ಅವಘೇ ನಿವಳ। ಕರೂನ ದಾಊ ॥೨೬॥

ಆಕಾಶ ಅಸತಾ ನಿಶ್ಚಳ। ಮಧೇ ವಾಯೋ ಜಾಲಾ ಚಂಚಳ।
ತೈಸೀ ಜಾಣಾವೀ ಕೇವಳ। ಮೂಳಮಾಯಾ ॥೨೭॥

ರೂಪ ವಾಯೋ ಚೇ ಜಾಲೇ। ತೇಣೇ ಆಕಾಶ ಭಂಗಲೇ।
ಐಸೇ ಹೇ ಸತ್ಯ ಮಾನಲೇ। ನವಚೆ ಕೀ ಕದಾ ॥೨೮॥

ತೈಸೀ ಮೂಳಮಾಯಾ ಜಾಲೀ। ಆಣೀ ನಿರ್ಗುಣತಾ ಸಂಚಲೀ।
ಯೇಣೇ ದೃಷ್ಟಾಂತೇ ತುಟಲೀ। ಮಾಗೀಲ ಆಶಂಕಾ ॥೨೯॥

ವಾಯು ನವ್ಹತಾ ಪುರಾತನ। ತೈಸೀ ಮೂಳಮಾಯಾ ಜಾಣ।
ಸಾಚ ಮ್ಹಣತಾ ಪುನ್ಹಾ ಲೀನ। ಹೋತಸೆ ॥೩೦॥

ಈ ವಿಶ್ವದಲ್ಲಿ ಎಲ್ಲ ಕಡೆಗೂ ಮಾಯೆಯು ವಿಸ್ತಾರವಿರುವದು. ಆದರೆ ಇದು ಸರ್ವಸ್ವೀ ಸಂಪೂರ್ಣ ನಿಜವಲ್ಲ. ಈ ಮಾತಿನಲ್ಲಿಯ ಆಳವಾದ ಮತ್ತು ಸೂಕ್ಷ್ಮವಾದ ಅರ್ಥ ಯಾವದಿರುವದೋ ಅದನ್ನು ತಿಳಿದವರು ಬಹಳ ವಿರಳವಾಗಿ ಕಂಡು ಬರುವರು. (೨೧) ಈ ಮಾಯೆಗೆ ಅನಿರ್ವಾಚ್ಯ (ವಿವರಿಸಿ ಹೇಳಲು ಸಾಧ್ಯ ವಿಲ್ಲದ) ಮಾಯೆ ಅನ್ನುವರು. ಶಬ್ದಗಳಿಂದ ತಿಳಿಸಿ ಹೇಳಲಿಕ್ಕೆ ಬರುವದಿಲ್ಲ. ಆದರೆ ಇದನ್ನು ಸ್ವಾನುಭವದಿಂದ ತಿಳಿಯಬೇಕಾಗುವದು. ಸಂತ ಸಾಧುಗಳ ಸಹವಾಸದಿಂದ ಮಾತ್ರ ಇದು ಆಕಲನವಾಗುವದು. ಸಂತರ ಸಂಗತಿ ಮಾಡ ದಿದ್ದರೆ ಅಥವಾ ಮಾಡದೆ ತಿಳಿಯುವ ಪ್ರಯತ್ನ ಅದು ಎಷ್ಟೇ ಜೋರಾಗಿದ್ದರೂ ಮಾಯೆಯ ಸ್ವರೂಪ ತಿಳಿಯು ವದಿಲ್ಲ.(೨೨)ಮೂಲ ಮಾಯೆಯೇ ಮೂಲಪುರುಷ, ಮತ್ತು ಮೂಲ ಪುರುಷನೇ ಮೂಲಮಾಯೆ ಇರುವದು. ಇದೇನೂ ಸಾಧಕರಿಗೆ ಸರಿಯಾಗಿ ವೇದ್ಯವಾಗುವದಿಲ್ಲ.ಸಾಧಕ ಅನ್ನುವನು:-"ಹೀಗೆ ಇರುವದಾದರೆ ಅನಂತ ಹೆಸರಿನಿಂದ ಇರುವಂಥ ಜಗದೀಶನೆಂದು ಯಾರಿಗೆ ಅನ್ನಬೇಕು?"(೨೩)ಮೂಲ ಚೈತನ್ಯವು ಅನಾಮ(ಹೆಸರಿಲ್ಲದ)ಮತ್ತುಅರೂಪ (ರೂಪ ಆಕಾರ ಇಲ್ಲದ)ಇರುವದು.ಮಾಯೆಯೇ ಇವನಿಗೆ(ಮೂಲ ಪುರುಷನಿಗೆ)ಅನೇಕ ರೂಪ ಮತ್ತು ಅನೇಕ ಹೆಸರು ಗಳನ್ನು ಇಟ್ಟಳು. ಆಗ ಮಾಯಾ ನಾಮರೂಪದ ಮೂಲಳೆಂದು ಅನಿಸಿಕೊಂಡಳು.ಈ ವಿಚಾರವು ಸರಿ ಇದೆ. ಈ ಬಗ್ಗೆ ಶ್ರೋತಾರರು ಶಂಕಾಪಡುವ ಕಾರಣವಿಲ್ಲ.(೨೪) ಆದರೆ ಇದು ಸ್ವಲ್ಪ ವಿಷಯಾಂತರವಾಯಿತು.ಈಗ ಮೂಲ ಪ್ರಶ್ನೆಯು "ನಿರಾಕಾರ ಬ್ರಹ್ಮದಲ್ಲಿ ಮೂಲ ಮಾಯಾ ಹೇಗೆ ಉತ್ಪನ್ನವಾದಳು" ಇದರ ಬಗ್ಗೆ ಉತ್ತರ ಕೊಡು ವೆವು ಕೇಳಿರಿ:– ಈ ಅವಾಂತರ ಮಾತುಗಳು ಸಾಕು. ಮಾತು ಬಹಳವಾಯಿತು. ಈಗ ಇದು ಇಲ್ಲಿಗೆ ಸಾಕು.ಮೂಲ ಪ್ರಶ್ನೆ ಏನಂದರೆ, "ನಿರಾಕಾರಿಯಾದ ಮೂಲ ಮಾಯಾ ಹೇಗೆ ಉತ್ಪನ್ನವಾದಳು?" (೨೫) ನಜರ ಬಂದಿ ಆಟ ಅಂದರೆ ಕಣಕಟ್ಟು ವಿದ್ಯೆಯ ಆಟವಾಡುವವರು ಅನೇಕ ವಸ್ತುಗಳ ಪ್ರತ್ಯಕ್ಷ ನಿರ್ಮಾಣವನ್ನು ನಮ್ಮೆದುರಿಗೇ ಮಾಡು ವರು. ಆದರೆ ಅವರು ಮಾಡಿ ತೋರಿಸಿದ್ದೆಲ್ಲ ಮಿಥ್ಯಾ ಇರುತ್ತದೆ. ಇದರಂತೆ ಈ ವಿಶ್ವ ಅಂದರೆ ಕಣ್ಣುಕಟ್ಟು (ಗಾರುಡಿ) ವಿದ್ಯೆಯ ಒಂದು ಆಟವೇ ಇರುವದು. ಈ ಆಟ ಹೇಗೆ ಆಡಲ್ಪಟ್ಟಿತು? ಮತ್ತು ಈ ದೃಶ್ಯದಿಂದ ತುಂಬಿದ ಜಗತ್ತು ಹೇಗೆ ನಿರ್ಮಾಣವಾಯಿತು? ಇದರ ಬಗ್ಗೆ ಸ್ಪಷ್ಟ ವಿವೇಚನೆ ಮಾಡಿ ಹೇಳುವೆನು. (೨೬) ಆಕಾ ಶವು ಅತ್ಯಂತ ನಿಶ್ಚಲ (ಚಲನರಹಿತ, ಸ್ಥಿರ)ವಿರುವದು. ಇದರಲ್ಲಿ ಚಂಚಲವಾಯು ಉತ್ಪನ್ನವಾಯಿತು. ಹರಿದಾಡುವ ವಾಯು ಉತ್ಪನ್ನವಾದರೂ ಆಕಾಶ ಅಲುಗಾಡದೇ ಹೇಗಿತ್ತೋ ಹಾಗೆಯೇ ಸ್ಥಿರವಾಗಿಯೇ ಉಳಿಯಿತು.ಇದರಂತೆಯೇ ಅಗದೀ ನಿರಾಕಾರ ಮತ್ತು ನಿಶ್ಚಲ ಬ್ರಹ್ಮದಲ್ಲಿ ಮೂಲಮಾಯೆ ಉತ್ಪನ್ನವಾಯಿತು. (೨೭) ವಾಯು ಉತ್ಪನ್ನ ವಾದ್ದರಿಂದ ಆಕಾಶಕ್ಕೇನೂ ಧಕ್ಕೆ ಆಗಲಿಲ್ಲ. ಆಕಾಶಕ್ಕೆ ಬಿರುಕು ಬಿಟ್ಟಿತು ಹರಿಯಿತು. (ಭಂಗ ಬಂದಿತು) ಎಂದು ಯಾರಿಗೂ ಅನುಭವಕ್ಕೆ ಬಂದಿರುವದಿಲ್ಲ. ಆಕಾಶ ಇದ್ದಂತೆಯೇ ಸ್ಥಿರವಿರುತ್ತದೆ. [೨೮] ಇದರಂತೆಯೇ ಮೂಲ ಮಾಯಾ ಉತ್ಪನ್ನಳಾದರೂ ಸಹ ಪರಬ್ರಹ್ಮದ ನಿರ್ಗುಣತನದಲ್ಲಿ ಎಳ್ಳಷ್ಟೂ ಸಹ ಅಂತರವಾಗುವದಿಲ್ಲ. ಅದು ಅಗದೀ ಹೇಗಿದ್ದಿತೋ ಹಾಗೆಯೇ ಇದೆ. ಈ ದೃಷ್ಟಾಂತದಿಂದ ಒಂದನೆಯ ಶಂಕಾದ ನಿರಸನ ಮಾಡಿಕೊಳ್ಳ ಬೇಕು. (೨೯) ವಾಯು ಇದೇನೂ ಆಕಾಶದಂತೆ ಪುರಾತನವಲ್ಲ ಇದರಂತೆಯೇ, ಮೂಲ ಮಾಯೆಯೂ ಸಹ ಪರಬ್ರಹ್ಮದಂತೆ ಸನಾತನವಲ್ಲ. ಅಲ್ಲದೆ ವಾಯು ಹೇಗೆ ಆಕಾಶದಲ್ಲಿ ಲೀನವಾಗುವದೋ ಅದೇ ಪ್ರಕಾರ ಮೂಲ ಮಾಯೆಯು ಪರಬ್ರಹ್ಮದಲ್ಲಿ ಲೀನವಾಗಿ ಹೋಗುವದು. ಅಂತೆಯೇ ಉತ್ಪನ್ನವಾಗುವ ಮತ್ತು ಲೀನವಾಗುವ ಮಾಯಾ ಸಂಪೂರ್ಣ ನಿಜವಲ್ಲ. (೩೦)

ವಾಯೋ ರೂಪೇ ಕೈಸಾ ಆಹೆ । ತೈಸೀ ಮೂಳಮಾಯಾ ಪಾಹೇ ।
ಭಾಸೇ ಪರೀ ತೇ ನ ಲಾಹೆ । ರೂಪ ತಯೇಚೇ ॥೩೧॥

ವಾಯೋ ಸತ್ಯ ಮ್ಹಣೋ ಜಾತಾ । ಪರೀ ತೋ ನ ಯೆ ದಾಖವಿತಾ ।
ತಯಾಕಡೆ ಪಾಹೋ ಜಾತಾ । ಧುಳೀ ಚ ದಿಸೆ ॥೩೨॥

ತೈಸೀ ಮೂಳಮಾಯಾ ಭಾಸೆ । ಭಾಸೇ ಪರೀ ತೇ ನ ದಿಸೆ ।
ಪುಢೇ ವಿಸ್ತಾರಲೀ ಅಸೆ । ಮಾಯಾ ಅವಿದ್ಯಾ ॥೩೩॥

ಜೈಸೇ ವಾಯೋಚೇನಿ ಯೋಗೇ । ದೃಶ್ಯ ಉಡೆ ಗಗನಮಾರ್ಗೇ ।
ಮೂಳಮಾಯೇಚ್ಯಾ ಸಂಯೋಗೇ । ತೈಸೇ ಜಗ ॥೩೪॥

ಗಗನೀ ಅಭ್ರಾಳ ನಾಥಿಲೇ । ಅಕಸ್ಮಾತ್ ಉದ್ಭವಲೇ ।
ಮಾಯೆಚೆನಿ ಗುಣೇ ಜಾಲೇ । ತೈಸೇ ಜಗ ॥೩೫॥

ನಾಥಿಲೇ ಚಿ ಗಗನ ನವ್ಹತೇ । ಅಕಸ್ಮಾತ್ ಆಲೇ ತೇಥೇ ।
ತೈಸೇ ದೃಶ್ಯ ಜಾಲೇ ಯೇಥೇ । ತೈಸಿಯಾಪರೀ ॥೩೬।

ಪರೀ ತ್ಯಾ ಆಭ್ರಾಳಾಕರಿತಾ । ಗಗನಾಚೀ ಗೇಲೀ ನಿಶ್ಚಳತಾ ।
ನಾಟೆ ಪರೀ ತೇ ತತ್ವತಾ । ತೈಸೀ ಚ ಆಹೆ ॥೩೭॥

ತೈಸೇ ಮಾಯೆಕರಿತಾ ನಿರ್ಗುಣ । ನಾಟೆ ಜಾಲೇ ಸಗುಣ ।
ಪರೀ ತೇ ಪಾಹಾತಾ ಸಂಪೂರ್ಣ । ಜೈಸೇ ತೈಸೇ ॥೩೮॥

ಆಭ್ರಾಳ ಆಲೇ ಆಣಿ ಗೇಲೇ । ತರೀ ಗಗನ ತೇ ಸಂಚಲೇ ।
ತೈಸೇ ಗುಣಾ ನಾಹೀ ಆಲೇ । ನಿರ್ಗುಣ ಬ್ರಹ್ಮ ॥೩೯॥

ನಭ ಮಾಥಾ ಲಾಗಲೇ ದಿಸೆ । ಪರೀ ತೇ ಜೈಸೇ ತೈಸೇ ಅಸೆ ।
ತೈಸೇ ಜಾಣಾವೇ ವಿಶ್ವಾಸೇ । ನಿರ್ಗುಣ ಬ್ರಹ್ಮ ॥೪೦॥

ಊರ್ಧ್ವ ಪಾಹಾತಾ ಆಕಾಶ । ನಿಳಿಮಾ ದಿಸೆ ಸಾವಕಾಸ ।
ಪರೀ ತೋ ಜಾಣಿಜೆ ಮಿಥ್ಯಾ ಭಾಸ । ಭಾಸಲಾಸೆ ॥೪೧॥

ವಾಯುವಿನ ರೂಪ ಹೇಗಿದೆ ಇದನ್ನು ನೋಡಿ ತಿಳಿಯಿರಿ. ವಾಯು ಬೀಸ ಹತ್ತಿದಾಗ ಅಂದರೆ ಆಗ ಇದು ಗಾಳಿ (ವಾಯು) ಅದೆ ಎಂದು ಭಾಸವಾಗುವದು ಮತ್ತು ತಿಳಿಯುವದು. ಗಾಳಿಗೆ ಒಂದು ರೂಪ ರಂಗು ಅನ್ನುವದು ಇಲ್ಲ. ಇದರಂತೆ ಮೂಲ ಮಾಯಾ ಕರ್ತೃತ್ವದಿಂದ ಇರುವದು ಎಂದು ಭಾಸವಾಗುವದು. ಮತ್ತು ತಿಳಿಯುವದು. ಆದರೆ ಮಾಯೆಯ ರೂಪ ಹೀಗೆ ಎಂದು ಹೇಳಲಿಕ್ಕೆ ಬರುವದಿಲ್ಲ.(೩೧)ವಾಯು ಇದು ಖರೇ ಇದೆ. ಅದನ್ನು ತೋರಿಸಿರಿ, ಅಂದರೆ ಅದನ್ನು ತೋರಿಸಲಿಕ್ಕೆ ಬರುವದಿಲ್ಲ. ಅದನ್ನು ನೋಡಲಿಕ್ಕೆಹೋದರೆ ಕೇವಲ ಧೂಳಿ ಮಾತ್ರ ಕಾಣುವದು. (೩೨) ಇದರಂತೆಯೇ ಮೂಲ ಮಾಯಾ ತನ್ನ ಅಸ್ತಿತ್ವವನ್ನು ತಿಳಿಯಪಡಿಸುವದು. ಆದರೆ ಇದು ಅದೆ ಅನ್ನುವಂತೆ ತಿಳಿಸಿಕೊಡಲು ಹೇಳಿದರೆ ತಿಳಿಸಿ ಹೇಳಲಿಕ್ಕೆ ಆಗುವದಿಲ್ಲ. ಯಾಕಂದರೆ ಇದು ಪ್ರತ್ಯಕ್ಷ ಕಾಣುವದಿಲ್ಲ. ಇದನ್ನು ನೋಡ ಹೋದರೆ ದೃಶ್ಯಪದಾರ್ಥಗಳ ರೂಪದಲ್ಲಿ (ಮಾಯಾ, ಮತ್ತು ಅವಿದ್ಯಾ ಕಾಣುವದು). ಮಾಯೆಯು ಅವಿದ್ಯಾ ರೂಪದಲ್ಲಿ ಕಾಣುವದು ಅರ್ಥಾತ್ ಮೂಲ ಮಾಯೆಯೇ ಕಾಣುವದಿಲ್ಲ. (೩೩) ವಾಯುವಿನ ಹರಿದಾಟದಿಂದ ದೃಶ್ಯವಸ್ತು ಆಕಾಶದಲ್ಲಿ ಹಾರುವದು. ಇದರಂತೆಯೇ ಮೂಲ ಮಾಯೆಯ ಸಂಯೋಗದಿಂದ ನಿರ್ಗುಣ ಬ್ರಹ್ಮದಲ್ಲಿ ದೃಶ್ಯ ಜಗತ್ತು ಕಾಣುವದು. ಮೂಲ ಪರಬ್ರಹ್ಮವು ಅದೃಶ್ಯ ನಿರಾಕಾರ, ನಿರ್ಗುಣ ಮತ್ತು ಸೂಕ್ಷ್ಮವಿರುವದು. ಇದರಲ್ಲಿಯೇ ಉತ್ಪನ್ನವಾದಂಥ ಮೂಲ ಮಾಯಾ ಅದೇ ಸದ್ವಸ್ತುವನ್ನು ಸಾಕಾರ, ಸಗುಣ, ಮತ್ತು ಸ್ಥೂಲ ಪದಾರ್ಥಗಳ ರೂಪದಲ್ಲಿ ತೋರಿಸುವದು. (೩೪) ಆಕಾಶವು ಸ್ವಚ್ಛವಿರುವದು, ನಿರಭ್ರವಿರುವದು. ಇದರಲ್ಲಿ ಒಮ್ಮಿಂದೊಮ್ಮೆಲೆ ಮೋಡ ತೋರುವದು.ಇದರಂತೆ ಮೂಲ ಪರಬ್ರಹ್ಮ ಏಕಾಕಿ ಇದ್ದು ನಿರ್ಮಲವಿರುವದು. ಇದರಲ್ಲಿ ಮಾಯೆಯಿಂದಾಗಿ ದೃಶ್ಯ ಜಗದ ನೋಟ ತೋರಹತ್ತುವದು. (೩೫) ವಾಸ್ತವಿಕವಾಗಿ ಆಕಾಶದಲ್ಲಿ ಮೂಲದಿಂದಲೂ ಏನೂ ಇರುವದಿಲ್ಲ. ಆದರೆ ಮೂಲ ಮಾಯೆಯಿಂದಾಗಿ ಅಲ್ಲಿ ದೃಶ್ಯ ಜಗದ ಭಾಸವಾಗುವದು. (೩೬) ಆಕಾಶದಲ್ಲಿ ಮೋಡ ಕಾಣಿಸಿತೆಂದರೆ ಇದರಿಂದ ಆಕಾಶದ ನಿಶ್ಚಲತೆಗೆ ಭಂಗ ಬಂದಿತು ಎಂದು ಅನಿಸುತ್ತದೆ. ಆದರೆ ನಿಜವಾಗಿಯೂ ಆಕಾಶದ ನಿಶ್ಚಲತೆ ಮೊದಲಿದ್ದಂತೆಯೇ ಅಭಂಗ ಇರುವದು. ಅವಿಚ್ಛಿನ್ನವಿರುವದು. (೩೭) ಇದರಂತೆಯೇ ಮೂಲ ಮಾಯಾ ಪ್ರಕಟವಾದ ಮೇಲೆ ನಿರ್ಗುಣ ಪರಬ್ರಹ್ಮ ಸಗುಣ ಸಾಕಾರ ಆದಂತೆ ಅನಿಸುವದು. ಆದರೆ ಸೂಕ್ಷ್ಮದೃಷ್ಟಿಯಿಂದ ನೋಡಿದರೆ ಪರಬ್ರಹ್ಮವು ಸಂಪೂರ್ಣವಾಗಿ ಹೇಗಿದ್ದಿತೋ ಹಾಗೇ ನಿರ್ಗುಣವೇ ಇರುವದು. (೩೮) ಮೋಡ ಬಂದಿತು (ಕಂಡಿತು) ಮತ್ತು ಹೋಯಿತು (ಕಾಣವಾಯಿತು), ಆದರೆ ಆಕಾಶವು ಯಾವ ಪ್ರಕಾರ ಇದ್ದಿತೋ ಅದರಂತೆ ಅವಿಚ್ಛಿನ್ನವೇ ಇರುವದು. ಇದರಂತೆಯೇ ಮಾಯೆಯಿಂದಾಗಿ ದೃಶ್ಯವಿಶ್ವ ಬಂದಿತು [ಉತ್ಪನ್ನವಾಯಿತು] ಮತ್ತು ಹೋಯಿತು ಮತ್ತು ಕಾಣದಾಯಿತು]. ಆದರೆನಿರ್ಗುಣ ಬ್ರಹ್ಮವು ಸಗುಣವಾಗದೇ ಅಗದೀ ಹೇಗಿದ್ದಿತೊ ಹಾಗೆಯೇ ಇರುವದು. [೩೯] ಆಕಾಶದಲ್ಲಿ ದೃಶ್ಯದ ಅನಂತ ಘಟನೆಗಳು ಘಟಿಸುವವು. ಆದರೂ ಆಕಾಶವೇನೂ ತನ್ನ ಮೂಲ ಸ್ವರೂಪದಿಂದ ಸರಿಯುವದಿಲ್ಲ.ವ ಯಾವ ಬದಲಾವಣೆಯೂ ಆಗುವದಿಲ್ಲ. ಅಗದೀ ಹೇಗಿದ್ದಿತೊ ಹಾಗೆಯೇ ಅಲಿಪ್ತವಾಗಿರುವದು. ಇದರಂತೆ ದೃಶ್ಯವಿಶ್ವದಲ್ಲಿಯ ಅನಂತ ಘಟನೆಗಳು ಘಟಿಸಿದರೂ ಮೂಲ ಪರಮಾತ್ಮ ಸ್ವರೂಪವುಹೇಗಿತ್ತೋ ಹಾಗೆಯೇ ಇರುವದು. ಅಭಂಗವಿರುವದು. ಅಲಿಪ್ತವಿರುವದು:- ಕ್ಷಿತಿಜದ ಹತ್ತಿರ [ಭೂಮಿಗೆ ಹೊಂದಿ] ಆಕಾಶ ಅಗದೀ ಸಮೀಪವಿದ್ದಂತೆ ನಮ್ಮ ತಲೆಗೆ ಹತ್ತುವದೆಂಬಂತೆ ಕಾಣುವದು. ಆದರೆ ಅದೇನೂ ಕೆಳಗೆ ಸರಿದಿರುವದಿಲ್ಲ. ಅದು ಇದ್ದಂತೆಯೇ ಇರುವದು. ಇದರಂತೆಯೇ ಈ ದೃಶ್ಯವಿಶ್ವದಲ್ಲಿ ಬ್ರಹ್ಮಗೆ ಸಗುಣತನ ಬಂದಂತೆ ಅನಿಸುವದು. ಆದರೆ ಬ್ರಹ್ಮದ ನಿರ್ಗುಣತನವು ಅಗದೀ ಹೇಗಿದ್ದಿತೋ ಹಾಗೆಯೇ ಇರುವದೆಂಬ ದೃಢ ವಿಶ್ವಾಸ ಉಳ್ಳವರಾಗಿರಿ. [೪೦] ಮೇಲೆ ನೋಡಿದರೆ ಆಕಾಶದಲ್ಲೆಲ್ಲ ಕಡೆಗೆ ನೀಲಿ ರಂಗು ಹರಡಿದ್ದು ಕಾಣುವದು.ಆದರೆ ಆ ರಂಗು ಆಕಾಶಕ್ಕೆ ಇರುವದಿಲ್ಲ. ಆದರೆ ಅದು ಕೇವಲ ಭಾಸ ಮಾತ್ರವಿರುವದು-ನಿಜವಿರುವದಿಲ್ಲ. [೪೧]

ಆಕಾಶ ಪಾಲಥೇ ಘಾತಲೇ । ಚಹೂ ಕಡೆ ಆಟೋಪಲೇ ।
ವಾಟೆ ವಿಶ್ವಾಸ ಕೋಂಡಿಲೇ । ಪರೀ ತೇ ವೋಕಳೇ ಚಿ ಅಸೆ ॥೪೨॥

ಪರ್ವತೀ ನಿಳಾ ರಂಗ ದಿಸೆ । ಪರೀ ತೋ ತಯಾ ಲಾಗಲಾ ನಸೆ ।
ಅಲಿಪ್ತ ಜಾಣಾವೇ ತೈಸೇ । ನಿರ್ಗುಣ ಬ್ರಹ್ಮ ॥೪೩॥

ರಥ ಧಾವತಾ ಪೃಥ್ವೀ ಚಂಚಳ । ವಾಟೆ ಪರೀ ತೇ ಅಸೆ ನಿಶ್ಚಳ ।
ತೈಸೇ ಪರಬ್ರಹ್ಮ ಕೇವಳ । ನಿರ್ಗುಣ ಜಾಣಾವೇ ॥೪೪॥

ಆಭಾಳಾಕರಿತಾ ಮಯಂಕ । ವಾಟೆ ಧಾವತೊ ನಿಶಂಕ ।
ಪರೀ ತೇ ಅವಘೇ ಮಾಈಕ । ಆಭಾಳ ಚಳೇ ॥೪೫॥

ಝಾಳೆ ಅಥವಾ ಅಗ್ನಿಜ್ವಾಳ । ತೇಣೇ ಕಂಪಿತ ದಿಸೆ ಅಂತರಾಳ ।
ವಾಟೆ ಪರೀ ತೇ ನಿಶ್ಚಳ । ಜೈಸೇ ತೈಸೇ ॥೪೬॥

ತೈಸೇ ಸ್ವರೂಪ ಹೇ ಸಂಚಲೇ । ಅಸತಾ ವಾಟೆ ಗುಣಾ ಆಲೇ ।
ಏಸೇ ಕಲ್ಪನೇಸಿ ಗಮಲೇ । ಪರೀ ತೇ ಮಿಥ್ಯಾ ॥೪೭॥

ದೃಷ್ಟಿಬಂಧನಾಚಾ ಖೇಳ । ತೈಸೀ ಮಾಯಾ ಹೇ ಚಂಚಳ ।
ವಸ್ತು ಶಾಶ್ವತ ನಿಶ್ಚಳ । ಜೈಸೀ ತೈಸೀ ॥೪೮॥

ಏಸೀ ವಸ್ತು ನಿರಾವೇವ । ಮಾಯಾ ದಾಖವೀ ಅವೇವ ।
ಈಚಾ ಏಸಾ ಚ ಸ್ವಭಾವ । ನಾಥಿಲೀ ಚ ಹೇ ॥೪೯॥

ಮೇಲಕ್ಕೆ ಆಕಾಶದ ಕಡೆಗೆ ನೋಡಿದರೆ ಒಂದು ಕೊಪ್ಪರಿಗೆಯಂಥದನ್ನು ಅಥವಾ ಮುಚ್ಚಳವನ್ನು ಡಬ್ಬು ಹಾಕಿದಂತೆ ಅದು ನಾಲ್ಕು ಬಾಜೂವನ್ನು ಆವರಿಸಿದಂತೆ ಕಾಣುವದು. ಇದರಿಂದ ಆಕಾಶವು ಇಡೀ ವಿಶ್ವವನ್ನೆಲ್ಲ ತನ್ನಲ್ಲಿ ಹಿಡಿದಿಟ್ಟಿರುವಂತೆ ತೋರುವದು. ಆದರೆ ಅದು ನಿಜವಲ್ಲ.ನಿಜವಾಗಿಯೂ ಆಕಾಶವು ಎಲ್ಲ ಬಾಜೂದಿಂದ ಅಗದೀ ಮೋಕಳೀಕ [ಸ್ವತಂತ್ರ] ಇರುವದು. ಯಾವುದಕ್ಕೂ ಹತ್ತಿಲ್ಲ. [೪೨] ದೂರದಿಂದ ನೋಡಿದರೆ ಪರ್ವತದ ಬಣ್ಣ ನೀಲಿಯಾಗಿ ಕಾಣುವದು. ಇದು ಹೀಗೆ ಕಂಡರೂ ಪರ್ವತಕ್ಕೇನೂ ಬಣ್ಣ ಹತ್ತಿರುವದಿಲ್ಲ. ಇದರಂತೆಯೇ ಈ ದೃಶ್ಯ ವಿಶ್ವವು ಪರಬ್ರಹ್ಮಕ್ಕೆ ಅಂಟಿಕೊಂಡಂತೆ ಕಾಣುವದು. ಆದರೆ ನಿರ್ಗುಣ ಬ್ರಹ್ಮವು ಅದರಿಂದ ಅಗದೀಅಲಿಪ್ತವಿರುವದು. [೪೩] ರಥವು ಓಡುವಾಗ ಪೃಥ್ವಿಯೇ ಓಡುವದೆಂದು ಅನಿಸುವದು. ಆದರೆ ಪೃಥ್ವಿ ಅಗದೀ ಸ್ಥಿರವಿರುವದು.ಇದರಂತೆಯೇ ಇಷ್ಟೆಲ್ಲ ಅದ್ಭುತ ಸಗುಣ ವಿಶ್ವವನ್ನು ನೋಡಿ ನಮಗೆ ಪರಬ್ರಹ್ಮ ಸಹಿತ ಸಗುಣವಾಗಿರುವನೆಂದು ಅನಿಸುವದು. ಆದರೆ ಅವನ ನಿರ್ಗುಣ ಅವಸ್ಥೆಯು ಅಗದೀ ಹೇಗಿದ್ದಿತೋ ಹಾಗೇ ಇರುವದು. [೪೪] ಬೆಳದಿಂಗಳ ದಿನದಲ್ಲಿ ಮೋಡ ಬಂದರೆ ಆಗ ಮೋಡ ಸರಿಯುವಾಗ ಚಂದ್ರ ಓಡುತ್ತಿರುವಂತೆ ಖಾತ್ರಿಪೂರ್ವಕ ಕಾಣುವದು. ಆದರೆ ಆ ದೃಶ್ಯ ಅಗದೀ ಭ್ರಮಾತ್ಮಕ ಇರುವದು. ನಿಜವಾಗಿ ಚಂದ್ರ ಸ್ಥಿರವಿದ್ದು ಮೋಡಗಳೇ ಓಡುತ್ತಿರುವವು [೪೫]ಬಿಸಲಿನ ಝಳ ಅಥವಾ ಬೆಂಕಿಯ ಜ್ವಾಲೆಗಳು ಆಕಾಶದತ್ತ ಹೋದವೆಂದರೆ ಆಕಾಶವು ಕಂಪಿಸಿದಂತೆ ಕಾಣುವದು. ಆದರೆ ಅದು ಭ್ರಮವಿರುವದು. ಯಾಕೆಂದರೆ ಆಕಾಶವು ಅಗದೀ ಹೇಗಿತ್ತೋ ಹಾಗೇ ಇರುವದು ನಿಶ್ಚಲವಿರುವದು. (೪೬) ಇದರಂತೆಯೇ ನಿರ್ಗುಣ ಮತ್ತು ನಿಶ್ಚಲನಾದ ಪರಬ್ರಹ್ಮ ಒಬ್ಬನೇ ಒಬ್ಬನಾಗಿ ಎಲ್ಲ ಕಡೆಗೂ ಪಸರಿಸಿರುವನು. ಇವನು ದೃಶ್ಯ ವಿಶ್ವದ ಮೂಲಕ ಸಗುಣವಾದನು ಎಂದು ನಮ್ಮ ಕಲ್ಪನೆಗೆ ಅನಿಸುವದು. ಆದರೆ ಇದು ನಿಜವಲ್ಲ. ಬ್ರಹ್ಮವು ಹೇಗಿತ್ತೋ ಹಾಗೆಯೇ ನಿರ್ಗುಣವಾಗಿಯೇ ಇರುವದು. (೪೭) ಕಣ್ಕಟ್ಟು ವಿದ್ಯೆ ಅಥವಾ ಗಾರುಡಿಯ ಆಟದಲ್ಲಿ ಅನೇಕ ವಸ್ತುಗಳು ತಾತ್ಪೂರ್ತಿಕವಾಗಿ ಉತ್ಪನ್ನ ಮಾಡಲ್ಪಡುವವು. ಇದರಂತೆಯೇ ಮಾಯಾ ಸ್ವತಃ ಚಂಚಲಳಿದ್ದು ಅನೇಕ ದೃಶ್ಯ ಪದಾರ್ಥಗಳನ್ನು ನಿರ್ಮಾಣ ಮಾಡುವಳು. ಆದರೆ ಅವೆಲ್ಲ ತಾತ್ಪೂರ್ತಿಕವಿರುವವು. ಅಶಾಶ್ವತವಿರುವವು. ದೃಶ್ಯ ಪದಾರ್ಥ ಬಂದಿತು ಮತ್ತು ಹೋಯಿತು. ಅಂದರೂ ಪರಾತ್ಪರ ಬ್ರಹ್ಮ ವಸ್ತು ಅಗದೀ ಹೇಗಿತ್ತೋ ಹಾಗೆಯೇ ಶಾಶ್ವತ ಮತ್ತು ನಿಶ್ಚಲ ಉಳಿಯುತ್ತದೆ. [ಇರುತ್ತದೆ]. (೪೮) ಈವರೆಗೆ ಮಾಡಿದ ವಿವೇಚನೆಯಿಂದ ಮೂಲ ಪರಮಾತ್ಮ ವಸ್ತುವನ್ನು ನೋಡಲಿಕ್ಕೆ ಅತೀಂದ್ರಿಯ ದೃಷ್ಟಿ ಬೇಕಾಗುವದೆಂಬುದು ವಾಚಕರ ಲಕ್ಷ್ಯದಲ್ಲಿ ಬಂದಿರಬೇಕು. ನಮ್ಮ ಇಂದ್ರಿಯಗಳು ಅತಿಶಯ ದುರ್ಬಲವಾಗಿವೆ. ಯಾಕೆಂದರೆ ದೃಶ್ಯವಸ್ತುವಿನ ಅಂತರಂಗ ಒತ್ತಟ್ಟಿಗಿರಲಿ,ಅದರ ಬಹಿರಂಗವೂ ಸಹ ಇವುಗಳಿಗೆ [ಇಂದ್ರಿಯಗಳಿಗೆ] ಸರಿಯಾಗಿ ಆಕಲನವಾಗುವದಿಲ್ಲ. ವಸ್ತು ಹೇಗಿಲ್ಲವೋ ಹಾಗೆ ಕಾಣುವದಕ್ಕೆ ಭ್ರಮೆಯನ್ನುವರು. ನಮ್ಮ ಇಂದ್ರಿಯಗಳು ಮೇಲಿಂದ ಮೇಲೆ ಭ್ರಮವನ್ನು ನಿರ್ಮಾಣ ಮಾಡುವವು. ಆದ್ದರಿಂದ ಇಂದ್ರಿಯಗಳನ್ನು ಹಿಂದಕ್ಕೆ ಸರಿಸಿ (ಒಗೆದು) ಅಂದರೆ ದೃಶ್ಯವನ್ನು ಮನಸ್ಸಿನಿಂದ ಹೊರತೆಗೆದು ನೋಡಲಿಕ್ಕೆ ನಿಮಗೆ ಬರುವದಾದರೆ ಮಾತ್ರ ಪರಮಾತ್ಮ ವಸ್ತು ಆಕಲನವಾದೀತು. [ಆಗುವದು].ಈ ದೃಶ್ಯ ಮತ್ತು ಅದರಲ್ಲಿ ಈ ಇಂದ್ರಿಯಗಳು ಅದು ಹೇಗೆ ನಿರ್ಮಾಣವಾದವು? ಯಾಕಾದವು? ಇದರ ಬಗೆಗೆ ನಿಜ ಹೇಳುವದಾದರೆ ಇದಕ್ಕೆ ಸಮಾಧಾನಕಾರಕ ಉತ್ತರವಿಲ್ಲ. [ಹೇಳಲಿಕ್ಕೆ ಆಗುವದಿಲ್ಲ]. ವಿಶ್ವದ ಬಗ್ಗೆ ಮಾನವೀ ಬುದ್ಧಿಗೆ ಗುಂಗು ಹಿಡಿಸುವ ಗೂಢವು ಇದೇ ಇರುವದು. ಮಾಯಾ ಅನ್ನುವ ಹೆಸರಿನ ಪರಮೇಶ್ವರನ ಅಚಿಂತ್ಯ ಶಕ್ತಿಯು ಇದೆಲ್ಲವನ್ನೂ ಉಂಟು ಮಾಡುವದೆಂದು ಮಾತ್ರ ನಮಗೆ ಹೇಳಲಿಕ್ಕೆ ಬರುವದು. ಆ ಮಾಯಾ ಶಕ್ತಿಯ ವರ್ಣನೆಯನ್ನು ಶ್ರೀ ಸಮರ್ಥರು ಈಗ ಮಾಡುವರು. ವಾಸ್ತವಿಕವಾಗಿ ಪರಮಾತ್ಮ ವಸ್ತುವು ಅಖಂಡವಿರುವದು. ಅವಯವ ರಹಿತವಿರುವದು ಇದರಲ್ಲಿ ಮಾಯೆಯು ಖಂಡ ಬಿದ್ದಂತೆ ಅಂದರೆ ಹೋಳು ತುಂಡು ಭಾಗ ಆದಂತೆ ಭಾಸ ನಿರ್ಮಾಣ ಮಾಡುವಳು. ಮೂಲದಲ್ಲಿ ಯಾವುದು ಇಲ್ಲವೋ ಅದು ಇರುವದು ಅನ್ನುವ ಭಾಸ ನಿರ್ಮಾಣ ಮಾಡುವದೇ ಮಾಯೆಯ ಕೆಲಸವಿರುವದು. ಅಂತೆಯೇ ಮಾಯೆಯ ಸೃಷ್ಟಿ ನಿಜವಿರುವದಿಲ್ಲ. (೪೯)

ಮಾಯಾ ಪಾಹಾತಾ ಮುಳೀ ಚ ನಸೆ। ಪರೀ ಹೇ ಸಾಚಾಐಸೀ ಭಾಸೆ।
ಉದ್ಭವೆ ಆಣಿ ನಿರಸೆ। ಆಭಾಳ ಜೈಸೇ ॥೫೦॥

ಐಸೀ ಮಾಯಾ ಉದ್ಭವಲೀ। ವಸ್ತು ನಿರ್ಗುಣ ಸಂಚಲೀ।
ಅಹಂ ಐಸೀ ಸ್ಫೂರ್ತಿ ಜಾಲೀ। ತೇ ಚಿ ಮಾಯಾ ॥೫೧॥

ಗುಣಮಾಯೇಂಚೆ ಪವಾಡೆ। ನಿರ್ಗುಣೀ ಹೇ ಕಾಹೀ ಚ ನ ಘಡೆ।
ಪರೀ ಹೇ ಘಡೆ ಆಣೀ ಮೋಡೆ। ಸಸ್ವರೂಪೀ ॥೫೨॥

ಜೈಸೀ ದೃಷ್ಟೀ ತರಳಲೀ। ತೇ ಣೇ ಸೇನಾ ಚ ಭಾಸಲೀ।
ಪಾಹಾತಾ ಆಕಾಶೀ ಚ ಜಾಲೀ। ಪರೀ ತೇ ಮಿಥ್ಯಾ ॥೫೩॥

ಮಿಥ್ಯಾ ಮಾಯೇಂಚಾ ಖೇಳ। ಉದ್ಭವ ಬೋಲಿಲಾ ಸಕಳ।
ನಾನಾ ತತ್ತ್ವಾಚಾ ಪಾಲ್ಹಾಳ। ಸಾಂಡೂನಿಯಾ ॥೫೪॥

ತತ್ತ್ವೇ ಮುಳೀ ಚ ಆಹೇತೀ। ವೋಂಕಾರ ವಾಯೋಂಚೀ ಗತೀ।
ತೇಥೀಂಚಾ ಅರ್ಥ ಜಾಣತೀ। ದಕ್ಷ ಜ್ಞಾನೀ ॥೫೫॥

ಮೂಳಮಾಯೇಂಚೇ ಚಳಣ। ತೇ ಚಿ ವಾಯೋಂಚೇ ಲಕ್ಷಣ।
ಸೂಕ್ಷ್ಮ ತತ್ತ್ವೇ ತೇ ಚಿ ಜಾಣ। ಜಡತ್ವಾ ಪಾವಲೀ ॥೫೬॥

ಐಸೀ ಪಂಚಮಹಾಭೂತೇ। ಪೂರ್ವೀ ಹೋತೀ ಅವ್ಯಕ್ತೇ।
ಪುಢೇ ಜಾಲೀ ವ್ಯಕ್ತೇ। ಸೃಷ್ಟಿರಚನೇಸೀ ॥೫೭॥

ಮೂಳ ಮಾಯೇಂಚೇ ಲಕ್ಷಣ। ತೇ ಚಿ ಪಂಚಭೂತಿಕ ಜಾಣ।
ತ್ಯಾಚೀ ಪಾಹೇ ವೊಳಖಣ। ಸೂಕ್ಷ್ಮದೃಷ್ಟೀ ॥೫೮॥

ಆಕಾಶ ವಾಯೋಂವಿಣ। ಇಚ್ಛಾ ಶಬ್ದ ಕರೀ ಕೋಣ।
ಇಚ್ಛಾಶಕ್ತಿ ತೇ ಚಿ ಜಾಣ। ತೇಜ ಸ್ವರೂಪ ॥೫೯॥

ಮೃದಪಣ ತೇ ಚಿ ಜಳ। ಜಡತ್ವ ಪೃಥ್ವೀ ಕೇವಳ।
ಐಸೀ ಮೂಳಮಾಯಾ ಸಕಳ। ಪಂಚಭೂತಿಕ ಜಾಣಾವೀ ॥೬೦॥

ಮಾಯಾ ಮೂಲ ಬ್ರಹ್ಮ ಸ್ವರೂಪದಲ್ಲಿ ಇರುವದಿಲ್ಲ. ಆದರೆ ಇವಳು ನಿಜವಾಗಿಯೂ ಇರುವಳೆಂಬ ಭ್ರಮೆ ಮಾತ್ರ ಉತ್ಪನ್ನವಾಗುವದು. ಆಕಾಶದಲ್ಲಿ ಮೋಡಗಳು ಬರುವವು ಮತ್ತು ಹೋಗುವವು. ಇದರಂತೆಯೇ ಮಾಯಾ ಮೂಲ ಸ್ವರೂಪದಲ್ಲಿ ಕಾಣುವದು ಮತ್ತು ನಾಶವಾಗುವದು. [ಮರೆಯಾಗುವದು]. ಆದರೆ ಮೂಲ ಸ್ವರೂಪಕ್ಕೆ ಇವಳಿಂದ ಯಾವ ಅಪಾಯ, ಅಥವಾ ತೊಂದರೆ ಇಲ್ಲ. (೫೦) ಮೋಡದ ಆವರಣ [ಮುಸುಕು] ದಂತೆ [ತೆರೆಯಂತೆ] ಬ್ರಹ್ಮದಲ್ಲಿ ಮಾಯಾ ನಿರ್ಮಾಣವಾದಳು. ಆದರೆ ಬ್ರಹ್ಮಸ್ವರೂಪವು ಹೇಗಿತ್ತೋ ಹಾಗೆಯೇ ನಿರ್ಗುಣವಿರುವದು. ಬ್ರಹ್ಮದಲ್ಲಿ "ಅಹಂ" ಅನ್ನುವ ಯಾವ ಸ್ಫೂರ್ತಿ ಉಂಟಾಯಿತೋ ಅದೇ ಮಾಯಾ ಇರುವದು. (೫೧) ಗುಣ ಮಾಯೆಯಿಂದ ಎಲ್ಲ ಘಟಾಟೋಪ, ಘಡಾಮೋಡಿ ನಡೆಯುವದು. ಇದಕ್ಕೂ ಮತ್ತು ನಿರ್ಗುಣ ಸ್ವರೂಪಕ್ಕೂ ಏನೂ ಸಂಬಂಧ ಇರುವದಿಲ್ಲ. ಸ್ವಸ್ವರೂಪದಲ್ಲಿ [ಪ್ರಕೃತಿಯಲ್ಲಿ] ಈ ಎಲ್ಲ ಘಡಾಮೋಡಿ ಉಂಟಾಗುವವು. (೫೨) ಯಾವ ಒಬ್ಬ ಮನುಷ್ಯನ ದೃಷ್ಟಿ [ನಜರ] ಚಂಚಲವಾದರೆ ವಿಕಾರ ಹೊಂದಿದರೆ ಆಗ ಅವನಿಗೆ ಆಕಾಶದಲ್ಲಿಯ ಮೋಡದಲ್ಲಿ ನಡೆದಾಡುವ ಸೈನ್ಯದ ದೃಶ್ಯ ಕಾಣುವದು. ಆದರೆ ಅದು ಆಕಾಶದಲ್ಲಿಯ ಮೋಡವು ಎಂದು ತಿಳಿದ ಮೇಲೆ ಎಲ್ಲವೂ ಸುಳ್ಳು (ಖೊಟ್ಟಿ) ಎಂದು ತಿಳಿಯುವದು. (೫೩) ಈ ಪ್ರಕಾರವಾಗಿ ಮಾಯೆಯ ಆಟ ಹೇಗೆ ಮಿಥ್ಯಾ ಇರುವದೆಂಬುದನ್ನು ಈಗ ಹೇಳಿದ್ದಾಯಿತು. ಅನೇಕತತ್ವದ ವಿವೇಚನೆಯನ್ನು ವಿಸ್ತಾರಗೊಳಿಸದೆ ಮಾಯಾ ಹೇಗೆ ಉತ್ಪನ್ನವಾದಳು? ಇದನ್ನು ಸಹ ನಿಮಗೆ ತಿಳಿಯುವಂತೆ ಹೇಳಿದೆನು. (೫೪) ಈವಿಶ್ವವು ಪಂಚಮಹಾಭೂತಗಳಿಂದ ರಚಿಸಲ್ಪಟ್ಟಿದೆ. ಈ ಭೂತ (ತತ್ವ)ಗಳು ಬೀಜ ರೂಪದಿಂದ ಮಾಯೆಯಲ್ಲಿ ಇರುವವು. ಒಂದರೊಳಗಿಂದ ಒಂದು ನಿರ್ಮಾಣವಾಗಿ ಬ್ರಹ್ಮಾಂಡದ ರಚನೆಯಾಗುವದು, ಇದು ಯಾರಿಗೆ ತಿಳಿಯುವದೋ [ತಿಳಿದಿರುವದೋ] ಅವರಿಗೆ ವಿಶ್ವದ ಮಸಾಲೆ[ತತ್ವದ ಸೊಗಸು]ಏನಿರುವದು? ಹೇಗಿರುವದು? ಇದು ತಿಳಿಯುವದು:-"ಅಹಂ" ಈ ಯಾವ ಮೂಲ ಸ್ಫೂರ್ತಿ, ಸ್ಫುರಣ ಇದು ವಾಯುಮಯವಿರುವದು. ಇದೆ ಓಂಕಾರವು ಅಂದರೆ ಪ್ರಣವವು ಇದರಲ್ಲಿ ಪಂಚಮಹಾಭೂತ [ತತ್ವ]ಗಳು ಬೀಜರೂಪದಿಂದ ಇರುವವು. ಇದು ಚತುರನಾದ ಜ್ಞಾನಿ ಪುರುಷನಿಗೆ ಮಾತ್ರ ಸರಿಯಾಗಿ ಗೊತ್ತಿರುವದು. [೫೫] ನಿಶ್ಚಲ ಬ್ರಹ್ಮದಲ್ಲಿ ಯಾವ ಹಾಲಚಾಲ [ಚಲನವಲನ] ಆಗುವದೋ ಅದು ಮೂಲ ಮಾಯಾ ಆಗಿದೆ. ಆ ಚಲನ ಅಂದರೆ (ಅಲ್ಲಾಡು) ಮಿಸುಕಾಡುವಿಕೆ ಇದು ಶಕ್ತಿರೂಪವಿರುವದು. ಶಕ್ತಿಯೇ ವಾಯುವಿನ ಲಕ್ಷಣವಾಗಿದೆ· ವಾಯುವಿನಲ್ಲಿಯ ಶಕ್ತಿಯಿಂದ ಸೂಕ್ಷ್ಮ ತತ್ವಗಳು ಸ್ಥೂಲ ರೂಪವಾಗುವವು. (೫೬) ಪಂಚ ಮಹಾಭೂತಗಳು ಪ್ರಥಮದಲ್ಲಿ ಅವ್ಯಕ್ತವಿದ್ದವು. ಅನಂತರ ವಿಶ್ವರಚನೆಯಾಗುವದಕ್ಕಾಗಿ ಇವು ವ್ಯಕ್ತವಾದವು. (೫೭) ಮೂಲ ಮಾಯೆಯಲ್ಲಿ ವಿಶ್ವ ರಚನೆಯ ಬೀಜ ಇದ್ದದ್ದಾದರೆ ಇವಳಲ್ಲಿಯೇ ಪಂಚ ಮಹಾಭೂತ (ತತ್ವ)ಗಳು ಸೂಕ್ಷ್ಮ ರೂಪದಿಂದ ಇರಲಿಕ್ಕೆ ಸಾಕು. ಯಾರು ಸೂಕ್ಷ್ಮ ವಿಚಾರ ಮಾಡುವರೋ, ಅವರಿಗೆ ಇದು ಲಕ್ಷ್ಯಕ್ಕೆ ಬರುವದು. (೫೮) ಆಕಾಶ ಮತ್ತು ವಾಯು ಈ ತತ್ವಗಳು ಮೂಲ ಮಾಯೆಯಲ್ಲಿ ಇರುವಂಥವಾಗಿವೆ. ಹೇಗೆ ಇರುವವು? ಇದನ್ನು ಹೇಳುವೆ ಕೇಳಿರಿ:– ಶಬ್ದ ಇದು ಆ ಕಾರ್ಯದ ಗುಣವು ಅಂತೆಯೇ "ಅಹಂ" ಅನ್ನುವ ಪ್ರಣವರೂಪದ ಸ್ಫುರಣ "ಓಂ"ಕಾರ ನಾದಸ್ವರೂಪದಿಂದ ಪ್ರಕಟವಾಯಿತು. ಚಲನ, ಹಾಲಚಾಲ, ಮಿಸುಗುವಿಕೆ, ಇದು ವಾಯುವಿನ ಗುಣವು. ಇದರಿಂದ ಅದಕ್ಕೆ "ನಾನು ಒಂದು ಇರುವೆನು, ಅನೇಕ ಆಗಬೇಕು"ಅನ್ನುವ ಇಚ್ಛೆ ಅಥವಾ ಇಚ್ಛಾಶಕ್ತಿ ಹುಟ್ಟಿತು. ಬಲ-ಶಕ್ತಿ ಇದು ತೇಜ (ಪ್ರಕಾಶ)ದ ಗುಣವು ಅಂತೆಯೇ ಇದರ ಇಚ್ಛೆಗೆ ಸಾಮರ್ಥ್ಯ (ಬಲ) ಪ್ರಾಪ್ತವಾಯಿತು. (೫೯) ಈ ಸಾಮರ್ಥ್ಯವು ಜೀವಕ್ಕೆ ತೊಂದರೆ ಕೊಡುವದಿಲ್ಲ. ಇದು ಮೃದುವಾಗಿದೆ. ಮೃದುತನವು ಜಲದ ಗುಣವಾಗಿದೆ· ಮತ್ತು ಈ ಎಲ್ಲ ಆಟವು ಜಡ ದ್ರವ್ಯದ ಆಧಾರದಿಂದ ನಡೆಯುವದು. ಜಡತ್ವವು ಪೃಥ್ವಿಯ ಗುಣವಿರುವದು. ಅಂತೂ ಈ ಪ್ರಕಾರ ಮೂಲ ಮಾಯೆಯಲ್ಲಿ ಪಂಚ ಮಹಾಭೂತಗಳು ಸೂಕ್ಷ್ಮತನದಿಂದ ಮತ್ತು ಅವ್ಯಕ್ತತನದಿಂದ ವಾಸ ಮಾಡುವವು. (೬೦)

ಯೇಕ ಯೇಕ ಭೂತಾ ಪೋಟೀ । ಪಂಚಭೂತಾಂಚೀ ರಾಹಾಟೀ।
ಸರ್ವ ಕಳೆ ಸೂಕ್ಷ್ಮದೃಷ್ಟೀ । ಘಾಲೂನ ಪಾಹಾತಾ ॥೬೧॥

ಪುಢೇ ಜಡತ್ವಾಸ ಆಲೀ । ತರೀ ಅಸತೀ ಕಾಲವಲೀ ।
ಐಸೀ ಮಾಯಾ ವಿಸ್ತಾರಲೀ । ಪಂಚಭೂತಿಕ ॥೬೨॥

ಮೂಳಮಾಯಾ ಪಾಹಾತಾ ಮುಳೀ । ಅಥವಾ ಅವಿದ್ಯಾ ಭೂಮಂಡಳೀ ।
ಸ್ವರ್ಗ ಮೃತ್ಯ ಪಾತಾಳೀ । ಪಾಂಚ ಚಿ ಭೂತೇ ॥೬೩॥

॥ಶ್ಲೋಕ॥ ಸ್ವರ್ಗೇ ಮೃತ್ಯೌ ಪಾತಾಲೆ ವಾ ಯತ್ಕಿಂಚಿತ್ಸಚರಾಚರಂ ।
ಸರ್ವಂ ಪಂಚಭೂತಕಂ ರಾಮ ಷಷ್ಠೇ ಕಿಂಚಿನ್ನದೃಶ್ಯತೆ ॥ಛ॥

ಸತ್ಯ ಸ್ವರೂಪ ಆದಿ ಅಂತೀ । ಮಧ್ಯೇ ಪಂಚಭೂತೇ ವರ್ತತೀ ।
ಪಂಚಭೂತಿಕ ಜಾಣಿಜೆ ಶ್ರೋತೀ । ಮೂಳಮಾಯಾ ॥೬೪॥

ಯೇಥೇ ಉಠಿಲೀ ಆಶಂಕಾ । ಸಾವಧ ಹೋಊನ ಐಕಾ ।
ಪಂಚಭೂತೇ ಜಾಲೀ ಯೇಕಾ । ತಮೋಗುಣಾಪಾಸುನೀ ॥೬೫॥

ಮೂಳಮಾಯಾ ಗುಣಾಪರತೀ । ತೇಥೇ ಭೂತೇ ಕೈಚೀ ಹೋತೀ ।
ಐಸೀ ಆಶಂಕಾ ಹೇ ಶ್ರೋತೀ । ಘೇತಲೀ ಮಾಗಾ ॥೬೬॥

ಐಸೇ ಶ್ರೋತೀ ಆಕ್ಷೇಪಿಲೇ । ಸಂಶಯಾಸ ಉಭೇ ಕೇಲೇ ।
ಯಾಚೇ ಉತ್ತರ ದಿಧಲೇ । ಪುಢಿಲೇ ಸಮಾಸೀ ॥೬೭॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
"ಸೂಕ್ಷ್ಮ ಆಶಂಕಾ" ನಾಮ ಸಮಾಸ ತೃತೀಯು ॥

● ●

ಈ ಪಂಚಮಹಾಭೂತಗಳು ಅವ್ಯಕ್ತವಿದ್ದಾಗ ಆಗಲಿ, ವ್ಯಕ್ತವಿದ್ದಾಗ ಆಗಲೀ ಈ ಐದೂ ಒಂದನ್ನೊಂದು ಬಿಟ್ಟು ಬೇರೆ ಇರುವದಿಲ್ಲ. ಅರ್ಥಾತ್ ಅವುಗಳಿಗೆ ಬೇರೆ ಇರಲಿಕ್ಕೇ ಆಗುವದಿಲ್ಲ. ಯಾಕೆಂದರೆ ಇವು ಒಂದರಲ್ಲೊಂದು ಬೆರೆತುಕೊಂಡಿರುವವು. ವಿಶ್ವರಚನೆಯ ಕಡೆಗೆ ಸೂಕ್ಷ್ಮದೃಷ್ಟಿಯಿಂದ ನೋಡಿದರೆ, ಆಗ ಇದೆಲ್ಲ ನಿಮ್ಮ ಲಕ್ಷ್ಯದಲ್ಲಿ ಬರುವದು. (೬೧) ಪಂಚಮಹಾಭೂತಗಳು ವ್ಯಕ್ತ ಸ್ವರೂಪಕ್ಕೆ ಬಂದ ಮೇಲೆ ಸಹ ಇವು ಒಂದರಲ್ಲೊಂದು ಬೆರೆತು ಕೊಂಡೇ ಇರುವವು. ಈ ಪ್ರಕಾರ ಪಂಚಮಹಾಭೂತಗಳನ್ನು ಹೊಟ್ಟೆಯಲ್ಲಿ ಧರಿಸಿದ ಈ ಮಾಯೆಯಾದ ಸಂಬಂಧವು ವಿಶ್ವದ ತುಂಬೆಲ್ಲ ಪಸರಿಸಿರುವದು. (೬೨) ಮೂಲ ಮಾಯೆಯ ಬುಡದ[ಆತ್ಮದ]ವರೆಗೆ ಹೋಗಿ ನೋಡಿರಿ, ಅಥವಾ ಅವಿದ್ಯಾಮಯವಾದ ಭೂಮಂಡಲದ ಮೇಲೆ ನೋಡಿರಿ,ಅಥವಾ ಸ್ವರ್ಗ, ಮೃತ್ಯು, ಪಾತಾಳದಲ್ಲಿ ಹೋಗಿ ನೋಡಿರಿ ಎಲ್ಲಿನೋಡಿದರೂ ಅಲ್ಲೆಲ್ಲ ಪಂಚಮಹಾಭೂತದ ವಿಸ್ತಾರವೇ ಇರುವದೆಂದು ನಿಮಗೆ ಕಂಡು ಬರುವದು. (೬೩) ಶ್ಲೋಕ:- ಸ್ವರ್ಗೇ ಮೃತ್ಯೌ ಪಾತಾಲೇ ವಾ ಯತ್ಕಿಂಚಿತ್ಸಚರಾಚರಂ।ಸರ್ವ ಪಂಚ ಭೂತಕಂ ರಾಮ ಪಶ್ಯಂ ಕಿಂಚಿನ್ನದೃಶ್ಯತೇ ॥೮॥ ಶ್ಲೋಕಾರ್ಥ:- ರಾಮಾ! ಸ್ವರ್ಗ, ಮೃತ್ಯು ಪಾತಾಳ, ಅಥವಾ ಅಲ್ಪ ಸ್ವಲ್ಪ ಸ್ಥಾವರ ಜಂಗಮದಿಂದ ಕೂಡಿದ ಜಗತ್ತು ಇದೆಲ್ಲವೂ ಪಂಚಭೂತಗಳಿಂದ ತುಂಬಿರುವದು. ಈ ಐದರ ಹೊರತು ಆರನೆಯದಾವುದೂ ಇಲ್ಲ.(೬೪)ಆರಂಭದಲ್ಲಿ ಮತ್ತುಕೊನೆಯಲ್ಲಿ ಸತ್ಯವೆನಿಸುವ ಪರಮಾತ್ಮಸ್ವರೂಪ ಇರುವದು,ಮಧ್ಯ ದಲ್ಲಿ ಮಾತ್ರ ಪಂಚಮಹಾಭೂತಗಳ ಘಡಾಮೋಡಿ ಗೊಂದಲ ನಡೆಯುವದು. ಮೂಲ ಮಾಯಾ ಪಂಚಭೂತಾ ತ್ಮಕವಿರುವದು. ಇದನ್ನು ಶ್ರೋತಾ ಜನ ತಿಳಿದಿರಬೇಕು. ಲಕ್ಷ್ಯದಲ್ಲಿ, ಇಟ್ಟಿರಬೇಕು. ಶ್ರೋತಾರು ಇದರ ಮೇಲೆ ಒಂದು ಶಂಕಾತೆಗೆಯುವರು:- ಈಗ ನಮಗೆ ಒಂದು ಶಂಕಾ ಬಂದಿದೆ ಇದನ್ನು ಹೇಳುವೆ ಲಕ್ಷ್ಯಗೊಟ್ಟು ಕೇಳಬೇಕು. ಒಂದೇ ಒಂದು ತಮೋಗುಣದಿಂದ ಪಂಚಭೂತಗಳು ನಿರ್ಮಾಣವಾಗುವವು. (೬೫) ಮೂಲ ಮಾಯೆಯಲ್ಲಿ ತ್ರಿಗುಣಗಳಿಗೆ ಸ್ಥಾನವೇ ಇಲ್ಲ. ಅಂದಮೇಲೆ ಅಲ್ಲಿ [ತಮೋಗುಣದಲ್ಲಿ] ಪಂಚಭೂತದ ಉಗಮ ಹೇಗಾಯಿತು? ಏಕಾಯಿತು? ಈ ಪ್ರಶ್ನೆಯನ್ನು ಶ್ರೋತಾ ಮೊದಲಿಗೆ ತೆಗೆದನು. (೬೬) ಶ್ರೋತಾ ಈ ಶಂಕೆ ಉತ್ಪನ್ನ ಮಾಡಿ ನಮ್ಮ ಮುಂದೆ ಇಟ್ಟಿದ್ದಾನೆ. ನಾವು ಮುಂದಿನ ಸಮಾಸದಲ್ಲಿ ಇದಕ್ಕೆ ಉತ್ತರವನ್ನು ಕೊಟ್ಟಿರುವೆವು. (೬೭)

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಎಂಟನೆಯ
ದಶಕದ "ಸೂಕ್ಷ್ಮ ಆಶಂಕಾ ನಿರೂಪಣ"ವೆಂಬ ಮೂರನೆಯ ಸಮಾಸವು ಮುಗಿಯಿತು.

● ●

### ಸಮಾಸ ಚತುರ್ಥ : ಸೂಕ್ಷ್ಮ ಪಂಚಭೂತೆ ನಿರೂಪಣ

॥ಶ್ರೀರಾಮ॥ ಮಾಗೀಲ ಆಶಂಕೇಚೇ ಮೂಳ। ಆತಾ ಹೋಈಲ ಪ್ರಾಂಜಳ।
ವೃತ್ತಿ ಕರಾವೀ ನಿವಳ। ನಿಮಿಷ್ಯ ಯೇಕ ॥೧॥

ಬ್ರಹ್ಮೀ ಮೂಳಮಾಯಾ ಜಾಲೀ। ತಿಚ್ಯಾ ಪೋಟಾ ಮಾಯಾ ಆಲೀ।
ಮಗ ತೇ ಗುಣ ಪ್ರಸವಲೀ। ಮ್ಹಣೌನಿ ಗುಣಕ್ಷೋಭಿಣೀ ॥೨॥

## ದಶಕ ೮. ಸಮಾಸ ೪. ''ಸೂಕ್ಷ್ಮಭೂತೆ'' ನಿರೂಪಣ

ಶುದ್ಧ, ನಿರ್ಮಲ, ನಿತ್ಯ, ಮತ್ತು ಪರಿಪೂರ್ಣವಿರುವ ಬ್ರಹ್ಮದ ಹೊರತಾಗಿ ಎರಡನೆಯದು ಅದು ಯಾವುದೂ ನಿಜ ಅಸ್ತಿತ್ವ ಹೊಂದಿರುವದಿಲ್ಲ. ಯಾವುದು ಇದೆಯೋ ಅದೆಲ್ಲವೂ ಪರಬ್ರಹ್ಮವೇ ಇರುವದು. ಆದರೆ ಪರಬ್ರಹ್ಮವು ಬರ್ಫದ ಗುಡ್ಡದಂತೆ ತಣ್ಣಗೆ, ಶಾಂತ, ಮತ್ತು ನಿರ್ಜೀವವಲ್ಲ. ಇದು ಜೀವಂತವಿರುವದು. ಇದರಲ್ಲಿ ಅನಂತಶಕ್ತಿಗಳು ಇರುವವು ಇವು ಬ್ರಹ್ಮರೂಪವಿರುವವು. ಇದರ ಪೈಕಿ ಒಂದು ವಿಲಕ್ಷಣ ಶಕ್ತಿಯು ಪರಬ್ರಹ್ಮದ ಒಂದು ಅಲ್ಪಭಾಗದಲ್ಲಿ ಉದಯ ಹೊಂದಿತು. ಇವಳಿಂದ [ಶಕ್ತಿಯಿಂದ] ಆ ಭಾಗದಲ್ಲಿ ಅಹಂ ಅನ್ನುವ ಸ್ಫುರಣ ವಾಯಿತು. ಇದಕ್ಕೆ ಮೂಲ ಮಾಯಾ ಎಂದು ಅನ್ನುವರು. ಮೂಲ ಮಾಯೆಯನ್ನು ಹೊಂದಿ [ತೆಗೆದುಕೊಂಡು] ಅನುಭವಕ್ಕೆ ಬರುವ ಬ್ರಹ್ಮವು ಈಶ್ವರವಿರುವದು. ಬ್ರಹ್ಮದಂತೆಯೇ ಎಲ್ಲ ಕಡೆಗೂ ಈಶ್ವರನು ವ್ಯಾಪಿಸಿರುವನು. ಈ ಈಶ್ವರನಲ್ಲಿಯೇ ವಿಶ್ವವು ಕಾಣುವದು, ಇರುವದು, ಮತ್ತು ಕೊನೆಗೆ ಮಾಯೆಯಾಗುವದು. ಒಬ್ಬನೇ ಇರುವ ಈಶ್ವರನು ಅನೇಕವಾಗಿ ಭಾಸವಾಗುವನು [ತೋರುವನು]. ಆದರೆ ಅವನು ಅನೇಕವಾಗಿ ಭಾಸವಾದರೂ ಅವನ ಏಕತ್ವಕ್ಕೆ ಭಂಗ ಬರುವದಿಲ್ಲ. ಆದರೆ ಇದೆಲ್ಲ ಭಾಸವು ಮೂಲ ಮಾಯೆಯ ಆಟವಿರುವದು.ಆಟ ಆಡಲು ಮೂಲ ಮಾಯೆಯು ಒಂದು ಕಡೆಗೆ ಅನಂತ ಜೀವಗಳನ್ನು ಉತ್ಪನ್ನ ಮಾಡುವಳು.ಅದೇ ಇನ್ನೊಂದು ಕಡೆಗೆ ತ್ರಿಗುಣಗಳಿಂದ ಪಂಚಮಹಾಭೂತಗಳನ್ನು ತಯಾರಿಸುವಳು. ಜೀವವೇ ಇರಲಿ, ಜಡ ದ್ರವ್ಯರೂಪದ ಪಂಚಭೂತವೇ ಇರಲಿ ಯಾವುದಿದ್ದರೂ ಕೊನೆಯಲ್ಲಿ ಎಲ್ಲವೂ ಈಶ್ವರರೂಪ ಅಥವಾಬ್ರಹ್ಮಮಯವೇ ಇರುವದು. ಈಶ್ವರನು ಜ್ಞಾನಿಯಾಗಿರುವನು ಜೀವವು ಅಜ್ಞಾನಿ ಇರುವದು. ಈಶ್ವರನು ಸ್ವಸ್ವರೂಪವನ್ನು ಎಂದೂ ಮರೆಯುವದಿಲ್ಲ. ಅದೇ ಜೀವವು ಸ್ವಸ್ವರೂಪವನ್ನು ಗುರುತಿಸುವದಿಲ್ಲ ಈಶ್ವರನು ಅನ್ನುವದೇನಂದರೆ, ಇಡೀ ವಿಶ್ವವು ನನ್ನಲ್ಲಿಯೇ ಇರುವದು. ಅದೇ ಜೀವವು ಅನ್ನುವದೇನಂದರೆ, ನಾನು ವಿಶ್ವದಲ್ಲಿ ಇರುವೆನು. ಈಶ್ವರನು ಎಷ್ಟು ದೊಡ್ಡವನಿರುವನೆಂದರೆ ಇವನಲ್ಲಿ ವಿಶ್ವದ ಪತ್ತೆಯೇ ಹತ್ತುವದಿಲ್ಲ. ಆದರೆ ಅದೇ ಜೀವ ಎಷ್ಟೊಂದು ಸಣ್ಣದಿವೆಯೆಂದರೆ ವಿಶ್ವದಲ್ಲಿ ಜೀವದ ಪತ್ತೆಯೇ ಆಗುವದಿಲ್ಲ. ಯಾವಾಗಲೂ ಆನಂದದಿಂದ ತುಂಬಿದವನಾದ ಈಶ್ವರನು ಆಪ್ತ ಕಾಮ ಎಂದರೆ ಯಾವನ ವಾಸನಾ ಸದೈವ [ಯಾವಾಗಲೂ] ತೃಪ್ತವಾಗಿಯೇ ಇರುವವೋ ಅಂಥವನು ಆಪ್ತಕಾಮಿ ಅನಿಸುವನು. ಆದರೆ ಅದೇ ಸದೈವ ಭಯದಿಂದ ವ್ಯಾಕುಲವಾಗುವ ಜೀವವು ಅತೃಪ್ತಕಾಮವು ಅಂದರೆ ಯಾವನ ವಾಸನಾ ಸದೈವ (ಸದೈವ) ಅತೃಪ್ತವಿರುವದೋ ಅಂಥವನು ಅತೃಪ್ತಕಾಮೀ ಎನಿಸುವನು. ಮೂಲ ಮಾಯೆಯಿಂದ ಮಾಯಾ ನಿರ್ಮಾಣ ಹೊಂದುವಳು. ಮತ್ತು ಇವಳು ತ್ರಿಗುಣಗಳಿಂದ ಈ ದೃಶ್ಯ ವಿಶ್ವನಿರ್ಮಾಣ ಮಾಡುವಳು. ಈ ವಿಶ್ವದ ಬಾಹ್ಯ ದೃಶ್ಯದ ನೋಟ, ಆಡಂಬರ-ಡೌಲು ಪಂಚಭೂತಾತ್ಮಕವಿರುವದು. ಸರ್ವ ಭೂತಗಳು ಒಂದರಲ್ಲೊಂದು ಕೂಡಿದ ಮಿಶ್ರಣವಾಗಿದೆ. (ಕಲಿಸಿದಂತೆ ಆಗಿವೆ).ಸರ್ವ ಜೀವಗಳಿಗೂ ಇದೇ ವಿಶ್ವದಲ್ಲಿ ಇರಬೇಕಾಗುವದು.

### ದಶಕ ೮ : ಸಮಾಸ ೪ : ಸೂಕ್ಷ್ಮ ಪಂಚಭೂತ ನಿರೂಪಣ [ನುಡಿ ೬೦]

ಮಾಯೆಯಲ್ಲಿಯೇ ದೃಶ್ಯವಿಶ್ವದ ಬೀಜವಿರಲಿಕ್ಕೆ ಬೇಕು. ಮೂಲ ಮಾಯಾದಿಂದ ಮಾಯಾ ಉದಯ ಹೊಂದುವಳು. ಇವಳಿಂದ ತ್ರಿಗುಣ (ಸತ್ವ, ರಜ, ತಮ)ಗಳು ಪ್ರಕಟಗೊಂಡವು. ಇದರಲ್ಲಿಯ ತಮೋ ಗುಣದಿಂದ ಪಂಚಭೂತಗಳು ಉದಯವಾದವು. ಈ ಪಂಚಭೂತಗಳ ಮಿಶ್ರಣದಿಂದ ದೃಶ್ಯವಿಶ್ವವು ಆಕಾರ ಹೊಂದಿತು. ಶ್ರೋತಾರು ಹಿಂದೆ ಯಾವ ಶಂಕಾ ತೆಗೆದಿದ್ದರೋ ಅದರ ಮೂಲವನ್ನು ಈಗ ಸ್ಪಷ್ಟಗೊಳಿಸುವೆವು. ಆದ್ದರಿಂದ ನೀವು ನಿಮ್ಮ ವೃತ್ತಿಯನ್ನು ಕ್ಷಣಹೊತ್ತು ಸ್ಥಿರಗೊಳಿಸಿ ಸ್ವಚ್ಛವಾಗಿರಿ. (೧) ಪರಬ್ರಹ್ಮದಲ್ಲಿ ಮೂಲ ಮಾಯೆ ಉತ್ಪನ್ನವಾದಳು. ಇವಳ ಹೊಟ್ಟೆಯಲ್ಲಿ ಮಾಯಾಜನ್ಮ ಹೊಂದಿದಳು. ಮತ್ತು ಮಾಯೆಯು ತ್ರಿಗುಣಗಳಿಗೆ ಜನ್ಮ ಕೊಟ್ಟಳು. ಅದ್ದರಿಂದ ಇವಳಿಗೆ **ಗುಣಕ್ಷೋಭಿಣಿ** ಅನ್ನುವರು. (೨)

ಪುಢೇ ತಿಜಪಾಸಾವ ಕೋಣ । ಸತ್ವರಜ ತಮೋಗುಣ ।
ತಮೋಗುಣಾಪಾಸೂನ ನಿರ್ಮಾಣ । ಜಾಲೀ ಪಂಚಭೂತೇ ॥೩॥
ಐಸೀ ಭೂತೇ ಉದ್ಭವಲೀ । ಪುಢೇ ತತ್ವೇ ವಿಸ್ತಾರಲೀ ।
ಏವಂ ತಮೋಗುಣಾಪಾಸೂನ ಜಾಲೀ । ಪಂಚಮಹಾಭೂತೇ ॥೪॥
ಮೂಳಮಾಯಾ ಗುಣಾಪರತೀ । ತೇಥೇ ಭೂತೇ ಕೈಚೀ ಹೋತೀ ।
ಐಸೀ ಆಶಂಕಾ ಹೇ ಶ್ರೋತೀ । ಘೇತಲೀ ಮಾಗಾ ॥೫॥
ಆಣೀಕ ಯೇಕ ಯೇಕೇ ಭೂತೀ । ಪಂಚಭೂತೇ ಅಸತೀ ।
ತೇ ಹಿ ಆತಾ ಕೈಸೀ ಸ್ಥಿತೀ । ಪ್ರಾಂಜಳ ಕರೂ ॥೬॥
ಸೂಕ್ಷ್ಮ ದೃಷ್ಟೀಚೇ ಕೌತುಕ । ಮೂಳಮಾಯಾ ಪಂಚಭೂತಿಕ ।
ಶ್ರೋತೀ ವಿಮಳ ವಿವೇಕ । ಕೇಲಾ ಪಾಹಿಜೆ ॥೭॥
ಆಧೀ ಭೂತೇ ತೀ ಜಾಣಾವೀ । ರೂಪೇ ಕೈಸೀ ವೋಳಖಾವೀ ।
ಮಗ ತೇ ಶೋಧೂನ ಪಾಹಾವೀ । ಸೂಕ್ಷ್ಮದೃಷ್ಟೀ ॥೮॥
ವೋಳಖೀ ನಾಹೀ ಅಂತರೀ । ತೇ ವೋಳಖಾವೀ ಕೋಣೇಪರೀ ।
ಮ್ಹಣೋನಿ ಭೂತಾಂಚೀ ವೋಳಖೀ ಚತುರೀ । ನಾವೇಕ ಪರಿಸಾವೀ ॥೯॥
ಜೇ ಜೇ ಜಡ ಆಣೀ ಕಠಿಣ । ತೇ ತೇ ಪೃಥ್ವೀಚೇ ಲಕ್ಷಣ ।
ಮೃದ ಆಣೀ ವೋಲೇಪಣ । ತಿತುಕೇ ಆಪ ॥೧೦॥
ಜೇ ಜೇ ಉಷ್ಣ ಆಣೀ ಸತೇಜ । ತೇ ತೇ ಜಾಣಾವೇ ಪೈ ತೇಜ ।
ಆತಾ ವಾಯೋ ಹಿ ಸಹಜ । ನಿರೋಪಿಜೇಲ ॥೧೧॥
ಚೈತನ್ಯ ಆಣೀ ಚಂಚಳ । ತೋ ಹಾ ವಾಯೋ ಚಿ ಕೇವಳ।
ಸುನ್ಯ ಆಕಾಶ ನಿಶ್ಚಳ । ಆಕಾಶ ಜಾಣಾವೇ ॥೧೨॥
ಐಸೀ ಪಂಚಮಹಾಭೂತೇ । ವೋಳಖೀ ಧರಾವೀ ಸಂಕೇತೇ ।
ಆತಾ ಯೇಕೀ ಪಾಂಚಭೂತೇ । ಸಾವಧ ಐಕಾ ॥೧೩॥
ಜೇ ತ್ರಿಗುಣಾಹೂನಿ ಪರ । ತ್ಯಾಚಾ ಸೂಕ್ಷ್ಮ ವಿಚಾರ ।
ಯಾಲಾಗೀ ಅತಿ ತತ್ಪರ । ಹೋಊನ ಐಕಾ ॥೧೪॥
ಸೂಕ್ಷ್ಮ ಆಕಾಶೀ ಕೈಸೀ ಪೃಥ್ವೀ । ತೇ ಚಿ ಆಧೀ ನಿರೋಪಾವೀ।
ಯೇಥೇ ಧಾರಣಾ ಧರಾವೀ । ಶ್ರೋತೇ ಜನೀ ॥೧೫॥
ಆಕಾಶ ಮ್ಹಣಿಜೆ ಅವಕಾಶ ಸುನ್ಯ । ಸುನ್ಯ ಮ್ಹಣಿಜೆ ತೇ ಅಜ್ಞಾನ ।
ಅಜ್ಞಾನ ಮ್ಹಣಿಜೆ ಜಡತ್ವ ಜಾಣ । ತೇ ಚಿ ಪೃಥ್ವೀ ॥೧೬॥

ಮಾಯೆಯಿಂದ ಯಾರುಯಾರು ಆದರು ಎಂದರೆ ಸತ್ವ, ರಜ, ಮತ್ತು ತಮ ಎನ್ನುವ ಹೆಸರಿನ ಗುಣದವರು ಆದರು. ಅದರಲ್ಲಿಯು ತಮೋ ಗುಣದಿಂದ ಪಂಚಭೂತಗಳ ನಿರ್ಮಾಣವಾಯಿತು. (೩) ಈ ಪ್ರಕಾರ ಪಂಚಭೂತಗಳು ಹುಟ್ಟಿದವು. ಆಮೇಲೆ ಇವುಗಳು ವಿಸ್ತಾರ ಹೊಂದಿದವು. ಸ್ವಲ್ಪದರಲ್ಲಿ ಹೇಳುವದಾದರೆ ತಮೋ ಗುಣದಿಂದ ಪಂಚಮಹಾಭೂತಗಳು ನಿರ್ಮಾಣವಾದವು. (೪) ಮೂಲ ಮಾಯಾ ತ್ರಿಗುಣದ ಆಚೆಗೆ ಇರುವದಾದರೆ ಇವುಗಳಿಂದ ಪಂಚಮಹಾಭೂತಗಳು ಉತ್ಪನ್ನವಾಗುವದು. ಅದು ಹೇಗೆ ಶಕ್ಯವಿದೆ? ಅನ್ನುವ ಶಂಕೆಯನ್ನು ಶ್ರೋತಾ ಇದಕ್ಕೂ ಪೂರ್ವದಲ್ಲಿ ತೆಗೆದಿದ್ದನು. (೮-೩-೬೩ರಿಂದ೬೬ ನೋಡಿರಿ) (೫) ಇನ್ನು ಒಂದು ಮುದ್ದೆ (ಶಂಕಾ) ಇರುವದು. ಅದೇನಂದರೆ ಪ್ರತಿಯೊಂದು ಭೂತದಲ್ಲಿ ಉಳಿದ ಭೂತಗಳು ಇರುವವು. ಇವುಗಳ ಸ್ಥಿತಿ ಹೇಗೆ ಇರುವದು? ಇದನ್ನೂ ಸಹ ಈಗ ನಿಮಗೆ ಸ್ಪಷ್ಟವಾಗಿ ತಿಳಿಯುವಂತೆ ಹೇಳುವೆವು.(೬) ಅತ್ಯಂತ ಸೂಕ್ಷ್ಮ ವಿಚಾರ ಮಾಡಿದ್ದಾದರೆ ಮೂಲ ಮಾಯೆಯಲ್ಲಿ ಪಂಚಭೂತಗಳ ಅಸ್ತಿತ್ವವು ಬೀಜರೂಪದಿಂದ ಇರುವದೆಂಬ ಮಾತಿನ ಖರೇತನವು ಮನದಟ್ಟಾಗುವದು. ಶ್ರೋತಾಜನ ಸ್ವಚ್ಛ ವ ಸೂಕ್ಷ್ಮ ವಿಚಾರದಿಂದ ವಿವೇಕದಿಂದ ಪ್ರಯತ್ನಿಸಬೇಕು. (೭) ಈಗ ಪಂಚ ಮಹಾಭೂತಗಳು ಯಾವವು? ಇದನ್ನು ಮೊದಲಿಗೆ ತಿಳಿಯಿರಿ. ಪ್ರತಿಯೊಂದರ ರೂಪವೆಂತದು ಇದನ್ನೂ ತಿಳಿದುಕೊಳ್ಳಿರಿ. ಆಮೇಲೆ ಸೂಕ್ಷ್ಮ ವಿಚಾರ ಮಾಡಿ ಜ್ಞಾನ ದೃಷ್ಟಿಯಿಂದ ಇವನ್ನು ಶೋಧಿಸಿ ತಿಳಿಯಿರಿ. (೮) ಎಲ್ಲಿಯವರೆಗೆ ಭೂತಗಳ ಲಕ್ಷಣಾದಿಗಳ ಜ್ಞಾನವು ನಮ್ಮ ಅಂತರಂಗದಲ್ಲಿ ಇಲ್ಲವೋ ಅಲ್ಲಿಯವರೆಗೆ ಇವುಗಳನ್ನು ಗುರುತಿಸಿ ಶೋಧಿಸಲಿಕ್ಕೆ ಬರುವದಿಲ್ಲ. ಆದ್ದರಿಂದ ಜಾಣರಾದವರು ಭೂತಗಳ ಬಗೆಗೆ ಹೇಗೆ ಶೋಧಿಸಿ ತಿಳಿಯಬೇಕೆಂಬುದನ್ನು ಹೇಳುವೆವು. ಕ್ಷಣ ಹೊತ್ತು ಏಕಚಿತ್ತದಿಂದ ಕೇಳಿರಿ. (೯) ಪಂಚಭೂತಗಳ ವಿಸ್ತಾರ (ವ್ಯಾಪಕ) ಲಕ್ಷಣಗಳ ಬಗೆಗೆ ಈಗ ಹೇಳುವರು.ಈ ಲಕ್ಷಣಗಳ ಮೇಲಿಂದ ವಿಚಾರ ಮಾಡಿದರೆ ನಿಮಗೆ ಆಗ ಸರ್ವ ಚರಾಚರ ವಿಶ್ವವು ಪಂಚ ಭೂತಗಳಿಂದ ಹೆಣೆಯಲ್ಪಟ್ಟಿದೆ ಎಂದು ಮನಸ್ಸಿಗೆ ಖಾತ್ರಿಯಾಗುವದು:- ಯಾವ ಯಾವುದು ಕಠಿಣ ಮತ್ತು ಜಡ ಇರುವದೋ ಅದೆಲ್ಲವೂ ಪೃಥ್ವಿಯ ಲಕ್ಷಣವು ಮತ್ತು ಯಾವ ಯಾವುದು ಮೃದು (ಮೆತ್ತಗೆ) ಹಾಗೂ ಹಸಿ ಇರುವದೋ ಅದೆಲ್ಲವೂ ನೀರಿನ [ಜಲದ] ಲಕ್ಷಣವೆಂದು ತಿಳಿಯಬೇಕು. (೧೦) ಯಾವ ಯಾವುದು ಬಿಸಿ ಸುಡುಸುಡು ಮತ್ತು ಪ್ರಕಾಶಯುಕ್ತವಿರುವದೋ ಅದೆಲ್ಲ ತೇಜದ [ಅಗ್ನಿಯ] ಲಕ್ಷಣವಿರುವದು. ಈಗ ವಾಯುವಿನ ಲಕ್ಷಣ ಹೇಳುವೆವು. (೧೧) ಜೀವಂತತನ ಮತ್ತು ಹಾಲಚಾಲ (ಚಲನವಲನ) ಇದು ವಾಯುವಿನ ಲಕ್ಷಣವಿರುವದು. ಮತ್ತು ಪೋಕಳ (ಪೊಳ್ಳು, ರಿಕಾಮಿ, ಶೂನ್ಯ)ತನ ಮತ್ತು ಅವಕಾಶ [ಅಂತರ] ಸ್ತಬ್ಧತೆ [ನಿಶ್ಚಲತನ] ಇವು ಆಕಾಶದ ಲಕ್ಷಣಗಳು. (೧೨) ಪಂಚಮಹಾಭೂತ[ತತ್ವ]ಗಳ ಲಕ್ಷಣಗಳು ಸ್ವಲ್ಪದರಲ್ಲಿ ಹೀಗಿರುವವು.ಇದರ ಮೇಲಿಂದ ಗುರುತಿಸಿ ಭೂತಗಳನ್ನು ತಿಳಿಯಬೇಕು. ಶೋಧಿಸಿ ತೆಗೆಯಬೇಕು. ಇರಲಿ, ಈಗ ಒಂದು ಭೂತದಲ್ಲಿ ಇತರ ಭೂತಗಳು ಹೇಗೆ ವಾಸಿಸುವವೆಂಬುದನ್ನು ತಿಳಿಸುವೆನು.ಲಕ್ಷ್ಯಗೊಟ್ಟು ಕೇಳಬೇಕು. (೧೩) ಯಾವುದು ತ್ರಿಗುಣದ ಆಚೆಗೆ ಇರುವದೋ ಅದರ ವಿಚಾರ ಅರ್ಥಾತ್ ಅದು ಸೂಕ್ಷ್ಮವೇ ಇರಲಿಕ್ಕೆ ಸಾಕು. ಆದ್ದರಿಂದ ಈಗ ನಾನು ಏನನ್ನೂ ಹೇಳುವೆನೋ ಅದನ್ನು ಶ್ರೋತಾಜನ ಅತ್ಯಂತ ಮನಗೊಟ್ಟು ಕೇಳಬೇಕು. (೧೪) ಆಕಾಶವು ಅತ್ಯಂತ ಸೂಕ್ಷ್ಮವಿದೆ ಹಾಗೂ ಪೃಥ್ವಿಯು ಅತ್ಯಂತ ಸ್ಥೂಲ ಮತ್ತು ಜಡ (ಕಠಿಣ)ವಿರುವದು. ಇಂಥ ಸೂಕ್ಷ್ಮ ಆಕಾಶದಲ್ಲಿ ಜಡ(ಕಠಿಣ)ವಾಗಿರುವ ಪೃಥ್ವಿಯು ಹೇಗೆ ಕಾಣಿಸಿಕೊಂಡಿತು? ಅನ್ನುವದನ್ನು ಈಗ ಮೊದಲು ತಿಳಿಸುವೆನು, ಏಕಾಗ್ರದಿಂದ ಕೇಳಿರಿ. (೧೫) ಆಕಾಶ ಅಂದರೆ ಕೇವಲ ಅವಕಾಶ ಅಥವಾ ಶೂನ್ಯಮಯವಿರುವದು. ಪೋಕಳ(ಪೊಳ್ಳು)ಮತ್ತು ಮಿಲ್ಲಾ (ರಿಕಾಮಿ) ಜಾಗಾ ಶೂನ್ಯಮಯ ಅಂದರೆ ಅಜ್ಞಾನವು. ಅಜ್ಞಾನ ಅಂದರೆ ಜಡತ್ವವು ಅರ್ಥಾತ್ ಜಡತ್ವ ಇವೇ ಪೃಥ್ವಿ ಎಂದು ತಿಳಿಯಬೇಕು. (೧೬)

ಆಕಾಶ ಸ್ವಯೇಂ ಆಹೆ ಮೃದ। ತೇ ಚಿ ಆಪ ಸ್ವತಸಿದ್ಧ।
ಆತಾ ತೇಜ ತೇ ಹಿ ವಿಶದ। ಕರೂನ ದಾವೂ ॥೧೭॥
ಅಜ್ಞಾನೇ ಭಾಸಲಾ ಭಾಸ। ತೋ ಚಿ ತೇಜಾಚಾ ಪ್ರಕಾಶ।
ಆತಾ ವಾಯೋ ಸಾವಕಾಶ। ಸಾಕಲ್ಯ ಸಾಂಗೋ ॥೧೮॥
ವಾಯು ಆಕಾಶಾ ನಾಹೀ ಭೇದ। ಆಕಾಶಾಇತುಕಾ ಅಸೆ ಸ್ತಬ್ಧ।
ತಥಾಪಿ ಆಕಾಶೀ ಜೋ ನಿರೋಧ। ತೋ ಚಿ ವಾಯೋ ॥೧೯॥
ಆಕಾಶೀ ಆಕಾಶ ಮಿಸಳಲೇ। ಹೇ ತೋ ನಲಗೆ ಕೀ ಬೋಲಿಲೇ।
ಯೇಣೇ ಪ್ರಕಾರೇ ನಿರೋಪಿಲೇ। ಆಕಾಶ ಪಂಚಭೂತ ॥೨೦॥
ವಾಯೋ ಮಧ್ಯೇ ಪಂಚಭೂತೇ। ತೇ ಹಿ ಏಕಾ ಯೇಕಚಿತ್ತೇ।
ಬೋಲಿಜೇತೀ ತೇ ಸಮಸ್ತೇ। ಯಥಾನ್ವಯೇ ॥೨೧॥
ಹಳು ಫೂಲ ತರೀ ಜಡ। ಹಳು ವಾರಾ ತರೀ ನಿಬಿಡ।
ವಾಯೋ ಲಾಗತಾ ಕಡಾಡ। ಮೋಡತೀ ಝಾಡೇ ॥೨೨॥
ತೊ ಲೇವಿಣ ಝಾಡ ಮೋಡೆ। ಏಸೇ ಹೇ ಕಾಹೀ ಚ ನ ಘಡೆ।
ತೋಲ ತೋ ಚಿ ತಯೆ ಜಡೆ। ಪೃಥ್ವೀಚಾ ಅಂಶ ॥೨೩॥
ಯೇಥೇ ಶ್ರೋತೇ ಆಶಂಕಾ ಘೇತೀ। ತೇಥೇ ಕೈಚೀ ಝಾಡೇ ಹೊತೀ।
ಝಾಡೇ ನವ್ಹತೀ ತರೀ ಶಕ್ತೀ। ಕಠಿಣರೂಪ ಆಹೆ ॥೨೪॥
ವನ್ಹೀ ಸ್ಫುಲಿಂಗ ಲಾಹಾನ। ಕಾಹೀ ತರ್ಹೀ ಅಸೆ ಉಷ್ಣ।
ತೈಸೇ ಸೂಕ್ಷ್ಮೀ ಜಡಪಣ। ಸೂಕ್ಷ್ಮರೂಪೇ ॥೨೫॥
ಮೃದಪಣ ತೇ ಚಿ ಆಪ। ಭಾಸ ತೇಜಾಚೇ ಸ್ವರೂಪ।
ವಾಯೋ ತೇಥೇ ಚಂಚಳರೂಪ। ಸಹಜ ಚಿ ಆಹೆ ॥೨೬॥
ಸಕಳಾಸ ಮಿಳೋನ ಆಕಾಶ। ಸಹಜಚಿ ಆಹೆ ಅವಕಾಶ।
ಪಂಚಭೂತಾಚೇ ಅಂಶ। ವಾಯೋಮಧೇ ನಿರೋಪಿಲೆ ॥೨೭॥
ಆತಾ ತೇಜಾಚೇ ಲಕ್ಷಣ। ಭಾಸಲೇಪಣ ತೇ ಕಠಿಣ।
ತೇಜೀ ಏಸೀ ವೊಳಖಣ। ಪೃಥ್ವೀಯೆಚೀ ॥೨೮॥
ಭಾಸಲಾ ಭಾಸ ವಾಟೆ ಮೃದ। ತೇಜೀ ಆಪ ತೇ ಚಿ ಪ್ರಸಿದ್ಧ।
ತೇಜೀ ತೇಜ ಸ್ವತಸಿದ್ಧ। ಸಾಂಗಣೇ ಚಿ ನಲಗೆ ॥೨೯॥
ತೇಜೀ ವಾಯೋ ತೋ ಚಂಚಳ। ತೇಜೀ ಆಕಾಶ ನಿಶ್ಚಳ।
ತೇಜೀ ಪಂಚಭೂತೇ ಸಕಳ। ನಿರೋಪಿಲೀ ॥೩೦॥

ಆಕಾಶವು ಸ್ವತಃ ಬಹಳ ಮೃದು ಇರುವದು. ಈ ಮೃದುತನವೇ ಆಕಾಶದಲ್ಲಿಯ ನೀರು (ಜಲ)ಎನಿಸುವದು. ಈಗ ಆಕಾಶದಲ್ಲಿ ತೇಜ ಹೇಗೆ ಅದೆ. ಅದನ್ನು ಸ್ಪಷ್ಟೀಕರಿಸಿ ಹೇಳುವೆನು. (೧೭) ಅಜ್ಞಾನದಿಂದ ಯಾವುದು ಭಾಸವಾಗುವದೋ (ತಿಳಿಯುವದು, ಸ್ಫುರಿಸುವದು) ಅದೇ ತೇಜದ (ಅಗ್ನಿಯ) ಪ್ರಕಾಶವೆನಿಸುವದು. ಅಜ್ಞಾನದಿಂದ ಯಾವ ವ್ಯವಹಾರ ಆಗುವದೋ ಅದೆಲ್ಲವೂ ಅವಕಾಶದಲ್ಲಿಯೇ ಆಗುತ್ತದೆ. (ಆಕಾಶದಲ್ಲಿಯೇ ಆಗುವದು). ಈಗ ವಾಯುವಿನ ರೂಪ ಹೇಳುವೆನು. (೧೮) ವಾಯು ಮತ್ತು ಆಕಾಶ ಇವುಗಳಲ್ಲಿ ಭೇದವಿಲ್ಲ. ವಾಯುವು ಆಕಾಶದಂತೆ ಸ್ತಬ್ಧವಿರುವದು. ಆದರೆ ಆಕಾಶದಲ್ಲಿ ಯಾವ ಪ್ರತೀಕಾರ ವಿರೋಧ ಮತ್ತು ಸೂಕ್ಷ್ಮ ಪ್ರತಿಬಂಧ ಅಥವಾ ಸೂಕ್ಷ್ಮ ಅಡಥಳ, ಅಡ್ಡಿ ಅನುಭವಕ್ಕೆ ಬರುವದೋ ಅದೇ ವಾಯುವಿರುವದು. (೧೯) ಆಕಾಶವು ಆಕಾಶದಲ್ಲಿ ಕೂಡಿಕೊಳ್ಳುವದು. ಇದನ್ನು ಪ್ರತ್ಯೇಕಿಸಿ ಹೇಳಬೇಕಾಗಿಲ್ಲ. ಈ ಪ್ರಕಾರ ಆಕಾಶದಲ್ಲಿ ಇತರ ಭೂತಗಳು ಹೇಗೆ ಇರುವವು, ಇದರ ವಿವೇಚನೆ ಮಾಡಿದ್ದಾಯಿತು. (೨೦) ವಾಯುವಿನಲ್ಲಿ ಇತರ ಭೂತಗಳು ಹೇಗೆ ಇರುವವೆಂಬುದನ್ನು ಈಗ ತಿಳಿಸಿ ಕೊಡುವೆನು. ಇದನ್ನು ಕ್ರಮದಿಂದ ಹೇಳುವೆನು. ಲಕ್ಷ್ಯಗೊಟ್ಟು ಕೇಳಿರಿ. (೨೧) ಹೂವು ಹಗುರವಾಗಿದ್ದರೂ ಅದಕ್ಕ ಒಂದು ತೂಕ, ಭಾರ ಇರುತ್ತದೆ. ಇದರಂತೆ ಗಾಳಿ [ವಾಯು] ಹಗುರಾಗಿದ್ದರೂ ಅದಕ್ಕೆ ಘನತ್ವ [ಗಟ್ಟಿತನ, ದಟ್ಟತನ] ಇರುವದು. ಕಠಿಣ [ಬಿರುಸು]ತನವಿರುವದು. ಅಂತೆಯೇ ಬಿರುಸಿನಿಂದ ಬೀಸುವ ಗಾಳಿಗೆ ಗಿಡಗಳು ಕಟ್‌ಕಟಲ್ ಎಂದು ಮುರಿದು ಬೀಳುವವು. (೨೨) ವಜನ,-ತೂಕವಿಲ್ಲದೇ ಗಿಡ ಮುರಿಯಿತೆಂದು ಅನ್ನಲು ಎಂದೂ ಬರುವದಿಲ್ಲ. ಭಾರವಿಲ್ಲದೇ ಗಿಡ ಮುರಿಯಲಾರದು.ಭಾರಕ್ಕೆ ಜಡತ್ವವಿರುವದು,ಇದು ವಾಯುವಿನಲ್ಲಿಯ ಪೃಥ್ವಿಯ ಅಂಶವು. (೨೩) ಇಲ್ಲಿ ಶ್ರೋತಾ ಒಂದು ಶಂಕಾ ತೆಗೆದನು ಅದು ಏನಂದರೆ:- ಈಗ ಕೇವಲ ಪಂಚಭೂತಗಳ ವರ್ಣನೆ ಮಾತ್ರ ನಡೆದಿರುವದು. ದೃಶ್ಯ ಪದಾರ್ಥಗಳು ಇನ್ನೂ ನಿರ್ಮಾಣಗೊಂಡೇ ಇಲ್ಲ. ಇಂಥ ನಿರಾಕಾರ ಅವಸ್ಥೆಯಲ್ಲಿ ಗಿಡಗಳಿರಲಿಕ್ಕೆ ಶಕ್ಯವಿಲ್ಲ. ಆಗ ಶ್ರೀ ಸಮರ್ಥರು ಉತ್ತರ ಕೊಡುತ್ತಾರೆ. ನಿರಾಕಾರ ಪಂಚಭೂತದಲ್ಲಿ ಗಿಡಗಳಿಲ್ಲವೆಂಬ ಮಾತು ನಿಜವಿದೆ. ಆದರೆ ಅಲ್ಲಿ ಶಕ್ತಿ ಇದ್ದೇ ಇದ್ದಳು. ಮತ್ತು ಈ ಶಕ್ತಿಯಲ್ಲಿ ಕಠಿಣತನವಿರುವದು. ಈ ಗುಣವು ಪೃಥ್ವಿಯ ಗುಣವಾಗಿದೆ. (೨೪) ಉದಾ:- ಬೆಂಕಿಯ ಅಗದೀ ಸಣ್ಣ ಕಿಡಿ ಇರುವದು. ಇದರಲ್ಲಿ ಇದರ ಪ್ರಮಾಣಕ್ಕನುಸಾರವಾಗಿ ಉಷ್ಣತೆ-ದಾಹಕಶಕ್ತಿ ಇದ್ದೇ ಇರುತ್ತದೆ. ಇದರಂತೆ ಸೂಕ್ಷ್ಮವಾಯುವಿನಲ್ಲಿ ಸೂಕ್ಷ್ಮರೂಪದಿಂದ ಕಠಿಣತನ-ಜಡತನವಿರುವದು. (೨೫) ವಾಯುವಿನಲ್ಲಿಯ ಮೃದುತನವು ನೀರಿನ [ಜಲದ] ಗುಣವಾಗಿದೆ. ವಾಯುವಿನಲ್ಲಿಯ ಭಾಸ-ಹೊಳಪು ಇದು ತೇಜ [ಅಗ್ನಿ]ದ ಗುಣವಾಗಿದೆ. ಮತ್ತು ಚಂಚಲತನವು ವಾಯುವಿನಲ್ಲಿಯ ಸ್ವತಃದ ಸ್ವಭಾವವೇ ಇರುವದು. (೨೬) ಈ ಎಲ್ಲವನ್ನೂ ಕೂಡಿಕೊಂಡು ಇರುವದು. ಆಕಾಶದ ಗುಣವಾಗಿದೆ.ವಾಯುವಿನಲ್ಲಿಯ ಕಠಿಣತನ ಹಾಗೂ ಮೃದುತನ,ಭಾಸ ಮತ್ತು ಚಂಚಲತನ ಇವುಗಳ ಸಮಾವೇಶವಿರುವದು. ಆದ್ದರಿಂದ ವಾಯುವಿನಲ್ಲಿ ಆಕಾಶವಿರುವದು. ಇದೇ ಪ್ರಕಾರ ವಾಯುವಿನಲ್ಲಿ ಇತರ ಭೂತಗಳ ಅಂಶವಿರುವದು. ಇದನ್ನು ಹೇಳಿಯಾಗಿದೆ. (೨೭) ಈಗ ತೇಜ [ಅಗ್ನಿ]ದ ಲಕ್ಷಣ ಹೇಳುವೆನು. ತೇಜದಿಂದ ಭಾಸ [ಹೊಳಪು,ಪ್ರಕಾಶ, ಕಾಂತಿ]ವಾಗುವದು. ಪ್ರತ್ಯಕ್ಷ ಏನಾದರೂ ಕಾಣುವದು. ಇಂದ್ರಿಯಗಳಿಗೆ ಗೊತ್ತಾಗುವದು ಏನೋ ಸ್ವಲ್ಪ ಕಠಿಣತನ, ದಟ್ಟತನ ಇಲ್ಲದ ಹೊರತು ಭಾಸವಾಗುವದಿಲ್ಲ. ಕಠಿಣತನ ಇದು ಪೃಥ್ವಿಯ ಅಂಶವು. ಆದ್ದರಿಂದ ತೇಜದಲ್ಲಿ ಪೃಥ್ವಿಯ ಅಂಶವಿರುವದು. (೨೮) ಯಾವ ಭಾಸವು ಅನುಭವಕ್ಕೆ ಬರುವದೋ ಅದು ಮೃದುವಾಗಿರುವದು. ಇಂದ್ರಿಯಗಳಿಗೆ ಸಹಜವಾಗಿ ಅನುಭವಕ್ಕೆ ಬರುವದು. ಈ ಯಾವ ಮೃದುತನವು ತೇಜದಲ್ಲಿಯ ನೀರಿನ ಅಂಶವಾಗಿದೆ. ತೇಜದಲ್ಲಿ ತೇಜ ಇರುವದು. ಇದು ಸ್ವತಃ ಸಿದ್ಧವಾದೇ ಇರುವದು. ಇದರ ಬಗೆಗೆ ಹೇಳಬೇಕಾಗಿಲ್ಲ. (೨೯) ತೇಜದಲ್ಲಿ ಕಂಡು ಬರುವ ಚಂಚಲತನವು ವಾಯುವಿನ ಅಂಶವಿರುವದು. ಇದರಲ್ಲಿ ಕಾಣುವ ಸ್ತಬ್ಧತೆಯು ಆಕಾಶದ ಅಂಶವಿರುವದು. ಈ ಪ್ರಕಾರ ತೇಜದಲ್ಲಿ ಇತರ ಭೂತಗಳು ಹೇಗಿರುವವು, ಇದನ್ನು ಹೇಳಿದೆವು. (೩೦)

ಆತಾ ಆಪಾಚೇ ಲಕ್ಷಣ । ಆಪ ತೇ ಚಿ ಜೇ ವ್ಮೃದಪಣ ।
ವ್ಮೃದಪಣ ತೇ ಕಠಿಣ । ತೇ ಚಿ ಪೃಥ್ವೀ ॥೩೧॥
ಆಸೀ ಆಪ ಸಹಜಚಿ ಅಸೆ । ತೇಜ ವ್ಮೃದಪಣೇ ಭಾಸೆ ।
ವಾಯೋ ಸ್ತಬ್ಧಪಣೇ ದಿಸೆ । ವ್ಮೃದತ್ವಾ ಆಂಗೀ ॥೩೨॥
ಆಕಾಶ ನಲಗೆ ಸಾಂಗಾವೇ । ತೇ ವ್ಯಾಪಕ ಚಿ ಸ್ವಭಾವೇ ।
ಆಸೀ ಪಂಚಭೂತಾಂಚೀ ನಾವೇ । ಸೂಕ್ಷ್ಮ ॥ ನಿರೋಪಿಲೀ ॥೩೩॥
ಆತಾ ಪೃಥ್ವೀಚೇ ಲಕ್ಷಣ । ಕಠಿಣ ಪೃಥ್ವೀ ಆಪಣ ।
ಕಠಿಣತ್ವೀ ವ್ಮೃದ ಪಣ । ತೇ ಚಿ ಆಪ ॥೩೪॥
ಕಠಿಣತ್ವಾಚಾ ಜೋ ಭಾಸ । ತೋ ಚಿ ತೇಜಾಚಾ ಪ್ರಕಾಶ ।
ಕಠಿಣತ್ವೀ ನಿರೋಧಾಂಶ । ತೋ ಚಿ ವಾಯೋ ॥೩೫॥
ಆಕಾಶ ಸಕಳಾಸ ವ್ಯಾಪಕ । ಹಾ ತೋ ಪ್ರಗಟ ಚಿ ವಿವೇಕ ।
ಆಕಾಶೀ ಚ ಕಾಹೀ ಯೇಕ । ಭಾಸ ಭಾಸೆ ॥೩೬॥
ಆಕಾಶ ತೋಡಿತಾ ತುಟೇನಾ । ಆಕಾಶ ಫೋಡಿತಾ ಫುಟೇನಾ ।
ಆಕಾಶ ಪರತೇ ಹೋಯೆನಾ । ತಿಳವಾತ್ರ ॥೩೭॥
ಅಸೋ ಆತಾ ಪೃಥ್ವೀಅಂತ । ದಾವಿಲಾ ಭೂತಾಂಚಾ ಸಂಕೇತ ।
ಯೇಕ ಭೂತೀ ಪಂಚಭೂತ। ತೇ ಹಿ ನಿರೋಪಿಲೇ ॥೩೮॥
ಪರೀ ಹೇ ಆಹಾಚ ಪಾಹಾತಾ ನಾತುಡೆ । ಬಳೇ ಚಿ ಪೋಟೀ ಸಂದೇಹ ಪಡೆ ।
ಭ್ರಾಂತಿರೂಪೇ ಅಹಂತಾ ಚಢೆ । ಅಕಸ್ಮಾತ ॥೩೯॥
ಸೂಕ್ಷ್ಮ ದೃಷ್ಟೀನೇ ಪಾಹಾತಾ । ವಾಯೋ ಚಿ ವಾಟೆ ತತ್ವತಾ ।
ಸೂಕ್ಷ್ಮ ವಾಯೋ ಶೋಧೂ ಜಾತಾ । ಪಂಚಭೂತೇ ದಿಸತೀ ॥೪೦॥
ಏವಂ ಪಂಚಭೂತಿಕ ಪವನ । ತೇಚಿ ಮೂಳಮಾಯಾ ಜಾಣ ।
ಮಾಯಾ ಆಣೀ ಸೂಕ್ಷ್ಮ ತ್ರಿಗುಣ। ತೇ ಹಿ ಪಂಚಭೂತಿಕ ॥೪೧॥
ಭೂತೇ ಗುಣ ಮೇಳವಿಜೆ । ತ್ಯಾಸೀ ಅಷ್ಟಧಾ ಬೋಲಿಜೆ ।
ಪಂಚಭೂತಿಕ ಜಾಣಿಜೆ। ಅಷ್ಟಧಾ ಪ್ರಕೃತೀ ॥೪೨॥
ಶೋಧೂನ ಪಾಹಿಲ್ಯಾವೀಣ । ಸಂದೇಹ ಧರಣೇ ಮೂರ್ಖಪಣ ।
ಯಾಚೀ ಪಾಹಾವೀ ವೊಳಖಣ । ಸೂಕ್ಷ್ಮದೃಷ್ಟೀ ॥೪೩॥
ಗುಣಾಪಾಸುನೀ ಭೂತೇ । ಪಾವಲೀ ಪಷ್ಟ ದಶೇತೇ ।
ಜಡತ್ವ ಯೇಊನ ಸಮಸ್ತೇ । ತತ್ವೇ ಜಾಲೀ ॥೪೪॥

ಈಗ ನೀರಿನ ಲಕ್ಷಣವು ಇದು ಮೃದುವಿರುವದು. ನೀರು ಮೃದುವಿದ್ದರೂ ಅದರಲ್ಲಿ ಸ್ವಲ್ಪಾದರೂ ಕಠಿಣತನ ಇದ್ದೇ ಇರುತ್ತದೆ, ಇದೇ ಪೃಥ್ವಿಯ ಅಂಶವೆಂದು ತಿಳಿಯಬೇಕು. (೩೧) ನೀರಿನಲ್ಲಿ ನೀರಿನತನ ಇದ್ದೇ ಇದೆ ಅನ್ನುವದು ತಿಳಿದದ್ದೇ ಅದೆ. ತೇಜದಿಂದ ನೀರಿನಲ್ಲಿಯ ಮೃದುತನ ಅನುಭವಕ್ಕೆ ಬರುವದು. ಮೃದುತನ ದಲ್ಲಿಯ ಸ್ತಬ್ಧತೆಯು ವಾಯುವಿನ ಗುಣವೆಂದು ತಿಳಿಯಿರಿ. (೩೨) ನೀರಿನಲ್ಲಿ ಆಕಾಶವು ಹೇಗಿದೆ ಅನ್ನುವದನ್ನು ಹೇಳುವ ಅವಶ್ಯವಿಲ್ಲ. ಯಾಕೆಂದರೆ ಸರ್ವವನ್ನೂ ವ್ಯಾಪಿಸಿ ಇರುವದೇ ಆಕಾಶದ ಸಹಜ ಗುಣವಿರುವದು ಆದ್ದರಿಂದ ಆಕಾಶವು ನೀರಿನಲ್ಲಿ ಇದ್ದೇ ಇರುವದು. ಈ ಪ್ರಕಾರ ನೀರಿನಲ್ಲಿ ಇತರ ಭೂತಗಳು ಹೇಗೆ ಸೂಕ್ಷ್ಮವಾಗಿ ಇರುವ ವೆಂಬುದನ್ನು ಹೇಳಿದ್ದಾಯಿತು. (೩೩) ಈಗ ಪೃಥ್ವಿಯ ಬಗೆಗೆ ಹೇಳುವೆನು. ಕಠಿಣತನವು ಇದರ ಗುಣವಿರುವದು. ಈ ಕಠಿಣತನದಲ್ಲಿ ಯಾವ ಮೃದುತನವಿರುವದೋ ಅದು ಪೃಥ್ವಿಯಲ್ಲಿಯ ನೀರಿನ ಅಂಶವಾಗಿದೆ. (೩೪) ಕಠಿಣತನದ ಯಾವ ಅನುಭವ ಬರುವದೋ ಅದು ತೇಜದ ಅಂಶವೆಂದು ತಿಳಿಯಬೇಕು. ಕಠಿಣತನದಲ್ಲಿ ಯಾವ ಪ್ರತೀಕಾರ (ವಿರೋಧ) ಕಂಡು ಬರುವದೋ ಅದು ವಾಯುವಿನ ಅಂಶವೆಂದು ತಿಳಿಯಬೇಕು. (೩೫) ಆಕಾಶವು ಎಲ್ಲವನ್ನೂ ವ್ಯಾಪಿಸಿ ಇರುವದು. ಈ ವಿಚಾರ ಎಲ್ಲರಿಗೂ ತಿಳಿದದ್ದೇ ಇರುವದು. ಮನುಷ್ಯನಿಗೆ ದೃಶ್ಯದ ಬಗೆಗೆ ಯಾವ ಭಾಸ ವಾಗುವದೋ ಅಥವಾ ಅನುಭವ ಬರುವದೋ ಅದೆಲ್ಲ ಆಕಾಶದಲ್ಲಿಯೇ ಬರುವದು. (೩೬) ಆಕಾಶವನ್ನು ಮುರಿಯ ಬೇಕೆಂದರೆ ಮುರಿಯುವದಿಲ್ಲ,ಒಡೆಯಬೇಕೆಂದರೆ ಒಡೆಯುವದಿಲ್ಲ.ಆಕಾಶವನ್ನು ಸ್ವಲ್ಪಅತ್ತಅಥವಾಇತ್ತ ಸರಿಸಬೇಕೆಂದರೆ ಎಳ್ಳಷ್ಟೂ ಎತ್ತಕಡೆಗೂ ಸರಿಸಲಿಕ್ಕೆ ಬರುವದಿಲ್ಲ.(೩೭) ಇರಲಿ,ಪೃಥ್ವಿಯಲ್ಲಿ ಇತರ ಭೂತಗಳು ಹೇಗೆ ಕೂಡಿರುವವು, ಇದನ್ನು ಹೇಳಿದ್ದಾಯಿತು. ಪ್ರತ್ಯೇಕ ಭೂತಗಳಲ್ಲಿ ಇತರ ಭೂತಗಳು ಅಂಶ ರೂಪದಿಂದ ಹೇಗೆ ಇರುವವು ಇದನ್ನೂ ವರ್ಣಿಸಿ ಹೇಳಿದೆವು. (೩೮) ಇನ್ನು ಮೇಲೆ ಅಷ್ಟಧಾ ಪ್ರಕೃತಿಗಳು ಯಾವವು ಇದನ್ನು ಸ್ಪಷ್ಟಪಡಿಸುವರು. ಇರಲಿ, ಪಂಚಭೂತಗಳ ಬಗೆಗೆ ಮೇಲ್ನೋಟದಿಂದ (ಹಗುರಾಗಿ) ವಿಚಾರ ಮಾಡಿ ನೋಡಿದರೆ ಈ ಐದೂ ಭೂತಗಳು ಒಂದರಲ್ಲೊಂದು ಕೂಡಿವೆ. ಮಿಶ್ರವಾಗಿವೆಯೆಂಬ ಮಾತು ಆಕಲನವಾಗುವದಿಲ್ಲ. ಮನಕ್ಕೆ ಒಪ್ಪಿತವಾಗುವದಿಲ್ಲ, ಆಗ ತೀವ್ರ ವಿಕಲ್ಪ ಉಂಟಾಗುವದು. ಮತ್ತು ಇದರಿಂದ ಇಲ್ಲದ ಕಲ್ಪನೆಗಳು ಹುಟ್ಟಿ ಒಮ್ಮಿಂದೊಮ್ಮೆಲೇ ಅಹಂಕಾರ ಉತ್ಪನ್ನವಾಗುವದು. (೩೯) ಸೂಕ್ಷ್ಮವಾಗಿ ಮತ್ತು ಆಳವಾಗಿ ವಿಚಾರ ಮಾಡಿ ನೋಡಿದರೆ ಆಗ ನಿಮಗೆ ಇದೆಲ್ಲವೂ ವಾಯುವಿನ ಅಂದರೆ ಶಕ್ತಿಯ ಆಟವಿರುವದೆಂದು ತಿಳಿಯುವದು. ಆ ಸೂಕ್ಷ್ಮಶಕ್ತಿಯ ಶೋಧ ಮಾಡಲಿಕ್ಕೆ ಹೋದರೆ ಅಲ್ಲಿ ಸೂಕ್ಷ್ಮ ಮಹಾಭೂತಗಳು ಕಾಣುವವು. (೪೦) ಒಟ್ಟಿನಲ್ಲಿ ಸೂಕ್ಷ್ಮ ಶಕ್ತಿಯಲ್ಲಿ ಪಂಚಮಹಾಭೂತಗಳು ಸೂಕ್ಷ್ಮ ತನದಿಂದ ಇರುವವು. ಈ ಸೂಕ್ಷ್ಮಶಕ್ತಿಗೆ ಮೂಲಮಾಯಾ ಎಂದು ಅನ್ನುವರು. ಇವಳಿಂದ ಉತ್ಪನ್ನವಾಗುವ ಮಾಯಾ, ಮತ್ತು ಇವಳಿಂದ ಉದ್ಭವವಾಗುವ ತ್ರಿಗುಣ, ಇವೆಲ್ಲವೂ ಪಂಚಭೂತಾತ್ಮಕವೇ ಇರುವದೆಂದು ತಿಳಿಯ ಬೇಕು. (೪೧) ಪಂಚಮಹಾಭೂತಗಳಲ್ಲಿ ಸತ್ವ, ರಜ, ತಮ ಈ ಮೂರು ಗುಣಗಳನ್ನು ಕೂಡಿಸಿದರೆ ಎಂಟು ಪ್ರಕಾರ ವಾಗುವದು. ಅಂತೆಯೇ "ಅಷ್ಟಧಾ ಪ್ರಕೃತಿ" ಇದು ಪಂಚಭೂತಾತ್ಮಕವೇ ಇರುವದೆಂದು ತಿಳಿಯಿರಿ. (೪೨) ಯಾವುದೇ ವಿಷಯದ ವಿಚಾರವನ್ನು ಶೋಧಿಸಿ ತಿಳಿಯಬೇಕು. ಹೀಗೆ ಮಾಡದೆ ಸುಮ್ಮನೇ ಇವುಗಳ ಬಗೆಗೆ ಸಂಶಯ ಹೊಂದುವದು ಹುಚ್ಚತನವೆನಿಸುವದು. ಅಷ್ಟಧಾ ಪ್ರಕೃತಿಯು ಪಂಚಭೂತಾತ್ಮಕ ಇರುವದು. ಇದನ್ನು ಸೂಕ್ಷ್ಮ ವಿಚಾರ ಮಾಡಿ ಸರಿಯಾಗಿ ತಿಳಿದುಕೊಳ್ಳಬೇಕು. (೪೩) ಮೂಲ ಮಾಯೆಯಲ್ಲಿ ಇರುವ ಅತ್ಯಂತ ಸೂಕ್ಷ್ಮ ಪಂಚ ಭೂತಗಳು ತ್ರಿಗುಣಗಳಿಂದ ಸ್ಪಷ್ಟವಾಗಿ ಕಾಣಿಸಿಕೊಳ್ಳುವವು. ಇವುಗಳಿಗೆ ದೃಶ್ಯರೂಪ ಬಂದ ಮೇಲೆ ಎಲ್ಲ ತತ್ವಗಳ ನಿರ್ಮಾಣವಾಯಿತು. (೪೪)

ಪುಢೇ ತತ್ವ ನಿವಂಚನಾ । ಪಿಂಡ ಬ್ರಹ್ಮಾಂಡ ತತ್ವರಚನಾ ।
ಬೋಲಿಲೀ ಅಸೆ ತೆ ಜನಾ । ಪ್ರಗಟ ಚಿ ಆಹೆ ॥೪೫॥

ಹಾ ಭೂತಕರ್ದಮು ಬೋಲಿಲಾ । ಸೂಕ್ಷ್ಮ ಸಂಕೇತೇ ದಾವಿಲಾ ।
ಬ್ರಹ್ಮಗೋಳ ಉಭಾರಲಾ । ತತ್ಪೂರ್ವೀ ॥೪೬॥

ಯಾ ಬ್ರಹ್ಮಾಂಡಾಪೈಲೀಕಡಿಲ ಗೋಷ್ಟೀ । ಜ್ಯೆ ಜಾಲೀ ನವ್ಹತೀ ಸೃಷ್ಟೀ ।
ಮೂಳಮಾಯಾ ಸೂಕ್ಷ್ಮದೃಷ್ಟೀ । ವೋಳಖಾವೀ ॥೪೭॥

ಸಪ್ತಕಂಚುಕ ಪ್ರಚಂಡ । ಜಾಲೇ ನವ್ಹತೇ ಬ್ರಹ್ಮಾಂಡ ।
ಮಾಯೆಅವಿದ್ಯೇಚೇ ಬಂಡ । ಐಲಿಕಡೆ ॥೪೮॥

ಬ್ರಹ್ಮಾ ವಿಷ್ಣು ಮಹೇಶ್ವರ । ಹಾ ಐಲಿಕಡಿಲ ವಿಚಾರ ।
ಪೃಥ್ವೀ ಮೇರೂ ಸಪ್ತ ಸಾಗರ । ಐಲಿಕಡೆ ॥೪೯॥

ನಾನಾ ಲೋಕ ನಾನಾ ಸ್ಥಾನೇ । ಚಂದ್ರ ಸೂರ್ಯ ತಾರಾಂಗಣೇ ।
ಸಪ್ತದ್ವೀಪೇ ಚೌದಾಭುವನೇ । ಐಲಿಕಡೆ ॥೫೦॥

ಶೇಷಕೂರ್ಮ ಸಪ್ತಪಾತಾಳ । ಯೆಕವಿಸ ಸ್ವರ್ಗೇ ಅಷ್ಟ ದಿಗ್‌ಪಾಳ ।
ತೇತೀಸ ಕೋಟೀ ದೇವ ಸಕಳ । ಐಲಿಕಡೆ ॥೫೧॥

ಇದಾದ ನಂತರ ಯಾವ ತತ್ವಗಳ ವಿಚಾರ ಇರುವದೋ ಆ ಪಿಂಡ ಮತ್ತು ಬ್ರಹ್ಮಾಂಡ ಈ ಎರಡರಲ್ಲಿ ಯಾವ ತತ್ವ ರಚನೆಯು ಇರುವದೋ ಇದೆಲ್ಲ ವಿಷಯ ಲೋಕದಜನರಿಗೆ ಚನ್ನಾಗಿ ತಿಳಿದ ವಿಷಯವೇ ಇರುವದು. (೪೫) ಇಲ್ಲಿಯವರೆಗೆ ಪಂಚಭೂತಗಳ ಮಿಶ್ರಣದ ವಿಷಯವನ್ನು ಸೂಕ್ಷ್ಮ ಲಕ್ಷಣಗಳಿಂದ ಹೇಳಿದೆವು. ಆದರೆ ಇದೆಲ್ಲವೂ ವಿಶ್ವ ರಚನೆಯು ಆಗುವ ಪೂರ್ವದಲ್ಲಿಯದಿರುವದು. (೪೬) ವಿಶ್ವ (ಜಗತ್ತು) ಉತ್ಪನ್ನವಾಗುವ ಪೂರ್ವದಲ್ಲಿ ವಿಶ್ವದ ಆಚೆಗೆ ಅಂದರೆ ಯಾವಾಗ ಯಾವುದೇ ದೃಶ್ಯವು ಉದ್ಭವವಾಗಿರಲಿಲ್ಲವೋ ಆಗ ಪಂಚಭೂತಗಳ ಅವಸ್ಥೆ ಏನಿತ್ತು? ಅನ್ನುವ ವಿಷಯವನ್ನು ಇಲ್ಲಿಯವರೆಗೆ ಹೇಳಿದ್ದಾಯಿತು. ಅಲ್ಲಿ ಕೇವಲ [ಫಕ್ತ] ಮೂಲ ಮಾಯಾ ಇದ್ದಳು. ದೀರ್ಘ ವಿಚಾರ ಮಾಡಿ ಸೂಕ್ಷ್ಮಬುದ್ಧಿಯಿಂದ ಇವಳನ್ನು ತಿಳಿಯಬೇಕು. (ಗುರುತಿಸಬೇಕು) (೪೭) ದೃಶ್ಯವಿಶ್ವವು ಅಸ್ತಿತ್ವ ದಲ್ಲಿಲ್ಲದಾಗ ಕೇವಲ ಪರಬ್ರಹ್ಮ ಮತ್ತು ಮೂಲ ಮಾಯಾ ಇಷ್ಟೇ ಇದ್ದಿತು. ದೃಶ್ಯ ಸೃಷ್ಟಿ ಯಾವತ್ತೂ ವಿಸ್ತಾರ ಇವೆಲ್ಲವೂ ಮೂಲ ಮಾಯೆಯ ನಂತರದ್ದಿರುವದು. ಅನ್ನುವ ವಿಷಯವನ್ನು ಈಗ ಹೇಳುವರು. ದೃಶ್ಯವಿಶ್ವದ ರಚನೆಯ ಬಗೆಗೆ ಭಾರತೀಯರ ಕೆಲವು ಕಲ್ಪನೆಗಳು ಇರುವವು. ಅವುಗಳ ವಿವರಗಳನ್ನು ಇಲ್ಲಿ ತಿಳಿಸಿಕೊಟ್ಟಿರುವ ರೆಂದು ಕಾಣುವದು. ಮೊದಲು ಮೂಲಮಾಯಾ ಇದ್ದಳು. ಆಗ ಏಳು ಆವರಣಗಳುಳ್ಳ ಈ ಭವ್ಯ ಪ್ರಚಂಡ ಬ್ರಹ್ಮಾಂಡವು (ಜಗತ್ತು) ಇನ್ನೂ ಆಗಿರಲಿಲ್ಲ. ಮಾಯಾ ಮತ್ತು ಅವಿದ್ಯಾ ಇವುಗಳ ಗೊಂದಲವೂ ಸಹ ಇತ್ತೀಚಿನದಿರುವದು ಪಂಚಮಹಾಭೂತ, ಅಹಂಕಾರ ಮತ್ತು ಮಹತ್‌ತತ್ವ ಇವೆಲ್ಲ ಕೂಡಿ ಏಳು ಆವರಣವೆನಿಸುವವು. (೪೮) ಬ್ರಹ್ಮ, ವಿಷ್ಣು, ಮಹೇಶ್ವರ ಈ ದೇವರೂ ಸಹ ಇತ್ತೀಚಿನವೇ ಇರುವವು. ಇದರಂತೆ, ಪೃಥ್ವಿ, ಮೇರು ಪರ್ವತ, ಏಳು ಸಮುದ್ರ ಇವೂ ಸಹ ಇತ್ತೀಚಿನವೇ ಇರುವವು. ಮೇರು ಪರ್ವತ ಇದು ಪುರಾಣ ಪ್ರಸಿದ್ಧ ಹಾಗೂ ಸ್ಥಿರವುಳ್ಳ ಸರ್ವೋಚ್ಚ (ಅತಿಉತ್ತಮ) ಬಂಗಾರದ ಪರ್ವತವಿರುವದು. ಸರ್ವ ಗ್ರಹಗಳು ಇದರ ಸುತ್ತಲೂ ತಿರುಗುತ್ತಿರುವವು. ಪೃಥ್ವಿಯ ಸುತ್ತು ಏಳು ಸಮುದ್ರಗಳ ಆವರಣವಿರುವದು. ಇವುಗಳ ಆಚೆಗೆ ಕ್ಷೀರಸಾಗರವಿದೆ. ಅದರಲ್ಲಿ ಭಗವಾನ್ ಶೇಷಶಾಯಿ ನಾರಾಯಣನಿರುವನು. (೪೯) ಅನೇಕ ಪ್ರಕಾರದ ಜನರು, ಅನೇಕ ಪ್ರಕಾರದ ಸ್ಥಾನಗಳು ಚಂದ್ರ, ಸೂರ್ಯ, ನಕ್ಷತ್ರ, ಸಪ್ತದ್ವೀಪಗಳು, ಹದಿನಾಲ್ಕು ಭುವನಗಳು (ಲೋಕಗಳು) ಇವು ಸಹ ಹಿಂದಿನಿಂದಲೇ ಆಗಿರುವವು. ಪೃಥ್ವಿಯಲ್ಲಿ ಏಳು ವಿಭಾಗ ಅಥವಾ ದ್ವೀಪಗಳು ಇರುವವು. ಅವುಗಳ ಹೆಸರು ಜಂಬು, ಪ್ಲಕ್ಷ, ಶಾಲ್ಮಲಿ, ಕುಶ, ಕ್ರೌಂಚ, ಶಾಕ, ಮತ್ತು ಪುಷ್ಕರ ಮತ್ತು ಹದಿನಾಲ್ಕು ಭುವನ ಲೋಕಗಳ ಹೆಸರು:– ಭೂಃ, ಭುವಃ, ಸ್ವಃ, ಮಃ, ಜನಃ, ತಪಃ, ಮತ್ತು ಸತ್ಯ ಇವು ಏಳು ಭವನ ಲೋಕಗಳು ಮತ್ತು ಅತಲ, ವಿತಲ, ಸುತಲ, ರಸಾತಲ, ಮಹಾತಲ, ತಲಾತಲ ಮತ್ತು ಪಾತಾಳ ಇವು ಏಳು ಪಾತಾಳ ಭುವನ ಲೋಕಗಳು. ಎರಡೂ ಕೂಡಿ ಹದಿನಾಲ್ಕು ಭುವನ ಲೋಕಗಳು (೫೦) ಶೇಷ, ಕೂರ್ಮ, ಏಳು ಪಾತಾಳ ಲೋಕಗಳು, ಇಪ್ಪತ್ತೊಂದು ಸ್ವರ್ಗಗಳು, ಎಂಟು ದಿಕ್ಪಾಲಕರು. ಮೂವತ್ತಮೂರು ಕೋಟಿ ದೇವ ದೇವತೆಗಳೆಲ್ಲರೂ ಇವು ಸಹ ಇತ್ತೀಚಿನವೇ ಇರುವವು. ಶೇಷನು ನಾಗಗಳ ರಾಜನು· ಇವನಿಗೆ ಸಾವಿರ ಹೆಡೆಗಳು ಇರುವವು. ಭಗವಾನ್ ವಿಷ್ಣು-ನಾರಾಯಣನು ಶೇಷನ ಮೇಲೆ ಶಯನ ಮಾಡುವನು. ಶೇಷನೇ ಪೃಥ್ವಿಯನ್ನು ತಲೆಯ ಮೇಲೆ ಹೊತ್ತಿರುವನು. (ಧರಿಸಿರುವನು). ಕೂರ್ಮ ಅಂದರೆ ಆಮೆ ಇದು ಭಗವಂತನ ಎರಡನೆಯ ಅವತಾರ ಇರುವದು. ಇಪ್ಪತ್ತೊಂದು ಸ್ವರ್ಗಗಳು ಇವುಗಳಲ್ಲಿ ಬ್ರಹ್ಮನ ಸ್ವರ್ಗಗಳು ಏಳು. ವಿಷ್ಣುವಿನ ಸ್ವರ್ಗಗಳು ಏಳು, ಮತ್ತು ಮಹೇಶ್ವರ ಸ್ವರ್ಗಗಳು ಏಳು. ಅಂತೂ ಇಪ್ಪತ್ತೊಂದು ಸ್ವರ್ಗಗಳು ಇವುಗಳ ಹೆಸರುಗಳು ಅನುಕ್ರಮವಾಗಿ, ಜ್ಯೋತಿ, ಸಿತ, ವಿಮಲ, ಅಥಆಗತ ಪ್ರಕಾಶ, ರಮ್ಯ, ಸಹಜ, ಸಿದ್ಧ, ನಾದ, ದಿವ್ಯ, ಏಕಾಂತ, ಸ್ಥಿರ, ತೃಪ್ತಿ, ನಿರ್ಮಲ, ಪ್ರೇಮಲ, ನಿಜ, ಲಯ, ಅನಂತ, ನಿತ್ಯ, ಅತೀತ, ಸಚ್ಚಿದಾನಂದ. ಇನ್ನೂ ಎಂಟು ದಿಕ್ಪಾಲಕರ ಹೆಸರುಗಳು:– ಇಂದ್ರ (ಪೂರ್ವ) ಅಗ್ನಿ (ಆಗ್ನೇಯ) ಯಮ (ದಕ್ಷಿಣ) ನಿಋತಿ (ನೈರುತ್ಯ) ವರುಣ (ಪಶ್ಚಿಮ) ವಾಯು (ವಾಯುವ್ಯ) ಸೋಮ (ಉತ್ತರ) ಈಶ್ವರ (ಈಶಾನ್ಯ) ಹೀಗೆ ಎಂಟು ಅಧಿಪತಿಗಳು ಮತ್ತು ಎಂಟು ದಿಕ್ಕುಗಳು. ಮೂವತ್ತಮೂರು ಕೋಟಿ ದೇವತೆಗಳು ಎಂಟು ವಸುಗಳು, ಹನ್ನೆರಡು ಆದಿತ್ಯರು, ಹನ್ನೊಂದು ರುದ್ರರು, ಪ್ರಜಾಪತಿ ಮತ್ತು ವಷಟ್ಕಾರರು ದೇವ, ದೇವತಾ ಮೂವತ್ತಮೂರು ಕೋಟಿ ವರ್ಗವಿರುವದು. (೫೧)

ಬಾರಾಆದಿತ್ಯ ಅಕ್ರಾರುದ್ರ । ನವನಾಗ ಸಪ್ತಋಷೇಶ್ವರ ।
ನಾನಾ ದೇವಾಚೆ ಅವತಾರ । ಜಾಲಿಕಡೆ ॥೫೨॥
ಮೇಘ ಮನು ಚಕ್ರವತೀ । ನಾನಾ ಜೀವಾಂಚೀ ಉತ್ಪತ್ತೀ ।
ಆತಾ ಅಸೋ ಸಾಂಗೋ ಕಿತೀ । ವಿಸ್ತಾರ ಹಾ ॥೫೩॥
ಸಕಳ ವಿಸ್ತಾರಾಚೇ ಮೂಳ । ತೇ ಮೂಳಮಾಯಾಚ ಕೇವಳ ।
ಮಾಗಾ ನಿರೋಪಿಲೀ ಸಕಳ । ಪಂಚಭೂತಿಕ ॥೫೪॥
ಸೂಕ್ಷ್ಮಭೂತೇ ಜೇ ಬೋಲಿಲೀ । ತೇಚಿ ಪುಢೇ ಜಡತ್ವಾ ಆಲೀ ।
ತೇ ಸಕಳ ಹಿ ಬೋಲಿಲೀ । ಪುಢಿಲ ಸಮಾಸೀ ॥೫೫॥
ಪಂಚಭೂತೇ ಪೃಥಕಾಕಾರೇ । ಪುಢೇ ನಿರೋಪಿಲೀ ವಿಸ್ತಾರೇ ।
ವೋಳಖೀಕಾರಣೇ ಅತ್ಯಾದರೇ । ಶ್ರೋತೀ ಶ್ರವಣ ಕರಾವೀ ॥೫೬॥
ಪಂಚಭೂತಿಕ ಬ್ರಹ್ಮಗೋಳ । ಜೇಣೇ ಕಳೆ ಹಾ ಪ್ರಾಂಜಳ ।
ದೃಶ್ಯ ಸಾಂಡೂನ ಕೇವಳ । ವಸ್ತುಚ ಪಾವಿಜೆ ॥೫೭॥
ಮಹಾದ್ವಾರ ವೋಲಾಂಡಾವೇ । ಮಗ ದೇವದರ್ಶನ ಘ್ಯಾವೇ ।
ತೈಸೇ ದೃಶ್ಯ ಹೇ ಸಾಂಡಾವೇ । ಜಾಣೋನಿಯಾ ॥೫೮॥
ಮ್ಹಣೋನಿ ದೃಶ್ಯಾಚಾ ಪೋಟೀ । ಆಹೆ ಪಂಚಭೂತಾಚೀ ದಾಟೀ ।
ಯೇಕಪಣೇ ಪಡಿಲೀ ಮಿಠೀ । ದೃಶ್ಯ ಪಂಚಭೂತಾ ॥೫೯॥
ಏವಂ ಪಂಚಭೂತಾಂಚೇ ಚಿ ದೃಶ್ಯ । ಸೃಷ್ಟೀ ರಚಲೀ ಸಾವಕಾಸ।
ಶ್ರೋತೀ ಕರೂನ ಅವಕಾಶ । ಶ್ರವಣ ಕರಾವೇ ॥೬೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
"ಸೂಕ್ಷ್ಮ ಪಂಚ ಭೂತೇ" ನಿರೂಪಣ ನಾಮ ಸಮಾಸ ಚತುರ್ಥ ॥

● ●

ಹನ್ನೆರಡು ಆದಿತ್ಯ, ಹನ್ನೊಂದು ರುದ್ರ, ಒಂಭತ್ತು ನಾಗ, ಏಳು ಋಷಿ, ಅನೇಕ ದೇವರ ಅವತಾರ ಇವೆಲ್ಲವೂ ಸಹ ಇತ್ತೀಚಿನವೇ ಇರುವವು. ಹನ್ನೆರಡು ಆದಿತ್ಯರು,ಧಾತು, ಮಿತ್ರ, ಆರ್ಯಮಾ, ರುದ್ರ, ವರುಣ ಸೂರ್ಯ, ಭಗ, ವಿವಸ್ವತ್, ಪೂಷನ್, ಸವಿತೃ, ತ್ವಷ್ಟಾ. ಮತ್ತು ವಿಷ್ಣು, ಇವು ಸೂರ್ಯನ ಹನ್ನೆರಡು ತಿಂಗಳಲ್ಲಿಯ ಹನ್ನೆರಡು ರೂಪಗಳಿರುವವು. ಹನ್ನೊಂದು ರುದ್ರರು ರೈವತ, ಅಜ, ಭೀಮ, ವಾಮ, ವೃಷಾಕಪಿ, ಅಜೈಕಪಾದ, ಉಗ್ರ, ಅಹಿರ್ಬುಧ್ನ್ಯ, ಬಹುರೂಪ, ಮಹಾನ್ ಇವು ರುದ್ರರ ಹೆಸರುಗಳು. ಒಂಭತ್ತು ನಾಗಗಳು-ಅನಂತ, ವಾಸುಕಿ, ಶೇಷ, ಪದ್ಮನಾಭ, ಕಂಬಲ, ಶಂಖಪಾಲ, ಧೃತರಾಷ್ಟ್ರ, ತಕ್ಷಕ, ಕಾಲಿಯ, ಇವು ನಾಗರಲ್ಲಿಯ ಒಂಭತ್ತು ಜಾತಿಗಳು. ಏಳು ಋಷಿಗಳು-ಕಶ್ಯಪ, ಅತ್ರಿ, ಭಾರದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ವಶಿಷ್ಠ ಇವರು ಏಳುಜನ ಋಷೀಶ್ವರರು (೫೨) ಚಕ್ರವರ್ತಿ–ಮನು, ಮೇಘ ಮತ್ತು ಅನೇಕ ಪ್ರಕಾರದ ಜೀವಗಳ ಉತ್ಪತ್ತಿ ಇವೆಲ್ಲವು ಇತ್ತೀಚಿನವೇ ಇರುವವು. ಇದರ ಈ ವಿಸ್ತಾರ ಎಷ್ಟೆಂದು ಹೇಳುವದು? ಈಗ ಇಷ್ಟು ಸಾಕು. ಮನು ಇವನು ಮನುಷ್ಯ ಜಾತಿಯ ಮೂಲ ಪುರುಷನಾಗಿರುವನು. ಯಾವತ್ತೂ ಪೃಥ್ವಿಯ ಮೇಲೆ ರಾಜ್ಯವಾಳಿದ ಪ್ರಥಮ ಚಕ್ರವರ್ತಿ ರಾಜನೆಂದರೆ ಈ ಮನುಮಹಾರಾಜನೇ ಆಗಿರುವನು. ಒಟ್ಟು ಹದಿನಾಲ್ಕು ಜನ ಮನುಗಳಿದ್ದಾರೆ.ಸ್ವಯಂಭುವ ಮನುವೇ ಇವರಲ್ಲಿ ಮೊದಲನೆಯವನು. ವೈವಸ್ವತಮನು ಏಳನೆಯವನು. ಇವನಿಗೆ ಸೂರ್ಯನಾರಾಯಣನು ಅಧ್ಯಾತ್ಮದ ಉಪದೇಶ ಮಾಡಿದನು. ಈಗ ಇರುವ ಸದ್ಯದ ಮಾನವರಿಗೆ ಇವನೇ ಮೂಲ ಪುರುಷನಿರುವನು (೫೩) ಇಲ್ಲಿಯವರೆಗೆ ಏನೇನು ವಿವರಿಸಲಾಯಿತೋ ವಿಸ್ತಾರ ಪೂರ್ವಕ ತಿಳಿಸಲಾಯಿತೋ ಇದರಲ್ಲಿ ಬಂದ ಎಲ್ಲದರ ಮೂಲವೆಂದರೆ ಮೂಲ ಮಾಯೆಯೇ ಇರುವಳು. ಇವಳಿಂದ (ಇವಳ ನಂತರ) ಇಷ್ಟೆಲ್ಲ ವಿಸ್ತಾರವಾಯಿತು. ಮೂಲ ಮಾಯಾ ಪಂಚಭೂತಾತ್ಮಕವಿರುವಳು ಅನ್ನುವದನ್ನು ಈ ಮೊದಲೇ ಹೇಳಿರುವೆವು. (೫೪) ಈ ಹಿಂದೆ ಸೂಕ್ಷ್ಮಭೂತಗಳ ಬಗ್ಗೆ ಹೇಳಿರುವೆವು. ಇವುಗಳೇ ಆನಂತರ ದೃಶ್ಯರೂಪಧಾರಣ ಮಾಡುವವು. ಇದರ ಬಗ್ಗೆ ಪೂರ್ಣವಿವೇಚನೆಯನ್ನು ಮುಂದಿನಸಮಾಸದಲ್ಲಿ ಮಾಡಿರುವೆವು. (೫೫) ಪಂಚಭೂತಗಳ ಪೈಕಿ ಪ್ರತಿಯೊಂದು ಭೂತದ ಸ್ವರೂಪವನ್ನು ಒಂದೊಂದೇ ವಿವರವಾಗಿ ಹೇಳಿರುವೆವು. ನಿಮಗೆ ಅಗದೀ ಲಕ್ಷ್ಯಕ್ಕೆ ಬರಲೆಂದು ವಿಸ್ತಾರದಿಂದ ವರ್ಣನೆಮಾಡಿ ಹೇಳಿರುವೆವು ಶ್ರೋತಾರರು ಮನಸ್ಸುಗೊಟ್ಟು ಕೇಳಬೇಕು. (೫೬) ಈ ಬ್ರಹ್ಮ ಗೋಲವು ಪಂಚಭೂತಗಳಿಂದ ಮಾಡಲ್ಪಟ್ಟಿದೆ ಎಂಬುದು ಮುಂದಿನ ವಿವೇಚನೆಯಿಂದ ನಿಮಗೆ ತಿಳಿಯುವದು. ಇದು ತಿಳಿಯಿತೆಂದರೆ ಯಾವತ್ತೂ ದೃಶ್ಯವನ್ನು ಹಿಂದೆ ಸರಿಸಿ ಪರಮಾತ್ಮ ವಸ್ತುವನ್ನು ಪ್ರಾಪ್ತ ಮಾಡಿಕೊಳ್ಳಲು ಬರುವದು. (೫೭) ದೇವ ಮಂದಿರದ ಮಹಾದ್ವಾರವನ್ನು ದಾಟಿ ಒಳಗೆ ಹೋದ ಮೇಲೆಯೇ ದೇವರ ದರ್ಶನ ತೆಗೆದುಕೊಳ್ಳಲಿಕ್ಕೆ ಬರುವದು. ಇದರಂತೆಯೇ ದೃಶ್ಯಪಂಚಭೌತಿಕವಿರುವದೆಂದು ತಿಳಿಯಬೇಕು. ಇದು ಮಹಾದ್ವಾರ ಇದ್ದಂತೆ ಇರುವದು. ಇದನ್ನು ತಿಳಿದು ಈ ದೃಶ್ಯ ಪಂಚಭೌತಿಕವನ್ನು ಹಿಂದೆ ಸರಿಸಿ ಬಿಡಬೇಕು.ಅಂದರೆ ಇದೆಲ್ಲ ಮಾಯಿಕ ಮತ್ತು ನಾಶಿವಂತ ಇರುವದು ಅನ್ನುವದನ್ನು ತಿಳಿದು ಮುಂದೆ ಸಾಗಬೇಕು. ಆಗ ಬ್ರಹ್ಮ ದರ್ಶನವಾಗುವದು. ದೇಹದ ಮತ್ತು ದೃಶ್ಯದ ಕಿಮ್ಮತ್ತು ತಿಳಿದು ಮನಸ್ಸಿನಿಂದ ಇದನ್ನು ಹೊರಹಾಕಲು ಸರ್ವಸಾಧನವನ್ನೂ ಮಾಡಬೇಕಾಗುವದು. ವೃತ್ತಿಯ ಮೇಲೆ ಕೂಡಿ ಬಿದ್ದ ದೃಶ್ಯದ ದಟ್ಟವಾದ ಆವರಣವು ಸಡಿಲ ಆಗುವದೆಂದರೆ ವಿವೇಕವು ಆವರಣವನ್ನು ಕಿತ್ತು ಬಾಜೂಕ್ಕೆ ಸರಿಸುವದು. ಅಂದರೆ ಇದೇ ವೈರಾಗ್ಯವಾಗಿದೆ. (೫೮) ಈ ದೃಶ್ಯ ವಿಶ್ವದ ಒಳಗೂ ಮತ್ತು ಹೊರಗೂ ಪಂಚಮಹಾಭೂತಗಳು ಸಂಪೂರ್ಣ ತುಂಬಿರುವವು. ದೃಶ್ಯ ಮತ್ತು ಪಂಚಭೂತ ಈ ಎರಡರಲ್ಲಿಯೂ ಐಕ್ಯದ ಬೆಸುಗೆ ಬಿದ್ದಿರುವದು. ದೃಶ್ಯವೇ ಪಂಚಭೂತ ಮತ್ತು ಪಂಚಭೂತವೆಂದರೇ ದೃಶ್ಯ ಹೀಗೆ ಪರಸ್ಪರ ಐಕ್ಯದ ಬೆಸುಗೆ ಇರುವದು.(೫೯) ಸಾರಾಂಶ:– ಎಲ್ಲ ದೃಶ್ಯವೂ ಪಂಚಭೂತಗಳಿಂದ ತಯಾರಾಗಿದೆ. ಪಂಚಭೂತಗಳಿಂದ ಕ್ರಮಕ್ರಮವಾಗಿ ವಿಶ್ವದ ರಚನೆಯಾಯಿತು. ಶ್ರೋತಾರರು ಸಾವಕಾಶವಾಗಿ ಸಾವಧತನದಿಂದ ಕೇಳಬೇಕು. (೬೦)

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದ ಎಂಟನೆಯ ದಶಕದೊಳಗಿನ
"ಸೂಕ್ಷ್ಮ ಪಂಚಭೂತೇ ನಿರೂಪಣ"ವೆಂಬ ನಾಲ್ಕನೆಯ ಸಮಾಸವು ಮುಗಿದುದು.

### ಸಮಾಸ ಪಂಚಮ : ಸ್ಥೂಲಪಂಚಮಹಾಭೂತೇಸ್ವರೂಪಾಕಾಶಭೇದೋನಾಮ

॥ಶ್ರೀರಾಮ॥ ಕೇವಳ ಮೂರ್ಖ ತೇ ನೇಣೆ । ಮ್ಹಣೌನ ಘಡಲೆ ಸಾಂಗಣೇ ।
ಪಂಚಭೂತಾಂಚೀ ಲಕ್ಷಣೇ । ವಿಶದ ಕರೂನಿ ॥೧॥

ಪಂಚಭೂತಾಂಚಾ ಕರ್ದಮ ಜಾಲಾ । ಆತಾ ನವಚೆ ವೇಗಳಾ ಕೇಲಾ ।
ಪರಂತು ಕಾಹೀ ಯೇಕ ವೆಗಳಲಾ । ಕರೂನ ದಾವೂ ॥೨॥

ಪರ್ವತ ಪಾಷಾಣ ಶಿಳಾ ಶಿಖರೇ । ನಾನಾ ವರ್ಣೇ ಲಾಹಾನ ಥೋರೇ ।
ಖಡೆ ಗುಂಡೆ ಬಹು ಪ್ರಕಾರೇ । ಜಾಣಿಜೆ ಪೃಥ್ವೀ ॥೩॥

ನಾನಾ ರಂಗಾಚೀ ಮೃತ್ತಿಕಾ । ನಾನಾ ಸ್ಥಳೋಸ್ಥಳೀ ಜೆ ಕಾ ।
ವಾಳುಕೇ ವಾಳು ಅನೇಕಾ । ಮಿಳೋನ ಪೃಥ್ವೀ ॥೪॥

ಪುರೇ ಪಟ್ಟಣೇ ಮನೋಹರೇ । ನಾನಾ ಮಂದಿರೇ ದಾಮೋದರೇ ।
ನಾನಾ ದೇವಾಳಯೇ ಶಿಖರೇ । ಮಿಳೋನ ಪೃಥ್ವೀ ॥೫॥

ಸಪ್ತ ದ್ವೀಪಾವತೀ ಪೃಥ್ವೀ । ಕಾಯೆ ಮ್ಹಣೋನಿ ಸಾಂಗಾವೀ ।
ನವ ಖಂಡೇ ಮಿಳೋನ ಜಾಣಾವೀ । ವಸುಂಧರಾ ॥೬॥

ನಾನಾ ದೇವ ನಾನಾ ನೃಪತೀ । ನಾನಾ ಭಾಷಾ ನಾನಾ ರಿತೀ ।
ಲಕ್ಷ ಚೌರ್‍ಯಾಸೀ ಉತ್ಪತ್ತೀ । ಮಿಳೋನ ಪೃಥ್ವೀ ॥೭॥

ನಾನಾ ಉದ್ವಸೇ ಜೇ ವನೇ । ನಾನಾ ತರೂವರಾಂಚೀ ಬನೇ ।
ಗಿರೀಕಂದರೇ ನಾನಾ ಸ್ಥಾನೇ । ಮಿಳೋನ ಪೃಥ್ವೀ ॥೮॥

ನಾನಾ ರಚನಾ ಕೇಲೀ ದೇವೀ । ಜೆ ಜೆ ನಿರ್ಮಿಲೀ ಮಾನವೀ ।
ಸಕಳ ಮಿಳೋನ ಪೃಥ್ವೀ । ಜಾಣಿಜೆ ಶ್ರೋತೀ ॥೯॥

ನಾನಾ ಧಾತು ಸುವರ್ಣಾದಿಕ । ನಾನಾ ರತ್ನೇ ಜೆ ಅನೇಕ ।
ನಾನಾ ಕಾಷ್ಠ್ಯವೃಕ್ಷಾದಿಕ । ಮಿಳೋನ ಪೃಥ್ವೀ ॥೧೦॥

ಆತಾ ಅಸೋ ಹೇ ಬಹುವಸ । ಜಡಾಂಶ ಆಣೇ ಕಠಿನಾಂಶ ।
ಸಕಳ ಪೃಥ್ವೀ ಹಾ ವಿಶ್ವಾಸ । ಮಾನಿಲಾ ಪಾಹಿಜೆ ॥೧೧॥

# ದಶಕ ೮. ಸಮಾಸ ೫. (ನುಡಿ ೭೦)
## "ಸ್ಥೂಲ ಪಂಚ ಮಹಾಭೂತೇ ಸ್ವರೂಪಾಕಾಶ ಭೇದೋ ನಾಮ"

ಈ ಎಲ್ಲ ದೃಶ್ಯವಿಶ್ವವು ಪಂಚಭೂತಗಳಿಂದ ಆಗಿದೆ. ಅರ್ಥಾತ್ ನಮಗೆ ಕಾಣುವ ಎಲ್ಲ ಪದಾರ್ಥಗಳು ಪಂಚಭೂತಾತ್ಮಕವೇ ಇರುವವು. ಪ್ರತಿಯೊಂದು ಮಹಾಭೂತದ ಪ್ರಧಾನ (ಮುಖ್ಯ) ಗುಣಗಳ ವಿವರಣೆ ಈ ಮೊದಲೇ ಮಾಡಿಕೊಟ್ಟದ್ದಾಗಿದೆ. ಆದ್ದರಿಂದ ಈ ಸಮಾಸದಲ್ಲಿ ಪೃಥ್ವಿಯಿಂದ, ನೀರಿನಿಂದ, ತೇಜದಿಂದ ಮತ್ತು ವಾಯುವಿನಿಂದ ತಯಾರಾಗುವ ಪದಾರ್ಥಗಳು ಯಾವವು, ಇದರ ವರ್ಣನೆ ಇರುವದು. ಆಕಾಶದ ಗುಣಧರ್ಮದ ಬಗ್ಗೆ ನೋಡಿದರೆ ಇದನ್ನು ಸದ್ವಸ್ತುವೆಂದು ತಿಳಿಯಲು ಒಪ್ಪಲು ಆತಂಕ ಇರುವದಿಲ್ಲ ಅನ್ನುವ ಆಕ್ಷೇಪ ಎತ್ತಿ ಕೊಂಡು ಹಾಗೆ ಇದನ್ನು ಒಪ್ಪಲಿಕ್ಕೆ ಬರುವದಿಲ್ಲ. ಅನ್ನುವ ವಿವರವನ್ನು ಚನ್ನಾಗಿ ತಿಳಿಯುವಂತೆ ಹೇಳಿರುವರು.

### ಸಮಾಸ ೫ : ಸ್ಥೂಲ ಪಂಚ ಮಹಾಭೂತೇ ಸ್ವರೂಪಾಕಾಶ ಭೇದೋ ನಾಮ

ಮೊದಲಿಗೆ ಪೃಥ್ವಿಯಿಂದ ಆದಂಥ ಪದಾರ್ಥಗಳನ್ನು ಹೇಳುವರು. ಯಾರು ಅಗದೀ ಮಂದಬುದ್ಧಿ ಯವರು ಇರುವರೋ ಅಂಥವರಿಗೆ ವಿಷಯ ಬೇಗ ತಿಳಿಯುವದಿಲ್ಲವೆಂದು ನಾವು ಪಂಚಭೂತಗಳ ಲಕ್ಷಣಗಳನ್ನು ಹೆಚ್ಚು ಸ್ಪಷ್ಟವಾಗಿ ಸುಲಭವಾಗಿ ತಿಳಿಯುವಂತೆ ಈಗ ಹೇಳುವೆವು. (೧) ವಾಸ್ತವಿಕವಾಗಿನೋಡಿದರೆ ಈ ಪಂಚ ಮಹಾಭೂತಗಳು ಪರಸ್ಪರ ಒಂದರಲ್ಲೊಂದು ಕೂಡಿ ಮಿಶ್ರವಾಗಿ ಇದರದೇ ಕಲಿಸಿದ[ಕೂಡಿದ] ರೊಜ್ಜು(ಮಣ್ಣನ್ನು ಕಲಿಸಿದ ಜಿಗಟು ಅರಲು) ಆಗಿದೆ. ಈಗ ಇವುಗಳನ್ನು ಒಂದೊಂದಾಗಿ ಬೇರೆ ತೆಗೆಯಲಿಕ್ಕೆ ಬರುವದಿಲ್ಲ. ಆದರೂ ಇದ್ದದ್ದರಲ್ಲಿಯೇ ಪ್ರತ್ಯೇಕವಾಗಿ ಎಷ್ಟನ್ನು ಗುರುತಿಸಿ ತೋರಿಸಲಿಕ್ಕೆ ಬರುವದೋ ಅಷ್ಟನ್ನು ತೋರಿಸಿ ಕೊಡು ವೆನು. (೨) ಪರ್ವತ, ಕಲ್ಲು, ದೊಡ್ಡ ಬಂಡೆಗಲ್ಲು, ಶಿಖರ ಮತ್ತು ಅವುಗಳ ಅನೇಕ ಪ್ರಕಾರದ ಬಣ್ಣಗಳು, ಸಣ್ಣ ದೊಡ್ಡ ಆಕಾರದ ಕಲ್ಲುಗಳು, ಹರಳುಗಳು, ದುಂಡುಕಲ್ಲುಗಳು ಇವೆಲ್ಲ ಪೃಥ್ವಿಯವೇ ಇರುವವು. (೩) ನಾನಾ ಸ್ಥಳಗಳಲ್ಲಿ ಕಾಣುವ ಅನೇಕ ಪ್ರಕಾರದ ಬಣ್ಣವಿರುವ ಮಣ್ಣುಗಳು, ದಪ್ಪ ಮತ್ತು ಸಣ್ಣಗಿರುವ ಉಸಕಿನ ಅನೇಕ ಪ್ರಕಾರಗಳು, ಇವೆಲ್ಲ ಪೃಥ್ವೀಮಯವಿರುವವು. (೪) ಗ್ರಾಮಗಳು, ಸುಂದರ ಶಹರಗಳು, ಅನೇಕ ಪ್ರಕಾರದ ಸಾಮಾನ್ಯ ಮತ್ತು ಸುಂದರ ಹಾಗೂ ರತ್ನಖಚಿತ ಮಂದಿರಗಳು. ಇವುಗಳ ಅನೇಕ ತರಹದ ಶಿಖರಗಳು ಇವೆಲ್ಲ ಪೃಥ್ವಿಮಯವಿರುವವು. (೫) ಪೃಥ್ವಿಯು ಏಳುದ್ವೀಪಗಳಲ್ಲಿ ವಿಭಾಗಿಸಲ್ಪಟ್ಟಿದೆ. ಇವರ ವರ್ಣನೆಯನ್ನು ಎಷ್ಟೆಂದು ಹೇಳುವದು? ನವಖಂಡ (ಒಂಭತ್ತು ಭಾಗ)ಗಳು ಕೂಡ ಎಲ್ಲವೂ ಪೃಥ್ವಿಯೇ ಆಗಿರುವದು. ನವಖಂಡಗಳು ಯಾವ ವೆಂದರೆ:–ಇಲಾವೃತ್ತ, ಭದ್ರಾಶ್ವ, ಹರಿವರ್ಷ, ಕಿಂಪುರುಷ, ಕೇತುಮಾಲ, ರಮ್ಯಕ, ಭರತ, ಹಿರಣ್ಮಯ, ಮತ್ತು ಉತ್ತರ ಕುರು ಈ ಹೆಸರಿನವು ಇರುವವು.(ಇವುಗಳಲ್ಲಿ ಏಕವಾಕ್ಯತೆ ಇಲ್ಲ).(೬)ಎಷ್ಟೆಷ್ಟೋ ದೇವದೇವತೆಗಳು,ಎಷ್ಟೆಷ್ಟೋ ರಾಜರು ಅನೇಕ ತರಹದ ಭಾಷೆಗಳನ್ನು ಮಾತನಾಡುವವರು, ಅನೇಕ ರೀತಿಯ ನಡತೆ-ನಡಾವಳಿಯ ಜನರು ಹೀಗೆ ಎಂಭತ್ನಾಲ್ಕು ಲಕ್ಷ ಯೋನಿಯ ಪ್ರಾಣಿಗಳು ಇವೆಲ್ಲವೂ ಕೂಡ ಪೃಥ್ವಿಯೇ ಆಗಿದೆ. (೭) ಹಾಳು ಬಿದ್ದ ಅರಣ್ಯ, ಬೇರೆಬೇರೆ ದೊಡ್ಡ ಗಿಡಮರಗಳಿಂದ ಪೂರ್ಣ ತುಂಬಿದ ದಟ್ಟವಾದ ಅರಣ್ಯ (ಜಂಗಲ್), ಗುಡ್ಡ, ದರಿ, ಕಣಿವೆ ಇತ್ಯಾದಿ ನಾನಾ ರೀತಿಯ ಸ್ಥಳಗಳೆಲ್ಲ ಕೂಡಿ ಪೃಥ್ವಿಯೇ ಆಗಿದೆ. (೮) ನಿಸರ್ಗವು ರಚಿಸಿದ ನಾನಾ ಪ್ರಕಾರಗಳು, ಮನುಷ್ಯ ರಚಿಸಿದ ನಾನಾ ಪ್ರಕಾರಗಳು, ಇವೆಲ್ಲ ಕೂಡಿಯೇ ಪೃಥ್ವಿ ಆಗಿರುವದು. ಇದನ್ನು ಶ್ರೋತಾರರು ಲಕ್ಷಿಸ ಬೇಕು. (೯) ಬಂಗಾರ, ಬೆಳ್ಳಿ, ಕಬ್ಬಿಣ ಇತ್ಯಾದಿ ನಾನಾ ನಮೂನೆಯ ಧಾತುಗಳು, ನಾನಾ ಪ್ರಕಾರದ ರತ್ನಗಳು, ಅನೇಕ ಪ್ರಕಾರದ ಕಟ್ಟಿಗೆಗಳು ಮತ್ತು ಗಿಡ ಮರಗಳು ಇವೆಲ್ಲ ಕೂಡಿ ಪೃಥ್ವಿಯೇ ಆಗಿರುವದು. (೧೦) ಇನ್ನು ಹೆಚ್ಚಿನ ಉದಾಹರಣೆ ಸಾಕು. ಯಾವ ಯಾವುದು ಅಚೇತನ ಮತ್ತು ಕಠಿಣ ಇರುವದೋ (ಜಡಾಂಶ) ಕಠಿಣಾಂಶ ಅದೆಲ್ಲವೂ ಪೃಥ್ವಿಯವೇ ಇರುವದು. ಇದರಲ್ಲಿ ವಿಶ್ವಾಸವಿಡಿರಿ. (೧೧)

ಬೋಲಿಲೇ ಪೃಥ್ವೀಚೇ ರೂಪ । ಆತಾ ಸಾಂಗಿಜೇಲ ಆಪ ।
ಶ್ರೋತೀ ವೊಳಖಾವೇ ರೂಪ । ಸಾವಧ ಹೋಉನೀ ॥೧೨॥
ವಾಪೀ ಕೂಪ ಸರೋವರ । ನಾನಾ ಸರಿತಾಂಚೇ ಜೇ ನೀರ ।
ಮೇಘ ಆಣೀ ಸಪ್ತ ಸಾಗರ । ಮಿಳೋನ ಆಪ ॥೧೩॥
ಶ್ಲೋಕಾರ್ಥ : ಕ್ಷಾರ ಕ್ಷೀರ ಸುರಾಸರ್ಪಿರ್ದಧಿ ಇಕ್ಷುರ್ಜಲಂ ತಥಾ ॥೪॥
ಕ್ಷಾರ ಸಮುದ್ರ ದಿಸತಾಹೆ । ಸಕಳ ಜನ ದೃಷ್ಟೀಸ ಪಾಹೆ ।
ಜೇಥೇ ಲವಣ ಹೋತಾಹೆ । ತೋಚಿ ಕ್ಷಾರಸಿಂಧು ॥೧೪॥
ಯೇಕ ದುಧಾಚಾ ಸಾಗರ । ತ್ಯಾ ನಾಂವ ಕ್ಷೀರ ಸಾಗರ ।
ದೇವೇ ದಿಧಲಾ ನಿರಂತರ । ಉಪಮನ್ಯಾಸೀ ॥೧೫॥
ಯೇಕ ಸಮುದ್ರ ಮದ್ಯಾಚಾ । ಯೇಕ ಜಾಣಾವಾ ಘೃತಾಚಾ ।
ಯೇಕ ನಿಖಳ ದಹ್ಯಾಚಾ । ಸಮುದ್ರ ಅಸೆ ॥೧೬॥
ಯೇಕ ಉಸಾಚ್ಯಾ ರಸಾಚಾ । ಯೇಕ ತೋ ಶುದ್ಧ ಜಳಾಚಾ।
ಐಸಾ ಸಾತಾ ಸಮುದ್ರಾಚಾ । ವೇಢಾ ಪೃಥ್ವೀಯೆಸೀ ॥೧೭॥
ಏವಂ ಭೂಮಂಡಳೀಚೇ ಜಳ। ನಾನಾ ಸ್ಥಳೀಚೇ ಸಕಳ ।
ಮಿಳೋನ ಅವಘೇ ಕೇವಳ । ಆಪ ಜಾಣಾವೇ ॥೧೮॥
ಪೃಥ್ವೀಗರ್ಭೀ ಕಿತೀ ಯೇಕ । ಪೃಥ್ವೀತಳೀ ಆವರ್ಣೋದಕ ।
ತಿಹೀ ಲೋಕೀಚೇ ಉದಕ । ಮಿಳೋನ ಆಪ ॥೧೯॥
ನಾನಾ ವಲ್ಲೀ ಬಹುವಸ । ನಾನಾ ತರೂವರಾಚೆ ರಸ ।
ಮಧ ಪಾರಾ ಅಮೃತ ವಿಷ । ಮಿಳೋನ ಆಪ ॥೨೦॥
ನಾನಾ ರಸ ಸ್ನೇಹಾದಿಕ । ಯಾ ಹಿ ವೇಗಳೆ ಅನೇಕ ।
ಜಳಾವೇಗಳೇ ಅವಶ್ಯಕ । ಆಪ ಬೋಲಿಜೆ ॥೨೧॥
ಸಾರದ್ರ ಆಣೀ ಸೀತಳ । ಜಳಾಸಾರಿಖೇ ಪಾತಳ ।
ಶುಕ್ಲೀತ ಶ್ರೋಣೀತ ಮೂತ್ರ ಲಾಳ । ಆಪ ಬೋಲಿಜೆ ॥೨೨॥
ಆಪ ಸಂಕೇತೇ ಜಾಣಾವೇ । ಪಾತಳ ಮ್ರೋಲೇ ವೊಳಖಾವೇ ।
ಮೃದ ಸೀತಳ ಸ್ವಭಾವೇ । ಆಪ ಬೋಲಿಜೇ ॥೨೩॥
ಜಾಲಾ ಆಪಾಚಾ ಸಂಕೇತ । ಪಾತಳ ಮೃದ ಗುಳಗುಳಿತ ।
ಸ್ವೇದ ಶ್ಲೇಷ್ಮಾ ಅಶ್ರು ಸಮಸ್ತ । ಆಪ ಜಾಣಾವೇ ॥೨೪॥
ತೇಜ ಏಕಾ ಸಾವಧಪಣೇ । ಚಂದ್ರ ಸೂರ್ಯ ತಾರಾಂಗಣೇ ।
ದಿವ್ಯದೇಹ ಸತೇಜಪಣೇ । ತೇಜ ಬೋಲಿಜೇ ॥೨೫॥

ಇನ್ನು ಮೇಲೆ ನೀರಿನಿಂದ ಆದಂಥ ಪದಾರ್ಥಗಳನ್ನು ಹೇಳುವರು. ಈ ವರೆಗೆ ಪೃಥ್ವಿಯ ರೂಪದ ಬಗೆಗೆ ಹೇಳಿದೆವು. ಈಗ ನೀರು ಹೇಗೆ ಕಾಣುವದು ಇದನ್ನು ಹೇಳುವೆವು. ಶ್ರೋತಾ ಜನ ನೀರಿನ ರೂಪದ ಬಗೆಗೆ ಲಕ್ಷ್ಯಗೊಟ್ಟು ಕೇಳಿರಿ. (೧೨) ಬಾವಿ, ಹೊಂಡ, ಕೆರೆ, ಸರೋವರ ಮತ್ತು ಬೇರೆಬೇರೆ ನದಿಗಳಲ್ಲಿಯ ನೀರು, ಮೋಡ ಮತ್ತು ಏಳು ಸಮುದ್ರ ಇವೆಲ್ಲ ಕೂಡಿ ನೀರೇ ಆಗಿರುವದು. ಶ್ಲೋಕಾರ್ಥ:— ಕ್ಷಾರ, ಕ್ಷೀರ, ಸುರಾ, ಸರ್ಪಿರ್ದಧಿ ಇಕ್ಷು ಜಲಂ ತಥಾ॥ಛ॥ ಶ್ಲೋಕಾರ್ಥ:— ಉಪ್ಪಿನ, ಹಾಲಿನ, ಸೆರೆಯ [ದಾರೂದ] ತುಪ್ಪದ, ಮೊಸರಿನ, ಕಬ್ಬಿನರಸದ, ಮತ್ತು ಸಿಹಿ ನೀರಿನ ಹೀಗೆ ಏಳು ಪ್ರಕಾರದ ಸಮುದ್ರಗಳಿರುವವು. (೧೩) ಕ್ಷಾರ ಸಮುದ್ರ ಇದು ಯಾವಾಗಲೂ ನೋಡಲಿಕ್ಕೆ ಸಿಗುವದು. ಇದು ಎಲ್ಲರಿಗೂ ಗೊತ್ತಿರುವದು. ಇದರಿಂದ ಉಪ್ಪು ಹೊರಡುವದು. ಆದ್ದರಿಂದ ಇದು ಉಪ್ಪಿನ ಸಮುದ್ರವಾಗಿದೆ. (೧೪) ಒಂದು ಹಾಲಿನ ಸಾಗರವಿರುವದು. ಇದಕ್ಕೆ ಕ್ಷೀರ ಸಮುದ್ರ ಅಥವಾ ಕ್ಷೀರಸಾಗರ ಅನ್ನುವರು. ಉಪಮನ್ಯು ಅನ್ನುವವನಿಗೆ ದೇವನು ಇದನ್ನು ಕಾಯಂ ಆಗಿ ಕೊಟ್ಟು ಬಿಟ್ಟನು. ಈ ಉಪಮನ್ಯುವು ವ್ಯಾಘ್ರವಾದ ಋಷಿಯ ಮಗನು. ಮನೆತನದಿಂದ ಬಡವರು. ತಾಯಿ ಮಗನಿಗೆ ನೀರಿನಲ್ಲಿ ಹಿಟ್ಟು ಕಲಿಸಿ ಹಾಲು ಎಂದು ಹೇಳಿ ಕೊಡುತ್ತಿದ್ದಳು. ಒಂದು ದಿವಸ ಹೊರಗೆ ಹೋದಾಗ ಅವನ ಮಿತ್ರನ ಮನೆಯಲ್ಲಿ ನಿಜವಾದ ಹಾಲು ಕುಡಿಯಲು ಸಿಕ್ಕಿತು. ಮನೆಗೆ ಬಂದ ಮೇಲೆ ತಾಯಿಗೆ ನಿಜವಾದ ಹಾಲು ಕುಡಿಯಲು ಕೊಡಬೇಕೆಂದು ಬೇಡಿದನು. ಆಗ ತಾಯಿಯು ದೇವರಲ್ಲಿ ಇದನ್ನು ಬೇಡಿ ಪಡೆಯಲು ಹೇಳಿದಳು. ಉಪಮನ್ಯುವು ತಪಶ್ಚರ್ಯ ಮಾಡಿ ದೇವ ರನ್ನು ಒಲಿಸಿಕೊಂಡನು ಮತ್ತು ಖರೇ ಹಾಲು ಕುಡಿಯಲಿಕ್ಕೆ ಬೇಡಿದನು. ಆಗ ದೇವರು ಇವನಿಗೆ ಕ್ಷೀರ ಸಾಗರವನ್ನೇ ಕೊಟ್ಟು ತೃಪ್ತಿಪಡಿಸಿದನು. (೧೫) ಒಂದು ಸಾಗರ ಸೆರೆಯದು. ಒಂದು ಸಾಗರ ಕರಗಿದ ತುಪ್ಪದ್ದು ಇರುವದು. ಒಂದು ಸಾಗರ ಶುದ್ಧ ಮೊಸರಿನದಿರುವದು. (೧೬) ಒಂದು ಸಾಗರ ಕೇವಲ ಕಬ್ಬಿನ ರಸದ್ದಿರುವದು. ಒಂದುಸಾಗರ ಶುದ್ಧ ಸಿಹಿ ನೀರಿನದಿರುವದು. ಅಂತೂ ಪೃಥ್ವಿಯ ಸುತ್ತಲೂ ಏಳು ಸಮುದ್ರಗಳು ಸುತ್ತಿಕೊಂಡಿರುವವು.(೧೭)ಇದ ರಂತೆ ಪೃಥ್ವಿಯ ಮೇಲೆ ಸುತ್ತುಮುತ್ತಲು ಅನೇಕ ಸ್ಥಳದಲ್ಲಿ ನೀರುಇರುವದು ಇದೆಲ್ಲಕೂಡಿ ನೀರೇಆಗಿರುವದು.[೧೮] ಪೃಥ್ವಿಯ ಹೊಟ್ಟೆಯಲ್ಲಿ ನೀರಿರುವದು. ಪೃಥ್ವಿಯ ಸುತ್ತುಮುತ್ತಲೂ ನೀರಿರುವದು. ಮೂರೂ ಲೋಕಗಳಲ್ಲಿ ಸಹ ನೀರಿರುವದು.ಇದೆಲ್ಲವೂ ನೀರೇ ಆಗಿದೆ.(೧೯) ನಾನಾ ತರಹದ ಬಳ್ಳಿಗಳು, ಅನೇಕ ಪ್ರಕಾರದ ಗಿಡದ ರಸಗಳು, ಜೇನುತುಪ್ಪ, ಪಾರಜ, ಅಮೃತ, ವಿಷ,ಇವೆಲ್ಲವೂ ನೀರೇ ಆಗಿರುವದು. (೨೦) ಎಣ್ಣೆಯಂಥ ಸ್ನಿಗ್ಧವಿರುವ ಅನೇಕ ಪ್ರವಾಹಿ (ಹರಿಯುವ) ಪದಾರ್ಥಗಳಿರುವವು. ಇವು ನೀರಿಗಿಂತ ಬೇರೆಯಾಗಿ ಕಂಡರೂ ಇವೆಲ್ಲ ರಸ ಅಂದರೆ ದ್ರವ ಪದಾರ್ಥಗಳು ನೀರಿನವೇ ಎಂದು ತಿಳಿಯಬೇಕು. (೨೧) ನೀರಿನಂತೆ ಇರುವ ತೆಳ್ಳಗಿನ ಪದಾರ್ಥಗಳು ಉದಾ:— ರೇತಸ್ಸು, ರಕ್ತ, ಮೂತ್ರ, ಜೊಲ್ಲು ಇತ್ಯಾದಿ ಯಾವುದು ಹಸಿ ಮತ್ತು ತಣ್ಣಗೆ, ತೆಳ್ಳಗೆ ಅಥವಾ ಪ್ರವಾಹಿ ಇರುವದೋ ಅವೆಲ್ಲ ನೀರೆ ಆಗಿರುವದು. (೨೨) ಸಾರಾಂಶ:— ಆಪ್, ಅಂದರೆ ನೀರು ಎಂದು ತಿಳಿಯಬೇಕು. ಯಾವ ಪದಾರ್ಥ ಸ್ವಾಭಾವಿಕವಾಗಿ ತೆಳ್ಳಗೆ ಹಸಿಯಾಗಿ, ಮೃದುವಾಗಿ ಮತ್ತು ಪ್ರವಾಹಿ ತಣ್ಣಗೆ ಇರುವದೋ ಅದೆಲ್ಲ ನೀರಿನ ಅಂಶವೇ ಇರುವದು. (೨೩) ನೀರಿನ ಗುರುತು ಹೇಳಿದ್ದಾಯಿತು. ಯಾವಯಾವುದು ತೆಳ್ಳಗೆ, ಮೃದು ವಾಗಿ, ಹಸಿಯಾಗಿರುವ ಅಂದರೆ ಕೈಜಾರಿ ಹೋಗುವಂತಹ ಅತಿಮೃದು ಇರುವ ಹಸಿ(ಗುಳಗುಳಿತ) ಉದಾ:-ಬೆವರು, ಕಫ, ಅಶ್ರು, ಆಮ ಇತ್ಯಾದಿ ಇವೆಲ್ಲ ನೀರೇ ಆಗಿರುವವು. (೨೪) ಇನ್ನು ತೇಜ (ಅಗ್ನಿ)ದ ಸಂಕೇತಗಳ ವರ್ಣನೆ ಯನ್ನು ಮಾಡುವರು:— ಈಗ ತೇಜದ ಬಗ್ಗೆ ಹೇಳುವೆನು. ಸಾವಧರಾಗಿ ಕೇಳಿರಿ. ಚಂದ್ರ, ಸೂರ್ಯ, ನಕ್ಷತ್ರಗಳ ಸಮೂಹ, ತೇಜೋಮಯವಾದ ದಿವ್ಯದೇಹ ಇವೆಲ್ಲ ತೇಜೋಮಯವಿರುವವು. ಎಲ್ಲಿ ಉಷ್ಣತೆ ಮತ್ತು ದಾಹಕ ಸಾಮರ್ಥ್ಯ (ಸುಡುವಶಕ್ತಿ)ವಿರುವದೋ ಅಲ್ಲಿ ಮತ್ತು ಪ್ರಕಾಶವು ಎಲ್ಲಿ ಕಾಣುವದೋ ಅಲ್ಲಿ ತೇಜವಿರುವದೆಂದು ತಿಳಿಯಬೇಕು. (೨೫)

ವನ್ಹೀ ಮೇಘೀ ವಿದ್ಯುಲ್ಲತಾ । ವನ್ಹೀ ಸೃಷ್ಟೀ ಸಂಹಾರಿತಾ ।
ವನ್ಹೀ ಸಾಗರಾ ಜಾಳಿತಾ । ವಡವಾನಳು ॥೨೬॥

ವನ್ಹೀ ಶಂಕರಾಚೆ ನೇತ್ರೀಚಾ । ವನ್ಹೀ ಕಾಳಾಚೆ ಕ್ಷುಧೇಚಾ ।
ವನ್ಹೀ ಪರೀಘು ಭೂಗೋಳಾಚಾ । ತೇಜ ಬೋಲಿಜೆ ॥೨೭॥

ಜೇ ಜೇ ಪ್ರಕಾಶರೂಪ । ತೇ ತೇ ತೇಜಾಚೇ ಸ್ವರೂಪ ।
ಶೋಷಕ ಉಷ್ಣಾದಿ ಆರೋಪ । ತೇಜ ಜಾಣಾವೇ ॥೨೮॥

ವಾಯೋ ಜಾಣಾವಾ ಚಂಚಳ । ಚೈತನ್ಯ ಚೇತವೀ ಕೇವಳ ।
ಬೋಲಣೇ ಚಾಲಣೇ ಸಕಳ । ವಾಯೋಮುಳೇ ॥೨೯॥

ಹಾಲೆ ಡೋಲೆ ತಿತುಕಾ ಪವನ । ಕಾಂಹೀ ನ ಚಲೆ ಪವನೇ ವಿಣ ।
ಸೃಷ್ಟೀ ಚಾಳಾಯಾ ಕಾರಣ । ಮೂಳ ತೋ ವಾಯೋ ॥೩೦॥

ಚಳಣ ವಳಣ ಆಣೀ ಪ್ರಾಸಾರಣ । ನಿರೋಧ ಆಣೀ ಅಕೋಚನ ।
ಸಕಳ ಜಾಣಾವಾ ಪವನ । ಚಂಚಳರೂಪೀ ॥೩೧॥

ಪ್ರಾಣ ಅಪಾನ ಆಣೀ ವ್ಯಾನ । ಚೌಥಾ ಉದಾನ ಆಣೀ ಸಮಾನ ।
ನಾಗ ಕೂರ್ಮ ಕರ್ಕಶ ಜಾಣ । ದೇವದತ್ತ ಧನಂಜಯೆ ॥೩೨॥

ಜಿತುಕೇ ಕಾಹೀ ಹೋತೇ ಚಳಣ । ತಿತುಕೇ ವಾಯೋಚೇ ಲಕ್ಷಣ ।
ಚಂದ್ರ ಸೂರ್ಯ ತಾರಾಗಣ । ವಾಯೋ ಚಿ ಧರ್ತಾ ॥೩೩॥

ಆಕಾಶ ಜಾಣಾವೇ ಪೋಕಳ । ನಿರ್ಮಳ ಆಣೀ ನಿಶ್ಚಳ ।
ಅವಕಾಶರೂಪ ಸಕಳ । ಆಕಾಶ ಜಾಣಾವೇ ॥೩೪॥

ಆಕಾಶ ಸಕಳಾಸ ವ್ಯಾಪಕ । ಆಕಾಶ ಅನೇಕೀ ಯೇಕ ।
ಆಕಾಶಾಮಧ್ಯೇ ಕೌತುಕ । ಚಹೂ ಭೂತಾಂಚೇ ॥೩೫॥

ತೇಜ ಅಂದರೆ ಅಗ್ನಿಯು, ಮೇಘದಲ್ಲಿ ಸಿಡಿಲು, ಮಿಂಚುಗಳ ರೂಪದಲ್ಲಿ ಅಗ್ನಿ ಕಾಣುವದು ಪ್ರಳಯ ಕಾಲದ ಅಗ್ನಿಯು ಸೃಷ್ಟಿಯ ಸಂಹಾರ ಮಾಡುವದು. ವಡವಾಗ್ನಿಯು ಸಮುದ್ರವನ್ನು ಸುಡುವದು. (೨೬) ಶ್ರೀ ಶಂಕರನ ಮೂರನೆಯ ನೇತ್ರದಲ್ಲಿ ಅಗ್ನಿ ಇರುವದು. ಕಾಲನು ಸರ್ವಭಕ್ಷಕನಾಗಿರುವನು. ಅಗ್ನಿಯು ಕಾಲನ ಹಸಿವೆ ಅನಿಸುವನು. ಇವನು ಎಲ್ಲವನ್ನೂ ಸುಟ್ಟು ತಿಂದು ಬಿಡುವನು. ಅಗ್ನಿಯು ಸರ್ವ ಪೃಥ್ವಿಯನ್ನು ಸುತ್ತುವರಿದಿದೆ. ಇದಕ್ಕೆ ಆವರಣಾನಳ ಅನ್ನುವರು. ಭೂಮಿಯ ಮೇಲೆ ಯಾವಾಗ್ಗೆ ಅಂದರೆ ಅಗ್ಗೆ, ಎಲ್ಲಿಬೇಕಲ್ಲಿ, ಬೆಂಕಿ ಹತ್ತುವದು, ಇವೆಲ್ಲವೂ ತೇಜದ ಪ್ರಕಾರವೆಂದು ತಿಳಿಯಬೇಕು. (೨೭) ಯಾವ ಯಾವುದು ಪ್ರಕಾಶಮಯವಿರುವದೋ ಅ ಎಲ್ಲವೂ ತೇಜದ ರೂಪವೇ ಇರುವದು. ಶೋಷಿಸುವ (ಹೀರುವ) ಅಥವಾ ಒಣಗಿಸುವ, ಶುಷ್ಕಗೊಳಿಸುವ ಅಥವಾ ಅಟ್ಟಿಸಿ ಬಿಡುವಂಥಹುದು ಮತ್ತು ಬೆಚ್ಚಗಿರುವ, ಸುಡುವಂಥ ಇವೆಲ್ಲ ಶಬ್ದಗಳು ತೇಜದ ಇರುವಿಕೆಯನ್ನು ತೋರಿಸುವವು. (೨೮) ಇನ್ನು ಮೇಲೆ ವಾಯುವಿನ ಗುರುತನ್ನು ವರ್ಣನೆ ಮಾಡುವರು. ವಾಯು ಚಂಚಲವಿರುವದು. ವಾಯುವಿನಿಂದ ಯಾವತ್ತೂ ಜೀವಿಗಳು ಬದುಕಿರುವವು. ಜೀವಂತತನವಿರುವದು. ಜೀವಂತತನವೆಂದರೆ ಚೈತನ್ಯವು. ಚೈತನ್ಯದಿಂದ ಜೀವ ಪ್ರಾಣಿಯು ಚಲನವಲನ-ಚಲಿಸುವಿಕೆ, ಹಾಲಚಾಲ (ಮಿಸುಕಾಟ) ಮಾಡುವದು. ಪ್ರಾಣಿಗಳ ಮಾತನಾಡುವಿಕೆ ನಡೆದಾಡುವಿಕೆಗಳೆಲ್ಲ ವಾಯುವಿನಿಂದಲೇ ಆಗುವವು. (೨೯) ದೃಶ್ಯವಸ್ತುವಿನಲ್ಲಿಯ ಎಲ್ಲ ಹಾಲಚಾಲ ಮಿಸುಕಾಟ ಚಟುವಟಿಕೆಗಳು ವಾಯುವಿನ ಸಾಮರ್ಥ್ಯದಿಂದ ನಡೆಯುವವು. ವಾಯು ಇಲ್ಲದಿದ್ದರೆ ಎಲ್ಲ ಚಟುವಟಿಕೆಗಳು ಸ್ತಬ್ಧವಾಗುತ್ತಿದ್ದವು. (ನಿಲ್ಲುತ್ತಿದ್ದವು). ಈ ವಿಶ್ವದಲ್ಲಿಯ ಎಲ್ಲ ಘಟನೆಯ ಘಡಾಮೋಡಿಗಳು ಉತ್ಪನ್ನವಾಗಬೇಕಾದರೆ ಇವುಗಳ ಮೂಲದಲ್ಲಿ ವಾಯುವು ಇರುವದು ಖಾತ್ರಿಯೆಂದು ತಿಳಿಯಬೇಕು. (೩೦) ಚಲನವಲನ ಹಬ್ಬುವಿಕೆ (ಪಸರಿಸುವದು) ಪ್ರತೀಕಾರ ಮಾಡುವಿಕೆ, ಆಕುಂಚನ ಹೊಂದುವಿಕೆ, ಈ ಎಲ್ಲ ಕ್ರಿಯೆಗಳು ಚಂಚಲವಾಯುವಿನಿಂದ ಆಗುವವು. (ಘಟಿಸುವವು) (೩೧) ವಾಯು ಪ್ರಾಣರೂಪದಲ್ಲಿ ಶರೀರದೊಳಗೆ ಇರುವದು. ಪ್ರಾಣ,ಅಪಾನ, ವ್ಯಾನ, ಉದಾನ ಮತ್ತು ಸಮಾನ ಈ ಐದು ಮುಖ್ಯ ಪ್ರಾಣಗಳು. ನಾಗ, ಕೂರ್ಮ, ಕೃಕಲ (ಕರ್ಕಶ) ದೇವದತ್ತ, ಮತ್ತು ಧನಂಜಯ ಇವು ಐದು ಉಪಪ್ರಾಣಗಳು. ಪ್ರಾಣದ ಸ್ಥಾನವು ಹೃದಯವಾಗಿದೆ. ಇಲ್ಲಿ ೨೪ತಾಸಿನಲ್ಲಿ (೨೧೬೦೦ ಶ್ವಾಸೋಚ್ಛ್ವಾಸಗಳು ಆಗುವವು) ಅಪಾನಸ್ಥಾನವು. ಗುದವು.ವ್ಯಾನವು ಸರ್ವ ಶರೀರದ ತುಂಬೆಲ್ಲ ವ್ಯಾಪಿಸಿರುವದು. ಉದಾನ ಸ್ಥಾನ ಕಂಠವು. ಸಮಾನದ ಸ್ಥಾನ ನಾಭಿ (ಹೊಕ್ಕಳು) ಪ್ರಾಣವು ದೇಹವನ್ನು ಜೀವಂತವಿಡುವದು. ಅಪಾನವು ಮಲ ಮೂತ್ರ ವಿಸರ್ಜನ ಮಾಡುವದು. ವ್ಯಾನವು ಸಂಧಿಗಳಲ್ಲಿ ಹಾಲಚಾಲ ಮಾಡುವದು ಇದರ ಕೆಲಸವು. ಉದಾನವು ಅನ್ನ ಜಲಗಳ ವಿಭಾಗ ಮಾಡುವದು. ಮತ್ತು ಸ್ವಪ್ನ ದರ್ಶನಾದಿ ಕಾರ್ಯ ಮಾಡುವದು. ಸಮಾನವು ಸರ್ವಶರೀರಕ್ಕೆ ಅನ್ನರಸ ಮುಟ್ಟಿಸುವದು. ಇನ್ನು ಉಪಪ್ರಾಣಗಳಲ್ಲಿಯ ನಾಗವು ತೇಗು (ತೇಗು, ಡರಕಿ) ಉಬ್ಬಳಿಕೆ, ವಾಂತಿ ಬರುವಂತೆ ಮಾಡುವದು. ನಾಗದ ಕಾರ್ಯವು ಕೂರ್ಮದ ಕಾರ್ಯ ಕಣ್ಣಿಗೆ ಕಣ್ಣಿನ ರೆಪ್ಪೆಗಳನ್ನು ತೆಗೆಯುವದು ಮತ್ತು ಮುಚ್ಚುವದು. ಕೃಕಲ (ಕರ್ಕಶ) ಕಾರ್ಯ ಸೀನುವದು, ದೇವದತ್ತದ ಕಾರ್ಯ ಆಕಳಿಸುವದು. (ಮೈಒಡಮುರಿಯುವದು) ಧನಂಜಯದ ಕಾರ್ಯ ಸತ್ತ ಮೇಲೆಯೂ ಸಹ ಶರೀರಕ್ಕೆ ವ್ಯಾಪಿಸಿ ಇರುವದು. (೩೨) ವಿಶ್ವದಲ್ಲಿ ಯಾವ ಗತಿ (ವೇಗ, ಚಲನವಲನ) ಕಾಣುವದೋ, ಯಾವ ಹಾಲಚಾಲ ಕಾಣುವದೋ ಇವೆಲ್ಲವೂ ವಾಯುವಿನ ಲಕ್ಷಣವೆಂದು ತಿಳಿಯಬೇಕು. ಚಂದ್ರ, ಸೂರ್ಯ, ಮತ್ತು ನಕ್ಷತ್ರಸಮೂಹ ಇವುಗಳನ್ನು ಅವುಗಳ ಸ್ಥಾನದ ಮೇಲೆ ಹಿಡಿದು ಕೂಡಿಸುವ ಕಾರ್ಯ ವಾಯುವಿನದೇ ಆಗಿದೆ.(೩೩) ಇನ್ನು ಮುಂದೆ ಕೊನೆಯದಾಗಿ ಆಕಾಶದ ಸಂಕೇತಗಳ ವರ್ಣನೆ ಮಾಡುವರು. ಆಕಾಶವು ಪ್ರೋಕ್ಕಾದದ್ದು, (ಪೋಕಳ), ನಿರ್ಮಲವಾದದ್ದು. ಮತ್ತು ಸ್ಥಿರವಿರುವದಾಗಿದೆ. ದಶತ್ತೂ ದಿಕ್ಕುಗಳಲ್ಲಿಯೂ ಹಬ್ಬಿರುವ ಯಾವ ಅಸೀಮ ಅವಕಾಶ (ಖಾಲಿ ಖುಲ್ಲಾ ಇದ್ದ ಜಾಗಾ ರೂಪ)ವು ಕಾಣಿಸುವದೋ-ಇರುವದೋ ಅದು ಆಕಾಶವೇ ಆಗಿದೆ ಎಂದು ತಿಳಿಯಿರಿ.(೩೪)ಆಕಾಶವು ಸರ್ವ ವಿಶ್ವವನ್ನೆಲ್ಲ ವ್ಯಾಪಿಸಿರುತ್ತದೆ. ಇದು ಅನೇಕದಲ್ಲಿ ಏಕತನದಿಂದ ಇರುವದು. ಪೃಥ್ವಿ.ಆಪ್, ತೇಜ, ಮತ್ತು ವಾಯು ಈ ನಾಲ್ಕು ಭೂತಗಳ ಸರ್ವ ಆಟವು ಆಕಾಶದಲ್ಲಿಯೇ ಇರುವದು. (೩೫)

ಆಕಾಶಾಐಸೇ ನಾಹೀ ಸಾರ । ಆಕಾಶ ಸಕಳಾಹೂನ ಥೋರ ।
ಪಾಹಾತಾ ಆಕಾಶಾಚಾ ವಿಚಾರ। ಸ್ವರೂಪಾ ಸಾರಿಖಾ ॥೩೬॥

ತವ ಶಿಷ್ಯೇ ಕೇಲಾ ಆಕ್ಷೇಪ । ದೋಹೀಂಚೇ ಸಾರಿಖೇ ಚಿ ರೂಪ ।
ತರೀ ಆಕಾಶ ಚಿ ಸ್ವರೂಪ । ಕಾ ಮ್ಹಣೋ ನಯೇ ॥೩೭॥

ಆಕಾಶ ಸ್ವರೂಪಾ ಕೋಣ ಭೇದ । ಪಾಹಾತಾ ದಿಸತೀ ಅಭೇದ ।
ಆಕಾಶ ವಸ್ತುಚ ಸ್ವತಸಿದ್ಧ । ಕಾ ನ ಮ್ಹಣಾವೀ ॥೩೮॥

ವಸ್ತು ಅಚಳ ಅಢಳ । ವಸ್ತು ನಿರ್ಮಳ ನಿಶ್ಚಳ ।
ತೈಸೇ ಚಿ ಆಕಾಶ ಕೇವಳ । ವಸ್ತುಸಾರಿಖೇ ॥೩೯॥

ಐಕೋನಿ ವಕ್ತಾ ಬೋಲೇ ವಚನ । ವಸ್ತು ನಿರ್ಗುಣ ಪುರಾತನ ।
ಆಕಾಶಾಅಂಗೀ ಸಪ್ತ ಗುಣ । ಶಾಸ್ತ್ರೀ ನಿರೋಪಿಲೇ ॥೪೦॥

ಕಾಮು ಕ್ರೋಧ ಶೋಕ ಮೋಹೋ । ಭಯ ಅಜ್ಞಾನ ಸುನ್ಯತ್ವ ಪಾಹೋ ।
ಐಸಾ ಸಪ್ತವಿಧ ಸ್ವಭಾವ । ಆಕಾಶಾಚಾ ॥೪೧॥

ಆಕಾಶದಷ್ಟು ಸೂಕ್ಷ್ಮವಾದದ್ದು ಇನ್ನೊಂದು ಇಲ್ಲವೇ ಇಲ್ಲ. ಆಕಾಶವು ಎಲ್ಲಕ್ಕಿಂತಲೂ ದೊಡ್ಡದಿರುವದು. ಮತ್ತು ವಿಶಾಲವೂ ಇರುವದು. ಆಕಾಶದ ವಿಚಾರ ಮಾಡಹತ್ತಿದೆವೆಂದರೆ ಪರಬ್ರಹ್ಮದ ಬಗೆಗೆ ವಿಚಾರ ಮಾಡುವೆವೋ ಏನೋ ಅನ್ನುವ ಭಾಸ ಉಂಟಾಗುವದು. ಪರಬ್ರಹ್ಮವು ಅತ್ಯಂತ ಸೂಕ್ಷ್ಮ ಮತ್ತು ಅಷ್ಟೇ ವಿಶಾಲವಿರುವದು. ಆಕಾಶವೂ ಸಹ ಅತಿಸೂಕ್ಷ್ಮ ಮತ್ತು ವಿಶಾಲವಿರುವದು. ಆದ್ದರಿಂದ ಆಕಾಶ ಮತ್ತು ಪರಬ್ರಹ್ಮ ಎರಡೂ ಸಮಾನವೆನಿಸುವವು. (೩೬) ಇಲ್ಲಿ ಶಿಷ್ಯನು ಒಂದು ಆಕ್ಷೇಪ ತೆಗೆದನು. ಆಕಾಶದ ಮತ್ತು ಬ್ರಹ್ಮದ ರೂಪವು ಒಂದೇ ಆಗಿದ್ದರೆ ಆಕಾಶಕ್ಕೇ ಬ್ರಹ್ಮವೆಂದು ಯಾಕೆ ಅನ್ನಬಾರದು? (೩೭) ಆಕಾಶ ಮತ್ತು ಬ್ರಹ್ಮ ಇದರಲ್ಲಿ ಭೇದವೇನಿರುವದು? ಸಹಜವಾಗಿ ನೋಡಿದರೆ ಇಬ್ಬರಲ್ಲಿ ಅಭೇದ ಕಾಣುವದು. ಅಂದಮೇಲೆ ಆಕಾಶ ಇದೇ ಸ್ವತಃ ಸಿದ್ಧ ಬ್ರಹ್ಮವಿರುವದೆಂದು ಏಕೆ ಅನ್ನಬಾರದು? (೩೮) ಈ ಆಕ್ಷೇಪವು ಬಹಳ ಮಹತ್ವದ್ದಿರುವದು. ದೃಶ್ಯ ವಿಶ್ವದಲ್ಲಿ ಅನಂತ, ಅಪಾರ, ಪ್ರಕಾರಗಳು ಇರುವವು. ಆದರೆ ಪರಬ್ರಹ್ಮಕ್ಕೆ ದೃಷ್ಟಾಂತ ಕೊಡುವಾಗ (ಫಕ್ತ) ಕೇವಲ ಆಕಾಶದ್ದೊಂದೇ ಉಪಯೋಗ ಮಾಡುವರು. ಇದಾದರೂ ಯೋಗ್ಯವೇ ಇರುವದು. ಯಾಕೆಂದರೆ ಆಕಾಶ ಮತ್ತು ಪರಬ್ರಹ್ಮ ಇವೆರಡರ ಲಕ್ಷಣಗಳು ಮೇಲ್ನೋಟಕ್ಕಾದರೂ ಒಂದೇ ತರಹ ಕಾಣುವವು:- ಪರಬ್ರಹ್ಮ ಅಚಲವಿರುವದು. ಅಥಳ, ನಿಶ್ಚಲ ಮತ್ತು ನಿರ್ಮಲವಿರುವದು. ಆಕಾಶವೂ ಸಹ ಅಗದೀ ಇದರಂತೆಯೇ ಇರುವದು. ಇದು ನಿಜವಾಗಿ ಖರೇ ಇದ್ದದ್ದಾದರೆ ಆಕಾಶವೇ ಬ್ರಹ್ಮವಿರುವದು. ಅಂತಾ ಯಾಕೆ ಅನ್ನಬಾರದು? (೩೯) ಬ್ರಹ್ಮದರ್ಶನವಾಗಬೇಕಾದರೆ ಸಾಧಕರು ದೃಶ್ಯದ ಮಹಾದ್ವಾರವನ್ನು ದಾಟಿ ಹೋಗಬೇಕಾಗುವದು ಎಂಬ ಮಾತನ್ನು ಶ್ರೀ ಸಮರ್ಥರು ಹಿಂದಿನ ಸಮಾಸದಲ್ಲಿ ಹೇಳಿದ್ದಾರೆ. ಸಾಧನದಿಂದ ಪಂಚಭೂತಗಳ ಪೈಕಿ ಪೃಥ್ವಿ, ಆಪ್,(ನೀರು)ತೇಜ(ಅಗ್ನಿ), ಮತ್ತು ವಾಯು ಈ ನಾಲ್ಕೂಭೂತಗಳನ್ನು ದಾಟಿ ಪಾರಾಗಿ ಹೋಗುವದು ಸಾಧಕರಿಗೆ ಹೆಚ್ಚು ಕಠಿಣವಾಗುವದಿಲ್ಲ. ಮನಸ್ಸಿನಿಂದ ಇವುಗಳ ಕಲ್ಪನೆ ಮಾಡಲಿಕ್ಕೆ ಬರುವದು.ಮತ್ತು ಕಲ್ಪನೆಯನ್ನು ಕಲ್ಪನೆಯಿಂದ ಇಲ್ಲದಂತೆ ಮಾಡುವದು ಸಾಧಿಸುತ್ತದೆ.ಆದರೆ ಆಕಾಶದ ಕಲ್ಪನೆ ಮಾಡಲಿಕ್ಕೆ ಬರುವದಿಲ್ಲ.ಯಾಕೆಂದರೆ ಅದು ಶೂನ್ಯವಿರುವದು.ಖಾಲಿ,ರಿಕಾಮಿ ಇರುವದು. ಸಾಧಕನ ಮನಸ್ಸು ಅಲ್ಲಿ ಲಯವಾಗುವದು. ಪರಮಾರ್ಥದಲ್ಲಿ ಶೂನ್ಯದ ಅನುಭವವು ಒಂದು ದೊಡ್ಡ ಅನುಭವವೆಂದು ತಿಳಿಯಲ್ಪಡುವದು. ಆದರೆ ಬ್ರಹ್ಮವೇನೂ ಶೂನ್ಯವಲ್ಲ, ಇದು ಆನಂದಮಯವಿರುವದು. ಆದ್ದರಿಂದ ವೃತ್ತಿಯು ಆಕಾಶಮಯವಾದರೂ ಸಹ ನಿಜವಾದ ಸ್ವರೂಪ ದರ್ಶನ ಆಗುವದಿಲ್ಲವೆಂಬ ಮಾತನ್ನು ಮರೆಯಬೇಡಿರಿ. ಇದಕ್ಕೆ ಹೊರತು[ಶಿವಾಯ]ಮನವು ಕಾಯಂ ಆಗಿ ಲಯ ಹೊಂದಿರುವದಿಲ್ಲ.ಇದು ದೇಹದಮೇಲೆ(ಶುದ್ಧಿಯ ಮೇಲೆ) ಬಂದೇ ಬರುವದು. ಮತ್ತು ಹೀಗೆ ಶುದ್ಧಿಯ (ಎಚ್ಚರಗೊಂಡ) ಮೇಲೆ ಬಂದ ಕೂಡಲೇ ಪುನಃ ದೃಶ್ಯದ ಅರಿವು ಪರತ (ತಿರುಗಿ) ಬರುವದು. ಆದ್ದರಿಂದ ಶೂನ್ಯದ ಆಚೆಗೆ ಹೋಗಿ ಮನವು ಉನ್ಮನವಾದಾಗ ಮಾತ್ರ ನಿಜವಾದ ಬ್ರಹ್ಮದರ್ಶನವಾಗುವದು.ಇದು ನಿಜವಾದ ಮರ್ಮವಿರುವದು:-ಶಿಷ್ಯನ ಆಕ್ಷೇಪಗಳನ್ನು ಕೇಳಿದ ನಂತರ ವಕ್ತಾ ಈಗ ಉತ್ತರ ಕೊಡಹತ್ತಿದರು. ಬ್ರಹ್ಮ ವಸ್ತು ನಿರ್ಗುಣವಿರುವದು. ಮತ್ತು ಇದು ಸನಾತನ ಅಂದರೆ ಕಾಯಂ ಆಗಿಯೇ ಇರುವಂತಹದು ಇರುವದು. ಆದರೆ ಶಾಸ್ತ್ರಕಾರರು ಆಕಾಶಕ್ಕೆ ಏಳು ಗುಣಗಳಿರುವವೆಂದು ಹೇಳಿರುವರು. (೪೦) ಕಾಮ, ಕ್ರೋಧ, ಶೋಕ, ಮೋಹ, ಭಯ, ಅಜ್ಞಾನ, ಮತ್ತು ಶೂನ್ಯತ್ವ ಹೀಗೆ ಏಳು ಪ್ರಕಾರದ ಗುಣಗಳು ಆಕಾಶದ ಸ್ವಭಾವ ಧರ್ಮವಾಗಿವೆ. ಇವನ್ನು ನೋಡಿ ತಿಳಿಯಿರಿ. (೪೧)

ಏಸೇ ಶಾಸ್ತ್ರಕಾರೇ ಬೋಲಿಲೇ । ವ್ಹಣೌನಿ ಆಕಾಶ ಭೂತ ಜಾಲೇ ।
ಸ್ವರೂಪ ನಿರ್ವಿಕಾರ ಸಂಚಲೇ । ಉಪಮೇರಹಿತ ॥೪೨॥

ಕಾಚಬಂದೀ ಆಣೀ ಜಳ । ಸಾರಿಖೇ ಚ ವಾಟೆ ಸಕಳ ।
ಪರೀ ಯೇಕ ಕಾಚ ಯೇಕ ಜಳ । ಶಾಹಾಣೇ ಜಾಣತೀ ॥೪೩॥

ರೂಪಾಮಧ್ಯೇ ಸ್ಫಟಿಕ ಪಡಿಲಾ । ಲೋಕೀ ತದ್ರೂಪ ದೇಖಿಲಾ ।
ತೇಣೇ ಕಪಾಳಮೋಕ್ಷ ಜಾಲಾ । ಕಾಪುಸ ನ ಕರೀ ॥೪೪॥

ತಂದುಲಾಮಧೇ ಶ್ವೇತ ಖಡೆ । ತಂದುಲಾ ಸಾರಿಖೇ ಚ ವಾಂಕುಡೆ ।
ಜಾವೂ ಜಾತಾ ದಾತ ಪಡೆ । ತೇವ್ಹಾ ಕಳೆ ॥೪೫॥

ತ್ರಿಭಾಗಾಮಧೇ ಖಡಾ ಅಸೆ । ತ್ರಿಭಾಗಾಸಾರಿಖಾ ಚ ಭಾಸೆ ।
ಶೋಧೂ ಜಾತಾ ವೇಗಳಾದಿಸೆ । ಕಠಿಣಪಣೇ ॥೪೬॥

ಗುಳಾಸಾರಿಖಾ ಗುಳದಗಡ । ಪರೀ ತೋ ಕಠಿಣ ನಿಚಾಡ ।
ನಾಗಕಾಂಡೀ ಆಣೀ ವೇಖಂಡ । ಯೇಕ ವ್ಹಣೋ ನಯೆ ॥೪೭॥

ಸೋನೇ ಆಣಿ ಸೋನಪಿತಳ । ಯೇಕ ಚಿ ವಾಟತೀ ಕೇವಳ ।
ಪರೀ ಪಿತಳೇಸಿ ಮಿಳತಾ ಜ್ವಾಳ । ಕಾಳಿಮಾ ಚಢೆ ॥೪೮॥

ಅಸೋ ಹೇ ಹೀನ ದೃಷ್ಟಾಂತ । ಆಕಾಶ ವ್ಹಣಿಜೆ ಕೇವಳ ಭೂತ ।
ತೇ ಭೂತ ಆಣೀ ಅನಂತ । ಯೇಕ ಕೈಸೇ ॥೪೯॥

ಶಾಸ್ತ್ರಕಾರರು ಹೀಗೆ ಹೇಳಿದ್ದರಿಂದ ಆಕಾಶವು ಪಂಚಭೂತಗಳ ಪೈಕಿ ಒಂದಾಗಿದೆ ಎಂದು ಮಾನ್ಯ ಮಾಡಿದ್ದಾರೆ. ಇದರ ವಿರುದ್ಧ[ಉಲಟ] ಬ್ರಹ್ಮಸ್ವರೂಪವು ನಿರ್ವಿಕಾರವಿರುವದು ಮತ್ತು ಎಲ್ಲ ಕಡೆಗೂ ಅವಿಕಾರತನದಿಂದ [ವಿಕಾರರಹಿತವಾಗಿ] ಸಂಪೂರ್ಣ ತುಂಬಿರುವದು. ಇದರಂತಹದು ಇನ್ನೊಂದು ಇಲ್ಲವೇ ಇಲ್ಲ. ಮುಖ್ಯವಾಗಿ ಹೇಳಬೇಕಾದ ಎರಡು ಆಧಾರಗಳು [ಪ್ರಮಾಣ] ಯಾವವೆಂದರೆ: ಬ್ರಹ್ಮವಸ್ತುವನ್ನು ಯಾರೂ ತಯಾರ ಮಾಡಿಲ್ಲ. ಇದು ಸ್ವತಃಸಿದ್ಧವಾದದ್ದು ಇರುವದು. ಅಂತೆಯೇ ಇದು ಸನಾತನವಿರುವದು. ಆಕಾಶವು ಮಾಯೆಯಲ್ಲಿಯ ತ್ರಿಗುಣದ ಪೈಕಿ ತಮೋಗುಣದಿಂದ ನಿರ್ಮಿತವಾಗಿದೆ. ಪ್ರಳಯಕಾಲದಲ್ಲಿ ಇದು ಎಲ್ಲಿಂದ ಬಂದಿತೋ ಅಲ್ಲಿಯೇ ಇದು ಲಯ ಹೊಂದುವದು. ಆದ್ದರಿಂದ ಇದು ಸನಾತನವಲ್ಲ. ಅಲ್ಲದೇ ಬ್ರಹ್ಮವಸ್ತು ಕಲ್ಪನೆಯ ಆಚೆಗೆ ಇರುವದು, ಅರ್ಥಾತ್ ಅದೆ ಅನ್ನುವ ರೀತಿಯಲ್ಲಿ ಆ ವಸ್ತುವಿನ ಬಗೆಗೆ ಏನೂ ಹೇಳಲಿಕ್ಕೆ ಬರುವದಿಲ್ಲ. ಇದರಲ್ಲಿ (ಬ್ರಹ್ಮವಸ್ತುವಿನಲ್ಲಿ) ಗುಣಗಳಿಲ್ಲ. ಮತ್ತು ಯಾವುದೇ ವಿಕಾರಗಳೂ ಇಲ್ಲ. ಆದೇ ಆಕಾಶವು ಇಂದ್ರಿಯಗಳಿಗೆ ಭಾಸವಾಗುವದು. ಇದರ ಬಗ್ಗೆ ಅಂದರೆ ಆಕಾಶ ಅದೆ ಅನ್ನುವ ರೀತಿಯಲ್ಲಿ ಹೇಳಲಿಕ್ಕೆ ಬರುವದು. ಇದರಲ್ಲಿ [ಆಕಾಶದಲ್ಲಿ] ಗುಣವಿರುವವು. ಮತ್ತು ವಿಕಾರಗಳೂ ಇರುವವು. ಒಟ್ಟಿನಲ್ಲಿ ಆಕಾಶ ಎಷ್ಟೇ ವ್ಯಾಪಕ ಮತ್ತು ನಿಶ್ಚಲ ಇದ್ದರೂ ಸಹ ಇದು ಬ್ರಹ್ಮವಾಗಲಿಕ್ಕೆ ಶಕ್ಯವಿಲ್ಲ. (೪೨) ಕಾಜನ್ನು ಕೂಡಿಸಿದ ನೆಲ (ಕಾಜಿನ ನೆಲಗಟ್ಟು) ಮತ್ತು ನೀರು ಇವೆರಡೂ ಅಗದೀ ಒಂದೇ ಆಗಿ ಕಾಣುವವು ನೋಡಿದವರಿಗೆ ಇಲ್ಲಿ ನೀರೇ ಇರುವದೆಂದು ಅನಿಸಿ ಮೋಸ ಬೀಳುವರು. ಆದರೆ ಜಾಣ ಜನರು ಕಾಜಿನ ನೆಲಕ್ಕೆ, ಕಾಜಿನ ನೆಲವೆಂದೇ ಅನ್ನುವರು. ನೀರು ಎಂದು ಅನ್ನುವದಿಲ್ಲ. ಇವೆರಡರಲ್ಲಿಯ ವ್ಯತ್ಯಾಸವನ್ನು ಇವರು ಸರಿಯಾಗಿ ಗುರುತಿಸುವರು. (೪೩) ಹತ್ತಿಯ ರಾಶಿಯ ಮೇಲೆ ಸ್ಫಟಿಕವನ್ನು ಇಟ್ಟರೆ ಅಥವಾ ಸ್ಫಟಿಕವು ಬಿದ್ದರೆ ಅದು ಹತ್ತಿಯಂತೆ ಕಾಣುವದು. ಆದರೆ ತಲೆಗೆ ಸ್ಫಟಿಕ ಬಡಿದರೆ ತಲೆ ಒಡೆಯುವದು. ಆದರೆ ತಲೆಗೆ ಕೇವಲ ಹತ್ತಿಯನ್ನು ಒಗೆದರೆ ತಲೆ ಒಡೆಯುವದಿಲ್ಲ. (೪೪) ಅಕ್ಕಿಯಲ್ಲಿ ಬಿಳಿಯ ಬೆಣಚು ಕಲ್ಲುಗಳು ಇರುವವು. ಇವರ ಆಕಾರವು ನೋಡಲಿಕ್ಕೆ ಅಕ್ಕಿಯಂತೆ ಇರುವದು. ಆದರೆ ಇವು ಅನ್ನದ ಸಂಗಡ ಬಾಯಿಯಲ್ಲಿ ಬಂದರೆ ಹಲ್ಲು ಮುರಿಯುವದು. ಆಗ ಇದು ಕಲ್ಲು–ಹರಳು ಇದೆ. ಅಕ್ಕಿಯಲ್ಲ, ಅನ್ನುವದು ಗೊತ್ತಾಗುವದು. (೪೫) ಸುಣ್ಣ, ಉಸುಕು, (ಪುಂಡಿ, ಬೆಂಡಿ, ಗಳ, ತೊಗಟೆ, ಬೇರು ಅಥವಾ ಜಿಗಟು ಬರುವ ತಪ್ಪಲ, ಬೇರು) ಜಿಗಟು ಇರುವ ತೊಗಟೆ, ಬೇರು ಇವುಗಳನ್ನು ಚೆನ್ನಾಗಿ ಕೂಡಿಸಿ ಚೆನ್ನಾಗಿ ಅರೆಯುವರು. ಇದಕ್ಕೆ ತ್ರಿ ಭಾಗ ಅನ್ನುವರು. ಇದು ಅಗದೀ ಮೃದು ಮತ್ತು ಜಗಟು ಇರುವದು. ಇದರಲ್ಲಿ ಒಂದು ಹರಳು ಕಲ್ಲು ಇದ್ದರೆ ಅದನ್ನು ಅದರ ಕಠಿಣತನದ ಮೂಲಕ ಆರಿಸಿ ತೆಗೆಯಲಿಕ್ಕೆ ಬರುವದು. ಮೇಲೆ ನೋಡಲಿಕ್ಕೆ ತ್ರಿಭಾಗದಂತೆಯೇ ಕಾಣುವದು. (೪೬) ಒಂದು ದುಂಡಗಿನ ಕಲ್ಲಿಗೆ ಬೆಲ್ಲ ಮೆತ್ತಿದರೆ ಅದು ಬೆಲ್ಲದಗುಂಡಿನಂತೆ – ಕರಣೆಯಂತೆಯೇ ಕಾಣುವದು. ಆದರೆ ನಿಜವಾಗಿ ಅದು ಸಂಪೂರ್ಣವಾಗಿ ಕಠಿಣವೇ ಇರುವದು. ಇದರಂತೆ ಬಚನಾಗ ಮತ್ತು ಬಜೆ ಇವು ಹೊರನೋಟಕ್ಕೆ ಒಂದೇ ತರಹ ಕಾಣುವವು, ಆದರೆ ಇವಕ್ಕೆ ಯಾರೂ ಒಂದೇ ಎಂದು ಅನ್ನುವದಿಲ್ಲ. (೪೭) ಬಂಗಾರ ಮತ್ತು ಬಂಗಾರದಂತಿರುವ ಹಿತ್ತಾಳಿ ಇವು ಮೇಲ್ನೋಟಕ್ಕೆ ಅಗದೀ ಒಂದೇ ಎಂದು ಅನಿಸಿದರೂ ಹಿತ್ತಾಳಿಯನ್ನು ಬೆಂಕಿಯಲ್ಲಿ ಹಾಕಿ ಕಾಸಿದರೆ ಕಪ್ಪಾಗುತ್ತದೆ. ಅರ್ಥಾತ್ ಬಂಗಾರ ಮಾತ್ರ ಹಾಗೆ ಮಾಡಿದರೆ ಕಪ್ಪಾಗುವದಿಲ್ಲ. (೪೮) ಇರಲಿ. ಇವೆಲ್ಲ ಹೀನ ಪ್ರತಿಯ ದೃಷ್ಟಾಂತ ಕೊಟ್ಟು ಆಕಾಶ ಮತ್ತು ಪರಬ್ರಹ್ಮ ಇವು ಒಂದೇ ರೂಪ ಹೇಗೆ ಇರುವದಿಲ್ಲ ಅನ್ನುವದನ್ನು ತೋರಿಸಿಕೊಟ್ಟದ್ದಾಯಿತು. ಇಲ್ಲಿಗೆ ಸಾಕು. ಆಕಾಶವು ಪಂಚ ಭೂತಗಳ ಪೈಕಿ ಕೇವಲ ಒಂದು ಭೂತ ಮಾತ್ರವಾಗಿದೆ. ಇದು ಮಾಯೆಯಿಂದ ನಿರ್ಮಾಣವಾಗಿರುವದು. ಅರ್ಥಾತ್ ಮಾಯೆಯ ಆಚೆಗೆ ಇರುವಂಥ ಅನಂತ ಬ್ರಹ್ಮವು ಮತ್ತು ಮಾಯೆಯ ನಂತರ ಆಗಿರುವ ಆಕಾಶ ಇವೆರಡೂ ಒಂದೇ ಇರಲಿಕ್ಕೆ ಶಕ್ಯವಿಲ್ಲ. (೪೯)

ವಸ್ತುಸೀ ವರ್ಣ ಚಿ ನಸೆ। ಆಕಾಶ ಶ್ಯಾಮವರ್ಣ ಅಸೆ।
ದೋಹೀಸ ಸಾಮ್ಯತಾಕೈಸೆ। ಕರಿತೀ ವಿಚಕ್ಷಣ ॥೫೦॥
ಶ್ರೋತೇ ಮ್ಹಣತೀ ಕೈಚೇ ರೂಪ। ಆಕಾಶ ಠಾಈಚೆ ಅರೂಪ।
ಆಕಾಶ ವಸ್ತು ಚ ತದ್ರೂಪ। ಭೇದ ನಾಹೀ ॥೫೧॥
ಚಹೂ ಭೂತಾಸ ನಾಶ ಆಹೆ। ಆಕಾಶ ಕೈಸೇ ನಾಸತಾಹೆ।
ಆಕಾಶಾಸ ನ ಸಾಹೆ। ವರ್ಣವೆಕ್ತೀ ವಿಕಾರ ॥೫೨॥
ಆಕಾಶ ಅಚಳ ದಿಸತೇ। ತ್ಯಾಚೇ ಕಾಯ ನಾಸೋ ಪಾಹಾತೇ।
ಪಾಹಾತಾ ಆಮುಚೆನಿ ಮತೇ। ಆಕಾಶ ಶಾಶ್ವತ ॥೫೩॥
ಐಸೇ ಐಕೋನ ವಚನ। ವಕ್ತಾ ಬೋಲೆ ಪ್ರತಿವಚನ।
ಐಕ ಆತಾ ಲಕ್ಷಣ। ಆಕಾಶಾಚೇ ॥೫೪॥
ಆಕಾಶ ತಮಾಪಾಸೂನ ಜಾಲೇ। ಮ್ಹಣೌನ ಕಾಮಕ್ರೋಧೇ ವೇಷ್ಟಿಲೇ।
ಅಜ್ಞಾನ ಸುನ್ಯತ್ವ ಬೋಲಿಲೇ। ನಾಮ ತಯಾಚೇ ॥೫೫॥
ಅಜ್ಞಾನೇ ಕಾಮಕ್ರೋಧಾದಿಕ। ಮೋಹೋ ಭಯ ಆಣೀ ಶೋಕ।
ಹಾ ಅಜ್ಞಾನಾಚಾ ವಿವೇಕ। ಆಕಾಶಾಗುಣೇ ॥೫೬॥
ನಾಸ್ತಿಕ ನಕಾರ ವಚನ। ತೇ ಚಿ ಸುನ್ಯಾಚೇ ಲಕ್ಷಣ।
ತಯಾಸ ಮ್ಹಣತೀ ಹೃದಯಸುನ್ಯ। ಅಜ್ಞಾನ ಪ್ರಾಣೀ ॥೫೭॥
ಆಕಾಶ ಸ್ತಬ್ಧಪಣೇ ಸುನ್ಯ। ಸುನ್ಯ ಮ್ಹಣಿಜೆ ತೇ ಅಜ್ಞಾನ।
ಅಜ್ಞಾನ ಮ್ಹಣಿಜೆ ಕಠಿಣ। ರೂಪ ತಯಾಚೇ ॥೫೮॥
ಕಠಿಣ ಸುನ್ಯ ವಿಕಾರವಂತ। ತಯಾಸ ಕೈಸೇ ಮ್ಹಣಾವೇ ಸಂತ।
ಮನಾಸ ವಾಟೆ ಹೇ ತದ್ವತ। ಆಹಾಚ ದೃಷ್ಟೀ ॥೫೯॥
ಅಜ್ಞಾನ ಕಾಲವಲೇ ಆಕಾಶೀ। ತಯಾ ಕರ್ದಮಾ ಜ್ಞಾನ ನಾಸೀ।
ಮ್ಹಣೋನಿಯಾ ಆಕಾಶಾಸೀ। ನಾಶ ಆಹೆ ॥೬೦॥
ತೈಸೇ ಆಕಾಶ ಆಣೀ ಸ್ವರೂಪ। ಪಾಹಾತಾ ವಾಟತೀ ಯೇಕರೂಪ।
ಪರೀ ದೋಹೀಮಧೇ ವಿಕ್ಷೇಪ। ಸುನ್ಯತ್ವಾಚಾ ॥೬೧॥
ಆಹಾಚ ಪಾಹಾತಾ ಕಲ್ಪನೇಸೀ। ಸಾರಿಖೇ ಚ ವಾಟೆ ನಿಶ್ಚಯೇಸೀ।
ಪರೀ ಆಕಾಶ ಸ್ವರೂಪಾಸೀ। ಭೇದ ಆಹೆ ॥೬೨॥
ಉನ್ಮನೀ ಆಣೀ ಸುಷುಪ್ತಿ ಅವಸ್ತಾ। ಸಾರಿಖೇಚ ವಾಟೆ ತತ್ವತಾ।
ಪರೀ ವಿವಂಚೂನ ಪಾಹೋ ಜಾತಾ। ಭೇದ ಆಹೇ ॥೬೩॥

ರಂಗ (ಬಣ್ಣ) ಇರುವ ಗುಣವು ಇಂದ್ರಿಯಗಳ ಮೇಲಿಂದ ಅವಲಂಬಿಸಿದೆ. ಆಕಾಶ ನೀಲ ವರ್ಣವಿರುವದು. ಆದರೆ ಬ್ರಹ್ಮ-ವಸ್ತುವು ಅತೀಂದ್ರಿಯವಿರುವದು. ಇದರಲ್ಲಿ ಶಬ್ದ,ಸ್ಪರ್ಶ, ರೂಪ, ರಸ ಮತ್ತು ಗಂಧಗಳಿಲ್ಲ ಇದು ನಿರ್ಗುಣವಿರುವದು. ಇದಕ್ಕೆ ಬಣ್ಣ ಇರಲಿಕ್ಕೆ ಶಕ್ಯವೇ ಇಲ್ಲ.ಆದ್ದರಿಂದ ಜಾಣ ಜನರು ಎರಡರ ಸಾಮ್ಯವನ್ನು ಒಪ್ಪುವದಿಲ್ಲ. (೫೦) ಈ ಪ್ರಕಾರ ವಿಷಯ ನಡೆದಾಗ ಶ್ರೋತಾನು ಮಧ್ಯದಲ್ಲಿ ಇನ್ನೊಂದು ಆಕ್ಷೇಪವನ್ನು ಎತ್ತಿದನು. ಅದು ಏನಂದರೆ, ಆಕಾಶದ ರೂಪದ ಬಗೆಗೆ ಪ್ರಶ್ನೆಯೇ ಇಲ್ಲ. ಆಕಾಶವು ಮೂಲದಿಂದಲೇ ರೂಪರಹಿತವಿರುವದು. ಅರ್ಥಾತ್ ಯಾವ ರೂಪವೂ ಅದಕ್ಕಿಲ್ಲ.ಆದ್ದರಿಂದ ಆಕಾಶವು ಬ್ರಹ್ಮದ ತದ್ರೂಪವಿದೆ. ಎರಡರಲ್ಲಿಯೂ ಏನೂ ಭೇದವಿಲ್ಲವೆಂದು ಅನ್ನಲಿಕ್ಕೆ ಏನು ಆತಂಕವಿದೆ? (೫೧) ಐದು ಭೂತಗಳಲ್ಲಿ ನಾಲ್ಕು ಭೂತಗಳಿಗೆ ನಾಶವಿದೆ, ಆಕಾಶಕ್ಕೆ ಮಾತ್ರ ನಾಶವಿಲ್ಲ. ಇದೇ ರೀತಿ ಆಕಾಶಕ್ಕೆ ರಂಗ (ಬಣ್ಣ) ಇಲ್ಲ, ವ್ಯಕ್ತ ಆಕಾರವಿಲ್ಲ, ಯಾವುದೇ ವಿಕಾರ ಭೇದವಿಲ್ಲ. (೫೨) ಇದರ ಹೊರತಾಗಿ ಆಕಾಶವು ಅಚಲ ಕಾಣುವದು. ಇದರದು ಯಾವುದೂ ನಾಶ ಹೊಂದುವದಿಲ್ಲ ಆದ್ದರಿಂದ ನಮ್ಮ ಅಭಿಪ್ರಾಯವು(ಮತವು) ಆಕಾಶವೇ ಶಾಶ್ವತಬ್ರಹ್ಮವಿರುವದು.?(೫೩) ಈಗಆಕ್ಷೇಪಗಳಿಗೆ ಉತ್ತರ ಕೊಡುವರು:- ಶ್ರೋತಾನ ಆಕ್ಷೇಪ ಕೇಳಿ ವಕ್ತಾ ಉತ್ತರ ಕೊಡುವನು. "ಆಕಾಶದ ಲಕ್ಷಣ ಹೇಳುವೆನು ಅದನ್ನು ಚನ್ನಾಗಿ ಕೇಳು. (೫೪) ಆಕಾಶವು ತಮೋಗುಣದಿಂದ ನಿರ್ಮಾಣವಾಗಿದೆ. ಆದ್ದರಿಂದ ಕಾಮ ಕ್ರೋಧ ವಗೈರೆ ವಿಕಾರಗಳು ಇವನ್ನು ಸುತ್ತಿಕೊಂಡಿವೆ. ಮತ್ತು ಇದು ಶೂನ್ಯಮಯವಿರುವದು. ಅಂತೆಯೇ ಇದಕ್ಕೆ ಅಜ್ಞಾನ ಅನ್ನುವ ಹೆಸರು ಇಟ್ಟಿರುವರು. (೫೫) ಅಜ್ಞಾನಮಯ ಇದ್ದುದರಿಂದ ಕಾಮ, ಕ್ರೋಧ, ಮೋಹ, ಭಯ, ಶೋಕ ಇತ್ಯಾದಿ ವಿಕಾರಗಳು ಆಕಾಶದಲ್ಲಿಇರುವವು.ಆಕಾಶದ ಗುಣ,ಅಜ್ಞಾನ ಮತ್ತು ಆ ಅಜ್ಞಾನದ ವಿವೇಚನೆಯನ್ನು ಹೀಗೆ ಮಾಡಲಿಕ್ಕೆ ಬರುವದು (೫೬)ಶೂನ್ಯ ಅಂದರೆ ಯಾವುದು ಇಲ್ಲವೋ ಅದು.ಇಲ್ಲವೆಂದು ಹೇಳುವದೇಅದರ ಲಕ್ಷಣವಿರುವದು.ಯಾವ ಪ್ರಾಣಿಯು(ಮನುಷ್ಯನು)ಅಜ್ಞಾನಿ ಇರುವನೋ ಅವನಿಗೆ ಹೃದಯ ಶೂನ್ಯನೆಂದು ನಿರ್ದಯಿ,ಬುದ್ಧಿಹೀನ,ನಷ್ಟಚಿತ್ತ, ಮತ್ತು ಅಡ್ನಾಡಿ, ಹುಂಬನೆಂದು ಅನ್ನುವರು.ಇದರ ಕಾರಣವೂ ಇದೇ ಇರುವದು.(೫೭) ಆಕಾಶದ ಸ್ತಬ್ಧತನ ಇದು ಶೂನ್ಯಮಯವಿರುವದು ಶೂನ್ಯ ಅಂದರೇನೆ ಅಜ್ಞಾನವಿರುವದು. ಅಜ್ಞಾನ ಅಂದರೆ ಜಡತ್ವವು ಅರ್ಥಾತ್ ಆಕಾಶವು ಸ್ಥೂಲವಿರುವದು, ಜಡವಿರುವದು. ಆಕಾಶ ಜಡರೂಪವಿರುವದು. ಬ್ರಹ್ಮದ ಸ್ತಬ್ಧತನವು ಚೈತನ್ಯಮಯವಿರುವದು. ಜ್ಞಾನಮಯವಿರುವದು, ಮತ್ತು ಸೂಕ್ಷ್ಮವಿರುವದು. ಆದರೆ ಆಕಾಶದ ಗುಣವು ಇದರ ವಿರುದ್ಧ ಇರುವದರಿಂದ ಎರಡೂ ಏಕರೂಪ (ಒಂದೇ ರೂಪ) ಆಗಲು ಶಕ್ಯವೇ ಇಲ್ಲ. (೫೮) ಜಡ ಮತ್ತು ಶೂನ್ಯ ಮತ್ತು ವಿಕಾರ ಹೊಂದುವ ಆಕಾಶಕ್ಕೆ. ಸೂಕ್ಷ್ಮ. ಸದ್ರೂಪ, ನಿರ್ವಿಕಾರವಿರುವ ಬ್ರಹ್ಮದ ಸರಿಸಾಟಿ (ಬರೋಬರಿ) ಹೇಗೆ ಆದೀತು? ಆಕಾಶ ಇದು ಬ್ರಹ್ಮದಂತೆ ಇವೆಯೆಂದು ನಮ್ಮ ಮನಸ್ಸಿಗೆ ಅನಿಸುವದು ನಿಜವಾದರೂ ಹೀಗೆ ಅನಿಸುವದು ಮೇಲ್ನೋಟದ ಪರಿಣಾಮವಿರುವದು. ಈ ನೋಟ (ದೃಷ್ಟಿ) ನಿಜವಲ್ಲ. (೫೯) ಅಜ್ಞಾನ ಮತ್ತು ಆಕಾಶ ಇವು ಒಂದರಲ್ಲೊಂದು ಮಿಶ್ರವಾಗಿರುವವು.ಆತ್ಮಜ್ಞಾನದಿಂದ ಈ ಮಿಶ್ರಣದ ನಾಶವಾಗುವದು.ಆದ್ದರಿಂದ ಆಕಾಶವು ನಾಶವಂತ ಇರುವದು. (೬೦) ಆಕಾಶ ಮತ್ತು ಬ್ರಹ್ಮಸ್ವರೂಪ ಇವೆರಡೂ ಮೇಲ್ನೋಟಕ್ಕೆ ಒಂದೇ ಇರುವವೆಂದುಭಾಸವಾಗುವದು ಆದರೆ ಆಕಾಶವು ಶೂನ್ಯರೂಪವಿರುವದು. ಮತ್ತು ಬ್ರಹ್ಮಸ್ವರೂಪ ಶೂನ್ಯವಿರುವದಿಲ್ಲ. ಇದೇ ಇವೆರಡರಲ್ಲಿಯ ಮಹತ್ವದ ದೊಡ್ಡ ಅಂತರ ಇರುವದು. (೬೧) ಶ್ರೋತಾನ ಆಕ್ಷೇಪ ಮೇಲ್ನೋಟದಿಂದ ನೋಡುವವರಿಗೆ ಗೈರ ಏನೂ ಕಾಣಿಸುವದಿಲ್ಲ. ಯಾಕಂದರೆ ಇಂದ್ರಿಯಗಳ ದೃಷ್ಟಿಯಿಂದ ನೋಡಿದಾಗ ಮನವೂ ಸಹ ಮೇಲಿನದನ್ನು ನೋಡಿಯೇ ಕಲ್ಪನಾ ಮಾಡುತ್ತದೆ. ಆ ಕಲ್ಪನೆಯ ಪ್ರಕಾರ ಆಕಾಶ ಮತ್ತು ಬ್ರಹ್ಮ ಅಗದೀ ಒಂದೇ ಇರುವವೆಂದು ಖಾತ್ರಿಪೂರ್ವಕ ಅನಿಸುವದು. ಆದರೆ ಈ ಎರಡರಲ್ಲಿ ಭೇದ-ವಿರುವದೆಂಬುದೂ ಸಹ ಅಷ್ಟೇನಿಜವಿದೆ.(೬೨)ಉದಾ:-ಉನ್ಮನಿಅವಸ್ಥೆ ಮತ್ತು ಗಾಢವಾದನಿದ್ರಾವಸ್ಥೆ ಇವೆರಡೂ ಮೇಲ್ನೋಟಕ್ಕೆ ಒಂದೇ ಅನಿಸುವವು. ಆದರೆ ಅಂತರ್ಯಾಮಿಯ ಉನ್ಮನಿಯಲ್ಲಿ ಶುದ್ಧ ಜ್ಞಾನ (ಅರಿವು) ಜಾಗ್ರತವಿರುವದು. ಮತ್ತು ಸತ್ಯಸ್ವರೂಪ ಬ್ರಹ್ಮದ ಸಾಕ್ಷಾತ್ ಸ್ಪರ್ಶವಾಗುವದು. ಆದರೆ ಅದೇ ಸುಷುಪ್ತಿ (ನಿದ್ರಾವಸ್ಥೆ)ಯಲ್ಲಿ ಅರಿವು ಅಜ್ಞಾನದಲ್ಲಿ ಸಂಪೂರ್ಣ ಲಯವಾಗಿರುವದು.ಮತ್ತು ವೃತ್ತಿಶೂನ್ಯರೂಪವಾಗುವದು. ಎರಡೂ ಅವಸ್ಥೆಯಲ್ಲಿ ಈ ತರಹದಿಂದ ಮೂಲಭೂತವಾದ ಭೇದವಿರುವದು. ಉನ್ಮನಿ ಅವಸ್ಥೆ ಜ್ಞಾನದ್ದಾಗಿದ್ದರೆ ಸುಷುಪ್ತಿ ಅವಸ್ಥೆಯು ಅಜ್ಞಾನದ್ದಾಗಿರುವದು. (೬೩)

ಖೋಟೇ ಖರ್‍ಯಾ ಸಾರಿಖೇ ಭಾವಿತೀ। ಪರೀ ಪರೀಕ್ಷವಂತ ನಿವಡಿತೀ।
ಕಾ ಕುರಂಗೇ ದೇಖೋನ ಭುಲತೀ। ಮೃಗಜಳಾಸೀ ॥೬೪॥

ಆತಾ ಅಸೋ ಹಾ ದೃಷ್ಟಾಂತ। ಬೋಲಿಲಾ ಕಳಾಯಾ ಸಂಕೇತ।
ಮ್ಹಣೌನಿ ಭೂತ ಆಣಿ ಅನಂತ। ಯೇಕೇ ನಮ್ಹೆತೀ ॥೬೫॥

ಆಕಾಶ ವೇಗಳೆಪಣೇ ಪಾಹಾವೇ। ಸ್ವರೂಪೀ ಸ್ವರೂಪ ಚಿ ವ್ಹಾವೇ।
ವಸ್ತುಚೇ ಪಾಹಾಣೇ ಸ್ವಭಾವೇ। ಐಸೇ ಅಸೆ ॥೬೬॥

ಯೇಥೇ ಆಶಂಕಾ ಫಿಟಲೀ। ಸಂದೇಹವೃತ್ತೀ ಮಾವಳಲೀ।
ಭಿನ್ನಪಣೇ ನವಚೆ ಅನುಭವಲೀ। ಸ್ವರೂಪಸ್ಥಿತೀ ॥೬೭॥

ಆಕಾಶ ಅನುಭವಾ ಯೇತೇ। ಸ್ವರೂಪ ಅನುಭವಾಪರತೇ।
ಮ್ಹಣೋನಿಯಾ ಆಕಾಶಾತೇ। ಸಾಮ್ಯತಾ ನ ಘಡೇ ॥೬೮॥

ದುಗ್ಧಾಸಾರಿಖಾ ಜಳಾಂಶ। ನಿವಡೂ ಜಾಣತೀ ರಾಜಹಂಸ।
ತೈಸೇ ಸ್ವರೂಪ ಆಣೀ ಆಕಾಶ। ಸಂತ ಜಾಣತೀ ॥೬೯॥

ಸಕಳ ಮಾಯಾ ಗಥಾಗೋವೀ। ಸಂತಸಂಗೇ ಹೇ ಉಗವಾವೀ।
ಪಾವಿಜೆ ಮೋಕ್ಷಾಚೀ ಪದವೀ। ಸತ್ಸಮಾಗಮೇ ॥೭೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
"ಸ್ಥೂಲ ಪಂಚ ಮಹಾಭೂತೇ ಸ್ವರೂಪಾಕಾಶ ಭೇದೋ ನಾಮ"
ಸಮಾಸ ಪಂಚಮ॥

ಯಾವದೂ ನಿಜವಲ್ಲವೋ ಅದು ನಿಜದಂತೆ ಭಾಸವಾದರೂ ಪರೀಕ್ಷೆ ಮಾಡುವ ಸೂಜ್ಞ ಜನರು ನಿಜದೊಳಗಿರುವ "ಖೊಟ್ಟಿ"ಯನ್ನು ಆರಿಸಿ (ಹುಡುಕಿ) ತೆಗೆದು ಬೇರೆ ಮಾಡುವರು. ಮೃಗಜಲ ನೋಡಿ ಜಿಗರಿ ಮೋಸಬಿದ್ದು ನೀರಿಗಾಗಿ ಅದರ ಹಿಂದೆ ಓಡುವವು. ಇದರಂತೆ ಅಜ್ಞಾನಿ ಜನರಿಗೆ ಆಕಾಶವು ಬ್ರಹ್ಮವೇ ಇರುವದೆಂದು ಅನಿಸುವದು. ಆದೇ ಜ್ಞಾನಿ ಜನರಿಗೆ ಹಾಗೆ ಅನಿಸುವದಿಲ್ಲ. (೬೪) ದೃಷ್ಟಾಂತದ ಸಹಾಯದಿಂದ ವಿಷಯ ಹೇಳುವದು ಇಲ್ಲಿಗೆ ಸಾಕು. ಆಕಾಶ ಮತ್ತು ಬ್ರಹ್ಮ ಇವುಗಳಲ್ಲಿಯ ಅಂತರ [ಫರಕ] ಲಕ್ಷದಲ್ಲಿ ಬರಬೇಕೆಂದು ಹಿಂದೆ ಹೇಳಿದವನ್ನೇ ಇಲ್ಲಿ ಹೇಳಿವೆವು. ಸಾರಾಂಶವೇನಂದರೆ ಪಂಚಭೂತಗಳ ಪೈಕಿ ಇರುವ ಆಕಾಶವು ಮತ್ತು ಸತ್ಯ ಜ್ಞಾನಮಯ, ಮತ್ತು ಅನಂತವಿರುವ ಬ್ರಹ್ಮ ಒಂದೇ ಅಲ್ಲ. [೬೫] ಇನ್ನೊಂದು ಮಹತ್ವದ ಮಾತು ಏನಂದರೆ,ದೃಷ್ಟಾ ಬೇರೆ ಇದ್ದುಕೊಂಡು ದೃಶ್ಯತನದಿಂದ ಆಕಾಶವನ್ನು ನೋಡಬಲ್ಲನು. ಆದರೆ ಬ್ರಹ್ಮ ಸ್ವರೂಪ ನೋಡಬೇಕೆಂದರೆ ದೃಷ್ಟಾನಿಗೆ ಬ್ರಹ್ಮಸ್ವರೂಪವೇ ಆಗಬೇಕಾಗುವದು. ದೃಶ್ಯದ ಅನುಭವ ಮತ್ತು ಬ್ರಹ್ಮವಸ್ತುವಿನ ಅನುಭವ ಈ ಎರಡರಲ್ಲಿ ಇದು ದೊಡ್ಡ ಅಂತರ ಇರುತ್ತದೆ. ಬ್ರಹ್ಮವಸ್ತು ನೋಡಬೇಕಾದರೆ ಬ್ರಹ್ಮದಲ್ಲಿಯೇ ವಿಲೀನವಾಗಬೇಕಾಗುವದು. ದೃಶ್ಯದ ಅನುಭವದಲ್ಲಿ ದ್ವೈತವನ್ನು ದಾಟಬೇಕಾಗುವದಿಲ್ಲ. ಆದರೆ ಆದೇ ಬ್ರಹ್ಮ ವಸ್ತುವಿನ ಅನುಭವದಲ್ಲಿ ದ್ವೈತವನ್ನು ದಾಟಿ ಹೋಗದ ಹೊರತು ಗತಿ ಇಲ್ಲ. ಉಪನಿಷತ್‌ದಲ್ಲಿ ಅಗದೀ ಸ್ಪಷ್ಟವಾಗಿ ಹೇಳಲಾಗಿದೆ. "ಬ್ರಹ್ಮ ವಿತ್ ಬ್ರಹ್ಮೈವ ಭವತಿ" ಅರ್ಥ :- ಬ್ರಹ್ಮವನ್ನು ತಿಳಿಯುವವನು. ಸ್ವತಃ ಬ್ರಹ್ಮಸ್ವರೂಪವೇ ಆಗುವನು. ಇದೇ ದಿವ್ಯ ಅನುಭವವಾಗಿದೆ. ಈ ಮಾತನ್ನು ಶ್ರೀಸಮರ್ಥರು ಸ್ವತಃದ ಅನುಭವದಿಂದ ಇಲ್ಲಿ ಹೇಳುತ್ತಾರೆ. (೬೬) ಇಷ್ಟೆಲ್ಲ ತಿಳಿಸಿ ಹೇಳಿದ ಮೇಲೆ ಶ್ರೋತಾರ ಸಂಶಯ ನಿವಾರಣೆ ಹೊಂದಿತು. ಮತ್ತು ಸಂದೇಹ ವೃತ್ತಿ ಇಲ್ಲದಾಯಿತು. ಇದರ ಜೊತೆಗೇ ಬ್ರಹ್ಮದಿಂದ ಬೇರೆಯಾಗಿದ್ದು ಬ್ರಹ್ಮ ಸ್ಥಿತಿಯನ್ನು ಅನುಭವಿಸಲಿಕ್ಕೆ ಬರುವದಿಲ್ಲವೆಂಬುದರ ಖಾತ್ರಿ ಶ್ರೋತಾಗೆ ಆಯಿತು.(೬೭)ಅನುಭವ ಪಡೆಯುವ "ನಾನು" ಬೇರೆ ಇದ್ದುಕೊಂಡು ಆಕಾಶದ ಅನುಭವ ಪಡೆಯಬಲ್ಲವನಾಗಿರುವೆನು. ಆದರೆ ಬ್ರಹ್ಮ ಸ್ವರೂಪವು ಇಂಥ ದ್ವೈತಮಯ ಅನುಭವದ ಆಚೆಗೆ ಇರುವದು.ಆದ್ದರಿಂದ ಆಕಾಶ ಮತ್ತು ಬ್ರಹ್ಮ ಎರಡೂ ಒಂದೇ ಇರಲಿಕ್ಕೆ ಶಕ್ಯವಿಲ್ಲ. ಎರಡರಲ್ಲಿಯೂ ಸಾಮ್ಯತೆಯೇ ಇಲ್ಲ. (೬೮) ಹಾಲಿನಲ್ಲಿ ನೀರು ಕೂಡಿಸಿದರೆ ನೀರೂ ಸಹ ಹಾಲಿನಂತೆ ಕಾಣುವದು. ಆದರೆ ರಾಜಹಂಸವು ಹಾಲಿನಲ್ಲಿ ಕೂಡಿದ ನೀರನ್ನು ಹೊರತೆಗೆಯುವದು. ಇದರಂತೆ ಆಕಾಶ ಮತ್ತು ಬ್ರಹ್ಮ ಒಂದೇ ರೂಪದಲ್ಲಿ ಕಂಡರೂ ಜ್ಞಾನಿ ಸಂತ ಸಾಧುಗಳು ಮಾತ್ರ ಇವುಗಳಲ್ಲಿಯ ಭೇದವನ್ನು ಸರಿಯಾಗಿ ತಿಳಿದು ಗುರುತಿಸಬಲ್ಲವರಾಗಿರುತ್ತಾರೆ. (೬೯) ಮಾಯೆಯ ಈ ಎಲ್ಲ ದೃಶ್ಯಮಯ ಪಂಚಭೂತಾತ್ಮಕ ಬಾಜಾರದ ಸಂತೆಯು ಬಹಳ ಜಟಿಲವಾಗಿರುವದು. ಹಾಗೂ ಕ್ಲಿಷ್ಟವಿರುವದು. ಸಂತ ಸಾಧುಗಳ ಸಂಗತಿಯಲ್ಲಿ ಇದ್ದುಕೊಂಡು ಈ ಜಟಿಲವಾದ ತೊಡಕನ್ನು ಬಿಡಿಸಬೇಕು. ಈ ರೀತಿಯಿಂದ ಸಂತ ಸಾಧು ಸಮಾಗಮ ಹೊಂದಿ ಮೋಕ್ಷದ ಪದವಿಯನ್ನು ಪ್ರಾಪ್ತಮಾಡಿಕೊಳ್ಳಬೇಕು. (೭೦)

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದ ಎಂಟನೆಯ ದಶಕದೊಳಗಿನ ಪಂಚಮಹಾಭೂತಸ್ವರೂಪಾಕಾಶಭೇದ ಎಂಬ ಹೆಸರಿನ ಐದನೆಯ ಸಮಾಸವು ಮುಗಿಯಿತು.

● ●

## ದಶಕ ೮. ಸಮಾಸ ೬. ದುಶ್ಚಿತ ನಿರೂಪಣ (ನುಡಿ ೫೪)

ಪರಮಾರ್ಥದಲ್ಲಿಯ ಒಂದು ಆಳವಾದ ಪ್ರಶ್ನೆಯ ಬಗೆಗೆ ಈ ಸಮಾಸ ಮುಂಡಂಪಾಗಿದೆ. ಆ ಪ್ರಶ್ನೆ ಯಾವುದೆಂದರೆ:- ಬ್ರಹ್ಮದರ್ಶನವಾಗಲಿಕ್ಕೆ ಸತ್ ಸಮಾಗಮ ಹೊಂದುವದು ಅತ್ಯಂತ ಅವಶ್ಯವಿದೆಯನ್ನುವದರಲ್ಲಿ ಎಷ್ಟೂ ಸಂಶಯವಿಲ್ಲ. ಆದರೆ ಸತ್ ಸಮಾಗಮದ ಲಾಭ ದೊರಕಿದ ಮೇಲೆ ಬ್ರಹ್ಮದರ್ಶನವಾಗಲು ಎಷ್ಟು ದಿವಸಗಳು ಬೇಕಾಗುವವು? ಈ ಪ್ರಶ್ನೆ ಉತ್ಪನ್ನವಾಗಲು ಕಾರಣವೇನಂದರೆ ಬಹುಜನರಿಗೆ ಸತ್‌ಸಂಗತಿಯ ಲಾಭವಾಗುವದು. ಈ ಸಹವಾಸದ ಲಾಭ ಬಹಳಷ್ಟು ದಿವಸ ಇರುವದು-ಉಳಿಯುವದು. ಹೀಗೆ ಸಹವಾಸಲಾಭ ದೊರಕಿದರೂಸಹ ಅಗದೀ ಕಡಿಮೆ ಜನರಿಗೆ ಮಾತ್ರ ಬ್ರಹ್ಮ ದರ್ಶನದ ಲಾಭ ದೊರಕುವದು. ಇದರ ವಿಷಯವಾಗಿ ಶ್ರೀ ಸಮರ್ಥರು ಈ

ಸಮಾಸದಲ್ಲಿ ಅಗದೀ ಸ್ಪಷ್ಟವಾಗಿ ವಿವರಣೆ ಮಾಡಿ ತಿಳಿಸಿದ್ದಾರೆ. ಜಗತ್ತಿನಲ್ಲಿ ಸಮಾನ ದೃಷ್ಟಿ ಅಥವಾ ಸಮಾನತೆ, ಅಭೇದ ಬುದ್ಧಿ,ಎಲ್ಲಿಯಾದರೂ ಕಂಡು ಬರುತ್ತಿದ್ದರೆ ಅದು ಕೇವಲ ಸಂತರ ಹತ್ತಿರವೇ ಕಾಣುವದು. ತಾವು ಭೋಗಿಸುತ್ತಿರುವ ಬ್ರಹ್ಮಾನಂದಾಮೃತವನ್ನು ಪ್ರತಿಯೊಬ್ಬ ಸಂತರು ಅಗದೀ ಮುಕ್ತಹಸ್ತದಿಂದ ಹಂಚುವರು. (ತೂರುವರು). ಇದನ್ನುತೆಗೆದುಕೊಳ್ಳುವದಕ್ಕೆ ಮತ್ತುತೆಗೆದುಕೊಂಡದ್ದನ್ನು ಅರಗಿಸಿಕೊಳ್ಳುವ ಸಾಮರ್ಥ್ಯ ಬಹಳ ಕಡಿಮೆಜನರಲ್ಲಿ ಕಂಡು ಬರುವದು. ಯಾಕಂದರೆ ಸಂತರ ಬೋಧವನ್ನು ತಿಳಿದು ಅದನ್ನು ಅರಗಿಸಿಕೊಳ್ಳುವದಕ್ಕೆ ಶಕ್ತಿ ಬೇಕಾಗುವದು. ಈ ಶಕ್ತಿ ಕೇವಲ ಹೆಸರಿಗೆ ಮಾತ್ರ ಸತ್ಸಂಗದಲ್ಲಿದ್ದರೆ ಬರುವದಿಲ್ಲ. ಇದಕ್ಕೆ ಮನದ ತಯಾರಿ ಬೇಕು. ಇಂಥ ಜನ ಬಹಳ ಕಡಿಮೆ ಕಾಣುವರು.ಆದ್ದರಿಂದ ಸತ್ಸಮಾಗಮ ಒದಗಿಯೂ ಸಹ ಬ್ರಹ್ಮದರ್ಶನದ ಆನಂದವನ್ನು ಎಲ್ಲರಿಗೂ ಅನುಭವಿಸಲಿಕ್ಕೆ ಬರುವದಿಲ್ಲ. ಇದಕ್ಕೆ ಯಾವ ರೀತಿಯ ತಯಾರಿ ಬೇಕೆಂಬ ಬಗ್ಗೆ ಬೃಹದಾರಣ್ಯಕ ಉಪನಿಷತ್‌ದಲ್ಲಿ ಯಾಜ್ಞವಲ್ಕ್ಯರು ಜನಕ ಮಹಾರಾಜನಿಗೆ ಹೇಳಿರುವದೇನಂದರೆ "ತಸ್ಮಾತ್ ಏವಂವಿದ್ ಶಾಂತಃ ದಾಂತಃ ಉಪರತಃ ತಿತಿಕ್ಷುಃ ಸಮಾಹಿತಃ ಭೂತ್ವಾ ಆತ್ಮನಿ ಏವ ಆತ್ಮಾನಂ ಪಶ್ಯತಿ" ಅರ್ಥ:– ಆದ್ದರಿಂದ ಆತ್ಮಾ ಹೇಗೆ ಇರುವನೆಂಬುದನ್ನು ತಿಳಿದು ಯಾವನು ಮನಸ್ಸಿನಿಂದ ಶಾಂತನಾಗುವನು, ಯಾವನು ಇಂದ್ರಿಯಗಳ ಸಂಯಮನ ಮಾಡುವನು, ಯಾವನು ಅಂತರ್ಮುಖಿಯಾಗುವನು,ಯಾವನು ಸಹನಶೀಲನಾಗುವನು,ಮತ್ತು ಯಾವನು ಏಕಾಗ್ರಚಿತ್ತನಾಗುವನೋ ಅಂಥವನಿಗೆ ಸ್ವತಃದ ಅಂತರ್ಯಾಮದಲ್ಲಿ ಆತ್ಮದರ್ಶನವಾಗುವದು" ಅರ್ಥಾತ್ ಬ್ರಹ್ಮದರ್ಶನ ಒದಗಬೇಕಾದರೆ ಮನುಷ್ಯನು ಅಗದೀ (ಬಹಳಷ್ಟು) ಏಕಾಗ್ರಚಿತ್ತ ಮತ್ತು ಪ್ರಯತ್ನಶೀಲನಾಗಿರಬೇಕಾಗುವದು. ಯಾವನು ಏಕಾಗ್ರಚಿತ್ತನಾಗಿರುವದಿಲ್ಲವೋ ಅವನು ವ್ಯಗ್ರಚಿತ್ತನಾಗಿರುವನು. ವ್ಯಗ್ರಚಿತ್ತನಿಗೆ ಶ್ರೀ ಸಮರ್ಥರು ದುಶ್ಚಿತ್ತತನವೆಂಬ ಹೆಸರನ್ನು ಉಪಯೋಗಿಸಿರುವರು. ಯಾವನು ಪ್ರಯತ್ನಶೀಲನಾಗಿರುವದಿಲ್ಲವೋ ಅವನು ಆಲಸ್ಯಉಳ್ಳವನಿರುವನು. ಆಲಸ್ಯತನಕ್ಕೆ ಶ್ರೀಸಮರ್ಥರು ಆಲಸ್ಯ (ಆಳಸ) ಅನ್ನುವರು. ದುಶ್ಚಿತ್ತತನ ಮತ್ತು ಆಲಸ್ಯ ಇವುಗಳ ನಡುವೆ (ಜೊತೆಗೆ) ನಿದ್ರೆಯ ಜೋಡು (ಭರತಿ) ಮಾಡಿ ಶ್ರೀ ಸಮರ್ಥರು ಇವಕ್ಕೆ ಭ್ರಷ್ಟಗೊಳಿಸುವ "ತ್ರಯೀ" (ಅಂದರೆ ಮೂರು ಕೆಟ್ಟ, ದುಷ್ಟ ಕೂಡಿದರೆ ಭ್ರಷ್ಟತ್ರಯೀ ಆಗುವದು)ಯೆಂದು ವರ್ಣನೆ ಮಾಡಿರುವರು. ತಾತ್ಪರ್ಯವೇನಂದರೆ, ಪರಮಾರ್ಥಿಯಾಗಬೇಕೆಂಬ ಮನುಷ್ಯನು ಏಕಾಗ್ರಚಿತ್ತದಿಂದ ಇಂದ್ರಿಯಗಳನ್ನು ಯಾವಾಗಲೂ ಹಿಡಿತದಲ್ಲಿ ಇಡುವಂಥವ, ಮತ್ತು ನಿದ್ರಾ, ಆಲಸ್ಯಾದಿಗಳಿಂದ ದೂರವಿರುವಂಥವನಾಗಿರಬೇಕು. ಈ ದುಷ್ಟತ್ರಯೀ ಗುಣಗಳನ್ನು ದೂರೀಕರಿಸಿದ ಮತ್ತು ಇಂದ್ರಿಯಗಳನ್ನು ಯಾವಾಗಲೂ ಹಿಡಿತದಲ್ಲಿ ಇಡುವವರು ಮತ್ತು ಸಂಪನ್ನ ಗುಣಗಳಿಂದ ಕೂಡಿದ ಮನುಷ್ಯನು ಸತ್ಸಮಾಗಮದಲ್ಲಿ ಇದ್ದವನಾದರೆ ಅವನು ನೋಡ ನೋಡುವಷ್ಟರಲ್ಲಿ ಪರಮಾರ್ಥ ಮಾರ್ಗದಲ್ಲಿ ತಯಾರ ಆಗುತ್ತುವನು. ಅವನ ಬುದ್ಧಿ ಅತ್ಯಂತ ಸೂಕ್ಷ್ಮಗೊಳ್ಳುವದು. ಮತ್ತು ಅದು ಏಕಾಗ್ರವಾಯಿತೆಂದರೆ ತಡಮಾಡದೇ ಮಾಯೆಯ ಪರದೆಯನ್ನು ಹರಿದೊಗೆದು ಸ್ವಸ್ವರೂಪದೊಂದಿಗೆ ತದಾಕಾರವಾಗುವದು.

## ಸಮಾಸ ಷಷ್ಠಮ : ದುಶ್ಚಿೀತ ನಿರೂಪಣ ನಾಮ

॥ಶ್ರೀರಾಮ॥ ಶ್ರೋತಾ ವಿನವೀ ವಕ್ತಯಾಸೀ । ಸತ್ಸಂಗಾಚೀ ಮಹಿಮಾ ಕೈಸೀ ।
ಮೋಕ್ಷ ಲಾಭೇ ಕಿತಾ ದಿವಸೀ । ಹೇ ಮಜ ನಿರೋಪಾವೇ ॥೧॥

ಧರಿತಾ ಸಾಧೂಚೀ ಸಂಗತೀ । ಕಿತಾ ದಿವಸಾ ಹೋತೆ ಮುಕ್ತೀ ।
ಹಾ ನಿಶ್ಚಯು ಕೃಪಾಮೂರ್ತೀ । ಮಜ ದೀನಾಸ ಕರಾವಾ ॥೨॥

ಮುಕ್ತೀ ಲಾಭೆ ತತ್ಕ್ಷಣೀ । ವಿಶ್ವಾಸತಾ ನಿರೂಪಣೀ ।
ದುಶ್ಚಿೀತ ಪಣೇ ಹಾನೀ । ಹೋತಸೇ ॥೩॥

ಸುಚಿತಪಣೇ ದುಶ್ಚಿೀತ । ಮನ ಹೋತೇ ಅಕಸ್ಮಾತ ।
ತ್ಯಾಸ ಕರಾವೇ ನಿವಾಂತ । ಕೋಣೆ ಪರೀ ॥೪॥

ಮನಾಚ್ಯಾ ತೋಡೂನ ವ್ರೋಢೀ । ಶ್ರವಣೀ ಬೈಸಾವೇ ಆವಡೀ ।
ಸಾವಧಪಣೇ ಘಡೀನೇ ಘಡೀ । ಕಾಳಸಾರ್ಥಕ ಕರಾವಾ ॥೫॥

ಅರ್ಥ ಪ್ರಮೇಯ ಗ್ರಂಥಾಂತರೀ । ಶೋಧೂನ ಘ್ಯಾವೇ ಅಭ್ಯಾಂತರೀ ।
ದುಶ್ಚಿೀತಪಣ ಆಲೇ ತರೀ । ಪುನ್ಹಾ ಶ್ರವಣ ಕರಾವೇ ॥೬॥

ಅರ್ಥಾಂತರ ಪಾಹಿಲ್ಯಾವಿಣ। ಉಗೇ ಚಿ ಕರೀ ಜೋ ಶ್ರವಣ ।
ತೋ ಶ್ರೋತಾ ನವ್ಹೆ ಪಾಷಾಣ । ಮನುಷ್ಯವೇಷೇ ॥೭॥

ಯೇಥೇ ಶ್ರೋತೇ ಮಾನಿತೀಲ ಸೀಣ । ಆಮ್ಹಾಸ ಕೇಲೇ ಪಾಷಾಣ ।
ತರೀ ಪಾಷಾಣಚೇ ಲಕ್ಷಣ । ಸಾವಧ ಏಕಾ ॥೮॥

ವಾಕುಡಾ ತಿಕಡಾ ಫೋಡಿಲಾ । ಪಾಷಾಣ ಘಡೂನ ನೀಟ ಕೇಲಾ ।
ದುಸರೇ ವೇಳೇಸೀ ಪಾಹಿಲಾ । ತರೀ ತೋ ತೈಸಾ ಚಿ ಅಸೇ ॥೯॥

ಟಾಂಕೀನೇ ಖಪಲೀ ಫೋಡಿಲೀ । ತೇ ಮಾಗುತೀ ನಾಹೀ ಜಡಲೀ।
ಮನುಷ್ಯಾಚೀ ಕುಬುದ್ಧಿ ಝಾಡಿಲೀ । ತರೀ ತೇ ಪುನ್ಹಾ ಲಾಗೇ ॥೧೦॥

ಸಾಂಗತಾ ಅವಗುಣ ಗೇಲಾ । ಪುನ್ಹಾ ಮಾಗುತಾ ಜಡಲಾ ।
ಯಾಕಾರಣೇ ಮಾಹಾಭಲಾ । ಪಾಷಾಣಗೋಟಾ ॥೧೧॥

## ದಶಕ ೮. ಸಮಾಸ ೬. "ದುಶ್ಚಿತ್ತನಿರೂಪಣ" (ನುಡಿ ೫೪)

ಶ್ರೋತಾ ವಿಚಾರಿಸುವನು. "ಸತ್ಸಂಗದ ಮಹಿಮೆ ಅಗಾಧವಿರುವದು ನಿಜವಿದೆ. ಆದರೆ ಸತ್ಸಂಗದಲ್ಲಿ ಇದ್ದವರಿಗೆ ಎಷ್ಟು ದಿವಸಗಳಲ್ಲಿ ಮೋಕ್ಷ ದೊರಕುವದು? ಇದರ ಬಗೆಗೆ ಹೇಳಿರಿ" ಶ್ರೋತಾ ವಕ್ತಾನಿಗೆ ವಿನಂತಿಸಿ ಕೊಳ್ಳುವದೇನಂದರೆ "ತಾವು ಸತ್ಸಂಗದ ಹಿರಿಮೆಯನ್ನು ಮೇಲಿಂದ ಮೇಲೆ ಹೇಳುವಿರಿ. ಆದರೆ ಸತ್ಸಂಗದ ಲಾಭ ದೊರೆತವರಿಗೆ ಎಷ್ಟುದಿವಸಗಳಲ್ಲಿ ಮೋಕ್ಷಪ್ರಾಪ್ತಿಯಾಗುವದು. ಇದನ್ನು ವಿವರಿಸಿ ಹೇಳಿರಿ. (೧) ಸತ್ಪುರುಷರ ಸಹ ವಾಸ ಹಿಡಿದ ಮೇಲೆ ಎಷ್ಟು ದಿವಸಗಳಲ್ಲಿ ಬ್ರಹ್ಮದರ್ಶನ ದೊರೆಯುವದು? ಮುಕ್ತಿಯ ಲಾಭ ಯಾವಾಗ್ಗೆ ಆಗು ವದು? ತಾವು ಕೃಪಾಮೂರ್ತಿ ಇರುವಿರಿ.ನಾನು ದೀನನಿರುವೆ. ಮೇಲಿನ ಪ್ರಶ್ನೆಗಳಿಗೆ ಉತ್ತರ ಹೇಳಬೇಕಾಗಿ ವಿನಂತಿ.(೨) ಈಗ ವಕ್ತಾ ಉತ್ತರ ಕೊಡುವನು. ಸತ್ಪುರುಷರು ಯಾವ ಉಪದೇಶ ಮಾಡುವರೋ ಅದರ ಮೇಲೆ ಸಂಪೂರ್ಣ ವಿಶ್ವಾಸ ಇಟ್ಟಿದ್ದಾದರೆ, ಕೂಡಲೇ ತತ್‌ಕ್ಷಣ ಆತ್ಮಜ್ಞಾನವಾಗಿ ಮುಕ್ತಿಯ ಲಾಭವಾಗುವದು. ಆದರೆ ದುಶ್ಚಿತ್‌ತನ ಅಂದರೆ ದುಷ್ಟತ್ರಯಿಗಳಿಂದಾಗಿ ನಮ್ಮದು ಬಹಳ ಹಾನಿ ಆಗುವದು. ಸತ್ಪುರುಷರು ಏನನ್ನು ಹೇಳುವರೋ ಅದರ ಮೇಲೆ ನಮ್ಮ ವಿಶ್ವಾಸ ಕೂಡದೇ ಇರುವದಕ್ಕೆ ದುಶ್ಚಿತ್ತನದ್ದೇ ಪರಿಣಾಮವಿರುವದು. (೩) ಇದರ ಮೇಲೆ ಶ್ರೋತಾ ಪುನಃ ಕೇಳುತ್ತಾನೆ. ಮನವು ಸುಚಿತ್ತವಿರುವದು. ಆದರೆ ಏಕಾಏಕಿ (ಒಮ್ಮಿಂದೊಮ್ಮೆಲೆ)ಅದು ದುಶ್ಚಿತ್ತವಾಗುವದು. ಖಿನ್ನವಾಗುವದು. ಆಮೇಲೆ ದುಶ್ಚಿತ್ತವಾದ ಮನವು ಅಗದೀ ಅಶಾಂತವಾಗುವದು.ಪ್ರಕ್ಷುಬ್ಧವಾಗುವದು.ಈ ಅಶಾಂತ ಮನವನ್ನು ಪುನಃ ಹೇಗೆ ಶಾಂತ ಮಾಡಬೇಕು? ಏಕಾಗ್ರಚಿತ್ತ ಹೇಗೆ ಆಗಬೇಕು? ಇದನ್ನೆಲ್ಲ ತಾವು ಹೇಳಬೇಕು. (೪) ಇದರ ಮೇಲೆ ವಕ್ತಾ ಉಪಾಯವನ್ನು ತಿಳಿಸಿಕೊಡುವನು. ಅದು ಹೀಗಿರುವದು. ಬೇರೆ ಬೇರೆ ತರಹದ ವಸ್ತುಗಳ ಕಡೆಗೆ ಮತ್ತು ವಿಷಯದ ಕಡೆಗೆ ಮನಸ್ಸು ಹರಿದಾಡುವದು ಎಳೆಯಲ್ಪಡುವದು. ಇದನ್ನು ಮೊದಲು ನಿಲ್ಲಿಸಬೇಕು. ಅನಂತರ ನಿಜವಾದ ಪ್ರೇಮ ವಿಶ್ವಾಸದಿಂದ ಶ್ರವಣಕ್ಕೆ (ಕೇಳಲಿಕ್ಕೆ) ಕೂಡ್ರಬೇಕು. ಸಮಯವನ್ನು ವ್ಯರ್ಥಗೊಳಿಸ ದಂತೆ ಸಾವಧರಿರಬೇಕು. ಈ ಪ್ರಕಾರ ನಿಮ್ಮ ವೇಳೆಯನ್ನು ಸಾರ್ಥಕಗೊಳಿಸುವ ಕಡೆಗೆ ಲಕ್ಷ್ಯಗೊಡಬೇಕು. (೫) ನೀವು ಯಾವ ಗ್ರಂಥ ಶ್ರವಣ ಮಾಡುವಿರೋ ಅದರಲ್ಲಿಯ ಅರ್ಥ ಮತ್ತು ತಾತ್ಪರ್ಯ ಭಾವಾರ್ಥ ಅಥವಾ ಸಿದ್ಧಾಂತವನ್ನು ಸರಿಯಾಗಿ ಶೋಧಿಸಿ ತಿಳಿಯಬೇಕು. ಮತ್ತು ವಿಚಾರ ಮಂಥನದಿಂದ ತಿಳಿದದ್ದನ್ನು ಬುದ್ಧಿಯಲ್ಲಿ ಸಂಗ್ರಹಿಸಬೇಕು. ಮನದ ತನ್ಮಯತೆ ಅಥವಾ ಏಕಾಗ್ರತೆಯು ಬಿಗಡಾಯಿಸಿ ಚಿತ್ತವು ವ್ಯಗ್ರವಾದರೆ ಮತ್ತು ಲಕ್ಷ್ಯವು ಭಲತೆ ಕಡೆಗೆ ಹೋದರೆ ತಿರುಗಿ ಶ್ರವಣ ಮಾಡಬೇಕು. (೬) ಇನ್ನು ಮೇಲೆ ಶ್ರೀಸಮರ್ಥರು ಪಾಷಾಣದದೃಷ್ಟಾಂತ ಕೊಟ್ಟು ಹೇಳುವರು:- ಕೆಲವೊಂದು ಶ್ರೋತಾರು (ಶ್ರೋತೃಜನ) ಪಾಷಾಣಕ್ಕಿಂತ ಕಡಿಮೆ ದರ್ಜೆಯವರು ಹೇಗೆ ಇರುವರೆಂಬುದನ್ನು ವರ್ಣಿಸಿದ್ದಾರೆ. ಗ್ರಂಥದಲ್ಲಿಯ ಅರ್ಥವನ್ನು ಬುದ್ಧಿಯಲ್ಲಿ ಧಾರಣ ಮಾಡದೆ ಯಾವನು ಕೇವಲ ಸುಮ್ಮನೆ ಶ್ರವಣ ಮಾಡುವನೋ ಅವನು ನಿಜವಾದ ಶ್ರೋತಾ ಅಲ್ಲ. ಮನುಷ್ಯ ರೂಪಧರಿಸಿದ ಒಂದು (ಪಾಷಾಣ) ಕಲ್ಲೇ ಎಂದು ಹೇಳಬಹುದು. (೭) ವಕ್ತಾರರು ನಿಮಗೆ (ಶ್ರೋತಾ ಜನರಿಗೆ) ಪಾಷಾಣ ಅನ್ನುವರೆಂದು ಕೆಡಕೆನಿಸಬಹುದು. ಆದರೆ ಪಾಷಾಣದ ಲಕ್ಷಣ ಹೇಳುವೆ ಮೊದಲು ಅದನ್ನು ಕೇಳಿರಿ. (೮) ತಿಳಿ ಯಿರಿ. ಅಂಕು ಡೊಂಕಾಗಿ ಒಡೆದ ಕಲ್ಲು ಇರುವದು. ಅದನ್ನು ಒಡೆದು-ಕಟೆದು ನಿಲ್ಲಿಸಿದರೆ ಅದು ಹೆಚ್ಚು ಕಡಿಮೆ ಮೊದಲಿನಂತೆಯೇ ಕಾಣುವದು. (೯) ಇದನ್ನು ಸರಿಯಾಗಿ ಉಳಿಯಿಂದ ಕಟೆದು ಪೆಣಕಿಯನ್ನು ಎಬ್ಬಿಸಿ ನೀಟಾಗಿ ಮಾಡಿದರೆ ಒಡೆದು ಉದುರಿದ ಕಲ್ಲಿನ ಪೆಣಕಿಗಳು ಪುನಃ ಹೋಗಿ ಮೊದಲಿನ ಕಲ್ಲಿಗೆ ಹತ್ತಿಕೊಳ್ಳುವದಿಲ್ಲ. ಕಟೆದ ಕಲ್ಲು ಒಂದು ರೂಪವನ್ನು ತಳೆಯುವದು. ಆದರೆ ಮನುಷ್ಯರ ಬಾಬತಿನಲ್ಲಿ ಈ ತರಹವಿಲ್ಲ. ಚಲೋ ಉತ್ತಮ ಉಪದೇಶದಿಂದ ಮನುಷ್ಯನ ಕೆಟ್ಟ ಬುದ್ಧಿಯು ಹಾರಿ ಹೋದರೂ ಅಷ್ಟರ ಮಟ್ಟಿಗೇ (ತಾತ್ಕಾಲಿಕವಾಗಿ) ಅದು ಬಾಜೂಕ್ಕೆ ಸರಿದಿರುತ್ತದೆ. ಆದರೆ ಪುನಃ ಆ ಡೊಂಕು ಬುದ್ಧಿ ಅವನಿಗೆ ಅಂಟಿಕೊಳ್ಳುತ್ತದೆ. (೧೦) ಒಬ್ಬನಿಗೆ ಅವನ ದೋಷ ಅವಗುಣ ಇವನ್ನು ತೋರಿಸಿಕೊಟ್ಟರೆ ಅವು ಆಗಿನ ಮಟ್ಟಿಗೆ ಅವನನ್ನು ಬಿಡುತ್ತವೆ. ಆದರೆ ಪುನಃ ಅವು ಅವನ ಅಂತರ್ಯಾಮದಲ್ಲಿ ಹಾಜರ ಇರುವವು. ಆದರೆ ಆದೇ ಪಾಷಾಣದಿಂದ ಹೀಗೆ ಆಗುವದಿಲ್ಲ. ಆದ್ದರಿಂದ ಮನು ಷ್ಯನಿಗಿಂತ ಪಾಷಾಣವು ಬಹಳ ಉತ್ತಮವೆಂದು ಅನ್ನಬೇಕಾಗುವದು. (೧೧)

ಜ್ಯಾಚಾ ಅವಗುಣ ಝುಡೇನಾ। ತೋ ಪಾಷಾಣಾಹೂನ ಉಣಾ।
ಪಾಷಾಣ ಆಗಳಾ ಜಾಣಾ। ಕೋಟಿಗುಣೇ ॥೧೨॥
ಕೋಟಿಗುಣೇ ಕೈಸಾ ಪಾಷಾಣ। ತ್ಯಾಚೇ ಹಿ ಏಕಾ ಲಕ್ಷಣ।
ಶ್ರೋತೀ ಕರಾವೇ ಶ್ರವಣ। ಸಾವಧ ಹೋಊನೀ ॥೧೩॥
ಮಾಣಿಕ ಮೋತೀ ಪ್ರವಾಳ। ಪಾಚೀ ವೈಢೂರ್ಯ ವಜ್ರನೀಳ।
ಗೋಮೇದಮಣೀ ಪರಿಸ ಕೇವಳ। ಪಾಷಾಣ ಬೋಲಿಜೆ ॥೧೪॥
ಯಾ ಹಿ ವೇಗಳೆ ಬಹುತ। ಸೂರ್ಯಕಾಂತ ಸೋಮಕಾಂತ।
ನಾನಾ ಮೊಹರೆ ಸಪ್ರಚಿತ। ಔಷಧಾಕಾರಣೇ ॥೧೫॥
ಯಾ ಹಿ ವೇಗಳೆ ಪಾಷಾಣ ಭಲೇ। ನಾನಾ ತೀರ್ಥೀ ಜೆ ಲಾಗಲೇ।
ನಾಪೀ ಕೂಪ ಸೆಖೀ ಜಾಲೇ। ಹರಿಹರ ಮೂರ್ತೀ ॥೧೬॥
ಯಾಚಾ ಪಾಹಾತಾ ವಿಚಾರ। ಪಾಷಾಣಾ ಏಸೇ ನಾಹೀ ಸಾರ।
ಮನುಷ್ಯ ತೇ ಕಾಯೆ ಪಾಮರ। ಪಾಷಾಣಾಪುಢೇ ॥೧೭॥
ತರೀ ತೋ ಏಸಾ ನವ್ಹೆ ಪಾಷಾಣ। ಜೋ ಅಪವಿತ್ರ ನಿಃಕಾರಣ।
ತಯಾಸಾರಿಖಾ ದೇಹ ಜಾಣ। ದುಶ್ಚಿೀತ ಅಭಕ್ತಾಂಚಾ ॥೧೮॥
ಆತಾ ಅಸೋ ಹೇ ಬೋಲಣೇ। ಘಾತ ಹೋತೊ ದುಶ್ಚಿೀತಪಣೇ।
ದುಶ್ಚಿೀತ ಪಣಾಚೆನಿ ಗುಣೇ। ಪ್ರಪಂಚ ನಾ ಪರಮಾರ್ಥ ॥೧೯॥
ದುಶ್ಚಿೀತಪಣೇ ಕಾರ್ಯ ನಾಸೆ। ದುಶ್ಚಿೀತಪಣೇ ಚಿಂತಾ ವಸೆ।
ದುಶ್ಚಿೀತಪಣೇ ಸ್ಮರಣ ನಸೆ। ಕ್ಷಣ ಯೇಕ ಪಾಹಾತಾ ॥೨೦॥
ದುಶ್ಚಿೀತಪಣೇ ಶತ್ರುಜಿಣೇ। ದುಶ್ಚಿೀತಪಣೇ ಜನ್ಮಮರಣೇ।
ದುಶ್ಚಿೀತಪಣಾಚೆನಿ ಗುಣೇ। ಹಾನೀ ಹೋಯೆ ॥೨೧॥
ದುಶ್ಚಿೀತಪಣೇ ನವ್ಹೆ ಸಾಧನ। ದುಶ್ಚಿೀತಪಣೇ ನ ಘಡೆ ಭಜನ।
ದುಶ್ಚಿೀತಪಣೇ ನವ್ಹೆ ಜ್ಞಾನ। ಸಾಧಕಾಸೀ ॥೨೨॥
ದುಶ್ಚಿೀತಪಣೇ ನವ್ಹೆ ನಿಶ್ಚಯೋ। ದುಶ್ಚಿೀತಪಣೇ ನ ಘಡೆ ಜಯೋ।
ದುಶ್ಚಿೀತಪಣೇ ಹೋಯೆ ಕ್ಷಯೋ। ಆಪುಲ್ಯಾ ಸ್ವಹಿತಾಚಾ ॥೨೩॥
ದುಶ್ಚಿೀತಪಣೇ ನ ಘಡೆ ಶ್ರವಣ। ದುಶ್ಚಿೀತಪಣೇ ನ ಘಡೆ ವಿವರಣ।
ದುಶ್ಚಿೀತಪಣೇ ನಿರೂಪಣ। ಹಾತೀಚೇ ಜಾಯೆ ॥೨೪॥
ದುಶ್ಚಿೀತ ಬೈಸಲಾ ಚಿ ದಿಸೆ। ಪರೀ ತೋ ಅಸತ ಚಿ ನಸೆ।
ಚಂಚಳ ಚಕ್ರೀ ಪಡಿಲೇ ಅಸೆ। ಮಾನಸ ತಯಾಚೇ ॥೨೫॥

ಯಾವನ ಅವಗುಣಗಳು ಎಷ್ಟು ಸಲ ಹೇಳಿದರೂ ಅವನು ಅವನ್ನು ಬಿಟ್ಟು ಬಿಡುವದಿಲ್ಲವೋ ಅಂಥ ಮನುಷ್ಯನು ಕಲ್ಲಿಗಿಂತ ಹೀನ ದರ್ಜೆಯವನೆಂದು ತಿಳಿಯಬೇಕು. ಇವನಿಗಿಂತ ಅನೇಕ ಪಟ್ಟು ಕಲ್ಲೇ ಉತ್ತಮವೆಂದು ಅನ್ನಲಿಕ್ಕೆ ಅಡ್ಡಿ ಇಲ್ಲ. (೧೨) ಪಾಷಾಣವು ಅನೇಕಪಟ್ಟು ಉತ್ತಮವೆಂಬುದು ಹೇಗೆ ಎಂಬುದರ ವರ್ಣನೆಯನ್ನು ಮಾಡುವೆ. ಶ್ರೋತಾಜನ ಲಕ್ಷ್ಯಕೊಟ್ಟು ಕೇಳಬೇಕು. (೧೩) ಮಾಣಿಕ್ಯ, ಮುತ್ತು,ಹವಳ, ಪಚ್ಚೆ, ವಜ್ರ,ವೈಡೂರ್ಯ, ನೀಲ, ಗೋಮೇದಕಮಣಿ, ಪರಿಸ(ಪುರುಷ) ಇತ್ಯಾದಿಗಳೆಲ್ಲವೂ ಪಾಷಾಣವೆಂದೇ ತಿಳಿಯಲ್ಪಡುವವು.(೧೪) ಶಿವಾಯ, ಸೂರ್ಯಕಾಂತ, ಸೋಮಕಾಂತ, (ಚಂದ್ರಕಾಂತ) ಮತ್ತು ರೋಗಗಳ ಔಷಧಕ್ಕೆಂದು ಉಪಯೋಗ ಬೀಳುವ ಮಣಿ ಇತ್ಯಾದಿ. ಮತ್ತು ಪಾಷಾಣದಲ್ಲಿಯು ಇನ್ನೂ ಅನೇಕ ಪ್ರಕಾರಗಳಿರುವವು. ಇವೆಲ್ಲ ಪಾಷಾಣ ವರ್ಗದವು. (೧೫) ಇವುಗಳಿಗಿಂತ ಬೇರೆ ಪ್ರಕಾರದ ಇನ್ನೂ ಕೆಲವು ಪಾಷಾಣಗಳಿರುವವು. ಉದಾ:– ಬೇರೆ ಬೇರೆ ತೀರ್ಥಗಳಲ್ಲಿಯ ಮಂದಿರ, ಘಾಟ, ಚಪ್ಪರ, ಮತ್ತು ಧರ್ಮಶಾಲೆ ಇವುಗಳನ್ನು ಕಟ್ಟಲಿಕ್ಕೆ ಕಲ್ಲುಗಳು ಬೇಕಾಗುವವು. ಬಾವಿ, ಗುಂಡ ಇತ್ಯಾದಿಗಳನ್ನು ಕಟ್ಟಲಿಕ್ಕೆ ಕಲ್ಲನ್ನು ಉಪಯೋಗಿಸುವರು.ಮತ್ತು ಕೊನೆಯದಾಗಿ ವಿಷ್ಣು,ಶಂಕರ ಇತ್ಯಾದಿ ದೇವದೇವಿ ಮೂರ್ತಿಗಳಿಗಾಗಿ ಉತ್ತಮ ಕಲ್ಲನ್ನು ಉಪಯೋಗಿಸುವರು. (೧೬) ಈ ದೃಷ್ಟಿಯಿಂದ ವಿಚಾರ ಮಾಡಿದರೆ ಪಾಷಾಣದ ಮೌಲ್ಯ ಬಹಳಷ್ಟು ಇರುವದೆಂಬುದು ಎಲ್ಲರ ಲಕ್ಷ್ಯಕ್ಕೆ ಬರುವದು. ಅರ್ಥಾತ್ ಇವುಗಳ ಮುಂದೆ ಮನುಷ್ಯನ ಕಿಮ್ಮತ್ತು ಕಡಿಮೆಯೇ ಆಗುವದೆಂದು ಹೇಳಲಿಕ್ಕೆ ಅಡ್ಡಿ ಇಲ್ಲ. (೧೭) ಆದರೆ ಯಾವ ಪಾಷಾಣವು ಮೇಲೆ ಹೇಳಿದ ಉತ್ತಮ ಕೆಲಸಕ್ಕೆ ಉಪಯೋಗ ಬೀಳುವದಿಲ್ಲವೋ ಅದು ಅಪವಿತ್ರ ಮತ್ತು ಕೆಲಸಕ್ಕೆ ಬಾರದ್ದು ಮತ್ತು ಕಿಮ್ಮತ್ತಿಲ್ಲದ್ದಾಗುವದು. ಇದರಂತೆ ಶ್ರದ್ಧಾಹೀನ ಮತ್ತು ವ್ಯಗ್ರಚಿತ್ತದ ಅಭಕ್ತನ ದೇಹ ಕಿಮ್ಮತ್ತಿಲ್ಲದ ಪಾಷಾಣದಂತೆ ಅಪವಿತ್ರ ವ ಕೆಲಸಕ್ಕೆಬಾರದ್ದು ಎಂದು ತಿಳಿಯಬೇಕು. (೧೮) ಈಗ ಮುಂದಿನ ಹತ್ತು ಓವಿ (ಶ್ಲೋಕ) ಗಳಲ್ಲಿ ಶ್ರೀಸಮರ್ಥರು ದುಶ್ಚಿತ್ತತನ (ವ್ಯಗ್ರಚಿತ್ತ)ದಿಂದ ಮಾನವೀ ಜೀವನವು ಹೇಗೆ ನಾಶ ಹೊಂದುವದು, ಹಾಳಾಗುವದು. ಇದರ ಬಗೆಗೆ ಬಹಳ ಮಾರ್ಮಿಕ ಹಾಗೂ ಸೂಕ್ಷ್ಮ ವರ್ಣನೆಯನ್ನು ಹೇಳಿದ್ದಾರೆ. ಮನಸ್ಸಿನ ಅಸ್ಥಿರತನ, ಶ್ರದ್ಧಾಹೀನತನ, ಶ್ರಮ ಮಾಡುವದಕ್ಕೆ ಬೇಸರ, ಲಕ್ಷ್ಯಹೀನತನ ಚಿತ್ತದ ವ್ಯಗ್ರತೆ ವಿಚಾರದಲ್ಲಿ ಗೊಂದಲ, ನಿಶ್ಚಿತತನದ ಅಭಾವ, ಇತ್ಯಾದಿ ಘಾತಕ ಮನೋವೃತ್ತಿ ಇವೆಲ್ಲ ದುಶ್ಚಿತತನದಲ್ಲಿ ಬರುವವೆಂದು ತೋರಿಸಿಕೊಟ್ಟಿದ್ದಾರೆ:– ಈಗ ಈ ಮಾತುಗಳು ಸಾಕು. ದುಶ್ಚಿತತನದಿಂದ ಮನುಷ್ಯನ ಘಾತವಾಗುವದು. ಇದರಿಂದ ಸರಿಯಾಗಿ ಪ್ರಪಂಚ ಸಾಗುವದಿಲ್ಲ. ಮತ್ತು ಸರಿಯಾಗಿ ಪರಮಾರ್ಥವೂ ಘಟಿಸುವದಿಲ್ಲ. "ತೇಲ ನಹಿ ತೂಪ ನಹಿ" ಅನ್ನುವ ಅವಸ್ಥೆ ಆಗುವದು. (೧೯) ದುಶ್ಚಿತತನದಿಂದ ಕಾರ್ಯದ ನಾಶವಾಗುವದು. ಯಾವಾಗಲೂ ಕಾಳಜಿ ಮತ್ತು ಚಿಂತೆ ಹತ್ತಿರುವದು. ಮತ್ತು ಯಾವುದೇ ಮಾತಿನ ಬಗ್ಗೆ ಸರಿಯಾದ ಜ್ಞಾಪಕ ಉಳಿಯುವದಿಲ್ಲ. (೨೦) ದುಶ್ಚಿತತನದಿಂದ ಜೀವನ ಬೇಡವೆನಿಸುವದು. ಇದು ಶತ್ರುವಿನಂತೆ ತಾಪ (ಕಷ್ಟ) ಕೊಡುವದು. ಜನ್ಮ ಮರಣಗಳು ಬೆನ್ನು ಹತ್ತುವವು. ಎಲ್ಲ ದೃಷ್ಟಿಯಿಂದ ಹಾನಿಯಾಗುವದು. (೨೧) ದುಶ್ಚಿತತನದಿಂದ ಸಾಧನೆ ಮುಂದುವರಿಯುವದಿಲ್ಲ. ಅದಕ್ಕೆ ಆಸ್ಪದವೂ ಆಗುವದಿಲ್ಲ. ಭಜನೆ ಸಹ ಸಾಧಿಸುವದಿಲ್ಲ. ಸಾಧಕನಿಗೆ ಆತ್ಮಜ್ಞಾನದ ಪ್ರಾಪ್ತಿ ಆಗುವದಿಲ್ಲ. (೨೨) ದುಶ್ಚಿತತನದಿಂದಾಗಿ ಮನದ ನಿಶ್ಚಯ ದೃಢವಾಗಿ ನಿಲ್ಲುವದಿಲ್ಲ. ಕಾರ್ಯದಲ್ಲಿ ಯಶ ಬರುವದಿಲ್ಲ. ಇಷ್ಟೇ ಅಲ್ಲ ಇದರಿಂದಾಗಿ ಆತ್ಮಹಿತದ ಕ್ಷಯವಾಗುವದು.(೨೩) ದುಶ್ಚಿತತನದಿಂದ ಶ್ರವಣ ಚನ್ನಾಗಿ ಆಗುವದಿಲ್ಲ. ಶ್ರವಣ ಮಾಡಿದ ವಿಷಯವನ್ನು ವಿವರಿಸಿ ಹೇಳಲಿಕ್ಕೆ ಬರುವದಿಲ್ಲ. ಮತ್ತು ಹೀಗಾಗುವದರಿಂದ ಶ್ರವಣ ಮಾಡಿದ ಪರಮಾರ್ಥವನ್ನು ಬುದ್ಧಿಯಲ್ಲಿ ಸಂಗ್ರಹಿಸಿಡಲಿಕ್ಕೆ ಬರುವದಿಲ್ಲ. (೨೪) ದುಶ್ಚಿತ ಮನುಷ್ಯನು ಒಂದೇ ಸ್ಥಳದಲ್ಲಿ ಕುಳಿತಂತೆ ಕಂಡರೂ ಅಲ್ಲಿ ಅವನು ಇದ್ದರೂ ಇಲ್ಲದಂತೆ ಇರುವನು. ಯಾಕಂದರೆ ಅವನ ಮನವು ಚಂಚಲತನದಿಂದ ಸಾವಿರಾರು ವಿಷಯಗಳಲ್ಲಿ ಚಕ್ಕರ ಹೊಡೆಯುತ್ತಿರುವದು. (೨೫)

ವೇಡೇ ಪಿಶಾಚ್ಯ ನಿರಂತರ । ಅಂಧ ಮುಕೇ ಆಣೀ ಬಧಿರ ।
ಶೈಸಾ ಜಾಣಾವಾ ಸಂಸಾರ । ದುಶ್ಚಿೀತ ಪ್ರಾಣಿಯಾಚಾ ॥೧೬॥

ಸಾವಧ ಅಸೋನ ಉಮುಜೇನಾ । ಶ್ರವಣ ಅಸೋನ ಐಕೇನಾ ।
ಜ್ಞಾನ ಅಸೋನ ಕಳೇನಾ । ಸಾರಾಸಾರ ವಿಚಾರ ॥೧೭॥

ಐಸಾ ಜೋ ದುಶ್ಚಿೀತ ಆಳಸೀ । ಪರಲೋಕ ಕೈಚಾ ತ್ಯಾಸೀ ।
ಜಯಾಚೇ ಜೀವೀ ಅಹಿರ್ನಿಶೀ । ಆಳಸ ವಸೆ ॥೧೮॥

ದುಶ್ಚಿೀತಪಣಾಪಾಸುನಿ ಸುಟಲಾ । ತರೀ ತೋ ಸವೇ ಚ ಆಳಸ ಆಲಾ ।
ಆಳಸಾಹಾತೀ ಪ್ರಾಣಿಯಾಲಾ । ಉಸಂತ ಚಿ ನಾಹೀ ॥೧೯॥

ಆಳಸೇ ರಾಹಿಲಾ ವಿಚಾರ । ಆಳಸೇ ಬುಡಾಲಾ ಆಚಾರ ।
ಆಳಸೇ ನಷ್ಟ ಪಾಠಾಂತರ । ಕಾಹೀ ಕೇಲ್ಯಾ ॥೨೦॥

ಆಳಸೇ ಘಡೇನಾ ಶ್ರವಣ । ಆಳಸೇ ನಷ್ಟ ನಿರೂಪಣ ।
ಆಳಸೇ ಪರಮಾರ್ಥಾಚೀ ಖೂಣ । ಮಳಿಣ ಜಾಲೀ ॥೨೧॥

ಆಳಸೇ ನಿತ್ಯನೇಮು ರಾಹಿಲಾ । ಆಳಸೇ ಅಭ್ಯಾಸ ಬುಡಾಲಾ ।
ಆಳಸೇ ಆಳಸ ವಾಢಲಾ । ಅಸಂಭಾವ್ಯ ॥೨೨॥

ಆಳಸೇ ಗೇಲೀ ಧಾರಣಾ ಧೃತೀ । ಆಳಸೇ ಮಳಿಣ ಜಾಲೀ ವೃತ್ತೀ ।
ಆಳಸೇ ವಿವೇಕಾಚೀ ಗತೀ । ಮಂದ ಜಾಲೀ ॥೨೩॥

ಆಳಸೇ ನಿದ್ರಾ ವಾಢಲೀ । ಆಳಸೇ ವಾಸನಾ ವಿಸ್ತಾರಲೀ ।
ಆಳಸೇ ಸುನ್ಯಾಕಾರ ಜಾಲೀ । ಸದ್‍ಬುದ್ಧಿ ನಿಶ್ಚಯಾಚೀ ॥೨೪॥

ಒಬ್ಬ ಹುಚ್ಚ, ಸದಾ ಪಿಶಾಚಿ ಬಾಧೆ ಇದ್ದವ ಅಥವಾ ಕುರುಡ, ಮೂಕ, ಮತ್ತು ಸರಕಿವುಡ ಇಂಥವರ ಸಂಸಾರ ಯಾವುದೋ ಒಂದು ತರಹದ್ದು ಇರುವದು. ಇದೇ ರೀತಿಯಲ್ಲಿ ದುಶ್ಚಿತ್ ಮನುಷ್ಯನ ಸಂಸಾರವಿರುವದು. ಇವನ ಸಂಸಾರದಲ್ಲಿ ಸಹ ಏನೂ ಕಳೆ ಇರುವದಿಲ್ಲ. (೨೬) ಲಕ್ಷ್ಯ ಕೊಡುವವರಂತೆ ಕಂಡರೂ ಅಲ್ಲಿ ಅವನ ಲಕ್ಷ್ಯ ಇರುವದಿಲ್ಲ. ಕೇಳುತ್ತಾನೆ ಎಂದು ಕಂಡರೂ ಅವನಿಗೆ ಕೇಳಿದ್ದು ಆಕಲನವಾಗುತ್ತಿರುವದಿಲ್ಲ. ಜ್ಞಾನ ಇ ರು ವ ದೆ ಂ ದು ತೋರುವದು. ಆದರೆ ನಿಜ ಯಾವುದು — ಖೊಟ್ಟಿ ಯಾವುದು ಇದು ಅವನಿಗೆ ತಿಳಿಯುತ್ತಿರುವದಿಲ್ಲ. (೨೭) ದುಶ್ಚಿತತನ ಅಂದರೆ ಅಶಾಂತ, ಅಸ್ಥಿರ, ಅಶ್ರದ್ಧ ಮತ್ತು ಅನಿಶ್ಚಿತ ಚಿತ್ತವೆಂದು ತಿಳಿಯಬೇಕು. ಕೇವಲ ದುಶ್ಚಿತ್ತತನದಿಂದಾಗಿ ಮನುಷ್ಯನದು ಬಹಳಷ್ಟು ಹಾನಿ ಆಗುವದು. ಇದರಲ್ಲಿ ಆಲಸ್ಯದ ಭರ್ತಿಯೊಂದು ಆದರೆ ತೀರಿತು.ಆಮೇಲೆ ಜೀವಿತವು ಅಗದೀ ವ್ಯರ್ಥವಾಗುವದು. ಶ್ರೀಸಮರ್ಥರಿಗೆ ಆಲಸ್ಯದ ಮನುಷ್ಯನು ಅಗದೀ ಸರಿ ಬರುವದಿಲ್ಲ, ಮನಸಾ ಅವನನ್ನು ಸೇರುವದಿಲ್ಲ. ಇದರ ವರ್ಣನೆಯನ್ನು ಈಗ ಕೇಳಿರಿ:— ಯಾವ ಮನುಷ್ಯನು ಮೇಲೆ ವಿವರಿಸಿದಂತೆ ದುಶ್ಚಿತ್ತನದ್ದು ಆಲಸಿಗನೂ ಇರುವನೋ ಅವನ ಬಗ್ಗೆ ಮಾತನಾಡುವದೇ ಬೇಡ ಯಾವನು ಸದಾಸರ್ವಕಾಲ ಆಲಸ್ಯದಲ್ಲಿ ಕಳೆಯುವನೋ ಅವನಿಗೆ ಪರಮಾರ್ಥ ಸಾಧಿಸುವದು ಎಷ್ಟೂ ಶಕ್ಯವಿಲ್ಲ. (೨೮) ಒಂದು ವೇಳೆ ಮನುಷ್ಯ ದುಶ್ಚಿತ್ತನದ ಹಿಡಿತದಿಂದ ಕಡೆಗಾದರೆ ಆಲಸ್ಯವು ಅವನನ್ನು ಕೂಡಲೇ ತಿಂದು ಬಿಡುತ್ತದೆ. ಇದರಿಂದ ಅವನು ಆಲಸ್ಯದ ಅಧೀನವಾಗುವನು. ಮತ್ತು ಆಲಸ್ಯದಿಂದ ಏನೂ ಮಾಡಲಾರದವನಾಗಿ ಆಲಸ್ಯದ ದಾಸನಾಗಿ ಬಿಡುವನು. ಆಲಸ್ಯದಿಂದ ಏನೂ ಮಾಡಲಿಕ್ಕೆ ಅವನಿಗೆ ಪುರುಸೊತ್ತೇ ಸಿಗುವದಿಲ್ಲ. (೨೯) ಆಲಸ್ಯದಿಂದ ಮನುಷ್ಯನ ವಿಚಾರಶಕ್ತಿಯು ಬೆಳವಣಿಗೆಯಾಗುವದಿಲ್ಲ. ಆಚಾರ ಧರ್ಮ ಮುಳುಗುವದು· ಏನು ಮಾಡಿದರೂ ಪಾಠಾಂತರ ಮಾಡಲಾಗುವದಿಲ್ಲ.(೩೦) ಆಲಸ್ಯದಿಂದ ಶ್ರವಣ ಘಟಿಸುವದಿಲ್ಲ. ನಿರೂಪಣ, ಪ್ರವಚನ ಇವುಗಳ ಲಾಭ ಮಾಡಿಕೊಳ್ಳಲಿಕ್ಕೆ ಆಗುವದಿಲ್ಲ. ಪರಮಾರ್ಥದ ಸಾಧನೆ ಮತ್ತು ಪ್ರಚೀತಿ (ಅನುಭವ) ಇವು ಮಲಿನವಾಗಿ ಹೋಗುವವು, (೩೧) ಆಲಸ್ಯದಿಂದ ನಿತ್ಯ ನೇಮಗಳು ನಡೆಯುವದಿಲ್ಲ. ಅಭ್ಯಾಸವಾಗುವದಿಲ್ಲ. ಮತ್ತು ಆಲಸ್ಯದಿಂದಲೇ ಕಲ್ಪನೆಗೂ ಮೀರಿ ಆಲಸ್ಯವು ಮತ್ತಷ್ಟು ಹೆಚ್ಚುತ್ತದೆ.(೩೨) ಆಲಸ್ಯದಿಂದ ಧಾರಣ (ಗ್ರಹಣ) ಶಕ್ತಿ ಇಲ್ಲದಾಗುತ್ತದೆ. ಧೈರ್ಯ ತಾಳುವ ಶಕ್ತಿಯು ನಾಶವಾಗುತ್ತವೆ. ಮನೋವೃತ್ತಿಯು ಮಲಿನವಾಗುವದು. ಮತ್ತು ವಿವೇಕದ ಗತಿ ಮಂದವಾಗುವದು· ಆಲಸ್ಯದಿಂದ ಮನುಷ್ಯನ ಮನದ ವಿವಿಧ ಶಕ್ತಿಗಳು ನಾಶವಾಗುವವು. ಇಲ್ಲವೇ ಅಗದೀ ಕ್ಷೀಣವಾಗುವವು. (೩೩) ಮನುಷ್ಯನು ಅತಿ ಆಲಸಿಯಾದರೆ ಅವನಿಗೆ ಬಹಳ (ಖೂಬ) ನಿದ್ರೆ ಮಾಡುವ (ಸವಯ) ಚಟ ಬೀಳುವದು. ಬಹಳಷ್ಟು ತಿನ್ನುವದು. ಬಹಳಷ್ಟು ನಿದ್ರೆಮಾಡುವದು ಮತ್ತು ಉಳಿದ ವೇಳೆಯನ್ನು ಸುಮ್ಮನೇ ವ್ಯರ್ಥ ಕುಳಿತು ಕಳೆಯುವ ಚಟ ಹತ್ತುವದು. ದುಃಶ್ಚಿತ್ತನ,ಆಲಸ್ಯತನ ಮತ್ತು ಅತಿ ನಿದ್ರೆಯು ಈ ಮೂರೂ ಅಜ್ಞಾನದ ನಿಜವಾದ ಲಕ್ಷಣಗಳಿರುವವು· ಆಲಸ್ಯದಿಂದ ನಿದ್ರೆ ಮಾಡುವ ಚಟ ಬೆಳೆಯುವದು, ಇದರಿಂದ ಆಶಾ-ಅಹಂಕಾರಾದಿ ವಾಸನಾದ ವಿಸ್ತಾರವಾಗುವದು. ನಿಶ್ಚಯ ಮಾಡುವ ಯಾವ ಸದ್ಬುದ್ಧಿ ಇರುವದೋ ಅದು ಶೂನ್ಯವಾಗುವದು, ಮನುಷ್ಯನ ಬುದ್ಧಿಗೆ ಎರಡು ಬಾಜೂ ಇರುವವು, ಇಂದ್ರಿಯಗಳ ಮುಖಾಂತರ ಒಳಗೆ ಬರುವ ದೃಶ್ಯ ಜಗತ್ತಿನ ಮಾಹಿತಿಯನ್ನು ವ್ಯವಸ್ಥಿತವಾಗಿ ರಚಿಸಿ ದೃಶ್ಯ ವಸ್ತುವಿನ ಜ್ಞಾನ ಮಾಡಿಕೊಡುವದು ಒಂದು ಬಾಜೂ ಆಗಿದೆ. ಇನ್ನೊಂದುಬಾಜು ದೃಶ್ಯ ವಸ್ತುಗಳ ಮೇಲಿನ ವೃತ್ತಿಯನ್ನು ಹಿಂದೆ ತೆಗೆದುಕೊಂಡು ಅಂತರ್ಮುಖದಿಂದ ಸ್ವರೂಪದ ಕಡೆಗೇ ನೋಡುವದು. ಇದು ಎರಡನೆಯ ಬಾಜು ಆಗಿದೆ. ಬುದ್ಧಿಯ ಈ ಎರಡನೆಯ ಬಾಜುವಿಗೆ ಸದ್ಬುದ್ಧಿ ಅಥವಾ ಪ್ರತಿಭಾ ಎಂದು ಅನ್ನುವರು. ಎಲ್ಲಿ ಸದ್ಬುದ್ಧಿ ಇಲ್ಲವೋ ಅಲ್ಲಿ ಪರಮಾರ್ಥವಿಲ್ಲ, ಸದ್ಬುದ್ಧಿಯು ಅತಿ ನಿಶ್ಚಯಾತ್ಮಕವಾದದ್ದು ಇರುವದು· ಇದನ್ನು ನಿರ್ಮಾಣ ಮಾಡುವದು ಮತ್ತು ಬೆಳೆಸುವದು ಸಾಧನದ ಮುಖ್ಯ ಮರ್ಮವಿರುವದು, ಆಲಸ್ಯದಿಂದ ಸದ್ಬುದ್ಧಿಯ ನಾಶವಾಗುವದು, ಇದು ಎಲ್ಲಕ್ಕಿಂತ ದೊಡ್ಡ ಹಾನಿ ಇರುವದು, (೩೪)

ದುಶ್ಚಿತಪಣಾಸವೇ ಆಳಸ । ಆಳಸೇ ನಿದ್ರಾವಿಳಾಸ ।
ನಿದ್ರಾವಿಳಾಸೇ ಕೇವಳ ನಾಸ । ಆಯುಷ್ಯಾಚಾ ॥೩೫॥

ನಿದ್ರಾ ಆಳಸ ದುಶ್ಚಿತಪಣ । ಹೇ ಚಿ ಮೂರ್ಖಾಚೇ ಲಕ್ಷಣ ।
ಯೇಣೇಕರಿತಾ ನಿರೂಪಣ । ಉಮಜೇಚಿನಾ ॥೩೬॥

ಹೇ ತಿನ್ಹೀ ಲಕ್ಷಣೇ ಜೇಥೇ । ವಿವೇಕ ಕೈಚಾ ಅಸೇಲ ತೇಥೇ ।
ಅಜ್ಞಾನಾಸ ಯಾಪರತೇ । ಸುಖ ಚಿ ನಾಹೀ ॥೩೭॥

ಕ್ಷುಧಾ ಲಾಗತಾ ಚ ಜೇವಿಲಾ । ಜೇವೂನ ಉಠತಾ ಆಳಸ ಆಲಾ ।
ಆಳಸ ಯೇತಾ ನಿಜೇಲಾ । ಸಾವಕಾಸ ॥೩೮॥

ನಿಜೋನ ಉಠತಾ ಚ ದುಶ್ಚಿತ । ಕದಾ ನಾಹೀ ಸಾವಚಿತ ।
ತೇಥೇ ಕೈಚೇ ಆತ್ಮಹಿತ । ನಿರೂಪಣೀ ॥೩೯॥

ಮರ್ಕಟಾಪಾಸೀ ದಿಲ್ಹೇ ರತ್ನ । ಪಿಶಾಚ್ಯಾ ಹಾತೀ ನಿಧಾನ ।
ದುಶ್ಚಿತಾ ಪುಢೇ ನಿರೂಪಣ । ತಯಾಪರೀ ಹೋಯೆ ॥೪೦॥

ಆತಾ ಅಸೋ ಹೇ ಉಪಪತ್ತೀ । ಆಶಂಕೇಚೀ ಕೋಣ ಗತೀ ।
ಕಿತಾ ದಿವಸಾ ಹೋತೆ ಮುಕ್ತೀ । ಸಜ್ಜನಾಚೆನಿ ಸಂಗೇ ॥೪೧॥

ಐಕಾ ಯಾಚೇ ಪ್ರತ್ಯೋತ್ತರ । ಕಥೇಸಿ ದ್ಯಾವೇ ನಿರೋತ್ತರ ।
ಸಂತ ಸಂಗಾಚಾ ವಿಚಾರ । ಐಸಾ ಅಸೆ ॥೪೨॥

ಲೋಹೋ ಪರಿಸೇಸೀ ಲಾಗಲಾ । ಥೆಂಬುಟಾ ಸಾಗರೀ ಮಿಳಾಲಾ ।
ಗಂಗೇ ಸರಿತೇ ಸಂಗಮು ಜಾಲಾ । ತತ್ಕ್ಷಣೀ ॥೪೩॥

ಸಾವಧ ಸಾಕ್ಷಪೀ ಆಣೀ ದಕ್ಷ । ತಯಾಸ ತತ್ಕಾಳ ಚಿ ಮೋಕ್ಷ ।
ಇತರಾಸ ತೇ ಅಲಕ್ಷ । ಲಕ್ಷಿಲೇ ನವಚೆ ॥೪೪॥

ಯೇಥೇ ಶಿಷ್ಯ ಪ್ರಜ್ಞಾಚ ಕೇವಳ । ಪ್ರಜ್ಞಾವಂತಾ ನಲಗೆ ವೇಳ ।
ಅನನ್ಯಾಸ ತತ್ಕಾಳ । ಮೋಕ್ಷ ಲಾಭೆ ॥೪೫॥

ಪ್ರಜ್ಞಾವಂತ ಆಣೀ ಅನನ್ಯ । ತಯಾಸ ನಲಗೆ ಯೇಕ ಕ್ಷಣ ।
ಅನನ್ಯ ಭಾವಾರ್ಥೇವಿಣ । ಪ್ರಜ್ಞಾ ಖೋಟೀ ॥೪೬॥

ಪ್ರಜ್ಞೇವಿಣ ಅರ್ಥ ನ ಕಳೆ । ವಿಶ್ವಾಸೇವಿಣ ವಸ್ತು ನಾ ಕಳೆ ।
ಪ್ರಜ್ಞಾವಿಶ್ವಾಸೇ ಗಳೆ । ದೇಹಾಭಿಮಾನ ॥೪೭॥

ಮೊದಲೇ ದುಶ್ಚಿತ್‌ತನ ಇದರಲ್ಲಿ ಆಲಸ್ಯತನ, ಮತ್ತು ಅದರಲ್ಲಿ ನಿದ್ರೆಯ ವಿಲಾಸ ಈ ದುಷ್ಟತ್ರಯಿಗಳು ಎಲ್ಲಿ ಕೂಡುವವೋ ಅಲ್ಲಿ ಯಾವತ್ತೂ ಆಯುಷ್ಯವು ಹಾಳಾಗಿ ಹೋಗುವದಕ್ಕೆ ಬಹಳ ವೇಳೆಯೇನೂ ಬೇಕಾಗುವದಿಲ್ಲ. (೩೫) ನಿದ್ರೆ, ಆಲಸ್ಯ, ಮತ್ತು ದುಃಶ್ಚಿತತನ ಈ ಮೂರೂ ನಿಜವಾಗಿಯೂ ಮೂರ್ಖರ ಲಕ್ಷಣಗಳಿರುವವು. ಆದ್ದರಿಂದ ಮಾಡಿದ ಉಪದೇಶ ಇವರ ಲಕ್ಷ್ಯದಲ್ಲಿಯೇ ಬರುವದಿಲ್ಲ. ಮೂರ್ಖ ಮನುಷ್ಯರ ಬುದ್ಧಿಯಲ್ಲಿ ಹೇಳಿದ ಉಪದೇಶದ ಯೋಗ್ಯವಾದ ಅರ್ಥವನ್ನು ಮಾಡುವ ಶಕ್ತಿಯೇ ಇರುವದಿಲ್ಲ. (೩೬) ಈ ಮೂರು ದೋಷಗಳು ಎಲ್ಲಿ ಇರುವವೋ ಅಲ್ಲಿ ಇರಲು ವಿವೇಕಕ್ಕೆ ಸಾಧ್ಯವಾಗುವದಿಲ್ಲ. ಅಜ್ಞಾನಿ ಮನುಷ್ಯನಿಗೆ ಆಲಸ್ಯ ಮತ್ತು ನಿದ್ರೆ ಇವುಗಳಿಗಿಂತ ಹೆಚ್ಚಿನ ಸುಖ ಯಾವುದೂ ಇಲ್ಲವೆಂದು ಅನಿಸುವದು.(೩೭)ಇಂಥ ಅಜ್ಞಾನಿ ಮನುಷ್ಯನು ಹಸಿವೆ ಆದ ಕೂಡಲೇ ಹೊಟ್ಟೆ ಬಿರಿಯುವಂತೆ ತಿನ್ನುವನು, ಊಟವಾದಕೂಡಲೇ ಸುಸ್ತ ಆಗುವದು. ಆಲಸ್ಯ ಬರುವದು. ಆಲಸ್ಯದ ಹಿಂದೆಯೇ ನಿದ್ರೆ ಬರುವದು. ನಂತರ ಮಲಗಿ ಬಿಡುವನು. (೩೮) ನಿದ್ರೆ ಮಾಡಿ ಎದ್ದನಂದರೆ ಅವನ ಮನವು ವ್ಯಗ್ರವಾಗಿರುವದು. ಯಾವುದರ ಕಡೆಗೂ ಚನ್ನಾಗಿ ಲಕ್ಷ್ಯವಿರುವದಿಲ್ಲ. ಇಂಥ ಮನಸ್ಸಿನ ಅವಸ್ಥೆಯಲ್ಲಿ ನಿರೂಪಣ, ಪ್ರವಚನ, ಕೇಳಿ ತನ್ನ ಆತ್ಮಹಿತ ಸಾಧನೆ ಮಾಡಿಕೊಳ್ಳಬಹುದು ಅನ್ನುವ ಮಾತು ಶಕ್ಯವಿಲ್ಲದಾಗಿದೆ. (೩೯) ಮಂಗನ ಕೈಯಲ್ಲಿ ಮಾಣಿಕ್ಯ ಕೊಟ್ಟರೆ ಅಥವಾ ಪಿಶಾಚಿಯ ಕೈಯಲ್ಲಿ ಹಣದ ಚೀಲಕೊಟ್ಟರೆ ಅದು ಹೇಗೆ ವ್ಯರ್ಥವಾಗುವದೋ ಅದರಂತೆ ದುಶ್ಚಿತ್ ಮನುಷ್ಯನಿಗೆ ಮಾಡಿದ ಪರಮಾರ್ಥದ ಉಪದೇಶ ವ್ಯರ್ಥವಾಗುವದು. (೪೦) ಸಮಾಸದಆರಂಭದಲ್ಲಿ ಶ್ರೋತಾ ಯಾವ ಪ್ರಶ್ನೆ ವಿಚಾರಿಸಿದ್ದನೋ ಅದಕ್ಕೆ ಉತ್ತರವನ್ನುಈಗ ಕೊಡುವರು:– ಅಜ್ಞಾನದ ಲಕ್ಷಣಗಳ ವಿವೇಚನೆ ಈಗ ಸಾಕು ಮಾಡೋಣ. ಮೂಲ ಪ್ರಶ್ನೆಗೆ ಉತ್ತರವೇನು ಅನ್ನುವದನ್ನು ನೋಡೋಣ. ನಿಮ್ಮ ಪ್ರಶ್ನೆ ಅಂದರೆ ಸತ್ಸಮಾಗಮ ಮಾಡಿದ ಮೇಲೆ ಮುಕ್ತಿಯು ಎಷ್ಟು ದಿವಸಗಳಲ್ಲಿ ದೊರಕುವದು? (೪೧) ಈ ಪ್ರಶ್ನೆಗೆ ಉತ್ತರ ಕೊಡುವೆ ಕೇಳಿರಿ. ನಾನು ಕೊಡುವ ಉತ್ತರದಿಂದ ಪ್ರಶ್ನೆ ವಿಚಾರಿಸಿದವರ ಶಂಕಾ ಖಾತ್ರಿಯಿಂದ ನಿವಾರಣೆಯಾಗುವದು. ಸತ್ಸಮಾಗಮದ ವಿಚಾರ ಮುಂದಿನಂತೆ ಇರುವದು. (೪೨) ಕಬ್ಬಿಣವು ಪರಿಸಗಲ್ಲಿಗೆ ಹತ್ತಿದರೆ, ನೀರಿನ ಹನಿ ಸಮುದ್ರದಲ್ಲಿ ಬಿದ್ದರೆ, ಒಂದು ನದಿ ಗಂಗಾನದಿಗೆ ಹೋಗಿ ಕೂಡಿದರೆ ಯಾವ ಕ್ಷಣದಲ್ಲಿ ಇವು [ಮೇಲೆ ಹೇಳಿದವು] ಘಟಿಸುವವೋ ಅದೇಕ್ಷಣದಲ್ಲಿ ವಿಲಂಬವಿಲ್ಲದೇ ಕಬ್ಬಿಣವು ಬಂಗಾರವಾಗುವದು. ನೀರಿನ ಹನಿಯು ಸಾಗರವಾಗುವದು. ಮತ್ತು ನದಿಯು ಗಂಗಾರೂಪವೇ ಆಗಿ ಹೋಗುವದು. (೪೩) ಇದರಂತೆ ಯಾವನು ಸಾವಧ ಇರುವನು. ಕಷ್ಟ ಸಹಿಷ್ಣು ಇರುವನು ಮತ್ತು ತತ್ಪರ (ತಲ್ಲೀನ) ಇರುವನೋ ಅವನಿಗೆ ಸತ್ಸಮಾಗಮದ ಸಂಗತಿಯಿಂದ ಕೂಡಲೇ ಮೋಕ್ಷ ಪ್ರಾಪ್ತವಾಗುವದು. ಯಾರಲ್ಲಿ ಈ ಗುಣಗಳಿರುವದಿಲ್ಲವೋ ಅವನಿಗೆ ಅತ್ಯಂತ ಸೂಕ್ಷ್ಮ ಬ್ರಹ್ಮಸ್ವರೂಪವನ್ನು ನೋಡಬೇಕೆಂದರೂ ಸಹಿತ ನೋಡಲಿಕ್ಕೆ ಬರುವದಿಲ್ಲ. (೪೪) ಪರಮಾರ್ಥದ ಅನುಭವದಲ್ಲಿಯೇ ಶಿಷ್ಯನ ಬುದ್ಧಿಯೇ ತಯಾರ ಆಗಬೇಕಾಗುವದು. ಅದು ಅತ್ಯಂತಸೂಕ್ಷ್ಮವಾಗಬೇಕಾಗುವದು. ಈ ರೀತಿ ತಯಾರಾದ ಬುದ್ಧಿ ಯಾವನಲ್ಲಿ ಇರುವದೋ ಅವನಿಗೆ ಸಮಯ ಹಿಡಿಯುವದಿಲ್ಲ. ಯಾವನು ಅನನ್ಯನಾಗಬಲ್ಲನೋ ಅವನಿಗೆ ಕೂಡಲೇ ಮೋಕ್ಷದ ಲಾಭವಾಗುವದು. (೪೫) ಯಾವನ ಬುದ್ಧಿ ಅತ್ಯಂತ ಸೂಕ್ಷ್ಮವಿರುವದೋ ಮತ್ತು ಅನನ್ಯನಾಗಬಲ್ಲನೋ ಅವನಿಗೆ ಸ್ವರೂಪ ಸಾಕ್ಷಾತ್ಕಾರವಾಗಲು ಒಂದು ಕ್ಷಣ ಸಹ ಹತ್ತುವದಿಲ್ಲ. ಅನನ್ಯ ಶ್ರದ್ಧೆ ಇರದ ಹೊರತು ಕೇವಲ ಸೂಕ್ಷ್ಮಬುದ್ಧಿಯು ಇಲ್ಲಿ ಕೆಲಸಕ್ಕೆ ಬರುವದಿಲ್ಲ. (೪೬) ಸೂಕ್ಷ್ಮಬುದ್ಧಿ ಇಲ್ಲದಿದ್ದರೆ ಸದ್ಗುರು ಏನನ್ನು ಹೇಳುವನೋ ಅದರ ಸರಿಯಾದ ಅರ್ಥ ತಿಳಿಯುವದಿಲ್ಲ. ಅನನ್ಯ ಶ್ರದ್ಧಾ ಇಲ್ಲದಿದ್ದರೆ ಆತ್ಮವಸ್ತುವಿನ ಆಕಲನವಾಗುವದಿಲ್ಲ. ಆದ್ದರಿಂದ ಪ್ರಜ್ಞಾ ಮತ್ತು ವಿಶ್ವಾಸ ಈ ಎರಡರಿಂದ ಮಾತ್ರ ದೇಹಾಭಿಮಾನ ನಾಶವಾಗುವದು. ದೇಹಬುದ್ಧಿ ಕಳಚಿ ಹೋಗುವದು. (೪೭)

ದೇಹಾಭಿಮಾನಾಚೆ ಅಂತೀ । ಸಹಜ ಚಿ ವಸ್ತು ಪ್ರಾಪ್ತೀ ।
ಸತ್ಸಂಗೇ ಸದ್ಗತೀ । ವಿಲಂಬ ಚಿ ನಾಹೀ ॥೪೮॥

ಸಾವಧ ಸಾಕ್ಷಪೀ ವಿಶೇಷ । ಪ್ರಜ್ಞಾವಂತ ಆಣೀ ವಿಶ್ವಾಸ ।
ತಯಾಸ ಸಾಧನೀ ಸಾಯಾಸ । ಕರಣೇ ಚಿ ನಲಗೆ ॥೪೯॥

ಇತರ ಭಾವಿಕ ಸಾಬಡೆ । ತಯಾಸ ಹಿ ಸಾಧನೇ ಮೋಕ್ಷ ಜೋಡೆ ।
ಸಾಧು ಸಂಗೇ ತತ್ಕಾಳ ಉಘಡೆ । ವಿವೇಕ ದೃಷ್ಟೀ ॥೫೦॥

ಪರೀ ತೇ ಸಾಧನ ಮೋಡೂ ನಯೆ । ನಿರೂಪಣಾಚಾ ಉಪಾಯೆ ।
ನಿರೂಪಣೇ ಲಾಗೆ ಸೋಯು । ಸರ್ವತ್ರಾಸೀ ॥೫೧॥

ಆತಾ ಮೋಕ್ಷ ಆಹೆ ಕೈಸಾ । ಕೈಸೀ ಸ್ವರೂಪಾಚೀ ದಶಾ ।
ತ್ಯಾಚೆ ಪ್ರಾಪ್ತೀಚಾ ಭರ್ವಸಾ । ಸತ್ಸಂಗೇ ಕೇವೀ ॥೫೨॥

ಐಸೇ ನಿರೂಪಣ ಪ್ರಾಂಜಳ । ಪುಢೇ ಬೋಲಿಲೇ ಅಸೆ ಸಕಳ ।
ಶ್ರೋತೀ ಹೋಉನಿಯಾ ನಿಶ್ಚಳ । ಅವಧಾನ ದ್ಯಾವೇ ॥೫೩॥

ಅವಗುಣ ತ್ಯಾಗಾವಯಾಕಾರಣೇ । ನ್ಯಾಯನಿಷ್ಠುರ ಲಾಗೇ ಬೋಲಣೇ ।
ಶ್ರೋತೀ ಕೋಪ ನ ಧರಣೇ । ಐಸಿಯಾ ವಚನಾಚಾ ॥೫೪॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
"ದುಶ್ಚಿತ ನಿರೂಪಣ ನಾಮ" ಸಮಾಸ ಷಷ್ಠಮ ॥

● ●

ನಾನು ದೇಹವಿರುವೆ ಈ ಭಾವನೆ ನಾಶವಾಯಿತೆಂದರೆ ಆಗ ಅಗದೀ ಸಹಜವಾಗಿ ಆತ್ಮವಸ್ತುವಿನ ಲಾಭವಾಗುವದು. ಈ ರೀತಿಯ ಸತ್ಸಂಗತಿಯಿಂದ ಉತ್ತಮ ಗತಿಯ ಲಾಭವಾಗುವದಕ್ಕೆ ತಡವಾಗುವದಿಲ್ಲ. (೪೮) ಯಾವ ಮನುಷ್ಯನು ತನ್ನ ಧ್ಯೇಯದ ವಿಷಯದಲ್ಲಿ ಜಾಗರೂಕನಿರುವನೋ ಮತ್ತು ಬಹಳಷ್ಟು ಶ್ರಮಪಡಲಿಕ್ಕೆ ತಯಾರ ಇರುವನೋ, ಪ್ರಜ್ಞಾವಂತ ಅಂದರೆ ಕುಶಾಗ್ರ ಬುದ್ಧಿವಂತನಿರುವನೋ ಮತ್ತು ನಿಜವಾದ ಶ್ರದ್ಧಾವಂತನಿರುವನೋ ಅಂಥವರಿಗೆ ಸಾಧನದ ಕಷ್ಟ ಬಹಳಮಾಡಬೇಕಾಗುವದಿಲ್ಲ. [೪೯] ಇದರ ಹೊರತಾಗಿ ಇತರ ಶ್ರದ್ಧಾವಂತರಾದ,ಆದರೆ ಮುಗ್ಧರಾದವರಿರುವರೋ ಇಂಥ ಜನರಿಗೆ ಸರಿಯಾದ ಸಾಧನದ ಕಷ್ಟದ ನಂತರ ಮೋಕ್ಷವು ಕೈಗೂಡುವದು. ಸತ್ಸಮಾಗಮದಿಂದ ಇವರ ಅಂತರ್ಯಾಮದಲ್ಲಿ ವಿವೇಕ ಶಕ್ತಿಯು ನಿರ್ಮಾಣವಾಗುವದು. ಮತ್ತು ಇವರಿಗೆ ಸದ್ವಸ್ತುವಿನ ದರ್ಶನವಾಗುವದು. ಸತ್ಪುರುಷ ಅಂದರೆ ಆತ್ಮಶಕ್ತಿಯನ್ನು ನಿರ್ಮಾಣ ಮಾಡುವಂಥ ನಡೆನುಡಿಯ ಯಂತ್ರವೇ ಆಗಿರುವರು. ಯಾವ ಜೀವದೊಂದಿಗೆ ಇವರ ನಿಕಟ ಸಹವಾಸ ಘಟಿಸುವದೋ ಆ ಜೀವದಲ್ಲಿ ಆತ್ಮಶಕ್ತಿಯು ಒಂದೇ ಸವನೆ ತುಂಬಲ್ಪಡುವದು. ಆದರೆ ಪಡೆಯುವ ಜೀವವು. ಈ ಶಕ್ತಿಯನ್ನು ಹಿಡಿದಿಟ್ಟುಕೊಳ್ಳಲಿಕ್ಕೆ ಅಶಕ್ತವಾದರೆ ಸತ್ಸಮಾಗಮದಿಂದ ಆಗಬೇಕಾದಷ್ಟು ಲಾಭ ಆಗುವದಿಲ್ಲ. ಯಾವ ಜೀವವು ಪ್ರಜ್ಞಾವಂತ ಮತ್ತು ಶ್ರದ್ಧಾವಂತ ಇರುವದೋ ಅದಕ್ಕೆ ಸಂತಸಾಧುಗಳ ಕಡೆಯಿಂದ ಸಂಕ್ರಮಿತವಾದಂಥ (ಏಕತ್ರವಾದಂಥ, ಒಂದುಗೂಡಿದಂಥ) ಆತ್ಮಶಕ್ತಿಯು ಅರಗುವದು. ಮತ್ತು ಅದರ ಪ್ರತಿಭೆ ಜಾಗ್ರತವಾಗಿ ಅದಕ್ಕೆ ಆತ್ಮದರ್ಶನ ಯೋಗವು ಲಭಿಸುವದು. (ದರ್ಶನವಾಗುವದು.) (೫೦) ಆತ್ಮ ದರ್ಶನವಾದ ಮೇಲೆ ಸಹ ನಿರೂಪಣದ ನಿಯಮ (ಶ್ರವಣ, ಮನನ) ಬಿಡಬಾರದು. ಮತ್ತು ಸಾಧನವನ್ನು ಬಿಡಬಾರದು. ಸರ್ವಸಾಮಾನ್ಯ ಜನರಿಗೆ ನಿರೂಪಣದಿಂದ ಆತ್ಮದರ್ಶನದ ಮಾರ್ಗ ತಿಳಿಯುವದು. ಮತ್ತು ಇದರಿಂದ ಅಲ್ಪುಸ್ವಲ್ಪು ಪರಮಾರ್ಥ ಮಾರ್ಗದಲ್ಲಿ ನಡೆಯಲು ಶಕ್ಯವಾಗುವದು. (೫೧) ಮುಂದಿನ ಸಮಾಸದ ಪ್ರಸ್ತಾಪವನ್ನು ಮಾಡುತ್ತಾರೆ. ಈಗ ಮೋಕ್ಷ, ಮೋಕ್ಷ, ಅನ್ನುವರು. ಅದು ಇರುವದಾದರೂ ಹೇಗೆ? ಸ್ವರೂಪ ದರ್ಶನದ ಅವಸ್ಥೆ ಹೇಗಿರುವದು? ಸತ್ಸಮಾಗಮ ಮಾಡುವದರಿಂದ ಸ್ವರೂಪ ದರ್ಶನವಾಗುವದೆಂಬ ಖಾತ್ರಿ ಏನು? (೫೨) ಈ ಪ್ರಶ್ನೆಯ ಉತ್ತರವನ್ನು ಮುಂದಿನ ಸಮಾಸದಲ್ಲಿ ವಿಸ್ತಾರವಾಗಿ ಮಾಡಿದ್ದೇವೆ. ಶ್ರೋತಾಜನ ಮನವನ್ನು ಸ್ಥಿರಗೊಳಿಸಿ ವಿಷಯದ ಕಡೆಗೆ ಲಕ್ಷ್ಯಕೊಡಿರಿ. (೫೩) ಶ್ರವಣ ಮಾಡುವವರ ಅವಗುಣಗಳು ನಾಶವಾಗಿ ಹೋಗಬೇಕಾಗಿದ್ದರೆ. ವಕ್ತಾನ ಸ್ಪಷ್ಟವಾಗಿ (ಖಂಡ ತುಂಡವಾಗಿ) ನಿಜವಿದ್ದುದನ್ನು ಮಾತಾಡಬೇಕಾಗುವದು. ಶ್ರೋತಾಜನ ಇಂಥ ನ್ಯಾಯನಿಷ್ಠುರ ಮಾತಿಗೆ ಸಿಟ್ಟಾಗಬಾರದು. (೫೪)

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಎಂಟನೆಯ ದಶಕದ
"ದುಶ್ಚಿತ್ತ ನಿರೂಪಣ"ವೆಂಬ ಆರನೆಯ ಸಮಾಸವು ಮುಗಿಯಿತು.

• •

### ಸಮಾಸ ಸಪ್ತಮ : ಮೋಕ್ಷ ಲಕ್ಷಣ

ಶ್ರೀರಾಮ॥ ಮಾಗಾ ಶ್ರೋತಯಾಚಾ ಪಕ್ಷ। ಕಿತಾ ದಿವಸಾ ಹೋತೋ ಮೋಕ್ಷ।
ತೇ ಚಿ ಕಥಾ ಶ್ರೋತೇ ದಕ್ಷ। ಹೋಊನ ಏಕಾ ॥೧॥

ಮೋಕ್ಷಾಸ ಕೈಸೇ ಜಾಣಾವೇ। ಮೋಕ್ಷ ಕೋಣಾಸ ಮ್ಹಣಾವೇ।
ಸಂತ ಸಂಗೇ ಪಾವಾವೇ। ಮೋಕ್ಷಾಸ ಕೈಸೇ ॥೨॥

## ದಶಕ ೮. ಸಮಾಸ ೭. ಮೋಕ್ಷ ಲಕ್ಷಣ (ನುಡಿ ೬೬)

ಮೋಕ್ಷದ ವಿಚಾರವನ್ನು ನಾವು ಯಾವಾಗ ಮಾಡುವೆವೋ ಆಗ ಅದನ್ನು ಬದ್ಧತನ (ಸಂಸಾರದಲ್ಲಿ ಸಿಕ್ಕಿಕೊಂಡಂಥ)ದ ಹಿನ್ನೆಲೆಯಲ್ಲಿ ಮಾಡುವೆವೆಂಬುದನ್ನು ಮರೆಯಬಾರದು ಬದ್ಧ (ಕಟ್ಟಿ ಹಾಕಿಕೊಂಡ) ವ ಮುಕ್ತ [ಬಿಡುಗಡೆ ಹೊಂದಿದವ] ಇವು ಪರಸ್ಪರ ಸಂಬಂಧಿತ ಶಬ್ದಗಳಿರುವವು. ಯಾವನು ಬಂಧಿತನಾಗಿರುವನೋ ಅವನೇ ಬಂಧನದಿಂದ ಮುಕ್ತನಾಗುವನು. ಸಂತಸಾಧುಗಳ ಮತ್ತು ವೇದಾಂತದ ಹೇಳಿಕೆ ಏನಂದರೆ ಜೀವವು ಬದ್ಧ (ಬಂಧಿತ) ವಿರುವದು. ಈ ಮಾತು ನಿಜವೇ ಇರುವದು. ಆದರೆ ಆ ಜೀವ ಮಾಡಿಕೊಂಡ ಸಂಕಲ್ಪವೇ ಅದರ ಬಂಧನಕ್ಕೆ ಕಾರಣವಾಗಿದೆ. ಯಾಕೆಂದರೆ ತಾನು ಸ್ವತಃ ಆತ್ಮಸ್ವರೂಪವಿದ್ದರೂ ಅದನ್ನು ಮರೆತು [ಅದರ ಮರೆವಾಗಿ] ನಾನು ಜೀವವೇ ಇರುವೆ ಅನ್ನುವ ಖಚಿತ ಭಾವನೆ ತಳೆಯಿತು. ಇದರಿಂದ ದೇಹಬುದ್ಧಿ [ಸಂಸಾರಿಕ ಬುದ್ಧಿ] ಹುಟ್ಟಿಕೊಂಡಿತು. ಇದರಿಂದ ಯಾವತ್ತೂ ವಿಶ್ವವು ಅದಕ್ಕೆ ವಿಪರೀತ ಕಾಣಹತ್ತಿತು. ನಾನು ದೇಹವೇ ಇರುವೆ ಈ ಭಾವನೆಯಿಂದಾಗಿ ನನಗೆ ಅದು ಬೇಕು. ಇದು ಬೇಡ ಅನ್ನುವ ವಾಸನಾ ಜೋರಾಗಿ ಬೆಳೆಯಿತು. ಈ ವಾಸನಾದಿಂದಾಗಿ ಜೀವಕ್ಕೆ ಅನೇಕ ಜನ್ಮವನ್ನು ತಾಳಬೇಕಾಗುತ್ತದೆ. ಇದರಲ್ಲಿ ಒಮ್ಮೆ ಅಪ್ಪಿತಪ್ಪಿ ಮಾನವದೇಹ ತಾಳುವ ಸಂಧಿಯು ಸಿಗುವದು. ಮಾನವ ಶರೀರದಲ್ಲಿಯೇ ಸಂತಸಾಧುಗಳ ಸಂಗತಿಯನ್ನು ಹಿಡಿದು ತನ್ನ ಸಂಕಲ್ಪಿತ ಬಂಧನವನ್ನು ಬಿಡಿಸಿಕೊಳ್ಳಲಿಕ್ಕೆ ಬರುವದು. ಇದನ್ನು ಮಾಡಿಕೊಳ್ಳದಿದ್ದರೆ ಈ(ಮಾನವ)ಶರೀರವು ವ್ಯರ್ಥವಾಗಿ ಹೋಗುವದು. ಪುನಃ(ಮತ್ತೊಮ್ಮೆ) ಮಾನವ ದೇಹ ಹೊಂದಿ ಬರುವೆವೆಂಬ ಖಾತ್ರಿ ಏನೂ ಇಲ್ಲ. ಸತ್ಸಮಾಗಮ ಮಾಡಿದ್ದಾದರೆ ನಮ್ಮ ಅಂತರ್ಯಾಮದಲ್ಲಿ ಆತ್ಮಾನಾತ್ಮ ವಿವೇಕದ ಉದಯವಾಗುವದು. ನಾನು ದೇಹವಲ್ಲ. ಯಾಕೆಂದರೆ ದೇಹವನ್ನು ಬೇರೆ ರೀತಿಯಲ್ಲಿ [ಪ್ರತ್ಯೇಕನಾಗಿ] ನೋಡಲಿಕ್ಕೆ ಸಾಧ್ಯವಿರುವದು. "ನಾನು ಮನವಲ್ಲ"–"ನಾನು ಬುದ್ಧಿಯಲ್ಲ"—ನಾನು ಅಂತಃಕರಣ ಅಲ್ಲ–ನಾನು ಅಹಂಕಾರಅಲ್ಲ–ವಾದ್ದರಿಂದ ಇವೆಲ್ಲವನ್ನೂ ನಾನು ಬೇರೆಯಾಗಿದ್ದುಕೊಂಡು ನೋಡಲು ಶಕ್ತನಾಗಿರುವೆನು. ನಾನು ಆತ್ಮವೇ ಇರುವೆ ಈ ಮೂಲ ಸತ್ಯವನ್ನು ಸಂತರು ವಿವೇಕದಿಂದ ತಿಳಿಸಿಕೊಡುವರು. ಆತ್ಮಸ್ವರೂಪದ ಅಜ್ಞಾನವು ಇದೊಂದು ನಿದ್ರೆ ಇರುವದು. ಈ ನಿದ್ರೆಯಲ್ಲಿ "ನಾನು ದೇಹವೆ ಇರುವೆ" ಅನ್ನುವ ಸ್ವಪ್ನ ಬೀಳುತ್ತದೆ. ಇದನ್ನು ಹೊಡೆದೋಡಿಸಬೇಕಾದರೆ, ಇಲ್ಲದಂತೆ ಮಾಡಬೇಕಾದರೆ ಜ್ಞಾನಮಯವಾದ ಎಚ್ಚರಿಕೆಯು ಅವಶ್ಯಕತೆ ಇರುವದು. ವಿವೇಕದ ಉಪಾಯದಿಂದ ಜೀವವನ್ನು ಎಚ್ಚರಗೊಳಿಸುವದೇ ಸಂತಸಾಧುಗಳ ನಿಜವಾದ ಕೆಲಸವಾಗಿರುವದು. ಯಾರ ಅಂತರ್ಯಾಮದಲ್ಲಿ ಈ ವಿವೇಕ ಸ್ಥಿರಗೊಳ್ಳುವದೋ ಅಂಥವರ ಬಂಧನವು ಕಡಿದು ಹೋಗಲು ತಡವಾಗುವದಿಲ್ಲ.

### ದಶಕ ೮. ಸಮಾಸ ೭ : ಮೋಕ್ಷ ಲಕ್ಷಣ (ನುಡಿ ೬೬)

ಜೀವವು ಕಟ್ಟಲ್ಪಟ್ಟಿರುತ್ತದೆ. ಸಂತರು ಅದನ್ನು ಮುಕ್ತ ಮಾಡುವರು:– ಶ್ರೋತಾಗಳು ಈ ಹಿಂದೆ ಒಂದು "ಪ್ರಶ್ನೆ ಎತ್ತಿದರು. ಅದರಲ್ಲಿ ಮೋಕ್ಷವು ಪದರಿನಲ್ಲಿ ಎಷ್ಟು ದಿವಸಗಳು ಹತ್ತುವವು?" ಇದಕ್ಕೆ ಉತ್ತರ ಕೊಡುವೆವು. ಶ್ರೋತಾಜನ ಶಾಂತಚಿತ್ತರಾಗಿ ಕೇಳಿರಿ. (೧) ಮೋಕ್ಷವನ್ನು ಹೇಗೆ ಗುರುತಿಸಬೇಕು? ಮೋಕ್ಷವೆಂದು ಯಾವುದಕ್ಕೆ ಅನ್ನಬೇಕು? ಸಂತ, ಸಾಧು ಸಂಗದಿಂದ ಮೋಕ್ಷವು ಅದು ಹೇಗೆ ಪ್ರಾಪ್ತವಾಗುವದು? ಈ ಪ್ರಶ್ನೆಗಳಿಗೆ ಈಗ ಉತ್ತರ ಕೊಡುವದು ಅವಶ್ಯವಾಗಿದೆ. (೨)

ತರೀ ಬದ್ಧ ಮ್ಹಣಿಜೆ ಬಾಂಧಲಾ । ಆಣೀ ಮೋಕ್ಷ ಮ್ಹಣಿಜೆ ಮೋಕಳಾ ಜಾಲಾ।
ತೋ ಸಂತಸಂಗೇ ಕೈಸಾ ಲಾಧಲಾ। ತೇ ಹಿ ಏಕಾ ॥೩॥

ಪ್ರಾಣೀ ಸಂಕಲ್ಪೀ ಬಾಂಧಲಾ । ಜೀವಪಣೇ ಬದ್ಧ ಜಾಲಾ ।
ತೋ ವಿವೇಕೇ ಮುಕ್ತ ಕೇಲಾ । ಸಾಧುಜನೀ ॥೪॥

ಮೀ ಜೀವ ಐಸಾ ಸಂಕಲ್ಪ । ದೃಢ ಧರಿತಾ ಗೇಲೇ ಕಲ್ಪ ।
ತೇಣೇ ಪ್ರಾಣೀ ಜಾಲಾ ಅಲ್ಪ । ದೇಹಬುದ್ಧೀಚಾ ॥೫॥

ಮೀ ಜೀವ ಮಜ ಬಂಧನ । ಮಜ ಆಹೆ ಜನ್ಮಮರಣ ।
ಕೇಲ್ಯಾ ಕರ್ಮಾಚೇ ಫಳ ಆಪಣ । ಭೋಗೀನ ಆತಾ ॥೬॥

ಪಾಪಾಚೇ ಫಳ ತೇ ದುಃಖ । ಆಣೀ ಪುಣ್ಯಾಚೇ ಫಳ ತೇ ಸುಖ ।
ಪಾಪ ಪುಣ್ಯ ಅವಶ್ಯಕ । ಭೋಗಣೇ ಲಾಗೆ ॥೭॥

ಪಾಪ ಪುಣ್ಯಭೋಗ ಸುಟೇನಾ । ಆಣೀ ಗರ್ಭವಾಸ ಹಿ ತುಟೇನಾ ।
ಐಸೀ ಜಯಾಚೀ ಕಲ್ಪನಾ । ದೃಢ ಜಾಲೀ ॥೮॥

ತಯಾ ನಾವ ಬಾಂಧಲಾ । ಜೀವಪಣೇ ಬದ್ಧ ಜಾಲಾ ।
ಜೈಸಾ ಸ್ವಯೇ ಬಾಂಧೋನ ಕೋಸಲಾ। ಮೃತ್ಯ ಪಾವೇ ॥೯॥

ತೈಸಾ ಪ್ರಾಣೀ ತೋ ಅಜ್ಞಾನ । ನೇಣೇ ಭಗವಂತಾಚೇ ಜ್ಞಾನ ।
ಮ್ಹಣೆ ಮಾಝೋ ಜನ್ಮ ಮರಣ । ಸುಟೇಚಿನಾ ॥೧೦॥

ಆತಾ ಕಾಹೀ ದಾನ ಕರೂ । ಪುಢಿಲ್ಯಾ ಜನ್ಮಾಸ ಆಧಾರೂ ।
ತೇಣೇ ಸುಖರೂಪ ಸಂಸಾರೂ । ಹೋಈಲ ಮಾಝಾ ॥೧೧॥

ಪೂರ್ವೀ ದಾನ ನಾಹೀ ಕೇಲೇ । ಮ್ಹಣೋನ ದರಿದ್ರ ಪ್ರಾಪ್ತ ಜಾಲೇ ।
ಆತಾ ತರೀ ಕಾಹೀ ಕೇಲೇ । ಪಾಹಿಜೆ ಕೀ ॥೧೨॥

ಮ್ಹಣೌನೀ ದಿಲೇ ವಸ್ತ್ರ ಜುನೇ । ಆಣೀ ಯೇಕ ತಾಂಬ್ರ ನಾಣೇ ।
ಮ್ಹಣೇ ಆತಾ ಕೋಟಿಗುಣೇ । ಪಾವೇನ ಪುಢೇ ॥೧೩॥

ಬದ್ಧ ಅಂದರೆ ಬಂಧನದಲ್ಲಿ ಸಂಸಾರದಲ್ಲಿ ಸಿಕ್ಕಿಕೊಂಡವನು, ಮೋಕ್ಷ ಅಂದರೆ ಬಂಧನದಿಂದ ಬಿಡುಗಡೆ ಹೊಂದಿದವನು, ಮುಕ್ತನಾದವನು. ಸಂತ ಸಂಗತಿಯಿಂದ ಬದ್ಧನು ಬಂಧನದಿಂದ ಹೇಗೆ ಬಿಡುಗಡೆ ಹೊಂದುವ ನೆಂಬುವದನ್ನು ಹೇಳುವೆವು. ಈಗ ಕೇಳಿರಿ. (೩) ಜೀವಕ್ಕೆ ಅದರ ಸಂಕಲ್ಪದ್ದೇ ಬಂಧನವಿರುವದು. ನಾನು ಜೀವ ಇರುವೆನು. ನನಗೆ ಜನ್ಮ ಮರಣಗಳಿರುವವು. ಮಾಡಿದಂಥ ಕರ್ಮದ ಫಲವನ್ನು ನಾನು ಭೋಗಿಸಲೇಬೇಕು. ಅನ್ನುವಂಥ ಸಂಕಲ್ಪದಿಂದ ಜೀವವು ಬದ್ಧವಾಗಿವೆ:- ಜೀವವು ಸಂಕಲ್ಪದಿಂದಾಗಿ ಒಂದು (ಬಾಜು) ಕಡೆ ಹೋಗುತ್ತದೆ. ನಾನು ಜೀವವಿರುವೆನು. ಅನ್ನುವ ಬದ್ಧತನ ಅದಕ್ಕೆ ಬರುವದು. ಸಾಧು ಸಂತರು ಜೀವಕ್ಕೆ ಆತ್ಮಾನಾತ್ಮ ವಿವೇಕ ವನ್ನು ಕಲಿಸಿ (ತಿಳಿಸಿ) ಬಂಧನದಿಂದ ಅದನ್ನು ಮುಕ್ತ ಮಾಡುವರು.(೪)"ನಾನು ಜೀವ ಇರುವೆ" ಅನ್ನುವ ಸಂಕಲ್ಪ ದಿಂದ ಮತ್ತು ಇದು (ಈ ನಿಶ್ಚಯ) ಬಹಳ ಕಾಲ ಇದನ್ನೇ ಗಟ್ಟಿಯಾಗಿ ಮನಸ್ಸಿನಲ್ಲಿ ಹಿಡಿದುಕೋಡದ್ದರಿಂದಾಗಿ ಜೀವದ–ದೇಹಬುದ್ಧಿಗಟ್ಟಿಕೊಂಡಿತು. ನಾನು ದೇಹದ ಮಟ್ಟಿಗೆ ಮಾತ್ರ ಸಣ್ಣವನಿರುವೆನು. ಅಲ್ಪನಿರುವೆನು.ಆಕುಂಚಿತ (ಸಂಕುಚಿತ)ಇರುವೆನು.ಅನ್ನುವಂಥ ಹೀನ ಮನೋವೃತ್ತಿ ಉಂಟಾಯಿತು(೫)ಅದರಿಂದ ಪ್ರಾಣಿಗೆ ಹೀಗೆ ಅನಿಸಹತ್ತಿತು. ನಾನು ಜೀವ ಇರುವೆ, ನಾನು ಕಟ್ಟಲ್ಪಟ್ಟಿರುವೆ, ನನಗೆ ಜನ್ಮ ಮರಣ ಇರುವದು, ನಾನೇ ಮಾಡಿದ ಕರ್ಮದ ಫಲ ವನ್ನು ನನಗೆ ಭೋಗಿಸಬೇಕಾಗುವದು. (೬) ಪಾಪ ಕರ್ಮದ ಫಲವಾಗಿ ದುಃಖ ಭೋಗಿಸಬೇಕಾಗಿರುವದು. ಪುಣ್ಯ ಕರ್ಮದ ಫಲದಿಂದ ಸುಖ ಭೋಗಿಸಲಿಕ್ಕೆ ಸಿಗುವದು. ಆದರೆ ಪಾಪ ಮತ್ತು ಪುಣ್ಯ ಇವನ್ನು ಭೋಗಿಸದ ಹೊರತು ಬಿಡುಗಡೆ ಇಲ್ಲ.(೭)ಪಾಪ ಮತ್ತುಪುಣ್ಯ ಇವುಗಳ ಫಲಭೋಗವನ್ನು ಭೋಗಿಸದ ಹೊರತು ಬಿಡುಗಡೆ ಇಲ್ಲವಾದ್ದರಿಂದ ಜನ್ಮ ತಾಳುವದು ತಪ್ಪುವದಿಲ್ಲ. ಇಂಥ ಕಲ್ಪನೆ (ವಿಚಾರ)ಗಳು ಅಗದೀ ಗಟ್ಟಿಯಾಗಿ ಬಿಟ್ಟಿರುವವು. (೮) ಇದಕ್ಕೆ ಕಟ್ಟಲ್ಪಟ್ಟವನೆಂದು-ಬಂಧಿತನೆಂದು ಅನ್ನುವರು. ಜೀವತನದಿಂದ ನಾನು .ಜೀವ ಇರುವೆನು ಅನ್ನುವ ಭಾವನೆಯಿಂದಾಗಿ ಇವನು ಬಂಧಿತನಾಗುವನು. ರೇಶಿಮೆಯ ಹುಳವು ತಾನೇ ಸ್ವತಃ ರೇಶಿಮೆಯ ಕೋಶ (ಗೂಡು)ವನ್ನು ನಿರ್ಮಾಣ ಮಾಡುವದು. ಮತ್ತು ಅದರಲ್ಲಿ ತಾನು ಸಿಕ್ಕಿಕೊಂಡು (ಇದ್ದುಕೊಂಡು) ಗುದುಮುರಿಗೆ ಹಾಕಿ ಕಷ್ಟದಿಂದ ಸಾಯುವದು. ಇದೇ ಪ್ರಕಾರ ಜೀವವು. ತಾನೇ ಸ್ವತಃ ಸಂಕಲ್ಪ ಮಾಡುತ್ತದೆ. ಮತ್ತು ಅದು ಗಟ್ಟಿಯಾಯಿತೆಂದರೆ ಜನ್ಮ ಮರಣದ ಚಕ್ರದಲ್ಲಿ ಸಿಕ್ಕಿಕೊಳ್ಳುವದು. (೯) ಈ ಜನ್ಮದಲ್ಲಿ ಜೀವವು ಸುಮ್ಮನೇ (ಕಾರಣವಿಲ್ಲದೆ) ಭ್ರಾಮಕ ಕಲ್ಪನೆ ಮಾಡಿಕೊಂಡು ಆಯುಷ್ಯವನ್ನು ವ್ಯರ್ಥಗೊಳಿಸುವದು. ಈಗ ಬಂದ ಜನ್ಮ ಫುಕ್ಕಟೆ (ವ್ಯರ್ಥ) ಹೋದ ಮೇಲೆ ಪುನಃ ಮನುಷ್ಯ ಜನ್ಮವೇ ಬರುವದೆಂದು ಯಾವ ಖಾತ್ರಿಯೂ ಇರುವದಿಲ್ಲ. ಸಾಮಾನ್ಯ ಜೀವ ಪ್ರಾಣಿಯು ಅಜ್ಞಾನಿಯಾಗಿರುವದು. ಇದಕ್ಕೆ ಭಗವಂತನ ಜ್ಞಾನವಿರುವದಿಲ್ಲ. ಅದಕ್ಕೆ ಅನಿಸುವದೇನಂದರೆ ನನ್ನ ಹಿಂದೆ ಹತ್ತಿದ ಜನ್ಮ ಮರಣದ ಚಕ್ರ ಏನುಮಾಡಿದರೂ ಬಿಡುವದಿಲ್ಲ. (೧೦) ಆದ್ದರಿಂದ ಅದು ಆಗ ಹೀಗೆ ಆಲೋಚಿಸುವದು. ಈ ಜನ್ಮದಲ್ಲಿಯಾದರೂ ಏನಾದರೂ ದಾನ ಧರ್ಮ ಮಾಡಿದ್ದಾದರೆ ಮುಂದಿನ ಜನ್ಮದಲ್ಲಿ ಈಗ ಮಾಡಿದ್ದರ ಪುಣ್ಯ ಉಪಯೋಗಕ್ಕೆ ಬರುವದು, ಆ ಪುಣ್ಯದಿಂದ ನಮ್ಮ ಸಂಸಾರ ಸುಖದ್ದಾದೀತು. (೧೧) ಹೋದ ಜನ್ಮ (ಕಳೆದ ಜನ್ಮ) ದಲ್ಲಿ ನಾವು ಏನೂ ದಾನ ಮಾಡಿರಲಿಲ್ಲವೆಂದೇ ಈ ಜನ್ಮದಲ್ಲಿ ನಾವು ದರಿದ್ರರಾಗಿರುವೆವು ಅದಕ್ಕಾಗಿ ಈಗ ಈ ಜನ್ಮದಲ್ಲಿಯಾದರೂ ನಾವು ಏನಾದರೂ ದಾನ ಇತ್ಯಾದಿ ಮಾಡಲಿಕ್ಕೆ ಬೇಕು. (೧೨) ಏನಾದರೂ ದಾನ ಮಾಡ ಬೇಕೆಂದು ಅವನು ಒಂದು ಹಳೇ ವಸ್ತು ಮತ್ತು ತಾಮ್ರದ ದುಡ್ಡು ತೆಗೆದುಕೊಂಡು ಅದನ್ನು ದಾನ ಮಾಡು ವನು. ಆಗ ಅವನು ಮನದಲ್ಲಿ ಕಲ್ಪನೆ ಮಾಡುವದೇನಂದರೆ ಮುಂದಿನ ಜನ್ಮದಲ್ಲಿ ಈಗ ಮಾಡಿದ ದಾನದ ಫಲವು ಕೋಟಿ ಪಟ್ಟು ಪುಣ್ಯವಾಗಿ ದೊರಕುವದು. (೧೩)

ಕುಶಾವರ್ತೀ ಕುರುಕ್ಷೇತ್ರೀ । ಮಹಿಮಾ ಏಕೋನ ದಾನ ಕರೀ ।
ಆಶಾ ಧರಿಲೀ ಅಭ್ಯಾಂತರೀ । ಕೋಟಿ ಗುಣಾಚೀ ॥೧೪॥

ರುಕಾ ಆಡಕಾ ದಾನ ಕೇಲಾ । ಅತಿತಾಸ ಟುಕಡಾ ಘಾತಲಾ ।
ಮ್ಹಣೆ ಮಾಝಾ ಢೀಗ ಜಾಲಾ । ಕೋಟಿ ಟುಕಡ್ಯಾಚಾ ॥೧೫॥

ತೋ ಮೀ ಖಾಊನ ಪುಢಿಲಿಯೆ ಜನ್ಮೀ । ಐಸೇ ಕಲ್ಪೀ ಅಂತರ್ಯಾಮೀ ।
ವಾಸನಾ ಗುಂತಲೀ ಜನ್ಮಕರ್ಮೀ । ಪ್ರಾಣಿಯಾಚೀ ॥೧೬॥

ಆತಾ ಮೀ ಜೇ ದೇಊನ । ತೇ ಪುಢಿಲೇ ಜನ್ಮೀ ಪಾವೇನ ।
ಐಸೇ ಕಲ್ಪೀ ತೋ ಅಜ್ಞಾನ । ಬದ್ಧ ಜಾಣಾವಾ ॥೧೭॥

ಬಹುತಾ ಜನ್ಮಾಚೆ ಅಂತೀ । ಹೋಯೆ ನರದೇಹಾಚೀ ಪ್ರಾಪ್ತೀ ।
ಯೇಥೇ ನ ಹೋತಾ ಜ್ಞಾನೇ ಸದ್ಗತೀ । ಗರ್ಭವಾಸ ಚುಕೇನಾ ॥೧೮॥

ಗರ್ಭವಾಸ ನರದೇಹೀ ಘಡೆ । ಐಸೇ ಹೇ ಸರ್ವಥಾ ನ ಘಡೆ ।
ಅಕಸ್ಮಾತ್ ಭೋಗಣೇ ಪಡೆ । ಪುನ್ಹಾ ನೀಚಯೋನೀ ॥೧೯॥

ಐಸಾ ನಿಶ್ಚಯೋ ಶಾಸ್ತ್ರಾಂತರೀ । ಬಹುತೀ ಕೇಲಾ ಬಹುತಾಪರೀ ।
ನರದೇಹ ಸಂಸಾರೀ । ಪರಮ ದುಲ್ಲಭ ಅಸೆ ॥೨೦॥

ಪಾಪಪುಣ್ಯ ಸಮತಾ ಘಡೆ । ತರೀ ಚ ನರದೇಹ ಜೋಡೆ ।
ಯೆರವೀ ಹಾ ಜನ್ಮ ನ ಘಡೆ । ಹೇ ವ್ಯಾಸವಚನ ಭಾಗವತೀ ॥೨೧॥

॥ಶ್ಲೋಕ॥ ನರದೇಹಮಾದ್ಯಂ ಸುಲಭಂ ಸುದುರ್ಲಭಂ ।
ಪ್ಲವಂ ಸುಕಲ್ಪಂ ಗುರುಕರ್ಣಧಾರಂ ॥
ಮಯಾನುಕೂಲೇನ ನಭಸ್ವತೇರಿತಂ ।
ಪುಮಾನ್ಭವಾಬ್ಧಿಂ ನ ತರೇತ್ಸ ಆತ್ಮಹಾ ॥ಛ॥

ನರದೇಹ ದುಲ್ಲಭ । ಅಲ್ಪಸಂಕಲ್ಪಾಚಾ ಲಾಭ ।
ಗುರುಕರ್ಣಧಾರೀ ಸ್ವಯಂಭ । ಸುಖ ಪಾವವೀ ॥೨೨॥

ಕುಶಾವರ್ತ (ಗೋದಾವರಿ ನದಿಯ ಉಗಮದಲ್ಲಿರುವ ತೀರ್ಥ) ಕುರುಕ್ಷೇತ್ರ. ಈ ತೀರ್ಥ ಕ್ಷೇತ್ರದ ಮಹಿಮೆಯನ್ನು ಕೇಳಿದನು. ಅದರಲ್ಲಿರುವದೇನಂದರೆ ಈ ತೀರ್ಥ ಕ್ಷೇತ್ರದಲ್ಲಿ ದಾನ ಮಾಡಿದ್ದಾದರೆ ಇದರ ಪುಣ್ಯಫಲ ಮುಂದೆ ಅಪಾರವಾಗಿ ಸಿಗುವದು. ಇದರ ಲಾಭಕ್ಕಾಗಿ ಆಯಾ ಕ್ಷೇತ್ರಗಳಿಗೆ ಹೋಗಿ ದಾನ ಮಾಡುವನು. ಮತ್ತು ಮನದಲ್ಲಿ ಆಶೆಪಡುವದೇನಂದರೆ ಮುಂದಿನ ಜನ್ಮದಲ್ಲಿ ನಮಗೆ ಕೋಟಿ ಕೋಟಿ ಪಟ್ಟು ಈ ದಾನದ ಫಲವು ಸಿಗು ವಂಥಾದ್ದಾಗಿದೆ. [೧೪] ಇವನು ಒಂದು ದುಡ್ಡು, ಅಥವಾ ದಮ್ಮಡಿ (ಪೈಸಾ) ದಾನ ಕೊಡುವನು ಅಥವಾ ಅತಿಥಿಗೆ ಒಂದು ರೊಟ್ಟಿಯ ತುಣುಕನ್ನು ತಿನ್ನಲು ಭಿಕ್ಷೆ ಹಾಕುವನು. ಇವುಗಳ ಮೇಲಿಂದ ಅವನು ಮನದಲ್ಲಿ ಕಲ್ಪಿಸುವ ದೇನಂದರೆ ಮುಂದಿನ ಜನ್ಮದಲ್ಲಿ ನಮಗೆ ಕೋಟಿ ತುಣುಕಿನ (ರೊಟ್ಟಿಯ) ರಾಶಿ ಸಿಕ್ಕೀತು. [೧೫] ಮುಂದಿನ ಜನ್ಮದಲ್ಲಿ ಅದನ್ನು ನಾವು ತಿನ್ನಬಹುದು. ಇಂಥ ಭ್ರಾಮಕ ಕಲ್ಪನೆ ಮನದಲ್ಲಿ ಅವನು ಮಾಡಿಕೊಳ್ಳುವನು. ಈ ಪ್ರಕಾರದಿಂದ ಜನ್ಮ ತಳೆಯುವದು. ಮತ್ತು ಕರ್ಮದಲ್ಲಿ ಮನುಷ್ಯನ ವಾಸನಾ ಅಡಗಿಕೊಂಡು ಇರುವದು. [೧೬] ಈ ಜನ್ಮದಲ್ಲಿ ನಾವು ಏನು ದಾನ ಮಾಡುವೆವೋ ಅದು ಮುಂದಿನ ಜನ್ಮದಲ್ಲಿ ಅನೇಕ ಪಟ್ಟಿನಿಂದ ನಮಗೆ ದೊರಕು ವದು, ಅನ್ನುವ ಕಲ್ಪನೆ ಮಾಡುವವನು ಅಜ್ಞಾನಿಯಾಗಿರುವನು. ಇವನೇ ಬದ್ಧನು (ಬಂಧಿತನು) ಎಂದು ತಿಳಿಯ ಬೇಕು. [೧೭] ಅನೇಕ ಜನ್ಮ ತಾಳಿದ ನಂತರ ಮಾನವ ದೇಹದ ಪ್ರಾಪ್ತಿಯಾಗುವದು. ಮಾನವನ ಜನ್ಮ ಬಂದ ಮೇಲೆ ಆತ್ಮಜ್ಞಾನ ಮಾಡಿಕೊಳ್ಳದಿದ್ದರೆ ಜೀವಕ್ಕೆ ಸದ್ಗತಿ ದೊರಕುವದಿಲ್ಲ. ಆದರ ಜನ್ಮ ಮರಣದ ತಿರುಗಾಟ (ಫೇರಿ) ತಪ್ಪುವದಿಲ್ಲ. (೧೮) ಇದೇ ಜನ್ಮದಲ್ಲಿ ಆತ್ಮಜ್ಞಾನವಾಗದೆ ಮರಣವಾದರೆ ಪುನಃ ಗರ್ಭವಾಸದಲ್ಲಿ ನರ ದೇಹವೇ ಪ್ರಾಪ್ತವಾಗುವದೆಂಬುದು ಬಹಳ ಕ್ವಚಿತ್ತಾಗಿ ಪ್ರಾಪ್ತವಾಗುವಂಥಹದ್ದಾಗಿದೆ. ಅಕಲ್ಪಿತವಾಗಿ ಆ ಜನ್ಮಕ್ಕೆ ಒಮ್ಮೊಂದೊಮ್ಮೆಲೇ ತೀರ ಕೀಳಮಟ್ಟದ ಯೋನಿಯಲ್ಲಿ ಜನ್ಮ ಹೊಂದುವ ಸರತಿ ಬಂದರೂ ಬರುತ್ತದೆ. (೧೯) ಬಹಳಷ್ಟು ಶಾಸ್ತ್ರಕಾರರು, ಪಂಡಿತರು ಬೇರೆ ಬೇರೆ ಶಾಸ್ತ್ರಗಳಲ್ಲಿ ಅನೇಕ ಪ್ರಕಾರವಾಗಿ ಇದೇ ಮಾತನ್ನು ನಿಶ್ಚಯಾ ತ್ಮಕವಾಗಿ ಹೇಳಿದ್ದಾರೆ. ಸಾರಾಂಶ, ಈ ಸಂಸಾರದಲ್ಲಿ ನರದೇಹ ಪ್ರಾಪ್ತವಾಗುವದು ಬಹಳ ದುರ್ಲಭವಿರುವದು.(೨೦) ಮೂರ್ಖ ಜನರು ಇಂಥ ದುರ್ಲಭ ನರದೇಹವನ್ನು ಹೇಗೆ ವಿನಃಕಾರಣ ವ್ಯರ್ಥಗೊಳಿಸಿ ಬಿಡುವರು ಇದರ ವರ್ಣನೆ ಮಾಡಿ ಈಗ ಹೇಳುವರು. ಈ ನರದೇಹ ವ್ಯರ್ಥವಾಗಿ ಕಳೆದುಕೊಳ್ಳುವದೆಂದರೆ ಒಂದು ರೀತಿಯ ಆತ್ಮ-ಹತ್ಯೆಯೇ ಆಗಿರುವದು:-ಪಾಪಮತ್ತು ಪುಣ್ಯ ಇವುಗಳಪ್ರಮಾಣ ಸಮವಾದಾಗ ಮಾನವದೇಹ ಪ್ರಾಪ್ತವಾಗುವದು. ಈ ಪಾಪ ಪುಣ್ಯದಪ್ರಮಾಣ ಸಮವಾಗದೇ ಇರುವತನಕ ಈ ಮಾನವದೇಹವು ಪ್ರಾಪ್ತವಾಗುವದಿಲ್ಲವೆಂದು ಭಾಗವತದಲ್ಲಿವ್ಯಾಸರ ವಚನವಿರುವದು. (೨೧) ಶ್ಲೋಕ:- ನರದೇಹಮಾದ್ಯಂ ಸುಲಭಂ, ಸುದುರ್ಲಭಂ । ಪ್ಲವಂ ಸುಕಲ್ಪಂ ಗುರುಕರ್ಣ ಧಾರಂ। ಮಯಾನುಕೂಲೇನ ನಭಸ್ವತೇರಿತಂ । ಪುಮಾನ್ಭವಾಬ್ಧಿಂ ನತರೇತ್ಸ ಆತ್ಮಹಾ ॥ (ಭಾಗವತ,೧೧,೨೦,೧೭,) ಶ್ಲೋಕಾರ್ಥ:- ಈ ಮೂಲ ಮಾನವ ದೇಹ ಸುಲಭವಿರುವದಾದರೂ ಅಷ್ಟೇ ದುರ್ಲಭವೂ ಇರುವದು. ಒಳ್ಳೆಯ ಸಂಕಲ್ಪವೇ ಇದರ ಹುಟ್ಟು (ಡೋಣಿಯನ್ನು ನಡೆಸುವ ಸಾಧನ).ಆದರೆ ಗುರುವೇ ಸುಕಾಣು(ಸುಕ್ಕಾಣಿ) ಹಿಡಿದಿರು ವಂಥ ನಾವಿಕ (ಅರ್ಥಾತ್ ನಾಯಕ) ಕರ್ಣಧಾರ ಇರುವನು. ಭಗವಂತನ ಅನುಕೂಲತೆ ಅಥವಾ ಕೃಪೆಯೇ ಗಾಳಿಯ ನಿಸುವದು. ಈ ಗಾಳಿಯಿಂದ ಅದು ದೂಡಲ್ಪಡುವಂಥ ಹಡಗವಿರುವದು. ಈ ರೀತಿಯ ಎಲ್ಲ ಸಹಾಯ ಇರಲಿ ಕ್ಕಾಗಿ ಯಾವ ಮನುಷ್ಯನು ಭವಸಾಗರವನ್ನು ದಾಟಿ ಹೋಗುವದಿಲ್ಲವೋ ಅಂಥವನು ಆತ್ಮಘಾತುಕಿಯೆನಿಸುವನು:- ನರದೇಹ ದುರ್ಲಭವಿರುವದು. ಇದು ಸ್ಪಷ್ಟವಿರುವದು. ಆದರೆ ದೇಹಬುದ್ಧಿಯು ಮಾಡಿದ ಅಲ್ಪ ಸಂಕಲ್ಪದಿಂದ ಮತ್ತು ಏನಾದರೂ ಹಿಂದಿನ ಜನ್ಮದ ವಾಸನಾ ಇರುವದರಿಂದಾಗಿ ಮನುಷ್ಯ ಜನ್ಮದ ಲಾಭವಾಗುವದು. ಮನುಷ್ಯ ಜನ್ಮವು ಪ್ರಾಪ್ತವಾದ ಮೇಲೆ ಸದ್ಗುರುವನ್ನು ಕರ್ಣಧಾರ (ನಾವಿಕ)ನನ್ನಾಗಿ ಮಾಡಬೇಕು. ಗುರುವೇ ಸ್ವತಃ ಸಿದ್ಧ ನಾವಿಕ ಅಥವಾ ಮಾರ್ಗದರ್ಶಕನಿರುವನು. ಅವನ ವಚನದಂತೆ ನಡೆದದ್ದಾದರೆ ನಿಜ ಸುಖವು ಪ್ರಾಪ್ತವಾಗುವದು.(೨೨)

ದೇವ ಅನುಕೂಳ ನವ್ಹೆ ಜಯಾ। ಸ್ವಯೇ ಪಾಪೀ ತೋ ಪ್ರಾಣಿಯಾ।
ಭವಾಬ್ಧೀ ನ ತರವೆ ತಯಾ। ಆತ್ಮಹತ್ಯಾರಾ ಬೋಲಿಜೆ ॥೨೩॥

ಜ್ಞಾನೇವಿಣ ಪ್ರಾಣೀಯಾಸೀ। ಜನ್ಮಮೃತ್ಯ ಲಕ್ಷ ಚೌರ್‍ಯಾಸೀ।
ತಿತುಕ್ಯಾ ಆತ್ಮಹತ್ಯಾ ತ್ಯಾಸೀ। ಮ್ಹಣೌನ ಆತ್ಮಹತ್ಯಾರಾ ॥೨೪॥

ನರದೇಹೀ ಜ್ಞಾನೇವಿಣ। ಕದಾ ನ ಚುಕೆ ಜನ್ಮಮರಣ।
ಭೋಗಣೇ ಲಾಗತೀ ದಾರುಣ। ನಾನಾ ನೀಚ ಯೋನೀ ॥೨೫॥

ರೀಸ ಮರ್ಕಟ ಶ್ವಾನ ಸೂಕರ। ಅಶ್ವ ವೃಷಭ ಮ್ಹೈಸಾ ಖರ।
ಕಾಕ ಕುರ್ಕುಟ ಜಂಬುಕ ಮಾರ್ಜರ। ಸರಡ ಬೇಡೂಕ ಮಕ್ಷಿಕಾ ॥೨೬॥

ಇತ್ಯಾದಿಕ ನೀಚ ಯೋನೀ। ಜ್ಞಾನ ನಸ್ತಾ ಭೋಗಣೇ ಜನೀ।
ಆಶಾ ಧರೀ ಮೂರ್ಖ ಪ್ರಾಣೀ। ಪುಢಿಲಿಯಾ ಜನ್ಮಾಚೀ ॥೨೭॥

ಹಾ ನರದೇಹ ಪಡತಾ। ತೋ ಚಿ ಪಾವಿಜೆ ಮಾಗುತಾ।
ಐಸಾ ವಿಶ್ವಾಸ ಧರಿತಾ। ಲಾಜ ನಾಹೀ ॥೨೮॥

ಕೋಣ ಪುಣ್ಯಾಚಾ ಸಂಗ್ರಹೋ। ಜೆ ಪುನ್ಹಾ ಪಾವಿಜೆ ನರದೇಹೋ।
ದುರಾಶಾ ಧರಿಲೀ ಪಾಹೋ। ಪುಢಿಲಿಯಾ ಜನ್ಮಾಚೀ ॥೨೯॥

ಐಸೆ ಮೂರ್ಖ ಅಜ್ಞಾನ ಜನ। ಕೇಲೇ ಸಂಕಲ್ಪೇ ಬಂಧನ।
ಶತ್ರು ಆಪಣಾಸಿ ಆಪಣ। ಹೊಊನ ಠೇಲಾ ॥೩೦॥

॥ಶ್ಲೋಕ॥ ಆತ್ಮೈವ ಹ್ಯಾತ್ಮನೊ ಬಂಧುರಾತ್ಮೈವ ರಿಪುರಾತ್ಮನಃ ॥ಛ॥

ಐಸೇ ಸಂಕಲ್ಪಾಚೇ ಬಂಧನ। ಸಂತಸಂಗೇ ತುಟೆ ಜಾಣ।
ಏಕ ತಯಾಚೇ ಲಕ್ಷಣ। ಸಾಂಗಿಜೇಲ ॥೩೧॥

ದೇವರ ಒಲುಮೆ (ದಯೆ) ಯಾರಿಗೆ ಇರುವದಿಲ್ಲವೋ ಅಂಥವನು ಸ್ವತಃ ಪಾಪಿಷ್ಠನಿರುವನು. ಈ ಭವಸಾಗರವನ್ನು ಇವನು ದಾಟಿ ಹೋಗಲಾರನು. (ಹೋಗಲಿಕ್ಕೆ ಸಾಧ್ಯವಾಗುವದಿಲ್ಲ). ಆದ್ದರಿಂದ ಇವನು ಆತ್ಮ ಘಾತಕಿಯೆಂದು ಅನಿಸಿಕೊಳ್ಳುವನು. (೨೩) ಯಾವ ಜೀವನಿಗೆ (ಪ್ರಾಣಿಗೆ) ಆತ್ಮಜ್ಞಾನ ಇರುವದಿಲ್ಲವೋ ಅದು ಎಂಭತ್ನಾಲ್ಕು ಲಕ್ಷ ಸಲ ಜನ್ಮ ಹೊಂದಬೇಕಾಗುವದು.(ದಾ.ದ ೨೦-೭-೪-ಇನ್ನೋಡಿರಿ)ಮತ್ತು ಅಷ್ಟೇ ಸಲ ಸಾಯು ಬೇಕಾಗುವದು. ಎಷ್ಟು ಸಲ ಜ್ಞಾನಹೀನನಾಗಿ ಇವನು ಸಾಯುವನೋ ಅಷ್ಟು ಸಲ ಇವನಿಗೆ ಆತ್ಮಹತ್ಯೆಯೇ ಆಗು ವದು. (ಒದಗುವದು). ಅಂತೆಯೇ ಇವನು (ಜೀವನು) ಆತ್ಮಘಾತುಕಿಯೆನಿಸಿಕೊಳ್ಳುವನು. (೨೪) ದುರ್ಲಭವಾದ ಮಾನವ ಜನ್ಮ ದೊರಕಿದರೂ ಆತ್ಮಜ್ಞಾನ ಮಾಡಿಕೊಳ್ಳದಿದ್ದರೆ ಇವನಿಗೆ ಜನ್ಮ ಮರಣದ ಚಕ್ರವು ತಪ್ಪಲಾರದು. ಇಷ್ಟೇ ಅಲ್ಲ ಇವನಿಗೆ ಅಗದೀ ಕೀಳಯೋನಿಯಲ್ಲಿ ಜನ್ಮ ತಳೆಯಬೇಕಾಗುವದು. (೨೫) ಕರಡಿ, ಮಂಗ, ನಾಯಿ, ಹಂದಿ, ಕುದುರೆ, ಎತ್ತು, ಕೋಣ, ಕತ್ತೆ, ಕಾಗೆ, ನರಿ, ಬೆಕ್ಕು, ಓತೀಕಾತ ಕಪ್ಪೆ, ನೊಣ,(೨೬) ಇತ್ಯಾದಿ ಅಗದೀ ಕೀಳು ಯೋನಿಯಲ್ಲಿ ಆತ್ಮಜ್ಞಾನ ಇಲ್ಲದಂಥ ಮನುಷ್ಯನು ಜನ್ಮ ಹೊಂದಬೇಕಾಗುವದು. ವಸ್ತು ಸ್ಥಿತಿ ಹೀಗಿದ್ದರೂ ಮೂರ್ಖ ಜನ ಮುಂದಿನ ಜನ್ಮದ ಆಶೆ ತಳೆಯುವರು. ಇದಕ್ಕೆ ಏನು ಅನ್ನಬೇಕು? (೨೭) ಈಗ ದೊರೆತಿರುವ ಸದ್ಯದ ಮಾನವ ದೇಹ ಮರಣ ಹೊಂದಿದ ನಂತರ ಪುನಃ ಮೊದಲಿನ ಮಾನವ ದೇಹವೇ ತನಗೆ ಸಿಗುವದೆಂಬ ಭರವಸೆ ತಳೆಯುವವರಿಗೆ ಲಜ್ಜೆ ಹೇಗೆ ಅನಿಸುವದಿಲ್ಲ. ಇವರು ಮೂರ್ಖರೇ ಸರಿ. (೨೮) ತಮ್ಮ ಹತ್ತಿರ ಅಂಥ ಯಾವ ಪುಣ್ಯದ ರಾಶಿ (ಸಂಗ್ರಹ) ಇರುವದು. ಇದರ ಬಲದ ಮೇಲೆ ಪುನಃ ನರದೇಹವೇ ತಮಗೆ ಸಿಗಬಹು ದಾಗಿದೆ ಎಂದು ಅನ್ನಲು ಖಾತ್ರಿ ಇಲ್ಲವೆಂದಾದರೆ ಈ ಮೂರ್ಖ ಮಾನವ ಮುಂದಿನ ಜನ್ಮದ ಬಗೆಗಿನ ಖೊಟ್ಟಿ ಆಶಾ ಹಿಡಿದುಕೊಂಡು ನಡೆಯುವದು ಮೂರ್ಖತನವಲ್ಲವೇ?(೨೯) ಇಂಥ ಮೂರ್ಖ ವ ಅಜ್ಞಾನಿ ಜನರು ತಮ್ಮದೇ ಆದ ಸಂಕಲ್ಪದಿಂದ ಸ್ವತಃ ತಾವೇ ಬಂಧನಕ್ಕೊಳಗಾಗುವರು. ಈ ಪ್ರಕಾರದ ಸಂಕಲ್ಪದಿಂದ ಬಂಧಿತ ಮೂರ್ಖ ಮಾನವ ತನ್ನ ಶತ್ರು ತಾನೇ ಆಗುವನು. (೩೦) ಶ್ಲೋಕ :- ಆತ್ಮೈವಹ್ಯಾತ್ಮನೋಬಂಧುರಾತ್ಮೈವರಿಪುರಾತ್ಮನಃ॥ (ಭ.ಗೀ೬.೫) ಶ್ಲೋಕಾರ್ಥ:- ತಾನೇ ತನ್ನ ಮಿತ್ರ, ಮತ್ತು ತಾನೇ ತನ್ನ ಶತ್ರು ಇರುವನು. ಈ ಪ್ರಕಾರದ ಸಂಕ ಲ್ಪದಿಂದ ಯಾವ ಬಂಧನ ಬೀಳುವದೋ ಅದು ಕೇವಲ ಸತ್ಸಮಾಗಮದಿಂದ ಹರಿದು ಹೋಗುವದು. ಇದರ ಲಕ್ಷಣ ಗಳನ್ನು ಹೇಳುವೆನು ಚಿತ್ತವಿಟ್ಟು ಕೇಳಬೇಕು. (೩೧)

ಪಾಂಚಾ ಭೂತಾಂಚೇ ಶರೀರ । ನಿರ್ಮಾಣ ಜಾಲೇ ಸಚರಾಚರ ।
ಪ್ರಕೃತಿ ಸ್ವಭಾವೇ ಜಗದಾಕಾರ । ವರ್ತೋ ಲಾಗೆ ॥೩೨॥

ದೇಹ ಅವಸ್ಥಾ ಅಭಿಮಾನ । ಸ್ಥಾನೇ ಭೋಗ ಮಾತ್ರಾ ಗುಣ ।
ಶಕ್ತೀ ಆದಿಕರೂನ ಲಕ್ಷಣ । ಚೌಪುಟೇ ತತ್ವಾಂಚೇ ॥೩೩॥

ಪಿಂಡ ಅಂದರೆ ಮಾನವ ದೇಹ (ಪಂಚ ಭೂತಾತ್ಮಕ ಶರೀರ)ವು ಮತ್ತು ಬ್ರಹ್ಮಾಂಡ ಅಂದರೆ ದೃಶ್ಯ (ತೋರುವ) ವಿಶ್ವವು. ಬೇರೆ ಬೇರೆ ತತ್ವ ಚಿಂತಕರು ಪಿಂಡ ಬ್ರಹ್ಮಾಂಡದ ಬಗ್ಗೆ ವಿಚಾರ ಮಾಡುವಾಗ ಇವುಗಳ ರಚನೆಯು ಯಾವ ತತ್ವಗಳ ಮೇಲೆ ಆಯಿತು? ಹೇಗೆ ಆಯಿತು? ಅನ್ನುವ ಬಗ್ಗೆ ವರ್ಣನೆ ಮಾಡಿರುವರು. ಕೆಲವು ತತ್ವ ಚಿಂತಕರು ಮೂರು ಮೂಲತತ್ವಗಳನ್ನು ಮನ್ನಿಸುವರು. ಕೆಲವರು ನಾಲ್ಕು ಅಂದರೆ ಕೆಲವರು ಐದು ಅನ್ನುವರು. ಇನ್ನೂ ಕೆಲವರು ಏಳು ತತ್ವಗಳೆಂದು ಅನ್ನುವರು. ಇವೆಲ್ಲವನ್ನು ನೋಡಿ ಸಾಮಾನ್ಯ ಜನರ ಮನಸ್ಸಿನಲ್ಲಿ ಗೊಂದಲ ಉಂಟಾಗುವದು. ಇವರು ಬಹಳಷ್ಟು ವಿಚಾರ ಮಾಡಿದರೂ ಸಹ ಈ ಗೊಂದಲದಿಂದ ಹೊರಬಂದು ಯಾವುದೇ ಒಂದರ ಬಗ್ಗೆ ನಿಶ್ಚಿತ ಮತ ಠರಾಯಿಸಲಿಕ್ಕೆ ಶಕ್ಯವಾಗುವದಿಲ್ಲ.ಆದರೆ ಆತ್ಮಜ್ಞಾನಿ ಸತ್ಪುರುಷರಿಗೆ ಈ ತತ್ವಗಳ ರಹಸ್ಯದ ಬಗ್ಗೆ ಸಂಪೂರ್ಣ ಗೊತ್ತಿರುವದರಿಂದ ಅವರು ಖಾತ್ರಿಪೂರ್ವಕ ಹೇಳುವದೇನಂದರೆ ಯಾವತ್ತೂ ಪಿಂಡ, ಬ್ರಹ್ಮಾಂಡದ ತತ್ವವಿಸ್ತಾರಗಳಲ್ಲಿ ಪರಬ್ರಹ್ಮ ಮತ್ತು ಮೂಲ ಮಾಯಾ ಅಥವಾ ಆತ್ಮಾ ಮತ್ತು ಅನಾತ್ಮಾ ಅನ್ನುವ ಎರಡೇ ಮೂಲತತ್ವಗಳಿರುವವು. ಈ ವಿಶ್ವದ ಯಾವತ್ತೂ ವಿಸ್ತಾರವು ಪಂಚಭೂತಾತ್ಮಕವಿರುವದು. ಇದು ಆತ್ಮಾ ಅಲ್ಲ. ಇದು ಮೂಲ ಮಾಯೆಯಿಂದ ಪ್ರಕಟವಾಗಿರುವದು. ದೇಹದಲ್ಲಿಯ ನಿಜವಾದ ನಾನು ಇದೇ ಆ ಆತ್ಮಾ ಇರುವದು ವಿಶ್ವದಲ್ಲಿ ಸರ್ವನಿಯಂತಾ ಅನಿಸುವವನು ಆ ಈಶ್ವರ ಅಥವಾ ಪರಮಾತ್ಮನೇ ಇರುವನು. ಆತ್ಮಾ ಮತ್ತು ಪರಮಾತ್ಮಾ ಒಂದೇ ಇರುವದು. ಅಂತಃಕರಣದಲ್ಲಿಯ ಶುದ್ಧ ಆತ್ಮ ಸ್ವರೂಪದ ಶೋಧ ಮಾಡಿದ್ದಾದರೆ ಆತ್ಮಾ ಸಾಕ್ಷಾತ್ಕಾರವಾಗುವದು. ಮತ್ತು "ನಾನು ಪರಮಾತ್ಮನೇ ಇರುವೆನು" ಅನ್ನುವದರ ಪ್ರತ್ಯಕ್ಷ ಅನುಭವವೂ ಬರುವದು. ಅಹಂಕಾರ ನಾಶ ಹೊಂದಿದ ಕೂಡಲೇ ಜನ್ಮ ಮರಣ ತಪ್ಪುತ್ತದೆ. ಯಾಕಂದರೆ ಅಹಂಕಾರವೇ ಜನ್ಮಕ್ಕೆ ಮೂಲ ಕಾರಣವಿರುವದು. ನಾನು ಅವನೇ ಅಂದರೆ ದೇವರೇ ಇರುವೆನು. ಅನ್ನುವ ಆತ್ಮಜ್ಞಾನ ಪಡೆಯುಕೊಳ್ಳುವದರಲ್ಲಿಯೇ ಮನುಷ್ಯ ಜನ್ಮದ ಸಾರ್ಥಕ್ಯವಿರುವದು. ಆತ್ಮಜ್ಞಾನ ಪಡೆದುಕೊಳ್ಳುವ ನಿಃಸಂಶಯಮಾರ್ಗವನ್ನು ಕೇವಲ ಸಾಧುಸಂತ(ಆತ್ಮಜ್ಞಾನಿ ಪುರುಷ)ರೇ ಹೇಳಿ ಅನುಭವಕ್ಕೆ ತಂದುಕೊಡುವಲ್ಲಿ ಸಮರ್ಥರಾಗಿರುವರು:– ಈ ಮಾನವ ಶರೀರವು ಪಂಚ ಮಹಾಭೂತಗಳಿಂದ ತಯಾರಾದದ್ದಿರುವದು. ಈ ಚರಾಚರ ವಿಶ್ವ (ಪ್ರಪಂಚ)ವೂ ಸಹ ಪಂಚಮಹಾಭೂತಗಳಿಂದಲೇ ನಿರ್ಮಾಣವಾಗಿದೆ ಅಂತೆಯೇ ಎಲ್ಲ ಸಾಕಾರ ಪ್ರಾಣಿಗಳು ತಮ್ಮ ತಮ್ಮ ಪ್ರಕೃತಿಯ ನಿಯಮಕ್ಕನುಸಾರವಾಗಿ ವರ್ತಿಸುವವು. ಮತ್ತು ಜಗತ್ತಿನಲ್ಲಿಯ ಸರ್ವ ಆಗು ಹೋಗುವ ಘಟನೆ ಇದೇ ಪ್ರಕಾರ ಆಗುತ್ತಲಿರುವವು. ನಾವು ಯಾವುದಕ್ಕೆ ನಿಸರ್ಗದ ನಿಯಮ ಅನ್ನುವೆವೋ ಅದು ಮೂಲತಃ ಪ್ರಕೃತಿಯ ನಿಯಮವೇ ಇರುವದು. ಅಂತೆಯೇ ಜಗದಲ್ಲಿ ವ್ಯವಸ್ಥೆಯೆನ್ನುವದು ಕಂಡು ಬರುವದು. ಕಾರ್ಯ ಕಾರಣ ಭಾವವು ತನ್ನ ಸತ್ತೆಯನ್ನು (ಅಧಿಕಾರವನ್ನು) ನಡೆಸುವದು. (೩೨) ಕೆಲವೊಂದು ಶಾಸ್ತ್ರಕಾರರು ಹೇಳುವದೇನಂದರೆ ಪಿಂಡಬ್ರಹ್ಮಾಂಡದ ರಚನೆಯು ನಾಲ್ಕುತತ್ವಗಳ ಆಧಾರದಿಂದ ಆಗಿರುವದು: ಉದಾ:-೧) ನಾಲ್ಕು ದೇಹಗಳು:- ಸ್ಥೂಲ, ಸೂಕ್ಷ್ಮ, ಕಾರಣ, ಮಹಾಕಾರಣ ೨) ನಾಲ್ಕು ಅವಸ್ಥೆಗಳು:–ಜಾಗ್ರತಿ,ಸ್ವಪ್ನ,ಸುಷುಪ್ತಿ ವ, ತುರ್ಯಾ ೩)ನಾಲ್ಕು ಅಭಿಮಾನಗಳು:–ವಿಶ್ವ[ಜಗತ್ತು]ತೈಜಸ(ತೇಜಸ್ವಿ)ಪ್ರಾಜ್ಞ (ತಿಳುವಳಿಕೆಯುಳ್ಳವ)ಪ್ರತ್ಯಗಾತ್ಮಾ, [ಕೂಟಸ್ಥ ಆತ್ಮಾ, ಮೂಲ ಪುರುಷ] ೪] ನಾಲ್ಕು ಸ್ಥಾನಗಳು:- ನೇತ್ರ, ಕಂಠ, ಹೃದಯ ವ, ಮೂರ್ಧಾ [ತಲೆ, ಶಿರ] ೫] ನಾಲ್ಕು ಭೋಗಗಳು:– ಸ್ಥೂಲ, ಪ್ರವಿವಕ್ತ [ಸೂಕ್ಷ್ಮ ದೇಹಕ್ಕೆ ಸಂಬಂಧಿಸಿದ ಭೋಗ, ಉಪಾಧಿರಹಿತ ಭೋಗ] ಆನಂದ ಮತ್ತು ಆನಂದಾವಭಾಸ, ೬] ನಾಲ್ಕು ಗುಣಗಳು:– ಸತ್ವ, ರಜ, ತಮ ಮತ್ತು ಶುದ್ಧ ತತ್ವ ೭] ನಾಲ್ಕು ಮಾತ್ರಾಗಳು:- ಅ, ಉ, ಮ, ಮತ್ತು ಅರ್ಧ ಮಾತ್ರಾ ಅಥವಾ ಈಶ್ವರ ೮] ನಾಲ್ಕು ಶಕ್ತಿಗಳು:– ಇಚ್ಛಾ, ಕ್ರಿಯಾ, ದ್ರವ್ಯ, ಜ್ಞಾನ. (೩೩)

ಐಸೀ ಪಿಂಡಬ್ರಹ್ಮಾಂಡರಚನಾ । ವಿಸ್ತಾರೇ ವಾಢಲೀ ಕಲ್ಪನಾ ।
ನಿರ್ಧಾರಿತಾ ತತ್ವಜ್ಞಾನಾ । ಮತೇ ಭ್ರಾಂಬಾವಲೀ ॥೩೪॥

ನಾನಾ ಮತೀ ನಾನಾ ಭೇದ । ಭೇದೇ ವಾಢತೀ ವೆವಾದ ।
ಪರೀ ತೋ ಏಕ್ಯತೇಚಾ ಸಂವಾದ । ಸಾಧು ಜಾಣತೀ ॥೩೫॥

ತಯಾ ಸಂವಾದಾಚೇ ಲಕ್ಷಣ । ಪಂಚಭೂತಿಕ ದೇಹ ಜಾಣ ।
ತ್ಯಾ ದೇಹಾಮಧೇ ಕಾರಣ । ಆತ್ಮಾ ವೊಳಖಾವಾ ॥೩೬॥

ದೇಹ ಅಂತೀ ನಾಸೋನ ಜಾಯೆ । ತ್ಯಾಸ ಆತ್ಮಾ ಮ್ಹಣೋ ನಯೆ ।
ನಾನಾ ತತ್ವಾಂಚಾ ಸಮುದಾಯು । ದೇಹಾಮಧೇ ಆಲಾ ॥೩೭॥

ಅಂತಃಕರಣ ಪ್ರಾಣಾದಿಕ । ವಿಷಯೆ ಇಂದ್ರಿಯೇ ದಶಕ ।
ಹಾ ಸೂಕ್ಷ್ಮಾಚಾ ವಿವೇಕ । ಬೋಲಿಲಾ ಶಾಸ್ತ್ರೀ ॥೩೮॥

ಘೇತಾ ಸೂಕ್ಷ್ಮಾಚೀ ಶುದ್ಧೀ । ಭಿನ್ನ ಅಂತಃಕರಣ ಮನ ಬುದ್ಧೀ ।
ನಾನಾ ತತ್ವಾಂಚೆ ಉಪಾಧೀ । ವೇಗಳಾ ಆತ್ಮಾ ॥೩೯॥

ಸ್ಥೂಳ ಸೂಕ್ಷ್ಮ ಕಾರಣ । ಮಹಾಕಾರಣ ವಿರಾಟ ಹಿರಣ್ಯ ।
ಅವ್ಯಾಕೃತ ಮೂಳಪ್ರಕೃತಿ ಜಾಣ । ಐಸೆ ಅಷ್ಟದೇಹ ॥೪೦॥

ಚ್ಯಾರೀ ಪಿಂಡೀ ಚ್ಯಾರೀ ಬ್ರಹ್ಮಾಂಡೀ । ಐಸೀ ಅಷ್ಟದೇಹಾಚೀ ಪ್ರೌಢೀ ।
ಪ್ರಕೃತಿ ಪುರುಷಾಚೀ ವಾಢೀ । ದಶದೇಹ ಬೋಲಿಜೇ ॥೪೧॥

ಹೀಗೆ ಮೂವತ್ತೆರಡು ತತ್ವಗಳು ಕೂಡಿ ಈ ಯಾವತ್ತೂ ಚರಾಚರ ಪಿಂಡ ಬ್ರಹ್ಮಾಂಡದ ರಚನೆ ಆಗಿರುವದು. ಈ ರೀತಿಯ ಅಭಿಪ್ರಾಯವನ್ನು ಕೆಲವು ತತ್ವ ಚಿಂತಕರು ಹೇಳುತ್ತಾರೆ.ವಿಶ್ವದ ವಿಸ್ತಾರ ಹೇಗಾಯಿತು ಅನ್ನುವದರಬಗ್ಗೆ ಎಷ್ಟು ವಿಸ್ತಾರ ಮಾಡಿ, ಕಲ್ಪನಾಕಟ್ಟಿ ಹೇಳಿದರೂ ಮುಗಿಯುವದಿಲ್ಲ.ಅದು ಮತ್ತೂ ಬೆಳೆಯುತ್ತ ಹೋಗುವದು. ಬೇರೆಬೇರೆ ತತ್ವಚಿಂತಕರು ತಮ್ಮ ತಮ್ಮ ಕಲ್ಪನೆಯನ್ನೇ ಹೇಳುತ್ತ ಹೋಗುವರು. ಇದರಿಂದ ತತ್ವದ ನಿಶ್ಚಯವಾಗುವಾಗ ತತ್ವ ಜ್ಞಾನದಲ್ಲಿ ಬೇರೆಬೇರೆ ಪರಸ್ಪರ ವಿರೋಧ ಇರುವ ಉತ್ಪನ್ನವಾಗುವವು.ಮತ್ತು ವಿಚಾರದ ಗೊಂದಲವೂ ಆಗುವದು.(೩೪)ಬೇರೆಬೇರೆ ತರಹದ ವಿಚಾರಪ್ರವಾಹದಲ್ಲಿ ಅನೇಕಭೇದಗಳಿರುವವು.ಆ ಭೇದಗಳಿಂದ ವಾದವಿವಾದವುಬೆಳೆಯುತ್ತ ಹೋಗುವದು.ಇಂಥ ಎಲ್ಲ ಭೇದಗಳಲ್ಲಿ ಅಂತರ್ಭೂತ(ಅಡಗಿರುವ)ವಾಗಿರುವ ಐಕ್ಯತೆಯನ್ನುಶೋಧಿಸಿ, ಎಲ್ಲ ಮತಗಳಲ್ಲಿ ಸುಖ ಸಂವಾದ ಉತ್ಪನ್ನ ಉಂಟು ಮಾಡುವ ಕಲೆಯು ಕೇವಲ ನಿಜವಾದ ಸತ್ಪುರುಷರಿಗೆ ಮಾತ್ರ ಗೊತ್ತಿರುವದು. (೩೫) ಎಲ್ಲ ಮತಗಳಲ್ಲಿಯ ಸಂವಾದವು ಹೀಗೆ ಇರುವದು:-ದೇಹವು ಪಂಚಭೂತಗಳು ಜಡ ಇರುವವು. ಇವುಗಳಿಗೆ ಚೇತನ ಕೊಡುವದು ಆತ್ಮವೇ ಇರುವದು. ಅದು ದೇಹದಲ್ಲಿ ಇರುವದು ಆದರೆ ಅದು ದೇಹದಿಂದ ಪ್ರತ್ಯೇಕ ಇರುವದು. (೩೭) ಕೊನೆಗೆ ದೇಹದ ನಾಶವಾಗುವದು. ಅಂತೆಯೇ ದೇಹವನ್ನು ಆತ್ಮವೆಂದು, ಒಪ್ಪಲಿಕ್ಕೆ ಬರುವದಿಲ್ಲ. ದೇಹದಲ್ಲಿ ಪಂಚಭೂತಗಳ ಸಮೂಹವಿರುವದು. ಅಂತಃಕರಣ, ಪಂಚಪ್ರಾಣ., ಹತ್ತು ಇಂದ್ರಿಯಗಳು ಮತ್ತು ಇವುಗಳ ಹತ್ತು ವಿಷಯಗಳು ಇವೆಲ್ಲ ಕೂಡಿ ಮನುಷ್ಯನ ಸೂಕ್ಷ್ಮದೇಹ ಉಂಟಾಗುವದು. ಹೀಗೆ ಶಾಸ್ತ್ರಗಳು ಹೇಳುವವು. ೧] **ಅಂತಃಕರಣ ಪಂಚಕ**:- ಮನ, ಬುದ್ಧಿ, ಚಿತ್ತ, ಅಹಂಕಾರ, ಅಂತಃಕರಣ. ೨] **ಪ್ರಾಣ ಪಂಚಕ**:- ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ. ೩] **ವಿಷಯ ಪಂಚಕ**:- ಶಬ್ದ, ಸ್ಪರ್ಶ, ರೂಪ, ರಸ, ಗಂಧ ೪) **ಕರ್ಮೇಂದ್ರಿಯ ಪಂಚಕ**:- ಹಸ್ತ, ಪಾದ, ಗುದ, ಉಪಸ್ಥ. ವಾಣಿ, ೫] **ಜ್ಞಾನೇಂದ್ರಿಯ ಪಂಚಕ**:- ತ್ವಚೆ, ನೇತ್ರ, ನಾಲಿಗೆ, ಕರ್ಣ, ಮೂಗು ಒಟ್ಟುಗೂಡಿ ಇಪ್ಪತ್ತೈದು ತತ್ವಗಳು ಮನುಷ್ಯನ ಸೂಕ್ಷ್ಮ ಶರೀರವು ಇವುಗಳಿಂದ ಉಂಟಾಗುವದು. (೩೮) ಸ್ಥೂಲ ದೇಹದ ಬಗೆಗೆ ವಿಚಾರ ಪೂರ್ವಕ ಶೋಧಿಸಿ ನೋಡಿದ್ದಾದರೆ ಇದು ಪಂಚಭೂತಗಳಿಂದ ಕೂಡಿದ್ದಾಗಿದೆಯೆಂದು ಕಂಡು ಬರುವದು. ಸೂಕ್ಷ್ಮ ದೇಹದ ಬಗೆಗೆ ಶೋಧ ಮಾಡಿದ್ದಾದರೆ ಅಂತಃಕರಣ, ಮನ ಮತ್ತು ಬುದ್ಧಿ ಇವು ಆತ್ಮದಿಂದ ಬೇರೆ ಇರುವವೆಂಬ ಅನುಭವ ಬರುವದು. ನನ್ನಅಂತಃಕರಣ ನನ್ನ ಮನ, ನನ್ನ ಬುದ್ಧಿ ಎಂದು ನಾವು ಅನ್ನುವೆವು. ಅಂದರೆ ನಾನು ಅಂತಃಕರಣ, ಮನ ಮತ್ತು ಬುದ್ಧಿ ಅಲ್ಲ ನಾನು ಇವುಗಳಿಗಿಂತ ಬೇರೆ ಆಗಿರುವೆನು. ಅಂತಃಕರಣ, ಮನ, ಬುದ್ಧಿ ಇವು ಪಂಚಭೂತಗಳಿಂದ ನಿರ್ಮಾಣವಾಗಿರುವಂಥ ಉಪಾಧಿಗಳಿರುವವು. ಇವೆಲ್ಲವುಗಳಿಂದ ಆತ್ಮಾ (ಖರೇ ನಾನು) ಬೇರೆ ಇರುವದು. ಉಪಾಧಿ ಅಂದರೆ ಮೇಲೆ ಹೊದಿಸಿದ ಹೊದಿಕೆಯು, ಸ್ಥೂಲ ದೇಹವೇ ಇರಲಿ, ಅಥವಾ ಸೂಕ್ಷ್ಮದೇಹವೇ ಇರಲಿ ಇವೆರಡೂ ಆತ್ಮಸ್ವರೂಪದ ಮೇಲೆ ಹಾಕಿರುವ ಹೊದಿಕೆ (ಆಚ್ಛಾದನ) ಎಂದು ತಿಳಿಯಬೇಕು. ಇವುಗಳಿಗಿಂತ ಆತ್ಮಾ ಅಗದೀ ಬೇರೆಯೇ ಇರುವದು. (೩೯) ಸ್ಥೂಲ, ಸೂಕ್ಷ್ಮ, ಕಾರಣ, ಮತ್ತು ಮಹಾಕಾರಣ ಇವು ನಾಲ್ಕು ಪಿಂಡದೇಹವು ಮತ್ತು ವಿರಾಟ, ಹಿರಣ್ಯಗರ್ಭ, ಅವ್ಯಾಕೃತ, ಮತ್ತು ಮೂಲ ಪ್ರಕೃತಿ ಇವು ನಾಲ್ಕೂ ಬ್ರಹ್ಮಾಂಡದವು. ಅಂತೂ ಎಂಟು ದೇಹಗಳೆಂಬುದು ಪ್ರಸಿದ್ಧವೇ ಇರುವದು. (೪೦) ನಾಲ್ಕು ದೇಹಗಳು ಪಿಂಡದವು, ನಾಲ್ಕು ದೇಹಗಳು ಬ್ರಹ್ಮಾಂಡದವು, ಅಂತೂ ಎಂಟು ದೇಹಗಳೆಂಬುದು ಪ್ರಸಿದ್ಧವೇ ಇರುವದು. ಇದರಲ್ಲಿ ಪ್ರಕೃತಿ (ವೃತ್ತಿ) ಮತ್ತು ಪುರುಷ (ಸಾಕ್ಷಿ) ಇವೆರಡನ್ನು ಕೂಡಿಸಿದರೆ ಒಟ್ಟು ಹತ್ತು ದೇಹಗಳಾಗುವವು (೪೧)

ಐಸೇ ತತ್ವಾಂಚೇ ಲಕ್ಷಣ । ಆತ್ಮಾ ಸಾಕ್ಷೀ ವಿಲಕ್ಷಣ ।
ಕಾರ್ಯ ಕರ್ತಾ ಕಾರಣ । ದೃಶ್ಯ ತಯಾಚೇ ॥೪೨॥

ಜೀವಶಿವ ಪಿಂಡಬ್ರಹ್ಮಾಂಡ । ಮಾಯಾಅವಿದ್ಯೇಚೇ ಬಂಡ ।
ಹೇ ಸಾಂಗತಾ ಅಸೇ ಉದಂಡ। ಪರೀ ಆತ್ಮಾ ತೋ ವೇಗಳಾ ॥೪೩॥

ಪಾಹೋ ಜಾತಾ ಆತ್ಮೆ ಚ್ಯಾರೀ । ತ್ಯಾಂಚೇ ಲಕ್ಷಣ ಅವಧಾರೀ ।
ಹೇ ಜಾಣೋನಿ ಅಭ್ಯಾಂತರೀ । ಸದೃಢ ಧರಾವೇ ॥೪೪॥

ಐಕ ಜೀವಾತ್ಮಾ ದುಸರಾ ಶಿವಾತ್ಮಾ । ತಿಸರಾ ಪರಮಾತ್ಮಾ ಜೋ ವಿಶ್ವಾತ್ಮಾ।
ಚೌಥಾ ಜಾಣಿಜೆ ನಿರ್ಮಳಾತ್ಮಾ । ಐಸೆ ಚ್ಯಾರೀ ಆತ್ಮೆ ॥೪೫॥

ಭೇದ ಉಂಚ ನೀಚ ಭಾಸತೀ । ಪರೀ ಚ್ಯಾರೀ ಯೇಕ ಚಿ ಅಸತೀ ।
ಯೇವಿಷೀ ದೃಷ್ಟಾಂತ ಸಂಮತೀ । ಸಾವಧ ಐಕಾ ॥೪೬॥

ಘಟಾಕಾಶ ಮಠಾಕಾಶ । ಮಹದಾಕಾಶ ಚಿದಾಕಾಶ ।
ಅವಘೇ ಮಿಳೋನ ಆಕಾಶ । ಯೇಕ ಚಿ ಅಸೇ ॥೪೭॥

ತೈಸಾ ಜೀವಾತ್ಮಾ ಆಣೀ ಶಿವಾತ್ಮಾ । ಪರಮಾತ್ಮಾ ಆಣೀ ನಿರ್ಮಳಾತ್ಮಾ ।
ಅವಘಾ ಮಿಳೋನ ಆತ್ಮಾ । ಯೇಕ ಚಿ ಅಸೆ ॥೪೮॥

ಘಟೀ ವ್ಯಾಪಕ ಜೇ ಆಕಾಶ । ತಯಾ ನಾವ ಘಟಾಕಾಶ ।
ಪಿಂಡೀ ವ್ಯಾಪಕ ಬ್ರಹ್ಮಾಂಶ । ತ್ಯಾಸ ಜೀವಾತ್ಮಾ ಬೋಲಿಜೆ ॥೪೯॥

ಮಠೀ ವ್ಯಾಪಕ ಜೇ ಆಕಾಶ । ತಯಾ ನಾವ ಮಠಾಕಾಶ ।
ತೈಸಾ ಬ್ರಹ್ಮಾಂಡೀ ಜೊ ಬ್ರಹ್ಮಾಂಶ । ತ್ಯಾಸ ಶಿವಾತ್ಮಾ ಬೋಲಿಜೆ ॥೫೦॥

ಮಠಾಬಾಹೇರೀಲ ಆಕಾಶ । ತಯಾ ನಾವ ಮಹದಾಕಾಶ ।
ಬ್ರಹ್ಮಾಂಡಾಬಾಹೇರೀಲ ಬ್ರಹ್ಮಾಂಶ । ತ್ಯಾಸ ಪರಮಾತ್ಮಾ ಬೋಲಿಜೆ ॥೫೧॥

ಉಪಾಧೀವೇಗಳೇ ಆಕಾಶ । ತಯಾ ನಾವ ಚಿದಾಕಾಶ ।
ತೈಸಾ ನಿರ್ಮಳಾತ್ಮಾ ಪರೇಶ । ತೋ ಉಪಾಧೀವೇಗಳಾ ॥೫೨॥

ಉಪಾಧೀಯೋಗೇ ವಾಟೆ ಭಿನ್ನ । ಪರೀ ತೇ ಆಕಾಶ ಅಭಿನ್ನ ।
ತೈಸಾ ಆತ್ಮಾ ಸ್ವಾನಂದಘನ । ಯೇಕ ಚಿ ಅಸೆ ॥೫೩॥

ಪಿಂಡ ಬ್ರಹ್ಮಾಂಡದ ತತ್ವಗಳ ವಿವರಣೆ ಈ ಪ್ರಕಾರವಾಗಿ ಇರುವದು. ಈ ಎಲ್ಲ ತತ್ವಗಳಿಂದ ಆತ್ಮಾ ಅಗದೀ ಬೇರೆ ಇರುವದು. ಇವನ ಲಕ್ಷಣಗಳೂ ಅಗದೀ ಬೇರೆಯೇ ಇರುವವು. ಆತ್ಮಾ ಸರ್ವದರ ಸಾಕ್ಷೀ ಇದ್ದು ಕಾರ್ಯ, ಕರ್ತಾ ಮತ್ತು ಕಾರಣ ಈ ಎಲ್ಲವನ್ನೂ ಇವನು(ಆತ್ಮನು)ಬೇರೆತನದಿಂದ ನೋಡುವನು, ಆತ್ಮನ ಮೇಲೆ ದೇಹದ ಹೊದಿಕೆ (ಆಚ್ಛಾದನ) ಇದ್ದರೂ ಸಹ ಇವನು ದೃಶ್ಯದ ಗುಲಾಮನೆಂದಿಗೂ ಆಗುವದಿಲ್ಲ. ಇವನ ಸ್ವಾತಂತ್ರ್ಯ ಮತ್ತು ಬೇರೆತನ [ಪ್ರತ್ಯೇಕತನ] ಕಾಯಂ ಇರುವದು. ಅಲ್ಲದೆ ಆತ್ಮನು ಮೂಲದಲ್ಲಿಯೇ ಸ್ವಪ್ರಕಾಶ ಇದ್ದುದರಿಂದ ಇವನು ಸ್ಥೂಲ ಮತ್ತು ಸೂಕ್ಷ್ಮ ದೇಹಗಳಿಗೆ ಪ್ರೇರಕನಿರುವನು. ರಾಜನು ಕೇವಲ ಸಿಂಹಾಸನದ ಮೇಲೆ ಕುಳಿತ ಕೂಡಲೇ ಪ್ರಜೆಗಳ ಅನೇಕ ಕಾರ್ಯಕಾರಣಗಳ ವ್ಯಾಪಾರವು ತನ್ನಷ್ಟಕ್ಕೆ ತಾನೇ ನಡೆಯುವದು. ಇದರಂತೆಯೇಆತ್ಮನು ಸಾಕ್ಷಿ ಇರುವದರಿಂದ ಆತ್ಮಸ್ವರೂಪದ ಪ್ರಕಾಶದಲ್ಲಿ [ಆತ್ಮಾ ಕರ್ತಾ ಅಲ್ಲದಿದ್ದರೂ] ಮನ, ಬುದ್ಧಿ ಮತ್ತು ಇಂದ್ರಿಯಗಳ ವ್ಯಾಪಾರವು ತನ್ನಷ್ಟಕ್ಕೆ ತಾನೇ ನಡೆಯುಹತ್ತುವವು. (೪೨) ಜೀವ ಮತ್ತು ಶಿವ, ಪಿಂಡ ಮತ್ತು ಬ್ರಹ್ಮಾಂಡ, ಮಾಯಾ ಮತ್ತು ಅವಿದ್ಯಾ ಇವುಗಳ ಪ್ರಸಾರ [ಹರಡುವಿಕೆ] ಅಥವಾ ವಿಸ್ತಾರವು ಅತಿಶಯ ಗುಂತಾಗುಂತಿಯದು. ತೊಡಕಿನದು. ಮತ್ತು ಪ್ರಚಂಡ ಪ್ರಮಾಣದ್ದಾಗಿರುವದು. ಇದನ್ನೆಲ್ಲ ಹೇಳುವದು ಕಠಿಣವಿರುವದು. ಆದರೆ ಈ ಎಲ್ಲವು ವಿಸ್ತಾರಗಳ ಗದ್ದಲದಿಂದ ಆತ್ಮನು ಮಾತ್ರ ಸಂಪೂರ್ಣ [ಅಗದೀ]ಬೇರೆ ಇರುವನು. ಅಲಿಪ್ತನಿರುವನು.[೪೩] ಕೇವಲ ಆತ್ಮದ ಬಗ್ಗೆಯೇ ವಿಚಾರ ಮಾಡಿದರೆ ಆತ್ಮಗಳು ನಾಲ್ಕು ಇರುವವು. ಇವುಗಳ ಲಕ್ಷಣಗಳನ್ನು ಹೇಳುವೆನು. ಲಕ್ಷ್ಯಪೂರ್ವಕ ಕೇಳಿರಿ. ಮತ್ತು ಮನದಲ್ಲಿ ಸ್ಥಿರಪಡಿಸಿಕೊಳ್ಳಿರಿ [೪೪] [ಒಂದು] ಜೀವಾತ್ಮಾ [ಎರಡು] ಶಿವಾತ್ಮಾ [ಮೂರು] ಪರಮಾತ್ಮ ಇವನಿಗೆ ವಿಶ್ವಾತ್ಮನೆಂದೂ ಅನ್ನುವರು [ನಾಲ್ಕು] ನಿರ್ಮಲಾತ್ಮಾ ಎಂದು ಒಟ್ಟು ನಾಲ್ಕು ಆತ್ಮಗಳು ಇರುವವು. [೪೫] ಈ ನಾಲ್ಕು ಆತ್ಮಗಳಲ್ಲಿ ಉಚ್ಚ-ನೀಚ, ಅಥವಾ ಶ್ರೇಷ್ಠ-ಕನಿಷ್ಠ ಅನ್ನುವ ಭೇದ ಇರುವಂತೆ ಭಾಸವಾಗುವದು. ಆದರೆ ಇದು ಸರಿಯುಲ್ಲ. ಯಾಕಂದರೆ ಮೂಲದಲ್ಲಿ ನಾಲ್ಕೂ ಆತ್ಮಗಳೂ ಒಂದೇ ಇರುವವು. ಇವಕ್ಕೆ ಒಂದು ದೃಷ್ಟಾಂತ ಕೊಟ್ಟು ಈ ವಿಷಯದ ಬಗೆಗೆ ತಿಳಿಸಿಕೊಡುವೆನು, ಸರಿಯಾಗಿ ಕೇಳಿರಿ [೪೬] ಆಕಾಶದಲ್ಲಿ ನಾಲ್ಕು ಪ್ರಕಾರಗಳಿರುವವು. ೧] ಘಟಾಕಾಶ, ೨] ಮಠಾಕಾಶ, ೩] ಮಹದಾಕಾಶ, ೪] ಮತ್ತು ಚಿದಾಕಾಶ, ನೋಡಲಿಕ್ಕೆ ಹೀಗೆ ನಾಲ್ಕು ಪ್ರಕಾರಗಳು ಕಂಡರೂ ಕೊನೆಗೆ ಮೂಲ ಆಕಾಶವೆಂಬುದು ಒಂದೇ ಒಂದು ಇರುವದು. [೪೭] ಇದೇ ಪ್ರಕಾರ ಜೀವಾತ್ಮಾ, ಶಿವಾತ್ಮಾ, ಪರಮಾತ್ಮಾ, ಮತ್ತು ನಿರ್ಮಲಾತ್ಮಾ ಇವು ನೋಡಲಿಕ್ಕೆ ನಾಲ್ಕು ಕಂಡರೂ ಕೊನೆಯಲ್ಲಿ ಎಲ್ಲವೂ ಕೂಡಿ ಒಂದೇ ಒಂದು ಆತ್ಮಾ ಇರುವದು. [೪೮] ಘಟದಲ್ಲಿ ವ್ಯಾಪಿಸಿದ ಆಕಾಶವು ಘಟಾಕಾಶವೆನಿಸುವದು. ಇದರಂತೆ ಪಿಂಡಕ್ಕೆ ವ್ಯಾಪಿಸಿ ಇರುವಂಥ ಪರಬ್ರಹ್ಮನಿಗೆ ಜೀವಾತ್ಮಾ ಅನ್ನುವರು. [೪೯] ಮಠವನ್ನು ವ್ಯಾಪಿಸಿ ಇರುವಂಥ ಆಕಾಶವು ಮಠಾಕಾಶವೆನಿಸುವದು. ಇದರಂತೆ ವಿಶ್ವವನ್ನು ವ್ಯಾಪಿಸಿ ಇರುವಂಥ ಪರಬ್ರಹ್ಮನಿಗೆ ಶಿವಾತ್ಮಾ ಅನ್ನುವರು. [೫೦] ಮಠದ ಹೊರಗಿರುವ ಆಕಾಶಕ್ಕೆ ಮಹದಾಕಾಶ ಅನ್ನುವರು. ಇದರಂತೆ ವಿಶ್ವದ ಹೊರಗಿರುವ ಪರಬ್ರಹ್ಮಕ್ಕೆ ಪರಮಾತ್ಮಾ ಅನ್ನುವರು. [೫೧] ಯಾವುದೇ ಉಪಾಧಿ ಅಂದರೆ ಮರ್ಯಾದಾ [ಅಳತೆ] ಇಲ್ಲದಂಥ ಆಕಾಶವು ಚದಾಕಾಶವೆನಿಸುವದು. ಇದರಂತೆಯೇ ಯಾವುದೇ ಉಪಾಧಿಯಿಂದ ಬೇರೆಯಾಗಿರುವಂಥ ಪರಬ್ರಹ್ಮನಿಗೆ ನಿರ್ಮಲಾತ್ಮಾ ಅಥವಾ ಪರಮೇಶ್ವರ ಅನ್ನುವರು. [೫೨] ಘಟ ಅಥವಾ ಮಠ ಇವುಗಳ ಉಪಾಧಿಯ ಯೋಗದಿಂದ ಆಕಾಶವು ಭೇದಯುಕ್ತವಾಗಿ ಭಾಸವಾದರೂ ಸಹ ಅದು ಮೂಲದಲ್ಲಿ ಅಭೇದವೇ ಇರುವದು. ಇದರಂತೆಯೇ ಸ್ವಾನಂದದಿಂದ ಒಳಗೂ ಹೊರಗೂ ತುಂಬಿಕೊಂಡಿರುವಂಥ ಆತ್ಮಾ ಇದು ಪಿಂಡಮತ್ತು ಬ್ರಹ್ಮಾಂಡ ಇವುಗಳ ಉಪಾಧಿಯಿಂದ ಸಣ್ಣದು, ದೊಡ್ಡದು ಅಂತಾ ಭಾಸವಾಗುವದು. ಆದರೂ ಇದು ಮೂಲದಲ್ಲಿ ಒಂದೇ ಒಂದು ಇರುವದು. ಇದರಲ್ಲಿ ಭೇದದ ಪ್ರಶ್ನೆಯೇ ಇರುವದಿಲ್ಲ. [೫೩]

ದೃಶ್ಯಾ ಸಬಾಹ್ಯ ಅಂತರೀ । ಸೂಕ್ಷ್ಮಾತ್ಮಾ ನಿರಂತರೀ ।
ತ್ಯಾಚೀ ವರ್ಣಾವಯಾ ಥೋರೀ । ಶೇಷ ಸಮರ್ಥ ನವ್ಹೇ ॥೫೪॥
ಐಸೇ ಆತ್ಮ್ಯಾಚೇ ಲಕ್ಷಣ । ಜಾಣತಾ ನಾಹೀ ಜೀವಪಣ ।
ಉಪಾಧೀ ಶೋಧಿತಾ ಅಭಿನ್ನ । ಮುಳೀ ಚ ಆಹೇ ॥೫೫॥
ಜೀವ ಪಣೇ ಯೇಕ ದೇಸೀ । ಅಹಂಕಾರೇ ಜನ್ಮ ಸೋಸೀ ।
ವಿವೇಕ ಪಾಹಾತಾ ಪ್ರಾಣಿಯಾಸೀ । ಜನ್ಮ ಕೈಚಾ ॥೫೬॥
ಜನ್ಮಮೃತ್ಯಾಪಾಸೂನ ಸುಟಲಾ । ಯಾ ನಾವ ಜಾಣಿಜೆ ಮೋಕ್ಷಜಾಲಾ ।
ತತ್ವೇ ಶೋಧಿತಾ ಪಾವಲಾ । ತತ್ವತಾ ವಸ್ತು ॥೫೭॥
ತೇ ಚಿ ವಸ್ತು ತೇ ಆಪಣ। ಹೇ ಮಹಾವಾಕ್ಯಾಚೇ ಲಕ್ಷಣ ।
ಸಾಧು ಕರಿತೀ ನಿರೂಪಣ । ಆಪುಲೇನ ಮುಖೇ ॥೫೮॥
ಜೇ ಚಿ ಕ್ಷಣೇ ಅನುಗ್ರಹ ಕೇಲಾ । ತೇ ಚಿ ಕ್ಷಣೇ ಮೋಕ್ಷ ಜಾಲಾ ।
ಬಂಧನ ಕಾಹೀ ಆತ್ಮಯಾಲಾ । ಬೋಲೋ ಚಿ ನಯೆ ॥೫೯॥
ಆತಾ ಆಶಂಕಾ ಫಿಟಲೀ । ಸಂದೇಹ ವೃತ್ತೀ ಮಾವಳಲೀ ।
ಸಂತಸಂಗೇ ತತ್ಕಾಳ ಜಾಲೀ । ಮೋಕ್ಷ ಪದವೀ ॥೬೦॥
ಸ್ವಪ್ನಾಮಧೇ ಜೋ ಬಾಂಧಲಾ । ತೋ ಜಾಗ್ರತೀನೇ ಮೋಕಳಾ ಕೇಲಾ ।
ಜ್ಞಾನ ವಿವೇಕೇ ಪ್ರಾಣಿಯಾಲಾ । ಮೋಕ್ಷಪ್ರಾಪ್ತೀ ॥೬೧॥
ಅಜ್ಞಾನನಿಸೀಚಾ ಅಂತೀ । ಸಂಕಲ್ಪದುಃಖೇ ನಾಸತೀ ।
ತೇಣೇ ಗುಣೇ ಹೋಯೆ ಪ್ರಾಪ್ತೀ । ತತ್ಕಾಳ ಮೋಕ್ಷಾಚೀ ॥೬೨॥
ತೋಡಾವಯಾ ಸ್ವಪ್ನಬಂಧನ । ನಲಗೆ ಆಣೀಕ ಸಾಧನ ।
ತಯಾಸ ಪ್ರೇತ್ನ ಜಾಗೃತೀವೀಣ । ಬೋಲೋಚಿ ನಯೆ ॥೬೩॥
ತೈಸಾ ಸಂಕಲ್ಪೇ ಬಾಂಧಲಾ ಜೀವ । ತ್ಯಾಸ ಆಣೀಕ ನಾಹೀ ಉಪಾವ ।
ವಿವೇಕ ಪಾಹಾತಾ ವಾವ । ಬಂಧನ ಹೋಯೆ ॥೬೪॥
ವಿವೇಕ ಪಾಹಿಲ್ಯಾವಿಣ । ಜೋ ಜೋ ಉಪಾವ ತೋ ತೋ ಸೀಣ ।
ವಿವೇಕ ಪಾಹಾತಾ ಆಪಣ । ಆತ್ಮಾ ಚ ಅಸೆ ॥೬೫॥
ಆತ್ಮಯಾಚಾ ಠಾಈ ಕಾಹೀ । ಬದ್ಧ ಮೋಕ್ಷ ದೋನೀ ನಾಹೀ ।
ಜನ್ಮಮೃತ್ಯ ಹೇ ಸರ್ವಹೀ । ಆತ್ಮತ್ವೀ ನ ಘಡೆ ॥೬೬॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
"ಮೋಕ್ಷ ಲಕ್ಷಣ" ನಾಮ ಸಮಾಸ ಸಪ್ತಮ ॥

ಆತ್ಮಾ ಅತ್ಯಂತ ಸೂಕ್ಷ್ಮವಿರುವದು. ಮತ್ತು ಅದು ಎಲ್ಲವನ್ನೂ ವ್ಯಾಪಿಸಿಯೂ ಶಿಲುಕಿ ಉಳಿಯುತ್ತದೆ. ಅಂತೆಯೇ ಈ ದೃಶ್ಯ ವಿಶ್ವದಲ್ಲಿಯ ಪ್ರತಿಯೊಂದು ವಸ್ತುವಿಗೆ ಆತ್ಮಾ ಒಳಗೂ ಹೊರಗೂ ನಿರಂತರವಾಗಿ ವ್ಯಾಪಿಸಿ ಇರುವದು. ಇದರ ಮಹಿಮೆಯನ್ನು ವರ್ಣಿಸುವ ಸಾಮರ್ಥ್ಯವು ಪ್ರತ್ಯಕ್ಷ ಆದಿಶೇಷನಿಗೂ ಇರುವದಿಲ್ಲ[೫೪] ಆತ್ಮಾ ಅತ್ಯಂತ ಸೂಕ್ಷ್ಮ ಮತ್ತು ಸರ್ವವನ್ನು ಹೇಗೆ ವ್ಯಾಪಿಸಿರುವದೆಂಬುದು ಯಾರ ಅನುಭವಕ್ಕೆ ಬಂದಿರುವದೋ ಅವರ ಜೀವತನ [ಜೀವಭಾವ]ದಲ್ಲಿ ಬಾಕಿ ಉಳಿಯುವದಿಲ್ಲ. ಮತ್ತು ಅವರ ಜೀವಭಾವವು ಇಲ್ಲದಂತಾಗಿಬಿಡುವದು. ಉಪಾಧಿಯನ್ನು ತಿಳಿದು ಅದನ್ನು ಒಂದು ಕಡೆಗೆ ಸರಿಸಿಬಿಟ್ಟರೆ ಆಗ ಮೂಲದಲ್ಲಿ ಭೇದರಹಿತವಾಗಿರುವದರ ಪ್ರತ್ಯಕ್ಷ ಜ್ಞಾನವಾಗುವದು. [೫೫] ಮನುಷ್ಯನು ಜೀವ ಭಾವದಿಂದ ಜೀವತನ ಸ್ವೀಕರಿಸಿದ್ದರಿಂದ ಏಕಾಂಗಿ [ಏಕದೇಶಿ] ಆಗುವನು. ಸಂಕುಚಿತವಾಗುವನು. ನಾನು ದೇಹ ಇರುವೆ ಅನ್ನುವ ಅಹಂಕಾರದಿಂದ ದೇಹಾಭಿಮಾನ ಉಂಟಾಗಿ ಅವನಿಗೆ ಜನ್ಮ ತಳೆಯುವ [ಹೊಂದುವ] ಕಷ್ಟ ಬರುವದು. ಆದರೆ ಆತ್ಮಾನಾತ್ಮ ವಿವೇಕದಿಂದ ತಿಳಿದು ನೋಡಿದರೆ ನಾನು ದೇಹವಿರದೆ ಕೇವಲ ಆತ್ಮನೇ ಇರುವೆನೆಂಬ ಖಾತ್ರಿಯಾಗುವದು. ಆತ್ಮ ನಿಶ್ಚಯ ಆದ ಕೂಡಲೇ ಅವನಿಗೆ ಪುನಃ ಜನ್ಮ ತಳೆಯಬೇಕಾಗುವದಿಲ್ಲ. [೫೬] ಜನ್ಮ ಮತ್ತು ಮರಣ ಇವುಗಳ ಹಿಡಿತದಿಂದ ಯಾರು ಬಿಡುಗಡೆ ಹೊಂದುವರೋ ಅವರಿಗೆ ಮೋಕ್ಷ ದೊರಕಿತೆಂದೇ ತಿಳಿಯಬೇಕು. ತತ್ವದ ಶೋಧ ಮಾಡ ಮಾಡುತ್ತ ಹೋದರೆ ಮನುಷ್ಯನಿಗೆ ಸದ್ವಸ್ತುವಿನ ಅಂದರೆ ಬ್ರಹ್ಮದ ಅನುಭವ ಆಗುವದು. [೫೭] ನಾವು ಸ್ವತಃ ಪ್ರತ್ಯಕ್ಷ ಪರಬ್ರಹ್ಮವೇ ಇರುವೆವು. ಹೀಗೆ ಮಹಾ ವಾಕ್ಯದ ನಿಜವಾದ ಅರ್ಥವಿರುವದು. ಸಂತ ಸಾಧು ಪುರುಷರು ಈ ಅರ್ಥವನ್ನು ತಮ್ಮ ಮುಖದಿಂದ ತಿಳಿಸಿಕೊಡುವರು. [೫೮] ಯಾವ ಕ್ಷಣದಲ್ಲಿ ಸಾಧು-ಸಂತರ ಗುರುವಿನ ಕೃಪೆ ಆಗುವದೋ ಅದೇ ಕ್ಷಣದಲ್ಲಿ ತಾನು ಸಾಕ್ಷಾತ್ ಬ್ರಹ್ಮವೇ ಇರುವೆನು. ಅನ್ನುವ ಅನುಭವ ಸಾಧಕನಿಗೆ ಬರುವದು. ಮತ್ತು ಅದೇ ಕ್ಷಣದಲ್ಲಿ ಸಾಧಕನು ಮುಕ್ತನಾಗುವನು. ಆತ್ಮ ಸ್ವರೂಪಕ್ಕೆ ಕೆಲವು ಬಂಧನಗಳಿರುವವೆಂಬ ಮಾತು ನಿಜವಲ್ಲ. [೫೯] ಈ ಎಲ್ಲ ವಿವೇಚನೆಯನ್ನು ಕೇಳಿ ಶ್ರೋತಾನ ಶಂಕಾ ನಿವಾರಣಗೊಂಡಿತು. ಅವನ ಮನದಲ್ಲಿಯ ಎಲ್ಲ ಸಂದೇಹಗಳ ನಿವಾರಣೆಯಾಯಿತು. ಸಾಧು ಸಂತರ ಸಂಗದಿಂದ ಮೋಕ್ಷ ಪದವಿ ಹೇಗೆ ತತ್ಕಾಲವಲ್ಲಿ ದೊರಕುವದು ಇದೂ ಸಹ ತಿಳಿಯಿತು. [೬೦] ಒಬ್ಬ ಮನುಷ್ಯನಿಗೆ ಒಂದು ಸ್ವಪ್ನ ಬಿದ್ದಿತು. ಅದರಲ್ಲಿ ತಾನು ಬಂಧನದಲ್ಲಿ ಇರುವೆನು ಎಂದು ಭಾಸವಾಯಿತು. ಆಗ ಅವನನ್ನು ಎಚ್ಚರಗೊಳಿಸಿದ ಕೂಡಲೇ ಅವನ ಬಂಧನ ಇಲ್ಲದಂತಾಗಿ ಅವನು ಖುಲ್ಲಾ, ಮೋಕಳೀಕ ಆದನು. ಇದರಂತೆಯೇ ಜ್ಞಾನಪೂರ್ವಕ ವಿವೇಕದಿಂದ ಮನುಷ್ಯನ ದೇಹಬುದ್ಧಿ ಇಲ್ಲದಾಗುತ್ತದೆ. ಮತ್ತು ಅವನಿಗೆ ಮೋಕ್ಷ ಪ್ರಾಪ್ತಿಯಾಗುವದು. [೬೧] ಅಜ್ಞಾನ ರೂಪದ ರಾತ್ರಿ ಮುಗಿದ ಕೂಡಲೇ ಮನುಷ್ಯನ ಸಂಕಲ್ಪ-ದುಃಖಗಳು ಇಲ್ಲದಾಗಿ ಬಿಡುವವು. ಸಂಕಲ್ಪ ಇಲ್ಲದಂತಾದ ಕೂಡಲೇ ಇದರ ಯೋಗದಿಂದ ಅವನಿಗೆ ತಾಬಡ ತೋಬಡ [ಕೂಡಲೇ] ಮೋಕ್ಷ ಪ್ರಾಪ್ತಿಯಾಗುವದು. [೬೨] ಸ್ವಪ್ನದಲ್ಲಿಯ ಬಂಧನವನ್ನು ಹರಿದು [ತುಂಡರಿಸಿ] ಹಾಕಲು ಎರಡನೇ ಯಾವ ಸಾಧನವೂ ಬೇಕಾಗುವದಿಲ್ಲ. ಕೇವಲ ಅವನನ್ನು ಎಚ್ಚರಗೊಳಿಸಬೇಕು. ಆದ್ದರಿಂದ ಸಾಧಕನು ಎಚ್ಚರಗೊಳ್ಳುವ ಪ್ರಯತ್ನ ಮಾಡಬೇಕು. ಸಾವಧರಾಗಬೇಕು. ಎರಡನೇ ಯಾವ ಸಾಧನದ ವಿಚಾರವನ್ನು ಮಾಡುವ ಕಾರಣವಿಲ್ಲ. [೬೩] ಜೀವವು ಕೇವಲ ಸಂಕಲ್ಪದಿಂದ ಬಂಧಿತನಾಗಿರುವನು. ಸಂಕಲ್ಪದ ಬಂಧನ ಬಿಡುಗಡೆಯಾಗಲು ಎರಡನೆಯ ಉಪಾಯವೇ ಇಲ್ಲ. ಆತ್ಮಾನಾತ್ಮ ವಿವೇಕ ಮಾಡಿದ್ದಾದರೆ ಈ ಸಂಕಲ್ಪ ಬಂಧನವು ತನ್ನಷ್ಟಕ್ಕೆ ತಾನೇ ಇಲ್ಲದಾಗಿ ಬಿಡುತ್ತದೆ. [೬೪] ವಿವೇಕವಿಲ್ಲದೇ [ವಿವೇಕದ ಹೊರತಾಗಿ] ಇತರ ಎಲ್ಲ ಉಪಾಯಗಳು ವ್ಯರ್ಥ ಇರುವವು. ಏನೂ ಸಾಧಿಸದೇ ವ್ಯರ್ಥ ಶ್ರಮ ಮಾತ್ರ ಆಗುವದು. ವಿವೇಕ ಒಂದೇ ಅಗದೀ ನಿಜವಾದ ಉಪಾಯ ಇರುವದು. ವಿವೇಕ ಮಾಡಿದರೆ-ತಾನು ಸ್ವತಃ ಆತ್ಮಸ್ವರೂಪವೇ ಇರುವೆ ಅನ್ನುವ ಪ್ರತ್ಯಕ್ಷ ಅನುಭವ ತನಗೇ ಬರುವದು. [೬೫] ಆತ್ಮಸ್ವರೂಪದ ಸ್ಥಳದಲ್ಲಿ ಬಂಧನವೂ ಇಲ್ಲ ಮತ್ತು ಮೋಕ್ಷವೂ ಇಲ್ಲ. ಜನ್ಮ ಮತ್ತು ಮರಣ ಇವು ದೇಹಕ್ಕೆ ಇರುವವು. ಆತ್ಮನಿಗೆ ಜನ್ಮವೂ ಇಲ್ಲ ಮತ್ತು ಮರಣವೂ ಸಹ ಇಲ್ಲ. [೬೬]

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಎಂಟನೆಯ ದಶಕದಲ್ಲಿಯ
"ಮೋಕ್ಷ ಲಕ್ಷಣ"ವೆಂಬ ಏಳನೆಯ ಸಮಾಸವು ಮುಗಿದುದು.

## ದಶಕ ೭. ಸಮಾಸ ೭. ಆತ್ಮ ದರ್ಶನ (ನುಡಿ ೭೦)

ಸಂತರ ಸಾನಿಧ್ಯದಲ್ಲಿ ಇದ್ದಾಗ ಅನೇಕ ವಿಷಯಗಳು ತಿಳಿಯುವವು. ಇವುಗಳಲ್ಲಿ ಪರಮಾರ್ಥಕ್ಕೆ ಸಂಬಂಧಿಸಿದವುಗಳನ್ನು ಅದರಲ್ಲಿಯೂ ಅತ್ಯವಶ್ಯಕವಾದವುಗಳು ಮತ್ತು ಪಾಯಾಭೂತ ಇದ್ದಂಥವುಗಳನ್ನು ಸಾಧಕನು ಆರಿಸಿ ತೆಗೆಯಬೇಕು. ಅದನ್ನು ಪುನಃ ಲಕ್ಷ್ಯದಲ್ಲಿ ತಂದು ಅರಗಿಸಿಕೊಳ್ಳಬೇಕು. "ಸ್ವಾನಂದಘನಆತ್ಮಾ ನಾನೇ ಇರುವೆನು." "ಆ ಪರಬ್ರಹ್ಮವೇ ನಾನಿರುವೆನು" ಸಂತರ ಈ ವಚನಗಳನ್ನು ಅಗದೀ ದೃಢತೆಯಿಂದ ಲಕ್ಷ್ಯದಲ್ಲಿಟ್ಟುಕೊಳ್ಳಬೇಕು. ನಾನು ಮೂಲ ಪರಮಾತ್ಮ ಸ್ವರೂಪೇ ಇರುವೆನೆಂಬುವ ಈ ಗೂಢ ರಹಸ್ಯವು ಸತ್ಸಮಾಗಮದಲ್ಲಿ

ಇದ್ದಾಗ ನಮಗೆ ತಿಳಿಯುವದು. ಆ ಪರಮಾತ್ಮನು ಶಾಶ್ವತನಿರುವನು. ನಿರಾಕಾರನಿರುವನು. ಮತ್ತು ಅನಂತ ಅಪಾರನಿರುವನು, ವ್ಯಾಪಕನಿರುವನು. ಮತ್ತು ಅನೇಕದಲ್ಲಿ ಏಕತನದಿಂದ ತುಂಬಿ (ವ್ಯಾಪಿಸಿ) ಇರುವನು. ಇಂಥ ಪರಮಾತ್ಮ ಸ್ವರೂಪದ ಜ್ಞಾನ ಮಾಡಿಕೊಳ್ಳಬೇಕು. ನಾನು ಅವನೇ ಇರುವೆನು· ಇದರ ಪ್ರತ್ಯಕ್ಷ ಅನುಭವ ಪಡೆಯುವದೇ ಪರಮಾರ್ಥದ ಪ್ರಾಣ ಇರುವದು· ಮೂಲದಲ್ಲಿ ನಾವು ಪರಮಾತ್ಮ ಸ್ವರೂಪವೇ ಇದ್ದರೂ ಸಹ ನಮಗೆ ಆ ಪರಮಾತ್ಮನ ನೆನಪು ಮರೆತು ಹೋಗಿದೆ. ಇಂದು ನಾವು ದೇಹ ರೂಪವೇ ಆಗಿ ಬಿಟ್ಟಿರುವೆವು· ಇದರ ಪರಿಣಾಮ ಹೇಗೆ ಕಂಡು ಬರುವದೆಂದರೆ ನಮ್ಮಲ್ಲಿ ಒಂದು ಖರೇ, ಒಂದು ಖೊಟ್ಟಿ ಅನ್ನುವ ಎರಡು "ನಾನು" ಕೆಲಸ ಮಾಡುವವು. (ನಮ್ಮ ಸುತ್ತು ಮುತ್ತು ಸುತ್ತಾಡುವವು). ಇವುಗಳ ಪೈಕಿ ದೇಹ ಬುದ್ಧಿಯಿಂದ ಬೆಳೆದ ಖೊಟ್ಟಿ ನಾನು ಇದು ಸರ್ವಸ್ವೀ (ನಾಶ) ಇಲ್ಲದಂತೆ ಆಗದ ಹೊರತು ಆತ್ಮ ಬುದ್ಧಿಯ ಖರೆ ನಾನು ಇದು ತನ್ನ ನಿಜವಾದ ಪೂರ್ಣ ಐಶ್ವರ್ಯದಿಂದ ಪ್ರಕಟವಾಗುವದಿಲ್ಲ. ಖೊಟ್ಟಿ ನಾನು ಇಲ್ಲದಂತೆ ಆಗಬೇಕಾದರೆ ಮನುಷ್ಯನು ಭಗವಂತನ ಚರಣ ಕಮಲದಲ್ಲಿ ಶರಣಾಗತನಾಗುವದೇ ಸರ್ವೋತ್ತಮ ಉಪಾಯವಾಗಿದೆ. ಇದಕ್ಕೇನೇ ಆತ್ಮನಿವೇದನ ಭಕ್ತಿ ಅನ್ನುವರು. ಆತ್ಮ ನಿವೇದನದಿಂದ ಖೊಟ್ಟಿ "ನಾನು" ಎನ್ನುವದು ನಾಶವಾಗಿ ಸತ್ಯ ಖರೇ ಎನ್ನುವ"ನಾನು" ಪ್ರಕಟವಾಗುವದು. ಖರೇ ನಾನು ಪ್ರಕಟವಾದ ಮೇಲೆ ಪರಮಾತ್ಮ ಸ್ವರೂಪದ ಜ್ಞಾನವಾಗಲಿಕ್ಕೆ ತಡವಾಗುವದಿಲ್ಲ. ದೇವರನ್ನು ನೋಡುವದಕ್ಕೆ ಹೋಗುವ ಸಾಧಕನು ಈ ರೀತಿಯಿಂದ ದೇವ ಸ್ವರೂಪವೇ ಆಗುವನು· ಆ ಮೇಲೆ ದೇವರಿಂದ ಅವನನ್ನು ಪ್ರತ್ಯೇಕಗೊಳಿಸಬೇಕೆಂದರೆ (ಬೇರ್ಪಡಿಸಬೇಕೆಂದರೆ) ಆಗುವದಿಲ್ಲ. "ಸ್ವಾನಂದಘನಆತ್ಮಾ ನಾನೇ ಇರುವೆನು" ಈ ಸಂತ ವಚನವನ್ನು ಮನದಲ್ಲಿ ಸಂಪೂರ್ಣವಾಗಿ ಬಿಂಬಿಸಿಕೊಳ್ಳಬೇಕು, ಸತತ ಸಾಧನೆಯಲ್ಲಿ ನಿರತರಾಗಿರಬೇಕು. ಮತ್ತು ಸ್ಥೂಲ, ಸೂಕ್ಷ್ಮ, ಕಾರಣ, ಮಹಾಕಾರಣ ಈ ನಾಲ್ಕು ದೇಹಗಳನ್ನು ಸಾಧನದ ಬಲದಿಂದ ಲೋಪ ಮಾಡಿ ಬಿಡಬೇಕು. ಶಾಸ್ತ್ರಪ್ರಚೀತಿ, ಗುರುಪ್ರಚೀತಿ. ಮತ್ತು ಆತ್ಮಪ್ರಚೀತಿ ಈ ಮೂರು ಪ್ರಚೀತಿಗಳು ಕೊನೆಯಲ್ಲಿದಾಗಿ ಒಂದೇ ಹೇಗೆ ಇರುವವು. ಅನ್ನುವದನ್ನು ಸ್ವತಃದ ಅನುಭವದಿಂದ ತಿಳಿಯಬೇಕು. (ಗುರುತಿಸಬೇಕು). ಕೊನೆಗೆ ಆತ್ಮಜ್ಞಾನದ ಸಾಮರ್ಥ್ಯದಿಂದ ದೇಹದಲ್ಲಿ ಕಂಡುಕೊಂಡ ವಿದೇಹತನದ ಅವಸ್ಥೆಯನ್ನು ಅನುಭವಿಸಬೇಕು. ಆತ್ಮದರ್ಶನವಾದರೆ ನಾವು ಕಳೆದುಕೊಂಡದ್ದು ನಮಗೆ ತಿರುಗಿ ಸಿಕ್ಕಂತಾಗುವದು. ಆತ್ಮಜ್ಞಾನ ದಿಂದ ದೃಶ್ಯವೆಲ್ಲ ಇಲ್ಲದಾಗುತ್ತದೆ, ಧ್ಯಾನ, ಧಾರಣಾ ಇವು ವಿರಾಮ ಹೊಂದುವವು. ಕಲ್ಪನಾ ದ ಹರಿದಾಟ ಬಂದಾಗುವದು. ಮತ್ತು ದೇಹ ಬುದ್ಧಿ ನಾಶವಾಗಿ ಬಿಡುವದು. "ನಾನು ಪರಬ್ರಹ್ಮ ಸ್ವರೂಪವೇ ಇರುವೆನು" ಅನ್ನುವ ಸಾಕ್ಷಾತ್ಕಾರವಾದ ಮೇಲೆ ನಿಸ್ಸಂಗ ಪರಮಾತ್ಮನಿಗೆ ಹತ್ತಿದಂಥ ಸಂಗವು ಬಿಟ್ಟು ಬಿಡುವದು. ಅದ್ವೈತಕ್ಕೆ ಹತ್ತಿದಂಥ ದ್ವೈತ ಕರಗಿ ಹೋಗುವದು. ಅನಂತನಿಗೆ ಅಂತವಂತನೊಡನೆ ಬಂದಂಥ ಸಂಬಂಧ ಬಿಟ್ಟು (ಹಾರಿದು) ಹೋಗುವದು. ಹೀಗೆ ಉಪಾಧಿರೂಪವಿದ್ದದ್ದೆಲ್ಲ ಇಲ್ಲದಾಗಿ ಹೋಗುವದು. ಕೇವಲ ಆತ್ಮ ಸ್ವರೂಪವಷ್ಟೇ ಶಿಲುಕು ಉಳಿಯುವದು.

## ಸಮಾಸ ಅಷ್ಟಮ : ಆತ್ಮದರ್ಶನ ನಾಮ

॥ಶ್ರೀರಾಮ॥ ಮಾಗಾ ಜಾಲೇ ನಿರೂಪಣ । ಪರಮಾತ್ಮಾ ತೋ ತೂಚಿ ಜಾಣ।
ತಯಾ ಪರಮಾತ್ಮಯಾಚೇ ಲಕ್ಷಣ । ತೇ ಹೇ ಐಸೇ ಅಸೆ ॥೧॥

ಜನ್ಮ ನಾಹೀ ಮೃತ್ಯ ನಾಹೀ । ಯೇಣೇ ನಾಹೀ ಜಾಣೇ ನಾಹೀ ।
ಬದ್ಧ ಮೋಕ್ಷ ದೋನೀ ನಾಹೀ । ಪರಮಾತ್ಮಯಾಸೀ ॥೨॥

ಪರಮಾತ್ಮಾ ನಿರ್ಗುಣ ನಿರಾಕಾರ । ಪರಮಾತ್ಮಾ ಅನಂತ ಅಪಾರ ।
ಪರಮಾತ್ಮಾ ನಿತ್ಯ ನಿರಂತರ । ಜೈಸಾ ತೈಸಾ ॥೩॥

ಪರಮಾತ್ಮಾ ಸರ್ವಾಂಸ ವ್ಯಾಪಕ । ಪರಮಾತ್ಮಾ ಅನೇಕೀ ಯೇಕ ।
ಪರಮಾತ್ಮಯಾಚಾ ವಿವೇಕ । ಅತರ್ಕ್ಯ ಆಹೇ ॥೪॥

ಐಸೀ ಪರಮಾತ್ಮಯಾಚೀ ಸ್ಥಿತೀ । ಬೋಲತಾತೀ ವೇದ ಶ್ರುತೀ ।
ಪರಮಾತ್ಮಾ ಪಾವಿಜೆ ಭಕ್ತೀ । ಯೇಥೇ ಸಂಶಯ ನಾಹೀ ॥೫॥

ತಯೇ ಭಕ್ತೀಚೇ ಲಕ್ಷಣ । ಭಕ್ತೀ ನವವಿಧಾ ಭಜನ ।
ನವವಿಧಾ ಭಜನೇ ಪಾವನ । ಬಹು ಭಕ್ತ ಜಾಲೇ ॥೬॥

ತಯಾ ನವವಿಧಾಮಧ್ಯೇ ಸಾರ । ಆತ್ಮನಿವೇದನ ಥೋರ ।
ತಯೇಚಾ ಕರಾವಾ ವಿಚಾರ । ಸ್ವಾನುಭವೇ ಸ್ವಯೇ ॥೭॥

ಆಪುಲಿಯಾ ಸ್ವಾನುಭವೇ । ಆಪಣಾಸ ನಿವೇದಾವೇ ।
ಆತ್ಮನಿವೇದನ ಜಾಣಾವೇ । ಐಸೇ ಅಸೆ ॥೮॥

ಮಹತ್ಪೂಜೇಚಾ ಅಂತೀ । ದೇವಾಸ ಮಸ್ತಕ ವಾಹಾತೀ ।
ತೈಸೀ ಆಹೆ ನಿಕಟ ಭಕ್ತೀ । ಆತ್ಮನಿವೇದನಾಚೀ ॥೯॥

ಆಪಣಾಸ ನಿವೇದಿತೀ । ಐಸೆ ಭಕ್ತ ಥೋಡೆ ಅಸತೀ ।
ತಯಾಸ ಪರಮಾತ್ಮಾ ಮುಕ್ತೀ । ತತ್ಕಾಳ ದೇತೋ ॥೧೦॥

ಆಪಣಾಸ ಕೈಸೇ ನಿವೇದಾವೇ । ಕೋಣೇ ಜಾಊನ ಪಡಾವೇ ।
ಕಿಂವಾ ಮಸ್ತಕ ತೋಡಾವೇ । ದೇವಾಪುಢೇ ॥೧೧॥

ಐಸೇ ಏಕೋನ ಬೋಲಣೇ । ವಕ್ತಾ ವದೆ ಸರ್ವಜ್ಞಪಣೇ ।
ಶ್ರೋತಾ ಸಾವಧಾನ ಹೋಣೇ । ಯೇಕಾಗ್ರ ಚಿತ್ತೇ ॥೧೨॥

## ದಶಕ ೮. ಸಮಾಸ ೮. ಆತ್ಮ ದರ್ಶನ (ನುಡಿ ೭೦)

ನಾವು ಆತ್ಮ ಸ್ವರೂಪರಿರುವೆಂಬುದು ನಿಜವಿದ್ದರೂ ಆ ಸ್ವರೂಪದ ಲಕ್ಷಣಗಳು ಯಾವವು? ಈ ಪ್ರಶ್ನೆ ಉತ್ಪನ್ನವಾಗುವದು. ಆದ್ದರಿಂದ ಈಗ ಪರಮಾತ್ಮನ ವರ್ಣನೆ ಮಾಡುತ್ತಾರೆ;– "ನೀನೇ ಆ ಪರಮಾತ್ಮಾ ಇರುವೆ" ಈ ಮಾತನ್ನು ಹಿಂದಿನ ಸಮಾಸದಲ್ಲಿ ಹೇಳಿರುವೆವು. ಆ ಪರಮಾತ್ಮನಲಕ್ಷಣಗಳು ಮುಂದೆ ಹೇಳಿದಂತೆ ಇರುವವು.(೧) ಪರಮಾತ್ಮ ಸ್ವರೂಪಕ್ಕೆ ಜನ್ಮವಿಲ್ಲ, ಸಾವೂ ಇಲ್ಲ. ಎಲ್ಲಿಗೂ ಬರುವದಿಲ್ಲ ಮತ್ತು ಹೋಗುವದೂ ಇಲ್ಲ ಇದರಂತೆ ಬಂಧನವೂ ಇಲ್ಲವಾದ್ದರಿಂದ ಮೋಕ್ಷ ಸಹ ಇರುವದಿಲ್ಲ. (೨) ಪರಮಾತ್ಮಾ ನಿರ್ಗುಣ ಮತ್ತು ನಿರಾಕಾರನಿರುವನು. ಅನಂತ ಮತ್ತು ಅಪಾರವೂ ಇರುವನು. ನಿತ್ಯ ನಿರಂತರನಿರುವನು. ಅಗದೀ ಇದ್ದಂತೆ ಇರುವನು. ಅಂದರೆ ಹೇಗಿದ್ದನೋ ಹಾಗೆ ಇರುವನು (೩) ಪರಮಾತ್ಮಾ ಎಲ್ಲದರಲ್ಲಿಯೂ, ಎಲ್ಲ ಕಡೆಗೂ ವ್ಯಾಪಿಸಿರುವನು. ಇವನು ಅನೇಕದಲ್ಲಿ ಏಕತ್ವತನದಿಂದ ಒಂದೇ ರೀತಿಯಲ್ಲಿ ಇರುವನು. ಆದರೆ ಇವನು ತರ್ಕದಿಂದ ತದ್ರೂಪ ಹೇಗಿರುವನೆಂದು ಹೇಳಲಿಕ್ಕೆ ಆಗುವದಿಲ್ಲ. (೪) ಪರಮಾತ್ಮಾ ತರ್ಕದಿಂದ ಆಕಲನವಾಗುವದಿಲ್ಲವೆಂದು ವೇದ ಮತ್ತು ಶ್ರುತಿಗಳು ಹೇಳುವವು.ಆದರೆ ಪರಮಾತ್ಮನು ಭಕ್ತಿಯಿಂದಪ್ರಾಪ್ತನಾಗುವನೆಂಬಲ್ಲಿ ಸಂಶಯವಿಲ್ಲ(ದಾ.ದ.೧-೪ನೋಡು)(೫) ಭಕ್ತಿಯಿಂದ ಪರಮಾತ್ಮ ಸ್ವರೂಪದ ಸಾಕ್ಷಾತ್ಕಾರವಾಗುವದು. ಅದರಲ್ಲಿಯೂ ನವವಿಧ ಒಂಭತ್ತುಪ್ರಕಾರದ ಭಕ್ತಿಯ ವೈಕಿ ಕೊನೆಯದಾದ ಆತ್ಮನಿವೇದನ ಭಕ್ತಿಯಿಂದ ನಿಶ್ಚಿತವಾಗಿ ಖಾತ್ರಿಯಿಂದ ಆತ್ಮಜ್ಞಾನ ಪ್ರಾಪ್ತವಾಗುವದು. ಪರಮಾತ್ಮನಿಗೆ ಶರಣು ಹೋಗಿ ಅವನಲ್ಲಿ ಅನನ್ಯನಾಗುವದೇ ಆತ್ಮ ನಿವೇದನದ ಮಾರ್ಗವಿರುವದು. ಭಕ್ತ ದೇವನಲ್ಲಿ ಅನನ್ಯನಾದ ಕೂಡಲೇ ಅವನು ದೇವ ಸ್ವರೂಪನೇ ಆಗುವನು:- ಭಕ್ತಿಯಿಂದ ಸಾಧಕನು ಭಗವಂತನಲ್ಲಿ ಅನನ್ಯ (ಏಕರೂಪ)ನಾಗುವನು· ಆ ಭಕ್ತಿಯಲ್ಲಿ ಒಂಭತ್ತು ಪ್ರಕಾರಗಳಿರುವವು. (ನವವಿಧ ಭಕ್ತಿ). ಇಂಥ ಭಕ್ತಿಯ ಮಾರ್ಗದಿಂದ ಬಹಳಷ್ಟು ಭಕ್ತ ಜನರು ಪಾವನರಾಗಿರುವರು. (೬) ಈ ನವವಿಧ ಭಕ್ತಿಗಳಲ್ಲಿ ಕೊನೆಯ ಆತ್ಮನಿವೇದನ ಭಕ್ತಿಯು ಅತ್ಯಂತ ಶ್ರೇಷ್ಠವಿರುವದು. ಇದರಲ್ಲಿ ಎಲ್ಲ ಪ್ರಕಾರದ ಭಕ್ತಿಯ ರಹಸ್ಯ ತುಂಬಿದೆ. ಆತ್ಮ ನಿವೇದನವು ಸ್ವತಃ ಅನುಭವ ಪಡೆದುಕೊಳ್ಳುವ ವಿಷಯವಿರುವದು. ಆದ್ದರಿಂದ ಸ್ವತಃ ಅನುಭವ ತೆಗೆದುಕೊಂಡೇ ಇದರ ವಿಚಾರ ಮಾಡಬೇಕು. (೭) ನೀವು ಸ್ವತಃ ದೇವರಲ್ಲಿ ಅರ್ಪಣಗೊಳ್ಳಬೇಕು. ಈ ಯಾವ ನಮ್ಮ "ನಾನು" ಅನ್ನುವ ಇದನ್ನು ದೇವರಿಗೆ ಅರ್ಪಿಸುವ ಅನುಭವಕ್ಕೆ ಆತ್ಮ ನಿವೇದನವೆನ್ನುವರು. ಆತ್ಮ ನಿವೇದನವೆಂದರೆ ದೇವರ ಚರಣದಲ್ಲಿ ಆತ್ಮ ಸಮರ್ಪಣ ಹೊಂದುವದೇ ಆಗಿದೆ. (೮) ಕೆಲವೊಂದು ಜನರು ದೇವರ ಮಹಾಪೂಜೆಯನ್ನು ಮಾಡುತ್ತಾರೆ. ಮಹಾಪೂಜೆ ಮುಗಿದ ಮೇಲೆ ಪೂಜೆ ಮಾಡಿದವನು ತನ್ನ ಶಿರಸ್ಸನ್ನು ದೇವರಿಗೆ ಅರ್ಪಿಸಿ ಬಿಡುವನು· (ಶಿರಬಾಗಿಸಿ ಸಾಷ್ಟಾಂಗ ನಮಸ್ಕಾರ ಹಾಕುವನು.) ಆತ್ಮ ನಿವೇದನ ಭಕ್ತಿಯು ಹೀಗೆ ದೇವರಲ್ಲಿಯ ಅತ್ಯಂತ ನಿಕಟವಿದ್ದಂಥ ಭಕ್ತಿಯಾಗಿದೆ. (೯) ದೇವರ ಚರಣದಲ್ಲಿ ತನ್ನ ಸ್ವತಃದ ಸಂಪೂರ್ಣ ಸಮರ್ಪಣ ಮಾಡುವಂಥ ಭಕ್ತರು ಬಹಳ ಕಡಿಮೆ ಜನರು ಕಂಡು ಬರುವರು. ಇಂಥ ಭಕ್ತರಿಗೆ ಪರಮಾತ್ಮನು ಶೀಘ್ರವಾಗಿ (ತಾಬಡ ತೋಬಡ) ಮುಕ್ತಿಯನ್ನು ಕೊಡುವನು. (೧೦) **ಆತ್ಮನಿವೇದನ ಅಥವಾ ಸಂಪೂರ್ಣ ಸಮರ್ಪಣ ಅಂದರೆ ಏನು?**:- ದೇವರ ಚರಣಗಳಿಗೆ ತನ್ನನ್ನೆನ್ನುವದೆಲ್ಲವನ್ನೂ ಸಮರ್ಪಣ ಮಾಡಬೇಕು. ಇದು ಒಳ್ಳೆಯದಾಗಿದೆ· ಆದರೆ ತಾನೇ ಸ್ವತಃ ತನ್ನನ್ನು ಸಮರ್ಪಣ ಹೇಗೆ ಮಾಡಬೇಕು. ಎಲ್ಲಿಗೆ ಹೋಗಿ ಬೀಳಬೇಕು. ಅಥವಾ ದೇವರ ಮುಂದೆ ತನ್ನ ಶಿರವನ್ನು ಕತ್ತರಿಸಿ ಬಿಡಬೇಕೋ ಹೇಗೆ? ಇದೆಲ್ಲವೂ ತಿಳಿಯಲೊಲ್ಲದಾಗಿದೆ. (೧೧) ಶ್ರೋತಾನ ಈ ಮಾತುಗಳನ್ನು ಕೇಳಿ ಸರ್ವಜ್ಞನಾದ ವಕ್ತಾ ಈಗ ಉತ್ತರ ಕೊಡುವನು. ಇದನ್ನು ಕೇಳುವದಕ್ಕಾಗಿ ಶ್ರೋತಾಜನ ಮನವನ್ನು ಏಕಾಗ್ರಗೊಳಿಸಬೇಕು(೧೨)

ಆತ್ಮನಿವೇದನಾಚೇ ಲಕ್ಷಣ । ಆಧೀ ಪಾಹಾವೇ ಮೀ ಕೋಣ ।
ಮಗ ಪರಮಾತ್ಮಾ ನಿರ್ಗುಣ । ತೋ ವೋಳಖಾವಾ ॥೧೩॥

ದೇವಾಭಕ್ತಾಚೇ ಶೋಧನ । ಕರಿತಾ ಹೋತೇ ಆತ್ಮನಿವೇದನ ।
ದೇವ ಆಹೆ ಪುರಾತನ । ಭಕ್ತ ಪಾಹೆ ॥೧೪॥

ದೇವಾಸ ವೋಳಖೋ ಜಾತಾ । ತೇಥೇ ಆಲೀ ತದ್ರೂಪತಾ ।
ದೇವಭಕ್ತವಿಭಕ್ತತಾ । ಮುಳೀ ಚ ನಾಹೀ ॥೧೫॥

ವಿಭಕ್ತ ನಾಹೀ ಮ್ಹಣೋನ ಭಕ್ತ । ಬದ್ಧನ ನಾಹೀ ಮ್ಹಣೋನಿ ಮುಕ್ತ ।
ಅಯುಕ್ತ ನಾಹೀ ಬೋಲಣೇ ಯುಕ್ತ । ಶಾಸ್ತ್ರಾಧಾರೇ ॥೧೬॥

ದೇವಾಭಕ್ತಾಚೇ ಪಾಹತಾ ಮೂಳ । ಹೋಯೆ ಭೇದಾಚೇ ನಿರ್ಮೂಳ ।
ಯೇಕ ಪರಮಾತ್ಮಾ ಸಕಳ । ದೃಶ್ಯಾವೇಗಳಾ ॥೧೭॥

ತಯಾಸಿ ಹೋತಾ ಮಿಳಣೀ । ಉರೀ ನಾಹೀ ದುಜೆಪಣೀ ।
ದೇವಭಕ್ತ ಹೇ ಕಡಸಣೀ । ನಿರಸೋನ ಗೇಲೀ ॥೧೮॥

ಆತ್ಮನಿವೇದನಾಚೆ ಅಂತೀ । ಜೇ ಕಾ ಘಡಲೀ ಅಭೇದ ಭಕ್ತೀ ।
ತಯೆ ನಾವ ಸಾಯೋಜ್ಯಮುಕ್ತೀ । ಸತ್ಯ ಜಾಣಾವೀ ॥೧೯॥

ಜೋ ಸಂತಾಸ ಶರಣ ಗೇಲಾ । ಅದ್ವೈತನಿರೂಪಣೇ ಬೋಧಲಾ ।
ಮಗ ಜರೀ ವೇಗಳಾ ಕೇಲಾ । ತರೀ ಹೋಣಾರ ನಾಹೀ ॥೨೦॥

ನದೀ ಮಿಳಾಲೀ ಸಾಗರೀ । ತೇ ನಿವಡಾವೀ ಕೋಣೇಪರೀ ।
ಲೋಹೋ ಸೋನೇ ಹೋತಾ ಮಾಘಾರೀ । ಕಾಳಿಮಾ ನ ಯೇ ॥೨೧॥

ತೈಸಾ ಭಗವಂತೀ ಮಿಳಾಲಾ । ತೋ ನವಚೆ ವೇಗಳಾ ಕೇಲಾ ।
ದೇವ ಭಕ್ತ ಆಪಣ ಜಾಲಾ । ವಿಭಕ್ತ ನವ್ಹೆ ॥೨೨॥

ದೇವ ಭಕ್ತ ದೋನೀ ಯೇಕ । ಜ್ಯಾಸೀ ಕಳಲಾ ವಿವೇಕ ।
ಸಾಧುಜನೀ ಮೋಕ್ಷದಾಯೆಕ । ತೋ ಚಿ ಜಾಣಾವಾ ॥೨೩॥

ಆತಾ ಅಸೋ ಹೇ ಬೋಲಣೇ । ದೇವ ಪಾಹಾವಾ ಭಕ್ತಪಣೇ ।
ತೇಣೇ ತ್ಯಾಚೇ ಐಶ್ವರ್ಯ ಬಾಣೇ । ತತ್ಕಾಳ ಅಂಗೀ ॥೨೪॥

ಪ್ರಥಮದಲ್ಲಿ ನಾನು ಯಾರು ಇರುವೆ? ಅನ್ನುವದರ ಶೋಧ ಮಾಡಬೇಕು. ಇದು ಆತ್ಮನಿವೇದನದ ಲಕ್ಷಣವಿರುವದು. ನಾನು ಯಾರಿರುವೆನೆಂಬುದರ ಶೋಧವಾದ ಮೇಲೆ (ತಿಳಿದ ಮೇಲೆ) ನಿರ್ಗುಣ ಪರಮಾತ್ಮನು ಹೇಗೆ ಇರುವನು? ಇದನ್ನು ತಿಳಿಯಬೇಕು. (೧೩) ದೇವರು ಹೇಗಿರುವನು? ಭಕ್ತನು ಹೇಗಿರುವನು? ದೇವ ಮತ್ತು ಭಕ್ತ ಇವರ ಸಂಬಂಧ ಹೇಗಿರುವದು? ಇದರ ಶೋಧ ಮಾಡುತ್ತ ಹೋದೆವೆಂದರೆ ಆತ್ಮನಿವೇದನವು ತನ್ನಷ್ಟಕ್ಕೆ ತಾನೇ ಘಟಿಸುವದು. ದೇವ ಶಾಶ್ವತ ಇರುವನು. ನಾವು ಶಾಶ್ವತರಲ್ಲ ಇದನ್ನು ಭಕ್ತನು ತಿಳಿಯುತ್ತಾನೆ. (೧೪) ದೇವರನ್ನು ಗುರುತಿಸಲು, ತಿಳಿದುಕೊಳ್ಳಲು ಹೋದಾಗ್ಗೆ ಭಕ್ತನು ದೇವರೊಂದಿಗೆ ತದ್ರೂಪನಾಗುವನು. ಆಗ ದೇವ ಮತ್ತು ಭಕ್ತ ಇವರಲ್ಲಿ ಭೇದ ಉಳಿಯುವದಿಲ್ಲ. ಇವರಲ್ಲಿ ಎಳ್ಳಷ್ಟೂ ಬೇರೆ ಎಂಬ (ಪ್ರತ್ಯೇಕತನ)ದೇನೂ ಶಿಲುಕು ಉಳಿಯುವದಿಲ್ಲ. (೧೫) ಭಗವಂತನಿಂದ ವಿಭಕ್ತ (ಬೇರೆಯಾದವ) ನಲ್ಲವೆಂದೇ ಇವನು ಭಕ್ತನು. ಇವನಿಗೆ ಬಂಧನ ಇಲ್ಲದ್ದರಿಂದ ಇವನು ಮುಕ್ತನು. ನಾನು ಇದನ್ನು ಶಾಸ್ತ್ರಾಧಾರಗಳಿಂದ ನಿಮಗೆ ಹೇಳುತ್ತಿರುವೆನು. ಆದ್ದರಿಂದ ನಾನು ಹೇಳಿದ್ದು ಆಗದೀ ಯೋಗ್ಯವಿರುವದು. ಅಯೋಗ್ಯವಿರಲಿಕ್ಕೆ ಶಕ್ಯವೇ ಇಲ್ಲ. (೧೬) ದೇವ ಮತ್ತು ಭಕ್ತ ಈ ಇಬ್ಬರ ಮೂಲ ಸ್ವರೂಪ ನೋಡಲಿಕ್ಕೆ ಹೋದರೆ ಇಬ್ಬರಲ್ಲಿಯ ಭೇದವು ಅಳಿದು ಹೋಗಿರುವದು ಕಂಡು ಬರುವದು. ಈ ಎಲ್ಲ ದೃಶ್ಯಗಳಿಗಿಂತ ಬೇರೆ ಇರುವಂಥ ಪರಮಾತ್ಮನೊಬ್ಬ ಮಾತ್ರ ಶಿಲುಕು ಉಳಿದಿರುವನು. (೧೭) ಈ ಪರಮಾತ್ಮ ಸ್ವರೂಪದೊಂದಿಗೆ ಸಮರಸವಾದ ಮೇಲೆ ಎರಡುತನಕ್ಕೆ ದ್ವೈತಕ್ಕೆ ಅಥವಾ ನಾನು ನೀನು ಅನ್ನುವ ಭೇದ ಭಾವಕ್ಕೆ ಸ್ಥಳವೇ ಉಳಿದಿರುವದಿಲ್ಲ. ಅಂದಮೇಲೆ ಇವ ದೇವ ಮತ್ತು ಇವ ಭಕ್ತ ಅನ್ನುವ ಭೇದದ ವಿಚಾರ ಉಳಿಯಲಿಕ್ಕೆ ಸಾಧ್ಯವಿಲ್ಲ. (೧೮) ಆತ್ಮನಿವೇದನದಿಂದ ತನ್ನದನ್ನುವದೆಲ್ಲವೂ ಸಂಪೂರ್ಣವಾಗಿ ಆತ್ಮ ಸಮರ್ಪಣವಾಯಿತೆಂದರೆ ಆ ಕೂಡಲೇ ಅಭೇದ ಭಕ್ತಿಯ ಅವಸ್ಥೆ ಪ್ರಾಪ್ತವಾಗುವದು. ಈ ಅವಸ್ಥೆಗೆ ಸಾಯುಜ್ಯ ಮುಕ್ತಿ ಅನ್ನುವರು. ಈ ಮಾತು ಅಗದೀ ಖರೇ ಇರುವದು. (೧೯) ಭಗವಂತನೊಂದಿಗೆ ಒಂದು ಸಲ ಸಮರಸತೆ (ಐಕ್ಯತೆ) ಆದ ಕೂಡಲೇ ಭಕ್ತನು ಪುನಃ ನಾನು ಅನ್ನುವ ಅಹಂ ದಿಂದ ಬೇರೆಯಾಗಿ ಉಳಿಯುವದೇ ಇಲ್ಲ;– ಯಾವನು ಸಂತರಿಗೆ ಅಥವಾ ಸದ್ಗುರುವಿಗೆ ಶರಣು ಹೋಗುವನೋ ಮತ್ತು ಯಾರ ಅಂತಃಕರಣದಲ್ಲಿ ಅದ್ವೈತದ ಗುರುವಚನಬೋಧ ಬಿಂಬಿಸಿರುವದೋ ಅವನ ಬುದ್ಧಿಯ ರಚನೆಯಲ್ಲಿ "ನಾನು ಆತ್ಮಸ್ವರೂಪ ಇರುವೆನು" ಅನ್ನುವ ಪ್ರಕಾಶ ಉಂಟಾಗುವದು. ಅಂಥವನು ಸ್ವರೂಪಮಯನೇ ಆಗುವನು. ಆಮೇಲೆ ಅವನನ್ನು ನಾನು ಅನ್ನುವದರಿಂದ ದೇವರಿಂದ ಬೇರ್ಪಡಿಸುವೆನೆಂದು ಅಂದರೂ ಅವನನ್ನು ದೇವರಿಂದ ಬೇರೆ ಮಾಡಲಿಕ್ಕೆ ಸಾಧ್ಯವಾಗುವದಿಲ್ಲ. (೨೦) ಒಂದು ನದಿಯು ಸಾಗರಕ್ಕೆ ಹೋಗಿ ಅದರಲ್ಲಿ ಕೂಡಿದ ನಂತರ ಆ ನದಿಯ ನೀರನ್ನು ಪ್ರತ್ಯೇಕಿಸಿ ತೆಗೆಯಲಿಕ್ಕೆ ಬರುವದಿಲ್ಲ. ಅಥವಾ ಪರಸಗಲ್ಲಿನ (ಸ್ಪರ್ಶಮಣಿ) ಸ್ಪರ್ಶವಾಗಿ ಕಬ್ಬಿಣವು ಬಂಗಾರವಾದ ಮೇಲೆ ಅದು ಎಂದೆಂದೂ ಕರಿದಾಗಲಾರದು. (ಕಬ್ಬಿಣವಾಗಲಾರದು) (೨೧) ಇದರಂತೆ ಯಾರು ಭಗವಂತನೊಂದಿಗೆ ಸಮರಸರಾದರೋ ಅವರು ಏನು ಮಾಡಿದರೂ ನಾನು ಅನ್ನುವ ಅಹಂ ಕ್ಕೆ ಒಳಗಾಗಲು ಸಾಧ್ಯವಿಲ್ಲ. ಭಕ್ತನು ದೇವನೆ ಆದಮೇಲೆ ಭಕ್ತನು ದೇವರಿಂದ ವಿಭಕ್ತನಾಗಲು ಸಾಧ್ಯವಿಲ್ಲ. (೨೨) ದೇವ ಮತ್ತು ಭಕ್ತ ಇವರಿಬ್ಬರಿದ್ದರೂ ನಿಜವಾಗಿ ಇಬ್ಬರಲ್ಲಿ ಏಕರೂಪತೆಯೇ (ಒಂದೇ) ಇರುವದು. ಈ ವಿಚಾರದಲ್ಲಿಯ ನಿಜವಾದ ಅರ್ಥ ಯಾರಿಗೆ ಸರಿಯಾಗಿ ತಿಳಿದಿರುವದೋ ಅಂಥ ಸಾಧಕರಿಗೆ ಈ ವಿಚಾರವು ಮೋಕ್ಷದವರೆಗೆ ಒಯ್ಯುವದು. ಆದ್ದರಿಂದ ಇದನ್ನು ಸರಿಯಾಗಿ ತಿಳಿಯಬೇಕು. (೨೩) ಈಗ ಇಷ್ಟು ವಿವೇಚನೆ ಸಾಕು. ಮನುಷ್ಯನು ಭಕ್ತನಾಗಬೇಕು ಮತ್ತು ದೇವರ ದರ್ಶನ ಹೊಂದಬೇಕು. ಇಂಥ ದರ್ಶನ ಯಾರು ಪಡೆಯುವರೋ ಆ ಭಕ್ತರ ಅಂಗದಲ್ಲಿ ದೇಹದಲ್ಲಿ ಭಗವಂತನ ಐಶ್ವರ್ಯ ಬಿಂಬಿಸುವದು. (೨೪)

ದೇಹ ಚಿ ಹೊಊನ ರಾಹಿಜೆ । ತೇಣೇ ದೇಹ ದುಃಖ ಸಾಹಿಜೆ ।
ದೇಹಾತೀತ ಹೋತಾ ಪಾವಿಜೆ । ಪರಬ್ರಹ್ಮ ತೇ ॥೨೫॥
ದೇಹಾತೀತ ಕೈಸೇ ಹೋಣೇ । ಕೈಸೇ ಪರಬ್ರಹ್ಮ ಪಾವಣೇ ।
ಐಶ್ವರ್ಯಾಚೀ ಲಕ್ಷಣೇ । ಕವಣ ಸಾಂಗಿಜೆ ॥೨೬॥
ಐಸೇ ಶ್ರೋತಾ ಆಕ್ಷೇಪಿಲೇ । ಯಾಚೇ ಉತ್ತರ ಕಾಯೆ ಬೋಲಿಲೇ ।
ತೇ ಚಿ ಆತಾ ನಿರೋಪಿಲೇ । ಸಾವಧ ಐಕಾ ॥೨೭॥
ದೇಹಾತೀತ ವಸ್ತು ಆಹೆ । ತೇ ತೂ ಪರಬ್ರಹ್ಮ ಪಾಹೇ ।
ದೇಹಸಂಗ ಹಾ ನ ಸಾಹೆ । ತುಜ ವಿದೇಹಾಸೀ ॥೨೮॥
ಜ್ಯಾಚೀ ಬುದ್ಧೀ ಹೋಯೆ ಐಸೀ । ವೇದ ವರ್ಣಿತೀ ತಯಾಸೀ।
ಶೋಧಿತಾ ನಾನಾ ಶಾಸ್ತ್ರಾಸೀ । ನ ಪಡೆ ಠಾಈ ॥೨೯॥
ಐಶ್ವರ್ಯ ಐಸೇ ತತ್ವತಾ । ಬಾಣೆ ದೇಹಬುದ್ಧಿ ಸೋಡಿತಾ ।
ದೇಹ ಮೀ ಐಸೇ ಭಾವಿತಾ । ಅಧೋಗತೀ ॥೩೦॥
ಯಾಕಾರಣೇ ಸಾಧುವಚನ । ಮಾನೂ ನಯೆ ಅಪ್ರಮಾಣ ।
ಮಿಥ್ಯಾ ಮಾನಿತಾ ದೂಷಣ । ಲಾಗೋ ಪಾಹೆ ॥೩೧॥
ಸಾಧುವಚನ ತೇ ಕೈಸೇ । ಕಾಯೆ ಧರಾವೇ ವಿಶ್ವಾಸೇ ।
ಯೇಕ ವೇಳ ಸ್ವಾಮೀ ಐಸೇ । ಮಜ ನಿರೋಪಾವೇ ॥೩೨॥
ಸೋಹಂ ಆತ್ಮಾ ಸ್ವಾನಂದಘನ । ಅಜನ್ಮಾ ತೋ ತೂಚಿ ಜಾಣ ।
ಹೇಚಿ ಸಾಧೂಚೇ ವಚನ । ಸದೃಢ ಧರಾವೇ ॥೩೩॥
ಮಹಾ ವಾಕ್ಯಾಚೇ ಅಂತರ । ತೂಚಿ ಬ್ರಹ್ಮ ನಿರಂತರ ।
ಐಸಿಯಾ ವಚನಾಚಾ ವಿಸರ । ಪಡೋಚಿ ನಯೆ ॥೩೪॥
ದೇಹಾಸಿ ಹೋಈಲ ಅಂತ । ಮಗ ಮೀ ಪಾವೇನ ಅನಂತ ।
ಐಸೇ ಬೋಲಣೇ ನಿಭ್ರಾಂತ । ಮಾನೂಚಿ ನಯೆ ॥೩೫॥
ಯೇಕ ಮೂರ್ಖ ಐಸೇ ಮ್ಹಣತೀ । ಮಾಯಾ ನಾಸೇಲ ಕಲ್ಪಾಂತೀ ।
ಮಗ ಆಮ್ಹಾಸ ಬ್ರಹ್ಮಪ್ರಾಪ್ತೀ । ಯೆರವೀ ನಾಹೀ ॥೩೬॥
ಮಾಯೇಸೀ ಹೋಈಲ ಕಲ್ಪಾಂತ । ಅಥವಾ ದೇಹಾಸೀ ಯೇಈಲ ಅಂತ ।
ತೇವ್ಹಾ ಪಾವೇನ ನಿವಾಂತ । ಪರಬ್ರಹ್ಮ ಮೀ ॥೩೭॥
ಹೇ ಬೋಲಣೇ ಅಪ್ರಮಾಣ । ಐಸೇ ನವ್ಹೆ ಸಮಾಧಾನ ।
ಸಮಾಧಾನಾಚೇ ಲಕ್ಷಣ । ವೇಗಳೇಚಿ ಅಸೆ ॥೩೮॥

ದೇಹಬುದ್ಧಿ ಇರುವ ವರೆಗೆ ಭಕ್ತಿ ಸಿದ್ಧಿಸಲಾರದು. ನಿಜವಾದ ಭಕ್ತನೆನಿಸಲಾರನು. ಇದಕ್ಕಾಗಿ ದೇಹಾತೀತನಾಗುವದು ಅವಶ್ಯವಿರುವದು. ಪರಬ್ರಹ್ಮ ದೇಹಾತೀತನೇ ಇರುವನು. ಇವನೊಂದಿಗೆ ತದ್ರೂಪನಾಗುವದಕ್ಕಾಗಿ ನಾವು ನೀವೂ ಸಹ ದೇಹದ ಆಚೆಗೆ ಹೋಗಬೇಕಾಗುವದು:- ನಾನು ದೇಹವೇ ಇರುವೆನು. ಈ ಭಾವನೆಯಿಂದ ನಾವು ಇದ್ದುದಾದರೆ ನಮಗೆ ದೇಹದ ದುಃಖಗಳನ್ನು ಅನುಭವಿಸಬೇಕಾಗುವದು. ದೇಹ ಬುದ್ಧಿ ಬಿಟ್ಟು ಕೊಟ್ಟು ನಾವು ದೇಹಾತೀತರಾದರೆ ಆಗ ನಮಗೆ ಪರಬ್ರಹ್ಮದ ಲಾಭವಾಗುವದು. (೨೫) ಈಗ ಶ್ರೋತಾ ಪ್ರಶ್ನೆ ಮಾಡುವನು. ದೇಹಾತೀತ ಹೇಗೆ ಆಗಬೇಕು? ಇದನ್ನು ಹೇಳಿರಿ. ಪರಬ್ರಹ್ಮನ ಲಾಭವನ್ನು ಹೇಗೆ ಮಾಡಿಕೊಳ್ಳಬೇಕು. ಮತ್ತು ಪರಮಾತ್ಮನ ಐಶ್ವರ್ಯದ ಲಕ್ಷಣಗಳು ಯಾವವು? ಇದನ್ನೆಲ್ಲ ಹೇಳಬೇಕು. (೨೬) ಶ್ರೋತಾ ಈ ಪ್ರಶ್ನೆ ವಿಚಾರಿಸಿದ ಮೇಲೆ ವಕ್ತಾನು ಶ್ರೋತಾನಿಗೆ ಉತ್ತರ ಕೊಡುವನು. ಈ ಉತ್ತರವನ್ನು ಕೇಳಿರಿ. (೨೭) ಪರಬ್ರಹ್ಮನು ದೇಹಾತೀತ ವಸ್ತು ಇರುವನೆಂಬ ಮಾತನ್ನು ಯಾವಾಗಲೂ ಲಕ್ಷ್ಯದಲ್ಲಿಟ್ಟುಕೊಂಡಿರಬೇಕು. ನೀವು ಸ್ವತಃ ವಿದೇಹಿ (ದೇಹಾಭಿಮಾನರಹಿತ) ಆದರೆ ದೇಹಾತೀತನಾದಿ ಎಂದರೆ ನಿನ್ನಲ್ಲಿ ದೇಹಬುದ್ಧಿ ಅಥವಾ ದೇಹದ ಮೇಲಿನ ಆಸಕ್ತಿಯು ಎಳ್ಳಷ್ಟು ಉಳಿಯಲಾರದು ಹಾಗೂ ಇದನ್ನು ನೀನು ಸಹಿಸುವದೂ ಇಲ್ಲ. (೨೮) ದೇಹಾತೀತ ಇರುವಂಥ ಆತ್ಮಬುದ್ಧಿ ಯಾವನಿಗೆ ದೊರಕುವದೋ ಅವನು ವಿದೇಹಿಯಾಗಿ ಬಿಡುವನು. ವೇದಗಳು ಸಹ ಈ ಸ್ಥಿತಿಯ ಸ್ತುತಿ ಮಾಡುವವು. ಅನೇಕ ಶಾಸ್ತ್ರಗಳನ್ನು ಸುಮ್ಮನೇ ಅಧ್ಯಯನ ಮಾಡಿದರೆ ಅದರಿಂದ ಆತ್ಮಬುದ್ಧಿ ನಿರ್ಮಾಣವಾಗುವದಿಲ್ಲ. (೨೯) ನಾನು ದೇಹ ಇರುವೆನೆಂಬ ಭಾವನೆಯನ್ನು ಸಂಪೂರ್ಣ ಬಿಟ್ಟು ಬಿಟ್ಟರೆ ಆಗ ವಿದೇಹತನದ ಐಶ್ವರ್ಯ ಪ್ರಾಪ್ತವಾಗುವದು.ನಾನು ದೇಹವೇ ಇರುವೆ ಈಭಾವನೆ ಎಲ್ಲಿಯವರೆಗೆ ಇರುವದೋ ಅಲ್ಲಿಯವರೆಗೆಅಧೋಗತಿ ಏನೂ ತಪ್ಪಿದ್ದಲ್ಲ. (೩೦) ಆದ್ದರಿಂದ ಸತ್ಪುರುಷರು ಏನನ್ನು ಹೇಳುವರೋ ಅವರ ಆ ಹೇಳಿಕೆಯು ಎಳ್ಳಷ್ಟೂ ಸುಳ್ಳು ಎಂದು ಭಾವಿಸಬಾರದು. ಹಾಗೆ ಸುಳ್ಳು ಖೊಟ್ಟಿ ಎಂದು ಭಾವಿಸಿದರೆ ದೋಷ ತಗಲುವದು. (೩೧)"ತತ್ ತ್ವಮ್, ಅಸಿ" "ಅದು ನೀನಿರುವೆ" ಅಂದರೆ ನಿಜವಾದ ನಾನು ಸ್ವಾನಂದ ಘನ ಆತ್ಮಾ ಇರುವೆ ಎಂದು ಸಂತರು ಹೇಳುವರು. ಮಾಯಾ ಇಲ್ಲವಂತೆ ಆದಮೇಲೆ ಸ್ವಾನಂದದ ಅನುಭವ ಪಡೆಯೋಣವೆನ್ನುವ ಈ ಕಲ್ಪನೆಯು ಹುಚ್ಚುತನದ್ದಾಗುವದೆಂದು ತಿಳಿಯಿರಿ. ಮಾಯೆಯ ಜಾಲದಲ್ಲಿ ಇದ್ದುಕೊಂಡೇ ದೇಹಾತೀತ ಅವಸ್ಥೆ ವಿದೇಹಾವಸ್ಥೆಯನ್ನು ಭೋಗಿಸುವದರಲ್ಲಿಯೇ ನಿಜವಾದ ಮೋಜು ಇರುವದು:- ಶ್ರೋತಾ ವಿಚಾರಿಸುವನು. ಸಂತ ಸಾಧುಗಳ ವಿಚಾರಗಳು ಯಾವವು? ಅದನ್ನು ಹೇಳಿರಿ. ಯಾವುದರ ಮೇಲೆ ನಿಜವಾದ ವಿಶ್ವಾಸವಿಡಬೇಕು? ಇದನ್ನು ಸ್ವಾಮಿರಾಯಾ ನನಗೆ ಒಮ್ಮೆ ತಿಳಿಸಿ ಹೇಳಿರಿ. (೩೨) ವಕ್ತಾ ಹೇಳುತ್ತಾನೆ. "ಸೋಹಂ" ಅಂದರೆ ಆ ಆತ್ಮಾ ನಾನೇ ಇರುವೆನು ನಾನೇ ಆಸ್ವಾನಂದ ಘನ ಆತ್ಮಾ ಇರುವೆನು ಯಾವುದಕ್ಕೆ ಜನ್ಮವಿಲ್ಲವೋ ಅಂಥ ಆತ್ಮಾ ನೀನೆ ಇರುವೆ ಅನ್ನುವ ಸಂತರ ಹೇಳಿಕೆಯನ್ನು ನಾವು ನಮ್ಮ ಮನದಲ್ಲಿ ಅಗದೀ ಗಟ್ಟಿಯಾಗಿ ಹಿಡಿಯಬೇಕು. (೩೩) "ನೀನೆ ಶಾಶ್ವತ ಬ್ರಹ್ಮ ಇರುವೆ" ಇದೇ ಮಹಾ ವಾಕ್ಯದ ನಿಜವಾದ ಅರ್ಥವಿರುವದು. ಈ ವಚನಗಳನ್ನು ಎಂದೂ ಮರೆಯದಂತೆ ಎಚ್ಚರವಹಿಸಬೇಕು. (೩೪) ದೇಹದ ಅಂತ್ಯವಾದ ಮೇಲೆ ಆಗ ನನಗೆ ಅನಂತ ಬ್ರಹ್ಮ ಪ್ರಾಪ್ತನಾಗುವನು.ಅಥವಾ ಪ್ರಾಪ್ತನಾದೇನು ಅನ್ನುವದು ಹುಚ್ಚುತನವಾಗುವದು. ಅಜ್ಞಾನದ್ದಾಗುವದು. ಆದ್ದರಿಂದ ಇದನ್ನು ನೀವು ಖರೇ ಎಂದು ನಂಬಬೇಡಿರಿ. (೩೫) ಕೆಲವು ಮೂರ್ಖರು ಅನ್ನುವದೇನೆಂದರೆ, ವಿಶ್ವದ ಪ್ರಳಯಕಾಲ ಬಂದಿತೆಂದರೆ ಆಗ ಮಾಯಾ ಇಲ್ಲವಾಗಿ ಹೋಗುವದು. ಮಾಯಾ ನಾಶ ಹೊಂದಿದ ಕೂಡಲೇ ನಮಗೆ ಬ್ರಹ್ಮಪ್ರಾಪ್ತಿ ಆಗುವದು ಇಲ್ಲದಿದ್ದರೆ ಇಲ್ಲ. (೩೬) ಕಲ್ಪಾಂತ್ಯದಲ್ಲಿ ಮಾಯಾ ನಾಶವಾದೀತು? ಅಥವಾ ದೇಹದ ಅಂತವಾದೀತು. ಆಗ ನಿರಾಯಾಸವಾಗಿ ನಮಗೆ ಬ್ರಹ್ಮ ಪ್ರಾಪ್ತಿಯಾದೀತೆಂದು ಈ ಹುಚ್ಚ ಜನರು ಅನ್ನುವರು. [೩೭] ಈ ಮಾತಿಗೆ ಏನೂ ಆಧಾರವಿಲ್ಲ. ಯಾಕಂದರೆ ಆತ್ಮಜ್ಞಾನದಿಂದ ಪ್ರಾಪ್ತವಾಗುವ ಸಮಾಧಾನವು ಇಂಥ ಪ್ರಕಾರದ್ದಿರುವದಿಲ್ಲ. ಸಮಾಧಾನದ ಲಕ್ಷಣ ಅದು ಬೇರೆಯೇ ಇರುವದು. [೩೮]

ಶೈನ್ಯ ಅವಘೇ ಚಿ ಮರಾವೇ । ಮಗ ರಾಜ್ಯಪದ ಪ್ರಾಪ್ತ ವ್ಹಾವೇ ।
ಶೈನ್ಯ ಅಸ್ತಾಚಿ ರಾಜ್ಯ ಕರಾವೇ । ಹೇ ಕಳೇನಾ ॥೩೯॥

ಮಾಯಾ ಅಸೋನಿ ಚ ನಾಹೀ । ದೇಹ ಅಸತಾಚ ವಿದೇಹೀ ।
ಐಸೇ ಸಮಾಧಾನ ಕಾಹೀ । ವೊಳಖಾವೇ ॥೪೦॥

ರಾಜ್ಯಪದ ಹಾತಾಸೀ ಆಲೇ । ಮಗ ಪರಿವಾರೇ ಕಾಯ ಕೇಲೇ ।
ಪರಿವಾರಾ ದೇಖತಾ ರಾಜ್ಯ ಗೇಲೇ । ಹೇ ತೋ ಘಡೇನಾ ॥೪೧॥

ಪ್ರಾಪ್ತ ಜಾಲಿಯಾ ಆತ್ಮಜ್ಞಾನ । ತೈಸೇ ದೃಶ್ಯ ದೇಹಭಾನ ।
ದೃಷ್ಟೀ ಪಡತಾ ಸಮಾಧಾನ । ಜಾಣಾರ ನಾಹೀ ॥೪೨॥

ಮಾರ್ಗೀ ಮುಳೀ ಸರ್ಪಾಕಾರ । ದೇಖತಾ ಭಯ ಆಲೇ ಥೋರ ।
ಕಳತಾ ತೇಥೀಚಾ ವಿಚಾರ । ಮಗ ಮಾರಣೇ ಕಾಯ ॥೪೩॥

ತೈಸೀ ಮಾಯಾ ಭಯಾನಕ । ವಿಚಾರ ಪಾಹಾತಾ ಮಾಈಕ ।
ಮಗ ತಯೇಚಾ ಧಾಕ । ಕಾಸಯಾ ಧರಾವಾ ॥೪೪॥

ದೇಖತಾ ಮೃಗಜಳಾಚೆ ಪೂರ । ಮ್ಹಣೆ ಕೈಸಾ ಪಾವೋ ಪೈಲಪಾರ ।
ಕಳತಾ ತೇಥೀಚಾ ವಿಚಾರ । ಸಾಂಕಡೇ ಕೈಚೇ ॥೪೫॥

ದೇಖತಾ ಸ್ವಪ್ನ ಭಯಾನಕ । ಸ್ವಪ್ನೀ ವಾಟೆ ಪರಮ ಧಾಕ ।
ಜಾಗ್ರತೀ ಆಲಿಯಾ ಸಾಶಂಕ । ಕಾಸಯಾ ವ್ಹಾವೇ ॥೪೬॥

ತಥಾಸೀ ಮಾಯಾ ಕಲ್ಪನೇಸೀ ದಿಸೆ । ಆಪಣ ಕಲ್ಪನೇತೀತ ಅಸೆ ।
ತೇಥೇ ಉದ್ವೇಗ ಕಾಈಸೆ । ನಿರ್ವಿಕಲ್ಪಾಸೀ ॥೪೭॥

ಅಂತೀ ಮತೀ ತೇ ಚಿ ಗತೀ । ಐಸೇ ಸರ್ವತ್ರ ಬೋಲತೀ ।
ತುರ್ಯಾ ಅಂತೀ ತುರ್ಯೇ ಪ್ರಾಪ್ತೀ । ಸಹಜಚಿ ಜಾಲೀ ॥೪೮॥

ಚೌದೇಹಾಚಾ ಅಂತ । ಆಣೀ ಜನ್ಮ ಮುಳಾಚಾ ಪ್ರಾಂತ ।
ಅಂತಾ ಪ್ರಾಂತಾಸೀ ಅಲಿಪ್ತ । ತೋ ತೂ ಆತ್ಮಾ ॥೪೯॥

ಇದ್ದ ಸೈನ್ಯವೆಲ್ಲವೂ ಸತ್ತು ಹೋದ ಮೇಲೆ ನಾವು ಸಿಂಹಾಸನದ ಮೇಲೆ ಕೂಡ್ರಬೇಕೆಂದು ಒಬ್ಬಾನೊಬ್ಬ ವಿಚಾರ ಮಾಡಿದ್ದಾದರೆ ಅದು ಖಾತ್ರಿಯಿಂದ ಹುಚ್ಚುತನದ್ದಾಗಿದೆ ಎಂದು ಅನ್ನಬೇಕಾಗುವದು. ಯಾವತ್ತೂ ಸೈನ್ಯ ಜೀವಂತವಿದ್ದಾಗ ರಾಜ್ಯ ಕಾರುಭಾರ ಮಾಡುವಲ್ಲಿ ನಿಜವಾದ ಶೋಭೆ ಇರುವದೆಂಬ ಅನುಭವದ ಮಾತು ಈ ಹುಚ್ಚರಿಗೆ ತಿಳಿಯುವದಿಲ್ಲ. [೩೯] ಮಾಯಾ ಇದ್ದೂ ಇಲ್ಲದಂತೆ ಆಗುವ ಮತ್ತು ದೇಹವಿದ್ದೂ ವಿದೇಹ ಸ್ಥಿತಿ (ಅವಸ್ಥೆ) ಇರಬೇಕು. ಹೀಗೆ ಇರುವ ಯಾವ ಸಮಾಧಾನವಿರುವದೋ ಅಂತಹದರ ಅನುಭವವನ್ನು ಸ್ವಲ್ಪಾದರೂ ನೀವು ಪಡೆಯಬೇಕು. [೪೦] ಒಮ್ಮೆ ರಾಜ್ಯ ಪದ ಕೈಯಲ್ಲಿ ಬಂದ ಮೇಲೆ ಅಗ ಪರಿವಾರ ಅಂದರೆ ಸೈನಿಕರು ಮತ್ತು ನೌಕರ ಚಾಕರರು ಏನೂ ಮಾಡಲಾರರು. ಪರಿವಾರ ನೋಡಿದೆವೆಂದಕೂಡಲೇ ರಾಜ್ಯಪದ ಎಂದೂ ಕೈಯಿಂದ ಬಿಟ್ಟು ಹೋಗುವದಿಲ್ಲ. [೪೧] ಇದರಂತೆ ಆತ್ಮಜ್ಞಾನ ಪ್ರಾಪ್ತವಾದ ಮೇಲೆ ದೃಶ್ಯದ ಮತ್ತು ನಿಮ್ಮ ದೇಹವ ಮೇಲಿನ ಎಚ್ಚರ ಉಳಿಯುವದಿಲ್ಲ. ಆದ್ದರಿಂದ ಆಗ ದೃಶ್ಯವು ದೃಷ್ಟಿಗೆ ಬಿದ್ದರೂ ಸಹ ಅಂತರಂಗದಲ್ಲಿಯ ಸಮಾಧಾನವು ಭಂಗಗೊಳ್ಳುವದಿಲ್ಲ. [೪೨] ಒಬ್ಬ ಮನುಷ್ಯನು ರಸ್ತೆಯಲ್ಲಿ ಹೋಗುತ್ತಿದ್ದನು. ಅವನು ರಸ್ತೆಯಲ್ಲಿ ಬಿದ್ದಂಥ ಒಂದು ಗಿಡದ ಬೇರನ್ನು ನೋಡಿದನು. ಅದು ಹಾವು ಎಂದು ಅನಿಸಿ ಆ ಮನುಷ್ಯ ಬಹಳ ಗಾಬರಿಗೊಂಡನು. ಆದರೆ ಧೈರ್ಯ ತಂದುಕೊಂಡು ಚನ್ನಾಗಿ ನೋಡಿದ ಮೇಲೆ ಅದು ಬೇರು ಇರುವದೆಂದು ತಿಳಿದನು. ಇದು ಹಾವು ಅಲ್ಲವೆಂದು ಖಾತ್ರಿಯಾಯಿತು. ಅವನ ಭಯವು ನಿವಾರಣೆ ಹೊಂದಿತು. ಅಂದ ಮೇಲೆ ಅವನಿಗೆ ಹಾವನ್ನು ಹೊಡೆಯುವ ಪ್ರಶ್ನೆಯೇ ಉಳಿಯಲಿಲ್ಲ. [೪೩] ಇದರಂತೆಯೇ ಅಜ್ಞಾನದ ದೆಶೆಯಲ್ಲಿ ಮಾಯೆ ಭಯಂಕರವೆನಿಸುವದು. ಭಯವನ್ನು ಉಂಟು ಮಾಡುವದು. ಆದರೆ ಆತ್ಮಾನಾತ್ಮ ವಿಚಾರ ಮಾಡಿದ್ದಾದರೆ ಆಗ ಮಾಯಾ ಭ್ರಾಮಕವಿರುವದು. ಅದು ಹೇಗೆ ಕಾಣುವದೋ ಅದರಂತೆ ಇಲ್ಲ ಅನ್ನುವ ಖಾತ್ರಿಯಾಗುವದು. ಇದೆಲ್ಲ ಆತ್ಮಜ್ಞಾನವಾದ ಮೇಲೆ ಮಾಯೆಯ ದರ್ಪ - ಮಾಯೆಯ ಭಯಕ್ಕೆ ನಾವು ಹೆದರುವ ಕಾರಣವಿಲ್ಲ. [೪೪] ಉಸುಕಿನ ಪ್ರದೇಶ(ಮರುಳುಗಾಡಿನ ಪ್ರದೇಶ)ದಲ್ಲಿ ಹೊರಟ ಒಬ್ಬ ಪ್ರವಾಸಿಗೆ ನಾಲ್ಕೂ ಕಡೆಗೆ ನೀರೇ ನೀರು ಪಸರಿಸಿರುವದು ಕಾಣಿಸಿತು. ಇದರೊಳಗಿಂದ ಆಚೆಗೆ ಹೋಗುವ ಬಗೆ ಹೇಗೆ ಅನ್ನುವ ಚಿಂತೆ ಉಂಟಾಯಿತು. ಆದರೆ ಅದು ಮೃಗ ಜಲದ ನೀರು ಇರುವದು, ಖರೇ ನೀರಲ್ಲವೆಂಬುದು ಈಗ ಅವನ ಲಕ್ಷ್ಯಕ್ಕೆ ಬಂದಿತು. ಅದರ ಕೂಡ ಅವನು ಕಲ್ಪಿಸಿಕೊಂಡ ಸಂಕಟವೂ ನಿವಾರಣೆಯಾಯಿತು. [೪೫] ಒಬ್ಬ ಮನುಷ್ಯನಿಗೆ ನಿದ್ರೆಯಲ್ಲಿ ಭಯಂಕರವಾದ ಒಂದು ಸ್ವಪ್ನ ಬಿದ್ದಿತು. ಇದರಿಂದ ಅವನು ಸ್ವಪ್ನದಲ್ಲಿ ಬಹಳ ಹೆದರಿದನು. ಆದರೆ ಅವನು ಎಚ್ಚರಗೊಂಡ ಮೇಲೆ ಅವನ ಭಯ ತನ್ನಷ್ಟಕ್ಕೆ ತಾನೇ ಹೋಗಿ ಬಿಟ್ಟಿತು. [೪೬] ಈ ಪ್ರಕಾರ ಮನುಷ್ಯ ಸ್ವತಃ ಕಲ್ಪನೆಯನ್ನು ಮಾಡುವನು. ಮತ್ತು ತಾನು ಮಾಡಿಕೊಂಡ ಆ ಕಲ್ಪನೆಯಿಂದಾಗಿ ತಾನೇ ಗಾಬರಿಗೊಳ್ಳುವನು. ಮಾಯೆಯೂ ಸಹ ನಮ್ಮ ಕಲ್ಪನೆಯ ಪರಿಣಾಮವೇ ಇರುವದು. ತಾನು ಸ್ವತಃ ಸ್ವಾನಂದ ಘನ ಆತ್ಮ ಸ್ವರೂಪವೇ ಇರುವೆನು ಅನ್ನುವ ಅನುಭವ ಬಂದ ಮೇಲೆ ನಾವು ಕಲ್ಪನೆಯ ಆಚೆಗೆ ಇರುವೆವು. ಅನ್ನುವ ಖಾತ್ರಿ ಪಟಾಯಿಸುವದು. ಯಾವುದು ನಿರ್ವಿಕಲ್ಪವಿರುವದೋ ಅದಕ್ಕೆ ಮಾಯೆಯು ದುಃಖ ಕೊಡಲು ಶಕ್ತಳಾಗುವದಿಲ್ಲ. ಅವನು (ಆತ್ಮಸ್ವರೂಪಿಯು) ನಿರ್ಭಯವಿರುವನು. [೪೭] **ಆತ್ಮಪ್ರತೀತಿಯಿಂದ (ಆತ್ಮಾನುಭವದಿಂದ) ಸ್ವಸ್ವರೂಪದೊಂದಿಗೆ ತದಾಕಾರತೆ ಆಗುವದು. ಮತ್ತು ಅತ್ತ ಇತ್ತ ಎಲ್ಲ ಕಡೆಗೂ ಸ್ವರೂಪವೇ ಪಸರಿಸಿದ್ದು ಕಾಣುವದು:**– ಅಂತ್ಯಕಾಲದಲ್ಲಿ ಮನಸ್ಸಿನ ಸ್ಥಿತಿಯು (ಅವಸ್ಥೆ) ಹೇಗಿರುವದೋ ಅದರಂತೆ ಸತ್ತ ಮೇಲೆ ಗತಿ ದೊರಕುವದೆಂದು ಎಲ್ಲರೂ ಹೇಳುವರು. ಇದು ಒಂದು ವೇಳೆ ಖರೆ ಇದ್ದುವಾದರೆ "ನಾನು ಸ್ವಾನಂದ ಘನ ಆತ್ಮಾ ಇರುವೆನು" ಈ ದೃಢ ವಿಚಾರ ಮನದಲ್ಲಿ ಸ್ಥಿರಗೊಂಡು (ಊರದುಕೊಂಡು) ದೇಹ ಬುದ್ಧಿಯ ಅಂತ ಆದದ್ದಾದರೆ ಸ್ವಸ್ವರೂಪದ ಪ್ರಾಪ್ತಿ ತನ್ನಿಂದ ತಾನೇ ಆಗುವದೆಂಬಲ್ಲಿ ಸಂಶಯವಿಲ್ಲ. [೪೮] ಸ್ಥೂಲ ಸೂಕ್ಷ್ಮಾದಿ ನಾಲ್ಕು ದೇಹ ಅಂದರೆ ಯಾವತ್ತೂ ದೃಶ್ಯ ಪ್ರಪಂಚ ಇರುವದು. ಇದರ ಅಂತ ಅಂದರೆ ಮಾಯಾ (ಯಾವತ್ತೂ ದೃಶ್ಯ ಪ್ರಪಂಚ) ಜನ್ಮದ ಮೂಲ ಸ್ಥಾನವೆಂದರೆ ಅವಿದ್ಯಾ ಅಥವಾ ವಾಸನಾ. ಮಾಯಾ ಮತ್ತು ಅವಿದ್ಯಾ ಇವುಗಳಿಂದ ಅಲಿಪ್ತವಿರುವಂಥ ಆ ರೂಪ ಆತ್ಮಾ ಇರುವದೋ ಅದೇ ನೀನು ಇರುವೆ. [೪೯]

ಜಯಾಸೀ ಐಸೀ ಆಹೆ ಮತೀ । ತಯಾಸ ಜ್ಞಾನೇ ಆತ್ಮಗತೀ ।
ಗತೀ ಆಣೀ ಅವಗತೀ । ವೇಗಳಾ ಚಿ ತೋ ॥೫೦॥

ಮತಿ ಖುಂಟಲೀ ವೇದಾಚೀ । ತೇಥೇ ಗತೀ ಆಣೀ ಅವಗತೀ ಕೈಚೀ ।
ಆತ್ಮ ಶಾಸ್ತ್ರ ಗುರು ಪ್ರಚಿತೀಚೀ । ಐಕ್ಯತಾ ಆಲೀ ॥೫೧॥

ಜೀವಪಣಾಚೀ ಫಿಟಲೀ ಭ್ರಾಂತೀ । ವಸ್ತು ಆಲೀ ಆತ್ಮಪ್ರಚಿತೀ ।
ಪ್ರಾಣ ಪಾವಲಾ ಉತ್ತಮ ಗತೀ । ಸದ್ಗುರುಬೋಧೇ ॥೫೨॥

ಸದ್ಗುರು ಬೋಧ ಜೇವ್ಹಾ ಜಾಲಾ । ಚೌದೇಹಾಸ ಅಂತ ಆಲಾ ।
ತೇಣೇ ನಿಜಧ್ಯಾಸ ಲಾಗಲಾ । ಸಸ್ವರೂಪೀ ॥೫೩॥

ತೇಣೇ ನಿಜಧ್ಯಾಸೇ ಪ್ರಾಣೀ । ಧ್ಯೆಯೆಂಚಿ ಜಾಲಾ ನಿರ್ವಾಣೀ ।
ಸಾಯೋಜ್ಯಮುಕ್ತೀಚಾ ಧನೀ । ಹೋಊನ ಬೈಸಲಾ ॥೫೪॥

ದೃಶ್ಯ ಪದಾರ್ಥ ವೋಸರತಾ । ಆವಘಾ ಆತ್ಮಾಚಿ ತತ್ವತಾ ।
ನೆಹಟೋನ ವಿಚಾರೇ ಪಾಹಾತಾ । ದೃಶ್ಯ ಮುಳೀ ಚ ನಾಹೀ ॥೫೫॥

ಮಿಥ್ಯಾ ಮಿಥ್ಯತ್ವೇ ಪಾಹಿಲೇ । ಮಿಥ್ಯಾಪಣೇ ಅನುಭವಾ ಆಲೇ ।
ಶ್ರೋತೀ ಪಾಹಿಜೆ ಐಕಿಲೇ । ಯಾ ನಾವ ಮೋಕ್ಷ ॥೫೬॥

ಸದ್ಗುರು ವಚನ ಹೃದಯೀ ಧರೀ । ತೋ ಚಿ ಮೋಕ್ಷಾಚಾ ಅಧಿಕಾರೀ ।
ಶ್ರವಣ ಮನನ ಕೇಲೇಚಿ ಕರೀ । ಅತ್ಯಾದರೇ ॥೫೭॥

ಈ ದೃಢ ನಿಷ್ಠೆ ಯಾರಲ್ಲಿ ಇರುವದೋ ಅವರಿಗೆ ಜ್ಞಾನದಿಂದ ಆತ್ಮದರ್ಶನವು ಖಾತ್ರಿಯಿಂದ ಒದಗುವದು. ಗತಿ ಮತ್ತು ಅಧೋಗತಿ ಅಂದರೆ ಸದ್ಗತಿ (ಮೋಕ್ಷ) ಮತ್ತು ದುರ್ಗತಿ (ಬಂಧ) ಈ ಎರಡರಿಂದಲೂ, ಆತ್ಮನು ಬೇರೆಯಾಗಿ ಇರುವನು. [೫೦] ಆತ್ಮಸ್ವರೂಪದ ವರ್ಣನೆ ಮಾಡುವಲ್ಲಿ ವೇದಗಳ ಮತಿ ಸೋತುನಿಂತಿತು. ಈ ಆತ್ಮದ ವಿಷಯದಲ್ಲಿ ಬದಲಾಗುತ್ತಿರುವ ಗತಿ ಮತ್ತು ಅವಗತಿಗಳಂಥವುಗಳಿಗೆ ಅವಕಾಶವೇ ಇರುವದಿಲ್ಲ. ಆತ್ಮ ದರ್ಶನದಲ್ಲಿ ಶಾಸ್ತ್ರಪ್ರಚೀತಿ, ಗುರುಪ್ರಚೀತಿ, ಮತ್ತು ಆತ್ಮ ಪ್ರಚೀತಿ ಈ ಮೂರೂ ಪ್ರಚೀತಿಗಳ ಸಮನ್ವಯವಾಗುವದು. ಆ ಯಾವ ಸ್ವಸ್ವರೂಪದ ಬಗ್ಗೆ ಶಾಸ್ತ್ರದಲ್ಲಿ ಹೇಳಲಾಗಿರುವದೋ ಅದರಂತೆಯೇ ಅನುಭವವು ಸದ್ಗುರುವಿಗೆ ಬಂದಿರುವದು. ಮತ್ತು ಸದ್ಗುರುವಿಗೆ ಬಂದಂಥ ಅನುಭವವೇ ಶಿಷ್ಯನಿಗೂ ಸಹ ಬರುವದು. ಆದ್ದರಿಂದ ಮೂರೂ ಅನುಭವಗಳು ಮೂಲತಃ ಒಂದೇ (ಏಕರೂಪ) ಇರುವವು, ಈ ಏಕತ್ವತನವೆಂದರೆ ಮೂರು ಪ್ರಚೀತಿಗಳ ಐಕ್ಯತೆ ಎಂದು ತಿಳಿಯಬೇಕು. [೫೧] ಬ್ರಹ್ಮ ವಸ್ತುವಿನ ಸಾಕ್ಷಾತ್ಕಾರವು ಸ್ವತಃಕ್ಕೆ ಆಯಿತೆಂದರೆ "ನಾನು . ಆತ್ಮಸ್ವರೂಪ ಇರುವೆನು" ಅನ್ನುವ ಅನುಭವ ನಿಮಗೆ ಬರುವದು. ಇದರಿಂದ "ನಾನು ಜೀವ ಇರುವೆನು" ಅನ್ನುವ ಭ್ರಮದ ಭಾವನೆಯು ಹಾರಿ ಹೋಗುವದು.(ಇಲ್ಲದಾಗುವದು). ಈ ರೀತಿಯಾಗಿ ಸದ್ಗುರುವಿನಿಂದ ಬಂದಂಥ ಜ್ಞಾನದಿಂದ ಮನುಷ್ಯ ಪ್ರಾಣಿ ಉತ್ತಮ ಗತಿಗೆ ಹೋಗುವನು. [೫೨] ಯಾವ ಹೊತ್ತಿನಲ್ಲಿ ಸದ್ಗುರುವು ತನ್ನ ಜ್ಞಾನವನ್ನು ಶಿಷ್ಯನಿಗೆ ಕೊಡುವನೋ ಅದೇ ಕ್ಷಣದಲ್ಲಿ ಆಗಲೇ ಅವನ ನಾಲ್ಕೂ ದೇಹಗಳ ಅಂತವಾಗುವದು. ಇದರಿಂದಾಗಿ ಸ್ವಸ್ವರೂಪದ ನಿಧಿಧ್ಯಾಸ ಹತ್ತುವದು. ಒಂದೇ ವಸ್ತುವಿನ ಅಖಂಡ ಚಿಂತನೆ ನಡೆಯುವದು. ಇದರಿಂದ ಆ ಸದ್ವಸ್ತುವಿನ ನಿಧಿಧ್ಯಾಸ ಹತ್ತಿತು ಅನ್ನುವರು. ಸತ್ಸಂಗದಲ್ಲಿ ಶ್ರವಣ ಮಾಡಿದ್ದನ್ನು ನಿವಾಂತವಾಗಿ ಮನನಮಾಡಬೇಕು. ಮನನದ ಉತ್ಕರ್ಷವಾಗಿ ನಿಧಿಧ್ಯಾಸ ನಿರ್ಮಾಣವಾಯಿತೆಂದರೆ ಆಗ ಸಾಧನವು ಸ್ಥಿರಗೊಳ್ಳುವದು. ಶ್ರಮದ ಫಲ ನಿಶ್ಚಿತ ದೊರಕುವದಕ್ಕೆ ದಾರಿ ಸುಗಮವಾಗುವದು. (೫೩) ನಿಧಿಧ್ಯಾಸದಿಂದ ಸಾಧಕ ಕೊನೆಗೆ ಧ್ಯೇಯ ರೂಪವೇ ಆಗಿ ಬಿಡುವನು. ಅಂದರೆ ಸಾಧಕನು ಆತ್ಮಸ್ವರೂಪವಾಗುವನು. ಬ್ರಹ್ಮರೂಪನಾಗುವನು. ಯಾವನು ಆತ್ಮಸ್ವರೂಪ ಆಗುವನೋ ಅವನು ಸಾಯುಜ್ಯ ಮುಕ್ತಿಯ ಮಾಲಕನಾಗುವನು. [೫೪] ಈ ದೇಹ ಸಹಿತವಾಗಿ ಎಲ್ಲ ದೃಶ್ಯ ಪದಾರ್ಥಗಳು ಅಳಿದು ಅರ್ಥಾತ್ ಇವುಗಳ ಜ್ಞಾಪಕವೇ ಇಲ್ಲದಂತೆ ಆದ ಮೇಲೆ ಎಲ್ಲಿ ಅಂದರೆ ಅಲ್ಲಿ ಸರ್ವತ್ರದಲ್ಲಿ ಆತ್ಮಸ್ವರೂಪವೇ ಭಾಸವಾಗುವದು. ಅಗದೀ ಶ್ರಮವಹಿಸಿ ಸೂಕ್ಷ್ಮ ವಿಚಾರ ಮಾಡಿದ್ದಾದರೆ ದೃಶ್ಯವೆಲ್ಲಕ್ಕೆ ಮೂಲದಲ್ಲಿಯೇ ನಿಜವಾದ ಅಸ್ತಿತ್ವ ಇಲ್ಲವೆಂಬುದು ಕಂಡು ಬರುವದು. [೫೫] ಯಾವುದು ಸುಳ್ಳು ಖೊಟ್ಟಿ ಇರುವದೋ ಅದು ಖೊಟ್ಟಿ ಎಂದು ತಿಳಿದೇ ನೋಡಿದ್ದಾದರೆ, ಇಷ್ಟೇ ಅಲ್ಲ ಯಾವುದು ಖೊಟ್ಟಿ ಇರುವದೋ ಅದು ಖೊಟ್ಟಿ ಅನ್ನುವದು ಅನುಭವಕ್ಕೆ (ಬರುವದು). ಬಂದಿತೆಂದರೆ ನಿಃಸಂಶಯವಾಗಿ ಆತ್ಮಜ್ಞಾನವಾದಂತೆ ಎಂದು ತಿಳಿಯಿರಿ. ಇದಕ್ಕೇ ಮೋಕ್ಷ ಎಂದು ಹೆಸರಿರುವದು. ಇದನ್ನು ಶ್ರೋತಾ ಜನ ಚನ್ನಾಗಿ ಲಕ್ಷ್ಯದಲ್ಲಿಡಬೇಕು. ಯಾವುದು ಖರೇ ಇರುವದೋ ಅದು ಸ್ವತಃ ಸಿದ್ಧವಾದದ್ದೇ ಇರುವದು. ಇದನ್ನೇನೂ ಹೊಸದಾಗಿ ನಿರ್ಮಾಣ ಮಾಡಬೇಕಾಗುವದಿಲ್ಲ. ಆದರೆ ಯಾವುದು ಖೊಟ್ಟಿ ಇರುವದೋ ಅದು ಖರೇ ಇದ್ದದ್ದರ ಮೇಲೆ ಹೊದಿಕೆ (ಮುಸುಕು) ಹಾಕುವದು. ಇದರಿಂದ ಖರೇ ಇದು ಕಿಂಚಿತ್ (ಸ್ವಲ್ಪ) ಕಾಣದಂತೆ, (ಮುಸಕಾದಂತೆ) ಆಗುವದು. ಖೊಟ್ಟಿ ಇದ್ದದ್ದರ ಖೊಟ್ಟಿತನ ಲಕ್ಷ್ಯಕ್ಕೆ ಬಂದಿತೆಂದರೆ ಆಗ ತನ್ನಷ್ಟಕ್ಕೆ ತಾನೇ ಅದು ಬಾಜೂಕ್ಕೆ ಸರಿದು ಬಿಡುವದು. ಮತ್ತು ಸತ್ಯವು ಸಹಜವಾಗಿ ಪ್ರಕಟಗೊಳ್ಳುವದು. ಖೊಟ್ಟಿಯ(ಸುಳ್ಳಿನ)ಆವಾಲಿನಿಂದ ಕಾಯಂ ಬಿಡುಗಡೆ ಹೊಂದುವದೇ ಮೋಕ್ಷವಿರುವದು(೫೬) ಸದ್ಗುರುವಿನ ವಚನವನ್ನು ಯಾವನು ತನ್ನ ಹೃದಯದಲ್ಲಿ ಸ್ಥಿರಪಡಿಸಿಕೊಳ್ಳುವನೋ ಅವನೇ ಮೋಕ್ಷಕ್ಕೆ ಅಧಿಕಾರಿ ಆಗುವನು. ಸದ್ಗುರುವಿನ ವಚನಗಳ ಶ್ರವಣ ಮತ್ತು ಸತತ ಮನನವನ್ನು ಅತ್ಯಂತ ಆದರದಿಂದ ಮತ್ತು ಪುನಃಪುನಃ ಮಾಡುವನೋ ಅವನು ಮೋಕ್ಷಕ್ಕೆ ಅಧಿಕಾರಿ ಆಗುವನು. [೫೭]

ಜೇಥೇ ಆಟಿತೀ ದೋನೀ ಪಕ್ಷ । ತೇಥೇ ಲಕ್ಷ ನಾ ಅಲಕ್ಷ ।
ಯಾ ನಾವ ಜಾಣಿಜೆ ಮೋಕ್ಷ । ನೇಮಸ್ತ ಆತ್ಮಾ ॥೫೮॥

ಜೇಥೇ ಧ್ಯಾನ ಧಾರಣಾ ಸರೆ । ಕಲ್ಪನಾ ನಿರ್ವಿಕಲ್ಪೀ ಮುರೆ ।
ಕೇವಳ ಜ್ಞಪ್ತಿಮಾತ್ರ ಉರೆ । ಸೂಕ್ಷ್ಮ ಬ್ರಹ್ಮ ॥೫೯॥

ಭವಮೃಗಜಳ ಆಟಲೇ । ಲಟಿಕೇ ಬಂಧನ ಸುಟಲೇ ।
ಅಜನ್ಮ್ಯಾಸ ಮುಕ್ತ ಕೇಲೇ । ಜನ್ಮದುಃಖಾಪಾಸುನೀ ॥೬೦॥

ನಿಃಸಂಗಾಚೀ ಸಂಗವ್ಯಾಧೀ । ವಿದೇಹಾಚೀ ದೇಹಬುದ್ಧೀ ।
ವಿವೇಕೇ ತೋಡಿಲೀ ಉಪಾಧೀ । ನಿಃಪ್ರಪಂಚಾಚೀ ॥೬೧॥

ಅದ್ವೈತಾಚೇ ತೋಡಿಲೇ ದ್ವೈತ । ಯೇಕಾಂತಾಸ ದಿಲಾ ಯೇಕಾಂತ ।
ಅನಂತಾಸ ದಿಲಾ ಅಂತ । ಅನಂತಾಚಾ ॥೬೨॥

ಜಾಗ್ರತೀಸ ಚೇವವಿಲೇ । ಚೇಈರ್‍ಯಾಸ ಸಾವಧ ಕೇಲೇ ।
ನಿಜಬೋಧಾಸ ಪ್ರಬೋಧಿಲೇ । ಆತ್ಮಜ್ಞಾನ ॥೬೩॥

ಅಮೃತಾಸ ಕೇಲೇ ಅಮರ । ಮೋಕ್ಷಾಸ ಮುಕ್ತೀಚೇ ಘರ ।
ಸಂಯೋಗಾಸ ನಿರಂತರ । ಯೋಗ ಕೇಲಾ ॥೬೪॥

ನಿರ್ಗುಣಾಸ ನಿರ್ಗುಣ ಕೇಲೇ । ಸಾರ್ಥಕಾಚೇ ಸಾರ್ಥಕ ಜಾಲೇ ।
ಬಹುತಾ ದಿವಸಾ ಭೇಟಲೇ । ಆಪಣಾಸಿ ಆಪಣ ॥೬೫॥

ಇನ್ನು ಮೇಲೆ ಆತ್ಮದರ್ಶಿ ಪುರುಷನ ಅವಸ್ಥೆಯು ಹೇಗಿರುವದು ಇದರ ಬಗ್ಗೆ ಬಹಳ ಸುರೇಖ ವರ್ಣನೆಯು ಇರುವದು:- ಯಾವ ಅನುಭವದಲ್ಲಿ ದ್ವೈತವೇ ಇಲ್ಲವೋ ಅಲ್ಲಿ ಪೂರ್ವ ಪಕ್ಷ ಮತ್ತು ಉತ್ತರ ಪಕ್ಷ ಇವೆರಡೂ ಸ್ವರೂಪದಲ್ಲಿ ವಿಲೀನವಾಗಿರುವವು. ಕೂಡಿ ಹೋಗಿರುವವು. ಅಲ್ಲಿ ಲಕ್ಷ್ಯ ಮತ್ತು ಅಲಕ್ಷ್ಯ ಇವೆರಡೂ ಶಿಲುಕು ಉಳಿದಿರುವದಿಲ್ಲ. ಲಕ್ಷ್ಯ ಇದು ಮಾಯೆಯ ಪ್ರಾಂತವಾದರೆ, ಅಲಕ್ಷ್ಯ ಇದು ಸ್ವರೂಪದ (ನಿಜರೂಪದ) ಪ್ರಾಂತವಿರುವದು. ಆದರೆ ಎಲ್ಲಿ ಮಾಯೆ ಇಲ್ಲದಂತಾಗಿ ಹೋಗುವದೋ ಅಲ್ಲಿ ಲಕ್ಷ್ಯವು ಲಯ ಹೊಂದುವದು. ಮತ್ತು ಇದರ ಜೊತೆಗೇ ಅಲಕ್ಷ್ಯವೂ ಸಹ ಲಯವಾಗುವದು. ಅಲ್ಲಿ ಕೇವಲ ಆತ್ಮಾ ಒಂದೇ ಇರುವದು ಈ ಸ್ಥಿತಿಗೆ ಮೋಕ್ಷವೆಂದು ಅನ್ನುವರು. (೩೮) ಅಲ್ಲಿ ಧ್ಯಾನ ಮತ್ತು ಧಾರಣಾ (ಬುದ್ಧಿ. ಆಕಲನ ಶಕ್ತಿ, ಸ್ಮರಣ ಶಕ್ತಿ,) ಇವು ತಮ್ಮ ಕೆಲಸ ಇನ್ನು ಇಲ್ಲವೆಂದು ನಿಂತು ಬಿಡುವವು, ಕಲ್ಪನೆಯು ನಿರ್ವಿಕಲ್ಪದಲ್ಲಿ ಬೆರೆತು ಹೋಗುವದು. ಮತ್ತು ಕೇವಲ ಶುದ್ಧ ಜ್ಞಾನಮಯ ಅತ್ಯಂತ ಸೂಕ್ಷ್ಮ ಬ್ರಹ್ಮ ಸ್ವರೂಪವಷ್ಟೇ ಶಿಲುಕು ಉಳಿಯುವದು. ಮನವು ಮನತನದಿಂದ ಇರುವವರೆಗೆ ಧ್ಯಾನ ಮತ್ತು ಧಾರಣೆ ಇವುಗಳ ಅವಶ್ಯಕತೆ ಇರುವದು. ಆದರೆ ಸಾಧಕಾವಸ್ಥೆ ಮುಗಿದು ಸ್ವರೂಪ ಸಾಕ್ಷಾತ್ಕಾರವಾದ ಕೂಡಲೇ ಮನವು ಉನ್ಮನವಾಗುವದು. ಆ ಬಳಿಕ ಧಾರಣಾ, ಧ್ಯಾನ, ಕಲ್ಪನಾ ಇತ್ಯಾದಿ ಮಾತುಗಳು ತಮ್ಮಿಂದ ತಾವೇ ವಿರಾಮ ಹೊಂದುವವು. (೫೯) ಪ್ರಪಂಚ ರೂಪದ ಮೃಗ ಜಲವು ಒಣಗಿ ಹೋಗುವದು-ದೇಹ ಬುದ್ಧಿಯು ಹಾಕಿದಂಥ ಮತ್ತು ಮೂಲದಲ್ಲಿಯೇ ಖೊಟ್ಟಿ ಇದ್ದಂಥ ನಾನು ಅನ್ನುವದರ ಬಂಧನವು ಹರಿಯುವದು. ಮತ್ತು ಯಾವುದು ವಾಸ್ತವಿಕವಾಗಿರುವ ಆ ಅಜನ್ಮಾ ಆದಂಥ ಆತ್ಮಾ ಇದು ಜನ್ಮಮರಣದ ದುಃಖದಿಂದ ಬಿಡುಗಡೆಯಾಗುವದು. [೬೦] ಅತ್ಯಂತ ಅಲಿಪ್ತ ಇರುವಂಥ ಆತ್ಮಾ ಆಸಕ್ತಿ (ಆಶೆ, ಮೋಹ) ಅನ್ನುವ ರೋಗದಿಂದ ಪೀಡಿತವಾಗಿತ್ತು. ಮತ್ತು [ಆರೋಗ್ಯ ಇಲ್ಲದ್ದಾಗಿತ್ತು] ಈಗ ಅದರ ರೋಗ ವಿಲ್ಲದಾಯಿತು. ಯಾವದು ಮೂಲದಲ್ಲಿಯದೋ[ಅದು]ದೇಹದ ಆಚೆಗೇ ಇರುವಂಥ ನಿಜವೋ ಇವಕ್ಕೆ "ನಾನು ದೇಹವೇ ಇರುವೆನು" ಈ ಸಂಕುಚಿತ ಭಾವನೆಯು ರೋಗ ಅಂಟಿಕೊಂಡಿತ್ತು. ಈ ಭಾವನೆ ಇಲ್ಲ ದಾಯಿತು. ಯಾವುದಕ್ಕೆ ಯಾವುದೇ ದೃಶ್ಯದ ಮರ್ಯಾದೆ ಉಪಾಧಿ ಇರಲಿಲ್ಲವೋ ಅದಕ್ಕೆ ದೃಶ್ಯ ಪ್ರಪಂಚದ ಉಪಾಧಿ ಅಂಟಿಕೊಂಡಿತ್ತು. ಈ ಉಪಾಧಿಯನ್ನು ಆತ್ಮಾನಾತ್ಮ ವಿವೇಕದಿಂದ ಕಡಿದು ಒಗೆಯಲಾಯಿತು. (೬೧) ಯಾವುದು ಮೂಲದಲ್ಲಿ ನಿಜವಾದ ಒಂದೇ ಒಂದಾದದ್ದು (ಪರಬ್ರಹ್ಮ) ಇದ್ದಿತೋ ಅದಕ್ಕೆ ಅನೇಕ (ಬಹಳ)ವಾಗ ಬೇಕು. ಅನ್ನುವ ಮಿಥ್ಯಾಭಾಸ ಉಂಟಾಯಿತು. ಈ ಸುಳ್ಳು ಭಾಸವನ್ನು ಇಲ್ಲದಂತೆ ಮಾಡಿ ಅದ್ವೈತಕ್ಕೆ ಅಂಟಿ ಕೊಂಡ ದ್ವೈತವನ್ನು ಕಡಿದು ಒಗೆಯಲಾಯಿತು. ಕಳೆದುಕೊಂಡ ಸ್ವಾಭಾವಿಕ ಏಕಾಂತವನ್ನು ಆತ್ಮನಿಗೆ ಪರತ ದೊರಕಿಸಿಕೊಡಲಾಯಿತು. ಯಾವನು ಅನಂತನಿರುವನೋ ಅವನಿಂದ ಮರೆಯಾದ [ಲೋಪವಾದ] ಅವನ ಅನಂತ ತನದ ಅರಿವನ್ನು ಪರತ ಬೆಳಗಿಸಿಕೊಡಲಾಯಿತು. [೬೨] ಯಾವ ಅರಿವು ಮಸಕಾಗಿತ್ತೋ ಆಚ್ಛಾದನಗೊಂಡಿತ್ತೋ ಮುಚ್ಚಲಾಗಿತ್ತೋ ಅದನ್ನು ಚನ್ನಾಗಿ ಎಚ್ಚರಗೊಳಿಸಿತು. ಎಚ್ಚರಗೊಂಡದ್ದಕ್ಕೆ ಸ್ವರೂಪದ ಅರಿವನ್ನು ಮಾಡಿಕೊಡ ಲಾಯಿತು. ಮತ್ತು ನಾನು ಇರುವೆ ಈ ಜ್ಞಾನಕ್ಕೆ ನಾನು ಆತ್ಮನೇ ಇರುವೆನು ಅನ್ನುವ ನಿಜ ಬೋಧಕ್ಕೆ ಆತ್ಮ ಜ್ಞಾನದ ಸ್ವರೂಪ ಕೊಡಲಾಯಿತು. (೬೩) ಅಮೃತ ರೂಪವಿರುವ ಆತ್ಮದ ಬೆನ್ನಿಗೆ (ಹಿಂದೆ) ಮೃತ್ಯುವಿನ ಪೀಡೆ (ತೊಂದರೆ) ಹತ್ತಿತ್ತು. ಅದನ್ನು ಬಿಡಿಸಿ ಅದರ ಅಮರತ್ವವನ್ನು ಅದಕ್ಕೆ ಪರತ ಕೊಟ್ಟಿತು. ಮೋಕ್ಷಕ್ಕೆ ಇರಲು ಸ್ಥಳವೇ ಇಲ್ಲದಂತೆ ಆಗಿತ್ತು. ಅದಕ್ಕೆ ಮುಕ್ತಿಯ ಮನೆಯಲ್ಲಿ ಇರಲು ಹೇಳಿ ಅದನ್ನು ಅಲ್ಲಿ ಕೂಡಿಸಲಾಯಿತು. ಜೀವ ಮತ್ತು ಪರಮಾತ್ಮಾ ಇವರಲ್ಲಿ ಕಾಯಂ ಸಂಯೋಗ ಘಟಿಸುವಂತೆ ಅವುಗಳಲ್ಲಿ ಮೈತ್ರಿ ಅರ್ಥಾತ್ ತಳಕು ಹಾಕಿ ಬಿಟ್ಟಿತು(೬೪)ನಿರ್ಗುಣ ಪರಬ್ರಹ್ಮನ ಮೇಲೆ ಸಗುಣತನದ ಆರೋಪ ಬಂದಿತ್ತು. ಇದನ್ನು ಇಲ್ಲದಂತೆ ಮಾಡಿ. ಇದರ ಮೂಲ ನಿರ್ಗುಣತನವನ್ನು ಸ್ಥಾಪಿಸಲಾಯಿತು. ಇದರಿಂದ ಮಾನವ ಜನ್ಮ ತಳೆದಿದ್ದಕ್ಕೆ ಪರಮೋಚ್ಚ ಸಾರ್ಥಕ ತನ ಸಾಧಿಸಲಾಯಿತು. ಮತ್ತು ಬಹಳ ಬಹಳ ದಿನಗಳ ನಂತರ ಸ್ವತಃಕ್ಕೆ ಸ್ವತಃದ ಭೆಟ್ಟಿಯಾಯಿತು. (೬೫)

ತುಟಲಾ ದ್ವೈತಾಚಾ ಪಡದಾ । ಅಭೇದೇ ತೋಡಿಲೇ ಭೇದಾ ।
ಭೂತ ಪಂಚಕಾಚೀ ಬಾಧಾ । ನಿರಸೋನ ಗೇಲೀ ॥೬೬॥

ಜಾಲೇ ಸಾಧನಾಚೇ ಫಳ । ನಿಶ್ಚಳಾಸ ಕೇಲೆ ನಿಶ್ಚಳ ।
ನಿರ್ಮಳಾಚಾ ಗೇಲಾ ಮಳ । ವಿವೇಕ ಬಳೇ ॥೬೭॥

ಹೋತೇ ಸನ್ನಿಧ ಚುಕಲೇ । ಜ್ಯಾಚೇ ತ್ಯಾಸ ಪ್ರಾಪ್ತ ಜಾಲೇ ।
ಆಪಣಾ ದೇಖತಾ ಫಿಟಲೇ । ಜನ್ಮದುಃಖ ॥೬೮॥

ದುಷ್ಟ ಸ್ವಪ್ನೇ ಜಾಜಾವಲಾ । ಬ್ರಾಹ್ಮಣ ನೀಚ ಯಾತೀ ಪಾವಲಾ ।
ಆಪಣಾಸಿ ಆಪಣ ಸಾಂಪಡಲಾ । ಜಾಗಪಣೇ ॥೬೯॥

ಐಸೇ ಜಯಾಸ ಜಾಲೇ ಜ್ಞಾನ । ತಯಾ ಪುರುಷಾಚೇ ಲಕ್ಷಣ ।
ಪುಢಿಲೆ ಸಮಾಸೀ ನಿರೂಪಣ । ಬೋಲಿಲೇ ಅಸೆ ॥೭೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
''ಆತ್ಮ ದರ್ಶನ'' ನಾಮ ಸಮಾಸ ಅಷ್ಟಮ ॥

ದ್ವೈತದ ಪಡದೆ, ನಡುವೆ ಅಡ್ಡ ಬಂದದ್ದರಿಂದ ಅದ್ವೈತವು ದೃಷ್ಟಿಗೆ ಕಾಣದಾಗಿತ್ತು. ಆ ಅಡ್ಡ ಬಂದ ಪಡದೆಯನ್ನು ಹರಿದು ಹಾಕಿ ಅದ್ವೈತವನ್ನು ಪ್ರಕಟಿಸಲಾಯಿತು. ಅಭೇದದ ಅನುಭವದಿಂದ ಭೇದದ ಸಮೂಲ ನಾಶವಾಯಿತು. ಪಂಚ ಭೂತಗಳಿಂದ ತಯಾರಾದ ದೃಶ್ಯ ವಿಶ್ವವನ್ನು ಮಿಥ್ಯತ್ವದಿಂದ ನೋಡಿ ಪ್ರಪಂಚದ ಭ್ರಮೆ ಹಾರಿ ಹೋಯಿತು. (೬೬) ಇಲ್ಲಿಯವರೆಗೆ ಮಾಡಿದಂಥ ಸಾಧನದ ಫಲ ಪದರಲ್ಲಿ (ಉಡಿಯಲ್ಲಿ) ಬಿದ್ದಿತು. ಯಾಕಂದರೆ ಸ್ವಸ್ವರೂಪದ ಸಾಕ್ಷಾತ್ ದರ್ಶನವಾಯಿತು. ನಿಶ್ಚಲ ಬ್ರಹ್ಮವಸ್ತುವಿನ ಮೇಲೆ ಹರಡಿದ ಚಂಚಲ ಮಾಯೆಯ ಹೊಲಸನ್ನು ಬಾಜೂಕ್ಕೆ ಸರಿಸಿ ಮೂಲದ ನಿಶ್ಚಲತನವನ್ನು ಪ್ರಕಟಗೊಳಿಸಿತು. ನಿರ್ಮಲ ಆತ್ಮಸ್ವರೂಪದ ಮೇಲೆ ಬಂದಂಥ ಅವಿದ್ಯಾರೂಪಿ ಮಲವನ್ನು ಆತ್ಮಾನಾತ್ಮ ವಿವೇಕದಿಂದ ಝಾಡಿಸಿ ಕಿತ್ತಿಒಗೆಯಲಾಯಿತು(೬೭) ಸ್ವಸ್ವರೂಪವೆಂಬ ಖಣಿಯು ಹತ್ತಿರವೇ ಇದ್ದರೂ ಭ್ರಮದಿಂದ ಅದು ಸಿಗಲೊಲ್ಲದಾಗಿತ್ತು. ಭ್ರಮ ನಿರಸನವಾಗಿ ವಿವೇಕವು ಜಾಗ್ರತಗೊಂಡು ಅದು ಯಾರದೋ ಅವರಿಗೆ ಪ್ರಾಪ್ತವಾಯಿತು. ಮತ್ತು ಈ ರೀತಿಯಿಂದಾಗಿ ಸ್ವಸ್ವರೂಪದ ದರ್ಶನವಾದದ್ದರಿಂದ ಜೀವಂತ ಇರುವಾಗಲೇ ನಮ್ಮ ಮುಂದೆಯೇ ಜನ್ಮ ಮರಣದ ದುಃಖ ಇಲ್ಲದಾಗಿ ಹೋಯಿತು. ಜೀವದ ಸಾರ್ಥಕ್ಯವಾಯಿತು. (೬೮) ಒಬ್ಬ ಬ್ರಾಹ್ಮಣನಿಗೆ ಸ್ವಪ್ನ ಬಿದ್ದಿತು. ಅದರಲ್ಲಿ ಅವನು ಹೀನ ಜಾತಿಯವನೆಂಬುದಾಗಿ ಕಂಡನು. ಅವನು ಬಹಳ ಗಾಬರಿಗೊಂಡನು. ಆದರೆ ಎಚ್ಚರವಾದ ಕೂಡಲೇ ತಾನು ಬ್ರಾಹ್ಮಣನೇ ಇರುವೆ ಅನ್ನುವದು ತಿಳಿಯಿತು. ಇದರಂತೆ "ನಾನು ದೇಹವಿರುವೆನು" ಈ ಭ್ರಮದಿಂದ ಜೀವವು ಸುಮ್ಮನೇ ದುಃಖ ಭೋಗಿಸುವದು. "ನಾನು ಆತ್ಮಾ ಇರುವೆನು" ಈ ಜ್ಞಾನ ಆದ ಮೇಲೆ ಅದು ನಿರ್ಭಯವಾಗುವದು(೬೯) "ನಾನು ಆತ್ಮನೇ ಇರುವೆ" ಈ ಜ್ಞಾನ ಯಾವ ಮನುಷ್ಯನಿಗೆ ಆಗುವದೋ ಅಂಥ ಮನುಷ್ಯರ ಲಕ್ಷಣಗಳನ್ನು ಮುಂದಿನ ಸಮಾಸದಲ್ಲಿ ಹೇಳಲಾಗಿದೆ. (೭೦)

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಎಂಟನೆಯ ದಶಕದ
"ಆತ್ಮದರ್ಶನ"ವೆಂಬ ಎಂಟನೆಯ ಸಮಾಸವು ಮುಗಿದುದು.

● ●

### ಸಮಾಸ ನವಮ : ಸಿದ್ಧ ಲಕ್ಷಣ ನಾಮ

॥ಶ್ರೀರಾಮ॥ ಅಂತರೀ ಗೇಲಿಯಾ ಅಮೃತ । ಬಾಹ್ಯ ಕಾಯಾ ಲಖಲಖಿತ ।
ಅಂತರ ಸ್ಥಿತಿ ಬಾಣತಾ ಸಂತ । ಲಕ್ಷಣೇ ಕೈಸೀ ॥೧॥

ಜಾಲೇ ಆತ್ಮಜ್ಞಾನ ಬರವೇ । ಹೇ ಕೈಸೇನಿ ಪಾ ಜಾಣಾವೇ ।
ಮ್ಹಣೋನಿ ಬೋಲಿಲೀ ಸ್ವಭಾವೇ । ಸಾಧುಲಕ್ಷಣೇ ॥೨॥

## ದಶಕ ೮. ಸಮಾಸ ೯. ಸಿದ್ಧ ಲಕ್ಷಣ (ನುಡಿ ೬೦)

ಹಗಲೂ ರಾತ್ರಿ ಆತ್ಮಸ್ವರೂಪದ ಧ್ಯಾನ ಮತ್ತು ಚಿಂತನ (ವಿಚಾರ) ಮಾಡುವದರಿಂದ ಸಾಧಕನಮನವು ಆತ್ಮಸ್ವರೂಪದಿಂದ ಒಳಗೂ ಹೊರಗೂ ತುಂಬಿ ಬಿಡುವದು. ಅತ್ಯಂತ ಸೂಕ್ಷ್ಮವಾದ ಆತ್ಮಸ್ವರೂಪದ ಅನುಸಂಧಾನದಲ್ಲಿ ಸದೈವ ತೊಡಗಿರುವ ಮನವು ತನ್ನಷ್ಟಕ್ಕೆ ತಾನೇ ಅತ್ಯಂತ ಸೂಕ್ಷ್ಮವಾಗುವದು. ಕೆಲವು ಕಾಲದ ನಂತರ ಇದರಲ್ಲಿ ಆಮೂಲಾಗ್ರವಾಗಿ ಬದಲಾವಣೆಯಾಗಿ ಮನವು ಉನ್ಮನ (ವಿರಕ್ತಾವಸ್ಥೆ) ವಾಗುವದು. ಉನ್ಮನಿಯಲ್ಲಿ ಜ್ಞಾತಾ (ತಿಳಿಯುವವನು) ಮತ್ತು ಜ್ಞೇಯ [ತಿಳಿಯಬೇಕಾದದ್ದು], ದೃಷ್ಟಾ [ನೋಡುವವನು] ದೃಶ್ಯ [ನೋಡಲು ಯೋಗ್ಯವಾದದ್ದು] ನಾನು ಮತ್ತು ನೀನು ಅಥವಾ ದೇವ ಮತ್ತು ಭಕ್ತ ಈ ದ್ವೈತಭಾವ ಉಳಿಯುವದಿಲ್ಲ. ಆಮೇಲೆ ಇದರಿಂದಾಗಿ ವಿಶ್ವದಲ್ಲಿಯ ದ್ವೈತಭೇದ ಅಥವಾ ದೃಶ್ಯವಸ್ತುವಿನ ವಿಸ್ತಾರ ಇವೆಲ್ಲ ಕಣ್ಣಿಗೆ ಕಂಡರೂ ಸಹ ಅದರಲ್ಲಿ ಆತ್ಮಸ್ವರೂಪವೇ ಕಾಣುವದು. ಇಷ್ಟೇ ಅಲ್ಲ ಅನುಭವಕ್ಕೂ ಬರುವದು. ಇದರ ಅರ್ಥವೇನೆಂದರೆ ಸಾಧಕನ ಅಜ್ಞಾನವು ನಾಶವಾಗುವದು. ಮತ್ತು ಇವನು ಕುಳಿತಲ್ಲಿಯೇ [ಇದ್ದಲ್ಲಿಯೇ] ಬ್ರಹ್ಮಸ್ವರೂಪನಾಗುವನು. ಅಂತೆಯೇ ದೇಹಬುದ್ಧಿಯ ನಾಶ=ಆತ್ಮಜ್ಞಾನ=ಪರಮಾತ್ಮಸ್ವರೂಪದ ಜ್ಞಾನ=ಯಾವತ್ತೂ ಪ್ರಾಣಿ ಮಾತ್ರದಲ್ಲಿ [ಭೂತ ಮಾತ್ರರಲ್ಲಿ] ತಾನೇ ಆತ್ಮಸ್ವರೂಪದಿಂದ ತುಂಬಿರುವೆನು ಅನ್ನುವ ಅನುಭವವಾಗಿರುವದು. ಸಾರಾಂಶ:-ಸರ್ವಪ್ರಾಣಿ ಮಾತ್ರರಲ್ಲಿ ಒಂದೇ ಒಂದು ಆತ್ಮವು ಸಮತ್ವದಿಂದ ಇರುವದು. ಇಂಥ ಪ್ರತ್ಯಕ್ಷ ಸ್ವಾನುಭವದಲ್ಲಿ ಕಾಯಂ ಆರೂಢ [ಸಿದ್ಧ, ಜೀವನ್ಮುಕ್ತ]ನಾಗಿರುವಂಥವನು ಸಿದ್ಧನೆನಿಸುವನು. ಇಂಥ ಸಿದ್ಧನ ಲಕ್ಷಣಗಳನ್ನು ಈ ಸಮಾಸದಲ್ಲಿ ವರ್ಣಿಸಲಾಗಿದೆ. ನಿಜ ಹೇಳುವದಾದರೆ ಸಿದ್ಧನ ಸಿದ್ಧತನವು ಅವನ ನಿರ್ದೋಷ, ನಿರ್ಮಮ [ವಾಸನಾಹೀನ] ನಿಸ್ವಾರ್ಥ ನಿಷ್ಕಾಮ, ನಿರ್ಮಲ, ಸಮ, ಮತ್ತು ಅತ್ಯಂತ ಪವಿತ್ರವಾದಂಥ ಅವಸ್ಥೆ ಅಂತರಂಗದಲ್ಲಿ ಇರುತ್ತದೆ. ಈ ಅವಸ್ಥೆಯು ಶಬ್ದಗಳಿಂದ ವರ್ಣಿಸಲಿಕ್ಕೆ ಸಾಧ್ಯವಿಲ್ಲದಷ್ಟು ಖಾಸಗಿ [ಸ್ವಂತದ್ದು]ಯಾದದ್ದೂ ಅತಿಸೂಕ್ಷ್ಮವೂ ಆಗಿರುವದು. ಯಾವತ್ತೂ ಚರಾಚರ [ಜಗತ್ತು]ದಲ್ಲಿ ಆತ್ಮಸ್ವರೂಪದಿಂದ ನಾನೇ ತುಂಬಿ ಇರುವೆನು. ಇಂಥ ಅವಸ್ಥೆಯಲ್ಲಿ "ಎರಡು" ಅನ್ನುವದು ಶಿಲುಕು ಉಳಿದಿರುವದೇ ಇಲ್ಲ. ಎರಡು ಅಂದೆವೆಂದರೆ, ಅಲ್ಲಿ ದ್ವೈತ ಬರುವದು. ಈ ಅವಸ್ಥೆ ಹಾಗಿರುವದಿಲ್ಲ. ಇಷ್ಟೇ ಅಲ್ಲ "ನನಗೆ ಈ ಅವಸ್ಥೆ ಬಂದಿತು" ಎಂದು ಸಹ ಅನ್ನಲಿಕ್ಕೆ ಬರುವದಿಲ್ಲ. ಬೃಹದಾರಣ್ಯಕ ಉಪನಿಷತ್‌ದಲ್ಲಿ ಯಾಜ್ಞವಲ್ಕ್ಯರು ಸಿದ್ಧಾವಸ್ಥೆಯ ಬಗ್ಗೆ ಹೀಗೆ ವರ್ಣನೆ ಮಾಡಿದ್ದಾರೆ -"ಯತ್ರಹಿ ದ್ವೈತಮಿವಭವತಿ, ತದಿತರಇತರಂ ಪಶ್ಯತಿ... ಜಿಘ್ರತಿ... ಶೃಣೋತಿ.... ವಿಜಾನಾತಿ। ... ಯತ್ರ ತ್ವಸ್ಯ ಸರ್ವಂ ಆತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್... ಜಿಘ್ರೇತ... ಶೃಣುಯಾತ್... ವಿಜಾನೀಯಾತ್। ... ವಿಜ್ಞಾತಾರಂ ಅರೇ, ಕೇನ ವಿಜಾನಿ ಯಾತ್। ಏತಾವದ್ ಅರೇ, ಖಲು ಅಮೃತತ್ವಂ॥ ಇತಿ॥ ಅರ್ಥ:-ದೃಷ್ಟಾ ಮತ್ತು ದೃಶ್ಯ ಇದು ದ್ವೈತವಿರುವತನಕ ದೃಷ್ಟಾ ದೃಶ್ಯವನ್ನು ನೋಡುತ್ತಿದ್ದನು, ಮೂಸುತ್ತಿದ್ದನು, ಕೇಳುತ್ತಿದ್ದನು, ಮತ್ತು ಗುರುತಿಸುತ್ತಿದ್ದನು. ಆದರೆ ಯಾವಾಗ ಸರ್ವವೂ ಆತ್ಮಮಯವಾಯಿತೋ ಆಗ ಯಾರು ಯಾರನ್ನು ನೋಡುವರು, ಮೂಸುವರು? ಕೇಳುವರು? ಮತ್ತು ಗುರುತಿಸುವರು? ಯಾವುದು ತನ್ನನ್ನು ತಾನೇ ತಿಳಿಯುವದೋ ಅದಕ್ಕೆ ತಿಳಿಯುವವನು ಬೇರೆ ಯಾವನಿರುವನು? "ಮೈತ್ರೇಯೀ, ಅಮರ ಜೀವನವು ಹೀಗಿರುವದು" ಅಂತರ್ಯಾಮಿ ಸ್ವಸ್ವರೂಪದೊಂದಿಗೆ ಸಮರಸವಿದ್ದುಕೊಂಡು ಹೊರಗೆ [ಬಹಿರಂಗದಲ್ಲಿ] ಸಾಧಕರಂತೆ ವರ್ತನ ಮಾಡುವವನೇ ಸಿದ್ಧನೆನಿಸುವನು. ನೀವು ಸ್ವತಃ ಉತ್ತಮ ಸಾಧಕರಾಗದ ಹೊರತು ಸಿದ್ಧರ ಅವಸ್ಥೆಯ ಬಗ್ಗೆ ನಿಮಗೆ ಸರಿಯಾಗಿ ತಿಳಿಯುವದು. ಕಠಿಣವಿರುವದು.

### ದಶಕ ೮. ಸಮಾಸ ೯ : ಸಿದ್ಧ ಲಕ್ಷಣ (ನುಡಿ ೬೦)

ಸಿದ್ಧ ಪುರುಷನ ಲಕ್ಷಣಗಳನ್ನು ಹೇಳಬೇಕೆಂದು ಶ್ರೋತಾಜನ ವಿನಂತಿ ಮಾಡಿಕೊಂಡಿದ್ದರು. ಅದಕ್ಕೆ ಉತ್ತರವನ್ನು ಹೇಳುತ್ತಾರೆ:- ಯಾವನಾದರೊಬ್ಬ ಮನುಷ್ಯ ಅಮೃತವನ್ನು ಕುಡಿದರೆ ಅದು ಹೊಟ್ಟೆಯಲ್ಲಿ ಹೋದ ಕೂಡಲೇ ಅವನ ಶರೀರದ ಕಾಂತಿ ಬದಲಾಗುತ್ತದೆ. ಇದರಂತೆ ಆತ್ಮಸಾಕ್ಷಾತ್ಕಾರವಾಗಿ ಬ್ರಾಹ್ಮೀಸ್ಥಿತಿ ಅವನಲ್ಲಿ ನೆಲೆಗೊಂಡಿತೆಂದರೆ ಅಂಥ ಸಾಧು ಸಂತರಲ್ಲಿ ಯಾವ ಲಕ್ಷಣಗಳು ಕಂಡು ಬರುವವು. ಇದನ್ನು ವಿಸ್ತಾರವಾಗಿ ಹೇಳಬೇಕು. [೧] ಎಂಥವನಿಗೆ ಶುದ್ಧ ಆತ್ಮಜ್ಞಾನವಾಗಿರುವದೆಂಬುದನ್ನು ಹೇಗೆ ಗುರುತಿಸಬೇಕು? ಈ ಪ್ರಶ್ನೆಗಳಿಗೆ ಉತ್ತರ ಕೊಡುವವರಿಗಾಗಿ ಸಿದ್ಧಪುರುಷನ ಲಕ್ಷಣಗಳನ್ನು ಹೇಳುವೆನು. [೨]

ಏಕ ಸಿದ್ಧಾಂಚೇ ಲಕ್ಷಣ । ಸಿದ್ಧ ಮ್ಹಣಿಜೆ ಸ್ವರೂಪ ಜಾಣ ।
ತೇಥೇ ಸಾಹಾತಾ ವೇಗಳೇಪಣ । ಮುಳೀ ಚ ನಾಹೀ ॥೩॥
ಸ್ವರೂಪ ಹೋಊನ ರಾಹಿಜೆ । ತಯಾ ನಾವ ಸಿದ್ಧ ಬೋಲಿಜೆ ।
ಸಿದ್ಧ ಸ್ವರೂಪೀ ಚ ಸಾಜೆ । ಸಿದ್ಧಪಣ ॥೪॥
ವೇದಶಾಸ್ತ್ರೀ ಜೇ ಪ್ರಸಿದ್ಧ । ಸಸ್ವರೂಪ ಸ್ವತಸಿದ್ಧ ।
ತಯಾಸಿ ಚ ಬೋಲಿಜೆ ಸಿದ್ಧ । ಅನ್ಯಥಾ ನ ಘಡೆ ॥೫॥
ತಥಾಪೀ ಬೋಲೋ ಕಾಹೀ ಯೇಕ । ಸಾಧಕಾಸ ಕಳಾಯಾ ವಿವೇಕ ।
ಸಿದ್ಧಲಕ್ಷಣಾಚೇ ಕೌತುಕ । ತೇ ಹೇ ಐಸೇ ಅಸೆ ॥೬॥
ಅಂತರಸ್ಥಿತ ಸ್ವರೂಪ ಜಾಲೀ । ಪುಢೇ ಕಾಯಾ ಕೈಸೀ ವರ್ತಲೀ ।
ಜೈಸೀ ಸ್ವಪ್ನೀಚೀ ನಾಥಿಲೀ । ಸ್ವಪ್ನರಚನಾ ॥೭॥
ತಥಾಪೀ ಸಿದ್ಧಾಚೇ ಲಕ್ಷಣ । ಕಾಹೀ ಕರೂ ನಿರೂಪಣ ।
ಜೇಣೇ ಬಾಣೆ ಅಂತರ್ಖೂಣ । ಪರಮಾರ್ಥಾಚೀ ॥೮॥
ಸದಾ ಸ್ವರೂಪಾನುಸಂಧಾನ । ಹೇ ಮುಖ್ಯ ಸಾಧೂಚೇ ಲಕ್ಷಣ ।
ಜನೀ ಅಸೋನ ಆಪಣ । ಜನಾವೇಗಳಾ ॥೯॥
ಸ್ವರೂಪೀ ದೃಷ್ಟೀ ಪಡತಾ । ತುಟೋನ ಗೇಲೀ ಸಂಸಾರ ಚಿಂತಾ ।
ಪುಢೇ ಲಾಗಲೀ ಮಮತಾ । ನಿರೂಪಣಾಚೀ ॥೧೦॥
ಹೇ ಸಾಧಕಾಚೇ ಲಕ್ಷಣ । ಪರೀ ಸಿದ್ಧಾಅಂಗೀ ಅಸೆ ಜಾಣ ।
ಸಿದ್ಧಲಕ್ಷಣ ಸಾಧಕೇವಿಣ । ಬೋಲೋ ಚ ನಯೆ ॥೧೧॥
ಬಾಹ್ಯ ಸಾಧಕಾಚೆ ಪರೀ । ಆಣೀ ಸ್ವರೂಪಾಕಾರ ಅಂತರೀ ।
ಸಿದ್ಧಲಕ್ಷಣ ತೇ ಚತುರೀ । ಜಾಣಿಜೆ ಐಸೇ ॥೧೨॥
ಸಂದೇಹರಹಿತ ಸಾಧನ । ತೇ ಚಿ ಸಿದ್ಧಾಚೇ ಲಕ್ಷಣ ।
ಅಂತರ್ಬಾಹ್ಯ ಸಮಾಧಾನ । ಚಳೇನಾ ಐಸೇ ॥೧೩॥
ಅಚಳ ಜಾಲೀ ಅಂತರ ಸ್ಥಿತೀ । ತೇಥೇ ಚಳಣಾಸ ಕೈಚೀ ಗತೀ ।
ಸ್ವರೂಪೀ ಲಾಗತಾ ವೃತ್ತೀ । ಸ್ವರೂಪ ಚಿ ಜಾಲೀ ॥೧೪॥
ಮಗ ತೋ ಚಳತಾಚ ಅಚಳ । ಚಂಚಳಪಣೇ ನಿಶ್ಚಳ ।
ನಿಶ್ಚಳ ಅಸೋನ ಚಂಚಳ । ದೇಹ ತ್ಯಾಚಾ ॥೧೫॥
ಸ್ವರೂಪೀ ಸ್ವರೂಪ ಚಿ ಜಾಲಾ । ಮಗ ತೋ ಪಡೋನಿಚ ರಾಹಿಲಾ।
ಅಥವಾ ಉಠೋನಿ ಪಳಾಲಾ । ತರೀ ಚಳೇನಾ ॥೧೬॥

ವಾಸ್ತವಿಕವಾಗಿ ಮುಖ್ಯ ಸಿದ್ಧ ಲಕ್ಷಣವೆಂದರೆ ಅಂತರ್ಯಾಮದಲ್ಲಿ ಸ್ವಸ್ವರೂಪಾಕಾರವಾಗುವದೇ ಖರೇ ಸಿದ್ಧಲಕ್ಷಣವಿರುವದು. ಆದರೆ ಸಾಧಕರಿಗೆ ಸುಲಭವಾಗಿ ತಿಳಿಯಲೆಂದು ಕೆಲವೊಂದು ಲಕ್ಷಣಗಳನ್ನು ಹೇಳುವರು;– ಸಿದ್ಧರ ಲಕ್ಷಣಗಳನ್ನು ಕೇಳಿರಿ. ಯಾವನು ಆತ್ಮಸ್ವರೂಪ ಇರುವನೋ ಅವನೇ ಸಿದ್ಧನು. ಸಿದ್ಧ ಮತ್ತು ಆತ್ಮ ಸ್ವರೂಪ ಇದರಲ್ಲಿ ಎಳ್ಳಷ್ಟು ಭೇದವಿಲ್ಲ. [ಅಂತರ, ಫರಕ, ಇರುವದಿಲ್ಲ] [೩] ಯಾವನು ಸ್ವಸ್ವರೂಪಾಕಾರವಾಗಿ ಇರುವನೋ ಅಂಥವನಿಗೆ ಸಿದ್ಧನೆಂದು ಅನ್ನುವರು. ಆತ್ಮಸ್ವರೂಪವು ಸ್ವತಃ ಸಿದ್ಧ ಇರುವದು. ಇದರೊಂದಿಗೆ ತದಾಕಾರ [ಏಕರೂಪ]ವಾದ ಪುರುಷನಿಗೆ ಅಂದರೆ ಬ್ರಹ್ಮರೂಪನಾದವನಿಗೆ ಸಿದ್ಧನೆಂದರೆ ಶೋಭಿಸುವದು. [೪] ಆತ್ಮಸ್ವರೂಪ ಸ್ವತಃ ಸಿದ್ಧವಿರುವದು. ಈ ಮಾತು ವೇದ ಶಾಸ್ತ್ರಗಳಲ್ಲಿ ಪ್ರಸಿದ್ಧವಿರುವದು. ಈ ಸ್ವಯಂಭೂ ಸ್ವರೂಪವನ್ನು ಯಾವನು ಹೊಂದುವನೋ ಅವನಿಗೆ ಸಿದ್ಧನೆನ್ನಬೇಕು ಇತರರಿಗೆ ಸಿದ್ಧ ಶಬ್ದವನ್ನು ಹಚ್ಚಲಿಕ್ಕೆ [ಉಪಯೋಗಿಸಲಿಕ್ಕೆ] ಬರುವದಿಲ್ಲ. [೫] ಸಿದ್ಧನನ್ನು ದೇಹದ ಅವಸ್ಥೆಯ ಮೇಲಿನಿಂದ ಗುರುತಿಸಲು ಬರುವದಿಲ್ಲ. ಸಂದೇಹರಹಿತ ಸಾಧನ ಸದೈವ [ಯಾವಾಗಲೂ] ಸ್ವರೂಪಾನುಸಂಧಾನ ಮತ್ತು ಒಳಗೂ ಹೊರಗೂ ಸಮಾಧಾನ ಈ ಮೂರು ಸಿದ್ಧನಾದ ಪುರುಷನ ಲಕ್ಷಣಗಳಿರುವವು;– ಇದೆಲ್ಲ ನಿಜವಿದ್ದರೂ ಸಹ ಸಾಧಕರಿಗೆ ಸಿದ್ಧಾವಸ್ಥೆಯ ಕಲ್ಪನೆ ಬರಬೇಕೆಂದು ಸಿದ್ಧ ಲಕ್ಷಣಗಳನ್ನು ಕೌತುಕದಿಂದ ವರ್ಣಿಸಿ ಹೇಳುವೆನು. [೬] ಯಾವನ ಅಂತರಂಗವು ಸ್ವಸ್ವರೂಪಮಯ ಆಗಿದೆಯೋ ಅಂಥವನ ದೇಹದ ವ್ಯಾಪಾರವೇನೂ ನಿಲ್ಲುವದಿಲ್ಲ. ಅದು ನಡೆದೇ ಇರುವದು. ಆದರೆ ಹೇಗೆ? ಸ್ವಪ್ನದಲ್ಲಿ ಕಾಣುವ ವಿಷಯ ಖೊಟ್ಟಿ ಇರುವದು. ಆದರೆ ಅವು ಸ್ವಪ್ನದ ಮಟ್ಟಿಗೆ ಮಾತ್ರ ನಿಜವಿರುವವು. ಇದರಂತೆಯೇ ಸಿದ್ಧನದೇಹ ಮಿಥ್ಯತೆಯಿಂದ ಸರ್ವವ್ಯಾಪಾರ–ವ್ಯವಹಾರ ಮಾಡುವದು. [೭] ಆದರೂ ಸಹ ಸಿದ್ಧರ ಲಕ್ಷಣಗಳ ಬಗ್ಗೆ ಸರ್ವ ಸಾಧಾರಣ ರೀತಿಯಲ್ಲಿ ವರ್ಣನೆಯನ್ನು ಮಾಡುವೆನು. ಈ ವರ್ಣನೆಯಿಂದ ಪರಮಾರ್ಥದ ಅಂತರಂಗ ಹೇಗಿರುವ ದೆಂಬುದರ ಉತ್ತಮ ಕಲ್ಪನೆ ಬರುವದು. [೮] ಸದಾ ಸರ್ವಕಾಲವೂ ಆತ್ಮಸ್ವರೂಪದೊಂದಿಗೆ ಮನಃಪೂರ್ವಕ ಅಂಟಿ ಕೊಂಡಿರುವದೇ ಸಾಧು ಸಿದ್ಧನ ಪ್ರಧಾನ ಲಕ್ಷಣವಿರುವದು. ಇವನು ದೇಹದಿಂದ ಲೋಕದಲ್ಲಿ[ಜನರಲ್ಲಿ]ಕಾಣಿಸಿಕೊಂಡರೂ ಮನದಿಂದ ಇವನು ಲೋಕದ ಜನಗಳಿಂದ ಬೇರೆ ಇರುವನು. [೯] ಆತ್ಮಸ್ವರೂಪದರ್ಶನದಲ್ಲಿಯೇ ಇರುವದರಿಂದ ಇವನಿಗೆ ಪ್ರಪಂಚದ ಕಾಳಜಿ ಎಳ್ಳಷ್ಟು ಇರುವದಿಲ್ಲ. ಇದರಿಂದಾಗಿ ಇವನಿಗೆ ಸ್ವಸ್ವರೂಪದ ವರ್ಣನದ ರುಚಿ ಉತ್ಪನ್ನ ವಾಗುವದು. [೧೦] ನಿಜವಾಗಿ ಇವು ಸಾಧಕನಲ್ಲಿಯ ಉತ್ತಮ ಲಕ್ಷಣಗಳಿರುವವು. ಆದರೆ ಇವು ಸಿದ್ಧರಲ್ಲಿಯೂ ಕಾಣುವವು. ಇದು ಯೋಗ್ಯವೇ ಇರುವದು. ಯಾಕೆಂದರೆ [ಸಾಧಕನ ಲಕ್ಷಣ ಹೇಳದ ಹೊರ್ತು ಸಿದ್ಧರ ಲಕ್ಷಣ ಹೇಳಲಿಕ್ಕೆ ಬರುವದಿಲ್ಲ] ಸಾಧಕತನದಿಂದಲೇ ಸಿದ್ಧಾವಸ್ಥೆಯು ಪ್ರಾಪ್ತವಾಗುವದಿರುವದು. [೧೧] ಅಂತೆಯೇ ಹೊರಗಿ ನಿಂದ ನೋಡಲಿಕ್ಕೆ ಯಾವನು ಸಾಧಕನಂತೆ ಕಾಣುವನೋ ಅವನ ಅಂತರ್ಯಾಮವು ಮಾತ್ರ ಆತ್ಮಸ್ವರೂಪದೊಂದಿಗೆ ತದಾಕಾರ[ಏಕರೂಪ]ವಾಗಿರುತ್ತದೆ. ಇವನು ಸಿದ್ಧನು–ಬುದ್ಧಿವಂತರಾದವರು ಸಿದ್ಧಪುರುಷರ ಈಲಕ್ಷಣಗಳನ್ನು ತಿಳಿದುಕೊ ಳ್ಳಬೇಕು. [೧೨] ಅತ್ಯಂತ ಸಂಶಯರಹಿತರಾಗಿ ಸಾಧನ ಮಾಡುವದೇ ಸಿದ್ಧರ ಲಕ್ಷಣವು ಎಂದೂ ಭಂಗವಾಗದಿರುವಂಥ ಸಮಾಧಾನವು ಅವನಲ್ಲಿ ಒಳಗೂಹೊರಗೂ ಭರಪೂರ ಯಾವಾಗಲೂ ಇರುವದು. [೧೩] ಯಾವನ ಮನದಸ್ಥಿತಿ ಅತ್ಯಂತ ನಿಶ್ಚಲವಾಗಿದೆಯೋ ಅವನ ಮನವು ಎಂದೂ ಅಸ್ವಸ್ಥವಾಗುವದಿಲ್ಲ. ನಮ್ಮ ವೃತ್ತಿ ಒಮ್ಮೆ ಸ್ವಸ್ವರೂಪಕ್ಕೆ ಅಂಟಿ ಕೊಂಡಿತೆಂದರೆ ಅದು ಆಮೇಲೆ ಸ್ವರೂಪಾಕಾರವೇ ಆಗಿ ಬಿಡುವದು. [೧೪] ಆಮೇಲೆ ಅವನು ದೇಹದಿಂದ ವ್ಯವ ಹಾರ [ಹಾಲಚಾಲ] ಮಾಡಿದರೂ ಸಹ ಅಂತರ್ಯಾಮದಲ್ಲಿ ಸ್ಥಿರವಿರುವನು. ಬಾಹ್ಯದಲ್ಲಿ ಚಂಚಲನಾಗಿ ಕಂಡರೂ ನಿಶ್ಚಲನಾಗಿರುವನು. ಅಂತರ್ಯಾಮದಲ್ಲಿ ಅವನ ವೃತ್ತಿ ಅತ್ಯಂತ ನಿಶ್ಚಲವಿರುವದು. ದೇಹ ಮಾತ್ರ ಚಂಚಲತನದಿಂದ ಹಾಲಚಾಲ ಮಾಡುವದು. [೧೫] ಸ್ವಸ್ವರೂಪದಲ್ಲಿ ವಿಲೀನವಾಗಿ ಯಾರು ಸ್ವಸ್ವರೂಪಾಕಾರವೇ ಆದರೋ ಅವರು ದೇಹದಿಂದ ಒಂದು ಸ್ಥಳದಲ್ಲಿ ಬಿದ್ದುಕೊಂಡಿರಲಿ ಅಥವಾ ಎದ್ದು ಓಡಾಡಲಿ ಇದರಲ್ಲಿ ಆಶ್ಚರ್ಯ ಪಡುವಂಥದೇನೂ ಇಲ್ಲ. ದೇಹದ ಎರಡೂ ಅವಸ್ಥೆಯಲ್ಲಿಯೂ ಅಂತರಂಗದಲ್ಲಿ ಇವನು ಅತ್ಯಂತ ಸ್ಥಿರವಿರುವನು. [೧೬]

ಯೇಥೇ ಕಾರಣ ಅಂತರಸ್ಥಿತೀ । ಅಂತರೀ ಚ ಪಾಹಿಜೆ ನಿವೃತ್ತೀ ।
ಅಂತರ ಲಾಗಲೇ ಭಗವಂತೀ। ತೋ ಚಿ ಸಾಧು ॥೧೭॥

ಬಾಹ್ಯ ಭಲತೈಸೇ ಅಸಾವೇ । ಪರೀ ಅಂತರ ಸ್ವರೂಪೀ ಲಾಗಾವೇ ।
ಲಕ್ಷಣೇ ದಿಸತೀ ಸ್ವಭಾವೇ । ಸಾಧುಅಂಗೀ ॥೧೮॥

ರಾಜೀ ಬೈಸತಾ ಅವಲಿಳಾ । ಅಂಗೀ ಬಾಣೆ ರಾಜಕಳಾ ।
ಸ್ವರೂಪೀ ಲಾಗತಾ ಜಿವ್ಹಾಳಾ । ಲಕ್ಷಣೇ ಬಾಣತೀ ॥೧೯॥

ಯೆರವ್ಹೀ ಅಭ್ಯಾಸ ಕರಿತಾ । ಹಾತಾ ನ ಚಢತೀ ಸರ್ವಥಾ ।
ಸ್ವರೂಪೀ ರಾಹಾವೇ ತತ್ವತಾ । ಸ್ವರೂಪ ಹೋಉನೀ ॥೨೦॥

ಅಭ್ಯಾಸಾಚಾ ಮುಗುಟಮಣೀ । ವೃತ್ತೀ ರಾಹಾವೀ ನಿರ್ಗುಣೀ ।
ಸಂತಸಂಗೇ ನಿರೂಪಣೀ । ಸ್ಥಿತೀ ಬಾಣೇ ॥೨೧॥

ಐಸೀ ಲಕ್ಷಣೇ ಬರವೀ । ಸ್ವರೂಪಾಕಾರೇ ಅಭ್ಯಾಸಾವೀ ।
ಸ್ವರೂಪ ಸೋಡಿತಾ ಗೋಸಾವೀ । ಭಾಂಬಾವತೀ ॥೨೨॥

ಆತಾ ಅಸೋ ಹೇ ಬೋಲಣೇ । ಐಕಾ ಸಾಧೂಚೀ ಲಕ್ಷಣೇ ।
ಜೇಣೇ ಸಮಾಧಾನ ಬಾಣೇ । ಸಾಧಕಾಅಂಗೀ ॥೨೩॥

ಸ್ವರೂಪೀ ಭರತಾ ಕಲ್ಪನಾ । ತೇಥೇ ಕೈಚೀ ಉರೇಲ ಕಾಮನಾ ।
ಮ್ಹಣೌನಿಯಾ ಸಾಧುಜನಾ । ಕಾಮ ಚಿ ನಾಹೀ ॥೨೪॥

ಕಲ್ಪಿಲಾ ವಿಷಯೋ ಹಾತೀಚಾ ಜಾವಾ । ತೇಣೇ ಗುಣೇ ಕ್ರೋಧ ಯಾವಾ ।
ಸಾಧುಜನಾಚಾ ಅಕ್ಷೈ ಠೇವಾ । ಜಾಣಾರ ನಾಹೀ ॥೨೫॥

ಮ್ಹಣೋನಿ ತೇ ಕ್ರೋಧರಹಿತ । ಜಾಣತೀ ಸ್ವರೂಪ ಸಂತ ।
ನಾಸಿವಂತ ಹೇ ಪದಾರ್ಥ । ಸಾಂಡೂನಿಯಾ ॥೨೬॥

ಜೇಥೇ ನಾಹೀ ದುಸರೀ ಪರೀ । ಕ್ರೋಧ ಯಾವಾ ಕೋಣಾವರೀ ।
ಕ್ರೋಧರಹಿತ ಸಚರಾಚರೀ । ಸಾಧುಜನ ವರ್ತತೀ ॥೨೭॥

ಸಿದ್ಧಾವಸ್ಥೆಯು ಪ್ರಾಪ್ತವಾಗಬೇಕಾದರೆ ಒಳಗಿನ ಅವಸ್ಥೆಯೇ ಮುಖ್ಯಕಾರಣವಿರುವದು. ಅಂದರೆ ಅಂತರಂಗದಲ್ಲಿ ವೃತ್ತಿರಹಿತ ಅವಸ್ಥೆ ಇರಬೇಕಾಗುವದು. ಯಾರ ವೃತ್ತಿಯು [ಅಂತಃಕರಣವು] ಭಗವಂತನ ಕಡೆಗೆ ಸದಾ ಸರ್ವಕಾಲ ಇರುವದೋ ಅವರೇ ಸಾಧು ಸಂತರು. [೧೭] ಹೊರನೋಟದಲ್ಲಿ ಹೇಗಿದ್ದರೂ ನಡೆಯುವದು. ದೇಹದ ಅವಸ್ಥೆ ಸಹ ಹೇಗಿದ್ದರೂ ಅಡ್ಡಿ ಇಲ್ಲ. ಆದರೆ ಅಂತರಂಗ ಅಥವಾ ಮನವು ಆತ್ಮಸ್ವರೂಪಕ್ಕೆ ಅಂಟಿಕೊಂಡಿರಬೇಕು. ಅಂದರೆ ಅವನಲ್ಲಿ ಆಗ ಸಿದ್ಧಲಕ್ಷಣಗಳು ತನ್ನಿಂದ ತಾನೇ ಪ್ರಕಟವಾಗಹತ್ತುವವು. [೧೮] ಒಬ್ಬ ಮನುಷ್ಯ ಸಹಜ ಯೋಗಾಯೋಗದಿಂದ ರಾಜ್ಯ ಪದಕ್ಕೆ ಬಂದನೆಂದರೆ ಅವನಿಗೆ ರಾಜನ ಐಶ್ವರ್ಯವೆಲ್ಲ ಪ್ರಾಪ್ತವಾಗುವದು. ಇದರಂತೆಯೇ ಯಾರಿಗೆ ಸ್ವಸ್ವರೂಪದ ಬಗ್ಗೆ ಆದರ ಪ್ರೇಮ ಉತ್ಪನ್ನವಾಗುವವೋ, ಯಾರಿಗೆ ಇದರಲ್ಲಿ ಅಭಿರುಚಿ ನಿರ್ಮಾಣವಾಗುವದೋ ಅಂಥವರಲ್ಲಿ ಸಿದ್ಧರಲಕ್ಷಣಗಳು ತಮ್ಮಷ್ಟಕ್ಕೆ ತಾವೇ ಶೋಭಿಸುವವು. ಹೊರಬೀಳುವವು[೧೯] ಇದರ ಹೊರತಾಗಿ ಸಿದ್ಧ ಲಕ್ಷಣದ ಅಭ್ಯಾಸ ಎಷ್ಟೇ ಮಾಡಿದರೂ ಸಹ ಅದು ಸಾಮಾನ್ಯರಲ್ಲಿ ಬರಲಾರದು. ಅಂತೆಯೇ ಸ್ವಸ್ವರೂಪದಲ್ಲಿ ತದಾಕಾರವಾಗಬೇಕು. ಮತ್ತು ಸ್ವರೂಪರೇ ಆಗಿ ಇರಬೇಕು.[೨೦]ನಿಮ್ಮ ವೃತ್ತಿಯನ್ನು ನಿರ್ಗುಣ ಸ್ವರೂಪದಲ್ಲಿಯೇ ಇರುವಂತೆ ಮಾಡಬೇಕು. ಇದೇ ಪರಮಾರ್ಥ ಸಾಧನೆಯಲ್ಲಿಯ ಕೊನೆಯ ಪ್ರಯತ್ನ ವಿರುವದು. [ಶಿರೋರತ್ನವಿರುವದು]. ವೃತ್ತಿಯನ್ನು ತ್ರಿಗುಣಾತೀತನಾದ ಪರಮಾತ್ಮ ಸ್ವರೂಪದಲ್ಲಿ ಇರಿಸುವದೇ ಸಾಧನಾಭ್ಯಾಸದ ಸರ್ವೋತ್ತಮ ಮೆಟ್ಟಲಾಗಿದೆ. ಸಂತಸಾಧು ಸಂಗತಿಯಲ್ಲಿ ಇದ್ದು ಸತತವಾಗಿ ಶ್ರವಣ ಮನನ ಮಾಡಿದ್ದಾವರೆ (ವೃತ್ತಿಯು ನಿರ್ಗುಣದಲ್ಲಿ ಸತತವೂ ಲೀನವಾಗಿ ಇರುವಂಥ ಶ್ರೇಷ್ಠ ಅಭ್ಯಾಸ ಮಾಡಬೇಕು. ಅಂದರೆ)ಆಗ ಈ ಅವಸ್ಥೆ ಬರುವದು. (೨೧) ಸ್ವಸ್ವರೂಪದೊಂದಿಗೆ ತದಾಕಾರ ಹೊಂದುವ ಅಭ್ಯಾಸ ಮಾಡುವಾಗ ಈ ಲಕ್ಷಣಗಳ ಅಭ್ಯಾಸವನ್ನೂ ಮಾಡಬೇಕು. ಸ್ವಸ್ವರೂಪದ ಸ್ಪರ್ಶ ಕಡಿವರೆ (ತಪ್ಪಿದರೆ) ದೊಡ್ಡ ಯೋಗ್ಯತೆಯ ಸಾಧಕನೂ ಸಹ ಗೊಂದಲಗೊಳ್ಳುವನು, ಗಾಬರಿಯಾಗುವನು. (೨೨) ಇನ್ನು ಮೇಲೆ ಸಾಧು ಸಂತರ ಲಕ್ಷಣದ ವರ್ಣನೆ ಇರುವದು. ಸಮಗ್ರ ಲಕ್ಷಣಗಳನ್ನು ನೋಡಿದ್ದಾದರೆ ಕಂಡು ಬರುವದೇನಂದರೆ ಪಶುತನ ಮತ್ತು ಮನುಷ್ಯತನ ಇವೆರಡೂ ನಿರ್ಮಲವಾದದ್ದರಿಂದ ಸಾಧು ಸಂತರ ಮನವು ಒಂದು ಬೇರೆ ಪ್ರಕಾರದ (ಪಾತಳಿಯಲ್ಲಿ) ಮಟ್ಟದಲ್ಲಿ ಇರುವದು. ಆದರೆ ಯಾವನೇ ಸಾಧು ಸಂತನು ಪಶುತನ ಮತ್ತು ಮನುಷ್ಯತನ ಇವುಗಳನ್ನು ಇಲ್ಲದಂತೆ ಮಾಡುವ ಹವ್ಯಾಸಕ್ಕೆ ಹೋಗದೇ ಅವನು ತನ್ನ ವೃತ್ತಿ ಸ್ವರೂಪಾಕಾರ ಮಾಡುವ ಅಭ್ಯಾಸವನ್ನು ಹಗಲೂ ರಾತ್ರಿ ಮಾಡಬೇಕು. ಈ ಅಭ್ಯಾಸದಿಂದ ಉಳಿದವುಗಳೆಲ್ಲ ತಮ್ಮಷ್ಟಕ್ಕೆ ತಾವೇ ಘಟಿಸುವವು:– ಈಗ ಈ ಮಾತು ಸಾಕು. ಸಾಧುವಿನ ಲಕ್ಷಣ ಹೇಳುವೆ ಕೇಳಿರಿ. ಇವನ್ನು ಕೇಳಿವರೆ ಸಾಧಕರಲ್ಲಿ ಸಮಾಧಾನ ಉಂಟಾಗುವದಕ್ಕೆ ಸಹಾಯವಾಗುವದು. (೨೩)ಯಾರ ಕಲ್ಪನೆಯಲ್ಲಿ ಕೇವಲ ಸ್ವಸ್ವರೂಪವೇ ತುಂಬಿರುವದೋ ಅಲ್ಲಿ ಯಾವುದೇ ಇಚ್ಛೆ ಅಥವಾ ಕಾಮನಾ ಇರಲಿಕ್ಕೆ ಸಾಧ್ಯ ವಿಲ್ಲ. ಆದ್ದರಿಂದ ಸಾಧು ಸಂತರಿಗೆ ಯಾವುದೇ ಕಾಮನಾ ಇರುವದಿಲ್ಲ. ಅವನು ನಿಷ್ಕಾಮನಿರುವನು. (೨೪) ಯಾವುದೇ ವಸ್ತು ಅಥವಾ ಯಾವುದೇ ಭೋಗ ದೊರಕಬೇಕೆಂಬ ಕಲ್ಪನೆಯನ್ನು ಮಾಡಿ ಅದು ಅಂದರೆ ಬೇಕೆನಿಸಿದ ವಸ್ತು ಅಥವಾ ಭೋಗ ಕೈಗೆ ದೊರಕದಿದ್ದರೆ ಮನುಷ್ಯನಿಗೆ ಕ್ರೋಧ ಬರುವದು. ಆದರೆ ಸ್ವಸ್ವರೂಪ ಇದು ಸಾಧುವಿನ ಅಕ್ಷಯವಾದ ಠೇವಾಗಿರುವದು. ಇದು ಎಂದಿಗೂ ಕೈಮೀರಿ ಹೋಗುವದಿಲ್ಲ. (೨೫) ಆದ್ದರಿಂದ ಸಾಧು ಅತ್ಯಂತ ಕ್ರೋಧರಹಿತನಾಗಿರುವನು. ಯಾವತ್ತೂ ನಾಶವಂತವಾದ ದೃಶ್ಯಪದಾರ್ಥಗಳನ್ನು ಬಾಜೂಕ್ಕೆ ಸರಿಸಿ ಶಾಶ್ವತವಿರುವ ಸ್ವಸ್ವರೂಪವನ್ನು ತಿಳಿಯುವನು. ಈ ಸ್ವರೂಪದ ಸಾಕ್ಷಾತ್‌ದರ್ಶನ ಮಾಡಿಕೊಳ್ಳುವನು. (೨೬) ಈ ದರ್ಶನದಲ್ಲಿ ಆತ್ಮಸ್ವರೂಪನಾದ ನಾನು ಸರ್ವ ಸ್ಥಳದಲ್ಲಿಯೂ ವ್ಯಾಪಿಸಿ ಇರುವೆನು ಅನ್ನುವ ಅನುಭವ ಇರುವದು. ಅರ್ಥಾತ್ ನನ್ನ ಹೊರತಾಗಿ ಜಗತ್ತಿನಲ್ಲಿ ಎರಡನೆಯದಾವದೂ ಇಲ್ಲವೆಂಬ ಭೂಮಿಕೆಯ ಮೇಲೆ ಸಾಧು ಸಂತರು ಇರುವರು. ನನ್ನ ಹೊರತಾಗಿ ಎರಡನೆಯವರಾರೂ ಇಲ್ಲವೆಂದ ಮೇಲೆ ಸಿಟ್ಟಿಗೇಳುವದಾದರೂ ಯಾರ ಮೇಲೆ? ಅನ್ನುವ ಪ್ರಶ್ನೆ ಬರುವದು. ಆದ್ದರಿಂದ ಭೂತಮಾತ್ರರೊಂದಿಗೆ ವ್ಯವಹರಿಸುವಾಗ ಸಾಧು ಪುರುಷರು ಅತ್ಯಂತ ಕ್ರೋಧರಹಿತವಾದ ವರ್ತನ ಮಾಡುವರು. (೨೭)

ಆಪುಲಾ ಆಪಣ ಸ್ವಾನಂದ । ಕೋಣಾವರೀ ಕರಾವಾ ಮದ ।
ಯಾಕಾರಣೇ ವಾದವೇವಾದ । ತುಟೋನ ಗೇಲಾ ॥೨೮॥

ಸಾಧು ಸ್ವರೂಪ ನಿರ್ವಿಕಾರ । ತೇಥೇ ಕೈಚಾ ತಿರಸ್ಕಾರ ।
ಆಪಲಾ ಆಪಣ ಮತ್ಸರ । ಕೋಣಾವರೀ ಕರಾವಾ ॥೨೯॥

ಸಾಧು ವಸ್ತು ಅನಾಯಾಸೇ । ಯಾಕಾರಣೇ ಮತ್ಸರ ನಸೇ ।
ಮದಮತ್ಸರಾಚೇ ಪಿಸೇ । ಸಾಧುಸೀ ನಾಹೀ ॥೩೦॥

ಸಾಧು ಸ್ವರೂಪ ಸ್ವಯಂಭ । ತೇಥೇ ಕೈಚಾ ಅಸೇಲ ದಂಭ ।
ಜೇಥೇ ದ್ವೈತಾಚಾ ಆರಂಭ । ಜಾಲಾ ಚ ನಾಹೀ ॥೩೧॥

ಜೇಣೇ ದೃಶ್ಯ ಕೇಲೇ ವಿಸಂಚ । ತಯಾಸ ಕೈಚಾ ಹೋ ಪ್ರಪಂಚ ।
ಯಾಕಾರಣೇ ನಿಃಪ್ರಪಂಚ । ಸಾಧು ಜಾಣಾವಾ ॥೩೨॥

ಅವಘೇ ಬ್ರಹ್ಮಾಂಡ ತ್ಯಾಚೇ ಘರ । ಪಂಚಭೂತಿಕ ಹಾ ಜೋಜಾರ ।
ಮಿಥ್ಯಾ ಜಾಣೋನ ಸತ್ವರ । ತ್ಯಾಗ ಕೇಲಾ ॥೩೩॥

ಯಾಕಾರಣೇ ಲೋಭ ನಸೇ । ಸಾಧು ಸದಾ ನಿರ್ಲೋಭ ಅಸೇ ।
ಜಯಾಚೀ ವಾಸನಾ ಸಮರಸೇ । ಶುದ್ಧ ಸ್ವರೂಪೀ ॥೩೪॥

ಆಪುಲಾ ಆಪಣ ಆಫುನಾ । ಸ್ವಾರ್ಥ ಕೋಣಾಚಾ ಕರಾವಾ ।
ಮ್ಹಣೋನಿ ಸಾಧು ತೋ ಜಾಣಾವಾ । ಶೋಕರಹಿತ ॥೩೫॥

ದೃಶ್ಯ ಸಾಂಡೂನ ನಾಸಿವಂತ । ಸ್ವರೂಪ ಸೇವಿಲೇ ಶಾಶ್ವತ ।
ಯಾಕಾರಣೇ ಶೋಕರಹಿತ । ಸಾಧು ಜಾಣಾವಾ ॥೩೬॥

ಶೋಕೇ ದುಖವಾವೀ ವೃತ್ತೀ । ತರೀ ತೇ ಜಾಹಾಲೀ ನಿವೃತ್ತೀ ।
ಮ್ಹಣೌನಿ ಸಾಧು ಆದಿಅಂತೀ । ಶೋಕರಹಿತ ॥೩೭॥

ಮೋಹೇ ಝುಳಂಬಾವೇ ಮನ । ತರೀ ತೇ ಜಾಹಾಲೇ ಉನ್ಮನ ।
ಯಾಕಾರಣೇ ಸಾಧುಜನ । ಮೋಹಾತೀತ ॥೩೮॥

ಸಾಧು ವಸ್ತು ಅದ್ವಯೆ । ತೇಥೇ ಕೈಚೇ ವಾಟೇಲ ಭಯೆ ।
ಪರಬ್ರಹ್ಮ ತೇ ನಿರ್ಭಯೆ । ತೋ ಚಿ ಸಾಧು ॥೩೯॥

ಸಾಧು ಸಂತರು ಸ್ವಸ್ವರೂಪದ ಆನಂದದಲ್ಲಿ ತಲ್ಲೀನರಾಗಿರುವರು. ಇದರಿಂದಾಗಿ ಎರಡನೆಯವರ ಮೇಲೆ ಸಿಟ್ಟಿಗೇಳಲು ಗರ್ವಿಷ್ಠ ಅಧಿಕಾರ ನಡೆಸಲು ಇವರಿಗೆ ಸವಡೇ ಇರುವದಿಲ್ಲ. ಅಂತೆಯೇ ಸಾಧುಗಳ ಜೀವನದಲ್ಲಿ ವಾದ ವಿವಾದಕ್ಕೆ ಎಳ್ಳಷ್ಟೂ ಸ್ಥಾನವಿರುವದಿಲ್ಲ. (೨೮) ಸ್ವಸ್ವರೂಪವು ವಿಕಾರರಹಿತವಿರುವದು. ಸಾಧುವು ಸ್ವರೂಪಾಕಾರ ವಿರುವನು. ಅಂತೆಯೇ ಸಾಧುವೂ ಸಹ ವಿಕಾರರಹಿತನೇ ಇರುವನು. ಇವನು ವಿಕಾರಗಳಿಂದ ಮುಕ್ತವಿರುವದರಿಂದ ಸಾಧು ಯಾರನ್ನೂ ತುಚ್ಛರೆಂದು ಹೀಯಾಳಿಸುವದಿಲ್ಲ. ಸರ್ವತ್ರದಲ್ಲಿ ತಾನೇ ಇರುವದರಿಂದ ತಾನೇ ತನ್ನ ಮೇಲೆ ಮತ್ಸರಗೊಳ್ಳುವದು ಶಕ್ಯವಿಲ್ಲ. [೨೯] ಸಾಧು ಸಹಜರೀತಿಯಲ್ಲಿ ಬ್ರಹ್ಮ ಸ್ವರೂಪನಿರುವನು. ಆದ್ದರಿಂದ ಇವನು ಎಂದೂ ಯಾರ ಮೇಲೆಯೂ ಮತ್ಸರಗೊಳ್ಳುವದಿಲ್ಲ. ಮದ, ಮತ್ಸರದ ಹುಚ್ಚುತನ ಸಾಧು ಸಂತರಲ್ಲಿ ಇರುವದಿಲ್ಲ. (೩೦) ಸಾಧು ಸ್ವರೂಪಾಕಾರ [ಬ್ರಹ್ಮಸ್ವರೂಪ] ವಾಗಿರುತ್ತಾನೆ. ಸ್ವರೂಪವು ಸರ್ವವ್ಯಾಪಿ ಇರುವದು ಮತ್ತು ಸ್ವಯಂಭೂ ಇರುವದು. ಇದರಲ್ಲಿ ಎರಡುತನ(ದ್ವಿತ್ವ)ಕ್ಕೆ ಆಸ್ಪದವೇ ಇಲ್ಲ ಎರಡನೆಯವನೊಬ್ಬ ಇದ್ದರಲ್ಲವೇ ದಂಭವನ್ನು ತೋರಿಸಲಿಕ್ಕೆ ಬರುವದು. ಎಲ್ಲಿ ಎರಡನೆಯವನು ಇಲ್ಲವೇ ಇಲ್ಲವೋ ಅಲ್ಲಿ ದಂಭವಿರಲಿಕ್ಕೆ ಶಕ್ಯವಿಲ್ಲ. ಆದ್ದರಿಂದ ಸಾಧು ಸಂತರಲ್ಲಿ ದಂಭವಿರುವದಿಲ್ಲ. (೩೧) ಈ ದೃಶ್ಯವು ಸ್ವರೂಪಕ್ಕೆ ಅಡ್ಡಬರುವದು. ದೃಶ್ಯದ ಎಲ್ಲ ವಿಸ್ತಾರವನ್ನು ಸಮೂಲವಾಗಿ ಇಲ್ಲದಂತೆ ಮಾಡಿದ ಮೇಲೆಯೇ ಸಾಧುವು ಸ್ವರೂಪಾಕಾರವಾಗಿರುವನು. ಇವನಲ್ಲಿ ಪ್ರಪಂಚದ ಜಂಜಾಟದ ಬಂಧನ ಉಳಿದಿರುವದೇ ಇಲ್ಲ. ಅದನ್ನು ಹರಿದು ಒಗೆದಿರುವನು. ಆದ್ದರಿಂದ ಸಾಧು ಸಂತರು ನಿಷ್ಪ್ರಪಂಚರಿರುವರು. (೩೨) "ಈ ವಿಶ್ವವೇ ನನ್ನ ಮನೆ ಇರುವದು" ಈ ಭಾವನೆಯು ಸಾಧುವಿನಲ್ಲಿರುವದು. ಪಂಚಭೂತಗಳ ಈ ತೊಡಕಿನ ಅವಾಢವ್ಯ ವಿಸ್ತಾರವು ಖೊಟ್ಟಿ ಇರುವದೆಂದು ತಿಳಿದಿರುವನು. ಈ ಎಲ್ಲ ಉಪಾಧಿಯನ್ನು ಕೂಡಲೇ ತ್ಯಾಗ ಮಾಡುವನು. (೩೩) ಇದರಿಂದಾಗಿ ಸಾಧುವಿನಲ್ಲಿ ಲೋಭವಿರುವದಿಲ್ಲ. ಇವನು ಯಾವಾಗಲೂ ನಿರ್ಲೋಭಿಯಾಗಿರುವನು. ಇವನ ವಾಸನಾ ಆತ್ಮಸ್ವರೂಪದೊಂದಿಗೆ ಸಮರಸವಾಗಿ ಹೋಗಿರುವದರಿಂದ ಇವನಲ್ಲಿ ಬೇಕು-ಬೇಡವೆನ್ನುವ ಇಚ್ಛೆ ಸರ್ವಸ್ವೀ ನಾಶವಾಗಿರುವದು. (೩೪) ಅತ್ತ ಇತ್ತ ಎಲ್ಲಿ ಅಂದರೆ ಅಲ್ಲೆಲ್ಲ ನನ್ನದಾದ ನಾನೇ ಹಬ್ಬಿರುವೆನು ಅನ್ನುವ ಸಾಕ್ಷಾತ್ ಅನುಭವವು ಸಾಧುವಿಗೆ ಬರುವದು. ಅಂದ ಮೇಲೆ ನಾನು ಒಬ್ಬ ವ್ಯಕ್ತಿ ಅನ್ನುವ ಭಾವನೆಯಿಂದ ಸ್ವಾರ್ಥ ಸಾಧಿಸಿಕೊಳ್ಳಬೇಕೆಂಬ ಇಚ್ಛೆ ಅವನಿಗೆ ಉಳಿದಿರುವದೇ ಇಲ್ಲ. ಆದ್ದರಿಂದ ಸಾಧು ಶೋಕರಹಿತನಿರುವನು. ದುಃಖದ ಮೂಲ ಸ್ವಾರ್ಥಬುದ್ಧಿ ಇರುವದು. ಈ ಸ್ವಾರ್ಥ ಬುದ್ಧಿಯೇ ನಾಶವಾದ ಮೇಲೆ ದುಃಖವು ತನ್ನಷ್ಟಕ್ಕೆ ತಾನೇ ಇಲ್ಲದಂತಾಗುವದು. (೩೫) ಇದಲ್ಲದೇ ದೃಶ್ಯದ ಆಸಕ್ತಿಯು ದುಃಖಕ್ಕೆ ಕಾರಣವಾಗಿರುವದು. ಆದರೆ ದೃಶ್ಯ ವೆಲ್ಲವೂ ನಾಶವಂತವಿರುವದೆಂದು ಖಾತ್ರಿಯಾದ ಮೇಲೆ ಸಾಧುವು ಇವುಗಳಿಂದ ದೂರ ಸರಿದು ಬಿಡುವನು. ಮತ್ತು ಶಾಶ್ವತ ಆತ್ಮಸ್ವರೂಪದ ಅಖಂಡ ಸೇವನ ಮಾಡುವನು. ಅಂತೆಯೇ ಸಾಧು ಶೋಕಮುಕ್ತನಾಗಿರುವನು. ಇವನ್ನೆಲ್ಲ ನೀವು ತಿಳಿಯಬೇಕು. (೩೬) ಸುಖ ಮತ್ತು ದುಃಖ ಇವು ನಮ್ಮ ವೃತ್ತಿಯ (ಮನಸ್ಥಿತಿಯ ಭಾವನೆಯ) ಧರ್ಮ (ಗುಣ) ಇರುವದು. ಆದರೆ ಸಾಧು ಸಂತರಲ್ಲಿ ವೃತ್ತಿಯೇ ಇಲ್ಲದಂತಾಗಿ ಬಿಟ್ಟಿರುತ್ತದೆ. ದುಃಖದ ವೃತ್ತಿಯ ನಿರ್ಮಾಣವೇ ಆಗುವದಿಲ್ಲ. ಆದ್ದರಿಂದ ಆರಂಭದಿಂದ ಕೊನೆಯವರೆಗೆ ಸಾಧು ಸಂತರು ದುಃಖರಹಿತರಾಗಿರುವರು. (೩೭) ಇವರ ಮನಸ್ಸು ಮೋಹದಿಂದ ಒಳಗೂ ಹೊರಗೂ ವ್ಯಾಪಿಸಿ ಭ್ರಮಿತವಾಗಿರುವದಿಲ್ಲ. ಯಾಕಂದರೆ ಮನವು ಮನ ವಾಗಿ ಇರದೆ ಅದು ಉನ್ಮನ (ವಿರಕ್ತ)ವಾಗಿ ಹೋಗಿರುತ್ತದೆ. ಆದ್ದರಿಂದ ಸಾಧು ಸಂತರು ಮೋಹದ ಆಚೆಗೆ ಇರುತ್ತಾರೆ. (೩೮) ಪರಬ್ರಹ್ಮವು ಒಂದೇ ಆಗಿರುವದು. ಅದ್ವಿತೀಯವಿರುವದು. ಸಾಧು ಸಂತರು ಈ ಸ್ವರೂಪದೊಂದಿಗೆ ತದಾಕಾರವಿರುವರು. ಇದಕ್ಕೆ ಎರಡು ಅನ್ನುವದು ಇರುವದೇ ಇಲ್ಲ. ಎರಡನೆಯವರಾರೂ ಇಲ್ಲದ್ದರಿಂದ ಇವರಿಗೆ ಯಾವುದರದೂ ಭಯವಿರುವದಿಲ್ಲ. ಪರಬ್ರಹ್ಮವು ಹೇಗೆ ಪೂರ್ಣ ನಿರ್ಭಯವಿರುವದೋ ಅದರಂತೆಯೇ ಸಾಧು ಸಂತರೂ ಸಹ ಪೂರ್ಣ ನಿರ್ಭಯರಿರುವರು. (೩೯)

ಯಾಕಾರಣೇ ಭಯಾತೀತ । ಸಾಧು ನಿರ್ಭಯ ನಿವಾಂತ ।
ಸಕಳಾಸ ಮಾಂಡೇಲ ಅಂತ । ಸಾಧು ಅನಂತರೂಪೀ ॥೪೦॥

ಸತ್ಯಸ್ವರೂಪೇ ಅಮರ ಜಾಲಾ । ಭಯೆ ಕೈಚೇ ವಾಟೇಲ ತ್ಯಾಲಾ ।
ಯಾಕಾರಣೇ ಸಾಧುಜನಾಲಾ । ಭಯೆ ಚಿ ನಾಹೀ ॥೪೧॥

ಜೇಥೇ ನಾಹೀ ದ್ವಂದ್ವಭೇದ । ಆಪಲಾ ಆಪಣ ಅಭೇದ ।
ತೇಥೇ ಕೈಚಾ ಉಠೇಲ ಖೇದ । ದೇಹಬುದ್ಧೀಚಾ ॥೪೨॥

ಬುದ್ಧೀನೇ ನೇಮಿಲೇ ನಿರ್ಗುಣಾ । ತ್ಯಾಸ ಕೋಣೇ ಚ ನೇಈನಾ ।
ಯಾಕಾರಣೇ ಸಾಧುಜನಾ । ಖೇದ ಚಿ ನಾಹೀ ॥೪೩॥

ಆಪಣ ಯೇಕಲಾ ಠಾಈಚಾ । ಸ್ವಾರ್ಥ ಕರಾವಾ ಕೋಣಾಚಾ ।
ದೃಶ್ಯ ನಸ್ತಾ ಸ್ವಾರ್ಥಾಚಾ । ಠಾವ ಚಿ ನಾಹೀ ॥೪೪॥

ಸಾಧು ಆಪಣ ಚಿ ಯೇಕ । ತೇಥೇ ಕೈಚಾ ದುಃಖಶೋಕ ।
ದುಜೇವಿಣ ಅವಿವೇಕ । ಯೇಣಾರ ನಾಹೀ ॥೪೫॥

ಆಶಾ ಧರಿತಾ ಪರಮಾರ್ಥಾಚೀ । ದುರಾಶಾ ತುಟಲೀ ಸ್ವಾರ್ಥಾಚೀ ।
ಮ್ಹಣೋನ ನೈರಾಶತಾ ಸಾಧೂಚೀ । ವೋಳಖಣ ॥೪೬॥

ಮೃದಪಣೇ ಜೈಸೇ ಗಗನ । ತೈಸೇ ಸಾಧೂಚೇ ಲಕ್ಷಣ ।
ಯಾಕಾರಣೇ ಸಾಧುವಚನ । ಕಠೀಣ ನಾಹೀ ॥೪೭॥

ಸ್ವರೂಪಾಚಾ ಸಂಯೋಗೀ । ಸ್ವರೂಪ ಚಿ ಜಾಲಾ ಯೋಗೀ ।
ಯಾಕಾರಣೇ ವೀತರಾಗೀ । ನಿರಂತರ ॥೪೮॥

ಸ್ಥಿತಿ ಬಾಣತಾ ಸ್ವರೂಪಾಚೀ । ಚಿಂತಾ ಸೋಡಿಲೀ ದೇಹಾಚೀ ।
ಯಾಕಾರಣೇ ಹೋಣಾರಾಚೀ । ಚಿಂತಾ ನಸೆ ॥೪೯॥

ಸ್ವರೂಪೀ ಲಾಗತಾ ಬುದ್ಧೀ । ತುಟೇ ಅವಘೀ ಉಪಾಧೀ ।
ಯಾಕಾರಣೇ ನಿರೋಪಾಧೀ । ಸಾಧುಜನ ॥೫೦॥

ಆದ್ದರಿಂದ ಸಾಧು ಸಂತರು ಅಗದೀ ಭಯರಹಿತರಿರುವರು. ಇವರು ಅತ್ಯಂತ ನಿರ್ಭಯರೂ ಮತ್ತು (ನಿವಾಂತ)ಶಾಂತರೂ ಇರುವರು. ಜಗತ್ತಿನಲ್ಲಿಯ ಎಲ್ಲ ವಸ್ತುಗಳಿಗೂ ಕೊನೆ ಇರುವದು. ಮತ್ತು ಇವುಗಳಿಗೆ ನಾಶವೂ ಇರುವದು. ಆದರೆ ಅನಂತ ಬ್ರಹ್ಮ ಸ್ವರೂಪದೊಂದಿಗೆ ಸಮರಸನಾದ ಸಾಧುವು ಸ್ವತಃ ಅಂತರರಹಿತವಿರುವನು.(೪೦) ಸತ್ಯಸ್ವರೂಪಿ ಪರಮಾತ್ಮನೊಂದಿಗೆ ಐಕ್ಯ ಹೊಂದಿದ್ದರಿಂದ ಸಾಧು ಸಂತರು ಅಮರರಾಗುವರು. ಅಮರತ್ವದಿಂದ ಇವರಿಗೆ ಯಾವುದರ ಭಯವೂ ಇರುವದಿಲ್ಲ. ಅಂತೆಯೇ ಸಾಧು ಸಂತರು ಅತ್ಯಂತ ಭಯರಹಿತರಿರುವರು. (೪೧) ತಾನೇ ತನ್ನತನದಿಂದ ಎಲ್ಲ ಸ್ಥಳದಲ್ಲಿ ಇದ್ದದ್ದರಿಂದ ಸಾಧು ಪುರುಷರಲ್ಲಿ ಅಭೇದವಿರುವದು. ಒಂದು ಮತ್ತು ಎರಡು ಅನ್ನುವ (ದ್ವಿತ್ವ) ಎರಡುತನದ ಭೇದ ಅಲ್ಲಿ ಇರುವದಿಲ್ಲ. ಎರಡು ಅನ್ನುವ ಭೇದ ಇಲ್ಲದ್ದರಿಂದಲೇ ಇವರ ಜೀವನ ದಲ್ಲಿ ದೇಹಬುದ್ಧಿಯಿಂದಾಗಿ ನಿರ್ಮಾಣವಾಗುವ ದುಃಖ ಇರುವದಿಲ್ಲ. (೪೨) ನಿರ್ಗುಣ ಇದೊಂದೇ ಖರೇ ಇರುವ ದೆಂದು ಸಾಧು ಸಂತರ ಬುದ್ಧಿಯ ನಿಶ್ಚಯವಿರುವದು. ನಿರ್ಗುಣವು ಒಯ್ಯಲಿಕ್ಕೆ ಬರುವಂಥ ವಸ್ತುವಲ್ಲವಾದ್ದರಿಂದ ಯಾರೂ ಒಯ್ಯಲಿಕ್ಕೆ ಶಕ್ತರಿಲ್ಲ. ಈ ಕಾರಣದಿಂದ ಸಾಧು ಪುರುಷನಿಗೆ ಖೇದಪಡುವ ಪ್ರಸಂಗವೇ ಇರುವದಿಲ್ಲ. (೪೩) ಎತ್ತನೋಡಿದರತ್ತ ಕಡೆಗೆ (ಸರ್ವ ಸ್ಥಳದಲ್ಲಿ) ನಾನೇ ನಾನು ತುಂಬಿಕೊಂಡಿರುವೆ ಅನ್ನುವ ಅನುಭವ ಇರುವಾಗ ಸ್ವಾರ್ಥಸಾಧಿಸುವದು ಯಾರ ಸಲುವಾಗಿ? ಅನ್ನುವ ಪ್ರಶ್ನೆ ಎದುರಿಗೆ ಬರುವದು. ಸ್ವಾರ್ಥದ ಮೂಲವು ದೃಶ್ಯ ವಸ್ತುವಾಗಿದೆ. ಎಲ್ಲಿ ಯಾವತ್ತೂ ದೃಶ್ಯವೇ ಇಲ್ಲದಂತೆ ಆಗಿ ಹೋಗಿರುವದೋ ಅಲ್ಲಿ ಸ್ವಾರ್ಥಕ್ಕೆ ಅವಕಾಶವೇ ಇರುವದಿಲ್ಲವಲ್ಲವೇ? (೪೪) ಸಾಧು ಸಂತರಿಗೆ ದ್ವೈತವು ಅನುಭವಕ್ಕೆ ಬರುವದಿಲ್ಲ. ಮೂಲತಃ ಒಬ್ಬನೇ ಒಬ್ಬ ಎಲ್ಲ ಕಡೆಗೂ ವ್ಯಾಪಿಸಿ ಇರುವನು. ಇವನಿಗೆ ದುಃಖ ಮತ್ತು ಶೋಕದ ಪ್ರಸಂಗವೇ ಇರುವದಿಲ್ಲ.ಅವಿವೇಕದಿಂದ ದ್ವೈತದ ಭಾಸವಾಗಹತ್ತಿದ ಕೂಡಲೇ ಅಲ್ಲಿ ದುಃಖ ಮತ್ತು ಶೋಕ ಇವು ನಿರ್ಮಾಣವಾಗುವವು. ಈ ಅವಿವೇಕವು ಎಲ್ಲಿ ಇರುವದಿಲ್ಲವೋ ಅಲ್ಲಿ ದುಃಖ ಮತ್ತು ಶೋಕಗಳೂ ಸಹ ಇರುವದಿಲ್ಲ. (೪೫) ಪರಮಾರ್ಥದ ಶುಭವಾಸನಾ ಹೊಂದಿದವ (ಇಟ್ಟುಕೊಂಡವ)ನಿಗೆ ಸ್ವಾರ್ಥ ಮೂಲವಾದ ಅಶುಭವಾಸನಾ ತನ್ನಷ್ಟಕ್ಕೆ ತಾನೇ ಬಿಟ್ಟು (ಕಳಚಿ) ಹೋಗುವದು. ಪರಮಾರ್ಥ ಸಾಧಿಸಿ ಸ್ವರೂಪಾಕಾರ ಹೊಂದಿದ ಮೇಲೆ ಶುಭವಾಸನಾ ಇದೂ ಸಹ ಕಳಚಿಹೋಗು ವದು. ಆಮೇಲೆ ಉಳಿಯುವದು ಕೇವಲ ನಿರ್ವಾಸನ ಅವಸ್ಥೆಯು ಆದ್ದರಿಂದ ನಿರ್ವಾಸನತಾ ಇದು ನಿಜವಾದ ಸಾಧು ಸಂತರನ್ನು ಗುರುತಿಸುವ ಸಂಕೇತವಿರುವದು. (೪೬) ಆಕಾಶವು ಹೇಗೆ ಅಗದೀ ಮೃದು ಇರುವದೋ ಇದರಂತೆ ಸಾಧುವಿನ ಅಂತಃಕರಣವು ಅಗದೀ ಮೃದು ಇರುವದು. ಇದರಿಂದಾಗಿ ಸಾಧುವಿನ ಮಾತು (ಸಂಭಾಷಣ)ಗಳು ಕಠೋರವಿರದೆ ಸಿಹಿ (ಮೃದು) ಆಗಿರುವವು (೪೭)ಸ್ವಸ್ವರೂಪದೊಂದಿಗೆ ಸಮರಸಗೊಳ್ಳುವ ಅಭ್ಯಾಸ ಮಾಡುವಂಥ ಯೋಗಿ ಅಥವಾ ಸಾಧು ಸಂತರು ಕೊನೆಯಲ್ಲಿ ಸ್ವರೂಪಾಕಾರವಾಗುವರು. ಇದರಿಂದಾಗಿ ಯಾವುದೇ ದೃಶ್ಯ ಪದಾ ರ್ಥವು ಇವರ ಮನವನ್ನು ಆಕರ್ಷಿತಗೊಳಿಸಲಾರದು. ಇವರು ಸದಾ ಸರ್ವಕಾಲ ಅಗದೀ ಅನಾಸಕ್ತರಾಗಿ ಉಳಿ ಯುವರು. (೪೮) ಸ್ವರೂಪದೊಂದಿಗೆ ಏಕರೂಪಗೊಳ್ಳುವ ಅವಸ್ಥೆ ಪ್ರಾಪ್ತವಾಯಿತೆಂದರೆ ಸಾಧಿಸಿತೆಂದರೆ ಅರ್ಥಾತ್ ನೆಲೆ ನಿಂತಿತೆಂದರೆ ದೇಹದ ಪರಿವೆ ಉಳಿಯುವದಿಲ್ಲ. ಅರ್ಥಾತ್ ದೇಹದ ಕಾಳಜಿ ಎಷ್ಟೂ ಇರುವದಿಲ್ಲ ಇದರಿಂದಾಗಿ ಮುಂದೇನಾದೀತೆನ್ನುವ ಬಗ್ಗೆ ಸಾಧುವಿಗೆ ಚಿಂತೆ ಆವರಿಸಲಾರದು.(೪೯) ಸಾಧುವಿನ ಬುದ್ಧಿ ಒಂದು ಸಲ ಸ್ವಸ್ವರೂ ಪದ ಅನುಸಂಧಾನದಲ್ಲಿ ಮಗ್ನವಾಯಿತೆಂದರೆ ಅದು ಆತ್ಮಬುದ್ಧಿಯಾಗಿ ಪರಿವರ್ತನಗೊಳ್ಳುವದು. ದೇಹಬುದ್ಧಿ ಇದ್ದಾಗ ಸ್ಥಳ ಕಾಲಗಳ ಬಗೆಗಿನ ಯಾವ ಮರ್ಯಾದಾ (ಸೀಮೆ, ನಿಯಮ) ಅಥವಾ ದೃಶ್ಯದ ಉಪಾಧಿ ಅದಕ್ಕೆ (ಮೊದಲಿನ ಬುದ್ಧಿಗೆ) ಇದ್ದಿತೋ [ಆತ್ಮಬುದ್ಧಿ ಆದಾಗ] ಅವೆಲ್ಲವೂ ಕಳಚಿ ಬಿದ್ದು ಹೋಗುವವು. ಆತ್ಮಬುದ್ಧಿಯು ಸ್ವಸ್ವರೂಪದಷ್ಟೇ ಅಮರ್ಯಾದ ಅಥವಾ ನಿರುಪಾಧಿಕವಾಗುವದು. ಸಾಧುವು ಸ್ವರೂಪದಷ್ಟೇ ಅಮರ್ಯಾದ ವಾಗುವನು. ಆದ್ದರಿಂದ ಸಾಧು ಪುರುಷ ನಿರುಪಾಧಿಕ ಇರುವನು. (೫೦)

ಸಾಧು ಸ್ವರೂಪೀ ಚ ರಾಹೆ । ತೇಥೇ ಸಂಗಚಿ ನ ಸಾಹೆ ।
ಮ್ಹಣೋನಿ ಸಾಧು ತೋ ನ ಪಾಹೆ । ಮಾನಾಪಮಾನ ॥೫೧॥

ಅಲಕ್ಷಾಸ ಲಾವೀ ಲಕ್ಷ । ಮ್ಹಣೋನ ಸಾಧು ಪರಮ ದಕ್ಷ ।
ಮೋಢೂ ಜಾಣತೀ ಕೈಪಕ್ಷ । ಪರಮಾರ್ಥಾಚಾ ॥೫೨॥

ಸ್ವರೂಪೀ ನ ಸಾಹೆ ಮಳ । ಮ್ಹಣೌನ ಸಾಧು ತೋ ನಿರ್ಮಳ ।
ಸಾಧು ಸ್ವರೂಪ ಚಿ ಕೇವಳ । ಮ್ಹಣೋನಿಯಾ ॥೫೩॥

ಸಕಳ ಧರ್ಮಾಮಧೇ ಧರ್ಮ । ಸ್ವರೂಪೀ ರಾಹಾಣೇ ಹಾ ಸ್ವಧರ್ಮ ।
ಹೇ ಚಿ ಜಾಣಿಜೆ ಮುಖ್ಯ ವರ್ಮ । ಸಾಧುಲಕ್ಷಣಾಚೇ ॥೫೪॥

ಧರಿತಾ ಸಾಧೂಚೀ ಸಂಗತೀ । ಆಪಷಾ ಚ ಲಾಗೆ ಸ್ವರೂಪಸ್ಥಿತೀ ।
ಸ್ವರೂಪಸ್ಥಿತೀನೆ ಬಾಣತೀ । ಲಕ್ಷಣೇ ಆಂಗೀ ॥೫೫॥

ಐಸೀ ಸಾಧೂಚೀ ಲಕ್ಷಣೇ । ಆಂಗೀ ಬಾಣತೀ ನಿರೂಪಣೇ ।
ಪರಂತು ಸ್ವರೂಪೀ ರಾಹಾಣೇ । ನಿರಂತರ ॥೫೬॥

ನಿರಂತರ ಸ್ವರೂಪೀ ರಾಹಾತಾ । ಸ್ವರೂಪ ಚಿ ಹೋಈಜೆ ತತ್ವತಾ ।
ಮಗ ಲಕ್ಷಣೇ ಆಂಗೀ ಬಾಣತಾ । ವೇಳ ನಾಹೀ ॥೫೭॥

ಸ್ವರೂಪೀ ರಾಹಿಲ್ಯಾ ಮತೀ । ಅವಗುಣ ಅವಘೇ ಚಿ ಸಾಂಡತೀ ।
ಪರಂತು ಯಾಸೀ ಸತ್ಸಂಗತೀ । ನಿರೂಪಣ ಪಾಹಿಜೆ ॥೫೮॥

ಸಕಳ ಸೃಷ್ಟೀಚಾ ಠಾಈ । ಅನುಭವ ಯೇಕ ಚಿ ನಾಹೀ ।
ತೋ ಬೋಲಿಜೇಲ ಸರ್ವ ಹೀ । ಪುಢಿಲೆ ಸಮಾಸೀ ॥೫೯॥

ಕೋಣೇ ಸ್ಥಿತೀನೇ ರಾಹಾತೀ । ಕೈಸಾ ಅನುಭವ ಪಾಹಾತೀ ।
ರಾಮದಾಸ ಮ್ಹಣೇ ಶ್ರೋತೀ । ಅವಧಾನ ದೇಣೆ ॥೬೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
''ಸಿದ್ಧಲಕ್ಷಣ'' ನಾಮ ಸಮಾಸ ನವಮ॥

● ●

ಸಾಧುವು ಸದೈವ ಸ್ವರೂಪಮಯನಾಗಿಯೇ ಇರುವನು. ಆ ಅವಸ್ಥೆಯಲ್ಲಿ ಯಾವುದೇ ದೃಶ್ಯದ ಎಳ್ಳಷ್ಟೂ ಸಂಸರ್ಗವು ಅದಕ್ಕೆ ಸಹನವಾಗುವದಿಲ್ಲ. ಅರ್ಥಾತ್ ದೇಹದ ಸಂಸರ್ಗವೂ ಸಹ ಅದಕ್ಕೆ ಇರುವದಿಲ್ಲ. ದೇಹದ ಸಂಬಂಧವೇ ಇಲ್ಲದ್ದರಿಂದ ಸಾಧು ಸಂತರು ಮಾನಾಪಮಾನವನ್ನು ನೋಡುವದೇ ಇಲ್ಲ. ಎಣಿಸುವದೂ ಇಲ್ಲ. (೫೧) ಮನುಷ್ಯನ ಮನಸ್ಸು ಎಲ್ಲಿ ಮುಟ್ಟಲಿಕ್ಕೆ ಸಾಧ್ಯವಿಲ್ಲವೋ ಅದು ಅಲಕ್ಷ್ಯವೆನಿಸುವದು. ಆ ಅಲಕ್ಷ್ಯದೊಂದಿಗೆ ಲಕ್ಷ್ಯ ಹಚ್ಚಿಕೊಡುವವನೇ ಸಾಧುವು. ಆದ್ದರಿಂದ ಸಾಧು ಅತ್ಯಂತ ತತ್ಪರನಿರುವನು. ಸ್ವಸ್ವರೂಪದ ಬಗೆಗೆ ಅತಿಶಯ ತತ್ಪರ ಇರುವಂಥ ಸಾಧುವಿಗೆ ಪರಮಾರ್ಥದ ಸಮರ್ಥನ ಹೇಗೆ ಮಾಡಬೇಕು. ಪರಮಾರ್ಥದ ಬಾಜೂ ಹೇಗೆ ಎತ್ತಿ ಹಿಡಿಯಬೇಕು ಅನ್ನುವದು ಅಗದೀ ಬರೋಬರ ಗೊತ್ತಿರುವದು. ಅರ್ಥಾತ್ ತಿಳಿದವನಿರುವನು. [೫೨] ಸ್ವ ಸ್ವರೂಪವು ಅತಿಶಯ ನಿರ್ಮಲವಿರುವದು ಇದಕ್ಕೆ ಮಲವೆಂದರೆ ಎಳ್ಳಷ್ಟೂ ಸಹಿಸಲಾಗುವದಿಲ್ಲ. ಸಾಧು ಸಂತರು ಇಂಥ ನಿರ್ಮಲವಿರುವ ಸ್ವರೂಪದೊಡನೆ ತದಾತ್ಮ್ಯ ಹೊಂದಿರುವರು. ಆದ್ದರಿಂದ ಸಾಧುವು ಸದಾ ನಿರ್ಮಲನಾಗಿರುವನು, [೫೩] ಎಲ್ಲ ಧರ್ಮಗಳಲ್ಲಿ ಉತ್ತಮ ಧರ್ಮ ವೆಂದರೆ ಸ್ವಧರ್ಮವಿರುವದು, ಮತ್ತು ಸ್ವ ಸ್ವರೂಪದೊಂದಿಗೆ ತದಾಕಾರವಾಗಿ ಇರುವದೂ ಸಹ ಸ್ವಧರ್ಮವೆಂದೇ ತಿಳಿಯಬೇಕು. ಸಾಧುಸಂತರ ಬಗೆಗೆ ಯಾವ ಲಕ್ಷಣಗಳನ್ನು ಹೇಳಲಾಗಿವೆಯೋ ಅವೆಲ್ಲವುಗಳ ರಹಸ್ಯವು ಸ್ವರೂಪದಲ್ಲಿ ಲೀನವಾಗಿ ಇರುವದೇ ಆಗಿರುವದೆಂದು ತಿಳಿಯಿರಿ. [೫೪] ಸಾಧು ಸತ್ಪುರುಷರ ಸಹವಾಸ ಹಿಡಿಯಿರಿ. ಯಾಕಂದರೆ ಸತ್ಸಂಗತಿಯಲ್ಲಿ ಯಾವ ಶ್ರಮವಿಲ್ಲದೇ ತನ್ನಿಂದ ತಾನೇ ಸ್ವಸ್ವರೂಪವೊಂದಿಗೆ ಲೀನವಾಗಲಿಕ್ಕೆ ಬರುವದು. ಸ್ವಸ್ವರೂಪವೊಂದಿಗೆ ತನ್ಮಯತಾ ಆಯಿತೆಂದರೆ ಆ ಕೂಡಲೇ ಸಾಧುವಿನ ಲಕ್ಷಣಗಳು ಸಹಜವಾಗಿ ನಿಮ್ಮಲ್ಲಿ ಕಂಡು ಬರುವವು. [೫೫] ಖರೇ ಸಾಧುವಿನ ಲಕ್ಷಣಗಳು ನಿರೂಪಣ [ವಿವೇಚನ, ಅದ್ವೈತದ ಚರ್ಚಾ]ದಿಂದ [ಸಾಧಕನಲ್ಲಿ] ಬಿಂಬಿಸುವವು. ಆದರೆ ಇದು ಒದಗಿ ಬರಬೇಕಾದರೆ ನಾವು ಸದಾ ಸರ್ವಕಾಲವೂ ಸ್ವರೂಪದಲ್ಲಿ ತನ್ಮಯರಾಗಿರುವದು ಅವಶ್ಯವು. [೫೬] ಸ್ವರೂಪದಲ್ಲಿ ಇರುವ ಅಭ್ಯಾಸವನ್ನು ಒಂದೇ ಸವನೆ ಮಾಡಿದೆವೆಂದರೆ ಸಾಧಕ ಸ್ವಸ್ವರೂಪಾಕಾರನೇ ಆಗಿ ಹೋಗುವನು ಆ ಮೇಲೆ ಸಾಧು ಲಕ್ಷಣಗಳು ಪ್ರಕಟವಾಗಲು ಬಹಳ ವೇಳೆ ಹತ್ತುವದಿಲ್ಲ.[೫೭] ಬುದ್ಧಿಯು ಆತ್ಮ ಸ್ವರೂಪದಲ್ಲಿ ಸ್ಥಿರಗೊಂಡಿತೆಂದರೆ ಅವಗುಣಗಳೆಲ್ಲವೂ ತನ್ನಷ್ಟಕ್ಕೆ ತಾನೇ ಉದುರಿ ಹೋಗುವವು. ಆದರೆ ಇಂಥ ಅನುಭವ ಬರಬೇಕಾದರೆ ಸತ್ಸಂಗತಿ ಬೇಕಾಗುವದು. ಮತ್ತು ಸಂತ ಸಾಧುಗಳ ಉಪದೇಶವೂ ಸಹ ಅವಶ್ಯವಾಗಿ ಬೇಕು. [೫೮] ಜಗತ್ತಿನಲ್ಲಿರುವವರಿಗೆಲ್ಲ ಒಂದೇ ತರಹದ ಅನುಭವವು ಬಂದೀತೆಂದು ಹೇಳಲಿಕ್ಕೆ ಬರುವದಿಲ್ಲ. ಮುಂದಿನ ಸಮಾಸದಲ್ಲಿ ಅನುಭವದ ಅನೇಕ ಪ್ರಕಾರಗಳನ್ನು ಹೇಳಬೇಕಾಗಿದೆ. [೫೯] ರಾಮದಾಸರು ಅನ್ನುವದೇನಂದರೆ ಯಾವ ಜನ ಯಾವ ಸ್ಥಿತಿಯಲ್ಲಿ ಇರುವರು ಮತ್ತು ಅವರಿಗೆ ಹೇಗೆಹೇಗೆ ಅನುಭವ ಬರುವದು ಇದನ್ನೆಲ್ಲ ಹೇಳುವವನಿರುವೆ ಇದರ ಕಡೆಗೆ ಶ್ರೋತಾ ಜನ ಲಕ್ಷ್ಯ ಕೊಡಬೇಕು. (೬೦)

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಎಂಟನೆಯ ದಶಕದ
"ಸಿದ್ಧ ಲಕ್ಷಣ"ವೆಂಬ ಒಂಭತ್ತನೆಯ ಸಮಾಸವು ಮುಗಿದುದು.

● ●

**ಸಮಾಸ ದಶಮ : ಸುನ್ಯತ್ವ ನಿರ್ಶನ**

॥ಶ್ರೀರಾಮ॥ ಜನಾಚೆ ಅನುಭವ ಪುಸತಾ । ಕಳ್ಳೋ ಉಠಿಲಾ ಅವಚಿತಾ ।
ಹಾ ಕಥಾಕಲ್ಲೋಳ ಶ್ರೋತಾ । ಕೌತುಕೇ ಐಕಾವಾ ॥೧॥

ಯೇಕ ಮ್ಹಣತೀ ಹಾ ಸಂಸಾರು। ಕರಿತಾ ಪಾವಿಜೆ ಪೈಲಪಾರು।
ಆಪಲಾ ನವ್ಹೆ ಕೀ ಜೋಜಾರು । ಜೀವ ದೇವಾಚೇ ॥೨॥

## ದಶಕ ೮. ಸಮಾಸ ೧೦. ಶೂನ್ಯತ್ವ ನಿರಸನ (ನುಡಿ ೮೨)

ಈ ಸಮಾಸದಲ್ಲಿ ಹೇಳಿದ ವಿಷಯದ ಮೇಲಿಂದ ಶ್ರೀ ಸಮರ್ಥರಲ್ಲಿಯ ಸರ್ವ ಬಾಜೂದ ಎಲ್ಲ ತರದ ಜ್ಞಾನದ ಬಗೆಗೆ ಹೇಗೆ ಅನುಭವ ಬರುವದೋ ಇದು ಇತರ ಸ್ಥಳಗಳಲ್ಲಿ ಕ್ವಚಿತ್ತಾಗಿ ಕಂಡು ಬರುವದು. ಒಂದರಂತೆ ಒಂದು ಇರಲಾರವು. ಇದೇ ಈ ದೃಶ್ಯ ಪ್ರಪಂಚದ ನಿಯಮವಿರುವದು. ನಮ್ಮ ಸುತ್ತು ಮುತ್ತು ಪಸರಿಸಿದ ಅಚೇತನ ಸಚೇತನಗಳಲ್ಲಿ ಒಂದರಂತೆ ಒಂದು ಕಾಣುವದಿಲ್ಲ. ಅಂದರೆ ಒಂದರಂತೆ ಒಂದು ಇರಲಾರವು. ನಡವಳಿಕೆಯಲ್ಲಿ ಇಲ್ಲ, ಮಾತಿನಲ್ಲಿ ಇಲ್ಲ, ನಡೆಯಲ್ಲಿ ಇಲ್ಲ, ರೂಢಿ, ಚಟಗಳಲ್ಲಿ ಇಲ್ಲ. ಅಥವಾ ಸ್ವಭಾವದಲ್ಲಿ ಇಲ್ಲ. ಪ್ರಪಂಚ ಇದು ಮೂಲತಃ ಅನೇಕತ್ವದಿಂದ ತುಂಬಿದಂಥದಿರುವದರಿಂದ ಪ್ರತಿಯೊಬ್ಬರ ವಿಚಾರ ಬೇರೆ ತರಹದ್ದು ಪ್ರತಿಯೊಬ್ಬರ ಮತ ಬೇರೆ ತರಹದ್ದು ಮತ್ತು ಪ್ರತಿಯೊಬ್ಬರ ವಾಸನಾ ಸಹ ಬೇರೆ ಬೇರೆ ರೀತಿಯವಿರುವವು ತತ್ವಜ್ಞಾನದ ಕ್ಷೇತ್ರದಲ್ಲಿ ಈ ಅನೇಕತ್ವವು ಆಧಿಕ್ಯದಿಂದ ( ಹಿರಿಮೆಯಿಂದ ) ತೋರಿ ಬರುವದು, ಜಗಮಾನ್ಯ ಪಂಡಿತರು ಬರೆದಂಥ ತತ್ವಜ್ಞಾನದ ಪ್ರಸಿದ್ಧ ಗ್ರಂಥಗಳನ್ನು ಅಭ್ಯಾಸ ಮಾಡಿನೋಡಿದರೆ ಮತ ಮತಗಳಲ್ಲಿಯ ಭಿನ್ನತನ ಬಹಳ ಸ್ಪಷ್ಟವಾಗಿ ಅನುಭವಕ್ಕೆ ಬರುವದು. ಪ್ರಪಂಚದಲ್ಲಿಯ ವ್ಯವಹಾರ ಮತ್ತು ದೃಶ್ಯದಲ್ಲಿ ಇರುವ ಬುದ್ಧಿಯ ವ್ಯಾಪಾರ ಇವುಗಳಲ್ಲಿ ಕಂಡು ಬರುವ ಮತಭಿನ್ನತೆಯನ್ನು ನಾವು ತಿಳಿಯಬುಹುದಾಗಿದೆ.ಆದರೆ ಉಪ ನಿಷತ್‌ದಲ್ಲಿ ಸಹ ಏನು ಕಂಡು ಬರುವದು? ಒಬ್ಬ ಋಷಿಯೇ ಎಲ್ಲ ಉಪನಿಷತ್ತುಗಳನ್ನು ಹೇಳಿರುವದಿಲ್ಲ. ಬೇರೆ ಬೇರೆ ಪ್ರಸಂಗಗಳಲ್ಲಿ ಬೇರೆ ಬೇರೆ ಋಷಿಗಳಿಗೆ ಅವರವರ ಆತ್ಮ ಚಿಂತನದೊಳಗಿಂದ ಯಾವುದು ಸ್ಫುರಿಸಿತೋ ಅದನ್ನು ಆ ಋಷಿ ಗಳು ಹೇಳಿದರು. ಒಬ್ಬ ಋಷಿ ಯಾವುದನ್ನು ಹೇಳಿದನೋ ಅದಕ್ಕೂ ಇನ್ನೊಬ್ಬ ಋಷಿ ಹೇಳಿದ್ದಕ್ಕೂಪರಸ್ಪರ ಸಂಬಂಧ ವಿರುವದಿಲ್ಲ. ಆದ್ದರಿಂದ ಉಪನಿಷತ್ತುಗಳ ಸ್ವರೂಪವು ಸಹ ಸಂಕೀರ್ಣ ಆಕುಂಚಿತವಿರುವದು. ಮಿಶ್ರವಾದದ್ದು ಇರು ವದು. ಮಹಾಭಾರತವು ಹೇಳುವದೇನಂದರೆ "ಧರ್ಮಾಧರ್ಮದ ನಿರ್ಣಯವನ್ನು ಹೇಗೆ ಮಾಡಬೇಕು?" ಈ ಪ್ರಶ್ನೆ ಯನ್ನು ಯಕ್ಷನು ಯುಧಿಷ್ಠಿರನಿಗೆ ಕೇಳಿದನು. ಆಗ ಯುಧಿಷ್ಠಿರನು ಉತ್ತರ ಕೊಟ್ಟದ್ದೇನಂದರೆ:- ಶ್ಲೋಕ:- ತರ್ಕೋ ಪ್ರತಿಷ್ಠಃ। ಶ್ರುತಯಃ ವಿಭಿನ್ನಾಃ ನೈಕೋ ಋಷಿಃ ಯಸ್ಯವಚಃ ಪ್ರಮಾಣಮ್। ಧರ್ಮಸ್ಯ ತತ್ವಂ ನಿಹಿತಂ ಗುಹಾಯಾಂ। ಮಹಾಜನೋ ಯೇನ ಗತಃ ಸ ಪಂಥಃ॥ ಅರ್ಥ:- "ತರ್ಕವು ಚಂಚಲವಿರುವದು ಶ್ರುತಿಗಳು ಅನೇಕ ಪ್ರಕಾರದಲ್ಲಿ ಭಿನ್ನ ವಿರುವವು. ಒಬ್ಬ ಋಷಿಯ ವಚನವೇ ಅಂತಿಮ ಪ್ರಮಾಣವಲ್ಲ. ಧರ್ಮದ ರಹಸ್ಯ ಬಹಳಷ್ಟು ಗೂಢ ವಿರುವದು. ಆದ್ದರಿಂದ ದೊಡ್ಡವರು ಯಾವ ಮಾರ್ಗದಿಂದ ಹೋಗುವರೋ ಆ ಮಾರ್ಗದಿಂದಲೇ ನಾವು ಹೋಗಬೇಕು. ಈ ಪ್ರಶ್ನೆಗೆ ಇದಕ್ಕಿಂತ ಅಧಿಕ ಸಮರ್ಪಕ ಉತ್ತರವನ್ನು ಇಂದಿಗೂ ಯಾರೂ ಕೊಟ್ಟಿಲ್ಲ. ಪ್ರಪಂಚದಲ್ಲಿಯಾಗಲೀ ಅಥವಾ ಪರಮಾರ್ಥದಲ್ಲಿಯಾಗಲೀ ಮತ ಮತಗಳ ಭಿನ್ನತನದ ಗಲಭೆ ಇರತಕ್ಕಂಥಾದ್ದೇ ಸರಿ, ಇದರೊಳಗಿಂದ ಹೊರಗೆ ಬರಲಿಕ್ಕೆ ವಿಶೇಷತಃ ಪರಮಾರ್ಥದಲ್ಲಿ ಸತ್ಪುರುಷರ ಸಂಗತಿ ಯಂಥ ಅತ್ಯಂತ ಸುರಕ್ಷಿತ ಮತ್ತು ನಿಶ್ಚಿತ ಫಲದಾಯಕವಾದಂಥ ಎರಡನೆಯ ಮಾರ್ಗವಿಲ್ಲ. ಈ ಸಾಧು ಸಂತರ ಮಾರ್ಗ ರಾಜಮಾರ್ಗವಿರುವದು. ಶ್ರೀಸಮರ್ಥರ ಈ ಉಪದೇಶ ಸರ್ವಸಾಧಕರಿಗೆ ಸರ್ವಶ್ರೇಷ್ಠವೆನಿಸುವದರಲ್ಲಿ ಸಂಶಯವಿಲ್ಲ.

### ದಶಕ ೮. ಸಮಾಸ ೧೦. ಶೂನ್ಯತ್ವ ನಿರಸನ (ನುಡಿ ೮೨)

ಪ್ರಥಮದಲ್ಲಿ ಪ್ರಾಪಂಚಿಕ ಅಂದರೆ ಅಜ್ಞಾನಿಜನರ ನಾನಾ ಪ್ರಕಾರದ ಮತಗಳ ಸವಿಸ್ತಾರ ವರ್ಣನೆ ಮಾಡು ವರು. ಸಾಮಾನ್ಯ ಜನ ಮತ, ಮತ್ತು ಅವರ ಅನುಭವವನ್ನು ಪರಿಶೀಲಿಸಿ ನೋಡಿದ್ದಾವರೆ. ಅವು ಪರಸ್ಪರ ವಿರುದ್ಧ ವಿರುವವು. ಈ ಮತವಾದಿಗಳಲ್ಲಿ ಕಲಹ ಪ್ರಾರಂಭವಾಗುವ ಸಾಧ್ಯತೆಯೂ ಇರುವದು. ಈ ಮತಗಳ ಗದ್ದಲ ಮತ್ತು ಅನುಭವದ ಕೂಗಾಟ ಚೀರಾಟ ಇವುಗಳನ್ನು ಶ್ರೋತಾಜನ ಕೌತುಕದಿಂದ ಕೇಳಬೇಕು. (೧) ಒಬ್ಬನು ಅನ್ನುತ್ತಾನೆ: "ನಾವು ಈ ಸಂಸಾರವನ್ನೇ ಮಾಡಬೇಕು ಸಂಸಾರ ಮಾಡುತ್ತ ಮಾಡುತ್ತ ಇದರೊಳಗಿಂದ ಪಾರಾಗಲಿಕ್ಕೆ ಬರುವದು. ಜೀವದ ಮೇಲೆ ದೇವರ ನಿಯಂತ್ರಣ ಇರುವದರಿಂದ ಈ ಸಂಸಾರ ವ್ಯಾಪವೇನೂ ನಾವು ಮಾಡಿದ್ದಲ್ಲ ನಮ್ಮ ಮಾಲಿಕಿ ಯದಲ್ಲ" (೨)

ಯೇಕ ವ್ಹ್ಣತೀ ಹೇ ನ ಘಡೆ । ಲೋಭ ಯೇಊನ ಆಂಗೀ ಜಡೆ ।
ಪೋಟಸ್ತೇಕರಣೇ ಘಡೆ । ಸೇವಾ ಕುಟುಂಬಾಚೀ ॥೩॥
ಯೇಕ ವ್ಹ್ಣತೀ ಸ್ವಭಾವೇ । ಸಂಸಾರ ಕರಾವಾ ಸುಖೇ ನಾವೇ ।
ಕಾಹೀ ದಾನಪುಣ್ಯ ಕರಾವೇ । ಸದ್ಗತೀಕಾರಣೇ ॥೪॥
ಯೇಕ ವ್ಹ್ಣತೀ ಸಂಸಾರ ಖೋಟಾ । ವೈರಾಗ್ಯೇ ಘ್ಯಾವಾ ದೇಶವಟಾ ।
ಯೇಣೇ ಸ್ವರ್ಗಲೋಕೀಚ್ಯಾ ವಾಟಾ । ಮೋಕಳ್ಯಾ ಹೋತೀ ॥೫॥
ಯೇಕ ವ್ಹ್ಣತೀ ಕೋಠೇ ಜಾವೇ । ವೆರ್ಥ ಚಿ ಕಾಸಯಾ ಹಿಂಡಾವೇ ।
ಆಪುಲೆ ಆಶ್ರಮೀ ಅಸಾವೇ । ಆಶ್ರಮಧರ್ಮ ಕರೂನೀ ॥೬॥
ಯೇಕ ವ್ಹ್ಣತೀ ಕೈಚಾ ಧರ್ಮ । ಅವಘಾ ಹೋತಸೆ ಅಧರ್ಮ ।
ಯೇ ಸಂಸಾರೀ ನಾನಾ ಕರ್ಮ । ಕರಣೇ ಲಾಗೇ ॥೭॥
ಯೇಕ ವ್ಹ್ಣತೀ ಬಹುತಾಪರೀ । ವಾಸನಾ ಅಸಾವೀ ಬರೀ ।
ಯೇಣೇ ಚಿ ತರಿಜೆ ಸಂಸಾರೀ । ಅನಾಯಾಸೇ ॥೮॥
ಯೇಕ ವ್ಹ್ಣತೀ ಕಾರಣ ಭಾವ । ಭಾವೇ ಚಿ ಪಾವಿಜೆ ದೇವ ।
ಯೇರ ಹೇ ಅವಘೇ ಚಿ ವಾವ । ಗಥಾಗೋವೀ ॥೯॥
ಯೇಕ ವ್ಹ್ಣತೀ ವಡಿಲೇ ಜೀವೀ । ಅವಘೀ ದೇವ ಚಿ ಮಾನಾವೀ ।
ಮಾಯೆಬಾಪೇ ಪೂಜಿತ ಜಾವೀ । ಯೇಕಾಭಾವೇ ॥೧೦॥
ಯೇಕ ವ್ಹ್ಣತೀ ದೇವಬ್ರಾಹ್ಮಣ । ತ್ಯಾಚೇ ಕರಾವೇ ಪೂಜನ ।
ಮಾಯೆಬಾಪ ನಾರಾಯೆಣ । ವಿಶ್ವಜನಾಚಾ ॥೧೧॥
ಯೇಕ ವ್ಹ್ಣತೀ ಶಾಸ್ತ್ರ ಪಾಹಾವೇ । ತೇಥೇ ನಿರೋಪಿಲೇ ದೇವೇ ।
ತೇಣೇ ಪ್ರಮಾಣೇ ಚಿ ಜಾವೇ । ಪರಲೋಕಾಸೀ ॥೧೨॥
ಯೇಕ ವ್ಹ್ಣತೀ ಅಹೋ ಜನಾ । ಶಾಸ್ತ್ರ ಪಾಹಾತಾ ಪುರವೇನಾ ।
ಯಾಕಾರಣೇ ಸಾಧುಜನಾ । ಶರಣ ಜಾವೇ ॥೧೩॥
ಯೇಕ ವ್ಹ್ಣತೀ ಸಾಂಡಾ ಗೋಠೀ । ವಾಯಾ ಚಿ ಕರಿತಾ ಚಾಉಟೀ ।
ಸರ್ವಾಸ ಕಾರಣ ಪೋಟೀ । ಭೂತದಯಾ ಅಸಾವೀ ॥೧೪॥
ಯೇಕ ವ್ಹ್ಣತೀ ಯೇಕ ಚಿ ಬರವೇ । ಆಪುಲ್ಯಾ ಆಚಾರೇ ಅಸಾವೇ ।
ಅಂತಕಾಳೀ ನಾಮ ಘ್ಯಾವೇ । ಸರ್ವೋತ್ತಮಾಚೇ ॥೧೫॥
ಯೇಕ ವ್ಹ್ಣತೀ ಪುಣ್ಯ ಅಸೇಲ । ತರೀ ಚ ನಾಮ ಯೇಈಲ ।
ನಾಹೀ ತರೀ ಭುಲೀ ಪಡೇಲ । ಅಂತಕಾಳೀ ॥೧೬॥

ಇನ್ನೊಬ್ಬನು ಅನ್ನುತ್ತಾನೆ: ಛೇ! ಛೇ!! ಹೀಗೆ ಮಾಡಿದರೆ ನಡೆಯಲಾರದು. ಸಂಸಾರ ಮಾಡುವಾಗ ಲೋಭವು ನಮ್ಮನ್ನು ಅಂಟಿಕೊಂಡು ಬಿಡುವದು. ಆಮೇಲೆ ನಮ್ಮ ಹೊಟ್ಟೆಗಾಗಿ ನಾವು ನಮ್ಮ ಕುಟುಂಬದ ಸೇವೆ ಯನ್ನು ಮಾಡಬೇಕಾಗುವದು. (೩) ಮತ್ತೊಬ್ಬನು ಅನ್ನುತ್ತಾನೆ: "ಸಂಸಾರವನ್ನು ಸಹಜ ರೀತಿಯಿಂದ ಮತ್ತು ಸುಖದಿಂದ ಮಾಡಬೇಕು. ಆದರೆ ಇದರಿಂದ ಸದ್ಗತಿ ಮಾತ್ರ ಸಿಗಲಾರದು. ಅದಕ್ಕಾಗಿ ಕೆಲವೊಂದು ದಾನ ಪುಣ್ಯಗಳ ಕೆಲಸ ಮಾಡಬೇಕು". (೪) ನಾಲ್ಕನೆಯವನು ಅನ್ನುವನು: "ಸಂಸಾರ ಇದು ನಿಜವಾಗಿ ಖೊಟ್ಟಿಯೇ ಇರುವದು. ವೈರಾಗ್ಯಧಾರಿಗಳಾಗಬೇಕು ಮತ್ತು ಎಲ್ಲಿಯಾದರೂ ದೇಶಾಂತರಕ್ಕೆ ಹೊರಟು ಹೋಗಬೇಕು.ಹೀಗೆ ಮಾಡಿದರೆ ಸ್ವರ್ಗ ಪ್ರಾಪ್ತಿಯ ಮಾರ್ಗ ಸುಲಭವಾಗುವದು–ಖುಲ್ಲಾ ಆಗುವದು. (೫) ಐದನೆಯವನು ಅನ್ನುವನು:ನಮ್ಮ ಮನೆ ಬಿಟ್ಟು ಎಲ್ಲಿಗೆ ಹೋಗುವದು. ಸುಮ್ಮನೆ ಕಾಲಧಾವತಿ ಮಾಡಿ ಪುಕ್ಕಟೆ ತಿರುಗಾಡುವಲ್ಲಿ ಏನೂ ಅರ್ಥವಿಲ್ಲ. ಆಶ್ರಮಧರ್ಮ ಸಂಬಾಳಿಸಿಕೊಂಡು ನಮ್ಮಮನೆಯಲ್ಲಿರುವದೇ ಎಲ್ಲಕ್ಕಿಂತ ಹೆಚ್ಚು ಒಳ್ಳೇದು. (೬) ಆರನೆಯವನು ಅನ್ನುವನು: "ಏನರಿ, ಎಲ್ಲಿಯ (ಎಂತಹ) ಧರ್ಮ ಬಂದಿದೆ? ಎಲ್ಲಿ ನೋಡಿದರಲ್ಲಿ ಅಧರ್ಮವೆದ್ದು ಕುಣಿಯುತ್ತಿದೆ. ಈ ಸಂಸಾರದಲ್ಲಿ ನಾನಾ ಪ್ರಕಾರದ ಉತ್ತಮ ಮತ್ತು ಕೆಟ್ಟ ಕರ್ಮಗಳನ್ನು ಮಾಡಬೇಕಾಗುವದು". (೭) ಏಳನೆಯವನು ಅನ್ನುವನು: ಶಕ್ಯವಿದ್ದಷ್ಟು ವಾಸನಾ ಉತ್ತಮವಾಗಿ ಇಟ್ಟುಕೊಳ್ಳಬೇಕು. ವಾಸನಾ ಶುದ್ಧವಿದ್ದರೆ ಮಾತ್ರ ಮನುಷ್ಯನು ಆಯಾಸ ಪಡದೆ ಸಂಸಾರವನ್ನು ಈಸಿ (ಈಜಿ) ಪಾರಾಗುವನು" (೮) ಎಂಟನೆಯವನು ಅನ್ನುವನು:"ಸಂಸಾರದಿಂದ ಪಾರಾಗಲು ನಿಷ್ಠೆಬೇಕು. ನಿಷ್ಠೆಯಿಂದ ಭಗವಂತನ ಪ್ರಾಪ್ತಿಯಾಗುವದು. ಇನ್ನುಳಿದೆಲ್ಲವೂ ನಿಷ್ಫಲವಾದವುಗಳೆಂದು ತಿಳಿಯಿರಿ"(೯) ಒಂಭತ್ತನೆಯವನು ಅನ್ನುವನು: "ತಾಯಿ ತಂದೆಗಳನ್ನು ಆಗದೀ ಮನಃಪೂರ್ವಕ ದೇವರೆಂದು ತಿಳಿಯಬೇಕು ಆಗದೀ ಶುದ್ಧ ನಿಷ್ಠಾ ಇಟ್ಟು ಅವರ ಪೂಜೆಯನ್ನು ಮಾಡುತ್ತಾ ಹೋಗಬೇಕು" (೧೦) ಹತ್ತನೆಯವನು ಅನ್ನುವನು:– "ದೇವ ಬ್ರಾಹ್ಮಣರ ಪೂಜಾ, ಅರ್ಚನಾ ಮಾಡಬೇಕು. ಭೂತ ಮಾತ್ರರ ಪೋಷಣ ಮಾಡುವಂಥ ನಾರಾಯಣನು ಇದರಿಂದ ಪ್ರಸನ್ನನಾಗಿ ಕೃಪೆ ಮಾಡುವನು" (೧೧) ಹನ್ನೊಂದನೆಯವನು ಅನ್ನುವನು: "ಶಾಸ್ತ್ರದ ಅಭ್ಯಾಸ ಮಾಡ ಬೇಕು. ಭಗವಂತನು ಅದರಲ್ಲಿ ಯಾವ ಉಪದೇಶ ಮಾಡಿರುವನೋ ಅದರಂತೆ ನಡೆಯಬೇಕು ಅಂದರೆ ಪರಲೋಕ ಪ್ರಾಪ್ತವಾಗುವದು" (೧೨) ಹನ್ನೆರಡನೆಯವನು ಅನ್ನುವನು:– ಶಾಸ್ತ್ರಗಳು ಬಹಳವಿರುವವು–ಅಪಾರವಿರುವವು. ಇವುಗಳ ಅಧ್ಯಯನ ಮಾಡಿ ಮುಗಿಸಬೇಕೆಂದರೆ ಸಾಧ್ಯವೇ ಇಲ್ಲ. ಆದ್ದರಿಂದ ಈ ಭಾನಗಡಿಯಲ್ಲಿ ಬೀಳದೇ ಸಾಧು ಸಂತರಿಗೆ ಶರಣು ಹೋಗಬೇಕು" (೧೩) ಹದಿಮೂರನೆಯವನು ಅನ್ನುವನು:"ಹೋಗಲಿ ಬಿಡಿರಿ, ಸುಮ್ಮನೆ ವಟವಟ ಹಚ್ಚಬೇಡಿರಿ. ಮುಖ್ಯವಾಗಿ ಅಂತಃಕರಣದಲ್ಲಿ ಭೂತದಯೆ ಇರಬೇಕು. ಇದೇ ಎಲ್ಲದರ ಸಾರವಿರುವದು" (೧೪) ಹದಿನಾಲ್ಕನೆಯವನು ಅನ್ನುವನು: "ನಮ್ಮ ನಮ್ಮ ಆಚಾರ ಧರ್ಮದಿಂದ ನಡೆಯಬೇಕು. ಇದೇ ಉತ್ತಮವಾದದ್ದು. ಮತ್ತು ಅಂತ್ಯಕಾಲದಲ್ಲಿ ಭಗವಂತನ ನಾಮವನ್ನು ಅನ್ನಬೇಕು. ಅಂದರೆ ಎಲ್ಲ ಆದಂತೆ" (೧೫) ಹದಿನೈದನೆಯವನು ಅನ್ನುವನು: "ಪುಣ್ಯವು ಪದರಿನಲ್ಲಿದ್ದರೇನೇ ಅಂತ್ಯಕಾಲದಲ್ಲಿ ಮುಖದಿಂದ ಭಗವಂತನ ನಾಮ ಬರುವದು. ಇಲ್ಲದಿದ್ದರೆ ಆ ಕೊನೆಯ ಹೊತ್ತಿಗೆ ಮನುಷ್ಯನಿಗೆ ಭ್ರಮವಾಗುವದು" (೧೬)

ಯೇಕ ಮ್ಹಣತೀ ಜೀತ ಅಸಾವೇ । ತನ ಚಿ ಸಾರ್ಥಕ ಕರಾವೇ ।
ಯೇಕ ಮ್ಹಣತೀ ಫಿರಾವೇ । ತೀರ್ಥಾಟಣ ॥೧೭॥
ಯೇಕ ಮ್ಹಣತೀ ಹೇ ಅಟಾಟೀ । ಪಾಣೀಪಾಷಾಣಾಚೀ ಭೇಟೀ ।
ಚುಂಬಕುಳ್ಯಾ ಮಾರಿತಾ ಹಿಂಪುಟೀ । ಕಾಸಾವಿಸ ವ್ಹಾವೇ ॥೧೮॥
ಯೇಕ ಮ್ಹಣತೀ ಸಾಂಡೀ ವಾಚಾಳೀ । ಅಗಾಧ ಮಹಿಮಾ ಭೂಮಂಡಳೀ ।
ದರ್ಶನ ಮಾತ್ರೇ ಹೋಯೆ ಹೋಳೀ । ಮಹಾಪಾತಕಾಚೀ ॥೧೯॥
ಯೇಕ ಮ್ಹಣತೀ ತೀರ್ಥ ಸ್ವಭಾವೇ । ಕಾರಣ ಮನ ಅವರಾವೇ ।
ಯೇಕ ಮ್ಹಣತೀ ಕೀರ್ತನ ಕರಾವೇ । ಸಾವಕಾಸ ॥೨೦॥
ಯೇಕ ಮ್ಹಣತೀ ಯೋಗ ಬರವಾ । ಮುಖ್ಯ ತೋ ಚಿ ಆಧೀ ಸಾಧಾವಾ ।
ದೇಹೋ ಅಮರ ಚಿ ಕರಾವಾ । ಅಕಸ್ಮಾತ ॥೨೧॥
ಯೇಕ ಮ್ಹಣತೀ ಐಸೇ ಕಾಯೆ । ಕಾಳವಂಚನಾ ಕರೂ ನಯೆ ।
ಯೇಕ ಮ್ಹಣತೀ ಧರಾವೀ ಸೋಯೆ । ಭಕ್ತಿಮಾರ್ಗಾಚೀ ॥೨೨॥
ಯೇಕ ಮ್ಹಣತೀ ಜ್ಞಾನ ಬರವೇ । ಯೇಕ ಮ್ಹಣತೀ ಸಾಧನ ಕರಾವೇ ।
ಯೇಕ ಮ್ಹಣತೀ ಮುಕ್ತ ಅಸಾವೇ । ನಿರಂತರ ॥೨೩॥
ಯೇಕ ಮ್ಹಣತೀ ಅನರ್ಗಳಾ । ಧರೀ ಪಾಪಾಚಾ ಕಂಟಾಳಾ ।
ಯೇಕ ಮ್ಹಣತೀ ರೇ ಮೋಕಳಾ । ಮಾರ್ಗ ಆಮುಚಾ ॥೨೪॥
ಯೇಕ ಮ್ಹಣತೀ ಹೇ ವಿಶೇಷ । ಕರೂ ನಯೆ ನಿಂದಾ ದ್ವೇಷ ।
ಯೇಕ ಮ್ಹಣತೀ ಸಾವಕಾಸ । ದುಷ್ಟಸಂಗ ತ್ಯಾಗಾವಾ ॥೨೫॥
ಯೇಕ ಮ್ಹಣತೀ ಜ್ಯಾಚೇ ಖಾವೇ । ತ್ಯಾ ಸನ್ಮುಖ ಚಿ ಮರಾವೇ ।
ತೇಣೇ ತತ್ಕಾಳ ಚಿ ಪಾವಾವೇ । ಮೋಕ್ಷಪದ ॥೨೬॥
ಯೇಕ ಮ್ಹಣತೀ ಸಾಂಡಾ ಗೋಶೀ । ಆಧೀ ಪಾಹಿಜೆ ತೇ ರೋಟೀ ।
ಮಗ ಕರಾವೀ ಚಾಉಟೀ । ಸಾವಕಾಸ ॥೨೭॥
ಯೇಕ ಮ್ಹಣತೀ ಪಾಉಸ ಅಸಾವಾ । ಮಗ ಸಕಳ ಯೋಗ ಬರವಾ ।
ಕಾರಣ ದುಷ್ಕಾಳ ನ ಪಡಾವಾ । ಮ್ಹಣಿಜೆ ಬರೇ ॥೨೮॥
ಯೇಕ ಮ್ಹಣತೀ ತಪೋನಿಧೀ । ಹೋತಾ ವೊಳತೀ ಸಕಳ ಸಿದ್ಧೀ ।
ಯೇಕ ಮ್ಹಣತೀ ರೇ ಆಧೀ । ಇಂದ್ರಪದ ಸಾಧಾವೇ ॥೨೯॥
ಯೇಕ ಮ್ಹಣತೀ ಆಗಮ ಪಾಹಾವಾ । ವೇತಾಳ ಪ್ರಸನ್ನ ಕರೂನ ಘ್ಯಾವಾ ।
ತೇಣೇ ಪಾವಿಜೆ ದೇವಾ । ಸ್ವರ್ಗಲೋಕೀ ॥೩೦॥

ಹದಿನಾರನೆಯವನು ಅನ್ನುವನು:"ನಾವು ಜೀವಂತವಿರುವಾಗಲೇ ನಮ್ಮ ಜೀವನ ಸಾರ್ಥಕ ಮಾಡಿಕೊಳ್ಳಬೇಕು" ಆಗ ಹದಿನೇಳನೆಯವನು ಅನ್ನುವನು : "ಕೇವಲ ತೀರ್ಥಾಟನ ಮಾಡುತ್ತ ತಿರುಗಬೇಕು" (೧೭) ಆಗ ಹದಿನೆಂಟನೆಯವನು ಅನ್ನುವನು: "ತೀರ್ಥಾಟನದ ಯಾತಾಯಾತ ಮಾಡುವ ಅವಶ್ಯವಿಲ್ಲ. ಯಾಕೆಂದರೆ ತೀರ್ಥದಲ್ಲಿಹೋದರೆ ಅಲ್ಲಿ ಕೇವಲ ಕಲ್ಲು ಮತ್ತು ನೀರು ಇವುಗಳದೇ ದರ್ಶನವಾಗುವದು. ಹಾಗೂ ತೀರ್ಥದಲ್ಲಿ ಮುಳುಗಿ-ಮುಳುಗಿ ಮೂಗು ಬಾಯಿ ಕಿವಿಗಳಲ್ಲಿ ನೀರು ಸೇರಿ ಅದರಿಂದ ಜೀವವು ಮಾತ್ರ ವ್ಯಾಕುಲಗೊಳ್ಳುವದು. ಕಷ್ಟವಾಗುವದು" (೧೮) ಹತ್ತೊಂಬತ್ತನೆಯವನು ಅನ್ನುವನು: "ಈ ಬಾಯಿ ಬಡಾಯಿ ಸಾಕು ಮಾಡಿರಿ ಈಜಗತ್ತಿನಲ್ಲಿ ತೀರ್ಥಗಳ ಮಹಿಮೆ ಅಪಾರವಿರುವದು. ಕೇವಲ ತೀರ್ಥ ದರ್ಶನದಿಂದ ಘೋರ ಪಾಪಗಳು ನಾಶಹೊಂದುವವು. (೧೯) ಇಪ್ಪತ್ತನೆಯವನು ಅನ್ನುವನು: "ಮನಸ್ಸನ್ನು ಬಿಗಿ ಹಿಡಿಯಿರಿ. ಇದು ಎಲ್ಲ ಸಾಧನೆಯ ಗುಟ್ಟು ಇರುವದು. ನಾವು ಮನವನ್ನು ಹಿಡಿತದಲ್ಲಿ ತಂದೆವೆಂದರೆ ಅದೇ ತೀರ್ಥವಾಗುವದು" ಆಗ ಇಪ್ಪತ್ತೊಂದನೆಯವನು ಅನ್ನುತ್ತಾನೆ: "ಸತತ ಕೀರ್ತನೆ ಮಾಡುತ್ತ ಹೋಗಬೇಕು"(೨೦) ಇಪ್ಪತ್ತೆರಡನೆಯವನು ಅನ್ನುವನು: "ಯೋಗ ಸಾಧನವು ಎಲ್ಲವುಗಳಿಗಿಂತ ಉತ್ತಮವಿರುವದು. ಆದ್ದರಿಂದ ಎಲ್ಲವನ್ನು ಒಂದು ಬದಿಗೆ ಸರಿಸಿ ಮೊದಲು ಯೋಗ ಸಾಧನೆಯನ್ನು ಮಾಡಬೇಕು. ಇದರಿಂದ ದೇಹ ಅಮರವಾಗುವದು. ಇದನ್ನೇ ಅವಶ್ಯ ಮಾಡಿರಿ.·(೨೧) ಇಪ್ಪತ್ತಮೂರನೆಯವನು ಅನ್ನುವನು: "ಇದೆಲ್ಲ ಏನು? ಹೀಗೆಲ್ಲ ಮಾಡಿ ಕಾಲನನ್ನು ಘಸಾಯಿಸಬೇಡಿರಿ". ಇಪ್ಪತ್ನಾಲ್ಕನೆಯವನು ಅನ್ನುವನು: "ಕೇವಲ ಭಕ್ತಿ ಮಾರ್ಗ ಹಿಡಿದು ನಡೆಯಿರಿ.(೨೨) ಇಪ್ಪತ್ತೈದನೆಯವನು ಅನ್ನುವದೇನಂದರೆ:"ಜ್ಞಾನ ಮಾರ್ಗವೇ ಸರ್ವೋತ್ತಮವು. ಇಪ್ಪತ್ತಾರನೆಯವನು: "ಸಾಧನ ಮಾಡುವದು ಯೋಗ್ಯ ಇದು ಅಂದರೆ ಇಪ್ಪತ್ತೇಳನೆಯವನು "ಸದಾ ಸರ್ವಕಾಲ ಮುಕ್ತತನದಿಂದ ನಡೆಯಬೇಕು ಎಂದು ಅನ್ನುವನು" (೨೩) ಇಪ್ಪತ್ತೆಂಟನೆಯವನು ಅನ್ನುವದೇನಂದರೆ:"ಎಲೋ ಮುಕ್ತತನದಿಂದ ಅಂದರೆ ಸ್ವೈರಾಚಾರದಿಂದ ನಡೆಯುವವನೇ?"ಪಾಪದ ಬಗೆಗೆ ಸ್ವಲ್ಪಾದರೂ ತಿರಸ್ಕಾರವಿರಲಿ-ಬೇಸರವಿರಲಿ". ಆಗ ಇಪ್ಪತ್ತೊಂಭತ್ತನೆಯವನು ಅನ್ನುತ್ತಾನೆ ಕೇಳಿರಿ: ನಮ್ಮ ಈ ಮಾರ್ಗವೇ ಮೂಲತಃ ಬಂಧನರಹಿತವಿರುವದು"(೨೪)ಮೂವತ್ತನೆಯವನು ಅನ್ನುತ್ತಾನೆ. ಪರಮಾರ್ಥದಲ್ಲಿ ವಿಶೇಷವೇನಾದರೂ ಇದ್ದುದಾದರೆ ಅದು ಯಾರ ನಿಂದೆಯನ್ನೂ ಮಾಡಬೇಡ,ಮತ್ತು ಯಾರ ಸಂಗಡವೂ ದ್ವೇಷ ಮಾಡಬೇಡ"ಆಗ ಮೂವತ್ತೊಂದನೆಯವನು ಅನ್ನುವನು: "ದುಷ್ಟರ ಸಂಗತಿಯನ್ನು ಸಾವಕಾಶವಾಗಿ ಬಿಟ್ಟು ಬಿಡಬೇಕು" (೨೫) ಮೂವತ್ತೆರಡನೆಯವನು ಅನ್ನುವನು: "ನಾವು ಯಾರ ಅನ್ನವನ್ನು ತಿನ್ನುವೆವೋ ಅವರ ಚಾಕರಿಯನ್ನು ಮಾಡುತ್ತ ಅವರ ಎದುರಿಗೇ ಪ್ರಾಣವನ್ನು ಬಿಡಬೇಕು ಅಂದರೆ ನಮಗೆ ತಾಬಡ ತೋಬಡ ಮೋಕ್ಷ ಸಿಗುವದು. (೨೬) ಮೂವತ್ತಮೂರನೆಯವನು ಅನ್ನುವನು : ಈ ಮಾತುಗಳೆಲ್ಲ ಇರಲಿ ಮೊದಲು ತಿನ್ನಲು ಹೊಟ್ಟೆತುಂಬ ಅನ್ನಬೇಕು. ಅದು ದೊರಕಿದ ನಂತರ ಉಳಿದ ಮಾತುಗಳ ಬಗ್ಗೆ ಸಾವಕಾಶವಾಗಿ ಮಾತಾಡುವಾ" (೨೭) ಮೂವತ್ನಾಲ್ಕನೆಯವನು ಅನ್ನುವನು: "ಮೊದಲಿಗೆ ಚನ್ನಾಗಿ ಮಳೆ ಬೀಳಬೇಕು. ಅಂದರೆ ಉಳಿದ ಎಲ್ಲ ವಿಚಾರಗಳೂ ಸರಿಯಾಗಿ ನಡೆಯುವವು. ಯಾಕಂದರೆ ದುಷ್ಕಾಳ ಬೀಳಬಾರದು. ಅಂದರೆ ಎಲ್ಲವೂ ಸರಿಹೋಗುವದು" (೨೮) ಮೂವತ್ತೈದನೆಯನು ಅನ್ನುವನು: ಬಹಳಷ್ಟು ತಪಶ್ಚರ್ಯ ಮಾಡಿ ತಪವನ್ನು ಸಂಗ್ರಹಿಸಬೇಕು. ಇದರ ಯೋಗದಿಂದ ಯಾವತ್ತೂ ಸಿದ್ಧಿಗಳು ವಶವಾಗುವವು. ಅಂದರೆ ನಮಗೆ ಏನೂ ಕಡಿಮೆ ಆಗುವದಿಲ್ಲ" ಆಗ ಮೂವತ್ತಾರನೆಯವನು ಅನ್ನುವದೇನಂದರೆ: "ಇವೆಲ್ಲಕ್ಕಿಂತ ಮೊದಲು ಇಂದ್ರ ಪದವಿಯನ್ನು ಸಾಧಿಸಿಕೊಳ್ಳಬೇಕು" (೨೯) ಮೂವತ್ತೇಳನೆಯವನು ಅನ್ನುವನು: "ತಂತ್ರಶಾಸ್ತ್ರದ ಅಭ್ಯಾಸ ಮಾಡಬೇಕು. ಇದರಿಂದ ವೇತಾಳವನ್ನು ವಶಮಾಡಿಕೊಳ್ಳಬೇಕು. ಇವರ ಸಹಾಯದಿಂದ ಸ್ವರ್ಗಕ್ಕೆ ಹೋಗಿ ಅಲ್ಲಿ ದೇವರಾಗಿ ಇರಬೇಕು." (೩೦)

ಯೇಕ ಮ್ಹಣತೀ ಅಘೋರಮಂತ್ರ । ತೇಣೇ ಹೋಈಜೆ ಸ್ವತಂತ್ರ ।
ಶ್ರೀಹರೀ ಜಯೇಚಾ ಕಳತ್ರ । ತೇ ಚಿ ಮೊಳೆ ॥೩೧॥
ತೀ ಲಾಗಲೆ ಸರ್ವ ಧರ್ಮ । ತೇಥೇ ಕೈಚೇ ಕ್ರಿಯಾಕರ್ಮ ।
ಯೇಕ ಮ್ಹಣತೀ ಕುಕರ್ಮ । ತಿಚ್ಯಾ ಮದೇ ॥೩೨॥
ಯೇಕ ಮ್ಹಣತೀ ಯೇಕ ಸಾಕ್ಷಪ । ಕರಾವಾ ಮೃತ್ಯಂಜಯಾಚಾ ಜಪ ।
ತೇಣೇ ಗುಣೇ ಸರ್ವ ಸಂಕಲ್ಪ । ಸಿದ್ಧೀತೇ ಪಾವತೀ ॥೩೩॥
ಯೇಕ ಮ್ಹಣತೀ ಬಟು ಭೈರವ । ತೇಣೇ ಪಾವಿಜೆ ವೈಭವ ।
ಯೇಕ ಮ್ಹಣತೀ ಝೋಟಿಂಗ ಸರ್ವ । ಪುರ್ವೀತಸೆ ॥೩೪॥
ಯೇಕ ಮ್ಹಣತೀ ಕಾಳೀ ಕಂಕಾಳೀ । ಯೇಕ ಮ್ಹಣತೀ ಭದ್ರಕಾಳೀ ।
ಯೇಕ ಮ್ಹಣತೀ ಉಚಿಷ್ಟ ಚಾಂಡಾಳೀ । ಸಾಹೇ ಕರಾವೀ ॥೩೫॥
ಯೇಕ ಮ್ಹಣತೀ ವಿಘ್ನಹರ । ಯೇಕ ಮ್ಹಣತೀ ಭೋಳಾ ಶಂಕರ ।
ಯೇಕ ಮ್ಹಣತೀ ಸತ್ವರ । ಪಾವೆ ಭಗವತೀ ॥೩೬॥
ಯೇಕ ಮ್ಹಣತೀ ಮಲ್ಲಾರೀ । ಸತ್ವರ ಚಿ ಸಭಾಗ್ಯ ಕರೀ ।
ಯೇಕ ಮ್ಹಣತೀ ಮಹಾ ಬರೀ । ಭಕ್ತಿ ವೆಂಕಟೇಶಾಚೀ ॥೩೭॥
ಯೇಕ ಮ್ಹಣತೀ ಪೂರ್ವ ಶೇವಾ । ಯೇಕ ಮ್ಹಣತೀ ಪ್ರೇತ್ನ ಕರಾವಾ ।
ಯೇಕ ಮ್ಹಣತೀ ಭಾರ ಘಾಲಾವಾ । ದೇವಾ ಚ ವರೀ ॥೩೮॥
ಯೇಕ ಮ್ಹಣತೀ ದೇವ ಕೈಚಾ । ಅಂತ ಚಿ ಪಾಹಾತೋ ಭಲ್ಯಾಚಾ ।
ಯೇಕ ಮ್ಹಣತೀ ಹಾ ಯುಗಾಚಾ । ಯುಗಧರ್ಮ ॥೩೯॥
ಯೇಕ ಆಶ್ಚರ್ಯ ಮಾನಿತೀ । ಯೇಕ ವಿಸ್ಮಯೋ ಕರಿತೀ ।
ಯೇಕ ಕಂಟಾಳೋನ ಮ್ಹಣತೀ । ಕಾಯೆ ಹೋಈಲ ತೇ ಪಾಹಾವೇ ॥೪೦॥
ಐಸೆ ಪ್ರಪಂಚಿಕ ಜನ । ಲಕ್ಷಣೇ ಸಾಂಗತಾ ಗಹನ ।
ಪರಂತು ಕಾಹೀ ಯೇಕ ಚಿನ್ಹ । ಅಲ್ಪಮಾತ್ರ ಬೋಲಿಲೋ ॥೪೧॥
ಆತಾ ಅಸೋ ಹಾ ಸ್ವಭಾವ । ಜ್ಞಾತ್ಯಾಚಾ ಕೈಸಾ ಅನುಭವ ।
ತೋ ಹಿ ಸಾಂಗಿಜೇಲ ಸರ್ವ । ಸಾವಧ ಐಕಾ ॥೪೨॥
ಯೇಕ ಮ್ಹಣತೀ ಕರಾವೀ ಭಕ್ತೀ । ಶ್ರೀಹರೀ ದೇಈಲ ಸದ್ಗತೀ ।
ಯೇಕ ಮ್ಹಣತೀ ಬ್ರಹ್ಮಪ್ರಾಪ್ತೀ । ಕರ್ಮೇ ಚಿ ಹೋಯೇ ॥೪೩॥
ಯೇಕ ಮ್ಹಣತೀ ಭೋಗ ಸುಟೇನಾ । ಜನ್ಮಮರಣ ಹೇ ತುಟೇನಾ ।
ಯೇಕ ಮ್ಹಣತೀ ಉರ್ಮೀ ನಾನಾ । ಅಜ್ಞಾನಾಚ್ಯಾ ॥೪೪॥

ಮೂವತ್ತೆಂಟನೆಯವನು ಅನ್ನುವನು: "ಅಘೋರ ಮಂತ್ರ ಸಾಧ್ಯಮಾಡಿಕೊಳ್ಳಬೇಕು. ಅಂದರೆ ಮಂತ್ರ ಪ್ರಭಾವದಿಂದ ಸ್ವತಂತ್ರರಾಗಲು ಬರುವದು. ಶ್ರೀಹರಿಯ ಆಶ್ರಯ ಪಡೆದಿರುವ ಲಕ್ಷ್ಮಿಯು ಆಗ ಪ್ರಸನ್ನಳಾಗುವಳು. (೩೧) "ಲಕ್ಷ್ಮಿಯ ಸುತ್ತು ಮುತ್ತಲೂ ಎಲ್ಲ ಧರ್ಮಗಳು ಕೂಡಿರುವವು. ಅಂದ ಮೇಲೆ ಯಾವ ಕ್ರಿಯಾ ಕರ್ಮಗಳ ಅವಶ್ಯಕತೆಯೂ ನಮಗೆ ಇರುವದಿಲ್ಲವೆಂದು ಮೂವತ್ತೊಂಭತ್ತನೆಯವನು ಅಂದನು." ಆಗ ಅಲ್ಲಿ ಇದ್ದ ನಾಲ್ವತ್ತನೆಯವನು "ಲಕ್ಷ್ಮಿಯ (ದ್ರವ್ಯದ) ಮದದಿಂದಲೇ ಎಲ್ಲ ಕೆಟ್ಟ ಕರ್ಮಗಳು ಆಗುವವು" (೩೨) ನಾಲ್ವತ್ತೊಂದನೆಯವನು ಅನ್ನುವನು : "ಒಂದೇಒಂದು ಪ್ರಯತ್ನ ಮಾಡಬೇಕು. ಅದು ಯಾವುದೆಂದರೆ ಮೃತ್ಯುಂಜಯ ಜಪವು ಇದರ ಸಾಮರ್ಥ್ಯದಿಂದ ಸರ್ವ ಸಂಕಲ್ಪಗಳೂ ಸಾಧ್ಯವಾಗುವವು" (೩೩) ನಾಲ್ವತ್ತೆರಡನೆಯವನು ಅನ್ನುವನು: "ಬಟು ಭೈರವನ (ಬ್ರಹ್ಮಚಾರೀ ಭೈರವದೇವನ) ಕೃಪೆಯಿಂದ ವೈಭವ ಪ್ರಾಪ್ತವಾಗುವದು."ನಾಲ್ವತ್ಮೂರನೆಯವನು ಅನ್ನುವನು : ಝೋಟಿಂಗ್ ಅನ್ನುವ ಭೂತ ಪಿಶಾಚಿ ವಶವಾದರೆ ಸರ್ವವನ್ನೂ ಒದಗಿಸಿಕೊಡುವನು. (೩೪) ನಾಲ್ವತ್ತನಾಲ್ಕನೆಯವನು "ಕಾಳಿ, ಕಂಕಾಳಿ, ಅಂದರೆ ನಾಲ್ವತ್ತೈದನೆಯವನು "ಭದ್ರಕಾಳಿ" ಅನ್ನುವನು. ನಾಲ್ವತ್ತಾರನೆಯವನು: ಉಚ್ಛಿಷ್ಟಚಂಡಾಳಿಯನ್ನು ಪ್ರಸನ್ನ ಮಾಡಿಕೊಳ್ಳಬೇಕು. (ಇವೆಲ್ಲ ಕ್ಷುದ್ರದೇವತೆಗಳು) (೩೫) ನಾಲ್ವತ್ತೇಳನೆಯವನು "ಗಣಪತಿ". ನಾಲ್ವತ್ತೆಂಟನೆಯವನು "ಭೋಳಾಶಂಕರ". ನಾಲ್ವತೊಂಭತ್ತನೆಯವನು "ಭಗವತಿ ಈ ದೇವಿಯು ಬಹುಬೇಗ ಪ್ರಸನ್ನಳಾಗುವಳು" (೩೬) ಐವತ್ತನೆಯವನು ಅನ್ನುವನು : "ಮಲ್ಹಾರಿಯು ಕೂಡಲೇ ಭಾಗ್ಯವಾನರನ್ನಾಗಿ ಮಾಡುವನು". ಐವತ್ತೊಂದನೆಯವನು ಅನ್ನುವನು: "ವೆಂಕಟೇಶನ ಭಕ್ತಿ ಸರ್ವದರಲ್ಲಿ ಅತಿ ಉತ್ತಮ ಭಕ್ತಿ ಇರುವದು" (೩೭) ಐವತ್ತೆರಡನೆಯವನು ಅನ್ನುವದೇನಂದರೆ "ಪೂರ್ವ ಪುಣ್ಯದ ಮೇಲೆ ಎಲ್ಲ ಅವಲಂಬಿಸಿ ಇರುವದು" ಅಂದರೆ, ಐವತ್ಮೂರನೆಯವನು ಅನ್ನುವನು ಸಾಕಷ್ಟು ಪ್ರಯತ್ನ ಮಾಡಬೇಕು" ಐವತ್ನಾಲ್ಕನೆಯವನು ಅನ್ನುವನು "ದೇವರ ಮೇಲೆ ಎಲ್ಲ ಭಾರ ಹಾಕಿ ನಾವು ಸ್ವಸ್ಥ ಕುಳಿತು ಬಿಡಬೇಕು. (೩೮) ಐವತ್ತೈದನೆಯವನು: "ಎಲ್ಲಿಯ ದೇವರು ಇವನು ಸಜ್ಜನರನ್ನೇ ಕಾಡುವನು ಅವರ ಅಂತವನ್ನೇ ನೋಡುತ್ತಿರುತ್ತಾನೆ" ಎನ್ನುವನು. ಐವತ್ತಾರನೆಯವನು ಅನ್ನುವನು: ಇದು ದೇವರ ದೋಷ ಅಲ್ಲ, ಸಜ್ಜನರ ಛಲ ಕಷ್ಟಗಳೆಲ್ಲ ಮುಖ್ಯವಾಗಿ ಯುಗ ಧರ್ಮಕ್ಕನುಸಾರವಾಗಿ ಬಂದವುಗಳಾಗಿವೆ. (೩೯) ಈ ಎಲ್ಲ ಪರಿಸ್ಥಿತಿ ನೋಡಿ ಕೆಲವರು ಆಶ್ಚರ್ಯ ಪಡುವರು. ಕೆಲವರು ಥಕ್ ಆಗುವರು. ಕೆಲವು ಜನ ಬೇಸತ್ತು ಏನು ಆಗುವದೋ ಅದನ್ನು ನೋಡಿದರಾಯಿತು ಅನ್ನುವರು. (೪೦) ಪ್ರಾಪಂಚಿಕ ಜನರು ಈ ರೀತಿಯಾಗಿ ತಮ್ಮ ತಮ್ಮ ಅಭಿಪ್ರಾಯ ಹೇಳುವರು. ಇನ್ನೂ ಎಷ್ಟೋ ಇರುವದು,ಆದರೆ ಅದೆಲ್ಲ ಹೇಳಲಿಕ್ಕೆ ಈಗ ಶಕ್ಯವಿಲ್ಲ. ಇಲ್ಲಿ ಹೇಳಿದವು ಕೆಲವು ಪ್ರಕಾರಗಳು ಇವಾದರೂ ನಿಮ್ಮ ಲಕ್ಷ್ಯಕ್ಕೆ ಬರಲಿಯೆಂದು ಹೇಳಲಾಗಿದೆ. (೪೧) ಪ್ರಾಪಂಚಿಕ ಜನರು ಹೇಳೀಕೇಳೀ ಅಜ್ಞಾನಿಗಳಾಗಿರುವರು. ಇವರ ಅಭಿಪ್ರಾಯಗಳು ಭ್ರಮ ಮೂಲಕವಿರುವವೆಂದು ತಿಳಿದರೆ ಇವರಲ್ಲಿ ಆಶ್ಚರ್ಯಪಡಬೇಕಾಗಿಲ್ಲ. ಆದರೆ ಪರಮಾರ್ಥದ ಮಾರ್ಗದಲ್ಲಿ ಇರುವಂಥವರು ಮತ್ತು ಸ್ವಸ್ವರೂಪದ ಗುರುತು ಹಿಡಿಯಬಲ್ಲವರೂ ಸಹ ತಮ್ಮ ತಮ್ಮ ಭಿನ್ನ ಮತಗಳನ್ನು ಮಂಡಿಸುವರು. ಇಂಥವುಗಳ ಬಗ್ಗೆ ಕೆಲವನ್ನು ಶ್ರೀ ಸಮರ್ಥರು ಇಲ್ಲಿ ಹೇಳುವರು :- ಪ್ರಾಪಂಚಿಕ ಜನರ ಸ್ವಭಾವದ ವರ್ಣನೆ ಈಗ ಸಾಕು. ಇನ್ನುಮುಂದೆ ಜ್ಞಾತಾಗಳ ಅಂದರೆ ತಿಳಿದವ, ವಿದ್ವಾನ, ಇಂಥವರ ಅನುಭವ ಎಷ್ಟು ಪ್ರಕಾರದ್ದಿರುವದು ಇದರ ಬಗ್ಗೆ ಈಗ ಸವಿಸ್ತಾರವಾಗಿ ಹೇಳುವೆವು ಲಕ್ಷ್ಯಕೊಟ್ಟು ಕೇಳಬೇಕು (೪೨) ಒಬ್ಬ ಅನ್ನುವದೇನಂದರೆ "ಚನ್ನಾಗಿ ಭಕ್ತಿ ಮಾಡಬೇಕು. ಅಂದರೆ ಭಗವಂತನು ಉತ್ತಮಗತಿ ಕೊಡುವನು". ಇನ್ನೊಬ್ಬ ಅನ್ನುವನು ಕರ್ಮ ಮಾಡುವದರಿಂದಲೇ ಬ್ರಹ್ಮಪ್ರಾಪ್ತಿಯಾಗುವದು. (೪೩) ಮೂರನೆಯವನು ಭೋಗ ಭೋಗಿಸದ ಹೊರತು ಬಿಡುಗಡೆಯೇ ಇಲ್ಲ. ಅದ್ದರಿಂದ ಜನ್ಮ ಮರಣ ಪರಂಪರೆ ಏನೂ ತಪ್ಪಿದ್ದಲ್ಲ" ಅನ್ನುವನು.ನಾಲ್ಕನೆಯವನು:ಅಜ್ಞಾನದಿಂದ ಎಲ್ಲ ಊರ್ಮಿ (ಕಲ್ಪನಾ) ಹುಟ್ಟುವವು. ಅಜ್ಞಾನ ಇರುವವರೆಗೆ ಈ ಕಲ್ಪನೆಗಳು ಏಳುತ್ತಲೇ ಇರುವವು.(೪೪)

ಯೇಕ ಮ್ಹಣತೀ ಸರ್ವ ಬ್ರಹ್ಮ । ತೇಥೇ ಕೈಚೇ ಕ್ರಿಯಾಕರ್ಮ ।
ಯೇಕ ಮ್ಹಣತೀ ಹಾ ಅಧರ್ಮ । ಬೋಲೋ ಚಿ ನಯೇ ॥೪೫॥

ಯೇಕ ಮ್ಹಣತೀ ಸರ್ವ ನಾಸೇ । ಉರಲೇ ತೇ ಚಿ ಬ್ರಹ್ಮ ಅಸೇ ।
ಯೇಕ ಮ್ಹಣತೀ ಐಸೇ ನಸೇ । ಸಮಾಧಾನ ॥೪೬॥

ಸರ್ವ ಬ್ರಹ್ಮ ಕೇವಳ ಬ್ರಹ್ಮ । ದೋನೀ ಪೂರ್ವಪಕ್ಷಾಚೆ ಭ್ರಮ ।
ಅನುಭವಾಚೇ ವೇಗಳೇ ವರ್ಮ । ಮ್ಹಣತೀ ಯೇಕ ॥೪೭॥

ಯೇಕ ಮ್ಹಣತೀ ಹೇ ನ ಘಡೇ । ಅನಿರ್ವಾಚ್ಯ ವಸ್ತು ಘಡೇ ।
ಜೇ ಬೋಲತಾ ಮೌನ್ಯ ಪಡೇ । ವೇದ ಶಾಸ್ತ್ರಾಸೀ ॥೪೮॥

ತವ ಶ್ರೋತಾ ಅನುವಾದಲಾ । ಮ್ಹಣೆ ನಿಶ್ಚಯೊ ಕೋಣ ಕೇಲಾ ।
ಸಿದ್ಧಾಂತಮತೇ ಅನುಭವಾಲಾ । ಉರೀ ಕೈಚೀ ॥೪೯॥

ಅನುಭವ ದೇಹೀ ವೇಗಳಾಲೇ । ಹೇ ಪೂರ್ವೀ ಚ ಬೋಲಿಲೇ ।
ಆತಾ ಕಾಹೀ ಯೇಕ ಕೇಲೇ । ನವಚೆ ಕೀ ॥೫೦॥

ಯೇಕ ಸಾಕ್ಷತ್ವೇ ವರ್ತತೀ । ಸಾಕ್ಷೀ ವೇಗಳಾ ಚಿ ಮ್ಹಣತೀ ।
ಆಪಣ ದೃಷ್ಟಾ ಐಸೀ ಸ್ಥಿತೀ । ಸ್ವಾನುಭವಾಚೀ ॥೫೧॥

ದೃಶ್ಯಾಪಾಸೂನ ದೃಷ್ಟಾ ವೇಗಳಾ । ಐಸೀ ಅಲಿಪ್ತಪಣಾಚೀ ಕಳಾ ।
ಆಪಣ ಸಾಕ್ಷತ್ವೇ ನಿರಾಳಾ । ಸ್ವಾನುಭವೇ ॥೫೨॥

ಸಕಳ ಪದಾರ್ಥ ಜಾಣತಾ । ತೋ ಪದಾರ್ಥಾಹೂನ ಪರ್ತಾ ।
ದೇಹೀ ಅಸೋನಿ ಅಲಿಪ್ತತಾ । ಸಹಜ ಚಿ ಜಾಲೀ ॥೫೩॥

ಯೇಕ ಐಸೇ ಸ್ವಾನುಭವೇ । ಮ್ಹಣತೀ ಸಾಕ್ಷತ್ವೇ ವರ್ತಾವೇ ।
ದೃಶ್ಯ ಅಸೋನಿ ವೇಗಳೇ ವ್ಹಾವೇ । ದೃಷ್ಟೇಪಣೇ ॥೫೪॥

ಯೇಕ ಮ್ಹಣತೀ ನಾಹೀ ಭೇದ । ವಸ್ತು ಠಾಈಚೀ ಅಭೇದ ।
ತೇಥೇ ಕೈಚಾ ಮತಿಮಂದ । ದೃಷ್ಟಾ ಆಣಿಲಾ ॥೫೫॥

ಅವಘೀ ಸಾಕರ ಚಿ ಸ್ವಭಾವೇ । ತೇಥೇ ಕಡು ಕಾಯ ನಿವಡಾವೇ ।
ದೃಷ್ಟಾ ಕೈಚಾ ಸ್ವಾನುಭವೇ । ಅವಘೇ ಚಿ ಬ್ರಹ್ಮ ॥೫೬॥

ಪ್ರಪಂಚ ಪರಬ್ರಹ್ಮ ಅಭೇದ । ಭೇದವಾದೀ ಮಾನಿತೀ ಭೇದ ।
ಪರೀ ಹಾ ಆತ್ಮಾ ಸ್ವಾನಂದ । ಆಕಾರಲಾ ॥೫೭॥

ಐದನೆಯವನು ಬ್ರಹ್ಮನೊಬ್ಬನೇ ಇದ್ದು ಇವನ ಹೊರತಾಗಿ ಎರಡನೆಯದೇನೂ ಇಲ್ಲವೆಂದು ಹೇಳುವ ದಾದರೆ ಕ್ರಿಯಾಕರ್ಮಗಳ ಅವಶ್ಯಕತೆ ಇರುವದೆಲ್ಲಿ? ಎಂದು ಅನ್ನುವನು. ಆಗ ಆರನೆಯವನು: ಕ್ರಿಯಾ, ಕರ್ಮದ ಬಗೆಗೆ ಮಾತಾಡುವದೇ ಅಧರ್ಮವೆಸುಸುವದು. ಇದು ಧರ್ಮಲಂಡತನವು. ಆದ್ದರಿಂದ ಆರೀತಿ ಮಾತಾಡಬೇಡಿರಿ. ಎಂದು ಅನ್ನುವನು. (೪೫) ಏಳನೆಯವನು ಅನ್ನುವನು: "ದೃಶ್ಯವೆಲ್ಲವೂ ನಾಶವಂತವಿರುವದು. ಸರ್ವದೃಶ್ಯ ನಷ್ಟ ವಾದ ಮೇಲೆ ಯಾವುದು ಉಳಿಯುವದೋ ಅದೇ ಬ್ರಹ್ಮವಿರುವದು" ಆಗ ಎಂಟನೆಯುವನು ಅನ್ನುವನು: "ಸಮಾ ಧಾನದ ಸ್ವರೂಪವು ಈಪ್ರಕಾರದ್ದಿರುವದಿಲ್ಲ."(೪೬)"ಸರ್ವವೂ ಬ್ರಹ್ಮವಿರುವದೆಂದು ಅನ್ನುವದು. ಮತ್ತು ಯಾವತ್ತೂ ದೃಶ್ಯವು ನಷ್ಟವಾಗಿ ಉಳಿಯುವದೇ ಬ್ರಹ್ಮವಿರುವದೆಂದು ಅನ್ನುವದೂ, ಇವೆರಡೂ ಸಿದ್ಧಾಂತಗಳು ಪೂರ್ವ ಪಕ್ಷದ ಭ್ರಮವಿರುವದು" ಆದ್ದರಿಂದ ಒಂಭತ್ತನೆಯವನು ಅನ್ನುವದೇನೆಂದರೆ "ಬ್ರಹ್ಮಾನುಭವದ ಮರ್ಮವು ಅದೊಂದು ಬೇರೆಯೇ ಇರುವದು."(೪೭)ಹತ್ತನೆಯುವನು ಅನ್ನುವನು: "ಬ್ರಹ್ಮದ ವರ್ಣನೆ ಮಾಡಲಿಕ್ಕೆ ಹೋದರೆ ವೇದ ಶಾಸ್ತ್ರ ಗಳೂ ಸಹ ಮೌನಧಾರಣ ಮಾಡುವವು-ಮಾತನ್ನು ನಿಲ್ಲಿಸಬೇಕಾಗುವದು. ಬ್ರಹ್ಮವು ಮನ ಮತ್ತು ವಾಣಿ ಇವುಗಳ ಅಳವಿಗೆ ಹೊರತಾಗಿರುವದು. ಇದು ಮನದ ಅಳವಿನಲ್ಲಿ ಅಂದರೆ ಅನುಭವದ ಅಳವಿನಲ್ಲಿ ಬರಲಿಕ್ಕೆ ಶಕ್ಯವಿಲ್ಲ ಇದು ಅನಿರ್ವಚನೀಯವಿರುವದು."(೪೮) ಇಲ್ಲಿ ಶ್ರೋತಾನು ಒಂದು ಆಕ್ಷೇಪವೆತ್ತಿದನು. ಇದನ್ನು ಕೇಳಿ ಶ್ರೋತಾ ಹೀಗೆ ವಿಚಾರಿಸಿದನು. ಬ್ರಹ್ಮವು ಹೀಗಿರುವದು ಮತ್ತು ಹಾಗಿರುವದು. ಎಂದು ಅನ್ನುವಿರಿ ಈ ನಿಶ್ಚಯವನ್ನು ಯಾರು ಮಾಡಿದರು? ಯಾಕೆಂದರೆ ಸಿದ್ಧಾಂತ ಪಕ್ಷದ ಪ್ರಕಾರ ಸದ್ವಸ್ತುವಿನ ಬಗ್ಗೆ "ನಾನು ಅನುಭವ ಪಡೆಯುವೆ" ಅನ್ನುವ ದ್ವೈತ ಇರುವದಿಲ್ಲ. ( ಅನುಭವಕ್ಕೆ ಸ್ಥಳವಿರುವದಿಲ್ಲ ) ಎಲ್ಲಿ ಈ ದ್ವೈತ ಇರುವದಿಲ್ಲವೋ ಅಲ್ಲಿ ಅನುಭವ ನಿರ್ಮಾಣವಾಗುವದೇ ಇಲ್ಲ. (೪೯) ಇದರ ಮೇಲೆ ವಕ್ತಾ ತನ್ನ ವಿಚಾರವನ್ನು ಸ್ಪಷ್ಟೀಕರಿಸಿ ಹೇಳುವನು;– ಪ್ರತಿಯೊಬ್ಬ ಮನುಷ್ಯರ ಅನುಭವ ಬೇರೆ ಬೇರೆ ಇರುವವು. ಈ ಮಾತನ್ನು ಹಿಂದೆಯೇ ಹೇಳಿರುವೆವು. ಇವೆಲ್ಲವನ್ನು ಈಗ ಒಂದು ಮಾಡಲು ಏಕರೂಪ ಮಾಡಲು ಬರುವದಿಲ್ಲ. (೫೦) ಒಬ್ಬನು ಸಾಕ್ಷಿತ್ವದಿಂದ ನಡೆಯುವನು (ಸಾಕ್ಷಿತ್ವ ಅಂದರೆ ತ್ರಯಸ್ಥತನ, ತಿರಾಯಿತತನದಿಂದ ನೋಡುವದು) ಸಾಕ್ಷಿಯು ಬೇರೆ ಇರುವನು ಎಂದು ಅವನು ಅನ್ನುವನು. ನಾವು ದ್ರಷ್ಟಾ ಇರುವೆವು. ಕೇವಲ ನೋಡುವವರಾದ ಸಾಕ್ಷಿಗಳು ನಾವು ಇದು ನಿಜವಾದ ಸ್ವಾನುಭವದ ಅವಸ್ಥೆ ಇರುವದು. (೫೧) ದೃಶ್ಯದಿಂದ ದ್ರಷ್ಟಾ ಬೇರೆ ಇರುವನು ಎಂಬಂಥ ಅನುಭವ ಸ್ಥಿರವಾಯಿತೆಂದರೆ ದೃಶ್ಯದಲ್ಲಿ ಇದ್ದುಕೊಂಡೂ ಅದರಿಂದ ಅಲಿಪ್ತ ರಾಗಿರುವ ಕಲೆಯು ಅಥವಾ ಯುಕ್ತಿಯು ಸಾಧ್ಯವಾಗುವದು.ಸಾಕ್ಷಿರೂಪದಿಂದ ನಾವು ಬೇರೆ ಇರುವೆವು ಅನ್ನುವದರ ಪ್ರತ್ಯಕ್ಷ ಅನುಭವ ಬರುವದು. (೫೨) ಸರ್ವ ಪದಾರ್ಥಗಳನ್ನು ಯಾವನು ತಿಳಿದಿರುವನೋ ಅವನು ಆ ಪದಾರ್ಥ ಗಳ ಆಚೆಗೆ ಇರುವನು. ಅವುಗಳಿಗಿಂತ ಬೇರೆ ಇರುವನು. ಈ ಅನುಭವ ಬಂದ ಮೇಲೆ ದೇಹದಿಂದ ಇದ್ದು ಅಗದೀ ಸಹಜವಾಗಿ ಅಲಿಪ್ತತೆ ಸಾಧಿಸುವದು.(೫೩)ಯಾರಿಗೆ ಈ ಅನುಭವ ಬರುವದೋ ಅವರು ಅನ್ನುವದೇನಂದರೆ ನಾವು ಸಾಕ್ಷಿತ್ವದಿಂದ(ಇರಬೇಕು)ನಡೆಯಬೇಕು.ದೃಶ್ಯವು ಆಜೂಬಾಜೂದಲ್ಲಿ ಇದ್ದರೂ ದೃಷ್ಟಾತನದಿಂದಬೇರೆಯಾಗಿ ಇರಬೇಕು:- ನಾನು ಕೇವಲ ನೋಡುವವನಾಗಿರುವೆ. ಈ ಭೂಮಿಕೆಯ ಮೇಲೆ ಆರೂಢನಾಗಿ ದೃಶ್ಯದಲ್ಲಿ ನಡೆಯಬೇಕು. (೫೪) ಇವರ ಮೇಲೆ ಒಬ್ಬನು ಅನ್ನುವದೇನಂದರೆ: ಬ್ರಹ್ಮವಸ್ತುವಿನ ಮೂಲದಲ್ಲಿ ಯಾವುದೇ ಭೇದವಿಲ್ಲ. ಅದು ಸಂಪೂರ್ಣ ಅಭೇದವಿರುವದು. ಆ ಅಭೇದ ರೂಪವಸ್ತುವಿನಲ್ಲಿ ಈ ಹುಚ್ಚ ದ್ರಷ್ಟಾನನ್ನು ಹೇಗೆ ತರಲು ಬಂದೀತು? (೫೫) ತಿಳಿಯಿರಿ ಒಂದು ಸ್ಥಳದಲ್ಲಿ ಸಕ್ಕರೆಯನ್ನು ಸಾಕಷ್ಟು ತುಂಬಿ ಇಟ್ಟಿರುವದು, ಇದರಲ್ಲಿ ಕಠಿಣತನವನ್ನು ಆರಿಸಿ ತೆಗೆದಿಡಲು ಬರಬಹುದೇನು? ಇದರಂತೆ ಎಲ್ಲಿ ಎಲ್ಲ ಕಡೆಗೂ ಪರಬ್ರಹ್ಮನೇ ಘನದಾಟ ತುಂಬಿರುವನೋ ಅಲ್ಲಿ ಸ್ವಾನುಭವ ದಿಂದ ದ್ರಷ್ಟಾನೊಬ್ಬನನ್ನು ಬೇರೆಯಾಗಿ ಬಾಜೂಕ್ಕೆ ತೆಗೆದಿಡಲು ಬರುವದಿಲ್ಲ. (೫೬) ಪ್ರಪಂಚ ಮತ್ತು ಪರಬ್ರಹ್ಮ ದೃಶ್ಯ, ವಿಶ್ವ ಮತ್ತು ಪರಮಾತ್ಮವಸ್ತು ಇವುಗಳಲ್ಲಿ ಎಳ್ಳಷ್ಟೂ ಭೇದವಿಲ್ಲ. ಭೇದವಾದಿಗಳಾದ ಜನರು ಸುಮ್ಮನೇ ಭೇದವನ್ನು ಮನ್ನಿಸುವರು. (ತಿಳಿಯುವರು) ಒಂದೇ ಒಂದಾದ ಸ್ವಾನಂದ ಘನ ಆತ್ಮಾ ವಿಶ್ವರೂಪದಿಂದ ಆಕಾರಕ್ಕೆ ಬಂದಿರುವನು. (೫೭)

ವಿಘುಂರಲೇ ತುಪ ಥಿಜಲೇ । ತೈಸೇ ನಿರ್ಗುಣ ಚಿ ಗುಣಾ ಆಲೇ ।
ತೇಥೇ ಕಾಯು ವೇಗಳೇ ಕೇಲೇ । ದೃಷ್ಟೇಪಣೇ ॥೫೮॥

ಮ್ಹಣೌನಿ ದೃಷ್ಟಾ ಆಣೀ ದೃಶ್ಯ । ಅವಘಾ ಯೇಕ ಚಿ ಜಗದೀಶ ।
ದೃಷ್ಟೇಪಣಾಚೆ ಸಾಯಾಸ । ಕಾಸಯಾಸೀ ॥೫೯॥

ಬ್ರಹ್ಮ ಚಿ ಆಕಾರಲೇ ಸರ್ವ । ಐಸಾ ಯೇಕಾಚಾ ಅನುಭವ।
ಐಸೆ ಹೇ ದೋನೀ ಸ್ವಭಾವ । ನಿರೋಪಿಲೇ ॥೬೦॥

ಅವಘಾ ಆತ್ಮಾ ಆಕಾರಲಾ । ಆಪಣ ಭಿನ್ನ ಕೈಚಾ ಉರಲಾ ।
ದುಸರಾ ಅನುಭವ ಬೋಲಿಲಾ । ಐಸಿಯಾಪರೀ ॥೬೧॥

ಐಕ ತಿಸರಾ ಅನುಭವ । ಪ್ರಪಂಚ ಸಾರೂನಿಯಾ ಸರ್ವ ।
ಕಾಹೀ ನಾಹೀ ತೋ ಚಿ ದೇವ। ಐಸೇ ಮ್ಹಣತೀ ॥೬೨॥

ದೃಶ್ಯ ಅವಘೇ ವೇಗಳೇ ಕೇಲೇ । ಕೇವಳ ಅದೃಶ್ಯ ಚಿ ಉರಲೇ।
ತೇ ಚಿ ಬ್ರಹ್ಮ ಅನುಭವಿಲೇ । ಮ್ಹಣತೀ ಯೇಕ ॥೬೩॥

ಪರೀ ತೇ ಬ್ರಹ್ಮ ಮ್ಹಣೋ ನಯೆ । ಉಪಾಯಾಸಾರಿಖಾ ಅಪಾಯೆ ।
ಸುನ್ಯತ್ವಾಸ ಬ್ರಹ್ಮ ಕಾಯೆ । ಮ್ಹಣೋ ಯೆಈಲ ॥೬೪॥

ದೃಶ್ಯ ಅವಘೇ ವೊಲಾಂಡಿಲೇ । ಅದೃಶ್ಯ ಸುನ್ಯತ್ವೀ ಪಡಿಲೇ ।
ಬ್ರಹ್ಮ ಮ್ಹಣೌನಿ ಮುರಡಲೇ । ತೇಥೂನಿಚ ಮಾಗೆ ॥೬೫॥

ಇಕಡೆ ದೃಶ್ಯ ತಿಕಡೆ ದೇವ । ಮಧ್ಯೇ ಸುನ್ಯತ್ವಾಚಾ ಠಾವ ।
ತಯಾಸ ಮಂದಬುದ್ಧಿಸ್ತವ । ಪ್ರಾಣೀ ಬ್ರಹ್ಮ ಮ್ಹಣೇ ॥೬೬॥

ರಾಯಾಸ ನಾಹೀ ವೊಳಖಿಲೇ । ಸೇವಕಾಸ ರಾವಸೇ ಕಲ್ಪಿಲೇ ।
ಪರೀ ತೇ ಅವಘೇ ವೆರ್ಥ ಗೇಲೇ । ರಾಜಾ ದೇಖತಾ ॥೬೭॥

ತೈಸೇ ಸುನ್ಯತ್ವ ಕಲ್ಪಿಲೇ ಬ್ರಹ್ಮ । ಪುಢೇ ದೇಖತಾ ಪರಬ್ರಹ್ಮ ।
ಸುನ್ಯತ್ವಾಚಾ ಅವಘಾ ಭ್ರಮು । ತುಟೋನ ಗೇಲಾ ॥೬೮॥

ಪರೀ ಹಾ ಸೂಕ್ಷ್ಮ ಆಡತಾಳಾ । ವಾರೀ ವಿವೇಕೇ ವೇಗಳಾ ।
ಜೈಸೇ ದುಗ್ಧ ಘೇಊನ ಜಳಾ । ರಾಜಹಂಸ ಸಾಂಡೀ ॥೬೯॥

ಬಿಸಿ ತುಪ್ಪ ಕರಗಿದ್ದು (ನೀರಾಗಿ) ಇರುತ್ತದೆ. ತಣ್ಣಗಾದ ಮೇಲೆ ಅದು ಗಟ್ಟಿಯಾಗುವದು. ಆದರೆ ತುಪ್ಪದಲ್ಲೆಲ್ಲೂ ಫರಕ ಬೀಳುವದಿಲ್ಲ. ಇದರಂತೆ ಮೂಲನಿರ್ಗುಣ ಪರಮಾತ್ಮ ವಸ್ತು ಸಗುಣವಾಗಿ ಆಕಾರಕ್ಕೆಬಂದಿತು. ಆದರೆ, ಇದರಲ್ಲಿ ಫರಕ ಇರುವದಿಲ್ಲ. ಇಲ್ಲಿ ದೃಷ್ಟೃತನದಿಂದ ಬೇರೆ ಏನು ಮಾಡಲಿಕ್ಕೆ ಬರುವದು? ಅರ್ಥಾತ್ ಏನೂ ಮಾಡಲಿಕ್ಕೆ ಬರುವದಿಲ್ಲ. (೫೮) ಒಟ್ಟಿನಲ್ಲಿ ದೃಷ್ಟಾ ಮತ್ತು ದೃಶ್ಯ ಎರಡೂ ಕೂಡಿ ಒಂದೇ ಪರಮೇಶ್ವರ ವಿರುವದು. ಅಂದ ಮೇಲೆ ದೃಷ್ಟೃತನದ ಖಟಪಟಿ (ದೃಷ್ಟಾನನ್ನು ಹುಡುಕಿ ತೆಗೆಯುವ ಪರಿಶ್ರಮ) ಏತಕ್ಕಾಗಿ ಬೇಕು? (೫೯) ಸಾರಾಂಶ : ಈ ದೃಶ್ಯವಿಶ್ವ ಅಂದರೆ ಆಕಾರಕ್ಕೆ ಬಂದಂಥ ಪರಬ್ರಹ್ಮವೇ ಆಗಿದೆ ಅನ್ನುವ ಅನುಭವ ಕೆಲವು ಜನರದಿರುವದು. ಈಗ ಎರಡು ಪ್ರಕಾರದ ಅನುಭವ ಹೇಳಿದ್ದಾಯಿತು. ಒಂದು ಅನುಭವ : ಹೀಗೆ ದೃಷ್ಟಾ ದೃಶ್ಯಕ್ಕಿಂತ ಬೇರೆ ಇರುವನು. ಇವನು ಸಾಕ್ಷಿಯಾಗಿ ದೃಶ್ಯವನ್ನು ನೋಡುವನು. ಎರಡನೇ ಅನುಭವ ಹೀಗಿರುವದು: ದೃಷ್ಟಾ ಬೇರೆತನದಿಂದ ಇಲ್ಲವೇ ಇಲ್ಲ. ದೃಷ್ಟಾ ಮತ್ತು ದೃಶ್ಯ ಇವೆರಡೂ ಒಂದೇ ಪರಮಾತ್ಮವಸ್ತು ಇರುವವು. (೬೦) ಒಂದೇ ಒಂದು ಆತ್ಮಸ್ವರೂಪವೇ ಒಂದು ವೇಳೆ ವಿಶ್ವರೂಪದಿಂದ ಸಾಕಾರವಾಗಿರುವದಾದರೆ ದೃಷ್ಟೃತನದಿಂದ ನಾವು ಭಿನ್ನರಾಗಿ ಉಳಿಯುವದಿಲ್ಲ. ಇದು ಎರಡನೇಪ್ರಕಾರದ ಅನುಭವವು ಇದನ್ನು ಹೇಳಿದೆವು. (೬೧) ಅನುಭವದ ಮೂರನೆಯ ಪ್ರಕಾರವನ್ನು ಹೇಳುವೆವು. ಕೇಳಿರಿ:– ಎಲ್ಲ ದೃಶ್ಯ ಪ್ರಪಂಚ ಅಥವಾ ದೃಶ್ಯ ವಿಶ್ವ ಇವನ್ನು ಬದಿಗೆ ಸರಿಸಬೇಕು. ಇವನ್ನು ಬಾಜೂಕ್ಕೆ ಸರಿಸಿದ ಮೇಲೆ ಯಾವುದು ಏನೂ ಶಿಲ್ಲಕ ಉಳಿದಿಲ್ಲವೆಂದು ಅನಿಸುವದೋ ಅದೇ ದೇವರೆಂದು ತಿಳಿಯಿರಿ ಹೀಗೂ ಕೆಲವರು ಅನ್ನುವರು. (೬೨) ದೃಶ್ಯವೆನ್ನುವದು ಎಷ್ಟಿದೆಯೋ ಅದೆಲ್ಲವನ್ನೂ ಒಂದು ಬಾಜೂಕ್ಕೆ ಸರಿಸಿದ ಮೇಲೆ ಕೇವಲ ಅದೃಶ್ಯವೇ ಶಿಲುಕು ಉಳಿಯುವದು. ಇದರ ಅನುಭವವೇ ಬ್ರಹ್ಮ ಸ್ವರೂಪದ ಅನುಭವವಾಗಿರುವದೆಂದು ಕೆಲವು ಜನರು ಅನ್ನುವರು. (೬೩) ಎಲ್ಲ ದೃಶ್ಯವನ್ನು ಬಾಜೂಕ್ಕೆ ಸರಿಸಿದ ಮೇಲೆ ಶೂನ್ಯ ಉಳಿಯುವದು. ಆ ಶೂನ್ಯಕ್ಕೆ ಬ್ರಹ್ಮವೆಂದು ಅನ್ನಲಿಕ್ಕೆ ಬರಲಾರದು. ಶೂನ್ಯಕ್ಕೆ ಬ್ರಹ್ಮ ಅಂದದ್ದಾದರೆ ಅಪಾಯವು ಉಪಾಯವಾದಂತೆ ಆದೀತು! ಬ್ರಹ್ಮದಂಥ ಸಂಪೂರ್ಣ ಖರೇ ಅಸ್ತಿತ್ವವು ಇನ್ನೊಂದಿಲ್ಲ. ಶೂನ್ಯ ಅಂದರೆ ಅಸ್ತಿತ್ವ ಇಲ್ಲದ್ದು. ಅದು "ಬ್ರಹ್ಮ ಶೂನ್ಯ ಇರುವನು" ಅಂದರೆ ಬ್ರಹ್ಮನ ಅಸ್ತಿತ್ವವನ್ನು ಇಲ್ಲದಂತೆ ಮಾಡಿದ ಹಾಗಾಗುವದು. ಇದರಿಂದ ಬ್ರಹ್ಮ ಅನುಭವಕ್ಕೆ ಬರಲು ಯಾವ ಉಪಾಯ ಮಾಡುವೆವೋ ಅದು ಕೊನೆಯಲ್ಲಿ ಅಪಾಯವಾಗಿ ಬಿಡುವದು. (೬೪) ದೃಶ್ಯವೆಲ್ಲವನ್ನು ದಾಟಿದೆವೆಂದರೆ ಅದೃಶ್ಯವು ಶಿಲ್ಲುಕು ಉಳಿಯುತ್ತದೆ. ಅದು ಶೂನ್ಯರೂಪವಿರುವದು. ಈ ಶೂನ್ಯವೇ ಬ್ರಹ್ಮವಿರುವದೆಂದು ತಿಳಿದು ಸಾಧಕನು ಹಿಂದಕ್ಕೆ ತಿರುಗುವನು. (೬೫) ವಾಸ್ತವಿಕವಾಗಿ ಈ ದಂಡೆಗೆ ದೃಶ್ಯವಿಶ್ವವಿರುವದು. ಆ ದಂಡೆಗೆ ಪರಬ್ರಹ್ಮವಿರುವದು. ಈ ಎರಡರ ಮಧ್ಯದಲ್ಲಿ ಶೂನ್ಯದ ಸ್ಥಾನವಿರುವದು. ಈ ಸಪ್ಪ ಹುಚ್ಚ ಸಾಧಕ ಆ ಶೂನ್ಯಕ್ಕೆ ಬ್ರಹ್ಮವೆಂದು ತಿಳಿಯುವನು. (೬೬) ಒಬ್ಬ ಮನುಷ್ಯನು ರಾಜನ ಭೆಟ್ಟಿಗೆ ಹೋದನು. ಅವನಿಗೆ ರಾಜನ ನೌಕರರ ಭೆಟ್ಟಿಯಾಯಿತು. ಇವನೇ ರಾಜನೆಂದು ಗೈರ ಸಮಜೂತ ಮಾಡಿಕೊಂಡನು. ನಂತರ ನಿಜವಾದ ರಾಜನ ಭೆಟ್ಟಿಯಾಯಿತು. ಆಗ ಅವನ ಮೊದಲಿನ ಗ್ರಹಿಕೆ(ಸಮಜೂತ) ಅಗದೀ ತಪ್ಪು ಅನ್ನುವದು ತಿಳಿಯಿತು. (೬೭) ಇದರಂತೆ ದೃಶ್ಯ ದಾಟಿದ ಮೇಲೆ ಕಂಡು ಬಂದ ಶೂನ್ಯವನ್ನೇ ಬ್ರಹ್ಮವೆಂದು ನಂಬಿದನು. ಆದರೆ ಆಮೇಲೆ ಖರೇ ಪರಬ್ರಹ್ಮದ ದರ್ಶನವಾಯಿತು. ಆಗ ಶೂನ್ಯದ ಎಲ್ಲ ಭ್ರಮವೂ ತನ್ನಿಂದ ತಾನೇ ಇಲ್ಲದಾಗಿ ಹೋಯಿತು. (೬೮) ಶೂನ್ಯದ ಪ್ರಾಂತ (ಪ್ರದೇಶ)ವು ಸೂಕ್ಷ್ಮದ ಪ್ರಾಂತವಿರುವದು. ಪರಬ್ರಹ್ಮದ ದರ್ಶನದಲ್ಲಿ ಅಡ್ಡ ಬರುವ ಶೂನ್ಯದ ಅಡಚಣಿ (ಅಡಥಳಾ) ಇದು ಸೂಕ್ಷ್ಮವೇ ಇರುವದು. ಈ ಸೂಕ್ಷ್ಮದ ಅಡ್ಡಿಯನ್ನು ವಿವೇಕದಿಂದಲೇ ಬಾಜೂಕ್ಕೆ ಸರಿಸಬೇಕಾಗುವದು. ರಾಜಹಂಸವು ನೀರಿನಲ್ಲಿ ಕೂಡಿದ ಹಾಲನ್ನು ಬೇರ್ಪಡಿಸಿ, ಹಾಲನ್ನು ಮಾತ್ರ ಸ್ವೀಕರಿಸುವದು-ನೀರನ್ನು ಬಿಟ್ಟುಬಿಡುವದು. ಇದರಂತೆ ವಿವೇಕವುಳ್ಳ ಸಾಧಕನು ಶೂನ್ಯವನ್ನು ಬಾಜೂಕ್ಕೆ ಸರಿಸಿ ಬ್ರಹ್ಮಸ್ವರೂಪವನ್ನು ಮಾತ್ರ ಗ್ರಹಣ ಮಾಡುವನು. [೬೯]

ಆಧೀ ದೃಶ್ಯ ಸೋಡಿಲೇ। ಮಗ ಸುನ್ಯತ್ವ ವೊಲಾಂಡಿಲೇ।
ಮೂಳಮಾಯೇಪರತೇ ದೇಖಿಲೇ। ಪರಬ್ರಹ್ಮ ॥೭೦॥

ವೇಗಳೇಪಣೇ ಪಾಹಾಣೇ ಘಡೆ। ತೇಣೇ ವೃತ್ತಿ ಸುನ್ಯತ್ವೀ ಪಡೆ।
ಪೋಟೀ ಸಂದೇಹ ಪವಾಡೆ। ಸುನ್ಯತ್ವಾಚಾ ॥೭೧॥

ಭಿನ್ನಪಣೇ ಅನುಭವಿಲೇ। ತಯಾಸ ಸುನ್ಯ ಐಸೇ ಬೋಲಿಲೇ।
ವಸ್ತು ಲಕ್ಷಿತಾ ಅಭಿನ್ನ ಜಾಲೇ। ಪಾಹಿಜೆ ಆಧೀ ॥೭೨॥

ವಸ್ತು ಆಪಣ ಚಿ ಹೋಣೇ। ಐಸೇ ವಸ್ತೂಚೇ ಪಾಹಾಣೇ।
ನಿಶ್ಚಯೇಸೀ ಭಿನ್ನಪಣೇ। ಸುನ್ಯತ್ವ ಲಾಭೆ ॥೭೩॥

ಯಾಕಾರಣೇ ಸುನ್ಯ ಕಾಹೀ। ಪರಬ್ರಹ್ಮ ಹೋಣಾರ ನಾಹೀ।
ವಸ್ತುರೂಪ ಹೋಊನ ಪಾಹೀ। ಸ್ವಾನುಭವೇ ॥೭೪॥

ಆಪಣ ವಸ್ತು ಸಿದ್ಧ ಚಿ ಆಹೆ। ಮನ ಮೀ ಐಸೇ ಕಲ್ಪೂ ನಯೆ।
ಸಾಧು ಸಾಂಗತೀ ಉಪಾಯೆ। ತೂ ಚಿ ಆತ್ಮಾ ॥೭೫॥

ಮನ ಮೀ ಐಸೇ ನಾಥಿಲೇ। ಸಂತೀ ನಾಹೀ ನಿರೋಪಿಲೇ।
ಮಾನಾವೇ ಕೋಣಾಚ್ಯಾ ಬೋಲೇ। ಮನ ಮೀ ಐಸೇ ॥೭೬॥

ಸಂತವಚನೀ ಠೇವಿತಾ ಭಾವ। ತೋ ಚಿ ಶುದ್ಧ ಸ್ವಾನುಭವ।
ಮನಾಚಾ ತೈಸಾ ಚ ಸ್ವಭಾವ। ಆಪಣ ವಸ್ತು ॥೭೭॥

ಜಯಾಚಾ ಘ್ಯಾವಾ ಅನುಭವ। ತೋ ಚಿ ಆಪಣ ನಿರಾವೇವ।
ಆಪುಲಾ ಘೇತೀ ಅನುಭವ। ವಿಶ್ವಜನ ॥೭೮॥

ಲೋಭೀ ಧನ ಸಾಧೂ ಗೇಲೇ। ತವ ತೇ ಲೋಭೀ ಧನ ಚಿ ಜಾಲೇ।
ಮಗ ತೇ ಭಾಗ್ಯಪುರುಷೀ ಭೋಗಿಲೇ। ಸಾವಕಾಸ ॥೭೯॥

ತೈಸೇ ದೇಹಬುದ್ಧಿ ಸೋಡಿತಾ। ಸಾಧಕಾಸ ಜಾಲೇ ತತ್ವತಾ।
ಅನುಭವಾಚಿ ಮುಖ್ಯ ವಾರ್ತಾ। ತೆ ಹೆ ಐಸೀ ॥೮೦॥

ಮೊದಲು ಎಲ್ಲ ದೃಶ್ಯವನ್ನು ಬಾಜೂಕ್ಕೆ ಸರಿಸಬೇಕು. ಆಮೇಲೆ ಅದೃಶ್ಯ ಶೂನ್ಯವನ್ನು ದಾಟಿಹೋಗ ಬೇಕು. ಅನಂತರ ಮೂಲ ಮಾಯೆಯ ಆಚೆಗೆ ಇರುವಂಥ ಪರಬ್ರಹ್ಮನ ದರ್ಶನ ಘಟಿಸುವದು. (೭೦) ನಾವು ಪ್ರತ್ಯೇಕವಾಗಿ (ಬೇರೆತನದಿಂದ) ಎಲ್ಲಿಯವರೆಗೆ ನೋಡುವೆವೋ ಅಲ್ಲಿಯವರೆಗೆ ನಮ್ಮ ವೃತ್ತಿ ಶೂನ್ಯದವರೆಗೆ ಹೋಗಿ ಅಲ್ಲಿ ನಿಲ್ಲುವದು. ಇದರಿಂದಾಗಿ ಮನಸ್ಸಿನಲ್ಲಿ ಶೂನ್ಯತ್ವದ ಕಲ್ಪನೆ ಬೆಳೆಯುತ್ತದೆ. ವೃತ್ತಿಯು ಶೂನ್ಯದ ಗೊಂದಲ ಗಡಿಬಿಡಿಯಲ್ಲಿಬೀಳುವದು. ಆಗ ಈಶೂನ್ಯವು ಬ್ರಹ್ಮವಿರಬಹುದೇ ಅನ್ನುವ ಸಂಶಯಉಂಟಾಗಿ ಅದರಿಂದ ಸೆಳೆಯುವದು(೭೧) ಯಾವ ಅದೃಶ್ಯ ಸೂಕ್ಷ್ಮವಿರುವದೋ ಅದನ್ನು ಬೇರೆತನದಿಂದ ಅನುಭವ ಪಡೆಯಲು ಬರುವದು. ಇದಕ್ಕೆ ಶೂನ್ಯ ಎಂದು ಅನ್ನುವರು. ಆದರೆ ಪರಮಾತ್ಮ ವಸ್ತುವಿನ ಅನುಭವ ಪಡೆಯಬೇಕಾದರೆ ಮೊದಲು ಆವಸ್ತುವಿನಲ್ಲಿ ತದಾಕಾರ ಹೊಂದಬೇಕಾಗುವದು. ಅದರೊಂದಿಗೆ ಅಭಿನ್ನವಾಗಿಯೇ ಅದನ್ನು ನೋಡಲಿಕ್ಕೆ ಬರುವದು. (೭೨) ನಾವು ವಸ್ತು ರೂಪರಾಗಿ ಹೋಗಿಯೇ ಆ ಪರಮಾತ್ಮ ವಸ್ತುವನ್ನು ನೋಡುವದು ಒಂದು ರೀತಿಯಾಗಿರುವದು. ಬೇರೆತನದಿಂದ ಸ್ವತಂತ್ರವಾಗಿ ನೋಡಲಿಕ್ಕೆ ಹೋದರೆ ಖಾತ್ರಿಯಿಂದ ಕೇವಲ ಶೂನ್ಯದರ್ಶನ ಮಾತ್ರ ಆಗುವದು. (೭೩) ಈ ಎಲ್ಲ ವಿವೇಚನೆಯ ಮೇಲಿಂದ ತಿಳಿದು ಬರುವದೇನಂದರೆ ಏನು ಮಾಡಿದರೂ ಶೂನ್ಯವು ಪರಬ್ರಹ್ಮವಾಗಲು ಸಾಧ್ಯವಿಲ್ಲ. ಪರಬ್ರಹ್ಮನ ದರ್ಶನ ಬೇಕಾಗಿದ್ದರೆ ಬ್ರಹ್ಮದೊಂದಿಗೆ ತದಾಕಾರವಾಗಿಯೇ ಅದರ ದರ್ಶನ ಪಡೆಯಬೇಕಾಗುವದು. ಬ್ರಹ್ಮರೂಪವಾಗಿಯೇ ಬ್ರಹ್ಮದ ಅನುಭವ ಪಡೆಯಬೇಕು ಇಲ್ಲದಿದ್ದರೆ ಸಾಧ್ಯವಿಲ್ಲ. (೭೪) ನಮ್ಮ ಖರೇ ನಾನು ಇದು ಬ್ರಹ್ಮಸ್ವರೂಪವೇ ಇರುವದು. ನಾನು ಮತ್ತು ಪರಬ್ರಹ್ಮ ಇವುಗಳ ಐಕ್ಯ ಸ್ವತಃ ಸಿದ್ಧವಿರುವದು. ಆದ್ದರಿಂದ "ಮನವೇ ನಾನು ಇರುವೆನು" ಹೀಗೆ ಕಲ್ಪನೆಯನ್ನು ಮಾಡಬಾರದು. "ನಾನು ಸ್ವತಃ ಸಿದ್ಧ ಆತ್ಮವೇ ಇರುವೆನು" ಇಂಥ ಭಾವನೆಯನ್ನು ಮಾಡಬೇಕು. ಈ ಉಪಾಯವನ್ನು ಸತ್ಪುರುಷರು ಹೇಳಿಕೊಡುವರು (೭೫) ಮೂಲದಲ್ಲಿ "ನಾನು" ಇದು ಮನ ರೂಪ ಇರುವದೇ ಇಲ್ಲ. ಶಿವಾಯ ಸಾಧು ಸಂತರು ಹೀಗೆ ಎಂದೂ ಹೇಳಿರುವದೇ ಇಲ್ಲ. ಅಂದ ಮೇಲೆ ಸುಮ್ಮನೆ ಯಾರದಾದರೂ ಹೇಳಿಕೆಯ ಮೇಲಿಂದ ಅಥವಾ ಮಾತಿನ ಮೇಲಿಂದ ವಿಶ್ವಾಸವಿಟ್ಟು "ನಾನು ಮನರೂಪ ಇರುವೆನು" ಎಂದು ತಿಳಿಯಬಾರದು. (೭೬) ಸಂತಸಾಧುಗಳ ವಚನವಲ್ಲಿ ಏಕನಿಷ್ಠೆಯಿಂದ ಶ್ರದ್ಧಾ ಇಡು ವದೇ ಶುದ್ಧ ಸ್ವರೂಪಾನುಭವ ಹೊಂದುವ ಏಕೈಕ ಸುಲಭ ಮಾರ್ಗವಿರುವದು. ಸಾಧು ಸಂತರ ವಚನದಲ್ಲಿ ನಿಜ ವಾದ ಪಕ್ಕಾ ಶ್ರದ್ಧೆಯನ್ನು ಇಟ್ಟಿದ್ದಾದರೆ ಮನದ ಮೊದಲಿನ ಸ್ವಭಾವವು ಪಲ್ಲಟಗೊಳ್ಳುವದು. ಮತ್ತು "ತಾನು ಪರಮಾತ್ಮ ವಸ್ತುವೇ ಇರುವೆನು" ಅನ್ನುವಲ್ಲಿ ರೂಪಾಂತರವಾಗಿ ಹೋಗುವದು. ಮನದ ಸಹಜ ಸ್ವಭಾವವೂ ಸಹ ಬ್ರಹ್ಮಸ್ವರೂಪವಾಗಿ ಬಿಡುವದು. (೭೭) ಯಾವ ಸ್ವಸ್ವರೂಪದ ಅನುಭವ ಪಡೆಯುವದಿರುವದೋ ಆ ಸ್ವರೂಪ ಅಂದರೆ ನಿಜವಾದ ನಾನು ನಿರವಯವ ಇರುವೆ-ನಿರಾಕಾರವಿರುವೆ. ಇಂಥ ಸ್ವರೂಪದ ಅನುಭವ ಯಾರಿಗೆ ಬರುವದೋ ಅವರಿಂದ ಇತರ ಜನರಿಗೂ ಲಾಭವಾಗುವದು. (೭೮) ಒಬ್ಬ ಲೋಭಿ ಮನುಷ್ಯನು ಧನ ಕೂಡಿಸುವ ಹವ್ಯಾಸದಲ್ಲಿ ತೊಡಗುವನು. ಧನ ಕೂಡಿಸುವ ಹೇತುವನ್ನು ಅವನು ಮರೆಯುವನು. ಅವನ ವೃತ್ತಿ ಕೇವಲ ಧನಮಯವೇ ಆಗಿ ಬಿಡುತ್ತದೆ. ಆ ಧನದ ಉಪಭೋಗ ಅವನು ಅನುಭವಿಸುವದಿಲ್ಲ. ಕೇವಲ ಧನವನ್ನು ಕೂಡಿಸಿ ಇಡುವಲ್ಲಿಯೇ ಆಯುಷ್ಯ ಕಳೆಯುವನು [ಕೊನೆಗೆ ಸಾಯುವನು]. ಇವನ ನಂತರ ಯಾರಾದರೂ ಭಾಗ್ಯವಾನರಿದ್ದವರು ಈ ಧನದ ಉಪಭೋಗವನ್ನು ಸಾಕಷ್ಟು ಪಡೆಯುವರು. [೭೯] ಸಾಧಕರ ವಿಷಯದಲ್ಲಿ ಹೀಗೆಯೇ ಆಗುತ್ತದೆ. ಸ್ವಾನಂದ ಸಿಗ ಬೇಕೆಂದು ಪ್ರಥಮದಲ್ಲಿ ಸಾಧಕನು ಪರಬ್ರಹ್ಮದ ನಾದಿಗೆ ಹತ್ತುವನು. ಮುಂದೆ ಅವನ ದೇಹ ಬುದ್ಧಿ ಕಡಿಮೆ ಆಗುತ್ತ ಹೋಗುವದು. ಸ್ವಾನಂದ ಭೋಗಿಸುವ ಅವನ ಇಚ್ಛೆ ಇಲ್ಲದಾಗಿ ಬಿಡುವದು. ಅವನ ವೃತ್ತಿ ಬ್ರಹ್ಮಮಯ ವಾಗುವದು. ಅರ್ಥಾತ್ ಸ್ವಾನಂದ ಭೋಗಿಸಲು ಅವನು ನಾನು ಅನ್ನುವದರಿಂದ ಉಳಿಯುವದೇ ಇಲ್ಲ. ಆದ್ದರಿಂದ ಅವನ ಬ್ರಾಹ್ಮೀ ಸ್ಥಿತಿಯು ಅಥವಾ ಆಧ್ಯಾತ್ಮಿಕ ಶ್ರೀಮಂತಿಕೆಯ ಲಾಭವು ಇತರ ಜನರಿಗೇ ಸಿಗುವದು. ಬ್ರಹ್ಮಾನು ಭವದ ಕಥೆಯು ಹೀಗಿರುವದು. [೮೦]

ಆಪಣ ವಸ್ತು ಮುಳೀ ಯೇಕ । ಐಸಾ ಜ್ಞಾನಾಚಾ ವಿವೇಕ ।
ಯೇಥೂನ ಹಾ ಜ್ಞಾನದಶಕ । ಸಂಪೂರ್ಣ ಜಾಲಾ ॥೮೧॥

ಆತ್ಮಜ್ಞಾನ ನಿರೋಪಿಲೇ । ಯಥಾಮತೀನೇ ಬೋಲಿಲೇ ।
ನ್ಯೂನಪೂರ್ಣ ಕ್ಷಮಾ ಕೇಲೇ । ಪಾಹಿಜೆ ಶ್ರೋತೀ ॥೮೨॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
''ಸುನ್ಯತ್ವ ನಿರ್ಶನ'' ನಾಮ ಸಮಾಸ ದಶಮ॥

— ದಶಕ ಅಷ್ಟಮ ಸಮಾಪ್ತ —

ನಮ್ಮ ನಿಜವಾದ "ನಾನು" ಮತ್ತು "ಪರಬ್ರಹ್ಮ" ಮೂಲದಲ್ಲಿ ಒಂದೇ ರೂಪವಿರುವವು. ಹೀಗೆ ಜ್ಞಾನದ ಸ್ವಚ್ಛ ನಿರ್ಣಯವಿರುವದು. ಈ ಸ್ಥಳದಲ್ಲಿ ಇಲ್ಲಿಗೆ ಜ್ಞಾನ ದಶಕವು ಸಂಪೂರ್ಣವಾಯಿತು. [೮೧] ನನ್ನ ಬುದ್ಧಿಯ ಪ್ರಕಾಶ ನಾನು ಆತ್ಮ ಜ್ಞಾನದ ವಿವೇಚನೆಯನ್ನು ಮಾಡಿದ್ದೇನೆ. ಇದರಲ್ಲಿ ಯಾವುದಾದರೂ ಹೆಚ್ಚು ಕಡಿಮೆ ಇದ್ದದ್ದಾದರೆ ಶ್ರೋತಾಜನ ಕ್ಷಮೆ ಮಾಡಬೇಕು. [೮೨]

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದ ಎಂಟನೆಯ ದಶಕದೊಳಗಿನ
"ಶೂನ್ಯತ್ವ ನಿರಶನ" ಎಂಬ ಹೆಸರಿನ ಹತ್ತನೆಯ ಸಮಾಸವು ಮುಗಿದುದು.

# ದಶಕ ೯. ಗುಣರೂಪ

ಮನುಷ್ಯನಿಗೆ ತನ್ನ[ಸ್ವತಃದ]ಅಜ್ಞಾನದ ತಿಳುವಳಿಕೆ ಇರುವದು. ಮಾನವನ ಮೂಲ ಸ್ವಭಾವವು ಜ್ಞಾನಮಯ ಇರುವದರಿಂದ ಅಜ್ಞಾನದಲ್ಲಿ ಅವನಿಗೆ ಸಮಾಧಾನವಿರುವದಿಲ್ಲ. ಅಜ್ಞಾನವನ್ನು ತೊರೆಯಲು ಹೊಡೆದು ಹಾಕಲು ಅವನ ಸತತ ಪ್ರಯತ್ನ ಮಾಡುವನು. ಆದರೆ ಅವನ ದಿಕ್ಕು ಅಥವಾ ಗುರಿ ತಪ್ಪುವದು. ಇಂದ್ರಿಯಗಳಿಗೆ ಕಾಣುವ ದೃಶ್ಯವಿಶ್ವವನ್ನು ಸತ್ಯವೆಂದು ನಂಬಿದ್ದರಿಂದ ಅದರ ಜ್ಞಾನವೇ ನಿಜವಾದ ಜ್ಞಾನವೆಂದು ಅವನು ತಿಳಿಯುವನು. ಆದರೆ ಇದು ಅಜ್ಞಾನದ ಪ್ರಕಾರವೇ ಇದ್ದದ್ದರಿಂದ ಇದರಿಂದ ಮನುಷ್ಯನಿಗೆ ಸಮಾಧಾನ ಲಭಿಸುವದಿಲ್ಲ. ಶ್ರೀ ಸಮರ್ಥರ ಹೇಳಿಕೆ ಹೇಗಿರುವದೆಂದರೆ ಜ್ಞಾನದ ಕೇಂದ್ರವು ಅದೃಶ್ಯದಲ್ಲಿ ಇರುವದು ಸೂಕ್ಷ್ಮದಲ್ಲಿ ಇರುವದು. ಈ ದೃಶ್ಯ ವಿಶ್ವದ ಧಾರಣ ಮತ್ತು ಪೋಷಣ ಮಾಡುವಂಥ ಆ ಪರಬ್ರಹ್ಮರೂಪಿ ಅದೃಶ್ಯ ಮತ್ತು ಸೂಕ್ಷ್ಮ ಸದ್ವಸ್ತುವೆಂಬುದು ಜ್ಞಾನಮಯವಿರುವದು. ಇದರ ಜ್ಞಾನ ಮಾಡಿಕೊಂಡೆವೆಂದರೆ ಅಜ್ಞಾನವು ಸಂಪೂರ್ಣ ಇಲ್ಲದಂತೆ ಆಗುವದು. ಮತ್ತು ನಿಜವಾದ ಸಮಾಧಾನದ ಲಾಭ ದೊರೆಯುವದು. ಆ ಸದ್ವಸ್ತುವು ಅತೀಂದ್ರಿಯವಿರುವದು. ಆದ್ದರಿಂದ ಇದರ ವರ್ಣನೆ ಮಾಡುವಾಗ ಇಂದ್ರಿಯಗಳಿಗೆ ಕಾಣುವ ದೃಶ್ಯ ಜಗತ್ತಿನಂತೆ ಅದು ಇಲ್ಲವೆಂದು ಹೇಳಬೇಕಾಗುವದು. ಕಠೋಪನಿಷತ್ತಿನಲ್ಲಿ ಒಂದು ಮಂತ್ರವು ಹೀಗಿರುವದು:– "ಅಶಬ್ದಂ, ಅಸ್ಪರ್ಶಂ, ಅರೂಪಂ, ಅವ್ಯಯಂ, ತಥಾ ಅರಸಂ, ನಿತ್ಯಮ್ ಅಗಂಧವತ್ ಚಯತ್। ಅನಾದಿ ಅನಂತಮ್ ಮಹತಃ ಪರಂ ಧ್ರುವಂ ನಿಚಾಯ್ಯ ತತ್ ಮೃತ್ಯುಮುಖಾತ್ ಪ್ರಮುಚ್ಯತೇ॥ ಅರ್ಥ;– ಈ ಆತ್ಮಾ ಅಸ್ಪರ್ಶ (ಮುಟ್ಟಲಾಗದ), ಅಶಬ್ದ, ಅರೂಪ, ಅರಸ [ರಸರಹಿತ], ಅಗಂಧ [ಗಂಧರಹಿತ] ಅವ್ಯಯ, ಅನಾದಿ ಅನಂತ, ನಿತ್ಯ, ಮಹತ್, ತತ್ವದಕ್ಕಿಂತ ಶ್ರೇಷ್ಠ ಮತ್ತು ಸ್ಥಿರವಿರುವದು. ಇದರ ಜ್ಞಾನವಾದ್ದರಿಂದ ಜೀವವು ಮೃತ್ಯು

ಮುಖದಿಂದ ಬಿಡುಗಡೆ ಪಡೆಯಿತು [ಪಾರಾಯಿತು]. ಪರಬ್ರಹ್ಮದ ಬಗೆಗೆ ಇಲ್ಲ ಅಥವಾ ಅಲ್ಲ ಅನ್ನುವ ರೀತಿಯಲ್ಲಿ ಈ ದಶಕದ ಆರಂಭವಾಗುವದು. [ಪರಬ್ರಹ್ಮದ ಬಗೆಗೆ ವೇದಾದಿಗಳು ನೇತಿ ನೇತಿ ಅಂದವೆಂದು ಅನ್ನುವ ರೀತಿಯಲ್ಲಿ]. ಇನ್ನೊಂದು ವಿಷಯವೇನಂದರೆ ಜ್ಞಾನವು ದೃಶ್ಯದ್ದಾಗಿರಲಿ ಅಥವಾ ಅದೃಶ್ಯದ್ದಾಗಿರಲಿ ಇದು [ಜಾಣೀವಮಯ] ತಿಳವಳಿಕೆಯಿಂದ ತುಂಬಿದ್ದಾಗಿರುವದು. ಇದು ಎಲ್ಲ ಕಡೆಗೂ ವ್ಯಾಪಿಸಿರುವದು ಯಾವುದು ಪಿಂಡದಲ್ಲಿಕಂಡು ಬರುವದೋ ಅದೇ ಬ್ರಹ್ಮಾಂಡದಲ್ಲಿಯೂ ವಾಸ ಮಾಡಿರುವದು. ಆದ್ದರಿಂದ ಆತ್ಮಜ್ಞಾನವಾದ ಕೂಡಲೇ ಅದರೊಳಗಿಂದಲೇ ಬ್ರಹ್ಮಜ್ಞಾನವು ಪ್ರಕಟವಾಗುವದು. ಆತ್ಮಜ್ಞಾನವಾಗಬೇಕಾದರೆ ತಿಳುವಳಿಕೆಯೊಂದಿಗೆ ಸೂಕ್ಷ್ಮಬುದ್ಧಿಯಿಂದ ಅನನ್ಯರಾಗಬೇಕಾಗುವದು. ನಮ್ಮ ವಾಸನಾ ಇದು ಅನನ್ಯವಾಗುವಲ್ಲಿ ಅಡ್ಡ ಬರುತ್ತದೆ [ವಾಸನಾ ಅಂದರೆ ಕರ್ಮದಿಂದಾಗಿ ಮನಸ್ಸಿನ ಮೇಲೆ ಇರುವಂಥ ಸಂಸ್ಕಾರ]. ವಾಸನಾದಿಂದ ನಾವು ನಮ್ಮ ದೇಹದೊಡನೆ ಸಮರಸವಾಗುವೆವು. ಇದರಿಂದಾಗಿ ನಾವು ದೇಹದಷ್ಟೇ ಆಕುಂಚಿತ [ಸಂಕುಚಿತ]ರಾಗುವೆವು. ದೇಹದೊಂದಿಗೆ ತೊಡಕು ಬಿದ್ದ ನಾವು ವಾಸನಾದ ಹಿಡಿತದಿಂದ ಬಿಡುಗಡೆಯಾಗಿ ಸ್ವಸ್ವರೂಪದಂತೆ ವಿಶಾಲರಾಗಬೇಕಾದರೆ ನಮ್ಮ ವೃತ್ತಿ [ಮನದ ಸ್ಥಿತಿ, ಭಾವನೆ]ಯನ್ನು ವಿಶಾಲ ಮಾಡಬೇಕು. ಇದು ಶ್ರೀ ಸಮರ್ಥರ ಅತಿ ಮೌಲ್ಯವಾದ-ಅತಿ ಶ್ರೇಷ್ಠವಾದ ಸೂಚನೆ ಇರುವದು. ಜ್ಞಾನದ ಅಂದರೆ ತಿಳುವಳಿಕೆಯ [ಸೂಕ್ಷ್ಮಬುದ್ಧಿಯ] ಸಾಮರ್ಥ್ಯದ ಮೇಲೆ ಬಹಳ ವಿಶ್ವಾಸ ಶ್ರೀ ಸಮರ್ಥರಿಗೆ ಇರುವದು. ಮನುಷ್ಯರು ತಿಳಿದುಕೊಂಡು [ಬುದ್ಧಿವಂತರಾಗಿ] ಸದ್ಗುಣದ ಸಂವರ್ಧನ [ಬೆಳವಣಿಗೆ] ಮಾಡಿಕೊಂಡದ್ದಾದರೆ ಭಾಗ್ಯವು ಇವರ ಬೆನ್ನು ಹತ್ತುವದು. ಮತ್ತು ಕೇವಲ ಅವಗುಣಗಳ ಬೆನ್ನು ಹತ್ತಿದರೆ ಮನುಷ್ಯನು ಅಭಾಗಿಯಾಗುವನು. ಇದು ಸಮರ್ಥರ ಸ್ಪಷ್ಟ ಮತವಿರುವದು. ಪರಮಾರ್ಥದ ಸಂಬಂಧವು ಮನುಷ್ಯನ ಅಂತರಂಗದೊಂದಿಗೆ ಗೊತ್ತುಪಡಿಸಿದ್ದು-ನಿರ್ಧಾರಿತವಾದದ್ದು ಇರುವದು.ಇದರಲ್ಲಿ ವೃತ್ತಿಯನ್ನು ಸುಧಾರಿಸಿಕೊಳ್ಳಬೇಕಾಗುವದು. ವಾಸನಾ ಕ್ಷೀಣ ಮಾಡಿಕೊಳ್ಳಬೇಕಾಗುವದು. ಮೊದಲಿಗೆ ವೃತ್ತಿಯನ್ನು ತಯಾರ ಮಾಡಿಕೊಳ್ಳಬೇಕು. ಅನಂತರ ಅಲಿಪ್ತತನದಿಂದ ಎಲ್ಲವನ್ನೂ ಮಾಡಿಕೊಳ್ಳಬೇಕು. ಎಲ್ಲವನ್ನೂ ಮಾಡಿ "ನಾನು" ಅನ್ನುವದರಿಂದ ಯಾವುದರಲ್ಲಿಯೂ ತೊಡಕಿಕೊಳ್ಳದೇ ಇರುವಂಥ ಜ್ಞಾನಿ ಪುರುಷನು ಧನ್ಯನೆನಿಸುವನು. ಇಂಥ ಜ್ಞಾನಿಯನ್ನು ಗುರುತಿಸಬೇಕಾದರೆ ನಾವೂ ಸಹ ಜ್ಞಾನವಂತರಾಗುವದು ಅತಿ ಅವಶ್ಯವಿರುವದು.

## ದಶಕ ೯. ಸಮಾಸ ೧. ಆಶಂಕಾ ನಾಮ (ನುಡಿ ೨೯)

ಮನುಷ್ಯ ಅಂದರೆ ಆತ್ಮಾ, ಮನಸ್ಸು, ಮತ್ತು ಶರೀರ ಇವುಗಳ ಸಂಗಮವು. [ಆತ್ಮಾಮತ್ತುಅನಾತ್ಮಾ] ಹೀಗೆ ಮೂವರ ಹಂಚಿಕೆ [ಪಾಲುವಾಟಣಿ] ಮಾಡಲಿಕ್ಕೆ ಬರುವದು. ಆತ್ಮಾ ಪರಬ್ರಹ್ಮಸ್ವರೂಪವಿರುವದು. ಆದರೆ ಅದೇ ಮನ ಮತ್ತು ಶರೀರ ಇವೆರಡೂ ಪಂಚಭೂತಾತ್ಮಕವಾದ ದೃಶ್ಯವಿಶ್ವದ ಭಾಗವಿರುವವು. ದೃಶ್ಯದೊಳಗಿಂದ ನಿರ್ಮಾಣವಾದ ಮನಸ್ಸು ಮತ್ತು ಶರೀರ ಇವುಗಳಿಗೆ ದೃಶ್ಯದ ಜ್ಞಾನ ಮಾಡಿಕೊಳ್ಳಲಿಕ್ಕೆ ಸುಲಭ ವ ಅನುಕೂಲವಿರುವದು.ನಮ್ಮ ಬುದ್ಧಿ ಮತ್ತು ವಾಣಿ ಮತ್ತು ಇಂದ್ರಿಯಗಳು ದೃಶ್ಯದ ವಿಚಾರ ಮಾಡುವಾಗ ಕೇಳುವದೇನು? ಸ್ವರಾಜ್ಯದಲ್ಲಿ ಇದ್ದಂತೆ ತಿರುಗಾಡುವವು-ಓಡಾಡುವವು. ಆದರೆ ಪರಬ್ರಹ್ಮನು ಅತೀಂದ್ರಿಯನಿರುವನು. ಅಲ್ಲಿ ಬುದ್ಧಿಗೆ ವಾಣಿಗೆ,ಮತ್ತು ಇಂದ್ರಿಯಗಳಿಗೆ ಪ್ರವೇಶವಿರುವದಿಲ್ಲ. ಬ್ರಹ್ಮನ ಸಾಮ್ರಾಜ್ಯವು ಅನನ್ಯತೆಯ[ಅದ್ವಿತೀಯ] ಅಥವಾ ಅದ್ವೈತವದ್ದು ಇರುವದು. ಆದರೆ ಬುದ್ಧಿಯ ಸಾಮ್ರಾಜ್ಯವು ಬೇರೆತನ [ಭಿನ್ನತನ] ಅಥವಾ ದ್ವೈತದ್ದಾಗಿರುವದು. ಇಂಥ ಪರಿಸ್ಥಿತಿಯಲ್ಲಿ ಜ್ಞಾನವಂತ ಸಂತರು ಅಜ್ಞಾನಿ ಜನಕ್ಕೆ ಬ್ರಹ್ಮಸ್ವರೂಪದ ಬಗ್ಗೆ ಹೇಳುವ ಪ್ರಸಂಗ ಬಂದಿತೆಂದರೆ "ಬ್ರಹ್ಮ ಹೀಗೆ ಇರುವದಿಲ್ಲ. ಬ್ರಹ್ಮ ಹಾಗಿರುವದಿಲ್ಲ" ಹೀಗೆ ನಕಾರಾತ್ಮಕ ಭಾಷೆಯನ್ನು ಉಪಯೋಗಿಸಿ ಹೇಳಬೇಕಾಗುವದು. ದೃಶ್ಯ ನಿಜವೆಂದು ಒಪ್ಪುವ ಅಜ್ಞಾನಿ ಮನುಷ್ಯನಿಗೆ ದೃಶ್ಯವಸ್ತುಗಳ ಬಗ್ಗೆ ಅವುಗಳ ಸಂಬಂಧದ ಬಗ್ಗೆ ಮತ್ತು ಕಲ್ಪನೆಯ ಭಾಷೆಯಿಂದ ಹೇಳಿದರೆ ತಿಳಿಯುವದು. ಇದರ ಆಶ್ರಯ ಹಿಡಿದುಕೊಂಡು ಬ್ರಹ್ಮ ಹಾಗಿಲ್ಲ ಎಂದು ಬ್ರಹ್ಮ ವರ್ಣನೆಯನ್ನು ಸಂತರು ಮಾಡುವರು. ಈ ಸಮಾಸದಲ್ಲಿ ಇದೇ ಪ್ರಕಾರದಲ್ಲಿ ಬ್ರಹ್ಮಸ್ವರೂಪದ ವರ್ಣನೆ ಇರುವದು.

## ಸಮಾಸ ಪ್ರಥಮ : ಆಶಂಕಾ ನಾಮ

॥ಶ್ರೀರಾಮ॥ ನಿರಾಕಾರ ಮ್ಹಣಿಜೆ ಕಾಯೇ। ನಿರಾಧಾರ ಮ್ಹಣಿಜೆ ಕಾಯೇ।
ನಿರ್ವಿಕಲ್ಪ ಮ್ಹಣಿಜೆ ಕಾಯೇ। ಮಜ ನಿರೋಪಾವೇ ॥೧॥
ನಿರಾಕಾರ ಮ್ಹಣಿಜೆ ಆಕಾರ ನಾಹೀ। ನಿರಾಧಾರ ಮ್ಹಣಿಜೆ ಆಧಾರ ನಾಹೀ।
ನಿರ್ವಿಕಲ್ಪ ಮ್ಹಣಿಜೆ ಕಲ್ಪನಾ ನಾಹೀ। ಪರಬ್ರಹ್ಮಾಸೀ ॥೨॥
ನಿರಾಮಯ ಮ್ಹಣಿಜೆ ಕಾಯೇ। ನಿರಾಭಾಸ ಮಣಿಜೆ ಕಾಯೇ।
ನಿರಾಮಯ ಮ್ಹಣಿಜೆ ಕಾಯೇ। ಮಜ ನಿರೋಪಾವೇ ॥೩॥
ನಿರಾಮಯ ಮ್ಹಣಿಜೆ ಜಳಮಯ ನಾಹೀ। ನಿರಾಭಾಸ ಮ್ಹಣಿಜೆ ಭಾಸ ಚಿ ನಾಹೀ।
ನಿರಾಮೆವ ಮ್ಹಣಿಜೆ ಅಮೆವ ನಾಹೀ। ಪರಬ್ರಹ್ಮಾಸೀ ॥೪॥
ನಿಃಪ್ರಪಂಚ ಮ್ಹಣಿಜೆ ಕಾಯೇ। ನಿಃಕಳಂಕ ಮ್ಹಣಿಜೆ ಕಾಯೇ।
ನಿರೋಪಾಧೀ ಮ್ಹಣಿಜೆ ಕಾಯೇ। ಮಜ ನಿರೋಪಾವೇ ॥೫॥
ನಿಃಪ್ರಪಂಚ ಮ್ಹಣಿಜೆ ಪ್ರಪಂಚ ನಾಹೀ। ನಿಃಕಳಂಕ ಮ್ಹಣಿಜೆ ಕಳಂಕ ನಾಹೀ।
ನಿರೋಪಾಧೀ ಮ್ಹಣಿಜೆ ಉಪಾಧೀ ನಾಹೀ। ಪರಬ್ರಹ್ಮಾಸೀ ॥೬॥
ನಿರೋಪಮ್ಯ ಮ್ಹಣಿಜೆ ಕಾಯೇ। ನಿರಾಲಂಬ ಮ್ಹಣಿಜೆ ಕಾಯೇ।
ನಿರಾಪೇಕ್ಷಾ ಮ್ಹಣಿಜೆ ಕಾಯೇ। ಮಜ ನಿರೋಪಾವೇ ॥೭॥
ನಿರೋಪಮ್ಯ ಮ್ಹಣಿಜೆ ಉಪಮಾ ನಾಹೀ।
ನಿರಾಲಂಬ ಮ್ಹಣಿಜೆ ಅವಲಂಬನ ನಾಹೀ।
ನಿರಾಪೇಕ್ಷಾ ಮ್ಹಣಿಜೆ ಅಪೇಕ್ಷಾ ನಾಹೀ। ಪರಬ್ರಹ್ಮಾಸೀ ॥೮॥
ನಿರಂಜನ ಮ್ಹಣಿಜೆ ಕಾಯೇ। ನಿರಂತರ ಮ್ಹಣಿಜೆ ಕಾಯೇ।
ನಿರ್ಗುಣ ಮ್ಹಣಿಜೆ ಕಾಯೇ। ಮಜ ನಿರೋಪಾವೇ ॥೯॥
ನಿರಂಜನ ಮ್ಹಣಿಜೆ ಜನ ಚಿ ನಾಹೀ। ನಿರಂತರ ಮ್ಹಣಿಜೆ ಅಂತರ ನಾಹೀ।
ನಿರ್ಗುಣ ಮ್ಹಣಿಜೆ ಗುಣ ಚಿ ನಾಹೀ। ಪರಬ್ರಹ್ಮಾಸೀ ॥೧೦॥
ನಿಃಸಂಗ ಮ್ಹಣಿಜೆ ಕಾಯೇ। ನಿರ್ಮಳ ಮ್ಹಣಿಜೆ ಕಾಯೇ।
ನಿಶ್ಚಳ ಮ್ಹಣಿಜೆ ಕಾಯೇ। ಮಜ ನಿರೋಪಾವೇ ॥೧೧॥
ನಿಃಸಂಗ ಮ್ಹಣಿಜೆ ಸಂಗ ಚಿ ನಾಹೀ। ನಿರ್ಮಳ ಮ್ಹಣಿಜೆ ಮಳ ಚಿ ನಾಹೀ।
ನಿಶ್ಚಳ ಮ್ಹಣಿಜೆ ಚಳಣ ನಾಹೀ। ಪರಬ್ರಹ್ಮಾಸೀ ॥೧೨॥
ನಿಶಬ್ದ ಮ್ಹಣಿಜೆ ಕಾಯೇ। ನಿರ್ದೋಷ ಮ್ಹಣಿಜೆ ಕಾಯೇ।
ನಿವೃತ್ತಿ ಮ್ಹಣಿಜೆ ಕಾಯೇ। ಮಜ ನಿರೋಪಾವೇ ॥೧೩॥

## ದಶಕ ೯. ಸಮಾಸ ೧. ಆಶಂಕಾ ನಾಮ (ನುಡಿ ೨೯)

ಈ ಸಮಾಸ ಮುಗಿಯುವವರೆಗೆ ಪ್ರಶ್ನೋತ್ತರ ರೂಪದಿಂದ ವಿಷಯ ಹೇಳಲಾಗಿದೆ. ಒಟ್ಟು ಪರಬ್ರಹ್ಮದ ಬಗ್ಗೆ ನಾಲ್ವತ್ತು ನಾಲ್ವತ್ತೆರಡು ಲಕ್ಷಣಗಳನ್ನು ಹೇಳಿರುವರು:– ಪ್ರಶ್ನೆ:– ನಿರಾಕಾರ, ನಿರಾಧಾರ, ನಿರ್ವಿಕಲ್ಪ ಅಂದರೇನು? ನನಗೆ ಇದನ್ನು ತಿಳಿಸಿ ಹೇಳಿರಿ. (೧) ಉತ್ತರ:– ಪರಬ್ರಹ್ಮನಿಗೆ ಆಕಾರವಿಲ್ಲ, ಆಧಾರವಿಲ್ಲ ಅವನಲ್ಲಿ (ಪರಬ್ರಹ್ಮ ವಸ್ತುವಿನಲ್ಲಿ) ಕಲ್ಪನೆಗಳಿರುವದಿಲ್ಲ. (೨) ಪ್ರಶ್ನೆ:- ನಿರಾಮಯ, ನಿರಾಭಾಸ, ನಿರವಯವ ಅಂದರೇನು? (೩) ಉತ್ತರ:- ಆಮಯ ಅಂದರೆ ರೋಗ, ನಾಶ, ಅಥವಾ ವಿಕಾರ ರೋಗ ಇದು ಪಿಂಡದ (ಶರೀರ) ವಿಕಾರವಿರುವದು. ಅದು ಪ್ರಳಯಕಾಲವಲ್ಲಿ ಜಲಮಯವಾಗುವದೇ ಬ್ರಹ್ಮಾಂಡದ ವಿಕಾರ (ರೋಗ)ವಿರುವದು. ಪರಬ್ರಹ್ಮನಿಗೆ ಸೃಷ್ಟಿಯ ಆರಂಭದಲ್ಲಿ ಮತ್ತು ಕೊನೆಯಲ್ಲಿ ಈ ವಿಕಾರಗಳು ಬಾಧಿಸುವದಿಲ್ಲ. ಆದ್ದರಿಂದ ಇವನು ನಿರಾಮಯನಿರುವನು. ಪರಬ್ರಹ್ಮದಲ್ಲಿ ಭಾಸ ಅಂದರೆ ಅನಿಶ್ಚಿತ ಜ್ಞಾನ, ಭ್ರಾಂತಿ, ಶಂಕಾ ಸಂಶಯಗಳಾವವೂ ಇಲ್ಲ. ಇವನಿಗೆ ಆಕಾರ ಇರುವದಿಲ್ಲವಾದ್ದರಿಂದ ಅವಯವಗಳೂ ಇಲ್ಲ. [ಭ್ರಮೆ = ಭ್ರಾಂತಿ, ಅಧ್ಯಾಸ,ಅಧ್ಯಾರೋಪ,ತಪ್ಪಾಗಿ ಭಾವಿಸು, ತಪ್ಪಾಗಿ ತಿಳಿ, ಸಂಶಯ, ವಿಪರೀತ ಜ್ಞಾನ, ಮಿಥ್ಯಾ ಜ್ಞಾನ, ಆರೋಪ, "ಅಧ್ಯಾರೋಪ" = ಒಂದು ವಸ್ತುವಿನ ಗುಣವನ್ನು ಮತ್ತೊಂದಕ್ಕೆ ಆರೋಪಿಸುವದು.] (೪) ಪ್ರಶ್ನೆ:– ನಿಷ್ಪ್ರಪಂಚ, ನಿಷ್ಕಲಂಕ, ನಿರುಪಾಧಿ ಅಂದರೇನು? (೫) ಉತ್ತರ:- ಪರಬ್ರಹ್ಮನಿಗೆ ಸಂಸಾರವಿಲ್ಲ, ನಿಷ್ಕಲಂಕ ಅಂದರೆ ಯಾವುದೇ ಕಲಂಕ (ದೋಷ) ವಿಲ್ಲದವ ಮತ್ತು ನಿರುಪಾಧಿಕ ಅಂದರೆ ಬ್ರಹ್ಮಸ್ವರೂಪಕ್ಕೆ ಯಾವುದೇ ಉಪಾಧಿ ಅಥವಾ ಮರ್ಯಾದಾ (ನಿಯಮ ಅಳತೆ, ಬಂಧನ) ಇರುವದಿಲ್ಲ. (೬) ಪ್ರಶ್ನೆ:– ನಿರುಪಮ, ನಿರಾಲಂಬ, ನಿರಪೇಕ್ಷೆ ಅಂದರೇನು? (೭) ಉತ್ತರ:– ಪರಬ್ರಹ್ಮನಿಗೆ ಉಪಮೆ (ಹೋಲಿಕೆ, ಸಾದೃಶ್ಯತೆ) ಇರುವದಿಲ್ಲ. ಪರಬ್ರಹ್ಮವು ಯಾವುದನ್ನೂ ಅವಲಂಬಿಸಿರುವದಿಲ್ಲ. ಅಂದರೆ ಯಾವುದರ ಅವಲಂಬನವಿಲ್ಲದ ಸ್ವತಂತ್ರನು ಮತ್ತು ಪರಬ್ರಹ್ಮನಿಗೆ ಯಾವುದರ ಅಪೇಕ್ಷೆಯೂ ಇರುವದಿಲ್ಲ. (೮) ಪ್ರಶ್ನೆ:- ನಿರಂಜನ, ನಿರಂತರ, ನಿರ್ಗುಣ, ಅಂದರೇನು? ನನಗೆ ಹೇಳಿರಿ. (೯) ಉತ್ತರ:– ಪರಬ್ರಹ್ಮನಿಗೆ ಜನಸಂಸರ್ಗ (ಪ್ರಾಣಿಮಾತ್ರರ ಸಂಸರ್ಗ)ವೇ ಇರುವದಿಲ್ಲವೆಂದು ನಿರಂಜನನು–ಪರಬ್ರಹ್ಮದಲ್ಲಿ ಅಂತರ (ಅವಕಾಶ) ಅಥವಾ ರಿಕಾಮಿ (ಪೋಕಳ-ಪೊಳ್ಳು) ಖುಲ್ಲಾ ಜಾಗಾ ಇರುವದಿಲ್ಲವೆಂದು ನಿರಂತರನು. ನಿರ್ಗುಣ ಅಂದರೆ ಇದು ಎಲ್ಲ ಕಡೆಗೂ ಒಂದೇ ರೀತಿ ತುಂಬಿರುವದು. ಇದಕ್ಕೆ ಗುಣಗಳೇ ಇರುವದಿಲ್ಲವಾದ್ದರಿಂದ ಬ್ರಹ್ಮಸ್ವರೂಪವು ನಿರ್ಗುಣವು. (೧೦) ಪ್ರಶ್ನೆ:– ನಿಃಸಂಗ, ನಿರ್ಮಲ, ನಿಶ್ಚಲ ಅಂದರೇನು? (೧೧) ಉತ್ತರ:- ಪರಬ್ರಹ್ಮನಿಗೆ ಆಸಕ್ತಿಯೇ ಇಲ್ಲವದ್ದರಿಂದ ಸಂಗವೇ ಇಲ್ಲ. ಆದ್ದರಿಂದ ನಿಃಸಂಗನು. ನಿರ್ಮಲವೆಂದರೆ ಪರಬ್ರಹ್ಮಕ್ಕೆ ಮಾಲಿನ್ಯವೇ ಇಲ್ಲ. ಮತ್ತು ನಿಶ್ಚಲ ಅಂದರೆ ಆ ಪರಬ್ರಹ್ಮವು ಸ್ವಸ್ಥಿತಿಯಿಂದ ಚಲನವಿಲ್ಲದ್ದು ಇರುವದು. ಆದ್ದರಿಂದ ನಿಶ್ಚಲವು(ಅಚಲವು).(೧೨) ಪ್ರಶ್ನೆ:– ನಿಃಶಬ್ದ, ನಿರ್ದೋಷ ನಿವೃತ್ತಿ ಅಂದರೇನು? (೧೩)

ನಿಶಬ್ದ ಮ್ಹಣಿಜೆ ಶಬ್ದ ಚಿ ನಾಹೀ । ನಿರ್ದೋಷ ಮ್ಹಣಿಜೆ ದೋಷ ಚಿ ನಾಹೀ।
ನಿವೃತ್ತಿ ಮ್ಹಣಿಜೆ ವೃತ್ತಿ ಚ ನಾಹೀ । ಪರಬ್ರಹ್ಮಾಸೀ ॥೧೪॥

ನಿಃಕಾಮ ಮ್ಹಣಿಜೆ ಕಾಯೀ। ನಿರ್ಲೇಪ ಮ್ಹಣಿಜೆ ಕಾಯೀ।
ನಿಃಕರ್ಮ ಮ್ಹಣಿಜೆ ಕಾಯೀ। ಮಜ ನಿರೋಪಾವೇ ॥೧೫॥

ನಿಃಕಾಮ ಮ್ಹಣಿಜೆ ಕಾಮ ಚಿ ನಾಹೀ । ನಿರ್ಲೇಪ ಮ್ಹಣಿಜೆ ಲೇಪ ಚಿ ನಾಹೀ।
ನಿಃಕರ್ಮ ಮ್ಹಣಿಜೆ ಕರ್ಮ ಚಿ ನಾಹೀ । ಪರಬ್ರಹ್ಮಾಸೀ ॥೧೬॥

ಅನಾಮ್ಯ ಮ್ಹಣಿಜೆ ಕಾಯೀ। ಅಜನ್ಮಾ ಮ್ಹಣಿಜೆ ಕಾಯೀ।
ಅಪ್ರತ್ಯಕ್ಷ ಮ್ಹಣಿಜೆ ಕಾಯೀ। ಮಜ ನಿರೋಪಾವೇ ॥೧೭॥

ಅನಾಮ್ಯ ಮ್ಹಣಿಜೆ ನಾಮ ಚಿ ನಾಹೀ । ಅಜನ್ಮಾ ಮ್ಹಣಿಜೆ ಜನ್ಮ ಚಿ ನಾಹೀ ।
ಅಪ್ರತ್ಯಕ್ಷ ಮ್ಹಣಿಜೆ ಪ್ರತ್ಯಕ್ಷ ನಾಹೀ । ಪರಬ್ರಹ್ಮ ತೇ ॥೧೮॥

ಅಗಣಿತ ಮ್ಹಣಿಜೆ ಕಾಯೀ। ಅಕರ್ತವ್ಯ ಮ್ಹಣಿಜೆ ಕಾಯೀ।
ಅಕ್ಷಯ್ಯ ಮ್ಹಣಿಜೆ ಕಾಯೀ । ಮಜ ನಿರೋಪಾವೇ ॥೧೯॥

ಅಗಣೀತ ಮ್ಹಣಿಜೆ ಗಣೀತ ನಾಹೀ। ಅಕರ್ತವ್ಯ ಮ್ಹಣಿಜೆ ಕರ್ತವ್ಯತಾ ನಾಹೀ।
ಅಕ್ಷಯ್ಯ ಮ್ಹಣಿಜೆ ಕ್ಷಯ ಚಿ ನಾಹೀ । ಪರಬ್ರಹ್ಮಾಸೀ ॥೨೦॥

ಅರೂಪ ಮ್ಹಣಿಜೆ ಕಾಯೀ। ಅಲಕ್ಷ ಮ್ಹಣಿಜೆ ಕಾಯೀ ।
ಅನಂತ ಮ್ಹಣಿಜೆ ಕಾಯೀ। ಮಜ ನಿರೋಪಾವೇ ॥೨೧॥

ಅರೂಪ ಮ್ಹಣಿಜೆ ರೂಪ ಚಿ ನಾಹೀ। ಅಲಕ್ಷ ಮ್ಹಣಿಜೆ ಲಕ್ಷತ ನಾಹೀ ।
ಅನಂತ ಮ್ಹಣಿಜೆ ಅಂತ ಚಿ ನಾಹೀ । ಪರಬ್ರಹ್ಮಾಸೀ ॥೨೨॥

ಅಪಾರ ಮ್ಹಣಿಜೆ ಕಾಯೀ। ಅಢಳ ಮ್ಹಣಿಜೆ ಕಾಯೀ।
ಅತರ್ಕ್ಯ ಮ್ಹಣಿಜೆ ಕಾಯೀ । ಮಜ ನಿರೋಪಾವೇ ॥೨೩॥

ಅಪಾರ ಮ್ಹಣಿಜೆ ಪಾರ ಚಿ ನಾಹೀ । ಅಢಳ ಮ್ಹಣಿಜೆ ಢಳ ಚಿ ನಾಹೀ।
ಅತರ್ಕ್ಯ ಮ್ಹಣಿಜೆ ತರ್ಕತ ನಾಹೀ। ಪರಬ್ರಹ್ಮ ತೇ ॥೨೪॥

ಅದ್ವೈತ ಮ್ಹಣಿಜೆ ಕಾಯೀ। ಅದೃಶ್ಯ ಮ್ಹಣಿಜೆ ಕಾಯೀ ।
ಅಚ್ಯುತ ಮ್ಹಣಿಜೆ ಕಾಯೀ। ಮಜ ನಿರೋಪಾವೇ ॥೨೫॥

ಅದ್ವೈತ ಮ್ಹಣಿಜೆ ದ್ವೈತ ಚಿ ನಾಹೀ । ಅದೃಶ್ಯ ಮ್ಹಣಿಜೆ ದೃಶ್ಯ ಚಿ ನಾಹೀ ।
ಅಚ್ಯುತ ಮ್ಹಣಿಜೆ ಚೆವತ ನಾಹೀ । ಪರಬ್ರಹ್ಮ ತೇ ॥೨೬॥

ಉತ್ತರ:– ಪರಬ್ರಹ್ಮದಲ್ಲಿ ಶಬ್ದಗಳಿಗೆ ಅಥವಾ ಭಾಷೆಗೆ ಪ್ರವೇಶವೇ ಇರುವದಿಲ್ಲ. ಅರ್ಥಾತ್ ಶಬ್ದವಿಲ್ಲದ್ದು ನಿಃಶಬ್ದವೇ ಆಗಿದೆ. ಪರಬ್ರಹ್ಮದಲ್ಲಿ ಯಾವ ದೋಷವೂ ಇರುವದಿಲ್ಲ. ಮತ್ತು ನಿವೃತ್ತಿ ಅಂದರೆ ಆಬ್ರಹ್ಮವಸ್ತುವಿಗೆ ವೃತ್ತಿಯೇ [ಮನದ ಸ್ಥಿತಿ ಭಾವನೆ ಇತ್ಯಾದಿ] ಇರುವದಿಲ್ಲ. [೧೪] ಪ್ರಶ್ನೆ:– ನಿಷ್ಕಾಮ, ನಿರ್ಲೇಪ, ನಿಷ್ಕರ್ಮ ಅಂದರೇನು? [೧೫] ಉತ್ತರ:– ಪರಬ್ರಹ್ಮನಿಗೆ ಯಾವುದೇ ಇಚ್ಛೆ [ಕಾಮನಾ] ಇರುವದಿಲ್ಲ. ನಿರ್ಲೇಪವೆಂದರೆ ಪರಬ್ರಹ್ಮನಿಗೆ ಲೇಪವೇ ಇರುವದಿಲ್ಲ. ಅಂದರೆ ಯಾವುದೂ ಏನೂ ಅಂಟಿಕೊಳ್ಳುವದಿಲ್ಲ. ಮತ್ತು ನಿಷ್ಕರ್ಮವೆಂದರೆ ಈ ಪರಾತ್ಪರ ಬ್ರಹ್ಮಕ್ಕೆ ಯಾವುದೇ ಕರ್ಮವಿರುವದಿಲ್ಲ. [೧೬] ಪ್ರಶ್ನೆ:- ಅನಾಮಾ, ಅಜನ್ಮಾ, ಅಪ್ರತ್ಯಕ್ಷ ಅಂದರೇನು? ನನಗೆ ತಿಳಿಸಿ ಹೇಳಿರಿ. [೧೭] ಉತ್ತರ;– ಪರಬ್ರಹ್ಮನಿಗೆ ಹೆಸರೇ ಇರುವದಿಲ್ಲ. ಆದ್ದರಿಂದ ಅವನಿಗೆ ರೂಪವೂ ಇಲ್ಲ. ಆದ್ದರಿಂದ ಅವನು ಅನಾಮಾ ಅನಿಸುವನು. ಅಜನ್ಮಾ ಅಂದರೆ ಪರಬ್ರಹ್ಮಕ್ಕೆ ಜನ್ಮವೇ ಇಲ್ಲವಾದ್ದರಿಂದ ಅವನು ಅಜನ್ಮನೆನಿಸುವನು. ಮತ್ತು ಅಪ್ರತ್ಯಕ್ಷ ಅಂದರೆ ಆ ಬ್ರಹ್ಮವಸ್ತು ಇಂದ್ರಿಯಗಳಿಗೆ ಕಾಣುವದಿಲ್ಲ. ಅರ್ಥಾತ್ ಬ್ರಹ್ಮವಸ್ತುವು ಪ್ರತ್ಯಕ್ಷಕಾಣಿಸುವದಿಲ್ಲವಾದ್ದರಿಂದ ಅವನು ಅಪ್ರತ್ಯಕ್ಷನೆನಿಸುವನು. [೧೮] ಪ್ರಶ್ನೆ:–ಅಗಣಿತ, ಅಕರ್ತವ್ಯ, ಅಕ್ಷಯ ಅಂದರೇನು? [೧೯] ಉತ್ತರ:– ಪರಬ್ರಹ್ಮನನ್ನು ಅಳೆಯಲಿಕ್ಕೆ [ಅಳತೆ ಮಾಡಲಿಕ್ಕೆ] ಬರುವದಿಲ್ಲ. ಮತ್ತು ಅವನು ಲೆಕ್ಕಕ್ಕೆ ಹತ್ತುವದಿಲ್ಲವಾದ್ದರಿಂದ ಅಗಣಿತನು. ಪರಬ್ರಹ್ಮನು ನೀತಿ ಅನೀತಿಗಳ ಆಚೆಗೆ ಇರುವವನು. ಅರ್ಥಾತ್ ಕರ್ತವ್ಯತೆ ಇರದವನು ಅಕರ್ತವ್ಯನು. ಪರಬ್ರಹ್ಮ ಸ್ವರೂಪಕ್ಕೆ ನಾಶವೇ ಇರುವದಿಲ್ಲ, ಸೊರಗುವದಿಲ್ಲ, ಕ್ಷಯಿಸುವದಿಲ್ಲವಾದ್ದರಿಂದ ಅಕ್ಷಯನು. [೨೦] ಪ್ರಶ್ನೆ:- ಅರೂಪ, ಅಲಕ್ಷ್ಯ, ಅನಂತ ಅಂದರೇನು? [೨೧] ಉತ್ತರ:–ಪರಬ್ರಹ್ಮಕ್ಕೆ ಯಾವುದೇ ರೂಪವಿರುವದಿಲ್ಲವಾದ್ದರಿಂದ ಅರೂಪವೆನಿಸುವದು. ಲಕ್ಷ್ಯದಲ್ಲಿ ತಂದುಕೊಳ್ಳಲಿಕ್ಕೆ ಆಗುವದಿಲ್ಲ. ಅಥವಾ ಮನಕ್ಕೆ ಆಕಲನವಾಗುವದಿಲ್ಲ. ಆದ್ದರಿಂದ ಇದು ಅಲಕ್ಷ್ಯವೆನಿಸಿದೆ. ಪರಬ್ರಹ್ಮ ರೂಪಕ್ಕೆ ಎಂದೂ ಅಂತವೇ ಇರುವದಿಲ್ಲವಾದ್ದರಿಂದ ಅನಂತವೆನಿಸುವದು. [೨೨] ಪ್ರಶ್ನೆ:- ಅಪಾರ, ಅಢಳ, ಅತರ್ಕ್ಯ ಅಂದರೇನು? [೨೩] ಉತ್ತರ:–ಪರಬ್ರಹ್ಮವು ಅಮರ್ಯಾದವಿರುವದು ಇವನ ಕೊನೆಯನ್ನು ಎಂದೂಮುಟ್ಟಲಿಕ್ಕಾಗುವದಿಲ್ಲ. ಅರ್ಥಾತ್ ಪಾರರಹಿತನು ಅಂದರೆ ಅಪಾರನು. ಅಢಳ ಅಂದರೆ ಪರಬ್ರಹ್ಮನು ತನ್ನ ಸ್ಥಳದಿಂದ ಎಂದೂ ಅಗಲಾಡುವುದಿಲ್ಲ. ಸ್ಥಾನಭ್ರಷ್ಟನಾಗುವದಿಲ್ಲವಾದ್ದರಿಂದ ಅಢಳನು. ಅತರ್ಕ್ಯ ಅಂದರೆ ಬುದ್ಧಿಗೆ ಇವನ ಸ್ವರೂಪದಬಗ್ಗೆ ಕಲ್ಪನೆಮಾಡಲಿಕ್ಕೆಆಗುವದಿಲ್ಲ. ಪರಾತ್ಪರನನ್ನು ತರ್ಕಿಸಲಿಕ್ಕಾಗುವದಿಲ್ಲವಾದ್ದರಿಂದ ಇವನು ಅತರ್ಕ್ಯನು[೨೪] ಪ್ರಶ್ನೆ:- ಅದ್ವೈತ, ಅದೃಶ್ಯ, ಅಚ್ಯುತ ಅಂದರೇನು? [೨೫] ಉತ್ತರ:– ಪರಬ್ರಹ್ಮವು ಅಗದೀ ಒಂದೇ ಒಂದು ಇರುವದು. ಅಲ್ಲಿ ಎರಡನೆಯದಾವುದೂ ಇಲ್ಲ. ಅರ್ಥಾತ್ ದ್ವೈತವಿಲ್ಲದ್ದೇ ಅದ್ವೈತವೆನಿಸುವದು. ಅದೃಶ್ಯವೆಂದರೆ ಪರಬ್ರಹ್ಮವು ಕಾಣಿಸುವಂತಹದಲ್ಲ–ಅತೀಂದ್ರಿಯವಿರುವದು. ಇಂದ್ರಿಯಗಳಿಗೆ ಗೋಚರಿಸುವದಿಲ್ಲ. ಅರ್ಥಾತ್ ದೃಶ್ಯವಲ್ಲದ್ದರಿಂದ ಅದೃಶ್ಯವೆನಿಸುವದು. ಅಚ್ಯುತ ಅಂದರೆ ತನ್ನ ಸ್ಥಾನದಿಂದ ಎಂದೂ ಕೆಳಗೆ ಸರಿಯುವದಿಲ್ಲ. ಎಂದಿಗೂ ಚ್ಯುತಿ ಇಲ್ಲದ್ದೇ ಅಚ್ಯುತವೆನಿಸುವದು. [೨೬]

ಅಭೇದ ಮ್ಹಣಿಜೆ ಕಾಯೋ। ಅದಾಹ್ಯ ಮ್ಹಣಿಜೆ ಕಾಯೋ।
ಅಕ್ಲೇದ ಮ್ಹಣಿಜೆ ಕಾಯೋ। ಮಜ ನಿರೋಪಾವೇ ॥೨೭॥

ಅಭೇದ ಮ್ಹಣಿಜೆ ಭೇದೇನಾ। ಅದಾಹ್ಯ ಮ್ಹಣಿಜೆ ಜಳೇನಾ।
ಅಕ್ಲೇದ ಮ್ಹಣಿಜೆ ಕಾಲವೇನಾ। ಪರಬ್ರಹ್ಮ ತೇ ॥೨೮॥

ಪರಬ್ರಹ್ಮ ಮ್ಹಣಿಜೆ ಸಕಳಾಪರತೇ। ತಯಾಸ ಪಾಹಾತಾ ಆಪಣ ಚಿ ತೇ।
ಹೇ ಕಳೇ ಅನುಭವಮಾತೇ। ಸದ್‌ಗುರು ಕೇಲಿಯಾ ॥೨೯॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
"ಆಶಂಕಾ ನಾಮ" ಸಮಾಸ ಪ್ರಥಮ ॥

ಪ್ರಶ್ನೆ:- ಅಚ್ಛೇದ್ಯ, ಅದಾಹ್ಯ, ಅಕ್ಲೇದ್ಯ ಅಂದರೇನು ತಿಳಿಸಿರಿ. (೨೭) ಉತ್ತರ:- ಪರಬ್ರಹ್ಮನನ್ನು ತುಂಡರಿಸಲಿಕ್ಕೆ ಬರುವದಿಲ್ಲ. ಭೇದರಹಿತನಾದ್ದರಿಂದ ಇವನು ಅಚ್ಛೇದ್ಯನು. ಪರಬ್ರಹ್ಮನನ್ನು ಸುಡಲಿಕ್ಕೆ ಬರುವದಿಲ್ಲ. ಇದು ಸುಡುವಂಥದಲ್ಲ. ದಾಹಕವಲ್ಲವಾದ್ದರಿಂದ ಅದಾಹ್ಯವು. ಪರಬ್ರಹ್ಮವು ಅಕ್ಲೇದ್ಯ ಅಂದರೆ ನೀರಿನಲ್ಲಿ ನೆನೆಯುವದಿಲ್ಲ, ಹಸಿಯಾಗುವದಿಲ್ಲ, ತೊಯ್ಯುವದಿಲ್ಲ, ಸ್ವರೂಪವನ್ನು ಕಲಸಲಾಗುವದಿಲ್ಲ. ಆದ್ದರಿಂದ ಅಕ್ಲೇದ್ಯನು. (೨೮) ಒಟ್ಟಿನಲ್ಲಿ ಹೇಳಬೇಕಾದ ತಾತ್ಪರ್ಯವೇನೆಂದರೆ ಪರಬ್ರಹ್ಮವು ಯಾವತ್ತೂ ದೃಶ್ಯವಿಶ್ವದ ಆಚೆಗೆ ಇರುವದು. ಅದರಂತಹದು ಅದೇ ಇರುವದು. ಅರ್ಥಾತ್ ಎರಡನೆಯದಾವುದೂ ಅದರಂತೆ ಇರುವದಿಲ್ಲ. ಕೇವಲ ಶಬ್ದಗಳಿಂದ ಹೇಳಲು ಸಾಧ್ಯವಿಲ್ಲ. ಸದ್ಗುರುವಿಗೆ ಶರಣು ಹೋಗಿ ಅವರ ಸಂಗದಲ್ಲಿ ಇದ್ದರೆ ಅನುಭವ ಬರುವದು. ಅವರು ಹೇಳಿದ ಅನುಭವ ಮಾರ್ಗದಿಂದ ಹೋದರೆ ಪರಬ್ರಹ್ಮದ ಸ್ವರೂಪ ತಿಳಿಯುವದು. [೨೯]

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಒಂಭತ್ತನೆಯ ದಶಕದ "ಆಶಂಕಾ ನಾಮ"ವೆಂಬ ಒಂದನೆಯ ಸಮಾಸವು ಮುಗಿದುದು.

### ಸಮಾಸ ದ್ವಿತೀಯ : ಬ್ರಹ್ಮ ನಿರೂಪಣ

॥ಶ್ರೀರಾಮ॥ ಜೇ ಜೇ ಕಾಹೀ ಸಾಕಾರ ದಿಸೆ। ತೇ ತೇ ಕಲ್ಪಾಂತೀ ನಾಸೆ।
ಸ್ವರೂಪ ತೇ ಅಸತ ಚಿ ಅಸೆ। ಸರ್ವಕಾಳ ॥೧॥

ಜೇ ಸಕಳಾಂಮಧೇ ಸಾರ। ಮಿಥ್ಯಾ ನವ್ಹೆ ತೇ ಸಾಚಾರ।
ಜೇ ಕಾ ನಿತ್ಯ ನಿರಂತರ। ಸಂಚಲೇ ಅಸೆ ॥೨॥

## ದಶಕ ೯. ಸಮಾಸ ೨. ಬ್ರಹ್ಮ ನಿರೂಪಣ (ನುಡಿ ೪೧)

ಅನುಭವದ ಪ್ರಕಾರಗಳು ಎರಡು ಬಗೆಯಾಗಿರುವವು. ಇಂದ್ರಿಯಗಳ ಅನುಭವದ ಮೇಲೆ ಆಧಾರ ಹೊಂದಿದ ದೃಶ್ಯವಿಶ್ವದ ಅನುಭವವು. ಒಂದು ಪ್ರಕಾರದ್ದಾಗಿದೆ. ಇನ್ನೊಂದು ಪ್ರಕಾರದಲ್ಲಿಅತೀಂದ್ರಿಯದ ಅನುಭವದ ಆಧಾರದಿಂದ ಪರಮಾತ್ಮ ಸ್ವರೂಪದ ಅನುಭವ ಪಡೆಯುವದು, ಇದು ಎರಡನೆಯದಾಗಿದೆ. ಸಾಮಾನ್ಯ ಜನರ ಅನುಭವವು ಮೊದಲನೆಯ ಪ್ರಕಾರದ್ದಿರುವದು. ಸಾಧು ಸಂತರ ಅನುಭವವು ಎರಡನೆಯ ಪ್ರಕಾರದ್ದಿರುವದು. ಸಂತರು ಹೇಳುವದೇನಂದರೆ:– ಇಂದ್ರಿಯಗಳಿಗೆ ಯಾವಯಾವುದು ಕಾಣುವದೋ ಅದೆಲ್ಲವೂ ದೃಶ್ಯವಿರುವದು. ದೃಶ್ಯವು ಕಾಲಾಂತರದಿಂದ ನಾಶ ಹೊಂದುವದು.ಆದರೆ ದೃಶ್ಯದ ಒಳಗೂ ಹೊರಗೂ ವ್ಯಾಪಿಸಿ ಇರುವಂಥ ಪರಮಾತ್ಮಸ್ವರೂಪವು ಹೇಗಿರುತ್ತದೆಯೋ ಹಾಗೆಯೇ ಇರುತ್ತದೆ. (ಅಳಿಯುವದಿಲ್ಲ, ಉಳಿಯುತ್ತದೆ). ಪಂಚಭೂತಾತ್ಮಕ ಪದಾರ್ಥಗಳಿಗೆ ಎಲ್ಲ ಕಡೆಗಳಿಂದ ಆವರಿಸಿರುವ ಆತ್ಮಸ್ವರೂಪವು ಅತೀಂದ್ರಿಯವಿರುವದು–ಅದೃಶ್ಯವಿರುವದು. ಪ್ರತಿಯೊಂದರ ಸಮೀಪ (ತೀರ ಹತ್ತಿರ) ಇದ್ದರೂ ಅದು ಅದೆ ಅನ್ನುವ ಭಾನ (ಅರಿವು) ನಮಗೆ ಇರುವದಿಲ್ಲ. ಎಲ್ಲ ಪ್ರಕಾರಗಳಲ್ಲಿಯೂ ಇಂದ್ರಿಯಗಳಿಂದಲೇ ನೋಡುವ ಸವಯು (ರೂಢಿ, ಚಟ) ಹತ್ತಿದ್ದರಿಂದ ಅತೀಂದ್ರಿಯ ಮತ್ತು ಸೂಕ್ಷ್ಮನಾಗಿರುವ ಪರಮಾತ್ಮಸ್ವರೂಪವನ್ನು ನಾವು ಕಣ್ಣಿನಿಂದ ನೋಡಬೇಕೆಂದು ಅನ್ನುವೆವು. ಇದು ಎಂದೂ ಶಕ್ಯವಾಗುವದಿಲ್ಲ. ನಮ್ಮ ಜಗತ್ತು ನಾನು ಅನ್ನುವದು ಅಹಂತನದ್ದು ಇದುದೇಹಬುದ್ಧಿಯ ಜಗತ್ತಾಗಿದೆ. ಅಭೇದಇರುವಂಥ ಮೂಲಸ್ವರೂಪದಲ್ಲಿ ಅಹಂ ಇದು ಇಲ್ಲದ ಭೇದವನ್ನು ಉಂಟು ಮಾಡುವದು."ನಾನು ಬ್ರಹ್ಮ ಇರುವೆನು" ಅನ್ನುವದೂ ಸಹ ಅಹಂತನದಭ್ರಮವೇ ಇರುವದೆಂದು ತಿಳಿಯಬೇಕು. ಶಬ್ದ ಮತ್ತು ಅದರ ಪದಾರ್ಥ,ವಾಣಿ ಮತ್ತು ವಿಚಾರ, ಇವು ಅಹಂತಾದ ಪ್ರದೇಶಗಳಾಗಿರುವವು. ಅನ್ವಯ ಅಂದರೆ ಸ್ವರೂಪದ ಬಗ್ಗೆ ಇದು ಇರುವದೆಂದು ವಿಚಾರ ಮಾಡುವದೇ ಅನ್ವಯವೆನಿಸುವದು. ಮತ್ತು ವ್ಯತಿರೇಕವೆಂದರೆ ಸ್ವರೂಪದ ಬಗ್ಗೆ ಇಲ್ಲವೆಂದು ವಿಚಾರ ಮಾಡುವದೇ ಆಗಿದೆ. ಇವೆರಡೂ ಪ್ರಕಾರಗಳು ಶಬ್ದದ ಆಟವೇ ಇರುವವು. ಖರೇ ಸ್ವರೂಪವು ಶಬ್ದದ ಆಚೆಗೆ ಇರುವದು. ನಾಲ್ಕೂ ವಾಣಿಗಳು ಎಲ್ಲಿ ನಿಲ್ಲುವವೋ, ಮೌನಧಾರಣ ಮಾಡುವವೋ ಅಲ್ಲಿ ಹೇಗೆ ಮುಟ್ಟಬಲ್ಲವು ? ಯಾಕೆಂದರೆ ಶಬ್ದಗಳು ನಾಶವಂತವಿರುವವು. ಶಬ್ದ ಮತ್ತು ಅರ್ಥ ಇವುಗಳನ್ನು ಹಿಂದಕ್ಕೆ ಬಿಟ್ಟು ಕೊಟ್ಟು ಅನನ್ಯ (ಏಕರೂಪ)ರಾಗಲಿಕ್ಕೆ ಕಲಿಯಬೇಕು. ಮೊದಲು ಶಬ್ದ ಕೇಳಬೇಕು. ಆಮೇಲೆ ಅದರ ಅರ್ಥದ ಮನನ ಮಾಡಬೇಕು. ಮನನ ಮಾಡಮಾಡುತ್ತ ಅರ್ಥರೂಪರಾಗಬೇಕು. ಕೊನೆಗೆ ಅದರಲ್ಲಿ ಏಕರೂಪರಾಗಬೇಕು. ಆಗ ಅಲ್ಲಿ ಶಬ್ದವು ನಿಃಶಬ್ದವಾಗುವದು. ನಾನು ಮತ್ತು ನನ್ನದು ಅನ್ನುವದೆಲ್ಲವೂ ಸುಳ್ಳು ಬೀಳುವವು. ನಿರರ್ಥಕವಾಗುವವು. ಮತ್ತು ಪ್ರಕೃತಿ ವ ಪುರುಷ ಇವೆರಡೂ ಲಯ ಹೊಂದುವವು.ಈ ಅನುಭವದವರೆಗೆ ಬಂದು ಮುಟ್ಟಿದವನೇ ಮಹಾಪುರುಷನು. ಇವನು ಮಾತಾಡಿದರೂ ಅವನ ಮೌನವು ಭಂಗವಾಗುವದಿಲ್ಲ. ಇವನು ಕರ್ಮ ಮಾಡಿದರೂ ಏನೂ ಮಾಡದೆ ಇದ್ದಂತೆ ಎಲ್ಲವರಲ್ಲಿಯೂ ಇದ್ದೂ ಇವನು ಯಾವುದರಲ್ಲಿಯೂ ಇಲ್ಲದಂತಿರುವನು. ಇದಕ್ಕೆ ಬ್ರಹ್ಮಜ್ಞಾನವೆನ್ನುವರು.

### ದಶಕ ೯. ಸಮಾಸ ೨. ಬ್ರಹ್ಮ ನಿರೂಪಣ (ನುಡಿ ೪೧)

॥ಶ್ರೀರಾಮ॥ ಆಕಾರಕ್ಕೆ ಬಂದದ್ದೆಲ್ಲ ನಾಶವಾಗುವದು. ಆದರೆ ವಸ್ತುವನ್ನು ಹೊರಗೂ ಒಳಗೂ ವ್ಯಾಪಿಸಿರುವ ಪರಮಾತ್ಮ ಸ್ವರೂಪವು ಹೇಗಿತ್ತೊ ಹಾಗೆಯೇ ಇರುವದು. ಇದನ್ನು ಕಣ್ಣಿನಿಂದ ನೋಡಬೇಕೆಂದು ಅನಿಸುತ್ತದೆ. ಆದರೆ ಅದನ್ನು ಹಾಗೆ ನೋಡಲಿಕ್ಕೆ ಬರುವದಿಲ್ಲ:- ಯಾವ ಯಾವದು ಏನೇನು ಆಕಾರ ಪಡೆದು ಬಂದಿರುವದೋ ಅದು ಕೊನೆಯಲ್ಲಿ ನಾಶವಾಗುವದು. ಆದರೆ ಪರಮಾತ್ಮ ಸ್ವರೂಪ ಮಾತ್ರ ಸದಾ ಸರ್ವಕಾಲದಲ್ಲಿಯೂ ಹೇಗಿರುತ್ತದೆಯೋ ಹಾಗೆಯೇ ಇರುವದು. (೧) ಯಾವುದು ಎಲ್ಲ ವಸ್ತುಗಳ ಸಾರತತ್ತ್ವವೋ ಅದು ಪರಿಪೂರ್ಣ ಸತ್ಯವಿರುವದು. ಅದು ಎಂದಿಗೂ ಸುಳ್ಳಾಗುವದಿಲ್ಲ. ಅದು ಯಾವಾಗಲೂ ಎಲ್ಲ ಕಡೆಗೂ ತುಂಬಿರುವದು. (೨)

ತೇ ಭಗವಂತಾಚೇ ನಿಜರೂಪ । ತ್ಯಾಸಿ ಬೋಲಿಜೆ ಸ್ವರೂಪ ।
ಯಾ ಹಿ ವೇಗಳೀ ಅನುರೂಪ । ನಾವೇಂ ತಯಾಚೀ ॥೩॥

ತ್ಯಾಸ ನಾವಾಚಾ ಸಂಕೇತ । ಕಳಾವಯಾ ಹಾ ದೃಷ್ಟಾಂತ ।
ಪರೀ ತೇ ಸ್ವರೂಪ ನಾವಾತೀತ । ಅಸತ ಚಿ ಅಸೆ ॥೪॥

ದೃಶ್ಯಾಸಬಾಹ್ಯ ಸಂಚಲೇ । ಪರೀ ತೇ ವಿಶ್ವಾಸ ಚೋರಲೇ ।
ಜವಳೀ ಚ ನಾಹೀ ಸೇ ಜಾಲೇ । ಅಸತ ಚಿ ಕೈಸೇ ॥೫॥

ಐಸಾ ಏಕೋನಿಯಾ ದೇವ । ಉಠೆ ದೃಷ್ಟೀಚಾ ಭಾವ ।
ಪಾಹೋ ಜಾತಾ ದಿಸೆ ಸರ್ವ । ದೃಶ್ಯ ಚಿ ಅವಘೇ ॥೬॥

ದೃಷ್ಟೀಚಾ ವಿಷಯೋ ದೃಶ್ಯ । ತೋ ಚಿ ಜಾಲಿಯಾ ಸಾದೃಶ್ಯ ।
ತೇಣೇ ದೃಷ್ಟೀ ಪಾವೇ ಸಂತೋಷ । ಪರೀ ತೇ ದೇಖಣೇ ನವ್ಹೆ ॥೭॥

ದೃಷ್ಟೀಸ ದಿಸೆ ತೇ ನಾಸೆ । ಯೇತದ್ವಿಷಈ ಶ್ರುತಿ ಅಸೆ ।
ಮ್ಹಣೌನ ಜೇ ದೃಷ್ಟೀಸ ದಿಸೆ । ತೇ ಸ್ವರೂಪ ನವ್ಹೆ ॥೮॥

ಸ್ವರೂಪ ತೇ ನಿರಾಭಾಸ । ಆಣೀ ದೃಶ್ಯ ಭಾಸಲೇ ಸಾಭಾಸ ।
ಭಾಸಾಸ ಬೋಲಿಲಾ ನಾಸ । ವೇದಾಂತ ಶಾಸ್ತ್ರೀ ॥೯॥

ಆಣೀ ಪಾಹಾತಾ ದೃಶ್ಯ ಚಿ ಭಾಸೆ । ವಸ್ತು ದೃಶ್ಯಾವೇಗಳೀ ಅಸೆ ।
ಸ್ವಾನುಭವೇ ಪಾಹಾತಾ ದಿಸೆ । ತೇ ದೃಶ್ಯಾಸಬಾಹ್ಯ ॥೧೦॥

ಜೇ ನಿರಾಭಾಸ ನಿರ್ಗುಣ । ತ್ಯಾಚೀ ಕಾಯೆ ಸಾಂಗಾವೀ ಖೂಣ ।
ಪರೀ ತೇ ಸ್ವರೂಪ ಜಾಣ । ಸನ್ನಿಧ ಚಿ ಅಸೆ ॥೧೧॥

ಜೈಸಾ ಆಕಾಶೀ ಭಾಸಲಾ ಭಾಸ । ಆಣೀ ಸಕಳಾಂಮಧೇ ಆಕಾಶ ।
ತೈಸಾ ಜಾಣಿಜೇ ಜಗದೀಶ । ಸಬಾಹ್ಯ ಅಭ್ಯಾಂತರೀ ॥೧೨॥

ಉದಕಾಮಧೇ ಪರೀ ಭಿಜೇನಾ । ಪೃಥ್ವೀಮಧೇ ಪರೀ ಝಿಜೇನಾ ।
ವನ್ಹೀಮಧೇ ಪರೀ ಸಿಜೇನಾ । ಸ್ವರೂಪ ದೇವಾಚೇ ॥೧೩॥

ತೇ ರೇಂದ್ಯಾಮಧೇ ಪರೀ ಬುಡೇನಾ । ತೇ ವಾಯೋಮಧೇ ಪರೀ ಉಡೇನಾ ।
ಸುವರ್ಣೀ ಅಸೆ ಪರೀ ಘಡೇನಾ । ಸುವರ್ಣಾ ಸಾರಿಖೇ ॥೧೪॥

ಇದೇ ಭಗವಂತನ ಸ್ವತಃದ ರೂಪವಿರುವದು. ಇದಕ್ಕೆ ಸ್ವರೂಪ ಎಂದು ಅನ್ನುವರು. ಇದರ ಹೊರತಾಗಿ ಭಗವಂತನಿಗೆ (ಸ್ವರೂಪಕ್ಕೆ) ಇನ್ನು ಅಸಂಖ್ಯ ಹೆಸರುಗಳು ಇರುವವು. (೩) ಸ್ವರೂಪವನ್ನು ಗುರುತಿಸುವದಕ್ಕಾಗಿ ನಾಮ ಇದು ಒಂದು ಸಂಕೇತವಿರುವದು. ಭಗವಂತನ ಕಲ್ಪನಾ ಬರುವದಕ್ಕಾಗಿ ಕೆಲವೊಂದು ದೃಷ್ಟಾಂತ ಕೊಡಬೇಕಾಗುವದು. ಆದರೆ ಆ ಸ್ವರೂಪವು ಎಲ್ಲ ನಾಮಗಳ ಅಂದರೆ ಹೆಸರಿನ ಮತ್ತು ದೃಷ್ಟಾಂತದ ಆಚೆಗೆ ಅಗದೀ ಹೇಗಿರುವದೋ ಹಾಗೇ ಇರುವದು. (೪) ಎಲ್ಲ ದೃಶ್ಯ ಪದಾರ್ಥಗಳ ಒಳಗೂ ಹೊರಗೂ ಆ ಸ್ವರೂಪ ತುಂಬಿ ಇರುವದು. ಆದರೂ ಸಹ ಸರ್ವ ಸಾಮಾನ್ಯ ಜನರಿಂದ ಅದು ಗುಪ್ತವಿರುವದು. ಪ್ರತಿಯೊಬ್ಬರ ಹತ್ತಿರ ಇದ್ದರೂ ಸಹ ಅದು ಅವರಿಗೆ ಇಲ್ಲದಂತೆ ಆಗಿರುವದು. (ಮನಾಚೆ ಶ್ಲೋ.೧೭೧ ಮತ್ತು ೧೭೯ ನೋಡಿರಿ) (೫) ಭಗವಂತನ ಈ ವರ್ಣನೆ ಕೇಳಿ ಸಾಮಾನ್ಯ ಜನರಿಗೆ ಅನಿಸುವದೇನಂದರೆ "ಭಗವಂತನನ್ನು (ಸದ್ವಸ್ತುವನ್ನು) ಕಣ್ಣಿಂದ ನೋಡಬೇಕು." ಆದರೆ ಕಣ್ಣಿನಿಂದ ಅವನನ್ನು ನೋಡಲು ಹೋದದ್ದಾದರೆ ಅತ್ತ ಇತ್ತ ಎಲ್ಲ ಕಡೆಗೂ ಕೇವಲ ದೃಶ್ಯ ಮಾತ್ರ ಕಾಣಿಸುವದು. (೬) ದೃಶ್ಯವೆಲ್ಲ ದೃಷ್ಟಿಯ ವಿಷಯವಿರುವದು. ವಸ್ತುವು ದೃಶ್ಯವಾಗಿ ಕಣ್ಣಿನಿಂದ ಪ್ರತ್ಯಕ್ಷ ನೋಡಲಿಕ್ಕೆ ಬಂದರೆ-ಆಗ ನೋಡಿದವನಿಗೆ "ನಾನು ವಸ್ತುವನ್ನು ನೋಡಿದೆನು. ಅನ್ನುವ ಸಂತೋಷವಾಗುವದು. ಆದರೆ ಈ ಕಣ್ಣಿನಿಂದ ನೋಡಿದ್ದೇನೂ ಖರೇ ನೋಟವಲ್ಲ. (ಈ ನೋಟವು ಶೋಧ ಪೂರ್ವಕ, ವಿಚಾರಪೂರ್ವಕವಾಗಿ ದೇವರನ್ನು ನೋಡುವ ಖರೇ ರೀತಿ ಅಲ್ಲ) (೭) ಯಾವ ಯಾವುದು ಕಣ್ಣಿಗೆ ಕಾಣಿಸುವದೋ ಅದೆಲ್ಲವೂ ನಾಶಹೊಂದುವದಾಗಿರುವದು. ಇದರ ಬಗ್ಗೆ ಒಂದು ಶ್ರುತಿ ವಚನವಿರುವದು. ಯದ್ ದೃಷ್ಟಂ ತದ್ ನಷ್ಟಂ. ಆದ್ದರಿಂದ ಕಣ್ಣಿಗೆಯಾವುದು ಕಾಣುವದೋ ಅದು ಸ್ವಸ್ವರೂಪವಲ್ಲಸ್ವಸ್ವರೂಪವುಹೊರಗಣ್ಣಿಗೆ ಕಾಣಿಸುವದಿಲ್ಲ.(೮)ಸ್ವರೂಪದ ವಿಷಯದಲ್ಲಿ ಭಾಸಕ್ಕೆ ಅಂದರೆ ಅನಿಶ್ಚಿತ ಜ್ಞಾನಕ್ಕೆ ಸ್ಥಾನವಿರುವದಿಲ್ಲ. ದೃಶ್ಯದ ಸ್ಥಳದಲ್ಲಿ ಮಾತ್ರ ಭಾಸಕ್ಕೆ ಸ್ಥಾನವಿರುವದು. ಮಿಥ್ಯಾತನವೂ ಇರುವದು. ಭಾಸವು ನಾಶವಂತವಿರುವದೆಂದು ವೇದಾಂತ ಶಾಸ್ತ್ರ ಹೇಳುವದು.(೯) ನಾವು ಯಾವಾಗ ಈ ಕಣ್ಣಿನಿಂದ ನೋಡುವೆವೋ, ಆಗ ಕೇವಲ ದೃಶ್ಯವೇ ಕಾಣುವದು. ಸದ್ವಸ್ತು ಅಥವಾ ಸ್ವಸ್ವರೂಪ ಕಲೆಯು ದೃಶ್ಯದಕ್ಕಿಂತಅಗದೀ ಬೇರೆ ಇರುವದು. ಸ್ವಸ್ವರೂಪಾನುಭವ ಬಂದಿತೆಂದರೆ ಆಗ ಸದ್ವಸ್ತು ದೃಶ್ಯದ ಒಳಗೂ ಹೊರಗೂ ವ್ಯಾಪಿಸಿ ಇರುವದೆಂದು ನಿಮಗೆ ಕಾಣುವದು. (೧೦) ಸ್ವಸ್ವರೂಪಕ್ಕೆ ಯಾವುದೇ ಆಭಾಸವಿರುವದಿಲ್ಲ. (ಸಾದೃಶ್ಯ) ಯಾವುದೇ ಗುಣವಿಲ್ಲ. ಆದ್ದರಿಂದ ಇದನ್ನು ಗುರುತಿಸಲಿಕ್ಕೆ ಯಾವ ಸಂಕೇತಗಳನ್ನು ಹೇಳಲಿಕ್ಕೆ ಬರುವದಿಲ್ಲ. ಹೀಗೆ ಇದು ಇರುವದಾಗಿದ್ದರೂ ಸಹ ಸ್ವರೂಪವು ನಿಮ್ಮ ನಿಕಟವರ್ತಿಯಾಗಿದೆಯೆಂಬಲ್ಲಿ ಸಂಶಯವಿಲ್ಲ. (೧೧) ಈಗ ದೃಷ್ಟಾಂತದಿಂದ ಆ ಸ್ವರೂಪದ ಬಗೆಗೆ ಸ್ವಲ್ಪ ಕಲ್ಪನೆಯನ್ನು ಮಾಡಿಕೊಡುವರು:- ನಾವು ಆಕಾಶವನ್ನು ನೋಡುವೆವು. ಆಗ ನಮಗೆ ಆಕಾಶವು ಕಂಡಿತು ಅನ್ನುವ ಭಾಸವಾಗುವದು. ಆದರೆ ಆಕಾಶ ಬೇರೆ ರೀತಿಯಲ್ಲಿ ನಮಗೆ ಕಾಣುವದೇ ಇಲ್ಲ. ಯಾಕಂದರೆ ಎಲ್ಲ ಕಡೆಯಿಂದಲೂ ಅದು ಒಂದೇ ಬಗೆಯಲ್ಲಿ ಪಸರಿಸಿರುವದು. ಇದರಂತೆ ಪರಮೇಶ್ವರನೂ ಸರ್ವ ದೃಶ್ಯವಸ್ತುಗಳಿಗೆ ಎಲ್ಲ ಕಡೆಯಿಂದ ಒಳಗೂ ಹೊರಗೂ ವ್ಯಾಪಿಸಿ ಇರುವನು. (೧೨) ಭಗವಂತನ ಸ್ವರೂಪ ನೀರಿನಲ್ಲಿ ಸಹ ವ್ಯಾಪಿಸಿರುವದು. ಆದರೆ ಅದು ತೊಯ್ಯುವದಿಲ್ಲ [ಹಸಿಯಾಗುವದಿಲ್ಲ]. ಪೃಥ್ವಿಯಲ್ಲಿ ಇದು ವ್ಯಾಪಿಸಿರುವದು. ಆದರೆ ಸವೆಯುವದಿಲ್ಲ [ಸೊರಗುವದಿಲ್ಲ]. ಅಗ್ನಿಯಲ್ಲಿ ಇದು ವ್ಯಾಪಿಸಿರುವದು. ಆದರೆ ಸುಡುವದಿಲ್ಲ. [೧೩] ಸ್ವರೂಪವು ರಾಡಿಯಲ್ಲಿ [ಅರಲು, ರೊಜ್ಜು] ವ್ಯಾಪಿಸಿದ್ದರೂ ಅದರಲ್ಲಿ ಮುಳುಗುವದಿಲ್ಲ. ಗಾಳಿಯಲ್ಲಿ ವ್ಯಾಪಿಸಿದ್ದರೂ ಅದು ಹಾರುವದಿಲ್ಲ. ಬಂಗಾರದಲ್ಲಿ ಅದು ವ್ಯಾಪಿಸಿದ್ದರೂ ಅದು ಬಂಗಾರದಂತೆ ನಾಮರೂಪ ಹೊಂದುವದಿಲ್ಲ. [ಇದರಿಂದ ಒಡವೆಗಳನ್ನು ತಯಾರಿಸಲಿಕ್ಕೆ ಬರುವದಿಲ್ಲ] [೧೪]

ಐಸೇ ಜೇ ಸಂಚಲೇ ಸರ್ವದಾ । ಪರೀ ತೇ ಆಕಳೇನಾ ಕದಾ ।
ಅಭೇದಾವರೂಜೀ ವಾಢವೀ ಭೇದಾ । ತೇ ಹೇ ಅಹಂತಾ ॥೧೫॥

ತಿಚ್ಯಾ ಸ್ವರೂಪಾಚೀ ಖೂಣ । ಸಾಂಗೋ ಕಾಹೀ ವೊಳಖಣ ।
ಅಹಂತೇಚೇ ನಿರೂಪಣ । ಸಾವಧ ಐಕಾ ॥೧೬॥

ಜೇ ಸ್ವರೂಪಾಕಡೆ ಪಾವೇ । ಅನುಭವಾಸವೇ ಝೋಪಾವೇ ।
ಅನುಭವಾಚೆ ಶಬ್ದ ಆಘವೇ । ಬೋಲೋನ ದಾವೀ ॥೧೭॥

ಮ್ಹಣೆ ಆತಾ ಮೀ ಚ ಸ್ವರೂಪ । ತೇ ಚಿ ಅಹಂತೇಚೇ ರೂಪ ।
ನಿರಾಕಾರೀ ಆಪೇಆಪ । ವೇಗಳೀ ಪಡೆ ॥೧೮॥

ಸ್ವಯಂ ಮೀ ಚ ಆಹೇ ಬ್ರಹ್ಮ । ಐಸಾ ಅಹಂತೇಚಾ ಭ್ರಮ ।
ಐಸಿಯೇ ಸೂಕ್ಷ್ಮೀ ಸೂಕ್ಷ್ಮ । ಪಾಹಾತಾ ದಿಸೆ ॥೧೯॥

ಕಲ್ಪನಾ ಆಕಳೀ ಹೇತ । ವಸ್ತು ಕಲ್ಪನಾತೀತ ।
ಮ್ಹಣೌನ ನಾಕಳೆ ಅಂತ । ಅನಂತಾಚಾ ॥೨೦॥

ಅನ್ವಯೇ ಆಣೀ ವೀತಿರೇಕ । ಹಾ ಶಬ್ದಭೇದ ಕೋಣೇಯೇಕ ।
ನಿಶಬ್ದಾಚಾ ಅಂತರವಿವೇಕ । ಶೋಧಿಲಾ ಪಾಹಿಜೇ ॥೨೧॥

ಈ ಪ್ರಕಾರ ಎಲ್ಲ ಸ್ಥಳದಲ್ಲಿ ಎಲ್ಲ ವಸ್ತುಗಳಲ್ಲಿ ವ್ಯಾಪಿಸಿ ಇರುವಂಥ ಸ್ವರೂಪವು ಭೇದರಹಿತ ಮತ್ತು ಸಮ [ಸಮಾನ] ಇರುವದು. ಇದರಲ್ಲಿ ಅಹಂ ಅನ್ನುವದು. ಭೇದವನ್ನು ನಿರ್ಮಾಣ ಮಾಡುವದು "ನಾನು ಬ್ರಹ್ಮ ಇರುವೆನು" ಇದು ಅಹಂ ಎಂದು ಅನಿಸುವದು. ಕೆಳಗಿನ ಮಟ್ಟದಲ್ಲಿ "ನಾನು ದೇಹ ಇರುವೆನು" ಈ ಎಲ್ಲ ರೂಪ ವನ್ನು ಅದು ತಳೆಯುವದು. ಮತ್ತು ಅನೇಕ ಕಲ್ಪನೆಗಳನ್ನು ಮಾಡುವದು. ಶಬ್ದ ಜ್ಞಾನದಲ್ಲಿ ರಮಿಸುವದು [ಆನಂದಪಡುವದು]. ಅನ್ವಯ ಮತ್ತು ವ್ಯತಿರೇಕ ಉಂಟು ಮಾಡುತ್ತ ಹೋಗುವದು. ಇದೆಲ್ಲವನ್ನೂ ಬಾಜೂಕ್ಕೆ ಸರಿಸಿ ನಿಶ್ಶಬ್ದ ಸ್ವರೂಪದೊಂದಿಗೆ ಅನನ್ಯರಾಗಬೇಕು:-ಈ ಪ್ರಕಾರವಾಗಿ ಸದಾ ಸರ್ವಕಾಲ ಎಲ್ಲ ಸ್ಥಳದಲ್ಲಿ ಭರಪೂರ ತುಂಬಿರುವಂಥ ಸ್ವಸ್ವರೂಪವು ಅನುಭವದ ಆಳವಿನಲ್ಲಿ ತಂದುಕೊಳ್ಳುವದು ಕಠಿಣವೆನಿಸುವದು. ಈ ಭೇದರಹಿತ ಸ್ವರೂಪದಲ್ಲಿ ಅಹಂ ಇದು ಭೇದವನ್ನು ಹುಟ್ಟಿಸುವದು. ನಿಜವಿರುವದೇನಂದರೆ ಸ್ವಸ್ವರೂಪದ ಬರುವದಕ್ಕಾಗಿ ಅಹಂ ಕಾರವನ್ನು ಸಂಪೂರ್ಣ ಇಲ್ಲದಂತೆ ಮಾಡಿ ಸ್ವಸ್ವರೂಪದೊಂದಿಗೆ ಸಮರಸವಾಗಬೇಕಾಗುವದು. ಆದರೆ ನಮಗೆ "ಅಹಂ"ಅನ್ನು ಕಾಯಂ ಇಟ್ಟು ಅನುಭವ ಪಡೆದುಕೊಳ್ಳುವ ರೂಢಿ (ಸವಯ) ಹತ್ತಿರುವದು. ಈ ರೂಢಿಯನ್ನು ನಾವು ಸ್ವಸ್ವರೂಪಾನುಭವಕ್ಕೂ ಲಾಗೂ ಮಾಡಿಕೊಳ್ಳುವೆವು. ಆದ್ದರಿಂದ "ನಾನು ದೇಹ ಇರುವೆನು" ಈ ಅಹಂ ತನದಿಂದ ದೃಶ್ಯದ ಅನುಭವ ಪಡೆಯುವದು. "ನಾನು ಬ್ರಹ್ಮ ಇರುವೆನು" ಅನ್ನುವ ಅಹಂದಿಂದ ಸ್ವರೂಪದ ಅನುಭವ ಪಡೆಯುವದು. ಈ ಎರಡೂ ಅನುಭವಗಳು ಅಭೇದದಲ್ಲಿ ಭೇದವನ್ನು ನಿರ್ಮಾಣ ಮಾಡುವವು. ಆದ್ದರಿಂದ ಎರಡೂ ನಿಜವಲ್ಲ.(೧೫)ಅಹಂ ಇದರ ಸ್ವರೂಪ ಲಕ್ಷ್ಯದಲ್ಲಿ ಬರಬೇಕೆಂದು ಕೆಲವೊಂದುಸಂಕೇತ[ಗುರುತು]ಹೇಳುವೆನು. ಆಹಂದ ಈ ವಿವೇಚನೆಯನ್ನು ಲಕ್ಷ್ಯಗೊಟ್ಟು ಕೇಳಿರಿ. (೧೬) ಅಹಂತಾ ಇದು ಸೂಕ್ಷ್ಮವಾಗುತ್ತ ಹೋಗಿ ಸ್ವಸ್ವರೂ ಪದವರೆಗೂ ಮುಟ್ಟುತ್ತದೆ. ಅದು ಸ್ವರೂಪದ ಅನುಭವದ ಹಿಂದೆ ಹಿಂದೆ ಇರುತ್ತದೆ. ಅನುಭವ ಎಲ್ಲಿಗೆ ಹೋಗು ವದೋ ಅಲ್ಲಿಯವರೆಗೆ ಹೋಗುವದು. ಮತ್ತು ಆಮೇಲೆ ಅದು ಅನುಭವವನ್ನು ಸಂಪೂರ್ಣವಾಗಿ ಶಬ್ದಗಳಿಂದ ವರ್ಣನೆ ಮಾಡುವದು. (೧೭) "ನಾನೇ ಸ್ವಸ್ವರೂಪ ಇರುವೆನು" ಎಂದು ಅನ್ನುವದೇ ಅಹಂತನದ ರೂಪವೆಂದು ತಿಳಿಯಬೇಕು. ನಿರಾಕಾರ ಮತ್ತು ಭೇದರಹಿತ ಸ್ವಸ್ವರೂಪದಲ್ಲಿ ಇದು (ಅಹಂ) ತನ್ನಷ್ಟಕ್ಕೆ ತಾನೇ ಬೇರೆತನದಿಂದ (ಪ್ರತ್ಯೇಕವಾಗಿ) ದೃಷ್ಟಿಗೆ ಬೀಳುವದು (೧೮) "ಸ್ವತಃ ನಾನೇ ಬ್ರಹ್ಮ ಇರುವೆನು" ಹೀಗೆ ಭಾವನೆ ಆಗುವದೇ ಅಹಂತನದ ಭ್ರಮವಿರುವದು. ವಿವೇಕದಿಂದ ಅತ್ಯಂತ ಸೂಕ್ಷ್ಮದಲ್ಲಿ ಹೋಗಿ ಸೂಕ್ಷ್ಮತನದಿಂದ ನೋಡಿದೆವೆಂದರೆ ನನ್ನ ಈ ಮಾತಿನ ಸತ್ಯತೆಯು ಬರೋಬರಿ ತಿಳಿದು ಬರುವದು. (೧೯) "ನಾನು ದೇಹವಿರುವೆನು" ಇದು ಹೇಗೆ ಕಲ್ಪನೆಯೋ ಹಾಗೆ "ನಾನು ಬ್ರಹ್ಮ ಇರುವೆನು" ಇದೂ ಸಹ ಕಲ್ಪನೆಯೇ ಇರುವದು. ಕಲ್ಪನೆಯಿಂದ ಭಾವನಾ ನಿರ್ಮಾಣವಾಗುವದು. ಮತ್ತು ಸದ್ವಸ್ತುವು ಅಥವಾ ಸ್ವಸ್ವರೂಪವು ಕಲ್ಪನೆಯ ಆಚೆಗೆ ಇರುವವು. ಕಲ್ಪನಾ ಇದು ಸ್ವರೂಪಕ್ಕೆ ಮರ್ಯಾದಾ ಹಾಕಲು ಹವಣಿಸುವದು. ಆದರೆ ಸ್ವಸ್ವರೂಪವು ಅನಂತ ಇರುವದರಿಂದ ಕಲ್ಪನೆಯಿಂದ ಅದಕ್ಕೆ ಮರ್ಯಾದಾ ಹಾಕಲಿಕ್ಕೆ ಆಗುವದಿಲ್ಲ. ಸ್ವರೂಪದ ಅಂತ ಹತ್ತುವದಿಲ್ಲ. (೨೦) ಅನ್ವಯ ಮತ್ತು ವ್ಯತಿರೇಕ ಇವು ಒಂದು ಶಬ್ದ ಭೇದವಿರುವದು. (ಅನ್ವಯ ಅಂದರೆ ಉಭಾರಣೆ=ಉತ್ಪತ್ತಿ, ಹುಟ್ಟು, ಉಂಟಾಗುವಿಕೆ ಅಂದರೆ ಪಿಂಡ ಬ್ರಹ್ಮಾಂಡದ ಹುಟ್ಟು, ರಚನೆಯ ವಿಚಾರವು. ವ್ಯತಿರೇಕ ಅಂದರೆ ಎಲ್ಲದರಕ್ಕಿಂತ ಬೇರೆಯಾದ ಅನುಭವ ಅಂದರೆ ಪಿಂಡ ಬ್ರಹ್ಮಾಂಡದ ಸಂಹಾರದ ವಿಚಾರ,ಇದು ವ್ಯತಿರೇಕವು).ಸದ್ವಸ್ತುವು ನಿಜವಾಗಿಯೂ ನಿಃಶಬ್ದವಿರುವದು. ಇಲ್ಲಿಯವರೆಗೆ ಅಂದರೆ ಸದ್ವಸ್ತುವಿನವರೆಗೆ ಶಬ್ದಗಳಿಗೆ ಬರುವಷ್ಟು ಶಕ್ತಿಯೇ ಇಲ್ಲ. ಆದ್ದರಿಂದ ನಮ್ಮ ಅಂತರ್ಯಾ ಮದಲ್ಲಿ ಆಳವಾಗಿ ಹೊಕ್ಕು ನಿಃಶಬ್ದ ಸ್ವರೂಪದ ಶೋಧವನ್ನು ನಾವು ಮಾಡಬೇಕು. ಒಂದೇ ಒಂದು ಪರಮಾತ್ಮ ಸ್ವರೂಪವು ಎಲ್ಲ ಕಡೆಗೆ ವ್ಯಾಪಿಸಿ ಇರುವದು. ಈ ರೀತಿಯ ದೃಷ್ಟಿಕೋನದಿಂದ ವಿಚಾರ ಮಾಡುವದಕ್ಕೆ ಅನ್ವಯ ವೆನ್ನುವರು. ಅದೇ ಸರ್ವ ದೃಶ್ಯವು ನಾಶವಂತವೆಂದು ತಿಳಿದು ಬಾಜೂಕ್ಕೆ ಸರಿಸಿದ ಮೇಲೆ ಯಾವುದು ಕೇವಲ ಸ್ವರೂಪ ಉಳಿಯುವದೋ ಆದರ ಕಡೆಗೆ ದೃಷ್ಟಿ ಇಟ್ಟು ವಿಚಾರ ಮಾಡುವದೇ ವ್ಯತಿರೇಕವಿರುವದು. ಸ್ವರೂಪದ ಅನುಭವ ಪಡೆಯುವದಕ್ಕಾಗಿ ಈ ಎರಡನ್ನೂ ದಾಟಿ ಆಚೆಗೆ ಹೋಗುವದು ಅವಶ್ಯವಿರುವದು. (೨೧)

ಅರ್ಥೀ ಘೇಈಜೇ ವಾಚ್ಯಾಂಶ । ಮಗ ಓಳಖಿಜೇ ಲಕ್ಷ್ಯಾಂಶ ।
ಲಕ್ಷ್ಯಾಂಶೀ ಪಾಹಾತಾ ವಾಚ್ಯಾಂಶ । ಅಸೇಲ ಕೈಚಾ ॥೨೨॥

ಸರ್ವ ಬ್ರಹ್ಮ ಆಣೀ ವಿಮಳಬ್ರಹ್ಮ । ಹಾ ವಾಚ್ಯಾಂಶಾಚಾ ಅನುಕ್ರಮ ।
ಶೋಧಿತಾ ಲಕ್ಷ್ಯಾಂಶಾಚೇ ವರ್ಮ । ವಾಚ್ಯಾಂಶ ನಸೆ ॥೨೩॥

ಸರ್ವ ವಿಮಳ ದೋನೀ ಪಕ್ಷ । ವಾಚ್ಯಾಂಶೀ ಆಟತೀ ಪ್ರತ್ಯಕ್ಷ ।
ಲಕ್ಷ್ಯಾಂಶೀ ಲಾವಿತಾ ಲಕ್ಷ । ಪಕ್ಷಪಾತ ಘಡೇ ॥೨೪॥

ಹೇ ಲಕ್ಷ್ಯಾಂಶೇ ಅನುಭವಣೇ । ಯೇಥೇ ನಾಹೀ ವಾಚ್ಯಾಂಶ ಬೋಲಣೇ ।
ಮುಖ್ಯ ಅನುಭವಾಚೇ ಖುಣೇ । ವಾಚಾರಂಭ ಕೈಚಾ ॥೨೫॥

ಪರಾ ಪಶ್ಯಂತೀ ಮಧೇಮಾ ವೈಖರೀ । ಜೇಥೇ ಓಸರತೀ ಚ್ಯಾರೀ ।
ತೇಥೇ ಶಬ್ದಕಳಾ ಕುಸರೀ । ಕೋಣ ಕಾಜ ॥೨೬॥

ಶಬ್ದ ಬೋಲತಾ ಸವೇ ಚ ನಾಸೆ । ತೇಥೇ ಶಾಶ್ವತತಾ ಕೋಠೇ ಅಸೆ ।
ಪ್ರತ್ಯಕ್ಷಾಸ ಪ್ರಮಾಣ ನಸೆ । ಬರೇ ಪಾಹಾ ॥೨೭॥

ಶಬ್ದ ಪ್ರತ್ಯಕ್ಷ ನಾಶಿವಂತ । ಮ್ಹಣೋನ ಘಡೆ ಪಕ್ಷಪಾತ ।
ಸರ್ವ ವಿಮಳ ಏಸಾ ಹೇತ । ಅನುಭವೀ ನಾಹೀ ॥೨೮॥

ಏಕ ಅನುಭವಾಚೇ ಲಕ್ಷಣ । ಅನುಭವ ಮ್ಹಣಿಜೇ ಅನನ್ಯ ಜಾಣ ।
ಏಕ ಅನನ್ಯಾಚೇ ಲಕ್ಷಣ । ಏಸೇ ಅಸೆ ॥೨೯॥

ಅನನ್ಯ ಮ್ಹಣಿಜೇ ಅನ್ಯ ನಸೆ । ಆತ್ಮನಿವೇದನ ಜೈಸೇ ।
ಸಂಗಭಂಗೇ ಅಸತ ಚಿ ಅಸೆ । ಆತ್ಮಾ ಆತ್ಮಪಣೇ ॥೩೦॥

ಸ್ವರೂಪದ ವರ್ಣನೆಯು ಶಬ್ದಗಳಿಂದ ಮಾಡಿದ್ದಾಗಿದೆ. ಈ ಶಬ್ದದ ಅರ್ಥವನ್ನು ಪ್ರಥಮದಲ್ಲಿ ಚೆನ್ನಾಗಿ ತಿಳಿದುಕೊಳ್ಳಬೇಕು. ಶಬ್ದದ ಅರ್ಥವು ಸರಿಯಾಗಿ ತಿಳಿಯುವದೇ ವಾಚ್ಯಾರ್ಥವಾಗಿದೆ. ಆದರೆ ಶಬ್ದಗಳು ಸಂಕೇತದಿಂದ ಸದ್ವಸ್ತುವಿನ ವರ್ಣನೆ ಮಾಡುವವು. ಆದ್ದರಿಂದ ವಾಚ್ಯಾರ್ಥವು ಲಕ್ಷ್ಯದಲ್ಲಿ ಬಂದ ಮೇಲೆ ಸದ್ವಸ್ತುವಿನ ಕಲ್ಪನಾ ಸರಿಯಾಗಿ ಮಾಡಬೇಕು.ಇದು ಲಕ್ಷ್ಯಾಂಶವಾಗಿದೆ. ಲಕ್ಷ್ಯಾಂಶವು ಧ್ಯಾನದಲ್ಲಿ ಬಂದಿತೆಂದರೆ ಆಗ ವಾಚ್ಯಾರ್ಥಕ್ಕೆ ಮಹತ್ವ ಉಳಿಯುವದಿಲ್ಲ. ಒಂದೇ ಲಕ್ಷ್ಯಾಂಶವನ್ನು ಬೇರೆ ಬೇರೆ ಶಬ್ದಗಳಿಂದ ವರ್ಣಿಸಿ ಹೇಳಲಿಕ್ಕೆ ಬರುವದು ಸಾಧ್ಯವಿದೆ. ಈ ಕಾರಣದಿಂದ ಶಬ್ದಗಳಿಗೆ ಲಕ್ಷ್ಯಾಂಶಕ್ಕಿಂತ ಕಡಿಮೆ ಮಹತ್ವವಿರುವದು. (೨೨) ಸರ್ವಬ್ರಹ್ಮ ವಿಮಲಬ್ರಹ್ಮ ಎಂದು ಎರಡು ಭೇದಗಳಿರುವವು. ಸರ್ವಬ್ರಹ್ಮವಾದಿಯು ಅನ್ನುವದೇನಂದರೆ- ಸರ್ವ ದೃಶ್ಯವನ್ನು ಬಾಜೂಕ್ಕೆ ಸರಿಸಿದ ಮೇಲೆ ಯಾವ ಶುದ್ಧ ವ ನಿರ್ಮಲ ಸ್ವರೂಪವು ಉಳಿಯುವದೋ ಅದು ಬ್ರಹ್ಮವಿರುವದು. ಬ್ರಹ್ಮದ ವರ್ಣನೆಯ ಈ ಎರಡು ಪ್ರಕಾರಗಳು- ಕೇವಲ ಶಬ್ದಗಳ ಮಟ್ಟಿಗೆ (ಶಬ್ದಾಡಂಬರ) ಭಿನ್ನವಿರುವವು. ಎರಡರ ಲಕ್ಷ್ಯಾಂಶವಾಗಿರುವ ಆ ಯಾವ ಪರಬ್ರಹ್ಮವು ಮಾತ್ರ ಅಗದೀ ಒಂದೇ ಒಂದು ಇರುವದು. ಇದರಲ್ಲಿ ಭೇದವೇ ಉಳಿಯುವದಿಲ್ಲ. ಅದೇ ಮಾಯಾವಿರಹಿತವಾದ ಪರಬ್ರಹ್ಮವು. (೨೩) ಸರ್ವಬ್ರಹ್ಮ ಮತ್ತು ವಿಮಲ ಬ್ರಹ್ಮ ಈ ಎರಡೂ ಪಕ್ಷಗಳು ವಾಚ್ಯಾಂಶ (ಶಾಬ್ದಿಕ ಜ್ಞಾನ)ದಲ್ಲಿಯೇ ಕರಗಿ ಹೋಗುವವು. ಶಬ್ದಗಳ ಆಚೆಗೆ ಇವುಗಳಿಗೆ ಸ್ಥಳವಿಲ್ಲ. ಶಬ್ದಗಳ ಅಳವಿನಲ್ಲಿಯೇ ಇವು ಇರುವವು. ಸ್ವಸ್ವರೂಪ ಇದು ಇವೆರಡರ ಲಕ್ಷ್ಯಾಂಶವಿರುವದು. ಇದರ ಕಡೆಗೆ ಲಕ್ಷ್ಯ ಹತ್ತಿತೆಂದರೆ ಇವೆರಡೂ ಪಕ್ಷಗಳು ಕಳಚಿ ಬೀಳುವವು. ಇವುಗಳ ನಾಶವಾಗುವದು. (೨೪) ಲಕ್ಷ್ಯಾಂಶದ ಮೇಲೆ [ರಹಸ್ಯಾರ್ಥದ ಮೇಲೆ]ಲಕ್ಷ್ಯವನ್ನು ಕೇಂದ್ರೀಕರಿಸಿ [ಏಕಾಗ್ರಗೊಳಿಸಿ]ಸ್ವಸ್ವರೂಪದ ಅನುಭವ ಪಡೆಯಬೇಕು.ಸ್ವರೂಪದಅನುಭವದಲ್ಲಿ ಶಬ್ದಗಳ ಕೆಲಸವಿಲ್ಲ. ಮಾತಿಗೆ ಆಸ್ಪದವಿಲ್ಲ. ಯಾಕಂದರೆ ಶಬ್ದದ ಆಚೆಗೆ ಇರುವಂಥ ಅನುಭವವನ್ನು ಶಬ್ದಗಳಿಂದ ವರ್ಣಿಸಲಿಕ್ಕೆ ಬರುವದೇ ಇಲ್ಲ. ನಿಃಶಬ್ದದ ಅವಸ್ಥೆಯಲ್ಲಿ ಹೋಗುವದೇ ಸ್ವರೂಪಾನುಭವದ ಮುಖ್ಯ ಸಂಕೇತವಿರುವದು. ಅಂತೆಯೇ ಈ ಅನುಭವದಲ್ಲಿ ಶಬ್ದಗಳಿಂದ ಹೇಳುವದಕ್ಕೆ [ಅದರಲ್ಲಿ]ಸ್ಫೂರ್ತಿ [ಉರ್ಮಿ] ಉಳಿದಿರುವದಿಲ್ಲ. ಶಬ್ದ ನಿಃಶಬ್ದವಾಗಿ ಹೋಗುವದು. [೨೫] ಪರಾ, ಪಶ್ಯಂತಿ, ಮಾಧ್ಯಮಾ ಮತ್ತು ವೈಖರಿ ಈ ನಾಲ್ಕು ವಾಣಿಗಳು ಸ್ವರೂಪಾನುಭವದ ವಿಷಯದಲ್ಲಿ ಹಾಳು ಬೀಳುವವು,.ಹಿಂದೆ ಸರಿಯುವವು, ಶೂನ್ಯವಾಗುವವು.ಆದ್ದರಿಂದ ಸ್ವರೂಪಾನುಭವದಲ್ಲಿ ಶಬ್ದಗಳ ಚಾತುರ್ಯದ ಕಾರ್ಯ ನಡೆಯುವದಿಲ್ಲ. ಇಲ್ಲಿ ಶಬ್ದದ ಕಲಾ ಸುಳ್ಳಾಗಿ ಬಿಡುವದು. [೨೬]ನಾವು ಶಬ್ದ ಉಚ್ಚರಿಸಿದೆವೆಂದರೆ ಅದು ಕೂಡಲೇ ನಾಶ ಹೊಂದುವದು. ಆದ್ದರಿಂದ ಶಬ್ದವು ಅಶಾಶ್ವತವಿರುವದು. ಶಬ್ದಗಳ ಅಶಾಶ್ವತತನವನ್ನು ನಾವು ಪ್ರತ್ಯಕ್ಷ ನೋಡುವೆವು. ಇದಕ್ಕೆ ಬೇರೆ ಪುರಾವೆಗಳು ಬೇಡ. [೨೭] ಶಬ್ದ ಪ್ರತ್ಯಕ್ಷ ನಾಶವಂತವಿರುವದು. ಆದ್ದರಿಂದಲೇ ತತ್ವಜ್ಞಾನದಲ್ಲಿಯ ವಾದಗಳು ಕೊನೆಗೆ ಕಳಚಿ ಬೀಳುವವು. ಸರ್ವಬ್ರಹ್ಮವಾದ ಮತ್ತು ವಿಮಲ ಬ್ರಹ್ಮವಾದ, ಇಂಥ ಪಕ್ಷಗಳು ಸ್ವರೂಪಾನುಭವದಲ್ಲಿ ಶಿಲ್ಕು ಉಳಿದಿರುವದಿಲ್ಲ. [ಟಿಕಾಯಿಸಿ ನಿಲ್ಲುವದಿಲ್ಲ.] [೨೮] ಅನುಭವದ ಲಕ್ಷಣ ಹೇಳುವೆ ಕೇಳಿರಿ, ಅನುಭವ ಅಂದರೆ ಸ್ವರೂಪದೊಂದಿಗೆ ಅನನ್ಯ [ಏಕರೂಪ] ವಾಗಿರುವದು. ಈಗ ಅನನ್ಯತನದ ಲಕ್ಷಣ ಹೇಳುವೆನು. [೨೯] ಅನ್ಯವಿಲ್ಲದಿರುವದು ಅನನ್ಯವು. ಯಾವಲ್ಲಿ ಎರಡುತನ ಅಥವಾ ಭಿನ್ನತನ ಅಥವಾ ದ್ವೈತತನ [ತ್ರಿಪುಟಿ] ಅಥವಾ ಬೇರೆತನ ಇರುವದಿಲ್ಲವೋ ಅಲ್ಲಿ ಅನನ್ಯತನವಿರುವದು. ಉದಾ:- ಆತ್ಮನಿವೇದನವು. ಅಹಂತನದಿಂದ ಬೇರೆತನ ಅಥವಾ ಅನ್ಯತನ ಬರುವದು. "ಅಹಂ" ಇದು ಹೋಯಿತೆಂದರೆ ಸಂಗ [ಜೋಡು, ಮೈತ್ರಿ,ಸೋಬತಿ] ಹೋಗುವದು, ಯಾಕಂದರೆ ಎರಡನೆಯವರೊಬ್ಬರು ಜೊತೆಗೆ ಇಲ್ಲದಿದ್ದರೆ ಸಂಗವು ಉಳಿಯಲಿಕ್ಕೆ ಸಾಧ್ಯವಿಲ್ಲ. ಆದ್ದರಿಂದ ಅಹಂತಾ ಹೋಯಿತೆಂದರೆ ಆಗ ಆತ್ಮಾ ಒಂದೇ ಒಂದು ಆತ್ಮತನದಿಂದ ಇದ್ದದ್ದು ಇದ್ದಂತೆ ಉಳಿಯುತ್ತದೆ. (೩೦)

ಆತ್ಮ್ಯಾಸ ನಾಹೀ ಆತ್ಮಪಣ । ಹೇ ಚಿ ನಿಃಸಂಗಾಚೇ ಲಕ್ಷಣ ।
ಹೇ ವಾಚ್ಯಾಂಶೇ ಬೋಲಿಲೇ ಜಾಣ । ಕಳಾವಯಾ ಕಾರಣೇ ॥೩೧॥

ಯೆರವೀ ಲಕ್ಷ್ಯಾಂಶ ತೋ ವಾಚ್ಯಾಂಶೇ । ಸಾಂಗಿಜೇಲ ಹೇ ಘಡೆ ಕೈಸೇ ।
ವಾಕ್ಯವಿವರಣೇ ಅಪೈಸೇ । ಕಳೋ ಲಾಗೇ ॥೩೨॥

ಕರಾವೇ ತತ್ವ ವಿವರಣ । ಶೋಧಾವೇ ಬ್ರಹ್ಮ ನಿರ್ಗುಣ ।
ಪಾಹಾವೇ ಆಪಣಾಸ ಆಪಣ । ಮ್ಹಣಿಜೆ ಕಳೆ ॥೩೩॥

ಹೇ ನ ಬೋಲತಾ ಚ ವಿವರಿಜೇ। ವಿವರೋನ ವಿರೋನ ರಾಹಿಜೇ।
ಮಗ ಅಬೋಲಣೇ ಚಿ ಸಾಜೇ । ಮಹಾಪುರುಷೀ ॥೩೪॥

ಶಬ್ದ ಚಿ ನಿಃಶಬ್ದ ಹೋತೀ। ಶ್ರುತಿ ನೇತಿ ನೇತಿ ಮ್ಹಣತೀ ।
ಹೇ ತೋ ಆಲೇ ಆತ್ಮಪ್ರಚಿತೀ । ಪ್ರತ್ಯಕ್ಷ ಆತಾ ॥೩೫॥

ಪ್ರಚಿತ ಆಲಿಯಾ ಅನುಮಾನ । ಹಾ ತೋ ಪ್ರತ್ಯಕ್ಷ ದುರಾಭಿಮಾನ ।
ತರೀ ಆತಾ ಮೀ ಅಜ್ಞಾನ। ಮಜ ಕಾಹೀ ಚ ನ ಕಳೆ ॥೩೬॥

ಮೀ ಲಟಿಕಾ ಮಾಝೇಂ ಬೋಲಣೇ ಲಟಿಕೇ ।
ಮೀ ಲಟಿಕಾ ಮಾಝೇಂ ಚಾಲಣೇ ಲಟಿಕೇ ।
ಮೀ ಮಾಝೇಂ ಅವಘೇ ಚಿ ಲಟಿಕೇ । ಕಲ್ಪನಿಕ ॥೩೭॥

ಮಜ ಮುಳೀ ಚ ನಾಹೀ ಠಾವ । ಮಾಝೇಂ ಬೋಲಣೇ ಅವಘೇ ಚಿ ವಾವ ।
ಹಾ ಪ್ರಕೃತೀಚಾ ಸ್ವಭಾವ । ಪ್ರಕೃತೀ ಲಟಿಕೀ ॥೩೮॥

ಪ್ರಕೃತಿ ಆಣೀ ಪುರುಷ । ಯಾ ದೋಹೀಂಸ ಜೇಥೇ ನಿರಾಸ ।
ತೇಥೇ ಮೀಪಣ ವಿಶೇಷ । ಹೇ ಕೇವಿ ಘಡೆ ॥೩೯॥

ನಾನು ಆತ್ಮಾ ಇರುವೆನು ಅನ್ನುವ ಆತ್ಮತನದ ತಿಳುವಳಿಕೆಯು ಆತ್ಮಸ್ವರೂಪಕ್ಕೆ ಇರುವದಿಲ್ಲ. ಹೀಗೆ ಕೇವಲ ಸ್ವರೂಪದಿಂದ ಇರುವದೇ ಅತ್ಯಂತ ಸಂಗರಹಿತ ಇರುವದರ ಸಂಕೇತ [ಗುರುತು] ಇರುವದು. ವಾಸ್ತವಿಕ ವಾಗಿ ಈ ಅವಸ್ಥೆಯು ಶಬ್ದದಆಚೆಗೆ ಇರುವದಾಗಿದೆ.ಆದರೆ ನಿಮಗೆ ಇದರ ಕಲ್ಪನೆ ಬರುವದಕ್ಕಾಗಿ ಶಬ್ದಗಳಿಂದ ಇದರ ವರ್ಣನೆ ಮಾಡಿರುವೆನು. [೩೧] ಅನನ್ಯರಾಗದ ಹೊರತು ಸ್ವರೂಪಾನುಭವ ಇರದು.ನಾವು ಅನನ್ಯ ಹೇಗಾಗಬೇಕು. ಇದರ ಪದ್ಧತಿ [ರೀತಿ]ಯನ್ನು ಈಗ ಹೇಳುವೆನು:- ನಿಜ ಹೇಳುವದಾದರೆ ಸದ್ವಸ್ತುವಿನ ಸ್ವರೂಪವನ್ನು ಶಬ್ದಗಳಿಂದ ಹೇಳಲಿಕ್ಕೆ ಬರುವದಿಲ್ಲ. ಆದರೆ ವಿಶ್ವಾಸದಿಂದ ಸಂತವಚನದ ಮೇಲೆ ಮನನ ಮತ್ತು ಚಿಂತನ ಮಾಡಿದ್ದಾದರೆ ಸ್ವರೂಪದ ಬಗ್ಗೆ ತಿಳಿಯು ಹತ್ತುವದು.[೩೨] ಈ ದೃಶ್ಯ ವಿಶ್ವದಲ್ಲಿಯ ತತ್ವದ ಬಗ್ಗೆ ಸವಿಸ್ತರ ವಿವರಣ[ನಿರೂಪಣ]ಮಾಡಬೇಕು.ನಿರ್ಗುಣ ಬ್ರಹ್ಮದ ಶೋಧ ತಿಳಿಯಬೇಕು.ನಾವು ಯಾರು? ಇದನ್ನು ಚನ್ನಾಗಿ ತಿಳಿದು ನೋಡಬೇಕು.ಅಂದರೆ ಸ್ವರೂಪ ಹೇಗೆ ಇರುವದು ಇದು ತಿಳಿಯಹತ್ತುವದು. [೩೩]ಮುಖ್ಯವಾಗಿ ಮಾತನಾಡುವದನ್ನು ನಿಲ್ಲಿಸಿ ಸ್ವರೂಪದ ಬಗ್ಗೆ ಇದರ ಅಖಂಡ ಮನನ ಮಾಡಬೇಕು. ಸ್ವರೂಪದ ಮನನ ಮಾಡುತ್ತಮಾಡುತ್ತ ಅದರಲ್ಲಿಯೇ ಮನವು ಕರಗಿ ಪೂರ್ಣ ಲೀನವಾಗಿ ಹೋಗಬೇಕು. ಈ ಪ್ರಕಾರದಿಂದ ಸ್ವರೂಪದೊಂದಿಗೆ ಅನನ್ಯರಾದ ಮೇಲೆ ಮನುಷ್ಯನು ಮನುಷ್ಯನಾಗಿ ಉಳಿಯುವದಿಲ್ಲ. ಅವನು ಮಹಾಪುರುಷನಾಗುವನು. ಇಂಥ ಮಹಾಪುರುಷನಿಗೆ ಮೌನವು ಬಹಳ ಶೋಭಿಸುವದು. ["ಗುರೋಸ್ತು ಮೌನಂ ವ್ಯಾಖ್ಯಾನಂ"]. [೩೪] ಸ್ವರೂಪಾನುಭವದಲ್ಲಿ ಶಬ್ದಗಳ ಶಬ್ದತನವು ಇಲ್ಲದಾಗಿ ಹೋಗುವದು. ಶಬ್ದವು ಶಬ್ದತನದಲ್ಲಿ ಕರಗಿ ಹೋಗುವದು. ಈ ಅವಸ್ಥೆಯ ಬಗ್ಗೆ ಹೇಳುವಾಗ ಶ್ರುತಿ "ನೇತಿ ನೇತಿ" "ಹೀಗೆ ಅಲ್ಲ, ಹೀಗೆ ಅಲ್ಲ" ಅನ್ನುವ ಉದ್ಗಾರ ತೆಗೆಯುವದು. ಇದು ಹೀಗೇಕೆ ಅನ್ನುವದೇಬುದು ಸ್ವತಃಕ್ಕೆ ಪ್ರತ್ಯಕ್ಷ ಅನುಭವದಿಂದ ಗೊತ್ತಾಗುವದು. [೩೫] ಈ ರೀತಿಯಿಂದ ಸ್ವರೂಪಾನುಭವ ಬಂದ ಮೇಲೆ ತರ್ಕದ ಮತ್ತು ಅನುಮಾನದ ಬೆನ್ನು ಹತ್ತುವದು-ಕೇವಲ ದುರಭಿಮಾನವೆಂದು ತಿಳಿಯಬೇಕು. ತರ್ಕದ ಬೆನ್ನು ಹತ್ತುವ ಹಟ ಹಿಡಿಯುವದು ನಾನು ಅನ್ನುವ ಅಹಂತನದ ಲಕ್ಷಣವಿರುವದು. ಆದರೆ ಈ "ನಾನು" ಹೇಗೆ ಇರುವದು?ಇದನ್ನು ನೋಡಿದರೆ ಅನುಮಾನದ ಹಟ ಹಿಡಿಯುವಂಥ ನಾನು ಅಜ್ಞಾನಿ ಇರುವೆ ಇವನಿಗೆ ಏನೂ ತಿಳಿಯುವದಿಲ್ಲ [೩೬] ಈ "ನಾನು" ಮೂಲದಲ್ಲಿಯೇ ಖೊಟ್ಟಿ ಇದ್ದದ್ದರಿಂದ ಇದರ ಮಾತುಕತೆ, ಹೋಗುವದು, ಬರುವದು ಖೊಟ್ಟಿ ಇರುವದು.ಇದರ ನನ್ನದೆನ್ನುವದೆಲ್ಲವೂ ಖೊಟ್ಟಿ ಇರುವದು ಕಾಲ್ಪನಿಕವಿರುವದು. [೩೭] ಇದಕ್ಕೆ ಎಷ್ಟೂ ಎಲ್ಲಿಯೂ ಸ್ಥಾನವೇ ಇಲ್ಲ. ಇದರ ಎಲ್ಲ ಮಾತುಗಳು ಅರ್ಥಹೀನವಿರುವವು. ಈ ನಾನು ಮತ್ತು ಇದರ ಎಲ್ಲ ವ್ಯವಹಾರವು ಪ್ರಕೃತಿಯ ಧರ್ಮವಿರುವದು. [ಪ್ರಕೃತಿ ಜನ್ಯವಿರುವದು]. ಮತ್ತು ಪ್ರಕೃತಿಯಾದರೋ ಖೊಟ್ಟಿ ಇರುವದು. ಆದ್ದರಿಂದ ಖೊಟ್ಟಿ ಪ್ರಕೃತಿಯ [ಮಾಯೆಯ] ಸ್ವಭಾವದಿಂದ ನಿರ್ಮಾಣವಾಗುವಂಥ ನಾನು ಮತ್ತು ಇದರ ಮಾತುಗಳು ನಡೆಯುವದು. ಇದೆಲ್ಲವೂ ಸಹ ಅಷ್ಟೇ ಖೊಟ್ಟಿ ಇರುವವು. [೩೮] ಸ್ವರೂಪಾನುಭವದಲ್ಲಿ ಪ್ರಕೃತಿ ಮತ್ತು ಪುರುಷ ಈ ಇಬ್ಬರದೂ ನಿರಾಸ [ಪರಿಹಾರ] ಆಗುವದು. ಇಬ್ಬರದೂ ಸ್ವರೂಪದಲ್ಲಿ ಲಯಗೊಳ್ಳುವದು. ಆಗ ಆ ಸ್ಥಳದಲ್ಲಿ ಪ್ರಕೃತಿಯಿಂದ ಪ್ರಕಟವಾಗುವ ನಾನು ಇದಕ್ಕೆ ವಿಶೇಷವಾಗಿ ಬೇರೆತನದಿಂದ ಅಸ್ತಿತ್ವ ಉಳಿಯುವದು ಆಗದೀ ಅಶಕ್ಯವಿರುವದು. [೩೯]

ಜೇಥೇ ಸರ್ವ ಹಿ ಅಶೇಷ ಜಾಲೇ । ತೇಥೇ ವಿಶೇಷ ಕೈಚೇ ಆಲೇ ।
ಮೀ ಮೌನೀ ಮ್ಹಣತಾ ಭಂಗಲೇ । ಮೌನ್ಯ ಜೈಸೇ ॥೪೦॥

ಆತಾ ಮೌನ್ಯ ನ ಭಂಗಾವೇ । ಕರೂನ ಕಾಹೀ ಚ ನ ಕರಾವೇ ।
ಅಸೋನ ನಿಶೇಷ ನಸಾವೇ । ವಿವೇಕಬಳೇ ॥೪೧॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
"ಬ್ರಹ್ಮ ನಿರೂಪಣ" ನಾಮ ಸಮಾಸ ದ್ವಿತೀಯ ॥

• •

ಯಾವ ಸ್ಥಳದಲ್ಲಿ ಸರ್ವದೃಶ್ಯವೂ ನಿಃಶೇಷ ಇಲ್ಲದಂತಾಗಿ ಹೋಗುವದೋ ಆ ಸ್ಥಳದಲ್ಲಿ ವಿಶೇಷತನದಿಂದ "ನಾನು" ಇದು ಹೇಗೆ ಉಳಿದೀತು? ಮೌನವನ್ನು ಪಾಲಿಸುವ ಒಬ್ಬ ಮನುಷ್ಯನು ಅನ್ನುವನು: "ನಾನು ಮೌನವೃತ ಹಿಡಿದಿರುವೆನು" ಎಂದು. ಇವನ ಈ ಮಾತಿನಿಂದಲೇ ಇವನ ಮೌನಭಂಗ ವಾಗುವದು. ಇದರಂತೆ ಯಾವುದು ಅಗದೀ ನಿಃಶೇಷ ಇರುವದೋ ಅಲ್ಲಿ ವಿಶೇಷ ಇರುವದೆಂದು ಅನ್ನುವದೆಂದರೆ ನಿಃಶೇಷತನವನ್ನೇ ಇಲ್ಲದಂತೆ ಮಾಡಿದ ಹಾಗೆ ಇರುವದು. [೪೦] ಆದ್ದರಿಂದ ಸ್ವರೂಪಾನುಭವ ಪಡೆಯಿರಿ. ಸ್ವರೂಪಾನುಭವದಲ್ಲಿದ್ದು ಮೌನಭಂಗವಾಗದಂತೆ ನಡೆಯಿರಿ. ಏನೆಲ್ಲವನ್ನೂ ಮಾಡಿ [ಪ್ರಸಂಗಕ್ಕೆ ತಕ್ಕ ವಿಹಿತಕರ್ಮ ಮಾಡಿ] ನಾನು ಏನೂ ಮಾಡಿಲ್ಲವೆಂಬಂತೆ ನಿಃಸಂಗರಾಗಿ ಇರಬೇಕು. ಮತ್ತು ನೋಡಲಿಕ್ಕೆ ಬೇರೆಕಾಣಿಸಿಕೊಂಡರೂ ಅನುಭವದಿಂದ ಅಗದೀ ಎಷ್ಟೂ ಬೇರೆ ಇರಬಾರದು. [೪೧]

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದ ಒಂಭತ್ತನೆಯ ದಶಕದೊಳಗಿನ
"ಬ್ರಹ್ಮನಿರೂಪಣ"ವೆಂಬ ಎರಡನೆಯ ಸಮಾಸವು ಮುಗಿದುದು.

● ●

## ದಶಕ ೯. ಸಮಾಸ ೩. ನಿಃಸಂದೇಹ ನಿರೂಪಣ (ನುಡಿ ೪೫)

ಜಗತ್ತಿನಲ್ಲಿ ಅಗಣಿತ ಜನ ಆಗಿ ಹೋದರು. ಸದ್ಯದಲ್ಲಿ ಜೀವಂತವಿರುವರು. ಮತ್ತು ಮುಂದೆಯೂ ಸಹ ಆಗುವವರಿರುವರು. ಆದರೆ ಇವರಲ್ಲಿ ಕೇವಲ ಎರಡು ವರ್ಗಗಳಿರುವವು. ಒಂದು ವರ್ಗ ಸ್ವಸ್ವರೂಪದ [ತನ್ನ ನಿಜವಾದ ಸ್ವರೂಪದ] ಅನುಭವ ಇರುವಂಥ ಜನರದು. ಮತ್ತು ಎರಡನೆಯ ವರ್ಗ ಸ್ವಸ್ವರೂಪದ ಅನುಭವ ಇಲ್ಲದಂಥ ಜನರದು. ಒಂದನೆಯ ವರ್ಗದ ಜನರ ಅನುಭವ ಅತೀಂದ್ರಿಯ [ಇಂದ್ರಿಯಗಳಿಗೆ ಅಗೋಚರ, ಸೂಕ್ಷ್ಮವಾದ] ಅದೃಶ್ಯ [ಕಾಣಿಸದ] ಪರಮಾತ್ಮ ವಸ್ತುವಿನ ಬಗೆಗೆ ಇರುವದು. ಎರಡನೆಯ ವರ್ಗದ ಜನರ ಅನುಭವ ಇಂದ್ರಿಯಗಳಿಗೆ ಗೋಚರವಾಗುವಂಥ ದೃಶ್ಯ ನಾಶವಂತ ವಸ್ತುವಿನ ಬಗ್ಗೆ ಇರುವದು. ಮೊದಲಿನ ವರ್ಗದಲ್ಲಿಯ ಜನರಿಗೆ ಜ್ಞಾನಿಗಳೆಂದು ಅನ್ನುವರು. ಅದೇ ಎರಡನೆಯ ವರ್ಗದ ಜನರಿಗೆ ಅಜ್ಞಾನಿಗಳೆಂದು ಅನ್ನುವರು. ಎರಡೂ ವರ್ಗದವರ ಅನುಭವದ ಪ್ರಕಾರಗಳು [ರುಚಿ] ಬೇರೆ ಬೇರೆ. ಅವುಗಳ ಮಟ್ಟ ಬೇರೆ ಬೇರೆ. ಯುಕ್ತಿವಾದ ಬೇರೆ ಬೇರೆ, ರಚನೆ ಬೇರೆ ಬೇರೆ, ಮತ್ತು ಸಾಧನ ಬೇರೆಬೇರೆ ಇರುವವು. ಜ್ಞಾನಿಮನುಷ್ಯನಿಗೆ ಪೂರ್ವಕಾಲದ ಅಜ್ಞಾನದ

ನದ ಅನುಭವ ಇರುವದರಿಂದ ಇವನಿಗೆ ಜ್ಞಾನ ಹೊಂದಿದ ಮೇಲೆ ಸಹ ಅಜ್ಞಾನಿ ಜನರ ದೃಷ್ಟಿಕೋನದ ಕಲ್ಪನೆ ಇರುವದು. ಆದರೆ ಅಜ್ಞಾನಿ ಮನುಷ್ಯರಿಗೆ ಮಾತ್ರ ಜ್ಞಾನಿ ಮನುಷ್ಯರ ಅವಸ್ಥೆಯ ಕಲ್ಪನೆ ಇರುವದಿಲ್ಲ. ಜ್ಞಾನಿ ಪುರುಷ ಆತ್ಮದೊಂದಿಗೆ ಏಕರೂಪ [ತದಾಕಾರ] ಇರುವನು. ಇದರಂತೆ ಅಜ್ಞಾನಿ ಮನುಷ್ಯ ದೇಹದೊಂದಿಗೆ ಏಕ ರೂಪ ಇರುವನು. ಅಜ್ಞಾನಿ ಮನುಷ್ಯನಿಗೆ ಜ್ಞಾನಿಪುರುಷ ತನ್ನ ಅನುಭವ ತಿಳಿಸಿ ಹೇಳಿಕೊಡಬೇಕಾದರೆ ಅಜ್ಞಾನಿ ಮನುಷ್ಯರ ಭಾಷೆಯನ್ನೇ ಉಪಯೋಗಿಸಿ ತಿಳಿಸಿಕೊಡುವರು. ಜ್ಞಾನಿ ಪುರುಷನು ಅಜ್ಞಾನಿಗಳ ಭಾಷೆ ತಿಳಿಯಬಲ್ಲವ ನಿರುವನು. ಆದರೆ ಅಜ್ಞಾನಿ ಮನುಷ್ಯರು ಜ್ಞಾನದ ಭಾಷೆ ತಿಳಿಯಲು ಶಕ್ತರಿರುವದಿಲ್ಲ. ಉದಾ:– ಕೇನೋಪನಿಷತ್ತದಲ್ಲಿ ಒಬ್ಬ ಬ್ರಹ್ಮಜ್ಞಾನಿಯು ಸ್ವತಃದ ಅನುಭವ ಹೇಳುವಾಗ ಅನ್ನುವದೇನಂದರೆ "ಯಸ್ಯ ಅಮತಂ ತಸ್ಯಮತಂ ಮತಂ ಯಸ್ಯ ನವೇದಸಃ। ಅವಿಜ್ಞಾತಂ ವಿಜಾನತಾಂ ವಿಜ್ಞಾತಮ್ ಅವಿಜಾನತಾಮ್ ॥ ಅರ್ಥ:– ಯಾವ ಆತ್ಮ ಜ್ಞಾನಿ ಪುರುಷನಿಗೆ ಆತ್ಮ ತತ್ವ ತಿಳಿಯುವದಿಲ್ಲವೆಂದು ಅನಿಸುವದೋ ಅವನಿಗೆ ಅದು ತಿಳಿದಿರುತ್ತದೆ. ಯಾವನು ನನಗೆ ಆತ್ಮ ತತ್ವ ತಿಳಿಯಿತು ಎಂದು ಅನ್ನುವನೋ ಅವನಿಗೆ ಅದು ತಿಳಿದಿರುವದಿಲ್ಲ. ಯಾರಿಗೆ ತಿಳಿಯುವದೋ ಅವರಿಗೆ ತಿಳಿದಿರುವದಿಲ್ಲ.ಮತ್ತು ಯಾರಿಗೆ ತಿಳಿಯುವದಿಲ್ಲವೋ ಅವರಿಗೆ ನಿಜವಾಗಿ ತಿಳಿದಿರುವದು.ಈ ವಾಕ್ಯದ ಅರ್ಥ ವನ್ನು ಸರಳ ರೀತಿಯಿಂದ ನೋಡಿದ್ದಾದರೆ ಅದರಲ್ಲಿ ಸ್ಪಷ್ಟವಾಗಿ ಪರಸ್ಪರ ವಿರೋಧ ಕಂಡು ಬರುವದು.ಜ್ಞಾನಿಪುರುಷ ಸ್ವಾನುಭವ ಹೇಳುವಲ್ಲಿ ಅಜ್ಞಾನದ ಭಾಷೆಯನ್ನು ಉಪಯೋಗಿಸುವದು.ನಿಜವಿರುವದು.ಆದರೆಅವನು ಹೇಳುವಮಾತಿನ ಅರ್ಥ ಮಾತ್ರ ಗೂಢವಿರುವದು. ಈ ಪ್ರಶ್ನೆ ನಿರ್ಮಾಣವಾಗಲು ಕಾರಣವೇನಂದರೆ ಹಿಂದಿನ ಸಮಾಸದ ಕೊನೆಯಲ್ಲಿ ಶ್ರೀಸಮರ್ಥರು ಸಹಜವಾಗಿ ಅಂದರು "ಎಲ್ಲವನ್ನೂ ಮಾಡಿ ಏನೂ ಮಾಡದವರಂತೆ ಇರಬೇಕು" ಇದನ್ನು ಕೇಳಿ ಶ್ರೋತಾ ಅನ್ನುತ್ತಾನೆ "ಏನರಿ ಇದು ಯಾವ ತರಹದ ನಿಮ್ಮ ಬ್ರಹ್ಮಜ್ಞಾನ? ಏನೆಲ್ಲವನ್ನೂ ಮಾಡಿ ಅಕರ್ತಾ ಮತ್ತು ಎಲ್ಲವನ್ನೂ ಭೋಗಿಸಿ ಅಭೋಕ್ತಾ ಆಗಿ ಇರುವದು ಹೇಗೆ ಶಕ್ಯವಿರುವದು? ಮನುಷ್ಯನು ಕರ್ತಾ ಮತ್ತು ಭೋಕ್ತಾ ಆಗಿ ಇರಬಹುದು ಅಥವಾ ಅಭೋಕ್ತಾ ಮತ್ತು ಅಕರ್ತಾ ಆಗಿ ಇರಬಹುದು. ಎರಡೂ ಒಂದೇ ವೇಳೆ ಯಲ್ಲಿ ಇರಲಿಕ್ಕೆ ಶಕ್ಯವಿಲ್ಲ"?ಇದಕ್ಕೆ ಉತ್ತರ ಒಂದೇ ಇರುತ್ತದೆ. ಅದು ಯಾವುದೆಂಬುವದನ್ನು ಹೇಳುವೆ ಕೇಳಿರಿ. ಜ್ಞಾನಿ ಪುರುಷ ಹೊರಗಿನಿಂದ ಸಾಮಾನ್ಯ ಮನುಷ್ಯರಂತೆ ಕಾಣುವನು. ಆದರೆ ಅವನ ಒಳಗಿನ ಅಂತರಂಗದ ಅವ ಸ್ಥೆಯು ಸಂಪೂರ್ಣವಾಗಿ ಬೇರೆಯೇ ಇರುವದು. ಅವನ ಅಂತರ್ಯಾಮವು ಪರಮಾತ್ಮ ಸ್ವರೂಪ ಇರುವದು. ಭಗವಂತನ ಅಂತರಸ್ಥಿತಿ ಯಾವದಿರುವದೋ ಅದೇ ಜ್ಞಾನಿ ಪುರುಷನದಾಗಿರುವದರಿಂದ ಇವನು ಮನುಷ್ಯ ವೇಷ ಧಾರಣ ಮಾಡಿದ ಪರಮಾತ್ಮನೇ ಆಗಿರುವನು. ಇವನು ಮಾಡಿಯೂ ಅಕರ್ತಾ ಮತ್ತು ಭೋಗಿಸಿಯೂ ಅಭೋಕ್ತಾ ಆಗಿರುವನು. ಇದು ಹೇಗೆ ಶಕ್ಯವಿದೆ ಅನ್ನುವದು ನಿಮಗೆ ತಿಳಿಯಬೇಕಾದರೆ ನಾವು ನೀವು ಸ್ವತಃ ಆ ಅವಸ್ಥೆಯ ತೀರ (ಅಗದೀ) ಹತ್ತಿರ ಹೋಗಲಿಕ್ಕೇ ಬೇಕು. ಆದ್ದರಿಂದ ಜ್ಞಾನಿಯನ್ನು ಗುರುತಿಸಲಿಕ್ಕೆ ನಾವು ಜ್ಞಾನಿ ಆಗಲಿಕ್ಕೇ ಬೇಕು ಇದೇ ನಿಮ್ಮ ಪ್ರಶ್ನೆಗೆ ಉತ್ತರವಾಗಿದೆ.

## ಸಮಾಸ ತೃತೀಯ : ನಿಃಸಂದೇಹ ನಿರೂಪಣ

॥ಶ್ರೀರಾಮ॥ ಶ್ರೋತೀ ಕೇಲಾ ಅನುಮಾನ । ಐಸೇ ಕೈಸೇ ಬ್ರಹ್ಮಜ್ಞಾನ ।
ಕಾಹೀ ಚ ನಾಹೀ ಅಸೋನ । ಹೇ ಕೇವಿ ಘಡೆ ॥೧॥

ಸಕಳ ಕರೂನ ಅಕರ್ತಾ । ಸಕಳ ಭೋಗೂನ ಅಭೋಕ್ತಾ ।
ಸಕಳಾಮಧೇ ಅಲಿಪ್ತತಾ । ಯೋಈಲ ಕೈಸೀ ॥೨॥

ತಥಾಪಿ ತುಮ್ಹೀ ಮ್ಹಣತಾ । ಯೋಗೀ ಭೋಗೂನ ಅಭೋಕ್ತಾ ।
ಸ್ವರ್ಗ ನರ್ಕ ಹೀ ಆತಾ । ಯೇಣೇ ಚಿ ನ್ಯಾಯೆ ॥೩॥

ಜನ್ಮ ಮೃತ್ಯ ಭೋಗಿಲೇ ಚ ಭೋಗೀ ।
ಪರೀ ತೋ ಭೋಗೂನ ಅಭೋಕ್ತಾ ಯೋಗೀ ।
ಯಾತನಾ ಹೀ ತಯಾಲಾಗೀ । ಯೇಣೇ ಚಿ ಪಾಡೇ ॥೪॥

ಕುಟೋನ ನಾಹೀ ಕುಟಿಲಾ । ರಡೋನಿ ನಾಹೀ ರಡಲಾ ।
ಕುಂಥೋನ ನಾಹೀ ಕುಂಥಿಲಾ । ಯೋಗೇಶ್ವರ ॥೫॥

ಜನ್ಮ ನಸೋನ ಘಾತಲಾ । ಪತಿತ ನಸೋನ ಜಾಲಾ ।
ಯಾತನಾ ನಸೋನ ಪಾವಲಾ । ನಾನಾಪರೀ ॥೬॥

ಐಸಾ ಶ್ರೋತಯಾಚಾ ಅನುಮಾನ । ಶ್ರೋತೀ ಘೇತಲೇ ಆಡರಾನ ।
ಆತಾ ಯಾಚೆ ಸಮಾಧಾನ । ಕೇಲೇ ಪಾಹಿಜೆ ॥೭॥

ವಕ್ತಾ ಮ್ಹಣೇ ಸಾವಧ ವ್ಹಾವೇ । ತುಮ್ಹೀ ಬೋಲತಾ ಬರವೇ ।
ಪರೀ ಹೇ ತುಮಚ್ಯಾಚ ಅನುಭವೇ । ತುಮ್ಹಾಸ ಘಡೆ ॥೮॥

ಜ್ಯಾಚಾ ಅನುಭವ ಜೈಸಾ । ತೋ ತೋ ಬೋಲತೋ ತೈಸಾ ।
ಸಂಪದೇವಿಣ ಜೋ ದಿವಸಾ। ತೋ ನಿರಾರ್ಥಕ ॥೯॥

## ದಶಕ ೯ : ಸಮಾಸ ೩ : ನಿಃಸಂದೇಹ ನಿರೂಪಣ [ನುಡಿ ೪೫]

ಶ್ರೋತಾ ಜನಕ್ಕೆ ಆತ್ಮಜ್ಞಾನವಿಲ್ಲ ಇದು ತಿಳಿದ ವಿಷಯವಾಗಿದೆ. ಈ ಅಜ್ಞಾನಿ ಜನರಿಗೆ ಜ್ಞಾನಿ ಪುರುಷರ ಅವಸ್ಥೆಯು ಒಮ್ಮೆಲೇ ಲಕ್ಷ್ಯಕ್ಕೆ ಬರುವದು ದುಸ್ತರವಾಗುವದು. ಆದ್ದರಿಂದ ಅಜ್ಞಾನಿಯು ಹೊಸ ಆಕ್ಷೇಪವನ್ನು ಎತ್ತುವನು. ಅದು ಯಾವುದೆಂದರೆ:– ಹಿಂದಿನ ಸಮಾಸದ ಕೊನೆಯಲ್ಲಿ ಮಾಡಿಯೂ ಮಾಡದವನಂತೆ ಮತ್ತು ಇದ್ದೂ ಇಲ್ಲದವನಂತೆ ಇರಬೇಕು. ಹೀಗೆ ವಕ್ತಾನು ಹೇಳಿದನು.ಇದರ ಬಗ್ಗೆ ವಿಚಾರ ಮಾಡಿ ಶ್ರೋತಾ ಶಂಕಾ ತೆಗೆದನು. ಏನೆಂದರೆ "ಬ್ರಹ್ಮಜ್ಞಾನ ಹೀಗೆ ಹೇಗೆ ಇರಲಿಕ್ಕೆ ಶಕ್ಯವಿರುವದು.?ನಾವು ಇದ್ದೂ ಇಲ್ಲದಂತೆ ಇರಲಿಕ್ಕೆ ಹೇಗೆ ಶಕ್ಯವಿರುವದು? [೧] ಎಲ್ಲ ಕರ್ಮ [ಕೆಲಸ] ಮಾಡಿ ಅಕರ್ತಾತನ, ಎಲ್ಲ ಭೋಗಗಳನ್ನು ಭೋಗಿಸಿ [ಮನಬಂದಂತೆ ಆಚರಣೆ ಮಾಡಿದರೂ ಸಹ] ಅಭೋಕ್ತತನ ಎಲ್ಲದರಲ್ಲಿಯೂ ಇದ್ದು ಇಲ್ಲದಿರುವ ಅಲಿಪ್ತತನ ಹೇಗೆ ಬಂದೀತು? [೨] ಆದರೂ ಸಹ ತಾವು ಅನ್ನುವದೇನಂದರೆ ಯೋಗಿಯು ಭೋಗ ಭೋಗಿಸಿ ಅಭೋಕ್ತಾ ಇರುವನು ಅನಿಸುವನು. ಅಂದಮೇಲೆ ಸ್ವರ್ಗ ಮತ್ತು ನರಕ ಇವುಗಳ ಭೋಗಗಳಿಗೂ ಈ ಅಭೋಕ್ತಾತನದ ನಿಯಮವನ್ನು ಅನ್ವಯಿಸಬೇಕಾಗುವದು. [೩] ಜನ್ಮ ಮತ್ತು ಮೃತ್ಯು ಇವುಗಳ ಭೋಗ ಭೋಗಿಸಲಿಕ್ಕೇ ಬೇಕಾಗುವದು. ಆದರೆ ಆ ಭೋಗ ಭೋಗಿಸಿ ಪುನಃ ಯೋಗಿಯು ಅಭೋಕ್ತನಾಗಿಯೇ ಉಳಿಯುವನೆಂದಾಯಿತು. ಹೀಗೆ.ಆದದ್ದಾದರೆ ಭೋಗದ ಯಾತನೆ ಭೋಗಿಸಿಯೂ ಸಹ ಯೋಗಿ ಅದನ್ನು ಭೋಗಿಸುವದಿಲ್ಲವೆಂದು ಅನ್ನಬೇಕಾಗುವದು. [೪] ಇದರ ಅರ್ಥವು ಹೀಗಾಗುವದು. ಯೋಗಿಪುರುಷನು ಹೊಡಿಸಿ(ಬಡಿಸಿ) ಕೊಂಡರೂ ಬಡಿಸಿಕೊಳ್ಳದವನಂತೆ [ಬಡತ ತಿನ್ನದವನಂತೆ] ಇರುವನು. ಶೋಕದಿಂದ ವ್ಯಾಕುಲನಾಗಿ ಇವನು ಅಳುವನು. ಆದರೆ ಇವನು ಅಳುವದಿಲ್ಲ. ಮತ್ತು ಶರೀರ ದುಃಖ ಸಹನವಾಗದೆ ಇವನು ನರಳುವನು. ಆದರೆ ಇವನು ನರಳುವದಿಲ್ಲ [೫] ಇವನಿಗೆ ಜನ್ಮವಿಲ್ಲದೆ ಇವನು ಜನ್ಮ ಪಡೆಯುವನು. ಪತಿತ ಇಲ್ಲದೆ ಇವನು ಪತಿತನಾಗುವನು ಮತ್ತು ಯಾತನಾ ಇಲ್ಲದೆ ನಾನಾ ಪ್ರಕಾರದ ಯಾತನಾ ಇವನಿಗೆ ಭೋಗಿಸಬೇಕಾಗುವದು. [೬] ಆಕ್ಷೇಪದ ಮುಖ್ಯ ಮುದ್ದೆ ಏನಂದರೆ:– ಮನುಷ್ಯನು ಬ್ರಹ್ಮಜ್ಞಾನಿ ಇದ್ದರೂ ಸಹ ಅವನಿಗೆ ನಾನಾ ಪ್ರಕಾರದ ಯಾತನಾ ದುಃಖ ಸಂಕಟಗಳನ್ನು ಭೋಗಿಸಬೇಕಾಗುವದು. ಇದು ಪ್ರತ್ಯಕ್ಷ ಕಾಣುವದು.ಈ ಎಲ್ಲವುಗಳೂ ಅವನ ಮನದ ಮೇಲೆ ಎಳ್ಳಷ್ಟು ಪರಿಣಾಮ ಮಾಡದೇ ಇರುವವೇನು? ಸಾಮಾನ್ಯ ಮನುಷ್ಯರ ಭೂಮಿಕೆಯು ಮೇಲಿಂದ ಅನುಮಾನ ಮಾಡಿದರೆ ಪರಿಣಾಮ ಆಗದೇ ಇರಲಿಕ್ಕೆ ಶಕ್ಯವಿಲ್ಲವೆಂದು ಅನಿಸುವದು. ಆದ್ದರಿಂದ ಈ ಆಕ್ಷೇಪಗಳಿಗೆ ಶ್ರೀಸಮರ್ಥರು ಹೀಗೆ ಉತ್ತರ ಕೊಡುವರು:– ಅಜ್ಞಾನದ ದೃಷ್ಟಿಕೋನದಿಂದ ಜ್ಞಾನಿ ಮನುಷ್ಯರ ಜೀವನದ ಕಡೆಗೆ ನೋಡಿದ್ದಾದರೆ ವಿಕೃತ[ವಿಲಕ್ಷಣವಾದ, ಅಸ್ವಾಭಾವಿಕವಾದ] ಅನುಮಾನ ಹೊರಡುವದು. ಜ್ಞಾನಿ ಮನುಷ್ಯರ ಅವಸ್ಥಾ ತಿಳಿಯಬೇಕಾದರೆ ನಾವು ಅಜ್ಞಾನದ ಭೂಮಿಕೆಯಿಂದ ಹೊರಬರುವದು ಅತಿ ಅವಶ್ಯವಿರುವದು. ವಕ್ತಾನ ಹೇಳಿಕೆಯು ಮೇಲೆ ತರ್ಕ ನಡಿಸಿ ಶ್ರೋತಾ ಜನ ಎತ್ತಿದ ಈ ಅನುಮಾನಗಳು ಎಷ್ಟು ಬರೋಬರಿ ಇಲ್ಲದವು. ಶ್ರೋತಾರು ವಿಚಾರದ ದಟ್ಟಡವಿಯಲ್ಲಿ ಅಡ್ಡರಸ್ತೆ ಹಿಡಿದು ಹೊರಟಿರುವರು. ಆದರೂ ಸಹ ಶ್ರೋತಾ ಜನದ ಸಮಾಧಾನ ಮಾಡುವದು ಈಗ ಅಗದೀ ಅವಶ್ಯವಿರುವದು. [೭] ವಕ್ತಾ ಅನ್ನುತ್ತಾನೆ, ಶ್ರೋತಾ ಜನ ಏಕಮನಸ್ಸಿನಿಂದ ಶ್ರವಣ ಮಾಡಬೇಕು. ನಿಮ್ಮ ಅನ್ನುವಿಕೆ ಯೋಗ್ಯವಿರುವದು. ನಿಮಗೆ ಯಾವ ಅನುಭವ ಬರುವದೋ ಅದನ್ನೇ ಪ್ರಮಾಣವೆಂದು ತಿಳಿದು ಮೇಲಿನ ಅನುಮಾನ ಎತ್ತಿ ಹೇಳಿದಿರಿ ಇದು ಆ ನಿಮ್ಮ ಅನುಭವದ ದೃಷ್ಟಿಯಿಂದ ಸರಿ ಇರುವದು. [೮] ಯಾರಿಗೆ ಯಾವ ಬಗೆಯ ಅನುಭವ ಬರುವದೋ ಆ ಬಗೆಯಿಂದ ಜೀವನದ ಅರ್ಥ ತಿಳಿಯುವರು. ಮತ್ತು ಅದನ್ನೇ ಹೇಳುವರು. ಉದಾ:- ಯಾರ ಹತ್ತಿರ ಸಂಪತ್ತು ಇರುವದಿಲ್ಲವೋ ಅವರು ದೊಡ್ಡ ಸಾಹಸ ಮಾಡಲು ಶಕ್ತರಾಗುವದಿಲ್ಲ. ಅವರಿಗೆ ಸಾಹಸದ ದೊಡ್ಡ ಕಲ್ಪನೆಯನ್ನು ಮಾಡಲಿಕ್ಕೆ ಸಹ ಬರುವದಿಲ್ಲ. ಇದರಂತೆ ಯಾರ ಅನುಭವ ಕ್ಷುದ್ರ ಇರುವದೋ ಅವರಿಗೆ ಜ್ಞಾನಿ ಪುರುಷರ ವಿಶಾಲ ಅನುಭವದ ಕಲ್ಪನೆಯನ್ನು ಮಾಡಲಿಕ್ಕೆ ಬರುವದೇ ಇಲ್ಲ. [೯]

ನಾಹೀ ಜ್ಞಾನಾಚೀ ಸಂಪದಾ । ಅಜ್ಞಾನದಾರಿದ್ರೇ ಆಪದಾ ।
ಭೋಗಿಲ್ಯಾ ಚ ಭೋಗೀ ಸದಾ । ಶಬ್ದಜ್ಞಾನೇ ॥೧೦॥

ಯೋಗೀ ವೋಳಖಾವಾ ಯೋಗೇಶ್ವರೇ । ಜ್ಞಾನೀ ವೋಳಖಾವಾ ಜ್ಞಾನೇಶ್ವರೇ ।
ಮಹಾಚತುರ ತೋ ಚತುರೇ । ವೋಳಖಾವಾ ॥೧೧॥

ಅನುಭವೀ ಅನುಭವಿಯಾಸ ಕಳೆ । ಅಲಿಪ್ತ ಅಲಿಪ್ತಪಣೇ ನಿವಳೇ ।
ವಿದೇಹಾಚಾ ದೇಹಭಾವ ಗಳೆ । ವಿದೇಹೀ ದೇಖತಾ ॥೧೨॥

ಬದ್ಧಾಸಾರಿಖಾ ಸಿದ್ಧ । ಆಣೀ ಸಿದ್ಧಾಸಾರಿಖಾ ಬದ್ಧ ।
ಯೇಕ ಭಾವೀಲ ತೋ ಅಬದ್ಧ । ವ್ಹಣಾವಾ ಚ ನಲಗೆ ॥೧३॥

ಝಡಪಲಾ ತೋ ದೇಹಧಾರೀ । ಆಣೀ ದೇಹಧಾರಕ ಪಂಚಾಕ್ಷರೀ ।
ಪರಂತು ದೋಘಾ ಯೇಕಸರೀ । ಕೈಸೀ ದ್ಯಾವೀ ॥೧೪॥

ತೈಸಾ ಅಜ್ಞಾನ ಪತಿತ । ಆಣೀ ಜ್ಞಾನೀ ಜೀವನ್ಮುಕ್ತ ।
ದೋಘೇ ಸಮಾನ ಮಾನೀಲ ತೋ ಯುಕ್ತ । ಕೈಸಾ ವ್ಹಣಾವಾ ॥೧೫॥

ಆತಾ ಅಸೋ ಹೇ ದೃಷ್ಟಾಂತ । ಪ್ರಚಿತ ಬೋಲೋ ಕಾಹೀ ಹೇತ ।
ಯೇಥೇ ಶ್ರೋತೀ ಸಾವಚಿತ್ತ । ಕ್ಷಣಯೇಕ ವ್ಹಾವೇ ॥೧೬॥

ಜೋ ಜೋ ಜ್ಞಾನೇ ಗುಪ್ತ ಜಾಲಾ । ಜೋ ವಿವೇಕೇ ವಿರಾಲಾ ।
ಜೋ ಅನನ್ಯಪಣೇ ಉರಲಾ । ನಾಹೀ ಚ ಕಾಹೀ ॥೧೭॥

ತಯಾಸ ಕೈಸೇ ಗವಸಾವೇ । ಶೋಧೂ ಜಾತಾ ತೋಚಿ ವ್ಹಾವೇ ।
ತೋ ಚಿ ಹೋತಾ ವ್ಹಣಾವೇ । ನಲಗೇ ಕಾಹೀ ॥೧೮॥

ದೇಹೀ ಪಾಹಾತಾ ದಿಸೇನಾ । ತತ್ವೇ ಶೋಧಿತಾ ಭಾಸೇನಾ ।
ಬ್ರಹ್ಮ ಆಹೆ ನಿವಡೇನಾ । ಕಾಹೀ ಕೇಲ್ಯಾ ॥೧೯॥

ಯಾವ ಮನುಷ್ಯನ ಹತ್ತಿರ ಆತ್ಮಜ್ಞಾನ ರೂಪದ ಸಂಪತ್ತು ಇರುವದಿಲ್ಲವೋ ಅವನ ಹತ್ತಿರ ಅಜ್ಞಾನ ರೂಪದ ದರಿದ್ರತನವಿರುವದು. ಇದರಿಂದಾಗಿ ಅವನು ಅನೇಕ ಆಪತ್ತುಗಳನ್ನು ಅನುಭವಿಸುವನು. ಅವನ ಗತಿಮಟ್ಟ ಕೇವಲ ಶಬ್ದಜ್ಞಾನದವರೆಗೆಮಾತ್ರ ಇರುವದು. ಆದರೆ ಇದರಿಂದ ಅವನು ಒಮ್ಮೆ ಅನುಭೋಗಿಸಿದ ಯಾತನೆಯನ್ನೇ ಅನೇಕ ಸಲ ಅನುಭವಿಸುವನು. ದೇಹಬುದ್ಧಿಯಿಂದ ಬಿಗಿಯಲ್ಪಟ್ಟ ಮನುಷ್ಯನು ಅಜ್ಞಾನ ದಿಂದಾಗಿ ಜನ್ಮ ಮರಣದ ಚಕ್ರದಲ್ಲಿ ತಿರುಗುವನು. ಪ್ರತಿಯೊಂದು ಜನ್ಮದಲ್ಲಿ ಅವನಿಗೆ ಅವೇ ಯಾತನೆಗಳನ್ನು ಪುನಃ ಪುನಃ ಭೋಗಿಸಬೇಕಾಗುವದು. [೧೦]ಯೋಗಿಯ ಅವಸ್ಥೆಯು ಯೋಗಿಗೇ ತಿಳಿಯುವದು. ಜ್ಞಾನಿಯ ಅವಸ್ಥೆಯು ಜ್ಞಾನಿಗೇ ತಿಳಿಯುವದು. ಚತುರಪುರುಷನು ಮಾತ್ರ ಚತುರ ಪುರುಷನನ್ನು ಗುರುತಿಸಬಲ್ಲನು. [೧೧] ಸ್ವಾನುಭವಿ ಪುರುಷನೇ ಆತ್ಮಜ್ಞಾನಿ ಪುರುಷನನ್ನು ಗುರುತಿಸಬಲ್ಲನು. ಯಾವನು ಸ್ವತಃ ಅಲಿಪ್ತ ಇರುವನೋ ಅವನೇ ಅಲಿಪ್ತತನದಿಂದ ಸಂಪನ್ನನಾದ ಪುರುಷನನ್ನು ಗುರುತಿಸುವನು ಮತ್ತು ಸಂತೋಷಪಡುವನು. ಸ್ವತಃ ವಿದೇಹಿ ಇರುವಂಥ ಮನುಷ್ಯನು ಇನ್ನೊಬ್ಬ ವಿದೇಹಿಪುರುಷನನ್ನು ನೋಡಿ ದೇಹದ ಪರಿವೆ ಇಲ್ಲದೆ ಎಚ್ಚರ ಕಳೆದುಕೊಳ್ಳು ವನು. [೧೨]ಕೇವಲ ದೇಹದ ಮೇಲಿಂದ ನೋಡಿದ್ದಾದರೆ ಒಬ್ಬ ಸಿದ್ಧಪುರುಷನು ಬದ್ಧನ ಹಾಗೆ ಕಾಣುವನು. ಇದ ರಂತೆ ಒಬ್ಬ ಬದ್ಧ ಮನುಷ್ಯನು ಸಿದ್ಧನಂತೆ ಕಾಣುವನು. ಆದರೆ ಇವರಿಬ್ಬರ ಯೋಗ್ಯತೆಯು ಒಂದೇ ಇರುವದೆಂದು ಯಾರು ತಿಳಿಯುವರೋ ಅವರು ಮೂರ್ಖರೇ ಇರುವರು. ಇದನ್ನು ಸ್ಪಷ್ಟೀಕರಿಸಿ ಹೇಳುವ ಆವಶ್ಯವಿಲ್ಲ. (೧೩) ಭೂತಬಾಧೆ ಆದಂಥ ಮನುಷ್ಯ ಮತ್ತು ಭೂತಬಾಧೆ ಬಿಡಿಸಲಿಕ್ಕೆ ಬಂದ ಮಾಂತ್ರಿಕ (ಪಂಚಾಕ್ಷರಿ) ಇಬ್ಬರೂ ದೇಹದಿಂದ ಒಂದೇ ತರಹ ಕಾಣುವರು. ಆದರೆ ಆ ಇಬ್ಬರ ಯೋಗ್ಯತೆಯು ಒಂದೇ ತರಗತಿಯದಲ್ಲ(೧೪)ಇದರಂತೆ ಒಬ್ಬ ಭ್ರಷ್ಟ ಅಜ್ಞಾನಿ ಮನುಷ್ಯ ಮತ್ತು ಒಬ್ಬ ಜೀವನ್ಮುಕ್ತ ಜ್ಞಾನಿ ಮಹಾಪುರುಷ ಇಬ್ಬರೂ ದೇಹದಿಂದ ಒಂದೇ ತರಹ ಕಾಣುವರು. ಆದರೆ ಆ ಇಬ್ಬರ ಯೋಗ್ಯತೆಯು ಒಂದೇ ಎಂದು ತಿಳಿಯುವ ಮನುಷ್ಯನು ವಿಚಾರಿಯಾಗಿ ರುವದಿಲ್ಲವೆಂದು ಅನ್ನಲು ಅಡ್ಡಿ ಇಲ್ಲ. (೧೫) ಆತ್ಮಜ್ಞಾನಿ ಪುರುಷನ ದೊಡ್ಡಸ್ತನವು (ಶ್ರೇಷ್ಠತ್ವ) ಅವನ ಸ್ವಸ್ವರೂಪಾನುಭವದಲ್ಲಿ ಇರುವದು. ಸ್ವರೂಪಾನುಭವ ಇದು ಒಳಗಿನ ಸ್ಥಿತಿ ಇರುವದು. ಆದ್ದರಿಂದ ಜ್ಞಾನಿ ಪುರು ಷನ ಯೋಗ್ಯತೆಯನ್ನು ತಿಳಿಯಬೇಕಾದರೆ ನಾವೂ ಸಹ ಜ್ಞಾನಿಯ ಅನುಭವದ ಮಟ್ಟಕ್ಕೆ ಬರಬೇಕಾಗುವದು:– ಈ ವಿಷಯವನ್ನು ದೃಷ್ಟಾಂತಗಳಿಂದ ಹೇಳಿದ್ದು ಇಲ್ಲಿಗೆ ಸಾಕು ಮಾಡೋಣ. ಸ್ವರೂಪಾನುಭವದ ಬಗ್ಗೆ ಕೆಲವೊಂದು ಅನುಭವದ ಕೆಲವೊಂದು ಸಂಕೇತ (ಗುರುತು) ಹೇಳುವೆನು. ಶ್ರೋತಾ ಜನ ಕೆಲಹೊತ್ತು ಸ್ಥಿರರಾಗಿ ಲಕ್ಷ್ಯಗೊಟ್ಟು ಕೇಳಿರಿ. (೧೬) ಆತ್ಮಜ್ಞಾನದ ಯೋಗದಿಂದ ಯಾವನು ಗುಪ್ತವಾಗುವನೋ ಅಂದರೆ ಯಾರ "ನಾನು" ಅನ್ನು ವದು (ಅಹಂ) ಅಂತರ್ಧಾನ ಹೊಂದುವದೋ, ನಿದಿಧ್ಯಾಸದಿಂದ ಯಾರು ಸ್ವಸ್ವರೂಪದಲ್ಲಿ ವಿಲೀನರಾಗಿ (ಕರಗಿ) ರುವರೋ ಮತ್ತು ಸ್ವರೂಪದಲ್ಲಿ ಅಂಥವರು ಸಮರಸ ಅಥವಾ ಏಕರೂಪರಾದ್ದರಿಂದ ಅವರು ಎಳ್ಳಷ್ಟೂ ಬೇರೆ ತನದಿಂದ ಉಳಿದಿರುವದಿಲ್ಲ. (೧೭) ಅವರನ್ನು ಹೇಗೆ ಹುಡುಕಬೇಕು? ಮತ್ತು ಹೇಗೆ ಹಸ್ತಗತ ಮಾಡಿಕೊಳ್ಳಬೇಕು? ಇದು ಅವರ ವಿಷಯದಲ್ಲಿ ಸುಲಭವಲ್ಲ. ಅಂಥವನನ್ನು ಯಾರು ಹುಡುಕಲಿಕ್ಕೆ ಹೋಗುವರೋ ಅವರೂ ಸ್ವತಃ ಆತ್ಮರೂಪರಾಗುವರು. ಅವರೇ ತದಾಕಾರವಾದಮೇಲೆ ಮಾತನಾಡುವದು, ನಡೆಯುವದು, ಶೋಧ ಮಾಡು ವದು ವಗೈರೆ ಎಲ್ಲವೂ ನಿಂತು ಬಿಡುವವು. ಬಾಕಿ ಯಾವುದೂ ಉಳಿದಿರುವದೇ ಇಲ್ಲ. [೧೮] ದೇಹರೂಪದಲ್ಲಿ ಅವನನ್ನು ನೋಡ ಹೋದರೆ ಅವನು ಅಲ್ಲಿ ಇರುವದಿಲ್ಲವಾದ್ದರಿಂದ ದೇಹರೂಪದಲ್ಲಿ ಅವನು ಕಾಣಿಸುವದಿಲ್ಲ. ಪಂಚಭೂತಗಳಲ್ಲಿ ಸಹ ಅವನ ಶೋಧ ತೆಗೆದುಕೊಂಡರೂ ಅಲ್ಲಿಯೂ ಅವನು ಅನುಭವಕ್ಕೆ ಬರುವದಿಲ್ಲ. ಬ್ರಹ್ಮ ರೂಪವಾಗಿ ಬ್ರಹ್ಮದಲ್ಲಿ ಇವನು ಇರುವದು ನಿಜವೇ ಆದರೆ ಏನೇನೋ ನಾನಾ ಪ್ರಯತ್ನ ಮಾಡಿ ಬಹುಪ್ರಯಾಸ ಪಟ್ಟು ಸ್ವರೂಪದಿಂದ ಬೇರೆ ತೆಗೆದು ನೋಡಬೇಕೆಂದು ಅಂದರೆ ಅದು ಎಂದೂ ಸಾಧ್ಯವಿಲ್ಲದ ಮಾತಾಗಿದೆ.[೧೯]

ದಿಸತೋ ತರೀ ದೇಹಧಾರೀ । ಪರೀ ಕಾಹೀ ಚ ನಾಹೀ ಅಂತರೀ ।
ತಯಾಸ ಪಾಹಾತಾ ವರಿವರೀ । ಕಳೇಲ ಕೈಸಾ ॥೨೦॥

ಕಳಾಯಾ ಶೋಧಾವೇ ಅಂತರ । ತವ ತೋ ನಿತ್ಯ ನಿರಂತರ ।
ಜಯಾಸ ಧುಂಡಿತಾ ವಿಕಾರ । ನಿರ್ವಿಕಾರ ಹೋತೀ ॥೨೧॥

ತೋ ಪರಮಾತ್ಮಾ ಕೇವಳ । ತಯಾಸ ನಾಹೀ ಮಾಯಾಮಳ ।
ಅಖಂಡ ಹೇತೂಚಾ ವಿಟಾಳ । ಜಾಲಾ ಚ ನಾಹೀ ॥೨೨॥

ಐಸಾ ಜೋ ಕಾ ಯೋಗೀರಾಜ । ತೋ ಆತ್ಮಾ ಸಹಜೀ ಸಹಜ ।
ಪೂರ್ಣಬ್ರಹ್ಮ ವೇದಬೀಜ । ದೇಹಾಕಾರೇ ಕಳೇನಾ ॥೨೩॥

ದೇಹ ಭಾವಿತಾ ದೇಹ ಚಿ ದಿಸೆ । ಪರೀ ಅಂತರ ಅನಾರಿಸೇ ಅಸೆ ।
ತಯಾಸ ಶೋಧಿತಾ ನಸೆ । ಜನ್ಮಮರಣ ॥೨೪॥

ಜಯಾಸ ಜನ್ಮಮರಣ ವ್ಹಾವೇ । ತೇ ತೋ ನವ್ಹೇ ಚಿ ಸ್ವಭಾವೇ ।
ನಾಹೀ ಚ ತೇ ಆಣಾವೇ । ಕೋಠೂನ ಕೈಚೇ ॥೨೫॥

ನಿರ್ಗುಣಾಸ ಜನ್ಮ ಕಲ್ಪಿಲಾ । ಅಥವಾ ನಿರ್ಗುಣ ಉಡವಿಲಾ ।
ತರೀ ಉಡಾಲಾ ಆಣೀ ಜನ್ಮಲಾ । ಆಪಲಾ ಆಪಣ ॥೨೬॥

ಮಾಧ್ಯಾನೀ ಥುಂಕಿತಾ ಸೂರ್ಯಾವರೀ।ತೋ ಥುಂಕಾ ಪಡೆಲ ಆಪಣಾಚ ವರೀ।
ದುಸರ್ಯಾಸ ಚಿಂತಿತಾ ಅಂತರೀ। ಆಪಣಾಸ ಘಡೆ ॥೨೭॥

ಹೊರಗಿನಿಂದ ನೋಡುವವರಿಗೆ ಸಾಮಾನ್ಯ ಮನುಷ್ಯರಂತೆ ಇವನು ದೇಹಧಾರಿಯಾಗಿ ಕಾಣುವನು. ಆದರೆ ಅವನ ಅಂತರ್ಯಾಮದಲ್ಲಿ "ನಾನು ದೇಹ ಇರುವೆನು" ಈ ತಿಳುವಳಿಕೆ (ಅನಿಸಿಕೆ) ಎಳ್ಳಷ್ಟೂ ಇರುವದಿಲ್ಲ. ಅಂತೆಯೇ ಅವನ ದೇಹವಲ್ಲಿ ಜೀವದ ವಸತಿ [ಇರುವಿಕೆ] ಇಲ್ಲ. ಒಂದು ಅರ್ಥದಿಂದ ಅವನ ದೇಹಖಾಲಿ (ರಿಕಾಮಿ) ಇರುವದು. ಇಂಥ ಜ್ಞಾನಿ ಪುರುಷನನ್ನು ಮೇಲ್ನೋಟದಿಂದ ನೋಡಿದ್ದಾದರೆ ಅವನ ಒಳಗಿನ ಅಂತರಂಗದ ಅವಸ್ಥೆಯ ಕಲ್ಪನೆಯೂ ಬರುವದಿಲ್ಲ. (೨೦) ಇವನು ನಿಜವಾಗಿ ಹೇಗಿರುವನೆಂಬುದನ್ನು ತಿಳಿಯುವದಕ್ಕಾಗಿ ಇವನ ಅಂತರ ಸ್ಥಿತಿಯನ್ನು ಶೋಧಿಸಿ ನೋಡಬೇಕು. ಹೀಗೆ ಶೋಧ ಮಾಡಿದರೆ ಆಗ ತಿಳಿಯುವದೇನಂದರೆ ಇವನು ಸದಾ ಸರ್ವಕಾಲವೂ ಶಾಶ್ವತ ವಸ್ತುವೇ ಇರುವನು· ಸ್ವಸ್ವರೂಪದೊಂದಿಗೆ ತದಾಕಾರವಾಗಿರುವನು, ಇವನ ಶೋಧ ಮಾಡಲಿಕ್ಕೆ ಹತ್ತಿದರೆ ಶೋಧ ಮಾಡಿ ಮಾಡಿ ನಿಮ್ಮ ದೇಹ ಬುದ್ಧಿಯೇ ಇಲ್ಲದಾಗಿ ಬಿಡುತ್ತದೆ. ಮತ್ತು ನೀವೂ ಸಹ ಸ್ವತಃ ನಿರ್ವಿಕಾರ ಸದ್ವಸ್ತುವಾಗಿ ಹೋಗುವಿರಿ, (೨೧) ಇವನು ಶುದ್ಧ ವ ಕೇವಲ ಪರಮಾತ್ಮ ಸ್ವರೂಪವೇ ಇರುವನು. ಇವನಲ್ಲಿ ಮಾಯೆಯ ಮಲ ಇರುವದೇ ಇಲ್ಲ. ಯಾವುದೇ ವಾಸನಾ ಸಂಕಲ್ಪ (ಉದ್ದೇಶ, ಇಚ್ಛೆ) ಇವು ಇವನಿಗೆ ಎಂದೂ ಸ್ಪರ್ಶಿಸಲಾರವು. (೨೨) ಅನುಭವದ ಇಂಥ ಉಚ್ಚ ಮಟ್ಟದಲ್ಲಿ ಸ್ಥಿರವಾಗಿ ಇರುವ ಯೋಗಿ. ರಾಜನು ಅತ್ಯಂತ ಸಹಜ ರೀತಿಯಲ್ಲಿ ಆತ್ಮಸ್ವರೂಪ ಆತ್ಮಾರಾಮ ಇರುವನು. ವೇದದ ಮೂಲನಾಗಿ ಇರುವ ಮತ್ತು ಪೂರ್ಣ ಬ್ರಹ್ಮ ಸ್ವರೂಪನಾದ ಈ ಜ್ಞಾನಿಯನ್ನು ಅವನ ದೇಹದ ಮೇಲಿಂದ ಅವನ ಅಂತರಂಗದ ಸ್ಥಿತಿಯನ್ನು ಗುರುತಿಸಲು ಸಾಧ್ಯವಿಲ್ಲ. (೨೩) ದೇಹದ ದೃಷ್ಟಿಯಿಂದ ನೋಡಿದರೆ ಇವನು ಸಾಮಾನ್ಯ ದೇಹಧಾರಿ ಮನುಷ್ಯನೆಂದು ಅನಿಸುವದು. ಆದರೆ ಅವನ ಒಳಗಿನ (ಅಂತರಂಗದ) ಸ್ಥಿತಿಯು ಅಗದೀ ಬೇರೆ ಇರುವದು. ಇದರ ಶೋಧ ಮಾಡಿದ್ದಾದರೆ ಇವನಿಗೆ ಜನ್ಮಮರಣ ಇಲ್ಲವೆಂಬುದು ಅನುಭವದಿಂದ ತಿಳಿದು ಬರುವದು. (೨೪) ಅವಿದ್ಯೆಯಿಂದಾಗಿ ಜೀವತನ (ಜೀವತ್ವ) ಬರುವದು. ಹಾಗೂ ಜೀವತನದಿಂದಾಗಿ ಜನ್ಮಮರಣಗಳನ್ನು ಭೋಗಿಸಬೇಕಾಗುವದು. ಜ್ಞಾನಿಪುರುಷನ ಅವಿದ್ಯಾ ಮತ್ತು ಜೀವತನಗಳು ಸ್ವರೂಪ ಸಾಕ್ಷಾತ್ಕಾರದಿಂದ ತಮ್ಮಷ್ಟಕ್ಕೆ ತಾವೇ ಇಲ್ಲದಾಗಿ ಹೋಗುವವು. ಜೀವದ ಹಿಂದೆ ಜನ್ಮ ಮರಣ ಗಂಟು ಬಿದ್ದಿರುವದು. ಜ್ಞಾನಿ ಪುರುಷ ಜೀವರೂಪನಿರದೇ ಪರಮಾತ್ಮ ಸ್ವರೂಪವಿರುವನು. ಆದ್ದರಿಂದ ಅವನಿಗೆ ಜನ್ಮ ಮರಣ ಇರುವದಿಲ್ಲ. ಇವನಲ್ಲಿ ಯಾವುದೂ ಇಲ್ಲವೇಇಲ್ಲವೋ ಅದು ಅವನಿಗೆ ಬರಲಾರದು. (ಆಗಲಾರದು) ಅರ್ಥಾತ್ ಜನ್ಮ ಮರಣ ಇಲ್ಲದವನಲ್ಲಿ ಜನ್ಮ ಮರಣವನ್ನು ಎಲ್ಲಿಂದ ತರುವದು? ಹೇಗೆ ತರುವದು? ಒಟ್ಟಿನಲ್ಲಿ ಜನ್ಮ ಮರಣವಿರುವ ಈ ದೇಹವು ಅಂತರಾತ್ಮವಲ್ಲ (೨೫) ಜ್ಞಾನಿ ಪುರುಷ ನಿರ್ಗುಣನಿರುವನು. ಇವನಿಗೆ ಜನ್ಮ ಮರಣ ಇರುವದಿಲ್ಲ ಉದಾ:– ತಿಳಿಯಿರಿ. ಒಬ್ಬ ಅಜ್ಞಾನಿ ಮನುಷ್ಯನು ನಿರ್ಗುಣನಿಗೆ ಜನ್ಮವಿದೆ ಎಂದು ಕಲ್ಪನೆಯನ್ನು ಮಾಡಿಕೊಂಡನು· ಅಥವಾ ನಿರ್ಗುಣನಿಗೆ ಮರಣ ಇದೆ ಎಂದು ಅಂದರೆ ಅಷ್ಟರಿಂದ(ಅಂದ ಮಾತ್ರಕ್ಕೆ) ಏನೂ ಫರಕ ಆಗುವದಿಲ್ಲ. ನಿರ್ಗುಣ ಹೇಗಿರುವನೋ ಹಾಗೆಯೇ ಇರುವನು. ಜ್ಞಾನಿಪುರುಷನಿಗೆ ಯಾರ ಅನ್ನುವಿಕೆಯಿಂದಲೂ ಜನ್ಮ ಮರಣ ಪ್ರಾಪ್ತವಾಗುವದಿಲ್ಲ· ಆದರೆ ಹುಟ್ಟಿದನು ಮತ್ತು ಸತ್ತನು ಈಅವಸ್ಥೆ ಕಲ್ಪನೆ ಮಾಡುವ ಅಜ್ಞಾನಿ ಮನುಷ್ಯನದೇ ಇರುವದು. (೨೬) ಉದಾ:- ತಿಳಿಯಿರಿ:- ಭರ್ತಿ ಮಧ್ಯಾಹ್ನ ಹನ್ನೆರಡು ಘಂಟೆಗೆ ಒಬ್ಬ ಮನುಷ್ಯನು ಸೂರ್ಯನ ಮೇಲೆ ಉಗುಳುವ ಪ್ರಯತ್ನ ಮಾಡಿದನು. ಆದರೆ ಅವನು ಉಗುಳಿದ ಉಗುಳು ಅವನ ಮೈಮೇಲೆಯೇ ಬೀಳುವದು. ಅಥವಾ ಇನ್ನೊಬ್ಬರಿಗೆ ಕೇಡಾಗಲೆಂದು ನಾವು ಮನದಲ್ಲಿ ಅಂದುಕೊಂಡರೆ ನಮಗೇ ಕೇಡು ಒದಗುವದು, ಇದರಂತೆ ಜ್ಞಾನಿ ಪುರುಷನಿಗೆ ಜನ್ಮ ಮರಣ ಇರುವದಿಲ್ಲ, ಅವನ ನಿರ್ಗುಣ ಸ್ಥಿತಿಯ ಅರಿವು ಇಲ್ಲದೇಅವನಿಗೆ ಜನ್ಮ ಮರಣ ಅದೆ ಎಂದು ಅಜ್ಞಾನದಿಂದ ನಾವು ಕಲ್ಪನಾ ಮಾಡಿದರೆ ನಮ್ಮ ಜನ್ಮ ಮರಣವನ್ನು ಜ್ಞಾನಿಯ ಮೇಲೆ ಹೇರಿದ ಹಾಗಾಗುವದು. ಯಾಕೆಂದರೆ ನಮ್ಮ ಹಿಂದೆ ಜನ್ಮ ಮರಣ ಹತ್ತಿದೆ ಎಂದು ಜ್ಞಾನಿ ಪುರುಷನಿಗೂ ಸಹ ಇದು ಇರಲಿಕ್ಕೇಬೇಕು ಎಂದು ಅನ್ನುವದು ಯೋಗ್ಯವಾಗಲಾರದು. (೨೭)

ಸಮರ್ಥ ರಾಯಾಚೇ ಮಹಿಮಾನ । ಜಾಣತಾ ಹೋತೇ ಸಮಾಧಾನ ।
ಪರಂತು ಭುಂಕೋ ಲಾಗಲೇ ಸ್ವಾನ। ತರೀ ತೇ ಸ್ವಾನ ಚಿ ಆಹೆ ॥೨೮॥

ಜ್ಞಾನೀ ತೋ ಸತ್ಯಸ್ವರೂಪ । ಅಜ್ಞಾನ ದೇಖೆ ಮನುಷ್ಯರೂಪ ।
ಭಾವಾಸಾರಿಖಾ ಫಳದ್ರೂಪ । ದೇವ ತೈಸಾ ॥೨೯॥

ದೇವ ನಿರಾಕಾರ ನಿರ್ಗುಣ । ಲೋಕ ಭಾವಿತೀ ಪಾಷಾಣ ।
ಪಾಷಾಣ ಫುಟತೋ ನಿರ್ಗುಣ । ಫುಟೇಲ ಕೈಸಾ ॥३೦॥

ದೇವ ಸದೋದಿತ ಸಂಚಲಾ । ಲೋಕೀ ಬಹುವಿಧ ಕೇಲಾ ।
ಪರಂತು ಬಹುವಿಧ ಜಾಲಾ । ಹೇ ತೋ ಘಡೇನಾ ॥३೧॥

ತೈಸಾ ಸಾಧು ಆತ್ಮಜ್ಞಾನೀ । ಬೋಧೇ ಪೂರ್ಣ ಸಮಾಧಾನೀ ।
ವಿವೇಕೇ ಆತ್ಮನಿವೇದನೀ । ಆತ್ಮರೂಪೀ ॥३೨॥

ಜಳೋನ ಕಾಷ್ಠಾಚಾ ಆಕಾರ । ಅಗ್ನಿ ದಿಸೆ ಕಾಷ್ಠಾಕಾರ ।
ಪರೀ ಕಾಷ್ಠ ಹೋಈಲ ಹಾ ವಿಚಾರ । ಬೋಲೋ ಚ ನಯೆ ॥३३॥

ಕರ್ಪೂರ ಅಸೆ ತೋ ಜಳತಾ ದಿಸೆ । ತೈಸಾ ಜ್ಞಾನೀದೇಹ ಭಾಸೆ ।
ತಯಾಸ ಜನ್ಮವಿತಾ ಕೈಸೇ । ಕರ್ದಳೀಉದರೀ ॥३೪॥

ಬೀಜ ಭಾಜಲೇ ಉಗವೇನಾ । ವಸ್ತ್ರ ಜಳಾಲೇ ಉಕಲೇನಾ ।
ವೋಘ ನಿವಡಿತಾ ನಿವಡೇನಾ । ಗಂಗೇ ಮಧೇ ॥३೫॥

ವೋಘ ಗಂಗೇಮಾಗೇ ದಿಸೆ । ಗಂಗಾ ಯೆಕದೇಸೀ ಅಸೆ ।
ಸಾಧು ಕಾಹೀಚ ನ ಭಾಸೆ । ಆಣೀ ಆತ್ಮಾ ಸರ್ವಗತ ॥३೬॥

ತಿಳಿಯಿರಿ ಒಬ್ಬ ಕರ್ತತ್ವಶಾಲಿಯಾದ ದೊಡ್ಡ ಪುರುಷನಿರುವನು. ಅವನ ದೊಡ್ಡಿಸ್ತನ ನಮಗೆ ತಿಳಿದರೆ ಮನಸ್ಸಿಗೆ ಸಮಾಧಾನವಾಗುತ್ತದೆ. ಆದರೆ ಅವನನ್ನು ನೋಡಿ ಅವನ ಮೇಲೆ ನಾಯಿಗಳು ಒದರುವವು. ಒದರುವದು ನಾಯಿಗಳ ಸ್ವಭಾವವೆಂದು ಯಾರೂ ಅವುಗಳ ಕಡೆಗೆ ಅಷ್ಟು ಲಕ್ಷ್ಯ ಕೊಡುವದಿಲ್ಲ. ಇದರಂತೆ ಜ್ಞಾನಿಪುರುಷರ ದೊಡ್ಡಿಸ್ತನ ತಿಳಿದರೆ ಮನಸ್ಸಿಗೆ ಸಮಾಧಾನವಾಗುವದು. ಅದು ತಿಳಿಯದೆ ಅವರಿಗೆ ಹೆಸರಿಡುವ ಹೀನಜನ ಜಗತ್ತಿನಲ್ಲಿ ಇದ್ದೇ ಇರುವದು. ಇಂಥವರ ಕಡೆಗೆ ದುರ್ಲಕ್ಷ್ಯ ಮಾಡುವದು ಯೋಗ್ಯವು. (೨೮) ಆತ್ಮಜ್ಞಾನಿ ಪುರುಷನು ಪರಮಾತ್ಮ ಸ್ವರೂಪನಿರುವನು. ಅಜ್ಞಾನಿ ಜನರು ಅವನಿಗೆ ಸಾಮಾನ್ಯ ಮನುಷ್ಯನೆಂದು ತಿಳಿಯುವರು. ಯಾರ ಭಾವ ಹೇಗೆಯೋ ಆ ಭಾವದಂತೆ ದೇವರು ಅವರಿಗೆ ಅದರಂತೆ ಫಲಕೊಡುವನು. ಜ್ಞಾನಿಪುರುಷನಿಗೆ ಯಾವನು ಮನುಷ್ಯನೆಂದು ತಿಳಿಯುವನೋ ಅವನಿಗೆ ಸಾಮಾನ್ಯ ಮಾನವನಂತೆ ಫಲ ಪ್ರಾಪ್ತಿಯಾಗುವದು. ಆತ್ಮಜ್ಞಾನದ ಪ್ರಾಪ್ತಿಯು ಅವರಿಗೆ ಆಗುವದಿಲ್ಲ. (೨೯) ಇನ್ನು ಮೇಲೆ ಮೂರು ನಾಲ್ಕು ದೃಷ್ಟಾಂತ ಕೊಟ್ಟು ನಮಗೆ ಏನು ತಿಳಿಸಿ ಕೊಡುವರೆಂದರೆ, ಸಾಧುವು ದೇಹದಿಂದಇರುವವನಾಗಿದ್ದರೂ ಸಹ ಅಂತರಂಗದ ಪ್ರಚೀತಿ (ಅನುಭವದಿಂದ) ಯಿಂದ ಅವನು ಪರಮಾತ್ಮಸ್ವರೂಪನೇ ಇರುವನು. ಅವನಿಗೆ ದೇಹ ಪತನದ ನಂತರ ಪುನಃ ಜನ್ಮ ಬರುವದಿಲ್ಲ:— ನಿಜವಾದ ದೇವರು ನಿರ್ಗುಣನು. ಮತ್ತು ನಿರಾಕಾರನು ಅಂದರೆ ಆಕಾರರಹಿತನೂ ಸಹ ಇರುವನು. ಆದರೆಸಾಮಾನ್ಯ ಜನರು ಕಲ್ಲಿನಲ್ಲಿ ಅವನ ಭಾವನೆಯನ್ನು ಮಾಡುವರು. ಕಲ್ಲು ಒಡೆಯುವದು,ಆದರೆ ನಿರ್ಗುಣ ದೇವನು ಒಡೆಯಲು ಶಕ್ಯವಿಲ್ಲ.(೩೦)ದೇವರು ಎಲ್ಲ ಕಡೆಗೂ ಭರಪೂರ ತುಂಬಿರುವನು.ಅವನು ಒಬ್ಬನೇ ಒಬ್ಬನಿದ್ದಾನೆ.ಸಾಮಾನ್ಯ ಜನರು ಇವನನ್ನು ಅನೇಕ ಪ್ರಕಾರದಿಂದ ಭಜಿಸುವರು.ಒಬ್ಬನಿಗೆ ಅನೇಕತನ ಕೊಡುವರು.ಒಬ್ಬನೇ ಒಬ್ಬನಿರುವ ದೇವ ಅನೇಕವಾಗುವದು ಶಕ್ಯವಿಲ್ಲ.(೩೧) ಇದರಂತೆ ಸಾಧು ಸಂತರು ಆತ್ಮಜ್ಞಾನಿ ಇರುವರು ಆ ಜ್ಞಾನದಿಂದ ಅವರು ಸಂಪೂರ್ಣ ಸಮಾಧಾನಿಯಾಗಿರುವರು. ನಿದಿಧ್ಯಾಸದಿಂದ ಅನನ್ಯರಾಗಿ ಅವರು ಆತ್ಮಸ್ವರೂಪಾಕಾರವಾಗುವರು. (೩೨) ಒಂದು ಕಟ್ಟಿಗೆಯು ಅಗ್ನಿಯಿಂದ ಯಾವಾಗ ಸುಡುವದೋ ಉರಿಯುವದೋ ಆಗ ಆ ಅಗ್ನಿಗೆ ಆ ಕಟ್ಟಿಗೆಯ ಆಕಾರ ಬರುವದು ಆದರೆ ಅಗ್ನಿಯು ಎಂದೂ ಕಟ್ಟಿಗೆಯಾಗಲಾರದು. ಇದರಂತೆ ಸಾಧು ಸಂತರ ಬ್ರಹ್ಮಜ್ಞಾನ ಅವರ ದೇಹದಲ್ಲಿ ಇರುವದೆಂಬುದು ನಿಜವಿರುವದು. ಆದರೆ ಅವರ ಜ್ಞಾನವು ದೇಹ ರೂಪ ಎಂದಿಗೂ ಆಗಲಾರದು. ಜ್ಞಾನಿಯು ದೇಹದ ಮೇಲೆ ಅವಲಂಬಿಸಿಕೊಂಡು ಇರುವದಿಲ್ಲ. ಸಾಧು ಪುರುಷರ ದೇಹದ ಮೇಲಿಂದ ಅವರ ಜ್ಞಾನದ ಕಲ್ಪನೆ ಮಾಡಲಿಕ್ಕೆ ಬರುವದಿಲ್ಲ. (೩೩) ಕರ್ಪೂರವು ಇರುವದು, ಉರಿಯುವಾಗ ಆ ಕರ್ಪೂರವು ಕಾಣುತ್ತದೆ. ಆದರೆ ಅದು ಪುನಃ ಬಾಳೆಗಿಡ (ಕದಳೀಗಿಡ)ದ ಹೊಟ್ಟೆಯಲ್ಲಿ ಉತ್ಪನ್ನವಾಗುವದಿಲ್ಲ. ಇದರಂತೆ ಆತ್ಮಜ್ಞಾನ ಧಾರಣ ಮಾಡಿದ ಜ್ಞಾನಿಪುರುಷನ ದೇಹ ಕಾಣುವದು. ಆದರೆ ಒಮ್ಮೆ ಇವನ ದೇಹ ಬಿದ್ದು ಹೋಯಿತೆಂದರೆ (ಜ್ಞಾನ ಅನ್ನುವ ಅಗ್ನಿಯಿಂದ ಇವನ ದೇಹ ಮೊದಲೇ ಸುಟ್ಟು ಹೋಗಿರುತ್ತದೆ) ಆ ಜ್ಞಾನಿ ಪುರುಷನಿಗೆ ಪುನಃ ಜನ್ಮವಿಲ್ಲ.(೩೪) ಬೀಜ (ಕಾಳು) ಹುರಿದು ಭೂಮಿಯಲ್ಲಿ ನೆಟ್ಟರೆ ಅದು ಹುಟ್ಟುವದಿಲ್ಲ. ವಸ್ತ್ರ ಸುಟ್ಟಿತೆಂದರೆ ಅದನ್ನು ಬಿಚ್ಚಲಿಕ್ಕೆ ಬರುವದಿಲ್ಲ. ಒಂದು ಹಳ್ಳವು ಗಂಗಾನದಿಗೆ ಕೂಡಿತೆಂದರೆ ಪರತ ಅದನ್ನು ಪ್ರತ್ಯೇಕಿಸಿ ತೆಗೆಯಲು ಬರುವದಿಲ್ಲ.(೩೫) ಗಂಗೆಗೆ ಕೂಡಿದ ನಂತರ ಹಳ್ಳವೂ ಸಹ ಗಂಗಾರೂಪವೇ ಆಗಿ ಹೋಗುವದು.ಆದರೆ ಗಂಗಾ ಏಕಾಂಗಿ(ಏಕದೇಶಿ)ಇರುವದು.ಸ್ಥಳ ಕಾಲಗಳಿಂದ ಮರ್ಯಾದಿತವಿರುವದು.ಅಂತೆಯೇ ಗಂಗೆಗೆ ಕೂಡುವ ಮೊದಲು ಮೂಲ ಹಳ್ಳವು ಪ್ರತ್ಯೇಕವಾಗಿ ಕಾಣುವದು. ಸಾಧುವಿನ ಸ್ಥಿತಿಯು ಸ್ವಲ್ಪ ಬೇರೆ ತರದ್ದಿರುವದು. ಆತ್ಮಾ ಸರ್ವದೇಶೀ ಇರುವದು. ಸರ್ವವ್ಯಾಪಿ ಇರುವದು. ಇದಕ್ಕೆ ಸ್ಥಳ ಕಾಲದ ಮರ್ಯಾದೆ ಇಲ್ಲ. ಆತ್ಮಸ್ವರೂಪದೊಂದಿಗೆ ತದಾಕಾರವಾಗುವ ಮೊದಲು ಸಾಧು ಸಂತರು ಬೇರೆತನದಿಂದ ಇರುವರೆಂಬುದು ನಿಜವು. ಆದರೆ ಒಮ್ಮೆ ಇವರು ಆ ಸ್ವರೂಪಾಕಾರ ಆದರೆಂದರೆ ಅವರನೆಂಬುದು ಏನೂ ಶಿಲುಕು ಉಳಿಯುವದಿಲ್ಲ.ಅವರಲ್ಲಿ ಮೊದಲಿನ ಅಜ್ಞಾನಾವಸ್ಥೆಯ ಕುರುಹು ತಪ್ಪಿ ಕೂಡಾ ಸಿಗುವದಿಲ್ಲ. ಈ ದೃಷ್ಟಿಯಿಂದ ನೋಡಿದರೆ ಗಂಗೆಯ ದೃಷ್ಟಾಂತವು ಸಾಧುವಿನ ಸ್ಥಿತಿ ವರ್ಣನೆ ಮಾಡುವಲ್ಲಿ ಪೂರ್ಣ ಸರಿ ಹೋಗುವದಿಲ್ಲ. (೩೬)

ಸುವರ್ಣ ನವ್ಹೆ ಲೋಖಂಡ । ಸಾಧೂಸ ಜನ್ಮ ಥೋತಾಂಡ ।
ಅಜ್ಞಾನ ಪ್ರಾಣೀ ಜಡಮೂಢ । ತಯಾಸ ಹೇ ಉಮಜೇಚಿನಾ ॥३८॥

ಅಂಧಾಸ ಕಾಹೀ ಚ ನ ದಿಸೆ । ತರೀ ತೇ ಲೋಕ ಆಂಧಳೆ ಕೈಸೆ ।
ಸನ್ನಿಪಾತೇ ಬರಳತಸೆ । ಸನ್ನಿಪಾತೀ ॥३೮॥

ಜೋ ಸ್ವಪ್ನಾಮಧೇ ಭ್ಯಾಲಾ । ತೋ ಸ್ವಪ್ನಭಯೇ ಮೋಸಣಾಲಾ ।
ತೇ ಭಯೆ ಜಾಗತ್ಯಾಲಾ । ಕೇವಿ ಲಾಗೆ ॥३೯॥

ಮುಳೀ ಸರ್ಪಾಕಾರ ದೇಖಿಲೀ । ಯೇಕ ಭ್ಯಾಲಾ ಯೇಕೇ ಮೋಳಖಿಲೀ ।
ದೋಘಾಂಚೀ ಅವಸ್ಥಾ ಲೇಖಿಲೀ । ಸಾರಿಖೀ ಚ ಕೈಸೀ ॥೪೦॥

ಹಾತೀ ಧರಿತಾ ಹಿ ಡಸೇನಾ । ಹೇ ಯೇಕಾಸ ಭಾಸೇನಾ ।
ತರೀ ತೇ ತ್ಯಾಚೀ ಕಲ್ಪನಾ । ತಯಾಸೀ ಚ ಬಾಧೀ ॥೪೧॥

ವಿಂಚು ಸರ್ಪ ಡಸಲಾ । ತೇಣೇ ತೋಚಿ ಜಾಕಳಲಾ ।
ತಯಾಚೆನಿ ಲೋಕ ಜಾಲಾ । ಕಾಸಾವೀಸ ಕೈಸಾ ॥೪೨॥

ಆತಾ ತುಟಲಾ ಅನುಮಾನ । ಜ್ಞಾನಿಯಾಸ ಕಳೆ ಜ್ಞಾನ ।
ಅಜ್ಞಾನಾಸ ಜನ್ಮಮರಣ । ಚುಕೇಚಿನಾ ॥೪३॥

ಯೇಕಾ ಜಾಣಣ್ಯಾಸಾಠೀ । ಲೋಕ ಪಡಿಲೆ ಅಟಾಟೀ ।
ನೇಣಪಣೇ ಹಿಂಪುಟೀ ಹೋತೀ । ಜನ್ಮ ಮೃತ್ಯೇ ॥೪೪॥

ತೇ ಚಿ ಕಥಾನುಸಂಧಾನ । ಪುಢೇ ಕೇಲೇ ಪರಿಚ್ಛಿನ್ನ ।
ಸಾವಧಾನ ಸಾವಧಾನ । ಮ್ಹಣೆ ವಕ್ತಾ ॥೪೫॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
"ನಿಃಸಂದೇಹ ನಿರೂಪಣ" ನಾಮ ಸಮಾಸ ತೃತೀಯ ॥

● ●

ಬಂಗಾರವು ಕಲಂಕರಹಿತವಾದ ಸರ್ವೋತ್ತಮ ಧಾತುವು. ಕಬ್ಬಿಣವೆಂದರೆ ಸರ್ವಹೀನ ಕಲಂಕಿತ ಧಾತುವು. ಇರುವದು. ಬಂಗಾರದ ಗುಣಧರ್ಮ ಬೇರೆ, ಮತ್ತು ಕಬ್ಬಿಣದ ಗುಣಧರ್ಮ ಬೇರೆ ಇರುವದು. ಇದರಂತೆ ಸಾಧು ಸಂತರು ಬಂಗಾರವಿದ್ದಂತೆ, ಅದೇ ಸಾಮಾನ್ಯ ಅಜ್ಞಾನಿ ಜನರು ಕಬ್ಬಿಣವಿದ್ದಂತೆ, ಎಂದು ತಿಳಿಯಬೇಕು. ಸಾಮಾನ್ಯ ಜನಕ್ಕೆ ಪುನಃಪುನಃ ಜನ್ಮ ತಳೆಯಬೇಕಾಗುವದು. ಆದರೆ ಸಾಧು ಸಂತರಿಗೆ ಪುನಃ ಜನ್ಮವಿರುವದಿಲ್ಲ. ಇದೇ ಜನ್ಮದಲ್ಲಿ ಮುಕ್ತರಿರುವರು. ಸಾಮಾನ್ಯ ಮತ್ತು ಮೂರ್ಖ ಅಜ್ಞಾನಿ ಜನಕ್ಕೆ ಏನು ಮಾಡಿದರೂ ಎಷ್ಟು ಸಲ ಹೇಳಿದರೂ ತಿಳಿದುಕೊಳ್ಳಲಿಕ್ಕೆ ಆಗುವದಿಲ್ಲ. (೩೭) ಕುರುಡನಿಗೆ ಸ್ವತಃಕ್ಕೆ ಏನೂ ಕಾಣಿಸುವದಿಲ್ಲವೆಂದು ಇತರಎಲ್ಲಜನರು ಸಹ ಕುರುಡರೇದೂ ಅವನಿಗೆ ಕಾಣುವದಿಲ್ಲವೇದೂ ಅನ್ನಲಿಕ್ಕೆ ಬಂದೀತೆ? ಅರ್ಥಾತ್ ಬರಲಾರದು. ಸನ್ನಿಪಾತ ಜ್ವರದಲ್ಲಿ ಮನುಷ್ಯನು ಬಾಯಿಗೆ ಬಂದಂತೆ ಬಡಬಡಿಸುವನು. ಇದರಂತೆ ಅಜ್ಞಾನಿ ಮನುಷ್ಯನು ಸಾಧು ಸಂತರ ಬಗ್ಗೆ ಏನಾದರೂ ಬಡಬಡಿಸುತ್ತಾನೆ. (೩೮) ಒಬ್ಬ ಮನುಷ್ಯನಿಗೆ ಒಂದು ಭಯಾನಕವಾದ ಸ್ವಪ್ನ ಬೀಳುವದು. ಅದರಿಂದ ಅವನು ಗಾಬರಿಗೊಂಡನು. ಮತ್ತು ದೊಡ್ಡ ಧ್ವನಿಯಿಂದ ಚೀರಿದನು. ಎಚ್ಚರವಿದ್ದ ಮನುಷ್ಯನಿಗೆ ಈ ಭಯವಿರುವದಿಲ್ಲ. (೩೯) ಸರ್ಪದ ಆಕಾರ ಇದ್ದಂಥ ಒಂದು ಗಿಡದ ಬೇರು ಬಿದ್ದಿತ್ತು ಇದನ್ನು ಇಬ್ಬರು ನೋಡಿದರು. ಒಬ್ಬನಿಗೆ ಇದನ್ನು ನೋಡಿ ಭಯವೆನಿಸಿತು. ಆದರೆ ಇನ್ನೊಬ್ಬನು ಬಿದ್ದದ್ದು ಗಿಡದ ಬೇರು ಎಂದು ಗುರುತಿಸಿದನು. ಈ ಇಬ್ಬರ ಅವಸ್ಥೆಯು ಒಂದೇ ತರಹದ್ದೆಂದು ಅನ್ನಲಿಕ್ಕೆ ಬರುವದಿಲ್ಲ. ಇದರಲ್ಲಿ ಒಬ್ಬನು ಅಂಜಿದರೆ ಇನ್ನೊಬ್ಬನು ನಿರ್ಭಯನಿರುವನು. (೪೦) ಆ ಬೇರನ್ನು ಕೈಯಲ್ಲಿ ಹಿಡಿದರೂ ಅದು ಕಡಿಯುವದಿಲ್ಲ. ಇದು ಅಂಜಿದ ಮನುಷ್ಯನಿಗೆ ತಿಳಿಯುವದಿಲ್ಲ. ಖರೇ ಅನಿಸುವದಿಲ್ಲ. ಅದು ಬೇರು ಅಲ್ಲ ಅದು ಹಾವೇ ಇರುವದು ಅನ್ನುವ ಅವನ ಕಲ್ಪನೆಯೇ ಅವನನ್ನು ಬಾಧೆಗೊಳಿಸುವದು. ಇದು ಹೇಗೆ ಘಟಿಸುವದೋ ಇದರಂತೆಯೇ ಮಿಥ್ಯಾ ದೇಹಕ್ಕೆ ಯಾವನು ಅಜ್ಞಾನದಿಂದ ಸತ್ಯವೆಂದು ನಂಬಿ ನಡೆಯುವನೋ ಅವನಿಗೆ ದೃಶ್ಯದ ಭಯ ಬಾಧಿಸುವದು. ಅವನ ಹಿಂದೆಯೇ ಜನ್ಮ ಮರಣಗಳು ಹತ್ತಿ ಬರುವವು ಆದರೆ ಎಲ್ಲ ದೃಶ್ಯವು ಮಿಥ್ಯಾ ಇರುವದು. ಕನಸಿನಂತೆ ಇರುವದು ಹೀಗೆ ಖಾತ್ರಿ ಮಾಡಿಕೊಂಡು ಯಾವನು ಆತ್ಮಸ್ವರೂಪದೊಂದಿಗೆ ಅಂಟಿಕೊಳ್ಳುವನೋ ಅವನಿಗೆ ಸಂಪೂರ್ಣ ನಿರ್ಭಯತೆ ಬರುವದು. ಇವನ ಜನ್ಮ ಮರಣ ಇಲ್ಲದಾಗಿ ಹೋಗುವವು. (೪೧) ಯಾವ ಮನುಷ್ಯನಿಗೆ ಹಾವು ಅಥವಾ ಚೇಳು ಕಡಿಯುವದೋ ಅವನಿಗೇ ಆ ವಿಷವು ಬಾಧಿಸುವದು. ಮತ್ತು ಅವನು ಸಂಕಟಪಡುವನು. ಕಡಿಸಿಕೊಳ್ಳದ ಇತರ ಜನರು ಆ ವಿಷದಿಂದ ಸಂಕಟಪಡುವದಿಲ್ಲ. ಇದರಂತೆ ಯಾವ ಮನುಷ್ಯನು ಅಜ್ಞಾನದಿಂದ ತುಂಬಿರುವನೋ ಅವನಿಗೆ ಜನ್ಮ ಮರಣದ ಭಯವು ಬಾಧಿಸುವದು. ಯಾವನು ಜ್ಞಾನಿ ಪುರುಷನಿರುವನೋ ಅವನಿಗೆ ಈ ಯಾವ ಭಯವೂ ಇರುವದಿಲ್ಲ. (೪೨) ಇಷ್ಟು ಹೇಳಿದ ಮೇಲೆ ಶ್ರೋತಾ ಜನರ ಸಮಾಧಾನವಾಯಿತು:–ಶ್ರೋತಾಜನ ವಿಚಾರಿಸಿದ ಸಂಶಯ ನಿರಸನ (ಪರಿಹಾರ) ವಾಯಿತು. ಯಾವನು ಸ್ವತಃ ಜ್ಞಾನಿ ಇರುವನೋ ಅವನಿಗೆ ಜ್ಞಾನಿ ಪುರುಷರ ಅವಸ್ಥೆಯು ತಿಳಿಯುವದು. ಯಾವನು ಅಜ್ಞಾನಿ ಇರುವನೋ ಅವನ ಜನ್ಮ ಮರಣದ ಸಾರಿಗೆ ಮಾತ್ರ ತಪ್ಪುವದಿಲ್ಲ. (೪೩) ತಮಗೆ ಜ್ಞಾನ ಪ್ರಾಪ್ತವಾಗಬೇಕೆಂದು ಎಲ್ಲ ಜನರೂ ಪ್ರಯತ್ನ (ಖಟಪಟ) ಮಾಡುತ್ತಿರುವರು. ಆದರೆ ಅಜ್ಞಾನದಿಂದ ಅವರ ಜನ್ಮ ಮೃತ್ಯುವೇನೂ ತಪ್ಪುವದಿಲ್ಲ. ಮತ್ತು ಈ ಅಜ್ಞಾನದಿಂದಾಗಿ ದುಃಖ ಭೋಗಿಸಬೇಕಾಗುವದು. [೪೪] ಇದೇ ವಿಷಯವನ್ನು ಮುಂದೆ ಅಗದೀ ಸ್ಪಷ್ಟವಾಗಿ ಹೇಳಿರುವೆವು. ಆದ್ದರಿಂದ ಶ್ರೋತಾ ಜನ ಬಹಳ ಲಕ್ಷ್ಯಗೊಟ್ಟು ಕೇಳಬೇಕು. ಹೀಗೆ ವಕ್ತಾ ವಿನಂತಿ ಮಾಡಿಕೊಳ್ಳುವನು. [೪೫]

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದ ಒಂಭತ್ತನೆಯ ದಶಕದ
"ನಿಃಸಂದೇಹ"ವೆಂಬ ಹೆಸರಿನ ಮೂರನೆಯ ಸಮಾಸವು ಮುಗಿಯಿತು.

● ●

### ಸಮಾಸ ಚತುರ್ಥ : ಜಾಣಪಣನಿರೂಪಣ

॥ಶ್ರೀರಾಮ॥ ಪೃಥ್ವೀ ಮಧೇ ಲೋಕ ಸಕಳ । ಯೇಕ ಸಂಪನ್ನ ಯೇಕ ದುರ್ಬಳ ।
ಯೇಕ ನಿರ್ಮಳ ಯೇಕ ವೋಂಗಳ । ಕಾಯ ನಿಮಿತ್ಯ ॥೧॥

ಕಿತ್ಯೇಕ ರಾಜೆ ನಾಂದತೀ । ಕಿತ್ಯೇಕ ದರಿದ್ರ ಭೋಗಿತೀ ।
ಕಿತಿಯೇಕಾಚೀ ಉತ್ತಮಸ್ಥಿತೀ । ಕಿತ್ಯೇಕ ಅಧಮೋದ್ಧಮ ॥೨॥

ಐಸೇ ಕಾಯ ನಿಮಿತ್ಯ ಜಾಲೇ । ಹೇ ಮಜ ಪಾಹಿಜೆ ನಿರೋಪಿಲೇ ।
ಯಾಚೇ ಉತ್ತರ ಐಕಿಲೇ । ಪಾಹಿಜೆ ಶ್ರೋತೀ ॥೩॥

ಹೇ ಸಕಳ ಗುಣಾಪಾಸೀ ಗತೀ । ಸಗುಣ ಭಾಗ್ಯಶ್ರೀ ಭೋಗಿತೀ ।
ಅವಗುಣಾಸ ದರಿದ್ರಪ್ರಾಪ್ತೀ । ಯದರ್ಥೀ ಸಂದೇಹನಾಹೀ ॥೪॥

ಜೋ ಜೋ ಜೇಥೇ ಉಪಜಲಾ । ತೋ ತೆ ಠೇವಸಾಈ ಉಮಜಲಾ ।
ತಯಾಸ ಲೋಕ ಮ್ಹಣತೀ ಭಲಾ । ಕಾರ್ಯಕರ್ತಾ ॥೫॥

# ದಶಕ ೯. ಸಮಾಸ ೪. ಜಾಣಪಣನಿರೂಪಣ (ನುಡಿ ೪೪)

ಶ್ರೀ ಸಮರ್ಥರ ಪರಮಾರ್ಥವು ಅತ್ಯಂತ ವಿವೇಕ ಪ್ರಧಾನವಿರುವದು. ಜ್ಞಾನದ ಸಾಮರ್ಥ್ಯದ ಮೇಲೆ ಇವರ ವಿಶ್ವಾಸ ಬಹಳವಿರುವದು. ಪ್ರಾಪಂಚಿಕನಿರಲಿ ಅಥವಾ ಪಾರಮಾರ್ಥಿಕನಿರಲಿ ಇಬ್ಬರೂ ಕರ್ಮ ಮಾಡಲೇಬೇಕಾಗುವದು. ಆದರೆ ಯಾವನು ತಿಳಿದುಕೊಂಡು ಅಥವಾ ತಿಳುವಳಿಕೆಯಿಂದ [ಜಾಣತನದಿಂದ] ಕರ್ಮ ಮಾಡುವನೋ ಇವನ ಕರ್ಮಕ್ಕೆ ಉತ್ತಮ ಫಲ ದೊರಕುವದು. ಯಾವನು ಇದೇ ಕರ್ಮವನ್ನು ತಿಳಿದುಕೊಳ್ಳದೆ ಅಥವಾ ದಡ್ಡತನದಿಂದ ಮಾಡುವನೋ ಅವನಿಗೆ ಗೌಣ [ಕಡಿಮೆ ತರಹದ] ಫಲ ಸಿಗುವದು. ಛಾಂದೋಗ್ಯ ಉಪನಿಷತ್ತದಲ್ಲಿ ಒಂದು ಮಂತ್ರ ಹೀಗಿದೆ: "ನಾನಾ ತು ವಿದ್ಯಾ ಚ ಅವಿದ್ಯಾ। ಯದೇವ ವಿದ್ಯಯಾ ಕರೋತಿ...ತದೇವ...ವೀರ್ಯವತ್ತರಂ ಭವತಿ" ಅರ್ಥ;-ವಿದ್ಯಾ ಮತ್ತು ಅವಿದ್ಯಾ ಅಥವಾ ಜ್ಞಾನ ಮತ್ತು ಅಜ್ಞಾನ ಇವೆರಡೂ ಭಿನ್ನವಿರುವವು. ಯಾವನು ತಿಳುವಳಿಕೆಯಿಂದ ಜ್ಞಾನದಿಂದ ಯುಕ್ತವಾದ ಕರ್ಮ ಮಾಡುವನೋ ಅವನ ಕರ್ಮ ಬಹು ದೊಡ್ಡ ಸಾಮರ್ಥ್ಯ ಉಳ್ಳದ್ದಾಗುವದು. ಅದು ಉತ್ತಮ ಫಲಕೊಡುವದು. ಇದಕ್ಕಿಂತ ಒಂದು ಹೆಜ್ಜೆ ಮುಂದೆ ಹೋಗಿ ಶ್ರೀಸಮರ್ಥರು ಹೇಳುವದೇನಂದರೆ ನಮ್ಮ ಜೀವನದಲ್ಲಿ ಭಾಗ್ಯ ನಿರ್ಮಾಣ ಮಾಡಿಕೊಳ್ಳುವದು ನಮ್ಮ ಕೈಯಲ್ಲಿಯೇ ಇರುವದು ತಿಳುವಳಿಕೆಯಿಂದ ಕರ್ಮ ನಿರ್ಮಾಣ ಮಾಡಿ ನಾವು ಗುಣಗಳ ವಿಕಾಸ ಮಾಡಿದ್ದಾದರೆ ಭಾಗ್ಯವು ತಾನೇ ನಮ್ಮ ಬೆನ್ನು ಹತ್ತುವದು. ಇದರ ವಿರುದ್ಧವಾಗಿರುವ ಅವಗುಣಿ ಮನುಷ್ಯನು ಅಭಾಗಿ ಇರುವನು. (ಜನನ ಮರಣ ಚಕ್ರದಲ್ಲಿ ಬೀಳುವನು) ಆದ್ದರಿಂದ ಪ್ರಪಂಚದಲ್ಲಿಯಾಗಲೀ ಪರಮಾರ್ಥದಲ್ಲಿಯಾಗಲೀ ಮನುಷ್ಯನು ತಿಳುವಳಿಕೆಯಿಂದ ನಡೆಯಬೇಕು ಅಂದರೆ ಅವನ ಜೀವನ ಎಲ್ಲ ತರಹದಿಂದ ಧನ್ಯವಾಗುವದು.

## ದಶಕ ೯. ಸಮಾಸ ೪. : ಜಾಣಪಣನಿರೂಪಣ (ನುಡಿ ೪೪)

ಶ್ರೋತಾ ಪ್ರಶ್ನೆ ವಿಚಾರಿಸುತ್ತಾನೆ:- ಈ ಪೃಥ್ವಿಯ ಮೇಲೆ ಅಸಂಖ್ಯ ಜನರಿರುವರು. ಇವರಲ್ಲಿ ಕೆಲವರು ಶ್ರೀಮಂತರಿದ್ದರೆ ಕೆಲವರು ಬಡವರಿರುವರು. ಕೆಲವರು ಸ್ವಚ್ಛವಾಗಿದ್ದರೆ ಕೆಲವರು ಅಸ್ವಚ್ಛ (ಹೊಲಸು)ರಾಗಿರುವರು. ಹೀಗೆ ಹೆಚ್ಚು ಕಡಿಮೆ ಇರಲಿಕ್ಕೆ ಕಾರಣವೇನು? (೧) ಕೆಲವು ಜನರು ರಾಜವೈಭವ ಭೋಗಿಸುವರು. ಆದರೆ ಕೆಲವರು ದರಿದ್ರತನವನ್ನು ಭೋಗಿಸುವರು. ಕೆಲವರ ಸ್ಥಿತಿ ಅತಿ ಉತ್ತಮವಿದ್ದರೆ ಕೆಲವರು ಅಗದೀ ಹೀನ ಅಂದರೆ ಅಗದೀಹೀನತನದಲ್ಲಿರುವರು.(೨)ಮನುಷ್ಯರಲ್ಲಿ ಹೀಗೆ ಭೇದ ತೋರುವ ಕಾರಣವೇನು? ಇದನ್ನು ನನಗೆವಿವರಿಸಿ ಹೇಳಬೇಕು ಶ್ರೋತಾ ವಿಚಾರಿಸಿದ ಈ ಪ್ರಶ್ನೆಗೆ ಉತ್ತರ ಹೇಳುವೆ ಕೇಳಿರಿ.(೩)ಇವೆಲ್ಲ ಭೇದಕ್ಕೆ ನಮ್ಮ ಗುಣದ ಪರಿಣಾಮವೇ ಇರುವದು ಯಾರು ಗುಣವಂತರಿರುವರೋ ಅವರು ಭಾಗ್ಯ ಮತ್ತು ವೈಭವವನ್ನು ಭೋಗಿಸುವರು. ಯಾರು ಗುಣಹೀನರಿರುವರೋ ಅವರಲ್ಲಿಯೂ ಅವಗುಣಗಳಿರುವರು. ದರಿದ್ರತನವನ್ನು ಭೋಗಿಸುವರು. ಇದರಲ್ಲಿ ಯಾವ ಸಂಶಯವೂ ಇರುವದಿಲ್ಲ. (೪) ಯಾವ ಮನುಷ್ಯನು ಯಾವ ಧಂದೆಯಲ್ಲಿ ಜನ್ಮ ಹೊಂದುವನೋ ಆ ಧಂದೆಯನ್ನು ಅವನು ತಿಳಿದುಕೊಂಡು ಮತ್ತು ತಿಳುವಳಿಕೆಯಿಂದ ಅದನ್ನು ಮಾಡುತ್ತ ಹೋದರೆ ಜನರು ಅವನಿಗೆ ಒಳ್ಳೆಯವ, ಚಲೋ ಮನುಷ್ಯ ಎಂದು ಅನ್ನುವರು. ಕೆಲಸಗಾರನೆಂದೂ ಕರ್ತಬಗಾರನೆಂದೂ ಅನ್ನುವರು. (೫)

ಜಾಣತಾ ತೋ ಕಾರ್ಯ ಕರೀ । ನೇಣತಾ ಕಾಹೀ ಚ ನ ಕರೀ ।
ಜಾಣತಾ ತೋ ಪೋಟ ಭರೀ । ನೇಣತಾ ಭೀಕ ಮಾಗೇ ॥೬॥
ಹೇ ತೋ ಪ್ರಗಟ ಚಿ ಅಸೆ । ಜನೀ ಪಾಹಾತಾ ಪ್ರತ್ಯಕ್ಷ ದಿಸೆ ।
ವಿದ್ಯೇವಿಣ ಕರಂಟಾ ವಸೆ । ವಿದ್ಯಾ ತೋ ಭಾಗ್ಯವಂತ ॥೭॥
ಆಪುಲೀ ವಿದ್ಯಾ ನ ಸಿಕಸೀ । ತರೀ ಕಾಯೆ ಭೀಕ ಮಾಗಸೀ ।
ಜೇಥೇ ತೇಥೇ ಬುದ್ಧೀ ಐಸೀ । ವಡಿಲೇ ಸಾಂಗತೀ ॥೮॥
ವಡಿಲ ಆಹೆ ಕರಂಟಾ । ಆಣೀ ಸಮರ್ಥ ಹೋಯೆ ಧಾಕುಟಾ ।
ಕಾ ಜೆ ವಿದ್ಯೇನೇ ಮೋಟಾ । ಮ್ಹಣೋನಿಯಾ ॥೯॥
ವಿದ್ಯಾನಾಹೀ ಬುದ್ಧಿನಾಹೀ । ವಿವೇಕನಾಹೀ ಸಾಕ್ಷೇಪನಾಹೀ ।
ಕುಶಳತಾನಾಹೀ ವ್ಯಾಪನಾಹೀ । ಮ್ಹಣೌನ ಪ್ರಾಣೀ ಕರಂಟಾ ॥೧೦॥
ಇತುಕೇ ಹೀ ಜೇಥೇ ವಸೆ । ತೇಥೇ ವೈಭವಾಸ ಉಣೇ ನಸೆ ।
ವೈಭವ ಸಾಂಡಿತಾ ಅಪೈಸೇ । ಪಾಠೀ ಲಾಗೆ ॥೧೧॥
ವಡಿಲ ಸಮರ್ಥ ಧಾಕುಟಾ ಭಿಕಾರೀ । ಏಕಾ ಯಾಚೀ ಕೈಸೀ ಪರೀ ।
ವಡಿಲಾಸಿಸಾ ವ್ಯಾಪ ನ ಕರೀ । ಮ್ಹಣೋನಿಯಾ ॥೧೨॥
ಜೈಸೀ ವಿದ್ಯಾ ತೈಸೀ ಹಾವ । ಜೈಸಾ ವ್ಯಾಪ ತೈಸೇ ವೈಭವ ।
ತೋಲಾಸಾರಿಖಾ ಹಾವಭಾವ । ಲೋಕ ಕರಿತೀ ॥೧೩॥
ವಿದ್ಯಾ ನಸೆ ವೈಭವ ನಸೆ । ತೇಥೇ ನಿರ್ಮಳ ಕೈಚಾ ಅಸೆ ।
ಕರಂಟಪಣೇ ವೊಖಟಾ ದಿಸೆ । ವೊಂಗಳ ಆಣೀ ವಿಕಾರೀ ॥೧೪॥
ಪಶು ಪಕ್ಷೀ ಗುಣವಂತ । ತ್ಯಾಸ ಕೃಪಾ ಕರೀ ಸಮರ್ಥ ।
ಗುಣ ನಸ್ತಾ ಜಿಣೇ ವೆರ್ಥ । ಪ್ರಾಣೀ ಮಾತ್ರಾಚೇ ॥೧೫॥
ಗುಣನಾಹೀ ಗೌರವನಾಹೀ । ಸಾಮರ್ಥ್ಯನಾಹೀ ಮಹತ್ವನಾಹೀ ।
ಕುಶಳತಾ ನಾಹೀ ತರ್ಕ ನಾಹೀ । ಪ್ರಾಣೀ ಮಾತ್ರಾಸೀ ॥೧೬॥
ಯಾ ಕಾರಣೇ ಉತ್ತಮ ಗುಣ । ತೇ ಚಿ ಭಾಗ್ಯಾಚೇ ಲಕ್ಷಣ ।
ಲಕ್ಷಣೇವಿಣ ಅವಲಕ್ಷಣ । ಸಹಜ ಚಿ ಜಾಲೇ ॥೧೭॥
ಜನಾಮಧೇ ಜೋ ಜಾಣತಾ । ತ್ಯಾಸ ಆಹೆ ಮಾನ್ಯತಾ ।
ಕೋಣೀ ಯೆಕ ವಿದ್ಯಾ ಅಸತಾ । ಮಹತ್ವ ಪಾವೇ ॥೧೮॥
ಪ್ರಪಂಚ ಅಥವಾ ಪರಮಾರ್ಥ । ಜಾಣತಾ ತೋ ಚಿ ಸಮರ್ಥ ।
ನೇಣತಾ ಜಾಣಿಜೆ ವೆರ್ಥ । ನಿಃಕಾರಣ ॥೧೯॥

ವಿದ್ಯಾ, ತಿಳುವಳಿಕೆ, (ಜಾಣ, ಚತುರ) ಅಥವಾ ಜ್ಞಾನ ಇವುಗಳಿಗೇ ಜೀವನದ ಸರ್ವಕ್ಷೇತ್ರದಲ್ಲಿ ಎಷ್ಟು ಮಹತ್ವ ಇರುವದು. ಇದನ್ನೆಲ್ಲ ತಿಳಿಸಿ ಹೇಳಿಕೊಡುತ್ತಾರೆ:– ತಿಳುವಳಿಕೆ (ಜಾಣ, ಚತುರ)ವುಳ್ಳ ಮನುಷ್ಯನು ಶ್ರಮ ಮಾಡುವನು. ಯಾವುದಾದರೂ ಉದ್ಯೋಗ ಮಾಡುವನು. ತಿಳುವಳಿಕೆ ಇಲ್ಲದ ಮನುಷ್ಯನು ಶ್ರಮಪಡುವದಿಲ್ಲ. ಆಲಸಿಗನಿರುವನು. ಅಂತೆಯೇ ತಿಳುವಳಿಕೆಯುಳ್ಳ ಮನುಷ್ಯನು ಚನ್ನಾಗಿ ಹೊಟ್ಟೆತುಂಬಿಕೊಳ್ಳುವನು. ಅದೇ ತಿಳುವಳಿಕೆ ಇಲ್ಲದವ ಆಲಸಿಗ ಚನ್ನಾಗಿ ಹೊಟ್ಟೆ ತುಂಬಿಕೊಳ್ಳಲು ಶಕ್ತನಾಗುವದಿಲ್ಲ. ಭಿಕ್ಷೆ ಬೇಡುವ ಕೆಲಸ ಮಾಡಬೇಕಾಗುವದು. (೬) ನಾನು ಹೇಳುವ ಈ ಮಾತು ಅಗದೀ ಸ್ಪಷ್ಟವಿರುವದು. ಸಮಾಜದಲ್ಲಿ ಈ ಘಟನೆಗಳು ಪ್ರತ್ಯಕ್ಷ ಕಂಡು ಬರುವವು. ವಿದ್ಯಾಹೀನ ಮನುಷ್ಯ ಅಭಾಗಿ (ಭಿಕಾರಿ) ಇದ್ದರೆ ವಿದ್ಯಾವಂತ ಮನುಷ್ಯನು ಭಾಗ್ಯವಂತನಿರುವನು. (೭) "ನಮ್ಮ ವಿದ್ಯೆಯನ್ನು ನೀನು ಕಲಿಯದಿದ್ದರೆ ನೀನು ಭಿಕ್ಷೆ ಬೇಡಬೇಕಾದೀತು" ಅನ್ನುವ ತಿಳುವಳಿಕೆಯ ಉಪದೇಶವನ್ನು ಎಲ್ಲ ಕಡೆಗೂ ಹಿರಿಯರಾದವರು ಹೇಳುತ್ತಾರೆ. (೮) ತಿಳಿಯಿರಿ, ಇಬ್ಬರು ಅಣ್ಣ ತಮ್ಮಂದಿರು ಇರುವರು. ಇವರಲ್ಲಿ ಹಿರಿಯವನಾದವನು ಬಹಳ ಭಾಗ್ಯಹೀನನಾದನು. ಅದೇ ಸಣ್ಣವನು ಭಾಗ್ಯವಾನ ಮತ್ತು ಕರ್ತಬಗಾರನಾದನು. ಇದೆಲ್ಲವೂ ಸಣ್ಣವನ ದೊಡ್ಡತನವು ಅವನ ವಿದ್ಯೆಯಲ್ಲಿ ಅಡಗಿರುವದು ಕಂಡು ಬರುವದು. (೯) ವಿದ್ಯಾ, ಚತುರತೆ, ವಿವೇಕ, ಪ್ರಯತ್ನ, ಕೌಶಲ್ಯ, ಮತ್ತು ವ್ಯಾಪ ಈ ಗುಣಗಳ ಪೈಕಿ ಒಂದಾದರೂ ಇಲ್ಲದಿದ್ದರೆ ಮನುಷ್ಯನು ಭಿಕಾರಿ (ಅಭಾಗಿ) ಎನಿಸುವನು (೧೦) ಮತ್ತು ಇವೆಲ್ಲ ಗುಣಗಳು ಯಾರಲ್ಲಿ ಇರುವವೋ ಅವರ ವೈಭವವು ಎಂದೂ ಕಡಿಮೆಯಾಗುವದಿಲ್ಲ. ಇಷ್ಟೇ ಅಲ್ಲ. ಬೇಡ ಬೇಡವೆಂದರೂ ವೈಭವವು ತಾನಾಗಿ ಅಂಥವನಬೆನ್ನು ಹತ್ತುವದು. [೧೧] ಕೆಲವು ಕಡೆಗೆ ಹಿರಿಯಣ್ಣನು ವೈಭವ ಭೋಗಿಸಿದರೆ ತಮ್ಮನಾದವನು ವೈಭವಹೀನ ಅಥವಾ ಭಿಕಾರಿ ಆಗಿರುವನು. ಇದರ ಕಾರಣವೇನಂದರೆ ಸಣ್ಣವನು ಹಿರಿಯ ಅಣ್ಣನಂತೆ ಸದೋದಿತ ವ್ಯಾಪ [ಯಾವುದಾದರೊಂದು ಕೆಲಸ] ದುಡಿಮೆ ಮಾಡುವದಿಲ್ಲ. [೧೨] ಮನುಷ್ಯನ ವಿದ್ಯಾ ಎಷ್ಟು ಇರುವದೋ ಅಷ್ಟರ ಮಟ್ಟಿಗೆ ಅವನಲ್ಲಿ ಮಹತ್ವಾಕಾಂಕ್ಷೆ ಇರುವದು ಮನುಷ್ಯನು ಎಷ್ಟು ವ್ಯಾಪದ ಹವ್ಯಾಸ ಮಾಡುವನೋ ಆ ಮಟ್ಟದಲ್ಲಿ ವೈಭವ ದೊರಕುವದು. ಮನುಷ್ಯನ ಕರ್ತೃತ್ವ ಸಾಮರ್ಥ್ಯ ಎಷ್ಟಿರುವದೋ ಆ ಮಟ್ಟದಲ್ಲಿ ತನ್ನ ಕರ್ತಬಗಾರಿ [ಸಾಮರ್ಥ್ಯ] ಯನ್ನು ಅವನು ತೋರಿಸುವನು. [೧೩] ಯಾವ ಮನುಷ್ಯನಲ್ಲಿ ವಿದ್ಯೆ ಮತ್ತು ವೈಭವ ಇಲ್ಲವೋ ಅಂಥವನು ಹೊಲಸುಗೊಟ್ಟಿಯಾಗಿ ತಿರುಗಾಡುವನು. ಇವನು ಭಾಗ್ಯಹೀನನಿರುವದರಿಂದ ಅಗದೀ ಕೆಟ್ಟವನಾಗಿ ಕಾಣುವನು. ಇಷ್ಟೇ ಅಲ್ಲ, ಅಗದೀ ಮಲಿನ ಮತ್ತು ಕೆಟ್ಟ ಪ್ರವೃತ್ತಿಯವನಾಗಿ ತೋರುವನು. [೧೪] ಪಶು ಮತ್ತು ಪಕ್ಷಿ ಇವುಗಳು ಗುಣಸಂಪನ್ನವಿದ್ದರೆ ಭಾಗ್ಯವಂತ ಮನುಷ್ಯನು ಅವುಗಳ ಬಗ್ಗೆ ಆದರ ತೋರುವನು. ಅವುಗಳನ್ನು ಪ್ರೇಮದಿಂದ ತನ್ನ ಹತ್ತಿರ ಇಟ್ಟುಕೊಂಡು ಸಾಕುವನು. ಇದರ ಅರ್ಥವೇನಂದರೆ ಏನಾದರೂ ಒಳ್ಳೇಗುಣ ಇಲ್ಲದಿದ್ದರೆ ಮನುಷ್ಯನ ಜೀವನ ಅಗದೀ ವ್ಯರ್ಥವೆನಿಸುವದು. [೧೫] ಗುಣ, ದೊಡ್ಡಸ್ತನ, ಸಾಮರ್ಥ್ಯ, ಸಮಾಜದಲ್ಲಿ ಗೌರವ, ಕಿಮ್ಮತ್ತು, ಕುಶಲತನ ಮತ್ತು ಚುರುಕು ಬುದ್ಧಿ ಮತ್ತು ತರ್ಕ ಬುದ್ಧಿ ಇವು ಇಲ್ಲದವನ ಜೀವನದಲ್ಲಿ ಯಾವ ಸ್ವಾರಸ್ಯವೂ ಇರುವದಿಲ್ಲ. ಆದರೆ ಇಂಥ ಜನರೂ ಕೆಲವರಿರುವರು. [೧೬] ಅದ್ದರಿಂದ ಮನುಷ್ಯನು ಉತ್ತಮಗುಣಗಳನ್ನು ತನ್ನಲ್ಲಿ ತಂದುಕೊಳ್ಳುವದೇ ಒಂದು ಮಹತ್ವದ ಭಾಗ್ಯದ ಲಕ್ಷಣವಿರುವದು ಈ ಲಕ್ಷಣಗಳು ಎಲ್ಲಿ ಇಲ್ಲವೋ ಅಲ್ಲಿ ಅವಲಕ್ಷಣಗಳು ಸೇರುವದು–ತೋರುವದು ಸ್ವಾಭಾವಿಕವೇ ಇರುವದು. [೧೭] ಸಮಾಜದಲ್ಲಿ ಯಾವನು ತಿಳಿದವನಿರುವನೋ ಅವನನ್ನು ಜನರು ಅಭಿಮಾನದಿಂದ ಮುಂದೆ ಕರೆಯುವರು. ಯಾವುದೇ ವಿದ್ಯೆ ಇದ್ದರೂ ಮನುಷ್ಯನಿಗೆ ಮಹತ್ವ ಬರುತ್ತದೆ. [೧೮] ಪ್ರಪಂಚದಲ್ಲಿಯೇ ಆಗಲಿ, ಅಥವಾ ಪಾರಮಾರ್ಥದಲ್ಲಿಯೇ ಆಗಲಿ ಯಾವನು ತಿಳಿದವನಿರುವನೋ ಅವನೇ ತನ್ನ ಪ್ರಭಾವವನ್ನು ಜನ ಮಾನಸದಲ್ಲಿ ಬೀರಬಲ್ಲನು. ಯಾವನು ತಿಳಿದವನಿಲ್ಲವೋ ಅವನು ವಿನಾಕಾರಣ ಆಯುಷ್ಯವನ್ನು ವ್ಯರ್ಥಮಾಡಿಕೊಳ್ಳುವನು. [೧೯]

ನೇಣತಾ ವಿಂಚು ಸರ್ಪ ಡಸೆ । ನೇಣತಾ ಜೀವಘಾತ ಅಸೆ ।
ನೇಣತಾ ಕಾರ್ಯ ನಾಸೆ । ಕೋಣೇ ಯೇಕ ॥೨೦॥

ನೇಣತಾ ಪ್ರಾಣೀ ಸಿಂತರೆ । ನೇಣಪಣೇ ತರ್ಷ್ಡಿ ಭರೇ ।
ನೇಣಪಣೇ ಠಕೆ ವಿಸರೇ । ಪದಾರ್ಥ ಕಾಹೀ ॥೨೧॥

ನೇಣತಾ ವೈರೀ ಜಿಂಕಿತೀ । ನೇಣತಾ ಅಪಾಈ ಪಡತೀ ।
ನೇಣತಾ ಸಂವ್ಹಾರತೀ ಘಡತೀ । ಜೀವನಾಸ ॥೨೨॥

ಆಪುಲೇ ಸ್ವಹಿತ ನ ಕಳೆ ಜನಾ । ತೇಣೇ ಭೋಗಿತೀ ಯಾತನಾ ।
ಜ್ಞಾನ ನೇಣತಾ ಅಜ್ಞಾನಾ । ಅಧೋಗತೀ ॥೨೩॥

ಮಾಯಾಬ್ರಹ್ಮ ಜೀವಶಿವ । ಸಾರಾಸಾರ ಭಾವಾಭಾವ ।
ಜಾಟಿಲ್ಯಾಸಾಠೀ ಹೋತೇ ವಾವ । ಜನ್ಮಮರಣ ॥೨೪॥

ಕೋಣ ಕರ್ತಾ ನಿಶ್ಚಯೇಸೀ । ಬದ್ಧ ಮೋಕ್ಷ ತೋ ಕೋಣಾಸೀ ।
ಏಸೇ ಜಾಣತಾ ಪ್ರಾಣೀಯಾಸೀ । ಸುಟಿಕಾ ಘಡೆ ॥೨೫॥

ಜಾಣಿಜೆ ದೇವ ನಿರ್ಗುಣ । ಜಾಣಿಜೆ ಮೀ ತೋ ಕೋಣ ।
ಜಾಣಿಜೆ ಅನನ್ಯ ಲಕ್ಷಣ । ಮ್ಹಣಿಜೆ ಮುಕ್ತ ॥೨೬॥

ಜಿತುಕೇ ಜಾಣೋನ ಸಾಂಡಿಲೇ । ತಿತುಕೇ ದೃಶ್ಯ ಮೊಲಾಂಡಿಲೇ ।
ಜಾಣತ್ಯಾಸ ಜಾಣತಾ ತುಟಲೇ । ಮೂಳ ಮೀಪಣಾಚೇ ॥೨೭॥

ನ ಜಾಣತಾ ಕೋಟೀವರೀ । ಸಾಧನೇ ಕೇಲೀ ಪರೋಪರೀ ।
ತರೀ ಮೋಕ್ಷಾಸ ಅಧಿಕಾರೀ । ಹೋಣಾರ ನಾಹೀ ॥೨೮॥

ಮಾಯಾಬ್ರಹ್ಮ ಮೊಳಖಾವೇ । ಆಪಣಾಸ ಆಪಣ ಜಾಣಾವೇ ।
ಇತುಕ್ಯಾಸಾಠೀ ಸ್ವಭಾವೇ । ಚುಕೆ ಜನ್ಮ ॥೨೯॥

ಜಾಣತಾ ಸಮರ್ಥಾಚೇ ಅಂತರ । ಪ್ರಸಂಗೇ ವರ್ತೇ ತದನಂತರ ।
ಭಾಗ್ಯ ವೈಭವ ಅಪಾರ। ತೇಣೇ ಚಿ ಪಾವೆ ॥೩೦॥

ತಿಳವಳಿಕೆ ಇಲ್ಲದ್ದು ಅಥವಾ ಅಜ್ಞಾನ ಇದೇ ಎಲ್ಲ ಕೆಟ್ಟದ್ದಕ್ಕೂ ಮತ್ತು ಅಪಯಶಸ್ಸಿಗೂ ಮೂಲ ಕಾರಣವಿರುವದು. ಅಜ್ಞಾನದ ಕಾರಣದಿಂದಾಗಿ ಹಾವು ಅಥವಾ ಚೇಳು ಕಡಿಸಿಕೊಳ್ಳುವ ಪ್ರಸಂಗಬರುವದು.ಅಜ್ಞಾನ ದಿಂದ ಜೀವಕ್ಕೆ ಘಾತವಾಗುವ ಪ್ರಸಂಗ ಬರುವದು. ನಾವು ಮಾಡುತ್ತಿರುವ ಯಾವುದಾದರೂ ಕೆಲಸವು ಅಜ್ಞಾನ ದಿಂದಾಗಿಕೆಡುವದು. [೨೦] ಅಜ್ಞಾನದಿಂದ ಮನುಷ್ಯನು ಭ್ರಮದಲ್ಲಿ ಬೀಳುವನು. ಅಜ್ಞಾನದಿಂದಾಗಿ ಇಲ್ಲದ ಸಲ್ಲದ ಗೊಂದಲದಲ್ಲಿ ಬಿದ್ದು ಹುಚ್ಚು ಹುಚ್ಚಾಗಿ ಹೇಗೇಗೋ ನಡೆದು ಗೊಂದಲಗೆಡುವನು. ಮತ್ತು ಅಜ್ಞಾನದಿಂದ ಮನು ಷ್ಯನು ಮೋಸ ಹೋಗುವನು. ಮತ್ತು ತನ್ನ ವಸ್ತುವನ್ನು ಮರೆಯುವನು. [೨೧] ನಮ್ಮ ಅಜ್ಞಾನದಿಂದಾಗಿ ಶತ್ರು ನಮ್ಮನ್ನು ಗೆಲ್ಲುವನು. ಅಜ್ಞಾನದಿಂದಾಗಿ ನಾವು ನಿಷ್ಕಾರಣ ಹಾನಿ ಸೋಸಬೇಕಾಗುವದು. ಅಜ್ಞಾನದಿಂದ (ಜೀವದ ಮೇಲೆ) ಅಪಾಯ ಅಜ್ಞಾನದಿಂದ ಜೀವದ ನಾಶ (ಕೊಲೆ) ಘಟಿಸುವವು. [೨೨] ಅಜ್ಞಾನದಿಂದಮನು ಷ್ಯನಿಗೆ ತನ್ನ ಹಿತ ತನಗೇ ತಿಳಿಯುವದಿಲ್ಲ. ಇದರಿಂದಾಗಿ ಅವನಿಗೆ ಯಾತನೆಗಳನ್ನು ಅನುಭವಿಸಬೇಕಾಗುವದು.ಜ್ಞಾನ ವಿಲ್ಲದ್ದರಿಂದ ಅಜ್ಞಾನಿ ಮನುಷ್ಯನಿಗೆ ಅಧೋಗತಿ ಪ್ರಾಪ್ತವಾಗುವದು.[೨೩]ಮಾಯಾ ವ ಬ್ರಹ್ಮ. ಜೀವ ಮತ್ತು ಶಿವ, ಸಾರ ಮತ್ತು ಅಸಾರ, ಭಾವ ವ, ಅಭಾವ ಇವುಗಳ ಸರಿಯಾದ ಜ್ಞಾನವಾಯಿತೆಂದರೆ ಜನ್ಮ ಮರಣವೇ ಇಲ್ಲದಂತಾಗಿ ಬಿಡುವದು. [೨೪] ನಿಜವಾದ ಕರ್ತಾ ಯಾರು ಇರುವರು? ಇದರಂತೆ ಬಂಧ ಮತ್ತು ಮೋಕ್ಷ ಇವು ಯಾರಿಗೆ ಘಟಿಸುವವು? ಇವುಗಳ ನಿಶ್ಚಿತ ಜ್ಞಾನವಾಯಿತೆಂದರೆ ಮನುಷ್ಯ ಜನ್ಮ ಮರಣಗಳಿಂದ ಬಿಡುಗಡೆಯಾ ಗುವನು ಮತ್ತು ಇವನು ಮುಕ್ತನಾಗುವನು. [೨೫] ದೇವರು ನಿರ್ಗುಣ ಇರುವನೆಂಬುದರ ಜ್ಞಾನ ಮಾಡಿಕೊಳ್ಳ ಬೇಕು. ನಾನು ಯಾರು ಇರುವೆ, ಇದರ ಜ್ಞಾನ ಮಾಡಿಕೊಳ್ಳಬೇಕು. ನಾನು ಮತ್ತು ದೇವ ಒಂದೇ ರೂಪವೇ ಇರುವೆವು. ಇದರ ಜ್ಞಾನ ಮಾಡಿಕೊಳ್ಳಬೇಕು. ಅಂದರೆ ಮನುಷ್ಯನು ಖಾತ್ರಿಯಿಂದ ಮುಕ್ತನಾಗುವನು. [೨೬] ಜ್ಞಾನದಿಂದ ವ್ಯವಹಾರಾದಿಗಳಲ್ಲಿ ಸತ್ಯ ಯಾವುದು ಎಂಬುದನ್ನು ತಿಳಿದು ಮತ್ತು ಮಿಥ್ಯೆ (ಅಸತ್ಯ)ವೆಂದು ತಿಳಿದ ದ್ದನ್ನು ಒಂದು ಕಡೆಗೆ ಸರಿಸಿದೆವೆಂದರೆ ಅಷ್ಟು ದೃಶ್ಯ ಜಗತ್ತನ್ನು ದಾಟಿದೆವೆಂದು ತಿಳಿಯಬೇಕು. ಹೀಗೆ ಸಾಗಿದರೆ ಕೊನೆಗೊಂದು ದಿವಸ ಸ್ಥೂಲ ಸೂಕ್ಷ್ಮಗಳೆಲ್ಲವನ್ನೂ ತಿಳಿಯುವವನಾದ ಯಾವ ಆತ್ಮಾ [ಸರ್ವ ಸಾಕ್ಷಿ] ಇರುವನೋ ಇವನನ್ನು ತಿಳಿಯಲು ಸಾಧ್ಯವಾಗುವದು. ಆಗ ನಾನೇ ಸರ್ವಸಾಕ್ಷಿ ಆತ್ಮಾ ಇರುವೆ ಅನ್ನುವ ಅನುಭವ ಬರುವದು. ಮತ್ತು ನಾನು ಅನ್ನುವ ಅಹಂದ ಮೂಲ ನಾಶವಾಗುವದು. ಸಾಮಾನ್ಯವಾಗಿ ನಮಗೆ ಯಾವಾಗ ಜ್ಞಾನವಾಗು ವದೋ ಆಗ ಜ್ಞಾನದ ಒಂದು ತುದಿಗೆ ತಿಳಿಯುವವನಾದ ಜ್ಞಾತಾ ಅಥವಾ ನಾನು ಇರುವದು. ಅದೇ ಇನ್ನೊಂದು ತುದಿಗೆ ತಿಳಿದುಕೊಳ್ಳುವ ವಸ್ತು ಅಥವಾ ಜ್ಞೇಯ ಇರುವದು. ಜ್ಞಾನದ ಎದುರಿಗೆ ಜ್ಞೇಯ ರೂಪದಿಂದ ಬರುವ ಎಲ್ಲವೂ ದೃಶ್ಯದಲ್ಲಿ ಗಣಿಸಲ್ಪಡುವವು. ದೃಶ್ಯವು ಮಿಥ್ಯಾ ಇರುವದರಿಂದ ಜ್ಞಾತಾನಿಗೆ ಅದರಲ್ಲಿ ಸಮಾಧಾನವಾಗು ವದಿಲ್ಲ. ಆಗ ಜ್ಞಾತಾ ಸ್ವತಃವೇ [ತಾನೇ] ಜ್ಞಾನ ಮಾಡಿಕೊಳ್ಳುವ ಮಾರ್ಗವನ್ನು ಅವಲಂಬಿಸುವನು. ಆಗ ಅಲ್ಲಿ ನಾನು ಎಂದು ಸುಳಿದಾಡುವ ಅಹಂತಾ ದೃಶ್ಯವೆಂದು ಕಳಚಿ ಬೀಳುವದು [ದೃಶ್ಯ ಇದು ನಾಶವಂತವಿರುವದು]. ಕೊನೆಗೊಮ್ಮೆ ಕೇವಲ ಜ್ಞಾನಮಯ ಶುದ್ಧ ಆತ್ಮಸ್ವರೂಪ ಶಿಲುಕು ಉಳಿಯುವದು. ಇದರ ಈ ಜ್ಞಾನವೇ ಆತ್ಮ ಜ್ಞಾನವಿರುವದು. [೨೭] ಆದರೆ ತಿಳಿದುಕೊಳ್ಳಬೇಕಾದದ್ದನ್ನು ಸರಿಯಾಗಿ ತಿಳಿಯದೆ [ಆತ್ಮ ತತ್ವದ ಜ್ಞಾನ] ಕೋಟ್ಯಾ ವಧಿ ಸಾಧನಗಳನ್ನು ನಾನಾ ಪ್ರಕಾರಗಳಿಂದ ಮಾಡಿದರೂ ಸಹ ಯಾವನೊಬ್ಬನೂ ಮೋಕ್ಷದ ಅಧಿಕಾರಿಯಾಗಲು ಶಕ್ಯವಿಲ್ಲವೆಂದ ಮೇಲೆ ಮೋಕ್ಷ ದೊರಕುವ ಮಾತಂತೂ ದೂರವೇ ಉಳಿಯಿತು. ಇಂಥವರಿಗೆ ಮೋಕ್ಷವಿಲ್ಲವೆಂಬು ದನ್ನು ಸ್ಪಷ್ಟಪಡಿಸುವೆನು. (೨೮) ಮಾಯಾ ಮತ್ತು ಬ್ರಹ್ಮ ಇದರ ಗುರುತನ್ನು ಗುರುತಿಸಿ ತಿಳಿಯಬೇಕು. ಸ್ವತಃ ನೀವೇ "ನಾನು ಯಾರು" ಇದರ ಜ್ಞಾನವನ್ನು ಮಾಡಿಕೊಳ್ಳಬೇಕು· ಇದೆಲ್ಲದರ ಜ್ಞಾನವಾಯಿತೆಂದರೆ ಜನ್ಮ ಮರಣ ಗಳ ಸುತ್ತಾಟ ತಪ್ಪುವದು. (೨೯) **ಜ್ಞಾನ ಮತ್ತು ಅಜ್ಞಾನ ಇದರ ವಿಮರ್ಶೆಯನ್ನು ಸ್ವಲ್ಪದರಲ್ಲಿ ಮಾಡಿ ತೋರಿಸುವರು:—** ಮೊದಲಿಗೆ ಭಗವಂತನ ನಿಜವಾದ ಸ್ವರೂಪದ ಜ್ಞಾನವನ್ನು ಮಾಡಿಕೊಳ್ಳಬೇಕು. ಅನಂತರ ಪ್ರಪಂಚದಲ್ಲಿಯ ವ್ಯವಹಾರಗಳ ಪ್ರಸಂಗಗಳನ್ನು ಗುರುತಿಸಿ ತಿಳಿದುಕೊಂಡು ನಡೆಯಬೇಕು· ಹೀಗೆ ನೀವು ಮಾಡಿದರೆ ಬಹಳ ದೊಡ್ಡ ಭಾಗ್ಯ ನಿಮ್ಮ ಪಾಲಿಗೆ ಬಂದು ನೀವು ಧನ್ಯರಾಗುವಿರಿ· ವೈಭವಶಾಲಿಗಳಾಗುವಿರಿ. (೩೦)

ಮ್ಹಣೌನ ಜಾಣಣೇ ನವ್ಹೆ ಸಾಮಾನ್ಯ । ಜಾಣತಾ ಹೊಈಜೆ ಸರ್ವಮಾನ್ಯ ।
ಕಾಹೀಚ ನೇಣತಾ ಅಮಾನ್ಯ । ಸರ್ವತ್ರ ಕರಿತೀ ॥೩೧॥

ಪದಾರ್ಥ ದೇಖೋನ ಭೂತ ಭಾವೀ । ನೇಣತೇ ಝುಡಪೋನ ಪ್ರಾಣ ಠೇವೀ ।
ಮಿಥ್ಯಾ ಆಹೆ ಉಠಾಠೇವೀ । ಜಾಣತೇ ಜಾಣತೀ ॥೩೨॥

ಜಾಣತ್ಯಾಸ ಕಳೇ ಮರ್ಮ । ನೇಣತ್ಯಾಚೇ ಖೋಟೇ ಕರ್ಮ ।
ಸಕಳ ಕಾಹೀ ಧರ್ಮಾಧರ್ಮ । ಜಾಣತಾ ಕಳೇ ॥೩೩॥

ನೇಣತ್ಯಾಸ ಯೆಮಯಾತನಾ । ಜಾಣತ್ಯಾಸ ಕಾಹೀ ಚ ಲಾಗೇನಾ।
ಸಕಳ ಜಾಣೋನ ನಿಮಂಚನಾ । ಕರೀ ತೋ ಮುಕ್ತ ॥೩೪॥

ನೇಣತಾ ಕಾಹೀ ರಾಜಕಾರಣ । ಅಪಮಾನ ಕರೂನ ಘೇತೀ ಪ್ರಾಣ ।
ನೇಣತಾ ಕಠಿಣ ವರ್ತಮಾನ । ಸಮಸ್ತಾಸ ಹೋಯೆ ॥೩೫॥

ಮ್ಹಣೋನಿಯಾ ನೇಣಣೇ ಖೋಟೇ । ನೇಣತೆ ಪ್ರಾಣೀ ತೆ ಕರಂಟೆ ।
ಜಾಣತಾ ನಿಮರತಾ ತುಟೆ । ಜನ್ಮಮರಣ ॥೩೬॥

ಮ್ಹಣೋನ ಅಲಕ್ಷ ಕರೂ ನಯೆ । ಜಾಣಣೇ ಹಾ ಚಿ ಉಪಾಯೆ।
ಜಾಣತಾ ಸಾಂಪಡೆ ಸೋಯೆ । ಪರಲೋಕಾಚೀ ॥೩೭॥

ಜಾಣಣೇ ಸಕಳಾಸ ಪ್ರಮಾಣ । ಮೂರ್ಖಾಸ ವಾಟೆ ಅಪ್ರಮಾಣ ।
ಪರಂತು ಅಲಿಪ್ತಪಣಾಚೀ ಖೂಣ । ಜಾಣತಾ ಕಳೆ ॥೩೮॥

ಯೆಕ ಜಾಣಣೇ ಕರೂನ ಪರತೇ । ಕೋಣ ಸೋಡೀ ಪ್ರಾಣಿಯಾತೇ ।
ಕೋಣೇ ಯೆಕ ಕಾರ್ಯ ಜೇ ತೇ । ಜಾಣಿಲ್ಯಾವಿಣ ನ ಕಳೆ ॥೩೯॥

ಜಾಣಣೇ ಮ್ಹಣಿಜೆ ಸ್ಮರಣ । ನೇಣಣೇ ಮ್ಹಣಿಜೆ ವಿಸ್ಮರಣ ।
ದೋಹೀಮಧೇ ಕೋಣ ಪ್ರಮಾಣ । ಶಾಹಾಣೇ ಜಾಣತೀ ॥೪೦॥

ನಿಮಗೊಂದು ಗುಟ್ಟಿನ ಮಾತು ಹೇಳುವೆ. ಜ್ಞಾನವು ಒಂದು ಸಾಮಾನ್ಯ ವಿಷಯವೆಂದು ಸರ್ವಥಾ ತಿಳಿಯಬೇಡಿರಿ. ಜ್ಞಾನಿ ಮನುಷ್ಯನನ್ನು ಸರ್ವಜನರೂ ಮನ್ನಿಸುವರು. ಆದರಿಸುವರು. ಯಾವನು ಏನನ್ನೂ ತಿಳಿದಿರುವದಿಲ್ಲವೋ ಅಂಥ ಅಜ್ಞಾನಿ ಮನುಷ್ಯನನ್ನು ಯಾರೂ ಮನ್ನಿಸುವದಿಲ್ಲ. ಆದರಿಸುವದಿಲ್ಲ. (೩೧) ಒಬ್ಬ ಅಜ್ಞಾನಿ ಮನುಷ್ಯನು ಕತ್ತಲಲ್ಲಿ ಒಂದು ಪದಾರ್ಥ ನೋಡಿದನು. ಅದು ಭೂತವಿರುವದೆಂದು ಅವನು ಕಲ್ಪನೆಯನ್ನು ಮಾಡಿದನು, ಈ ಖೊಟ್ಟಿ ಕಲ್ಪನೆಯಿಂದ ಅವನು ಆವೇಶಗೊಂಡನು. (ಸುಳ್ಳು ಭೂತ ಸಂಚಾರ ಮಾಡಿಕೊಂಡ) ಹಾಗೂ ಕೊನೆಗೊಮ್ಮೆ ಜೀವ ಕಳೆದುಕೊಂಡನು. ಇದೆಲ್ಲ ಖಟಾಟೋಪ ಕೇವಲ ಅಜ್ಞಾನದಿಂದ ನಿರ್ಮಾಣವಾದಂಥ ಖೊಟ್ಟಿ ಕಲ್ಪನೆಯ ಆಟವಿರುವದು. ಇಂಥ ಪ್ರಸಂಗಗಳನ್ನು ತಿಳಿದವರು ಇದೆಲ್ಲವೂ ವ್ಯರ್ಥವೆಂದು ಗುರುತಿಸುವರು. (೩೨) ತಿಳಿದವನಿಗೇ ರಹಸ್ಯ ತಿಳಿಯುವದು. ತಿಳಿಯದವನ ಕರ್ಮ ಖೊಟ್ಟಿ ಇರುವದು. ಅವನು (ಅಜ್ಞಾನಿಯು) ತಪ್ಪು ಕರ್ಮ(ಕೆಲಸ) ಮಾಡುವನು. ಧರ್ಮ ಯಾವುದು. ಮತ್ತು ಅಧರ್ಮ ಯಾವುದು ಇದೆಲ್ಲ ತಿಳಿದವನಿಗೇ ಗೊತ್ತಾಗುವದು. (೩೩) ಅಜ್ಞಾನಿ ಮನುಷ್ಯನಿಗೆ ಯಮಯಾತನೆಯನ್ನು ಭೋಗಿಸಬೇಕಾಗುವದು. ಆದರೆ ಜ್ಞಾನಿ ಮನುಷ್ಯನಿಗೆ ಇದರೊಂದಿಗೆ (ಯಮಯಾತನೆಯ ಬಗ್ಗೆ) ಎಳ್ಳಷ್ಟೂ ಸಂಬಂಧ ಬರುವದೇ ಇಲ್ಲ. ಎಲ್ಲವನ್ನೂ ತಿಳಿದುಕೊಂಡು ಯಾವನು ಸಾರಾಸಾರ ಸೂಕ್ಷ್ಮ ವಿಚಾರ ಮಾಡುವನೋ ಅವನು ನಿಶ್ಚಯವಾಗಿ ಮುಕ್ತನಾಗುವನು. (೩೪) ವ್ಯವಹಾರದಲ್ಲಿ ಪ್ರಸಂಗಾನುಸಾರ ಹೇಗೆ ನಡೆಯಬೇಕೆಂಬುದು ಯಾರಿಗೆ ತಿಳಿಯುವದಿಲ್ಲವೋ ಅಂಥ ಮನುಷ್ಯನು ಎರಡನೆಯವರ ಅಪಮಾನ ಮಾಡುವನು. ಮತ್ತು ಕ್ವಚಿತ್ ಪ್ರಸಂಗದಲ್ಲಿ ಅವರ ಪ್ರಾಣ ಸಹ ತೆಗೆದುಕೊಳ್ಳುವನು. ಇಂಥ ಅಜ್ಞಾನಿ ಮನುಷ್ಯರ ನಡವಳಿಕೆಯಿಂದ ಎಲ್ಲರಿಗೂ ಬಹಳ ಕಠಿಣ ಪ್ರಸಂಗ ಪ್ರಾಪ್ತವಾಗುವದು. (೩೫) ಆದ್ದರಿಂದ ಅಜ್ಞಾನವೆಂಬುದು ಅಗದೀ ಕೆಟ್ಟದ್ದಿರುವದು. ತ್ಯಾಜ್ಯವಿರುವದು. ಅಜ್ಞಾನಿ ಮನುಷ್ಯನು ಅಭಾಗಿ (ಕೃಪಣ) ಇರುವನು. ಭಾಗ್ಯಹೀನನಿರುವನು. ಅಜ್ಞಾನದ ಈ ಸ್ವಭಾವ ಮತ್ತು ಪರಿಣಾಮ ಇವನ್ನು ಗುರುತಿಸಿ ತಿಳಿದುಕೊಂಡು ಯಾವನು ಆತ್ಮಾನಾತ್ಮ ವಿವೇಕ ಮಾಡುವನೋ ಅವನು ಜನ್ಮ ಮರಣಗಳಿಂದ ಮುಕ್ತನಾಗುವನು. (೩೬) ಆದ್ದರಿಂದ ಜ್ಞಾನದ ಕಡೆಗೆ ದುರ್ಲಕ್ಷ್ಯ ಮಾಡಬಾರದು. (ನಿರ್ಲಕ್ಷ್ಯ ಮಾಡಬಾರದು) ಜ್ಞಾನವನ್ನು ಅನಾದರ ಮತ್ತು ಅಪಮಾನ ಮಾಡಬಾರದು. ಜ್ಞಾನ ಇದೇ ಎಲ್ಲದಕ್ಕಿಂತ ಹೆಚ್ಚಿನದು. ಜ್ಞಾನದ ನೆರವು (ಉಪಾಯ) ಪರಮಾರ್ಥದ ಲಾಭ ಮಾಡಿ ಕೊಡುವಲ್ಲಿ ಬಹಳ ಉಪಯೋಗ ಬೀಳುವದು ಸುಲಭ ಸಾಧ್ಯವಿರುವದು. ಜ್ಞಾನವಿಲ್ಲದೆ ಪರಮಾರ್ಥವಿಲ್ಲ. ಇದನ್ನು ನಿಶ್ಚಿತ ತಿಳಿಯಿರಿ (೩೭) ಜ್ಞಾನಿಯ ದೊಡ್ಡಿಸ್ತನವು ಎಲ್ಲರಿಗೂ ಮಾನ್ಯವಿರುವದು, ಇದು ಮೂರ್ಖನಿಗೆ ಪಟಾಯಿಸುವದಿಲ್ಲ. ಒಟ್ಟಿನಲ್ಲಿ ಅಲಿಪ್ತವಾಗಿ ಇರಲು ಹೇಗೆ ಬರುವದೆನ್ನುವದು ಜ್ಞಾನ ಪ್ರಾಪ್ತವಾದ ಮೇಲೆಯೇ ತಿಳಿಯುವದು. (೩೮) ಜ್ಞಾನವನ್ನು ಒಂದು ಬದಿಗೆ ಸರಿಸಿಬಿಟ್ಟರೆ ಮನುಷ್ಯನನ್ನು ಅಜ್ಞಾನದಿಂದ ಮುಕ್ತಗೊಳಿಸುವ ಸಾಮರ್ಥ್ಯಉಳ್ಳವರು ಯಾರೂ ಇಲ್ಲ. ಯಾವುದೇ ಕಾರ್ಯವು ಅದು ಎಂಥದೇ ಇರಲಿ ಜ್ಞಾನದ ನೆರವಿಲ್ಲದೆ ಅದನ್ನು ಹೇಗೆ ಮಾಡಬೇಕೆಂಬುದು ತಿಳಿಯುವದಿಲ್ಲ. ಶ್ರೀ ಸಮರ್ಥರು ಜ್ಞಾನ ಪ್ರಧಾನ ಕರ್ಮದ ಮೇಲೆ ಹೆಚ್ಚು ಪ್ರಾಧಾನ್ಯ ಕೊಟ್ಟಿದ್ದಾರೆ. ಭಕ್ತಿ ಇರಲಿ, ಕರ್ಮವಿರಲಿ, ಪ್ರತಿಯೊಂದಕ್ಕೆ ಜ್ಞಾನದ ಪಾರ್ಶ್ವಭೂಮಿ ಅವಶ್ಯವಿರುವದು. ಇದು ಅವರ ಅಭಿಪ್ರಾಯವಿರುವದು. (೩೯) ಜ್ಞಾನ ಇದು ಸ್ಮರಣ ರೂಪವಿರುವದು. ಅದೇ ಅಜ್ಞಾನವು ವಿಸ್ಮರಣ ರೂಪವಿರುವದು. ಇವೆರಡರಲ್ಲಿ ಮಾನ್ಯವಾವುದು. ಇದನ್ನು ಜಾಣ ಪುರುಷನು ತಿಳಿಯುವನು. "ನಾನು ಆತ್ಮವೇ ಇರುವೆ" ಈ ಸ್ಮರಣ (ನೆನಪು) ಅಖಂಡ (ಸತತ) ಇರುವದೇ ಜ್ಞಾನದ ಲಕ್ಷಣವಿರುವದು. ಅದೇ "ನಾನು ದೇಹವಿರುವೆ" ಈ ದೃಶ್ಯದ ಸ್ಮರಣ ಅಖಂಡ ಇರುವದೇ ಅಜ್ಞಾನದ ಲಕ್ಷಣವಾಗಿದೆ. ಅಜ್ಞಾನದಲ್ಲಿ ಸ್ವಸ್ವರೂಪದ ವಿಸ್ಮರಣವಿರುವದು. [೪೦]

ಜಾಣತೇ ಲೋಕ ತೇ ಶಾಹಾಣೇ। ನೇಣತೇ ವೇಡೆ ದೈನ್ಯವಾಣೇ।
ವಿಜ್ಞಾನ ತೇಹೀ ಜಾಣಪಣೇ। ಕಳೋ ಆಲೇ ॥೪೧॥

ಜೇಥೇ ಜಾಣಪಣ ಖುಂಟಲೇ। ತೇಥೇ ಬೋಲಣೇ ಹಿ ತುಟಲೇ।
ಹೇತುರಹಿತ ಜಾಲೇ। ಸಮಾಧಾನ ॥೪೨॥

ಶ್ರೋತೆ ಮ್ಹಣತೀ ಹೇ ಪ್ರಮಾಣ। ಜಾಲೇ ಪರಮ ಸಮಾಧಾನ।
ಪರೀ ಪಿಂಡ ಬ್ರಹ್ಮಾಂಡ ಐಕ್ಯ ಲಕ್ಷಣ। ಮಜ ನಿರೋಪಾವೇ ॥೪೩॥

ಬ್ರಹ್ಮಾಂಡೀ ತೇಚಿ ಪಿಂಡೀ ಅಸೆ। ಬಹುತ ಬೋಲತೀ ಐಸೇ।
ಪರಂತು ಯಾಚಾ ಪ್ರತ್ಯಯ ವಿಲಸೆ। ಐಸೇ ಕೇಲೇ ಪಾಹಿಜೆ ॥೪೪॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
"ಜಾಣಪಣ ನಿರೂಪಣ" ನಾಮ ಸಮಾಸ ಚತುರ್ಥ ॥

● ●

ಜ್ಞಾನಿ ಜನರು ನಿಜವಾಗಿ ಬುದ್ಧಿವಂತರಿರುವರು. ಅಜ್ಞಾನಿ ಜನರು ಹುಚ್ಚ ಮತ್ತು ಭಿಕಾರಿ [ದೀನ ಸ್ಥಿತಿಯುವ]ಇರುವರು. ಸ್ವರೂಪಾನುಭವ ಏನು ಹೇಗೆ ಇರುವದು,ಇದು ಜ್ಞಾನದಿಂದಲೇ ತಿಳಿಯುತ್ತುವದು.[೪೧] ಜ್ಞಾನದಿಂದ ಅಜ್ಞಾನದ ನಾಶವಾಗುವದು. ಮತ್ತು ಆಮೇಲೆ ಜ್ಞಾನವೂಸಹ ಸ್ವಸ್ವರೂಪದಲ್ಲಿ ವಿಲೀನವಾಗಿ ಹೋಗುವದು. "ನಾನು ದೇವ ಇರುವೆ" ಈ ಅನುಭವದಿಂದ "ನಾನು ದೇಹ ಇರುವೆ" ಈ ತಿಳುವಳಿಕಯು ಇಲ್ಲದಾಗುವದು ಆನಂತರ "ನಾನು ದೇವ ಇರುವೆ" ಈ ತಿಳುವಳಿಕೆಯೂ ಸಹ ಪರಬ್ರಹ್ಮದಲ್ಲಿ ಲೀನವಾಗುವದು. ಆಗ ಅಲ್ಲಿ ಭಾಷೆ ಮೌನತಾಳುವದು. ಅತ್ಯಂತ ವಾಸನಾರಹಿತವಾಗಿರುವಂಥ ಸಂಪೂರ್ಣ ಸಮಾಧಾನ ಲಭಿಸುವದು. (೪೨) **ಇನ್ನು ಮುಂದಿನ ಸಮಾಸದ ಪ್ರಸ್ತಾಪನೆಯನ್ನು ಮಾಡುವರು:**— ಮೇಲಿನ ವಿವೇಚನೆಯನ್ನು ಕೇಳಿ ಶ್ರೋತಾ ಜನಕ್ಕೆ ವಕ್ತಾನ ಹೇಳಿಕೆಯು ಸತ್ಯವೆಂದು ಪಟಾಯಿಸಿತು. ಅವರಿಗೆ ಆಗದೀ ಸಮಾಧಾನ ಪ್ರಾಪ್ತವಾಯಿತು. ಆಗ ಶ್ರೋತಾ ಜನ ಪಿಂಡ ವ ಬ್ರಹ್ಮಾಂಡ ಇವೆರಡೂ ಒಂದೇ ಹೇಗೆ? ಇದನ್ನು ಕೇಳುವ ಇಚ್ಛೆ ವ್ಯಕ್ತಪಡಿಸಿದರು.(೪೩) ಯಾವುದು ಪಿಂಡದಲ್ಲಿ ಇರುವದೋ, ಅದೇ ಬ್ರಹ್ಮಾಂಡದಲ್ಲಿ ಇರುವದು. ಹೀಗೆ ಬಹುಜನ ಅನ್ನುತ್ತಿರುವರು.ಇದರ ಖರೇ ಅರ್ಥವನ್ನು ನಮಗೆ ತಿಳಿಯುವಂತೆ ತಾವು ವಿವರಿಸಿ ಹೇಳಬೇಕಾಗಿ ವಿನಂತಿಸಿಕೊಂಡರು, (೪೪)

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದ ಒಂಭತ್ತನೆಯ ದಶಕದ "ಜಾಣಪಣ ನಿರೂಪಣ"ವೆಂಬ ಹೆಸರಿನ ನಾಲ್ಕನೆಯ ಸಮಾಸವು ಮುಗಿದುದು.

• •

### ಸಮಾಸ ಪಂಚಮ : ಅನುಮಾನ ನಿರ್ಶನ

॥ಶ್ರೀರಾಮ॥ಪಿಂಡಾಸಾರಿಖೀ ಬ್ರಹ್ಮಾಂಡರಚನಾ।ನಯೆ ಆಮುಚ್ಯಾ ಅನುಮಾನಾ।
ಪ್ರಚಿತ ಪಾಹಾತಾ ನಾನಾಮತೇ । ಭಾಂಬಾವತೀ ॥೧॥

ಜೇ ಪಿಂಡೀ ತೇ ಚಿ ಬ್ರಹ್ಮಾಂಡೀ । ಐಸೀ ಬೋಲಾವಯಾಚೀ ಪ್ರೌಢೀ ।
ಹೇ ವಚನ ಘಡೀನೇ ಘಡೀ । ತತ್ವಜ್ಞ ಬೋಲತೀ ॥೨॥

# ದಶಕ ೯. ಸಮಾಸ ೫. ಅನುಮಾನ ನಿರಸನ (ನುಡಿ ೪೧)

ಅದ್ವೈತ ವೇದಾಂತ ಮತ್ತು ತತ್ವಮ ತತ್ವಜ್ಞಾನಗಳಲ್ಲಿ ಎಷ್ಟು ಪ್ರಕಾರಗಳಿರುವವೋ ಅವುಗಳಲ್ಲಿ "ಯಾವುದು ಪಿಂಡದಲ್ಲಿ ಅದು ಬ್ರಹ್ಮಾಂಡದಲ್ಲಿ" ಅನ್ನುವ ತತ್ವವನ್ನು ಪ್ರಮಾಣವೆಂದು ತಿಳಿಯುವರು. ಈ ವಾಕ್ಯಕ್ಕೆ ಎರಡು ಅರ್ಥಗಳು ಇರುವವು. ಮೊದಲನೆಯ ಅರ್ಥವು ಹೀಗೆ ಇರುವದು· ಶರೀರದಲ್ಲಿ ಹರಿದಾಡುವ ಸದ್ವಸ್ತು ಅಂದರೆ ಆತ್ಮಾ ಮತ್ತು ವಿಶ್ವದಲ್ಲಿ ಹರಿದಾಡುವ ವಸ್ತು ಅಂದರೆ ಪರಮಾತ್ಮಾ ಇವೆರಡೂ ಒಂದೇ ಇರುವವು. ಛಾಂದೋಗ್ಯ ಉಪನಿಷತ್ತಿನ ಆರನೆಯ ಅಧ್ಯಾಯದಲ್ಲಿ ಶ್ವೇತಕೇತುವಿಗೆ ಅವನ ತಂದೆಯು ನದಿಗಳು, ಸಮುದ್ರ, ನೀರು, ಉಪ್ಪು ಇತ್ಯಾದಿ ಅನೇಕ ದೃಷ್ಟಾಂತಗಳನ್ನು ಹೇಳಿದನು. ದೃಶ್ಯವಿಶ್ವದ ಅಂತರ್ಯಾಮದಲ್ಲಿ ವಾಸ ಮಾಡು ವಂಥ ಪರಮಾತ್ಮ ಸ್ವರೂಪ ಅಥವಾ ತತ್ =ಅದು ಮತ್ತು ಅದರ ಸ್ವತಃದ ಅಂತರ್ಯಾಮದಲ್ಲಿ ವಾಸ ಮಾಡು ವಂಥ ಆತ್ಮಸ್ವರೂಪ ಅಥವಾ ತ್ವಮ್ (ನೀನು) ಎರಡೂ ಒಂದೇ ಇರುವವು. "ತತ್ ತ್ವಮ್ ಅಸಿ" ಇದು ಮಹಾ ವಾಕ್ಯವು ಇದನ್ನು ದೃಷ್ಟಾಂತ ದ್ವಾರದಿಂದ ತಿಳಿಸಿ ಕೊಟ್ಟಿರುವರು. ಜ್ಞಾನದಶಕ (ದಶಕ ೮) ದಲ್ಲಿ ಶ್ರೀ ಸಮರ್ಥರು ಈ ಮಹಾ ವಾಕ್ಯದ ಅರ್ಥವನ್ನು ಸಂಪೂರ್ಣ ವಿಚಾರ ಮಾಡಿದ್ದಾರೆ. ಇನ್ನು ಎರಡನೆಯ ಅರ್ಥವು ಹೀಗೆ:–ಈ ಎಲ್ಲ ದೃಶ್ಯ ವಿಶ್ವವು ಪಂಚ ಮಹಾಭೂತಗಳಿಂದ ತಯಾರಾಗಿದೆ. ಜಗತ್ತಿನೊಳಗಿರುವ ಪ್ರತಿಯೊಂದು ಪದಾರ್ಥವು ಪಂಚ ಭೂತಾತ್ಮಕವಿರುವದು. ಅರ್ಥಾತ್ ಪಿಂಡದಲ್ಲಿ (ಶರೀರದಲ್ಲಿ) ಮತ್ತು ಬ್ರಹ್ಮಾಂಡದಲ್ಲಿ ಎಲ್ಲ ಕಡೆಗೂ ಪಂಚಭೂತಗಳ ವಿಸ್ತಾರ (ಹರಡುವಿಕೆ) ಕಾಣುವದು· ತೈತ್ತರೀಯ ಉಪನಿಷತ್‌ದಲ್ಲಿ ಹೀಗೆ ಮಂತ್ರವಿರುವದು· "ಆತ್ಮನಃ ಆಕಾಶಃ ಸಂಭೂತಃ । ಆಕಾಶಾದ್ ವಾಯುಃ । ವಾಯೋಃ ಅಗ್ನಿಃ । ಅಗ್ನೇಃ ಆಪಃ । ಅದ್ಭ್ಯಃ ಪೃಥಿವೀ ಪೃಥಿವ್ಯಾ ಓಷಧಯಃ । ಓಷಧೀಭ್ಯಃ ಅನ್ನಮ್ । ಅನ್ನಾತ್ ಪುರುಷಃ ಅರ್ಥ:– "ಪರಮಾತ್ಮ ಸ್ವರೂಪದಿಂದ ಮೊದಲಿಗೆ ಆಕಾಶವು, ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ನೀರು, ನೀರಿನಿಂದ ಪೃಥ್ವಿ, ಪೃಥ್ವಿಯಿಂದ ವನಸ್ಪತಿ, ವನಸ್ಪತಿಯಿಂದ ಅನ್ನ, ಅನ್ನದಿಂದ ಪುರುಷ ಉತ್ಪನ್ನವಾದನು." ಈ ಎಲ್ಲ ದೃಶ್ಯವಿಶ್ವವು ಮತ್ತು ಅವರೊಳಗಿರುವ ಅಚೇತನ (ಜೀವವಿಲ್ಲದ) ಮತ್ತು ಸಚೇತನ (ಜೀವವಿರುವ) ವಾದ ಎಲ್ಲ ಪದಾರ್ಥಗಳು ಪಂಚ ಮಹಾಭೂತಗಳ ಮಿಶ್ರಣದಿಂದ ತಯಾರಾಗುವವು. ಈ ಮಿಶ್ರಣದ ಕ್ರಿಯೆಗೆ (ಕೆಲಸ, ಕಾರ್ಯ) ಪಂಚೀಕರಣ ಅನ್ನುವರು. ಈ ಸಮಾಸದಲ್ಲಿ ಶ್ರೀ ಸಮರ್ಥರು ಎರಡನೆಯ ಅರ್ಥದ ಬಗೆಗೆ ವಿವೇಚಿಸಿರುವರು.

## ದಶಕ ೯. ಸಮಾಸ ೫. ಅನುಮಾನ ನಿರಸನ (ನುಡಿ ೪೧)

ಈ ಸಮಾಸದ ಆರಂಭದಲ್ಲಿಯೇ ಶ್ರೋತಾ ಹೇಳುವದೇನಂದರೆ ಬ್ರಹ್ಮಾಂಡದ ರಚನೆಯು ಪಿಂಡದ (ದೇಹದ) ರಚನೆಯಂತೆ ಇರುವವೆಂದು ಬಹಳಷ್ಟು ಜನ ಹೇಳುವರು. ಆದರೆ ಅದರಂತೆ (ಅಂದಂತೆ) ಅನುಭವ ಬರುವದಿಲ್ಲ. ಉದಾ:- ವಿಷ್ಣುವು ಬ್ರಹ್ಮಾಂಡದ ಅಂತಃಕರಣವಾಗಿದ್ದಾನೆ. ಚಂದ್ರನು ಮನಸ್ಸಾಗಿದ್ದಾನೆ. ಬ್ರಹ್ಮನು ಬುದ್ಧಿಯಾಗಿ ದ್ದಾನೆ. ಮತ್ತು ರುದ್ರನು ಅಹಂಕಾರವಾಗಿರುವನೆಂದು ಹೇಳುವರು· ಆದರೆ ಇದರ ಪ್ರತೀತಿ (ಅನುಭವ) ಎಂದೂ ಬಂದಿಲ್ಲ. ಬರುವದೂ ಇಲ್ಲ. ಸುಮ್ಮನೇ ಶಾಸ್ತ್ರ ಹೇಳುವದೆಂದು ನಾವು ನಂಬುವದು ಯೋಗ್ಯವೆನಿಸುವದಿಲ್ಲ. ಆದ್ದರಿಂದ ಇದರ ಬಗ್ಗೆ ನಿಜವಿರುವ ವಿಷಯವನ್ನು ಗುರುಸ್ವಾಮಿಯೇ ನಮಗೆ ತಿಳಿಸಿಕೊಡುವವನಾಗು:–ಬ್ರಹ್ಮಾಂಡದ ರಚನೆಯು ಪಿಂಡ (ದೇಹ, ಶರೀರ)ದಂತೆ ಇರುವದು ಅನ್ನುವ ಮಾತು ನಮ್ಮ ಮನಕ್ಕೆ ಪಟಾಯಿಸುವದಿಲ್ಲ. ಪ್ರತ್ಯಕ್ಷ ಅನುಭವ ನೋಡಬೇಕೆಂದು ಹೋದರೆ ಅನೇಕ ಮತಗಳ ಗೊಂದಲವೇ ಎದ್ದು ಕಾಣುವದು. (೧)ಪಿಂಡದಲ್ಲಿ ಇದ್ದದ್ದೇ ಬ್ರಹ್ಮಾಂಡದಲ್ಲಿ ಇರುವದು. ಹೀಗೆ ಅನ್ನುವದು ಮಾತಿನ ಒಂದು ಶೈಲಿ [ಹೊಸ ಫ್ಯಾಶನ್] ಆಗಿದೆ. ಇಷ್ಟೇ ಅಲ್ಲ, ತತ್ವ ಚಿಂತಕರೂ ಸಹ ಈ ವಾಕ್ಯವನ್ನು ಮೇಲಿಂದ ಮೇಲೆ ಹೇಳುತ್ತಾರೆ [ಅಂದು ತೋರಿಸುವರು][೨]

ಪಿಂಡ ಬ್ರಹ್ಮಾಂಡ ಯೇಕ ರಾಹಾಟೀ । ಐಸೀ ಲೋಕಾಚೀ ಲೋಕಧಾಟೀ ।
ಪರೀ ಪ್ರತ್ಯಯಾಚೆ ಪರಿಪಾಟೀ । ತಗೋ ನ ಸಕೆ ॥೩॥

ಸ್ಥೂಳ ಸೂಕ್ಷ್ಮ ಕಾರಣ ಮಹಾಕಾರಣ। ಹೇ ಚ್ಯಾರೀ ಪಿಂಡೀಚೆ ದೇಹ ಜಾಣ।
ಹಿರಣ್ಯ ಅವ್ಯಾಕೃತ ಮೂಳಪ್ರಕೃತೀ ಹೇ ಖೂಣ। ಬ್ರಹ್ಮಾಂಡೀಚೀ ॥೪॥

ಹೇ ಶಾಸ್ತ್ರಧಾಟೀ ಜಾಣಾವೀ । ಪರೀ ಪ್ರಚಿತ ಕೈಸೀ ಆಣಾವೀ ।
ಪ್ರಚಿತ ಪಾಹಾತಾ ಗಥಾಗೋವೀ । ಹೋತ ಆಹೆ ॥೫॥

ಪಿಂಡೀ ಆಹೆ ಅಂತಃಕರಣ । ತರೀ ಬ್ರಹ್ಮಾಂಡೀ ವಿಷ್ಣು ಜಾಣ ।
ಪಿಂಡೀ ಬೋಲಿಜೇತೇ ಮನ । ತರೀ ಬ್ರಹ್ಮಾಂಡೀ ಚಂದ್ರಮಾ ॥೬॥

ಪಿಂಡೀ ಬುದ್ಧೀ ಐಸೇ ಬೋಲಿಜೆ । ತರೀ ಬ್ರಹ್ಮಾಂಡೀ ಬ್ರಹ್ಮಾ ಐಸೇ ಜಾಣಿಜೆ।
ಪಿಂಡೀ ಚಿತ್ತ ಬ್ರಹ್ಮಾಂಡೀ ವೊಳಖಿಜೆ । ನಾರಾಯೆಣು ॥೭॥

ಪಿಂಡೀ ಬೋಲಿಜೆ ಅಹಂಕಾರ । ಬ್ರಹ್ಮಾಂಡೀ ರುದ್ರ ಹಾ ನಿರ್ಧಾರ ।
ಐಸಾ ಬೋಲಿಲಾ ವಿಚಾರ । ಶಾಸ್ತ್ರಾಂತರೀ ॥೮॥

ತರೀ ಕೋಣ ವಿಷ್ಣೂಚೇ ಅಂತಃಕರ್ಣ । ಚಂದ್ರಾಚೇ ಕೈಸೆ ಮನ ।
ಬ್ರಹ್ಮಯಾಚೇ ಬುದ್ಧಿಲಕ್ಷಣ । ಮಜ ನಿರೋಪಾವೇ ॥೯॥

ನಾರಾಯೆಣಾಚೇ ಕೈಸೇ ಚಿತ್ತ । ರುದ್ರಅಹಂಕಾರಾಚಾ ಹೇತ ।
ಹಾ ವಿಚಾರ ಪಾಹೋನ ನೇಮಸ್ತ । ಮಜ ನಿರೋಪಾವಾ ॥೧೦॥

ಪ್ರಚೀತನಿಶ್ಚಯಾಪುಢೇ ಅನುಮಾನ । ಜೈಸೇ ಸಿಂಹಾಪುಢೇ ಆಲೇ ಸ್ವಾನ ।
ಖರ್‍ಯಾಪುಢೇ ಖೋಟೇ ಪ್ರಮಾಣ । ಹೋಈಲ ಕೈಸೇ ॥೧೧॥

ಪಿಂಡದ ವ್ಯವಹಾರ ಮತ್ತು ಬ್ರಹ್ಮಾಂಡದ ವ್ಯವಹಾರ ಎರಡೂ ಒಂದೇ ತರಹ ಇರುವವು. ಹೀಗೆ ಅನ್ನುವದು ಲೋಕದಲ್ಲಿಯ ಒಂದುಪದ್ಧತಿಯಾಗಿ ಬಿಟ್ಟಿರುತ್ತದೆ. ಆದರೆ ಇದರ(ನಿಜಾಂಶ) ಖರೇತನವನ್ನು ನೋಡುವ ಪ್ರಯತ್ನ ಮಾಡಿದರೆ ಇದು (ಈ ಸಿದ್ಧಾಂತವು) ವಸ್ತುಸ್ಥಿತಿಯ ಪರೀಕ್ಷೆಗೆ (ಅನುಭವದ ಒರೆಗಲ್ಲಿಗೆ) ಹಚ್ಚಿದರೆ ಟಿಕಾಯಿಸುವದಿಲ್ಲ.(೩) ಶಾಸ್ತ್ರದಲ್ಲಿ ವರ್ಣನೆ ಮಾಡಿದ ಪಿಂಡ ಬ್ರಹ್ಮಾಂಡದ ರಚನೆ ಮತ್ತು ಅದರ ವ್ಯವಹಾರ ಎರಡೂ ಪ್ರತ್ಯಕ್ಷ್ಯಾನುಭವದ ಒರೆಗಲ್ಲಿಗೆ ಹತ್ತುವದಿಲ್ಲ(ನಿಲ್ಲುವದಿಲ್ಲ)ವೆಂಬುದನ್ನು ತೋರಿಸಿಕೊಡುವರು:-ಪಿಂಡದಲ್ಲಿಯ ದೇಹಗಳು ನಾಲ್ಕು ಪ್ರಕಾರದವುಗಳು.೧)ಸ್ಥೂಲ ೨)ಸೂಕ್ಷ್ಮ ೩) ಕಾರಣ ೪) ಮಹಾಕಾರಣ. ಬ್ರಹ್ಮಾಂಡದಲ್ಲಿಯ ದೇಹಗಳು ನಾಲ್ಕು ಪ್ರಕಾರಗಳು:- ೧] ವಿರಾಟ ೨] ಹಿರಣ್ಯ ೩] ಅವ್ಯಾಕೃತ ೪]ಮೂಲ ಪ್ರಕೃತಿ ಹೀಗೆ ಶಾಸ್ತ್ರ ಹೇಳುವದು(೪) ಶಾಸ್ತ್ರದಲ್ಲಿ ಈ ಪ್ರಕಾರದ ವರ್ಣನೆ ಇರುವದು ನಿಜವೇ ಆಗಿದೆ.ಆದರೆ ಇದರ ಪ್ರತೀತಿ ಪ್ರತ್ಯಕ್ಷ ಅನುಭವ ಹೊಂದುವದು ಹೇಗೆ ಅನ್ನುವದು ಒಂದು ಪ್ರಶ್ನೆ ಇರುವದು. ಇದರ ಅನುಭವ ಪಡೆಯುವ ಪ್ರಯತ್ನ ಮಾಡಲಿಕ್ಕೆ ಹತ್ತಿದರೆ ಆಗ ಶಾಸ್ತ್ರದಲ್ಲಿ ಹೇಳಿದ ವರ್ಣನೆಯು (ಮೇಲೆ ವಿವರಿಸಿದ್ದು) ಕೇವಲ ಕಾಲ್ಪನಿಕವೆಂದು ಅನಿಸುವದು. [೫] ಹೀಗೆ ಕಾಲ್ಪನಿಕವಾಗಿ ಯಾಕೆ ಅನಿಸುವದು, ಇದನ್ನು ತಿಳಿಯಿರಿ. ಪಿಂಡದಲ್ಲಿ ಹೇಗೆ ಅಂತಃಕರಣವಿರುವದೋ. ಇದರಂತೆ ಬ್ರಹ್ಮಾಂಡದಲ್ಲಿ ವಿಷ್ಣುವಿದ್ದಾನೆ. ಅಂದರೆ ವಿಷ್ಣುವು ಬ್ರಹ್ಮಾಂಡದ ಅಂತಃಕರಣವಾಗುವನು. ಇದರಂತೆ ಪಿಂಡದಲ್ಲಿ ಹೇಗೆ ಮನವಿರುವದೋ ಇದರಂತೆ ಬ್ರಹ್ಮಾಂಡದಲ್ಲಿ ಚಂದ್ರನಿರುವನು.(೬) ಪಿಂಡದಲ್ಲಿ ಹೇಗೆ ಬುದ್ಧಿ ಇರುವದೋ ಇದರಂತೆ ಬ್ರಹ್ಮಾಂಡದಲ್ಲಿ ಬ್ರಹ್ಮದೇವನಿರುವನು. ಪಿಂಡದಲ್ಲಿ ಹೇಗೆ ಚಿತ್ತವಿರುವದೋ ಬ್ರಹ್ಮಾಂಡದಲ್ಲಿ ನಾರಾಯಣನಿರುವನು. [೭] ಪಿಂಡದಲ್ಲಿ ಹೇಗೆ ಅಹಂಕಾರವಿರುವದೋ ಇದರಂತೆ ಬ್ರಹ್ಮಾಂಡದಲ್ಲಿ ನಿಃಸಂಶಯವಾಗಿ ರುದ್ರನಿರುವನು. ಹೀಗೆ ಶಾಸ್ತ್ರದಲ್ಲಿ ವರ್ಣನೆ ಇರುವದು ಕಂಡು ಬರುವದು. [೮] ಇದರ ಮೇಲೆ ಈ ಪ್ರಕಾರ ಸಂಶಯ [ಶಂಕಾ] ಬರುವದು. ವಿಷ್ಣುವಿನ ಅಂತಃಕರಣವಾವದಿರುವದು? ಚಂದ್ರನ ಮನ ಹೇಗಿರುವದು ಬ್ರಹ್ಮನ ಬುದ್ಧಿಯ ಲಕ್ಷಣಗಳೇನು? [೯] ನಾರಾಯಣನ ಚಿತ್ತವು ಹೇಗಿರುವದು? ರುದ್ರನ ಅಹಂಕಾರದ ಸ್ವರೂಪವೆಂಥದು? ಈ ಎಲ್ಲ ಪ್ರಶ್ನೆಗಳಿಗೆ ವಿಚಾರ ಪೂರ್ವಕ ಮತ್ತು ನಿಶ್ಚಯಾತ್ಮಕ ಉತ್ತರವನ್ನು ಸ್ವಾಮಿರಾಯಾ ನನಗೆ ತಿಳಿಯುವಂತೆ ತಿಳಿಸಿ ಕೊಡುವವನಾಗು! [೧೦] ಸಿಂಹದ ಮುಂದೆ ನಾಯಿಯ ಕಿಮ್ಮತ್ತು ಕಡಿಮೆ ಇರುವದು. ಇದರಂತೆ ಪ್ರತ್ಯಕ್ಷ ಅನುಭವದೊಳಗಿಂದ ನಿರ್ಮಾಣವಾಗುವ ನಿಶ್ಚಯಾತ್ಮಕವಾದ ಜ್ಞಾನದ ಮುಂದೆ ಕೇವಲ ಅನುಮಾನದ ಕಿಮ್ಮತ್ತು ಅಗದೀ ಕಡಿಮೆ ಇರುವದು. ಖರೆಯತನದ ಮುಂದೆ ಖೊಟ್ಟಿ ಸುಳ್ಳುತನವನ್ನು ಯಾರೂ ಪ್ರಮಾಣವೆಂದು ನಂಬಲಾರರು. ಈ ಓವಿ ಮತ್ತು ಮುಂದಿನ ಹತ್ತು ಓವಿಗಳ ಮೇಲಿಂದ ಶ್ರೀ ಸಮರ್ಥರಲ್ಲಿಯ ವಿಜ್ಞಾನ ಪ್ರಧಾನ ದೃಷ್ಟಿಕೋನದ ಅರಿವು ಲಕ್ಷ್ಯದಲ್ಲಿ ಬರುವದು. ವಿಜ್ಞಾನವೆಂದರೆ ನಿರೀಕ್ಷಣ ಮತ್ತು ಪ್ರಯೋಗ ಇವುಗಳಿಂದ ಸಿದ್ಧವಾದಂಥ ಜ್ಞಾನವು ಇಂಥ ಸಿದ್ಧ ಸಿದ್ಧಾಂತಗಳು ಮಾತ್ರ ಭೂತ,ಭವಿಷ್ಯ ವ ವರ್ತಮಾನ ಘಟನೆಗಳಿಗೂ ಸಹ ನಿಶ್ಚಿತ ಮತ್ತು ನಿಃಸಂದೇಹವಾದ ಅರ್ಥವನ್ನು ಹೇಳುವವು. ಇಂಥ ಸಿದ್ಧಾಂತಗಳ ಬಗ್ಗೆ ನನಗೆ ಹೀಗೆ ಅನಿಸುವದು, ನಿನಗೆ ಹೀಗೆ ಅನಿಸುವದು. ಇಂಥ ಜೊಳ್ಳು ಮತ್ತು ನಿರರ್ಥಕವಾದ ಅನುಮಾನಗಳಿಗೆ ಎಳ್ಳಷ್ಟೂ ಸ್ಥಾನವಿಲ್ಲ. ಈ ಸಿದ್ಧಾಂತ ಸರ್ವಜ್ಞಾನಿಷ್ಠರು ಪರಿಗೂ ಪ್ರಮಾಣವೆನಿಸುವದು. ಎಲ್ಲ ಸಂತರ ಗ್ರಂಥಗಳು ಒಂದೇ ಪರಮಾತ್ಮ ವಸ್ತುವನ್ನು ಬುದ್ಧಿ ನಿಷ್ಠವಾಗಿ ವರ್ಣನೆ ಮಾಡುವವು. ಈ ಮಾತು ಅಗದೀ ಖರೇ ಇರುವದು. ಆದರೆ ಅದರೊಳಗೂ ಪಾರಮಾರ್ಥಿಕ ಘಟನೆಗಳಿಗೆ ಪುರಾವೆ [ಆಧಾರ] ಮತ್ತು ಸೂಕ್ಷ್ಮ ಸ್ವಾನುಭವದ ಆಧಾರ ತೆಗೆದುಕೊಳ್ಳದ ಹೊರತು ಕೇವಲ ವಚನ [ಮಾತು] ಮಾತಾಡುವಂತಿಲ್ಲ. ಮಾತಾಡಬಾರದು ಅನ್ನುವದು ಶ್ರೀಸಮರ್ಥರಲ್ಲಿಯೇ ಹೆಚ್ಚು ಸ್ಪಷ್ಟವಾಗಿ ಕಂಡು ಬರುವದು. ಇದರೀದ ವಿಷಯದ ವಿವೇಚನೆ ಮಾಡುವ ಭರದಲ್ಲಿ ಪರಮಾರ್ಥದ ಬಗ್ಗೆ ಮತ್ತು ದೇವರ ಬಗ್ಗೆ ಇರುವ ಭ್ರಾಮಕ ಲೋಕ ಸಮಜೂತಿ (ತಿಳವಳಿಕೆ)ಯ ಮೇಲೆ ಇವರು ಬಹಳ ಕಠೋರವಾಗಿ ಮಾತಿನ ಪ್ರಹಾರ ಮಾಡಿದ್ದಾರೆ. [೧೧]

ಪರೀ ಯಾಸ ಪಾರಖೀ ಪಾಹಿಜೆ । ಪಾರಖೀನೇ ನಿಶ್ಚಯು ಲಾಹಿಜೆ ।
ಪರೀಕ್ಷಾ ನಸ್ತಾ ರಾಹಿಜೆ । ಅನುಮಾನ ಸಂಶಈ ॥೧೨॥

ವಿಷ್ಣು ಚಂದ್ರ ಆಣೀ ಬ್ರಹ್ಮಾ । ನಾರಾಯೆಣ ಆಣೀ ರುದ್ರನಾಮಾ ।
ಯಾ ಪಾಂಚಾಚೀ ಅಂತಃಕರ್ಣ ಪಂಚಕೇ ಆಮ್ಹಾ । ಸ್ವಾಮೀ ನಿರೋಪಾವೀ ॥೧೩॥

ಯೇಥೇ ಪ್ರಚಿತ ಹೇ ಪ್ರಮಾಣ । ನಲಗೆ ಶಾಸ್ತ್ರಾಚಾ ಅನುಮಾನ ।
ಅಥವಾ ಶಾಸ್ತ್ರೀ ತರೀ ಪಾಹೋನ । ಪ್ರತ್ಯಯೋ ಆಣಾವಾ ॥೧೪॥

ಪ್ರಚಿತೀವೀಣ ಜೇ ಬೋಲಣೇ । ತೇ ಅವಘೇ ಚಿ ಕಂಟಾಳವಾಣೇ ।
ತೋಂಡ ಪಸರೂನ ಜೈಸೇ ಸುಣೇ । ರಡೋನ ಗೇಲೇ ॥೧೫॥

ತೇಥೇ ಕಾಯೆ ಹೋ ಏಕಾವೇ । ಆಣೀ ಕಾಯೆ ಶೋಧೂನ ಪಾಹಾವೇ ।
ಜೇಥೇ ಪ್ರತ್ಯಯಾಚ್ಯಾ ನಾವೇ । ಸುನ್ಯಾಕಾರ ॥೧೬॥

ಆವಘೆ ಆಂಧಳೇ ಚಿ ಮಿಳಾಲೆ । ತೇಥೇ ಡೋಳಸಾಚೇ ಕಾಯ ಚಾಲೆ ।
ಅನುಭವಾಚೆ ನೇತ್ರ ಗೇಲೆ । ತೇಥೇ ಅಂಧಕಾರ ॥೧೭॥

ನಾಹೀ ದುಗ್ಧ ನಾಹೀ ಪಾಣೀ । ಕೇಲೀ ವಿಷ್ಮೇಚೀ ಸಾರಣೀ ।
ತೇಥೇ ನಿವಡಾಯಾಚೆ ಧನೀ । ತೇ ಏಕ ಡೊಂಬಕಾವಳೇ ॥೧೮॥

ಆಪುಲೆ ಇಚ್ಛೇನೇ ಬೋಲಿಲೇ । ಪಿಂಡಾಏಸೇ ಬ್ರಹ್ಮಾಂಡ ಕಲ್ಪಿಲೇ ।
ಪರೀ ತೇ ಪ್ರಚೀತೀಸ ಆಲೇ । ಕೋಣ್ಯಾ ಪ್ರಕಾರೇ ॥೧೯॥

ಮ್ಹಣೋನ ಹಾ ಅವಘಾ ಚ ಅನುಮಾನ । ಅವಘೇ ಕಲ್ಪನೇಚೇ ರಾನ ।
ಭಲೀ ನ ಘ್ಯಾವೇ ಆಡರಾನ । ತಸ್ಕರೀ ಘ್ಯಾವೇ ॥೨೦॥

ಕಲ್ಪೂನ ನಿರ್ಮಿಲೇ ಮಂತ್ರ । ದೇವ ತೇ ಕಲ್ಪನಾಮಾತ್ರ ।
ದೇವ ನಾಹೀ ಸ್ವತಂತ್ರ । ಮಂತ್ರಾಧೇನ ॥೨೧॥

ಆದರೆ ಪ್ರತೀತಿ [ಅನುಭವದ]ಯ ಮಹತ್ವ ಲಕ್ಷ್ಯದಲ್ಲಿ ಬರಬೇಕಾದರೆ ನಿಜವಾದ ಪರೀಕ್ಷಕ ಬೇಕಾಗುವದು. ಚನ್ನಾಗಿ ವಿವರವಾಗಿ ಪರೀಕ್ಷೆ ಮಾಡಿದ್ದಾದರೆ ನಿಜವಾದದ್ದು ಯಾವದಿರುವದೆನ್ನುವದರ ನಿಶ್ಚಯ ಮಾಡಲಿಕ್ಕೆ ಬರುವದು. ಹೀಗೆ ಪರೀಕ್ಷೆ ಮಾಡದಿದ್ದರೆ ಮನುಷ್ಯನು ಅನುಮಾನದ ಸಂಶಯ ಜಾಲದಲ್ಲಿ ತೊಡಕಿಕೊಳ್ಳುವನು. [೧೨] ವಿಷ್ಣು,ಚಂದ್ರ,ಬ್ರಹ್ಮದೇವ, ನಾರಾಯಣ, ಮತ್ತು ರುದ್ರ ಈ ಐದು ದೇವತೆಗಳಿಗೆ ಯಾವ ಐದು ಅಂತಃಕರುಣಗಳಿರುವವೋ ಅವನ್ನು ಗುರುನಾಥಾ ನಮಗೆ ಹೇಳಿ ತಿಳಿಸಿ ಕೊಡುವವನಾಗು! [೧೩] ಈ ವಿಷಯದಲ್ಲಿ ಕೇವಲ ಪ್ರತ್ಯಕ್ಷ ಅನುಭವಗಳದೇ ಪುರಾವೆ ಇರಬೇಕು. ಶಾಸ್ತ್ರಗಳು ತೆಗೆದ ಸಂಶಯ ಅನುಮಾನಗಳಿಗೆ ಇಲ್ಲಿ ಮಹತ್ವವಿಲ್ಲ. ಅಥವಾ ಶಾಸ್ತ್ರಗಳು ಹೇಳಿದ ವಿಚಾರವನ್ನು ಸ್ವೀಕರಿಸುವದೇ ಆದರೆ ಆ ಮಾತು ಪ್ರತ್ಯಕ್ಷ ಅನುಭವದಿಂದ ಸಿದ್ಧವಾಗಲಿಕ್ಕೇಬೇಕು. [೧೪] ಸ್ವತಃ ಅನುಭವ ಪಡೆಯದ ಹೊರತು ಬರೇ ಸಿದ್ಧಾಂತದ ಮಾತನ್ನು ಆಡುತ್ತ ಹೊರಡುವದೆಂದರೆ ಅದು ಕೇವಲ ಶಬ್ದಜಾಲದ ಪಾಂಡಿತ್ಯವೆನಿಸಿ ಬೇಸರ ತರಿಸುವದು. ಬಾಯಿ ತೆರೆದು ಆ ಎಂದು ಒಂದು ನಾಯಿ ಒದರಿ ಅತ್ತರೆ ಅದನ್ನು ಕೇಳಲಿಕ್ಕೆ ಆಗುವದಿಲ್ಲ–ಬೇಜಾರು ಬರುವದು. ಇದರಂತೆ ಒಣ ಪಾಂಡಿತ್ಯದ ಪ್ರಕಾರವಿರುವದು. [೧೫] ಮಾತನಾಡುವ ಮಾತಿನಲ್ಲಿ ಅನುಭವದ ಹೆಸರಿನಲ್ಲಿ ಶೂನ್ಯ [ಪೂಜ] ಇದ್ದರೆ ಆ ಮಾತುಗಳನ್ನು ಕೇಳುವದರಲ್ಲಿ ಯಾವ ಅರ್ಥವೂ ಇರುವದಿಲ್ಲ. ಹಾಗೂ ಈ ಜೊಳ್ಳು ಮಾತಿನ ಮೇಲೆ ಮನನ ಮಾಡಿದರೆ ಅದರಿಂದ ಯಾವ ನಿಶ್ಚಿತವಾದ ಜ್ಞಾನವೂ ಆಗುವದಿಲ್ಲ. (೧೬) ಯಾವ ಸಮೂಹದಲ್ಲಿ ಎಲ್ಲರೂ ಕುರುಡರೇ ಇರುವರೋ ಅಂಥಲ್ಲಿ ಒಬ್ಬ ಕಣ್ಣದ್ದ ಮನುಷ್ಯನು ಬಂದರೆ=ಇದ್ದರೆ ಅವನ ಮಾತನ್ನು ಯಾರೂ ಕೇಳುವದಿಲ್ಲ. ಇದರಂತೆಯೇ ಸ್ವಾನುಭವದ ಜ್ಞಾನನೇತ್ರ ಇಲ್ಲದಂಥಲ್ಲಿ ಸ್ವರೂಪದ ಬಗ್ಗೆ ಎಲ್ಲವೂ ಅಂಧಕಾರವಾಗಿಯೇ ಕಂಡು ಬರುವದು. ದೇಹಬುದ್ಧಿಯ ಜನರು ಸ್ವರೂಪದ ಬಾಬತಿನಲ್ಲಿ ಕುರುಡರೇ ಇರುವರು. ಇವರಿಗೆ ಸ್ವರೂಪ ವರ್ಣನೆ ತಿಳಿಯುವದಾಗಲೀ ಅದು ಪಟಾಯಿಸುವದಾಗಲೀ ಸುಲಭದ್ದಲ್ಲ. ಕಠಿಣವೇ ಇರುವದು.[೧೭] ಆತ್ಮಬುದ್ಧಿಯ ಸ್ವಾನುಭವಿ ಪುರುಷನು ರಾಜಹಂಸದಂತೆ ಇರುವನು. ಇವನು ಸಾರ ಅಸಾರಗಳನ್ನು ಸರಿಯಾಗಿ ಆರಿಸಿ ತೆಗೆಯುವನು. ದೇಹ ಬುದ್ಧಿಯ ಜನರು ಮಾತ್ರ ಡೊಂಬರ ಕಾಗೆಯಂತೆ ಇರುವರು. ಇವರು ದೃಶ್ಯದ ಹೊಲಸನ್ನು ಕಿವುಚುತ್ತ ಕೂಡ್ರುವರು. ಆದ್ದರಿಂದ ಹಾಲು ಮತ್ತು ನೀರು ಇದರ ಮಿಶ್ರಣದ ಬದಲು ಹೊಲಸನ್ನು ಕೂಡಿಸಿ ಇದನ್ನು ಎದುರಿಗೆ ಇಟ್ಟರೆ ಅದರಲ್ಲಿಯದನ್ನು ಆರಿಸುವದಕ್ಕಾಗಿ ರಾಜಹಂಸದ ಅವಶ್ಯಕತೆಯೇ ಇರುವದಿಲ್ಲ. ಯಾಕೆಂದರೆ ಹೊಲಸಿನಲ್ಲಿಯದನ್ನು ಆರಿಸಿ ತೆಗೆಯುವಲ್ಲಿ ದೊಂಬರ ಕಾಗೆಯೇ ಬಹಳ ಪ್ರವೀಣವಿರುತ್ತದೆ. (೧೮) ಪಿಂಡದಂತೆಯೇ ಬ್ರಹ್ಮಾಂಡದ ರಚನೆ ಇರುವದೆಂದು ಕಲ್ಪನೆ ಮಾಡಿಕೊಳ್ಳುವದು. ಮತ್ತು ತಮ್ಮ ಮನಸ್ಸಿಗೆ ಬಂದಂತೆ ಅದನ್ನು ಮಾತಾಡಿ ತೋರಿಸುವದು. ಇವರ ಪದ್ಧತಿಯಾಗಿದೆಯೆಂದು ಕಾಣುವದು. ನಾವು ಮಾತಾಡಿದ್ದಕ್ಕೆ ಪುರಾವೆ ಯಾವುದು ಮತ್ತು ಅದರ ಅನುಭವ ಪಡೆಯುವದು ಹೇಗೆಂಬುದನ್ನು ಮಾತ್ರ ಯಾರೂ ಹೇಳುವದಿಲ್ಲ. [೧೯] "ಯಾವುದು ಪಿಂಡದಲ್ಲಿರುವದೋ ಅದೇ ಬ್ರಹ್ಮಾಂಡದಲ್ಲಿ" ಅನ್ನುವದೆಲ್ಲ ಅನುಮಾನದ ಆಟವಿರುವದು. ಇದು ಭಯಂಕರ ಕಲ್ಪನೆಯ ಜಂಗಲ್ ಇರುವದು. ಉತ್ತಮ ಜನರು ಇಂಥ ಅರಣ್ಯದಲ್ಲಿ ಹೋಗಬಾರದು. ಚೋರರು ಮಾತ್ರ ಸಂಚಾರ ಮಾಡಬೇಕು. [೨೦] ನಾವು ಯಾವ ದೇವರನ್ನು ಮನ್ನಿಸುವೆವೊ ಆ ದೇವರುಗಳೂ ಸಹ ಹೀಗೆಯೇ ಕಾಲ್ಪನಿಕವಿರುವವು. ಇವುಗಳ ಅಸ್ತಿತ್ವದಬಗ್ಗೆ ಹೇಗೆ ಪ್ರಶ್ನೆಗಳು ನಿರ್ಮಾಣವಾಗುವವು? ಇದರವಿವರವನ್ನು ಸವಿಸ್ತಾರವಾಗಿ ಹೇಳುವರು. ಯಾವನಾದರೊಬ್ಬನ ಮನದಲ್ಲಿ ಕಲ್ಪನೆ ಹುಟ್ಟುವದು. ಮತ್ತು ಅವನು ಮಂತ್ರ ರಚಿಸುವನು. ಆ ಮಂತ್ರದ ದೇವತೆಯೂ ಸಹ ಕಲ್ಪನೆಯಿಂದ ನಿರ್ಮಾಣವಾದದ್ದೇ ಇರುವದು. ಮಂತ್ರದಿಂದಲೇ ಆ ದೇವತೆಯ ಪ್ರಾಣಪ್ರತಿಷ್ಠಾ ಮಾಡುವದು. ಇದರ ಅರ್ಥವೇನಂದರೆ, ದೇವತೆಗಳು ಸ್ವತಂತ್ರರಿರುವದಿಲ್ಲ. ಮಂತ್ರದ ಆಧೀನರಿರುವರು. [೨೧]

ಯೇಥೇ ನ ಬೋಲತಾ ಜಾಣಾವೇ । ಬೋಲಣೇ ವಿವೇಕಾ ಆಣಾವೇ ।
ಆಂಧಳೇ ಪಾಉಲೀ ವೊಳಖಾವೇ । ವಿಚಕ್ಷಣೇ ॥೨೨॥

ಜಯಾಸ ಜೈಸೇ ಭಾಸಲೇ । ತೇಣೇ ತೈಸೇ ಕವಿತ್ವ ಕೇಲೇ ।
ಪರೀ ಹೇ ಪಾಹಿಜೆ ನಿವಡಿಲೇ । ಪ್ರಚಿತೀನೇ ॥೨೩॥

ಬ್ರಹ್ಮಯಾನೇ ಸಕಳ ನಿರ್ಮಿಲೇ । ಬ್ರಹ್ಮಯಾಸ ಕೋಣೇ ನಿರ್ಮಾಣ ಕೇಲೇ ।
ವಿಷ್ಣೂನೇ ವಿಶ್ವ ಪಾಳಿಲೇ । ವಿಷ್ಣೂಸ ಪಾಳಿತಾ ಕವಣು ॥೨೪॥

ರುದ್ರ ವಿಶ್ವಸಂಹಾರಕರ್ತಾ । ಪರೀ ಕೋಣ ರುದ್ರಾಸ ಸಂಹಾರಿತಾ ।
ಕೋಣ ಕಾಳಾಚಾ ನಿಯಂತಾ । ಕಳಲಾ ಪಾಹಿಜೆ ॥೨೫॥

ಯಾಚಾ ಕಳೇನಾ ವಿಚಾರ । ತೋ ಅವಘಾ ಅಂಧಕಾರ ।
ಮ್ಹಣೋನಿಯಾ ಸಾರಾಸಾರ । ವಿಚಾರ ಕರಣೇ ॥೨೬॥

ಬ್ರಹ್ಮಾಂಡ ಸ್ವಭಾವೇ ಚಿ ಜಾಲೇ । ಪರಂತು ಹೇ ಪಿಂಡಾಕಾರ ಕಲ್ಪಿಲೇ ।
ಕಲ್ಪಿಲೇ ಪರೀ ಪ್ರತ್ಯಯಾ ಆಲೇ । ನಾಹೀ ಕದಾ ॥೨೭॥

ಪಾಹಾತಾ ಬ್ರಹ್ಮಾಂಡಾಚೀ ಪ್ರಚಿತೀ । ಕಿತ್ಯೇಕ ಸಂಶಯು ಉಠತೀ ।
ಹೇ ಕಲ್ಪನಿಕ ಶ್ರೋತೀ । ನೇಮಸ್ತ ಜಾಣಾವೇ ॥೨೮॥

ಪಿಂಡಾಸಾರಿಖೀ ಬ್ರಹ್ಮಾಂಡರಚನಾ । ಕೋಣ ಆಣಿತೋ ಅನುಮಾನಾ ।
ಬ್ರಹ್ಮಾಂಡೀ ಪದಾರ್ಥ ನಾನಾ । ತೇ ಪಿಂಡೀ ಕೈಚೇ ॥೨೯॥

ಔಟ ಕೋಟೀ ಭೂತಾವಳೀ । ಔಟ ಕೋಟೀ ತೀರ್ಥಾವಳೀ ।
ಔಟ ಕೋಟೀ ಮಂತ್ರಾವಳೀ । ಪಿಂಡೀ ಕೋಠೇ ॥೩೦॥

ತೇತೀಸ ಕೋಟೀ ಸುರವರ । ಅಠ್ಯಾಂಸಿಸಹಸ್ರ ಋಷೇಶ್ವರ ।
ನವಕೋಟೀ ಕಾತ್ಯಾಯಣೀಚಾ ವಿಚಾರ । ಪಿಂಡೀ ಕೋಠೇ ॥೩೧॥

ಚ್ಯಾಮುಂಡಾ ಛಪನ್ನ ಕೋಟೀ । ಕಿತ್ಯೇಕ ಜೀವ ಕೋಟ್ಯಾನುಕೋಟೀ ।
ಚೌರ್ಯಾಸೀಲಕ್ಷ ಯೋನೀಚೀ ದಾಟೀ । ಪಿಂಡೀ ಕೋಠೇ ॥೩೨॥

ಬ್ರಹ್ಮಾಂಡೀ ಪದಾರ್ಥ ನಿರ್ಮಾಣ ಜಾಲೇ । ಪೃಥಕಾಕಾರೇ ವೇಗಳಾಲೇ ।
ತೇ ಹಿ ತಿತುಕೆ ನಿರೋಪಿಲೇ। ಪಾಹಿಜೇತ ಪಿಂಡೀ ॥೩೩॥

ಜಿತುಕ್ಯಾ ಔಷಧೀ ತಿತುಕೀ ಫಳೇ । ನಾನಾ ಪ್ರಕಾರೀ ರಸಾಳೇ ।
ನಾನಾ ಬೀಜೇ ಧಾನ್ಯೇ ಸಕಳೇ । ಪಿಂಡೀ ನಿರೋಪಾವೀ ॥೩೪॥

ಈ ಮಾತುಗಳು ಸ್ಪಷ್ಟವಾಗಿ ಮಾತಾಡಲಿಕ್ಕೆ ಬಾರದಂಥವು ಇರುವವು. ಇದನ್ನು ಮನದಲ್ಲಿಯೇ ತಿಳಿದು ಕೊಂಡು ಸುಮ್ಮನಿರಬೇಕು. ಶಾಸ್ತ್ರಗಳೇ ಇರಲಿ ಅಥವಾ ಯಾವೊಬ್ಬ ಪಂಡಿತನೇ ಇರಲಿ, ಇವರ ಹೇಳಿಕೆಯಲ್ಲಿಯ ಖರೇ ಮತ್ತು ಖೊಟ್ಟಿ[ಸುಳ್ಳು]ಇದನ್ನು ಆರಿಸಿ ತಿಳಿಯಿರಿ. ನಡೆಯುವದರ ಮೇಲಿಂದ ಮನುಷ್ಯನು ಕುರುಡನಿರುವನೆಂಬು ದನ್ನು ಬುದ್ಧಿವಂತ ಮನುಷ್ಯನು ತಿಳಿದುಕೊಳ್ಳುವನು. ಇದರಂತೆ ಮಾತಾಡಿದ ಮಾತುಗಳು ಅನುಭವಯುಕ್ತವಿರುವವೋ ಅಥವಾ ಇಲ್ಲವೋ, ಅನ್ನುವದನ್ನು ಗುರುತಿಸಿ ಅಂಥವನ್ನು ಪ್ರಮಾಣವೆಂದು ತಿಳಿಯಬೇಕು. (೨೨) ಮನುಷ್ಯನು ತನಗೆ ಹೊಳೆದಂತೆ ಕಾವ್ಯರೂಪದಿಂದ ದೇವತಾ ವರ್ಣನೆಯನ್ನು ಮಾಡುವನು. ಅಥವಾ ವಸ್ತುವಿನ ವರ್ಣನೆಯನ್ನು ಮಾಡು ವನು. ಆದರೆ ಅವನ ಆ ಮಾತುಗಳು ನಿಜವಿರುವವೋ, ಅಥವಾ ಇಲ್ಲವೋ ಅನ್ನುವದನ್ನು ಅನುಭವದಿಂದ ನಿರ್ಣಯ ಮಾಡಬೇಕು. (೨೩) ಉದಾ:- ಬ್ರಹ್ಮದೇವನು ಈ ಎಲ್ಲ ವಿಶ್ವವನ್ನು ನಿರ್ಮಾಣ ಮಾಡಿರುವನು. ಅಂತಾ ಅಂದ ದ್ದಾದರೆ ಆ ಬ್ರಹ್ಮದೇವನನ್ನು ಯಾರು ನಿರ್ಮಾಣ ಮಾಡಿದರು? ಅನ್ನುವ ಪ್ರಶ್ನೆ ಬರುವದು. ವಿಷ್ಣುವು ವಿಶ್ವದ ಸಂರಕ್ಷಣೆ ಮಾಡುವನು. ಹೀಗೆ ಅಂದದ್ದಾದರೆ ಆ ವಿಷ್ಣುವನ್ನು ಯಾರು ಸಂರಕ್ಷಣ ಮಾಡುವರು? ಅನ್ನುವ ಪ್ರಶ್ನೆ ಸಹಜವಾಗಿ ಬರುವದು. (೨೪) ರುದ್ರ ಅಥವಾ ಶಂಕರನು ವಿಶ್ವದ ಸಂಹಾರ ಮಾಡುವವನು ಎಂದು ಅಂದದ್ದಾದರೆ ಆ ರುದ್ರನ ಸಂಹಾರವನ್ನು ಯಾರು ಮಾಡುವರು? ಅನ್ನುವ ಪ್ರಶ್ನೆಯು ಬರುವದು. ಕಾಲನು ಎಲ್ಲದರ ನಿಯಮನ ಮಾಡುವ ನಿಯಂತಾ ಇರುವನು ಎಂದು ಅಂದದ್ದಾದರೆ ಕಾಲನ ನಿಯಂತಾ ಯಾರು? ಅನ್ನುವ ಪ್ರಶ್ನೆ ಬರುವದು(೨೫) ಈ ಎಲ್ಲ ಪ್ರಶ್ನೆಗಳಿಗೆ ಉತ್ತರ ಕೊಡಲಿಕ್ಕೆ ಎಲ್ಲಿಯವರೆಗೆ ಬರುವದಿಲ್ಲವೋ ಅಲ್ಲಿಯವರೆಗೂ ಸಂಪೂರ್ಣ ಅಜ್ಞಾನದ ಅಂಧಃಕಾರವಿರುವದೆಂದು ತಿಳಿದು ಸುಮ್ಮನಿರಬೇಕು. ಮತ್ತು ಇವೆಲ್ಲವನ್ನೂ ತಿಳಿಯುವದಕ್ಕಾಗಿ ಆತ್ಮಾನಾತ್ಮ ವಿಚಾರ ಮಾಡಲಿಕ್ಕೆ ಪ್ರಾರಂಭಿಸಬೇಕು. (೨೬) ಇದರ ನಂತರ "ಯಾವುದು ಪಿಂಡದಲ್ಲಿದೆಯೋ ಅದು ಬ್ರಹ್ಮಾಂಡದಲ್ಲಿದೆ" ಈ ಮಾತು ನಿಜವಿರುವದೆಂದು ನಂಬುವಲ್ಲಿ ಯಾವ ಅಡಚಣೆಗಳು ಬರುವವೆಂಬುದನ್ನು ವರ್ಣಿಸಿದ್ದಾರೆ:- ಬ್ರಹ್ಮಾಂ ಡವು ತನ್ನಷ್ಟಕ್ಕೆ ತಾನೇ ನಿರ್ಮಾಣವಾಗಿದೆ. [ಇದನ್ನು ಸಹೇತು ಪುರಸ್ಪರವಾಗಿ ಮಾಡಿದರೆಂದು ಅನ್ನಲಿಕ್ಕೆ ಬರು ವದಿಲ್ಲ]. ಆದರೆ ಇದರ ರಚನೆಯು ಪಿಂಡದಂತಿರುವದೆಂದು ಕೆಲವರು ಕಲ್ಪನೆಯನ್ನು ಮಾಡಿರುವರು. ಹೀಗೆ ಕಲ್ಪನೆ ಯನ್ನೇನೋ ಮಾಡಿದ್ದು ನಿಜವಿರುವದು. ಆದರೆ ಇದು ನಿಜವಿರುವದೆಂಬ ಅನುಭವವು ಮಾತ್ರ ಎಂದೂ ಯಾರಿಗೂ ಬಂದಿರುವದಿಲ್ಲ. (೨೭) ನಿಜವಾಗಿ ಬ್ರಹ್ಮಾಂಡವು ಪಿಂಡದಂತೆ ಇರುವದೋ ಹೇಗೆ? ಇದರ ಶೋಧ ಮಾಡಲಿಕ್ಕೆ ಹತ್ತಿದರೆ ಅಲ್ಲಿ ಸಂಶಯಗಳು ಬಹಳಷ್ಟು ನಿರ್ಮಾಣವಾಗುವವು. ಆದ್ದರಿಂದ ಇದು ಕೇವಲ ಕಲ್ಪನೆ ಇರುವದು. ಇದರಲ್ಲಿ ಸಂಶಯವಿಲ್ಲವಾದ್ದರಿಂದ ಶ್ರೋತಾಜನರು ನಿಶ್ಚಿತವಾಗಿ ಇದು ಕಲ್ಪನೆ ಎಂದು ತಿಳಿಯಿರಿ. (೨೮) ಬ್ರಹ್ಮಾಂ ಡದ ರಚನೆ ಪಿಂಡದಂತೆ ಇರುವದೆಂದು ಅನ್ನುವವರು ಇದರ ಬಗ್ಗೆ ಸಂಪೂರ್ಣ ವಿಚಾರ ಮಾಡುವದಿಲ್ಲ. ಯಾಕಂದರೆ ಬ್ರಹ್ಮಾಂಡದಲ್ಲಿ ಅಸಂಖ್ಯ ಪದಾರ್ಥಗಳಿರುವವು. ಇವೆಲ್ಲವೂ ಪಿಂಡದಲ್ಲಿ ಇರಲು ಶಕ್ಯವಿಲ್ಲ (೨೯) ಉದಾ:-ಬ್ರಹ್ಮಾಂ ಡದಲ್ಲಿ ಮೂರು ಕೋಟಿ ಐವತ್ತು ಸಾವಿರದಷ್ಟು ಭೂತಗಳಿರುವವು. ಮೂರುಕೋಟಿ ಐವತ್ತು ಸಾವಿರ ತೀರ್ಥಗಳಿರುವವು. ಮೂರುಕೋಟಿ ಐವತ್ತು ಸಾವಿರದಷ್ಟು ಮಂತ್ರಗಳಿರುವವು. ಇಷ್ಟೆಲ್ಲವೂ ಪಿಂಡದಲ್ಲಿ ಇರಲು ಶಕ್ಯವಿಲ್ಲ. (೩೦) ಬ್ರಹ್ಮಾಂಡದಲ್ಲಿ ಮೂವತ್ತೂರು ಕೋಟಿ ದೇವತೆಗಳಿರುವರು. ಎಂಭತ್ತೆಂಟು ಸಾವಿರ ಋಷೀಶ್ವರ ರಿರುವರು. ಒಂಭತ್ತು ಕೋಟಿ ಕಾತ್ಯಾಯನೀ ದೇವತೆಗಳಿರುವರು. ಇವೆಲ್ಲವೂ ಪಿಂಡದಲ್ಲಿ ಇರಲು ಶಕ್ಯವಿಲ್ಲ. (೩೧) ಬ್ರಹ್ಮಾಂಡದಲ್ಲಿ ಐವತ್ತಾರು ಕೋಟಿ ಚಾಮುಂಡಾಗಣ ಇರುವದು. ಅಕ್ಷರಶಃ ಕೋಟ್ಯಾವಧಿ ಜೀವಗಳಿರುವವು. ಎಂಭತ್ನಾಲ್ಕು ಲಕ್ಷ ಯೋನಿಯಲ್ಲಿಯ ಅಗಣಿತ ಕೋಟಿ ಜೀವ ಪ್ರಾಣಿಗಳ ಕೇವಲ ಗದ್ದಲವೇ ಗದ್ದಲವಿರುವದು. ಇಷ್ಟೆಲ್ಲವೂ ಪಿಂಡದಲ್ಲಿರಲು ಶಕ್ಯವಿಲ್ಲ. (೩೨) ಜಗತ್ತಿನಲ್ಲಿ ಬೇರೆ ಬೇರೆ ಆಕಾರದಲ್ಲಿಯ ವಿಭಿನ್ನವಾಗಿರುವ ಎಷ್ಟೆಷ್ಟೋ ಪದಾರ್ಥಗಳು [ಬ್ರಹ್ಮಾಂಡದಲ್ಲಿ] ನಿರ್ಮಾಣವಾಗಿರುವವು. ಇವೆಲ್ಲವೂ ಪಿಂಡದಲ್ಲಿ ಇರುವವೆಂದು ತೋರಿಸಲಿಕ್ಕೆ ಶಕ್ಯವಿಲ್ಲ. [೩೩] ಅಸಂಖ್ಯ ವನಸ್ಪತಿಗಳಿರುವವು. ಇದರಂತೆ ಅಸಂಖ್ಯ ಪ್ರಕಾರದ ರಸವತ್ತಾದ ಫಲಗಳು ಇರುವವು. ಅನೇಕ ಪ್ರಕಾರದ ಬೀಜಗಳು ಮತ್ತು ನಾನಾ ನಮೂನೆಯ ಧಾನ್ಯಗಳಿರುವವು. ಇವೆಲ್ಲವೂ ಪಿಂಡದಲ್ಲಿ ತೋರಿಸಲಿಕ್ಕೆ ಬರು ವದು ಶಕ್ಯವಿಲ್ಲ. [೩೪]

ಹೇ ಸಾಂಗತಾ ಪುರವೇನಾ । ತರೀ ಉಗೇ ಚೀ ಬೋಲವೇನಾ।
ಬೋಲಿಲೇ ನ ಯೇತಾ ಅನುಮಾನಾ । ಲಾಜಿರವಾಣೇ ॥೩೫॥

ತರೀ ಹೇ ನಿರೋಪಿಲೇ ನವಜೆ । ಫುಕಟ ಬೋಲತಾ ಕಾಯ ವೇಚೆ ।
ಯಾಕಾರಣೇ ಅನುಮಾನಾಚೇ । ಕಾರ್ಯ ನಾಹೀ ॥೩೬॥

ಪಾಚ ಭೂತೇ ತೇ ಬ್ರಹ್ಮಾಂಡೀ । ಆಣಿ ಪಾಚ ಚಿ ವರ್ತತೀ ಪಿಂಡೀ ।
ಯಾಚೀ ಪಾಹಾವೀ ರೋಕಡೀ । ಪ್ರಚೀತ ಆತಾ ॥೩೭॥

ಪಾಚಾ ಭೂತಾಚೇ ಬ್ರಹ್ಮಾಂಡ । ಆಣೀ ಪಂಚಭೂತಿಕ ಹೇ ಪಿಂಡ ।
ಯಾವೇಗಳೇ ತೇ ಉದಂಡ । ಅನುಮಾನಜ್ಞಾನ ॥೩೮॥

ಜಿತುಕೇ ಅನುಮಾನಾಚೇ ಬೋಲಣೇ । ತಿತುಕೇ ವಮನಪ್ರಾಯೆ ತ್ಯಾಗಣೇ ।
ನಿಶ್ಚಯಾತ್ಮಕ ತೇ ಚಿ ಬೋಲಣೇ । ಪ್ರತ್ಯಯಾಚೇ ॥೩೯॥

ಜೇ ಚಿ ಪಿಂಡೀ ತೇ ಚಿ ಬ್ರಹ್ಮಾಂಡೀ । ಪ್ರಚಿತ ನಾಹೀ ಕೀ ರೋಕಡೀ ।
ಪಂಚಭೂತಾಚೀ ತಾಂತಡೀ । ದೋಹೀಕಡೆ ॥೪೦॥

ಮ್ಹಣೋನಿ ದೇಹೀಚೇ ಧ್ಯಾನಮಾನ । ಹಾ ತೋ ಅವಘಾ ಚಿ ಅನುಮಾನ ।
ಆತಾ ಯೇಕ ಸಮಾಧಾನ । ಮುಖ್ಯ ತೇ ಕೈಸೇ ॥೪೧॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
"ಅನುಮಾನ ನಿರ್ಶನನಾಮ" ಸಮಾಸ ಪಂಚಮ ॥

● ●

ಈ ಪ್ರಕಾರ ಹೇಳುತ್ತ ಹೇಳುತ್ತ ಬೇಕಾದಷ್ಟು ಬೆಳೆಸಬಹುದು. ಆದರೆ ಈ ಪಿಂಡಬ್ರಹ್ಮಾಂಡದಲ್ಲಿಯ ವಿಷಮತೆಯ ಬಗ್ಗೆ ಒಟ್ಟಿನಲ್ಲಿ ಎಷ್ಟು ಹೇಳಿದರೂ ಮುಗಿಯುವದಿಲ್ಲ. ಆದ್ದರಿಂದ ಪಿಂಡ ಬ್ರಹ್ಮಾಂಡದ ರಚನೆ ಒಂದೇ ಪ್ರಕಾರದ್ದಿರುವದೆಂದು ಸುಮ್ಮನೆ ವ್ಯರ್ಥ ಮಾತನಾಡಬಾರದು. ನಾವು ಮಾತಾಡಿದ್ದು ತರ್ಕದಿಂದ ಖರೇ ಎಂದು ಸಿದ್ಧವಾಗದಿದ್ದರೆ ಅದು ನಾಚಿಕೆಗೇಡಿನ ಮಾತಾಗುವದು. [೩೫] ಪಿಂಡ ಮತ್ತು ಬ್ರಹ್ಮಾಂಡ ಇವುಗಳ ರಚನೆಯು ಸಮಾನವಿರುವದೆಂದು ತೋರಿಸಲಿಕ್ಕೆ ಬರದಿದ್ದಾಗ ಸುಮ್ಮನೆ ವ್ಯರ್ಥವಾಗಿ ಮಾತನಾಡಲಿಕ್ಕೆ ಏನು ವೆಚ್ಚವಾಗುವದು. [ಗಾಳಿಗುದ್ದಿ ಮೈಕೈ ನೋಯಿಸಿಕೊಂಡಂತೆ]ಆದ್ದರಿಂದ ಈ ವಿಷಯದಲ್ಲಿ ಸುಮ್ಮಸುಮ್ಮನೆ ಇಲ್ಲದ ಕಲ್ಪನೆ ಮಾಡುವಲ್ಲಿ ಅರ್ಥವಿಲ್ಲ.[೩೬] ಇಷ್ಟೆಲ್ಲ ಹೇಳಿದ ಮೇಲೆ ಕೊನೆಗೆ "ಯಾವುದು ಪಿಂಡದಲ್ಲಿ ಅದೆಯೋ ಅದೇ ಬ್ರಹ್ಮಾಂಡದಲ್ಲಿಯೂ ಇದೆ" ಇದರ ನಿಜವಾದ ಅರ್ಥವನ್ನು ಹೇಳುವರು. ಹಾಗೂ ಇದರಿಂದ ಮನಸ್ಸಿಗೆ ಸಮಾಧಾನವಾಗುವದು:– ಈ ಎಲ್ಲ ವಿಶ್ವವು ಐದು ಮಹಾಭೂತಗಳಿಂದ ತಯಾರಾಗಿದೆ. ಪಿಂಡವೂ ಸಹ ಐದು ಮಹಾಭೂತಗಳಿಂದಲೇ ತಯಾರಾಗಿದೆ. ಇದರ ಸಾಕ್ಷಾತ್ ಅನುಭವವನ್ನು ಪ್ರತ್ಯಕ್ಷವಾಗಿ ಅನುಭವದಿಂದ ತಿಳಿದುಕೊಳ್ಳಬೇಕು. [೩೭] ವಿಶ್ವವು ಪಂಚ ಭೂತಗಳಿಂದ ಹೇಗೆ ಹೆಣೆಯಲ್ಪಟ್ಟಿದೆಯೋ ಇದರಂತೆಯೇ ತದ್ರೂಪ ಆಗಿ ಪಿಂಡ ಅಥವಾ ದೇಹ ಇದೂ ಸಹ ಪಂಚ ಭೂತಗಳಿಂದ ಹೆಣೆಯಲ್ಪಟ್ಟಿದೆ. ಇದು ಪ್ರತ್ಯಕ್ಷ ಅನುಭವದ ಮಾತಾಗಿದೆ. ಇದರ ಹೊರತಾದ ಎಲ್ಲ ಮಾತುಗಳೂ ಪುಟ್ಟಾ ಪೂರಾ ಅವಿಚಾರದ ಕಲ್ಪನೆಯ ಜ್ಞಾನವೆಂದು ತಿಳಿಯಬೇಕು. [೩೮] ಕೇವಲ ಅನುಭವದ ಒರೆಗಲ್ಲಿಗೆ ಯಾವುದು ಹತ್ತುವದಿಲ್ಲವೋ ಅದು ಕೇವಲ ಅನುಮಾನದ ಮತ್ತು ಕಲ್ಪನೆಯ ಜ್ಞಾನವಿರುವದು. ಇದು ವಾಂತಿ ಮಾಡಿದ ಕಾರಿಕೆಯಂತೆ ಬೇಸರ ತರಿಸುವದಾಗಿದೆಯೆಂದು ತಿಳಿದು ಅದನ್ನು ಬಾಜೂಕ್ಕೆ ಸರಿಸಬೇಕು. ಅನುಭವದ ಮಾತುಗಳು ಯಾವಾಗಲೂ ನಿಶ್ಚಯಾತ್ಮಕವಾದವಿರುವವು. ಇವು ಗ್ರಾಹ್ಯವೆಂದು ತಿಳಿಯಬೇಕು. [೩೯] ಕೊನೆಯದಾಗಿ ಪಿಂಡದಲ್ಲಿ ಏನು ಇರುವದೋ ಅದೇ ಬ್ರಹ್ಮಾಂಡದಲ್ಲಿಯೂ ಇರುವದು. ಈ ವಚನದ ಅನುಭವವನ್ನು ಹೀಗೆ ಪ್ರತ್ಯಕ್ಷ ಅನುಭವದಿಂದ ಪಡೆದುಕೊಳ್ಳಲು ಬರುವದು. ಪಿಂಡದಲ್ಲಿಯಾಗಲೀ ಮತ್ತು ಬ್ರಹ್ಮಾಂಡದಲ್ಲಿಯಾಗಲೀ ಈ ಎರಡರಲ್ಲಿಯೂ ಪಂಚಭೂತಗಳ ಗಡಿಬಿಡಿಯು ಚಾಲೂ ಇರುವದು. ಇವುಗಳ ಖಟಾಟೋಪ [ಕಾರಭಾರ]ವೂ ಕಂಡು ಬರುವದು. ಇದು ಮಾತ್ರ ಸತ್ಯವು. [೪೦] ಆದ್ದರಿಂದ ಬ್ರಹ್ಮಾಂಡದಲ್ಲಿರುವ ಸ್ಥಾನಗಳನ್ನು ಮತ್ತು ಅದಕ್ಕೆ ಸಂಬಂಧಿಸಿದ ಇತರ ವಿಷಯ [ಗೋಷ್ಟಿ]ಗಳು ಪಿಂಡದಲ್ಲಿ ಅಂದರೆ ದೇಹ [ಶರೀರ]ದಲ್ಲಿ ನೋಡುವ ಪ್ರಯತ್ನ ಮಾಡುವದೆಂದರೆ ಇದೊಂದು ಕೇವಲ ಕಲ್ಪನೆಯ ಆಟವಾಗಿರುವದು. ಆದ್ದರಿಂದ ಇದು ನಿಜವಲ್ಲವೆಂಬುದನ್ನು ಪುನಃ ನಿಮಗೆ ಹೇಳುವೆನು. ಇರಲಿ, ನಿಜವಾದ ಸಮಾಧಾನ ಹೇಗೆ ಇರುವದೆಂಬುದರ ವಿಚಾರವನ್ನು ನಾವು ಈಗ ಮಾಡುವಾ. [೪೧]

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದ ಒಂಭತ್ತನೆಯ ದಶಕದೊಳಗಿನ
"ಅನುಮಾನ ನಿರ್ಶನ" ಎಂಬ ಹೆಸರಿನ ಐದನೆಯ ಸಮಾಸವು ಮುಗಿಯಿತು.

● ●

### ಸಮಾಸ ಷಷ್ಠಮ : ಗುಣರೂಪನಿರೂಪಣ

॥ಶ್ರೀರಾಮ॥ ಆಕಾಶ ಜೈಸೇ ನಿರಾಕಾರ । ತೈಸಾ ಬ್ರಹ್ಮಾಚಾ ವಿಚಾರ ।
ತೇಥೇ ವಾಯೋಚಾ ವಿಕಾರ । ತೈಸೀ ಮೂಳಮಾಯಾ ॥೧॥

ಹೇ ದಾಸಬೋಧೀ ಅಸೆ ಬೋಲಿಲೇ । ಜ್ಞಾನದಶಕೀ ಪ್ರಾಂಜಳ ಕೇಲೇ ।
ಮೂಳಮಾಯೇತ ದಾಖವಿಲೇ । ಪಂಚಭೂತಿಕ ॥೨॥

# ದಶಕ ೯. ಸಮಾಸ ೬. ಗುಣರೂಪನಿರೂಪಣ (ನುಡಿ ೫೪)

ಈ ಸಮಾಸದಲ್ಲಿ ಶ್ರೀ ಸಮರ್ಥರು ವೇದಾಂತದ ದೃಷ್ಟಿಯಿಂದ ಮತ್ತು ಸಾಧನದ ದೃಷ್ಟಿಯಿಂದ ಒಂದು ಬಹಳ ಮಹತ್ವವಿರುವ ಮಾತನ್ನು ಹೇಳಿರುವರು. ಅದು ಹೀಗಿರುವದು. ಈ ಸಂಬಂಧ ಚರಾಚರ ವಿಶ್ವಕ್ಕೆಲ್ಲ ತಿಳುವಳಿಕೆಯು [ಜಾಣೀವ, ಅರಿವು] ವ್ಯಾಪಿಸಿರುವದು. ಸಚೇತನ ಅಂದರೆ ಜೀವಂತ ಪ್ರಾಣಿಗಳಲ್ಲಿ ತಿಳಿವಳಿಕೆ ಕಂಡು ಬರುವದು. ಇದರಲ್ಲಿ ಆಶ್ಚರ್ಯವಿಲ್ಲ. ಆದರೆ ಅಚೇತನ ವಸ್ತುಗಳಲ್ಲಿಯೂ ಸಹ ತಿಳಿವಳಿಕೆ ಇರುತ್ತದೆ. ಈ ಸಿದ್ಧಾಂತವು ವೇದಾಂತದ್ದಾಗಿದೆ. ಸಂತರ ಅನುಭವವೂ ಸಹ ಇದೇ ಪ್ರಕಾರದ್ದಾಗಿದೆ. ಇಷ್ಟೇ ಅಲ್ಲ, ವಿಶ್ವದಲ್ಲೆಲ್ಲ ವ್ಯಾಪಿಸಿ ಇರುವಂಥ ತಿಳುವಳಿಕೆ (ಅರಿವು)ಯು ಅನುಭವಕ್ಕೆ ಬರುವಂತೆ ನಾವು ಸೂಕ್ಷ್ಮವಾದ ಮನವನ್ನು ತಯಾರ ಮಾಡುವದೇ ಮುಖ್ಯವಾಗಿ ಪರಮಾರ್ಥ ಸಾಧನೆಯಲ್ಲಿಯ ಪ್ರಾಣವಿರುವದು. ಜ್ಞಾನಿ ಪುರುಷರು ಹೇಳುವದೇನಂದರೆ ಈ ಎಲ್ಲ ವಿಶ್ವವೂ ನಾಮರೂಪಗಳಿಂದ ತುಂಬಿರುವದೇ ಆಗಿದೆ. ಪ್ರತಿಯೊಂದು ವಸ್ತುವಿಗೆ ಹೆಸರು ಮತ್ತು ರೂಪ ಹೀಗೆ ಎರಡು ಪ್ರಕಾರವಿರುವವು. ರೂಪ ಅಂದರೆ ವಸ್ತುವಿನ ಬಹಿರಂಗವು. ಇದು ಪಂಚಭೂತಗಳಿಂದ ಹೆಣೆದದ್ದಿದ್ದು ಸ್ಥೂಲವಿರುವದು. ನಾಮ ಅಂದರೆ ವಸ್ತುವಿನ ಅಂತರಂಗ ಇದು ತಿಳುವಳಿಕೆಯಿಂದ ಕೂಡಿದ್ದಾಗಿದೆ. ಮತ್ತು ಸೂಕ್ಷ್ಮವಿದ್ದು ಶಕ್ತಿಯುಳ್ಳದ್ದಿರುವದು. ರೂಪದಲ್ಲಿ ಬದಲಾವಣೆ ಆಗುವದು.ಆದರೆ ನಾಮದಲ್ಲಿ ಬದಲು ಆಗುವದಿಲ್ಲ. ಅಚೇತನ ವಸ್ತುವಿನಲ್ಲಿ ತಿಳುವಳಿಕೆಯು ಸುಪ್ತ ಅವಸ್ಥೆಯಲ್ಲಿ ಇರುವದು. ಸಚೇತನ ವಸ್ತುವಿನಲ್ಲಿ ತಿಳುವಳಿಕೆಯು ಜೀವಂತವಾಗಿ ಅನುಭವಕ್ಕೆ ಬರುವದು. ತಿಳುವಳಿಕೆಯೊಳಗಿಂದ ಜೀವಂತತನವು ಮತ್ತು ಜೀವಂತದೊಳಗಿಂದ ಮನವು ಪ್ರಕಟವಾಗುವದು. ವಸ್ತುವಿಗೆ ಅಥವಾ ಪ್ರಾಣಿಗಳ ಶರೀರಕ್ಕೆ ತಿಳುವಳಿಕೆಯು ವ್ಯಾಪಿಸಿಕೊಂಡಿರುವದು. ಇದರಂತೆ ಯಾವತ್ತೂ ದೃಶ್ಯ ವಿಶ್ವವನ್ನೆಲ್ಲ ವ್ಯಾಪಿಸಿ ಇರುವಂಥ ಮತ್ತು ಧಾರಣ ಮಾಡುವ ಗ್ರಹಣಶಕ್ತಿಗೆ ಬಹಳ ದೊಡ್ಡ ತಿಳಿವಳಿಕೆ (ಜ್ಞಾನ ಕಲಾ) ಇರುವದು. ಇದಕ್ಕೆ ಹಿರಣ್ಯಗರ್ಭ ಅಥವಾ ಓಂಕಾರವೆಂದು ಅನ್ನುವರು. ಋಗ್ವೇದದಲ್ಲಿ ಹೀಗೆ ಮಂತ್ರವಿರುವದು:- ಹಿರಣ್ಯಗರ್ಭಃ ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್ ಅರ್ಥ:– ವಿಶ್ವ ಉತ್ಪನ್ನವಾಗುವ ಮೊದಲು ಹಿರಣ್ಯಗರ್ಭ ಒಂದೇ ಇದ್ದಿತು.ಇದೇ ಎಲ್ಲ ವಿಶ್ವಕ್ಕೂ ಸ್ವಾಮಿ ಇರುವದು.ಮಾಂಡೂಕ್ಯ ಉಪನಿಷತ್ ಹೇಳುವದೇನಂದರೆ "ಓಂ ಇತಿ ಏತದ್ ಅಕ್ಷರಂ ಇದಂ ಸರ್ವಮ್" ಅರ್ಥ:– ಓಂ ಈ ಅಕ್ಷರವೇ ಈ ಸರ್ವ ವಿಶ್ವವಿರುವದು. ನಾವು ಈಗ ಇದಕ್ಕೆ "ವಿಶ್ವಮನ" ಎಂದು ಹೆಸರು ಕೊಡೋಣ. ಈ ಸಮಾಸದಲ್ಲಿ ಶ್ರೀ ಸಮರ್ಥರು ವಿಶ್ವ ಮನದ ವರ್ಣನೆ ಮಾಡಿದ್ದಾರೆ. ಸಾಧನದಿಂದ ಸಾಧಕನ ತಿಳುವಳಿಕೆಯು ದೇಹದ ಹೊರಗೆ ಪಸರಿಸುವದು. ಇದು ಸೂಕ್ಷ್ಮವಾಗುತ್ತ ಹೋಗುವದು. ಮತ್ತು ಸರ್ವ ಜೀವದ ತಿಳಿವಳಿಕೆಯಲ್ಲಿ (ಅರಿವಿನಲ್ಲಿ) ಸಮರಸಗೊಳ್ಳುವದು. ಈ ರೀತಿಯಿಂದ ಮನುಷ್ಯನ ಜೀವಕ್ಕೆ ವ್ಯಾಪಕತನ ಬಂದು ಕೊನೆಗೆ ಅದು ಮಹಾನ್ ಆತ್ಮಾ ಅಂದರೆ ಮಹಾತ್ಮಾ ಆಗುವದು.

## ದಶಕ ೯ : ಸಮಾಸ ೬ : ಗುಣರೂಪನಿರೂಪಣ [ನುಡಿ ೫೪]

ಸಚೇತನದಲ್ಲಿ ಅರಿವು ಇಂದ್ರಿಯಗಳಿಗೆ ಗೋಚರವಾಗುವದು. ಅದೇ ಅಚೇತನದಲ್ಲಿ ಇದು ಇಂದ್ರಿಯಗಳಿಗೆ ಗೋಚರವಾಗುವದಿಲ್ಲ. ಸಚೇತನ ಪ್ರಾಣಿಗಳ ಪೈಕಿ ಮನುಷ್ಯರಲ್ಲಿ ಮಾತ್ರ ಬಹಳಷ್ಟು ನಿರ್ಮಲ ಸ್ವರೂಪದ ತಿಳುವಳಿಕೆಯು(ಅರಿವು) ದೃಷ್ಟಿಗೆ ಬೀಳುತ್ತದೆ:- ಬ್ರಹ್ಮ ಸ್ವರೂಪವು ಆಕಾಶದಂತೆ ಇರುವದು. ಆಕಾಶಕ್ಕೆ ಆಕಾರವಿಲ್ಲ.ಇದರಂತೆ ಬ್ರಹ್ಮನಿಗೂ ಸಹ ಆಕಾರವಿಲ್ಲ. ನಿರಾಕಾರ ಮತ್ತು ನಿರ್ವಿಕಾರವಿರುವ ಆಕಾಶದಲ್ಲಿ ವಾಯುವಿನ (ಲಹರ, ಲಾಟ)ವಿಕಾರ (ಚಂಚಲತ್ವ) ಉದ್ಭವವಾಗುವದು. ಇದರಂತೆ ನಿರ್ವಿಕಾರ ಪರಬ್ರಹ್ಮದಲ್ಲಿ ಮೂಲ ಮಾಯಾ ಉದ್ಭವವಾಗುವದು. (೧) ದಾಸಬೋಧದ ಏಳನೆಯ ದಶಕದಲ್ಲಿ ಇದನ್ನು ಮೊದಲಿಗೆ ಹೇಳಿರುವದು ನಂತರ ಜ್ಞಾನ ದಶಕದಲ್ಲಿ ಅಂದರೆ ಎಂಟನೆಯ ದಶಕದಲ್ಲಿ ಇದನ್ನೇ ಹೆಚ್ಚು ಸ್ಪಷ್ಟವಾಗಿ ಹೇಳಿರುವೆನು. ಮೂಲ ಮಾಯಾ ತನ್ನ ಹೊಟ್ಟೆಯಲ್ಲಿ ಪಂಚ ಮಹಾಭೂತಗಳನ್ನು ಇಟ್ಟುಕೊಂಡಿರುವಳೆಂಬುದನ್ನು ಅಲ್ಲಿ ಸ್ಪಷ್ಟಪಡಿಸಿರುವೆವು. (೨)

ತೇಥೇ ಜಾಣೀವ ತೋ ಸತ್ವಗುಣ । ಮಧ್ಯ ತೋ ರಜೋಗುಣ ।
ನೇಣೀವ ತಮೋಗುಣ । ಜಾಣಿಜೆ ಶ್ರೋತೀ ॥೩॥

ಮ್ಹಣಾಲ ತೇಥೇ ಕೈಚೀ ಜಾಣೀವ । ತರೀ ಏಕಾ ಯಾಚಾ ಅಭಿಪ್ರಾವ ।
ಪಿಂಡೀ ಮಹಾಕಾರಣ ದೇಹೀಸರ್ವ—। ಸಾಕ್ಷಿಣೀ ಅವಸ್ಥಾ ॥೪॥

ತೈಸೀ ಮೂಳಪ್ರಕೃತೀ ಬ್ರಹ್ಮಾಂಡೀಚೇ । ದೇಹ ಮಹಾಕಾರಣ ಸಾಚೇ ।
ಮ್ಹಣೋನ ತೇಥೇ ಜಾಣೀವೇಚೇ । ಅಧಿಷ್ಠಾನ ಆಲೇ ॥೫॥

ಅಸೋ ಮೂಳಮಾಯೆಭೀತರೀ । ಗುಪ್ತ ತ್ರಿಗುಣ ವಾಸ ಕರೀ ।
ಪಷ್ಟ ಹೋತೀ ಸಂಧೀ ಚತುರೀ । ಜಾಣಾವೀ ಗುಣಕ್ಷೋಭಿಣೀ ॥೬॥

ಜೈಸಾ ತೃಣಾಚಾ ಪೋಟರಾಕಳಾ । ಪುಢೇ ಉಕಲೋನ ಹೋಯೆ ಮೋಕಳಾ ।
ತೈಸೀ ಮೂಳಮಾಯಾ ಅವಲೀಳಾ । ಗುಣಾ ಪ್ರಸವಲೀ ॥೭॥

ಮೂಳಮಾಯಾ ವಾಯೋಸ್ವರೂಪ । ಏಕ ಗುಣ ಕ್ಷೋಭಿಣೀಚೇ ರೂಪ ।
ಗುಣವಿಕಾರ ಹೋತಾಚಿ ಅಲ್ಪ । ಗುಣಕ್ಷೋಭಿಣೀ ಬೋಲಿಜೆ ॥೮॥

ಪುಢೇ ಜಾಣೀವ ಮಧ್ಯಸ್ತ ನೇಣೀವ । ಮಿಶ್ರಿತ ಚಾಲಿಲಾ ಸ್ವಭಾವ ।
ತೇಥೇ ಮಾತ್ರಕಾಸ ಠಾವ । ಶಬ್ದ ಜಾಲಾ ॥೯॥

ತೋ ಶಬ್ದಗುಣ ಆಕಾಶೀಚಾ । ಏಸಾ ಅಭಿಪ್ರಾವ ಯೆಥೀಚಾ ।
ಶಬ್ದೇಚಿ ವೇದಶಾಸ್ತ್ರಾಚಾ । ಆಕಾರ ಜಾಲಾ ॥೧೦॥

ಪಂಚಭೂತೇ ತ್ರಿಗುಣಾಕಾರ । ಅವಘಾ ವಾಯೋಚಾ ವಿಕಾರ ।
ಜಾಣೀವನೇಣೀವೆಚಾ ವಿಚಾರ । ವಾಯೋ ಚಿ ಕರಿತಾ ॥೧೧॥

ಮೂಲ ಮಾಯೆಯಲ್ಲಿಯೇ ತ್ರಿಗುಣಗಳು ಸುಪ್ತವಾಗಿ(ಗುಪ್ತವಾಗಿ)ಇರುವವು. ಅಲ್ಲಿಯತಿಳಿವಳಿಕೆ(ಅರಿವು) ಯೇ ಸತ್ವಗುಣವಾಗಿದೆ. ಇದು ಜ್ಞಾನಮಯವಿರುವದು. ಸ್ವಲ್ಪ ಅರಿವು, ಸ್ವಲ್ಪ ಮರೆವು. (ಅಜ್ಞಾನ) ಇವೆರಡರ ಮಿಶ್ರಣವೇ ಮಧ್ಯದಲ್ಲಿಯ ರಜೋಗುಣವಿರುವದು. ರಜೋಗುಣದಲ್ಲಿ ಜ್ಞಾನ ಮತ್ತು ಅಜ್ಞಾನ ಇವುಗಳ ಮಿಶ್ರಣ ವಿರುವದು. ಮತ್ತು ಅಜ್ಞಾನ (ಮರೆವು) ಇದು ತಮೋಗುಣವಿರುವದು. ತಮೋಗುಣವು ಕೇವಲ ಅಜ್ಞಾನಮಯ ವಿರುವದು. (೩) ಮೂಲ ಮಾಯೆಯಲ್ಲಿ ಅರಿವು (ತಿಳುವಳಿಕೆ) ಇದು ಎಲ್ಲಿಂದ ಮತ್ತು ಹೇಗೆ ಬಂದಿತು? ಎಂದು ನೀವು ಕೇಳುವಿರಾದರೆ ಇದನ್ನು ನಿಮಗೆ ತಿಳಿಸಿ ಹೇಳುವೆನು. ಪಿಂಡದವು ನಾಲ್ಕು ದೇಹಗಳಿರುವವು. ಇದರ ಪೈಕಿ ಮಹಕಾರಣದೇಹವು ನಾಲ್ಕನೆಯದು. ಸರ್ವಸಾಕ್ಷಿ ತುರ್ಯಾ ಈ ಅವಸ್ಥೆಯು ಮಹಾಕಾರಣದೇಹದ ಲಕ್ಷಣ ವಿರುವದು. (೪) ಬ್ರಹ್ಮಾಂಡದಲ್ಲಿಯೂ ನಾಲ್ಕು ದೇಹಗಳಿರುವವು. ಇದರ ಪೈಕಿ ಮೂಲ ಪ್ರಕೃತಿ ಇದು ಮಹಾ ಕಾರಣ ದೇಹವಿರುವದು. ಇದು ಜ್ಞಾನಮಯವಿರುವದರಿಂದ ಇದರಲ್ಲಿ ಶುದ್ಧ ಅರಿವಿನ (ತಿಳುವಳಿಕೆಯ) ಅಧಿಷ್ಠಾನ ವಿರುವದು. ಜಾಣವಾಗುವಿಕೆ,ಇದು ಜ್ಞಾನವಾಗುವಿಕೆ ಇದು ಅರಿವಿನ ಪ್ರಧಾನ ಧರ್ಮವಿರುವದು ಎಲ್ಲಿ ಅರಿವು ಇರು ವದೋ ಅಲ್ಲಿ ಜ್ಞಾನ ಹುಟ್ಟುತ್ತದೆ. ಮತ್ತು ಎಲ್ಲಿ ಜ್ಞಾನ ಕಾಣುವದೋ ಅಲ್ಲಿ ಅರಿವು ಇರುವದು. [ಜಾಣೀವ] ಅರಿವಿಗೆ ಕಾನ್ಸಸ್ ಅನ್ನುವರು. (೫) ಮೂಲ ಮಾಯೆಯ ಹೊಟ್ಟೆಯಲ್ಲಿ ಸತ್ವ, ರಜ, ತಮ ಈ ಮೂರುಗುಣ ಗಳು ಸೂಕ್ಷ್ಮ ರೀತಿಯಲ್ಲಿ ಗುಪ್ತವಾಗಿ ವಾಸ ಮಾಡಿರುವವು. ಇವು ಬೆಳೆದವೆಂದರೆ ಪ್ರಕಟವಾಗುವವು. ಇದೇ ಗುಣ ಮಾಯೆ ಅನಿಸಿದೆ. ಇದರಿಂದ ಮೂರೂ ಗುಣಗಳಲ್ಲಿಯ ಸಾಮ್ಯಾವಸ್ಥೆ ಭಂಗವಾಗುವದು. ಆಗ ಇವು ವ್ಯಕ್ತಗೊಂಡು ಹೊರ ಬರುವವು. ಆದ್ದರಿಂದ ಗುಣಕ್ಷೋಭಿಣಿಯು ತ್ರಿಗುಣಗಳನ್ನು ವ್ಯಕ್ತದಿಶೆಗೆ ತರುವ ಸಂಧಿ (ಸಂಯೋಗ, ಮಿಲಾಪ) ಆಗಿದೆ ಎಂದು ಬುದ್ಧಿವಂತರು ತಿಳಿಯಬೇಕು. (ತ್ರಿಗುಣಗಳು ಪ್ರಕಟವಾಗುವ ಅಥವಾ ಸ್ಪಷ್ಟವಾಗುವ ಅವಸ್ಥೆಗೆ ಗುಣಕ್ಷೋಭಿಣಿ ಅನ್ನುವರು) (೬) ಧಾನ್ಯದ ತೆನೆಯು ಪ್ರಥಮದಲ್ಲಿ ಮುಚ್ಚಿ (ಬಂದ) ಇರುತ್ತದೆ. ತೆನೆಯಲ್ಲಿ ಕಾಳುಗಳು ತುಂಬಿರುತ್ತವೆ. ಆದರೆ ಸ್ಪಷ್ಟವಾಗಿ ಕಾಣುವದಿಲ್ಲ. ನಂತರ ತೆನೆಯು ಒಂದು ಹದಕ್ಕೆ (ಹಣ್ಣಿಗೆ) ಬಂದಿತೆಂದರೆ ತೆನೆಯು ಅರಳುತ್ತದೆ. (ಬಿಚ್ಚುತ್ತದೆ). ಇದರಲ್ಲಿಯ ಕಾಳುಗಳು ಹೊರಬೀಳುವವು. ಇದರಂತೆ ಮೂಲ ಮಾಯಾ ಆರಂಭದಲ್ಲಿ ಮೂರು ಗುಣಗಳನ್ನೂ ಹೊಟ್ಟೆಯಲ್ಲಿ ಇಟ್ಟುಕೊಂಡಿರುವಳು. ಮುಂದೆ ಇವು ಬೆಳೆದಾಗ ಗುಣ ಕ್ಷೋಭದಿಂದ ಗುಣ ಮಾಯೆ ಪ್ರಕಟವಾಗುವಳು. ಆಮೇಲೆ ಇವಳಲ್ಲಿಂದ ಆಗದೀ ಸಹಜವಾಗಿ ಮೂರೂ ಗುಣಗಳು ಹೊರ ಬಂದವು ಮತ್ತು ವ್ಯಕ್ತದಶೆಗೆ ಬಂದವು. (೭) ಮೂಲ ಮಾಯಾ ವಾಯು ಸ್ವರೂಪ ಅಂದರೆ ಶಕ್ತಿರೂಪ ಇರುವದು. ಇನ್ನು ಮೇಲೆ ಗುಣ ಕ್ಷೋಭಿಣಿಯ ರೂಪದ ವಿಚಾರ ಹೇಳುವೆನು. ಮೂಲಮಾಯೆಯಲ್ಲಿ ಸ್ವಲ್ಪ ಗುಣಗಳ ವಿಕಾರ ಉಂಟಾದ ಕೂಡಲೇ ಅದಕ್ಕೆ ಗುಣಕ್ಷೋಭಿಣಿಯೆನಿಸುವಳು. (೮) ಆಮೇಲೆ ಇವಳಲ್ಲಿ ಸತ್ವ, ರಜ, ತಮ ಇವುಗಳ ಮಿಶ್ರಣದಿಂದ ವಿಶ್ವ ನಿರ್ಮಾಣಗೊಳ್ಳುವ ಕ್ರಿಯೆ ಸಹಜವಾಗಿ ನಡೆಯುವದು. ಇದರಲ್ಲಿ ಮೊದಲಿಗೆ (ಅ, ಉ, ಮ ಹಾಗೂ ಅರ್ಧ ಮಾತ್ರಾದ) ಮೂರೂವರೆ ಮಾತ್ರಾದ ಓಂಕಾರವು-ಓಂಕಾರದ ಧ್ವನಿಯು ಪ್ರಕಟವಾಯಿತು. ಇದಕ್ಕೇ ಹಿರಣ್ಯಗರ್ಭ ಅಥವಾ ಶಬ್ದಬ್ರಹ್ಮ ಅಥವಾ ಲೋಗಾಸ ಅನ್ನುವರು. ಸಂತ ಸಾಧುಗಳ ಹೆಸರು ಇದೇ ಇರುವದು. [೯] ಶಬ್ದ ಇದು ಆಕಾಶದ ಗುಣವಿರುವದು. ಇದರಲ್ಲಿ ಹೀಗೆ ಗರ್ಭಿತಾರ್ಥವಿರುವದು. ವೇದ ಮತ್ತು ಶಾಸ್ತ್ರ ಇವೆಲ್ಲ ಶಬ್ದದ ಮೂಲಕ [ಶಬ್ದದ ದ್ವಾರದಿಂದ] ಸಾಕಾರವಾಗುವವು. [ಪ್ರಕಟಗೊಳ್ಳು ವವು]. [೧೦] ಪಂಚಭೂತಗಳು ಮತ್ತು ಮೂರು ಗುಣಗಳು ಕೂಡಿ ಎಂಟು ಆಗುವವು. ಇದೇ ಅಷ್ಟಧಾ ಪ್ರಕೃತಿ ಯೆನಿಸುವದು. ಇದು [ವಾಯುರೂಪದ] ಮೂಲ ಮಾಯೆಯ ವಿಕಾರವೇ ಇರುವದು. ಇದು ಇವಳದೇ ಒಂದು ಕನಿಷ್ಠ ರೂಪವಿರುವದು. ಜ್ಞಾನ ಮತ್ತು ಅಜ್ಞಾನ ಇದರ ವಿಚಾರ ಮಾಡುವ ಪ್ರಸಂಗ ಮೂಲ ಮಾಯೆಯಿಂದಲೇ ಬರುವದು. ಪರಬ್ರಹ್ಮನ ಸ್ಥಳದಲ್ಲಿ ಕೇವಲತನ [ಆಗದೀ ಶುದ್ಧತನ] ಇರುವದು. ಇದು [ಸ್ವತಂತ್ರವಾಗಿ]ಸುಮ್ಮನೇ ಇರುವದು. ಇದರಲ್ಲಿ ಅಜ್ಞಾನವಿಲ್ಲ. ಹಾಗೇ ಜ್ಞಾನವೂ ಸಹ ಇಲ್ಲ. ಆದರೆ ಮೂಲ ಮಾಯೆಯಲ್ಲಿ "ನಾನು ಬ್ರಹ್ಮ ಇರುವೆನು" ಅನ್ನುವ ಜ್ಞಾನರೂಪದ ಅರಿವು ಇರುವದು. ಇದರ ಬೆನ್ನ ಹಿಂದೆಯೇ ಅಜ್ಞಾನ ರೂಪದ ತಮೋಗುಣ [ಮರೆವು] ಪ್ರಕಟವಾಗುವದು. [೧೧]

ವಾಯೋ ನಸ್ತಾ ಕೈಚೀ ಜಾಣೀವ । ಜಾಣೀವ ನಸ್ತಾ ಕೈಚೀ ನೇಣೀವ ।
ಜಾಣೀವ ನೇಣೀವೇಸ ಠಾವ । ವಾಯೋಗುಣೇ ॥೧೨॥

ಜೇಥೇ ಮುಳೀ ಚ ನಾಹೀ ಚಳಣ । ತೇಥೇ ಕೈಚೇ ಜಾಣೀವಲಕ್ಷಣ ।
ಮ್ಹಣೋನಿ ವಾಯೋಚಾ ಗುಣ । ನೇಮಸ್ತ ಜಾಣಾವಾ ॥೧೩॥

ಯೇಕಾಪಾಸೂನ ಯೇಕ ಜಾಲೇ । ಹೇ ಯೇಕ ಉಗೇ ಚಿ ದಿಸೋನ ಆಲೇ ।
ಸ್ವರೂಪ ಮುಳೀ ಚ ಭಾಸಲೇ । ತ್ರಿಗುಣಭೂತಾಚೇ ॥೧೪॥

ಐಸಾ ಹಾ ಮೂಳೀಚಾ ಕರ್ದಮು । ಪುಢೇ ಪಸ್ಟತೇಚಾ ಅನುಕ್ರಮು ।
ಸಾಂಗತಾ ಯೇಕಾಪಾಸೂನ ಯೇಕ ಉಗಮು । ಹೇ ಹಿ ಖರೇ ॥೧೫॥

ವಾಯೋಚಾ ಕರ್ದಮು ಬೋಲಿಲಾ । ತಯಾಪಾಸೂನ ಅಗ್ನಿ ಜಾಲಾ ।
ತೋ ಹಿ ಪಾಹಾತಾ ದೇಖಿಲಾ । ಕರ್ದಮು ಚಿ ॥೧೬॥

ಅಗ್ನೀಪಾಸೂನ ಜಾಲೇ ಆಪ । ತೇ ಹೀ ಕರ್ದಮು ಸ್ವರೂಪ ।
ಆಪಾಪಾಸೂನ ಪೃಥ್ವೀಚೇ ರೂಪ। ತೇ ಹಿ ಕರ್ದಮುರೂಪೀ ॥೧೭॥

ಯೇಥ ಆಶಂಕಾ ಉಠಿಲೀ । ಭೂತಾಸ ಜಾಣೀವ ಕೋಠೇ ದೇಖಿಲೀ ।
ತರೀ ಭೂತಾತ ಜಾಣೀವ ಹೇ ಏಕಿಲೀ । ನಾಹೀ ವಾರ್ತಾ ॥೧೮॥

ಒಂದು ವೇಳೆ ಮೂಲಮಾಯೆಯೇ ಇಲ್ಲದಿದ್ದರೆ ಪರಬ್ರಹ್ಮನಿಗೆ ಸ್ವತಃದ ಜ್ಞಾನರೂಪದ ಅರಿವು ಆಗುತ್ತಿರಲಿಲ್ಲ. ಅರಿವು ನಿರ್ಮಾಣವಾಯಿತೆಂದರೆ, ಅನಂತರ ಅಜ್ಞಾನ (ಮರೆವು)ವು ಸ್ವಾಭಾವಿಕತನದಿಂದ ಮುಂದೆ ಬರುವದು. ಆದ್ದರಿಂದ ಅರಿವು-ಮರೆವು ಅಥವಾ ಜ್ಞಾನ-ಮತ್ತು-ಅಜ್ಞಾನ ಈ ಜೋಡಿಗೆ ಮೂಲ ಮಾಯೆಯ ಹೊರತು ಸ್ಥಾನವೇ ಇಲ್ಲ. (೧೨) ಎಲ್ಲಿ ಎಷ್ಟೂ ಚಲನವಲನ (ಹಾಲಚಾಲ) ಇರುವದಿಲ್ಲವೋ ಅಂಥಲ್ಲಿ ಅರಿವಿನ ಅಸ್ತಿತ್ವ ಇರುವದೆಂದು ಅನ್ನಲಿಕ್ಕೆ ಬರುವದಿಲ್ಲ. ಆದ್ದರಿಂದ ಅರಿವು (ತಿಳವಳಿಕೆ) ಇದು ನಿಶ್ಚಿತವಾಗಿ ವಾಯುವಿನ ಗುಣವಿರುವದೆಂದು ತಿಳಿಯಿರಿ. ಮೂಲ ಮಾಯೆಗೆ ವಾಯುವೆಂದು ಯಾಕೆ ಅಂದರು? ಅನ್ನುವದರ ವಿಚಾರ ಇಲ್ಲಿ ಬಯಲಿಗೆ ಬರುತ್ತದೆ. ಹೇಗೆಂದರೆ ಚಲನವಲನ ಆಗುವದು ಅರಿವಿನ ಗುರುತಾಗಿದೆ. ವಾಯು ಒಂದೇ ಸವನೆ ಸದಾಕಾಲ ಚಲನವಲನ ಮಾಡುತ್ತಲಿರುವವನಾಗಿದ್ದಾನೆ. ಆದ್ದರಿಂದ ಅರಿವು ಇದು ವಾಯುರೂಪವಿರುವದು. ಪರಬ್ರಹ್ಮದಲ್ಲಿ ಮೂಲ ಮಾಯಾ ನಿರ್ಮಾಣವಾದಾಗಲೇ "ನಾನು ಬ್ರಹ್ಮ ಇರುವೆನು" ಅನ್ನುವ ಅರಿವು ನಿರ್ಮಾಣವಾಯಿತು. ಈ ಅರಿವು ಜ್ಞಾನರೂಪ ಮತ್ತು ಶಕ್ತಿಮಯ ಇರುವದು. ಯಾವುದೇ ಶಕ್ತಿಯು ಚಲನವಲನ ಮಾಡದ ಹೊರತು ಇರಲಾರದು. ಇರಲಿಕ್ಕೆ ಸಾಧ್ಯವಿಲ್ಲ. ಆದ್ದರಿಂದ ಮೂಲಮಾಯೆಯಿಂದ ಗುಣಮಾಯಾ ಪ್ರಕಟವಾಯಿತು. ಮತ್ತು ಆಮೇಲೆ ಗುಣಮಾಯೆಯಿಂದ ತ್ರಿಗುಣದ ಮೂಲಕ ಅರ್ಥಾತ್ ತ್ರಿಗುಣದ ತಳಹದಿಯ ಮೇಲೆ ಯಾವತ್ತೂ ದೃಶ್ಯವಿಶ್ವವು ಆಕಾರಗೊಂಡಿತು. ಈ ದೃಷ್ಟಿಯಿಂದ ಮೂಲ ಮಾಯಾ ವಾಯುರೂಪ ಅನ್ನುತ್ತಾರೆ.(೧೩) ಒಂದರಿಂದ ಒಂದು ಉತ್ಪನ್ನವಾದವು ಅನ್ನುವದನ್ನು ಹೇಳದ ಹೊರತು ವಿಶ್ವವು ಹೇಗೆ ನಿರ್ಮಾಣಗೊಂಡಿತು ಅನ್ನುವದನ್ನು ನಿಮಗೆಲ್ಲ ಹೇಳಲಿಕ್ಕೆ ಆಗುವದಿಲ್ಲ. (ಸುಮ್ಮನೆ ಹೊರಟಿತು). ಇರಲಿ,ನಿಜವಾಗಿ ಹೇಳಬೇಕಂದರೆ, ಮೂರು ಗುಣ ಮತ್ತು ಪಂಚಭೂತ ಇವೆಲ್ಲವೂ ಮೂಲ ಮಾಯೆಯಲ್ಲಿ ಒಂದರಲ್ಲೊಂದು ಕೂಡಿಕೊಂಡೇ ಇರುವವು. ಇದರ ಅರ್ಥವೇನಂದರೆ:- ನಾವು ದೇಹಬುದ್ಧಿಯಿಂದ ವಿಚಾರ ಮಾಡುವ ಜನರೇ ಇರುವೆವು. ನಮ್ಮ ಬುದ್ಧಿಯು ಸ್ಥಳ ಕಾಲಗಳ ಮರ್ಯಾದೆಯಲ್ಲಿ ವ್ಯವಹರಿಸುವದು. ಮೊದಲು ಮತ್ತು ನಂತರ ಇಲ್ಲಿ ಮತ್ತು ಅಲ್ಲಿ ಕಾರಣ ಮತ್ತು ಕಾರ್ಯ ಈ ಮೂರು ಅಳತೆಗೋಲಿನ ಹೊರತು ನಾವು ಯಾವ ಘಟನೆಯ ಬಗ್ಗೆಯೂ ವಿಚಾರ ಮಾಡಲು ಆಗುವದಿಲ್ಲ. ಕೇವಲ ದೃಶ್ಯ ಘಟನೆಯ ಬಗ್ಗೆ ವಿಚಾರ ಮಾಡುವಾಗ ಸ್ಥಳ ಕಾಲಗಳ ನಿಮಿತ್ತವು ಯೋಗ್ಯವೆನಿಸುವದು. ಆದರೆ ಸೂಕ್ಷ್ಮ ಅತೀಂದ್ರಿಯ ಮತ್ತು ಸ್ಥಳ ಕಾಲಾತೀತ ಘಟನೆಗಳ ವಿಚಾರ ಮಾಡುವಾಗ ಕಾಲಾನುಕ್ರಮವನ್ನು ಹಚ್ಚುವದು ಬರೋಬರ ಆಗುವದಿಲ್ಲ. ಯಾಕೆಂದರೆ ಎಲ್ಲಿ ಕಾಲವು ಇನ್ನೂ ನಿರ್ಮಾಣವಾಗದೇ ಇರುವದೋ ಅಂಥ ಮೂಲ ಮಾಯೆಯ ಮತ್ತು ಗುಣಮಾಯೆಯ ಘಟನೆಗಳ ಮೊದಲು ಅಥವಾ ನಂತರ ಘಟಿಸಿದವೆಂದು ಅನ್ನಲಿಕ್ಕೆ ಬರುವದಿಲ್ಲ. ಇವುಗಳ ಕ್ರಮವು ತರ್ಕಾನುಸಾರವೆಂದು ತಿಳಿಯಬೇಕು. ಕಾಲಾನುಸಾರವೆಂದು ತಿಳಿಯಬಾರದು. (೧೪) ಮೂಲ ಮಾಯೆಯಲ್ಲಿ ಪಂಚಭೂತಗಳು ಮತ್ತು ತ್ರಿಗುಣ ಇವುಗಳ ಮಿಶ್ರಣದ ಅವಸ್ಥೆ (ಸ್ಥಿತಿ, ರೀತಿ) ಹೀಗೆ ಇರುವದು. ಅಲ್ಲಿ ಅವು ಸೂಕ್ಷ್ಮ ಮತ್ತು ಏಕರೂಪವಿರುವವು. ಮುಂದೆ ಏಕತನದಲ್ಲಿ ಅನೇಕತನ ಆಗ ಹತ್ತಿತ್ತು. ಅಂದರೆ ಪಂಚಭೂತ ಮತ್ತು ಮೂರು ಗುಣ ಇವು ಪ್ರತ್ಯೇಕವಾಗಿ ಅನುಭವಕ್ಕೆ ಬರುವವು. ಅನೇಕತನದ ಕ್ರಮ ಹೇಳುವಾಗ ಒಂದರಿಂದ ಇನ್ನೊಂದು (ಎರಡನೆಯದು) ನಿರ್ಮಾಣವಾಯಿತು ಎಂದು ಹೇಳುವದು ಯೋಗ್ಯವಾದದ್ದು ಮತ್ತು ಸರಿಯಾದದ್ದು ಇರುತ್ತದೆ. (೧೫) ಇಲ್ಲಿಯವರೆಗೆ ವಾಯುವಿನಲ್ಲಿ ಇರುವಂಥ ಮಿಶ್ರಣ ಪಂಚಭೂ+ತ್ರಿಗು (೫+೩)ದ ಬಗೆಗೆ ಹೇಳಿದೆನು. ಇರಲಿ, ವಾಯುವಿನಿಂದ ತೇಜ ಹೊರಟಿತು. (ಉತ್ಪನ್ನವಾಯಿತು). (ತೇಜ ಅಂದರೆ ಅಗ್ನಿ) ಅಗ್ನಿ ನಿರ್ಮಾಣಗೊಂಡಿತು. ಅಗ್ನಿಯಲ್ಲಿಯೂ ಸಹ ವಾಯುವಿನಂತೆಯೇ ಮಿಶ್ರಣವಿರುವದು. (೧೬) ಅಗ್ನಿಯಿಂದ ನೀರು (ಜಲ) ನಿರ್ಮಾಣವಾಯಿತು. ಇದರಲ್ಲಿಯೂ ಮೇಲೆ ಇದ್ದಂತೆ ಮಿಶ್ರಣವಿರುವದು. ನೀರಿನಿಂದ ಪೃಥ್ವಿ ಉತ್ಪನ್ನವಾಯಿತು. ಇದರಲ್ಲಿ ಸಹ ಮೇಲಿನ ಮಿಶ್ರಣವಿರುವದು. (ಓಂದೆ ದ.೮ ಸ.೪ರಲ್ಲಿ ನೋಡು) (೧೭) ಈ ಸ್ಥಳದಲ್ಲಿ ಒಂದು ಶಂಕಾ ಬರುವದು. ಅದೇನಂದರೆ ಐದು ಭೂತಗಳು ನೋಡಲಿಕ್ಕೇನೋ ಅಚೇತನ ಕಾಣುವವು. ಇವುಗಳಲ್ಲಿ ಅರಿವು ಅನ್ನುವದು ಎಲ್ಲಿಯೂ ಕಾಣುವದಿಲ್ಲ. ಪಂಚಭೂತಗಳಲ್ಲಿ ಅರಿವು ಇರುವದು ಎಂದು ಅನ್ನುವ ಮಾತನ್ನು ನಾವು ಎಂದೂ ಎಲ್ಲಿಯೂ ಕೇಳಿಲ್ಲ. [೧೮]

ಜಾಣೀವ ವ್ಹಾಣಿಜೆ ಜಾಣತೇ ಚಳಣ । ತೇ ಚಿ ವಾಯೋಚೇ ಲಕ್ಷಣ ।
ವಾಯೋಅಂಗೀ ಸಕಳ ಗುಣ । ಮಾಗಾ ನಿರೋಪಿಲೇ ॥೧೯॥

ವ್ಹಾಣೋನ ಜಾಣೀವನೇಣೀವಮಿಶ್ರಿತ । ಅವಘೇ ಚಾಲಿಲೇ ಪಂಚಭೂತ ।
ವ್ಹಾಣೋನಿಯಾ ಭೂತಾತ । ಜಾಣೀವ ಅಸೆ ॥೨೦॥

ಕೋಠೇ ದಿಸೆ ಕೋಠೇ ನ ದಿಸೆ । ಪರೀ ತೇ ಭೂತೀ ವ್ಯಾಪೂನ ಅಸೆ ।
ತಿಕ್ಷಣ ಬುದ್ಧಿ ಕರಿತಾ ಭಾಸೆ । ಸ್ಥೂಳ ಸೂಕ್ಷ್ಮ ॥೨೧॥

ಪಂಚಭೂತೇ ಆಕಾರಲೀ । ಭೂತೀ ಭೂತೇ ಕಾಲವಲೀ ।
ತರೀ ಪಾಹಾತಾ ಭಾಸಲೀ । ಯೇಕ ಸ್ಥೂಳ ಯೇಕ ಸೂಕ್ಷ್ಮೇ ॥೨೨॥

ನಿರೋಧವಾಯೋ ನ ಭಾಸೆ । ತೈಸೀ ಜಾಣೀವ ನ ದಿಸೆ ।
ನ ದಿಸೆ ಪರೀ ತೆ ಅಸೆ । ಭೂತರೂಪೇ ॥೨೩॥

ಕಾಷ್ಠೀ ಅಗ್ನೀ ದಿಸೇನಾ । ನಿರೋಧವಾಯೊ ಭಾಸೇನಾ ।
ಜಾಣೀವ ತೈಸೀ ಲಕ್ಷೇನಾ । ಯೇಕಾಯೇಕೀ ॥೨೪॥

ಭೂತೇ ವೇಗಳಾಲೀ ದಿಸತೀ । ಪಾಹಾತಾ ಯೇಕ ಚಿ ಭಾಸತೀ ।
ಬಹುತ ಧೂರ್ತಪಣೇ ಪ್ರಚೀತೀ । ಮೊಳಖಾವೀ ॥೨೫॥

ಬ್ರಹ್ಮಾಪಾಸೂನ ಮೂಳಮಾಯಾ। ಮೂಳಮಾಯೇಪಾಸೂನ ಗುಣಮಾಯಾ।
ಗುಣಮಾಯೇಪಾಸೂನ ತಯಾ । ಗುಣಾಸ ಜನ್ಮ ॥೨೬॥

ಗುಣಾಪಾಸೂನಿಯಾ ಭೂತೇ । ಪಾವಲೀ ಪಷ್ಟ ದಶೇತೇ ।
ಐಸಿಯಾಚೀ ರೂಪೇ ಸಮಸ್ತೇ । ನಿರೋಪಿಲೀ ॥೨೭॥

ಆಕಾಶ ಗುಣಾಪಾಸೂನ ಜಾಲೇ । ಹೇ ಕದಾಪೀ ನಾಹೀ ಘಡಲೇ ।
ಶಬ್ದಗುಣಾಸ ಕಲ್ಪಿಲೇ । ಆಕಾಶ ವಾಯಾ ॥೨೮॥

ಯೇಕ ಸಾಂಗತಾ ಯೇಕ ಚಿ ಭಾವೀ । ಉಗೀ ಚ ಕರೀ ಗಥಾಗೋವೀ ।
ತಯಾ ವೇಡ್ಯಾಚೀ ಉಗವೀ । ಕೋಣೇ ಕರಾವೀ ॥೨೯॥

ಈ ಶಂಕಾಕ್ಕೆ ಉತ್ತರವಾಗಿ ಹೇಳುವದೇನಂದರೆ, ಹೇತು ಪೂರ್ವಕ[ಉದ್ದೇಶ ಪೂರ್ವಕ]ವಾಗಿ ಆಗುವಂಥ ಚಲನವಲನ [ಹಾಲಚಾಲ] ಇದು ಅರಿವೆ ಇರುವದು. ವಾಯುವಿನ ಲಕ್ಷಣವೂ ಸಹ ಇದೇ ಇರುವದು. ಮತ್ತು ವಾಯುವಿನಲ್ಲಿ ಎಲ್ಲ ಗುಣಗಳೂ ಇರುವವು. ಇದನ್ನು ಇದೇ ಈಗ ಹೇಳಿದ್ದೇನೆ. ಶ್ರೀ ಸಮರ್ಥರ ಉತ್ತರವು ಉತ್ಕ್ರಾಂತಿವಾದಿಗಳ [ವಿಕಾಸವಾದಿಗಳ] ಉತ್ತರಕ್ಕೆ ಅಗದೀ ಬರೋಬರ ಹೊಂದುತ್ತದೆ. ಅವರು ಹೇಳುವನೇನಂದರೆ ಅರಿವು (ಕಾನ್ಸಸೆಸ್) ಇದು ಜೀವಂತತನದ ಲಕ್ಷಣವಿರುವದು. ಮತ್ತು ಹೇತು ಪೂರ್ವಕ ಚಲನವಲನ (ಹಾಲಚಾಲ) [ಪರ್ಪಜಫುಲ್ ಮುವ್ಹಮೆಂಟ] ಇದು ಅರಿವಿನ [ಜಾಣೀವದ] ಲಕ್ಷಣವಿರುವದು. [೧೯] ಆದ್ದರಿಂದ ಅರಿವು ಮತ್ತು ಮರೆವು [ಅಜ್ಞಾನ] ಇವುಗಳ ಮಿಶ್ರಣದಿಂದಲೇ ಪಂಚಭೂತಗಳ ಖಟಾಟೋಪ ನಡೆಯುವದು. ಇದರ ಮೇಲಿಂದ ನೋಡಿದರೆ ಮಹಾಭೂತಗಳಲ್ಲಿ ಅರಿವು ಇರುವದೆಂದು ಗೊತ್ತಾಗುವದು. ಅಂತೆಯೇ ಸಂಶಯ ತಾಳುವ ಕಾರಣವೇ ಇಲ್ಲ. [೨೦] ಅರಿವು ಇದು ಐದೂ ಭೂತಗಳಲ್ಲಿ ವ್ಯಾಪಿಸಿರುವದೆಂಬ ಮಾತು ನಿಜವೇ ಇರುವದು. ಆದರೆ ಇದು ಒಂದು ಕಡೆಗೆ ಪ್ರಕಟವಾಗಿ ಕಾಣುವದು. ಇನ್ನೊಂದು ಕಡೆಗೆ ಇದು ಪ್ರಕಟವಾಗಿ ಕಾಣಿಸುವದಿಲ್ಲ. ಇದರಲ್ಲಿ ಇಷ್ಟೇ ಮಾತ್ರ ಅಂದರೆ ಇರುವದು. ತೀವ್ರ-ಸೂಕ್ಷ್ಮ ಬುದ್ಧಿಯಿಂದ ವಿಚಾರ ಮಾಡಿದ್ದಾದರೆ ಅರವಿನ ಲ್ಲಿಯ ಸ್ಥೂಲ ಮತ್ತು ಸೂಕ್ಷ್ಮರೂಪಗಳು ಸರಿಯಾಗಿ ತಿಳಿಯುವವು. [೨೧] ಐದು ಭೂತಗಳು ಯಾವಾಗ ಆಕಾರಕ್ಕೆ ಬಂದವೋ ಆಗ ಅವು ನೋಡಲಿಕ್ಕೆ ಬೇರೆ ಬೇರೆ ಕಾಣಹತ್ತಿದವು-ಆಗಲೂ ಸಹ ಅವು ಒಂದಕ್ಕೊಂದು ಕೂಡಿಕೊಂಡು ಅಥವಾ ಕಲಿಸಿ ಕಲಬೆರಿಕೆಯಾಗಿಯೇ ಇರುವವು. ಇವುಗಳ ಕಡೆಗೆ ನೋಡಿದರೆ ಒಂದು ಸ್ಥೂಲವಾಗಿ ಕಾಣುವದು. ಮತ್ತು ಎರಡನೆಯದು ಸೂಕ್ಷ್ಮವಾಗಿರುವದು. (ಸೂಕ್ಷ್ಮವಾಗಿ ಕಾಣುವದು) (೨೨) ವಾಯು (ಗಾಳಿ) ಸ್ವಲ್ಪವೂ ಬೀಸದಿದ್ದಾಗ ವಾಯು ಇದೆ ಎಂದು ಅನಿಸುವದಿಲ್ಲ. ಇದರಂತೆ ಅರಿವು ಗುಪ್ತವಿದ್ದಾಗ ಅದು ಕಾಣಿಸುವದಿಲ್ಲ. ಆದರೆ ಇದು ಕಾಣದಿದ್ದರೂ ಭೂತಗಳ ಅಂತರಂಗದಲ್ಲಿ ಸೂಕ್ಷ್ಮರೂಪದಿಂದ ಇದ್ದೇ ಇರುವದು. (೨೩) ಕಟ್ಟಿಗೆಯಲ್ಲಿ ಅಗ್ನಿ ಇದ್ದೂ ಅದು ಕಾಣಿಸುವದಿಲ್ಲ. ವಾಯುವು ಬೀಸುವದು ಬಂದಾದರೂ ಸಹ ಅದು ಇದ್ದೂ ಭಾಸವಾಗುವದಿಲ್ಲ. ಇದರಂತೆ ಅರಿವಿನ ಅಸ್ತಿತ್ವ ಒಮ್ಮೆಲೆ ಲಕ್ಷ್ಯಕ್ಕೆ ಬರುವದಿಲ್ಲ. (೨೪) ಐದೂ ಭೂತಗಳು ನೋಡಲಿಕ್ಕೆ ಬೇರೆ ಬೇರೆಯಾಗಿ ಕಾಣುವವು. ಆದರೆ ಸೂಕ್ಷ್ಮ ವಿಚಾರದಿಂದ ನೋಡಿದ್ದಾದರೆ ಅವು ಏಕರೂಪವಾಗಿ ಕಾಣುವವು. ಈ ವಿಚಾರದ (ಮಾತಿನ) ಅನುಭವ ಬಹಳ ಚತುರತನದಿಂದ ತಿಳಿಯಬೇಕಾಗುವದು. (ಪಡೆಯಬೇಕಾಗುವದು). (೨೫) ವಿಶ್ವವು ಹೇಗೆ ನಿರ್ಮಾಣವಾಯಿತು,ಅನ್ನುವದು ಸರಿಯಾಗಿ ಲಕ್ಷ್ಯವಲ್ಲಿ ಬರಬೇಕಾದರೆ ಸೂಕ್ಷ್ಮ ವಿಚಾರದ ಅವಶ್ಯಕತೆಯು ಇರುವದು. ಈ ರೀತಿಯಲ್ಲಿ ವಿಚಾರ ಮಾಡಿದರೆ ಮಾತ್ರ ಇದರಲ್ಲಿಯ ಕಠಿಣ ತೊಡಕುಗಳು ತಮ್ಮಷ್ಟಕ್ಕೆ ತಾವೇ ನಿವಾರಣೆ ಆಗಿ ವಿಷಯ ಗೋಚರವಾಗುವದು. ಇನ್ನು ವಿಶ್ವ ನಿರ್ಮಾಣದ ಕಥೆಯು ಹೀಗಿರುವದು:- ಪರಬ್ರಹ್ಮನಿಂದ ಮೂಲ ಮಾಯಾ ಆದಳು. ಮೂಲ ಮಾಯೆಯಿಂದ ಗುಣಮಾಯಾ ಆದಳು ಗುಣ ಮಾಯೆಯಿಂದ ಸತ್ವ, ರಜ, ತಮ, ಈ ಮೂರು ಗುಣಗಳು ಹುಟ್ಟಿದವು. (೨೬) ಗುಣಗಳಿಂದ ಪಂಚಮಹಾ ಭೂತಗಳು ನಿರ್ಮಾಣವಾದವು. ಆಮೇಲೆ ಇವು ಬೇರೆ ಬೇರೆಯಾಗಿ ದೃಶ್ಯರೂಪಕ್ಕೆ ಬಂದವು. ಈ ಎಲ್ಲವುಗಳ ಲಕ್ಷಣ ಗಳನ್ನು ಈವರೆಗೆ ಹೇಳಿದ್ದಾಗಿದೆ. (೨೭) ಖರೇ ಅಂದರೆ ಐದು ಭೂತಗಳು ಮತ್ತು ಮೂರು ಗುಣಗಳು ಕೂಡಿ ಗುಣಮಾಯಾ ಇರುವದು. ಆದ್ದರಿಂದ ಆಕಾಶವು ಗುಣಗಳಿಂದ ಆಯಿತೆಂದು ಎಂದೂ ಯಾರಿಗೂ ಹೇಳಲಿಕ್ಕೆ ಸಾಧ್ಯವಿಲ್ಲ. ಶಬ್ದಗಳಿಗೆ ಅಧಿಷ್ಠಾನ ಬೇಕಾಗುವದು. ಅದಕ್ಕಾಗಿ ಸುಮ್ಮನೇ ಆಕಾಶದ ಕಲ್ಪನೆಯನ್ನು ಮಾಡಿರುವರು. (೨೮) ಒಂದು ಹೇಳಿದರೆ,ಅದಕ್ಕೆ ಇಲ್ಲದ ಅರ್ಥ ಮಾಡಿ ಏನೇನೋ ತಿಳಿದುಕೊಳ್ಳುವರು. ಇಲ್ಲದ ಅರ್ಥ ಹಚ್ಚಿ ಫೋಟಾಳಿ ಮಾಡುವರು. ಇಂಥ ಹುಚ್ಚರ ಸಮಜೂತ ಮಾಡುವದು, ಅವರಿಗೆ ಪಟಾಯಿಸಿ ಕೊಡುವದು ಬಹಳ ಕಠಿಣ ಕೆಲಸ ವಿರುವದು. (೨೯)

ಸಿಕವಿಲ್ಯಾಹಿ ಕಳೇನಾ । ಉಮಜವಿಲ್ಯಾ ಹೀ ಉಮಜೇನಾ ।
ದೃಷ್ಟಾಂತೇ ಹಿ ತರ್ಕೇನಾ । ಮಂದರೂಪ ॥೩೦॥

ಭೂತಾಹೂನ ಭೂತ ಥೋರ । ಹಾ ಹಿ ದಾವಿಲಾ ವಿಚಾರ ।
ಪರೀ ಭೂತಾವಡಿಲ ಸ್ವತಂತ್ರ । ಕೋಣ ಆಹೆ ॥೩೧॥

ಜೇಥೇ ಮೂಳಮಾಯಾ ಪಂಚಭೂತಿಕ । ತೇಥೇ ಕಾಯೆ ರಾಹಿಲಾ ವಿವೇಕ ।
ಮೂಳಮಾಯೇಪರತೇ ಯೇಕ । ನಿರ್ಗುಣಬ್ರಹ್ಮ ॥೩೨॥

ಬ್ರಹ್ಮೀ ಮೂಳಮಾಯಾ ಜಾಲೀ । ತಿಚೀ ಲೀಳಾ ಪರೀಕ್ಷಿಲೀ ।
ತವ ತೇ ನಿಖಳ ವೊಳಖಲೀ । ಭೂತೇತ್ರಿಗುಣಾಚೀ ॥೩೩॥

ಭೂತೇ ವಿಕಾರವಂತ ಚತ್ವಾರ । ಆಕಾಶ ಪಾಹಾತಾ ನಿರ್ವಿಕಾರ ।
ಆಕಾಶ ಭೂತ ಹಾ ವಿಚಾರ । ಉಪಾಧೀಕರಿತಾ ॥೩೪॥

ಪಿಂಡೀ ವ್ಯಾಪಕ ಮ್ಹಣೋನ ಜೀವ । ಬ್ರಹ್ಮಾಂಡೀ ವ್ಯಾಪಕ ಮ್ಹಣೋನ ಶಿವ ।
ತೈಸಾ ಚ ಹಾ ಹೀ ಅಭಿಪ್ರಾವ । ಆಕಾಶಾಚಾ ॥೩೫॥

ಇಂಥವರು ಎಷ್ಟು ಹೇಳಿ ಕಲಿಸಿದರೂ ತಿಳಿದುಕೊಳ್ಳುವದಿಲ್ಲ. ಸರಿಯಾಗಿ ತಿಳಿಸಿ ಹೇಳಿದರೂ ತಿಳಿದುಕೊಳ್ಳುವದಿಲ್ಲ. ಉದಾಹರಣೆ-ಮತ್ತು ದೃಷ್ಟಾಂತ ಕೊಟ್ಟು ತಿಳಿಸಿದರೂ ಸಹ ಸರಿಯಾಗಿ ಅರ್ಥಮಾಡಿಕೊಳ್ಳುವ ಶಕ್ತಿ ಅವರ ಬುದ್ಧಿಯಲ್ಲಿರುವದಿಲ್ಲ. (೩೦) ಶ್ರೀ ಸಮರ್ಥರಿಗೆ ಇಲ್ಲಿ ಹೇಳಬೇಕಾಗಿರುವದೇನಂದರೆ ವಿಶ್ವ ನಿರ್ಮಾಣದ ಕಥೆ ಇದು ಅತೀಂದ್ರಿಯದ ವಿಷಯವಿರುವದು. ಇದರಲ್ಲಿಯ ಕಲ್ಪನೆಯು ಅತ್ಯಂತ ಸೂಕ್ಷ್ಮವಿರುವದು. ಇದರ ಬಗ್ಗೆ ಸ್ವಲ್ಪ ಆದರೂ ಅಂದಾಜ ಬರಬೇಕೆಂದು ದೃಷ್ಟಾಂತ ರೂಪದಿಂದ ವಿಷಯದ ಬಗ್ಗೆ ಮಾತನಾಡಬೇಕಾಗುವದು. ಆದರೂ ಇದರ ಅರ್ಥ ಮಾಡುವಾಗ ದೃಶ್ಯದ ಅರ್ಥಮಾಡುವಂಥ ರೀತಿಯನ್ನು ಇಲ್ಲಿ ಉಪಯೋಗ ಮಾಡಬಾರದು. ಕೇವಲ ಸಂಕೇತದಿಂದ ಅರ್ಥವನ್ನು ಲಕ್ಷ್ಯದಲ್ಲಿ ತರಬೇಕು:-ಇರಲಿ. ಐದು ಭೂತಗಳಲ್ಲಿ ಒಂದಕ್ಕಿಂತ ಒಂದು ದೊಡ್ಡವಿರುವವು ಅನ್ನುವ ಈ ವಿಚಾರವನ್ನು ಮಾಡುವರು. (ಮಂಡಿಸಿದರು). ಮತ್ತು ಅನುಕ್ರಮದಿಂದ ಪಂಚಭೂತಗಳಿಗಿಂತ ಶ್ರೇಷ್ಠ ಮತ್ತು ಸ್ವತಂತ್ರ ಯಾರು ಇರುವರು ಅನ್ನುವ ಪ್ರಶ್ನೆ ಹುಟ್ಟುವದು. (೩೧) ಮೂಲದಿಂದಲೂ ಇರುವ ಮೂಲ ಮಾಯೆಯೇ ಪಂಚಭೂತಗಳಿಂದ ತುಂಬಿರುವಾಗ ಈ ಪ್ರಶ್ನೆಯ ವಿಚಾರ ಏಳುವದೇ ಇಲ್ಲ. ನಿಮ್ಮ ಪ್ರಶ್ನೆಯ ವಿಚಾರ ಇಲ್ಲಿಗೆ ನಿಂತುಬಿಡುವದು. ಮೂಲಮಾಯೆಯ ಆಚೆಗೆ ಕೇವಲ ನಿರ್ಗುಣ ಬ್ರಹ್ಮನೊಬ್ಬನು ಮಾತ್ರ ಇರುವನು. ಐದು ಭೂತಗಳು ನಮ್ಮ ಸ್ಥೂಲ ದೃಷ್ಟಿಗೆ ಜಡ ಮತ್ತು ದೃಶ್ಯವಾಗಿ ಭಾಸವಾಗುವವು. ಆದರೆ ಸೂಕ್ಷ್ಮದೃಷ್ಟಿಯಿಂದ ನೋಡಿದ್ದಾದರೆ ಇವು ಅರಿವಿನ ರೂಪವೇ ಇರುವವು, ಅನ್ನುವದು ತಿಳಿಯುವದು. ಅರಿವು (ಜಾಣೀವ) ಅಂದರೆ ಶಕ್ತಿಯು ಅರ್ಥಾತ್ ಈ ದೃಶ್ಯವಿಶ್ವದಲ್ಲಿ ಅತ್ತ ಇತ್ತ ಎಲ್ಲ ಕಡೆಗೂ ಶಕ್ತಿಯ ಸಂಚಾರವೇ ಇರುವದು. ಇವಳದೇ ವ್ಯವಹಾರ ಇರುವದು. ಪಂಚಭೂತಗಳು ಮೂರು ಗುಣಗಳು ಮತ್ತು ಯಾವತ್ತೂ ದೃಶ್ಯ ಪದಾರ್ಥಗಳು ಶಕ್ತಿಯ ಚಲನವಲನದಿಂದಾಗುವ ಘಟನೆಗಳೇ ಇರುವವು. ಇವೆಲ್ಲವನ್ನು ಲಕ್ಷ್ಯದಲ್ಲಿ ತಂದುಕೊಂಡು ದಿವ್ಯದೃಷ್ಟಿಯ ಸಂಪಾದನೆಗಾಗಿ ಸಾಧಕನು ವಿಶ್ವದ ಜಗತ್ತಿನ ವಿಚಾರ ಮಾಡಬೇಕು. ಇದಕ್ಕಾಗಿಯೇ ಶ್ರೀ ಸಮರ್ಥರು ಈವಿಷಯವನ್ನು ಬಹುವಿಸ್ತಾರವಾಗಿ ಸವಿಸ್ತಾರವಾಗಿ ಬಿಡಿಸಿ ಹೇಳಿದ್ದಾರೆ. (೩೨) ಪರಬ್ರಹ್ಮದಲ್ಲಿ ಮೂಲ ಮಾಯಾ ನಿರ್ಮಾಣವಾದಳು. ಈ ಅತಿ ವಿಶಾಲ ವಿಶ್ವ ನಿರ್ಮಾಣದ ಆಟವನ್ನು ಇವಳೇ ಆಡುವಳು. ಇವಳ ಈ ಲೀಲೆಯ ಸೂಕ್ಷ್ಮ ನಿರೀಕ್ಷಣೆ ಮಾಡಿದರೆ ಮತ್ತು ಆಳವಾದ ಪರೀಕ್ಷೆಯನ್ನು ಮಾಡಿದ್ದಾದರೆ ಆಗ ಕಂಡು ಬರುವದೇನಂದರೆ ಇವಳು ಕೇವಲ ಐದು ಭೂತಗಳು ಮತ್ತು ಮೂರು ಗುಣಗಳು ಕೂಡಿರುವ [ಮಿಶ್ರಣದ] ಮೂಸಿ ಅಥವಾ ಚಿಲುಮೆ ಆಗಿರುವಳು. (೩೩) ಐದು ಭೂತಗಳ ಪೈಕಿ ಅಂದರೆ ಪೃಥ್ವಿ, ಆಪ್ (ನೀರು), ತೇಜ [ಅಗ್ನಿ] ಮತ್ತು ವಾಯು ಇವುಗಳಿಗೆ ವಿಕಾರವಿರುವದು ಅಳತೆ ಇರುವದು. ಇವುಗಳಲ್ಲಿ ಬದಲಾವಣೆ ಉಂಟಾಗುವದು. ಆಕಾಶವು ಮಾತ್ರ ನಿರ್ವಿಕಾರವಿರುವದು. ಆಕಾಶಕ್ಕೆ ಉಪಾಧಿ ಇರುವದು. ಮರ್ಯಾದಾ[ಸೀಮೆ, ಎಲ್ಲೆ,ಅಳತೆ] ಇರುವದು. ಅಂತೆಯೇ ಇದು ಪಂಚಭೂತಗಳಲ್ಲಿ ಗಣಿಸಲ್ಪಡುವದು. [೩೪] ಅರಿವು [ಶಕ್ತಿ] ಪಿಂಡಕ್ಕೆ ಯಾವಾಗ ವ್ಯಾಪಿಸುವದೋ ಆಗ ಇದಕ್ಕೆ ಜೀವವೆಂದು ಅನ್ನುವರು. ಇದು ಪಿಂಡದ ಮಟ್ಟಿಗೆ ಮರ್ಯಾದಿತವಿರುವದು. ಅರಿವು [ಶಕ್ತಿ] ಯಾವಾಗ ವಿಶ್ವಕ್ಕೆ ಅಥವಾ ಬ್ರಹ್ಮಾಂಡಕ್ಕೆ ವ್ಯಾಪಿಸುವದೋ ಆಗ ಇದು ವಿಶ್ವದಮಟ್ಟಿಗೆ ಮರ್ಯಾದಿತವಾಗುವದು.ಆಗ ಇದಕ್ಕೆ ಶಿವ ಎನ್ನುವರು. ಆಕಾಶದ ಬಗ್ಗೆ ಸಹ ಹೀಗೆಯೇ ವಿಚಾರ ಮಾಡಲಿಕ್ಕೆ ಬೇಕು. ಯಾವುದೇ ದೃಶ್ಯವಸ್ತುವಿನ ಬಗ್ಗೆ ಅದು ಅಂದರೆ ಆ ವಸ್ತುವು ಪಿಂಡವಿರಲಿ ಅಥವಾ ಬ್ರಹ್ಮಾಂಡವಿರಲಿ ಮರ್ಯಾದೆ [ಅಳತೆ, ಶೀಮೆ] ಇಲ್ಲದ ಅಂದರೆ ಅಮರ್ಯಾದವಿರುವ ಯಾವ ಶುದ್ಧ, ನಿರ್ಮಲ, ಮಿಶ್ರವಿರದ, ಅನಂತವಾದ ಅರಿವೇ ಪರಮಾತ್ಮ ಸ್ವರೂಪವೆಂದು ತಿಳಿಯಬೇಕು.ಇದರಂತೆ ವಸ್ತುವನ್ನು ವ್ಯಾಪಿಸುವಂಥ ಆಕಾಶವನ್ನು ಬಿಡಬೇಕು.ಈ ಎರಡನ್ನೂ ಬಿಟ್ಟು ಉಳಿಯುವಂಥ ಶುದ್ಧ, ಕೇವಲ ಮತ್ತು ಅನಂತ ಅಸ್ತಿತ್ವವೇ ಪರಮಾತ್ಮ ಸ್ವರೂಪವೆಂದು ತಿಳಿಯಬೇಕು. (೩೫)

ಉಪಾಧೀಮಧೆ ಸಾಂಪಡಲೇ । ಸೂಕ್ಷ್ಮ ಪಾಹಾತಾ ಭಾಸಲೇ ।
ಇತುಕ್ಯಾಸಾಠೀ ಆಕಾಶ ಜಾಲೇ। ಭೂತರೂಪೇ ॥೩೬॥

ಆಕಾಶ ಅವಕಾಶ ತೋ ಭಕಾಸ । ಪರಬ್ರಹ್ಮ ತೇ ನಿರಾಭಾಸ ।
ಉಪಾಧೀ ನಸ್ತಾ ಜೇ ಆಕಾಶ । ತೇ ಚಿ ಬ್ರಹ್ಮ ॥೩೭॥

ಜಾಣೀವ ನೇಣೀವ ಮಧ್ಯಮಾನ । ಹೇ ಚಿ ಗುಣಾಚೇ ಪ್ರಮಾಣ ।
ಯೇಥೇ ನಿರೋಪಿಲೇ ತ್ರಿಗುಣ । ರೂಪೇ ಸಹಿತ ॥೩೮॥

ಪ್ರಕೃತೀ ಪಾವಲೀ ವಿಸ್ತಾರಾತೇ । ಪುಢೇ ಯೇಕಾಚೇ ಯೇಕ ಚಿ ಹೋತೇ ।
ವಿಕಾರವಂತ ಚಿ ತಯಾತೇ । ನೇಮು ಕೈಚಾ ॥೩೯॥

ಕಾಳೇ ಪಾಂಢರೇ ಮೇಳವಿತಾ । ಪಾರವೇ ಹೋತೆ ತತ್ವತಾ ।
ಕಾಳೇ ಪಿವಳೇ ಮೇಳವಿತಾ । ಹಿರವೇ ಹೋಯೆ ॥೪೦॥

ಐಸೆ ರಂಗ ನಾನಾಪರೀ । ಮೇಳವಿತಾ ಪಾಲಟಿ ಧರೀ ।
ತೈಸೇ ದೃಶ್ಯ ಹೇ ವಿಕಾರೀ । ವಿಕಾರವಂತ ॥೪೧॥

ಯೇಕಾ ಜೀವನೇ ನಾನಾ ರಂಗ । ಉಮಟೋ ಲಾಗತೀ ತರಂಗ ।
ಪಾಲಟಾಚಾ ಲಾಗವೇಗ । ಕಿತೀ ಮ್ಹಣೋನ ಪಾಹಾವಾ ॥೪೨॥

ಯೇಕಾ ಉದಕಾಚೇ ವಿಕಾರ । ಪಾಹಾತಾ ದಿಸತೀ ಅಪಾರ ।
ಪಾಚಾ ಭೂತಾಚೆ ವಿಸ್ತಾರ । ಚೌರ್‍ಯಾಂಸೀ ಲಕ್ಷ ಯೋನೀ ॥೪೩॥

ನಾನಾ ದೇಹಾಚೇ ಬೀಜ ಉದಕ । ಉದಕಾಪಾಸೂನ ಸಕಳ ಲೋಕ ।
ಕಿಡಾ ಮುಂಗೀ ಸ್ವಾಪದಾದಿಕ। ಉದಕೇ ಚಿ ಹೋಯೇ ॥೪೪॥

ಶುಕ್ಲೀತ ಶ್ರೋಣೀತ ಮ್ಹಣಿಜೆ ನೀರ । ತ್ಯಾ ನೀರಾಚೇ ಹೇ ಶರೀರ ।
ನಖೇ ದಂತ ಅಸ್ಥಿಮಾತ್ರ । ಉದಕಾಚ್ಯಾ ಹೋತೀ ॥೪೫॥

ಆಕಾಶಕ್ಕೆ ದೃಶ್ಯವು ಮರ್ಯಾದೆಯನ್ನು ಹಾಕಿತು. ಒಂದು ಅರ್ಥದಿಂದ ನೋಡಿದರೆ ಆಕಾಶವು ದೃಶ್ಯದ ಹಿಡಿತದಲ್ಲಿ ಅಥವಾ ಝಪಾಟೆಯಲ್ಲಿ ಸಿಕ್ಕಿಕೊಂಡಿತು. ಸೂಕ್ಷ್ಮ ದೃಷ್ಟಿಯಿಂದ ನೋಡಿದರೆ ಇದು ಜ್ಞೇಯ ರೂಪ ದಿಂದ ಅಂದರೆ ಬೇರೆತನದಿಂದ ಯಾವುದು ಅನುಭವಕ್ಕೆ ಬರುವದೋ ಅದು ಪಂಚಭೂತಾತ್ಮಕವಿರುವದು. ಆದ್ದರಿಂದ ಆಕಾಶವು ಪಂಚಭೂತಗಳಲ್ಲಿ ಒಂದು ಎಂದು ಗಣಿಸಲ್ಪಡುವದು. (೩೬) ಆಕಾಶವು ಅವಕಾಶ ರೂಪ ಪೊಳ್ಳು ಜಾಗಾದ ಭಾಸರೂಪವಿರುವದು. ಆದ್ದರಿಂದ ಅದು ಶೂನ್ಯಮಯ ಇರುವದು. ಈ ಶೂನ್ಯತ್ವಕ್ಕೆ "ವ್ಹಾಇಡ್" ಅನ್ನುವರು. ಶೂನ್ಯವು [ನಾಹಿಪಣಾನೆ ಭಾಸತೆ] ಇಲ್ಲದೆ ಭಾಸವಾಗುವದು. ಅನುಭವಕ್ಕೆ ಬರುವದು ಆದರೆ ಪರಬ್ರಹ್ಮವು ಬೇರೆ ಯಾಗಿ ಪ್ರತ್ಯೇಕತನದಿಂದ ಅನುಭವಕ್ಕೆ ಬರುವದೇ ಇಲ್ಲ. ತರ್ಕದಿಂದ ವರ್ಣನೆ ಮಾಡುವಾಗ ದೃಶ್ಯದಂತೆ ಅದು ಇಲ್ಲ ವೆಂದು ಹೇಳಬೇಕಾಗುವದು. ಆದರೆ ಪರಬ್ರಹ್ಮವು ಶೂನ್ಯವಲ್ಲ. ಇದರ ಇರುವಿಕೆ ಅಥವಾ ಅದೆ ಅನ್ನುವದು ಮಾತ್ರ ಎಂದೂ ಲೋಪವಾಗುವದಿಲ್ಲ. ದೃಶ್ಯತನದ ಯಾವುದೇ ಉಪಾಧಿ ಇಲ್ಲದ ಆ ಯಾವ ಆಕಾಶವೇ ಪರಬ್ರಹ್ಮ ಸ್ವರೂಪವಾಗಿದೆ. (೩೭) ಸತ್ವ ಅಂದರೆ ಅರಿವು.ತಮ ಅಂದರೆ ಅಜ್ಞಾನ (ಮರೆವು). ಮತ್ತು ರಜ ಅಂದರೆ ಅರಿವು+ ಮರೆವಿನ ಮಿಶ್ರಣವು ಈ ಮೂರು ಗುಣಗಳ ಲಕ್ಷಣಗಳ ಬಗ್ಗೆ ಅವುಗಳ ಪ್ರಕಟರೂಪ ಸಹಿತ ಈ ಮೊದಲು ಹೇಳಿಯೇ ಇರುವದು. (೩೮) ಒಮ್ಮೆ ಪ್ರಕೃತಿಯು ವಿಸ್ತಾರವಾಗ ಹತ್ತಿತೆಂದರೆ ಒಂದರಿಂದ·ಇನ್ನೊಂದು ನಿರ್ಮಾಣ ವಾಗುತ್ತ ಹೋಗುವದು. ಪ್ರಕೃತಿಯು ವಿಕಾರ ಉಳ್ಳದ್ದಿರುವದೆಂದು ಒಮ್ಮೆ ತಿಳಿಯಿತೆಂದರೆ ಆಮೇಲೆ ಪ್ರಕೃತಿಯಿಂದ ಅನಂತ ಪ್ರಕಾರದ ದೃಶ್ಯ ಹೇಗೆ ನಿರ್ಮಾಣವಾಗುತ್ತ ಹೋಗುವದೆಂಬ ಬಗ್ಗೆ ಆಶ್ಚರ್ಯವಾಗುವದಿಲ್ಲ. ಮಹಾಭೂತ ಗಳು ಐದು ಮತ್ತು ಗುಣಗಳು ಮೂರು ಕೂಡಿ ಎಂಟು ಆಯಿತು. ಐದುಭೂತಗಳ ಪೈಕಿ ಪ್ರತಿಯೊಂದರಲ್ಲಿಯ ಹೆಚ್ಚು ಕಡಿಮೆಯ ಭಾಗ ಮತ್ತು ಮೂರು ಗುಣಗಳಲ್ಲಿಯ ಕಡಿಮೆ-ಹೆಚ್ಚು ಪ್ರಮಾಣ ಹೀಗೆ ಎರಡೂ ಕೂಡಿ ಅಕ್ಷರಶಃ ಅನಂತ ಪ್ರಕಾರದ ದೃಶ್ಯವಸ್ತುಗಳು ನಿರ್ಮಾಣವಾಗುವವು, ಆದ್ದರಿಂದಲೇ ಈ ವಿಶ್ವದಲ್ಲಿ ವಿಲಕ್ಷಣ ವಿವಿಧತೆ ಯನ್ನು ನೋಡಿ ಮನುಷ್ಯನು ಆಶ್ಚರ್ಯ ಚಕಿತನಾಗಿ ಹೋಗುವನು. ಇವನ ಬುದ್ಧಿ ಕುಂಠಿತವಾಗುವದು. ಅಂದ ಮೇಲೆ ವಿಶ್ವವಿಸ್ತಾರದ ನಿಶ್ಚಿತಗಣನೆಯನ್ನು ಹೇಗೆ ಮಾಡಲಿಕ್ಕೆ ಬಂದೀತು?ಅರ್ಥಾತ್ ಬರುವದಿಲ್ಲ. [೩೯] ಉದಾ:- ಕರಿದು ಮತ್ತು ಬಿಳಿದು ಬಣ್ಣ ಏಕತ್ರ ಮಾಡಿದರೆ ಅದರಿಂದ ಬೂದುಬಣ್ಣ ತಯಾರು ಆಗುವದು. ಕರಿದು ಮತ್ತು ಹಳದಿ ರಂಗ [ಬಣ್ಣ] ಕೂಡಿದರೆ ಅದರಿಂದ ಹಸಿರು ಬಣ್ಣ [ರಂಗ] ತಯಾರ ಆಗುವದು. [೪೦] ಈ ರೀತಿಯಲ್ಲಿ ರಂಗದ ಮಿಶ್ರಣ ಮಾಡಿದರೆ ಮೂಲ ಬಣ್ಣ ಬದಲಾಗುವದು. ಮತ್ತು ಹೊಸಬಣ್ಣ ತಯಾರ ಆಗುವದು ಇದ ರಂತೆ ಮೂಲದಲ್ಲಿಯೇ ದೃಶ್ಯವು ವಿಕಾರವುಳ್ಳದ್ದಿರುವದರಿಂದ ಇದರಲ್ಲಿ ಬದಲು ಆಗಿ ಹೊಸ ಹೊಸ ದೃಶ್ಯವಸ್ತು ತಯಾರ ಆಗುತ್ತ ಹೋಗುವವು. [೪೧] ಮೂಲದಲ್ಲಿ ನೀರು ಒಂದೇ ಇರುತ್ತದೆ. ಆದರೆ ಇದರ ಮೇಲೆ ತರಂಗ ಗಳು [ತೆರೆಗಳು] ಏಳುವವು. ಈ ತರಂಗಗಳಲ್ಲಿ ಬಹಳ ತೀವ್ರಗತಿಯಿಂದ ಬದಲಾವಣೆಗಳು ಆಗುತ್ತಿರುತ್ತದೆ. ಈ ತೆರೆಗಳ ಎಣಿಕೆ ಮಾಡುವದು. ಅಶಕ್ಯವಿರುವದು. [೪೨] ಐದು ಭೂತಗಳ ಪೈಕಿ ನೀರೂ ಒಂದು ಭೂತವಿರುವದು. ಇದೊಂದರದೇ ಇಷ್ಟೊಂದು ಅಸಂಖ್ಯ ಬದಲಾವಣೆ [ಫೇರ-ಬದಲು] ಆಗುವದನ್ನು ಕಾಣುವೆವು. ಒಟ್ಟಿನಲ್ಲಿ ಐದೂ ಭೂತಗಳ ಪ್ರಸಾರ[ವಿಸ್ತಾರ]ವಿಷ್ಟೊಂದು ಅಪಾರ ಇರುವದು. ಇದರ ಕಲ್ಪನೆಯನ್ನು ಮಾಡುವದು ಸಹ ಸಾಧ್ಯವಿಲ್ಲ ವೆಂದು ಅನಿಸುವದು ಎಂಭತ್ನಾಲ್ಕು ಲಕ್ಷ ಯೋನಿಗಳಲ್ಲಿಯ ಜೀವ ಪ್ರಾಣಿಗಳು ಈ ಅಫಾಟ.ಅಮರ್ಯಾದಪ್ರಸಾರ (ವಿಸ್ತಾರ)ದಲ್ಲಿಯ ಒಂದು ಭಾಗವಿರುವದು.[೪೩]ಜಗತ್ತಿನಲ್ಲಿ ಎಷ್ಟೆಷ್ಟೋ ಪ್ರಾಣಿಗಳು ಕಾಣಿಸುವವು. ಆದರೆ ನೀರು ಇದೇ ಆ ದೇಹಗಳಿಗೆ ಮೂಲವಿರುವದು. ಎಲ್ಲ ಜನರು, ಹುಳಹುಪ್ಪಡಿ ಇತ್ಯಾದಿ ಜೀವ ಮತ್ತು ಕ್ರೂರ ಜಾನ ವರುಗಳು, ಪಶುಪಕ್ಷಿ ಇತ್ಯಾದಿ ಅನೇಕ ಜೀವಗಳು ನೀರಿನಿಂದ ನಿರ್ಮಾಣವಾಗುವವು. [೪೪] ರಕ್ತ ಮತ್ತು ವೀರ್ಯ ಇವು ಮೂಲದಲ್ಲಿ ನೀರೇ ಇರುವವು· ಈ ನೀರಿನಿಂದ ನಮ್ಮ ಶರೀರವು ಹುಟ್ಟಿದೆ. ಉಗುರು, ಹಲ್ಲು ಮತ್ತು ಎಲ್ಲ ಎಲುವುಗಳು ಇವೆಲ್ಲ ನೀರಿನಿಂದಲೇ ತಯಾರ ಆಗಿರುವವು· [೪೫]

ಮುಳ್ಯಾಚೆ ಬಾರೀಕ ಸಾಗೋರೆ । ತೇಣೇ ಸಂಥೇ ಉದಕ ಭರೆ ।
ಯಾ ಉದಕೇ ಚಿ ವಿಸ್ತಾರೆ । ವೃಕ್ಷಮಾತ್ರ ॥೪೬॥

ಅಂಬ್ರ ವೃಕ್ಷ ಮೊಹರಾ ಆಲೆ । ಅವಘೆ ಉದಕಾಕರಿತಾ ಜಾಲೆ ।
ಫಳೀ ಫುಲೀ ಲಗಡಲೇ । ಸಾವಕಾಸ ॥೪೭॥

ಖೋಡ ಫೋಡೂನ ಅಂಬೆ ಪಾಹಾತಾ । ತೇಥೇ ದಿಸೇನಾ ಸರ್ವಥಾ ।
ಖಾಂದ್ಯಾ ಫೋಡೂನ ಫಳೇ ಪಾಹಾತಾ । ಮ್ರೊಲೀಸಾಲೇ ॥೪೮॥

ಮುಳಾಪಾಸೂನ ಸೇವಟಿ ವರೀ । ಫಳ ನಾಹೀ ತದನಂತರೀ ।
ಜಳರೂಪ ಫಳ ಚತುರೀ । ವಿವೇಕೇ ಜಾಣಾವೇ ॥೪೯॥

ತೇ ಚಿ ಜಳ ಸೇಂಡ್ಯಾ ಚಢೆ । ತೇವ್ಹಾ ವೃಕ್ಷಮಾತ್ರ ಲಗಡೆ ।
ಯೇಕಾಚೇ ಯೇಕ ಚಿ ಘಡೆ । ಯೇಣೇ ಪ್ರಕಾರೇ ॥೫೦॥

ಪತ್ರೇ ಪುಷ್ಪೇ ಫಳೇ ಭೇದ । ಕಿತೀ ಕರಾವಾ ಅನುವಾದ ।
ಸೂಕ್ಷ್ಮ ದೃಷ್ಟೀನೇ ವಿಶದ । ಹೋತ ಆಹೆ ॥೫೧॥

ಭೂತಾಚೆ ವಿಕಾರ ಸಾಂಗೋ ಕಿತೀ । ಕ್ಷಣಕ್ಷಣಾ ಪಾಲಟತೀ ।
ಯೇಕಾಚೆ ಯೇಕ ಚಿ ಹೋತೀ । ನಾನಾ ವರ್ಣ ॥೫೨॥

ತ್ರಿಗುಣ ಭೂತಾಚೀ ಲಟಪಟ । ಪಾಹೋ ಜಾತಾ ಹೆ ಖಟಪಟ ।
ಬಹುರೂಪ ಬಹು ಪಾಲಟ । ಕಿತೀ ಮ್ಹಣೋನ ಸಾಂಗಾವಾ ॥೫೩॥

ಯೆ ಪ್ರಕೃತೀಚಾ ನಿರಾಸ । ವಿವೇಕೇ ವಾರಾವಾ ಸಾವಕಾಸ ।
ಮಗ ಪರಮಾತ್ಮಾ ಪರೇಶ । ಅನನ್ಯಭಾವೇ ಭಜಾವಾ ॥೫೪॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
"ಗುಣರೂಪನಿರೂಪಣ" ನಾಮ ಸಮಾಸ ಷಷ್ಠಮ ॥

● ●

ಗಿಡದ ಬುಡದಲ್ಲಿಯ ಬೊಡ್ಡೆಗೆ ತೀರ ಸಣ್ಣ ಬೇರುಗಳು ಬಹಳ ಇರುವವು. ಇವುಗಳಿಂದ ನೀರು ಶೋಷಿಸಲ್ಪಟ್ಟು ಆ ನೀರು ಇಡೀ ಗಿಡಕ್ಕೆ ಹರಡುವದು. ಇದರಿಂದಾಗಿ ಗಿಡದ ವಿಸ್ತಾರ ವೃದ್ಧಿಗೊಳ್ಳುವದು·[೪೬] ನೀರಿನಿಂದ ಮಾವಿನ ಗಿಡಕ್ಕೆ ಚಿಗುರು, ಮೊಗ್ಗುಗಳು ಬಿಡುವವು· ಗಿಡಕ್ಕೆ ಹೂವುಗಳಿಂದಾಗಿ ಶೋಭೆ ಬರುವದು. ಹಣ್ಣುಗಳ ರಾಶಿಯೇ ಬರುವದು. ಇದೆಲ್ಲ ನೀರಿನ ಪರಿಣಾಮವೇ ಆಗಿದೆ. [೪೭] ಮಾವಿನ ಗಿಡಕ್ಕೆ ಹಣ್ಣು ಜೋತು ಬಿದ್ದಿರುವವೆಂದು, ಮಾವಿನ ಗಿಡದ ಬೊಡ್ಡೆಯನ್ನು ಒಡೆದು ಅದರಲ್ಲಿಯೂ ಮಾವಿನ ಹಣ್ಣುಗಳನ್ನು ನೋಡುವ ಪ್ರಯತ್ನ ಮಾಡಿದರೆ ಅದರಲ್ಲಿ ಮಾವಿನ ಹಣ್ಣುಗಳನ್ನು ಕಾಣಲಾರೆವು. ಇದೇ ಪ್ರಕಾರದಿಂದ ಮಾವಿನ ಮರದ ಟೊಂಗೆಗಳನ್ನು ಸೀಳಿ ನೋಡಿದರೂ ಅದರಲ್ಲಿ ಹಸಿ ತೊಗಟೆ ಮತ್ತು ಹಸಿ ಚಕ್ಕಿಗಳು ಮಾತ್ರ ಕಾಣುವವು· [೪೮] ಈ ಪ್ರಕಾರವಾಗಿ ಗಿಡದ ಕೆಳಗಿನ ಬೇರಿನಿಂದ ಮೇಲಿನ ಟೊಂಗೆಯ ವರೆಗೂ ನೋಡಿದರೆ ಅದರಲ್ಲಿ ಫಲಗಳು ಕಾಣುವದಿಲ್ಲ. ಇದರ ಮೇಲಿಂದ ಗಿಡಗಳಲ್ಲಿ ಉತ್ಪನ್ನವಾದ ಹಣ್ಣುಗಳು ಜಲರೂಪ ಇರುವದೆಂಬುದನ್ನು ಚತುರರಾದವರು ವಿವೇಕದಿಂದ ನಿಶ್ಚಯ ಮಾಡಿಕೊಳ್ಳಬೇಕು. [೪೯] ಗಿಡದ ಬುಡದಲ್ಲಿಯ ಬೇರುಗಳು ಹೀರಿಕೊಂಡ ನೀರು ಯಾವಾಗ ಗಿಡದ ಟೊಂಗೆಯ ವರೆಗೂ ಮುಟ್ಟುವದೋ ಆಗ ಇಡೀ ಗಿಡವು ಹೂವು, ಕಾಯಿ, ಹಣ್ಣುಗಳಿಂದ ತುಂಬಿ ಹೋಗುವದು, ಒಂದರಿಂದ ಇನ್ನೊಂದು [ಎರಡನೆಯದು] ಹೇಗೆ ಬೆಳೆಯುವದು–ನಿರ್ಮಾಣವಾಗುವದೆಂಬುದು ಇದಕ್ಕೆ ಒಂದು ನಿದರ್ಶನ[ಉದಾಹರಣೆ]ವಾಗಿದೆ. [೫೦] ಒಂದೇ ನೀರಿನಿಂದ ಎಲೆ, ಹೂ, ಫಲ, ಹೀಗೆ ಬೇರೆ ಬೇರೆ ಪ್ರಕಾರಗಳು ಉಂಟಾಗುವವು. ಈ ಭೇದ ಎಷ್ಟು ಇರುವದೆಂಬುದನ್ನು . ಹೇಳಲಿಕ್ಕೆ ಅಶಕ್ಯವು· ಸೂಕ್ಷ್ಮ ಬುದ್ಧಿಯಿಂದ ವಿಚಾರ ಮಾಡಿದರೆ ಈ ಎಲ್ಲ ವಿಚಾರಗಳು ಸ್ಪಷ್ಟವಾಗಿ ತಿಳಿದು ಬರುವವು. [೫೧] ಐದು ಭೂತಗಳಲ್ಲಿ ಕ್ಷಣ ಕ್ಷಣಕ್ಕೂ ಒಂದೇ ಸವನೆ ಬದಲಾಗುತ್ತಲೇ ಇರುವದು. ಈ ಎಲ್ಲ ಬದಲಾವಣೆಯ ಬಗ್ಗೆ ವಿವರಿಸಿ ಹೇಳಲಿಕ್ಕೆ ಶಕ್ಯವಿಲ್ಲ, ಒಂದು ಪದಾರ್ಥದಲ್ಲಿ ಬದಲು ಆಗಿ ಅದರೊಳಗಿಂದ ಎರಡನೇ ಪದಾರ್ಥನಿರ್ಮಾಣವಾಗುವದು. ಪದಾರ್ಥಗಳ ಬಣ್ಣ (ರಂಗ) ದಲ್ಲಿ ಸಹ ನಾನಾ ತರಹದ ಬದಲಾವಣೆಗಳು ಘಟಿಸುವವು. ಇದೆಲ್ಲದರ ವರ್ಣನೆ ಮಾಡುವದು ಶಕ್ಯವಿಲ್ಲ (೫೨) ಮೂರು ಗುಣ ಮತ್ತು ಐದು ಭೂತ ಇವುಗಳ ಪರಸ್ಪರ ಮಿಶ್ರಣದ ಈ ಅವಾಢವ್ಯ ಖಟಾಟೋಪದ ವಿಷಯವನ್ನು ತಿಳಿದುಕೊಳ್ಳುವದೆಂದರೆ ದೊಡ್ಡ ಸಾಹಸವೇ (ಖಟಪಟಿಯೇ) ಇರುವದು. ನಾನಾ ಪ್ರಕಾರದ ವಸ್ತುಗಳು ಇವುಗಳ ನಾನಾ ಪ್ರಕಾರದ ರೂಪಗಳು, ಇವುಗಳಲ್ಲಿ ಆಗುವ ನಾನಾ ಪ್ರಕಾರದ ಬದಲಾವಣೆ, ಈ ಎಲ್ಲವುಗಳ ನಿರೀಕ್ಷಣ ಮತ್ತು ಪರೀಕ್ಷೆ ಮಾಡುವದೆಂದರೆ ಎಷ್ಟು ಕಠಿಣ ಕೆಲಸ ಇರುವದೆಂಬುದರ ಕಲ್ಪನೆಯನ್ನು ಮಾಡಬೇಕು. (೫೩) ಇಂಥ ಗುಣ ಮಾಯೆಯ ಅಂದರೆ ಗುಣಮಯ ಪ್ರಕೃತಿಯ ನಿರಸನ ( ಪರಿಹಾರ ) ಮಾಡಬೇಕು. ಆದರೆ ಇದನ್ನು ಅತ್ಯಂತ ವಿವೇಕದಿಂದ ಮತ್ತು ಸಾವಕಾಶವಾಗಿ ಮಾಡಬೇಕು. ಆಮೇಲೆ ಪರಮಾತ್ಮ ಸ್ವರೂಪದ ಪರಮೇಶ್ವರನಲ್ಲಿ ಸಂಪೂರ್ಣ(ಅಗದೀ)ಅನನ್ಯರಾಗಬೇಕು. ಮತ್ತು ಅವನೊಂದಿಗೆ ತದಾಕಾರ (ಏಕರೂಪ) ರಾಗಿ ಅವನ ಭಕ್ತಿ ಮಾಡಬೇಕು. (೫೪)

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದ ಒಂಭತ್ತನೆಯ ದಶಕದೊಳಗಿನ
"ಗುಣನಿರೂಪಣ"ವೆಂಬ ಹೆಸರಿನ ಆರನೆಯ ಸಮಾಸವು ಮುಗಿದುದು.

● ●

ಸಮಾಸ ಸಪ್ತಮ : ವಿಕಲ್ಪ ನಿರ್ಶನ

॥ಶ್ರೀರಾಮ॥ ಆಧೀ ಸ್ಥೂಳ ಆಹೆ ಯೇಕ । ತರೀ ಮಗ ಅಂತಃಕರ್ಣ ಪಂಚಕ ।
ಜಾಣತೇಪಣಾಚಾ ವಿವೇಕ । ಸ್ಥೂಳಾಕರಿತಾ ॥೧॥

ತೈಸೇ ಚಿ ಬ್ರಹ್ಮಾಂಡೇವೀಣ ಕಾಹೀ । ಮೂಳಮಾಯೇಸಿ ಜಾಣೀವ ನಾಹೀ ।
ಸ್ಥೂಳಾಚ್ಯಾ ಆಧಾರೇ ಸರ್ವಹಿ । ಕಾರ್ಯ ಚಾಲೆ ॥೨॥

# ದಶಕ ೯. ಸಮಾಸ ೭. ವಿಕಲ್ಪ ನಿರ್ಶನ (ನುಡಿ ೫೭)

ಪ್ರತಿಯೊಂದು ವಸ್ತುವಿಗೆ ಎರಡೆರಡು ಅಂಗಗಳು ಇರುವದೆಂಬುದನ್ನು ನೀವು ನೋಡಿದಿರಿ. ವಸ್ತುವಿನ ಬಹಿರಂಗವು ದೃಶ್ಯ ಹಾಗೂ ಸ್ಥೂಲವಿರುವದು.ವಸ್ತುವಿನ ಅಂತರಂಗವು ಅದೃಶ್ಯ ಮತ್ತು ಸೂಕ್ಷ್ಮವಿರುವದು·ಇವುಗಳ ಪೈಕಿ ಅಂತರಂಗ ಅಂದರೆ ಸೂಕ್ಷ್ಮ ಅಂಗ ಶ್ರೇಷ್ಠವಿರುವದು. ಇದನ್ನು ಹೇಳಿ ಶ್ರೀಸಮರ್ಥರು ಪುನರ್ಜನ್ಮದ ಪ್ರಶ್ನೆಯನ್ನು ಕೈಯಲ್ಲಿ ತೆಗೆದುಕೊಂಡಿರುವರು. ಮನುಷ್ಯನಿಗೆ ಪುನಃ ಜನ್ಮ ಬರುವದು ಶಕ್ಯವಿಲ್ಲವೆಂದು ಅನ್ನುವ ಜನರು. ಯಾವ ರೀತಿಯಲ್ಲಿ ವಾದ ಮಾಡುವರೆಂದರೆ,ಅದು ಹೀಗೆ:– ಮನುಷ್ಯ ಅಂದರೆ ದೇಹ ಮತ್ತು ಅಂತಃಕರುಣವು. ದೇಹ ಇದು ಐದು ಭೂತಗಳ ಕಗ್ಗಂಟಿನ ಗದ್ದಲದ್ದಿರುವದು. ಮನುಷ್ಯನು ಸತ್ತು ಅವನ ದೇಹ ದಹನ ಮಾಡಿದರೆಂದರೆ ಮುಗಿಯಿತು, ಅವನದೆಲ್ಲವೂ ನಾಮಶೇಷವಾಗಿ ಹೋಗುವದು. ಆದ್ದರಿಂದ ಇವನೇನೂ ಪುನಃ ಜನ್ಮ ತಳೆಯಲು ಶಕ್ಯವಿಲ್ಲ. ಮನುಷ್ಯನ ಅಂತಃಕರಣ ಅರಿವಿನಿಂದ ತುಂಬಿದ್ದೇ ಆಗಿರುವದು. ವಾಸನಾ [ಇಚ್ಛಾ] ಕಲ್ಪನಾ [ವಿಚಾರ] ಭಾವನಾ [ನಿಷ್ಠಾ,ಚಿಂತನ] ವ, ಕಾಮನಾ [ಆಶೆ, ಅಪೇಕ್ಷೆ] ಇತ್ಯಾದಿ ಅನೇಕ ವೃತ್ತಿ [ಕೆಲಸ] ಇದರಲ್ಲಿ ಕಾಣುವವು· ಮನುಷ್ಯನು ಶುದ್ಧಿಯ ಮೇಲೆ [ಎಚ್ಚರ] ಇದ್ದಾಗ ಮಾತ್ರ ಇವನ ಅರಿವು ಸತೇಜವಿರುವದು. ಎಚ್ಚರ ಹಾರಿತೆಂದರೆ ಅವನ ಅರಿವು ಲೋಪವಾಗುವದು· ಅರಿವು ಸಂಪೂರ್ಣ ಲೋಪವಾದರೆ ಅದು ಮರಣವೆಂದು ತಿಳಿಯಬೇಕು. ಮನುಷ್ಯ ಸತ್ತ ಮೇಲೆ ಅವನ ಅಂತಃಕರಣವು ಏನಾಗುವದು. ಇದನ್ನು ಯಾರಿಗೂ ಹೇಳಲಿಕ್ಕೆ ಬರುವದಿಲ್ಲ. ಇದು ವಿತಂಡವಾದವೆಂದು ನಿಶ್ಚಯಿಸಿ ಶ್ರೀ ಸಮರ್ಥರು ಸ್ಪಷ್ಟವಾಗಿ ಹೇಳುವದೇನಂದರೆ:– ಎಲ್ಲಿಯವರೆಗೆ ಆತ್ಮಜ್ಞಾನವು ಆಗುವದಿಲ್ಲವೋ ಅಲ್ಲಿಯವರೆಗೆ ಪುನಃ ಜನ್ಮ ಹೊಂದುವದೇನೂ ತಪ್ಪುವದಿಲ್ಲ. ಇದು ಅಗದೀ ನಿಶ್ಚಿತವು. ಆತ್ಮಜ್ಞಾನದ ಹೊರತು ಮುಕ್ತಿ ಇಲ್ಲ, ಅನ್ನುವ ಸಿದ್ಧಾಂತ ಅಬಾಧಿತ ಇರುವದು. ಶ್ವೇತಾಶ್ವತರ ಉಪನಿಷತ್ತಿನಲ್ಲಿ ಹೀಗೆ ಮಂತ್ರವಿದೆಃ– "ತಮೇವ ವಿದಿತ್ವಾ ಅತಿ ಮೃತ್ಯುಂ ಏತಿ ನಾನ್ಯಃ ಪಂಥಾಃ ವಿದ್ಯತೇ ಅಯನಾಯ" ಅರ್ಥ:– ಆ ಆತ್ಮವನ್ನು ಸಾಕ್ಷಾತ್[ಪ್ರತ್ಯಕ್ಷವಾಗಿ] ತಿಳಿದುಕೊಂಡೇ ಮನುಷ್ಯ ಮೃತ್ಯುವಿನ ಆಚೆಗೆ ಹೋಗುವನು. ಮೃತ್ಯುವಿನ ಆಚೆಗೆ ಹೋಗಲಿಕ್ಕೆ ಆತ್ಮಜ್ಞಾನದ ಹೊರತಾಗಿ ಎರಡನೆಯ ಮಾರ್ಗವಿಲ್ಲ. ಆದ್ದರಿಂದ ಮನುಷ್ಯರು ಆತ್ಮಜ್ಞಾನ ಮಾಡಿಕೊಳ್ಳಬೇಕು, ಇದು ಆಗದ ಹೊರತು ಪುನರ್ಜನ್ಮ ತಪ್ಪುವದಿಲ್ಲ.

## ದಶಕ ೯ : ಸಮಾಸ ೭ : ವಿಕಲ್ಪ ನಿರ್ಶನ [ನುಡಿ ೫೭]

**ಮೊದಲಿಗೆ ಸ್ಥೂಲವೋ? ಅಥವಾ ಮೊದಲಿಗೆ ಸೂಕ್ಷ್ಮವೋ? ಹೀಗೆ ಪ್ರಶ್ನೆ ಇರುವದು. ಇದಕ್ಕೆ ಉತ್ತರ:— ಮೊದಲಿಗೆ ಸೂಕ್ಷ್ಮ ಮತ್ತು ಆನಂತರ ಸ್ಥೂಲವೆಂದು ಹೇಳುವೆವು:·** ಪಿಂಡವು ಮೊದಲಿಗೆ ಸ್ಥೂಲವಿರುವದು. [ಸ್ಥೂಲ ಪಿಂಡ ಅಂದರೆ ಪಂಚಭೂತಾತ್ಮಕವಾದ ಜಡಶರೀರ] ಆ ಮೇಲೆ ಅದರಲ್ಲಿ ಅಂತಃಕರಣ ಪಂಚಕ ಕಾಣುವದು. ಅಂತಃಕರಣ, ಮನ, ಬುದ್ಧಿ, ಚಿತ್ತ, ಮತ್ತು ಅಹಂಕಾರ ಹೀಗೆ ಐದು ಕೂಡಿ ಅಂತಃಕರಣ ಪಂಚಕವಾಗುವದು. ಜ್ಞಾನದ ವಿಚಾರ ಮತ್ತು ವ್ಯವಹಾರ ಇವು ಸ್ಥೂಲದೇಹದ ಆಧಾರದಿಂದ ನಡೆಯುವವು.(೧) ಇದರಂತೆಯೇ ಈ ದೃಶ್ಯ ಮತ್ತು ಸ್ಥೂಲ ಬ್ರಹ್ಮಾಂಡವೂ ಇರುವದು· ಆದ್ದರಿಂದ ಮೂಲ ಮಾಯೆಯಲ್ಲಿ ನಾನು ಬ್ರಹ್ಮ ಇರುವೆ ಅನ್ನುವ ಅರಿವು ಇರುವದು· ಆದ್ದರಿಂದ ಪಿಂಡ ಬ್ರಹ್ಮಾಂಡದಲ್ಲಿಯ ಸರ್ವ ವ್ಯವಹಾರವು ಸ್ಥೂಲದ ಆಧಾರದಿಂದ ನಡೆಯುವದು. (೨)

ತೇ ಸ್ಥೂಳಚಿ ನಸ್ತಾ ನಿರ್ಮಾಣ । ಕೋಠೇ ರಾಹೇಲ ಅಂತಃಕರ್ಣ ।
ಐಸಾ ಶ್ರೋತೀ ಕೇಲಾ ಪ್ರಶ್ನ । ಯಾಚೇ ಉತ್ತರ ಐಕಾ ॥೩॥

ಕೋಸಲೆ ಅಥವಾ ಕಾಂಟೆಧರೇ । ನಾನಾ ಸೃಷ್ಟಿಭಾಗೀ ಚಾಲತೀ ಘರೇ ।
ಜೀವ ಕರಿತೀ ಲಹಾನಥೋರೇ । ಶಕ್ತೀನುಸಾರ ॥೪॥

ಶಂಖ ಸಿಂಪೀ ಘುಲಾ ಕವಡೆ । ಆಧೀ ತ್ಯಾಚೇ ಘರ ಘಡೆ ।
ಕಿಂವಾ ಆಧೀ ನಿರ್ಮಾಣ ಕಿಡೆ । ಹೇ ವಿಚಾರಾವೇ ॥೫॥

ಆಧೀ ಪ್ರಾಣೀ ತೇ ಹೋತೀ । ಮಗ ಘರೇ ನಿರ್ಮಾಣ ಕರಿತೀ ।
ಹೇ ತೋ ಪ್ರತ್ಯಕ್ಷ ಪ್ರಚಿತೀ । ಸಾಂಗಣೇ ನಲಗೆ ॥೬॥

ತೈಸೇ ಆಧೀ ಸೂಕ್ಷ್ಮ ಜಾಣ । ಮಗ ಸ್ಥೂಳ ಹೋತೇ ನಿರ್ಮಾಣ ।
ಯೇಣೇ ದೃಷ್ಟಾಂತೇ ಪ್ರಶ್ನ । ಫಿಟಲಾ ಶ್ರೋತಯಾಚಾ ॥೭॥

ತವ ಶ್ರೋತಾ ಪುಸೆ ಆಣೀಕ । ಜೀ ಆಠವಲೇ ಕಾಹೀ ಯೇಕ ।
ಜನ್ಮಮೃತ್ಯಾಚಾ ವಿವೇಕ । ಮಜ ನಿರೋಪಾವಾ ॥೮॥

ಕೋಣ ಜನ್ಮಾಸ ಘಾಲಿತೇ । ಆಣೀ ಮಾಗುತಾ ಕೋಣ ಜನ್ಮಘೇತೇ ।
ಹೇ ಪ್ರತ್ಯಯಾ ಕೈಸೆ ಯೇತೇ । ಕೋಣ್ಯಾ ಪ್ರಕಾರೇ ॥೯॥

ಬ್ರಹ್ಮಾ ಜನ್ಮಾಸ ಘಾಲಿತೋ । ವಿಷ್ಣು ಪ್ರತಿಪಾಳ ಕರಿತೋ ।
ರುದ್ರ ಅವಘೇ ಸಂವ್ಹಾರಿತೋ । ಐಸೇ ಬೋಲತೀ ॥೧೦॥

ತರೀ ಹೇ ಪ್ರವೃತ್ತೀಚೇ ಬೋಲಣೇ । ಪ್ರತ್ಯಯಾಸ ಆಣೀ ಉಣೇ ।
ಪ್ರತ್ಯಯ ಪಾಹಾತಾ ಶ್ಲಾಘ್ಯವಾಣೇ । ಹೋಣಾರ ನಾಹೀ ॥೧೧॥

ಬ್ರಹ್ಮ್ಯಾಸ ಕೋಣೇ ಜನ್ಮಾಸ ಘಾತಲೇ । ವಿಷ್ಣೂಸ ಕೋಣೇ ಪ್ರತಿಪಾಳಿಲೇ ।
ರುದ್ರಾಸ ಕೋಣೇ ಸಂಹಾರಿಲೇ । ಮಹಾಪ್ರಳಈ ॥೧೨॥

ಮ್ಹಣೌನಿ ಹಾ ಸೃಷ್ಟೀಭಾವ । ಅವಘಾ ಮಾಯೇಚಾ ಸ್ವಭಾವ ।
ಕರ್ತಾ ಮ್ಹಣೋ ನಿರ್ಗುಣ ದೇವ । ತರೀ ತೋ ನಿರ್ವಿಕಾರೀ ॥೧೩॥

ಮ್ಹಣಾವೇ ಮಾಯಾ ಜನ್ಮಾಸ ಘಾಲೀ । ತರೀ ಹೆ ಆಪಣ ಚಿ ವಿಸ್ತಾರಲೀ ।
ಆಣೀ ವಿಚಾರಿತಾ ಥಾರಲೀ । ಹೇ ಹೀ ಘಡೇನಾ ॥೧೪॥

ಈ ಸ್ಥೂಲವೇ ಒಂದು ವೇಳೆ ನಿರ್ಮಾಣವಾಗಿರದಿದ್ದರೆ ಅರಿವಿಗೆ ಮತ್ತು ಅಂತಃಕರಣಕ್ಕೆ ಇರಲು ಜಾಗೆ (ಸ್ಥಳ)ಯೇ ಸಿಗುತ್ತಿರಲಿಲ್ಲ. ಶ್ರೋತಾ ಜನರು ಈ ಪ್ರಶ್ನೆಯನ್ನು ಕೇಳಿದರು. ಅದಕ್ಕೆ ಕೊಡುವ ಉತ್ತರವನ್ನು ಶ್ರೋತಾ ಜನರು ಸರಿಯಾಗಿ ಕೇಳಿ ತಿಳಿಯಿರಿ. (೩) ರೇಶ್ಮೆಯ ಹುಳವು ತನ್ನ ಸುತ್ತು ತಂತುವಿನ ಕೋಶ ತಯಾರಿಸಿ ತಾನು ಅದರಲ್ಲಿಯೇ ಬಂದಿಯಾಗಿ ಉಳಿದುಕೊಳ್ಳುವದು. ಇತರ ಕೆಲವು ಹುಳಗಳು ತಮ್ಮ ಸುತ್ತ ಮಣ್ಣಿನ ಅಥವಾ ಮುಳ್ಳಿನ ಆವರಣ ಮಾಡಿಕೊಂಡು ಅಲ್ಲಿ ಇರುವವು. ಇದೇ ರೀತಿಯಲ್ಲಿ ಪೃಥ್ವಿಯ ಮೇಲಿನ ಜೀವಗಳು ತಮ್ಮ ತಮ್ಮ ಶಕ್ತಿಯ ಪ್ರಕಾರ ಸ್ವತಃಕ್ಕಾಗಿ ಸಣ್ಣ ದೊಡ್ಡ ಮನೆಗಳನ್ನು ನಿರ್ಮಾಣ ಮಾಡಿಕೊಳ್ಳುವವು. (೪) ಶಂಖ, ಸಿಂಪು, ಮತ್ತು ಸಣ್ಣ ದೊಡ್ಡ ಕವಡಿ ಇವುಗಳ ಮನೆ ಇರುವದು. ಆ ಮನೆಯಲ್ಲಿರುವ ಹುಳ (ಜೀವ)ಮೊದಲೋ ಅಥವಾ ಅದರ ಮನೆ ಅಥವಾ ಕೋಶ ಮೊದಲೋ ಇದರ ವಿಚಾರ ಮಾಡಬೇಕು. (೫) ಮೊದಲಿಗೆ ಪ್ರಾಣಿ ಜನ್ಮ ಹೊಂದುವದು. ಆ ಮೇಲೆ ಅದು ತನ್ನ ಮನೆ ತಯಾರ ಮಾಡುವದು. ಇದು ನಾವು ನೋಡಿದ ಪ್ರತ್ಯಕ್ಷ ಅನುಭವದ ಮಾತೇ ಇರುವದು. ಇದರ ಬಗ್ಗೆ ಹೆಚ್ಚಿಗೆ ಹೇಳುವ ಕಾರಣವಿಲ್ಲ. (೬) ಇದರಂತೆ ಮೊದಲು ಸೂಕ್ಷ್ಮವು ನಿರ್ಮಾಣ ವಾಗುವದು. ಆನಂತರ ಸ್ಥೂಲ ನಿರ್ಮಾಣವಾಗುವದು, ಈ ದೃಷ್ಟಾಂತದ ಮೇಲಿಂದ ಶ್ರೋತೃಗಳ ಪ್ರಶ್ನೆಗೆ ಉತ್ತರ ಏನೆಂಬುದು ಲಕ್ಷ್ಯಕ್ಕೆ ಬರಬಹುದು. (೭) ಇದರ ನಂತರ ಜನ್ಮ ಮೃತ್ಯುವಿನ ಪ್ರಶ್ನೆ ಮುಂದೆ ಬರುವದು. ಜೀವ ವನ್ನು ಯಾರು ಜನ್ಮಕ್ಕೆ ಹಾಕುವರು? ಮನುಷ್ಯನು ಸತ್ತನಂತರ ಪುನಃ ಜನ್ಮ ಯಾರಿಗೆ ಬರುವದು? ಇದನ್ನು ತಿಳಿ ಯುವದು ಹೇಗೆ? ಪಾಪ ವ ಪುಣ್ಯ ಇವುಗಳ ಸ್ವರೂಪವೇನು? ಸತ್ತಮೇಲೆ ಸತ್ತ ಪ್ರತಿಯೊಬ್ಬರಿಗೂ ಜನ್ಮ ಇದ್ದೇ ಇದೆ ಅಲ್ಲವೇ? ಹೀಗೆ ಅನೇಕ ಉಪ ಪ್ರಶ್ನೆಗಳು ಮೂಲ ಪ್ರಶ್ನೆಯೊಳಗಿಂದ ನಿರ್ಮಾಣವಾಗುವವು. ಇದರ ವರ್ಣನೆ ಯನ್ನು ಮಾಡುವಾಗ ಜನರು ಹೇಗೆ ವಿತಂಡ ವಾದ ಹಾಕುವರು ? ಇದರ ದಿಗ್ದರ್ಶನ ಇಲ್ಲಿ ಕಂಡು ಬರುವದು:- ಈಗ ಶ್ರೋತಾ ಅನ್ನುವದೇನಂದರೆ,"ನನಗೆ ಈಗ ಇನ್ನಷ್ಟು ನೆನಪಾಯಿತು. ಜನ್ಮ ಮರಣದ ಬಗ್ಗೆ ನನಗೆ ಮಾಹಿತಿ ಹೇಳಿರಿ." ಜನ್ಮ ವ ಮೃತ್ಯು ಇವುಗಳ ವಿಚಾರ ಹೇಗೆ ಇರುವದು? ಇದನ್ನು ತಿಳಿಯುವಂತೆ (ತಿಳಿಸಿ) ಹೇಳಿರಿ. (೮) ಜೀವನಿಗೆ ಯಾರು ಜನ್ಮಕ್ಕೆ ಹಾಕುವರು? ಸತ್ತ ಮೇಲೆ ಯಾರು ಜನ್ಮ ತಾಳುವರು? ಯಾವ ರೀತಿಯಿಂದ ಮತ್ತು ಯಾವ ಪ್ರಕಾರದಿಂದ ಇವುಗಳ ಬಗ್ಗೆ ಪ್ರತ್ಯಕ್ಷ ಅನುಭವ ಬರುವದು? ಈ ಪ್ರಶ್ನೆಗೂ ಉತ್ತರ ಹೇಳಿರಿ. (೯) ಸಾಮಾನ್ಯ ಜನರು ಅನ್ನುವದೇನಂದರೆ, ಬ್ರಹ್ಮದೇವ ಜನ್ಮಕ್ಕೆ ಹಾಕುವನು. ವಿಷ್ಣುವು ಸಂರಕ್ಷಣ ಮಾಡುವನು.ಮತ್ತು ರುದ್ರ ಎಲ್ಲರ ಸಂಹಾರ ಮಾಡುವನು. (೧೦) ಆದರೆ ಇದು ಸಾಮಾನ್ಯ ವ್ಯವಹಾರದಲ್ಲಿಯ ಮಾತು ಇರುವದರಿಂದ ಇದು ಪ್ರತ್ಯಕ್ಷ ಅನುಭವ ಪಡೆಯುವಲ್ಲಿ ನ್ಯೂನ ಬರುವದು. ಇದರ ಪ್ರತ್ಯಕ್ಷ ಅನುಭವ ಪಡಯಲು ಹೋದರೆ ಇದು ನಿಜವೆಂದು ಸಿದ್ಧವಾಗುವದಿಲ್ಲ. (೧೧) ನಿಮ್ಮನ್ನು ನಾವು ಹೀಗೆ ವಿಚಾರಿಸುವೆವು. ಬ್ರಹ್ಮದೇವನನ್ನು ಯಾರು ಜನ್ಮಕ್ಕೆ ಹಾಕಿದರು ? ವಿಷ್ಣುವನ್ನು ಸಂರಕ್ಷಿಸುವವರು ಯಾರು ? ಮತ್ತು ಮಹಾಪ್ರಳಯ ಕಾಲದಲ್ಲಿ ರುದ್ರನ ಸಂಹಾರ ಯಾರು ಮಾಡುವರು ? (೧೨) ಒಟ್ಟಿನಲ್ಲಿ ಈ ಪ್ರಶ್ನೆಗಳಿಗೆ ಉತ್ತರ ಕೊಡಲಿಕ್ಕೆ ಆಗುವದಿಲ್ಲ. ಆದ್ದರಿಂದ ಈ ದೃಶ್ಯ ವಿಶ್ವ ನಿಜವಲ್ಲ. ಇದೆಲ್ಲವೂ ಮಾಯೆಯ ಜಾಲವಿರುವದು. ಇರಲಿ, ನಿರ್ಗುಣ ದೇವನಾದರೂ ವಿಶ್ವದ ಕರ್ತಾ ಇರುವನೆಂದು ಅನ್ನುವದೂ ಸರಿ ಕಾಣುವದಿಲ್ಲ. ಯಾಕಂದರೆ ಅವನು ವಿಕಾರರಹಿತನಿರುವನು. (೧೩) ನಿರ್ಗುಣ ದೇವನು ನಿರ್ವಿಕಾರನೂ ಆಗಿರುವದರಿಂದ ಇವನು ವಿಕಾರಮಯ ವಿಶ್ವವನ್ನು ನಿರ್ಮಾಣ ಮಾಡುವದಿಲ್ಲ. ಅಂದ ಮೇಲೆ "ಮಾಯಾ ವಿಕಾರಿ ಎಂದು ವಿಕಾರಮಯ ವಿಶ್ವವನ್ನು ಇವಳು ಜನ್ಮಕ್ಕೆ ಹಾಕುವಳು." ಅಂತಾ ಅನ್ನು ವದೂ ಸಹ ಸರಿ(ಬರೋಬರ)ಅಲ್ಲ. ಯಾಕಂದರೆ ವಿಶ್ವರೂಪದಿಂದ (ಸೃಷ್ಟಿರೂಪದಿಂದ) ಸ್ವತಃ ಮಾಯಾ ಇವಳೇ ವಿಸ್ತಾರ ಹೊಂದಿರುವಳು. ಇದರ ಬಗ್ಗೆ ಸೂಕ್ಷ್ಮ ವಿಚಾರ ಮಾಡಲಿಕ್ಕೆ ಹೋದರೆ ಕೊನೆಯವರೆಗೂ ಇದು ವೃಥ ವಾಗಿ ನಿಲ್ಲುವದಿಲ್ಲ. [೧೪]

ಆತಾ ಜನ್ಮತೋ ತೋ ಕೋಣ । ಕೈಸೀ ತ್ಯಾಚೀ ವೊಳಖಣ ।
ಆಣೀ ಸಂಚಿತಾಚೇ ಲಕ್ಷಣ । ತೇ ಹಿ ನಿರೋಪಾವೇ ॥೧೫॥
ಪುಣ್ಯಾಚೇ ಕೈಸೇ ರೂಪ । ಆಣೀ ಪಾಪಾಚೇ ಕೈಸೇ ಸ್ವರೂಪ ।
ಯಾ ಹಿ ಶಬ್ದಾಚಾ ಆಕ್ಷೇಪ। ಕೋಣ ಕರ್ತಾ ॥೧೬॥
ಹೇ ಕಾಹೀ ಚ ನ ಯೆ ಅನುಮಾನಾ । ಮ್ಹಣತೀ ಜನ್ಮ ಘೇತೆ ವಾಸನಾ ।
ಪರೀ ತೇ ಪಾಹಾತಾ ದಿಸೇನಾ । ನಾ ಧರಿತಾ ನ ಯೆ ॥೧೭॥
ವಾಸನಾ ಕಾಮನಾ ಆಣೀ ಕಲ್ಪನಾ । ಹೇತು ಭಾವನಾ ಮತಿ ನಾನಾ ।
ಐಶಾ ಅನಂತ ವೃತ್ತೀ ಜಾಣಾ । ಅಂತಃಕರ್ಣಪಂಚಕಾಚ್ಯಾ ॥೧೮॥
ಅಸೋ ಹೇ ಅವಘೇ ಜಾಣೀವ ಯಂತ್ರ । ಜಾಣೀವ ಮ್ಹಣಿಜೆ ಸ್ಮರಣ ಮಾತ್ರ।
ತ್ಯಾ ಸ್ಮರಣಾಸ ಜನ್ಮಸೂತ್ರ । ಕೈಸೇ ಲಾಗೇ ॥೧೯॥
ದೇಹೋ ನಿರ್ಮಾಣ ಪಾಂಚಾ ಭೂತಾಂಚಾ । ವಾಯೋ ಚಾಳಕ ತಯಾಚಾ ।
ಜಾಣಣೇ ಹಾ ಮನಾಚಾ । ಮನೋಭಾವ ॥೨೦॥
ಐಸೇ ಹೇ ಸಹಜ ಚಿ ಘಡಲೇ । ತತ್ವಾಚೇ ಗುಂಥಾಡೇ ಜಾಲೇ ।
ಕೋಣಾಸ ಕೋಣೇ ಜನ್ಮವಿಲೇ । ಕೋಣ್ಯಾ ಪ್ರಕಾರೇ ॥೨೧॥
ತರೀ ಹೇ ಪಾಹಾತಾ ದಿಸೇನಾ । ಮ್ಹಣೋನ ಜನ್ಮ ಚಿ ಅಸೇನಾ ।
ಉಪಜಲಾ ಪ್ರಾಣೀ ಯೇನಾ । ಮಾಗುತಾ ಜನ್ಮಾ ॥೨೨॥
ಕೋಣಾಸೀಚ ಜನ್ಮ ನಾಹೀ । ತರೀ ಸಂತಸಂಗೇ ಕೇಲೇ ಕಾಈ ।
ಐಸಾ ಅಭಿಪ್ರಾವ ಸರ್ವ ಹಿ । ಶ್ರೋತಯಾಚಾ ॥೨೩॥
ಪೂರ್ವೀ ಸ್ಮರಣ ನಾ ವಿಸ್ಮರಣ । ಮಧೇ ಚಿ ಹೇ ಜಾಲೇ ಸ್ಮರಣ ।
ಅಂತರ್ಯಾಮೀ ಅಂತಃಕರ್ಣ । ಜಾಣತೀ ಕಳಾ ॥೨೪॥
ಸಾವಧ ಆಹೆ ತೋ ಸ್ಮರಣ । ವಿಕಳ ಹೋತಾ ವಿಸ್ಮರಣ ।
ವಿಸ್ಮರಣ ಪಡತಾ ಮರಣ । ಪಾವತೀ ಪ್ರಾಣೀ ॥೨೫॥
ಸ್ಮರಣ ವಿಸ್ಮರಣ ರಾಹಿಲೇ । ಮಗ ದೇಹಾಸ ಮರಣ ಆಲೇ ।
ಪುಢೇ ಜನ್ಮಾಸ ಘಾತಲೇ । ಕೋಣಾಸ ಕೋಣೇ ॥೨೬॥
ಮ್ಹಣೋನೀ ಜನ್ಮ ಚಿ ಅಸೇನಾ । ಆಣೀ ಯಾತನಾ ಹೀ ದಿಸೇನಾ ।
ಅವಘೀ ವ್ಯರ್ಥ ಚಿ ಕಲ್ಪನಾ । ಬಳಾವಲೀ ॥೨೭॥
ಮ್ಹಣೌನ ಜನ್ಮ ಚಿ ನಾಹೀ ಕೋಣಾಸೀ । ಶ್ರೋತಯಾಚೀ ಆಶಂಕಾ ಐಸೀ ।
ಮರೋನ ಗೇಲೇ ತೇ ಜನ್ಮಾಸೀ । ಮಾಗುತೇ ನ ಯೆ ॥೨೮॥

ಆದ್ದರಿಂದ ಜನ್ಮತಾಳಿ ಬರುವವನು ಅವನು ಯಾವನು ಇರುವನು ? ಇವನ ಗುರುತು ಹೇಗೆ ತಿಳಿಯ ಬೇಕು ? ಮತ್ತು ಸಂಚಿತ ಅಂದರೆ ಏನು ? ಅದರ ಲಕ್ಷಣಗಳು ಯಾವವು ? ಇದನ್ನೂ ನನಗೆ ಸವಿಸ್ತಾರ ಹೇಳಿರಿ. (೧೫) ಪುಣ್ಯದ ಮತ್ತು ಪಾಪದ ಸ್ವರೂಪ ಎಂಥದು ? ಇದೆಲ್ಲದರ ಪ್ರಶ್ನೆ ವಿಚಾರಿಸುವವರು ಯಾರು ಇರುವರು ? (೧೬) ಇದರ ಬಗ್ಗೆ ನಿಶ್ಚಿತವಾಗಿ ಏನೂ ನಿಶ್ಚಯಿಸಲಿಕ್ಕೆ ನನಗೆ ಬರುವದಿಲ್ಲ. ಕೆಲವು ಜನ ಅನ್ನುವ ದೇನಂದರೆ:-ವಾಸನಾ ಜನ್ಮ ತಾಳುವದು. ಆದರೆ ಪ್ರತ್ಯಕ್ಷ ನೋಡಬೇಕೆಂದರೆ ಇದು ಕಾಣುವದಿಲ್ಲ. ಅಥವಾ ಇದನ್ನು ಹಿಡಿಯಲಿಕ್ಕೆ ಬರುವದಿಲ್ಲ. (೧೭) ವಾಸನಾ, ಕಾಮನಾ, ಕಲ್ಪನಾ, ಹೇತು, ಭಾವನಾ, ಅನೇಕ ಪ್ರಕಾರದ ತರ್ಕ ಹೀಗೆ ಅಂತಃಕರಣ ಪಂಚಕಗಳ ಅನಂತ ವೃತ್ತಿ ಇರುವದು. (೧೮) ಇದೆಲ್ಲವೂ ಅರಿವಿನ ರೂಪಿ ಯಂತ್ರದ ಕಾರ್ಯ ವಿರುವದು. ಅರಿವು (ತಿಳುವಳಿಕೆ) ಅಂದರೆ ಸ್ವತಃದ ಕೇವಲ ಸ್ಮರಣವಿರುವದು. ಈ ನಾನು ಅನ್ನುವ ಅರಿವಿಗೆ ಜನ್ಮದ ಬಂಧನ ಹೇಗೆ ಹತ್ತಿತು ? (೧೯) ಐದು ಭೂತಗಳಿಂದ ದೇಹ ನಿರ್ಮಾಣವಾಯಿತು. ವಾಯುವಿನಿಂದ ಚಲನ ವಲನವಾಗುವದು. ಅರಿವು ಇದು ದೇಹದಲ್ಲಿರುವಂಥ ಮನಸ್ಸಿನ ಧರ್ಮವಿರುವದು.(೨೦) ಐದು ತತ್ವಗಳ ಗೊಂದಲ ದಿಂದಾಗಿ (ತೊಡಕಿನಿಂದಾಗಿ) ಇವುಗಳಿಂದ ದೇವ ಮತ್ತು ಮನ ಇವು ತಮ್ಮಷ್ಟಕ್ಕೆ ತಾವೇ ನಿರ್ಮಾಣವಾದವು. ಅಂದ ಮೇಲೆ ಯಾರನ್ನು ಯಾರು ಮತ್ತು ಯಾವ ರೀತಿಯಿಂದ ಜನ್ಮಕ್ಕೆ ಹಾಕಿದರು ? ಈ ಪ್ರಶ್ನೆಯೇ ವ್ಯರ್ಥ ವಿರುವದು. (೨೧) ಆದರೆ ಯಾವನು ಯಾವನನ್ನು ಜನ್ಮಕ್ಕೆ ಹಾಕುವನೆಂಬುದೇನೂ ಪ್ರತ್ಯಕ್ಷ ಕಾಣಿಸಿಲ್ಲ. ಆದ್ದರಿಂದ ಪುನಃ ಜನ್ಮವೇ ಇಲ್ಲ. ಇಲ್ಲಿ ಜನ್ಮ ತಾಳಿ ಬಂದ ಪ್ರಾಣಿಗೆ ಸತ್ತ ನಂತರ ಪುನಃ ಜನ್ಮ ಬರುವದಿಲ್ಲ (೨೨) ಒಳ್ಳೆ ಯದು. ಮರಣದ ನಂತರ ಪುನಃ ಪುನಃ ಯಾರಿಗೂ ಜನ್ಮ ಬರುವದಿಲ್ಲ. ಹೀಗೆ ಅಂದದ್ದಾದರೆ ಸಂತ ಸಾಧುಗಳ ಸಂಗತಿ ಸಹವಾಸದಿಂದ ಏನು ಸಾಧಿಸುವದು ? ಅನ್ನುವ ಪ್ರಶ್ನೆಯು ಹುಟ್ಟುವದು. ಶ್ರೋತಾ ಜನರೆಲ್ಲರ ಮನ ದಲ್ಲಿ ಇದೇ ಪ್ರಶ್ನೆ ತಲೆಹಾಕುವದು. (೨೩) ಜನ್ಮ ತಾಳುವ ಪೂರ್ವದಲ್ಲಿ ಸ್ಮರಣವಿರಲಿಲ್ಲ. ಅದರಂತೆ ವಿಸ್ಮರಣವೂ ಇರಲಿಲ್ಲ. ಜನ್ಮ ತಾಳಿದ ಮೇಲೆ ಈ ಸ್ಮರಣದ ಉದಯವಾಯಿತು. ಮನುಷ್ಯನ ಅಂತರ್ಯಾಮದಲ್ಲಿ ಯಾವ ಅಂತಃಕರಣವಿರುವದೋ ಅದೇ ಅರಿವಿನ ಪ್ರಕಟ ರೂಪವಿರುವದು. (೨೪) ಮನುಷ್ಯನಲ್ಲಿ ಎಚ್ಚರ ಇರುವ ವರೆಗೆ ಅರಿವು ಇರುವದು. ಮನುಷ್ಯನು ಎಚ್ಚರವಿಲ್ಲದವನಾದ(ಬೇಶುದ್ಧನಾದ)ನೆಂದರೆ ಅರಿವು ಲೋಪವಾಗುವದು. ಅರಿವು ಸಂಪೂರ್ಣ ಲೋಪವಾದರೆ ಆಗ ಅವನು ಸಾಯುವನು. (೨೫) ಅರಿವು ಮತ್ತು ಮರೆವು (ಅಜ್ಞಾನ) ಎರಡನ್ನೂ ಕಳೆದುಕೊಂಡರೆ ಮನುಷ್ಯನ ದೇಹಕ್ಕೆ ಮರಣ ಬರುವದು. ಅಂದ ಮೇಲೆ ಸತ್ತನಂತರ ಯಾರನ್ನು ಯಾರು ಜನ್ಮಕ್ಕೆ ಹಾಕುವರು ? [೨೬] ಆದ್ದರಿಂದ ಸತ್ತ ನಂತರ ಜನ್ಮವೇ ಬರುವದಿಲ್ಲ. ಅರ್ಥಾತ್ ಸತ್ತಮೇಲೆ ಯಾವ ಯಾತನೆ ಯನ್ನೂ ಭೋಗಿಸಬೇಕಾಗುವದಿಲ್ಲ. ಮರಣವಾದ ಮೇಲೆ ಪುನಃ ಜನ್ಮ ಬರುವದೆಂದು ಹೇಳುವದು ಖೊಟ್ಟಿ ಕಲ್ಪನೆ ಇರುವದು. ಸುಮ್ಮನೆ ಇದನ್ನೊಂದು ಕಲ್ಪನೆಯ ಭೂತವನ್ನು ಕಲ್ಪಿಸಿ ಜನ ನಂಬಿ ನಡೆದಿದ್ದಾರೆ. [೨೭] ಇದರ ಮೇಲಿಂದ ಶ್ರೋತಾ ಜನರ ಅಭಿಪ್ರಾಯ ಈ ರೀತಿಯಲ್ಲಿ ತಿಳಿದು ಬರುವದು:- ಸತ್ತ ಮೇಲೆ ಪುನಃ ಯಾರಿಗೂ ಜನ್ಮ ಬರುವದಿಲ್ಲ. ಮನುಷ್ಯನು ಒಮ್ಮೆ ಸತ್ತು ಹೋದನೆಂದರೆ ಅವನು ಪುನಃ ಜನ್ಮ ಪಡೆಯುವದಿಲ್ಲ. [೨೮]

ವಾಳಲೇ ಕಾಷ್ಠ ಹಿರವಳೇನಾ। ಪಡಿಲೇ ಫಳ ತೇ ಪುನ್ಹಾ ಲಾಗೇನಾ।
ತೈಸೇ ಪಡಿಲೇ ಶರೀರ ಯೇನಾ। ಜನ್ಮಾಸ ಮಾಗುತೇ ॥೨೯॥

ಮಡಕೇ ಅವಚಿತೆ ಫುಟಲೇ। ಫುಟಲೇ ತೇ ಫುಟೋನೀ ಚ ಗೇಲೇ।
ತೈಸೇ ಚಿ ಪುನ್ಹಾ ಜನ್ಮಲೇ। ನಾಹೀ ಮನುಷ್ಯ ॥೩೦॥

ಯೇಥೇ ಅಜ್ಞಾನ ಆಣೀ ಸಜ್ಞಾನ। ಸಾರಿಖೇ ಚ ಜಾಲೇ ಸಮಾನ।
ಐಸಾ ಬಳಾವಲಾ ಅನುಮಾನ। ಶ್ರೋತಯಾಸೀ ॥೩೧॥

ವಕ್ತಾ ಮ್ಹಣೆ ಹೋ ಐಕಾ। ಅವಘೇ ಪಾಷಾಂಡ ಕರೂ ನಕಾ।
ಅನುಮಾನ ಅಸೇಲ ತರೀ ವಿವೇಕಾ। ಅವಲೋಕಾವೇ ॥೩೨॥

ಪ್ರೇತ್ನೇವೀಣ ಕಾರ್ಯ ಜಾಲೇ। ಜೇವಿಲ್ಯಾವೀಣ ಪೋಟ ಭರಲೇ।
ಜ್ಞಾನೇವೀಣ ಮುಕ್ತ ಜಾಲೇ। ಹೇ ತೋ ಘಡೇನಾ ॥೩೩॥

ಸ್ವಯೇ ಆಪಣ ಜೇವಿಲಾ। ತ್ಯಾಸ ವಾಟೆ ಲೋಕ ಧಾಲಾ।
ಪರಂತು ಹೇ ಸಮಸ್ತಾಲಾ। ಘಡಲೇ ಪಾಹಿಜೆ ॥೩೪॥

ಪೋಹಣೇ ಸಿಕಲಾ ತೋ ತರೇಲ। ಪೋಹಣೇ ನೆಣೆ ತೋ ಬುಡೇಲ।
ಯೇಥೇ ಹೀ ಅನುಮಾನ ಕರೀಲ। ಐಸಾ ಕವಣು ॥೩೫॥

ತೈಸೇ ಜಯಾಸ ಜ್ಞಾನ ಜಾಲೇ। ತೇ ತೇ ತಿತುಕೇ ಚ ತರಲೇ।
ಜ್ಯಾಚೇ ಬಂಧನ ಚಿ ತುಟಲೇ। ತೋಚಿ ಮುಕ್ತ ॥೩೬॥

ಮೋಕಳಾ ಮ್ಹಣೆ ನಾಹೀ ಬಂಧನ। ಆಣೀ ಪ್ರತ್ಯಕ್ಷ ಬಂದೀ ಪಡಿಲೆ ಜನ।
ತ್ಯಾಚೇ ಕೈಸೇ ಸಮಾಧಾನ। ತೇ ತುಮ್ಹೀ ಪಾಹಾ ॥೩೭॥

ನೆಣೆ ದುಸರ್ಯಾಚೀ ತಳಮಳ। ತೇ ಮನುಷ್ಯ ಪರದುಃಖಸೀತಳ।
ತೈಸಾ ಚ ಹಾ ಹೀ ಕೇವಳ। ಅನುಭವ ಜಾಣಾವಾ ॥೩೮॥

ಜಯಾಸ ಆತ್ಮಜ್ಞಾನ ಜಾಲೇ। ತತ್ವೇ ತತ್ವ ವಿಮಂಚಿಲೇ।
ಖುಣೇಸೀ ಪಾವತಾ ಚ ಬಾಣಲೇ। ಸಮಾಧಾನ ॥೩೯॥

ಜ್ಞಾನೇ ಚುಕೇ ಜನ್ಮಮರಣ। ಸಗಟ ಬೋಲಣೇ ಅಪ್ರಮಾಣ।
ವೇದಶಾಸ್ತ್ರ ಆಣೀ ಪುರಾಣ। ಮಗ ಕಾಸಯಾಸೀ ॥೪೦॥

ಪೂರ್ಣ ಒಣಗಿದ ಕಟ್ಟಿಗೆಯು ಅಂಕುರಿಸುವದಿಲ್ಲ [ಚಿಗುರುವದಿಲ್ಲ] ಫಲ ಒಮ್ಮೆ ಗಿಡದಿಂದ ಕೆಳಗೆ ಬಿದ್ದಿತೆಂದರೆ ಅದು ಪುನಃ ಗಿಡಕ್ಕೆ ಹತ್ತಿಕೊಳ್ಳುವದಿಲ್ಲ. ಇದರಂತೆ ಶರೀರ ಒಮ್ಮೆ ಬಿದ್ದಿತೆಂದರೆ ಪುನಃ ಅದು ಜನ್ಮಕ್ಕೆ ಬರುವದಿಲ್ಲ. (೨೯) ತಿಳಿಯಿರಿ. ಒಂದು ಗಡಿಗೆ ಒಮ್ಮಿಂದೊಮ್ಮೆಲೇ ಒಡೆಯಿತು. ಅದು ಒಮ್ಮೆ ಒಡೆಯಿತೆಂದರೆ ಮುಗಿಯಿತು. ಅದು ಮತ್ತೆ ಮೊದಲಿನಂತೆ ಆಗಲು ಶಕ್ಯವೇ ಇಲ್ಲ. ಇದರಂತೆ ದೇಹ ಒಮ್ಮೆ ಬಿದ್ದಿತೆಂದರೆ [ಸತ್ತರೆ] ಅದು ಕಾಯಂ ಆಗಿಯೇ [ಕೊನೆಯುವರೆಗೂ] ಬಿದ್ದು ಹೋಯಿತು. [ಪುನಃ ಏಳುವದೇ ಇಲ್ಲ]. ಆದ್ದರಿಂದ ಮನುಷ್ಯನು ಒಮ್ಮೆ ಸತ್ತನೆಂದರೆ ಅವನು ಪುನಃ ಜನ್ಮಕ್ಕೆ ಬರುವದಿಲ್ಲ. [೩೦] ಶ್ರೋತಾ ಜನರ ಈ ಅಭಿಪ್ರಾಯವನ್ನೆಲ್ಲ ಕೇಳಿದ ಮೇಲೆ ಅನಿಸುವದೇನಂದರೆ ಜ್ಞಾನಿ ಮತ್ತು ಅಜ್ಞಾನಿ ಜನರನ್ನು ಇವರು ನಿಶ್ಚಿತವಾಗಿ ಸಮಾನರೆಂದು ಭಾವಿಸುವರು. [೩೧] ಈ ಮೇಲೆ ವಿವರಿಸಿದ್ದನ್ನೆಲ್ಲ ಕೇಳಿ ಇದರ ಮೇಲೆ ಶ್ರೀ ಸಮರ್ಥರು ಆಕ್ಷೇಪಗಳಿಗೆ ಉತ್ತರ ಕೊಡುವರು. ಇವರ ಮುಖ್ಯ ಅನಿಸಿಕೆ ಏನಂದರೆ ಪುನಃ ಜನ್ಮ ಬರುವದೋ ಅಥವಾ ಇಲ್ಲವೋ ಅನ್ನುವದು ಅತೀಂದ್ರಿಯ ವಿಷಯವಿರುವದು ಕೇವಲ ದೃಶ್ಯದ ಪರೀಕ್ಷಣದಿಂದಲೇ ಈ ಸಮಸ್ಯೆ ಬಗೆಹರಿಯಲಾರದು. ಜ್ಞಾನೀ ಜನರಿಗೆ ಪುನಃ ಜನ್ಮ ಬರುವದಿಲ್ಲವೆಂಬ ಮಾತು ನಿಜವಿದೆ .ಆದರೆ ಅಜ್ಞಾನಿ ಮನುಷ್ಯರಿಗೆ ಪುನಃ ಜನ್ಮ ತೆಗೆದುಕೊಳ್ಳಬೇಕಾಗುವದು:- ಈಗ ವಕ್ತಾ ಶ್ರೋತಾ ಜನಕ್ಕೆ ಹೇಳುವನು. ನೀವು ಸುಮ್ಮನೇ ಹೆಚ್ಚು ಹೆಚ್ಚು ಹುರಳಿಲ್ಲದ ತರ್ಕ ಮಾಡಲಿಕ್ಕೆ ಹೋಗಬೇಡಿರಿ. ವ್ಯರ್ಥವಾದ ವಿವಾದಕ್ಕೆ ಇಳಿಯಬೇಡಿರಿ. ಮನುಷ್ಯರು ತರ್ಕ ನಡಿಸಬೇಕು. ಆದರೆ ಅದಕ್ಕೆ ವಿವೇಕದ ಆಧಾರ ಇರಬೇಕು. [೩೨] ಪ್ರಯತ್ನ ಮಾಡದೇ, ಮಣವುಟ್ಟಿ ದುಡಿಯದೇ, ಕಾರ್ಯ ಸಿದ್ಧಿಸುವದಾಗಲಿ, ಊಟ ಮಾಡದೇ ಹೊಟ್ಟೆಯು ತುಂಬಿತೆನ್ನುವದಾಗಲೀ, ಆತ್ಮಜ್ಞಾನವಾಗದೇ ಮುಕ್ತನಾಗುವದಾಗಲೀ ಅಸಾಧ್ಯದ ಮಾತು. ಜಗತ್ತಿನಲ್ಲೆಲ್ಲೂ ಹೀಗೆ ಆಗಿಲ್ಲ. ಇಷ್ಟೇ ಅಲ್ಲ ಎಂದೂ ಆಗಲಿಕ್ಕೇ ಸಾಧ್ಯವಿಲ್ಲ. [೩೩] ಒಬ್ಬನು ಸ್ವತಃ ಉಂಡು ತೃಪ್ತನಾದನು. ಆಗ ಅವನು ಯಾವತ್ತೂ ಜನರು ಉಂಡು ತೃಪ್ತರಾದರು ಅಂತಾ ಅಂದರೆ ಅಥವಾ ಅನಿಸಿದರೆ ಈ ಮಾತು ಈ ಅವನ ಅನಿಸಿಕೆ ಯೋಗ್ಯವಲ್ಲ. ಅವನಂತೆ ಎಲ್ಲರೂ ಉಂಡು ತೃಪ್ತರಾದರೆ ಅಥವಾ ಆಗಿದ್ದರೆ ಮಾತ್ರ ಆಗ ಅನ್ನಲು ಸರಿ ಅನಿಸುವದು. [೩೪] ಯಾವನಿಗೆ ನೀರಿನಲ್ಲಿ ಈಜಲಿಕ್ಕೆ ಬರುವದೋ ಅವನೇ ನೀರಿನಲ್ಲಿ ತೇಲುವನು. ಯಾರಿಗೆ ಈಜಲಿಕ್ಕೆ ಬರುವದಿಲ್ಲವೋ ಅವರು ಮುಳುಗಿ ಹೋಗುವರು. ಇದರ ಬಗ್ಗೆ ಯಾರಿಗೂ ಸಂಶಯ ಬರುವದು ಸರಿಯಲ್ಲ. [೩೫] ಇದರಂತೆ ಯಾರಿಗೆ ಆತ್ಮಜ್ಞಾನ ಆಗಿರುವದೋ ಅವರಷ್ಟೇ ಸಂಸಾರ ಸಾಗರದಲ್ಲಿ ತೇಲಿದರು. ಅವರ ಬಂಧನ ಹರಿಯಿತು. ಅವರೇ ಮುಕ್ತರು.[೩೬] ಯಾರು ಬಂಧನದಿಂದ ಮುಕ್ತರಿರುವರೋ ಅಂಥವರು ಅನ್ನುವದೇನಂದರೆ:- ಜಗತ್ತಿನಲ್ಲಿ ಯಾವುದೇ ತರಹದ ಬಂಧನವೆಂಬುದೇ ಇಲ್ಲ. ಈ ಅವರ ಅನ್ನುವಿಕೆಯು ಅವರ ಮಟ್ಟಿಗೆ ಮಾತ್ರ ನಿಜವಿರುವದು. ಆದರೆ ಜಗತ್ತಿನಲ್ಲಿ ಪ್ರತ್ಯಕ್ಷ ಬಂಧನದಲ್ಲಿ ತೊಡಕು ಹಾಕಿಕೊಂಡ ಜನರು ಎಷ್ಟೆಷ್ಟೋ ಇದ್ದಾರೆ. ಇವರ ಸಮಾಧಾನ ಇಂಥ ಮಾತಿನಿಂದ ಆಗಬಹುದೇ ? ಇದನ್ನು ಶ್ರೋತಾ ಜನರೇ ವಿವೇಕದಿಂದ ನಿಶ್ಚಯ ಮಾಡಿಕೊಳ್ಳಬೇಕು. [೩೭] ಎರಡನೆಯವರ ದುಃಖದ ಕಲ್ಪನೆ ಯಾರಿಗೆ ಎಷ್ಟೂ ಇರುವದಿಲ್ಲವೋ[ಬರುವದಿಲ್ಲವೋ]ಆ ಮನುಷ್ಯನು ಎರಡನೆಯವರಲ್ಲಿ ದುಃಖವು ವಿಶೇಷವಾಗಿ ಇಲ್ಲವೆಂದು ತಿಳಿದುಕೊಂಡಿರುವನು. ಇದಕ್ಕೆ "ಪರದುಃಖ ಶೀತಲ" ಎಂದು ಅನ್ನುವರು. ಬಂಧನರಹಿತ ಇದ್ದಂಥ ಮನುಷ್ಯನಿಗೆ, ಬಂಧನದಲ್ಲಿದ್ದು ದುಃಖ ಭೋಗಿಸುವಂಥವರ ದುಃಖ ತಿಳಿಯುವದಿಲ್ಲವೆಂಬುದು ಹೀಗಿರುವದು [೩೮] ಯಾರಿಗೆ ಆತ್ಮಜ್ಞಾನವಾಗಿದೆಯೋ, ಯಾರು ಎಲ್ಲ ತತ್ವಗಳ ವಿವರವನ್ನು ಪರಿಶೀಲಿಸುವರೋ, ಅವರಿಗೆ ಮಾತ್ರ ಸ್ವಸ್ವರೂಪದ ವರೆಗೆ ಹೋಗಿ ಮುಟ್ಟುವ ದಾರಿ ಸಿಗುವದು. ಮತ್ತು ಅವರಿಗೆ ಸಂಪೂರ್ಣ ಸಮಾಧಾನದ ಲಾಭವಾಗುವದು. [೩೯] ಆತ್ಮಜ್ಞಾನದಿಂದ ಜನ್ಮ - ಮರಣದ ಬಂಧನ ಹರಿಯುವದು. ಈ ಮಾತು ಅತ್ಯಂತ ಸತ್ಯ [ಅಗದೀ ಖರೇ] ಇರುವದು. ಆದರೆ ಎಲ್ಲರಿಗೂ ಜನ್ಮ ಮರಣ ಇಲ್ಲವೆಂದು ಅನ್ನುವದು ಅಯೋಗ್ಯವಿರುವದು. ಹೀಗೆ ಒಂದು ವೇಳೆ ಇದ್ದದ್ದಾದರೆ ವೇದ, ಶಾಸ್ತ್ರ, ಪುರಾಣಾದಿಗಳಿಗೆ ಎಷ್ಟೂ ಅರ್ಥವೇ ಇರುವದಿಲ್ಲವೆಂದು ಅನ್ನಬೇಕಾಗುತ್ತು. [೪೦]

ವೇದಶಾಸ್ತ್ರ ವಿಚಾರಬೋಲೀ । ಮಹಾನುಭಾವಾಚೀ ಮಂಡಳೀ ।
ಭೂಮಂಡಳೀ ಲೋಕ ಸಕಳೀ । ಹೇ ಮಾನೀತನಾ ॥೪೧॥

ಅವಘೇ ಹೋತಾ ಅಪ್ರಮಾಣ। ಮಗ ಆಪಲೇ ಚ ಕಾಯ ಪ್ರಮಾಣ ।
ಮ್ಹಣೋನ ಜೇಥೇ ಆತ್ಮಜ್ಞಾನ । ತೋ ಚಿ ಮುಕ್ತ ॥೪೨॥

ಅವಘೇ ಚ ಮುಕ್ತ ಸಾಹಾತಾ ನರ । ಹಾ ಹೀ ಜ್ಞಾನಾಚಾ ಉದ್ಗಾರ ।
ಜ್ಞಾನೇವಿಣ ತೋ ಉದ್ಧಾರ । ಹೋಣಾರ ನಾಹೀ ॥೪೩॥

ಆತ್ಮಜ್ಞಾನ ಕಳೋ ಆಲೇ । ಮ್ಹಣೋನ ದೃಶ್ಯ ಮಿಥ್ಯಾ ಜಾಲೇ ।
ಪರಂತು ವೇಢಾ ಲಾವಿಲೇ । ಸಕಳಾಸ ಯೇಣೆ ॥೪೪॥

ಆತಾ ಪ್ರಶ್ನ ಹಾ ಫಿಟಲಾ । ಜ್ಞಾನೀ ಜ್ಞಾನೇ ಮುಕ್ತ ಜಾಲಾ ।
ಅಜ್ಞಾನ ತೋ ಬಾಂಧಲಾ । ಆಪಲೆ ಕಲ್ಪನೇನೇ ॥೪೫॥

ವಿಜ್ಞಾನಾಸಾರಿಖೇ ಅಜ್ಞಾನ । ಆಣೀ ಮುಕ್ತಾಸಾರಿಖೇ ಬಂಧನ ।
ನಿಶ್ಚಯಾ ಸಾರಿಖಾ ಅನುಮಾನ । ಮಾನೂ ಚಿ ನಯೆ ॥೪೬॥

ಬಂಧನ ಮ್ಹಣಿಜೆ ಕಾಹೀ ಚ ನಾಹೀ । ಪರೀ ವೇಢಾ ಲಾವಿಲೇ ಸರ್ವಹೀ ।
ಯಾಸ ಉಪಾವ ಚಿ ನಾಹೀ । ಕಳಲ್ಯಾವಾಚುನೀ ॥೪೭॥

ಕಾಹೀ ಚ ನಾಹೀ ಆಣೀ ಬಾಧೀ । ಹೇ ಚಿ ನವಲ ಸಾಹಾ ಆಧೀ ।
ಮಿಥ್ಯಾ ಜಾಣಿಜೇನಾ ಬದ್ಧಿ । ಮ್ಹಣೋನ ಬದ್ಧ ॥೪೮॥

ವೇದ ಮತ್ತು ಶಾಸ್ತ್ರ ಇವುಗಳಲ್ಲಿಯ ವಚನಗಳು ಅತ್ಯಂತ ನಿಶ್ಚಿತ ವಿಚಾರದ ಕೊನೆಯಲ್ಲಿ ಬರೆದವುಗಳಾಗಿವೆ. ಆದ್ದರಿಂದ ವೇದ ಶಾಸ್ತ್ರ, ಪುರಾಣಗಳು ಸ್ವಾನುಭವಿಗಳಾದ ಮಹಾತ್ಮಾ ಪುರುಷರು, ಋಷಿಗಳು; ಸಂತ ಸಾಧುಗಳು ಮತ್ತು ಜಗತ್ತಿನಲ್ಲಿಯ ಅನುಭವಿ ಪುರುಷರಿಗೆಲ್ಲ ಮೇಲಿನ ಮಾತು ಮಾನ್ಯವಾಗುವದಿಲ್ಲ. (೪೧) ಎಲ್ಲರ (ಅನುಭವಿಗಳ) ವಿಚಾರವು ಖೊಟ್ಟಿ ಮತ್ತು ಸುಳ್ಳು ಇರುವದು. ನನ್ನ ವಿಚಾರವೇ ನಿಜವಾದದ್ದು ಎಂದು ತಿಳಿದು ನಡೆಯುವದು ತೀರ ತಪ್ಪುದಾರಿಯಾಗುವದು. (ನಿನ್ನ ಅಂಬೋಣವೇ ನಿಜವೆಂದು ಅನ್ನಲಿಕ್ಕೆ ಹೇಗೆ ಬರುವದು). ಆದ್ದರಿಂದ ಯಾರಿಗೆ ಆತ್ಮಜ್ಞಾನವಾಗುವದೋ ಆಗಿರುವದೋ ಅವರೇ ಮುಕ್ತರು. ಇತರರಿಗೆ ಮಾತ್ರ ಜನ್ಮ ಇರುವದೆಂದು ಸಿದ್ಧಾಂತವಿರುವದು. (೪೨) ಯಾವನು ಮುಕ್ತನಾಗಿರುವನೋ ಅವನಿಗೆ ಅನಿಸುವದೇನಂದರೆ ಎಲ್ಲರೂ ಮುಕ್ತರಿರುವರು. ಇದು ಜ್ಞಾನಿ ಪುರುಷರ ಉದ್ಗಾರವಿರುವದು. ಆದರೆ ಜ್ಞಾನಿ ಪುರುಷನಿಗೆ ಹೀಗೆ ಅನಿಸಿದರೂ ಸಹ ಆತ್ಮಜ್ಞಾನವಿಲ್ಲದೇ ಜನರ ಉದ್ಧಾರವಾಗುವದಿಲ್ಲ. ಇದೂ ಸಹ ಅದರಷ್ಟೇ ನಿಜವಿರುವದು. (೪೩) ಯಾವನಿಗೆ ಆತ್ಮಸಾಕ್ಷಾತ್ಕಾರವಾಗಿ ಆತ್ಮಜ್ಞಾನ ಪ್ರಾಪ್ತವಾಗುವದೋ ಅವನಿಗೆ ಎಲ್ಲ ದೃಶ್ಯವಿಶ್ವ ಖೊಟ್ಟಿ ಅನಿಸುವದು. ಇವನ ದೃಷ್ಟಿಯಿಂದ ಇದು ಸರಿಯಾದದ್ದಿರುವದು. ಆದರೆ ಆತ್ಮಜ್ಞಾನವು ಯಾರಿಗೆ ಇಲ್ಲವೋ ಅಂಥ ಸಾಮಾನ್ಯ ಜನರಿಗೆ ದೃಶ್ಯವೆಲ್ಲ ಖರೇ ಅನಿಸುವದು. ಮತ್ತು ಇವರ ಮನಸ್ಸಿನ ಮೇಲೆ ಇದು ಅಂದರೆ ದೃಶ್ಯವು ಖರೇ ಅನ್ನುವದೇ ಪರಿಣಾಮಮಾಡುವದು. (೪೪) ಈ ಪ್ರಕಾರ ವಕ್ತಾ ಪ್ರಶ್ನೆಗಳಿಗೆ ಉತ್ತರ ಕೊಟ್ಟನು. ಜ್ಞಾನಿ ಪುರುಷ ಆತ್ಮಜ್ಞಾನದಿಂದ ಮುಕ್ತನಾಗುವನು ಅಜ್ಞಾನಿ ಮನುಷ್ಯನು ಸ್ವತಃದ ಕಲ್ಪನೆಯಿಂದಲೇ ಬಂಧಿತನಾಗುವನು. (೪೫) ವಿಜ್ಞಾನ ಮತ್ತು ಅಜ್ಞಾನ, ಮುಕ್ತ ಮತ್ತು ಬದ್ಧ, ಸ್ವಾನುಭವ ಮತ್ತು ತರ್ಕ ಇವುಗಳನ್ನು ಒಂದೇ ಸಮವೆಂದು ತಿಳಿಯುವದು ಸರಿಯಲ್ಲ. ವಿಜ್ಞಾನ ಅಂದರೆ ವೃತ್ತಿಶೂನ್ಯ ಅವಸ್ಥೆಯು, ಮತ್ತು ಅಜ್ಞಾನವೆಂದರೆ ತಿಳುವಳಿಕೆ ಇಲ್ಲದ ವೃತ್ತಿಶೂನ್ಯ ಅವಸ್ಥೆಯು (ನೇಣತೆ ಪಣಾಚಿ ವೃತ್ತಿಶೂನ್ಯತಾ). ಅತ್ಯಂತ ನಿವೃತ್ತ (ವೃತ್ತಿಯು ಹಿಂದಕ್ಕೆ ತಿರುಗುವಿಕೆ ಮತ್ತು ನಿರ್ವಾಸನ (ವಾಸನಾರಹಿತ) ಆದಂಥ ಮುಕ್ತ ಮತ್ತು ತಮೋಗುಣದಿಂದ ಸುಸ್ತ (ಮಂದ) ಆದಂಥಬದ್ಧ ಇವು ಸಮಾನವೆಂದು ತಿಳಿಯಲಿಕ್ಕೆ ಬರುವದಿಲ್ಲ. ಸ್ವಸ್ವರೂಪಾನುಭವದಿಂದ ಪುನಃ ಜನ್ಮ ಇಲ್ಲವೆನ್ನುವ ನಿಶ್ಚಯು ಮತ್ತು ತರ್ಕದಿಂದ ಪುನಃ ಜನ್ಮವಿರಲಾರದೆಂದು ಹೇಳುವ ಅನುಮಾನದ ಮಾತು ಇವು ಮೇಲ್ನೋಟಕ್ಕೆ ಒಂದೇ ಅನಿಸಿದರೂ ಸಹ ಇವು ಒಂದೇ ಸಮ ಇರುವದಿಲ್ಲ. ಒಂದೇ ಯೋಗ್ಯತೆಯವೂ ಇರುವದಿಲ್ಲ. ಪರಮಾರ್ಥದಲ್ಲಿ ಬಹಿರಂಗಕ್ಕಿಂತ ಅಂತರಂಗದ ಕಡೆಗೆ ದೃಷ್ಟಿ ಕೊಡಬೇಕಾಗುವದು. ಆದ್ದರಿಂದ ಸಮಾಧಿ ಮತ್ತು ನಿದ್ರೆ ಇವು ಹೊರಗಿನಿಂದ ಒಂದೇ ಸಮ ಕಂಡರೂ ಅಂತರಂಗದಲ್ಲಿ ಎರಡೂ ಆಗದೀ ಭಿನ್ನವಿರುವವು. (೪೬) ಜ್ಞಾನಿಪುರುಷನ ದೃಷ್ಟಿಯಿಂದ ಈ ದೃಶ್ಯವೆಲ್ಲವೂ ಮಿಥ್ಯೆಯಾದ್ದರಿಂದ ಯಾರೂ ಬದ್ಧರಿಲ್ಲ. ಜಗತ್ತಿನಲ್ಲಿ ಬಂಧನವೆಂಬುದು ಯಾರಿಗೂ ಇಲ್ಲವೆಂದು ಅನ್ನುವ ಜ್ಞಾನಿಯ ಅನಿಸಿಕೆಯು ಅವನ ಭೂಮಿಕೆಯ ಮೇಲಿಂದ ನಿಜವೇ ಇರುವದು. ಆದರೆ ಎಲ್ಲ ಸಾಮಾನ್ಯ ಜನರಿಗೆ ದೃಶ್ಯವು ಸುತ್ತಿಕೊಂಡದ್ದರಿಂದ ಮತ್ತು ಅವನ ಮೇಲೆ (ಅಜ್ಞಾನಿಯ ಮೇಲೆ) ಅದು ತನ್ನ ಅಧಿಕಾರ ನಡೆಸುವದರಿಂದ ಸಾಮಾನ್ಯರ ಅನಿಸಿಕೆಯೂ ಅಷ್ಟೇ ನಿಜವೆನಿಸುವದು. ಈ ಎರಡೂ ಭೂಮಿಕೆಗಳನ್ನು ಚನ್ನಾಗಿ ತಿಳಿದುಕೊಂಡದ್ದಾದರೆ, ಈ ತಿಳುವಳಿಕೆಯೇ ನಮ್ಮನ್ನು ಈ ತೊಂದರೆಯಿಂದ ಹೊರಗೆ ಬರಲು ಮಾರ್ಗ ತೋರಿಸುವದು. (೪೭) ಪರಮಾತ್ಮ ಸ್ವರೂಪದ ಕಡೆಯಿಂದ ನೋಡಿದರೆ ಈ ದೃಶ್ಯವಿಶ್ವವು ಆಗಿಯೇ ಇಲ್ಲ. ಯಾವುದು ಆಗಿಯೇ ಇಲ್ಲವೋ ಯಾವುದಕ್ಕೆ ಎಷ್ಟೂ ನಿಜವೆಂಬುದು ಇಲ್ಲವೋ ಅಂಥದು ನಮ್ಮನ್ನು ಬಾಧಿಸುವದು. ಇದೇ ಒಂದು ಬಹಳ ಆಶ್ಚರ್ಯದ ವಿಷಯವಿರುವದು. ನೋಡಿರಿ! ದೃಶ್ಯವಿಶ್ವವು ನಿಜವೆನಿಸುವದು. ಇದರ ಖೊಟ್ಟಿತನ ನಮ್ಮ ಬುದ್ಧಿಗೆ ನಿಶ್ಚಿತತನದಿಂದ ತಿಳಿಯಲೊಲ್ಲದಾಗಿದೆ. ಆದ್ದರಿಂದ ಮನುಷ್ಯನು ಇದರಿಂದ ಬಂಧಿತನಾಗುವನು ಬದ್ಧನಾಗುವನು. (೪೮)

ಭೋಳಾ ಭಾವ ಸಿದ್ಧೀ ಜಾವ। ಹಾ ಉಧಾರಾಚಾ ಉಪಾವ।
ಲೋಕಡಾ ಮೋಕ್ಷಾಚಾ ಅಭಿಪ್ರಾವ। ವಿವೇಕೇ ಜಾಣಾವಾ ॥೪೯॥

ಪ್ರಾಣೀ ಮ್ಹಣಯಾ ಮೋಕಳಾ। ಆಧೀ ಪಾಹಿಜೆ ಜಾಣೀವಕಳಾ।
ಸಕಳ ಜಾಣತಾ ನಿರಾಳಾ। ಸಹಜ ಚಿ ಹೋಯೆ ॥೫೦॥

ಕಾಂಹೀ ಚ ನೇಣಿಜೆ ತೇ ಅಜ್ಞಾನ। ಸಕಳ ಜಾಣಿಜೆ ತೇ ಜ್ಞಾನ।
ಜಾಣೀವ ರಾಹಾತಾ ವಿಜ್ಞಾನ। ಸ್ವಯೆ ಚಿ ಆತ್ಮಾ ॥೫೧॥

ಅಮೃತ ಸೇವೂನ ಅಮರ ಜಾಲಾ।
ತೋ ಮ್ಹಣೆ ಮೃತ್ಯ ಕೈಸಾ ಯೇತೋ ಜನಾಲಾ।
ತೈಸಾ ವಿವೇಕೀ ಮ್ಹಣೆ ಬದ್ಧಾಲಾ। ಜನ್ಮ ತೋ ಕೈಸಾ ॥೫೨॥

ಜಾಣತಾ ಮ್ಹಣೆ ಜನಾತೇ। ತುಮ್ಹಾಸ ಭೂತ ಕೈಸೇ ಝಡಪಿತೇ।
ತುಮ್ಹಾಸ ವಿಷ ಕೈಸೇ ಚಢತೇ। ನಿರ್ವಿಷ ಮ್ಹಣೇ ॥೫೩॥

ಆಧೀ ಬದ್ಧಾಸಾರಿಖೇ ಮ್ಹಣೇ। ಮಗ ಹೇ ನಲಗೆ ಚಿ ಪುಸಾವೇ।
ವಿವೇಕ ದುರೀ ಠೇವೂನ ಪಾಹಾವೇ। ಲಕ್ಷಣ ಬದ್ಧಾಚೇ ॥೫೪॥

ನಿಜೇಲ್ಯಾಸ ಚೆಈಲಾ ತೋ। ಮ್ಹಣೆ ಹಾ ಕಾ ರೇ ಮೊಸಣಾತೋ।
ಅನುಭವ ಪಾಹಾಣೇ ಚಿ ಆಹೆ ತೋ। ತರೀ ಮಗ ನಿಜೋನ ಪಾಹಾವಾ ॥೫೫॥

ಸರಳತನ (ಭೋಳೆ ಸ್ವಭಾವ) ಅಂದರೆ ತಿಳುವಳಿಕೆ ಇಲ್ಲದ ಸರಳತನ [ಶ್ರದ್ಧಾ] ಇದು ಆತ್ಮ ಜ್ಞಾನದ ಸಿದ್ಧಿಯನ್ನು ಪ್ರಾಪ್ತಮಾಡಿಕೊಡುವದು ಎಂದು ಅನ್ನುವರು. ಈ ವ್ಯವಹಾರದ ಮಾತು ಉದ್ಧರಿಯದಾಗಿದೆ. ಮೋಕ್ಷದ ವ್ಯವಹಾರ ಯಾವಾಗಲೂ ರೋಖಡಿಯದಾಗಿರುವದು. ಆದರೆ ಇದಕ್ಕೆ ಮುಖ್ಯವಾಗಿ ಆತ್ಮಾನಾತ್ಮ ವಿವೇಕವು ಬೇಕು. ಇದಕ್ಕೆ ತಿಳುವಳಿಕೆಯು ಅವಶ್ಯಕತೆ ಇರುವದು. ವಿವೇಕದ ಸಹಾಯದಿಂದ ರೋಖ-ಠೋಕ ಸಿದ್ಧಿಯ ಪ್ರಾಪ್ತಿಯಾಗುವದು ಸಣ್ಣ ಮಕ್ಕಳಂತೆ ಸರಳವಾದ ಭೋಳೆ ಮನಸ್ಸು ಇರಬೇಕು. ಅಂದರೆ ಪರಮಾರ್ಥವು ಕೂಡಲೇ ಸಾಧಿಸುವದೆಂದು ಅನ್ನುವದು ನಿಜವಿದ್ದರೂ ಆ ಮನವು ಮಾತ್ರ ತಿಳುವಳಿಕೆಯುದಾಗಿರಬೇಕು. ಅಜ್ಞಾನದ ಅಂದರೆ ತಿಳುವಳಿಕೆ ಇಲ್ಲದ್ದಾಗಿರಬಾರದು ಪರಮಾರ್ಥಕ್ಕೆ ಬುದ್ಧಿಯು ಬೇಕಾಗುವದಿಲ್ಲವೆಂಬ[ಬುದ್ಧಿಯುಅವಶ್ಯಕತೆ ಇಲ್ಲವೆಂಬ]ಒಂದು ಬಹಳ ದೊಡ್ಡಮತ್ತುದೃಢವಾದ ಗೈರಸಮಜೂತ ಭಾರತದಲ್ಲಿ ಹರಡಿರುವದು. ಪರಮಾರ್ಥಕ್ಕೆ ವಿದ್ವತ್ತು ಮತ್ತುವ್ಯವಹಾರಿಕವಾದ ಸ್ವಾರ್ಥ ಬುದ್ಧಿ ಬೇಕಾಗುವದಿಲ್ಲವೆಂಬುದು ನಿಜವಿದೆ. ಆದರೆ ಸಾರಾಸಾರ ವಿಚಾರ ಮಾಡಿ ಸಾರ (ನಿಜ)ವನ್ನು ಸರಿಯಾಗಿ ಕಂಡು ಹಿಡಿದು ಗ್ರಹಿಸುವ ಶಕ್ತಿ ಇರುವಂಥ ಸೂಕ್ಷ್ಮವಾದ ಆತ್ಮ ಬುದ್ಧಿಯ ಹೊರತು ಆತ್ಮಜ್ಞಾನ ಪ್ರಾಪ್ತವಾಗುವದು ಶಕ್ಯವೇ ಇಲ್ಲವೆಂಬುದೂ ಅಷ್ಟೇ ನಿಜವಿರುವದು. (೪೯) ಬಂಧನದಿಂದ ಮುಕ್ತವಾಗಲು ಎಲ್ಲಕ್ಕೂ ಮೊದಲು ಸೂಕ್ಷ್ಮ ಬುದ್ಧಿಯೇ ಬೇಕಾಗುವದು. ಸೂಕ್ಷ್ಮವಾದ ಆತ್ಮಸ್ವರೂಪ ಗುರುತಿಸುವ ಶಕ್ತಿ ಇದರಲ್ಲಿ ಇರಬೇಕಾಗುವದು. ಈ ಸೂಕ್ಷ್ಮಬುದ್ಧಿಯಿಂದ ಸಾರ ವ ಅಸಾರ, ಸ್ಥೂಲ ವ ಸೂಕ್ಷ್ಮ ಈ ಎಲ್ಲವುಗಳ ಸ್ವರೂಪ ತಿಳಿಯಿತೆಂದರೆ ಆಗ ಇದನ್ನು ತಿಳಿಯುವವನಾದ"ನಾನು" ಅನ್ನುವದು ತನ್ನಷ್ಟಕ್ಕೆ ತಾನೇ ಈ ಎಲ್ಲವುಗಳಿಂದ ಬೇರೆಯಾಗುವದು. "ನಾನು" ಇದಕ್ಕೆ ಇದ್ದಂಥ ದೃಶ್ಯದ ಬಂಧನ ಕಳಚಿ ಬೀಳುವದು. [೫೦] ವಸ್ತುವಿನ ಯಥಾರ್ಥ ಸ್ವರೂಪವನ್ನು ತಿಳಿಯದೇ ಇರುವದರ ಹೆಸರು ಅಜ್ಞಾನವೆನಿಸುವದು. ಆದರೆ ವಸ್ತುವಿನ ಯಥಾರ್ಥ ಸ್ವರೂಪ ತಿಳಿಯುವದರ ಹೆಸರು ಜ್ಞಾನವಿರುವದು. ಅಜ್ಞಾನದಲ್ಲಿ ಏನೂ ತಿಳಿಯುವದಿಲ್ಲವಾದರೆ ಜ್ಞಾನದಲ್ಲಿ ಎಲ್ಲವೂ ತಿಳಿಯುವದು. ಆದರೆ ಜ್ಞಾನ ರೂಪೀ ಅರಿವೂ ಸಹ ಯಾವಾಗ ಹಿಂದೆ [ಬೀಳುವದೋ] ಉಳಿಯುವದೋ ಆಗ ಸ್ವರೂಪ ಸಾಕ್ಷಾತ್ಕಾರವಾಗುವದು. "ನಾನು ಆತ್ಮವೇ ಇರುವೆ" ಅನ್ನುವ ಅನುಭವ ಬರುವದು. ಇದಕ್ಕೆ ವಿಜ್ಞಾನ ಅಂದರೆ ಸ್ವಾನುಭವದ ಜ್ಞಾನ ಎಂದು ಅನ್ನುವರು[೫೧]ಒಬ್ಬ ಮನುಷ್ಯನು ಅಮೃತ ಕುಡಿದನು ಮತ್ತು ಅದರಿಂದ ಅಮರನಾದನು. ಆಮೇಲೆ ಅವನು "ಜನರಿಗೆ ಮರಣ ಯಾಕೆ ಮತ್ತು ಹೇಗೆ ಬರುವದಪ್ಪಾ" ಎಂದು ಅನ್ನಹತ್ತಿದನು. ಇದರಂತೆ ಆತ್ಮಜ್ಞಾನಿ ಪುರುಷನು ಸಾಮಾನ್ಯ ಜನರಿಗೆ ಅನ್ನುವದೇನಂದರೆ "ಏನಪ್ಪಾ, ಮನುಷ್ಯನು ಸತ್ತ ಮೇಲೆ ಅವನಿಗೆ ಪುನಃ ಜನ್ಮ ಹೇಗೆ ಬಂದೀತು?" [೫೨] ಜ್ಞಾನಿ ಪುರುಷನು ಜನರಿಗೆ ವಿಚಾರಿಸುವದೇನಂದರೆ "ಏನಪ್ಪಾ ನಿಮಗೆ ಭೂತ ಬಾಧೆ ಆಗುವದಾದರೂ ಹೇಗೆ"? ಇದರಂತೆ ವಿಷಬಾಧೆಯ ಅನುಭವವಿಲ್ಲದವನು ಇತರ ಜನರನ್ನು ಕೇಳುವದೇನಂದರೆ "ನಿಮಗೆ ವಿಷ ಏರುವದಾದರೂ ಹೇಗೆ"?[೫೩]ಈ ಎಲ್ಲದರ ಭಾವಾರ್ಥವೇನಂದರೆ ನಾವುಮೊದಲು ಬದ್ಧ ದೆಶೆಯಲ್ಲಿ ಇರಬೇಕು. ಆ ಬದ್ಧಾವಸ್ಥೆಯ ಲಕ್ಷಣಗಳನ್ನು ಮೈಗೂಡಿಸಿಕೊಂಡೆವೆಂದರೆ ಆಗ ಇಂಥ ಪ್ರಶ್ನೆಗಳನ್ನು ಮನುಷ್ಯನು ವಿಚಾರಿಸುವದಿಲ್ಲ. ಬದ್ಧನ ಅವಸ್ಥೆಯು ಲಕ್ಷ್ಯದಲ್ಲಿ ಬರುವದಕ್ಕಾಗಿ ನಾವು ಮೊದಲು ನಮ್ಮ ಜ್ಞಾನವನ್ನು ಸ್ವಲ್ಪ ಬಾಜೂಕ್ಕೆ ಸರಿಸಿಟ್ಟು ಅದರ ಕಡೆಗೆ ನೋಡಬೇಕಾಗುವದು. [೫೪] ನಿದ್ರೆ ಹೋದ ಒಬ್ಬ ಮನುಷ್ಯನು ಬಡಬಡಿಸಹತ್ತಿದನು. ಆಗ ಎಚ್ಚರಿದ್ದವನು ಅವನ ಕಡೆಗೆ ನೋಡಿ ಅಂದದ್ದೇನಂದರೆ "ಈ ಮನುಷ್ಯನು ನಿದ್ರೆಯಲ್ಲಿ ಹೀಗೇಕೆ ಬಡಬಡಿಸುವನು!" ಅವನು ಏಕೆ ಮತ್ತು ಹೇಗೆ ಬಡಬಡಿಸುವನೆಂಬುದರ ಅನುಭವ ಬೇಕಿದ್ದರೆ ಸ್ವತಃನಿದ್ರೆ ಹೋಗುವದು ಅವಶ್ಯವಿದೆ. [೫೫]

ಜ್ಞಾತ್ಯಾಚೀ ಉಗವಲೀ ವೃತ್ತೀ। ಬದ್ಧಾಂನಿಸೀ ನ ಪಡೆ ಗುಂತೀ।
ಭುಕೆಲ್ಯಾಚೀ ಅನುಭವಪ್ರಾಪ್ತೀ। ಧಾಲ್ಯಾಸ ನಾಹೀ ॥೫೬॥

ಇತುಕೇನ ಆಶಂಕಾ ತುಟಲೀ। ಜ್ಞಾನೇ ಮೋಕ್ಷ ಪ್ರಾಪ್ತೀ ಜಾಲೀ।
ವಿವೇಕ ಪಾಹಾತಾ ಬಾಣಲೀ। ಅಂತರಸ್ಥಿತೀ ॥೫೭॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
''ವಿಕಲ್ಪ ನಿರ್ಶನ'' ನಾಮ ಸಮಾಸ ಸಪ್ತಮ ॥

ಜ್ಞಾನಿ ಪುರುಷರ ವೃತ್ತಿ ದೃಶ್ಯದಿಂದ ಹೊರಬಿದ್ದಿರುವದು. ಇದರಿಂದ ಬದ್ಧಜನರ ವೃತ್ತಿಯಂತೆ ಅವರು ದೃಶ್ಯದಲ್ಲಿ ತೊಡಕಿಕೊಂಡು ಅಥವಾ ಅದರ ವಶವರ್ತಿಗಳಾಗುವದಿಲ್ಲ. ಇದರಂತೆ ಹಸಿದ ಮನುಷ್ಯನ ಅವಸ್ಥೆಯ ಕಲ್ಪನೆಯು ಹೊಟ್ಟೆ ತುಂಬಾ ಊಟ ಮಾಡಿದ ಮನುಷ್ಯನಿಗೆ ಬರುವದಿಲ್ಲ. ಇದರಂತೆ ಜ್ಞಾನಿ ಮತ್ತು ಮುಕ್ತ ಮನುಷ್ಯರಿಗೆ ಬದ್ಧ ಮನುಷ್ಯರ ಜೀವನದ ಕಲ್ಪನೆ ಸಹಜಾಸಹಜೀ ಬರಲಾರದು. [೫೬] ಇಷ್ಟೆಲ್ಲ ವಿವೇಚನೆಯಿಂದ ಶ್ರೋತಾಜನರ ಶಂಕೆಯು ನಿರಸನ [ಪರಿಹಾರ] ವಾಯಿತು. ಜ್ಞಾನದಿಂದಲೇ ಮೋಕ್ಷ ಪ್ರಾಪ್ತಿಯಾಗುವದು. ಮುಕ್ತ ಪುರುಷರಿಗೆ ಪುನಃ ಜನ್ಮ ಬರುವದಿಲ್ಲ. ಆಳವಾಗಿ ಆತ್ಮಾನಾತ್ಮ ವಿವೇಕ ಮಾಡಿದ್ದಾದರೆ ಖಂಡಿತವಾಗಿ ಆತ್ಮಜ್ಞಾನದ ಅಂತರ ಸ್ಥಿತಿ ಬಿಂಬಿಸುವದು. ಇದೆಲ್ಲವೂ ಶ್ರೋತಾ ಜನಕ್ಕೆ ಸಮಾಧಾನ ತಂದಿತು. [೫೭]

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಒಂಭತ್ತನೆಯ ದಶಕದಲ್ಲಿಯ
"ವಿಕಲ್ಪ ನಿರಸನ" ಎಂಬ ಹೆಸರಿನ ಏಳನೆಯ ಸಮಾಸವು ಮುಕ್ತಾಯವಾದುದು.

• •

## ದಶಕ ೯. ಸಮಾಸ ೮. ದೇಹಾಂತ ನಿರೂಪಣ (ನುಡಿ ೩೮)

ಹಿಂದಿನ ಸಮಾಸದಲ್ಲಿ ಯಾವ ಪ್ರಶ್ನೆಯನ್ನು ಕೇಳಲಾಗಿತ್ತೋ ಅದಕ್ಕೆ ಉತ್ತರ ಕೊಡುವದು ಹಾಗೆಯೇ ಉಳಿದುಕೊಂಡಿದೆ. ಜ್ಞಾನಿ ಪುರುಷನಿಗೆ ಪುನಃ ಜನ್ಮ ಬರುವದಿಲ್ಲ. ಆದರೆ ಅಜ್ಞಾನಿ ಜನರಿಗೆ ಮಾತ್ರ ಪುನಃ ಪುನಃ ಜನ್ಮ ತಾಳಬೇಕಾಗುವದು. ಕೇವಲ ದೇಹದ ಮತ್ತು ಅರಿವಿನ ದೃಷ್ಟಿಯಿಂದ ನೋಡಿದ್ದಾದರೆ ಮರಣ ಹೊಂದಿದ ಮನುಷ್ಯರ ಹಿಂದೆ ಏನೂ ಶಿಲುಕು ಉಳಿಯುವದಿಲ್ಲ. ಅಂದ ಮೇಲೆ ಅಜ್ಞಾನಿ ಮನುಷ್ಯರಲ್ಲಿ ಅಂಥ ದೇನು ಇರುವದು ? ಮತ್ತು ಸತ್ತನಂತರ ಯಾವುದು ಶಿಲುಕು ಉಳಿಯುವದು ? ಮತ್ತು ಅವರಿಗೆ ಪುನಃ ಜನ್ಮಕ್ಕೆ ಹಾಕುವಂಥದು ಯಾವುದು ? ಈ ಪ್ರಶ್ನೆಗೆ ಉತ್ತರವನ್ನು ಶ್ರೀ ಸಮರ್ಥರು ಈಗ ಕೊಡುವರು. ಜ್ಞಾನಿ ಪುರುಷರ ಪ್ರತ್ಯಕ್ಷ ಅನುಭವ ಏನಿರುವದೆಂದರೆ:– ಮನುಷ್ಯನಿಗೆ ಹೇಗೆ ದೃಶ್ಯ ಸ್ಥೂಲ ದೇಹ ಇರುವದೋ ಅದರಂತೆ ಅವನಿಗೆ ಒಂದು ಅದೃಶ್ಯ ವ ಸೂಕ್ಷ್ಮ ದೇಹ ಇರುವದು. ಸೂಕ್ಷ್ಮ ದೇಹವು ಸ್ಥೂಲ ದೇಹದ ಆಧಾರದಿಂದ ಇರುವದು.

ಅದಕ್ಕೆ ವ್ಯಾಪಿಸಿಕೊಂಡು ಇರುವದು. ಸೂಕ್ಷ್ಮ ದೇಹವು ಸ್ಥೂಲ ದೇಹಕ್ಕೆ ಅಂಟಿಕೊಂಡು ಇರುವದು. ಹೀಗೆ ಅಂಟಿಕೊಂಡಿರುವ ವರೆಗೆ ಮನುಷ್ಯನು ಜೀವಂತನಿರುವನು. ಸೂಕ್ಷ್ಮ ದೇಹವು ಸ್ಥೂಲ ದೇಹದ ಹೊರಗೆ ಬಂದು ಅದರೊಂದಿಗಿನ ಸಂಬಂಧವನ್ನು ಕಾಯಂ ಬಿಡುವದು. ಆಗ ಮನುಷ್ಯನು ಸಾಯುವನು. ಚರ್ಮ, ಸ್ನಾಯು, ರಕ್ತ ಎಲುವು, ಗ್ರಂಥಿ ಮತ್ತು ಮಜ್ಜಾತಂತು ಅಥವಾ ನರ ಇವೆಲ್ಲ ಸ್ಥೂಲ ದೇಹದ ಘಟಕಗಳಿರುವವು. ಪ್ರಾಣ, ಮನ, ಬುದ್ಧಿ, ಅಹಂಕಾರ ಮತ್ತು ವಾಸನಾ ಇವು ಸೂಕ್ಷ್ಮ ದೇಹದ ಘಟಕಗಳಿರುವವು. ಈ ಎಲ್ಲ ಘಟಕಗಳಲ್ಲಿ ವಾಸನಾ ಇದು ಪ್ರಧಾನ ಘಟಕವೆಂದು (ಮುಖ್ಯ ಘಟಕವೆಂದು) ತಿಳಿಯಬೇಕು. ಸೂಕ್ಷ್ಮ ದೇಹಕ್ಕೆ ವಾಸನಾತ್ಮಕ ದೇಹವೆಂದು ಅನ್ನುವರು. ಇದು ಅತ್ಯಂತ ಸಾರ್ಥಕವಾದ ಹೆಸರೆಂದು ಅನ್ನಲಿಕ್ಕೆ ಅಡ್ಡಿಯಿಲ್ಲ. ವಾಸನಾ ಇದು ವಾಯುರೂಪವಿರುವದು. ಇದು ಇಂದ್ರಿಯಗಳಿಗೆ ಗೋಚರವಾಗುವದಿಲ್ಲ. ಆದರೆ ಈ ವಾಸನಾದಿಂದಾಗಿ ಜೀವ ಹೊಸ ಹೊಸ ಜನ್ಮ ತಾಳುವದು. ಅರ್ಥಾತ್ ವಾಸನಾ ಇದೇ ಹೊಸ ಹೊಸ ಜನ್ಮ ತಾಳಲಿಕ್ಕೆ ಹಚ್ಚುವದು. ಬೃಹದಾರಣ್ಯಕ ಉಪನಿಷತ್ತಿನಲ್ಲಿ ಒಂದು ಮಂತ್ರ ಹೀಗಿರುವದು. "ತಸ್ಯಹ ಏತಸ್ಯ ಹೃದಯಸ್ಯ ಅಗ್ರಂ ಪ್ರದ್ಯೋತತೆ ತೇನ ಪ್ರದ್ಯೋತೇನ ಏಷಃ ಆತ್ಮಾ ಚಕ್ಷುಷ್ಟಃ ವಾ ಮೂರ್ಧ್ನಃ ವಾ ಅನ್ಯೇ ಭ್ಯಃ ವಾ ಶರೀರ ದೇಶೇಭ್ಯಃ ನಿಷ್ಕ್ರಾಮತಿ, ತಂ ಉತ್ಕ್ರಾಮ್ಯಂತಂ ಪ್ರಾಣಃ ಅನೂತ್ಕ್ರಾಮಂತಿ, ಪ್ರಾಣಂ ಅನೂತ್ಕ್ರಾಮಂತಂ ಸರ್ವೇ ಪ್ರಾಣಾಃ ಅನೂತ್ಕ್ರಾಮಂತಿ ಸವಿಜ್ಞಾನಃ ಭವತಿ ಸವಿಜ್ಞಾನಂ ಏವ ಅನ್ವವಕ್ರಾಮತಿ ತಂ ವಿದ್ಯಾಕರ್ಮಣಿ ಸಮನ್ವಾರಭೇತೆ ಪೂರ್ವಪ್ರಜ್ಞಾಚ"ಅರ್ಥ:–ಮರಣಾಸನ್ನ ಮನುಷ್ಯನ ಹೃದಯದ ಹೊರಗೆ ಹೋಗುವ ದ್ವಾರವು ಪ್ರಕಾಶಿತವಾಗುವದು. ಆ ಪ್ರಕಾಶದಿಂದ ಜೀವವು ಕಣ್ಣಿನಿಂದ ಅಥವಾ ತಲೆಯಿಂದ ಅಥವಾ ಶರೀರದ ಇತರ ದ್ವಾರಗಳಿಂದ ಹೊರಹೊರಡುವದು. ಜೀವ ಅಥವಾ ಸೂಕ್ಷ್ಮದೇಹ ಇವು ಶರೀರ ಬಿಟ್ಟು ಹೊರಡಹತ್ತಿದಕೂಡಲೇ ಪ್ರಾಣವೂ ಸಹ ಅವುಗಳ ಹಿಂದೆಯೇ ಹೊರಡುತ್ತದೆ, ಪ್ರಾಣದಹಿಂದೆಯೇ ಎಲ್ಲ ಇಂದ್ರಿಯಗಳು ಹೋಗುವವು. ಆ ಸಮಯದಲ್ಲಿ ಸೂಕ್ಷ್ಮದೇಹವು ವಿಜ್ಞಾನಮಯವಾಗುವದು. ಇದರ ಎಲ್ಲ ಸಂಸ್ಕಾರಗಳು ಒಂದು ಕಡೆಗೆ ಏಕತ್ರವಾಗ.ವವು. ಈ ಎಲ್ಲ ಸಂಸ್ಕಾರದೊಂದಿಗೆ ಅದು ಶರೀರ ಬಿಟ್ಟು ಬಿಡುವದು. ತನ್ನ ಜ್ಞಾನ, ಕರ್ಮ, ಪೂರ್ವಪ್ರಜ್ಞೆ ಇವೆಲ್ಲವನ್ನೂ ತೆಗೆದು ಅದು ಹೊರಟು ಹೋಗುವದು. ವಾಸನಾ ಸಾತ್ವಿಕವೋ ರಾಜಸಿಕವೋ ಅಥವಾ ತಾಮಸಿಕವೋ ಹೇಗೆ ಇರುವದೋ ಹಾಗೆ ಮುಂದಿನ ಜನ್ಮ ಬರುವದು. ಅಭ್ಯಾಸದಿಂದ ಸತ್ವಗುಣದ ಉತ್ಕರ್ಷವಾಗಿ ಜೀವವು ವೈರಾಗ್ಯ ಸಂಪನ್ನವಾಯಿತೆಂದರೆ ವಾಸನಾಕ್ಷಯ ಹೊಂದುವದು. ಮತ್ತು ಅದಕ್ಕೆ ಆತ್ಮಜ್ಞಾನ ಪ್ರಾಪ್ತವಾಗುವದು. ವಾಸನಾ ಕ್ಷಯ ಹೊಂದಿದರೆ ಜೀವಕ್ಕೆ ಪುನಃ ಜನ್ಮ ಬರುವದಿಲ್ಲ. ಆತ್ಮಜ್ಞಾನವಾಗದೇ ಮನುಷ್ಯ ಸತ್ತರೆ ಅವನ ವಾಸನಾ ಶಿಲುಕು ಉಳಿಯುವದು. ಅರ್ಥಾತ್ ಅವಕ್ಕೆ ಪುನಃ ಜನ್ಮ ಪಡೆಯದ ಹೊರತು ಗತ್ಯಂತರ ವಿರುವದಿಲ್ಲ.

## ಸಮಾಸ ಅಷ್ಟಮ : ದೇಹಾಂತ ನಿರೂಪಣ

॥ಶ್ರೀರಾಮ॥ ಜ್ಞಾತಾ ಸುಟಲಾ ಜ್ಞಾನಮತೇ । ಪರಂತು ಜನ್ಮ ಕೈಸಾ ಬದ್ಧಾತೇ ।
ಬದ್ಧಾಚೇ ಕಾಯೆ ಜನ್ಮತೇ । ಅಂತಕಾಳೀ ॥೧॥

ಬದ್ಧ ಪ್ರಾಣೀ ಮರೋನ ಗೇಲೆ । ತೇಥೇ ಕಾಹೀ ಚ ನಾಹೀ ಉರಲೇ ।
ಜಾಣೀವೆಚೇ ವಿಸ್ಮರಣ ಜಾಲೇ । ಮರಣಾಪೂರ್ವೀ ॥೨॥

ಐಸೀ ಘೇತಲೀ ಆಶಂಕಾ । ಯಾಚೇ ಉತ್ತರ ಐಕಾ ।
ಆತಾ ದುಶ್ಚೀತ ಹೋಊ ನಕಾ । ಮ್ಹಣೆ ವಕ್ತಾ ॥೩॥

ಪಂಚಪ್ರಾಣ ಸ್ಥಳೇ ಸೋಡಿತೀ । ಪ್ರಾಣರೂಪ ವಾಸನಾವೃತ್ತೀ ।
ವಾಸನಾ ಮಿಶ್ರಿತ ಪ್ರಾಣ ಜಾತೀ । ದೇಹ ಸೋಡುನಿಯಾ ॥೪॥

ವಾಯೋಸರಿಸೀ ವಾಸನಾ ಗೇಲೀ । ತೇ ವಾಯೋ ರೂಪೇ ಚಿ ರಾಹಿಲೀ ।
ಪುನ್ಹಾ ಜನ್ಮ ಘೇಊನ ಆಲೀ । ಹೇತುಪರತ್ವೇ ॥೫॥

ಕಿತ್ಯೇಕ ಪ್ರಾಣೀ ನಿಃಶೇಷ ಮರತೀ । ಪುನ್ಹಾ ಮಾಗುತೇ ಜೀವ ಯೇತೀ ।
ಢಕಲೂನ ದಿಲ್ಹೇ ತೇಣೇ ದುಖವತೀ । ಹಸ್ತಪಾದಾದಿಕ ॥೬॥

ಸರ್ಪ ದೃಷ್ಟೀ ಜಾಲಿಯಾವರೀ । ತೀ ದಿವಸಾ ಉಠವೀ ಧನ್ವಂತರೀ ।
ತೇವ್ಹಾ ತೇ ಮಾಘಾರೀ । ವಾಸನಾ ಯೇತೇ ಕೀ ॥೭॥

ಕಿತ್ಯೇಕ ಸೆವೇ ಹೋಊನ ಪಡತೀ । ಕಿತ್ಯೇಕ ತಯಾಸ ಉಠವಿತೀ ।
ಯೆಮಲೋಕೀಹೂನ ಆಣಿತೀ । ಮಾಘಾರೇ ಪ್ರಾಣೀ ॥೮॥

ಕಿತ್ಯೇಕ ಪೂರ್ವೀ ಶ್ರಾಪಿಲೇ । ತೇ ಶಾಪೇ ದೇಹ ಪಾವಲೇ ।
ಉಶ್ರಾಪಕಾಳೀ ಪುನ್ಹಾ ಆಲೇ । ಪೂರ್ವ ದೇಹೀ ॥೯॥

ಕಿತ್ಯೇಕೀ ಬಹು ಜನ್ಮ ಘೇತಲೇ । ಕಿತ್ಯೇಕ ಪರಕಾಯಾ ಪ್ರವೇಶಲೇ ।
ಐಸೆ ಆಲೆ ಆಣೀ ಗೇಲೇ । ಬಹುತ ಲೋಕ ॥೧೦॥

ಪುಂಕಿಲ್ಯಾಸರಿಸಾ ವಾಯೋ ಗೇಲಾ । ತೇಥೇ ವಾಯೋಸು ತ ನಿರ್ಮಾಣ ಜಾಲಾ ।
ಮ್ಹಣೋನ ವಾಯೋರೂಪ ವಾಸನೇಲಾ । ಜನ್ಮ ಆಹೆ ॥೧೧॥

ಮನಾಚ್ಯಾ ವೃತ್ತೀ ನಾನಾ । ತ್ಯಾತ ಜನ್ಮ ಘೇತೇ ವಾಸನಾ ।
ವಾಸನಾ ಪಾಹಾತಾ ದಿಸೇನಾ । ಪರಂತು ಆಹೆ ॥೧೨॥

## ದಶಕ ೯. ಸಮಾಸ ೮. ದೇಹಾಂತ ನಿರೂಪಣ (ನುಡಿ ೩೮)

ಶ್ರೋತಾಜನರು, ಕೇಳುಗರು, ಸಂಶಯದ ಪುನರುಚ್ಚಾರ (ಸ್ಪಷ್ಟೀಕರಣ) ಮಾಡುವರು:– ಜ್ಞಾನಿಪುರುಷ ಆತ್ಮಜ್ಞಾನದಿಂದಾಗಿ ಜನ್ಮದ ಹಿಡಿತದಿಂದ ಬಿಡುಗಡೆ ಹೊಂದುವನು(ದು)ಅಗದೀ ನಿಜವಿರುವದು. ಆದರೆ ಅಜ್ಞಾನಿ ಮನುಷ್ಯನಿಗೆ ಜನ್ಮ ಹೇಗೆ ಬರುವದು? ಬದ್ಧನಾದ ಮನುಷ್ಯ ಸತ್ತನಂತರ ಅವನದು ಏನು ಉಳಿಯುವದು?ಮತ್ತು ಅದು ಅವನನ್ನು ಪುನಃ ಜನ್ಮಕ್ಕೆ ಹಾಕುವದೇ? (೧) ಮೇಲೆ ಮೇಲೆ ನೋಡಿದರೆ ಬದ್ಧ ಮನುಷ್ಯ ಸತ್ತನಂತರ ಅವನದು ಏನೂ ಶಿಲುಕು ಉಳಿಯುವದಿಲ್ಲ. ಮರಣಕ್ಕಿಂತ ಮೊದಲೇ ಅವನ ಅರಿವು ಸಹ ಸಂಪೂರ್ಣ ಇಲ್ಲದಂತಾಗಿ ಹೋಗಿರುವದು. (೨) ಶ್ರೋತಾ ಒಂದು ಶಂಕಾ ತೆಗೆದನು. ಆ ಶಂಕಾದ ನಿರಸನ (ಪರಿಹಾರ) ಕೇಳಿರಿ, ಮನಸ್ಸು ವ್ಯಗ್ರಗೊಳ್ಳದಂತೆ ಮಾಡಿಕೇಳಿರಿ. (೩) ಮನುಷ್ಯನ ಸೂಕ್ಷ್ಮದೇಹವು ವಾಸನಾರೂಪವಿರುವದು. ವಾಸನಾ ಇದು ವಾಯುರೂಪವಿರುವದು. ಇದು ಕಾಣುವದಿಲ್ಲ ಆದರೆ ಇರುವದು ದೇಹ ಬಿದ್ದು ಹೋದರೂ ಸಹ ವಾಸನಾ ಇದು ಇದ್ದದ್ದು ಇದ್ದಂತೆಯೇ ಶಿಲುಕು ಉಳಿಯುವದು. ಇದು ಪುನಃ ಪುನಃ ಜನ್ಮ ತಾಳಲಿಕ್ಕೆ ಹಚ್ಚುವದು. ಇದು ಅರಿವಿನ ರೂಪ ಇದ್ದದ್ದರಿಂದ ಅಗದೀ ಮೂಲಮಾಯೆಯವರೆಗೂ ಹೋಗಿ ಮುಟ್ಟುವದು. ಐದೂ ಪ್ರಾಣಗಳು ಶರೀರದಲ್ಲಿಯ ತಮ್ಮ ಸ್ಥಾನವನ್ನು ಬಿಡುವವು. ಆ ಕಾಲದಲ್ಲಿ ವಾಸನಾ ಅವುಗಳ ಹಿಂದೆಯೇ ಹೋಗುವದು. ಯಾಕಂದರೆ ವಾಸನಾ ಇದು ಪ್ರಾಣರೂಪವಿರುವದು. ಮರಣಕಾಲದಲ್ಲಿ ವಾಸನಾದಿಂದ ಮಿಶ್ರಿತವಾದ ಕಲಬೆರಿಕೆಯಾದ ಪ್ರಾಣವು ದೇಹವನ್ನು ಬಿಟ್ಟು ಹೋಗುವದು. (೪) ಪ್ರಾಣವು ವಾಯು ರೂಪವಿರುವದು. ವಾಯುವಿನ ಸಂಗಡ ವಾಸನಾ ದೇಹವನ್ನು ಬಿಡುವದು. ಇದು ವಾಯುರೂಪದಲ್ಲಿಯೇ ಶಿಲುಕು ಉಳಿಯುವದು. ಮತ್ತು ಸಾಯುವಾಗ ಯಾವ ಬಯಕೆ–ಇಚ್ಛೆ (ಹೇತು) ಇರುವದೋ ಆ ಪ್ರಕಾರ ಅದು ವಾಸನಾ ಪುನಃ ಜನ್ಮ ಹೊಂದಿ ಬರುವದು. (೫) ಕೆಲವೊಂದು ಸಲ ಯಾವನೊಬ್ಬ ಮನುಷ್ಯನು ಸಂಪೂರ್ಣವಾಗಿ ಸಾಯುವನು. ಅವನ ದೇಹ ಪ್ರೇತವಾಗುವದು. ಆದರೆ ಪುನಃ ಅವನ ಜೀವ ದೇಹದಲ್ಲಿ ಪರತ ಬರುವದು ಪ್ರೇತವೆಂದು ದೇಹವನ್ನು ದಬ್ಬಿಬಿಟ್ಟರೆ ಅಥವಾ ಹೇಗೊ ಒಗೆದರೆ ಆ ದೇಹದ ಕೈಕಾಲುಗಳಿಗೆ ಮತ್ತು ಇತರ ಅವಯವಗಳಿಗೆ ಪೆಟ್ಟು ಬೀಳುವದು (೬)ಒಬ್ಬಾನೊಬ್ಬ ಮನುಷ್ಯನಿಗೆ ಹಾವಿನ ದೃಷ್ಟಿಯ ವಿಷ ಬಾಧಿಸುವದು. ಇದರಿಂದಾಗಿ ಅವನು ಸಾಯುವನು. ಮೂರು ದಿನದ ನಂತರ ಒಬ್ಬ ದೊಡ್ಡ ಮಾಂತ್ರಿಕನು ಅವನ ವಿಷವನ್ನು ಇಳಿಸಿ ಅವನನ್ನು ಎಬ್ಬಿಸುವನು. ಸಾಯುವಾಗ ದೇಹದಿಂದ ಹೊರಬಿದ್ದ ವಾಸನಾ ಪುನಃ ಪರತ ದೇಹದಲ್ಲಿ ಬರುವದು. ಬಂದ ಕೂಡಲೇ ಅವನು ಜೀವಂತನಾಗಿ ಏಳುವನು. (೭) ಕೆಲವೊಂದು ಜನರಲ್ಲಿ ಪ್ರಾಣವು ಹೊರಟು ಹೋದದ್ದರಿಂದ ಪ್ರೇತವಾಗಿ ಬೀಳುವರು. ಕೆಲವೊಂದು ಜನರು ಅವನನ್ನು ಜೀವಂತಗೊಳಿಸುವರು ಅಂದರೆ ಅವನನ್ನು ಯಮಲೋಕದಿಂದ ಪರತ ಕರೆದುಕೊಂಡು ಬರುವರು.(೮) ನಾವು ಪೂರ್ವಕಾಲದ ಕೆಲವು ಸಂಗತಿಗಳನ್ನು ಕೇಳುವೆವು. ಅವುಗಳ ಪೈಕಿ ಕೆಲವನ್ನು ಉದಾಹರಿಸುವೆ. ಪೂರ್ವಕಾಲದಲ್ಲಿ ಕೆಲವು ಜನರಿಗೆ ಶಾಪಕೊಟ್ಟರು. ಇದರಿಂದ ಅವರು ಹೊಸದೇಹವನ್ನು ತಾಳಬೇಕಾಯಿತು. ಆದರೆ ಉಃಶಾಪಯೋಗದಿಂದ ಯೋಗ್ಯಕಾಲದಲ್ಲಿ ಅದು ಪುನಃ ಮೊದಲಿನ ದೇಹದಲ್ಲಿ ಜನ್ಮತಾಳಿತು (೯)ಕೆಲವು ಜನರು ಬಹಳ ಜನ್ಮತಳೆದರು.ಕೆಲವು ಜನರು ಪರಕಾಯ ಪ್ರವೇಶ ಮಾಡಿದರು ಈ ಬಗೆಯಲ್ಲಿ ಎಷ್ಟೆಷ್ಟೋ ಜನ ಜನ್ಮಹೊಂದಿದರು ಹಾಗೂ ಮರಣವನ್ನೂ ಹೊಂದಿದರು.(೧೦) ಮೂಲ ವಾಯು ಸ್ತಬ್ಧ ಇರುವದು. ಉಫ್ ಎಂದು ಊದಿದರೆ ಆಗ ಅದಕ್ಕೆ ಗತಿ ದೊರೆತು ಅದು ಚಲವಲನ ಮಾಡುವದು.ವಾಯು ಚಲನವಲನವನ್ನು ಪ್ರಾರಂಭಿಸಿದ ಕೂಡಲೇ ಪ್ರಾಣ ನಿರ್ಮಾಣವಾಗುವದು. ಪ್ರಾಣವು ವಾಸನಾರೂಪವಿರುವದು.ಮತ್ತು ಈ ವಾಸನಾದಿಂದಾಗಿ ಜನ್ಮತಾಳಬೇಕಾಗುವದು.ಅರ್ಥಾತ್ ಜನ್ಮತಳೆಯಲು ಹಚ್ಚುವದು ವಾಸನಾಎಂದು ತಿಳಿಯಿರಿ(೧೧)ಮೂಲವಾಸನಾ ಅತಿಸೂಕ್ಷ್ಮವಿರುವದು ನೋಡಹೋದರೆ ಕಾಣವದಿಲ್ಲ. ಪರಂತು ವಾಸನಾ ಅನ್ನುವದು ಖಾತ್ರಿಯಿಂದ ಇರುವದು. ಇದರಲ್ಲಿ ಸಂಶಯವಿಲ್ಲ(ವಾಸನಾ ಅಂದರೆ ಹೇತು, ಇಚ್ಛಾ, ಹೆಚ್ಚಿನ (ಅಧಿಕ) ಅರಿವು) ನಮ್ಮ ಮನಸ್ಸಿನಲ್ಲಿ ಉಂಟಾಗುವ ಅನೇಕ ವೃತ್ತಿಗಳಿಗೆ ಮೂಲಸ್ಥಾನವು ವಾಸನೆಯಲ್ಲಿರುವದು. ವಾಸನಾದಿಂದ ವೃತ್ತಿ (ಮನದ ಸ್ಥಿತಿ, ಭಾವನಾ) ನಿರ್ಮಾಣವಾಗುವದು. ಮತ್ತು ವೃತ್ತಿಯಿಂದ ವಾಸನಾದ ಸಂರಕ್ಷಣೆಯಾಗುವದು. (೧೨)

ವಾಸನಾ ಜಾಣಿಜೆ ಜಾಣೀವ ಹೇತ। ಜಾಣೀವ ಮುಳೀಚಾ ಮೂಳ ತಂತ।
ಮೂಳ ಮಾಯೇತ ಅಸೆ ಮಿಶ್ರಿತ। ಕಾರಣರೂಪೇ ॥೧೩॥

ಕಾರಣರೂಪ ಆಹೆ ಬ್ರಹ್ಮಾಂಡೀ। ಕಾರ್ಯರೂಪೇ ವರ್ತೇ ಪಿಂಡೀ।
ಅನುಮಾನಿತಾ ತಾಂತಡೀ। ಅನುಮಾನೇನಾ ॥೧೪॥

ಪರಂತು ಆಹೆ ಸೂಕ್ಷ್ಮರೂಪ। ಜೈಸೇ ವಾಯೋಚೇ ಸ್ವರೂಪ।
ಸಕಳ ದೇವ ವಾಯೋರೂಪ। ಆಣೀ ಭೂತಸೃಷ್ಟಿ ॥೧೫॥

ವಾಯೋಮಧೇ ವಿಕಾರ ನಾನಾ। ವಾಯೋ ತರೀ ಪಾಹಾತಾ ದಿಸೇನಾ।
ತೈಸೀ ಜಾಣೀವವಾಸನಾ। ಅತಿ ಸೂಕ್ಷ್ಮ ॥೧೬॥

ತ್ರಿಗುಣ ಆಣೀ ಪಂಚಭೂತೇ। ಹೇ ವಾಯೋಮಧ್ಯೇ ಮಿಶ್ರಿತೇ।
ಅನುಮಾನೇನಾ ಮ್ಹಣೋನ ತ್ಯಾತೇ। ಮಿಥ್ಯಾ ಮ್ಹಣೋ ನಯೆ ॥೧೭॥

ಸಹಜ ವಾಯೋ ಚಾಲೇ। ತರೀ ಸುಗಂಧ ದುರ್ಗಂಧ ಕಳೋ ಆಲೆ।
ಉಷ್ಣ ಸೀತಳ ತಪ್ತ ನಿವಾಲೇ। ಪ್ರತ್ಯಕ್ಷ ಪ್ರಾಣೀ ॥೧೮॥

ಪ್ರಾಣ, ವಾಸನಾ, ಮನ, ಮತ್ತು ವೃತ್ತಿ ಇವು ಒಂದೇ ಸೂಕ್ಷ್ಮ ದೇಹದ ಅವಯವಗಳೆಂದು ಹೇಳಬಹುದು ವಾಸನಾ ಪ್ರಾಣರೂಪವಿದ್ದರೆ ಮನವು ಪ್ರಾಣಮಯವಿರುವದು. ವಾಸನಾ ಅರಿವು ಪ್ರಧಾನವಿದ್ದರೆ ವೃತ್ತಿಯು ಅರಿವಿನ ರೂಪವಿರುವದು. ಆದ್ದರಿಂದ ವೃತ್ತಿ ನಿರೋಧ ಮಾಡಿತೆಂದರೆ ಮನ ವಶವಾಗುವದು. ಪ್ರಾಣಾಯಾಮ ಮಾಡಿದರೆ ವೃತ್ತಿ ನಿರೋಧವಾಗುವದು. ಇದರಂತೆ ವೃತ್ತಿಯು ಸುಧಾರಿಸಿದರೆ ವಾಸನಾ ಕ್ಷೀಣವಾಗುವದು. ಮತ್ತು ವಾಸನಾ ಕ್ಷೀಣವಾದರೆ ಮನವು ಶುದ್ಧವಾಗುವದು. ಮನವು ಶುದ್ಧವಾದರೆ ಅರಿವು ಸ್ವಚ್ಛವಾಗುವದು. ಮತ್ತು ಅರಿವು ನಿರ್ಮಲವಾಯಿತೆಂದರೆ ಇದು ಮೂಲಮಾಯೆಯಲ್ಲಿ ವಿಲೀನವಾಗುವದು:-ದೇಹಬುದ್ಧಿಯಲ್ಲಿ ಸಂಚರಿಸುವ ಅರಿವು ಇದು ಹೇತು (ಉದ್ದೇಶ) ಸಹಿತ ಸಹೇತುಕ ಇರುವದು. ಇದು ಬೇಕು ವ ಇದು ಬೇಡ ಹೀಗೆ ಅನಿಸುವದೇ ಅರಿವಿನ ಸ್ವರೂಪವಿರುವದು. ಈ ಸ್ವರೂಪವೆಂದರೆ ವಾಸನಾ ಇರುವದು ಪಿಂಡದಲ್ಲಿರುವಂಥ ಅರಿವಿನ ಸಂಬಂಧ ಆಗದೀ ಮೂಲ ಮಾಯೆಯುವರೆಗೆ ಹೋಗಿ ಮುಟ್ಟುವದು. ಅರಿವಿನ ತಂತುಗಳು ಮೂಲ ಮಾಯೆಯಲ್ಲಿಯ ಐದು ಭೂತಗಳು ಮತ್ತು ಮೂರು ಗುಣಗಳು ಇವುಗಳೊಂದಿಗೆ ಬೆರೆತಿರುತ್ತವೆ. (ಕಲಿಸಿರುತ್ತವೆ) ಮಿಶ್ರವಾಗಿರುವವು. ಮೂಲ ಮಾಯೆಯಲ್ಲಿ"ನಾನು ಬ್ರಹ್ಮ ಇರುವೆನು"ಈ ಅರಿವಿನ ಅತ್ಯಂತೆ ಶುದ್ಧ,ನಿರ್ಮಲ,ಅನಂತ, ಅಪಾರ ಮತ್ತು ನಿಶ್ಚಲ ಸ್ವರೂಪ ಇರುವದು. ಈ ಜ್ಞಾನಮಯ ಸ್ವರೂಪಕ್ಕೆ ಪುರುಷ, ಈಶ್ವರ, ಅಥವಾ ಶಿವ ಅಂತಾ ಅನ್ನುವರು. ಆದರೆ ಇದರ ಸಂಗಡವೇ ಮೂಲಮಾಯೆಯಲ್ಲಿ ಗುಣ ಮಾಯೆಯ ಅಧಿಷ್ಠಾನವಿರುವದು. ಇದು ವಾಯು ರೂಪ ಅಥವಾ ಶಕ್ತಿರೂಪವಿರುವದು. ಇದಕ್ಕೆ ಪ್ರಕೃತಿ, ಮಾಯಾ, ಅಥವಾ ಶಕ್ತಿ ಎಂದು ಅನ್ನುವರು. ವಾಯು ಮತ್ತು ಅರಿವು (ತಿಳವಳಿಕೆ), ಪ್ರಕೃತಿ ಮತ್ತು ಪುರುಷ ಶಕ್ತಿ ಮತ್ತು ಶಿವ ಇವೆಲ್ಲ ಕೂಡಿ ಮೂಲಮಾಯಾ ಇರುವದು. ಈಶ್ವರನದು ಹೇಗೆ ಸತ್ಯ ಸಂಕಲ್ಪವೋ ಹಾಗೆಯೇ ಜೀವದ್ದು ವಾಸನಾ ಎಂದು ತಿಳಿಯಿರಿ. ವಾಸನಾ ಪ್ರಾಣರೂಪವಿರುವದು. ಪ್ರಾಣವು ವಾಯು ಪುತ್ರ, ಆದ್ದರಿಂದ ವಾಯುರೂಪವಿರುವದು. ಮೂಲ ಮಾಯೆಯಲ್ಲಿ ವಾಯುವು ಅರಿವಿನೊಂದಿಗೆ ಇರುವದು ಅರ್ಥಾತ್ ವಾಸನಾ ಅರಿವಿನಿಂದ ಯುಕ್ತವಿರುವದು. ಇದೇ ಕಾರಣದಿಂದಾಗಿ ಅರಿವಿನ ತಂತುವು ಅಗದೀ ಮೂಲಮಾಯೆಯುವರೆಗೂ ಮುಟ್ಟುವವು. (೧೩) ಬ್ರಹ್ಮಾಂಡದಲ್ಲಿ ಇರುವಂಥ ಅರಿವು ಕಾರಣ ರೂಪದಿಂದ (ನಿಮಿತ್ತ ಮಾತ್ರದಿಂದ) ಇರುವದು. ಪಿಂಡದಲ್ಲಿ ಇದು (ಅರಿವು) ಕಾರ್ಯರೂಪದಿಂದ ಇರುವದು. ಅರಿವಿನ ಸ್ವರೂಪ ಅರ್ಥವಾಗಲಿಕ್ಕೆ ವೇಳೆ ಹಿಡಿಯುವದು. ಇದು ಒಮ್ಮೆಲೇ ತಿಳಿಯುವದಿಲ್ಲ. ಈಶ್ವರನು ವಿಶ್ವದ ನಿರ್ಮಾಣ ಮಾಡುವಾಗ ಯಾವ ಸಂಕಲ್ಪ ಮಾಡಿದನೋ ಅದು ಬೀಜ ರೂಪ ಇದ್ದದ್ದರಿಂದ ಯಾವತ್ತೂ ದೃಶ್ಯ ಘಟನೆಗೆ ಮೂಲಕಾರಣವಿರುವದು. ಆ ಸಂಕಲ್ಪದಲ್ಲಿ ಯಾವ ಯಾವುದು ಗುಪ್ತ ಮತ್ತು ಸುಪ್ತ (ಜಡವಾದ) ಇರುವದೋ ಆ ಎಲ್ಲವೂ ದೃಶ್ಯರೂಪತಾಳಿ ಜಗತ್ತಿನಲ್ಲಿ ಪ್ರಕಟವಾಗುವದು. ದೃಶ್ಯಘಟನೆಯು ಕಾರ್ಯರೂಪ ವಿರುವದು. ಇದು ಕಾರ್ಯರೂಪ ಅರಿವಿನ ಅಥವಾ ಸಂಕಲ್ಪದ ತಿಳಿವಳಿಕೆ ಬರಲಿಕ್ಕೆ ನಮ್ಮ ಬುದ್ಧಿಯು ಅತ್ಯಂತ ಸೂಕ್ಷ್ಮವಾಗಬೇಕಾಗುವದು. (೧೪) ಆದರೆ ವಾಸನಾ ಇರುವದು. ಮತ್ತು ಅದು ವಾಯುವಿನಂತೆ ಸೂಕ್ಷ್ಮವಿರುವದು. ಎಲ್ಲ ದೇವ ದೇವತೆಗಳು ವಾಯುರೂಪರೇ ಇರುವರು. ಇದು ಪಂಚಭೂತಾತ್ಮಕ ಸೃಷ್ಟಿಯದೇ ಭಾಗವಿರುವದು. (೧೫) ವಾಯುವಿನಲ್ಲಿ ಎಷ್ಟೆಷ್ಟೋ ಪ್ರಕಾರಗಳು ಆಗುವವು ಹೀಗಿದ್ದರೂ ಅದು ಕಾಣಿಸುವದಿಲ್ಲ. ಇದರಂತೆ ಅರಿವಿನ ರೂಪದ ವಾಸನಾ ಅತಿಸೂಕ್ಷ್ಮ ಇರುವದು. ಇದರಲ್ಲಿಯೂ ಅನೇಕ ಪ್ರಕಾರದ ಹೆಚ್ಚು ಕಡಿಮೆ ಆಗುವವು. ಆದರೂ ಸಹ ಅದು ಕಾಣಿಸುವದಿಲ್ಲ. (೧೬)ಮೂರು ಗುಣ ಮತ್ತು ಐದು ಭೂತ ಹೀಗೆ ಎಂಟು ತತ್ವಗಳು ವಾಯುವಿನಲ್ಲಿ ಮಿಶ್ರವಾಗಿರುತ್ತವೆ. (ಕೂಡಿರುತ್ತವೆ). ಇದರ ಕಲ್ಪನೆ ಬರುವದಿಲ್ಲವೆಂದು ಅದು ಹೀಗೆ ಅಲ್ಲ-ಇದು ಹೀಗೆ ಅಲ್ಲವೆಂದು ಅಲ್ಲಗಳೆಯಬೇಡಿರಿ. (೧೭) ಗಾಳಿ ಸಹಜವಾಗಿ ಬೀಸಿದರೆ ಇದರಿಂದ ಸುಗಂಧ, ಅಥವಾ ದುರ್ಗಂಧದ ವಾಸನೆಯು ತಿಳಿಯುವದು. ಬಿಸಿ ಪದಾರ್ಥ ತಣ್ಣಗಾಗುವವು. ಮತ್ತು ಶೆಕೆ (ಉಷ್ಣತೆ)ಯಿಂದ ಪೀಡಿತನಾದವನು ಗಾಳಿಯಿಂದ ಶಾಂತನಾಗುವನು ತಣ್ಣಗಾಗುವನು. ಇವೆಲ್ಲ ಪ್ರತ್ಯಕ್ಷ ಅನುಭವಕ್ಕೆ ಬರುವಂಥವು ಇರುವವು. (೧೮)

ವಾಯೋಚೆನಿ ಮೇಘ ವ್ರೊಳತೀ । ವಾಯೋಚೆನಿ ನಕ್ಷತ್ರೇ ಚಾಲತೀ ।
ಸಕಳ ಸೃಷ್ಟೀಚೀ ವರ್ತತೀ ಗತೀ। ಸಕಳತೋ ವಾಯೋ ॥೧೯॥

ವಾಯೋರೂಪೇ ದೇವತೇ ಭೂತೇ । ಅಂಗೀ ಭರತೀ ಅಕಸ್ಮಾತೇ ।
ವೀಧ ಕೇಲಿಯಾ ಪ್ರೇತೇ । ಸಾವಧ ಹೋತೀ ॥೨೦॥

ರಾಹಾಣೇ ಬ್ರಾಹ್ಮಣ ಸಮಂಧ ಜಾತೀ । ರಾಹಾಣೇ ಠೇವಣೀ ಸಾಂಪಡತೀ ।
ನಾನಾ ಗುಂತಲೇ ಉಗವತೀ । ಪ್ರತ್ಯಕ್ಷ ರಾಹಾಣೇ ॥೨೧॥

ವಾರೇ ನಿರಾಳೇ ನ ಬೋಲೆ । ದೇಹಾಮಧೇ ಭರೋನ ಡೋಲೆ ।
ಆಳೀ ಘೇಊನ ಜನ್ಮಾ ಆಲೆ । ಕಿತ್ಯೇಕ ಪ್ರಾಣೀ ॥೨೨॥

ಐಸಾ ವಾಯೋಚಾ ವಿಕಾರ । ಯೇಮಂಚೆ ಕಳೇನಾ ವಿಸ್ತಾರ ।
ಸಕಳ ಕಾಹೀ ಚರಾಚರ । ವಾಯೋಮುಳೇ ॥೨೩॥

ವಾಯೋ ಸ್ತಬ್ಧರೂಪೇ ಸೃಷ್ಟೀಧರ್ತಾ । ವಾಯೋ ಚಂಚಳರೂಪೇ ಸೃಷ್ಟಿಕರ್ತಾ।
ನ ಕಳೆ ತರೀ ವಿಚಾರೀ ಪ್ರವರ್ತಾ । ಮ್ಹಣಿಜೆ ಕಳೆ ॥೨೪॥

ಮುಳಾ ಪಾಸೂನ ಸೇವಟವರೀ । ವಾಯೋ ಚಿ ಸಕಳ ಕಾಹೀ ಕರೀ ।
ವಾಯೋವೇಗಳೆ ಕರ್ತೃತ್ವ ಚತುರೀ । ಮಜ ನಿರೋಪಾವೇ ॥೨೫॥

ಜಾಣೀವರೂಪ ಮೂಳಮಾಯಾ । ಜಾಣೀವ ಜಾತೆ ಆಪಲ್ಯಾ ಠಾಯಾ ।
ಗುಪ್ತ ಪ್ರಗಟ ಹೋಊನಿಯಾ । ವಿಶ್ವೀ ವರ್ತೇ ॥೨೬॥

ಕೋಠೇ ಗುಪ್ತ ಕೋಠೇ ಪ್ರಗಟೆ । ಜೈಸೇ ಜೀವನ ಉಘಾಳೆ ಆಟೆ ।
ಪುಢೇ ಮಾಗುತಾ ವ್ರೋಘ ಲೋಟೆ । ಭೂಮಂಡಳೀ ॥೨೭॥

ತೈಸಾ ಚ ವಾಯೋಮಧೇ ಜಾಣೀವ ಪ್ರಕಾರ । ಉಮಟೆ ಆಟೆ ನಿರಂತರ ।
ಕೋಠೇ ವಿಕಾರೇ ಕೋಠೇ ಸಮೀರ । ಉಗಾ ಚ ವಾಜೆ ॥೨೮॥

ಗಾಳಿಯಿಂದ ಮೋಡಗಳು ಚಲನವಲನ ಮಾಡುವವು. ಮತ್ತು ಮಳೆಯನ್ನು ಸುರಿಸುವವು. ಗಾಳಿಯಿಂದ ನಕ್ಷತ್ರಗಳು ಚಲಿಸುವವು. ವಿಶ್ವದಲ್ಲೆಲ್ಲ ಕಡೆಗೂ ವಾಯುವಿನಿಂದ ಚಾಲನೆ (ಗತಿ) ಸಿಗುವದು. ಈ ಪ್ರಕಾರ ವಿಶ್ವದಲ್ಲಿ ಗಾಳಿಯು ಎಲ್ಲ ಕೆಲಸವನ್ನು ಮಾಡುತ್ತದೆ. (೧೯) ಭೂತಗಳು ಮತ್ತು ದೇವತೆಗಳು ಅಥವಾ ಸಣ್ಣ ದೇವತೆಗಳು ವಾಯುರೂಪ ಇರುವವು. ಇವು ಏಕದಂ (ಒಮ್ಮೆಲೆ) ಮೈಯಲ್ಲಿ ಸಂಚರಿಸುವವು. ಮಂತ್ರ ತಂತ್ರದ ಕೆಲವು ಪ್ರಕಾರಗಳಿಂದ ಪ್ರೇತಗಳೂ ಸಹ ಜೀವಂತವಾಗುವವು. (೨೦) ರಾಹಾಣೆ ಅಂದರೆ ಮಂತ್ರ ಪ್ರಯೋಗ ಮಾಡಿ ದೈವತೆಯ ಸಂಚಾರವಾಗುವಂತೆ ಮಾಡುವದು. ಇಂಥ ಸಂಚಾರದಿಂದ ಬ್ರಹ್ಮ ಸಂಬಂಧವನ್ನು ಹೊರಗೆ ಹಾಕುವದು. ಅಥವಾ ಹೊರಹಾಕಲಿಕ್ಕೆ ಹಚ್ಚುವರು. ಭೂಮಿಯಲ್ಲಿ ಹುಗಿದಿಟ್ಟ ಧನವನ್ನು ಹುಡುಕಿ ತೆಗೆದುಕೊಡುವರು. ಮತ್ತು ಅನೇಕ ಪ್ರಕಾರದ ಸಂಕಟದಲ್ಲಿ ಸಿಕ್ಕಿಕೊಂಡ ಜನರನ್ನು ಅದರಿಂದ ಪಾರು ಮಾಡುವರು (೨೧) ಮೈಯಲ್ಲಿ ಸೇರಿಕೊಂಡಿರುವ ಪಿಶಾಚಿಗಳು ದೇಹವಿಲ್ಲದೆ ಮಾತನಾಡಲಾರವು, ಆದ್ದರಿಂದ ಯಾರಾದರೊಬ್ಬರಲ್ಲಿ ಅದು ಸೇರಿಕೊಂಡು ಪ್ರಕಟವಾಗುವದು. ಇಂಥ ಪ್ರಕಾರದ ವಾಸನಾ ತಳೆದು ಎಷ್ಟೋ ಜೀವಗಳು ಜನ್ಮಕ್ಕೆ ಬರುವವು. (೨೨) ಇವೆಲ್ಲವೂ ವಾಯುವಿನ ಪ್ರಕಾರವಿರುವವು. ಒಟ್ಟಿನಲ್ಲಿ ಹೇಳಬೇಕಾದ ತಾತ್ಪರ್ಯವೇನಂದರೆ ವಾಯುವಿನ ವಿಸ್ತಾರ ತಿಳಿಯುವದು-ಬಹಳ ಕಠಿಣವಿರುವದು. ಯಾವತ್ತೂ ಚರಾಚರ ವಿಶ್ವದಲ್ಲಿಯ ಸರ್ವ ವ್ಯವಹಾರವು ವಾಯುವಿನಿಂದ ನಡೆಯುವದು. (೨೩) ವಾಯುವಿನ ಸ್ಥಿರರೂಪವೇ ವಿಶ್ವಧಾರಣ ಮಾಡಿರುವದು. ಮತ್ತು ಸಂರಕ್ಷಣೆಯನ್ನು ಮಾಡುವದು ವಿಷ್ಣುವಿನ ಅಂಶವು. ವಾಯುವಿನ ಗತಿಮಾನ (ಚಂಚಲ) ರೂಪವೇ ವಿಶ್ವನಿರ್ಮಾಣ ಮಾಡುವದು-ಬ್ರಹ್ಮನ ಅಂಶವು ನನ್ನ ಅನಿಸಿಕೆಯು ತಿಳಿಯದಿದ್ದರೆ ಆಳವಾದ ವಿಚಾರವನ್ನು ಮಾಡಬೇಕು ಅಂದರೆ ಆಗ ತಿಳಿಯುವದು. (೨೪) ವಿಶ್ವದ ಆರಂಭದಿಂದ ಕೊನೆಯವರೆಗೆ ಏನೆಲ್ಲ ಆಗುವವೋ ಅವೆಲ್ಲವೂ ವಾಯುವಿನಿಂದ ಉಂಟಾಗುವವು. ಇಲ್ಲಿ ವಾಯುವಿನ ಹೊರತು ಬೇರೆ ಯಾರಾದರೂ ಕರ್ತೃತ್ವವಿರುವದೇ ಇದ್ದದ್ದಾದರೆ ಚತುರರಾದವರು ಯಾರೆಂಬುದನ್ನು ತೋರಿಸಿಕೊಡಬೇಕು. (೨೫) ಶ್ರೀಸಮರ್ಥರು ವಾಯು ಶಬ್ದವನ್ನು ಶಕ್ತಿ ಅನ್ನುವ ಅರ್ಥದಲ್ಲಿ ಉಪಯೋಗಿಸಿದ್ದಾರೆ. ಇದನ್ನು ನೀವು ಲಕ್ಷ್ಯದಲ್ಲಿಟ್ಟುಕೊಳ್ಳಬೇಕು. ವಿಶ್ವದ ವ್ಯವಹಾರದಲ್ಲಿ ಎಲ್ಲ ಕಡೆಗೂ ಶಕ್ತಿಯ ಆಟವೇ ನಡೆದಿರುವದು. ಶಕ್ತಿಗೆ ಅಂತವಿಲ್ಲ-ಅನಂತವಿದೆ. ಇವಳಲ್ಲಿ ಎರಡುರೂಪಗಳಿರುವವು. ಒಂದು ಸ್ಥಿರರೂಪ. ಎರಡನೆಯದು ಗತಿಮಾನ ರೂಪವು (ಕಾರ್ಯಕಾರಿ ರೂಪವು). ಒಂದನೆಯ ಸ್ಥಿರ ರೂಪದಿಂದ ಇವಳು ವಿಶ್ವವೆಲ್ಲವನ್ನೂ ಅನಂತಕಾಲವೂ ಸ್ಥಿರವಾಗಿ ಹಿಡಿದಿರುವಳು. ಎರಡನೆಯ ಗತಿಮಾನರೂಪದಿಂದ ಇವಳು ವಿಶ್ವವನ್ನು ನಿರ್ಮಾಣ ಮಾಡಿ ಅದರಲ್ಲಿ ಅನಂತ ಘಡಾಮೋಡಗಳನ್ನುಂಟು ಮಾಡುವಳು. ಆದರೆ ಶಕ್ತಿಯು ಕುರುಡಳಲ್ಲ. ಇವಳು ಅರಿವಿನಿಂದ ಕೂಡಿದವಳಿರುವಳು. ಇಷ್ಟೇ ಅಲ್ಲ. ಇವಳು ಶಕ್ತಿ ಅಥವಾ ಮೂಲಮಾಯೆಯು ಅರಿವಿನ ರೂಪವೇ ಇರುವಳು. ಈ ಅರಿವು ಅತ್ಯಂತ ಶಾಂತ, ಸ್ಥಿರ, ಜ್ಞಾನಮಯ, ಅನಂತ, ಮತ್ತು ಆನಂದರೂಪವಿರುವದು ಇವಳ ವರ್ಣನೆಯನ್ನು ಕೇಳಿರಿ ಈಗ ತಿಳಿಸಿಕೊಡುವೆವು. ಮೂಲಮಾಯೆ ಅರವಿನರೂಪವಿರುವಳು. ಸ್ವಸ್ವರೂಪ ಇದು ಅರಿವಿನ ನಿಜವಾದ ಮೂಲ ಸ್ಥಳ (ಠಿಕಾಣ) ಇರುವದು. ಇಲ್ಲಿ ಇವಳು ಸಹಜವಾಗಿ ಹೋಗುವಳು. ಸ್ವರೂಪದಲ್ಲಿ ಲೀನವಿರುವಂಥ ಅರಿವು ಸ್ತಬ್ಧವಿರುವದು. ಆದರೆ ವಿಶ್ವದಲ್ಲಿ ಇದೇ ಅರಿವು ಗತಿಮಾನ ಉಳ್ಳದ್ದಾಗಿ (ಚಟುವಟಿಕೆ ಉಳ್ಳದ್ದಾಗಿ) ಕರ್ತೃತ್ವ-ಕಾರ್ಯಗಳನ್ನು ಮೆರೆಸುವಳು ಅರ್ಥಾತ್ ನಡೆಯಿಸುವಳು. ಒಂದು ಕಡೆಗೆ ಪ್ರಕಟವಾಗಿ ಒಂದು ಕಡೆ ಅಪ್ರಕಟವಾಗಿ ಇವಳ ಕಾರ್ಯ ಚಾಲೂ ಇರುವದು. ಸರಾಗವಾಗಿ ನಡೆಯುವದು. (೨೬) ಭೂಮಿಯೊಳಗಿಂದ ನೀರು ಒಮ್ಮೆಲೇ ಮೇಲೆ ಪುಟಿದು ಬರುತ್ತದೆ. ಒಮ್ಮೊಮ್ಮೆ ನೀರು ಬತ್ತಿ ಹೋಗುತ್ತದೆ. ಬತ್ತಿ-ಕೆಲವು ದಿನಗಳ ನಂತರ ಮೊದಲಿನಂತೆ ಪುನಃ ನೀರಿನ ಪ್ರವಾಹ ಭೂಮಿಯ ಮೇಲೆ ಜೋರಿನಿಂದ ಹರಿಯಹತ್ತುವದು. ಇದರಂತೆ ಅರಿವು ಒಂದು ಕಡೆಗೆ ಗುಪ್ತವಿದ್ದರೆ ಇನ್ನೊಂದು ಕಡೆಗೆ ಪ್ರಕಟರೂಪದಲ್ಲಿ ಕಾಣುವದು. ಒಂದು ಕಡೆಗೆ ಪ್ರಕಟವಿದ್ದದ್ದು ಗುಪ್ತವಾಗುವದು. ಗುಪ್ತವಿದ್ದು ಪ್ರಕಟವಾಗುವದು. (೨೭) ವಾಯುವಿನಲ್ಲಿ ಇರುವಂಥ ಅರಿವಿನ ಪ್ರಕಾರ, ರೀತಿ, ಹೀಗೆಯೇ ಇರುವದು. ಒಂದು ಕಡೆಗೆ ಇದು ಪ್ರಕಟವಾಗಿ ಕಾಣುವದು. ಒಂದು ಕಡೆಗೆ ಇದು ಗುಪ್ತವಾಗುವದು. ಒಂದು ಕಡೆಗೆ ಇದರಲ್ಲಿ ಬದಲಾವಣೆ ಹೊಂದಿದ್ದು ಕಾಣುವದು. ಒಂದು ಕಡೆಗೆ ಕೇವಲ ವಾಯುವೇ ಕಾರ್ಯ ಮಾಡುವದು. (೨೮)

ಮಾರೀ ಅಂಗಾವರೂನ ಜಾತೀ । ತೇಣೇ ಹಾತಪಾಯ ಮೋಳತೀ ।
ಮಾರಾ ಮಾಜತಾ ಕರಪತೀ । ಆಲೀ ಪಿಕೇ ॥೨೯॥

ನಾನಾ ರೋಗಾಚೀ ನಾನಾ ಮಾರೀ । ಪೀಡಾ ಕರಿತೀ ಪೃಥ್ವೀವರೀ ।
ವೀಜ ಕಡಾಡೀ ಅಂಬರೀ । ವಾಯೋ ಮುಳೇ ॥೩೦॥

ವಾಯೋ ಕರಿತಾ ರಾಗೋದ್ಗಾರ । ಕಳೆ ಮೋಳಖೀಚಾ ನಿರ್ಧಾರ ।
ದೀಪ ಲಾಗೆ ಮೇಘ ಪಡೆ ಹಾ ಚಮತ್ಕಾರ । ರಾಗೋದ್ಗಾರೀ ॥೩೧॥

ವಾಯೋ ಫುಂಕಿತಾ ಭುಲೀ ಪಡತೀ । ವಾಯೋ ಫುಂಕಿತಾ ಖಾಂಡಕೇ ಕರಪತೀ।
ವಾಯೋಕರಿತಾ ಚಾಲತೀ । ನಾನಾ ಮಂತ್ರ ॥೩೨॥

ಮಂತ್ರೇ ದೇವ ಪ್ರಗಟತೀ । ಮಂತ್ರೇ ಭೂತೇ ಅಖರಕಿತೀ ।
ಬಾಜೀಗರೀ ಮೊಡಂಬರೀ ಕರಿತೀ । ಮಂತ್ರಸಾಮರ್ಥ್ಯೇ ॥೩೩॥

ರಾಕ್ಷಸಾಚೀ ಮಾವರಚನಾ । ತೇ ಹೆ ದೇವಾದಿಕಾ ಕಳೇನಾ ।
ವಿಚಿತ್ರ ಸಾಮರ್ಥ್ಯೇ ನಾನಾ । ಸ್ತಂಬನ ಮೋಹನಾದಿಕೇ ॥೩೪॥

ಧಡ ಚಿ ಪಿಸೇ ಕರಾವೇ । ಪಿಸೇ ಚ ಉಮಜವಾವೇ ।
ನಾನಾ ವಿಕಾರ ಸಾಂಗಾವೇ । ಕಿತೀ ಮ್ಹಣೋನೀ ॥೩೫॥

ಮಂತ್ರೇ ಸಂಗ್ರಾಮ ದೇವಾಚಾ । ಮಂತ್ರೇ ಸಾಭಿಮಾನ ಋಷೀಚಾ ।
ಮಹಿಮಾ ಮಂತ್ರಸಾಮರ್ಥ್ಯಾಚಾ । ಕೋಣ ಜಾಣೇ ॥೩೬॥

ಮಂತ್ರೇ ಪಕ್ಷೀ ಆಟೋಪಿತೀ । ಮೂಷಕೇ ಸ್ವಾಪದೇ ಬಾಂಧತೀ ।
ಮಂತ್ರೇ ಮಹಾಸರ್ಪ ಖಿಳಿತೀ । ಆಣೀ ಧನಲಾಭ ॥೩೭॥

ಆತಾ ಅಸೋ ಹಾ ಪ್ರಶ್ನ ಜಾಲಾ । ಬದ್ಧಾಚಾ ಜನ್ಮ ಪ್ರತ್ಯಯಾ ಆಲಾ ।
ಮಾಗೀಲ ಪ್ರಶ್ನ ಫಿಟಲಾ । ಶ್ರೋತಯಾಚಾ ॥೩೮॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
''ದೇಹಾಂತ ನಿರೂಪಣ'' ನಾಮ ಸಮಾಸ ಅಷ್ಟಮ ॥

● ●

ಮೈಮೇಲಿನಿಂದ ಗಾಳಿ ಹಾಯ್ದು ಹೋದರೆ ಕೈಕಾಲು ಒಣಗುವವು. ಗಾಳಿಬೀಸಿದ್ದರಿಂದ ಎಷ್ಟೋಸಲ ಒಳ್ಳೇ ಸ್ಥಿತಿಯಲ್ಲಿದ್ದ ಪೀಕುಗಳು ಸಹ ಒಣಗುವವು.(೨೯) ಅನೇಕ ಪ್ರಕಾರದ ಗಾಳಿಯಿಂದ ಅನೇಕ ಪ್ರಕಾರದ ರೋಗಗಳು ಹುಟ್ಟುವವು. ಭೂಮಿಯ ಮೇಲಿನ ಜನರಿಗೆ ಇದರಿಂದ ಪೀಡೆಯಾಗುವದು. ವಾಯುವಿನಿಂದಲೇ ಆಕಾಶದಲ್ಲಿ ಸಿಡಿಲು ಮಿಂಚುಗಳು ಅಬ್ಬರಿಸುವವು.(೩೦) ವಾಯುವಿನಿಂದ ಗಾಯನದಲ್ಲಿಯ ರಾಗಗಳನ್ನು ಹಾಡಲಿಕ್ಕೆ ಬರುವದು. ಶ್ರೋತಾ ಜನಕ್ಕೆ ವಾಯುವಿನಿಂದಲೇ ಈ ರಾಗವು ಯಾವದು ಇದು ಎಂಬುದು ತಿಳಿಯುವದು. ದೀಪರಾಗದಿಂದ ದೀಪಗಳು ಹತ್ತುವವು. ಮೇಘಮಲ್ಹಾರರಾಗದಿಂದ ಮಳೆಯು ಬೀಳುವದು. ಇವೆಲ್ಲವೂ ರಾಗದ ಚಮತ್ಕಾರಗಳು ವಾಯುವಿನಿಂದಲೇ ಉಂಟಾಗುವವು (೩೧) ಗಾಳಿ ಊಫ್ ಅಂತಾ ಊದಿದರೆ ಮನುಷ್ಯನಿಗೆ ಭ್ರಮೆ (ಗುಂಗು, ಮೋಹದ ಮಾಟ) ಆಗುವದು. ಗಾಳಿ ಊದಿದರೆ ಕುರು ಗಂಟು ವ್ರಣ ಇವು ಕರಗಿ ಒಣಗುವವು. ವಾಯುವಿನಿಂದಾಗಿ ಅನೇಕ ಪ್ರಕಾರದ ಮಂತ್ರಗಳು ಪರಿಣಾಮ ಮಾಡುವವು. ಮಂತ್ರಗಳಿಂದ ದೇವತೆಗಳು ಪ್ರಕಟಗೊಳ್ಳುವರು. (ಮಂತ್ರದಿಂದಲೇ ದೇವತಾ ಪ್ರತಿಷ್ಠಾಪನೆ ಆಗುವದು).ಮಂತ್ರಗಳಿಂದ ದೆವ್ವ,ಭೂತಗಳನ್ನು ಎದುರಿಗೆ.ತರಲಿಕ್ಕೆ[ಹೊರ ತರಲಿಕ್ಕೆ] ಬರುವದು. ಒಂದು ವಸ್ತುವನ್ನು ಬದಲಿಸಿ ಅದರ ಬದಲು ಇನ್ನೊಂದನ್ನು ಸೃಷ್ಟಿಸುವದು, ಬೇರೆ ಬೇರೆ ರೂಪಗಳನ್ನು ತೆಗೆದುಕೊಂಡು ಜನರನ್ನು ಚಕಿತಗೊಳಿಸುವದು, ಇಂಥ ಜಾದೂ ಕೈಚಳಕವನ್ನು ಮಂತ್ರ ಸಾಮರ್ಥ್ಯದಿಂದ ಮಾಡಲಿಕ್ಕೆ ಬರುವದು. (೩೨) ದೇವಾಧಿದೇವತೆಗಳಿಗೆ ಸಹ ತಿಳಿಯದ ರಾಕ್ಷಸರ ಮಾಯಾಮಯ ರಚನೆಯು ಮಂತ್ರ ಸಾಮರ್ಥ್ಯದಿಂದ ಮಾಡಲಿಕ್ಕೆ ಬರುವದು. ಒಬ್ಬನನ್ನು ಒಂದೇ ಸ್ಥಳದಲ್ಲಿ ಸ್ತಂಭನಗೊಳಿಸುವದು(ನೆಲಕ್ಕೆ ಹತ್ತಿಕೊಳ್ಳುವಂತೆ ಮಾಡುವದು) ಅಥವಾ ಅವನಿಗೆ ಮೋಹಿನಿ ವಿದ್ಯೆಯಿಂದ ಭ್ರಮಗೊಳಿಸುವದು. ಮನುಷ್ಯರನ್ನು ಸಂಪೂರ್ಣವಾಗಿ ವಶಮಾಡಿಕೊಳ್ಳುವದು. [ವಶೀಕರಣ ವಿದ್ಯೆಯಿಂದ] ಇಂಥ ಪ್ರಕಾರದ ವಿಚಿತ್ರ ಸಾಮರ್ಥ್ಯವು ಮಂತ್ರದಲ್ಲಿ ಇರುವದು. (೩೩) ಚನ್ನಾಗಿ ದಷ್ಟ ಪುಷ್ಟ ಮತ್ತು ನೆಟ್ಟಗಿದ್ದವನನ್ನು ಹುಚ್ಚನನ್ನಾಗಿ ಮಾಡುವದು. ಮತ್ತು ಹುಚ್ಚನಿದ್ದವನನ್ನು ಸರಿ ಮಾಡುವದು. ಇವೆಲ್ಲ ವಾಯುವಿನಲ್ಲಿಯ ಅನೇಕ ಪ್ರಕಾರದ ವಿಕಾರಗಳಿರುವವು. ಇವನ್ನು ಎಷ್ಟು ಹೇಳಿದರೂ ಕಡಿಮೆಯೇ ಸರಿ. (೩೪) ಮಂತ್ರದ ಸಾಮರ್ಥ್ಯದಿಂದ [ಅಸ್ತ್ರಾದಿಗಳನ್ನು ಮಂತ್ರಿಸಿ ಬಿಡುವರು] ದೇವ ದೇವತೆಗಳಲ್ಲಿ ಯುದ್ಧ ನಡೆಯುವವು. ಋಷಿಗಳ ಜರಬು ಅವರ ಮಂತ್ರ ಸಾಮರ್ಥ್ಯದ ಮೇಲೆ ಅವಲಂಬಿಸಿರುವದು. ಮಂತ್ರ ಸಾಮರ್ಥದ ಮಹಿಮೆ ಬಗ್ಗೆ ಯಾರಿಗೂ ಪೂರ್ಣ ಹೇಳಲಿಕ್ಕೆ ಆಗುವದಿಲ್ಲ. [೩೫] ಮಂತ್ರದಿಂದ ಪಕ್ಷಿಗಳನ್ನು ತಾಬೆಯಲ್ಲಿ [ವಶದಲ್ಲಿ] ಇಟ್ಟುಕೊಳ್ಳಲಿಕ್ಕೆ ಬರುವದು. ಇಲಿ ಮತ್ತು ಜನಾವರಗಳನ್ನು ಕಟ್ಟಿ ಹಾಕಲಿಕ್ಕೆ ಬರುವದು. [ಬಾಯಿಥಡಿ ಅಂದರೆ ದುಷ್ಟಪ್ರಾಣಿಗೆ, ಕಡಿಯಲಿಕ್ಕೆ ಬರದಂತೆ ಮಾಡುವದು] ಮಂತ್ರದಿಂದ ದೊಡ್ಡಸರ್ಪವನ್ನು ಒಂದೇ ಸ್ಥಳದಲ್ಲಿ ಇರುವಂತೆ ಮಾಡಲಿಕ್ಕೆ ಬರುವದು. ಮಂತ್ರದಿಂದ ಧನಲಾಭಹೊಂದಲು ಬರುವದು. [೩೬] ಇನ್ನು ಈ ವಿಷಯ ಸಾಕು. ಶ್ರೋತಾ ಜನರ ಪ್ರಶ್ನೆಗೆ ಉತ್ತರ ಕೊಟ್ಟೆವು. ಬದ್ಧನಿಗೆ ಜನ್ಮ ಹೇಗೆ ಬರುವದು? ಈ ಪ್ರಶ್ನೆಗೆ ಉತ್ತರ ಹೇಳಲಾಯಿತು. ಶ್ರೋತಾಜನ ಇದನ್ನು ಸರಿಯಾಗಿ ಗ್ರಹಿಸಲಿ. [೩೭]

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದ ಒಂಭತ್ತನೆಯ ದಶಕದೊಳಗಿನ
"ದೇಹಾಂತ ನಿರೂಪಣ"ವೆಂಬ ಎಂಟನೆಯ ಸಮಾಸವು ಮುಗಿದುದು.

● ●

## ದಶಕ ೯. ಸಮಾಸ ೯. ಸಂದೇಹ ನಿವಾರಣ (ನುಡಿ ೪೧)

ಬ್ರಹ್ಮ ಮತ್ತು ಬ್ರಹ್ಮಾಂಡ ಇವುಗಳ ಪರಸ್ಪರ ಸಂಬಂಧವೇನು? ಇದೊಂದು ವೇದಾಂತದಲ್ಲಿಯ ಕೂಟ ಪ್ರಶ್ನೆ [ತೊಡಕಿನ ಪ್ರಶ್ನೆ] ಇರುವದು. ಈ ಸಮಾಸದಲ್ಲಿ ಶ್ರೀಸಮರ್ಥರು ಇದಕ್ಕೆ ಸಮಾಧಾನಕರ ಉತ್ತರ ಕೊಟ್ಟಿದ್ದಾರೆ. ಈ ಪ್ರಶ್ನೆ ನಿರ್ಮಾಣವಾಗಲಿಕ್ಕೆ ಕಾರಣವೇನಂದರೆ: ಬ್ರಹ್ಮನ ಸ್ವಭಾವ ಬೇರೆ ಮತ್ತು ಬ್ರಹ್ಮಾಂಡದ ಸ್ವಭಾವವೂ ಬೇರೆ ಇರುವದು. ಒಂದು ಶಾಶ್ವತವಿದ್ದರೆ ಇನ್ನೊಂದು ಅಶಾಶ್ವತವು. ಒಂದು ನಿರ್ಗುಣವಿದ್ದರೆ ಇನ್ನೊಂದು ಸಗುಣವು. ಒಂದು ನಿಶ್ಚಲವಿದ್ದರೆ ಇನ್ನೊಂದು ಚಂಚಲವು. ಒಂದು ಒಂದೇ ಒಂದಾದದ್ದಿದ್ದರೆ [ಏಕಜಿನಸಿ] ಇನ್ನೊಂದು ಅನೇಕ ಪ್ರಕಾರದ್ದು [ಬಹುಜಿನಸಿ] ಇರುವದು. ಒಂದು ಅನಂತ ಇದ್ದರೆ ಇನ್ನೊಂದು ಅಂತ ಇರುವಂಥಾದ್ದು[ನಾಶವಂತ]. ಒಂದು ಪೂರ್ಣವಿದ್ದರೆ ಇನ್ನೊಂದು ಅಪೂರ್ಣವು. ಒಂದು ನಿರ್ವಿಕಾರಿ ಇದ್ದರೆ ಇನ್ನೊಂದು ವಿಕಾರಿ, ಹೀಗೆ ಎರಡರಲ್ಲಿಯೂ ಮೂಲವಲ್ಲಿಯೇ ಅಂತರ [ಮೂಲಗಾಮಿ] ಇರುವದು. ಮೊದಲಿಗೆ ನಾವು ಲಕ್ಷ್ಯದಲ್ಲಿಡಬೇಕಾದದ್ದು ಏನಂದರೆ: ಬ್ರಹ್ಮಾಂಡವು ಬ್ರಹ್ಮದಲ್ಲಿಯೇ ಇರಲಿಕ್ಕೇಬೇಕು. ಅರ್ಥಾತ್ ಇರುವದು. ಈಶೋಪ

ನಿಷತ್‌ದಲ್ಲಿ ಮೊದಲನೆಯ ಮಂತ್ರ ಹೇಳುವದೇನಂದರೆ"ಈಶಾವಾಸ್ಯಮ್ ಇದಮ್ ಸರ್ವಮ್। ಯತ್‌ಕಿಂಚ ಜಗತ್ಯಾಂ ಜಗತ್" ಅರ್ಥಃ– ಈ ವಿಶ್ವದಲ್ಲಿ ಏನು ಇದೆಯೋ ಅದೆಲ್ಲವೂ ಪರಮೇಶ್ವರನಿಂದ ವ್ಯಾಪಿಸಿರುವದು. ಆಕಾಶದಿಂದ ನಿರ್ಮಾಣವಾಗಿರುವ ಈ ವಿಶ್ವವು ಆಕಾಶದಲ್ಲಿಯೇ ಆಶ್ರಯ ಪಡೆಯುವದು. ಮತ್ತು ಕೊನೆಗೆ ಆಕಾಶದಲ್ಲಿಯೇ ವಿಲೀನವಾಗುವದು. ಆಕಾಶವು ಬ್ರಹ್ಮದಲ್ಲಿ ವಿಲೀನವಾಗುವದು. ಬ್ರಹ್ಮದ ಹೊರಗೆ ಅವಕಾಶವೇ ಇಲ್ಲ. ಅರ್ಥಾತ್ ವಿಶ್ವವು ಬ್ರಹ್ಮದ ಹೊರಗೆ ಹೋಗಲಿಕ್ಕೆ ಶಕ್ಯವಿಲ್ಲ. ಈ ಕಾರಣದಿಂದಾಗಿ ಬ್ರಹ್ಮಾಂಡವು ಬ್ರಹ್ಮದಲ್ಲಿಯೇ ಇರುವದು ಅನ್ನುವದು ಯೋಗ್ಯ ಹಾಗೂ ಸಕಾರಣವಿದೆ. ಆದರೆ ಬ್ರಹ್ಮಾಂಡದಲ್ಲಿ ಬ್ರಹ್ಮ ಇರುವನೇ? ಹೇಗೆ? ಈ ಬಗ್ಗೆ ತೈತ್ತರೀಯ ಉಪನಿಷತ್‌ದಲ್ಲಿಯ ಬ್ರಹ್ಮವಲ್ಲಿಯಲ್ಲಿ ಹೀಗೆ ಮಂತ್ರವಿರುವದು। "ಸಃ ಅಕಾಮಯತ ಬಹುಸ್ಯಾಮ್ ಪ್ರಜಾಯೇಯ ಇತಿ, ಸಃ ತಪಃ ಅತಪ್ಯತ ಸಃ ತಪಃ ತಪ್ತ್ವಾ ಇದಮ್ ಸರ್ವಮ್ ಅಸೃಜತ ಯದ್ ಇದಂ ಕಿಂಚ ತತ್ ಸೃಸ್ಟ್ವಾ ತತ್ ಏವ ಅನುಪ್ರಾವಿಶತ್" ಅರ್ಥ:-"ನಾನು ಅನೇಕವಾಗಬೇಕು. ಹೀಗೆ ಬ್ರಹ್ಮನು ಇಚ್ಛೆ ಮಾಡಿದನು. ಅವನು ತಪಸ್ಸನ್ನು ಮಾಡಿದನು. ತಪಸ್ಸು ಮಾಡಿ ಅವನು ಆ ಎಲ್ಲವನ್ನೂ ನಿರ್ಮಾಣ ಮಾಡಿದನು. ಇದನ್ನೆಲ್ಲ ನಿರ್ಮಾಣ ಮಾಡಿ ಅವನು ಅದರಲ್ಲಿ ಪ್ರವೇಶಿಸಿದನು". ಇದರ ಅರ್ಥ ಹೀಗಿರುವದು. ಬ್ರಹ್ಮನು ವ್ಯಾಪಕನಿದ್ದರೆ ಬ್ರಹ್ಮಾಂಡವು ವ್ಯಾಪ್ಯ ಇರುವದು. ನಿಜವೆಂದರೆ ಒಬ್ಬ ಬ್ರಹ್ಮದ ಹೊರತು ಇನ್ನೊಂದಕ್ಕೆ ಅಸ್ತಿತ್ವವಿಲ್ಲ. ಏನಿರುವದೋ ಅದೆಲ್ಲವೂ ಬ್ರಹ್ಮವೇ ಇರುವದು. ವಿಶ್ವದಲ್ಲಿ ಯಾವುದು ಕಾಣುವದೋ ಅದು ಬ್ರಹ್ಮದಿಂದಲೇ ನಿರ್ಮಾಣವಾಗುವದು. ಬ್ರಹ್ಮದಿಂದಲೇ ಮಾಡಿರುವದು. ಬ್ರಹ್ಮದಿಂದಲೇ ಜೀವಿಸುವದು. ಮತ್ತು ಕೊನೆಗೆ ಬ್ರಹ್ಮದಲ್ಲಿಯೇ ಲಯ ಹೊಂದುವದು. ಹೀಗೆ ಇದ್ದರೂ ಸಹ ವಿಶ್ವನಿರ್ಮಾಣ ಮಾಡಿ ಅದರಲ್ಲಿಯೇ ಬ್ರಹ್ಮ ಸೇರಿದನು, ಎಂದು ಶ್ರುತಿ ಹೇಳುವದು. ಅರ್ಥಾತ್ ವಿಶ್ವವು ಯಾವ ಸ್ವರೂಪದಲ್ಲಿ ನಮಗೆ ಕಾಣುವದೋ ಆ ಸ್ವರೂಪದಲ್ಲಿ ಆ ಬ್ರಹ್ಮ ಅಲ್ಲ. [ಇಲ್ಲ]. ಆದ್ದರಿಂದ ಮೂಲಪ್ರಶ್ನೆಯ ಕಡೆಗೆ ನೋಡುವದರಲ್ಲಿ ಎರಡು ಪ್ರಕಾರಗಳಿರುವವು. ಬ್ರಹ್ಮ ಸ್ವರೂಪದ ಕಡೆಯಿಂದ ನೋಡಿದ್ದಾದರೆ ಅಖಿಲವಿಶ್ವವು ಬ್ರಹ್ಮಮಯವೇ ಇರುವದು, ಆದರೆ ವಿಶ್ವದ ಕಡೆಯಿಂದ ನೋಡಿದ್ದಾದರೆ ನಾಮ ರೂಪಾತ್ಮಕ ದೃಶ್ಯದ ಅಂತರ್ಯಾಮಿಯಾದ ಬ್ರಹ್ಮ ವಾಸ ಮಾಡುವದು·ನಮ್ಮ ಇಂದ್ರಿಯಗಳಿಗೆ ಕಾಣುವ ವಿಶ್ವದ ಹರಡುವಿಕೆ[ಪಸರಿಸುವಿಕೆ]ಯ ಮೂಲವು ಬ್ರಹ್ಮದ್ದೇ ವಿಲಾಸವಿರುವದು. ನಾವು ದ್ವೈತವನ್ನು ನಿಜವೆಂದು ನಂಬುವ ಜನರು ನಮ್ಮ ಅವಸ್ಥೆಯು ಸಣ್ಣ ಮಕ್ಕಳಂತೆ ಇರುವದು. ಚಿತ್ರಕಾರರು ಒಂದೇ ಕಟ್ಟಿಗೆಯಿಂದ ನಾಯಿ, ಕುದುರೆ, ಆನೆ, ವಗೈರೆ ಪ್ರಾಣಿಗಳನ್ನು ಮಾಡಿರುತ್ತಾರೆ· ಮಕ್ಕಳಿಗೆ ಇವು ಬಿಡಿಬಿಡಿಯಾಗಿ ಪ್ರತಿಯೊಂದು ನಿಜವೆನಿಸುವವು. ಆದರೆ ಆ ಎಲ್ಲ ಪ್ರಾಣಿಗಳ ಮೂಲ ದ್ರವ್ಯವು ಕಟ್ಟಿಗೆ ಇರುವದೆಂಬ ತಿಳುವಳಿಕೆ ಮಕ್ಕಳಿಗೆ ಇರುವದಿಲ್ಲ. ದೊಡ್ಡವರಿಗೆ ಇವೆಲ್ಲ ಕಟ್ಟಿಗೆಯಿಂದ ಆದವುಗಳು ಇರುವವು, ಅನ್ನುವ ತಿಳುವಳಿಕೆ ಇದ್ದದ್ದರಿಂದ ಆ ಪ್ರಾಣಿಗಳೆಲ್ಲವು ಬೇರೆಯಾಗಿ ತೋರಿದರೂ ಸಹ ಏಕ ವಸ್ತು [ಜಿನಸಿ] ಅಂದರೆ ಒಂದೇ ಕಟ್ಟಿಗೆಯಿಂದ ಆದದ್ದೆಂದು ತಿಳಿಯುವರು, ಪ್ರಾಣಿ ತಯಾರಾಗುವ ಪೂರ್ವದಲ್ಲಿ ಪ್ರಾಣಿ ತಯಾರ ಆದಮೇಲೆ ಮತ್ತು ಪ್ರಾಣಿ ಮುರಿದ [ಭಂಗಗೊಂಡ] ಮೇಲೆ ಕಟ್ಟಿಗೆಯಲ್ಲಿ ದ್ರವ್ಯದ ದೃಷ್ಟಿಯಿಂದ [ಕಟ್ಟಿಗೆಯ ದೃಷ್ಟಿಯಿಂದ] ಯಾವ ಫರಕೂ ಆಗುವದಿಲ್ಲ, ಇದರಂತೆ ವಿಶ್ವ ನಿರ್ಮಾಣವಾಗುವ ಮೊದಲು ಬ್ರಹ್ಮ "ಒಂದು" ಇತ್ತು. ವಿಶ್ವ ನಿರ್ಮಾಣವಾಯಿತು, ಆಗ ಅದು "ಬಹುರೂಪಿ ಅಥವಾ ಅನೇಕ" ಆಯಿತು, ವಿಶ್ವ ಲಯವಾದಾಗ ಅದು ಪುನಃ ಒಂದೇ ಇರುವದು. ಆದರೆ "ಬ್ರಹ್ಮ ಒಂದೇ ಇರುವದು" ಮತ್ತು "ಬ್ರಹ್ಮ ಬಹುರೂಪಿ ಅಥವಾ ಅನೇಕವಾಗಿ ಕಾಣುವದು." ಇವುಗಳಲ್ಲಿ ಬ್ರಹ್ಮ ಸ್ವರೂಪದ ದೃಷ್ಟಿಯಿಂದ ಎಳ್ಳಷ್ಟು ಅಂತರವಾಗುವದಿಲ್ಲ. ಈ ಮಾತು ನಮ್ಮ ಲಕ್ಷ್ಯದಲ್ಲಿ ಬರುವದಿಲ್ಲ. ಸ್ವಸ್ವರೂಪದ ಅಜ್ಞಾನದಿಂದಾಗಿ ನಮಗೆ ಭ್ರಮವಾಗುವದು. ವಿಶ್ವದಲ್ಲಿ ತುಂಬಿ ಉಳಿದಂಥ ಬ್ರಹ್ಮವನ್ನು ನಾವು ಮರೆಯುವೆವು, ವಿಶ್ವದಲ್ಲಿಯ ಅನೇಕತನವನ್ನು ನಾವು ನಿಜವೆಂದು ಅನ್ನುವೆವು. ವಿಶ್ವದ ಮೂಲ ಅಧಿಷ್ಠಾನವಾದ ಯಾವ ಬ್ರಹ್ಮವೋ ಅದರ ಸಾಕ್ಷಾತ್ ಜ್ಞಾನವಾಯಿತೆಂದರೆ ಅಜ್ಞಾನವು ಇಲ್ಲದಾಗಿ ಹೋಗುವದು, ಅಜ್ಞಾನದ ಸಂಗಡ ಭ್ರಮವೂ ಇಲ್ಲವಾಗಿ ಹಾರಿ ಹೋಗುವದು, ವಿಶ್ವರೂಪದಿಂದ ಶೋಭಿಸುವ ಬ್ರಹ್ಮದಜ್ಞಾನವು ಸನ್ನಿವೇಶ ನಿಲ್ಲುವದು, ಆ ಮೇಲೆ ಮೂಲ ಪ್ರಶ್ನೆಯೇ ಉಳಿಯುವದಿಲ್ಲ.

### ಸಮಾಸ ನವಮು : ಸಂದೇಹ ವಾರಣ

॥ಶ್ರೀರಾಮ॥ ಬ್ರಹ್ಮ ವಾರಿತಾ ವಾರೇನಾ । ಬ್ರಹ್ಮ ಸಾರಿತಾ ಸರೇನಾ ।
ಬ್ರಹ್ಮ ಕಾಹೀ ವೊಸರೇನಾ । ಯೇಕೀಕಡೆ ॥೧॥
ಬ್ರಹ್ಮ ಭೇದಿತಾ ಭೇದೇನಾ । ಬ್ರಹ್ಮ ಛೇದಿತಾ ಛೇದೇನಾ ।
ಬ್ರಹ್ಮ ಪರತೇ ಹೋಯೇನಾ । ಕೇಲೇ ತರೀ ॥೨॥
ಬ್ರಹ್ಮ ಖಂಡೇನಾ ಅಖಂಡ । ಬ್ರಹ್ಮೀ ನಾಹೀ ದುಸರೇ ಬಂಡ ।
ತರೀ ಕೈಸೇ ಹೇ ಬ್ರಹ್ಮಾಂಡ । ಸಿರಕಲೇ ಮಧೇ ॥೩॥
ಪರ್ವತ ಪಾಷಾಣ ಸಿಳಾ ಸಿಖರೇ । ನಾನಾ ಸ್ಥಳೇ ಸ್ಥಳಾಂತರೇ ।
ಭೂಗೋಳ ರಚನಾ ಕೋಣ್ಯಾ ಪ್ರಕಾರೇ । ಜಾಲೀ ಪರ ಬ್ರಹ್ಮೀ ॥೪॥
ಭೂಗೋಳ ಆಹೇ ಬ್ರಹ್ಮಾಮಧೇ । ಬ್ರಹ್ಮ ಆಹೇ ಭೂಗೋಳಾಮಧೇ ।
ಪಾಹಾತಾ ಯೇಕ ಯೇಕಾಮಧೇ । ಪ್ರತ್ಯಕ್ಷ ದಿಸೆ ॥೫॥
ಬ್ರಹ್ಮೀ ಭೂಗೋಳೇ ಪೈಸ ಕೇಲಾ। ಆಣೀ ಭೂಗೋಳಹೀ ಬ್ರಹ್ಮೇ ಭೇದಿಲಾ।
ವಿಚಾರ ಪಾಹಾತಾ ಪ್ರತ್ಯಯು ಆಲಾ । ಪ್ರತ್ಯಕ್ಷ ಆತಾ ॥೬॥
ಬ್ರಹ್ಮೇ ಬ್ರಹ್ಮಾಂಡ ಭೇದಿಲೇ । ಹೇ ತೋ ಪಾಹಾತಾ ನೀಟ ಚಿ ಜಾಲೇ ।
ಪರೀ ಬ್ರಹ್ಮಾಸ ಬ್ರಹ್ಮಾಂಡೇ ಭೇದಿಲೇ । ಹೇ ವಿಪರೀತ ದಿಸೆ ॥೭॥
ಭೇದಿಲೇ ನಾಹೀ ಮ್ಹಣಾವೇ । ತರೀ ಬ್ರಹ್ಮೀ ಬ್ರಹ್ಮಾಂಡ ಸ್ವಭಾವೇ ।
ಹೇ ಸಕಳಾಸ ಅನುಭವೇ । ದಿಸತ ಆಹೆ ॥೮॥
ತರೀ ಹೇ ಆತಾ ಕೈಸೇ ಜಾಲೇ । ವಿಚಾರೂನ ಪಾಹಿಜೆ ಬೋಲಿಲೇ ।
ಐಸೇ ಶ್ರೋತೀ ಆಕ್ಷೇಪಿಲೇ । ಆಕ್ಷೇಪವಚನ ॥೯॥
ಆತಾ ಯಾಚೇ ಪ್ರತ್ಯೋತ್ತರ । ಸಾವಧ ಐಕಾ ನಿರೋತ್ತರ ।
ಯೆಥೇ ಪಡಿಲೇ ಕೀ ವಿಚಾರ । ಸಂದೇಹಾಚೆ ॥೧೦॥
ಬ್ರಹ್ಮಾಂಡ ನಾಹೀ ಮ್ಹಣೋ ತರೀ ದಿಸೆ । ಆಣಿ ದಿಸೆ ಮ್ಹಣೋ ತರೀ ನಾಸೆ ।
ಆತಾ ಹೇ ಸಮಜತೀ ಕೈಸೇ । ಶ್ರೋತೇಜನ ॥೧೧॥
ತವ ಶ್ರೋತೇ ಜಾಲೆ ಉದ್ದಿತ । ಆಹೋ ಮ್ಹಣತಿ ಸಾವಚಿತ್ತ ।
ಪ್ರಸಂಗೇ ಬೋಲೋ ಉಚಿತ । ಪ್ರತ್ಯೋತ್ತರ ॥೧೨॥

## ದಶಕ ೯ : ಸಮಾಸ ೯ : ಸಂದೇಹ ವಾರಣ [ನುಡಿ ೪೧]

ಮೊದಲಿಗೆ ಪ್ರಶ್ನೆಯ ಸ್ವರೂಪವನ್ನು ಚನ್ನಾಗಿ ತಿಳಿಸಿ ಹೇಳುವರು:- ಶ್ರೋತಾ ಅನ್ನುವದೇನಂದರೆ ಬ್ರಹ್ಮನನ್ನು ನಿವಾರಿಸಬೇಕು, ದೂರಮಾಡಬೇಕು, ಇಲ್ಲದಂತೆ ಮಾಡಬೇಕು ಎಂದು ಅಂದರೆ ಮಾಡಲಿಕ್ಕೆ ಬರಲೊಲ್ಲದು. ಇವನನ್ನು ಬಾಜೂಕ್ಕೆ (ಒಂದು ಬದಿಗೆ) ಸರಿಸಬೇಕೆಂದರೆ ಮಾಡಲಿಕ್ಕೆ ಆಗಲೊಲ್ಲದು. ಈ ಬ್ರಹ್ಮವನ್ನು ಒಂದು ಬದಿಗೆ ಒಟ್ಟುಗೂಡಿಸಿ ಇಡಬೇಕೆಂದರೆ ಹಾಗೆ ಮಾಡಲಿಕ್ಕೂ ಆಗಲೊಲ್ಲದು (೧) ಬ್ರಹ್ಮವನ್ನು ಮುರಿಯಬೇಕೆಂದರೆ ಮುರಿಯಲಿಕ್ಕೆ ಬರುವದಿಲ್ಲ. ಬ್ರಹ್ಮನಿಗೆ ಒಂದು ಛಿದ್ರ (ತೂತು) ಮಾಡಬೇಕೆಂದರೆ ಮಾಡಲಿಕ್ಕೆ ಬರಲೊಲ್ಲದು. ಬ್ರಹ್ಮವನ್ನು ಹಿಂದಕ್ಕೆ ಸರಿಸಿ ನೂಗಿಸಬೇಕೆಂದರೆ ಹಿಂದಕ್ಕೆ ಸರಿಯಲೊಲ್ಲದು. (೨) ಬ್ರಹ್ಮವು . ಅಖಂಡವಿರುವದು. ಇದನ್ನು ಚೂರು ಚೂರು (ತುಣುಕು, ತುಣುಕು) ಮಾಡಬೇಕೆಂದರೆ ತುಣುಕು ಮಾಡಲಿಕ್ಕೆ ಬರಲೊಲ್ಲದಾಗಿದೆ. ಬ್ರಹ್ಮ ಒಬ್ಬನೇ ಒಬ್ಬನಿದ್ದಾನೆ. ಇವನಲ್ಲಿ ಇವನ ಹೊರತಾಗಿ ಇನ್ನೊಂದು ಯಾವುದೂ ಇಲ್ಲ. ಹೀಗೆ ಇದ್ದರೂ ಸಹಿತ ಇವನಲ್ಲಿ ಈ ಬ್ರಹ್ಮಾಂಡ ಹೇಗೆ ಸೇರಿತು? ಇದೊಂದು ಪ್ರಶ್ನೆ ಇರುವದು. (೩) ಪರ್ವತ, ಬಂಡೆಕಲ್ಲು,ಕಲ್ಲು, ಶಿಖರ, ಅನೇಕ ಪ್ರಕಾರದ ಸ್ಥಳವುಳ್ಳ ಈ ಜಡ ಪೃಥ್ವಿಯ ರಚನೆಯು ಆ ಸೂಕ್ಷ್ಮ ಪರಬ್ರಹ್ಮದಲ್ಲಿ ಹೇಗೆ ಆಯಿತು?(೪) ಪೃಥ್ವಿಯು ಬ್ರಹ್ಮದಲ್ಲಿ ಇರುವಂತೆಯೇ ಬ್ರಹ್ಮವು ಪೃಥ್ವಿಯೊಳಗೆ ಇರುವದು. ಸರಿಯಾಗಿ ವಿಚಾರ ಮಾಡಿ ನೋಡಿದರೆ ಪೃಥ್ವಿ ಮತ್ತು ಬ್ರಹ್ಮ ಇವು ಒಂದರೊಳಗೊಂದು ಕೂಡಿಯೇ ಇರುವವೆಂದು ಪ್ರತ್ಯಕ್ಷದಲ್ಲಿ ಕಾಣಿಸುವದು. (೫) ಬ್ರಹ್ಮದಲ್ಲಿ ಪೃಥ್ವಿಯು ಸ್ಥಳವನ್ನು ವ್ಯಾಪಿಸಿದೆ. ಮತ್ತು ಪೃಥ್ವಿಯ ಅಂತರ್ಯಾಮದಲ್ಲಿ ಬ್ರಹ್ಮ ಇರುವದು. ವಿಚಾರ ಮಾಡಿದ್ದಾದರೆ ಪೃಥ್ವಿ ಮತ್ತು ಬ್ರಹ್ಮ ಇವುಗಳ ಈ ಪರಸ್ಪರ ಸಂಬಂಧ ಪ್ರತ್ಯಕ್ಷವಾಗಿ ಅನುಭವಕ್ಕೆ ಬರುವದು. (೬) ಬ್ರಹ್ಮ ಸೂಕ್ಷ್ಮವಿರುವದು. ಆದ್ದರಿಂದ ಬ್ರಹ್ಮವು ಬ್ರಹ್ಮಾಂಡವನ್ನು ಭೇದಮಾಡಿ ಅದರ ಅಂತರ್ಯಾಮದಲ್ಲಿ ಇರುವದು. ಇದು ಮಾತ್ರ ಸರಿ (ಬರೋಬರಿ) ಇರುವದು. ಆದರೆ ಬ್ರಹ್ಮಾಂಡ ಸ್ಥೂಲವಿದೆ, ಜಡವಿದೆ. ಇಂಥದು ಬ್ರಹ್ಮದ ಭೇದ ಮಾಡಿ ಅದರಲ್ಲಿ ಸ್ಥಳವ್ಯಾಪಿಸಿತು ಅನ್ನುವ ಮಾತು ಅಗದೀ ವಿಪರೀತವೆನಿಸುವದು. (೭) ಬ್ರಹ್ಮಾಂಡವು ಬ್ರಹ್ಮದ ಭೇದಮಾಡಲಿಲ್ಲವೆಂದು ಅನ್ನುವದಾದರೆ ಅದು ಬ್ರಹ್ಮದಲ್ಲಿ ಸಹಜವಾಗಿಯೇ ಇರುವದೆಂದು ಅನ್ನುವದಕ್ಕೆ ಯಾವ ಅಡ್ಡಿಯೂ ಇಲ್ಲ. ಇದು ಪ್ರತ್ಯಕ್ಷ ಅನುಭವದಿಂದ ಎಲ್ಲರಿಗೂ ಕಾಣುವದು. (೮) ಆದರೇದು ಹೇಗೆ ಘಟಿಸಿತು? ಈ ಪ್ರಶ್ನೆಯ ವಿಚಾರ ಮಾಡಿ ಉತ್ತರ ಕೊಡಬೇಕು ಎಂದು ಶ್ರೋತಾನು ಆಕ್ಷೇಪವೆತ್ತಿದನು.(೯) ಈಗ ಈ ಪ್ರಶ್ನೆಗೆ ಉತ್ತರ ಕೊಡುವರು: ಲಕ್ಷ್ಯಪೂರ್ವಕ ಕೇಳಿರಿ. ಅವರು ಕೊಡುವ ಉತ್ತರದಿಂದ ನೀವು ನಿರುತ್ತರರಾಗುವಿರಿ. ಮತ್ತು ಪ್ರಶ್ನೆ ಬಗೆಹರಿಯುವದು. ಈ ಪ್ರಶ್ನೆ ಬಿಡಿಸಿ ಹೇಳುವಾಗ್ಗೆ ಕೆಲವು ಶಂಕಾ ಸಂಶಯಗಳು ಬರುವವು. (೧೦) ಬ್ರಹ್ಮಾಂಡವೇ ಇಲ್ಲವೆಂದು ಅನ್ನಬೇಕೆಂದರೆ-ಅದು ಕಣ್ಣಿಗೆ ಪ್ರತ್ಯಕ್ಷ ಕಾಣುವದು. ಇರಲಿ ಇದು ಕಾಣಿಸುವದೆಂದು ಅನ್ನಬೇಕೆಂದರೆ-ಇದು ನಾಶ ಹೊಂದುವದು. ಆದ್ದರಿಂದ ಶ್ರೋತಾಜನರು ಬ್ರಹ್ಮಾಂಡದ ಈ ಸ್ವರೂಪವನ್ನು ಮೊದಲು ಸರಿಯಾಗಿ ತಿಳಿದುಕೊಳ್ಳಿರಿ. (೧೧) ಆಗ ಶ್ರೋತಾ ಅಂದದ್ದೇನಂದರೆ ತಾವು ಹೇಳುವ ಉತ್ತರವನ್ನು ನಾವು ಲಕ್ಷ್ಯಪೂರ್ವಕ ಕೇಳಿ ತಿಳಿಯಲು ಉತ್ಸುಕರಿರುವೆವು. ಏಕಚಿತ್ತದಿಂದ ಕೇಳುವೆವು ಎಂದು ಅಂದ ಮೇಲೆ ವಕ್ತಾ ಅನ್ನುವನು. ಈ ಪ್ರಶ್ನೆಗೆ ಮತ್ತು ತತ್ಸಂಬಂಧಿ ಪ್ರಸಂಗಕ್ಕೆ ಸರಿಯಾಗಿ ಉತ್ತರ ಕೊಡುವೆನು. (೧೨)

ಆಕಾಶೀ ದೀಪಾಸ ಲಾವಿಲೇ। ದೀಪೇ ಆಕಾಶ ಪರತೇ ಕೇಲೇ।
ಹೇ ತೋ ಘಡೇನಾ ಪಾಹಿಲೇ। ಪಾಹಿಜೆ ಶ್ರೋತೀ ॥೧೩॥

ಆಪ ತೇಜ ಅಥವಾ ಪವನ। ಸಾರೂ ನ ಸಕತೀ ಗಗನ।
ಗಗನ ಪಾಹಾತಾ ಸಘನ। ಚಳೇಲ ಕೈಸೇ ॥೧೪॥

ಅಥವಾ ಕಠೀಣ ಜಾಲೀ ಮೇದಿನೀ। ತರೀ ಗಗನೇ ಕೇಲೀ ಚಾಳಣೀ।
ಪೃಥ್ವೀಚೇ ಸರ್ವಾಂಗ ಭೇದುನೀ। ರಾಹಿಲೇ ಗಗನ ॥೧೫॥

ಯಾಚೀ ಪ್ರಚಿತ ಐಸೀ ಅಸೆ। ಜೇ ಜಡತ್ವಾ ಆಲೇ ತಿತುಕೇ ನಾಸೆ।
ಆಕಾಶ ಜೈಸೇ ತೈಸೇ ಅಸೆ। ಚಳಣಾರ ನಾಹೀ ॥೧೬॥

ವೇಗಳೇಪಣೇ ಪಾಹಾವೇ। ತಯಾಸ ಆಕಾಶ ಮ್ಹಣಾವೇ।
ಅಭಿನ್ನ ಹೋತಾ ಸ್ವಭಾವೇ। ಆಕಾಶ ಬ್ರಹ್ಮ ॥೧೭॥

ತಸ್ಮಾತ್ ಆಕಾಶ ಚಳೇನಾ। ಭೇದ ಗಗನಾಚಾ ಕಳೇನಾ।
ಭಾಸಲೇ ಬ್ರಹ್ಮ ತಯಾಸ ಜಾಣಾ। ಆಕಾಶ ಮ್ಹಣಾವೇ ॥೧೮॥

ನಿರ್ಗುಣ ಬ್ರಹ್ಮಸೇ ಭಾಸಲೇ। ಕಲ್ಪ್ಣಾಜಾತಾ ಅನುಮಾನಲೇ।
ಮ್ಹಣೋನ ಆಕಾಶ ಬೋಲಿಲೇ। ಕಲ್ಪನೆಸಾಠೀ ॥೧೯॥

ಶ್ರೀಸಮರ್ಥರು ಕೊಟ್ಟ ಉತ್ತರದ ಭಾವಾರ್ಥ ಹೀಗಿರುವದು. ನಮ್ಮ ದೃಷ್ಟಿಕೋನ ಅತ್ಯಂತ ಆಕುಂಚಿತ ಸಂಕುಚಿತವಿರುವದು. ಇದರಿಂದ ವಸ್ತು ಹೇಗಿರುವದೋ ಅದರಂತೆ ನಮಗೆ ಕಾಣುವದಿಲ್ಲ. ಇದಕ್ಕೆ ಭ್ರಮ-ಭ್ರಮ ಎಂದು ಅನ್ನುವರು. ನಾವು ವಿಶಾಲರಾಗಿ ನಮ್ಮ ವೃತ್ತಿಯನ್ನು ಅತ್ಯಂತ ವಿಶಾಲ ಮಾಡಿಕೊಂಡರೆ ಆಗ ಭ್ರಮವು ಇಲ್ಲದಾಗಿ ಹೋಗುವ ಉಪಾಯ ಗೊತ್ತಾಗುವದು. ವೃತ್ತಿ ವಿಶಾಲವಾಗುತ್ತ ಹೋದ ಹೋದಂತೆ ಒಮ್ಮೆಲೇಹರಿದು ಬಿಡುವದು. ಆಗಲೇ ಜೀವವು ಬ್ರಹ್ಮಸ್ವರೂಪವಾಗಿ ಹೋಗಿಬಿಡುವದು:– ತಿಳಿಯಿರಿ, ನಾವು ಆಕಾಶದಲ್ಲಿ ದೀಪ ಹಚ್ಚಿದೆವು. ಆದರೆ ಆ ದೀಪದಿಂದ ಆಕಾಶವೇನೂ ಒಂದು ಬಾಜೂಕ್ಕೆ ಸರಿಯಿತು ಅನ್ನುವ ಮಾತು ಅಶಕ್ಯ ಹಾಗೂ ಎಂದೂ ಸಾಧ್ಯವಿಲ್ಲದ್ದೆಂದು ಹೇಳುವೆವು. ಈ ಮಾತನ್ನು ಶ್ರೋತಾಜನ ಲಕ್ಷ್ಯದಲ್ಲಿಟ್ಟುಕೊಳ್ಳಿರಿ. (೧೩) ನೀರು, ಅಗ್ನಿ ವಾಯು ಈ ಮೂರು ಭೂತಗಳ ಪೈಕಿ ಯಾವದೊಂದೂ ಆಕಾಶವನ್ನು ಒಂದು ಬದಿಗೆ ಸರಿಸಲು ಶಕ್ತವಿರುವದಿಲ್ಲ. ಆಕಾಶವು ಭರಗಚ್ಚಾಗಿ ಅಥವಾ ದಟ್ಟ–ಅತಿದಟ್ಟವಾಗಿ ಎಲ್ಲಕಡೆಗೆ ತುಂಬಿಕೊಂಡಿರುವದು. ಮತ್ತು ಇದು ಅಗದೀ ಸ್ಥಿರವಿರುವದು. ಇದರಲ್ಲಿ ಚಲನವಲನವಾಗುವದಿಲ್ಲ. ಆದ್ದರಿಂದ ಇದನ್ನು ಒಂದು ಬದಿಗೆ (ಬಾಜೂಕ್ಕೆ) ಸರಿಸಲಿಕ್ಕೆ ಬರುವದಿಲ್ಲ. [೧೪] ಪೃಥ್ವಿ ಕಠಿಣವಿರುವದು ಇದರಲ್ಲಿ ಸಂಶಯವೇ ಇಲ್ಲ. ಆದರೆ ಆಕಾಶವು ಅತ್ಯಂತ ಸೂಕ್ಷ್ಮ, ಮೃದು ಮತ್ತು ಸಣ್ಣಗೆ [ಜಿನಗು] ಇದ್ದದ್ದರಿಂದ ಪೃಥ್ವಿಯ ಅಣುಪರಮಾಣುಗಳಲ್ಲಿ ಇದು ತುಂಬಿರುವದು. ಆಕಾಶವು ಪೃಥ್ವಿಯನ್ನು ಜರಡಿ ಹಿಡಿದು ಸಾಣಿಸಿಬಿಟ್ಟಿದೆ ಎಂದರೆ ಬೇರೆ ಭಾವಿಸಬೇಕಾಗಿಲ್ಲ. [೧೫] ಒಟ್ಟಿನಲ್ಲಿ ಪೃಥ್ವಿ, ಆಪ್, ತೇಜ, ಮತ್ತು ವಾಯು ಈ ನಾಲ್ಕು ಭೂತಗಳು ಆಕಾಶವನ್ನು ಭೇದಿಸಲಿಕ್ಕೆ ಶಕ್ಯವಿಲ್ಲ. ಇದರ ಪ್ರತ್ಯಕ್ಷ ಅನುಭವ ಹೀಗಿರುವದು. ಇದನ್ನು ಕೇಳಿರಿ. ಯಾವ ಯಾವದು ಸ್ಥೂಲ ಮತ್ತು ಜಡವಿರುವದೋ ಅದು ನಾಶ ಹೊಂದುವದು. ಯಾವುದು ಸೂಕ್ಷ್ಮವಿರುವದೋ ಅದು ಅವಿನಾಶ [ನಾಶರಹಿತ]ವಾದದ್ದಿರುವದು. ಆಕಾಶ ಅಗದೀ ಸೂಕ್ಷ್ಮವಿರುವದು. ಆದ್ದರಿಂದಲೇ ಉಳಿದ ನಾಲ್ಕೂ ಭೂತಗಳು ಬರಲಿ ಮತ್ತು ಹೋಗಲಿ ಏನೇ ಆದರೂ ಸಹ ಆಕಾಶ ಹೇಗಿರುತ್ತದೆಯೋ ಹಾಗೆಯೇ ಇರುವದು. ಇದು ಎಷ್ಟೂ ಚಲಿಸುವದಿಲ್ಲ. [೧೬] ಇನ್ನು ಮೇಲೆ ಆಕಾಶ ಮತ್ತು ಬ್ರಹ್ಮ ಇವುಗಳಲ್ಲಿಯ ವ್ಯತ್ಯಾಸವನ್ನು ಹೇಳುವರು:– ಆಕಾಶವನ್ನು ನಾವು ಬೇರೆ ಇದ್ದು ನೋಡಲಿಕ್ಕೆ ಬರುವದು. ಆದ್ದರಿಂದ ಇದಕ್ಕೆ ಮಹಾಭೂತ ಅನ್ನುವರು. ಇದರೊಂದಿಗೆ ತದಾಕಾರ ಅಥವಾಅಭಿನ್ನರಾಗಿ ನೋಡಿದ್ದೇ ಆದರೆ ಆಕಾಶಕ್ಕೆ ಬ್ರಹ್ಮ ಎಂದು ಅನ್ನಲಿಕ್ಕೆ ಯಾವ ಆತಂಕವೂ ಇಲ್ಲ. ಸರ್ವವ್ಯಾಪಿತನ, ಸೂಕ್ಷ್ಮತನ, ನಿಶ್ಚಿಂತತನ, ಘನದಾಟತನ ನಿಶ್ಚಲತನ ಈಎಲ್ಲ ಅಂಶಗಳಲ್ಲಿ[ಬಾಬತಿನಲ್ಲಿ]ಆಕಾಶವುಅಗದೀ ಬ್ರಹ್ಮದಂತೆಯೇ ಇರುವದು. ಎಲ್ಲಿಯವರೆಗೆ ನಾವುಇದನ್ನು ಬೇರೆತನದಿಂದ ನೋಡುವೆವೋ ಅಲ್ಲಿಯವರೆಗೆ ಇದು ದೃಶ್ಯದಲ್ಲಿ ಗಣಿಸಲ್ಪಡುವದು ಅಲ್ಲಿ ದ್ವೈತವು ಕಾಯಂ ಆಗಿ ಇರುವದು. ಅದನ್ನು ಬೇರೆತನದಿಂದ ನೋಡುವವನಾದ ನಾನು ದೇಹಬುದ್ಧಿಯ ಸಂಕುಚಿತತನವನ್ನು ಬಿಡುವದಿಲ್ಲ. ಆದರೆ ಆಕಾಶದೊಂದಿಗೆ ಅಭಿನ್ನನಾಗುವ ದೃಷ್ಟಾ ಅಥವಾ ನಾನು ಸ್ವತಃ [ಖುದ್ದ] ಆಕಾಶದಷ್ಟು ವಿಶಾಲ ಮತ್ತು ಸೂಕ್ಷ್ಮನಾಗುತ್ತಾನೆ. ಅವನು ಶಿವನೇ ಆಗುವನು. ಶಿವಸ್ವರೂಪ ಮತ್ತು ಬ್ರಹ್ಮಸ್ವರೂಪ ಇದರಲ್ಲಿ ವಿಶೇಷ ವ್ಯತ್ಯಾಸ ಇರುವದಿಲ್ಲ. (೧೭) ಹೀಗೆ ಹೇಳುವ ಉದ್ದೇಶವೇನಂದರೆ, ಆಕಾಶವು ಬ್ರಹ್ಮನಂತೆ ನಿಶ್ಚಲ ಮತ್ತು ಅವಿನಾಶವಿರುವದು. ಆಕಾಶದ ಖರೇ ಸ್ವರೂಪವು ನಮಗೆ ತಿಳಿಯುವದಿಲ್ಲ. ಪರಬ್ರಹ್ಮವನ್ನೇ ಬೇರೆತನದಿಂದ ನೋಡಿದೆವೆಂದರೆ ಆಗ ಅದಕ್ಕೆ ಆಕಾಶ ಅನ್ನುವರು. ದೃಶ್ಯದ ಬಾಜಾರದಲ್ಲಿ ಬ್ರಹ್ಮಸ್ವರೂಪದ ಕಲ್ಪನೆ ತಂದುಕೊಡುವಂಥದು ಆಕಾಶದ ಹೊರತು ಇನ್ನೊಂದಕ್ಕೆ ಸಾಧ್ಯವಿಲ್ಲ. [೧೮] ಆಕಾಶದ ಕಡೆಗೆ ನೋಡಿದ್ದಾದರೆ ಅದು ನಿರ್ಗುಣ ಬ್ರಹ್ಮವೇ ಇರುವದೋ ಏನೋ ಅನ್ನುವ ವಿಚಾರ ಬರುವದು. ಆದರೆ ಆಕಾಶವು ನಿರ್ಗುಣ ಬ್ರಹ್ಮವಲ್ಲ. ಯಾಕಂದರೆ ಬುದ್ಧಿಯಿಂದ ನಾವು ಆಕಾಶದ ಬಗ್ಗೆ ಕಲ್ಪನೆಯನ್ನು ಮಾಡಲಿಕ್ಕೆ ಬರುವದು. ಇದರ ಕಲ್ಪನೆ ಮಾಡಲಿಕ್ಕೆ ಬರುವದೆಂದೇ ಅದಕ್ಕೆ ಆಕಾಶ ಎಂದು ಅನ್ನುವರು. ಬ್ರಹ್ಮ ನಿರ್ವಿಕಲ್ಪ ಇರುವನು. ಅತೀಂದ್ರಿಯ ಇರುವನು. ಆದರೆ ಆಕಾಶವು ಅದರಂತೆ ಇಲ್ಲ. [೧೯]

ಕಲ್ಪನೇಸಿ ಭಾಸೆ ಭಾಸ। ತಿತುಕೇ ಜಾಣಾವೇ ಆಕಾಶ।
ಪರಬ್ರಹ್ಮ ನಿರಾಭಾಸ। ನಿರ್ವಿಕಲ್ಪ ॥೨೦॥

ಪಂಚಭೂತಾಮಧೇ ವಾಸ। ಮ್ಹಣೌನ ಬೋಲಿಜೆ ಆಕಾಶ।
ಭೂತಾಂತರೀ ಜೋ ಬ್ರಹ್ಮಾಂಶ। ತೇ ಚಿ ಗಗನ ॥೨೧॥

ಪ್ರತ್ಯಕ್ಷ ಹೋತೇ ಜಾತೇ। ಅಚಳ ಕೈಸೆ ಮ್ಹಣಾವೇ ತ್ಯಾತೇ।
ಮ್ಹಣೋನಿಯಾ ಗಗನಾತೇ। ಭೇದಿಲೇ ನಾಹೀ ॥೨೨॥

ಪೃಥ್ವೀ ವಿರೋನ ಉರೆ ಜೀವನ। ಜೀವನ ನಸ್ಸಾ ಉರೆ ಅಗ್ನ।
ಅಗ್ನ ವಿಝುತಾ ಉರೆ ಪವನ। ತೋ ಹಿ ನಾಸೆ ॥೨೩॥

ಮಿಥ್ಯಾ ಆಲೇ ಆಣೀ ಗೇಲೆ। ತೇಣೇ ಖರೇ ತೇ ಭಂಗಲೇ।
ಐಸೇ ಹೇ ಪ್ರಚೀತೀಸ ಆಲೇ। ಕೋಣೇಪರೀ ॥೨೪॥

ಭ್ರಮೇ ಪ್ರತ್ಯಕ್ಷ ದಿಸತೇ। ವಿಚಾರ ಪಾಹಾತಾ ಕಾಯ ತೇಥೇ।
ಭ್ರಮಮೂಳ ಯಾ ಜಗಾತೇ। ಖರೇ ಕೈಸೇ ಮ್ಹಣಾವೇ ॥೨೫॥

ಎಲ್ಲಿಯವರೆಗೆ ನಾವು ನಾನು ಅನ್ನುವ ಅಹಂದಿಂದ ಬೇರೆತನದಿಂದ (ಪ್ರತ್ಯೇಕನಾಗಿ) ವಸ್ತುವನ್ನು ನೋಡುವೆವೋ ಅಲ್ಲಿಯವರೆಗೆ ಕಲ್ಪನೆಯು ನಡೆಯುವದು. ಮತ್ತು ವಸ್ತುವು ಭಿನ್ನತನದಿಂದ ಕಾಣುವದು. ಎಲ್ಲಿಯ ವರೆಗೆ ಕಲ್ಪನೆಯು ನಡೆಯುವದೋ, ಮತ್ತು ವಸ್ತುವು ಬೇರೆತನದಿಂದ (ಭಿನ್ನತ್ವದಿಂದ)ಭಾಸವಾಗುವದೋ, ಅಲ್ಲಿಯ ವರೆಗೆ ನಾವು ಏನನ್ನು ನೋಡುವೆವೋ ಅದೆಲ್ಲವೂ ಆಕಾಶವೆಂದು ತಿಳಿಯಬೇಕು. ಯಾಕಂದರೆ ಪರಬ್ರಹ್ಮದಲ್ಲಿ ಬೇರೆ ತನದಿಂದ ಭಿನ್ನತ್ವದಿಂದ ನೋಡಲಿಕ್ಕೆ ಬಾರದು. ಮತ್ತು ಇದರಲ್ಲಿ ಕಲ್ಪನೆಗೂ ಅವಕಾಶವಿಲ್ಲ. ಬ್ರಹ್ಮ ನಿರಾಭಾಸ ವ ನಿರ್ವಿಕಲ್ಪವಿರುವದು. [೨೦] ವಾಸ್ತವಿಕವಾಗಿ ಆಕಾಶ ಅಂದರೆ ಬ್ರಹ್ಮವೇ ನಿಜ.ಆದರೆ ಆಕಾಶವು ಪಂಚ ಮಹಾಭೂತ ಗಳಲ್ಲಿ ಒಂದಾಗಿ ಗಣಿಸಲ್ಪಡುತ್ತದೆ. ಅಂತೆಯೇ ಇದಕ್ಕೆ ಆಕಾಶವೆಂದು ಅನ್ನುವರು. ಭೂತಗಳ ಅಂತರ್ಯಾಮದಲ್ಲಿ ಯಾವ ಬ್ರಹ್ಮದ ಅಂಶವಿರುವದೋ ಅದೇ ನಿಜವಾದ ಆಕಾಶವಾಗಿದೆ. ವಸ್ತುವಿನಬಹಿರಂಗದಲ್ಲಿ ಎಷ್ಟೇ ಫರಕ ಆದರೂ ಸಹ ಅದರ ಅಂತರಂಗದಲ್ಲಿ ಯಾವುದು ನಿಶ್ಚಲ ಇರುವದೋ ಅದು ವಸ್ತುವಿನಲ್ಲಿಯ ಬ್ರಹ್ಮಾಂಶವೆಂದು ತಿಳಿಯಿರಿ. [೨೧] ಉಳಿದ ನಾಲ್ಕು ಭೂತಗಳು ಆಕಾಶದೊಳಗಿಂದ ಉತ್ಪನ್ನವಾಗುವವು. ಮತ್ತು ಅದರೊಳಗೇ ಪುನಃ ವಿಲೀನವಾಗುವವು. ಆದ್ದರಿಂದ ಈ ನಾಲ್ಕು ಭೂತಗಳಿಗೆ ನಿಶ್ಚಲ ಎಂದು ಅನ್ನಲಿಕ್ಕೆ ಬರಲಾರದು. ಭೂತಗಳು ಆಕಾಶ ದಲ್ಲಿ ಬಂದವು. ಮತ್ತು ಹೋದವು. ಆದರೂ ಆಕಾಶವು ಹೇಗಿತ್ತೋ ಹಾಗೆಯೇ ಇರುವದು. ಇದರಲ್ಲಿ ಭೇದ ವಾಗುವದಿಲ್ಲ. [೨೨] ಪೃಥ್ವಿಯು ಕರಗಿ ನೀರು ಉಳಿಯುವದು. ನೀರು ಆಟ್ಟಿಸಿ ಅಗ್ನಿ ಉಳಿಯುವದು. ಅಗ್ನಿ ಆರಿ ವಾಯು ಉಳಿಯುವದು. ಕೊನೆಗೆ ವಾಯು ಸಹ ಇಲ್ಲದಾಗಿ ಹೋಗುವದು. [೨೩] ಯಾವುದು ಕಾಣುವದೋ ಮತ್ತು ನಾಶವಾಗುವದೋ ಅದೆಲ್ಲವೂ ಖೊಟ್ಟಿ ಇರುವದು. ಹೀಗೆ ಯಾವುದು ಖೊಟ್ಟಿ ಅದೆಯೋ ಅದು ಬಂದಿತು ಮತ್ತು ಹೋಯಿತು. ಇದರಿಂದ ಯಾವುದು ನಿಜವಿದೆಯೋ ಅದು ಭಂಗಗೊಂಡಂತೆ ಮಾತ್ರ ಕಂಡಿತು. ಇಂಥ ಯಾವ ಅನುಭವ ಬರುವದೋ ಇದಕ್ಕೆ ಏನು ಕಾರಣವಿರುವದು.?ಇದನ್ನು ತಿಳಿಯುವದು (ನೋಡುವದು) ಅವಶ್ಯ ವಿರುವದು. ಯಾವ ವಸ್ತು ನಿಜವಿರುವದೋ ಅದು ನಿಶ್ಚಲವಿರುವದು. ಅಭಂಗವಿರುವದು. ಇದರ ಮೇಲೆ ಏನಾ ದರೂ ಕಂಡರೆ ಮತ್ತು ಇಲ್ಲದಾಗಿ ಹೋದರೆ ವಸ್ತುವಿಗೆ ಇದರಿಂದ ಯಾವ ಆಘಾತವೂ [ಧಕ್ಕೆ] ಆಗಲಾರದು. ಆದರೆ ಸಾಮಾನ್ಯ ದೃಷ್ಟಿಯಿಂದ ನೋಡುವವರಿಗೆ ಅನಿಸುವದೇನೆಂದರೆ ವಸ್ತುವಿಗೆ ಇದರಿಂದ ಆಘಾತವಾಯಿತು. ಎಂದು ಅನಿಸುವದು. ಇದಕ್ಕೆ ಕಾರಣವೇನಂದರೆ ವಸ್ತುವಿನ ಸ್ವರೂಪದ ಬಗ್ಗೆ ಇರುವ ಅಜ್ಞಾನವೇ ಆಗಿದೆ. ಈ ಅಜ್ಞಾನದಿಂದ ಭ್ರಮ ನಿರ್ಮಾಣವಾಗುವದು. [೨೪] ಪರಬ್ರಹ್ಮದ ಸ್ವರೂಪದ ಬಗ್ಗೆ ಅಜ್ಞಾನವಿದ್ದದ್ದರಿಂದ ನಮಗೆ ಭ್ರಮವಾಗುವದು. ಯಾವ ಯಾವುದು ಬರುವದೋ ಮತ್ತು ಹೋಗುವದೋ ಅದೆಲ್ಲವೂ ಮಿಥ್ಯಾ ಇರುವದು. ಅಂದರೆ ಅದು ಕಂಡರೂ ಸಹ ಖರೆ ಅಲ್ಲ. ಹೀಗೆ ತಾತ್ಪೂರ್ತಿಕವಾಗಿ ಕಾಣಿಸುವಂಥದು ಖರೇ ಅಲ್ಲದಿದ್ದರೂ ಸಹಿತ ಖರೆ ಎನಿಸುವದು. ಇದಕ್ಕೆ ಭ್ರಮೆ ಅನ್ನುವರು. ಭ್ರಮ ಇದು ದೇಹಬುದ್ಧಿಯ ಸಂಕುಚಿತತನದ ಪರಿಣಾಮವಿರು ವದು. ನಾವು ದೇಹದ ಹೊರಗೆ ಬಂದು ಎಷ್ಟು ವಿಶಾಲರಾಗುವೆವೋ ಅಷ್ಟು ಭ್ರಮವು ಕರಗುತ್ತ ಹೋಗುವದು. ಕೊನೆಗೆ ಅದು ನಾಶವಾಗುವದು ! ಭ್ರಮವಾದ ಮನುಷ್ಯನಿಗೆ ಏನಾದರೂ ಒಂದು ಪ್ರತ್ಯಕ್ಷ ಕಾಣುವದು. ಆದರೆ ವಿಚಾರದಿಂದ ಶೋಧ ಮಾಡಿ ನೋಡಿದರೆ ಅಲ್ಲಿ ಏನೂ ಕಾಣುವದಿಲ್ಲ. ಈ ದೃಶ್ಯ ಜಗತ್ತಿನ ಸ್ಥಿತಿಯೂ ಹೀಗೆಯೇ ಇರುವದು. ಅದು ಕಾಣುವದು. ಆದರೆ ನಾಶವಾಗುವದು. ವಿಚಾರದಿಂದ ಇದರ ಶೋಧ ಮಾಡಿದ್ದಾದರೆ ಏನೂ ಶಿಲುಕು (ತಥ್ಯ) ಉಳಿಯುವದಿಲ್ಲ. ಅದು ಭ್ರಮ ಮೂಲಕವಿರುವದು. ಅದ್ದರಿಂದ ಜಗತ್ತನ್ನು ಸತ್ಯವೆಂದು ಅನ್ನ ಲಿಕ್ಕೆ ಬರುವದಿಲ್ಲ. [೨೫]

ಭ್ರಮ ಶೋಧಿತಾ ಕಾಹೀ ಚ ನಾಹೀ । ತೇಥೇ ಭೇದಿಲೇ ಕೋಣೇ ಕಾಈ ।
ಭ್ರಮೇ ಭೇದಿಲೇ ಮ್ಹಣತಾ ಠಾಈ । ಭ್ರಮ ಚಿ ಮಿಥ್ಯಾ ॥೨೬॥

ಭ್ರಮಾಚೇ ರೂಪ ಮಿಥ್ಯಾ ಜಾಲೇ । ಮಗ ಸುಖೇ ಮ್ಹಣಾವೇ ಭೇದಿಲೇ ।
ಮುಳೀ ಲಟಿಕೇ ತ್ಯಾನೇ ಕೆಲೇ । ತೇ ಹಿ ತೈಸೇ ॥೨೭॥

ಲಟಿಕ್ಯಾನೇ ಉದಂಡ ಕೇಲೇ । ತರೀ ಆಮುಚೇ ಕಾಯೆ ಗೇಲೆ ।
ಕೇಲೇ ಮ್ಹಣತಾ ಚ ನಾಥಿಲೇ । ಶಾಹಾಣೆ ಜಾಣತೀ ॥೨೮॥

ಸಾಗರಾ ಮಧೇ ಖಸಖಸ । ತೈಸೇ ಪರಬ್ರಹ್ಮೀ ದೃಶ್ಯ ।
ಮತೀಸಾರಿಖಾ ಮತಿಪ್ರಕಾಶ । ಅಂತರೀ ವಾಢೆ ॥೨೯॥

ಮತೀ ಕರಿತಾ ವಿಶಾಳ । ಕವಳೋ ಲಾಗೆ ಅಂತರಾಳ ।
ಪಾಹಾತಾ ಭಾಸೆ ಬ್ರಹ್ಮಗೋಳ । ಕವೀಠ ಜೈಸೇ ॥೩೦॥

ವೃತ್ತಿ ತ್ಯಾಹೂನ ವಿಶಾಳ । ಕರಿತಾ ಬ್ರಹ್ಮಾಂಡ ಬದ್ರಿ ಫಳ ।
ಬ್ರಹ್ಮಾಕಾರ ಹೋತಾ ಕೇವಳ । ಕಾಹೀ ಚ ನಾಹೀ ॥೩೧॥

ಆಪಣ ವಿವೇಕೇ ವಿಶಾಳಲಾ । ಮರ್ಯಾದೇವೇಗಳಾ ಜಾಲಾ ।
ಮಗ ಬ್ರಹ್ಮಗೋಳ ದೇಖಿಲಾ । ವಟಬೀಜ ನ್ಯಾಯೇ ॥೩೨॥

ಹೋತಾ ತ್ಯಾಹೂನ ವಿಸ್ತೀರ್ಣ । ವಟಬೀಜ ಕೋಟಿಪ್ರಮಾಣ ।
ಆಪಣ ಹೋತಾ ಪರಿಪೂರ್ಣ । ಕಾಹೀ ಚ ನಾಹೀ ॥೩೩॥

ಭ್ರಮದಿಂದ ಯಾವುದು ಕಾಣುವದೋ ಅದರ ಶೋಧ ಮಾಡಿ ನೋಡಿದರೆ ಅಲ್ಲಿ ಏನೂ ಇರುವದಿಲ್ಲ ಅನ್ನುವಅನುಭವ ಬಂದೀತು. ಯಾವುದು ಮೂಲದಲ್ಲಿ ಇಲ್ಲವೇ ಇಲ್ಲವೋ ಅದು ಯಾವುದರದೋ ಭೇದ ಮಾಡಿತು ಎಂದು ಅನ್ನುವದೂ ಶಕ್ಯವಿಲ್ಲ. ಇಂಥವನು ಅಂಥವನ ಭೇದ ಮಾಡಿದನು ಎಂದು ಭ್ರಮದಿಂದ ಅಂದದ್ದಾದರೆ ಭ್ರಮವೊ ಖೊಟ್ಟಿಯಾಗಿರುವದರಿಂದ ಅದೂ ಖೊಟ್ಟಿಯೇ ಸರಿ. ಯಾವುದು ಘಟಿಸಿಯೇ ಇಲ್ಲವೋ ಅದು ಘಟಿಸಿತು ಎಂದು ಯಾರಾದರೂ ಅಂದರೆ ಅವನು ಅನ್ನುವ ಆ ಘಟನೆ ಘಟಿಸಿಯೇ ಇರುವದಿಲ್ಲ. ಅದರ ಸಂಗಡ ಅವನ ತಿಳುವಳಿಕೆ ಆದದ್ದೂ ಸಹ ನಿಜವಿರುವದಿಲ್ಲ. ಒಟ್ಟಿನಲ್ಲಿ ಭ್ರಮದಿಂದ ಆದದ್ದು, ಅನಿಸಿದ್ದು ಎಲ್ಲವೂ ಸುಳ್ಳೇ ಇರುವದು. (೨೬) ಭ್ರಮದಿಂದ ಯಾವುದು ಕಾಣುವದೋ ಅದು ಖರೇ ಅಲ್ಲವೆಂದು ಒಮ್ಮೆ ನಿಶ್ಚಿತವಾಗಿ ಗೊತ್ತಾದ [ತಿಳಿದ]ಮೇಲೆ ಇಂಥವನು ಅಂಥವನ ಭೇದ ಮಾಡಿದನೆಂದು [ಡಣಾಡಂಗುರವಾಗಿ] ಸ್ಪಷ್ಟವಾಗಿ ಹೇಳಿಕೊಳ್ಳಲಿ. ಯಾವುದು ಮೂಲದಲ್ಲಿಯೇ ಖರೇ ಅಲ್ಲವಾದದ್ದನ್ನು ಅವನು ಏನೋ ಒಂದು ಮಾಡಿದನು ಎಂದು ಅಂದರೆ ಆ ಮಾಡಿದ್ದೂ ಸಹ ಖರೇ ಇರುವದಿಲ್ಲ. [೨೭] ಯಾವುದು ಇಲ್ಲವೇ ಇಲ್ಲವೋ ಯಾವುದಕ್ಕೆ ಅಸ್ತಿತ್ವವಿಲ್ಲವೋ ಅದು ಬಹಳಷ್ಟು ಮಾಡಿತು ಎಂದು ಅಂದದ್ದಾದರೆ ಯಾರದೇನೂ ಹೋಗುವದಿಲ್ಲ. ಮಾಡಿದನು ಎಂದು ಅನ್ನುವಾಗಲೇ ಅದು ಘಟಿಸಿಯೇ ಇಲ್ಲವೆಂಬ ಈ ವಸ್ತುಸ್ಥಿತಿಯನ್ನು ಬುದ್ಧಿವಂತರಾದವರು ಮಾತ್ರ ತಿಳಿಯುವರು. [೨೮] ನಮ್ಮ ಜ್ಞಾನದ ವ್ಯಾಪ್ತಿಯು ನಮ್ಮ ವೃತ್ತಿಯ ಪರಿಣಾಮದ ಮೇಲೆ ಅವಲಂಬಿಸಿರುವದು.ನಮ್ಮ ವೃತ್ತಿ[ಸ್ಥಿತಿ-ಅವಸ್ಥೆ]ಎಷ್ಟು ವಿಶಾಲವೋ ಅಷ್ಟು ನಮ್ಮ ಮತಿ ವಿಶಾಲವಿರುವದು.ಮತ್ತು ನಮ್ಮ ಮತಿ ಎಷ್ಟು ವಿಶಾಲವೋ ಅಷ್ಟು ನಮ್ಮ ಜ್ಞಾನ ಹಾಗೂಅನುಭವ ಎರಡೂ ವಿಶಾಲವಾಗುವವು.ಆದ್ದರಿಂದ ನಮ್ಮ ವೃತ್ತಿಯನ್ನು ಹೆಚ್ಚೆಚ್ಚುವಿಶಾಲ ಮಾಡಿಕೊಳ್ಳಬೇಕು ಮತ್ತುಕೊನೆಗೆ ಬ್ರಹ್ಮಕ್ಕೆ ಗವಸಣಿಕೆ[ಆಚ್ಛಾದನ,ಆವರಣ]ಹಾಕಿರಿ ಎಂದು ಶ್ರೀಸಮರ್ಥರು ಹೇಳುವರು:–"ದರ್ಯಾಮೆ ಖಸ ಖಸ"ಅನ್ನುವ ಒಂದು ಗಾದೆ ಇರುವದು. ವಿಶಾಲವಾದ ಸಮುದ್ರದಲ್ಲಿ ಖಸ ಖಸಿಯಕಾಳಿನ ಪತ್ತೆಹತ್ತಲಾರದು. ಇದರಂತೆ ಪರಬ್ರಹ್ಮವು ಎಷ್ಟೊಂದು ಅನಂತ ವ ಅಪಾರವಾಗಿರುವದೆಂದರೆಈದೃಶ್ಯವಿಶ್ವವೆಲ್ಲವೂ ಅದರ ಮುಂದೆ ಹೇಳಲಿಕ್ಕೆ ಬರದಷ್ಟು ಕಲ್ಪನೆಗೆ ನಿಲುಕದಷ್ಟು ಅಲ್ಪವಿರುವದು, ಮನುಷ್ಯನ ಬುದ್ಧಿ ಎಷ್ಟಿರುವದೋ ಆ ಪ್ರಮಾಣದಲ್ಲಿ ಅದರೊಳಗೆ ಜ್ಞಾನದ ಬೆಳಕು ಕಾಣುವದು. ಆದರೆ ಬುದ್ಧಿಯನ್ನು ವಿಶಾಲಗೊಳಿಸಲು ಬರುವದು. [೨೯] ಸದ್ಯದ ಅವಸ್ಥೆಯಲ್ಲಿ ನಮಗೆ ಈ ವಿಶ್ವವು ಎಷ್ಟೊಂದು ದೊಡ್ಡದಾಗಿ ಕಾಣುವದು. ಆದರೆ ಬುದ್ಧಿಯನ್ನು ವಿಚಾರದಿಂದ ವಿಶಾಲ ಮಾಡಿದರೆ ಇದು ಆಕಾಶಕ್ಕೆ ತೆಕ್ಕೆ ಹಾಕುವದು. ಆಲಿಂಗನ ಕೊಡುವದು. ಆಮೇಲೆ ಈ ವಿಶ್ವ ಒಂದು ಬೆಳವಲ ಕಾಯಿಯಷ್ಟು ಸಣ್ಣದಾಗಿ ಕಾಣಿಸುವದು. [೩೦] ನಾವು ನಮ್ಮ ವೃತ್ತಿಯನ್ನು ಇನ್ನೂ ಹೆಚ್ಚು ಅಂದರೆ ಮೊದಲಿಗಿಂತ ವಿಶಾಲ ಮಾಡಿಕೊಂಡಿದ್ದಾದರೆ ಬೆಳವಲಕಾಯಿಯಷ್ಟು ಕಾಣಿಸಿದ ವಿಶ್ವವು ಬಾರೀಕಾಯಿಯಷ್ಟು ಕಾಣಹತ್ತುವದು. ಕೊನೆಗೆ ನಮ್ಮ ವೃತ್ತಿ ಮತ್ತೂ ವಿಶಾಲಗೊಂಡು ಬ್ರಹ್ಮದೊಂದಿಗೆ ತದಾಕಾರವಾಯಿತೆಂದರೆ ಆಗ ವಿಶ್ವವು ನೋಡಲಿಕ್ಕೆ ಉಳಿದಿರುವದೇ ಇಲ್ಲ. [೩೧] ದೇಹಬುದ್ಧಿ ಇಲ್ಲದಂತೆ ಮಾಡಿ ನಾವು ವಿವೇಕದಿಂದ ವಿಶಾಲವಾದರೆ ನಮ್ಮ ಸ್ಥಳ ಕಾಲದ ನಿರ್ಬಂಧ, ನಿಯಮಗಳು ಕಳಚಿ ಬೀಳುವದು. ಆಗ ಆ ಅಮರ್ಯಾದವಾಗಿರುವ ವಿಶಾಲ ಅವಸ್ಥೆಯಲ್ಲಿ ಈ ವಿಶ್ವವು ಒಂದು ಆಲದ ಬೀಜದಷ್ಟು ಸಣ್ಣದಾಗಿ ಕಾಣುವದು. [೩೨] ನಾವು ಇನ್ನೂ ಹೆಚ್ಚು ವಿಶಾಲರಾದರೆ ಈ ವಿಶ್ವವು ಆಲದಬೀಜ [ವಟವೃಕ್ಷದ ಬೀಜ]ಕ್ಕಿಂತಲೂ ಅತಿಶಯ ಸಣ್ಣದಾಗಿ ಕಂಡುಬರುವದು. ನಾವು ಕೇವಲ ಬ್ರಹ್ಮರೂಪರೇ ಆಗಿ ಪರಿಪೂರ್ಣರಾಗಿ ಬಿಟ್ಟರೆ ಆಗ ವಿಶ್ವವು ನೋಡಲಿಕ್ಕೆ ಎಷ್ಟೂ ಶಿಲುಕು ಉಳಿದಿರುವದೇ ಇಲ್ಲ. [ಇದು ಅತ್ಯಂತ ನಿಜವಾದ ಹಾಗೂ ಸ್ವತಃ ಶ್ರೀ ಸಮರ್ಥರ ಅನುಭವದ ಮಾತಾಗಿರುವದು. ಇದರಲ್ಲಿ ಸಂಶಯವಿಲ್ಲ]. ಕಾರಣ ಯಾರೂ ಸಂಶಯಪಡಬಾರದು. [೩೩]

ಆಪಣ ಭ್ರಮೆ ಲಾಹಾನಾಳಲಾ । ಕೇವಳ ದೇಹಧಾರೀ ಜಾಲಾ ।
ತರೀ ಮಗ ಬ್ರಹ್ಮಾಂಡ ತ್ಯಾಲಾ । ಕಮಳೇಲ ಕೈಸೇ ॥೩೪॥

ವೃತ್ತಿ ಐಸೀ ವಾಢವಾವೀ । ಪಸರೂನ ನಾಹೀ ಚ ಕರಾವೀ ।
ಪೂರ್ಣ ಬ್ರಹ್ಮಾಸ ಪುರವಾವೀ । ಚಹೂಕಡೆ ॥೩೫॥

ಜವ ಯೇಕ ಸುವರ್ಣ ಆಣಿತಾ । ತೇಣೇ ಬ್ರಹ್ಮಾಂಡ ಮಢವಿತಾ ।
ಕೈಸೇ ಹೋಈಲ ತೇ ತತ್ವತಾ । ಬರೇ ಪಾಹಾ ॥೩೬॥

ವಸ್ತು ವೃತ್ತೀಸ ಕವಳೆ । ತೇಣೇ ವೃತ್ತಿ ಘಾಟೋನ ವಿತುಳೆ ।
ನಿರ್ಗುಣ ಆತ್ಮಾ ಚ ನಿವಳೆ । ಜೈಸಾ ತೈಸಾ ॥೩೭॥

ಯೆಥೇ ಫಿಟಲೀ ಆಶಂಕಾ । ಶ್ರೋತೆ ಹೋ ಸಂದೇಹ ಧರೂ ನಕಾ ।
ಅನುಮಾನ ಅಸೇಲ ತರೀ ವಿವೇಕಾ । ಅವಲೋಕಾವೇ ॥೩೮॥

ವಿವೇಕೇ ತುಟೆ ಅನುಮಾನ । ವಿವೇಕೇ ಹೋಯೆ ಸಮಾಧಾನ।
ವಿವೇಕೇ ಆತ್ಮನಿವೇದನ। ಮೋಕ್ಷ ಲಾಭೆ ॥೩೯॥

ಕೇಲೀ ಮೋಕ್ಷಾಚೀ ಉಪೇಕ್ಷಾ । ವಿವೇಕೇ ಸಾರಿಲೇ ಪೂರ್ವಪಕ್ಷಾ ।
ಸಿದ್ಧಾಂತ ಆತ್ಮಾ ಪ್ರತ್ಯಕ್ಷಾ । ಪ್ರಮಾಣ ನಲಗೆ ॥೪೦॥

ಹೇ ಪ್ರಚಿತೀಚೀ ಉತ್ತರೇ । ಕಳತೀ ಸಾರಾಸಾರ ವಿಚಾರೇ ।
ಮನನಧ್ಯಾಸೇ ಸಾಕ್ಷಾತ್ಕಾರೇ । ಪಾವನ ಹೋಈಜೆ ॥೪೧॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
''ಸಂದೇಹ ವಾರಣ'' ನಾಮ ಸಮಾಸ ನವಮ ॥

● ●

ಈಗ ನಾವು ದೇಹಬುದ್ಧಿಯಿಂದ ಅಗದೀ ಆಕುಂಚಿತರಾಗಿರುವೆವು. ತಿಳಿಯಿರಿ. ಒಂದು ಜೀವವು ಭ್ರಮದಿಂದಾಗಿ ಸಣ್ಣದಾಗುತ್ತ ಆಗುತ್ತ ಹೋಯಿತು. ಕೊನೆಗೆ ಅದು ಕೇವಲ ದೇಹದಷ್ಟಾಯಿತು. ಆಗ ಅದು ನಾನು ದೇಹವೇ ಇರುವೆನು ಎಂದು ತಿಳಿಯಹತ್ತಿತು. ಈ ಪ್ರಕಾರ ಆಕುಂಚಿತ ವೃತ್ತಿಯು ಮನುಷ್ಯನ ಬುದ್ಧಿಗೆ ವಿಶ್ವಕ್ಕೆ ಗವಸಣಿಕೆ ಆವರಣ ಹಾಕುವದಕ್ಕಾಗಲೀ ಅದಕ್ಕೆ ತೆಕ್ಕೆ ಬೀಳುವದಾಗಲೀ ಶಕ್ಯವಿಲ್ಲ. (೩೪) ನಾವು ನಮ್ಮ ವೃತ್ತಿಯನ್ನು ವಿಶಾಲವಾಗಿ ಬೆಳೆಸಬೇಕು. ಅದು ಎಷ್ಟು ವಿಶಾಲವಾಗಿ ಹರಡಬೇಕೆಂದರೆ ಕೊನೆಕೊನೆಗೆ ಅದು (ಪಿಸಿದು) ಹರಿದು ಹೋಗಬೇಕು. ಅರ್ಥಾತ್ ವಿಶಾಲವಾಗಿ ಕೊನೆಗೆ ಇಲ್ಲದಂತೆಯೇ ಆಗಿ ಹೋಗಬೇಕು. ಅರ್ಥಾತ್ ಪೂರ್ಣ ಬ್ರಹ್ಮಕ್ಕೆ ನಾಲ್ಕೂ ಕಡೆಯಿಂದ ಸಾಕಾಗುವಷ್ಟು ಬುದ್ಧಿಯನ್ನು ಪಸರಿಸಬೇಕು. ವಿಶಾಲ ಮಾಡಬೇಕು. (೩೫) ತಿಳಿಯಿರಿ, ನಾವು ಅಗದೀ ಸ್ವಲ್ಪ ಬಂಗಾರ ತೆಗೆದುಕೊಂಡು ಅದರಿಂದ ಇಡೀ ವಿಶ್ವಕ್ಕೆ ಹೊದಿಕೆ (ಮಡಾಸ)ಹಾಕುವ ಪ್ರಯತ್ನ ಮಾಡಹೋದರೆ ಏನಾದೀತು? ನಾವು ಎಷ್ಟೇ ಪ್ರಯತ್ನ ಮಾಡಿದರೂ ಸಹ ಈ ಪ್ರಯತ್ನದಿಂದ ಬಂಗಾರವು ಸಾಕಾಗಲಾರದು. ಕಡಿಮೆಯೇ ಆಗುವದು. ಇದರಂತೆಯೇ ಬ್ರಹ್ಮವನ್ನು ಹಿಡಿಯಲಿಕ್ಕೆ ವೃತ್ತಿಯು ಹೋದರೆ ಅದರ ಸ್ಥಿತಿಯೂ ಹೀಗೆಯೇ ಆಗುವದು. (೩೬) ನಮ್ಮ ವೃತ್ತಿಯು ವಿವೇಕದಿಂದ ಪರಬ್ರಹ್ಮವನ್ನು ತಿಳಿಯಲು ಹೊರಟಿತೆಂದರೆ ಅದು ಪಸರಿಸಹತ್ತುವದು. ಆದರೆ ಪಸರಿಸುತ್ತ ಪಸರಿಸುತ್ತ ಅದರ ಅಳತೆ (ಶಕ್ತಿ) ಸೀಮೆ, ಮುಗಿಯುವದು. ಮತ್ತು ಅದು ಹರಿದುಹೋಗಿ ಪರಬ್ರಹ್ಮದಲ್ಲಿ ಲೀನವಾಗಿ ಹೋಗುವದು. ಆಮೇಲೆ ಮೂಲದ ನಿರ್ಗುಣ ಆತ್ಮಸ್ವರೂಪ ಹೇಗಿತ್ತೋ ಹಾಗೇ ಸ್ಪಷ್ಟವಾಗಿ ಅನುಭವಕ್ಕೆ ಬರುವದು. (೩೭) ಇಲ್ಲಿಗೆ ನಿಮ್ಮ ಶಂಕಾ (ಸಂಶಯ)ದ ನಿರಸನವಾಯಿತೆಂದು ನಾನು ತಿಳಿಯುವೆನು. ಶ್ರೋತಾಜನರೇ, ಮೇಲೆ ಯಾವ ಯಾವ ವಿಷಯವನ್ನು ಹೇಳಿದೆನೋ ಅದರ ಬಗ್ಗೆ ಮನಸ್ಸಿನಲ್ಲಿ ಸಂಶಯ ತಾಳಬೇಡಿರಿ. ಸಂಶಯವಿದ್ದರೆ ಮನಸ್ಸಿನಲ್ಲಿಯೇ ಚನ್ನಾಗಿ ವಿಚಾರ ಮಾಡಿ ನೋಡಿರಿ. (೩೮) ಮನುಷ್ಯನು ವಿವೇಕದಿಂದ ವಿಚಾರವಂತನಾದರೆ ಅವನ ಶಂಕಾ ನಿವಾರಣವಾಗುವದು. ವಿವೇಕದಿಂದ ನಿಮಗೆ ಸಮಾಧಾನ ಸಿಗುವದು. ಮತ್ತು ವಿವೇಕದಿಂದಲೇ ಶರಣಾಗತಿಯನ್ನು ಸಾಧಿಸಿಕೊಂಡರೆ ಮೋಕ್ಷವು ನಿಮ್ಮ ಪದರಿನಲ್ಲಿ ಬೀಳುವದು. (೩೯) ಮೋಕ್ಷದ ಬೆನ್ನು ಹತ್ತಿ ನೀವು ಹೋಗುವ ಕಾರಣವೇ ಇಲ್ಲ. ಮೋಕ್ಷವನ್ನು ಒಂದು ಕಡೆಗೆ (ಬಾಜೂಕ್ಕೆ) ಇಟ್ಟು ಬಿಡಿರಿ. ಆದರೆ ವಿವೇಕದಿಂದ; ನಿಜವೆನಿಸುವ ಆದರೆ ನಿಜವಲ್ಲದ ದೃಶ್ಯವನ್ನು ಬಾಜೂಕ್ಕೆ ಸರಿಸಬೇಕು. ಅಂದರೆ ಆಗ ಆತ್ಮದ ಪ್ರತ್ಯಕ್ಷ ಸಾಕ್ಷಾತ್ಕಾರವಾಗುವದು. ಇದಕ್ಕೆ ಇನ್ನಷ್ಟು ಪುರಾವೆ ಏಕೆ ಬೇಕು? ದೃಶ್ಯ ನಿಜವೆನಿಸುವದು ಪೂರ್ವ ಪಕ್ಷವಾದರೆ, ಅತೀಂದ್ರಿಯ ಆತ್ಮಸ್ವರೂಪವು ಸಿದ್ಧಾಂತ ಪಕ್ಷವಾಗಿದೆ. (೪೦) ಈಗ ಯಾವ ವಿಷಯವನ್ನು ಹೇಳಿದೆನೋ ಅದು ನನ್ನ ಸ್ವತಃದ ಅನುಭವದ್ದೇ ಇರುವದು. ಸಾರಾಸಾರ ವಿವೇಕ ಮಾಡಿ ವಿಚಾರಶೀಲರಾದರೆ ನನ್ನ ಅಭಿಪ್ರಾಯ ನಿಮ್ಮ ಲಕ್ಷ್ಯದಲ್ಲಿ ಬರುವದು. ಈಗ ನಾನು ಹೇಳಿದ್ದು ಶ್ರವಣವು. ಇದರ ಮೇಲೆ ಮನನ ಮಾಡಿರಿ. ಅದರಿಂದ ನಿಧಿಧ್ಯಾಸ ಹತ್ತಿದರೆ ಆಗ ಆತ್ಮಸಾಕ್ಷಾತ್ಕಾರವಾಗುವದು. ಸಾಕ್ಷಾತ್ಕಾರದಿಂದ ಪವಿತ್ರರಾಗಿ ಬಿಡಿರಿ. ಅಂದರೆ ಸಾರ್ಥಕವು. (೪೧)

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದ ಒಂಭತ್ತನೆಯ ದಶಕದಲ್ಲಿಯ
"ಸಂದೇಹ ವಾರಣ" ಎಂಬ ಒಂಭತ್ತನೆಯ ಸಮಾಸವು ಮುಗಿದುದು.

## ಸಮಾಸ ದಶಮ : ಸ್ಥಿತಿ ನಿರೂಪಣ

॥ಶ್ರೀರಾಮ॥ದೇಉಳಾಮಧೇ ಜಗನ್ನಾಯೆಂಕ। ಆಣೀ ದೇವಳಾವರೀ ಬೈಸಲಾ ಕಾಕ।
ಪರೀ ತೋ ದೇವಾಹೂನ ಅಧಿಕ। ವ್ಹಣೋ ನಯೆ ಕೀ ॥೧॥

ಸಭಾ ಬೈಸಲೀ ರಾಜದ್ವಾರೀ। ಆಣೀ ಮರ್ಕಟ ಗೇಲೇ ಸ್ತಂಭಾವರೀ।
ಪರೀ ತೇ ಸಭೆಹೂನ ಶ್ರೇಷ್ಠ ಚತುರೀ। ಕೈಸೇ ಮಾನಾವೇ ॥೨॥

ಬ್ರಾಹ್ಮಣ ಸ್ನಾನ ಕರೂನ ಗೇಲೆ। ಆಣೀ ಬಕ ತೈಸೇ ಚಿ ಬೈಸಲೇ।
ಪರೀ ತೆ ಬ್ರಾಹ್ಮಣಾಪರೀಸ ಭಲೆ। ಕೈಸೆ ಮಾನಾವೆ ॥೩॥

## ದಶಕ ೯. ಸಮಾಸ ೧೦. ಸ್ಥಿತಿ ನಿರೂಪಣ (ನುಡಿ ೩೮)

ಶ್ರೀ ಸಮರ್ಥರು ಈ ಸಮಾಸದಲ್ಲಿ ಪರಮಾರ್ಥದ ಬಗ್ಗೆ ಸಾಧ್ಯ ದೃಷ್ಟಿ ಮತ್ತು ಸಾಧನ ದೃಷ್ಟಿಯಿಂದ ಸಮಾರೋಪ ಮಾಡಿರುವರು. ಪರಮಾರ್ಥವು ಅಂತರಂಗದ್ದಿರುವದು. ಬಹಿರಂಗದ್ದಲ್ಲ. ಇದಕ್ಕೆ ಮುಖ್ಯವಾಗಿ ಅಂತರ್ ನಿಷ್ಠಾಬೇಕು. ಪರಮಾರ್ಥದಲ್ಲಿ ನಾವು ಯಾವ ಧ್ಯೇಯ ಇಡುವೆವೋ ಅದರೊಂದಿಗೆ ನಮ್ಮ ಅಂತರಂಗವು ತಾದಾತ್ಮ್ಯ ಹೊಂದುವದು. ದೇವತೆಗಳ ಭಕ್ತಿ ಮಾಡುವವ ದೇವಲೋಕಕ್ಕೆ ಹೋಗುವನು. ಭೂತಗಳ ಭಕ್ತಿ ಮಾಡುವವ ಭೂತ ಲೋಕಕ್ಕೆ ಹೋಗುವನು. ಪಿತೃಗಳ ಭಕ್ತಿ ಮಾಡುವವನು ಪಿತೃ ಲೋಕಕ್ಕೆ ಹೋಗುವನು. ಅರ್ಥಾತ್ ನಿರ್ಗುಣ ಪರಬ್ರಹ್ಮನ ಉಪಾಸನಾ ಮಾಡುವವನು ಸ್ವತಃ ನಿರ್ಗುಣ ಬ್ರಹ್ಮರೂಪವೇ ಆಗುವನು. ಶ್ರೀಮದ್ಭಗವದ್ಗೀತೆಯಲ್ಲಿ ಭಗವಾನ ಶ್ರೀ ಕೃಷ್ಣನು ಸ್ಪಷ್ಟವಾಗಿ ಹೇಳುವದೇನಂದರೆ :– ಯಾತಿ ದೇವವ್ರತಾ ದೇವಾನ್ ಪಿತೃನ್ ಯಾಂತಿ ಪಿತೃ ವ್ರತಾಃ । ಭೂತಾನಿ ಯಾಂತಿ ಭೂತೇಜ್ಯಾಯಾಂತಿ ಮದ್‌ಯಾಜಿನೋಽಪಿ ಮಾಮ್ ॥ **ಅರ್ಥ**:- "ದೇವರ ಭಕ್ತಿ ಮಾಡುವವನು ದೇವಲೋಕಕ್ಕೆ ಹೋಗುವನು. ಪಿತೃಗಳ ಭಕ್ತಿ ಮಾಡುವವನು ಪಿತೃ ಲೋಕಕ್ಕೆ ಹೋಗುವನು. ಭೂತಗಳ ಭಕ್ತಿ ಮಾಡುವವನು ಭೂತಗಳೊಂದಿಗೆ ಹೋಗುವನು. ಮತ್ತು ನನ್ನ(ಈಶ್ವರನ) ಭಕ್ತಿ ಮಾಡುವವನು ನನ್ನಲ್ಲಿಗೆ ಬಂದು ಮುಟ್ಟುವನು." ಭಗವಂತನ ಗುರುತು ಮಾಡಿಕೊಳ್ಳುವಲ್ಲಿಯೇ ಮಾನವ ಜೀವನದ ನಿಜವಾದ ಗುರಿ ಇರುವದು. ನಾನು ಅನ್ನುವದರ ಶೋಧ ಮಾಡುತ್ತ ಮಾಡುತ್ತ ಹೋದಂತೆ ಯಾವತ್ತೂ ದೃಶ್ಯದ ನಿರಾಸ (ಪರಿಹಾರ)ವಾಗುವದು. ಕೊನೆಗೆ ಕೇವಲ ಶುದ್ಧ ಆತ್ಮಾ ಒಂದೇ ಉಳಿಯುವದು. ಅಲ್ಲದೆ ಕೊನೆಗೆ ಸೋಹಮ್ "ನಾನು ಅವನೇ ಇರುವೆನು" ಅನ್ನುವ ಸಾಕ್ಷಾತ್ಕಾರವಾಗುವದು. ಇದೇ ಪರಮಾರ್ಥದೊಳಗಿನ ನಿಜವಾದ ಗುರುತು ಇರುವದೆಂದು ತಿಳಿಯಿರಿ. ಒಬ್ಬ ಬಡವನಿಗೆ ರಾಜ್ಯಪದ ಪ್ರಾಪ್ತವಾಯಿತೆಂದರೆ ಅವನ ಜೀವನದಲ್ಲಿ ಎಲ್ಲ ಕಡೆಯಿಂದ ಎಲ್ಲ ರೀತಿಯಿಂದ ಬದಲಾವಣೆಯಾಗುವದು. ಇದರಂತೆ ಬಡ ಜೀವವು ಬ್ರಹ್ಮಸ್ವರೂಪವಾಯಿತೆಂದರೆ ಅದರ ಜೀವನ ದಲ್ಲಿ ಆಮೂಲಾಗ್ರ ಬದಲಾವಣೆ ಆಗುವದು. ಸಾಧನೆಯನ್ನು ಮಾಡುತ್ತ ಮಾಡುತ್ತ ಸಾಧಕನು ಸ್ವತಃ ಸಾಧ್ಯರೂಪ ನಾಗುವನು. ಆಮೇಲೆ ಅವನಿಗೆ ಯಾವುದನ್ನೂ ಮಾಡುವ ಅವಶ್ಯಕತೆ ಇರುವದೇ ಇಲ್ಲ.

### ದಶಕ ೯ : ಸಮಾಸ ೧೦ : ಸ್ಥಿತಿ ನಿರೂಪಣ [ನುಡಿ ೩೮]

**ಪರಮಾರ್ಥದ ಪರೀಕ್ಷೆಯನ್ನು ಅಂತರಂಗದ ಮೇಲಿಂದ ಮಾಡಬೇಕಾಗುವದು. ಹೊರಗಿನ ಪರಿಸ್ಥಿತಿಯ ಮೇಲಿನಿಂದ ವ್ಯಕ್ತಿಯು ಅಂತರಂಗದಲ್ಲಿ ಯಾವ ಅವಸ್ಥೆ ಇರುವದೆಂಬುದನ್ನು ಹೇಳಲಿಕ್ಕೆ ಬರುವದಿಲ್ಲ:—** ತಿಳಿಯಿರಿ. ಒಂದು ಗುಡಿಯಲ್ಲಿ ದೇವರಿರುವನು. ಆ ಗುಡಿಯ ಶಿಖರದ ಮೇಲೆ ಒಂದು ಕಾಗೆಯು ಕುಳಿತಿತು. ದೇವರಿಗಿಂತ ಮೇಲಿನ ಸ್ಥಳದಲ್ಲಿ ಕಾಗೆ ಕುಳಿತಷ್ಟಕ್ಕೆ ಕಾಗೆಯೇನೂ ದೇವರಿಗಿಂತಲೂ ಶ್ರೇಷ್ಠ ಇರುವದೆಂದು ಯಾರೂ ಅನ್ನಲಾರರು. [೧] ತಿಳಿಯಿರಿ. ರಾಜನ ವಾಡೆಯಲ್ಲಿ ಒಂದು ಸಭೆ ಕೂಡಿತು. ಅಷ್ಟರಲ್ಲಿ ಒಂದು ಮಂಗವು ಸಭಾ ಮಂಟಪದ ಕಂಬದ ಮೇಲೆ ಹತ್ತಿ ಕುಳಿತಿತು. ಸಭಾಸದರು ಕೆಳಗೆ ಕುಳಿತಿದ್ದರು. ಮಂಗ ಅವರ ಮೇಲ್ಗಡೆಗೆ ಕುಳಿತಿತ್ತು. ಇಷ್ಟರಿಂದ ಬುದ್ಧಿವಂತರಾದವರು ಸಭಾಸದರಗಿಂತ ಮಂಗ ಶ್ರೇಷ್ಠವೆಂದು ತಿಳಿಯಲಾರರು. [೨] ಕೆಲವೊಂದು ಬ್ರಾಹ್ಮಣರು ಕೆರೆಯಲ್ಲಿ ಸ್ನಾನ ಮಾಡಿ ಕಣ್ಣು ಮುಚ್ಚಿ ದಂಡೆಯ ಮೇಲೆ ಧ್ಯಾನಾಸಕ್ತರಾಗಿ ಕುಳಿತರು. ಕೆಲವು ಬಕ ಪಕ್ಷಿಗಳೂ ಸಹ ಅಲ್ಲಿಗೆ ಬಂದು ಕಣ್ಣು ಮುಚ್ಚಿ ಕುಳಿತವು. ಆದರೆ ಆ ಬಕ ಪಕ್ಷಿಗಳು ಬ್ರಾಹ್ಮಣರಗಿಂತ ಶ್ರೇಷ್ಠವೆಂದು ಅನ್ನಲಿಕ್ಕೆ ಬಾರದು. [೩]

ಬ್ರಾಹ್ಮಣಾಮಧೇ ಕೋಣೀ ನೇಮಸ್ತ । ಕೋಣೀ ಜಾಲೆ ಅವ್ಯಾವೆಸ್ತ ।
ಆಣೀ ಸ್ನಾನ ಸದಾ ಧ್ಯಾನಸ್ಥ । ಪರೀ ತೇ ಉತ್ತಮ ನವ್ಹೆ ॥೪॥

ಬ್ರಾಹ್ಮಣ ಲಕ್ಷಮುದ್ರಾ ನೇಣೆ । ಮಾರ್ಜರ ಲಕ್ಷವಿಷಈ ಶಾಹಾಣೇ ।
ಪರೀ ಬ್ರಾಹ್ಮಣಾಪರೀಸ ವಿಶೇಷ ಕೋಣೇ । ಮ್ಹಣಾವೇ ತಯಾಸೀ ॥೫॥

ಬ್ರಾಹ್ಮಣ ಪಾಹೆ ಭೇದಾಭೇದ । ಮಕ್ಷಿಕಾ ಸರ್ವಾಸ ಅಭೇದ ।
ಪರೀ ತೀಸ ಜಾಲಾ ಜ್ಞಾನ ಬೋಧ । ಹೇ ತೋ ನ ಘಡೇ ಕೀ ॥೬॥

ಉಂಚ ವಸ್ತ್ರೇ ನೀಚ ಲ್ಯಾಲಾ । ಆಣೀ ಸಮರ್ಥ ಉಘಡಾ ಚ ಬೈಸಲಾ ।
ಪರೀ ತೋ ಆಹೆ ಪರೀಕ್ಷಿಲಾ । ಪರೀಕ್ಷವಂತೀ ॥೭॥

ಬಾಹ್ಯಾಕಾರ ಕೇಲಾ ಆಧೀಕ । ಪರೀ ತೋ ಅವಘಾ ಲೊಕಿಕ ।
ಯೇಥೇ ಪಾಹಿಜೆ ಮುಖ್ಯ ಯೇಕ । ಅಂತರನಿಷ್ಠಾ ॥೮॥

ಲೋಕಿಕ ಬರಾ ಸಂಪಾದಿಲಾ । ಪರೀ ಅಂತರೀ ಸಾವಧ ನಾಹೀ ಜಾಲಾ ।
ಮುಖ್ಯ ದೇವಾಸ ಚುಕಲಾ । ತೋ ಆತ್ಮಘಾತಕೀ ॥೯॥

ದೇವಾಸ ಭಜತಾ ದೇವಲೋಕ । ಪಿತ್ರಾಸ ಭಜತಾ ಪಿತ್ರಲೋಕ ।
ಭೂತಾಸ ಭಜತಾ ಭೂತಲೋಕ । ಪಾವಿಜೇತೊ ॥೧೦॥

ಜೇಣೇ ಜಯಾಸ ಭಜಾವೇ । ತೇಣೇ ತ್ಯಾ ಲೋಕಾಸೀ ಜಾವೇ ।
ನಿರ್ಗುಣೇ ಭಜತಾ ವ್ಹಾವೇ । ನಿರ್ಗುಣ ಚಿ ಸ್ವಯೇ ॥೧೧॥

ನಿರ್ಗುಣಾಚೇ ಕೈಸೇ ಭಜನ । ನಿರ್ಗುಣೇ ಅಸಾವೇ ಅನನ್ಯ ।
ಅನನ್ಯ ಹೋತಾ ಹೋಈಜೆ ಧನ್ಯ । ನಿಶ್ಚಯೇಸೀ ॥೧೨॥

ಸಕಳ ಕೇಲಿಯಾಚೇ ಸಾರ್ಥಕ । ದೇವ ವ್ಹೊಳಖಾವಾ ಯೇಕ ।
ಆಪಣ ಕೋಣ ಹಾ ವಿವೇಕ । ಪಾಹಿಲಾ ಪಾಹಿಜೆ ॥೧೩॥

ದೇವ ಪಾಹಾತಾ ನಿರಾಕಾರ । ಆಪಲಾ ತೋ ಮಾಈಕ ವಿಚಾರ ।
ಸೋಽಹಂ ಆತ್ಮಾ ಹಾ ನಿರ್ಧಾರ । ಬಾಣೋನ ಗೇಲಾ ॥೧೪॥

ಆತಾ ಅನುಮಾನ ತೋ ಕಾಈ । ವಸ್ತು ಆಹೆ ವಸ್ತುಚಾ ಠಾಈ ।
ದೇಹಭಾವ ಕಾಹೀ ಚ ನಾಹೀ । ಧಾಂಡೋಳಿತಾ ॥೧೫॥

ಬ್ರಾಹ್ಮಣರಲ್ಲಿ ಕೆಲವರು ನಿಯಮವಂದಂತೆ ಆಚರಣೆಯಿಂದ ನಡೆಯುವರು. ಕೆಲವರು ಅವ್ಯವಸ್ಥಿತವಾಗಿ ನಡೆಯುವವರೂ ಇರುವರು. ಆದರೆ ನಾಯಿಯೊಂದು ಯಾವಾಗಲೂ ಕಣ್ಣುಮುಚ್ಚಿ ಧ್ಯಾನಸ್ಥನಂತೆ ಕುಳಿತಿರುತ್ತದೆ. ಇಷ್ಟರಿಂದಲೇ ಆ ನಾಯಿಯೇನೂ ಬ್ರಾಹ್ಮಣನಿಗಿಂತ ಶ್ರೇಷ್ಠವೆಂದು ಅನ್ನಲಿಕ್ಕೆ ಬಾರದು. (೪) ಒಂದು ವಸ್ತುವಿನ ಕಡೆಗೆ ಅತ್ಯಂತ ಏಕಾಗ್ರವಾಗಿ ಲಕ್ಷ್ಯಕೊಡುವ ರೂಢಿ ಬಹಳಷ್ಟು ಜನ ಬ್ರಾಹ್ಮಣರಲ್ಲಿ ಇರುವದಿಲ್ಲ. ಬೆಕ್ಕು ಮಾತ್ರ ಯಾವುದೋ ಒಂದು ವಸ್ತುವಿನ ಕಡೆಗೆ ಅತಿ ಏಕಾಗ್ರದಿಂದ ನೋಡುತ್ತಿರುವದನ್ನು ನಾವು ನೋಡುವೆವು. ಇಷ್ಟರಿಂದ ಬೆಕ್ಕು ಬ್ರಾಹ್ಮಣನಿಗಿಂತ ಶ್ರೇಷ್ಠವೆಂದು ಅನ್ನಲಿಕ್ಕೆ ಬರುವದಿಲ್ಲ. (೫) ಬ್ರಾಹ್ಮಣನು ಭೇದಾ ಭೇದಗಳನ್ನು ನೋಡಿ ತಿಳಿದು ನಡೆಯುವನು. ಆದರೆ ನೊಣವು ಎಲ್ಲಿಯೂ ಯಾವ ಭೇದವನ್ನೂ ನೋಡದೇ ಅದು ತಿಪ್ಪೆಗುಂಡಿಯಲ್ಲಿ ಅಥವಾ ಉತ್ತಮ ಅನ್ನ ಈ ಎರಡರ ಭೇದ ಮಾಡದೆ ಅಲ್ಲಿ–ಇಲ್ಲಿ ಎಲ್ಲ ಕಡೆಗೂ ಕೂಡುವದು. ಹೀಗೆ ಎಲ್ಲವೂ ಒಂದೇ ಎಂದು ಮನ್ನಿಸುವ ನೊಣಕ್ಕೆ ಆತ್ಮಜ್ಞಾನವಾಗಿದೆ ಎಂದು ಭಾವಿಸಲಿಕ್ಕೆ ಶಕ್ಯವಿಲ್ಲ. (೬) ತಿಳಿಯಿರಿ, ಒಬ್ಬ ಕನಿಷ್ಠ ಪ್ರತಿಯ ಮನುಷ್ಯನು ಭಾರೀ ಕಿಮ್ಮತ್ತಿನ ಬಟ್ಟೆಗಳನ್ನು ಹಾಕಿಕೊಂಡಿರುವನು. ಒಬ್ಬ ಶ್ರೇಷ್ಠ ಪುರುಷನು ಬರಿಮೈಯಿಂದಲೇ ಎಲ್ಲಿಯೋ ಒಂದು ಕಡೆಗೆ ಕುಳಿತಿರುವನು. ನಿಜವಾದ ಪರೀಕ್ಷಕರಾದವರು ಈ ಇಬ್ಬರಲ್ಲಿ ಯಾರು ಶ್ರೇಷ್ಠ, ಯಾರು ಕನಿಷ್ಠ ಅನ್ನುವದನ್ನು ಅಗದೀ ಬರೋಬರ ಗುರುತಿಸುವರು. (೭) ಹೊರಗಿನಿಂದ ಬಹಳಷ್ಟು ಡಾಮ ಡೌಲು ಮಾಡಿದರೆ ಅದು ವ್ಯವಹಾರದಲ್ಲಿ ನಡೆದು ಹೋಗುವದು. ಆದರೆ ಪರಮಾರ್ಥದಲ್ಲಿ ಮಾತ್ರ ಇದು ನಡೆಯುವದಿಲ್ಲ. ಅಲ್ಲಿ ಮುಖ್ಯವಾಗಿ ಅಂತರ್ನಿಷ್ಠಾ ಇರಬೇಕಾಗುವದು. ಇದು ಇಲ್ಲದಿದ್ದರೆ ಪರಮಾರ್ಥ ಜೊಳ್ಳು ಸುಳ್ಳು ಆಗುವದು. ಅಂತರ್ನಿಷ್ಠಾ ಅಂದರೆ ಆತ್ಮನಿಷ್ಠೆಯೇ ಆಗಿದೆ. (೮) ಆತ್ಮಜ್ಞಾನವಾದರೇ ಜೀವನ ಸಾರ್ಥಕ ವೆನಿಸುವದು. ಇಲ್ಲದಿದ್ದರೆ ವ್ಯರ್ಥವೆನಿಸುವದು. ನಮ್ಮ "ನಾನು" ಅನ್ನುವದು ನಿಜವಲ್ಲ. ನಿಜವಾದ "ನಾನು" ಯಾರಿ ರುವೆನು? ಇದರ ಶೋಧವನ್ನು ಮಾಡಬೇಕು. ವಿವೇಕದಿಂದ ಸಮಾಧಾನದಿಂದ ತಿಳಿದು ನೋಡಬೇಕು. ನಾನು ಅನ್ನು ವದನ್ನು ಬಾಜೂಕ್ಕೆ ಸರಿಸಿ ಸೋಹಂ ಅನ್ನುವದರ ಅನುಭವ ಪಡೆಯಬೇಕು. (ಅಂದರೆ ಆ ಪರಮಾತ್ಮನೇ ನಾನಿರು ವೆನು. ಅನ್ನುವ ಅನುಭವ ಬರುವದು.) ಒಬ್ಬನು ವ್ಯವಹಾರದಲ್ಲಿ ಉತ್ತಮ ಲೌಕಿಕವನ್ನು ಸಂಪಾದಿಸಿದನು. ಆದರೆ ಅಂತರ್ಯಾಮದಲ್ಲಿಯ ಸ್ವರೂಪದ ಕಡೆಗೆ ಲಕ್ಷ್ಯವನ್ನೇ ಕೊಡಲಿಲ್ಲ. ಇದರಿಂದ ಅವನಿಗೆ ಮುಖ್ಯದೇವ ಪ್ರಾಪ್ತನಾಗು ವದಿಲ್ಲ. ಇಂಥ ಮನುಷ್ಯನು ಆತ್ಮಘಾತುಕಿ ಎನಿಸುವನು. ನರಜನ್ಮವು ದುರ್ಲಭವು. ಆದ್ದರಿಂದ ವ್ಯರ್ಥವಾದ ಡಾಮಡೌಲಿನ ಮನುಷ್ಯನು ತನ್ನ ಘಾತವನ್ನು ತಾನೇ ಸ್ವತಃ ಮಾಡಿಕೊಳ್ಳುವನು. [೯] ದೇವತೆಗಳ ಉಪಾಸನಾ ಮಾಡಿದರೆ ದೇವಲೋಕ ಸಿಗುವದು, ಪಿತೃಗಳ ಉಪಾಸನಾ ಮಾಡಿದರೆ ಪಿತೃಲೋಕ ಸಿಗುವದು. ಭೂತಗಳ ಉಪಾ ಸನಾ ಮಾಡಿದರೆ ಅವರಿಗೆ ಭೂತಲೋಕ ಸಿಗುವದು. [೧೦] ಯಾರು ಯಾವುದರ ಉಪಾಸನೆಯನ್ನು ಮಾಡುವರೋ ಅವರು ಆ ಲೋಕಕ್ಕೆ ಹೋಗುವರು. ನಿರ್ಗುಣದ ಉಪಾಸನೆಯನ್ನು ಮಾಡಿದರೆ ಮಾತ್ರ ಮನುಷ್ಯನು ಸ್ವತಃ ನಿರ್ಗುಣನಾಗುವನು. [೧೧] ಪ್ರಶ್ನೆ:- ನಿರ್ಗುಣದ ಉಪಾಸನೆಯನ್ನು ಹೇಗೆ ಮಾಡಬೇಕು.? ಉತ್ತರ:– ನಾವು ನಿರ್ಗುಣದೊಂದಿಗೆ ಅನನ್ಯರಾಗಬೇಕು. ಏಕರೂಪರಾಗಬೇಕು. ನಾನು ಅನ್ನುವದನ್ನು ಒಂದು ಬದಿಗೆ ಸರಿಸಿಬಿಡಬೇಕು. ಮತ್ತು ನಿರ್ಗುಣದಲ್ಲಿ ಕೂಡಿಕೊಂಡು ಬಿಡಬೇಕು, ಈ ರೀತಿಯಿಂದ ನಿರ್ಗುಣದೊಂದಿಗೆ ಸಮರಸನಾಗುವವನು ನಿಶ್ಚಯವಾಗಿಯೂ ಧನ್ಯನಾಗಿ ಹೋಗುವನು. [೧೨] ಒಂದು : ದೇವರನ್ನು ಗುರುತಿಸುವದಕ್ಕೆ ಉಪಯೋಗಿಸಿದರೆ ಮಾತ್ರ ಜೀವನದಲ್ಲಿಯ ಎಲ್ಲ ಪ್ರಯತ್ನವೂ ಸಾರ್ಥಕವೆನಿಸುವದು."ನಾನು ಯಾರು ಇರುವೆನು" ಇದರ ಬಗ್ಗೆ ಸೂಕ್ಷ್ಮ ವಿಚಾರ ಮಾಡಬೇಕು. [೧೩] ದೇವನನ್ನು ನೋಡಬೇಕೆಂದರೆ ಆ ದೇವನಾದರೋ ನಿರ್ಗುಣ ವ ನಿರಾಕಾರನಿರುವನು. ಇನ್ನು "ನಾನು" ಅನ್ನುವದರ ವಿಚಾರ ಮಾಡಿದ್ದಾದರೆ ಇದು ನಿಜವಲ್ಲ. ಆದ್ದರಿಂದ ವಿವೇಕ ವಿಚಾರದಿಂದ ಆಳವಾಗಿ ತಿಳಿದು ನೋಡಿದರೆ ಆಗ "ನಾನು ಅದೇ ಇರುವೆನು" "ನಾನು ಆತ್ಮವೇ ಇರುವೆನು" ಅನ್ನುವ ಸಂಶಯ ರಹಿತವಾದ ನಿರ್ಧಾರವು ನಮ್ಮಲ್ಲಿ ನೆಲೆಯೂರುವದು. [೧೪] ಅನಂತರ ಕಲ್ಪನೆ ಮಾಡುವ ಅಥವಾ ಸಂಶಯ ಪಡುವದರ ಅವಶ್ಯಕತೆ ಇರುವದಿಲ್ಲ. ಬ್ರಹ್ಮವು ಹೇಗಿರುವದೋ ಹಾಗೆಯೇ ಅದು ಸ್ವಸ್ಥಾನದಲ್ಲಿ ನಿಶ್ಚಲವಾಗಿ ಇರುವದು. ಅದರ [ಬ್ರಹ್ಮದ] ಮೇಲೆ ಆರೋಪ ಮಾಡಿದ ದೇಹ ಬುದ್ಧಿಯ ಶೋಧ ಮಾಡಿ ನೋಡಿದಾಗ ಅದು ನಿಜವಲ್ಲವೆನ್ನುವ ಅನು ಭವವು [ನಾನು ದೇಹವಲ್ಲ ಅನ್ನುವ ಅನುಭವ] ಬರುವದು, [೧೫]

ಸಿದ್ಧಾಸ ಆಣೀ ಸಾಧನ । ಹಾ ತೋ ಅವಘಾ ಚ ಅನುಮಾನ ।
ಮುಕ್ತಾಸ ಆಣೀ ಬಂಧನ । ಆಡಳೇನಾ ॥೧೬॥

ಸಾಧನೇ ಜೇ ಕಾಹೀ ಸಾಧಾವೇ । ತೇ ತೋ ಆಪಣ ಚಿ ಸ್ವಭಾವೇ ।
ಆತಾ ಸಾಧಕಾಚ್ಯಾ ನಾವೇ । ಸುನ್ಯಾಕಾರ ॥೧೭॥

ಕುಲ್ಲಾಳ ಪಾವಲಾ ರಾಜಪದವೀ । ಆತಾ ರಾಸಭೇ ಕಾಸಯಾ ರಾಖಾವೀ ।
ಕುಲ್ಲಾಳಪಣಾಚೀ ಉಠಾಠೇವೀ । ಕಾಸಯಾ ಪಾಹಿಜೆ ॥೧೮॥

ತೈಸಾ ಅವಘಾ ವೃತ್ತೀಭಾವ । ನಾನಾ ಸಾಧನಾಚಾ ಉಪಾವ ।
ಸಾಧ್ಯ ಜಾಲಿಯಾ ಕೈಚಾ ಠಾವ । ಸಾಧನಾಸೀ ॥೧೯॥

ಸಾಧನೇ ಕಾಯೆ ಸಾಧಾವೇ । ನೇಮೋ ಕಾಯೆ ಫಳ ಘ್ಯಾವೇ ।
ಆಪಣ ವಸ್ತು ಭರಂಗಳಾವೇ । ಕಾಸಯಾಸೀ ॥೨೦॥

ದೇಹ ತರೀ ಪಾಚಾ ಭೂತಾಚಾ । ಜೀವ ತರೀ ಅಂಶ ಬ್ರಹ್ಮೀಚಾ ।
ಪರಮಾತ್ಮಾ ತರೀ ಅನನ್ಯಾಚಾ । ಠಾವ ಪಾಹಾ ॥೨೧॥

ಉಗೇ ಚಿ ಪಾಹಾತಾ ಮೀಪಣ ದಿಸೆ । ಶೋಧ ಘೇತಾ ಕಾಹೀ ಚ ನಸೆ ।
ತತ್ವೀ ತತ್ವ ನಿರಸೆ । ಪುಢೇ ನಿಖಳ ಆತ್ಮಾ ॥೨೨॥

ಆತ್ಮಾ ಆಹೆ ಆತ್ಮಪಣೇ । ಜೀವ ಆಹೆ ಜೀವಪಣೇ ।
ಮಾಯಾ ಆಹೆ ಮಾಯಾಪಣೇ । ವಿಸ್ತಾರಲೀ ॥೨೩॥

ಏಸೆ ಅವಘೇ ಚಿ ಆಹೆ । ಆಣೀ ಆಪಣ ಹಿ ಕೋಣೀಯೇಕ ಆಹೆ ।
ಹೇ ಸಕಳ ಶೋಧೂನ ಪಾಹೆ । ತೋ ಚಿ ಜ್ಞಾನೀ ॥೨೪॥

ನಾನು ಆತ್ಮನೇ ಇರುವೆನು. ಇದರ ಸಾಕ್ಷಾತ್ಕಾರವಾಗಿ ಯಾರು ಸಿದ್ಧರಾಗುವರೋ ಅವರಿಗೆ ಸಾಧನದ ಅವಶ್ಯಕತೆ ಅನ್ನುವದನ್ನು ಅಂಟಿಸುವದು ಕೇವಲ ಕಲ್ಪನೆಯಾಗುವದು. ಅರ್ಥಾತ್ ಸಿದ್ಧನಿಗೆ ಸಾಧನವು ಅವಶ್ಯವೆಂದು ಅನ್ನುವ ಮಾತು, ಬರೇ ಸಂಶಯದ್ದೂ, ಕಲ್ಪನೆಯದೂ ಆಗಿರುವದು. ಯಾರು ನಿಜವಾಗಿ ಮುಕ್ತರಾಗಿರುವರೋ ಅಥವಾ ಮುಕ್ತರಾಗುವರೋ ಅವರಿಗೆ ಸಾಧನದ ಬಂಧನ ಇರುವದು ಶಕ್ಯವೇ ಇಲ್ಲ. (೧೬) ಸಾಧನ ಮಾಡಿ ಯಾವುದನ್ನು ಸಾಧಿಸಿಕೊಳ್ಳಬೇಕಾಗಿದೆಯೋ ಅದನ್ನು ಸಾಧಿಸಿಕೊಂಡ ನಂತರ ಅಂದರೆ ಸಾಧನದಿಂದ ಆ ಆತ್ಮಸ್ವರೂಪ ಸ್ವತಃ ತಾನೇ ಆದ ಕೂಡಲೇ ಸಾಧನವು ಮುಗಿದು ಹೋಗುವದು, ಸಾಧಕನ ಅವಸ್ಥೆಯು ಅಲ್ಲಿಗೆ ಮುಗಿದು ಬಿಡುವದು. ಅಂದ ಮೇಲೆ ಸಾಧನವೇಕೆ? ಅರ್ಥಾತ್ ಇಲ್ಲ! [೧೭] ಯಾವನು ನಿಜವಾದ ಜ್ಞಾನಿ ಇರುವನೋ ಅವನು ಸ್ವತಃದ ಸ್ವಸ್ವರೂಪದ ಮತ್ತು ಮಾಯೆಯ ಈ ಎಲ್ಲವುಗಳ ಶೋಧ ಮಾಡುವನು, ಕೊನೆಗೆ ನನ್ನ ಅಹಂ ಅನ್ನುವದು. ಖೊಟ್ಟಿ ಮಾಯಾ ಇದು ಖೊಟ್ಟಿ, ಕೇವಲ ಪರಮಾತ್ಮನೊಬ್ಬನೇ ನಿಜವಾದವನು, ಸತ್ಯನು, ಅನ್ನುವ ಪ್ರತ್ಯಕ್ಷ ಅನುಭವ ಅವನಿಗೆ ಬರುವದು:- ತಿಳಿಯಿರಿ, ಒಬ್ಬ ಕುಂಬಾರನಿರುವನು; ಅವನಿಗೆ ಅಕಸ್ಮಾತ್ ರಾಜ್ಯಪದ ದೊರಕಿತು. ಆ ಮೇಲೆ ಅವನು ಕತ್ತೆಗಳನ್ನು ಸಂರಕ್ಷಿಸುವ ಕೆಲಸ ಮಾಡುವದಿಲ್ಲ. ಮತ್ತು ತನ್ನ ಕುಂಬಾರಿಕೆಯ ಕಸಬನ್ನು ಮಾಡುವದಿಲ್ಲ. [೧೮] ಇದರಂತೆ ಯಾವುದೇ ಸಾಧನದ ಆಚರಣೆಯನ್ನು ಮಾಡಬೇಕೆಂದರೆ ಆ ವೃತ್ತಿಯೊಂದಿಗೆ ಅತಿ ನಿಕಟವಾದ ಸಂಬಂಧ ವಿರಬೇಕು. ಹೊರತಾಗಿ [ಶಿವಾಯ] ಯಾವುದೇ ಸಾಧನವು ವಿಶಿಷ್ಟ ವೃತ್ತಿಯ ಆಧಾರದಿಂದಲೇ ನಡೆಯುವದು. ಮತ್ತು ನಿವೃತ್ತಿಪದ [ಆತ್ಮಸ್ವರೂಪ] ಹೊಂದಬೇಕಾದರೆ ವೃತ್ತಿರಹಿತ ಅಥವಾ ನಿವೃತ್ತರಾಗಿರಬೇಕಾಗುವದು. ಈ ಕಾರಣಗಳಿಂದಾಗಿ ಆತ್ಮಜ್ಞಾನದ ಸಾಧ್ಯವು ಪದರಿನಲ್ಲಿ ಬಿದ್ದ ಮೇಲೆ ಯಾವ ಸಾಧನದ ಅವಶ್ಯಕತೆಯೂ ಉಳಿಯುವದಿಲ್ಲ. ವೃತ್ತಿಯು ನಿರ್ಮಾಣವಾಗುವದಿಲ್ಲವಾದ್ದರಿಂದ ಸಾಧನ ಆಗಲು ಶಕ್ಯವಿಲ್ಲ. ಅವಶ್ಯವೂ ಇಲ್ಲ. [೧೯] ಸಾಧನದಿಂದ ನಮಗೇನು ಸಾಧಿಸಿಕೊಳ್ಳುವದಿದೆ? ನಮಗೆ ನಿಯಮಾಚರಣೆಗಳಿಂದ ನಡೆದು ಯಾವ ಫಲವನ್ನು ಸಂಪಾದಿಸಬೇಕಾಗಿದೆ? ಇದರ ಬಗ್ಗೆ ನಮ್ಮ ತಿಳುವಳಿಕೆಯು ಆಗದೀ ಸ್ವಚ್ಛ ವ ಬಗೋಚರ ಇರಬೇಕು. ನಾವು ಆತ್ಮಸ್ವರೂಪರೇ ಇದ್ದುದರಿಂದ ಸುಮ್ಮನೇ ಇಲ್ಲಸಲ್ಲದ ಕಲ್ಪನೆಯನ್ನು ಮಾಡಿಕೊಂಡು ತಪ್ಪುದಾರಿಯಿಂದ ಹೋಗಬಾರದು.[೨೦] ದೇಹದ ವಿಚಾರ ಮಾಡಿದ್ದಾದರೆ ಇದು ಪಂಚಭೂತಗಳದ್ದಿರುವದು. ಜೀವದವಿಚಾರ ಮಾಡಿದ್ದಾದರೆ ಇದು ಬ್ರಹ್ಮದ ಅಂಶವಿರುವದು. ಇದನ್ನು ತಿಳಿದು ಯಾರು ಅನನ್ಯರಾಗುವರೋ ಅವರೇ ಮಾತ್ರ ಪರಮಾತ್ಮನವರೆಗೆ ಹೋಗಿ ಮುಟ್ಟುವರೆಂಬುದನ್ನು ಲಕ್ಷ್ಯದಲ್ಲಿಡಿರಿ.[೨೧] ಸಾಮಾನ್ಯ ರೀತಿಯಲ್ಲಿ ಸುಮ್ಮನೇ ನೋಡಿದರೆ "ನಾನು" ಅನ್ನುವದು ಕಾಣುವದು. ಆದರೆ ವಿಚಾರದಿಂದ ಇದರ ಶೋಧ ಮಾಡಲು ಹೋದರೆ "ನಾನು" ಅನ್ನುವದು ನಿಜವಲ್ಲವೆಂಬುದು ಸ್ಪಷ್ಟವಾಗಿ ಕಂಡು ಬರುವದು. ಈ ರೀತಿಯಿಂದ ಒಂದು ತತ್ವದಿಂದ ಇನ್ನೊಂದು ತತ್ವದ ನಿರಸನ ಮಾಡಿದ್ದಾದರೆ ಯಾವತ್ತೂ ದೃಶ್ಯವು ನಿಜವಲ್ಲ ಅನ್ನುವ ಅನುಭವವು ನಿಮಗೆ ಬರುತ್ತದೆ. ಆಪ್ ತತ್ವದಿಂದ ಪೃಥ್ವಿ, ತೇಜದಿಂದ ಆಪ್, ವಾಯುದಿಂದ ತೇಜ. ಈ ತತ್ವಗಳ ನಿರಾಸ ಮಾಡಿದ ಮೇಲೆ ಮತ್ತು ಜ್ಞಾನದಿಂದ ಅಜ್ಞಾನದ ನಿರಾಸ ಮಾಡಿದ ಮೇಲೆ ಶುದ್ಧ ಆತ್ಮವೇ ಉಳಿಯುವದು. ಅನಂತರ ಶುದ್ಧ, ಯಾವ ಕಲಬೆರಕೆಯೂ ಇಲ್ಲದ ಕೇವಲ ಶುಧ್ಧವಾದ ಆತ್ಮಸ್ವರೂಪವು ಮಾತ್ರ ಶಿಲುಕು ಉಳಿಯುವದು. [೨೨] ಸ್ವಸ್ವರೂಪವು ಆತ್ಮತನದಿಂದ ಇರುವದು. ಜೀವವು ಜೀವತನದಿಂದ ಇರುವದು. ಮಾಯಾ ವಿಖ್ಯಾತನದಿಂದ ಎಲ್ಲ ಕಡೆಗೂ ಪಸರಿಸಿ ಇರುವದು. (೨೩) ಇವೆಲ್ಲವೂ ಇರುವವೆಂದೇ ಕಾಣುವವು. ಮತ್ತು ಇದರ ಸಂಗಡವೇ ನಾನೂ ಒಬ್ಬ ಯಾವನೋ ಏನೋ ಇರುವೆನು, ಹೀಗೆ ಅನಿಸುವದು. ಇವುಗಳ ಪೈಕಿ ಖರೆ ಅನ್ನುವದೂ ಇರುವದು- ಆದರೆ ಏಕೆ ಇರುವದು? ಇವುಗಳ ಪೈಕಿ ಶುದ್ಧ ಅಸ್ತಿತ್ವ ಅಥವಾ ಖರೇತನ ಯಾವುದಕ್ಕೆ (ಯಾರಿಗೆ) ಇರುವದು. ಇವನ್ನೆಲ್ಲ ಯಾರು ಸರಿಯಾಗಿ ಶೋಧಿಸಿ ನೋಡುವರೋ ಅವರೇ ನಿಜವಾದ ಜ್ಞಾನಿ ಇರುವರು. (೨೪)

ಶೋಧೂ ಜಾಣೇ ಸಕಳಾಸೀ । ಪರೀ ಪಾಹೋ ನೇಣೆ ಆಪಣಾಸೀ ।
ಐಸಾ ಜ್ಞಾನೀ ಯೇಕದೆಸೀ । ವೃತ್ತಿರೂಪೇ ॥೨೫॥

ತೇ ವೃತ್ತಿರೂಪ ಜರೀ ಪಾಹಿಲೇ । ತರೀ ಮಗ ಕಾಹೀ ಚ ನಾಹೀ ರಾಹಿಲೇ ।
ಪ್ರಕೃತಿನಿರಾಸೇ ಅವಘೇ ಚಿ ಗೇಲೇ । ವಿಕಾರವಂತ ॥೨೬॥

ಉರಲೇ ತೇ ನಿಖಳ ನಿರ್ಗುಣ । ವಿವಂಚಿತಾ ತೇ ಚಿ ಆಪಣ ।
ಐಸೀ ಹೇ ಪರಮಾರ್ಥಾಚೀ ಖೂಣ । ಅಗಾಧ ಆಹೆ ॥೨೭॥

ಫಳ ಯೇಕ ಆಪಣ ಯೇಕ । ಐಸಾ ನಾಹೀ ಹಾ ವಿವೇಕ ।
ಫಳಾಚೇ ಫಳ ಕೋಣೇಯೇಕ। ಸ್ವಯೇ ಚಿ ಹೋಈಜೆ ॥೨೮॥

ಜ್ಞಾತಾ ಮತ್ತು ಜ್ಞೇಯ ಇವುಗಳ ದ್ವೈತದಲ್ಲಿ ವ್ಯವಹರಿಸುವ ಶೋಧಕನು ಜ್ಞೇಯ ರೂಪದಿಂದ ಎದುರಿಗೆ ಬರುವ ಯಾವತ್ತೂ ಜಗತ್ತನ್ನೂ ತಿಳಿಯುವನು. ಮತ್ತು ಅದರ ಶೋಧ ಮಾಡುವನು. ಆದರೆ"ನಾನು" ಅನ್ನುವ ಅಹಂದಿಂದ ಜಗತ್ತಿನ ಶೋಧ ಮಾಡುವಂಥ ಯಾವ ಜ್ಞಾತಾ ಇರುವನೋ ಇವನ ಶೋಧವನ್ನು ಯಾರೂ ಮಾಡುವದಿಲ್ಲ. ಜಗತ್ತಿನ ಜ್ಞಾನವು ವೃತ್ತಿರೂಪ ಇದ್ದದ್ದರಿಂದ ನಾನು ಯಾರು ಇದರ ಶೋಧ ಮಾಡದಂಥ (ಪಡೆಯದಂಥ) ಜ್ಞಾತಾನು ಅಪೂರ್ಣ ಜ್ಞಾನಿ ಇರುವನು. [೨೫] **ಇನ್ನು ಮೇಲೆ ಪರಮಾರ್ಥದ ಮುಖ್ಯ ಗುರುತುಗಳನ್ನು ಹೇಳುತ್ತಾರೆ:–** ಜ್ಞಾತಾ (ತಿಳಿದುಕೊಳ್ಳುವ ಮನುಷ್ಯ) ನು ಎಲ್ಲಿಯವರೆಗೆ ಬೇರೆತನದಿಂದ ಇದ್ದು (ಉಳಿದು)ಕೊಂಡು ಜ್ಞೇಯದ (ತಿಳಿಯಬೇಕಾದದ್ದರ) ಜ್ಞಾನ ಮಾಡಿಕೊಳ್ಳುವನೋ ಅಲ್ಲಿಯವರೆಗೆ ಆ ಜ್ಞಾನವು ವೃತ್ತಿರೂಪವಿರುವದು. ಜ್ಞಾನದ ವ್ಯವಹಾರದಲ್ಲಿ ಯಾವ ಜ್ಞೇಯವು ಎದುರಿಗೆ ಬರುವದೋ ಅದರ ಒಂದು ಪ್ರತಿಮಾ (ಸಾದೃಶ್ಯರೂಪ) ಮನದಲ್ಲಿ ತಯಾರ ಆಗುವದು. ಈ ಪ್ರತಿಮೆಯಲ್ಲಿ ಕಲ್ಪನೆಯ ಅಂಶವು ಬಹಳಷ್ಟು ಇರುವದು. ಇದರ ಹೊರತಾಗಿ ಪ್ರತಿಮೆಗೆ ಜ್ಞಾತಾನ ಪೂರ್ವಾನುಭವದ ಆಳತೆಗೋಲು ಇರುವನು. ಅಲ್ಲದೇ ಕೆಲವೊಂದು ಸಲ ಆ ಪ್ರತಿಮೆಗೆ ಭಾವನೆಯ ಸದಯತೆ (ತತ್ವಾಂಶ) ಇರುವ ಸಂಭವವೂ ಉಂಟು. ಈ ರೀತಿಯಿಂದ ಜ್ಞಾತಾ ಯಾವ ಯಾವ ವಸ್ತುವನ್ನು ನೋಡುವನೋ ಆ ಆ ವಸ್ತುವು ಪ್ರತಿಮಾ ರೂಪದಿಂದ ಮನಸ್ಸಿನಲ್ಲಿ ಬಂದು ನಿಲ್ಲುತ್ತದೆ. (ಕಾಣಿಸಿಕೊಳ್ಳುತ್ತದೆ). ಇದರಲ್ಲಿ ಬುದ್ಧಿಯ ಅಂಶವಿರುವದು. ಭಾವನೆಯ ಸ್ಪರ್ಶ ಇರಲಿಕ್ಕೆ ಶಕ್ಯವಿದೆ. ಇದು ಕರ್ಮದ ಬಗ್ಗೆ ಪ್ರೇರಣಾ ಕೊಡಬಹುದಾಗಿದೆ. ಮತ್ತು ಇದು ಸ್ಥಳ ಕಾಲದ ಮರ್ಯಾದೆಯಲ್ಲಿಯೇ ಇರುವನು. ನಿತ್ಯದ ವ್ಯವಹಾರದಲ್ಲಿ ಇಂಥ ಅನಂತ ಪ್ರತಿಮೆಗಳು ಮನದಲ್ಲಿ ಬಂದು ಹೋಗುವವು. ಇದಕ್ಕೆ ವೃತ್ತಿ ಎಂದು ಅನ್ನುವರು. ಯಾವುದಕ್ಕೆ ನಾವು ಇಂದು ನಮ್ಮ "ನಾನು" ಅನ್ನುವೆವೋ ಇದು ಇಂಥ ವೃತ್ತಿಯ ಸಮೂಹವಿರುವದು. "ನಾನು" ಹೋಯಿತೆಂದ ಕೂಡಲೇ ವೃತ್ತಿಯೂ ಲಯವಾಗಿ ಹೋಗುವದು. ವೃತ್ತಿ ನಿರೋಧ ಆದ ಕೂಡಲೇ "ನಾನು" ಇದು ಲಯವಾಗುವದು. ಆದ್ದರಿಂದ ಶ್ರೀ ಸಮರ್ಥರು ಹೇಳುವದೇನಂದರೆ ದೇಹ ಬುದ್ಧಿಯ ಜ್ಞಾನವು ವೃತ್ತಿ ರೂಪವಿರುವದು. ಈ ವೃತ್ತಿಯ ಬಗ್ಗೆ ಚನ್ನಾಗಿ ಪರಿಶೀಲಿಸಿ ಪರೀಕ್ಷಿಸಿದರೆ ಆಗ ಯಾವತ್ತೂ ವೃತ್ತಿಯು ಕಲ್ಪನೆಯಿಂದ ತುಂಬಿರುವಂಥದ್ದಾಗಿದೆ, ಇದು ಲಕ್ಷ್ಯಕ್ಕೆ ಬರುವದು. ಕಲ್ಪನೆಯಿಂದ ಹುಟ್ಟಿದವುಗಳು ನಿಜವಿರುವದಿಲ್ಲ ಈ ರೀತಿಯಲ್ಲಿ ಪ್ರಕೃತಿಯು ನಿರ್ಮಾಣ ಮಾಡಿದ ಯಾವತ್ತೂ ದೃಶ್ಯವು ವಿಕಾರಉಳ್ಳದ್ದು ಮತ್ತು ಚಂಚಲವೆಂದು, ಖೊಟ್ಟಿ ಎಂದು ನಿಶ್ಚಯವಾಗುವದು. [೨೬] ಏಕಾಂಗಿ [ಮರ್ಯಾದಿತ-ವ್ಯಾಪಕವಲ್ಲದ] ಮತ್ತು ಪರಿಚ್ಛಿನ್ನ [ಪ್ರಕಟ, ಸ್ಪಷ್ಟ] ದೃಶ್ಯವು ಲಯ ಹೊಂದಿದ ಕೂಡಲೇ ಕೇವಲ ಶುದ್ಧ ನಿರ್ಗುಣವಾದ ಸ್ವಚ್ಛರೂಪ ಉಳಿಯುವದು. ಹೆಚ್ಚಿನ ವಿವೇಕ ಮಾಡಿದರೆ [ತಿಳಿದರೆ] ಆ ಸ್ವರೂಪವು ಸ್ವತಃ ನಾವೇ ಇರುವೆವು. ಅನ್ನುವ ಆತ್ಮ ಸಾಕ್ಷಾತ್ಕಾರವಾಗುವದು. ಪರಮಾರ್ಥದಲ್ಲಿ ಇದೊಂದು ಅತ್ಯಂತ ಆಳವಾದ ಮತ್ತು ಗಹನವಾದ ಗುರುತು ಇರುವದು· [೨೭] ಪರಮಾರ್ಥದಲ್ಲಿಯ ವಿಚಾರ ಒಂದು ಬೇರೆ ಪ್ರಕಾರದ್ದೇ ಇರುವದು. ವಸ್ತುವನ್ನು ತಿಳಿಯುವವನಾದ ಜ್ಞಾತಾ ಮತ್ತು ತಿಳಿಯಬೇಕಾದ ವಸ್ತು ಜ್ಞೇಯ· ಈ ಎರಡೂ ಈ ವಿಚಾರದಲ್ಲಿ ಬೇರೆಯಾಗಿ ಉಳಿಯುವದಿಲ್ಲ. ಈ ವಿಚಾರದಲ್ಲಿ ಜ್ಞಾತಾ ಸ್ವತಃ ಜ್ಞೇಯ ರೂಪನಾಗಿ ಹೋಗುವನು. ಜ್ಞಾತಾ ಜ್ಞೇಯದೊಂದಿಗೆ ಅನನ್ಯನಾಗಿ ಈ ಜ್ಞಾನ ಹೊಂದುವನು. [ಪರಮಾರ್ಥದ ಫಲ ಮೋಕ್ಷ, ಆದರೆ ಇಲ್ಲಿ ಮೋಕ್ಷಕ್ಕೆ ಮೋಕ್ಷ ಪದ ಕೊಡುವಂಥ ದೇವರ ದೇವರಾಗುವವರೇ ನಾವಿರುವೆವು, ಅನ್ನುವ **ಅನುಭವಯುಕ್ತ ಜ್ಞಾನವಾಗುವದು**] [೨೮]

ರಂಕ ಹೋತಾ ರಾಜಾ ಜಾಲಾ । ಬರೇ ಪಾಹಾತಾ ಪ್ರತ್ಯಯೊ ಆಲಾ ।
ರಂಕಪಣಾಚಾ ಗಲ್ಬಲಾ । ರಂಕೀ ಕರಾವಾ ॥೨೯॥

ವೇದ ಶಾಸ್ತ್ರೇ ಪುರಾಣೇ । ನಾನಾ ಸಾಧನೇ ನಿರೂಪಣೇ ।
ಸಿದ್ಧ ಸಾಧು ಜ್ಯಾಕಾರಣೇ । ನಾನಾ ಸಾಯಾಸ ಕರಿತೀ ॥೩೦॥

ತೇ ಬ್ರಹ್ಮರೂಪ ಆಪಣ ಚೀ ಆಂಗೇ । ಸಾರಾಸಾರವಿಚಾರಪ್ರಸಂಗೇ ।
ಕರಣೇ ನ ಕರಣೇ ಪಾಲುಗೇ । ಕಾಹೀ ಚ ನಾಹೀ ॥೩೧॥

ರಂಕ ರಾಜಆಜ್ಞೇಸಿ ಭ್ಯಾಲೇ । ತೇ ಚಿ ಪುಢೇ ರಾಜಾ ಜಾಲೇ ।
ಮಗ ತೇ ಭಯೋ ಚಿ ಉಡಾಲೇ । ರಂಕಪಣಾಸರಿಸೇ ॥೩೨॥

ವೇದೇ ವೇದಾಜ್ಞೇನೇ ಚಾಲಾವೇ । ಸಚ್ಛಾಸ್ತ್ರೇ ಶಾಸ್ತ್ರ ಅಭ್ಯಾಸಾವೇ ।
ತೀರ್ಥೇ ತೀರ್ಥಾಸ ಜಾವೇ । ಕೋಣ್ಯಾ ಪ್ರಕಾರೇ ॥೩೩॥

ಅಮೃತೇ ಸೇವಾವೇ ಅಮೃತ । ಅನಂತೆ ಪಾಹಾವಾ ಅನಂತ ।
ಭಗವಂತೇ ಲಕ್ಷಾವಾ ಭಗವಂತ । ಕೋಣ್ಯಾ ಪ್ರಕಾರೇ ॥೩೪॥

ಸಂತೇ ಅಸಂತ ತ್ಯಾಗಾವೇ । ನಿರ್ಗುಣೇ ನಿರ್ಗುಣಾಸೀ ಭಂಗಾವೇ ।
ಸ್ವರೂಪೇ ಸ್ವರೂಪೀ ರಂಗಾವೇ । ಕೋಣ್ಯಾ ಪ್ರಕಾರೇ ॥೩೫॥

ತಿಳಿಯಿರಿ. ಒಬ್ಬ ಭಿಕಾರಿ ಇದ್ದನು. ಅವನು ರಾಜನಾದನು. ಆಗ ಅವನು ಬಹಳ ಚನ್ನಾಗಿ ವಿಚಾರಿಸಿ ನೋಡಿಕೊಂಡ ಮೇಲೆ ಅವನಿಗೆ ತಾನು ಖರೋಖರ ರಾಜನಾಗಿರುವೆನೆಂಬುದರ ಪ್ರತ್ಯಕ್ಷ ಅನುಭವ ಬಂದಿತು. ಆಮೇಲೆ ಭಿಕಾರಿಗೆ ಭಿಕ್ಷೆ ಬೇಡುವ ಇತ್ಯಾದಿ ಧಡಪಡಿಕೆಯು ಕೆಲಸ ಶೋಭಿಸುವದಿಲ್ಲ, ಇದರಂತೆ ಆತ್ಮಜ್ಞಾನಿ ಪುರುಷನು ವೃತ್ತಿರೂಪ ಜ್ಞಾನದ ಬಗ್ಗೆ ಧಡಪಡಿಸುವದಿಲ್ಲ. [೨೯] ವೇದಗಳು, ಶಾಸ್ತ್ರಗಳು, ಪುರಾಣಗಳು, ನಾನಾ ಪ್ರಕಾರದ ಸಾಧನಗಳು ನಿರೂಪಣ ಮಾಡುವದು· ಸಿದ್ಧರು ಮಂತ್ರ ಸಾಧುಗಳು ಯಾವುದರ ಪ್ರಾಪ್ತಿಯಾಗಬೇಕೆಂಬ ಬಗೆಗೆ ಧಡಪಡ ಮಾಡುವರೋ (೩೦) ಆ ಬ್ರಹ್ಮಸ್ವರೂಪ ತಾನೇ ಸ್ವತಃವೇ ಇರುವೆನು, ಅನ್ನುವ ಸಾಕ್ಷಾತ್ ಅನುಭವ ಬಂದ ಮೇಲೆ ಕರ್ಮಾಕರ್ಮಗಳ ಸಂಬಂಧ ಮಂತ್ರ ಸಮಸ್ಯೆ ಉಳಿಯುವದಿಲ್ಲ. ಪ್ರಸಂಗ ಬಂದಾಗ್ಗೆ ಸಾರಾಸಾರ ವಿಚಾರ ಮಾಡಿ ಇದನ್ನು ಮಾಡುವದು ಸರಿಯೇ ಅಥವಾ ಅದನ್ನು ಮಾಡುವದು ಸರಿಯೇ, ಇದನ್ನು ಮಾಡುವದು ಯೋಗ್ಯವೇ ಅಥವಾ ಮಾಡದಿರುವದು ಯೋಗ್ಯವೇ, ಅನ್ನುವ ಪ್ರಶ್ನೆಗಳೆಲ್ಲ ನಿರರ್ಥಕ (ಸುಳ್ಳು) ವಾದವುಗಳು ಎಂದು ಅನಿಸಿ ಸತ್ಯ ವಸ್ತುವಿಗೆ ಯಾವ ಕರ್ತವ್ಯದ ಶಿಲ್ಕು ಉಳಿಯುವದಿಲ್ಲ. [೩೧] ಒಬ್ಬ ಬಡ ಮನುಷ್ಯನು ರಾಜಾಜ್ಞೆಗೆ ಅಂಜುತ್ತಿದ್ದನು. ಮುಂದೆ ಅವನೇ ಸ್ವತಃ ರಾಜನಾದನು· ರಾಜನಾದ ಕೂಡಲೇ ಅವನ ಬಡತನವು ಹೇಗೆ ಹೋಗಿ ಬಿಟ್ಟಿತೋ ಅದರಂತೆ ಅವನ ಅಂಜುವಿಕೆಯು ಭಯವೂಸಹ ಹೋಗಿ ಬಿಟ್ಟಿತು. ಇದರಂತೆ ಆತ್ಮಜ್ಞಾನ ಆಗುವವರೆಗೆ ವೇದ ಶಾಸ್ತ್ರಾದಿಗಳ ಆಜ್ಞೆಯನ್ನು ಪಾಲಿಸಬೇಕಾಗುವದು. ಆದರೆ ಸಾಕ್ಷಾತ್ಕಾರವಾದ ಮೇಲೆ ಜ್ಞಾನಿ ಪುರುಷನು ಸರ್ವವಿಧ ಆಚರಣೆಗಳ ವಿಧಿ ನಿಷೇಧಗಳ ಆಚೆಗೆ ಹೋಗುವನು, (೩೨) ಆತ್ಮಜ್ಞಾನಿ ಪುರುಷನು ಸ್ವತಃ ವೇದ ಶಾಸ್ತ್ರಗಳ ಮೂಲನಾಗುವನು. ತೀರ್ಥಗಳ ಸ್ವರೂಪವೇ ಆಗುವನು. ವೇದಗಳು ವೇದದ ಆಜ್ಞೆಯನ್ನು ಪಾಲಿಸುವದು, ವೇದಾಂತ ಶಾಸ್ತ್ರಗಳು ಶಾಸ್ತ್ರದ ಅಭ್ಯಾಸ ಮಾಡುವದು, ತೀರ್ಥವು ತೀರ್ಥಗಳ ಯಾತ್ರೆ ಮಾಡುವದು. ಇವೆಲ್ಲ ಘಟಿಸಲಿಕ್ಕೆ ಹೇಗೆ ಅಶಕ್ಯ ಮತ್ತು ಅಯೋಗ್ಯವೋ! ಅದರಂತೆಯೇ ಜ್ಞಾನಿ ಪುರುಷನಿಗೆ ದೃಶ್ಯದ ಬಂಧನ ಅಥವಾ ನಿರ್ಬಂಧ ಹಾಕುವದು ಯೋಗ್ಯವಲ್ಲ. ಇವನು ಸರ್ವತರಹದಿಂದ ಸರ್ವರೀತಿಯಿಂದ ಪೂರ್ಣ ಮುಕ್ತನೇ ಇರುವನು. (೩೩) ಇದರಂತೆಯೇ ಅಮೃತವು ಅಮೃತವನ್ನು ಕುಡಿಯುವದು. ಅನಂತನು ಅನಂತನನ್ನು ನೋಡುವದು, ಭಗವಂತನು ಭಗವಂತನ ಧ್ಯಾನ ಮಾಡುವದು· ಇವೆಲ್ಲ ಘಟಿಸುವದು ಶಕ್ಯವಿಲ್ಲ(೩೪) ಸಂತ ಅಂದರೆ ಸದಾ ಸರ್ವತ್ರ ಪೂರ್ಣವಾಗಿ (ಸ್ಥಿರವಾಗಿ) ವ್ಯಾಪಿಸಿ ಇರುವ ಬ್ರಹ್ಮಸ್ವರೂಪವೇ ಇರುವದು. ಅಸಂತ ಅಂದರೆ ಯಾವುದು ಎಂದೂ ಇರಲೇ ಇಲ್ಲವೋ ಅದು ಅಂಥ ಭಾಸ ರೂಪವಿರುವದು. ಯಾವುದು ಸದಾಕಾಲ ಇದ್ದೇ ಇರುವದೋ, ಅದು ಎಂದೂ ಯಾವಾಗಲೂ ಇಲ್ಲವೇಇಲ್ಲವೋ ಅದನ್ನು ತ್ಯಜಿಸಬೇಕು. ನಿರ್ಗುಣವು ನಿರ್ಗುಣದ ಭಂಗ ಮಾಡಬೇಕು· ಸ್ವಸ್ವರೂಪವು ಸ್ವಸ್ವರೂಪದಲ್ಲಿಯೇ ತಲ್ಲೀನಗೊಳ್ಳಬೇಕು. ಇವೆಲ್ಲ ಘಟಿಸಲಿಕ್ಕೆ ಶಕ್ಯವಿರುವದಿಲ್ಲ. (೩೫)

ಅಂಜನೇ ಲ್ಯಾವೇ ಅಂಜನ। ಧನೇ ಸಾಧಾವೇ ಧನ।
ನಿರಂಜನೇ ನಿರಂಜನ। ಕೈಸೆ ಅನುಭವಾವೇ ॥೩೬॥

ಸಾಧ್ಯ ಕರಾವೇ ಸಾಧನಾಸೀ। ಧ್ಯೆಯೋ ಧರಾವೇ ಧ್ಯಾನಾಸೀ।
ಉನ್ಮನೇ ಆವರಾವೇ ಮನಾಸೀ। ಕೋಣ್ಯಾ ಪ್ರಕಾರೇ ॥೩೭॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
''ಸ್ಥಿತಿ ನಿರೂಪಣ'' ನಾಮ ಸಮಾಸ ದಶಮ ॥

—ದಶಕ ನವಮ ಸಮಾಪ್ತ—

ಅಂಜನವು ಸ್ವತಃಕ್ಕೆ ಅಂಜನ ಹಾಕಿಕೊಳ್ಳುವದು. ಧನದಿಂದಲೇ ಧನದ ಪ್ರಾಪ್ತಿ ಮಾಡಿಕೊಳ್ಳುವದು. ಶುದ್ಧ ಪರಮಾತ್ಮ ಸ್ವರೂಪವೇ ಅದರಂಥದೇ ಪರಮಾತ್ಮ ಸ್ವರೂಪದಂಥ ಅನುಭವ ಪಡೆಯುವದು. ಇವೆಲ್ಲ ಘಟಿಸುವದುಶಕ್ಯವಿಲ್ಲ(೩೭)ಯಾವುದುಸ್ವತಃ ಸಾಧ್ಯವಿರುವದೋ ಅದರಿಂದಲೇ(ಅದೇ)ಸಾಧನ ಮಾಡಬೇಕು.ಯಾವುದು ಸ್ವತಃ ಧ್ಯೇಯವಿರುವದೋ ಅದರಿಂದಲೇ (ಅದೇ) ಧ್ಯಾನವನ್ನು ಹಚ್ಚಬೇಕು. ಯಾವನು ಉನ್ಮನನಿರುವನೋ (ಈಶಚಿಂತನದಲ್ಲಿ ನಿಮಗ್ನನಿರುವನು ಅರ್ಥಾತ್ ವಿರಕ್ತನು) ಅವನು ಮನವನ್ನು ಆವರಿಸಬೇಕು. ಈತಾ ಅಂದದ್ದಾದರೆ ಇವೆಲ್ಲ ಸಂಗತಿಗಳು ಘಟಿಸುವದು ಶಕ್ಯವಿಲ್ಲ. ಹೇಳಬೇಕಾದದ್ದರ ಒಟ್ಟು ಭಾವಾರ್ಥವೇನಂದರೆ ಆತ್ಮಸಾಕ್ಷಾತ್ಕಾರಿಯಾದ ಜ್ಞಾನಿಪುರುಷ ತ್ರಿಗುಣದ ಮತ್ತು ಪಂಚಭೂತಗಳ ಕಕ್ಷೆಯನ್ನು ಮೀರಿ ಆಚೆಗೆ ಹೋಗಿರುವನು. ದೃಶ್ಯದಲ್ಲಿಯ ಯಾವತ್ತೂ ಕಲ್ಪನೆಗಳು ಅಲ್ಲಿ ನಿರರ್ಥಕವಾಗುವವು. ನಾವು ಇದರ ಬಗ್ಗೆ ಯಾವ ಯಾವವೋ ಮತ್ತು ಏನೇನೋ ಕಲ್ಪನೆಯನ್ನು ಮಾಡಿದರೂ ಸಹ ಅವೆಲ್ಲವೂ ದೇಹಬುದ್ಧಿಯವಾದದ್ದರಿಂದ ದ್ವೈತಪ್ರಧಾನವಿರುವವು. ಮತ್ತು ಅದಾದರೋ ಸ್ವಸ್ವರೂಪವು ಸಂಪೂರ್ಣ ಅದ್ವೈತದ ಸಾಮ್ರಾಜ್ಯದಲ್ಲಿ ಇರುವದು. ಆದ್ದರಿಂದ ಇಂಥ ಪರಸ್ಪರ ವಿರೋಧಿ ಭಾಷೆಯಿಂದ ಅವರ ಸ್ಥಿತಿಯ ಕಲ್ಪನೆಯನ್ನು ತಂದುಕೊಡಬೇಕಾಗುವದು. (೩೭)

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಒಂಭತ್ತನೇ ದಶಕದಲ್ಲಿಯ
"ಸ್ಥಿತಿ ನಿರೂಪಣ"ವೆಂಬ ಹತ್ತನೆಯ ಸಮಾಸವು ಮುಕ್ತಾಯವಾಯಿತು.

● ●

**ಮುಖ್ಯ ತಾತ್ಪರ್ಯ:–** ಪರಬ್ರಹ್ಮ ಸ್ವರೂಪವೇ ಆದ ಸಿದ್ಧನಿಗೆ ಸಾಧನಗಳನ್ನು ಮಾಡಬೇಕೆಂದು ಅಂದರೆ ಅದು ವೇದಗಳು ವೇದಾಜ್ಞೆಯನ್ನು ಪಾಲಿಸಬೇಕೆಂದು ಹೇಳಿದಂತೆ ಆಗುವದಿಲ್ಲವೇ ಹೇಗೆ? ಶಾಸ್ತ್ರಗಳು ಶಾಸ್ತ್ರಗಳ ಅಭ್ಯಾಸ ಮಾಡಬೇಕೆಂದು ಹೇಳಿದಂತೆ ಆಗುವದಿಲ್ಲವೇ ಹೇಗೆ? ಅಥವಾ ತೀರ್ಥಗಳು ತೀರ್ಥಗಳಿಗೆ ಹೋಗುವದು ಸರಿಯೇ? ಸಾಧ್ಯವೇ ಹೇಗೆ? ಅಮೃತವೇ ಅಮೃತಪಾನ ಮಾಡಬೇಕೇ ಹೇಗೆ? ಅನಂತನೇ ಅನಂತನನ್ನು ಧ್ಯಾನಿಸಬೇಕೇ ಹೇಗೆ? ಸ್ವತಃ ಭಗವಂತನೇ ಭಗವಂತನ ಸ್ಮರಣೆ ಭಜನೆ ಮಾಡುವದುಂಟೇ ಹೇಗೆ? ಸ್ವಯಂ ಸದ್ವಸ್ತುವೇ ಸತ್ತ್ವವನ್ನು ತ್ಯಜಿಸುವದು ಶಕ್ಯವೇ ಹೇಗೆ? ನಿರ್ಗುಣ ಸ್ವರೂಪದೊಡನೆ ಸ್ವತಃ ನಿರ್ಗುಣದ ಐಕ್ಯತೆ ಆಗುವದು ಹೇಗೆ? ಹಾಗೂ ಸ್ವತಃ ಸ್ವರೂಪವೇ ಸ್ವರೂಪದಲ್ಲಿ ಏಕತೆ (ಲೀನತೆ)ಆಗಲುಂಟೇ? ಸ್ವಯಂ ಅಂಜನವೇ ತನ್ನ ಕಣ್ಣಲ್ಲಿ ಅಂಜನ ಹಾಕಿಕೊಳ್ಳುವದು ಸಾಧ್ಯವೇ ಹೇಗೆ? ಧನವೇ ಧನಗಳಿಸಬೇಕೇನು? ನಿರಂಜನ ವಸ್ತುವೇ ನಿರಂಜನವನ್ನು ಅನುಭವಿಸುವದೇ ಹೇಗೆ? **ತಾತ್ಪರ್ಯ:–**ಸಾಧ್ಯವಸ್ತುವು ಸಾಧನವನ್ನು ಮಾಡಲಿಕ್ಕೆ ಆಗಲಾರದು. ಧ್ಯೇಯ-ಧ್ಯೇಯಸ್ವರೂಪ ಧ್ಯಾನ ಮಾಡಲಾರದು. ಮತ್ತು ಸ್ವತಃ ಉನ್ಮನಿ ಸ್ಥಿತಿಯೇ ಮನಸ್ಸನ್ನು ಅಂಕೆಯಲ್ಲಿಡುವ ಕಾರಣವೇ ಇರುವದಿಲ್ಲ.

● ●

## ದಶಕ ೧೦. “ಜಗಜ್ಯೋತೀ” ನಾವು

ಈ ದಶಕದಲ್ಲಿ ಶ್ರೀಸಮರ್ಥರು ವೇದಾಂತದಲ್ಲಿಯ ಮೂರು ಮಹತ್ವದ ಸಿದ್ಧಾಂತಗಳನ್ನು ತಿಳಿಸಿಕೊಟ್ಟಿರುವರು. [೧ನೆಯ ಸಿದ್ಧಾಂತ] ಜಗತ್ತಿನೊಳಗೆ ಎಲ್ಲ ಕಡೆಗೂ ಒಂದು ಪ್ರಚಂಡ ಶಕ್ತಿ ಸಮರ್ಥ [ಬಲವಂತ]ವಾದ ಮತ್ತು ಜ್ಞಾನ ಸಂಪನ್ನವಾದ ಅರಿವು ಕಾರ್ಯ ಮಾಡುತ್ತದೆ. ಇದರ ಹೆಸರು ಜಗತ್ + ಜ್ಯೋತಿ ಎಂದು ಇರುವದು. ಉಪನಿಷತ್‌ದಲ್ಲಿ ಬರುವ ಹಿರಣ್ಯ-ಗರ್ಭವೆಂಬುದು ಇದೇ ಆಗಿರುವದು. **[೨ನೆಯ ಸಿದ್ಧಾಂತ]** ಪಿಂಡ ಮತ್ತು ಬ್ರಹ್ಮಾಂಡ ಇವೆರಡಕ್ಕೂ ಪ್ರಳಯ [ನಾಶ]ವಿದೆ. ನಮ್ಮ ದೇಹ ಹೇಗೆ ನಾಶವಾಗುವದೋ ಹಾಗೆಯೇ ಯಾವತ್ತೂ ದೃಶ್ಯ ವಿಶ್ವವೂ ಸಹ ಸತತವಾಗಿ ಪ್ರಳಯದ ಕಡೆಗೆ ಅಥವಾ ವಿನಾಶದ ಕಡೆಗೆ ಓಡುತ್ತಿರುವದು. ಆದ್ದರಿಂದ ಇವೆಲ್ಲವೂ ಭ್ರಮರೂಪವೆಂದು ತಿಳಿಯಬೇಕು. ಕೇವಲ ನಿಶ್ಚಲ ಬ್ರಹ್ಮವೊಂದೇ ಅಂತಿಮ ಸತ್ಯವೆಂದು ತಿಳಿಯಬೇಕು. [೩ನೆಯ ಸಿದ್ಧಾಂತ] ಮಾಯಾ ಅಂದರೆ ಸ್ವರೂಪದ ಮರೆವೇ ಇರುವದು. ಇದೇ ಪಾಪವು. ಬ್ರಹ್ಮವೆಂದರೆ ಸ್ವರೂಪದ ಸ್ಮರಣವು. ಈ ಸ್ಮರಣವೇ ಪುಣ್ಯವು. ಈ ಮೂರು ಸಿದ್ಧಾಂತದ ಕೂಡ ಶ್ರೀ ಸಮರ್ಥರು ಸಾಧನೆಯ ಸಂಬಂಧದ ಬಗ್ಗೆ ನಾಲ್ಕು ಮಹತ್ವದ ಮಾತುಗಳನ್ನು ಹೇಳಿರುವರು. [೧ನೆಯ ಮಾತು] ದೊಡ್ಡದೊಡ್ಡ ಸಾಧು ಸಂತರು ದೇಹವಿಟ್ಟ ಮೇಲೆ ಸಹ ಅವರ ಸಾಮರ್ಥ್ಯದ ಬಗ್ಗೆ ಪ್ರತ್ಯಕ್ಷವಾಗಿ ನಮಗೆ ಅನುಭವವು ಬರುವದು. ಸತ್ಪುರುಷರು ಅತ್ಯಂತ ನಿರ್ವಾಸನರಿರುವರು. ಜೀವಂತವಿದ್ದಾಗಲೇ ಅವರು ಬ್ರಹ್ಮ ಸ್ವರೂಪವಾಗಿರುವದರಿಂದ ದೇಹ ಬಿದ್ದ ಮೇಲೂ ಸಹ ಅವರಲ್ಲಿ ಎಳ್ಳಷ್ಟು ಅಂತರ [ಹೆಚ್ಚು ಕಡಿಮೆ] ಆಗುವದಿಲ್ಲ. ಅಂತೆಯೇ ಯಾರು ಅವರಲ್ಲಿ ಶುದ್ಧಭಾವ ಇಡುವರೋ ಅವರನ್ನು ಅವರು ಸದಾಕಾಲವೂ ಸಂಭಾಳಿಸುವರು. [೨ನೆಯ ಮಾತು] ಭಜನೆಯನ್ನು

ಎಲ್ಲರೂ ಮಾಡುತ್ತಾರೆ. ಆದರೆ ಯಾವ ಕಾಮನೆಯನ್ನೂ ಇಟ್ಟುಕೊಳ್ಳದೇ ಭಕ್ತಿ ಮಾಡುವದು ಬಹಳ ಶ್ರೇಷ್ಠವಾದ ದ್ದಿರುವದು. ನಿಷ್ಕಾಮ ಭಕ್ತಿಯಲ್ಲಿ ವಿಲಕ್ಷಣಸಾಮರ್ಥ್ಯವಿರುವದು ಕಂಡು ಬಂದಿದೆ. ನಿಷ್ಕಾಮ ಭಕ್ತಿ ಮತ್ತು ಬ್ರಹ್ಮಜ್ಞಾನ ಇವುಗಳ ಜೋಡು ಕೂಡಿದರೆ ಇದಕ್ಕೆ ತ್ರಿಭುವನದಲ್ಲಿ ತುಲನಾ ಮಾಡಲು ಸಾಧ್ಯವೇ ಇಲ್ಲ. [೩ನೆಯ ಮಾತು] ಆತ್ಮಜ್ಞಾನವಾಗಿದೆ ಅನ್ನಲಿಕ್ಕೆ ಆಧಾರ [ಪುರಾವೆ] ಯಾವುದು? ಪರಮೇಶ್ವರನನ್ನು ಗುರುತಿಸಿದನು. ನಾನು ನಿಜವಾಗಿ ಯಾರು? ಇದು ತಿಳಿಯಿತು. ಬ್ರಹ್ಮಾಂಡವನ್ನು ಯಾರು ಮಾಡಿದರು? ಮತ್ತು ಯಾವುದರಿಂದ ತಯಾರಿಸಿದರು? ಇವೆಲ್ಲವೂ ತಿಳಿಯಿತು. ಮುಖ್ಯಕರ್ತಾ ಯಾರು? ಅನ್ನುವದೂ ತಿಳಿಯಿತು. ಪಾಪದ ಖಂಡನೆ ಆಯಿತು. ಮತ್ತು ಜನ್ಮ ಯಾತನಾ ತಪ್ಪಿತು. ಇಷ್ಟೆಲ್ಲ ಆದ ಕೂಡಲೇ ಆತ್ಮಜ್ಞಾನವಾಯಿತು ಎಂದು ಖಾತ್ರಿಯಿಂದ ತಿಳಿಯಬೇಕು. [೪ನೆಯ ಮಾತು] ಚನ್ನಾಗಿ ಶೋಧಿಸಿ ನೋಡಿ ಸದ್ಗುರುವನ್ನು ಮಾಡಿಕೊಳ್ಳಬೇಕು. ಅಂಥ ಸದ್ಗುರುವಿನ ಸಂಗತಿಯಲ್ಲಿ ಇರಬೇಕು. ಶ್ರವಣ, ಮನನ, ನಿಧಿಧ್ಯಾಸ ಇವನ್ನು ಸಾಧಿಸಿಕೊಳ್ಳಬೇಕು. ಮತ್ತು ರೋಖಡಿ ಆತ್ಮಸಾಕ್ಷಾತ್ಕಾರವನ್ನು ಮಾಡಿಕೊಳ್ಳಬೇಕು. ಇವೆಲ್ಲ ಆಗಲಿಕ್ಕೆ ಗುರುವಿನಲ್ಲಿಡುವ ಅಚಲ ಶ್ರದ್ಧೆ ಮತ್ತು ಅವನ ಸೇವೆಯಿಂದ ಅವನನ್ನು ಸಂತುಷ್ಟಪಡಿಸಿ ಕೃಪಾವಂತರಾಗಿ ಆತ್ಮೋದ್ಧಾರ ಮಾಡಿಕೊಳ್ಳಬೇಕು.

## ದಶಕ ೧೦ : ಸಮಾಸ ೧ : ಅಂತಃಕರಣೈಕ ನಿರೂಪಣ

ಸಚೇತನ ಪ್ರಾಣಿಗಳು ಜೀವಂತವಿರುವವು. ಜೀವಂತತನವು ಸದೈವ [ಯಾವಾಗಲೂ]ವೂ ಅರಿವಿನೊಂದಿಗೆ ಕಾಣುವದು [ಇರುವದು]. ಅರಿವಿನ ವ್ಯಕ್ತ ಸ್ವರೂಪವು ಪ್ರಾಣಿಗಳಲ್ಲಿಯ ಬೇರೆ ಬೇರೆ ಪ್ರೇರಣೆಗಳಿಂದಾಗಿ ಅನುಭವಕ್ಕೆ ಬರುವದು. ಉದಾ:-ನಾಯಿ, ಬೆಕ್ಕು, ಆನೆ, ಚಿಗರೆ, ಹಾವು, ಗಿಳಿ, ಪಾರಿವಾಳ, ಮೀನ ಮತ್ತು ಮನುಷ್ಯರು ಇವೆಲ್ಲ ಪ್ರಾಣಿಗಳು ಎಷ್ಟೆಷ್ಟೋ ಭಿನ್ನಶರೀರದವು ಮತ್ತು ಸ್ವಭಾವದವು ಇರುವವು. ಆದರೆ ಅವುಗಳಲ್ಲಿ ಕಾರ್ಯಮಾಡುವಂಥ ಪ್ರೇರಣೆಯನ್ನು ನೋಡಿದ್ದಾದರೆ ಅವು ಸ್ವಲ್ಪು ಹೆಚ್ಚು ಕಡಿಮೆ ಪ್ರಮಾಣದಲ್ಲಿ ಒಂದೇ ಇರುವವು ಎಂದು ಕಾಣಿಸುವದು. ಎಲ್ಲ ಪ್ರಾಣಿಗಳೂ ಅನ್ನವನ್ನು ಹುಡುಕುವವು. ನೀರಡಿಕೆಯನ್ನು ತೀರಿಸಿಕೊಳ್ಳುವವು. ನಿದ್ರೆ ಮಾಡುವವು. ಮತ್ತು ವಿಶ್ರಾಂತಿಯನ್ನು ಪಡೆಯುವವು. ಕಾಮ ವಾಸನೆಯನ್ನು ಭೋಗಿಸುವವು. ಪ್ರೇಮ ಮಾಡುವವು ಎರಡನೆಯವರ ಮೇಲೆ ಅವಲಂಬಿಸಿ ಇರುವವು. ಅಂಜಿ ಓಡುವವು. ದುಃಖ ನೋವುಗಳನ್ನು ಅನುಭವಿಸುವವು. ಮತ್ತು ಸಹನೆ ಮಾಡಿಕೊಳ್ಳುವವು. ಪರಸ್ಪರರಲ್ಲಿ ಸಂಘರ್ಷ ಮಾಡುವವು. ಸಹಕಾರ ಮಾಡುವವು ಮಕ್ಕಳುಮರಿಗಳ ಮೇಲೆ ಪ್ರೇಮ ಮಾಡುವವು. ಇದರಂತೆ ಕ್ರೋಧ ಮತ್ತು ದ್ವೇಷವನ್ನೂ ಮಾಡುವವು. ಇವುಗಳಮೇಲಿಂದ ನೋಡಿದರೆ ಎಲ್ಲ ಜೀವಂತಪ್ರಾಣಿಗಳು ಅಂತರ್ಯಾಮದಲ್ಲಿ ಒಂದೇ ಒಂದು ಅರಿವು ವಿಭಾಗಿಸಲ್ಪಟ್ಟಿದೆ.ಅಥವಾ ಹಂಚಲ್ಪಟ್ಟಿದೆ ಎಂದು ಅನ್ನಲಿಕ್ಕೆ ಅಡ್ಡಿ ಇಲ್ಲ. ಎಲ್ಲರ ಅಂತಃಕರಣ ಒಂದೇ ಇರುವದು ಅನ್ನುವ ಶಬ್ದದಿಂದ ಶ್ರೀಸಮರ್ಥರು ಈ ಸಮಾಸದಲ್ಲಿ ಅರಿವಿನ ಬಗ್ಗೆ ಸಾಮಾನ್ಯವಾದ ತಿಳುವಳಿಕೆಯನ್ನು ಕೊಡುವರು.

### ದಶಕ ದಶಮ : ಸಮಾಸ ಪ್ರಥಮ : ಅಂತಃಕರಣ ಯೇಕ ನಿರೂಪಣ

॥ಶ್ರೀರಾಮ॥ ಸಕಳಾಚೇ ಅಂತಃಕರಣ ಯೇಕ । ಕಿಂವಾ ಯೇಕ ನವ್ಹೇ ಅನೇಕ ।
ಐಸೇ ಹೇ ನಿಶ್ಚಯಾತ್ಮಕ । ಮಜ ನಿರೋಪಾವೇ ॥೧॥

ಐಸೇ ಶ್ರೋತಯಾನೇ ಪುಸಿಲೇ । ಅಂತಃಕರಣ ಯೇಕ ಕೀ ವೇಗಳಾಲೇ ।
ಯಾಚೇ ಉತ್ತರ ಐಕಿಲೇ । ಪಾಹಿಜೆ ಶ್ರೋತೀ ॥೨॥

ಸಮಸ್ತಾಚೆ ಅಂತಃಕರಣ ಯೇಕ । ನಿಶ್ಚಯೋ ಜಾಣಾವಾ ನೇಮಕ ।
ಹಾ ಪ್ರತ್ಯಯಾಚಾ ವಿವೇಕ । ತುಜ ನಿರೋಪಿಲಾ ॥೩॥

ಶ್ರೋತಾ ಮ್ಹಣೆ ವಕ್ತಯಾಸೀ । ಅಂತಃಕರಣ ಯೇಕ ಸಮಸ್ತಾಸೀ ।
ತರೀ ಮಿಳೇನಾ ಯೇಕಯೇಕಾಸೀ । ಕಾಯೆನಿಮಿತ್ಯ ॥೪॥

ಯೇಕ ಜೇವಿತಾ ಅವಘೇ ಧಾಲೇ । ಯೇಕ ನಿವತಾ ಅವಘೇ ನಿವಾಲೇ ।
ಯೇಕ ಮರತಾ ಅವಘೇ ಮೆಲೇ । ಪಾಹಿಜೆತ ಕೀ ॥೫॥

ಯೇಕ ಸುಖೀ ಯೇಕ ದುಃಖೀ । ಐಸೇ ವರ್ತತೇ ಲೋಕಿಕೀ ।
ಯೇಕಾ ಅಂತಃಕರಣಾಚೀ ವೊಳಖೀ । ಕೈಸೀ ಜಾಣಾವೀ ॥೬॥

ಜನೀ ವೇಗಳಾಲೀ ಭಾವನಾ । ಕೋಣಾಸ ಕೋಣೀ ಚ ಮಿಳೇನಾ ।
ಮ್ಹಣೌನ ಹೇ ಅನುಮಾನಾ । ಯೇತ ನಾಹೀ ॥೭॥

ಅಂತಃಕರಣ ಯೇಕ ಅಸತೇ । ತರೀ ಯೇಕಾಚೇ ಯೇಕಾಸ ಕಳೋ ಯೇತೇ ।
ಕಾಹೀ ಚೋರಿತಾಚ ನ ಯೇತೆ । ಗೌಪ್ಯ ಗುಹ್ಯ ॥೮॥

ಯಾಕಾರಣೇ ಅನುಮಾನೇನಾ । ಅಂತಃಕರಣ ಯೇಕ ಹೇ ಘಡೇನಾ ।
ವಿರೋಧ ಲಾಗಲಾ ಜನಾ । ಕಾಯೆ ನಿಮಿತ್ಯ ॥೯॥

ಸರ್ಪ ಡಸಾಯಾ ಯೇತೋ । ಪ್ರಾಣೀ ಭೇಊನ ಪಳತೋ ।
ಯೇಕ ಅಂತಃಕರಣ ತರೀ ತೋ । ವಿರೋಧ ನಸಾವಾ ॥೧೦॥

ಐಸೀ ಶ್ರೋತಯಾಚೀ ಆಶಂಕಾ । ವಕ್ತಾ ಮ್ಹಣೆ ಚಳೋ ನಕಾ ।
ಸಾವಧ ಹೋಊನ ಐಕಾ । ನಿರೂಪಣ ॥೧೧॥

## ದಶಕ ೧೦ : ಸಮಾಸ ೧ : ಅಂತಃಕರಣ ಒಂದೇ (ನುಡಿ ೩೧)

**ಶ್ರೋತಾನ ಪ್ರಶ್ನೆ**:- ಯಾವತ್ತೂ ಪ್ರಾಣಿಗಳ ಅಂತಃಕರಣ ಒಂದೇ ಇರುವದೋ ಹೇಗೆ? ಅಥವಾ ಬೇರೆ ಬೇರೆ ಇರುವವೊ? ಈ ಪ್ರಶ್ನೆಗೆ ತಾವು ನನಗೆ ನಿಃಸಂಶಯವಾದ ಉತ್ತರವನ್ನು ಕೊಡಬೇಕು. (೧) **ವಕ್ತಾನ ಉತ್ತರ**:- ಎಲ್ಲವುಗಳ ಅಂತಃಕರಣ ಒಂದೇ ಅದೆಯೋ ಅಥವಾ ಬೇರೆ ಬೇರೆ ಇರುವವೋ ಅನ್ನುವ ಪ್ರಶ್ನೆಯನ್ನು ಶ್ರೋತಾ ಮಾಡಿದನು. ಅದಕ್ಕೆ ಉತ್ತರವನ್ನು ಹೇಳುವೆ ಶ್ರೋತಾರು ಕೇಳಬೇಕು. (೨) ನೀವು ಯಾವ ಸಂಶಯ ವನ್ನೂ ತೆಗೆದುಕೊಳ್ಳದೇ ಕೇಳಿರಿ. ಯಾವತ್ತರ [ಸರ್ವದರ] ಅಂತಃಕರಣ ಒಂದೇ ಇರುವದು. ಇದನ್ನು ದೃಢವಾಗಿ ನಂಬಿರಿ. ಯಾಕಂದರೆ ಇದು ನನ್ನ ಅನುಭವವಿರುವದು. ಮತ್ತು ಅದನ್ನೇ ನಾನು ನಿಮಗೆ ಹೇಳಿದೆನು. (೩) ಇದರ ಮೇಲೆ ಶ್ರೋತಾನು ಪುನಃ ಪ್ರಶ್ನೆ ಮಾಡಿದನು:ಇದನ್ನು ಕೇಳಿ ಶ್ರೋತಾ ವಕ್ತಾನಿಗೆ ವಿಚಾರಿಸುವದೇನಂದರೆ: ತಮ್ಮ ಉತ್ತರದಿಂದ ನನಗೆ ಅನಿಸುವ ಸಂಶಯವೇನಂದರೆ:-ಎಲ್ಲರ ಅಂತಃಕರಣ ಒಂದೇ ಇದ್ದದ್ದೇ ನಿಜವಾದರೆ ಒಂದರಲ್ಲಿ ಅಥವಾ ಒಬ್ಬರಲ್ಲಿಯ ಅಂತಃಕರಣವು ಇನ್ನೊಂದರಲ್ಲಿಯ ಅಥವಾ ಇನ್ನೊಬ್ಬರ ಅಂತಃಕರಣದೊಂದಿಗೆ ಸಮರಸವಾಗುವದಿಲ್ಲ. ಒಂದೇ ರೀತಿಯದು ಇರುವದಿಲ್ಲ. ಇದರ ಕಾರಣವೇನು? (೪) ಸರ್ವದರ ಅಂತಃಕರಣ ಒಂದೇ ಇರುವದೇ ನಿಜವಾದರೆ ಒಬ್ಬನು ಉಂಡರೆ ಎಲ್ಲರ ಹೊಟ್ಟೆ ತುಂಬಲಿಕ್ಕೇ ಬೇಕು. ಒಬ್ಬನು ಶಾಂತನಾದರೆ ಎಲ್ಲರೂ ಶಾಂತರಾಗಬೇಕು. ಒಬ್ಬನು ಸತ್ತರೆ ಎಲ್ಲರೂ ಸಾಯಬೇಕು. (೫) ಜಗತ್ತಿನಲ್ಲಿ ಒಬ್ಬ ಸುಖಿ ಇದ್ದರೆ ಇನ್ನೊಬ್ಬ ದುಃಖಿ ಇರುವನು. ಇದು ಪ್ರತ್ಯಕ್ಷವಾಗಿ ಕಾಣುವದು.ಹೀಗೆ ಕಾಣಿಸಿದರೂ ಸಹ ಎಲ್ಲರ ಅಂತಃಕರಣ ಒಂದೇ ಇರುವದು ಎಂದು ಹೇಗೆ ತಿಳಿಯಲಿಕ್ಕೆ ಬಂದೀತು? (೬) ಪ್ರತಿಯೊಬ್ಬ ಮನುಷ್ಯನ ಭಾವನೆಯು ಬೇರೆ ಬೇರೆ ಇರುವದು. ಹಾಗೂ ಒಬ್ಬನು ಇನ್ನೊಬ್ಬನೊಂದಿಗೆ ಒಂದೇ ಅಭಿಪ್ರಾಯ ಹೊಂದಿರುವದು ಸಹ ಕಂಡು ಬರುವದಿಲ್ಲ. ಆದ್ದರಿಂದ ಎಲ್ಲರ ಅಂತಃಕರಣ ಒಂದೇ ಇರುವದೆಂದು ಅನ್ನುವದು ನಮ್ಮ ಮನಸ್ಸಿಗೆ ಒಪ್ಪಿಗೆಯಾಗಲೊಲ್ಲದು. (೭) ಎಲ್ಲರ ಅಂತಃಕರಣ ಒಂದೇ ಇದ್ದರೆ ಒಬ್ಬನ ಮನದಲ್ಲಿ ಇದ್ದದ್ದು ಇನ್ನೊಬ್ಬನಿಗೆ ತಿಳಿಯಬೇಕಾಗಿತ್ತು. ಇದರಿಂದ ಯಾವದೇ ಒಂದು ಗುಪ್ತ ಸಂಗತಿಯನ್ನು ಮುಚ್ಚಿಡಲು ಬರುತ್ತಲೇ ಇರಲಿಲ್ಲ.(೮) ಅಂತೂ ಇದರ ಬಗ್ಗೆ ಅನುಭವ ಬರುವದಿಲ್ಲ. ಆದ್ದರಿಂದ ಇದೆಲ್ಲ ತರ್ಕಕ್ಕೆ ಸರಿಹೊಂದುವದಿಲ್ಲ. ಅಂತೆಯೇ ಎಲ್ಲರ ಅಂತಃಕರಣ ಒಂದೇ ಇರುವದು ಶಕ್ಯವಿಲ್ಲ. ಒಂದೇ ಇದ್ದದ್ದೇ ಆದರೆ ಲೋಕದ ಜನರಲ್ಲಿ ಪರಸ್ಪರ ವಿರೋಧ ನಿರ್ಮಾಣವಾಗುವದು, ಹಾಗೂ ಮೇಲಿಂದ ಮೇಲೆ ಸಂಘರ್ಷಗಳಾಗುವದು ತಪ್ಪುತ್ತಿತ್ತು. ಜನ ಏಕಾಭಿಪ್ರಾಯದವರಾಗುತ್ತಿದ್ದರು. ಆದರೆ ತದ್ವಿರುದ್ಧ ಜನರಲ್ಲಿ ವಿರೋಧ ಸಂಘರ್ಷಗಳು ಕಂಡು ಬರುವವು. ಇದಕ್ಕೆ ಕಾರಣವೇನು? (೯) ಹಾವು ಕಡಿಯಲು ಬಂದರೆ ಪ್ರಾಣಿಮಾತ್ರರು ಅಂಜಿ ಗಾಬರಿಯಾಗಿ ದೂರ ಓಡಿ ಹೋಗುವರು. ಅದೇ ಅಂತಃಕರಣ ಒಂದೇ ಇದ್ದದ್ದೇ ಆದರೆ ಪರಸ್ಪರರಲ್ಲಿ ಹೀಗೆ ವಿರೋಧ ಕಂಡು ಬರುತ್ತಿರಲಿಲ್ಲ. (೧೦) ಇವೆಲ್ಲ ಶ್ರೋತಾಜನರ ಶಂಕೆಗಳು. ಇವಕ್ಕೆ ವಕ್ತಾನು ಶಂಕಾ ನಿರಸನ ಮಾಡುವ ಉದ್ದೇಶದಿಂದ ಅನ್ನುತ್ತಾನೆ. ಶ್ರೋತಾ ಜನ ಒಮ್ಮೆಲೇ ಗಡಬಡಿಸಿ ಹೋಗುವ ಕಾರಣವಿಲ್ಲ. ಇವಕ್ಕೆಲ್ಲ ಉತ್ತರ ಕೊಡುವೆ. ಲಕ್ಷ್ಯಪೂರ್ವಕ ಕೇಳಿರಿ. (೧೧)

ಅಂತಃಕರ್ಣ ಮ್ಹಣಿಜೆ ಜಾಣೀವ । ಜಾಣೀವ ಜಾಣತಾ ಸ್ವಭಾವ ।
ದೇಹ ರಕ್ಷಣಾಚಾ ಉಪಾವ । ಜಾಣತೀ ಕಳಾ ॥೧೨॥

ಸರ್ಪ ಜಾಣೋನ ಡಂಖೂ ಆಲಾ । ಪ್ರಾಣೀ ಜಾಣೋನ ಪಳಾಲಾ ।
ದೋಹೀಕಡೆ ಜಾಣೀವೆಲಾ । ಬರೇ ಪಾಹಾ ॥೧೩॥

ದೋಹೀಕಡೆ ಜಾಣೀವೆಸಿ ಪಾಹಿಲೇ । ತರೀ ಅಂತಃಕರ್ಣ ಯೇಕಚಿ ಜಾಲೇ ।
ವಿಚಾರಿತಾ ಪ್ರತ್ಯಯೋ ಆಲೇ । ಜಾಣೀವರೂಪೇ ॥೧೪॥

ಜಾಣೀವ ರೂಪೇ ಅಂತಃಕರ್ಣ । ಸಕಳಾಚೇ ಯೇಕ ಹೇ ಪ್ರಮಾಣ ।
ಜೀವಮಾತ್ರಾಸ ಜಾಣಪಣ । ಯೇಕ ಚಿ ಅಸೆ ॥೧೫॥

ಯೇಕೆ ದೃಷ್ಟೀಚೇ ದೇಖಣೇ । ಯೇಕೆ ಜಿವ್ಹೇಚೇ ಚಾಖಣೇ ।
ಐಕಣೇ ಸ್ಪರ್ಶಣೇ ವಾಸ ಘೇಣೇ । ಸರ್ವತ್ರಾಸ ಯೇಕ ॥೧೬॥

ಪಶು ಪಕ್ಷೀ ಕಿಡಾ ಮುಂಗೀ । ಜೀವಮಾತ್ರ ನಿರ್ಮಾಣ ಜಗೀ ।
ಜಾಣೀವಕಳಾ ಸರ್ವಾಲಾಗೀ । ಯೇಕ ಚಿ ಆಹೆ ॥೧೭॥

ಸರ್ವಾಸ ಜಳ ತೇ ಸೀತಳ । ಸರ್ವಾಸ ಅಗ್ನಿ ತೇಜಾಳ ।
ಸರ್ವಾಸ ಅಂತಃಕರ್ಣ ಕೇವಳ । ಜಾಣತೀ ಕಳಾ ॥೧೮॥

ಆವಡೆ ನಾವಡೆ ಐಸೇ ಜಾಲೇ । ತರೀ ಹೇ ದೇಹಸ್ವಭಾವಾವರೀ ಗೇಲೇ ।
ಪರಂತು ಹೇ ಕಳೋ ಆಲೇ । ಅಂತಃಕರ್ಣಯೋಗೇ ॥೧೯॥

ಸರ್ವಾಚೇ ಅಂತಃಕರ್ಣ ಯೇಕ । ಐಸಾ ನಿಶ್ಚಯೋ ನಿಶ್ಚಯಾತ್ಮಕ ।
ಜಾಣತೀಯಾಚೇ ಕೌತುಕ । ಚಹುಕಡೆ ॥೨೦॥

ಇತುಕೇನ ಫಿಟಲೀ ಆಶಂಕಾ । ಆತಾ ಅನುಮಾನ ಕರೂ ನಕಾ ।
ಜಾಣಣೇ ತಿತುಕೇ ಯೇಕಾ । ಅಂತಃಕರ್ಣಾಚೇ ॥೨೧॥

ಜಾಣೋನ ಜೀವ ಚಾರಾ ಘೇತೀ । ಜಾಣೋನ ಭಿತೀ ಲಪತೀ ।
ಜಾಣೋನಿಯಾ ಪಳೋನ ಜಾತೀ । ಪ್ರಾಣೀಮಾತ್ರ ॥೨೨॥

ಕಿಡಾ ಮುಂಗೀ ಪಾಸೂನ ಬ್ರಹ್ಮಾದಿಕ । ಸಮಸ್ತಾಸ ಅಂತಃಕರ್ಣ ಯೇಕ ।
ಯೇ ಗೋಷ್ಟೀಚೇ ಕೌತುಕ । ಪ್ರತ್ಯೇ ಜಾಣಾವೇ ॥೨೩॥

ಅಂತಃಕರಣ ಅಂದರೆ ತಿಳುವಳಿಕೆಯು–ತಿಳುವಳಿಕೆ ಅಂದರೆ ಇರುವದೆಂಬುದರ ನೆನಪು. ಅಥವಾ ಜಾಗ್ರತ ಅವಸ್ಥೆಯ ಸ್ಥಿತಿಯಾಗಿದೆ. ವಸ್ತುವಿನ ಅಸ್ತಿತ್ವದ ನೆನಪಾಗುವದೇ ಈ ತಿಳುವಳಿಕೆಯ ಪ್ರಧಾನ ಧರ್ಮ ಇರುವದು. ಒಂದೇ ಒಂದು ತಿಳುವಳಿಕೆಯು ಸರ್ವ ಸ್ಥಳದಲ್ಲಿಯೂ ಕೆಲಸ ಮಾಡುತ್ತದೆ. ಆದ್ದರಿಂದ ಎಲ್ಲರದೂ ದೃಶ್ಯದ ಬಗೆಗಿನ ಅನುಭವವು ಹೆಚ್ಚು ಕಡಿಮೆ ಒಂದೇ ತರದ್ದಾಗಿರುವದು:– ಅಂತಃಕರಣ ಅಂದರೆ ಅರಿವು ಅರ್ಥಾತ್ ತಿಳುವಳಿಕೆಯು. ತಿಳುವಳಿಕೆ ಅಂದರೆ ತಿಳಿಯುವ ಸ್ವಾಭಾವಿಕ ಧರ್ಮ ಅಥವಾ ಪ್ರಕೃತಿ ಸಹಜ (ನೈಸರ್ಗಿಕ) ಶಕ್ತಿಯು. ಈ ಶಕ್ತಿಯಿಂದಲೇ (ಹುಟ್ಟು ಗುಣದಿಂದ) ಪ್ರಾಣಿಗಳಿಗೆ ದೇಹ ರಕ್ಷಣೆಯ ಉಪಾಯ ತಿಳಿಯುವದು (೧೨) ಒಂದು ಕಡೆಗೆ ತಿಳುವಳಿಕೆಯ ಪ್ರೇರಣೆಯಿಂದ ಹಾವು ಕಡಿಯಲಿಕ್ಕೆ ಬರುವದು. ಮತ್ತು ಮನುಷ್ಯನೂ ಸಹ ಅದೇ ತಿಳುವಳಿಕೆಯ ಪ್ರೇರಣೆಯಿಂದ ಹಾವಿನಿಂದ ದೂರ ಓಡುವನು. ಅಂದರೆ ಹಾವು ಹಾಗೂ ಮನುಷ್ಯ ಈ ಇಬ್ಬರಲ್ಲಿರುವ ತಿಳುವಳಿಕೆಯೇ ಈ ಕಾರ್ಯ ಮಾಡುವದು. (೧೩) ಎರಡರಲ್ಲಿಯೂ ತಿಳುವಳಿಕೆ ಇರುವದು. ಇವುಗಳಲ್ಲಿಯ ಪ್ರೇರಣೆಯೂ ಸಹ ಒಂದೇ ಇರುವದು. ಆದ್ದರಿಂದ ಎರಡರಲ್ಲಿಯ ಅಂತಃಕರಣ ಏಕರೂಪವಿರಲಿಕ್ಕೇ ಬೇಕು. ಈ ರೀತಿಯಿಂದ ವಿಚಾರ ಮಾಡಿದಾಗ ತಿಳವಳಿಕೆಯ ದೃಷ್ಟಿಯಿಂದ ಎಲ್ಲ ಪ್ರಾಣಿಗಳ ಅಂತಃಕರಣ ಸಮಾನವಿರುವದು ಅನ್ನುವದರ ಪ್ರತ್ಯಕ್ಷ ಅನುಭವ ಬರುವದು. (೧೪) ತಿಳವಳಿಕೆಯ ದೃಷ್ಟಿಯಲ್ಲಿ ಸರ್ವಜೀವದ ಅಂತಃಕರಣ ಒಂದೇ ಇರುವದೆಂಬ ಮಾತು ಸಿದ್ಧವಾಯಿತು. ಜೀವ ಪ್ರಾಣಿಗಳೆನ್ನುವವು ಎಷ್ಟಿರುವವೋ ಅವೆಲ್ಲವುಗಳ ಅಂತರ್ಯಾಮದಲ್ಲಿ ತಿಳುವಳಿಕೆಯು (ಜ್ಞಾನ ಕಲೆಯು) ಒಂದೇ ಇರುವದು. (೧೫) ಉದಾ:— ಕಣ್ಣಿನಿಂದ ನೋಡುವದು, ನಾಲಿಗೆಯಿಂದ ರುಚಿ ನೋಡುವದು, ಕಿವಿಯಿಂದ ಕೇಳುವದು, ಅಂಗದಿಂದ ಸ್ಪರ್ಶ ಮಾಡುವದು, ಮೂಗಿನಿಂದ ವಾಸನೆ ಹೊಂದುವದು ಇವೆಲ್ಲ ಇಂದ್ರಿಯಗಳ ಅನುಭವದಲ್ಲಿ ಯಾವತ್ತರಿಗೂ ಒಂದೇ ರೀತಿಯ ಪ್ರತೀತಿ ಬರುವದು. ಯಾಕಂದರೆ ಅನುಭವ ಪಡೆಯುವ ತಿಳುವಳಿಕೆ ಈ ಎಲ್ಲವುಗಳಲ್ಲಿ ಒಂದೇ ಬಗೆಯದಾಗಿರುವದು. (೧೬) ಪಶು, ಪಕ್ಷಿ, ಹುಳು, ಇರುವೆ ಇತ್ಯಾದಿ ಅನಂತ ಪ್ರಕಾರದ ಜೀವ ಪ್ರಾಣಿ ಜಗತ್ತಿನಲ್ಲಿ ನಿರ್ಮಾಣವಾಗುವವು. ಆದರೆ ಇವುಗಳ ವಿಷಯವಾಗಿ(ಬಾಬತ್ತಿನಲ್ಲಿ)ಇತರ ಬಹಳಷ್ಟು ವಿವಿಧ ತರಗತಿಗಳಿದ್ದರೂ ಸಹ ಎಲ್ಲವುಗಳಲ್ಲಿ ತಿಳುವಳಿಕೆಯ ಕಲೆ ಮಾತ್ರ ಅಗದೀ ಒಂದೇ ಇರುವದು. (೧೭) ನೀರು ಎಲ್ಲರಿಗೂ ತಣ್ಣಗೇ ಹತ್ತುವದು. ಅಗ್ನಿ ಎಲ್ಲರಿಗೂ ಉಷ್ಣವೇ ಆಗಿರುವದು. ಇವುಗಳ ಅರ್ಥವೇನಂದರೆ ಎಲ್ಲರ ಅಂತಃಕರಣ ಅಂದರೆ ತಿಳುವಳಿಕೆಯು, ಜ್ಞಾನ ಕಲೆಯು, ಒಂದೇ ಇರುವದು. (೧೮) ಒಬ್ಬನಿಗೆ ಒಂದು ವಸ್ತುವು ಪ್ರೀತಿಯದಾಗಿದ್ದರೆ ಅದೇ ವಸ್ತು ಇನ್ನೊಬ್ಬರಿಗೆ ಸೇರಿಕೆಯಾಗುವದಿಲ್ಲ. ಈ ಬೇಕು–ಬೇಡ ಇವು ಮನುಷ್ಯನ ದೇಹ ಸ್ವಭಾವದ ಮೇಲೆ ಅವಲಂಬಿಸಿರುವದು. ಆದರೆ ವಸ್ತುವಿನ ಬಗ್ಗೆ ಬೇಕು ಅಥವಾ ಬೇಡ ಇಲ್ಲವೇ ಸೇರುವದು ಅಥವಾ ಸೇರದಿರುವದು ಇವೆಲ್ಲ ಅಂತಃಕರಣದ ಯೋಗದಿಂದಲೇ ತಿಳಿಯುವದು (೧೯) ಎಲ್ಲ ಪ್ರಾಣಿಗಳ ಅಂತಃಕರಣವು ಒಂದೇ ಇರುವದೆಂಬುವ ಈ ಮಾತು ಅಗದೀ ನಿಃಸಂಶಯ ಮತ್ತು ನಿಶ್ಚಯಾತ್ಮಕವಿರುವದು. ಆಶ್ಚರ್ಯ ಹಾಗೂ ಕೌತುಕ ಪಡುವಂಥ ಇದರ ಲೀಲೆ ಜಗತ್ತಿನೊಳಗೆಲ್ಲ ಕಡೆಗೂ ನೋಡಲಿಕ್ಕೆ ಸಿಗುವದು. (೨೦) ಇಷ್ಟು ಹೇಳಿದ ಮೇಲೆ ಶ್ರೋತಾ ಜನರ ಶಂಕಾ ನಿರಸನವಾಯಿತು. ಇನ್ನು ಶ್ರೋತಾರು ಸುಮ್ಮನೇ ಇಲ್ಲದ ತರ್ಕ ತೆಗೆಯಬಾರದು. ತಿಳುವಳಿಕೆ (ಅರಿವು) ಎಲ್ಲೆಲ್ಲಿ ಕಾಣಿಸುವದೋ ಅದು ಒಂದೇ ಅಂತಃಕರಣದ್ದೇ ಇರುವದು. ಇದನ್ನು ಅವಶ್ಯ ತಿಳಿದುಕೊಳ್ಳಿರಿ. ಮತ್ತು ಗುರುತಿಸಿರಿ. (೨೧) ಈ ತಿಳುವಳಿಕೆಯ ಪ್ರೇರಣೆಯಿಂದಲೇ ಪ್ರಾಣಿಗಳು ಹುಲ್ಲು ಮೇವು ತಿನ್ನುವವು. ಇದರ ಪ್ರೇರಣೆಯಿಂದ ಪ್ರಾಣಿಗಳು ಅಂಜುವವು. ಮತ್ತು ಅಡಗಿಕೊಳ್ಳುವವು. ಮತ್ತು ಇದರ ಪ್ರೇರಣೆಯಿಂದಲೇ ಪ್ರಾಣಿಗಳು ಓಡಿ ಹೋಗುವವು. (೨೨) ಅಗದೀ ಸಣ್ಣ ಹುಳು ಇರುವೆಯಿಂದ ಹಿಡಿದು ಠೇಟ ಬ್ರಹ್ಮಾದಿಕರ ವರೆಗೂ ಎಲ್ಲರ ಅಂತಃಕರಣ ಒಂದೇ ಇರುವದು. ಮತ್ತು ನಾನು ಹೇಳಿದ ಈ ಮಾತಿನ ಕೌತುಕವನ್ನು ನೀವು ಪ್ರತ್ಯಕ್ಷ ಅನುಭವದಿಂದ ತಿಳಿದು ನೋಡಿರಿ. (೨೩)

ಥೋರ ಲಹಾನ ತರೀ ಅಗ್ನೀ । ಥೋಡೇ ಬಹು ತರೀ ಪಾಣೀ ।
ನ್ಯೂನ ಪೂರ್ಣ ತರೀ ಪ್ರಾಣೀ । ಅಂತಃಕರ್ಣೇ ಜಾಣತೀ ॥೨೪॥

ಕೋಠೇ ಉಣೇ ಕೋಠೇ ಅಧೀಕ । ಪರಂತು ಜಿನಸಮಾಸಲಾ ಯೇಕ ।
ಜಂಗಮ ಪ್ರಾಣೀ ಕೋಣೀಯೇಕ । ಜಾಟಿಲ್ಯಾವಿಣ ನಾಹೀ ॥೨೫॥

ಜಾಣೀವ ಮ್ಹಣಿಜೆ ಅಂತಃಕರ್ಣ । ಅಂತಃಕರ್ಣ ವಿಷ್ಣೂಚಾ ಅಂಶ ಜಾಣ ।
ವಿಷ್ಣೂ ಕರಿತೋ ಪಾಳಣ । ಯೇಣೇ ಪ್ರಕಾರೇ ॥೨೬॥

ನೇಣತಾ ಪ್ರಾಣೀ ಸಂಮ್ಹಾರತೋ । ನೇಣೀವ ತಮೋಗುಣ ಬೋಲಿಜೇತೋ ।
ತಮೋಗುಣೇ ರುದ್ರ ಸಂಹಾರಿತೋ । ಯೇಣೇ ಪ್ರಕಾರೇ ॥೨೭॥

ಕಾಹೀ ಜಾಣೀವ ಕಾಹೀ ನೇಣೀವ । ಹಾ ರಜೋಗುಣಾಚಾ ಸ್ವಭಾವ ।
ಜಾಣತಾ ನೇಣತಾ ಜೀವ । ಜನ್ಮಾಸ ಯೆತೀ ॥೨೮॥

ಜಾಣೀವೆನೇ ಹೋತೇ ಸುಖ । ನೇಣೀವೆನೇ ಹೋತೇ ದುಃಖ ।
ಸುಖದುಃಖ ಅವಶ್ಯಕ । ಉತ್ಪತ್ತಿಗುಣೇ ॥೨೯॥

ಜಾಣಣ್ಯಾನೆಣಣ್ಯಾಚೀ ಬುದ್ಧೀ । ತೋ ಚಿ ದೇಹೀ ಜಾಣಾವಾ ವಿಧೀ ।
ಸ್ಥೂಳದೇಹೀ ಬ್ರಹ್ಮಾ ತ್ರಿಶುದ್ಧೀ । ಉತ್ಪತ್ತಿಕರ್ತಾ ॥೩೦॥

ಐಸಾ ಉತ್ಪತ್ತಿ ಸ್ಥಿತಿ ಸಂಹಾರ । ಪ್ರಸಂಗೇ ಬೋಲಿಲಾ ವಿಚಾರ ।
ಪರಂತು ಯಾಚಾ ನಿರ್ಧಾರ । ಪ್ರತ್ಯೈ ಪಾಹಾವಾ ॥೩೧॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
''ಅಂತಃಕರ್ಣ ಯೇಕ'' ನಾಮ ಸಮಾಸ ಪ್ರಥಮ ॥

ಅಗ್ನಿ(ಬೆಂಕಿ)ಯು ಸಣ್ಣದಿರಲಿ ಅಥವಾ ದೊಡ್ಡದಿರಲಿ ಅದು ಅಗ್ನಿಯೇ ಆಗಿರುವದು. ನೀರು ಸ್ವಲ್ಪ ವಿರಲಿ ಅಥವಾ ಬಹಳವಿರಲಿ ಅದು ನೀರೇ ಆಗಿರುವದು. ಇದರಂತೆ ತಿಳುವಳಿಕೆ (ಅರಿವು) ಕಡಿಮೆ ಇರಲಿ ಅಥವಾ ಪೂರ್ಣವಿರಲಿ ಎಲ್ಲ ಪ್ರಾಣಿಗಳು ಅಂತಃಕರಣದಿಂದಲೇ ತಿಳಿಯುವವು. (೨೪) ತಿಳುವಳಿಕೆಯು ಕೆಲವು ಪ್ರಾಣಿಗಳಲ್ಲಿ ಕಡಿಮೆ, ಕೆಲವು ಪ್ರಾಣಿಗಳಲ್ಲಿ ಬಹಳಷ್ಟು ಇರುವದು ಕಂಡು ಬರುವದು. ಆದರೆ ಎಲ್ಲ ಕಡೆಗೂ ಇದರ ಮೂಲ ಸ್ವರೂಪ ಒಂದೇ ಇರುವದು. ಯಾವುದೇ ಚಲನ ವಲನ ಮಾಡುವಂಥ ಜೀವಂತ ಪ್ರಾಣಿಯು ತಿಳುವಳಿಕೆ ಇಲ್ಲದೇ ಇರಲು ಶಕ್ಯವೇ ಇಲ್ಲ. (೨೫) **ಇನ್ನು ಮೇಲೆ ತಿಳುವಳಿಕೆ ಇದ್ದ ಮತ್ತು ತಿಳುವಳಿಕೆ ಇಲ್ಲದ (ಅಜ್ಞಾನಿ) ಜನರ ಬಗೆಗಿನ ಪರಿಣಾಮ ಹೇಳುವರು:-** ತಿಳುವಳಿಕೆ ಅಂದರೆ ಅಂತಃಕರಣವು. ಅಂತಃಕರಣ ಇದು ವಿಷ್ಣುವಿನ ಅಂಶವಿರುವದು. ಈ ತಿಳುವಳಿಕೆಯಿಂದ ವಿಷ್ಣುವು ವಿಶ್ವದ ಪಾಲನ ಮಾಡುವನು. (೨೬) ಯಾವುದರಲ್ಲಿ ತಿಳುವಳಿಕೆ ಇರುವದಿಲ್ಲ.ಅಥವಾ ಯಾವುದರಲ್ಲಿ ತಿಳುವಳಿಕೆ ನಾಶ ಹೊಂದುವದೋ ಆ ಪ್ರಾಣಿಯು ನಾಶವಾಗುವದು. ಅಜ್ಞಾನವು (ತಿಳುವಳಿಕೆ ಇಲ್ಲದೆ ಇರುವದು) ತಮೋಗುಣದ ಲಕ್ಷಣವಾಗಿರುವದು. ಈ ರೀತಿಯ ತಮೋಗುಣಯಾದ ರುದ್ರನು ಸಂಹಾರ ಮಾಡುವನು. (೨೭) ಸ್ವಲ್ಪು ತಿಳುವಳಿಕೆ ಮತ್ತು ಸ್ವಲ್ಪು ಅಜ್ಞಾನ ಅರ್ಥಾತ್ ಸ್ವಲ್ಪು ಅರಿವು-ಸ್ವಲ್ಪು ಮರೆವು. ಇವುಗಳ ಮಿಶ್ರಣ ಇರುವದೇ ರಜೋಗುಣದ ಲಕ್ಷಣವು. ಈ ಅರಿವು ವ, ಮರೆವು ಮಿಶ್ರಿತ ಇರುವಂಥ ಜೀವವು ಪುನಃ ಜನ್ಮ ತಾಳುವದು. (೨೮) ತಿಳುವಳಿಕೆಯಿಂದ ಜೀವಕ್ಕೆ ಸುಖವಾಗುವದು, ಮತ್ತು ಅಜ್ಞಾನದಿಂದ ಅದಕ್ಕೆ ದುಃಖವಾಗುವದು. ಆದ್ದರಿಂದ ಜನ್ಮ ತಾಳಿ ಬಂದ ಜೀವಕ್ಕೆ ಸುಖ ಮತ್ತು ದುಃಖ ಎರಡನ್ನೂ ಅವಶ್ಯ ವಾಗಿ ಭೋಗಿಸಬೇಕಾಗುವದು. (೨೯) ರಜೋಗುಣದ ಹೊಟ್ಟೆಯಲ್ಲಿರುವ ಅರಿವು ಮತ್ತು ಮರೆವು ಮಿಶ್ರಿತ ವಿರುವಂಥ ಆ ಯಾವ ಬುದ್ಧಿಯೋ ಅದು ದೇಹದಲ್ಲಿರುವ ಬ್ರಹ್ಮದೇವರ ಅಂಶವಾಗಿರುವದೆಂದು ತಿಳಿಯಿರಿ. ನಿರ್ಮಾಣ ಕಾರ್ಯ ಮಾಡುವಂಥ ಬ್ರಹ್ಮನು ಈ ರೀತಿಯಿಂದ ನಿಜವಾಗಿ ಸತ್ಯವಾಗಿ ಸ್ಥೂಲ ದೇಹದಲ್ಲಿ ಕಂಡುಬರುವನು. (೩೦) ವಿಷಯ ಹೊರಟಿತೆಂದು ಮತ್ತೊಮ್ಮೆ ನಿಮಗೆ ಉತ್ಪತ್ತಿ, ಸ್ಥಿತಿ, ಮತ್ತು ಸಂಹಾರ ಇವುಗಳ ವಿವರಣೆ ಮಾಡಿ ದೆನು. ನೀವು ಪ್ರತ್ಯಕ್ಷ ತಿಳಿದು ಇದರ ಬಗ್ಗೆ ನಿಶ್ಚಿತ ಅಭಿಪ್ರಾಯ ತಾಳುವವರಾಗಿರಿ. (೩೧).

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಹತ್ತನೆಯ ದಶಕದಲ್ಲಿಯ
"ಅಂತಃಕರಣಯೇಕ" ವೆಂಬ ಒಂದನೆಯ ಸಮಾಸವು ಮುಗಿದುದು.

● ●

ದಶಕ ೧೦ : ಸಮಾಸ ೨ : ದೇಹ ಆಶಂಕಾ [ನುಡಿ ೨೫]

॥ಶ್ರೀರಾಮ॥ ಸ್ವಾಮೀನೇ ವಿಚಾರ ದಾಖವಿಲಾ ।
ಯೇಥೇ ವಿಷ್ಣೂಚಾ ಅಭಾವ ದಿಸೋನ ಆಲಾ ।
ಬ್ರಹ್ಮಾ ವಿಷ್ಣು ಮಹೇಶಾಲಾ । ಉರೀ ನಾಹೀ ॥೧॥

ಉತ್ಪತ್ತಿ ಸ್ಥಿತಿ ಸಂವ್ಹಾರ । ಬ್ರಹ್ಮಾ ವಿಷ್ಣು ಮಹೇಶ್ವರ ।
ಯಾಚಾ ಪಾಹಾತಾ ವಿಚಾರ । ಪ್ರತ್ಯಯೋ ನಾಹೀ ॥೨॥

ಬ್ರಹ್ಮಾ ಉತ್ಪತ್ತಿಕರ್ತಾ ಚೌಮುಖಾಂಚಾ ।
ಯೇಥೇ ಪ್ರತ್ಯಯೋ ನಾಹೀ ತ್ಯಾಚಾ ।
ಪಾಳಣ ಕರ್ತಾ ವಿಷ್ಣು ಚೌಭುಜಾಂಚಾ । ತೋ ಹಿ ಏಕೋನ ಜಾಣೋ ॥೩॥

ಮಹೇಶ ಸಂವ್ಹಾರ ಕರಿತೋ । ಹಾ ಹೀ ಪ್ರತ್ಯಯೋ ಕೈಸಾ ಯೇತೋ ।
ಲಿಂಗ ಮಹಿಮಾ ಪುರಾಣೀ ತೋ । ವಿಪರೀತ ಬೋಲಿಲಾ ॥೪॥

## ದಶಕ ೧೦. ಸಮಾಸ ೨. ದೇಹ ಆಶಂಕಾ ನಿರೂಪಣ (ನುಡಿ ೨೫)

ಈ ಸಮಾಸದಲ್ಲಿ ಶ್ರೀಸಮರ್ಥರು ಮೂರು ಪ್ರಶ್ನೆಗಳನ್ನು ನಿರ್ಮ್ಮಿ ಮುಂದೆ ಇಟ್ಟಿದ್ದಾರೆ. (ಒಂದನೆಯ ಪ್ರಶ್ನೆ) ವಿಷ್ಣುವು ಪಾಲನ (ಸಂರಕ್ಷಣೆ) ಮಾಡುವನು ರುದ್ರನು ಸಂಹಾರ ಮಾಡುವನು ಮತ್ತು ಬ್ರಹ್ಮದೇವನು ನಿರ್ಮಾಣ ಮಾಡುವನು ಹೀಗೆ ಶಾಸ್ತ್ರ ಹೇಳುವದು. ಮತ್ತು ಲೋಕದ ಜನರೂ ಇದನ್ನೇ ಅನ್ನುವರು. ಆದರೆ ಈ ಮೂವರೂ ದೇವತೆಗಳನ್ನು ಎಲ್ಲಿಯೂ ಕಂಡಿಲ್ಲ ನೋಡಿಲ್ಲ. ಅಂದ ಮೇಲೆ ಇವರು ಇರುವದು ಮತ್ತು ಮೇಲೆ ಹೇಳಿದ ಕಾರ್ಯ ಮಾಡುವದು ನಿಜವಿರುವದೋ ಹೇಗೆ? (ಎರಡನೆಯ ಪ್ರಶ್ನೆ) ಈ ದೇವತೆಗಳು ಮಾಯೆಯನ್ನು ಮಾಡಿದರು ಎಂದು ಅನ್ನಬೇಕೆಂದರೆ ಈ ದೇವರುಗಳು ಮಾಯಾದಿಂದ ನಿರ್ಮಿತರಾದವರೇ ಇರುವರು, ಹಾಗಾದರೆ ಮಾಯೆಯನ್ನು ಯಾರು ಮಾಡಿದರು? ಮಾಯೆಯು ಮಾಯೆಯನ್ನು ನಿರ್ಮಿಸಿದಳು ಎಂದು ಅನ್ನುವದಾದರೆ ಎರಡನೆಯ ಮಾಯೆಯೇ ಇಲ್ಲ, ಇರುವವಳು ಒಬ್ಬಳೇ ಅಲ್ಲವೇನು? ಇನ್ನು ದೇವರನ್ನು ಪಂಚಭೂತಗಳು ಮಾಡಿದವು ಎಂದು ಅನ್ನಬೇಕೆಂದರೆ ಈ ಭೂತಗಳನ್ನು ಮಾಯೆಯೇ ನಿರ್ಮಿಸಿರುವಳು. ಪರಬ್ರಹ್ಮನೇ ಮಾಯೆಯನ್ನು ಮಾಡಿದನು ಎಂದು ಅನ್ನಲಿಕ್ಕೆ ಬರುವದಿಲ್ಲ.ಯಾಕಂದರೆ ಅವನಲ್ಲಿ ಕರ್ತಾತನ (ಕಾರ್ಯ ಮಾಡುವ ಇಚ್ಛೆ)ವೇ ಇಲ್ಲ. ಇದರ ಹೊರತಾಗಿ ಮಾಯಾ ಖರೇ ಎಂದು ಅಂದರೆ ಆಗ ಕರ್ತೃತ್ವದ ಪ್ರಶ್ನೆ ಬರಬಹುದು ಇಲ್ಲದಿದ್ದರೆ ಇಲ್ಲ. (ಮೂರನೆಯ ಪ್ರಶ್ನೆ)ವೇದಗಳಲ್ಲಿ ದೇವರುಗಳ ಮತ್ತು ಮಾಯೆಯ ವರ್ಣನೆ ಇರುವದು. ಆದರೆ ಈ ವೇದಗಳು ಎಲ್ಲಿಂದ ಬಂದವು? ಮನುಷ್ಯನು ವೇದವನ್ನು ಅನ್ನುವನು. ಮನುಷ್ಯನ ದೇಹ ಹೇಗೆ? ಮತ್ತು ಯಾತರಿಂದ ನಿರ್ಮಾಣವಾಗಿದೆ? ಈ ದೇವರು ಹೇಗೆ ಪ್ರಕಟರಾದರು? ಈ ಪ್ರಶ್ನೆಗಳಿಗೆ ಉತ್ತರ ಹುಡುಕಲು ಹೋಗಬೇಕೆಂದರೆ ಶಾಸ್ತ್ರಗಳ ಅಭಿಪ್ರಾಯ (ಮತ) ಮತ್ತು ಲೋಕಾಭಿಪ್ರಾಯ (ಮತ)ಇವುಗಳಲ್ಲಿ ವಿರೋಧ ಕಂಡು ಬರುವದು. ಇದರಂತೆಯೇ ಬೇರೆ ಬೇರೆ ಶಾಸ್ತ್ರಗಳಲ್ಲಿ ಸಹ ಮತಭೇದ ಇದ್ದದ್ದು ಕಂಡು ಬರುವದು. ಅಂದ ಮೇಲೆ ಈಗ ಶಾಸ್ತ್ರಮತ ಅಲ್ಲಗಳೆಯದೆ(ಸಂಬಾಳಿಸಿ) ಅನುಭವಕ್ಕೆ ಒಪ್ಪಿಗೆಯಾಗುವಂತೆ ಸಮರ್ಥರು ಉತ್ತರ ಕೊಡಬೇಕಾಗಿದೆ.

### ದಶಕ ೧೦. ಸಮಾಸ ೨. ದೇಹ ಆಶಂಕಾ (ನುಡಿ ೨೫)

ಶ್ರೋತಾ ಶಂಕಾ ವಿಚಾರಿಸುವನು:– ಹಿಂದಿನ ಸಮಾಸದಲ್ಲಿ ಸ್ವಾಮಿಗಳು ಒಂದು ವಿಚಾರವನ್ನು ತಿಳಿಸಿದರು. ಅದು ಏನಂದರೆ:– ಬ್ರಹ್ಮ, ವಿಷ್ಣು ಮಹೇಶ್ವರ ಈ ದೇವತೆಗಳು ಶರೀರಧಾರಣ ಮಾಡಿ ಇರುವರು. ಆದರೆ ಆ ಮೂರೂ ದೇವತೆಗಳಿಗೆ ಎಲ್ಲಿಯೂ ಸ್ಥಾನವೇ ಇಲ್ಲ. ಮತ್ತು ಅವರು ಇರುವರು ಅನ್ನುವ ಬಗ್ಗೆ ಅನುಭವ ಬರಲೊಲ್ಲದು. (೧) ಬ್ರಹ್ಮ, ವಿಷ್ಣು, ಮಹೇಶ್ವರರು ಕ್ರಮವಾಗಿ ಉತ್ಪತ್ತಿ, ಸ್ಥಿತಿ, ಲಯ (ಸಂಹಾರ) ಇವುಗಳನ್ನು ಮಾಡುವರೇನು? ಇದರ ಬಗ್ಗೆ ವಿಚಾರದಿಂದ ಶೋಧ ಮಾಡಿದರೆ ಅನುಭವ ಬರುವದಿಲ್ಲ. (೨) ಈ ಮೃತ್ಯುಲೋಕದಲ್ಲಿ ಉತ್ಪತ್ತಿ (ಹುಟ್ಟಿಸು) ಮಾಡುವ ಬ್ರಹ್ಮದೇವರಿಗೆ ನಾಲ್ಕು ಮುಖಗಳಿರುವವು ಎಂದು ಹೇಳುವರು. ಆದರೆ ಇದರ ಬಗ್ಗೆ ಎಂದೂ ಅನುಭವ ಬಂದಿಲ್ಲ. ಅವನನ್ನೂ ಅವನ ಮುಖವನ್ನೂ ನೋಡಿಲ್ಲ. ಪಾಲನ ಮಾಡುವಂಥ ವಿಷ್ಣುವಿಗೆ ನಾಲ್ಕು ಕೈಗಳಿರುವವೆಂದು ಅನ್ನುವರು. ಆದರೆ ಇವನನ್ನು ಎಂದೂ ಯಾರೂ ಪ್ರತ್ಯಕ್ಷ ನೋಡಿಲ್ಲ. ಕೇವಲ ಜನತೆ ಅನ್ನುವದನ್ನು ಕೇಳಿ ಗೊತ್ತಿರುವದು. (೩) ಮಹೇಶ್ವರ (ರುದ್ರ) ಸಂಹಾರ ಮಾಡುವನು ಎಂದು ಅನ್ನುವರು. ಆದರೆ ಇದರ ಅನುಭವವು ಯಾವ ತರಹದ್ದು ಮತ್ತು ಹೇಗೆ? ಬರುವದು ಇದರ ಬಗ್ಗೆ ತಿಳಿದಿಲ್ಲ. ಪುರಾಣದಲ್ಲಿ ಶಂಕರನ ಲಿಂಗದ ಮಹಿಮೆಯನ್ನು ಮಿತಿ ಮೀರಿ ವರ್ಣಿಸಿದ್ದಾರೆ. ಇದು ವಿಪರೀತವಾಗಿ ತೋರುವದು. (೪)

ಮೂಳಮಾಯೇಸ ಕೋಣೇ ಕೇಲೇ । ಹೇ ತೋ ಪಾಹಿಜೆ ಕಳಲೇ ।
ತಿಹೀ ದೇವಾಚೇ ರೂಪ ಜಾಲೇ । ಏಲಿಕಡೆ ॥೫॥

ಮೂಳಮಾಯಾ ಲೋಕಜನನೀ । ತಯೇಪಾಸೂನ ಗುಣಕ್ಷೋಭಿಣೀ ।
ಗುಣಕ್ಷೋಭಿಣೀಪಾಸೂನ ತ್ರಿಗುಣೀ । ಜನ್ಮ ದೇವಾ ॥೬॥

ಐಸೇ ಬೋಲತೀ ಶಾಸ್ತ್ರಕಾರಕ । ಆಣಿ ಪ್ರವೃತ್ತೀಚೆ ಹಿ ಲೋಕ ।
ಪ್ರತ್ಯಯೆ ಪುಸತಾ ಕಿತ್ಯೇಕ । ಅಕಾಂತ ಕರಿತೀ ॥೭॥

ಮ್ಹಣೋನ ತ್ಯಾಸ ಪುಸಾವೇನಾ । ತ್ಯಾಚೇನ ಪ್ರತ್ಯಯೋ ಆಣವೇನಾ ।
ಪ್ರತ್ಯಯೇವಿಣ ಪ್ರೇತ್ನ ನಾನಾ । ಠಕಾಠಕೀ ॥೮॥

ಪ್ರಚಿತೀವೀಣ ವೈದ್ಯ ಮ್ಹಣವೀ । ಉಗೀ ಚ ಕರೀ ಉಠಾಠೇವೀ ।
ತಯಾ ಮೂರ್ಖಾಲಾ ಗೋವೀ । ಪ್ರಾಣೀಮಾತ್ರ ॥೯॥

ತೈಸಾ ಚ ಹಾ ಹಿ ವಿಚಾರ । ಪ್ರತ್ಯಯೇ ಕರಾವಾ ನಿರ್ಧಾರ ।
ಪ್ರತ್ಯಯೇ ನಸ್ತಾ ಅಂಧಕಾರ । ಗುರುಶಿಷ್ಯಾಸೀ ॥೧೦॥

ಬರೇ ಲೋಕಾಸ ಕಾಯೆ ಮ್ಹಣಾವೇ । ಲೋಕ ಮ್ಹಣತೀ ತೇ ಚಿ ಬರವೇ ।
ಪರಂತು ಸ್ವಾಮೀನೇ ಸಾಂಗಾವೇ । ವಿಶದ ಕರೂನೀ ॥೧೧॥

ಮ್ಹಣೋ ದೇವೀ ಮಾಯಾ ಕೇಲೀ। ತರೀ ದೇವಾಚೀ ರೂಪೇ ಮಾಯೇತ ಆಲೀ।
ಜರೀ ಮ್ಹಣೋ ಮಾಯೆನೇ ಮಾಯಾ ಕೇಲೀ । ತರೀ ದುಸರೀ ನಾಹೀ ॥೧೨॥

ಜರೀ ಮ್ಹಣೋ ಭೂತೀ ಕೇಲೀ । ತರೀ ತೆ ಭೂತಾಚೀ ಚ ವಳಲೀ ।
ಮ್ಹಣಾವೇ ಜರೀ ಪರಬ್ರಹ್ಮೇ ಕೇಲೀ । ತರೀ ಬ್ರಹ್ಮೀ ಕರ್ತೃತ್ವ ನಾಹೀ ॥೧೩॥

ಆಣೀ ಮಾಯಾ ಖರೀ ಅಸಾವೀ । ತರೀ ಬ್ರಹ್ಮೀ ಕರ್ತೃತ್ವಾಚೀ ಗೋವೀ।
ಮಾಯಾ ಮಿಥ್ಯಾ ಐಸೀ ಜಾಣಾವೀ । ತರೀ ಕರ್ತೃತ್ವ ಕೈಚೇ ॥೧೪॥

ಆತಾ ಹೇ ಅವಘೇ ಚಿ ಉಗವೇ । ಆಣೀ ಮನಾಸ ಪ್ರತ್ಯಯೋ ಫಾವೆ ।
ಐಸೆ ಕೇಲೇ ಪಾಹಿಜೆ ದೇವೇ । ಕೃಪಾಳೂ ಪಣೇ ॥೧೫॥

ವೇದ ಮಾತೃಕಾವೀಣ ನಾಹೀ । ಮಾತೃಕಾ ದೇಹಾವೀಣ ನಾಹೀ ।
ದೇಹ ನಿರ್ಮಾಣ ಹೋತ ನಾಹೀ । ದೇಹಾವೇಗಳಾ ॥೧೬॥

ಈ ಮೂರು ದೇವರು ಪ್ರಕಟರೂಪ ಧಾರಣವಾದದ್ದು ಮಾಯೆಯ ನಂತರ ಆದದ್ದು ಇರುವದು. ಈ ಮೂಲ ಮಾಯೆಯನ್ನು ಯಾರು ಮಾಡಿದರೆಂಬುದನ್ನು ನಾವು ತಿಳಿಯಲಿಕ್ಕೇ ಬೇಕು. (೫) ಮೂಲ ಮಾಯಾ ಇವಳು ನಿಜವಾಗಿಯೂ ವಿಶ್ವದ ಜನನಿ ಇರುವಳು. ದೊಡ್ಡ ತಾಯಿ ಇರುವಳು. ಇವಳಿಂದ ಗುಣಕ್ಷೋಭಿಣೆಯು ಹುಟ್ಟಿದಳು, ಗುಣಕ್ಷೋಭಿಣಿಯಿಂದ ಸತ್ವ, ರಜ, ತಮ ಈ ಮೂರು ಗುಣಗಳು ಹುಟ್ಟಿದವು. ಈ ಮೂರು ಗುಣಗಳಿಂದ ಮೇಲೆ ಬಂದ ಮೂರು ದೇವರು (ಬ್ರಹ್ಮ, ವಿಷ್ಣು, ರುದ್ರ) ಹುಟ್ಟಿದರು. (೬) ಶಾಸ್ತ್ರ ರಚಿಸುವ ಶಾಸ್ತ್ರಕರ್ತರು ಮತ್ತು ಶಾಸ್ತ್ರಗಳನ್ನು ಪ್ರಮಾಣವೆಂದು ನಂಬುವಂಥ ಸಾಮಾನ್ಯ ಜನರು ದೇವರ ಉತ್ಪತ್ತಿಯ ಬಗ್ಗೆ ಈ ವಿವರವನ್ನು ಹೇಳುವರು. ಈ ದೇವ ಇರುವನೆಂಬ ಬಗ್ಗೆ ಏನಾದರೂ ಪ್ರತ್ಯಕ್ಷ ಅನುಭವ ಇರುವದೇ ಹೇಗೆ? ಎಂದು ಯಾರಾದರೂ ಕೇಳಿದರೆ ಬಹಳಷ್ಟು ಜನ ಆಕ್ರೋಶದಿಂದ ರೊಚ್ಚಿನಿಂದ ಮಾತನಾಡುವರು. (೭) ಆದ್ದರಿಂದ ಅಂಥವರನ್ನು ವಿಚಾರಿಸಲಿಕ್ಕೆ ಅವಕಾಶವೇ ಇರುವದಿಲ್ಲ. ಈ ತ್ರಿಮೂರ್ತಿ ದೇವರ ಅಸ್ತಿತ್ವದ ಪ್ರತ್ಯಕ್ಷ ಅನುಭವವನ್ನು ಈ ಜನರು ತಂದು ಕೊಡಲು ಶಕ್ತರಿಲ್ಲ. ಇವರಿಗೆ ಪ್ರತ್ಯಕ್ಷ ಅನುಭವ ಬಂದಿರುವದಿಲ್ಲವೆಂದಮೇಲೆ ಅವರಾದರೂ ಏನು ಹೇಳಬೇಕು? ಇದರ ಬಗ್ಗೆ ಪ್ರಯತ್ನ ಮಾಡುವದೆಂದರೆ ಕೇವಲ ಕಣ್ಣುಮುಚ್ಚಾಲೆಯು ಹಾಗೂ ಠಕ್ಕಿಸುವ,ಘಸಾಯಿಸುವ ಕೆಲಸ ಆಗುವದು. (೮) ತಿಳಿಯಿರಿ. ಒಬ್ಬ ಮನುಷ್ಯ ರೋಗ ಮತ್ತು ಅದರ ಮೇಲಿನ ಉಪಚಾರ ಇವುಗಳ ಪ್ರತ್ಯಕ್ಷ ಅನುಭವದ ಜ್ಞಾನವಿಲ್ಲದೆ ತನ್ನಷ್ಟಕ್ಕೆ ತಾನೇ ವೈದ್ಯ ಎಂದು ಅನ್ನಹತ್ತಿದರೆ ಅದು ಅವನ ಆ ವ್ಯವಸಾಯದಲ್ಲಿಯ ಕೇವಲ ಠಕ್ಕತನ-ವ್ಯರ್ಥಶ್ರಮವೆನಿಸುವದು. ಇಂಥ ಮೂರ್ಖನು ಎಲ್ಲ ಜನರನ್ನು ಕಷ್ಟದಲ್ಲಿ ದಬ್ಬುವನು. (ತಾನೂ ಕಷ್ಟದಲ್ಲಿ ಬೀಳುವನು) (೯) ಈ ದೇವರ ಬಾಬತ್ತಿನಲ್ಲಿಯೂ ಹೀಗೆಯೇ ಆಗುವ ಸಂಭವ ಹೆಚ್ಚು ಇರುವದು. ಆದ್ದರಿಂದ ಅವಸರ ಪಡದೆ ಪ್ರತ್ಯಕ್ಷ ಅನುಭವ ಪಡೆದು ಆಮೇಲೆ ನೀವು ನಿಮ್ಮ ನಿಶ್ಚಿತ [ಖಚಿತವಾದ] ಅಭಿಪ್ರಾಯ ತಾಳಬೇಕು. ಪ್ರತ್ಯಕ್ಷ ಅನುಭವ ಇರದಿದ್ದರೆ ಗುರು ಮತ್ತು ಶಿಷ್ಯ ಇಬ್ಬರೂ ಅಜ್ಞಾನದ ಗಾಢಾಂಧಕಾರದಲ್ಲಿ ಭ್ರಮಿಸುತ್ತಲೇ ಇರುವರು. (೧೦) ಇರಲಿ, ಜನರಿಗಾದರೂ ಏನೆಂದು ಹೆಸರಿಡಬೇಕು? ಒಂದೊಂದು ಸಲ ಲೋಕದ ಅನ್ನುವಿಕೆಯೇ ಸರಿಯಾದದ್ದು ಎಂದು ಅನ್ನುವ ಪ್ರಸಂಗ ಬರುವದು. ಆದ್ದರಿಂದ ಗುರುನಾಥಾ, ಸಮರ್ಥ ಸ್ವಾಮಿಯೇ ನೀನು ಈ ವಿಷಯವನ್ನೆಲ್ಲ ಸ್ಪಷ್ಟವಾಗಿ ತಿಳಿಸಿ ಹೇಳುವವನಾಗು.(೧೧)ಇನ್ನು ಎರಡನೆಯ ಪ್ರಶ್ನೆಯನ್ನು ಸವಿಸ್ತಾರವಾಗಿ ಮಂಡಿಸುವರು:- ದೇವರು ಮಾಯಾ ಹುಟ್ಟಿಸಿದನು ಎಂದು ಅನ್ನಬೇಕೆಂದರೆ ದೇವರೇ ಮಾಯೆಯಿಂದ ನಿರ್ಮಾಣವಾಗಿರುವನು. ಹಾಗೂ ದೇವರ ರೂಪವೂ ಸಹ ಮಾಯಾಮಯವಿರುವದು. ಮಾಯೆಯು ಮಾಯಾ ನಿರ್ಮಾಣ ಮಾಡಿದಳು ಎಂದು ಅನ್ನಬೇಕೆಂದರೆ ಮೂಲ ಮಾಯೆ ಒಬ್ಬಳೇ ಒಬ್ಬಳಿರುವಳು. ಎರಡನೆಯ ಮಾಯೆ ಇಲ್ಲವೇ ಇಲ್ಲ.[೧೨] ಪಂಚಭೂತಗಳು ಮಾಯಾ ನಿರ್ಮಿಸಿದವು ಎಂದು ಅಂದದ್ದಾದರೆ ಮೂಲ ಮಾಯೆಯಲ್ಲಿಯೇ ಪಂಚಭೂತಗಳು ತುಂಬಿರುವವು. ಆದ್ದರಿಂದ ಇದು ಶಕ್ಯವಿಲ್ಲ. ಇನ್ನು ಪರಬ್ರಹ್ಮನೇ ಮಾಯಾ ನಿರ್ಮಾಣ ಮಾಡಿದನು ಎಂದು ಅಂದರೆ ಆ ಪರಬ್ರಹ್ಮನಲ್ಲಿ ಕರ್ತೃತ್ವದ ಶಕ್ತಿ ಇರುವದಿಲ್ಲ[೧೩] ಶಿವಾಯಃ ಮಾಯಾ ನಿಜವೆಂದು ಅವದ್ದಾದರೆ ಪರಬ್ರಹ್ಮನಕಡೆ ಇರುವದೆಂದು ಅನ್ನುವಪ್ರಶ್ನೆ ಹುಟ್ಟುತ್ತಿತ್ತು.ಮಾಯೆಯೇ ಮೂಲದಲ್ಲಿ ಖರೇ ಇರುವದೇ ಇಲ್ಲವೆಂದಮೇಲೆ ಮಾಯೆಯನ್ನು ನಿರ್ಮಾಣ ಮಾಡುವ ಕರ್ತೃತ್ವದ ಪ್ರಶ್ನೆಯೇ ಏಳುವದಿಲ್ಲ. [೧೪] ಕೊನೆಗೆ ಶ್ರೋತಾ ಅನ್ನುತ್ತಾನೆ. ಈ ಎಲ್ಲ ಪ್ರಶ್ನೆಗಳನ್ನು ವಿವರಿಸಿ ಮನಸ್ಸಿಗೆ ಅನುಭವ ಬರುವಂಥ ವಿವೇಚನೆಯನ್ನು ಸದ್ಗುರುವೇ ಕೃಪೆ ಮಾಡಿ ಹೇಳಿಕೊಡುವವನಾಗು. [೧೫] ಇನ್ನು ಮೇಲೆ ಮೂರನೆಯ ಪ್ರಶ್ನೆ ಏನಿರುವವೆಂಬುದನ್ನು ಮುಂದೆ ಇಡುವರು. ವೇದಗಳು ಶಬ್ದಮಯವಿರುವವು. ಶಬ್ದಗಳು ಅಕ್ಷರಗಳಿಂದ ರೂಪ ತಾಳುವವು. ಎಲ್ಲ ಅಕ್ಷರಗಳ ಮೂಲ ಓಂಕಾರದ ಮೂರುವರೆ ಮಾತ್ರಾದಲ್ಲಿ ಇರುವದು. ಆದ್ದರಿಂದ ವೇದ ಇದು ಮಾತ್ರಾಮಯ [ಅಕ್ಷರಗಳಿಂದ ಕೂಡಿದ್ದು] ಇರುವದು. ಓಂಕಾರವು ದೇಹವಿಲ್ಲದೆ ಸಾಕಾರವಾಗುವದಿಲ್ಲ. ಮತ್ತು ದೇಹವಿಲ್ಲದೆ ದೇಹ ನಿರ್ಮಾಣವಾಗುವದಿಲ್ಲ. [೧೬]

ತಯಾ ದೇಹಾಮಧೇ ನರದೇಹೋ । ತ್ಯಾ ನರದೇಹಾತ ಬ್ರಾಹ್ಮಣ ದೇಹೋ ।
ತಯಾ ಬ್ರಾಹ್ಮಣದೇಹಾಸ ಪಾಹೋ । ಅಧಿಕಾರ ವೇದೀ ॥೧೭॥

ಅಸೋ ವೇದ ಕೋಠೂನ ಜಾಲೆ । ದೇಹ ಕಾಸಯಾಚೆ ಕೇಲೇ ।
ದೇವ ಕೈಸೆ ಪ್ರಗಟಲೆ । ಕೋಣ್ಯಾ ಪ್ರಕಾರೇ ॥೧೮॥

ಐಸಾ ಬಳಾವಲಾ ಅನುಮಾನ । ಕೇಲೇ ಪಾಹಿಜೆ ಸಮಾಧಾನ ।
ವಕ್ತಾ ಮ್ಹಣೆ ಸಾವಧಾನ । ಹೋಈ ಆತಾ ॥೧೯॥

ಪ್ರತ್ಯಯೋ ಪಾಹಾತಾ ಸಾಕಡೀ । ಅನಘೀ ಹೋತೇ ವಿಘಡಾವಿಘಡೀ ।
ಅನುಮಾನಿತಾ ಘಡೀನೇ ಘಡೀ । ಕಾಳ ಜಾತೋ ॥೨೦॥

ಲೋಕಧಾಟೀ ಶಾಸ್ತ್ರನಿರ್ಣಯೊ । ಯೇಥೇ ಬಹುಧಾ ನಿಶ್ಚಯೊ ।
ಮ್ಹಣೋನಿಯಾ ಯೇಕ ಪ್ರತ್ಯಯೊ । ಯೇಣಾರ ನಾಹೀ ॥೨೧॥

ಆತಾ ಶಾಸ್ತ್ರಾಚೀ ಭೇಡ ಧರಾವೀ । ತರೀ ಸುಟೇನಾ ಹೇ ಗಥಾಗೋವೀ ।
ಗಥಾಗೋವೀ ಹೆ ಉಗವಾವೀ । ತರೀ ಶಾಸ್ತ್ರಭೇದ ದಿಸೆ ॥೨೨॥

ಶಾಸ್ತ್ರ ರಕ್ಷೂನ ಪ್ರತ್ಯಯೊ ಆಣಿಲಾ। ಪೂರ್ವಪಕ್ಷ ತ್ಯಾಗೂನ ಸಿದ್ಧಾಂತ ಪಾಹಿಲಾ।
ಶಾಹಾಣಾ ಮೂರ್ಖ ಸಮಜಾವಿಲಾ । ಯೇಕಾ ವಚನೇ ॥೨೩॥

ಶಾಸ್ತ್ರೀ ಚ ಪೂರ್ವಪಕ್ಷ ಬೋಲಿಲಾ। ಪೂರ್ವಪಕ್ಷ ಮ್ಹಣಾವೇ ಲಟಿಕ್ಯಾಲಾ ।
ವಿಚಾರ ಪಾಹಾತಾ ಆಮ್ಹಾಲಾ । ಶಬ್ದ ನಾಹೀ ॥೨೪॥

ತಥಾಪಿ ಬೋಲೋ ಕಾಹೀಯೇಕ । ಶಾಸ್ತ್ರ ರಕ್ಷೂನ ಕೌತುಕ ।
ಶ್ರೋತೀ ಸಾದರ ವಿವೇಕ । ಕೇಲಾ ಪಾಹಿಜೆ ॥೨೫॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
''ದೇಹ ಆಶಂಕಾ'' ನಾಮ ಸಮಾಸ ದ್ವಿತೀಯ ॥

ದೇಹದಲ್ಲಿ ನರದೇಹವೇ ಉತ್ತಮವೆಂದು ಅನ್ನುವರು. ನರದೇಹದಲ್ಲಿ ಬ್ರಾಹ್ಮಣದೇಹ ಶ್ರೇಷ್ಠವೆಂದು ಅನ್ನುವರು ಅಂತೆಯೇ ಬ್ರಾಹ್ಮಣ ದೇಹಕ್ಕೆ ವೇದದ ಅಧಿಕಾರವಿರುವದು. [೧೭] ಇರಲಿ, ಇಲ್ಲಿ ಒಂದು ಪ್ರಶ್ನೆ ಯಾವುದು ಬರುವವೆಂದರೆ, ವೇದಗಳು ಎಲ್ಲಿಂದ ಬಂದವು? ದೇಹವನ್ನು ಯಾವುದರಿಂದ ತಯಾರಿಸಲಾಗಿದೆ? ಮತ್ತು ದೇವರು ಯಾವ ರೀತಿಯಲ್ಲಿ ದೃಶ್ಯದ ಆಕಾರಕ್ಕೆ ಬಂದನು? [೧೮] ಶ್ರೋತಾಜನರ ತರ್ಕ ಒಂದೇ ಸವನೆ ಓಡ ಹತ್ತಿತು. ಆದ್ದರಿಂದ ಇವರ ಸಮಾಧಾನ ಮಾಡುವದು ಈಗ ಅಗದೀ ಅವಶ್ಯವಿರುವದು. ಆದ್ದರಿಂದ ವಕ್ತಾ ಅನ್ನುವನು: ನೀವು ಅಗದೀ ಲಕ್ಷ್ಯಪೂರ್ವಕ ನಾನು ಕೊಡುವ ಉತ್ತರ ಕೇಳಿರಿ. [೧೯] ಪ್ರಶ್ನೆಗಳಿಗೆ ಉತ್ತರದ ಮಾರ್ಗ ತೋರಿಸಿಕೊಡುವರು:- ಪ್ರತ್ಯಕ್ಷ ಅನುಭವ ನೋಡಿದರೆ ನಿಜವಾಗಿ ಒಂದು ಮುಖ್ಯ ಅಡಚಣೆ ನಿರ್ಮಾಣವಾಗುವದು. ಯಾಕಂದರೆ ಶಾಸ್ತ್ರಗಳು ಏನನ್ನು ಪ್ರತಿಪಾದನ ಮಾಡುವವೋ ಅದರೊಂದಿಗೆ ಅನುಭವ ಸರಿಹೊಂದುವದಿಲ್ಲ. ವಿರೋಧ ಬರುವದು. ಇದರಿಂದ ಎಲ್ಲವೂ ಗೊಂದಲಗೊಂಡು ಶಾಸ್ತ್ರ ನಿಜವೇ ಅಥವಾ ಪ್ರತ್ಯಕ್ಷ ಅನುಭವ ನಿಜವೇ? ಯಾವುದನ್ನು ನಾವು ಒಪ್ಪಬೇಕು? ಅನ್ನುವ ಅನುಮಾನ ಅಡಚಣೆ ಹುಟ್ಟುತ್ತದೆ. ಇದರ ಮೇಲೆ ತರ್ಕ ಮಾಡ ಹತ್ತಿದರೆ ಕೊನೆಯ ನಿರ್ಣಯ ಆಗುವದೇ ಇಲ್ಲ. ಇದರಿಂದ ಕ್ಷಣಕ್ಷಣದಂತೆ ಕಾಲ ಮಾತ್ರ ಗತಿಸಿ ವ್ಯರ್ಥ ಹೋಗುವದು [೨೦]ಜನರ ಅಭಿಪ್ರಾಯ[ಮತ]ಏನು?ಮತ್ತು ಶಾಸ್ತ್ರದ ನಿರ್ಣಯ ಏನು? ಇವು ನಾನಾ ಪ್ರಕಾರದವು ಇರುವವು. ಆದ್ದರಿಂದ ಇವುಗಳಲ್ಲಿ ನಿಶ್ಚಿತವಾದ ಒಂದು ಸಿದ್ಧಾಂತ ಕಂಡು ಬರುವದಿಲ್ಲ. [೨೧] ಇದರಿಂದ ಏನಾಗುವದೆಂದರೆ ಶಾಸ್ತ್ರದಲ್ಲಿಯ ಪ್ರಮಾಣ ಸರಿ ಅಂದು ಅದನ್ನು ಸಂಬಾಳಿಸುವ ಪ್ರಯತ್ನ ಮಾಡಿದರೆ ಈ ಗೊಂದಲವು (ಘೋಟಾಳಿಯು) ಬಿಡುಗಡೆ ಹೊಂದುವದಿಲ್ಲ. ಮತ್ತು ಈ ಗೊಂದಲದ ಬಿಡುಗಡೆ ಮಾಡಲಿಕ್ಕೆ ಹೋದರೆ ಶಾಸ್ತ್ರದ ನಿರ್ಣಯದಲ್ಲಿ ಏಕಾಭಿಪ್ರಾಯ ಕಾಣುವದಿಲ್ಲ. (೨೨) ಇಂಥಲ್ಲಿ ನಮ್ಮ ಉತ್ತರ ಹೇಗಿರಬೇಕೆಂದರೆ ಒಂದು ಕಡೆ ಶಾಸ್ತ್ರದ ಪ್ರಮಾಣಕ್ಕೂ ಧಕ್ಕೆ ಹತ್ತಬಾರದು. ಮತ್ತು ಇತ್ತ ಎರಡನೆಯ ಕಡೆಯ ಪ್ರತ್ಯಕ್ಷ ಅನುಭವಕ್ಕೂ ವಿರೋಧ ಬಂದಿರಬಾರದು. ಅಂತೆಯೇ ಮೊದಲಿಗೆ ಪೂರ್ವಪಕ್ಷ ಸ್ಪಷ್ಟವಾಗಿ ಮಂಡಿಸಬೇಕು. ಅದರಲ್ಲಿಯ ದೋಷಗಳನ್ನು ಎತ್ತಿ ತೋರಿಸಿ ಅದನ್ನು ಬಾಜೂಕ್ಕೆ ಸರಿಸಬೇಕು. ಮತ್ತು ಆ ಮೇಲೆ ತಮ್ಮ ಸಿದ್ಧಾಂತವನ್ನು ಪ್ರತಿಪಾದಿಸಬೇಕು. ಕೊನೆಗೆ ಒಂದೇ ಉತ್ತರ ಕೊಡಬೇಕು. ಇದರಿಂದ ಬುದ್ಧಿವಂತನಿಗೂ ಮತ್ತು ಬುದ್ಧಿಗೇಡಿಗೂ ಅಂತೂ ಇಬ್ಬರಿಗೂ ಸಮಾಧಾನವಾಗಬೇಕು. (೨೩) ಶಾಸ್ತ್ರದಲ್ಲಿ ಪೂರ್ವಪಕ್ಷ ಹೇಳುವ ಪದ್ಧತಿ ಇರುವದು. ಪೂರ್ವ ಪಕ್ಷ ಅಪೂರ್ಣವಿರುವದು. ಖೊಟ್ಟಿ ಅಥವಾ ನಿರರ್ಥಕವಿರುವದು. ನಿಜವಿರುವದಿಲ್ಲ. ಆದ್ದರಿಂದ ಇಲ್ಲಿ ಪೂರ್ವಪಕ್ಷ ಮಂಡಿಸಿ ಅದರ ವಿವೇಚನೆ ಮಾಡಿದರೆ ಅದರಿಂದ ನಮಗೆ ನೀವು ದೋಷ ಕೊಡಲಿಕ್ಕೆ ಬರುವದಿಲ್ಲ. ವಿಷಯ ತಿಳಿಯಲೆಂದು ಹೀಗೆ ಮಾಡಲಾಗುವದು. (೨೪) ಆದರೂ ಶಾಸ್ತ್ರದ ಪ್ರಮಾಣ ರಕ್ಷಿಸಿ ನೀವು ಕೇಳಿದ ವಿಷಯದ ಬಗ್ಗೆ ಕೌತುಕದಿಂದ ಅಲ್ಪಮಟ್ಟಿಗೆ ವಿವೇಚಿಸುವೆನು. ಶ್ರೋತಾ ಜನ ಆದರದಿಂದ ಕೇಳಿ ಆದರ ವಿಚಾರ ವಿವೇಕದಿಂದ ಮಾಡಿರಿ. (೨೫)

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಹತ್ತನೆಯ ದಶಕದಲ್ಲಿಯ "ದೇಹ ಆಶಂಕಾ" ಎಂಬ ಎರಡನೆಯ ಸಮಾಸವು ಮುಗಿದುದು.

● ●

### ಸಮಾಸ ತೃತೀಯ : ದೇಹ ಆಶಂಕಾ ಶೋಧನ

॥ಶ್ರೀರಾಮ॥ ಉಪಾಧೀವಿಣ ಜೇ ಆಕಾಶ । ತೇ ಚಿ ಬ್ರಹ್ಮ ನಿರಾಭಾಸ ।
ತೇ ನಿರಾಭಾಸೀ ಮೂಳಮಾಯೇಸ । ಜನ್ಮ ಜಾಲಾ ॥೧॥

ತೇ ಮೂಳಮಾಯೇಚೇ ಲಕ್ಷಣ । ವಾಯೋಸ್ವರೂಪ ಚಿ ಜಾಣ ।
ಪಂಚಭೂತೇ ಆಣಿ ತ್ರಿಗುಣ । ವಾಯೋ ಅಂಗೀ ॥೨॥

## ದಶಕ ೧೦. ಸಮಾಸ ೩. ದೇಹ ಆಶಂಕಾ ಶೋಧನ (ನುಡಿ ೨೧)

ಈ ಸಮಾಸದಲ್ಲಿ ವಿಶ್ವವು ಯಾವ ಕ್ರಮದಿಂದ ನಿರ್ಮಾಣವಾಯಿತಂ? ಇದನ್ನು ಪ್ರಾರಂಭದಲ್ಲಿಯೇ ಹೇಳಲಾಗಿದೆ. ಅನಂತರ ವಾಯು, ಅಗ್ನಿ, ಆಪ, ವ ಪೃಥ್ವಿ ಈ ನಾಲ್ಕು ಭೂತಗಳ ಬಗ್ಗೆ ಪ್ರತಿ ಒಂದರಲ್ಲಿಯೂ ಎರಡು ಬಗೆ (ರೂಪ) ಇರುವದನ್ನು ತಿಳಿಸಿ ಹೇಳಲಾಗಿದೆ. ನಮ್ಮ ದೇಹದಲ್ಲಿ ಅಂತಃಕರಣವು ಹೇಗೆ ವಾಸ ಮಾಡುವದೋ ಅದರಂತೆ ವಿಶ್ವದಲ್ಲಿಯೂ ಅಂತಃಕರಣ ವಾಸ ಮಾಡುವದು. ಅದು ಅರಿವಿನ (ತಿಳುವಳಿಕೆಯ) ರೂಪದಲ್ಲಿ ಇರುವದು. ಶಕ್ತಿರೂಪವಲ್ಲಿ ಇರುವದು ಸಚೇತನಗಳಲ್ಲಿ ಅಂತಃಕರಣವು ಪ್ರಕಟ ರೂಪದಲ್ಲಿ ಕಾಣುವದು. ಆದರೆ ಅದೇ ಅಚೇತನದಲ್ಲಿ ಹೀಗೆ ಕಾಣುವದಿಲ್ಲ.ಅಲ್ಲಿ ಅದು ಗುಪ್ತ ವ ಸುಪ್ತವಾಗಿರುವದು ಮನುಷ್ಯರಲ್ಲಿಯ ಅಂತಃಕರಣವು ಅರಿವಿನ ರೂಪದಲ್ಲಿ ಇರುವದು. ಈ ಅರಿವು ನಾನು ಅನ್ನುವ ರೀತಿಯಲ್ಲಿ ಇರುವದು. ನಾನು ಇದು ವಾಸನಾಮಯ ವಿರುವದು. ಬೃಹದಾರಣ್ಯಕದ ೪ನೆಯಅಧ್ಯಾಯದಲ್ಲಿ ಹೀಗೆ ಮಂತ್ರವಿದೆ."ಅಥಃ ಖಲುಆಹುಃಕಾಮಮಯ ಏವಅಯಂ ಪುರುಷಃ ಇತಿ॥ **ಅರ್ಥ:**– "ಆದ್ದರಿಂದಲೇ ಈ ಜೀವವು ವಾಸನಾಮಯ ಇರುವದು, ಎಂದು ಅನ್ನುವರು" ವಾಸನಾ ಇದು ಸೂಕ್ಷ್ಮವಾಯುರೂಪವಿರುವದು. ಆದ್ದರಿಂದ ದೃಶ್ಯ ವಿಶ್ವದಲ್ಲಿ ವಾಯುವಿಗೆ ಬಹಳ ಮಹತ್ವವಿರುವದು. ವಾಯುವಿನ ಎರಡು ರೂಪಗಳ ಪೈಕಿ ಒಂದು ರೂಪ ಅಂದರೆ ಗಾಳಿಯು. ಇದರ ಎರಡನೆಯ ರೂಪ ಅಂದರೆ ಅದೃಶ್ಯದಲ್ಲಿರುವ ವಾಸನಾ ಇರುವದು. ಶ್ರೀಸಮರ್ಥರು ಹೀಗೆ ಸ್ಪಷ್ಟವಾಗಿ ಹೇಳಿರುವರು. ಏನೆಂದರೆ ಒಂದು ಆತ್ಮ ಸ್ವರೂಪದ ಹೊರತಾಗಿ ಉಳಿದ ಎಲ್ಲ ದೇವ ದೇವತಾ ಮತ್ತು ಭೂತಗಳು ಇವೆಲ್ಲ ವಾಯು ರೂಪವಿರುವವು. ಶತಪಥ ಬ್ರಾಹ್ಮಣದಲ್ಲಿ ಹೀಗೆ ಒಂದು ಮಂತ್ರವಿದೆ। "ಸರ್ವೇಷಾಮು ಹ್ಯಷ ದೇವಾನಾಮ್ ಆತ್ಮಾಯದ್ ವಾಯುಃ **ಅರ್ಥ:**– ವಾಯು ಇವನು ಸರ್ವದೇವರ ಆತ್ಮಾ ಇರುವನು" (೯, ೧, ೨, ೩೮) ವಾಯುವಿನಲ್ಲಿ ಅರಿವು ಇರುವದು. ಮತ್ತು ವಾಸನಾ ಸಹ ಇರುವದು. ವಾಸನಾ ಇದರ ರೂಪ ಸೂಕ್ಷ್ಮ ಇದ್ದದ್ದರಿಂದ ಇದು ಬೇಕಾದ ಕಡೆಗೆ ಭ್ರಮಣ ಮಾಡಲು ಶಕ್ಯವಿರುವದು. ಇದರಲ್ಲಿ ಶ್ರೇಷ್ಠ ಮತ್ತು ಕನಿಷ್ಠ ಅನ್ನುವ ಮೆಟ್ಟಲುಗಳಿರುವವು ಇದರ ಮೇಲೆ ಅದರ (ವಾಸನಾದ) ಶಕ್ತಿಯು ಅವಲಂಬಿಸಿರುವದು. ಜಗತ್ತಿನ ಬೇರೆ ಬೇರೆ ಸ್ಥಳದಲ್ಲಿ ಇಂಥ ಶಕ್ತಿಗಳು ತಿರುಗಾಡುವವು. ನಾನಾ ತರಹದ ಮಂತ್ರತಂತ್ರಗಳಿಂದ ಇದನ್ನು (ಶಕ್ತಿಯನ್ನು) ವಶ ಮಾಡಿಕೊಳ್ಳಲಿಕ್ಕೆ ಬರುವದು. ನಿಮಗೆ ವಾಯುವಿನ ಎರಡು ರೂಪಗಳನ್ನು ಹೇಳಿದೆನು. ಇದರಂತೆ ಅಗ್ನಿಯದು ನೀರಿನದು, ಮತ್ತು ಪೃಥ್ವಿಯದು ಸಹ ವರ್ಣಿಸಲಾಗಿದೆ. ಶ್ರೇಷ್ಠರೂಪದಲ್ಲಿ ಶಕ್ತಿಯದು ಮತ್ತು ಸಾಮರ್ಥ್ಯದ ಶೋಧ ಕಲ್ಪನೆ ದೊಡ್ಡದಿರುತ್ತದೆ. ಮತ್ತು ಅದು ಪ್ರಭಾವಿಯಾಗಿರುವದು. ಕನಿಷ್ಠರೂಪದಲ್ಲಿ ಈ ಸಾಮರ್ಥ್ಯ ಮರ್ಯಾದಿತವಾಗಿರುವದು.

### ದಶಕ ೧೦. ಸಮಾಸ ೩. ದೇಹ ಆಶಂಕಾ ಶೋಧನ (ನುಡಿ ೨೧)

ಮೊದಲಿಗೆ ವಿಶ್ವನಿರ್ಮಿತಿಯ ಕ್ರಮದ ವರ್ಣನೆ ಮಾಡುವರು:–ಆಕಾಶಕ್ಕೆ ಮರ್ಯಾದೆ (ಅಳತೆ,ಸೀಮೆ) ಇರುವದು. ಅದು ಬೇರೆ ರೀತಿಯಿಂದ ಭಾಸವಾಗುವದು. ಮರ್ಯಾದಾ (ಅಳತೆ) ಮತ್ತು ಬೇರೆಯಾಗಿ ತೋರುವದೆಂಬ ಭಾಸವನ್ನು ಇದರಿಂದ ತೆಗೆದು ಬಿಟ್ಟರೆ ಅದೇ ಆಕಾಶವು ಬೃಹತ್ ಸ್ವರೂಪವಾಗುವದು. ಇಂಥ ಅಮರ್ಯಾದ ಮತ್ತು ಭಾಸರಹಿತ ಬ್ರಹ್ಮದಲ್ಲಿ ಮೂಲ ಮಾಯಾ ಹುಟ್ಟಿಬಂದಳು. (೧) ವಾಯು ಸ್ವರೂಪ ಇರುವದೇ ಮೂಲ ಮಾಯೆಯ ಲಕ್ಷಣವಿರುವದು. ಐದು ಭೂತಗಳು ಮತ್ತು ಮೂರು ಗುಣಗಳು ಒಟ್ಟು ಎಂಟು ವಾಯುವಿನಲ್ಲಿ ಅಂತರ್ಭೂತವಾಗಿರುವವು. ಇಲ್ಲಿ ವಾಯು ಅಂದರೆ ಶಕ್ತಿ ಎಂದು ಅರ್ಥವಿರುವದು. ಮೂಲ ಮಾಯಾ ಶಕ್ತಿರೂಪ ಇರುವಳು. ಇಡೀ ವಿಶ್ವಕ್ಕೆ ಇವಳು ದೊಡ್ಡ ತಾಯಿ ಇರುವಳು. ಗುಣಮಾಯಾ ಇವಳು ಚಿಕ್ಕ ತಾಯಿಯಾಗಿರುವಳು. (೨)

ಆಕಾಶಾಪಾಸೂನ ವಾಯೋ ಜಾಲಾ। ತೋ ವಾಯೋದೇವ ಬೋಲಿಲಾ।
ವಾಯೋಪಾಸೂನ ಅಗ್ನೀ ಜಾಲಾ। ತೋ ಅಗ್ನಿದೇವ ॥೩॥

ಅಗ್ನಿಪಾಸೂನ ಜಾಲೇ ಆಪ। ತೇ ನಾರಾಯೆಣಾಚೇ ಸ್ವರೂಪ।
ಆಪಾಪಾಸೂನ ಪೃಥ್ವೀಚೇ ರೂಪ। ತೇ ಬೀಜಾಕಾರೇ ॥೪॥

ತೇ ಪೃಥ್ವೀಚೆ ಪೋಟೀ ಪಾಷಾಣ। ಬಹು ದೇವಾಚೇ ಲಕ್ಷಣ।
ನಾನಾ ಪ್ರಚಿತ ಪ್ರಮಾಣ। ಪಾಷಾಣದೇವೀ ॥೫॥

ನಾನಾ ವೃಕ್ಷ ಮೃತ್ತಿಕಾ। ಪ್ರಚಿತ ರೋಕಡೀ ವಿಶ್ವಲೋಕಾ।
ಸಮಸ್ತ ದೇವಾಚಾ ಥಾರಾ ಯೇಕಾ। ವಾಯೋಮಧ್ಯೇ ॥೬॥

ದೇವ ಯಕ್ಷಿಣೀ ಕಾತ್ಯಾಯೆಣೀ। ಚಾಮುಂಡಾ ಜಖಿಣೀ ಮಾನವಿಣೀ।
ನಾನಾಶಕ್ತಿ ನಾನಾಸ್ಥಾನೀ। ದೇಶ ಪರತ್ವೇ ॥೭॥

ಪುರುಷನಾಮೇ ಕಿತ್ಯೇಕ। ದೇವ ಅಸತೀ ಅನೇಕ।
ಭೂತೇ ದೇವತೇ ನಪುಷಕ। ನಾಮೇ ಬೋಲಿಜೆತೀ ॥೮॥

ದೇವ ದೇವತಾ ದೇವತೇ ಭೂತೇ। ಪೃಥ್ವೀಮಧ್ಯೇ ಅಸಂಖ್ಯಾತೇ।
ಪರಂತು ಯಾ ಸಮಸ್ತಾತೇ। ವಾಯೋಸ್ವರೂಪ ಬೋಲಿಜೆ ॥೯॥

ವಾಯೋಸ್ವರೂಪ ಸದಾ ಅಸಣೇ। ಪ್ರಸಂಗೇ ನಾನಾ ದೇಹ ಧರಣೇ।
ಗುಪ್ತ ಪ್ರಗಟ ಹೋಣೇ ಜಾಣೇ। ಸಮಸ್ತಾಸೀ ॥೧೦॥

ವಾಯೋಸ್ವರೂಪೇ ವಿಚರತೀ। ವಾಯೋಮಧ್ಯೇ ಜಗಜ್ಜ್ಯೋತೀ।
ಜಾಣತೀಕಳಾ ವಾಸನಾ ವೃತ್ತಿ। ನಾನಾ ಭೇದೇ ॥೧೧॥

ಆಕಾಶಾಪಾಸೂನ ವಾಯೋ ಜಾಲಾ। ತೋ ದೋ ಪ್ರಕಾರೇ ವಿಭಾಗಲಾ।
ಸಾವಧಪಣೇ ವಿಚಾರ ಕೇಲಾ। ಪಾಹಿಜೆ ಶ್ರೋತೀ ॥೧೨॥

ಆಕಾಶದಿಂದ ವಾಯು ನಿರ್ಮಾಣವಾಯಿತು. ಇವನಿಗೆ ವಾಯುದೇವನೆಂದು ಅನ್ನುವರು. ವಾಯುವಿನಿಂದ ಅಗ್ನಿ (ತೇಜ) ನಿರ್ಮಾಣವಾಯಿತು. ಇವನಿಗೆ ಅಗ್ನಿದೇವನೆಂದು ಅನ್ನುವರು. (೩) ಅಗ್ನಿಯಿಂದ ಆಪ(ನೀರು) ನಿರ್ಮಾಣವಾಯಿತು. ಆಪೋನಾರಾಯಣ ಅಂದರೆ ಇದು ನಾರಾಯಣನ ಸ್ವರೂಪವಿರುವದು. ಆಪ್‌ದಿಂದ ಪೃಥ್ವಿ ನಿರ್ಮಾಣವಾಯಿತು. ಇದರ ರೂಪ ಬೀಜಾಕಾರವಿರುವದು. ಬೀಜದಲ್ಲಿ ಯಾವಪ್ರಕಾರ ಇಡೀ ವೃಕ್ಷವು ಗುಪ್ತವಾಗಿರುವದೋ ಅದರಂತೆ ಪೃಥ್ವಿಯಲ್ಲಿ ಶಕ್ತಿಯು ಗುಪ್ತವಾಗಿ ವಾಸವಾಗಿರುವದು. ಯಾವ ಜಡ ದ್ರವ್ಯದಿಂದ ಪೃಥ್ವಿ ತಯಾರಾಗಿದೆಯೋ ಅದು ಮೂಲ ಶಕ್ತಿರೂಪವೇ ಇರುವದು. (೪) ಪೃಥ್ವಿಯ ಹೊಟ್ಟೆಯಲ್ಲಿ ಬಹಳಷ್ಟು ಕಲ್ಲುಗಳಿರುವವು. ಇವುಗಳ ಪೈಕಿ ಕೆಲವು ಕಲ್ಲುಗಳಲ್ಲಿ ದೇವರ ಲಕ್ಷಣಗಳಿರುವವು ಎಂದು ನಂಬಿಕೆ ಇರುವದು.(ಕಲ್ಲಿನಲ್ಲಿ ದೇವರು ಒಡಮೂಡಿದೆ ಅನ್ನುವರು).ಇಂಥ ಕಲ್ಲಿನಲ್ಲಿ ದೇವರು ವಾಸ್ತವ್ಯ ಮಾಡುವನು.ಇಂಥ ಪ್ರತೀತಿಯೂ(ಅನುಭವ)ಬರುವದು. ಕಲ್ಲಿನಲ್ಲಿ ದೇವರು ಇರುವನು ಅನ್ನುವದಕ್ಕೆ ಇದೇ ಪ್ರಮಾಣವೆಂದು ತಿಳಿಯಬೇಕು.(ಎಲ್ಲ ಕಲ್ಲುಗಳಲ್ಲಿ ದೇವರಿರುವನೆಂದು ಯಾರೂ ಅನ್ನುವದಿಲ್ಲ). (೫) ಅನೇಕ ಗಿಡಗಳಲ್ಲಿ (ಅರಳಿಮರ, ಆಲದಮರ, ಅತ್ತಿಮರ, ಬನ್ನಿಮರ ಇತ್ಯಾದಿ) ಮತ್ತು ಮಣ್ಣಿನ ಮೂರ್ತಿಯಲ್ಲಿ ದೇವರು ಇರುವನೆಂಬ ಬಗ್ಗೆ ಪ್ರತ್ಯಕ್ಷ ಅನುಭವವು ಜಗತ್ತಿನಲ್ಲಿಯು ಬಹಳಷ್ಟು ಜನರಿಗೆ ಬಂದಿರುವದು. ಈ ಎಲ್ಲ ದೇವರಿಗೂ ಒಬ್ಬನೇ ವಾಯುವಿನ ಆಶ್ರಯವಿರುವದು. ಈ ಎಲ್ಲ ದೇವರು ಶಕ್ತಿಯ ವಿವಿಧ ರೂಪಗಳಿರುವವು. (೬) ದೇವ, ಯಕ್ಷಿಣಿ, ಕಾತ್ಯಾಯನಿ, ಚಾಮುಂಡಾ, ಜಾಖಿಣಿ, ಮಾನವಿಣಿ ಇತ್ಯಾದಿ ಅನೇಕ ಪ್ರಕಾರದ ಶಕ್ತಿ ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ಸ್ಥಳದಲ್ಲಿ ಇರುವದು ಕಂಡು ಬರುವವು. (೭) ಪುಲ್ಲಿಂಗದ ಹೆಸರಿನ ಎಷ್ಟೋ ದೇವತೆಗಳು ಇರುವವು. ಇದರಂತೆ ದೈವತೆ,ಭೂತೆ, ಇಂಥ ನಪುಂಸಕ ನಾಮದ ದೇವರೂ ಇರುವವು. (೮) ಜಗತ್ತಿನಲ್ಲಿ ದೇವ, ದೇವತಾ, ದೈವತೆ, ಮತ್ತು ಭೂತಗಳು ನಿಜವಾಗಿಯೂ ಅಸಂಖ್ಯವಿರುವವು. ಆದರೆ ಇವೆಲ್ಲವೂ ವಾಯು ಸ್ವರೂಪವಿರುವವು.ಇವೆಲ್ಲವೂ ಶಕ್ತಿಯ ರೂಪವಿರುವವು.(೯) ಈ ಎಲ್ಲ ದೇವತೆಗಳೂ ಯಾವಾಗಲೂ ವಾಯುರೂಪದಿಂದ ಇರುವವು. ಪ್ರಸಂಗಕ್ಕೆ ತಕ್ಕಂತೆ ಇವರು ಅನೇಕ ಪ್ರಕಾರದ ದೇಹಧಾರಣ ಮಾಡುವರು. ಮತ್ತು ಗುಪ್ತವಿರುವಲ್ಲಿ ಪ್ರಕಟವಾಗುವದು, ಪ್ರಕಟ ಇರುವಲ್ಲಿ ಗುಪ್ತವಾಗುವದು. ಇಂಥ ರೀತಿ ಸಹ ಈ ದೇವತೆಗಳಲ್ಲಿ ಇರುವದು. ಒಟ್ಟಿನಲ್ಲಿ ನಾನಾ ಪ್ರಕಾರದಲ್ಲಿ ಅನೇಕ ತರಹದಲ್ಲಿ ವಿಚಿತ್ರ ರೂಪದಿಂದ ಸಹ ಇವರು ಪ್ರಕಟವಾಗುವರು. (೧೦) ಈ ದೇವತೆಗಳೆಲ್ಲ ವಾಯುರೂಪದಿಂದ ಎಲ್ಲ ಕಡೆಗೂ ಸಂಚಾರ ಮಾಡುವರು, ಆಡ್ಡಾಡುವರು, ತಿರುಗಾಡುವರು. ವಾಯುವಿನಲ್ಲಿ ಜಗತ್‌ಜ್ಯೋತಿ (ಜ್ಞಾನಕಲಾ) ಇರುವದು. ವಾಯುವಿನಲ್ಲಿ ಅರಿವು, ವಾಸನಾ, ವೃತ್ತಿ, ಇತ್ಯಾದಿರೂಪದಿಂದ ಇದ್ದು ಜಗಜ್ಯೋತಿ ಅಂದರೆ ಜ್ಞಾನಕಲಾ ಇರುವಳು).ಇದು ಅರಿವಿನ ರೂಪದಿಂದ ಇರುವದು. ಇದು ಈ ಯಾವ ಅರಿವು ಇರುವದೋ ಅದರಲ್ಲಿ ವಾಸನಾದಿಂದಾಗಿ ಅನೇಕ ಪ್ರಕಾರದ ಭೇದ ನಿರ್ಮಾಣವಾಗುವವು. ವಾಸನಾದಿಂದ ಜ್ಞಾನ ಕಲೆಯಲ್ಲಿ ನಿರ್ಮಾಣವಾಗುವ ಯಾವ ಭೇದ ಆದೆಯೋ ಅದೇ ವಾಯು ರೂಪ ದೇವ ದೇವತಾದ ಮೂಲವಿರುವದು. ವಾಸನಾ ಶುಭವಾದದ್ದು ಇದ್ದರೆ ದೇವತಾ ಶ್ರೇಷ್ಠವಿರುವನು . ವಾಸನಾ ಕನಿಷ್ಠವಿದ್ದರೆ (ಅಶುಭವಿದ್ದರೆ) ದೇವತಾ ಕನಿಷ್ಠ ಪ್ರಕಾರದ್ದಿರುವದು. ಭೂತ ಪ್ರೇತಾದಿಗಳ ವಾಸನಾ ಅಗದೀ ಅಂದರೆ ಅಗದೀ ಹೀನದರ್ಜೆಯದಿರುವದು. (೧೧) ಇನ್ನು ನೇಲೆ ನಾಲ್ಕು ಭೂತಗಳ ದ್ವಿವಿಧ ಪ್ರಕಾರಗಳ ರೀತಿಯನ್ನು ಹೇಳುವರು:- ಆಕಾಶದಿಂದ ವಾಯು ನಿರ್ಮಾಣವಾದಾಗಲೇ ಅದರಲ್ಲಿ ಎರಡು ವಿಭಾಗ ಆದವು. ಶ್ರೋತಾಜನ ರೇ ಇದನ್ನು ಲಕ್ಷ್ಯಪೂರ್ವಕ ಕೇಳಿರಿ ಮತ್ತು ಸಾವಧಾನದಿಂದ ವಿಚಾರಮಾಡಿರಿ.(೧೨)

ಯೇಕ ವಾರಾ ಸಕಳ ಜಾಣತೀ । ಯೇಕ ವಾಯೋಮಧೀಲ ಜಗಜ್ಜ್ಯೋತೀ ।
ಜಗಜ್ಜ್ಯೋತೀಚ್ಯಾ ಅನಂತ ಮೂರ್ತೀ । ದೇವದೇವತಾಂಚ್ಯಾ ॥೧೩॥

ವಾಯೊ ಬಹುತ ವಿಕಾರಲಾ । ಪರಂತು ದೋ ಪ್ರಕಾರೇ ವಿಭಾಗಲಾ ।
ಆತಾ ವಿಚಾರಐಕಿಲಾ । ಪಾಹಿಜೆ ತೇಜಾಚಾ ॥೧೪॥

ವಾಯೊಪಾಸೂನ ತೇಜ ಜಾಲೇ । ಉಷ್ಣ ಸೀತಳ ಪ್ರಕಾಶಲೇ ।
ದ್ವಿವಿಧ ರೂಪ ಐಕಿಲೇ । ಪಾಹಿಜೆ ತೇಜಾಚೇ ॥೧೫॥

ಉಷ್ಣಾ ಪಾಸೂನ ಜಾಲಾ ಭಾನು । ಪ್ರಕಾಶರೂಪ ದೈದೀಪ್ಯ ಮಾನು ।
ಸರ್ವ ಭಕ್ಷಕ ಹುತಾಶನು । ಆಣೀ ವಿದ್ಯುಲ್ಲತಾ ॥೧೬॥

ಸೀತಳಾಪಾಸೂನ ಆಪ ಅಮೃತ । ಚಂದ್ರ ತಾರಾ ಆಣೀ ಸೀತ ।
ಆತಾ ಪರಿಸಾ ಸಾವಚಿತ್ತ । ಹೋಊನ ಶ್ರೋತೇ ॥೧೭॥

ತೇಜ ಬಹುತ ವಿಕಾರಲೇ । ಪರಂತು ದ್ವಿವಿಧಾ ಚ ಬೋಲಿಲೇ ।
ಆಪಹಿ ದ್ವಿವಿಧಾ ಚ ನಿರೋಪಿಲೇ । ಆಪ ಆಣಿ ಅಮೃತ ॥೧೮॥

ಯೇಕೇ ಪೃಥ್ವೀಚಾ ವಿಚಾರ । ಪಾಷಾಣ ಮೃತ್ತಿಕಾ ನಿರಂತರ ।
ಆಣೀಕ ದುಸರಾ ಪ್ರಕಾರ । ಸುವರ್ಣ ಪರೀಸ ನಾನಾ ರತ್ನೇ ॥೧೯॥

ನಾವು ಯಾವುದಕ್ಕೆ ಗಾಳಿ ಅನ್ನುವೆವೋ ಅದು ವಾಯುವಿನಲ್ಲಿಯ ಒಂದು ಪ್ರಕಾರವಿರುವದು. ಈ ಪ್ರಕಾರವು ಎಲ್ಲರಿಗೂ ಗೊತ್ತಿರುವದೇ ಆಗಿದೆ. ಮತ್ತೊಂದು ಗಾಳಿಯಲ್ಲಿಯ ಜ್ಞಾನಕಲೆಯು ಅಥವಾ ಯಾವುದಕ್ಕೆ ಜಗತ್‌ಜ್ಯೋತಿ ಅನ್ನುವರೋ ಆ ಪ್ರಕಾರವು ಎರಡನೆಯದು. ಎಲ್ಲ ದೇವ ದೇವತಾ ಅಂದರೆ ಜಗತ್ + ಜ್ಯೋತಿಯ ಅನಂತ ಮೂರ್ತಿಗಳೇ ಆಗಿರುವವು. ಜಗಜ್ಯೋತಿಯು ಅಂದರೆ ಅರಿವಿನ ಪೂರ್ಣ ರೂಪವೇ ಇರುವದು. ಇದು ಶಕ್ತಿಮಯವಿರುವದು, ವಾಸನಾ ಇದು ಅರಿವಿನ (ತಿಳುವಳಿಕೆಯ) ಸಣ್ಣ ದೊಡ್ಡ ಕೇಂದ್ರಗಳನ್ನು ತಯಾರ ಮಾಡುವದು. ಶುಭವಾಸನೆ ಇದ್ದು ಮತ್ತು ಅರಿವು ವಿಶಾಲವಿದ್ದರೆ ಅಲ್ಲಿ ಶಕ್ತಿಯು ಶುಭ ಮತ್ತು ಸಾಮರ್ಥ್ಯ ಇವು ದೊಡ್ಡದು ಇರುವವು. ಜಗತ್ತಿನಲ್ಲಿ ಯಾವ ಮನುಷ್ಯನು ಮನಸ್ಸುಗೊಟ್ಟು ಉಪಾಸನಾ ಮಾಡುವನೋ ಅವನಿಗೆ ಈ ಶಕ್ತಿ ಕೇಂದ್ರದ ಅಂದರೆ ಶ್ರೇಷ್ಠ ದೇವದೇವತೆಗಳ ದೊಡ್ಡ ಬೆಂಬಲ (ಮದ್ದತು) ಇರುವದು. ಆ ದೇವ ದೇವತೆಗಳು ಉಪಾಸಕನನ್ನು ಸದಾ ರಕ್ಷಿಸುವವು. ಅಡಚಣೆಯಿಂದ ಪಾರು ಮಾಡುವವು. ಅವನಿಗೆ ಅನೇಕ ತರಹದಿಂದ ಸಂಬಾಳಿಸುವವು. ಅವನ ಹಿತದ ಬಗ್ಗೆ ತತ್ಪರ ಹಾಗೂ ಜಾಗ್ರತವಿರುವವು. ಯಾವ ಮಂದಿರದಲ್ಲಿ ಉತ್ತಮ ಮತ್ತು ನಿಷ್ಕಾಮ ಉಪಾಸನೆ ಮತ್ತು ಭಜನೆ ಇತ್ಯಾದಿ ನಡೆಯುವವೋ ಅಲ್ಲಿ ಅನೇಕ ಶುಭ ಮತ್ತು ಶ್ರೇಷ್ಠ ದೇವ ದೇವತೆಗಳ ವಾಸವಿರುವದು. ಇದೇ ನಿಯಮವು ಶ್ರೇಷ್ಠರಾದ ಸಾಧು ಸಂತಾದಿ ಸತ್ಪುರುಷರ ಸಮಾಧಿ ಸ್ಥಾನಗಳಿಗೂ ಲಾಗೂ ಇರುವದು. ಯಾರು ತಾಮಸ ಉಪಾಸನೆಯನ್ನು ಮಾಡುವರೋ ಮತ್ತು ಎಲ್ಲ ತಾಮಸ ಮಂತ್ರ, ವ ತಂತ್ರ ಇದರ ಕಾರ್ಯ ನಡೆಯುವದೋ ಅಲ್ಲಿ ಕನಿಷ್ಠ ದೇವತಾ ಅಥವಾ ಹೀನದೇವತಾದ ಶಕ್ತಿ ವಾಸ ಮಾಡುವದು. ಈ ಕನಿಷ್ಠಾದಿ ದೇವತಾ ಸಹಾಯದಿಂದ ತಾತ್ಪೂರ್ತಿಕ ವಾಸನಾ ತೃಪ್ತಿ ಲಭಿಸುವದೆಂಬುದು ನಿಜವಿರುವದು. ಆದರೆ ಈ ಉಪಾಸನೆಯು ಕೊನೆಯು ಶುಭಕರವಾಗಿ ಮುಗಿಯುವದಿಲ್ಲ. ಮನುಷ್ಯನ ಬುದ್ಧಿ ಭ್ರಷ್ಟವಾಗುವದು. (೧೩) ವಾಯುವಿನಲ್ಲಿ ವಿಕಾರಗಳು ಬಹಳಷ್ಟು ಇರುವದು ಕಂಡು ಬರುತ್ತವೆ. ಆದರೂ ಅದರ ಮುಖ್ಯ ಪ್ರಕಾರಗಳು ಎರಡೇ ಇರುವವು. ಇನ್ನು ಮೇಲೆ ತೇಜ (ಅಗ್ನಿ)ದ ಪ್ರಕಾರ ಕೇಳಿರಿ. (೧೪) ವಾಯುವಿನಿಂದ ತೇಜ (ಅಗ್ನಿ) ನಿರ್ಮಾಣವಾಯಿತು. ಉಷ್ಣ (ಬಿಸಿ) ಮತ್ತು ಥಂಡ(ತಂಪು)ಹೀಗೆ ಎರಡೂ ಪ್ರಕಾರದಿಂದ ಇದು ಅನುಭವಕ್ಕೆ ಬರುವದು. ಈಗ ತೇಜದ ಎರಡು ಪ್ರಕಾರ ಹೇಳುವೆ ಕೇಳಿರಿ. [೧೫] ಪ್ರಕಾಶ ರೂಪ ಮತ್ತು ಅತ್ಯಂತ ತೇಜೋಮಯನಾದ ಸೂರ್ಯನು ಉಷ್ಣದಿಂದಲೇ ಆದನು. ಇದರಂತೆ ಸರ್ವಭಕ್ಷಕ ಅಗ್ನಿ ಮತ್ತು ವಿದ್ಯುತ್[ಮಿಂಚು, ಸಿಡಿಲು, ಲಾವಾರಸ] ಇವೆರಡೂ ಉಷ್ಣದಿಂದಲೇ ನಿರ್ಮಾಣವಾದುವು. [೧೬] ಎರಡನೆಯ ಪ್ರಕಾರದಲ್ಲಿ ಥಂಡ-ತಣ್ಣನ್ನ ಅಥವಾ ಶೀತಲ ತೇಜದಿಂದ ನೀರು, ಅಮೃತ, ಚಂದ್ರ, ನಕ್ಷತ್ರ ಮತ್ತು ಚಳಿ [ಥಂಡಿ] ಇವು ನಿರ್ಮಾಣವಾದವು. ಈಗ ಶ್ರೋತಾಜನ ಲಕ್ಷ್ಯಗೊಟ್ಟು ಕೇಳಿರಿ. [೧೭] ತೇಜದ ವಿಕಾರಗಳು ಅನೇಕವಿದ್ದರೂ ಅವುಗಳಲ್ಲಿ ಮುಖ್ಯವಾದವುಗಳು ಎರಡೇ ಇರುವವು. ಇದರಂತೆ ನೀರಿನಲ್ಲಿಯೂ ಮುಖ್ಯವಾಗಿ ಎರಡು ಪ್ರಕಾರಗಳಿರುವವು. ಅಂದರೆ ಒಂದನೇದು ನೀರು, ಎರಡನೆಯದು ಅಮೃತ ಇದರ ಬಗ್ಗೆ ಮೊದಲೇ ಹೇಳಲಾಗಿದೆ. [೧೮] ಇನ್ನು ಪೃಥ್ವಿಯ ಪ್ರಕಾರ ಕೇಳಿರಿ. ಕಲ್ಲು ಮತ್ತು ಮಣ್ಣು ಇವು ನಮ್ಮ ಅನುಭವದಲ್ಲಿಯವು-ಒಂದನೆಯ ಪ್ರಕಾರದವಾಗಿವೆ. ಮತ್ತು ಎರಡನೇದ್ದರಲ್ಲಿ ಬಂಗಾರ-ಪರುಷಗಲ್ಲು [ಪರಿಸಕಲ್ಲು] ಮತ್ತು ಅನೇಕ ಪ್ರಕಾರದ ರತ್ನಗಳು. [೧೯]

ಬಹುರತ್ನಾ ವಸುಂಧರಾ । ಕೋಣ ಖೋಟಾ ಕೋಣ ಖರಾ ।
ಅವಘೇ ಕಳೆ ವಿಚಾರಾ-। ರೂಢ ಹೋತಾ ॥೨೦॥

ಮನುಷ್ಯೇ ಕೋಠೂನ ಜಾಲೀ । ಹೇ ಮುಖ್ಯ ಆಶಂಕಾ ರಾಹಿಲೀ ।
ಪುಢೇ ವೃತ್ತಿ ಸಾವಧ ಕೇಲೀ । ಪಾಹಿಜೆ ಶ್ರೋತೀ ॥೨೧॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
''ದೇಹ ಆಶಂಕಾ ಶೋಧನ'' ನಾಮ ಸಮಾಸ ತೃತೀಯ ॥

● ●

ಬಹು ರತ್ನಾ ವಸುಂಧರಾ ಅನ್ನುವ ಒಂದು ವಾಕ್ಯವಿದೆ. ರತ್ನ ಖರೇ ಯಾವುದು? ಖೋಟ್ಟಿ ಯಾವುದು? ಇದು ತಿಳಿಯಲಿಕ್ಕೇ ಬೇಕು, ಮನುಷ್ಯನು ವಿಚಾರದ ಮೇಲೆ ಸವಾರ [ಆರೂಢ]ನಾದರೆ ಆಗ ಇದೆಲ್ಲವೂ ತಿಳಿಯುವದು. [೨೦] ಇರಲಿ, ಮನುಷ್ಯನು ಎಲ್ಲಿಂದ ಬಂದನು? ಈ ಮುಖ್ಯ ಶಂಕೆ ಇನ್ನೂ ಉಳಿದುಕೊಂಡೇ ಬಿಟ್ಟಿರುವದು. ಇದರ ನಿರಸನ [ಪರಿಹಾರ] ಕೇಳುವದಕ್ಕೆ ಶ್ರೋತಾಜನ ಸಾವಧರಾಗಬೇಕು. ತೇಜ, ಆಪ್, ಪೃಥ್ವಿ ಇವುಗಳ ಎರಡು ಪ್ರಕಾರಗಳನ್ನು ಹೇಳುವದರ ಉದ್ದೇಶವೇನಂದರೆ, ಒಂದನೆಯ ಪ್ರಕಾರದವು ಹೆಚ್ಚು [ಅಧಿಕ] ಗುಣಸಂಪನ್ನ ಮತ್ತು ಶಕ್ತಿಮಯ ಇರುವವು. ಎರಡನೆಯ ಪ್ರಕಾರದವು ಹೀನಗುಣ ಮತ್ತು ಹೀನಶಕ್ತಿಮಯವಿರುವವು. ಆದರೆ ಎರಡೂ ಪ್ರಕಾರಗಳಲ್ಲಿ ಸಾಮರ್ಥ್ಯ ಇರುವದು. ಇದರಲ್ಲಿ ಸಂಶಯವಿಲ್ಲ. [೨೧]

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಹತ್ತನೆಯ ದಶಕದ
"ದೇಹಆಶಂಕಾಶೋಧನ ನಾಮ" ಎಂಬ ಹೆಸರಿನ ಮೂರನೆಯ ಸಮಾಸವು
ಮುಗಿದುದು.

## ದಶಕ ದಶಮ : ಸಮಾಸ ಚತುರ್ಥ : ಬೀಜ ಲಕ್ಷಣ

॥ಶ್ರೀರಾಮ॥ ಆತಾ ಪಾಹೋ ಜಾತಾ ಉತ್ಪತ್ತೀ ।
ಮನುಷ್ಯಾ ಪಾಸೂನ ಮನುಷ್ಯೇ ಹೋತೀ ।
ಪಶುಪಾಸೂನ ಪಶು ನಿಪಜತೀ । ಪ್ರತ್ಯಕ್ಷ ಆತಾ ॥೧॥

ಖೇಚರೇ ಆಣೀ ಭೂಚರೇ । ವನಚರೇ ಆಣೀ ಜಳಚರೇ ।
ನಾನಾ ಪ್ರಕಾರೀಚೀ ಶರೀರೇ । ಶರೀರಾ ಪಾಸೂನ ಹೋತೀ ॥೨॥

# ದಶಕ ೧೦. ಸಮಾಸ ೪. ಬೀಜ ಲಕ್ಷಣ (ನುಡಿ ೪೬)

ಮಾನವನ ಉತ್ಪತ್ತಿಯು ಹೇಗಾಯಿತು?ಅಂತಾ ಹೇಳುವದರಲ್ಲಿ ಎರಡು ತರಹಗಳಿರುವವು. ೧]ಉತ್ಕ್ರಾಂತಿ [ವಿಕಾಸ] ಮತ್ತು ೨] ನಿರ್ಮಿತಿ ಉತ್ಕ್ರಾಂತಿ. ಹೇಳುವದೇನಂದರೆ: ವಿಶ್ವದ ಆರಂಭದಲ್ಲಿ ಕೇವಲ ಶಕ್ತಿ ಇತ್ತು. ಅದು ಅಮೂರ್ತ ಸ್ವರೂಪದಲ್ಲಿ ಇತ್ತು. ನಂತರ ಮೂರ್ತಗೊಂಡು [ಆಕಾರ ಹೊಂದಿ] ಪ್ರಥಮದಲ್ಲಿ ಜಡದ್ರವ್ಯ ನಿರ್ಮಾಣ ವಾದವು. ಆಮೇಲೆ ಬಹಳ ಕಾಲದ ನಂತರ ಅವುಗಳಲ್ಲಿಯು ಜೀವನದಿಂದ ಅಂದರೆ ನೀರಿನಿಂದ ಜೀವ ನಿರ್ಮಾಣ ವಾಯಿತು. ವನಸ್ಪತಿಯೇ ನೀರಿನಿಂದ ಹುಟ್ಟಿದ ಮೊದಲನೆಯ ಅವತಾರವು. ಮುಂದೆ ಇದರಲ್ಲಿ ಸುಧಾರಣೆಯಾಗುತ್ತ ಆಗುತ್ತ ಮೀನ, ಪಕ್ಷಿ, ಮತ್ತು ಜನಾವರ [ದನಕರ ಇತ್ಯಾದಿ]ಗಳು ತಯಾರ ಆದವು. ಜನಾವರಗಳಿಂದ ಮುಂದೆ ದೊಡ್ಡ ಮಂಗ ಹುಟ್ಟಿತು. ಮತ್ತು ಕೊನೆಗೆ ಮಂಗದಿಂದ ಮನುಷ್ಯನ ಅವತಾರವಾಯಿತು. ಇನ್ನು ನಿರ್ಮಿತಿ ಹೇಳು ವದೇನಂದರೆ ಮೂಲ ಮಾಯೆಯಲ್ಲಿ ಐದುಭೂತಗಳು ಮತ್ತು ಮೂರು ಗುಣಗಳು ಅಮೂರ್ತರೂಪದಲ್ಲಿ ಇದ್ದೇ ಇದ್ದವು. ಇದರಲ್ಲಿ ಯಾವ ಅರಿವು ಅನ್ನುವದು ಇರುವದೋ ಅದೇ ಈಶ್ವರವು. ಪೃಥ್ವಿಯ ಮತ್ತು ಸ್ವರ್ಗದಲ್ಲಿಯ ಎಲ್ಲ ಪದಾರ್ಥ ಸಜೀವ ಮತ್ತು ನಿರ್ಜೀವ ಸೃಷ್ಟಿ ಮನಸ್ಸಿನ ಧರ್ಮ ಮತ್ತು ನೈತಿಕ ಗುಣ ಮನುಷ್ಯರು ಪಶು ಪಕ್ಷಿ, ಸಾಗರ, ಪರ್ವತ, ನದಿಗಳು ಮತ್ತು ವನಸ್ಪತಿ ಇತ್ಯಾದಿ ಯಾವತ್ತೂ ಸಚೇತನ ವ ಅಚೇತನ ವಿಶ್ವ ಇವನ್ನೆಲ್ಲ ಆ ಈಶ್ವರನು ಕೇವಲ ತನ್ನ ಕಲ್ಪನಾ ಸಾಮರ್ಥ್ಯದಿಂದ ನಿರ್ಮಾಣ ಮಾಡುವನು.ಆದರೂ ಸಹ ಈಶ್ವರನು ಸ್ವತಃ ಅಮೂರ್ತ [ಆಕಾರರಹಿತ] ಅಲಿಪ್ತ ಮತ್ತು ಸ್ವಸ್ವರೂಪದಲ್ಲಿ ಲೀನವಾಗಿರುವನು. ಮುಂಡಕ ಉಪನಿಷತ್ತದ ಎರಡ ನೆಯ ಮುಂಡಕದಲ್ಲಿಯ ಐದಾರು ಮಂತ್ರಗಳಲ್ಲಿ ವಿಶ್ವನಿರ್ಮಾಣದ ಬಗ್ಗೆ ಹೇಳಿರುವದು. ಅವುಗಳಲ್ಲಿಯ ಕೆಲವು ಮಂತ್ರಗಳು ಹೀಗಿರುವವು:– । ದಿವ್ಯಃ ಹಿ ಅಮೂರ್ತಃ ಪುರುಷಃ ಸಬಾಹ್ಯ ಅಭ್ಯಂತರಃ ಹಿ ಅಜಃ...ಏತಸ್ಮಾತ್ ಜಾಯತೆ ಪ್ರಾಣಃ ಮನಃ ಸರ್ವೇಂದ್ರಿಯಾಣಿಚ, ಖಂ ವಾಯುಃ ಜ್ಯೋತಿಃ ಆಪಃ ಪೃಥಿವೀ...ತಸ್ಮಾತ್ ಚ ದೇವಾ ಬಹುಧಾ ಸಂ ಪ್ರಸೂತಾಃ ಸಾಧ್ಯಾ ಮನುಷ್ಯಾಃ ಪಶವಃ ವಯಾಂಸಿ... ಅತಃ ಸಮುದ್ರಾಃ ಗಿರಿಯಃ ಚ... ಅತಃ ಚ ಸರ್ವಾ ಓಷಧಯಃ ರಸಃ ಚ ಯೇನೇಷ ಭೂತೈಃ ತಿಷ್ಠತೆ ಹಿ ಅಂತರಾತ್ಮಾ–। ಅರ್ಥ:– ಸೃಷ್ಟಿಯ ಆರಂಭದಲ್ಲಿ ಅಮೂರ್ತವಾದ ದಿವ್ಯ ಪುರುಷನೇ ಮಾತ್ರ ಇದ್ದನು. ಅವನು ಸರ್ವತ್ರದಲ್ಲಿ ಒಳಗೂ ಹೊರಗೂ ವ್ಯಾಪಿಸಿ ಇದ್ದು ಅಜನಾಗಿರುವನು. ಇವನಿಗೆ ಜನ್ಮವಿಲ್ಲ. ಆಗುಹೋಗುಗಳಿಲ್ಲ. ಇವನಿಂದ ಪ್ರಾಣ ಮನಸ್ಸು ಸರ್ವ ಇಂದ್ರಿಯಗಳು ಆಕಾಶ ವಾಯು, ಅಗ್ನಿ, ಜಲ, ಮತ್ತು ಪೃಥ್ವಿ ಇವೆಲ್ಲವೂ ನಿರ್ಮಾಣವಾದವು. ಇವನಿಂದಲೇ ಎಲ್ಲ ಪ್ರಕಾರದ ದೇವ ದೇವದೂತ, ಮನುಷ್ಯರು, ಪಶುಪಕ್ಷಿ ಇತ್ಯಾದಿ ಉತ್ಪನ್ನವಾದವು. ಎಲ್ಲ ಸಮುದ್ರ ಪರ್ವತ, ನದಿಗಳು, ವನಸ್ಪತಿ, ಅವುಗಳಲ್ಲಿಯ ರಸ ಇವೆಲ್ಲ ಇವನಿಂದಲೇ ಉತ್ಪನ್ನವಾದವು. ಈ ಅಂತರಾತ್ಮಾ ಸರ್ವಭೂತಗಳಲ್ಲಿ ಇದ್ದು ಅವುಗಳನ್ನು ಪೋಷಣ ಮಾಡುವನು. ಶ್ರೀ ಸಮರ್ಥರು ಈ ಸಮಾಸದಲ್ಲಿ ಇದೇ ಸಿದ್ಧಾಂತವನ್ನು ಸವಿಸ್ತಾರವಾಗಿ ಹೇಳಿರುವರು.

## ದಶಕ ೧೦ : ಸಮಾಸ ೪ : ಬೀಜ ಲಕ್ಷಣ [ನುಡಿ ೪೬]

ಮನುಷ್ಯನ ಉತ್ಪತ್ತಿ ಹೇಗೆ ಆಯಿತು? ಇದನ್ನು ಹೇಳುವಾಗ ಯಾವ ಯಾವ ಅಡಚಣಿಗಳು ಬರುವ ವೆಂಬುದರ ಬಗ್ಗೆ ಸ್ವಲ್ಪದರಲ್ಲಿ ಈಗ ವರ್ಣನೆ ಮಾಡುವರು:– ಮನುಷ್ಯ ಹೇಗೆ ನಿರ್ಮಾಣವಾಗುವನೆಂಬುದು ನಮಗೆ ಪ್ರತ್ಯಕ್ಷವೇ ಕಂಡು ಬರುವ ಸಂಗತಿಯಾಗಿದೆ. ಅಂದರೆ ಮನುಷ್ಯನಿಂದ ಮನುಷ್ಯನು ಹುಟ್ಟುವನು. ಮತ್ತು ಪಶುವಿ ನಿಂದ ಪಶುವು ಹುಟ್ಟುವದು. [೧] ಆಕಾಶದಲ್ಲಿ ಹಾರಾಡುವ ಪಕ್ಷಿ, ಪೃಥ್ವಿಯ ಮೇಲೆ ಅಡ್ಡಾಡುವ ಪ್ರಾಣಿ,ಅಡವಿ ಅರಣ್ಯಗಳಲ್ಲಿರುವ ಪ್ರಾಣಿ–ಜಾನುವಾರಗಳು ಮತ್ತು ನೀರಿನಲ್ಲಿರುವ ಪ್ರಾಣಿಗಳು ಹೀಗೆ ಅನೇಕ ಪ್ರಕಾರದ ಶರೀರ ವುಳ್ಳವು ಇರುವವು. ಆದರೆ ಇವೆಲ್ಲವೂ ಇನ್ನೊಂದು ಶರೀರದಿಂದಲೇ ನಿರ್ಮಾಣವಾಗುವವು. [೨]

ಪ್ರತ್ಯಕ್ಷಾಸ ಆಣೀ ಪ್ರಮಾಣ। ನಿಶ್ಚಯಾಸ ಆಣೀ ಅನುಮಾನ।
ಮಾರ್ಗ ದೇಖೋನ ಆಡರಾನ। ಘೇಊ ಚ ನಯೆ ॥೩॥

ವಿಪರೀತಾಪಾಸೂನ ವಿಪರೀತೇ ಹೋತೀ। ಪರೀ ಶರೀರೇ ಚ ಬೋಲಿ ಜೇತೀ।
ಶರೀರಾವಾಚೂನ ಉತ್ಪತ್ತೀ। ಹೋಣಾರ ನಾಹೀ ॥೪॥

ತರೀ ಹೇ ಉತ್ಪತ್ತಿ ಕೈಸೀ ಜಾಲೀ। ಕಾಸಯಾಚೀ ಕೋಣೇ ಕೇಲೀ।
ಜೇಣೇ ಕೇಲೀ ತ್ಯಾಚೀ ನಿರ್ಮಿಲೀ। ಕಾಯಾ ಕೋಣೇ ॥೫॥

ಏಸೇ ಪಾಹಾತಾ ಉದಂಡ ಲಾಂಬಲೇ। ಪರೀ ಮುಳೀ ಶರೀರ ಕೈಸೇ ಜಾಲೇ।
ಕಾಸಯಾಚೇ ಉಭಾರಿಲೇ। ಕೋಣೇ ಕೈಸೇ ॥೬॥

ಏಸೀ ಹೇ ಮಾಗೀಲ ಆಶಂಕಾ। ರಾಹಾತ ಗೇಲೀ ತೇ ಏಕಾ।
ಕದಾಪೀ ಜಾಜು ಘೇಊ ನಕಾ। ಪ್ರತ್ಯಯೋ ಆಲಿಯಾನೇ ॥೭॥

ಪ್ರತ್ಯಯೋ ಚಿ ಆಹೆ ಪ್ರಮಾಣ। ಮೂರ್ಖಾಸ ವಾಟೆ ಅಪ್ರಮಾಣ।
ಪಿಂಡೇ ಪ್ರಚಿತಶಬ್ದೇ ಜಾಣ। ವಿಶ್ವಾಸಾಸೀ ॥೮॥

ಬ್ರಹ್ಮೀ ಮೂಳಮಾಯಾ ಜಾಲೀ। ತೇ ಚಿ ಅಷ್ಟಧಾ ಪ್ರಕೃತಿ ಬೋಲಿಲೀ।
ಭೂತೀ ತ್ರಿಗುಣೀ ಕಾಲವಲೀ। ಮೂಳಮಾಯಾ ॥೯॥

ತೇ ಮೂಳಮಾಯಾ ವಾಯೋಸ್ವರೂಪ।ವಾಯೋಮಧ್ಯೇ ಜಾಣೀವೇಚೇ ರೂಪ।
ತೆ ಚಿ ಇಚ್ಛಾ ಪರೀ ಆರೋಪ। ಬ್ರಹ್ಮೀ ನ ಘಡೆ ॥೧೦॥

ತಥಾಪಿ ಬ್ರಹ್ಮೀ ಕಲ್ಪಿಲಾ। ತರೀ ತೋ ಶಬ್ದ ವಾಯಾ ಗೇಲಾ।
ಆತ್ಮಾ ನಿರ್ಗುಣ ಸಂಚಲಾ। ಶಬ್ದಾತೀತ ॥೧೧॥

ಆತ್ಮಾ ನಿರ್ಗುಣ ವಸ್ತು ಬ್ರಹ್ಮ। ನಾಮಮಾತ್ರ ತಿತುಕಾ ಭ್ರಮ।
ಕಲ್ಪೂನ ಲಾವಿಲಾ ಸಂಭ್ರಮ। ತರೀ ತೋ ಲಾಗಣಾರ ನಾಹೀ ॥೧೨॥

ತಥಾಪಿ ಆಗ್ರಹೇ ಲಾವಿಲಾ। ಜರೀ ಧೋಂಡಾ ಮಾರಿಲಾ ಆಕಾಶಾಲಾ।
ಆಕಾಶಾವರೀ ಕುಂಥಿಲಾ। ತರೀ ತೇ ತುಟೇನಾ ॥೧೩॥

ಯಾವುದಕ್ಕೆ ಪ್ರತ್ಯಕ್ಷ ಪುರಾವೆ ಇರುವದೋ ಅದಕ್ಕೆ ಹೆಚ್ಚಿನ ಪುರಾವೆ ಬೇಕಾಗುವದಿಲ್ಲ. ನಿಶ್ಚಿತವಿರು ವಂಥಲ್ಲಿ ತರ್ಕ ನಡಯಲಾರದು. ಅರ್ಥಾತ್ ಸರಳವಿರುವ ರಸ್ತೆಯು ಕಣ್ಣ ಮುಂದೆ ಕಾಣುತ್ತಿರುವಾಗ ಮನುಷ್ಯನು ಅಡ್ಡಮಾರ್ಗದಿಂದ ಹೋಗುವದು ಒಳಿತಲ್ಲ. [೩] ಇರಲಿ, ವಿಚಿತ್ರ ವ, ವಿಲಕ್ಷಣ ಶರೀರದಿಂದ ಅಂಥದೇ ವಿಚಿತ್ರ ವ ವಿಲಕ್ಷಣ ಶರೀರವು ನಿರ್ಮಾಣವಾಗುವದು. ಇದಕ್ಕಾದರೂ ಶರೀರವೆಂದೇ ಹೆಸರಿಸಿ ಕರೆಯುವರು. ತಾತ್ಪರ್ಯ ಶರೀರವಿಲ್ಲದ ಹೊರತು ಶರೀರದ ಉತ್ಪತ್ತಿ ಆಗುವದು ಶಕ್ಯವಿಲ್ಲ. [೪] ಇಲ್ಲಿ ಒಂದು ಪ್ರಶ್ನೆ ಮುಂಬೆ ಬರುವದು. ಶರೀರದ ಉತ್ಪತ್ತಿಯಾದರೂ ಹೇಗಾಯಿತು? ಇದನ್ನು ಯಾರು ಮಾಡಿದರು? ಏತರಿಂದ ಮಾಡಿದರು? ಯಾವನು ಶರೀರದ ಉತ್ಪತ್ತಿ ಮಾಡಿದನೋ ಅವನ ಶರೀರವನ್ನು ಯಾರು ನಿರ್ಮಾಣ ಮಾಡಿದರು? [೫] ಈ ಪ್ರಶ್ನೆಗೆ ಉತ್ತರ ಕೊಡುವಾಗ ಹೀಗೆ ಅಂದ್ದೆವೆಂದರೆ: ಅ.ನ ಶರೀರವನ್ನು ಬ.ನು ನಿರ್ಮಾಣ ಮಾಡಿದನು. ಬ.ನ ಶರೀರವನ್ನು ಕ.ನು ನಿರ್ಮಾಣ ಮಾಡಿದನು. ಕ.ನ ಶರೀರವನ್ನು ಡ.ನು ನಿರ್ಮಾಣ ಮಾಡಿದನು...ಹೀಗೆ ಎಷ್ಟು ಹಿಂದಕ್ಕೆ ಹೋಗಬೇಕಾಗುವದೆಂಬುದನ್ನು ಹೇಳಲಿಕ್ಕೆ ಬರುವದಿಲ್ಲ,ಹೋದರೆ ಹನುಮಂತನ ಬಾಲ ಬೆಳೆದಂತೆ ಅದು ಕೊನೆಗಾಣುವದಿಲ್ಲ. ಇರಲಿ ಹಾಗಾದರೆ, ಪ್ರಥಮದಲ್ಲಿಯ ಮೊದಲನೆಯ ಶರೀರ ಹೇಗೆ ಆಯಿತು? ಅನ್ನುವ ಪ್ರಶ್ನೆ ಹಾಗೆಯೇ ಶಿಲುಕು ಉಳಿಯುವದು. ಇದರೊಂದಿಗೇನೆ ಅದು ಯಾವುದರಿಂದ ತಯಾರಾಯಿತು? ಮತ್ತು ಯಾರು ನಿರ್ಮಾಣ ಮಾಡಿದರು ? ಈ ಪ್ರಶ್ನೆಗಳು ಉತ್ತರವಿಲ್ಲದೇ ಉಳಿಯುವವು. [೬] ಹಿಂದೆ ಕೇಳಿದ ಶಂಕೆ ಇದಾಗಿದ್ದು ಅದಕ್ಕೆ ಉತ್ತರ ಕೊಡುವದೂ ಸಹ ಹಾಗೆಯೇ ಉಳಿದು ಬಿಟ್ಟಿದೆ.ಇರಲಿ ಪ್ರತ್ಯಕ್ಷ ಅನುಭವ ಬಂದ ಮೇಲೆ ಮಾತ್ರ ನೀವು ಸುಮ್ಮನೇ ಇಲ್ಲದ ತರ್ಕ ಮಾಡಬೇಡಿರಿ. [೭] ಪ್ರತ್ಯಕ್ಷ ಅನುಭವ ಇದೇ ಪುರಾವೆ ಎಂದು ತಿಳಿಯಿರಿ. ಮೂರ್ಖರಿಗೆ ಮಾತ್ರ ಇದು ಪಟಾಯಿಸುವದಿಲ್ಲ. ಪ್ರತೀತಿ [ಅನುಭವ] ಬಂದಿತೆಂದರೆ ಅಥವಾ ಅನುಭವದ ಮಾತು ಅಂತಾ ಅಂದೆವೆಂದರೆ ಸಾಮಾನ್ಯ ಮನುಷ್ಯರಲ್ಲಿ ವಿಶ್ವಾಸ ಹುಟ್ಟುವದು. [೮] ವಿಶ್ವದ ಮೂಲ ಈಶ್ವರಕ್ಕೆ ಪರಬ್ರಹ್ಮದಲ್ಲಿ ಇದ್ದದ್ದು ನಿಜವೇ ಆದರೂ ಇವನು ಸದಾ ಸರ್ವಕಾಲದಲ್ಲಿಯೂ ನಿರ್ಲೇಪವಿರುವನು. ಮೂಲ ಮಾಯಾ ಮಾತ್ರ ಸರ್ವವನ್ನೂ ಉಂಟು ಮಾಡುವಳು:- ಪರಬ್ರಹ್ಮದಲ್ಲಿ ಮೂಲಮಾಯಾ ನಿರ್ಮಾಣವಾದಳು. ಇವಳಿಗೆ ಮುಂದೆ ಅಷ್ಟಧಾ ಪ್ರಕೃತಿಯೆಂದು ಹೆಸರು ಇಟ್ಟಿತು. ಐದೂಭೂತ ಮತ್ತು ಮೂರುಗುಣ ಹೀಗೆ ಎಂಟು ತತ್ವಗಳು ಮೂಲಮಾಯೆಯಲ್ಲಿ ಮಿಶ್ರವಾಗಿರುವವು. [೯]ಮೂಲಮಾಯಾ ವಾಯು ಸ್ವರೂಪ ಮತ್ತು ಶಕ್ತಿಮಯವಿರುವದು. ವಾಯುವಿನಲ್ಲಿ ಇರುವ ಅರಿವಿನ ರೂಪವೇ ಇಚ್ಛಾ ಅನಿಸುವದು ಆದರೆ ಪರಬ್ರಹ್ಮದ ಮೇಲೆ ಇದನ್ನು(ಇಚ್ಛಾಶಕ್ತಿ)ಆರೋಪಿಸಲಿಕ್ಕೆ[ಹೇರಲಿಕ್ಕೆ]ಬರುವದಿಲ್ಲ.ಶಕ್ತಿಯಲ್ಲಿ ಇರುವಂಥ ಅರಿವಿಗೆ ಸತ್ಯಸಂಕಲ್ಪದ ರೂಪಇರುವದು.ಆದ್ದರಿಂದ ಇದಕ್ಕೆ ಇಚ್ಛಾ ಎಂದು ಅನ್ನಬೇಕಾಗುವದು.ಆದರೆಅಜ್ಞಾನಿ ಜನರಲ್ಲಿಯ ಇಚ್ಛೆಯಿಂದಅಥವಾ ಸಂಕಲ್ಪದಿಂದ[ಅಜ್ಞಾನಿ ಜನರ]ಸ್ವಸ್ವರೂಪದಮೇಲೆ ಮುಸುಕು ಹಾಕಲಾಗುತ್ತದೆ. ಇದು ಮೂಲ ಮಾಯೆಯಲ್ಲಿ ಮಾತ್ರ ಘಟಿಸುವದಿಲ್ಲ ಇದರ ಹೊರತಾಗಿ ಪ್ರಥಮದ ಸಂಕಲ್ಪ ಸತ್ಯ ಸಂಕಲ್ಪವಿದ್ದದ್ದರಿಂದ ಸ್ವಸ್ವರೂಪಕ್ಕೆ ತನ್ನ ಸ್ವಾನಂದದ ಮರೆವು ಆಗುವದಿಲ್ಲ.[೧೦] ಶುದ್ಧಬ್ರಹ್ಮದಲ್ಲಿ ಇಚ್ಛೆಯ ಕಲ್ಪನೆಯನ್ನು ಮಾಡಿದರೆ ಅದು ವ್ಯರ್ಥ(ನಿರರ್ಥಕ)ವಾಗಿ ಹೋಗುವದು.ಯಾಕಂದರೆ ಬ್ರಹ್ಮನು ನಿರ್ವಿಕಲ್ಪನಿರುವನು. ಆತ್ಮರೂಪದಿಂದ ಆ ನಿರ್ಗುಣ ವ ಶಬ್ದಾತೀತವಿರುವ ಸ್ವರೂಪವು ಎಲ್ಲ ಕಡೆಗೂ ತುಂಬಿರುವದು. [೧೧] ವಾಸ್ತವಿಕವಾಗಿ ಸದ್ವಸ್ತುವು ಮಾನವೀ ಭಾಷೆ ಮತ್ತು ಕಲ್ಪನಾ ಇವುಗಳ ಅಳವಿನ ಆಚೆಗೆ [ಹೊರಗೆ] ಇರುವದು. ಆತ್ಮಾ, ನಿರ್ಗುಣ, ವಸ್ತು, ಬ್ರಹ್ಮ ಇತ್ಯಾದಿ ಹೆಸರುಗಳು ನಿಜವಾಗಿಯೂ ಭ್ರಮಾತ್ಮಕವಿರುವವು. ಯಾಕಂದರೆ ನಾವು ನಮ್ಮ ಕಲ್ಪನೆಯಿಂದ ಸದ್ವಸ್ತುವಿನ ಮೇಲೆ ಈ ಹೆಸರುಗಳನ್ನು ಹೇರಿರುವೆವು [ಇಟ್ಟಿರುವೆವು].ಆದರೆ ಈ ಭ್ರಾಮಕ ಹೆಸರುಗಳು ಸದ್ವಸ್ತುವಿನ ಸ್ವರೂಪವನ್ನು ಸ್ಪರ್ಶಿಸಲಾರವು. [೧೨] ತಿಳಿಯಿರಿ, ಒಬ್ಬ ಮನುಷ್ಯನು ಆಕಾಶಕ್ಕೆ ಕಲ್ಲು ಒಗೆದನು ಅಥವಾ ಉಗುಳಿದನು. ಇವು ಆಕಾಶದವರೆಗೂ ಹೋಗಿ ಮುಟ್ಟುವದಿಲ್ಲ. ಆಕಾಶಕ್ಕೆ ಯಾವುದೂ ಸ್ಪರ್ಶ ಮಾಡಲು ಶಕ್ಯವಿಲ್ಲ ಇದರಂತೆ ಯಾರಾದರೂ ಆಗ್ರಹದಿಂದ ಅಥವಾ ಹಟದಿಂದ ಬ್ರಹ್ಮಕ್ಕೆ ಯಾವುದೇ ಹೆಸರು ಇಟ್ಟರೂ ಅದು ಅದಕ್ಕೆ ಅಂಟಿಕೊಳ್ಳುವದಿಲ್ಲ. [೧೩]

ತೈಸೇ ಬ್ರಹ್ಮ ನಿರ್ವಿಕಾರ । ನಿರ್ವಿಕಾರೀ ಲಾವಿತೀ ವಿಕಾರ ।
ವಿಕಾರ ನಾಸೇ ನಿರ್ವಿಕಾರ । ಜೈಸೇ ತೈಸೇ ॥೧೪॥

ಆತಾ ಏಕಾ ಪ್ರತ್ಯಯೋ । ಜಾಣೋನಿ ಧರಾವಾ ನಿಶ್ಚಯೋ ।
ತರೀ ಚ ಪಾವಿಜೆ ಜಯೋ । ಅನುಭವಾಚಾ ॥೧೫॥

ಮಾಯಾ ಬ್ರಹ್ಮೀ ಜೋ ಸಮೀರ । ತ್ಯಾತ ಜಾಣತಾ ತೋ ಈಶ್ವರ।
ಈಶ್ವರ ಆಣೀ ಸರ್ವೇಶ್ವರ। ತಯಾಸೀ ಚ ಬೋಲಿಜೆ ॥೧೬॥

ತೋ ಚಿ ಈಶ್ವರ ಗುಣಾಸೀ ಆಲಾ । ತ್ಯಾಚಾ ತ್ರಿಗುಣಭೇದ ಜಾಲಾ।
ಬ್ರಹ್ಮಾ ವಿಷ್ಣು ಮಹೇಶ ಉಪಜಲಾ । ತಯೋ ಠಾಈ ॥೧೭॥

ಸತ್ವ ರಜ ಆಣಿ ತಮ । ಹೇ ತ್ರಿಗುಣ ಉತ್ತಮೋತ್ತಮ ।
ಯಾಂಚ್ಯಾ ಸ್ವರೂಪಾಚಾ ಅನುಕ್ರಮ । ಮಾಗಾ ನಿರೂಪಿಲಾ ॥೧೮॥

ಜಾಣತಾ ವಿಷ್ಣು ಭಗವಾನ। ಜಾಣತಾ ನೇಣತಾ ಚತುರಾನನ ।
ನೇಣತಾ ಮಹೇಶ ಪಂಚಾನನ । ಅತ್ಯಂತ ಭೋಳಾ ॥೧೯॥

ತ್ರಿಗುಣ ತ್ರಿಗುಣೇ ಕಾಲವಲೇ । ಕೈಸೆ ಹೋತೀ ವೇಗಳಾಲೇ ।
ಪರೀ ವಿಶೇಷ ನ್ಯೂನ ಭಾಸಲೇ । ತೇ ಬೋಲಾವೇ ಲಾಗತೀ ॥೨೦॥

ವಾಯೋ ಮಧ್ಯೇ ವಿಷ್ಣು ಹೋತಾ । ತೋ ವಾಯೋಸ್ವರೂಪಚಿ ತತ್ವತಾ ।
ಪುಢೇ ಜಾಲಾ ದೇಹಧರ್ತಾ । ಚತುರ್ಭುಜ ॥೨೧॥

ತೈಸಾ ಚ ಬ್ರಹ್ಮಾ ಆಣಿ ಮಹೇಶ । ದೇಹ ಧರಿತೀ ಸಾವಕಾಸ ।
ಗುಪ್ತ ಪ್ರಗಟ ಹೋತಾ ತಯಾಸ । ವೇಳ ನಾಹೀ ॥೨೨॥

ಆತಾ ರೋಕಡೀ ಪ್ರಚಿತೀ । ಮನುಷ್ಯೇ ಗುಪ್ತ ಪ್ರಗಟ ತೀ ।
ಮಾ ತ್ಯಾ ದೇವಾಚ್ಯಾ ಚ ಮೂರ್ತೀ । ಸಾಮರ್ಥ್ಯವಂತ ॥೨೩॥

ದೇವ ದೇವತಾ ಭೂತೇ ದೇವತೇ । ಚಢತೇ ಸಾಮರ್ಥ್ಯ ಆಹೆ ತೇಥೇ ।
ಯೋಣೇ ಚಿ ನ್ಯಾಯೇ ರಾಕ್ಷಸಾತೇ । ಸಾಮರ್ಥ್ಯ ಕಳಾ ॥೨೪॥

ಅಂತೂ ಬ್ರಹ್ಮವು ಇದರಂತೆ ಅತ್ಯಂತ ವಿಕಾರ ಮುಕ್ತವಿರುವದು. ವಿಕಾರರಹಿತವಿರುವ ಬ್ರಹ್ಮಕ್ಕೆ ವಿಕಾರಗಳನ್ನು ಅಂಟಿಸುವ ಪ್ರಯತ್ನ ಮಾಡಿದರೆ ವಿಕಾರವೇ ಕಳಚಿ ಬಿದ್ದು ಹೋಗುವದು. ಮತ್ತು ಮೂಲಬ್ರಹ್ಮವು ಮಾತ್ರ ಹೇಗಿತ್ತೋ ಹಾಗೇ ಇರುವದು. (೧೪) ಇರಲಿ, ಈಗ ಕೇಳಿರಿ, ಅನುಭವದ ಮಾತನ್ನು ಹೇಳುವೆ. ಸ್ಥಿರ ಚಿತ್ತದಿಂದ ಕೇಳಿ ತಿಳಿದುಕೊಳ್ಳಿರಿ. ಆಮೇಲೆ ನಿಮ್ಮ ಮತವನ್ನು ನಿಶ್ಚಿತ ಮಾಡಿಕೊಳ್ಳಿರಿ. ಹೀಗೆ ಮಾಡಿದರೆ ನಿಮಗೆ ಸಾಕ್ಷಾತ್ ಅನುಭವ ಬರುವದು. (೧೫) ಪರಬ್ರಹ್ಮದ ದೃಷ್ಟಿಯಿಂದ ನೋಡಿದರೆ ಈ ವಿಶ್ವವು ಉತ್ಪನ್ನ ಆಗಿರುವನೇ ಇಲ್ಲ. ಆದ್ದರಿಂದ ಇದರ (ಬ್ರಹ್ಮದ) ಕಡೆಯಿಂದ ವಿಚಾರ ಮಾಡುವಾಗ್ಗೆ ವಿಶ್ವ ನಿರ್ಮಿತಿಯ ಕಥೆ ಹೇಳುವದು ಅನುಭವದ (ಅರ್ಥಾತ್ ಸಂತ ಸಾಧುಗಳ ಅನುಭವದ) ಉಲಟ (ವಿರುದ್ಧ) ಹೋದಂತೆ ಆಗುವದು. ಅದ್ದರಿಂದ ವಿಶ್ವದ ಬಾಜೂದಿಂದ ವಿಚಾರ ಮಾಡಿ ಅದು ಹೇಗೆ ನಿರ್ಮಾಣವಾಯಿತು ಅನ್ನುವದನ್ನು ಹೇಳಬೇಕಾಗುವದು:– ವಾಯುರೂಪಿ ಮೂಲ ಮಾಯಾ ನಿರ್ಮಾಣವಾದಳು ಅಂದರೆ ಪರಬ್ರಹ್ಮದ ಒಂದು ಭಾಗದ ಮೇಲೆ ಇವಳು ಇರುವಳು. ಆಗ ಅಲ್ಲಿ "ನಾನು ಬ್ರಹ್ಮ ಇರುವೆನು". ಈ ಜ್ಞಾನಮಯ ತಿಳುವಳಿಕೆ ಅಥವಾ ಶುದ್ಧ ಅರಿವು ಪ್ರಕಟವಾಗುವದು. ಆ ಅರಿವಿನ ಅಧಿಷ್ಠಾನವಾದ ಬ್ರಹ್ಮನಿಗೆ ಈಶ್ವರ ಎಂದು ಅನ್ನುವರು. ಈಶ್ವರ ಮತ್ತು ಪರಮೇಶ್ವರ ಇವೆರಡೂ ಅವನವೇ ಇರುವವು. (೧೬) ಈಶ್ವರನಿಗೆ ಗುಣಗಳ ಸಂಬಂಧ ಬರುವದು. ಆಗ ತ್ರಿಗುಣಗಳ ಗುಣಭೇದದಿಂದ ಈಶ್ವರನಲ್ಲಿ ಮೂರು ಅಂಗಗಳು ಕಾಣುವವು. ಸತ್ವಗುಣದ ಅಂಗ ವಿಷ್ಣು, ರಜೋಗುಣದ ಅಂಗ ಬ್ರಹ್ಮದೇವ, ಮತ್ತು ತಮೋಗುಣದ ಅಂಗ ಮಹೇಶ (ರುದ್ರ)ರೆಂದು ಕರೆಯಿಸಿಕೊಳ್ಳುವರು. ಈಶ್ವರನ ಸ್ಥಳದಲ್ಲಿ ಈ ಮೂರೂ ಅಂಗಗಳು ಕಾಣಿಸಿದರೂ ಕೊನೆಗೆ ಈಶ್ವರ ಒಬ್ಬನೇ ಇರುವನು. (೧೭) ಸತ್ವ, ರಜ, ತಮ, ಈ ಮೂರುಗುಣಗಳು ಉತ್ತಮದಲ್ಲಿ ಉತ್ತಮಗುಣ ಇರುವವು. ಇವುಗಳ ಸ್ವರೂಪದ ವರ್ಣನೆಯನ್ನು ಕ್ರಮವಾಗಿ ಹಿಂದೆ ಹೇಳಲಾಗಿದೆ. (೧೮) ಅರಿವು ಇದು ಸತ್ವಮಯ, ಇದು ಭಗವಾನ್ ವಿಷ್ಣುವು. ಅರಿವು ಮರೆವು ಮಿಶ್ರ ಇದು ರಜೋಮಯ, ಇದು ನಾಲ್ಕು ಮುಖದ ಬ್ರಹ್ಮದೇವರು ಮತ್ತು ಮರೆವು (ಅಜ್ಞಾನ) ಇದು ತಮೋಮಯ, ಇದು ಐದು ಮುಖದ ಅತ್ಯಂತ ಭೋಳಾ ಶಂಕರನು. (೧೯) ಮೂರು ಗುಣಗಳು ಒಂದರಲ್ಲೊಂದು ಕೂಡಿ ಮಿಶ್ರವಾಗಿರುವವು. ಇವುಗಳನ್ನು ಬೇರೆ ಮಾಡಲಿಕ್ಕೆ ಬರುವದಿಲ್ಲ. ಆದರೆ ಯಾವಾಗ ಒಂದು ಗುಣ ಹೆಚ್ಚಿನ ಪ್ರಮಾಣದಲ್ಲಿ ಅಥವಾ ಕಡಿಮೆ ಪ್ರಮಾಣದಲ್ಲಿ ಕಾಣುವದೋ ಆಗ್ಗೆ ಆ ಪ್ರಕಾರದಂತೆ ಗುಣಗಳ ಬಗ್ಗೆ ಹೇಳಬೇಕಾಗುವದು. (೨೦) ಉದಾ:– ಮೂಲ ಮಾಯೆಯಲ್ಲಿಯ ಅರಿವಿನಲ್ಲಿ ಸತ್ವಮಯನಾದ ವಿಷ್ಣು ಇದ್ದನು. ನಿಜವಾಗಿಯೂ ಇವನು ವಾಯುರೂಪ–ಶುದ್ಧ ಅರಿವಿನ ಸ್ವರೂಪವೇ ಇದ್ದನು. ನಂತರ ನಾಲ್ಕು ಕೈಗಳಿರುವ ದೇಹಧಾರಣ ಮಾಡಿದನು. (೨೧) ಇದರಂತೆ ಬ್ರಹ್ಮದೇವ ಮತ್ತು ಶಂಕರ ಇವರೂ ಮೂಲ ಅರಿವಿನಲ್ಲಿ ಇದ್ದರು. ನಂತರ ಯೋಗ್ಯ ಕಾಲದಲ್ಲಿ ಈ ಇಬ್ಬರೂ ದೇಹಧಾರಣ ಮಾಡುವರು. ದೇಹದಿಂದ ಪ್ರಕಟವಾಗುವದಕ್ಕೆ ಮತ್ತು ದೇಹಬಿಟ್ಟು ಹೋಗುವದಕ್ಕೆ ಗುಪ್ತರಾಗಿ ಹೋಗಲು, ಗುಪ್ತರಾಗಿ ಇರಲು ಗುಪ್ತವಾಗಿ ಬರಲು ಈ ಮೂವರಿಗೂ ವೇಳೆ ಹತ್ತುವದಿಲ್ಲ. ಇವರು ಕ್ಷಣದಲ್ಲಿ ಗುಪ್ತ ಅಥವಾ ಕ್ಷಣದಲ್ಲಿ ಪ್ರಕಟರಾಗಲು ಶಕ್ತರಿರುವರು. (೨೨) ಮನುಷ್ಯರೂ ಸಹ ಗುಪ್ತರಾಗುವರು ಮತ್ತು ಪ್ರಕಟರಾಗುವರು. ಇದರ ಪ್ರತ್ಯಕ್ಷ ಅನುಭವವು ನಮಗೆ ಬರುವದು. ಅಂದಮೇಲೆ ಬ್ರಹ್ಮ, ವಿಷ್ಣು, ಮಹೇಶ್ವರ ಇವರಾದರೋ ದೇವರ ಅವತಾರ ಮೂರ್ತಿಗಳೇ ಇರುವರು. ಇವರಲ್ಲಿ ಅಚಾಟ ಸಾಮರ್ಥ್ಯ ಇದ್ದೇ ಇರುವದು. ಅವರು ಗುಪ್ತ ವ ಪ್ರಕಟರಾದರೆ ಅದರ ಬಗ್ಗೆ ಆಶ್ಚರ್ಯಪಡಬೇಕಾದ ಕಾರಣವಿಲ್ಲ. (೨೩) ದೇವ ದೇವತಾ ಭೂತ ಮತ್ತು ಸ್ವರ್ಗದಲ್ಲಿಯ ದೈವತೆಗಳಲ್ಲಿ ಅಧಿಕಾಧಿಕವಾದ ಹೆಚ್ಚಿನ ಸಾಮರ್ಥ್ಯ ಇರುವದು. ಇದೇ ನ್ಯಾಯದಿಂದ ರಾಕ್ಷಸರಲ್ಲಿ ಸಹ ಬಲದ ಸಾಮರ್ಥ್ಯ ಇದ್ದ ಒಂದು ಕಾಲವಿತ್ತು. (೨೪)

ಝೋಟಿಂಗ ವಾಯೋಸ್ವರೂಪ ಅಸತೀ । ಸವೇ ಚ ಖುಳಖುಳಾ ಚಾಲತೀ ।
ಖೋಬರೀ ಖಾರಿಕಾ ಟಾಕೂನ ದೇತೀ । ಅಕಸ್ಮಾತ ॥೨೫॥
ಅವಘೇ ಚಿ ನ್ಯಾಲ ಅಭಾವೇ । ತರೀ ಹೇ ಬಹುತೇಕಾಸ ಠಾವೇ ।
ಆಪುಲ್ಯಾಲಾ ಅನುಭವೇ । ವಿಶ್ವಲೋಕ ಜಾಣತೀ ॥೨೬॥
ಮನುಷ್ಯೇ ಧರಿತೀ ಶರೀರವೇಷ । ನಾನಾ ಪರಕಾಯಾ ಪ್ರವೇಶ ।
ಮಾ ತೋ ಪರಮಾತ್ಮಾ ಜಗದೀಶ । ಕೈಸಾ ನ ಧರೀ ॥೨೭॥
ಮ್ಹಣೋನಿ ವಾಯೋಸ್ವರೂಪೇ ದೇಹ ಧರಿಲೇ ।
ಬ್ರಹ್ಮಾ ವಿಷ್ಣು ಮಹೇಶ ಜಾಲೇ ।
ಪುಢೇ ತೇಚಿ ವಿಸ್ತಾರಲೇ । ಪುತ್ರಪೌತ್ರೀ ॥೨೮॥
ಅಂತರೀ ಚ ಸ್ತ್ರಿಯಾ ಕಲ್ಪಿಲ್ಯಾ । ತೋ ತ್ಯಾ ಕಲ್ಪಿತಾಚ ನಿರ್ಮಾಣ ಜಾಲ್ಯಾ ।
ಪರೀ ತಯಾಪಾಸೂನ ಪ್ರಜಾ ನಿರ್ಮಿಲ್ಯಾ । ನಾಹೀತ ಕದಾ ॥೨೯॥
ಇಛೂನ ಪುತ್ರ ಕಲ್ಪಿಲೇ । ತೇ ತೇ ಪ್ರಸಂಗೀ ನಿರ್ಮಾಣ ಜಾಲೇ ।
ಯೇಣೇ ಪ್ರಕಾರೇ ವರ್ತಲೇ । ಹರಿಹರಾದಿಕ ॥೩೦॥
ಪುಢೇ ಬ್ರಹ್ಮಯಾನೇ ಸೃಷ್ಟೀ ಕಲ್ಪಿಲೀ । ಇಛೇಸರಿಸೀ ಸೃಷ್ಟೀ ಜಾಲೀ ।
ಜೀವಸೃಷ್ಟಿ ನಿರ್ಮಾಣ ಕೇಲೀ । ಬ್ರಹ್ಮದೇವೇ ॥೩೧॥
ನಾನಾ ಪ್ರಕಾರೀಚೆ ಪ್ರಾಣೀ ಕಲ್ಪಿಲೇ । ಇಛೇಸರಿಸೇ ನಿರ್ಮಾಣ ಜಾಲೇ ।
ಅವಘೇ ಜೋಡೇ ಚಿ ಉದೇಲೇ । ಅಂಡಜ ಜಾರಜಾದಿಕ ॥೩೨॥
ಯೇಕ ಜಳಸ್ವೇದಾಪಾಸೂನ ಜಾಲೇ । ತೇ ಪ್ರಾಣೀ ಸ್ವೇದಜ ಬೋಲಿಲೇ ।
ಯೇಕ ವಾಯೋಕರಿತಾ ಜಾಲೇ । ಅಕಸ್ಮಾತ ಉದ್ಭಿಜ ॥೩೩॥
ಮನುಷ್ಯಾಚೀ ಗೌಡವಿದ್ಯಾ । ರಾಕ್ಷಸಾಚೀ ಮೋಡಂಬರೀವಿದ್ಯಾ ।
ಬ್ರಹ್ಮಯಾಚೀ ಸೃಷ್ಟಿವಿದ್ಯಾ । ಯೇಣೇ ಪ್ರಕಾರೇ ॥೩೪॥
ಕಾಂಹೀಯೇಕ ಮನುಷ್ಯಾಚೀ । ತ್ಯಾಹೂನ ವಿಶೇಷ ರಾಕ್ಷೇಸಾಚೀ ।
ತ್ಯಾಹೂನ ವಿಶೇಷ ಬ್ರಹ್ಮಯಾಚೀ । ಸೃಷ್ಟಿವಿದ್ಯಾ ॥೩೫॥
ಜಾಣತೇ ನೇಣತೇ ಪ್ರಾಣೀ ನಿರ್ಮಿಲೇ । ವೇದ ವದೋನ ಮಾರ್ಗ ಲಾವಿಲೇ ।
ಬ್ರಹ್ಮಯಾನೇ ನಿರ್ಮಾಣ ಕೇಲೇ । ಯೇಣೇ ಪ್ರಕಾರೇ ॥೩೬॥
ಮಗ ಶರೀರಾಪಾಸೂನ ಶರೀರೇ । ಸೃಷ್ಟಿ ವಾಢಲೀ ವಿಕಾರೇ ।
ಸಕಳ ಶರೀರೇ ಯೇಣೇ ಪ್ರಕಾರೇ । ನಿರ್ಮಾಣ ಜಾಲೀ ॥೩೭॥

ಝೋಟಿಂಗ್ [ಬಲಿಷ್ಠ ಭೂತಜಾತಿ] ಈ ಯೋನಿ ವಾಯುಸ್ವರೂಪ ಇರುವದು. ಝೋಟಿಂಗರು ವಾಯು ಸ್ವರೂಪರು. ಇವರು ಕಾಣುವದಿಲ್ಲ. ಆದರೆ ಇವರು ನಡೆದಾಡಿದರೆ ಇವರ ನಡಿಗೆಯಿಂದ ಖುಳ್ ಖುಳ್-ಖಳ್, ಎಂದು ಸಪ್ಪಳವಾಗುವದು. ಝೋಟಿಂಗವು ಕಲ್ಪನಾ ಇಲ್ಲದಲೇ ಒಮ್ಮಿಂದೊಮ್ಮೆಲೇ ಕೊಬ್ಬರಿ ಉತ್ತತ್ತಿಗಳನ್ನು ನಮ್ಮ ಮುಂದೆ ತಂದು ಒಗೆಯುವರು, ಆದರೆ ಅವರು ಕಾಣುವದಿಲ್ಲ. (೨೫) ಇವುಗಳ ಮೇಲೆ ವಿಶ್ವಾಸವಿಡದೇ ಇದೆಲ್ಲ ಪೂರ್ಣ ಸುಳ್ಳು. ಖೊಟ್ಟಿ ಇರುವದೆಂದು ಅನ್ನುವವರು ಇರಬಹುದು. ಆದರೆ ಇದು ಪ್ರತ್ಯಕ್ಷ ಘಟಿಸುವದೆಂಬುದು ಅನೇಕ ಜನಕ್ಕೆ ಗೊತ್ತಿರುವದು. ಬಹಳ ಜನರಿಗೆ ಅನುಭವ ಬಂದಿರುವದರಿಂದಲೇ ಎಲ್ಲರಿಗೂ ಇದೆಲ್ಲವೂ ಗೊತ್ತಿರುವದು. [೨೬] ಮನುಷ್ಯರು ಬೇರೆ ಬೇರೆ ಶರೀರ ಮತ್ತು ವೇಷಧಾರಣ ಮಾಡುವರು. ಪರಕಾಯ ಪ್ರವೇಶ ಮಾಡುವರು. ಅಂದಮೇಲೆ ಜಗತ್ತಿನ ಒಡೆಯನಾದ ಪರಮೇಶ್ವರನು ಶರೀರಧಾರಣ ಮಾಡುವದಿಲ್ಲವೆಂದು ಅದು ಹೇಗೆ ಹೇಳಲಿಕ್ಕೆ ಬಂದೀತು? (೨೭) ಆದ್ದರಿಂದ ವಾಯು ಸ್ವರೂಪದ ಅರಿವಿನಿಂದ ದೇಹಧಾರಣ ಮಾಡಿದವರೇ ಬ್ರಹ್ಮ, ವಿಷ್ಣು, ಮಹೇಶ್ವರ ಎಂದು ಆದರು. ಮುಂದೆ ಇವರಿಗೆ ಮಕ್ಕಳು ಮೊಮ್ಮಕ್ಕಳೇ ಮೊದಲಾದ ವಂಶ ವೃಕ್ಷವು ವಿಸ್ತಾರ ಹೊಂದುತ್ತ ಹೋಯಿತು. [೨೮] ಇವರು ಮನದಲ್ಲಿ ಸ್ತ್ರೀಯ ಕಲ್ಪನೆಯನ್ನು ಮಾಡಿದರು. ಕಲ್ಪನಾ ಮಾಡಿದ ಕ್ಷಣದಲ್ಲಿಯೇ ಸ್ತ್ರೀಯು ನಿರ್ಮಾಣವಾದಳು. ಆದರೆ ಇವಳಿಂದ ಪ್ರಜಾ ನಿರ್ಮಾಣ ಕಾರ್ಯವನ್ನು ಇವರು ಎಂದೂ ಮಾಡಲಿಲ್ಲ. [೨೯] ಪುತ್ರಬೇಕೆನ್ನುವ ಇಚ್ಛೆಯಿಂದ ಪುತ್ರನ ಕಲ್ಪನೆಯನ್ನು ಮಾಡಿದರು. ಇದರಿಂದ ಆಯಾ ಪ್ರಸಂಗದಲ್ಲಿ ಪುತ್ರರು ನಿರ್ಮಾಣವಾದರು. ಬ್ರಹ್ಮ, ವಿಷ್ಣು, ಮಹೇಶ ಈ ಮೂವರೂ ಈ ರೀತಿಯಿಂದ ಈ [ಪದ್ಧತಿಯಿಂದ] ನಡೆದರು. [೩೦] ಅನಂತರ ಬ್ರಹ್ಮದೇವನು ಈ ವಿಶ್ವದ ಕಲ್ಪನೆಯನ್ನು ಮಾಡಿದನು. ಕೂಡಲೇ ಇವನ ಇಚ್ಛೆಯ ಪ್ರಕಾರ ವಿಶ್ವ ನಿರ್ಮಾಣವಾಯಿತು. ವಿಶ್ವದಲ್ಲಿರುವ ಯಾವತ್ತೂ ಜೀವ ಪ್ರಾಣಿಗಳನ್ನು ಬ್ರಹ್ಮದೇವನೇ ನಿರ್ಮಾಣ ಮಾಡಿದನು. [೩೧] ಇವನು ಅನೇಕ ಪ್ರಕಾರದ ಪ್ರಾಣಿಗಳ ಕಲ್ಪನೆಯನ್ನು ಮಾಡಿದನು. ಆ ಪ್ರಾಣಿಗಳೆಲ್ಲ ತತ್‌ಕ್ಷಣದಲ್ಲಿ ನಿರ್ಮಾಣವಾದವು. ಅಂಡಜ, ಜಾರಜ ಇತ್ಯಾದಿಗಳಲ್ಲಿ ಗಂಡು ಮತ್ತು ಹೆಣ್ಣು ಹೀಗೆ ಜೋಡಿಯಾಗಿ ಪ್ರಕಟವಾದವು. [೩೨] ಯಾವ ಪ್ರಾಣಿಗಳು ಬೆವರಿನ ನೀರಿನಿಂದ ನಿರ್ಮಾಣವಾದವೋ ಇದಕ್ಕೆ ಸ್ವೇದಜ ಅನ್ನುವರು. ಯಾವ ಪ್ರಾಣಿಯು ವಾಯುವಿನಿಂದತತ್‌ಕ್ಷಣದಲ್ಲಿ ನಿರ್ಮಾಣವಾಗುವವೋ ಅವಕ್ಕೆ ಉದ್ಭಿಜ ಎಂದು ಅನ್ನುವರು. [೩೩] ಮನುಷ್ಯರು ಜಾದೂ ಮಾಡಿ ವಸ್ತುಗಳನ್ನು ನಿರ್ಮಾಣ ಮಾಡಿದರು ಇದಕ್ಕೆ ಗೌಡ ವಿದ್ಯಾ ಅನ್ನುವರು. ರಾಕ್ಷಸರು ನಿರ್ಮಾಣ ಮಾಡುವ ವಿದ್ಯೆಗೆ ಓಡಂಬರೀ ವಿದ್ಯಾ ಅನ್ನುವರು. ಇದರಂತೆ ಬ್ರಹ್ಮದೇವನ ನಿರ್ಮಾಣವಿದ್ಯೆಗೆ ಸೃಷ್ಟಿವಿದ್ಯಾ ಎಂದು ಅನ್ನುವರು. [೩೪] ಮಾನವರು ಮಾಡುವ ಗೌಡ ವಿದ್ಯೆಯಿಂದ ಕೆಲವೊಂದು ವಸ್ತುಗಳು ಅಲ್ಪಪ್ರಮಾಣದಲ್ಲಿ ನಿರ್ಮಾಣವಾಗುವವು. ರಾಕ್ಷಸರ ವೋಡಂಬರೀ ವಿದ್ಯೆಯಿಂದ ಇನ್ನೂ ಹೆಚ್ಚು ವಸ್ತುಗಳು ನಿರ್ಮಾಣವಾಗುವವು. [ಆದರೆ ಎಲ್ಲವೂ ನಿರ್ಮಾಣವಾಗುವದಿಲ್ಲ]. ಇನ್ನು ಬ್ರಹ್ಮದೇವನ ಸೃಷ್ಟಿ ವಿದ್ಯೆಯಿಂದ ಅತ್ಯಧಿಕ ವಸ್ತುಗಳು ನಿರ್ಮಾಣವಾದವು. ವಿಶ್ವದಲ್ಲಿಯ ಎಲ್ಲ ವಸ್ತುಗಳೂ ಸೃಷ್ಟಿ ವಿದ್ಯೆಯಿಂದ ನಿರ್ಮಾಣವಾಗುವವು. [೩೫] ಬ್ರಹ್ಮದೇವನು ತಿಳವಳಿಕೆಯ [ಅರಿವಿನ] ಮತ್ತು ತಿಳವಳಿಕೆ ಇಲ್ಲದ [ಮರೆವಿನ] ಹೀಗೆ ಎರಡೂ ಪ್ರಕಾರದ ಪ್ರಾಣಿಗಳನ್ನು ನಿರ್ಮಿಸಿದನು. ವೇದಗಳನ್ನು ಪ್ರಕಟ ಮಾಡಿ ಪ್ರಾಣಿಗಳಿಗೆ ಬದುಕಿನ ಮಾರ್ಗ ಕಲ್ಯಾಣದ ದಾರಿಯನ್ನು ತೋರಿಸಿದನು. ಅಂತೂ ಬ್ರಹ್ಮದೇವ ಈ ಪ್ರಕಾರ ಎಲ್ಲ ಪ್ರಾಣಿಗಳನ್ನು ನಿರ್ಮಾಣ ಮಾಡಿದನು. [೩೬] ಒಮ್ಮೆ ಸೃಷ್ಟಿ ನಿರ್ಮಾಣವಾದ ಮೇಲೆ ಶರೀರದಿಂದ ಶರೀರಗಳು ಜನ್ಮ ಹೊಂದಿದವು. [ನಿರ್ಮಾಣವಾದವು]. ಮತ್ತು ಅನೇಕ ಪ್ರಕಾರಗಳಿಂದ ಅನೇಕ ಬಗೆಯಲ್ಲಿ ಸೃಷ್ಟಿಯ ವಿಸ್ತಾರ ಬೆಳೆಯಿತು. ಹೀಗೆ ಎಲ್ಲ ಶರೀರಗಳು ನಿರ್ಮಾಣವಾದವು. [೩೭]

ಯೇಥೇ ಆಶಂಕಾ ಫಿಟಲೀ । ಸಕಳ ಸೃಷ್ಟಿ ವಿಸ್ತಾರಲೀ ।
ವಿಚಾರ ಪಾಹಾತಾ ಪ್ರತ್ಯಯಾ ಆಲೀ । ಯಥಾನ್ವಯೇ ॥೩೮॥

ಐಸೀ ಸೃಷ್ಟಿ ನಿರ್ಮಾಣ ಕೇಲೀ । ಪುಢೇ ವಿಷ್ಣೂನೇ ಕೈಸೀ ಪ್ರತಿಪಾಳಿಲೀ ।
ಹೇ ಹೀ ವಿವಂಚನಾ ಪಾಹಿಲೀ । ಪಾಹಿಜೆ ಶ್ರೋತೀ ॥೩೯॥

ಸಕಳ ಪ್ರಾಣೀ ನಿರ್ಮಾಣ ಜಾಲೇ । ತೇ ಮೂಳರೂಪ ಜಾಣೋನ ಪಾಳಿಲೇ ।
ಶರೀರೇ ದೈತ್ಯ ನಿರ್ದಾಳಿಲೇ । ನಾನಾ ಪ್ರಕಾರೀಚೇ ॥೪೦॥

ನಾನಾ ಅವತಾರ ಧರಣೇ । ದುಷ್ಟಾಚಾ ಸಂಹಾರ ಕರಣೇ ।
ಧರ್ಮ ಸ್ಥಾಪಾಯಾಕಾರಣೇ । ವಿಷ್ಣೂಸ ಜನ್ಮ ॥೪೧॥

ಮ್ಹಣೋನ ಧರ್ಮಸ್ಥಾಪನೇಚೆ ನರ । ತೇ ಹೀ ವಿಷ್ಣೂಚೆ ಅವತಾರ ।
ಅಭಕ್ತ ದುರ್ಜನ ರಜನೀಚರ । ಸಹಜ ಚಿ ಜಾಲೇ ॥೪೨॥

ಆತಾ ಪ್ರಾಣೀ ಜೇ ಜನ್ಮಲೇ । ತೇ ನೇಣೋನ ಸಂಹಾರಲೇ ।
ಮೂಳರೂಪೇ ಸಂಹಾರಿಲೇ । ಯೇಣೇ ಪ್ರಕಾರೇ ॥೪೩॥

ಶರೀರೇ ರುದ್ರ ಖವಳೇಲ । ತೇ ಜೀವಸೃಷ್ಟಿ ಸಂಹಾರೇಲ ।
ಅವಘೇ ಬ್ರಹ್ಮಾಂಡ ಚಿ ಜಳೇಲ । ಸಂಹಾರಕಾಳೀ ॥೪೪॥

ಏವಂ ಉತ್ಪತ್ತೀ ಸ್ಥಿತೀ ಸಂಹಾರ । ಯಾಚಾ ಐಸಾ ಆಹೆ ವಿಚಾರ ।
ಶ್ರೋತೀ ಹೋಊನ ತತ್ಪರ । ಅವಧಾನ ದ್ಯಾವೇ ॥೪೫॥

ಕಲ್ಪಾಂತೀ ಸಂಹಾರ ಘಡೇಲ । ತೋ ಚಿ ಪುಢೇ ಸಾಂಗಿಜೇಲ ।
ಪಂಚಪ್ರಳಯ ವೋಳಖೇಲ । ತೋ ಚಿ ಜ್ಞಾನೀ ॥೪೬॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
"ಬೀಜ ಲಕ್ಷಣ" ನಾಮ ಸಮಾಸ ಚತುರ್ಥ ॥

● ●

ಇಲ್ಲಿಗೆ ಶಂಕಾದ ನಿರಶನವಾಯಿತು. ಯಾವತ್ತೂ ಸೃಷ್ಟಿ ಹೇಗೆ ವಿಸ್ತಾರ ಹೊಂದಿತು ಇದರ ಬಗ್ಗೆ ವಿಚಾರ ಮಾಡಲಿಕ್ಕೆ ಹತ್ತಿದಂತೆ ಸೃಷ್ಟಿಯ ವಿಸ್ತಾರದ ಕ್ರಮವು ಪ್ರತ್ಯಕ್ಷ ಅನುಭವಕ್ಕೆ ಬಂದಿತು. [೩೮] ಬ್ರಹ್ಮದೇವನು ಈ ಪ್ರಕಾರ ಈ ಸೃಷ್ಟಿ ನಿರ್ಮಾಣ ಮಾಡಿದನೆಂಬುದು ನಿಜವೇ ಆಗಿದೆ. ಆದರೆ ಮುಂದೆ ವಿಷ್ಣುವು ಇದನ್ನು ಹೇಗೆ ಪ್ರತಿಪಾಲನ ಮಾಡಿದನು. ಮತ್ತು ಸಂಭಾಳಿಸಿದನು. ಇದರ ವಿವೇಚನವೂ ಶ್ರೋತಾಜನಕ್ಕೆ ತಿಳಿಯಲಿಕ್ಕೆಬೇಕು. [೩೯] ಸರ್ವಪ್ರಾಣಿಗಳು ನಿರ್ಮಾಣವಾದವು. ಆ ಎಲ್ಲ ಪ್ರಾಣಿಗಳಲ್ಲಿ ತಿಳವಳಿಕೆ [ಅರಿವು] ಇರುವದು. ಅರಿವು ಇದು ವಿಷ್ಣುವಿನ ಮೂಲರೂಪವಿರುವದು. ಈ ಮೂಲ ಶುದ್ಧ ಅರಿವಿನಿಂದ ಎಲ್ಲ ಪ್ರಾಣಿಗಳ ಪಾಲನವಾಗುವದು. ಇಷ್ಟೇ ಅಲ್ಲ, ಈ ಅರಿನಿಂದ ಪ್ರತ್ಯಕ್ಷ ಶರೀರಧಾರಣ ಮಾಡಿ[ಅನೇಕ ಅವತಾರ ಧಾರಣ ಮಾಡಿ] ಅನೇಕ ಪ್ರಕಾರದ ರಾಕ್ಷಸರನ್ನು ಸಂಹರಿಸಿದ್ದಾನೆ. [೪೦] ದುಷ್ಟರ ಸಂಹಾರ ಮಾಡುವದಕ್ಕಾಗಿ ಈ ವಿಷ್ಣುರೂಪದ ಮೂಲ ಶುದ್ಧ ಅರಿವು ಅನೇಕ ಪ್ರಕಾರದ ಅವತಾರ ಧಾರಣ ಮಾಡುವದು. ಮತ್ತು ಧರ್ಮದ ಸ್ಥಾಪನೆಯನ್ನು ಮಾಡುವದಕ್ಕಾಗಿ ವಿಷ್ಣುವು ಜನ್ಮ ತಾಳಿ ಸ್ಥೂಲರೂಪಕ್ಕೆ ಬರಬೇಕಾಯಿತು. [೪೧] ಈ ದೃಷ್ಟಿಯಿಂದ ಧರ್ಮಸ್ಥಾಪನೆಯನ್ನು ಮಾಡುವ ಮನುಷ್ಯರೂ ಸಹ ವಿಷ್ಣುವಿನ ಅಂಶಾವತಾರರೆಂದು ತಿಳಿಯಬೇಕು. ಅರ್ಥಾತ್ ಯಾರು ಅಭಕ್ತ ಮತ್ತು ದುರ್ಜನರಿರುವರೋ ಅವರೆಲ್ಲ ರಾಕ್ಷಸರೆಂದು ತಿಳಿಯಬೇಕು. ಈ ವಿಷಯ ಸಹಜವಾಗಿ ತನ್ನಷ್ಟಕ್ಕೆ ತಾನೇ ಬಂದಿತು. [೪೨] ಇರಲಿ, ಈಗ ಯಾವ ಪ್ರಾಣಿ ಜನ್ಮ ತಾಳಿ ಬರುವದೋ ಅದು ಅದರ ಅಜ್ಞಾನದಿಂದ [ಮರೆವಿನಿಂದ] ಸಂಹಾರವಾಗುವದು. ಯಾವ ಪ್ರಕಾರ ಮೂಲ ವಿಷ್ಣುರೂಪದ ಅರಿವು ಪ್ರಾಣಿಗಳ ಪಾಲನ ಮಾಡುವದೋ ಇದರಂತೆಯೇ ಮೂಲರುದ್ರ ರೂಪ ಅಜ್ಞಾನ [ಮರೆವು]ವು ಪ್ರಾಣಿಗಳ ಸಂಹಾರ ಮಾಡುವದು. [೪೩] ಎಲ್ಲ ಪ್ರಾಣಿಗಳ ಶರೀರದಲ್ಲಿರುವ ರುದ್ರನು ಯಾವ ಕಾಲಕ್ಕೆ ಯಾವ ವೇಳೆಗೆ ಉರಿದೇಳುವನೋ [ಸಂತಾಪಗೊಳ್ಳುವನೋ] ಆ ವೇಳೆಯಲ್ಲಿ ಯಾವತ್ತೂ ಜೀವ ಸೃಷ್ಟಿನಾಶವಾಗಿ ಹೋಗುವದು. ಆ ಸಂಹಾರಕಾಲದ ಪ್ರಸಂಗದಲ್ಲಿ ಯಾವತ್ತೂ ವಿಶ್ವವು ಸುಟ್ಟು ಹೋಗುವದು, [೪೪] ಉತ್ಪತ್ತಿ, ಸ್ಥಿತಿ, ಸಂಹಾರ ಇವುಗಳ ವಿವೇಚನೆಯ ವಿಷಯವನ್ನು ಈ ಪ್ರಕಾರ ಹೇಳಿ ಕೊಡಲಾಯಿತು. ಶ್ರೋತಾಜನ ಮುಂದಿನ ವಿಷಯದ ಕಡೆಗೆ ಲಕ್ಷ್ಯಕೊಡಬೇಕು. [೪೫] ಕಲ್ಪಾಂತ್ಯದಲ್ಲಿ ಯಾವ ಸಂಹಾರ ಘಟಿಸುವದೋ ಅದರ ವಿಷಯವನ್ನು ಮುಂದಿನ ಸಮಾಸದಲ್ಲಿ ಹೇಳುವವರಿರುವೆವು. ಐದು ಪ್ರಕಾರದ ಪ್ರಳಯವನ್ನು ಯಾವನು ತಿಳಿಯುವನೋ ಅವನು ನಿಜವಾದ ಜ್ಞಾನಿಯೇ ಆಗಿರುವನು. [೪೬]

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಹತ್ತನೆಯ ದಶಕದ
"ಬೀಜಲಕ್ಷಣ"ವೆಂಬ ಹೆಸರಿನ ನಾಲ್ಕನೆಯ ಸಮಾಸವು ಮುಗಿದುದು.

## ದಶಕ ೧೦. ಸಮಾಸ ೫. ಪಂಚಪ್ರಳಯ (ನುಡಿ ೨೮)

ಪುರಾಣದಲ್ಲಿ ಒಂದು ಸುಂದರ ಕಲ್ಪನೆ ಇರುವದು. ಅದು ಯಾವುದೆಂದರೆ ವಿಷ್ಣುವಿನ ನಾಭಿ ಕಮಲ (ಹೊಕ್ಕಳದಲ್ಲಿ ಹುಟ್ಟಿದ ಕಮಲ)ದಿಂದ ನಾಲ್ಕು ಮುಖದ ಬ್ರಹ್ಮದೇವ ಉತ್ಪನ್ನನಾದನು. ವಿಷ್ಣು ಅಂದರೆ ಮೂಲ ಮಾಯೆಯಲ್ಲಿಯ ತಿಳುವಳಿಕೆಯ [ಅರಿವಿನ] ಶುದ್ಧ ಸ್ವರೂಪವಿರುವದು. ಇದರ ಹೊಟ್ಟೆಯಿಂದ ಅರಿವು-ಮರೆವು ಮಿಶ್ರಿತವಾದ ಬ್ರಹ್ಮ ದೇವರು ಹೊರ ಬೀಳುವರು· ತಾಯಿಯ ಹೊಟ್ಟೆಯಲ್ಲಿರುವ ಬಾಲಕನಿಗೆ ತಾಯಿಯ ಹೊಟ್ಟೆ ಯಲ್ಲಿರುವ ನಾಳದಿಂದ ಜೀವರಸವು ದೊರಕುವದು. ಇದರಂತೆಯೇ ಬ್ರಹ್ಮದೇವಗೆ ಸೃಷ್ಟಿ ನಿರ್ಮಾಣ ಮಾಡಲಿಕ್ಕೆ ಹತ್ತುವ ಎಲ್ಲ ಜ್ಞಾನವು ವಿಷ್ಣುವಿನಿಂದ ದೊರಕುವದು. ಈ ಸಂಕೇತದ ಇನ್ನೊಂದು ಅರ್ಥವೆಂದರೆ – ಮನುಷ್ಯನ ನಾಭಿಯ ಹತ್ತಿರ ಅಂದರೆ ಹೊಟ್ಟೆಯ ಒಳಗೆ ಹೊಕ್ಕಳದ ಸುತ್ತಲೂ ಸೂರ್ಯ ಚಕ್ರ ಇರುವದು. ಈ ಚಕ್ರ ಜಾಗ್ರತವಾಯಿತೆಂದರೆ ಮನುಷ್ಯನು ಅತ್ಯಂತ [ಸೃಜನ, ಸರ್ಜ=ಸೀಹ, ದಂತೆ] ಜಾಗೃತನಾಗುವನು. ಜ್ಞಾನದ, ಕಲೆಯ, ವಿಜ್ಞಾನದ ಅಥವಾ ಜೀವನದ ಯಾವ ಕ್ಷೇತ್ರದಲ್ಲಿ ಇದು ಸಂಚರಿಸುವದೋ ಆ ಕ್ಷೇತ್ರದಲ್ಲಿ ಅದರ ಕೈಯಿಂದ ಹೊಸ ನಿರ್ಮಾಣ ಘಟಿಸುವದು. ಶ್ರೇಷ್ಠ ಜ್ಞಾನಿ, ಕವಿ, ಗಾಯಕ, ವಕ್ತಾ, ಶಾಸ್ತ್ರಜ್ಞ ಅಥವಾ ವೀರ, ಶೂರ ಇಂಥವರಲ್ಲಿ ಸೂರ್ಯಚಕ್ರ ಜಾಗ್ರತ ಇದ್ದೇ ಇರುವದು. ಇರಲಿ. ಬ್ರಹ್ಮದೇವನ ಅವಸ್ಥೆಯಲ್ಲಿ ಸಂಕಲ್ಪ ಮತ್ತು ಅದರ ಸಿದ್ಧಿ ಇವುಗಳಲ್ಲಿ ಕಾಲಾಂತರ ಇರುವದಿಲ್ಲ. ಇವನ ಸಂಕಲ್ಪ ಸತ್ಯ ಸಂಕಲ್ಪ ಇದ್ದದ್ದರಿಂದ ಇವನು ಉತ್ಪನ್ನ ನಾದ ಕೂಡಲೇ ಫಲ ಕೊಡುವನು. ಅದ್ದರಿಂದ ಬ್ರಹ್ಮ ದೇವನು ಸಂಕಲ್ಪ ಮಾಡಿದ ಕೂಡಲೇ ವಿಶ್ವವು ನಿರ್ಮಾಣ ವಾಯಿತು. ಬ್ರಹ್ಮದೇವನಿಗೆ ವೇದ ಉಪನಿಷತ್ ಮತ್ತು ಬ್ರಾಹ್ಮಣ ಗ್ರಂಥಗಳಲ್ಲಿ ಪ್ರಜಾಪತಿ, ಹಿರಣ್ಯಗರ್ಭ, ಸೂತ್ರಾತ್ಮಾ ಹೀಗೆ ಹೆಸರು ಇರುವವು. ಗೀತೆಯಲ್ಲಿಯ ಅಧಿದೈವನು ಇವನೇ ಇರುವನು. ವಿಶ್ವ ನಿರ್ಮಾಣವಾದ ಕೂಡಲೇ ಇವನ ವ್ಯವಹಾರವೆಲ್ಲ ಕಾಲಗತಿಗೆ ಅನುಸಾರವಾಗಿ ನಡೆಯುವದು. ಕಾಲಗತಿಯು ಚಕ್ರಾಕಾರ ಇದ್ದದ್ದರಿಂದ ವಿಶ್ವ ನಿರ್ಮಾಣವಾದ ಮೇಲೆ ಕಾಲಾಂತರದಲ್ಲಿ ಈ ವಿಶ್ವದ ಸಂಹಾರವೂ ಸಹ ಆಗುವದು. ವಿಶ್ವ ಸಂಹಾರದ ಕಲ್ಪನೆಯು ಪ್ರಥಮವಾಗಿ ತೈತ್ತರೀಯ ಉಪನಿಷತ್ತದಲ್ಲಿ ಸ್ಪಷ್ಟವಾಗಿ ಕಂಡು ಬರುವದು. ಬ್ರಹ್ಮದೇವನ ದಿವಸ ಆರುಭವಾದ ಕೂಡಲೇ ವಿಶ್ವವು ನಿರ್ಮಾಣವಾಗುವದು. ಮತ್ತು ಬ್ರಹ್ಮ ದೇವನ ಆಯುಷ್ಯ ಮಿತಿಯ ಒಂದು ಹಗಲು ದಿವಸ ಮುಗಿದು ರಾತ್ರಿ ಪ್ರಾರಂಭವಾದ ಕೂಡಲೇ ವಿಶ್ವದ ಸಂಹಾರವಾಗುವದು. ರಾತ್ರಿ ಮುಗಿದು ಹಗಲು

ಪ್ರಾರಂಭವಾದ ಕೂಡಲೇ ಪುನಃ ವಿಶ್ವ ನಿರ್ಮಾಣವಾಗುವದು. ಇದರಲ್ಲಿ ಭೂತಗಳ ಆ ಸಮುದಾಯವೇ ಪುನಃ ಜನ್ಮ ತಾಳುವದು. ಬ್ರಹ್ಮದೇವನ ದಿವಸಕ್ಕೆ=ಹಗಲಿಗೆ ಕಲ್ಪ ಅಥವಾ ಸರ್ಗ ಮತ್ತು ರಾತ್ರಿಗೆ ಪ್ರಲಯ ಅನ್ನುವರು. ನಮ್ಮ ಕಾಲ ಗಣನೆಯ ಪ್ರಕಾರ ಕಲ್ಪ ಅಂದರೆ ನಾಲ್ಕು ಅಬ್ಜ ಮೂವತ್ತೆರಡು ಕೋಟಿ ವರ್ಷಗಳಾಗುವವು, ಇಷ್ಟು ವರ್ಷ ವಿಶ್ವ ನಡೆಯುವದು. ಅಂದರೆ ಬ್ರಹ್ಮ ದೇವನ ಹಗಲು ಹೊತ್ತಿಗೆ ಅವನ ದಿವಸ [ಹಗಲು] ಮುಗಿದು ರಾತ್ರಿ ಪ್ರಾರಂಭವಾಗುವದು. ಯಾವಾಗ ಪ್ರಲಯ ಪ್ರಾರಂಭವಾಗುವದೋ ಆಗ್ಗೆ ಯಾವ ಕ್ರಮದಿಂದ ವಿಶ್ವ ನಿರ್ಮಾಣ ವಾಯಿತೋ ಸರಿಯಾಗಿ ಅದರ ವಿರುದ್ಧ ಕ್ರಮದಿಂದ [ಉಲಟ ರೀತಿಯಿಂದ] ವಿಶ್ವದ ಲಯವಾಗುವದು. ಈಗ ಇಲ್ಲಿ ಅಧ್ಯಾತ್ಮ ಶಾಸ್ತ್ರದಲ್ಲಿಯ ಒಂದು ಅತಿ ಮಹತ್ವದ ಸಿದ್ಧಾಂತವು ಲಕ್ಷ್ಯಕ್ಕೆ ಬರುವದು· ಇದನ್ನು ಲಕ್ಷ್ಯದಲ್ಲಿ ಇಟ್ಟುಕೊಳ್ಳುವದು ಅತಿ ಅವಶ್ಯವಾದದ್ದು ಅದು ಯಾವುದೆಂದರೆ: ಪಿಂಡ [ಮಾಯಾ [ಕ್ರೋಕ್ಸಾಝುಮ್] ಮತ್ತು ಬ್ರಹ್ಮಾಂಡ [ಮ್ಯಾಕ್ರೋಕ್ಸಾಝುಮ್] ಇವುಗಳ ರಚನೆ ಆಗದೀ ಸಮಾನವಿರುವದು. ಮನುಷ್ಯ ಇವನು ವಿಶ್ವ ರಚನೆಯ ಪ್ರತೀಕವಿರುವನು. ಬ್ರಹ್ಮಾಂಡದಲ್ಲಿಯ ಸರ್ವತತ್ವಗಳು ಮನುಷ್ಯನಲ್ಲಿ ಕಂಡು ಬರುವವು.ಐತರೇಯ ಉಪನಿಷತ್ತಿನಲ್ಲಿಯ ಎರಡನೆಯ ಖಂಡದಲ್ಲಿ ಹೀಗೆ ಕಥೆ ಇರುವದು: "ಆತ್ಮನು ಪ್ರಥಮವಾಗಿ ವಿರಾಟ ಪುರುಷನನ್ನು ಉತ್ಪನ್ನ ಮಾಡಿ ಅವನನ್ನು ಸಜೀವಗೊಳಿಸಿದನು. ನಂತರ ಆತ್ಮಾ ಇವನು ವಿರಾಟ ಪುರುಷನ ಬಗ್ಗೆ ಬಹಳಷ್ಟು ವಿಚಾರ ಮಾಡಿದನು. ಮೊದಲು ಅವನ ಇಂದ್ರಿಯಗಳನ್ನು ಅನಂತರ ಅವನ ಕರ್ಮವನ್ನು ಉತ್ಪನ್ನ ಮಾಡಿದನು. ನಂತರ ಎಲ್ಲ ಕರ್ಮದ ದೇವತಾ ಮತ್ತು ಲೋಕಪಾಲರನ್ನು ನಿರ್ಮಿಸಿದನು. ಇವನು ಮುಖವನ್ನು ಮೊದಲಿಗೆ ನಿರ್ಮಾಣ ಮಾಡಿದನು. ಅದರೊಳಗಿಂದ ಶಬ್ದ ವ ಶಬ್ದದಿಂದ ಅಗ್ನಿ ಉತ್ಪನ್ನರಾದರು.ನಂತರ ಮೂಗನ್ನೂ ಅದರ ಹೊರಳಿಗಳನ್ನೂ ನಿರ್ಮಿಸಿ ದನು. ಮತ್ತು ಅದರಿಂದ ಪ್ರಾಣ, ಮತ್ತು ಪ್ರಾಣದಿಂದ ವಾಯು ಉತ್ಪನ್ನವಾಯಿತು· ಅಲ್ಲಿಂದ ಅವನು ಕಣ್ಣನ್ನು ನಿರ್ಮಿಸಿದನು. ಮತ್ತು ಅದರಿಂದ ದೃಷ್ಟಿ ವ ದೃಷ್ಟಿಯಿಂದ ಸೂರ್ಯ ಉತ್ಪನ್ನವಾದರು. ಅವನು ಕಿವಿಯನ್ನು ನಿರ್ಮಾಣ ಮಾಡಿದನು. ಅದರಿಂದ ಕೇಳುವದು ಮತ್ತು ಕೇಳುವದರಿಂದ ದಿಕ್ಕುಗಳು ಉತ್ಪನ್ನವಾದವು." ಇದರ ಮೇಲಿಂದ ತಿಳಿದು ಬರುವದೇನಂದರೆ: ವಿರಾಟ ಪುರುಷನ ಮುಖ, ಮೂಗು, ಕಣ್ಣು, ಕಿವಿ, ವಗೈರೆ ಇಂದ್ರಿಯಗಳು ಮೊದಲಿಗೆ ನಿರ್ಮಾಣವಾದವು. ನಂತರ ಅವನ ಕರ್ಮ ಮತ್ತು ಅದರಿಂದ ಪಂಚ ಭೂತಗಳು ಉತ್ಪನ್ನವಾದವು. ವ್ಯಕ್ತಿಯ ದೃಷ್ಟಿಯಿಂದ ಆ ಉಪನಿಷತ್ ಹೇಳುವದೇನಂದರೆ "ಅತ್ಮನು ವಿರಾಟನ ಹೊಟ್ಟೆಯಲ್ಲಿ ಹಸಿವೆ, ನೀರಡಿಕೆಗಳನ್ನು ಉತ್ಪನ್ನ ಮಾಡಿದನು. ಮತ್ತು ಇವನಿಗೆ ಇರಲಿಕ್ಕೆ ವಿಚಾರದ ಕೊನೆಯಲ್ಲಿ ಮನುಷ್ಯ ಶರೀರವೇ ಉತ್ತಮ ಸ್ಥಾನ ವೆಂದು ತಿಳಿದು ಅಲ್ಲಿ ಅದು ವಾಸವಾಯಿತು. ಆ ಮೇಲೆ ಅಗ್ನಿಯು ವಾಚಾ [ಶಬ್ದ] ಆಗಿ ಮುಖದಲ್ಲಿ ಪ್ರವೇಶ ಮಾಡಿ ದನು. ವಾಯು ಪ್ರಾಣವಾಗಿ ಮೂಗಿನಲ್ಲಿ ಪ್ರವೇಶ ಮಾಡಿದನು. ಸೂರ್ಯ ದೃಷ್ಟಿಯಾಗಿ ಕಣ್ಣಿನಲ್ಲಿ ಸೇರಿದನು. ದಿಕ್ಕುಗಳು ಶ್ರವಣವಾಗಿ ಕಿವಿಯಲ್ಲಿ ಸೇರಿದವು. "ಹೇಳುವ ತಾತ್ಪರ್ಯವೇನಂದರೆ: ಈ ಸಮಾಸದಲ್ಲಿ ಶ್ರೀಸಮರ್ಥರು ಐದು ಪ್ರಳಯ ಗಳನ್ನು ಹೇಳಿದ್ದಾರೆ. ಇವುಗಳಲ್ಲಿ ಪಿಂಡದವು ಎರಡು ಪ್ರಳಯಗಳು. ಮತ್ತು ಬ್ರಹ್ಮಾಂಡದವು ಎರಡು ಪ್ರಳಯಗಳು ಒಟ್ಟು ನಾಲ್ಕು ಆದವು. ಒಂದು ವಿವೇಕ ಪ್ರಳಯ ಎಂದು ಐದನೆಯ ಪ್ರಳಯ ಹೇಳಿದ್ದಾರೆ. ಪಿಂಡದವು ಮತ್ತು ಬ್ರಹ್ಮಾಂಡದ ಪ್ರಳಯಗಳು ತನ್ನಷ್ಟಕ್ಕೆ ತಾನೇ [ನಿಯತಿಗನುಸಾರವಾಗಿ] ಆಗುವವು. ಆದರೆ ವಿವೇಕಪ್ರಳಯ ಮಾತ್ರ ಮನುಷ್ಯನು ಸ್ವತಃ ಮಾಡಬೇಕಾಗುವದು· ಸಾಧಕರು ಸ್ವತಃದಲ್ಲಿಯೇ ತತ್ವಗಳ ಪ್ರಳಯ ಸಾಧಿಸಿಕೊಂಡರೆ ಆಗ ಅವರಿಗೆ ಬ್ರಹ್ಮಾಂಡದಲ್ಲಿಯ ತತ್ವಗಳ ಪ್ರಳಯ ತನ್ನಷ್ಟಕ್ಕೆ ತಾನೇ ಸಾಧಿಸುವದು. ಉದಾ:- ಸಾಧಕರು ವಾಣಿಯ ಲಯ ಸಾಧಿಸಿದರೆ [ವೈಖರಿಯದು ಮಧ್ಯಮಾದಲ್ಲಿ, ಮಧ್ಯಮಾದ್ದು ಪಶ್ಯಂತಿವಾಣಿಯಲ್ಲಿ ಮತ್ತು ಪಶ್ಯಂತಿಯದು ಪರಾವಾಣಿಯಲ್ಲಿ ಲಯ ಸಾಧಿಸಿದರೆ] ಅವನಿಗೆ ವಿಶ್ವದಲ್ಲಿಯ ಸರ್ವ ಜ್ಞಾನವು ಹಸ್ತಗತವಾಗುವದು. ಯಾಕಂದರೆ ಎಲ್ಲ ಜ್ಞಾನಗಳಿಗೆ ಮೂಲವು ಅಗ್ನಿಯು. ಪಂಚ ಪ್ರಾಣಗಳ ಲಯ ಸಾಧಿಸಿಕೊಂಡು ಬಿಟ್ಟರೆ ಅವನಿಗೆ ದೊಡ್ಡಶಕ್ತಿ ಬರುವದು· ದೃಷ್ಟಿಯ ಲಯ ಮಾಡಿದರೆ ದಿವ್ಯ ದೃಷ್ಟಿ ಬರುವದು. ಶ್ರವಣದ ಲಯ ಸಾಧಿಸಿದರೆ ದೂರದ ಶ್ರವಣ ಸಾಧಿಸುವದು.

ದಶಕ ದಶಮ : ಸಮಾಸ ಪಂಚಮ : ಪಂಚಪ್ರಳಯ ನಿರೂಪಣ

॥ಶ್ರೀರಾಮ॥ ಐಕಾ ಪ್ರಳಯಾಚೇ ಲಕ್ಷಣ । ಪಿಂಡೀ ದೋನೀ ಪ್ರಳಯೆ ಜಾಣ ।
ಯೇಕನಿದ್ರಾ ಯೇಕ ಮರಣ । ದೇಹಾಂತಕಾಳ ॥೧॥

ದೇಹಧಾರಕ ತಿನೀ ಮೂರ್ತೀ । ನಿದ್ರಾ ಜೇವ್ಹಾ ಸಂಪಾದಿತೀ ।
ತೋ ನಿದ್ರಾಪ್ರಳಯ ಶ್ರೋತೀ । ಬ್ರಹ್ಮಾಂಡೀಚಾ ಜಾಣಾವಾ ॥೨॥

ತಿನೀ ಮೂರ್ತೀಸ ಹೋಈಲ ಅಂತ । ಬ್ರಹ್ಮಾಂಡಾಸ ಮಾಂಡೇಲ ಕಲ್ಪಾಂತ ।
ತೇವ್ಹಾ ಜಾಣಾವಾ ನೇಮಸ್ತ । ಬ್ರಹ್ಮಪ್ರಳಯೆ ಜಾಲಾ ॥೩॥

ದೋನೀ ಪಿಂಡೀ ದೋನೀ ಬ್ರಹ್ಮಾಂಡೀ । ಚ್ಯಾರೀ ಪ್ರಳಯ ನಮಖಂಡೀ ।
ಪಾಚವಾ ಪ್ರಳಯ ಉದಂಡೀ । ಜಾಣಿಜೆ ವಿವೇಕಾಚಾ ॥೪॥

ಐಸೆ ಹೆ ಪಾಂಚಹಿ ಪ್ರಳಯೆ । ಸಾಂಗಿತಲೆ ಯಥಾನ್ವಯೇ ।
ಆತಾ ಹೇ ಅನುಭವಾಸ ಯೆ । ಐಸೇ ಕರೂ ॥೫॥

ನಿದ್ರಾ ಜೇವ್ಹಾ ಸಂಚರೇ । ತೇವ್ಹಾ ಜಾಗೃತೀವ್ಯಾಪಾರ ಸರೇ ।
ಸುಷುಪ್ತಿ ಅಥವಾ ಸ್ವಪ್ನ ಭರೇ । ಅಕಸ್ಮಾತ ಆಂಗೀ ॥೬॥

ಯಾ ನಾವ ನಿದ್ರಾಪ್ರಳಯೆ । ಜಾಗ್ರತೀಚಾ ಹೋಯೆ ಕ್ಷಯೆ ।
ಆತಾ ಐಕಾ ದೇಹಾಂತ ಸಮಯೆ । ಮ್ಹಣಿಜೆ ಮೃತ್ಯಪ್ರಳಯೆ ॥೭॥

ದೇಹೀ ರೋಗ ಬಳಾವತೀ । ಅಥವಾ ಕಠೀಣ ಪ್ರಸಂಗ ಪಡತೀ ।
ತೇಣೇ ಪಂಚಪ್ರಾಣ ಜಾತೀ । ವ್ಯಾಪಾರ ಸಾಂಡುನೀ ॥೮॥

ತಿಕಡೆ ಗೇಲಾ ಮನಪವನ । ಇಕಡೆ ರಾಹಿಲೀ ಮುಸ್ತೀ ತನು ।
ದುಸರಾ ಪ್ರಳಯೆ ಅನುಮಾನು । ಅಸೇಚಿನಾ ॥೯॥

ತಿಸರಾ ಬ್ರಹ್ಮಾ ನಿಜೆಲಾ । ತೋ ಹಾ ಮೃತ್ಯಲೋಕ ಗೋಳಾ ಜಾಲಾ ।
ಅವಘಾ ವ್ಯಾಪಾರ ಖುಂಟಲಾ । ಪ್ರಾಣೀಮಾತ್ರಾಚಾ ॥೧೦॥

ತೇವ್ಹಾ ಪ್ರಾಣೀಯಾಚೆ ಸೂಕ್ಷ್ಮಾಂಶ । ವಾಯೋಚಕ್ರೀ ಕರಿತೀ ವಾಸ ।
ಕಿತ್ಯೇಕ ಕಾಳ ಜಾತಾ ಬ್ರಹ್ಮಯಾಸ । ಜಾಗ್ರತೀ ಘಡೇ ॥೧೧॥

ಪುನ್ಹಾ ಮಾಗುತೀ ಸೃಷ್ಟಿ ರಚೀ । ವಿಸಂಚಿಲೆ ಜೀವ ಮಾಗುತೆ ಸಂಚೀ ।
ಸೀಮಾ ಹೋತಾ ಆಯುಷ್ಯಾಚೀ । ಬ್ರಹ್ಮಪ್ರಳಯ ಮಾಂಡೇ ॥೧೨॥

ಶತ ವರುಷೇ ಮೇಘ ಜಾತೀ । ತೇಣೇ ಪ್ರಾಣೀ ಮೃತ್ಯ ಪಾವತೀ ।
ಅಸಂಭಾವ್ಯ ತರ್ಕೇ ಕ್ಷಿತೀ । ಮರ್ಯಾದೇವೇಗಳೀ ॥೧೩॥

## ದಶಕ ೧೦ : ಸಮಾಸ ೫ : ಪಂಚಪ್ರಳಯ (ನುಡಿ ೨೮)

ಪ್ರಳಯಗಳು ಒಟ್ಟು ಐದು ಇರುವವು. ಇವುಗಳ ಸಾಮಾನ್ಯ ವರ್ಣನೆಯನ್ನು ಮೊದಲಿಗೆ ಮಾಡುವರು:– ಈಗ ಪ್ರಳಯದ ಲಕ್ಷಣಗಳನ್ನು ಕೇಳಿರಿ. ಪಿಂಡದಲ್ಲಿ ಎರಡು ಪ್ರಳಯವಿರುವವು. ಒಂದು ಪ್ರಳಯವು ಗಾಢ ನಿದ್ರೆಯದಾಗಿದೆ. ಎರಡನೆಯ ಪ್ರಳಯವು ಮರಣ ಅಥವಾ ದೇಹಾಂತಕಾಲದ್ದಿರುವದು. (೧) ಬ್ರಹ್ಮಾಂಡದಲ್ಲಿ ಸಹ ಎರಡು ಪ್ರಳಯ ಇರುವವು. ಬ್ರಹ್ಮ, ವಿಷ್ಣು, ಮಹೇಶ, ಇವರು ದೇಹಧಾರಣ ಮಾಡಿದ ಮೇಲೆ ಯಾವಾಗ ನಿದ್ರೆ ಮಾಡುವರೋ ಆಗ ಬ್ರಹ್ಮಾಂಡದ ನಿದ್ರಾ ಪ್ರಳಯವೆನಿಸುವದು. ಆ ಹೊತ್ತಿಗೆ ಬ್ರಹ್ಮದೇವನ ಹಗಲು ಮುಗಿದು ಅವನ ರಾತ್ರಿ ಪ್ರಾರಂಭವಾಗುತ್ತದೆ. (೨) ಬ್ರಹ್ಮ, ವಿಷ್ಣು, ಮಹೇಶ, ಈ ಮೂವರೂ ದೇಹಧಾರಿ ತ್ರಿಮೂರ್ತಿಗಳ ಅಂತ್ಯ ಯಾವಾಗ ಆಗುವದೋ ಆ ಹೊತ್ತಿಗೆ ಬ್ರಹ್ಮಾಂಡದ ಕಲ್ಪಾಂತ್ಯ ಪ್ರಾರಂಭವಾಗುವದು. ಆಗ ಬ್ರಹ್ಮ ಪ್ರಳಯ ಖಾತ್ರಿಯಿಂದ ಆಗ ಹತ್ತಿದೆಯೆಂದು ತಿಳಿಯಬೇಕು. (೩) ಈ ನವಖಂಡ ಪೃಥ್ವಿಯ ಮೇಲೆ ಪಿಂಡದವು ಎರಡು ಮತ್ತು ಬ್ರಹ್ಮಾಂಡದವು ಎರಡು ಹೀಗೆ ನಾಲ್ಕು ಪ್ರಳಯಗಳು ಆಗುವವು. ಐದನೆಯ ಪ್ರಳಯ ವಿವೇಕದ್ದಾಗಿರುವದು. ಇದೇ ಅತಿಶಯ ಮಹತ್ವದ್ದಾಗಿದೆ. ಹಾಗೆಯೇ ಅದು ಸರ್ವೋತ್ತಮವಿರುವದು. (೪) ಹೀಗೆ ಇರುವ ಐದು ಪ್ರಳಯಗಳ ಬಗ್ಗೆ ಚನ್ನಾಗಿ ಅನುಕ್ರಮದಿಂದ ಹೇಳಿದೆನು. ಇನ್ನು ಇವು ಅನುಭವಕ್ಕೆ ಹೇಗೆ ಬರುವವು? ಇದರ ಬಗ್ಗೆ ಈಗ ಹೇಳುವೆನು. (೫) ಮೊದಲು ನಿದ್ರಾ ಪ್ರಳಯ ಕೇಳಿರಿ:– ಮನುಷ್ಯನಿಗೆ ಒಮ್ಮೆ ನಿದ್ರೆ ಬಂದು ಅದು ಚನ್ನಾಗಿ ಹತ್ತಿತೆಂದರೆ ಅವನ ಎಚ್ಚರತನದಲ್ಲಿಯ ಎಲ್ಲ ವ್ಯಾಪಾರ ವ ವ್ಯವಹಾರಗಳು ನಿಂತು ಬಿಡುವವು. ಆಗ ಅವನಿಗೆ ಗಾಢವಾಗಿ ನಿದ್ರೆ ಹತ್ತುವದು. ಇಲ್ಲವೆ ನಿದ್ರೆಹತ್ತಿಯೂ ಅದರಲ್ಲಿ ಸ್ವಪ್ನ ಬೀಳುವವು. (೬) ಮನುಷ್ಯನ ಈ ಅವಸ್ಥೆಗೆ ನಿದ್ರಾಪ್ರಳಯ ಎಂದು ಅನ್ನುವರು. ಈ ನಿದ್ರಾಪ್ರಳಯದಲ್ಲಿ ಎಚ್ಚರವೆಂಬುದು ಸಂಪೂರ್ಣ ಕ್ಷಯ ಆಗಿರುತ್ತದೆ. ಇರಲಿ ಈಗ ದೇಹದ ಅಂತ್ಯಕಾಲ ಅಂದರೆ ಮೃತ್ಯುಪ್ರಳಯನೇ ಆಗಿರುವದು. ಇದರ ಬಗ್ಗೆ ಕೇಳಿರಿ, ಈಗ ಮೃತ್ಯುಪ್ರಳಯದ ಬಗ್ಗೆ ಕೇಳಬೇಕು. (೭) ಶರೀರದಲ್ಲಿ ರೋಗದ ಹೆಚ್ಚಳ, ಅಥವಾ ದೇಹದ ಮೇಲೆ ಕಠಿಣ ಪ್ರಸಂಗ ಬರುವಿಕೆ ಮತ್ತು ದೇಹಕ್ಕೆ ಹೊಡೆತ ಬೀಳುವದು. ಅಥವಾ ದೊಡ್ಡ ಅಪಘಾತವಾಗುವದು. ಇದರಿಂದ ದೇಹದಲ್ಲಿ ಇರುವಂಥ ಮತ್ತು ಅದನ್ನು (ದೇಹವನ್ನು) ಜೀವಂತವಾಗಿಡುವ ಪಂಚಪ್ರಾಣಗಳು ತಮ್ಮ ತಮ್ಮ ಕಾರ್ಯ ಬಿಟ್ಟುಕೊಟ್ಟು ದೇಹಬಿಟ್ಟು ಹೋಗುವವು. (೮) ಪ್ರಾಣ ಹೊರಟು ಹೋಗುವಾಗ ಅದರ ಸಂಗಡ ಮನಸ್ಸಿನ ತಿಳುವಳಿಕೆ (ಅರಿವು) ಸಹಿತ ಹೋಗಿ ಬಿಡುವದು. ಆಗ ಅಲ್ಲಿ ಹಿಂದೆ ಉಳಿದದ್ದೆಂದರೆ ಮೃತದೇಹವು ಮಾತ್ರ. ಇದಕ್ಕೆ ಮೃತ್ಯುಪ್ರಳಯ ಅನ್ನುವರು. ಈ ಪ್ರಳಯ ಅಗದೀ ಪ್ರತ್ಯಕ್ಷವೇ ಇರುವದು. ಇದರ ಬಗ್ಗೆ ಕಲ್ಪನೆ ಮಾಡಲಿಕ್ಕೆ ಕಾರಣವೇ ಇಲ್ಲ. (೯) ಈಗ ಬ್ರಹ್ಮಾಂಡದ ಮೊದಲನೆಯ ಪ್ರಳಯದ ಬಗ್ಗೆ ಹೇಳುವರು. ಈ ಪ್ರಳಯ ಅಂದರೆ ಬ್ರಹ್ಮದೇವನ ರಾತ್ರಿಯು:– ಬ್ರಹ್ಮದೇವ ನಿದ್ರೆ ಹೋದನೆಂದರೆ ಮೂರನೆಯ ಪ್ರಳಯ ಪ್ರಾರಂಭವಾಗುವದು. ಆ ಹೊತ್ತಿನಲ್ಲಿ ಮೃತ್ಯುಲೋಕ ಏಕತ್ರವಾಗುವದು. ಪೃಥ್ವಿಯ ಮೇಲಿನ ಎಲ್ಲ ಪ್ರಾಣಿಗಳ ವ್ಯಾಪಾರ–ಚಲನವಲನಗಳು ಬಂದು ಬೀಳುವವು. (೧೦) ಆಗ ಎಲ್ಲ ಪ್ರಾಣಿಗಳ ಸೂಕ್ಷ್ಮದೇಹ ಬ್ರಹ್ಮಾಂಡದಲ್ಲಿಯ ವಾಯುವಿನೊಳಗೆ ಹೋಗಿ ಇರುವವು. ಈ ರೀತಿಯಲ್ಲಿ ಬಹುಕಾಲ ಕಳೆದ ನಂತರ ಆಗ ಬ್ರಹ್ಮದೇವನ ರಾತ್ರಿ ಮುಗಿದು ದಿವಸ[ಹಗಲು] ಪ್ರಾರಂಭವಾಗುವದು. (ಬೆಳಗಾಗುವದು). ಬ್ರಹ್ಮದೇವ ಎಚ್ಚರವಾಗುವನು. (೧೧) ಎಚ್ಚರವಾದ ಮೇಲೆ ಪುನಃ ಮೊದಲಿನಂತೆ ವಿಶ್ವದ ರಚನೆಯನ್ನು ಮಾಡುವನು. ಅತ್ತ ಇತ್ತ ಪಸರಿಸಿ ಹೋಗಿದ್ದ ಜೀವಗಳನ್ನು ಪುನಃ ಬ್ರಹ್ಮದೇವನು ಏಕತ್ರಮಾಡುವನು. ಆಗ ಪುನಃ ಎಲ್ಲ ಮೊದಲಿನಂತೆ ಆಗುವದು. ಇದು ಬ್ರಹ್ಮಾಂಡದ ನಿದ್ರಾಪ್ರಳಯವು. ಆಮೇಲೆ ಕಾಲಗತಿಯಂತೆ ಬ್ರಹ್ಮದೇವನ ಆಯುಷ್ಯದ ಕೊನೆಗಾಲ ಬರುವದು. ಆ ಹೊತ್ತಿನಲ್ಲಿ ಬ್ರಹ್ಮ ಪ್ರಳಯವಾಗುವದು. (೧೨) ಈಗ ಬ್ರಹ್ಮ ಪ್ರಳಯದ ಸವಿಸ್ತರ ವರ್ಣನೆಯನ್ನು ಕೇಳಿರಿ:– ನೂರು ವರ್ಷ ಮೋಡಗಳೇ ಬರುವದಿಲ್ಲ. ಆದ್ದರಿಂದ ಮಳೆ ಬರದೆ (ಅವರ್ಷಣ) ಮಳೆಯ ಬರ ಬಿದ್ದು ಜೀವ ಪ್ರಾಣಿಗಳು ನೀರಿಲ್ಲದೆ ಸತ್ತು ಹೋಗುವವು. ನಮಗೆ ಕಲ್ಪನೆಯನ್ನು ಮಾಡಲಿಕ್ಕೆ ಬರದಷ್ಟು ದೊಡ್ಡ ಪ್ರಮಾಣದಲ್ಲಿ ಭೂಮಿ ಸೀಳುವದು. ಬಹಳಷ್ಟು ಬಿರುಕು ಬಿಡುವದು. (೧೩)

ಸೂರ್ಯ ತಪೇ ಬಾರಾಕಳೀ । ತೇಣೇ ಪೃಥ್ವೀಚೀ ಹೋಯ ಹೋಳೀ ।
ಅಗ್ನೀ ಪಾವತಾ ಪಾತಾಳೀ । ಶೇಷ ವಿಷ ವಮೀ ॥೧೪॥

ಆಕಾಶೀ ಸೂರ್ಯಾಚ್ಯಾ ಜ್ವಾಳಾ । ಪಾತಾಳೀ ಶೇಷ ವಿಷ ವಮೀ ಗರಳಾ ।
ದೋಹೀಕಡೂನ ಜಳತಾ ಭೂಗೋಳಾ । ಉರೀ ಕೈಚೀ ॥೧೫॥

ಸೂರ್ಯಾಸ ಖಡತರತಾ ಚಢೇ । ಹಲಕಾಲೋಳ ಚಹುಕಡೆ ।
ಕೋಸಳತೀ ಮೇರೂಚೆ ಕಡೇ । ಘಡಘಡಾಯಮಾನ ॥೧೬॥

ಅಮರಾವತೀ ಸತ್ಯಲೋಕ । ವೈಕುಂಠ ಕೈಲಾಸಾದಿಕ ।
ಯಾಹಿವೇಗಳೇ ನಾನಾಲೋಕ । ಭಸ್ಮೋನ ಜಾತೀ ॥೧೭॥

ಮೇರು ಅವಘಾ ಚಿ ಘಸರೇ । ತೆಥೀಲ ಮಹಿಮಾ ಚ ವೊಸರೆ ।
ದೇವ ಸಮುದಾವ ವಾವರೆ । ವಾಯೊಚಕ್ರೀ ॥೧೮॥

ಭಸ್ಮ ಜಾಲಿಯಾ ಧರತ್ರೀ । ಪರ್ಜನ್ಯ ಪಡೇ ಶುಂಡಾಧಾರೀ ।
ಮಹೀ ವಿರೇ ಜಳಾಂತರೀ । ನಿಮಿಷ್ಯ ಮಾತ್ರೇ ॥೧೯॥

ಪುಢೇ ನುಸ್ತೇ ಉರೇಲ ಜಳ । ತಯಾಸ ಶೋಷೀಲ ಅನಳ ।
ಪುಢೇ ಯೇಕವಟತೀ ಜ್ವಾಳ । ಮರ್ಯಾದೇ ವೇಗಳೇ ॥೨೦॥

ಸಮುದ್ರೀಚಾ ವಡವಾನಳ । ಶಿವನೇತ್ರೀಚಾ ನೇತ್ರಾನಳ ।
ಸಪ್ತಕಂಚುಕೀಚಾ ಆವರ್ಣಾನಳ । ಸೂರ್ಯ ಆಣೇ ವಿದ್ಯುಲ್ಲ್ಯತಾ ॥೨೧॥

ಐಸೆ ಜ್ವಾಳ ಯೇಕವಟತೀ । ತೇಣೇ ದೇವ ದೇಹ ಸೋಡಿತೀ ।
ಪೂರ್ವರೂಪೇ ಮಿಳೋನ ಜಾತೀ । ಪ್ರಭಂಜನೀ ॥೨೨॥

ತೋ ವಾರಾ ಝುಡಪೀ ವೈಶ್ವಾನರಾ । ವನ್ಹೀ ವಿಝೋಲ ಯೇಕಸರಾ ।
ವಾಯೋ ಧಾವೇ ಸೈರಾವೈರಾ । ಪರಬ್ರಹ್ಮೀ ॥೨೩॥

ಧೂಮ್ರ ವಿತುಳೇ ಆಕಾಶೀ । ತೈಸೇ ಹೋಈಲ ಸಮೀರಾಸೀ ।
ಬಹುತಾಮಧೇ ಥೋಡಿಯಾಸೀ । ನಾಶ ಬೋಲಿಲಾ ॥೨೪॥

ವಾಯೋ ವಿತುಳತಾ ಚ ಜಾಣ । ಸೂಕ್ಷ್ಮ ಭೂತೇ ಆಣೇ ತ್ರಿಗುಣ ।
ಈಶ್ವರ ಸಾಂಡೀ ಅಧಿಷ್ಠಾನ । ನಿರ್ವಿಕಲ್ಪೀ ॥೨೫॥

ತೇಥೇ ಜಾಣೀವ ರಾಹಿಲೀ । ಆಣೀ ಜಗಜ್ಜ್ಯೋತೀ ನಿಮಾಲೀ ।
ಶುದ್ಧ ಸಾರಾಂಶ ಉರಲೀ । ಸ್ವರೂಪಸ್ಥಿತೀ ॥೨೬॥

ಹನ್ನೆರಡು ಪ್ರಕಾರದ ಕಿರಣಗಳಿಂದ ಸೂರ್ಯನು ಪ್ರಕಾಶಿಸುವನು. ಮತ್ತು ಉಷ್ಣತೆಯನ್ನು ನಿರ್ಮಾಣ ಮಾಡುವನು. ಇದರಿಂದ ಪೃಥ್ವಿ ಸುಡಲಿಕ್ಕೆ ಹತ್ತುವದು. ಈ ಪ್ರಕಾಶದ ಜ್ವಾಲೆಯು ಪಾತಾಳದವರೆಗೂ ಹೋಗುವದು. ಇದರ ಉಷ್ಣತೆಯಿಂದ ಶೇಷ [ನಾಗದೇವತೆ] ವಿಷಕಾರ ಹತ್ತುವನು. (೧೪) ಆಕಾಶದಲ್ಲಿ ಸೂರ್ಯಪ್ರಕಾಶದ ದಾಹ ಮತ್ತು ಪಾತಾಳದಲ್ಲಿ ಶೇಷ ಕಾರುವ ವಿಷದ ದಾಹ ಇವೆರಡರ ಮಧ್ಯದಲ್ಲಿ ಸಿಕ್ಕಿಕೊಂಡ ಪೃಥ್ವಿಯು ಆವಾಗಲೇ ಸುಟ್ಟು ಹೋಗುವದು. (೧೫) ಸೂರ್ಯನ ಉಷ್ಣತೆಯು ಬೆಳೆಯುತ್ತ ಹೋಗುವದು. ಎಲ್ಲ ಕಡೆಗೂ ಬಹಳ ದೊಡ್ಡ ಅಲ್ಲೋಲ ಕಲ್ಲೋಲವಾಗುವದು. ಮೇರು ಪರ್ವತದ ಶಿಖರಗಳು ದಡದಡ ಬೀಳಹತ್ತುವವು. (೧೬) ಇಂದ್ರನ ರಾಜಧಾನಿಯಾದ ಅಮರಾವತಿ, ಸತ್ಯಲೋಕ, ವೈಕುಂಠ, ಕೈಲಾಸ, ಮತ್ತು ಇನ್ನೂ ಇರಬಹುದಾದ ಮತ್ತು ಇದ್ದ ಎಲ್ಲ ಲೋಕಗಳೂ ಸುಟ್ಟು ಹೋಗುವವು. (ಭಸ್ಮವಾಗುವವು). (೧೭) ಮೇರು ಪರ್ವತ ಬುಡಮೇಲಾಗಿ ಸಿಡಿದುಬಿಡುವದರಿಂದ ಇದರಮಹಿಮೆಯು ನಾಮಶೇಷವಾಗುವದು.ಅದರಮೇಲೆ ಇರುವಂಥ ಎಲ್ಲದೇವರು ವಾಯು ಚಕ್ರದಲ್ಲಿ ಪ್ರವೇಶ ಮಾಡುವರು (೧೮) ಪೃಥ್ವಿ ಹೀಗೆ ಸುಟ್ಟು ಹೋದ ಮೇಲೆ ದೊಡ್ಡ ಮಳೆ ಬೀಳಹತ್ತುವದು. ಆನೆಯ ಸೊಂಡೆಯ ತರಹದಲ್ಲಿ ನೀರು ಸೋರುವದು [ಬೀಳುವದು]. ಪೃಥ್ವಿಯು ನೋಡ ನೋಡುವಷ್ಟರಲ್ಲಿ ನೀರಿನಲ್ಲಿ ಮುಳುಗಿಬಿಡುವದು. [೧೯] ಆಮೇಲೆ ಆಗ ಎಲ್ಲ ಕಡೆಗೂ ನೀರೇನೀರಾಗುವದು. ಈ ನೀರನ್ನು ಅಗ್ನಿಯು ಹೀರಿಬಿಡುವದು.ಆಗ ಅಗ್ನಿಯದೇ ಕಾರಭಾರ ಬರುವದು. ಬ್ರಹ್ಮಾಂಡದಲ್ಲಿಯ ಎಲ್ಲ ಅಗ್ನಿ ಒಂದೇ ಕಡೆಗೆ ಏಕತ್ರ ಆಗುವದು.ಆಗ ಅದು ಅಳತೆ ಮಾಡಲಿಕ್ಕೆ ಬರದಷ್ಟು ಭಯಂಕರವಿರುವದು [೨೦]ಸಮುದ್ರದಲ್ಲಿಯ ವಡವಾಗ್ನಿ, ಶಂಕರನ ನೇತ್ರದಲ್ಲಿಯ ನೇತ್ರಾಗ್ನಿ, ಏಳು ಆವರಣ[ವೇಷ್ಟನ]ವಿದ್ದ ಅಗ್ನಿ,[ಪಂಚಭೂತ, ಅಹಂಕಾರ, ಮಹತ್‌ತತ್ವ ಕೂಡಿ ಏಳು,ಇದಕ್ಕೆ ಸಪ್ತಕಂಚುಕಿಯ ಆವರಣಾನಳ ಅನ್ನುವರು. ಇದರ ಆವರಣ ಇಡೀ ವಿಶ್ವಕ್ಕೆ ಇರುವದು. ಆದ್ದರಿಂದಲೇ ಇದಕ್ಕೆ ಎಲ್ಲಾ ಬ್ರಹ್ಮಾಂಡದಲ್ಲಿಯ ಅಗ್ನಿ ಅನ್ನುವರು]. ಸೂರ್ಯ ಮತ್ತು ವಿದ್ಯುತ್ತು ಇವುಗಳಲ್ಲಿಯ ಅಗ್ನಿ (೨೧) ಈ ಎಲ್ಲ ಅಗ್ನಿಗಳು ಒಂದೇ ಕಡೆಗೆ ಏಕತ್ರವಾಗುವವು. ಆಗ ದೇವರಿಗೆ ಸಹ ತಮ್ಮ ದೇಹ ಬಿಡಬೇಕಾಗುವದು. ಆಗ ದೇವರು ತಮ್ಮ ಮೂಲವಾಯು ಸ್ವರೂಪದಲ್ಲಿ ಕೂಡಿ ಹೋಗುವರು. (೨೨) ಈಗ ವಾಯುವಿನ ರಾಜ್ಯ ಪ್ರಾರಂಭವಾಯಿತು. ಈ ವಾಯು ಬಹಳ ಜೋರಿನಿಂದ ಬೀಸುತ್ತ ಅಗ್ನಿಯ ಮೇಲೆ ಎರಗುವನು. ಇದರಿಂದಾಗಿ ಅಗ್ನಿ ಒಮ್ಮೆಲೇ ಆರಿ ಹೋಗುವನು. ಆಮೇಲೆ ಪರಬ್ರಹ್ಮದಲ್ಲಿ ವಾಯು ಸಿಕ್ಕಾಪಟ್ಟೆ ಬೀಸಲಿಕ್ಕೆ ಹತ್ತುವನು.(೨೩) ಆದರೆ ಧೂಳು, ಹೊಗೆ ಇವು ಆಕಾಶದಲ್ಲಿ ಹೇಗೆ ನಾಶವಾಗಿ ಹೋಗುವವೋ ಅದರಂತೆ ಪರಬ್ರಹ್ಮದಲ್ಲಿ ವಾಯುವು ನೋಡಲಿಕ್ಕೆ ಸಿಗದೆ ಹೇಳಹೆಸರಿಲ್ಲದಂತಾಗಿ ಹೋಗುವನು. ಇದು ಸರಿಯೇ ಇರುವದು. ಯಾಕೆಂದರೆ ಬಹಳಷ್ಟರಲ್ಲಿ ಅಲ್ಪವು ನಾಶವಾಗಿ ಹೋಗುವದು. (೨೪) ವಾಯು ಈ ರೀತಿಯಾಗಿ ಪರಬ್ರಹ್ಮದಲ್ಲಿ ಲೀನವಾದ ಕೂಡಲೇ ಸೂಕ್ಷ್ಮವಾದ ಐದುಭೂತಗಳು, ಮೂರು ಗುಣಗಳು (ಅಷ್ಟಧಾಪ್ರಕೃತಿಯು) ಮತ್ತು ಈಶ್ವರ ಇವೆಲ್ಲ ತಮ್ಮ ಬೇರೆತನವನ್ನು ತ್ಯಜಿಸಿ ನಿರ್ವಿಕಲ್ಪ ಪರಬ್ರಹ್ಮದಲ್ಲಿ ಲೀನವಾಗಿ ಹೋಗುವರು. (೨೫) ಅಲ್ಲಿ ಅತಿಶುದ್ಧವಾದ ಅರಿವು [ತಿಳುವಳಿಕೆ] ಇರುವದು. ಆದರೆ ಜಗತ್+ಜ್ಯೋತಿ, [ಜ್ಞಾನಕಲಾ] ಇಲ್ಲದಾಗಿ ಬಿಡುವದು. ಈ ರೀತಿಯಿಂದ ಸರ್ವಸಂಹಾರವಾದ ನಂತರ ಕೇವಲ ಸ್ವರೂಪ ಸ್ಥಿತಿ ಮಾತ್ರ ಉಳಿಯುವದು. ಈಶ್ವರನು ವಿಶ್ವನಿರ್ಮಾಣದ ಯಾವ ಸಂಕಲ್ಪ ಮಾಡಿದ್ದನೋ ಅದು ಸತ್ಯ ಸಂಕಲ್ಪವು. ಇದು ಜ್ಞಾನಮಯ ಇರುವದು. ಅರಿವಿನ ರೂಪವಿರುವದು. ಸಾಮರ್ಥ್ಯ ಸಂಪನ್ನವಿರುವದು ಇದಕ್ಕೆಜಗತ್+ಜ್ಯೋತಿ ಅನ್ನುವರು. ಪ್ರಲಯ ಕಾಲದಲ್ಲಿ ವಿಶ್ವವು ಸ್ವಸ್ವರೂಪದಲ್ಲಿ ವಿಲೀನಗೊಳ್ಳುವದು. ಇದರಿಂದ ವಿಶ್ವದ ನಿರ್ಮಾಣವಾಗಲು ಕಾರಣವಾದ ಮತ್ತು ಅದನ್ನು ಕೊನೆಯವರೆಗೆ ಧಾರಣ ಮಾಡಿದ ಸತ್ಯಸಂಕಲ್ಪವೂ ಸಹ ಈಶ್ವರನಲ್ಲಿ ವಿಲೀನವಾಗುವದು. ಮತ್ತು ಈಶ್ವರನು ಬ್ರಹ್ಮರೂಪದಲ್ಲಿ ಕೂಡಿ ಹೋಗುವನು. (೨೬)

ಜಿತುಕೀ ಕಾಹೀ ನಾಮಾಭಿಧಾನೇ। ತಯೆ ಪ್ರಕೃತೀಚೆನಿ ಗುಣೇ।
ಪ್ರಕೃತೀ ನಸ್ತಾ ಬೋಲಣೇ। ಕೈಸೇ ಬೋಲಾವೇ ॥೨೭॥

ಪ್ರಕೃತೀ ಅಸ್ತಾ ವಿವೇಕ ಕೀಜೆ। ತ್ಯಾಸ ವಿವೇಕಪ್ರಳಯೆ ಬೋಲಿಜೆ।
ಪಾಂಚ ಹೀ ಪ್ರಳಯ ಜೋಜೇ। ತುಜ ನಿರೋಪಿಲೇ ॥೨೮॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
''ಪಂಚಪ್ರಳಯ ನಿರೂಪಣ'' ನಾಮ ಸಮಾಸ ಪಂಚಮ ॥

● ●

ಈಶ್ವರ ಜಗತ್‌ಜ್ಯೋತಿ, ಸತ್ಯ ಸಂಕಲ್ಪ ಮುಂತಾದ ಎಲ್ಲ ಹೆಸರುಗಳು ಮತ್ತು ಅವರು ತೋರಿಸಿದ ಕಲ್ಪನೆ ಇವೆಲ್ಲವೂ ಪ್ರಕೃತಿ ಮೂಲಕವಾಗಿ ಅಸ್ತಿತ್ವದಲ್ಲಿ ಬರುವವು. ಈ ಪ್ರಕೃತಿಯೇ ಮೂಲಸ್ವರೂಪದಲ್ಲಿ ಲೀನವಾಗಿ ಹೋದ ಮೇಲೆ ಅವುಗಳಿಗೆ ಸ್ಥಾನ ಉಳಿಯುವದಿಲ್ಲ. ಇದರ ಬಗ್ಗೆ ಮಾತನಾಡಬೇಕೆಂದರೂ ಸಹ ಮಾತುಗಳು ಬಂದ ಆಗುವವು. (೨೭) ತೀರ ಕೊನೆಯಲ್ಲಿ ವಿವೇಕ ಪ್ರಳಯ ಹೇಳುವರು:- ಇವೊತ್ತಿನ ಅವಸ್ಥೆಯಲ್ಲಿ ಪ್ರಕೃತಿ ಇರುವದು. ಇದು ನಿಜವೆಂದು ಅನಿಸುವದು. ಮತ್ತು ವಿಶ್ವವು ಸಹ ನಿಜವೆನಿಸುವದು. ಎಲ್ಲ ದೃಶ್ಯಗಳ ನಿರಾಸ [ಪರಿಹಾರ] ಮಾಡಿಕೊಳ್ಳಲಿಕ್ಕೆ ಆತ್ಮಾನಾತ್ಮ ವಿವೇಕ ಮಾಡಬೇಕು. ಇಂಥ ವಿವೇಕದಿಂದ ದೃಶ್ಯವೆಲ್ಲವೂ ನಿಜವಲ್ಲ ವಾದ್ದರಿಂದ ಇದನ್ನು ಒಂದು ಬದಿಗೆ (ಒಂದು ಬಾಜೂಕ್ಕೆ) ಸರಿಸುವದಕ್ಕೇನೆ ವಿವೇಕ ಪ್ರಳಯವೆಂದು ಅನ್ನುವರು. ಈ ಪ್ರಕಾರ ಐದು ಪ್ರಳಯಗಳ ವರ್ಣನೆಯನ್ನು ಮಾಡಲಾಯಿತು. ಸಮಗ್ರ ದಾಸಬೋಧ ಗ್ರಂಥವು ವಿವೇಕ ಪ್ರಳಯ ವನ್ನು ಹೇಗೆ ಮಾಡಬೇಕು. ಇದನ್ನೇ ಕಲಿಸುತ್ತಿದೆಯೆಂದು ಅನ್ನಲಿಕ್ಕೆ ಯಾವ ಅಡ್ಡಿಯೂ ಇಲ್ಲ. ಒಂದು ಸಲ ಬ್ರಹ್ಮಾಂಡದ [ಪ್ರಳಯ] ಬ್ರಹ್ಮಪ್ರಳಯ ಸುಲಭವೆನಿಸಬಹುದು. ಆದರೆ ಪಿಂಡದಲ್ಲಿಯ ಅಹಂತಾದ ಮೃತ್ಯು ಪ್ರಳ ಯವು ಬಹಳಷ್ಟು ಕಠಿಣವಿರುವದು. ಸಂತ ಸಾಧುಗಳು ವಿವೇಕದ ಸಾಮರ್ಥ್ಯದಿಂದ ಅದನ್ನು ಸ್ವತಃ ಅನುಭವಕ್ಕೆ ತಂದುಕೊಂಡವರಾಗಿದ್ದಾರೆ. ಆದ್ದರಿಂದ ಅವರ ಮಹಿಮೆಗೆ ಅಳತೆಯೇ ಇಲ್ಲ. ಸೀಮಾತೀತರಿರುವರು. (೨೮)

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಹತ್ತನೆಯ ದಶಕದ
"ಪಂಚ ಪ್ರಳಯ" ಎಂಬ ಹೆಸರಿನ ಐದನೆಯ ಸಮಾಸವು ಮುಗಿಯಿತು.

## ದಶಕ ೧೦. ಸಮಾಸ ೬. ಭ್ರಮ ನಿರೂಪಣ (ನುಡಿ ೪೦)

ಹಿಂದಿನ ಸಮಾಸದಲ್ಲಿ ವಿವೇಕ ಪ್ರಳಯದ ಬಗ್ಗೆ ಸವಿಸ್ತಾರವಾಗಿ ತಿಳಿಸಿ ಹೇಳಲಿಕ್ಕೆ ಆಗಲಿಲ್ಲ. ಅದನ್ನು ಈ ಸಮಾಸದಲ್ಲಿ ವಿವರವಾಗಿ ಹೇಳಿದ್ದಾರೆ. ಮನುಷ್ಯನ ಅಜ್ಞಾನವನ್ನು ಅಳಿಸಿಹಾಕುವ ಕೆಲಸವು ಮುಖ್ಯವಾಗಿ ವಿವೇಕದ ಪ್ರಧಾನ ಕಾರ್ಯವಾಗಿರುವದು. ಅಜ್ಞಾನದಿಂದ ವಿಪರೀತ ಕಲ್ಪನೆಗಳು ನಿರ್ಮಾಣವಾಗುವವು. ಮತ್ತು ಮಾನವ ಜೀವನದ ಮೇಲೆ ಅದು ತನ್ನ ಅಧಿಕಾರ ಸತ್ತಾ ನಡೆಸುವದು. ಇದಕ್ಕೆ ಭ್ರಮೆ ಎಂದು ಅನ್ನುವರು. ವಿವೇಕ ಪ್ರಳಯ ಅಂದರೆ ಅಜ್ಞಾನ ಪ್ರಳಯ, ಒಟ್ಟಿನಲ್ಲಿ ಇದೇ ಭ್ರಮ ಪ್ರಳಯವಿರುವದು. ಆದ್ದರಿಂದ ಈ ಸಮಾಸದಲ್ಲಿ ಮುಖ್ಯವಾಗಿ ಭ್ರಮದ ವರ್ಣನೆಯು ಇರುವದು. ಬ್ರಹ್ಮಾಂಡ ಪ್ರಳಯ ಯಾವಾಗ ಆಗುವ ಕಾಲ ಬಂದೀತೋ

ಆಗ್ಗೆ ಆದೀತು. [ಅದಕ್ಕೆ ಬಹುಕಾಲ ಬೇಕು]. ಆದರೆ ಸದ್ಯಕ್ಕೆ ಮೃತ್ಯು ಪ್ರಳಯ ಆಗುವ ಮೊದಲು ಪ್ರತಿಯೊಬ್ಬರು ವಿವೇಕ ಪ್ರಳಯ [ಸಾಧನೆ] ಮಾಡಬೇಕು. ಇದು ಸಂತ ಸಾಧುಗಳ ಆಗ್ರಹದ ಅಭಿಪ್ರಾಯವಿರುವದು. ವಿವೇಕ ಪ್ರಳಯ ಸಾಧಿಸಿದ ಮನುಷ್ಯರಿಗೆ ಶ್ರೀಸಮರ್ಥರು ಮಹಾಪುರುಷ ಎಂದು ಅಂದಿದ್ದಾರೆ. ಇವನು ನಿಜವಾದ ಜ್ಞಾನಿ ಇರುವನು. ಕೌತುಕವಿರುವದೇನಂದರೆ, ಮಾನವ ಜೀವನದಲ್ಲಿ ಜ್ಞಾನವು ಸರ್ವಶ್ರೇಷ್ಠವೆಂದು ತಿಳಿಯಿರಿ. ಏಕಂದರೆ ಜ್ಞಾನದಿಂದ ವಸ್ತು ಹೇಗಿರುವದೋ ಹಾಗೇ ಕಾಣುವದು [ಅನುಭವಕ್ಕೆ ಬರುವದು]. ಜ್ಞಾನದ ವಿರುದ್ಧ ವಿರುವ ಅಜ್ಞಾನವು ಎರಡು ಕಡೆಯಿಂದ [ಎರಡು ದಿಕ್ಕಿನಿಂದ] ಪರಿಣಾಮ ಮಾಡುವದು. ವಸ್ತು ಹೇಗಿರುವದೋ ಹಾಗೆ ಅದನ್ನು ಗುರುತಿಸುವದಿಲ್ಲ. ಇದು ಒಂದು ಪರಿಣಾಮವು. ಮತ್ತು ವಸ್ತುವು ಹೇಗೆ ಇಲ್ಲವೋ ಅದರಂತೆಯೇ ಅದು ಇರುವದೆಂದು ಅನಿಸುವದು. ಇದು ಎರಡನೆಯ ಪರಿಣಾಮವು. ಮೊದಲನೆಯ ಪರಿಣಾಮ ವಿಶೇಷ ಘಾತಕ ವಲ್ಲ. ಆದರೆ ಎರಡನೆಯ ಪರಿಣಾಮ ಮಾತ್ರ ಘಾತಕವಿರುವದು, ಏಕೆಂದರೆ ಇದರಿಂದ ವಿಪರೀತ ಜ್ಞಾನ ನಿರ್ಮಾಣ ವಾಗುವದು. ಇದಕ್ಕೇ ಭ್ರಮೆ ಎಂದು ಅನ್ನುವರು. ಭ್ರಮ ಶಬ್ದವು ಭ್ರಮ್ ಧಾತುವಿನಿಂದ ಹುಟ್ಟಿದೆ, ಭ್ರಮ್ ಅಂದರೆ ತಿರುಗಾಡುವದು. ಕೆಲಸವಿಲ್ಲದೇ ಅಡ್ಡಾಡುವದು, ಚಕ್ರಾಕಾರವಾಗಿ ಸುತ್ತಾಡುವದು. ಗಡಿಬಿಡಿಯ ಅಡ್ಡಾಟ ಅವ್ಯವಸ್ಥಿತತನದ ವರ್ತನೆ. ಗುಣು ಗುಣು ವಟ ವಟ ಮಾತಾಡುವದು. ತಪ್ಪು ಕೆಲಸ ಮಾಡುವದು. ಮೋಹದಲ್ಲಿ ಬೀಳುವದು. ಅಲ್ಲದ ಮಾರ್ಗ ಹಿಡಿಯುವದು. ಇತ್ಯಾದಿ ಇಂದ್ರಿಯಗಳು ಮನ, ಬುದ್ಧಿ. ಅಹಂಕಾರ (ಅಹಂತನ) ಮತ್ತು ಕಲ್ಪನಾ ಇವುಗಳ ಮೇಲೆ ಮೋಹದ ಆಚ್ಛಾದನ (ಪಡದೆ) ಬಂದು ಅವುಗಳ ವ್ಯಾಪಾರ (ಕಾರ್ಯ) ಹೇಗೆ ನಡೆಯಬೇಕಾಗಿತ್ತೋ ಅದರಂತೆ ನಡೆಯುವದಿಲ್ಲ. ಇದರಿಂದಾಗಿ ಆಗ ನಾನಾ ಪ್ರಕಾರದ ಭ್ರಮ. ನಿರ್ಮಾಣವಾಗುವದು. "ನಾನು ದೇಹವೇ ಇರುವೆನು" ಈ ಖೊಟ್ಟಿ ತಿಳುವಳಿಕೆಯಿಂದ ಮನುಷ್ಯನು ಮೋಸ ಹೋಗುವನು. ಆಗ ಅವನಿಗೆ ನಿಜ ವಲ್ಲದ್ದು ನಿಜವೆಂದು ಅನಿಸುವದು. ಅರ್ಥಾತ್ ಸುಳ್ಳನ್ನು ನಿಜವೆಂದು ತಿಳಿದು ಅದನ್ನು ಆಧರಿಸಿ ನಡೆಯುವನು. ಯಾವುದು ಒಳ್ಳೆಯದಲ್ಲವೋ ಅದು ಒಳ್ಳೆಯದೆಂದು ತಿಳಿಯುವನು. ಯಾವುದು ಅಯೋಗ್ಯವಿರುವದೋ ಅದು ಯೋಗ್ಯವೆಂದು ಮಾಡಬಾರದ್ದನ್ನು ಮಾಡುವನು. ಯಾವುದು ತನ್ನದಲ್ಲವೋ ಅದು ತನ್ನದೆಂದು ತಿಳಿಯುವನು. ಯಾವುದು ಸುಖ ಸಂತೋಷದ್ದಲ್ಲವೋ ಅದನ್ನು ಸುಖದ್ದೆಂದು ತಿಳಿದು ಅದರ ಬೆನ್ನು ಹತ್ತುವನು. ಕಠೋಪನಿಷತ್ತದಲ್ಲಿ ಪ್ರಸಿದ್ಧ ವಿರುವ ಮಂತ್ರ ಹೀಗಿದೆ. । "ಅವಿದ್ಯಾಯಾಮ್ ಅಂತರೆ ವರ್ತಮಾನಾಃ ಸ್ವಯಂ ಧೀರಾಃ ಪಂಡಿತಂ ಮನ್ಯ ಮಾನಾಃ । ದಂದ್ರಮ್ಯಮಾಣಾಃ ಪರಿಯಂತಿ ಮೂಢಾಃ ಅಂಧೇನೈವನೀಯಮಾನಾಯಥಾಂಧಾಃ " । ಅರ್ಥ:- "ಪ್ರಪಂಚದಲ್ಲಿ ಸಿಕ್ಕು ತೊಳಲಾಡುವವನು, ನಾನೇ ತಿಳಿದವನು. ನಾನೇ ಪಂಡಿತನು, ಎಂದು ತಿಳಿಯುವರಾದ ನಾವೇ ಅಯೋಗ್ಯ ಮಾರ್ಗದಿಂದ ಹೋಗುವಮೂರ್ಖಜನರು ಕುರುಡನು ಕುರುಡನಬೆನ್ನುಹಿಡಿದು ಹೋದಂತೆ ಇವರು ತಪ್ಪು ಮಾರ್ಗದಿಂದ ಹೋಗುವರು. ಕೊನೆಗೆ ಅನೇಕ ದುಃಖಾದಿಗಳನ್ನು ಅನುಭವಿಸುವರು" ವಿವೇಕಪ್ರಳಯ ಹೇಗೆ ಮಾಡಬೇಕು. ಅಥವಾ ದೇಹಬುದ್ಧಿಯು ನಿರ್ಮಾಣ ಮಾಡಿದಂಥ ಅನೇಕ ತರಹದ ಭ್ರಮವನ್ನು ವಿವೇಕದಿಂದ ಹೇಗೆ ಇಲ್ಲದಂತೆ ಮಾಡಬೇಕು. ಅಥವಾ ಭ್ರಮವನ್ನು ನಾಶಪಡಿಸಬೇಕು. ಇದನ್ನು ಕಲಿಸಿ ತಿಳಿಸಿ ಕೊಡುವದ ಕ್ಕಾಗಿಯೇ ಶ್ರೀ ಸಮರ್ಥರು ದಾಸಬೋಧ [ಗ್ರಂಥರಾಜ] ಬರೆದರೆಂದು ಅನ್ನಲಿಕ್ಕೆ ಯಾವ ಅಡ್ಡಿಯೂ ಇಲ್ಲ.

### ದಶಕ ದಶಮ : ಸಮಾಸ ಷಷ್ಠಮ : ಭ್ರಮ ನಿರೂಪಣ

॥ಶ್ರೀರಾಮ॥ ಉತ್ಪತ್ತಿ ಸ್ಥಿತಿ ಸಂಹಾರ । ಯಾಚಾ ನಿರೋಪಿಲಾ ವಿಸ್ತಾರ ।
ಪರಮಾತ್ಮಾ ನಿರ್ಗುಣ ನಿರಾಕಾರ । ಜೈಸಾ ತೈಸಾ ॥೧॥

ಹೋತೇ ವರ್ತತೇ ಆಣೀ ಜಾತೇ । ಯಾಚಾ ಸಮಂಧ ನಾಹೀ ತೇಥೇ ।
ಆದ್ಯ ಮಧ್ಯ ಅವಸಾನ ತೇ । ಸಂಚಲೇ ಚಿ ಆಹೆ ॥೨॥

ಪರಬ್ರಹ್ಮ ಅಸತ ಚಿ ಅಸೆ । ಮಧ್ಯೇ ಚಿ ಹಾ ಭ್ರಮ ಭಾಸೆ ।
ಭಾಸೆ ಪರಂತು ಅವಘಾ ನಾಸೆ । ಕಾಳಾಂತರೀ ॥೩॥

ಉತ್ಪತ್ತಿ ಸ್ಥಿತೀ ಸಂಹಾರತ । ಮಧ್ಯೇ ಹಿ ಅಖಂಡ ಹೋತ ಜಾತ ।
ಪುಢೇ ಸೇವಟೀ ಕಲ್ಪಾಂತ । ಸಕಳಾಸ ಆಹೆ ॥೪॥

ಯಾ ಮಧೇ ಜ್ಯಾಸ ವಿವೇಕ ಆಹೆ । ತೋ ಆಧೀ ಚ ಜಾಣತಾಹೆ ।
ಸಾರಾಸಾರ ವಿಚಾರೇ ಪಾಹೆ । ವ್ಹಣೌನಿಯಾ ॥೫॥

ಬಹುತ ಭ್ರಮಿಷ್ಟ ಮಿಳಾಲೇ । ತ್ಯಾತ ಉಮಜಲ್ಯಾಚೇ ಕಾಯ ಚಾಲೇ ।
ಸೃಷ್ಟೀ ಮಧೇ ಉಮಜಲೆ । ಐಸೆ ಥೋಡೆ ॥೬॥

ತ್ಯಾ ಉಮಜಲ್ಯಾಚೇ ಲಕ್ಷಣ । ಕಾಹೀ ಕರೂ ನಿರೂಪಣ ।
ಭ್ರಮಾಹೂನ ವಿಲಕ್ಷಣ । ಮಹಾಪುರುಷ ॥೭॥

ಭ್ರಮ ಹಾ ನಸೇಲ ಜಯಾಸೀ । ಮನೀ ವೋಳಖಾವೆ ತಯಾಸೀ ।
ಐಕ ಆತಾ ಭ್ರಮಾಸೀ । ನಿರೋಪಿಜೇಲ ॥೮॥

ಯೇಕ ಪರಬ್ರಹ್ಮ ಸಂಚಲೇ । ಕದಾಪೀ ನಾಹೀ ವಿಕಾರಲೇ ।
ತ್ಯಾವೇಗಳೇ ಭಾಸಲೇ । ತೇ ಭ್ರಮರೂಪ ॥೯॥

## ದಶಕ ೧೦ : ಸಮಾಸ ೬ : ಭ್ರಮ ನಿರೂಪಣ (ನುಡಿ ೪೦)

ಒಬ್ಬ ಪರಬ್ರಹ್ಮನ ಹೊರತು ಯಾವತ್ತೂ ದೃಶ್ಯವಿಶ್ವವು ಕೇವಲ ತೋರಿಕೆಯದು ಮಾತ್ರವಿರುವದು. ಭ್ರಮೆ ಇರುವದು. ವಿವೇಕದಿಂದ ಈ ಭಾಸ–ಭ್ರಮವನ್ನು ಇಲ್ಲದಾಗಿ [ನಾಶ ಮಾಡಿ] ಮಾಡುವ ಪುರುಷನು ಖರೇ ಜ್ಞಾನಿ ಮತ್ತು ದೊಡ್ಡವ ಎಂದು ತಿಳಿಯಬೇಕು:– ವಿಶ್ವದ ಉತ್ಪತ್ತಿ ಮತ್ತು ಸ್ಥಿತಿ ಹಾಗೂ ಅದರ ಸಂಹಾರ ಇವು ಹೇಗೆ ಘಟಿಸುವವು. ಇದರ ಬಗ್ಗೆ ಇಲ್ಲಿಯವರೆಗೆ ವಿವೇಚಿಸಿ ಹೇಳಿದೆವು. ವಿಶ್ವದ ಮೇಲಿನ ವ್ಯವಹಾರ ನಡೆದಿರುವಾಗ ಪರಮಾತ್ಮಾ ಮಾತ್ರ ಅಗದೀ ಹೇಗಿರುವನೋ ಹಾಗೆಯೇ ನಿರ್ಗುಣ ನಿರಾಕಾರನಾಗಿ ಇರುವನು. [೧] ವಿಶ್ವದ ನಿರ್ಮಾಣವಾಗುವದು. ಇದು ಬಹುಕಾಲ ಇರುವದು. ಮತ್ತು ಕಲ್ಪಾಂತ್ಯದಲ್ಲಿ ಇಲ್ಲದಾಗಿ ಹೋಗುತ್ತದೆ. ಆದರೆ ಇದಕ್ಕೂ ಪರಬ್ರಹ್ಮಕ್ಕೂ ಯಾವ ಸಂಬಂಧವಿಲ್ಲ. ಯಾಕೆಂದರೆ ವಿಶ್ವದ ಮೊದಲು ವಿಶ್ವನಿರ್ಮಾಣವಾದ ಮೇಲೆ ಮತ್ತು ವಿಶ್ವದ ನಿರ್ಮಾಣವಾದ ಮೇಲೆಯೂ ಸಹ ಅಗದೀ ಹೇಗೆ ಇತ್ತೋ ಅದರಂತೆಯೇ ಸರ್ವತ್ರದಲ್ಲಿ ಪರಬ್ರಹ್ಮವು ಒಂದೇತರಹ ತುಂಬಿ ಇರುವದು [೨] ಪರಬ್ರಹ್ಮವು ಸದಾಕಾಲ ಇದ್ದೇ ಇರುವದು. ಮಧ್ಯದಲ್ಲಿ ಈ ವಿಶ್ವದ ಭ್ರಮನಿರ್ಮಾಣವಾಗುವದು ವಿಶ್ವ ಇರುವದೆಂದು ಭಾಸವಾಗುವದು. ಆದರೆ ಕಾಲಾಂತರದಲ್ಲಿ ಇದು ನಾಶವಾಗುವದು. [೩] ಉತ್ಪತ್ತಿ, ಸ್ಥಿತಿ, ಮತ್ತು ಲಯ [ಸಂಹಾರ] ಪರಬ್ರಹ್ಮದಲ್ಲಿ ಒಂದೇ ಸವನೆ ಕಾಲಾನುಸಾರ ಈ ಘಟನೆಗಳು ಆಗುತ್ತಲೇ ಬಂದಿರುವದು ನಿಜವೇ ಇರುವದು. ಆದರೆ ಈ ಎಲ್ಲವುಗಳಿಗೆ ಕಲ್ಪ ಮುಗಿದ ಕೂಡಲೇ ಕೊನೆಗೆ ನಾಶ ಇರುವದು. [೪] ವಿಶ್ವದಲ್ಲಿ ಈ ವ್ಯವಹಾರ ನಡೆದಿರುವಾಗಲೇ ಅದರಲ್ಲಿ ಇದ್ದುಕೊಂಡು ಯಾರು ವಿವೇಕದ ವಿಚಾರವನ್ನು ಮಾಡುವರೋ ಅಂಥವರಿಗೆ ಇದೆಲ್ಲವೂ ಮೊದಲಿಗೇ ತಿಳಿಯುವದು. [ಜೀವಂತ ಇದ್ದಾಗಲೇ ತಿಳಿಯುವದು]. ಜಗತ್ತಿನಲ್ಲಿಯ ಎಲ್ಲ ಮಾತಿನ ಕಡೆಗೆ ಇವನು ಸಾರಾಸಾರ ವಿಚಾರದಿಂದ ನೋಡುವನು. ಇದರಿಂದ ಇವನಿಗೆ ಸ್ವರೂಪದ ಜ್ಞಾನ ಅರ್ಥಾತ್ ಸೃಷ್ಟಿ ಸಂಹಾರಗಳಿಲ್ಲದರ ಜ್ಞಾನ ಮೊದಲೇ ಆಗುವದು. [೫] ತಿಳಿಯಿರಿ, ಭ್ರಮಗೊಂಡ ಮನುಷ್ಯರ ಒಂದು ದೊಡ್ಡ ಸಮೂಹವೇ ಇರುವದು. ಆ ಸಮೂಹದಲ್ಲಿ ಒಬ್ಬ ಭ್ರಮರಹಿತನಾದ ಮನುಷ್ಯನು ಹೋದನು. ಅವನು ಯಾವುದು ನಿಜವಿರುವದೋ ಅದರ ಬಗ್ಗೆ ಅವರಿಗೆ ಹೇಳಹತ್ತಿದನು. ಆದರೆ ಅವನ ಮಾತನ್ನು ಯಾರೂ ಕೇಳುವದಿಲ್ಲ. ಇದು ಜಗತ್ತಿನಲ್ಲಿಯ ಜನರ ಅವಸ್ಥೆ–ಸ್ಥಿತಿ ಇರುವದು. ಇಲ್ಲಿ ಜಗತ್ತಿನಲ್ಲಿ ಭ್ರಮಗೊಂಡ ಜನರೇ ಬಹಳಷ್ಟು ಇರುವರು. ಜಗತ್ತಿನಲ್ಲಿ [ಸಂಸಾರದಲ್ಲಿ] ಇದ್ದು ವಿಶ್ವದ ನಿಜವಾದ ಸ್ವರೂಪ ತಿಳಿದುಕೊಂಡವರು ಮತ್ತು ತಿಳಿದುಕೊಳ್ಳುವವರು ಬಹಳ ಕಡಿಮೆ ಜನರೇ ಇರುವರು. [೬] ವಿಶ್ವದ ಖರೇ ಸ್ವರೂಪ ತಿಳಿಯುವಂಥ ಜ್ಞಾನಿ ಮಹಾಪುರುಷರ ಬಗ್ಗೆ ಹೇಳುವದು ಬಹಳ ಮಾರ್ಮಿಕ ಮತ್ತು ಅರ್ಥಗರ್ಭಿತವಿರುವದು. ಜಗತ್ತಿನಲ್ಲಿಯೇ ಹೆಸರಾದ ಮಹಾಪುರುಷರ ಬಗ್ಗೆ ಸ್ವಲ್ಪ ವಿವೇಚನೆ ಮಾಡುವೆನು. ಯಾರು ಭ್ರಮದಿಂದ ಬೇರೆ ಇರುವರೋ ಭ್ರಮರಹಿತರಿರುವರೋ ಅದರಿಂದ ಯಾರು ದೂರ ಇರುವರೋ ಅಂಥವರೇ ಮಹಾಪುರುಷರೆಂದು ಹೇಳಬಹುದು. ಶ್ರೀಸಮರ್ಥರು ಹೇಳಿದಂಥ ಮಹಾಪುರುಷರ ವ್ಯಾಖ್ಯೆ ಬಹಳ ಮಾರ್ಮಿಕವಿರುವದು. ಅರ್ಥಪೂರ್ಣವಿರುವದು. ಜಗತ್ತಿನಲ್ಲಿ ನಾಮವಂತರೆನಿಸಿದ ದೊಡ್ಡ ಪುರುಷರಲ್ಲಿ ಎಷ್ಟು ಜನ ಇವರ ಈ ವ್ಯಾಖ್ಯೆಯಲ್ಲಿ ಬರಬಹುದು. ಇದನ್ನು ಹೇಳುವದು ಮಾತ್ರ ಕಠಿಣವಿರುವದು. [೭] ಮಾನವ ಜೀವನದಲ್ಲಿಯ ಬೇರೆ ಬೇರೆ ಕ್ಷೇತ್ರದಲ್ಲಿ ಅನೇಕ ಪ್ರಕಾರದ ಭ್ರಮ ಹೇಗೆ ಮುಚ್ಚುಮರೆಯಿಲ್ಲದೇ ರಾಜಾರೋಷವಾಗಿ ಇರುವದು. ಇದರ ಬಗ್ಗೆ ಸ್ವಲ್ಪದರಲ್ಲಿ ಸ್ಪಷ್ಟವಾಗಿ ವರ್ಣಿಸಿ ಹೇಳಿದ್ದಾರೆ:– ಯಾವ ಭ್ರಮವೂ ಇಲ್ಲದ ಮನುಷ್ಯನನ್ನು ಮನದಲ್ಲಿ ಗುರುತಿಸಿ ಅಂಥವರ ಬಗ್ಗೆ ಆದರದಿಂದ ಇರಬೇಕು. ಭ್ರಮರಹಿತನನ್ನು ಗುರುತಿಸಲಿಕ್ಕೆ ಬರಬೇಕೆಂದು ಕೆಲವು ಪ್ರಕಾರದ ಭ್ರಮಗಳ ಬಗ್ಗೆ ನಿಮಗೆ ವರ್ಣಿಸಿ ಹೇಳುವೆನು. [೮] ಭ್ರಮದ ಬಗ್ಗೆ ಮುಖ್ಯ ವ್ಯಾಖ್ಯೆ:– ಪರಬ್ರಹ್ಮ ಸ್ವರೂಪದ ಒಂದೇ ಒಂದಾದ ಸದ್ವಸ್ತು (ರಿಅಲಿಟಿ) ಎಲ್ಲ ಕಡೆಗೂ ತುಂಬಿ ಇರುವದು. ಇದರಲ್ಲಿ ಎಂದೂ ಯಾವ ಪ್ರಕಾರದ್ದೂ ವಿಕಾರ ಅಥವಾ ಬದಲಾವಣೆ ಆಗುವದಿಲ್ಲ. ಇದು ಅಗದೀ ಸತ್ಯವು. ಇದು ಹೀಗೆ ಅನುಭವಕ್ಕೆ ಬರದೆ ಏನೇನೋ ಯಾವ ಯಾವುದೋ ಬೇರೆ ಪ್ರಕಾರವು ಅನುಭವಕ್ಕೆ ಬಂದರೆ ಅದು ಎಲ್ಲವೂ ಭ್ರಮರೂಪವೆಂದು ಖಾತ್ರಿಯಿಂದ ತಿಳಿಯಬೇಕು. [೯]

ಜಯಾಸೀ ಬೋಲಿಲಾ ಕಲ್ಪಾಂತ । ತ್ರಿಗುಣ ಆಣೀ ಪಂಚಭೂತ ।
ಹೇ ಅವಘೇ ಚಿ ಸಮಸ್ತ । ಭ್ರಮರೂಪ ॥೧೦॥

ಮೀ ತೂ ಹಾ ಭ್ರಮ । ಉಪಾಸನಾ ಹಿ ಭ್ರಮ ।
ಈಶ್ವರಭಾವ ಹಾ ಹಿ ಭ್ರಮ । ನಿಶ್ಚಯೇಸೀ ॥೧೧॥

॥ಶ್ಲೋಕ॥ ಭ್ರಮೇಣಾಹಂ ಭ್ರಮೇಣ ತ್ವಂ । ಭ್ರಮೇಣೋಪಾಸಕಾ ಜನಾಃ॥
ಭ್ರಮೇಣೇಶ್ವರಭಾವತ್ವಂ । ಭ್ರಮಮೂಲಮಿದಂ ಜಗತ್ ॥೧॥

ಯಾಕಾರಣೇ ಸೃಷ್ಟಿ ಭಾಸತ। ಪರಂತು ಭ್ರಮ ಚಿ ಹಾ ಸಮಸ್ತ ।
ಯಾಮಧ್ಯೇ ಜೆ ವಿಚಾರವಂತ । ತೇ ಚಿ ಧನ್ಯ ॥೧೨॥

ಆತಾ ಭ್ರಮಾಚಾ ವಿಚಾರೂ । ಅತ್ಯಂತ ಚಿ ಪ್ರಾಂಜಳ ಕರೂ।
ದೃಷ್ಟಾಂತದ್ವಾರೇ ವಿವರೂ । ಶ್ರೋತಯಾಸೀ ॥೧೩॥

ಭ್ರಮಣ ಕರಿತಾ ದುರೀ ದೇಸೀ । ದಿಶಾಭೂಲಿ ಆಪಣಾಸೀ ।
ಕಾ ವೊಳಖೀ ಮೋಡೆ ಜೀವಲಗಾಸೀ । ಯಾ ನಾವ ಭ್ರಮ ॥೧೪॥

ಕಾ ಉನ್ಮತ್ತ ದ್ರವ್ಯ ಸೇವಿಲೇ । ತೇಣೇ ಅನೇಕ ಭಾಸೋ ಲಾಗಲೇ ।
ನಾನಾ ವೆಥಾ ಕಾ ಝಡಪಿಲೇ । ಭೂತೆ ತೋ ಭ್ರಮ ॥೧೫॥

ದಶಾವತಾರೀ ವಾಟತೀ ನಾರೀ । ಕಾ ತೇ ಮಾಂಡಲೀ ಬಾಜೀಗರೀ ।
ಉಗಾ ಚ ಸಂದೇಹ ಅಂತರೀ । ಯಾ ನಾವ ಭ್ರಮ ॥೧೬॥

ಠೇವಿಲಾ ಠಾವ ತೋ ವಿಸರಲಾ । ಕಾ ಮಾರ್ಗೀ ಜಾತಾ ಮಾರ್ಗ ಚುಕಲಾ ।
ಪಟ್ಟಣಾಮಧೇ ಭಾಂಬಾವಲಾ । ಯಾ ನಾವ ಭ್ರಮ ॥೧೭॥

ವಸ್ತು ಆಪಣಾಪಾಸೀ ಅಸತಾ । ಗೇಲೀ ಮ್ಹಣೋನಿ ಹೋಯೆ ದುಚಿತಾ ।
ಆಪಲೇ ಆಪಣ ವಿಸರತಾ । ಯಾ ನಾವ ಭ್ರಮ ॥೧೮॥

ಕಾಂಹೀ ಪದಾರ್ಥ ವಿಸರೋನ ಗೇಲಾ । ಕಾ ಜೇ ಸಿಕಲಾ ತೇ ವಿಸರಲಾ ।
ಸ್ವಪ್ನದುಃಖೇ ಘಾಬಿರಾ ಜಾಲಾ । ಯಾ ನಾವ ಭ್ರಮ ॥೧೯॥

ದುಶ್ಚಿನ್ಹೇ ಅಥವಾ ಅಪಶಕುನ । ಮಿಥ್ಯಾ ವಾರ್ತೇನೇ ಭಂಗೆ ಮನ ।
ನಚಕೇ ಪದಾರ್ಥ ದೇಖೋನ । ಯಾ ನಾವ ಭ್ರಮ ॥೨೦॥

ವೃಕ್ಷ ಕಾಷ್ಠ ದೇಖಿಲೇ । ಮನಾತ ವಾಟೇ ಭೂತ ಆಲೇ ।
ಕಾಹೀಚ ನಸ್ತಾ ಹಡಬಡಿಲೇ । ಯಾ ನಾವ ಭ್ರಮ ॥೨೧॥

ಯಾವ ಮಾತುಗಳು, ವಿಷಯುಗಳು, ವಸ್ತುಗಳು ಅನುಭವಗಳಿಗೆ ಅಥವಾ ಕಲ್ಪನೆಗಳಿಗೆ ಇಂದಲ್ಲದಿದ್ದರೂ ಎಂದಾದರೊಂದು ದಿನ ಅಥವಾ ಕೊನೆಗೆ ಪ್ರಳಯ ಕಾಲಕ್ಕೆ ಅಂತ (ನಾಶ) ಇರುವದೋ ಇವೆಲ್ಲವೂ ಭ್ರಮದಲ್ಲಿಯೇ ಎಣಿಸಲ್ಪಡುವವು. ಉದಾ:- ಐದು ಭೂತಗಳು, ಮೂರು ಗುಣಗಳು, ಇವೆಲ್ಲವೂ ಭ್ರಮರೂಪವಿರುವವು. [೧೦] ಇದರಂತೆ ನಾನು ಮತ್ತು ನೀನು, ದೇವ ಮತ್ತು ಭಕ್ತ ಉಪಾಸನಾ ಮತ್ತು ಸ್ವತಃ ಈಶ್ವರ ಸಹಿತ ಎಲ್ಲವೂ ಭ್ರಮ ರೂಪವಿರುವದು. [೧೧] ಶ್ಲೋಕ:- ಭ್ರಮೇಣಾಹಂ ಭ್ರಮೇಣತ್ವಂ। ಭ್ರಮೇಣೋಪಾಸಕಾಜನಾಃ।ಭ್ರಮೇಣೇಶ್ವರ ಭಾವತ್ವಂ। ಭ್ರಮಮೂಲ ಮಿದಂ ಜಗತ್ ॥೧॥ ಶ್ಲೋಕಾರ್ಥ:- ಭ್ರಮದಿಂದ "ನಾನು" ಇರುವೆ ಅನ್ನುವ ಭಾಸ ವಾಗುವದು. ಭ್ರಮದಿಂದ "ನೀನು" ಇರುವಿ ಎಂದು ಅನಿಸುವದು. "ಭಕ್ತ ವ ಉಪಾಸಕ" ಖರೇ ಅನಿಸುವದೂ ಸಹ ಭ್ರಮದ ಪರಿಣಾಮವಿರುವದು. "ಈಶ್ವರ ಇದ್ದಾನೆ" ಎಂದು ಅನಿಸುವದೂ ಸಹ ಭ್ರಮದ ಭಾಗವೇ ಇರು ವದು. ತಾತ್ಪರ್ಯ ಈ ಎಲ್ಲ ದೃಶ್ಯ ವಿಶ್ವವು ಭ್ರಮರೂಪವೇ ಇರುವದು. ಆದ್ದರಿಂದ ಈ ಅವಾಢವ್ಯ ವಿಶ್ವ ಪ್ರತ್ಯಕ್ಷ ಅದೇ ಅನ್ನುವದು. ನಮಗೆ ಕಂಡರೂ, ಅದೆ ಎಂದು ಅನಿಸಿ ದರೂ ಇವೆಲ್ಲ ಭ್ರಮೆ ಇರುವದು. ಅಂತೆಯೇ ಜಗತ್ತಿನಲ್ಲಿ ಯಾರು ವಿವೇಕಶೀಲ ವಿಚಾರವಂತ ಪುರುಷರೂ ಇರು ವರೋ ಅವರು ಧನ್ಯರೆಂದು ತಿಳಿಯಬೇಕು. ವಿಚಾರವಂತರಿದ್ದವರಿಗೆ ವಿವೇಕದ ಸಾಮರ್ಥ್ಯ ಇರುವದು. ಅವರು ವಿವೇಕದಿಂದ ಪ್ರತ್ಯಕ್ಷ ಕಾಣಿಸುವ ಈ ವಿಶ್ವವು ಭ್ರಮರೂಪವಿರುವದೆಂದು ತಿಳಿದಿರುತ್ತಾರೆ. ಮತ್ತು ಮನಃಪೂರ್ವಕ ಅವರಿಗೆ ಖಾತ್ರಿ ಆಗಿರುತ್ತದೆ. [೧೨] ಈವರೆಗೆ ಹೇಳಿದ್ದೆಲ್ಲ ಭ್ರಮದ ಮೂಲ ತಾತ್ವಿಕ ಸ್ವರೂಪವು ಪ್ರತ್ಯಕ್ಷ ಜೀವನ ದಲ್ಲಿ ಭ್ರಮದ ಅವಿಷ್ಕಾರ [ಕಲ್ಪನೆ, ಶೋಧ] ಹೇಗೆ ಮತ್ತು ಎಷ್ಟು ತರಹದಿಂದ ಆಗುವದು, ಇದರ ವರ್ಣನೆ ಯನ್ನು ಮಾಡುವರು:- ಭ್ರಮದ ಸ್ವರೂಪ ಅಗದೀ ಸ್ಪಷ್ಟವಾಗಿ ತಿಳಿಯುವಂತೆ ಈಗ ವಿವೇಚಿಸುವೆನು. ಅನೇಕ ಉದಾಹರಣೆಗಳನ್ನು ಕೊಟ್ಟು ಭ್ರಮಸ್ವರೂಪವನ್ನು ಶ್ರೋತಾ ಜನರ ಮುಂದೆ ಇಡುವೆನು. [೧೩] ನಾವು ನಮ್ಮ ಊರಿನಿಂದ ದೂರದೇಶಕ್ಕೆ ಹೋದಾಗ ಪರಿಚಯವಿಲ್ಲದ್ದಕ್ಕೆ ದಾರಿ ತಪ್ಪಿ ಅಡ್ಡದಾರಿ ಹಿಡಿಯುವೆವು. ನಾವು ದಿಕ್ಕು ತಪ್ಪಿದವರಾಗಿ ಬಿಡುವೆವು. ಅಥವಾ ನಮ್ಮ ನಿಕಟವರ್ತಿ ಸ್ನೇಹಿತರು ಮತ್ತು ಪ್ರೇಮಿ ಜನರ ಗುರುತನ್ನು ಮರೆಯು ವೆವು. ಅಥವಾ ಹೆಸರನ್ನು ಮರೆಯುವೆವು. ಇದು ಭ್ರಮವೆನಿಸುವದು. [೧೪] ಅಮಲು ಬರುವ ಪದಾರ್ಥ ಸೇವಿಸಿ ದ್ದರಿಂದ ಅಥವಾ ಮದ್ಯಪಾನ ಮೊದಲಾದ ಅಮಲಿನ ಪೇಯ ಕುಡಿದದ್ದರಿಂದ ಇಲ್ಲದ್ದೇನಾದರೂ ಕಾಣುವದು. ಮತ್ತು ಇಲ್ಲದ ವ್ಯಥೆ ಇರುವದೆಂದು ಅನಿಸುವದು. ಭೂತ ಬಾಧೆ ಆಗುವದು. [೧೫] ದಶಾವತಾರಾದಿ ನಾಟಕ ಗಳಲ್ಲಿ ಕೆಲಸ ಮಾಡುವ ಸ್ತ್ರೀ ವೇಷಧಾರಿಗಳು ನಿಜವಾದ ಸ್ತ್ರೀಯರೇ ಎಂದು ಭಾವಿಸುವದು[ಹಿಂದಿನ ಕಾಲದಲ್ಲಿ ಸ್ತ್ರೀ ಪಾತ್ರಗಳನ್ನು ಪುರುಷರೇ ಮಾಡುತ್ತಿದ್ದರು] ಜಾದೂ ಆಟ ನಿಜವೆನಿಸುವದು. ಏನೂ ಕಾರಣವಿಲ್ಲದೆ ಮನದಲ್ಲಿ ಸಂಶಯ ತಳವೂರುವದು. [೧೬] ಒಂದು ಸ್ಥಳದಲ್ಲಿಟ್ಟ ವಸ್ತುವನ್ನು ಅನಂತರ ಮರೆತುಬಿಡುವದು. ದಾರಿ ಹಿಡಿದು ಹೋಗು ವಾಗ ದಾರಿ ತಪ್ಪುವದು. ದೊಡ್ಡ ಪಟ್ಟಣಕ್ಕೆ ಹೋದಾಗ್ಗೆ ಒಮ್ಮೆಲೇ ಗಾಬರಿಯಾಗುವದು. ಗೊಂದಲಗೊಳ್ಳು ವದು. [ಗಡಬಡಗೊಳ್ಳುವದು] [೧೭] ವಸ್ತು ತನ್ನ ಹತ್ತಿರವೇ ಇದ್ದು ಕಳೆದು ಹೋಯಿತೆಂದು ತಿಳಿಯುವದು, ಮತ್ತು"ಕಳೆದುಕೊಂಡೆನು"ಎಂದು ಹಳಹಳಿಪಡುತ್ತ ಖಿನ್ನವಾಗುವದು. ಒಮ್ಮೊಮ್ಮೆ ಪ್ರಸಂಗೋಚಿತವಾಗಿ ತಾನು ಎಲ್ಲಿ ಹೇಗೆ ಬಂದೆ ಅಥವಾ ಇದ್ದೇನೆ ಇದರ ಅರಿವು ಮರೆವು ಆಗುವದು.[೧೮] ನಿಮ್ಮ ಸಾಮಾನುಗಳಲ್ಲಿ ಕೆಲವನ್ನು ಮರೆತು ಬಿಟ್ಟು ಹೋಗುವದು. ಕಲಿತವಿದ್ಯೆ ಅಥವಾ ಕಲೆಯನ್ನು ಮರೆಯುವದು. ಸ್ವಪ್ನದಲ್ಲಿ ಉಂಟಾದ ದುಃಖದಿಂದ ಗಾಬರಿಯಾಗುವದು. [೧೯] ಶುಭ ಚಿನ್ಹ [ಶುಭ ಸೂಚನೆ] ನೋಡಿ-ಅಪಶಕುನ ಕಂಡು ಅಥವಾ ಖೊಟ್ಟಿ ಬಾತಮಿ [ಸುದ್ದಿ] ಕೇಳಿ, ಮನಸ್ಸು ಅಸ್ವಸ್ಥಗೊಳ್ಳುವದು, ಒಂದು ವಸ್ತುವನ್ನು ನೋಡಿ ಬೆದರುವದು. [೨೦] ಯಾವುದೋ ಒಂದು ಗಿಡ ಅಥವಾ ದೊಡ್ಡ ಕಟ್ಟಿಗೆ ನೋಡಿ, ಇದು ಭೂತವಿದೆ ಅಂತಾ ಮನದಲ್ಲಿ ಕಲ್ಪನೆ ಹುಟ್ಟುವದು,ಅಂಜು ವದಕ್ಕೆ ಯಾವ ಕಾರಣವೂ ಇರದೇ ಅಂಜುವದು. ನಡುಗಹತ್ತುವದು. (೨೧)

ಕಾಚ ಮ್ಹಣೋನ ಉದಕಾತ ಪಡೆ । ಕಾ ಸಭಾ ದೇಖೋನ ದರ್ಪಣೀ ಪವಾಡೆ ।
ದ್ವಾರ ಚುಕೋನ ಭಲತೀಕಡೆ । ಜಾಣೇ ಯಾ ನಾವ ಭ್ರಮು ॥೨೨॥
ಯೇಕ ಅಸ್ತಾ ಯೇಕ ವಾಟೇ । ಯೇಕ ಸಾಂಗತಾ ಯೇಕ ನಿವಟೇ ।
ಯೇಕ ದಿಸತಾ ಯೇಕ ಉಠೇ । ಯಾ ನಾವ ಭ್ರಮು ॥೨೩॥
ಆತಾ ಜೇ ಜೇ ದೇಇಜೇತೇ । ತೇ ತೇ ಪುಢೇ ಪಾವಿಜೇತೇ।
ಮೇಲೇ ಮಾಣುಸ ಭೋಜನಾ ಯೇತೇ । ಯಾ ನಾವ ಭ್ರಮು ॥೨೪॥
ಯೇ ಜನ್ಮೀಚೇ ಪುಢಿಲೇ ಜನ್ಮೀ । ಕಾಹೀ ಯೇಕ ಪಾವೇನ ಮೀ ।
ಪ್ರೀತೀ ಗುಂತಲೀ ಮನುಷ್ಯಾಚೇ ನಾಮೀ । ಯಾ ನಾವ ಭ್ರಮು ॥೨೫॥
ಮೇಲೇ ಮನುಷ್ಯ ಸ್ವಪ್ನಾ ಆಲೇ । ತೇಣೇ ಕಾಹೀ ಮಾಗಿತಲೇ ।
ಮನೀ ಅಖಂಡ ಬೈಸಲೇ । ಯಾ ನಾವ ಭ್ರಮು ॥೨೬॥
ಅವಘೇ ಮಿಥ್ಯಾ ಮ್ಹಣೌನ ಬೋಲೇ। ಆಣಿ ಸಾಮರ್ಥ್ಯಾವರೀ ಮನ ಚಾಲೇ।
ಜ್ಞಾತೇ ವೈಭವೇ ದಪಟಲೇ । ಯಾ ನಾವ ಭ್ರಮು ॥೨೭॥
ಕರ್ಮಠಪಣೇ ಜ್ಞಾನ ವಿಟೆ । ಕಾ ಜ್ಞಾತೇಪಣೇ ಬಳೇ ಭ್ರಷ್ಟೇ ।
ಕೋಣೇಯೇಕ ಸೀಮಾ ಫಿಟೇ । ಯಾ ನಾವ ಭ್ರಮು ॥೨೮॥
ದೇಹಾಭಿಮಾನ ಕರ್ಮಾಭಿಮಾನ । ಜಾತ್ಯಾಭಿಮಾನ ಕುಳಾಭಿಮಾನ ।
ಜ್ಞಾನಾಭಿಮಾನ ಮೋಕ್ಷಾಭಿಮಾನ । ಯಾ ನಾವ ಭ್ರಮು ॥೨೯॥
ಕೈಸಾ ನ್ಯಾಯು ತೋ ನ ಕಳೆ । ಕೇಲಾ ಅನ್ಯಾಯು ತೋ ನಾಡಳೇ ।
ಉಗಾ ಚ ಅಭಿಮಾನೇ ಖವಳೇ । ಯಾ ನಾವ ಭ್ರಮು ॥೩೦॥
ಮಾಗೀಲ ಕಾಹೀ ಆಠವೇನಾ । ಪುಢೀಲ ವಿಚಾರ ಸುಚೇನಾ ।
ಅಖಂಡ ಆರೂಢ ಅನುಮಾನಾ । ಯಾ ನಾವ ಭ್ರಮು ॥೩೧॥
ಪ್ರಚೀತಿವಿಣ ಔಷಧ ಘೇಣೇ । ಪ್ರಚಿತ ನಸ್ತಾ ಪಥ್ಯ ಕರಣೇ ।
ಪ್ರಚೀತೀವೀಣ ಜ್ಞಾನ ಸಾಂಗಣೇ । ಯಾ ನಾವ ಭ್ರಮು ॥೩೨॥
ಫಳಶ್ರುತೀವೀಣ ಪ್ರಯೋಗ । ಜ್ಞಾನೇವಿಣ ನುಸ್ತಾ ಯೋಗ ।
ಉಗಾ ಚ ಶರೀರೇ ಭೋಗಿಜೆ ಭೋಗ । ಯಾ ನಾವ ಭ್ರಮು ॥೩೩॥
ಬ್ರಹ್ಮಾ ಲಿಹಿತೋ ಅದೃಷ್ಟೀ । ಆಣೀ ವಾಚೂನ ಜಾತೆ ಸಟೀ ।
ಐಶಾ ಪ್ರಕಾರೀಚ್ಯಾ ಗೋಷ್ಟೀ । ಯಾ ನಾವ ಭ್ರಮು ॥೩೪॥
ಉದಂಡ ಭ್ರಮು ವಿಸ್ತಾರಲಾ । ಅಜ್ಞಾನಜನೀ ಪೈಸಾವಲಾ ।
ಅಲ್ಪ ಸಂಕೇತೇ ಬೋಲಿಲಾ । ಕಳಾವಯಾ ಕಾರಣೇ ॥೩೫॥

ಎದುರಿಗೆ (ಇರುವದು)ಕಾಣುವದು ಕಾಜು ಅಲ್ಲ–ಇದು ನೀರು ಇರುವದೆಂಬುದನ್ನು ತಿಳಿಯದೇ ಆ ನೀರಿನಲ್ಲಿ ಒಮ್ಮೆಲೇ ಹೋಗುವದು. ಅಥವಾ ಅದರಲ್ಲಿ ಬೀಳುವದು, ಪ್ರತ್ಯಕ್ಷ ಸಭೆಯು ಕಡೆಗೆ ನೋಡದೆ ಕಾಜಿನ ಕನ್ನಡಿಯಲ್ಲಿ ಕಂಡ ಸಭೆಯ ಪ್ರತಿಬಿಂಬವು ನಿಜವೆಂದು ಅನಿಸುವದು, ನಿಜವಾದ ಬಾಗಿಲನ್ನು ತಪ್ಪಿ ಬಿಟ್ಟು ಎತ್ತ ಕಡೆಗಾದರೂ ಹೋಗುವದು. [ಭಾರತದ ಕಥೆಯಲ್ಲಿಯ ಮಯಸಭಾದಲ್ಲಿ ಇಂಥವು ಕಾಣುವವು.] [೨೨] ಇರುವದು ಒಂದು ಆದರೆ ತಿಳಿಯುವದು ವಿಪರೀತವಾದದ್ದು. ಹೇಳುವದು ಒಂದಾದರೆ ತಿಳಿಯುವದು ವಿಪರೀತವೆನಿಸುವಂಥದು. ಒಂದು ಏನಾದರೂ ಕಂಡರೆ ಅದನ್ನು ವಿಪರೀತಾರ್ಥದಲ್ಲಿ ಕಲ್ಪನೆ ಮಾಡುವದು. [೨೩] ಈ ಜನ್ಮದಲ್ಲಿ ಯಾವುಯಾವುದನ್ನು ದಾನ ಮಾಡುವೆವೋ ಅದು ಮುಂದಿನ ಜನ್ಮದಲ್ಲಿ ನಮಗೆ ಪರತ ಸಿಗುವದೆಂದು ತಿಳಿಯುವದು. ಸತ್ತವನು ಊಟಕ್ಕೆ ಬರುವನೆಂದು ನಂಬುವದು. [೨೪] ಈ ಜನ್ಮದಲ್ಲಿಯದು ಏನಾದರೂ ಮುಂದಿನ ಜನ್ಮದಲ್ಲಿ ತಮಗೆ ಸಿಗುವದೆಂದು ತಿಳಿಯುವ ಭಾವನೆ ಉಂಟಾಗುವಿಕೆ.ಮತ್ತು ಮನುಷ್ಯರ ಹೆಸರಿನಲ್ಲಿಯೇ ಪ್ರೇಮ ನೆಲೆ ನಿಂತುಕೊಳ್ಳುವದು. [೨೫] ಸತ್ತ ಮನುಷ್ಯನು ಸ್ವಪ್ನದಲ್ಲಿ ಬಂದನು. ಮತ್ತು ಅವನು ತನಗೆ ಅದು ಬೇಕು – ಇದು ಬೇಕು ಎಂದು ಬೇಡಿದನು. ಆದರೆ ಇದೇ ಮಾತು ಸದಾ ಮನಸ್ಸಿನಲ್ಲಿ ಬಂದು ನಿಲ್ಲುವದು. [೨೬] ಜನರ ಮುಂದೆ ಇದೆಲ್ಲ ಪೂರ್ಣ ಸುಳ್ಳು ಇರುವದೆಂದು ಬಾಯಿಂದ ಹೇಳುವದು. ಆದರೆ ಮನದಲ್ಲಿ ಮಾತ್ರ ಅಧಿಕಾರ ಹಾಗೂ ಐಶ್ವರ್ಯ ಇವುಗಳ ಆಶೆ ಇರುವದು. ಜ್ಞಾನಿ-ಪಂಡಿತ ಇದ್ದು ವೈಭವಕ್ಕೆ ಬಗ್ಗುವದು. ಇಲ್ಲವೆ ಒಲಿಯುವದು. ಅದರ ದಾಸನಾಗುವದು. [೨೭] ಅತಿ ಕರ್ಮಠತನದಿಂದ ಜ್ಞಾನದ ಬಗ್ಗೆ ಅನಾದರತನ. ಇದರಂತೆ ನಾನು ಮಹಾಪಂಡಿತನು ಅನ್ನುವ ಅತಿ ಜ್ಞಾನದಿಂದ ಹಠ ಪೂರ್ವಕವಾಗಿ ಆಚಾರ ಭ್ರಷ್ಟತನ, ಅತಿ ಕರ್ಮಠತನದಿಂದ ಸನಾತನದ ವರ್ತನೆಯಲ್ಲಿ ಮತ್ತು ಜ್ಞಾನಿಯೆಂಬ ಅಹಂದಿಂದ ಭ್ರಷ್ಟಾಚಾರಿಯಾಗಿರುವದು. ಸಾಮಾಜಿಕ ಮರ್ಯಾದೆಯನ್ನು ಮುದ್ದಾಂ ಮೀರಿ ನಡೆಯುವದು. [೨೮] ದೇಹ, ಕರ್ಮ, ಜಾತಿ, ಕುಲ, ಜ್ಞಾನ ಮತ್ತು ಮೋಕ್ಷ ಇವುಗಳಬಗ್ಗೆ ಹಿಡಿದಿರುವ ಅಭಿಮಾನ. ಇಷ್ಟೇ ಅಲ್ಲ ದೃಶ್ಯದಲ್ಲಿಯು ಎಲ್ಲವುಗಳ ಬಗ್ಗೆ ಅಭಿಮಾನ ತಾಳುವದು. [೨೯] ನಿಜವಾದ ನ್ಯಾಯು ಯಾವುದೆಂಬುದು ತನಗೆ ತಿಳಿಯುವದಿಲ್ಲ, ಅನ್ಯಾಯ ಮಾಡಿದರೆ ಅದೂ ಸಹ ಲಕ್ಷ್ಯದಲ್ಲಿ ಬರುವಂತಿಲ್ಲ. ಇಂಥ ಸ್ಥಿತಿ ಇದ್ದರೂ ಸಹ ನಿಷ್ಕಾರಣವಾದ ಅಭಿಮಾನದಿಂದ ರೇಗಾಡುವದು, ಅಸಂತುಷ್ಟಗೊಳ್ಳುವದು. [೩೦] ಹಿಂದಿನದಾವುದೂ ನೆನಪಾಗುವದಿಲ್ಲ. ಮುಂದಿನದರ ಬಗ್ಗೆ ಯಾವುದೂ ತೋರುವದಿಲ್ಲ. ಇಂಥ ಅವಸ್ಥೆಯಲ್ಲಿ ಆಗ ಮಾತ್ರ ಕೇವಲ ಕಲ್ಪನೆಯನ್ನು ಮಾಡುತ್ತಾ ಇರುವದು. [೩೧] ಯಾವುದು ಅನುಭವದಿಂದ ಸಿದ್ಧವಾಗಿರುವದಿಲ್ಲವೋ ಅಂಥ ಔಷಧವನ್ನು ತೆಗೆದುಕೊಳ್ಳುವದು. ಅದರಂತೆ ಯಾರಿಗೂ ಅನುಭವವಿರದಂಥಾ ಪಥ್ಯ ಮಾಡುವದು. ಮತ್ತು ತಮಗೆ ಅನುಭವ ಇಲ್ಲದಂಥವರ ಜ್ಞಾನವನ್ನು ಲೋಕದ ಜನರಿಗೆ ಹೇಳುವದು. (೩೨) ಯಾವ ಪ್ರಯೋಗದ ಫಲ ಏನು ಅನ್ನುವದು ಗೊತ್ತಿಲ್ಲದೇ ಅದರ ಪ್ರಯೋಗ ಮಾಡಲಿಕ್ಕೆ ಹೋಗುವದು.ಜ್ಞಾನದ ಜೋಡು ಇಲ್ಲದೇ ಯೋಗದ ಅಭ್ಯಾಸ ತಾನೇ ಮಾಡುವದು. ಸುಮ್ಮನೆ(ಕಾರಣವಿಲ್ಲದೆ)ೀ ತನ್ನ ಶರೀರದಿಂದ ಸುಖದ ಭೋಗ ಭೋಗಿಸುವದು.(೩೩) ಮನುಷ್ಯನು ಹುಟ್ಟುವದಕ್ಕಿಂತ ಮೊದಲು ಅವನ ಹಣೆಯಲ್ಲಿ ಅವನ ಭವಿಷ್ಯವನ್ನು ಬ್ರಹ್ಮದೇವ ಬರೆದಿಡುವನು ಮತ್ತು ಮನುಷ್ಯ ಜನ್ಮ ಹೊಂದಿದ ನಂತರ ಅವನ ಜನನದ ಆರನೆಯ ದಿವಸ "ಸಟವಿ" ಬಂದು ಅದನ್ನು ಓದಿ ಹೋಗುವಳು ಇಂಥ ಮಾತಿನ ಮೇಲೆ ವಿಶ್ವಾಸವಿಡುವದು. (೩೪) ಇಲ್ಲಿಯವರೆಗೆ ಹೇಳಿದ ಎಲ್ಲ ಮಾತುಗಳು ಭ್ರಮದಲ್ಲಿ ಎಣಿಸಲ್ಪಡುವವು. ಹೀಗೆ ಹೇಳುತ್ತ ಹೋಗಿ ಭ್ರಮದ ಬಗ್ಗೆ ಬಹಳ ವಿಸ್ತಾರದ ವರ್ಣನೆಯನ್ನು ಮಾಡಲಾಯಿತು. ಅಜ್ಞಾನಿ ಜನರಲ್ಲಿ ಇದು ಅತಿಶಯವಾಗಿ ಪಸರಿಸಿರುತ್ತದೆ. ಭ್ರಮದ ಸ್ವರೂಪ ಲಕ್ಷ್ಯದಲ್ಲಿ ಸ್ಥಿರವಿರಲಿ. ಅಜ್ಞಾನ ದೂರಾಗಲಿ. ಅನ್ನುವ ಉದ್ದೇಶದಿಂದ ಕೆಲವು ಉದಾಹರಣೆಗಳನ್ನು ಕೊಟ್ಟಿರುವೆವು ಇಷ್ಟೇ. (೩೫)

ಭ್ರಮರೂಪ ವಿಶ್ವ ಸ್ವಭಾವೇ। ತೆಥೇ ಕಾಯೆ ವ್ಯಾಣೋನ ಸಾಂಗಾವೇ।
ನಿರ್ಗುಣ ಬ್ರಹ್ಮಾವೇಗಳೇ ಅಘವೇ। ಭ್ರಮರೂಪ ॥೩೬॥

ಜ್ಞಾತ್ಯಾಸ ನಾಹೀ ಸಂಸಾರ। ಐಸೇ ಬೋಲತೀ ಅಪಾರ।
ಗತ ಜ್ಞಾತ್ಯಾಚೆ ಚಮತ್ಕಾರ। ಯಾ ನಾವ ಭ್ರಮ ॥೩೭॥

ಯೇಥೇ ಆಶಂಕಾ ಉಠಿಲೀ। ಜ್ಞಾತ್ಯಾಚೀ ಸಮಾಧೀ ಪೂಜಿಲೀ।
ತೇಥೇ ಕಾಹೀ ಪ್ರಚಿತ ಆಲೀ। ಕಿಂವಾ ನಾಹೀ ॥೩೮॥

ತೈಸೇ ಚಿ ಅವತಾರೀ ಸಂಪಲೇ। ತ್ಯಾಚೇ ಹಿ ಸಾಮರ್ಥ್ಯ ಉದಂಡ ಚಾಲೇ।
ತರೀ ತೇ ಕಾಯೆ ಗುಂತಲೇ। ವಾಸನಾ ಧರೂನಿ ॥೩೯॥

ಐಸೀ ಆಶಂಕಾ ಉದ್ಭವಲೀ। ಸಮರ್ಥೇ ಪಾಹಿಜೆ ನಿರಸಿಲೀ।
ಇತುಕೇ ನ ಹೇ ಸಮಾಪ್ತ ಜಾಲೀ। ಕಥಾ ಭ್ರಮಾಚೀ ॥೪೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
''ಭ್ರಮ ನಿರೂಪಣ'' ನಾಮ ಸಮಾಸ ಷಷ್ಟಮ ॥

● ●

ಈಗ ಈ ವಿಷಯದ ಉಪ ಸಂಹಾರ ಮಾಡುವರು:- ಈ ಎಲ್ಲ ವಿಶ್ವವೇ ಮೂಲದಲ್ಲಿ ಭ್ರಮರೂಪ ವಿರುವದು. ಅಂದ ಮೇಲೆ ಇಲ್ಲಿ ಭ್ರಮೆಯ ಬಗ್ಗೆ ಎಷ್ಟು ಹೇಳಿದರೂ ಕಡಿಮೆಯೇ ಆಗುವದು. ಅಂದ ಮೇಲೆ ಎಷ್ಟು ಮತ್ತು ಹೇಗೆ ಹೇಳಬೇಕೆಂಬ ಪ್ರಶ್ನೆ ಉತ್ಪನ್ನವಾಗುವದು. ಇರಲಿ. ಒಟ್ಟಿನಲ್ಲಿ ಒಬ್ಬನೇ ಒಬ್ಬನಾದ ನಿರ್ಗುಣ ಬ್ರಹ್ಮದ ಹೊರತಾಗಿ ಉಳಿದೆಲ್ಲವೂ ಭ್ರಮರೂಪವೇ ಇರುವದೆಂದು ನಿಶ್ಚಿತವಾಗಿ ನಂಬಿರಿ. (೩೬) ಆತ್ಮಜ್ಞಾನಿ ಪುರುಷರಿಗೆ ಸಂಸಾರದ ಸ್ಪರ್ಶವಿಲ್ಲ. ಅನ್ನುವದನ್ನು ಸಾವಿರ ಸಲ ಹೇಳಲಾಗಿದೆ. ಆದರೂ ಸಹ ದೇಹ ಇಟ್ಟಂಥ ಜ್ಞಾನಿ ಪುರುಷರ ಚಮತ್ಕಾರಗಳನ್ನು ಹೇಳುವರು. ಇದೂ ಸಹ ಭ್ರಮವೇ ಇರುವದು. (೩೭) ಇದರ ಮೇಲೆ ಶ್ರೋತಾ ಜನರ ಶಂಕಾ:- ಇಲ್ಲಿ ಒಂದು ಸಂಶಯ (ಶಂಕಾ) ಬರುವದು. ಅದು ಯಾವುದೆಂದರೆ? ತಿಳಿಯಿರಿ. ನಾವು ಜ್ಞಾನಿಪುರುಷರ ಸಮಾಧಿಯ ಪೂಜೆ ಮಾಡಿದೆವು. ಆದರಿಂದ ಅದರ ಅಸ್ತಿತ್ವದ ಬಗೆಗೆ ಏನಾದರೂ ಪ್ರತೀತಿ ಅನುಭವ ಬರುವದೋ ಅಥವಾ ಇಲ್ಲವೋ? ಹೇಳಿರಿ. (೩೮) ಇದರಂತೆ ಪೂರ್ವದಲ್ಲಿ ಆಗಿ ಹೋದಂಥ ಅವತಾರಿ ಪುರುಷರ ಬಗ್ಗೆ ಬಹಳಷ್ಟು ಸಾಮರ್ಥ್ಯದ ಬಗೆಗೆ ಇಂದಿಗೂ ಅನುಭವ ಬರುತ್ತದೆ. ಇದು ನಿಜವೇ ಇದ್ದುದಾದರೆ ಅಂತ್ಯಕಾಲದಲ್ಲಿ ಅವರಲ್ಲಿ ಏನಾದರೂ ವಾಸನಾ ಉಳಿಯಿತು.ಮತ್ತು ಇದರಿಂದ ಅವರು ಇಲ್ಲಿಯೇ ತೊಡಕಿಕೊಂಡು ಇರುವರೆಂದು ಭಾವಿಸಬೇಕೇ, ಹೇಗೆ? (೩೯) ಶ್ರೋತಾ ಅನ್ನುವದೇನಂದರೆ ಇದು ನನ್ನ ಶಂಕಾ ಇರುವದು. ಇದು ನನ್ನ ಪ್ರಾಮಾಣಿಕವಾದ ಶಂಕಾ ಇರುವದು. ಶ್ರೀ ಸಮರ್ಥರು ಇದರ ಪರಿಹಾರ (ನಿರಸನ) ಮಾಡಬೇಕು. ಭ್ರಮದ ವಿವೇಚನೆಯು ಇಲ್ಲಿಗೆ ಮುಗಿಯಿತು. (೪೦)

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಹತ್ತನೆಯ ದಶಕದ
"ಭ್ರಮ ನಿರೂಪಣ" ಎಂಬ ಹೆಸರಿನ ಆರನೆಯ ಸಮಾಸವು ಮುಗಿದುದು.

● ●

## ದಶಕ ೧೦. ಸಮಾಸ ೭. ಸಗುಣ ಭಜನ (ನುಡಿ ೩೧)

ಈ ಸಮಾಸದಲ್ಲಿ ಅಧ್ಯಾತ್ಮ ಶಾಸ್ತ್ರದಲ್ಲಿಯ ಒಂದು ಗೂಢ ಅನುಭವದ ವರ್ಣನೆ ಇರುವದು. ಈಗ ಆ ಪ್ರಶ್ನೆಯಾವುದೆಂದರೆ ಅವತಾರ ತಾಳಿದ ಮತ್ತು ಜ್ಞಾನಿ ಪುರುಷ ಇವರು ಜೀವಂತವಿದ್ದಾಗ ದೇಹದಿಂದ ಸಂಸಾರದಲ್ಲಿದ್ದಂತೆ ಕಂಡರೂ ಸಹ ಮನದಿಂದ ಅದರಲ್ಲಿ ಇರುವದಿಲ್ಲ. ಮರಣದ ನಂತರ ಅರ್ಥಾತ್ ಸಂಸಾರದೊಂದಿಗೆ ಅವರ ಸಂಬಂಧ ಇರುವದೇ ಇಲ್ಲ. ಸತ್ಪುರುಷನು ಸತ್ತಮೇಲೆ ಅವರ ಸಮಾಧಿಯನ್ನು ಕಟ್ಟುವರು. ಬಹು ಜನರಿಗೆ ಸಮಾಧಿಯಲ್ಲಿ ಅವರ ಅಸ್ತಿತ್ವದ ಅನುಭವ ಬರುವದು. ಇದು ಹೇಗೆ? ಈ ಅನುಭವ ನಿಜವಾಗಿಯೂ ಖರೇ ಇರುವದೋ ಅಥವಾ ಖೊಟ್ಟಿ ಇರುವದೋ, ಸತ್ಪುರುಷನು ತನ್ನ ಆ ಸಮಾಧಿಯಲ್ಲಿ ಇರುವನೋ ಹೇಗೆ? ಇದ್ದರೆ ಅವರು ಹೇಗೆ ಮುಕ್ತರೆನಿಸುವರು? ಇರುವದಿಲ್ಲವೆಂದರೆ ಅಲ್ಲಿ ಅನುಭವ ಹೇಗೆ ಬರುವದು? ಇದಕ್ಕೆ ಉತ್ತರ:– ಸತ್ಪುರುಷ ಆತ್ಮಜ್ಞಾನಿ ಇರುವನು. ಇವನು ಈಶ್ವರನಲ್ಲಿ ಸಮರಸವಾಗಿರುವನು. ಆದ್ದರಿಂದ ಮೂಲಮಾಯೆಯ ಅಧ್ಯಕ್ಷನಾಗುವನು. ಆಗ ಈಶ್ವರನ ಜ್ಞಾನ ಪ್ರೇಮ ವ ಸಾಮರ್ಥ್ಯ ಇವು ಸಮರಸ ಹೊಂದಿದ ಸತ್ಪುರುಷನ ಜ್ಞಾನ, ಪ್ರೇಮ, ಸಾಮರ್ಥ್ಯವಾಗಿ ಬಿಡುವವು. ಈಶ್ವರನ ಹೇತುವೆ ಇವನ ಹೇತುವು. ಮತ್ತು ಈಶ್ವರನ ಕೃಪೆಯೇ ಇವನ ಕೃಪೆಯು. ಇಂಥ ಅವಸ್ಥೆ ಮರಣಿಸಿದ ಸತ್ಪುರುಷನಿಗೆ ಬರುವದು. ಈಶ್ವರನು ಹೇಗೆ ಸರ್ವಾಂತರ್ಯಾಮಿಯೋ ಅದರಂತೆ ಇವನೂ ಸರ್ವಾಂತರ್ಯಾಮಿಯಾಗಿ ಸರ್ವಜೀವರ ಮೇಲೆ ಅತ್ಯಂತ ನಿಃಸ್ವಾರ್ಥದ ಪ್ರೇಮ ಮಾಡುವನು. ಆತ್ಮಜ್ಞಾನವು ಅನುಭವ ರೂಪವಿರುವದು. ಆದರೆ ಜ್ಞಾನಿಪುರುಷನಿಗೆ ಭೆಟ್ಟಿಯಾಗುವವರು ಬಹುಶಃ ಅಜ್ಞಾನಿಗಳೇ ಇರುವರು. ಇವರಿಗೆ ಆತ್ಮಾನುಭವದ ಕಲ್ಪನೆಯನ್ನು ಕೊಡುವದಕ್ಕಾಗಿ ಸಾಧು ಸಂತರು ತಮ್ಮಜ್ಞಾನವನ್ನು ಶಬ್ದಗಳ ಸಹಾಯ

ದಿಂದ ವಿಚಾರರೂಪದಿಂದ ಹೇಳುವರು. ಇದರಿಂದಾಗಿ ಅವರ ಜ್ಞಾನಕ್ಕೆ ವಿಚಾರದ ಆಕಾರ ಬರುವದು. ಸಾಧು ಸಂತರ ಈ ವಿಚಾರ ಬಹಳ ದೊಡ್ಡ ಸಾಮರ್ಥ್ಯ ಸಂಪನ್ನವಿರುವದು. ಅಜ್ಞಾನಿ ಜೀವದ ಬಗ್ಗೆ ಇವರಿಗೆ ಅತಿಉತ್ಕಟ ಪ್ರೇಮ ಮತ್ತು ಜೀವದ ಕಲ್ಯಾಣದ ಬಗೆಗೆ ಅತಿಶಯ ತಳಮಳವು ಇವರ ವಿಚಾರದಲ್ಲಿ ಯಾವಾಗಲೂ ತುಂಬಿತುಳು ಕುತ್ತಿರುವವು. ದೇಹದಿಂದ ಎಲ್ಲಿ (ಜೀವಂತರಿದ್ದಾಗ್ಗೆ) ಇರುವರೋ ಆ ಸ್ಥಳದಲ್ಲಿ ಅವರ ಆ ಜೀವಂತ ಪ್ರಭಾವೀ ವಿಚಾರಗಳು ಸೂಕ್ಷ್ಮ ತರಂಗ ರೂಪದಿಂದ ಇರುವವು (ಜಾಗೃತವಾಗಿ ವಾಸಿಸುವವು). ದೇಹ ಇಟ್ಟ ಮೇಲೆ ಜನರು ಅವರ ಸಮಾಧಿ ಕಟ್ಟುವರು. ಜೀವಂತವಿದ್ದಾಗಿನ ಸತ್ಪುರುಷರು ಇಲ್ಲಿ ಗುಪ್ತವಾಗಿ ಇರುವನೆಂಬ ಪ್ರಾಮಾಣಿಕ ಭಾವನೆಯು ಬಹು ಜನರಲ್ಲಿ ಇರುವದು. ಇವರು ನಿಜವಾಗಿ ಸರ್ವವ್ಯಾಪಿಯೇ ಇರುವರು. ಇವರ ವಿಚಾರ ತರಂಗದ ಸಮೂಹ ಅವರ ಸಮಾಧಿ ಸ್ಥಾನದ ಹತ್ತಿರ ಕಾಯಂ ಆಗಿ ವಾಸಮಾಡುವದು. ಯಾವಾಗ ಯಾವೊಬ್ಬ ಮನುಷ್ಯನು ಸಮಾಧಿಯ ದರ್ಶನಕ್ಕೆ ಹೋಗುವನೋ ಆಗ ಅಲ್ಲಿಯ ಅವರ ವಿಚಾರ ತರಂಗಗಳು ಹೋದವರ ಸೂಕ್ಷ್ಮದೇಹದ ಮೇಲೆ ಪರಿಣಾಮ ಮಾಡುವವು. ಒಂದು ವೇಳೆ ಅದು ಪಾರಮಾರ್ಥಿಕ ದೃಷ್ಟಿಯಿಂದ ಸೂಕ್ಷ್ಮ ಗ್ರಾಹಿ ಶಕ್ತಿ (ಲವಚಿಕ)ಯದಾಗಿ ಬಲಯುತವಾಗಿದ್ದರೆ ಮಾತ್ರ ಆ ವಿಚಾರ ತರಂಗಗಳು ಅದರ ಭೇದ ಮಾಡಿ ಒಳಗೆ ಪ್ರವೇಶಿಸುವವು. ಆಕಾಲಕ್ಕೆ ಆ ಮನುಷ್ಯನಿಗೆ (ಸಮಾಧಿ ದರ್ಶನಕ್ಕೆ ಹೋದವನಿಗೆ) ಆ ಸಮಾಧಿಸ್ಥ ಸಂತನ ಅಸ್ತಿತ್ವದ ಅನುಭವ ಬರುವದು. ಇನ್ನೊಂದು ಮಾತು ವಿಚಾರಕ್ಕೆ ಯೋಗ್ಯವಿದೆ. ವಾಸನಾ ಇದ್ದಲ್ಲಿ ಸ್ವಾರ್ಥ ಇರುವದು. ವಾಸನಾ ಇಲ್ಲದಿದ್ದರೆ ಅಲ್ಲಿ ಸ್ವಾರ್ಥವಿರುವದಿಲ್ಲ. ಸ್ವಾರ್ಥ ಇದ್ದಲ್ಲಿ ಸಂಕುಚಿತತನ ಇರುವದು. ಇದು ಬಹಳ ಬಲಹೀನಮಾಡುವದು. ನಿಸ್ವಾರ್ಥತನದಲ್ಲಿ ವಿಶಾಲತೆ ಇರುವದು. ಇದು ಬಹಳ ಬಲಸಂಪನ್ನವಿರುವದು. ಸಾಧು ಸಂತರಲ್ಲಿ ವಾಸನಾ ಇರುವದಿಲ್ಲ. ಸ್ವಾರ್ಥವೂ ಇರುವದಿಲ್ಲ. ದೇವರ ಮೇಲೆ ಅತ್ಯಂತ ನಿಷ್ಕಾಮ ಪ್ರೇಮ ಮಾಡುವರು. ಮತ್ತು ಮನುಷ್ಯರ ಮೇಲೆ ಸಹ ಅಗದೀ ನಿಃಸ್ವಾರ್ಥ ಪ್ರೇಮ ಮಾಡುವರು. ಇವರ ಈ ಶುದ್ಧ ಪ್ರೇಮವು ಜೀವದೊಳಗೆ ಅತಿ ಆಳವಾಗಿ ಹೋಗಿ ಮುಟ್ಟುವದು. ಆದ್ದರಿಂದ ಸಂತ ಸಾಧುಗಳು ದೇಹದಿಂದ ಕಣ್ಮರೆಯಾಗಿದ್ದರೂ ಸಹ ಮನುಷ್ಯರ ಹೃದಯದಲ್ಲಿ ಪ್ರೇಮರೂಪದಿಂದ ಜೀವಂತ ಇರುವರು. ಅವನಿಗೆ (ದರ್ಶನಾಪೇಕ್ಷೆಗೆ) ಸಮಾಧಿಸ್ಥ ಸಂತ ಇಲ್ಲಿ ಇರುವನೆಂಬುದರ ಪ್ರತ್ಯಕ್ಷ ಅನುಭವ ಬರುವದು. ಆದರೆ ಒಂದು ಮಾತನ್ನು ನೀವು ಯಾವಾಗಲೂ ಲಕ್ಷದಲ್ಲಿಟ್ಟಿರಬೇಕು. ಯಾವುದೆಂದರೆ ಸಂತರಲ್ಲಿ ಪ್ರೇಮದಿಂದ ಭರ್ತಿ ತುಂಬಿ ತುಳುಕಾಡುವ ಜೀವವು ಮರಣದ ನಂತರ ಸಮಾಧಿಯ ಆಸುಪಾಸು (ಸುತ್ತಮುತ್ತ) ತಿರುಗುತ್ತಿರುವದು. ಸುತ್ತಾಡುವದು. ಅದು ಪುನಃ ಜನ್ಮ ತಾಳಿ ಬಂದ ಮೇಲೆ ಇಂದಲ್ಲದಿದ್ದರೂ ಎಂದಾದರೊಂದು ದಿನ ಸಮಾಧಿಯ ದರ್ಶನಕ್ಕೆ ಬರುವದು. ಮತ್ತು ಅದು ಕಾಯಂ ಆಗಿ ಅಲ್ಲಿ ಅಂಟಿಕೊಳ್ಳುವದು. ಇದರಿಂದಾಗಿ ವರ್ಷಾನುವರ್ಷವಷ್ಟೇ ಅಲ್ಲ, ಶತಕಾನುಶತಕದತನಕಾ ಆ ಸತ್ಪುರುಷರ ಮಹಿಮೆ ಕಾಯಂ ಉಳಿಯುವದು. ಸ್ವತಃ ಶ್ರೀ ಸಮರ್ಥರೇ ಇದಕ್ಕೆ ಉತ್ತಮ ಉದಾಹರಣೆಯಾಗಿರುವರು. ಕೊನೆಯದಾಗಿ ಗೂಢ ಮಾತು ಯಾವುದೆಂದರೆ ಸಮಾಧಿಯ ಮೇಲೆ ನಿಷ್ಠಾಭಕ್ತಿ ಇಡುವಂಥ ಭಕ್ತರ ಪೈಕಿ ಒಬ್ಬನಾದರೂ ಚೆನ್ನಾಗಿ ತಯಾರ ಆದರೆ ಅಂಥ ಭಕ್ತನ ನಿಷ್ಕಾಮ ಭಜನಾದಿಗಳಿಂದ ಸಮಾಧಿಗೆ ದೊಡ್ಡ ಕಳೆ (ತೇಜ) ಬರುವದು. ಸಮಾಧಿಯ ಸುತ್ತಮುತ್ತ (ಸಮೀಪದಲ್ಲಿ) ಸ್ಥಿರಗೊಂಡಿರುವ ಆ ಸತ್ಪುರುಷನ ವಿಚಾರ ತರಂಗಗಳಿಗೆ ಆ ನಿಷ್ಕಾಮ ಭಕ್ತನ ಆತ್ಮಬಲದಿಂದ ನಿರ್ಮಲತನ ಉಜ್ವಲ ತೇಜ, (ಚಕಚಕಿತನ)ಬರುವದು. ಇದರಿಂದ ಆ ಸಮಾಧಿಯಲ್ಲಿ ವಾಸವಾಗಿರುವ ಗುಪ್ತ ಜೀವಂತತನಕ್ಕೆ ಹೆಚ್ಚಿನ ಸ್ಫೂರ್ತಿ (ಬಲ) ಬರುವದು. ಆದ್ದರಿಂದ ಸತ್ಪುರುಷರ ಅಸ್ತಿತ್ವದ ಪ್ರತೀತಿ ಬೇಗ ಬರುವದು. ಸಗುಣ ಭಕ್ತಿಯಲ್ಲಿಯ ನಿಷ್ಕಾಮ ಉಪಾಸನೆಯ ಈ ಗೂಢ ಮಹಾತ್ಮೆಯನ್ನು ಭಕ್ತ ಸಂತ ಸಾಧುಗಳು ಮಾತ್ರ ಗುರುತಿಸುವರು. ಆದ್ದರಿಂದ ಆತ್ಮಜ್ಞಾನ ಆದ ಮೇಲೆಯೂ ಸಹ ಸಂತಾದಿಕರು ಸಗುಣೋಪಾಸನೆಯನ್ನು ಬಿಟ್ಟು ಬಿಡಲಿಲ್ಲ. ತಿರಸ್ಕರಿಸಲಿಲ್ಲ. ಇದೇ ಸಂತಾದಿಕರ ಪೂರ್ಣ ಮಾರ್ಗವಿರುವದು. ತಾತ್ಪರ್ಯ ಸಂತರು ಕಣ್ಮರೆಯಾದರೂ ಸಹ ಅವರ ಬಗ್ಗೆ ಬರುವ ಅನುಭವವು ಇತರ ಸಾಮಾನ್ಯ ವ ಪ್ರಾಪಂಚಿಕರ ಅನುಭವದಂತೆ ಭ್ರಮೆ ಅನಿಸಲಾರದು. ಅನಿಸುವದೂ ಇಲ್ಲ.

### ದಶಕ ದಶವಾ : ಸಮಾಸ ಸಪ್ತಮ : ಸಗುಣ ಭಜನ ನಿರೂಪಣ

॥ಶ್ರೀರಾಮ॥ ಅವತಾರಾದಿಕ ಜ್ಞಾನೀ ಸಂತ । ಸಾರಾಸಾರ ವಿಚಾರೇ ಮುಕ್ತ ।
ತ್ಯಾಚೇ ಸಾಮರ್ಥ್ಯ ಚಾಲತ । ಕೋಣ್ಯಾ ಪ್ರಕಾರೇ ॥೧॥

ಹೇ ಶ್ರೋತಯಾಂಚೀ ಆಶಂಕಾ । ಪಾಹತಾ ಪ್ರಶ್ನ ಕೇಲಾ ನಿಕಾ ।
ಸಾವಧ ಹೋಊನ ಐಕಾ । ಮ್ಹಣೆ ವಕ್ತಾ ॥೨॥

ಜ್ಞಾನೀ ಮುಕ್ತ ಹೋಊನ ಗೇಲೇ । ಮಾಗೇ ತ್ಯಾಚೆ ಸಾಮರ್ಥ್ಯ ಚಾಲೇ ।
ಪರಂತು ತೆ ನಾಹೀ ಆಲೆ । ವಾಸನಾ ಧರೂನೀ ॥೩॥

ಲೋಕಾಸ ಹೋತೋ ಚಮತ್ಕಾರ । ಲೋಕ ಮಾನಿತೀ ಸಾಚಾರ ।
ಪರಂತು ಯಾಚಾ ವಿಚಾರ । ಪಾಹಿಲಾ ಪಾಹಿಜೆ ॥೪॥

ಜೀತ ಅಸ್ತಾ ನೇಣೋ ಕಿತೀ । ಜನಾಮಧೇ ಚಮತ್ಕಾರ ಹೋತೀ ।
ಐಸಿಯಾಚಿ ಸದ್ಯಪ್ರಚಿತೀ । ರೋಕಡೀ ಪಾಹಾವೀ ॥೫॥

ತೋ ತರೀ ಆಪಣ ನಾಹೀ ಗೇಲಾ। ಲೋಕೀ ಪ್ರತ್ಯಕ್ಷ ದೇಖಿಲಾ ।
ಐಸಾ ಹಾ ಚಮತ್ಕಾರ ಜಾಲಾ । ಯಾಸ ಕಾಯೆ ಮ್ಹಣಾವೇ ॥೬॥

ತರೀ ಹಾ ಲೋಕಾಚಾ ಭಾವಾರ್ಥ । ಭಾವಿಕಾ ದೇವ ಯೆಥಾರ್ಥ ।
ಅನೇತ್ರ ಕಲ್ಪನಾ ವೆರ್ಥ । ಕುತರ್ಕಾಚೀ ॥೭॥

ಆವಡೆ ತೇ ಸ್ವಪ್ನೀ ದೇಖಿಲೇ । ತರೀ ಕಾಯ ತೇಥೂನ ಆಲೇ ।
ಮ್ಹಣಾಲ ತೇಣೇ ಆಠವಿಲೇ । ತರೀ ದ್ರವ್ಯ ಕಾ ದಿಸೆ ॥೮॥

## ದಶಕ ೧೦. ಸಮಾಸ ೭. ಸಗುಣ ಭಜನ ನಿರೂಪಣ (ನುಡಿ ೩೧)

ಜ್ಞಾನಿ ಪುರುಷರು ದೇಹವಿಟ್ಟ ನಂತರವೂ ಸಹ ಜನರಿಗೆ ಅವರ ದರ್ಶನವಾಗುವದು. ಮತ್ತು ಇತರ ರೀತಿಯಿಂದಲೂ ಸಹ ಅನುಭವ ಬರುವದು. ಈ ಮಾತು ನಿಜವಿರುವದು. ಜ್ಞಾನಿ ಪುರುಷರು ಮುಕ್ತರಿರುವರು. ಅವರ ವಾಸನಾ ಎಷ್ಟೂ ಶಿಲುಕು ಉಳಿದಿರುವದಿಲ್ಲ. ಲೋಕದ ಜನರ ಶುದ್ಧ ಭಾವನೆಯು ಈ ಭಕ್ತ ಜನರಿಗೆ ಫಲ ಕೊಡುವದು. ರಾಮ ಕೃಷ್ಣಾದಿ ಅವತಾರ, ಶ್ರೇಷ್ಠಜ್ಞಾನಿ ಪುರುಷ ಮತ್ತು ಸಂತ ಸಾಧು ಇವರು ಸಾರಾಸಾರ ವಿಚಾರದಿಂದ ಮುಕ್ತರಾಗಿರುವರು. ಇವರು ದೇಹವಿಟ್ಟ ನಂತರವೂ ಸಹ ಅವರ ಸಾಮರ್ಥ್ಯ ಅಲ್ಲಿ ನಡೆಯುವದು. ಅದು ಹೇಗೆ ನಡೆಯುವದು? (೧) ಇದು ಶ್ರೋತಾನ ಶಂಕಾ ಇರುವದು. ಈ ಪ್ರಶ್ನೆ ನಿಜವಾಗಿಯೂ ಬಹಳ ಉತ್ತಮವಿರುವದು. ವಕ್ತಾ ಅನ್ನುವನು ಇದರ ವಿಷಯದ ಬಗ್ಗೆ ಉತ್ತರ ಕೊಡುವೆನು ಲಕ್ಷ್ಯಕೊಟ್ಟು ಕೇಳಿರಿ.(೨) ಆತ್ಮಜ್ಞಾನಿ ಪುರುಷರು ಮುಕ್ತರಿರುವರು. ಇವರ ಪ್ರಾರಬ್ಧ ಮುಗಿಯಿತೆಂದರೆ ಆಗ ದೇಹವಿಡುವರು. ದೇಹವಿಟ್ಟ ಮೇಲೆಯೂ ಸಹ ಅವರ ಸತ್ತಾ ನಡೆಯುವದು. ಪ್ರತ್ಯಕ್ಷ ಕಾರ್ಯ ಮಾಡುವದು. ಆದರೆ ವಾಸನಾದಿಂದಾಗಿ (ವಾಸನಾ ಹಿಡಿದು) ಅವರು ತಿರುಗಿ ಬರುವರೆಂದು ಇದರ ಅರ್ಥವಲ್ಲ. (೩) ಜನರಿಗೆ ಇವರ ಅಸ್ತಿತ್ವದ ಚಮತ್ಕಾರ ಗಳು ಅನುಭವಕ್ಕೆ ಬರುವವು.ಜನರೂ ಸಹ ಇವನ್ನು ಸತ್ಯವೆಂದು ತಿಳಿಯುವರು. ಆದರೆ ಇದರಲ್ಲಿ ನಿಜವಾದ ಅರ್ಥ ಯಾವುದು? ಇದರ ಬಗ್ಗೆ ಚನ್ನಾಗಿ ವಿಚಾರ ಮಾಡಲಿಕ್ಕೇಬೇಕು. (೪) ಯಾವನೊಬ್ಬ ಸತ್ಪುರುಷನು ಜೀವಂತ ವಿದ್ದಾಗ ಅವನ ಕಡೆಯಿಂದ ಲೋಕದ ಜನರ ಮುಂದೆ ಬಹಳಷ್ಟು ಚಮತ್ಕಾರಗಳು ಆಗಿರಬಹುದು. ಇದೇನೂ ಅಶ ಕ್ಯವಲ್ಲ. ಆದರೆ ಅವನು ದೇಹವಿಟ್ಟ ಮೇಲೆ ಚಮತ್ಕಾರಗಳು ಘಟಿಸುವವು. ಇವುಗಳ ಬಗ್ಗೆ ಬರುವ ಖರೇ ಅನು ಭವಗಳನ್ನು ತತ್ಕಾಲದಲ್ಲಿ ಸ್ವತಃ ಪಡೆದು ನೋಡಬೇಕು. [ಕೇವಲ ಹೇಳಿಕೆಯ ಮಾತಿನ ಮೇಲೆ ವಿಶ್ವಾಸಬೇಡ] [೫] ಉದಾ:- ಸತ್ಪುರುಷನು ಜೀವಂತವಿದ್ದಾಗ ತನ್ನ ಮನೆಯಲ್ಲಿಯೇ ಇರುವನು. ಅಂದು (ಒಂದಾನೊಂದು ದಿನ) ಅಲ್ಲಿಂದ ಹೊರಗೆ ಹೋಗಿಯೇ ಇಲ್ಲ. ಹೀಗಿದ್ದಾಗ ಒಂದೇ ದಿವಸ ಒಂದೇ ಹೊತ್ತಿಗೆ ಎರಡು ಅಥವಾ ಮೂರು ಸ್ಥಳಗಳಲ್ಲಿ ಜನರಿಗೆ ಇವನು ಪ್ರತ್ಯಕ್ಷ ಕಣ್ಣಿಗೆ ಬಿದ್ದಿರುವನು. (ಇದಕ್ಕೆ) ಈ ಚಮತ್ಕಾರಕ್ಕೆ ಯಾವುದು ಮತ್ತು ಎಂಥದು ಕಾರಣವಿರಬಹುದು? (೬) ಇದರ ಕಾರಣ ಹೀಗಿರುವದು. ಜನರ ಶುದ್ಧ ಭಾವನೆಯೇ ಇಂಥ ಘಟನೆ ಗಳಿಗೆ ಕಾರಣವಿರುವದು. ಸಂತ ಸಾಧುಗಳು ದೇವರೂಪರಿರುವರು. ಮತ್ತು ಯಾರ ಭಾವನೆ ಹೇಗಿರುವದೋ ಅದ ರಂತೆ ಅವರಿಗೆ ದೇವ ಫಲಿಸುವನು. ಚಮತ್ಕಾರಗಳಿಗೆ ಇದೇ ಒಂದು ಮುಖ್ಯ ಕಾರಣವಿರುವದು: ಇತರ ಕಲ್ಪನೆ ಮಾಡುವದೆಂದರೆ ನಿಷ್ಕಾರಣವಾಗಿ ಇಲ್ಲದ ಸಲ್ಲದ ತರ್ಕವೆನಿಸುವದು. ಆದ್ದರಿಂದ ಸಂತರು ದೇಹ ಬಿಟ್ಟ ಮೇಲೆ ಸಹ ಅವನು ಹೋಗಿಲ್ಲ, ಅವನೇ ಇರುವನು. ಈ ಭಾವನೆಯು ನಿಜವಾದ ಕಳಕಳಿಯದು, ಶ್ರದ್ಧೆಯದು ಇದ್ದರೆ ಅವನಿಗೆ ಆ ಸಂತ ಸಾಧುಗಳು ಪ್ರತ್ಯಕ್ಷ ದರ್ಶನ ಕೊಡುವರು. ಚಮತ್ಕಾರದ ಪ್ರತ್ಯಕ್ಷ ಪ್ರತೀತಿ (ಅನುಭವ) ಅಂದರೆ ಇದೇ ಇರುವದು. ವಾಸ್ತವಿಕ ವಿಚಾರ ಮಾಡಿದರೆ ಸಂತ ಜೀವಂತವಿದ್ದಾಗ ಸಂತನು ದೇಹದಲ್ಲಿ ಇರುವದಿಲ್ಲ. ಆದ್ದರಿಂದ ಅವನ ದೇಹ ಬಿದ್ದ ಮೇಲೆ ಅವನ ಮೂಲ ಅವಸ್ಥೆಯಲ್ಲಿ ಎಳ್ಳಷ್ಟೂ ಬದಲಾವಣೆ ಆಗುವದಿಲ್ಲ. ಇವನ ದೇಹ ಜೀವಂತ ಇದ್ದಾಗ ಸಹ ಶುದ್ಧ ಭಾವನೆಯು ಯಾವ ಫಲಕೊಡುವದೋ ಅದೇ ಫಲ ಆ ಭಾವನೆ ಅವನ ದೇಹ ಬಿದ್ದ ನಂತರವೂ ಸಹ ಕೊಡುವದು. ಈ ರೀತಿಯಿಂದ ಸಂತರು ದೇಹವಿಟ್ಟ ನಂತರ ಚಮತ್ಕಾರಗಳು ಘಟಿಸುವವು. ಮತ್ತು ಅವು ಆಗದೇ ಖರೇ ಇರುವವು. (೭) ಮನಃಪೂರ್ವಕವಾಗಿ ನಮಗೆ ಯಾವುದು ಪ್ರೀತಿಯದೋ ಅದು ಸ್ವಪ್ನದಲ್ಲಿ ಕಾಣುವದು. ಆದರೆ ಯಾವುದು ಸ್ವಪ್ನದಲ್ಲಿ ಕಾಣುವದೋ ಅದು ಹೊರಗಿನಿಂದ ಅಥವಾ ಎಲ್ಲಿಂದಾಗಲೀ ಬಂದದ್ದಲ್ಲ. ಇದರ ಮೇಲೆ ಯಾರಾದರೂ ಆ ವಸ್ತುವು ನಿಮ್ಮ ಸ್ಮರಣದಲ್ಲಿ ಇತ್ತು ಆದ್ದರಿಂದ ಅದು ಸ್ವಪ್ನದಲ್ಲಿ ಕಂಡಿತು ಎಂದು ಅನ್ನಬಹುದು. ಇದು ನಿಜವಲ್ಲ. ಯಾಕಂದರೆ ವಸ್ತುವಿನ ಸ್ಮರಣ ಆದದ್ದಾದರೆ ಅದೇನೂ ಪ್ರತ್ಯಕ್ಷ ಕಾಣುವದಿಲ್ಲ. ಆದರೂ ಸ್ವಪ್ನದಲ್ಲಿ ಮಾತ್ರ ಅದು ಪ್ರತ್ಯಕ್ಷ ಕಾಣುವದು· ಇದಕ್ಕೆ ಕಾರಣವೇನು? (೮)

ಏವಂ ಆಪಲೀ ಕಲ್ಪನಾ । ಸ್ವಪ್ನೀಂ ಯೇತೀ ಪದಾರ್ಥ ನಾನಾ ।
ಪರೀ ತೆ ಪದಾರ್ಥ ಚಾಲತೀನಾ । ಅಥವಾ ಆಠಲೂ ನಾಹೀ ॥೯॥

ಯೇಥೇ ತುಟಲೀ ಆಶಂಕಾ । ಜ್ಞಾತ್ಯಾಸ ಜನ್ಮ ಕಲ್ಪೂ ನಕಾ ।
ಉಮಜೇನಾ ತರೀ ವಿವೇಕಾ । ಬರೇ ಪಾಹಾ ॥೧೦॥

ಜ್ಞಾನೀ ಮುಕ್ತ ಹೋಊನ ಗೇಲೆ । ತ್ಯಾಚೇ ಸಾಮರ್ಥ್ಯ ಉಗೇ ಚಿ ಚಾಲೇ।
ಕಾ ಜೆ ಪುಣ್ಯಮಾರ್ಗೇಂ ಚಾಲಿಲೇ । ಮ್ಹಣೋನಿಯಾ ॥೧೧॥

ಯಾಕಾರಣೇಂ ಪುಣ್ಯಮಾರ್ಗೇಂ ಚಾಲಾವೇ । ಭಜನ ದೇವಾಚೇ ವಾಢವಾವೇ ।
ನ್ಯಾಯೆ ಸಾಂಡೂನ ನ ಜಾವೇ । ಅನ್ಯಾಯು ಮಾರ್ಗೇಂ ॥೧೨॥

ನಾನಾ ಪುರಶ್ಚರಣೇಂ ಕರಾವೀ । ನಾನಾ ತೀರ್ಥಾಟಣೇಂ ಫಿರಾವೀ ।
ನಾನಾ ಸಾಮರ್ಥ್ಯೇಂ ವಾಢವಾವೀ । ವೈರಾಗ್ಯಬಳೇಂ ॥೧೩॥

ನಿಶ್ಚಯೆ ಬೈಸೆ ವಸ್ತೂಕಡೆ । ತರೀ ಜ್ಞಾನ ಮಾರ್ಗೇಂ ಹಿ ಸಾಮರ್ಥ್ಯ ಚಢೆ ।
ಕೋಣೇಯೇಕ ಯೇಕಾಂತ ಮೋಡೆ। ಏಸೇ ನ ಕರಾವೇ ॥೧೪॥

ಯೇಕ ಗುರು ಯೇಕ ದೇವ । ಕೋಠೇ ತರೀ ಅಸಾವಾ ಭಾವ ।
ಭಾವಾರ್ಥ ನಸ್ತಾ ವಾವ । ಸರ್ವ ಕಾಹೀ ॥೧೫॥

ನಿರ್ಗುಣೇಂ ಜ್ಞಾನ ಜಾಲೇ । ಮ್ಹಣೋನ ಸಗುಣ ಅಲಕ್ಷ ಕೇಲೇ ।
ತರೀ ತೇ ಜ್ಞಾತೇ ನಾಗವಲೇ । ದೋಹಿಕಡೆ ॥೧೬॥

ನಾಹೀ ಭಕ್ತಿ ನಾಹೀ ಜ್ಞಾನ । ಮಧೇ ಚ ಪೈಸಾವಲಾ ಅಭಿಮಾನ ।
ಮ್ಹಣೌನಿಯಾ ಜಪಧ್ಯಾನ । ಸಾಂಡೂ ಚ ನಯೆ ॥೧೭॥

ಒಟ್ಟಿನಲ್ಲಿ ನಾವು ಕಲ್ಪನಾ ಮಾಡುವೆವು. ಅದರಿಂದ ಸ್ವಪ್ನದಲ್ಲಿ ಅನೇಕ ವಸ್ತುಗಳು ನಮಗೆ ಪ್ರತ್ಯಕ್ಷ ಕಾಣುವವು. ಆ ವಸ್ತುಗಳ ಸ್ಮರಣವಾಗುವದೆಂದು ಅವು ಕಾಣುವವು, ಎಂದು ಅನ್ನುವದು ನಿಜವಲ್ಲ. ಅಂದಹಾಗೆ ಇದರದು ವ್ಯವಹಾರದಲ್ಲಿ ಏನೂ ಉಪಯೋಗವಿಲ್ಲವೆಂಬುದು ನಿಜವೇ ಇರುವದು. ಶ್ರೀ ಸಮರ್ಥರಿಗೆ ಹೇಳಬೇಕಾಗಿರುವದೇನಂದರೆ:– ತಿಳಿಯಿರಿ, ಒಬ್ಬ ಸತ್ಪುರುಷನು ನಿಧನ ಹೊಂದಿದನು. ನಾವು ಅವನನ್ನು ಸ್ಮರಿಸಿದೆವು. ಇದರಿಂದ ಆ ಸತ್ಪುರುಷ ಪ್ರತ್ಯಕ್ಷ ಪ್ರಕಟವಾಗುವನೆಂದು ಅನ್ನಲು ಬರುವದಿಲ್ಲ. ಆದರೆ ಇವರು ಇದ್ದೇ ಇರುವರು ಅನ್ನುವ ದೃಢ ಮತ್ತು ನಿಃಸಂಶಯ ಕಲ್ಪನೆಯನ್ನು ನಾವು ಮಾಡಿದರೆ ಅಷ್ಟರ ಮಟ್ಟಿಗೆ ಅವರು ಪ್ರತ್ಯಕ್ಷ ಪ್ರಕಟವಾಗುವರೆಂದು ಅನ್ನಲಿಕ್ಕೆ ಅಡ್ಡಿ ಇಲ್ಲ. ಆದರೆ ಇದು ನಮ್ಮ ಕಲ್ಪನೆಯ ಪರಿಣಾಮವಿರುವದು. ಕಲ್ಪನೆ ಕರಗಿದರೆ ಅದು ಇಲ್ಲದಾಗುವದು. ಅವರು ಪ್ರಕಟರಾಗುವಾಗ ತಾವಾಗಿ ಅಥವಾ ವಾಸನಾ ಹಿಡಿದು ಸಾಕಾರವಾಗುವರೆಂದು ಎಷ್ಟೂ ತಿಳಿಯಬಾರದು. (೯) ಇಲ್ಲಿಗೆ ಶ್ರೋತಾ ಜನರ ಶಂಕಾ ನಿರಶನ ಹೊಂದಿತು. ಜ್ಞಾನಿಪುರುಷನಿಗೆ ಜನ್ಮ ಬರುವದೆಂದು ಎಳ್ಳಷ್ಟೂ ಕಲ್ಪನೆಯನ್ನು ಮಾಡಬೇಡಿರಿ. ನನ್ನ ಹೇಳಿಕೆ ನಿಮಗೆ ತಿಳಿಯದಿದ್ದರೆ ಸಮಾಧಾನದಿಂದ ಸೂಕ್ಷ್ಮ ವಿಚಾರಮಾಡಿ ನೋಡಿರಿ. ಆಗ ನಿಮಗೆ ಖಾತ್ರಿಯಾಗುವದು. (೧೦) ಯಾವ ಜ್ಞಾನಿಪುರುಷನು ಮುಕ್ತನಾಗುವನೋ ಅವನ ಸತ್ತಾ ಯಾವ ಅಡೆತಡೆ ಇಲ್ಲದೆ ಸ್ವಾಭಾವಿಕವಾಗಿ ಮತ್ತು ತನ್ನಷ್ಟಕ್ಕೆ ತಾನೇ ನಡೆಯುವದು. ಖರೇ ಮಾರ್ಗದಿಂದ ಅವರು ಹೋಗಿರುತ್ತಾರೆ. ಆದ್ದರಿಂದ ಹೀಗೆ ಘಟಿಸುತ್ತದೆ. ಭಗವಂತನ ದರ್ಶನದ ಮಾರ್ಗವೊಂದೇ ನಿಜವಾದ ಪುಣ್ಯಮಾರ್ಗವಿರುವದು. ಭಗವಂತನ ಮಾರ್ಗದಿಂದ ಯಾರು ಹೋಗುವರೋ ಅವರ ಮಹಾತ್ಮೆಯನ್ನು ಸ್ವತಃ ಭಗವಂತನೇ ಹೆಚ್ಚಿಸುವನು. ಆದ್ದರಿಂದ ಸ್ವತಃ ಯಾವ ಪ್ರಯತ್ನ ಮಾಡದೇ ಸಂತಸಾಧುಗಳ ಮಹಾತ್ಮೆಯು ಜಗತ್ತಿನಲ್ಲಿ ತನ್ನಷ್ಟಕ್ಕೆ ತಾನೇ ಹೆಚ್ಚುತ್ತ ಹೋಗುವದು. (೧೧) ಇದಕ್ಕಾಗಿ ಮನುಷ್ಯರು ಪುಣ್ಯ ಮಾರ್ಗದಿಂದ ನಡೆಯಬೇಕು. ಜಗತ್ತಿನಲ್ಲಿ ಭಗವಂತನ ಭಕ್ತಿಯನ್ನು ಬೆಳಿಸಬೇಕು. ಮತ್ತು ನ್ಯಾಯದ ಪಥ ಬಿಟ್ಟು ಅನ್ಯಾಯದ ಮಾರ್ಗದಿಂದ ಎಂದೂ ಹೋಗಬಾರದು. (೧೨) ಇನ್ನು ಮೇಲೆ ಜ್ಞಾನಿ ಪುರುಷನು ಯಾವ ಪುಣ್ಯಮಾರ್ಗದಿಂದ ಹೋಗುವನೋ ಆ ಮಾರ್ಗದ ಬಗ್ಗೆ ಕಲ್ಪನೆಯನ್ನು ಮಾಡಿಕೊಡುವರು:– ಅನೇಕ ಪ್ರಕಾರದ ಪುರಶ್ಚರಣ ಮಾಡಬೇಕು. ಅನೇಕ ತೀರ್ಥಗಳಿಗೆ ಹೋಗಿಬರಬೇಕು. ಮತ್ತು ಪ್ರಬಲ ವೈರಾಗ್ಯ ಧಾರಣ ಮಾಡಿ ಅನೇಕ ಪ್ರಕಾರದ ಶಕ್ತಿಯನ್ನು ನಿಮ್ಮಲ್ಲಿ ಬೆಳೆಸಿಕೊಳ್ಳಬೇಕು. [೧೩] "ನಾನು ಆತ್ಮಸ್ವರೂಪ ಇರುವೆನು" ಅನ್ನುವದು ಮನದ ನಿಶ್ಚಯವಾಗಿದ್ದರೆ ಜ್ಞಾನಮಾರ್ಗ ಸಾಧಿಸುವದು. ಮತ್ತು ಇತರ ಯೋಗದಿಂದ ನಿಮ್ಮಲ್ಲಿ ಬಹಳ ದೊಡ್ಡ ಸಾಮರ್ಥ್ಯದ ಹೆಚ್ಚಳವಾಗುವದು. ನಿಮ್ಮ ಒಂದೇ ಒಂದಾದ ನಿಷ್ಠಾ [ಏಕನಿಷ್ಠೆ] ಎಲ್ಲಿ ಇರುವದೋ ಅದಕ್ಕೆ ಪೆಟ್ಟಾಗದಂತೆ [ಕೆಡಕಾಗದಂತೆ] ನೋಡಿಕೊಳ್ಳಿರಿ. ಅಪಾಯವಾಗುವಂಥದೇನನ್ನೂ ಮಾಡಬೇಡಿರಿ [೧೪] ಒಬ್ಬ ಸದ್ಗುರುವಿನಲ್ಲಾಗಲಿ, ಅಥವಾ ಒಬ್ಬ ದೇವರಲ್ಲಾಗಲಿ, ಈ ಎರಡರ ಪೈಕಿ ಒಂದರ ಮೇಲೆ ಸಂಪೂರ್ಣ ನಿಷ್ಠಾ ಇಡಬೇಕು. ಸಂಪೂರ್ಣ ನಿಷ್ಠಾ ಇಲ್ಲದಿದ್ದರೆ ಬಾಕಿ ಉಳಿದವೆಲ್ಲ ವ್ಯರ್ಥವಾಗಿ ಹೋಗುವವು. [೧೫] ತಿಳಿಯಿರಿ, ಒಬ್ಬನಿಗೆ ನಿರ್ಗುಣದ ಅನುಭವ ಬಂದಿತು. ನಿರ್ಗುಣದ ಜ್ಞಾನವಾಯಿತೆಂದು ಅವನು ಸಗುಣದ ದುರ್ಲಕ್ಷ್ಯ ಮಾಡಿದನು. ಸದ್ಗುರುವಿನ ಅಥವಾ ದೇವರ ಉಪಾಸನೆಯನ್ನೂ ಬಿಟ್ಟನು. ಇಂಥ ಜ್ಞಾನಿಪುರುಷನು ಎರಡೂ ಕಡೆಯಿಂದಲೂ ದುರ್ದೈವಿಯಾಗಿ "ಛೀ" ಅನ್ನಿಸಿಕೊಳ್ಳುವನು. [ಏನಬವದಿಂಗಿ]! ಇವನಿಗೆ ಸರಿಯಾಗಿ ನಿರ್ಗುಣವು ಸ್ವಾಧೀನವಾಗುವದಿಲ್ಲ. ಮತ್ತು ಸರಿಯಾಗಿ ಸಗುಣವು ಕೈಗೆ ಹತ್ತುವದಿಲ್ಲ. [೧೬] ಇಂಥವರಲ್ಲಿ ಜ್ಞಾನ ಅನ್ನುವದು ಇರುವದಿಲ್ಲ. ಮತ್ತು ಭಕ್ತಿ ಅನ್ನುವದೂ ಇರುವದಿಲ್ಲ. ಸುಮ್ಮನೇ ವ್ಯರ್ಥ ಅಭಿಮಾನ ಮಾತ್ರ ಇಂಥವರಲ್ಲಿ ಹೆಚ್ಚುತ್ತದೆ. ಆದ್ದರಿಂದ ಯಾರೇ ಆಗಲಿ ಜಪ, ಧ್ಯಾನ, ಇವನ್ನು ಏನು ಮಾಡಿದರೂ ಬಿಡಬಾರದು. [೧೭]

ಸಾಂಡೀಲ ಸಗುಣ ಭಜನಾಸೀ । ತರೀ ತೋ ಜ್ಞಾತಾ ಪರೀ ಅಪೇಸೀ ।
ಮ್ಹಣೌನಿಯಾ ಸಗುಣಭಜನಾಸೀ । ಸಾಂಡೂ ಚಿ ನಯೆ ॥೧೮॥

ನಿಃಕಾಮ ಬುದ್ಧೀಚಿಯಾ ಭಜನಾ । ತ್ರೈಲೋಕೀ ನಾಹೀ ತುಳಣಾ ।
ಸಮರ್ಥೇವಿಣ ಘಡೇನಾ । ನಿಃಕಾಮ ಭಜನ ॥೧೯॥

ಕಾಮನೆನೇ ಫಳ ಘಡೆ । ನಿಃಕಾಮ ಭಜನೇ ಭಗವಂತ ಜೋಡೆ ।
ಫಳ ಭಗವಂತಾ ಕೋಣೀಕಡೆ । ಮಹದಾಂತರ ॥೨೦॥

ನಾನಾ ಫಳೇ ದೇವಾಪಾಸೀ । ಆಣೀ ಫಳ ಅಂತರೀ ಭಗವಂತಾಸೀ ।
ಯಾಕಾರಣೇ ಪರಮೇಶ್ವರಾಸೀ । ನಿಃಕಾಮ ಭಜಾವೇ ॥೨೧॥

ನಿಃಕಾಮ ಭಜನಾಚೇ ಫಳ ಆಗಳೇ । ಸಾಮರ್ಥ್ಯ ಚಢೆ ಮರ್ಯಾದೇವೇಗಳೇ ।
ತೇಥೇ ಬಾಪುಡೀ ಫಳೇ । ಕೋಣೀಕಡೆ ॥೨೨॥

ಭಕ್ತೇ ಜೇ ಮನೀ ಧರಾವೇ । ತೇ ದೇವೇ ಆಪಣ ಚಿ ಕರಾವೇ।
ತೇಥೇ ವೇಗಳೇ ಭಾವಾವೇ । ನಲಗೆ ಕದಾ ॥೨೩॥

ದೋನೀ ಸಾಮರ್ಥ್ಯೇ ಏಕ ಹೋತಾ । ಕಾಳಾಸ ನಾಟೋಪೆ ಸರ್ವಥಾ ।
ತೇಥೇ ಇತರಾಚೀ ಕೋಣ ಕಥಾ । ಕೀಟಕನ್ಯಾಯೆೇ ॥೨೪॥

ಮ್ಹಣೋನ ನಿಃಕಾಮ ಭಜನ । ವರೀ ವಿಶೇಷ ಬ್ರಹ್ಮಜ್ಞಾನ ।
ತಯಾಸ ತುಳಿತಾ ತ್ರಿಭುವನ । ಉಣೇ ವಾಟೆ ॥೨೫॥

ಯಾವ ಆತ್ಮಜ್ಞಾನಿ ಸಗುಣದ ಉಪಾಸನೆಯನ್ನು ಬಿಡುವನೋ ಅವನು ನಿಜವಾದ ಜ್ಞಾನಿಯಾಗಿದ್ದರೂ ಅಯಶಸ್ವೀ ಅನಿಸುವನು. ಆದ್ದರಿಂದ ಸಗುಣದ ಉಪಾಸನೆಯನ್ನು ಎಂದೂ ಬಿಡಬಾರದು. ಆತ್ಮಜ್ಞಾನಿ ಪುರುಷನು ಅತಿಮಾನವೀ ಪುರುಷನಾಗುವದು ನಿಜವಿದೆ. ಆದರೆ ಅವನ ಜ್ಞಾನ ಪಕ್ವವಾಗುವವರೆಗೆ ಅವನ ಮಾನವತಾ ಅವನನ್ನು ಬಿಡುವದಿಲ್ಲ. ಅಲ್ಲದೆ ಜ್ಞಾನ ಪಕ್ವವಾದ ನಂತರ ಒಳಗೆ ಅತಿಮಾನವ ಇದ್ದುಕೊಂಡು ಹೊರಗೆ ಮಾತ್ರ ಅವನು ಅಗದೀ ಸಾದಾ ಮನುಷ್ಯರ ಭೂಮಿಕೆಯಲ್ಲಿ ವರ್ತಿಸುವನು. ಅಂದರೆ ಮಾನವತೆಯಿಂದಲೇ ವರ್ತಿಸುವನು. ಅಂದರೆ ಎರಡೂ ಅವಸ್ಥೆಯ ನಡುವೆ ಅವನಿಗೆ ಮಾನವತೆಯನ್ನು ಬಿಟ್ಟುಕೊಟ್ಟರೆ ನಡೆಯುವದಿಲ್ಲ. ಅತ್ಯಂತ ನಿಷ್ಕಾಮ ಉಪಾಸನಾ ಇದು ಮಾನವತೆಯ ಸರ್ವೋತ್ತಮ ಸ್ವರೂಪವಿರುವದು. ಕೆಲವರು ಜ್ಞಾನದ ಉಪಾಸನೆಯನ್ನು ಮಾಡಬಹುದು. ಕೆಲವರು ಕಲೆಯನ್ನು, ಕೆಲವರು ವಿದ್ಯೆಯನ್ನು, ಕೆಲವರು ವಿಜ್ಞಾನದ ವಿಷಯವನ್ನು, ಕೆಲವರು ಭಗವಂತನ ಉಪಾಸನೆಯನ್ನು ಮಾಡಬಹುದು. ಆದರೆ ಇವೆಲ್ಲ ನಿಷ್ಕಾಮವಾದರೆ ಅದು ಶುದ್ಧ ಮತ್ತು ಪವಿತ್ರವಾಗುವದು. ಇದರಲ್ಲಿ ವಿಲಕ್ಷಣ ಸಾಮರ್ಥ್ಯವಿರುವದು. ಜಗತ್ತಿನ ಉದ್ಧಾರಕ್ಕಾಗಿ ಅದು ಅತ್ಯರತ ಉಪಯೋಗ ಬೀಳುವದು. ಯಾವ ಜ್ಞಾನಿಯು ಉಪಾಸನೆಯನ್ನು ಮಾಡುವದಿಲ್ಲವೋ ಅವನಲ್ಲಿ ಯಾವ ಸಾಮರ್ಥ್ಯವೂ ಇರುವದಿಲ್ಲ. ಆದ್ದರಿಂದ ಇಂಥವನು ಅಯಶಸ್ವೀ ಎನಿಸುವನು. (೧೮) ನಿಷ್ಕಾಮ ಉಪಾಸನಾ ಮತ್ತು ನಿರ್ಭೇಳ(ಶುದ್ಧ, ನಿರ್ಮಲ) ಬ್ರಹ್ಮಜ್ಞಾನ ಇವುಗಳ ಜೋಡಿ ಕೂಡಿ ನಡೆದರೆ ಬಹಳ ದೊಡ್ಡಕಾರ್ಯ ಘಟಿಸುವದು ಎಂದು ಶ್ರೀಸಮರ್ಥರು ಹೇಳುವರು ಅತ್ಯಂತ ನಿಷ್ಕಾಮ ಬುದ್ಧಿಯಿಂದ ಮಾಡಿದಂಥ ಅಂದರೆ ಯಾವುದೇ ಅಪೇಕ್ಷೆಯನ್ನು ಇಟ್ಟುಕೊಳ್ಳದೆ ಮಾಡಿದಂಥ ಭಗವಂತ ಉಪಾಸನೆಯು ಸರ್ವಶ್ರೇಷ್ಠವಿರುವದು. ಇದನ್ನು ಸರಿಗಟ್ಟುವಂಥ ವಸ್ತುವು ಈ ವಿಶ್ವದಲ್ಲಿ ಬೇರೆ ಯಾವುದೂ ಇಲ್ಲ. ಬಲವಂತವಾದ ದೊಡ್ಡ ಆತ್ಮಬಲ ಇಲ್ಲದ ಹೊರತು ಯಾವ ಮನುಷ್ಯನಿಗೂ ಇಂಥ ಉಪಾಸನೆಯನ್ನು ಮಾಡಲಿಕ್ಕೆ ಶಕ್ಯವಾಗಲಾರದು. (೧೯) ಏನಾದರೂ ಅಪೇಕ್ಷೆ ಇಟ್ಟುಕೊಂಡು ಉಪಾಸನೆಯನ್ನು ಮಾಡಿದರೆ ಅವನ ಅಪೇಕ್ಷೆಯು ಮಾತ್ರ ಪೂರ್ಣವಾಗುವದು ಯಾವ ಅಪೇಕ್ಷೆಯನ್ನೂ ಇಟ್ಟುಕೊಳ್ಳದೆ ಉಪಾಸನೆಯನ್ನು ಮಾಡಿದ್ದಾದರೆ ಪ್ರತ್ಯಕ್ಷ ಭಗವಂತನ ಭೆಟ್ಟಿಯಾಗುವದು. ಭಗವಂತನು ನಿಮ್ಮವನಾಗುವನು. ಯಾವದೊಂದು ಅಪೇಕ್ಷೆಯು [ಕಾಮನೆಯು] ಪೂರ್ಣವಾಗುವದು. ಮತ್ತು ಸಾಕ್ಷಾತ್ ಭಗವಂತನ ಪ್ರಾಪ್ತಿ ಆಗುವದು. ಇವೆರಡರಲ್ಲಿ ಅಗದೀ ಬಹಳ ದೊಡ್ಡ ಅಂತರವಿರುವದು. (೨೦) ಭಗವಂತನ ಹತ್ತಿರ ನಮ್ಮ ಸರ್ವ ಅಪೇಕ್ಷೆಗಳನ್ನು–ವಾಸನೆಯನ್ನು ಮತ್ತು ಬೇಡಿಕೆಗಳನ್ನೆಲ್ಲ ಪೂರ್ಣ ಮಾಡುವ ಸಾಮರ್ಥ್ಯವಿರುವದು. ಆದರೆ ನಾವು ಕೇವಲ ವಾಸನಾ ತೃಪ್ತಿ ಅಥವಾ ಕಾಮನಾಪೂರ್ತಿಯ ಬೇಡಿಕೆಗಳನ್ನು ಬೇಡಹತ್ತಿದರೆ ಆಗ ಭಗವಂತನು ನಮ್ಮಿಂದ ದೂರ ಸರಿಯುವನು. ಕೈಗೆ ಸಿಗದಷ್ಟು ದೂರ ಹೋಗುವನು. ಇಷ್ಟೇ ಏಕೆ, ನಾವು ಭಗವಂತನನ್ನೇ ಕಳೆದುಕೊಳ್ಳುವೆವು. ಆದ್ದರಿಂದ ಅತ್ಯಂತ ನಿಷ್ಕಾಮ ಬುದ್ಧಿಯಿಂದ ನಾವು ಭಗವಂತನ ಉಪಾಸನೆಯನ್ನು ಮಾಡಬೇಕು. [೨೧] ನಿಷ್ಕಾಮ ಬುದ್ಧಿಯಿಂದ ಮಾಡಿದ ಉಪಾಸನಾದ ಫಲ ಒಂದು ವಿಚಿತ್ರ ಮಜೇದಾರ ಪ್ರಕಾರದ್ದಿರುವದು. ನಿಷ್ಕಾಮ ಉಪಾಸಕನಲ್ಲಿ ಅಸೀಮ ಸಾಮರ್ಥ್ಯ ಉಂಟಾಗುವದು. [ಸಂಗ್ರಹವಾಗುವದು]. ಈ ಸಾಮರ್ಥ್ಯದಿಂದ ಬೇಕಾದ್ದನ್ನು ಮಾಡಬಹುದು. ಅಂದಮೇಲೆ ಕಾಮನಾ ಪೂರ್ತಿಗೆ ಎಷ್ಟು ಕಿಮ್ಮತ್ತು ಉಳಿಯುವದಿಲ್ಲ. [೨೨] ಇಂತಹದು ಆಗ ಬೇಕು ಅನ್ನುವ ಸಂಕಲ್ಪ ನಿಷ್ಕಾಮ ಭಕ್ತನ ಮನದಲ್ಲಿ ಬಂದ ಕೂಡಲೇ ಭಗವಂತನು ಸ್ವತಃ ತಾನೇ ಅದನ್ನು ಪೂರ್ಣಗೊಳಿಸುವನು. ಇದಕ್ಕಾಗಿ ಭಕ್ತನು ಭಗವಂತನಿಗೆ ಪ್ರತ್ಯೇಕವಾದ ಪ್ರಾರ್ಥನೆಯನ್ನು ಮಾಡಿಕೊಳ್ಳುವ ಕಾರಣವಿರುವದಿಲ್ಲ. [೨೩] ಆತ್ಮಜ್ಞಾನ ಮತ್ತು ಭಗವಂತನ ಭಕ್ತಿ ಇವೆರಡೂ ಶಕ್ತಿ ಸಾಮರ್ಥ್ಯಗಳು ಒಂದೇ ಕಡೆಗೆ ಬಂದ ಮೇಲೆ ಕೇಳುವದೇನು? ಆ ಜ್ಞಾನಿ ಭಕ್ತನು ಕಾಲನಿಗೂ ಸಹ ಮೀರಿದವನಾಗುವನು. ಇನ್ನುಳಿದವರ ಪಾಡೇನು? ಇತರರಿಗಂತೂ ಇವನು ಭಾರಿ ಮೀರಿದವನೆನಿಸುವನು. ಇದರಲ್ಲಿ ಆಶ್ಚರ್ಯಪಡುವಂಥದೇನೂ ಇರುವದಿಲ್ಲ. ಇತರರೆಲ್ಲ ಇವನ ಮುಂದೆ ಕ್ಷುದ್ರಕೀಟವೆನಿಸುವರು. [೨೪] ಆದ್ದರಿಂದ ಅತ್ಯಂತ ನಿಷ್ಕಾಮ ಉಪಾಸನಾ ಮತ್ತು ಅದರ ಜೊತೆಗೆ ಬ್ರಹ್ಮಜ್ಞಾನ ಇಂಥ ಯೋಗ ಬಂದ ಮೇಲೆ ಇದರ ತುಲನಾ ಮಾಡಿ ನೋಡಿದರೆ ತ್ರಿಭುವನವೂ ಸಹ ಕಡಿಮೆ ಅನಿಸುವದು. [೨೫]

ಯೇಥೇ ಬುದ್ಧೀಚಾ ಪ್ರಕಾಶ। ಆಣೀಕ ನ ಚಢೆ ವಿಶೇಷ।
ಪ್ರತಾಪ ಕೀರ್ತೀ ಆಣೀ ಯಶ। ನಿರಂತರ ॥೨೬॥

ನಿರೂಪಣಾಚಾ ವಿಚಾರ। ಆಣೀ ಹರಿಕಥೇಚಾ ಗಜರ।
ತೇಥೇ ಹೋತೀ ತತ್ಪರ। ಪ್ರಾಣೀಮಾತ್ರ ॥೨೭॥

ಜೇಥೇ ಭ್ರಷ್ಟಾಕಾರ ಘಡೇನಾ। ತೋ ಪರಮಾರ್ಥ ಹೀ ದಡೇನಾ।
ಸಮಾಧಾನ ವಿಘಡೇನಾ। ನಿಶ್ಚಯಾಚೇ ॥೨೮॥

ಸಾರಾಸಾರ ವಿಚಾರ ಕರಣೇ। ನ್ಯಾಯೆ ಅನ್ಯಾಯೆ ಅಖಂಡ ಪಾಹಾಣೇ।
ಬುದ್ಧಿ ಭಗವಂತಾಚೇ ದೇಣೇ। ಪಾಲಟೇನಾ ॥೨೯॥

ಭಕ್ತ ಭಗವಂತೀ ಅನನ್ಯ। ತ್ಯಾಸೀ ಬುದ್ಧಿ ದೇತೋ ಆಪಣ।
ಯೆದರ್ಥೀ ಭಗವದ್ವಚನ। ಸಾವಧ ಏಕಾ ॥೩೦॥

॥ ಶ್ಲೋಕಾರ್ಧ ॥ ದದಾಮಿ ಬುದ್ಧಿಯೋಗಂ ತಂ।
ಯೇನ ಮಾಮುಪಯಾಂತಿ ತೇ ॥ ॥ ಭ. ಗೀ. ॥

ಮ್ಹಣೌನ ಸಗುಣ ಭಜನ। ವರೀ ವಿಶೇಷ ಬ್ರಹ್ಮಜ್ಞಾನ।
ಪ್ರತ್ಯಯಾಚೇ ಸಮಾಧಾನ। ದುರ್ಲಭ ಜಗೀ ॥೩೧॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
"ಸಗುಣ ಭಜನ ನಿರೂಪಣ" ನಾಮ ಸಮಾಸ ಸಪ್ತಮ ॥

ಜ್ಞಾನಿಭಕ್ತರ ಮಹಿಮಾ ಇದಕ್ಕಿಂತ ಹೆಚ್ಚಿಗೆ ತಿಳಿಯಲು ತಿಳಿಸಿ ಹೇಳಲು ಬುದ್ಧಿಗೆ ಶಕ್ತಿಯಿಲ್ಲ. ಸಾಧ್ಯವಿಲ್ಲ. ಇವನ ಪ್ರತಾಪ, ಕೀರ್ತಿ ಮತ್ತು ಯಶ ಇವು ನಿರಂತರವೂ ಹೆಚ್ಚುತ್ತ ಹೋಗುವವು. [೨೬] ಯಾವ ಜ್ಞಾನಿಭಕ್ತನಲ್ಲಿ ಆತ್ಮಜ್ಞಾನದ ವಿವೇಚನೆ ಇರುವದೋ ಮತ್ತು ಅದರ ಸಂಗಡ ಭಗವಂತನ ಉಪಾಸನೆಯ ಶೋಭೆ, ಡಾವುಡೌಲು, ಮೊದಲಾದ ಸುಥಾಟುಗಳಿದ್ದರೆ ಅಲ್ಲಿ ಬಹಳಷ್ಟು ಜನ ಸಮುದಾಯ ಆಕರ್ಷಿತರಾಗಿ ಬರುವರು. ಮತ್ತು ಆ ಸತ್ಪುರುಷನೊಂದಿಗೆ ಲೀನರಾಗುವರು.[೨೭]ಯಾವ ಸತ್ಪುರುಷರಲ್ಲಿ ಭ್ರಷ್ಟಾಕಾರ, ಭ್ರಷ್ಟಾಚಾರಗಳು ಘಟಿಸುವದಿಲ್ಲವೋ ಮತ್ತು ಯಾರ ವರ್ತನೆ ಅತ್ಯಂತ ನೀತಿ, ಧರ್ಮ, ಭಕ್ತಿಗಳಿಗೆ ಅನುಸರಿಸಿ ಇರುವದೋ ಅವರ ಪರಮಾರ್ಥ ಎಂದಿಗೂ ಮುಚ್ಚಿ ಅಥವಾ ಅಡಗಿ ಇರುವದಿಲ್ಲ. ಮತ್ತು ಲೋಕ ಸಂಗ್ರಹವಾದರೂ ಸಹ ಅವರ ದೃಢ ಸುನಿಶ್ಚಯದ ಆತ್ಮಜ್ಞಾನದಿಂದಾಗಿ ಅವರ ಸಮಾಧಾನ ಎಂದಿಗೂ ಭಂಗವಾಗುವದಿಲ್ಲ. [೨೮] ಈ ಕಾರಣಗಳ ಸಲುವಾಗಿ ಸಾಧಕರು ಯಾವಾಗಲೂ ಸಾರಾಸಾರ ವಿಚಾರವನ್ನು ವಿವೇಕ ಪೂರ್ಣರಾಗಿ ಮಾಡಬೇಕು. ನ್ಯಾಯವಾದದ್ದು ಯಾವುದು? ಅನ್ಯಾಯವಾದದ್ದು ಯಾವುದು? ಇದನ್ನು ಅಖಂಡವಾಗಿ ಶೋಧ ಮಾಡಬೇಕು. ಅಂದರೇನೇ ಆತ್ಮಜ್ಞಾನದ ಕಡೆಗೆ ಬುದ್ಧಿ ಒಲಿಯುವದು. ಆದರೆ ಇದೆಲ್ಲ ಭಗವಂತನ ಕೃಪೆಯನ್ನು ಅವಲಂಬಿಸಿದೆ. ಒಮ್ಮೆ ಇದು ಅವನ ಕೃಪೆಯಿಂದ ಪ್ರಾಪ್ತವಾಯಿತೆಂದರೆ ಅದರಲ್ಲಿ ಬದಲಾವಣೆ ಆಗುವದಿಲ್ಲ. [೨೯] ಭಗವಂತನೊಂದಿಗೆ ಯಾವ ಭಕ್ತನು ಅನನ್ಯ ಶರಣಾಗತನಾಗುವನೋ ಅವನಿಗೆ ಭಗವಂತನು ಸ್ವತಃ ಮಾರ್ಗದರ್ಶನ ಮಾಡುವನು. ಅವನಿಗೆ ಯೋಗ್ಯ ಬುದ್ಧಿ ಅಂದರೆ ಸಾರಾಸಾರ ವಿಚಾರ ಮಾಡುವಲ್ಲಿ ದಾರಿ ತೋರಿಸುವನು. ಇದರ ಬಗ್ಗೆ ಭಗವಂತನ ವಚನವಿರುವದು ಅದನ್ನುಕೇಳಿರಿ.ಶ್ಲೋಕಃ–ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ॥ಭ.ಗೀ.॥ ಶ್ಲೋಕಾರ್ಥ:– ನಾನು ಅವರಿಗೆ ಬುದ್ಧಿಯನ್ನು ಕೊಡುವೆನು. ಅದರ ಯೋಗದಿಂದ ಅವರು ನನ್ನನ್ನು ಬಂದು ಕೂಡುವರು. [೩೦] ಆದ್ದರಿಂದ ಭಗವಂತನ ಸಗುಣ ಉಪಾಸನಾ ಮತ್ತು ಅದರಲ್ಲಿಯ ವಿಶೇಷವಾದದ್ದೆಂದರೆ ಬ್ರಹ್ಮಜ್ಞಾನ ಮತ್ತು ಇದರ ಮೂಲಕ ಪ್ರಾಪ್ತವಾಗುವ ಸ್ವಾನುಭವದ ನಿಜವಾದ ಸಮಾಧಾನ ಇವುಗಳು ಜಗತ್ತಿನಲ್ಲಿ ನಿಜವಾಗಿಯೂ ಬಹಳ ದುರ್ಲಭವಿರುವವು. [೩೧]

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಹತ್ತನೆಯ ದಶಕದ
"ಸಗುಣ ಭಜನ ನಿರೂಪಣ"ವೆಂಬ ಏಳನೆಯ ಸಮಾಸವು ಮುಗಿದುದು.

● ●

ದಶಕ ದಶಮು : ಸಮಾಸ ಅಷ್ಟಮು : ಪ್ರಚಿತ ನಿರೂಪಣ

॥ಶ್ರೀರಾಮ॥ ಐಕಾ ಪ್ರಚಿತೀಚೀ ಲಕ್ಷಣೇ । ಪ್ರಚಿತ ಪಾಹೆಲ ತೇ ಶಾಹಾಣೇ ।
ಯೇರ ವೇಡೆ ದೈನ್ಯವಾಣೆ । ಪ್ರಚಿತೀವಿಣ ॥೧॥

ನಾನಾ ರತ್ನೇ ನಾನಾ ನಾಣೀ । ಪರೀಕ್ಷೂನ ನ ಘೇತಾ ಹಾನೀ ।
ಪ್ರಚಿತ ನ ಯೆತಾ ನಿರೂಪಣೀ । ಬೈಸೋ ಚ ನಯೆ ॥೨॥

# ದಶಕ ೧೦. ಸಮಾಸ ೮. ಪ್ರಚೀತಿ ನಿರೂಪಣ (ನುಡಿ ೩೪)

ಪ್ರಪಂಚದಲ್ಲಿಯಾಗಲೀ ಅಥವಾ ಪರಮಾರ್ಥದಲ್ಲಿಯಾಗಲೀ ಜ್ಞಾನದ ಲಕ್ಷಣಗಳು ಒಂದೇ ತರಹದ್ದಾಗಿರುವವು. ಜ್ಞಾನವು ನಿಜವಾದದ್ದು ಇರಬೇಕು. ನಿಶ್ಚಿತವಾದದ್ದು ಇರಬೇಕು. ಸ್ವತಃದ ಅನುಭವದ್ದಾಗಿರಬೇಕು. ಮತ್ತು ಸರ್ವರಿಗೂ ಒಂದೇ ಸಮನಾದದ್ದು ಇರಬೇಕು. ಪ್ರಪಂಚದಲ್ಲಿಯ ಘಟನೆಗಳು, ವಸ್ತು ವ ಅನುಭವ ಇವು ಇಂದ್ರಿಯ ಗೋಚರ ಇರುವವು. ಇದರಿಂದಾಗಿ ಪ್ರಪಂಚದಲ್ಲಿಯ ಜ್ಞಾನದ ನಿಜತ್ವ (ಖರೇತನ)ವನ್ನು ಪ್ರತ್ಯಕ್ಷ ಪುರಾವೆಗಳಿಂದ ಕೂಡಲೇ ತಪಾಸ ಮಾಡಿ ಖಾತ್ರಿ ಮಾಡಿಕೊಳ್ಳಲಿಕ್ಕೆ ಬರುವದು. ವಸ್ತುವಿನ ವರ್ತನದೊಂದಿಗೆ (ಇರುವಿಕೆಗೆ) ಜ್ಞಾನದ ಸಂವಾದ ಇದ್ದದ್ದಾದರೆ ಮಾತ್ರ ಅದು ನಿಜವಾದ ಜ್ಞಾನವೆನಿಸುವದು. ಅವನು ಹಾಗೆ ಅನ್ನುತ್ತಾನೆ-ಇವನು ಹೀಗೆ ಅನ್ನುತ್ತಾನೆ.ಆದ್ದರಿಂದ ಜ್ಞಾನವು ನಿಜವಾದದ್ದಲ್ಲ.ಇಂಥ ಗೊಳ್ಳು ವ್ಯವಹಾರವು ಪ್ರಪಂಚದಲ್ಲಿ ಮಾತ್ರ ನಡೆಯುವದು. ಪರಮಾರ್ಥದಲ್ಲಿಯ ಘಟನೆಗಳು ವಸ್ತು ಮತ್ತು ಅನುಭವ ಇವು ಅತೀಂದ್ರಿಯ [ಇಂದ್ರಿಯಗಳಿಗೆ ಗೋಚರಿಸವಂಥವು] ಇರುವವು. ಇದರಲ್ಲಿಯ ಜ್ಞಾನದ ಖರೇತನವು ಇಂದ್ರಿಯಗಳ ಪ್ರತ್ಯಕ್ಷ ಪುರಾವೆಯಿಂದ ಸಿದ್ಧವಾಗುವದಿಲ್ಲ. ಇತರ ಸಿದ್ಧ ಸಾಧಕರ ಅನುಭವವೂ ಇಲ್ಲಿ ಕೆಲಸಕ್ಕೆ ಬರುವದಿಲ್ಲ. ಇಷ್ಟೇ ಅಲ್ಲ,ಪ್ರತ್ಯಕ್ಷ ಸದ್ಗುರುವಿನ ಅನುಭವ ಸಹಿತ ಸಮಾಧಾನಕರವಾಗುವಂತೆ ಪೂರ್ಣ ಉಪಯೋಗ ಬೀಳುವದಿಲ್ಲ ಇಲ್ಲಿ ಕೇವಲ ಸ್ವತಃದ ಅನುಭವವೇ ಜ್ಞಾನದ ಖರೇತನಕ್ಕೆ ನಿಃಸಂದೇಹತೆಯನ್ನು ಉಂಟು ಮಾಡುವದು.ಶ್ರೀಸಮರ್ಥರ ಆಗ್ರಹದ ಹೇಳಿಕೆ ಏನಂದರೆ ಈ ಆತ್ಮಪ್ರವೃತ್ತಿಯ ದೃಷ್ಟಿಕೋನವು ವ್ಯವಹಾರದಲ್ಲಿ ಹೇಗೆ ಇರುವದೋ ಹಾಗೆಯೇ ಪರಮಾರ್ಥದಲ್ಲಿ ಸಹ ಮೂಲಭೂತವಿರುವದು. ನಿತ್ಯದ ವ್ಯವಹಾರದಲ್ಲಿಯ ಅನೇಕ ಉದಾಹರಣೆಗಳನ್ನು ಕೊಟ್ಟು ಈ ಪ್ರತೀತಿಯ (ಅನುಭವ) ಸರ್ವರೀತಿಯ ಮಹತ್ವವನ್ನು ಇವರು ಇಲ್ಲಿ ಸ್ಪಷ್ಟವಾಗಿ ಮಂಡಿಸಿದ್ದಾರೆ. ಆದರೆ ಪರಮಾರ್ಥದಲ್ಲಿ ಪ್ರತೀತಿ ಬರುವದು ಅಂದರೆ ಯಾವುದು ಏನನ್ನು ಸಾಧಿಸುವದು, ಇದನ್ನು ಹೇಳುವದು ಅವಶ್ಯವಿರುವದು. ಮುಂಡಕ ಉಪನಿಷತ್ತಿನ ಎರಡನೆಯ ಅಧ್ಯಾಯದಲ್ಲಿ ಪ್ರಸಿದ್ಧವಿರುವ ಮಂತ್ರ ಹೀಗಿರುವದು:-। "ಭಿದ್ಯತೆ ಹೃದಯಗ್ರಂಥಿಃ ಛಿದ್ಯಂತೆ ಸರ್ವ ಸಂಶಯಾಃ। ಕ್ಷೀಯಂತೆ ಚಾಸ್ಯ ಕರ್ಮಾಣಿ ತಸ್ಮಿನ್‌ದೃಷ್ಟೆ ಪರಾವರೇ"। ಅರ್ಥ:- "ಶ್ರೇಷ್ಠರಲ್ಲಿ ಮತ್ತು ಕನಿಷ್ಠರಲ್ಲಿ ಸಮಾನವಾಗಿ ವ್ಯಾಪಿಸಿ ಇರುವಂಥ ಬ್ರಹ್ಮನ ದರ್ಶನವಾದ ಕೂಡಲೇ ಹೃದಯದಲ್ಲಿ ವಾಸಮಾಡಿದಂಥ ಅವಿದ್ಯಾ ಮತ್ತು ಇದರಿಂದ ಉತ್ಪನ್ನವಾಗುವ ವಾಸನಾ ಸಮುದಾಯವು ನಾಶ ಹೊಂದುವದು. ಇದರಂತೆ ಮನಸ್ಸಿನಲ್ಲಿಯ ಸರ್ವ ಸಂದೇಹಗಳು ನಷ್ಟವಾಗುವವು. ಇದರ ಹೊರತಾಗಿ ಪಾಪದ ಖಂಡನವಾಗಿ ಸರ್ವ ಕರ್ಮಗಳು ಕ್ಷಯ ಹೊಂದುವವು" ಈ ಸಮಾಸದಲ್ಲಿ ಆತ್ಮಸಾಕ್ಷಾತ್ಕಾರ ಆದಾಗ ಯಾವ ಮಾತಿನ ಬಗ್ಗೆ ಪ್ರತ್ಯಕ್ಷ ಪ್ರತೀತಿ ಬರುವದು.? ಈ ಬಗ್ಗೆ ಇಲ್ಲಿ ಬಹಳ ಸುಂದರವಾದ ವರ್ಣನೆ ಇರುವದು.

## ದಶಕ ೧೦ : ಸಮಾಸ ೮ : ಪ್ರಚೀತಿ ನಿರೂಪಣ [ನುಡಿ ೩೪]

ಪ್ರಥಮದಲ್ಲಿ ವ್ಯವಹಾರದಲ್ಲಿಯ ಅನೇಕ ಉದಾಹರಣೆಗಳನ್ನು ಕೊಟ್ಟು ಪ್ರತೀತಿಯ [ಅನುಭವದ] ಮಹತ್ವವನ್ನು ನಿಮಗೆ ಬಿಂಬಿಸಿಕೊಡುವರು:- ಈಗ ಪ್ರಚೀತಿ [ಪ್ರತೀತಿ, ಅನುಭವ]ಯ ಲಕ್ಷಣ ಹೇಳುವೆ ಕೇಳಿರಿ. ಯಾರು ಪ್ರಚೀತಿ ನೋಡುವರೋ ತಿಳಿಯುವರೋ ಯಾರು ಸ್ವಾನುಭವ ಪಡೆಯುವರೋ ಅವರೆಲ್ಲ ನಿಜವಾದ ಬುದ್ಧಿವಂತರು ಪ್ರತೀತಿ ಪಡೆಯದ ಇತರ ಜನರು ಹುಚ್ಚ ಮತ್ತು ಕನಿಷ್ಠ ಪ್ರತಿಯವರೆಂದು ತಿಳಿಯಬೇಕು. [೧] ನಾಣ್ಯಗಳು ಮತ್ತು ರತ್ನಗಳು ಅನೇಕ ಪ್ರಕಾರದವು ಇರುವವು. ಇವುಗಳನ್ನು ಪರೀಕ್ಷೆ ಮಾಡದೇ ತೆಗೆದುಕೊಂಡರಾದರೆ ಹಾನಿಯಾಗುವದು. ಯಾವ ನಿರೂಪಣ ಪ್ರವಚನಗಳಲ್ಲಿ ಸ್ವಾನುಭವದ ಪ್ರಕಾಶ ಇರುವದಿಲ್ಲವೋ ಅಥವಾ ಅನುಭವ ಪಡೆಯುವ ಮಾರ್ಗ ಯಾವುದರಲ್ಲಿ ಇರುವದಿಲ್ಲವೋ ಅಂಥ ನಿರೂಪಣಾದಿಗಳನ್ನು ಕೇಳಲಿಕ್ಕೆ ಕೂಡಲೇ ಬಾರದು. ಯಾಕೆಂದರೆ ಅಲ್ಲಿ ಕೇವಲ ಶಬ್ದಛಲವಿರುವದು. [೨]

ತುರಂಗ ಶಸ್ತ್ರ ದವುೂನ ಪಾಹಿಲೇ । ಬರೇ ಪಾಹಾತಾ ಪ್ರಚಿತೀಸ ಆಲೇ ।
ತರೀ ಮಗ ಪಾಹಿಜೆ ಘೇತಲೇ । ಜಾಣತೇ ಪುರುಷೀ ॥೩॥

ಬೀಜ ಉಗವೇಲಸೇ ಪಾಹಾವೇ । ತರೀ ಮಗ ದ್ರವ್ಯ ಘಾಲೂನ ಘ್ಯಾವೇ ।
ಪ್ರಚಿತ ಆಲಿಯಾ ಏಕಾವೇ । ನಿರೂಪಣ ॥೪॥

ದೇಹೀ ಆರೋಗ್ಯತಾ ಜಾಲೀ । ಏಸೀ ಜನಾ ಪ್ರಚಿತ ಆಲೀ ।
ತರೀ ಮಗ ಆಗತ್ಯ ಘೇತಲೀ । ಪಾಹಿಜೆ ಮಾತ್ರಾ ॥೫॥

ಪ್ರಚಿತೀವಿಣ ಔಷಧ ಘೇಣೇ । ತರೀ ಮಗ ಧಡ ಚಿ ವಿಘಡಣೇ ।
ಅನುಮಾನೇ ಜೇ ಕಾರ್ಯ ಕರಣೇ । ತೇ ಚಿ ಮೂರ್ಖಪಣ ॥೬॥

ಪ್ರಚಿತೀಸ ನಾಹೀ ಆಲೇ । ಆಣೀ ಸುವರ್ಣ ಕರವಿಲೇ ।
ತರೀ ಮಗ ಜಾಣಾವೇ ಠಕಿಲೇ । ದೇಖತ ದೇಖತಾ ॥೭॥

ಶೋಧೂನ ಪಾಹಿಲ್ಯಾವಿಣ । ಕಾಹೀತರೀ ಯೇಕ ಕಾರಣ ।
ಹೋಣಾರ ನಾಹೀ ನಿರ್ವಾಣ । ಪ್ರಾಣಾಸ ಘಡೆ ॥೮॥

ಮ್ಹಣೋನೀ ಅನುಮಾನಾಚೇ ಕಾರ್ಯ । ಭಲ್ಯಾನೀ ಕದಾಪಿ ಕರೂ ನಯೆ ।
ಉಪಾಯು ಪಾಹಾತಾ ಅಪಾಯೆ । ನೇಮಸ್ತ ಘಡೇ ॥೯॥

ಪಾಣ್ಯಾತೀಲ ಮ್ಹೈಸೀಚೀ ಸಾಟೀ । ಕರಣೇ ಹೇ ಬುದ್ಧೀಚ ಖೋಟೀ ।
ಶೋಧಿಲ್ಯಾವಿಣ ಹಿಂಪುಟೀ । ಹೋಣೇ ಘಡೆ ॥೧೦॥

ವಿಶ್ವಾಸೇ ಘರ ಘೇತಲೇ । ಏಸೇ ಕಿತೀ ನಾಹೀ ಏಕಿಲೇ ।
ಮ್ಹೆಂದೇ ಮ್ಹೆಂದಾವೇ ಕೇಲೇ । ಪರೀ ತೇ ಶೋಧಿಲೇ ಪಾಹಿಜೆ ॥೧೧॥

ಶೋಧಲ್ಯಾವಿಣ ಅನ್ನವಸ್ತ್ರ ಘೇಣೇ । ತೇಣೇ ಪ್ರಾಣಾಸ ಮುಕಣೇ ।
ಲಟಿಕ್ಯಾಚಾ ವಿಶ್ವಾಸ ಧರಣೇ । ಹೇ ಚಿ ಮೂರ್ಖಪಣ ॥೧೨॥

ಸಂಗತೀ ಚೋರಾಚೀ ಧರಿತಾ । ಘಾತ ಹೋಈಲ ತತ್ವತಾ ।
ಠಕು ಪಿಂಢರೂ ಶೋಧಿತಾ । ಠಾಈ ಪಡೆ ॥೧೩॥

ಗೈರಸಾಳ ತಾಮುಗಿರಿ । ಕೋಣೇ ನವೀ ಮುದ್ರಾ ಕರೀ ।
ನಾನಾ ಕಪಟ ಪರೋಪರೀ । ಶೋಧೂನ ಪಾಹಾವೇ ॥೧೪॥

ದಿವಾಳಖೋರಾಚಾ ಮಾಂಡ । ಪಾಹಾತಾ ವೈಭವ ದಿಸೆ ಉದಂಡ ।
ಪರೀ ತೇ ಅವಘೇ ಥೋತಾಂಡ । ಭಂಡ ಪುಢೇ ॥೧೫॥

ಕುದುರೆಯನ್ನು ಹತ್ತಿ ಓಡಿಸಿ ನೋಡಬೇಕು, ಶಸ್ತ್ರ ಪ್ರಯೋಗಿಸಿ ತಿಳಿಯಬೇಕು. ಹೀಗೆ ಮಾಡಿನೋಡಿ ಉತ್ತಮ ಪ್ರತಿಯವು ಇದ್ದರೆ ಮಾತ್ರ ತಿಳಿದವರು ಕೊಳ್ಳಬೇಕು. [೩] ಬೀಜಗಳು ಚನ್ನಾಗಿ ಹುಟ್ಟುವವು ಅನ್ನುವದನ್ನು ಖಾತ್ರಿ ಮಾಡಿಕೊಂಡು ಆಮೇಲೆ ಹಣಕೊಟ್ಟು ಕೊಳ್ಳಬೇಕು. ನಿರೂಪಣಕಾರ [ಪ್ರವಚನ ಮಾಡುವವ] ಏನನ್ನು ಹೇಳುವನೋ ಅದರ ಪ್ರತ್ಯಕ್ಷ ಅನುಭವ [ಖಾತ್ರಿ] ಬರುವಂತಿದ್ದರೆ ಆ ನಿರೂಪಣ ಕೇಳಬೇಕು. [೪] ಶರೀರಕ್ಕಾದ ರೋಗ ಇಂಥ ಒಂದು ಮಾತ್ರೆಯಿಂದ ಗುಣವಾಗುವದು ಅನ್ನುವ ಖಾತ್ರಿ ಇತರ ರೋಗಿ ಜನರಿಗೂ ಬಂದದ್ದು ಕೇಳಿ ಖಾತ್ರಿ ಮಾಡಿಕೊಂಡ ಮೇಲೆ ಆ ಮಾತ್ರೆಯನ್ನು ನೀವು ಅಗತ್ಯವಾಗಿ ತೆಗೆದುಕೊಳ್ಳಬೇಕು. (ಉಪಯೋಗ ಮಾಡಬೇಕು.) [೫] ಯಾವ ಔಷಧದ ಅನುಭವವನ್ನು ಯಾರೂ ಪಡೆದು ಮಾಡಿಕೊಂಡಿಲ್ಲವೋ ಅಂಥದನ್ನು ನೀವು ತೆಗೆದುಕೊಂಡರೆ ನೆಟ್ಟಗಿದ್ದ ಪ್ರಕೃತಿ ಸಹ ಹದಗೆಡುವ ಸಂಭವ ಇರುವದು. ಏನಾದರೂ ಕಲ್ಪನೆಯನ್ನು ಮಾಡಿಕೊಂಡು ಸುಮ್ಮನೆ ಅನುಮಾನ ಪಡುತ್ತಾ ಕಾರ್ಯ ಮಾಡಿದರೆ ಅದು ಮೂರ್ಖತನದ್ದಾಗುವದು. [೬] ಹಲಕಾ [ಕಡಿಮೆ ಪ್ರತಿಯ] ಧಾತುವಿನಿಂದ ಬಂಗಾರ ಮಾಡುವ ವಿದ್ಯೆಗೆ ಕಿಮಿಯಾ ಅನ್ನುವರು ತಿಳಿಯಿರಿ:- ಒಬ್ಬ ಕಿಮಿಯಾಗಾರನು[ಬಂಗಾರ ಮಾಡುವವನು] ಕಬ್ಬಿಣದಿಂದ ಬಂಗಾರ ಮಾಡಿಕೊಡುವೆನು ಎಂದು ಅಂದನು. ಅವನ ವಿದ್ಯೆಯ ಪ್ರತ್ಯಕ್ಷ ಅನುಭವ ಇಲ್ಲದೆ ಅವನಿಗೆ ಬಂಗಾರ ಮಾಡಿಕೊಡಲಿಕ್ಕೆ ಹೇಳಿದೆವು. [ಅದಕ್ಕೆ ಹಣದ ಖರ್ಚು ಮಾಡಿದೆವು]. ಆದರೆ ಅವನು ನೋಡ ನೋಡುವಷ್ಟರಲ್ಲಿ ನಿಮ್ಮನ್ನು ಫಸಾಯಿಸುವನು. [೭] ಆರಂಭದಲ್ಲಿಯೇ ಚನ್ನಾಗಿ ಚೌಕಸಿ ಮಾಡದ ಹೊರತು ಯಾವುದಾದರೊಂದು ಕೆಲಸವನ್ನು ಮಾಡಿಕೊಡುವದಾಗಿ ಹೊಣೆಹೊತ್ತರೆ ಆ ಕೆಲಸ ಸುರಳೀತವಾಗಲಾರದು. ಇಷ್ಟೇ ಅಲ್ಲ ನಿಮ್ಮ ಜೀವಕ್ಕೂ ಧೋಕಾ ಆಗುವ ಸಂಭವ ಇರುವದು. [೮] ಆದ್ದರಿಂದ ಬುದ್ಧಿವಂತರಾದವರು ಪ್ರತ್ಯಕ್ಷ ಅನುಭವ ಇಲ್ಲದೇ ಕೇವಲ ಕಲ್ಪನೆಯನ್ನು ಮಾಡಿ ಅನುಮಾನದಿಂದ ಯಾವುದೇ ಕಾರ್ಯವನ್ನೂ ಮಾಡಬಾರದು. ಮಾಡಿದ್ದಾದರೆ ಉಪಾಯವಾಗುವ ಬದಲು ಖಾತ್ರಿಯಿಂದ ಅಪಾಯವಾಗುವದು. [೯] ತಿಳಿಯಿರಿ, ಒಂದು ಎಮ್ಮೆ ನೀರಿನಲ್ಲಿ ಮುಳುಗಿದೆ, ಅದು ಹೇಗಿರುವದು, ಎಂತಿರುವದು ಎನ್ನುವದನ್ನು ಸರಿಯಾಗಿ ನೋಡದೇ ಆ ಎಮ್ಮೆಯ ಖರೀದಿ ಚೀಟಿ ಮಾಡಿಸುವದು ಅಂದರೆ ಬುದ್ಧಿಗೇಡಿತನದ ಕೆಲಸವಾಗುವದು. ಅದನ್ನು ಸರಿಯಾಗಿ ನೋಡದ್ದರಿಂದ ಹಿಂದುಗಡೆ ಪಶ್ಚಾತ್ತಾಪ ಪಡಬೇಕಾಗುವದು.[೧೦] ಸ್ವತಃ ನೋಡದೇ ಎರಡನೆಯವರ ಭರವಸೆಯ ಮೇಲಿಂದ ಮನೆ ಖರೀದಿಸುವ ಕೆಲಸವನ್ನು ಯಾರಾದರೂ ಮಾಡಿದ್ದನ್ನು ಕೇಳಿರುವಿರಾ? ಲಬಾಡ ಜನರು ದುರಾಸೆಯಿಂದ ಮೋಸದ ಪ್ರಯತ್ನ ಮಾಡತಕ್ಕವರೇ ಆದ್ದರಿಂದ ನೀವು ಚನ್ನಾಗಿ ತಪಾಸ ಮಾಡಿ ಯಾವುದೇ ಕಾರ್ಯವನ್ನು ಮಾಡಬೇಕು. [೧೧] ಚನ್ನಾಗಿ ಚೌಕಸಿ ಮಾಡದೇ [ಅನ್ನಧಾನ್ಯ + ವಸ್ತ್ರ] ಅನ್ನವಸ್ತ್ರ ಖರೀದಿಸಿದರೆ ಜೀವ ಕಳೆದುಕೊಳ್ಳುವ ಪ್ರಸಂಗ ಬರಬಹುದಾಗಿದೆ. ಸುಳ್ಳುಗಾರನ ಮೇಲೆ ವಿಶ್ವಾಸವಿಡುವದೆಂದರೆ ಮೂರ್ಖತನವೇ ಸರಿ. [೧೨] ಚೋರರ ಗೆಳೆತನ ಮಾಡಿದರೆ ಅಥವಾ ಸಂಗತಿ ಮಾಡಿದರೆ ಖಾತ್ರಿಯಿಂದ ನಿಮಗೆ ಅಪಾಯ ಒದಗುವದು. ಚನ್ನಾಗಿ ತಪಾಸ ಮಾಡಿದರೆ ಆಗ ಚೋರ, ಠಕ್ಕ, ಲಬಾಡ, ಲುಚ್ಚಾ ಜನರು ಯಾರೆಂಬುದು ಅಲ್ಲಿಯೇ ಹೊರಬರುವದು. [೧೩] ಖೊಟ್ಟಿ ನಾಣ್ಯಗಳನ್ನು ತಯಾರಿಸುವವರು, ತಾಮ್ರದಿಂದ ಬಂಗಾರ ಮಾಡಿ ಕೊಡುವೆವು ಎಂದು ಹೇಳುವವರು, ಸರಕಾರದ ನಜರ ತಪ್ಪಿಸಿ ನಾಣ್ಯಗಳನ್ನು ಮಾಡುವವರು. ಹೀಗೆ ನಾನಾ ಪ್ರಕಾರದ ಲಬಾಡಗಿರಿ ಕಾರ್ಯ ಜಗತ್ತಿನಲ್ಲಿ ನಡೆಯುವದು ನಾವು ಇದನ್ನು ತಿಳಿದುಕೊಂಡು ಜಾಗ್ರತರಾಗಿ ಇರಬೇಕು. [೧೪] ಒಬ್ಬ ದಿವಾಳಿ ಖೋರನು ಜನರಲ್ಲಿ ಬಡಾಯಿ ಕೊಚ್ಚಿಕೊಳ್ಳುತ್ತಿರುತ್ತಾನೆ, ತನ್ನಲ್ಲಿ ಬಹಳಷ್ಟು ಧನ ದೌಲತ್ತು ಇದೆ ಅನ್ನುವ ಭಾವವನ್ನು ತೋರಿಸುತ್ತಾನೆ. ಆದರೆ ಇದು ಅವನ ಒಣಪ್ರತಿಷ್ಠೆಯ ಲಬಾಡಗಿರಿಯ ಬಡಬಡಿಕೆಯಾಗಿರುವದು. ಮುಂದೆ ಇವನ ಫಜೀತಿಯಾಗುವದು. [ಅವನಲ್ಲಿ ವಿಶ್ವಾಸವಿಟ್ಟು ನೀವು ಗೆಳೆತನ ಮಾಡಿದರೆ ನೀವೂ ತೊಂದರೆಗೊಳಗಾಗುವ ಪ್ರಸಂಗ ಬರುವದು] [೧೫]

ಜೈಸೇ ಪ್ರಚಿತೀವೀಣ ಜ್ಞಾನ । ತೇಥೇ ನಾಹೀ ಸಮಾಧಾನ ।
ಕರೂನ ಬಹುತಾಚಾ ಅನುಮಾನ । ಅನ್ಹೀತ ಜಾಲೇ ॥೧೬॥

ಮಂತ್ರ ಯಂತ್ರ ಉಪದೇಸಿಲೇ । ನೇಣತೇ ಪ್ರಾಣೀ ತೇ ಗೋವಿಲೇ ।
ಜೈಸೇ ಝುಜಾಂಕೂನ ಮಾರಿಲೇ । ದುಖಣಾಈತ ॥೧೭॥

ವೈದ್ಯ ಪಾಹಿಲಾ ಪರೀ ಕಚ್ಚಾ । ತರೀ ಪ್ರಾಣ ಗೇಲಾ ಪೋರಾಚಾ ।
ಯೇಥೇ ಉಪಾಯೊ ದುಸರ್‍ಯಾಚಾ । ಕಾಯೆ ಚಾಲೆ ॥೧೮॥

ದುಃಖೇ ಅಂತರೀ ಝಿಜೆ । ಆಣೀ ವೈದ್ಯ ಪುಸತಾ ಲಾಜೆ ।
ತರೀಚ ಮಗ ತ್ಯಾಸೀ ಸಾಜೆ । ಆತ್ಮಹತ್ಯಾರೇಪಣ ॥೧೯॥

ಜಾಣತ್ಯಾವರೀ ಗರ್ವ ಕೇಲಾ । ತರೀ ನೇಣತ್ಯಾಕರಿತಾ ಬುಡಾಲಾ ।
ಯೇಥೇ ಕೋಣಾಚಾ ಘಾತ ಜಾಲಾ । ಬರೇ ಪಾಹಾ ॥೨೦॥

ಪಾಪಾಚೀ ಖಂಡಣಾ ಜಾಲೀ । ಜನ್ಮಯಾತನಾ ಚುಕಲೀ ।
ಐಸೀ ಸ್ವಯೇ ಪ್ರಚಿತ ಆಲೀ । ಮ್ಹಣಿಜೆ ಬರೇ ॥೨೧॥

ಪರಮೇಶ್ವರಾಸ ವೋಳಖಿಲೇ । ಆಪಣ ಕೋಣಸೇ ಕಳಲೇ ।
ಆತ್ಮನಿವೇದನ ಜಾಲೇ । ಮ್ಹಣಿಜೆ ಬರೇ ॥೨೨॥

ಬ್ರಹ್ಮಾಂಡ ಕೋಣೇ ಕೇಲೇ । ಕಾಸಯಾಚೇ ಉಭಾರಲೇ ।
ಮುಖ್ಯ ಕರ್ತ್ಯಾಸ ವೋಳಖಿಲೇ । ಮ್ಹಣಿಜೆ ಬರೇ ॥೨೩॥

ಯೇಥೇ ಅನುಮಾನ ರಾಹಿಲಾ। ತರೀ ಪರಮಾರ್ಥ ಕೇಲಾ ತೋ ವಾಯಾ ಗೇಲಾ।
ಪ್ರಾಣೀ ಸಂಶಈ ಬುಡಾಲಾ । ಪ್ರಚಿತೀವಿಣ ॥೨೪॥

ಹೇ ಪರಮಾರ್ಥಾಚೇ ವರ್ಮ । ಲಟಿಕೇ ಬೋಲೇ ತೋ ಅಧಮ ।
ಲಟಿಕೇ ಮಾನೀ ತೋ ಅಧಮೋದ್ಧಮ । ಯೆಥಾರ್ಥ ಜಾಣಾವಾ ॥೨೫॥

ಯೇಥೇ ಬೋಲಣ್ಯಾಚೀ ಜಾಲೀ ಸೀಮಾ । ನೇಣತಾ ನ ಕಳೆ ಪರಮಾತ್ಮಾ ।
ಅಸತ್ಯ ನಾಹೀ ಸರ್ವೋತ್ತಮಾ । ತೂ ಜಾಣಸೀ ॥೨೬॥

ಮಾಝೊ ಉಪಾಸನೇಚಾ ಬಡಿವಾರ । ಜ್ಞಾನ ಸಾಂಗಾವೇ ಸಾಚಾರ ।
ಮಿಥ್ಯಾ ಬೋಲತಾ ಉತ್ತರ । ಪ್ರಭೂಸ ಲಾಗೇ ॥೨೭॥

ಇದರಂತೆ ಯಾವ ಮನುಷ್ಯನಿಗೆ ಸ್ವಾನುಭವವಿಲ್ಲವೋ ಅವನ ಜ್ಞಾನ ಅಂದರೆ ಒಣ ಪ್ರತಿಷ್ಠೆಯ ಬಡಬಡಿಕೆಯು.ಇಂಥವರಲ್ಲಿ ಖರೇ ಸಮಾಧಾನ ಇರುವದಿಲ್ಲ. ತಮಗೆ ಅನುಭವವಿಲ್ಲದ ಮತ್ತು ಅನುಮಾನ ಪ್ರಧಾನ ಜ್ಞಾನದಿಂದ ಇವನು ಅನೇಕ ಜನರನ್ನು ತನ್ನ ಬೆನ್ನ ಹಿಂದೆ ಕಟ್ಟಿಕೊಂಡು ಆಡ್ಡಾಡುವನು. ಇದರಿಂದ ಅವನ ಸ್ವಂತಕ್ಕೆ ಮತ್ತು ಲೋಕದ ಜನರ ಅಹಿತ ಮಾಡಲಿಕ್ಕೆ ಇವನು ಕಾರಣವಾಗುವನು. [೧೬] ಅನುಭವ ವಿಹೀನರಾದ ಜನರು ಗುರುತ್ವದಡೌಲುಮೆರೆಸುತ್ತ ಅಜ್ಞ ಜನರಿಗೆ ಮಂತ್ರ ತಂತ್ರಗಳ ಉಪದೇಶವನ್ನು ಕೊಡುವರು. ಮತ್ತು ಅವರನ್ನು ಅದರಲ್ಲಿ ತೊಡಗಿಸಿ ಅವರ ಹಾನಿಯನ್ನು ಮಾಡುವರು. ಒಬ್ಬ ಅಜಾರಿ ಇದ್ದ ಮನುಷ್ಯನನ್ನು ಮುಚ್ಚಿ ಇಡುವದು–ಔಷಧವಿಲ್ಲದೆ ಸಾಯಿಸಿ ಬಿಡುವದು ಅಥವಾ ಒಬ್ಬ ಅಜಾರಿ ಇದ್ದ ಮನುಷ್ಯನಿಗೆ [ಬಲಹೀನನನ್ನು] ಮುಸುಕು ಹಾಕಿ ಹೊಡೆದು ಒಗೆದಂತೆ ಈ ಢೋಂಗಿ ಗುರುವಿನ ಕಾರ್ಯವಿರುವದು. [೧೭] ಯಾವನೋ ಒಬ್ಬನ ಹುಡುಗನು ಬಹಳ ಅಜಾರಿ ಇರುವನು. ಅವನಿಗೆ ಔಷಧ ಕೊಡಲಿಕ್ಕೆ ಒಬ್ಬ ಅನುಭವವಿಲ್ಲದ ಮತ್ತು ಅಪಕ್ವ ವೈದ್ಯನನ್ನು ಕರೆತಂದರು. ಆದರೆ ಅವನ ಉಪಚಾರದಿಂದ ಆ ಹುಡುಗ ಉಳಿಯಲಿಲ್ಲ. ಇಂಥ ಪ್ರಸಂಗದಲ್ಲಿ ಇತರ ಜನರಿಗೆ ಏನೂ ಸಹಾಯ ಅಥವಾ ಉಪಾಯ ಮಾಡಲಿಕ್ಕೆ ಆಗುವದಿಲ್ಲ. [೧೮] ಒಬ್ಬ ಮನುಷ್ಯನು ಅಜಾರಿಯಿಂದ ಸೊರಗಿ ಸೊರಗಿ ಸಣ್ಣಾಗುತ್ತ ನಡೆದಿದ್ದಾನೆ. ಆದರೆ ವೈದ್ಯನು ಏನಾಗುತ್ತದೆಂದು ವಿಚಾರ ಮಾಡಿದಾಗ ಮನಬಿಚ್ಚಿ ತನ್ನ ವಿಕಾರದ ಬಗ್ಗೆ ಹೇಳಲಿಕ್ಕೆ ನಾಚಿಕೊಳ್ಳುತ್ತಾನೆ. ಇಂಥಲ್ಲಿ ಈ ರೋಗಿ ತನಗೆತಾನೇ ಘಾತಮಾಡಿಕೊಂಡಂತಾಗುವದೆಂದು ಹೇಳಿದರೆ ತಪ್ಪಾಗಲಾರದು. (೧೯) ಯಾವನು ತಿಳಿದವನಿರುವನೋ ಅವನನ್ನು ತುಚ್ಛೀಕರಿಸಿ ಗರ್ವದಿಂದ ಇದ್ದರೆ ತಿಳಿಯದವನದೇ ಹಾನಿಯಾಗುವದು. [ಢೋಂಗಿ ಜನರ ಉಪದೇಶದಂತೆ ನಡೆದರೆ ಅವನೇ ಕಷ್ಟದಲ್ಲಿ ಮುಳುಗುವನು]. ವ್ಯರ್ಥವಾಗಿ ಹೋಗುವನು. ಇದು ತಾನೇ ತನ್ನ ಘಾತಮಾಡಿಕೊಂಡಂತಾಗುವದು. [೨೦]ಇನ್ನು ಮೇಲೆ ಆತ್ಮಸಾಕ್ಷಾತ್ಕಾರವಾಯಿತು ಇದನ್ನು ಯಾತರ ಮೇಲಿಂದ ಗುರುತಿಸಬೇಕು? ಇದರ ಬಗ್ಗೆ ಉತ್ತಮ ವರ್ಣನೆಯಿರುವದು. (ಸಾಧಕರು ಈ ಓವಿ (ಶ್ಲೋಕ)ಯನ್ನು ಸತತ ಕಣ್ಣು ಮುಂದೆ ಇಟ್ಟುಕೊಂಡು ನಡೆಯಬೇಕು). ಪಾಪವು ಸಂಪೂರ್ಣವಾಗಿ ನಾಶಹೊಂದಿತು. ಪುನಃ ಹುಟ್ಟಿಬಂದು ಯಾತನೆ ಅನುಭವಿಸುವದು ನಿಂತಿತು. ಹೀಗೆ ಪ್ರತ್ಯಕ್ಷ ಅನುಭವ ಸ್ವತಃಕ್ಕೆ ಬಂದಿತೆಂದರೆ ಆತ್ಮಜ್ಞಾನವಾಯಿತೆಂದು ತಿಳಿಯಬೇಕು. (೨೧) ಪರಮೇಶ್ವರನ ಗುರುತು ಆಯಿತು, "ನಾನು ನಿಜವಾಗಿ ಯಾರು ಇರುವೆ" ಇದೂ ತಿಳಿಯಿತು. ಸಂಪೂರ್ಣ ಶರಣಾಗತಿ ಸಾಧಿಸಿತೆಂದರೆ ಆತ್ಮಜ್ಞಾನವಾಯಿತು ಎಂದು ತಿಳಿಯಬೇಕು. (೨೨) ಈ ವಿಶ್ವವನ್ನು ಯಾರು ಮಾಡಿದರು ಇದು ತಿಳಿಯಿತು, ಇದನ್ನು ಏತರದಿಂದ ಮಾಡಿದ್ದಾರೆ ಇದೂ ತಿಳಿಯಿತು. ನಿಜವಾದ ಕರ್ತಾ ಯಾರು? ಇದನ್ನು ಗುರುತಿಸಿ ತಿಳಿದೆನು. ಒಟ್ಟಿನಲ್ಲಿ ಇವೆಲ್ಲ ತಿಳಿದರೆ ಆತ್ಮಜ್ಞಾನವಾಯಿತು ಎಂದು ತಿಳಿಯಬೇಕು. (೨೩) ಮೇಲೆ ಹೇಳಿದ [ಮೇಲಿನ 3 ಓವಿಗಳಲ್ಲಿಯ] ಮಾತಿನ ಸಂಬಂಧವಾಗಿ ಅಗದೀ ಸೂಕ್ಷ್ಮ ಸಂಶಯ ಉಳಿದರೂ ಸಹ ಅವರಿಗೆ [ಅಲ್ಲಿಯತನಕಾ] ಮಾಡಿದ ಪರಮಾರ್ಥ ವ್ಯರ್ಥವಾಗಿ ಹೋಯಿತೆಂದು ತಿಳಿಯಬೇಕು. ಸಾಕ್ಷಾತ್ ಸ್ವರೂಪಾನುಭವ ಇರದ್ದರಿಂದ ಮನುಷ್ಯನು ಸಂಶಯದಿಂದ ಬಂಧಿತನಾಗಿರುವನು. (೨೪) ಪರಮಾರ್ಥದ ರಹಸ್ಯವು ಇದಾಗಿದೆ. ಇದು ಖೊಟ್ಟಿ ಎಂದು ಯಾರು ಅನ್ನುವರೋ ಅವರು ಅಧಮರೆಂದು ತಿಳಿಯಬೇಕು.ಈ ಮಾತು ಖೊಟ್ಟಿ ಇರುವದು ಹೀಗೆ ತಿಳಿಯುವವನು ಅಧಮರಿಗಿಂತ ಅಧಮನೆಂದು ನಿಶ್ಚಿತವಾಗಿ ನಂಬಬೇಕು. (೨೫) ಇವಕ್ಕಿಂತ ಹೆಚ್ಚಿಗೇನೂ ಹೇಳುವದಿರುವದಿಲ್ಲ. ಅಜ್ಞಾನವು ಎಲ್ಲಿಯವರೆಗೆ ಇರುವದೋ ಅಲ್ಲಿಯವರೆಗೆ ಪರಮಾತ್ಮ ಸ್ವರೂಪವು ತಿಳಿಯಲಾರದು. ಈ ಮಾತು ಎಳ್ಳಷ್ಟೂ ಸುಳ್ಳಲ್ಲ. ಸರ್ವೋತ್ತಮಾ ಪ್ರಭುರಾಮರಾಯಾ. ನಾನು ಅನ್ನುವದರ ಭಾವಾರ್ಥವನ್ನು ನೀನು ಸರಿಯಾಗಿ ತಿಳಿಯುವವನಾಗಿರುವಿ. ನೀನು ಸರ್ವಜ್ಞನೇ ಇರುವಿ.(೨೬) ನನ್ನ ಉಪಾಸನೆಯ ಶ್ರೇಷ್ಠ ವೈಶಿಷ್ಟ್ಯವೇನಿರುವದೆಂದರೆ, ನಿಮಗೆಲ್ಲರಿಗೂ ಅಗದೀ ಖರೇ ಆತ್ಮಜ್ಞಾನವನ್ನೇ ಹೇಳಬೇಕು. ನಾನು ಹೇಳಿದ್ದರಲ್ಲಿ ಸುಳ್ಳಿದ್ದರೆ–ಮೋಸದ್ದಿದ್ದರೆ ಅಥವಾ ಬಡಿವಾರದ್ದಿದ್ದರೆ ಅದರ ದೋಷಪ್ರಭುರಾಮರಾಯನಿಗೆ ಹತ್ತೀತು.[ಶ್ರೀರಾಮದಾಸರು ಸುಳ್ಳು ಖೊಟ್ಟಿ ಮಾತಾಡುವರೆಂದು ಜನ ಅನ್ನುವರು] (೨೭)

ಮ್ಹಣೋನಿ ಸತ್ಯ ಚಿ ಬೋಲಿಲೇ । ಕರ್ತ್ಯಾಸ ಪಾಹಿಜೆ ಮ್ರೊಳಖಿಲೇ ।
ಮಾಯೋದ್ಭವಾಚೇ ಶೋಧಿಲೇ । ಪಾಹಿಜೆ ಮೂಳ ॥೨೮॥

ತೇ ಚಿ ಪುಢೇ ನಿರೂಪಣ । ಬೋಲಿಲೇ ಚಿ ಬೋಲಿಲೇ ಪ್ರಮಾಣ।
ಶ್ರೋತೀ ಸಾವಧ ಅಂತಃಕರ್ಣ । ಘಾತಲೇ ಚಿ ಘಾಲಾವೇ ॥೨೯॥

ಸೂಕ್ಷ್ಮ ನಿರೂಪಣ ಲಾಗಲೇ । ತೇಥೇ ಬೋಲಿಲೇ ಚಿ ಮಾಗುತೇ ಬೋಲಿಲೇ ।
ಶ್ರೋತ್ಯಾಸ ಪಾಹಿಜೆ ಉಮಜಲೇ । ಮ್ಹಣೌನಿಯಾ ॥೩೦॥

ಪ್ರಚಿತ ಪಾಹಾತಾ ನಿಕಟ । ಉಡೋನ ಜಾತೀ ಪರಿಪಾಠ ।
ಮ್ಹಣೋನಿ ಹೇ ಖಟಪಟ । ಕರಣೇ ಲಾಗೇ ॥೩೧॥

ಪರಿಪಾಠೇ ಚಿ ಜರೀ ಬೋಲಿಲೇ । ತರೀ ಪ್ರಚಿತಸಮಾಧಾನ ಬುಡಾಲೇ ।
ಪ್ರಚಿತಸಮಾಧಾನ ರಾಖಿಲೇ । ತರೀ ಪರಿಪಾಠ ಉಡೇ ॥೩೨॥

ಐಸೀ ಸಾಂಕಡೀ ದೋಹೀಕಡೆ । ಮ್ಹಣೌನ ಬೋಲಿಲೇ ಚಿ ಬೋಲಣೇ ಘಡೆ ।
ದೋನೀ ರಾಖೋನಿಯಾ ಕೋಡೇ । ಉಕಲೂನ ದಾವ್ರೂ ॥೩೩॥

ಪರಿಪಾಠ ಆಣೀ ಪ್ರಚಿತ ಪ್ರಮಾಣ । ದೋನೀ ರಾಖೋನ ನಿರೂಪಣ ।
ಶ್ರೋತೇ ಪರಮ ವಿಚಕ್ಷಣ । ವಿವರೋತ ಪುಢೇ ॥೩೪॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
''ಪ್ರಚಿತ ನಿರೂಪಣ'' ನಾಮ ಸಮಾಸ ಅಷ್ಟಮ ॥

● ●

ಆದ್ದರಿಂದ ಸಂಪೂರ್ಣ ಸತ್ಯ ಯಾವುದಿರುವದೋ ಅದನ್ನೇ ನಾನು ನಿಮಗೆ ಹೇಳುವೆನು. ನಿಜವಾದ ಕರ್ತಾ ಯಾರು ಅನ್ನುವದನ್ನು ಸಾಧಕರು ಗುರುತಿಸಬೇಕಾಗುವದು. ತಿಳಿಯಬೇಕಾಗುವದು ಮಾಯಾ ಎಲ್ಲಿ ಮತ್ತು ಹೇಗೆ ಉತ್ಪನ್ನವಾದಳು ಇದರ ಮೂಲವನ್ನು ಶೋಧಿಸಿ ತಿಳಿಯಬೇಕು. (೨೮) ಈ ವಿಷಯ ಸೂಕ್ಷ್ಮವಿರುವದರಿಂದ ಇದು ಮನದಲ್ಲಿ ಸ್ಥಿರಗೊಳ್ಳುವದಕ್ಕೆ ಮೇಲಿಂದ ಮೇಲೆ ಈ ವಿಷಯ ತಿಳಿಸಿ ಹೇಳಬೇಕಾಗುವದು. ಇದರಂತೆಯೇ ಪರಂಪರಾ [ಸಂಪ್ರದಾಯ] ಮತ್ತು ಆತ್ಮ ಪ್ರತೀತಿ ಇವುಗಳಲ್ಲಿ ಆತ್ಮಪ್ರತೀತಿ ಶ್ರೇಷ್ಠವೆಂಬುದು ನಿಜವೇ ಇರುವದು. ಆದರೆ ಪರಂಪರಾ [ಸಂಪ್ರದಾಯ] ತ್ಯಜಿಸಿ ಬಿಡದೇ ಪ್ರತೀತಿಯ ಬಗ್ಗೆ ಮಾತನಾಡುವದು ಅತೀಅವಶ್ಯವಿರುವದು:– ಈ ವಿಷಯದ ವಿವೇಚನೆಯನ್ನು ಮುಂದೆ ಮಾಡಿದ್ದೇವೆ. ಹಿಂದೆ ಹೇಳಿದ ವಿಷಯವನ್ನೇ ಪುನಃ ವರ್ಣನೆ ಮಾಡಿದ್ದು ನಿಮಗೆ ಕಂಡು ಬರಬಹುದಾಗಿದೆ. ಶ್ರೋತಾಜನ ಒಮ್ಮೆ ಲಕ್ಷ್ಯಪೂರ್ವಕವಾಗಿ ಈ ಮೊದಲೇ ಕೇಳಿರುವಿರೆಂಬುದು ನಿಜವಿದ್ದರೂ ನೀವು ಪುನಃ ಸಾಧಕ ವೃತ್ತಿಯಿಂದ ಈಗ ಇನ್ನೊಮ್ಮೆ ಲಕ್ಷ್ಯಪೂರ್ವಕ ಕೇಳಿರಿ. (೨೯) ಈ ವಿಷಯ ಸೂಕ್ಷ್ಮವಿರುವದು. ಕೂಡಲೇ ಲಕ್ಷ್ಯಕ್ಕೆ ಬರುವದಿಲ್ಲ. ಆದ್ದರಿಂದ ಶ್ರೋತಾಜನರಿಗೆ ಈ ವಿಷಯ ಚನ್ನಾಗಿ ತಿಳಿಯಲೆಂದು ಮೊದಲು ಹೇಳಿದ್ದನ್ನೇ ಪುನಃ ಪುನಃ ಈಗ ಹೇಳಲಾಗುವದು. [೩೦] ಸೂಕ್ಷ್ಮ ಅನುಭವದಿಂದ ನೋಡಿದ್ದಾದರೆ ಪರಂಪರೆಯಿಂದ ನಡೆಯುತ್ತ ಬಂದಂಥ ಜನರ ಕಲ್ಪನೆ ಖೊಟ್ಟಿ [ಇರುವದು] ಅನಿಸುವದು. ಆದ್ದರಿಂದ ಪರಮಾರ್ಥದ ಬಗ್ಗೆ ಪುನಃ ಪುನಃ ಹೇಳುವದು ಅವಶ್ಯವಿರುವದು. [೩೧] ಇಲ್ಲಿ ಒಂದು ಪೇಚು [ತೊಡಕು, ತೊಂದರೆ, ಅಡ್ಡಿ] ಬರುವದು. ಯಾವುದೆಂದರೆ ಪರಂಪರಾನುಗತ ಲೋಕದ ಜನರ ತಿಳವಳಿಕೆಯ ಪ್ರಕಾರ ಹೇಳಬೇಕೆಂದರೆ, ಸ್ವಾನುಭವದ ಸಮಾಧಾನ ಉಳಿಯುವದಿಲ್ಲ. ಮತ್ತು ಸ್ವಾನುಭವದ ಪ್ರಕಾರ ಮಾತಾಡಬೇಕೆಂದರೆ ಪರಂಪರಾಗತಜನ ಕಲ್ಪನಾಹಾರಿ ಹೋಗದ ಹೊರತು ನಡೆಯುವದಿಲ್ಲ. [೩೨] ಹೀಗೆ ಎರಡೂ ಕಡೆಯಿಂದ ಅಡಚಣಿ ಕಾಣಿಸಿಕೊಳ್ಳುವದು. ಆದ್ದರಿಂದ ಮೊದಲು ಹೇಳಿದ್ದನ್ನೇ ಪುನಃ ಪುನಃ ಹೇಳಬೇಕಾಗುವದು. ಈಗ ಪೂರ್ವ ಪರಂಪರಾಗತ ಲೋಕಸಮಜೂತಿ [ಅಭಿಪ್ರಾಯ] ಮತ್ತು ಸ್ವಾನುಭವ ಈ ಎರಡೂದರ ಸಮನ್ವಯ ಮಾಡಿಕೊಂಡು ಈ ತೊಡಕನ್ನು ಬಿಡಿಸಿ ತೋರಿಸಿಕೊಡುವೆ. [೩೩] ಪೂರ್ವ ಪರಂಪರಾ ಮತ್ತು ಆತ್ಮ ಪ್ರತೀತಿ ಇವೆರಡರ ಸತ್ಯತೆಗೆ, ಆಧಾರಕ್ಕೆ ಭಂಗಬಾರದಂತೆ ಇದರ ವಿವೇಚನೆಯನ್ನು ಮಾಡುವೆ. ಬುದ್ಧಿವಂತರಾದ ಶ್ರೋತಾ ಜನರು ನಾನು ಹೇಳಿದ್ದರ ಬಗ್ಗೆ ಆಳವಾದ ವಿಚಾರ ಮಾಡಬೇಕು, ಮನನ ಮಾಡಬೇಕು. ಸಮಾಧಾನ ಸಾಧಿಸಬೇಕು. [೩೪]

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಹತ್ತನೆಯ ದಶಕದ
"ಪ್ರಚೀತಿ ನಿರೂಪಣ" ಎಂಬ ಹೆಸರಿನ ಎಂಟನೆಯ ಸಮಾಸವು ಮುಗಿದುದು.

● ●

**ದಶಕ ದಶಮು : ಸಮಾಸ ನವಮು : ಪುರುಷ ಪ್ರಕೃತಿ**

॥ಶ್ರೀರಾಮ॥ ಆಕಾಶೀ ವಾಯೋ ಜಾಲಾ ನಿರ್ಮಾಣ।
ತೈಸೀ ಬ್ರಹ್ಮೀ ಮೂಳಮಾಯಾ ಜಾಣ।
ತ್ಯಾ ವಾಯೋಮಧೇ ತ್ರಿಗುಣ। ಆಣೀ ಪಂಚಭೂತೇ ॥೧॥

ವಟಬೀಜೀ ಅಸೆ ವಾಡ। ಫೋಡೂನ ಪಾಹಾತಾ ನ ದಿಸೆ ಝಾಡ।
ನಾನಾ ವೃಕ್ಷಾಚೇ ಜುಂಬಾಡ। ಬೀಜಾಪಾಸೂನ ಹೋತೀ ॥೨॥

ತೈಸೀ ಬೀಜರೂಪ ಮೂಳಮಾಯಾ। ವಿಸ್ತಾರ ಜಾಲಾ ತೇಥೂನಿಯಾ।
ತಿಚೇ ಸ್ವರೂಪ ಶೋಧುನಿಯಾ। ಬರೇ ಪಾಹಾವೇ ॥೩॥

ತೇಥೇ ದೋನೀ ಭೇದ ದಿಸತೀ। ವಿವೇಕೇ ಪಾಹಾವೀ ಪ್ರಚಿತೀ।
ನಿಶ್ಚಳೀ ಜೆ ಚಂಚಳ ಸ್ಥಿತೀ। ತೋ ಚಿ ವಾಯೋ ॥೪॥

ತಯಾಮಧೇ ಜಾಣೀವಕಳಾ। ಜಗಜ್ಜ್ಯೋತೀಚಾ ಜಿವ್ಹಾಳಾ।
ವಾಯೋ ಜಾಣೀವ ಮಿಳೋನ ಮೇಳಾ। ಮೂಳಮಾಯಾ ಬೋಲಿಜೆ ॥೫॥

ಸರಿತಾ ಮ್ಹಣತಾ ಬಾಯಕೋ ಭಾಸೆ। ತೆಥೇ ಪಾಹಾತಾ ಪಾಣೀ ಚ ಅಸೆ।
ವಿವೇಕೀ ಹೋ ಸಮಜಾ ತೈಸೇ। ಮೂಳಮಾಯೆಸೀ ॥೬॥

ವಾಯೋ ಜಾಣೀವ ಜಗಜ್ಜ್ಯೋತೀ। ತಯಾಸ ಮೂಳಮಾಯಾ ಮ್ಹಣತೀ।
ಪುರುಷ ಆಣೀ ಪ್ರಕೃತೀ। ಯಾಚೇ ಚ ನಾವ ॥೭॥

ವಾಯೋಸ ಮ್ಹಣತೀ ಪ್ರಕೃತೀ। ಆಣೀ ಪುರುಷ ಮ್ಹಣತೀ ಜಗಜ್ಜ್ಯೋತೀ।
ಪುರುಷಪ್ರಕೃತೀ ಶಿವಶಕ್ತೀ। ಯಾಚೇ ಚ ನಾವ ॥೮॥

ವಾಯೋಮಧೇ ಜಾಣೀವ ವಿಶೇಷ। ತೋ ಚಿ ಪ್ರಕೃತೀಮಧೇ ಪುರುಷ।
ಯೇ ಗೋಷ್ಟೀಚಾ ವಿಶ್ವಾಸ। ಧರಿಲಾ ಪಾಹಿಜೆ ॥೯॥

ವಾಯೋ ಶಕ್ತಿ ಜಾಣೀವ ಈಶ್ವರ। ಅರ್ಧನಾರೀ ನಟೇಶ್ವರ।
ಲೋಕ ಮ್ಹಣತೀ ನಿರಂತರ। ಯೇಣೇ ಪ್ರಕಾರೇ ॥೧೦॥

## ದಶಕ ೧೦. ಸಮಾಸ ೯. ಪುರುಷ ಪ್ರಕೃತಿ (ನುಡಿ ೩೦)

ಈ ಮೊದಲೇ ಸೂಚಿಸಿದ ಪ್ರಕಾರ ಈ ಸಮಾಸದಲ್ಲಿ ಶ್ರೀ ಸಮರ್ಥರು ಹಿಂದೆ ಬಂದು ಹೋದವುಗಳಲ್ಲಿಯ ಕೆಲವು ಮಹತ್ವದ ತಾತ್ವಿಕ ವಿಷಯಗಳ ಸಾರಾಂಶ ಕೊಟ್ಟಿರುವರು. ವಿಷಯ ಚನ್ನಾಗಿ ತಿಳಿಯಲು ಇದು [ಈ ಸಮಾಸದಲ್ಲಿ ಹೇಳಿದ್ದು] ಉಪಯೋಗ ಬೀಳುವದು, ಇದರಲ್ಲಿ ಸಂಶಯವಿಲ್ಲ.

### ದಶಕ ೧೦. ಸಮಾಸ ೯. ಪುರುಷ ಪ್ರಕೃತಿ (ನುಡಿ ೩೦)

ಮೂಲ ಮಾಯಾ, ಪುರುಷ, ಪ್ರಕೃತಿ, ಜಗಜ್ಜ್ಯೋತಿ, ಶಿವಶಕ್ತಿ, ದೇವ, ದೇವತಾ ವಗೈರೆ ವಿಷಯಗಳನ್ನು ಸ್ವಲ್ಪದರಲ್ಲಿ ವಿವರಿಸಿ ಹೇಳಿದ್ದಾರೆ:– ಆಕಾಶದಲ್ಲಿ ವಾಯು ಹೇಗೆ ಉತ್ಪನ್ನವಾಯಿತೋ ಆದರಂತೆಯೇ ಪರಬ್ರಹ್ಮದಲ್ಲಿ ಮೂಲಮಾಯಾ ಉತ್ಪನ್ನವಾದಳು. ಆ ವಾಯುವಿನಲ್ಲಿ ಐದು ಭೂತಗಳು ಮತ್ತು ಮೂರು ಗುಣಗಳು ಇರುವವು. [೧] ಆಲದ ಗಿಡದ ಬೀಜ ಎಷ್ಟೊಂದು ಸಣ್ಣದಿರುವದು. ಆದರೆ ಆ ಬೀಜದಲ್ಲಿ ಆಲದ ಗಿಡದಂಥ ಪ್ರಚಂಡ ವೃಕ್ಷವು ಸೂಕ್ಷ್ಮತನದಿಂದ ವಾಸಮಾಡುವದು. ಆ ಬೀಜವನ್ನು ಒಡೆದು ನೋಡಿದರೆ ಆ ವೃಕ್ಷವು ಅದರಲ್ಲಿ ಕಾಣುವದಿಲ್ಲ. ಅನೇಕ ವೃಕ್ಷಗಳ ಸಮೂಹವು ಇಂಥ ಅತಿ ಸಣ್ಣ ಬೀಜದಿಂದಲೇ ಹೊರಬೀಳುವದು. [೨] ಮೂಲ ಮಾಯಾ ಆ ಆಲದ ಬೀಜದಂತೆ ಎಂದು ತಿಳಿಯಿರಿ. (ಈ ಉಪಮೆ ಹೋಲಿಕೆಗಾಗಿ ಮಾತ್ರ ಹೇಳಿದೆ). ಈ ಮಾಯೆಯಿಂದಲೇ ಪ್ರಚಂಡ ವೃಕ್ಷದ ಅರ್ಥಾತ್ ವಿಶ್ವರೂಪ ವೃಕ್ಷದ ವಿಸ್ತಾರವಾಗುವದು. ಈ ಮೂಲ ಮಾಯೆಯ ಸ್ವರೂಪ ಹೇಗೆ ಇರುವದು. ಇದರ ಬಗ್ಗೆ ಆಳವಾದ ವಿಚಾರದಿಂದ ಸೂಕ್ಷ್ಮವಾಗಿ ಶೋಧಿಸಿ ನೋಡಬೇಕು. [೩] ಮೂಲ ಮಾಯೆಯ ಶೋಧ ಮಾಡುವಾಗ ಅಲ್ಲಿ ಎರಡು ತತ್ವಗಳು ಕಂಡು ಬರುವವು. ಸೂಕ್ಷ್ಮ ವಿಚಾರದಿಂದ ಇದರ ಅನುಭವ ಪ್ರತ್ಯಕ್ಷವಾಗಿ ಸ್ವತಃ ಪಡೆಯಬೇಕು. ನಿಶ್ಚಲ ಸ್ವರೂಪದಲ್ಲಿ ಆಗುವ ಚಲನವಲನವೇ ವಾಯುವೆಂದು ಅನ್ನಿಸಿಕೊಳ್ಳುವದು. ಇದಕ್ಕೆ ವಾಯು ಅನ್ನುವರು. (೪) ಈ ವಾಯುವಿನಲ್ಲಿ ಶುದ್ಧ ಅರಿವು (ತಿಳುವಳಿಕೆ) ವಾಸ ಮಾಡಿರುವದು. ಈ ಅರಿವು ಅಂದರೆ ಜಗಜ್ಜ್ಯೋತಿಯು ಮೂಲ ಝುರಿಯಾಗಿದೆ. ಆದ್ದರಿಂದ ವಾಯು ಅಂದರೆ ಚಂಚಲತೆ ಮತ್ತು ಅದರಲ್ಲಿಯ ಶುದ್ಧ ಅರಿವು ಎರಡೂ ಕೂಡಿ ಮೂಲಮಾಯಾ ಇರುವದು. (೫) ಸರಿತಾ ಅಂದರೆ ನದಿ, ಸರಿತಾಶಬ್ದ ಸ್ತ್ರೀವಾಚಕವಿರುವದರಿಂದ ಇದನ್ನು ಉಚ್ಚರಿಸಿದ ಕೂಡಲೇ ಸ್ತ್ರೀಯ ಕಲ್ಪನೆಯು ಮನದಲ್ಲಿ ಬರುವದು ನಿಜವಾಗಿದೆ. ಆದರೆ ಪ್ರತ್ಯಕ್ಷ ನೋಡಿದ್ದಾದರೆ ಅದು ನೀರಾಗಿರುತ್ತದೆ. ನೀರು ಎಂದಾದರೂ ಸ್ತ್ರೀಯಾಗಲಾರದು. ಇದರಂತೆ ಮೂಲಮಾಯಾ ಈ ಶಬ್ದ ಸ್ತ್ರೀವಾಚಕ ಇದ್ದುದರಿಂದ ಇದನ್ನು ಉಚ್ಚರಿಸಿದ ಕೂಡಲೇ ಸ್ತ್ರೀಯ ಕಲ್ಪನೆಯು ಮನದಲ್ಲಿ ಬರುವದು ಖರೇ ಇರುವದು. ಆದರೆ ವಿಚಾರವಂತರು, ಬುದ್ಧಿವಂತರು ಇವಳು (ಮಾಯಾ) ಸ್ತ್ರೀ ಅಲ್ಲವೆಂಬುವದನ್ನು ನೆನಪಿನಲ್ಲಿಟ್ಟುಕೊಂಡು ಮೂಲ ಮಾಯೆಯ ಬಗ್ಗೆ ಊಹಿಸಿ (ಅಂದಾಜ ಮಾಡಿ) ತಿಳಿಯುವ ಪ್ರಯತ್ನ ಮಾಡಬೇಕು. (೬) ವಾಯು, ಅರಿವು, ಜಗಜ್ಜ್ಯೋತಿ ಇವುಗಳ ತ್ರಿಕೂಟದ ಮೇಳಕ್ಕೆ [ಸಮೂಹಕ್ಕೆ] ಮೂಲಮಾಯಾ ಅನ್ನುವರು. ಪುರುಷ ಮತ್ತು ಪ್ರಕೃತಿ ಇವೆರಡೂ ಮೂಲಮಾಯೆಯ ಪ್ರಕಾರವೇ ಇರುವವು. ಅಂದರೆ ಮೂಲಮಾಯೆಯ ಹೆಸರೇ ಇರುವವು. (೭) ವಾಯುವಿಗೆ ಪ್ರಕೃತಿ ಎಂದು ಅನ್ನುವರು. ಮತ್ತು ಜಗಜ್ಜ್ಯೋತಿಗೆ ಪುರುಷ ಎಂದು ಅನ್ನುವರು. ಪುರುಷ ಪ್ರಕೃತಿ ಇವುಗಳಿಗೆ ಶಿವಶಕ್ತಿ ಎಂದೂ ಇನ್ನೊಂದು ಹೆಸರು ಇರುವದು. [೮] ವಾಯುವಿನಲ್ಲಿರುವ ವಿಶೇಷವಾಗಿ ತೋರುವ ಶುದ್ಧ ಅರಿವು ಇದೇ ಪ್ರಕೃತಿಯಲ್ಲಿಯ ಪುರುಷವಾಗಿದೆ. ಈ ಮಾತಿನ ಬಗ್ಗೆ ದೃಢ ವಿಶ್ವಾಸ ತಾಳುವದು ಅವಶ್ಯವಿರುವದು. [೯] ವಾಯು–ಶಕ್ತಿ ಮತ್ತು ಅರಿವು-ಈಶ್ವರ ಇರುವವು. ಈ ರೀತಿಯಿಂದಲೇ ಲೋಕದ ಜನರು ಅರ್ಧನಾರೀನಟೇಶ್ವರ ಎಂದು ಯಾವಾಗಲೂ ಉಲ್ಲೇಖ ಮಾಡುವರು [ಇವನು ಜಗದಾಕಾರ ರೂಪದಿಂದ ಅನೇಕ ರೂಪಧರಿಸುವನು. ಆದ್ದರಿಂದ ಸರ್ವನಟರಲ್ಲಿ ಇವನು ಶ್ರೇಷ್ಠನು. ಅಂತೆಯೇ ಇವನಿಗೆ ನಟೇಶ್ವರ–ಅರ್ಧನಾರೀನಟೇಶ್ವರನೆಂದು ಅನ್ನುವರು]. [೧೦]

ವಾಯೋಮಧ್ಯೇ ಜಾಣೀವ ಗುಣ। ತೇ ಚಿ ಈಶ್ವರಾಚೇ ಲಕ್ಷಣ।
ತಯಾಪಾಸೂನ ತ್ರಿಗುಣ। ಪುಢೇ ಜಾಲೇ ॥೧೧॥
ತಯಾ ಗುಣಾಮಧೇ ಸತ್ವಗುಣ। ನಿಖಳ ಜಾಣೀವಲಕ್ಷಣ।
ತ್ಯಾಚಾ ದೇಹಧಾರೀ ಆಪಣ। ವಿಷ್ಣು ಜಾಲಾ ॥೧೨॥
ತ್ಯಾಚ್ಯಾ ಅಂಶೇ ಜಗ ಚಾಲೇ। ಐಸೇ ಭಗವದ್ಗೀತಾ ಬೋಲೇ।
ಗುಂತಲೇ ತೇ ಚಿ ಉಗವಲೇ। ವಿಚಾರ ಪಾಹಾತಾ ॥೧೩॥
ಯೇಕ ಜಾಣೀವ ವಾಟಲೀ। ಪ್ರಾಣೀಮಾತ್ರಾಸ ವಿಭಾಗಲೀ।
ಜಾಣಜಾಣೋ ನಾಚವಿಲೀ। ಸರ್ವತ್ರ ಕಾಯಾ ॥೧೪॥
ತಯೇಚೇ ನಾವ ಜಗಜ್ಜ್ಯೋತೀ। ಪ್ರಾಣೀಮಾತ್ರ ತಿಚೇನ ಜಿತೀ।
ಯಾಚೀ ಲೋಕಡೀ ಪ್ರಚಿತೀ। ಪ್ರತ್ಯಕ್ಷ ಪಾಹಾವೀ ॥೧೫॥
ಪಕ್ಷೀ ಶ್ವಾಪದ ಕಿಡಾ ಮುಂಗೀ। ಕೋಣೀಯೇಕ ಪ್ರಾಣೀ ಜಗೀ।
ಜಾಣೀವ ಖೇಳೆ ತ್ಯಾಚಾ ಆಂಗೀ। ನಿರಂತರ ॥೧೬॥
ಜಾಣೋನೀ ಕಾಯಾ ಪಳವಿತೀ। ತೇಣೇ ಗುಣೇ ವಾಂಚತೀ।
ದಡತೀ ಆಣಿ ಲಪತೀ। ಜಾಣಜಾಣೋ ॥೧೭॥
ಅವಘ್ಯಾ ಜಗಾಸ ವಾಂಚವಿತೀ। ಮ್ಹಣೋನಿ ನಾಮೇ ಜಗಜ್ಜ್ಯೋತೀ।
ತೇ ಗೇಲಿಯಾ ಪ್ರಾಣೀ ಮರತೀ। ಜೇಥೀಲ ತೇಥೇ ॥೧೮॥
ಮುಳೀಂಚಿ ಜಾಣೀವೇಚಾ ವಿಕಾರ। ಪುಢೇ ಜಾಲಾ ವಿಸ್ತಾರ।
ಜೈಸೆ ಉದಕಾಚೆ ತುಷಾರ। ಅನಂತ ರೇಣು ॥೧೯॥
ತೈಸೆ ದೇವ ದೇವತಾ ದೇವತೇ ಭೂತೇ। ಮಿಥ್ಯಾ ಮ್ಹಣೋ ನಯೇ ತ್ಯಾತೇ।
ಆಪುಲಾಲ್ಯಾ ಸಾಮರ್ಥ್ಯೇ ತೇ। ಸೃಷ್ಟೀಮಧೇ ಫಿರತೀ ॥೨೦॥
ಸದಾ ವಿಚರತೀ ವಾಯೋಸ್ವರೂಪೇ। ಸ್ವಇಚ್ಛಾ ಪಾಲಟಿತೀ ರೂಪೇ।
ಅಜ್ಞಾನ ಪ್ರಾಣೀ ಭ್ರಮೇ ಸಂಕಲ್ಪೇ। ತ್ಯಾಸ ಬಾಧಿತೀ ॥೨೧॥
ಜ್ಞಾತ್ಯಾಸ ಸಂಕಲ್ಪ ಚಿ ಅಸೇನಾ। ಮ್ಹಣೋನ ತ್ಯಾಚೇನ ಬಾಧವೇನಾ।
ಯಾಕಾರಣೇ ಆತ್ಮಜ್ಞಾನಾ। ಅಭ್ಯಾಸಾವೇ ॥೨೨॥
ಅಭ್ಯಾಸಿಲಿಯಾ ಆತ್ಮಜ್ಞಾನ। ಸರ್ವ ಕರ್ಮಾಸ ಹೋಯೆ ಖಂಡಣ।
ಹೇ ಲೋಕಡೀ ಪ್ರಚಿತ ಪ್ರಮಾಣ। ಸಂದೇಹ ನಾಹೀ ॥೨೩॥
ಜ್ಞಾನೇವಿಣ ಕರ್ಮ ವಿಘಡೇ। ಹೇ ತೋ ಕದಾಪಿ ನ ಘಡೆ।
ಸದ್ಗುರುವೀಣ ಜ್ಞಾನ ಜೋಡೆ। ಹೇ ಹಿ ಅಘಟಿತ ॥೨೪॥

ವಾಯುವಿನಲ್ಲಿರುವ ಅರಿವಿನ ಗುಣವೇ ಈಶ್ವರನ ಲಕ್ಷಣವೆಂದು ತಿಳಿಯಬೇಕು. ಇವನಿಂದಲೇ[ಈಶ್ವರನಿಂದ] ನಂತರ ಸತ್ವ, ರಜ, ತಮ, ಈ ಮೂರು ಗುಣಗಳು ನಿರ್ಮಾಣವಾದವು. [೧೧] ಇವುಗಳ ಪೈಕಿ ಸತ್ವಗುಣ ಇದು ಶುದ್ಧ ಅರಿವಿನ ರೂಪವಿರುವದು. ಈ ಗುಣದ ದೇಹಧಾರಣ ಮಾಡಿದವನಿಗೆ ವಿಷ್ಣು ಎಂದು ಅನ್ನುವರು.[೧೨] ಇವನ ಅಂಶದಿಂದ ಜಗತ್ತು ನಡೆಯುವದೆಂದು ಭಗವದ್ಗೀತೆಯು ಹೇಳುವದು. [ವಿಷ್ಟಭ್ಯಾಂ...ಏಕಾಂಶೇನ ಸ್ಥಿತೋ ಜಗತ್ ೧೦-೪೨] ದೃಶ್ಯದಲ್ಲಿ ತೊಡಕಿಕೊಂಡದ್ದರಿಂದ ಶುದ್ಧ ಅರಿವಿನ ಈ ಅಂಶ ಮುಚ್ಚಿ ಹೋಗಿರುವದು. ಯಾರು ಸೂಕ್ಷ್ಮ ವಿಚಾರ ಮಾಡಿ ನೋಡುವರೋ ಅವರಿಗೆ ಮಾತ್ರ ಇದು ಅನುಭವಕ್ಕೆ ಬರುವದು. ಇವರೇ ಮುಕ್ತರು. [೧೩] ಯಾವ ಅರಿವಿನಿಂದ ವಿಷ್ಣು ಆಗಿರುವನೋ ಈ ವಿಷ್ಣುವಿನ ಅಂಶವು ಸರ್ವ ಪ್ರಾಣಿಗಳ ಅಂಗದಲ್ಲಿ ವಿಭಾಗಗೊಂಡಿದೆ. ಇದರ ಪ್ರೇರಣೆಯಿಂದಲೇ ಪ್ರತಿಯೊಂದು ಪ್ರಾಣಿಯೂ ತಿಳುವಳಿಕೆಯಿಂದ ಕೂಡಿದ್ದಾಗಿದ್ದು ತಮ್ಮ ದೇಹದ ಸಂರಕ್ಷಣೆಯನ್ನು ತಾವೇ ತಿಳಿದುಕೊಂಡು ಮಾಡಿಕೊಳ್ಳುವವು. [೧೪] ಇದಕ್ಕೆ ಜಗತ್‌ಜ್ಯೋತಿ ಅನ್ನುವರು. ಪ್ರತಿಯೊಂದು ಪ್ರಾಣಿ ಇದರಿಂದಾಗಿಯೇ ಜೀವಂತ ಇರುವದು. ಇದಂತೂ ಪ್ರತ್ಯಕ್ಷವಾದ ಅನುಭವವಿರುವದು. [೧೫] ಈ ಜಗತ್ತಿನಲ್ಲಿ ಪಕ್ಷಿ, ದನಕರುಗಳು [ಜನಾವರಗಳು] ಹುಳ, ಇರುವೆ ಇತ್ಯಾದಿ ಪ್ರಾಣಿಗಳು ಯಾವ ಯಾವವು ಕಂಡು ಬರುವವೋ ಅವೆಲ್ಲವುಗಳ ಅಂಗಗಳಲ್ಲಿ ಅರಿವು ನಿರಂತರ ಸಂಚರಿಸುವದು. [೧೬] ಯಾವುದೋ ಒಂದು ಕಠಿಣ ಪ್ರಸಂಗ ಬಂದರೆ ಆಗ ಆ ಪ್ರಾಣಿ ಅರಿವಿನಿಂದಾಗಿ ಅದನ್ನು [ಆ ಪ್ರಸಂಗವನ್ನು] ಗುರುತಿಸುವದು. ಅಲ್ಲಿಂದ ಓಡಿಹೋಗುವದು, ಮತ್ತು ತನ್ನ ಜೀವವನ್ನು ಉಳಿಸಿಕೊಳ್ಳುವದು. ಈ ಅರಿವಿನಿಂದಲೇ ಒಮ್ಮೆ ಅಡಗಿ ಕೂಡುವದು ಅಥವಾ ಕಣ್ಣಿಗೆ ಕಾಣದಂತೆ ಮರೆಯಾಗಿ ಹೋಗಿ ಕೂಡುವದು. [೧೭] ಈ ಪ್ರಕಾರದಿಂದ ಎಲ್ಲ ಪ್ರಾಣಿಗಳಲ್ಲಿರುವ ಅರಿವು ಎಲ್ಲ ಜಗತ್ತನ್ನೂ ಕಾಪಾಡುವದು. ಆದ್ದರಿಂದಲೇ ಇದಕ್ಕೆ ಜಗತ್‌ಜ್ಯೋತಿ ಅನ್ನುವರು. ಇದು ಶರೀರದಿಂದ ಹೊರಬಿದ್ದು ಹೋದ ಕೂಡಲೇ ಪ್ರಾಣಿ ಅಲ್ಲಿಂದಲ್ಲಿಯೇ [ಇದರಲ್ಲಿಯೇ] ಸತ್ತು ಬೀಳುವದು.(೧೮) ಮೂಲ ಮಾಯೆಯಲ್ಲಿ ಇರುವಂಥ ಅರಿವು ಅನಂತ ಮತ್ತು ಅಪಾರವಿರುವದು. ಇವೆಲ್ಲಿಯೇ ಒದಲ ಆಯಿತು. (ಫರಕ-ಅಂತರ) ಮತ್ತು ಇವರವೇ ಮುಂದೆ ಆದದ್ದು ಅಂದರೆ ಈ ವಿಶ್ವದ ಎಲ್ಲ ವಿಸ್ತಾರವೂ ಆಯಿತು. ನೀರು ಮೂಲದಲ್ಲಿ ಒಂದೇ ಇರುವದು. ಆದರೆ ಇದರೊಳಗಿಂದ ಅನಂತ ಹನಿಗಳು ನಿರ್ಮಾಣವಾಗುವವು. ಇವು ಅತೀ ಸೂಕ್ಷ್ಮ ಅಥವಾ ಸಣ್ಣವಿರುವವು. ಇದರಂತೆ ಮೂಲ ಮಾಯೆಯಲ್ಲಿಯ ಒಂದೇ ಒಂದು ವಿಶಾಲವಾದ ಅರಿವಿನೊಳಗಿಂದ ಅನಂತ ಸಣ್ಣ ಸಣ್ಣ ಅಂಶಗಳು ನಿರ್ಮಾಣವಾದವು. ಮತ್ತು ಜಗತ್ತಿನಲ್ಲಿ ಪ್ರಾಣಿಗಳ ರೂಪದಿಂದ ಪಸರಿಸಿದವು. (೧೯) ಆದ್ದರಿಂದ ದೇವ, ದೇವತಾ, ದೈವತ ಮತ್ತು ಭೂತ ಇವುಗಳನ್ನು ಖೊಟ್ಟಿ ಎಂದು ತಿಳಿಯಬಾರದು. ಇವಾದರೂ ಅರಿವಿನ ಭಿನ್ನ ಪ್ರಕಾರಗಳಿರುವವು. ಯಾರಿಗೆ ಯಾವ ಪ್ರಮಾಣದಲ್ಲಿ ಅರಿವು ಇರುವದೋ ಆ ಪ್ರಮಾಣದಂತೆ ಅವುಗಳಿಗೆ ಸಾಮರ್ಥ್ಯವಿರುತ್ತದೆ. ಆದ್ದರಿಂದ ಮೇಲೆಹೇಳಿದ ದೇವ ದೇವತಾದಿ ಯೋನಿಗಳು ತಮ್ಮ ಸಾಮರ್ಥ್ಯದ ಪ್ರಮಾಣದಿಂದ ವಿಶ್ವದಲ್ಲಿ ಸಂಚರಿಸುತ್ತಿರುವವು. (೨೦) ಇವು ಯಾವಾಗಲೂ ವಾಯುರೂಪದಿಂದ ಸಂಚರಿಸುವವು. ಮನಸ್ಸಿಗೆ ಬಂದಂಥ ವೇಷ ಧರಿಸುವವು. ದೇಹಧಾರಣ ಮಾಡುವವು. ಅಜ್ಞಾನಿ ಮನುಷ್ಯರಿಗೆ ಅವರ ಭ್ರಮದ ಮೂಲಕ ಅಥವಾ ಸಂಕಲ್ಪ (ಕಲ್ಪನಾ)ದಿಂದ ಇವು ಕಾಡುವವು. (೨೧) ಜ್ಞಾನಿ ಪುರುಷನಿಗೆ ಎಷ್ಟೂ ಸಂಕಲ್ಪವಿರುವದಿಲ್ಲ-ಭ್ರಮದ ಕಲ್ಪನೆ ಇರುವದಿಲ್ಲವಾದ್ದರಿಂದ ಇವನಿಗೆ ಅವು ಕಾಡಲಿಕ್ಕೆ ಸಾಧ್ಯವಿಲ್ಲ. ಆದ್ದರಿಂದ ಆತ್ಮಜ್ಞಾನದ ಅಭ್ಯಾಸವನ್ನು ಮಾಡಬೇಕು. [೨೨] ಆತ್ಮಜ್ಞಾನದ ಅಭ್ಯಾಸ ಮಾಡಿದ್ದಾದರೆ ಎಲ್ಲಕರ್ಮಗಳನಾಶವಾಗುವದು. ಇದು ನಾನು ಸ್ವತಃ ಅನುಭವಿಸಿದ ಸತ್ಯಸಂಗತಿಯಾಗಿದೆ. ಇದರಲ್ಲಿ ಎಳ್ಳಷ್ಟೂ ಸಹ ಸಂಶಯವಿಲ್ಲ. [೨೩] ಜ್ಞಾನದ ವಿನಃ ಕರ್ಮದ ಬಂಧನ ಎಂದೂ ಹರಿಯುವದಿಲ್ಲ. ಇದು ಅಗದೀ ಸತ್ಯವಾದ ಮಾತು. ಇದನ್ನು ನಂಬಿರಿ. ಕರ್ಮಬಂಧನ ಜ್ಞಾನವಿಲ್ಲದೇ ಹರಿಯಿತೆಂದು ಅನ್ನುವ ಘಟನೆ ಎಂದೂ ಘಟಿಸಲಾರದು. ಇದರಂತೆ ಸದ್ಗುರುವಿಲ್ಲದೇ ಜ್ಞಾನವಾಯಿತೆಂದು ಹೇಳುವದು ಮೂರ್ಖತನದ್ದಾಗುವದು. ಸದ್ಗುರುವಿಲ್ಲದೇ ಜ್ಞಾನ ಘಡಾಯಿಸುವದಿಲ್ಲ. ಅನ್ನುವದನ್ನೂ ನಂಬಿರಿ. [೨೪]

ಮ್ಹಣೋನ ಸದ್ಗುರು ಕರಾವಾ । ಸತ಼್ಂಗ ಶೋಧೂನ ಧರಾವಾ ।
ತತ್ವವಿಚಾರ ವಿವರಾವಾ । ಅಂತರ್ಯಾಮೀ ॥೨೫॥

ತತ್ವೀ ತತ್ವ ನಿರಸೋನ ಜಾತಾ । ಆಪಲಾ ಆಪಣ ಚಿ ತತ್ವತಾ ।
ಅನನ್ಯಭಾವೇ ಸಾರ್ಥಕತಾ । ಸಹಜ ಚಿ ಜಾಲೀ ॥೨೬॥

ವಿಚಾರ ನ ಕರಿತಾ ಜೇ ಜೇ ಕೇಲೇ । ತೇ ತೇ ವಾಉಗೇ ವೆರ್ಥ ಗೇಲೇ ।
ಮ್ಹಣೋನಿ ವಿಚಾರೀ ಪ್ರವರ್ತಲೇ । ಪಾಹಿಜೆ ಆಧೀ ॥೨೭॥

ವಿಚಾರ ಪಾಹೇಲ ತೋ ಪುರುಷು । ವಿಚಾರ ನ ಪಾಹೇ ತೋ ಪಶು ।
ಐಸೀ ವಚನೇ ಸರ್ವೇಷು । ಠಾಈ ಠಾಈ ಬೋಲಿಲಾ ॥೨೮॥

ಸಿದ್ಧಾಂತ ಸಾಧಾಯಾಕಾರಣೇ । ಪೂರ್ವಪಕ್ಷ ಲಾಗೇ ಉಡವಣೇ ।
ಪರಂತು ಸಾಧಕಾ ನಿರೂಪಣೇ । ಸಾಕ್ಷಾತ್ಕಾರ ॥೨೯॥

ಶ್ರವಣ ಮನನ ನಿಜಧ್ಯಾಸ । ಪ್ರಚಿತೀನೇ ಬಾಣತಾ ವಿಶ್ವಾಸ ।
ರೋಕಡಾ ಸಾಕ್ಷಾತ್ಕಾರ ಸಾಯಾಸ । ಕರಣೇ ಚಿ ನಲಗೆ ॥೩೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
"ಪುರುಷ ಪ್ರಕೃತಿ ನಾಮ" ಸಮಾಸ ನವಮ ॥

ಆದ್ದರಿಂದ ಯಾರಿಗೆ ಆತ್ಮಜ್ಞಾನ ಬೇಕಾಗಿದೆಯೋ ಅವರು ಸದ್ಗುರುವಿಗೆ ಶರಣಾಗಬೇಕು, ಸದ್ಗುರುವನ್ನು ಮಾಡಿಕೊಳ್ಳಬೇಕು. ಚನ್ನಾಗಿ ಶೋಧಿಸಿ ಚೌಕಶಿ ಮಾಡಿ ಸಾಧು ಸಂತರ ಸಂಗತಿಯನ್ನು ಮಾಡಬೇಕು. ಮತ್ತು ನಿಮ್ಮ ಅಂತರಂಗದಲ್ಲಿ ತತ್ವದ ವಿಚಾರ ಮಾಡಬೇಕು. [೨೫] ತತ್ವದ ಸೂಕ್ಷ್ಮ ವಿಚಾರ ಮಾಡುತ್ತಾ ಮಾಡುತ್ತಾ ಹೋಗಬೇಕು. ಆಗ ಒಂದು ತತ್ವದಿಂದ ಎರಡನೆಯ ತತ್ವದ್ದು. ಎರಡನೆಯದರಿಂದ ಮೂರನೆಯ ತತ್ವದ್ದು ಹೀಗೆ ತತ್ವಗಳ ನಿರಾಸ [ಪರಿಹಾರ] ಆಗುವದು. ಎಲ್ಲ ತತ್ವಗಳ ನಿರಸನವಾಯಿತೆಂದರೆ,ಆಗ ಯಾವುದು ಶಿಲುಕು ಉಳಿಯುವದೋ ಅದು ನಿಮ್ಮ ನಿಜವಾದ [ಖರೇ] ಶುದ್ಧ ಸ್ವರೂಪವಿರುವದು. ಆ ಶುದ್ಧ ಸ್ವರೂಪದೊಂದಿಗೆ ನಾವು ತದಾಕಾರ ಸಾಧಿಸಿಕೊಂಡೆವೆಂದರೆ ಆತ್ಮಸಾಕ್ಷಾತ್ಕಾರವಾಗುವದು. ಇದರಿಂದ ತನ್ನಷ್ಟಕ್ಕೆ ತಾನೇ ಸಾರ್ಥಕತನ ದೊರೆಯುವದು.(೨೬)ಚನ್ನಾಗಿ ವಿಚಾರ ಮಾಡದೆ ಇದ್ದರೆ ಮಾಡಿದ ಸಾಧನೆಯು ವಿನಾಕಾರಣ ವ್ಯರ್ಥವಾಗುವದು. ಆದ್ದರಿಂದ ಸಾಧಕರು ಮೊದಲು ಚನ್ನಾಗಿ ಮಾಡಲಿಕ್ಕೆ ಆರಂಭ ಮಾಡಬೇಕು.[೨೭] ಯಾರು ಚನ್ನಾಗಿ ವಿಚಾರ ಮಾಡುವರೋ ಅವರೇ ನಿಜವಾದ ಮನುಷ್ಯರು.ಯಾರು ವಿಚಾರ ಮಾಡುವದಿಲ್ಲವೋ ಅವರು ಶುದ್ಧ ಪಶುಗಳೆಂದು ತಿಳಿಯಬೇಕು. ಇಂಥ ಅರ್ಥದ ವಚನಗಳನ್ನು ಭಗವಂತನು ಆಗಾಗ್ಗೆ [ಭಗವದ್ಗೀತೆಯಲ್ಲಿ] ಅಲ್ಲಲ್ಲಿ ಹೇಳಿದ್ದಾನೆ. [೨೮] ಸಿದ್ಧಾಂತ ಏನಿರುವದೆಂದು ಸರಿಯಾಗಿ ಲಕ್ಷ್ಯದಲ್ಲಿ ಬರಬೇಕೆಂದು ಮೊದಲಿಗೆ ಪೂರ್ವಪಕ್ಷದ ಅಂದರೆ ಮಾಯಾ ಇದರ ಖಂಡನ ಮಾಡಬೇಕಾಗುವದು. ಆದರೆ ಸಾಧಕರಿಗೆ ಈ ಭಾನಗಡಿಯು ಅವಶ್ಯಕತೆ ಇರುವದಿಲ್ಲ. ಅವರಿಗೆ ಕೇವಲ ಸ್ವಾನುಭವ ಸಂಪನ್ನವಾದ ನಿರೂಪಣ [ಪ್ರವಚನ]ಗಳಿಂದಲೇ ಸಾಕ್ಷಾತ್ಕಾರವಾಗುವದು. ಅಂತೂ ಶ್ರವಣ,ಮನನ, ನಿದಿಧ್ಯಾಸಗಳು ಬೇಕು. ಹಾಗೂ ಗುರುನಿಷ್ಠೆ ವಿಶ್ವಾಸ ಖರೇ ಇರಬೇಕು. [೨೯] ಪ್ರಥಮದಲ್ಲಿ ಶ್ರವಣ ಮಾಡಬೇಕು. ನಂತರ ಅದರ ಮನನವನ್ನು ಉತ್ತಮ ರೀತಿಯಿಂದ ಮಾಡಬೇಕು. ಅದರ ನಂತರ ನಿದಿಧ್ಯಾಸಕ್ಕೆ ಪ್ರಾರಂಭಿಸಬೇಕು. ಹಗಲೂ ರಾತ್ರಿ ಮನಸ್ಸಿನಲ್ಲಿ ಅದರದೇ ಚಿಂತನೆಯನ್ನು ಮೆಲಕು ಹಾಕಬೇಕು. ಆಗ ಸಾವಕಾಶವಾಗಿ ಪರಮಾರ್ಥ ಮಾರ್ಗದಲ್ಲಿಯು ಅನುಭವ ಬರಹತ್ತುವದು. ಇದರಿಂದ ಸಾಧಕರ ಶ್ರದ್ಧಾ ಅಧಿಕಾಧಿಕ ದೃಢವಾಗುತ್ತ ಹೋಗುವದು. ಕೊನೆಗೆ ಸಾಧಕನಿಗೆ ಪ್ರತ್ಯಕ್ಷ ಆತ್ಮಸಾಕ್ಷಾತ್ಕಾರವಾಗುವದು. ಇದರ ಸಲುವಾಗಿ ಬೇರೆ ಯಾವ ಪ್ರಯತ್ನ ಮಾಡುವ ಕಾರಣವೇ ಇರುವದಿಲ್ಲ. [೩೦]

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದ ಹತ್ತನೆಯ ದಶಕದೊಳಗಿನ
"ಪುರುಷ ಪ್ರಕೃತಿ" ಎಂಬ ಒಂಭತ್ತನೆಯ ಸಮಾಸವು ಮುಗಿದುದು.

● ●

**ದಶಕ ದಶಮ : ಸಮಾಸ ದಶಮ : ಚಳಾಚಳನಿರೂಪಣ**

॥ಶ್ರೀರಾಮ॥ ಗಗನಾಸಾರಿಖೇ ಬ್ರಹ್ಮ ಪೋಕಳ । ಉದಂಡ ಉಂಚ ಅಂತರಾಳ ।
ನಿರ್ಗುಣ ನಿರ್ಮಳ ನಿಶ್ಚಳ । ಸದೋದಿತ ॥೧॥

ತ್ಯಾಸ ಪರಮಾತ್ಮಾ ಮ್ಹಣತೀ । ಅನೇಕ ನಾಮೇ ನೇಣೋ ಕಿತೀ ।
ಪರೀ ತೇ ಜಾಣಿಜೆ ಆದಿಅಂತೀ । ಜೈಸೆ ತೈಸೆ ॥೨॥

## ದಶಕ ೧೦. ಸಮಾಸ ೧೦. ಚಲಾಚಲನಿರೂಪಣ (ನುಡಿ ೬೮)

ಈ ಸಮಾಸದಲ್ಲಿಯೂ ಸಹ ಹಿಂದೆ ಬಂದು ಹೋದ ವಿಷಯಗಳನ್ನು ಪುನಃ ವಿವರಿಸಿದ್ದಾರೆ. ಆದರೂ ಒಂದು ಹೊಸ ಬಾಜುವನ್ನು ಶ್ರೀಸಮರ್ಥರು ನಮ್ಮ ದೃಷ್ಟಿಗೆ ತಂದಿರುವರು. ಇದರ ಹೊರತಾಗಿ ಇವರು ಹೇಳುವದರಲ್ಲಿ ಯಾವಾಗಲೂ ಹೊಸ ಮಾದರಿ ಒಂದನ್ನು ಮುಂದಿಡುವರು. ಇದರಿಂದಾಗಿ ವಾಚಕರು ವಿಷಯ ವಿವೇಚನೆಯೊಂದಿಗೆ ಸಹಜವಾಗಿ ತೇಲಿ ಈಸಿ–ದಾಟಿ ಹೋಗುವರು. (ತನ್ಮಯರಾಗಿ ಓದಿಕೊಂಡು ಹೋಗುವರು), ಮೊದಲಿಗೆ ಮೂಲ ಮಾಯೆಯ ಸ್ತ್ರೀ ವಾಚಕಗಳ ಹೆಸರನ್ನು ಹೇಳಿರುವರು. ಮುಂದೆ ಈಶ್ವರನ ಪುರುಷವಾಚಕ ಹೆಸರುಗಳನ್ನು ಹೇಳಿರುವರು. ಮತ್ತು ನಂತರ ಮೂಲ ಮಾಯೆಯ ನಪುಂಸಕ ಹೆಸರುಗಳನ್ನು ಹೇಳಿರುವರು. ಇಷ್ಟೆಲ್ಲ ಹೆಸರುಗಳನ್ನು ಒಂದರ ಹಿಂದೆ ಒಂದರಂತೆ ಭರಭರಾಟಿಯಿಂದ ಹೇಳುವಾಗ ಇವರ ಭಾಷೆಯ ಪ್ರಬಲ ಓಘವು ಸ್ಪಷ್ಟವಾಗಿ ತಿಳಿಯುವದು. ತತ್ವಜ್ಞಾನವು ಬಹಳ ಸಲ ಕೇವಲ ಒಂದು ಶಬ್ದದ ಜಾಲವಾಗಿ ತೋರುವದು. ಇದರಿಂದ ಪ್ರಧಾನ ವಿಷಯ ಕಣ್ಮರೆಯಾಗುವದು. ಶಬ್ದರೂಪದ ತೊಡಕು, ಜಂಜಾಟಗಳ ಆವರಣವು ಹೊರಗಿನಿಂದ ಇದ್ದರೂ ಸಹ ಒಳಗಿನ ಆತ್ಮಜ್ಞಾನದ ಸಿದ್ಧಾಂತ ಜ್ಞಾನವು ಸುರಕ್ಷಿತವಿರುವದು. ಈ ಸಿದ್ಧಾಂತವನ್ನು ಎಷ್ಟೂ ಮುಚ್ಚುಮರೆಯಿಲ್ಲದೇ ಅಗದಿ ಸ್ಪಷ್ಟವಾಗಿ ಲೋಕದ ಜನರ ಮುಂದೆ ಮಂಡಿಸುವ ದೊಡ್ಡ ಕಾರ್ಯವನ್ನು ಸಂತ ಸಾಧುಗಳು ಮಾಡುವರು. ಶ್ರೀ ಸಮರ್ಥರು ಇಲ್ಲಿ ಇದನ್ನೇ ಮಾಡಿರುವರೆಂಬುದು ಒಡೆದು ಕಾಣುವದು. ಶ್ರೀಸಮರ್ಥರ ಮತದಂತೆ ದೃಶ್ಯವೆಲ್ಲ ಪಾಪವೇ ಇರುವದು. ಬ್ರಹ್ಮವು ಇದೊಂದೇ ಪುಣ್ಯಕರವು. ಮತ್ತು ಆತ್ಮಜ್ಞಾನದ ಹೊರತಾಗಿ ಉಳಿದೆಲ್ಲವೂ ಖೇದಕರವಾದದ್ದು–ಬೇಸರ ತರಿಸುವಂಥಹದಿರುತ್ತದೆ. ಸಾಧನ ಮಾಡುವ ಕೆಲವು ಜನರು ಬಾಹ್ಯಾಂಗದಿಂದ ಅನೇಕ ಪ್ರಕಾರದ ಉತ್ತಮ ಮತ್ತು ಕೆಟ್ಟ, ಬೇಸರ ತರಿಸುವಂಥಹದು. ವಾಕರಿಸುವಂಥ ತುಚ್ಛ ಸಾಧನಗಳನ್ನು ಮಾಡುವರು. ಇಂಥ ಸಾಧನದಿಂದ ಖರೇ ಸಮಾಧಾನ ಎಂದೂ ದೊರಕುವದಿಲ್ಲ. ಸಮಾಧಾನವು ಕೇವಲ ಆತ್ಮಜ್ಞಾನಿ ಪುರುಷರಿಗೆ ಮಾತ್ರ ದೊರಕುವದು. ಆತ್ಮಜ್ಞಾನವು ಸರ್ವದರಲ್ಲಿ ಅತಿ ಶ್ರೇಷ್ಠವಿದ್ದು ಇದರ ಅಭ್ಯಾಸ ಮಾಡುವ ಪುರುಷರು ಮಹಾಪುಣ್ಯವಂತರೆಂದು ತಿಳಿಯಬೇಕು. ಶ್ರೀಸಮರ್ಥರು ಕೊನೆಯದಾಗಿ ಸ್ಪಷ್ಟವಾಗಿ ಹೇಳುವದೇನಂದರೆ "ನನ್ನ ಸ್ವತಃದ ಅನುಭವವು ಹೀಗಿರುವದು. ನೀವೂ ಸಹ ಪ್ರತಿಯೊಬ್ಬರೂ ಇದರಂತೆಯೇ ಅನುಭವ ಪಡೆಯಿರಿ ಮತ್ತು ಧನ್ಯರಾಗಿರಿ.

### ದಶಕ ೧೦ : ಸಮಾಸ ೧೦ : ಚಲಾಚಲ[ವಿಚಾರ]ನಿರೂಪಣ [ನುಡಿ ೬೮]

ಬ್ರಹ್ಮ ಆಕಾಶದಂತೆ ಇರುವನು. ಇದರಲ್ಲಿ ವಾಯು ಹೇಗೆ ನಿರ್ಮಾಣವಾಯಿತೋ ಅದರಂತೆ ಬ್ರಹ್ಮದಲ್ಲಿ ಮೂಲಮಾಯಾ ಆದಳು:– ಆಕಾಶವು ಹೇಗೆ ಪೊಳ್ಳು ಇರುವದೋ ಮತ್ತು ಕಲ್ಪನಾತೀತವಾಗಿ ಎತ್ತರವಿರುವ ಅವಕಾಶ ಉಳ್ಳದ್ದಿರುವದೋ ಇದರಂತೆಯೇ ಬ್ರಹ್ಮವೂ ಇರುವದು. ಯಾವಾಗಲೂ ಪರಬ್ರಹ್ಮವು ನಿರ್ಗುಣ,ನಿರ್ಮಲ ನಿಶ್ಚಲವಿರುವದು. (೧) ಇದಕ್ಕೆ ಪರಮಾತ್ಮಾ ಅನ್ನುವರು. ಇವನಿಗೆ ಇನ್ನೂ ಎಷ್ಟು ಹೆಸರುಗಳಿರುವವೋ ಏನೋ ತಿಳಿದವರಾರು? ಹೆಸರು ಎಷ್ಟಾದರೂ ಏಕೇ ಇರಲಿ, ಇರವಲ್ಲವೇಕೆ. ಇವನು ಮಾತ್ರ ಆದಿಯಲ್ಲಿ ಮತ್ತು ಅಂತ್ಯದಲ್ಲಿ ಹೇಗಿದ್ದನೋ ಹಾಗೇ ಇರುವನು. (೨)

ವಿಸ್ತೀರ್ಣ ಪಸರಲಾ ವೈಸ । ಭೋವತಾ ದಾಟಲಾ ಅವಕಾಶ ।
ಭಾಸ ಚಿ ನಾಹೀ ನಿರಾಭಾಸ । ಜೈಸೇ ತೈಸೆ ॥೩॥

ಚಹೂಕಡೆ ಪಾತಾಳತಳೀ । ಅಂತ ಚಿ ನಾಹೀ ಅಂತರಾಳೀ ।
ಕಲ್ಪಾಂತಕಾಳೀ ಸರ್ವಕಾಳೀ । ಸಂಚಲೇ ಚಿ ಅಸೆ ॥೪॥

ಐಸೇ ಕಾಹೀಯೆಕ ಅಚಂಚಳ । ತೇ ಅಚಂಚಳೀ ಭಾಸೆ ಚಂಚಳ ।
ತ್ಯಾಸ ನಾವೇಂ ಹಿ ಪುಷ್ಕಳ । ತ್ರಿವಿಧಾ ಪ್ರಕಾರೇಂ ॥೫॥

ನ ದಿಸತಾ ನಾವ ಠೇವಣೆ । ನ ದೇಖತಾ ಖೂಣ ಸಾಂಗಣೇಂ ।
ಅಸೋ ಹೇಂ ಜಾಣಾಯಾಕಾರಣೇಂ । ನಾವಾಭಿಧಾನೇಂ ॥೬॥

ಮೂಳಮಾಯಾ ಮೂಳಪ್ರಕೃತಿ । ಮೂಳಪುರುಷ ಐಸೇ ಮ್ಹಣತೀ ।
ಶಿವಶಕ್ತಿ ನಾವೇಂ ಕಿತೀ । ನಾನಾ ಪ್ರಕಾರೇಂ ॥೭॥

ಪರೀ ಜೆ ನಾವ ಠೇವಿಲೇಂ ಜಯಾ । ಆಧೀಂ ವೋಳಖಾವೇಂ ತಯಾ ।
ಪ್ರಚಿತೀವೀಣ ಕಾಸಯಾ । ವಲಗನಾ ಕರಾವೀ ॥೮॥

ರೂಪಾಚೀ ನ ಧರಿತಾ ಸೋಯೆ । ನಾವಾಸರಿಸೇಂ ಭರಂಗಳೋ ನಯೆ ।
ಪ್ರತ್ಯಯಾವಿಣ ಗಳಂಗಾ ಹೋಯೆ । ಅನುಮಾನಜ್ಞಾನೇಂ ॥೯॥

ನಿಶ್ಚಳ ಗಗನೀಂ ಚಂಚಳ ವಾರಾ । ವಾಜೋಂ ಲಾಗಲಾ ಭರಾರಾ ।
ಪರೀ ತ್ಯಾ ಗಗನಾ ಆಣಿ ಸಮೀರಾ । ಭೇದ ಆಹೆ ॥೧೦॥

ತೈಸೇ ನಿಶ್ಚಳ ಪರಬ್ರಹ್ಮ । ಚಂಚಳ ಮಾಯಾ ಭಾಸಲಾ ಭ್ರಮ ।
ತ್ಯಾ ಭ್ರಮಾಚಾ ಸಂಭ್ರಮ । ಕರೂನ ದಾವೂ ॥೧೧॥

ಜೈಸಾ ಗಗನೀಂ ಚಾಲಿಲಾ ಪವನ । ತೈಸೇ ನಿಶ್ಚಳೀಂ ಜಾಲೇಂ ಚಳಣ ।
ಇಚ್ಛಾ ಸ್ಫೂರ್ತಿ ಲಕ್ಷಣ । ಸ್ಫೂರ್ಣರೂಪ ॥೧೨॥

ಅಹಂಪಣೇಂ ಜಾಣೀವ ಜಾಲೀ । ತೇ ಚಿ ಮೂಳ ಪ್ರಕೃತಿ ಬೋಲಿಲೀ ।
ಮಹಾಕಾರಣಕಾಯಾ ರಚಲೀ । ಬ್ರಹ್ಮಾಂಡೀಚೀ ॥೧೩॥

ಮಹಾಮಾಯಾ ಮೂಳಪ್ರಕೃತೀ । ಕಾರಣ ತೇಂ ಅವ್ಯಾಕೃತೀ ।
ಸೂಕ್ಷ್ಮ ಹಿರಣ್ಯಗರ್ಭ ಮ್ಹಣತೀ । ವಿರಾಟ ತೇಂ ಸ್ಥೂಳ ॥೧೪॥

ಐಸೇ ಪಂಚೀಕರ್ಣ ಶಾಸ್ತ್ರಪ್ರಮೇಯೆ । ಈಶ್ವರತನುಚತುಷ್ಟಯೆ ।
ಮ್ಹಣೋನ ಹೇಂ ಬೋಲಣೇಂ ಹೋಯೆ । ಜಾಣೀವ ಮೂಳಮಾಯಾ ॥೧೫॥

ನಾವು ಒಂದು ಕಲ್ಪನೆ ಮಾಡಿಕೊಳ್ಳಬೇಕು. ಬಹಳ ಬಹಳ ದೊಡ್ಡ ಜಾಗೆ ಪಸರಿಸುವದು(ಹರಡಿರುವದು). ಈ ಜಾಗೆಯ ಸುತ್ತು ಮತ್ತು ಮತ್ತಷ್ಟು ಬಹಳ ಪೊಳ್ಳು (ಪೋಕಳ) ಹರಡಿರುವದು. ಇಂಥ ಅನಂತ ಅಪಾರ ಜಾಗೆಯ ಮೇಲಿಂದ ಪರಬ್ರಹ್ಮದ ಬಗ್ಗೆ ಕಿಂಚಿತ್ ಕಲ್ಪನಾ ಬರುವದು. ಆದರೆ ಇದರಲ್ಲಿ ಒಂದು ಅಂತರವಿರುವದು. ಜಾಗಾ ಇದು ಇಂದ್ರಿಯ ಗೋಚರವಿರುವದು. ಪೊಳ್ಳು ಮನಸ್ಸಿಗೆ ಭಾಸವಾಗುವದು.(ಹೊಳೆಯುವದು). ಆದರೆ ಬ್ರಹ್ಮವನ್ನು ಬೇರೆತನದಿಂದ (ಪ್ರತ್ಯೇಕವಾಗಿದ್ದುಕೊಂಡು) ಅನುಭವ ಪಡೆಯಲು ಬರುವದಿಲ್ಲ. ನಿರಾಭಾಸವಿರುವ ಬ್ರಹ್ಮವು ಯಾವಾಗಲೂ ಇದ್ದಕ್ಕಿದ್ದಂತೆಯೇ ಇರುವದು. ಅಂದರೆ ಆಕಾಶದ ತುಂಬವೂ ಬ್ರಹ್ಮವ್ಯಾಪಿಯೇ ಇರುವದು.(೩)ನಾಲ್ಕುದಿಕ್ಕುಗಳಲ್ಲಿ ಪಾತಾಳದ ಕೆಳಗೆ ಮತ್ತು ಮೇಲೆ ಅಂತರಾಳದ ನಭೋಮಂಡಲದ ಆಚೆಗೆ ಹರಡಿರುವ ಪರಬ್ರಹ್ಮಕ್ಕೆ ಯಾವ ವಿಕಾರವೂ ಇರುವದಿಲ್ಲ. ಎಲ್ಲ ಕಾಲದಲ್ಲಷ್ಟೇಅಲ್ಲ, ಕಲ್ಪಾಂತಕಾಲದ ಹೊತ್ತಿನಲ್ಲಿ ಸಹ ಪರಬ್ರಹ್ಮ ಅಗದೀ ಇದ್ದಂತೆಯೇ ತುಂಬಿ ಇರುತ್ತದೆ. (೪) ಪರಬ್ರಹ್ಮವೆಂಬುದು ವಿಲಕ್ಷಣವಾದ ನಿಶ್ಚಲ ವಸ್ತು ಇರುವದು. ಈ ನಿಶ್ಚಲ ವಸ್ತುವಿನಲ್ಲಿ ಚಂಚಲವು ಭಾಸವಾಯಿತು. ಇದಕ್ಕೆ ಅನೇಕ ಹೆಸರುಗಳೂ ಇರುವವು. ಅನೇಕ ಪ್ರಕಾರದವೂ ಇರುವವು. ಇವುಗಳಲ್ಲಿ ಮೂರು ವಿಭಾಗ ಮಾಡಲು ಬರುವದು. (೫) ಈ ಚಂಚಲವು ಇಂದ್ರಿಯಗಳಿಗೆ ಕಾಣುವದಿಲ್ಲ. ಆದರೂ ಇದಕ್ಕೆ ಹೆಸರುಗಳನ್ನು ಕೊಟ್ಟಿದ್ದಾರೆ. ಅದನ್ನು ನೋಡದೆ ಅದರ ಲಕ್ಷಣಗಳನ್ನು ಹೇಳಿದ್ದಾರೆ. ಇದೆಲ್ಲ ವಿಚಿತ್ರವಿರುವದು ನಿಜವೇ ಆಗಿದೆ. ಈ ಚಂಚಲವೆಂಬುದು ಯಾವದಿರುವದು. ಏನಿರುವದು ಇದರ ಕಲ್ಪನೆಯು ಬರುವದಕ್ಕಾಗಿ ಇದಕ್ಕೆ ಅನೇಕ ಹೆಸರುಗಳನ್ನು ಇಟ್ಟಿದ್ದಾರೆ. (೬) ಮೂಲ ಮಾಯಾ ಏನಿರುವದು ಇದರ ಕಲ್ಪನೆಯನ್ನು ಹೆಚ್ಚು ಸ್ಪಷ್ಟ ಮಾಡಿರುವರು:— ನಿಶ್ಚಲ ಪರಬ್ರಹ್ಮದಲ್ಲಿ ಭಾಸವಾಗುವ ಚಂಚಲಕ್ಕೆ ಮೂಲಮಾಯಾ, ಮೂಲ ಪ್ರಕೃತಿ, ಮೂಲ ಪುರುಷ ಎಂದು ಅನ್ನುವರು. ಇದಕ್ಕೆ ಶಿವಶಕ್ತಿ ಎಂದು ಒಂದು ಹೆಸರೂ ಇರುವದು.ಇಂಥ ಅನೇಕ ಹೆಸರುಗಳು ಇರುವವು (೭) ಆದರೆ, ನಾವು ಒಂದು ವಸ್ತುವಿಗೆ ಯಾವಾಗ ಹೆಸರು ಕೊಡುವೆವೋ ಆಗ ಅದಕ್ಕಿಂತ ಮೊದಲೇ ಅದನ್ನು ತಿಳಿಯುವೆವು ವಸ್ತುವಿನ ಜ್ಞಾನ ಇಲ್ಲದೇ ಸುಮ್ಮನೇ ಶಬ್ದವಾಪರಿಸುವಲ್ಲಿ ಏನೂ ಅರ್ಥವಿರುವದಿಲ್ಲ. (೮) ವಸ್ತುವಿನ ಸ್ವರೂಪ ತಿಳಿಯದೇ ಸುಮ್ಮನೆ ಹೆಸರಿನ ಮೇಲಿಂದ ಕಲ್ಪನೆಯನ್ನು ಮಾಡುತ್ತ ಕೂಡಬಾರದು. ವಸ್ತುವನ್ನು ಪ್ರತ್ಯಕ್ಷ ನೋಡದೆ ಅದರ ವಿಷಯಕ್ಕೆ ಸುಮ್ಮನೆ ಕಲ್ಪನಾ ಮಾಡುತ್ತ ಹೋದರೆ ಎಲ್ಲವೂ ಗೊಂದಲಗೇಡಾಗುವದು. (೯) ನಿಶ್ಚಲ–ಅಲ್ಲಾಡದಿರುವ ಆಕಾಶದಲ್ಲಿ ಚಂಚಲ ಗಾಳಿ ಬೀಸಹತ್ತಿದರೆ ಆಗ ಅದು ಬೇರೆತನದಿಂದ ಅನುಭವಕ್ಕೆ ಬರುವದು. ಗಾಳಿ ಆಕಾಶದಲ್ಲಿಯೇ ಉತ್ಪನ್ನವಾಗುವದು. ಮತ್ತು ಆಕಾಶದಲ್ಲಿಯೇ ಸುಳಿದಾಡುವದು. ಆದರೆ ಈ ಎರಡರಲ್ಲಿ ಅಂದರೆ ಆಕಾಶ ಮತ್ತು ಗಾಳಿ ಇವುಗಳಲ್ಲಿ ಭೇದ ಕಂಡು ಬರುವದು. (೧೦) ಇದರಂತೆ ಪರಬ್ರಹ್ಮ ನಿಶ್ಚಲ ಇರುವನು. ಈ ನಿಶ್ಚಲದಲ್ಲಿ ಚಂಚಲಮಾಯಾ ನಿರ್ಮಾಣವಾದಂತ್ತರ ಭಾಸವಾಗುವದು. ಮಾಯಾ ನಿರ್ಮಾಣವಾಯಿತು ಅನ್ನುವದು ಸಹ ಭ್ರಮೆಯೇ ಇರುವದು. ಈ ಭ್ರಮದ ವಿಸ್ತಾರ ಹೇಗೆ ಇರುವದು.?ಇದರ ಬಗ್ಗೆ ಈಗ ತೋರಿಸಿಕೊಡುವೆನು. [೧೧] ಆಕಾಶದಲ್ಲಿ ಗಾಳಿ ಹೇಗೆ ಬೀಸುವದೋ ಅದರಂತೆ ನಿಶ್ಚಲ ಬ್ರಹ್ಮದಲ್ಲಿ ಹಾಲಚಾಲ ಚಲನವಲನವಾಯಿತು. ಈ ಚಲನವಲನವು ಇಚ್ಛಾರೂಪ, ಸ್ಫೂರ್ತಿರೂಪ, ಅಥವಾ ಸ್ಫುರಣರೂಪ ಇರುವದು. [ಏಕೋಹಂ ಬಹುಸ್ಯಾಮ್ ಪ್ರಜಾಯೇಯ] ಇದೇ ಬ್ರಹ್ಮದಲ್ಲಿ ಉಂಟಾದ ಸ್ಫುರಣವು. [೧೨] ನಿರ್ವಿಕಾರ ಪರಬ್ರಹ್ಮಕ್ಕೆ "ನಾನು ಬ್ರಹ್ಮ ಇರುವೆನು" ಅನ್ನುವ ಸ್ವತಃದ ಅರಿವು [ತಿಳುವಳಿಕೆ] ಉತ್ಪನ್ನವಾಯಿತು. ಈ ಅರಿವಿಗೇನೇ ಮೂಲ ಪ್ರಕೃತಿ ಎಂದು ಅನ್ನುವರು. ಬ್ರಹ್ಮಾಂಡದ ಮಹಾಕಾರಣ ದೇಹ ರಚಿಸಲ್ಪಟ್ಟಿತು. [೧೩]ಮಹಾಮಾಯಾ ಇದು ಮೂಲ ಪ್ರಕೃತಿಯಾಗಿದೆ. ಅವ್ಯಾಕೃತ [ವಿಕಾರ ಹೊಂದದಿರುವ, ವಿಕಾರವಿಲ್ಲದ] ಇದು ಕಾರಣ ದೇಹವಾಗಿದೆ. ಹಿರಣ್ಯಗರ್ಭವು ಸೂಕ್ಷ್ಮ ದೇಹವಾಗಿದೆ. ಮತ್ತು ವಿರಾಟವು ದೃಶ್ಯರೂಪ ಅಥವಾ ಸ್ಥೂಲದೇಹವೆಂದು ತಿಳಿಯಬೇಕು. [೧೪] ವೇದಾಂತ ಶಾಸ್ತ್ರದಲ್ಲಿ ಸಿದ್ಧಾಂತರೂಪದಿಂದ ಯಾವ ಪಂಚೀಕರಣದ ಬಗ್ಗೆ ಹೇಳಿರುವದೋ ಆ ಪ್ರಕಾರ ಈಶ್ವರನಲ್ಲಿ ಈ ನಾಲ್ಕು ದೇಹಗಳಿರುವವು. ಆದ್ದರಿಂದ ಮೂಲ ಮಾಯೆಯಲ್ಲಿ ಅರಿವು ಇರುವದು ಎಂದು ಅನ್ನಬೇಕಾಗುವದು. [೧೫]

ಪರಮಾತ್ಮಾ ಪರಮೇಶ್ವರು । ಪರೇಶ ಜ್ಞಾನಘನ ಈಶ್ವರು ।
ಜಗದೀಶ ಜಗದಾತ್ಮಾ ಜಗದೀಶ್ವರು । ಪುರುಷನಾಮೇ ॥೧೬॥
ಸತ್ತಾರೂಪ ಜ್ಞಾನಸ್ವರೂಪ । ಪ್ರಕಾಶರೂಪ ಜ್ಯೋತಿರೂಪ ।
ಕಾರಣರೂಪ ಚಿದ್ರೂಪ । ಶುದ್ಧ ಸೂಕ್ಷ್ಮ ಅಲಿಪ್ತ ॥೧೭॥
ಆತ್ಮಾ ಅಂತರಾತ್ಮಾ ವಿಶ್ವಾತ್ಮಾ । ದೃಷ್ಟಾ ಸಾಕ್ಷೀ ಸರ್ವಾತ್ಮಾ ।
ಕ್ಷೇತ್ರಜ್ಞ ಶಿವಾತ್ಮಾ ಜೀವಾತ್ಮಾ । ದೇಹೀ ಕೂಟಸ್ತ ಬೋಲಿಜೆ ॥೧೮॥
ಇಂದ್ರಾತ್ಮಾ ಬ್ರಹ್ಮಾತ್ಮಾ ಹರಿಹರಾತ್ಮಾ ।
ಯೆಮಾತ್ಮಾ ಧರ್ಮಾತ್ಮಾ ನೈರುತ್ಯಾತ್ಮಾ ।
ವರುಣವಾಯೋಕುಬೇರಾತ್ಮಾ । ಋಷಿದೇವಮುನಿಧರ್ತಾ ॥೧೯॥
ಗಣ ಗಂಧರ್ವ ವಿದ್ಯಾಧರ । ಯೆಕ್ಷ ಕಿನ್ನರ ನಾರದ ತುಂಬರ ।
ಸರ್ವಲೋಕಾಚೇ ಅಂತರ । ತೋ ಸರ್ವಾಂತರಾತ್ಮಾ ಬೋಲಿಜೆ ॥೨೦॥
ಚಂದ್ರ ಸೂರ್ಯ ತಾರಾಮಂಡಳೇ । ಭೂಮಂಡಳೇ ಮೇಘಮಂಡಳೇ ।
ಯೆಕವೀಸ ಸ್ವರ್ಗೇ ಸಪ್ತಪಾತಾಳೇ । ಅಂತರಾತ್ಮಾ ಚ ವರ್ತವೀ ॥೨೧॥
ಗುಪ್ತವಲ್ಲೀ ಪಾಲ್ಹಾಳಲೀ । ತಿಚೀ ಪುರುಷನಾಮೇ ಘೇತಲೀ ।
ಆತಾ ಸ್ತ್ರೀನಾಮೇ ಏಕಿಲೀ । ಪಾಹಿಜೆ ಶ್ರೋತೀ ॥೨೨॥
ಮೂಳಮಾಯಾ ಜಗದೇಶ್ವರೀ । ಪರಮವಿದ್ಯಾ ಪರಮೇಶ್ವರೀ ।
ವಿಶ್ವವಂದ್ಯಾ ವಿಶ್ವೇಶ್ವರೀ । ತ್ರೈಲೋಕ್ಯ ಜನನೀ ॥೨೩॥
ಅಂತರ್ಹೇತು ಅಂತರ್ಕಳಾ । ಮೌನ್ಯಗರ್ಭ ಜಾಣೀವಕಳಾ ।
ಚಪಳ ಜಗಜ್ಜ್ಯೋತೀ ಜೀವನಕಳಾ । ಪರಾ ಪಶ್ಯಂತೀ ಮಧ್ಯಮಾ ॥೨೪॥
ಯುಕ್ತಿ ಬುದ್ಧಿ ಮತಿ ಧಾರಣಾ । ಸಾವಧಾನತಾ ನಾನಾ ಚಾಳಣಾ ।
ಭೂತ ಭವಿಷ್ಯ ವರ್ತಮಾನಾ । ಉಕಲೂನ ದಾವೀ ॥೨೫॥
ಜಾಗೃತಿ ಸ್ವಪ್ನ ಸುಷುಪ್ತೀ ಜಾಣೇ । ತುರ್ಯಾ ತಾಟಸ್ತಾ ಅವಸ್ತಾ ಜಾಣೇ ।
ಸುಖ ದುಃಖ ಸಕಳ ಜಾಣೇ । ಮಾನಾಪಮಾನ ॥೨೬॥
ತೇ ಪರಮ ಕಠೀಣ ಕೃಪಾಳು । ತೇ ಪರಮ ಕೋಮಳ ಸ್ನೇಹಾಳು ।
ತೇ ಪರಮ ಕ್ರೋಧೀ ಲೋಭಾಳು । ಮರ್ಯಾದೇವೇಗಳೀ ॥೨೭॥
ಶಾಂತೀ ಕ್ಷಮಾ ವಿರಕ್ತೀ ಭಕ್ತೀ । ಅಧ್ಯಾತ್ಮವಿದ್ಯಾ ಸಾಯೋಜ್ಯಮುಕ್ತೀ ।
ವಿಚಾರಣಾ ಸಹಜ ಸ್ಥಿತಿ । ಜಯೇಚೆನೀ ॥೨೮॥

ಪಿಂಡದವು ನಾಲ್ಕು ದೇಹ:-ಸ್ಥೂಲ,ಸೂಕ್ಷ್ಮ,ಕಾರಣ,ಮಹಾಕಾರಣ ಮತ್ತು ಬ್ರಹ್ಮಾಂಡದವು ನಾಲ್ಕು ದೇಹ:-ವಿರಾಟ, ಹಿರಣ್ಯಗರ್ಭ,ಅವ್ಯಾಕೃತ, ಮತ್ತು ಮೂಲಮಾಯಾ. ಮೂಲಮಾಯೆಗೆ ಮಹಾಮಾಯಾ ಅಥವಾ ಮೂಲಪ್ರಕೃತಿ ಎಂದೂಸಹ ಅನ್ನುವರು.ಯಾವಪ್ರಕಾರ ಪಿಂಡದ ನಾಲ್ಕೂದೇಹಗಳಲ್ಲಿ ಅರಿವು ಅನುಸ್ಯೂತವಾಗಿ ತುಂಬಿರುತ್ತದೆಯೋ [ಅಖಂಡವಾಗಿಹರಿಯುತ್ತದೆ.ಅಥವಾ ತುಂಬಿರುವದು]ಇದರಂತೆ ಬ್ರಹ್ಮಾಂಡದ ನಾಲ್ಕೂ ದೇಹಗಳಲ್ಲಿ ಅರಿವು ಅನುಸ್ಯೂತವಾಗಿ[ಅಖಂಡವಾಗಿ]ತುಂಬಿದೆ.ಮೂಲಮಾಯೆಯಲ್ಲಿಯು ಅರಿವೇ ಈಶ್ವರವೆನಿಸಿದೆ. ಇಂಥ ಈಶ್ವರನ ಪುಲ್ಲಿಂಗದ ಹೆಸರುಗಳನ್ನು ಕೇಳಿರಿ:- ಪರಮಾತ್ಮಾ, ಪರಮೇಶ್ವರ, ಪರೇಶ, ಜ್ಞಾನಘನ, ಈಶ್ವರ, ಜಗದೀಶ, ಜಗದಾತ್ಮಾ,ಜಗದೀಶ್ವರ ಹೀಗೆ ಇವನಿಗೆ ಪುರುಷವಾಚಕ ಹೆಸರುಗಳು ಇರುವವು.[೧೬]ಸತ್ತಾರೂಪ, ಜ್ಞಾನ ಸ್ವರೂಪ,ಪ್ರಕಾಶರೂಪ,ಜ್ಯೋತಿರೂಪ, ಕಾರಣರೂಪ, ಚಿದ್ರೂಪ, ಶುದ್ಧ,ಸೂಕ್ಷ್ಮ,ಅಲಿಪ್ತ.[೧೭] ಆತ್ಮಾ,ಅಂತರಾತ್ಮಾ,ವಿಶ್ವಾತ್ಮಾ, ದೃಷ್ಟಾ, ಸಾಕ್ಷಿ ಸರ್ವಾತ್ಮಾ,ಕ್ಷೇತ್ರಜ್ಞ,ಶಿವಾತ್ಮಾ,ಜೀವಾತ್ಮಾ,ದೇಹೀ ಮತ್ತು ಕೂಟಸ್ಥ ಹೀಗೂ ಸಹ ಅನ್ನುವರು.[೧೮]ಇಂದ್ರಾತ್ಮಾ, ಬ್ರಹ್ಮಾತ್ಮಾ,ಹರಿಹರಾತ್ಮಾ,ಯಮಾತ್ಮಾ,ಧರ್ಮಾತ್ಮಾ,ನೈಋತ್ಯಾತ್ಮಾ,ವರುಣ - ವಾಯು-ಕುಬೇರಾತ್ಮಾ, ಋಷಿದೇವ-ಮುನಿಧರ್ತಾ,ಇವೂ ಸಹ ಅವನ ಹೆಸರುಗಳಿರುವವು.[೧೯]ಗಣ,ಗಂಧರ್ವ,ವಿದ್ಯಾಧರ ಯಕ್ಷ,ಕಿನ್ನರ,ನಾರದ, ತುಂಬುರ, ಇವರೆಲ್ಲರಲ್ಲಿಯು ಮತ್ತು ಸರ್ವಲೋಕಗಳಲ್ಲಿ ಯಾವನು ಅಂತರ್ಯಾಮಿಯಾಗಿ ಇರುವನೋ ಅವನಿಗೆ ಸರ್ವಾಂತರಾತ್ಮಾ ಅನ್ನುವರು[೨೦]ಚಂದ್ರಸೂರ್ಯ,ತಾರಾಮಂಡಲ, ಭೂಮಂಡಲ,ಮೇಘಮಂಡಲ,ಇಪ್ಪತ್ತೊಂದು ಸ್ವರ್ಗ,ಮತ್ತು ಏಳು ಪಾತಾಳ,ಇವೆಲ್ಲವನ್ನೂ ಅಂತರಾತ್ಮನೇ ನಡಿಸುವನು.[೨೧]ಮೂಲಮಾಯೆಗೆ ಪುರುಷವಾಚಕ ಶಬ್ದಗಳನ್ನು ಈಗಹೇಳಿದ್ದಾಯಿತು. ಈಗ ಅವಳ ಸ್ತ್ರೀವಾಚಕದ ಹೆಸರುಗಳನ್ನು ಹೇಳುವರು, ಕೇಳಿರಿ.ಮೂಲಮಾಯಾ ಇದೊಂದು [ಯಾವುದೋ ಒಂದು] ಗುಪ್ತ ಬಳ್ಳಿ ಇರುವದು. ಈ ಬಳ್ಳಿ ಭರಭರಾಟಿಯಿಂದ ಬಹುವಿಶಾಲವಾಗಿ ಮನಬಂದಂತೆ ಬೆಳೆದು ಎಲ್ಲ ಕಡೆಗೆ ಪಸರಿಸಿದೆ. ಈ ಮಾಯಾಬಳ್ಳಿಗೆ ಕೊಟ್ಟ ಪುರುಷವಾಚಕ ಹೆಸರುಗಳನ್ನು ಹೇಳಿದ್ದಾಯಿತು. ಈಗ ಇದಕ್ಕೆ ಕೊಟ್ಟ ಸ್ತ್ರೀವಾಚಕ ಹೆಸರುಗಳನ್ನು ಹೇಳುವೆ ಕೇಳಿರಿ. [೨೨] ಮೂಲ ಮಾಯಾ, ಜಗದೀಶ್ವರಿ, ಪರಮವಿದ್ಯಾ, ಪರಮೇಶ್ವರಿ, ವಿಶ್ವವಂದ್ಯಾ, ವಿಶ್ವೇಶ್ವರಿ, ತ್ರೈಲೋಕ್ಯಜನನಿ. [೨೩] ಅಂತರ್ಹೇತು, ಅಂತರ್ಕಳಾ, ಮೌನಗರ್ಭಾ, ಜಾಣೀವಕಳಾ [ಅರಿವಿನಕಲಾ,ಜ್ಞಾನಕಲಾ] ಚಪಲಾ,ಜಗತ್‌ಜ್ಯೋತಿ, ಜೀವನಕಲಾ, ಪರಾ, ಪಶ್ಯಂತಿ,ಮಧ್ಯಮಾ[೨೪] ಯುಕ್ತಿ, ಬುದ್ಧಿ, ಮತಿ, ಧಾರಣಾ, ಸಾವಧಾನತಾ, ಅನೇಕ ಪ್ರಕಾರದ ಶೋಧಕ ಬುದ್ಧಿ, ಭೂತ ಭವಿಷ್ಯ ವರ್ತಮಾನ ಇವುಗಳನ್ನು ವಿಂಗಡಿಸಿ [ಬಿಚ್ಚಿ] ತೋರಿಸುವ ಶಕ್ತಿ [೨೫] ಜಾಗ್ರತಿ, ಸ್ವಪ್ನ, ಸುಷುಪ್ತಿ ಈ ಅವಸ್ಥೆಗಳನ್ನು ಇವಳು ತಿಳಿದಿರುವಳು. ತುರ್ಯಾ ಮತ್ತು ತಟಸ್ಥಾವಸ್ಥೆಗಳನ್ನು ಇವಳು ತಿಳಿದಿರುವಳು. ಸುಖ, ದುಃಖ ವ ಮಾನಾಪಮಾನ ಇವೆಲ್ಲವನ್ನು ಇವಳು ತಿಳಿದಿರುವಳು.[೨೬]ಇವಳು ಅತಿ ಕಠೋರವಿರುವಳು.ಮತ್ತು ಅತಿ ಕೃಪಾಳುವೂ ಇರುವಳು.ಇವಳು ಅತ್ಯಂತ ಕೋಮಲ, ಮತ್ತು ಪ್ರೇಮಳ[ದಯಾಳು]ಇರುವಳು. ಇವಳು ಭಯಂಕರ ಸಿಟ್ಟಿನವಳಿರುವಳು ಹಾಗೂ ಕಲ್ಪನಾಕ್ಕೆ ಮೀರಿದ ಮಾಯಾಳು ಅಂದರೆ ದಯಾಳು ಸಹ ಇರುವಳು. [೨೭] ಶಾಂತಿ, ಕ್ಷಮಾ, ವಿರಕ್ತಿ, ಭಕ್ತಿ, ಅಧ್ಯಾತ್ಮವಿದ್ಯಾ, ಸಾಯುಜ್ಯಮುಕ್ತಿ. ಸೂಕ್ಷ್ಮ ವಿಚಾರ ಮಾಡುವ ಶಕ್ತಿ ಮತ್ತು ಸಹಜಸ್ಥಿತಿ ಇವೆಲ್ಲವೂ ಈ ಮೂಲಮಾಯಾ ಇವಳ ಕೃಪೆಯಿಂದ ಸಂಭವಿಸುವವು. ಪದರಿನಲ್ಲಿ ಬೀಳುವವು. [೨೮]

ಪೂರ್ವೀ ಪುರುಷನಾಮೇ ಬೋಲಿಲೀ । ಉಪರೀ ಸ್ತ್ರೀನಾಮೇ ನಿರೋಪಿಲೀ ।
ಆತಾನಪುಂಸಕ ನಾಮೇ ಏಕಿಲೀ । ಸಾಹಿಜೆ ಚಂಚಳಾಚೀ ॥೨೯॥

ಜಾಣಣೇ ಅಂತಃಕರ್ಣ ಚಿತ್ತ । ಶ್ರವಣ ಮನನ ಚೈತನ್ಯ ಜೀವಿತ ।
ಯೇತೇ ಜಾತೇ ಸುಚೀತ । ಹೋಊನ ಸಾಹಾ ॥೩೦॥

ಮೀಪಣ ತೂಪಣ ಜಾಣಪಣ । ಜ್ಞಾತೇಪಣ ಸರ್ವಜ್ಞಪಣ ।
ಜೀವಪಣ ಶಿವಪಣ ಈಶ್ವರಪಣ । ಅಲಿಪ್ತಪಣ ಬೋಲಿಜೆ ॥೩೧॥

ಏಸೀ ನಾಮೇ ಉದಂಡ ಅಸತೀ । ಪರೀ ತೆ ಯೇಕ ಚಿ ಜಗಜ್ಜ್ಯೋತೀ ।
ವಿಚಾರವಂತ ತೇ ಜಾಣತೀ । ಸರ್ವಾಂತರಾತ್ಮಾ ॥೩೨॥

ಆತ್ಮಾ ಜಗಜ್ಜ್ಯೋತೀ ಸರ್ವಜ್ಞಪಣ । ತೀನೀ ಮಿಳೋನ ಯೇಕ ಚಿ ಜಾಣ ।
ಅಂತಃಕರ್ಣಚಿ ಪ್ರಮಾಣ । ಜ್ಞಪ್ತಿ ಮಾತ್ರ ॥೩೩॥

ಢೀಗ ಜಾಲೇ ಪದಾರ್ಥಾಚೆ । ಪುರುಷ ಸ್ತ್ರೀ ನಪುಂಸಕ ನಾಮಾಚೆ ।
ಪರಂತು ಸೃಷ್ಟೀ ರಚನೇಚೇ । ಕಿತೀ ಮ್ಹಣೋನ ಸಾಂಗಾವೇ ॥೩೪॥

ಸಕಳ ಚಾಳಿತಾ ಯೇಕ । ಅಂತರಾತ್ಮಾ ವರ್ತವೀ ಅನೇಕ ।
ಮುಂಗೀಪಾಸೂನ ಬ್ರಹ್ಮಾದಿಕ । ತೇಣೇ ಚಿ ಚಾಲತೀ ॥೩೫॥

ತೋ ಅಂತರಾತ್ಮಾ ಆಹೆ ಕೈಸಾ । ಪ್ರಸ್ತುತ ವೋಳಖಾನಾ ಆಮಾಸಾ।
ನಾನಾ ಪ್ರಕಾರೀಚಾ ತಮಾಸಾ । ಯೇಥೇ ಚಿ ಆಹೆ ॥೩೬॥

ತೋ ಕಳತೋ ಪರೀ ದಿಸೇನಾ । ಪ್ರಚಿತ ಯೇತೆ ಪರೀ ಭಾಸೇನಾ ।
ಶರೀರೀ ಅಸೆ ಪರೀ ವಸೇನಾ । ಯೇಕೇ ಠಾಈ ॥೩೭॥

ತೀಕ್ಷ್ಣಪಣೇ ಗಗನೀ ಭರೇ । ಸರೋವರ ದೇಖತಾ ಚ ಪಸರೇ ।
ಪದಾರ್ಥ ಲಕ್ಷೂನ ಉರೇ । ಚಹುಕಡೆ ॥೩೮॥

ಜೈಸಾ ಪದಾರ್ಥ ದೃಷ್ಟೀಸ ದಿಸತೋ । ತೋ ತ್ಯಾಸಾರಿಖಾ ಚ ಹೋತೋ ।
ನಾಯೋಹೂನಿ ವಿಶೇಷ ತೋ । ಚಂಚಳವಿಷಈ ॥೩೯॥

ಕಿತ್ಯೇಕ ದೃಷ್ಟೀನೇ ದೇಖೇ । ಕಿತೀಯೇಕ ರಸನೆನೇ ಚಾಖೇ ।
ಕಿತೀಯೇಕ ತೇ ವೋಳಖೇ । ಮನೇಕರೂನಿ ॥೪೦॥

ಶ್ರೋತೀ ಬೈಸೋನ ಶಬ್ದ ಏಕತೋ । ಘ್ರಾಣೇಂದ್ರಿಯೇ ವಾಸ ಘೇತೋ ।
ತ್ವಚೆಇಂದ್ರಿಯೇ ಜಾಣತೋ । ಶೀತೋಷ್ಣಾದಿಕ ॥೪೧॥

ಇನ್ನುಮೇಲೆ ಮೂಲ ಮಾಯೆಯ ನಪುಂಸಕಲಿಂಗದ ಹೆಸರುಗಳನ್ನು ಹೇಳುವರು:–ಮೊದಲಿಗೆ ಪುರುಷವಾಚಕ ಹೆಸರು ಗಳನ್ನು ಹೇಳಿದೆವು.ಆನಂತರ ಸ್ತ್ರೀವಾಚಕ ಹೆಸರುಗಳನ್ನು ಹೇಳಿದೆವು.ಈಗ ಆ ಚಂಚಲವಾದವಳ ಮೂಲಮಾಯಾ ಎನಿಸಿದವಳನಪುಂಸಕ ಹೆಸರುಗಳನ್ನು ಹೇಳುವೆ,ಕೇಳಿರಿ.[೨೯]ತಿಳಿಯುವದು,[ಅರಿವು]ಅಂತಃಕರಣ, ಚಿತ್ತ, ಶ್ರವಣ,ಮನನ, ಚೈತನ್ಯ. ಜೀವಿತ,[ಚಂಚಲವಾದ ಜೀವನ]. ಶರೀರದಲ್ಲಿ ಬರುವ ಮತ್ತು ಹೋಗುವ ಸೂಕ್ಷ್ಮತನ ಇವನ್ನು ಚನ್ನಾಗಿ ಲಕ್ಷ್ಯಗೊಟ್ಟು ನೋಡಿರಿ. [೩೦] ನಾನು ಅನ್ನುವದು, ನೀನು ಅನ್ನುವದು, ಜಾಣಪಣ ಅಂದರೆ ತಿಳಿವಳಿಕೆ [ಗುಣಜ್ಞತೆ] ಜ್ಞಾನಿತ್ವ, ಸರ್ವಜ್ಞತೆ, ಜೀವತ್ವ, ಈಶ್ವರತ್ವ ಶಿವತ್ವ, ಅಲಿಪ್ತತೆ ಹೀಗೆ ಇರುವ ನಪುಂಸಕ ಹೆಸರುಗಳನ್ನು ಹೇಳಲಾಯಿತು. [೩೧] ಮೂರು ಪ್ರಕಾರದ ಹೆಸರುಗಳನ್ನು ಹೇಳಿದರೂ ಸಹ ಮೂಲ ಮಾಯಾ ಈಶ್ವರ, ಮಹಾಮಾಯಾ, ಸರ್ವಾಂತರಾತ್ಮಾ ಇತ್ಯಾದಿ ಎಲ್ಲವೂ ಒಂದೇ ರೂಪವಿರುವವು:– ಇಲ್ಲಿಯವರೆಗೆ ಹೇಳಿದ ಹೆಸರುಗಳು ಇನ್ನೂಬಹಳಷ್ಟು ಇರುವವಾದರೂ ಇವೆಲ್ಲವುಗಳಲ್ಲಿ ಇರುವ ಜಗತ್‌ಜ್ಯೋತಿಒಂದೇ ಇರುವದು.ಇವೆಲ್ಲ ಒಂದೇಸರ್ವಾಂತರಾತ್ಮನ ಹೆಸರುಗಳು ಇರುವವು.ಇವೆಲ್ಲವನ್ನೂ ವಿಚಾರವಂತರಾದವರು ತಿಳಿದಿರುತ್ತಾರೆ.[೩೨] ಆತ್ಮಾ, ಜಗಜ್ಜ್ಯೋತಿ ಮತ್ತು ಸರ್ವಜ್ಞತ್ವ, [ಆತ್ಮಾ ಪುಲ್ಲಿಂಗವು. ಜಗತ್-ಜ್ಯೋತಿಸ್ತ್ರೀಲಿಂಗವು. ಸರ್ವಜ್ಞತನವು ನಪುಂಸಕ ಲಿಂಗವು] ಈ ಮೂರುಕೂಡಿ ಕೊನೆಗೆ ಒಂದೇಇರುವದು.ಶುದ್ಧ ಅರಿವಿನ ಸ್ವರೂಪವಿರುವ ಅಂತಃಕರಣ ಇದು ಇವಕ್ಕೆಲ್ಲಪ್ರತ್ಯಕ್ಷವಾದ ಪುರಾವೆ ಇರುವದು[೩೩]ಪುರುಷವಾಚಕ,ಸ್ತ್ರೀವಾಚಕ,ನಪುಂಸಕವಾಚಕವಾದ ಹೆಸರುಗಳಿರುವ ಅಗಣಿತವಸ್ತುಗಳುಅಕ್ಷರಶಃ ಇನ್ನೂ ಬಹಳ ಅಂದರೆ ಇವುಗಳು ರಾಶಿ ರಾಶಿಗಟ್ಟಲೇ ಇರುವವು. ವಿಶ್ವದಲ್ಲಿ ನಾನಾ ತರಹ ವಸ್ತುಗಳು ಇರುವವು. ಇವೆಲ್ಲವನ್ನು ಹೇಳಲಿಕ್ಕೆ ಶಕ್ಯವಿಲ್ಲ. [೩೪] ಒಬ್ಬನೇ ಒಬ್ಬ ಅಂತರಾತ್ಮನು ಸರ್ವವನ್ನೂ ನಡೆಸುವನು. ಇವನೇ ಅನೇಕ ಪ್ರಕಾರದ ಚಲನವಲನಗಳನ್ನು ಉಂಟು ಮಾಡುವನು. ತೀರಸಣ್ಣಇರುವೆಯಿಂದ ಬ್ರಹ್ಮದೇವರವರೆಗೂ ಸರ್ವಜೀವಗಳೆಲ್ಲವೂ ಈ ಅಂತರಾತ್ಮನ ಸತ್ತಾದಿಂದ ಕೆಲಸ ಮಾಡುವವು. [೩೫] ಇಂಥ ಆ ಅಂತರಾತ್ಮಾ ಹೇಗೆ ಇರುವನು? ಇದರ ಬಗ್ಗೆ ಈಗಲೇ ಸ್ವಲ್ಪಾದರೂ ಗುರುತಿಸಿ ಕಂಡು ಹಿಡಿಯಬೇಕು, ತಿಳಿಯಬೇಕು. ಇವನ ಸತ್ತೆಯಲ್ಲಿ ನಾನಾ ಪ್ರಕಾರದ ಮೋಜು (ಕೌತುಕ) ಇರುವದು ಕಂಡು ಬರುವದು. [೩೬] ಇವನು ಇರುವನೆಂಬುದು ತಿಳಿಯುವದು. ಆದರೆ ಇವನು ಕಾಣಿಸುವದಿಲ್ಲ. ಇವನ ಅಸ್ತಿತ್ವದ ಅನುಭವ ಬರುವದು. ಆದರೆ ಇವನು ಬೇರೆತನದಿಂದ [ಪ್ರತ್ಯಕ್ಷವಾಗಿ] ಭಾಸವಾಗುವದಿಲ್ಲ. ಇವನು ಶರೀರದಲ್ಲಿ ಇರುವನು. ಆದರೆ ಇವನು ಒಂದೇ ಸ್ಥಳದಲ್ಲಿ[ನಿಲ್ಲುವದಿಲ್ಲ] ಇರುವದಿಲ್ಲ.[೩೭]ಒಮ್ಮೊಮ್ಮೆ[ಅಕಸ್ಮಾತ್ತಾಗಿ]ಇವನು ಚಟಕ್ಕನೆ[ತೀಕ್ಷ್ಣತನದಿಂದ]ಆಕಾಶದಲ್ಲೆಲ್ಲ ಸಂಚರಿಸುವನು.ಒಮ್ಮೆ ದೊಡ್ಡ ಸರೋವರ ನೋಡಿ ಇವನು ಅದರ ತುಂಬೆಲ್ಲಾ ಪಸರಿಸುವನು.ಈ ಪ್ರಕಾರವಾಗಿ ಇವನು ಸರ್ವಪದಾರ್ಥಗಳನ್ನು ನೋಡಿ(ಅವಲೋಕಿಸಿ)ಯೂ ಮತ್ತೆ ನಾಲ್ಕೂಕಡೆಗೂ ಉಳಿಯುವನು[೩೮]ವೇದಾಂತದಲ್ಲಿಯ ಜ್ಞಾನವಿಚಾರಸಾದಲ್ಲಿ ಹೇಳಿರುವದೇನಂದರೆ:–ದ್ರಷ್ಟಾನ ಮುಂದೆ ಯಾವಾಗ ಯಾವೊಂದು ದೃಶ್ಯ ಬರುವದೋ ಆಗ ದ್ರಷ್ಟಾ ಆ ದೃಶ್ಯದಷ್ಟೇ ಆಗುವನು.ಪರತ[ಮರಳಿ]ಬರುವನು.ಆಗ ಅವನಿಗೆ ಜ್ಞಾನವಾಗುವದು.ಇದರ ಅನುವಾದವನ್ನು ಶ್ರೀ ಸಮರ್ಥರು ಈಗ ಇಲ್ಲಿ ಮಾಡುವರು:– ಯಾವ ಪದಾರ್ಥ ದೃಷ್ಟಿಗೆ ಬೀಳುವದೋ ಅದರ ಆಕಾರದಷ್ಟೆ ಇವನು ಆಗುವನು. ಅದರ ರೂಪವನ್ನು ಧರಿಸುವನು.ಹೀಗೆ ಅನೇಕಾನೇಕ ಪದಾರ್ಥಗಳು ಇವನ ದೃಷ್ಟಿಗೆ ಬೀಳುವವು.ಆ ಎಲ್ಲ ಪದಾರ್ಥಗಳಂತೆ ಆಗುವನು. ಅದರಿಂದ ಚಂಚಲತನದ ವಿಷಯದಲ್ಲಿ ಇವನು ವಾಯುವನ್ನು ಸಹ ಹಿಂದಕ್ಕೆ ಹಾಕುವನು.[೩೯] ಇವನು ದೃಷ್ಟಿಯಿಂದ ಎಷ್ಟೆಷ್ಟೋ ನೋಡುವನು. ನಾಲಿಗೆಯಿಂದ ಅನೇಕದರ ರುಚಿ ನೋಡುವನು.ಮನಸ್ಸಿನ ಸಹಾಯದಿಂದ ಎಷ್ಟೆಷ್ಟೋ ತಿಳಿದುಕೊಳ್ಳುವನು. [೪೦] ಕಿವಿಯಲ್ಲಿ ಸೇರಿ ಇವನು ಶಬ್ದಗಳನ್ನು ಕೇಳುವನು. ಮೂಗಿನಿಂದ ವಾಸನೆಯನ್ನು ತೆಗೆದುಕೊಳ್ಳುವನು. ಇವನು ಚರ್ಮದಿಂದ ತಂಪು ಮತ್ತು ಬಿಸಿ ಮೊದಲಾದವುಗಳನ್ನು ತಿಳಿಯುವನು. ಹೀಗೆ ಪದಾರ್ಥಗಳ ಗುಣಧರ್ಮಗಳನ್ನೆಲ್ಲ ಇವನು ಅರಿಯುವನು. [೪೧]

ಏಶಾ ಜಾಣೇ ಅಂತರ್ಕಳಾ । ಸಕಳಾಂಮಧೇ ಪರೀ ನಿರಾಳಾ ।
ಪಾಹಾತಾ ತ್ಯಾಚೀ ಅಗಾಧ ಲೀಳಾ । ತೋ ಚಿ ಜಾಣೇ ॥೪೨॥
ತೋ ಪುರುಷ ನಾ ಸುಂದರೀ । ಬಾಳ ತಾರುಣ್ಯ ನಾ ಕುಮಾರೀ ।
ನಪುಂಸಕಾಚಾ ದೇಹಧಾರೀ । ಪರೀ ನಪುಸಕ ನವ್ಹೆ ॥೪೩॥
ತೋ ಚಾಲವೀ ಸಕಳ ದೇಹಾಸೀ । ಕರೂನ ಅಕರ್ತಾ ಮ್ಹಣತೀ ತ್ಯಾಸೀ ।
ತೋ ಕ್ಷೇತ್ರಜ್ಞ ಕ್ಷೇತ್ರವಾಸೀ । ದೇಹೀ ಕೂಟಸ್ಥ ಬೋಲಿಜೇ ॥೪೪॥
॥ಶ್ಲೋಕ॥ ದ್ವಾವಿಮೌ ಪುರುಕ್ಷಾ ಲೋಕೇ । ಕ್ಷರಶ್ಚಾಕ್ಷರ ಏವ ಚ ॥
ಕ್ಷರಃ ಸರ್ವಾಣಿ ಭೂತಾನಿ । ಕೂಟಸ್ಥೋಽಕ್ಷರ ಉಚ್ಯತೇ ॥೧॥
ದೋನೀ ಪುರುಷ ಲೋಕೀ ಅಸತೀ । ಕ್ಷರಾಕ್ಷರ ಬೋಲಿಜೇತೀ ।
ಸರ್ವ ಭೂತೇ ಕ್ಷರ ಮ್ಹಣತೀ । ಅಕ್ಷರ ಕೂಟಸ್ಥ ಬೋಲಿಜೆ ॥೪೫॥
ಉತ್ತಮ ಪುರುಷ ತೋ ಆಣೇಕ । ನಿಃಪ್ರಪಂಚ ನಿಃಕಳಂಕ ।
ನಿರಂಜನ ಪರಮಾತ್ಮಾ ಯೇಕ । ನಿರ್ವಿಕಾರೀ ॥೪೬॥
ಚ್ಯಾರೀ ದೇಹ ನಿರಸಾವೇ । ಸಾಧಕೇ ದೇಹಾತೀತ ವ್ಹಾವೇ ।
ದೇಹಾತೀತ ಹೋತಾ ಜಾಣಾವೇ । ಅನನ್ಯ ಭಕ್ತ ॥೪೭॥
ದೇಹಮಾತ್ರ ನಿರಸುನೀ ಗೇಲಾ । ತೇಥೇ ಅಂತರಾತ್ಮಾ ಕೈಸಾ ಉರಲಾ ।
ನಿರ್ವಿಕಾರೀ ವಿಕಾರಲಾ । ಠಾವ ನಾಹೀ ॥೪೮॥
ನಿಶ್ಚಳ ಪರಬ್ರಹ್ಮ ಯೇಕ । ಚಂಚಳ ಜಾಣಾವೇ ಮಾಈಕ ।
ಏಸಾ ಪ್ರತ್ಯಯು ನಿಶ್ಚಯಾತ್ಮಕ । ವಿವೇಕೇ ಪಾಹಾವಾ ॥೪೯॥
ಯೆಥೇ ಬಹುತ ನಲಗೆ ಖಳಖಳ । ಯೇಕ ಚಂಚಳ ಯೇಕ ನಿಶ್ಚಳ ।
ಶಾಶ್ವತ ಕೋಣತೇ ಕೇವಳ । ಜ್ಞಾನೇ ವೊಳಖಾವೇ ॥೫೦॥
ಅಸಾರ ತ್ಯಾಗೂನ ಘೇಈಜೆ ಸಾರ । ಮ್ಹಣೋನ ಸಾರಾಸಾರ ವಿಚಾರ ।
ನಿತ್ಯಾನಿತ್ಯ ನಿರಂತರ । ಪಾಹಾತೀ ಜ್ಞಾನೀ ॥೫೧॥
ಜೇಥೇ ಜ್ಞಾನ ಚಿ ಹೋತೇ ವಿಜ್ಞಾನ । ಜೇಥೇ ಮನ ಚಿ ಹೋತೇ ಉನ್ಮನ ।
ತೇಥೆ ಕೈಚೇ ಚಂಚಳಪಣ । ಆತ್ಮಯಾಸೀ ॥೫೨॥
ಸಾಂಗಣೋವಾಂಗಣೇಚೇ ಕಾಮ ನವ್ಹೇ । ಆಪುಲ್ಯಾ ಅನುಭವೇ ಜಾಣಾವೇ ।
ಪ್ರತ್ಯಯಾವಿಣ ಶಿಣಾವೇ । ತೇ ಚಿ ಪಾಪ ॥೫೩॥
ಸತ್ಯಾಯೇವಢೇ ಸುಕೃತ ನಾಹೀ । ಅಸತ್ಯಾಯೇವಢೇ ಪಾಪ ನಾಹೀ ।
ಪ್ರಚಿತೀವಿಣ ಕೋಠೇ ಚಿ ನಾಹೀ । ಸಮಾಧಾನ ॥೫೪॥

ಆದರೆ ಇವನು ಎಲ್ಲವುಗಳಅಂತರ್ಯಾಮದಲ್ಲಿ ಇದ್ದು ನಡೆಯಿಸುವದರಲ್ಲಿ ಇವನ ಕರಾಮತಿಯುಮರ್ಮ ಅಗಾಧವಿರು ವದು. ಸರ್ವದರಲ್ಲಿ ಇದ್ದೂ ಎಲ್ಲವುಗಳಿಂದ ಬೇರೆಯಾಗಿಯೇ ಉಳಿಯುವನು. ಇವನ ಲೀಲೆಯು ನಿಜವಾಗಿಯೂ ಅಗಾಧ ವಿರುವದು. ಇದರಿಂದ ಅನಿಸುವದೇನಂದರೆ "ಅವನ ಲೀಲೆ ಅವನಿಗೇಗೊತ್ತು" ಎಂದು ನಾವು ಅನ್ನಬೇಕಾಗುವದು. [೪೨] ಇವನು ಪುರುಷನಲ್ಲ, ಇವನು ಸ್ತ್ರೀ ಅಲ್ಲ, ಇವನು ಬಾಲಕನಲ್ಲ, ತರುಣನಲ್ಲ ಅಥವಾ ಕುಮಾರಿ ಅಲ್ಲ. ನಪುಂಸಕನ ದೇಹ ದಲ್ಲಿ ಇದ್ದೂ ಸಹ ಇವನು ನಪುಂಸಕನಲ್ಲ. [೪೩] ಇವನು ಸರ್ವ ದೇಹಗಳನ್ನು ನಡೆಸುವನು. ಆದರೆ ಹೀಗೆ ನಡೆ ಯಿಸಿಯೂ ಸಹ ಇವನು ಸರ್ವವನ್ನೂ ಮಾಡಿ ಅಕರ್ತಾ ಇರುವನು ಅನ್ನುವ ವರ್ಣನೆಯನ್ನು ವೇದಾಂತಿಗಳು ಮಾಡುವರು. ದೇಹದಲ್ಲಿ ಇದ್ದಾಗ ಇವನಿಗೆ ಕ್ಷೇತ್ರಜ್ಞ. [ಆತ್ಮಾ], ಕ್ಷೇತ್ರವಾಸಿ, ಅಥವಾ ಕೂಟಸ್ಥ [ಮೂಲಪುರುಷ] ಎಂದು ಅನ್ನುವರು. [೪೪] ಶ್ಲೋಕ:- ದ್ವಾವಿಮೌ ಪುರುಷೌ ಲೋಕೇಕ್ಷರಶ್ಚಾಕ್ಷರ ಏವ ಚ। ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ॥(ಭ.ಗೀ.ಅ.೧೫.ಶ್ಲೋ.೧೬) ಶ್ಲೋಕಾರ್ಥ:- "ಈ ಲೋಕದಲ್ಲಿ ಈ ಇಬ್ಬರೇ ಪುರುಷರಿರುವರು. ಅವರ ಹೆಸರು ಕ್ಷರ ಮತ್ತು ಅಕ್ಷರವೆಂದು ಅನ್ನುವರು. ಎಲ್ಲ ಭೂತಗಳಿಗೆ ಕ್ಷರ ಪುರುಷ ಎಂದು ಅನ್ನುವರು. ಕೂಟಸ್ಥನಿಗೆ ಅಕ್ಷರ ಪುರುಷ ಎಂದು ಅನ್ನುವರು." ಈ ವಿಶ್ವದಲ್ಲಿ ಇಬ್ಬರು ಪುರುಷ ರಿರುವರು. ಅವರಿಗೆ ಕ್ಷರ ಮತ್ತು ಅಕ್ಷರ ಎನ್ನುವರು. ಎಲ್ಲ ಭೂತಗಳಿಗೆ ಕ್ಷರ ಎನ್ನುವರು. ಮತ್ತು ಕೂಟಸ್ಥನಿಗೆ (ಜೀವಕ್ಕೆ) ಅಕ್ಷರ ಎಂದು ಅನ್ನುವರು. [೪೫] ಇವರಿಬ್ಬರಿಗಿಂತ ಇನ್ನೊಬ್ಬನಿರುವನು. ಅವನಿಗೆ ಉತ್ತಮ ಪುರುಷನೆಂದು ಅನ್ನಬಹುದು. (ಅನ್ನುವರು). ಅವನು ಅಗದೀ ಪ್ರಪಂಚರಹಿತ, ಕಲಂಕರಹಿತ, ಮಲರಹಿತ, ಮತ್ತು ವಿಕಾರರಹಿತನಾದ ಪರಮಾತ್ಮನೇ ಆಗಿರುವನು. [೪೬] ಈಗ ಸಾಧಕರು ತತ್ವಜ್ಞಾನದ ಈ ಜಾಲ(ಜಂಜಾಟ)ದೊಳಗಿಂದ ಯಾವುದನ್ನು ಅಥವಾ ಏನನ್ನು ಪಡೆಯಬೇಕು ಇದರಬಗ್ಗೆ ಹೇಳುವರು:- ಸಾಧಕರು ನಾಲ್ಕೂ ದೇಹಗಳ ನಿರಸನ ಮಾಡಬೇಕು. ಅವರು ದೇಹದ ಆಚೆಗೆ ಹೋಗಬೇಕು. ದೇಹದ ಆಚೆಗೆ ಹೋದರೆಂದರೆ ಸಾಧಕರು ಅನನ್ಯ ಭಕ್ತರಾಗುವರು. (೪೭) ನಾಲ್ಕೂ ದೇಹ ಗಳ ನಿರಸನವಾಯಿತೆಂದರೆ ಆಗ ಆ ಸ್ಥಳದಲ್ಲಿ ಅಂತರಾತ್ಮಾ-ಒಳಗೆ ಇರುವಂಥ ಆತ್ಮಾ-ಅಲ್ಲಿ ಹೇಗೆ ಉಳಿದಾನು? ಅಂದರೆ ಉಳಿಯುವದಿಲ್ಲ. ವಿಕಾರರಹಿತ ಸ್ವರೂಪದಲ್ಲಿ ವಿಕಾರಕ್ಕೆ ಎಷ್ಟೂ ಸ್ಥಳವೇ ಇರುವದಿಲ್ಲ. ಅಂದರೆ ಬ್ರಹ್ಮನಿಗೆ ವಿಕಾರಗಳೇ ಇಲ್ಲ. (೪೮) ಒಂದೇ ಇರುವ ಪರಬ್ರಹ್ಮವಷ್ಟೇ ಅಗದೀ ನಿಶ್ಚಲವಿರುವದು. ಬದಲಾವಣೆ ಹೊಂದುವ ದೆಲ್ಲವೂ ಮಾಯಾಮಯವಿರುವದೆಂದು ನಿಶ್ಚಯವಾಗಿ ತಿಳಿಯಿರಿ. ಅಗದೀ ಆಳವಾದ ವಿಚಾರಮಾಡಿ ಇದರ ನಿಶ್ಚಯಾ ತ್ಮಕ ಅನುಭವ ಪಡೆಯಿರಿ. (೪೯) ಈ ವಿಷಯದ ಬಗ್ಗೆ ಸುಮ್ಮನೇ ಬಹಳ ಗುಲ್ಲೆಬ್ಬಿಸುವ ಕಾರಣವಿಲ್ಲ. ಒಟ್ಟು ಎರಡೇ ಮಾತುಗಳು ಇರುವವು. ಒಂದು ನಿಶ್ಚಲ. ಮತ್ತು ಒಂದು ಚಂಚಲವು. ಇವುಗಳಲ್ಲಿ ಶಾಶ್ವತವಾದದ್ದು ಯಾವುದು ಇರುವದು? ಇದನ್ನು ಜ್ಞಾನದಿಂದ ಕೇವಲ ಸೂಕ್ಷ್ಮ ವಿವೇಕದಿಂದ ಗುರುತಿಸಬೇಕು. (೫೦) ಅಸಾರವನ್ನು ಬಿಟ್ಟುಕೊಟ್ಟು ಸಾರವನ್ನು ತೆಗೆದುಕೊಳ್ಳುವದಕ್ಕಾಗಿಯೇ ಸಾರಾಸಾರ ವಿಚಾರ ಮಾಡಬೇಕಾಗುವದು. ಶಾಶ್ವತ ಯಾವುದು? ಮತ್ತು ಅಶಾಶ್ವತ ಯಾವುದು? ಇದರ ವಿಚಾರವನ್ನು ಜ್ಞಾನಿಜನರು ನಿರಂತರವೂ ಮಾಡುತ್ತಲಿರುವರು. (೫೧) ಜ್ಞಾನವು ನಿದಿಧ್ಯಾಸದಿಂದ ಯಾವಾಗ ವಿಜ್ಞಾನವಾಗುವದೋ ಅಂದರೆ ಪ್ರತ್ಯಕ್ಷ ಅನುಭವದಲ್ಲಿ ಅದು ರೂಪಾಂತರವಾಗುವದೋ ಇದರಂತೆಯೇ ಯಾವಾಗ ಮನಸ್ಸು ಒಲ್ಲದ ಮನಸ್ಸಾಗಿ ಮನವೇಬದು ಹೋಗಿ ಅದು ಉನ್ಮನವಾಗುವದೋ ಆ ಅವಸ್ಥೆಯಲ್ಲಿ ಮೊದಲಿನ ಪ್ರಕಾರ ಅಂತರಾತ್ಮನಲ್ಲಿರುವ ಚಂಚಲತನವು ಶಿಲುಕು ಉಳಿಯುವದಿಲ್ಲ. (೫೨) ನಾನು ಈಗ ಏನನ್ನು ಹೇಳುತ್ತಿರುವೆನೋ ಇದು ಬರೇ ಹೇಳುವ ಕೇಳುವ ಬಾಯಿಬಡಾಯಿಯ ನಿರುಪಯೋಗಿ ಕೆಲಸವಲ್ಲ. ನೀವು ಸ್ವತಃ ಅನುಭವ ಪಡೆದು ಇದನ್ನು ತಿಳಿಯುವದಿರುವದು. ಅನುಭವದ ಹೊರತಾಗಿ ತಕರಾರು ಮಾಡುವದು ದುರ್ವಾದ ಮಾಡುವದು-ಇದು ನಿಜವಾ ಗಿಯೂ ಪಾಪದ ಕಾರ್ಯವೆನಿಸುವದು. (೫೩) ಪಾಪ ಮತ್ತು ಪುಣ್ಯ ಇವುಗಳ ವ್ಯಾಖ್ಯೆಯನ್ನು ಮಾಡುವರು:- ಸತ್ಯದಂಥ ಪುಣ್ಯವಿಲ್ಲ. ಅಸತ್ಯದಂಥ ಪಾಪವಿಲ್ಲ. ಅನುಭವದ ಹೊರತಾಗಿ ಸಮಾಧಾನ ದೊರಕುವದು ಶಕ್ಯವಿಲ್ಲ. (೫೪)

ಸತ್ಯ ಮ್ಹಣಿಜೆ ಸ್ವರೂಪ ಜಾಣ । ಅಸತ್ಯ ಮಾಯಾ ಹೇ ಪ್ರಮಾಣ ।
ಯೇಥೇ ನಿರೋಪಿಲೇ ಪಾಪಪುಣ್ಯ । ರೂಪೇಸಹಿತ ॥೫೫॥

ದೃಶ್ಯ ಪಾಪ ಮೊಸರಲೇ । ಪುಣ್ಯ ಪರಬ್ರಹ್ಮ ಉರಲೇ ।
ಅನನ್ಯ ಹೋತಾ ಚ ಜಾಲೇ। ನಾಮಾತೀತ ॥೫೬॥

ಆಪಣ ವಸ್ತು ಸ್ವತಸಿದ್ಧ । ತೇಥೇ ನಾಹೀ ದೇಹ ಸಮಂಧ ।
ಪಾಪರಾಸೀ ಹೋತೀ ದಗ್ಧ । ಯೇಣೇ ಪ್ರಕಾರೇ ॥೫೭॥

ಯೆರವೀ ಬ್ರಹ್ಮಜ್ಞಾನೇವೀಣ । ಜೇ ಜೇ ಸಾಧನ ತೋ ತೋ ಸೀಣ ।
ನಾನಾ ದೋಷಾಚೇ ಕ್ಷಾಳಣ । ಹೋಈಲ ಕೈಸೇ ॥೫೮॥

ಪಾಪಾಚೇ ವಳಲೇ ಶರೀರ । ಪಾಪ ಚಿ ಘಡೆ ತದ ನಂತರ ।
ಅಂತರೀ ರೋಗ ವರೀವರೀ ಉಪಚಾರ । ಕಾಯ ಕರೀ ॥೫೯॥

ನಾನಾ ಕ್ಷೇತ್ರೀ ಹೇ ಮುಂಡಿಲೇ । ನಾನಾ ತೀರ್ಥೀ ಹೇ ದಂಡಿಲೇ ।
ನಾನಾ ನಿಗ್ರಹೀ ಖಂಡಿಲೇ । ಠಾಈ ಠಾಈ ॥೬೦॥

ನಾನಾ ಮೃತ್ತಿಕೇನೇ ಘಾಸಿಲೇ । ಅಥವಾ ತಪ್ತಮುದ್ರೇನೇ ಲಾಸಿಲೇ ।
ಜರೀ ಹೇ ವರೀವರೀ ತಾಸಿಲೇ । ತರೀ ಶುದ್ಧ ನವ್ಹೆ ॥೬೧॥

ಸೇಣಾಚೆ ಗೋಳೆ ಗಿಳಿಲೇ । ಗೋಮುತ್ರಾಚೆ ಮೋಘೆ ಘೇತಲೆ ।
ಮಾಳಾ ರುದ್ರಾಕ್ಷ ಘಾತಲೇ । ಕಾಷ್ಠಮಣೀ ॥೬೨॥

ವೇಷ ವರೀವರೀ ಕೇಲಾ । ಪರೀ ಅಂತರೀ ದೋಷ ಭರಲಾ ।
ತ್ಯಾ ದೋಷಾಚ್ಯಾ ದಹನಾಲಾ । ಆತ್ಮಜ್ಞಾನ ಪಾಹಿಜೆ ॥೬೩॥

ನಾನಾ ವ್ರತೇ ನಾನಾ ದಾನೇ । ನಾನಾ ಯೋಗ ತೀರ್ಥಾಟಣೇ ।
ಸರ್ವಾಹುನೀ ಕೋಟೀಗುಣೇ । ಮಹಿಮಾ ಆತ್ಮಜ್ಞಾನಾಚಾ ॥೬೪॥

ಆತ್ಮಜ್ಞಾನ ಪಾಹೇ ಸದಾ । ತ್ಯಾಚ್ಯಾ ಪುಣ್ಯಾಸ ನಾಹೀ ಮರ್ಯಾದಾ ।
ದುಷ್ಟ ಪಾತಕಾಚೀ ಬಾಧಾ । ನಿರಸೋನ ಗೇಲೀ ॥೬೫॥

ಸತ್ಯ ಅಂದರೆ ಆತ್ಮಸ್ವರೂಪವಾಗಿದೆ. ಅಸತ್ಯ ಅಂದರೆ ಮಾಯಾ ಆಗಿದೆ. ಇವು ಅನುಭವ ಸಿದ್ಧವಾದವು. ಪಾಪ ವ ಪುಣ್ಯ ಇವುಗಳ ನಿಜ ಲಕ್ಷಣಗಳನ್ನು ಹೇಳಿದೆವು.(೫೫)ಮಾಯಾಮಯವಾದ ಅಸಾರ ದೃಶ್ಯವೆಲ್ಲವೂ ಪಾಪವು. ಇದು ಹೋದಮೇಲೆ ಅಥವಾ ಅಳಿದ ಮೇಲೆ ಆಗ ಅಲ್ಲಿ ಪರಬ್ರಹ್ಮಸ್ವರೂಪವೆಂಬ ಪುಣ್ಯವಷ್ಟೇ ಶಿಲ್ಲಕ ಉಳಿಯುವದು. ಈ ಪುಣ್ಯದೊಂದಿಗೆ ಚಿಂತನದಿಂದ ತದಾಕಾರವಾಯಿತೆಂದರೆ ಅರ್ಥಾತ್ ಸಾಧಕನು ಅದೇ ತಾನಾದ ಮೇಲೆ ಮಾತು ಗಳು ಬಾರದಾಗುವವು. ಏನೂ ಅನ್ನಲು ಬರುವದಿಲ್ಲ.ನಾನುಬೇರೆಅನ್ನುವದರ ಮರೆವಾಗುವದು.ಆಗ ಶಬ್ದಗಳ ಆಚೆಗೆ ಹೋಗಲಿಕ್ಕೆ ಬರುವದು. (೫೬) ಸ್ವತಃ ಸಿದ್ಧ ಪರಮಾತ್ಮವಸ್ತು ತಾನೇ ಇರುವೆನೆಂಬ ಪ್ರತ್ಯಕ್ಷ ಅನುಭವ ಬರು ವದು. ಅಲ್ಲಿ ದೇಹದ ಮತ್ತು ದೃಶ್ಯದ ಸಂಬಂಧ ಏನೂ ಇರುವದಿಲ್ಲ. ಸ್ವತಃ ಸಿದ್ಧನಾದವನಲ್ಲಿಯು ಪಾಪದ ರಾಶಿ ಗಳು ಈ ರೀತಿ ಸುಟ್ಟು ಭಸ್ಮವಾಗಿ ಹೋಗುವವು. (೫೭) ನಿಜವಾಗಿಯೂ ಹೇಳುವದಾದರೆ ಬ್ರಹ್ಮಜ್ಞಾನದ ಅನು ಭೂತಿ (ಅನುಭವ) ಇಲ್ಲದ ಶಿವಾಯ [ಹೊರತಾಗಿ] ಬೇಕಾದ ಸಾಧನಗಳನ್ನು ಮಾಡಿದರೂ ಅದು ವ್ಯರ್ಥ ಹಾಗೂ ಕಷ್ಟದಾಯಕವಾಗುವದು. ಬ್ರಹ್ಮಜ್ಞಾನವಿಲ್ಲದ ಹೊರತು ಅನೇಕ ಪ್ರಕಾರದ ಪಾಪದೋಷಾದಿಗಳು ನಿವಾರಣಹೊಂದ ಲಾರವು. [೫೮] ಈ ದೇಹವು ಮೂಲದಲ್ಲಿಯೇ ಪಾಪದಿಂದ ತಯಾರವದ್ದಿರುವದು. ಶರೀರ ಹುಟ್ಟಿಬಂದ ಮೇಲೆಯೂ ಸಹ ಅದರಿಂದ [ಶರೀರದಿಂದ] ಪಾಪವೇ ಘಟಿಸುತ್ತ ಹೋಗುವದು. ಯಾಕೆಂದರೆ ದೃಶ್ಯವೇ ಸತ್ಯ ವೆಂದು ನಂಬಿರುವದು ಒಂದು ರೋಗವು. ಶರೀರದಲ್ಲಿ ಇದು ಗಟ್ಟಿಯಾಗಿ ಸೇರಿ ತಳಹಿಡಿದು ಕುಳಿತ ಮೇಲೆ ಅದಕ್ಕೆ ಕೇವಲ ಮೇಲಿನ ಅಂಥಿಂಥ ಕೀಳು ಉಪಚಾರಗಳು ಉಪಯೋಗ ಬೀಳುವದಿಲ್ಲ. ದೃಶ್ಯವೇ ಮೂಲದಿಂದಲೂ ಪಾಪ ಕರವಿರುವದು.ಆ ದೃಶ್ಯದ ಪಂಚಭೂತಗಳದೇ ದೇಹವಿರುವದರಿಂದ ಮತ್ತು ಈ ದೃಶ್ಯದೇಹವನ್ನು ದೃಶ್ಯದಿಂದ ಸುಖ ಪಡೆದುಕೊಳ್ಳುವದಕ್ಕಾಗಿಯೇ ಉಪಯೋಗಿಸಿಕೊಂಡದ್ದರಿಂದ ಅದು ಪಾಪದ ಆಚರಣೆ ಮಾಡುತ್ತಲೇ ಇರುವದು. ಈ ರೀತಿಯಲ್ಲಿ ಆಳವಾಗಿ ಹೋದಂಥ ದೇಹಬುದ್ಧಿ ಕೇವಲ ಸಾದಾ ಉಪಚಾರ ಮಾತ್ರದಿಂದ ಹೋಗಲಾರದು. (೫೯) ಮೇಲೆ ಮೇಲಿನ ಉಪಚಾರ ಹೇಗೆ ವ್ಯರ್ಥವಿರುವದು?ಇದನ್ನು ಹೇಳುವರು:- ಅನೇಕ ಕ್ಷೇತ್ರಗಳಿಗೆ ಹೋಗಿ ದೇಹದ ಮುಂಡನ ಮಾಡಿಸಿದರೆ, ಅನೇಕ ತೀರ್ಥಗಳಿಗೆ ಹೋಗಿ ದೇಹಕ್ಕೆ ಕಷ್ಟಕೊಟ್ಟರೆ, ಅನೇಕ ಪ್ರಕಾರದ ನಿಗ್ರಹ [ಹಿಂಸೆ, ದಂಡನೆ]ಮಾಡಿ ದೇಹಕ್ಕೆ ಅಲ್ಲಲ್ಲಿ ಕಡಿದರೆ[ಘಾಯಾದಿ ಕ್ರೂರ ಕಾರ್ಯ ಮಾಡಿದರೆ] [೬೦]ಅಥವಾ ಬೇರೆಬೇರೆ ಸ್ಥಳಗಳ ಲ್ಲಿಯ ಮಣ್ಣಿನಿಂದ ದೇಹವನ್ನು ತಿಕ್ಕಿಕೊಂಡರೆ, ಕಾಸಿದ ಮುದ್ರೆಯಿಂದ ದೇಹಕ್ಕೆ ಹಚ್ಚಿಕೊಂಡರೆ, ದೇಹದ ಸರ್ವಾಂಗ ಕ್ಷೌರ ಮಾಡಿಸಿದರೆ ಅರ್ಥಾತ್ ಈ ರೀತಿಯಲ್ಲಿ ದೇಹ ದಂಡಿಸಿದರೆ ದೇಹ ಶುದ್ಧವಾಗುವದಿಲ್ಲ. [೬೧] ಶಗಣಿ ಅಥವಾ ಗೋಮಳಯದಗುಳಿಗೆ ಮಾಡಿ ನುಂಗಿದರೆ, ಗೋಮೂತ್ರವನ್ನು ಗಡಿಗೆಗಟ್ಟಲೆ ಕುಡಿದರೆ, ಮಾಲೆ-ರುದ್ರಾಕ್ಷಿ-ತುಳಸೀ ಕಾಷ್ಠ ಮಣಿಯ ಸರವನ್ನು ಕೊರಳಲ್ಲಿ ಧರಿಸಿದರೆ [೬೨] ಬಾಹ್ಯದ ವೇಷವನ್ನು ಅಗದೀ ಬದಲಿಸಿದರೆ ಇಂಥ ಅನೇಕ ಉಪಚಾರವೆಲ್ಲವನ್ನು ಮಾಡಿದರೆ ಇವು ಮೇಲಿನ ಉಪಚಾರಗಳೆನಿಸುವವು. ಒಳಗೆ ತುಂಬಿರುವ ದೋಷರಾಶಿಗೆ ಇದ ರಿಂದ ಯಾವ ಧಕ್ಕೆಯೂ ಹತ್ತುವದಿಲ್ಲ. ಅಂದರೆ ಪಾಪನಾಶವಾಗುವದಿಲ್ಲ. ಈ ದೋಷದಹನಕ್ಕೆ ಆತ್ಮಜ್ಞಾನವೊಂದೇ ನಿಜವಾದ ಉಪಾಯವಿರುವದು. [೬೩] ಎಲ್ಲ ವ್ರತ, ದಾನ, ಯೋಗ, ಯಾಗ, ತೀರ್ಥಾಟನ ಇವೆಲ್ಲವುಗಳಿಗಿಂತ ಆತ್ಮಜ್ಞಾನದ ಮಹಿಮೆಯು ಕೋಟಿ ಪಟ್ಟು ಹೆಚ್ಚಿನದಿರುವದು. [೬೪] ಯಾರು ಸದೈವ (ಯಾವಾಗಲೂ) ಆತ್ಮ ಜ್ಞಾನ ಸಂಪನ್ನರಿರುವರೋ ಅವರ ಪುಣ್ಯಕ್ಕೆ ಎಣೆಯೇ ಇಲ್ಲ. ದೇಹ ಬುದ್ಧಿಯ ದುಷ್ಟಪಾಪದ ಬಾಧೆ ಮೊದಲು ಆದದ್ದು ಈ ಆತ್ಮಜ್ಞಾನದಿಂದ ಇಲ್ಲವಾಗಿ ಹೋಗುವದು. (೬೫)

ವೇದಶಾಸ್ತ್ರೀ ಸತ್ಯಸ್ವರೂಪ । ತೇ ಚಿ ಜ್ಞಾನಿಯಾಚೇ ರೂಪ ।
ಪುಣ್ಯ ಜಾಲೇ ಅಮಾಪ । ಸುಕೃತೇ ಸೀಮಾ ಸಾಂಡಿಲೀ ॥೬೬॥

ಯಾ ಪ್ರಚಿತೀಚ್ಯಾ ಗೋಷ್ಟೀ । ಪ್ರಚಿತ ಪಾಹಾವೀ ಆತ್ಮದೃಷ್ಟೀ ।
ಪ್ರಚಿತೀ ವೇಗಳೇ ಕಷ್ಟೀ । ಹೋಊಚ ನಯೆ ॥೬೭॥

ಆಗಾ ಯೇ ಪ್ರಚಿತೀಚೆ ಲೋಕ ಹೋ । ಪ್ರಚಿತ ನಸ್ತಾ ಅವಘಾ ಶೋಕ ಹೊ ।
ರಘುನಾಥ ಕೃಪೇನೇ ರಾಹೋ । ಪ್ರತ್ಯಯು ನಿಶ್ಚಯಾಚಾ ॥೬೮॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
''ಚಳಾಚಳ ನಿರೂಪಣ ನಾಮ'' ಸಮಾಸ ದಶಮ ॥

● ●

ದಶಕ ದಹಾವಾ ಸಮಾಪ್ತ

● ●

ವೇದ ಶಾಸ್ತ್ರಾದಿಗಳಲ್ಲಿ ಸತ್ಯಸ್ವರೂಪದ ಅಂದರೆ ಪರಮಾತ್ಮ ಸ್ವರೂಪದ ಬಗ್ಗೆ ಯಾವ ವರ್ಣನೆ ಇರುವದೋ ಅದು ಜ್ಞಾನಿಪುರುಷರ ರೂಪವೇ ಇರುವದು. ಇಂಥ ಜ್ಞಾನಿ ಪುರುಷರಲ್ಲಿ ಪ್ರಚಂಡ ಪುಣ್ಯದ ಸಂಗ್ರಹ ಕೂಡಿ ಬೀಳುವದು. ಇವನ ಹತ್ತಿರ ಸೀಮಾತೀತವಾದ ಸುಕೃತ ಕಂಡು ಬರುವದು. (೬೬) ಈ ಮಾತುಗಳೆಲ್ಲ ಅನುಭವ ಸಿದ್ಧವೇ ಇರುವವು. ನನ್ನ ಅನುಭವದವೇ ಇರುವವು. ಸ್ವಸ್ವರೂಪದ ಅನುಭವ ಪಡೆದು ಇದರ ಪ್ರತೀತಿ ನೋಡಿರಿ. ಅನುಭವ ಪಡೆಯದೆ ಸುಮ್ಮನೆ ದುಃಖಿಗಳಾಗಬೇಡಿರಿ. (೬೭) ಅಯ್ಯಾ ಪ್ರತೀತಿ ಪಡೆಯಬೇಕೆಂದು ಪ್ರಯತ್ನಪಡುವ ವಿವೇಕಿಗಳಾದ ಲೋಕದ ಜನರೇ, ಪ್ರತೀತಿ [ಪ್ರಚೀತಿ, ಅನುಭವ] ಪಡೆಯುವ ಪ್ರಯತ್ನವನ್ನು ವಿವೇಕ ಹಾಗೂ ಬುದ್ಧಿವಂತಿಕೆಯಿಂದ ಮಾಡಿರಿ. ಯಾಕೆಂದರೆ ಅನುಭವ ಇಲ್ಲದ್ದು ದುಃಖಕ್ಕೆ ಕಾರಣವಾಗುವದು. ಆದ್ದರಿಂದ ನಾನು ಪ್ರಾರ್ಥಿಸಿಕೊಳ್ಳುವದೇನಂದರೆ, "ರಾಮರಾಯಾ ನಿನ್ನ ಕೃಪೆಯಿಂದ ಪ್ರತೀತಿ ಪಡೆಯುವ ಜನರ ನಿಶ್ಚಯವು ಯಾವಾಗಲೂ ಸ್ಥಿರಗೊಳ್ಳಲಿ" (೬೮)

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಹತ್ತನೆಯ ದಶಕದ
"ಚಲಾಚಲ ನಿರೂಪಣ"ವೆಂಬ ಹತ್ತನೆಯ ಸಮಾಸವು ಮುಗಿದುದು.

• •

# ಪೂರ್ವಾರ್ಧದ ಸಿಂಹಾವಲೋಕನ

ಗ್ರಂಥರಾಜ ದಾಸಬೋಧದ ಪೂರ್ವಾರ್ಧ ಮುಗಿಯಿತು. ಉತ್ತರಾರ್ಧ ಆರಂಭ ಮಾಡುವ ಮೊದಲು ಸ್ವಲ್ಪ ಸಿಂಹಾವಲೋಕನ ಮಾಡುವದು ಅವಶ್ಯವಿರುವದು, ಈವರೆಗಿನ ಹತ್ತು ದಶಕಗಳಲ್ಲಿ ಶ್ರೀಸಮರ್ಥರು ಈ ಮುಂದಿನ ಮಾತುಗಳನ್ನು ಸ್ಪಷ್ಟವಾಗಿ ಹೇಳಿದ್ದಾರೆ.[ಒಂದು] ಮಾನವೀಯ ಜೀವನದಲ್ಲಿ ಜ್ಞಾನಕ್ಕಿಂತ ಶ್ರೇಷ್ಠವಾದದ್ದು ಯಾವದೂ ಇಲ್ಲವೇ ಇಲ್ಲವು. ಜ್ಞಾನವೇ ಸರ್ವಶ್ರೇಷ್ಠವಾದದ್ದು ಇದರಲ್ಲಿ ಯಾವ ಸಂಶಯವಿಲ್ಲ. ಜ್ಞಾನದ ಪ್ರಕಾರಗಳಲ್ಲಿ ಆತ್ಮಜ್ಞಾನವು ಮಾತ್ರ ಪರಮಪವಿತ್ರವಿರುವದು. ಇದರಂಥ ಜ್ಞಾನ ಇನ್ನೊಂದಿಲ್ಲ. [ಎರಡು] ಆತ್ಮಜ್ಞಾನವೆಂದರೆ ನಿಜವಾದ ದೇವರ ದರ್ಶನವು. ಇದರಿಂದ ಮಾನವರಿಗೆ ಶಾಶ್ವತ ಮತ್ತು ಸಂಪೂರ್ಣ ಸಮಾಧಾನ ಲಭಿಸುವದು. [ಮೂರು] ಇತರ ಜ್ಞಾನಗಳಲ್ಲಿ ಜ್ಞಾತಾ ಅಥವಾ ತಿಳಿಯುವವನಾದ ನಾನು ಬೇರೆತನದಿಂದ [ಪ್ರತ್ಯೇಕವಾಗಿ ಉಳಿದು] ವಸ್ತುವಿನ ಜ್ಞಾನ ಮಾಡಿಕೊಳ್ಳುವನು. ಆತ್ಮಜ್ಞಾನದಲ್ಲಿ ಜ್ಞಾತಾ ಅಂದರೆ ತಿಳಿಯುವವನು ಆತ್ಮವಸ್ತುವಿನೊಂದಿಗೆ ತದಾತ್ಮ ಹೊಂದಿ ಅದರ ಜ್ಞಾನ ಮಾಡಿಕೊಳ್ಳುವನು. ಆದ್ದರಿಂದ ದೇವದರ್ಶನವಾದಂಥ ಪುರುಷನು ದೇವರೂಪವೇ ಆಗುವನು. [ನಾಲ್ಕು] ಆತ್ಮವಸ್ತುವು ಅದೃಶ್ಯ ಮತ್ತು ಸೂಕ್ಷ್ಮವಿರುವದು. ಇದರ ಪ್ರಾಪ್ತಿಯ ಬಗ್ಗೆ ತಳಮಳ [ಹಂಬಲ] ಹತ್ತಬೇಕಾದರೆ ದೃಶ್ಯದ ಅಂದರೆ ಪ್ರಪಂಚದ ಮೇಲಿನ ಪ್ರೇಮದಿಂದ ಬಿಡುಗಡೆಯಾಗುವದು ಅವಶ್ಯವಿದೆ. [ಐದು] ಪ್ರಪಂಚದ ಸ್ವರೂಪವನ್ನು ಪರೀಕ್ಷಿಸಿ ನೋಡಿದರೆ ಇದು ಎಲ್ಲ ಕಡೆಯಿಂದಲೂ ಅಪೂರ್ಣವಿರುವದೆಂದು ಕಂಡುಬರುವದು. ಆದ್ದರಿಂದ ಪ್ರಪಂಚವು ದುಃಖಮಯವಾಗಿ ಇರುವಂಥದೇ ಆಗಿರುವದು. ಇದರ ಮನವರಿಕೆಯು ಮೇಲೆಯೋ ಮನುಷ್ಯನು ದೇವದರ್ಶನಕ್ಕಾಗಿ-ಅವನ ಶೋಧಕ್ಕಾಗಿ ತಯಾರಾಗುವನು.[ಆರು] ದೇವರು ಕೊನೆಗೆ ತನ್ನಲ್ಲಿಯೇ ಇದ್ದುದು ಗೊತ್ತಾಗುವದು. ಅವನು ಕೈವಶವಾಗಬೇಕಾದರೆ ತನ್ನಲ್ಲಿಯ ಸದ್ಯದ "ನಾನು" ಇದನ್ನು ಆಮೂಲಾಗ್ರ ಬದಲಾಯಿಸಬೇಕಾಗುವದು. ಇದಕ್ಕಾಗಿ ಸದ್ವಿದ್ಯಾ, ಸತ್ವಗುಣ, ಉತ್ತಮಗುಣ ಇವುಗಳ ಅಭ್ಯಾಸದ ಅವಶ್ಯಕತೆಯು ಪ್ರಾರಂಭದಲ್ಲಿ ಅವಶ್ಯವಿರುವದು. [ಏಳು] ನಂತರ ನಾವು ದೇವರಿಗಾಗಿ ಅಥವಾ ಸದ್ಗುರುವಿಗಾಗಿ ಬದುಕನ್ನು ಮುಡುಪಾಗಿಡಬೇಕಾಗುವದು. ಜೀವಿಸುವದು ಈ ಉದ್ದೇಶ ಪೂರ್ತಿಗಾಗಿ ಇರುವದು. ಆದ್ದರಿಂದ ದೇವ ಸದ್ಗುರು ಇವರ ಇಚ್ಛೆಯಲ್ಲಿ ನಿಮ್ಮ ಇಚ್ಛೆ ಕೂಡಿಸಬೇಕು. ಅದರೊಂದಿಗೆ ಅನನ್ಯರಾಗಬೇಕು. ಈ ಮಾರ್ಗವು ಕೊನೆಗೆ "ನಾನು" ಅನ್ನುವದನ್ನು ಕೊನೆಗೊಳಿಸಿ ಅಂದರೆ ವಾಸನಾದಕ್ಷಯಮಾಡಿಸಿ ಆತ್ಮಜ್ಞಾನದವರೆಗೂ ನಿಮ್ಮನ್ನು ಒಯ್ಯುವದು. [ಎಂಟು] ಮನುಷ್ಯರ ಅಂತರ್ಯಾಮದಲ್ಲಿ ಒಂದು ಖರೇ[ನಿಜವಾದ]ಇನ್ನೊಂದುಖೊಟ್ಟಿ [ಸುಳ್ಳು] ಹೀಗೆ ಎರಡು "ನಾನು" ಇರುವವು. ಆತ್ಮಜ್ಞಾನವಾಗಬೇಕಾದರೆ ಖೊಟ್ಟಿಯಾದ "ನಾನು" ಇದನ್ನು ವಿವೇಕ ವಿಚಾರದಿಂದ ಬದಿಗೆ [ಬಾಜೂಕ್ಕೆ] ಸರಿಸಿ ಖರೇ ಇರುವ "ನಾನು" ಇದರ ಶೋಧ ಮಾಡಬೇಕಾಗುವದು. [ಒಂಭತ್ತು] ಮೊದಲಿಗೆ ಸತ್ಪುರುಷರಿಂದ ಆತ್ಮಸ್ವರೂಪದ ಬಗ್ಗೆ ಶ್ರವಣ ಮಾಡಬೇಕಾಗುವದು. ಆ ಸ್ವರೂಪ ಹೀಗೆ ಇರುವದು:-ಆತ್ಮಾ, ಮತ್ತು ಬ್ರಹ್ಮ ಒಂದೇ ಆಗಿವೆ. ಬ್ರಹ್ಮವು ಒಂದೇ ಒಂದಾದದ್ದು. ಮತ್ತು ಅದ್ವಿತೀಯ ಇರುವದು. ಇದರಲ್ಲಿ ಭೇದದ ಅನೇಕತನದ, ಅಥವಾ ಚಂಚಲತನದ ಭಾಸವಾಗುವದು. ಇದೇ ಮೂಲ ಮಾಯಾ ಇರುವದು. ಮೂಲಮಾಯೆಯಲ್ಲಿ ಶುದ್ಧ ಅರಿವು ಇರುವದು. ಇದೇ ಈಶ್ವರವು. ಮೂಲ ಮಾಯೆಯಲ್ಲಿ ಐದು ಮಹಾಭೂತಗಳು ಮತ್ತು ಮೂರು ಗುಣಗಳು ಒಟ್ಟಿಗೇ ಇರುವವು. ಇವುಗಳಲ್ಲಿಂದ ಗುಣಮಾಯಾ ಪ್ರಕಟವಾಯಿತು. ಮತ್ತು ವಿಶ್ವದ ರಚನೆಯೂ ಆಯಿತು. [ಹತ್ತು] ಯಾವುದು ಪಿಂಡದಲ್ಲಿ ಅದೆಯೋ ಅದೇ ಬ್ರಹ್ಮಾಂಡದಲ್ಲಿ ಇರುವದು. ಎಲ್ಲ ವಿಶ್ವದಲ್ಲಿ ಒಂದೇ ಒಂದು ಮೂಲ ಅರಿವು ಕೆಲಸ ಮಾಡುತ್ತದೆ. ಇದಕ್ಕೆ ಜಗತ್‌ಜ್ಯೋತಿ ಅನ್ನುವರು. ಎಲ್ಲ ಕರ್ತೃತ್ವವು ಇದರದೇ ಇರುವದು. ಪಿಂಡದಲ್ಲಿ ಸಹ ಇವಳದೇ ಪ್ರಭುತ್ವ ನಡೆಯುವದು. [ಹನ್ನೊಂದು] ಅಜ್ಞಾನದಿಂದ ಜೀವವು ಆ ಜಗತ್‌ಜ್ಯೋತಿಯನ್ನು ಮರೆಯುವದು. ನಾನು ಸ್ವಸ್ವರೂಪವಿರದೇ ದೇಹವೇ ಇರು

ವೆನು. ಅನ್ನುವ ಗಟ್ಟಿಭಾವನೆ ಹೊಂದುವದು. ಇದರಿಂದ ಜೀವನು ಆಕುಂಚಿತಗೊಳ್ಳುವನು. ನಾನು ಕರ್ತಾ, ನಾನು ಭೋಕ್ತೃ-ಸುಖದುಃಖಿಗಳ ಒಡೆಯು ನನಗೆ ಜನ್ಮ ಮರಣ ಇರುವದು. ಇಂಥ ಕಲ್ಪನಾದಿಗಳಿಂದ ಜಗತ್ತಿನಲ್ಲಿ ವ್ಯವಹರಿಸುವೆವು. ಇದೇ ದೇಹಾ"ಹಂ"ತ[ದೇಹದ ಅಹಮಿಕೆ] ಮಾಯೆಯ ಪ್ರಭಾವ ಇರುವದು. [ಹನ್ನೆರಡು] ಈ ಅಹಮಿಕೆಯಿಂ (ಅಹಂಕಾರ) ದಾಗಿ ಜೀವವು ಸಂಕುಚಿತ (ಅಪೂರ್ಣ)ವಾಗುವದು. (ಮಂಗಬುದ್ಧಿಯದಾಗುವದು), ಸರ್ವ ಜಗತ್ತಿನ ವ್ಯವಹಾರವನ್ನು ಲೀಲೆಯಿಂದ ಮಾಡುವ-ಮಾಡಿಸುವ, ಇದರ ಸಾಮರ್ಥ್ಯ ಲೋಪವಾಗಿ ಜೀವವು ದೀನತೆಯುಳ್ಳದ್ದಾಗುವದು. ಆದ್ದರಿಂದ ತತ್ವವಿಚಾರದಿಂದ ಸರ್ವಚಂಚಲದ ಅರ್ಥಾತ್ ಅಹಂಕಾರದ ನಿರಾಸ (ಪರಿಹಾರ) ಮಾಡಿ ಸ್ವಸ್ವರೂಪದೊಂದಿಗೆ ಸಮರಸವಾಗಬೇಕು. ಇದು ಸಂತ ಸಾಧುಗಳು ಹೇಳುವದರ ಸಾರಾಂಶವಿರುವದು. [ಹದಿಮೂರು] ಇದರ ಮೇಲೆ ಪುನಃ ಪುನಃ ಮನನ ಮಾಡಬೇಕು. ಮನನದಿಂದ ಬುದ್ಧಿಯು ಅತ್ಯಂತ ಸೂಕ್ಷ್ಮವಾಗುವದು. ಮತ್ತು ಅದಕ್ಕೆ ಸ್ವಸ್ವರೂಪ ಚಿಂತನ ಮಾಡಲು ಶಕ್ತಿ ಬರುವದು. ಸತತವಾದ ಸ್ವರೂಪ ಚಿಂತನಕ್ಕೆ ನಿದಿಧ್ಯಾಸವೆನ್ನುವರು.ನಿದಿಧ್ಯಾಸದಿಂದ ಕೊನೆಗೆ ಆತ್ಮಸಾಕ್ಷಾತ್ಕಾರವಾಗುವದು. ಈ ಮಾರ್ಗವು ಸ್ವಸ್ವರೂಪದ ಅನುಸಂಧಾನದಿಂದ ಆತ್ಮಜ್ಞಾನದವರೆಗೆ ತಂದು ನಿಮ್ಮನ್ನು ಮುಟ್ಟಿಸುವದು. [ಹದಿನಾಲ್ಕು] ಇದು ವಿಚಾರಪ್ರಧಾನ ಮಾರ್ಗವಿರುವದು. ಮಾನವ ಜೀವನದಲ್ಲಿ ಸಾರಾಸಾರ ವಿಚಾರಕ್ಕೆ ಅಥವಾ ವಿವೇಕಕ್ಕೆ ಸರ್ವ ಶ್ರೇಷ್ಠ ಸ್ಥಾನವಿರುವದು ಇದನ್ನು ಹೇಳುವಾಗ ಶ್ರೀಸಮರ್ಥರಿಗೆ ಯಾವಾಗಲೂ ಬೇಸರ ಬಂದಿಲ್ಲ. ಪುನಃ ಪುನಃ ಹೇಳಿದ್ದನ್ನೇ ಹೇಳುವಾಗ ಸಂಕೋಚಪಟ್ಟುಕೊಂಡಿಲ್ಲ. ಆದರೆ ವಿಚಾರ ಅನ್ನುವದು ಇಮ್ಮಗಲಿನ ಶಸ್ತ್ರ (ಎರಡೂ ಕಡೆಗೂ ಹರಿತವಿರುವ ಶಸ್ತ್ರ) ವಿರುವದು. ಕುಶಲತೆಯಿಂದ ಉಪಯೋಗಿಸಿದರೆ ಇದು-ಎಲ್ಲ ಸಂಶಯಗಳನ್ನು ಪರಿಹರಿಸುವದು ಮತ್ತು ನಿಮ್ಮನ್ನು ಆತ್ಮಜ್ಞಾನದವರೆಗೆ ತ್ವರಿತವಾಗಿ ಕರೆದೊಯ್ಯುವದು. ಆದರೆ ಇದನ್ನು ಅಯೋಗ್ಯ ರೀತಿಯಿಂದ ಉಪಯೋಗಿಸಿದರೆ ನಿಮ್ಮ ಶ್ರದ್ಧಾಸ್ಥಾನವನ್ನೇ ಭ್ರಷ್ಟಗೊಳಿಸುವದು, ಅನೇಕ ಸಂಶಯದ ತೊಡರು-ತೊಡಕುಗಳ ಜಾಲವನ್ನೇ ನಿರ್ಮಾಣ ಮಾಡುವದು. ಮತ್ತು ಜೀವನದಲ್ಲಿ ಕೇವಲ ಗೊಂದಲವನ್ನು ಹುಟ್ಟಿಸಿ ನಿಮ್ಮನ್ನು ಹಾರಾಡಿಸುವದು, ಕುಣಿಸುವದು. ಆದ್ದರಿಂದ ಮನುಷ್ಯನ ವಿವೇಕವು ಕಲ್ಪನಾ ಪ್ರಧಾನವಿರಬಾರದು. ಅದು ಪ್ರತ್ಯಕ್ಷದ ಅನುಭವಕ್ಕನುಸಾರವಾಗಿ ಇರಬೇಕು. ಈ ಮಾತನ್ನು ಶ್ರೀಸಮರ್ಥರು ಪುನಃ ಪುನಃ ಒತ್ತಿ (ಬಜಾಯಿಸಿ) ಹೇಳಿದ್ದಾರೆ. ಪ್ರತೀತಿ ಇಲ್ಲದಿದ್ದರೆ ಅದು ಅನುಭವವಿಲ್ಲದ ಪರಮಾರ್ಥವಾಗುವದು. ಅಂಥ ಪರಮಾರ್ಥವು ಗಾಳೀಗುದ್ದಿ ಮೈನೋಯಿಸಿಕೊಂಡಂತೆ ವ್ಯರ್ಥ ಶ್ರಮದ್ದಾಗುವದು.

ಪೂರ್ವಾರ್ಧದಲ್ಲಿ ಸಿದ್ಧಾಂತಗಳನ್ನು ಹೇಳಿದ್ದಾಯಿತು. ಈಗ ಅದರ ವ್ಯವಹಾರ ಹೇಗೆ ಮಾಡಬೇಕು. ಅದನ್ನು ಶ್ರೀಸಮರ್ಥರು ಹೇಳುವರು. ಗ್ರಂಥರಾಜ ದಾಸಬೋಧವು ಉಪನಿಷತ್ತದ ಮರಾಠಿ ಅವತಾರವಿದೆ. ಅನ್ನುವದನ್ನು ಜಗತ್ತಿಗೆ ಆಧಾರಸಹಿತ ತೋರಿಸಿಕೊಡಲಿಕ್ಕೆ ಬರುವದು. ಶ್ರೀ ಸಮರ್ಥರು ಹೇಳಿದ ಜ್ಞಾನೀ ಪುರುಷರ ಅವಸ್ಥೆಯು ಉಪನಿಷತ್ತಿಗೆ ಅನುಸರಿಸಿ ಇರುವದು. ಛಾಂದೋಗ್ಯ ಉಪನಿಷತ್ತಿನ ಏಳನೆಯ ಅಧ್ಯಾಯದ ಇಪ್ಪತ್ತೈದನೆಯ ಖಂಡದಲ್ಲಿ ಜ್ಞಾನೀ ಪುರುಷರ ಬಗ್ಗೆ ಹೀಗೆ ವರ್ಣನೆ ಇರುವದು. ಮಂತ್ರ:-"ಆತ್ಮಾ ಏವ ಅಧಸ್ತಾತ್ ಆತ್ಮಾ ಉಪರಿಷ್ಟಾತ್, ಆತ್ಮಾ ಪಶ್ಚಾತ್. ಆತ್ಮಾಪುರಸ್ತಾತ್, ಆತ್ಮಾ ದಕ್ಷಿಣತಃ ಆತ್ಮಾ ಉತ್ತರತಃ ಆತ್ಮಾ ಏವ ಇದಂ ಸರ್ವಮ್, ಸವ್ಯೆ ಏಷಃ ಏವಂ ಪಶ್ಯನ್, ಏವಂ ಮನ್ವಾನಃ ಏವಂ ವಿಜಾನನ್, ಆತ್ಮರತಿಃ ಆತ್ಮ ಕ್ರೀಡಃ, ಆತ್ಮಮಿಥುನಃ, ಆತ್ಮಾನಂದಃ, ಸಸ್ವರಾಡ್ ಭವತಿ" ಅರ್ಥ:- "ಆತ್ಮವೇ ಕೆಳಗೆ ಇರುವದು. ಮೇಲೆ ಇರುವದು. ಬೆನ್ನ ಹಿಂದೆ ಇರುವದು. ಮುಂದೆ ಇರುವದು. ಬಲಗಡೆ-ಎಡಗಡೆಗೆ ಆತ್ಮವೇ ಇರುವದು. ಇದೆಲ್ಲ ಆತ್ಮವೇ ಇರುವದು. ಈ ಪ್ರಕಾರ ಸರ್ವತ್ರದಲ್ಲಿಯೂ ಆತ್ಮವೇ ಇರುವದೆಂದು ತಿಳಿದು ನೋಡುವವನು, ಮನನ ಮಾಡುವವನು, ಮತ್ತು ತಿಳಿಯುವಂಥ ಮನುಷರೆಲ್ಲರೂ ಆತ್ಮದಲ್ಲಿಯೇ ರಮಮಾಣ (ಆಸಕ್ತ)ವಾಗುವರು. ಅದರ ಕೂಡ ಆಡುವರು. ಅದರ ಸುಖ ಭೋಗಿಸುವರು, ಮತ್ತು ಅದರ ಆನಂದ ಹೊಂದುವರು. ಖರೇ ಸಮಾಧಾನ ಭೋಗಿಸುವರು.

ಇವರು ಸ್ವತಃದ ರಾಜರೇ ಆಗುವರು" ಶ್ರೀಸಮರ್ಥರ ಭಕ್ತಿಯು ಕಲ್ಪನೆಯು ಅತ್ಯಂತ ಜ್ಞಾನ ಪ್ರಧಾನವಿರುವದು. ಇವರ ಭಕ್ತಿಯ ವರ್ಣನೆಗೆ ಆತ್ಮಸಾಕ್ಷಾತ್ಕಾರಿ ತತ್ವಜ್ಞಾನದ ಪಾರ್ಶ್ವಭೂಮಿ (ಹಿನ್ನೆಲೆ) ಇರುವದರಿಂದ ಜ್ಞಾನೀಭಕ್ತ ಇವರ ಆದರ್ಶಪುರುಷ ಇರುವನು. ಆತ್ಮಜ್ಞಾನಿ ಪುರುಷನು ಸ್ವತಃ ಕೃತ ಕೃತ್ಯನಾಗುವದು–ಯೋಗ್ಯವೇ ಇರುವದು. ಪರಂತು ತನ್ನ ಜ್ಞಾನನಿಷ್ಠೆಗೆ ಭಂಗ ಬರಗೊಡದೆ ಈ ಜ್ಞಾನಿಯು ಅಜ್ಞಾನಿ ಜನರನ್ನು ಆತ್ಮಜ್ಞಾನದವರೆಗೆ ಒಯ್ದು ಮುಟ್ಟಿಸುವ ಪ್ರಯತ್ನ (ಖಟಪಟಿ) ಮಾಡುವದರಲ್ಲಿಯೇ ನಿಜವಾದ ಭೂಷಣವಿರುವದು. ಜ್ಞಾನಿಪುರುಷನು ಇದನ್ನು ಮಾಡಬೇಕೆಂದು ಅನ್ನುವದು ಬರೋಬರಿ ಅಲ್ಲ. ಯಾಕೆಂದರೆ ಇವನ ಕೈಯಿಂದ ಜೀವಿಗಳ ಉದ್ಧಾರದ ಕೆಲಸ ತನ್ನಷ್ಟಕ್ಕೆ ತಾನೇ ಆಗುತ್ತಲೇ ಇರುವದು. ತೈತ್ತರೀಯ ಉಪನಿಷತ್ತಿನ ಭೃಗುವಲ್ಲಿಯಲ್ಲಿ ಭೃಗು ಋಷಿ ತನ್ನ ಕೃತ ಕೃತ್ಯತನವನ್ನು ಹೇಳುವನು ಅವರಲ್ಲಿ ಅವನುಅನ್ನುವದೇನಂದರೆ"ಆನಂದಮಯನಿರುವ ಆತ್ಮನೊಂದಿಗೆ ತದಾಕಾರಹೊಂದಿ (ಏಕರೂಪರಾಗಿ)ಜ್ಞಾನಿಪುರುಷನು ಬ್ರಹ್ಮರೂಪವಾಗುವನು. ಇಂಥವನು ಸ್ವೇಚ್ಛೆಯಿಂದ ಸಂಚಾರ ಮಾಡುವನು.ಮತ್ತು ಸಾಮವನ್ನು ಹಾಡುತ್ತ ಇರುವನು."ಏತತ್ಸಾಮಗಾಯನ್ ಆಸ್ತೆ"ಇದರ ಮೇಲೆ ಭಾಷ್ಯ ಮಾಡುವಾಗ ಕರ್ಮ ಸನ್ಯಾಸ ಕೇಸರಿ ಶ್ರೀ ಶಂಕರಾಚಾರ್ಯರು ಅನ್ನುವದೇನಂದರೆ,ಏಕಮೇವಾ ದ್ವಿತೀಯ ಬ್ರಹ್ಮದ ಸಾಕ್ಷಾತ್ಕಾರವಾದ ಈ ಜ್ಞಾನೀ ಪುರುಷನು ಕೇವಲ ಲೋಕದ ಜನರ ಉದ್ಧಾರಕ್ಕಾಗಿ, ಅನುಗ್ರಹ ಮಾಡುವದಕ್ಕಾಗಿ, ಆತ್ಮಜ್ಞಾನದ ಫಲ ಪ್ರಕಟಿಸುತ್ತ ಒಂದೇ ಸವನೇ ಬ್ರಹ್ಮಗಾಯನ ಮಾಡುವನು. ಇದರ ಅರ್ಥವು ಇಷ್ಟೇ ಇರುವದು:-ಬ್ರಹ್ಮರೂಪ ಆದಂಥ ಜೀವನ್ಮುಕ್ತ ಪುರುಷನು ಅಕರ್ತಾತನದಿಂದ ಲೀಲೆಯಿಂದ ಲೋಕಸಂಗ್ರಹ ಮಾಡುವನು. ಲೋಕ ಸಂಗ್ರಹ ಮಾಡುವದರಲ್ಲಿಯೂ ಒಂದು ತಂತ್ರವಿರುವದು. ಅನೇಕ ಪ್ರಕಾರದ ವಾಸನಾ ತಮ್ಮಲ್ಲಿಟ್ಟುಕೊಂಡು ಸಂತಸಾಧುಗಳ ಕಡೆಗೆ ಹೋಗುವ ಅಜ್ಞಾನಿ ಜನರನ್ನು ವಾಸನಾರಹಿತ [ನಿರ್ವಾಸನದ]ವಾದ ಆತ್ಮಸ್ಥಿತಿಯ ಕಡೆಗೆ ಒಲಿಯುವಂತೆ ಮಾಡುವದು ಸುಲಭವಲ್ಲ. ಜ್ಞಾನಿ ಪುರುಷರು ಅಧ್ಯಾತ್ಮಿಕ ಮುಂದಾಳುತನವನ್ನು ಬುದ್ಧಿಪೂರ್ವಕ ಸ್ವೀಕಾರಮಾಡಿ ಒಳ್ಳೇ ಮನಸ್ಸಿನಿಂದ ಆತ್ಮಜ್ಞಾನದ ಪ್ರಸಾರ ಹೇಗೆ ಮಾಡಬೇಕು ಅನ್ನುವ ಬಗ್ಗೆ ಸರ್ವಾಂಗೀಣ (ಸರ್ವಸಾಮಾನ್ಯ) ವಿಚಾರಗಳನ್ನು ಶ್ರೀಸಮರ್ಥರು ಈ ಗ್ರಂಥದ ಉತ್ತರಾರ್ಧದಲ್ಲಿ ವಿವರಿಸಿರುವದು ಕಂಡುಬರುತ್ತದೆ. ಮರಾಠಿಯಲ್ಲಿ ಶುದ್ಧ ಅಧ್ಯಾತ್ಮವು ಬಹಳಷ್ಟು ಇತ್ತು.ಈಗಲೂ ಇರುವದು.ಆದರೆ[ಜನ]ಸಂಗ್ರಹದ ಹಾಗೂ ಸ್ವಾನುಭವದ ಮತ್ತುಖಾತ್ರಿಯ ಅತಿ ಸ್ಪಷ್ಟವಾದ ವಿವೇಚನೆ ಇರುವ ಗ್ರಂಥವೆಂದರೆ ಇವರದೇ ಇರುವದು. ಮರಾಠಿ ಹಾಗೂ ಇತರ ಯಾವ ಭಾಷೆಯಲ್ಲಿಯೂ ಈ ಮಾದರಿಯ ವಿವೇಚನೆಯುಳ್ಳ ಗ್ರಂಥ ಕಂಡು ಬರುವದಿಲ್ಲ. ಹೂವುಗಳಿಂದ ಅತ್ತರ ತೆಗೆಯುವದು ಅಷ್ಟು ಕಠಿಣವಲ್ಲ. ಆದರೆ ಮಣ್ಣಿನಿಂದ ಅತ್ತರ ತೆಗೆಯುವದರಲ್ಲಿ ನಿಜವಾದ ಯುಕ್ತಿ, ಚಾತುರ್ಯಗಳ ಪರೀಕ್ಷೆ ಇದೆ. ವಿವೇಕ ವೈರಾಗ್ಯ ಸಂಪನ್ನ ಪುರುಷರಿಗೆ ಆತ್ಮಜ್ಞಾನವನ್ನು ಮಾಡಿಕೊಡುವದು ಅಷ್ಟು ಕಠಿಣವಲ್ಲ. ಆದರೆ ವಾಸನಾದಿಂದ ಬಿಗಿಯಲ್ಪಟ್ಟ ಪ್ರಾಪಂಚಿಕರಿಗೆ, ಅಜ್ಞಾನಿಗಳಿಗೆ ಆತ್ಮಜ್ಞಾನದಲ್ಲಿ ಅಧಿಕಾರಿಗಳಾಗುವಂತೆ ಮಾಡುವದರಲ್ಲಿ ಸಂತ ಸಾಧುಗಳ ನಿಜವಾದ ಕರ್ತೃತ್ವಶಕ್ತಿ ಅಡಗಿದೆ. ಶ್ರೀ ಸಮರ್ಥರ ಮಹಂತ [ಶ್ರೇಷ್ಠ ಪ್ರತಿಯ ಸಂತ ಸಾಧುಗಳ ನಾಯಕ]ರಾಗಿರುವವರು, ವಿಶಾಲ, ದಯಾಳು ಹಾಗೂ ನಿರ್ಮಲ ಹೃದಯದ ಆತ್ಮಜ್ಞಾನಿ ಅಥವಾ ಜೀವನ್ಮುಕ್ತ ಪುರುಷರಿರುವರು. ಅಂತೆಯೇ ಇವರು ಸಮರ್ಥರೆನಿಸಿಕೊಂಡರು. ಗ್ರಂಥಗಳಲ್ಲಿ ರಾಜವೆನಿಸಿದ ಗ್ರಂಥರಾಜ ದಾಸಬೋಧವು ಇವರಿಂದ ಲೋಕ ಕಲ್ಯಾಣಕ್ಕಾಗಿ ಪ್ರಸಿದ್ಧಿಯನ್ನು ಪಡೆದು ಹೊರಬಂದಿತು.

# ದಶಕ ಹನ್ನೊಂದು : ಭೀಮದಶಕ

ಶ್ರೀಸಮರ್ಥರ ಆದರ್ಶ ಪುರುಷರು ಯಾರೆಂದರೆ ಶ್ರೀ ಮಾರುತಿರಾಯನು. ಇವನ ಹೆಸರು ಬಲಭೀಮ ಎಂದೂ ಇರುವದು. ಇವನನ್ನು ಹನ್ನೊಂದನೆಯ ರುದ್ರನೆಂದು ತಿಳಿಯುವರು. ಅಂತೆಯೇ ಈ ಹನ್ನೊಂದನೆಯ ದಶಕಕ್ಕೆ **ಭೀಮ ದಶಕ** ಎಂದು ಹೆಸರು ಕೊಟ್ಟಿರುವರು. ಶ್ರೀ ಮಾರುತಿರಾಯನು ಶ್ರೇಷ್ಠ ಪ್ರತಿಯ ಸಾಧುಗಳ ಸಮುದಾಯದ ಮಹಂತ-ಮುಖ್ಯರೆಲ್ಲರಿಗೂ ಅಗ್ರಗಣ್ಯ (ಹಿರಿಯ, ಮಾರ್ಗದರ್ಶಕ) ಇರುವನು. ಸಹಜ ಸಮಾಧಿ ಯನ್ನು ಸಂಬಾಳಿಸಿಕೊಂಡು ಕರ್ಮಕಾರ್ಯಾದಿಗಳ ಪ್ರಚಂಡ ವ್ಯಾಪವನ್ನು ಹೇಗೆ ಮಾಡಬೇಕೆಂಬುದನ್ನು ಈ ಬಲ ಭೀಮನ ಜೀವನದಿಂದ ತಿಳಿಯಬೇಕು. ಕಲಿತು ಕಾರ್ಯ ತತ್ಪರರಾಗಬೇಕು. ಅಂತೆಯೇ ಮಹಂತರ ವರ್ಣನೆ ಮಾಡಿ ದಂಥ ಈ ದಶಕಕ್ಕೆ "ಭೀಮದಶಕ" ಅನ್ನುವ ಹೆಸರು ಕೊಟ್ಟಿದ್ದಾರೆ. ಶ್ರೀ ಸಮರ್ಥರ ಕಾಲದಲ್ಲಿ ಇಡೀ[ಯಾವತ್ತೂ] ದೇಶದಲ್ಲೆಲ್ಲ ಕಡೆಗೂ ಬೌದ್ಧಿಕ ಅರಾಜಕತ್ವ [ಅವ್ಯವಸ್ಥೆ] ಹರಡಿಕೊಂಡಿದ್ದಿತು. ಪ್ರಪಂಚದಲ್ಲಾಗಲೀ ಅಥವಾ ಪರಮಾ ರ್ಥದಲ್ಲಿಯಾಗಲೀ ನಿಜವಾದ ಅನುಭವ [ಪ್ರಚೀತಿಯ]ದ ಜ್ಞಾನೋಪಾಸನೆಯು ಕ್ಷೀಣತ್ವ ಹೊಂದಿತ್ತು. ಚೈತನ್ಯರಹಿತ ವಾಗಿತ್ತು. ಎಲ್ಲ ಕಡೆಗೂ ಮತ ಮತಗಳಲ್ಲಿ ಗದ್ದಲ ಗೊಂದಲವಿತ್ತು. ಗರ್ದಿ ಗಡಿಬಿಡಿ ಈರ್ಷೆ ತುಂಬಿತ್ತು. ಸಾಮಾನ್ಯ ಮನುಷ್ಯನೂ ಸಹ ಅತಿಸ್ವಾರ್ಥಿಯಾಗಿದ್ದನು. ಇವರನ್ನು ಸ್ವಾರ್ಥದಿಂದ ಹೊರಗೆಳೆದು ಸರಿದಾರಿಗೆ ತರುವಂಥ ನಿಃಸ್ವಾರ್ಥ ಪುಢಾರಿಗಳ ಮತ್ತು ಅದರ ಜೊತೆಗೆ ತತ್ವಜ್ಞಾನ ತಿಳಿಸಿಕೊಡುವಂಥವರ ಅವಶ್ಯಕತೆಯೂ ಬಹಳಷ್ಟಿತ್ತು. ಶ್ರೀದಾಸಬೋಧದಂಥ ಬ್ರಹ್ಮಜ್ಞಾನವನ್ನು ಹೇಳಿಕೊಡುವಂಥ ಗ್ರಂಥರಾಜದಲ್ಲಿ "ಪ್ರಕ್ಕಟೆಯಾಗಿ ತಿನ್ನಬೇಡ, ದೇಹ ವನ್ನು ಆಲಸ್ಯಗೊಳಿಸಬೇಡ, ದೇಹಕ್ಕೆ ಕಷ್ಟದಂಡಿತದ ಸವಯ (ರೂಢಿ) ಇರಬೇಕು. ವೇಳೆಯನ್ನು ವ್ಯರ್ಥಗೊಳಿಸ ಬೇಡ, ಪ್ರಪಂಚಕ್ಕೆ ಹಣಬೇಕು. ಅದನ್ನು ನೀನು ದುಡಿದು ಗಳಿಸಬೇಕು. ಪ್ರಾತಃಕಾಲದಲ್ಲಿ ಬೇಗನೆ ಏಳು" ಇತ್ಯಾದಿ ಮಾತುಗಳನ್ನು ಹೇಳಬೇಕಾಯಿತು. ಇದರ ಮೇಲಿಂದ ನೋಡಿದರೆ ಸಮಾಜದಲ್ಲಿಯ ಸಾಮಾನ್ಯ ಮನುಷ್ಯನ ಜೀವ ನದ ಮಟ್ಟ ಎಷ್ಟೊಂದು ಕೆಳಗಿನ[ಹೀನ] ಮಟ್ಟಕ್ಕೆ ಬಂದು ಮುಟ್ಟಿತ್ತೆಂಬುದರ ಕಲ್ಪನೆಯು ಬರುತ್ತದೆ. ಯಾರೂ ಪ್ರಪಂಚವನ್ನು ಸಹ ಸರಿಯಾಗಿ ಮಾಡುತ್ತಿರಲಿಲ್ಲ. ಹಾಗೂ ಮಹತ್ವಾಕಾಂಕ್ಷೆಯಿಂದ ಶ್ರಮಪಟ್ಟು ಕೆಲಸ ಮಾಡಿ ಮೇಲೆ ಬರಬೇಕೆಂದು ಬಯಸುತ್ತಿರಲಿಲ್ಲ. ಯಾವತ್ತೂ ಜನರ ಲಕ್ಷ್ಯವು ದೃಶ್ಯದಲ್ಲಿ ಅಥವಾ ನಶ್ವರ ಪ್ರಪಂಚದಲ್ಲಿ ತೊಡಕಿಕೊಂಡಿತ್ತು. ಪ್ರಪಂಚವನ್ನು ಬದಿಗೆ ಸರಿಸಿ ಪರಮಾರ್ಥ ಮಾಡಿರಿ ಅಂತಾ ಹೇಳುವದಕ್ಕೆ ಆಸ್ಪದವೇ ಇರಲಿಲ್ಲ. ಒಂದು ವೇಳೆ ಹೀಗೆ ಹೇಳಿದ್ದರೂಸಹ ಈ ಮಾತನ್ನು ಕೇಳಲಿಕ್ಕೆ ಅಲ್ಲಿ ಯಾರೂ ನಿಲ್ಲುತ್ತಿರಲಿಲ್ಲ. ದಾದ ಮಾಡುತ್ತಿ ರಲಿಲ್ಲ. ಅಂತೆಯೇ ಶ್ರೀಸಮರ್ಥರು ಪ್ರಪಂಚವನ್ನು ಚನ್ನಾಗಿ ಮಾಡಲಿಕ್ಕೆ ಮೊದಲಿಗೆ ಕಲಿಯಿರಿ, ಯಾಕೆಂದರೆ ಯಾರಿಗೆ ಸರಿಯಾಗಿ ಪ್ರಪಂಚ ಮಾಡಲಿಕ್ಕೆ ಬರುವದಿಲ್ಲವೋ ಅಂಥವರಿಗೆ ಸೂಕ್ಷ್ಮವಾಗಿರುವ ಪರಮಾರ್ಥ ಸಾಧಿಸುವದು ಕಠಿಣ ವಾಗುವದೆಂದು ಹೇಳಬೇಕಾಯಿತು. ಕೇವಲ ಪ್ರಪಂಚವನ್ನಷ್ಟೇ ಚನ್ನಾಗಿ ಮಾಡುವದೇನೂ ಮಾನವೀ ಜೀವನದ ಧ್ಯೇಯವಲ್ಲ ಈ ಮಾತು ಅಗದೀ ನಿಜವಿದ್ದರೂ ಸಹ ಪ್ರತ್ಯಕ್ಷದಲ್ಲಿ ಅಸ್ಥಿರ-ಚಂಚಲವಾಗಿರುವದನ್ನು ತ್ಯಜಿಸಿ [ಬಿಟ್ಟು] ಸ್ಥಿರವಾದ ನಿಶ್ಚಲದಕಡೆಗೆ ಅಥವಾ ಪ್ರಪಂಚ ಬಿಟ್ಟು ಪರಮಾರ್ಥದ ಕಡೆಗೇ ಲಕ್ಷ್ಯ ಕೊಡುವಂಥವರು ಕ್ವಚಿತ್ತಾಗಿ ಒಡು ಬರುವರು. ಆದ್ದರಿಂದ ಮೊದಲುಪ್ರಪಂಚವನ್ನು ಸರಿಯಾಗಿ ಮಾಡಿದ್ದಾದರೆ ಅದರಿಂದ ಪರಮಾರ್ಥದಲ್ಲಿ ಉಪಯೋಗ ಬೀಳುವಂಥ ಗುಣ ನಿಷ್ಠಾ, ಜಿಗುಟುತನ [ಹಟ ಸಾಧನೆಯ ಮನಸ್ಸು, ದೀರ್ಘ ಹಂಬಲತನ], ಕಷ್ಟಪಡುವದು, ಖಂಬೀರತನ[ಜಿಗಟುತನ], ನಿಯಮಿತತನ, ಸುಖದುಃಖಗಳನ್ನು ಸಹಿಸುವದು, ಮಾನಾಪಮಾನಗಳನ್ನು ನುಂಗಿಕೊಳ್ಳು ವದೇ ಮೊದಲಾದವು ವಿಕಸಿತವಾಗುವವು. ಪ್ರಪಂಚವನ್ನು ಸರಿಯಾಗಿ ಚನ್ನಾಗಿ ಮಾಡಿರಿ ಅಂದರೇನು? ಇದಕ್ಕೆ ಉತ್ತರವು ಹೀಗೆ ಇರುವದು. ನಾನು ಮತ್ತು ನನ್ನದು ಅನ್ನುವದೇ ಬಂಧ (ಬಂಧನ)ವಿರುವದು. ಇದನ್ನು ತೊಡೆದು ಹಾಕಲು ಅದರ ಸ್ಥಳದಲ್ಲಿ ನೀನು ಮತ್ತು ನಿನ್ನದು ಅನ್ನುವದನ್ನು ಇಡಬೇಕು. ಅಂದರೆ ನಾನು ನನ್ನ ಪ್ರಪಂಚ ಇದು ಒಂದು ದೇವರದೇ ಇರುವದು. ಅನ್ನುವ ಖರೇ ನಿಷ್ಠಾ ಇಟ್ಟುಕೊಂಡು ಅಗದೀ ವ್ಯವಹಾರ ಬುದ್ಧಿಯಿಂದ

ಪ್ರಪಂಚ ಮಾಡಬೇಕು. ಇದಕ್ಕೆ ಈಶ್ವರಾರ್ಪಣ ಬುದ್ಧಿಯಿಂದ ಕರ್ಮ ಮಾಡುವದು ಅನ್ನುವರು. ಹೀಗೆ ವರ್ತಿಸಿದರೆ ಜೀವದ ವಾಸನಾ ಕ್ಷೀಣವಾಗುವದು. ಅಹಂತಾ ಕಡಿಮೆ ಆಗುವದು ಚಿತ್ತ ನಿರ್ಮಲವಾಗುವದು. ಮತ್ತು ನಿರಾಸಕ್ತ ಕರ್ಮವು ತನ್ನಷ್ಟಕ್ಕೆತಾನೇ ನಡೆಯಹತ್ತುವದು(ಒದಗಿಬರುವದು).ಆದರೆಸಾಮಾನ್ಯ ಮನುಷ್ಯರಿಗೆ ಈ ಮಾತು ಯಾವನಾದರೊಬ್ಬನ ಜೀವನದಲ್ಲಿ ಸಾಕಾರವಾಗದ (ಪ್ರತ್ಯಕ್ಷ ತೋರಿ ಬರದ) ಹೊರತು ಆಕಲನ (ಖಾತ್ರಿ) ಆಗುವದಿಲ್ಲ. ಮಹಂತನ ಜೀವನವು ಹೀಗೆ ಇರಬೇಕು. ಮಹಂತನು ಅತಿಕರ್ಮನಿರತನಿರಬೇಕು. ಕಾಯಕವೇ ಕೈಲಾಸವೆಂದು ತಿಳಿದವನೂ, ಅದರಂತೆ ನಡೆಯುವವನೂ ಆಗಿರಬೇಕು. ಅಹಂಕಾರರಹಿತನಾದವನು – ಮನವು ಸ್ವಸ್ವರೂಪದಲ್ಲಿ ಲೀನನಾದವನು, ಮತ್ತು ನಿಃಸ್ವಾರ್ಥವಾದ ಪ್ರೇಮಮಾಡುವಂಥ ಮಹಂತನು ಎಲ್ಲವನ್ನೂ ಮಾಡಿದರೂ ಯಾವುದರಲ್ಲಿಯೂ ಆಸಕ್ತನಾಗದೇ ಇರುವನು. ಯಾವತ್ತು ಮಹಂತರು ಆತ್ಮಜ್ಞಾನ ಉಳ್ಳವರೇ ಇರುವರೆಂದು ಹೇಳಲಿಕ್ಕೆ ಬರುವದಿಲ್ಲ. ಆದರೆ ಇವರೆಲ್ಲರೂ ಸಾಧಕರಾದವರು. ಮಾತ್ರ ಇರಲೇಬೇಕು. ಇದ್ದೇ ಇರುವರು. ಸ್ವಸ್ವರೂಪದ ಅನುಸಂಧಾನದ ಬಗೆಗಿನ ಇವರ ಅಭ್ಯಾಸ ಹೇಗೆ ಹೇಗೆ ದೃಢಗೊಳ್ಳುತ್ತ ಹೋಗುವದೋ ಆಯಾ ರೀತಿಯಲ್ಲಿ ಇವರ ಸಾಮರ್ಥ್ಯ ವಿಕಸಿತವಾಗುತ್ತ ಹೋಗುವದು. ಜನರಿಗೆ ಇದು ಒಂದು ಸ್ಫೂರ್ತಿಯ ಕೇಂದ್ರವೆನಿಸುವದು. ಇಂಥ ಭೂಮಿಕೆಯ ಮೇಲೆ ಇರುವಂಥ ಮಹಂತ ಅಥವಾ ಆಧ್ಯಾತ್ಮಿಕ ಪುಢಾರಿಯು ಯಾವ ಸಮಾಜದಲ್ಲಿ ಇರುವನೋ ಆ ಸಮಾಜದಲ್ಲಿಯ ಬಹುಜನರ ಜೀವನಮಟ್ಟ ಪ್ರಾಪಂಚಿಕ ಮತ್ತು ಪಾರಮಾರ್ಥಿಕ ಈ ಎರಡೂ ದೃಷ್ಟಿಯಿಂದ ಉಚ್ಚದರ್ಜೆಯದಾಗಿ ಎದ್ದು ಕಾಣುವದು.

● ●

**ದಶಕ ಏಕಾದಶ : ಸಮಾಸ ಪ್ರಥಮ : ಸಿದ್ಧಾಂತ ನಿರೂಪಣ**

॥ಶ್ರೀರಾಮ॥ ಆಕಾಶಾಪಾಸೂನ ವಾಯೋ ಹೋತೋ ।
ಹಾ ತೋ ಪ್ರತ್ಯಯೆ ಯೇತೊ ।
ವಾಯೋ ಪಾಸೂನ ಅಗ್ನಿ ಜೊ ತೊ । ಸಾವಧ ಏಕಾ ॥೧॥

ವಾಯೋಚೀ ಕಠಿಣ ಘಿಸಣೀ । ತೇಥೇ ನಿರ್ಮಾಣ ಜಾಲಾ ವನ್ಹೀ ।
ಮಂದ ವಾಯೋ ಸೀತಳ ಪಾಣೀ । ತೆಥುನಿ ಜಾಲೇ ॥೨॥

## ದಶಕ ೧೧. ಭೀಮ ದಶಕ ಸಮಾಸ ೧. ಸಿದ್ಧಾಂತ ನಿರೂಪಣ (ನುಡಿ ೪೪)

ನಮ್ಮ ಮೂಲರೂಪವಾಗಿರುವ ಬ್ರಹ್ಮಾಕಾರ ವೃತ್ತಿಯನ್ನು ಇದ್ದದ್ದನ್ನು ಇದ್ದಂತೆ ಕಾಯಂ (ಭಂಗವಾಗದಂತೆ) ಇಟ್ಟುಕೊಂಡು ಲೋಕಸಂಗ್ರಹದ ವ್ಯವಹಾರ ಕಾರ್ಯವನ್ನು ಉತ್ತಮರೀತಿಯಿಂದ ಸಂಬಾಳಿಸಿಕೊಂಡು ಹೋಗುವದಕ್ಕೆ ಸಹಜ ಸಮಾಧಿ ಎಂದು ಅನ್ನುವರು. ಈ ಸಮಾಸದಲ್ಲಿ ಇದರ ಬಗ್ಗೆ ಪ್ರಸ್ತಾಪ ಮಾಡಲಾಗಿದೆ. ಆತ್ಮಜ್ಞಾನ ಪ್ರಾಪ್ತವಾದ ಮೇಲೆ ಸರ್ವತ್ರದಲ್ಲಿ ಸರ್ವಕಾಲದಲ್ಲಿ ಕೇವಲ ಆತ್ಮಸ್ವರೂಪವೇ ಅನುಭವಕ್ಕೆ ಬರುವದು. ಅಂತಃಕರಣದಲ್ಲಿಯ ಸರ್ವ ಸಂಕಲ್ಪಗಳು ಅಸ್ತಂಗತ ಹೊಂದುವವು. ಮತ್ತು ಅಭೇದ ಬುದ್ಧಿಯ ಕಾರಣದಿಂದಾಗಿ ಯಾವತ್ತೂ ಪ್ರಾಣಿ ಮಾತ್ರರಲ್ಲಿ ಬ್ರಹ್ಮದರ್ಶನ ಘಟಿಸುವದು. ಅಭೇದ ಬುದ್ಧಿಯೇ ಆತ್ಮಜ್ಞಾನದ ಪ್ರಾಣವಿರುವದು. ಕರ್ಮ ಅಥವಾ ವ್ಯವಹಾರ ಮಾಡುವದಕ್ಕೆ ನಾನು ಅನ್ನುವ ಅರಿವು ಬೇಕೇ ಬೇಕು. ಸ್ಥಳ, ಕಾಲ, ಮತ್ತು ಉದ್ದೇಶ ಇವುಗಳ ಮಿತಿ (ನಿರ್ಬಂಧ) ಇರಬೇಕಾಗುವದು. ಭೇದ ಬುದ್ಧಿ ಇದು ವ್ಯವಹಾರದ ಅಥವಾ ಕರ್ಮದ ಪ್ರಾಣವಿರುವದು. ಜ್ಞಾನದೊಳಗಿನ ಅಭೇದ ಬುದ್ಧಿ ಮತ್ತು ಕರ್ಮದಲ್ಲಿಯ ಭೇದ ಬುದ್ಧಿ ಇವುಗಳಲ್ಲಿ ವಿರೋಧ ವಿರುವದೆಂದು ನಮಗೆ ಅನಿಸುವದು ನಿಜವಿದ್ದರೂ ಸಹ, ಅನುಮಾನ (ಸಂಶಯ)ದ ಹಿನ್ನೆಲೆಯಿಂದ(ಭೂಮಿಕೆಯಿಂದ) ನೋಡಿದ್ದಾದರೆ ಇದು ವಿರೋಧವಾಗಿ ಭಾಸವಾಗುವದು. ಆದರೆ ಸ್ವಾನುಭವದ ಭೂಮಿಕೆಯಿಂದ ನೋಡಿದರೆ ಆಗ ಇದು ಉಳಿಯುವದಿಲ್ಲ. ಇದು ಹೇಗೆ ಆಗುವ (ಘಟಿಸುವ)ದೆಂಬುದನ್ನು ಹೇಳುವೆ-ಕೇಳಿರಿ, (ನೋಡಿರಿ): ಮೂಲದಲ್ಲಿ ಏಕರೂಪವಿದ್ದಂಥ ಜ್ಞಾನ (ತಿಳುವಳಿಕೆ) ಅಂದರೆ ಜಗತ್-ಜ್ಯೋತಿಯು ಇದು ಈ ದೇಹವೇ ನಾನು ಎಂಬ ಅಹಂಕಾರದ ಅನಿಸಿಕೆಯ ಕಾರಣದಿಂದ ವಿಭಾಗ ಹೊಂದಿತು. ಸಂಕಲ್ಪ ವಿಕಲ್ಪ, ಕಲ್ಪನಾ, ಸ್ಮೃತಿ, ವಾಸನಾ, ಭಾವನಾ, ವಿಚಾರ, ಸುಖದುಃಖ ಸಂವೇದನ ಇತ್ಯಾದಿ ರೂಪದಿಂದ ಕಾಣಿಸಿಕೊಂಡಿತು. ಆದರೆ ಸಾಧನದಿಂದ ಸಾಧಕನ ಅಹಂಭಾವ ಕರಗುತ್ತ ಹೋಗುವದು. ಇದರಿಂದಾಗಿ ಅವನ ಅಂತರಂಗದಲ್ಲಿ ವಿಭಾಗ ಹೊಂದದ ಅರಿವು (ತಿಳುವಳಿಕೆ) ಪುನಃಏಕತ್ರ ಕೂಡಿಕೊಂಡು ವ್ಯಾಪಕ ಹಾಗೂ ಸೂಕ್ಷ್ಮವಾಗಹತ್ತುವದು. ಆಗ ವ್ಯಕ್ತಿ ನಿರಪೇಕ್ಷೀ [ಇಂಪರ್ಸನಲ್] ಆಗುವನು. ಹೀಗೆ ಇದು ಆಯಿತೆಂದರೆ ಆ ಮನುಷ್ಯನ ಅಂತಃಕರಣವು ಯಾವತ್ತೂ ಪ್ರಾಣಿಗಳ ಅಂತಃಕರಣದೊಂದಿಗೆ ಏಕರೂಪವಾಗುವದು. ದೇಹಬುದ್ಧಿಯ ಮನುಷ್ಯರು ಸ್ವತಃದ ದೇಹದ ನಿತ್ಯಕ್ರಿಯಾ (ಕಾರ್ಯ)ವನ್ನು ಯಾವ ರೀತಿಯ ಅಂತಃಪ್ರೇರಣೆಯಿಂದ ಮತ್ತು ಸಹಜ ರೀತಿಯಲ್ಲಿ ಮಾಡುವರೋ ಅದೇ ರೀತಿಯ ಅಂತಃಪ್ರೇರಣೆಯಿಂದ ಮತ್ತು ಸಹಜ ರೀತಿಯಲ್ಲಿ ಆತ್ಮಬುದ್ಧಿಯ ಮನುಷ್ಯರೂ ಸಹ ಜಗತ್ತಿನಲ್ಲಿಯ ಪ್ರಾಣಿ ಮಾತ್ರರೊಂದಿಗೆ ವ್ಯವಹಾರ ಮಾಡುವರು. ಅಂತಃಪ್ರೇರಣಾ ಅಥವಾ ಪ್ರತಿಭಾ [ವಿಶೇಷ ಪ್ರಜ್ಞೆ] ಇದು ಪ್ರತ್ಯಕ್ಷ ಬ್ರಹ್ಮದ್ದೇ ಶಕ್ತಿ ಇರುವದು. ಸಂತರು ಸಾಧುಗಳು ಇದಕ್ಕೆ ಶಾರದಾ ಅನ್ನುವರು. ಸಾಧಕನ ಬುದ್ಧಿ ಸಂಪೂರ್ಣ ನಿರ್ಮಮ (ಮಮತ್ವರಹಿತ-ರಾಗರಹಿತ) ವಾದರೆ ಅಹಂತಾ ನಿಃಶೇಷವಾಗಿ ನಾಶ ಹೊಂದಿದ್ದಾದರೆ, ಮತ್ತು ಅವನ ವಾಸನಾ ಸಂಪೂರ್ಣ ಇಲ್ಲದಂತಾದರೆ ಆಗ ಅವನ (ಸಾಧಕನ) ಬ್ರಹ್ಮಾಕಾರ ವೃತ್ತಿಯು ಸ್ಥಿರಗೊಳ್ಳುವದು. ಅವನ ಅದ್ವೈತ ಭಾವವು ಅಂಗಭೂತವಾಗುವದು. (ಅದ್ವೈತಭಾವ ಇಡೀ ಶರೀರದಲ್ಲಿ ಸಮಾವಿಷ್ಟವಾಗುವದು). ಇಂಥ ಸಾಧಕನ ಪ್ರತಿಭೆಯು ಪ್ರಭಾವವು ಅಖಂಡವಾಗಿ ಹರಿಯುವದು.(ಪ್ರವಹಿಸುವದು).ಇವನಿಗೆ ದ್ವೈತದ ಅರಿವು ಆದರೂ ಸಹ ಅದು ಮಿಥ್ಯಾ ಇರುವದು.ಅಂದರೆಹುಸಿ ಇರುವದು.ಅನ್ನುವ ಪಕ್ಕಾಖಾತ್ರಿಇರುವದು.ಅಂದಮೇಲೆ ಇವನ ಬ್ರಹ್ಮಾಕಾರ ವೃತ್ತಿಗೆ ವ್ಯತ್ಯಯ(ಧಕ್ಕೆ)ಬರದೇಅಖಂಡನಾಗಿಯೇ ಇರುವನು.ಇವನು ಅಪ್ರತಿಮ ಲೋಕ ಸಂಗ್ರಹ ಮಾಡುವನು.ಇದಕ್ಕೇ ಸಹಜ ಸಮಾಧಿ ಎಂದು ಅನ್ನುವರು.

### ದಶಕ ೧೧ : ಸಮಾಸ ೧ : ಸಿದ್ಧಾಂತ ನಿರೂಪಣ (ನುಡಿ ೪೪)

ಪ್ರಥಮದಲ್ಲಿ ಸೃಷ್ಟಿಯ ಉತ್ಪತ್ತಿ ಮತ್ತು ಅನಂತರ ಸೃಷ್ಟಿಯ ನಾಶ. ಇದರ ಬಗ್ಗೆ ಸ್ವಲ್ಪದರಲ್ಲಿ ಹೇಳುತ್ತಾರೆ:- ಆಕಾಶದಿಂದ (ಗಾಳಿ) ವಾಯು ನಿರ್ಮಾಣವಾಗುವದು. ಇದು ಎಲ್ಲರಿಗೂ ಅನುಭವ ಬರುವ ವಿಷಯವೇ ಇರುವದು. ಗಾಳಿಯಿಂದ ಅಗ್ನಿ ಹುಟ್ಟುವದು. ಇದು ಹೇಗೆ ಆಗುವದೆಂಬುದನ್ನು ಲಕ್ಷ್ಯಕೊಟ್ಟು ಕೇಳಿರಿ. (೧) ವಾಯುವಿನಲ್ಲಿಯ ಕಠಿಣ ಘರ್ಷಣೆ (ತಿಕ್ಕಾಟ)ದಿಂದ ಅಗ್ನಿ ನಿರ್ಮಾಣವಾಗುವದು. ಇದರಲ್ಲಿ ಉಷ್ಣ ಹಾಗೂ ಶೀತಲ ಅಥವಾ ಮಂದವಾದ ಎರಡು ಝುಳುಕುಗಳು ಉತ್ಪನ್ನವಾದವು. ಅದರಲ್ಲಿಯ ಮಂದವಾದ ವಾಯುವಿನಿಂದ ತಣ್ಣಗಿರುವ ನೀರು (ಜಲ) ನಿರ್ಮಾಣವಾಗುವದು. (೨)

ಆಪಾಪಾಸೂನ ಜಾಲೀ ಪೃಥ್ವೀ। ತೇ ನಾನಾ ಬೀಜರೂಪ ಜಾಣಾವೀ।
ಬೀಜಾಪಾಸೂನ ಉತ್ಪತ್ತಿ ವ್ಹಾವೀ। ಹಾ ಸ್ವಭಾವಚಿ ಆಹೆ ॥೩॥
ಮುಳೀ ಸೃಷ್ಟೀ ಕಲ್ಪನೆಚೀ। ಕಲ್ಪನಾ ಆಹೆ ಮುಳೀಚೀ।
ಜಯೇಪಾಸೂನ ದೇವತ್ರಯಾಚೀ। ಕಾಯಾ ಜಾಲೀ ॥೪॥
ನಿಶ್ಚಳಾಮಧೇ ಚಂಚಳ। ತೆ ಚಿ ಕಲ್ಪನಾ ಕೇವಳ।
ಅಷ್ಟಧಾ ಪ್ರಕೃತೀಚೇ ಮೂಳ। ಕಲ್ಪನಾರೂಪ ॥೫॥
ಕಲ್ಪನಾ ತೇ ಚಿ ಅಷ್ಟಧಾ ಪ್ರಕೃತಿ। ಅಷ್ಟಧಾ ತೆ ಚಿ ಕಲ್ಪನಾ ಮೂರ್ತೀ।
ಮುಳಾಗ್ರಾಪಾಸೂನ ಉತ್ಪತ್ತಿ। ಅಷ್ಟಧಾ ಜಾಣಾವೀ ॥೬॥
ಪಾಚ ಭೂತೇ ತೀನ ಗುಣ। ಆಠ ಜಾಲೀ ದೋನೀ ಮಿಳೋನ।
ಮ್ಹಣೌನಿ ಅಷ್ಟಧಾ ಪ್ರಕೃತಿ ಜಾಣ। ಬೋಲಿಜೆತೆ ॥೭॥
ಮುಳೀ ಕಲ್ಪನಾರೂಪ ಜಾಲೀ। ಪುಡೇ ತೆ ಚಿ ಫಾಪಾವಲೀ।
ಕೇವಳ ಜಡತ್ವಾಸ ಆಲೀ। ಸೃಷ್ಟಿರೂಪೇ ॥೮॥
ಮುಳೀ ಜಾಲೀ ತೆ ಮೂಳಮಾಯಾ। ತ್ರಿಗುಣ ಜಾಲೆ ತೆ ಗುಣಮಾಯಾ।
ಜಡತ್ವ ಪಾವಲೀ ತೆ ಅವಿದ್ಯಾ ಮಾಯಾ। ಸೃಷ್ಟಿರೂಪೇ ॥೯॥
ಪುಢೇ ಚ್ಯಾರೀ ಖಾಣೀ ಜಾಲ್ಯಾ। ಚ್ಯಾರೀ ವಾಣೀ ವಿಸ್ತಾರಲ್ಯಾ।
ನಾನಾ ಯೋನೀ ಪ್ರಗಟಲ್ಯಾ। ನಾನಾ ವೆಕ್ತೀ ॥೧೦॥
ಐಸೀ ಜಾಲೀ ಉಭಾರಣೀ। ಆತಾ ಐಕಾ ಸಂಮ್ಹಾರಣೀ।
ಮಾಗೀಲ ದಶಕೀ ವಿಶದ ಕರೂನಿ। ಬೋಲಿಲೇ ಅಸೆ ॥೧೧॥
ಪರಂತು ಆತಾ ಸಂಕಳಿತ। ಬೋಲಿಜೇಲ ಸಂಮ್ಹಾರಸಂಕೇತ।
ಶ್ರೋತೆ ವಕ್ತೆ ಯೇಥೇ ಚಿತ್ತ। ದೇಊನ ಐಕಾ ॥೧೨॥
ಶತವರುಷೇ ಅನಾವೃಷ್ಟಿ। ತೆಥೇ ಆಟೇಲ ಜೀವಸೃಷ್ಟಿ।
ಐಶಾ ಕಲ್ಪಾಂತಾಚ್ಯಾ ಗೋಷ್ಟೀ। ಶಾಸ್ತ್ರೀ ನಿರೋಪಿಲ್ಯಾ ॥೧೩॥
ಬಾರಾಕಳೀ ತಪೆ ಸೂರ್ಯ। ತೇಣೇ ಪೃಥ್ವೀಚೀ ರಕ್ಷಾ ಹೋಯೆ।
ಮಗ ತೇ ರಕ್ಷಾ ವಿರೋನ ಜಾಯೇ। ಜಳಾಂತರೀ ॥೧೪॥
ತೇ ಜಳ ಶೋಷೀ ವೈಶ್ವಾನರು। ವನ್ಹೀ ಝುಡಸೀ ಸಮೀರು।
ಸಮೀರ ವಿತುಳೆ ನಿರಾಕಾರು। ಜೈಸೇ ತೈಸೇ ॥೧೫॥
ಐಸೀ ಸೃಷ್ಟಿ ಸಂಹಾರಣೇ ಜಾಲೀ। ಮಾಗಾ ವಿಸ್ತಾರೇ ಬೋಲಿಲೀ।
ಮಾಯಾನಿರಾಸೆ ಉರಲೀ। ಸ್ವರೂಪಸ್ಥಿತಿ ॥೧೬॥

ನೀರಿನಿಂದ ಪೃಥ್ವಿ ನಿರ್ಮಾಣವಾಗುವದು. ಇದರೊಳಗೆ ಅನೇಕ ಪ್ರಕಾರದ ಬೀಜಗಳ ಸಂಗ್ರಹ ಇರುವದು. ಬೀಜಗಳಿಂದ ವನಸ್ಪತಿಯು ಮತ್ತು ಪ್ರಾಣಿ ಮಾತ್ರರ ನಿರ್ಮಾಣ ಆಗಬೇಕೆನ್ನುವದು ನಿಸರ್ಗದ ನಿಯಮವೇ ಇರುವದು. (೩) ಈ ದೃಶ್ಯ (ಕಾಣುವ) ವಿಶ್ವವು ಕಲ್ಪನಾಮಾಯೆಯಿರುವದು. ಕಲ್ಪನೆಯು ಆಗದೀ ಮೂಲ ಮಾಯೆಯ ಪರಿಯಂತರ ಬಂದು ಮುಟ್ಟುವದು. ಬ್ರಹ್ಮ, ವಿಷ್ಣು ಮಹೇಶ ಈ ಮೂರು ದೇವರು ಮೂಲ ಮಾಯೆಯಿಂದ ಹೊರಗೆ ಬಂದವರಾಗಿರುವರು. (೪) ನಿಶ್ಚಲ (ಚಲಿಸದೇ ಇರುವ, ಅಚಲನಾದ ಬ್ರಹ್ಮನಲ್ಲಿ ಚಂಚಲ ಕಂಡು ಬರುವದು. ಇದು ಕಲ್ಪನೆಯು ಆಗದೀ (ತೀರ) ಮೊಟ್ಟ ಮೊದಲಿನ ಸ್ವರೂಪವಿರುವದು. ಆದ್ದರಿಂದಲೇ ಅಷ್ಟಧಾಪ್ರಕೃತಿ (ಪಂಚಭೂತ + ಮೂರು ಗುಣ ಕೂಡಿ ಆಗಿರುವದು) ಇದೂ ಸಹ ಮೂರ್ತಿವಂತವಾಗಿ ಕಲ್ಪನಾದಿಂದಲೇ ರೂಪಗೊಂಡಿರುವದು. (೫) ಕಲ್ಪನಾ ಸಾಕಾರಗೊಂಡಿತು ಅಂದರೆ ಎಲ್ಲಕ್ಕೂ ಮೊದಲಿನಿಂದ ಹಿಡಿದು ಕಟ್ಟಕಡೆಯವರೆಗಿನದೆಲ್ಲ ಅಂದರೆ ಸೃಷ್ಟಿಯೂ ಸಹ ಅಷ್ಟಧಾ ಪ್ರಕೃತಿಯೇ ಇರುವದೆಂದು ದೃಢವಾಗಿ ತಿಳಿಯಬೇಕು. (೬) ಐದುಭೂತ ಮತ್ತು ಮೂರು ಗುಣ ಕೂಡಿ ಎಂಟು ತತ್ವಗಳಾಗುವವು. ಅಂತೆಯೇ ಇದಕ್ಕೆ ಅಷ್ಟಧಾ ಪ್ರಕೃತಿ ಎಂದು ಅನ್ನುವರು. (೭) ಆಗದೀ ಮೊಟ್ಟ ಮೊದಲಿಗೆ (ಮೂಲದಲ್ಲಿ) ಸೂಕ್ಷ್ಮ ಕಲ್ಪನಾ ಇದ್ದಿತು. ಅನಂತರ ಅದೇ ತೀವ್ರವಾಗಿ ಬೆಳೆಯಿತು. ಬಹಳಷ್ಟು ವಿಸ್ತಾರವೂ ಆಯಿತು. ಕೊನೆಗೆ ವಿಶ್ವದ ರೂಪದಿಂದ ದೃಶ್ಯ ಆಕಾರವನ್ನು ಧಾರಣ ಮಾಡಿತು. (೮) ಎಲ್ಲಕ್ಕೂ ಮೊದಲಿನ ಮೂಲ ಬ್ರಹ್ಮದಲ್ಲಿ ಯಾವ ಕಲ್ಪನೆ ಉಂಟಾಯಿತೋ ಅದೇ ಮೂಲ ಮಾಯಾ ಆಗಿರುವದು. ಇವಳಲ್ಲಿ ಗುಣಗಳು ಪ್ರಕಟಗೊಂಡವು. ಅದು ಗುಣ ಮಾಯೆ ಅನಿಸಿಕೊಂಡಿತು. ಮತ್ತು ದೃಶ್ಯ ಇಂದ್ರಿಯ ಗೋಚರವಾದಂಥ ವಿಶ್ವವು ರೂಪತಾಳಿತು. ಇದು ಜಡತ್ವ ಹೊಂದಿತಾದ್ದರಿಂದ ಇದು ಅವಿದ್ಯಾ ಮಾಯೆಯಾಯಿತು. (ಅನಿಸಿಕೊಂಡಿತು) (೯) ಅನಂತರದಲ್ಲಿ ಜೀವದಲ್ಲಿ ನಾಲ್ಕು ಪ್ರಾಣಿ (ಅಂಡಜ, ಜಾರಜ ಸ್ವೇದಜ, ಉದ್ಭಿಜ ಹೀಗೆ) ಪ್ರಕಾರಗಳಿರುವವು. ಮತ್ತು ನಾಲ್ಕು ವಾಣಿಯ (ಪರಾ, ಪಶ್ಯಂತಿ ಮಾಧ್ಯಮಾ, ವೈಖರಿ ಹೀಗೆ) ಪ್ರಕಾರಗಳು. ಅನಂತರ ಶಬ್ದರೂಪದಿಂದ ವಿಸ್ತಾರ ಹೊಂದಿದವು. ಕೊನೆಗೆ ಅನೇಕ ಪ್ರಕಾರದ ಯೋನಿಗಳು ಮತ್ತು ಅದರಿಂದ ಅನೇಕ ಜೀವರಾಶಿಗಳು ಉತ್ಪನ್ನವಾದವು. (೧೦) ಈ ಪ್ರಕಾರ ವಿಶ್ವದ ನಿರ್ಮಾಣವಾಯಿತು. ಇನ್ನು ವಿಶ್ವದ ಸಂಹಾರ ಹೇಗಾಗುವದು ಇದನ್ನು ಈಗ ಹೇಳುವೆನು. ಕೇಳಬೇಕು. ಸಂಹಾರಗೊಳ್ಳುವ ಕ್ರಮದ ಬಗ್ಗೆ ಹಿಂದಿನ ದಶಕದಲ್ಲಿ ಸವಿಸ್ತರವಾಗಿ ಹೇಳಿದ್ದಾಗಿದೆ. (೧೧) ಈಗ ಇಲ್ಲಿ ಆಗದೀ ಸ್ವಲ್ಪದರಲ್ಲಿ ಸಂಹಾರ ಕ್ರಮದ ಬಗ್ಗೆ ಹೇಳುವೆನು. ಶ್ರೋತಾ ವಕ್ತಾರರೆಲ್ಲ ಲಕ್ಷ್ಯಗೊಟ್ಟು ಕೇಳಿರಿ. (೧೨) ಒಂದು ನೂರುವರ್ಷ ಮಳೆ ಬೀಳದ್ದರಿಂದ ಪೃಥ್ವಿಯ ಮೇಲಿದ್ದ ಎಲ್ಲ ಜೀವ ಪ್ರಾಣಿಗಳು ನಾಶವಾಗುವವು. ಈ ಕಲ್ಪಾಂತವು ಹೇಗೆ ಘಟಿಸುವದು ಅನ್ನುವ ವರ್ಣನೆಯನ್ನು ಶಾಸ್ತ್ರದಲ್ಲಿ ನೋಡಿದರೆ ತಿಳಿಯುವದು. (೧೩) ಹನ್ನೆರಡು ಪ್ರಕಾರದ ಕಿರಣಗಳಿಂದ ಸೂರ್ಯನು ಅತಿ ಉಷ್ಣತ್ವವನ್ನು ತಳೆಯುವನು. ಇದರಿಂದ ಪೃಥ್ವಿಯೇ ಕಾಯ್ದು ಸುಟ್ಟು ಅದು ಬೂದಿಯಾಗುವದು. ಅದು (ಬೂದಿಯು) ನೀರಿನಲ್ಲಿ ಕರಗಿ ಹೋಗುವದು. (೧೪) ಅಗ್ನಿಯು ಆ ನೀರನ್ನು ಶೋಷಿಸಿ ಬಿಡುವದು. ಈ ಅಗ್ನಿಯನ್ನು ವಾಯುವು ಆರಿಸಿ ಬಿಡುವನು. ಕೊನೆಗೆ ವಾಯುವೂ ಸಹ ಇಲ್ಲದಾಗಿ ಬಿಡುವನು. ಮತ್ತು ಕೇವಲ ನಿರಾಕಾರ ಬ್ರಹ್ಮವು ಮಾತ್ರ ಹೇಗಿದ್ದಿತೋ ಹಾಗೆಯೇ ಶಿಲುಕು ಉಳಿಯುವದು. (೧೫) ಸೃಷ್ಟಿಯ ಸಂಹಾರ ಈ ಪ್ರಕಾರ ಆಗಿ ಹೋಗುವದು. ಇದರ ಬಗ್ಗೆ ಹಿಂದೆ ಸವಿಸ್ತರವಾಗಿ ಹೇಳಿರುವದು. ಈ ಬಗೆಯಿಂದ ವಿಶ್ವದ ಸಂಹಾರವಾದ ಕೂಡಲೇ ಮಾಯೆಯು ದೂರಾಗುವದು. ಮಾಯಾ ದೂರವಾದ ಕೂಡಲೇ ಅಲ್ಲಿ ಕೇವಲ ನಿರ್ವಿಕಾರ ಸ್ವರೂಪವು ಮಾತ್ರ ಉಳಿಯುವದು. (೧೬)

ತೇಥೇ ಜೀವಶಿವ ಪಿಂಡಬ್ರಹ್ಮಾಂಡ । ಆಟೋನ ಗೇಲೇ ಥೋತಾಂಡ ।
ಮಾಯೆ ಅವಿದ್ಯೇಚೇ ಬಂಡ । ವಿತಳೋನ ಗೇಲೇ ॥೧೭॥

ವಿವೇಕೇ ಚೀ ಬೋಲಿಲಾ ಕ್ಷಯೆ । ಮ್ಹಣೋನಿ ವಿವೇಕಪ್ರಳಯು ।
ವಿವೇಕೀ ಜಾಣತೀ ಕಾಯೆ । ಮೂರ್ಖಾಸ ಕಳೇ ॥೧೮॥

ಸೃಷ್ಟಿ ಶೋಧಿತಾ ಸಕಳ । ಯೆೇಕ ಚಂಚಳ ಯೆೇಕ ನಿಶ್ಚಳ ।
ಚಂಚಳಾಸ ಕರ್ತಾ ಚಂಚಳ । ಚಂಚಳ ರೂಪೀ ॥೧೯॥

ಜೋ ಸಕಳ ಶರೀರೀ ವರ್ತೇ । ಸಕಳ ಕರ್ತೃತ್ವಾಸ ಪ್ರವರ್ತೇ ।
ಕರೂನ ಅಕರ್ತಾ ಹಾ ವರ್ತೇ । ಶಬ್ದ ಜಯಾ ॥೨೦॥

ರಾವ ರಂಕ ಬ್ರಹ್ಮಾದಿಕ । ಸಕಳಾಮಧೇ ವರ್ತೇ ಯೆೇಕ ।
ನಾನಾ ಶರೀರೇ ಚಾಳಕ । ಇಂದ್ರಿಯೆದ್ವಾರೇ ॥೨೧॥

ತ್ಯಾಸ ಪರಮಾತ್ಮಾ ಬೋಲತೀ । ಸಕಳ ಕರ್ತಾ ಐಸೇ ಜಾಣತೀ ।
ಪರಿ ತೋ ನಾಸೇಲ ಪ್ರಚಿತೀ । ವಿವೇಕೇ ಪಾಹಾವೀ ॥೨೨॥

ಜೋ ಸ್ವಾನಾಮಧೇ ಗುರುಗುರಿತೋ। ಜೋ ಸೂಕರಾಮಧೇ ಕುರುಕುರಿತೋ।
ಗಾಢವೀ ಭರೋನ ಭುಂಕತೋ । ಆಟಾಹಾಸ್ಯೇ ॥೨೩॥

ಲೋಕ ನಾನಾ ದೇಹ ದೇಖತೀ । ವಿವೇಕೀ ದೇಹಾಂತ ಪಾಹಾತೀ ।
ಪಂಡಿತ ಸಮದರ್ಶನೇ ಘೇತೀ । ಯೆಣೇ ಪ್ರಕಾರೇ ॥೨೪॥

॥ಶ್ಲೋಕ॥ ವಿದ್ಯಾವಿನಯು ಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।
ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥

ದೇಹ ಪಾಹಾತಾ ವೇಗಳಾಲೇ । ಪರಂತು ಅಂತರ ಯೆೇಕ ಚಿ ಜಾಲೇ ।
ಪ್ರಾಣೀಮಾತ್ರ ದೇಖಿಲೇ । ಯೆೇಕಾಂತರೇ ॥೨೫॥

ಅನೇಕ ಪ್ರಾಣೀ ನಿರ್ಮಾಣ ಹೋತೀ । ಪರೀ ಯೆೇಕ ಚೀ ಕಳಾ ವರ್ತತೀ ।
ತಯೆ ನಾವ ಜಗಜ್ಜ್ಯೋತೀ । ಜಾಣತೀಕಳಾ ॥೨೬॥

ಶ್ರೋತ್ರೀ ನಾನಾ ಶಬ್ದ ಜಾಣೇ । ತ್ವಚೆಮಧೇ ಸೀತೋಷ್ಣ ಜಾಣೇ ।
ಚಕ್ಷುಮಧೇ ಪಾಹೋ ಜಾಣೇ । ನಾನಾ ಪದಾರ್ಥ ॥೨೭॥

ರಸನೇಮಧೇ ರಸ ಜಾಣೇ । ಘ್ರಾಣಾಮಧೇ ವಾಸ ತೋ ಜಾಣೇ ।
ಕರ್ಮ ಇಂದ್ರಿಯಾಮಧೇ ಜಾಣೇ । ನಾನಾ ವಿಷಯುಸ್ವಾದ ॥೨೮॥

ಅಲ್ಲಿ ಜೀವ ಇಲ್ಲ, ಶಿವವೂ ಇಲ್ಲ, ಪಿಂಡವೂ ಇಲ್ಲ, ಬ್ರಹ್ಮಾಂಡವೂ ಇಲ್ಲ, ಇವೆಲ್ಲ ಕಲ್ಪನೆಯಿಂದಹುಟ್ಟಿದ (ಆದ) ಖೊಟ್ಟಿ ರಚನೆ ಆದ್ದರಿಂದ ಇವೆಲ್ಲ ಇಲ್ಲದಾಗಿ ಹೋಗುವವು, ಮಾಯಾ ಮತ್ತು ಅವಿದ್ಯಾ ಇವುಗಳ(ದೊಂಬರಾಟ) ಗದ್ದಲ ಮರೆಯಾಗಿ ಹೋಗುವವು. (೧೭) ವಿವೇಕ ಪ್ರಲಯದ ಮಹತ್ವ:- ವಿವೇಕದಿಂದ ದೃಶ್ಯದ ನಾಶ [ತೋರಿಬರುವದೆಲ್ಲವೂ ಮಿಥ್ಯೆಯು. ಕೊನೆಯವರೆಗೆ ಇರುವಂಥದಲ್ಲ-ಶಾಶ್ವತವಾದದ್ದಲ್ಲ.] ಮಾಡುವದಕ್ಕೇನೇ ವಿವೇಕ ಪ್ರಳಯವೆನ್ನುವರು. ಈ ಪ್ರಳಯ ಹೇಗೆ ಮಾಡಬೇಕೆಂಬುದನ್ನು ವಿವೇಕ ಉಳ್ಳ ಪುರುಷನೇ ತಿಳಿಯುವನು. ಮೂರ್ಖರಿಗೆ ಇದು ತಿಳಿಯುವದಿಲ್ಲ. (೧೮) ಈಗ ಸರ್ವ ಪ್ರಾಣಿಗಳಲ್ಲಿ ಮತ್ತು ಪದಾರ್ಥಗಳಲ್ಲಿ ಗುಪ್ತರೂಪದಿಂದ ಇರುವಂಥ ಜಗತ್-ಜ್ಯೋತಿ (ಅರಿವು) ಯಾವ ರೀತಿಯಿಂದ ಕ್ರೀಡಾ ಮಾಡುವದೆಂಬುದನ್ನು ಈಗ ವರ್ಣನೆ ಮಾಡುವರು:- ಈ ವಿಶ್ವವೆಲ್ಲವನ್ನು ಶೋಧಿಸಿ ನೋಡಿದರೆ ಕೇವಲ ಎರಡೇ ತತ್ವಗಳು ಕಂಡು ಬರುವವು. ಒಂದು ಚಂಚಲ [ಚಲ], ಇನ್ನೊಂದು ನಿಶ್ಚಲ (ಅಚಲ)ವಿರುವದು. ಚಂಚಲದ ಕರ್ತಾ ಚಂಚಲನೇ ಇದ್ದು ಇವನು ಚಂಚಲ ಸ್ವರೂಪನೇ ಇರುವನು. [೧೯] ಇವನು ಯಾವತ್ತೂ ಪ್ರಾಣಿಗಳ ಶರೀರದಲ್ಲಿ ಇರುವನು. ಅವನೇ ಆ ಶರೀರವನ್ನು ನಡೆಸುವನು. ಶರೀರದ ಕರ್ತೃತ್ವಕ್ಕೆ ಪ್ರೇರಣೆ ಮಾಡುವನು. ಇವನು ಮಾಡಿಯೂ ಅಕರ್ತಾ ಅಂದರೆ ಮಾಡದವನಂತೆ ಇರುವನೆಂಬ ಶಬ್ದಗಳಿಂದ ಇವನ ವರ್ಣನೆಯನ್ನು ಮಾಡುವರು. [೨೦] ಬಡವ, ಶ್ರೀಮಂತ ಮತ್ತು ಬ್ರಹ್ಮಾದಿಕ ದೇವರು ಇವರೆಲ್ಲರ ಅಂತರ್ಯಾಮದಲ್ಲಿ ಇವನೇ ಒಬ್ಬನಿದ್ದು ಇವರನ್ನೆಲ್ಲ ನಡೆಸಿಕೊಂಡು ಹೋಗುವನು. ಇಂದ್ರಿಯಗಳ ಮುಖಾಂತರ ಅನೇಕ ದೇಹದ ವ್ಯವಹಾರವನ್ನೂ ಇವನು ನಡೆಸುವನು. [೨೧] ಇವನಿಗೆ ಪರಮಾತ್ಮಾ ಎಂದು ಅನ್ನುವರು. ಇವನು ಸರ್ವಕರ್ತಾ ಇರುವನೆಂದು ಜನರು ತಿಳಿಯುವರು ಆದರೆ ಇವನೂ ಸಹ ಕೊನೆಗೆ [ಪ್ರಳಯ ಕಾಲದಲ್ಲಿ] ನಾಶಹೊಂದುವವನೇ ಇರುವನು. ಇದರ ಬಗ್ಗೆ ನಿಜ ಯಾವುದು ಸುಳ್ಳು [ಖೊಟ್ಟಿ] ಯಾವುದು ಎಂಬುದನ್ನು ವಿವೇಕದಿಂದ ಶೋಧಿಸಿ ನೋಡಬೇಕು. [೨೨] ನಾಯಿಯಲ್ಲಿದ್ದುಕೊಂಡು ಗುರ್ ಗುರ್ ಅನ್ನುವದು, ಹಂದಿಯಲ್ಲಿದ್ದು ಕುರ್ ಕುರ್ ಮಾಡುವದು, ಕತ್ತೆಯ ಅಂತರ್ಯಾಮದಲ್ಲಿ ತುಂಬಿಕೊಂಡು ಇದ್ದು ಇವನ ಅಟ್ಟಹಾಸದಿಂದ ಒದರುವದು. [೨೩] ಸಾಮಾನ್ಯ ಮನುಷ್ಯರು ಪ್ರಾಣಿಗಳಲ್ಲಿ ಮೇಲೆ ತೋರುವ ದೃಶ್ಯದೇಹ ಮಾತ್ರ ನೋಡುವರು. ಆದ ವಿವೇಕವುಳ್ಳ ಮನುಷ್ಯರು ಇವುಗಳ ಅಂತರ್ಯಾಮದಲ್ಲಿರುವ ಆತ್ಮ ತತ್ವದ ಕಡೆಗೆ [ಜ್ಞಾನದ ಕಲೆಯ ಕಡೆಗೆ] ನೋಡುವರು ಈ ರೀತಿಯಿಂದ ವಿವೇಕ ಉಳ್ಳವರು. ಯಾವತ್ತೂ ಪ್ರಾಣಿಗಳನ್ನು ಒಂದೇ ರೀತಿಯಲ್ಲಿ ಕಾಣುವರು. [ತಿಳಿಯುವರು] ಮತ್ತು ಅವರಂತೆ ನಡೆಯುವರು. [೨೪] ಶ್ಲೋಕ:- "ವಿದ್ಯಾ ವಿನಯ ಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ। ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ॥ (ಭ ಗೀ.) ವಿದ್ಯಾ ಮತ್ತು ವಿನಯ ಇವುಗಳಿಂದ ಸಂಪನ್ನನಾದಂಥ ಬ್ರಾಹ್ಮಣ, ಆಕಳು, ಆನೆ, ನಾಯಿ ಮತ್ತ ಚಂಡಾಲ ಈ ಎಲ್ಲರನ್ನು ವಿವೇಕಿಯಾದ ಪುರುಷರು ಸಮಾನ ಭಾವನೆಯಿಂದ ನೋಡಿ (ಕಂಡು) ಅವರೊಂದಿಗೆ ಸಮತ್ವದಿಂದ ನಡೆಯುವರು:-ಪ್ರಾಣಿಗಳ ದೇಹವನ್ನು ನೋಡಿದರೆ ಅವು ಬೇರೆ ಬೇರೆಯಾಗಿರುವದು ಕಂಡು ಬರುವದು. ಆದರೆ ಈ ಎಲ್ಲ ಪ್ರಾಣಿಗಳ ಅಂತಃಕರಣವು ಮಾತ್ರ ಒಂದೇ ಇರುವದು. ಅಂತೆಯೇ ವಿವೇಕಿಗಳಾದವರು ಕೇವಲ (ಫಕ್ತ) ಅಂತರಂಗದ ಕಡೆಗೆ ಲಕ್ಷ್ಯಗೊಟ್ಟು ಎಲ್ಲವನ್ನೂ ಒಂದೇ ಬಗೆಯಲ್ಲಿ ನೋಡುವರು. (೨೫) ಅನೇಕ ಪ್ರಕಾರದ ಪ್ರಾಣಿಗಳು ನಿರ್ಮಾಣವಾಗುವವು. ಇದು ನಿಜವೇ ಇದ್ದರೂ ಈ ಎಲ್ಲವನ್ನೂ ನಡೆಯಿಸುವ ಮತ್ತು ಆಡಿಸುವಂಥ ಜೀವನ ಕಲಾ ಮಾತ್ರ ಒಂದೇ ಇರುವದು. ಇದಕ್ಕೆ ಜಗತ್-ಜ್ಯೋತಿ, ಅಥವಾ ಜ್ಞಾನಕಲಾ ಎಂದು ಅನ್ನುವರು. (೨೬) ಈ ಜಗತ್ ಜ್ಯೋತಿಯನ್ನು ಇನ್ನೂ ಎಷ್ಟು ಬಗೆಯಿಂದ ಗುರುತಿಸುವರು? ಮತ್ತು ಇದರ ಬೇರೆ ಬೇರೆ ಹೆಸರುಗಳು ಯಾವವು? ಇದರ ಬಗ್ಗೆ ಹೇಳುವರು:- ಕರ್ಣ [ಕಿವಿ] ದ್ವಾರದಿಂದ ಇದು ಅನೇಕ ಶಬ್ದ ತಿಳಿಯುವದು. ಚರ್ಮದ ದ್ವಾರದಿಂದ ಇದು ಶೀತ, ಉಷ್ಣ (ತಂಡಿ, ಕಾವು) ಇವುಗಳನ್ನು ತಿಳಿಯುವದು. ನೇತ್ರಗಳ ದ್ವಾರದಿಂದ ಇದು ಅನೇಕ (ಪದಾರ್ಥ) ರೂಪಗಳನ್ನು ನೋಡುವದರಿಂದ ತಿಳಿಯುವದು (೨೭) ನಾಲಿಗೆಯ ದ್ವಾರದಿಂದ ಇದು ರಸ (ಉಪ್ಪು, ಖಾರ, ಸಿಹಿ ಕಹಿ ಮೊದಲಾದವುಗಳನ್ನು)ವನ್ನು ತಿಳಿಯುವದು. ನಾಸಿಕ (ಮೂಗು) ದ್ವಾರದಿಂದ ಇದು ವಾಸನೆ ತೆಗೆದುಕೊಳ್ಳುವದನ್ನು ತಿಳಿಯುವದು. ಕರ್ಮೇಂದ್ರಿಯ (ಕೆಲಸ ಮಾಡುವ ಶರೀರದ ಅವಯವ:- ಹಸ್ತ, ಪಾದ, ಗುದ, ಉಪಸ್ಥ ಮತ್ತು ವಾಣಿ)ಗಳ ದ್ವಾರದಿಂದ ಇದು ಅನೇಕ ಪ್ರಕಾರದ ವಿಷಯ ಸುಖವನ್ನು ಪಡೆಯುವದನ್ನು ತಿಳಿಯುವದು.(೨೮)

ಸೂಕ್ಷ್ಮ ರೂಪ ಸ್ಥೂಳ ರಕ್ಷೀ । ನಾನಾ ಸುಖದುಃಖೇ ಪರೀಕ್ಷೀ ।
ತ್ಯಾಸ ಮ್ಹಣತೀ ಅಂತರಸಾಕ್ಷೀ । ಅಂತರಾತ್ಮಾ ॥೨೯॥

ಆತ್ಮಾ ಅಂತರಾತ್ಮಾ ವಿಶ್ವಾತ್ಮಾ । ಚೈತನ್ಯ ಸರ್ವಾತ್ಮಾ ಸೂಕ್ಷ್ಮಾತ್ಮಾ ।
ಜೀವಾತ್ಮಾ ಶಿವಾತ್ಮಾ ಪರಮಾತ್ಮಾ । ದೃಷ್ಟಾ ಸಾಕ್ಷೀ ಸತ್ತಾರೂಪ ॥೩೦॥

ವಿಕಾರಾಮಧೀಲ ವಿಕಾರೀ । ಅಖಂಡ ನಾನಾ ವಿಕಾರ ಕರೀ ।
ತಯಾಸ ವಸ್ತು ಮ್ಹಣತೀ ಭಿಕಾರೀ । ಪರಮ ಹೀನ ॥೩೧॥

ಸರ್ವ ಯೇಕ ಚಿ ದಿಸತೀ । ಅವಘಾ ಯೇಕಕಾರ ಕರಿತೀ ।
ತೇ ಅವಘೀ ಮಾಈಕ ಸ್ಥಿತೀ । ಚಂಚಳಾ ಮಧೇ ॥೩೨॥

ಚಂಚಳ ಮಾಯಾ ತೇ ಮಾಈಕ । ನಿಶ್ಚಳ ಪರಬ್ರಹ್ಮ ಯೇಕ ।
ನಿತ್ಯಾನಿತ್ಯ ವಿವೇಕ । ಯಾಕಾರಣೆ ॥೩೩॥

ಜಾತೋ ಜೀವ ತೋ ಪ್ರಾಣ । ನೇಣೇ ಜೀವ ತೋ ಅಜ್ಞಾನ ।
ಜನ್ಮ ತೋ ಜೀವ ತೋ ಜಾಣ । ವಾಸನಾತ್ಮಕ ॥೩೪॥

ಐಕ್ಯ ಜೀವ ತೋ ಬ್ರಹ್ಮಾಂಶ । ಜೇಥೇ ಪಿಂಡ ಬ್ರಹ್ಮಾಂಡ ನಿರಾಸ ।
ಯೇಥೇ ಸಾಂಗಿತಲೇ ವಿಶೇಷ । ಚತ್ವಾರ ಜೀವ ॥೩೫॥

ಅಸೋ ಹೇ ಅವಘೇ ಚಂಚಳ । ಚಂಚಳ ಜಾಈಲ ಸಕಳ ।
ನಿಶ್ಚಳ ತೇ ನಿಶ್ಚಳ । ಆದಿಅಂತೀ ॥೩೬॥

ಆದ್ಯ ಮಧ್ಯ ಅವಸಾನ । ಜೇ ವಸ್ತು ಸಮಸಮಾನ ।
ನಿರ್ವಿಕಾರೀ ನಿರ್ಗುಣ ನಿರಂಜನ । ನಿಃಸಂಗ ನಿಃಪ್ರಪಂಚ ॥೩೭॥

ಸ್ವತಃ ಜಗತ್-ಜ್ಯೋತಿ ಸೂಕ್ಷ್ಮರೂಪವಿರುವದು. ಆದರೆ ಇದು ಸೂಕ್ಷ್ಮವಿದ್ದುಕೊಂಡೂ ಇದು ಸ್ಥೂಲ ದೇಹದ ರಕ್ಷಣೆ ಮಾಡುವದು. ನಾನಾ ಪ್ರಕಾರದ ಸುಖ ದುಃಖಗಳನ್ನು ಬರೋಬರ ರೀತಿಯಿಂದ ಪರೀಕ್ಷೆ ಮಾಡು ವದು. ಅಂತರ್ಯಾಮಿದಲ್ಲಿ ಇರುವಂಥ ಈ ಜಾಣೀವ ಕಲೆ ಅರ್ಥಾತ್ ಜ್ಞಾನ ಕಲೆಯನ್ನು ಅಂತಃಸಾಕ್ಷಿ ಅಥವಾ ಅಂತರಾತ್ಮಾ ಎಂದು ಅನ್ನುವರು. (೨೯) ಇದರ ಇನ್ನೂ ಕೆಲವು ಹೆಸರುಗಳು: ಆತ್ಮಾ, ವಿಶ್ವಾತ್ಮಾ, ಚೈತನ್ಯ, ಸರ್ವಾತ್ಮಾ, ಸೂಕ್ಷ್ಮಾತ್ಮಾ, ಜೀವಾತ್ಮಾ, ಪರಮಾತ್ಮಾ ಶಿವಾತ್ಮಾ, ದೃಷ್ಟಾ, ಸಾಕ್ಷಿ ಮತ್ತು ಸತ್ತಾರೂಪ ಇತ್ಯಾದಿ.(೩೦) ಜಗತ್-ಜ್ಯೋತಿ ಬಹಳ ವಿಲಕ್ಷಣವೇನೋ ನಿಜವು. ಯಾವತ್ತೂ ಜೀವಗಳ ಅಂತರ್ಯಾಮಿದಲ್ಲಿ ಇದ್ದುಕೊಂಡು ಅದನ್ನು ನಡೆಸಿಕೊಂಡು ಹೋಗುವದೂ ನಿಜವೇ ಇರುವದು. ಆದರೆ ಇದು ಚಂಚಲವಿರುವದು. ಇದು ಚಂಚಲದ (ಮಾಯೆಯ) ಪರಿಣಾಮವಿರುವದು. ನಿಶ್ಚಲ ಸ್ವರೂಪವು ಮಾತ್ರ ಇದರ ಆಚೆಗೆ ಇರುವದು. ಮೊದಲಿಗೆ ಮೂಲ ಮಾಯಾ ಅಂದರೆ ನಿಶ್ಚಲಬ್ರಹ್ಮವಸ್ತುವಿನಲ್ಲಿಯ ವಿಕಾರವಿರುವದು.ಈ ವಿಕಾರಿ ಮೂಲಮಾಯೆಯೊಳಗಿನ ವಿಕಾರವೆಂ ದರೆ ಜಗತ್-ಜ್ಯೋತಿಇರುವದು.ಅರ್ಥಾತ್ ಜಗತ್‌ಜ್ಯೋತಿಯು ವಿಕಾರದಲ್ಲಿಯವಿಕಾರವಿರುವದು[ಚಂಚಲವಿರುವದು] ಇನ್ನು ಜಗತ್‌ಜ್ಯೋತಿಯು ಅಖಂಡವಾಗಿ ನಾನಾ ಪ್ರಕಾರದ ವಿಕಾರಗಳನ್ನು ನಿರ್ಮಾಣ ಮಾಡುವದು.ಆದ್ದರಿಂದ ಏನಿ ದ್ದರೂ ಇದು ನಿಶ್ಚಲ ಬ್ರಹ್ಮವಸ್ತು ಆಗಲಿಕ್ಕೆ ಶಕ್ಯವಿಲ್ಲ. ಆಗಲಾರದು. ಪರಂತು ಅನುಭವದಿಂದ ಮತ್ತು ವಿವೇಕ ದಿಂದ ದರಿದ್ರ (ಮಂದ ಮತಿಗಳು) ರಾದವರು. ಅತಿಶಯ ಹೀನ ಮಟ್ಟದಲ್ಲಿದ್ದ ಜನರು ಈ ಜಗತ್‌ಜ್ಯೋತಿಗೇನೇ ಬ್ರಹ್ಮವಸ್ತು ಅನ್ನುವರು. (೩೧) ಈ ಅಧ್ಯಾತ್ಮ ದರಿದ್ರ ಜನಕ್ಕೆ ನಿಶ್ಚಲ ಮತ್ತು ಚಂಚಲ ಇವೆಲ್ಲ ಒಂದೇ ಆಗಿ ತೋರುವವು.ಯಾವತ್ತೂ ತತ್ವಗಳನ್ನು ಒಂದೇ ವರ್ಗದಲ್ಲಿ ಕೂಡಿಸಿ ಕಲಬೆರಕಿಮಾಡಿ ಬಿಡುವರು.ಈ ಸಬ್‌ಗೋಲಂಕಾರ ಮಾಡುವದೂಸಹ ಚಂಚಲದಲ್ಲಿ ಇರುವಂಥ ಮಾಯಿಕಸ್ಥಿತಿಯ ಅಹಂದ ಪರಿಣಾಮವೇ ಇರುವದು. (೩೨) ಚಂಚಲ ಅಥವಾ ವಿಕಾರಿಯಾದದ್ದೆಲ್ಲವೂ ಮಾತ್ರ ಮೂಲ ಮಾಯಾದಿಂದ ನಿರ್ಮಾಣವಾಗಿದೆ. ಇದು ಖರೇ ಇರುವದಿಲ್ಲ, ನಿಶ್ಚಲ ಪರಬ್ರಹ್ಮವೊಂದೇ ಮಾತ್ರ ಖರೇ ಇರುವದು. ಈ ಖರೇ ಖೊಟ್ಟಿಯ ನಿಶ್ಚಿತ ಅನುಭವ ಬರುವದಕ್ಕಾಗಿ ನಿತ್ಯ ಅಥವಾ ನಿಶ್ಚಲ, ಯಾವುದು?ಮತ್ತು ಅನಿತ್ಯ ಅಥವಾ ಚಂಚಲ ಯಾವುದು? ಇವುಗಳ ತುಲನಾತ್ಮಕ ವಿವೇಚನೆ ಮಾಡುವದು. ಅರ್ಥಾತ್ ವಿವೇಕ ಮಾಡುವದು ಅತಿ ಅವಶ್ಯವಿರುವದು. [೩೩] ಜೀವ ಹೋಗುತ್ತದೆ[ಹೋಯಿತು] ಎಂದು ನಾವು ಅನ್ನುವೆವು. ಆಗ ಮನುಷ್ಯರ ಪ್ರಾಣ ಹೋಗುತ್ತದೆ. ಜೀವಕ್ಕೆ ತಿಳಿಯುವದಿಲ್ಲ ಎಂದು ನಾವು ಅನ್ನು ವೆವು. ಆಗ ಇದು ಅಜ್ಞಾನವೆನಿಸುವದು. ಜೀವ ಹುಟ್ಟುವದು [ಹುಟ್ಟುತ್ತದೆ] ಎಂದು ನಾವು ಅನ್ನುವೆವು. ಆಗ ವಾಸನಾ ಸಾಕಾರಗೊಂಡು ಬರುವದು. [೩೪] ಜೀವವು ಬ್ರಹ್ಮದಲ್ಲಿ [ಬ್ರಹ್ಮದೊಂದಿಗೆ] ಐಕ್ಯ ಹೊಂದುವದು. ಎಂದು ನಾವು ಅನ್ನುವೆವು. ಆಗ ಜೀವದಲ್ಲಿಯ ಬ್ರಹ್ಮಾಂಶವನ್ನು ಉದ್ದೇಶಿಸಿ ಮಾತನಾಡುವೆವು. ಬ್ರಹ್ಮದೊಂದಿಗಿನ ತದಾಕಾರ ಸ್ಥಿತಿಯಲ್ಲಿ ಪಿಂಡ ಬ್ರಹ್ಮಾಂಡದ ನಿರಾಸ(ಪರಿಹಾರ)ವಾಗುವದು. ಅಲ್ಲಿ ಜೀವವು ನಾಲ್ಕು ಪ್ರಕಾರದ್ದೆಂದು ಸಹ ಹೇಳಲಾಗಿರುವದು. (೩೫) ಇರಲಿ ಇದೆಲ್ಲವೂ ಚಂಚಲವೇ ಇರುವದು. ಇದು ಚಂಚಲವಿದ್ದದ್ದರಿಂದಲೇ ವಿನಾಶ ವುಳ್ಳದ್ದಿರುವದು.(ನಾಶವಂತವಿರುವದು). ಆದರೆ ಯಾವುದು ನಿಶ್ಚಲವಿರುವದೋ ಅದು ಆರಂಭದಿಂದ ಕೊನೆಯ ವರೆಗೆ ಅವಿನಾಶಿ (ಶಾಶ್ವತ, ನಾಶರಹಿತ) ಇರುವದು. (೩೬) **ಈ ಶಾಶ್ವತ, ಅವಿನಾಶ, ಪರಬ್ರಹ್ಮ ವಸ್ತುವಿನ ಅನುಭವ ಹೇಗೆ ಪಡೆಯಬೇಕು. ಅನ್ನುವದನ್ನು ಈಗ ಕೊನೆಯದಾಗಿ ಹೇಳುವರು:**-ಆರಂಭದಲ್ಲಿ ಮಧ್ಯ ದಲ್ಲಿ ಮತ್ತು ಕೊನೆಯಲ್ಲಿ ಅರ್ಥಾತ್ ಮೂರೂ ಅವಸ್ಥೆಯಲ್ಲಿ ಯಾವ ವಸ್ತು ವಿಕಾರರಹಿತವಾಗಿರುವದೋ (ಉಳಿ ಯುವದೋ) ಮತ್ತು ಎಳ್ಳಷ್ಟೂ ಸಹ ಬದಲಾಗದೇ ಹೇಗಿದ್ದಿತೋ ಅದರಂತೆಯೇ (ಹಾಗೇ) ಇರುವದೋ ಅದು ಪರಬ್ರಹ್ಮ ವಸ್ತುವೆಂದು ಖಾತ್ರಿಯಿಂದ ತಿಳಿಯಬೇಕು. ಈ ವಸ್ತು ನಿರ್ವಿಕಾರಿಯು ನಿರ್ಗುಣವು. ನಿರಂಜನವು. ನಿಸ್ಸಂಗವು, ಮತ್ತು ನಿಃಷ್ಪ್ರಪಂಚವು ಇರುವದು. (೩೭)

ಉಪಾಧಿನಿರಾಸೇ ತತ್ವತಾ । ಜೀವಶಿವಾಸ ಐಕ್ಯತಾ ।
ವಿವಂಚೂನ ಪಾಹೋ ಜಾತಾ । ಉಪಾಧಿ ಕೈಚೀ ॥೩೮॥

ಅಸೋ ಜಾಣಣೇ ತಿತುಕೇ ಜ್ಞಾನ । ಪರಂತು ಹೋತೇ ವಿಜ್ಞಾನ ।
ಮನೇ ವೊಳಖಾವೇ ಉನ್ಮನ । ಕೋಣ್ಯಾ ಪ್ರಕಾರೇ ॥೩೯॥

ವೃತ್ತೀಸ ನ ಕಳೆ ನಿವೃತ್ತಿ । ಗುಣಾಸ ಕೈಚೀ ನಿರ್ಗುಣಪ್ರಾಪ್ತೀ ।
ಗುಣಾತೀತ ಸಾಧಕ ಸಂತೀ । ವಿವೇಕೇ ಕೇಲೇ ॥೪೦॥

ಶ್ರವಣಾಪರೀಸ ಮನನ ಸಾರ । ಮನನೇ ಕಳೇ ಸಾರಾಸಾರ ।
ನಿಜಧ್ಯಾಸೇ ಸಾಕ್ಷಾತ್ಕಾರ । ನಿಃಸಂಗ ವಸ್ತು ॥೪೧॥

ನಿರ್ಗುಣೀ ಜೆ ಅನನ್ಯತಾ । ತೇಚಿ ಮುಕ್ತಿ ಸಾಯೋಜ್ಯತಾ ।
ಲಕ್ಷ್ಯಾಂಶ ವಾಚ್ಯಾಂಶ ಆತಾ । ಪುರೇ ಜಾಲಾ ॥೪೨॥

ಅಲಕ್ಷೀ ರಾಹಿಲೇ ಲಕ್ಷ । ಸಿದ್ಧಾಂತೀ ಕೈಚಾ ಪೂರ್ವಪಕ್ಷ ।
ಅಪ್ರತ್ಯಕ್ಷಾಸ ಕೈಚೇ ಪ್ರತ್ಯಕ್ಷ । ಅಸೋನ ನಾಹೀ ॥೪೩॥

ಅಸೋನ ಮಾಈಕ ಉಪಾಧೀ । ತೇ ಚಿ ಸಹಜಸಮಾಧೀ ।
ಶ್ರವಣೇ ವಳಾವೀ ಬುದ್ಧೀ । ನಿಶ್ಚಯಾಚೀ ॥೪೪॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
"ಸಿದ್ಧಾಂತ ನಿರೂಪಣ" ನಾಮ ಸಮಾಸ ಪ್ರಥಮ ॥

● ●

ಜೀವಕ್ಕೆ ಉಪಾಧಿಗಳು ಇರುವವು. ಈ ಉಪಾಧಿಗಳ ನಿರಾಸ (ಪರಿಹಾರ) ಆದ ಕೂಡಲೇ ಜೀವವು ಶಿವದೊಂದಿಗೆ ಐಕ್ಯ ಹೊಂದುವದು. ಉಪಾಧಿಯ ನಿರಾಸ ಮಾಡಲಿಕ್ಕೆ ವಿವೇಕ ಮಾಡುವದೇ ಮುಖ್ಯ ಹಾಗೂ ಖಾತ್ರಿಯ ಉಪಾಯವಿರುವದು. ವಿವೇಕ ವಿಚಾರ ಮಾಡಿದರೆ ಉಪಾಧಿಯು(ಉಪಸರ್ಗ,)ಉಳಿಯುವದೇ ಇಲ್ಲ.(೩೮) ನಾವು ಯಾವು ಯಾವುದನ್ನು (ಏನೇನನ್ನು) ತಿಳಿಯುವೆವೋ ಅದೆಲ್ಲ ಜ್ಞಾನವೆನಿಸುವದು. ಪರಂತು. ಇದರ ಪ್ರತ್ಯಕ್ಷ ಅನುಭವ ಪಡೆದುಕೊಂಡ ಕೂಡಲೇ ಜ್ಞಾನವು ವಿಜ್ಞಾನವಾಗುವದು. [ಜ್ಞಾನವು ವಿಜ್ಞಾನದಲ್ಲಿ ಅಡಗುವದು]. ವಿಜ್ಞಾನದಲ್ಲಿ ಮನವು ಉನ್ಮನವಾಗುವದು. ಅಂದರೆ ಒಂದು ಉಚ್ಚ ಸ್ಥಿತಿಗೆ ಮುಟ್ಟುವದೇ ಆಗಿದೆ. ಉನ್ಮನ ಹೇಗಿರುವದು. ? ಇದು ಸದ್ಯದ ಮನಕ್ಕೆ ಆಕಲನವಾಗುವದಿಲ್ಲ. [ತಿಳಿಯುವದಿಲ್ಲ.] [೩೯] ವೃತ್ತಿ ರೂಪ ಜ್ಞಾನಕ್ಕೆ ನಿವೃತ್ತಿ ಹೇಗೆ ಇರುವದೆಂಬುದು ತಿಳಿಯುವದಿಲ್ಲ. ಗುಣಗಳ ಆಧೀನದಲ್ಲಿ ಇರುವ ಸಾಮಾನ್ಯರಿಗೆ ಇದರ ಆಚೆಗೆ ಇರುವಂಥ ನಿರ್ಗುಣದ ವರೆಗೆ ಹೋಗಿ ಮುಟ್ಟಲಿಕ್ಕೆ ಆಗುವದಿಲ್ಲ. ಯಾವನು ಸಾಧಕನಾಗಿರುವನೋ ಅವನಿಗೆ ಸಂತ ಸದ್ಗುರುವು ವಿವೇಕದ ಯೋಗದಿಂದ ಗುಣಾತೀತ, [ವಿರಕ್ತ]ನನ್ನಾಗಿ ಮಾಡಿ ಬಿಡುವನು. [೪೦] ದೇಹಬುದ್ಧಿವುಳ್ಳವರು. [ಪ್ರಾಪಂಚಿಕರಾದ ಸಾಮಾನ್ಯ ಜನರು] ವೃತ್ತಿ ರೂಪ [ಭಾವನಾರೂಪ] ಮನದ ಕಕ್ಷೆಯಲ್ಲಿ ವ್ಯವಹರಿಸುವರು. [ಇರುವರು]. ಯಾವ ಸ್ಥಳದಲ್ಲಿ ವೃತ್ತಿ ಇಲ್ಲದಾಗಿ ಮನವು ಉನ್ಮನ [ವಿರಕ್ತ, ಉಚ್ಚಮಟ್ಟ ಸ್ಥಿತಿ] ಆಗುವದು.? ಮತ್ತು ಜ್ಞಾನವು ವಿಜ್ಞಾನ [ಅನುಭವಯುಕ್ತ ಪರಿಪಕ್ವ ಜ್ಞಾನ] ವಾಗುವದು.? ಇಂಥ ಆ ಅವಸ್ಥೆಯ ಕಲ್ಪನಾ ಮಾಡುವದು ಕಠಿಣವಿರುವದು. ಆದ್ದರಿಂದ ಈಗ ಸಾಧನಾದ ಬಗ್ಗೆ ಹೇಳುವರು:- ಸದ್ಗುರು ಮುಖದಿಂದ ಶ್ರವಣ ಮಾಡುವದು ಬಹು ಮುಖ್ಯವಾದ ಪ್ರಥಮ ಮೆಟ್ಟಲು ಇರುವದು. ಇದನ್ನು ಶ್ರದ್ಧೆಯಿಂದ ಕೇಳಬೇಕು. ಇನ್ನು ಶ್ರವಣಕ್ಕಿಂತ ಮನನ ಮಾಡುವದು ಇನ್ನೂ ಶ್ರೇಷ್ಠವು. ಯಾಕಂದರೆ ಮನನದಿಂದ ಸಾರಾಸಾರವು ತಿಳಿಯುವದು. ಮನನಕ್ಕಿಂತ ನಿಧಿ ಧ್ಯಾಸವು ಮತ್ತೂ ಶ್ರೇಷ್ಠವು. ಯಾಕಂದರೆ ನಿಧಿಧ್ಯಾಸದಿಂದ ನಿಃಸ್ಸಂಗ ಆತ್ಮವಸ್ತುವಿನ ಪ್ರತ್ಯಕ್ಷ ಸಾಕ್ಷಾತ್ಕಾರ [ಅನುಭವ] ಘಟಿಸುವದು. [೪೧] ನಿರ್ಗುಣ ಬ್ರಹ್ಮದೊಂದಿಗೆ ತದಾಕಾರ [ಏಕರೂಪ] ವಾಗುವದಕ್ಕೆ ಸಾಯುಜ್ಯ ಮುಕ್ತಿ ಎಂದು ಅನ್ನುವರು. ಇಲ್ಲಿಯವರೆಗೆ ಸಾಧಕನು ಬಂದನಂತರ ಲಕ್ಷ್ಯಾಂಶ, ಮತ್ತು ವಾಚ್ಯಾಂಶ, ಇವೆರಡೂ ತನ್ನಷ್ಟಕ್ಕೆ ತಾನೇ ಹಿಂದೆ ಉಳಿಯುವವು. [೪೨] ನಿರ್ಗುಣದೊಂದಿಗೆ ಅನನ್ಯ [ಏಕರೂಪ] ಆಗುವದು. ಅಂದರೆ ಯಾವಲ್ಲಿ ಲಕ್ಷ್ಯವು ಮುಟ್ಟಲಿಕ್ಕೆ ಸಮರ್ಥವಾಗುವದಿಲ್ಲವೋ ಅಲ್ಲಿ ಲಕ್ಷ್ಯ ಇಡುವದೇ ಆಗಿರುವದು. ಸಿದ್ಧಾಂತ[ಸ್ಥಾಪಿತವಾದ ತತ್ವ ನಿರ್ಧಾರ, ನಿರ್ಣಯ] ಹಸ್ತಗತವಾದ [ಸಾಧಿಸಿದ] ಮೇಲೆ ಅಲ್ಲಿಗೆ ಪೂರ್ವ ಪಕ್ಷದ ಕೆಲಸ ಮುಗಿಯುವದು. ಬ್ರಹ್ಮ ಸ್ವರೂಪವು ಅತೀಂದ್ರಿಯ ಇದ್ದದ್ದರಿಂದ ಇಂದ್ರಿಯಗಳಿಗೆ ಪ್ರತ್ಯಕ್ಷವಾಗಿ ನೋಡಲಿಕ್ಕೆ ಬರುವದಿಲ್ಲ. ಬ್ರಹ್ಮ ಸ್ವರೂಪವು ಇಂದ್ರಿಯಗಳ ದೃಷ್ಟಿಯಿಂದ ಇದ್ದೂ ಇಲ್ಲದಂತೆ ಆಗಿ ಬಿಡುವದು.[೪೩]ಮಾಯಾಮಯ ದೃಶ್ಯದ ಉಪಾಧಿಯು [ಚಂಚಲವು] ಎಲ್ಲ ಕಡೆಗೂ ಇದ್ದರೂ ಇದೆಲ್ಲ ಉಪಾಧಿ ಎಂದು ತಿಳಿದು ನಿರ್ಗುಣ [ಆತ್ಮಸ್ವರೂಪ]ದೊಂದಿಗೆ ಅನನ್ಯತೆಯನ್ನು ಸಾಧಿಸಿಕೊಳ್ಳಬೇಕು. ಮತ್ತು ಸ್ಥಿರಪಡಿಸಿಕೊಳ್ಳಬೇಕು. ಇದಕ್ಕೇ [ಈ ಸ್ಥಿತಿಗೇ] ಸಹಜ ಸಮಾಧಿ ಅನ್ನುವರು. [ಈ ಸಮಾಧಿಯಲ್ಲಿ ದೇಹ ಬಿಡಬೇಕಾಗಿಲ್ಲ]. ಇದು ಸಾಧ್ಯವಾಗಬೇಕಾದರೆ ಪ್ರಥಮದಲ್ಲಿ ಶ್ರವಣದಿಂದ ಬುದ್ಧಿಯಲ್ಲಿ ಆತ್ಮಸ್ವರೂಪದ ಬಗ್ಗೆ [ಅದು ಎಲ್ಲ ಕಡೆಗೂ ತುಂಬಿರುವದು ಅನ್ನುವ ಬಗ್ಗೆ] ನಿಶ್ಚಯ ನಿರ್ಮಾಣವಾಗುವಂತೆ ಮಾಡುವದು ಅವಶ್ಯವಿರುವದು. [೪೪]

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಹನ್ನೊಂದನೆಯ ದಶಕದ
"ಸಿದ್ಧಾಂತ ನಿರೂಪಣ"ವೆಂಬ ಒಂದನೆಯ ಸಮಾಸವು ಮುಗಿದುದು.

### ಸಮಾಸ ದ್ವಿತೀಯ : ಚತ್ವಾರದೇವನಿರೂಪಣ

॥ಶ್ರೀರಾಮ॥ ಯೇಕ ನಿಶ್ಚಳ ಯೇಕ ಚಂಚಳ । ಚಂಚಳೀ ಗುಂತಲೇ ಸಕಳ ।
ನಿಶ್ಚಳ ತೇ ನಿಶ್ಚಳ । ಜೈಸೇ ತೈಸೇ ॥೧॥

ಪಾಹೆ ನಿಶ್ಚಳಾಚಾ ವಿವೇಕ । ಐಸಾ ಲಕ್ಷಾಮಧೇ ಯೇಕ ।
ನಿಶ್ಚಳಾಐಸಾ ನಿಶ್ಚಯಾತ್ಮಕ । ನಿಶ್ಚಳಚಿ ತೋ ॥೨॥

## ದಶಕ ೧೧. ಸಮಾಸ ೨. ಚತ್ವಾರದೇವ ನಿರೂಪಣ (ನುಡಿ ೪೦)

ವಿಶ್ವದಲ್ಲಿ ಎರಡೇ ಎರಡು ವಸ್ತುಗಳಿರುವವು. ಒಂದು ಶಾಶ್ವತ ಅಥವಾ ನಿಶ್ಚಲವಾದದ್ದು. ಮತ್ತು ಎರಡನೆಯದೆಂದರೆ ಅಶಾಶ್ವತ ಅಥವಾ ಚಂಚಲವಾಗಿರುವದು. ಅಶಾಶ್ವತವೆಲ್ಲವೂ ಮಾಯಾಮಯವಿರುವದರಿಂದ ಇದು ಇಂದಿಲ್ಲ ನಾಳೆ ಎಂದಾದರೊಂದು ದಿನ ನಾಶ ಹೊಂದುವದೇ ಆಗಿದೆ. ಪ್ರಥಮದ ಅವಸ್ಥೆಯಲ್ಲಿ ಇದು ಅವ್ಯಕ್ತವಿರುವದು.ಆಗ ಸೂಕ್ಷ್ಮವಿರುವದು. ಪರಂತು ಯಾವಾಗ ವ್ಯಕ್ತದಿಶೆಗೆ [ಬೈಲಿಗೆ] ಬರುವದೋ ಆಗ ಇದು ಸ್ಥೂಲವಾಗುವದು. ಮತ್ತು ಅಮರ್ಯಾದವಾಗಿ [ಭೇದಾ ಭೇದ ಎಣಿಸದೆ] ಬೆಳೆಯುವದು. ವಿಸ್ತಾರ ಹೊಂದುವದು.ಈ ವಿಸ್ತಾರ ಕ್ರಮದಲ್ಲಿ ನಾನಾ ಪ್ರಕಾರದ ಪ್ರಾಣಿಗಳು ಉತ್ಪನ್ನವಾದ ನಂತರ ಮನುಷ್ಯರ ನಿರ್ಮಾಣವಾಗುವದು. ಮಾನವ ಜೀವನದ ಮಟ್ಟವು ಪೂರ್ಣವಾಗಿ [ಅಗದೀ]ಬೇರೆಯೇ ಇರುವದು. ಮಾನವ ಸಮಾಜದಲ್ಲಿ ಅನೇಕ ರೀತಿಯ ಮತ ಮತಾಂತರಗಳು ಅನೇಕ ತರಹದ ನಡತೆ ನಡಾವಳಿಗಳು ಮತ್ತು ಇರುವ ಬಗೆಯೂ ಸಹ ಅನೇಕ ಪ್ರಕಾರದ್ದಾಗಿರುವದು ಕಂಡುಬರುವದು. ಇದರಂತೆ ಮನುಷ್ಯರು ತಮ್ಮ ಕಲ್ಪನೆಯ ಪ್ರಕಾರ ಅನೇಕ ಪ್ರಕಾರದ ದೇವರನ್ನು ನಿರ್ಮಾಣ ಮಾಡಿದರು. ನಾನಾ ಶಾಸ್ತ್ರಗಳ ಬಾಜಾರವನ್ನು ತೆರೆದರು,ತುಂಬಿದರು. ಈ ಎಲ್ಲ ಗದ್ದಲ ಗಡಿಬಿಡಿಯಲ್ಲಿ ನಿಜವಾದ ದೇವರು ಯಾವುದು ಅನ್ನುವದೇ ತಿಳಿಯದಂತೆ ಆಯಿತು. ಸರ್ವಸಾಧಾರಣ ಲೋಕ ಮತ[ಸಾಮಾನ್ಯ ಜನರ ಅಭಿಪ್ರಾಯ]ವೇನೂ ಅಂತಿಮ ಸತ್ಯವಲ್ಲ. ಜನರು ಪ್ರತಿಮೆಯ ಪೂಜೆ ಮಾಡುತ್ತಾರೆ. ಇವರ ದೃಷ್ಟಿಯಲ್ಲಿ ಈ ಪ್ರತಿಮೆಯೇ ದೇವರಾಗಿರುವದು. ಆದರೆ ಅದೇನೂ ನಿಜವಾದ ಶಾಶ್ವತ ದೇವರಲ್ಲ. ಜ್ಞಾನಿ ಜನರು ನಿಜವಾದ ದೇವರನ್ನೂ ಶೋಧಿಸಿ [ಗುರುತಿಸಿ] ತೆಗೆಯಲಿಕ್ಕೆ ಬೇಕು. ಸಹಜ ರೀತಿಯಲ್ಲಿ ನೋಡಿದರೆ ನಾಲ್ಕು ಪ್ರಕಾರದದೇವರು ಕಾಣಿಸುವವು. [೧] ಎಲ್ಲರ ಅಂತರಾತ್ಮಾ [೨] ವಿಶ್ವಾತ್ಮಾ [೩] ದ್ರಷ್ಟಾ ಅಥವಾ ಸಾಕ್ಷಿ [೪] ನಿಶ್ಚಲಪರಮಾತ್ಮಾ. ಜ್ಞಾನಿ ಪುರುಷನು ರಾಜಹಂಸದಂತೆ ಇರಬೇಕು. ಈ ವಿಶ್ವದಲ್ಲಿ ಶಾಶ್ವತ-ಅಶಾಶ್ವತ ಇದರಿಂದ ಯಾವ ಮಿಶ್ರಣವಾಗಿರುವದೋ ಆ ಮಿಶ್ರಣ [ರೊಜ್ಜು. ರಾಡಿ]ದಿಂದ ಜ್ಞಾನಿಯು ಶಾಶ್ವತವನ್ನು ಶೋಧಿಸಿ ತೆಗೆಯಬೇಕು. ಜನಲೋಕದಲ್ಲಿ ನಾಲ್ಕು ಪ್ರಕಾರದ ದೇವರು ಕಂಡು ಬರುವವು. [ಒಂದು] ಪ್ರತಿಮಾ [ಎರಡು] ಅವತಾರ [ಮೂರು] ಅಂತರಾತ್ಮಾ [ನಾಲ್ಕು] ಪರಮಾತ್ಮಾ ಇವುಗಳಲ್ಲಿ ಕೊನೆಯದಾದ ಪರಮಾತ್ಮಾ ಇದೇ ನಿಜವಾದ ದೇವರಾಗಿರುವದು. ಇವರ ಅನುಭವವನ್ನು ಪಡೆಯುವವನೇ ಮಹಾನುಭಾವನೆನಿಸುವನು. ಪ್ರಕೃತಿಯ ಆಚೆಗೆ ಇರುವವನಾದ ಆ ದೊಡ್ಡ ದೇವನ ಧ್ಯಾನ ಮಾಡುತ್ತ ಮಾಡುತ್ತ ಈ ಮಹಾನುಭಾವನು ಅದರೊಂದಿಗೆ ತದ್ರೂಪನಾಗಿ ಬಿಡುವನು. ಇಂಥ ಜ್ಞಾನಿ ಪುರುಷನೇ ಅಂತರ್ಯಾಮಿಯಾದ ಶಾಶ್ವತ ಪುರುಷನ ಗುರುತು ಮಾಡಿಕೊಳ್ಳುವನು. ಮತ್ತು ಮಾಡಿಕೊಡುವನು. ಆದರೆ ಬಹಿರಂಗದಲ್ಲಿ ಮಾತ್ರ ಅಗದೀ ಸಾಮಾನ್ಯರಂತೆ ಲೋಕ ವ್ಯವಹಾರವನ್ನು ನಡೆಸಿಕೊಂಡು ಹೋಗುವನು.

### ದಶಕ ೧೧. ಸಮಾಸ ೨. ಚತ್ವಾರದೇವ ನಿರೂಪಣ (ನುಡಿ ೪೦)

**ಬಹಳಷ್ಟು ಜನರು ಅಶಾಶ್ವತ(ಚಂಚಲ)ದಲ್ಲಿಯೇ ಸಿಕ್ಕುಬಿದ್ದು ಜೀವನ ನಡೆಸುವರು. ಇಷ್ಟೇ ಅಲ್ಲ.ಶಾಶ್ವತದ ಬಗ್ಗೆ ಆಧ್ಯಾತ್ಮಿಕತೆಯ ಗಪ್ಪ(ಹರಟೆ)ಹೊಡೆಯುವ ಪುರುಷರೂ ಸಹ ಸಹಜವಾಗಿ ಅಶಾಶ್ವತದಲ್ಲಿ ಮುಳುಗಿ ಬಿಡುವವರಾಗಿರುವರು. ಆದರೆ ಅಶಾಶ್ವತದ ಜಾಲದಿಂದ ಹೊರಬೀಳುವ ಭಾಗ್ಯವಂತರು ತೀರ ಕಡಿಮೆ ಇರುವರು:–** ಈ ವಿಶ್ವದಲ್ಲಿ ಎರಡೇ ವಸ್ತುಗಳು ಇರುವವು. ಒಂದು ಶಾಶ್ವತ ಮತ್ತು ಎರಡನೆಯದು ಅಶಾಶ್ವತ. ಎಲ್ಲ ಜನರೂ ಅಶಾಶ್ವತದಲ್ಲಿ[ಚಂಚಲದಲ್ಲಿ]ತೊಡಕಿಕೊಂಡಿರುವರು. ಆದರೆ ಅದೇ ಶಾಶ್ವತವು ಮಾತ್ರ ಮೂಲದಲ್ಲಿ ಹೇಗಿತ್ತೋ ಹಾಗೆಯೇ ಶಾಶ್ವತವಾಗಿ ಇರುವದು. ಕ್ವಚಿತ್ತಾಗಿ ಎಲ್ಲಿಯೋ ಒಬ್ಬಿಬ್ಬರು ಶಾಶ್ವತದ ಶೋಧ ಮಾಡುವರು. ಅಂತೆಯೇ ಇಂಥವರ ಶಾಶ್ವತತನದಲ್ಲಿ ಯಾವ ತರಹದ ನ್ಯೂನತೆ [ಕೊರತೆ] ಬರುವದಿಲ್ಲ. [೧] ಸಾರಾಸಾರ ವಿವೇಕ ಮಾಡಿ ಶಾಶ್ವತದ ನಿಶ್ಚಲದ ಶೋಧ ಮಾಡುವಂಥವರು ಲಕ್ಷಕ್ಕೊಬ್ಬರು ಕಾಣುವರು. ಶಾಶ್ವತದಂತೆ ಅವರೂ ಸಹ ಅತ್ಯಂತ ಪರಿಶ್ರಮ ಪೂರ್ವಕ ದೃಢ ನಿಶ್ಚಯದಿಂದ ಸ್ಥಿರ ಮತ್ತು ಶಾಶ್ವತರೇ ಆಗುವರು. [೨]

ಯಾ ನಿಶ್ಚಳಾಚ್ಯಾ ಗೋಷ್ಟೀ ಸಾಂಗತೀ। ಪುನ್ಹಾ ಚಂಚಳಾಕಡೆ ಧಾವತೀ।
ಚಂಚಳಚಕ್ರೀ ನಿಘೋನ ಜಾತೀ। ಐಸೆ ಥೋಡೆ ॥೩॥

ಚಂಚಳೀ ಚಂಚಳ ಜನ್ಮಲೇ। ಚಂಚಾಳಾಚಿ ಮಧೇ ವಾಢಲೇ।
ಅವಘೇ ಚಂಚಳಚಿ ಬಿಂಬಲೇ। ಜನ್ಮವರೀ ॥೪॥

ಪೃಥ್ವೀ ಅವಘೀ ಚಂಚಳಾಕಡೆ। ಕರಣೇ ತಿತುಕೇ ಚಂಚಳೀ ಘಡೆ।
ಚಂಚಳ ಸಾಂಡೂನ ನಿಶ್ಚಳೀ ಪವಾಡೆ। ಐಸಾ ಕೈಚಾ ॥೫॥

ಚಂಚಳ ಕಾಹೀ ನಿಶ್ಚಳೇನಾ। ನಿಶ್ಚಳ ಕದಾಪಿ ಚಳೇನಾ।
ನಿತ್ಯಾನಿತ್ಯವಿವೇಕೇ ಜನಾ। ಉಮಜೆ ಕಾಹೀ ॥೬॥

ಕಾಹೀ ಉಮಜಲೇ ತರೀ ನುಮಜೆ। ಕಾಹೀ ಸಮಜಲೇ ತರೀ ನ ಸಮಜೆ।
ಕಾಹೀ ಬುಝೆ ತರೀ ನಿಬುಝೆ। ಕಿಂಚಿತ ಮಾತ್ರ ॥೭॥

ಸಂದೇಹ ಅನುಮಾನ ಆಣೀ ಭ್ರಮ। ಅವಘಾ ಚಂಚಳಾಮಧೇ ಶ್ರಮ।
ನಿಶ್ಚಳೀ ಕದಾ ನಾಹೀ ಮರ್ಮ। ಸಮಜಲೇ ಪಾಹಿಜೆ ॥೮॥

ಚಂಚಳಾಕರೀ ತಿತುಕೀ ಮಾಯಾ। ಮಾಈಕ ಜಾಯೆ ವಿಲಯಾ।
ಲಹಾನ ಥೋರ ಮ್ಹಣಾವಯಾ। ಕಾರ್ಯ ನಾಹೀ ॥೯॥

ಸಗಟ ಮಾಯಾ ವಿಸ್ತಾರಲೀ। ಅಷ್ಟಧಾ ಪ್ರಕೃತಿ ಫಾಂಪಾವಲೀ।
ಚಿತ್ರವಿಚಿತ್ರ ವಿಕಾರಲೀ। ನಾನಾರೂಪೇ ॥೧೦॥

ನಾನಾ ಉತ್ಪತ್ತೀ ನಾನಾ ವಿಕಾರ। ನಾನಾ ಪ್ರಾಣೀ ಲಾಹಾನ ಥೋರ।
ನಾನಾ ಪದಾರ್ಥ ಮಕಾರ। ನಾನಾ ರೂಪೇ ॥೧೧॥

ವಿಕಾರವಂತ ವಿಕಾರಲೇ। ಸೂಕ್ಷ್ಮ ಜಡತ್ವಾಸ ಆಲೇ।
ಅಮರ್ಯಾದ ದಿಸೋ ಲಾಗಲೇ। ಕಾಹೀಚಾಬಾಹೀ ॥೧೨॥

ಬಹಳಷ್ಟು ಜನರು ಬಾಯಿಯಿಂದ ಮಾತ್ರ ಶಾಶ್ವತದ ಬಗ್ಗೆ ಬಹಳಷ್ಟು ಮಾತನಾಡುವರು. ಆದರೆ ಪುನಃ ಈ ಜನರು ಅಶಾಶ್ವತದ ಹಿಂದೆಯೇ ಓಡುವರು. ಈ ಅಶಾಶ್ವತದ ಜಾಲದಿಂದ ಹೊರಬಿದ್ದು ಬರುವವರು ಆಗದೀ [ಬಹಳ] ಕಡಿಮೆ ಇರುವರು. [೩] ಅಶಾಶ್ವತದಲ್ಲಿಂದಲೇ ಅಶಾಶ್ವತವು ಜನ್ಮ ತಳೆಯುವದು. ಅದರಲ್ಲಿಯೇ ಬೆಳೆಯುವದು. ಆದ್ದರಿಂದ ಇದು ಆಯುಷ್ಯವೆಲ್ಲವೂ ಮನುಷ್ಯನ ಮನಸ್ಸಿನ ಮೇಲೆ ಅಶಾಶ್ವತ [ಚಂಚಲ]ವು ಒಂದೇ ಸವನೆ ತನ್ನ ಪರಿಣಾಮವನ್ನು ಮಾಡುತ್ತಲೇ ಇರುವದು. [೪] ಈ ಭೂಮಂಡಲದ ಮೇಲಿನ ಎಲ್ಲ ಘಟನೆಗಳೂ ಅಶಾಶ್ವತದವೇ ಇರುವವು. ಇಲ್ಲಿಯ ಮನುಷ್ಯನ ಕಾರ್ಯ ಮತ್ತು ಎಲ್ಲ ವ್ಯವಹಾರವೂ ಸಹ ಅಶಾಶ್ವತದಲ್ಲಿಯೇ ನಡೆಯುವವು. ಆದ್ದರಿಂದ ಅಶಾಶ್ವತವನ್ನು ಬದಿಗೆ ಸರಿಸಿ ಶಾಶ್ವತದಲ್ಲಿ ಪ್ರವೇಶ ಮಾಡುವಂಥ ಮನುಷ್ಯನು ಸಿಗುವದು ಬಹಳ ಕಠಿಣವಿರುವದು. [೫] ಯಾವುದು ಅಶಾಶ್ವತವಿರುವದೋ ಅದು ಯಾವ ಕಾಲಕ್ಕೂ ಸ್ಥಿರವಾಗಿ ನಿಲ್ಲಲಾರದು. ಉಳಿಯಲಾರದು. ಯಾವುದು ಶಾಶ್ವತವಿರುವದೋ ಅದು ಯಾವ ಕಾಲಕ್ಕೂ ನಾಶವಾಗಲಾರದು. ಸ್ಥಿರವಾಗಿಯೇ ಉಳಿಯುವದು. ನಿತ್ಯಾನಿತ್ಯ? ವಿವೇಕ?[ಸ್ಥಿರ, ಸತ್ಯ, ಯಾವುದು? ಅಸ್ಥಿರ, ಅಸತ್ಯ ಯಾವುದು?]ದಿಂದ ಮನುಷ್ಯನಿಗೆ ಈ ಎಲ್ಲ ವಿಷಯದ ಬಗೆ ಸತ್ಯ ಯಾವುದೆಂಬುದು ಸ್ವಲ್ಪ ಸ್ವಲ್ಪ ತಿಳಿಯುತ್ತ ಹೋಗುವದು. [೬] ಆದರೆ ಚಂಚಲ ಅಂದರೆ ಅಶಾಶ್ವತದ ಪ್ರಭಾವದ ಜೋರು ಬಹಳ ವಿಲಕ್ಷಣವಿರುವದು. ನಿತ್ಯಾನಿತ್ಯ ವಿವೇಕವನ್ನು ಮಾಡಿ ಅದರಿಂದ ಸ್ವಲ್ಪ ಸ್ವಲ್ಪ ತಿಳಿದರೂ ಸಹ ಇದು ತಿಳಿದೂ ತಿಳಿಯದಂತಾಗಿ ಬಿಡುತ್ತದೆ. ಹಾಗೂ ಸ್ವಲ್ಪ ತಿಳಿದಿದ್ದರೂ ಸಹ ಇದು ತಿಳಿಯದಂತಾಗಿ ವ್ಯರ್ಥವಾಗಿ ಹೋಗುವದು. ಮತ್ತು ಮನುಷ್ಯನಿಗೆ ಕೆಲವೊಂದು ಅನುಭವ ಬಂದು ಜ್ಞಾನವಾದರೂ ಸಹ ಅವನ ಅಜ್ಞಾನವೇನೂ ದೂರವಾಗುವದಿಲ್ಲ. [೭] ಮನುಷ್ಯನ ಮನಸ್ಸಿನ ಮೇಲೆ ಮಾಯೆಯ ದಟ್ಟ ಆವರಣವಿರುವದು. ಇದರಿಂದಾಗಿ ಅವನಿಗೆ ಸಂಶಯ, ಕಲ್ಪನಾ, ಭ್ರಮ ಇತ್ಯಾದಿ ಬಡಿದುಕೊಳ್ಳುವವು. ಆವರಿಸುವವು. ಈ ವಿಶ್ವದಲ್ಲಿಯ ಎಲ್ಲ ಸಚೇತನ ವ ಅಚೇತನಗಳ ವ್ಯಾಪ್ತಿ [ವಿಸ್ತಾರ, ಹಬ್ಬುವಿಕೆ] ಎಲ್ಲವೂ ಮಾಯೆಯಿಂದಲೇ ಹೊರಬೀಳುವವು. ಇವೆಲ್ಲ ಅಶಾಶ್ವತವಿರುವವು. ಅಮರ್ಯಾದ [ಅಳತೆಗೆ ಹತ್ತದಷ್ಟು] ಇರುವವು:- ಸಂಶಯ ಬರುವಿಕೆ, ಕಲ್ಪನಾ ಮಾಡುತ್ತ ಹೊರಡುವದು, ಭ್ರಮ ಉಂಟಾಗುವಿಕೆ ಈ ಎಲ್ಲವುಗಳು ಅಶಾಶ್ವತದೊಳಗಿನ ಕಷ್ಟಕೊಡುವಂಥ ಘಟನೆಗಳಿರುವವು. ಶಾಶ್ವತದಲ್ಲಿ ಇವುಗಳಿಗೆ ಎಷ್ಟೂ ಸ್ಥಾನವೇ ಇರುವದಿಲ್ಲ. ಆದರೆ ಈ ರಹಸ್ಯವು ಮನುಷ್ಯನಿಗೆ ತಿಳಿಯಲಿಕ್ಕೆ ಮಾತ್ರ ಬೇಕು. [೮] ಯಾವ ಯಾವುದು ಅಶಾಶ್ವತವಿರುವದೋ ಅವೆಲ್ಲವೂ ಮಾಯಾ ನಿರ್ಮಿತವಾದದ್ದು ಇರುವದು. ಮತ್ತು ಇವೆಲ್ಲವೂ ನಶ್ವರ ಇರುವವು. ನಾಶವಂತವಿರುವವು. ಮಾಯಾ ನಿರ್ಮಿತ ವಸ್ತುಗಳಲ್ಲಿ ಸಣ್ಣವು ದೊಡ್ಡವು ಅನ್ನುವ ಭೇದ ಕಂಡು ಬರುವದಿಲ್ಲ. ಯಾವತ್ತೂ ವಸ್ತುಗಳು ನಾಶವಂತವಾದವು ಇರುತ್ತವೆ. [೯] ವಿಶ್ವದಲ್ಲೆಲ್ಲ ಕಡೆಗೂ ಮಾಯೆಯ ವಿಸ್ತಾರವೇ ಇರುವದು. ಪಂಚಭೂತಗಳು ಮತ್ತು ಮೂರು ಗುಣಗಳು ಕೂಡಿರುವಂಥ ಅಷ್ಟಧಾ ಪ್ರಕೃತಿಯು ವಿಶ್ವದ ತುಂಬೆಲ್ಲ ವಿಸ್ತಾರವಾಗಿದೆ [ಹರಡಿದೆ]. ಅನೇಕ ಪ್ರಕಾರದ ಚಿತ್ರ ವಿಚಿತ್ರ ರೀತಿಯಿಂದ ಇದು ವಿಸ್ತಾರಗೊಂಡಿದ್ದನ್ನು ನಾವು ನೋಡುವೆವು. [೧೦] ಇದರ ವಿಸ್ತಾರದಲ್ಲಿ ಅನೇಕ ಪ್ರಕಾರದ ನಿರ್ಮಿತ ವಸ್ತುಗಳು, ಅನೇಕ ತರಹದ ಬದಲಾವಣೆಗಳು, ಅನೇಕ ರೀತಿಯ ಸಣ್ಣ ದೊಡ್ಡ ಮತ್ತು ನಾನಾ ರೀತಿಯ ಜಡ ದ್ರವ್ಯಮಯ ಪದಾರ್ಥಗಳು ಮತ್ತು ನಾನಾ ಪ್ರಕಾರದ ರೂಪಗಳು ಕಂಡು ಬರುವವು. [೧೧] ಅಷ್ಟಧಾ ಪ್ರಕೃತಿಯು ವಿಕಾರಶೀಲವಾದಂಥ ಅಥವಾ ಸತತ ಬದಲಾವಣೆ ಹೊಂದುವಂಥ ಇರುವದರಿಂದ ಇದರ ವಿಕಾರೀ ಸ್ವಭಾವದಿಂದ ಈ ವಿಶ್ವವು ನಿರ್ಮಾಣವಾಗಿದೆ. ಅವ್ಯಕ್ತ ಪ್ರಕೃತಿಯು ಸೂಕ್ಷ್ಮವಿರುವದು. ಇದು ವ್ಯಕ್ತರೂಪಧಾರಣ ಮಾಡುವಾಗ ಸ್ಥೂಲ ಪದಾರ್ಥಗಳ ರೂಪ ಹೊಂದುವದು. ಈ ರೀತಿಯಿಂದ ಇದು ಅಳತೆಗೆಟ್ಟು ಮನಬಂದಂತೆ ಬೆಳೆದ ಅಥವಾ ಬಹಳ ವಿಸ್ತಾರಗೊಂಡ ಈ ದೃಶ್ಯ ಸ್ಥೂಲ ವಿಶ್ವವು ನಮಗೆ ತೋರಿ ಬರುವದು. [೧೨]

ಮಗ ನಾನಾ ಶರೀರೇ ನಿರ್ಮಾಣ ಜಾಲೀ। ನಾನಾ ನಾಮಾಭಿಧಾನೇ ಠೇವಿಲೀ।
ಭಾಷಾ ಪರತ್ವೇ ಕಳೋ ಆಲೀ। ಕಾಹೀ ಕಾಹೀ ॥೧೩॥

ಮಗ ನಾನಾ ರೀತಿ ನಾನಾ ದಂಡಕ। ಆಚಾರ ಯೇಕಾಹೂನ ಯೇಕ।
ವರ್ತೋ ಲಾಗಲೇ ಸಕಳ ಲೋಕ॥ ಲೋಕಾಚಾರೇ ॥೧೪॥

ಅಷ್ಟಧಾ ಪ್ರಕೃತೀಚೀ ಶರೀರೇ। ನಿರ್ಮಾಣ ಜಾಲೀ ಲಾಹಾನಥೋರೇ।
ಪುಢೇ ಆಪುಲಾಲ್ಯಾ ಪ್ರಕಾರೇ। ವರ್ತೋ ಲಾಗತೀ ॥೧೫॥

ನಾನಾ ಮತ್ತೇ ನಿರ್ಮಾಣ ಜಾಲೀ। ನಾನಾ ಪಾಷಾಂಡೇ ಮಾಢಲೀ।
ನಾನಾ ಪ್ರಕಾರೀಚೀ ಉಠಿಲೀ। ನಾನಾ ಬಂಡೇ ॥೧೬॥

ಜೈಸಾ ಪ್ರವಾಹ ಪಡಿಲಾ। ತೈಸಾ ಚ ಲೋಕ ಚಾಲಿಲಾ।
ಕೋಣ ವಾರೀಲ ಕೋಣಾಲಾ। ಯೇಕ ನಾಹೀ ॥೧೭॥

ಪೃಥ್ವೀಚಾ ಜಾಲಾ ಗಳಾಂಠಾ। ಯೇಕಾಹೂನ ಯೇಕ ಮೋಠಾ।
ಕೋಣ ಖರಾ ಕೋಣ ಖೋಟಾ। ಕೋಣ ಜಾಣೇ ॥೧೮॥

ಜಡ ದ್ರವ್ಯದಿಂದ ಈ ಬಗೆಯಾಗಿ ಆಶ್ಚರ್ಯಕರ ಅನಂತವಸ್ತುಗಳು ನಿರ್ಮಾಣವಾದ ನಂತರ ನಾನಾ ಪ್ರಕಾರದಲ್ಲಿ ದೇಹಧಾರಣ ಹೊಂದಿದ ಜೀವಂತ ಪ್ರಾಣಿಗಳು ನಿರ್ಮಾಣವಾದವು. ಇವುಗಳಿಗೆ ಬೇರೆ ಬೇರೆ ಹೆಸರು ಗಳನ್ನು ಇಟ್ಟರು. ಇವುಗಳಲ್ಲಿಂದಲೇ ಆ ಮೇಲೆ ಮನುಷ್ಯನು ನಿರ್ಮಾಣವಾದನು. ಮನುಷ್ಯರಲ್ಲಿ ಬೇರೆ ಬೇರೆ ಭಾಷೆ ಗಳು ಉತ್ಪನ್ನವಾದವು. ಭಾಷೆಯು ಸಾಧನದಿಂದ ಮನುಷ್ಯರಿಗೆ ಪರಸ್ಪರ ಮನೋಗತವು ಸ್ವಲ್ಪ ಸ್ವಲ್ಪ ತಿಳಿಯ ಹತ್ತಿತು. (೧೩) ಶಬ್ದರೂಪ ಭಾಷೆಯಿಂದ ಮಾನವ ಸಮಾಜದ ಜೀವನವು ಒಮ್ಮೆಲೆ (ಏಕದಂ) ಮೇಲಿನ ಮಟ್ಟಕ್ಕೆ ಏರಿತು. ಮಾನವ ಸಮಾಜದ ತಳಹದಿಯು ಭಾಷೆಯಲ್ಲಿರುತ್ತದೆ. ಆದರೆ ಅದರ ಪ್ರಗತಿಯ ಮೂಲವು ಆಚಾರ ಮತ್ತು ವಿಚಾರ ಇವುಗಳಲ್ಲಿ ಕಂಡು ಬರುವದು. ಆಚಾರ ಮತ್ತು ವಿಚಾರಗಳಲ್ಲಿ ಶಿಥಿಲತೆ ಅಸ್ತವ್ಯಸ್ತತೆ ಬಂದರೆ ಇಡೀ ಸಾಮಾಜಿಕ ಜೀವನವೇ ಅಸ್ತವ್ಯಸ್ತವಾಗುವದು. ಸಡಿಲಾಗುವದು. ಸಾಮಾಜಿಕ ಜೀವನವೆಲ್ಲವೂ ಅಸ್ತವ್ಯಸ್ತವಾಗುವದು: ಸಮಾಜದ ಪ್ರಗತಿ ನಿಲ್ಲುವದು. ಇದರಿಂದ ಸಮಾಜದಲ್ಲಿಯ ವ್ಯಕ್ತಿಯ ಜೀವನದಲ್ಲಿ ಉತ್ತಮತನದ ಅಭಾವವು ಭಾಸವಾಗುವದು. ಪ್ರತಿಯೊಬ್ಬ ಸಂತನಿಗೆ ಸಮಾಜ ಮನದ ತಿಳುವಳಿಕೆ ಇರುವದು. ಇದರಲ್ಲಿ ಸಂಶಯವಿಲ್ಲ. ಈ ಮನದ ವಿಕೃತಿ ಇಲ್ಲ ದಂತೆ ಮಾಡುವ ಪ್ರಯತ್ನ ತಮ್ಮ ತಮ್ಮ ಸ್ವಭಾವಕ್ಕನುಸಾರವಾಗಿ ಪ್ರತಿಯೊಬ್ಬ ಸಾಧು ಸಂತನು ಮಾಡುತ್ತಲೇ ಇರುತ್ತಾನೆ. ಆದರೆ ಶ್ರೀ ಸಮರ್ಥರಲ್ಲಿ ಈ ತಿಳುವಳಿಕೆ ಅತ್ಯಧಿಕ ಪ್ರಮಾಣದಲ್ಲಿ ಎದ್ದು ಶೋಭಿಸುತ್ತಿತ್ತು. ಇವರು ಭಾರತದ ತುಂಬ ಮಾಡಿದ ಸಂಚಾರದಲ್ಲಿ ಭಾರತೀಯ ಸಮಾಜದ ಸರ್ವಾಂಗೀಣ ಅಸ್ತವ್ಯಸ್ತತೆಯನ್ನು ಪ್ರತ್ಯಕ್ಷ ನೋಡಿದರು. ಎಲ್ಲಿ ನೋಡಿದಲ್ಲಿ ಬೇಶಿಸ್ತು ಹರಡಿಕೊಂಡಿತ್ತು. ಸಮಾಜದಲ್ಲಿಯ ವಿಚಾರ ಪ್ರಧಾನ ಬ್ರಾಹ್ಮಣ ವರ್ಗವು ವಿಚಾರಹೀನರಾಗಿ ಪ್ರಭಾವ ಕುಗ್ಗಿದವರಾಗಿದ್ದರು. ಅನೇಕ ಹೊಸ ಮತ ಪ್ರವಾಹ ನಿರ್ಮಾಣವಾಗಿ ಪರಸ್ಪರ ರಲ್ಲಿಯ ಸಂಘರ್ಷಣದಿಂದ ಒಳಗಿನ ಮತ್ತು ಹೊರಗಿನ ಜೀವನದಲ್ಲಿ ಗೊಂದಲ ಮತ್ತು ಗಡಿಬಿಡಿ ಎದ್ದುಬಿಟ್ಟಿತ್ತು. ನಿಜವಾದ ದೇವರ ಮರೆವು ಆಗಿ ಕ್ಷುದ್ರ ದೇವ ದೇವತೆಗಳ ಸುಗ್ಗಿ ಪ್ರಾರಂಭವಾಗಿತ್ತು. ಈ ಎಲ್ಲ ಪರಿಸ್ಥಿತಿಯ ವರ್ಣನೆ ಇಲ್ಲಿ ಕಂಡು ಬರುವದು:- ಅನಂತರ ಸಮಾಜದೊಳಗೆ ಅನೇಕ ಪ್ರಕಾರದ ನೀತಿ ನಿಯಮ ನಡುವಳಿಕೆಗಳು ನಿರ್ಮಾಣ ಗೊಂಡವು. ಅನೇಕ ಬಗೆಯ ರೀತಿ ರಿವಾಜುಗಳು ನಡೆನುಡಿಯ ರೂಢಿಯ ಪ್ರಘಾತಗಳೂ ಇದರಿಂದ ಅನೇಕ ಪ್ರಕಾ ರದ ಆಚಾರಗಳೂ ಪ್ರಾರಂಭವಾದವು. ಈ ಲೋಕಾಚಾರಕ್ಕನುಸರಿಸಿ ಯಾವತ್ತೂ ಸಮಾಜದ ಜನರು ನಡೆಯಲಿಕ್ಕೆ ಹತ್ತಿದರು. (೧೪) ಒಟ್ಟಿನಲ್ಲಿ ಅಷ್ಟಧಾ ಪ್ರಕೃತಿಯು ಮೊಟ್ಟ ಮೊದಲು ನಿರ್ಮಾಣವಾಯಿತು. ಇದರಿಂದ ಅನೇಕ ಪ್ರಕಾರದ ಸಣ್ಣ ದೊಡ್ಡ ಶರೀರಗಳು ನಿರ್ಮಾಣಗೊಂಡವು. ಅನಂತರ ಅವುಗಳ ಸ್ವಭಾವಕ್ಕನುಸಾರವಾಗಿ ಆ ಆ ಪ್ರಾಣಿಗಳ (ಜೀವಗಳ) ವರ್ತಣೂಕ (ನಡವಳಿಕೆ) ಪ್ರಾರಂಭವಾಯಿತು. (೧೫) ಆದರೆ ಮಾನವ ಸಮಾಜದಲ್ಲಿಯ ಜೀವನವು ಹೆಚ್ಚು ತೊಡಕಿನದೂ ಗೊಂದಲಗೊಳಿಸುವಂಥದೂ ಇರುವದು. ಮಾನವ ಸಮಾಜದಲ್ಲಿ ಅನೇಕ ಪ್ರಕಾ ರದ ಮತಗಳು ನಿರ್ಮಾಣಗೊಂಡವು. ಅನೇಕ ಪ್ರಕಾರದ ಖೊಟ್ಟಿ ಹಾಗೂ ಭ್ರಮೆಗೊಳಿಸುವ (ಗೊಂದಲ ಉಂಟು ಮಾಡುವ) ವಿಚಾರಗಳು ಹುಟ್ಟಿ ಬೆಳೆದು ನಿಂತವು. ಮತ್ತು ನಾನಾ ಪ್ರಕಾರದ ವಿಲಕ್ಷಣ ಕಲ್ಪನೆಗಳ ಪ್ರಸಾರ ವಾಯಿತು. (೧೬) ಸಮಾಜದಲ್ಲಿ ಯಾವ ವಿಚಾರದ ಪ್ರವಾಹ ಪ್ರಬಲವಿರುವದೋ ಅದನ್ನನುಸರಿಸಿ ಸಾಮಾನ್ಯ ಜನರು ನಡೆಯುವರು. ಇಂಥವರನ್ನು ಹಿಡಿದು ಯೋಗ್ಯ ಮಾರ್ಗದರ್ಶನದ ಕಡೆಗೆ ತಿರುಗಿಸಿ ಸರಿದಾರಿಗೆ ಹಚ್ಚುವ ವಿಚಾರವಂತ ಪುರುಷರು ಸಮಾಜದಲ್ಲಿ ಕ್ವಚಿತ್ತಾಗಿ ಕಂಡು ಬರುವರು. (೧೭) ಸದ್ಯದ ಕಾಲದಲ್ಲಿಯಾದರೋ ಮಾನವ ಸಮಾಜದಲ್ಲಿ ಸರ್ವತ್ರದಲ್ಲಿ ಗೊಂದಲ (ಅಸ್ತವ್ಯಸ್ತತೆ, ತಿಕ್ಕಾಟ) ಬೆಳೆದಿರುವದು. ಪ್ರತಿಯೊಬ್ಬರೂ ತಾವೇ ಇತರರಿಗಿಂತ ದೊಡ್ಡವರೆಂದು ತಿಳಿಯುವರು. ಇಂಥ ಪರಿಸ್ಥಿತಿಯಲ್ಲಿ ಖರೇ ಯಾರು ಮತ್ತು ಖೊಟ್ಟಿ ಯಾರು? ಇವನ್ನು ನಿಶ್ಚಯಿಸುವದು ಬಹಳ ಕಠಿಣವಾಗುವದು. (೧೮)

ಆಚಾರ ಬಹುಕಚಿತ ಪಡಿಲಾ । ಕಿತ್ಯೇಕ ಪ್ರೋಟಾ ಸಾಠೀ ಬುಡಾಲಾ ।
ಅವಘಾ ವರಸಂಗ ಚಿ ಜಾಲಾ। ಸಾಭಿಮಾನೇ ॥೧೯॥

ದೇವ ಜಾಲೇ ಉದಂಡ । ದೇವಾಚೇ ಮಾಂಡಲೇ ಭಂಡ ।
ಭೂತಾ ದೇವತಾಚೇ ಥೋತಾಂಡ । ಯೇಕ ಚಿ ಜಾಲೇ ॥೨೦॥

ಮುಖ್ಯ ದೇವ ತೋ ಕಳೇನಾ । ಕಾಶಾಸ ಕಾಹೀ ಚ ಮಿಳೇನಾ ।
ಯೇಕಾಸ ಯೇಕ ಮಳೇನಾ । ಅನಾವರ ॥೨೧॥

ಐಸಾ ನಾಸಲಾ ವಿಚಾರ । ಕೋಣ ಪಾಹಾತೋ ಸಾರಾಸಾರ ।
ಕೈಚಾ ಲಹಾನ ಕೈಚಾ ಥೋರ । ಕಳೇಚಿನಾ ॥೨೨॥

ಶಾಸ್ತ್ರಾಚಾ ಬಾಜಾರ ಭರಲಾ । ದೇವಾಚಾ ಗಲ್ಬಲಾ ಜಾಲಾ ।
ಲೋಕ ಕಾಮನೇಚ್ಯಾ ವ್ರತಾಲಾ। ಝೊಂಬೋನ ಪಡತೀ ॥೨೩॥

ಐಸೇ ಅವಘೇ ನಾಸಲೇ । ಸತ್ಯಾಸತ್ಯ ಹಾರಪಲೇ ।
ಅವಘೇ ಅನಾಯೇಕ ಜಾಲೇ । ಚಹೂಕಡೇ ॥೨೪॥

ಮತಾಮತಾಚಾ ಗಲ್ಬಲಾ । ಕೋಣೀ ಪುಸೇನಾ ಕೋಣಾಲಾ ।
ಜೋ ಜೇ ಮತೀ ಸಾಂಪಡಲಾ । ತಯಾಸ ತೇ ಚಿ ಥೋರ ॥೨೫॥

ಅಸತ್ಯಾಚಾ ಅಭಿಮಾನ । ತೇಣೇ ಪಾವಿಜೆ ಪತನ ।
ಮ್ಹಣೋನಿಯಾ ಜ್ಞಾತೇ ಜನ । ಸತ್ಯ ಶೋಧಿತೀ ॥೨೬॥

ಲೋಕ ವರ್ತತೀ ಸಕಳ । ತೇ ಜ್ಞಾತ್ಯಾಸ ಕರತಳಾಮಳ ।
ಆತಾ ಐಕಾ ಕೇವಳ । ವಿವೇಕೀ ಹೋ ॥೨೭॥

ಲೋಕ ಕೋಣ್ಯಾ ಪಂಥೇ ಜಾತೀ । ಆಣಿ ಕೋಣ್ಯಾ ದೇವಾಸ ಭಜತೀ ।
ಐಸೀ ಹೇ ರೋಕಡೀ ಪ್ರಚಿತೀ । ಸಾವಧ ಐಕಾ ॥೨೮॥

ಮೃತ್ತಿಕಾ ಧಾತು ಪಾಷಾಣಾದಿಕ । ಐಸಿಯಾ ಪ್ರತಿಮಾ ಅನೇಕ ।
ಬಹುತೇಕ ಲೋಕಾಚಾ ದಂಡಕ । ಪ್ರತಿಮಾದೇವೀ ॥೨೯॥

ನಾನಾ ದೇವಾಚೆ ಅವತಾರ । ಚರಿತ್ರೇ ಐಕತೀ ಯೇಕ ನರ ।
ಜಪ ಧ್ಯಾನ ನಿರಂತರ । ಕರಿತೀ ಪೂಜಾ ॥೩೦॥

ಆಚಾರವು ಬಹು ರಂಗಿನದಾಗಿ ಬಹಳ ತೊಡಕಿನದಾಗಿದೆ. ಕೆಲವೊಂದು ಆಚಾರಗಳು ಹೊಟ್ಟೆಹೊರೆಯು ವದರಲ್ಲಿ ಮುಳುಗಿವವು. ಉಳಿದಂಥ ಆಚಾರಗಳನ್ನು ಕೇವಲ ಹೊರ ನೋಟಕ್ಕಾಗಿ ಆಚರಿಸಲಾಗುವದು. ದೇಹದ ಅಭಿಮಾನದಿಂದಾಗಿ ಆಚಾರವು ಕೇವಲ ಬಾಹ್ಯಾಡಂಬರಕ್ಕಾಗಿ ಹೊರನೋಟದಲ್ಲಿ ಆಚರಿಸಲ್ಪಡುವದು (೧೯) ಆಚಾರ ದಿಂದ ಜಾರಿದ ಸಮಾಜವು ವಿಚಾರದಿಂದಲೂ ಜಾರಿದ್ದಿತು. ಖರೇ ದೇವರನ್ನು ಲೋಪಗೊಳಿಸಿ ಭೂತಗಳ ಮತ್ತು ಖೊಟ್ಟಿ ದೇವತೆಗಳ ಮಹತ್ವವು ಹೆಚ್ಚಾಯಿತು. ಸಮಾಜದಲ್ಲಿ ಬಹಳಷ್ಟು ದೇವತೆಗಳು ನಿರ್ಮಾಣವಾದವು. ಈ ದೇವರುಗಳಲ್ಲಿ ಇಲ್ಲದ ಮಹತ್ವ (ನಿರರ್ಥಕ ಮಹತ್ವ) ಬೆಳೆಯಿತು. ಭೂತಗಳು ಮತ್ತು ದೇವತೆಗಳಲ್ಲಿ ಇಲ್ಲದ ಅವಾ ಸ್ತವ ಮಹಾತ್ಮೆಯು ಇವುಗಳಲ್ಲಿ (ಒಂದರದೊಂದರಲ್ಲಿ) ಕಲಬೆರಕೆ (ಕೂಡುವಿಕೆ)ಯಾಗಿ ಬೆಳೆಯಿತು. (೨೦) ಮುಖ್ಯ ಮತ್ತು ಖರೇ ದೇವರು ಯಾರು? ಇದೇ ತಿಳಿಯದಂತೆ ಆಯಿತು. ಯಾವುದೂ ಯಾವುದಕ್ಕೂ ಹೊಂದಿಕೆಯಾಗು ವದಿಲ್ಲ. ಸ್ವೈರಾಚಾರಕ್ಕೆ (ಮನಬಂದಂತೆ ನಡೆಯುವದು) ಪ್ರತಿಬಂಧ ಮಾಡುವಂಥವರು ಯಾರೂ ಕಂಡು ಬರುವ ದಿಲ್ಲ. (೨೧) ಈ ಪ್ರಕಾರ ಯಾವತ್ತೂ ಸಮಾಜ ವಿಚಾರ ಭ್ರಷ್ಟವಾಗಿರುವದು. ಸಾರಾಸಾರ ವಿವೇಚನೆ ಮಾಡು ವಂಥ ವಿವೇಕಿ ಪುರುಷರು ಯಾರೂ ಉಳಿದಿರುವದಿಲ್ಲ. ಮತ್ತು ಸಣ್ಣವರು ಯಾರು? ದೊಡ್ಡವರು ಯಾರು ? ಇದನ್ನು ನಿರ್ಣಯಿಸುವದಕ್ಕೆ ಯಾವ ಮಾರ್ಗವೂ ಉಳಿದಿರಲಿಲ್ಲ (೨೨) ಕೇವಲ ಶಾಸ್ತ್ರದ ಸಂತೆಯೇ ನೆರೆದಿರುತ್ತದೆ. ಕೇವಲ ದೇವರದೇ ಗರ್ದಿಯಾಗಿ ಬಿಟ್ಟಿದೆ. ಮತ್ತು ಸಮಾಜದ ಬಹು ಜನರು ಪ್ರಾಪಂಚಿಕ ವಾಸನಾ ಪೂರ್ಣಮಾಡು ವಂಥ ವ್ರತಗಳನಾದಕ್ಕೆ ಹುಚ್ಚರಂತೆ ಗಂಟು ಬಿದ್ದಿರುವರು. (೨೩) ಈ ರೀತಿಯಲ್ಲಿ ಜನ ಸಮೂಹವು (ಬಹುಜನ ಸಮಾಜ) ಯಾವತ್ತೂ ರೀತಿಯಲ್ಲಿ ಹದಗೆಟ್ಟು ಹೋಗಿರುವಂತೆ ಕಂಡು ಬರುವದು. ಸತ್ಯಾಸತ್ಯದಲ್ಲಿ ಇರುವ ಅಂತರ ಕಳೆದು ಹೋದಂತೆ (ಕಂಡು ಬರದಂತೆ) ಆಗಿ ಬಿಟ್ಟಿದೆ. ನಾಲ್ಕೂ ಕಡೆಗೂ ಕೇವಲ ಅರಾಜಕತೆ ಹಬ್ಬಿದ್ದು ಕಂಡು ಬರುತ್ತದೆ. (೨೪) ಅನೇಕ ತರಹದ ಮತ ಮತಾಂತರಗಳ ಗೊಂದಲ (ಗರ್ದಿ) ಹೆಚ್ಚಿರುವದು. ಯಾರೂ ಯಾರನ್ನೂ ವಿಚಾರಿಸದಂತೆ ಆಗಿದೆ. ಯಾರಿಗೆ ಯಾವ ಮತ ಕಾಣುವದೋ ಅದೇ ಅವನಿಗೆ ಉತ್ತಮ ಮತ್ತು ದೊಡ್ಡದು (ಶ್ರೇಷ್ಠ) ಆಗಿ ಕಾಣಿಸುವದು. (ಅನಿಸುವದು) (೨೫) ಯಾರು ಅಸತ್ಯದ ಅಭಿಮಾನ ಹಿಡಿಯುವರೋ ಅವರ ಅಧಃಪಾತವಾಗುವದು. ಆದ್ದರಿಂದಲೇ ಖರೇ ಜ್ಞಾನಿ ಮನುಷ್ಯರು ಸತ್ಯದ ಶೋಧ ಮಾಡುವರು. (೨೬) ಸಾಮಾನ್ಯರು ಪೂರ್ಣ ತಿಳುವಳಿಕೆಯಿಲ್ಲದವರು ಪ್ರಕೃತಿ (ಮಾಯೆ)ಯ ಕಕ್ಷೆಯಲ್ಲಿಯ ಅನೇಕ ಅಶಾಶ್ವತ ದೇವ ದೇವತೆಗಳನ್ನು ಭಜಿಸುವರು. ಇದರಿಂದ ಸಮಾಧಾನ ಸಿಗುವದಿಲ್ಲ, ಆದ್ದರಿಂದ ತಿಳಿದವರು ಪ್ರಕೃತಿ ಮಾಯೆಯ ಆಚೆಗೆ ಇರುವ ಶಾಶ್ವತ ದೇವರನ್ನು ಭಜಿಸುವರು. ಇದರಿಂದ ಇಂಥವರಿಗೆ ಇದರ ದಿವ್ಯ ಅನುಭವ ಬರುವದು. ಮತ್ತು ಇಂಥವರೇ ಮಹಾತ್ಮರಾಗುವರು:- ಸಾಮಾನ್ಯ ಜನರಲ್ಲಿ ದೇವರ ಬಗ್ಗೆ ಇರುವ ಕಲ್ಪನೆ ಮತ್ತು ಅವರು ದೇವರೊಡನೆ ನಡೆದುಕೊಳ್ಳುವ ರೀತಿ ಇವೆರಡೂ ಖರೇ ಇರುವದಿಲ್ಲ. ಈ ಮಾತು ತಿಳುವಳಿಕೆಯುಳ್ಳ (ಮನುಷ್ಯ ನಿಗೆ) ಪುರುಷನಿಗೆ ಅಗದೀ ಸ್ಪಷ್ಟವಾಗಿ ಕಂಡು ಬರುತ್ತದೆ. ಇರಲಿ. ಈಗ ತಿಳಿದಂಥ ವಿವೇಕಿ ಮನುಷ್ಯರೇ, ನಿಮಗೆ ಖರೇ ದೇವರ ಬಗ್ಗೆ ನಾನು ಹೇಳುವೆ ಚನ್ನಾಗಿ ಲಕ್ಷ್ಯಗೊಟ್ಟು ಕೇಳಿರಿ. (೨೭) ಸಾಮಾನ್ಯ ಜನರು ಯಾವ ಮಾರ್ಗ ದಿಂದ ಹೋಗುವರು, ಮತ್ತು ಯಾವ ದೇವರನ್ನು ಭಜಿಸುವರು ಇದರ ವಿಷಯದಲ್ಲಿ ನಾನು ಪ್ರತ್ಯಕ್ಷ ನೋಡಿದು ದನ್ನೇ ವರ್ಣಿಸುವೆ. ಶ್ರೋತಾರು ಇದನ್ನು ಲಕ್ಷ್ಯಗೊಟ್ಟು ಕೇಳಬೇಕು. (೨೮) ಧಾತು (ಲೋಹಾದಿಗಳು) ಕಲ್ಲು, ಮಣ್ಣು, ಕಟ್ಟಿಗೆ ಇತ್ಯಾದಿಗಳಿಂದ ತಯಾರಿಸಿದಂಥ ದೇವರ ಅನೇಕ ಪ್ರತಿಮಾ ಇರುವವು. ಈ ಪ್ರತಿಮಾ (ವಿಗ್ರಹ) ಅಂದರೇನೇ ದೇವರು ಅನ್ನುವ ಕಲ್ಪನೆ ಬಹುತೇಕ ಜನರಲ್ಲಿ ಇರುವದು. (೨೯) ದೇವರ ಅನೇಕ ಅವತಾರಗಳು ಆಗಿ ಹೋಗಿರುವವು. ಬಹಳಷ್ಟು ಜನರು ಆ ಅವತಾರಗಳ ಚರಿತ್ರೆಯನ್ನು ಕೇಳುವರು. ಅವರ ಪೂಜೆಯನ್ನು ಮಾಡು ವರು. ಅವರ ಜಪವನ್ನು ಮಾಡುವರು. ಮತ್ತು ಅವರ ನಿರಂತರ ಧ್ಯಾನ ಮಾಡುವರು. (೩೦)

ಯೇಕ ಸಕಳಾಂಚಾ ಅಂತರಾತ್ಮಾ । ವಿಶ್ವೀ ವರ್ತೇ ಜೋ ವಿಶ್ವಾತ್ಮಾ ।
ದೃಷ್ಟಾ ಸಾಕ್ಷೀ ಜ್ಞಾನಾತ್ಮಾ । ಮಾನಿತೀ ಯೇಕ ॥೩೧॥

ಯೇಕ ತೇ ನಿರ್ಗುಳ ನಿಶ್ಚಳ । ಕದಾಪೀ ನವ್ಹೇತಿ ಚಂಚಳ ।
ಅನನ್ಯಭಾವೇ ಕೇವಳ । ವಸ್ತುಚ ತೇ ॥೩೨॥

ಯೇಕ ನಾನಾ ಪ್ರತಿಮಾ । ದುಸರಾ ಅವತಾರ ಮಹಿಮಾ ।
ತಿಸರಾ ತೋ ಅಂತರಾತ್ಮಾ । ಚೌಥಾ ತೊ ನಿರ್ವಿಕಾರೀ ॥೩೩॥

ಐಸೆ ಹೇ ಚತ್ವಾರ ದೇವ । ಸೃಷ್ಟೀಮಧೀಲ ಸ್ವಭಾವ ।
ಯಾವೇಗಳಾ ಅಂತರ್ಭಾವ । ಕೋಠೇ ಚಿ ನಾಹೀ ॥೩೪॥

ಅವಘೇ ಯೇಕ ಚಿ ಮಾನಿತೀ । ತೇ ಸಾಕ್ಷ ದೇವ ಜಾಣತೀ।
ಪರಂತು ಅಷ್ಟಧಾ ಪ್ರಕೃತಿ । ವೊಳಖಿಲೀ ಪಾಹಿಜೆ ॥೩೫॥

ಪ್ರಕೃತೀ ಮಧೀಲ ದೇವ । ತೋ ಪ್ರಕೃತೀಚಾ ಸ್ವಭಾವ ।
ಭಾವಾತೀತ ಮಾಹಾನಭಾವ । ವಿವೇಕೇ ಜಾಣಾವಾ ॥೩೬॥

ಜೋ ನಿರ್ಗುಳಾಸ ಧ್ಯಾಈಲ । ತೋ ನಿರ್ಗುಳ ಚಿ ಹೋಈಲ ।
ಜೋ ಜಯಾಸ ಭಜೇಲ । ತೋ ತದ್ರೂಪ ಜಾಣಾವಾ ॥೩೭॥

ಕ್ಷೀರ ನೀರ ನಿವಡಿತೀ । ತೇ ರಾಜಹಂಸ ಬೋಲಿಜೇತೀ ।
ಸಾರಾಸಾರ ಜಾಣತೀ । ತೇ ಮಾಹಾನಭಾವ ॥೩೮॥

ಅರೆ ಜೋ ಚಂಚಳಾಸ ಧ್ಯಾಈಲ । ತೋ ಸಹಜ ಚಿ ಚಳೇಲ ।
ಜೋ ನಿಶ್ಚಳಾಸ ಭಜೇಲ । ತೋ ನಿಶ್ಚಳ ಚಿ ॥೩೯॥

ಪ್ರಕೃತೀಸಾರಿಖೇ ಚಾಲಾವೇ । ಪರೀ ಅಂತರೀ ಶಾಶ್ವತ ವೊಳಖಾವೇ ।
ಸತ್ಯ ಹೋಊನ ವರ್ತಾವೇ । ಲೋಕಾ ಐಸೇ ॥೪೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
"ಚತ್ವಾರ ದೇವ ನಿರೂಪಣ" ನಾಮ ಸಮಾಸ ದ್ವಿತೀಯ ॥

● ●

ಸರ್ವರಲ್ಲಿಯೂ ಇರುವಂಥ ಆ ಯಾವ ಅಂತರಾತ್ಮಾ ಇರುವನೋ ಅವನನ್ನೇ ದೇವರೆಂದು ಕೆಲವು ಜನ ನಂಬಿ ನಡೆಯುತ್ತಿರುವರು. ವಿಶ್ವದಲ್ಲೆಲ್ಲ ವ್ಯಾಪಿಸಿರುವಂಥ ಮತ್ತು ಇದನ್ನು ನಡೆಯಿಸುವಂಥ ವಿಶ್ವಾತ್ಮನನ್ನೇ ದೇವರೆಂದು ಕೆಲವು ಜನರು ನಂಬುತ್ತಿರುವರು. ಮತ್ತು ಸಾಕ್ಷಿರೂಪದಲ್ಲಿ ಇರುವವನಾದ ಆ ಯಾವ ಜ್ಞಾನಾತ್ಮಾ-ದೃಷ್ಟಾ ಇವನನ್ನೇ ದೇವರೆಂದು ಕೆಲವು ಜನ ನಂಬುತ್ತಿರುವರು. (೩೧) ಎಂದೆಂದಿಗೂ ಚಲಿಸದೇ ಇರುವಂಥ ಆ ಯಾವ ನಿರ್ಮಲ ಮತ್ತು ನಿಶ್ಚಲವಾದ ಶಾಶ್ವತ ಸದ್ವಸ್ತು ಅಥವಾ ಬ್ರಹ್ಮವಸ್ತು ಇದರೊಂದಿಗೆ ಅನನ್ಯತನದಿಂದ ತದಾಕಾರ (ಏಕರೂಪ) ಆದಂಥ ಸ್ವತಃ ಬ್ರಹ್ಮರೂಪವೇ ಆದಂಥ ಕೆಲವೊಂದು ಜನ ಇರುವರು. (೩೨) ಇವುಗಳ ಮೇಲಿಂದ ನೋಡಿದರೆ ದೇವರು ನಾಲ್ಕು ಪ್ರಕಾರದವು ಇರುವವು ಎಂದು ಅನಿಸುವದು. [೧] ನಾನಾ ಪ್ರಕಾರದ ಪ್ರತಿಮೆಗಳು [೨]ಅವತಾರಗಳ ಅವತಾರಿಕರ ಮಹಿಮೆ [೩]ಎಲ್ಲರೊಳಗಿನ ಅಂತರಾತ್ಮಾ [೪]ಮತ್ತು ನಿರ್ವಿಕಾರ ಪರಬ್ರಹ್ಮ[೩೩] ಹೀಗೆ ನಾಲ್ಕು ಪ್ರಕಾರದ ದೇವರಿರುವವು. ಇವು ಮಾನವನ ಸ್ವಭಾವಕ್ಕನುಗುಣವಾಗಿ ಈ ಪ್ರಕಾರ ಇರುವವೆಂದು ಅನಿಸುವದು. ಈ ನಾಲ್ಕು ಪ್ರಕಾರಗಳ ಹೊರತಾಗಿ ಐದನೆಯ ಪ್ರಕಾರದವು ಮನುಷ್ಯನ ಅಂತರ್ಯಾಮದಲ್ಲಿ ಕಂಡು ಬರುವದಿಲ್ಲ. [೩೪] ದೇವರು ಅಲ್ಲಿಂದ ಇಲ್ಲಿಯವರೆಗೆ ಒಬ್ಬನೇ ಇರುವನು. ಇವನು ಎಲ್ಲದರ ಸಾಕ್ಷಿಯಾಗಿರುವನು. ಮತ್ತು ಇವನು ಎಲ್ಲವನ್ನೂ ತಿಳಿಯುವವನಿರುವನು. ಹೀಗೆ ಕೆಲವರು ನಂಬುತ್ತಾರೆ. ಆದರೆ ದೇವನಿಗೆ ಯಾವ [ಸಾಕ್ಷಿತನವು] ದೃಶ್ಯವು ಬರುವದೋ ಅದು ಅನ್ಯಥಾ ಪ್ರಕೃತಿಯಿಂದ ಬರುವದು. ಇದನ್ನು ಗಟ್ಟಿಯಾಗಿ ಮತ್ತು ಸರಿಯಾಗಿ ಎಲ್ಲರೂ ತಿಳಿಯಬೇಕು. (೩೫) ಪ್ರಕೃತಿಯನ್ನು ಸಾಕ್ಷಿತನದಿಂದ ನೋಡುವಂಥ ದೇವರು ಪ್ರಕೃತಿಯ ಸ್ವಭಾವದಂತೆ ಅಂದರೆ ಚಂಚಲ ಅಥವಾ ಅಶಾಶ್ವತವಾದದ್ದೇ ಇರುವದೆಂಬುದು ಸ್ವಾಭಾವಿಕವಾಗಿ ಪ್ರತ್ಯಕ್ಷ ಕಂಡು ಬರುವದೇ ಆಗಿದೆ. ಮೂಲದೇವರನ್ನು ನೋಡುವದೇ ಇವರಿಗೆ ಗೊತ್ತಿಲ್ಲ. ಪ್ರಕೃತಿ ನಿರ್ಮಾಣವಾದ ನಂತರ ಅದರ ಮೇಲೆ ದೃಶ್ಯರೂಪ [ಸಾಕ್ಷಿತನ]ದಿಂದ ನೋಡುವ ಆರೋಪ[ಇಲ್ಲದ ಗುಣಗಳನ್ನು ಹೊರಿಸಿ ಹೇಳುವದು]ಬಂದಿತು. ಪ್ರಕೃತಿಯೊಳಗಿಂದ ನಿರ್ಮಾಣಗೊಂಡ ಈ ಸಾಕ್ಷಿತನವು ಪ್ರಕೃತಿಯಂತೆಯೇ ಅಶಾಶ್ವತವೇ ಇರುವದು. ಆದ್ದರಿಂದ ಯಾವುದೇ [ರೂಪ] ಆಗಿರುವದಕ್ಕಿಂತಲೂ ಆಚೆಗಿನ ಅಥವಾ ಕಲ್ಪನೆಯ ಆಚೆಗೆ ಇರುವಂಥ ದಿವ್ಯಭಾವವೆಂದರೇನೇ ಕೇವಲ ಅಸ್ತಿತ್ವವು. ಇದನ್ನು ವಿವೇಕದಿಂದಲೇ ತಿಳಿಯಬೇಕು. [೩೬] ಮಾಯಾ ಮೂಲರಹಿತವಾದ ಬ್ರಹ್ಮವಸ್ತು ವಿನ ಚಿಂತನವನ್ನು ಯಾವನು ಸತತ ಮಾಡುವನೋ ಅವನು ಬ್ರಹ್ಮ ಸ್ವರೂಪವೇ ಆಗಿ ಬಿಡುವನು. ಯಾವನು ಮಾಯಾಮಯ ದ್ವೈತವನ್ನು ಭಜಿಸುವನೋ, ಯಾವನು ಭಯದಿಂದ ತುಂಬಿದ ಪ್ರಕೃತಿಯನ್ನು ಸತತ ಚಿಂತಿಸುನೋ ಅಂಥವನು ಭಯದಿಂದ ವ್ಯಾಪಿಸಲ್ಪಡುವನೆಂದು ಸ್ಪಷ್ಟವಾಗಿ ತಿಳಿಯಿರಿ. [೩೭] ಹಾಲು ಮತ್ತು ನೀರು ಕೂಡಿದ ಮಿಶ್ರಣದಿಂದ ಹಾಲನ್ನು ಮಾತ್ರ ಯಾವುದು ಪ್ರತ್ಯೇಕಿಸಿ ತೆಗೆಯುವದೋ ಅದಕ್ಕೆ ರಾಜಹಂಸ ಅನ್ನುವರು. ಶಾಶ್ವತ ಮತ್ತು ಅಶಾಶ್ವತ ಇವುಗಳನ್ನು ಬೇರೆ ಬೇರೆ ಮಾಡಿ ಯಾವುದು ಶಾಶ್ವತವೆಂಬುದನ್ನು ಯಾವನು ತಿಳಿಯುವನೋ ಅವನಿಗೆ ಶ್ರೇಷ್ಠ ಅನುಭವಿ [ಸಂತ] ಎಂದು ಅನ್ನುವರು. [೩೮] ಪ್ರಾಜ್ಞರೆ, [ತಿಳಿದವರೇ, ಮಾನ್ಯರೇ] ಏನು ಹೇಳಬೇಕು. ಯಾವನು ಚಂಚಲವಾದ ಅಶಾಶ್ವತವಾದದ್ದನ್ನು ಸತತವಾಗಿ ಚಿಂತನ ಮಾಡುವನೋ ಅವನು ಅಸ್ಥಿರ ಪ್ರಜ್ಞನಾಗಿಯೇ ಉಳಿಯುವನು. ಯಾವನು ಶಾಶ್ವತವಾದದ್ದನ್ನು ಸತತ ಚಿಂತಿಸುವನೋ ಅವನು ಸ್ಥಿರಪ್ರಜ್ಞನಾಗುವನು. [೩೯] ಆದ್ದರಿಂದ ತಿಳಿದಂಥ ಜನರು ದೇಹದಿಂದ ಅಶಾಶ್ವತವಾದ ಪ್ರಕೃತಿಯಂತೆ ವರ್ತಿಸಬೇಕು. ಪರಂತು ಅಂತರ್ಯಾಮದಲ್ಲಿ ಶಾಶ್ವತ ಬ್ರಹ್ಮವನ್ನು ಗುರುತಿಸಿ ತಿಳಿದುಕೊಂಡಿರಬೇಕು. ಒಳಗಿನಿಂದ ಬ್ರಹ್ಮಸ್ವರೂಪ ಇದ್ದು ಹೊರಗೆ ಮಾತ್ರ ನಾಲ್ಕು ಜನರಂತೆ ವರ್ತನ ಮಾಡಬೇಕು. [೪೦]

ಶ್ರೀದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಹನ್ನೊಂದನೆಯ
ದಶಕದ "ಚತ್ವಾರದೇವ ನಾಮ ನಿರೂಪಣ"ವೆಂಬ ಎರಡನೆಯ ಸಮಾಸವು ಮುಗಿದುದು.

● ●

ದಶಕ ಏಕಾದಶ : ಸಮಾಸ ತೃತೀಯು : ಶಿಕವಣ ನಿರೂಪಣ

॥ಶ್ರೀರಾಮ॥ ಬಹುತಾ ಜನ್ಮಾಚಾ ಶೇವಟ । ನರದೇಹ ಸಾಪಡೆ ಅವಚಟ ।
ಯೇಥೇ ವರ್ತಾವೇ ಚೋಖಟ । ನೀತಿ ನ್ಯಾಯೇ ॥೧॥

ಪ್ರಪಂಚ ಕರಾವಾ ನೇಮಕ । ಪಾಹಾವಾ ಪರಮಾರ್ಥ ವಿವೇಕ ।
ಜೇಣೇಕರಿತಾ ಉಭಯ ಲೋಕ । ಸಂತುಷ್ಟ ಹೋತೀ ॥೨॥

## ದಶಕ ೧೧. ಸಮಾಸ ೩. ಶಿಕ್ಷಣ ನಿರೂಪಣ (ನುಡಿ ೩೦)

ಮಾನವೀ ಜೀವನಕ್ಕೆ ಎರಡು ಅಂಗಗಳು ಇರುವವು. ಒಂದು ಅಂಗವು ಪ್ರಪಂಚದ್ದು. ಮತ್ತು ಎರಡ ನೆಯದು ಪರಮಾರ್ಥದ್ದು. ಈ ಎರಡೂ ಅಂಗಗಳ ಸಮತೋಲ ಬೆಳವಣಿಗೆ ಆಗುವಲ್ಲಿಯೇ ಜೀವನದ ಸೌಂದರ್ಯ ಶ್ರೇಷ್ಠತ್ವ ಅಡಗಿರುವದು. ಸುಂದರ ಜೀವನವೇ ಯಶಸ್ವೀ ಜೀವನವಾಗಿರುವದು. ಜೀವನದಲ್ಲಿ ಸೌಂದರ್ಯ ನಿರ್ಮಾಣ ವಾಗಲು ಅದಕ್ಕೆ ಒಂದು ಸುಂದರ ಆಕಾರ (ಸ್ವರೂಪ) ಕೊಡುವದರ ಅವಶ್ಯಕತೆ ಇರುವದು. ಜೀವನದ ವಿಷಯು ದಲ್ಲಿ ನಮಗೆ ಬೇಕಾದಂತೆ ಆಕಾರ [ಸ್ವರೂಪ] ಕೊಡುವಲ್ಲಿ ಶಿಸ್ತಿನ ಅವಶ್ಯಕತೆಯು ಇರುವದು. ನಿಯಮ ಪಾಲಿಸದ ಹೊರತು ಶಿಸ್ತು ಬರುವದಿಲ್ಲ. ಆಲಸ್ಯ ತ್ಯಜಿಸದ ಹೊರತು ಶಿಸ್ತು ಮತ್ತು ನಿಯಮಗಳನ್ನು ಪಾಲಿಸಲಿಕ್ಕೆ ಬರುವ ದಿಲ್ಲ. ಅಥವಾ ಆಗುವದಿಲ್ಲ. ಅಂತೆಯೇ ಆಲಸ್ಯವನ್ನು ಬಿಟ್ಟು ನಿಯಮ ಪಾಲಿಸಬೇಕು. ನಿಯಮ ಪಾಲಿಸಿ ಶಿಸ್ತನ್ನು ಕಲಿಯಬೇಕು. ಮತ್ತು ಶಿಸ್ತಿನಿಂದ ನಡೆದು (ವ್ಯವಹರಿಸಿ) ಜೀವನಕ್ಕೊಂದು ಮನೋಹರ ಸ್ವರೂಪ ಕೊಡಬೇಕು. ಇದೇ ಶ್ರೀಸಮರ್ಥರ ಆಗ್ರಹದ ಹೇಳಿಕೆ ಇರುವದು. ಸಾಮಾನ್ಯ ಮನುಷ್ಯರು ತಮ್ಮ ಜೀವನಕ್ಕೆ ಯಾವ ರೀತಿಯಲ್ಲಿ ಸುಂದರ ಆಕಾರ ಸ್ವರೂಪದ ನಡವಳಿಕೆಯನ್ನು ಕೊಡಬೇಕು.? ಮತ್ತು ಹೇಗೆ ಕೊಡಬೇಕು? ಇದನ್ನು ಹೇಳುವದ ಕ್ಕಾಗಿಯೇ ಶ್ರೀಸಮರ್ಥರು ತಮ್ಮ ಕಾಲದಲ್ಲಿಯು ಆಗಿನ ಜನರಿಗೆ ದಿನಕ್ರಮದ ವೇಳಾಪತ್ರಿಕೆಯ ಒಂದು ರೂಪರೇಷೆ ಯನ್ನು ಹೇಳಿಕೊಟ್ಟರು. ಸದ್ಯದ ಕಾಲಕ್ಕೆ ಅದು ಹೇಗಿತ್ತೋ ಹಾಗೆ ಲಾಗೂ ಬೀಳಲಾರದು ಆದರೆ ಅವುಗಳಲ್ಲಿ ಕೆಲವು ಸರ್ವಕಾಲಕ್ಕೂ ಉಪಯುಕ್ತವಿರುವ ತತ್ವ ಇರುವವು. ಇವು ಹೀಗೆ ಇರುವವು. ೧) ಜೀವನವು ಯಶಸ್ವಿ ಯಾಗಬೇಕಾದರೆ ಪ್ರಪಂಚ ಮತ್ತು ಪರಮಾರ್ಥ ಇವೆರಡೂ ಇರಬೇಕು. ೨) ಆಲಸ್ಯದಿಂದ ಜೀವನವು ಹಸಗೆಡು ತ್ತದೆ. ಹಾಳಾಗುತ್ತದೆ. ಆಲಸ್ಯದಂಥ ಶತ್ರು ಇನ್ನೊಂದಿಲ್ಲವು. ೩) ಮುಂಜಾನೆ[ಪ್ರಾತಃಕಾಲದಲ್ಲಿ]ಬೇಗನೆ ಏಳಬೇಕು. ೪) ಮುಂಜಾನೆ ಆತ್ಮಚಿಂತನೆ ಮಾಡಬೇಕು. ೫) ಮುಂಜಾನೆ ಅವಶ್ಯವಾಗಿ ಉಪಯುಕ್ತ ಗ್ರಂಥಗಳ ಪಠಣ ಮಾಡ ಬೇಕು. ೬) ಸವಿಮಾತಿನಿಂದ ಜನರನ್ನು ಸಂತೋಷಗೊಳಿಸಬೇಕು. ೭) ತಮ್ಮ ತಮ್ಮ ವ್ಯವಸಾಯದಲ್ಲಿ ಎಚ್ಚರಿಕೆ ಯಿಂದ ಮತ್ತು ಪ್ರಾಮಾಣಿಕತನದಿಂದ ಇರಬೇಕು. ೮) ನೀವೇ ದುಡಿದು ನಿಮ್ಮದನ್ನು ನೀವೇ ತಿನ್ನಿರಿ. ಆದರೆ ಸಮಾಜದ್ದನ್ನು ಪುಕ್ಕಟೆಯಾಗಿ ತಿನ್ನಬೇಡಿರಿ. ೯) ಅನೇಕ ಸದ್ಗ್ರಂಥಗಳ ವಾಚನ ಮಾಡಬೇಕು. ಮತ್ತು ಮನನ ಮಾಡಬೇಕು. ೧೦) ನಿಮ್ಮ ವ್ಯವಸಾಯದ [ಧಂದೆಯ] ಬಗ್ಗೆ ಉತ್ತಮ ಜ್ಞಾನವಿರಬೇಕು. ೧೧) ಅಡಚಣೆಯ ಲ್ಲಿದ್ದ ಮನುಷ್ಯರಿಗೆ ಸಹಾಯ ಮಾಡಬೇಕು. ೧೨) ಎರಡನೆಯವರ ಹಿತಕ್ಕಾಗಿ ಶರೀರವನ್ನು ಸ್ವಲ್ಪಾದರೂ ಕಷ್ಟಪಡಿ ಸಬೇಕು. ೧೩) ನಾನು ಭಗವಂತನ ವಿಶ್ವಸ್ಥನಿರುವೆನೆಂಬ ಭಾವನೆಯಿಂದ ಪ್ರಪಂಚ ಮಾಡಬೇಕು. ೧೪) ಪ್ರಪಂಚ ದಲ್ಲಿ ಹೊಟ್ಟೆಗೆ ಸಾಕಾಗುವಷ್ಟು ಹಣವು ಅವಶ್ಯವಿರಬೇಕು. ೧೫) ಪರಮಾರ್ಥದಲ್ಲಿ ನಿಮ್ಮದರ ಬಗ್ಗೆ ನೀವೇ ಶೋಧ ಮಾಡಬೇಕು. ಈ ಪ್ರಕಾರ ಹದಿನೈದು ಮಣಿಗಳ ಮಾಲೆಯನ್ನು ಯಾವನು ಕೊರಳಲ್ಲಿ ಧರಿಸಿಕೊಂಡು ಜೀವನ ನಡೆ ಯಿಸುವನೋ ಅಂಥವನ ಜೀವನ ಧನ್ಯವಾದುದೆಂದು ಶ್ರೀಸಮರ್ಥರ ಖಚಿತ ಅಭಿಪ್ರಾಯವಿರುವದು.

### ದಶಕ ೧೧. ಸಮಾಸ ೩. ಶಿಕ್ಷಣ ನಿರೂಪಣ (ನುಡಿ ೩೦)

ನರದೇಹದ ಮಹತ್ವವನ್ನು ಗುರುತಿಸಿ ಮುಪ್ಪು [ವೃದ್ಧತ್ವ] ಬರುವದರೊಳಗಾಗಿ ಜೀವನವನ್ನು ಸಾರ್ಥಕ ಮಾಡಿಕೊಳ್ಳಬೇಕು. ಬಹಳ ವಿವೇಕದಿಂದ ನಡೆದು ಪ್ರಪಂಚ ಮತ್ತು ಪರಮಾರ್ಥಗಳನ್ನು ಸಾಧಿಸಿ ಸಾರ್ಥಕ ರಾಗಬೇಕು:-ಹೀನ[ಕೆಳಗಿನ]ಯೋನಿಯಲ್ಲಿ ಅನೇಕ ಜನ್ಮಗಳನ್ನು ತಳೆದ ನಂತರ ಕೊನೆಗೆ ಅಕಸ್ಮಾತ್ ಒಮ್ಮೊಮ್ಮೆ ಮಹದ್ಭಾಗ್ಯದಿಂದ ಮನುಷ್ಯ ಜನ್ಮ ನಮಗೆ ಬರುವದು. ಈ ದೇಹದಲ್ಲಿ ಬಂದಮೇಲೆ ನೀತಿ, ನ್ಯಾಯದಿಂದ ಮತ್ತು ನಿರ್ಮಲತನದ ವರ್ತನೆಯಿಂದ ನಡೆಯಬೇಕು. [೧] ಪ್ರಪಂಚವನ್ನು ಅಗದೀ ವ್ಯವಸ್ಥಿತವಾಗಿ ಮಾಡಬೇಕು. ಇದರ ಸಂಗಡವೇ ಪರಮಾರ್ಥದ ಅಭ್ಯಾಸವನ್ನು ಮಾಡಬೇಕು. ಹೀಗೆ ನೀವು ನಡೆದದ್ದಾದರೆ ಇಹಲೋಕ ಮತ್ತು ಪರ ಲೋಕ ಈ ಎರಡೂ ಕಡೆಯಿಂದ ಯಶ ಸಿಗುವದು. [೨]

ಶತ ವರುಷೇ ವಯ ನೇಮಿಲೇ । ತ್ಯಾತ ಬಾಳಪಣ ನೇಣತಾ ಗೇಲೇ ।
ತಾರುಣ್ಯ ಅವಘೇ ವೇಚಲೇ । ವಿಷಯಾಕಡೇ ॥೩॥

ವೃದ್ಧಪಣೀ ನಾನಾ ರೋಗ । ಭೋಗಣೇ ಲಾಗೆ ಕರ್ಮಭೋಗ ।
ಆತಾ ಭಗವಂತಾಚಾ ಯೋಗ । ಕೋಣೇ ವೇಳೇ ॥೪॥

ರಾಜಿಕ ದೇವಿಕ ಉದೇಗ ಚಿಂತಾ । ಅನ್ನ ವಸ್ತ್ರ ದೇಹ ಮಮತಾ ।
ನಾನಾ ಪ್ರಸಂಗೇ ಅವಚಿತಾ । ಜನ್ಮ ಗೇಲಾ ॥೫॥

ಲೋಕ ಮರಮರೋ ಜಾತೀ । ವಡಿಲೇ ಗೇಲೀ ಹೇ ಪ್ರಚಿತೀ ।
ಜಾಣತ ಜಾಣತ ನಿಶ್ಚಿತೀ । ಕಾಯೆ ಮಾನಿಲೇ ॥೬॥

ಅಗ್ನ ಗೃಹಾಸೀ ಲಾಗಲಾ । ಆಣಿ ಸಾವಕಾಸ ನಿಜೇಲಾ ।
ತೋ ಕೈಸಾ ಮ್ಹಣಾವಾ ಭಲಾ । ಆತ್ಮಹತ್ಯಾರಾ ॥೭॥

ಪುಣ್ಯಮಾರ್ಗ ಅವಘಾ ಬುಡಾಲಾ । ಪಾಪಸಂಗ್ರಹ ಉದಂಡ ಜಾಲಾ ।
ಯೆಮಯಾತನೇಚಾ ಝೋಲಾ । ಕಠೀಣ ಆಹೆ ॥೮॥

ತರೀ ಆತಾ ಐಸೇ ನ ಕರಾವೇ । ಬಹುತ ವಿವೇಕೇ ವರ್ತಾವೇ ।
ಇಹಲೋಕ ಪರತ್ರ ಸಾಧಾವೇ । ದೋಹೀಕಡೇ ॥೯॥

ಆಳಸಾಚೇ ಫಳ ರೋಕಡೇ । ಜಾಂಭಯಾ ದೇಊನ ನಿದ್ರಾ ಪಡೇ ।
ಸುಖ ಮ್ಹಣೌನ ಆವಡೇ । ಆಳಸೀ ಲೋಕಾ ॥೧೦॥

ಸಾಕ್ಷೇಪ ಕರಿತಾ ಕಷ್ಟತೀ । ಪರಂತು ಪುಢೇ ಸುರವಾಡತೀ ।
ಖಾತೀ ಜೇವಿತೀ ಸುಖೀ ಹೋತೀ । ಯೆತ್ನೇಕರೂನೀ ॥೧೧॥

ಆಳಸ ಉದಾಸ ನಾಗವಣಾ । ಆಳಸ ಪ್ರೇತ್ನ ಬುಡವಣಾ ।
ಆಳಸೇ ಕರಂಟ ಪಣಾಚ್ಯಾ ಖುಣಾ । ಪ್ರಗಟ ಹೋತೀ ॥೧೨॥

ಮ್ಹಣೌನ ಆಳಸ ನಸಾವಾ । ತರೀ ಚ ಪಾವಿಜೆ ವೈಭವಾ ।
ಅರತ್ರೀ ಪರತ್ರೀ ಜೀವಾ । ಸಮಾಧಾನ ॥೧೩॥

ಪ್ರೇತ್ನ ಕರಾವಾ ತೋ ಕೋಣ । ಹೇ ಚಿ ಐಕಾ ನಿರೂಪಣ ।
ಸಾವಧ ಕರೂನ ಅಂತಃಕರಣ । ನಿಮಿಷ್ಯ ಯೇಕ ॥೧೪॥

ಮನುಷ್ಯರ ಆಯುಷ್ಯ ಒಂದು ನೂರು ವರ್ಷವೆಂದು ತಿಳಿಯುವರು. ಇವುಗಳಲ್ಲಿ ಬಾಲ್ಯದ ಕಾಲವು ಅಜ್ಞಾನದಲ್ಲಿ ಕಳೆದು ಹೋಗುವದು. ತಾರುಣ್ಯದ ಕಾಲವು ವಿಷಯ ಸುಖ ಅಥವಾ ಇಂದ್ರಿಯ ಸುಖಭೋಗದಲ್ಲಿ ಖರ್ಚಾಗಿ ಹೋಗುವದು. [೩] ಮುಪ್ಪುತನದಲ್ಲಿ ಅನೇಕ ರೋಗಗಳು ಶರೀರಕ್ಕೆ ಪೀಡೆಯನ್ನು ಕೊಡುವವು. ಮನುಷ್ಯನಿಗೆ ಪೂರ್ವಕರ್ಮದ ಭೋಗವನ್ನು ಭೋಗಿಸಬೇಕಾಗುವದು. ಅಂತೂ ಈ ಪ್ರಕಾರ ಬಾಲ್ಯ, ತಾರುಣ್ಯ, ಮತ್ತು ವೃದ್ಧಾಪ್ಯ ಇವು ಪ್ರಪಂಚಕ್ಕಾಗಿಯೇ ಖರ್ಚಾಗಿ ಹೋಗುವವು. ಅಂತೆಯೇ ಭಗವಂತನ ದರ್ಶನ ಪಡೆಯುವ ಯೋಗದ ಅವಕಾಶ ಸಿಗುವದೇ ಇಲ್ಲ (೪)ಜೀವನದಲ್ಲಿ ನಾನಾ ತರಹದ ಪ್ರಸಂಗಗಳು ಬರುವವು.ರಾಜ್ಯಕರ್ತನು ಮಾಡಿದಂಥ-ಕೊಟ್ಟಂಥ ಕಷ್ಟ-ನಷ್ಟಗಳು ದೈವಿ ಆಪತ್ತಿ [ಸಂಕಟ] ನಿಷ್ಫಲತೆ [ಪ್ರಯೋಜನವಾಗದ] ಕಾಳಜಿ. [ಚಿಂತೆ] ಅನ್ನ ವಸ್ತ್ರದ ಕೊರತೆ ದೇಹದ ಮೇಲಿನ ಮಮತೆಯಿಂದಾಗಿ ಬರುವ ದುಃಖ ಇತ್ಯಾದಿ ಅನೇಕ ಪ್ರಕಾರದ ಪ್ರಸಂಗಗಳಿಗೆ ಎದೆಗೊಡುವಿಕೆ ಇವನ್ನೆಲ್ಲ ಎದುರಿಸುವದರಲ್ಲಿಯೇ ಆಯುಷ್ಯ ಸರಿದದ್ದು ತಿಳಿಯದೇ ಅದು ಮುಗಿಯಲು ಬಂದಿರುತ್ತದೆ. [೫] ಮನುಷ್ಯರು ಒಂದೇ ಸವನೆ ಸಾಯುತ್ತಲೇ ಇರುತ್ತಾರೆ. ಹಿರಿಯರಾದವರು ಹೋದದ್ದು ನಮಗೆ ಪ್ರತ್ಯಕ್ಷ ಕಾಣುತ್ತದೆ. ಇಷ್ಟೆಲ್ಲ ಗೊತ್ತಿದ್ದರೂ ಯಾವುದೂ ಶಾಶ್ವತವೆಂದು ಹೇಳಲಿಕ್ಕೆ ಆಗುವದಿಲ್ಲ. ಮತ್ತು ಶಾಶ್ವತವಿರುವದೆಂದು ಹೇಳಿದರೂ ನಂಬಲಿಕ್ಕೆ ಆಗುವದಿಲ್ಲ. [೬] ಮನೆಗೆ ಬೆಂಕಿ ಹತ್ತಿತೆಂದು ತಿಳಿಯಿರಿ. ಇಂಥ ಬೆಂಕಿ ಹತ್ತಿದ ಮನೆಯಲ್ಲಿ ಯಾರಾದರೂ ಸ್ವಸ್ಥವಾಗಿ ಮಲಗಿ-ಬಿಟ್ಟರು ಅಂತಾ ಅಂದರೆ ಅವರಿಗೆ ಯಾರೂ ಜಾಣ ಅಥವಾ ಉತ್ತಮ ಪುರುಷ ಅನ್ನಲಾರರು. ಯಾಕೆಂದರೆ ಇಂಥವರು ತಾವೇ ತಮ್ಮನ್ನು ಘಾತಮಾಡಿಕೊಂಡಂತೆ ಆಗುವದು [೭] ಜೀವನದಲ್ಲಿ ಪುಣ್ಯಮಾರ್ಗವೆಲ್ಲ ಮುಳುಗಿತು. ಮತ್ತು ಪಾಪವು ಮಾತ್ರ ಬಹಳಷ್ಟು ಸಂಗ್ರಹವಾಗಿ ಕುಳಿತಿತು. ಇದರಿಂದಾಗಿ ಮರಣದ ನಂತರ ಅನುಭವಿಸಬೇಕಾಗುವ ಯಮಯಾತನೆಯ ಹೊಡೆತದ ಕಷ್ಟವು ಬಹಳವಿರುವದು. [೮] ಆದ್ದರಿಂದ ಮನುಷ್ಯರು ಹೀಗೆ ಸರ್ವಥಾ ಮಾಡಬಾರದು. ಜೀವನದಲ್ಲಿ ಬಹಳ ವಿಚಾರ ವಿವೇಕದಿಂದ ನಡೆಯಬೇಕು. ಮತ್ತು ಪ್ರಪಂಚ ಹಾಗೂ ಪರಮಾರ್ಥ ಇವೆರಡನ್ನೂ ಸಾಧಿಸಬೇಕು. [೯] ಈಗ ಆಲಸ್ಯದಿಂದ ಎಷ್ಟೊಂದು ಕೆಟ್ಟ ಪರಿಣಾಮವಾಗುವದು ಇದನ್ನು ಹೇಳುವರು:- ಜೀವನದಲ್ಲಿ ಆಲಸ್ಯದ ಪರಿಣಾಮವು ಅಗದೀ ಬೇಗ ಕಂಡು ಬರುವದು. ಮನುಷ್ಯನು ಸುಸ್ತಾಗಿ ನಿದ್ರಾಧೀನನಾಗುವನು. ಆಲಸ್ಯವುಳ್ಳ ಮನುಷ್ಯರಿಗೆ ನಿದ್ರೆಯು ಅತ್ಯಂತ ಸುಖವಾಗಿ ಅನಿಸುವದು. [೧೦] ಆರಂಭದಲ್ಲಿ ಯಾವುದೇ ಉದ್ಯೋಗ [ಮಾಡುವಾಗ] ಕಷ್ಟದ್ದಾಗುವದು-ನಿಜವೇ ಸರಿ. ಆದರೆ ಈ ಕಷ್ಟಪಟ್ಟದ್ದರ ಪರಿಣಾಮ ಅರ್ಥಾತ್ ಸುಖ ಮುಂದೆ ಕಾಲಾಂತರದಲ್ಲಿ ದೊರಕುವದು. ಉದ್ಯೋಗಿ ಮನುಷ್ಯನು ಉತ್ತಮ ಖಾದ್ಯ ಪದಾರ್ಥ ಮತ್ತು ಉತ್ತಮ ಶ್ರೇಷ್ಠ ಪಾನೀಯಗಳನ್ನು ಸೇವಿಸುವನು. ಮತ್ತು ಸುಖದಿಂದ ಜೀವನವನ್ನು ನಡೆಸುವನು. [೧೧] ಆಲಸ್ಯವು ಉತ್ಸಾಹಕ್ಕೆ ಮಾರಕವಿರುವದು. ಆಲಸ್ಯವು ಬಹಳ ಹಾನಿ ಮಾಡುವದು. ಆಲಸ್ಯದಿಂದ ಪ್ರಯತ್ನಗಳು ನಾಶವಾಗುವವು. ಆಲಸ್ಯವು ದೌರ್ಭಾಗ್ಯದ ಚಿನ್ಹೆಯಾಗಿದೆ. ಆಲಸ್ಯದಿಂದ ದುರ್ವ್ಯವೀತನದ ಚಿನ್ಹಗಳು ಪ್ರಕಟವಾಗುವವು. [೧೨] ಆದ್ದರಿಂದ ಮನುಷ್ಯನು ಆಲಸ್ಯಕ್ಕೆ ಆಸ್ಪದ ಕೊಡಬಾರದು. ಮನುಷ್ಯರಲ್ಲಿ ಆಲಸ್ಯವಿಲ್ಲದಿದ್ದರೆ ಮಾತ್ರ ಅವನಿಗೆ ವೈಭವ ಪ್ರಾಪ್ತವಾಗುವದು. ಮತ್ತು ಪ್ರಪಂಚದಲ್ಲಿ ಮತ್ತು ಪರಮಾರ್ಥದಲ್ಲಿ ಜೀವಕ್ಕೆ ಸಮಾಧಾನ ಲಭಿಸುವದು. [೧೩] ಇನ್ನು ಮೇಲೆ ಸಾಮಾನ್ಯ ಜನರ ಜೀವನವು ಸಾರ್ಥಕ ಮತ್ತು ಯಶಸ್ವೀ ಆಗಬೇಕಾದರೆ ಹೇಗೆ ನಡೆಯಬೇಕೆಂಬುವ ಬಗ್ಗೆ ಕೆಲವೊಂದು ರೂಪ ರೇಷೆಗಳನ್ನು ಶ್ರೀಸಮರ್ಥರು ಹೇಳುವರು:- ಆಲಸ್ಯವನ್ನು ತ್ಯಜಿಸಿ ಪ್ರಯತ್ನಶೀಲರಾಗಬೇಕೆಂಬುದು ಖರೇ ಇರುವದು. ಆದರೆ ಯಾವ ಯಾವ ಪ್ರಯತ್ನಗಳನ್ನು ಮಾಡಬೇಕೆಂಬುದನ್ನು ಹೇಳುವೆನು. ಶ್ರೋತಾರರು ಇವನ್ನೆಲ್ಲ ಲಕ್ಷ್ಯಗೊಟ್ಟು ಕೇಳಬೇಕು. [೧೪]

ಪ್ರಾತಃಕಾಳೀ ಉಠಾವೇ । ಕಾಹೀ ಪಾಠಾಂತರ ಕರಾವೇ ।
ಯಥಾನುಶಕ್ತಿ ಆಠವಾವೇ । ಸರ್ವೋತ್ತಮಾಸೀ ॥೧೫॥

ಮಗ ದಿಶೆಕಡೆ ಜಾವೇ । ಜೆ ಕೋಣಾಸಿ ಚ ನವ್ಹೆ ಠಾವೇ ।
ಶೌಚ್ಯ ಆಚ್ಮನ ಕರಾವೇ । ನಿರ್ಮಳ ಜಳೇ ॥೧೬॥

ಮುಖಮಾರ್ಜನ ಪ್ರಾತಃಸ್ನಾನ । ಸಂಧ್ಯಾತರ್ಪಣ ದೇವತಾರ್ಚನ ।
ಪುಢೇ ವೈಶ್ಯದೇವ ಉಪಾಸನ । ಯಥಾಸಾಂಗ ॥೧೭॥

ಕಾಹೀ ಫಳಾಹಾರ ಘ್ಯಾವಾ । ಮಗ ಸಂಸಾರಧಂದಾ ಕರಾವಾ ।
ಸುಶಬ್ದೇ ರಾಜೀ ರಾಖಾವಾ । ಸಕಳ ಲೋಕ ॥೧೮॥

ಜ್ಯಾ ಜ್ಯಾಚಾ ಜೋ ವ್ಯಾಪಾರ । ತೇಥೇ ಅಸಾವೇ ಖಬರ್ದಾರ ।
ದುಶ್ಚಿತಪಣೇ ತರೀ ಪೋರ । ವೇಢಾ ಲಾವೀ ॥೧೯॥

ಚುಕೆ ಠಕೆ ವಿಸರೆ ಸಾಂಡೀ । ಆಠವಣ ಜಾಲಿಯಾ ಚರ್ಫಡೀ ।
ದುಶ್ಚಿತ ಆಳಸಾಚೀ ರೋಕಡೀ । ಪ್ರಚಿತ ಪಾಹಾ ॥೨೦॥

ಯಾಕಾರಣೇ ಸಾವಧಾನ । ಯೇಕಾಗ್ರ ಅಸಾವೇ ಮನ ।
ತರೀ ಮಗ ಜೇವಿತಾ ಭೋಜನ । ಗೋಡ ವಾಟೆ ॥೨೧॥

ಪುಢೇ ಭೋಜನ ಜಾಲಿಯಾವರೀ । ಕಾಹೀ ವಾಚೀ ಚರ್ಚಾ ಕರೀ ।
ಯೇಕಾಂತೀ ಜಾಊನ ವಿವರೀ । ನಾನಾ ಗ್ರಂಥ ॥೨೨॥

ತರೀಚ ಪ್ರಾಣೀ ಶಾಹಾಣಾ ಹೋತೋ । ನಾಹೀ ತರೀ ಮೂರ್ಖ ಚಿ ರಾಹಾತೋ ।
ಲೋಕ ಖಾತೀ ಆಪಣ ಪಾಹತೋ । ದೈನ್ಯವಾಣಾ ॥೨೩॥

ಏಕ ಸದೇವ ಪಣಾಚೇ ಲಕ್ಷಣ । ರಿಕಾಮಾ ಜಾಊ ನೇದಿ ಯೇಕ ಕ್ಷಣ ।
ಪ್ರಪಂಚ ವೆವಸಾಯಾಚೇ ಜ್ಞಾನ । ಬರೇ ಪಾಹೇ ॥೨೪॥

ಕಾಹೀ ಮೇಳವೀ ಮಗ ಜೇವೀ । ಗುಂತಲ್ಯಾ ಲೋಕಾಸ ಉಗವೀ ।
ಶರೀರ ಕಾರಣೀ ಲಾವೀ । ಕಾಹೀ ತರೀ ॥೨೫॥

ಕಾಹೀ ಧರ್ಮಚರ್ಚಾ ಪುರಾಣ । ಹರೀಕಥಾ ನಿರೂಪಣ ।
ವಾಯಾ ಜಾಊ ನೇದೀ ಕ್ಷಣ । ದೋಹೀಕಡೆ ॥೨೬॥

ಮುಂಜಾನೆ ಬೇಗ ಏಳಬೇಕು. ಉಪಯುಕ್ತವಾದಂಥದ್ದೇನನ್ನಾದರೂ ಪಾಠ ಮಾಡಬೇಕು. ಇದಾದ ಮೇಲೆ ನಿಮಗೆ ಹೇಗೆ ಶಕ್ಯವಿರುವದೋ ಆ ಪ್ರಕಾರ ಭಗವಂತನ ಸ್ಮರಣೆಯುನ್ನು ಮಾಡಬೇಕು. [೧೫] ಆ ಮೇಲೆ ದೂರದಲ್ಲೆಲ್ಲಾದರೂ ಬಹಿರ್ದೆಶೆಗೆ [ಶೌಚಕ್ಕೆ] ಹೋಗಬೇಕು. ಅನಂತರ ಸ್ವಚ್ಛ ನೀರಿನಿಂದ ಕೈಕಾಲು ಮುಖಗಳನ್ನು ತೊಳೆದುಕೊಂಡು ಆಚಮನ ಮಾಡಬೇಕು. [೧೬] ಆ ಮೇಲೆ ದಂತಧಾವನ [ಹಲ್ಲು ತಿಕ್ಕುವದು] ಮತ್ತು ಪ್ರಾತಃ ಸ್ನಾನ ಮಾಡಬೇಕು. ಆಮೇಲೆ ಸಂಧ್ಯಾವಂದನೆಯುನ್ನು ಮಾಡಬೇಕು. ಪಿತೃ ತರ್ಪಣ ಕೊಡಬೇಕು. ದೇವರ ಪೂಜೆಯನ್ನು ಮಾಡಬೇಕು. ಅನಂತರ ಯಥಾ ಕ್ರಮದಿಂದ ವೈಶ್ವದೇವ ಮಾಡಬೇಕು. [೧೭] ಇಷ್ಟೆಲ್ಲ ಮುಗಿದ ಮೇಲೆ [ಸ್ವಲ್ಪ] ಅಲ್ಪೋಪಹಾರ ಮಾಡಬೇಕು. ಅನಂತರ ಪ್ರಪಂಚದ ಉದ್ಯೋಗವನ್ನು ಪ್ರಾರಂಭಿಸಬೇಕು. ಮಧುರ ಶಬ್ದಗಳಿಂದ ಯಾವತ್ತೂ ಬಳಗದ ಜನರನ್ನು ಸಂತೋಷದಿಂದ ಇಡಬೇಕು. [೧೮] ಪ್ರತಿಯೊಬ್ಬರು ಸ್ವತಃದ ವ್ಯವಸಾಯದಲ್ಲಿ ಬಹಳ ಎಚ್ಚರಿಕೆಯಿಂದ ನಡೆಯಬೇಕು. ಅಜಾಗರೂಕತೆಯಿಂದ ನಡೆದದ್ದಾದರೆ ಪ್ರಸಂಗೋಪಾತ್ ನಿಮ್ಮನ್ನು ಒಬ್ಬ ಹುಡುಗ ಸಹ ಫಸಾಯಿಸಿ [ಮೋಸ] ಮಾಡಿ ಬಿಡುವನು. [೧೯] ಯಾವ ಮನುಷ್ಯನು ತಪ್ಪುವನೋ ಮೋಸ ಹೋಗುವನೋ ಅಥವಾ ವಸ್ತುಗಳನ್ನು ಮರೆಯುವನೋ ಕಳೆಯುವನೋ ಮತ್ತು ಇವುಗಳ ಜ್ಞಾಪಕವಾದ ಕೂಡಲೇ ತಳಮಳ ಪಡುವನೋ ಇಂಥವನಿಗೆ ಯಶಸ್ಸು ಬರುವದು. ಕಠಿಣ ಹೋಗುವದು, ಇದಕ್ಕೆ ಆಲಸ್ಯ ಮತ್ತು ಅಜಾಗರೂಕತೆ [ಬೇಸಾವಧತನ] ಇವೇ ಕಾರಣವಿರುವವೆಂದು ಪ್ರತ್ಯೇಕವಾಗಿ ಹೇಳಲಿಕ್ಕೆ ಬೇಡ. ಪ್ರತ್ಯಕ್ಷ ಅನುಭವದ ಮಾತೇ ಇರುವದು. [೨೦] ಆದ್ದರಿಂದ ಮನುಷ್ಯನು ತನ್ನ ವ್ಯವಸಾಯದಲ್ಲಿ ಯಾವಾಗಲೂ ಎಚ್ಚರದಿಂದ ನಡೆಯಬೇಕು. ಅದರಲ್ಲಿ ಮನವನ್ನು ಏಕಾಗ್ರಗೊಳಿಸಬೇಕು. ಈ ಪ್ರಕಾರದಿಂದ ಉತ್ತಮ ರೀತಿಯಲ್ಲಿ ನಿಮ್ಮ ವ್ಯವಸಾಯ ಮಾಡಿ ಮನೆಗೆ ಬಂದು ಊಟ ಮಾಡಿದರೆ ಅದು ಬಹಳ ರುಚಿಯುನಿಸುವದು. [೨೧] ಮನುಷ್ಯರು ಮನನದಿಂದ ವಿಚಾರದ ಬೆಳವಣಿಗೆ ಮಾಡಿಕೊಳ್ಳಬೇಕು. ಎರಡನೆಯುವರ ಸಲುವಾಗಿ ಸ್ವಲ್ಪಾದರೂ ಶರೀರ ದಂಡಿಸಬೇಕು. ಮತ್ತು ಭಗವಂತನ ಮೇಲೆ ಭರವಸೆ ಇಟ್ಟು ಪ್ರಪಂಚದಲ್ಲಿ ಜೀವನವನ್ನು ಸಾಗಿಸಬೇಕು. ಈ ಪ್ರಕಾರ ಯಾರು ನಡೆಯುವರೋ ಅಂಥವರ ಜೀವನವು ಸರ್ವಾಂಗದಿಂದ ಪರಿಪೂರ್ಣವಾಗುವದು. ಊಟವಾದ ಮೇಲೆ ಸ್ವಲ್ಪ ಕಾಲ ಓದಬೇಕು. ಸ್ವಲ್ಪ ಚರ್ಚಾ ಮಾಡಬೇಕು. ಆಮೇಲೆ ಒಂದು ಕಡೆ ಒಬ್ಬರೇ ಕುಳಿತು ಬೇರೆ ಬೇರೆ ಗ್ರಂಥಗಳ ಅಭ್ಯಾಸವನ್ನು ಚನ್ನಾಗಿ ಮಾಡಬೇಕು ಅಂದರೆ ಜೀವನ ಸುಖಕರವಾಗುವದು.[೨೨] ಈ ಪ್ರಕಾರವಾಗಿ ಮನುಷ್ಯನು ನಡೆದದ್ದಾದರೆ ಅವನು ಜಾಣನಾಗುವನ ; ಇಲ್ಲದಿದ್ದರೆ ಅವನು ಮೂರ್ಖನಾಗಿಯೇ ಉಳಿಯುವನು. ಎರಡನೆಯುವರು ಹಣವಂತರಾಗಿ ಐಶ್ವರ್ಯ ಭೋಗಿಸಬೇಕು. ನೀವಾದರೋ ದೀನರಾಗಿ ಕೇವಲ ಜೊಲ್ಲು ಸುರಿಸುತ್ತ ನೋಡಬೇಕು. ಇಂಥ ಪ್ರಸಂಗ ಮೂರ್ಖ ಮನುಷ್ಯರಿಗೆ ಮಾತ್ರ ಬರುವದು. [೨೩] ನಮ್ಮ ಭಾಗ್ಯದ ಉದಯವಾಗಬೇಕಾದರೆ ನಮ್ಮ ಆಯುಷ್ಯದ ಒಂದು ಕ್ಷಣವನ್ನೂ ವ್ಯರ್ಥಗೊಳಿಸದೇ ಕಾರ್ಯಶೀಲರಾಗಿರುವದೇ ಭಾಗ್ಯೋದಯದ ಲಕ್ಷಣವಿರುವದೆಂದು ಪಕ್ಕಾ ತಿಳಿಯಬೇಕು. ಪ್ರಪಂಚದಲ್ಲಿ ಯಾವ ಧಂದೆ(ಉದ್ಯೋಗ)ನೀವು ಮಾಡುವಿರೋ ಅದರ ಬಗ್ಗೆ ಉತ್ತಮ ತಿಳುವಳಿಕೆ (ಜ್ಞಾನ) ನಿಮಗೆ ಇರಬೇಕು. [೨೪] ದಿನಂಪ್ರತಿ ಏನಾದರೂ ಗಳಿಸಬೇಕು. ಮತ್ತು ಅನಂತರವೇ ನೀವು ಊಟ ಮಾಡಬೇಕು. ಯಾರದನ್ನೂ ಎಂದೂ ಫುಕ್ಕಟೆ ತಿನ್ನಬೇಡಿರಿ. ಅಡಚಣೆಯಲ್ಲಿದ್ದವರಿಗೆ ಯಥಾ ಶಕ್ತಿ ಸಹಾಯ ಮಾಡಿರಿ. ಮತ್ತು ಅವರ ಅಡಚಣೆ ದೂರ ಮಾಡಿರಿ. ಯಾವುದೇ ಉತ್ತಮ ಕಾರ್ಯದ ಬಗ್ಗೆ ದೇಹವನ್ನು ಕಷ್ಟಪಡಿಸಲಿಕ್ಕೆ ಹಚ್ಚಿರಿ, ವ್ಯಗ್ರರಾಗಬೇಡಿರಿ. [೨೫] ಅಲ್ಪ ಸ್ವಲ್ಪ ಧರ್ಮದ ಬಗ್ಗೆ ಚರ್ಚೆ ಮಾಡಿರಿ, ಪುರಾಣ ಕೇಳಿರಿ, ಹರಿ ಕಥೆ (ಕೀರ್ತನೆ) ಕೇಳಿರಿ, ನಿರೂಪಣ ಪ್ರವಚನಗಳನ್ನು ಕೇಳಿರಿ. ಪ್ರಪಂಚ ಮತ್ತು ಪರಮಾರ್ಥಗಳೆರಡರಲ್ಲೂ, ಒಂದು ಕ್ಷಣ ವ್ಯರ್ಥ ಕಳೆಯದೆ ಮೇಳ ಮಾಡಿ ಕೂಡಿಸಿಕೊಂಡು ನಡೆಯಿರಿ. [೨೬]

ಐಸಾ ಜೋ ಸರ್ವ ಸಾವಧ । ತ್ಯಾಸ ಕೈಚಾ ಅಸೇಲ ಖೇದ ।
ವಿವೇಕೇ ತುಟಲಾ ಸಂಬಂಧ । ದೇಹ ಬುದ್ಧೀಚಾ ॥೨೭॥

ಆಹೆ ತಿತುಕೇ ದೇವಾಚೇ । ಐಸೇ ವರ್ತಣೇ ನಿಶ್ಚಯಾಚೇ ।
ಮೂಳ ತುಟೇ ಉದ್ವೇಗಾಚೇ । ಯೇಣೇ ರೀತೀ ॥೨೮॥

ಪ್ರಪಂಚೀ ಪಾಹಿಜೆ ಸುವರ್ಣ । ಪರಮಾರ್ಥೀ ಪಂಚಿಕರ್ಣ ।
ಮಹಾವಾಕ್ಯಾಚೇ ವಿವರಣ । ಕರಿತಾ ಸುಟೇ ॥೨೯॥

ಕರ್ಮ ಉಪಾಸನಾ ಆಣಿ ಜ್ಞಾನ । ಯೇಣೇ ರಾಹೇ ಸಮಾಧಾನ ।
ಪರಮಾರ್ಥಾಚೇ ಜೇ ಸಾಧನ । ತೇ ಹಿ ಐಕತ ಜಾವೇ ॥೩೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
"ಸಿಕವಣ ನಿರೂಪಣ" ನಾಮ ಸಮಾಸ ತೃತೀಯ ॥

ಈ ರೀತಿಯಿಂದ ಜೀವನದಲ್ಲಿಯು ಎಲ್ಲ ರೀತಿಯಿಂದ ಯಾವನು ಸಾವಧನಾಗಿ ನಡೆಯುವನೋ ಅವನಿಗೆ ದುಃಖಪಡುವ ಪ್ರಸಂಗವೇ ಬರುವದಿಲ್ಲ. ಇಂಥ ಮನುಷ್ಯ ವಿವೇಕದ ಬಲದಿಂದ ದೇಹಬುದ್ಧಿ ಅಥವಾ ಸ್ವಾರ್ಥ ವನ್ನು ಬಿಟ್ಟು ಬಿಡುತ್ತಾನೆ. (೨೭) ನಮ್ಮ ದೇಹ ಸಹಿತವಾಗಿ ಯಾವತ್ತೂ ದೃಶ್ಯವು ಭಗವಂತನದೇ ಇರುವದು ಎಂಬ ದೃಢನಿಶ್ಚಯದಿಂದ ಯಾವನು ನಡೆಯುವನೋ ಅಂಥವನ ದುಃಖದ ಮೂಲವೇ ಕಿತ್ತು ಬೀಳುತ್ತದೆ. ಇವನ ಮಮತ್ವ (ನನ್ನದು-ನಾನು ಅನ್ನುವದು) ನಾಶವಾಗಿರುವದರಿಂದ ಇವನ ವಾಸನಾ ಕ್ಷೀಣವಾಗುವದು. ವಾಸನಾಕ್ಷೀಣ ವಾದದ್ದರಿಂದ ಇವನಿಗೆ ಫಲದಆಶೆ ಇರುವದಿಲ್ಲ.ಫಲಾಪೇಕ್ಷೆ ನಷ್ಟವಾದದ್ದರಿಂದ(ಫಲದಅಪೇಕ್ಷೆ ಬಿಟ್ಟು ಹೋದದ್ದರಿಂದ) ಇವನ ಆನಂದವು ಲೋಪವಾಗುವದಿಲ್ಲ. ಸದಾ ಆನಂದವೇ ಆನಂದ ಅಂದ ಮೇಲೆ ಅಲ್ಲಿ ದುಃಖದ ವಿಷಯ ಹೇಗೆ ಉಳಿದೀತು? (೨೮) ಪ್ರಪಂಚವು ವ್ಯವಸ್ಥಿತ ರೀತಿಯಿಂದ ನಡೆಯಲು ಹಣದ ಅವಶ್ಯಕತೆ ಇರುವವು. ಆದರೆ ಪರ ಮಾರ್ಥವು ಉತ್ತಮ ಪ್ರಕಾರದಿಂದ ಜರುಗಲಿಕ್ಕೆ (ಘಟಿಸಲಿಕ್ಕೆ) ವಿಶ್ವದಲ್ಲಿಯ ತತ್ವಗಳ ಜ್ಞಾನವು ಅವಶ್ಯವಿರುವದು. "ತತ್ ತ್ವಮ್ ಅಸಿ। ಅಹಮ್ ಬ್ರಹ್ಮಅಸ್ಮಿ"। ಇತ್ಯಾದಿ ಮಹಾವಾಕ್ಯಗಳ ಮನನ ವ ನಿಧಿಧ್ಯಾಸ ಮಾಡಿದ್ದಾದರೆ ಆತ್ಮಜ್ಞಾನವಾಗಿ ಮನುಷ್ಯನು ಪ್ರಕೃತಿಯ ಬಂಧನದಿಂದ ಮುಕ್ತನಾಗುವನು.(೨೯) ಕರ್ಮ, ಭಕ್ತಿ, ಮತ್ತು ಜ್ಞಾನ ಇವುಗಳ ಸಮನ್ವಯ ಸಾಧಿಸಿದರೆ ಮನುಷ್ಯನಿಗೆ ಆತ್ಮಸಾಕ್ಷಾತ್ಕಾರ ಘಟಿಸುವದು. ಮತ್ತು ಅವನಿಗೆ ಸಂಪೂರ್ಣ ಸಮಾಧಾನ ದೊರಕುವದು. ಮತ್ತು ಅದು ಕಾಯಂ ಆಗಿ ಯಾವಾಗಲೂ ಸ್ಥಿರ ಉಳಿಯುವದು. ಇದೇ ಪರಮಾರ್ಥ ಸಾಧನವಾಗಿರುವದರಿಂದ ಯಾವಾಗಲೂ ಇದರ ಶ್ರವಣ ಮಾಡಬೇಕು. (३೦)

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಹನ್ನೊಂದನೆಯ ದಶಕದಲ್ಲಿಯ "ಶಿಕ್ಷಣ ನಿರೂಪಣ" ಎಂಬ ಮೂರನೆಯ ಸಮಾಸವು ಮುಗಿದುದು.

ದಶಕ ಏಕಾದಶ : ಸಮಾಸ ಚತುರ್ಥ : ಸಾರ ವಿವೇಕ ನಿರೂಪಣ

॥ಶ್ರೀರಾಮ॥ ಬ್ರಹ್ಮ ಮ್ಹಣಿಜೆ ನಿರಾಕಾರ। ಗಗನಾಸಾರಿಖಾ ವಿಚಾರ।
ವಿಕಾರ ನಾಹೀ ನಿರ್ವಿಕಾರ। ತೇ ಚಿ ಬ್ರಹ್ಮ ॥೧॥

ಬ್ರಹ್ಮ ಮ್ಹಣಿಜೆ ನಿಶ್ಚಳ। ಅಂತರಾತ್ಮಾ ತೋ ಚಂಚಳ।
ದೃಷ್ಟಾ ಸಾಕ್ಷೀ ಕೇವಳ। ಬೋಲಿಜೆ ತಯಾ ॥೨॥

ತೋ ಅಂತರಾತ್ಮಾ ಮ್ಹಣಿಜೆ ದೇವ। ತ್ಯಾಚಾ ಚಂಚಳ ಸ್ವಭಾವ।
ಪಾಳಿತಾಹೆ ಸಕಳ ಜೀವ। ಅಂತರೀ ವಸೋನೀ ॥೩॥

ತ್ಯಾವೇಗಳೆ ಜಡ ಪದಾರ್ಥ। ತೇಣೇ ವೀಣ ದೇಹ ವ್ಯರ್ಥ।
ತೇಣೇ ಚಿ ಕಳೆ ಪರಮಾರ್ಥ। ಸಕಳ ಕಾಹೀ ॥೪॥

ಕರ್ಮಮಾರ್ಗ ಉಪಾಸನಾಮಾರ್ಗ। ಜ್ಞಾನಮಾರ್ಗ ಸಿದ್ಧಾಂತಮಾರ್ಗ।
ಪ್ರವೃತ್ತಿ ಮಾರ್ಗ ನಿವೃತ್ತಿ ಮಾರ್ಗ। ದೇವ ಚಿ ಚಾಲವೀ ॥೫॥

ಚಂಚಳೇವಿಣ ನಿಶ್ಚಳ ಕಳೇನಾ। ಚಂಚಳ ತರೀ ಸ್ಥಿರಾವೇನಾ।
ಐಸೇ ಹೇ ವಿಚಾರ ನಾನಾ। ಬರೆ ಪಾಹಾ ॥೬॥

## ದಶಕ ೧೧. ಸಮಾಸ ೪. ಸಾರ ವಿವೇಕ ನಿರೂಪಣ (ನುಡಿ ೪೦)

ಈ ಸಮಾಸದಲ್ಲಿ ಜ್ಞಾನದ ಬಗ್ಗೆ ಒಂದು ಮಹತ್ವದ ವಾಖ್ಯೆ ಕಂಡು ಬರುವದು. ಯಾವುದೇ ವಸ್ತುವಿನ ನಿಜಸ್ವರೂಪವನ್ನು (ಖರೇ ಕಿಮ್ಮತ್ತನ್ನು) ಗುರುತಿಸುವದಕ್ಕೆ ಜ್ಞಾನವೆನ್ನುವರು. ದೃಶ್ಯವು ಕಾಯಂ (ಶಾಶ್ವತ) ಉಳಿಯುವದಿಲ್ಲ. ಇದು ಅಶಾಶ್ವತವದೆ ಅನ್ನುವದು ಪ್ರತ್ಯಕ್ಷ ಅನುಭವಕ್ಕೆ ಬಂದರೂ ಸಹ ದೇಹಬುದ್ಧಿಯ ರೂಢಿ (ಚಟ) ಯಿಂದ ನಮಗೆ ಅದು ನಿಜ ಅನಿಸುವದು. ಅಂತೆಯೇ ಜಾಣರಾದವರು ಸೂಕ್ಷ್ಮ ವಿವೇಕ ಮಾಡಬೇಕು. ಸಾರ ಮತ್ತು ಅಸಾರ ಇವೆರಡನ್ನೂ ಒಂದೇ ಮಾಡದೇ ಅಸಾರವನ್ನು ಗುರುತಿಸಿ ಬದಿಗೆ ಸರಿಸಬೇಕು. (ತ್ಯಜಿಸಿ ಬಿಡಬೇಕು). ಮತ್ತು ಯಾವದು ಕಾಯಂ ಉಳಿಯುವಂತಹದೋ ಆ ಸಾರವನ್ನಷ್ಟೇ (ಸತ್ಯವಾದದ್ದನ್ನು)ಸ್ವೀಕಾರ ಮಾಡಬೇಕು. ಹೀಗೆ ವಿವೇಕ ಮಾಡುತ್ತ ಮಾಡುತ್ತ ಪಿಂಡದವು ನಾಲ್ಕು ಮತ್ತು ಬ್ರಹ್ಮಾಂಡದವು ನಾಲ್ಕು ಒಟ್ಟುಗೂಡಿ ಎಂಟೂ ದೇಹದ (ಅಷ್ಟಧಾ ಪ್ರಕೃತಿಯ) ನಿರಾಸ (ಪರಿಹಾರ) ವಾಗುವದು. ಸರ್ವ ದೃಶ್ಯದ ನಿರಾಸವಾಯಿತೆಂದರೆ ಶೂನ್ಯವು ಮುಂದೆ ನಿಲ್ಲುತ್ತದೆ. ಅಲ್ಲಿ ಮನುಷ್ಯನ ಬುದ್ಧಿ ಗೊಂದಲದಲ್ಲಿ (ಘೋಟಾಳೆಯಲ್ಲಿ) ಬೀಳುವದು. ವಿವೇಕದಿಂದ ಶೂನ್ಯವನ್ನೂ ದಾಟಿ ಹೋದ ಮೇಲೆ ನಿರ್ವಿಕಾರ ಬ್ರಹ್ಮವು ಅನುಭವಕ್ಕೆ ಬರುವದು. ವಾಸ್ತವಿಕವಾಗಿ ವಿಶ್ವದ ಅಂತರ್ಯಾಮದಲ್ಲಿ ಇದ್ದುಕೊಂಡು ಜೀವವನ್ನು ಕುಣಿದಾಡಿಸುವ ಅಂತರ್ಯಾಮನು (ಅಂತರಾತ್ಮನು) ದೃಷ್ಟಾ ಇರುವನು. ಇವನು ಕೇವಲ [ಫಕ್ತ] ಸಾಕ್ಷಿರೂಪನಿರುವನು. ಈ ಅಂತರಾತ್ಮಾ ಅಂದರೇನೇ ದೇವರಾಗಿರುವನು. ಆದರೆ ಈ ಅಂತರಾತ್ಮಾ [ದೇವನು] ಸಹಿತ ಕೊನೆಗೆ ಪ್ರಕೃತಿಯ ಕ್ಷೇತ್ರದಲ್ಲಿಯೇ ಬರುವನು. ನಿರ್ವಿಕಾರಿಯಾದ ಬ್ರಹ್ಮವು ಮಾತ್ರ ಇದರ ಆಚೆಗೆ ಇರುವದು. ಅಲ್ಲಿಯವರೆಗೆ ಬಂದು ಮುಟ್ಟುವದೆಂದರೆ ಕೊನೆಯ ಅವಸ್ಥೆಯೆಂದು ತಿಳಿಯಬೇಕು.

### ದಶಕ ೧೧. ಸಮಾಸ ೪. ಸಾರ ವಿವೇಕ ನಿರೂಪಣ (ನುಡಿ ೩೦)

ನಿರ್ವಿಕಾರ ಪರಬ್ರಹ್ಮ ಮತ್ತು ಅಂತರಾತ್ಮಾ ಇವರಲ್ಲಿಯ ವ್ಯತ್ಯಾಸ (ಫರಕು, ಭೇದ) ಸ್ಪಷ್ಟವಾಗಿ ತಿಳಿಸಿಕೊಡುತ್ತಾರೆ. ಆಕಾರ (ಚಿನ್ಹ) ಇಲ್ಲದ ಹೊರತು ಮನುಷ್ಯನ ಬುದ್ಧಿಗೆ ಕಲ್ಪನೆ ಮಾಡಲಿಕ್ಕೆ ಬರುವದಿಲ್ಲ. ಆದ್ದರಿಂದಲೇ ಬ್ರಹ್ಮವು ಆಕಾಶದಂತೆ ಇರುವದು ಎಂದು ಅನ್ನಬೇಕಾಯಿತು. ಆದರೆ ಬ್ರಹ್ಮಕ್ಕೆ ಈ [ಆಕಾಶದ] ಆಕಾರವೂ ಇರುವದಿಲ್ಲ. ಯಾವ ಆಕಾರವೂ ಇರುವದಿಲ್ಲ. ಇದರ ಶಿವಾಯ ಆಕಾಶಕ್ಕೆ ವಿಕಾರ ಇರುವದು. ಇದು ಬದಲಾಗುತ್ತದೆ. ಆದ್ದರಿಂದ ಯಾವುದು ಅತ್ಯಂತ ನಿರ್ವಿಕಾರ ಮತ್ತು ನಿರಾಕಾರ ಇರುವದೋ ಅದೇ ಬ್ರಹ್ಮವಾಗಿರುವದು.[೧] ಬ್ರಹ್ಮವು ಸಂಪೂರ್ಣ ಶಾಶ್ವತವಾದದ್ದಿರುವದು. ಇದರ ಮಾನದಿಂದ ನೋಡಿದರೆ ಅಂತರಾತ್ಮ ಅಶಾಶ್ವತವಿರುವದು. ಅಂತರಾತ್ಮನಿಗೇ ದೃಷ್ಟಾ ಮತ್ತು ಕೇವಲ ಸಾಕ್ಷಿ ಎಂದು ಅನ್ನುವರು. [೨] ಅಂತರಾತ್ಮಾ ಅಂದರೇನೇ ದೇವರು. ಇವನು ಸ್ವಭಾವದಿಂದ ಅಶಾಶ್ವತನಿರುವನು. ಇವನು ಸರ್ವಜೀವಿಗಳ ಅಂತರ್ಯಾಮದಲ್ಲಿ ಇರುವನು ಮತ್ತು ಇವುಗಳ ಪಾಲನ ಮಾಡುವನು. [೩] ಅಂತರಾತ್ಮನಿಲ್ಲದೇ ಬೇರೆ ಇರುವ ಯಾವತ್ತೂ ಪದಾರ್ಥಗಳು ಜಡವೆಂದು ತಿಳಿಯಬೇಕು. ಇವೆಲ್ಲವೂ ಅಚೇತನವಿರುವವು. ಅಂತರಾತ್ಮನಿಲ್ಲದ ದೇಹವು ಅಚೇತನವಾಗಿ ಉಳಿಯುವದು. ವ್ಯರ್ಥವಾಗುವದು. ಅಂತರಾತ್ಮನ ಇರುವಿಕೆ [ಅಸ್ತಿತ್ವ]ಯಿಂದ ಪರಮಾರ್ಥ ತಿಳಿಯುವದು. ಏನೆಲ್ಲವೂ ಇವನಿಂದಲೇ ತಿಳಿಯಲಾಗುವದು. ಜಡದಿಂದ ತಿಳಿಯುವದಿಲ್ಲವೆಂದು ಬೇರೆ ಹೇಳಲಿಕ್ಕೆ ಬೇಡ. [೪] ಕರ್ಮಮಾರ್ಗ, ಜ್ಞಾನಮಾರ್ಗ, ಉಪಾಸನಾ ಮಾರ್ಗ, ಸಿದ್ಧಾಂತ ಮಾರ್ಗ, ಪ್ರವೃತ್ತಿ ಮಾರ್ಗ, ನಿವೃತ್ತಿ ಮಾರ್ಗ ಇತ್ಯಾದಿ ಎಲ್ಲ ಮಾರ್ಗಗಳನ್ನು ಅಂತರಾತ್ಮನೇ ನಡೆಯಿಸುವನು. [೫] ಅಶಾಶ್ವತದ ಹೊರತು ಶಾಶ್ವತವೆಂದರೆ ಯಾವುದು, ಇದು ತಿಳಿಯುವದಿಲ್ಲ. ಈ ಮಾತು ಖರೇ ಇದ್ದರೂ ಸಹ ಅಶಾಶ್ವತವು ಎಂದಿಗೂ ಶಾಶ್ವತತನದ ಮಟ್ಟಕ್ಕೆ ಏರುವದಿಲ್ಲ. ಅನೇಕ ಪ್ರಕಾರದ ವಿಚಾರದಿಂದ ವಿವೇಕ ಮಾಡಿ ಇವನ್ನು ತಿಳಿದುಕೊಳ್ಳಬೇಕು. [೬]

ಚಂಚಳ ನಿಶ್ಚಳಾಚೀ ಸಂಧೀ । ತೇಥೇ ಭ್ರಾಂಬಾವತೇ ಬುದ್ಧಿ ।
ಕರ್ಮಮಾರ್ಗಾಚಿ ಜಿ ವಿಧೀ । ತೆ ಮಗ ಏಲಿಕಡೆ ॥೭॥

ದೇವ ಯಾ ಸಕಳಾಚೇ ಮೂಳ । ದೇವಾಸ ಮೂಳ ನಾ ಡಾಳ ।
ಪರಬ್ರಹ್ಮ ತೇ ನಿಶ್ಚಳ । ನಿರ್ವಿಕಾರೀ ॥೮॥

ನಿರ್ವಿಕಾರೀ ಆಣಿ ವಿಕಾರೀ । ಯೇಕ ಮ್ಹಣೇಲ ತೋ ಭಿಕಾರೀ ।
ವಿಚಾರಾಚೀ ಹೋತೆ ಮಾರೀ । ದೇಖತದೇಖತಾ ॥೯॥

ಸಕಳ ಪರಮಾರ್ಥಾಸ ಮೂಳ । ಪಂಚೀಕರ್ಣ ಮಹಾವಾಕ್ಯ ಕೇವಳ ।
ತೇ ಚಿ ಕರಾವೇ ಪ್ರಾಂಜಳ । ಪುನಃಪುನ್ಹಾ ॥೧೦॥

ಪಹಿಲಾ ದೇಹ ಸ್ಥೂಳಕಾಯಾ । ಆಠವಾ ದೇಹ ಮೂಳಮಾಯಾ ।
ಅಷ್ಟದೇಹ ನಿರ್ಶಲಿಯಾ । ವಿಕಾರ ಕೈಚಾ ॥೧೧॥

ಯಾಕಾರಣೇ ವಿಕಾರೀ । ಸಾಚಾಏಸೀ ಬಾಜೀಗರೀ ।
ಯೇಕ ಸಮಜೆ ಯೇಕ ಖರೀ । ಮಾನಿತಾಹೆ ॥೧೨॥

ಉತ್ಪತ್ತಿ ಸ್ಥಿತೀ ಸಂವ್ಹಾರ । ಯಾವೇಗಳಾ ನಿರ್ವಿಕಾರ ।
ಕಳಾಯಾಸಾಠೀ ಸಾರಾಸಾರ । ವಿಚಾರ ಕೇಲಾ ॥೧೩॥

ಸಾರ ಅಸಾರ ದೋನೀ ಯೇಕ । ತೇಥೇ ಕೈಚಾ ಉರಲಾ ವಿವೇಕ ।
ಪರೀಕ್ಷಾ ನೇಣತೀ ರಂಕ । ಪಾಷೀ ಕರಂಟೆ ॥೧೪॥

ಜೋ ಯೇಕ ಚಿ ವಿಸ್ತಾರಲಾ । ತೋ ಅಂತರಾತ್ಮಾ ಬೋಲಿಲಾ ।
ನಾನಾ ವಿಕಾರೀ ವಿಕಾರಲಾ । ನಿರ್ವಿಕಾರೀ ನವ್ಹೆ ॥೧೫॥

ವಿಚಾರವಂತ ಜನರೂ ಸಹ ಶಾಶ್ವತ ಮತ್ತು ಅಶಾಶ್ವತ ಇವುಗಳನ್ನು ಸಂಮಿಶ್ರ (ಕಲಬೆರಕೆ ಕೂಡಿಸುವದು) ಮಾಡುತ್ತಾರೆ. ನಿರ್ವಿಕಾರಿಯಾದ ಶಾಶ್ವತ ಬ್ರಹ್ಮ ಮತ್ತು ವಿಕಾರಿ, ಅಶಾಶ್ವತವಾಗಿರುವ ಅಂತರಾತ್ಮಾ ಇವೆರಡೂ ಒಂದೇ ಎಂದು ತಿಳಿದು ಘೋಟಾಳೆ ಮಾಡುತ್ತಾರೆ. ಆದ್ದರಿಂದ ಅಗದೀ ಸೂಕ್ಷ್ಮ ವಿಚಾರ ವಿವೇಕ ಮಾಡಿ ಅಸಾರದೊಳಗಿಂದ ಸಾರವನ್ನು ಗುರುತಿಸಿ ಆರಿಸಿ ತೆಗೆಯಬೇಕು:–ಯಾವತ್ತೂ ಅಶಾಶ್ವತದೃಶ್ಯವು ಎಲ್ಲಿ ನಿಲ್ಲುವದೋ, ಮುಗಿಯುವದೋ ಆಗ ಅಲ್ಲಿ ಶೂನ್ಯವು ಮುಂದೆ ಬಂದು ನಿಲ್ಲುತ್ತದೆ. ಇದರ ಆಚೆಗೆ (ಇದನ್ನು ದಾಟಿ ಹೋದರೆ) ಶಾಶ್ವತವಿರುವದು. ಶಾಶ್ವತ ಮತ್ತು ಅಶಾಶ್ವತ ಇವುಗಳನ್ನು ಕೂಡಿಸಿಕೊಂಡ ಕೊಂಡಿಯು ಶೂನ್ಯವಾಗಿರುವದು. ಈ ಶೂನ್ಯಮಯ ಕೊಂಡಿಯು ಹತ್ತಿರ ಬಂದ ಮೇಲೆ ಸಾಧಕರ ಬುದ್ಧಿಗೊಂದಲದಲ್ಲಿ ಬೀಳುವದು. ಸಾಧಕನು ಶೂನ್ಯಕ್ಕೆ ಬ್ರಹ್ಮನೆಂದು ತಿಳಿಯುವನು. ಅಲ್ಲಿ ಆಗ ದೃಶ್ಯದ ಅರ್ಥಾತ್ ದೇಹದ ಮರೆವು ಆಗಿರುವದರಿಂದ ಕರ್ಮಕ್ಕೆ ಜಾಗೆ (ಸ್ಥಾನ) ಇರುವದಿಲ್ಲ. ಅಂತೆಯೇ ಕರ್ಮ ಮಾರ್ಗದ ಯಾವತ್ತೂ ಆಚಾರಗಳು ಕೆಳಗಿನ ಅವಸ್ಥೆಯಲ್ಲಿಯೇ ಇರುವವು. (೭) ಅಂತರಾತ್ಮಾ ಇವನು ಸರ್ವದೃಶ್ಯದ ಮತ್ತು ಕರ್ಮಗಳಿಗೆ ಮೂಲನು. ಪ್ರಕೃತಿಯಿಂದಾಗಿ ಅಸ್ತಿತ್ವಕ್ಕೆ ಬರುವ ಅಂತರಾತ್ಮನಿಗೆ ಮೂಲ ಮತ್ತು ಕಡೆಯ (ಕೊನೆಯ ಶಿಖರ) ಅಥವಾ ಖರೇ ಅಸ್ತಿತ್ವವೇ ಇಲ್ಲ. ನಿಜವಾದ ಅಸ್ತಿತ್ವವು ಕೇವಲ ನಿರ್ವಿಕಾರಿ ಮತ್ತು ಶಾಶ್ವತ ಪರಬ್ರಹ್ಮನಿಗೆ ಮಾತ್ರ ಇರುವದು. (೮) ನಿರ್ವಿಕಾರಿಯಾದ ಬ್ರಹ್ಮ ಮತ್ತು ವಿಕಾರಿಯಾದ ಅಂತರಾತ್ಮಾ ಇವೆರಡೂ ಒಂದೇ ಇರುವವು ಎಂದು ತಿಳಿಯುವ ಮನುಷ್ಯನು ಬುದ್ಧಿಯಿಂದ ಭಿಕಾರಿ (ಶೂನ್ಯ)ಯೆಂದೇ ತಿಳಿಯಬೇಕು. ವಿಚಾರದಿಂದ ಪರಬ್ರಹ್ಮದ ತಿಳುವಳಿಕೆ ಮಾಡಿಕೊಳ್ಳಲಿಕ್ಕೆ ಹೋದರೆ ಹಾ ಹಾ ಅನ್ನುವಷ್ಟರಲ್ಲಿ ವಿಚಾರಗಳು ನಾಶವಾಗಿ ಬಿಡುವವು. (೯) ಈ ವಿಶ್ವವು ಯಾವುದರಿಂದ ಹೆಣೆಯಲ್ಪಟ್ಟಿದೆಯೋ ಆ ಪಂಚಭೂತಗಳ ವಿವರವಾದ ಮಾಹಿತಿ ಮತ್ತು ಮಹಾವಾಕ್ಯದ (೧) ಅಹಂ ಬ್ರಹ್ಮಾಸ್ಮಿ ೨) ತತ್ವಮಸಿ ೩) ಪ್ರಜ್ಞಾನಂ ಬ್ರಹ್ಮ ೪) ಅಯಮಾತ್ಮಾ ಬ್ರಹ್ಮ ಈ ನಾಲ್ಕು ವಾಕ್ಯಗಳು) ಮನನ ನಿಧಿಧ್ಯಾಸ ಇವೆಲ್ಲ ಪರಮಾರ್ಥದ ಮೂಲವಿರುವವು. ಇವನ್ನೆಲ್ಲ ವಿಚಾರ ವಿವೇಕದಿಂದ ಮೇಲಿಂದಮೇಲೆ ಸ್ಪಷ್ಟವಾಗಿ ತಿಳಿದುಕೊಳ್ಳಬೇಕು. (೧೦)ಪಿಂಡದ ಹಾಗೂ ಬ್ರಹ್ಮಾಂಡದ(ಅಷ್ಟಧಾ ದೇಹ)ಎಂಟು ದೇಹಗಳ ಪೈಕಿ ಮೊದಲನೆಯ ದೇಹವೆಂದರೆ ನಮ್ಮ ಸ್ಥೂಲ ದೇಹ ನಮ್ಮ ಜಡ ಶರೀರವೇ ಇರುವದು. ಆ ದೇಹಗಳ ಪೈಕಿ ಕೊನೆಯ ದೇಹ ಅಂದರೆ ಎಂಟನೆಯ ದೇಹವು ಮೂಲ ಮಾಯಾ ಆಗಿರುವದು. ಎಂಟೂ ದೇಹದ ನಿರಸನ ಮಾಡಿದ ಮೇಲೆ ಆಗ ವಿಕಾರಗಳಾಗಲೀ ಅಥವಾ ಬದಲಾವಣೆಯಾಗಲೀ ಎಳ್ಳಷ್ಟೂ ಉಳಿಯುವದಿಲ್ಲ. (೧೧) ಈ ಕಾರಣದಿಂದ ಯಾವ ಯಾವವು ವಿಕಾರ ಹೊಂದುವವೋ ಅಥವಾ ಬದಲಾವಣೆಯಾಗುವವೋ ಅವೆಲ್ಲ ಖರೇ ಎಂದು ಎನಿಸಿದರೂ ಸಹ ಅವು ಭಾಸಮಾನವೆನಿಸುವವು. ಅಂದರೆ ಅವೆಲ್ಲ ಜಾದೂದಿಂದ ನಿರ್ಮಾಣ ಮಾಡಿದ ವಸ್ತುಗಳಂತೆ ಭ್ರಮರೂಪವಿರುವವು. ಖರೇ ತಿಳುವಳಿಕೆಯುಳ್ಳ ಮನುಷ್ಯನು ಇದರ ಜಾದೂತನ (ಖೊಟ್ಟಿ ಸುಳ್ಳುತನ)ವನ್ನು ಗುರುತಿಸುವನು. ಮತ್ತು ತಿಳುವಳಿಕೆ ಇಲ್ಲದ ಅಜ್ಞಾನಿ ಮನುಷ್ಯ ಇದನ್ನು ಖರೇ ಎಂದು ನಂಬುವನು. (೧೨) ವಿಕಾರಿಯಾದ ವಸ್ತುಗಳಿಗೆ ಉತ್ಪತ್ತಿ, (ಹುಟ್ಟು) ಸ್ಥಿತಿ, (ಇರುವಿಕೆ) ಮತ್ತು ಲಯ (ಸಂಹಾರ) ಇವು ಇರುವವು. ನಿರ್ವಿಕಾರವಾದ ಬ್ರಹ್ಮವಸ್ತು ಇವೆಲ್ಲವುಗಳಿಗಿಂತ ಬೇರೆ ಇರುತ್ತದೆ. ಇದು ಸರಿಯಾಗಿ ತಿಳಿಯುವದಕ್ಕಾಗಿ ಸಾರ (ಶಾಶ್ವತ, ಸತ್ಯ) ಯಾವುದು? ಅಸಾರ–ನಾಶವಂತ ಯಾವದು? ಇವುಗಳ ಸೂಕ್ಷ್ಮ ವಿಚಾರ ವಿವೇಕ ಮಾಡಬೇಕು.(೧೩) ಸಾರ ಮತ್ತು ಅಸಾರ ಇವೆರಡೂ ಒಂದೇ ಎಂದು ತಿಳಿದದ್ದಾದರೆ ಆ ಮೇಲೆ ವಿವೇಕಕ್ಕೆ ಸ್ಥಳವೇ [ಕಿಮ್ಮತ್ತೇ] ಇಲ್ಲದಂತಾಗುವದು. ಇಂಥ ವಿವೇಕಶೂನ್ಯ, ಬುದ್ಧಿಹೀನ, ಪಾಪಿ ಮತ್ತು ಅಭಾಗಿ [ಭಿಕಾರಿ] ಮನುಷ್ಯರಿಗೆ ಸಾರಾಸಾರದ ಪರೀಕ್ಷೆಯನ್ನೇ ಮಾಡಲಿಕ್ಕೆ ಬರುವದಿಲ್ಲ. [೧೪] ಒಬ್ಬನೇ ಒಬ್ಬನಿರುವ ಅಂತರಾತ್ಮಾ ಈ ವಿಶ್ವರೂಪದಿಂದ ವಿಸ್ತಾರ ಹೊಂದಿರುವನು. ಇವನಿಂದಲೇ ಈ ವಿಶ್ವದಲ್ಲಿ ನಾನಾ ಪ್ರಕಾರದ ಭೇದ ಮತ್ತು ಬದಲಾವಣೆಗಳು ತೋರಿ ಬರುವವು. ಇಂಥ ಭೇದ ಬದಲಾವಣೆಗಳಿಂದ ಮೆರೆಯುವ, ಶೋಭಿಸುವ ಅಂತರಾತ್ಮನು ನಿರ್ವಿಕಾರಿಯಾದ ಬ್ರಹ್ಮನಲ್ಲವೆಂದು ತಿಳಿಯಿರಿ.(೧೫)

ಏಸೇ ಪ್ರಗಟ ಚಿ ಆಹೆ। ಆಪುಲ್ಯಾ ಪ್ರತ್ಯಯೆ ಪಾಹೇ।
ಕಾಯ ರಾಹೆ ಕಾಯ ನ ರಾಹೆ। ಹೇ ಕಳೇನಾ ॥೧೬॥

ಜೇ ಅಖಂಡ ಹೋತ ಜಾತೇ। ಜೇ ಸರ್ವದಾ ಸಂವ್ಹಾರತೇ।
ರೋಕಡೇ ಪ್ರಚಿತೀಸ ಯೇತೇ। ಜನಾ ಮಧೇ ॥೧೭॥

ಯೇಕ ರಡೆ ಯೇಕ ಚರ್ಫಡೀ। ಯೇಕಾಚೀ ಧರೀ ನರಡೀ।
ಯೇಕಮೇಕಾ ಝೋಂಬತೀ ಬರಾಡೀ। ದುಕಳ್ಯಲೆ ಜೈಸೆ ॥೧೮॥

ನಾಹೀ ನ್ಯಾಯ ನಾಹೀ ನೀತಿ। ಏಸೆ ಹೇ ಲೋಕ ವರ್ತತೀ।
ಆಣಿ ಅವಘೇ ಚ ಸಾರ ಮ್ಹಣತೀ। ವಿವೇಕಹೀನ ॥೧೯॥

ಧೋಂಡೆ ಸಾಂಡೂನ ಸೋನೇ ಘ್ಯಾವೇ। ಮಾತೀ ಸಾಂಡೂನ ಅನ್ನ ಖಾವೇ।
ಆಣಿ ಅವಘೇ ಚಿ ಸಾರ ಮ್ಹಣಾವೇ। ಬಾಷ್ಕಳಪಣೇ ॥೨೦॥

ಮ್ಹಣೌನಿ ಹಾ ವಿಚಾರ ಕರಾವಾ। ಸತ್ಯಮಾರ್ಗ ತೋ ಚಿ ಧರಾವಾ।
ಲಾಭ ಜಾಣೋನ ಘ್ಯಾವಾ। ವಿವೇಕಾಚಾ ॥೨೧॥

ಸಾರಗಾರ ಯೇಕ ಚಿ ಸರೀ। ತೇಥೇ ಪರೀಕ್ಷೇಸ ಕೈಚೀ ಉರೀ।
ಯಾಕಾರಣೇ ಚತುರೀ। ಪರೀಕ್ಷಾ ಕರಾವೀ ॥೨೨॥

ಜೇಥೇ ಪರೀಕ್ಷೇಚಾ ಅಭಾವ। ತೇಥೇ ದೇ ಘಾವ ಘೇ ಘಾವ।
ಸಗಟ ಸಾರಿಖಾ ಸ್ವಭಾವ। ಲೌಂದಪಣಾಚಾ ॥೨೩॥

ಘೇವ ಯೆ ತೇ ಚಿ ಘ್ಯಾವೇ। ಘೇವ ನ ಯೇ ತೇ ಸೋಡಾವೇ।
ಉಂಚ ನೀಚ ವೊಳಖಾವೇ। ತ್ಯಾ ನಾವ ಜ್ಞಾನ ॥೨೪॥

ಈ ಮಾತು ಅಗದೀ ಸ್ಪಷ್ಟ ಮತ್ತು ಖುಲ್ಲಾ ಇರುವದು. ನಿಮ್ಮ ಅನುಭವದಿಂದ ಇದನ್ನು ನೋಡಲಿಕ್ಕೆ ಬರುವದು. ಆದರೂ ಸಹ ಇದರಲ್ಲಿ ಶಾಶ್ವತ ಮತ್ತು ಸ್ಥಿರವಿರುವದು ಯಾವುದು? ಮತ್ತು ಅಶಾಶ್ವತ ನಶ್ವರವಾದದ್ದು ಯಾವುದು ? ಇದು ನಮಗೆ ತಿಳಿಯುವದಿಲ್ಲ. ( ೧೬ ) ಮಾನವ ಜೀವನದಲ್ಲಿ ದೃಶ್ಯವು ಅಶಾಶ್ವತವಿರುವದು, ನಶ್ವರವಿರುವದು, ಇದರ ಅನುಭವ ಸದೈವ (ಮೇಲಿಂದ ಮೇಲೆ) ಬರುವದು.ತಿಳಿದಂಥ ಜಾಣ ಮನುಷ್ಯನು ಶಾಶ್ವತವಾದದ್ದನ್ನೇ ಸ್ವೀಕರಿಸಬೇಕು.ಶ್ರೇಷ್ಠವಾದದ್ದು ಯಾವುದು? ಹೀನವಾದದ್ದು ಯಾವುದು?ಉತ್ತಮ ಯಾವುದು ? ಅಧಮ ಯಾವುದು? ಇದನ್ನೆಲ್ಲ ತಿಳಿಯುವದಕ್ಕೆ ಜ್ಞಾನವೆನ್ನು ವರು. ದೃಶ್ಯವು ನಿಜವಿದೆ ಅನ್ನುವ ರೂಢಿಯನ್ನು ಬಿಟ್ಟುಕೊಟ್ಟು [ತ್ಯಜಿಸಿ], ಶಾಶ್ವತವಾದದ್ದರ ಅಭ್ಯಾಸ ಮಾಡ ಬೇಕು:- ಯಾವುದು ಇರುವದು ಮತ್ತು ಹೋಗುವದು. ಅಂದರೆ ಯಾವುದು ಒಂದೇ ಸವನೆ ಬದಲಾಗುವದೋ ಯಾವುದು ಒಂದೇ ಸವನೆ ಇಲ್ಲದಾಗುವದೋ ಅಂದರೆ ನಾಶ ಹೊಂದುವದೇ ಆಗಿದೆಯೋ ಈ ಅಶಾಶ್ವತ ಮತ್ತು ನಶ್ವರ ದೃಶ್ಯದ ಅನುಭವವು ನಮ್ಮ ಸುತ್ತು ಮುತ್ತಲಿನ ಜೀವನದಲ್ಲಿಯೂ ಸಹ ಪ್ರತ್ಯಕ್ಷವಾಗಿ ಕಾಣುವದು.[೧೭] ಉದಾ:- ಒಬ್ಬನು ಅಳುವನು, ಒಬ್ಬನು ಒದ್ದಾಡುವನು, ಚಡಪಡಿಸುವನು, ಒಬ್ಬನು ಇನ್ನೊಬ್ಬನ ಗಂಟಲು ಹಿಡಿ ಯುವನು. [ಹಿಚುಕುವನು], ಇದಲ್ಲದೆ ದುಷ್ಕಾಳದಲ್ಲಿಯ ಹಸಿದು ಕಂಗಾಲಾದ ಜನರಂತೆ ಕೆಲವು ಜನರು ಒಬ್ಬರ ಮೇಲೊಬ್ಬರು ಎಗರಿ ಬೀಳುವರು. [೧೮] ನ್ಯಾಯದ ಇಚ್ಛೆಯಿಲ್ಲ,ನೀತಿಯ ಹೆದರಿಕೆಯಿಲ್ಲ,ಹೀಗೆ ಈ ಜನಸಾಮಾನ್ಯರು ನಡೆಯುವರು.(ವರ್ತಿಸುವರು),ಮತ್ತು ವಿವೇಕಹೀನರು ತಮ್ಮ ನಡವಳಿಕೆಯನ್ನು ತಾವು ಮಾಡಿದ್ದೇ ಸರಿ ಎಂದು ಸಮ ರ್ಥಿಸಿಕೊಳ್ಳುವರು. ಶ್ರೀ ಸಮರ್ಥರಿಗೆ ಏನು ಹೇಳಬೇಕಾಗಿದೆ ಎಂದರೆ ದೃಶ್ಯವೆಲ್ಲ ಸ್ಪಷ್ಟವಾಗಿ ಧಡಧಡಿತವಾಗಿ ನಶ್ವರ ವಿರುವದು. ಇದರ ಪ್ರತ್ಯಕ್ಷ ಅನುಭವ ಬರುತ್ತಿದ್ದರೂ ಸಹ ನಶ್ವರದ ಪ್ರಾಪ್ತಿಯ ಸಲುವಾಗಿ ಜನರು ಅತ್ಯಂತ ಹೀನಮಟ್ಟಕ್ಕಿಳಿದು ಪಶುಗಳಂತೆ ವರ್ತಿಸುವರು. ಅಸಾರವಾದ ದೃಶ್ಯಕ್ಕೆ ಇವರು ಸಾರವೆಂದು ತಿಳಿಯುವರು. ಹೀಗೆ ತಿಳಿಯುವದೇ ಮುಖ್ಯವಾಗಿ ವಿವೇಕದಾರಿದ್ರ್ಯದ ಪ್ರಧಾನ ಲಕ್ಷಣವಿರುವದು. (೧೯) ಸಾಮಾನ್ಯ ಮನುಷ್ಯನೂ ಸಹ ಕಲ್ಲುಗಳನ್ನು ಆರಿಸಿ ಒಗೆದು ಬಂಗಾರವನ್ನು ತೆಗೆದುಕೊಳ್ಳುವನು. ಮಣ್ಣನ್ನು ಆರಿಸಿಒಗೆದು ಧಾನ್ಯವನ್ನು ತೆಗೆದು ಕೊಳ್ಳುವನು. ಅಂದರೆ ಅನ್ನವನ್ನು ತಿನ್ನುವನು ಇದರ ಅರ್ಥವೇನೆಂದರೆ ಸಾರದಿಂದ ಅಸಾರವಾದದ್ದನ್ನು ಬೇರ್ಪಡಿಸಿ ದೂರಸರಿಸುವಂಥ ವಿವೇಕಶಕ್ತಿ ಇವನಲ್ಲಿ ಇರುವದು. ಹೀಗಿದ್ದರೂ ಸಹ ಮನುಷ್ಯನು ಎಲ್ಲವೂ ಚನ್ನಾಗಿರುವದೆಂದು ಅನ್ನುವನು. ಮತ್ತು ಸ್ವಾರ್ಥಕ್ಕಾಗಿ ಮನಬಂದಂತೆ ನಡೆಯುವನು. ಇದು ಮೂರ್ಖತನವೇ ಇರುವದು. (೨೦) ಆದ್ದರಿಂದ ಮನುಷ್ಯನು ಚನ್ನಾಗಿ ವಿವೇಕಯುಕ್ತ ವಿಚಾರ ಮಾಡಬೇಕು. ಸತ್ಯದ ಮಾರ್ಗವಿದ್ದಲ್ಲಿಂದಲೇ ಹೋಗ ಬೇಕು. ವಿವೇಕದಿಂದ ಚನ್ನಾಗಿ (ಸರಿಯಾಗಿ) ತಿಳಿದುಕೊಂಡು ಆಯುಷ್ಯದ (ಮಾನವ ಜನ್ಮದ) ಲಾಭ ಸಾರ್ಥಕತೆ ಮಾಡಿಕೊಳ್ಳಬೇಕು. (೨೧) ಸಾರ ಅಂದರೆ ಸಂಪತ್ತು ಅಥವಾ ಅಮೌಲ್ಯರತ್ನವು. ಮತ್ತು ಗಾರ ಅಂದರೆ ಗಾರ ಗೋಟಿ (ಹೊಳೆಯುವ ಕಲ್ಲು) ಅಥವಾ ಸಾದಾಕಲ್ಲು ಈ ಎರಡರದೂ ಕಿಮ್ಮತ್ತು ಸಮವೆಂದು ಒಪ್ಪಿದ್ದಾದರೆ ಆಮೇಲೆ ಅಲ್ಲಿ ಪರೀಕ್ಷಾ ಮಾಡುವ ಅವಶ್ಯಕತೆಯೇ ಉಳಿಯುವದಿಲ್ಲ. ಆದ್ದರಿಂದ ತಿಳಿದ ಮನುಷ್ಯನು ಕಿಮ್ಮತ್ತಿನದು ಯಾವದು? ಕಿಮ್ಮತ್ತಿಲ್ಲದ್ದು ಯಾವುದು? ಇದರ ಬಗ್ಗೆ ಸರಿಯಾಗಿ ಖರೇ ಪರೀಕ್ಷೆ ಮಾಡಬೇಕು. (೨೨) ಎಲ್ಲಿ ಇಂಥ ಪರೀಕ್ಷೆ ಮತ್ತು ಯೋಗ್ಯ ಅಯೋಗ್ಯದ ನಿರ್ಣಯ ಇರುವದಿಲ್ಲವೋ ಅಂಥಲ್ಲಿ ಎರಡು ಕೊಟ್ಟರೇನು ಮತ್ತು ಎರಡು ತೆಗೆದುಕೊಂಡರೇನು? ಎಲ್ಲವೂ ಒಂದೇ ಇರುವದು. ಶ್ರೇಷ್ಠತನ ಮತ್ತು ಕನಿಷ್ಠತನ ಎರಡನ್ನೂ ಹಿಂದ ಕ್ಕಿಟ್ಟು ಯಾವತ್ತರನ್ನೂ ಒಂದೇ ಸಮವೆಂದು ತಿಳಿದರೆ ಮತ್ತು ಅದರಂತೆ ವರ್ತಿಸಿದರೆ ಇದು ಅಡ್ನಾಡಿಗತನ ಅಥವಾ ಮುಠ್ಠಾಳತನದ ಸ್ವಭಾವ ಆಗುವದು. [ಬೇಕೂಫ]. ಮೂರ್ಖ ಮನುಷ್ಯನಾದವನು ಸಮಾಜದಲ್ಲಿಯ ಸಜ್ಜನರನ್ನು ಮತ್ತು ದುರ್ಜನರನ್ನು ಒಂದೇ ಪಾತಳಿ (ಮಟ್ಟ)ಯಲ್ಲಿ ಎಣಿಸುವನು. (ತಿಳಿಯುವನು) (೨೩) ಯಾವು ದನ್ನು ಪಡೆಯುವದು ಯೋಗ್ಯವಿದೆಯೋ ಅದನ್ನು ತೆಗೆದುಕೊಳ್ಳಬೇಕು. ಯಾವುದು ಯೋಗ್ಯವಿಲ್ಲವೋ ಅದನ್ನು ತೆಗೆದುಕೊಳ್ಳಬಾರದು. ಉತ್ತಮ ಯಾವುದು? ಮತ್ತು ಹೀನವಾದದ್ದು ಯಾವುದು? ಇದನ್ನು ಅಗದೀ ಸರಿಯಾಗಿ ಗುರುತಿಸುವದಕ್ಕೇ ಜ್ಞಾನವೆಂದು ಹೆಸರಿರುವದು. (೨೪)

ಸಂಸಾರ ಸಾಂತೇಸ ಆಲೆ । ಯೇಕ ಲಾಭೇ ಅಮರ ಜಾಲೇ ।
ಯೇಕ ತೇ ಕರಂಟಿ ಠಕಲೇ । ಮುದಲ ಗೇಲೇ ॥೨೫॥

ಜಾಣತ್ಯಾನೆ ಐಸೇ ನ ಕರಾವೇ । ಸಾರ ತೇ ಚಿ ಶೋಧೂನ ಘ್ಯಾವೇ ।
ಅಸಾರ ತೇ ಜಾಣೋನ ತ್ಯಾಗಾವೇ । ವಮಕ ಜೈಸೇ ॥೨೬॥

ತೇ ವಮಕ ಕರೀ ಪ್ರಾಶನ । ತರೀ ತೇ ಸ್ವಾನಾಚೇ ಲಕ್ಷಣ ।
ತೇಥೇ ಶುಚಿಷ್ಮಂತ ಬ್ರಾಹ್ಮಣ । ಕಾಯ ಕರೀ ॥೨೭॥

ಜೇಹಿ ಜೈಸೇ ಸಂಚಿತ ಕೇಲೆ । ತಯಾಸ ತೈಸೇ ಚಿ ಘಡಲೇ ।
ಜೇ ಅಭ್ಯಾಸೀ ಪಡೋನ ಜಡಲೇ । ತೇ ತೋ ಸುಟೇನಾ ॥೨೮॥

ಯೇಕ ದಿವ್ಯಾನ್ನೇ ಭಕ್ಷಿತೀ । ಯೇಕ ವಿಷ್ಠಾ ಸಾವಡಿತೀ ।
ಆಪಲ್ಯಾ ವಡಿಲಾಚಾ ಘೇತೀ । ಸಾಭಿಮಾನ ॥೨೯॥

ಅಸೋ ವಿವೇಕೇವಿಣ । ಬೋಲಣೇ ತಿತುಕಾ ಸೀಣ ।
ಕೋಣೇಂಯೇಕೇ ಶ್ರವಣ ಮನನ । ಕೇಲೇ ಚಿ ಕರಾವೇ ॥೩೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ಸಾರ ವಿವೇಕ ನಿರೂಪಣ' ನಾಮ ಸಮಾಸ ಚತುರ್ಥ ॥

ಸಂಸಾರವೆಂಬುದು ಒಂದು ಸಂತೆ (ಬಾಜಾರ) ಇದ್ದಂತೆ ಇರುವದು. ನರದೇಹದ ಭಂಡವಾಳ ತೆಗೆದುಕೊಂಡು ಮನುಷ್ಯನು ಈ ಬಾಜಾರದಲ್ಲಿ ಬರುವನು. ಇವರಲ್ಲಿ ಕೆಲವರು ಭಾಂಡವಲದ ಅಂದರೆ ನರದೇಹದ ಉತ್ತಮ ಉಪಯೋಗ ಮಾಡಿಕೊಂಡು ಅಮರತ್ವದ ಲಾಭ ಮಾಡಿಕೊಳ್ಳುವರು. ಇನ್ನುಳಿದವರು ದುರ್ವ್ಯಸನಿಗಳಿರುವರು. ದುರ್ವ್ಯಸನದಿಂದ ಇವರು ಮೋಸ ಹೋಗುವರು. ಮತ್ತು ಮೂಲ ಭಾಂಡವಲ ಅಂದರೆ ದೇಹವನ್ನೇ ಕಳೆದುಕೊಂಡು ಕೂಡ್ರುವರು. ದೇಹವನ್ನು ವ್ಯರ್ಥಗೊಳಿಸುವರು. [೨೫] ತಿಳುವಳಿಕೆಯುಳ್ಳ ಜನರು ಹೀಗೆ ಮಾಡಬಾರದು. ಯಾವುದು ಖರೇ ಇರುವದೋ ಮತ್ತು ಅದು ನಿಮ್ಮ ನಿಜವಾದ ಕಲ್ಯಾಣದ್ದಾಗಿರುವದೋ ಇದನ್ನು ಶೋಧಿಸಿ ವಿವೇಕದಿಂದ ಇದರ ಸ್ವೀಕಾರ ಮಾಡಬೇಕು. ಯಾವುದು ಅಸಾರವಿರುವದೋ, ಯಾವುದು ಅಕಲ್ಯಾಣದ್ದಿರುವದೋ ಅಂಥದನ್ನು ಗುರುತಿಸಿ ಅದನ್ನು ವಾಂತಿ ಮಾಡಿದ ಹೊಲಸೆಂದು ದೂರ ಒಗೆದು ಬಿಡಬೇಕು. (೨೬) ವಾಂತಿ ಮಾಡಿದ್ದನ್ನು ತಿನ್ನುವದು ಬಿಡಾಡಿ ನಾಯಿಯ ಲಕ್ಷಣವಿರುವದು. ಅಂಥಲ್ಲಿ ಪವಿತ್ರ ಬ್ರಾಹ್ಮಣನದು ಅಂದರೆ ಸಜ್ಜನನಾದವನದೇನೂ ಉಪಾಯ ನಡೆಯುವದಿಲ್ಲ. [೨೭] ಯಾವನು ಪೂರ್ವ[ಜನ್ಮ]ದಲ್ಲಿ ಯಾವ ರೀತಿಯ ಕರ್ಮ ಮಾಡಿರುವನೋ ಆ ಪ್ರಕಾರ ಅದರ ಪರಿಣಾಮವನ್ನು ಈಗ ಅವನು ಭೋಗಿಸಬೇಕಾಗುವದು. ಪುನಃ ಪುನಃ ಅದನ್ನೇ ಮಾಡುತ್ತ ಹೋದದ್ದರಿಂದಾಗಿ ಮನುಷ್ಯನಿಗೆ ಅದೇ ರೂಢಿಯಾಗಿ ಬಿಡುತ್ತದೆ. ಈ ರೂಢಿ (ಸವಯ, ಚಟ) ಬಿಟ್ಟು ಹೋಗುವದು ಕಠಿಣವಾಗುವದು. [೨೮] ಈ ಭೋಗ ನ್ಯಾಯದಿಂದ ಕೆಲವರು ಉತ್ತಮ ಪಕ್ವಾನ್ನವನ್ನು ತಿನ್ನುವರು. ಮತ್ತು ಕೆಲವರು ಹೊಲಸನ್ನು ಕೆವುಚುತ್ತ ಕೂಡ್ರುವರು. ಮತ್ತು ಇದೇ ಜನ ತಮ್ಮ ಹಿರಿಯರ ಅಭಿಮಾನ ಹಿಡಿದು ಅದರ ಢಂಬಾಚಾರದ ಪ್ರದರ್ಶನ ಮಾಡುವರು. [ಇದು ನಾಟಕೀ ಪ್ರದರ್ಶನವೇ ಇರುವದು.] [೨೯] ಇರಲಿ, ಯಾರಿಗೆ ವಿವೇಕವಿಲ್ಲವೋ ಅವರಿಗೆ ಈ ಮಾತು ಹೇಳುವದೆಂದರೆ ಗಾಳೀ ಗುದ್ದಿ ಮೈ ನೋಯಿಸಿಕೊಂಡಂತೆ ಅಥವಾ ವ್ಯರ್ಥ ದಣಿದುಕೊಂಡಂತೆ ಆಗುವದು. ಒಟ್ಟಿನಲ್ಲಿ ಮನುಷ್ಯನು ಶ್ರವಣ ಮತ್ತು ಮನನ ಇವನ್ನು ಪುನಃ ಪುನಃ ಮಾಡಬೇಕು. [೩೦]

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಹನ್ನೊಂದನೆಯ ದಶಕದ "ಸಾರ ವಿವೇಕ"ವೆಂಬ ನಾಲ್ಕನೆಯ ಸಮಾಸವು ಮುಗಿದುದು.

● ●

ದಶಕ ಏಕಾದಶ : ಸಮಾಸ ಪಂಚಮ : ರಾಜಕಾರಣ ನಿರೂಪಣ

॥ಶ್ರೀರಾಮ॥ ಕರ್ಮ ಕೇಲೇ ಚಿ ಕರಾವೇ। ಧ್ಯಾನ ಧರಿಲೇ ಚಿ ಧರಾವೇ।
ವಿವರಲೇ ಚಿ ವಿವರಾವೇ। ಪುನ್ಹಾ ನಿರೂಪಣ

ತೈಸೇ ಆಮ್ಹಾಸ ಘಡಲೇ। ಬೋಲಿಲೇ ಚಿ ಬೋಲಣೇ ಪಡಿಲೇ।
ಕಾ ಜೇ ವಿಘಡಲೇ ಚಿ ಘಡಲೇ। ಪಾಹಿಜೆ ಸಮಾಧಾನ

## ದಶಕ ೧೧. ಸಮಾಸ ೫. ರಾಜಕಾರಣ ನಿರೂಪಣ (ನುಡಿ ೨೭)

ಈ ಸಮಾಸದ ಹೆಸರು "ರಾಜಕಾರಣ ನಿರೂಪಣ" ಎಂದು ಇರುವದು. ರಾಜಕಾರಣ ಈ ಶಬ್ದವನ್ನು ಶ್ರೀ ಸಮರ್ಥರು ಯಾವ ಉದ್ದೇಶದಿಂದ [ಅರ್ಥದಿಂದ] ಉಪಯೋಗಿಸಿರುವರೆಂಬುದನ್ನು ಮೊದಲಿಗೆ ಹೇಳುವದು ಅವಶ್ಯವಿರುವದು. ಲೋಕ [ಜನ] ಸಂಗ್ರಹ ಮಾಡುವ ಪುರುಷನಿಗೆ ಸಮಾಜದ ಸರ್ವ ಅಂಗದೊಂದಿಗೆ ಸಂಬಂಧ ಬರುವದು. ಅದರಲ್ಲಿಯೂ ನಮ್ಮ ದೇಶದಲ್ಲಿ ಧರ್ಮಕ್ಕೆ ಮತ್ತು ಅಧ್ಯಾತ್ಮಕ್ಕೆ ವಿಶೇಷ ಮರ್ಯಾದೆ ಇದ್ದುದರಿಂದ ಲೋಕ [ಜನ] ಸಂಗ್ರಹದ ಪುರುಷನಿಗೆ ಸಾಧು-ಸಂತ, ಧರ್ಮ ಸಂಸ್ಥೆ, ರಾಜ್ಯ ಸಂಸ್ಥೆ ಮತ್ತು ಅರ್ಥ ಸಂಸ್ಥೆ, ಇವುಗಳ ಬಗ್ಗೆ ಹೆಚ್ಚು ನಿಕಟ ಸಂಬಂಧ ಬರುವದು. ಆಗಾದರೇನು? ಈಗಾದರೇನು? ನಮ್ಮ ದೇಶದಲ್ಲಿಯ ರಾಜಕೀಯ ಪುಢಾರಿಗಳಿಗೆ, ಮುಂತ್ಸದ್ದಿಗಳಿಗೆ ಮತ್ತು ಹಿರಿಯ ಸೇನಾನಿಗಳಿಗೆ [ಸೇನಾಪತಿಗೆ], ಇದಲ್ಲದೇ ಶ್ರೇಷ್ಠ ಕ್ರಾಂತಿಕಾರಿಗಳಿಗೆ ಸಹಿತವಾಗಿ ಸಾಧು ಸಂತರ ಆಶೀರ್ವಾದ ಮತ್ತು ಬೆಂಬಲ ಅವಶ್ಯಬೇಕೆಂದು ಅನಿಸುವದು. ಅರ್ಥಾತ್ ಯಾವೊಬ್ಬ ರಾಜಕೀಯ ಪುಢಾರಿ ಅಥವಾ ಹಿರಿಯ ಸೇನಾಪತಿಯು ಯಾವನಾದರೊಬ್ಬ ಸಾಧು ಅಥವಾ ಸಂತರ ಕಡೆಗೆ ಮೇಲಿಂದ ಮೇಲೆ ಹೋಗಲಿಕ್ಕೆ ಹತ್ತಿದರೆಂದರೆ ಶಾಸನದ ಲಕ್ಷ್ಯ ಅವನ ಕಡೆಗೆ ಸಹಜವಾಗಿ [ತನ್ನಷ್ಟಕ್ಕೆ ತಾನೇ] ಹೋಗುತ್ತದೆ ವಿಶೇಷತಃ ರಾಜನು ಪರಕೀಯನಾಗಿದ್ದರೆ ಆ ಸಾಧುವಿಗೆ ರಾಜಕೀಯ ಉಪಸರ್ಗ ಸೋಸುವ ಪ್ರಸಂಗ ಬರುವದು ಅಶಕ್ಯವೇನಲ್ಲ. ಶ್ರೀ ಸಮರ್ಥರ ಕಾಲದಲ್ಲಿ ರಾಜಕೀಯ ಸತ್ತಾ ಪರಕೀಯರವಿತ್ತು. ರಾಜರು, ಮತ್ತು ರಾಜಕೀಯ ಅಧಿಕಾರಿಗಳು ಆಗ ಅಸಹಿಷ್ಣು, ಕ್ರೂರ ಮತ್ತು ಕಠಿಣ ಹೃದಯುದವರು ಇದ್ದರು. ಇಂಥವರೊಂದಿಗೆ ಸೆಣಸಾಡುವ ಲೋಕ ಸಂಗ್ರಹದ ಪುರುಷನಿಗೆ ಶ್ರೀ ಸಮರ್ಥರ ಆಶೀರ್ವಾದಪೂರ್ವಕ ಪೂರ್ಣ ಬೆಂಬಲವಿತ್ತು. ಇಂಥ ಲೋಕ ಸಂಗ್ರಹೀ ಪುರುಷನು ಹೇಗೆ ನಡೆದುಕೊಳ್ಳಬೇಕು? ಅನ್ನುವ ಬಗ್ಗೆ ಹೇಳುವಾಗ ಶ್ರೀ ಸಮರ್ಥರು ರಾಜಕಾರಣ ಈ ಶಬ್ದವನ್ನು ಉಪಯೋಗಿಸಿರುವರು. ಲೋಕ ಸಂಗ್ರಹ ಮಾಡಲಿಕ್ಕೆ ಸಮಾಜದ ಪುಢಾರಿತನವನ್ನು ನಿರ್ವಹಿಸುವಾಗ ಇರಬೇಕಾಗುವ ವ್ಯವಹಾರ ಚತುರತೆ ಅಂದರೆ ರಾಜಕಾರಣವೇ ಆಗಿದೆ. ರಾಜಕೀಯ ಹಾಲಚಾಲ ಇದು ಪುಢಾರಿತನದ ಒಂದು ಮಹತ್ವದ ಭಾಗವೇ ಇರುವದು. ಸಮಾಜದಲ್ಲಿಯ ನಿಃಸ್ವಾರ್ಥಿ ಮತ್ತು ಚತುರ ಪುರುಷರಿಗೆ ಶ್ರೀ ಸಮರ್ಥರು ಪ್ರೇರಣೆ ಕೊಟ್ಟರು. ಮತ್ತು ಲೋಕ ಸಂಗ್ರಹ ಹೇಗೆ ಮಾಡಬೇಕು? ಇದನ್ನು ತಿಳಿಸಿಕೊಟ್ಟರು. ಇಂಥವರಲ್ಲಿ ಯಾರು ರಾಜಕಾರಣಿಗಳಾದರೋ ಅವರಿಗೆ ರಾಜನೀತಿಯ ಉಪದೇಶ ಸಹ ಮಾಡಿದ್ದಾರೆ. ಅದರಲ್ಲಿಯ ಕೆಲವು ಭಾಗವು ಈ ದಾಸಬೋಧವಲ್ಲಿ ಬಂದಿರುವದು.

### ದಶಕ ೧೧ ಸಮಾಸ ೫ ರಾಜಕಾರಣ ನಿರೂಪಣ (ನುಡಿ ೨೭)

ಮೊದಲಿಗೆ ತಮ್ಮ ಸ್ವಂತದ ಅನುಭವವನ್ನು ಹೇಳುವರು. ಒಂದೇ ಕರ್ಮವನ್ನು ಪುನಃ ಪುನಃ ಮಾಡಬೇಕು. ಭಗವಂತನ ಧ್ಯಾನವನ್ನು ಪುನಃ ಪುನಃ ಮಾಡಬೇಕು· [ಹಿಡಿಯಬೇಕು]. ಆತ್ಮಜ್ಞಾನದ ಬಗ್ಗೆ ಕೇಳಿದ ವಿಷಯದ ಮೇಲೆ ಪುನಃ ಪುನಃ ಮನನ ಮಾಡಬೇಕು. [೧] ನನ್ನ ಬಾಬತ್ತಿನಲ್ಲಿಯೂ ಸಹ ಇದೇ ಘಟನೆಯು ಘಟಿಸಿದೆ. ಒಂದೆ ಒಮ್ಮೆ ಯಾವುದನ್ನು ನಾನು ಹೇಳಿರುವೆನೋ ಅದನ್ನೇ ನಾನು ಪುನಃ ಪುನಃ ಹೇಳಬೇಕಾಗುವದು. ಯಾಕೆಂದರೆ ಕೇಳುವವನ ಸಮಾಧಾನವು ಸಾಮಾನ್ಯ ವಾತಾವರಣದಿಂದ ಪುನಃ ಪುನಃ ಬಿಗಡಾಯಿಸುತ್ತದೆ. ಬಿಗಡಾಯಿಸಿದ ಸಮಾಧಾನವನ್ನು ಪೂರ್ವವತ್ [ಮೊದಲಿನ] ಸ್ಥಿತಿಗೆ ತರುವದಕ್ಕಾಗಿ ಹೇಳಿದ್ದನ್ನೇ ಹೇಳಬೇಕಾಗುವದು. [೨]

ಅನನ್ಯ ರಾಹೆ ಸಮುದಾವ । ಇತರ ಜನಾಸ ಉಪಜೆ ಭಾವ ।
ಏಸಾ ಆಹೆ ಅಭಿಪ್ರಾವ । ಉಪಾಯಾಚಾ ॥೩॥

ಮುಖ್ಯ ಹರಿಕಥಾ ನಿರೂಪಣ । ದುಸರೇ ತೇ ರಾಜಕಾರಣ ।
ತಿಸರೇ ತೇ ಸಾವಧಪಣ । ಸರ್ವವಿಷಈ ॥೪॥

ಚೌಥಾ ಅತ್ಯಂತ ಸಾಕ್ಷೇಪ । ಫೇಡಾವೇ ನಾನಾ ಆಕ್ಷೇಪ ।
ಅನ್ಯಾಯೆ ಥೋರ ಅಥವಾ ಅಲ್ಪ । ಕ್ಷಮಾ ಕರೀತ ಜಾವೇ ॥೫॥

ಜಾಣಾವೇ ಪರಾಚೆ ಅಂತರ । ಉದಾಸೀನತಾ ನಿರಂತರ ।
ನೀತಿನ್ಯಾಯಾಸಿ ಅಂತರ । ಪಡೋ ಚ ನೇದಾವೇ ॥೬॥

ಸಂಕೇತೇ ಲೋಕ ವೇಧಾವಾ । ಯೇಕೂನಯೇಕ ಬೋಧಾವಾ ।
ಪ್ರಪಂಚ ಹಿ ಸಾವರಾವಾ । ಯಥಾನಶಕ್ತ್ಯಾ ॥೭॥

ಪ್ರಪಂಚಸಮಯೋ ವ್ರೊಳಖಾವಾ । ಧೀರ ಬಹುತ ಅಸಾವಾ ।
ಸಂಮಂಧ ಪಡೋ ನೇದಾವಾ । ಅತಿ ಪರಿತಯಾಚಾ ॥೮॥

ಉಪಾಧೀಸೀ ವಿಸ್ತಾರಾವೇ । ಉಪಾಧೀತ ನ ಸಂಪಡಾವೇ ।
ನೀಚತ್ವ ಪಹಿಲೇ ಚ ಘ್ಯಾವೇ । ಆಣಿ ಮೂರ್ಖಪಣ ॥೯॥

ದೋಷ ದೇಖೋನ ಝಾಂಕಾವೇ । ಅವಗುಣ ಅಖಂಡ ನ ಬೋಲಾವೇ ।
ದುರ್ಜನ ಸಾಂಪಡೋನ ಸೋಡಾವೇ । ಪರೋಪಕಾರ ಕರೂನೀ ॥೧೦॥

ಲೋಕ ಸಂಗ್ರಹೀ ಪುರುಷನು ಲೋಕ ಸಮುದಾಯವನ್ನು ವಶಮಾಡಿಕೊಂಡು ಅವರಿಗೆ ಮಾರ್ಗದರ್ಶನ ಮಾಡಿ ಪ್ರಗತಿಯ ಹಾದಿಯಿಂದ ನಡೆಯುವಂತೆ ಮಾಡುವನು. ಈ ಕಾರ್ಯದಲ್ಲಿ ವಿಕ್ಷೇಪ [ಅಡ್ಡಿ, ಅಢಥಳಾ] ಬರದಂತೆ ಮತ್ತು ಜನತೆಯಲ್ಲಿ ಪ್ರಗತಿಯು ಅಖಂಡವಾಗಿ ಚಾಲೂ ಇರುವಂತೆ ಪುಢಾರಿಗಳು ಹೇಗೆ ನಡೆಯಬೇಕೆಂಬ ಬಗ್ಗೆ ಈಗ ಸವಿಸ್ತಾರವಾಗಿ ಹೇಳುವರು. ಲೋಕ ಸಂಗ್ರಹೀ ಪುಢಾರಿಗಳೊಂದಿಗೆ ಅವರ ಅನುಯಾಯಿಗಳ ಗುಂಪು [ಗ್ರುಪ್] ಅವರೊಂದಿಗೆ ಅನನ್ಯ ಏಕನಿಷ್ಠರಾಗಿರಬೇಕು. ಇದು ಅತಿ ಅವಶ್ಯವು. ಯಾಕೆಂದರೆ ಸಮೂಹ [ಗ್ರುಪ್]ದ ಹೊರಗಿನ ಜನರಿಗೆ ನಿಮ್ಮ ಬಗ್ಗೆ ವಿಶ್ವಾಸ ಉತ್ಪನ್ನವಾಗುವದು. ಇದು ಸಾಧ್ಯವಾಗುವದಾದರೆ ನಿಮ್ಮ ಪುಢಾರಿತನವು ಯಶಸ್ವಿಯಾದಂತೆ ಎಂದು ತಿಳಿಯಬೇಕು. ಇಂಥ ಪುಢಾರಿತನವು ಸಾಧ್ಯವಾಗಬೇಕಾದರೆ ನೀವು ಹೇಗೆ ನಡೆಯಬೇಕು ಅನ್ನುವ ಬಗ್ಗೆ ಮುಂದೆ ಹೇಳಲಾಗಿದೆ. [೩] ಅಧ್ಯಾತ್ಮದ ಪೀಠಿಕೆ (ಭೂಮಿಕೆ) ಅಥವಾ ಹಿನ್ನೆಲೆ ಎಂಥದು ಇರುವದು? ಇದು ಪ್ರಥಮ ಲಕ್ಷಣವಿರುವದು.ಭಗವಂತನ ಮರೆವು ಎಂದೂ ಆಗದಂತೆ ಎಚ್ಚರಿಕೆ ವಹಿಸುವದು. ಮತ್ತು ಯೋಗ್ಯ ವ್ಯವಹಾರದಿಂದ ನಡೆಯುವದು. ಇದು ಎರಡನೆಯ ಲಕ್ಷಣವಿರುವದು. ವ್ಯವಹಾರ ಉತ್ತಮ ರೀತಿಯಲ್ಲಿ ಮಾಡುವದಕ್ಕೆ ಚಾತುರ್ಯ ಇರಬೇಕು. ಎಲ್ಲ ಬಾಬತಿನಲ್ಲಿ ಸಾವಧಾನವಾಗಿರುವದು ಮೂರನೆಯ ಲಕ್ಷಣವಿರುವದು. ಪುಢಾರಿಯ ಲಕ್ಷ್ಯ ನಾಲ್ಕೂ ನಿಟ್ಟಿನಲ್ಲಿರಬೇಕು.(೪) ಸತತೋದ್ಯೋಗಿಯಾಗಿರುವದೇ ನಾಲ್ಕನೆಯ ಲಕ್ಷಣವು.ಅವಿರತ ಉದ್ಯೋಗದ ಹೊರತು ಕಾಯಂ ಸ್ವರೂಪದ ಸ್ಥಿರ ಯಶ ದೊರೆಯಲಾರದು. ಯಾಕೆಂದರೆ ನಿಮ್ಮ ಧ್ಯೇಯದಬಗ್ಗೆ ಮತ್ತು ಕಾರ್ಯದ ಬಗ್ಗೆ ನಾನಾಪ್ರಕಾರದ ಆಕ್ಷೇಪ ಮತ್ತು ಸಂಶಯಗಳು ಏಳುವವು. ಇವುಗಳನ್ನು ನಿರಸನ ಮಾಡಬೇಕು. ನಿಮ್ಮ ಅನುಯಾಯಿಗಳು ಸಣ್ಣ ದೊಡ್ಡ ತಪ್ಪುಗಳನ್ನು ಮಾಡುವರು. ಇದರ ಬಗ್ಗೆ ತಿಳಿಹೇಳಿ ಕ್ಷಮಿಸಬೇಕು. [೫] ಎರಡನೆಯುವರ ಮನಸ್ಸಿನಲ್ಲಿ ಏನಿರುವದೆಂಬುದನ್ನು ಚಾಣಾಕ್ಷತನದಿಂದ ಕಂಡು ಹಿಡಿಯಬೇಕು. ನೀವು ನಿಮ್ಮ ವೃತ್ತಿಯನ್ನು ಯಾವಾಗಲೂ ಅಲಿಪ್ತ(ತಟಸ್ಥ)ಇಡಬೇಕು.ನಿಮ್ಮ ನಡವಳಿಕೆಯು ನೀತಿ. ನ್ಯಾಯ, ವಿವೇಕವನ್ನು ಬಿಟ್ಟು ಎಂದೂ ಇರಬಾರದು. [೬] ಕೇವಲ ಸೂಚನೆ [ಕಣ್ಣು ಸನ್ನೆ]ಯಿಂದಲೇ ಮನುಷ್ಯನನ್ನು ಆಕರ್ಷಿತನನ್ನಾಗಿ ಮಾಡಿಕೊಳ್ಳುವ ಕಲೆ ಇರಬೇಕು. ಇವನು ನಿಮ್ಮ ಹತ್ತಿರ ಬಂದನೆಂದರೆ ಅವನಿಗೆ ಖರೇ ಜ್ಞಾನ ಹೇಳಿ ಜಾಣನನ್ನಾಗಿ ಮಾಡಬೇಕು. ಇದನ್ನು ಮಾಡುವಾಗ ಶಕ್ಯವಾದಷ್ಟು ಪ್ರಪಂಚವನ್ನೂ ಸಹ ಮಾಡಬೇಕು. [ನಡೆಸಬೇಕು] [೭] ಪ್ರಪಂಚದಲ್ಲಿ ಹೆಚ್ಚು ಕಡಿಮೆ ಪ್ರಸಂಗಗಳು ಬರುವವು. ಇದರ ಆಳವನ್ನು ತಿಳಿಯಬೇಕು. ನಿಮ್ಮಲ್ಲಿ ಬಹಳಷ್ಟು ಧೈರ್ಯವಿರಬೇಕು. ಆದರೆ ಪ್ರಪಂಚದ ಮರ್ಯಾದೆಗೆ ಮೀರಿ ಇರುವ ಸಂಬಂಧವನ್ನು ಹಚ್ಚಿಕೊಳ್ಳಬಾರದು. [೮] ನಿಮ್ಮ ಕಾರ್ಯದ ವ್ಯಾಪವನ್ನು ಹೆಚ್ಚಿಸಬೇಕು. ನಿಮ್ಮ ಕಾರ್ಯದ ಕ್ಷೇತ್ರವನ್ನು ಬೆಳೆಸಬೇಕು. ಆದರೆ ನೀವು ಅದರಲ್ಲಿ ಸಂಪೂರ್ಣ ಸಿಕ್ಕಿ ಹಾಕಿಕೊಳ್ಳಬೇಡಿರಿ. ಮನಸ್ಸಿನಿಂದ ಅದರಲ್ಲಿ ತೊಡಕಿಕೊಳ್ಳಬೇಡಿರಿ. ಪ್ರಾರಂಭದಿಂದಲೇ ನಾನು ಕಿರಿಯವ ಹಾಗೂ ಅಜ್ಞಾನಿ ಎಂಬ ಭಾವನೆ [ದೊಡ್ಡ ಜ್ಞಾನಿ ಎಂಬ ಅಹಂಕಾರಕ್ಕೆ ಎಡೆಗೊಡದಂತೆ] ಇರುವಂತೆ ನೋಡಿಕೊಳ್ಳಿರಿ. [೯] ಎರಡನೆಯುವರ ದೋಷ ಕಾಣುತ್ತದೆ. ಆದರೆ ಅದರ ಮೇಲೆ ಮುಸುಕೆಳೆಯಿರಿ. ದೋಷ ಬಯಲಿಗೆಳೆದು ಒಮ್ಮೆಲೇ [ಏಕದಂ] ಅಪಮಾನ ಮಾಡಬೇಡಿರಿ. ಇನ್ನೊಬ್ಬರ ಅವಗುಣಗಳನ್ನು ನಿಮ್ಮ ಬಾಯಿಯಿಂದ ಮಾತನಾಡಿ ತೋರಿಸಬೇಡಿರಿ. ದುರ್ಜನನೆಂದು ಕಂಡು ಬಂದರೆ ಅವನಿಗೆ ಶಕ್ಯವಾದಷ್ಟು ಉಪಕಾರ ಮಾಡಿರಿ. ಪ್ರತಿಫಲದ ಅಪೇಕ್ಷೆ ಬೇಡ. ಇದರಿಂದ ಅವನು ಉಪಕೃತನಾಗುವನು. ತನ್ನ ಕೆಲಸಕ್ಕೆ ನಾಚಿಕೆ ಪಟ್ಟುಕೊಳ್ಳುವನು. [ಸುಧಾರಿಸಿದವನೂ ಆಗಬಹುದು] [೧೦]

ತರ್ಹಿ ಭರೋಂಚ ನಯೆ । ಸುಚಾವೇ ನಾನಾ ಉಪಾಯೆ ।
ನಷ್ಟ ತೇ ಚಿ ಕರಾವೇ ಕಾರ್ಯೇ । ದೀರ್ಘ ಪ್ರೇತ್ನೇ ॥೧೧॥
ಘಡ ನಾಸೋ ಚಿ ನೇದಾವಾ । ಪಡಿಲಾ ಪ್ರಸಂಗ ಸಾವರಾವಾ ।
ಅತಿವಾದ ನ ಕರಾವಾ । ಕೋಣೇಯೆಕಾಸೀ ॥೧೨॥
ದುಸರ್‍ಯಾಚೇ ಅಭೀಷ್ಟ ಜಾಣಾವೇ । ಬಹುತಾಚೇ ಬಹುತ ಸೋಸಾವೇ ।
ನ ಸೋಸೇ ತರೀ ಜಾವೇ । ದಿಗಾಂತರಾ ಪ್ರತೀ ॥೧೩॥
ದುಃಖ ದುಸರ್‍ಯಾಚೇ ಜಾಣಾವೇ । ಐಕೋನ ತರೀ ವಾಟೋನ ಘ್ಯಾವೇ ।
ಬರೇ ವಾಈಟ ಸೋಸಾವೇ । ಸಮುದಾಯಾಚೇ ॥೧೪॥
ಅಪಾರ ಅಸಾವೇ ಪಾಠಾಂತರ । ಸನ್ನಿಧ ಚಿ ಅಸಾವಾ ವಿಚಾರ ।
ಸದಾ ಸರ್ವದಾ ತತ್ಪರ । ಪರೋಪಕಾರಾಸೀ ॥೧೫॥
ಶಾಂತೀ ಕರೂನ ಕರವಾವೀ । ತರ್ಹಿ ಸಾಂಡೂನ ಸಾಂಡವಾವೀ ।
ಕ್ರಿಯಾ ಕರೂನ ಕರವಾವೀ । ಬಹುತಾಕರವೀ ॥೧೬॥
ಕರಣೇ ಅಸೇಲ ಅಪಾಯೆ । ತರೀ ಬೋಲೋನ ದಾಖವೂ ನಯೆ ।
ಪರಸ್ಪರೇ ಚಿ ಪ್ರತ್ಯಯೇ । ಪ್ರಚಿತೀಸ ಆಣಾವಾ ॥೧೭॥
ಜೋ ಬಹುತಾಚೇ ಸೋಸೀನಾ । ತ್ಯಾಸ ಬಹುತ ಲೋಕ ಮಿಳೇನಾ ।
ಬಹುತ ಸೋಸಿತಾ ಉರೇನಾ । ಮಹತ್ವ ಆಪುಲೇ ॥೧೮॥
ರಾಜಕಾರಣ ಬಹುತ ಕರಾವೇ । ಪರಂತು ಕಳೋ ಚ ನೇದಾವೇ ।
ಪರಪೀಡೇವರೀ ನಸಾವೇ । ಅಂತಃಕರಣ ॥೧೯॥
ಲೋಕ ಪಾರಖೂನ ಸಾಂಡಾವೇ । ರಾಜಕಾರಣೇ ಅಭಿಮಾನ ಝಾಡಾವೇ ।
ಪುನ್ಹಾ ಮೇಳಊನ ಘ್ಯಾವೇ । ದುರೀಲ ದೋರೇ ॥೨೦॥
ಹಿರವಟಾಸೀ ದುರೀ ಧರಾವೇ । ಕಚರಟಾಸೀ ನ ಬೋಲಾವೇ ।
ಸಮಂಧ ಪಡತಾ ಸೋಡೂನ ಜಾವೇ । ಯೇಕೀಕಡೆ ॥೨೧॥
ಐಸೇ ಅಸೋ ರಾಜಕಾರಣ । ಸಾಂಗತಾ ತೇ ಅಸಾಧಾರಣ ।
ಸುಚಿತ ಅಸ್ತಾ ಅಂತಃಕರಣ । ರಾಜಕಾರಣ ಜಾಣೇ ॥೨೨॥

ಸುಮ್ಮ ಸುಮ್ಮನೇ ವಿಚಿತ್ರತನ, ಸಿಟ್ಟು ಸಿಡುಕುತನದಿಂದ ವರ್ತಿಸಬಾರದು. ಪ್ರಸಂಗ ಬಂದಾಗ ನಾನಾ ಪ್ರಕಾರದ ಉಪಾಯಗಳನ್ನು ಸೂಚಿಸಬೇಕು. ಯಾವುದಾದರೂ ಒಂದು ಕಾರ್ಯ ಆಗುವಂತಿದ್ದರೆ ಅದನ್ನು ದೀರ್ಘ ಪ್ರಯತ್ನ ಮಾಡಿ ಆಗುವಂತೆ ಮಾಡಬೇಕು. [೧೧] ಒಂದು ಕಾರ್ಯಕ್ಕಾಗಿ ಕೂಡಿದ ಜನಸಮೂಹವು [ಗ್ರುಪ್] ಭಂಗಗೊಳ್ಳದಂತೆ ಚಾಣಾಕ್ಷತನದಿಂದ ಕಾಳಜಿತೆಗೆದುಕೊಳ್ಳಿರಿ. ಕಠಿಣ ಪ್ರಸಂಗಬಂದರೆ ಧೈರ್ಯದಿಂದ ನಿಭಾಯಿಸಿಕೊಂಡು ಹೋಗಬೇಕು. ಯಾರೊಡನೆಯೂ ವಿನಾಕಾರಣವಾಗಿ[ಮರ್ಯಾದೆ ಮೀರಿ] ವಾದ ಮಾಡಬಾರದು [ವಾದಕ್ಕಿಳಿಯ ಬಾರದು].[೧೨]ಎರಡನೆಯವರ ಕಲ್ಯಾಣ ಯಾವುದರಲ್ಲಿದೆಯೆಂದು ಗುರುತಿಸಿ ಆ ಪ್ರಕಾರ ವರ್ತಿಸಬೇಕು.ಬಹುಜನರ ಸಲುವಾಗಿ ಬಹಳ ಕಷ್ಟ ಸೋಸಬೇಕು. ಇಂಥ ಕಷ್ಟ ಮಾಡಲಿಕ್ಕಾಗದಿದ್ದರೆ, ತಡೆದುಕೊಳ್ಳಲಿಕ್ಕೆ ಆಗದಿದ್ದರೆ ಪುಢಾರಿತನ ಬಿಟ್ಟುಕೊಟ್ಟು ಏಕಾಂತ ಸ್ಥಳಕ್ಕೆ ಹೊರಟು ಹೋಗಬೇಕು. ಅಲ್ಲಿ ಆತ್ಮಶಕ್ತಿ ಹೆಚ್ಚಿಸಿಕೊಳ್ಳಿರಿ. [೧೩] ಎರಡನೆಯವರ ದುಃಖವನ್ನು ಗುರುತಿಸಿ ಅವರಿಂದ ಕಾರಣ ಕೇಳಿರಿ, ಅದನ್ನು ಕೇಳಿ ಅದರಲ್ಲಿ ನೀವೂ ಪಾಲುಗೊಳ್ಳಿರಿ. ಸಮೂಹದಲ್ಲಿ ಅನುಭವಿಸಬೇಕಾಗುವ ಆ ಯಾವ ದುಃಖ ಇರುವದೋ ಅದು ಮತ್ತು ಭೋಗಿಸುವದಕ್ಕಾಗಿ ಆ ಯಾವುದೇ ವಸ್ತು ಇರಲಿ. ಅದರಲ್ಲಿ ನೀವು ಭಾಗೀದಾರರಾಗಬೇಕು. [ಅರ್ಥಾತ್ ಸಮುದಾಯದ ಸುಖ ದುಃಖದಲ್ಲಿ ಪಾಲುಗಾರರಾಗಬೇಕು] [೧೪] ಬಹಳಷ್ಟು ಪಾಠಾಂತರ ಮಾಡಬೇಕು. [ಮಾಡಿರಬೇಕು]. ಬಹಳಷ್ಟು ಗ್ರಂಥಗಳ ಅವಲೋಕನ ಮಾಡಬೇಕು. ಯಾವಾಗಲೂ ವಿವೇಕ ವಿಚಾರದಿಂದ ನಡೆಯುವದು ಮತ್ತು ವಿವೇಕಯುಕ್ತ ಕರ್ಮ ಮಾಡುವ ಸವಯ [ರೂಢಿ] ಇರಬೇಕು. ಪರೋಪಕಾರ ಮಾಡಲು ಸದಾಕಾಲ ಮನಸಾ ತಯಾರ ಇರಬೇಕು. [೧೫] ಎಂಥ ಕಠಿಣ ಪ್ರಸಂಗದಲ್ಲಿಯೂ ಸಹ ನೀವು ಶಾಂತರಾಗಿರಬೇಕು. ಮತ್ತು ಇತರರಿಗೂ ಶಾಂತರಾಗಿರಲು ತಿಳಿಸಿ ಹೇಳಬೇಕು. ನೀವು ಕ್ಷಣಕ್ಕೊಂದು ತರಹದ ವರ್ತನೆಯನ್ನು ಬಿಡಬೇಕು. ಮತ್ತು ಇತರರಿಗೂ ಬಿಡಲಿಕ್ಕೆ ಹೇಳಬೇಕು. ನೀವು ಕರ್ಮ ಮಾಡಿರಿ. ಮತ್ತು ಇತರರ ಕಡೆಯಿಂದ ಅದನ್ನು ಮಾಡಿಸಿರಿ. [೧೬] ಯಾವನೊಬ್ಬನಿಗೆ ಅಪಾಯ ಮಾಡುವದು ಇದ್ದರೆ ಅದರ ಬೊಬ್ಬಾಟ ಮಾಡದೇ ಇರಬೇಕು. ನೀವು ಅದರಲ್ಲಿ ಸಿಕ್ಕಿಕೊಳ್ಳದೇ ಪರಸ್ಪರ ಅಪ್ರತ್ಯಕ್ಷವಾಗಿ ಆಗುವಂತೆ ಮಾಡಬೇಕು. [೧೭] ಯಾರಿಗೆ ಬಹಳಷ್ಟು ಜನರ ದುಃಖಗಳನ್ನು ಸಹನ ಮಾಡಲಿಕ್ಕೆ ಆಗುವದಿಲ್ಲವೋ ಅವರ ಕಡೆಗೆ ಬಹುಜನ ಸಮುದಾಯ ಆಕರ್ಷಿತವಾಗುವದಿಲ್ಲ. ಆದರೆ ಎರಡನೆಯವರದನ್ನು ಎಷ್ಟು ಪ್ರಮಾಣದಲ್ಲಿ ನಾವು ವಹಿಸಬೇಕು, ಸಹಿಸಬೇಕು, ಅನ್ನುವದಕ್ಕೆ ಒಂದು ಪ್ರಮಾಣವಿರುವದು. (ಮಿತಿ ಇರುವದು). ಈ ಪ್ರಮಾಣಕ್ಕಿಂತ ಹೆಚ್ಚಿಗೆ ವಹಿಸುವದರಿಂದ ಗುಣ [ತಥ್ಯ] ಉಳಿಯುವದಿಲ್ಲ. ಯಾಕಂದರೆ ಆಮೇಲೆ ಇದರಿಂದಾಗಿ ನಿಮ್ಮ ಕಿಮ್ಮತ್ತು ಉಳಿಯುವದಿಲ್ಲ. [೧೮] ಲೋಕ ಸಂಗ್ರಹ ಆಗುವದಕ್ಕೆ ಅನೇಕ ಗುಪ್ತ ಕಾರ್ಯ ಮಾಡಬೇಕಾಗುವದು. ಅದನ್ನು ನೀವು ಮಾಡಬೇಕು. ಆದರೆ ಜನರಿಗೆ ತಿಳಿಯಗೊಡಬಾರದು. ಇನ್ನೊಬ್ಬರನ್ನು ವಿನಾಕಾರಣ ಛಳಿಸುವ ವಿಚಾರವನ್ನು ಸಹ ನೀವು ಮಾಡಬಾರದು. [೧೯] ಮನುಷ್ಯರ ಪರೀಕ್ಷೆ ಮಾಡಿ ಅವರನ್ನು ಬಾಜೂಕ್ಕೆ ಸರಿಸಬೇಕು. ಗರ್ವಿಷ್ಠ, ಅಭಿಮಾನಿ ಮನುಷ್ಯರ ಅಭಿಮಾನವನ್ನು ಬಹು ಚತುರತೆಯಿಂದ ಇಲ್ಲದಾಗಿಸಬೇಕು. ಇದೇ ಕಾರಣದಿಂದಾಗಿ ಅಂದರೆ ದುರಭಿಮಾನದಿಂದ ದೂರ ಸರಿದ ಜನರು ಪುನಃ ಸಮೂಹದಲ್ಲಿ ಒಂದುಗೂಡುವರು.[೨೦] ಶೀಘ್ರಕೋಪಿ, ಮತ್ತು ವಿವೇಕಹೀನ ಮನುಷ್ಯರನ್ನು ದೂರ ಇಡಬೇಕು. ಅಂಜುಬುರುಕ ಮತ್ತು ಮೈಗಳ್ಳ ಜನರ ಮುಂದೆ ನಿಮ್ಮ ರಹಸ್ಯದ ಗುಟ್ಟನ್ನು ಹೇಳಬೇಡಿರಿ. ಇಂಥ ಜನರ ಸಂಪರ್ಕ ಬಂದದ್ದಾದರೆ ನೀವು ಎರಡನೆಯ ಕಡೆಗೆ ಎದ್ದು ಹೋಗಿರಿ. [೨೧] ಇರಲಿ, ರಾಜಕಾರಣ ಅಂದರೆ ಲೋಕ ಸಂಗ್ರಹದ ಕೆಲಸವೆಂಬುದು ಅದು ಹೀಗೆ ಇರುವದು. ಇದರ ಸಮಗ್ರ ವರ್ಣನೆ ಮಾಡಲು ಶಕ್ಯವಿಲ್ಲ. ಯಾವನ ಚಿತ್ತ ಏಕಾಗ್ರಗೊಳ್ಳುವದೋ ಅಂಥವನಿಗೇ ಇದು ತಿಳಿಯುವದು. [೨೨]

ವೃಕ್ಷೀ ರೂಢಾಸೀ ಉಚಲಾವೇ । ಯುದ್ಧಕರ್ತ್ಯಾಸ ಢಕಲೂನ ದ್ಯಾವೇ ।
ಕಾರಬಾರಾಚೇ ಸಾಂಗಾವೇ । ಆಂಗ ಕೈಸೇ ॥೨೩॥

ಪಾಹಾತಾ ತರೀ ಸಾಪಡೇನಾ । ಕೀರ್ತಿ ಕರೂ ತರೀ ರಾಹೇನಾ ।
ಆಲೇ ವೈಭವ ಅಭಿಳಾಸೀನಾ । ಕಾಹೀ ಕೇಲ್ಯಾ ॥೨೪॥

ಯೇಕಾಚೀ ಪಾಠೀ ರಾಖಣೇ । ಯೇಕಾಸ ದೇಖೋ ನ ಸಕಣೇ ।
ಐಸೀ ನವ್ಹೇತ ಕೀ ಲಕ್ಷಣೇ । ಚಾತುರ್ಯಾಚೀ ॥೨೫॥

ನ್ಯಾಯ ಬೋಲತಾ ಹಿ ಮಾನೇನಾ । ಹಿತ ತೇ ಚಿ ನ ಯೇ ಮನಾ ।
ಯೇಥೇ ಕಾಹೀ ಚ ಚಾಲೇನಾ । ತ್ಯಾಗೇವಿಣ ॥೨೬॥

ಶ್ರೋತೀ ಕಳೋನ ಆಕ್ಷೇಪಿಲೇ । ವ್ಹಾಣೌನ ಬೋಲಿಲೇ ಚಿ ಬೋಲಿಲೇ ।
ನ್ಯೂನಪೂರ್ಣ ಕ್ಷಮಾ ಕೇಲೇ । ಪಾಹಿಜೆ ಶ್ರೋತೀ ॥೨೭॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯಸಂವಾದೇ
''ರಾಜಕಾರಣ ನಿರೂಪಣ'' ನಾಮ ಸಮಾಸ ಪಂಚಮ ॥

ತಮ್ಮ ಜೀವದ ರಕ್ಷಣೆಗಾಗಿ (ಬಚಾವಕ್ಕಾಗಿ) ಜನರು ಭಯದಿಂದ ಗಿಡವನ್ನೇರುವರು, ಅಲ್ಲಿ ಅಡಗಿ ಕೂಡುವರು. ಇಂಥ ಭಯಗ್ರಸ್ತ ಮತ್ತು ದುರ್ಬಲ ಜನ ಸಮಾಜದಲ್ಲಿಯೂ ಇರುವರು, ಇಂಥವರ ಸಹಾಯಕ್ಕಾಗಿ ನೀವು ಜರೂರ ಹೋಗಿರಿ. ಈ ದೀನ ದುರ್ಬಲರನ್ನು ಛಲಿಸುವಂಥವರು ಯಾರು ಇರುವರೋ ಆ (ಯುದ್ಧ ಮಾಡುವಂಥ) ಜನರನ್ನು ಓಡಿಸಿಬಿಡಿರಿ, ಇಂಥ ಪರೋಪಕಾರದ ವ್ಯವಹಾರಗಳ ಎಲ್ಲ ವರ್ಣನೆಯನ್ನು ಮಾಡಲು ಶಕ್ಯವಿಲ್ಲ. [೨೩] ಖರೇ ಲೋಕ ಸಂಗ್ರಹಿಯಾದ ನಿಃಸ್ವಾರ್ಥೀ ಪುರುಷನು ಕೆಲಸವಾದ ಕೂಡಲೇ ಬೇರೆ ಕಡೆಗೆ ಹೊರಟು ಹೋಗುವನು. ಅವನ ಶೋಧ ಮಾಡಿದರೂ ಅವನು ಸಿಗುವದಿಲ್ಲ. ಇಂಥವನ ಸನ್ಮಾನ ಮಾಡಬೇಕೆಂದರೂ ಅವನು ನಿಲ್ಲುವದಿಲ್ಲ. ಇಷ್ಟೇ ಅಲ್ಲ,ತಾನಾಗಿ ಬಂದ ವೈಭವದ ಅಭಿಲಾಷೆಯನ್ನು ಸಹ ಅವನು ಹಿಡಿಯುವದಿಲ್ಲ.(೨೪) ಒಬ್ಬನ ಬೆನ್ನ ಹಿಂದೆ ಎದ್ದು ನಿಂತುಕೊಂಡು ಅವನಿಗೆ ಸಂರಕ್ಷಣ ಕೊಡುವದು ಮತ್ತು ಅದರ ಜೊತೆಗೆ ಎರಡನೆಯವರ ಉತ್ಕರ್ಷವನ್ನು ಸಹನ ಮಾಡಿಕೊಳ್ಳದೇ ಇರುವದು ಇಂಥ ಮನೋವೃತ್ತಿ ಇರುವದೇನೂ ಚಾತುರ್ಯದ ಲಕ್ಷಣವೆನಿಸುವದಿಲ್ಲ. (೨೫) ಯಾವ ಮನುಷ್ಯನಿಗೆ ಯೋಗ್ಯವಾದದ್ದು ಮತ್ತು ನ್ಯಾಯವಾದದ್ದು ಯಾವುದು, ಇದನ್ನು ತಿಳಿಸಿ ಹೇಳಿದರೂ ಸಹ ತಿಳಿಯುವದಿಲ್ಲವೋ ಮತ್ತು ತನ್ನ ಕಲ್ಯಾಣ ಯಾವುದರಲ್ಲಿ ಇರುವದು, ಇದನ್ನು ಯಾವ ಮನುಷ್ಯನು ಮನಸ್ಸಿನ ಮೇಲೆ ತೆಗೆದುಕೊಳ್ಳುವದಿಲ್ಲವೋ ಅಂಥ ಮನುಷ್ಯನ ಮುಂದೆ ಉಪಾಯ ಯಾವದೂ ನಡೆಯುವದಿಲ್ಲ. ಅವನನ್ನು ಅವನಷ್ಟಕ್ಕೇ ಬಿಡುವದೊಂದೇ ಉತ್ತಮ ಮಾರ್ಗವಿರುವದು. (೨೬) ಶ್ರೋತಾ ಜನಕ್ಕೆ ಇದೆಲ್ಲ ಗೊತ್ತಿರುವದೇ ಆಗಿದೆ. ಆದರೂ ಶ್ರೋತಾ ಶಂಕಾ ಎತ್ತಿದ್ದರಿಂದ ಈಗ ಹಿಂದೆ ಹೇಳಿದ್ದನ್ನೇ ಪುನರಪಿ ಹೇಳಬೇಕಾಯಿತು.ಇದರಲ್ಲಿ ಏನಾದರೂ ಹೆಚ್ಚು ಕಡಿಮೆ ಆಗಿದ್ದರೆ ಅದರ ಬಗ್ಗೆ ಶ್ರೋತಾ ಜನ ಕ್ಷಮೆ ಮಾಡಬೇಕು[೨೭]

ಶ್ರೀ ದಾಸಬೋಧವಲ್ಲಿಯ ಗುರುಶಿಷ್ಯರ ಸಂವಾದದ ಹನ್ನೊಂದನೆಯ ದಶಕದೊಳಗಿನ
"ರಾಜಕಾರಣ ನಿರೂಪಣ"ವೆಂಬ ಐದನೆಯ ಸಮಾಸವು ಮುಗಿದುದು.

### ದಶಕ ಏಕಾದಶ : ಸಮಾಸ ಷಷ್ಠಮ : ಮಹಂತ ಲಕ್ಷಣ

॥ಶ್ರೀರಾಮ॥ ಶುದ್ಧ ನೇಟಕೇ ಲ್ಯಾಹಾವೇ । ಲೇಹೋನ ಶುದ್ಧ ಶೋಧಾವೇ ।
ಶೋಧೂನ ಶುದ್ಧ ವಾಚಾವೇ । ಚುಕೋ ನಯೆ ॥೧॥

ವಿಶ್ಕಳಿತ ಮಾತ್ರುಕಾ ನೇಮಸ್ತ ಕರಾವ್ಯಾ। ಧಾಟ್ಯಾ ಜಾಣೋನ ಸದೃಢ ಧರಾವ್ಯಾ।
ರಂಗ ರಾಖೋನ ಭರಾವ್ಯಾ । ನಾನಾ ಕಥಾ ॥೨॥

ಜಾಣಾಯಾಚೇ ಸಾಂಗತಾ ನ ಯೆ । ಸಾಂಗಾಯಾಚೇ ನೇಮಸ್ತ ನ ಯೆ ।
ಸಮಜಲ್ಯಾವಿಣ ಕಾಹೀ ಚ ನ ಯೆ । ಕೋಣೇಯೇಕ ॥೩॥

## ದಶಕ ೧೧. ಸಮಾಸ ೬. ಮಹಂತ ಲಕ್ಷಣ (ನುಡಿ ೧೯)

ಎಲ್ಲ ಪುಢಾರಿಗಳು ಲೋಕ ಸಂಗ್ರಹ ಮಾಡುವರೆಂಬುದು ನಿಜವಿರುವದು. ಆದರೆ ಸಮಾಜದಲ್ಲಿಯು ಪುಢಾರಿತನವು ಒಂದೇ ಪ್ರಕಾರದ್ದು ಇರುವದಿಲ್ಲ. ಪ್ರತಿಯೊಬ್ಬರ ಲೋಕಸಂಗ್ರಹವು ಭಿನ ಭಿನ್ನ ತರಹದ್ದಿರುವದು. ಉದಾ:– ರಾಜಕೀಯ ಪುಢಾರಿಗಳ ಲೋಕ ಸಂಗ್ರಹ ಬೇರೆ, ವಿಜ್ಞಾನ ಕ್ಷೇತ್ರದಲ್ಲಿಯು ಪುಢಾರಿ ಆಗಿದ್ದ ವಿಜ್ಞಾನ ಪಂಡಿತನ ಲೋಕ ಸಂಗ್ರಹ ಬೇರೆ, ಒಬ್ಬಾನೊಬ್ಬ ಧಾರ್ಮಿಕ ಪುಢಾರಿಯ ಲೋಕಸಂಗ್ರಹ ಬೇರೆ, ಕಲೆಯಲ್ಲಿ ಮುಂದಾಳುತ್ವ ಇರುವ ಒಬ್ಬ ಕಲಾವಂತನ ಲೋಕ ಸಂಗ್ರಹ ಬೇರೆ ಇರುವದು. ಶ್ರೀ ಸಮರ್ಥರ ಮಹಂತನು ಅಧ್ಯಾತ್ಮಿಕ ನಾಯಕನು ಇರುವನು. ಶ್ರೀರಾಮಚಂದ್ರ ಇವನ ಆದರ್ಶ ಪುರುಷನಿರುವನು. ಕಮಲವೊಂದು ಪರಿಪೂರ್ಣ ಅರಳಿದ ಮೇಲೆ ಎಲ್ಲ ದೃಷ್ಟಿಯಿಂದ ಅದು ಸುಂದರವಾಗಿ ಕಾಣುವದು. ಇದರಂತೆಯೇ ಮಹಂತನ ಜೀವನವು ಸರ್ವಾಂಗೀಣ ವಾಗಿ ಎಲ್ಲ ಅಂಶಗಳಿಂದ ವಿಕಸಿತಹೊಂದಿಸೌಂದರ್ಯದಿಂದ ತುಂಬಿದ್ದಾಗಿರಬೇಕು. ಇದು ಶ್ರೀಸಮರ್ಥರ ಖಚಿತ ಅಭಿಪ್ರಾಯ ವಿರುವದು. ನಿಃಸ್ವಾರ್ಥವಾದ ಪ್ರೇಮದಿಂದ ತುಂಬಿದ ಮಹಂತನು ಲೋಕದ ಜನರಿಗೆ ದೊಡ್ಡ ಆಧಾರವೆನಿಸುವನು. ಇಂಥ ಮಹಂತನು ಜನರನ್ನು ಎಲ್ಲ ಪ್ರಕಾರದಿಂದ ಬುದ್ಧಿವಂತರನ್ನಾಗಿ ಮಾಡಿ ಸನ್ಮಾರ್ಗದ ಮೇಲೆ ತಂದು ಬಿಡು ವನು, ಈ ಪ್ರಕಾರ ಲೋಕ ಕಲ್ಯಾಣ ಮಾಡಿ ಲೋಕದ ಜನರ ಖರೇ ಪ್ರೇಮ ಸಂಪಾದನ ಮಾಡಿದರೂ ತಾನು ಅಂತರಾತ್ಮನಂತೆ ಪುನಃ ಅಗದೀ ಅಲಿಪ್ತನಾಗಿ ಉಳಿಯುವನು. ಹೀಗೆ ಮಾಡುವದರಲ್ಲಿಯೇ ಅವನ ನಿಜವಾದ ದೊಡ್ಡಸ್ತಿಕೆ ಇರುವದು.

### ದಶಕ ೧೧. ಸಮಾಸ ೬. ಮಹಂತ ಲಕ್ಷಣ (ನುಡಿ ೧೯)

ಆಚಾರ, ವಿಚಾರ, ಉಚ್ಚಾರ, ಪ್ರಚಾರ, ವ್ಯವಹಾರ, ಮತ್ತು ಪರಮಾರ್ಥ ಈ ಆರೂ ಅಂಗದಿಂದ ಮಹಂತನ ವ್ಯಕ್ತಿತ್ವ ಚನ್ನಾಗಿ ವಿಕಸಿತವಾಗಿರಬೇಕು. ಅವನಲ್ಲಿ ಬೌದ್ಧಿಕ ಶ್ರೇಷ್ಠತೆ ಇರಬೇಕು. ಆ ಆ ಕಾಲದ ಪರಿಸ್ಥಿತಿಯ ಪ್ರಕಾರ ಅವನ ಲೇಖನ (ಬರವಣಿಗೆ), ವಾಚನ, ಮತ್ತು ಪಾಠಾಂತರ ಇವು ಶ್ರೇಷ್ಠ ದರ್ಜೆಯವಾಗಿರಬೇಕು. ಮಹಂತನಾದವನು ಶುದ್ಧವಾಗಿ ಬರೆಯಬೇಕು. ಅಚ್ಚುಕಟ್ಟಾಗಿ ಬರೆಯಬೇಕು. ಬರೆಯುವದು ಮುಗಿದ ಮೇಲೆ ಪುನಃ ಓದಿ ಅವರಲ್ಲಿಯ ಅಶುದ್ಧಗಳನ್ನು ಹುಡುಕಿ ತೆಗೆದು ಹಾಕಬೇಕು. ಇಷ್ಟೆಲ್ಲ ಆದ ಮೇಲೆ ಶುದ್ಧವಾಗಿದೆಯೇ ಎಂದು ಪುನಃ ಓದಬೇಕು. ಓದುವಾಗ ತಪ್ಪು ತಪ್ಪಾಗಿ ಓದಬಾರದು. (೧) ಹ್ರಸ್ವ, ದೀರ್ಘ, ತಲೆಕಟ್ಟು (ಕಾನಾಮಾತ್ರಾ) ಅನುಸ್ವಾರಾದಿಗಳು, ವ್ಯಾಕರಣ ದೋಷಗಳು ಆಗಿದ್ದರೆ (ಏನಾದರೂ ಹಿಂದು ಮುಂದಾಗಿದ್ದರೆ) ಅವನ್ನು ಅಲ್ಲಿಂದಲ್ಲಿಯೇ ಸರಿ ಮಾಡಬೇಕು. ಬರೆಯುವದಕ್ಕೆ ನೀವು ಯಾವ ಪದ್ಧತಿ ಒಮ್ಮೆ ಸ್ವೀಕರಿಸುವಿರೋ ಅದನ್ನೇ ಕೊನೆಯವರೆಗೆ ನಿಶ್ಚಯದಿಂದ ಕಾಯಂ ಇಡಬೇಕು. ಮಧ್ಯ ಮಧ್ಯದಲ್ಲಿ ಉತ್ತಮ ವರ್ಣನಾದಿಗಳನ್ನು ಕೊಟ್ಟು ಅನೇಕ ಉಪಮ (ಹೋಲಿಕೆ)ಗಳಿಂದ ಚಿತ್ರಿತ ಮಾಡಬೇಕು. (೨) ಮುಖ್ಯವಾಗಿ ಯಾವುದನ್ನು ತಿಳಿಸಿ ಹೇಳಬೇಕಾಗಿದೆಯೋ ಅವನ್ನು ಚನ್ನಾಗಿ ಹೇಳಲಿಕ್ಕೆ ಬರುವದಿಲ್ಲ. ಮತ್ತು ಯಾವುದನ್ನು ಹೇಳಬೇಕಾಗಿದೆಯೋ ಅದನ್ನು ಸರಿಯಾದ ರೀತಿಯಲ್ಲಿ ಸಾಧಾರವಾಗಿ ಇನ್ನೊಬ್ಬರಿಗೆ ಹೇಳಲಿಕ್ಕೆ ಬರುವದಿಲ್ಲ. ಮತ್ತು ಜನರಿಂದ ವಿಷಯವನ್ನು ಚನ್ನಾಗಿ ತಿಳಿದುಕೊಳ್ಳಲಿಕ್ಕೂ ಬರುವದಿಲ್ಲ. ಇಂಥ ಮನುಷ್ಯನು ಮಹಂತನೆಂದು ಅನ್ನಿಸಿಕೊಳ್ಳಲಾರನು. ಮಹಂತನಾಗಲಾರನು. (೩)

ಹರಿಕಥಾ ನಿರೂಪಣ । ನೇಮಸ್ತಪಣೇ ರಾಜಕಾರಣ ।
ವರ್ತಾಯಾಚೇ ಲಕ್ಷಣ । ತೇ ಹೀ ಅಸಾವೇ ॥೪॥

ಪುಸೋ ಜಾಣೇ ಸಾಂಗೋ ಜಾಣೇ । ಅರ್ಥಾಂತರ ಕರೂ ಜಾಣೇ ।
ಸಕಳಿಕಾಚೇ ರಾಖೋ ಜಾಣೇ । ಸಮಾಧಾನ ॥೫॥

ದೀರ್ಘ ಸೂಚನಾ ಆಧೀ ಕಳೇ । ಸಾವಧಪಣೇ ತರ್ಕ ಪ್ರಬಳೇ ।
ಜಾಣಜಾಣೋನಿ ನಿವಳೇ । ಯಥಾಯೋಗ್ಯ ॥೬॥

ಐಸಾ ಜಾಣೆ ಜೋ ಸಮಸ್ತ । ತೋ ಚಿ ಮಹಂತ ಬುದ್ಧಿವಂತ ।
ಯಾಮೇಗಳೇ ಅಂತವಂತ । ಸಕಳ ಕಾಹೀ ॥೭॥

ತಾಳಮೇಳ ತಾನಮಾನೇ । ಪ್ರಬಂದ ಕವಿತಾ ಜಾಡ ವಚನೇ ।
ಮಜ್ಯಾಲಸೀ ನಾನಾ ಚಿಹ್ನೇ । ಸುಚತೀ ಜಯಾ ॥೮॥

ಜೋ ಯೇಕಾಂತಾಸ ತತ್ಪರ । ಆಧೀ ಕರೀ ಪಾಠಾಂತರ ।
ಅಥವಾ ಶೋಧೀ ಅರ್ಥಾಂತರ । ಗ್ರಂಥಗರ್ಭೀಚೇ ॥೯॥

ಆಧೀಚ ಸಿಕೋನ ಜೋ ಸಿಕವೀ । ತೋ ಚಿ ಪಾವೆ ಶ್ರೇಷ್ಠ ಪದವೀ ।
ಗುಂತಲ್ಯಾ ಲೋಕಾಸ ಉಗವೀ । ವಿವೇಕಬಳೇ ॥೧೦॥

ಅಕ್ಷರ ಸುಂದರ ವಾಚಣೇ ಸುಂದರ । ಬೋಲಣೇ ಸುಂದರ ಚಾಲಣೇ ಸುಂದರ।
ಭಕ್ತಿ ಜ್ಞಾನ ವೈರಾಗ್ಯ ಸುಂದರ । ಕರೂನ ದಾವೀ ॥೧೧॥

ಜಯಾಸ ಯೆತ್ನ ಚಿ ಆವಡೆ । ನಾನಾ ಪ್ರಸಂಗೀ ಪವಾಡೆ ।
ಧೀಟಪಣೇ ಪ್ರಗಟೆ ದಡೆ । ಐಸಾ ನವ್ಹೆ ॥೧೨॥

ಸಾಂಕಡೀ ಮಧೇ ವರ್ತೋ ಜಾಣೇ । ಉಪಾಧೀ ಮಧೇ ಮಿಳೋ ಜಾಣೇ ।
ಅಲಿಪ್ತಪಣೇ ರಾಖೋ ಜಾಣೇ । ಆಪಣಾಸೀ ॥೧೩॥

ಆಹೆ ತರೀ ಸರ್ವಾಠಾಈ । ಪಾಹೋ ಜಾತಾ ಕೋಠೇಚಿ ನಾಹೀ ।
ಜೈಸಾ ಅಂತರಾತ್ಮಾ ಠಾಈಚಾ ಠಾಈ । ಗುಪ್ತ ಜಾಲಾ ॥೧೪॥

ಆತ್ಮಜ್ಞಾನದ ವಿಚಾರ, ತಕ್ಕಮಟ್ಟಿಗೆ (ಅವಶ್ಯವಿರುವಷ್ಟು) ರಾಜಕಾರಣ, ನಾಲ್ಕುಜನರಲ್ಲಿಹೇಗೆ ನಡೆಯಬೇಕೆಂಬ ತಿಳುವಳಿಕೆ ಈ ಎಲ್ಲ ಮಾತುಗಳು ಮಹಂತನಲ್ಲಿ ಅವಶ್ಯವಾಗಿ ಇರಬೇಕು. (೪)ಯಾರಿಗೆ ಯಾವುದನ್ನು ವಿಚಾರಿಸಬೇಕು, ಕೇಳಬೇಕು, ಯಾರಿಗೆ ಯಾವುದನ್ನು ಹೇಳಬೇಕು. ಮತ್ತು ಗ್ರಂಥದ ಸರಿಯಾದ ಅರ್ಥವನ್ನು ಹೇಗೆ ತೆಗೆಯಬೇಕು, ಇದೆಲ್ಲವನ್ನು ಮಹಂತನು ತಿಳಿದವನಾಗಿರುವನು. ಎಲ್ಲರನ್ನು ಸಮಾಧಾನವಾಗಿಡುವದು ಹೇಗೆ? ಇದೂ ಸಹ ಇವನಿಗೆ ತಿಳಿದಿರುವದು.(೫)ಮುಂದಾಗುವ ಘಟನೆಗಳು ಹೇಗೆ ಘಟಿಸುವವು.ಇದರ ಅಂದಾಜು ಮಹಂತನಾದವನಿಗೆ ಮೊದಲಿಗೇ ಗೊತ್ತಾಗುವದು.ಎಲ್ಲ ಮಾತಿನ ಕಡೆಗೂ ಕಾರ್ಯದ ಕಡೆಗೂ ಇವನ ಲಕ್ಷ್ಯ ಇರುವದರಿಂದ ಇವನ ವಿಚಾರಗಳು ಶ್ರೇಷ್ಠ ಹಾಗೂ ಪ್ರಬಲವಿರುವವು. ಪುನಃ ಪುನಃ ತಿಳಿದುಕೊಳ್ಳುವದರಿಂದ ಎಲ್ಲವೂ ಇವನಿಗೆ ಪೂರ್ಣ ಸ್ವಚ್ಛವಾಗಿ ತೋರಿ ಬರುವವು. [೬] ಈ ಪ್ರಕಾರದಿಂದ ಯಾವನು ಎಲ್ಲ ಕಾರ್ಯಗಳನ್ನು ತಿಳಿಯುವನೋ ಅವನೇ ಖರೇ ಬುದ್ಧಿವಂತನಾದ ಮಹಂತನೆಂದು ತಿಳಿಯಬೇಕು. ಇಂಥ ಮಹಂತರ ಹೊರತಾಗಿ ಬಾಕೀ ಉಳಿದವೆಲ್ಲವೂ ಉಪಯೋಗವಿಲ್ಲದ ಗೊಳ್ಳೇ ಸರಿ. ಅರ್ಥಾತ್ ಇವೆಲ್ಲ ವಿನಾಶವಂತವೆನಿಸುವವು. [೭] ಸಮಯಾಸಮಯಪ್ರಜ್ಞೆ [ಪರಿಸ್ಥಿತಿಯ ಅಂದಾಜ ಕಟ್ಟುವಿಕೆ) ವೇಳೆಯ ಮಹತ್ವ, ತಾಳ, ಮಾತ್ರಾ, ಹಾವಭಾವ, ಪ್ರಬಂಧ, ಗ್ರಂಥ, ಕಾವ್ಯ, ಮಹತ್ವದ ವಚನ (ನುಡಿ, ಶ್ಲೋಕಾದಿಗಳು) ಸಭಾ ಧೈರ್ಯ, ಸಭಾರಂಗಿನ ಕುಶಲತೆ ಇತ್ಯಾದಿಗಳು ಮಹಂತನಾದವನಿಗೆ ಪ್ರಸಂಗಾನುಸಾರ ಹೊಳೆಯುವವು. ಇವನಿಗೆ ಎಲ್ಲ ಗೊತ್ತಿರುವವು. (೮) ಇವನಿಗೆ ಏಕಾಂತವು ಮನಸಾ ಪ್ರೀತಿಯದಾಗಿರುವದು. ಇವನು ಸ್ವತಃ ಮೊದಲು ಪಾಠಾಂತರ, ಸ್ವಾಧ್ಯಾಯ ಮಾಡುವನು. ಅಥವಾ ಗ್ರಂಥದ ಅಂತರಂಗದಲ್ಲಿ ಹೊಕ್ಕು ಅದರೊಳಗಿನ ಆಳವಾದ ಅರ್ಥವನ್ನು ಶೋಧಿಸಿ ತೆಗೆಯುವನು. (೯) ಯಾವುದೊಂದನ್ನೂ ಇವನು ಮೊದಲಿಗೆ ಸ್ವತಃ ಅಭ್ಯಾಸ ಮಾಡಿ ತಿಳಿದು ಅನಂತರ ಇತರರಿಗೆ ಅದನ್ನು ಕಲಿಸುವನು. (ಹೇಳುವನು). ಆದ್ದರಿಂದ ಇವನಿಗೆ ಶ್ರೇಷ್ಠ ಪದವಿ ಪ್ರಾಪ್ತವಾಗುವದು. ಅಡಚಣೆಯಲ್ಲಿ ಸಿಕ್ಕು ತೊಳಲುವ ಜನರನ್ನು ಇವನು ವಿವೇಕ ಬಲದಿಂದ ಎತ್ತಿ ಹಿಡಿಯುವನು. ಪ್ರಪಂಚದಲ್ಲಿ ತೊಡಕಿಕೊಂಡ ಜನರನ್ನು ಆತ್ಮಾನಾತ್ಮ ವಿವೇಕವನ್ನು ತಿಳಿಸಿ(ಕಲಿಸಿ) ಪ್ರಪಂಚಾಸಕ್ತರನ್ನು ನಿರಾಸಕ್ತರನ್ನಾಗಿ ಮಾಡುವವನು ಮಹಂತನೇ ಆಗಿರುವನು. [೧೦] ಹೇಗೆ ಇವನ ಅಕ್ಷರಗಳು ಸುಂದರವಿರುವವೋ ಅದೇ ರೀತಿಯಲ್ಲಿ ಓದುವದೂ ಸುಂದರವಿರುವದು. ಮತ್ತು ಹೇಗೆ ಇವನ ಮಾತುಗಳು ಮುತ್ತಿನಂತೆ ಸುಂದರವಿರುವವೋ ಇದರಂತೆ ಇವನ ನಡೆ ನುಡಿಗಳೂ ಸುಂದರವಿರುವವು. ಇಷ್ಟಲ್ಲದೇ ಇನ್ನೂ ಹೆಚ್ಚಿನದಾದ ಭಕ್ತಿ, ಜ್ಞಾನ, ವೈರಾಗ್ಯ ಇತ್ಯಾದಿ ಯಾವತ್ತನ್ನೂ ಇವನು ಅತಿ ಸುಂದರವಾಗಿ ಮಾಡಿ ತೋರಿಸುವನು [೧೧] ಇವನಿಗೆ ಪ್ರಯತ್ನ ಪಡುವಲ್ಲಿ ಬಹಳ ಆಸಕ್ತಿ ಪ್ರೇಮವಿರುವದು. ಅನೇಕ ಪ್ರಕಾರದ ಪ್ರಸಂಗದಲ್ಲಿ ಇವನ ದೊಡ್ಡಸ್ತಿಕೆ ಕಂಡು ಬರುವದು. ಯಾವುದೇ ಪ್ರಸಂಗ ಬಂದರೂ ಇವನು ಧೈರ್ಯದಿಂದ ಎದುರಿಸುವನು. ಪ್ರಸಂಗ ನೋಡಿಕೊಂಡು ಪಲಾಯನ ಮಾಡುವವನು ಇವನಾಗಿರುವದಿಲ್ಲ. [೧೨] ಸಂಕಟ ಕಾಲದಲ್ಲಿ ಹೇಗೆ ನಡೆಯಬೇಕೆಂಬುದನ್ನು ಇವನು ತಿಳಿದಿರುವನು. ಅನೇಕ [ಸಾರ್ವಜನಿಕ ಮತ್ತು ಇತರ] ವ್ಯಾಪಗಳಲ್ಲಿ ಹೇಗೆ ಮತ್ತು ಎಷ್ಟು ಪ್ರಮಾಣದಲ್ಲಿ ಸಮರಸರಾಗಿ ಭಾಗವಹಿಸಬೇಕೆಂದು ಇವನಿಗೆ ಗೊತ್ತಿರುವದು. ಆದರೆ ಇವೆಲ್ಲವುಗಳಿಂದ ತನ್ನ ಅಲಿಪ್ತತನವನ್ನು ಹೇಗೆ ಸಂಭಾಳಿಸಿಕೊಳ್ಳಬೇಕೆಂಬುದನ್ನೂ ಸಹ ಇವನು ಚನ್ನಾಗಿ ತಿಳಿದಿರುವನು. [೧೩] ಅಂತರಾತ್ಮಾದಂತೆ ಮಹಂತನ ಅಲಿಪ್ತತೆ ಇರುವದು. ಅಂತರಾತ್ಮಾ ಸರ್ವತ್ರದಲ್ಲಿ ವಾಸ ಮಾಡುವನು. ಆದರೆ ನೋಡಬೇಕೆಂದರೆ ಅವನು ಎಲ್ಲಿಯೂ ಸಿಗುವದಿಲ್ಲ (ಕಾಣುವದಿಲ್ಲ). ಇವನು ಇದ್ದಲ್ಲಿಯೇ ಇದ್ದಂತೆ ಗುಪ್ತವಾಗುವನು. ಇದರಂತೆಯೇ ಮಹಂತನು ಸರ್ವದರಲ್ಲಿಯೂ ಭಾಗಿಯಾಗಿದ್ದು ನೋಡ ಹೋದರೆ ಅವನು ಒಮ್ಮೆಲೇ ಇಲ್ಲದಾಗಿ ಬಿಟ್ಟಿರುತ್ತಾನೆ. ಅವನು ಏಕಾಂತಕ್ಕಾಗಿ (ಗುಪ್ತವಾಗಿ) ಹೋಗಿ ಬಿಡುವನು. [೧೪]

ತ್ಯಾವೇಗಳೇ ಕಾಹೀ ಚ ನಸೆ। ಪಾಹೋ ಜಾತಾ ತೋ ನ ದಿಸೆ।
ನ ದಿಸೋನ ವರ್ತವೀತಸೆ। ಪ್ರಾಣಿ ಮಾತ್ರಾಸೀ ॥೧೫॥

ತೈಸಾ ಚ ಹಾ ಹೀ ನಾನಾಪರೀ। ಬಹುತ ಜನಾಸ ಶಾಹಾಣೇ ಕರೀ।
ನಾನಾ ವಿದ್ಯಾ ತ್ಯಾ ವಿವರೀ। ಸ್ಥೂಳ ಸೂಕ್ಷ್ಮಾ ॥೧೬॥

ಆಪಣಾಕರಿತಾ ಶಾಹಾಣೆ ಹೋತೀ। ತೇ ಸಹಜ ಚಿ ಸೋಯೆ ಧರಿತೀ।
ಜಾಣತೆಪಣಾಚೀ ಮಹಂತೀ। ಐಸೀ ಅಸೆ ॥೧೭॥

ರಾಖೋ ಜಾಣೇ ನೀತಿನ್ಯಾಯು। ನ ಕರೀ ನ ಕರವೀ ಅನ್ಯಾಯು।
ಕಠೀಣ ಪ್ರಸಂಗೀ ಉಪಾಯು। ಕರೂ ಜಾಣೇ ॥೧೮॥

ಐಸಾ ಪುರುಷ ಧಾರಣೇಚಾ। ತೋ ಚಿ ಆಧಾರ ಬಹುತಾಂಚಾ।
ದಾಸ ಮ್ಹಣೇ ರಘುನಾಥಾಚಾ। ಗುಣ ಘ್ಯಾವಾ ॥೧೯॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ಮಹಂತ ಲಕ್ಷಣ' ನಾಮ ಸಮಾಸ ಷಷ್ಟಮ ॥

ಅಂತರಾತ್ಮನಿಲ್ಲದೆ ಯಾರೂ ಇರಲಿಕ್ಕೆ ಶಕ್ಯವಿಲ್ಲ. ಇವನನ್ನು ನೋಡಬೇಕೆಂದರೆ ಕಾಣುವದಿಲ್ಲ. ಆದರೆ ಕಾಣದಿದ್ದರೂ ಎಲ್ಲ ಜೀವಗಳಲ್ಲಿ ಇವನು ಹಾಲಚಾಲ ಮಾಡಿಸಲಿಕ್ಕೆ ಸಮರ್ಥನಿರುವನು. ಇದೇ ಪ್ರಕಾರ ಸಮಾಜ ದಲ್ಲಿಯ ಅನೇಕ ಚಳುವಳಿಗಳಿಗೆ ಮಹಂತನು ಪ್ರೇರಣೆ ಕೊಡುವನು. ಇವುಗಳ ಸೂತ್ರಧಾರಕನೂ ಇವನೇ ಇರುವನು. ಆದರೆ ಇವನನ್ನು ಪ್ರತ್ಯಕ್ಷ ನೋಡಬೇಕೆಂದು ಹೋದರೆ ಅವನು ಅದರಲ್ಲಿ ಇರುವದಿಲ್ಲ. ಇದೇ ಅವನಲ್ಲಿಯ ಖರೇ ಅಲಿಪ್ತತನವಿರುವದು. [೧೫] ಅಲಿಪ್ತವಿರುವ ಅಂತರಾತ್ಮದಂತೆ ಮಹಂತನೂ ಪುಷ್ಕಳ ಜನರಿಗೆ ನಾನಾ ಪ್ರಕಾರದ ಜಾಣತನವನ್ನು ಕಲಿಸುವನು. ಸ್ಥೂಲ, ಸೂಕ್ಷ್ಮ, ಇಂಥ ಅನೇಕಪ್ರಕಾರದ ವಿದ್ಯಾ ಪ್ರದಾನ ಮಾಡುವನು. ದೃಶ್ಯದ ಜ್ಞಾನ ಪಡೆಯುವ ವಿದ್ಯೆಯು ಇದು ಸ್ಥೂಲವಾದರೆ ಅದೇ ಅದೃಶ್ಯ ಭಗವಂತನ ಜ್ಞಾನ ಕೊಡುವ ವಿದ್ಯೆ, ಇದು ಸೂಕ್ಷ್ಮ ಅಂತಾ ತಿಳಿಯಬೇಕು, ಖರೇ ಮಹಂತನಲ್ಲಿ ಇವೆರಡೂ ಒಟ್ಟಿಗೇ ಇರುವವು. [೧೬] ಮಹಂತನಾದವನು ಯಾವ ಜನಕ್ಕೆ ವಿದ್ಯೆ ಕಲಿಸಿ ಜಾಣರನ್ನಾಗಿ ಮಾಡುವನೋ ಆ ಜನರು ಆ ಮಹಂತನಿಗೆ ಸಂಪೂರ್ಣವಾಗಿ ವಶವಾಗಿ ರುವರು. ಅವನೊಂದಿಗೆ ಕೃತಜ್ಞತಾತನದಿಂದ ನಡೆದುಕೊಳ್ಳುವರು. ಇದು ಸಹಜವಾದದ್ದೇ ಇರುವದು. ತಿಳುವಳಿಕೆ ಯಿಂದ, ವಿವೇಕಯುಕ್ತ ಜ್ಞಾನದಿಂದ ಮಾಡಿರುವದೆಲ್ಲ ಖರೇ ಮಹಂತಗಿರಿಯು ಪ್ರಭಾವವಾಗಿರುವದು. [೧೭] ಖರೇ ಮಹಂತನು ನೀತಿಯು ಮತ್ತು ನ್ಯಾಯದ ರಕ್ಷಣೆಯನ್ನು ಮಾಡುವನು. ಸ್ವತಃ ಎಂದೂ(ತಪ್ಪಿಯೂ ಕೂಡಾ) ಅನೀತಿ ಮತ್ತು ಅನ್ಯಾಯವನ್ನು ಇವನು ಮಾಡುವದಿಲ್ಲ. ಮತ್ತು ಇತರರ ಕಡೆಯಿಂದ ಎಂದೂ ಮಾಡಿಸುವದಿಲ್ಲ. ಕಠಿಣ ಪ್ರಸಂಗಬಂದದ್ದಾದರೆ ಅದರೊಳಗಿಂದ ಪಾರಾಗುವಂಥ ಉಪಾಯವನ್ನು ಇವನು ಹುಡುಕಿ ತೆಗೆಯುವನು[೧೮] ಇಂಥ ಮನೋಬಲದ ಪುರುಷನು ಯಾವನಿರುವನೋ ಅವನಿಂದ ಪುಷ್ಕಳ ಜನರಿಗೆ ಆಧಾರವಿರುವದು. ಶ್ರೀ ರಾಮ ದಾಸರು ಏನನ್ನುತ್ತಾರೆಂದರೆ, ಶ್ರೀ ರಾಮಚಂದ್ರನಲ್ಲಿ ಮೇಲೆ ಹೇಳಿದ ಗುಣಗಳೆಲ್ಲ ಇರುವವು. ಇವನನ್ನು ಮಹಂತನು ಅವಶ್ಯವಾಗಿ ಸ್ವೀಕರಿಸಬೇಕು. [೧೯]

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಹನ್ನೊಂದನೆಯ ದಶಕದ
"ಮಹಂತ ಲಕ್ಷಣ"ವೆಂಬ ಆರನೆಯ ಸಮಾಸವು ಮುಗಿದುದು.

● ●

### ದಶಕ ಏಕಾದಶ : ಸಮಾಸ ಸಪ್ತಮ : ಚಂಚಳ ನದೀ

॥ಶ್ರೀರಾಮ॥ ಚಂಚಳ ನದೀ ಗುಪ್ತ ಗಂಗಾ । ಸ್ಮರಣೇ ಪಾವನ ಕರೀ ಜಗಾ ।
ಪ್ರಚೀತ ರೋಕಡೀ ಪಾಹಾ ಗಾ। ಅನ್ಯಥಾ ನವ್ಹೆ ॥೧॥
ಕೇವಳ ಅಚಂಚಳೀ ನಿರ್ಮಾಣ ಜಾಲೀ । ಅಧೋಮುಖೇ ಬಳೇ ಚಾಲಿಲೀ ।
ಅಖಂಡ ವಾಹೆ ಪರೀ ದೇಖಿಲೀ । ನಾಹೀ ಚ ಕೋಣೇ ॥೨॥

## ದಶಕ ೧೧. ಸಮಾಸ ೭. ಚಂಚಳ ನದೀ (ನುಡಿ ೨೨)

ಈ ಸಮಾಸದಲ್ಲಿ ಶ್ರೀಸಮರ್ಥರು ಮೂಲಮಾಯೆಯನ್ನು ಬಹು ದೊಡ್ಡ ನದಿಗೆ ಹೋಲಿಸಿ ಸುರಸ ರೂಪಕ 'ರಚಿಸಿದ್ದಾರೆ. ಮೂಲಮಾಯೆಯು ಚಂಚಲಮತ್ತು ವಾಸನಾಮಯ ಇದ್ದುದರಿಂದ ಇವಳು ಹರಿಯುವ ನದಿ ಯಂತಿರುವಳು. ಪರಬ್ರಹ್ಮನ ಅನಂತ ಶಕ್ತಿಗಳ ಪೈಕಿ ಇವಳೊಬ್ಬಳು ವಿಲಕ್ಷಣ ಶಕ್ತಿಯುಳ್ಳವಳಿರುವಳು.ಇವಳ ಮೂಲ ಸ್ವರೂಪ ಅತ್ಯಂತ ಸೂಕ್ಷ್ಮ, ನಿರ್ಮಲ, ಸರ್ವವ್ಯಾಪಿ ಮತ್ತು ಬ್ರಹ್ಮನಷ್ಟೇ ಪವಿತ್ರವಿರುವದು. ಆದ್ದರಿಂದ ಇವಳ ಸ್ಮರಣ ಮಾತ್ರದಿಂದ ಜಗತ್ತೂ ಸಹ ಪವಿತ್ರವಾಗಿ ಹೋಗುವದು. ಆದರೆ ಯಾವತ್ತೂ ವಿಶ್ವವನ್ನು ನಡೆಯಿಸುವ ಈ ಸೂಕ್ಷ್ಮ ಶಕ್ತಿಯನ್ನು ಬೇರೆತನದಿಂದ ನೋಡ ಹೋದರೆ ಯಾರಿಗೂ ಕಾಣಿಸುವದಿಲ್ಲ. ಸೂಕ್ಷ್ಮದ ಕಡೆಯಿಂದ ಸ್ಥೂಲದ ಕಡೆಗೆ ಇವಳ ಪ್ರವಾಹ ಹರಿಯುತ್ತ ಹೋಗುವದು. ಜಗತ್ತಿನಲ್ಲಿ ವ್ಯವಹರಿಸುವ ಪ್ರತಿಯೊಂದು ಜೀವ ಪ್ರಾಣಿಗಳಲ್ಲಿ ಇವಳೇ ಕಾರ್ಯ ಮಾಡುವಳು. ಪ್ರಾಣಿಗಳಲ್ಲಿಯ ಸತ್ವ,ರಜ, ತಮಾದಿ ಗುಣಗಳಂತೆ ಸೌಮ್ಯ, ಉಗ್ರ, ಕ್ರೂರ ಅಥವಾ ಪ್ರೇಮಳವಾದ ವ್ಯಕ್ತರೂಪವನ್ನು ಧಾರಣ ಮಾಡಿ ಇವಳು ವ್ಯಕ್ತರೂಪಕ್ಕೆ ಬರುವಳು. ಇವಳ ಸಾಮರ್ಥ್ಯಕ್ಕೆ ಅಂತವೇ ಇಲ್ಲ. ಮನುಷ್ಯರಲ್ಲಿ ಇವಳು ವೃತ್ತಿರೂಪದಲ್ಲಿ (ಮನದಸ್ಥಿತಿ, ಭಾವನೆಯಲ್ಲಿ) ಕಂಡು ಬರುವಳು. ಸಾಮಾನ್ಯ ಮನುಷ್ಯರ ವೃತ್ತಿ ಸ್ಥೂಲದ ಕಡೆಗೆ ಓಡುತ್ತದೆ. ಆದ್ದರಿಂದ ಬಹು ಜನತೆಯು ಇವಳ ಪ್ರವಾಹದ ಸೆಳೆತದಲ್ಲಿ ತೇಲಿ ಹೋಗುವರು ಅಥವಾ ಕಾಣದಾಗಿ ಹೋಗುವರು. ಕೆಲವೇ ಕೆಲವು. ಅತಿ ಸ್ವಲ್ಪ ಜನರು ಸ್ಥೂಲದ ಕಡೆಗೆ ಹರಿದೋಡುವ ತಮ್ಮ ವೃತ್ತಿಯನ್ನು ಉಲಟಾಯಿಸುವರು [ತಿರುಗಿಸುವರು] ಮತ್ತು ಸೂಕ್ಷ್ಮದ ಕಡೆಗೆ ಹೆಚ್ಚು ಹೆಚ್ಚು ಪ್ರಮಾಣದಲ್ಲಿ ಈಸುವರು. ಆದರಲ್ಲಿ ಸೇರುವರು ಹಾದಿಯಲ್ಲಿ ಬ್ರಹ್ಮಲೋಕ ಹತ್ತುವದು (ಇನ್ನೂ ಅನೇಕ ಹತ್ತುವವು). ಇದನ್ನೂ ದಾಟಿ ಇವರು ಮುಂದೆ ಅಂದರೆ ಉಗಮದವರೆಗೆ ಹೋಗಿ ಮುಟ್ಟುವರು. ಆಗ ಅಲ್ಲಿ ಇವರಿಗೆ ಮೂಲಮಾಯೆಯ ಅತ್ಯಂತ ಶುದ್ಧ ಸ್ವರೂಪ ಅನುಭವಕ್ಕೆ ಬರುವದು. "ನಾನು ಬ್ರಹ್ಮವಿರುವೆನು" ಇದೇ ಆ ಅನುಭವವಿರುವದು. ಈ ಅನುಭವದ ಆಚೆಗೆ (ಇದಕ್ಕಿಂತ ಮುಂದೆ) ಹೋದ ಮೇಲೆ ವೃತ್ತಿಯು ಇಲ್ಲದಂತಾಗಿಯೇ ಹೋಗುವದು. ಬ್ರಹ್ಮದೊಂದಿಗೆ ತದಾಕಾರ (ಏಕರೂಪ) ಆದದ್ದರಿಂದ ಮೂಲ ಮಾಯೆಯು ಅಂತರ್ಧಾನ ಹೊಂದುವದು. ಅಂತೆಯೇ ಈ ನದಿಯ ಉಗಮದ ಆಚೆಗೆ ಹೋಗಿ ನೋಡಿದರೆ ಅಲ್ಲಿ ನದಿ ಇಲ್ಲವೇ ಇಲ್ಲ, ಅನ್ನುವದು ಅನುಭವ ಬರುವದು. ಈ ಅನುಭವ ಹೊಂದಿದ ಶ್ರೇಷ್ಠ ಪುರುಷನಿಗೆ ವೃತ್ತಿ ಶೂನ್ಯ-ಯೋಗೇಶ್ವರ ಅನ್ನುವ ಹೆಸರನ್ನು ಶ್ರೀಸಮರ್ಥರು ಕೊಟ್ಟಿರುವರು.

### ದಶಕ ೧೧. ಸಮಾಸ ೭. ಚಂಚಳ ನದೀ (ನುಡಿ ೨೨)

ಮೂಲಮಾಯಾ ಇದು ಒಂದು ಸೂಕ್ಷ್ಮದ ಕಡೆಯಿಂದ ಸ್ಥೂಲದ ಕಡೆಗೆ ಅತೀಂದ್ರಿಯ ಬ್ರಹ್ಮದಿಂದ ದೃಶ್ಯ (ತೋರುವ) ವಿಶ್ವದ ಕಡೆಗೆ ಹರಿಯುವ ನದಿ ಇರುವದು:- ಮೂಲ ಮಾಯೆಯು ಹರಿಯುವ ಒಂದು ನದಿಯಾಗಿರುವಳು. ಇವಳೊಂದು ಅದೃಶ್ಯ ಗಂಗೆಯಂತಿರುವಳು. ಇವಳ ಸ್ಮರಣೆ ಮಾಡಿದ್ದಾದರೆ ಮನುಷ್ಯನು ಪವಿತ್ರನಾಗುವನು. ಉದ್ಧಾರ ಹೊಂದುವನು. ಈ ಮಾತು ಎಳ್ಳಷ್ಟೂ ಸುಳ್ಳಲ್ಲ. ಇದರ ಪ್ರತ್ಯಕ್ಷ ಸ್ವತಃ ಸಿದ್ಧ (ರೋಖಡಿ) ಅನುಭವ ತೆಗೆದುಕೊಂಡು ನೋಡಬೇಕು. (೧) ಈ ನದಿಯು ನಿಶ್ಚಲ ಬ್ರಹ್ಮರೂಪ ಪರ್ವತದಲ್ಲಿಂದ ಉಗಮ ಹೊಂದಿರುವದು. ಕೆಳಮುಖ ಮಾಡಿ ಇದು ರಭಸ (ಜೋರಿನಿಂದ) ದಿಂದ ಹರಿಯುವದು. ಸೂಕ್ಷ್ಮ ಮತ್ತು ಅದೃಶ್ಯ ಬ್ರಹ್ಮನಿಂದ ಸ್ಥೂಲ ಮತ್ತು ದೃಶ್ಯ ವಿಶ್ವದ ಕಡೆಗೆ ಇದರ ಪ್ರವಾಹ ಹರಿಯುತ್ತ ಹೋಗುತ್ತದೆ. ಇದು ಅಖಂಡವಾಗಿ ಹರಿಯುತ್ತಿದ್ದರೂ ಸಹ ಇನ್ನೂವರೆಗೆ ಯಾರೂ ಇದನ್ನು ನೋಡಿಲ್ಲ. ವಿಶ್ವವನ್ನೇ ನಡೆಸುವ ಈ ಶಕ್ತಿಗೆ ವಿಶ್ರಾಂತಿಯೆಂಬುದೇ ಇಲ್ಲ. ಆದರೆ ಇವಳ ಕಾರ್ಯವಷ್ಟೇ ನಮ್ಮ ದೃಷ್ಟಿಗೆ ಬೀಳುವದು. ಇವಳ ಮೂಲ ಸ್ವರೂಪ ನಮ್ಮ ಅನುಭವಕ್ಕೆ ಬರುವದಿಲ್ಲ. (೨)

ವಳಣೇ ವಾಂಕಣೇ ಭೋವರೇ। ಉಕಳ್ಯಾ ತರಂಗ ಝುರೇ।
ಲಾದಾ ಲಾಟಾ ಕಾತರೇ। ಠಾಈ ಠಾಈ ॥೩॥

ಶುಷ್ಕ ಜಳಾಚೆ ಚಳಾಳ। ಧಾರಾ ಧಬಾಬೇ ಖಳಾಳ।
ಚಿಪಳ್ಯಾ ಚಳಕ್ಯಾ ಭಳಾಳ। ಚಪಳ ಪಾಣೀ ॥೪॥

ಫೇಣ ಫುಗೆ ಹೆಲಾವೆ। ಸೈರಾವೈರಾ ಉದಕ ಧಾವೇ।
ಥೇಂಬ ಫುಈ ಮೋಜಾವೇ। ಅಣುರೇಣು ಕಿತೀ ॥೫॥

ವೊಸಾಣೇ ವಾಹತೀ ಉದಂಡ। ಝೋತಾವೇ ದರ್ಕುಟೆ ದಗಡ।
ಖಡಕೇ ಬೇಟೇ ಆಡ। ವಳಸಾ ಉಠೇ ॥೬॥

ವೃದ ಭೂಮೀ ತುಟೋನ ಗೇಲ್ಯಾ। ಕಠೀಣ ತೈಶ್ಯಾಚಿ ರಾಹಿಲ್ಯಾ।
ಠಾಈ ಠಾಈ ಉದಂಡ ಪಾಹಿಲ್ಯಾ। ಸೃಷ್ಟೀಮಧೇ ॥೭॥

ಯೇಕ ತೇ ವಾಹತ ಚಿ ಗೇಲೇ। ಯೇಕ ವಳಶಾಮಧೇ ಪಡಿಲೇ।
ಯೇಕ ಸಾಂಕಡೀತ ಆಡಕಲೇ। ಅಧೋಮುಖ ॥೮॥

ಯೇಕ ಆಪಟಿಆಪಟೋ ಚ ಗೇಲೀ। ಯೇಕ ಚಿರಡಚಿರ್ಡೋ ಚ ಮೇಲೀ।
ಕಿತೀಯೇಕ ತೇ ಫುಗಲೀ। ಪಾಣೀ ಭರಲೇ ॥೯॥

ಉಗಮ ಹೊಂದಿದ ಸ್ಥಳಬಿಟ್ಟು ಕೆಳಗಡೆ ಬಂದಂಥ ಈ ನದಿಯು ಒಮ್ಮೆ ಜೋರಿನಿಂದ ಹರಿಯಹತ್ತಿದ ಕೂಡಲೇ ಅಂದರೆ ಪ್ರವಹಿಸುವ ಇವಳ ಮಾರ್ಗದಲ್ಲಿ ಯಾವ ಯಾವ ಪ್ರಕಾರಗಳು ಘಟಿಸುವವು? ಇದರ ವರ್ಣನೆಯನ್ನು ಶ್ರೀಸಮರ್ಥರು ಈಗ ಮಾಡುವರು:- ಈ ನದಿಗೆ ಅಲ್ಲಲ್ಲಿ ತಿರುವುಗಳು ಇರುವವು. ಅಂಕುಡೊಂಕುಗಳಾಗಿ ಹರಿಯುವ ಜೋರು [ಸೆಳವು] ಇರುವದು. ಅಲ್ಲಲ್ಲಿ ತಿರುಗಣಿ ಮಡವು. ಖಳ ಖಳ–ಬಳ ಬಳ ಅನ್ನುವ ಶಬ್ದ ಇರುವದು. ಪುಟಿಗೆ (ಉಕ್ಕು ಬಂದಂತೆ) ಆಗುವದು. ಝರಿಗಳು, ಸಣ್ಣ ತೆರೆಗಳು ಇವೆಲ್ಲ ಕಂಡು ಬರುವವು. ಇದರಲ್ಲಿ ನೀರು ನಿಂತು ರೊಜ್ಜು, ರಾಡಿ, ಇರುವದು. ದೊಡ್ಡ ತೆರೆಗಳೂ ಇರುವವು. ಮತ್ತು ಕಲ್ಲಿನ ದಿಬ್ಬದಿಂದಾಗಿ ಪ್ರವಾಹ ಎರಡು ಭಾಗವಾಗಿಯೂ ಇರುವದು.(೩)ಕೆಲವೊಂದು ಕಡೆಗೆ ನೀರಿನ ಪ್ರವಾಹಒಣಗುವದು.[ಗುಪ್ತಗಾಮಿನಿಯಿಂದ]. ಕೆಲವುಕಡೆಗೆ ನೀರಿನ ಧಾರೆ ಮತ್ತು ಧಬ ಧಬೆ[ಜಲಪಾತ]ಯಿಂದಾಗಿ ಪ್ರವಾಹದಲ್ಲಿ ಜೋರು ದೊಡ್ಡದಾಗಿಖಳ್ ಖಳ್ ಎಂಬ ಶಬ್ದವಾಗುವದು.ಮತ್ತು ಕೆಲವುಕಡೆಗೆ ನದಿಯಪ್ರವಾಹ ಕ್ರಮದಿಂದ ಇಳಿಯುತ್ತ ಹಳ್ಳದಂತಾಗುವದು. ಆಗದೇ ಸಣ್ಣದಾಗಿ ಅಥವಾ ಅಡ್ಡಗಲವಾಗಿರುವದು. ಅಂತೂ ಈ ನದಿಯ ನೀರು ಈ ಪ್ರಕಾರದಿಂದ ಹರಿಯುತ್ತಿರುವದು.[೪] ನೀರಿನ ಮೇಲೆ ಬುರುಗು ಅದರಿಂದ ಗುಳ್ಳೆಗಳಾಗಿ ಅವುಗಳು ಪ್ರವಾಹದಿಂದಾಗಿ ಏರಿಳಿತಗೊಳ್ಳುವವು. ಮತ್ತು ಒಂದಕ್ಕೊಂದು ಅಪ್ಪಳಿಸುವವು. ಇತ್ಯಾದಿ ಇವು ಕಣ್ಣುಮುಚ್ಚಾಲೆಯ ಆಟದಂತೆ ಕಾಣುವವು. ಪ್ರವಾಹವು ಸ್ವಚ್ಛಂದವಾಗಿ ಹರಿಯುತ್ತಿರುವದು. ಈ ಪ್ರವಾಹದಲ್ಲಿಂದ ಪುಟಿದು ಮೇಲಕ್ಕೆ ಹಾರುವ ನೀರಿನ ದೊಡ್ಡ ಹನಿಗಳು. ತೀರ ಸಣ್ಣ ತುಂತುರ ತುಷಾರಗಳು ಇವುಗಳ ಎಣಿಕೆ ಅಶಕ್ಯವಿರುವದು. (೫) ಪ್ರವಾಹದಲ್ಲಿ ಬಹಳಷ್ಟು ಹೊಲಸು, ಕಸಕಡ್ಡಿ ಇತ್ಯಾದಿ ಹರಿಯುತ್ತ ತೇಲಿ ಹೋಗುವವು. ಜೋರಾದ ಪ್ರವಾಹ ಬಂದಿತೆಂದರೆ ಮತ್ತು ಜೋರಾದ ನೀರಿನ ಪ್ರವಾಹದ ಕೂಡ ಸಣ್ಣಕಲ್ಲುಗಳು ದೊಡ್ಡ ಕಲ್ಲುಗಳೊಡನೆ ತಿಕ್ಕುತ್ತ ಸಣ್ಣ ಬೆಟ್ಟ-ದಿಬ್ಬವನ್ನು ಸುತ್ತುವರಿದು ನೀರು ಚಕ್ರಾಕಾರವಾಗಿ ತಿರುಗುತ್ತ ಮುಂದೆ ಸಾಗಿ ಹೋಗುವದು. (೬) ದಂಡೆಗೆ ಹತ್ತಿದ ಮೃದು ಜಮೀನುಗಳು ಕೊರೆದು ಹೋಗುವವು. ಕಠಿಣ ಜಮೀನುಗಳು ಹಾಗೇ ಉಳಿಯುವವು. ಜಗತ್ತಿನ ಅನೇಕ ಕಡೆಗೆ ಇಂಥ ಬಹಳಷ್ಟು ಜಮೀನು (ಉಳಿದವು)ಗಳನ್ನು ನೋಡುವೆವು. (೭) ಬಹಳಷ್ಟು ಜೀವಗಳು ಈ ಮಾಯಾ ನದಿಯ ಪ್ರವಾಹದಲ್ಲಿ ಹರಿದು ಹೋಗುವವು. ಮತ್ತು ನಾಶ ಹೊಂದುವವು. ಎಲ್ಲಿಯೋ ಕೆಲವು ಜೀವಗಳು ಬಹಳ ಹಿಮ್ಮತ್ತಿನಿಂದ ಉಗಮದ ಕಡೆಗೆ ಈಸುತ್ತ ಹೋಗುವವು. (ಎದುರು ಈಸುವವು).ಮತ್ತು ಬ್ರಹ್ಮ ದರ್ಶನ ಹೊಂದಿ ಪಾವನವಾಗುವವು. ಕೆಲವು ಜನರು ನದಿಯಪ್ರವಾಹದ ಕೂಡ ಹರಿದು (ತೇಲಿ) ಹೋಗುವರು. ಕೆಲವರು ತಿರುಗಣಿ ಮಡುವಿನೊಳಗೆ ಸಿಕ್ಕಿಕೊಳ್ಳುವರು. ಇನ್ನೂ ಕೆಲವರು ಕೆಳಗೆ ಮುಖಮಾಡಿ ಇಕ್ಕಟ್ಟಿನ ಸ್ಥಳದಲ್ಲಿ ಸಿಕ್ಕುಬೀಳುವರು. ಇದರ ಅರ್ಥವೇನಂದರೆ ಕೆಲವು ಜನ ನೀಚ ಯೋನಿಯ ಕಡೆಗೆ ಹೋದರು. ಕೆಲವರು ಜನ್ಮ ಮರಣದ ಚಕ್ರದಲ್ಲಿ ಸಿಕ್ಕಿಕೊಂಡರು. ಇನ್ನೂ ಕೆಲವರು ದೇಹ ಬುದ್ಧಿಯಿಂದ ಅತ್ಯಂತ ಸ್ವಾರ್ಥಿಗಳಾಗಿ ಬಹಿರ್ಮುಖರಾದರು. (೮) ಕೆಲವು ಜೀವಿಗಳು ಅಪ್ಪಳಿಸಿ, ಅಪ್ಪಳಿಸಿ ಸತ್ತವು. ಕೆಲವು ಜೀವಿಗಳು ಹರಿದು ಪರಿದು ಗಾಸಿಯಾಗಿ ಸತ್ತವು. ಇನ್ನೂ ಎಷ್ಟೋ ಜೀವಿಗಳ ಹೊಟ್ಟೆಯಲ್ಲಿ ನೀರು ಸೇರಿ ಹೊಟ್ಟೆ ಉಬ್ಬಿದವು. ಇದರ ಅರ್ಥವೇನಂದರೆ ಕೆಲವು ಜೀವಗಳು ದೃಶ್ಯದ ಬೆನ್ನು ಹತ್ತಿದವು.ಆದರೆ ಅಲ್ಲಿ ದ್ವೈತದ ಸಂಘರ್ಷ ನಿರ್ಮಾಣವಾಗಿ ಬಡೆತ ತಿಂದು ಸತ್ತವು. ಕೆಲವೊಂದು ಜೀವಗಳು ಸಂಸಾರದಲ್ಲಿಯ ಮಾಮೂಲಿ ಸಂಕಟ ಪರಂಪರೆಯಲ್ಲಿ ಅಡಗಿ ಅದರ ಭಾರದಿಂದಲೇ ಸತ್ತವು. ಮತ್ತುಬಹಳಷ್ಟು ಜೀವಗಳು ಅಹಂಕಾರದಿಂದ ಉನ್ಮತ್ತವಾಗಿ ಕೊನೆಗೆ ವ್ಯರ್ಥವಾಗಿ ಹೋದವು. (೯)

ಯೇಕ ಬಳಾಚೆ ನಿವಡಲೇ । ತೇ ಪ್ರೋಹತ ಚಿ ಉಗಮಾಸ ಗೇಲೇ।
ಉಗಮು ದರ್ಶನೇ ಪವಿತ್ರ ಜಾಲೇ । ತೀರ್ಥರೂಪ ॥೧೦॥

ತೇಥೇ ಬ್ರಹ್ಮಾದಿಕಾಂಚೀ ಭುವನೇ । ಬ್ರಹ್ಮಾಂಡ ದೇವತಾಚೀ ಸ್ಥಾನೇ ।
ಉಫರಾಟೀ ಗಂಗಾ ಪಾಹಾತಾ ಮಿಳಣೇ। ಸಕಳಾಸ ತೇಥೇ ॥೧೧॥

ತ್ಯಾ ಜಳಾಐಸೇ ನಾಹೀ ನಿರ್ಮಳ । ತ್ಯಾ ಜಳಾಐಸೇ ನಾಹೀ ಚಂಚಳ ।
ಆಪೋನಾರಾಯಣ । ಕೇವಳ ಬೋಲಿಜೆ ತ್ಯಾಸೀ ॥೧೨॥

ಮಹಾನದೀ ಪರೀ ಅಂತರಾಳೀ । ಪ್ರತ್ಯಕ್ಷ ವಾಹೆ ಸರ್ವಕಾಳೀ ।
ಸ್ವರ್ಗ ಮೃತ್ಯ ಪಾತಾಳೀ । ಪಸರಲೀ ಪಾಹಾ ॥೧೩॥

ಅಧೋರ್ಧ್ವ ಅಷ್ಟ ಹಿ ದಿಶಾ । ತಿಚೇ ಉದಕ ಕರೀ ವಳಸಾ ।
ಜಾಣತೇ ಜಾಣತೀ ಜಗದೀಶಾ । ಸಾರಿಖೀ ಚ ತೇ ॥೧೪॥

ಅನಂತ ಪಾತ್ರೀ ಉದಕ ಭರಲೇ । ಕೋಠೇ ಪಾಝುಪಾಝುರೋ ಚ ಗೇಲೇ ।
ಕಿತೀಯೇಕ ತೇ ವೇಚಲೇ । ಸಂಸಾರಾಸೀ ॥೧೫॥

ಕೆಲವೊಂದು ಜೀವಗಳು ಬಹಳ ಬಲವಾನವಿದ್ದವು. ಪ್ರವಾಹದ ವಿರುದ್ಧ[ಉಲಟ]ದಿಕ್ಕಿನ ಕಡೆಗೆ ನದಿಯ ಉಗಮದವರೆಗೂ ಇವು ಈಸಿ ಹೋದವು. ಇವುಗಳಿಗೆ ಉಗಮದ ದರ್ಶನವಾದದ್ದರಿಂದ ಪವಿತ್ರವಾದವು. ಇವುಗಳಿಗೆ ತೀರ್ಥ ಮಹಾತ್ಮ್ಯದ ಶ್ರೇಷ್ಠತೆಯ[ಪುಣ್ಯದ]ಲಾಭ ದೊರೆಯಿತು. ಇದರ ಅರ್ಥವೇನಂದರೆ ಸೂಕ್ಷ್ಮದ ಕಡೆಯಿಂದ ಸ್ಥೂಲದ ಕಡೆಗೆ ಧಾವಿಸುವದೇ ಮಾಯೆಯ ಸ್ವಭಾವವಿರುವದು. ಇದರ ವಿರುದ್ಧ ಸಡ್ಡು ಹೊಡೆದು ನಿಲ್ಲುವ ಮನುಷ್ಯ ಬಲವಾನನೇ ಇರುವನು. ತನ್ನ ಬಲವನ್ನು ಉಪಯೋಗಿಸಿ ಇವನು ಸ್ಥೂಲದ ಕಡೆಗೆ ಹೋಗದೇ ಧೈರ್ಯದಿಂದ ಸೂಕ್ಷ್ಮದ ಕಡೆಗೆ ಹೋಗುವನು. ಈ ಪ್ರಕಾರ ಹೆಚ್ಚು ಹೆಚ್ಚಾಗಿ ಸೂಕ್ಷ್ಮದ ಒಳಗೆ ಪ್ರವೇಶಿಸುವನು. ಹಾಗೆಯೇ ಮುಂದೆ ಮುಂದೆ ಹೋಗಿ ಕೊನೆಗೆ ಇವನು ನಿಶ್ಚಲ ಬ್ರಹ್ಮದವರೆಗೂ ಮುಟ್ಟುವನು. ಅಲ್ಲಿ ಬ್ರಹ್ಮದರ್ಶನವಾದದ್ದರಿಂದ ಇವನು ಪವಿತ್ರವಾಗುವನು. ಪವಿತ್ರತನದಿಂದಾಗಿ ತೀರ್ಥದ ಯೋಗ್ಯತೆಯನ್ನು ಹೊಂದುವನು. [೧೦] ಈ ಗಂಗೆಯಲ್ಲಿ ಉಪರಾಟಿ [ಉಲಟಾ] ಆಗಿ ಹೋಗಿ ನೋಡಿದರೆ ಅಲ್ಲಿ ಬ್ರಹ್ಮಾದಿಕರ ಭುವನಗಳು ಕಾಣುವವು. ಬ್ರಹ್ಮಾಂಡದಲ್ಲಿಯ ದೇವದೇವತೆಗಳ ಸ್ಥಾನಗಳು ಹತ್ತುವವು. ಇಲ್ಲಿ ಎಲ್ಲರ ಭೆಟ್ಟಿ ಆಗುವದು. ಮನುಷ್ಯ ಅಂತರ್ಮುಖನಾಗುತ್ತ ಹೋದಂತೆ ಆಗ ಅವನು ಸೂಕ್ಷ್ಮದಲ್ಲಿಯ ಮೇಲಿನ ಮಟ್ಟಕ್ಕೆ ಹೋಗುವ ಮೆಟ್ಟಲನ್ನು ಹತ್ತಲಿಕ್ಕೆ ಪ್ರಾರಂಭಿಸುವನು. ಸಾಧನ ವಿವೇಕದಿಂದ ಹೇಗೆ ಹೇಗೆ ಇವನು ಮೇಲಿನ ಮೆಟ್ಟಲನ್ನು ಹತ್ತುವನೋ ಹಾಗೆ ಹಾಗೆ ಅವನಿಗೆ ಬೇರೆ ಬೇರೆ ಜನರ ಭೆಟ್ಟಿಯಾಗುವದು. ಕೊನೆಗೆ ಬ್ರಹ್ಮಲೋಕದವರೆಗೂ ಹೋಗುವನು. ಅಲ್ಲಿ ಬ್ರಹ್ಮಾದಿಕರ ದರ್ಶನವಾಗುವದು. ಇತರ ದೇವತೆಗಳ ದರ್ಶನ ಮೊದಲೇ ಆಗಿರುವದು. [೧೧] ಉಗಮದ ಹತ್ತರ ಮಾಯಾರೂಪಿ ಗಂಗೆಯ ನೀರು ಅತ್ಯಂತ ನಿರ್ಮಲವಿರುವವು. ಆದರೆ ಇವು ಅತ್ಯಂತ ಚಂಚಲವಿರುವವು. ಅಂದರೆ ಪ್ರವಾಹೀ ಇರುವವು. ಆದ್ದರಿಂದ ಇದಕ್ಕೆ ಆಪೋ ನಾರಾಯಣ (ನೀರೇ ನಾರಾಯಣ) ಎಂದು ಅನ್ನುವರು. ಗುಣಮಾಯಾ ನಿರ್ಮಾಣವಾಗುವ ಪೂರ್ವದಲ್ಲಿ ಈ ಮೂಲ ಮಾಯೆಯು ನಿಜವಾಗಿಯೂ ಬ್ರಹ್ಮಸ್ವರೂಪವೇ ಇರುತ್ತಾಳೆ. ಅಂತೆಯೇ ಇವಳು ಅತ್ಯಂತ ಪವಿತ್ರ, ನಿರ್ಮಲ ಮತ್ತು ಭೇದರಹಿತೆ ಇರುವಳು. [೧೨] ಈ ಮೂಲ ಮಾಯಾರೂಪೀ ನದಿಯು ವಿಶ್ವದಲ್ಲಿ ಹೇಗೆ ಪಸರಿಸಿತು. ಮತ್ತು ವಿಸ್ತಾರ ಹೊಂದಿತು ಇದನ್ನು ಹೇಳುತ್ತಾರೆ. ಮತ್ತು ಎಲ್ಲ ಕಡೆಗೂ ಇವಳದೇ ಪ್ರಭಾವ ಕಾಣುವದು. ಆದರೆ ಇವಳು ಮಾತ್ರ ಎಲ್ಲಿಯೂ ಪ್ರತ್ಯಕ್ಷ ಕಂಡು ಬರುವದಿಲ್ಲ. ಇದೇ ನಿಜವಾದ ಚಮತ್ಕಾರವು. ಇದು ಮಹಾನದಿಯೇ ಖರೇ ಇರುವದು. ಆದರೆ ಇದು ಆಕಾಶದಲ್ಲಿ ಹರಿಯುತ್ತದೆ. ಒಂದೇ ಸವನೆ (ಬಿಡುವಿಲ್ಲದೆ)ಪ್ರತ್ಯಕ್ಷವಾಗಿ ಹರಿಯುವದಾಗಿದೆ. ಸ್ವರ್ಗ, ಮೃತ್ಯು, ಪಾತಾಳ, ಈ ಮೂರೂ ಲೋಕದಲ್ಲಿ ಇವಳು ಪಸರಿಸಿರುವಳು. ಮೂಲಮಾಯಾ ಅತ್ಯಂತಸೂಕ್ಷ್ಮವಿದ್ದದ್ದರಿಂದ ಅತ್ಯಂತಸೂಕ್ಷ್ಮವಾದ ಆಕಾಶದಲ್ಲಿಯೂ ಇವಳು ಹರಿಯುವಳು. ಆಕಾಶದ ಆಚೆಗೆ ಆಕಾಶವನ್ನು ಮೀರಿ (ದಾಟಿದ ನಂತರ) ಅಲ್ಲಿ(ಚಿದಾಕಾಶದಲ್ಲಿ)ಇವಳ ಮೂಲವಿರುವದು (೧೩)ಕೆಳಗೆ—ಮೇಲೆ ಎಂಟು ದಿಕ್ಕುಗಳು ಹೀಗೆ ಹತ್ತು ದಿಕ್ಕಿನಲ್ಲಿ ಮಾಯೆಯ ಪ್ರವಾಹ ತಿರುಗಣಿ ಮಡುವಿನಂತೆ ಒಂದೇ ಸವನೆ ತಿರುಗುತ್ತಲೇ ಇರುವದು. ಅಂತೆಯೇ ಜ್ಞಾನಿಗಳಾದ ಪುರುಷರು ಇವಳನ್ನು ಈಶ್ವರನಂತೆಯೇ ಮಾನಿಸುತ್ತಾರೆ. (ತಿಳಿಯುತ್ತಾರೆ). ಈಶ್ವರನಂತೆಯೇ ಇರುವಳೆಂದು ಗುರುತಿಸುತ್ತಾರೆ. ಈಶ್ವರನಂತೆಯೇ ಇವಳು ಸರ್ವವ್ಯಾಪಿ ಇರುವಳು ಸರ್ವರ ಮೇಲೆ ಸತ್ತಾ (ಪ್ರಭಾವ) ನಡೆಸುವಳು. ಆದ್ದರಿಂದ ಇವಳು ಈಶ್ವರ ಸ್ವರೂಪವೇ ಇರುವಳೆಂದು ಜ್ಞಾನಿಜನರು ತಿಳಿಯುವರು. [೧೪] ತಿಳಿಯಿರಿ. ಅಸಂಖ್ಯ ಭಾಂಡಿ (ಪಾತ್ರೆ)ಗಳು ಇರುವವು ಮತ್ತು ಇವುಗಳಲ್ಲಿ ನೀರು ತುಂಬಿದೆ. ಕೆಲವು ಭಾಂಡಿಗಳಲ್ಲಿಯ ನೀರು ಸೋರಿ ಹೋಗುತ್ತವೆ. ಕೆಲವು ಭಾಂಡಿಗಳಲ್ಲಿಯ ನೀರು ಸಂಸಾರದಲ್ಲಿ ಖರ್ಚಾಗುವದು. ಭಾಂಡಿ ಅಂದರೆ ಪ್ರಾಣಿ ಮತ್ತು ನೀರು ಅಂದರೆ ಮಾಯಾ ಇರುವದು. ನೀರು ಸೋರಿ ಹೋಗುವದು ಅಂದರೆ ಮಾಯಾ ಇಲ್ಲವಾಗುವದು. ಎಂದು ತಿಳಿಯಬೇಕು. ಜ್ಞಾನಿ ಪುರುಷರ ಬಾಬತ್ತಿನಲ್ಲಿ ಹೀಗೆ ಘಟಿಸುವದು. ಇವರ ದೇಹದಲ್ಲಿ ಸ್ವಸ್ವರೂಪ ತುಂಬಿ ಇರುವದು. ಇತರ ಜನರು ಮಾಯೆಯಿಂದಾಗಿ ಸಂಸಾರದಲ್ಲಿ ಸಿಕ್ಕಿಕೊಳ್ಳುವರು. [೧೫]

ಯೇಕ್ಯಾ ಸಂಗೇ ತೇ ಕಡವಟ । ಯೇಕ್ಯಾಸಂಗೇ ತೇ ಗುಳಚಟ ।
ಯೇಕ್ಯಾಸಂಗೇ ತೇ ತಿಖಟ । ತುರಟ ಕ್ಷಾರ ॥೧೬॥

ಜ್ಯಾ ಜ್ಯಾ ಪದಾರ್ಥಾಸ ಮಿಳೇ । ತೇಥೇ ತದ್ರೂಪ ಚಿ ಮಿಸಳೇ ।
ಸಖೋಲ ಭೂಮೀಸ ತುಂಬಳೇ । ಸಖೋಲಪಣೇ ॥೧೭॥

ವಿಷಾಮಧೇ ವಿಷ ಚಿ ಹೋತೇ । ಅಮೃತಾಮಧೇ ಮಿಳೋನ ಜಾತ ।
ಸುಗಂಧೀ ಸುಗಂಧ ತೇ । ದುರ್ಗಂಧೀ ದುರ್ಗಂಧ ॥೧೮॥

ಗುಣೀ ಅವಗುಣೀ ಮಿಳೆ । ಜ್ಯಾಚೇ ತ್ಯಾಪರೀ ನಿವಳೆ ।
ತ್ಯಾ ಉದಕಾಚಾ ಮಹಿಮಾ ನ ಕಳೆ । ಉದಕೇವಿಣ ॥೧೯॥

ಉದಕ ಮಾಹೆ ಅಪರಂಪಾರ । ನ ಕಳೆ ನದೀ ಕೀ ಸರೋವರ ।
ಜಳವಾಸ ಕರೂನ ನರ । ರಾಹಿಲೆ ಕಿತೀಯೇಕ ॥೨೦॥

ಉಗಮಾ ಪೈಲಿಕಡೆ ಗೇಲೇ । ತೇಥೇ ಪರತೋನ ಪಾಹಿಲೇ ।
ತವ ತೇ ಪಾಣೀ ಚ ಆಟಲೇ । ಕಾಹೀ ನಾಹೀ ॥೨೧॥

ವೃತ್ತಿಸುನ್ಯ ಯೋಗೇಶ್ವರ । ಯಾಚಾ ಪಾಹಾವಾ ವಿಚಾರ ।
ದಾಸ ಮ್ಹಣೇ ವಾರಂವಾರ । ಕಿತೀ ಸಾಂಗೋ ॥೨೨॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
"ಚಂಚಳ ನದೀ ನಿರೂಪಣ" ನಾಮ ಸಮಾಸ ಸಪ್ತಮ ॥

ಯಾವ ಪ್ರಕಾರದ ಭಾಂಡಿ ಇರುವದೋ ಆ ತರಹದ ರುಚಿ ಅದರಲ್ಲಿಯ ನೀರಿಗೆ ಬರುವದು. ಒಂದು ಭಾಂಡಿಯಲ್ಲಿಯ ನೀರು ಸ್ವಲ್ಪ ಕಹಿ ಇದ್ದರೆ ಇನ್ನೊಂದು ಭಾಂಡಿಯಲ್ಲಿಯದು ಸ್ವಲ್ಪ ಸಿಹಿ ಇರುವದು. ಇತರಭಾಂಡಿಗಳಲ್ಲಿಯ ನೀರು ಉಪ್ಪು, ಖಾರ, ಒಗರು ಇತ್ಯಾದಿ ರುಚಿಯುಳ್ಳ ಇರುವವು. ಮಾಯಾ ಅಂದರೆ ಚಿತ್‌ಶಕ್ತಿಯಾಗಿದೆ. ಸತ್ವಗುಣಿ ಮನುಷ್ಯರಲ್ಲಿ ಇವಳು ಸಿಹಿರೂಪದ ಸ್ವಭಾವದಿಂದ ವ್ಯಕ್ತರೂಪಧಾರಣ ಮಾಡುವಳು. ರಜೋಗುಣಿಜನರಲ್ಲಿ ಇವಳು ವಿಕಾರ ರೂಪ-ಭೇದರೂಪಧಾರಣ ಮಾಡುವಳು. ಅದೇ ತಮೋಗುಣಿ ಮನುಷ್ಯರಲ್ಲಿ ಇವಳು ದುಷ್ಟತನದ ರೂಪಧಾರಣ ಮಾಡುವಳು. [೧೬] ಯಾವ ಯಾವ ಪದಾರ್ಥದೊಂದಿಗೆ ಇವಳ ಸಂಬಂಧ ಬರುವದೋ ಆಯಾ ಪದಾರ್ಥದಲ್ಲಿ ಇವಳು ಸಮರಸವಾಗುವಳು. ಆಳವಾದ ಜಮೀನು ಇದ್ದರೆ ಅಲ್ಲಿ ಇವಳು ಆಳವಾಗಿ ತುಂಬಿಕೊಂಡೇ ಇರುವಳು. ಚಿತ್‌ಶಕ್ತಿ ಸ್ವತಃ ಯಾವುದೂ ಅಲ್ಲ. (ಏನೂ ಅಲ್ಲ) ಯಾವ ಯಾವ ದೃಶ್ಯವಸ್ತುವಿನೊಂದಿಗೆ ಸಂಬಂಧ ಬರುವದೋ ಅವುಗಳೊಂದಿಗೆ ಸಮರಸ ಹೊಂದಿ ಇರುವದಷ್ಟೇ ಇವಳಿಗೆ ಗೊತ್ತಿರುವದಾಗಿದೆ. ಆದ್ದರಿಂದ ವಸ್ತುವಿನಲ್ಲಿಯ ಚಿತ್‌ಶಕ್ತಿಯ ಪ್ರಮಾಣವು ಆಯಾ ವಸ್ತುವಿನ ಗಹನತೆಯ ಮೇಲೆ ಅಥವಾ ಆಳ, ಅಗಲ (ಸಖೋಲಪನ)ದ ಮೇಲೆ ಅವಲಂಬಿಸಿರುತ್ತದೆ. (೧೭) ವಿಷದೊಂದಿಗೆ ಇವಳು ವಿಷವಾಗುವಳು. ಅದೇ ಅಮೃತದಲ್ಲಿ ಇವಳೇ ಅಮೃತವಾಗಿ ಬಿಡುವಳು. ಸುಗಂಧದಲ್ಲಿ ಸುಗಂಧಿ ಮತ್ತು ದುರ್ಗಂಧದಲ್ಲಿ ದುರ್ಗಂಧಿಯಾಗುವದೇ ಇವಳ ಧರ್ಮವಿರುವದು. [೧೮] ಗುಣಗಳಲ್ಲಿ ಇವಳು ಗುಣವಾಗಿ ಬಿಡುವಳು. ಮತ್ತು ಅವಗುಣಗಳಲ್ಲಿ ಅವಗುಣಿಯೇ ಆಗುವಳು. ಯಾವುದರೊಂದಿಗೆ ಇವಳ ಸಂಬಂಧ ಬರುವದೋ ಅದರಂತೆಯೇ ಇವಳು ಅನುಭವಕ್ಕೆ ಬರುವಳು. ಈ ಚಿತ್‌ಶಕ್ತಿಯ ಮಹಿಮೆ ತಿಳಿಯಬೇಕಾದರೆ ಇವಳ ಕೃಪೆಯೇ ಅವಶ್ಯವಿರುವದು. ಆ ಯಾವ ಮೂಲ ಮಾಯೆಯ ಅಧಿಕಾರ (ಅಮಲು) ಯಾವತ್ತೂ ಚರಾಚರ ವಿಶ್ವದ ಮೇಲೆ ನಡೆಯುವದೋ ಇವಳ ಕೃಪೆಯಿಂದಲೇ ಪರಮಾರ್ಥ ವಿಚಾರವು ಉತ್ಪನ್ನವಾಗುವದು. ಇವಳೇ ಸಾರಾಸಾರವನ್ನು ವಿಂಗಡಿಸಿ ತೋರಿಸುವಳು. ಇವಳೇ ಅನುಭವದ ಮುಖ್ಯ ಗುರುತಾಗಿರುವಳು. ಮನುಷ್ಯನಿಗೆ ಇವಳ ಅನಿರ್ವಚನೀಯ ಸ್ವರೂಪದಆಕಲನವಾಗಬೇಕಾದರೆ ಇವಳ ಮನಸ್ಸಿಗೆ ಬಂದರೆ ಅರ್ಥಾತ್ ಇವಳು ಕೃಪೆ ಮಾಡಿದರೆ ಮಾತ್ರ ಸಾಧ್ಯವಿರುವದು. [೧೯] ಈ ಮಾಯಾ ನದಿಯನೀರು ಬಹಳ ಆಳ ಮತ್ತು ತಿಳಿಯದಷ್ಟು ಅಪಾರವಿರುವದು. ಇದರಿಂದ ಇದು ನದಿಯೋ ಅಥವಾ ಸರೋವರ ಅಥವಾ ದೊಡ್ಡ ಜಲಾಶಯವೋ ಅನ್ನುವದರ ಪತ್ತೆ [ಗುರುತು] ಹತ್ತುವದಿಲ್ಲ. ಎಷ್ಟೋ ಜನ ಈ ಮಾಯಾ ನದಿಯ ನೀರಿನಲ್ಲಿಯೇ ವಸತಿ ಮಾಡಿಕೊಂಡು ಇದ್ದದ್ದು ಕಂಡು ಬರುವದು. ಸರೋವರವು ಸ್ಥಿರವಿರುವದು. ಅಂದರೆ ಸಂಗ್ರಹಿತವಾದ ನಿಂತ ನೀರು ಇರುವದು. ನದಿ ಅಸ್ಥಿರವಿರುವದು. ಅಂದರೆ ಹರಿಯುತ್ತಲಿರುವದು. ಈ ದೃಶ್ಯವಿಶ್ವ ಸ್ಥಿರವಿರುವದೆಂದು ಅನಿಸುತ್ತದೆ. ಆದರೆ ದೃಶ್ಯದಿಂದ ಇದು ಎಷ್ಟೊಂದು ಅಪರಂಪಾರ ತುಂಬಿದೆ ಎಂದರೆ ಇದರ ಅಸ್ಥಿರತನ, ಪ್ರವಾಹಿತನ, ಮನುಷ್ಯನ ಲಕ್ಷ್ಯಕ್ಕೇ ಬರುವದಿಲ್ಲ. ಆದ್ದರಿಂದಲೇ ಮನುಷ್ಯ ದೃಶ್ಯದ ಹೊರಗೆ ಬರುವ ಪ್ರಯತ್ನ ಮಾಡುವದಿಲ್ಲ. ಅಂತೂ ಕೊನೆಗೆ ಇವನು ಮೋಸಹೋಗುವನು. [೨೦] ತಿಳಿವಂಥವರು ಏನು ಮಾಡುವರೋ ಅವನ್ನು ಕೇಳಬೇಕು. ಪ್ರವಾಹದ ಉಲಟ [ವಿರುದ್ಧ] ಈಜುತ್ತ ಈಜುತ್ತ ಯಾರು ಉಗಮದ ಆಚೆಗೆ ಮುಟ್ಟಿರುವರೋ ಅವರು ಹಿಂದುರಗಿ ನೋಡಿದರು. ಆಗ ಅವರಿಗೆ ಹೀಗೆ ಕಂಡಿತು ಮಾಯಾ ನದಿಯ ನೀರು ಸಂಪೂರ್ಣ ಆಟ್ಟಿಸಿದ್ದು ಕಂಡಿತು. ಅಲ್ಲಿ ನದಿಯ ಗುರುತು ಸಹಿತ ಏನೂ ಇರಲಿಲ್ಲ. ತಮ್ಮ ವೃತ್ತಿಯನ್ನು ಅಂತರ್ಮುಖ ಮಾಡಿಕೊಂಡು ಸೂಕ್ಷ್ಮದಲ್ಲಿ ಪ್ರವೇಶಿಸಿದರು. ಅಂದರೆ ಮಾಯಾ ನದಿಯನ್ನು ದಾಟಿ ಕೊನೆಗೆ ಬ್ರಹ್ಮಸ್ವರೂಪರಾದರು. ಇವರ ದೃಷ್ಟಿಯಿಂದ ಮಾಯಾ ಎಳ್ಳಷ್ಟೂ ಇಲ್ಲವೇ ಇಲ್ಲ ಅನ್ನುವ ಅನುಭವ ಬಂದಿತು. [೨೧] ಯಾರು ತಮ್ಮ ವೃತ್ತಿ ಅಥವಾ ಕಲ್ಪನೆಯನ್ನು ಶೂನ್ಯ ಮಾಡಿದರೋ, ಯಾರು ನಿವೃತ್ತರಾದರೋ, ನಿರಂಬಳರಾದರೋ, ಮುಕ್ತರಾದವರಿರುವರೋ ಇಂಥ ಆ ಶ್ರೇಷ್ಠ ಜ್ಞಾನಿಯ ಸ್ಥಿತಿಯನ್ನೇ ಅಭ್ಯಾಸ ಮಾಡಿ ಅವನ್ನು ತಿಳಿದುಕೊಳ್ಳಬೇಕು. ಕೊನೆಗೆ ಸಂತರು-ದಾಸರು ಅನ್ನುವದೇನಂದರೆ, ಇದೇ ಮಾತನ್ನು ಅಥವಾ ಈ ವಿಷಯವನ್ನು ಮೇಲಿಂದ ಮೇಲೆ ಎಷ್ಟೆಂದು ಹೇಳುವದು. [೨೨]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದೊಳಗಿನ ಹನ್ನೊಂದನೆಯ ದಶಕದ<br>"ಚಂಚಲ ನದಿ" ಎಂಬ ಏಳನೆಯ ಸಮಾಸವು ಮುಗಿದುದು.

**ದಶಕ ಏಕಾದಶ : ಸಮಾಸ ಅಷ್ಟಮ : ಅಂತರಾತ್ಮಾ ವಿವರಣ**

॥ಶ್ರೀರಾಮ॥ ಆಧೀ ವಂದೂ ಸಕಳ ಕರ್ತಾ । ಸಮಸ್ತ ದೇವಾಚಾ ಜೋ ಭರ್ತಾ ।
ತ್ಯಾಚೆ ಭಜನೀ ಪ್ರವರ್ತಾ । ಕೋಣೀತರೀ ॥೧॥

ತೇಣೇವಿಣ ಕಾರ್ಯ ನ ಚಲೇ । ಪಡಿಲೇ ಪರ್ಣ ತೇ ಹಿ ನ ಹಾಲೇ ।
ಅವಘೇ ತ್ರೈಲೋಕ್ಯೇ ಚಿ ಚಾಲೇ । ಜಯಾಚೆನೀ ॥೨॥

ತೋ ಅಂತರಾತ್ಮಾ ಸಕಳಾಚಾ । ದೇವದಾನವಮಾನವಾಚಾ ।
ಚತ್ವಾರಖಾಣೀಚತ್ವಾರವಾಣೀಚಾ । ಪ್ರವರ್ತಕು ॥೩॥

## ದಶಕ ೧೧. ಸಮಾಸ ೮. ಅಂತರಾತ್ಮಾ ವಿವರಣ (ನುಡಿ ೨೫)

ಪರಮಾತ್ಮ ವಸ್ತುವಿನ ಬಗ್ಗೆ ವಿಚಾರ ಮಾಡುವಾಗ ಶ್ರೀಸಮರ್ಥರು ಮೂರು ಮೆಟ್ಟಿಲುಗಳನ್ನು ಹೇಳುವರು. ೧] ನಮ್ಮ ದೇಹದಲ್ಲಿ ವಾಸ ಮಾಡುವ ಆತ್ಮಾ ೨]ಸರ್ವವಿಶ್ವದಲ್ಲಿ, ಚರಾಚರಗಳಲ್ಲಿ.[ಅಂತರ್ಯಾ]ಅಂತರ್ಯಾಮಿಯಾಗಿ ವಾಸಮಾಡಿರುವ ಅಂತರಾತ್ಮಾ ೩]ವಿಶ್ವವನ್ನೆಲ್ಲ ತುಂಬಿ ಉಳಿಯುವಂಥ ಪರಮಾತ್ಮಾ. ಇವೇ ಅವರು ಹೇಳುವ ಮೂರು ಮೆಟ್ಟಿಲುಗಳು. ಈ ಮೂರು ಮೆಟ್ಟಿಲುಗಳೆಂದು ಅನ್ನುವಾಗ ಸ್ವರೂಪದ ದೃಷ್ಟಿಯಿಂದ ಇವುಗಳಲ್ಲಿ ಇದು ಶ್ರೇಷ್ಠ, ಇದು ಕನಿಷ್ಠ ಅನ್ನುವ ಭಾವವಿಲ್ಲ. ಆದರೆ ಅನುಭೂತಿಯ [ಅನುಭವದ] ವ್ಯಾಪಕತೆಯಲ್ಲಿ [ಆಳದಲ್ಲಿ] ಹೆಚ್ಚುಕಡಿಮೆ ಇರುವದು. ಮನುಷ್ಯನು ದೇಹದ ಸಹಾಯದಿಂದ ಇಂದ್ರಿಯ ಸುಖ ಭೋಗಿಸುವನು. ಆದರೆ ದೇಹವನ್ನು ನಡೆಸುವ ಆತ್ಮನನ್ನು ಮಾತ್ರ ಮರೆಯುವನು. ಇದೇ ಮಾನವನ ಅಜ್ಞಾನವಿರುವದು. ಈ ವಿಶ್ವದಲ್ಲಿ ನಿಜವಾಗಿ ಅಸಂಖ್ಯ ಜೀವ ಪ್ರಾಣಿಗಳು ಇರುವವು ಈ ಎಲ್ಲವುಗಳನ್ನು ಅಂತರಾತ್ಮನು ಅಂತರ್ಯಾಮದಲ್ಲಿದ್ದುಕೊಂಡು ಇವುಗಳನ್ನು ನಡೆಸುವನು. ಕೆಲವು ಕಡೆಯಲ್ಲಿ ಇವನು ಗುಪ್ತವಿರುವನು. ಕೆಲವು ಕಡೆಗೆ ಪ್ರಕಟತನದಿಂದ ಕಂಡು ಬರುವನು. ಆದರೆ ಇವೆಲ್ಲದರಲ್ಲಿಯೂ ಇದ್ದೂ ಸಹ ಪುನಃ ಇವನು ಶಿಲುಕು ಉಳಿಯುವನು. ಇವನು ಸರ್ವದೇವರ ದೇವನಿರುವನು. ಯಾವತ್ತೂ ವಿಶ್ವದ ಚಾಲಕನಿರುವನು. ಇಂಥವನ ಜ್ಞಾನ ಮಾಡಿಕೊಳ್ಳಲೇ ಬೇಕು. ಸರ್ವತ್ರದಲ್ಲಿ ವಾಸಮಾಡುವಂಥ ಅಂತರಾತ್ಮನನ್ನು ಗುರುತಿಸಿ ತಿಳಿದದ್ದಾದರೆ ಮನುಷ್ಯನು ಸ್ವತಃ ವಿಶ್ವವ್ಯಾಪಿ ಆಗುವನು. ಮನುಷ್ಯನು ಅಪೂರ್ಣನಿರುವನು. ಅಂತರಾತ್ಮನು ಪೂರ್ಣನಿರುವನು. ಆದ್ದರಿಂದ ಮನುಷ್ಯನಾಗಿ ಇದ್ದುಂದೇ ಆದರೆ ಅಂತರಾತ್ಮನ ಸಂಪೂರ್ಣ ಜ್ಞಾನವಾಗುವದಿಲ್ಲ. ಇವನ ಬಗ್ಗೆ ಎಷ್ಟೇ ಕೇಳಲಿ, ನೋಡಲಿ, ಇದರಿಂದ ಅಷ್ಟಕ್ಕಷ್ಟೇ ತಿಳಿಯುವದು. ಒಟ್ಟಿನಲ್ಲಿ ಅಂತರಾತ್ಮನ ಸಂಪೂರ್ಣ ಜ್ಞಾನವಾಗಲಿಕ್ಕೆ ಅವನೊಂದಿಗೆ ಸಮರಸವಾಗಿ ತದಾಕಾರ [ಏಕರೂಪ] ಹೊಂದಬೇಕಾಗುವದು. ಇದನ್ನು ಸಾಧಿಸುವದಕ್ಕಾಗಿ ಮೊದಲು ದೃಶ್ಯವಿಶ್ವದ ವಿವರಣ (ಸವಿಸ್ತರ ನಿರೂಪಣ) ವಿವೇಚನೆ ಮಾಡಲಿಕ್ಕೆ ಆರಂಭ ಮಾಡಬೇಕು. ಇದರಿಂದ ತತ್ವಗಳಿಂದ ತತ್ವಗಳ ನಿರಾಸವಾಗುತ್ತದೆ. (ನಿಜವಾದ ಗರ್ಭತಾರ್ಥ ತಿಳಿಯುವದು). ಮತ್ತು ದೇಹಬುದ್ಧಿ ಕಳಚಿ ಬೀಳುವದು. ಆಮೇಲೆ ಅಂತರಾತ್ಮದ ಅಖಂಡ ಚಿಂತನ (ಮನನ-ವಿಚಾರ) ಮಾಡಬೇಕು. ಚಿಂತನ ಮಾಡ ಮಾಡುತ್ತ ಇವನೊಂದಿಗೆ ತಾದಾತ್ಮ್ಯತೆಯಾಗುವದು ವಿಭಕ್ತತನ (ದ್ವೈತ ಭಾವ, ದ್ವಿಭಾವ) ಹೋಗಿ ಭಕ್ತತನ ಬರುವದು. ಜೀವನ ಧನ್ಯವಾಗುವದು.

### ದಶಕ ೧೧. ಸಮಾಸ ೮. ಅಂತರಾತ್ಮಾ ವಿವರಣ (ನುಡಿ ೨೫)

ಚರಾಚರ ವಿಶ್ವವನ್ನು ಅಂತರ್ಯಾಮಿತನದಿಂದ ನಡೆಸುವಂಥ ಅಂತರಾತ್ಮಾ ಇವನೇ ನಿಜವಾದ ದೇವರು ಅಥವಾ ಈಶ್ವರನಿರುವನು. ಇವನ ಜ್ಞಾನಮಾಡಿಕೊಳ್ಳಬೇಕು. ಯಾವತ್ತೂ ಘಟನೆಗಳಿಗೆ ಕರ್ತಾ, ಹಾಗೆಯೇ ಸರ್ವದೇವರ ಮಾಲಕನಾದ ಆ ಯಾವ ಅಂತರಾತ್ಮಾ, ಇವನ ಜ್ಞಾನ ಮಾಡಿಕೊಳ್ಳುವಂಥ ಪ್ರಯತ್ನ ಯಾರೇ ಆಗಲಿ ಮಾಡಬೇಕು. [೧] ಅಂತರಾತ್ಮನ ಹೊರತು ಯಾವ ಕಾರ್ಯಗಳೂ ಆಗುವದಿಲ್ಲ. ಅವನ ಸತ್ತಾ ಇಲ್ಲದೆ ಗಿಡದಿಂದ ಉದುರಿ ಬಿದ್ದ ಒಂದು ಎಲೆಯೂ ಸಹ ಅಲ್ಲಾಡುವದಿಲ್ಲ. ಇವನಿಂದ ದೊರಕುವ (ಸಿಗುವ) ಚೇತನದಿಂದಲೇ ಯಾವತ್ತೂ ತ್ರೈಲೋಕ್ಯವು ಹಾಲಚಾಲ ಮಾಡುವದು. [೨]ದೇವರು, ದಾನವರು. ಮಾನವರು, ನಾಲ್ಕು ಖಾಣಿ, ನಾಲ್ಕು ವಾಣಿ ಈ ಎಲ್ಲವುಗಳಿಗೂ ಪ್ರವರ್ತಕನು ಒಬ್ಬನೇ ಒಬ್ಬನಾದ ಅಂತರಾತ್ಮನಿರುವನು. [೩]

ತೋ ಯೆಕಲಾ ಚಿ ಸಕಳಾ ಘಟೀ । ಕರೀ ಭಿನ್ನಭಿನ್ನಾ ರಾಹಾಟೀ।
ಸಕಳ ಸೃಷ್ಟೀಚೀ ಗೋಷ್ಟೀ । ಕಿತೀ ಮ್ಹಣೌನ ಸಾಂಗಾವೀ ॥೪॥

ಐಸಾ ಜೋ ಗುಪ್ತೇಶ್ವರ । ತ್ಯಾಸ ಮ್ಹಣಾವೇ ಈಶ್ವರ ।
ಸಕಳ ಐಶ್ವರ್ಯ ಥೋರ ಥೋರ । ಜಯಾಚೆನಿ ಭೋಗಿತೀ ॥೫॥

ಐಸಾ ಜೇಣೇ ವೊಳಖಿಲಾ । ತೋ ವಿಶ್ವಂಭರ ಚಿ ಜಾಲಾ ।
ಸಮಾಧೀ ಸಹಜಸ್ಥಿತೀಲಾ । ಕೋಣ ಪುಸೆ ॥೬॥

ಅವಘೇ ತ್ರೈಲೋಕ್ಯ ವಿವರಾವೇ । ತೇಂವ್ಹಾ ವರ್ಮ ಪಡೇಲ ಠಾವೇ ।
ಆವಚಟೇ ಘಬಾಡ ಸಿಣಾವೇ । ನಲಗೇ ಚಿ ಕಾಂಹೀ ॥೭॥

ಪಾಹಾತಾ ಐಸಾ ಕೋಣ ಆಹೆ । ಜೋ ಅಂತರಾತ್ಮಾ ವಿವರೋನ ಪಾಹೆ ।
ಅಲ್ಪ ಸ್ವಲ್ಪ ಕಳೋನ ರಾಹೆ । ಸಮಾಧಾನೇ ॥೮॥

ಅರೆ ಹೇ ಪಾಹಿಲೇ ಚ ಪಾಹಾವೇ । ವಿವರಲೇ ಚಿ ಮಾಗುತೇ ವಿವರಾವೇ ।
ವಾಚಿಲೇಚಾ ವಾಚಾವೇ । ಪುನ್ಹಾ ಪುನ್ಹಾ ॥೯॥

ಅಂತರಾತ್ಮಾ ಕೇವಢಾ ಕೈಸಾ । ಪಾಹಾಣಾರಾಚೀ ಕೋಣ ದಶಾ ।
ದೇಖಿಲ್ಯಾ ಐಕಿಲ್ಯಾ ಐಸಾ । ವಿವೇಕ ಸಾಂಗೇ ॥೧೦॥

ಉದಂಡ ಐಕಿಲೇ ದೇಖಿಲೇ । ಅಂತರಾತ್ಮ್ಯಾಸ ನವಚೆ ಪುರವಿಲೇ ।
ಪ್ರಾಣೀ ದೇಹಧಾರೀ ಬಾಪುಡೇ । ಕಾಯೆ ಜಾಣೇ ॥೧೧॥

ಪೂರ್ಣಾಸ ಅಪೂರ್ಣ ಪುರೇನಾ । ಕಾ ಜೇ ಅಖಂಡ ವಿವರೇನಾ ।
ವಿವರತಾ ವಿವರತಾ ಉರೇನಾ । ದೇವಾ ವೇಗಳಾ ॥೧೨॥

ವಿಭಕ್ತಪಣೇ ನಸಾವೇ । ತರೀ ಚ ಭಕ್ತ ಮ್ಹಣವಾವೇ ।
ನಾಹೀತರೀ ವೇರ್ಥ ಚಿ ಸಿಣಾವೇ । ಖಟಾಟೋಪೆ ॥೧೩॥

ಉಗಾ ಚ ಘರ ಪಾಹೋನ ಗೇಲಾ । ಘರಧನೀ ನಾಹೀ ವೊಳಖಿಲಾ ।
ರಾಜ್ಯಾಮಧೂನ ಚಿ ಆಲಾ । ಪರೀ ರಾಜಾ ನೇಣೇ ॥೧೪॥

ಸರ್ವ ಪ್ರಾಣಿಗಳ ದೇಹದಲ್ಲಿ ಇವನೇ ವಾಸಮಾಡುವನು ಮತ್ತು ಇವುಗಳಿಗೆಲ್ಲ. ಬೇರೆ ಬೇರೆ ತರಹದಿಂದ ನಡೆಯುವಂತೆ ಪ್ರೇರಣೆ ಸಹ ಮಾಡುವನು. ಎಲ್ಲ ವಿಶ್ವದಲ್ಲಿಯೂ ಕಂಡು ಬರುವ ಇವನ ಕರ್ತೃತ್ವದ ಬಗ್ಗೆ ಸಂಪೂರ್ಣವಾಗಿ ಹೇಳಲಿಕ್ಕೆ ಬರುವದಿಲ್ಲ. [೪] ಇಂಥ ಈ ಯಾವ ಗುಪ್ತ ಮಾಲಕನಿರುವನೋ ಇವನಿಗೆ ಈಶ್ವರ ಎಂದು ಅನ್ನುವರು. ಈ ಈಶ್ವರನ ಸತ್ತೆಯಿಂದಲೇ ಲೋಕವೆಲ್ಲ ದೊಡ್ಡ ಐಶ್ವರ್ಯ ಭೋಗಿಸುವದು. [೫] ಇಂಥ ಅಂತರಾತ್ಮನ ಜ್ಞಾನ ಯಾರಿಗೆ ಆಗುವದೋ ಅವನು ಸ್ವತಃ ವಿಶ್ವವ್ಯಾಪಿ ವಿಶ್ವಂಭರನೇ ಆಗುವನು. ಆಮೇಲೆ ಸಮಾಧಿ ಮತ್ತು ಸಹಜ ಸ್ಥಿತಿ ಇವುಗಳ ಬಗ್ಗೆ ಯಾವ ಮಹತ್ವ ಉಳಿಯುವದಿಲ್ಲ. ಈಶ್ವರನೊಂದಿಗೆ ತದಾಕಾರ ಹೊಂದುವ ಸ್ಥಿತಿಯು ಇತರ ಸರ್ವ ಅವಸ್ಥೆಗಳಲ್ಲಿಯ ಸ್ಥಿತಿಗಿಂತ ಬಹಳಷ್ಟು ಮೇಲ್ಮಟ್ಟದ್ದಾಗಿರುವದು. [ಎಲ್ಲ ಅವಸ್ಥೆಗಳ ಆಚೆಗಿನದಾಗಿರುವದು] [೬] ಅಂತರಾತ್ಮವನ್ನು ತಿಳಿಯಬೇಕಿದ್ದರೆ ಇದು ಬೇರೆತನದಿಂದ ಶಕ್ಯವಿರುವದಿಲ್ಲ. ಬೇರೆತನ ಅಂದರೆ ಅಪೂರ್ಣತನವು. ಅಪೂರ್ಣಕ್ಕೆ ಪೂರ್ಣದ ಸಂಪೂರ್ಣ ಜ್ಞಾನವಿರುವದು. ಅಶಕ್ಯವು. ಆದ್ದರಿಂದ ಆತ್ಮಚಿಂತನದಿಂದ ವಿವೇಕಯುಕ್ತರಾಗಿ ಈಶ್ವರನಲ್ಲಿ ಕೂಡಿಕೊಂಡು ಹೋಗಬೇಕು. ವಿಭಕ್ತತನದಿಂದ ಉಳಿಯಲೇಬಾರದು. ಈ ದೃಶ್ಯವಿಶ್ವದ ವಿವರಣೆಯನ್ನು ವಿವೇಕದಿಂದ ಹೆಚ್ಚು ಹೆಚ್ಚು ಮಾಡುತ್ತ ಹೋದದ್ದಾದರೆ ಅಂತರಾತ್ಮನ ರಹಸ್ಯ ತನ್ನಿಂದ ತಾನೇ ತಿಳಿಯುವ [ಆಕಲನವಾಗುವ]ದು. ಒಮ್ಮಿಂದೊಮ್ಮೆ ಪ್ರಚಂಡ ಲಾಭ ಕೈಗೆ ಬರುವದು. ಇದರ ಸಲುವಾಗಿ ಇನ್ನಿತರ ಶ್ರಮ ಮಾಡಬೇಕಾಗುವದಿಲ್ಲ. [೭] ಬುದ್ಧಿಯಿಂದ ವಿವರಣೆ ಮಾಡಿ ಅಂತರಾತ್ಮಾನ ಜ್ಞಾನ ಮಾಡಿಕೊಳ್ಳಲಿಕ್ಕೆ ಯಾರಿಗೂ ಶಕ್ಯವಿಲ್ಲ. ಇದರ ಜ್ಞಾನ ಮಾಡಿಕೊಳ್ಳುವ ಬುದ್ಧಿಯಿಂದ ಧಡಪಡಿಸುವವರಿಗೆ ಅಲ್ಪಸ್ವಲ್ಪ ಜ್ಞಾನವಾಗುವದು. ಮತ್ತು ಇಷ್ಟರಿಂದಲೇ ಇವರು ಸಮಾಧಾನ ಹೊಂದಬೇಕಾಗುವದು. [೮] ಅಲ್ಪಸ್ವಲ್ಪ ಜ್ಞಾನದಿಂದ ಅಂತರಾತ್ಮನ ಬಗ್ಗೆ ಆಗಿರುವ ಕಿಂಚಿತ್ ದರ್ಶನದ ಸಹಾಯ[ಆಧಾರ]ದಿಂದ ಅದನ್ನು ಪುನಃ ಪುನಃ ಪಡೆಯಿರಿ. ಮತ್ತು ಪುನಃ ಪುನಃ ಅಂತರಾತ್ಮನ ವಿವರಣೆ ಮಾಡಿರಿ. ಇದರ ಬಗ್ಗೆ ಓದಿದ್ದನ್ನು ಪುನಃ ಪುನಃ ಓದಿರಿ. [ಬೇಸರ ಮಾಡಿಕೊಳ್ಳಬೇಡಿರಿ] [೯] ಆ ಅಂತರಾತ್ಮ ಎಷ್ಟಿದ್ದಾನೆ? ಹೇಗಿದ್ದಾನೆ? ಇವನನ್ನು ಯಾರು ನೋಡಿರುವರೋ ಆ ನೋಡಿದವರ ಅವಸ್ಥೆ ಎಂತಿರುವದು ? ಇದರ ಬಗ್ಗೆ ಯಾರಾದರೂ ಹೇಳಿದರೆ ಅದು ಹೆಚ್ಚಾಗಿ ಅಪೂರ್ಣವಿರುವದು. ಯಾಕೆಂದರೆ ಹೇಳುವವರು ಎಷ್ಟು ನೋಡಿರುವರೋ ಮತ್ತು ಎಷ್ಟು ಕೇಳಿರುವರೋ ಅಷ್ಟೇ ಜ್ಞಾನದ ಬಗ್ಗೆ ಹೇಳುವರು. [೧೦] ಮನುಷ್ಯನು ಎಷ್ಟೇ ನೋಡಲಿ ಮತ್ತು ಕೇಳಲಿ ಅಷ್ಟರಿಂದಲೇ ಅಂತರಾತ್ಮನ ಸಂಪೂರ್ಣ ವರ್ಣನೆ ಮಾಡಲಿಕ್ಕೆ ಆಗುವದಿಲ್ಲ. ಯಾಕಂದರೆ ಇವನ ಜ್ಞಾನ ಅಪೂರ್ಣವಿರುವದು. ದೇಹಧಾರಿಯಾದ ಈ ಬಡ ಮನುಷ್ಯನು ಅನಂತ ವ ಅಪಾರನಾಗಿರುವ ಅಂತರಾತ್ಮನನ್ನು ಸಂಪೂರ್ಣವಾಗಿ ತಿಳಿಯುವದು ಶಕ್ಯವಿಲ್ಲದ ಮಾತಾಗಿರುವದು. [೧೧] ಮನುಷ್ಯನು ಅಪೂರ್ಣನಾವನೆ. ಅಂತರಾತ್ಮಾ ಪೂರ್ಣನಿರುವನು. ಪೂರ್ಣವನ್ನು ಅಪೂರ್ಣವು ತಿಳಿದುಕೊಳ್ಳಲಾರದು. ಯಾಕೆಂದರೆ ಮನುಷ್ಯನು ಪೂರ್ಣವಸ್ತುವಿನ ಅಖಂಡ ಚಿಂತನೆ ಮಾಡುವದಿಲ್ಲ. ಅಖಂಡ ಚಿಂತನೆ ಮಾಡುತ್ತ ಹೋದರೆ ಮನುಷ್ಯನು ಕೊನೆಗೆ ದೇವರಿಂದ ಬೇರೆಯಾಗಿ ಉಳಿಯುವದಿಲ್ಲ. ಏಕರೂಪವಾಗುವನು. [೧೨] ದೇವರಿಂದ ಬೇರೆಯಾಗಿ [ಭಿನ್ನವಾಗಿ] ಉಳಿಯಬಾರದು. ಅಂದರೆ ಮಾತ್ರ ಆಗ ಅವನು ಭಕ್ತನೆಂದು ಅನ್ನುಕೊಳ್ಳಲಿಕ್ಕೆ ಶೋಭೆ ಬರುವದು. ದೇವರೊಂದಿಗೆ ತದಾತ್ಮ್ಯವು ಸಾಧಿಸದಿದ್ದರೆ ಮಾಡಿದ ಖಟಾಟೋಪದ ಶ್ರಮ ವ್ಯರ್ಥವಾಗಿ ಹೋಗುವದು. [೧೩] ಅಂತರಾತ್ಮನು ದೇಹದಲ್ಲಿಯೇ ಇರುವನು. ಆದರೆ ಜಾಣ[ಬುದ್ಧಿವಂತ]ವಿವೇಕೀಜನರು ಇವನ ಜ್ಞಾನ ಮಾಡಿಕೊಳ್ಳುವದಿಲ್ಲವೆಂದ ಮೇಲೆ ಮೂರ್ಖಮತ್ತು ಜಾಣ ಇವರಿಬ್ಬರೂ ಒಟ್ಟಿನಲ್ಲಿ ದೀನತನದ ಜೀವನವನ್ನೇ ಸಾಗಿಸುವರು. ಒಬ್ಬ ಮನುಷ್ಯನು ಒಂದು ಮನೆಯನ್ನು ನೋಡಿ ಹೋದನು. ಆದರೆ ಅವನು ಮನೆಯ ಮಾಲಕನನ್ನು ನೋಡಲಿಲ್ಲ. ಅವನು ಯಾವನಿರುವನೆಂದು ಕೇಳಿ ಗುರುತಿಸಲೂ ಇಲ್ಲ. ಇನ್ನೊಬ್ಬ ಮನುಷ್ಯನು ಒಂದು ರಾಜ್ಯದಿಂದ ಬಂದನು. ಆದರೆ ಅಲ್ಲಿಯ ರಾಜನು ಯಾರು ಇವರ ವಿಚಾರ ಪೌಕಶಿ ಮಾಡಲಿಲ್ಲ. [೧೪]

ದೇಹಸಂಗೇ ವಿಷಯೆ ಭೋಗಿಲೇ । ದೇಹಸಂಗೇ ಪ್ರಾಣೀ ವಿರವಲೇ ।
ದೇಹ ಧರ್ತ್ಯಾಸ ಚುಕಲೇ । ನವಲ ನೋಹೆ ॥೧೫॥
ಐಸೇ ಲೋಕ ಅವಿವೇಕೀ । ಆಣಿ ಮ್ಹಣತೀ ಆಮ್ಹೀ ವಿವೇಕೀ ।
ಬರೇ ಜ್ಯಾಚಿ ಜೈಸೀ ಟಾಕೀ। ತೈಸೇ ಕರಾವೇ ॥೧೬॥
ಮೂರ್ಖ ಅಂತರ ರಾಖೋ ನೇಣೆ । ಮ್ಹಣೌನ ಅಸಾವೇ ಶಾಹಾಣೇ ।
ತೇ ಶಾಹಾಣೆ ಹಿ ದೈನ್ಯವಾಣೆ । ಹೋಊನ ಗೇಲೆ ॥೧೭॥
ಅಂತರೀ ಠೇವಣೇ ಚುಕಲೇ । ದಾರೋದಾರೀ ಧುಂಡೂ ಲಾಗಲೇ ।
ತೈಸೇ ಅಜ್ಞಾನಾಸ ಜಾಲೇ । ದೇವ ನ ಕಳೆ ॥೧೮॥
ಯಾ ದೇವಾಚೇ ಧ್ಯಾನ ಕರೀ । ಐಸಾ ಕೋಣ ಸೃಷ್ಟೀವರೀ।
ವೃತ್ತೀ ಯೇಕದೇಸೀ ತರ್ತರೀ । ಪವಾಡೇಲ ಕೋಠೇ ॥೧೯॥
ಬ್ರಹ್ಮಾಂಡೀ ದಾಟಲೇ ಪ್ರಾಣೀ । ಬಹುರೂಪೇ ಬಹುವಾಣೀ।
ಭೂಗರ್ಭೀ ಆಣಿ ಪಾಷಾಣೀ । ಕಿತೀಯೇಕ ॥೨೦॥
ಇತುಕೆ ಠಾಈ ಪುರವಲಾ । ಅನೇಕೀ ಯೇಕ ಚಿ ವರ್ತಲಾ ।
ಗುಪ್ತ ಆಣಿ ಪ್ರಗಟಲಾ। ಕಿತೀಯೇಕ ॥೨೧॥
ಚಂಚಳೇ ನ ಹೋಈಜೆ ನಿಶ್ಚಳ । ಪ್ರಚಿತ ಜಾಣಾವೀ ಕೇವಳ ।
ಚಂಚಳ ತೇ ನವ್ಹೆ ನಿಶ್ಚಳ । ಪರಬ್ರಹ್ಮ ತೇ ॥೨೨॥
ತತ್ವೇ ತತ್ವ ಜೇವ್ಹಾ ಉಡೆ । ತೇವ್ಹಾ ದೇಹಬುದ್ಧಿ ಝುಡೆ ।
ನಿರ್ಮಳ ನಿಶ್ಚಳ ಚಹೂಕಡೆ । ನಿರಂಜನ ॥೨೩॥
ಆಪಣ ಕೋಣ ಕೋಠೇ ಕೈಚಾ । ಐಸಾ ಮಾರ್ಗ ವಿವೇಕಾಚಾ ।
ಪ್ರಾಣೀ ಜೋ ಸ್ವಯೇಕಾಚಾ । ತ್ಯಾಸ ಹೇ ಕಳೇನಾ ॥೨೪॥
ಭಲ್ಯಾನೇ ವಿವೇಕ ಧರಾವಾ । ದುಸ್ತರ ಸಂಸಾರ ತರಾವಾ ।
ಅವಘಾ ವಂಶ ಚಿ ಉಧರಾವಾ । ಹರಿಭಕ್ತೀ ಕರೂನಿ ॥೨೫॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
''ಅಂತರಾತ್ಮಾ ವಿವರಣ'' ನಾಮ ಸಮಾಸ ಅಷ್ಟಮ ॥

ಇದು ಹೇಗೆ ಘಟಿಸುವದೋ ಇದರಂತೆ ಮನುಷ್ಯನು ದೇಹದ ಮೂಲಕ ಇಂದ್ರಿಯಗಳ ಸುಖ ಭೋಗಿಸುವನು. ಸಾಯುವವರೆಗೂ ದೇಹದ ಸಂಗತಿಯಿಂದ ಜಗದಲ್ಲಿ ಮೆರೆಯುವನು. ಆ ಯಾವನು ದೇಹವನ್ನು ನಡೆಸುವನೋ ಆ ಅಂತರಾತ್ಮನನ್ನೇ ಮನುಷ್ಯನು ತಿಳಿಯುವದಿಲ್ಲ. ಇದು ಒಂದು ದೊಡ್ಡ ಆಶ್ಚರ್ಯವೇ ಸರಿ. (೧೫) ಈ ರೀತಿಯಿಂದ ಜನರು ವಿವೇಕ ಹೀನರಾಗಿದ್ದರೂ ಸಹ ತಾವು ದೊಡ್ಡ ವಿವೇಕಿಗಳೆಂದು [ಎಲ್ಲವನ್ನು ತಿಳಿದವರೆಂದು) ಅನಿಸಿಕೊಳ್ಳುವ ನಾಟಕ ಮಾಡುವರು. ಒಟ್ಟಿನಲ್ಲಿ ಯಾರಿಗೆ ಹೇಗೆ ನಡೆಯುವ ಸವಯ [ರೂಢಿ] ಇರುವದೋ ಅದರಂತೆ ಅವರು ನಡೆಯುವರು. [೧೬] ಯಾರಿಗೆ ತಮ್ಮ ಅಂತರಂಗವನ್ನು ಸಂಬಾಳಿಸುವದಕ್ಕೆ ಬರುವದಿಲ್ಲವೋ ಅವರು ಮೂರ್ಖರೇ ಆಗಿರುವರು. ಆದ್ದರಿಂದ ಮನುಷ್ಯನು ಜಾಣತನವನ್ನು ಕಲಿಯಬೇಕು. ಬುದ್ಧಿವಂತನಾಗಬೇಕೆಂದು ಹಿರಿಯರು ಅನ್ನುವರು. ಆದರೆ ಹಿರಿಯರು ಅನ್ನುವರೆಂದು ಜಾಣರಾದವರ ಕಡೆಗೆ ಹೋಗಿ ನೋಡಿದರೆ ಅವರೂ ಸಹ ಅಂತರಂಗದ ಜ್ಞಾನವಿಲ್ಲದೇ ತೊಳಲುವವರೇ ಇರುವದು ಕಾಣುವದು. ಇದರ ಅರ್ಥವೇನಂದರೆ ಸಾಮಾನ್ಯ ವ್ಯವಹಾರದಲ್ಲಿ ಮೂರ್ಖ ಮತ್ತು ಜಾಣ ಅನ್ನುವ ಭೇದವನ್ನು ನಾವು ಮಾಡುವೆವು. ಆದರೆ ಇಲ್ಲಿ ಇವರಿಬ್ಬರಿಗೂ ಸ್ವತಃದ ಅಂತರಂಗ ಜ್ಞಾನವಿರದಿದ್ದರಿಂದ ಪರಮಾರ್ಥದ ದೃಷ್ಟಿಯಲ್ಲಿ ಇಬ್ಬರೂ ಅಜ್ಞಾನಿಗಳೇ ಇರುವರು.(೧೭) ತಿಳಿಯಿರಿ, ಒಬ್ಬನ ಮನೆಯಲ್ಲಿಯೇ ಸಂಪತ್ತನ್ನು ಇಡಲಾಗಿದೆ. ಆದರೆ ಅದನ್ನು ಅವನು ಮರೆತನು ಮತ್ತು ಆಮೇಲೆ ಸಂಪತ್ತಿನ ಸಲುವಾಗಿ ಇತರರ ಮನೆ ಮನೆ ತಿರುಗ ಹತ್ತಿದನು. ಇದರಂತೆ ಅಜ್ಞಾನಿ ಮನುಷ್ಯನ ಅವಸ್ಥೆ ಇರುವದು. ಸ್ವತಃದ ಅಂತರಂಗದಲ್ಲಿ ಇರುವಂಥ ಈಶ್ವರನು ಇವನಿಗೆ ತಿಳಿಯುವಲ್ಲನು. (ಗುರುತಿಸುವದಂತೂ ದೂರೇ ಉಳಿಯಿತು). ಇವನು ಅವನನ್ನು ಹೊರಗೆ ಶೋಧಿಸಲು ಹೋಗುವನು. [ಹುಚ್ಚರಂತೆ ತಿರುಗುವನು][೧೮] ಮನುಷ್ಯರ ಅಂತರ್ಯಾಮದಲ್ಲಿ ವಾಸಮಾಡುವ ಅಂತರಾತ್ಮನು ಅನಂತ ಮತ್ತು ಅಪಾರನಿರುವನು. ವೃತ್ತಿಜ್ಞಾನ [ಪ್ರಾಪಂಚಿಕ ಜ್ಞಾನ]ದಿಂದ ಇವನನ್ನು ನೋಡುವದು ಶಕ್ಯವಿಲ್ಲದ್ದು. ಅದಕ್ಕಾಗಿ ನಾನು ಅನ್ನುವದನ್ನು ನಷ್ಟಗೊಳಿಸಬೇಕು. [ಇಲ್ಲದಂತೆ ಮಾಡಬೇಕು]. ವಿವೇಕದಿಂದ ದೇಹಬುದ್ಧಿಯನ್ನು ಕಳಚಿ ಬಿಡಬೇಕಾಗುವದು:- ಅನಂತ ಅಂತರಾತ್ಮನ ಧ್ಯಾನ ಮಾಡುವವನು ಈ ಜಗತ್ತಿನಲ್ಲಿ ಯಾರೂ ಇರುವದಿಲ್ಲ. ಮನುಷ್ಯನಲ್ಲಿಯ ತಿಳಿಯುವ ವೃತ್ತಿ ಏಕದೇಶೀ ಇರುವದು. ಇದರ ವ್ಯಾಪವು ದೃಶ್ಯದವರೆಗೆ ಮಾತ್ರ ಇರುವದು. ಹೀಗೆ ಸ್ಥಳ ಕಾಲಗಳಿಂದ ಮರ್ಯಾದಿತ ವಿರುವ ವೃತ್ತಿಯ ಚಪಲತೆಯು ಅಂತರಾತ್ಮನ ಧ್ಯಾನ ಮಾಡುವಷ್ಟರ ಮಟ್ಟಿಗೆ ಇದು ಸಾಕಾಗುವಷ್ಟು ಇರುವದಿಲ್ಲ. [೧೯] ಈ ವಿಶ್ವದಲ್ಲಿ ಜೀವ ಪ್ರಾಣಿಗಳು ಕೇವಲ ಗರ್ದಿ, ಗದ್ದಲ ಮಾಡಿಕೊಂಡೇ ಇರುವವು. ಇವುಗಳ ರೂಪ ಹಾಗೂ ಭಾಷೆ ನಾನಾ ತರಹದ್ದಿರುವವು. ಪೃಥ್ವಿಯ ಹೊಟ್ಟೆಯಲ್ಲಿ ಮತ್ತು ಪಾಷಾಣ [ಕಲ್ಲು]ದಲ್ಲಿ ಸಹ ಇಂಥ ಎಷ್ಟೆಷ್ಟೋ ಪ್ರಾಣಿಗಳು ಇರುವವು. [೨೦] ಈ ಎಲ್ಲವುಗಳಲ್ಲಿ ಅಂತರಾತ್ಮ ತುಂಬಿಯೂ ಪುನಃ ಉಳಿದಿರುವನು. ಈ ಪ್ರಕಾರ ಅನೇಕವರಲ್ಲಿ ಒಂದೇ ಒಂದು ಅಂತರಾತ್ಮಾ ನಟಿಸಿರುವನು. ಕೆಲವೊಂದು ಸ್ಥಳದಲ್ಲಿ ಇವನು ಗುಪ್ತವಿರುವನು. ಕೆಲವು ಸ್ಥಳದಲ್ಲಿ ಇವನು ಪ್ರಕಟವಾಗಿ ಕಾಣುವನು. [೨೧] ನಾವು ಅಶಾಶ್ವತವಾದ ಮಾಯೆಯಲ್ಲಿ ಎಲ್ಲಿಯವರೆಗೆ ಇರುವೆವೋ ಅಲ್ಲಿಯವರೆಗೆ ಶಾಶ್ವತವಾದ ಬ್ರಹ್ಮವಸ್ತು ಹಸ್ತಗತವಾಗುವದಿಲ್ಲ. ಪ್ರತ್ಯಕ್ಷ ಅನುಭವದಿಂದ ಇದನ್ನು ನಾವು ಗುರುತಿಸಬೇಕು. ಯಾವುದು ಅಶಾಶ್ವತವಿದೆಯೋ ಅದು ಶಾಶ್ವತ ಪರಬ್ರಹ್ಮನು ಅಲ್ಲವೆಂದು ಖಾತ್ರಿಯಿಂದ ತಿಳಿಯಿರಿ. [೨೨] ಒಂದು ತತ್ವದಿಂದ ಎರಡನೇ ತತ್ವದ ನಿರಾಸವಾಗುತ್ತ ಹೋಗುವದೋ ಆಗ ದೇಹ ಬುದ್ಧಿಯ ಕ್ಷಯವಾಗುವದು.ಆಮೇಲೆ ಒಂದೇ ಒಂದು ನಿರ್ಮಲ, ನಿಶ್ಚಲ ವ ನಿರಂಜನ ಬ್ರಹ್ಮವು ಅನುಭವಕ್ಕೆ ಬರುವದು [೨೩] ವಿವೇಕದ ಮಾರ್ಗ ಯಾವುದಿರುವದೋ ಅದರಲ್ಲಿ "ನಾನು ಯಾರು" "ಎಲ್ಲಿಂದ ಬಂದೆನು" ಮತ್ತು "ನಾನು ಹೇಗಿರುವೆನು" ಈ ಪ್ರಶ್ನೆಗಳನ್ನು ಬಿಡಿಸಬೇಕಾಗುವದು. ಯಾವ ಮನುಷ್ಯನು ಸ್ವತಃ ವಿವೇಕದಿಂದ ಅಜ್ಞಾ ಇರುವನೋ ಅವನಿಗೆ ಇದು ತಿಳಿಯುವದಿಲ್ಲ. [೨೪] ಆದ್ದರಿಂದ ಸಜ್ಜನ ಮನುಷ್ಯರು ವಿವೇಕದ ಬೆನ್ನು ಹಿಡಿಯಬೇಕು. ಪಾರಾಗಲಿಕ್ಕೆ [ಉದ್ಧಾರವಾಗಲಿಕ್ಕೆ] ಕಠಿಣವಾದ ಈ ಸಂಸಾರವನ್ನು ವಿವೇಕದ ಬಲದಿಂದ ತಿಳಿದು ಪಾರಾಗಬೇಕು. ಮತ್ತು ಭಗವಂತನಲ್ಲಿ ಭಕ್ತಿ ಮಾಡಿ ತಮ್ಮ ವಂಶದ ಉದ್ಧಾರ ಮಾಡಬೇಕು. [೨೫]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದ ಹನ್ನೊಂದನೆಯ ದಶಕದೊಳಗಿನ
"ಅಂತರಾತ್ಮಾ ವಿವರಣ" ಎಂಬ ಎಂಟನೆಯ ಸಮಾಸವು ಮುಗಿದುದು.

## ದಶಕ ೧೧. ಸಮಾಸ ೯. ಉಪದೇಶ ನಿರೂಪಣ (ನುಡಿ ೨೫)

ಈ ಜಗತ್ತು ಕರ್ಮಭೂಮಿ ಇರುವದರಿಂದ ಮನುಷ್ಯನಿಗೆ ಏನು ಮಾಡಿದರೂ ಕರ್ಮ ಮಾಡುವದನ್ನು ತಪ್ಪಿಸಲಿಕ್ಕೆ ಆಗುವದಿಲ್ಲ. ಯಾಕಂದರೆ ಕರ್ಮ ಮಾಡಲೇಬೇಕಾಗುವದು. ಅಂದಮೇಲೆ ಪ್ರತಿಯೊಬ್ಬರೂ ಇದನ್ನು ಮನಃಪೂರ್ವಕ ಮಾಡಬೇಕು. ಕರ್ಮ ಮಾಡುವಲ್ಲಿ ಏನಾದರೂ ಅಡಚಣೆಗಳು ಬಂದರೆ ಆಗ ಭಗವಂತನ ಸ್ಮರಣೆ ಮಾಡಬೇಕು. ಆ ಭಗವಂತ ಹೇಗಿದ್ದಾನೆಂಬುದನ್ನು ವಿವೇಕದಿಂದ ಗುರುತಿಸಬೇಕು. ಅಂತರಾತ್ಮನೇ ಖರೇ ದೇವ ಇರುವನು. ಇವನು ದೇಹದಲ್ಲಿ ಆತ್ಮಾ ಆಗಿದ್ದರೆ ಜಗದಲ್ಲಿ ಜಗದಾತ್ಮಾ ಎಂದು ಕಾರ್ಯಮಾಡುವನು. ಒಬ್ಬನೇ ಒಬ್ಬನಾಗಿರುವ ಅಂತರಾತ್ಮಾ ಎಲ್ಲ ಸ್ಥಳದಲ್ಲಿ ವ್ಯಾಪಿಸಿಕೊಂಡೇ ಇರುವನು. ನಾವು ಪ್ರತಿಮೆಯ ಪೂಜೆ ಮಾಡುವೆವು. ಇದು ಅಂತರಾತ್ಮನಿಗೆಸಲ್ಲುವದು. ಅಂತರಾತ್ಮನಲ್ಲಿಂದಲೇ ಅವತಾರಿಯು ಜನ್ಮಹೊಂದುವನು. ಮತ್ತು ಅವತಾರಿಯು ನಿಜಧಾಮಕ್ಕೆ ಹೋದಮೇಲೆ ಅದರೊಳಗೇ ಆತ್ಮರೂಪದಿಂದ ಅಲ್ಲಿ ವಾಸ ಮಾಡುವನು. ಜಗಜ್ಯೋತಿಯಲ್ಲಿ ಇವನ ವಾಸವಿರುವದು. ಸರ್ವಪ್ರಾಣಿ ಮಾತ್ರರಲ್ಲಿಯೂ ಒಂದೇಒಂದಾದ ಅಂತರಾತ್ಮನಿದ್ದರೂಸಹ ದೇಹಬುದ್ಧಿಯಿಂದಾಗಿ ಪ್ರತಿಯೊಬ್ಬರಿಗೆ[ಬೇರೆತನ]ಪ್ರತ್ಯೇಕತನ ಬರುವದು. ಆದ್ದರಿಂದ ದೇಹಬುದ್ಧಿಯನ್ನು ದೂರಮಾಡಿಸಿ ಒಗೆದು ಮೊದಲು ದೇಹದಲ್ಲಿಯ ಆತ್ಮನನ್ನು ನೋಡಬೇಕು. ಆಮೇಲೆ ಇದನ್ನೇ ವಿಶ್ವದಲ್ಲಿ ನೋಡಬೇಕು. ಮತ್ತು ಕೊನೆಗೆ ಸೂಕ್ಷ್ಮ ವಿವೇಕದಿಂದ ನಿಶ್ಚಲನಾದ ಪರಬ್ರಹ್ಮನ ಅನುಭವ ಹೊಂದಬೇಕು. [ಪಡೆಯಬೇಕು]. ಚಂಚಲವು ಹೊರಟು ಹೋದ ಕೂಡಲೇ ನಿಶ್ಚಲ ಪರಬ್ರಹ್ಮವು ಉಳಿಯುವದು. ಈ ಅನುಭವ ಬರಲು ನಾವು ಅನನ್ಯರಾಗಬೇಕಾಗುವದು. ನಾನು ಅನ್ನುವದು ದೃಷ್ಟಾತನ [ನಾನು ನೋಡುವವನು] ಇದು ಹೋದ ಕೂಡಲೇ ಅನನ್ಯತೆ [ಏಕರೂಪತ್ವ, ಅಭಿನ್ನತ್ವ] ಲಭಿಸುವದು. ಇಲ್ಲಿ ದೃಷ್ಟಾ ಇಲ್ಲದಲೇ ಅನುಭವ ಬರುವದು. ಮತ್ತು ವೃತ್ತಿಶೂನ್ಯ ಅವಸ್ಥೆ ಬರುವದು. ಇದೇ ಸರ್ವೋತ್ತಮ ಅನುಭವವಿರುವದು.

### ದಶಕ ೧೧. ಸಮಾಸ ೯. ಉಪದೇಶ ನಿರೂಪಣ (ನುಡಿ ೨೫)

ಕರ್ಮ ಮಾಡದ ಹೊರತು ಗತ್ಯಂತರವಿಲ್ಲ. ಚನ್ನಾಗಿ ಕರ್ಮ ಮಾಡಬೇಕು. ಮಧ್ಯದಲ್ಲಿ ಅಡಚಣಿ ಬಂದದ್ದಾದರೆ ಭಗವಂತನನ್ನು ಸ್ಮರಿಸಬೇಕು. ಆ ಭಗವಂತ ಹೇಗಿರುವನೆಂಬುದನ್ನು ವಿವೇಕದಿಂದ ಗುರುತಿಸಬೇಕು. ಜೀವನದಲ್ಲಿ ಪ್ರಥಮಕ್ಕೆ ಕರ್ಮದ ಪ್ರಸಂಗ ಬರುವದು. ಮನುಷ್ಯನಿಗೆ ಕರ್ಮ ಮಾಡಲೇಬೇಕಾಗುತ್ತದೆ. ಕರ್ಮವನ್ನು ಉತ್ತಮ ರೀತಿಯಿಂದ ಮಾಡಬೇಕು. ಕರ್ಮದಲ್ಲಿ ಏನಾದರೂ ದೋಷ ಅಥವಾ ಕೊರತೆ ಉಂಟಾದರೆ ಆಗ ಅದನ್ನು ಮಾಡಲು ವಿಘ್ನಗಳು ನಿರ್ಮಾಣವಾಗುವವು. [೧] ಆದ್ದರಿಂದ ತಿಳಿಯಿರಿ. ನಾವು ಕರ್ಮವನ್ನು ಆರಂಭಿಸಿದೆವು. ಅದರ ಪೈಕಿ ಸ್ವಲ್ಪು ಉತ್ತಮ ಪ್ರಕಾರದಿಂದ ಪಾರುಗಂಡಿತು. [ಪೂರೈಸಿತು]. ಆದರೆ ಮಧ್ಯದಲ್ಲಿ ಏನಾದರೂ ಅಡಚಣೆ ಬಂದಿತೆಂದರೆ ಆಗ ಎಲ್ಲೆಲ್ಲಿ ಅಡಚಣೆಗಳು ಬರುವವೋ ಅಲ್ಲಲ್ಲಿ ನಾವು ಭಗವಂತನ ಸ್ಮರಣೆ ಮಾಡಬೇಕು. [೨] ಆ ಭಗವಂತ ಇರುವದಾದರೂ ಹೇಗೆ? ಇದರ ಬಗ್ಗೆ ಸೂಕ್ಷ್ಮ ವಿಚಾರ ಮಾಡಬೇಕು. ಸಂಧ್ಯಾ ಮಾಡುವಾಗ ಮೊದಲಿಗೆ ಇಪ್ಪತ್ನಾಲ್ಕು ಹೆಸರುಗಳಿಂದ ಭಗವಂತನ ಸ್ಮರಣೆಯನ್ನು ಮಾಡುವರು. [೩] ಪರಂತು, ಅವನಿಗೆ ಕೇವಲ ಇಪ್ಪತ್ನಾಲ್ಕೇ ಹೆಸರುಗಳಿರುವವೆಂದು ಅನ್ನಲಾಗದು. ಅವನಿಗೆ ಸಾವಿರಾರು ಹೆಸರುಗಳಿರುವವು. ಇಷ್ಟೇ ಏಕೆ? ಅನಂತ ಹೆಸರುಗಳು ಇರುವವು. ಹೀಗಿದ್ದೂ ಅವನು ಪುನಃ ಅನಾಮಿ [ಹೆಸರು ರಹಿತ] ಇರುವನು. ಸರ್ವ ಹೆಸರುಗಳ ಆಚೆಗೆ ಇರುವನು. ಹಾಗಾದರೆ ಅವನು ನಿಜವಾಗಿಯೂ ಹೇಗಿರುವನು? ಇದನ್ನು ನಿಮ್ಮ ವಿವೇಕಯುಕ್ತ ಸೂಕ್ಷ್ಮ ವಿಚಾರದಿಂದ ನೀವು ನಿಮ್ಮ ಅಂತರ್ಮನದಲ್ಲಿ ಗುರುತಿಸಿರಿ. [೪]

ಬ್ರಾಹ್ಮಣ ಸ್ನಾನಸಂಧ್ಯಾ ಕರೂನ ಆಲಾ । ಮಗ ತೋ ದೇವಾರ್ಚನಾಸ ಬೈಸಲಾ।
ಯೆಥಾಸಾಂಗ ತೋ ಪೂಜಿಲಾ । ಪ್ರತಿಮಾದೇವೋ ॥೫॥

ನಾನಾ ದೇವಾಚ್ಯಾ ನಾನಾ ಪ್ರತಿಮಾ । ಲೋಕ ಪೂಜಿತೀ ಧರೂನ ಪ್ರೇಮಾ ।
ಜ್ಯಾಚ್ಯಾ ಪ್ರತಿಮಾ ತೋ ಪರಮಾತ್ಮಾ। ಕೈಸಾ ಆಹೆ ॥೬॥

ಐಸೇ ವೋಳಖಿಲೇ ಪಾಹಿಜೆ । ವೋಳಖೋನ ಭಜನ ಕೀಜೆ ।
ಜೈಸಾ ಸಾಹೇಬ ನಮಸ್ಕಾರಿಜೇ । ಪೊಳಖಿಲ್ಯಾ ಉಪರೀ ॥೭॥

ತೈಸಾ ಪರಮಾತ್ಮಾ ಪರಮೇಶ್ವರ । ಬರಾ ವೋಳಖಾವಾ ಪಾಹೋನ ವಿಚಾರ ।
ತರೀಚ ಪಾವಿಜೆ ಪಾರ । ಭ್ರಮಸಾಗರಾಚಾ ॥೮॥

ಪೂಜಾ ಘೇತಾತೀ ಪ್ರತಿಮಾ । ಆಂಗಾ ಯೇತೋ ಅಂತರಾತ್ಮಾ ।
ಅವತಾರೀ ತರೀ ನಿಜಧಾಮಾ । ಯೇಊನ ಗೇಲೇ ॥೯॥

ಪರೀ ತೇ ನಿಜರೂಪೇ ಅಸತೀ । ತೇ ನಿಜರೂಪ ತೇ ಜಗಜ್ಜ್ಯೋತೀ ।
ಸತ್ವಗುಣ ತಯೇಸ ಮ್ಹಣತೀ । ಜಾಣತೀ ಕಳಾ ॥೧೦॥

ತಯೇ ಕಳೇಚೆ ಪೋಟೀ । ದೇವ ಅಸತೀ ಕೋಟ್ಯಾನುಕೋಟೀ ।
ಯಾ ಅನುಭವಾಚ್ಯಾ ಗೋಷ್ಟೀ । ಪ್ರತ್ಯಯೇ ಪಾಹಾವ್ಯಾ ॥೧೧॥

ದೇಹಪುರಾಮಧೇ ಈಶ । ಮ್ಹಣೋನ ತಯಾ ನಾಂವ ಪುರುಷ ।
ಜಗಾಮಧೇ ಜಗದೀಶ । ತೈಸಾ ವೋಳಖಾವಾ ॥೧೨॥

ಜಾಣೀವರೂಪೇ ಜಗದಾಂತರೇ । ಪ್ರಸ್ತುತ ವರ್ತತೀ ಶರೀರೇ ।
ಅಂತಃಕರಣವಿಷ್ಣು ಯೇಣೇ ಪ್ರಕಾರೇ । ವೋಳಖಾವಾ ॥೧೩॥

ತೋ ವಿಷ್ಣು ಆಹೆ ಜಗದಾಂತರೀ । ತೋ ಚಿ ಆಪುಲೇ ಅಂತರೀ ।
ಕರ್ತಾ ಭೋಕ್ತಾ ಚತುರೀ । ಅಂತರಾತ್ಮಾ ವೋಳಖಾವಾ ॥೧೪॥

ಒಬ್ಬ ಬ್ರಾಹ್ಮಣನು ನದಿಯಲ್ಲಿ ಸ್ನಾನ ಸಂಧ್ಯಾ ಮಾಡಿಕೊಂಡು ಬಂದನು. ಮತ್ತು ಮನೆಯಲ್ಲಿ ದೇವರ ಪೂಜೆ ಮಾಡಲು ಕುಳಿತನು. ದೇವರ ಪ್ರತಿಮೆಯ ಪೂಜೆಯನ್ನು ಯಥಾಸಾಂಗವಾಗಿ ಮಾಡಿದನು. [೫] ಅನೇಕ ದೇವರ ಅನೇಕ ತರತಹದ ಪ್ರತಿಮೆಗಳು ಇರುವವು. ಜನರು ಅಗದೀ ಪ್ರೇಮದಿಂದ ಇವುಗಳ ಪೂಜೆಯನ್ನು ಮಾಡುವರು. ಆದರೆ ಯಾವ ದೇವರದು-ಯಾವ ಪ್ರತಿಮೆ ಇರುವದೋ ಆ ಪರಮಾತ್ಮಾ ಹೇಗಿರುವನು? [೬] ಇದನ್ನು ನಾವು ತಿಳಿಯಬೇಕು. ನಮ್ಮ ಮೇಲಿನ ಅಧಿಕಾರಿಗಳನ್ನು ನಾವು ಗುರುತಿಸಿದ ಕೂಡಲೇ ನೋಡಿದ ಕೂಡಲೇ ಯಾವ ಪ್ರಕಾರ ನಾವು ನಮಸ್ಕಾರ ಮಾಡುವೆವೋ ಅದರಂತೆಯೇ ಪರಮಾತ್ಮನನ್ನು ಗುರುತಿಸಿ ತಿಳಿದು ಅವನ ಭಕ್ತಿ ಮಾಡಬೇಕು. [೭] ಚನ್ನಾಗಿ ವಿಚಾರ ಮಾಡಿ ಪರಮಾತ್ಮಾ ಅಥವಾ ಪರಮೇಶ್ವರನನ್ನು ಚನ್ನಾಗಿ ಗುರುತಿಸಿ ತಿಳಿಯಬೇಕು. ಅಂದರೆ ಮಾತ್ರ ಈ ದೃಶ್ಯದಿಂದ ತುಂಬಿದ ಸಂಸಾರ ರೂಪೀ ಭ್ರಮ ಸಮುದ್ರವನ್ನು ದಾಟಿ ಪಾರಾಗಲು ಸಾಧ್ಯವಾಗುವದು. [೮] ಸರ್ವದರಲ್ಲಿ ಅಂತರ್ಯಾಮಿತನದಿಂದ ಇರುವವನೇ ಖರೇ ದೇವರು. ದೇಹದಲ್ಲಿ ಸಹ ಅವನೇ ಇರುವನು. ಜಗತ್ತಿನಲ್ಲೆಲ್ಲ ಕಡೆಗೂ ಅವನೇ ಇರುವನು. ನಾವು ಪ್ರತಿಮೆಯ ಪೂಜೆಯನ್ನು ಮಾಡುವೆವು. ಆದರೆ ಇದರಿಂದ ನಮ್ಮ ಅಂತರಂಗದಲ್ಲಿಯ ಅಂತರಾತ್ಮಾ ಪ್ರಕಟವಾಗುವನು. ಅವತಾರೀ ಪುರುಷರಲ್ಲಿ ಆ ಅಂತರಾತ್ಮನು ಮೇಲಿಂದ ಮೇಲೆ ಪ್ರಕಟವಾಗುತ್ತಲಿರುವನು. ಅಂತರಾತ್ಮನಿಂದ ಇವರು [ಅವತಾರಿ ಪುರುಷರು] ಕೆಳಗೆ ಬರುವರು. ಮತ್ತು ಪುನಃ ಅವತಾರ ಮುಗಿಸಿ ಮರತ ಅಂತರಾತ್ಮಾನಲ್ಲಿಯೇ ಹೋಗುವರು. ನಾವು ರಾಮಕೃಷ್ಣಾದಿ ಅವತಾರೀ ಪುರುಷರ ಪ್ರತಿಮೆಯ ಪೂಜೆಯನ್ನು ಮಾಡುವೆವು. ಈ ಪೂಜೆಯು ಕೊನೆಗೆ ಅಂತರಾತ್ಮನಿಗೆ ಸಲ್ಲುವದು. ನಮ್ಮ ಅಂತಃಕರಣದಲ್ಲಿಯ ಅಂತರಾತ್ಮನನ್ನು ಜಾಗ್ರತಗೊಳಿಸುವದು. ಮತ್ತು ಪ್ರಕಟಮಾಡುವದೇ ದೇವರ ಪೂಜೆಯ ಕಾರ್ಯವಿರುವದು. ಪ್ರತಿಮೆಯಿಂದ ಮನಕ್ಕೆ ಒಂದು ತರಹದ ಆಧಾರ ಆಶ್ರಯ ಅವಲಂಬನವೆಂದು ಉಪಯೋಗ ಬೀಳುವದು. ಅಂತರಾತ್ಮಾ ಇವನೇ ಯಾವತ್ತೂ ಅವತಾರಗಳಿಗೆ ವಾಸಿಸಲು ಆಶ್ರಯ ಉಳ್ಳವನಾಗಿರುವನು. ಅಂತೆಯೇ ಇವನಿಗೆ ನಿಜಧಾಮನೆಂದು ಅನ್ನುವರು. [೯] ಅವತಾರೀ ಪುರುಷರು ಸ್ವಸ್ವರೂಪದಿಂದ ಕಾಯಂ ಆಗಿ ಇರುವರು. ಇವರು ಚಿರಂಜೀವರಿರುವರು. ಜಗಜ್ಜ್ಯೋತಿ ಇದು ಅದರ ರೂಪವು. ಇದಕ್ಕೆ ಶುದ್ಧಸತ್ವಗುಣ ಅಥವಾ ಜ್ಞಾನಕಲಾ ಎಂದು ಅನ್ನುವರು. ಅಂತರಾತ್ಮಾ ಮತ್ತು ಜಗಜ್ಜ್ಯೋತಿ ಇವೆರಡೂ ಒಂದೇ ಆಗಿರುವವು. [೧೦] ಈ ಜ್ಞಾನಕಲೆಯ ಹೊಟ್ಟೆಯಲ್ಲಿ ಕೋಟ್ಯಾನುಕೋಟಿ ದೇವರಿರುವರು.ಈ ಮಾತು ನನ್ನಅನುಭವಕ್ಕೆ ಬಂದ ಖರೇ ಮಾತಾಗಿದೆ. ನೀವೂ ಸ್ವತಃ ಅನುಭವ ತೆಗೆದುಕೊಂಡು ಅದನ್ನು ತಿಳಿದುಕೊಳ್ಳಿರಿ.[೧೧] ಅಂತರಾತ್ಮನು ಈ ದೇಹರೂಪದ ನಗರ ಅಥವಾ ಪುರದಲ್ಲಿ ಇರುವನು.ಆದ್ದರಿಂದ ಇವನಿಗೆ ಪುರುಷಅನ್ನುವರು.ಇದೇ ರೀತಿಯಲ್ಲಿ ಜಗದಲ್ಲಿ ಇರುವ ಜಗದಂಶನಾದ ಅಂತರಾತ್ಮನಿಗೆ ಜಗದೀಶ ಅನ್ನುವರು. ಇದನ್ನು ನೀವು ತಿಳಿಯಬೇಕು.[೧೨]ಈ ಜಗದ ಅಂತರ್ಯಾಮದಲ್ಲಿ ಶುದ್ಧ ತಿಳುವಳಿಕೆ [ಜ್ಞಾನ ಕಲೆ]ಯು ವಾಸಮಾಡುವದು, ಇದೇ ಎಲ್ಲ ಶರೀರಗಳಿಗೂ ಹಾಲಚಾಲ ಮಾಡುವ ಪ್ರೇರಣೆಕೊಡುವದು. ಈ ತಿಳುವಳಿಕೆ (ಜ್ಞಾನ ಕಲೆ) ಅಂದರೇನೆ ವಿಷ್ಣು ಅಥವಾ ವಿಶ್ವದ ಅಂತಃಕರಣವಾಗಿದೆ. ಎಂದು ತಿಳಿಯಬೇಕು. (೧೩) **ಜಗತ್ತಿನಲ್ಲಿ ಇರುವ (ಅರಿವು) ತಿಳುವಳಿಕೆಯೇ ನಮ್ಮ ಅಂತಃಕರಣದಲ್ಲಿ ವಾಸ ಮಾಡುವದು. ಅರ್ಥಾತ್ ಅನೇಕದಲ್ಲಿ ಏಕತನ (ಒಂದೇ) ದಿಂದ ಇದು ಕಾರ್ಯ ಮಾಡುವದು. ಆದರೆ ಕೇವಲ ದೇಹ ಬುದ್ಧಿಯಿಂದಾಗಿ ನಾವು ದೇಹದ ಅಭಿಮಾನ ಹಿಡಿಯುವೆವು. ಮತ್ತು ಬೇರೆತನದಿಂದಲೇ ಸಾಗುವೆವು. (ಜೀವಿಸುವೆವು)** ಜಗದಲ್ಲಿ ಇರುವಂಥ ವಿಷ್ಣುವೇ ನಮ್ಮ ಅಂತಃಕರಣದಲ್ಲಿಯೂ ಇರುವನು. ಇವನೇ ಅಂತರಾತ್ಮನಾಗಿರುವನು. ಇವನೇ ಖರೇ ಕರ್ತಾ ವ ಭೋಕ್ತಾ ಇರುವನೆಂಬುದನ್ನು ಚತುರರಾದವರು (ಗುರುತಿಸಿಕೊಳ್ಳಬೇಕು), ತಿಳಿಯಬೇಕು. (೧೪)

ಐಕೆ ದೇಖೇ ಹುಂಗೆ ಚಾಖೇ । ಜಾಣೋನ ವಿಚಾರೇ ವ್ರೊಳಖೇ ।
ಕಿತ್ಯೇಕ ಆಪುಲೇ ಪಾರಿಖೇ । ಜಾಣತಾಹೇ ॥೧೫॥

ಯೇಕ ಚಿ ಜಗಾಂಚಾ ಜಿವ್ಹಾಳಾ । ಪರೀ ದೇಹಲೋಭಾಚಾ ಆಡತಾಳಾ ।
ದೇಹಸಮಂಧೇ ವೇಗಳಾ । ಅಭಿಮಾನ ಧರೀ ॥೧೬॥

ಉಪಜೆ ವಾಢೆ ಮರೆ ಮಾರೀ । ಜೈಶಾ ಉಚಲತೀ ಲಹರೀಮರೀ ಲಹರೀ ।
ಚಂಚಳ ಸಾಗರೀ ಭರೋವರೀ । ತ್ರೈಲೋಕ್ಯ ಹೋತ ಜಾತೇ ॥೧೭॥

ತ್ರೈಲೋಕಾ ವರ್ತವಿತೋ ಯೇಕ । ಮ್ಹಣೌನ ತ್ರೈಲೋಕ್ಯ ನಾಯೆಕ ।
ಐಸಾ ಪ್ರತ್ಯಯಾಚಾ ವಿವೇಕ । ಪಾಹಾನಾ ಕೈಸಾ ॥೧೮॥

ಐಸಾ ಅಂತರಾತ್ಮಾ ಬೋಲಿಲಾ । ಪರೀ ತೋ ಹಿ ತತ್ವಾಮಧೇ ಆಲಾ ।
ಪುಢೇ ವಿಚಾರ ಪಾಹಿಜೆ ಕೇಲಾ । ಮಹಾವಾಕ್ಯಾಚಾ ॥೧೯॥

ಆಧೀ ದೇಖಿಲಾ ದೇಹಧಾರೀ । ಮಗ ಪಾಹಾವೇ ಜಗದಾಂತರೀ ।
ತಯಾಚೆನಿಯಾ ಉಪರೀ । ಪರಬ್ರಹ್ಮ ಪಾವೇ ॥೨೦॥

ಪರಬ್ರಹ್ಮಾಚಾ ವಿಚಾರ । ಹೋತಾ ನಿವಡೆ ಸಾರಾಸಾರ ।
ಚಂಚಳ ಜಾಈಲ ಹಾ ನಿರ್ಧಾರ । ಚುಕೇನಾ ಕೀ ॥೨೧॥

ಉತ್ಪತ್ತಿ ಸ್ಥಿತಿ ಸಂಮ್ಹಾರ ಜಾಣ । ತ್ಯಾಹೂನ ವೇಗಳಾ ನಿರಂಜನ ।
ಯೇಥೇ ಜ್ಞಾನಾಚೇ ವಿಜ್ಞಾನ । ಹೋತ ಆಹೆ ॥೨೨॥

ಅಷ್ಟದೇಹ ಥಾನಮಾನ । ಜಾಣೋನ ಜಾಲಿಯಾ ನಿರ್ಶನ ।
ಪುಢೇ ಉರೇ ನಿರಂಜನ । ವಿಮಳ ಬ್ರಹ್ಮ ॥೨೩॥

ವಿಶ್ವವನ್ನೇ ವ್ಯಾಪಿಸಿರುವ ಅಂತರಾತ್ಮಾ ಯಾವತ್ತೂ ಶರೀರದಿಂದ ಕೇಳುವನು, ನೋಡುವನು. ವಾಸನೆ ತೆಗೆದುಕೊಳ್ಳುವನು, ರುಚಿ ಪಡೆಯುವನು. ತಿಳಿದು ಯೋಗ್ಯ ವಿಚಾರ ಮಾಡುವನು. ಮತ್ತು ತಿಳಿಯುವನು. ನಮ್ಮವರಾರು ? ಮತ್ತು ನಮ್ಮವರಲ್ಲದವರಾರು ? ಇದನ್ನು ಸಹ ಇವನೇ ತಿಳಿಯುವನು. (೧೫) ನಿಜವಾಗಿ ಹೇಳುವದಾದರೆ ಜಗತ್ತಿನ ಅಂತಃಕರಣ ಒಂದೇ ಇರುವದು. ಆದರೆ ದೇಹದ ಆಸಕ್ತಿಯಿಂದಾಗಿ ಅದು ಹಾಗೆ ಅಂದರೆ ಇದ್ದದ್ದು ಇದ್ದಂತೆ ನಮ್ಮ ಅನುಭವಕ್ಕೆ ಬರುವದಿಲ್ಲ. ದೇಹದ ಅಭಿಮಾನ ಆಸಕ್ತಿಯಿಂದ ಮನುಷ್ಯನು ಬೇರೆ ರೀತಿಯ ಅಭಿಮಾನ ಹಿಡಿಯುವನು. ನಾನು ದೇಹವೇ ಇರುವೆನು,ಅನ್ನುವ ಅಭಿಮಾನದಿಂದ ಮನುಷ್ಯನು ಬೇರೆ ರೀತಿಯ ಜೀವನ ಸಾಗಿಸುವನು, [೧೬] ಸಾಗರದ ನೀರಿನ ಮೇಲೆ ಯಾವ ಪ್ರಕಾರ ತೆರೆಗಳ ಮೇಲೆ ತೆರೆಗಳು ಬರುತ್ತಲೇ ಇರುವವೋ ಅದರಂತೆ ಈ ತಿಳುವಳಿಕೆಯ [ಅರಿವಿನ] ರೂಪದ ಸಾಗರದಲ್ಲಿ ದೇಹಗಳ ಅನಂತ ತೆರೆಗಳು ಬರುವವು. ಮತ್ತು ಹೋಗುವವು. ಪ್ರಾಣಿಗಳ ದೇಹ ಹುಟ್ಟುವದು, ಬೆಳೆಯುವದು, ಸಾಯುವದು ಮತ್ತು ಕೊಲ್ಲುವದು, ಹೊಡೆಯುವದು ಈ ಅಂತರಾತ್ಮನ ಸಾಗರದಲ್ಲಿ ಇಂಥ ಅನೇಕ ವಿಶ್ವ ಉತ್ಪನ್ನವಾಗುವವು. ಮತ್ತು ಲಯ ಹೊಂದುವವು [೧೭] ಈ ಪ್ರಚಂಡವಾದ ತ್ರೈಲೋಕ್ಯವನ್ನು ನಡೆಯಿಸುವನೆಂದೇ ಈ ಅಂತರಾತ್ಮನಿಗೆ ತ್ರೈಲೋಕ್ಯ ನಾಯಕನೆಂದು ಅನ್ನುವರು. ಇವನ ಬಗ್ಗೆ ವಿವೇಕ ವಿಚಾರದಿಂದ ಅನುಭವ ಪಡೆದುಕೊಂಡಾದರೂ ನೋಡಿರಿ. [೧೮] **ಈಗ ಈ ಅಂತರಾತ್ಮನು ವಿಲಕ್ಷಣ ಮತ್ತು ಅದ್ಭುತನೇನೋ ಇರುವದು ನಿಜವಾಗಿದ್ದರೂ ಸಹ ಇವನೂ ಮಾಯೆಯ ಕಕ್ಷೆಯಲ್ಲಿ ಬರುವನು. ಇವನ ಆಚೆಗೆ ಇರುವಂಥ ಪರಬ್ರಹ್ಮನ ವರೆಗೂ ನಾವು ಹೋಗಲಿಕ್ಕೇಬೇಕು. ಆದ್ದರಿಂದ ಪ್ರಥಮದಲ್ಲಿ ದೇಹದಲ್ಲಿಯ ಸ್ವರೂಪ ಗುರುತಿಸಬೇಕು. ಆ ಮೇಲೆ ಜಗತ್ತಿನಲ್ಲಿಯ ಸ್ವರೂಪವನ್ನು ತಿಳಿಯಬೇಕು.ಹಾಗೂ ಕೊನೆಗೆ ನಿರ್ಮಲ ನಿರ್ವಿಕಾರನಾದ ಪರಬ್ರಹ್ಮನ ಅನುಭವ ಪಡೆಯಬೇಕು:** ಇಲ್ಲಿಯ ವರೆಗೆ ಅಂತರಾತ್ಮನ ಬಗ್ಗೆ ಇಷ್ಟೆಲ್ಲ ವರ್ಣನೆ ಮಾಡಿ ಹೇಳಿದ್ದಾಯಿತು. ಇದೆಲ್ಲ ನಿಜವಿದ್ದರೂ ಇವನೂ ಸಹ ಮಾಯೆಯ ಪ್ರಾಂತದಲ್ಲಿಯೇ ಬರುವನು. ಆದ್ದರಿಂದ ಇದರ ಮುಂದೆ ಒಂದು ಹೆಜ್ಜೆ ಇಟ್ಟು ತತ್ತ್ವಮಸ್ಯಾದಿ ಮಹಾ ವಾಕ್ಯದ ಬಗ್ಗೆ ಅಂದರೆ ಶುದ್ಧ ಬ್ರಹ್ಮದ ಬಗ್ಗೆ ವಿಚಾರ ಮಾಡುವದು ಅತಿ ಅವಶ್ಯವಿರುವದು[೧೯] ಮೊಟ್ಟ ಮೊದಲು ನಮ್ಮ ದೇಹದಲ್ಲಿಯ ಸ್ವಸ್ವರೂಪವನ್ನು ಗುರುತಿಸಿ ಅನುಭವ ಪಡೆಯಬೇಕು. ಆಮೇಲೆ ವಿಶ್ವದಲ್ಲಿ ವ್ಯಾಪಿಸಿ ಇರುವಂಥ ಈಶ್ವರ ಸ್ವರೂಪವನ್ನು ತಿಳಿದು ಅದರ ಅನುಭವ ಪಡೆಯಬೇಕು. ಈ ಅನುಭವವನ್ನು ಹಿಂದಕ್ಕೆ ಸರಿಸಿ ಮುಂದೆ ಹೋದಾಗ ಶುದ್ಧ ಪರಬ್ರಹ್ಮವು ಅನುಭವಕ್ಕೆ ಬರುವದು. [೨೦] ಶುದ್ಧ ನಿರ್ವಿಕಾರ ಪರಬ್ರಹ್ಮದ ಸಾಕ್ಷಾತ್ಕಾರವಾಯಿತೆಂದರೆ ಶಾಶ್ವತ, ಅಶಾಶ್ವತದ ಗುರುತು ಸರಿಯಾಗಿ ತಿಳಿಯುವದು. ಅನಂತರ ಅಶಾಶ್ವತವಾದದ್ದೆಲ್ಲವೂ [ನಶ್ವರ]ನಾಶವಂತ ಇರುವದು.ಅನ್ನುವ ನಿಶ್ಚಯದ ಅನುಭವ ಆಗುವದು ಆ ಮೇಲೆ ಎಂದೂ ಅದು ಬದಲಾಗುವದಿಲ್ಲ. ಅಥವಾ ಏನು ಮಾಡಿದರೂ ಇದು ಅಲ್ಲಾಡುವದಿಲ್ಲ. [೨೧] ಯಾವುದು ನಶ್ವರ ಇರುವದೋ ಅದಕ್ಕೆ ಉತ್ಪತ್ತಿ, ಸ್ಥಿತಿ, ಸಂಹಾರ ಈ ವಿಕಾರಗಳು ಇರುವವು. ನಿರಂಜನ ಬ್ರಹ್ಮವು ಇದಕ್ಕಿಂತ ಅಗದೀ ಬೇರೆ ಇರುವದು. ಇದರಲ್ಲಿ ಅಂದರೆ ನಿರಂಜನ ಬ್ರಹ್ಮದಲ್ಲಿ ಜ್ಞಾನದ ಪರ್ಯವಸಾನ(ಅಂತ್ಯ)ವು ವಿಜ್ಞಾನದಲ್ಲಿ ಆಗುವದು [೨೨] ಪಿಂಡ-ಬ್ರಹ್ಮಾಂಡದವು ಎಂಟು ದೇಹಗಳು, ಮತ್ತು ಸ್ಥಳ - ಕಾಲಗಳಿಂದ ಎಣಿಸಲ್ಪಟ್ಟ.(ಗಣಿಸಿದ,ದೃಶ್ಯ ವಿಶ್ವವನ್ನು ಗುರುತಿಸಿ (ತಿಳಿದು)ಇದರ ಲಯ ಮಾಡಿದ ನಂತರ, ಆಮೇಲೆ ಮುಂದೆ ಕೇವಲ ನಿರಂಜನ ವಿಮಲ ಬ್ರಹ್ಮವು ಮಾತ್ರ ಉಳಿಯುವದು. [೨೩]

ವಿಚಾರೇ ಚಿ ಅನನ್ಯ ಜಾಲಾ । ಸಾಹಾಣಾರಾವಿಣ ಪ್ರತ್ಯಯು ಆಲಾ ।
ತೇ ಹಿ ವೃತ್ತಿ ನಿವೃತ್ತೀಲಾ । ಬರೇ ಸಾಹಾ ॥೨೪॥

ಯೇಥೇ ರಾಹಿಲಾ ವಾಚ್ಯಾಂಶ । ಸಾಹೋನ ಸಾಂಡಿಲಾ ಲಕ್ಷ್ಯಾಂಶ ।
ಲಕ್ಷ್ಯಾಂಶಾಸರಿಸಾ ವೃತ್ತಿಲೇಶ । ತೋ ಹಿ ಗೇಲಾ ॥೨೫॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
''ಉಪದೇಶ ನಿರೂಪಣ'' ನಾಮ ಸಮಾಸ ನವಮ ॥

**ಹೆಚ್ಚು ಹೆಚ್ಚು ಚಿಂತನ ಮಾಡಿ ಅನನ್ಯನಾಗಬೇಕು. "ನಾನು" ಇದನ್ನು ಇಲ್ಲದಾಗಿಸಿ ಅನುಭವ ಪಡೆಯಬೇಕು. ಮತ್ತು ವೃತ್ತಿಯನ್ನು ನಿವೃತ್ತಿ ಮಾಡಬೇಕು:–** ಯಾವ ಸಾಧಕನು ಅಖಂಡ ಮತ್ತು ನಿರಂತರ ಚಿಂತನದಿಂದ ಅಂತರಾತ್ಮನೊಂದಿಗೆ ಅನನ್ಯವಾಗುವನೋ ಅವನ [ಅಹಂ] "ನಾನು" ಅನ್ನುವದು ನಾಶವಾಗುವದು. "ನಾನು" ಅನ್ನುವದು ಅಥವಾ "ನಾನು ತಿಳಿದವ" ಅನ್ನುವದು ಅಥವಾ "ನಾನು ನೋಡಿದೆ" ಅನ್ನುವದು ಇವೆಲ್ಲ ಇಲ್ಲದಾಗಿ ಅವನಿಗೆ ಆತ್ಮಸ್ವರೂಪದ ಸಾಕ್ಷಾತ್ ಅನುಭವ ಬರುವದು. ಪರಂತು ಅನುಭವ ಬರುವದೂ ಒಂದು ವೃತ್ತಿಯೇ ಇರುವದು. ಅನಂತರ ಈ ವೃತ್ತಿಯೂ ಸಹ ಇಲ್ಲದಾಗಿ ವೃತ್ತಿ ಶೂನ್ಯ ಅವಸ್ಥೆ ಬರುವದು. ಇದೇ ಸರ್ವ ಶ್ರೇಷ್ಠ ಸ್ಥಿತಿಯೆಂದು ತಿಳಿಯಬೇಕು. [೨೪] ಪ್ರಥಮದಲ್ಲಿ ಶಬ್ದ ಕೇಳುವ ಅನುಭವ ಬಂದನಂತರ ಈ ಶಬ್ದಗಳ ಅರ್ಥ ಆಕಲನವಾದದ್ದರ ಅನುಭವ, ಅನಂತರ ಅರ್ಥದಿಂದ ಅಭಿಪ್ರೇತ (ಉದ್ದೇಶ)ವಿರುವ ವಸ್ತುವಿನ ಅನುಭವ ಮತ್ತು ಕೊನೆಯಲ್ಲಿ ಅನುಭವ ಪಡೆಯುವ ವೃತ್ತಿಯ ಲಯ ಹೀಗೆ ಈ ಸಾಧನದ ಮೆಟ್ಟಲು ಇರುವವು. ಆದ್ದರಿಂದ ವಾಚ್ಯಾಂಶವು ಹಿಂದೆ ಉಳಿಯಿತು. ವಸ್ತುವಿನ ಸಾಕ್ಷಾತ್ ಅನುಭವ ಬಂದದ್ದರಿಂದ ಲಕ್ಷ್ಯಾಂಶವೂ ಹಿಂದೆ ಉಳಿಯಿತು. ಮತ್ತು ಕೊನೆಗೆ ವೃತ್ತಿಯೂ ಸಹ ಇಲ್ಲದಾಯಿತು. (೨೫)

ಶ್ರೀ ದಾಸಬೋಧದಲ್ಲಿಯ ಹನ್ನೊಂದನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ಉಪದೇಶ ನಾಮ"ವೆಂಬ ಒಂಭತ್ತನೆಯ ಸಮಾಸವು ಮುಗಿದುದು.

## ದಶಕ ೧೧. ಸಮಾಸ ೧೦. ನಿಸ್ಪೃಹ ವರ್ತಣೂಕ (ನಡವಳಿಕೆ) (ನುಡಿ ೨೫)

ಮಾನವೀ ಜೀವನದಲ್ಲಿ ವ್ಯಕ್ತಿ, ಸಂಸ್ಕೃತಿ ಮತ್ತು ಸಮಾಜ ಸಂಸ್ಥೆ ಹೀಗೆ ಮೂರು ಅಂಗಗಳಿರುವವು. ಇವುಗಳಲ್ಲಿ ವ್ಯಕ್ತಿಯು ಎಲ್ಲಕ್ಕಿಂತ [ಶ್ರೇಷ್ಠನು] ಮಹತ್ವದವನು. ಸಾಮಾನ್ಯ ಜನ ಸ್ವಾರ್ಥಿ ಇರುವರು. ಇವನಿಗೆ ನಿಸ್ವಾರ್ಥತನದ ಆದರ್ಶವನ್ನು ತೋರಿಸುವ ಕೆಲಸ ಸಂಸ್ಕೃತಿ ಮಾಡುವದು. ಆದರೆ ಈ ಆದರ್ಶವು ಪ್ರತ್ಯಕ್ಷ ಆಚರಣೆಯಲ್ಲಿ ಬರುವಂತೆ ಆಸ್ಪದ ಮಾಡಿಕೊಡುವ ಕೆಲಸವನ್ನು ಸಮಾಜ ಸಂಸ್ಥೆಗಳು ಮಾಡುವವು. ಶ್ರೀ ಸಮರ್ಥರು ಅನ್ನುವದೇನಂದರೆ, ಯಾವೊಬ್ಬ ವ್ಯಕ್ತಿಯ ಜೀವನದಲ್ಲಿ ನಿಃಸ್ವಾರ್ಥತನವು ಒಮ್ಮೆ ಸಾಕಾರಗೊಂಡದ್ದಾದರೆ ಇದರಿಂದಾಗಿ ಸಮಾಜದ ಸರ್ವ ಮಟ್ಟ ಏರುವದು. ಸ್ವತಃ ಶ್ರೀ ಸಮರ್ಥರು ಅದ್ಭುತ, ಅತಿಶಯ ನಿಃಸ್ವಾರ್ಥಿಗಳಿದ್ದರು. ಇವರು ಬಹಳಷ್ಟು ಲೋಕ ಸಂಗ್ರಹ ಮಾಡಿದರು. ಇದರ ಪ್ರತ್ಯಕ್ಷ ಅನುಭವವನ್ನು ಈ ಸಮಾಸದಲ್ಲಿ ಹೇಳಿದ್ದಾರೆ. ಸಮಾಜವನ್ನು ದೇಹ ಬುದ್ಧಿಯ ಅಥವಾ ಸ್ವಾರ್ಥದ ಬಲೆ (ಜಾಳಿಗೆ) ಯಿಂದ ಹೊರ ತೆಗೆಯುವ ಪ್ರಯತ್ನ ಮಾಡುವಂಥ ಮಹಂತರಲ್ಲಿ ಮುಂದಿನ ಲಕ್ಷಣಗಳಿರಬೇಕು. ಕ್ರಮದಿಂದ ಮತ್ತು ಮಹತ್ವದಿಂದ ತೋರುವ

ಮೊದಲನೆಯ ಗುಣ ಯಾವುದೆಂದರೆ ಮಹಂತನು ಸ್ವತಃ ಆತ್ಮಸಾಕ್ಷಾತ್ಕಾರ ಹೊಂದಿದವನಾಗಿರಬೇಕು. ಅಂತರಾತ್ಮನ ಸಾಕ್ಷಾತ್ಕಾರ ಹೊಂದಿದವನಾಗಿರಬೇಕು. ಆ ಯಾವ ಅಂತರಾತ್ಮನ ಸಾಕ್ಷಾತ್ಕಾರ ಹೊಂದಿದ ಇವನು ಅವನಂತೆ ಅತ್ಯಂತ ದೊಡ್ಡ ಮನಸ್ಸಿನವನೂ ಮತ್ತು ಅನಾಸಕ್ತನೂ ಆದವನಿರಬೇಕು. ಇವನಿಗೆ ಏಕಾಂತದ ಬಗ್ಗೆ ಅತಿಶಯ ಒಲವಿರಬೇಕು-ಪ್ರೇಮವಿರಬೇಕು. ಕೇವಲ (ಫಕ್ತ) ಜನರಿಗೆ ಮಾರ್ಗದರ್ಶನ ಮಾಡುವ ಮಟ್ಟಿಗೆ ಇವನು ಸಮಾಜದಲ್ಲಿ ಕೂಡಿರಬೇಕು. ತಾನು ಯಾರು?-ಎಲ್ಲಿಯವನೆಂಬುದರ ಬಗ್ಗೆ ಜನಕ್ಕೆ ಮಾಹಿತಿ ಇರಬಾರದು. ಮತ್ತು ತಾನಾಗಿ ಹೇಳಬಾರದು. ನಿತ್ಯವೂ ಹೊಸ ಹೊಸ ಜನರನ್ನು ಹುಡುಕಿ ಅವರನ್ನು ಜಾಣ ಬುದ್ಧಿವಂತರನ್ನಾಗಿ ಮಾಡಬೇಕು. ಇದು ಮಹಂತನ ಎರಡನೆಯ ಗುಣವು. ಕೀರ್ತಿರೂಪದಿಂದ ಎಲ್ಲರಿಗೂ ಇವನು ಗೊತ್ತಿರಬೇಕು. ಜನರೊಂದಿಗೆ ಸಂಪರ್ಕ ಸಂಬಂಧ ಬಂದ ಮೇಲೆ ಜನರು ಮಹಂತನ ಬಗ್ಗೆ ಹೆಚ್ಚಿಗೆ ತಿಳಿಯಲು ಇವನನ್ನು ಪರೀಕ್ಷಿಸುವರು. ಆದರೆ ಇದೇನೂ ಆಶ್ಚರ್ಯದ ಮಾತಲ್ಲವೆಂದ ಮೇಲೆ ಅವರ ಪರೀಕ್ಷೆಯಲ್ಲಿ ತೇರ್ಗಡೆಯಾಗಬೇಕಾದರೆ ಸ್ವತಃದ ಬಗ್ಗೆ ಎಳ್ಳಷ್ಟೂ ಆಶೆ ಆಕಾಂಕ್ಷೆಗಳು, ಬೇಕು-ಬೇಡ ಅನ್ನುವ ಇಚ್ಛೆ, ಇವು ಇರದಂತೆ ವರ್ತನೆ ಇರಬೇಕು. ಇದು ಸ್ಪಷ್ಟವಾಗಿ ಮುಚ್ಚುಮರೆ ಇಲ್ಲದ ರೀತಿಯಲ್ಲಿ ಎದ್ದು ಕಾಣಿಸಬೇಕು. ಭಗವಂತನ ಕಥೆ-ಕೀರ್ತನೆ ಇವನ್ನು ಕ್ಷಣ ಸಹ ಬಿಡಬಾರದು. ಇದು ಮೂರನೆಯ ಗುಣವು. ಒಟ್ಟಿನಲ್ಲಿ ಉತ್ತಮ ಗುಣದ ಅಭ್ಯಾಸ ಮಾಡಬೇಕು. ಮತ್ತು ಇದನ್ನು ಜನರಿಗೆ ಕಲಿಸಬೇಕು. ಬಹು ದೊಡ್ಡ-ದೊಡ್ಡ ಜನಸಮುದಾಯ ಕೂಡಿಸಿ [ಸಂಘಟಿಸಿ] ಕಾರ್ಯದಲ್ಲಿ ತೊಡಗಿಸಬೇಕು. ಸತ್ಕಾರ್ಯ ಪ್ರವೃತ್ತರನ್ನಾಗಿ ಮಾಡಬೇಕು. ಇದು ನಾಲ್ಕನೆಯ ಗುಣವು. ತಾವು ಆರಂಭಿಸಿದ ಕಾರ್ಯ ಬಹಳಷ್ಟು ಜನಕ್ಕೆ ಹಿಡಿಸಿ ಅಲ್ಲಲ್ಲಿ ಲೋಕ ಸಮೂಹವು ಕಾರ್ಯ ಮಾಡಲಿಕ್ಕೆ ಪ್ರಾರಂಭವಾಯಿತೆಂದರೆ ಒಂದು ದೊಡ್ಡ ಕೆಲಸ ಸಿದ್ಧವಾಗ ಹತ್ತಿದೆ ಎಂದು ತಿಳಿಯಬೇಕು. ಸ್ವತಃ ಅವಿಶ್ರಾಂತ ಕಷ್ಟಪಡಬೇಕು. ಯಾವಾಗಲೂ ಕೆಲಸ ಬೇಗ ಮುಗಿಸುವದರ ಕಡೆಗೆ ಲಕ್ಷ್ಯವಿರಬೇಕು. ಅನೇಕ ಜನರನ್ನು ಉಪಾಸನಾ ಮಾರ್ಗಕ್ಕೆ ಹಚ್ಚಬೇಕು, ಇದು ಐದನೆಯ ಗುಣವು. ಸಮಾಜದಲ್ಲಿಯ ಎಲ್ಲ ಜನರೂ ಒಂದೇ ರೀತಿಯವರು ಇರುವದಿಲ್ಲ "ನಾನು ಏನು ಮಾಡಲಿ" ಅಂತಾ ಮನುಷ್ಯ ವಿಚಾರಿಸುವನು. ಆಗ ಅವನ ಯೋಗ್ಯತೆ (ಲಾಯಖಿ) ನೋಡಿಕೊಂಡು ಅದರಂತೆ ಅವನಿಗೆ ಕೆಲಸ ಹೇಳಬೇಕು. ಯಾವ ಯಾವನಿಗೋ, ಯಾವ ಯಾವುದೋ ಕೆಲಸವನ್ನು ಗೊತ್ತು ಗುರಿ ಇಲ್ಲದೆ ಹೇಳಿದರೆ ಕೆಲಸ ಗೊಂದಲಗೆಡುವದು. ಘೋಟಾಳೆ ಉಂಟು ಮಾಡುವದು. ಆದ್ದರಿಂದ ಲಾಯಖ (ಸರಿಯಾದ, ಯೋಗ್ಯನಾದ) ಮನುಷ್ಯನನ್ನು ಹುಡುಕಿ ತೆಗೆಯಬೇಕು ಮತ್ತು ಅವನಿಗೆ ಮಹಂತಿಯಲ್ಲಿ ಚನ್ನಾಗಿ ತಯಾರ ಮಾಡಬೇಕು, ಅಂಥವರನ್ನು ಬೇರೆ ಬೇರೆ ದೇಶದಲ್ಲಿ ಲೋಕ ಸಂಗ್ರಹ ಮಾಡಲಿಕ್ಕೆ ಕಳಿಸಿ ಕೊಡಬೇಕು. ಇದು ಆರನೆಯ ಗುಣವು.

### ದಶಕ ಏಕಾದಶ : ಸಮಾಸ ದಶಮ : ನಿಸ್ಪೃಹ ವರ್ತಣೂಕ

॥ಶ್ರೀರಾಮ॥ ಮೂರ್ಖ ಯೇಕದೇಸೀ ಹೋತೋ। ಚತುರ ಸರ್ವತ್ರ ಪಾಹಾತೋ।
ಜೈಸಾ ಬಹುಧಾ ಹೋಊನ ಭೋಗಿತೋ। ನಾನಾ ಸುಖೇ ॥೧॥

ತೋ ಚಿ ಅಂತರಾತ್ಮಾ ಮಹಂತ। ತೋ ಕಾ ಹೋಈಲ ಸಂಕೋಚಿತ।
ಪ್ರಶಸ್ತ ಜಾಣತಾ ಸಮಸ್ತ। ವಿಖ್ಯಾತ ಯೋಗೀ ॥೨॥

ಕರ್ತಾ ಭೋಕ್ತಾ ತತ್ವತಾ। ಭೂಮಂಡಳೀ ಸರ್ವ ಸತ್ತಾ।
ತ್ಯಾವೇಗಳಾ ತ್ಯಾಸ ಜ್ಞಾತಾ। ಪಾಹೇಸಾ ಕವಣು ॥೩॥

ಐಸೇ ಮಹಂತೇ ಅಸಾವೇ। ಸರ್ವ ಸಾರ ಶೋಧೂನ ಘ್ಯಾವೇ।
ಪಾಹೋ ಜಾತಾ ನ ಸಂಪಡಾವೇ। ಯೇಕಾಯೇಕೀ ॥೪॥

ಕೀರ್ತಿರೂಪೇ ಉದಂಡ ಖ್ಯಾತ। ಜಾಣತೀ ಲಾಹಾನ ಥೋರ ಸಮಸ್ತ।
ವೇಶ ಪಾಹಾತಾ ಶಾಶ್ವತ। ಯೇಕ ಹಿ ನಾಹೀ ॥೫॥

ಪ್ರಗಟ ಕೀರ್ತಿ ತೇ ಢಳೇನಾ। ಬಹುತ ಜನಾಸ ಕಳೇನಾ।
ಪಾಹೋ ಜಾತಾ ಆಡಳೇನಾ। ಕಾಯೆ ಕೈಸೇ ॥೬॥

ವೇಷಭೂಷಣ ತೇ ದೂಷಣ। ಕೀರ್ತಿಭೂಷಣ ತೇ ಭೂಷಣ।
ಚಾಳಣೇ ವಿಣ ಯೇಕ ಕ್ಷಣ। ಜಾಊ ಚ ನೇದೀ ॥೭॥

ತ್ಯಾಗೀ ವೊಳಖೀಚೆ ಜನ। ಸರ್ವಕಾಳ ನಿತ್ಯನೂತನ।
ಲೋಕ ಶೋಧೂನ ಪಾಹಾತೀ ಮನ। ಪರೀ ಇಚ್ಛಾ ದಿಸೇನಾ ॥೮॥

ಪುರ್ತೇ ಕೋಣಾಕಡೆ ಪಾಹೇನಾ। ಪುರ್ತೇ ಕೋಣಾಸೀ ಬೋಲೇನಾ।
ಪುರ್ತೇ ಯೇಕೇ ಸ್ಥಳೀ ರಾಹೇನಾ। ಉಠೋನ ಜಾತೋ ॥೯॥

## ದಶಕ ೧೧. ಸಮಾಸ ೧೦. ನಿಸ್ಪೃಹ ವರ್ತಣೂಕ (ನುಡಿ ೨೫)

ಮಹಂತನು ಅಂತರಾತ್ಮನ ಜ್ಞಾನ ಮಾಡಿಕೊಳ್ಳಬೇಕು. ತದ್ರೂಪ (ಏಕರೂಪ) ಇರಬೇಕು. ಅಂತರಾತ್ಮನಂತೆಯೇ ವಿಶಾಲ ಮತ್ತು ಅಲಿಪ್ತ ಇರಬೇಕು. ಮೂರ್ಖ ಮನುಷ್ಯನು ಜೀವನದ ಕಡೆಗೆ ಸಂಕುಚಿತ ದೃಷ್ಟಿಯಿಂದ ನೋಡುವನು. ಚತುರ ಮನುಷ್ಯನು ಸರ್ವಾಂಗೀಣ ದೃಷ್ಟಿ (ವಿಶಾಲದೃಷ್ಟಿ)ಯಿಂದ ಜಗತ್ತಿನ ಕಡೆಗೆ ನೋಡುವನು. ಅಂತರಾತ್ಮನು ಯಾವ ಪ್ರಕಾರ ಅನೇಕದರಲ್ಲಿ ವ್ಯಾಪಿಸಿ (ಅನೇಕ ರೂಪ ತಳೆದು) ನಾನಾ ಪ್ರಕಾರದ ಸುಖ ಭೋಗಿಸುವನೋ ಇದರಂತೆ ಚತುರ ಮನುಷ್ಯನು ಅನೇಕರ ಜೀವನದೊಂದಿಗೆ ಸಮರಸನಾಗುವನು. (೧) ಅಂತರಾತ್ಮಾ ಇವನೊಬ್ಬ (ನಿಜವಾದ ಮಹಂತನಾಗಿರುವನು. ಮಹಾನ್ ಶ್ರೇಷ್ಠ [ದೊಡ್ಡವ]ನಿರುವನು. ವಿಶಾಲ ಮತ್ತು ಬಹಳ ದೊಡ್ಡವನಿರುವನು. ಇವನು ಎಂದು ಆಕುಂಚಿತವಾಗುವದೇ ಇಲ್ಲ. ಇವನು ಅತಿ ವಿಶಾಲ ಇರುವನು. ಯಾವತ್ತನ್ನೂ ತಿಳಿಯುವಂಥವ-ತಿಳಿದವನಿರುವನು. ಇವನು ವಿಖ್ಯಾತ ಯೋಗಿಯೇ ಆಗಿರುವನು. (೨) ಜಗತ್ತಿನಲ್ಲಿ ನಿಜವಾದ ಕರ್ತಾ ಮತ್ತು ಭೋಕ್ತಾ ಎರಡೂ ಅಂತರಾತ್ಮನೇ ಆಗಿರುವನು. ಯಾವತ್ತೂ ಜಗತ್ತಿನ ಮೇಲೆ ಇವನ ಸತ್ತಾ ನಡೆಯುವದು. ಇವನು ಸ್ವತಃ ತನ್ನನ್ನು ತಾನು ತಿಳಿದುಕೊಂಡವನು-ತಿಳಿದುಕೊಳ್ಳುವಂಥವನಿರುವನು. ಎರಡನೆಯವರಾರೂ ಇವನನ್ನು ತಿಳಿಯಲು ಶಕ್ಯವಿಲ್ಲ. (೩) ಮಹಂತನು ಅಂತರಾತ್ಮನಂತಾಗಬೇಕು. ಸರ್ವದರ ಸಾರವನ್ನು ಇವನು ಶೋಧಿಸಿ ತಿಳಿಯಬೇಕು. ಯಾರಾದರೂ ನೋಡಲಿಕ್ಕೆ ಬಂದರೆ ಇವನು ಸಹಜವಾಗಿ ಸಿಗಬಾರದು [ಭೆಟ್ಟಿಯಾಗಬಾರದು]. (೪) ಮಹಂತನು ಲೋಕಸಂಗ್ರಹವನ್ನು ಮಾಡಲೇಬೇಕು. ಆದರೆ ಇವನು ಹೇಗೆ ಗುಪ್ತನಿರಬೇಕು? ಹೇಗೆ ಪ್ರಕಟನಿರಬೇಕು.? ಇದರ ವರ್ಣನೆಯನ್ನು ಮಾಡುವರು:- ಮಹಂತನ ಕೀರ್ತಿ ಎಲ್ಲ ಕಡೆಗೂ ಪಸರಿಸಿರುವದರಿಂದ ಸಣ್ಣ ದೊಡ್ಡವರಿಗೆಲ್ಲ ಇವನ ಬಗ್ಗೆ ಗೊತ್ತಿರುವದು. ಆದರೆ ಇವನು ಸದಾಕಾಲ ಒಂದೇ ವೇಷದಿಂದ ಸಂಚರಿಸುವದಿಲ್ಲ. (೫) ಇವನ ಕೀರ್ತಿ ಎಂದೂ ಕಡಿಮೆ ಆಗುವದಿಲ್ಲ. ಆದರೆ ಬಹು ಜನರಿಗೆ ಇವನ ಬಗ್ಗೆ ಪ್ರತ್ಯಕ್ಷ ಮಾಹಿತಿ ಇರುವದಿಲ್ಲ. (ಕೇವಲ ಕೇಳಿ ತಿಳಿದಿರುವರು). ಇವನನ್ನು ಹುಡುಕಿ ಭೆಟ್ಟಿಯಾಗಬೇಕೆಂದರೆ ಇವನು ಹೇಗಿದ್ದಾನೆ? ಎಂತಿದ್ದಾನೆ? ಎಂಬುದು ತಿಳಿಯದ್ದರಿಂದ ಸುಲಭವಾಗಿ ಭೆಟ್ಟಿಯಾಗುವದಿಲ್ಲ. ಸಿಗುವದಿಲ್ಲ. (೬) ವೇಷವೊಂದೇ ಮನುಷ್ಯನಿಗೆ ಭೂಷಣವೆನಿಸುವದಿಲ್ಲ. ಕೀರ್ತಿಯೊಂದು ಮಾತ್ರ ಖರೇ ಭೂಷಣವಿರುವದು. ತನ್ನ ಎದುರಿಗಿರುವ ಅನೇಕ ಸಮಸ್ಯೆಗಳ ಮೇಲೆ ಅಖಂಡವಾಗಿ ಇವನ ಮನನವು ನಡೆದೇ ಇರುವದು. (೭) ಲೋಕ ಸಂಗ್ರಹ ಮಾಡುವ ಇವನ ಪದ್ಧತಿ ಹೇಗೆ ಇರುವದು? ಇದರ ವರ್ಣನೆ ಮಾಡುವರು. ಇದನ್ನು ಕೇಳಿರಿ:- ನಿಜವಾದ ಮಹಂತನು ತನ್ನ ಪರಿಚಯದ ಜನರನ್ನು ದೂರವಿಡುವನು. ಮತ್ತು ಯಾವಾಗಲೂ ಹೊಸ ಹೊಸ ಜನರನ್ನು ತನ್ನ ಕಡೆಗೆ ಆಕರ್ಷಿಸುವನು. ಜನರೂ ಸಹ ಇವನ ಅಂತರಂಗವನ್ನು ಶೋಧಿಸಿ ನೋಡುವರು. ಆದರೆ ಅವರಿಗೆ ಇವನ ಅಂತರ್ಯಾಮದಲ್ಲಿ ಯಾವ ಇಚ್ಛೆ ಅಥವಾ ವಾಸನಾ ಇದ್ದದ್ದೂ ಕಂಡು ಬರುವದಿಲ್ಲ. (ಅತಿ ಪರಿಚಯದವರನ್ನೂ ದೂರವಿಡಬೇಕು. ಇದು ಒಂದು ಅರ್ಥ. ಇನ್ನೊಂದು ರೀತಿಯ ಅರ್ಥ, ಇವರು ಹತ್ತಿರವಿದ್ದರೂ ಲೋಕ ಕಲ್ಯಾಣ ಕಾರ್ಯದಲ್ಲಿ ತಯಾರಾದವರಿರುವರು. ಆದ್ದರಿಂದ ಅವರನ್ನು ಹತ್ತಿರ ಇಡದೇ ದೂರ ದೂರದ ಕಡೆಗೆ ಪ್ರಚಾರ ಮಾಡಲು ಕಳಿಸುತ್ತಿದ್ದರು. ಒಟ್ಟಿನಲ್ಲಿ ಹತ್ತಿರವಿದ್ದವರಲ್ಲಿ ಸೋಮಾರಿಗಳು ಅಸಮರ್ಥರಾದವರನ್ನು ಕೂಳಿಗೆ ದಂಡವೆಂದು ದೂರವಿಡುವದು. ಮತ್ತು ತಯಾರಾದ ಕಾರ್ಯಕರ್ತರನ್ನು ಲೋಕ ಕಲ್ಯಾಣಕ್ಕಾಗಿ ಹೊರಗೆ ಕಳಿಸುತ್ತಿದ್ದರೆಂದು ಅನಿಸುವದು). (೮) ಮುಕ್ತ ಮನಸ್ಸಿನಿಂದ ಮಹಂತನು ಯಾರ ಕಡೆಗೂ ನೋಡುವದಿಲ್ಲ. ಅಡ್ಡ ತಿಡ್ಡ ವಟಗುಟ್ಟುವದಿಲ್ಲ. ಯಾರೊಡನೆಯೂ ಹೆಚ್ಚಿಗೆ ಮಾತನಾಡುವದಿಲ್ಲ. ಒಂದೇ ಸ್ಥಳದಲ್ಲಿ ಬಹಳ ಹೊತ್ತು ಇರುವದಿಲ್ಲ. ಇರುವನೆಂದು ಅನ್ನುವಷ್ಟರಲ್ಲಿ ಎದ್ದು ಬೇರೆ ಯಾವುದೋ ಕಡೆಗೆ ಹೋಗಿರುವನು. [೯]

ಜಾತೇ ಸ್ಥಳ ತೇ ಸಾಂಗೇನಾ । ಸಾಂಗಿತಲೇ ತೇಥೆ ತರೀ ಜಾಯೇನಾ ।
ಆಪುಲೀ ಸ್ಥಿತೀ ಅನುಮಾನಾ । ಯೇವ್ರೋಚ ನೇದೀ ॥೧೦॥

ಲೋಕೀ ಕೇಲೇ ತೇ ಚುಕಾವೀ । ಲೋಕೀ ಭಾವಿಲೇ ತೇ ಉಲಥವೀ ।
ಲೋಕೀ ತರ್ಕಿಲೇ ತೇ ದಾವೀ । ನಿರ್ಫಳ ಕರೂನೀ ॥೧೧॥

ಲೋಕಾಸ ಪಾಹ್ಯಾಚಾ ಆದರ । ತೇಥೇ ಯಾಚಾ ಅನಾದರ ।
ಲೋಕ ಸರ್ವಕಾಳ ತತ್ಪರ । ತೇಥೇ ಯಾಚೀ ಅನಿಚ್ಛಾ ॥೧೨॥

ಯೇವಂ ಕಲ್ಪಿತಾ ಕಲ್ಪೇನಾ । ನಾ ತರ್ಕಿತಾ ಹಿ ತರ್ಕೇನಾ ।
ಕದಾಪಿ ಭಾವಿತಾ ಭಾವೇನಾ । ಯೋಗೇಶ್ವರ ॥೧೩॥

ಐಸೇ ಅಂತರ ಸಾಂಪಡೇನಾ । ಶರೀರ ಠಾಈ ಪಡೇನಾ ।
ಕ್ಷಣಯೇಕ ವಿಶಂಭೇನಾ । ಕಥಾಕೀರ್ತನ ॥೧೪॥

ಲೋಕ ಸಂಕಲ್ಪ ವಿಕಲ್ಪ ಕರಿತೀ । ತೇ ಅವಘೇ ಚಿ ನಿರ್ಫಳ ಹೋತೀ ।
ಜನಾಚೀ ಜನಾ ಲಾಜವೀ ವೃತ್ತಿ । ತೇವ್ಹಾ ಯೋಗೇಶ್ವರ ॥೧೫॥

ಬಹುತೀ ಶೋಧೂನ ಪಾಹಿಲೇ । ಬಹುತಾಜ್ಯಾ ಮನಾಸ ಆಲೇ ।
ತರೀ ಮಗ ಜಾಣಾವೇ ಸಾಧಿಲೇ । ಮಹತ್ಕೃತ್ಯ ॥೧೬॥

ಅಖಂಡ ಯೇಕಾಂತ ಸೇವಾವಾ । ಅಭ್ಯಾಸಚಿ ಕರೀತ ಜಾವಾ ।
ಕಾಳ ಸಾರ್ಥಕ ಚಿ ಕರಾವಾ । ಜನಾಸಹಿತ ॥೧೭॥

ಉತ್ತಮ ಗುಣ ತಿತುಕೇ ಘ್ಯಾವೇ । ಘೇಊನ ಜನಾಸ ಸಿಕವಾವೇ ।
ಉದಂಡ ಸಮುದಾಯೆ ಕರಾವೇ । ಪರಿ ಗುಪ್ತರೂಪೇ ॥೧೮॥

ತಾನು ಇಂಥಲ್ಲಿಗೆ ಹೋಗುವೆನೆಂದು ಯಾರ ಮುಂದೆಯೂ ಹೇಳುವದಿಲ್ಲ. ಒಂದು ವೇಳೆ ಹೇಳಿದರೂ ಸಹ ಆ ಸ್ಥಳಕ್ಕೆ ಹೋಗಿ ನೋಡಿದರೆ ಅಲ್ಲಿ ಇರುವದಿಲ್ಲ. ಒಟ್ಟಿನಲ್ಲಿ ತನ್ನ ಇರುವಿಕೆಯ ಸ್ಥಿತಿಯ ಬಗ್ಗೆ ಯಾರಿಗೂ ಕಲ್ಪನೆ ಸಹ ಬರುವಂತೆ ಮಾಡುವದಿಲ್ಲ. [೧೦] ಜನರು ಮಹಂತನ ಬಗ್ಗೆ ಯಾವ ಊಹೆ [ಅಂದಾಜ] ಕಟ್ಟಿರು ವರೋ ಅದನ್ನು ಬಾಡಮೇಲು ಮಾಡುವನು. ಜನರು ಮನದಲ್ಲಿ ಯಾವ ಭಾವನೆಯನ್ನು ಮಾಡಿಕೊಂಡಿರುವರೋ ಅದನ್ನು ಉಲಟಾ ಪಲಟಾ ಮಾಡಿ ಬಿಡುವನು. ಜನರು ಮಾಡಿದ ತರ್ಕವನ್ನು ವ್ಯರ್ಥಗೊಳಿಸುವನು. ಮಹಂತನು ಆತ್ಮಜ್ಞಾನಿ ಜೀವನ್ಮುಕ್ತ ಪುರುಷನಿರುವನು. ಇವನು ಯಾವಾಗಲೂ ಅಂತಃಪ್ರೇರಣೆಯಿಂದ ವರ್ತಿಸುವನು. ಅಜ್ಞಾನಿ ಜನತೆಯು ಮಾಡಿಕೊಂಡಿರುವ ಇವನ ಬಗೆಗಿನ ಕಲ್ಪನೆಗಳೆಲ್ಲ ಸುಳ್ಳಾಗಿ ಬಿಡುವವು. ಇವನ ನಡವಳಿಕೆಗೆ ವ್ಯವಹಾರದ ಬಂಧನಗಳು ಸರಿ ಬೀಳುವದಿಲ್ಲ. ಇವನು ಸ್ವೇಚ್ಛಾ ಪುರುಷನೇ ಸರಿ. (೧೧) ಜನರಲ್ಲಿ ಇರುವ, ನೋಡುವ ಹೌಸು, ಉತ್ಸುಕಕತೆಯು ಮಹಂತನಿಗೆ ಕ್ಷುಲ್ಲಕವೆನಿಸುವದು. ಜನರ ಮನಸ್ಸು ಸಾಮಾನ್ಯವಾಗಿ ಯಾವುದರಲ್ಲಿ ಪ್ರೇಮದಿಂದ ರಮಿಸುವದೋ ಆ ವಿಷಯಗಳ ಬಗ್ಗೆ ಮಹಂತನಿಗೆ ಎಳ್ಳಷ್ಟೂ ಇಚ್ಛಾ ಆಗುವದಿಲ್ಲ. [೧೨] ಈ ಪ್ರಕಾರ ಯಾರ ಸ್ಥಿತಿಯು ಇರುವದೋ ಅಂಥವರ ಬಗ್ಗೆ ಕಲ್ಪನೆಯಿಂದ ಕಲ್ಪಿಸಲಿಕ್ಕೆ ಆಗುವದಿಲ್ಲ. ತರ್ಕದಿಂದ ತಿಳಿಯುವದಿಲ್ಲ. ಮತ್ತು ತಿಳಿದುಕೊಳ್ಳಬೇಕೆಂದರೂ ಸಹ ಸರಿಯಾಗಿ ತಿಳಿಯುವದಿಲ್ಲ. ಅಥವಾ ತಿಳಿಯಲಿಕ್ಕೆ ಶಕ್ಯವಾಗುವದಿಲ್ಲ. ಯಾಕಂದರೆ ಇಂಥ ಮಹಂತನು ಖರೇ ಯೋಗೀಶ್ವರ ಮಹಂತನೇ ಇರುವನು(೧೩)ಇಂಥಮಹಂತನ ಮನಸ್ಸಿನಲ್ಲಿ ಏನಿರುವದೆಂಬುದು ಯಾರಿಗೂ ತಿಳಿಯುವದಿಲ್ಲ. ಶರೀರದಿಂದ ಇವನು ಒಂದು ಸ್ಥಳದಲ್ಲಿ ಆರಾಮದಿಂದ ಇದ್ದದ್ದನ್ನು ಕಂಡಿಲ್ಲ. ಆದರೆ ಭಗವಂತನ ಗುಣಗಾನ ಕಥಾನುವಾದವನ್ನು ಇವನು ಮರೆತಿಲ್ಲ. ಬೇಸರಪಟ್ಟಿಲ್ಲ ಒಟ್ಟಿನಲ್ಲಿ ಇವನು ಭಗವಂತನ ಗುಣ ಗಾನ ನಾಮಸ್ಮರಣ, ಗುಣವರ್ಣನೆ ಇವನ್ನು ಅಖಂಡವಾಗಿ ಮಾಡುತ್ತಲೇ ಇರುವನು. [೧೪] ಇವನ ಬಗ್ಗೆ ಜನರು ಅನೇಕ ತರ್ಕವಿತರ್ಕ ಮಾಡುವರು. ಆದರೆ ಇವೆಲ್ಲ ಪರಸ್ಪರದಲ್ಲಿಯೇ ಖೊಟ್ಟಿಯೆಂದು ಜನಕ್ಕೆ ಖಾತ್ರಿಯಾಗುವದು. ಹೀಗಾದಾಗ ತರ್ಕ ಕುತರ್ಕ ಮಾಡಿದವರು ನಾಚುವರು. ತಲೆ ತಗ್ಗಿಸುವರು. ಇರಲಿ, ಹೀಗೆ ಯಾರ ಬಗ್ಗೆ ಘಟಿಸು ವವೋ ಆ ಮಹಂತನು ನಿಜವಾದ ಯೋಗೀಶ್ವರನೆಂದು ತಿಳಿಯಬೇಕು. (೧೫) ಇಂಥ ಶ್ರೇಷ್ಠ ಮಹಂತರು ಜನರಿಗೆ ಏನನ್ನು ಕಲಿಸುವರು ? ಬೋಧಿಸುವರು ? ಹೇಗೆ ತಿಳಿಸಿ ಕೊಡುವರು ? ಇದನ್ನು ವರ್ಣಿಸಿ ಹೇಳುವರು. ಮಹಂತನು ಹೊಸದಾಗಿ ಆರಂಭಿಸಿದ ಕಾರ್ಯದ ಬಗ್ಗೆ ಪ್ರಥಮದಲ್ಲಿ ಜನ ಮನದಲ್ಲಿ ಅಶ್ರದ್ಧೆ ಇರುವದು. ಜನರು ಸೂಕ್ಷ್ಮವಾಗಿ ತಪಾಸಿಸಿ ನೋಡುವರು. ಬಹು ಜನರಿಗೆ ಇದು ಪಟಾಯಿಸಿದರೆ-ಮನ ಒಪ್ಪಿದರೆ ಆಗ ಅನೇಕ ಜನರು ಈ ಕಾರ್ಯದಲ್ಲಿ ಭಾಗವಹಿಸುವರು. ಈ ರೀತಿ ಆಯಿತೆಂದರೆ ಒಂದು ದೊಡ್ಡ ಕಾರ್ಯ ಸಾಧಿಸಿದಂತೆ ಆಗು ವದು. (ಇನ್ನೊಂದು ಹೆಜ್ಜೆ ಮುಂದಿಡುವದಕ್ಕೆ ಉತ್ಸಾಹ ಬರುವದು) [೧೬] ಮಹಂತನು ನಡು ನಡುವೆ ಬಿಡುವು ಮಾಡಿಕೊಂಡು ಅಖಂಡ ಏಕಾಂತ ಸೇವನ ಮಾಡಬೇಕು. ಏಕಾಂತದಲ್ಲಿ ಧ್ಯಾನ, ಧಾರಣೆ, ಜಪ ಮತ್ತು ಗ್ರಂಥಗಳ ಅಭ್ಯಾಸ ಮುಂದುವರಿಯುತ್ತಿರಬೇಕು. (ಚಾಲೂ ಇಡಬೇಕು). ಜನರ ಉದ್ಧಾರದ-ಲೋಕಕಲ್ಯಾಣದ ಉಪಾಯದ ಬಗ್ಗೆ ಚಿಂತನೆ ಮಾಡಬೇಕು ಹಾಗೂ ಜನರನ್ನು ಸನ್ಮಾರ್ಗಕ್ಕೆ ಹಚ್ಚಬೇಕು. ಅಂದರೆ ಅವರ ಮತ್ತು ನಿಮ್ಮ ಕಾಲ ವನ್ನು ಸಾರ್ಥಕ ಕೆಲಸದಲ್ಲಿ ಖರ್ಚು ಮಾಡಿದಂತಾಗುವದು. (೧೭) ನೀವು ಸ್ವತಃ ಉತ್ತಮ ಗುಣ ತಳೆಯಬೇಕು. ಮತ್ತು ಆಮೇಲೆ ಜನರಿಗೆ ಹೇಳಬೇಕು. (ಕಲಿಸಬೇಕು). ದೊಡ್ಡ ದೊಡ್ಡ ಜನ ಸಮುದಾಯ ಕೂಡಿಸಬೇಕು. ಆದರೆ ಪ್ರಚಾರವಿಲ್ಲದೆಯೇ (ಬಿನ್ ಬೊಬ್ಬಾಟ) ಗುಪ್ತವಾಗಿರಬೇಕು. (೧೮)

ಅಖಂಡ ಕಾಮಾಚೀ ಲಗಬಗ । ಉಪಾಸನೇಸ ಲಾವಾವೇ ಜಗ ।
ಲೋಕ ಸಮಜೋನ ಮಗ । ಆಜ್ಞಾ ಇಛಿತೀ ॥೧೯॥

ಆಧೀ ಕಷ್ಟ ಮಗ ಫಳ । ಕಷ್ಟ ಚಿ ನಾಹೀ ತೇ ನಿರ್ಫಳ ।
ಸಾಕ್ಷೇಪೇವಿಣ ಕೇವಳ । ವೃಥಾಪುಷ್ಟ ॥೨೦॥

ಲೋಕ ಬಹುತ ಶೋಧಾವೇ । ತ್ಯಾಂಚೆ ಅಧಿಕಾರ ಜಾಣಾವೇ ।
ಜಾಣ ಜಾಣೋನ ಧರಾವೇ । ಜವಳೀ ದುರೀ ॥೨೧॥

ಅಧಿಕಾರಪರತ್ವೇ ಕಾರ್ಯ ಹೋತೇ । ಅಧಿಕಾರ ನಸ್ತಾ ವ್ಯರ್ಥ ಜಾತೇ ।
ಜಾಣೋನಿ ಶೋಧಾವೀ ಚಿತ್ತೇ । ನಾನಾ ಪ್ರಕಾರೇ ॥೨೨॥

ಅಧಿಕಾರ ಪಾಹೋನ ಕಾರ್ಯ ಸಾಂಗಣೇ। ಸಾಕ್ಷೇಪ ಪಾಹೋನ ವಿಶ್ವಾಸ ಧರಣೇ।
ಆಪಲಾ ಮಗಜ ರಾಖಣೇ । ಕಾಂಹೀತರೀ ॥೨೩॥

ಹೇ ಪ್ರಚಿತೀಚೇ ಬೋಲಿಲೇ । ಆಧೀ ಕೇಲೇ ಮಗ ಸಾಂಗಿತಲೇ ।
ಮಾನೇಲ ತರೀ ಪಾಹಿಜೆ ಘೇತಲೇ । ಕೋಣೀಯೇಕೇ ॥೨೪॥

ಮಹಂತೇ ಮಹಂತ ಕರಾವೇ । ಯುಕ್ತಿಬುದ್ಧೀನೇ ಭರಾವೇ ।
ಜಾಣತೇ ಕರೂನ ವಿಖರಾವೇ । ನಾನಾ ದೇಶೀ ॥೨೫॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ನಿಸ್ಪೃಹ ವರ್ತಣುಕ' ನಾಮ ಸಮಾಸ ದಶಮ ॥

— ದಶಕ ಏಕಾದಶ ಸಮಾಪ್ತ —

ಸತತ ಉದ್ಯೋಗಿಯಾದ ನೀವು ಹಿಡಿದ ಕೆಲಸ ಬೇಗ ಮುಗಿಸುವ ಅವಸರವಿರಬೇಕು. ಜನರನ್ನು ಭಗವಂತನ ಉಪಾಸನೆಯಲ್ಲಿ ತೊಡಗಿಸುವ ಕಾರ್ಯದಲ್ಲಿ ಆಲಸ್ಯವಿರಬಾರದು. ಬಿಡುವಿಲ್ಲದೇ ಈ ಕೆಲಸ ಮಾಡಬೇಕು. ಈ ರೀತಿಯ ನಿಮ್ಮ ವರ್ತನೆಯನ್ನು ನೋಡಿದ ಜನತೆ ನಿಮಗೆ ಗುರುತ್ವವನ್ನು ಆದರದಿಂದ ಕೊಡುವರು. ನಿಮ್ಮ ಆಜ್ಞೆಯಂತೆ ವರ್ತಿಸಲು ತಾವಾಗಿ ತಯಾರ ಆಗುವರು.(೧೯) ಕಷ್ಟಪಡದೇ ಯಾವ ಮಹತ್ಕಾರ್ಯ ಸಾಧಿಸುವದಿಲ್ಲ. ಎಲ್ಲರೂ ಒಂದೇ ಯೋಗ್ಯತೆಯವರು ಇರುವದಿಲ್ಲ. ಆದ್ದರಿಂದ ಪ್ರತಿಯೊಬ್ಬರಿಂದ ಅವರವರ ಯೋಗ್ಯತೆಯ ಪ್ರಕಾರ ಕೆಲಸ ಮಾಡಿಸಿಕೊಳ್ಳುವದರಲ್ಲಿಯೇ ಗುಟ್ಟಿರುವದು. ಮಹತ್ವವಿರುವದು. "ಮೊದಲಿಗೆ ಕಷ್ಟ-ಆಮೇಲೆ ಫಲ" ಹೀಗೆ ಜೀವನದಲ್ಲಿ ನಿಯಮವಿದೆ. ಕಷ್ಟವನ್ನೇ ಪಡದಿದ್ದರೆ ಫಲ ಹೇಗೆ ಸಿಕ್ಕೀತು? ಅರ್ಥಾತ್ ಸಿಗುವದಿಲ್ಲ.ಶ್ರಮ ಮಾಡದೇ ನಿರುದ್ಯೋಗಿಯಾಗಿ ಯಾವನು ಜೀವಿಸುವನೋ ಅವನು ಭೂಮಿಗೆ ಭಾರನು. ವೃಥಾಪುಷ್ಟನೆಂದು ತಿಳಿಯಿರಿ. ವೃಥಾಪುಷ್ಟ ಪುಕ್ಕಟೆ ತಿನ್ನುವವ. ಋಣ ಕೂಳು ತಿನ್ನುವವ. ಶ್ರೀ ಸಮರ್ಥರಿಗೆ ವೃಥಾಪುಷ್ಟರಲ್ಲಿ ಬಹಳ ಬೇಸರವಿರುವದು. [೨೦] ಬಹಳಷ್ಟು ಜನರನ್ನು ಸೂಕ್ಷ್ಮವಾಗಿ ನಿರೀಕ್ಷಣೆ ಮಾಡಬೇಕು. ಅವರು ಯಾವ ಯೋಗ್ಯತೆಯವರು. ಏತಕ್ಕೆ ಯೋಗ್ಯರೆಂಬುದನ್ನು ತಿಳಿಯಬೇಕು. ಆಮೇಲೆ ಪ್ರತಿಯೊಬ್ಬರ ಯೋಗ್ಯತೆಯ ಪ್ರಕಾರ ಅವರನ್ನು ಹತ್ತಿರ ಕರೆದು ಅಂತರಂಗದಲ್ಲಿ ಸೇರಿಸಿಕೊಳ್ಳಬೇಕು ಅಥವಾ ದೂರವಿಡಬೇಕು. [೨೧] ಯಾರಲ್ಲಿ ಎಷ್ಟು ಯೋಗ್ಯತೆ ಇರುವದೋ ಆ ಶಕ್ತಿಯ ಪ್ರಮಾಣದಲ್ಲಿ ಅವರ ಕಡೆಯಿಂದ ಕಾರ್ಯ ಘಟಿಸುವದು. ಯೋಗ್ಯತೆ ಮತ್ತು ಶಕ್ತಿ-ಯುಕ್ತಿ ಇರಲಿಲ್ಲವಾದರೆ ಕಾರ್ಯ ವ್ಯರ್ಥವಾಗಿ ಹೋಗುವದು. ಆದ್ದರಿಂದ ಯೋಗ್ಯತೆ ನಿರ್ಣಯಿಸಲು ಜನರ ಅಂತರಂಗವನ್ನು ಅನೇಕ ಪ್ರಕಾರದಿಂದ ತಪಾಸಿಸಿ ನೋಡಬೇಕು. [೨೨] ಮನುಷ್ಯರ ಯೋಗ್ಯತೆ ನೋಡಿ ಅವರಿಗೆ ನೀಗುವಂಥ ಕೆಲಸವನ್ನು ಹೇಳಬೇಕು. ಕಷ್ಟಪಡುವ ಶಕ್ತಿ [ತಾಖತ್] ನೋಡಿ ಅಂಥ ಜನರ ಮೇಲೆ ವಿಶ್ವಾಸವಿಡಬೇಕು. ಆದರೆ ಇದೆಲ್ಲ ಮಾಡುವಾಗ ನಿಮ್ಮ ಮಹತ್ವ ಮತ್ತು ಯೋಗ್ಯತೆ ಮತ್ತು ದೊಡ್ಡಿಸ್ಥಿಕೆ ಇವಕ್ಕೆ ಧಕ್ಕೆ ಬರದಂತೆ ನೋಡಿಕೊಳ್ಳಬೇಕು.[೨೩]ಶ್ರೀಸಮರ್ಥರು ಸ್ವತಃ ಇದರಂತೆ ನಡೆದರು. ಮಹಂತನು ಇನ್ನೊಬ್ಬ ಮಹಂತನನ್ನು ತಯಾರಿಸಬೇಕು. ನಾನು ಸ್ವತಃಅನುಭವ ಪಡೆದು ಈಗ ನಿಮಗೆ ಹೇಳುತ್ತೇನೆ.ನಾನು ಇದನ್ನೆಲ್ಲ ಮೊದಲು ಮಾಡಿರುವೆನು.ಮತ್ತು ಈಗ ಜಗತ್ತಿನ ಮುಂದೆ ಹೇಳಿದ್ದೇನೆ. ನಿಮಗೆ ಇದು [ಲಪಟಾಯಿಸಿದರೆ] ಒಪ್ಪಿಗೆಯಾದರೆ ಮಾತ್ರ ಯಾರಾದರೂ ಹೀಗೆ ನಡೆದು ನೋಡಲಿ. [೨೪] ಮಹಂತನು ಎರಡನೇ [ಬೇರೆ] ಮಹಂತನನ್ನು ತಯಾರು ಮಾಡಬೇಕು. ಅವರಿಗೆ ಯುಕ್ತಿ ಮತ್ತು ಬುದ್ಧಿ ಕಲಿಸಬೇಕು. ಅವರನ್ನು ಜ್ಞಾನ ಸಂಪನ್ನರನ್ನಾಗಿ ಮಾಡಿ ದೇಶದ ಬೇರೆ ಬೇರೆ ಭಾಗಗಳಿಗೆ ಲೋಕ ಸಂಗ್ರಹಕ್ಕಾಗಿ ಕಳಿಸಬೇಕು. [೨೫]

ಶ್ರೀ ದಾಸಬೋಧವಲ್ಲಿಯ ಗುರುಶಿಷ್ಯರ ಸಂವಾದದ ಹನ್ನೊಂದನೆಯ ದಶಕದ
"ನಿಸ್ಪೃಹ ವರ್ತಣೂಕ" ಎಂಬ ಹತ್ತನೆಯ ಸಮಾಸವು ಮುಗಿದುದು.

● ●

## ದಶಕ ೧೨. "ವಿವೇಕ ವೈರಾಗ್ಯ".

ಮನುಷ್ಯನ ಪ್ರಶಂಸೆ ಮಾಡುವದೇಕೆಂದರೆ ಮಾನವ ಜೀವನವು ಮೊಸಳೆಯಂತೆ ಜಲ-ಸ್ಥಳವಾಸಿ ಅಂದರೆ ದ್ವಿಮುಖ [ಇಬ್ಬಗೆ] ದ್ದಾಗಿದೆ. ಮೊಸಳೆಯು ಯಾವ ಪ್ರಕಾರ ಸಹಜವಾಗಿ ನೀರಿನಲ್ಲಿರುವದೋ ಅವೇ ಪ್ರಕಾರ [ಮೊಸಳೆಯು] ಇದು ನೆಲದ ಮೇಲೆಯೂ ಸಹ ಇರುವದು. ಇದರಂತೆ ಮನುಷ್ಯನೂ ಸಹ ಇಂದ್ರಿಯ ಗೋಚರ ದೃಶ್ಯ ಜಗತ್ತಿನಲ್ಲಿ ಯಾವ ಪ್ರಕಾರ ಸಹಜವಾಗಿ ಇರುವನೋ ಅದೇ ಪ್ರಕಾರ ಅತೀಂದ್ರಿಯ ಅದೃಶ್ಯ ಜಗತ್ತಿನಲ್ಲಿಯೂ ಸಹಜವಾಗಿ ಇರುವನು. ಈ ಇಂದ್ರಿಯ ಗೋಚರ ದೃಶ್ಯ ಜಗತ್ತು ಇತರ ಪ್ರಾಣಿ ಮತ್ತು ಮನುಷ್ಯರು ಮತ್ತು ಪಂಚ ಭೂತಾತ್ಮಕ ಜಡ ವಸ್ತುಗಳಿಂದ ತಯಾರಾದದ್ದಿರುವದು. ಆದರೆ ಅದೇ ಅತೀಂದ್ರಿಯ ಅದೃಶ್ಯ ಜಗತ್ತು ಕೇವಲ ಸಂಕಲ್ಪ ಮಾತ್ರದಿಂದ ತಯಾರಾದದ್ದಿರುವದು. ಮಾನವೀ ಜೀವನದಲ್ಲಿಯ ಈ ಎರಡು ಅಂಗಗಳಲ್ಲಿ ಒಂದಕ್ಕೆ ಪ್ರಪಂಚ ಹಾಗೂ ಇನ್ನೊಂದಕ್ಕೆ ಪಾರಮಾರ್ಥ ಎಂದು ಹೆಸರು ಇರುವದು. ಈ ಎರಡೂ ಅಂಗಗಳು ಒಂದರ ಮೇಲೊಂದು ಅವಲಂಬಿಸಿ ಇದ್ದರೂ ಸಹ ಸಂಕಲ್ಪದಿಂದಾದ ಜಗತ್ತು [ದಿ ವರ್ಲ್ಡ್ ಆಫ್ ಕಾನ್ಸೆಪ್ಟ್ಸ್] ಜಡವಸ್ತುಗಳ ಜಗತ್ತಿನಕ್ಕಿಂತ [ದಿ ವರ್ಲ್ಡ್ ಆಫ್ ಸೆನ್ಸ] ನಿಶ್ಚಿತವಾಗಿಯೂ ಶ್ರೇಷ್ಠವಿರುವದು. ಮನುಷ್ಯನ ಸಂಕಲ್ಪದಿಂದಲೇ ಜಗತ್ತು ಅವನ ವಿವೇಕ ಶಕ್ತಿಯೊಳಗಿಂದ ನಿರ್ಮಾಣವಾಗುವದು. ಆದ್ದರಿಂದ ಶ್ರೀ ಸಮರ್ಥರು ಬೇಸರಗೊಳ್ಳದೇ ಪುನಃ ಪುನಃ ವಿವೇಕದ ಮೇಲೆ ಹೆಚ್ಚು ಭಾರವಿಟ್ಟಿದ್ದಾರೆ. ಭರವಸೆ ಇಟ್ಟಿದ್ದಾರೆ. ಈ ದಶಕದಲ್ಲಿ ಏನನ್ನು ತೋರಿಸಿಕೊಟ್ಟಿದ್ದಾರೆಂದರೆ ಪ್ರಪಂಚವನ್ನು ಸಂಭಾಳಿಸಿಕೊಂಡು ಯಾವನು ಪರಮಾರ್ಥ ಮಾಡುವನೋ ಅವನ ಜೀವನ ಹೆಚ್ಚು ಒಳ್ಳೆಯ ಮತ್ತು ಸರ್ವಾಕರ್ಷಕವಾಗುವದು. [ಎಲ್ಲರನ್ನೂ ಬೆರಗುಗೊಳಿಸುವಂತಹದಾಗಿರುವದು. ಇದು ಪ್ರಾಪಂಚಿಕರಿಗೆ ಒಂದು ಸವಾಲು ಒಡ್ಡಿದಂತೆ ಕಂಡು ಬರುವದು]. ಪ್ರಪಂಚದಲ್ಲಾಗಲೀ ಅಥವಾ ಪಾರಮಾರ್ಥದಲ್ಲಿಯಾಗಲೀ ವಿವೇಕವು ಬಹಳ ದೊಡ್ಡಶಕ್ತಿಯಾಗಿರುವದು, ಶ್ರೀಸಮರ್ಥರು ಸ್ಪಷ್ಟವಾಗಿ ಹೇಳುವದೇನಂದರೆ, ವ್ಯವಹಾರದಲ್ಲಿ ಕಡಿಮೆ ನಶೀಬದವರೆಂದು ಅನಿಸಿಕೊಳ್ಳಬೇಕಾದರೆ ಬಹುಪಾಲು ಅವರ ವರ್ತನ ಮತ್ತು ಅದೂರದರ್ಶಿತನ, ಅವಿವೇಕತನದ ಫಲವೇ ಇರುವದು. ಮನುಷ್ಯ ಪ್ರಯತ್ನ ಮಾಡುತ್ತಾನೆ. ಆದರೆ ಅದು ದೋಷರಹಿತ [ನಿರ್ದಿಷ್ಟ] ಯತ್ನ ಇರುವದಿಲ್ಲ. ಆದ್ದರಿಂದ ಅವನಿಗೆ ಅಪಯಶ ಬರುವದು. ಶಾಂತತನದಿಂದ ವಿಚಾರ ಮಾಡಿ ಸರಿಯಾದ ದಾರಿಯಲ್ಲಿ ಹೋಗಿ ಪ್ರಯತ್ನ ಮಾಡುವದನ್ನು ನಿಶ್ಚಯಿಸಬೇಕು. ಮತ್ತು ಆ ನಿಶ್ಚಯಿಸಿದ ದಾರಿಯಲ್ಲಿ ದೋಷರಹಿತ ಯತ್ನ ಮಾಡಬೇಕು. ಪ್ರಸಂಗ

ನೋಡಿ ನಡೆಯಬೇಕು. ಎರಡನೆಯವರ ಸಲುವಾಗಿ ಸ್ವಲ್ಪ ಕಷ್ಟ-ನಷ್ಟ ಸಹಿಸಬೇಕು. ಹೀಗೆ ನಡೆದಿದ್ದಾದರೆ ಮನುಷ್ಯನಿಗೆ ಪ್ರಪಂಚದಲ್ಲಿ ಯಶ ಬರಲು ತಡವಾಗುವದಿಲ್ಲ. ಪರಮಾರ್ಥದಲ್ಲಿ ದೇವ ಯಾರು? ಮತ್ತು ನಾನು ಯಾರು? ಇದರ ಶೋಧವನ್ನು ವಿವೇಕದಿಂದ ಮಾಡಬೇಕು. ಈ ವಿಷಯದಲ್ಲಿ ಪುಸ್ತಕದ ಜ್ಞಾನದಿಂದ ಬಹಳಷ್ಟು ಸಹಾಯವಾದೀತೆಂದು ಅನಿಸುವದಿಲ್ಲ. ಆದ್ದರಿಂದ ವಿಶ್ವದ ನಿರ್ಮಾಣ ಮತ್ತು ಅದರ ಸಂಹಾರ ಇದರ ಬಗ್ಗೆ ಗುರುಮುಖದಿಂದ ಶ್ರವಣ ಮಾಡಬೇಕು. ಹೇಳಿದ್ದನ್ನು ಸರಿಯಾಗಿ ತಿಳಿದುಕೊಳ್ಳಬೇಕು. ಜಡ, ಚಂಚಲ, ಮತ್ತು ನಿಶ್ಚಲ ಹೀಗೆ ಮೂರು [ಶ್ರೇಣಿಯಿಂದ] ಕಡೆಯಿಂದ ಒಟ್ಟಾಗಿ ಸೇರಿ ಸದ್ವಸ್ತುವಿನ ಅನುಭವ ಬರುವದು. ಚಂಚಲದ ಕೂಡ ಕಾಲವು ಜನ್ಮ ತಳೆಯುವದು. ನಮ್ಮ ಮನವು ಚಂಚಲದ ಪ್ರತೀಕವಿರುವದು. ನಾವು ಮನದ ಅಧೀನರಾಗಿ ಎಲ್ಲಿಯವರೆಗೆ ಇರುವೆವೋ ಅಲ್ಲಿಯವರೆಗೆ ನಿಮ್ಮ ಮೇಲೆ ಕಾಲನ ಸತ್ತಾ ಇರುವದು. [ಅವನ ಪ್ರಭುತ್ವವು ಇರುವದು]. ದೇವನು ನಿರ್ಗುಣ ಮತ್ತು ನಿಶ್ಚಲ ಪರಮಾತ್ಮನಿರುವನು. ಇವನ ಹತ್ತಿರ ಕಾಲನು ವಿಶ್ರಾಂತಿ ಹೊಂದುವನು. [ಇಲ್ಲಿ ಇವನ ಆಟ ನಡೆಯುವದಿಲ್ಲ]. ನಿಜವಾಗಿ ನಾವು ಸ್ವತಃ ಆತ್ಮ ಸ್ವರೂಪರೇ ಇರುವೆವು. ಇದರಲ್ಲಿ ಯಾವ ಸಂಶಯವೂ ಇಲ್ಲ. ಆದ್ದರಿಂದಲೇ ನಾನು ಮತ್ತು ದೇವ ಒಂದೇ ಇರುವೆವು. ಅನ್ನುವ ಪ್ರತ್ಯಕ್ಷ ಅನುಭವ ಬರುವದಕ್ಕೆ ಪರಮಾರ್ಥ ಎಂದು ಹೆಸರು ಇರುವದು. ಈ ಅನುಭವ ಬರಬೇಕಾದರೆ ವಿವೇಕ ಮತ್ತು ವೈರಾಗ್ಯ ಇವುಗಳ ತಳಹು ಹಾಕಿ ಜೀವನ ನಡೆಸಬೇಕಾಗುವದು. ಒಂದು ಇದ್ದು ಇನ್ನೊಂದು ಇಲ್ಲದಿದ್ದರೆ ಅವರ ಅವಸ್ಥೆ ಕುಂಟನಂತಾಗುವದು. ಅರ್ಥಾತ್ ಎರಡರ ಮೇಳ ಬೇಕೇಬೇಕು. ವಿವೇಕದಿಂದ ಅಂತರಂಗದಲ್ಲಿಯ ವಾಸನಾ ಕ್ಷೀಣವಾಗುತ್ತ ಹೋಗುವದು. ಇದರಿಂದಾಗಿ ವೈರಾಗ್ಯ ಬಲಗೊಳ್ಳುವದರಿಂದ ಪ್ರಪಂಚದ ಕಡೆಗೇ ಹರಿಯುವ ಮನದ ಒಲವು [ಓಘ] ಕುಂಠಿತಗೊಳ್ಳುವದು. ಹೀಗಾಗಿ ಒಳಗೆ ಮತ್ತು ಹೊರಗೆ ಎರಡೂ ಕಡೆಯಿಂದ ಯಾವುದು ಖುಲ್ಲಾ [ಮುಕ್ತ] ಮೋಕಳೀಕ ಆಗುವದೋ ಅದು ಬೇಗನೇ ಮುಕ್ತವಾಗುವದು. ಅವಶ್ಯವಿದ್ದಷ್ಟು [ಜರೂರಿ ಪೂರ್ತೆ] ಸಂಯಮದಿಂದ ಇಂದ್ರಿಯ ಭೋಗ ಪಡೆಯುವದು. ಇದು ಪ್ರಾಪಂಚಿಕರ ವೈರಾಗ್ಯವೆಂದು ತಿಳಿಯಬೇಕು. ಸಾರಾಂಶ:- ಸ್ವತಃ ತಾನು ಮುಕ್ತನಾಗಬೇಕು. ಸವಿ ಮಾತುಗಳಿಂದ ಜನರಿಗೆ ತಿಳಿ ಹೇಳಿ [ಕಲಿಸಿ] ಅವರೂ ಮುಕ್ತರಾಗುವಂತೆ ಮಾಡಬೇಕು. ಲೋಕದ ಜನರಿಗಾಗಿ ಕಷ್ಟ ಸಹಿಸಿ ಅವರ ಕಲ್ಯಾಣದಿಂದ ನಿಮ್ಮ ಕೀರ್ತಿಯು ಉಳಿಯುವಂತೆ ಮಾಡಬೇಕು. ಇದಕ್ಕೆ ಕೃತಾರ್ಥ ಜೀವನ ಎಂದು ಅನ್ನುವರು.

## ದಶಕ ೧೨. ಸಮಾಸ ೧. ವಿಮಲ ಲಕ್ಷಣ (ನುಡಿ ೨೦)

ಮಾನವ ಜೀವನದಲ್ಲಿ ಪ್ರಪಂಚ ಮತ್ತು ಪಾರಮಾರ್ಥ ಇವು ಒಂದಕ್ಕೊಂದು ಪೂರಕವಿರುವವು. ಪ್ರಪಂಚದಲ್ಲಿ ಕೆಲಸಕ್ಕೆ ಬರುವ ಗುಣಗಳೇ ಪಾರಮಾರ್ಥದಲ್ಲಿ ಸಹ ಉಪಯೋಗ ಬೀಳುವವು. ಆದ್ದರಿಂದ ಸರ್ವಸಾಧಾರಣ-ಸಾಮಾನ್ಯ ಮನುಷ್ಯನು ಪ್ರಪಂಚವನ್ನು ಸರಿಯಾಗಿ ಸಂಬಾಳಿಸಿಕೊಂಡು ಅದರೊಂದಿಗೆ ಪರಮಾರ್ಥವನ್ನು ಮಾಡಬೇಕು. ಮನುಷ್ಯನಲ್ಲಿ ಯಾವ ವಿವೇಕವಿರುವದೋ ಅದರ ಬಲದ ಮೇಲೆ ಪ್ರಪಂಚವು ಹೇಗೆ ಯಶಸ್ವಿಯಾಗುವದೋ ಅದರಂತೆ ಪರಮಾರ್ಥವೂ ಸಹ ಹಸ್ತಗತವಾಗುವದು. ವಿವೇಕದಿಂದ ದೂರದೃಷ್ಟಿ ಬರುವದು. ಮನುಷ್ಯನು ಈ ದೂರ ದೃಷ್ಟಿ ಉಪಯೋಗಿಸಿಕೊಂಡು ಮುಂದೆ ಬರುವ ಪ್ರಸಂಗಗಳಿಗಾಗಿ ಮುಂಚಿತವಾಗಿ [ಆಗಾವು] ವ್ಯವಸ್ಥೆ ಮಾಡಿ ಇಡಬೇಕು. ವಿವೇಕಶೀಲ ಮನುಷ್ಯನು ಅವಗುಣಗಳನ್ನು ಬಿಡಬೇಕು. ಮತ್ತು ಗುಣವಂತರ [ಯೋಗ್ಯರ-ಶ್ರೇಷ್ಠರ] ಗುಣಗಳನ್ನು ಸ್ವೀಕರಿಸಬೇಕು. ಇಂಥ ಮನುಷ್ಯನು ಹೊರನೋಟದಲ್ಲಿ ನಾಲ್ಕು ಜನರಂತೆ ಕಂಡರೂ ಸಹ ಅವನ ಅಂತರ್ಯಾಮದಲ್ಲಿಯ ವಿವೇಕವು ಪೂರ್ಣ ಆಗದೀ ಜಾಗ್ರತವಿರುವದು. ಒಟ್ಟಿನಲ್ಲಿ ಹೇಳಬೇಕಾದ ಮುಖ್ಯ ಗುರಿ ಏನೆಂದರೆ, ಮನುಷ್ಯನು ಪ್ರಪಂಚವನ್ನು ಸಾವಧಾನ ಪೂರ್ವಕ ಮಾಡಬೇಕು. ಮತ್ತು ಇದರೊಂದಿಗೇನೆ ಪರಮಾರ್ಥದಲ್ಲಿಯೂ ಸಹ ಸ್ಪಷ್ಟ [ಪ್ರತ್ಯಕ್ಷ] ಅನುಭವ ಪಡೆಯಬೇಕು.

## ದಶಕ ದ್ವಾದಶ : ಸಮಾಸ ಪ್ರಥಮ : ವಿಮಳ ಲಕ್ಷಣ

॥ಶ್ರೀರಾಮ॥ ಆಧೀ ಪ್ರಪಂಚ ಕರಾವಾ ನೇಟಕಾ ।
ಮಗ ಘ್ಯಾವೇ ಪರಮಾರ್ಥ ವಿವೇಕಾ ।
ಯೇಥೇ ಆಳಸ ಕರೂ ನಕಾ । ವಿವೇಕೀ ಹೋ ॥೧॥

ಪ್ರಪಂಚ ಸಾಂಡೂನ ಪರಮಾರ್ಥ ಕರಾಲ । ತೇಣೇ ತುಮ್ಹೀ ಕಷ್ಟೀ ವ್ಹಾಲ ।
ಪ್ರಪಂಚ ಪರಮಾರ್ಥ ಚಾಲವಾಲ । ತರೀ ತುಮ್ಹೀ ವಿವೇಕೀ ॥೨॥

ಪ್ರಪಂಚ ಸಾಂಡೂನ ಪರಮಾರ್ಥ ಕೇಲಾ । ತರೀ ಅನ್ನ ಮಿಳೇನಾ ಖಾಯಾಲಾ ।
ಮಗ ತಯಾ ಕರಂಟ್ಯಾಲಾ । ಪರಮಾರ್ಥ ಕೈಚಾ ॥೩॥

ಪರಮಾರ್ಥ ಸಾಂಡೂನ ಪ್ರಪಂಚ ಕರಿಸೀ । ತರೀ ತೂ ಯೆಮಯಾತನಾ ಭೋಗಿಸೀ ।
ಅಂತೀ ಪರಮ ಕಷ್ಟೀ ಹೋಸೀ । ಯೆಮಯಾತನಾ ಭೋಗಿತಾ ॥೪॥

ಸಾಹೇಬಕಾಮಾಸ ನಾಹೀ ಗೇಲಾ । ಗೃಹೀ ಚ ಸುರವಾಡೋನ ಬೈಸಲಾ ।
ತರೀ ಸಾಹೇಬ ಕುಟಿಲ ತಯಾಲಾ । ಪಾಹಾತೀ ಲೋಕ ॥೫॥

ತೇಂವ್ಹಾ ಮಹತ್ವ ಚಿ ಗೇಲೇ । ದುರ್ಜನಾಚೇ ಹಾಸೇ ಜಾಲೇ ।
ದುಃಖ ಉದಂಡ ಭೋಗಿಲೇ । ಆಪುಲ್ಯಾ ಜೀವೇ ॥೬॥

ತೈಸೇ ಚಿ ಹೋಣಾರ ಅಂತೀ । ಮ್ಹಣೌನ ಭಜಾವೇ ಭಗವಂತೀ ।
ಪರಮಾರ್ಥಾಚೀ ಪ್ರಚಿತೀ । ರೋಕಡೀ ಘ್ಯಾವೀ ॥೭॥

ಸಂಸಾರೀ ಅಸತಾ ಮುಕ್ತ । ತೋ ಚಿ ಜಾಣಾವಾ ಸಂಯುಕ್ತ ।
ಅಖಂಡ ಪಾಹೆ ಯುಕ್ತಾಯುಕ್ತ । ವಿಚಾರಣಾ ಹೇ ॥೮॥

ಪ್ರಪಂಚೀ ಜೋ ಸಾವಧಾನ । ತೋ ಪರಮಾರ್ಥ ಕರೀಲ ಜಾಣ ।
ಪ್ರಪಂಚೀ ಜೋ ಅಪ್ರಮಾಣ । ತೋ ಪರಮಾರ್ಥೀ ಖೋಟಾ ॥೯॥

ಮ್ಹಣೌನ ಸಾವಧಾನಪಣೇ । ಪ್ರಪಂಚ ಪರಮಾರ್ಥ ಚಾಲವಣೆ ।
ಐಸೇ ನ ಕರಿತಾ ಭೋಗಣೇ । ನಾನಾ ದುಃಖೇ ॥೧೦॥

ಪರ್ಣಾಳೀ ಪಾಹೋನ ಉಚಲೇ । ಜೀವಸೃಷ್ಟಿ ವಿವೇಕೇ ಚಾಲೇ ।
ಆಣೀ ಪುರುಷ ಹೋಊನ ಭ್ರಮಲೇ । ಯಾಸೀ ಕಾಯ ಮ್ಹಣಾವೇ ॥೧೧॥

## ದಶಕ ೧೨ ಸಮಾಸ ೧ ವಿಮಲ ಲಕ್ಷಣ (ನುಡಿ ೨೦)

ಪ್ರಪಂಚವನ್ನು ಬಿಟ್ಟುಕೊಟ್ಟು ಪರಮಾರ್ಥ ಮಾಡುವದು, ಅಥವಾ ಪರಮಾರ್ಥ ಬಿಟ್ಟು ಪ್ರಪಂಚ ಮಾಡುವದು. ಇವೆರಡೂ ದೋಷಯುಕ್ತವೇ ಇರುವವು. ಆದ್ದರಿಂದ ಪ್ರಪಂಚ ಮತ್ತು ಪರಮಾರ್ಥ ಎರಡನ್ನೂ ಸಮಾಂತರದಲ್ಲಿ ನಡೆಸಿಕೊಂಡು ಹೋಗುವದರಲ್ಲಿಯೇ ಜೀವನದ ರಮ್ಯತೆ ಕಂಡು ಬರುವದು:- ಮೊದಲು ಪ್ರಪಂಚ ವನ್ನು ವ್ಯವಸ್ಥಿತವಾಗಿ ಮಾಡಿರಿ. ಆಮೇಲೆ ವಿವೇಕವನ್ನು ಪರಮಾರ್ಥದ ಕಡೆಗೆ ಹೊರಳಿಸಿರಿ. ವಿವೇಕಿಗಳಾದ ಮಾನ ವರೇ ! ಹೀಗೆ ಮಾಡುವಲ್ಲಿ ಆಲಸ್ಯ ಮಾಡಬೇಡಿರಿ. ತಪ್ಪಬೇಡಿರಿ. [೧] ಪ್ರಪಂಚ ಬಿಟ್ಟು ನೀವು ಪರಮಾರ್ಥವನ್ನು ಮಾಡಿದ್ದಾದರೆ ನೀವು ದುಃಖಿತರು ಮತ್ತು ಕಷ್ಟಿಗಳೂ ಆಗಬೇಕಾದೀತು. ಪ್ರಪಂಚ ಮತ್ತು ಪರಮಾರ್ಥ ಎರ ಡನ್ನೂ ಸರಿಯಾದ ರೀತಿಯಿಂದ ನಡೆಯಿಸಿದರೇನೇ ನಿಮಗೆ ಖರೇ ವಿವೇಕಿಗಳೆಂದು ಅನ್ನಲಿಕ್ಕೆ ಬರುವದು. [೨] ಪ್ರಪಂಚ ಬಿಟ್ಟು ಕೊಟ್ಟು ನೀವು ಪರಮಾರ್ಥವನ್ನು ಮಾಡಿದ್ದಾದರೆ ನಿಮ್ಮ ಹೊಟ್ಟೆಗೆ ತಿನ್ನಲು ಅನ್ನ ಸಹ ಸರಿ ಯಾಗಿ ಸಿಗಲಾರದು. ಆಮೇಲೆ ಇಂಥ ಕಡಿಮೆ ದೈವದ [ನಸೀಬದ] ಜನರಿಗೆ ಪರಮಾರ್ಥವೂ ಸಹ ಸಾಧಿಸಲಾ ರದು. [೩] ಒಳ್ಳೇದು. ಪರಮಾರ್ಥ ಬಿಟ್ಟುಕೊಟ್ಟು ಕೇವಲ ಪ್ರಪಂಚವನ್ನೇ ಮಾಡಿದರೆ ಜೀವವು ಯಮಯಾತನೆ ಯನ್ನು ಭೋಗಿಸಬೇಕಾಗುವದು. ಯಮಯಾತನೆ ಅನುಭವಿಸುವಾಗ ಜೀವಕ್ಕೆ ಕೊನೆಯಲ್ಲಿ ಬಹಳಷ್ಟು ಕಷ್ಟ ಸಹಿಸ ಬೇಕಾಗುವದು. (೪) ತಿಳಿಯಿರಿ, ಒಬ್ಬ ನೌಕರನು ಮಾಲಕನು ಹೇಳಿದ ಕೆಲಸದ ಮೇಲೆ ಹೋಗದೇ ಮೋಜು ಮಾಡುತ್ತ ಮನೆಯಲ್ಲಿಯೇ ಉಳಿದದ್ದಾದರೆ ಅವನ ಮಾಲಕನು ಅವನಿಗೆ ಹೊಡೆತ ಹಾಕುವನು. (ದಂಡಿಸುವನು) ಮತ್ತು ಜನರು ಈ ತಮಾಷೆ ನೋಡುವರು. (೫) ಹೀಗೆ ಆಯಿತೆಂದರೆ, ಜನರಲ್ಲಿ ನಿಮ್ಮ ಮರ್ಯಾದೆ ಹೋಗು ವದು. ದುರ್ಜನರು ಹಾಸ್ಯಮಾಡಿ ನಗುವರು. (ಮಾಲಕನು ನಿಮ್ಮನ್ನು ದೂರೀಕರಿಸಬಹುದು). ಇದರಿಂದ ನಿಮ್ಮ ಜೀವಕ್ಕೆ ಅತಿಶಯ ಕಷ್ಟವಾಗುವದು. (೬) ಪರಮಾರ್ಥ ಬಿಟ್ಟು ಕೇವಲ ಪ್ರಪಂಚ ಮಾಡುವವನ ಅವಸ್ಥೆಯೂ ಹೀಗೆಯೇ ಆಗುವದು. ಆದ್ದರಿಂದ ಭಗವಂತನಲ್ಲಿ ಭಕ್ತಿ ಮಾಡಿರಿ ಮತ್ತು ಇದೇ ಆಯುಷ್ಯದಲ್ಲಿಯೇ ಪರಮಾರ್ಥದ ಪ್ರತ್ಯಕ್ಷ ಅನುಭವ ಪಡೆಯಿರಿ. (ಮುಕ್ತರಾಗಿರಿ). (೭) ಸಂಸಾರದಲ್ಲಿ ಇದ್ದುಕೊಂಡು ಯಾವನು ಮುಕ್ತದಶೆಯನ್ನು ಅನುಭವಿಸುವನೋ (ಕೆಸರಿನಲ್ಲಿಯ ಕಮಲದಂತೆ) ಅವನೇ ನಿಜವಾದ ಯೋಗಿಯೆಂದು ತಿಳಿಯಿರಿ. ನಮಗೆ ಯೋಗ್ಯ ವಾದದ್ದು ಯಾವುದು? ಮತ್ತು ಅಯೋಗ್ಯವಾದದ್ದು ಯಾವದು? ಇದರ ಸಾರಾಸಾರ ವಿಚಾರವು ಇವನ ಅಂತರಂಗ ದಲ್ಲಿ ಅಖಂಡವಾಗಿ ಜಾಗ್ರತವಿರುವದು. (೮) ಯಾವ ಮನುಷ್ಯನು ಸಾವಧಾನತನದಿಂದ ಪ್ರಪಂಚ ಮಾಡುವನೋ ಅವನೇ ಪರಮಾರ್ಥವನ್ನೂ ಸಹ ಅದರಷ್ಟೇ ಸಾವಧಾನತನದಿಂದ ಮಾಡಲಿಕ್ಕೆ ಶಕ್ಯವಿರುವದು. ಯಾವನು ಪ್ರಪಂಚ ದಲ್ಲಿಯೇ ಸರಿಯಾಗಿ ನಡೆಯುವದಿಲ್ಲವೋ ಅಂಥವನ ಪರಮಾರ್ಥವೂ ಸಹ ನಿರರ್ಥಕ ವ ಢೋಂಗಿ ಆಗಿರುವದು.(೯) ಆದ್ದರಿಂದ ಮನುಷ್ಯನು ಪ್ರಪಂಚ ವ, ಪರಮಾರ್ಥ ಎರಡನ್ನೂ ಬಹಳ ಸಾವಧಾನತನದಿಂದ ಮತ್ತು ಬಹಳ ದಕ್ಷತೆ ಯಿಂದ ನಡೆಸಬೇಕು. ಸಾಗಿಸಿಕೊಂಡು ಹೋಗಬೇಕು. ಹೀಗೆ ಮಾಡದೇ ಇದ್ದರೆ ಅನೇಕ ಪ್ರಕಾರದ ದುಃಖಗಳನ್ನು ಭೋಗಿಸಬೇಕಾಗುವದು. (೧೦) ಸಾಮಾನ್ಯ ಕ್ರಿಮಿ ಕೀಟಕಗಳೂ ಸಹ ವಿಚಾರ ಪೂರ್ವಕವಾಗಿ ಎಚ್ಚರತನದಿಂದ ಹೆಜ್ಜೆಗಳನ್ನು ಎತ್ತಿಡುವವು. ಅಂದಮೇಲೆ ಮನುಷ್ಯನಾದವನಂತೂ ಅಗದೀ ವಿವೇಕದಿಂದ ನಡೆಯಬೇಕಾಗುವದು. ತಮ್ಮ ಸುತ್ತಮುತ್ತಲಿನ ಪರಿಸ್ಥಿತಿಯ ಮೇಲಿಂದ ವಿಚಾರಮಾಡಿ ಮುಂದೆ ಏನು ಆಗಬಹುದು? ಇದರ ಅಂದಾಜನ್ನು ಮಾಡಿಕೊಳ್ಳಬೇಕು. ಮತ್ತು ಅದರಂತೆ ತಮ್ಮ ನಡವಳಿಕೆಯ ಧೋರಣೆಯನ್ನು ಇಡಬೇಕು ಇಂಥ ಮನುಷ್ಯನ ಸಮಾಧಾನ ಕಾಯಂ ಉಳಿಯುವದು. ಗಿಡದ ಎಲೆಯ ಮೇಲಿರುವ ಒಂದು ಹುಳವೂ ಸಹ ಮೊದಲಿಗೆ ತನ್ನ ಮುಂದಿನ ಆಧಾರವು ಗಟ್ಟಿಯಾಗಿದೆಯೋ ಎಂದು ಆಲೋಚಿಸುತ್ತದೆ. ತನಗೆ ಖಾತ್ರಿಯಾದರೆ ಆಗ ಅದು ತನ್ನ ಕಾಲನ್ನು ಸಡಿಲಿಸಿ ಮುಂದಕ್ಕೆ ಜಾಗರೂಕವಾಗಿ ಸರಿಸುತ್ತದೆ. ಇದರ ಅರ್ಥವೇನಂದರೆ ಎಲ್ಲ ಜೀವವಿರುವ ಪ್ರಾಣಿ ಗಳು ವಿಚಾರ ಪೂರ್ವಕ ಕರ್ಮಮಾಡುವವು. ಆದರೆ ಸರ್ವಪ್ರಾಣಿಗಳಲ್ಲಿ ಶ್ರೇಷ್ಠನಾದ ಮನುಷ್ಯನು ಮಾತ್ರ ಅವಿವೇಕ ದಿಂದ ಮನಬಂದಂತೆ ತಾಳತಪ್ಪಿ ವರ್ತಿಸುವನು. ಇದಕ್ಕೆ ಏನನ್ನಬೇಕು? (೧೧)

ಮ್ಹಣೌನ ಅಸಾವೀ ದೀರ್ಘ ಸೂಚನಾ । ಅಖಂಡ ಕರಾವೀ ಚಾಳಣಾ ।
ಪುಢೀಲ ಹೋಣಾರ ಅನುಮಾನಾ । ಆಣೂನ ಸೋಡಾವೇ ॥೧೨॥

ಸುಖೀ ಅಸತೋ ಖಬರ್ದಾರ । ದುಃಖೀ ಹೋತೋ ಬೇಖಬರ ।
ಐಸಾ ಹಾ ಲೋಕಿಕ ವಿಚಾರ । ದಿಸತ ಚಿ ಆಹೆ ॥೧೩॥

ಮ್ಹಣೌನ ಸರ್ವ ಸಾವಧಾನ । ಧನ್ಯ ತಯಾಚೇ ಮಹಿಮಾನ ।
ಜನೀ ರಾಖೇ ಸಮಾಧಾನ । ತೋ ಚಿ ಯೇಕ ॥೧೪॥

ಚಾಳಣೇಚಾ ಆಳಸ ಕೇಲಾ । ತರೀ ಅವಚಿತಾ ಪಡೇಲ ಘಾಲಾ ।
ತೇ ವೇಳೆ ಸಾವರಾಯಾಲಾ । ಅವಕಾಶ ಕೈಚಾ ॥೧೫॥

ಮ್ಹಣೌನ ದೀರ್ಘಸೂಚನೇಚೆ ಲೋಕ । ತ್ಯಾಚಾ ಪಾಹಾವಾ ವಿವೇಕ ।
ಲೋಕಾಕರಿತಾ ಲೋಕ । ಶಾಹಾಣೇ ಹೋತೀ ॥೧೬॥

ಪರೀ ತೇ ಶಾಹಾಣೇ ವೊಳಖಾವೇ । ಗುಣವಂತಾಚೆ ಗುಣ ಘ್ಯಾವೇ ।
ಅವಗುಣ ದೇಖೋನ ಸಾಂಡಾವೇ । ಜನಾಮಧೇ ॥೧೭॥

ಮನುಷ್ಯ ಪಾರಖೂ ರಾಹೇನಾ । ಆಣಿ ಕೋಣಾಚೇ ಮನ ತೋಡೀನಾ ।
ಮನುಷ್ಯ ಮಾತ್ರ ಅನುಮಾನಾ । ಆಣೂನ ಪಾಹೇ ॥೧೮॥

ದಿಸೆ ಸಕಳಾಸ ಸಾರಿಖಾ । ಪಾಹಾತಾ ವಿವೇಕೀ ನೇಟಕಾ ।
ಕಾಮೀ ನಿಕಾಮೀ ಲೋಕಾ । ಬರೇ ಪಾಹೇ ॥೧೯॥

ಜಾಣೋನ ಪಾಹಿಜೇತ ಸರ್ವ । ಹೇ ಚಿ ತಯಾಚೇ ಅಪೂರ್ವ ।
ಜ್ಯಾಚೇ ತ್ಯಾಪರೀ ಗೌರವ । ರಾಖೋ ಜಾಣೇ ॥೨೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ವಿಮಳ ಲಕ್ಷಣ' ನಾಮ ಸಮಾಸ ಪ್ರಥಮ ॥

ಆದ್ದರಿಂದ ಮನುಷ್ಯನಲ್ಲಿ ವಿವೇಕದಿಂದ ವಿಕಸಿತವಾದಂಥ ದೂರ ದೃಷ್ಟಿ ಇರಬೇಕು. ಸುತ್ತುಮುತ್ತಲಿನ ಪರಿಸ್ಥಿತಿಯ ಮೇಲೆ ಮನುಷ್ಯನು ಸತತ ವಿಚಾರ ಮಾಡಬೇಕು. ಮತ್ತು ವಿವೇಕ ಶಕ್ತಿಯ ಬಲದಿಂದ (ಜೋರಿನಿಂದ) ಮುಂದಾಗುವದನ್ನು ಸರಿಯಾಗಿ [ಅಗಾವ ಆಗಿ] ತರ್ಕ ಮಾಡಬೇಕು. [೧೨] ಪರಿಸ್ಥಿತಿಯನ್ನನುಲಕ್ಷಿಸಿ ಯಾವನು ಸಾವಧತನದಿಂದ ಬಾಳುವನೋ ಅವನು ಸುಖಿಯಾಗುವನು. ಯಾವನು ಬೇಸಾವಧತನದಿಂದ (ಎಚ್ಚರವಿಲ್ಲದೇ) ಬಾಳುವನೋ ಅವನು ದುಃಖಿಯಾಗುವನು. ಕಷ್ಟ ಭೋಗಿಸುವನು. ಜನತೆಯು ನಿತ್ಯ ಪ್ರಾಪಂಚಿಕ ಜೀವನದಲ್ಲಿ ಇದು ಸತತ ಅನುಭವಕ್ಕೆ ಬರುವದು· [೧೩] ಅಂತೆಯೇ ಎಲ್ಲ ರೀತಿಯಲ್ಲಿ ಎಚ್ಚರದಿಂದ ಇದ್ದು ಯಾರು ಜೀವನ ನಡೆಸುವರೋ ಅವರಲ್ಲಿ ನಿಜವಾಗಿಯೂ ದೊಡ್ಡಸ್ತಿಕೆ (ವಿಶಾಲ ಮನೋಭಾವ) ಇರುವದು. ಇಂಥ ಮನುಷ್ಯನೇ ಸ್ವತಃದ ಮತ್ತು ಜನರ ಸಮಾಧಾನವನ್ನು ಕಾಯ್ದುಕೊಂಡು ಹೋಗುವನು. [೧೪] ಎಲ್ಲ ಕಡೆಯ ಪರಿಸ್ಥಿತಿಯನ್ನು ಚನ್ನಾಗಿ ತಿಳಿದುಕೊಳ್ಳುವಲ್ಲಿ ದುರ್ಲಕ್ಷ್ಯ ಮಾಡಿದ್ದಾದರೆ ಯಾವಾಗ ಎಂಥ ಸಂಕಟ ಬರುವದೆಂದು ಹೇಳಲಿಕ್ಕೆ ಬರುವದಿಲ್ಲ. ಒಮ್ಮೆ ಸಂಕಟ ಬಂದು ಬಿಟ್ಟರೆ ಆಮೇಲೆ ಅದನ್ನು ತಡೆಯುವದಕ್ಕಾಗಲೀ, ಎದುರಿಸಲಿಕ್ಕಾಗಲೀ ಸಮಯವಿರುವದಿಲ್ಲ. [ಆಯುಷ್ಯದ ಭರವಸೆಯಾದರೂ ಎಲ್ಲಿರುವದು?] [೧೫] ದೂರದೃಷ್ಟಿಯುಳ್ಳವರು ಯಾವ ರೀತಿಯಲ್ಲಿ ಮತ್ತು ಹೇಗೆ ವಿಚಾರ ಮಾಡುವರೆಂಬುದನ್ನು ತಿಳಿದುಕೊಳ್ಳಬೇಕು. ಮತ್ತು ಅಂಥವರಿಂದ ನೀವು ಜಾಣತನವನ್ನು ಕಲಿಯಬೇಕು. ಒಬ್ಬನು ಇನ್ನೊಬ್ಬನಿಂದ ಕಲಿಯುವದು ಹೊಸತಲ್ಲ, ಜಗತ್ತಿನ ರೀತಿಯೇ ಇರುವದು. ಯಾವಾಗಲೂ ಉತ್ತಮವಾದದ್ದನ್ನು ಕಲಿಯುತ್ತಲೇ ಇರಬೇಕು· [೧೬] ಅವಗುಣ ಬಿಡಬೇಕು, ಉತ್ತಮವಿರುವ ಗುಣ ಹಿಡಿಯಬೇಕು. (ಸ್ವೀಕರಿಸಬೇಕು.) ಯಾರ ಮನಸ್ಸನ್ನೂ ನೋಯಿಸಬಾರದು· ಹೊರನೋಟಕ್ಕೆ ಸಾದಾ ಆಗಿರಬೇಕು. ಆದರೆ ಅಂತರಂಗದಲ್ಲಿ ಯಾವಾಗಲೂ ವಿವೇಕವು ಜಾಗ್ರತವಾಗಿರುವಂತೆ ನೋಡಿಕೊಳ್ಳಬೇಕು:– ಸಮಾಜದಲ್ಲಿಯ ಜಾಣ [ತಿಳಿದವ] ರನ್ನು ಶೋಧಿಸಿ ಗುರುತಿಸಬೇಕು. ಗುಣವಂತ ಜನರಲ್ಲಿಯ ಉತ್ತಮ ಗುಣಗಳನ್ನು ನೀವು ಸ್ವೀಕರಿಸಬೇಕು. ಜನರಲ್ಲಿ ಕಾಣ ಬರುವ ಅವಗುಣಗಳನ್ನು ನೀವು ಬಿಟ್ಟು ಬಿಡಬೇಕು. [೧೭] ನಿಮ್ಮ ಜೊತೆಗೆ ಸಂಬಂಧ ಬರುವ ಜನರ ಗುಣಾವಗುಣ ಅಥವಾ ನಡತೆ ನಡಾವಳಿಯ ಬಗ್ಗೆ ಸರಿಯಾಗಿ ಪರೀಕ್ಷಿಸದೇ ಬಿಡಬಾರದು. ಆದರೆ ಹೀಗೆ ಮಾಡುವಾಗ ಯಾರ ಮನಸ್ಸಿಗೂ ನೋವಾಗಬಾರದು. ಯಾವತ್ತೂ ಜನರ ಯೋಗ್ಯತೆ [ಲಾಯಖ] ತಿಳಿದು ಕೊಂಡಿರಬೇಕು. [೧೮] ಇಂಥ ವಿಮಲ ನಿರ್ಮಲ ಲಕ್ಷಣದ ಮನುಷ್ಯನು ಹೊರನೋಟದಿಂದ ನೋಡಿದರೆ ಸಾದಾ ಭೋಳಾ [ನಾಲ್ಕು ಜನರಂತೆ] ಕಾಣುವನೆಂಬುದು ನಿಜವೇ ಆದರೂ ಇವನ ಅಂತರ್ಯಾಮದಲ್ಲಿಯ ವಿವೇಕವು ಜಾಗ್ರತವಾಗಿರುವದು. ಅಂತೆಯೇ ಯೋಗ್ಯ ವಿಚಾರ, ವಿವೇಕದಿಂದ ಇವನು ನಡೆಯುವನು. ಇದರಿಂದಾಗಿ ಕೆಲಸ ಮಾಡುವವರು ಯಾರು? ಮತ್ತು ಕೆಲಸ ಮಾಡದೇ ಇರುವವರು ಯಾರು? ಇದನ್ನು ಇವನು ಸರಿಯಾಗಿ ಗುರುತಿಸುವನು. [೧೯] ಪ್ರತಿಯೊಬ್ಬರ ಕಾರ್ಯಶಕ್ತಿಯನ್ನು ಗುರುತಿಸಿ ಎಲ್ಲರನ್ನೂ [ಉಪಯೋಗಿ, ನಿರುಪಯೋಗಿ ಇಬ್ಬರನ್ನೂ] ತನ್ನವರನ್ನಾಗಿ ಮಾಡಿಕೊಳ್ಳುವನು. ಇದೇ ಇಂಥವರಲ್ಲಿಯ ಅಲೌಕಿಕ ಗುಣವೆಂದು ಹೇಳಬಹುದು. ಯಾವನಿಗೆ, ಯಾರಿಗೆ, ಎಷ್ಟು, ಮಹತ್ವ ಅಥವಾ ದೊಡ್ಡಸ್ತಿಕೆ ಕೊಡಬೇಕೆಂಬುವ ಚಾತುರ್ಯವು ಇವನಿಗೆ ಚನ್ನಾಗಿ ಗೊತ್ತಿರುವದು. (೨೦)

ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಹನ್ನೆರಡನೆಯ ದಶಕದ
"ವಿಮಲ ಲಕ್ಷಣ"ವೆಂಬ ಒಂದನೆಯ ಸಮಾಸವು ಮುಗಿದುದು.

● ●

## ದಶಕ ೧೨. ಸಮಾಸ ೨. ಪ್ರತ್ಯಯ ನಿರೂಪಣ (ನುಡಿ ೪೦)

ಯಾವುದೇ ಸಮಾಜದಲ್ಲಿಯ ಸಾಮಾನ್ಯ ಮನುಷ್ಯನು ವಾಸನಾ ಪ್ರಧಾನ ಇರುವನು. ಸಂಸಾರಿಕ ಮನುಷ್ಯನಿಗೆ ತನ್ನ ಪ್ರಾಪಂಚಿಕ ಪರಿಸ್ಥಿತಿ ಉತ್ತಮವಾಗಿರಬೇಕು. ಐಷಆರಾಮ ಆಗಿರಬೇಕು. ಅಂತಾ ಮನಃಪೂರ್ವಕವಾಗಿ ಇಚ್ಛಿಸುವನು. ಆದರೆ ಅದು ಅವನಂತೆ ಇರುವದಿಲ್ಲ. ಪ್ರಪಂಚದಲ್ಲಿ ಕೊರತೆ ಬೀಳುವದು, ಮತ್ತು ಮನುಷ್ಯನಿಗೆ ದುಃಖಾದಿಗಳನ್ನು ಅನುಭವಿಸಬೇಕಾಗುವದು. ಇದಕ್ಕೆ ಕಾರಣವು ಪ್ರಾರಬ್ಧವಲ್ಲ. ಮಾಡಬೇಕಾದ ಯೋಗ್ಯ ಪ್ರಯತ್ನ ಇವರಿಂದ ಆಗಬೇಕಾದಷ್ಟು ಆಗುವದಿಲ್ಲ. ಇದು ನಿಜವಾದ ಕಾರಣವಿರುವದು. ಮನುಷ್ಯ ಯೋಗ್ಯ

ದಿಶೆಯಲ್ಲಿ ಮನಃಪೂರ್ವಕ ಪ್ರಯತ್ನ ಮಾಡಿದ್ದಾದರೆ, ಅವನಿಗೆ ಪ್ರಪಂಚದಲ್ಲಿ ಸಹಸಾ ಕಡಿಮೆ ಬೀಳುವದೇ ಇಲ್ಲ. ಇಂಥ ತಪ್ಪಿಲ್ಲದ ಯತ್ನ ಯಾವುದು? ಇದರ ವರ್ಣನೆಯು ಈ ಸಮಾಸದಲ್ಲಿ ಇರುವದು. ನಾವು ನಮ್ಮ ಅವಗುಣಗಳನ್ನು ತಿಳಿದುಕೊಳ್ಳಬೇಕು. ಜನರೊಂದಿಗೆ ಹೇಗೆ ನಡೆದುಕೊಳ್ಳಬೇಕು. ಇದನ್ನು ತಿಳಿಯದೇ ಇದ್ದದ್ದಕ್ಕಾಗಿ ಅವರವರಲ್ಲಿ ಮತ್ಸರ ಮತ್ತು ಜಗಳ ತಂಟೆ ಆಗುವವು. ಜಗಳದಿಂದ ಇಬ್ಬರೂ ಹಣ್ಣಾಗುವರು. ಕಷ್ಟಕ್ಕೆ ಒಳಗಾಗುವರು. ಮತ್ತು ಆಮೇಲೆ ನಿಜವಾಗಿ ಮಾಡಬೇಕಾದ ಕಾರ್ಯದ ಬೆಳವಣಿಗೆ ನಿಂತು ಹೋಗುವದು. ಪ್ರಯತ್ನ ಹದಗೆಡುವದು. ಅಥವಾ ಅದು ಅಷ್ಟಕ್ಕೇ ನಿಂತು ಹೋಗುವದು. ಸಾಮಾನ್ಯವಾಗಿ ಜನರ ರೀತಿ ಹೇಗಿರುವದೆಂದರೆ, ಅವರು ತಾವು ನಡೆದದ್ದು–ತಾವು ಮಾಡಿದ್ದು ಸರಿ ಇರುವದು. ಇನ್ನೊಬ್ಬರದು ಸರಿ ಅಲ್ಲ ಅನ್ನುವರು. ಮತ್ತು ಎರಡನೆಯವರಿಗೆ ಹೆಸರಿಡುವದು. (ಅಂದಮೇಲೆ) ನಾಲ್ಕು ಜನರಿಂದ ಸರಿ (ಬರೋಬರಿ) ಅಂತ ಅನ್ನಿಸಿಕೊಳ್ಳಬೇಕಾಗಿದ್ದರೆ ಜನರ ಒಳಿತು ಕೆಡಕುಗಳನ್ನು ಸಹಿಸಬೇಕಾಗುವದು. ಜನರಿಗೆ ತಿಳಿಯುವದಿಲ್ಲ. ಅಥವಾ ತಿಳವಳಿಕೆಯುಳ್ಳವರಾಗಿರುವದಿಲ್ಲ. ಅಂತೆಯೇ ಜನರು ಹೀಗೆಯೇ ಸ್ವಾರ್ಥಿಗಳಾಗಿ ನಡೆಯುವರು. ಬುದ್ಧಿಗೇಡಿಗಳು ಮಾಡುವದೇನು? ನಾವು ಮೇಲಿನ ಮಟ್ಟದಲ್ಲಿದ್ದು ಅವರನ್ನು ಕ್ಷಮಾ ಮಾಡಬೇಕು. ಹೀಗೆ ಮಾಡದೇ ಇದ್ದರೆ ಅವರಲ್ಲಿ ಮತ್ತು ನಮ್ಮಲ್ಲಿ ಏನೂ ಅಂತರವು ಉಳಿಯುವದಿಲ್ಲ. ನಾವು ಸತ್ಪಥದಲ್ಲಿಯೇ ನಡೆಯಬೇಕು. ಇದರೊಂದಿಗೆ ಜನರ ಅಂತರಂಗ ನಮ್ಮ ವಿಷಯದಲ್ಲಿ ನಿರ್ಮಲವಾಗುತ್ತ ಹೋಗಬೇಕು. ಹೀಗೆ ನಮ್ಮ ನಡೆನುಡಿ ಇರಬೇಕು. ಯಾರು ಯಾವಾಗಲೂ ಖರೇ ಮಾತಾಡುವರೋ ಮತ್ತು ಮಾತಾಡಿದಂತೆ ನಡೆಯುವರೋ ಅಂಥವರನ್ನು ಜನರು ಮನ್ನಿಸುವರು. ಜನತಾರೂಪಿ ಜನಾರ್ದನರು ಒಮ್ಮೆ ಪ್ರಸನ್ನರಾದರೆಂದರೆ ಆಮೇಲೆ ಏನೂ ಕಡಿಮೆ ಆಗುವದಿಲ್ಲ. ಎಲ್ಲರನ್ನೂ ಸದಾ ಸಂತೋಷದಲ್ಲಿ ಇಡುವದು ಕಠಿಣವೇ ಇರುವದು. ಯಾವಾಗಲೂ ಯಾರದೂ ಹುಳುಕು ಕುಂದು ಎತ್ತಿ ತೋರಿಸಿ ಮಾತನಾಡಬಾರದು. ಯಾಕಂದರೆ ಇದರಿಂದ ಮನುಷ್ಯನ ಮನವು ದುಃಖಿತವಾಗುವದು. ಎರಡನೆಯವರ ದೋಷ ತೆಗೆದು ಮಾತನಾಡುವದರಲ್ಲಿ ಅರ್ಥವಿಲ್ಲ. ನಮ್ಮ ಸಾಮರ್ಥ್ಯವೇ ಕಡಿಮೆ ಇರುವದು. ಈ ದೃಷ್ಟಿಕೋನವನ್ನು ನಮ್ಮ ಮನಸ್ಸಿಗೆ ಪುನಃ ಪುನಃ ತಿಳಿಸಿಕೊಡುವದು ಅವಶ್ಯವು. ಮನುಷ್ಯನು ಮರಣದ ನೆನಪನ್ನು ಹೊಂದಿರಬೇಕು. ಕೊನೆಗೆ ನಮ್ಮ ಸಂಗಡ ಯಾವುದು ಮತ್ತು ಏನು ಬರುವದು ಇದನ್ನು ತಿಳಿದುಕೊಂಡಿರಬೇಕು. ಮತ್ತು ವಿವೇಕದಿಂದ ಚನ್ನಾಗಿ ನಡೆಯಬೇಕು. ತಿಳಿಯಿರಿ, ಒಬ್ಬ ಮನುಷ್ಯನು ಬಹಳಷ್ಟು ವಿದ್ಯೆ ಕಲಿತನು, ಆದರೆ ಬಂದ ಪ್ರಸಂಗಗಳನ್ನು ಇವನಿಗೆ ತಿಳಿದುಕೊಳ್ಳಲಿಕ್ಕೆ ಆಗದಿದ್ದರೆ ಮತ್ತು ಬಂದದ್ದಕ್ಕೆ ಯೋಗ್ಯವಾದ ರೀತಿಯಲ್ಲಿ ಎದೆಗೊಟ್ಟು ನಿಲ್ಲಲಿಕ್ಕೆ ಬರದಿದ್ದರೆ, ಸರಿಯಾದ ರೀತಿಯಲ್ಲಿ ಅದನ್ನು ಎದುರಿಸಲು ಆಗದಿದ್ದರೆ, ಅಂಥ ಮನುಷ್ಯನ ವಿದ್ಯಾ ಕವಡೆ ಬೆಲೆಗಿಂತಲೂ ಕಡಿಮೆ ಎನಿಸುವದು. ಅದು ಕೆಲಸಕ್ಕೆ ಬಾರದ್ದೆಂದು ತಿಳಿಯಿರಿ. ಆದ್ದರಿಂದ ಮನುಷ್ಯನು ಕಾಲ, ವೇಳೆ, [ಪ್ರಸಂಗ–ಮಾನ,] ಗುರುತಿಸಬೇಕು. ನಮಗೆ ಯಾವುದು ಬೇಕು ಅನಿಸುವದೋ ಅದಕ್ಕಾಗಿ ಯೋಗ್ಯ ಪ್ರಯತ್ನ ಮಾಡಬೇಕು. ಆಮೇಲೆ ಅವನಿಗೆ ಏನೂ ಕಡಿಮೆ ಬೀಳಲಾರದು.

## ದಶಕ ೧೨ ಸಮಾಸ ೨ ಪ್ರತ್ಯಯ ನಿರೂಪಣ (ನುಡಿ ೩೦)

ಸಂಸಾರ ಮಾಡುವಂಥ ಸ್ತ್ರೀ ಪುರುಷರಿಗೆ ಶ್ರೀಸಮರ್ಥರು ಆರಂಭದಲ್ಲಿಯೇ ಆವಾಹನ ಮಾಡುವವರಾಗಿರುವರು. ಅವರ ಅಂಬೋಣವೇನೆಂದರೆ, ಅರಿತ(ಸಮಜೂತದಾರ) ಜಾಣ ಸ್ತ್ರೀ ಪುರುಷರು ಯಾವ ತಪ್ಪು ತಿಳುವಳಿಕೆ(ಗೈರ ಸಮಜೂತ)ಮಾಡಿಕೊಳ್ಳಬೇಡಿರಿ. ಬಹು ಜನರಿಗೆ ಪ್ರಪಂಚದಲ್ಲಿ ಬಹಳಷ್ಟು ಕಡಿಮೆ ಬೀಳುತ್ತದೆ, ಅನ್ನುವದು ಅಗದೀ ಖರೇ ಇರುವದು. ಪರಂತು ಇದಕ್ಕೆ ಪ್ರಾರಬ್ಧವು ಕಾರಣವಲ್ಲ. ನಾವು ಯೋಗ್ಯ ದಿಶೆಯಲ್ಲಿ ಸರಿಯಾದ ಪ್ರಯತ್ನ ಮಾಡುವದಿಲ್ಲವೆಂದು ಪ್ರಪಂಚದಲ್ಲಿ ನಮಗೆ ಬೇಕಾದದ್ದು ಯಾವುದೋ ಅದು ಸಿಗುವದಿಲ್ಲ.

**ದಶಕ ದ್ವಾದಶ : ಸಮಾಸ ದ್ವಿತೀಯು : ಪ್ರತ್ಯಯು ನಿರೂಪಣ**

॥ಶ್ರೀರಾಮ॥ ಏಕಾ ಸಂಸಾರಾಸೀ ಆಲೆ ಹೋ। ಸ್ತ್ರೀ ಪುರುಷ ನಿಸ್ಪೃಹ ಹೋ।
ಸುಚಿತಪಣೇ ಪಾಹೋ। ಅರ್ಥಾಂತರ ॥೧॥

ಕಾಯೆ ಮ್ಹಣತೆ ವಾಸನಾ। ಕಾಯೆ ಕಲ್ಪಿತೆ ಕಲ್ಪನಾ।
ಅಂತರೀಚೆ ತರಂಗ ನಾನಾ। ಪ್ರಕಾರೇ ಉಠತೀ ॥೨॥

ಬರೇ ಖಾವೇ ಬರೇ ಜೆವಾವೇ। ಬರೇ ಲ್ಯಾವೇ ಬರೇ ನೆಸಾವೇ।
ಮನಾಸಾರಿಖೇ ಅಸಾವೇ। ಸಕಳ ಕಾಹೀ ॥೩॥

ಏಸೇ ಆಹೆ ಮನೋಗತ। ತರೀ ತೇ ಕಾಹೀ ಚ ನ ಹೋತ।
ಬರೇ ಕರಿತಾ ಅಕಸ್ಮಾತ। ವಾಈಟ ಹೋತೇ ॥೪॥

ಯೇಕ ಸುಖೀ ಯೇಕ ದುಃಖೀ। ಪ್ರತ್ಯಕ್ಷ ವರ್ತತೇ ಲೋಕೀ।
ಕಷ್ಟೀ ಹೋಊನಿಯಾ ಸೆಖೀ। ಪ್ರಾರಬ್ಧಾವರೀ ಘಾಲಿತೀ ॥೫॥

ಅಚುಕ ಯೆತ್ನ ಕರವೇನಾ। ಮ್ಹಣೌನ ಕೇಲೇ ತೇ ಸಜೇನಾ।
ಆಪಲಾ ಅವಗುಣ ಜಾಣವೇನಾ। ಕಾಹೀ ಕೇಲ್ಯಾ ॥೬॥

ಜೋ ಆಪಲಾ ಆಪಣ ನೇಣೇ। ತೋ ದುಸರ್‍ಯಾಚೇ ಕಾಯೆ ಜಾಣೇ।
ನ್ಯಾಯೆ ಸಾಂಡಿತಾ ದೈನ್ಯವಾಣೇ। ಹೋತೀ ಲೋಕ ॥೭॥

ಲೋಕಾಚೇ ಮನೋಗತ ಕಳೇನಾ। ಲೋಕಾಸಾರಿಖೇ ವರ್ತವೇನಾ।
ಮೂರ್ಖಪಣೇ ಲೋಕೀ ನಾನಾ। ಕಳಹ ಉಠತೀ ॥೮॥

ಮಗ ತೇ ಕಳೋ ವಾಢತೀ। ಪರಸ್ಪರೇ ಕಷ್ಟೀ ಹೋತೀ।
ಪ್ರೇತ್ನ ರಾಹಾತಾ ಅಂತೀ। ಶ್ರಮ ಚಿ ಹೋಯೆ ॥೯॥

ಏಸೀ ನವ್ಹೇ ವರ್ತಣುಕ। ಪರೀಕ್ಷಾವೇ ನಾನಾ ಲೋಕ।
ಸಮಜಲೇ ಪಾಹಿಜೆ ನೇಮಕ। ಜ್ಯಾಚೇ ತ್ಯಾಪರೀ ॥೧೦॥

ಶಬ್ದಪರೀಕ್ಷಾ ಅಂತರಪರೀಕ್ಷಾ। ಕಾಹೀ ಯೇಕ ಕಳೆ ದಕ್ಷಾ।
ಮನೋಗತ ನತದೃಕ್ಷಾ। ಕಾಯ ಕಳೆ ॥೧೧॥

ದುಸರ್‍ಯಾಸ ಶಬ್ದ ಠೇವಣೇ। ಆಪಲಾ ಕೈಪಕ್ಷ ಘೇಣೇ।
ಪಾಹೋ ಜಾತಾ ಲೋಕಿಕ ಲಕ್ಷಣೇ। ಬಹುತೇಕ ಏಸೀ ॥೧೨॥

## ದಶಕ ೧೨. ಸಮಾಸ ೨. ಪ್ರತ್ಯಯ ನಿರೂಪಣ (ನುಡಿ ೩೦)

ಸಂಸಾರ ಮಾಡಿಕೊಂಡು-ಹೋಗುವ [ಗೃಹಸ್ಥಾಶ್ರಮೀ ಅಥವಾ ಸಂಸಾರಿಕ] ಸಜ್ಜನ ಸ್ತ್ರೀ ಪುರುಷರೇ ನಾನು ಏನು ಹೇಳುವೆನೋ ಅದನ್ನು ಶಾಂತಚಿತ್ತದಿಂದ ಮತ್ತು ನಿರ್ಮಲ ಮನಸ್ಸಿನಿಂದ ಕೇಳಿರಿ. ನನ್ನ ಅಂಬೋಣದರ ಅರ್ಥವನ್ನು ಚನ್ನಾಗಿ ತಿಳಿದುಕೊಳ್ಳಿರಿ. (೧) ನಮ್ಮ ವಾಸನಾ ಏನನ್ನಾದರೂ ಇಚ್ಛಿಸುತ್ತದೆ, ಬೇಡುತ್ತದೆ. ನಮ್ಮ ಕಲ್ಪನಾ ಇಲ್ಲದ ಮನೋರಾಜ್ಯವನ್ನು ರಚಿಸುವದು. ನಮ್ಮ ಮನದಲ್ಲಿ ಇಂಥ ಅನೇಕ ಪ್ರಕಾರದ ಬೇಡಿಕೆಗಳು ಏಳುವವು. (೨) ನಮಗೆ ತಿನ್ನಲು ಕುಡಿಯಲು ಉತ್ತಮವಾದದ್ದು ಸಿಗಬೇಕು. ನಮಗೆ ಉಡತೊಡಲು ಉತ್ತಮ [ಚಲೋ] ವಸ್ತ್ರಗಳು ಸಿಗಬೇಕು. ಇಷ್ಟೇ ಅಲ್ಲ ಎಲ್ಲವೂ ನಮ್ಮ ಮನಸ್ಸಿಗೆ ತಕ್ಕದ್ದೇ [ಚಲೋದೆ] ಇರಬೇಕು. ಹೀಗೆ ನಮ್ಮಲ್ಲಿ ಅನೇಕ ಇಚ್ಛೆಗಳು ಇರುವವು. (೩) ನಮ್ಮ ಮನೋಗತವು ಈ ಪ್ರಕಾರ ಇದ್ದರೂ ಸಹ ಇವುಗಳ ಪೈಕಿ ಏನೂ ಒದಗಿ ಬರುವದಿಲ್ಲ. ಉಲಟ, ಚಲೋದು ಮಾಡಲಿಕ್ಕೆ ಹೋದರೆ ಅನಪೇಕ್ಷಿತವಾಗಿ (ಭಲತೆ) ಇಲ್ಲದ್ದೊಂದು ಆಗಿ ಬಿಡುವದು (೪) ಒಬ್ಬನು ಸುಖಿಯಿದ್ದರೆ ಇನ್ನೊಬ್ಬನು ದುಃಖ ಭೋಗಿಸುವನು. ಈ ಮಾತನ್ನು ಪ್ರಪಂಚದಲ್ಲಿ ಪ್ರತ್ಯಕ್ಷವಾಗಿ ನೋಡುವೆವು. ಯಾರು (ಎಷ್ಟೂ ಶ್ರಮಪಡದೆ) ದುಃಖ ಭೋಗಿಸುವರೋ ಅವರು ಕಷ್ಟಿಗಳಾಗಿರುವರು. ಮತ್ತು ಇವರು ತಮ್ಮ ದುಃಖದ ಕಾರಣವನ್ನು ಕೊನೆಗೆ ಪ್ರಾರಬ್ಧದ ಮೇಲೆ ಹಾಕುವರು. (೫) ಆದರೆ ಇದು ಎಷ್ಟೂ ಬರೋಬರ ಅಲ್ಲ. ಮುಖ್ಯವಾಗಿ ಮನುಷ್ಯನು ಬರೋಬರ ಪ್ರಯತ್ನ ಮಾಡುವದಿಲ್ಲ. ಅಂತೆಯೇ ಅವನು ಯಾವುದನ್ನು ಮಾಡುವನೋ ಅದಕ್ಕೆ ತಕ್ಕ ಫಲ ಅವನಿಗೆ ಸಿಗುವದಿಲ್ಲ. ಖರೇ ದೋಷ ನಮ್ಮ ಕಡೆಗೇ ಇರುವದು.ನಮ್ಮ ಅವಗುಣ ನಮಗೇ ಅಡ್ಡ ಬರುವದು. ಈ ಮಾತು ಏನು ಮಾಡಿದರೂ ಮನುಷ್ಯನ ಲಕ್ಷ್ಯಕ್ಕೆ ಬರುವದೇ ಇಲ್ಲ. (೬) ತಾನು ನಿಜವಾಗಿ ಹೇಗಿರುವೆನೆಂಬುದು ಸ್ವತಃ ಅವನಿಗೇ ತಿಳಿಯುವದಿಲ್ಲವೆಂದ ಮೇಲೆ ಇವನಿಗೆ ಎರಡನೆಯವನು ಹೇಗೆ ಇರುವನೆಂಬುದು ಹೇಗೆ ತಿಳಿಯಬೇಕು ?ಅರ್ಥಾತ್ ತಿಳಿಯುವದಿಲ್ಲ. ಯೋಗ್ಯ ಮಾರ್ಗದಿಂದ ಹೋಗುವದನ್ನು ಬಿಟ್ಟು ಅಡ್ಡ ಮಾರ್ಗ ಹಿಡಿದದ್ದರಿಂದ ಮನುಷ್ಯನು ದೀನನಾಗುವನು.(೭)ಪ್ರಪಂಚದಲ್ಲಿ ಮನಸ್ಸಿನಂತೆ ಆಗಬೇಕಾದರೆ ಜನರ ಮನೋಗತವನ್ನು ಗುರುತಿಸಿ ನಡೆಯಬೇಕು.ಜಗಳ ಜೋಟಿ (ತಂಟೆ) ತಪ್ಪಿಸಬೇಕು. ಮನುಷ್ಯರ ನಡವಳಿಕೆ-ನಡಾವಳಿಯ ಪರೀಕ್ಷೆ ಮಾಡಿದ ಮೇಲೆ ಅವರ ಸಂಗಡ ವ್ಯವಹರಿಸಬೇಕು. ಜನರ ಮನಸ್ಸಿನಲ್ಲಿ ಏನು ಇರುವದೆಂಬುದು ಯಾರಿಗೆ ತಿಳಿಯುವದಿಲ್ಲವೋ ಮತ್ತು ಜನರಿಗೆ ಒಪ್ಪಿಗೆ ಆಗುವಂತೆ ಯಾರಿಗೆ ನಡೆಯಲಿಕ್ಕೆ ಆಗುವದಿಲ್ಲವೋ ಇಂಥವನ ಮೂರ್ಖತನದಿಂದಾಗಿ ಇವನ ಸಂಗಡ ಅನೇಕ ಜನರು ಜಗಳ ತಂಟೆ ಮಾಡುವರು.(೮)ಈ ಜಗಳಗಳು ಬೆಳೆಯುತ್ತ ಹೋಗುವವು.ಇದರಿಂದ ಇವನಿಗೂ ಮತ್ತು ಜನರಿಗೂ ಕೂಡಿಯೇ ದುಃಖ-ಕಷ್ಟಗಳು ಆಗುವವು.ಹೀಗಾಗುವದರಿಂದ ಪ್ರಪಂಚದಲ್ಲಿಯ ಒಂದು ಒಳ್ಳೆಯ ಕಾರ್ಯ ಬಂದು ಬೀಳುವದು. ಒಟ್ಟಿನಲ್ಲಿ ವೈಯಕ್ತಿಕವಾಗಿ ಮತ್ತು ಕೆಲವು ಸಾಮಾಜಿಕ ಕಾರ್ಯಗಳ ಪ್ರಗತಿ ನಿಲ್ಲುವದು. ಕೊನೆಗೆ ವಿನಾಕಾರಣ ಶ್ರಮ ಮಾತ್ರ ಆಗುವದು. (೯) ಈ ಪ್ರಕಾರದ ನಡವಳಿಕೆ ಏನೂ ಒಳ್ಳೆಯದಲ್ಲ. ನಿಮ್ಮೊಂದಿಗೆ ಯಾರ ಯಾರ ಸಂಬಂಧ ಬರುವದೋ ಆ ಎಲ್ಲ ತರದ ಜನರನ್ನೂ ಪರೀಕ್ಷಿಸಿ ನೋಡಬೇಕು. ಯಾವ ಮನುಷ್ಯನು ಹೇಗಿರುವನು ಇದರ ಸರಿಯಾದ ಜ್ಞಾನ ನಿಮಗೆ ಇರುವದು ಅವಶ್ಯವು. [೧೦] ಚತುರ ಮತ್ತು ಸಾವಧಾನದ ಮನುಷ್ಯನಿಗೆ ಎರಡನೆಯವರ ಮಾತಿನ ಮೇಲಿಂದ, ಉದ್ದೇಶದ ಮೇಲಿಂದ ಮತ್ತು ಅವರ ಮಾತಿನ ಧಾಟಿಯ ಮೇಲಿಂದಲೇ ಜನರ ಪರೀಕ್ಷಾ ಮಾಡಲಿಕ್ಕೆ ಬರುವದು. ಬುದ್ಧಿ ಹೀನ ಮನುಷ್ಯನಿಗೆ ಇನ್ನೊಬ್ಬರ ಮನದಲ್ಲಿಯ ಉದ್ದೇಶ ತಿಳಿಯುವದಿಲ್ಲ. [೧೧] "ನನ್ನದೇ ನಿಜವು" ಹೀಗೆನ್ನುವದು ಜನ ಸ್ವಭಾವವೇ ಇರುವದು. ಜನರನ್ನು ಸಹನಶೀಲತೆಯಿಂದ ಕಾಣಬೇಕು. ಅವರದನ್ನು ತಾನು ಸಹಿಸಬೇಕು. ಮತ್ತು ಖರೇತನದಿಂದ ನಡೆಯಬೇಕು. ಒಮ್ಮೆ ಜನತೆ ನಿಮ್ಮ ಕಡೆಗೆ ಒಲಿದು ಬಂದರೆಂದರೆ ಆಮೇಲೆ ಭಾಗ್ಯದ ಬಾಗಿಲು ತೆರೆದಂತೆ ಯಾವುದಕ್ಕೂ ಕಡಿಮೆ ಬೀಳುವದಿಲ್ಲ. ಎರಡನೆಯವರಿಗೆ ಹೆಸರಿಡುವದು ಮತ್ತು ತನ್ನದು ಅಗದೀ ಬರೋಬರ ಅದೆ ಅನ್ನುವ ಗರ್ವದ ನುಡಿನಡೆಗಳು ಸರ್ವಸಾಧಾರಣ [ಸಾಮಾನ್ಯ] ಜನರ ಸ್ವಭಾವವೇ ಇರುವದು. [೧೨]

ಲೋಕೀ ಬರೇ ಮ್ಹಣಾಯಾಕಾರಣೇ। ಭಲ್ಯಾಸ ಲಾಗತೇ ಸೋಸಣೇ।
ನ ಸೋಸಿತಾ ಭಂಡವಾಣೇ। ಸಹಜ ಚಿ ಹೋಯೇ ॥೧೩॥

ಆಪಣಾಸ ಜೇ ಮಾನೇನಾ। ತೇಥೇ ಕದಾಪಿ ರಾಹಾವೇನಾ।
ಉರೀ ತೋಡೂನ ಜಾವೇನಾ। ಕೋಣೇಯೇಕೇ ॥೧೪॥

ಬೋಲತೋ ಖರೇ ಚಾಲತೋ ಖರೇ। ತ್ಯಾಸ ಮಾನಿತೀ ಲಹಾನಥೋರೇ।
ನ್ಯಾಯೆ ಅನ್ಯಾಯೆ ಪರಸ್ಪರೇ। ಸಹಜ ಚಿ ಕಳೇ ॥೧೫॥

ಲೋಕಾಸ ಕಳೇನಾ ತವರೀ। ವಿವೇಕೇ ಕ್ಷಮಾ ಜೋ ನ ಕರೀ।
ತೇಣೇಕರಿತಾ ಬರಾಬರೀ। ಹೋತ ಜಾತೇ ॥೧೬॥

ಜವರೀ ಚಂದನ ಝಿಜೇನಾ। ತವತೋ ಸುಗಂಧ ಕಳೇನಾ।
ಚಂದನ ಆಣಿ ವೃಕ್ಷ ನಾನಾ। ಸಗಟ ಹೋತೀ ॥೧೭॥

ಜವ ಉತ್ತಮ ಗುಣ ನ ಕಳೆ। ತೋ ಯಾ ಜನಾಸ ಕಾಯೆ ಕಳೇ।
ಉತ್ತಮ ಗುಣ ದೇಖತಾ ನಿವಳೇ। ಜಗದಾಂತರ ॥೧೮॥

ಜಗದಾಂತರ ನಿವಳತ ಗೇಲೇ। ಜಗದಾಂತರೀ ಸಖ್ಯ ಜಾಲೇ।
ಮಗ ಜಾಣಾವೇ ವೊಳಲೇ। ವಿಶ್ವಜನ ॥೧೯॥

ಜನೀ ಜನಾರ್ದನ ವೊಳಲಾ। ತರೀ ಕಾಯೆ ಉಣೇ ತಯಾಲಾ।
ರಾಜೀ ರಾಖಾವೇ ಸಕಳಾಲಾ। ಕಠೀಣ ಆಹೇ ॥೨೦॥

ಪೇರಿಲೇ ತೇ ಉಗವತೇ। ಉಸಿಣೇ ದ್ಯಾವೇ ಘ್ಯಾವೇ ಲಾಗತೇ।
ವರ್ಮ ಕಾಢಿತಾ ಭಂಗತೇ। ಪರಾಂತರ ॥೨೧॥

ಲೋಕಿಕೀ ಬರೇಪಣ ಕೇಲೇ। ತೇಣೇ ಸೌಖ್ಯ ವಾಢಲೇ।
ಉತ್ತರಾಸಾರಿಖೇ ಆಲೇ। ಪ್ರತ್ಯೋತ್ತರ ॥೨೨॥

ಹೇ ಆವಘೇ ಆಪಣಾಪಾಸೀ। ಯೇಥೇ ಬೋಲ ನಾಹೀ ಜನಾಸೀ।
ಸಿಕವಾವೇ ಆಪಲ್ಯಾ ಮನಾಸೀ। ಕ್ಷಣಕ್ಷಣಾ ॥೨೩॥

ಖಳ ದುರ್ಜನ ಭೇಟಲಾ। ಕ್ಷಮೇಚಾ ಧೀರ ಬುಡಾಲಾ।
ತರೀ ಮೋನೇ ಚಿ ಸ್ಥಳತ್ಯಾಗ ಕೇಲಾ। ಪಾಹಿಜೆ ಸಾಧಕೇ ॥೨೪॥

ಚೆನ್ನಾಗಿರುವ ಒಳ್ಳೆಯ ಮನುಷ್ಯನಿಗೆ ಅನಿಸುವದೇನಂದರೆ,ಜನರು ತನಗೆ ಒಳ್ಳೆಯವನೆಂದು ಅನ್ನಬೇಕು. ಈ ಅಪೇಕ್ಷೆ ಸಹ ಸಾಮಾನ್ಯರಲ್ಲಿ ಸ್ವಾಭಾವಿಕವಾಗಿ ಇರುವದು. ಆದರೆ ಈ ಒಳ್ಳೆಯ ಮನುಷ್ಯನೂ ಸಹ ಜನರ ಸಲುವಾಗಿ ಕಷ್ಟ ನಷ್ಟ ಸೋಸಬೇಕು. ಮತ್ತು ಸವಿಮಾತಿನಿಂದ ಇರಬೇಕು. ಇದೂ ಅವಶ್ಯವೇ ಇರುವದು. ಯಾರು ಹೀಗೆ ಕಷ್ಟನಷ್ಟ ಸುಖದುಃಖದಲ್ಲಿ ಪಾಲುದಾರರಾಗುವದಿಲ್ಲವೋ ಅವರು ಫಜೀತಿಗೊಳಪಡದೇ ಇರಲಾರರು. [೧೩] ಯಾವ ಕಡೆಯು ಜನರ ನಡತೆ ನಡಾವಳಿ ನಿಮಗೆ ಸಮ್ಮತವಿರುವದಿಲ್ಲವೋ ಅಂಥಲ್ಲಿ ನೀವು ಬಿಲ್ಕುಲ ಹೋಗಬಾರದು, ಇರಬಾರದು. ಆದರೆ ಸರ್ವಸಾಧಾರಣ ಮನುಷ್ಯರಿಗೆ ಇನ್ನೊಬ್ಬರ ಮನಸ್ಸು ಮುರಿದು ಅಲ್ಲಿಂದ ಎದ್ದು ಹೋಗುವದು – ಜಾಗಾ ಬಿಡುವದು ಕಷ್ಟದ್ದಾಗುವದು. ಹೋಗಗೊಡುವದಿಲ್ಲ. [೧೪] ಯಾವನು ಅಗದೀ ಸತ್ಯವಂತನೋ ಅವನ ನಡವಳಿಕೆಯೂ ನಿರ್ಮಲವಾದದ್ದೇ ಇರುವದು. ಇಂಥವನನ್ನು ಸಣ್ಣವರು ದೊಡ್ಡವರು ಎಲ್ಲರೂ ಮನ್ನಿಸುವರು ಒಪ್ಪುವರು. ಬರೋಬರಿ ವ, ಯೋಗ್ಯ ಯಾವುದು? ಮತ್ತು ತಪ್ಪುವ ಅಯೋಗ್ಯ ಯಾವುದು? ಇದರ ನಿರ್ಣಯ ಆಮೇಲೆ ತನ್ನಷ್ಟಕ್ಕೆ ತಾನೇ ಆಗುವದು. [೧೫] ನಾವು ಯಾರಿರುವೆವು? ನಮ್ಮ ಯೋಗ್ಯತೆ ಏನಿರುವದು? ಇದೆಲ್ಲ ಜನರಿಗೆ ಎಲ್ಲಿಯವರೆಗೆ ತಿಳಿಯುವದಿಲ್ಲವೋ ಅಲ್ಲಿಯವರೆಗೆ ನಿಜವಾದ [ದೊಡ್ಡ] ಶ್ರೇಷ್ಠ ಪುರುಷನು ವಿವೇಕಪೂರ್ಣ ವ ಕ್ಷಮಾಶೀಲನಾಗಿ ಇರಬೇಕು. "ತಾಳಿದವನು ಬಾಳುವನು" ಈ ಮಾತು ಸುಳ್ಳಲ್ಲ. ಒಂದು ವೇಳೆ ಇವನು ಕ್ಷಮಾಶೀಲನಾಗಿ ಉಳಿಯದಿದ್ದರೆ ಆಗ ಇವನಲ್ಲಿ ಮತ್ತು ಸಾಮಾನ್ಯ ಜನರಲ್ಲಿ ಏನೂ ಅಂತರ ಉಳಿಯುವದಿಲ್ಲ. [೧೬] ಚಂದನ ಶ್ರೀಗಂಧಾದಿಗಳು ಎಲ್ಲಿಯವರೆಗೆ ಸೊರಗುವದಿಲ್ಲವೋ ಅಲ್ಲಿಯವರೆಗೂ ಅದರ ಸುಗಂಧವು ಜನರಿಗೆ ತಿಳಿಯುವದಿಲ್ಲ. [ಗೊತ್ತಾಗುವದಿಲ್ಲ] ಮತ್ತು ಎಲ್ಲಿಯವರೆಗೆ ಸುಗಂಧ ತಿಳಿಯುವದಿಲ್ಲವೋ ಅಲ್ಲಿಯವರೆಗೆ ಚಂದನ ಶ್ರೀಗಂಧ ಮತ್ತು ಇತರ ಗಿಡಗಳನ್ನು ಒಂದೇ ಎಂದು ಜನರು ತಿಳಿಯುವರು. [೧೭] ಒಬ್ಬ ಮನುಷ್ಯನಲ್ಲಿರುವ ಉತ್ತಮ ಗುಣಗಳು ಜನರಲ್ಲಿ ಪ್ರಕಟವಾಗದಿದ್ದರೆ ಆ ಜನರಿಗೆ ಆ ಮನುಷ್ಯನ ಯೋಗ್ಯತೆಯ ಕಲ್ಪನಾ ಬರುವದಿಲ್ಲ. ಆದರೆ ಯಾವಾಗ ಅವನಲ್ಲಿಯ ಉತ್ತಮ ಗುಣಗಳು ಪ್ರಕಟಗೊಳ್ಳುವವೋ, ಜನರಿಗೆ ಗೊತ್ತಾಗುವದೋ ಆಗ ಜನಾಭಿಪ್ರಾಯ ಸಹಜವಾಗಿ ತನ್ನಿಂದ ತಾನೇ ಬದಲಾಗುವದು. ಇವನ ಮೇಲೆ ಶ್ರದ್ಧಾ ಉಂಟಾಗುವದು.[೧೮] ನಮ್ಮ ಬಗೆಗಿನ ಜನಮತ ಬದಲಾಗುತ್ತ ತಿಳಿಯಾಗುತ್ತ ಹೋದಂತೆ, ಜನಮನ ಸ್ವಚ್ಛವಾಗಿ ಅಂದರೆ ನಿಮ್ಮ ಮೇಲೆ ಜನರ ಪ್ರೇಮ ಹೆಚ್ಚಾದಂತೆ ಜನತೆ ನಿಮ್ಮವರಾಗುವರು.ಆಗ ಜನವಶವಾಯಿತೆಂದು ನೀವು ಸ್ಪಷ್ಟವಾಗಿ ತಿಳಿಯಬೇಕು. [೧೯] ಈ ರೀತಿಯಿಂದ ಜನತಾರೂಪ ಜನಾರ್ದನ ಯಾವ ಪುರುಷನಿಗೆ ವಶವಾಗುವನೋ ಅವನಿಗೆ ಏನೂ ಕಡಿಮೆ ಬೀಳುವದಿಲ್ಲ. ಪರಂತೂ ಎಲ್ಲರನ್ನೂ ಖುಷಿಯಲ್ಲಿಡುವದು, ಬಹಳ ಕಠಿಣ ಕೆಲಸವಿರುವದು. (೨೦) ಎಲ್ಲರನ್ನೂ ರಾಜಿ ಖುಷಿಯಲ್ಲಿಡುವಲ್ಲಿ ಯಾರನ್ನೂ ದೂಷಿಸಬಾರದು. ಮರ್ಮ ಭೇದಕ ಮಾತು ಆಡಬಾರದು. ಕ್ಷಮಾ ವೃತ್ತಿ ಬಿಡಬಾರದು. ಇದಕ್ಕೆ ಭಂಗ ಬರುವಂತೆ ಕಂಡರೆ ಬೇರೆ ಕಡೆಗೆ ಹೊರಟು ಹೋಗಬೇಕು. ನಾವು ಏನನ್ನು ಬಿತ್ತುವೆವೋ ಅದೇ ಹುಟ್ಟುತ್ತದೆ. ನಾವು ಕಡ [ಕೈಗಡ] ತೆಗೆದುಕೊಂಡು ಬಂದಿದ್ದರೆ ಅದನ್ನು ಮರತ ಕೊಡಬೇಕಾಗುವದು. ನಾವು ಯಾರದಾದರೂ ಗುಪ್ತರಹಸ್ಯವನ್ನು ಪ್ರಕಟಗೊಳಿಸಿದರೆ ಅವರ ಅಂತಃಕರಣಕ್ಕೆ ಗಾಯ ನೋವು ಮಾಡಿದಂತಾಗುವದು.(೨೧) ನಾವು ಜನರ ಕೂಡ ಚೆನ್ನಾಗಿ ವರ್ತಿಸಿದರೆ ಅವರಿಂದ ನಮ್ಮ ಜೀವನದಲ್ಲಿ ಸುಖದ ಹೆಚ್ಚಳವಾಗುವದು. ನೀವು ಉತ್ತರ ಕೊಟ್ಟಂತೆ ತಿರುಗಿ ಅದರಂತೆಯೇ ಉತ್ತರ ಬರುವದು. ಇದು ನಿಶ್ಚಿತ ನಿಯಮವು. ಇದು ನಿಮಗೆ ಗೊತ್ತೇ ಇರುವದು. (೨೨) ಜೀವನದಲ್ಲಿ ನಾವು ಸುಖಭೋಗಿಸಬೇಕೋ ದುಃಖ ಭೋಗಿಸಬೇಕೋ ಇದೆಲ್ಲವೂ ನಮ್ಮ ಕೈಯಲ್ಲಿಯೇ ಇರುವದು.ಈ ಬಾಬತ್ತಿನಲ್ಲಿ ಎರಡನೆಯವರಿಗೆ ದೋಷ ಕೊಡಲಿಕ್ಕೆ ಬರುವದಿಲ್ಲ.ನೀವು ನಿಮ್ಮ ಮನಕ್ಕೆ ಈ ಮಾತನ್ನು ಯಾವಾಗಲೂ ಹೇಳುತ್ತ ಇರಬೇಕು.ಯಾಕಂದರೆ ಮನಕ್ಕೆ ಶಿಕ್ಷಣ ಬೇಕೇ ಬೇಕು.(೨೩)ತಿಳಿಯಿರಿ.ಯಾವನೋ ದುಷ್ಟ ಅಥವಾ ದುರ್ಜನ ಮನುಷ್ಯನು ನಿಮಗೆ ಭೆಟ್ಟಿಯಾದನು, ಅವನ ಕೂಡ ವರ್ತಿಸುವಾಗ ನಿಮ್ಮ ಕ್ಷಮಾ ವೃತ್ತಿಯು ತೂಕ ತಪ್ಪುವಂತೆ ಕಂಡರೆ ಸಾಧಕನು ಕೂಡಲೇ ಮೌನಧಾರಣ ಮಾಡಬೇಕು. ಮತ್ತು ಆ ಸ್ಥಳದಿಂದ ಎದ್ದು ಬೇರೆ ಕಡೆಗೆ ಹೊರಟು ಹೋಗಬೇಕು. (೨೪)

ಲೋಕ ನಾನಾ ಪರೀಕ್ಷಾ ಜಾಣತೀ । ಅಂತರಪರೀಕ್ಷಾ ನೇಣತಿ ।
ತೇಣೇ ಪ್ರಾಣೀ ಕರಂಟೆ ಹೋತೀ । ಸಂದೇಹ ನಾಹೀ ॥೨೫॥

ಆಪಣಾಸ ಆಹೆ ಮರಣ । ಮ್ಹಣೌನ ರಾಖಾವೇ ಬರೇಪಣ ।
ಕಠಿಣ ಆಹೆ ಲಕ್ಷಣ । ವಿವೇಕಾಚೇ ॥೨೬॥

ಥೋರ ಲಹಾನ ಸಮಾನ । ಆಪಲೆ ಪಾರಿಖೆ ಸಕಳ ಜನ ।
ಚಢತೇ ವಾಢತೇ ಸನೇಧಾನ । ಕರಿತಾ ಬರೇ ॥೨೭॥

ಬರೇ ಕರಿತಾ ಬರೇ ಹೋತೇ । ಹೇ ತೋ ಪ್ರತ್ಯಯಾಸ ಯೇತೇ ।
ಆತಾ ಪುಢೇ ಸಾಂಗಾವೇ ತೇ । ಕೋಣಾಸ ಕಾಯೆ ॥೨೮॥

ಹರಿಕಥಾನಿರೂಪಣ । ಬರೇಪಣೇ ರಾಜಕಾರಣ ।
ಪ್ರಸಂಗ ಪಾಹಿಲ್ಯಾವಿಣ । ಸಕಳ ಖೋಟೇ ॥೨೯॥

ವಿದ್ಯಾ ಉದಂಡಚಿ ಶಿಕಲಾ । ಪ್ರಸಂಗಮಾನ ಚುಕತ ಚಿ ಗೇಲಾ ।
ತರೀ ಮಗ ತಯೆ ವಿದ್ಯೇಲಾ । ಕೋಣ ಪುಸೆ ॥೩೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
''ಪ್ರತ್ಯಯ ನಿರೂಪಣ'' ನಾಮ ಸಮಾಸ ದ್ವಿತೀಯ ॥

ಮನುಷ್ಯರ ಮನಸ್ಸಿನ ಪರೀಕ್ಷೆಯು ಖರೇ ಮಹತ್ವದ್ದಿರುವದು. ಮರಣದ [ಸಾವಿನ] ಸ್ಮರಣೆ ಇಟ್ಟು ಕೊಂಡು ವಿವೇಕವನ್ನು ಜಾಗ್ರತವಿಡಬೇಕು. ಮತ್ತು ಜನರ ಕೂಡ ಚನ್ನಾಗಿ ನಡೆಯಬೇಕು. ಜನರನ್ನು ಪ್ರೇಮಿಸಿ ತನ್ನವರನ್ನಾಗಿಮಾಡಿಕೊಳ್ಳಬೇಕು. ಹೊತ್ತು ವೇಳೆ ನೋಡಿ ಪ್ರಸಂಗವನ್ನು ಗುರುತಿಸಿ ವರ್ತಿಸಬೇಕು. ಸಾಮಾನ್ಯವಾಗಿ ಮನುಷ್ಯನಿಗೆ ಹೊರಗಿನ ಗುರುತುಗಳ ಪರೀಕ್ಷಾ ಮಾಡಲಿಕ್ಕೆ ಬರುವದು. ಇದಕ್ಕೆ ಅಡ್ಡಿ ಅಡಚಣಿ ಬರುವದಿಲ್ಲ. ಆದರೆ ಮನುಷ್ಯರ ಅಂತರಂಗದ ಪರೀಕ್ಷಾ ಮಾಡಲಿಕ್ಕೆ ಬರಬೇಕು. ಇದನ್ನು ಎಲ್ಲರಿಗೂ ಮಾಡಲಿಕ್ಕೆ ಬರುವದಿಲ್ಲ. ಇದರಿಂದ ಮನುಷ್ಯನು ಭಾಗ್ಯವಾನನಾಗುವದಿಲ್ಲವೆಂಬಲ್ಲಿ ಯಾವ ಸಂಶಯವೂ ಇಲ್ಲ. (೨೫) ನಾವು ಒಂದಾನೊಂದು ದಿವಸ ಸಾಯುವವರೇ ಇರುವೆವೆಂಬುದನ್ನು ಲಕ್ಷ್ಯದಲ್ಲಿಟ್ಟುಕೊಂಡು ಜನರ ಕೂಡ ಪ್ರೇಮದ ಸಂಬಂಧ ಇಡಬೇಕು. ಈ ವಿವೇಕವನ್ನು (ಸಾಧಿಸಿ) ಗಟ್ಟಿಯಾಗಿ ಹಿಡಿದು ನಡೆಯುವದು ಮಾತ್ರ ಕಠಿಣ ಹೋಗುವದು. (೨೬) ನಿಮಗಿಂತ ಸಣ್ಣವರು, ದೊಡ್ಡವರು, ನಿಮ್ಮ ಸರಿ ಇದ್ದವರು, ಮತ್ತು ನಮ್ಮವರು, ಹೊರಗಿನವರು, ಈ ಎಲ್ಲ ಪ್ರಕಾರ ಜನರ ಸಂಗಡ ಸ್ನೇಹ ಪ್ರೇಮ ಬೆಳೆಯುತ್ತಲೇ ಇರಬೇಕು. ಇದು ಬಹಳ ಉತ್ತಮವು. (೨೭) ನಾವು ಇನ್ನೊಬ್ಬರಿಗೆ ಒಳ್ಳೇದು ಮಾಡಿದರೆ ಅದರಿಂದ ನಮಗೂ ಒಳ್ಳೆಯದು ಆಗುವದು. ಇದು ಪ್ರತ್ಯಕ್ಷ ಅನುಭವ ಬರುವ ಮಾತಾಗಿದೆ. ಇದಕ್ಕಿಂತ ಹೆಚ್ಚಿಗೆ ಹೇಳಬೇಕಾದದ್ದು ಇನ್ನಾವುದೂ ಇರುವದಿಲ್ಲ. [೨೮] ಭಗವಂತನ ಕಥೆ, ಅಧ್ಯಾತ್ಮ ನಿರೂಪಣ, ಉತ್ತಮ ರಾಜಕಾರಣ ಇವುಗಳನ್ನು ಚನ್ನಾಗಿ ಕೇಳಿ ತಿಳಿಯಬೇಕು. ಮತ್ತು ಪ್ರಸಂಗ ನೋಡಿಕೊಂಡು ಇವುಗಳನ್ನು ಉಪಯೋಗಿಸಬೇಕು. ಪ್ರಸಂಗ ನೋಡಿ ಮಾಡಿದರೆ ಇವುಗಳಿಂದ ಯಶ ದೊರೆಯುವದು. ವೇಳೆ ಪ್ರಸಂಗ ತಿಳಿಯದೇ ಮಾಡಿದರೆ ಇವು ವ್ಯರ್ಥ ಹೋಗುವವು. ನಿಮಗೆ ಶ್ರಮ ಮಾತ್ರ ಆಗುವದು. (೨೯) ತಿಳಿಯಿರಿ, ಒಬ್ಬ ಮನುಷ್ಯ ಬಹಳಷ್ಟು ವಿದ್ಯೆಯನ್ನು ಕಲಿತನು. ಪಂಡಿತನಾದನು. ಆದರೆ ಪ್ರಸಂಗ ನೋಡಿ ಅದಕ್ಕೆ ಸರಿಯಾಗಿ ವಿದ್ಯೆಯ ಉಪ ಯೋಗ ಮಾಡಲಿಕ್ಕೆ ಬರದಿದ್ದರೆ ಇವನ ವಿದ್ಯೆ ವ್ಯರ್ಥವೆನಿಸುವದು. ಇವನ ವಿದ್ಯೆಯನ್ನು ಯಾರೂ ವಿಚಾರಿಸು ವದಿಲ್ಲ. (೩೦)

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದ ಹನ್ನೆರಡನೆಯ ದಶಕದೊಳಗಿನ
"ಪ್ರತ್ಯಯ ನಿರೂಪಣ ನಾಮ" ಎಂಬ ಎರಡನೆಯ ಸಮಾಸವು ಮುಗಿದುದು.

• •

**ದಶಕ ದ್ವಾದಶ : ಸಮಾಸ ತೃತೀಯ : ಭಕ್ತ ನಿರೂಪಣ**

॥ಶ್ರೀರಾಮ॥ ಪೃಥ್ವೀ ಮಧೇ ಬಹುತ ಲೋಕ। ತೇಹೀ ಪಾಹಾವಾ ವಿವೇಕ।
ಇಹಲೋಕ ಆಣಿ ಪರಲೋಕ। ಬರಾ ಪಾಹಾವಾ ॥೧॥

ಇಹಲೋಕ ಸಾಧಾಯಾಕಾರಣೇ। ಜಾಣತ್ಯಾಚೀ ಸಂಗತೀ ಧರಣೇ।
ಪರಲೋಕ ಸಾದಾಯಾಕಾರಣೇ। ಸದ್ಗುರು ಪಾಹಿಜೆ ॥೨॥

## ದಶಕ ೧೨. ಸಮಾಸ ೩. ಭಕ್ತನಿರೂಪಣ (ನುಡಿ ೩೩)

ಮನುಷ್ಯನು ತನ್ನ ಜೀವನದಲ್ಲಿ ಇಹಲೋಕ ಮತ್ತು ಪರಲೋಕ ಅಥವಾ ಪ್ರಪಂಚ ಮತ್ತು ಪರಮಾರ್ಥ ಈ ಎರಡರ ಬಗ್ಗೆ (ಇವುಗಳ ಬಗ್ಗೆ) ವಿಚಾರ ಮಾಡುವದು ಯೋಗ್ಯವಾಗಿದೆ. ಪ್ರಪಂಚ ಚನ್ನಾಗಿ ಸಾಗಬೇಕಾದರೆ ಇವನು ಇದನ್ನು ಸರಿಯಾಗಿ ತಿಳಿದವರ ಸಂಗತಿ ಹಿಡಿಯಬೇಕು. ಮತ್ತು ಪರಮಾರ್ಥ ಸಾಧಿಸಿ ಸಮಾಧಾನ ಪಡೆಯಲು ಸದ್ಗುರುವಿನ ಸಂಗತಿ ಮಾಡಬೇಕು. "ದೇವ ಯಾರು" ಮತ್ತು "ನಾನು ಯಾರು" ಈ ಎರಡು ಪ್ರಶ್ನೆಗಳನ್ನು ಸದ್ಗುರುವಿನಲ್ಲಿ ಅನನ್ಯ (ಏಕನಿಷ್ಠ)ನಾಗಿ ವಿಚಾರಿಸಬೇಕು. ಸಂಪೂರ್ಣ ಶಾಶ್ವತ ಇರುವ ಪರಬ್ರಹ್ಮವನ್ನು ತಿಳಿಯುವದು, ಗುರುತಿಸುವದು, ಇದೇ ಪರಮಾರ್ಥದ ಖರೇ ರಹಸ್ಯವಿರುವದು. ಆದ್ದರಿಂದ ಇದರ ಅನುಭವ ಬರಬೇಕಾದರೆ ಸಾರಾಸಾರ ವಿಚಾರ ಸೂಕ್ಷ್ಮ ವಿವೇಕ ಮಾಡಬೇಕು. ಹೀಗೆ ವಿಚಾರ ಮಾಡಿದರೆ ಆಗ ತಿಳಿಯುವದೇನಂದರೆ ಈ ವಿಶ್ವದಲ್ಲಿ ದೃಶ್ಯ ಮತ್ತು ಅದೃಶ್ಯ ಅನ್ನುವ ಎರಡು ಪ್ರಕಾರದ ಪದಾರ್ಥಗಳಿರುವವು. ಎಲ್ಲ ಜಡ ಪದಾರ್ಥಗಳು ದೃಶ್ಯವಿರುವವು. ಆದರೆ ಅದೃಶ್ಯದಲ್ಲಿ ಚಂಚಲ ಮತ್ತು ನಿಶ್ಚಲ ಎಂದು ಎರಡು ಪದಾರ್ಥ ಇರುವವು. ಇದರ ಪೈಕಿ ಜಡ ಮತ್ತು ಚಂಚಲ ಪದಾರ್ಥಗಳು ಮಾಯಿಕವಿರುವದರಿಂದ ಇವು ಅಶಾಶ್ವತವಿರುವವು. ಮತ್ತು ನಿಶ್ಚಲ ವಸ್ತು ಅಂದರೆ ಪರಬ್ರಹ್ಮವು ಇದೊಂದೇ ಶಾಶ್ವತವಾದದ್ದಿರುವದು. ವಿವೇಕದಿಂದ ತ್ರೈಲೋಕವನ್ನು ತಿರುಗಬೇಕು. ಮತ್ತು ಶಾಶ್ವತ ವ ಅಶಾಶ್ವತ ಇವುಗಳ ನಿರ್ಣಯ ಮಾಡಿಕೊಳ್ಳಬೇಕು. ಶಾಶ್ವತ ನಿರ್ವಿಕಾರಿ ಪರಬ್ರಹ್ಮದಲ್ಲಿ ವಿಕಾರವು ನಿರ್ಮಾಣವಾಗಿ ಅಲ್ಲಿ (ಅದರೊಳಗಿಂದ) ಮೂಲ ಮಾಯೆ ಮತ್ತು ಅಂತರಾತ್ಮಾ ಇವು ಉದಯವಾದವು. ಇವುಗಳಿಂದ ಪಿಂಡ ಬ್ರಹ್ಮಾಂಡ ಎರಡೂ ಕೂಡಿ ಎಂಟು ದೇಹಗಳು ಉಂಟಾಗಿ ಈ ಎಲ್ಲ ವಿಶ್ವವು ಕಾಣಿಸಿಕೊಂಡಿತು ವಿವೇಕದಿಂದ ಮಾಯಿಕವಿರುವದನ್ನು ಖಂಡಿಸಿ ಬದಿಗೆ ಸರಿಸಬೇಕು· ಮತ್ತು ಪರಬ್ರಹ್ಮವನ್ನು ಹುಡುಕಿ ತೆಗೆಯಬೇಕು. ಹೀಗೆ ಮಾಡಿ ಶಾಶ್ವತದೇವನನ್ನು ತಿಳಿಯಬೇಕು. ಆಮೇಲೆ "ನಾನು ಯಾರು?" ಇದರ ಶೋಧ ಮಾಡಬೇಕು. (ತಿಳಿಯಬೇಕು) ಈ "ನಾನು" ಇದರ ಶೋಧವನ್ನು ನಮ್ಮ ಅಂತರಂಗದಲ್ಲಿಯೇ ಮಾಡಿಕೊಳ್ಳುವದಿರುವದು. ಇದರ ಶೋಧ ಮಾಡಲಿಕ್ಕೆ ಹತ್ತಿದಾಗ ಕೊನೆಗೆ ಖೊಟ್ಟಿಯಾದ "ನಾನು" ಇದು ಕಳಚಿ ಬಿದ್ದು ಹೋಗುವದು. ಮಾಯವಾಗುವದು. ಆಗ ನಮಗೆ ನಾನೇ ಕೇವಲ ಆತ್ಮಾ ಇರುವೆನು ಅನ್ನುವ ಅನುಭವ ಬರುವದು. ಖೊಟ್ಟಿ ನಾನು ಇದು ಕಳಚಿ ಹೋದ ಕೂಡಲೇ ಬೇರೇತನ ಹೋಗುವದು. ಮತ್ತು ವೃತ್ತಿಯು (ಮನಸ್ಸಿನ ಸ್ಥಿತಿಯು) ನಿವೃತ್ತಿ ಯಾಗುವದು. ನಿರಾಸವಾಗಿ ವೈರಾಗ್ಯ ಬರುವದು· ಮತ್ತು ಇದರಿಂದಾಗಿ ಉನ್ಮನ ಸಾಧಿಸುವದು. ಉನ್ಮನ ಅವಸ್ಥೆಯಲ್ಲಿ ಜ್ಞಾನವು ವಿಜ್ಞಾನವಾಗುವದು. ಧ್ಯಾನವು ಧ್ಯೇಯ(ಅಂತಿಮ ವಸ್ತು) ವಾಗುವದು. ಎಲ್ಲ ಪಾಪಗಳು ಲಯವಾಗಿ ಹೋಗುವವು, ಅರ್ಥಾತ್ ಜನ್ಮದ ಸಾರ್ಥಕವಾಗುವದು· ಈ ಪದಕ್ಕೆ ಮುಟ್ಟಿದವರು ಭಗವಂತನ ದಾಸರು. ಇವರೇ ಇತರ ಜನರನ್ನು ಉದ್ಧರಿಸುವರು.

## ದಶಕ ೧೨. ಸಮಾಸ ೩. ಭಕ್ತ ನಿರೂಪಣ (ನುಡಿ ೩೩)

ಮನುಷ್ಯನು ಪ್ರಪಂಚ ಮತ್ತು ಪರಮಾರ್ಥ ಎರಡನ್ನೂ ಸಾಧಿಸಿಕೊಳ್ಳುವಲ್ಲಿಯೇ ಖರೇ ಸಾರ್ಥಕತೆ ಇದೆ. ತಿಳಿದವರಾದ ಅನುಭವಿಗಳ ಹೇಳಿಕೆಯ ಪ್ರಕಾರ ಪ್ರಪಂಚ ಮಾಡಬೇಕು. ಆದರೆ ಅದೇ ಪರಮಾರ್ಥವನ್ನು ಶ್ರೀ ಸದ್ಗುರುವಿನ ಹೇಳಿಕೆಯ ಪ್ರಕಾರ ಮಾಡಬೇಕು:— ಜಗತ್ತಿನಲ್ಲಿ ಪುಷ್ಕಳ (ಬಹಳಷ್ಟು) ಜನರಿರುವರು. ಇವರೆಲ್ಲರೂ ವಿವೇಕ ಪೂರ್ವಕ ಬಾಳಬೇಕು. ಇಹಲೋಕ ಮತ್ತು ಪರಲೋಕ ಇವೆರಡರ ಬಗ್ಗೆ ವಿಚಾರ ಮಾಡಬೇಕು. (೧) ಈ ಜಗತ್ತಿನ ಬಾಳಿನಲ್ಲಿ ಯಶ ಬರಬೇಕಾದರೆ ತಿಳುವಳಿಕೆಯುಳ್ಳ ಸಜ್ಜನರ ಸಂಗತಿ ಮಾಡಬೇಕು. ಪರಮಾರ್ಥದಲ್ಲಿ ಯಶ ಬರಬೇಕಾದರೆ ಸದ್ಗುರುವಿನ ಅವಶ್ಯಕತೆ ಮುಖ್ಯವಿರುವದು (೨)

ಸದ್ಗುರುಸೀ ಕಾಯೆ ಪುಸಾವೇ । ಹೇ ಹಿ ಕಳೆನಾ ಸ್ವಭಾವೇ ।
ಅನನ್ಯ ಭಾವೇ ಯೇಕಭಾವೇ । ದೋನೀ ಗೋಷ್ಟೀ ಪುಸಾವ್ಯಾ ॥೩॥
ದೋನೀ ಗೋಷ್ಟೀ ತ್ಯಾ ಕೋಣ । ದೇವ ಕೋಣ ಆಪಣ ಕೋಣ ।
ಯಾ ಗೋಷ್ಟೀಚೇ ವಿವರಣ । ಕೇಲೇ ಚಿ ಕರಾವೇ ॥೪॥
ಆಧೀ ಮುಖ್ಯ ದೇವ ತೋ ಕೋಣ । ಮಗ ಆಪಣ ಭಕ್ತ ತೋ ಕೋಣ ।
ಪಂಚೀಕರ್ಣ ಮಹಾವಾಕ್ಯವಿವರಣ । ಕೇಲೇ ಚಿ ಕರಾವೇ ॥೫॥
ಸಕಳ ಕೇಲಿಯಾಚೇ ಫಳ । ಶಾಶ್ವತ ವೊಳಖಾವೇ ನಿಶ್ಚಳ ।
ಆಪಣ ಕೋಣ ಹಾ ಕೇವಳ । ಶೋಧ ಘ್ಯಾವಾ ॥೬॥
ಸಾರಾಸಾರ ವಿಚಾರ ಘೇತಾ । ಸದಾಸ ನಾಹೀ ಶಾಶ್ವತತಾ ।
ಆಧೀ ಕಾರಣ ಭಗವಂತಾ । ವೊಳಖಿಲೇ ಪಾಹಿಜೆ ॥೭॥
ನಿಶ್ಚಳ ಚಂಚಳ ಆಣೀ ಜಡ । ಅವಘಾ ಮಾಯೇಚಾ ಪವಾಡ ।
ಯಾಮಧೇ ವಸ್ತು ಜಾಡ । ಜಾಣಾರ ನಾಹೀ ॥೮॥
ತೇ ಪರಬ್ರಹ್ಮ ಧುಂಡಾವೇ । ವಿವೇಕೇ ತ್ರೈಲೋಕ್ಯ ಹಿಂಡಾವೇ ।
ಮಾಈಕ ವಿಚಾರೇ ಖಂಡಾವೇ । ಪರೀಕ್ಷವಂತೀ ॥೯॥
ಖೋಟೇ ಸಾಂಡೂನ ಖರೇ ಘ್ಯಾವೇ । ಪರೀಕ್ಷವಂತೀ ಪರೀಕ್ಷಾವೇ ।
ಮಾಯೇಚೇ ಅವಘೇ ಚಿ ಜಾಣಾವೇ । ರೂಪ ಮಾಈಕ ॥೧೦॥
ಪಂಚಭೂತಿಕ ಹೇ ಮಾಯಾ । ಮಾಈಕ ಜಾಯೆ ವಿಲಯಾ ।
ಪಿಂಡಬ್ರಹ್ಮಾಂಡ ಅಷ್ಟಕಾಯಾ । ನಾಸಿವಂತ ॥೧೧॥
ದಿಸೇಲ ತಿತುಕೇ ನಾಸೇಲ । ಉಪಜೇಲ ತಿತುಕೇ ಮರೇಲ ।
ರಚೇಲ ತಿತುಕೇ ಖಚೇಲ । ರೂಪ ಮಾಯೇಚೇ ॥೧೨॥
ವಾಢೇಲ ತಿತುಕೇ ಮೋಡೇಲ । ಯೆಈಲ ತಿತುಕೇ ಜಾಯೀಲ ।
ಭೂತಾಸ ಭೂತ ಖಾಈಲ । ಕಲ್ಪಾಂತಕಾಳೀ ॥೧೩॥
ದೇಹಧಾರಕ ತಿತುಕೇ ನಾಸತೀ । ಹೇ ತೋ ರೋಕಡೀ ಪ್ರಚಿತೀ ।
ಮನುಷ್ಯೇವಿಣ ಉತ್ಪತ್ತಿ । ರೇತ ಕೈಚೇ ॥೧೪॥
ಅನ್ನ ನಸ್ತಾ ರೇತ ಕೈಚೇ । ವೋಷಧಿ ನಸ್ತಾ ಅನ್ನ ಕೈಚೇ ।
ವೋಷಧೀಸ ಜೀಣೇ ಕೈಚೇ । ಪೃಥ್ವೀ ನಸ್ತಾ ॥೧೫॥
ಆಪ ನಸ್ತಾ ಪೃಥ್ವೀ ನಾಹೀ । ತೇಜ ನಸ್ತಾ ಆಪ ನಾಹೀ ।
ವಾಯೋ ನಸ್ತಾ ತೇಜ ನಾಹೀ । ಐಸೇ ಜಾಣಾವೇ ॥೧೬॥

ಸದ್ಗುರುವಿನಲ್ಲಿ ನಾವು ಏನನ್ನು ವಿಚಾರಿಸಬೇಕೆಂಬುದು ಎಷ್ಟೋ ಜನರಿಗೆ ತಿಳಿಯುವದಿಲ್ಲ. ಸದ್ಗುರುವಿನೊಂದಿಗೆ ಶ್ರದ್ಧಾ ಭಕ್ತಿಯಿಂದ ಅನನ್ಯರಾಗಿ ಏಕಮನಸ್ಸಿನಿಂದ ಎರಡು ಮಾತುಗಳನ್ನು ಅವನಲ್ಲಿ ವಿಚಾರಿಸಬೇಕು.[೩] ಇವು ಯಾವವೆಂದರೆ ೧) ದೇವ ಯಾರು? ೨) ನಾವು ಅಥವಾ ನಾನು ಯಾರು? ವಿವೇಕದಿಂದ ಇವುಗಳ ಬಗ್ಗೆ ಕೇಳಬೇಕು. ಮೇಲಿಂದ ಮೇಲೆ ಇದರ ಬಗ್ಗೆ ಮನನ ಮಾಡಬೇಕು. [೪] ಪ್ರಥಮದಲ್ಲಿ ಮುಖ್ಯದೇವನು ಯಾರು? ಆಮೇಲೆ ಭಕ್ತನು ಯಾವನಿರುವನು? ವಿವೇಕದಿಂದ ಇವೆರಡು ಪ್ರಶ್ನೆಗಳನ್ನು ತಿಳಿಯಬೇಕಾದರೆ–ಇದಕ್ಕಾಗಿ ಉತ್ತರ ಸಿಗಬೇಕಾದರೆ ಪಂಚೀಕರಣ ಮತ್ತು ಮಹಾವಾಕ್ಯ ಇವುಗಳ ವಿಚಾರ ಪುನಃ ಪುನಃ ಮಾಡಬೇಕು. [೫] ಶಾಶ್ವತ ಪರಬ್ರಹ್ಮನ ಪ್ರತ್ಯಕ್ಷ ಅನುಭವ ಪಡೆಯುವದೇ ಯಾವತ್ತೂ ಪರಮಾರ್ಥದ ರಹಸ್ಯವೆಂದು ತಿಳಿಯಬೇಕು:– ಶಾಶ್ವತ ಮತ್ತು ನಿಶ್ಚಲ ಪರಬ್ರಹ್ಮವನ್ನು ತಿಳಿಯುವದೇ ಎಲ್ಲ ಪರಮಾರ್ಥ ಮಾಡಿದ್ದರ ಫಲವಿರುವದು. ಮತ್ತು ಕೇವಲ ಶುದ್ಧ ನಾನು ಯಾರಿರುವೆ ಇದರ ಬಗ್ಗೆಯೂ ಶೋಧ ಮಾಡಿ ತಿಳಿಯಬೇಕು. ಇದೇ ಎಲ್ಲ ಪರಿಶ್ರಮದ (ಸಾಧನದ) ಸಫಲತೆ ಇರುವದು. [೬] ಶಾಶ್ವತ ಯಾವುದು? ಅಶಾಶ್ವತ ಯಾವುದು? ವಿವೇಕದಿಂದ ಸೂಕ್ಷ್ಮ ವಿಚಾರ ಮಾಡಿದ್ದಾದರೆ ಆಗ ಕಂಡು ಬರುವದೇನಂದರೆ ಈ ದೃಶ್ಯವಿಶ್ವದಲ್ಲಿಯ ಯಾವುದೇ ಸ್ಥಾನವು ತ್ರಿಮೂರ್ತಿಗಳ ಸ್ಥಾನವೂ ಸಹ ಶಾಶ್ವತವಲ್ಲ. ಎಲ್ಲಕ್ಕೂ ಮೂಲ ಕಾರಣನಾದ ಆ ಯಾವ ಪರಮಾತ್ಮ ಪರಬ್ರಹ್ಮನಿರುವನೋ ಅವನನ್ನು ಶೋಧಿಸಿ ತಿಳಿಯುವದು ಅವಶ್ಯವಿರುವದು. [೭] ಈ ದೃಶ್ಯ ವಿಶ್ವದಲ್ಲಿ ನಿಶ್ಚಲ, ಚಂಚಲ ಮತ್ತು ಜಡ ಹೀಗೆ ಬೇರೆ ಬೇರೆ ಭೇದಗಳಿರುವದು ಕಂಡು ಬರುವದು. ಆದರೆ ಇದೆಲ್ಲ ವಿಸ್ತಾರವು ಮಾಯೆಯದೇ ಇರುವದು. ಶಾಶ್ವತ ಪರಬ್ರಹ್ಮ ವಸ್ತುವು ಮಾಯೆಯ ಆಚೆಗೆ ಅಂದರೆ ಮಾಯೆಯನ್ನು ದಾಟಿ (ಗೆದ್ದು) ಮುಂದೆ ಹೋದಾಗ ಇರುವದು. [೮] ಈ ಪರಬ್ರಹ್ಮವನ್ನು ಹುಡುಕಿ ತೆಗೆಯಬೇಕು. ಗುರುತಿಸಬೇಕು. ಇದಕ್ಕಾಗಿ ಮನದಿಂದ ವಿವೇಕದ ಬಲದಿಂದ ತ್ರಿಲೋಕವನ್ನು ತಿರುಗಿ ಬರಬೇಕು. ಯಾವ ಯಾವುದು ಮಾಯಾ ನಿರ್ಮಿತ ಅದೆಯೋ ಅದನ್ನು ವಿಚಾರ ವಿವೇಕದಿಂದ ಬದಿಗೆ [ಬಾಜೂಕ್ಕೆ] ಸರಿಸಬೇಕು. ಇದು ಖರೇ ಪರೀಕ್ಷಾವಂತನ ಕೆಲಸವೆಂದು ತಿಳಿಯಬೇಕು. [೯] ಯಾವನು ನಿಜವಾದ ಪರೀಕ್ಷಾ ಮಾಡುವವನಿರುವನೋ ಅವನು ಖರೇ ಯಾವುದು? ಖೊಟ್ಟಿ ಯಾವುದು? ಇದರ ತಪಾಸ ಮಾಡಬೇಕು. ಖೊಟ್ಟಿ ಇದ್ದದ್ದನ್ನು ಬಾಜೂಕ್ಕೆ ಸರಿಸಿ ಖರೇ ಇದ್ದದ್ದನ್ನೇ ಸ್ವೀಕಾರ ಮಾಡಬೇಕು. ಮಾಯೆಯು ನಿರ್ಮಿಸಿದ ಎಲ್ಲ ಪದಾರ್ಥಗಳು ಕಣ್ಣಿಗೆ ಖರೇ ಕಂಡರೂ ಅದು ಖರೇ ಅಲ್ಲ ಅನ್ನುವ ಅನುಭವದ ಮಾತನ್ನು ನಿಶ್ಚಯದಿಂದ ಗುರುತಿಸಿ ತಿಳಿಯಿರಿ. [೧೦] ಮಾಯೆಯ ಪ್ರಸಾರ (ವಿಸ್ತಾರ)ವು ಪಂಚಭೂತಗಳಿಂದ ತುಂಬಿದ್ದಾಗಿದೆ. ಪಂಚಭೌತಿಕ ವಸ್ತುಗಳೆಲ್ಲವೂ ನಾಶವಂತವಿರುವವು ಈ ದೃಷ್ಟಿಯಿಂದ ಪಿಂಡ ಮತ್ತು ಬ್ರಹ್ಮಾಂಡ ಹಾಗೂ ಇವುಗಳ ಎಂಟು ದೇಹಗಳೆಲ್ಲವೂ ನಾಶವಂತವಿರುವವು [೧೧] ಮಾಯಾದಿಂದ ಉತ್ಪನ್ನವಾದ ಈ ಎಲ್ಲ ವಿಶ್ವವು ಹೇಗೆ ನಾಶವಂತ ಇರುವದೆಂಬುದರ ಬಗ್ಗೆ ವರ್ಣನೆಮಾಡುವರು: ಇಂದ್ರಿಯಗಳಿಗೆ ಯಾವ ಯಾವದು ಕಾಣುವದೋ ಅದೆಲ್ಲವೂ ನಾಶವಾಗುವದು. ಯಾವ ಯಾವದು ಜನ್ಮ ಹೊಂದುವದೋ (ಹುಟ್ಟುವದೋ) ಅವೆಲ್ಲವೂ ಮರಣ ಹೊಂದುವವು. ಯಾವ ಯಾವುದನ್ನು ರಚಿಸಲಾಗಿದೆಯೋ ಅವೆಲ್ಲ ಮುರಿದು ಬೀಳುವವು. ನಶಿಸಿ ಹೋಗುವವು. ಇದೆಲ್ಲವೂ ಮಾಯೆಯ ರೂಪವಿರುವದು. [೧೨] ಯಾವ ಯಾವುದು ಬೆಳೆಯುವದೋ ಅದೆಲ್ಲವೂ ಮುರಿದು ಬೀಳುವದು. ಯಾವ ಯಾವುದು ಬರುವದೋ ಅದೆಲ್ಲವೂ ಹೋಗುವದು. ಕೊನೆಯದಾದ ಕಲ್ಪಾಂತ್ಯದ ಸಮಯದಲ್ಲಿ ಒಂದು ಮಹಾಭೂತವು ಇನ್ನೊಂದನ್ನು (ಎರಡನೆಯವನ್ನು) ನುಂಗಿ ಬಿಡುವದು. [೧೩] ದೇಹಧಾರಣ ಮಾಡುವಂಥ ಪ್ರಾಣಿಗಳೆಲ್ಲವೂ ನಾಶ ಹೊಂದುವವು. ಇದು ನಿಮಗೆ ಪ್ರತ್ಯಕ್ಷ ಅನುಭವಕ್ಕೆ ಬರುವ ಮಾತಾಗಿದೆ. ಮನುಷ್ಯನಿಲ್ಲದೆ ಮನುಷ್ಯ ಉತ್ಪನ್ನವಾಗುವದಿಲ್ಲ. ವೀರ್ಯವಿಲ್ಲದೇ ಉತ್ಪತ್ತಿ (ಹುಟ್ಟು) ಆಗುವದಿಲ್ಲ. [೧೪] ಅನ್ನವಿಲ್ಲದೇ ವೀರ್ಯ ಉತ್ಪನ್ನವಾಗುವದಿಲ್ಲ. ವನಸ್ಪತಿಗಳಿಲ್ಲದೆ ಅನ್ನ ನಿರ್ಮಾಣವಾಗುವದಿಲ್ಲ. ಪೃಥ್ವಿ (ಭೂಮಿ) ಇಲ್ಲದೇ ವನಸ್ಪತಿ ನಿರ್ಮಾಣವಾಗುವದಿಲ್ಲ. [೧೫] ನೀರಿಲ್ಲದಿದ್ದರೆ ಭೂಮಿ ಇಲ್ಲ. ತೇಜ ಇಲ್ಲದಿದ್ದರೆ ನೀರಿಲ್ಲ. ವಾಯು ಇಲ್ಲದಿದ್ದರೆ ತೇಜ ಇಲ್ಲ. ಹೀಗೆ ಕ್ರಮವಿರುವದನ್ನು ತಿಳಿಯಬೇಕು. [೧೬]

ಅಂತರಾತ್ಮಾ ನಸ್ತಾ ವಾಯೋ ಕೈಚಾ । ವಿಕಾರ ನಸ್ತಾ ಅಂತರಾತ್ಮಾ ಕೈಚಾ ।
ನಿರ್ವಿಕಾರೀ ವಿಕಾರ ಕೈಚಾ । ಬರೇ ಪಾಹಾ ॥೧೭॥

ಪೃಥ್ವೀ ನಾಹೀ ಆಪ ನಾಹೀ । ತೇಜ ನಾಹೀ ವಾಯೋ ನಾಹೀ ।
ಅಂತರಾತ್ಮಾ ವಿಕಾರ ನಾಹೀ । ನಿರ್ವಿಕಾರೀ ॥೧೮॥

ನಿರ್ವಿಕಾರ ಜೇ ನಿರ್ಗುಣ । ತೇ ಚಿ ಶಾಶ್ವತಾಚೀ ಖೂಣ ।
ಅಷ್ಟಧಾ ಪ್ರಕೃತಿ ಸಂಪೂರ್ಣ । ನಾಸಿವಂತ ॥೧೯॥

ನಾಸಿವಂತ ಸಮಜೋನ ಪಾಹಿಲೇ । ತೋ ತೇ ಅಸ್ತಾಚೀ ನಸ್ತೇ ಜಾಲೇ ।
ಸಾರಾಸಾರೇ ಕಳೋ ಆಲೇ । ಸಮಾಧಾನ ॥೨೦॥

ವಿವೇಕೇ ಪಾಹಿಲಾ ವಿಚಾರ । ಮನಾಸ ಆಲೇ ಸಾರಾಸಾರ ।
ಯೇಣೇ ಕರಿತಾ ವಿಚಾರ । ಸದೃಢ ಜಾಲಾ ॥೨೧॥

ಶಾಶ್ವತ ದೇವ ತೋ ನಿರ್ಗುಣ । ಐಸೀ ಅಂತರೀ ಬಾಣಲೀ ಖೂಣ ।
ದೇವ ಕಳಲಾ ಮೀ ಕೋಣ । ಕಳಲೇ ಪಾಹಿಜೆ ॥೨೨॥

ಮೀ ಕೋಣ ಪಾಹಿಜೆ ಕಳಲೇ । ದೇಹತತ್ವ ತಿತುಕೇ ಶೋಧಿಲೇ ।
ಮನೋವೃತ್ತೀಚಾ ಠಾಊ ಆಲೇ । ಮೀತೂಪಣ ॥೨೩॥

ಸಕಳ ದೇಹಾಚಾ ಶೋಧ ಘೇತಾ । ಮೀಪಣ ದಿಸೇನಾ ಪಾಹಾತಾ ।
ಮೀತೂಪಣ ಹೇ ತತ್ವತಾ । ತತ್ವೀ ಮಾವಳಲೇ ॥೨೪॥

ದೃಶ್ಯ ಪದಾರ್ಥ ಚಿ ವೋಸರೇ । ತತ್ವೇ ತತ್ವ ತೇವ್ಹಾ ಸರೇ ।
ಮೀತೂಪಣ ಹೇ ಕೈಚೇ ಉರೇ । ತತ್ವತಾ ವಸ್ತು ॥೨೫॥

ಪಂಚೀಕರ್ಣ ತತ್ವ ವಿವರ್ಣ । ಮಹಾವಾಕ್ಯೇ ವಸ್ತು ಆಪಣ ।
ನಿಸಂಗ ಪಣೇ ನಿವೇದನ । ಕೇಲೇ ಪಾಹಿಜೆ ॥೨೬॥

ದೇವಾ ಭಕ್ತಾಚೇ ಮೂಳ । ಶೋಧೂನ ಪಾಹಾತಾ ಸಕಳ ।
ಉಪಾಧೀವೇಗಳಾ ಕೇವಳ । ನಿರೋಪಾಧೀ ಆತ್ಮಾ ॥೨೭॥

ಅಂತರಾತ್ಮಾ ಅಥವಾ ಆಕಾಶ ಇಲ್ಲದಿದ್ದರೆ ವಾಯು ಉತ್ಪನ್ನವಾಗಲು ಶಕ್ಯವಿಲ್ಲ. ಮೂಲಮಾಯೆಯಲ್ಲಿ ವಿಕಾರ [ಏಕೋಽಹಂ ಬಹು ಸ್ಯಾಮ್] ಇಲ್ಲದಿದ್ದರೆ ಅಂತರಾತ್ಮಾ [ಆಕಾಶ] ಇರುವದಿಲ್ಲ ಪರಂತು ನಿರ್ವಿಕಾರ ಪರಬ್ರಹ್ಮದಲ್ಲಿ ಕಾಣುವ ವಿಕಾರಗಳು ನಿಜವಾದವುಗಳೇ, ಹೇಗೆ? ಇದರ ಬಗ್ಗೆ ಚನ್ನಾಗಿ ವಿಚಾರ ಮಾಡಬೇಕು. [೧೭] ಮಾಯೆಯಿಂದ ಈ ರೀತಿಯಲ್ಲಿ ನಿರ್ಮಾಣವಾದ ಈ ಎಲ್ಲ ವಿಶ್ವವು ನಾಶವಂತ ಇರುವದೆಂಬುದನ್ನು ತಿಳಿದು ಬಾಜೂಕ್ಕೆ ಸರಿಸಿ ಶಾಶ್ವತ ಬ್ರಹ್ಮನಿಗೆ ಆಚ್ಛಾದನ ಮಾಡಬೇಕು ಖರೇ ದೇವ ಯಾರು? ಈ ಪ್ರಶ್ನೆಗೆ ಇದು ಉತ್ತರವಿರುವದು:- ನಿರ್ವಿಕಾರಿ ಪರಬ್ರಹ್ಮನಲ್ಲಿ ಪೃಥ್ವಿ, ಆಪ್,ತೇಜ, ವಾಯು, ಅಂತರಾತ್ಮಾ ಮತ್ತು ಮೂಲ ಮಾಯಾ ಇವುಗಳಲ್ಲಿ ಯಾವದೊಂದೂ ಸಹ ಕಾಣುವದಿಲ್ಲ. [೧೮] ನಿರ್ಗುಣ, ನಿರ್ವಿಕಾರ, ನಿರಂಜನ ವಸ್ತುವೊಂದೇ ಶಾಶ್ವತದ [ಅಳಿವಿಲ್ಲದರ] ಗುರುತು ಇರುವದು. ಅನ್ಯಥಾ ಪ್ರಕೃತಿಯೂ ಸಹ ಸಂಪೂರ್ಣವಾಗಿ ನಾಶವಂತವಿರುವದು. (೧೯) ಒಟ್ಟಿನಲ್ಲಿ ಈ ವಿನಾಶಕಾರಕ ಸೃಷ್ಟಿ ಅಥವಾ ಯಾವತ್ತೂ ದೃಶ್ಯವು ನಾಶವಂತವಿರುವದೆಂದು ಖಾತ್ರಿ ಮಾಡಿಕೊಂಡರೆ ಸಾಕು. ಆ ಮೇಲೆ ಇವು ಇದ್ದರೂ ಇಲ್ಲದಂತೆ ಆಗಿ ಬಿಡುವವು. ಸಾರಾಸಾರ ವಿಚಾರದಿಂದ ಸಮಾಧಾನವೆಂದರೆ, ಏನು-ಯಾವುದು ಇರುವದು.?ಇದರ ಬಗ್ಗೆ ಬರೋಬರಿ ತಿಳಿಯುವದು. (೨೦) ಶಾಶ್ವತವಾದದ್ದನ್ನು ಹುಡುಕಿ ತೆಗೆಯುವದಕ್ಕಾಗಿ ವಿಚಾರ ಮಾಡಹತ್ತಿದಾಗ ಸಾರ ಯಾವುದು? ಮತ್ತು ಅಸಾರ ಯಾವುದು? ಇದರ ನಿಶ್ಚಯ ಮನದಲ್ಲಿಯೇ ಗೊತ್ತಾಗುವದು. ಇದು ಮನಕ್ಕೆ ಖಾತ್ರಿಯಾದ ಕೂಡಲೇ ಆತ್ಮಾನಾತ್ಮ ವಿಚಾರವು ಬಲವಂತವಾಗುವದು. ವಿಚಾರ ಮಾಡುವದರಿಂದ ವಿಚಾರ ಮಾಡುವ ಸಾಮರ್ಥ್ಯವು ಬೆಳೆಯುತ್ತ ಹೋಗುವದು. ವಿಚಾರದ ಸಾಮರ್ಥ್ಯ ಬೆಳೆದಾಗ ವಿಚಾರಕ್ಕೆ ಸೂಕ್ಷ್ಮದೊಳಗೆ ಪ್ರವೇಶ ಮಾಡುವ ಬಲ ಬರುತ್ತದೆ. ವಿಚಾರವು ಯಾವ ಪ್ರಮಾಣದಲ್ಲಿ ಸೂಕ್ಷ್ಮವಾಗುವದೋ ಆ ಪ್ರಮಾಣದಲ್ಲಿ ಅದು (ಸೂಕ್ಷ್ಮ ವಿಚಾರವು) ಅಶಾಶ್ವತದ ಕವಚವನ್ನು ಭೇದಿಸಿ ಶಾಶ್ವತದವರೆಗೆ ಮುಟ್ಟುವದು. ಅಲ್ಲಿ ಅದು ಇಲ್ಲದಾಗಿ ಹೋಗಿ ವಸ್ತು ದರ್ಶನ ಹೊಂದುವದು. [೨೧] ದೇವ ಶಾಶ್ವತನಿರುವನು. ನಿರ್ಗುಣನಿರುವನು. ಅನ್ನುವ ಗುರುತು ಸ್ವಾನುಭವದಿಂದ ಖಾತ್ರಿಯಾದರೆ ದೇವ ಯಾರು ಇದು ತಿಳಿಯಿತೆಂದರೆ ಒಂದು ಮೆಟ್ಟಿಗೆ (ಹಂತಕ್ಕೆ) ಬಂದಂತಾಯಿತು. ಈಗ "ನಾನು ಯಾರು?" ಇದನ್ನು ಸರಿಯಾಗಿ ತಿಳಿದುಕೊಳ್ಳುವದು ಅವಶ್ಯವಿದೆ. (೨೨) "ನಾನು ಯಾರು?" ಇದರ ಶೋಧ ಮಾಡುತ್ತಾ, ಮಾಡುತ್ತಾ, ನಾನು ಶುದ್ಧ ನಿರ್ಮಲ ನಿರುಪಾಧಿಕ ಆತ್ಮಾ ಇರುವೆನು ಅನ್ನುವ ಅನುಭವ ಬರುವದು:- "ನಾನು ಯಾರು?" ಇದು ತಿಳಿಯಬೇಕಾದರೆ ದೇಹದಲ್ಲಿಯ ತತ್ವಗಳನ್ನು ಶೋಧಿಸಬೇಕು. ಹೀಗೆ ಶೋಧಿಸಿ ನೋಡಿದರೆಆಗ ತಿಳಿಯುವದೇನಂದರೆ, ಮನದಲ್ಲಿ ಉತ್ಪನ್ನವಾಗುವ ವೃತ್ತಿಯಲ್ಲಿಯೇ [ಮನದ ಸ್ಥಿತಿಯಲ್ಲಿಯೇ] ಈ ನಾನು-ನೀನು ಅನ್ನುವದರ ಮೂಲವಿರುವದು. [೨೩] ಸ್ಥೂಲ, ಸೂಕ್ಷ್ಮ, ಮತ್ತು ಕಾರಣ ಈ ಎಲ್ಲಾ ದೇಹಗಳ ಶೋಧ ಮಾಡಿದ್ದಾದರೆ ಈ ಮೊಟ್ಟ ನಾನು ಅನ್ನುವದು ಎಲ್ಲಿಯೂ ಕಾಣುವದಿಲ್ಲ. ಈ ಶೋಧದಲ್ಲಿ ಯಾವತ್ತೂ. ನಾನು. ನೀನು ಅನ್ನುವದು ಪಂಚ ತತ್ವದಲ್ಲಿಯೇ ಲೀನವಾಗಿ ಹೋಗುವವು. [೨೪] ಇದೇ ಶೋಧದಲ್ಲಿ ದೃಶ್ಯ ಪದಾರ್ಥಗಳು ಸಹ ಮಿಥ್ಯಾ ಎಂದು ಪಕ್ಕಕ್ಕೆ ಸರಿಯುವವು. ಒಂದು ತತ್ವವು ಇನ್ನೊಂದು [ಎರಡನೆಯ] ತತ್ವದಲ್ಲಿ ಲಯ ಹೊಂದುವದು. ಆಗ ಅಲ್ಲಿ ನಾನು, ನೀನು ಅನ್ನುವದು ಉಳಿಯಲು ಆಸ್ಪದವೇ ಇರುವದಿಲ್ಲ. ಆಗ ಅಲ್ಲಿ ಕೇವಲ ಬ್ರಹ್ಮವಸ್ತು ಅಷ್ಟೇ ಶಿಲುಕು [ಬಾಕಿ] ಉಳಿಯುವದು.[೨೫] ಅಂತೂ ಪಂಚೀಕರಣದ ಅರ್ಥ ಹಾಗೂ ವಿಚಾರ-ತತ್ವವಿವರಣೆಯ ಅರ್ಥ,ಮಹಾವಾಕ್ಯ ಚಿಂತನೆಯ ವಿಷಯ ಈ ಎಲ್ಲವುಗಳ ಭಾವಾರ್ಥವು ಏನಿರುವದೆಂದರೆ ನಾವು ಪರಮಾತ್ಮ ಸ್ವರೂಪರೇ ಇರುವೆವು. ಈ ಅನುಭವವು ಬರುವದಕ್ಕಾಗಿ ನಾವು ಅನಾಸಕ್ತರಾಗಿ ಆತ್ಮ ವಸ್ತುವಿನೊಂದಿಗೆ ತದಾಕಾರ [ಏಕರೂಪ]ರಾಗಬೇಕು. [ದೇಹದ-ನಾನು ಅನ್ನುವದರ ಸಂಗ ಹರಿದು ಹೋಗಿ ನಿಸ್ಸಂಗರಾಗುವೆವು] [೨೬] ತಾತ್ಪರ್ಯ:- ದೇವ ಮತ್ತು ಭಕ್ತ ಇವರ ಮೂಲ ಶೋಧಿಸಿ ನೋಡಿದರೆ ಸರ್ವ ಉಪಾಧಿ ರಹಿತನಾದಂಥ ಕೇವಲ ಆತ್ಮಾ, ಇದು ಶಿಲುಕು (ಬಾಕಿ) ಉಳಿಯುವದು. (೨೭)

ಮೀಪಣ ತೇ ಬುಡಾಲೇ। ವಿವೇಕೇ ವೇಗಳೇಪಣಾ ಗೇಲೇ।
ನಿವೃತ್ತಿಪದಾಸ ಪ್ರಾಪ್ತ ಜಾಲೇ। ಉನ್ಮನೀಪದ ॥೨೮॥

ವಿಜ್ಞಾನೀ ರಾಹಿಲೇ ಜ್ಞಾನ। ಧ್ಯೇಯೆ ರಾಹಿಲೇ ಧ್ಯಾನ।
ಸಕಳ ಕಾಹೀ ಕಾರ್ಯಾಕಾರಣ। ಪಾಹೋನ ಸಾಂಡಿಲೇ ॥೨೯॥

ಜನ್ಮ ಮರಣಾಚೇ ಚುಕಲೇ। ಪಾಪ ಅವಘೇ ಚಿ ಬುಡಾಲೇ।
ಯೆಮಯಾತನೇಚೇ ಜಾಲೇ। ನಿಸಂತಾನ ॥೩೦॥

ನಿರ್ಬಂದ ಅವಘಾ ಚಿ ತುಟಲಾ। ವಿಚಾರೇ ಮೋಕ್ಷ ಪ್ರಾಪ್ತ ಜಾಲಾ।
ಜನ್ಮ ಸಾರ್ಥಕ ಚಿ ವಾಟಲಾ। ಸಕಳ ಕಾಹೀ ॥೩೧॥

ನಾನಾ ಕಿಂತ ನಿವಾರಲೇ। ಧೋಕೆ ಅವಘೆ ಚಿ ತುಟಲೆ।
ಜ್ಞಾನವಿವೇಕೇ ಪಾವನ ಜಾಲೆ। ಬಹುತ ಲೋಕ ॥೩೨॥

ಪತಿತ ಪಾವನಾಚೆ ದಾಸ। ತೇ ಹಿ ಪಾವನ ಕರಿತೀ ಜಗಾಸ।
ಐಸೀ ಹೆ ಪ್ರಚಿತ ಮನಾಸ। ಬಹುತಾಂಚ್ಯಾ ಆಲೀ ॥೩೩॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
"ಭಕ್ತ ನಿರೂಪಣ" ನಾಮ ಸಮಾಸ ತೃತೀಯ ॥

ಈ ಆತ್ಮನ ಸಾಕ್ಷಾತ್ಕಾರವಾಯಿತೆಂದರೆ ಏನಾಗುವದು? ಇದನ್ನು ಹೇಳುವರು:– ಈ ರೀತಿಯಿಂದ ತತ್ವದ ನಿರಾಸವಾಗಿ ಅದರ ಜೊತೆಗೇ ನಾನು ಅನ್ನುವದು ಇಲ್ಲದಾದ ಮೇಲೆ ಆತ್ಮಾನಾತ್ಮವಿವೇಕದಿಂದ ಬೇರೆತನ (ಅಹಂ) ಇದು ಇಲ್ಲದಾಗುವದು. ಅಂದರೆ ಆಗ ವೃತ್ತಿರಹಿತ ಅವಸ್ಥೆ ಬಂದು ಉನ್ಮನೀ ಪದ ಪ್ರಾಪ್ತವಾಗುವದು. (೨೮) ಇದು ಪ್ರಾಪ್ತವಾದ ಮೇಲೆ ಜ್ಞಾನದ ರೂಪಾಂತರವು ವಿಜ್ಞಾನದಲ್ಲಿ ಆಗುವದು. ಧ್ಯಾನವು ಧ್ಯೇಯಮಯವಾಗಿ ಬಿಡುವದು. ಕಾರ್ಯ ಕಾರಣ ಭಾವದಲ್ಲಿ ಅಂತರ್ಭೂತವಾಗುವಂಥ ಎಲ್ಲ ದ್ವೈತಮಯ ದೃಶ್ಯವು ಬಾಜೂಕ್ಕೆ ಸರಿದು ಹೋಗುವದು.(೨೯) ಜನ್ಮ ಮರಣದ ಚಕ್ರ ಮುಗಿಯುವದು. ಯಾವತ್ತೂ ಪಾಪದನಾಶವಾಗಿ ಹೋಗುವದು. ಯಮಯಾತನೆಯ ಹಿಡಿತದಿಂದ ಬಿಡುಗಡೆಯಾಗುವದು. [೩೦] ಸರ್ವ ಪ್ರಕಾರದ ವಿಧಿ-ನಿಷೇಧಗಳೆಲ್ಲದರ ಬಂಧನಗಳು ಹರಿದು ಹೋಗುವವು. ಬ್ರಹ್ಮ ವಿಚಾರದಿಂದ ಮೋಕ್ಷ ಪ್ರಾಪ್ತಿಯಾಗುವದು. ಮತ್ತು ಜನ್ಮ ತಳೆದು ಬಂದದ್ದು ಸಾರ್ಥಕವಾಯಿತೆಂದು ಅನಿಸುವದು. [೩೧] ನಾನಾ ಪ್ರಕಾರದ ಸಂಶಯಗಳು ಇಲ್ಲದಾಗಿ ಹೋಗುವವು. ಸರ್ವ ಸಂಕಟಗಳೂ ಇಲ್ಲದಾಗುವವು. ಈ ಪ್ರಕಾರದಲ್ಲಿ ಆತ್ಮಜ್ಞಾನ ಮತ್ತು ಅತ್ಮಾನಾತ್ಮ ವಿವೇಕ ಇವುಗಳ ಸಹಾಯದಿಂದ ಬಹಳಷ್ಟು ಜನರು ಪಾವನರಾಗಿರುವರು. [೩೨] ಪತಿತರನ್ನು ಪಾವನ ಮಾಡುವಂಥ ಪರಮಾತ್ಮನ[ಪ್ರಭುರಾಮರಾಯನ]ದಾಸರೂ ಸಹ ಜಗತ್ತನ್ನು ಪಾವನ ಮಾಡುವರು. ಈ ತರಹದ ಅನುಭವ ಬಹಳಷ್ಟು ಜನರಿಗೆ ಬಂದಿರುವದು [೩೩]

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಹನ್ನೆರಡನೆಯ ದಶಕದ "ಭಕ್ತ ನಿರೂಪಣ''ವೆಂಬ ಹೆಸರಿನ ಮೂರನೆಯ ಸಮಾಸವು ಮುಗಿದುದು.

• •

ದಶಕ ದ್ವಾದಶ : ಸಮಾಸ ಚತುರ್ಥ : ವಿವೇಕ ವೈರಾಗ್ಯ ನಿರೂಪಣ

॥ಶ್ರೀರಾಮ॥ ಮಹದ್ಭಾಗ್ಯ ಹಾತಾಸ ಆಲೇ ।
ಪರೀ ಭೋಗೂ ನಾಹೀ ಜಾಣಿತಲೇ ।
ತೈಸೇ ವೈರಾಗ್ಯ ಉತ್ಪನ್ನ ಜಾಲೇ । ಪರೀ ವಿವೇಕ ನಾಹೀ ॥೧॥

ಆದಳತೇ ಆಫಳತೇ । ಕಷ್ಟೀ ಹೋತೇ ದುಃಖೀ ಹೋತೇ ।
ಏಕತೇ ದೇಖತೇ ಯೇತೇ । ವೈರಾಗ್ಯ ತೇಣೇ ॥೨॥

# ದಶಕ ೧೨. ಸಮಾಸ ೪. ವಿವೇಕ ವೈರಾಗ್ಯ ನಿರೂಪಣ (ನುಡಿ ೨೦)

ವ್ಯವಹಾರದಲ್ಲಾಗಲೀ ಅಥವಾ ಪರಮಾರ್ಥದಲ್ಲಿಯಾಗಲೀ ಯಾವುದಾದರೂ ಒಂದು ದೊಡ್ಡ ಕಾರ್ಯವನ್ನು ಸಿದ್ಧಿಗೆ ಒಯ್ಯಬೇಕಾದರೆ ವಿಶಿಷ್ಟ ಪ್ರಕಾರದ ಯೋಗ್ಯತೆ ಬೇಕಾಗುವದು. ಆತ್ಮಜ್ಞಾನ ಪ್ರಾಪ್ತವಾಗಬೇಕಾದರೆ ವಿವೇಕ ಮತ್ತು ವೈರಾಗ್ಯ ಇವುಗಳ ಆವಶ್ಯಕತೆ ಬಹಳವಿರುವದು. ಮನುಷ್ಯ ನಡೆಯಬೇಕಾದರೆ ಎರಡು ಕಾಲುಗಳನ್ನು ಹೇಗೆ ಉಪಯೋಗಿಸುವನೋ ಅಥವಾ ರಥವು ಜೋರಾಗಿ ಹೋಗಲಿಕ್ಕೆ ಎರಡು ಗಾಲಿಗಳು ಹೇಗೆ ಬೇಕೋ ಇದರಂತೆಯೇ ಸಾಧಕನ ಸಾಧನಾ ಕಾರ್ಯವು ಸಮಾಧಾನಕರವಾಗಿ ನಡೆಯಲಿಕ್ಕೆ ವಿವೇಕ ಮತ್ತು ವೈರಾಗ್ಯ ಇವೆರಡೂ ಸಮತೋಲವಾಗಿ ನಮ್ಮಲ್ಲಿರುವದು ಅವಶ್ಯವು. ಒಂದನ್ನು ಬಿಟ್ಟು ಒಂದು ವ್ಯರ್ಥವಾಗುವದು. ನಿಷ್ಫಲವಾಗುವದು. ಮತ್ತು ಇತ್ತ ಪ್ರಪಂಚ ಅರ್ಧಮರ್ಧ, ಅತ್ತ ಪರಮಾರ್ಥವೂ ಇಲ್ಲ ಇಂಥ ಅವಸ್ಥೆಯು ಬರುವದು. ನಮ್ಮ ಧ್ಯೇಯ ಯಾವುದು ? ನಮ್ಮ ಸಾಧನೆ ಯಾವುದು ? ಪ್ರಪಂಚದ ಸ್ವರೂಪವೇನು ? ಜಗತ್ತಿನ ಸ್ವಭಾವ ಹೇಗೆ ? ಸ್ವರೂಪಾನುಭವದ ಲಕ್ಷಣಗಳು ಯಾವವು ? ಇತ್ಯಾದಿ ಪ್ರಶ್ನೆಗಳಿಗೆ ಅಗದೀ ಸ್ಪಷ್ಟ ಉತ್ತರವನ್ನು ಬುದ್ಧಿಯಿಂದ ಗ್ರಹಣ ಆಕಲನ ಮಾಡುವದು. ಇದರ ಹೆಸರೇ ವಿವೇಕವೆಂದು ಇರುವದು. ನಮ್ಮ ದೇಹ ಸಹಿತ ಸರ್ವ ದೃಶ್ಯದ ಕಿಮ್ಮತ್ತು ಆತ್ಮಜ್ಞಾನದಕ್ಕಿಂತ ಕಡಿಮೆ ಅಂತಾ ಅನಿಸುವದು. ದೇಹದಿಂದ ಸುಖ ಪಡೆಯಬೇಕೆಂಬ ಪ್ರವೃತ್ತಿ ಕ್ಷೀಣವಾಗುವದು. ಬೇಕು ಬೇಡಗಳು ಶಾಂತವಾಗುವಿಕೆ, ಮನಸ್ಸಿನಿಂದ ಎಲ್ಲಿಯೂ, ಯಾತರಲ್ಲಿಯೂ, ಯಾವದರಲ್ಲಿಯೂ ಆಸಕ್ತವಾಗದೇ ಇರುವದು, ಇದಕ್ಕೆ ವೈರಾಗ್ಯ ಅಂತಾ ಅನ್ನುವರು. ವೈರಾಗ್ಯದ ಅಭಾವವಿದ್ದರೆ ಕೇವಲ ವಿವೇಕವು ಲಂಗಡಾ (ಹೆಳವ) ಎನಿಸುವದು. ಮತ್ತು ವಿವೇಕದ ಅಭಾವವಿದ್ದ ಕೇವಲ ವೈರಾಗ್ಯವು ದುರಾಗ್ರಹಿ ವ ದುಷ್ಟ ತರ್ಕದ್ದಾಗಿ ಬಿಡುವದು. ವಿವೇಕ-ವೈರಾಗ್ಯದಿಂದ ಕೂಡಿದ ಮನುಷ್ಯನು ಒಳಗಿನಿಂದ ವ ಹೊರಗಿನಿಂದ ಮುಕ್ತನಿರುವನು. ಬಂಧನರಹಿತನಿರುವನು. ಇಂಥವನ ಮಾತು ಮತ್ತು ಕೃತಿಯಲ್ಲಿ (ನಡೆ ನುಡಿಯಲ್ಲಿ) ಎಳ್ಳಷ್ಟೂ ವಿರೋಧ ಕಂಡು ಬರುವದಿಲ್ಲ. ಆದ್ದರಿಂದ ಸಜ್ಜನರು ಇವನ ಜೀವನವನ್ನು ನೋಡಿ ಆಶ್ಚರ್ಯಪಡುವರು. ಆನಂದ ವ್ಯಕ್ತ ಮಾಡುವರು. ಉತ್ತಮ ಸಾಧಕನು ಒಂದು ರೀತಿಯಲ್ಲಿ ಪರಮಾರ್ಥದ ಪ್ರಚಾರಕನಿರುವನು. ಇವನಿಗೆ ಭಗವಂತನ ಹೊರತಾಗಿ ಇತರ ವಾಸನಾ ಇರುವದಿಲ್ಲ. ಇವನಲ್ಲಿ ವೈರಾಗ್ಯವು ಸಂಪೂರ್ಣ (ಭರಪೂರ) ತುಂಬಿರುವದು. ಇವನ ವಿವೇಕ ಮತ್ತು ಧಾರಣಾ (ಬುದ್ಧಿಯ ಗ್ರಹಣ ಶಕ್ತಿ, ಸ್ಥಿರತ್ವ, ಸ್ಮರಣ ಶಕ್ತಿ) ಇವೆರಡೂ ಶ್ರೇಷ್ಠ ದರ್ಜೆಯವಿರುವವು. ಇವನು ಮನಃಪೂರ್ವಕ ಭಜನೆ ಮಾಡುವನು, ರಸಭರಿತ ಹರಿಕೀರ್ತನ ಮಾಡುವನು. ನಿರೂಪಣ, ಭಾಷಣ, ಪ್ರವಚನಗಳಲ್ಲಿ ಸ್ವಾನುಭವದ ಮಾತುಗಳನ್ನು ಹೇಳುವನು ಸಾರಾಂಶ:– ಉತ್ತಮ ವಿವೇಕ, ಪ್ರಖರ ವೈರಾಗ್ಯ, ಅನುಭವಯುಕ್ತ ಬ್ರಹ್ಮಜ್ಞಾನ, ಆಚಾರಶೀಲತೆ ಮತ್ತು ಪರೋಪಕಾರ ಈ ಗುಣಗಳಿಂದ ಕೂಡಿದ ಸಂಪನ್ನ ಪುರುಷನು ಬಹಳಷ್ಟು ಜನರನ್ನು ಪರಮಾರ್ಥದಯೋಗ್ಯಮಾರ್ಗದ ಮೇಲೆ ತಂದು ಬಿಡುವನು.

## ದಶಕ ೧೨. ಸಮಾಸ ೪. ವಿವೇಕ ವೈರಾಗ್ಯ ನಿರೂಪಣ (ನುಡಿ ೨೦)

ಜೀವನದಲ್ಲಿ ಸರ್ವದೃಷ್ಟಿಯಿಂದ ಯಶಸ್ವಿಯಾಗಲಿಕ್ಕೆ ವಿವೇಕವು ಬೇಕು. ಮತ್ತು ಇದರ ಕೂಡ ವೈರಾಗ್ಯವೂ ಸಹ ಬೇಕು. ವಿವೇಕವಿಲ್ಲದ ವೈರಾಗ್ಯವು ಸಂಕಟದಲ್ಲಿ ಕೆಡವುವದು. ಅದೇ ವೈರಾಗ್ಯವಿಲ್ಲದ ವಿವೇಕವು ಜೊಳ್ಳು ಅನಿಸುವದು:- ತಿಳಿಯಿರಿ, ಒಬ್ಬ ಸಾಮಾನ್ಯ ಮನುಷ್ಯನಿಗೆ ಅಪಾರ ಐಶ್ವರ್ಯ ಲಭಿಸಿತು. ಆದರೆ ಅದರ ಭೋಗೋಪಯೋಗ ಗೊತ್ತಿರದಿದ್ದರೆ ಬಂದ ಸಂಪತ್ತು ವ್ಯರ್ಥವಾಗಿ ಹೋಗುವದು. ಇದರಂತೆ ಒಬ್ಬನಿಗೆ ವೈರಾಗ್ಯ ಪ್ರಾಪ್ತವಾಯಿತು. ಆದರೆ ಅವನಲ್ಲಿ ವಿವೇಕವೇ ಇಲ್ಲದಿದ್ದರೆ ಆ ವೈರಾಗ್ಯದಿಂದ ಆತ್ಮಜ್ಞಾನವು ನಿರ್ಮಾಣವಾಗುವದಿಲ್ಲ. [೧] ಪ್ರಪಂಚದಲ್ಲಿ ಹೊಡೆತ, ಬಡೆತ ಕಷ್ಟ, ದುಃಖ ಏರು, ಇಳಿವು ಇವು ಇರುವವು. ಇವನ್ನೆಲ್ಲ ಕೇಳಿ ಮತ್ತು ಸ್ವತಃ ನೋಡಿ ಅನುಭವ ಪಡೆದ ಮೇಲೆ ಮನುಷ್ಯನಿಗೆ ವೈರಾಗ್ಯ ಉತ್ಪನ್ನವಾಗುವದು. (೨)

ನಾನಾ ಪ್ರಪಂಚಾಚ್ಯಾ ವ್ರೋಢೀ । ನಾನಾ ಸಂಕಟೇ ಸಾಂಕಡೀ ।
ಸಂಸಾರ ಸಾಂಡುನೀ ದೇಶಧಡೀ । ಹೋಯ ತೇಣೇ ॥೩॥

ತೋ ಚಿಂತೆ ಪಾಸೂನ ಸುಟಲಾ । ಪರಾಧೇನತೇಪಾಸುನಿ ಪಳಾಲಾ ।
ದುಃಖತ್ಯಾಗೇ ಮೋಕಳಾ ಜಾಲಾ । ರೋಗೀ ಜೈಸಾ ॥೪॥

ಪರೀ ತೋ ಹೋಊ ನಯೆ ಮೊಕಾಟ । ನಷ್ಟ ಭ್ರಷ್ಟ ಆಣಿ ಚಾಟ ।
ಸೀಮಾ ಚ ನಾಹೀ ಸ್ವೈರಾಟ । ಗುರೂ ಜೈಸೇ ॥೫॥

ವಿವೇಕೇವಿಣ ವೈರಾಗ್ಯ ಕೇಲೇ । ತರೀ ಅವಿವೇಕೇ ಅನರ್ಥೀ ಘಾತಲೇ ।
ಅವಘೇ ವ್ಯರ್ಥ ಚಿ ಗೇಲೇ । ದೋಹೀಕಡೆ ॥೬॥

ನಾ ಪ್ರಪಂಚ ನಾ ಪರಮಾರ್ಥ । ಅವಘೇ ಜಿಣೇ ಚಿ ಜಾಲೇ ವ್ಯರ್ಥ ।
ಅವಿವೇಕೇ ಅನರ್ಥ । ಐಸಾ ಕೇಲಾ ॥೭॥

ಕಾ ವ್ಯರ್ಥ ಚಿ ಜ್ಞಾನ ಬಡಬಡಿಲಾ । ಪರೀ ವೈರಾಗ್ಯಯೋಗ ನಾಹೀ ಘಡಲಾ ।
ಜೈಸಾ ಕಾರಾಗೃಹೀ ಅಡಕಲಾ । ಪುರುಷಾರ್ಥ ಸಾಂಗೇ ॥೮॥

ವೈರಾಗ್ಯೇವಿಣ ಜ್ಞಾನ । ತೋ ವ್ಯರ್ಥ ಚಿ ಸಾಭಿಮಾನ ।
ಲೋಭದಂಭೇ ಘೋಳಸೂನ । ಕಾಸಾವಿಸ ಕೇಲಾ ॥೯॥

ಸ್ವಾನ ಬಾಂಧಲೇ ತರೀ ಭುಂಕೇ । ತೈಸಾ ಸ್ವಾರ್ಥಮುಳೇ ಥಿಂಕೆ ।
ಪರಾಧೀಕ ದೇಖೋ ನ ಸಕೆ । ಸಾಭಿಮಾನೇ ॥೧೦॥

ಹೇ ಯೇಕೆವಿಣ ಯೇಕ । ತೇಣೇ ಉಗಾ ಚ ವಾಢೆ ಶೋಕ ।
ಆತಾ ವೈರಾಗ್ಯ ಆಣಿ ವಿವೇಕ । ಯೋಗ ಐಕಾ ॥೧೧॥

ವಿವೇಕೇ ಅಂತರೀ ಸುಟಲಾ । ವೈರಾಗ್ಯೇ ಪ್ರಪಂಚ ತುಟಲಾ ।
ಅಂತರ್ಬಾಹ್ಯ ಮೋಕಳಾ ಜಾಲಾ । ನಿಃಸಂಗ ಯೋಗೀ ॥೧೨॥

ಜೈಸೇ ಮುಖೇ ಜ್ಞಾನ ಬೋಲೇ । ತೈಸೀ ಚ ಸವೇ ಕ್ರಿಯಾ ಚಾಲೇ ।
ದೀಕ್ಷಾ ದೇಖೋನೀ ಚಕ್ಕಿತ ಜಾಲೇ। ಸುಚಿಷ್ಮಂತ ॥೧೩॥

ಆಸ್ಥಾ ನಾಹೀ ತ್ರೈಲೋಕ್ಯಾಚೀ । ಸ್ಥಿತೀ ಬಾಣಲೀ ವೈರಾಗ್ಯಾಚೀ।
ಯೆತ್ನ ವಿವೇಕಧಾರಣೆಚೀ । ಸೀಮಾ ನಾಹೀ ॥೧೪॥

ಪ್ರಪಂಚದಲ್ಲಿ ಅನೇಕ ಪ್ರಕಾರದ ಎಳೆದಾಟ, ಜಗ್ಗಾಟ ಇರುವವು. ಅನೇಕ ತರಹದ ಸಂಕಟಗಳು ಬರುವವು. ನಾನಾ ನಮೂನೆಯ ಅಡಚಣೆಗಳನ್ನು ಅನುಭವಿಸಬೇಕಾಗಬಹುದು. ಈ ಎಲ್ಲವುಗಳಿಂದ ಮನುಷ್ಯ ಬೇಸರಗೊಳ್ಳುವನು, ಮತ್ತು ಪ್ರಪಂಚ ಬಿಟ್ಟು ದೇಶಾಂತರಕ್ಕೆ ಹೋಗುವನು. (ಹೋಗಬಹುದು) [೩] ರೋಗ ಮುಕ್ತನಾದ ಒಬ್ಬ ರೋಗಿ ಯಾವ ಪ್ರಕಾರವಾಗಿ ಅನಾರೋಗ್ಯದ ಹಿಡಿತದಿಂದ ಬಿಡುಗಡೆಯಾಗಿ ಹೊರಬರುವನೋ ಅದರಂತೆಯೇ ಪ್ರಪಂಚಕ್ಕೆ ಬೇಸರಪಟ್ಟು ತ್ರಾಸುಗೊಂಡು ದೇಶಾಂತರಕ್ಕೆ ಹೋದ ಮನುಷ್ಯನು ಚಿಂತೆ-ದುಃಖ ಮತ್ತು ಪರಾಧೀನತೆ ಇವುಗಳಿಂದ ಮುಕ್ತನಾಗುವನು. [೪] ಆದರೆ ಪ್ರಪಂಚ ಬಿಟ್ಟುಕೊಟ್ಟು ಹೋದ ಈ ಮನುಷ್ಯನು ಸ್ವೈರಾಚಾರಿ, ದುಷ್ಟ, ಭ್ರಷ್ಟ, ಬಡಬಡ್ಯಾ ಮತ್ತು ಅಡವೀದನಗಳಂತೆ ಸ್ವೇಚ್ಛಾ ತಿರುಗುವವನಾಗಬಾರದು, ಸ್ವೇಚ್ಛಾಚಾರಿ ಆಗಬಾರದು. [೫] ವಿವೇಕವಿಲ್ಲದೆ ವೈರಾಗ್ಯ ತಾಳಿದರೆ ಅವಿವೇಕವೆನಿಸುವದು. ಇದು ಅವರನ್ನು ಸಂಕಟದಲ್ಲಿ ಕೆಡವುವದು. ಮತ್ತು ಹೀಗಾಗಿ ಪ್ರಪಂಚ-ಪರಮಾರ್ಥ ಈ ಎರಡೂ ಕಡೆಗೆ ಇವನು ಮೋಸ(ಫಸಗಿ) ಬೀಳುವನು. (೬) ಇವನಿಗೆ ಸರಿಯಾಗಿ ಪ್ರಪಂಚ ಸಾಧಿಸುವದಿಲ್ಲ. ಅತ್ತ ಸರಿಯಾಗಿ ಪರಮಾರ್ಥವೂ ಸಾಧಿಸುವದಿಲ್ಲ, ಒಟ್ಟಿನಲ್ಲಿ ಇವನ ಜೀವನವೇ ವ್ಯರ್ಥವಾಗಿ ಹೋಗುವದು. ಅವಿವೇಕದಿಂದಾಗಿಯೇ ಇಂಥ ಅನರ್ಥಗಳು ಉಂಟಾಗುವವು. (೭) ತಿಳಿಯಿರಿ, ಒಬ್ಬ ಮನುಷ್ಯನು ಜ್ಞಾನದ ಬಗ್ಗೆ ಬಹಳಷ್ಟು ದೀರ್ಘವಾಗಿ ಮಾತನಾಡುವನು. ಆದರೆ ಅವನ ಜ್ಞಾನಕ್ಕೆ ವೈರಾಗ್ಯದ ಪಾರ್ಶ್ವಭೂಮಿ ಇಲ್ಲದಿದ್ದರೆ ಆ ಜ್ಞಾನವು ವ್ಯರ್ಥ ಬೊಗಳಿಕೆ, ಬಡಬಡಿಕೆ ಅನಿಸುವದು. ತುರಂಗ (ಜೇಲು) ದಲ್ಲಿ ಬಿದ್ದ ಮನುಷ್ಯನು ಪರಾಕ್ರಮದ ದೊಡ್ಡ ದೊಡ್ಡ ಮಾತುಗಳನ್ನು ಆಡಿದಂತೆ ಇದೂ ಆಗುವದು. (೮) ವೈರಾಗ್ಯದ ಪಾಯಾ ಇಲ್ಲದ ಜ್ಞಾನವು ಸುಮ್ಮನೇ ಇಲ್ಲದ (ಖೊಟ್ಟಿ) ಅಭಿಮಾನ ಹುಟ್ಟಿಸುವದು. ಇಂಥ ವೈರಾಗ್ಯ ಹೀನನಾದ ಜ್ಞಾನಿ ಮನುಷ್ಯನು ಲೋಭದಿಂದ ಮತ್ತು ದಂಭದಿಂದ ಕೂಡಿದವನಾಗಿ ಬಹಳಷ್ಟು ವ್ಯಾಕುಲನಾಗಿರುವನು. ಇದರಿಂದಾಗಿ ಇವನು ಬಹಳ ಲೋಭಿ ಮತ್ತು ಢೋಂಗಿ ಸಹ ಇರುವನು. (೯) ಇವನ ಅವಸ್ಥೆಯು ಒಂದು ನಾಯಿಯಂತೆ ಇರುವದು. ನಾಯಿಯನ್ನು ಕಟ್ಟಿ ಹಾಕಿದರೂ ಸಹ ಅದು ಒದರುತ್ತದೆ. ಇದರಂತೆ ಈ ಜ್ಞಾನವಂತ ಲೋಭಿಯು ಸ್ವಾರ್ಥಕ್ಕಾಗಿ ಶಬ್ದಾಡಂಬರದೊಂದಿಗೆ ಒದರುತ್ತಾನೆ, ಚಡಪಡಿಸುತ್ತಾನೆ. ಇವನ ಅಭಿಮಾನವು ದುರಭಿಮಾನಗೊಂಡಿರುವದು. ಅಂತೆಯೇ ಎರಡನೆಯವರ ಉತ್ಕರ್ಷ ಇವನಿಗೆ ಸಹನವಾಗುವದಿಲ್ಲ. (೧೦) ಒಟ್ಟಿನಲ್ಲಿ ಹೇಳಬೇಕಾದ ಮುಖ್ಯ ವಿಷಯವು ಏನೆಂದರೆ, ವಿವೇಕವಿಲ್ಲದ ವೈರಾಗ್ಯ ಮತ್ತು ವೈರಾಗ್ಯವಿಲ್ಲದ ವಿವೇಕ ಇದ್ದದ್ದಾದರೆ ಸುಮ್ಮನೇ ದುಃಖ ಹೆಚ್ಚಾಗಲು ಇವು ಕಾರಣವಾಗುವವು. ಇನ್ನು ವಿವೇಕ ಸಹಿತವಾದ ವೈರಾಗ್ಯ ಇದ್ದದ್ದಾದರೆ ಅದು ಹೇಗಿರುವದೆಂಬುದನ್ನು ಹೇಳುವೆ ಕೇಳಿರಿ. [೧೧] **ಯಾರ ಅಂಗದಲ್ಲಿ ವಿವೇಕ ಮತ್ತು ವೈರಾಗ್ಯ ಎರಡೂ ಯೋಗ್ಯ ಪ್ರಮಾಣದಲ್ಲಿ ಶೋಭಿಸುವವೋ ಅವರು ಒಳಗೂ ಹೊರಗೂ ಸ್ವಚ್ಛವಾಗಿರುವರು. ಒಂದೇಯಾಗಿರುವರು. ಇವರ ನಡೆ ನುಡಿಗಳಲ್ಲಿ ಸುಸಂಗತಿ ಇರುವದು. ಇವರ ಜೀವನ ನೋಡಿ ಜನರು ಪ್ರಭಾವಿತರಾಗುವರು. ಇವರ ಸ್ವಾನುಭವದ ಮಾತುಗಳು ಬಹಳಷ್ಟು ಪರಿಣಾಮ ಮಾಡುವವು. ಇಂಥವರಿಂದಾಗಿ ಸಾವಿರಾರು ಜನರು ಸನ್ಮಾರ್ಗಕ್ಕೆ ಹತ್ತುವರು.**- ವಿವೇಕದಿಂದ ಮನುಷ್ಯನಲ್ಲಿಯ ನಾನು ಅನ್ನುವದು ಬಿಟ್ಟು ಹೋಗುವದು. ಮತ್ತು ಇವನಲ್ಲಿಯ ಪ್ರಪಂಚದ ಆಸಕ್ತಿ ಬಿಟ್ಟು ಹೋಗುವದು. ವಿವೇಕಯುಕ್ತ ವೈರಾಗ್ಯವಂತ ಮನುಷ್ಯನು ಈ ರೀತಿಯಲ್ಲಿ ಒಳಗಿನಿಂದ ಮತ್ತು ಹೊರಗಿನಿಂದ ಮುಕ್ತನಾಗುವನು. ಬಂಧನ ರಹಿತನಾಗುವನು. ಇಂಥವನೇ ನಿಜವಾದ ನಿಃಸಂಗ ಯೋಗಿಯು. [೧೨] ಇಂಥ ಯೋಗಿಯು ತಾನು ಮಾತಾಡಿದಂತೆಯೇ ಅದನ್ನು ಕೃತಿಯಲ್ಲಿ ಮಾಡಿ ತೋರಿಸುವನು. ಇವನ ಜೀವನ ಪದ್ಧತಿಯನ್ನು ನೋಡಿ ಸಮಾಜದಲ್ಲಿಯ ಶುದ್ಧಾಚರಣೆಯ ಜನರೂ ಸಹ ಚಕಿತಗೊಳ್ಳುವರು. ತಲೆದೂಗುವರು. [೧೩] ಇವನಲ್ಲಿ ತ್ರಿಲೋಕಾಸಕ್ತಿ ಇಲ್ಲ. ಮತ್ತು ಪ್ರಜ್ವಲಿತ ವೈರಾಗ್ಯವಿರುವದು. ಇವಕ್ಕೆ ಜೋಡಿಯಾಗಿ ಇತ್ತ ಕಡೆಯಿಂದ ಅಮರ್ಯಾದ ಪ್ರಯತ್ನ, ಅಸೀಮವಾದ ವಿವೇಕ, ಅದ್ಭುತವಾದ ಗ್ರಹಣ ಶಕ್ತಿ, ಬುದ್ಧಿಶಕ್ತಿ ಇವು ಇವನಲ್ಲಿ [ವಿವೇಕ+ವೈರಾಗ್ಯ ಉಳ್ಳವನಲ್ಲಿ] ಶೋಭಿಸುವವು. [೧೪]

ಸಂಗೀತ ರಸಾಳ ಹರಿಕೀರ್ತನ। ತಾಳಬದ್ಧ ತಾನಮಾನ।
ಪ್ರೇಮಳ ಆವಡೀಚೇ ಭಜನ। ಅಂತರಾಪಾಸುನೀ ॥೧೫॥

ತತ್ಕಾಳ ಚಿ ಸನ್ಮಾರ್ಗ ಲಾಗೇ। ಐಸಾ ಅಂತರೀ ವಿವೇಕ ಜಾಗೇ।
ವಗತ್ರ್ಕೃತ್ವ ಕರಿತಾ ನ ಭಂಗೇ। ಸಾಹಿತ್ಯ ಪ್ರತ್ಯಯಾಚೇ ॥೧೬॥

ಸನ್ಮಾರ್ಗೇ ಜಗಾಸ ಮಿಳಾಲಾ। ಮ್ಹಣಿಜೆ ಜಗದೀಶ ವ್ರೊಳಲಾ।
ಪ್ರಸಂಗ ಪಾಹಿಜೆ ಕಳಲಾ। ಕೋಣೇಯೇಕ ॥೧೭॥

ಪ್ರಖರ ವೈರಾಗ್ಯ ಉದಾಸೀನ। ಪ್ರತ್ಯಯಾಚೇ ಬ್ರಹ್ಮಜ್ಞಾನ।
ಸ್ನಾನಸಂಧ್ಯಾ ಭಗವದ್ಭಜನ। ಪುಣ್ಯಮಾರ್ಗ ॥೧೮॥

ವಿವೇಕ ವೈರಾಗ್ಯ ತೇ ಐಸೇ। ನುಸ್ತೇ ವೈರಾಗ್ಯ ಹೇಕಾಡಪಿಸೇ।
ಶಬ್ದಜ್ಞಾನ ಯೆಳಿಲಸೇ। ಆಪಣ ಚಿ ವಾಟೇ ॥೧೯॥

ಮ್ಹಣೌನ ವಿವೇಕ ಆಣಿ ವೈರಾಗ್ಯ। ತೇ ಚಿ ಜಾಣಿಜೆ ಮಹದ್ಭಾಗ್ಯ।
ರಾಮದಾಸ ಮ್ಹಣೇ ಯೋಗ್ಯ। ಸಾಧು ಜಾಣತೀ ॥೨೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
"ವಿವೇಕ ವೈರಾಗ್ಯ" ನಾಮ ಸಮಾಸ ಚತುರ್ಥ ॥

ತಾಳಬದ್ಧ, ತಾನಬದ್ಧ, ಸಂಗೀತ ಪ್ರಧಾನವಾದ ಹರಿಕೀರ್ತನವನ್ನು ಇವನು ಮಾಡುವನು. ಕೀರ್ತನದಲ್ಲಿ ಪ್ರೇಮರಸ ತುಂಬಿ ಹರಿಯುವಂತೆ ಮಾಡುವನು. ಇದರಂತೆ ಅಗದೀ ಮನಃಪೂರ್ವಕವಾಗಿ ಖರೇ ಪ್ರೇಮದಿಂದ ಇವನು ಭಗವಂತನ ಭಜನೆಯನ್ನೂ ಮಾಡುವನು. [೧೫] ಇವನ ಮಾತುಗಳನ್ನು ಕೇಳಿದ ಜನರು ಕೂಡಲೇ ಸನ್ಮಾರ್ಗದ ಕಡೆಗೆ ಹೋಗುವರು. ಜನರನ್ನು ಆಕರ್ಷಿಸುವ ಇಂಥ ಪ್ರಬಲ ವಿವೇಕವು ಅವನ ಅಂತರ್ಯಾಮದಲ್ಲಿ ಪ್ರದೀಪ್ತ, ಉಜ್ವಲ, ಇರುವದು. ಇವನು ಮಾತನಾಡುವಾಗ ಇವನ ಮಾತುಗಳು ಸ್ವಾನುಭವದ ಸಾಹಿತ್ಯಕ್ಕೆ ಎಂದೂ ವಿರೋಧ ಮಾಡುವದಿಲ್ಲ.[೧೬]ಸನ್ಮಾರ್ಗದಿಂದ ಹೋಗುವಲ್ಲಿ ಲೋಕ ಸಮುದಾಯ ಅವನನ್ನು ಅನುಸರಿಸ ಹತ್ತಿದರೆಂದರೆ ಅವನ ಮೇಲೆ ಈಶ್ವರನ ಕೃಪಾ ಆಯಿತೆಂದು ತಿಳಿಯಬೇಕು. ಇಷ್ಟೆಲ್ಲ ಖರೇ ಇದ್ದರೂ ಸಹ ಪ್ರಸಂಗ ಯಾವುದು ಅದೆ?ಅದನ್ನು ತಿಳಿಯಲಿಕ್ಕೆ ಮತ್ತು ಅದಕ್ಕೆ ತಕ್ಕಂತೆ ನಡೆಯಲಿಕ್ಕೆ ಬರಬೇಕು. [೧೭] ಯಾವದರದೂ ಆಶೆ ಇಲ್ಲದ ಪ್ರಖರ ವೈರಾಗ್ಯ ಇರಬೇಕು. ಸ್ವಾನುಭವದ ಬ್ರಹ್ಮಜ್ಞಾನವಿರಬೇಕು. ಸ್ನಾನ,ಸಂಧ್ಯಾ,ಶೀಲತೆ ಇರಬೇಕು ಜೊತೆಗೆ ಭಗವಂತನ ಭಜನೆ ತಪ್ಪದೇ ಇರಬೇಕು. ನಾಮಸ್ಮರಣೆ ತಪ್ಪದೇ ಇರಬೇಕು. [ಅಖಂಡವಾಗಿರಬೇಕು]. ಪುಣ್ಯಮಾರ್ಗದಿಂದ ಹೋಗುವವರಿರಬೇಕು. (೧೮) ಯಾರಲ್ಲಿ ವಿವೇಕ ಮತ್ತು ವೈರಾಗ್ಯ ಇವುಗಳ ಜೋಡು ಇರುವದೋ ಆ ಪುರುಷನೇ ಖರೇ ಸಾಧು ಪುರುಷನು. ಕೇವಲ ವೈರಾಗ್ಯವು ಅಂದರೆ ತೋರಿಕೆಯ ವೈರಾಗ್ಯವು ದುರಾಗ್ರಹಿ ಮತ್ತು ಹುಚ್ಚು ಹಟಮಾರಿತನದ್ದೇ ಇರುವದು ಕೇವಲ ಶಬ್ದ ಜ್ಞಾನವು ನಾಚಿಕೆಪಡುವಂಥದು ಮತ್ತು ಬೇಸರ ತರಿಸುವಂಥದು ಅನಿಸುವದು. (೧೯) ಆದ್ದರಿಂದ ವಿವೇಕ ಮತ್ತು ವೈರಾಗ್ಯ ಇವುಗಳ ಸಂಗವು ಆಗುವದೇ ಒಂದು ದೊಡ್ಡ ಭಾಗ್ಯವೆಂದು ತಿಳಿಯಬೇಕು. ರಾಮದಾಸ ಸ್ವಾಮಿ ಅನ್ನುವದೇನಂದರೆ ಯಾರು ಖರೇ ಸಾಧುಗಳಿರುವರೋ ಅವರಿಗೆ ಇದೆಲ್ಲ ಸರಿಯಾಗಿ ತಿಳಿಯುವದು. (೨೦)

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹನ್ನೆರಡನೆಯ ದಶಕದೊಳಗಿನ "ವಿವೇಕ ವೈರಾಗ್ಯ" ಎಂಬ ನಾಲ್ಕನೆಯ ಸಮಾಸವು ಮುಗಿದುದು.

● ●

### ದಶಕ ದ್ವಾದಶ : ಸಮಾಸ ಪಂಚಮ : ಆತ್ಮನಿವೇದನ

॥ಶ್ರೀರಾಮ॥ ರೇಖೇಚೇಂ ಗುಂಡಾಳೇಂ ಕೇಲೇಂ । ಮಾತೃಕಾಕ್ಷರೀಂ ಶಬ್ದ ಜಾಲೇ।
ಶಬ್ದ ಮೇಳಊನ ಚಾಲೇ । ಶ್ಲೋಕ ಗದ್ಯ ಪ್ರಬಂದ ॥೧॥

ವೇದಶಾಸ್ತ್ರೇಂ ಪುರಾಣೇಂ । ನಾನಾ ಕಾವ್ಯೇಂ ನಿರೂಪಣೇಂ ।
ಗ್ರಂಥಭೇದ ಅನುವಾದಣೇಂ । ಕಿತೀಂ ಮ್ಹಣೋನಿ ॥೨॥

ನಾನಾ ಋಷೀ ನಾನಾ ಮತೇಂ । ಪಾಹೋ ಜಾತಾ ಅಸಂಖ್ಯಾತೇಂ ।
ಭಾಷಾ ಲಿಪೀ ಜೇಥ ತೇಥೇಂ । ಕಾಯೆ ಉಣೇಂ ॥೩॥

ವರ್ಗ ಋಚಾ ಶ್ರುತಿ ಸ್ಮೃತಿ । ಅಧ್ಯಾ ಸ್ವರ್ಗ ಸ್ತಬಕ ಜಾತೀಂ ।
ಪ್ರಸಂಗ ಮಾನೇಂ ಸಮಾಸ ಪೋಥೀಂ । ಬಹುಧಾ ನಾಮೇಂ ॥೪॥

ನಾನಾ ಪದೇಂ ನಾನಾ ಶ್ಲೋಕ । ನಾನಾ ಬೀರ ನಾನಾ ಕಡಕ ।
ನಾನಾ ಸಾಖ್ಯಾ ದೋಹಡೆ ಅನೇಕ । ನಾಮಾಭಿಧಾನೇಂ ॥೫॥

## ದಶಕ ೧೨. ಸಮಾಸ ೫. ಆತ್ಮ ನಿವೇದನ (ನುಡಿ ೨೨)

ಈ ದೃಶ್ಯವಿಶ್ವದಲ್ಲಿ ಅನೇಕ ಪ್ರಕಾರದ ಭೇದಗಳು ಇರುವದು ಕಂಡು ಬರುವದು. ಪರಂತು ಇವೆಲ್ಲವೂ ಅಶಾಶ್ವತವಿರುವವು. ಮಾಯೆಯ ಅಷ್ಟದೇಹಗಳ ನಿರಾಸ (ಪರಿಹಾರ) ಮಾಡಿದ ಕೂಡಲೇ ಆ ಎಲ್ಲ ಅಶಾಶ್ವತವು ನಾಶವಾಗುವದು. (ಇಲ್ಲದಾಗುವದು). ಮತ್ತು ಶುದ್ಧ ಬ್ರಹ್ಮವೊಂದೇ ಶಿಲುಕು ಉಳಿಯುವದು. ಈ ಪರಬ್ರಹ್ಮದ ಅನುಭವ ಬರಬೇಕಾದರೆ ಆತ್ಮನಿವೇದನದ ಅವಶ್ಯಕತೆ ಇರುವದು. ಇದರಲ್ಲಿ ಮೂರು ಪ್ರಕಾರಗಳು ಇರುವವು. ೧) ನಾನು ಮತ್ತು ನನ್ನದು ಅನ್ನುವದೆಲ್ಲವೂ ಭಗವಂತನದೇ ಇರುವದು ಅಂತಾ ಅನ್ನುವ ಭಾವನೆಯಿಂದ ಜಗತ್ತಿನಲ್ಲಿ ಬಾಳುವದು-ಬದುಕು ಸಾಗಿಸುವದು. ಇದು ಜಡ ಆತ್ಮನಿವೇದನವಾಗಿದೆ. ೨) ಅಂತರಾತ್ಮ ಜಗದೀಶನು ಸರ್ವತ್ರದಲ್ಲಿಯೂ ವ್ಯಾಪಿಸಿರುವನು. ಖರೇ ಕರ್ತಾ ಅವನೇ ಇರುವನು. ಪ್ರತಿಯೊಂದು ಜೀವವೂ ಅವನದೇ ಅಂಶವಿರುವದು. ಪ್ರತಿಯೊಂದು ವಸ್ತುವಿನಲ್ಲಿ ಘಟನೆ (ಸಂಭವಿಸುವಿಕೆ) ಯಲ್ಲಿ ಮತ್ತು ಪ್ರಾಣಿಗಳಲ್ಲಿ (ಅರ್ಥಾತ್ ಸ್ವತಃದಲ್ಲಿ ಸಹ) ಅಂತರಾತ್ಮನ ಅಸ್ತಿತ್ವದ ಸತ್ಯತೆಯ ಅರಿವು ಇದನ್ನು ಜಾಗ್ರತವಿಟ್ಟು ಬಾಳುವೆ ಸಾಗಿಸುವದು, ಚಂಚಲ ಆತ್ಮನಿವೇದನವಾಗಿದೆ. ೩) ಮಾಯಾ ನಿರ್ಮಿತ ಚಂಚಲವೆಲ್ಲವೂ ಸ್ವಪ್ನಾಕಾರವಿದ್ದು. ಇದು ಕಾಣಸುತ್ತಿದ್ದರೂ ನಿಜವಾದ ಅರ್ಥದಲ್ಲಿ ಅಲ್ಲ. ಅರ್ಥಾತ್ ನಾನು ಸಹ ಅಲ್ಲ. ಈ ರೀತಿಯಲ್ಲಿ ನಾನು ಇಲ್ಲದಾಗಿ (ನಾಶವಾಗಿ) ನಿರಾಕಾರ ವ. ನಿಶ್ಚಲ ಬ್ರಹ್ಮದೊಂದಿಗೆ ತದಾಕಾರ (ಏಕರೂಪ) ವಾಗುವದಕ್ಕೆ ನಿಶ್ಚಲ ಆತ್ಮನಿವೇದನವೆನ್ನುವರು. ಸಾಧಕರು ಜಡ ಆತ್ಮನಿವೇದನದಿಂದ ತಮ್ಮ ಸಾಧನವನ್ನು ಆರಂಭ ಮಾಡಿ ಹಂತ ಹಂತದಿಂದ ಕೊನೆಗೆ ನಿಶ್ಚಲ ಆತ್ಮನಿವೇದನದಲ್ಲಿ ಸ್ವತಃ ವಿಲೀನವಾಗುವದೇ ಇರುವದು.

### ದಶಕ ೧೨. ಸಮಾಸ ೫. ಆತ್ಮ ನಿವೇದನ (ನುಡಿ ೨೨)

**ಮೂಲ ಒಂದೇ ಒಂದಾದ ಓಂಕಾರದಿಂದ ಯಾವತ್ತೂ ಸೃಷ್ಟಿ ನಿರ್ಮಾಣವಾಯಿತು,ಅಂತಾ ಶ್ರುತಿ ತಾಯಿ (ಮಾವುಲಿ) ಹೇಳುವದು. ಓಂಕಾರವು ನಾದರೂಪವಿರುವದು. ಅಕ್ಷರಗಳು ಶಬ್ದ, ಭಾಷೆ, ಸಾಹಿತ್ಯ, ಸಂಗೀತ ಇತ್ಯಾದಿ ಎಲ್ಲವೂ ನಾದರೂಪ ಮತ್ತು ಧ್ವನಿರೂಪ ಇರುವವು. ತಾತ್ಪರ್ಯ:-ಸೃಷ್ಟಿಯಲ್ಲಿ ಅನೇಕ ಭೇದ ಕಂಡು ಬಂದರೂ ಸಹ ಅದರ ಮೂಲವು ಅಭೇದದಲ್ಲಿ ಇರುವದು:-** ಗೆರೆಗಳನ್ನು ಅಡ್ಡಾ, ತಿಡ್ಡಾ, ಸೊಟ್ಟಾ, ಪಟ್ಟಾ ತೆಗೆದರೆ ಕೊನೆಗೆ ಅದು ಅಕ್ಷರರೂಪದಲ್ಲಿ ತಯಾರ ಆಗುವದು.ಅಕ್ಷರಗಳಿಂದ ಶಬ್ದವು ತಯಾರ ಆಗುವದು. ಇಂಥ ಶಬ್ದಗಳ ಅನೇಕ ಪ್ರಕಾರಗಳನ್ನು ಏಕತ್ರಗೊಂಡರೆ ಆಗ ಶ್ಲೋಕ, ಗದ್ಯ ಮತ್ತು ಪ್ರಬಂಧ ಇತ್ಯಾದಿ ತಯಾರ ಆಗುವವು. (೧) ವೇದ, ಶಾಸ್ತ್ರ, ಪುರಾಣ,ನಾನಾಪ್ರಕಾರದ ಕಾವ್ಯ ನಿರೂಪಣ ಹೀಗೆ ಗ್ರಂಥಗಳಲ್ಲಿ ಅನೇಕ ಭೇದಗಳಿರುವವು. ಅವೆಲ್ಲವುಗಳನ್ನು ಹೇಳಲಿಕ್ಕೆ ಶಕ್ಯವಿಲ್ಲ. (೨) ಅನೇಕ ಋಷಿಗಳ ಅನೇಕ ಮತಗಳು ಇರುವವು. ಇವುಗಳ ಸಂಖ್ಯೆ ಬಹಳಷ್ಟು ದೊಡ್ಡದಿರುವದು. ಅಲ್ಲಿ ಇಲ್ಲಿ ಎಲ್ಲ ಕಡೆಗೂ ಭಾಷಾ ಮತ್ತು ಲಿಪಿ ಇವು ಉಪಲಬ್ಧವಿರುವದರಿಂದ ಗ್ರಂಥಗಳಿಗೇನೂ ಕೊರತೆ ಇಲ್ಲ. (೩) ವರ್ಗ (ಋಗ್ವೇದದಲ್ಲಿಯ ಅಧ್ಯಾಯಗಳ ಪೋಟ ಭೇದ) ಸೂಕ್ತ (ಋಗ್ವೇದ ಮಂತ್ರ) ಶ್ರುತಿ (ಉಪನಿಷತ್) ಸ್ಮೃತಿ(ಮನು, ಯಾಜ್ಞವಲ್ಕ್ಯ ಮುಂತಾದವರ ಗ್ರಂಥ) ಅಧ್ಯಾಯ, ಸರ್ಗ, ಗ್ರಂಥದ ಭಾಗ) ಸ್ತಬಕ [ಚಂಪೂ ಕಾವ್ಯದ ಭಾಗ] ಜಾತಿ, ಪ್ರಸಂಗ, ಮಾನೆ, ಸಮಾಸ.[ಪೋಥಿಯಲ್ಲಿಯ ಪ್ರಕರಣಗಳ ಹೆಸರು] ಪೋಥಿ. ಹೀಗೆ ಗ್ರಂಥ ಭೇದಾನುಸಾರವಾದ ಅನೇಕ ಹೆಸರುಗಳು ಇರುವವು. [೪] ನಾನಾ ಪ್ರಕಾರದ ಪದಗಳು, ಶ್ಲೋಕಗಳು, ಬೀರ, ಕಡಕ, ಸಾಖ್ಯಾ, ದೋಹೆ, [ಇವು ಹಿಂದೀ ಕಾವ್ಯದಲ್ಲಿಯ ಛಂದಗಳು] ಕಾವ್ಯದ ಪ್ರಕಾರಗಳು ಹೀಗಿರುವವು. [೫]

ಡಫಗಾಣೇ ಮಾಚಿಗಾಣೇ । ದಂಡಿಗಾಣೇ ಕಥಾಗಾಣೇ ।
ನಾನಾ ಮಾನೇ ನಾನಾ ಜಸನೇ । ನಾನಾ ಖೇಳ ॥೬॥

ಧ್ವನಿ ಘೋಷ ನಾದ ರೇಖಾ । ಚಹು ವಾಚಾಮಧ್ಯೇ ದೇಖಾ।
ವಾಚಾರೂಪೇ ಹಿ ಏಕಾ । ನಾನಾ ಭೇದ ॥೭॥

ಉನ್ಮೇಷ ಪರಾ ಧ್ವನಿ ಪಶ್ಯಂತೀ । ನಾದ ಮಧ್ಯಮಾ ಶಬ್ದ ಚೌಥೀ ।
ವೈಖರೀಪಾಸೂನ ಉಮಟತೀ । ನಾನಾ ಶಬ್ದರತ್ನೇ ॥೮॥

ಅಕಾರ ಉಕಾರ ಮಕಾರ । ಅರ್ಧ ಮಾತ್ರಾಚೇ ಅಂತರ ।
ಔಟಮಾತ್ರಾ ತದನಂತರ। ಬಾವನ ಮಾತೃಕಾ ॥೯॥

ನಾನಾಭೇದ ರಾಗಜ್ಞಾನ । ನೃತ್ಯಭೇದ ತಾನಮಾನ ।
ಅರ್ಥಭೇದ ತತ್ವಜ್ಞಾನ । ವಿವಂಚನಾ ॥೧೦॥

ತತ್ವಾಮಧ್ಯೇ ಮುಖ್ಯ ತತ್ವ । ತೇ ಜಾಣಾವೇ ಶುದ್ಧಸತ್ವ ।
ಅರ್ಧಮಾತ್ರಾ ಮಹತ್ತತ್ವ । ಮೂಳಮಾಯಾ ॥೧೧॥

ನಾನಾ ತತ್ವೇ ಲಹಾನಥೋರೇ । ಮಿಳೋನ ಅಷ್ಟಹಿ ಶರೀರೇ ।
ಅಷ್ಟಧಾ ಪ್ರಕೃತೀಚೇ ವಾರೇ। ನಿಘೋನ ಜಾತೇ ॥೧೨॥

ವಾರೇ ನಸ್ತಾ ಜೇ ಗಗನ । ತೈಸೇ ಪರಬ್ರಹ್ಮ ಸಘನ ।
ಅಷ್ಟದೇಹಾಚೇ ನಿರ್ಶನ । ಕರೂನ ಪಾಹಾವೇ ॥೧೩॥

ಬ್ರಹ್ಮಾಂಡಪಿಂಡ ಉಭಾರ । ಪಿಂಡಬ್ರಹ್ಮಾಂಡ ಸಂಹಾರ ।
ದೋಹಿವೇಗಳೇ ಸಾರಾಸಾರ । ವಿಮಳ ಬ್ರಹ್ಮ ॥೧೪॥

ಪದಾರ್ಥ ಜಡ ಆತ್ಮಾ ಚಂಚಳ । ವಿಮಳಬ್ರಹ್ಮ ತೇ ನಿಶ್ಚಳ ।
ವಿವರೋನ ವಿರೆ ತತ್ವಾಳ । ತದ್ರೂಪ ಹೋಯೆ ॥೧೫॥

ಪದಾರ್ಥ ಮನೇ ಕಾಯಾ ವಾಚಾ । ಮೀ ಹಾ ಅವಘಾ ಚಿ ದೇವಾಚಾ ।
ಜಡ ಆತ್ಮನಿವೇದನಾಚಾ । ವಿಚಾರ ಏಸಾ ॥೧೬॥

ಇವುಗಳಲ್ಲದೆ ಡೋಲು ಬಾರಿಸುತ್ತ ತಾಳಕ್ಕೆ ಸರಿಯಾಗಿ ಕುಣಿಯುವದು. ಇದಕ್ಕೆ ಮಾಚಿಗಾಣ ಅನ್ನುವರು. (ಇದು ದಿಂಡಿ ಹಾಡಿನ ಇನ್ನೊಂದು ಪ್ರಕಾರ). ದಿಂಡಿ ಹಾಡು, ದಮಡಿ ಹಾಡು, ಭಜನೆ, ಡಫ್‌ದಿಂದ ಹಾಡುವ ಲಾವಣಿ, ಪೊವಾಡಾ, ಭಜನೆ. ದಿಂಡಿ-ಭಜನೆ ಹಾಡು, ಕಥೆಯು ಹಾಡು, ಅನೇಕ ಗೌರವ ಪರ ಕಥಾ (ಮಾನೆ), ಅನೇಕ ಉಪ ಕಥೆಗಳು ಅನೇಕ ಆಟದವು ಹೀಗೆ ಅನೇಕ ಪ್ರಕಾರಗಳು ಗಾಯನದಲ್ಲಿ ವ ಹಾಡಿನಲ್ಲಿ ಇರುವವು. [೬] ಧ್ವನಿ, ಘೋಷ, ನಾದ, ಮತ್ತು ರೇಖಾ [ಶಬ್ದೋಚ್ಚಾರಗಳಲ್ಲಿಯ ಸ್ಪಷ್ಟತೆ],ಹೀಗೆ ನಾಲ್ಕು ಪ್ರಕಾರಗಳು ವಾಣಿಯಲ್ಲಿ ಇರುವವು. ಇನ್ನು ಮೇಲೆ ನಮ್ಮ ವಾಣಿಯ ರೂಪ ವ ಪ್ರಕಾರಗಳನ್ನು ಕೇಳಿರಿ. (೭) ಕೇವಲ ವಾಯು ರೂಪ ಅರಿವಿನ ಸ್ಫುರಣವು ಪರಾವಾಣಿ [ಮನದಲ್ಲಿ] ಇರುವದು.ಇದು ಕೇವಲ ಸ್ಫೂರ್ತಿರೂಪವಿರುವದು. ಪಶ್ಯಂತಿ ವಾಣಿಯು [ಹೃದಯದಲ್ಲಿ] ಧ್ವನಿರೂಪವಿರುವದು. ಮಧ್ಯಮಾವಾಣಿಯು [ಕಂಠದಲ್ಲಿ] ನಾದರೂಪವಿರುವದು. ಮತ್ತು ನಾಲ್ಕನೆಯದು ಶಬ್ದರೂಪವಿರುವದು. ಇದರ ಹೆಸರು ವೈಖರಿ ವಾಣಿಯು. ವೈಖರಿಯಿಂದ ಅನೇಕ ಪ್ರಕಾರದ ಸ್ಪಷ್ಟ ಶಬ್ದಗಳು ಉತ್ಪನ್ನವಾಗುವವು. ಮತ್ತು ಮುಖದಿಂದ ಹೊರಗೆ ಬರುವವು. [೮] ಅಕಾರ,ಉಕಾರ ಮತ್ತು ಮಕಾರ, ಈ ಮೂರು ಮಾತ್ರಾ ಮತ್ತು ಓಂಕಾರ ಮೇಲಿನ ಚಂದ್ರ ವ ಬಿಂದು ಇದು ಅರ್ಧ ಮಾತ್ರೆ, ಒಟ್ಟು ಮೂರುವರಿ (3॥) ಮಾತ್ರೆಗಳು ಆಗುವವು. ಈ ಓಂಕಾರದೊಳಗಿಂದಲೇ ಹದಿನಾರು ಸ್ವರ ಮತ್ತು ಮೂವತ್ತಾರು ವ್ಯಂಜನ ಒಟ್ಟು ಎಲ್ಲಾ ಕೂಡಿ ಐವತ್ತೆರಡು ಅಕ್ಷರಗಳು ನಿರ್ಮಾಣವಾಗಿರುವವು. [೯] ಅನೇಕ ಪ್ರಕಾರದ ರಾಗ ರಾಗಿಣಿಗಳಲ್ಲಿರುವಂಥ ಭೇದಗಳ ಜ್ಞಾನ, ಅನೇಕ ಪ್ರಕಾರದ ನೃತ್ಯದಲ್ಲಿಯ ಭೇದಗಳ ಜ್ಞಾನ, ಅನೇಕ ತಾಳ, ಮತ್ತು ತಾನ, [ಸ್ವರ ವಿಸ್ತಾರ] ಇವುಗಳ ಜ್ಞಾನ, ಶಬ್ದಗಳಲ್ಲಿಯ ಅನೇಕ ಪ್ರಕಾರದ ಅರ್ಥ ಬೇರೆ ಬೇರೆ ತತ್ವ ಜ್ಞಾನದ ವಿಚಾರ ವಿಮರ್ಶೆ ಈ ಎಲ್ಲವೂ ಶಬ್ದದ ನೆರವಿನಿಂದಲೇ ನಡೆಯುವವು. [೧೦] **ಶುದ್ಧ ಸತ್ವ** ಇದು ಎಲ್ಲ ತತ್ವಗಳಲ್ಲಿ ಮುಖ್ಯ ತತ್ವ ಇರುವದು. ಇದಕ್ಕೇ ಅರ್ಧ ಮಾತ್ರಾ, ಮಹತ್ ತತ್ವ ಅಥವಾ ಮೂಲಮಾಯಾ, ಅಂತಾ ಅನ್ನುವರು. [ಅಕಾರ ತಮ, ಉಕಾರ ರಜ, ಮಕಾರ ಸತ್ವ, ಅರ್ಧ ಮಾತ್ರಾ ಶುದ್ಧ ಸತ್ವ ಹೀಗೆ ಆದವು ಅನ್ನಬಹುದು]. [೧೧] ಬೇರೆ ಬೇರೆ ಪ್ರಕಾರದ ಸಣ್ಣ ದೊಡ್ಡ ತತ್ವಗಳು ಹೆಚ್ಚುಕಡಿಮೆ ಪ್ರಮಾಣದಲ್ಲಿ ಕೂಡಿಕೊಂಡು ಪಿಂಡ ಬ್ರಹ್ಮಾಂಡದ ಎಂಟು ದೇಹವಾಗಿರುತ್ತದೆ. ಐದು ಭೂತಗಳು ಮತ್ತು ಮೂರು ಗುಣಗಳು ಕೂಡಿ ಅಷ್ಟಧಾ ಪ್ರಕೃತಿ ಆಗಿರುವದು. ಇದರಲ್ಲಿ ಅರಿವಿನ ರೂಪದ ವಾಯು ಇರುವದು. ಇದು ಚಂಚಲ ಇರುವದರಿಂದ ಇಲ್ಲದಾಗುತ್ತದೆ. ಇದು ನಾಶವಂತವಿರುವದು.[೧೨] ಗಾಳಿ ಇಲ್ಲದಾಗ ಆಕಾಶವು ಹೇಗೆ ಅಗದೀ ಶುದ್ಧವಾಗಿ ಇರುವದೋ ಅವರಂತೆ ಎಂಟು ದೇಹಗಳ ನಿರಸನ[ಪರಿಹಾರ] ವಾದ ಮೇಲೆ ಕೇವಲ ಘನದಾಟ ಪರಬ್ರಹ್ಮವು ಮಾತ್ರ ಉಳಿಯುವದು ಇದರ ಅನುಭವವನ್ನು ನೀವು ಹೊಂದಿರಿ. [೧೩] ಪಿಂಡ ಬ್ರಹ್ಮಾಂಡದ ಉತ್ಪತ್ತಿ ಮತ್ತು ನಾಶ ಹೇಗೆ ಆಗುವದು? ಇದರ ಬಗ್ಗೆ ವಿವೇಕದಿಂದ ಸೂಕ್ಷ್ಮ ವಿಚಾರ ಮಾಡಬೇಕು. ಉತ್ಪತ್ತಿ ಮತ್ತು ನಾಶ ಇವೆರಡಕ್ಕೂ ಬೇರೆಯಾದ ಎಲ್ಲದರ ಸಾರ ಇರುವಂಥ ಪರಬ್ರಹ್ಮದ ಅಂದರೆ ಶುದ್ಧವಾದ ನಿರ್ಮಲ ಬ್ರಹ್ಮದ ಅನುಭವವನ್ನು ಪಡೆಯಬೇಕು[೧೪] ದೃಶ್ಯ ಪದಾರ್ಥಗಳು ಪಂಚಭೂತಾತ್ಮಕ ಇರುವದರಿಂದ ಇವು ಜಡವಿರುವವು. ಇದರ ಅಂತರ್ಯಾಮದಲ್ಲಿ ಸತ್ತಾರೂಪದಿಂದ ಇರುವಂಥ ಅಂತರಾತ್ಮಾ ಚಂಚಲವಿರುವನು. ಜಡ ವ ಚಂಚಲದ ಆಚೆಗೆ ಇರುವಂಥ ವಿಮಲ ಬ್ರಹ್ಮವು ಮಾತ್ರ ನಿಶ್ಚಲವಿರುವದು. ಈ ಮೂರು ಮೆಟ್ಟಲುಗಳ ಬಗ್ಗೆ [ಈ ಮೂರು ಪ್ರಕಾರಗಳ ಬಗ್ಗೆ] ಮೇಲಿಂದಮೇಲೆ ವಿವೇಕಯುಕ್ತ ವಿಚಾರ ಮಾಡಿದಾಗ ಜಡ ವ ಚಂಚಲ ಇವು ಕರಗಿ ಹೋಗುವವು. ಮತ್ತು ವಿಚಾರ ಮಾಡುವವನೇ ನಿಶ್ಚಲ ಪರಬ್ರಹ್ಮದಲ್ಲಿ ತತ್ಕಾಲದಲ್ಲಿ ತದ್ರೂಪವಾಗುವನು. ಏಕರೂಪ ಬ್ರಹ್ಮಸ್ವರೂಪವಾಗುವನು. [೧೫] ಜಡ, ಚಂಚಲ, ಮತ್ತು ನಿಶ್ಚಲ ಈ ಮೂರು ಪ್ರಕಾರಗಳಲ್ಲಿ ತದಾಕಾರವಾಗುವದಕ್ಕೆ ಯಾವ ಕ್ರಮವನ್ನು ಅನುಸರಿಸಬೇಕಾಗುವದು? ಇದರ ಬಗ್ಗೆ ವರ್ಣನೆ ಮಾಡುವರು. ಆತ್ಮನಿವೇದನ ಅನ್ನುವದು ಇದರ ಹೆಸರು:- ನಾನು ಮತ್ತು ನನ್ನದೆನ್ನುವದೆಲ್ಲವೂ ಅಂದರೆ ನನ್ನ ಪದಾರ್ಥ, ನನ್ನ ಸಾಹಿತ್ಯ ಅಥವಾ ನನ್ನ ವಸ್ತು, ನನ್ನ ಮನಸ್ಸು, ನನ್ನ ದೇಹ, ಮತ್ತು ನನ್ನ ವಾಚಾ, ಮಾತು ಅರ್ಥಾತ್ ನಾನು-ಮತ್ತು ನನ್ನ ಯಾವತ್ತೂ ಪ್ರಪಂಚವೂ ಸಹ ದೇವರ ಒಡೆತನದ್ದು [ಮಾಲಕೀಯದು] ಅದೆ. ನನ್ನದೆನ್ನುವದೆಲ್ಲವೂ ನಿಜವಾಗಿ ಅವನದೇ ಅದೆ. ಈ ಭಾವನೆಯನ್ನು ಇಟ್ಟುಕೊಂಡು ಬಾಳುವನು. ಇದಕ್ಕೆ ಜಡ ಆತ್ಮನಿವೇದನ ಅನ್ನುವರು. [೧೬]

ಚಂಚಳಕರ್ತಾ ತೋ ಜಗದೀಶ । ಪ್ರಾಣಿಮಾತ್ರ ತ್ಯಾಚಾ ಅಂಶ ।
ತ್ಯಾಚಾ ತೋ ಚಿ ಆಪಣಾಸ । ಠಾವ ನಾಹೀ ॥೧೭॥

ಚಂಚಳ ಆತ್ಮನಿವೇದನ । ಯಾಚೇ ಸಾಂಗಿತಲೇ ಲಕ್ಷಣ ।
ಕರ್ತಾ ದೇವ ತೋ ಆಪಣ । ಕೋಠೇಂಚಿ ನಾಹೀ ॥೧೮॥

ಚಂಚಳ ಚಳೇ ಸ್ವಪ್ನಾಕಾರ । ನಿಶ್ಚಳ ದೇವ ತೋ ನಿರಾಕಾರ ।
ಆತ್ಮನಿವೇದನಾಚಾ ಪ್ರಕಾರ । ಜಾಣಿಜೇ ಐಸಾ ॥೧೯॥

ಠಾವ ಚಿ ನಾಹೀ ಚಂಚಳಾಚಾ । ತೇಥೇ ಆಧೀ ಆಪಣ ಕೈಚಾ ।
ನಿಶ್ಚಳ ಆತ್ಮನಿವೇದನಾಚಾ । ವಿವೇಕ ಐಸಾ ॥೨೦॥

ತಿಹಿ ಪ್ರಕಾರೇ ಆಪಣ । ನಾಹೀ ನಾಹೀ ದುಜೇಪಣ ।
ಆಪಣ ನಸ್ತಾ ಮೀಪಣ । ನಾಹೀ ಚ ಕೋಠೇ ॥೨೧॥

ಪಾಹಾತಾ ಪಾಹಾತಾ ಅನುಮಾನಲೇ । ಕಳತಾ ಕಳತಾ ಕಳೋ ಆಲೇ ।
ಪಾಹಾತಾ ಅವಘೇ ಚಿ ನಿವಾಂತ ಜಾಲೇ । ಬೋಲಣೇ ಆತಾ ॥೨೨॥

ಇತಿ ಶ್ರೀ ದಾಸಬೋಧೇ ಗುರುಶಿಷ್ಯ ಸಂವಾದೇ
"ಆತ್ಮ ನಿವೇದನ" ನಾಮ ಸಮಾಸ ಪಂಚಮ ॥

ಈ ದೃಶ್ಯ ವಿಶ್ವವನ್ನು ನಡೆಸುವವನು ಅಂತರಾತ್ಮಾ ಇರುವನು. ಇವನು ಚಂಚಲನಿರುವನು. ಯಾವತ್ತೂ ಜೀವಗಳು ಇವನ ಅಂಶವಿರುವವು. ಅಂತರಾತ್ಮನ ಸತ್ತಾ ಯಾವತ್ತೂ ಕಡೆಗೆ ನಡೆಯುವದು. ಆದ್ದರಿಂದ ನಮ್ಮ "ನಾನು" ಅನ್ನುವದಕ್ಕೆ ಆಸ್ಪದವೇ ಇರುವದಿಲ್ಲ. [೧೭] ಆದ್ದರಿಂದ ಏನೆಲ್ಲವೂ ಘಟಿಸುವದೋ ಆಗುವದೋ ಅದರ ಕರ್ತಾ ಅಂತರಾತ್ಮನಿರುವನು. ದೇವ ಕರ್ತಾ ಇರುವನು. ನಮ್ಮ ಕರ್ತವ್ಯವು ಎಳ್ಳಷ್ಟೂ ನಿಜ ಅಲ್ಲ-ಅನ್ನುವ ನಿಶ್ಚಯ ದಿಂದ ಇರುವದಕ್ಕೆ ಚಂಚಲ ಆತ್ಮನಿವೇದನ ಅನ್ನುವರು. (೧೮) ಯಾವುದು ಚಂಚಲವಿರುವದೋ ಅದೆಲ್ಲವೂ ಸ್ವಪ್ನ ದಂತೆ ಇರುವದು. ನಾಶವಂತವಿರುವದು. ಆದರೆ ನಿಶ್ಚಲ ಪರಮಾತ್ಮನಾದರೋ ಕೇವಲ ನಿರಾಕಾರನಿರುವನು. ಇವ ನೊಂದಿಗೆ ತದಾಕಾರ ಹೊಂದುವದೇ ನಿಶ್ಚಲ ಆತ್ಮನಿವೇದನದ ಪ್ರಕಾರವಿರುವದು [೧೯] ಚಂಚಲವು ಮೂಲದಲ್ಲಿಯೇ ಅದು ಮಿಥ್ಯಾ ಇರುವದು. ಅಲ್ಲಿ "ನಾನು" ಅಂತಾ ಇರುವಂಥಾ ಚಂಚಲ ಜೀವ ಇರುವದು ಶಕ್ಯವಿಲ್ಲ. ಆದ್ದರಿಂದ ನಾನು ಇಲ್ಲ–ನನ್ನದೆನ್ನುವದೂ ಇಲ್ಲ. ಚಂಚಲವೂ ಇಲ್ಲ. ಕೇವಲ ಶುದ್ಧ ನಿಶ್ಚಲ ಪರಬ್ರಹ್ಮ ಒಂದೇ ಇರುವದು. ಅನ್ನುವ ಅನುಭವ ಪಡೆಯುವದೇ ನಿಶ್ಚಲ ಆತ್ಮನಿವೇದನವೆಂದು ತಿಳಿಯಬೇಕು. [೨೦] ಆತ್ಮನಿವೇದನದ ಈ ಮೂರು ಪ್ರಕಾರಗಳಲ್ಲಿ ನಮ್ಮ ನಾನು ಅನ್ನುವದಕ್ಕೆ ಸ್ಥಾನವಿಲ್ಲ. ಆತ್ಮಸ್ವರೂಪಕ್ಕಿಂತ ಬೇರೆತನವಾವುದಕ್ಕೂ ಸ್ಥಾನವಿಲ್ಲ. ನಾವು ಬೇರೆತನದಿಂದ (ಪ್ರತ್ಯೇಕವಾಗಿ) ಉಳಿಯುವದೇ ಇಲ್ಲವಾದ್ದರಿಂದ ನಾನು ಅನ್ನುವದು ಎಲ್ಲಿಯೂ ಕಾಣುವದಿಲ್ಲ. ನಾನು ಅನ್ನುವದರ ಲೋಪ ಮಾಡುವದೇ ಮುಖ್ಯವಾಗಿ ಈ ಮೂರು ಪ್ರಕಾರದ ಆತ್ಮನಿವೇದನದ ಮರ್ಮವಿರು ವದು. [೨೧] ಪರಬ್ರಹ್ಮದ ಶೋಧ ಮಾಡುತ್ತ ಮಾಡುತ್ತ ಮೊದಲಿಗೆ ಕಲ್ಪನೆಯ ವ್ಯಾಪ್ತಿ (ಪರಿಮಿತಿ) ಯಲ್ಲಿ ಸ್ವಲ್ಪ ಬಂದು ಆ ಮೇಲೆ ಸೂಕ್ಷ್ಮ ವಿವೇಕ ಮಾಡುತ್ತ ಮಾಡುತ್ತ ವಿಚಾರದಿಂದಾಗಿ ಅದರ ಸ್ವರೂಪ ಅಗದೀ ಖಾತ್ರಿಯಿಂದ ತಿಳಿಯಿತು. (ಆಕಲನವಾಯಿತು). ಮತ್ತು ಆನಂತರ ಸಾಕ್ಷಾತ್ ಅನುಭವವೂ ಆಯಿತು. ಆಗ ಮನದ ಚಡಪಡಿಕೆ, ಧಡಪಡ, ಒಮ್ಮೆಲೇ (ಏಕದಂ) ಎಲ್ಲವೂ ಶಾಂತವಾದವು. ಮತ್ತು ಮಾತು ಸ್ತಬ್ಧವಾಗಿ (ಸಮಾಧಾನ ಉಂಟಾಯಿತು) ವಿಶ್ರಾಂತಿ ಉಂಟಾಯಿತು. [೨೨]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹನ್ನೆರಡನೆಯ ದಶಕದೊಳಗಿನ
"ಆತ್ಮ ನಿವೇದನ" ಎಂಬ ಐದನೆಯ ಸಮಾಸವು ಮುಗಿದುದು.

● ●

ದಶಕ ದ್ವಾದಶ : ಸಮಾಸ ಷಷ್ಠಮ : ಸೃಷ್ಟಿಕ್ರಮನಿರೂಪಣ

॥ಶ್ರೀರಾಮ॥ ಬ್ರಹ್ಮ ನಿರ್ಮಳ ನಿಶ್ಚಳ । ಶಾಶ್ವತ ಸಾರ ಅಮಳ ವಿಮಳ ।
ಅವಕಾಶ ಘನ ಪ್ರೋಕಳ । ಗಗನಾಐಸೇ ॥೧॥

ತಯಾಸ ಕರಣೇ ನಾ ಧರಣೇ । ತಯಾಸ ಜನ್ಮ ನಾ ಮರಣೇ ।
ತೇಥೇ ಜಾಣಣೇ ನಾ ನೇಣಣೇ । ಸುನ್ಯಾತೀತ ॥೨॥

ತೇ ರಚೇನಾ ನಾ ಖಚೇನಾ । ತೇ ಹೋಯೆನಾ ನಾ ಜಾಯೆನಾ ।
ಮಾಯಾತೀತ ನಿರಂಜನಾ। ಪಾರ ಚಿ ನಾಹೀ ॥೩॥

ಪುಢೇ ಸಂಕಲ್ಪ ಉಠಿಲಾ । ಷಡಗುಣೇಶ್ವರ ಬೋಲಿಜೆ ತ್ಯಾಲಾ ।
ಅರ್ಧನಾರೀನಟೇಶ್ವರಾಲಾ । ಬೋಲಿಜೇತೇ ॥೪॥

ಸರ್ವೇಶ್ವರ ಸರ್ವಜ್ಞ । ಸಾಕ್ಷೀ ದೃಷ್ಟಾ ಜ್ಞಾನಘನ ।
ಪರೇಶ ಪರಮಾತ್ಮಾ ಜಗಜೀವನ । ಮೂಳಪುರುಷ ॥೫॥

ತೇ ಮೂಳಮಾಯಾ ಬಹುಗುಣೀ । ಅಧೋಮುಖೇ ಗುಣಕ್ಷೋಭಿಣೀ ।
ಗುಣತ್ರಯೋ ತಿಜಪಾಸೂನಿ । ನಿರ್ಮಾಣ ಜಾಲೇ ॥೬॥

# ದಶಕ ೧೨. ಸಮಾಸ ೬. ಸೃಷ್ಟಿ ಕ್ರಮ ನಿರೂಪಣ (ನುಡಿ ೩೧)

ವೇದಾಂತದ ಅನಿಸಿಕೆ ಏನಂದರೆ ಯಾವ ಯಾವುದು ನಿರ್ಮಾಣ ಆಗುವದೋ ಅದೆಲ್ಲವೂ ನಾಶವಂತ ವಿರುವದು. ಇದಲ್ಲದೆ, ಯಾವ ಕ್ರಮದಿಂದ ವಿಶ್ವ ನಿರ್ಮಾಣವಾಗುವದೋ ಅದರ ಉಲಟ (ತಿರುವು ಮುರುವು) ಕ್ರಮದಿಂದ ಇದು ನಾಶ ಹೊಂದುವದು. ಪರಬ್ರಹ್ಮವು ಅತ್ಯಂತ ಸ್ಥಿರ ಮತ್ತು ಶಾಶ್ವತವಿರುವದು. ಇದರಲ್ಲಿ ಮೊದಲು ಸಂಕಲ್ಪವು ಉದಯವಾಯಿತು. ಇದಕ್ಕೆ ಆದಿಸಂಕಲ್ಪವೆನ್ನುವರು. ಈ ಸಂಕಲ್ಪಕ್ಕೆ ಪುರುಷ ವ ಪ್ರಕೃತಿ ಅಂತಾ ಎರಡು ಅಂಗಗಳಿರುವವು.ಮೂಲ ಮಾಯೆಯಿಂದ ಗುಣ ಮಾಯೆ (ಗುಣಕ್ಷೋಭಿಣಿ)ಯು ಪ್ರಕಟವಾದಳು. ಇವಳು ಅಧೋಮುಖ ಅಂದರೆ ಸೂಕ್ಷ್ಮದಿಂದ ಸ್ಥೂಲದ ಕಡೆಗೆ ಪಸರಿಸಹತ್ತಿದಳು. ಈ ಕ್ರಿಯೆಯಲ್ಲಿ ಬ್ರಹ್ಮ, ವಿಷ್ಣು, ಮತ್ತು ಮಹೇಶ ಈ ದೇವತೆಗಳು ಉತ್ಪನ್ನರಾದರು, ಆ ಮೇಲೆ ಪಂಚಭೂತಗಳು ಸ್ಥೂಲದೆಶೆಯಲ್ಲಿ ಬಂದವು. ಇದರ ಕ್ರಮ ಹೀಗೆ ಇದೆ:-ಆಕಾಶ, ವಾಯು. ಅಗ್ನಿ, ಆಪ್, ಮತ್ತು ಪೃಥ್ವಿ ಅನಂತರ ಪೃಥ್ವಿಯಿಂದ ಔಷಧಿ ಅಥವಾ ವನಸ್ಪತಿಗಳು ಇದರಿಂದ ಅನ್ನರಸ ಮತ್ತು ಇದರಿಂದ ಎಂಭತ್ನಾಲ್ಕು ಲಕ್ಷ ಯೋನಿಯಲ್ಲಿಂದ ಜೀವ ಪ್ರಾಣಿಗಳು ಹುಟ್ಟಿದವು. ಅಗದೀ ಇದರ ಉಲಟ ಕ್ರಮದಿಂದ ವಿಶ್ವದ ಸಂಹಾರ ಉಂಟಾಗುವದು. ಪರಂತು ವಿಶ್ವ ಅವತರಿಸುವಾಗ, ಹುಟ್ಟುವಾಗ ಮತ್ತು ಸಂಹಾರ ಹೊಂದುವಾಗ ಶಾಶ್ವತ ನಿರಂಜನ ಬ್ರಹ್ಮವು ಆರಂಭದಿಂದ ಕೊನೆಯವರೆಗೂ ಹೇಗಿದ್ದಿತೋ ಹಾಗೇ ಇರುವದು. ಯಾವನು ನಿಜವಾದ ತಿಳುವಳಿಕೆಯುಳ್ಳವನಿರುವನೋ ಅಂಥ ವನು ಇಲ್ಲಿ ಅಂದರೆ ನಿರಂಜನ ಬ್ರಹ್ಮದಲ್ಲಿ ಅನುಸಂಧಾನ ಹಚ್ಚಬೇಕು. ನಾವು ಉಪಾಧಿಯಿಂದ ಸ್ವಲ್ಪ ಬಾಜೂಕ್ಕೆ ಸರಿದದ್ದಾದರೆ ಆಮೇಲೆ ಈ ಎಲ್ಲ ವಿಶ್ವದ ಹರವು (ಪ್ರಸಾರವು) ಭ್ರಮರೂಪ ಅದೆ ಅನ್ನುವದರ ಅನುಭವ ಬರುವದು. ಆದರೆ ಹೀಗೆ ಅನುಭವ ಬರುವದಕ್ಕೆ ಪುಸ್ತಕದ ಜ್ಞಾನ ಉಪಯೋಗ-ಬೀಳುವದಿಲ್ಲ. ಅದ್ದರಿಂದ ಇದನ್ನು ಗುರು ಮುಖದಿಂದಲೇ ಶ್ರವಣ ಮಾಡಬೇಕಾಗುವದು. ಮತ್ತು ಎಲ್ಲವನ್ನೂ ಸವಿಸ್ತಾರವಾಗಿ. ಸರಿಯಾಗಿ ಅವರಿಂದ ತಿಳಿದುಕೊಳ್ಳುವ ಪ್ರಯತ್ನ ಮಾಡಬೇಕು.

### ದಶಕ ೧೨. ಸಮಾಸ ೬. ಸೃಷ್ಟಿ ಕ್ರಮ ನಿರೂಪಣ (ನುಡಿ ೩೧)

**ಮೊದಲು ಪರಬ್ರಹ್ಮವು ಹೇಗಿರುವದು ಇದನ್ನು ಹೇಳುತ್ತಾರೆ:-** ಪರಬ್ರಹ್ಮವು ಅತ್ಯಂತ ನಿರ್ಮಲ ವ ನಿಶ್ಚಲವಿರುವದು. ಇದು ಶಾಶ್ವತವಾದದ್ದು. ಮತ್ತು ಮಲರಹಿತವಾದದ್ದು ಇರುವದು. ಇಷ್ಟೇ ಅಲ್ಲ, ಇದು ಸರ್ವದರ ಸಾರವೂ ಇರುವದು. ಆಕಾಶದಂತೆ ಎಲ್ಲ ಕಡೆಗೂ ಘನ (ದಟ್ಟ) ವಾಗಿ ತುಂಬಿರುವದು. ಮತ್ತು ಇದು ಅತ್ಯಂತ ಸೂಕ್ಷ್ಮವೂ ಇರುವದು. (೧) ಬ್ರಹ್ಮಕ್ಕೆ ಮಾಡುವದೂ ಇಲ್ಲ. ಮತ್ತು ಬಿಡುವದೂ ಇಲ್ಲ. ಜನ್ಮವಿಲ್ಲ ಮತ್ತು ಮರಣವಿಲ್ಲ. ಇದಕ್ಕೆ ಜ್ಞಾನವಿಲ್ಲ, ಮತ್ತು ಅಜ್ಞಾನವೂ ಇಲ್ಲ, ಆದರೆ ಇದು ಶೂನ್ಯವಲ್ಲ, ಶೂನ್ಯದ ಆಚೆಗೆ ಇದು ಇರುವದು. (೨) ಇದು ರಚಿಸುವದಿಲ್ಲ, ವಿಸ್ಖಲಿತ (ಬಿಗಡಾಯಿಸು) ವಾಗುವದಿಲ್ಲ. ಅಥವಾ ಲಯ ವಾಗುವದಿಲ್ಲ (ಸೊರಗುವದಿಲ್ಲ). ಇದು ಆಗುವದಿಲ್ಲ-ಹೋಗುವದಿಲ್ಲ. ಮತ್ತು ಇಲ್ಲದಂತೆಯೂ ಆಗುವದಿಲ್ಲ. ಮಾಯೆಯ ಆಚೆಗೆ ಮಾಯೆಯನ್ನು ದಾಟಿ ಇರುವ ಇಂಥ ಈ ಬ್ರಹ್ಮಕ್ಕೆ ಕೊನೆಯೇ ಇಲ್ಲ. (೩) ಈ ಯಾವತ್ತೂ ದೃಶ್ಯವಿಶ್ವವು ಹೇಗೆ ನಿರ್ಮಾಣವಾಯಿತು? ಇದನ್ನು ಕ್ರಮವಾಗಿ ಹೇಳುತ್ತಾರೆ:- ಇಂಥ ಈ ಪರಬ್ರಹ್ಮದಲ್ಲಿ ಸಂಕಲ್ಪ ಅಂದರೆ ಆಸೆ, ಇಚ್ಛೆಯು ಉತ್ಪವಿಸಿತು. ಈ ಅರ್ಧನಾರೀನಟೇಶ್ವರನಿಗೆ ಸಂಕಲ್ಪರೂಪದ ಸಗುಣ ಬ್ರಹ್ಮನಿಗೆ ಷಡ್ಗುಣೇಶ್ವರ ಅನ್ನುವರು. (೪) ಇದರ ಹೊರತಾಗಿ ಇವನಿಗೆ ಸರ್ವೇಶ್ವರ, ಸರ್ವಜ್ಞ, ಸಾಕ್ಷಿ, ದ್ರಷ್ಟಾ, ಜ್ಞಾನ ಘನ, ಮೂಲ ಪುರುಷ ಅನ್ನುವ ಹೆಸರುಗಳೂ ಇರುವವು. (೫) ಮೂಲ ಮಾಯೆಯು ಜಡ ಗುಣ ಇರುವಳು. ಕೆಳಗೆ ಬಾಯಿ ಮಾಡಿದ್ದರಿಂದ ಇವಳು ಗುಣಕ್ಷೋಭಿಣಿಯಾದಳು. ಸತ್ವ, ರಜ, ತಮ, ಈ ಮೂರೂ ಗುಣಗಳು ಇವಳಿಂದ ಪ್ರಕಟವಾದವು. (೬)

ಪುಢೇ ವಿಷ್ಣು ಜಾಲಾ ನಿರ್ಮಾಣ । ಜಾಣತೀಕಳಾ ಸತ್ವಗುಣ ।
ಜೋ ಕರಿತಾಹೆ ಪಾಳಣ । ತ್ರೈಲೋಕ್ಯಾಚೇ ॥೭॥
ಪುಢೇ ಜಾಣೀವನೆಣೀವಮಿಶ್ರಿತ । ಬ್ರಹ್ಮಾ ಜಾಣಾವಾ ನೇಮಸ್ತ ।
ತ್ಯಾಚ್ಯಾ ಗುಣೇ ಉತ್ಪತ್ತಿ ಹೋತ । ಭುವನ ತ್ರೈ ॥೮॥
ಪುಢೇ ರುದ್ರ ತಮೋಗುಣ । ಸಕಳ ಸಂಹಾರಾಚೇ ಕಾರಣ ।
ಸಕಳ ಕಾಂಹೀ ಕರ್ತೇಪಣ । ತೇಥೇ ಚಿ ಆಲೇ ॥೯॥
ತೇಥೂನ ಪುಢೇ ಪಂಚಭೂತೇ । ಪಾವಲೀ ಪಷ್ಟ ದಶೇತೇ ।
ಅಷ್ಟಧಾ ಪ್ರಕೃತೀಚೇ ಸ್ವರೂಪ ತೇ । ಮುಳೀ ಚ ಆಹೆ ॥೧೦॥
ನಿಶ್ಚಳೀ ಜಾಲೇ ಚಳಣ । ತೇ ಚಿ ವಾಯೋಚೇ ಲಕ್ಷಣ ।
ಪಂಚಭೂತೇ ಆಣಿ ತ್ರಿಗುಣ । ಸೂಕ್ಷ್ಮ ಅಷ್ಟಧಾ ॥೧೧॥
ಆಕಾಶ ಮ್ಹಣಿಜೆ ಅಂತರಾತ್ಮಾ । ಪ್ರತ್ಯಯೋ ಪಹಾವಾ ಮಹಿಮಾ ।
ತ್ಯಾ ಆಕಾಶಾಪಾಸೂನ ಜನ್ಮಾ । ವಾಯೋ ಆಲಾ ॥೧೨॥
ತಯಾ ವಾಯೋಚ್ಯಾ ದೋನೀ ಝುಳುಕಾ । ಉಷ್ಣ ಸೀತಳ ಏಕಾ ।
ಸೀತಳಾಪಾಸೂನ ತಾರಾ ಮಯಂಕಾ । ಜನ್ಮ ಜಾಲಾ ॥೧೩॥
ಉಷ್ಣಾಪಾಸೂನ ರವಿ ವನ್ಹೀ । ವಿದ್ಯುಲ್ಯತಾ ಆದಿಕರೂನಿ ।
ಸೀತಳ ಉಷ್ಣ ಮಿಳೋನಿ । ತೇಜ ಜಾಣಾವೇ ॥೧೪॥
ತಯಾ ತೇಜಾಪಾಸೂನ ಜಾಲೇ ಆಪ । ಆಪ ಆಳೋನ ಪೃಥ್ವೀಚೇರೂಪ ।
ಪುಢೇ ಔಷಧೀ ಅಮೂಪ । ನಿರ್ಮಾಣ ಜಾಲ್ಯಾ ॥೧೫॥
ಔಷಧೀಪಾಸೂನ ನಾನಾ ರಸ । ನಾನಾ ಬೀಜ ಅನ್ನರಸ ।
ಚೌರ್‍ಯಾಸಿ ಲಕ್ಷ ಯೋನೀಚಾ ವಾಸ । ಭೂಮಂಡಳೀ ॥೧೬॥
ಏಸೀ ಜಾಲೀ ಸೃಷ್ಟಿರಚನಾ । ವಿಚಾರ ಆಣಿಲಾ ಪಾಹಿಜೆ ಮನಾ ।
ಪ್ರತ್ಯಯೇವಿಣ ಅನುಮಾನಾ । ಪಾತ್ರ ಹೋಇಜೆ ॥೧೭॥
ಏಸಾ ಜಾಲಾ ಆಕಾರ । ಯೇಣೇ ಚಿ ನ್ಯಾಯೇ ಸಂಹಾರ ।
ಸಾರಾಸಾರ ವಿಚಾರ । ಯಾಸ ಬೋಲಿಜೆ ॥೧೮॥
ಜೇ ಜೇ ಜೆಥೂನ ನಿರ್ಮಾಣ ಜಾಲೇ । ತೇ ತೇ ತೇಥೇ ಚಿ ನಿಮಾಲೇ ।
ಯೇಣೇ ಚಿ ನ್ಯಾಯೇ ಸಂಹಾರಲೇ । ಮಹಾಪ್ರಳಈ ॥೧೯॥
ಆದ್ಯ ಮಧ್ಯ ಅವಸಾನ । ಜೇ ಶಾಶ್ವತ ನಿರಂಜನ ।
ತೇಥೇ ಲಾವಾವೇ ಅನುಸಂಧಾನ । ಜಾಣತೇ ಪುರುಷೀ ॥೨೦॥

ಮುಂದೆ (ಆಮೇಲೆ) ವಿಷ್ಣುವು ಜನ್ಮಕ್ಕೆ ಬಂದನು. ವಿಷ್ಣು ಅಂದರೆ ಸತ್ವಗುಣ, ಇದು ಅರಿವಿನ ರೂಪವು, ಇಂಥ ವಿಷ್ಣುವು ತ್ರಿಲೋಕಗಳನ್ನು ಪಾಲನಮಾಡುವನು. [೭] ಅನಂತರ ಬ್ರಹ್ಮದೇವ ಜನ್ಮ ತಳೆದನು. ಇವನಲ್ಲಿ ಅರಿವು ಮತ್ತು ಮರೆವು ಇವು ಮಿಶ್ರವಿರುವವು. ಇದನ್ನು ಖಾತ್ರಿಯಿಂದ ತಿಳಿಯಿರಿ. ಇವನು ರಜೋಗುಣಿಯು. ಇವನ ಕರ್ತೃತ್ವದಿಂದ ಮೂರು ಲೋಕಗಳು ಉತ್ಪನ್ನವಾದವು. [೮] ಮುಂದೆ ರುದ್ರ ಜನ್ಮತಳೆದನು. ಇವನು ತಮೋಗುಣಿ ಇರುವನು. ಯಾವತ್ತೂ ಸಂಹಾರಗಳಿಗೆ [ಒಡೆಯನು] ಮೂಲಕಾರಣನು. ವಿಶ್ವದಲ್ಲಿಯ ಯಾವತ್ತೂ ಸ್ಥೂಲಜಗತ್ತಿನ ಕರ್ತೃತ್ವತನವೆಲ್ಲ ರುದ್ರನ ಹತ್ತಿರ ಇರುವದು. [೯] ಅನಂತರ ಪಂಚಭೂತಗಳು ವ್ಯಕ್ತಗೊಂಡವು. ಅವ್ಯಕ್ತರೂಪದಿಂದ ಇವು ಅಷ್ಟಧಾ ಪ್ರಕೃತಿಯಲ್ಲಿ ಇದ್ದೇ ಇದ್ದವು. ಅಷ್ಟಧಾ ಪ್ರಕೃತಿಯ ಮೂಲಸ್ವರೂಪವು ಪಂಚಭೂತಾತ್ಮಕವೇ ಇರುವದು. [೧೦] ನಿಶ್ಚಲ ಬ್ರಹ್ಮದಲ್ಲಿ ಯಾವ ಚಲನವಾಯಿತೋ ಅದು ವಾಯುವಿನ ಲಕ್ಷಣವು. ಐದು ಭೂತಗಳು ಮತ್ತು ಮೂರು ಗುಣಗಳು ಕೂಡಿ ಆದ ಅಷ್ಟಧಾ ಪ್ರಕೃತಿಯು ಪ್ರಥಮದಲ್ಲಿ ಸೂಕ್ಷ್ಮ ಇರುವದು. [೧೧] ಆಕಾಶ ಅಂದರೆ ಅಂತರಾತ್ಮಾ ಇರುವದು. ಇದು ಎಷ್ಟು ದೊಡ್ಡದಿರುವದೆಂಬುದನ್ನು ಅನುಭವದಿಂದ ನೋಡಬೇಕು. ಈ ಆಕಾಶದಿಂದ ವಾಯು ಆದನು. [೧೨] ವಾಯುವಿನಲ್ಲಿ ಉಷ್ಣ ಹಾಗೂ ತಣ್ಣಗೆ ಹೀಗೆ ಎರಡು ಪ್ರಕಾರಗಳು ಇರುವವು. ತಣ್ಣಗಿನ ವಾಯುವಿನಿಂದ ಚಂದ್ರ ಮತ್ತು ನಕ್ಷತ್ರಗಳು ಜನ್ಮ ಹೊಂದಿದವು. [೧೩] ಉಷ್ಣ ವಾಯುವಿನಿಂದ ಸೂರ್ಯ, ಅಗ್ನಿ, ವಿದ್ಯುತ್, ಇತ್ಯಾದಿ ಉತ್ಪನ್ನವಾದವು. ತೇಜದಲ್ಲಿ ಸಹ ತಂಪು (ತಣ್ಣಗೆ) ಮತ್ತು ಉಷ್ಣ ಹೀಗೆ ಎರಡು ಪ್ರಕಾರಗಳಿರುವವು. [೧೪] ಈ ತೇಜದಿಂದ ನೀರು(ಜಲ)ಉಂಟಾಯಿತು. ನೀರು ಗಟ್ಟಿಯಾಗಿ ಪೃಥ್ವಿ ಆಯಿತು. ಪೃಥ್ವಿಯ ಮೇಲೆ ಅಸಂಖ್ಯ ವನಸ್ಪತಿಗಳು [ಔಷಧ] ಹುಟ್ಟಿದವು. (೧೫) ವನಸ್ಪತಿಯಿಂದ ಅನೇಕ ಪ್ರಕಾರದ ರಸಗಳು, ಬೀಜಗಳು ಮತ್ತು ಅನ್ನರಸ ಇವೆಲ್ಲ ಉತ್ಪನ್ನವಾದವು. ಪೃಥ್ವಿಯ ಮೇಲಿನ ಎಂಭತ್ನಾಲ್ಕು ಲಕ್ಷ ಜೀವರಾಶಿಗಳು ಅನ್ನ ರಸದಿಂದಲೇ ಬದುಕುವವು. [೧೬] ಈ ಕ್ರಮದಿಂದ ಯಾವತ್ತೂ ವಿಶ್ವದ ರಚನೆಯಾಯಿತು. ಸಾಧಕನು ಈ ರಚನಾ ಕ್ರಮಗಳನ್ನು ಚನ್ನಾಗಿ ವಿಚಾರ ಮಾಡಬೇಕು. ಮನುಷ್ಯನಿಗೆ ಖರೇ ಅನುಭವ ಇಲ್ಲದಿದ್ದರೆ ಸುಮ್ಮನೇ ಏನಾದರೂ ಕಲ್ಪನೆ ಮಾಡುತ್ತ ಕೂಡ್ರಬೇಕಾಗುವದು.[೧೭] **ಈಗ ಸ್ವಲ್ಪದರಲ್ಲಿ ವಿಶ್ವದ ಸಂಹಾರದ ಬಗ್ಗೆ ಹೇಳುವರು:–** ಹೀಗೆ ಮೆಟ್ಟಲು ಮೆಟ್ಟಲಾಗಿ ವಿಶ್ವವು ಆಕಾರಕ್ಕೆ ಬಂದಿತು. ಇದೇ ಪದ್ಧತಿಯಿಂದ ಇದರ (ವಿಶ್ವದ) ಸಂಹಾರ ಸಹ ಆಗುವದು. ಆಕಾರ [ಉತ್ಪತ್ತಿ]ಮತ್ತು ಸಂಹಾರ ಇದರ ಬಗ್ಗೆ ಚನ್ನಾಗಿ ವಿಚಾರ ಮಾಡುವದಕ್ಕೆ ಸಾರಾಸಾರ ವಿಚಾರ ಅನ್ನುವರು.[೧೮] ಯಾವುದು ಎಲ್ಲಿಂದ ಜನ್ಮಕ್ಕೆ ಬರುವದೋ ಅದು ಅದರಲ್ಲಿಯೇ ಪುನಃ ವಿಲೀನವಾಗಿ ಹೋಗುವದು. ಇದೇ ಪದ್ಧತಿಯಿಂದ ಮಹಾ ಪ್ರಲಯಕಾಲದಲ್ಲಿ ಸಹ ಸರ್ವವಿಶ್ವದ ಸಂಹಾರ ಆಗುವದು. [೧೯] ಈ ಎಲ್ಲ ಪರಿಸ್ಥಿತಿಗಳಲ್ಲಿಯೂ ಸಹ ಶಾಶ್ವತ ಬ್ರಹ್ಮವು ಮಾತ್ರ ಹೇಗಿತ್ತೋ ಹಾಗೇ [ಉಳಿಯುವದು] ಇರುವದು. ಆಗುವದು ಮತ್ತು ಹೋಗುವದು. ಅರ್ಥಾತ್ ಆಗು ಹೋಗುಗಳು ಉಪಾಧಿಮಯ ಇರುವವು. ತಾತ್ಪೂರ್ತಿಕ ಮತ್ತು ಭ್ರಮಾರೂಪವಿರುವವು. ಇದನ್ನೆಲ್ಲ ಗುರುತಿಸಿ ತಿಳಿದು ಶಾಶ್ವತ ವಸ್ತುವಿನ ಅನುಸಂಧಾನ ಹೊಂದಬೇಕು. ಅಥವಾ ಇಡಬೇಕು. ಇದನ್ನು ಸಾಧಿಸಲಿಕ್ಕೆ ಸೂಕ್ಷ್ಮ ವಿವೇಕ ಬೇಕಾಗುವದು. ಇದು ಕೇವಲ ಗ್ರಂಥವಾಚನದಿಂದ ಬರುವದಿಲ್ಲ. ಇದು ಬರಬೇಕಾದರೆ ಸದ್ಗುರುವಿಗೆ ಶರಣು ಹೋಗಬೇಕು:– ವಿಶ್ವರಚನೆಯ ಆರಂಭದಲ್ಲಿ, ಮಧ್ಯದಲ್ಲಿ, ಕೊನೆಯಲ್ಲಿ ಶಾಶ್ವತ ಬ್ರಹ್ಮವು ಅತ್ಯಂತ ಶುದ್ಧ [ಮಲರಹಿತ] ಇರುವದು. ತಿಳುವಳಿಕೆಯುಳ್ಳ ಪುರುಷನು ಈ ಶಾಶ್ವತ ಬ್ರಹ್ಮದ ಬಗ್ಗೆ ಏಕಾಗ್ರ ಮನದಿಂದ ಅಖಂಡವಾಗಿ ಚಿಂತನ ಮಾಡಬೇಕು. [೨೦]

ಹೋತ ಜಾತೇ ನಾನಾ ರಚನಾ । ಪರೀ ತೇ ಕಾಂಹೀ ಚ ತಗೇನಾ ।
ಸಾರಾಸಾರ ವಿಚಾರಣಾ । ಯಾಕಾರಣೇ ॥೨೧॥

ದೃಷ್ಟಾ ಸಾಕ್ಷೀ ಅಂತರಾತ್ಮಾ । ಸರ್ವತ್ರ ಬೋಲತೀ ಮಹಿಮಾ ।
ಪರೀ ಹೇ ಸರ್ವಸಾಕ್ಷಿಣೀ ಅವಸ್ಥಾ ಮಾ। ಪ್ರತ್ಯಯೇ ಪಾಹಾವೀ ॥೨೨॥

ಮೂಳಾಪಾಸೂನ ಸೇವಟವರೀ । ಅವಘೀ ಮಾಯೇಚೀ ಭರೋವರೀ ।
ನಾನಾ ವಿದ್ಯಾ ಕಳಾಕುಸರೀ । ತಯೇಮಧೇ ॥೨೩॥

ಜೋ ಉಪಾಧೀಚಾ ಸೇವಟ ಪಾವೇಲ । ತ್ಯಾಸ ಭ್ರಮ ಐಸೇ ವಾಟೇಲ ।
ಜೋ ಉಪಾಧೀಮಧ್ಯೇ ಆಡಕೇಲ । ತ್ಯಾಸ ಕಾಢಿತಾ ಕವಣ ॥೨೪॥

ವಿವೇಕಪ್ರತ್ಯಯಾಚೀ ಕಾಮೇ । ಕೈಸೀ ಘಡತೀಲ ಅನುಮಾನಭ್ರಮೇ ।
ಸಾರಾಸಾರ ವಿಚಾರಾಚೇನ ಸಂಭ್ರಮೇ । ಪಾವಿಜೆ ಬ್ರಹ್ಮ ॥೨೫॥

ಬ್ರಹ್ಮಾಂಡೀಚೇ ಮಹಾಕಾರಣ । ತೇ ಮೂಳಮಾಯಾ ಜಾಣ ।
ಅಪೂರ್ಣಾಸ ಮ್ಹಣತೀ ಬ್ರಹ್ಮಪೂರ್ಣ । ವಿವೇಕಹೀನ ॥೨೬॥

ಸೃಷ್ಟೀಮಧೇ ಬಹುಜನ । ಯೇಕ ಭೋಗಿತೀ ನೃಪಾಸನ ।
ಯೇಕ ವಿಷ್ಠಾ ಟಾಕಿತೀ ಜಾಣ । ಪ್ರತ್ಯೇಕ್ಷ ಆತಾ ॥೨೭॥

ಐಸೇ ಉದಂಡ ಲೋಕ ಅಸತೀ । ಆಪಣಾಸ ಥೋರ ಮ್ಹಣತೀ ।
ಪರೀ ತೇ ವಿವೇಕೀ ಜಾಣತೀ । ಸಕಳ ಕಾಹೀ ॥೨೮॥

ಐಸಾ ಆಹೆ ಸಮಾಚಾರ । ಕಾರಣ ಪಾಹಿಜೆ ವಿಚಾರ ।
ಬಹುತಾಚ್ಯಾ ಬೋಲೇ ಹಾ ಸಂಸಾರ । ನಾಸೂ ನಯೆ ॥೨೯॥

ಪುಸ್ತಕ ಜ್ಞಾನೇ ನಿಶ್ಚಯೆ ಧರಣೇ । ತರೀ ಗುರು ಕಾಸಯಾ ಕರಣೇ ।
ಯಾಕಾರಣೇ ವಿವರಣೇ । ಆಪುಲ್ಯಾ ಪ್ರತ್ಯಯೇ ॥೩೦॥

ಜೋ ಬಹುತಾಂಚ್ಯಾ ಬೋಲೇ ಲಾಗಲಾ।ತೋ ನೇಮಸ್ತ ಜಾಣಾವಾ ಬುಡಾಲಾ।
ಯೇಕ ಸಾಹೇಬ ನಸ್ತಾ ಕೋಣಾಲಾ। ಮುಶ್ಯಾರಾ ಮಾಗಾವಾ ॥೩೧॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
''ಸೃಷ್ಟಿಕ್ರಮ ನಿರೂಪಣ'' ನಾಮ ಸಮಾಸ ಷಷ್ಟಮ ॥

ಈ ವಿಶ್ವದಲ್ಲಿ ಅನಂತ ತರದ ರಚನೆಗಳು ಆಗುವವು. ಮತ್ತು ಹೋಗುವವು. ಯಾವುದೇ ಸೃಷ್ಟಿ ರಚನೆಯು [ಶಾಶ್ವತ] ಕಾಯಂ ಆಗಿ ಉಳಿಯುವದಿಲ್ಲ. ಆದ್ದರಿಂದ ಸಾರ ಯಾವುದು ? ಮತ್ತು ಅಸಾರ ಯಾವುದು ? ಇದರ ವಿಚಾರ ಮಾಡಬೇಕಾಗುವದು. [೨೧] ಅಂತರಾತ್ಮಾ ಇವನು ಕೇವಲ ಮಾಯೆಯ ದೃಷ್ಟಾ ಇರುವನು.ಸಾಕ್ಷಿ ಇರುವನು. ಮಾಯಾಮೂಲನಿರುವನು. ಹೀಗೆಂದು ಅಂತರಾತ್ಮನ ಮಹಿಮೆಯನ್ನು ಯಾವತ್ತೂ ಜನ ಹೇಳುವರು. ಆದರೆ ಇವನೇನೂ ಆ ಶುದ್ಧ ಬ್ರಹ್ಮವಲ್ಲ. ಅನ್ನುವದರ [ಖಾತ್ರಿ] ಅನುಭವ ಬರುವದಕ್ಕಾಗಿ ಸರ್ವಸಾಕ್ಷಿಣೀ ಅವಸ್ಥೆಯನ್ನು, ಅನುಭವವನ್ನು ಸ್ವತಃ ಪಡೆಯಬೇಕು. (೨೨) ವಿಶ್ವದ ಅಗದೀ ಮೂಲದಿಂದ ಕೊನೆಯವರೆಗೂ ಎಲ್ಲವೂ ಮಾಯೆಯದೇ ವಿಸ್ತಾರವಿರುವದು. (ಆಟವಿರುವದು). ಇದರೊಳಗೆ ವಿದ್ಯಾ, ಕಲಾ, ವ ಕೌಶಲ್ಯಗಳೆಲ್ಲವೂ ತುಂಬಿರುವವು. ಇವೆಲ್ಲವೂ ವಿಶ್ವದಲ್ಲಿ ಕಾಣಿಸುವವು. (೨೩) ಆದರೆ ಇದೆಲ್ಲವೂ ಉಪಾಧಿರೂಪವಿರುವದು. (ವಿಕಾರ ರೂಪ, ಮಾಯಾ ರೂಪ ಇರುವದು). ಇದರಿಂದ ಶುದ್ಧ ಬ್ರಹ್ಮದ ಮೇಲೆ ಮುಸುಕು (ಮರೆ, ಪಡದೆ,(ಆವರಣ) ಬೀಳುವದು. ಯಾರಾದರೂ ವಿವೇಕದಿಂದ ಉಪಾಧಿಯ ಕೊನೆಯನ್ನು ಮುಟ್ಟಿದರೆ ಅವರಿಗೆ ಈ ವಿಶ್ವ ವಿಸ್ತಾರದ ಪ್ರಸಾರವು ಕೇವಲ ಭ್ರಮ ಇರುವದೆಂದು ತಿಳಿಯುವದು. ಆದರೆ ಯಾರು ಈಉಪಾಧಿಯಲ್ಲಿ ಸಿಕ್ಕಿಹಾಕಿಕೊಳ್ಳುವರೋ, ಅದರಲ್ಲಿಯೇ ಉಳಿಯುವರೋ ಅವರು ಇದೆಲ್ಲವೂ (ಉಪಾಧಿಯು) ಖರೇ ಇರುವದೆಂದು ತಿಳಿದು ನಡೆಯುವರು. ಇಂಥವರನ್ನು ಈ ಉಪಾಧಿ ಜಾಲದ ತೊಡಕಿನಿಂದ ಹೊರಗೆ ತೆಗೆಯುವದು ಬಹಳ ಕಠಿಣವಿರುವದು. (೨೪) ವಿವೇಕವನ್ನು ಬೆಳೆಸಿಕೊಂಡು ಪ್ರತ್ಯಕ್ಷ ಅನುಭವ ಹೊಂದುವ ಕೆಲಸ ಯಾವದಿರುವದೋ ಅದು ಕೇವಲ ಭ್ರಮಾತ್ಮಕ ಕಲ್ಪನಾ ಮಾಡುವದರಿಂದ ಸಾಧಿಸುವದಿಲ್ಲ. ಸಾರಾಸಾರ ವಿಚಾರದ ಸಾಮರ್ಥ್ಯದಿಂದಲೇ ಪರಬ್ರಹ್ಮದ ಪ್ರಾಪ್ತಿ ಆಗುತ್ತದೆ. (೨೫) ಬ್ರಹ್ಮಾಂಡದ ಮಹಾಕಾರಣ ದೇಹಕ್ಕೆ ಮೂಲ ಮಾಯಾ ಅನ್ನುವರು, ಈ ದೇಹವು ಅಪೂರ್ಣವೇ ಇರುವದು, ಆದರೆ ಈ ಅಪೂರ್ಣಕ್ಕೆ ವಿವೇಕಹೀನ ಜನರು ಪೂರ್ಣ ಬ್ರಹ್ಮ ಅಂದರೆ ಇದೇ ಇರುವದು ಅಂತಾ ಅನ್ನುವರು. (೨೬) ಜಗತ್ತಿನಲ್ಲಿ ಬಹಳಷ್ಟು ಜನರು ಇರುವರು. ಇವರಲ್ಲಿ ಕೆಲವರು ಸಿಂಹಾಸನದ ಭೋಗ ಪಡೆಯುವರು. ಆದರೆ ಇತರ ಕೆಲವು ಜನ ಹೊಲಸು ಕಿವುಚುತ್ತ ಕೂಡುವರು. ಇದು ಪ್ರತ್ಯಕ್ಷ ಕಾಣುವ ಮಾತಾಗಿದೆ. ವಿವೇಕಹೀನ ಜನರು ಎರಡನೇ ಪ್ರಕಾರದವರೆಂದು ತಿಳಿಯಬೇಕು. [೨೭] ಸ್ವತಃ ತಾನೇ ದೊಡ್ಡವನೆಂದು ಅಂದುಕೊಳ್ಳುವ ಜನರು ಜಗತ್ತಿನಲ್ಲಿ ಬಹಳಷ್ಟು ಇರುವರು. ಪರಂತು ವಿವೇಕವುಳ್ಳ ಬುದ್ಧಿವಂತ ಪುರುಷ ಖರೇ ದೊಡ್ಡವರಾರು ಅನ್ನುವದನ್ನು ತಿಳಿದಿರುವರು, ನೀವೂ ತಿಳಿದುಕೊಳ್ಳಿರಿ. (೨೮) ಈ ವಿಷಯದ ಕಥೆ ಇಷ್ಟಿರುವದು. ಹೇಳುವದಕ್ಕೆ ಕಾರಣವೇನಂದರೆ ಮನುಷ್ಯನಿಗೆ ವಿವೇಕಯುಕ್ತ ಸೂಕ್ಷ್ಮ ವಿಚಾರವು ಅವಶ್ಯವಾಗಿ ಬೇಕು. ಬಹು ಜನರ ಮಾತು ಕೇಳಿ ಅವರ ನಾದಿಗೆ ಬಿದ್ದು ನಿಮ್ಮ ಸಂಸಾರವನ್ನು ಹಾಳು ಮಾಡಿಕೊಳ್ಳಬೇಡಿರಿ. ಘೋಟಾಳೆಯಲ್ಲಿ ಹಾಕಬೇಡಿರಿ(೨೯) ಅನುಭವವಿಲ್ಲದೆ ಪರಮಾತ್ಮ ಸ್ವರೂಪದ ನಿಶ್ಚಯವಾಗುವಂತಿದ್ದರೆ ಸದ್ಗುರುವಿಗೆ ಶರಣು ಹೋಗಿ ಗುರು ಮಾಡಿಕೊಳ್ಳುವ ಅವಶ್ಯಕತೆ ಇರುತ್ತಿರಲಿಲ್ಲ. ಆದರೆ ಇಲ್ಲಿ ಪುಸ್ತಕೀಯ ಜ್ಞಾನ ಸುಳ್ಳು ಬೀಳುವದು. ಆದ್ದರಿಂದ ಸ್ವತಃ ಅನುಭವ ಪಡೆಯಿರಿ. ಮತ್ತು ಆ ಮೇಲೆ ಸೃಷ್ಟಿ ಕ್ರಮದ ಬಗ್ಗೆ ಸಾರಾಸಾರ ವಿಚಾರ ಮಾಡಿರಿ. ನಿಮ್ಮ ವಿವೇಕವು ನಿಮ್ಮ ಪ್ರತೀತಿಯ (ಅನುಭವದ) ಮೇಲೆ ಆಧರಿಸಬೇಕು. [೩೦] ಯಾವನು ಯಾರ ಯಾರದೋ ನಾದಿಗೆ ಬಿದ್ದು ಅಂಥವರ ಬೆನ್ನು ಹತ್ತುವನೋ ಅವನು ಖಾತ್ರಿಯಿಂದ ಮುಳುಗುವನೆಂದು ಪಕ್ಕಾ ತಿಳಿಯಿರಿ. ಪೂರ್ಣ ವಿಶ್ವಾಸದಿಂದ ಸದ್ಗುರುವಿಗೆ ಶರಣಾಗಿರಿ. ಯಾವನಿಗೆ ಒಬ್ಬನೇ ಮಾಲಕನಿಲ್ಲವೋ ಅವನಿಗೆ ನಿರ್ದಿಷ್ಟವಾಗಿ ಯಾರ ಕಡೆಗೂ ದುಡಿತದ ಪ್ರತಿಫಲ [ಪಗಾರ] ಬೇಡಲಿಕ್ಕೆ ಬರುವದಿಲ್ಲ. [೩೧]

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಹನ್ನೆರಡನೆಯ ದಶಕದ
"ಸೃಷ್ಟಿ ಕ್ರಮ" ಎಂಬ ಆರನೆಯ ಸಮಾಸವು ಮುಗಿದುದು

**ದಶಕ ದ್ವಾದಶ : ಸಮಾಸ ಸಪ್ತಮ : ವಿಷಯತ್ಯಾಗ ನಿರೂಪಣ**

॥ಶ್ರೀರಾಮ॥ ನ್ಯಾಯೇ ನಿಷ್ಠುರ ಬೋಲಣೇ। ಬಹುತಾಸ ಮಾಟೇ ಕಂಟಾಳವಾಣೇ।
ಮಳಮಳ ಕರಿತಾ ಜೇವಣೇ । ವಿಹಿತ ನವ್ಹೆ ॥೧॥

ಬಹುತೀ ವಿಷಯ ನಿಂದಿಲೇ । ಆಣಿ ತೇ ಚಿ ಸೇವಿತ ಗೇಲೇ ।
ವಿಷಯತ್ಯಾಗೇ ದೇಹ ಚಾಲೇ । ಹೇ ತೋ ಘಡೇನಾ ॥೨॥

## ದಶಕ ೧೨. ಸಮಾಸ ೭. ವಿಷಯ ತ್ಯಾಗ (ನುಡಿ ೪೧)

ಈ ಸಮಾಸದ ಆರಂಭವು ಒಂದು ಮಹತ್ವದ ಪ್ರಶ್ನೆಯಿಂದ ಆಗುವದು. ಆ ಪ್ರಶ್ನೆ ಯಾವುದೆಂದರೆ ವಿಷಯದ ಬಗ್ಗೆ ಅಂದರೆ ಇಂದ್ರಿಯ ಸುಖದ ಸಂಪೂರ್ಣ ತ್ಯಾಗ ಮಾಡದ ಹೊರತು ಪರಮಾರ್ಥ ಸಾಧಿಸುವದಿಲ್ಲವೆಂಬುದು ನಿಜವೇ ಇದ್ದದ್ದಾದರೆ ಪ್ರಾಪಂಚಿಕರಿಗೆ ಪರಮಾರ್ಥ ಸಾಧಿಸಲು ಹೇಗೆ ಶಕ್ಯವಾಗುವದು? ಮತ್ತು ನೀವು ಪ್ರಾಪಂಚಿಕರಿಗೆ ಪರಮಾರ್ಥ ಮಾಡಲಿಕ್ಕೆ (ಸಾಧಿಸಲಿಕ್ಕೆ) ಹೇಳುವಿರಿ? ಇದು ಹೇಗೆ ಶಕ್ಯವಾಗುವದು? ಶ್ರೀ ಸಮರ್ಥರು ತಮ್ಮ ನಿತ್ಯದ ವಿಧಾಯಕ ದೃಷ್ಟಿಕೋನದಿಂದ ಈ ಪ್ರಶ್ನೆಗೆ ಸುರೇಖವಾದ ಮತ್ತು ಸರ್ವಸಾಮಾನ್ಯವಾದ ಮತ್ತು ತರ್ಕ ಶುದ್ಧವಾದ ಉತ್ತರ ಕೊಡುವರು. ಅದು ಹೀಗಿದೆ:- ವಿಷಯ ತ್ಯಾಗದ ಹೊರತು ಅಥವಾ ವೈರಾಗ್ಯವಿಲ್ಲದ ಹೊರತು ಯಾರಿಗೂ ಪರಮಾರ್ಥ ಸಾಧಿಸುವದಿಲ್ಲ. ಇದು ನಿರ್ವಿವಾದವಾದದ್ದೇ ಇರುವದು. ಪೂರ್ವ ಕಾಲದ ಅಥವಾ ಹಿಂದಿನ ದೊಡ್ಡ ದೊಡ್ಡ ಜನರು, ಜ್ಞಾನಿ ಜನರು ಅತ್ಯಂತ ವೈರಾಗ್ಯವಂತರೇ ಇದ್ದರೆಂಬ ಮಾತು ಸುಳ್ಳಲ್ಲ. ಆದರೆ ವಿಷಯ ತ್ಯಾಗ ಅಂದರೇನು? ಅನ್ನುವದನ್ನು ಸರಿಯಾಗಿ ತಿಳಿದುಕೊಳ್ಳುವದು ಇಲ್ಲಿ ಬಹಳ ಮುಖ್ಯವಾದದ್ದಿರುವದು. ಪ್ರಾಪಂಚಿಕನಿಗೆ ಅಥವಾ ಪರಮಾರ್ಥ ಸಾಧಕನಿಗೆ ತಿನ್ನುಣ್ಣುವದು, ಮಲಗುವದು, ಕೂಡುವದು, ಹೋಗುವದು, ಬರುವದು, ಇತ್ಯಾದಿ ದೇಹ ಧರ್ಮಗಳನ್ನು ಸರಿಯಾಗಿ ಮಾಡಬೇಕಾಗುವದು. ಇವನ್ನು ಮಾಡದೇ ಯಾರಿಗೂ ಬಾಳಿ ಬದುಕಲಿಕ್ಕೆ ಸಾಧ್ಯವಿಲ್ಲ. ಆದರೆ ಪ್ರಾಪಂಚಿಕನ ಅಂತರಂಗ ಮತ್ತು ಪಾರಮಾರ್ಥಿಕನ ಅಂತರಂಗ ಇವುಗಳಲ್ಲಿ ಬಹಳ ವ್ಯತ್ಯಾಸ (ಫರಕು) ಇರುವದು. ಪ್ರಾಪಂಚಿಕ ಮನುಷ್ಯ ಪಶ್ಚಾತ್ತಾಪ ಪಡದೇ ಕೇವಲ ಪ್ರಪಂಚಕ್ಕಾಗಿಯೇ ಬಾಳುವನು, ಬದುಕುವನು. ಇವನು ತಿನ್ನುಣ್ಣುವದಕ್ಕಾಗಿ ಮತ್ತು ದೇಹದ ಸುಖಕ್ಕಾಗಿ ಬಾಳಿ ಬದುಕುವನು. ಇದರಿಂದಾಗಿ ಇವನು ಮತ್ಸರದಿಂದ ಗ್ರಸ್ತನಾಗಿ ವ್ಯರ್ಥವಾಗಿ ಹೋಗುವನು. ಪರಮಾರ್ಥದ ಮನುಷ್ಯನಿಗೆ ಸಾಧನ ಮಾಡುವದಕ್ಕಾಗಿ ದೇಹದ ಉಪಯೋಗ ಬೇಕೇ ಬೇಕು. ಅದು ಗಟ್ಟಿ ಇರಲೆಂದು ಸಾಧನದಲ್ಲಿ ಇದರ ಉಪಯೋಗ ಬೀಳಲೆಂದು ದೇಹಕ್ಕೆ ತಿನ್ನಲು, ಕುಡಿಯಲು ಹಾಕುವನು. ಮತ್ತು ಇದರೊಂದಿಗೆ ಆಚಾರ-ವಿಚಾರಗಳನ್ನು ಆಚರಿಸುತ್ತ ಪವಿತ್ರತೆಯನ್ನು ಕಾಯ್ದುಕೊಳ್ಳುವನು. ಆಚಾರ-ವಿಚಾರದಲ್ಲಿ ಭ್ರಷ್ಟನಾದಂಥ ಮನುಷ್ಯನಿಗೆ ಪರಮಾರ್ಥ ಸಾಧಿಸುವದಿಲ್ಲ. ವೈರಾಗ್ಯ ಇದು ಮನಸ್ಸಿನ ಅವಸ್ಥೆ ಇರುವದು. ಪ್ರಾಪಂಚಿಕನ ವೈರಾಗ್ಯ ಹೇಗಿರುವದೆಂದರೆ:- ಭಗವಂತನ ಸಲುವಾಗಿ ದೇಹವನ್ನು ವ್ಯವಸ್ಥಿತ ಇಟ್ಟು, ಬಾಳಿ ಬದುಕುವದು-ಅವಶ್ಯವು. ಇದಕ್ಕಾಗಿ ನಿಯಮಬದ್ಧವಾಗಿ ದೇಹ ಸುಖ ಭೋಗಿಸಲು ಯಾವ ಅಡ್ಡಿಯೂ ಇಲ್ಲ. ಅಗದೀ ಮಾಪಕವಾಗಿ (ಪ್ರಮಾಣಬದ್ಧ, ಅವಶ್ಯವಿದ್ದಷ್ಟು) ವಿಷಯ ಭೋಗಿಸುವದೇ ಪ್ರಾಪಂಚಿಕರ ತ್ಯಾಗವಿರುವದು. ಇದೇ ಇವರ ವೈರಾಗ್ಯವಿರುವದು. ಪಾರಮಾರ್ಥಿಕನಿಗೆ ಹೊರಗಿನ (ಬಹಿರಂಗದ) ತ್ಯಾಗ ಸಹ ಮಾಡಲಿಕ್ಕೆ ಬರುವದು. ಅವರಲ್ಲಿ ಇದು ಒಂದು ಹೆಚ್ಚಿನದಿರುವದು. ವೈರಾಗ್ಯದಂತಹ ಭಾಗ್ಯ ಇನ್ನೊಂದಿಲ್ಲ. ನಿಜವಾದ ವೈರಾಗ್ಯವಂತ ಪುರುಷ ಅಂದರೆ ಈಶ್ವರೀ ಪುರುಷನೇ ಆಗಿರುವನು.

### ದಶಕ ೧೨. ಸಮಾಸ ೭. ವಿಷಯ ತ್ಯಾಗ (ನುಡಿ ೪೧)

ಶ್ರೋತಾರ ಶಂಕಾ ಏನಂದರೆ ಸರ್ವಶಾಸ್ತ್ರಕಾರರೂ ವಿಷಯದ ನಿಂದಾ ಮಾಡುತ್ತಾರೆ. ವಿಷಯ ತ್ಯಾಗ ಮಾಡದ ಹೊರತು ಪರಮಾರ್ಥವು ಸಾಧಿಸುವದೇ ಇಲ್ಲ ಅಂತಾ ಹೇಳುವರು. ಆದರೆ ಅಗದೀ ಖರೆ ಪ್ರಾಪಂಚಿಕ ಮನುಷ್ಯ ಮತ್ತು ಶ್ರೇಷ್ಠ ಪರಮಾರ್ಥಿ ಪುರುಷ ಈ ಇಬ್ಬರ ದೇಹದ ಜೀವನದಲ್ಲಿ ವ್ಯತ್ಯಾಸ (ಫರಕು) ಕಂಡು ಬರುವದಿಲ್ಲ. ಇದು ಹೇಗೆ? ಯಾಕೆ? :- ಅಗದೀ ತರ್ಕಶುದ್ಧವಾದ ಸ್ಪಷ್ಟ ಮಾತುಗಳು ಬಹು ಜನರಿಗೆ ಸೇರಿಕೆಯಾಗುವದಿಲ್ಲ ಹೊಟ್ಟೆಯಲ್ಲಿ ಮಳಮಳ ಇದ್ದರೆ ಊಟ ಸರಿ ಹೋಗುವದಿಲ್ಲ· ರುಚಿ ಬರುವದಿಲ್ಲ. ಅದರಂತೆ ಮನಸ್ಸಿನಲ್ಲಿ ಶಂಕಾ ಇಟ್ಟುಕೊಂಡು ಶ್ರವಣ ಮಾಡುವದು ಹಿತಕರವೆನಿಸುವದಿಲ್ಲ. ಹಾಗಾದರೆ ಆ ಶಂಕೆ ಯಾವುದು? ಹೇಳುವೆ, ಕೇಳಿರಿ. (೧) ಬಹಳಷ್ಟು ಜನರು ವಿಷಯದ ಬಗ್ಗೆ ಅಥವಾ ದೇಹ ಸುಖದ ಬಗ್ಗೆ ನಿಂದಾ ಮಾಡುವರು. ಆದರೆ ತಾವೇ ಸ್ವತಃ ಇವುಗಳನ್ನು ಅನುಭವಿಸುತ್ತ ಬಾಳುವರು. ನಿಜ ಹೇಳುವದಾದರೆ ವಿಷಯ ತ್ಯಾಗ ಮಾಡಿದ್ದಾದರೆ ದೇಹಸಾಗುವದು,ನಡೆಯುವದು ಶಕ್ಯವೇ ಇಲ್ಲ(೨)

ಬೋಲಣೇ ಯೇಕ ಚಾಲಣೇ ಯೇಕ । ತ್ಯಾಚೇ ನಾವ ಹೀನ ವಿವೇಕ ।
ಯೇಣೇ ಕರಿತಾ ಸಕಳ ಲೋಕ । ಹಾಸೋ ಲಾಗತೀ ॥೩॥
ವಿಷಯತ್ಯಾಗೇವಿಣ ತೋ ಕಾಹೀ । ಪರಲೋಕ ತೋ ಪ್ರಾಪ್ತ ನಾಹೀ ।
ಐಸೇ ಬೋಲಣೇ ಠಾಈ ಠಾಈ । ಬರೇ ಪಾಹಾ ॥೪॥
ಪ್ರಪಂಚೀ ಖಾತೀ ಜೇವಿತೀ । ಪರಮಾರ್ಥೀ ಕಾಯೆ ಉಪವಾಸ ಕರಿತೀ ।
ಉಭಯತಾ ಸಾರಿಖೇ ದಿಸತೀ । ವಿಷಯಾವಿಷಈ ॥೫॥
ದೇಹ ಚಾಲತಾ ವಿಷಯ ತ್ಯಾಗೀ । ಐಸಾ ಕೋಣ ಆಹೆ ಜಗೀ ।
ಯಾಚಾ ನಿರ್ವಾಹ ಮಜಲಾಗೀ । ದೇವೇ ನಿರೋಪಾವಾ ॥೬॥
ವಿಷಯ ಅವಘಾ ತ್ಯಾಗಾವಾ । ತರೀ ಚ ಪರಮಾರ್ಥ ಕರಾವಾ ।
ಐಸೇ ಪಾಹಾತಾ ಗೋವಾ । ದಿಸತೋ ಕೀ ॥೭॥
ಐಸಾ ಶ್ರೋತಾ ಅನುವಾದಲಾ । ವಕ್ತಾ ಉತ್ತರ ದೇತಾ ಜಾಲಾ ।
ಸಾವಧ ಹೋಊನ ಮನ ಘಾಲಾ । ಯೇತದ್ವಿಷಈ ॥೮॥
ವೈರಾಗ್ಯೇ ಕರಾವಾ ತ್ಯಾಗ । ತರೀಚ ಪರಮಾರ್ಥಯೋಗ ।
ಪ್ರಪಂಚತ್ಯಾಗೇ ಸರ್ವ ಸಾಂಗ । ಪರಮಾರ್ಥ ಘಡೇ ॥೯॥
ಮಾಗೇ ಜ್ಞಾನೀ ಹೋಊನ ಗೇಲೇ । ತೇಹೀ ಬಹುತ ಕಷ್ಟ ಕೇಲೇ ।
ತರೀ ಮಗ ವಿಖ್ಯಾತ ಜಾಲೇ । ಭೂಮಂಡಳೀ ॥೧೦॥
ಯೇರ ಮತ್ಸರ ಕರಿತಾ ಚ ಗೇಲೀ । ಅನ್ನ ಅನ್ನ ಮ್ಹಣತಾ ಮೇಲೀ ।
ಕಿತ್ಯೇಕ ಭ್ರಷ್ಟಲೀ । ಪೋಟಾಸಾಠೀ ॥೧೧॥
ವೈರಾಗ್ಯ ಮುಳೀಹೂನ ನಾಹೀ । ಜ್ಞಾನ ಪ್ರತ್ಯಯಾಚೇ ನಾಹೀ ।
ಸುಚಿ ಆಚಾರ ತೋ ಹೀ ನಾಹೀ । ಭಜನ ಕೈಚೇ ॥೧೨॥
ಐಸೆ ಪ್ರಕಾರೀಚೆ ಜನ । ಆಪಣಾಸ ಮ್ಹಣತೀ ಸಜ್ಜನ ।
ಪಾಹೋ ಜಾತಾ ಅನುಮಾನ । ಅವಘಾ ಚ ದಿಸೆ ॥೧೩॥
ಜಯಾಸ ನಾಹೀ ಅನುತಾಪ । ಹೇ ಚಿ ಯೇಕ ಪೂರ್ವಪಾಪ ।
ಕ್ಷಣಕ್ಷಣಾ ವಿಕ್ಷೇಪ । ಪರಾಧೀಕಪಣೇ ॥೧೪॥
ಮಜ ನಾಹೀ ತುಜ ಸಾಜೇನಾ । ಹೇ ತೋ ಅವಘೇ ಠಾಉಕೇ ಆಹೆ ಜನಾ ।
ಖಾತ್ಯಾಸ ನಖಾತೇ ದೇಖೋ ಸಕೇನಾ । ಐಸೇ ಆಹೆ ॥೧೫॥
ಭಾಗ್ಯಪುರುಷ ಥೋರ ಥೋರ । ತ್ಯಾಸ ನಿಂದಿತೀ ಡೀವಾಳಖೋರ ।
ಸಾವಾಸ ದೇಖತಾ ಚೋರ । ಚರ್ಫಡೀ ಜೈಸಾ ॥೧೬॥

ಸಡೆ ನುಡಿಯಲ್ಲಿ ಮೇಳವಿಲ್ಲದ್ದಕ್ಕೆ ಹೀನ ವಿವೇಕವೆನ್ನುವರು. ಇಂಥ ಹೀನ ವಿವೇಕದ ಜನರನ್ನು ಎಲ್ಲರೂ ಗೇಲಿ ಮಾಡಿ ನಗುವರು. [೩] ವಿಷಯದ ತ್ಯಾಗ ಮಾಡದ ಹೊರತು ಪರಮಾರ್ಥವು ಸಾಧಿಸುವದಿಲ್ಲವೆಂಬ ಮಾತುಗಳು ಎಲ್ಲ ಕಡೆಯಿಂದಲೂ ಕೇಳಿ ಬರುವವು. [೪] ಆದರೆ ಪ್ರಶ್ನೆ ಹೀಗಿರುವದು. ಪ್ರಪಂಚ ಮಾಡುವವರಷ್ಟೇ ತಿನ್ನುವರು, ಕುಡಿಯುವರು, ಆದರೆ ಪರಮಾರ್ಥ ಮಾಡುವವರು ಉಪವಾಸವಿರುವರೇನು? ವಿಷಯ ಸೇವನೆಯ ಬಾಬತ್ತಿನಲ್ಲಿ ಇಬ್ಬರೂ ಒಂದೇ ಕಾಣುವರು. [೫] ಮನುಷ್ಯನು ಜೀವಂತವಿರುವವರೆಗೆ ವಿಷಯವನ್ನು ಬಿಟ್ಟು ಬಿಡುವದು ಅಶಕ್ಯ ಕೋಟಿಯ ಮಾತಾಗಿದೆ. ದೇಹ ಜೀವಂತವಿರುವವರೆಗೂ ವಿಷಯ ಸೇವನೆ ಇಲ್ಲದೇ ಜೀವಿಸುವವರು ಯಾರಾದರೂ ಇರುವರೇನು? ಈ ಪ್ರಶ್ನೆಗೆ ಸಮಾಧಾನಕರ ಉತ್ತರವನ್ನು ಶ್ರೀಗುರು ದೇವರು ಬಹು ಆತ್ಮೀಯತೆಯಿಂದ ನಮಗೆ ತಿಳಿಸಿಕೊಡಬೇಕು. [೬] ವಿಷಯದ ಸಂಪೂರ್ಣ ತ್ಯಾಗ ಮಾಡಿದರೇನೇ ಪರಮಾರ್ಥ ಮಾಡಲಿಕ್ಕೆ ಬರುವದು ಅಂದದ್ದಾದರೆ ಇದು ದೊಡ್ಡ ಗೋಂದಲದ್ದೇ ಆಗುವದು [೭] ಶ್ರೋತಾ ಜನರ ಶಂಕೆಗೆ ಶ್ರೀ ಸಮರ್ಥರು ಈಗ ಉತ್ತರ ಕೊಡುವರು. ಪ್ರಪಂಚದ ತ್ಯಾಗ ಮಾಡದ ಹೊರತು ಪರಮಾರ್ಥ ಸಾಧಿಸುವದಿಲ್ಲವೆನ್ನುವದು ಅಗದೀ ಖರೇ ಇರುವದು. ಆದರೆ ವೈರಾಗ್ಯವು ಮನಸ್ಸಿನ ಅವಸ್ಥೆ ಇರುವದು· ಅದಕ್ಕಾಗಿ ಹೊರಗಿನ ತ್ಯಾಗ ಎಷ್ಟು ಮಾಡಬೇಕು? ಅನ್ನುವದು ಆ ಆ ಪರಿಸ್ಥಿತಿಯ ಮೇಲೆ ಅವಲಂಬಿಸಿರುವದು. ಪಾರಮಾರ್ಥಿ ಮನುಷ್ಯನಿಗೆ ಹೆಚ್ಚಿನ ಪ್ರಮಾಣದಲ್ಲಿ ತ್ಯಾಗ ಮಾಡಲು ಸಾಧ್ಯವಾಗುವದು. ಪ್ರಾಪಂಚಿಕ ಮನುಷ್ಯನು ತನ್ನ ವ್ಯವಹಾರದ ಚೌಕಟ್ಟಿನಲ್ಲಿ (ಒಂದು ಪರಿಮಿತಿಯಲ್ಲಿ) ಕೂಡುವಷ್ಟು ತ್ಯಾಗ ಮಾಡಲಿಕ್ಕೆ ಶಕ್ತನಿರುವನು. ಒಟ್ಟಿನಲ್ಲಿ ಎರಡೂ ಕಡೆಯಲ್ಲಿ ತ್ಯಾಗ ಘಟಿಸುವದು ನಿಜವೇ ಇರುವದು:- ಶ್ರೋತಾನು ತನ್ನ ಶಂಕೆಯನ್ನು ಸವಿಸ್ತಾರವಾಗಿ ಮಂಡಿಸಿದನು. ವಕ್ತಾ ಇದರ ನಿರಸನ ಮಾಡಿದನು. ವಕ್ತಾನ ಹೇಳಿಕೆಯನ್ನು ಶ್ರೋತಾ ಜನರು ಏಕಾಗ್ರ ಮನದಿಂದ ಹೇಳುವ ವಿಷಯದ ಕಡೆಗೆ ಲಕ್ಷ್ಯ ಹಾಕಿ ಕೇಳಬೇಕು· [೮] ವೈರಾಗ್ಯದ ಹಿನ್ನೆಲೆಯಿಂದ ವಿಷಯದ ತ್ಯಾಗ ಮಾಡಿದರೇ ಪರಮಾರ್ಥ ಸಾಧಿಸುವ ಯೋಗ ಬರುವದು. ಪ್ರಪಂಚದ ತ್ಯಾಗ ಮಾಡಿದರೇನೇ ಸರ್ವಾಂಗೀಣ ಪರಮಾರ್ಥ ಘಟಿಸುವದು. (೯) ಪೂರ್ವ ಕಾಲದಲ್ಲಿ ಆ ಯಾವ ದೊಡ್ಡ ದೊಡ್ಡ ಜ್ಞಾನಿಗಳು ಆಗಿ ಹೋದರೋ ಅವರೆಲ್ಲ ಪರಮಾರ್ಥದ ಸಲುವಾಗಿ ಬಹಳಷ್ಟು ಕಷ್ಟವನ್ನು ಸೋಸಿದರು. ಮತ್ತು ಆಮೇಲೆ ಇವರು ಜಗತ್ತಿನಲ್ಲಿ ವಿಖ್ಯಾತರಾದರು. (೧೦) ಉಳಿದ ಪ್ರಾಪಂಚಿಕ ಜನ ತಮ್ಮ ತಮ್ಮಲ್ಲಿ ಮತ್ಸರ ಮಾಡುತ್ತ ಇದ್ದರು. ಕೆಲವರು ಅನ್ನಾನ್ನಗತಿಕರಾಗಿ ಕೂಳಿಲ್ಲದೇ ಸತ್ತರು. ಕೆಲವರು ಹೊಟ್ಟೆಯ ಪಾಡಿಗಾಗಿ ಭ್ರಷ್ಟರಾದರು. (೧೧) ಯಾರಲ್ಲಿ ಖರೇ ವೈರಾಗ್ಯವಿಲ್ಲವೋ ಸ್ವತಃದ ಅನುಭವವಿಲ್ಲವೋ. ಜ್ಞಾನವಿಲ್ಲವೋ, ಶುದ್ಧ ಆಚಾರವಿಲ್ಲವೋ, ಭಜನೆ ಪೂಜೆಗಳಿಲ್ಲವೋ, [೧೨] ಇಂಥ ರೀತಿಯ ಜನರು ತಾವು ಸಜ್ಜನರೆಂದು ಮೆರೆಯುವರು. ಬಡಾಯಿ ಕೊಚ್ಚುವರು. ನಿಜವಾಗಿ ನೋಡಿದರೆ ಇದೆಲ್ಲವೂ ಕಾಲ್ಪನಿಕವು. ಈ ಸಜ್ಜನತನವು ವಾಸ್ತವಿಕವಾದದ್ದಲ್ಲ. (೧೩) ನಮ್ಮ ಈ ವರೆಗಿನ ಆಯುಷ್ಯವು ವ್ಯರ್ಥವಾಗಿ ಹೋಯಿತು, ಅನ್ನುವ ಅನುತಾಪ ಹುಟ್ಟದಿದ್ದರೆ ಅದು ಆ ಮನುಷ್ಯನ ಒಂದು ಮಹಾ ಪಾಪವೆಂದು ತಿಳಿಯಬೇಕು. ಇನ್ನೊಬ್ಬರ ಉತ್ಕರ್ಷ ನೋಡಿ ಮನುಷ್ಯನ ಮನದಲ್ಲಿ ವಿಕ್ಷೇಪ ಉತ್ಪನ್ನವಾಗುವದು. ಇದರಿಂದಾಗಿ ಅವನ ಮತ್ಸರ ಹೆಚ್ಚುವದು.(೧೪) "ಯಾವುದು ನನಗಿಲ್ಲವೋ ಅದು ನಿನಗೂ ಶೋಭಿಸುವದಿಲ್ಲ (ಇರಬಾರದು)" ಈ ಮತ್ಸರ ದೃಷ್ಟಿಕೋನವಿರುವದು ಎಲ್ಲರಿಗೂ ಗೊತ್ತಿದ್ದದ್ದೇ ಇರುವದು. ಯಾರಿಗೆ ತಿನ್ನಲು ಅನ್ನ ಸಿಗುವದಿಲ್ಲವೋ ಅವರು ಅನ್ನ ತಿನ್ನುವವರನ್ನು ನಿರ್ಮಲ ಮನದಿಂದ ನೋಡುವದು ಶಕ್ಯವಾಗುವದಿಲ್ಲ. ಇದೂ ಒಂದು, ಮೇಲೆಹೇಳಿದ್ದರ ಪ್ರಕಾರವೇ ಇರುವದು. (೧೫) ಭಾಗ್ಯವಂತರಾದ ಇಂಥ ಶ್ರೇಷ್ಠ ಸತ್ಪುರುಷರನ್ನು ಟವಾಳಿಖೋರ–ಅಂದರೆ ಉಡಾಳಖೋರ–ಟೊಣಪ ಜನನಿಂದಾ ಮಾಡುವರು. ಸಜ್ಜನ ಮನುಷ್ಯನನ್ನು ನೋಡಿ ಚೋರರು ಚಡಪಡಿಸುವರು. ಒಳಒಳಗೇ ಕುದಿಯುವರು. ಮತ್ಸರದ ಇದೂ ಒಂದು ಪ್ರಕಾರ ಇರುವದು. [೧೬]

ವೈರಾಗ್ಯಾಪರತೇ ನಾಹೀ ಭಾಗ್ಯ । ವೈರಾಗ್ಯ ನಾಹೀ ತೇ ಅಭಾಗ್ಯ ।
ವೈರಾಗ್ಯ ನಸ್ತಾ ಯೋಗ್ಯ । ಪರಮಾರ್ಥ ನವ್ಹೆ ॥೧೭॥

ಪ್ರತ್ಯಯೆ ಜ್ಞಾನೀ ವೀತರಾಗೀ । ವಿವೇಕಬಳೇ ಸಕಳ ತ್ಯಾಗೀ ।
ತೋ ಜಾಣಿಜೆ ಮಹಾಯೋಗೀ । ಈಶ್ವರೀ ಪುರುಷ ॥೧೮॥

ಅಷ್ಟಮಾ ಸಿದ್ಧೀಚೀ ಉಪೇಕ್ಷಾ । ಕರೂನ ಘೇತಲೀ ಯೋಗದೀಕ್ಷಾ ।
ಘರೋಘರೀ ಮಾಗೇ ಭಿಕ್ಷಾ । ಮಹಾದೇವ ॥೧೯॥

ಈಶ್ವರಾಚೀ ಬರಾಬರೀ । ಕೈಸಾ ಕರೀಲ ವೇಷಧಾರೀ ।
ಮ್ಹಣೋನಿಯಾ ಸಗಟ ಸರೀ । ಹೋತ ನಾಹೀ ॥೨೦॥

ಉದಾಸ ಆಣೀ ವಿವೇಕ । ತ್ಯಾಸ ಶೋಧಿತೀ ಸಕಳ ಲೋಕ ।
ಜೈಸೇ ಲಾಲಚೀ ಮೂರ್ಖ ರಂಕ। ತೇ ದೈನ್ಯವಾಣೇ ॥೨೧॥

ಜೆ ವಿಚಾರಾಪಾಸೂನ ಚೇವಲೇ । ಜೆ ಆಚಾರಾಪಾಸೂನ ಭ್ರಷ್ಟಲೇ ।
ವಿವೇಕ ಕರೂ ವಿಸರಲೇ । ವಿಷಯಲೋಭೀ ॥೨೨॥

ಭಜನ ತರೀ ಆವಡೇನಾ । ಪುರಶ್ಚರ್ಣ ಕದಾಪಿ ಘಡೇನಾ ।
ಭಲ್ಯಾಸ ತ್ಯಾಸ ಪಡೇನಾ । ಯೇತನ್ನಿಮಿತ್ಯ ॥೨೩॥

ವೈರಾಗ್ಯೇ ಕರೂನ ಭ್ರಷ್ಟೇನಾ । ಜ್ಞಾನ ಭಜನ ಸಾಂಡೀನಾ ।
ವಿತ್ಪನ್ನ ಆಣಿ ವಾದ ಘೇನಾ । ಐಸಾ ಥೋಡಾ ॥೨೪॥

ಕಷ್ಟ ಕರಿತಾ ಸೇತ ಪಿಕೆ । ಉಂಚ ವಸ್ತ್ರ ತತ್ಕಾಳ ವಿಕೆ ।
ಜಾಣತ್ಯಾ ಲೋಕಾಚ್ಯಾ ಕೌತುಕೇ । ಉಡ್ಯಾ ಪಡತೀ ॥೨೫॥

ಯೇರ ತೇ ಅವಘೆ ಚಿ ಮಂದಲೇ । ದುರಾಶೇನೇ ಖೋಟೆ ಜಾಲೇ ।
ಕಾನಕೊಂಡೇ ಜ್ಞಾನ ಕೇಲೇ । ಭ್ರಷ್ಟಾಕಾರೇ ॥೨೬॥

ಸಬಳ ವಿಷಯ ತ್ಯಾಗಣೇ । ಶುದ್ಧ ಕಾರ್ಯಾಕಾರಣ ಘೇಣೇ ।
ವಿಷಯ ತ್ಯಾಗಾಚೀ ಲಕ್ಷಣೇ । ವೊಳಖಾ ಐಸೀ ॥೨೭॥

**ಮಾನವ ಜೀವನವು ಯಶಸ್ವೀ ಆಗಬೇಕಾದರೆ ವೈರಾಗ್ಯದ ಅತ್ಯಂತ ಅವಶ್ಯಕತೆ ಇರುವದು. ಯಾವುದೇ ಒಂದು ದೊಡ್ಡ ಕಾರ್ಯ ಸಿದ್ಧವಾಗಲು ವೈರಾಗ್ಯವು ಬೇಕು. ಅದರಲ್ಲಿಯೂ ಪರಮಾರ್ಥದಲ್ಲಿ ಇದು ಅದರ ಪ್ರಾಣವಿರುವದು:-** ವೈರಾಗ್ಯದಂತಹ ಭಾಗ್ಯವಿಲ್ಲ. ವೈರಾಗ್ಯ ಇಲ್ಲದಿದ್ದರೆ ದುರ್ಭಾಗ್ಯವೆಂದು ತಿಳಿಯಬೇಕು. ಯಾಕಂದರೆ ವೈರಾಗ್ಯವಿಲ್ಲದೆ ಯೋಗ್ಯರೀತಿಯಲ್ಲಿ ಪರಮಾರ್ಥವಾಗುವದಿಲ್ಲ. [೧೭] ಯಾರಲ್ಲಿ ಅನುಭವದ ಜ್ಞಾನವಿರುವದೋ, ಯಾರಲ್ಲಿಯು ಆಸಕ್ತಿ ಬಿಟ್ಟು ವಿವೇಕದ ಬಲದಿಂದ ಯಾರು ಸರ್ವಸ್ವದ ತ್ಯಾಗ ಮಾಡಿರುವರೋ ಇಂಥವರು ಮಹಾಯೋಗಿಗಳು, ಮಹಾನ್ ಸಂತರು, ಸಾಧುಗಳು, ಅಂತಾ ತಿಳಿಯಬೇಕು. ಇವರು ಈಶ್ವರೀ ಪುರುಷರೇ ಇರುವರು. [೧೮] ಯಾವತ್ತರಲ್ಲಿ ಅಂದರೆ ಎಲ್ಲರಲ್ಲಿ ಶ್ರೀ ಶಂಕರನು ವೈರಾಗ್ಯದ ಮೇರು ಇರುವನು. ಅದ್ವಿತೀಯ ಆದರ್ಶವುಳ್ಳವನಿರುವನು. ಎಂಟು ದೊಡ್ಡ ಅಣಿಮಾದಿ ಸಿದ್ಧಿಗಳನ್ನು ಹಿಂದಕ್ಕೆ ಸರಿಸಿ (ಸಿದ್ಧಿಗಳ ಅಧೀನನಾಗದೆ) ಶ್ರೀ ಮಹಾದೇವನು ಮಹಾಯೋಗ ದೀಕ್ಷೆಯನ್ನು ತೆಗೆದುಕೊಂಡನು. ಮತ್ತು ಈ ಮಹಾಯೋಗಿ ಪುರುಷನು ಮನೆ ಮನೆಗೆ ಹೋಗಿ ಭಿಕ್ಷೆ ಬೇಡುತ್ತ ತಿರುಗುವನು. [೧೯] ಈ ಮಹಾಯೋಗಿ ಮಹಾದೇವನಂತೆ ವೇಷಧಾರಣ ಮಾಡುವವನು ಇವನಿಗೆ ಸರಿಯಾಗ ಬಲ್ಲನೇ? ಛೇ ! ಛೇ !! ಎಂದೂ ಆಗಲಾರನು ! ಆದ್ದರಿಂದ ಹೊರಗಿನಿಂದ ಒಂದೇ ತರಹದಿಂದ ಕಂಡರೂ ಸಹ ಎಲ್ಲರ ಯೋಗ್ಯತೆ ಒಂದೇ ತರಹದ್ದಿರುವದಿಲ್ಲ. [೨೦] ಯಾವನು ಅಂತರಂಗದಲ್ಲಿ (ಒಳಗೆ) ವೈರಾಗ್ಯ ಸಂಪನ್ನ ಮತ್ತು ವಿವೇಕಿ ಇರುವನೋ ಅಂಥ ಪುರುಷನನ್ನು ಬಹಳಷ್ಟು ಜನ ಹುಡುಕುತ್ತಿರುವರು. ಇದರ ವಿರುದ್ಧ (ಉಲಟ) ಯಾವನು ಲೋಭಿ ಆಸಕ್ತ ಮತ್ತು ವಿವೇಕಹೀನ ಇರುವನೋ ಇಂಥ ಭಾಗ್ಯಹೀನ ಜನರನ್ನು ಯಾರೂ ಕೇಳುವದಿಲ್ಲ. ಈ ಭಾಗ್ಯಹೀನರು ಕೊನೆಯವರೆಗೆ ಅಯ್ಯೋ ! ಅನ್ನುವ ಜೀವನ ನಡೆಸುತ್ತ ಬದುಕುವರು. [೨೧] ಯಾರು ಉಚ್ಚ ವಿಚಾರದಿಂದ ಕೆಳಗೆ ಜಾರಿರುವರೋ, ಯಾರು ಆಚಾರದಿಂದ ಭ್ರಷ್ಟರಿರುವರೋ, ಇಂಥವರೆಲ್ಲ ವಿಷಯ ಲೋಭಕ್ಕೋಸ್ಕರಗಾಗಿ ಆತ್ಮಾನಾತ್ಮ ವಿಚಾರ ಮಾಡಲಿಕ್ಕೆ ಶಕ್ತರಾಗುವದಿಲ್ಲ. ಸಾರಾಸಾರ ವಿಚಾರದ ನೆನಪೇ ಇವರಿಗೆ ಆಗುವದಿಲ್ಲ. ಯಾವಾಗಲೂ ಇವರಿಗೆ ದುರಾಸಕ್ತಿ ಇರುವದರಿಂದ ಮರೆವೇ ಆವರಿಸಿರುವದು. [೨೨] ಇವರಿಗೆ ಭಜನೆ ಪೂಜೆಯಲ್ಲಿ ಪ್ರೇಮವಿರುವದಿಲ್ಲ. ಇವರ ಕೈಯಿಂದ ಪುರಶ್ಚರಣವಂತೂ ಎಂದೂ ಘಟಿಸುವದೇ ಇಲ್ಲ. ಈ ಎಲ್ಲ ಕಾರಣಗಳಿಂದಾಗಿ ಇವರಿಗೆ ಸಂತರು, ಸಾಧುಗಳು, ಸಜ್ಜನರುಗಳೊಂದಿಗೆ ಸಹಕರಿಸುವದಾಗುವದಿಲ್ಲ. ಹೊಂದಿಕೊಂಡು ಉದ್ಧಾರದ ಮಾರ್ಗ ಕೇಳುವದಂತೂ ಅಸಾಧ್ಯದ ಮಾತೇ ಸರಿ. [೨೩] ವೈರಾಗ್ಯ ಸಂಪನ್ನನಿದ್ದು ಯಾವನು ಭ್ರಷ್ಟನಾಗುವದಿಲ್ಲವೋ, ಜ್ಞಾನೀ ಇದ್ದು ಯಾವನು ಭಗವಂತನ (ಸಗುಣ ಭಕ್ತಿ) ಭಜನ ನಾಮಸ್ಮರಣ ಬಿಡುವದಿಲ್ಲವೋ ಸ್ವತಃ ವಿದ್ವಾಂಸನಿದ್ದು ಯಾವನು ವಾದದಲ್ಲಿ ಎಂದೂ ಸೇರುವದಿಲ್ಲವೋ, ಇಂಥವರು ಬಹಳ ಕಡಿಮೆ ಜನರಿರುವರು (೨೪) ಹೊಲದಲ್ಲಿ ಕಷ್ಟಪಟ್ಟು ದುಡಿದರೆ ಉತ್ತಮ ಬೆಳೆಯು (ಪೀಕು) ಬರುವದು. ಉತ್ತಮ ಮಾಲು [ಉಚ್ಚವಸ್ತು] ಇದ್ದರೆ ಪೇಟೆಯಲ್ಲಿ [ಬಾಜಾರದಲ್ಲಿ] ಬಹು ಬೇಗ ಮಾರಾಟವಾಗುವದು. ಇದರಂತೆ ಯಾರು ವಿವೇಕ ಮತ್ತು ವೈರಾಗ್ಯ ಈ ಎರಡರಿಂದ ಸಂಪನ್ನರಿರುವರೋ ಇಂಥವರ ಕಡೆಗೆ ತಿಳುವಳಿಕೆಯ ಜನ ಹಾರುತ್ತ ಹೋಗಿ ಮುಗಿ ಬೀಳುವರು. [೨೫] ಇದೆಲ್ಲ ಯಾರಲ್ಲಿ ಇರುವದಿಲ್ಲವೋ ಅಂಥ ಜನರು ನಿಸ್ತೇಜರಾಗಿ ಹಿಂದೆ ಬೀಳುವರು. ಇವರಲ್ಲಿ ಆಶೆಯು ಕೆಲಸ ಮಾಡುವದರಿಂದ ಇವರು ಖೊಟ್ಟಿಯಾಗಿ ಬಿಡುವರು. ವೈರಾಗ್ಯ ಭ್ರಷ್ಟರಾದದ್ದರಿಂದ ಇವರ ಜ್ಞಾನ ಲಜ್ಜೆಗೇಡಿನದು, ನಾಚಿಕೆಗೇಡಿನದು ಆಗುವದು. ಇಂಥವನು ತಲೆತಗ್ಗಿಸಿಕೊಂಡವನಂತೆ ಇರಬೇಕಾಗುವದು. [೨೬] **ಕೊನೆಯಲ್ಲಿ ವೈರಾಗ್ಯದ ಮತ್ತು ತ್ಯಾಗದ ಮರ್ಮ ಹೇಳುವರು:-** ಮರ್ಯಾದೆಯನ್ನು ಮೀರಿ ಇರುವಂಥ [ನಿಷಿದ್ಧ ವಿಷಯ] ಮತ್ತು ಪ್ರಮಾಣ ಮಿಕ್ಕಿದ ದೇಹ ಸುಖವನ್ನೂ ಬಿಡಬೇಕು. ಶರೀರಧಾರಣೆಗೆ ಅವಶ್ಯವಿರುವಷ್ಟು ಮಾತ್ರ ದೇಹ ಸುಖ ಹೊಂದಬೇಕು. [ಶುದ್ಧ, ಗ್ರಾಹ್ಯವಾದ ವಿಷಯವನ್ನು ಶರೀರ ಕಾರ್ಯ ನಡೆಯುವ ಪೂರ್ತಿ ಸೇವಿಸಬೇಕು]. ವಿಷಯ ತ್ಯಾಗದ ಲಕ್ಷಣಗಳು ಹೀಗಿರುವವು. ಇವನ್ನು ತಿಳಿದು ಇರಬೇಕು. [೨೭]

ಸಕಳ ಕಾಂಹೀ ಕರ್ತಾದೇವ। ನಾಹೀ ಪ್ರಕೃತೀಚಾ ಠಾವ।
ವಿವೇಕಾಚಾ ಅಭಿಪ್ರಾವ। ವಿವೇಕೀ ಜಾಣತೀ ॥೨೮॥

ಶೂರತ್ವ ವಿಷಈ ಖಡತರ। ತ್ಯಾಸ ಮಾನಿತೀ ಲಹಾನಥೋರ।
ಕಾಮಗಾರ ಆಣಿ ಅಂಗಚೋರ। ಯೇಕ ಕೈಸಾ ॥೨೯॥

ತ್ಯಾಗಾತ್ಯಾಗ ತಾರ್ಕಿಕ ಜಾಣೇ। ಬೋಲಾವಿಸೇ ಚಾಲೋ ಜಾಣೇ।
ಪಿಂಡ ಬ್ರಹ್ಮಾಂಡ ಸಕಳ ಜಾಣೇ। ಯಥಾಯೋಗ್ಯ ॥೩೦॥

ವಿಸಾ ಜೋ ಸರ್ವಜಾಣತಾ। ಉತ್ತಮಲಕ್ಷಣೀ ಪುರತಾ।
ತಯಾಚೆನಿ ಸಾರ್ಥಕತಾ। ಸಹಜ ಚಿ ಹೋಯೆ ॥೩೧॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
"ವಿಷಯತ್ಯಾಗನಿರೂಪಣ" ನಾಮ ಸಮಾಸ ಸಪ್ತಮ ॥

ಈಗ ಹೇಳಿದ್ದು ವೈರಾಗ್ಯದ ಬಗ್ಗೆ. ಇನ್ನು ವಿವೇಕದ ಬಗ್ಗೆ ಕೇಳಿರಿ. ಯಾವ ಯಾವ ಆಗು ಹೋಗುಗಳು ಘಟಿಸುವವೋ ಅವೆಲ್ಲವುಗಳ ಕರ್ತಾ ಈಶ್ವರನಿರುವನು. ಪ್ರಕೃತಿಯ ಪಸಾರಕ್ಕೆ ನಿಜವಾದ ಅಸ್ತಿತ್ವವಿಲ್ಲ, ಮಾಯೆಗೆ ಪ್ರವೇಶವೇ ಇರುವದಿಲ್ಲ, ಅನ್ನುವ ನಿಶ್ಚಯವು ಅಂತರ್ಯಾಮದಲ್ಲಿ ಸ್ಥಿರಗೊಳ್ಳಬೇಕು. ಅಂದರೆ ಅದು ವಿವೇಕವು. ಯಾರು ಖರೇ ವಿವೇಕೀ ಇರುವರೋ ಅವರಿಗೇ ಮೇಲೆ ಹೇಳಿದ ವಿವೇಕದ ಅರ್ಥ ಬರೋಬರ ಸರಿಯಾಗಿ ತಿಳಿಯುವದು. [೨೮] ಸರ್ವ ಪ್ರಸಂಗಗಳಲ್ಲಿ ಯಾರು ಧೈರ್ಯ ಶೌರ್ಯ ತೋರುವರೋ ಅವರಿಗೆ ಸಣ್ಣವರು ದೊಡ್ಡವರು ಎಲ್ಲರೂ ಶೂರ ಅಂತಾ ಒಪ್ಪುವರು. ಯಾರು ಖರೇ ಕಷ್ಟ ಪಡುವವರು ಇರುವರೋ ಅವರು ಮತ್ತು ಮೈಗಳ್ಳರಾರಿರುವರೋ ಅವರು ಇವರಿಬ್ಬರಿಗೂ ಸರಿಸಮರೆಂದು ಅನ್ನಲಿಕ್ಕೆ ಬರುವದಿಲ್ಲ [೨೯] ಯಾವುದರ ತ್ಯಾಗ ಮಾಡಬೇಕು, ಯಾವುದರ ತ್ಯಾಗ ಮಾಡಬಾರದು, ಇದನ್ನು ಶುದ್ಧ ತರ್ಕದಿಂದ ಯಾವನು ತಿಳಿಯುವನೋ, ಮತ್ತು ತಾನು ಏನು ಮಾತಾಡುವನೋ ಅದರಂತೆ ನಡೆಯುವದನ್ನು ಯಾರು ತಿಳಿದಿರುವರೋ ["ನುಡಿದಂತೆ ನಡೆದರೆ ಇದೇ ಜನ್ಮ ಕಡೆ"] ಮತ್ತು ಪಿಂಡ ಬ್ರಹ್ಮಾಂಡದ ರಚನೆಯನ್ನು ಯಾರು ಯಥಾರ್ಥವಾಗಿ ತಿಳಿಯುವರೋ [೩೦] ಇಂಥವರು ಯಾವತ್ತನ್ನೂ ತಿಳಿಯುವಂಥವರಿರುವರು. ಇಂಥ ಉತ್ತಮ ಗುಣಗಳಿಂದ ಯಾರು ಪರಿಪೂರ್ಣರಿರುವರೋ ಇಂಥವರ ಸಂಗತಿಯಿಂದ ನಮ್ಮ ಆಯುಷ್ಯದ ಸಾರ್ಥಕತೆಯಾಗುವದು. [೩೧]

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಹನ್ನೆರಡನೆಯ ದಶಕದ "ವಿಷಯ ತ್ಯಾಗ ನಿರೂಪಣ" ಎಂಬ ಏಳನೆಯ ಸಮಾಸವು ಮುಗಿದುದು.

● ●

### ದಶಕ ದ್ವಾದಶ : ಸಮಾಸ ಅಷ್ಟಮ : ಕಾಳರೂಪ ನಿರೂಪಣ

॥ಶ್ರೀರಾಮ॥ ಮೂಳಮಾಯಾ ಜಗದೇಶ್ವರ । ಪುಢೇ ಅಷ್ಟಧೇಚಾ ವಿಸ್ತಾರ ।
ಸೃಷ್ಟಿಕ್ರಮೇ ಆಕಾರ । ಆಕಾರಲಾ ॥೧॥

ಹೇ ಅವಘೇ ಚ ನಸ್ತಾ ನಿರ್ಮಳ । ಜೈಸೆ ಗಗನ ಅಂತರಾಳ ।
ನಿರಾಕಾರೀ ಕಾಳವೇಳ । ಕಾಂಹೀಚ ನಾಹೀ ॥೨॥

ಉಪಾಧೀಚಾ ವಿಸ್ತಾರ ಜಾಲಾ । ತೇಥೇ ಕಾಳ ದಿಸೋನ ಆಲಾ ।
ಯೆರವೀ ಪಾಹಾತಾ ಕಾಳಾಲಾ । ಠಾವ ಚಿ ನಾಹೀ ॥೩॥

ಯೇಕ ಚಂಚಳ ಯೇಕ ನಿಶ್ಚಳ । ಯಾವೇಗಳಾ ಕೋಠೇ ಕಾಳ ।
ಚಂಚಳ ಆಹೆ ತಾವತ್ಕಾಳ । ಕಾಳ ಮ್ಹಣಾವೇ ॥೪॥

ಆಕಾಶ ಮ್ಹಣಿಜೆ ಅವಕಾಶ । ಅವಕಾಶ ಬೋಲಿಜೆ ವಿಲಂಬಾಸ ।
ತ್ಯಾ ವಿಲಂಬರೂಪ ಕಾಳಾಸ । ಜಾಣೋನಿ ಘ್ಯಾವೇ ॥೫॥

ಸೂರ್ಯಾಕರಿತಾ ವಿಲಂಬ ಕಳೇ । ಗಣನಾ ಸಕಳಾಚೀ ಆಕಳೇ ।
ಪಳಾಪಾಸೂನ ನಿವಳೇ । ಯುಗಪರಿಯಂತ ॥೬॥

# ದಶಕ ೧೨. ಸಮಾಸ ೮. ಕಾಳರೂಪ ನಿರೂಪಣ (ನುಡಿ ೩೪)

ಪರಮಾತ್ಮ ಸ್ವರೂಪ ಕೇವಲ (ಫಕ್ತ) ಶುದ್ಧ (ಹೆಸರಿಗೆ ಮಾತ್ರ) ಇರುವದು. ಆದರೆ ಮೂಲ ಮಾಯೆ ಆಗುವದು. (ಇತ್ಸು, ಇದ್ದೀತು). ಇವುಗಳಲ್ಲಿ ಇರುವದು ಮತ್ತು ಆಗುವದು ಇದರಲ್ಲಿ ಭೇದವಿರುವದು. ಇರುವದು ಅಂದರೆ ಯಾವಾಗಲೂ ಹೇಗಿತ್ತೋ ಹಾಗೇ ಇರುವದು ಅನ್ನುವದನ್ನು ಸೂಚಿಸುವದು. ಆಗುವದು ಅಂದರೆ ಇದು ಬದಲಾವಣೆಯನ್ನು ತೋರಿಸುವದು. ಬದಲಾವಣೆ ಅಂದ ಕೂಡಲೇ ಸ್ಥಳ, ಕಾಲಗಳ [ಅವಕಾಶದ] ವಿಲಂಬದ ಅನುಭವ ಬರುವದು. ಕಾಲ ಇದು ವಿಲಂಬರೂಪವಿರುವದು. ಅದೇ ನಿಶ್ಚಲ ನಿರಾಕಾರದಲ್ಲಿ ಮಾತ್ರ ಕಾಲವಿಲ್ಲ. ಯಾಕೆಂದರೆ ಇಲ್ಲಿ ಬದಲೆಂಬುದೇ ಇಲ್ಲ. ಚಂಚಲದ ಕೂಡ ಕಾಲ ನಿರ್ಮಾಣವಾಗುವದು. ಈ ಕಾಲನ ಸತ್ತಾ ದೃಶ್ಯದ ಮೇಲೆ ನಡೆಯುವದು. ಅವ್ಯಕ್ತದಿಂದ ವ್ಯಕ್ತದಲ್ಲಿ ಬರುವದು ಮತ್ತು ವ್ಯಕ್ತದಲ್ಲಿಂದ ಅವ್ಯಕ್ತದ ಕಡೆಗೆ ಹೋಗುವದು. ಈ ಕ್ರಿಯೆಯು ಕಾಲನ ಅನುರೋಧದಿಂದ (ಪ್ರೇರಕ ಶಕ್ತಿಯಿಂದ) ನಡೆಯುವದು. ಬ್ರಹ್ಮಾಂಡ ಎಲ್ಲಿಂದ ನಿರ್ಮಾಣವಾಗುವದೋ ಅಲ್ಲಿಗೆ ವಿವೇಕದಿಂದ ಹೋಗಿ ಮುಟ್ಟಬೇಕು. ಭಕ್ತಿಯಿಂದ ಭಗವಂತನ ಪ್ರಾಪ್ತಿ ಮಾಡಿಕೊಳ್ಳಬೇಕು. ಇಲ್ಲಿಯ ಎಲ್ಲ ದೃಶ್ಯವೂ ಇಲ್ಲಿಯೇ ಇರುವದು. ಅದು ಎಲ್ಲಿಯೂ ಹೋಗುವದಿಲ್ಲ. ಆದ್ದರಿಂದ ಜಡವಸ್ತುಗಳ ಮೇಲೆ ಲೋಭ ಹಿಡಿಯದೇ ಪ್ರಪಂಚದಲ್ಲಿ ಇರಬೇಕು. ಮತ್ತು ಸಂಸಾರ ಮಾಡುತ್ತಲಿರುವಾಗಲೇ ಸಮಾಧಾನವನ್ನು ಭೋಗಿಸಬೇಕು. ಜನಕ ಮಹಾರಾಜನು ಇಂಥ ಸಮಾಧಾನವನ್ನು ಹೊಂದಿದವನಾಗಿದ್ದನು.

## ದಶಕ ೧೨. ಸಮಾಸ ೮. ಕಾಳರೂಪ ನಿರೂಪಣ (ನುಡಿ ೩೪)

ನಿರಾಕಾರನಾದ ಬ್ರಹ್ಮ ವಸ್ತುವಿನಲ್ಲಿ ಕಾಲನಿಗೆ ಅವಕಾಶ (ಸ್ಥಾನ) ಇಲ್ಲ. ಚಂಚಲ ಬಂದ ಕೂಡಲೇ ಕಾಲ ಬರುವದು. ಮತ್ತು ಇದು ಇರುವವರೆಗೂ ಕಾಲವೂ ಸಹ ಇರುವದು. ಕಾಲವು ವಿಲಂಬ ರೂಪವಿರುವದು. (ಅವಕಾಶ ರೂಪವಿರುವದು):- ಪರಬ್ರಹ್ಮದಲ್ಲಿ ಪ್ರಥಮದಲ್ಲಿ ಮೂಲ ಮಾಯಾ ನಿರ್ಮಾಣವಾಯಿತು. ಮೂಲ ಮಾಯೆಯಲ್ಲಿಯ ಶುದ್ಧ ಅರಿವು [ಜಾಣೀವ] ಇದು ಜಗದೀಶ್ವರವಾಗಿದೆ. ಇದರ ನಂತರ ಅಷ್ಟಧಾ ಪ್ರಕೃತಿಯ ವಿಸ್ತಾರವಾಯಿತು. ಇದರಲ್ಲಿ ಯಾವ ಸೃಷ್ಟಿ ರಚನೆಯಾಯಿತೋ ಇದರಿಂದ ಆಮೇಲೆ ಆಕಾರವು ನಿರ್ಮಾಣವಾಯಿತು. [೧] ಆಕಾಶದಲ್ಲಿ ಮೋಡಗಳಿಲ್ಲದಾಗ ಅದು ಹೇಗೆ ನಿರ್ಮಲವಾದ-ವಿಸ್ತಾರವಾದ ಆಕಾಶವು ಇರುವದೋ ಇದರಂತೆ ಪ್ರಕೃತಿ ಮತ್ತು ಅದರ ಪಸಾರ (ವಿಸ್ತಾರ) ಇಲ್ಲದಾಗ ನಿರ್ಮಲ ಪರಬ್ರಹ್ಮವಿರುವದು. ನಿರಾಕಾರ ಸ್ವರೂಪದಲ್ಲಿ ಕಾಲ ವೇಳೆ ಯಾವುದೂ ಕಂಡುಬರುವದಿಲ್ಲ. [೨] ಉಪಾಧಿಯ ವಿಸ್ತಾರವಾಯಿತೆಂದರೆ ಕಾಲ ಕಾಣಹತ್ತುವದು. ಇಲ್ಲದಿದ್ದರೆ ಕಾಲನಿಗೆ ಸ್ಥಾನವೇ ಇಲ್ಲ. ಉಪಾಧಿ ಅಂದರೆ ಮಾಯಾ ಅಥವಾ ಪ್ರಕೃತಿ, ಸದ್ವಸ್ತುವಿನ ಮೇಲೆ ಬಂದಂಥ ಹೊದಿಕೆಯು ಅಂದರೆ ಆವರಣವು [೩] ಒಟ್ಟಿನಲ್ಲಿ ಎರಡೇ ಪ್ರಕಾರಗಳು ಅಸ್ತಿತ್ವದಲ್ಲಿ ಇರುವವು. ಒಂದು ನಿಶ್ಚಲ ಬ್ರಹ್ಮ ಮತ್ತು ಎರಡನೆಯದು ಚಂಚಲ ಮಾಯಾ. ಇದರ ವ್ಯತಿರಿಕ್ತ ಕಾಲ ಅನ್ನುವ ಮೂರನೆಯ ಪ್ರಕಾರವು ಇರುವದಿಲ್ಲ. ಎಲ್ಲಿಯವರೆಗೆ ಚಂಚಲ ಇರುವದೋ ಅಲ್ಲಿಯವರೆಗೆ ಕಾಲದ ಅಸ್ತಿತ್ವ ಗೊತ್ತಾಗುವದು. (ತಿಳಿಯುವದು). [೪] ಆಕಾಶ ಅಂದರೆ ಅವಕಾಶ ಅಥವಾ ವಿಸ್ತಾರವು. ವಿಲಂಬಕ್ಕೆ ಅವಕಾಶವೆನ್ನುವರು. ಕಾಲವು ವಿಲಂಬ ರೂಪವಿರುವದು ಇದರ ಸ್ವರೂಪವನ್ನು ಸರಿಯಾಗಿ ತಿಳಿದುಕೊಳ್ಳಬೇಕು. (೫) ಕಾಲದ ಗಣನೆಯನ್ನು ಸೂರ್ಯನ ಗತಿಯಿಂದ ಮಾಡುವರು. ಮತ್ತು ಇದರಲ್ಲಿ ಅನೇಕ ವಿಭಾಗಗಳನ್ನು ಗುರುತಿಸುವರು. ಮತ್ತು ಅಷ್ಟೇ ರದ ಗಣನೆಯನ್ನು ದೇವರ ಆಯುಷ್ಯದಿಂದ ಮಾಡುವರು:- ಸೂರ್ಯನ ಯೋಗದಿಂದ ನಮಗೆ ವಿಲಂಬ(ಅವಕಾಶ) ತಿಳಿಯುವದು. ವಿಲಂಬ ಇದರ ಮೂಲವನ್ನು ಹಿಡಿದು ನಮಗೆ ಗಣನೆ ಮಾಡಲಿಕ್ಕೆ ಬರುವದು. ಒಂದು ಪಳದಿಂದ ಯುಗದವರೆಗೂ ಲೆಕ್ಕ ಮಾಡಲಿಕ್ಕೆ ಬರುವದು. (೬)

ಪಳ ಘಟಿಕಾ ಪ್ರಹರ ದಿವಸ । ಅಹೋರಾತ್ರ ಪಕ್ಷ ಮಾಸ ।
ಶಡ್ಮಾಸ ವರಿ ಯುಗಾಸ । ಠಾವ ಜಾಲಾ ॥೭॥

ಕ್ರೇತ ತ್ರೇತ ದ್ವಾಪಾರ ಕಳೀ । ಸಂಖ್ಯಾ ಚಾಲಿಲೀ ಭೂಮಂಡಳೀ ।
ದೇವಾಚೀ ಆಯುಷ್ಯೇ ಆಗಳೀ । ಶಾಸ್ತ್ರೀ ನಿರೋಪಿಲೀ ॥೮॥

ತೇ ದೇವತ್ರಯಾಚೀ ಖಟಪಟ । ಸೂಕ್ಷ್ಮರೂಪೇ ವಿಲಗಟ ।
ದಂಡಕ ಖಾಂಡಿತಾ ಚಟಪಟ । ಲೋಕಾಸ ಹೋತೇ ॥೯॥

ಮಿಶ್ರಿತ ತ್ರಿಗುಣ ನಿವಡೇನಾ । ತೇಣೇ ಆದ್ಯಂತ ಸೃಷ್ಟಿರಚನಾ ।
ಕೋಣ ಥೋರ ಕೋಣ ಸಾನಾ । ಕೈಸಾ ಮ್ಹಣಾವಾ ॥೧೦॥

ಅಸೋ ಹೀ ಜಾಣತ್ಯಾಚೀ ಕಾಮೇ । ನೇಣತಾ ಉಗಾ ಚ ಗುಂತೇ ಭ್ರಮೇ ।
ಪ್ರತ್ಯಯೇ ಜಾಣಜಾಣೋ ವರ್ಮೇ । ಠಾಈ ಪಾಡಾವೀ ॥೧೧॥

ಉತ್ಪನ್ನಕಾಳ ಸೃಷ್ಟಿಕಾಳ । ಸ್ಥಿತಿಕಾಳ ಸಂವ್ಹಾರಕಾಳ ।
ಆದ್ಯಂತ ಅವಘಾ ಕಾಳ । ವಿಲಂಬರೂಪೀ ॥೧೨॥

ಜೇ ಜೇ ಜಯೇ ಪ್ರಸಂಗೀ ಜಾಲೇ । ತೇಥೇ ಕಾಳಾಚೇ ನಾವ ಪಡಿಲೇ ।
ಬರೇ ನಸೇಲ ಅನುಮಾನಲೇ । ತರೀ ಪುಢೇ ಐಕಾ ॥೧೩॥

ಪ್ರಜನ್ಯಕಾಳ ಶೀತಕಾಳ । ಉಷ್ಣಕಾಳ ಸಂತೋಷಕಾಳ ।
ಸುಖ ದುಃಖ ಆನಂದಕಾಳ । ಪ್ರತ್ಯಯೇ ಯೇತೋ ॥೧೪॥

ಪ್ರಾತಃಕಾಳ ಮಾಧ್ಯಾನಕಾಳ। ಸಾಯಂಕಾಳ ವಸಂತಕಾಳ ।
ಪರ್ವಕಾಳ ಕಠಿಣಕಾಳ । ಜಾಣಿಜೆ ಲೋಕೀ ॥೧೫॥

ಜನ್ಮಕಾಳ ಬಾಳತ್ವಕಾಳ । ತಾರುಣ್ಯಕಾಳ ವೃದ್ಧಾಪ್ಯಕಾಳ ।
ಅಂತಕಾಳ ವಿಷಮಕಾಳ । ವೇಳರೂಪೇ ॥೧೬॥

ಸುಕಾಳ ಆಣಿ ದುಷ್ಕಾಳ । ಪ್ರದೋಷಕಾಳ ಪುಣ್ಯಕಾಳ ।
ಸಕಳ ವೇಳಾ ಮಿಳೋನ ಕಾಳ । ತಯಾಸ ಮ್ಹಣಾವೇ ॥೧೭॥

ಅಸತೇ ಯೇಕ ವಾಟತೇ ಯೇಕ । ತ್ಯಾಚೇ ನಾವ ಹೀನ ವಿವೇಕ ।
ನಾನಾ ಪ್ರವೃತ್ತೀಚೆ ಲೋಕ । ಪ್ರವೃತ್ತಿ ಜಾಣತೀ ॥೧೮॥

ಪ್ರವೃತ್ತಿ ಚಾಲೇ ಅಧೋಮುಖೇ । ನಿವೃತ್ತಿ ಧಾವೇ ಊರ್ಧ್ವಮುಖೇ ।
ಊರ್ಧ್ವಮುಖೇ ನಾನಾ ಸುಖೇ । ವಿವೇಕೀ ಜಾಣತೀ ॥೧೯॥

ಪಳ, ಘಳಿಗೆ, ಪ್ರಹರ, ದಿವಸ, ರಾತ್ರಿ, (ಅಹೋರಾತ್ರಿ) ಪಕ್ಷ ಅಥವಾ ಹದಿನೈದು ದಿವಸ, ಮಾಸ ಅಥವಾ ತಿಂಗಳು, ಆರು ತಿಂಗಳು, ವರ್ಷ ಈ ಪ್ರಕಾರ ನಾವು ಯುಗದ ವರೆಗೂ ಕಾಲವನ್ನು ಎಣಿಸಿ ಲೆಕ್ಕಮಾಡ ಬಹುದು. [೭] ಆನಂತರ ಕೃತ, ತ್ರೇತಾ, ದ್ವಾಪರ ಮತ್ತು ಕಲಿ ಹೀಗೆ ನಾಲ್ಕು ಯುಗಗಳು ಪೃಥ್ವಿಯ ಮೇಲೆ ನಡೆದಿರುವವು. ಇದರಂತೆ ಶಾಸ್ತ್ರದಲ್ಲಿ ದೇವರ ಆಯುಷ್ಯವನ್ನು ಸಹ ಬಹಳಷ್ಟು ಹೇಳಿರುವರು. [೮] ತ್ರಿಗುಣಾತ್ಮಕ ರಾದ ಬ್ರಹ್ಮ, ವಿಷ್ಣು, ಮಹೇಶ ಈ ಮೂರು ದೇವರುಗಳ ಕಾರ್ಯಗಳು (ಉತ್ಪತ್ತಿ, ಸ್ಥಿತಿ, ಸಂಹಾರ ಕಾರ್ಯಗಳು) ಸೂಕ್ಷ್ಮ ರೂಪದಿಂದ ಬೇರೆ ಬೇರೆಯಾಗಿ ಚಾಲೂ ಇರುವವು. ಇದರ ನಿಯಮ ಭಂಗ ಮಾಡಿದರೆ ಜನರಿಗೆ ಕಾಳಜಿ ವ ಅಸಮಾಧಾನ ಆಗುವದು.(ಯಾಕೆಂದರೆ ಸಂಪ್ರದಾಯ ರೀತಿ ರಿವಾಜನ್ನು ಜನರು ಬಿಡುವರು. ಇದರಿಂದ ಅಂತಃ ಕರಣಕ್ಕೆ ಚಡಪಡಿಕೆ–ಅಸಮಾಧಾನವಾಗುವದು). [೯] ಸತ್ವ, ರಜ, ತಮ ಈ ಮೂರು ಗುಣಗಳು ಒಂದರೊಳ ಗೊಂದು ಕೂಡಿರುವವು. ಇವುಗಳನ್ನು ಪ್ರತ್ಯೇಕವಾಗಿ ವಿಂಗಡಿಸಲಿಕ್ಕೆ ಬರುವದಿಲ್ಲ. ಮೊದಲಿನಿಂದ ಕೊನೆಯವರೆಗಿನ ಸೃಷ್ಟಿ ರಚನೆಯಲ್ಲವೂ ತ್ರಿಗುಣದ ಮಿಶ್ರಣದಿಂದಲೇ ಆಗಿರುವದು. ಆದ್ದರಿಂದ ಇದರಲ್ಲಿ ಯಾರು ದೊಡ್ಡವರು, ಯಾರು ಸಣ್ಣವರು, ಅಂತಾ ಅನ್ನಲಿಕ್ಕೆ ಬರುವದಿಲ್ಲ. ಮೂರೂ ದೇವತೆಗಳು ಒಂದೇ ಯೋಗ್ಯತೆಯವರು ಮತ್ತು ಮಹತ್ವವುಳ್ಳವರು ಇರುವರು. (೧೦) ಇರಲಿ. ಇದೆಲ್ಲವೂ ಸರಿಯಾಗಿ ತಿಳಿಯಬೇಕಾದರೆ ಬುದ್ಧಿವಂತಿಕೆ ಬೇಕು. ಇದು ಜಾಣರ ಕೆಲಸವಿರುವದು. ಅಜ್ಞಾನಿ ಮನುಷ್ಯನು ಸುಮ್ಮನೆ (ವ್ಯರ್ಥವಾಗಿ) ಭ್ರಮದಿಂದಾಗಿ ಅಜ್ಞಾನದ ಜಾಲದಲ್ಲಿ ಸಿಕ್ಕು ಬೀಳುವನು. ಆದ್ದರಿಂದ ಸೃಷ್ಟಿಯಲ್ಲಿಯ ಗೂಢ ವಿಷಯವನ್ನು ಸ್ವತಃ ಸೂಕ್ಷ್ಮವಾಗಿ ಶೋಧಿಸಿ ಅನುಭವ ತೆಗೆದುಕೊಂಡು ಖಾತ್ರಿ ಮಾಡಿಕೊಳ್ಳಬೇಕು. ನಿಶ್ಚಿತಪಡಿಸಿಕೊಂಡು ತಿಳಿಯಬೇಕು[೧೧]**ಕಾಲವೆಂಬ ಶಬ್ದ ವನ್ನು ವಿಲಂಬ (ಅವಕಾಶ) ಅರ್ಥದಿಂದ ಉಪಯೋಗಿಸುತ್ತಾರೆ. ಆದರೆ ಯಾವ ಪ್ರಸಂಗ ಇರುವದೋ ಅದಕ್ಕೂ ಸಹ ಕಾಲ ಶಬ್ದವನ್ನು ಯೋಜಿಸುವರು**:- ಉದಾ:– ಉತ್ಪತ್ತಿಕಾಲ, ಸೃಷ್ಟಿಕಾಲ, ಸ್ಥಿತಿಕಾಲ, ಸಂಹಾರ ಕಾಲ, ಹೀಗೆಲ್ಲ ಇರುವ ಇವು ಆರಂಭದಿಂದ ಕೊನೆಯವರೆಗೂ ವಿಲಂಬರೂಪಿಯೇ ಇರುವವು. [೧೨] ಯಾವ ಪ್ರಸಂಗದಲ್ಲಿ (ಯಾವ ಕಾಲದಲ್ಲಿ, ಯಾವ ಹೊತ್ತಿನಲ್ಲಿ) ಏನು ಘಟಿಸುವದೋ ಅದಕ್ಕೆ ಕಾಲದ ಹೆಸರನ್ನು ಉಪ ಯೋಗಿಸುವೆವು. ಇದು ನಿಮ್ಮ ಲಕ್ಷ್ಯದಲ್ಲಿ ಸರಿಯಾಗಿ ಬರದಿದ್ದರೆ ಈಗ ಹೇಳುವೆ ಬರೋಬರಿ ಕೇಳಿರಿ. [೧೩]ಮಳೆ ಗಾಲ [ಪರ್ಜನ್ಯಕಾಲ],ಚಳಿಗಾಲ [ಶೀತಕಾಲ],ಬೇಸಿಗೆಕಾಲ [ಉಷ್ಣತಾ ಕಾಲ], ಸಂತೋಷ ಕಾಲ, ದುಃಖ ಕಾಲ, ಆನಂದದ ಕಾಲ ಇವು ಕಾಲದ ಅನುಭವ ಬರುವಂಥವು. [೧೪] ಪ್ರಾತಃಕಾಲ, ಮಧ್ಯಾನ್ಹ ಕಾಲ, ಸಾಯಂಕಾಲ, ಮತ್ತು ವಸಂತಕಾಲ, ಪರ್ವಕಾಲ, ಕಠಿಣಕಾಲ ಈ ಕಾಲ ಸೂಚಕದ ಅರ್ಥವನ್ನು ಜನರು ತಿಳಿದಿರುವರು. [೧೫] ಜನ್ಮಕಾಲ, ಬಾಲ್ಯತನದಕಾಲ, ತಾರುಣ್ಯಕಾಲ, ಮುಪ್ಪಿನಕಾಲ, ಅಂತ್ಯಕಾಲ, ವಿಷಮಕಾಲ, ಇವೆಲ್ಲ ವೇಳೆ ಸೂಚಕ [ಸಮಯ ಸೂಚಕ] ಕಾಲವಿರುವವು. [೧೬] ಸುಕಾಳ, ದುಷ್ಕಾಳ, ಪ್ರದೋಷಕಾಲ, ಪುಣ್ಯಕಾಲ, ಇವೆಲ್ಲಾ ಅವಧಿ ಗಳು ಕೂಡಿ ಕಾಲ ಅಂತಾ ಅನ್ನಬೇಕು. [೧೭] ಮನುಷ್ಯನು ಹೀನ ವಿವೇಕಿ ಇರಬಾರದು. ನಿವೃತ್ತಿಯಿಂದ ಸೂಕ್ಷ್ಮದ ಕಡೆಗೆ ದೃಷ್ಟಿ ತಿರುಗಿಸಿ ಕೊನೆಗೆ ಅಂದರೆ ಮೂಲದ ವರೆಗೂ ಹೋಗಿ ಮುಟ್ಟಬೇಕು. ಪ್ರಪಂಚದಲ್ಲಿ ಇದ್ದುಕೊಂಡೇ ಇವನ್ನು ಸಾಧಿಸಲಿಕ್ಕೆ ಬರುವದು. ಪ್ರಪಂಚ ಮತ್ತು ಪರಮಾರ್ಥ ಎರಡನ್ನೂ ಸಾಧಿಸುವಲ್ಲಿಯೇ ನಿಜವಾದ ಮೋಜು ಇರುವದು:– ವಸ್ತು ಇರುವದು ಒಂದು ಆದರೆ ಕಾಣುವದು ಯಾವುದೋ ಒಂದು, ಅಥವಾ ಇರುವದೊಂದು ತರಹ, ತಿಳಿಯುವದು-ಬೇರೊಂದು ತರಹ ಇದಕ್ಕೆ ಹೀನ ವಿವೇಕ ಅನ್ನುವರು. ಹೀನ ವಿವೇಕ ಅಂದರೆ ಅವಿದ್ಯೆ ಅಥವಾ ಅಧ್ಯಾಸ [ಆರೋಪ] ವಾಗಿದೆ. ನಾನಾ ಪ್ರಕಾರದ ಮನೋರಚನೆಯ ಜನರು ಹೊರಗೆ ಕಾಣುವದನ್ನಷ್ಟೇ ತಿಳಿದಿರುವರು. [೧೮] ಪ್ರವೃತ್ತಿಯು ಅಧೋಮುಖದಿಂದ ವಿಷಯದ ಕಡೆಗೆ ಸಾಗುವದು. ಸೂಕ್ಷ್ಮದ ಕಡೆಯಿಂದ ಸ್ಥೂಲದ ಕಡೆಗೆ ಧಾವಿಸುವದು. ನಿವೃತ್ತಿಯು ಊರ್ಧ್ವಮುಖವಾಗಿ ಸಾಗುವದು. ಸ್ಥೂಲದ ಕಡೆಯಿಂದ ಸೂಕ್ಷ್ಮದ ಕಡೆಗೆ ಶುದ್ಧ ಸತ್ವದ ಕಡೆಗೆ ಹೋಗುವದು. ಸೂಕ್ಷ್ಮದ ಶುದ್ಧ ಸತ್ವದ ಕಡೆಗೆ ಹೋಗುವಲ್ಲಿ (ಹೋದರೆ) ಅನೇಕ ಪ್ರಕಾರದ ಸುಖ ಕುಡು ಬರುವದು. (ಶುದ್ಧ ಸತ್ವ ಅಂದರೆ ಪರಬ್ರಹ್ಮವು).ಈ ಮಾತನ್ನು ವಿವೇಕವುಳ್ಳವರು ತಿಳಿಯು ವರು. (೧೯)

ಬ್ರಹ್ಮಾಂಡ ರಚನಾ ಜೆಥೂನ ಜಾಲೀ । ತೇಥೇ ವಿವೇಕೀ ದೃಷ್ಟಿ ಘಾಲೀ ।
ವಿವರತಾ ವಿವರತಾ ಲಾಧಲೀ । ಪೂರ್ವಾಪರ ಸ್ಥಿತಿ ॥೨೦॥

ಪ್ರಪಂಚೀ ಅಸೋನ ಪರಮಾರ್ಥ ಪಾಹೆ । ತೋಹಿ ಯೇ ಸ್ಥಿತೀತೇ ಲಾಹೆ ।
ಪ್ರಾರಬ್ಧಯೋಗೇ ಕರೂನ ರಾಹೆ । ಲೋಕಾಮಧೇ ॥೨೧॥

ಸಕಳಾಂಚೇ ಯೇಕ ಚಿ ಮೂಳ । ಯೇಕ ಜಾಣತೇ ಯೇಕ ಬಾಷ್ಕಳ ।
ವಿವೇಕೇ ಕರೂನ ತತ್ಕಾಳ । ಪರಲೋಕ ಸಾಧಾವಾ ॥೨೨॥

ತರೀ ಚ ಜನ್ಮಾಚೇ ಸಾರ್ಥಕ । ಭಲೇ ಪಾಹಾತೀ ಉಭಯ ಲೋಕ ।
ಕಾರಣ ಮುಳೀಚಾ ವಿವೇಕ । ಪಾಹಿಲಾ ಪಾಹಿಜೆ ॥೨೩॥

ವಿವೇಕಹೀನ ಜೆ ಜನ । ತೇ ಜಾಣಾವೇ ಪಶುಸಮಾನ ।
ತ್ಯಾಚೇ ಐಕತಾ ಭಾಷಣ । ಪರಲೋಕ ಕೈಚಾ ॥೨೪॥

ಬರೇ ಆಮುಚೇ ಕಾಯ ಗೇಲೇ । ಜೇ ಕೇಲೇ ತೇ ಫಳಾಸ ಆಲೇ ।
ಪೇರಿಲೇ ತೇ ಉಗವಲೇ । ಭೋಗಿತೀ ಆತಾ ॥೨೫॥

ಪುಢೇ ಹಿ ಕರೀ ತೋ ಪಾವೇ । ಭಕ್ತಿಯೋಗೇ ಭಗವಂತ ಧ್ಯಾವೇ ।
ದೇವ ಭಕ್ತ ಮಿಳತಾ ದುಣಾವೇ । ಸಮಾಧಾನ ॥೨೬॥

ಕೀರ್ತಿ ಕರೂನ ನಾಹೀ ಮೇಲೇ । ಉಗೇ ಚ ಆಲೇ ಆಣಿ ಗೇಲೇ ।
ಶಾಹಾಣೇ ಹೋಊನ ಭುಲಲೇ । ಕಾಯ ಸಾಂಗಾವೇ ॥೨೭॥

ಯೇಥೀಲ ಯೇಥೇ ಅವಘೇ ಚಿ ರಾಹಾತೇ । ಐಸೇ ಪ್ರತ್ಯಯಾಸ ಯೇತೇ ।
ಕೋಣ ಕಾಯ ಘೇಊನ ಜಾತೇ । ಸಾಂಗಾನಾ ಕಾ ॥೨೮॥

ಪದಾರ್ಥೀ ಅಸಾವೇ ಉದಾಸ । ವಿವೇಕ ಪಾಹಾವಾ ಸಾವಕಾಸ ।
ಯೇಣೇ ಕರಿತಾ ಜಗದೀಶ । ಅಲಭ್ಯ ಲಾಭೆ ॥೨೯॥

ಜಗದೀಶಾಪರತಾ ಲಾಭ ನಾಹೀ । ಕಾರ್ಯಾಕಾರಣ ಸರ್ವ ಕಾಂಹೀ ।
ಸಂಸಾರ ಕರಿತ ಅಸತಾ ಹಿ । ಸಮಾಧಾನ ॥೩೦॥

ಮಾಗಾ ಹೋತೇ ಜನಕಾದಿಕ । ರಾಜ್ಯ ಕರಿತಾ ಹಿ ಅನೇಕ ।
ತೈಸೇ ಚಿ ಆತಾ ಪುಣ್ಯಶ್ಲೋಕ । ಕಿತ್ಯೇಕ ಅಸತೀ ॥೩೧॥

ಈ ಬ್ರಹ್ಮಾಂಡದ ರಚನೆಯು ಆ ಯಾವ ಮೂಲ ಮಾಯೆಯಿಂದ ಆಯಿತೋ ಅಲ್ಲಿಗೆ ವಿವೇಕಿಯಾದ ವರು ತಮ್ಮ ಜ್ಞಾನ ದೃಷ್ಟಿಯನ್ನು ಒಯ್ದು ಮುಟ್ಟಿಸುವರು. ಈ ರೀತಿಯಿಂದ ಸೂಕ್ಷ್ಮ ಮನನ ಮತ್ತು ನಿಧಿ ಧ್ಯಾಸನ ಮಾಡುತ್ತ ಮಾಡುತ್ತ ಅವರಿಗೆ ಆರಂಭದ ಬ್ರಹ್ಮರೂಪ ಅವಸ್ಥೆ ಪ್ರಾಪ್ತವಾಗುವದು. [೨೦] ಪ್ರಪಂಚದಲ್ಲಿ ಇದ್ದುಕೊಂಡು ಯಾರು ಪರಮಾರ್ಥದ ಸಾಧನಾ ಮಾಡುವರೋ ಅವರಿಗೆ ಸಹ ಈ ಅವಸ್ಥೆ ಪ್ರಾಪ್ತವಾಗುವದು. ಪ್ರಾರಬ್ಧದ ಯೋಗ ಹೇಗೆ ಇರುವದೋ ಆ ಪ್ರಕಾರ ಜನತೆಯು ಕೂಡ ಇದ್ದು ಇವರು ಪ್ರಪಂಚವನ್ನು ಮಾಡುವರು. [೨೧] ಸರ್ವದರ ಮೂಲ ಒಂದೇ ಇರುವದು. ಇದನ್ನು ವಿವೇಕವುಳ್ಳವನು ತಿಳಿಯುವನು. ಅವಿವೇಕಿ-ವಿವೇಕಹೀನನಾದವನು-ತಿಳಿಯಲಾರನು. ಆದ್ದರಿಂದ ಬುದ್ಧಿವಂತರಾದವರು ವಿವೇಕವನ್ನು ಉಪಯೋಗಿಸಿ ಶೀಘ್ರವಾಗಿ ಪರಮಾರ್ಥವನ್ನು ಸಾಧಿಸಬೇಕು. [೨೨] ಪರಮಾರ್ಥ ಸಾಧಿಸಿದರೆ ಮಾತ್ರ ಜನ್ಮದ ಸಾರ್ಥಕ್ಯವಾಗು ವದು. ಇದಕ್ಕಾಗಿ ಬುದ್ಧಿವಂತರು ಪ್ರಪಂಚ ಮತ್ತು ಪರಮಾರ್ಥ ಎರಡನ್ನೂ ಸಾಧಿಸುವರು. ಎರಡನ್ನೂ ಸಾಧಿಸು ವದಕ್ಕಾಗಿ ವಿವೇಕ ವಿಚಾರದಿಂದ ಮೂಲದ ವರೆಗೆ ಹೋಗಬೇಕಾಗುವದು. [೨೩] ವಿವೇಕ-ಹೀನ ಜನರು ಜನಾವರ [ದನ]ದಂತೆ ಬಾಳುವರು. ಇಂಥವರ ಹೇಳಿಕೆ ಕೇಳಿದರೆ ಪರಮಾರ್ಥ ಸಾಧಿಸುವದು ಶಕ್ಯವೇ ಇಲ್ಲ. [೨೪] ಇರಲಿ, ವಿವೇಕ ಹೀನತನದಿಂದ ಯಾರೇ ಆಗಲಿ ಬಾಳಿ ಬದುಕಿದರೆ ನಮ್ಮದೇನೂ ಹಾನಿಯಾಗುವದಿಲ್ಲ. ಯಾವನು ಏನನ್ನು ಮಾಡು ವನೋ ಅದರ ಫಲ ಅವನಿಗೇ ಸಿಗುವದು. ಏನನ್ನು ಬಿತ್ತುವನೋ ಅದೇ ಹುಟ್ಟುತ್ತದೆ. ಅದರ ಫಲವನ್ನು ಮನು ಷ್ಯನು ಭೋಗಿಸಲೇಬೇಕು. ಈಗ ಭೋಗಿಸುವದನ್ನು ಎಲ್ಲರೂ ನೋಡುವೆವು. [೨೫] ಹಿಂದೆ ಆದದ್ದು ಆಯಿತು. [ಆಗಿ ಹೋಯಿತು]. ಈಗಲೂ ಸಹ ಮನುಷ್ಯನು ಭಗವಂತನ ಭಕ್ತಿ ಮಾಡಿ ಸಮಾಧಾನವನ್ನು ದೊರಕಿಸಿಕೊಳ್ಳಲು ಶಕ್ಯವಿದೆ. ಮನುಷ್ಯನು ಜಡದ ಬಗ್ಗೆ ಅನಾಸಕ್ತನಾಗಿ ಇದ್ದುಕೊಂಡು ಭಗವಂತನ ಶೋಧ ಮಾಡಿದರೆ ಅವನಿಗೆ ಆತ್ಮ ಜ್ಞಾನವಾಗುವದು ಕಠಿಣವಿಲ್ಲ. ಖಾತ್ರಿಯಿಂದ ಆತ್ಮಜ್ಞಾನವಾಗುವದು:- ಈಗಲಾದರೂ ಸಹ ಮನುಷ್ಯನು ಪರ ಮಾರ್ಥ ಮಾಡಿದ್ದಾದರೆ ಅವನಿಗೆ ಅದು ಸಾಧಿಸುವದು. ಇವನು ಭಕ್ತಿ ಮಾಡಿದ್ದಾದರೆ ಇವನಿಗೆ ಭಗವಂತನ ಪ್ರಾಪ್ತಿ ಆಗುವದು. ಭಕ್ತನದು ಭಗವಂತನೊಂದಿಗೆ ಐಕ್ಯವು ಒದಗಿ ಬಂದ ಕೂಡಲೇ ಭಕ್ತನ ಸಮಾಧಾನವು ದುಪ್ಪಟ್ಟು ಪ್ರಮಾಣದಲ್ಲಿ ಬೆಳಗುವದು. ಭಕ್ತನು ಪೂರ್ಣ ಸಮಾಧಾನಿಯಾಗುವನು. [೨೬] ಒಳ್ಳೇ ಭಕ್ತ ಅಂತಾ ಯಾರು ಹೆಸರು ಪಡೆಯದೇ ಮರಣ ಹೊಂದುವರೋ ಅವರೆಲ್ಲ (ಸುಮ್ಮನೆ)ವ್ಯರ್ಥ ಜನ್ಮತಳೆದಂತೆ. ಮತ್ತು ವ್ಯರ್ಥ ಜೀವಿಸಿ ವ್ಯರ್ಥ ಸತ್ತು ಹೋದಂತೆ ಆಗುವದು. ಬುದ್ಧಿವಂತರಾದ ಜಾಣ ಜನರಿಗೂ ಸಹ ಇಲ್ಲಿ (ಪ್ರಪಂಚದಲ್ಲಿ) ಮೋಹ ಭ್ರಮದ ಪಾಶ ಬೀಳುವದು. ಇದಕ್ಕೆ ಏನನ್ನಬೇಕು. [೨೭] ಈ ಜಗದಲ್ಲಿಯದೆಲ್ಲವೂ ಇಲ್ಲಿಯೇ ಇರುವದು. ಯಾ ವುದೂ ನಮ್ಮ ಜೊತೆಗೆ ಬರುವದಿಲ್ಲ. ಇದು ಪ್ರತ್ಯಕ್ಷ ಅನುಭವದ ಮಾತಾಗಿದೆ. ಯಾರಾದರೂ ಏನನ್ನಾದರೂ ತಮ್ಮ ಸಂಗಡ ತೆಗೆದುಕೊಂಡು ಹೋದದ್ದಿದ್ದರೆ ಹೇಳಿರಿ. [೨೮] ಒಟ್ಟಿನಲ್ಲಿ ಮನುಷ್ಯನು ದೃಶ್ಯ ವಸ್ತುಗಳ ಬಗ್ಗೆ ಅನಾಸಕ್ತನಾಗಿರಬೇಕು. ಪೂರ್ಣ ಶಾಂತತನದಿಂದ ಸೂಕ್ಷ್ಮ ವಿವೇಕ ವಿಚಾರ ಮಾಡಬೇಕು. ಹೀಗೆ ಮಾಡುವದರಿಂದ ಪರಮೇಶ್ವರನ ಲಾಭವಾಗುವದು. ಇದು ಬಹು ದೊಡ್ಡ ಲಾಭವೇ ಇರುವದು. ಅಲಭ್ಯ ಲಾಭವೇ ಸರಿ. [೨೯] ಪರಮೇಶ್ವರನ ಪ್ರಾಪ್ತಿಯಂಥ ದೊಡ್ಡ ಲಾಭ ಈ ಜಗತ್ತಿನಲ್ಲಿ ಬೇರೆ ಯಾವುದೂ ಇಲ್ಲ. ಆದ್ದರಿಂದ ಇದರ ಕಡೆಗೆ ಅವಶ್ಯ ಲಕ್ಷ್ಯಕೊಟ್ಟು ಪ್ರಪಂಚಕ್ಕೆ ಅತಿ ಅವಶ್ಯವಿರುವಂಥ ಕರ್ಮವನ್ನು ಯೋಗ್ಯ ಪ್ರಮಾಣದಿಂದ ಮಾಡಲಿಕ್ಕೆ ಅಡ್ಡಿ ಇಲ್ಲ. ಇದು ಪರಮಾರ್ಥಕ್ಕೆ ಅಡ್ಡ ಬರುವದಿಲ್ಲ. ಹೀಗೆ ನಡೆದರೆ ಸಂಸಾರ ಮಾಡುವಾಗ ಸಹ ಸಮಾಧಾನವು ಕಾಯಂ ಉಳಿಯುವದು. (೩೦) ಪೂರ್ವಕಾಲದಲ್ಲಿ ಜನಕಾದಿ ಅನೇಕ ರಾಜರು ಆಗಿ ಹೋದರು. ಅವರು ರಾಜ್ಯಭಾರ ಮಾಡುವದರೊಂದಿಗೆ ತಮ್ಮ ಸಮಾಧಾನವನ್ನು ಉಳಿಸಿಕೊಂಡು ಪುಣ್ಯವಂತರೆನಿಸಿಕೊಂಡರು. ಕೀರ್ತಿ ಶಾಲಿಗಳಾದರು. ಸದ್ಯದಲ್ಲಿ ಸಹ ಇಂಥ ಪುಣ್ಯಪುರುಷರು. ಜೀವಿಸುವರು. [೩೧]

ರಾಜಾ ಅಸತಾ ಮೃತ್ಯ ಆಲಾ। ಲಕ್ಷ ಕೋಟೀ ಕಬುಲ ಜಾಲಾ।
ತರಿ ಸೋಡಿನಾ ತಯಾಲಾ। ಮೃತ್ಯ ಕಾಹೀ ॥೩೨॥

ಐಸೇ ಹೇ ಪರಾಧೇನ ಜಿಣೇ। ಯಾ ಮಧೇ ದುಖಣೇ ಬಾಹಾಣೇ।
ನಾನಾ ಉದ್ವೇಗ ಚಿಂತಾ ಕರಣೇ। ಕಿತೀ ಮ್ಹಣೋನೀ ॥೩೩॥

ಹಾಟ ಭರಲಾ ಸಂಸಾರಾಚಾ। ನಫಾ ಪಾಹಾವಾ ದೇವಾಚಾ।
ತರೀ ಚ ಯಾ ಕಷ್ಟಾಚಾ। ಪರಿಯಾಯ ಹೋತೋ ॥೩೪॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
''ಕಾಳರೂಪ'' ನಾಮ ಸಮಾಸ ಅಷ್ಟಮ ॥

ಈ ಸಂಸಾರವು ತಾತ್ಪೂರ್ತಿಕವಾದದ್ದಿರುವದು. ಇದು ಕಾಳಜಿ (ಚಿಂತೆ) ಯಿಂದ ವ್ಯಾಪಿಸಿದ್ದಿರುವದು. ಇಂಥದರಲ್ಲಿಯೇ ಭಗವಂತನನ್ನು ಪ್ರಾಪ್ತ ಮಾಡಿಕೊಳ್ಳಬೇಕು:– ತಿಳಿಯಿರಿ. ಒಬ್ಬ ರಾಜನಿಗೆ ಅಂತ್ಯಕಾಲ ಬಂದಿತು, ಮರಣವನ್ನು ತಪ್ಪಿಸಿಕೊಳ್ಳುವದಕ್ಕಾಗಿ ಲಕ್ಷಾವಧಿ ಅಷ್ಟೇ ಅಲ್ಲ, ಕೋಟ್ಯಾವಧಿ ರೂಪಾಯಿಗಳನ್ನು ಕೊಡಲಿಕ್ಕೆ ತಯಾರ ಆದನು. ಆದರೆ ಏನು ಮಾಡಿದರೂ ಮರಣವು ತಪ್ಪಿದ್ದಲ್ಲವೆಂದು ತಿಳಿದು ಯಾರೂ ಇದಕ್ಕೆ ತಯಾರ ಆಗಲಿಲ್ಲ. ಮರಣವು ಆವನನ್ನು ಬಿಡಲಿಲ್ಲ. [೩೨] ಮನುಷ್ಯನು ಜೀವಿಸಿ ಇರುವದು ನಿಜವಾಗಿ ಪರಾಧೀನವಾದದ್ದಿರುವದು. ಹಾಗೆಯೇ ರೋಗ ರುಜಿನಗಳು ಅನೇಕ ಪ್ರಕಾರದ ದುಃಖ ದುಷ್ಮಾನ ಮತ್ತು ಚಿಂತೆ ಇವುಗಳಿಂದ ವ್ಯಾಪಿಸಿರುವನು. ಯಾವತ್ತನ್ನೂ ಇಲ್ಲಿ ಹೇಳಲಿಕ್ಕೆ ಶಕ್ಯವಿಲ್ಲ. [೩೩] ಸಂಸಾರದ ಸಂತೆ ಕೂಡಿರುವದು. ಇದರಲ್ಲಿ ದೇವರ ಲಾಭ ನೋಡಬೇಕು. ಇದರ ಲಾಭ ಮಾಡಿಕೊಳ್ಳಬೇಕು. ದೇವರ ಲಾಭವಾದರೇನೇ ಸಂಸಾರದಲ್ಲಿ ಮಾಡಿದ ಕಷ್ಟಕ್ಕೆ ನಿಜವಾದ ಪ್ರತಿಫಲ ಸಿಕ್ಕಂತಾಗುವದು. ಇಲ್ಲದಿದ್ದರೆ ಮಾಡಿದ ಶ್ರಮ ನಿಜವಾಗಿಯೂ ವ್ಯರ್ಥವಾಗಿ ಹೋದಂತಾಗುವದು. [೩೪]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹನ್ನೆರಡನೆಯ ದಶಕದೊಳಗಿನ
"ಕಾಳರೂಪ" ಎಂಬ ಎಂಟನೆಯ ಸಮಾಸವು ಮುಗಿದುದು.

● ●

ದಶಕ ದ್ವಾದಶ : ಸಮಾಸ ನವಮು : ಯತ್ನ ಶಿಕವಣ

॥ಶ್ರೀರಾಮ॥ ದುರ್ಬಲ ನಾಚಾರಿ ವೊಡಗಸ್ತ । ಆಳಸೀ ಖಾದಾಡ ರಿಣಗಸ್ತ ।
ಮೂರ್ಖಪಣೇ ಅವಘೇ ವೆಸ್ತ । ಕಾಂಹೀ ಚ ನಾಹೀ ॥೧॥

ಖಾಯಾ ನಾಹೀ ಜೇವಾಯಾ ನಾಹೀ । ಲೇಯಾ ನಾಹೀ ನೇಸಾಯಾ ನಾಹೀ ।
ಅಂಥರಾಯಾ ನಾಹೀ ಪಾಂಘುರಾಯಾ ನಾಹೀ। ಕೋಪಟ ನಾಹೀ ಅಭಾಗೀ ॥೨॥

## ದಶಕ ೧೨. ಸಮಾಸ ೯. ಯತ್ನಸಿಕವಣ (ನುಡಿ ೩೦)

ಸಂತರ ಉಪದೇಶವನ್ನು ಸೂಕ್ಷ್ಮ ರೀತಿಯಿಂದ ಪರಿಶೀಲಿಸಿದಾಗ ತಿಳಿಯುವದೇನಂದರೆ, ಸಂತ-ಸಾಧು ಇವರು ಪ್ರಯತ್ನವಾದಿಯಾಗಿದ್ದರೆಂದು ತಿಳಿಯುವದು. ಇದು ಖರೇ ಇದ್ದರೂ ಸಹ ನಮ್ಮ ಶ್ರೀಸಮರ್ಥರ ಪ್ರಯತ್ನ ವಾದವು ಒಂದು ಬೇರೆ ರೀತಿಯದು. ಅಥವಾ ಆಶ್ಚರ್ಯ, ಕೌತುಕ ಪಡುವಂಥಾದ್ದಿರುವದು. ಈ ಕರ್ಮಭೂಮಿಯಲ್ಲಿ ಅದರಲ್ಲಿಯೂ ಮಾನವ ಜೀವನದಲ್ಲಿ ಪ್ರಯತ್ನವೊಂದೇ ದೇವರೆಂದು ತಿಳಿಯಬೇಕು, ಅನ್ನುವದೇ ಇವರ ಸ್ಪಷ್ಟ ಹೇಳಿಕೆಯಾಗಿದೆಯೆಂದು ಕಾಣುವದು. ಒಬ್ಬ ಅತ್ಯಂತ ದುರ್ದೈವಿ ಮನುಷ್ಯನು ಇದ್ದನು. ಯಾವತ್ತೂ ರೀತಿಯಿಂದ ಅಭಾಗಿ, ಕೃಪಣ, ಭಿಕಾರಿ, ಇತ್ಯಾದಿ ಲಕ್ಷಣಗಳಿಂದ ಕೂಡಿದವನಾಗಿದ್ದನು. ಇವನು ಜೀವನದ ಬಾಳಿಗೆ ಬೇಸರಗೊಂಡು ಶ್ರೀ ಸಮರ್ಥರಿಗೆ ಪ್ರಶ್ನೆ ಮಾಡಿ ಕೇಳಿಕೊಂಡಿದ್ದೇನಂದರೆ:- "ನನ್ನ ಈ ವಿಪನ್ನ(ಕಷ್ಟ)ದ ಅವಸ್ಥೆ ನನಗೆ ಬೇಡವಾಗಿದೆ. ಸಾಕು ಸಾಕಾಗಿದೆ. ನಾನು ಬದುಕಿರಬೇಕೇ ? ಅಥವಾ ಸತ್ತು ಹೋಗಬೇಕೇ ? ಮತ್ತು ಬದುಕಬೇಕು ಅಂತಾ ನೀವು ಅನ್ನುವದಾದರೆ ಹೇಗೆ ಬಾಳಬೇಕು ? ಜೀವನ ಹೇಗೆ ಸಾಗಿಸಬೇಕು ? ಇವನ ಪ್ರಶ್ನೆಗೆ ಉತ್ತರ ಕೊಡುವದಕ್ಕಾಗಿಯೇ ಶ್ರೀ ಸಮರ್ಥರು ಈ ಸಮಾಸ ಹೇಳಿದ್ದಾರೆ. ಇವರ ಹೇಳುವಿಕೆಯ ಉದ್ದೇಶದ ಗುರಿ ಯಾವುದೆಂದರೆ ಆಲಸ್ಯವನ್ನು ಹೊಸಗಿ ಎಸೆದುಬಿಡಿರಿ. ಮತ್ತು ಯೋಗ್ಯ ದಿಶೆಯಿಂದ ನೀವು ಪ್ರಯತ್ನ ಮಾಡಿದ್ದಾದರೆ ಅಂಥ ಮನುಷ್ಯನಿಗೆ ದೈವ ಅನುಕೂಲ ಆಗದೇ ಇರಲಾರದು. ಇದೇ ಇವರ ಸಂದೇಶವಿರುವದು. ಮನುಷ್ಯನು ಎಷ್ಟೂ ನಿರಾಶನಾಗಬಾರದು. ನೀಟಾಗಿ ಬಾಳುವ ನಿಶ್ಚಯ ಮಾಡಬೇಕು. ಆದರೆ ಹೇಗೆ ಬಾಳಿ ಬದುಕಬೇಕೆಂಬುದು ನಮಗೆಲ್ಲರಿಗೂ ತಿಳಿಯುವ ದಕ್ಕಾಗಿ ಶ್ರೀ ಸಮರ್ಥರು ಜೀವನ ಪದ್ಧತಿಯ ಒಂದು ರೂಪ-ರೇಷೆಯನ್ನು ಸಹ ಹೇಳಿಕೊಟ್ಟಿದ್ದಾರೆ. ಮನುಷ್ಯನು ಮೊದಲಿಗೆ ಉದ್ವಿಗ್ನತೆ (ಉದಾಸೀನತೆ) ಯನ್ನು ತ್ಯಜಿಸಬೇಕು. ಪ್ರಸನ್ನ ಮನದಿಂದ ಆತ್ಮ ಸುಧಾರಣೆಯ ಮಾರ್ಗದ ಬೆನ್ನು ಹತ್ತಬೇಕು. ನಾವು ಏನನ್ನು ಮಾತನಾಡುವೆವೋ ಅದರಂತೆ ನಡೆಯಬೇಕು. ಆಡುವದೊಂದು ಮಾಡುವ ದೊಂದು ಆಗಬಾರದು. "ನುಡಿದಂತೆ ನಡೆ, ಇದೇ ಜನ್ಮಕಡೆ" ಅನ್ನುವ ಹಿರಿಯರ ವಾಕ್ಯ ಮರೆಯಬಾರದು. ನಿರ ಪೇಕ್ಷತನವಿರಬೇಕು. ಜನರನ್ನು ಮಧುರ ಶಬ್ದಗಳಿಂದ ನಿಮ್ಮವರನ್ನಾಗಿ ಮಾಡಿಕೊಳ್ಳಬೇಕು. ಹೃದಯದಲ್ಲಿ ಭಗವಂತನ ಧ್ಯಾನ ಸದಾ ಇರಬೇಕು. ಮುಖದಿಂದ ನಾಮಸ್ಮರಣ ಮಾಡಬೇಕು. ಹೀಗೆ ಯಾರು ಮಾಡುವರೋ ಅವರಲ್ಲಿ ತೇಜ ಉತ್ಪನ್ನವಾಗಲು ತಡವಾಗಲಾರದು. ಇವನು ಮೇಲಿನ ದರ್ಜೆಯ ಮಹಂತನಾಗುವನು. ಆ ಮೇಲೆ ಇವನ ಭಾಗ್ಯದ ಮುಂದೆ ಬೇರೆ ಯಾವುದೂ ಇರಲಾರದು. ಇವನಿಗೆ ಯಾವದರ ಕೊರತೆ ಉಂಟಾಗುವದಿಲ್ಲ. ಕೇವಲ ಭಾಗ್ಯವೇ ಭಾಗ್ಯವು.

### ದಶಕ ೧೨. ಸಮಾಸ ೯. ಯತ್ನಸಿಕವಣ (ನುಡಿ ೩೦)

ಪ್ರತಿಯೊಂದು ದೇಶವಲ್ಲಿ, ಪ್ರತಿಯೊಂದು ಸಮಾಜದಲ್ಲಿ, ಪ್ರತಿಯೊಂದು ಕಾಲದಲ್ಲಿ ಕೆಲವೊಂದು ದುರ್ದೈವೀ ಜನರು ಇದ್ದೇ ಇರುವರು. ಇದು ಮಾನವೀ ಜೀವನದಲ್ಲಿಯ ನಿಯಮವೇ ಇರುವದು. ಇಂಥ ಒಂದು ಪ್ರಕಾರದ ಒಬ್ಬ ದುರ್ದೈವಿ ಮತ್ತು ಕೃಪಣ ಅಭಾಗೀ ಮನುಷ್ಯನು ತಳಮಳದಿಂದ ಕೂಡಿದವನಾಗಿ ಶ್ರೀ ಸಮರ್ಥ ರಿಗೆ ತನ್ನ ಪರಿಸ್ಥಿತಿಯನ್ನು ಹೇಳಿದನು. ಕೊನೆಗೆ"ಬಾಳಿ ಬದುಕುವದರಲ್ಲಿ ಅರ್ಥವಿರುವದೇ ಅಥವಾ ಇಲ್ಲವೇ"ಅನ್ನುವ ಪ್ರಶ್ನೆಯು ಅವನ ಮುಂದೆ ನಿಲ್ಲುವದು. ಅವರ ವರ್ಣನೆಯನ್ನು ಕೇಳಿರಿ:— ಯಾರ ಆಧಾರ, ಆಸರೆ ಇಲ್ಲದ ಒಬ್ಬ ದುರ್ಬಲ ದುರ್ದೈವಿ ಮತ್ತು ಧನಹೀನ ಮನುಷ್ಯನು ಇದ್ದನು. ಅವನ ಇರುವಿಕೆಯು ಒಟ್ಟಿನಲ್ಲಿ ಹೀಗಿದ್ದಿತು. ಇವನು ಆಲಸಿ ಮತ್ತು ಆಶಾಳೆಯುಳ್ಳವನಾಗಿದ್ದನು. ಇದಲ್ಲದೆ ಇವನು ಸಾಲಗಾರನೂ ಆಗಿದ್ದನು. ಮೂರ್ಖತನ ದಿಂದಾಗಿ ಇವನ ಜೀವನವೆಲ್ಲವೂ ಅಸ್ತವ್ಯಸ್ತವಾಗಿ ಹೋಗಿದ್ದಿತು. ಇವನದು ಏನೂ ವ್ಯವಸ್ಥಿತವಿರಲಿಲ್ಲ. [೧] ಈ ಅಭಾಗಿ ಮನುಷ್ಯನಿಗೆ ಸ್ವಲ್ಪವಾದರೂ ತಿನ್ನುವುದಕ್ಕೆ ಇಲ್ಲ. ಮೈಮೇಲೆ ಹಾಕಿಕೊಳ್ಳಲು ಮತ್ತು ಉಡಲು ವಸ್ತ್ರ ಸಹ ಇಲ್ಲ. ಹಾಸಿಗೆಯೂ ಇಲ್ಲ. ಹೊದ್ದುಕೊಳ್ಳಲೂ ಇಲ್ಲ. ಇರಲಿಕ್ಕೆ ಒಂದು ಗುಡಿಸಲೂ ಸಹ ಇಲ್ಲ. ಹೀಗಿತ್ತು ಇವನ ದೈನ್ಯಾವಸ್ಥೆಯು. [೨]

ಸೋಯರೆ ನಾಹೀ ಧಾಯರೆ ನಾಹೀ । ಇಷ್ಟನಾಹೀ ಮಿತ್ರನಾಹೀ ।
ಪಾಹಾತಾ ಕೋಠೇ ಓಳಖೀ ನಾಹೀ । ಆಶ್ರಯೇವಿಣ ಪರದೇಸೀ ॥೩॥

ತೇಣೇ ಕೈಸೇ ಕರಾವೇ । ಕಾಯ ಜೀವೇಸೀ ಧರಾವೇ ।
ವಾಚಾವೇ ಕೀ ಮರಾವೇ । ಕೋಣ್ಯಾ ಪ್ರಕಾರೇ ॥೪॥

ಐಸೇ ಕೋಣೇಯೇಕೇ ಪುಸಿಲೇ । ಕೋಣೇಯೇಕೇ ಉತ್ತರ ದಿಧಲೇ ।
ಶ್ರೋತೀ ಸಾವಧ ಐಕಿಲೇ । ಪಾಹಿಜೆ ಆತಾ ॥೫॥

ಲಹಾನಥೋರ ಕಾಮ ಕಾಂಹೀ । ಕೇಲ್ಯಾವೇಗಳೇ ಹೋತ ನಾಹೀ ।
ಕರಂಟ್ಯಾ ಸಾವಧ ಪಾಹೀ । ಸದೇವ ಹೋಸೀ ॥೬॥

ಅಂತರೀ ನಾಹೀ ಸಾವಧಾನತಾ । ಯೆತ್ನ ಠಾಕೇನಾ ಪುರತಾ ।
ಸುಖಸಂತೋಷಾಚೀ ವಾರ್ತಾ । ತೇಥೇ ಕೈಚೀ ॥೭॥

ಮ್ಹಣೋನ ಆಳಸ ಸೋಡಾವಾ । ಯೆತ್ನ ಸಾಕ್ಷೇಪೇ ಜೋಡಾವಾ ।
ದುಶ್ಚಿತಪಣಾಚಾ ಮೋಡಾವಾ । ಥಾರಾ ಬಳೇ ॥೮॥

ಪ್ರಾತಃಕಾಳೀ ಉಠತ ಜಾವೇ । ಪ್ರಾತಃಸ್ಮರಾಮಿ ಕರಾವೇ ।
ನಿತ್ಯ ನೇಮೇ ಸ್ಮರಾವೇ । ಪಾಠಾಂತರ ॥೯॥

ಮಾಗೀಲ ಉಜಳಣಿ ಪುಢೇ ಪಾಠ । ನೇಮ ಧರಾವಾ ನಿಕಟ ।
ಬಾಷ್ಕಳಪಣಾಚೀ ವಟವಟ । ಕರೂಚ ನಯೇ ॥೧೦॥

ದಿಶೇಕಡೆ ದುರೀ ಜಾವೇ । ಸುಚಿಸ್ಮಂತ ಹೋಊನ ಯಾವೇ ।
ಯೇತಾ ಕಾಂಹೀ ತರೀ ಆಣಾವೇ । ರಿತೇ ಖೋಟೇ ॥೧೧॥

ಧೂತವಸ್ತ್ರೇ ಘಾಲಾವೀ ಪಿಳೂನ । ಕರಾವೇ ಚರಣಕ್ಷಾಳಣ ।
ದೇವದರ್ಶನ ದೇವಾರ್ಚನ । ಯಥಾಸಾಂಗ ॥೧೨॥

ಕಾಂಹೀ ಫಳಾಹಾರ ಘ್ಯಾವಾ । ಪುಢೇ ವೆವಸಾಯ ಕರಾವಾ ।
ಲೋಕ ಆಪಲಾ ಪರಾವಾ । ಮ್ಹಣತ ಜಾವಾ ॥೧೩॥

ಸುಂದರ ಅಕ್ಷರ ಲ್ಯಾಹಾವೇ । ಪಷ್ಟ ನೇಮಸ್ತ ವಾಚಾವೇ ।
ವಿವರವಿವರೋ ಜಾಣಾವೇ । ಅರ್ಥಾಂತರ ॥೧೪॥

ನೇಮಸ್ತ ನೇಟಕೇ ಪುಸಾವೇ । ವಿಶದ ಕರೂನ ಸಾಂಗಾವೇ ।
ಪ್ರತ್ಯಯೇವಿಣ ಬೋಲಾವೇ । ತೇ ಚಿ ಪಾಪ ॥೧೫॥

ಇವನಿಗೆ ಯಾರೂ ಹತ್ತಿ ಹೊಂದಿದವರೂ ಇರಲಿಲ್ಲ. ಇಷ್ಟಮಿತ್ರರೂ ಇರಲಿಲ್ಲ ಎಲ್ಲಿಯೂ ಯಾರದೂ ವಿಶೇಷ ಗುರುತು ಸಹ ಇರಲಿಲ್ಲ. ಯಾರ ಆಶ್ರಯವೂ ಸಹ ಇದ್ದಿಲ್ಲ. ಇಂಥ ಇವನು ಸ್ವದೇಶದಲ್ಲಿಯೇ ಪರದೇಶಿಯಾಗಿ ಜೀವಿಸಿದ್ದನು. [೩] ಇಂಥ ಮನುಷ್ಯನು ಏನು ಮಾಡಬೇಕು ? ಯಾವ ಆಶೆಯಿಂದ ಜೀವ ಹಿಡಿದು ಬಾಳಬೇಕು ? ಯಾವ ರೀತಿಯಿಂದ ಇವನು ಬದುಕಬೇಕು? ಅಥವಾ ಸತ್ತೇ ಹೋಗಬೇಕೆ ? [೪] ಇಂಥ ಪ್ರಶ್ನೆಯನ್ನು ಒಬ್ಬನು ವಿಚಾರಿಸಿದನು. ಇದಕ್ಕೆ ಯಾವ ಉತ್ತರವನ್ನು ಕೊಟ್ಟರು ಇದನ್ನೆಲ್ಲ ಶ್ರೋತಾ ಜನರು ಲಕ್ಷ್ಯಪೂರ್ವಕ ಕೇಳಬೇಕು. **(೫) ಪ್ರತ್ಯಕ್ಷ ಕಾಣುವಂಥ ಯಶಸ್ವಿ ಆಗುವಂಥ ಪ್ರಯತ್ನ ಮಾಡುವದು ಹೇಗೆ ? ಇದನ್ನು ಹೇಳುವ ಮೊದಲು ಈ ಅಭಾಗಿ ಮನುಷ್ಯ ತನ್ನ ಮನಸ್ಸನ್ನು ಸ್ವಲ್ಪ ಬದಲಿಸಿಕೊಳ್ಳಬೇಕೆಂದು ಹೇಳುವರು:-** ಮಾನವ ಜೀವನದಲ್ಲಿ ಒಂದು ನಿಯಮವಿರುವದು. ಯಾವುದೇ ಕೆಲಸ ಕಾರ್ಯ ಅದು ಸಣ್ಣದಿರಲಿ ಅಥವಾ ದೊಡ್ಡದಿರಲಿ, ಮಾಡದ ಹೊರತು ಆಗುವದಿಲ್ಲ. ಆ ಯಾವ ಅಭಾಗಿ ಮನುಷ್ಯನಿಗೆ ಭಾಗ್ಯವಾನನಾಗಬೇಕೆಂಬ ಇಚ್ಛೆ ಇದ್ದರೆ ಅವನು ಈ ಮಾತನ್ನು ಮನಃಪೂರ್ವಕವಾಗಿ ವಿಚಾರ ಮಾಡಿ ಇದನ್ನು ತನ್ನಲ್ಲಿ ಗಟ್ಟಿಯಾಗಿಟ್ಟುಕೊಳ್ಳಬೇಕು [೬] ಉತ್ತಮ ಪ್ರಯತ್ನವಾಗಲು ಮನದಲ್ಲಿ ದಕ್ಷತೆ (ಎಚ್ಚರ) ಬೇಕು. ಮನುಷ್ಯನಲ್ಲಿ ಸಾವಧಾನತೆ ಇಲ್ಲದಿದ್ದರೆ ಅವನ ಕೈಯಿಂದ ಕೊನೆಯವರೆಗೂ ಪ್ರಯತ್ನವಾಗುವದಿಲ್ಲ. ಮತ್ತು ಯಾರ ಕೈಯಿಂದ ಇಂಥ ದೀರ್ಘ ಪ್ರಯತ್ನವಾಗುವದಿಲ್ಲವೋ ಅವನ ಬಾಳಿನಲ್ಲಿ ಸುಖ ಸಂತೋಷದ ಅನುಭವ ಬರುವದಿಲ್ಲ. (೭) ಆದ್ದರಿಂದ ಮನುಷ್ಯನು ಮೊದಲಿಗೆ ಆಲಸ್ಯವನ್ನು ಸಂಪೂರ್ಣ ಬಿಡಬೇಕು. ಬಹಳ ಛಲದಿಂದ ಪ್ರಯತ್ನ ಮಾಡಬೇಕು. ದೀರ್ಘ ಉದ್ಯೋಗಿಯಾಗಬೇಕು. ಪ್ರಯತ್ನ ಮಾಡುವಾಗ ಮನದಲ್ಲಿ ಸಂಶಯ ಬರಬಹುದು. ಮನವು ನಿರಾಸೆ ಹೊಂದಬಹುದು. ಮನಸ್ಸು ಹಿಂದಕ್ಕೆ ತಿರುಗಬಹುದು. ಈ ಎಲ್ಲ ವಿಕ್ಷೇಪಗಳನ್ನು ಧೈರ್ಯದಿಂದ ಜಬರದಸ್ತಿಯಿಂದ ಹೊರಗೆ ತೆಗೆದು ಒಗೆಯಿರಿ. ಪ್ರಯತ್ನಶೀಲರಾಗಿರಿ. **(೮) ಆಮೇಲೆ ಪ್ರಯತ್ನಶೀಲ ಮನುಷ್ಯನು ತನ್ನ ಜೀವನ ಪದ್ಧತಿಯನ್ನು ಹೇಗಿಡಬೇಕೆಂಬ ಬಗ್ಗೆ ಸ್ವಲ್ಪದರಲ್ಲಿ ವರ್ಣನೆ ಮಾಡಿ ಹೇಳುವರು:-** ಮನುಷ್ಯನು ಮುಂಜಾನೆ-(ಬೆಳಿಗ್ಗೆ) ಬೇಗ ಏಳಬೇಕು, ಎದ್ದ ಮೇಲೆ ಭಗವಂತನ ಸ್ಮರಣ ಮಾಡಬೇಕು. ಮೊದಲಿಗೆ ಏನಾದರೂ ಬಾಯಿಪಾಠ ಮಾಡಿದವುಗಳು ಇದ್ದರೆ ಅವುಗಳನ್ನು ಪುನಃ ಉಜಳಣಿ (ಪುನರಾವರ್ತನೆ) ಮಾಡಬೇಕು. (೯) ಮೊದಲು ಪಾಠ ಮಾಡಿದವುಗಳನ್ನು ಪುನಃ ಉಜಳಣಿ ಮಾಡುವದು ಮತ್ತು ಹೊಸದಾಗಿ ಯಾವುದಾದರೂ ಪಾಠ ಓದುವದು ಹೀಗೆ ದೃಢ ನಿಯಮ ಮಾಡಬೇಕು. ವ್ಯರ್ಥವಾದ ಹಾಳು ಹರಟೆಯನ್ನು ಬಿಟ್ಟುಬಿಡಬೇಕು. [೧೦] ಆಮೇಲೆ ದೂರದವರೆಗೂ ಹೋಗಿ (ಎಲ್ಲಿಯಾದರೂ) ಶೌಚಾದಿಗಳನ್ನು ತೀರಿಸಿ ನಿರ್ಮಲಗೊಂಡು ಬರಬೇಕು. ಬರುವಾಗ ಏನಾದರೂ (ಹೂವು, ಪತ್ರಿ, ತುಳಸಿ ಇತ್ಯಾದಿ) ತರಬೇಕು. ಬರಿಗೈಯಿಂದ ಬರಬಾರದು [೧೧] ಮನೆಗೆ ಬಂದ ಮೇಲೆ ಕಾಲು ತೊಳೆಯಬೇಕು. ನಿಮ್ಮ ಒಗೆದ ವಸ್ತ್ರಗಳನ್ನು ಹಿಂಡಿ ಒಣಗ ಹಾಕಬೇಕು. ನಂತರ ದೇವ ಪೂಜಾ ವ ದೇವದರ್ಶನ ಇವನ್ನು ವ್ಯವಸ್ಥಿತವಾಗಿ ಮಾಡಬೇಕು. [೧೨] ಇಷ್ಟೆಲ್ಲ ಆದ ಮೇಲೆ ಏನಾದರೂ ಫಲಾಹಾರ ಮಾಡಬೇಕು. ಆ ಮೇಲೆ ನಿಮ್ಮ ವ್ಯವಸಾಯ ಯಾವದಿರುವದೋ ಅದನ್ನು ಮಾಡಬೇಕು. ಜನರಲ್ಲಿ ನಮ್ಮವರು ಯಾರು ಮತ್ತು ನಮ್ಮವರಲ್ಲವವರು ಯಾರು ? ಇದನ್ನು ತಿಳಿದುಕೊಂಡು ನಡೆಯಬೇಕು. (ಅವರನ್ನು ನಮ್ಮವರನ್ನಾಗಿ ಮಾಡಿಕೊಳ್ಳಬೇಕು). [೧೩] ಬರೆಯುವಾಗ ಅಕ್ಷರಗಳನ್ನು ಸುಂದರವಾಗಿ ಬರೆಯಬೇಕು. ಓದುವಾಗ ಸ್ಪಷ್ಟವಾಗಿ ಮತ್ತು ಸರಿಯಾಗಿ ಓದಬೇಕು. ಪುನಃ ಪುನಃ ವಿಚಾರ ಮಾಡಿ ಮನನ ಮಾಡಿಕೊಂಡು ಅದರ ಖರೇ ಅರ್ಥವನ್ನು ತಿಳಿದುಕೊಳ್ಳಬೇಕು. [೧೪] ಯಾರಿಗಾದರೂ ಏನಾದರೂ ವಿಚಾರ ಮಾಡುವದಿದ್ದರೆ ಚೆನ್ನಾಗಿ ಮತ್ತು ಮುಖ್ಯವಾದದ್ದನ್ನು ವಿಚಾರ ಮಾಡಬೇಕು. ಯಾರಿಗಾದರೂ ಏನಾದರೂ ಹೇಳುವದಿದ್ದರೆ ಚೆನ್ನಾಗಿ ಉಲಗಡಾ ಮಾಡಿ ಸ್ಪಷ್ಟ ಮಾಡಿ ಹೇಳಬೇಕು. ಸ್ವತಃಕ್ಕೆ ಅನುಭವವಾಗಿರದ ಹೊರತು ಜ್ಞಾನದ ಬಗ್ಗೆ ಹರಟೆ ಹೊಡೆಯುವದು ಪಾಪವೆಂದೇ ತಿಳಿಯಬೇಕು. [೧೫]

ಸಾವಧಾನತಾ ಅಸಾವೀ । ನೀತಿಮರ್ಯಾದಾ ರಾಖಾವೀ ।
ಜನಾಸ ಮಾನೇ ಐಸೀ ಕರಾವೀ । ಕ್ರಿಯಾಸಿದ್ಧಿ ॥೧೬॥

ಆಲಿಯಾಚೇ ಸಮಾಧಾನ । ಹರಿಕಥಾ ನಿರೂಪಣ ।
ಸರ್ವದಾ ಪ್ರಸಂಗ ಪಾಹೋನ । ವರ್ತತ ಜಾವೇ ॥೧೭॥

ತಾಳ ಘಾಟೇ ಮುದ್ರಾ ಶುದ್ಧ । ಅರ್ಥ ಪ್ರಮೆಯ ಅನ್ವಯ ಶುದ್ಧ ।
ಗದ್ಯಪದ್ಯೇ ದೃಷ್ಟಾಂತ ಶುದ್ಧ । ಅನ್ವಯಾಚೇ ॥೧೮॥

ಗಾಣೇ ವಾಜವಣೇ ನಾಚಣೇ । ಹಸ್ತನ್ಯಾಸ ದಾಖವಣೇ ।
ಸಭಾರಂಜಕೇ ವಚನೇ । ಆಡಕಥಾ ಛಂದಬಂದ ॥೧೯॥

ಬಹುತಾಂಚೇ ಸಮಾಧಾನ ರಾಖಾವೇ । ಬಹುತಾಸ ಮಾನೇಲ ತೇ ಬೋಲಾವೇ ।
ವಿಲಗ ಪಡೋ ನೇದಾವೇ । ಕಥೇ ಮಧೇ ॥೨೦॥

ಲೋಕಾಸ ಉದಂಡ ವಾಜೀ ಆಣೂ ನಯೇ । ಲೋಕಾಚೇ ಉಕಲಾವೇ ಹೃದಯ ।
ತರೀ ಮಗ ಸ್ವಭಾವೇ ಹೋಯ । ನಾಮಘೋಷ ॥೨೧॥

ಭಕ್ತಿ ಜ್ಞಾನ ವೈರಾಗ್ಯಯೋಗ । ನಾನಾ ಸಾಧನಾಚೇ ಪ್ರಯೋಗ ।
ಜೇಣೇ ತುಟೇ ಭವರೋಗ । ಮನನಮಾತ್ರೇ ॥೨೨॥

ಜೈಸೇ ಬೋಲಣೇ ಬೋಲಾವೇ । ತೈಸೇಚಿ ಚಾಲಣೇ ಚಾಲಾವೇ ।
ಮಗ ಮಹಂತಲೀಳಾ ಸ್ವಭಾವೇ । ಆಂಗೀ ಬಾಣೇ ॥೨೩॥

ಯುಕ್ತಿವೀಣ ಸಾಜಿರಾ ಯೋಗ । ತೋ ದುರಾಶೇಚಾ ರೋಗ ।
ಸಂಗತೀಚ್ಯಾ ಲೋಕಾಚಾ ಭೋಗ । ಉಭಾ ಠೇಲಾ ॥೨೪॥

ಐಸೇ ನ ಕರಾವೇ ಸರ್ವಥಾ । ಜನಾಸ ಪಾವಲೂ ನಯೇ ವೇಥಾ ।
ಹೃದಈ ಚಿಂತಾವೇ ಸಮರ್ಥಾ । ರಘುನಾಥಜೀಸೀ ॥೨೫॥

ಉದಾಸವೃತ್ತೀಸ ಮಾನವೇ ಜನ । ವಿಶೇಷ ಕಥಾನಿರೂಪಣ ।
ರಾಮಕಥಾ ಬ್ರಹ್ಮಾಂಡ ಭೇದೂನ । ಪೈಲಾಡ ನ್ಯಾವೀ ॥೨೬॥

ಸಾಂಗ ಮಹಂತೀ ಸಂಗೀತ ಗಾಣೇ । ತೇಥೇ ವೈಭವಾಸ ಕಾಯ ಉಣೇ ।
ನಭಾಮಾಜೀ ತಾರಾಗಣೇ । ತೈಸೇ ಲೋಕ ॥೨೭॥

ಯಾವಾಗಲೂ ಸಾವಧಾನತೆ ಇರಬೇಕು. ನೀತಿಯು ಮರ್ಯಾದೆಯನ್ನು ಸಂಬಾಳಿಸಿಕೊಂಡು ನಡೆಯಬೇಕು. ಯಾವುದಾದರೂ ಕೆಲಸ ಮಾಡುವದಿದ್ದರೆ ಜನರಿಗೆ [ವಿಚಾರವಂತ ಸಜ್ಜನರಿಗೆ] ಅದು ಪೂರ್ಣ ಮೆಚ್ಚಿಗೆಯಾಗುವಂತೆ ಮಾಡಬೇಕು. [೧೬] ಯಾರಾದರೊಬ್ಬರು ನಿಮ್ಮ ಹತ್ತಿರ ಬಂದರೆ ಅವರಿಗೆ ಸಮಾಧಾನದ ನಾಲ್ಕು ಮಾತುಗಳನ್ನು ಹೇಳಬೇಕು. ಭಗವಂತನ ಕಥೆ ಹೇಳುತ್ತಿರಬೇಕು. ಕೀರ್ತನೆ ಮಾಡುತ್ತಿರಬೇಕು, ಅಧ್ಯಾತ್ಮದ ನಿರೂಪಣವೂ ಚಾಲೂ ಇರಬೇಕು. ಸದಾ ಸರ್ವಕಾಲದಲ್ಲಿಯೂ ಪ್ರಸಂಗ ವೇಳೆ ನೋಡಿ ನಡೆಯಬೇಕು (೧೭) ತಾಳ, ಧಾಟಿ, ಶುದ್ಧ ಮುದ್ರಾ, ಅರ್ಥ, ಪ್ರಮೇಯ ಶುದ್ಧ ಅನ್ವಯ, ಗದ್ಯ, ಪದ್ಯ, ಶುದ್ಧ ಮತ್ತು ಉಚಿತ, (ಯೋಗ್ಯ) ದೃಷ್ಟಾಂತ (೧೮) ಗಾಯನ, ಹಾಡುವದು, ಬಾರಿಸುವದು, ಕುಣಿಯುವದು, ಕೈಯಿಂದ ಅಭಿನಯ ತೋರಿಸುವದು ಶ್ರೋತಾ ಜನರನ್ನು ಪ್ರಸನ್ನಗೊಳಿಸುವಂಥ ವಚನಗಳಿಂದ ಪ್ರವಚನ ಹೇಳುವದು, ಸಣ್ಣಸಣ್ಣ ಕಥೆ ಉಪಕಥೆ ಹೇಳುವದು. ಛಂದ ಮತ್ತು ಬಂಧ ಈ ಎಲ್ಲವನ್ನೂ ಭಗವಂತನ ಕಥಾ ಕೀರ್ತನಾದಿಗಳನ್ನು ಹೇಳುವಾಗ ಉಪಯೋಗಿಸಬೇಕು. (೧೯) ಬಹು ಜನರು ಸಮಾಧಾನವಾಗುವಂತೆ ಕಥಾದಿಗಳನ್ನು ಮಾಡಬೇಕು. ಬಹಳ ಜನರಿಗೆ ಪ್ರೇಮ ಬರುವಂಥ ಮತ್ತು ಬಹು ಮೆಚ್ಚುವಂಥ ಮಾತುಗಳನ್ನು ಉಪಯೋಗಿಸಬೇಕು. ನೀವು ಹೇಳುವ ಕಥೆಯಲ್ಲಿ ವಿಸಂಗತಿ, ವಿಷಯಾಂತರಗಳು ಬರದಂತೆ ನಡೆಸಬೇಕು. (೨೦) ಶ್ರೋತಾ ಜನಕ್ಕೆ ಬಹು ಬೇಸರ ಬರುವಂಥ ಕಥಾದಿಗಳು ಇರಬಾರದು. ಜನರ ಮನೋಗತ ಅಥವಾ ಹೃದಯ ತುಂಬಿ ಬರುವಂಥ ಮಾರ್ಮಿಕ ಮಾತುಗಳನ್ನು ಉಪಯೋಗಿಸಬೇಕು. ಈ ರೀತಿಯಲ್ಲಿ ಕಥೆ ಮಾಡಿದರೆ ಸಹಜವಾಗಿ ಯಾವತ್ತೂ ಜನ ಬಹಳ ಪ್ರಸನ್ನತನದಿಂದ ಭಗವಂತನ ನಾಮಘೋಷ, ಜಯಘೋಷ ಮಾಡುವರು, [೨೧] ನಿಮ್ಮ ಕಥಾದಿಗಳಲ್ಲಿ, ಅಥವಾ ನಿರೂಪಣಾದಿಗಳಲ್ಲಿ ಭಕ್ತಿ, ಜ್ಞಾನ, ವೈರಾಗ್ಯ ಯೋಗ ಮತ್ತು ಅನೇಕ ತರಹದ ಅನೇಕ ಸಾಧನಗಳ ಪ್ರಯೋಗದಬಗ್ಗೆ ವರ್ಣನೆ ಮಾಡಬೇಕು. ವರ್ಣನೆ ಹೇಗಿರಬೇಕೆಂದರೆ ನೀವು ಹೇಳಿದ್ದರ ಮೇಲೆ ಮನನ ಮಾಡಿ ಶ್ರೋತಾ ಜನರ ಭವರೋಗ ಇಲ್ಲದಾಗಿ ಬಿಡಬೇಕು. [ಅಶ್ಲೀಲ ವ ಅವಾಚ್ಯ ಶೃಂಗಾರಾದಿಗಳ ವರ್ಣನೆಯು ಎಳ್ಳಷ್ಟೂ ಇರಬಾರದು.] [೨೨] ನೀವು ಹೇಗೆ ಮಾತನಾಡುವಿರೋ ಅದರಂತೆ ಸ್ವತಃ ನೀವು ನಡೆಯಬೇಕು. ಅಂದಾಗ ಮಹಂತನಿಗೆ ಶೋಭಿಸುವಂತಹ ನಡವಳಿಕೆ ಸಹಜವಾಗಿ ನಿಮ್ಮಲ್ಲಿ ಎದ್ದು ಕಾಣುವದು. [೨೩] ಮಹಂತತನದ ಯೋಗ ಬರುವದು ಉತ್ತಮವೇನೋ ಖರೆಅದೆ. ಆದರೆ ಮಹಂತನಲ್ಲಿ ನಡವಳಿಕೆಯ ಕೌಶಲ್ಯ ಇಲ್ಲದಿದ್ದರೆ ಅದು ಯೋಗ್ಯವಲ್ಲ. ಅದು ದುರಾಸೆಯ ರೋಗವೆಂದು ತಿಳಿಯಬೇಕು. ಇಂಥ ಕೌಶಲ್ಯಹೀನ ಮಹಂತನ ಸಂಗತಿ ಮಾಡುವಂಥ ಜನರಿಗೆ ಯಾವದೋ ಕೆಟ್ಟ ಭೋಗವೇ "ಅ" ಎಂವು ಎದ್ದು ನಿಂತಿರುವದೆಂದು ಅನ್ನಬೇಕಾಗುವದು. [೨೪] ಮಹಂತನು ಹೀಗೆ ಎಂದೂ ಮಾಡಬಾರದು. ಜನರಿಗೆ ತ್ರಾಸು ವ ದುಃಖವಾಗುವಂತೆ ಯಾವಾಗಲೂ ವರ್ತಿಸಬಾರದು. ಮಹಂತನು ತನ್ನ ಹೃದಯದಲ್ಲಿ (ಸಮರ್ಥನಾದ) ಶ್ರೀ ರಘುನಾಥನ ಚಿಂತನವನ್ನು ಸತತ ಮಾಡುವ ಅಭ್ಯಾಸವಿಡಬೇಕು. [೨೫] ವೈರಾಗ್ಯ ಮತ್ತು ಅನಾಸಕ್ತ ವೃತ್ತಿ ಇವು ಜನರಿಗೆ ಆದರ್ಶವಾಗಿರುವವು. ಪ್ರೀತಿಯ ಸಂಗತಿಗಳಾಗಿರುವವು. ಭಗವಂತನ ಕಥಾ ವ ನಿರೂಪಣ ಇವು ಹೆಚ್ಚಾಗಿ ಬೇಕೆನಿಸುವವು. ಆದ್ದರಿಂದ ಬ್ರಹ್ಮಾಂಡದ ಭೇದವಾಗುವಂತೆ ಶ್ರೀರಾಮ ಕಥೆಯನ್ನು ಹೇಳಿ ಜನರನ್ನು ತಲ್ಲೀನಗೊಳಿಸಿ ಅವರನ್ನು ಬ್ರಹ್ಮಾಂಡದ ಆಚೆಗೆ ಒಯ್ದು ಬಿಡುವಂತೆ ಮಾಡಬೇಕು. ಶ್ರೀ ರಾಮನ ಕಥೆಯನ್ನು ಹೇಳಿ ನೇರವಾಗಿ ನಿಶ್ಚಲ ಪರಬ್ರಹ್ಮನತನಕಾ ಒಯ್ದು ಮುಟ್ಟಿಸಬೇಕು. [೨೬] ಸರ್ವ ಸುಗುಣಗಳಿಂದ ಮಂಡಿತವಾದ ಮಹಂತತನವಿರಬೇಕು. ಇವರಲ್ಲಿ ಸಂಗೀತದ, ಗಾಯನದ ಜೋಡು ಇದ್ದರೆ ಆ ಮಹಂತನ ವೈಭವಕ್ಕೆ ಯಾವುದೂ ಸರಿಗಟ್ಟಲಾರದು. ಅವನಿಗೆ ಕೊರತೆಯೆಂಬುದು ಇರುವದೇ ಇಲ್ಲ. ಚಂದ್ರನ ಸುತ್ತು-ಮುತ್ತು ನಕ್ಷತ್ರಗಳು ಮುತ್ತಿದಂತೆ ಈ ಮಹಂತನ ಸುತ್ತಲೂ ಜನರು ಮುತ್ತುವರು. [ಕೂಡುವರು.] [೨೭]

ಆಕಲಬಂದ ನಾಹೀ ಜೇಥೇ। ಅವಘೇಚಿ ವಿಶ್ಕಳಿತ ತೇಥೇ।
ಯೇಕೇ ಆಕಲೇವಿಣ ತೇ। ಕಾಯೆ ಆಹೇ ॥೨೮॥

ಘಾಲೂನ ಅಕಲೇಚಾ ಪವಾಡ। ವ್ಯಾನೇ ಬ್ರಹ್ಮಾಂಡಾಹೂನ ಜಾಡ।
ತೇಥೇ ಕೈಚೇ ಆಣಿಲೇ ದ್ವಾಡ। ಕರಂಟ ಪಣ ॥೨೯॥

ಯೇಥೇ ಆಶಂಕಾ ಫಿಟಲೀ। ಬುದ್ಧಿ ಯೆತ್ನೀ ಪ್ರವೇಶಲೀ।
ಕಾಂಹೀಯೇಕ ಆಶಾ ವಾಢಲೀ। ಅಂತಃಕರ್ಣೀ ॥೩೦॥

ಇತಿ ಶ್ರೀ ದಾಸಬೋಧೇ ಗುರುಶಿಷ್ಯ ಸಂವಾದೇ
'ಯೆತ್ನ ಸಿಕವಣ' ನಾಮ ಸಮಾಸ ನವಮ ॥

ಯಾವನು ಬುದ್ಧಿಯಿಂದ ಹೀನನಿರುವನೋ ಅವನ ಹತ್ತಿರ ಎಲ್ಲವೂ ಅವ್ಯವಸ್ಥಿತವೇ ಇರುವದು. ಇದು ಯಾವುದಕ್ಕೂ ಉಪಯೋಗ ಬೀಳುವದಿಲ್ಲ. ಒಟ್ಟಿನಲ್ಲಿ ಬಾಳಿನಲ್ಲಿ ಬದುಕಿನಲ್ಲಿ ಬುದ್ಧಿವಂತಿಕೆ ಬೇಕು. ಜಾಣತನವಿರ ಬೇಕು. ಇವಿಲ್ಲದಿದ್ದರೆ ಉಳಿದ ಯಾವುದಕ್ಕೂ ಎಷ್ಟೂ ಮಹತ್ವವಿಲ್ಲ. (೨೮) ನಿಮ್ಮ ಬುದ್ಧಿಯ ಸಾಮರ್ಥ್ಯವನ್ನು ಬಹಳಷ್ಟು ಬೆಳೆಸಬೇಕು. ನೀವು ಬ್ರಹ್ಮಾಂಡಕ್ಕಿಂತ ಹೆಚ್ಚು ವಿಶಾಲರಾಗುವಷ್ಟು ಬುದ್ಧಿಯ ವಿಸ್ತಾರವನ್ನು ಮಾಡಿಕೊಳ್ಳಬೇಕು. ಹೀಗೆ ಆದ ಮೇಲೆ ಆ ಸ್ಥಳದಲ್ಲಿ ನತದೃಷ್ಟತನ, ದರಿದ್ರತನ ಇರಲಿಕ್ಕೆ ಸಾಧ್ಯವೇ ಇಲ್ಲ. (೨೯) ಈ ರೀತಿಯಿಂದ ಮೂಲ ಶಂಕಾದ ನಿರಾಕರಣವು ಇಲ್ಲಿ ಹೇಳಿದಂತಾಯಿತು. ಪ್ರಯತ್ನ ಮಾಡಲಿಕ್ಕೇಬೇಕು. ಇದು ಬುದ್ಧಿಗೆ ಒಪ್ಪಿಗೆಯಾಯಿತು (ಪಟಾಯಿಸಿತು). ಇದರಿಂದ ನಮಗೆ ಭಾಗ್ಯದ ದಿವಸ ಬರುವದೆಂಬ ಆಶಾ ಭಾವನೆಯು ಅಂತಃಕರಣದಲ್ಲಿ ಉದಯವಾಯಿತು. (೩೦)

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹನ್ನೆರಡನೆಯ ದಶಕದೊಳಗಿನ "ಯತ್ನಸಿಕವಣ" ಎಂಬ ಒಂಭತ್ತನೆಯ ಸಮಾಸವು ಮುಗಿದುದು.

● ●

## ದಶಕ ೧೨. ಸಮಾಸ ೧೦. ಉತ್ತಮ ಪುರುಷ ನಿರೂಪಣ (ನುಡಿ ೪೩)

ಜಗದಲ್ಲಿ ಅಕ್ಷರಶಃ ಅನಂತ ಪ್ರಾಣಿಗಳು ಇರುವವು. ಪ್ರಾಣಿ ಅನ್ನುವ ದೃಷ್ಟಿಯಲ್ಲಿ ಮನುಷ್ಯರಾದಿಯಾಗಿ ಯಾವತ್ತೂ ಒಂದೇ ಭೂಮಿಕೆಯ ಮೇಲೆ ಜೀವಿಸಿರುವರೆಂಬುದು ನಿಜವಿರುವದು. ಆದರೆ ಅಧ್ಯಾತ್ಮದ ದೃಷ್ಟಿಯಿಂದ ವಿಚಾರ ಮಾಡಿದಾಗ ಮನುಷ್ಯರು ಮತ್ತು ಮನುಷ್ಯೇತರ ಪ್ರಾಣಿ ಹೀಗೆ ಎರಡು ವರ್ಗ ಮಾಡಬೇಕಾಗುವದು. ಸರ್ವ ಪ್ರಾಣಿಗಳಲ್ಲಿ ಮನುಷ್ಯನು ಮಾತ್ರ (ಅಧ್ಯಾತ್ಮ) ಆತ್ಮಜ್ಞಾನದ ಅಧಿಕಾರಿ ಇರುವನು. ಆದರೆ ಈ ಅಧಿಕಾರದ ದೃಷ್ಟಿಯಿಂದ ವಿಚಾರ ಮಾಡಿದಾಗ ಮನುಷ್ಯರಲ್ಲಿ ಜ್ಞಾನಿ ಮತ್ತು ಅಜ್ಞಾನಿ ಹೀಗೆ ಪುನಃ ಎರಡು ವರ್ಗ ಮಾಡಬೇಕಾಗುವದು. ಆತ್ಮಜ್ಞಾನೀ ಮನುಷ್ಯನು ಮಾತ್ರ ಶ್ರೀ ಸಮರ್ಥರ ಉತ್ತಮ ಪುರುಷನಾಗಿರುವನು.

ಬಹಳ ಸ್ವಲ್ಪ ಜನರು ಮಾತ್ರ ತಮ್ಮ ಆತ್ಮಜ್ಞಾನದ ಅಧಿಕಾರವನ್ನು ಉಪಯೋಗ ಮಾಡುವರು. ಇದರಿಂದಾಗಿ ಮಾನವ ಸಮಾಜದಲ್ಲಿ ಒಟ್ಟು ಅಜ್ಞಾನೀ ಜನರ ಸಂಖ್ಯೆಯೇ ಬಹಳ ದೊಡ್ಡ ಪ್ರಮಾಣದಲ್ಲಿ ಕಂಡು ಬರುವದು. ಆದರೆ ಇದೇ ಕಾರಣದಿಂದ ಜ್ಞಾನಿ ಪುರುಷರ ಮೇಲೆ ಬಹಳ ದೊಡ್ಡ ಸಾಮಾಜಿಕ ಜವಾಬ್ದಾರಿ ಬೀಳುವದು. ಸ್ವತಃ ಬ್ರಹ್ಮಜ್ಞಾನಿಯಾಗಿ ಕೃತ ಕೃತ್ಯನಾದ ಮೇಲೆ ಜ್ಞಾನಿ ಪುರುಷನಿಗೆ ಈ ಜಗದಲ್ಲಿ ಸ್ವತಃದ ಬಗ್ಗೆ ಮಾಡುವದಾವುದೂ ಉಳಿದಿರುವದಿಲ್ಲ. ಯಾಕೆಂದರೆ ಅವನು ಮುಕ್ತನು ಅಂತೆಯೇ ತನ್ನ ಸುತ್ತು ಮುತ್ತಲಲ್ಲಿ (ಹರಡಿದ) ಇರುವಂಥ ಅಜ್ಞಾನಿ ಜನಸಮುದಾಯದಲ್ಲಿ ಆತ್ಮಜ್ಞಾನವು ಸಮ್ಮುಖ (ಸನ್ಮುಖ)ವಾಗುವಂತೆ, ಅವರಲ್ಲಿ ಜ್ಞಾನ ಅಂಕುರಗೊಳ್ಳುವಂತೆ ಇವನು ಪ್ರಯತ್ನ ಮಾಡಬೇಕು. ಹೀಗೆ ಮಾಡಬೇಕೆಂದು ಜ್ಞಾನೀ ಜನರ ವಿಷಯದಲ್ಲಿ ಶ್ರೀ ಸಮರ್ಥರ ಆಗ್ರಹದ ಹೇಳಿಕೆ ಇರುವದು. ಜನರನ್ನು ಆತ್ಮಜ್ಞಾನದ ಕಡೆಗೆ ತಿರುಗಿಸುವದಕ್ಕಾಗಿ ಜ್ಞಾನಿ ಪುರುಷನಲ್ಲಿ ಯಾವ ಯಾವ ಗುಣಗಳಿರಬೇಕು ಹಾಗೆಯೇ ತನ್ನ ಕಾರ್ಯ ಯಶಸ್ವೀ ಆಗಲು ಇವನು ಯಾವ ಯಾವ ಉಪಾಯಗಳನ್ನು ಯೋಜಿಸಬೇಕು. ಅನ್ನುವ ಬಗ್ಗೆ ಸ್ವಲ್ಪದರಲ್ಲಿ ಆದರೆ ಬಹಳ ಅರ್ಥಗರ್ಭಿತ ವರ್ಣನೆಯು ಈ ಸಮಾಸದಲ್ಲಿರುವದು. ಇದನ್ನು ನೋಡಿಕೊಳ್ಳಿರಿ. ಈ ವರ್ಣನೆಯಲ್ಲಿ ಮರಾಠಿ ಭಾಷೆಯ ಸಖೋಲ (ಆಳವಾದ) ಅರ್ಥವಾಹಕತನವೂ ಸಹ ಸ್ಪಷ್ಟವಾಗಿ ಅನುಭವಕ್ಕೆ ಬರುವದು. ಶ್ರೀ ಸಮರ್ಥರ ಈ ಉತ್ತಮ ಪುರುಷನು ಮಹಾನುಭಾವನೇ ಇರುವನು. ನಿಜವಾಗಿಯೂ ದೊಡ್ಡವನಿರುವನು. ಆತ್ಮಸ್ವರೂಪದ ಅತ್ಯಂತ ವಿಶಾಲ ಅನುಭವದಿಂದಾಗಿ ಇವನು ಅತಿ ವಿಶಾಲನಾಗಿರುವನು. ದೇಹ ಬುದ್ಧಿಯನ್ನು ಸುಟ್ಟು ಹಾಕಿದ್ದರಿಂದ ಇವನು ಸಂಪೂರ್ಣ ಸ್ವಾರ್ಥರಹಿತ ಇರುವನು. ಆದ್ದರಿಂದಲೇ ಉಳಿದ ಆಯುಷ್ಯವನ್ನು ಇವನು ಎರಡನೆಯವರ ಸಲುವಾಗಿ ಖರ್ಚು ಮಾಡಲಿಕ್ಕೆ ಶಕ್ತನಿರುವನು. ವ್ಯವಹಾರದಲ್ಲಿ ನಡೆಯುವಾಗ್ಗೆ ಈ ಜ್ಞಾನಿ ಪುರುಷನು ಬಹು ಪ್ರಯತ್ನಶೀಲ ಇರುವನು. ತನ್ನ ವೇಳೆಯನ್ನು ಇವನು ಎಂದೂ ವ್ಯರ್ಥ ಹೋಗಗೊಡುವದಿಲ್ಲ. ಇವನ ವೃತ್ತಿ ಅತ್ಯಂತ ಶಾಂತ ಮತ್ತು ಕ್ಷಮಾಶೀಲವಿರುವದು. ಇವನು ನುಡಿದಂತೆ ನಡೆಯುವನು. ಹೇಳಿದಂತೆ ತಾನು ಆಚರಿಸುವನು. ಹಾಗೂ ಇವನ ಮಾತುಗಾರಿಕೆಯು ಅತ್ಯಂತ ಮೃದು ಮತ್ತು ಮಧುರವಿರುವದು. ಇದಲ್ಲದೆ ಇವನ ನಡವಳಿಕೆ ಅತ್ಯಂತ ನಮ್ರತನದ್ದಿರುವದು. ಇಂಥ ಜ್ಞಾನಿ ಪುರುಷನ ಲೋಕ ಜನ ಸಂಗ್ರಹ ಕಾರ್ಯ ಯಶಸ್ವಿಯಾಗುವದು ತನ್ನ ಯಥಾರ್ಥ ಜ್ಞಾನ ಶಕ್ತಿಯ ಬಲದಿಂದ ಇವನು ಬಹುಜನರ ಮನೋಗತವನ್ನು ತಿಳಿಯುವನು. ಮತ್ತು ತನ್ನ ಕಡೆಗೆ ಸೆಳೆಯುವನು. ಮತ್ತು ಅವರಿಗೆ ಧೈರ್ಯ ಕೊಟ್ಟು ಸಮಾಧಾನಗೊಳಿಸುವನು. ಇವನು ತನ್ನ ಕೂಡ ಇರುವಂಥ ಜನರನ್ನು ಸಾವಕಾಶವಾಗಿ ಅಧ್ಯಾತ್ಮದತ್ತ ಒಯ್ಯುವನು. ಜ್ಞಾನದ ವಿಷಯದಲ್ಲಿ ತಯಾರಗೊಳಿಸುವನು. ಭಗವಂತನ ಮಾರ್ಗದಲ್ಲಿ ನಡೆಯುವಂತೆ ಮಾಡುವನು. ಮತ್ತು ಕೊನೆಗೆ ಆತ್ಮಜ್ಞಾನದ ಕೊನೆಯವರೆಗೂ ಒಯ್ದು ಮುಟ್ಟಿಸುವನು. ಯಾವ ಸಮಾಜದಲ್ಲಿ ಇಂಥ ಸತ್ಪುರುಷ-ಸಂತರ ಪರಂಪರಾ ಮುಂದುವರೆದಿರುವದೋ ಆ ಸಮಾಜವು ಧನ್ಯ ಧನ್ಯವಿರುವದು.

## ದಶಕ ದ್ವಾದಶ : ಸಮಾಸ ದಶಮ : ಉತ್ತಮ ಪುರುಷ ನಿರೂಪಣ

॥ಶ್ರೀರಾಮ॥ ಆಪಣ ಯೆಥೇಷ್ಟ ಜೇವಣೇ । ಉರಲೇ ತೇ ಅನ್ನದಾಟಣೇ ।
ಪರಂತು ವಾಯಾ ದವಡಣೇ । ಹಾ ಧರ್ಮ ನವ್ಹೇ ॥೧॥

ತೈಸೇ ಜ್ಞಾನೇ ತೃಪ್ತ ವ್ಹಾವೇ । ತೇ ಚಿ ಜ್ಞಾನ ಜನಾಸ ಸಾಂಗಾವೇ ।
ತರತೇನ ಬುಡೋ ನೇದಾವೇ । ಬುಡತಯಾಸೀ ॥೨॥

ಉತ್ತಮ ಗುಣ ಸ್ವಯೇ ಘ್ಯಾವೇ । ತೇ ಬಹುತಾಸ ಸಾಂಗಾವೇ ।
ವರ್ತಲ್ಯಾವಿಣ ಬೋಲಾವೇ । ತೇ ಶಬ್ದ ಮಿಥ್ಯಾ ॥೩॥

ಸ್ನಾನ ಸಂಧ್ಯಾ ದೇವಾರ್ಚನ । ಯೇಕಾಗ್ರ ಕರಾವೇ ಜಪಧ್ಯಾನ ।
ಹರಿಕಥಾ ನಿರೂಪಣ । ಕೇಲೇ ಪಾಹಿಜೆ ॥೪॥

ಶರೀರ ಪರೋಪಕಾರೀ ಲಾವಾವೇ । ಬಹುತಾಂಚ್ಯಾ ಕಾರ್ಯಾಸ ಯಾವೇ ।
ಉಣೇ ಪಡೋ ನೇದಾವೇ । ಕೋಣಿಯೇಕಾಚೇ ॥೫॥

ಆಡಲೇ ಜಾಕಸಲೇ ಜಾಣಾವೇ । ಯಥಾನಶಕ್ತಿ ಕಾಮಾಸ ಯಾವೇ ।
ಮೃದವಚನೇ ಬೋಲತ ಜಾವೇ । ಕೋಣೇಯೇಕಾಸೀ ॥೬॥

ದುಸರ್ಯಾಚ್ಯಾ ದುಃಖೇ ದುಖವಾವೇ । ಪರಸಂತೋಷೇ ಸುಖೀ ವ್ಹಾವೇ ।
ಪ್ರಾಣೀ ಮಾತ್ರಾಸ ಮೇಳವೂನ ಘ್ಯಾವೇ । ಬರ್ಯಾ ಶಬ್ದೇ ॥೭॥

ಬಹುತಾಂಚೆ ಅನ್ಯಾಯ ಕ್ಷಮಾವೇ । ಬಹುತಾಂಚೆ ಕಾರ್ಯಭಾಗ ಕರಾವೇ ।
ಆಪಲ್ಯಾಪರೀಸ ವ್ಹಾವೇ । ಪಾರಖೇ ಜನ ॥೮॥

ದುಸರ್ಯಾಚೇ ಅಂತರ ಜಾಣಾವೇ । ತದನುಸಾರ ಚಿ ವರ್ತಾವೇ ।
ಲೋಕಾಸ ಪರೀಕ್ಷಿತ ಜಾವೇ । ನಾನಾ ಪ್ರಕಾರೇ ॥೯॥

ನೇಮಕ ಚಿ ಬೋಲಾವೇ । ತತ್ಕಾಳ ಚಿ ಪ್ರತಿವಚನ ದ್ಯಾವೇ ।
ಕದಾಪೀ ರಾಗಾಸ ನ ಯಾವೇ । ಕ್ಷಮಾರೂಪೇ ॥೧೦॥

ಆಲಸ್ಯ ಅವಘಾ ಚ ದವಡಾವಾ । ಯೆತ್ನ ಉದಂಡ ಚಿ ಕರಾವಾ ।
ಶಬ್ದಮತ್ಸರ ನ ಕರಾವಾ । ಕೋಣೇಯೇಕಾಚಾ ॥೧೧॥

ಉತ್ತಮ ಪದಾರ್ಥ ದುಸರ್ಯಾಸ ದ್ಯಾವಾ । ಶಬ್ದ ನಿವಡೂನ ಬೋಲಾವಾ ।
ಸಾವಧಪಣೇ ಕರೀತ ಜಾವಾ । ಸಂಸಾರ ಆಪಲಾ ॥೧೨॥

## ದಶಕ ೧೨. ಸಮಾಸ ೧೦. ಉತ್ತಮ ಪುರುಷ ನಿರೂಪಣ (ನುಡಿ ೪೩)

**ಮೊದಲು ಸ್ವತಃ ಆತ್ಮಜ್ಞಾನ ಮಾಡಿಕೊಳ್ಳಬೇಕು. ಇದನ್ನು ಸಾಧಿಸಿಕೊಂಡ ಮೇಲೆ ನಿಮ್ಮ ದೇಹವನ್ನು ಎರಡನೆಯವರ ಉದ್ಧಾರಕ್ಕಾಗಿ ಕಷ್ಟಪಡಿಸಬೇಕು. ಎರಡನೆಯವರ ಸಲುವಾಗಿ ನೀವು ಪ್ರಯತ್ನ ಮಾಡುವಾಗ ನಿಮ್ಮ ಕಾರ್ಯಕ್ಕೆ ಉತ್ತಮ ರೂಪ ಹೆಸರು ಬರುವದು ಒಳ್ಳೆಯದು. ಅದ್ದರಿಂದ ಜ್ಞಾನಿ ಪುರುಷನು ಯಾವ ಯಾವ ಗುಣಗಳ ಅಭ್ಯಾಸ ಮಾಡಬೇಕು ಇದರ ವರ್ಣನೆಯನ್ನು ಇಲ್ಲಿ ಹೇಳುವರು:—** ನೀವು ಹೊಟ್ಟೆಯ ತುಂಬಾ ಊಟ ಮಾಡಿರಿ. ನೀವು ಉಂಡಮೇಲೆ ಮಿಕ್ಕಿದ ಅನ್ನವನ್ನು ಎರಡನೆಯವರಿಗೆ ಹಂಚಿರಿ. ಉಳಿದಂಥ ಅನ್ನವನ್ನು ವ್ಯರ್ಥ ಕೆಡಿಸುವದು ಯೋಗ್ಯವಲ್ಲ. ಧರ್ಮವೂ ಅಲ್ಲ. [೧] ಇದು ಹೇಗೋ ಹಾಗೆಯೇ ನೀವು ಸ್ವತಃ ಆತ್ಮಜ್ಞಾನದಿಂದ ತೃಪ್ತರಾಗಿರಿ. ಸಮಾಧಾನ ಹೊಂದಿರಿ. ಆ ಮೇಲೆ ಅದೇ ಜ್ಞಾನವನ್ನು ಜನರಿಗೆ ಕಲಿಸಿರಿ. ತಿಳಿಸಿಕೊಡಿರಿ. ಯಾರು ಸ್ವತಃ ಉತ್ತಮ ರೀತಿಯಲ್ಲಿ ಈಸುವರೋ ಮತ್ತು ತೇಲುವರೋ ಅಂಥವರು ಮುಳುಗುವ ಮನುಷ್ಯನನ್ನು ಉಳಿಸಬೇಕು. ಮತ್ತು ತೇಲಿಸಬೇಕು. ಎತ್ತಬೇಕು. ಇದು ಯೋಗ್ಯವಾದದ್ದೇ ಇರುವದು. [೨] ಮೊದಲು ನೀವು ಸ್ವತಃ ಉತ್ತಮ ಗುಣಗಳನ್ನು ನಿಮ್ಮಲ್ಲಿ ತಂದುಕೊಳ್ಳಬೇಕು. ಮತ್ತು ಆಮೇಲೆ ಅನೇಕ ಜನರಿಗೆ ಇವನ್ನು ತಿಳಿಸಿ ಹೇಳಬೇಕು. ಉತ್ತಮ ಗುಣಗಳ ಅನುಭವ ಆಚರಣೆ ನೀವು ಮಾಡದೇ ಜನರಿಗೆ ಇವನ್ನು ಹೇಳಿದರೆ ಅದು ಹೇಳುವವನು ಸುಳ್ಳು ಹೇಳುವವನೆಂದಾಗುವದು.. [೩] ಜ್ಞಾನಿಯಾದವನು ಆಚಾರ ವ ಉಪಾಸನಾ ಬಿಡಬಾರದು. ಸ್ನಾನ, ಸಂಧ್ಯಾ, ದೇವರ ಪೂಜಾ, ಏಕಾಗ್ರ ಮನದಿಂದ ಜಪ, ಧ್ಯಾನ, ನಾಮಸ್ಮರಣೆ, ಹರಿಕಥಾ, ಭಜನೆ ಮತ್ತು ನಿರೂಪಣ ಈ ಎಲ್ಲವುಗಳನ್ನು ಮಾಡುವದರ ಅವಶ್ಯಕತೆ ಇರುವದು. [೪] ನಿಮ್ಮ ಶರೀರವನ್ನು ಪರೋಪಕಾರಕ್ಕಾಗಿ ದಂಡಿಸಿರಿ. ಬಹು ಜನರ ಕೆಲಸಕಾರ್ಯಗಳನ್ನು ಮಾಡಿಕೊಡಿರಿ. ಯಾರಿಗೂ ನ್ಯೂನತೆಯಾಗದಂತೆ ಇರಬೇಕು. ಕೊರತೆಯಾಗದಂತೆ ನೋಡಿಕೊಳ್ಳಬೇಕು. [೫] ಯಾರಿಗೆ ಯಾವ ಅಡಚಣೆ ಇದೆಯೋ ಅದನ್ನು ಗುರುತಿಸಿರಿ. ಮತ್ತು ಯಾರು ತೊಂದರೆಯಲ್ಲಿರುವರೋ ಅವರ ದುಃಖವನ್ನು ತಿಳಿದುಕೊಳ್ಳಿರಿ. ಮತ್ತು ನಿಮಗೆ ಶಕ್ಯವಿದ್ದಷ್ಟು ಸಹಾಯ ಮಾಡಿರಿ. ಕೆಲಸ ಮಾಡಿಕೊಡಿರಿ. ಎಂಥ ಮನುಷ್ಯನೇ ಇದ್ದರೂ ಅವನಕೂಡ ಅಗದೀ ಮೃದು ಶಬ್ದಗಳಿಂದ ಮಾತಾಡುವ ರೂಢಿ ಇಟ್ಟುಕೊಳ್ಳಿರಿ. [೬] ಎರಡನೆಯವರ ದುಃಖದಿಂದ ದುಃಖಿತರಾಗಿರಿ. ಅದರಂತೆ, ಎರಡನೆಯವರ ಸಂತೋಷದಲ್ಲಿ ನೀವು ಸುಖಿಗಳಾಗಿರಿ. ಸವಿಮಾತುಗಳಿಂದ ಜನರನ್ನು ನಿಮ್ಮ ಕಡೆಗೆ ಮಾಡಿಕೊಳ್ಳಿರಿ. [೭] ಅನೇಕ ಜನರ ಅನ್ಯಾಯವನ್ನು ಕ್ಷಮಿಸಿ ಬಿಡಿರಿ. ಅನೇಕ ಜನರಿಗೆ ಅವರ ಕಾರ್ಯದಲ್ಲಿ ಸಹಾಯ ಮಾಡಿರಿ. ಪರಕೀಯ ಜನರನ್ನು ನಿಮ್ಮ ಕಡೆಗೆ ಒಲಿಸಿಕೊಳ್ಳಿರಿ. [೮] ಜನರ ಮನಸ್ಸಿನಲ್ಲಿದ್ದದ್ದನ್ನು ಮುಂದಾಗಿ ಗುರುತಿಸಿರಿ. ಆ ಧೋರಣಕ್ಕನುಗುಣವಾಗಿ ನಿಮ್ಮ ಧೋರಣೆ ಇರಬೇಕು. ಮತ್ತು ಅದಕ್ಕೆ ತಕ್ಕ ರೀತಿಯಲ್ಲಿ ನಡೆಯಬೇಕು. ಅನೇಕ ಬಗೆಯಿಂದ ಜನರನ್ನು ಪರೀಕ್ಷಿಸಿ ಗುರುತಿಸಬೇಕು. ಮತ್ತು ಹೊಸಬರನ್ನು ಪರೀಕ್ಷಿಸುತ್ತಲೇ ಇರಬೇಕು. [೯] ಅವಶ್ಯವಿದ್ದಷ್ಟೇ ಮಾತನಾಡಬೇಕು. ಯಾರಾದರೂ ಪ್ರಶ್ನೆ ವಿಚಾರಿಸಿದರೆ ಆ ಕೂಡಲೇ ಉತ್ತರ ಕೊಡಬೇಕು. ನಿಮ್ಮಲ್ಲಿ ಕ್ಷಮಾಗುಣವಿರಬೇಕು. ಇದರ ಬಲದಿಂದ ಯಾವಾಗಲೂ ರಾಗ ದ್ವೇಷಗಳ ಅಧೀನರಾಗಬಾರದು. ಇದರಿಂದ ರಾಗ-ದ್ವೇಷಗಳಿಂದ ದೂರವಿರಲಿಕ್ಕೆ ಸಾಧ್ಯವಾಗುವದು. ಅಲ್ಲದೇ-ಕ್ಷಮಾ ಗುಣ ಕಾಯಂ-ಸ್ಥಿರ ಇರಬೇಕು.[೧೦] ಆಲಸ್ಯವನ್ನು ಸಂಪೂರ್ಣ ತ್ಯಜಿಸಬೇಕು. ಯಾವಾಗಲೂ ಅಗದೀ ಪ್ರಯತ್ನ ಮಾಡುವವರೇ ಆಗಿರಬೇಕು. ಯಾರಾದರೂ ಹುಚ್ಚಾಬಟ್ಟೆ ಏನಾದರೂ ಮಾತನಾಡಿದರೆ ಅಷ್ಟರಿಂದಲೇ ಅವರೊಂದಿಗೆ ದ್ವೇಷ ಮಾಡಬಾರದು. [೧೧] ಉತ್ತಮ ಪದಾರ್ಥ ಮೊದಲು ನೀನು ತೆಗೆದುಕೊಳ್ಳದೇ ಎರಡನೆಯವರಿಗೆ ಕೊಡಬೇಕು. ಪ್ರತಿಯೊಂದು ಶಬ್ದವನ್ನು ತೂಕ ಮಾಡಿ ಮಾತನಾಡಬೇಕು ಹೋಗ (ವ್ಯರ್ಥ) ಮಾತು ದುಷ್ಟ ಮಾತು ಇರಬಾರದು. ಅಗದೀ ಎಚ್ಚರಿಕೆಯಿಂದ ನಿಮ್ಮ ಸಂಸಾರ ನಡಿಸಬೇಕು. [೧೨]

ಮರಣಾಚೇ ಸ್ಮರಣ ಅಸಾವೇ। ಹರಿಭಕ್ತೀಸ ಸಾದರ ವ್ಹಾವೇ।
ಮರೋನ ಕೀರ್ತೀಸ ಉರವಾವೇ। ಯೇಣೇ ಪ್ರಕಾರೇ ॥೧೩॥
ನೇಮಕಪಣೇ ವರ್ತೋ ಲಾಗಲಾ। ತೋ ಬಹುತಾಸ ಕಳೋ ಆಲಾ।
ಸರ್ವ ಆರ್ಜವೀ ತಯಾಲಾ। ಕಾಯೆ ಉಣೇ ॥೧೪॥
ಐಸಾ ಉತ್ತಮ ಗುಣೀ ವಿಶೇಷ। ತಯಾಸ ಮ್ಹಣಾವೇ ಪುರುಷ।
ಜಯಾಚ್ಯಾ ಭಜನೇ ಜಗದೀಶ। ತೃಪ್ತ ಹೋಯೆ ॥೧೫॥
ಉದಂಡ ಧಿಃಕಾರೂನ ಬೋಲತೀ। ತರೀ ಚಳೋ ನೇದಾವೀ ಶಾಂತಿ।
ದುರ್ಜನಾಸ ಮಿಳೋನ ಜಾತೀ। ಧನ್ಯ ತೇ ಸಾಧು ॥೧೬॥
ಉತ್ತಮ ಗುಣೀ ಶೃಂಘಾರಲಾ। ಜ್ಞಾನವೈರಾಗ್ಯೇ ಶೋಭಲಾ।
ತೋ ಚಿ ಯೇಕ ಜಾಣಾವಾ ಭಲಾ। ಭೂಮಂಡಳೀ ॥೧೭॥
ಸ್ವಯೇ ಆಪಣ ಕಷ್ಟಾವೇ। ಬಹುತಾಚೇ ಸೋಸಿತ ಜಾವೇ।
ಝಿಜೋನ ಕೀರ್ತೀಸ ಉರವಾವೇ। ನಾನಾ ಪ್ರಕಾರೇ ॥೧೮॥
ಕೀರ್ತೀ ಪಾಹೋ ಜಾತಾ ಸುಖ ನಾಹೀ। ಸುಖ ಪಾಹಾತಾ ಕೀರ್ತೀ ನಾಹೀ।
ವಿಚಾರೇವಿಣ ಕೋಠೇ ಚಿ ನಾಹೀ। ಸಮಾಧಾನ ॥೧೯॥
ಪರಾಂತರಾಸ ನ ಲಾವಾವಾ ಢಕಾ। ಕದಾಪಿ ಪಡೋ ನೇದಾವಾ ಚುಕಾ।
ಕ್ಷಮಾಶೀಳ ತಯಾಚ್ಯಾ ತುಕಾ। ಹಾನೀ ನಾಹೀ ॥೨೦॥
ಆಪಲೇ ಅಥವಾ ಪರಾವೇ। ಕಾರ್ಯ ಅವಘೇ ಚ ಕರಾವೇ।
ಪ್ರಸಂಗೀ ಕಾಮಾಸ ಚುಕವಾವೇ। ಹೇ ವಿಹಿತ ನವ್ಹೇ ॥೨೧॥
ಬರೇ ಬೋಲತಾ ಸುಖ ವಾಟತೇ। ಹೇ ತೋ ಪ್ರತ್ಯಕ್ಷ ಕಳತೇ।
ಆತ್ಮವತ ಪರಾವೇ ತೇ। ಮಾನೀತ ಜಾವೇ ॥೨೨॥
ಕಠಿಣ ಶಬ್ದೇ ವಾಈಟ ವಾಟತೇ। ಹೇ ತೋ ಪ್ರತ್ಯಯಾಸ ಯೇತೇ।
ತರೀ ಮಗ ವಾಈಟ ಬೋಲಾವೇ ತೇ। ಕಾಯೆ ನಿಮಿತ್ಯ ॥೨೩॥
ಆಪಣಾಸ ಚಿಮೋಟಾ ಘೇತಲಾ। ತೇಣೇ ಕಾಸಾವಿಸ ಜಾಲಾ।
ಆಪಣಾವರೂನ ದುಸರ್‍ಯಾಲಾ। ರಾಖತ ಜಾವೇ ॥೨೪॥
ಜೇ ದುಸರ್‍ಯಾಸ ದುಃಖಕರೀ। ತೇ ಅಪವಿತ್ರ ವೈಖರೀ।
ಆಪಣಾಸ ಘಾತ ಕರೀ। ಕೋಣಿಯೇಕೆ ಪ್ರಸಂಗೀ ॥೨೫॥
ಪೇರಿಲೇ ತೇ ಉಗವತೇ। ಬೋಲಣ್ಯಾಸಾರಿಖೇ ಉತ್ತರ ಯೇತೇ।
ತರೀ ಮಗ ಕರ್ಕಶ ಬೋಲಾವೇ ತೇ। ಕಾಯೆ ನಿಮಿತ್ಯ ॥೨೬॥

ನಾವು ಒಂದು ದಿನ ಸಾಯುವದು ನಿಶ್ಚಿತವೆಂಬ ಅರಿವನ್ನು ಮರೆಯಬಾರದು. ಹರಿಭಕ್ತಿಯ ಬಗ್ಗೆ ಸದಾ ಸಿದ್ಧರಿರಬೇಕು. ಈ ಪ್ರಕಾರದಿಂದ ಆಯುಷ್ಯವನ್ನು ಕಳೆಯಬೇಕು· ಬಾಳಿ ಬದುಕಬೇಕು· ಮರಣದ ನಂತರ ನಿಮ್ಮ ಕೀರ್ತಿ ಉಳಿಯುವಂತೆ ಮಾಡಬೇಕು· [೧೩] ಮನುಷ್ಯರ ತನ್ನ ಧ್ಯೇಯಾನುರೂಪವಾಗಿ ಶಿಸ್ತಿನಿಂದ ನಡೆಯ ಹತ್ತಿದನೆಂದರೆ ಇದು ಬಹು ಜನರಿಗೆ ಗೊತ್ತಾಗುವದು. ಎಲ್ಲರೂ ಇವನನ್ನು ಮಾನ್ಯ ಮಾಡುವರು. ಗೌರವದಿಂದ ಕಾಣುವರು. ಆ ಮೇಲೆ ಇವನಿಗೆ ಯಾವುದೂ ಕೊರತೆಯಾಗುವದಿಲ್ಲ. [೧೪] ಇಂಥ ಉತ್ತಮ ಗುಣಗಳಿಂದ ಯಾವನು ವಿಶೇಷ ಸಂಪನ್ನನಿರುವನೋ ಅಂಥವನಿಗೆ ಉತ್ತಮ ಪುರುಷ ಅನ್ನಬೇಕು. ಮಾನ್ಯ ಮಾಡಬೇಕು. ಇಂಥವನು ಮಾಡುವ ಭಕ್ತಿಯಿಂದ ಪರಮೇಶ್ವರನು ತೃಪ್ತನಾಗುವನು. ಪ್ರಸನ್ನನಾಗುವನು. [೧೫] ಜನತೆಯ ಮುಂದೆ ಆದರ್ಶದಿಂದ ಇರಲಿಕ್ಕೆ ಯೋಗ್ಯವಾದಂಥ ಇನ್ನೂ ಕೆಲವು ಉತ್ತಮ ಪುರುಷಲಕ್ಷಣಗಳನ್ನು ಹೇಳುವರು. ಇವಗಳಲ್ಲಿ ಮುಂದಿನ ನಾಲ್ಕು ಲಕ್ಷಣಗಳು ಬಹಳ ಮಹತ್ವದ ಲಕ್ಷಣಗಳಿರುವವು. [೧] ಆತ್ಮಜ್ಞಾನ [೨] ಪ್ರಖರ ವೈರಾಗ್ಯ [೩] ಮಧುರ ಭಾಷಣ ಮತ್ತು [೪] ಬಹುಜನರಿಗೆ [ಸುಖ] ಕಲ್ಯಾಣ ಮಾಡುವದು ಈ ನಾಲ್ಕು ಲಕ್ಷಣಗಳು ಉತ್ತಮ ಪುರುಷನ ಆಚರಣೆಯಲ್ಲಿ ಪ್ರತ್ಯಕ್ಷ ಸಾಕಾರವಾಗುವವು. ಕೃತಿಯಲ್ಲಿ ತೋರಿ ಬರುವವು. ಇವನು ಹೇಗೆ ಮಾತಾಡುವನೋ ಅದರಂತೆಯೇ ನಡೆಯುವನು:- ಯಾರಾದರೂ ಎಷ್ಟೇ ಅವಹೇಳನ ಮಾಡಿ ಮಾತಾಡಿದರೂಸಹ ಉತ್ತಮ ಪುರುಷನು ತನ್ನ ಶಾಂತಿಯನ್ನು ಭಂಗಗೊಳಿಸುವದಿಲ್ಲ. ಭಂಗಗೊಳಿಸಬಾರದು. ದುರ್ಜನರ ಕೂಡ ಸಹ ಯಾರಿಗೆ ಸಮರಸವಾಗಲು [ಸಮರಸರಾಗಿ ಸುಧಾರಿಸಲು] ಶಕ್ಯವಾಗುವದೋ ಆ ಸಾಧುಪುರುಷ ನಿಶ್ಚಿತವಾಗಿ ಧನ್ಯನೆಂದು ತಿಳಿಯಬೇಕು. [೧೬] ಯಾವ ಪುರುಷನು ಉತ್ತಮ ಗುಣಗಳನ್ನು ಪ್ರೇಮಾದರಗಳಿಂದ ಅಂಗೀಕಾರ ಮಾಡುವನೋ ಜ್ಞಾನದಿಂದ ವೈರಾಗ್ಯದಿಂದ ಯಾವನು ನಿಜವಾಗಿಯೂ ಶೋಭಿಸುವನೋ ಆ ಪುರುಷನೊಬ್ಬನು ಮಾತ್ರ ಜಗದಲ್ಲಿ ನಿಜವಾದ ಉತ್ತಮ ಪುರುಷನೆನಿಸುವನು. [೧೭] ನಾವು ಸ್ವತಃ ಕಷ್ಟಪಡಬೇಕು. ಬಹುಜನರಿಗಾಗಿ ಬಹಳಷ್ಟು ದುಡಿಯಬೇಕು. ಕಷ್ಟ ಸಹಿಸಬೇಕು. ಜನರಿಗಾಗಿ ಅನೇಕ ಪ್ರಕಾರದಿಂದ ಕೆಲಸ ಮಾಡಿ ನಿಮ್ಮ ಕೀರ್ತಿಯನ್ನು ಹಿಂದೆ ಇಡಬೇಕು. [೧೮] ಕೀರ್ತಿ ಬೇಕಾಗಿದರೆ, ದೇಹಕ್ಕೆ ಸುಖ ಬಯಸಿದರೆ ಅದು ನಡಿಯಲಾರದು. ದೇಹಕ್ಕೆ ಸುಖ ಕೊಡುವ ಆಶೆ ಇದರೆ ಕೀರ್ತಿ ಪದರಿನಲ್ಲಿ ಬೀಳಲಾರದು. ಸಾರಾಸಾರ ವಿಚಾರದಹೊರತು ಯಾರಿಗೂ ಖರೇ ಸಮಾಧಾನ ಸಿಗಲಾರದು. (೧೯) ಎರಡನೆಯವರ ಅಂತಃಕರಣ ದುಃಖಿಗೊಳ್ಳುವಂತೆ ಮಾಡಬೇಡಿರಿ. ನಿಮ್ಮ ಕೈಯಿಂದ ಎಂದಿಗೂ ಗೈರ ಕೆಲಸ ಘಟಿಸಬಾರದು. ಯಾವನು ಖರೇ ಕ್ಷಮಾಶೀಲ ಇರುವನೋ ಅವನ ದೊಡ್ಡಿಸ್ತಿಕೆಗೆ ಎಂದೂ ಕುಂದು ಬರುವದಿಲ್ಲ [೨೦] ಯಾವುದೇ ಕೆಲಸ ತನ್ನದಿರಲಿ ಅಥವಾ ಇನ್ನೊಬ್ಬರದಿರಲಿ ಎಲ್ಲವನ್ನೂ ಮನಃಪೂರ್ವಕ ಮಾಡಬೇಕು. ಕೆಲಸ ಮಾಡುವ ಪ್ರಸಂಗ ಬಂದಾಗ ಮೈಗಳ್ಳತನ ತೋರುವದೇನೂ ಸರಿ ಅಲ್ಲ. [೨೧] ಸವಿಮಾತು ಆಡಿದರೆ ಮನಸ್ಸಿಗೆ ಆನಂದವಾಗುವದು. ಇದು ನಮ್ಮ ಪ್ರತ್ಯಕ್ಷ ಅನುಭವದ ಮಾತಾಗಿರುವದು. ಇದರ ಮೇಲಿಂದ ನಾವು ಇನ್ನೊಬ್ಬರನ್ನು ನಮ್ಮಂತೆಯೇ ತಿಳಿಯುವದನ್ನು ಕಲಿಯಬೇಕು. [೨೨] ಯಾರಾದರೂ ಕಠೋರ ದುಷ್ಟ ಶಬ್ದ ಮಾತನಾಡಿದರೆ ಮನಸ್ಸಿಗೆ ಬಹಳ ಕೆಡಕೆನಿಸುವದು. ಇದಾದರೂ ಪ್ರತ್ಯಕ್ಷ ಅನುಭವ ಬಂದದ್ದೇ ಇರುವದು. ಅಂದ ಮೇಲೆ ವಿನಾಕಾರಣ ಕೆಟ್ಟ ಮಾತುಗಳನ್ನು ಆಡದಿರುವದು ಉತ್ತಮ. [೨೩] ನಿಮಗೆ ಯಾರಾದರೂ ಚಿವುಟಿದರೆ ಜೀವ ಕಸಿವಿಸಿಗೊಳ್ಳುವದು. ಇದನ್ನು ಲಕ್ಷ್ಯದಲ್ಲಿಟ್ಟುಕೊಂಡು ಇನ್ನೊಬ್ಬರಿಗೆ ದುಃಖ ಕೊಡಬಾರದು. [೨೪] ಯಾವ ಮಾತಿನಿಂದ ಇನ್ನೊಬ್ಬರಿಗೆ ದುಃಖವಾಗುವದೋ ಯಾವ ವಾಣಿಯು (ಮಾತು) ಇನ್ನೊಬ್ಬರಿಗೆ ದುಃಖ ಕೊಡುವದೋ ಆ ವಾಣಿಯು ಅಪವಿತ್ರವು. ಒಮ್ಮೊಮ್ಮೆ ಇದು ನಿಮ್ಮ ಸ್ವತಃಕ್ಕೂಸಹ ಘಾತ ಮಾಡುವದು. [೨೫] ಎಂಥ ಬೀಜ ಬಿತ್ತುವೆವೋ ಅಂಥವೇ ಹುಟ್ಟುತ್ತವೆ· ನೀವು ಯಾವ ರೀತಿಯಲ್ಲಿ ಮಾತನಾಡುವಿರೋ ಅದರಂತೆಯೇ ಪ್ರತಿ ಉತ್ತರ ನಿಮಗೆ ಅದೇ ಧಾಟಿಯಲ್ಲಿಯೇ ಬರುತ್ತದೆ. ಹೀಗೆ ಇರುವದು ನಿಜವೇ ಸರಿ. ಅಂದ ಮೇಲೆ ವಿನಾಕಾರಣ ಕಠೋರ, ಕಠಿಣ, ದುಷ್ಟ ಶಬ್ದ ಮಾತಾಡದಿರುವದು ಉತ್ತಮವಲ್ಲವೇ? [೨೬]

ಆಪಲ್ಯಾ ಪುರುಷಾರ್ಥವೈಭವೇ । ಬಹುತಾಸ ಸುಖೀ ಕರಾವೇ ।
ಪರಂತು ಕಷ್ಟೀ ಕರಾವೇ । ಹೆ ರಾಕ್ಷಸೀ ಕ್ರಿಯಾ ॥೨೭॥

ದಂಭ ದರ್ಪ ಅಭಿಮಾನ । ಕ್ರೋಧ ಆಣೀ ಕಠಿಣ ವಚನ ।
ಹೇ ಅಜ್ಞಾನಾಚೇ ಲಕ್ಷಣ । ಭಗವದ್ಗೀತೇತ ಬೋಲಿಲೇ ॥೨೮॥

ಜೋ ಉತ್ತಮ ಗುಣೇ ಶೋಭಲಾ । ತೋ ಚಿ ಪುರುಷ ಮಹಾ ಭಲಾ ।
ಕಿತ್ಯೇಕ ಲೋಕ ತಯಾಲಾ । ಶೋಧೀತ ಫಿರತೀ ॥೨೯॥

ಕ್ರಿಯೇವಿಣ ಶಬ್ದಜ್ಞಾನ । ತೇ ಚಿ ಸ್ವಾನಾಚೇ ವಮನ ।
ಭಲೇ ತೇಥೇ ಅವಲೋಕನ । ಕದಾಪಿ ನ ಕರಿತೀ ॥೩೦॥

ಮನಾಪಾಸೂನ ಭಕ್ತಿ ಕರಣೇ । ಉತ್ತಮ ಗುಣ ಅಗತ್ಯ ಧರಣೇ ।
ತಯಾ ಮಹಾಪುರುಷಾಕಾರಣೇ । ಧುಂಡೀತ ಯೇತೀ ॥೩೧॥

ಐಸಾ ಜೋ ಮಹಾನುಭಾವ । ತೇಣೇ ಕರಾವಾ ಸಮುದಾವ ।
ಭಕ್ತಿಯೋಗೇ ದೇವಾಧಿದೇವ । ಆಪುಲಾ ಕರಾವಾ ॥೩೨॥

ಆಪಣ ಅವಚಿತೆ ಮರೋನ ಜಾವೇ । ಮಗ ಭಜನ ಕೋಣೇ ಕರಾವೇ ।
ಯಾಕಾರಣೇ ಭಜನಾಸ ಲಾವಾವೇ । ಬಹುತ ಲೋಕ ॥೩೩॥

ಆಮಚೀ ಪ್ರತಿಜ್ಞಾ ಐಸೀ । ಕಾಹೀ ನ ಮಾಗಾವೇ ಶಿಷ್ಯಾಸೀ ।
ಆಪಣಾಮಾಗೇ ಜಗದೀಶಾಸೀ । ಭಜತ ಜಾವೇ ॥೩೪॥

ಯಾಕಾರಣೇ ಸಮುದಾವ । ಜಾಲಾ ಪಾಹಿಜೆ ಮಹೋಭಾವ ।
ಹಾತೋಪಾತೀ ದೇವಾಧಿದೇವ । ವೋಳಖಾ ಕರಾವಾ ॥೩೫॥

ಆತಾ ಸಮುದಾಯಾಕಾರಣೇ । ಪಾಹಿಜೇತೀ ದೋನೀ ಲಕ್ಷಣೇ ।
ಶ್ರೋತೀ ಯೇಥೇ ಸಾವಧಪಣೇ । ಮನ ಘಾಲಾವೇ ॥೩೬॥

ನೀವು ಶ್ರೇಷ್ಠ ಪದಕ್ಕೇರಿ ವೈಭವ ಪಡೆಯಿರಿ. ಆ ವೈಭವದಿಂದ ಬಹು ಜನರನ್ನು ಸುಖಿಗಳನ್ನಾಗಿ ಮಾಡಿರಿ. ಆದರೆ ಈ ವೈಭವದ ಬಲದಿಂದ ಜನರನ್ನು ದುಃಖಿತರನ್ನಾಗಿ ಮಾಡುವದು ನೀಚ ರಾಕ್ಷಸೀ ಕ್ರಿಯೆ ಅನಿಸುವದು. [೨೭] ಡಂಭ, ದರ್ಪ, ಅಭಿಮಾನ, ಕ್ರೋಧ ಮತ್ತು ಕಠೋರವಾಣಿ ಇವು ಅಜ್ಞಾನದ ಲಕ್ಷಣಗಳಾಗಿರುವವು. ಈ ಮಾತನ್ನು ಭಗವದ್ಗೀತೆಯು ೧೬-೪-ರಲ್ಲಿ ಹೇಳಿದೆ. [೨೮] ಮೇಲೆ ಹೇಳಿದ ಉತ್ತಮ ಗುಣಗಳಿಂದ ಯಾವನು ಶೋಭಿಸುವನೋ ಅವನೇ ನಿಜವಾದ ದೊಡ್ಡ ಮನುಷ್ಯನು. ಇಂಥ ಗುಣವಂತ ಪುರುಷರನ್ನೇ ಜನ ಹುಡುಕುತ್ತ ತಿರುಗುವರು. [೨೯] ಕ್ರಿಯಾ ಹೀನತನ, ಒಣ (ಬರೇ) ಶಬ್ದ ಜ್ಞಾನ ಇವು ನಾಯಿಯ ಓಕರಿಕೆಯಂತೆ ಅತಿ ಬೇಸರ ತರುವಂಥದ್ದಿರುವದು. ಬುದ್ಧಿವಂತ ಜನರು ಇಂಥದರ ಕಡೆಗೆ ಎಂದೂ ಕಣ್ಣೆತ್ತಿ ನೋಡುವದಿಲ್ಲ. ಲಕ್ಷ್ಯ ಕೊಡುವದಿಲ್ಲ. [೩೦] ಯಾವನು ಮನಸಾ ಭಗವಂತನ ಭಕ್ತಿ ಮಾಡುವನೋ ಮತ್ತು ಅಗದೀಅಗತ್ಯದಿಂದ ಮನಸಾಉತ್ತಮ ಗುಣಗಳ ಅಭ್ಯಾಸ ಮಾಡುವನೋ ಅವನು ಖರೇ ದೊಡ್ಡ ಪುರುಷನಿರುವನು. ಇಂಥ ಶ್ರೇಷ್ಠ ಪುರುಷನನ್ನು ಜನರು ಹುಡುಕಿಕೊಂಡು ಬರುವರು. [೩೧] ಇಲ್ಲಿಯ ವರೆಗೆ ಯಾರ ವರ್ಣನೆ ಮಾಡಿದೆವೋ ಅಂಥ ಶ್ರೇಷ್ಠ ಪುರುಷರು (ಉತ್ತಮ ಪುರುಷರು) ಲೋಕ (ಜನ) ಸಂಗ್ರಹ ಮಾಡಬೇಕು. ಸಮಾಜದಲ್ಲಿ ಅಧ್ಯಾತ್ಮ ಪರಂಪರೆಯು ಉಳಿಯಬೇಕು. ಇದು ಅಗದೀ ವಾಸನಾರಹಿತವಾದದ್ದಿರುವದು. ಇದನ್ನು ಒಡೆದು ಹೇಳುವದು ಬೇಡ ಆದರೂ ಸಹ "ನನ್ನ ತರುವಾಯ ನನ್ನ ನಂತರ ನೀವು ಭಗವಂತನ ಭಕ್ತಿಯನ್ನು ಚಾಲೂ ಇಡಬೇಕು" ಅಂತಾ ಅವನು ತನ್ನ ಅನುಯಾಯಿಗಳಿಗೆ ಹೇಳುವನು. ಜನರು ಸ್ವಾರ್ಥಿಗಳೇ ಇರುತ್ತಾರೆ. ಇದನ್ನು ಲಕ್ಷ್ಯದಲ್ಲಿಟ್ಟುಕೊಂಡು ಸಾವಕಾಶವಾಗಿ ವಿವೇಕದಿಂದ ವಿಚಾರದಿಂದ ಮತ್ತು ಧೈರ್ಯದಿಂದ ಜನರನ್ನು ಭಗವಂತನ ಕಡೆಗೆ ಒಯ್ಯುವ ಕೆಲಸವನ್ನು ಉತ್ತಮ ಪುರುಷನು ಮಾಡುವನು:- ಇಂಥ ಶ್ರೇಷ್ಠನಾದ ಸ್ವಾನುಭವಿ ಉತ್ತಮ ಪುರುಷ ಯಾವನಿರುವನೋ ಅವನು ಬಹಳಷ್ಟು ಜನರನ್ನು ಒಂದೆಡೆ ಕೂಡಿಸಿ ಅವರೆಲ್ಲರ ಮುಖಂಡತ್ವ ವಹಿಸಬೇಕು. ಜನರನ್ನು ಭಕ್ತಿಯ ಮಾರ್ಗಕ್ಕೆ ಹಚ್ಚಿ ಭಗವಂತನು ತನ್ನವನಾಗುವಂತೆ ಮಾಡಿಕೊಳ್ಳಬೇಕು. ಜನರಿಗೂ ಮಾಡಿಸಿಕೊಡಬೇಕು. [೩೨] ತಿಳಿಯಿರಿ ನಾವು ಅಕಸ್ಮಾತ್ ಒಂದು ವೇಳೆ ಸತ್ತು ಹೋದದ್ದಾದರೆ ನಿಮ್ಮ ನಂತರ ಭಗವಂತನ ಭಕ್ತಿ ಮಾಡುವವರು, ನಡೆಸುವವರು ಇರಲಿಕ್ಕಿಲ್ಲ.(ಸಾಂಪ್ರದಾಯ ನಡೆಯುಲಿಕ್ಕಿಲ್ಲ). ಆದ್ದರಿಂದ ಬಹಳಷ್ಟು ಜನರನ್ನು ಭಗವಂತನ ಭಜನೆಗೆ, ಭಕ್ತಿಮಾಡಲಿಕ್ಕೆ ಹಚ್ಚಬೇಕು. (ಸಾಂಪ್ರದಾಯ ಕಟ್ಟಬೇಕು). [೩೩] ನೀವು (ಮಹಂತನು ಗುರುವಾದವನು) ನಿಮ್ಮ ಶಿಷ್ಯರ ಹತ್ತಿರ ಏನೂ ಬೇಡಬಾರದು. ಇದು ಕಟ್ಟಾಜ್ಞೆಯು. ಆದರೂ ಸಹ ನೀವು ಒಂದನ್ನು ಮಾತ್ರ ಶಿಷ್ಯರಲ್ಲಿ ಬೇಡಬಹುದು. ಅದು ಯಾವುದೆಂದರೆ, ನನ್ನ ತರುವಾಯ ಶಿಷ್ಯರು ಭಗವಂತನ ಭಕ್ತಿಯ ಈ ನನ್ನ ಸಂಪ್ರದಾಯವನ್ನು ಬಿಡಬಾರದು. ಇನ್ನೂ ಚನ್ನಾಗಿ ನಡಿಸಿ ಭಕ್ತಿಯು ಭಗವಂತನಲ್ಲಿ ಬೆಳೆಯುವಂತೆ ಮಾಡಬೇಕು. ಇದೇ ಶಿಷ್ಯರಲ್ಲಿ ನೀವು ಬೇಡುವ ದಕ್ಷಿಣೆಯು. [೩೪] ಇದು ಸಾಧ್ಯವಾಗಬೇಕಾದರೆ ಲೋಕ ಸಮುದಾಯ ತಯಾರ ಆಗಲಿಕ್ಕೇ ಬೇಕು. ಮತ್ತು ದೊಡ್ಡ ದೊಡ್ಡ ಉತ್ಸವಗಳನ್ನು ಏರ್ಪಡಿಸಬೇಕು. ಹೀಗೆ ಮಾಡಿದ ಮೇಲೆ ಪರಮಾತ್ಮನು ತಡಮಾಡದೇ ನೋಡನೋಡುವಷ್ಟರಲ್ಲಿ ನಿಮ್ಮ ಮೇಲೆ ಕೃಪಾ ಮಾಡಲು ಶಕ್ಯವಾಗುವದು. [೩೫] ಇಂಥ ಒಂದು ಲೋಕ ಸಮುದಾಯ ನಿರ್ಮಾಣವಾಗುವದಕ್ಕಾಗಿ ಮುಖಂಡನಲ್ಲಿ ಎರಡು ಲಕ್ಷಣಗಳು ಇರಬೇಕಾಗುವದು. ಶ್ರೋತಾರರು ಮನಃಪೂರ್ವಕವಾಗಿ ಲಕ್ಷ್ಯಗೊಟ್ಟು ಇವನ್ನು ಕೇಳಿರಿ. [೩೬]

ಜೇಣೇ ಬಹುತಾಸ ಘಡೇ ಭಕ್ತಿ । ತೇ ಹೇ ರೋಕಡೀ ಪ್ರಬೋಧಶಕ್ತಿ ।
ಬಹುತಾಚೇ ಮನೋಗತ ಹಾತೀ। ಘೇತಲೇ ಪಾಹಿಜೆ ॥೩೭॥

ಮಾಗಾ ಬೋಲಿಲೇ ಉತ್ತಮ ಗುಣ । ತಯಾಸ ಮಾನಿತೀ ಪ್ರಮಾಣ ।
ಪ್ರಬೋಧಶಕ್ತಿಚೇ ಲಕ್ಷಣ । ಪುಢೇ ಚಾಲೇ ॥೩೮॥

ಬೋಲಣ್ಯಾಸಾರಿಖೇ ಚಾಲಣೇ । ಸ್ವಯೇ ಕರೂನ ಬೋಲಣೇ ।
ತಯಾಚೀ ವಚನೇ ಪ್ರಮಾಣೇ । ಮಾನಿತೀ ಜನೀ ॥೩೯॥

ಜೇ ಜೇ ಜನಾಸ ಮಾನೇನಾ । ತೇ ತೇ ಜನಹಿ ಮಾನೀನಾ ।
ಆಪಣ ಯೇಕಲಾ ಜನ ನಾನಾ । ಸೃಷ್ಟೀಮಧೇ ॥೪೦॥

ಮ್ಹಣೋನ ಸಾಂಗಾತೀ ಅಸಾವೇ । ಮಾನತ ಮಾನತ ಶಿಕವಾವೇ ।
ಹಳು ಹಳು ಸೇವಟಾ ನ್ಯಾವೇ । ವಿವೇಕಾನೇ ॥೪೧॥

ಪರಂತು ಹೇ ವಿವೇಕಾಚೀ ಕಾಮೇ । ವಿವೇಕೀ ಕರೀಲ ನೇಮೇ ।
ಇತರ ತೇ ಬಾಪುಡೆ ಭ್ರಮೇ । ಭಾಂಡೋಚ ಲಾಗಲೇ ॥೪೨॥

ಬಹುತಾಸೀ ಭಾಂಡತಾ ಯೇಕಲಾ । ಶೈನ್ಯಾವಾಚೂನ ಪುರವಲಾ ।
ಯಾಕಾರಣೇ ಬಹುತಾಲಾ । ರಾಜೀ ರಾಖಾವೇ ॥೪೩॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಉತ್ತಮ ಪುರುಷ ನಿರೂಪಣ' ನಾಮ ಸಮಾಸ ದಶಮ ॥

— ದಶಕ ಬಾರಾವಾ ಸಮಾಪ್ತ —

ಸ್ಪಷ್ಟವಾದ (ರೋಕಡಿ) ಯಥಾರ್ಥ ಜ್ಞಾನವನ್ನು ಜಾಗೃತಗೊಳಿಸುವ ಶಕ್ತಿ ಇದು ಮೊದಲನೆಯ ಲಕ್ಷಣವು. ಬಹುಜನ ಸಮುದಾಯದ ಮನೋಗತ ಅಥವಾ ಬಹುಜನರ ಮತ, ಅಭಿಪ್ರಾಯ ತಿಳಿದು ಅವರನ್ನು ತನ್ನ ಕೈಯಲ್ಲಿ ಹಿಡಿದುಕೊಳ್ಳುವ ಚತುರತನ ಇದು ಎರಡನೆಯ ಲಕ್ಷಣವಾಗಿದೆ. ಮಹಂತನಲ್ಲಿ ಉತ್ತಮ ದರ್ಜೆಯ ವಕ್ತೃತ್ವ ಇರಬೇಕು. ತಾನು ಹೇಳುವ ವಿಷಯವನ್ನು ಉತ್ತಮ ರೀತಿಯಲ್ಲಿ ಸುಲಭವಾಗಿ ತಿಳಿಯುವಂತೆ ಮತ್ತು ರಸಭರಿತವಾಗಿ ಜನರ ಮುಂದೆ ಹೇಳಲಿಕ್ಕೆ ಬರಬೇಕು. ಇದಲ್ಲದೆ ತನ್ನ ಕಡೆಗೆ ಬಂದವರೆಲ್ಲರ ನಿಷ್ಠಾ ತನ್ನಲ್ಲಿ ಕಾಯಂ ಉಳಿಯುವಂತೆ ನಿಮ್ಮ ಮಾತುಕತೆಯಲ್ಲಿ ಮತ್ತು ಆಚರಣೆಯಲ್ಲಿ ಮೇಳವಿರಬೇಕು. [೩೭] ಈ ಹಿಂದೆ ಉತ್ತಮ ಗುಣಗಳ ಬಗ್ಗೆ ಹೇಳಲಾಗಿದೆ. ಇವು ಯಾರಲ್ಲಿ ಎದ್ದು ಕಾಣುವವೋ ಅವರನ್ನು ಬಹುಜನರು ಮನ್ನಿಸುವರು. ಇಂಥ ಉತ್ತಮ ಪುರುಷರ ಮಾತಿಗೆ ಕಿಮ್ಮತ್ತು (ಬೆಲೆ) ಬರುವದು. ಮತ್ತು ಅವನ ಜ್ಞಾನ-ಭಕ್ತಿಯ ಕಾರ್ಯ ಪ್ರಸಾರ ಹೊಂದುವದು. (೩೮) ಯಾವನು ನುಡಿದಂತೆ ನಡೆಯುವನೋ ಯಾವನು ಮೊದಲು ತಾನು ಸ್ವತಃ ಆಚರಣೆ ಮಾಡಿ ಆಮೇಲೆ ಜನರಿಗೆ ಇದರಂತೆ ನೀವೂ ಆಚರಿಸಿರಿ ಅಂತಾ ಹೇಳುವನೋ ಇಂಥ ಶ್ರೇಷ್ಠ ಪುರುಷನ ಶಬ್ದವನ್ನು ಜನರು ಪ್ರಮಾಣವೆಂದು ತಿಳಿಯುವರು. ಒಪ್ಪುವರು. [೩೯] ಯಾವ ಮಾತನ್ನು ಬಹು ಜನರು ಒಪ್ಪುವದಿಲ್ಲವೋ ಅಥವಾ ಅವರಿಗೆ ಪಟಾಯಿಸುವದಿಲ್ಲವೋ-ಒಪ್ಪಿಗೆ ಆಗುವದಿಲ್ಲವೋ ಅಂಥ ಮಾತನ್ನು ಜನ ಪ್ರಮಾಣವೆಂದು ಎಂದೂ ಒಪ್ಪುವದಿಲ್ಲ. "ನನ್ನದೇ ಅಭಿಪ್ರಾಯ-ನನ್ನ ಮಾತೇ ಖರೇ" ಹೀಗೆ ಅನ್ನುವದು ನಡೆಯಲಾರದು. ಜಗತ್ತು ಒಪ್ಪುವದಿಲ್ಲ. ಅಂದಾಗ ಬಹು ಸಂಖ್ಯೆಯ ಜನರಲ್ಲಿ ನೀನೊಬ್ಬನು ಏಕಾಂಗಿಯಾಗಿ ಉಳಿಯಬೇಕಾಗುವದು. ಸಂಗಡ ಜನ ಸಮುದಾಯವು ಇರುವದು ಅವಶ್ಯವು. ನೀನೊಬ್ಬನೇ ಹಿಂದೆ ಉಳಿದು ಉಪಯೋಗವಿಲ್ಲ. [೪೦] ನೀವು ಜನರಲ್ಲಿ ಕೂಡಿಕೊಂಡು ಹೋಗಿರಿ ಅವರಿಗೆ ಕ್ರಮ ಕ್ರಮವಾಗಿ ವಿವೇಕವನ್ನು ಕಲಿಸಿರಿ ಸಾವಕಾಶವಾಗಿ ಸಾವಧಾನದಿಂದ, ವಿವೇಕದಿಂದ ವೈರಾಗ್ಯದ ಕೊನೆಯ ಮೆಟ್ಟಲಿನವರೆಗೆ ಅವರನ್ನು ಒಯ್ಯಿರಿ. ಮುಖಂಡ (ಅಧಿಕಾರಿ ಪುರುಷ) ಜನರ ಮುಂದೆ ಇರಬೇಕೆಂಬ ಮಾತು ನಿಜವೇ ಇರುವದು. ಆದರೆ ಇವನು ಯಾವಾಗಲೂ ಬಹಳ ಮುಂದೆ ಇದ್ದರೆ ಜನರಿಗೆ ಇವನ ಹಿಂದೆ ಹೋಗುವದು ಅಡಚಣೆಯದೆನಿಸುವದು. ಆದ್ದರಿಂದ ಇವನು ಕ್ರಮ ಕ್ರಮದಿಂದಲೇ ಜನರನ್ನು ಮುಂದಕ್ಕೆಳೆದು ತರುವದು ಅವಶ್ಯವು. ಇದರಿಂದ ಅವರ ಜನ್ಮ ಸಾರ್ಥಕವಾಗುವದು. [೪೧] ಆದರೆ ಇಂಥ ಪುಢಾರಿತನ ಮಾಡುವದು. ವಿವೇಕದ ಕೆಲಸವಿರುವದು. ಖರೇ ವಿವೇಕಿಯಾದವನು ಮಾತ್ರ ಇದನ್ನು ಮಾಡಬಲ್ಲನು. ಇತರ ಜನ ವಿಚಾರಹೀನರು ಗೈರ ತಿಳುವಳಿಕೆಯಿಂದ ತಮ್ಮ ತಮ್ಮಲ್ಲಿ ಜಗಳಾಡುತ್ತ ಕೂಡುವರು. [೪೨] ಸೈನ್ಯವಿಲ್ಲದೆ ಒಬ್ಬ ಸೇನಾಪತಿ ಹೇಗೆ ಯುದ್ಧ ಮಾಡಲಾರನೋ ಇದರಂತೆಯೇ ಪುಢಾರಿಯಾದವನು ಬಹುಜನರ ಕೂಡ ಕಡಿದಾಡಿದರೆ, ತಂಟೆ ಮಾಡಿದರೆ ಅವನೊಬ್ಬನೇ ಯಾವ ಕಾರ್ಯ ಮಾಡಬಲ್ಲನು ? ಅರ್ಥಾತ್ ಏನೂ ಸಾಧಿಸಲಾರನು. ಆದ್ದರಿಂದ ಬಹಳಷ್ಟು ಜನರನ್ನು ಪ್ರೇಮದಿಂದ ತನ್ನವರನ್ನಾಗಿ ಮಾಡಿಕೊಳ್ಳಬೇಕು. ಜನರನ್ನು ಏಕತ್ರದಲ್ಲಿ ತರಬೇಕು. (ತನ್ನ ಸಂಪ್ರದಾಯದ ಸಮುದಾಯವನ್ನು ಬೆಳೆಸಬೇಕು). [೪೩]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹನ್ನೆರಡನೆಯ ದಶಕದೊಳಗಿನ "ಉತ್ತಮ ಪುರುಷ ನಿರೂಪಣ"ಎಂಬ ಹತ್ತನೆಯ ಸಮಾಸವು ಮುಗಿದುದು.

ಜೇಣೇ ಬಹುತಾಸ ಘಡೇ ಭಕ್ತಿ । ತೇ ಹೇ ರೋಕಡೀ ಪ್ರಬೋಧಶಕ್ತಿ ।
ಬಹುತಾಚೇ ಮನೋಗತ ಹಾತೀ । ಘೇತಲೇ ಪಾಹಿಜೆ ॥೩೭॥
ಮಾಗಾ ಬೋಲಿಲೇ ಉತ್ತಮ ಗುಣ । ತಯಾಸ ಮಾನಿತೀ ಪ್ರಮಾಣ ।
ಪ್ರಬೋಧಶಕ್ತಿಚೇ ಲಕ್ಷಣ । ಪುಢೇ ಚಾಲೇ ॥೩೮॥
ಬೋಲಣ್ಯಾಸಾರಿಖೇ ಚಾಲಣೇ । ಸ್ವಯೇ ಕರೂನ ಬೋಲಣೇ ।
ತಯಾಚೇ ವಚನೇ ಪ್ರಮಾಣೇ । ಮಾನಿತೀ ಜನೀ ॥೩೯॥
ಜೇ ಜೇ ಜನಾಸ ಮಾನೇನಾ । ತೇ ತೇ ಜನಹಿ ಮಾನೀನಾ ।
ಆಪಣ ಯೇಕಲಾ ಜನ ನಾನಾ । ಸೃಷ್ಟೀಮಧೇ ॥೪೦॥
ಮ್ಹಣೋನ ಸಾಂಗಾತೀ ಅಸಾವೇ । ಮಾನತ ಮಾನತ ಶಿಕವಾವೇ ।
ಹಳು ಹಳು ಸೇವಟಾ ನ್ಯಾವೇ । ವಿವೇಕಾನೇ ॥೪೧॥
ಪರಂತು ಹೇ ವಿವೇಕಾಚೀ ಕಾಮೇ । ವಿವೇಕೀ ಕರೀಲ ನೇಮೇ ।
ಇತರ ತೇ ಬಾಪುಡೆ ಭ್ರಮೇ । ಭಾಂಡೋ ಚ ಲಾಗಲೇ ॥೪೨॥
ಬಹುತಾಸೀ ಭಾಂಡತಾ ಯೇಕಲಾ । ಶೈನ್ಯಾವಾಚೂನ ಪುರವಲಾ ।
ಯಾಕಾರಣೇ ಬಹುತಾಲಾ । ರಾಜೀ ರಾಖಾವೇ ॥೪೩॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಉತ್ತಮ ಪುರುಷ ನಿರೂಪಣ' ನಾಮ ಸಮಾಸ ದಶಮ ॥

— ದಶಕ ಬಾರಾವಾ ಸಮಾಪ್ತ —

ಸ್ಪಷ್ಟವಾದ (ರೋಕಡಿ) ಯಥಾರ್ಥ ಜ್ಞಾನವನ್ನು ಜಾಗೃತಗೊಳಿಸುವ ಶಕ್ತಿ ಇದು ಮೊದಲನೆಯ ಲಕ್ಷಣವು. ಬಹುಜನ ಸಮುದಾಯದ ಮನೋಗತ ಅಥವಾ ಬಹುಜನರ ಮತ, ಅಭಿಪ್ರಾಯ ತಿಳಿದು ಅವರನ್ನು ತನ್ನ ಕೈಯಲ್ಲಿ ಹಿಡಿದುಕೊಳ್ಳುವ ಚತುರತನ ಇದು ಎರಡನೆಯ ಲಕ್ಷಣವಾಗಿದೆ. ಮಹಂತನಲ್ಲಿ ಉತ್ತಮ ದರ್ಜೆಯ ವಕ್ತೃತ್ವ ಇರಬೇಕು. ತಾನು ಹೇಳುವ ವಿಷಯವನ್ನು ಉತ್ತಮ ರೀತಿಯಲ್ಲಿ ಸುಲಭವಾಗಿ ತಿಳಿಯುವಂತೆ ಮತ್ತು ರಸಭರಿತವಾಗಿ ಜನರ ಮುಂದೆ ಹೇಳಲಿಕ್ಕೆ ಬರಬೇಕು. ಇದಲ್ಲದೆ ತನ್ನ ಕಡೆಗೆ ಬಂದವರೆಲ್ಲರ ನಿಷ್ಠಾ ತನ್ನಲ್ಲಿ ಕಾಯಮ ಉಳಿಯುವಂತೆ ನಿಮ್ಮ ಮಾತುಕತೆಯಲ್ಲಿ ಮತ್ತು ಆಚರಣೆಯಲ್ಲಿ ಮೇಳವಿರಬೇಕು. [೩೭] ಈ ಹಿಂದೆ ಉತ್ತಮ ಗುಣಗಳ ಬಗ್ಗೆ ಹೇಳಲಾಗಿದೆ. ಇವು ಯಾರಲ್ಲಿ ಎದ್ದು ಕಾಣುವವೋ ಅವರನ್ನು ಬಹುಜನರು ಮನ್ನಿಸುವರು. ಇಂಥ ಉತ್ತಮ ಪುರುಷರ ಮಾತಿಗೆ ಕಿಮ್ಮತ್ತು (ಬೆಲೆ) ಬರುವದು. ಮತ್ತು ಅವನ ಜ್ಞಾನ-ಭಕ್ತಿಯ ಕಾರ್ಯ ಪ್ರಸಾರ ಹೊಂದುವದು. (೩೮) ಯಾವನು ನುಡಿದಂತೆ ನಡೆಯುವನೋ ಯಾವನು ಮೊದಲು ತಾನು ಸ್ವತಃ ಆಚರಣೆ ಮಾಡಿ ಆಮೇಲೆ ಜನರಿಗೆ ಇದರಂತೆ ನೀವೂ ಆಚರಿಸಿರಿ ಅಂತಾ ಹೇಳುವನೋ ಇಂಥ ಶ್ರೇಷ್ಠ ಪುರುಷನ ಶಬ್ದವನ್ನು ಜನರು ಪ್ರಮಾಣವೆಂದು ತಿಳಿಯುವರು. ಒಪ್ಪುವರು. [೩೯] ಯಾವ ಮಾತನ್ನು ಬಹು ಜನರು ಒಪ್ಪುವದಿಲ್ಲವೋ ಅಥವಾ ಅವರಿಗೆ ಪಟಾಯಿಸುವದಿಲ್ಲವೋ-ಒಪ್ಪಿಗೆ ಆಗುವದಿಲ್ಲವೋ ಅಂಥ ಮಾತನ್ನು ಜನ ಪ್ರಮಾಣವೆಂದು ಎಂದೂ ಒಪ್ಪುವದಿಲ್ಲ. "ನನ್ನದೇ ಅಭಿಪ್ರಾಯ-ನನ್ನ ಮಾತೇ ಖರೇ" ಹೀಗೆ ಅನ್ನುವದು ನಡೆಯಲಾರದು. ಜಗತ್ತು ಒಪ್ಪುವದಿಲ್ಲ. ಅಂದಾಗ ಬಹು ಸಂಖ್ಯೆಯ ಜನರಲ್ಲಿ ನೀನೊಬ್ಬನು ಏಕಾಂಗಿಯಾಗಿ ಉಳಿಯಬೇಕಾಗುವದು. ಸಂಗಡ ಜನ ಸಮುದಾಯವು ಇರುವದು ಅವಶ್ಯವು. ನೀನೊಬ್ಬನೇ ಹಿಂದೆ ಉಳಿದು ಉಪಯೋಗವಿಲ್ಲ. [೪೦] ನೀವು ಜನರಲ್ಲಿ ಕೂಡಿಕೊಂಡು ಹೋಗಿರಿ ಅವರಿಗೆ ಕ್ರಮ ಕ್ರಮವಾಗಿ ವಿವೇಕವನ್ನು ಕಲಿಸಿರಿ ಸಾವಕಾಶವಾಗಿ ಸಾವಧಾನದಿಂದ, ವಿವೇಕದಿಂದ ವೈರಾಗ್ಯದ ಕೊನೆಯ ಮೆಟ್ಟಲಿನವರೆಗೆ ಅವರನ್ನು ಒಯ್ಯಿರಿ. ಮುಖಂಡ (ಅಧಿಕಾರಿ ಪುರುಷ) ಜನರ ಮುಂದೆ ಇರಬೇಕೆಂಬ ಮಾತು ನಿಜವೇ ಇರುವದು. ಆದರೆ ಇವನು ಯಾವಾಗಲೂ ಬಹಳ ಮುಂದೆ ಇದ್ದರೆ ಜನರಿಗೆ ಇವನ ಹಿಂದೆ ಹೋಗುವದು ಅಡಚಣಿಯದೆನಿಸುವದು. ಆದ್ದರಿಂದ ಇವನು ಕ್ರಮ ಕ್ರಮದಿಂದಲೇ ಜನರನ್ನು ಮುಂದಕ್ಕೆಳೆದು ತರುವದು ಅವಶ್ಯವು. ಇದರಿಂದ ಅವರ ಜನ್ಮ ಸಾರ್ಥಕವಾಗುವದು. [೪೧] ಆದರೆ ಇಂಥ ಪುಢಾರಿತನ ಮಾಡುವದು. ವಿವೇಕದ ಕೆಲಸವಿರುವದು. ಖರೇ ವಿವೇಕಿಯಾದವನು ಮಾತ್ರ ಇದನ್ನು ಮಾಡಬಲ್ಲನು. ಇತರ ಜನ ವಿಚಾರಹೀನರು ಗೈರ ತಿಳುವಳಿಕೆಯಿಂದ ತಮ್ಮ ತಮ್ಮಲ್ಲಿ ಜಗಳಾಡುತ್ತ ಕೂಡುವರು. [೪೨] ಸೈನ್ಯವಿಲ್ಲದೆ ಒಬ್ಬ ಸೇನಾಪತಿ ಹೇಗೆ ಯುದ್ಧ ಮಾಡಲಾರನೋ ಇದರಂತೆಯೇ ಪುಢಾರಿಯಾದವನು ಬಹುಜನರ ಕೂಡ ಕಡಿದಾಡಿದರೆ, ತಂಟೆ ಮಾಡಿದರೆ ಅವನೊಬ್ಬನೇ ಯಾವ ಕಾರ್ಯ ಮಾಡಬಲ್ಲನು ? ಅರ್ಥಾತ್ ಏನೂ ಸಾಧಿಸಲಾರನು. ಆದ್ದರಿಂದ ಬಹಳಷ್ಟು ಜನರನ್ನು ಪ್ರೇಮದಿಂದ ತನ್ನವರನ್ನಾಗಿ ಮಾಡಿಕೊಳ್ಳಬೇಕು. ಜನರನ್ನು ಏಕತ್ರದಲ್ಲಿ ತರಬೇಕು. (ತನ್ನ ಸಂಪ್ರದಾಯದ ಸಮುದಾಯವನ್ನು ಬೆಳೆಸಬೇಕು). [೪೩]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹನ್ನೆರಡನೆಯ ದಶಕದೊಳಗಿನ
"ಉತ್ತಮ ಪುರುಷ ನಿರೂಪಣ" ಎಂಬ ಹತ್ತನೆಯ ಸಮಾಸವು ಮುಗಿದುದು.

# ದಶಕ ೧೩. ನಾಮರೂಪ

ಮಾನವೀ ಮನೋರಚನೆಯಲ್ಲಿ ಒಂದು ವಿಲಕ್ಷಣ ಗುಣವಿರುವದು. ಇದರ ಬಲದಿಂದ ಮನುಷ್ಯನು ಸ್ವತಃ ತನ್ನ ಕಡೆಗೆ ಮತ್ತು ಜಗದ ಕಡೆಗೆ ನಿಷ್ಪಕ್ಷಪಾತ ದೃಷ್ಟಿಯಿಂದ ನೋಡಲು ಶಕ್ತನಾಗುವನು. ಈ ದೃಷ್ಟಿಯಿಂದ ಸ್ವತಃದ ಕಡೆಗೆ ನೋಡಿದ್ದಾದರೆ ನಮ್ಮ ಜೀವನವು ದೇಹ ಮತ್ತು ಆತ್ಮಾ ಇವುಗಳ ಸಹಕಾರ್ಯದಿಂದಲೇ ನಡೆದಿರುವದೆಂಬುದು ಸ್ಪಷ್ಟವಾಗಿ ಕಾಣಿಸುವದು. ದೇಹಾತ್ಮ ಯೋಗದಿಂದ ಎಲ್ಲ ವ್ಯವಹಾರವೂ ನಡೆಯುವದು. ಇದರಲ್ಲಿ ದೇಹವು ಜಡ ವ ಅನಿತ್ಯವಾದದ್ದಿರುವದು. ಮತ್ತು ಆತ್ಮಾ ಇದು ಸೂಕ್ಷ್ಮ ವ ನಿತ್ಯ ಇರುವದು ಈ ಆತ್ಮದ ಕೌತುಕ ನೋಡುವದನ್ನು ಕಲಿಯುವದೇ ಪರಮಾರ್ಥದ ಒಂದು ಮಹತ್ವದ ಅಂಗವಿರುವದೆಂದು ತಿಳಿಯಬೇಕು. ಆತ್ಮದ ಕೌತುಕ ನೋಡುವ ಇಚ್ಛೆ ಇದ್ದರೆ ಆತ್ಮಾನಾತ್ಮ ವಿವೇಕ ಮಾಡಬೇಕಾಗುವದು. ಇದಕ್ಕಾಗಿ ಸೃಷ್ಟಿಯ ಆರಂಭದವರೆಗೂ ಹೋಗಬೇಕಾಗುವದು. ಮೂಲ ನಿರ್ವಿಕಾರ ಪರಬ್ರಹ್ಮದಲ್ಲಿ ಮೂಲ ಸಂಕಲ್ಪದ ಉದಯವಾಯಿತು. ಇದಕ್ಕೆ ಎರಡು ಅಂಗಗಳಿರುವವು. ಒಂದು ಅಷ್ಟಧಾ ಪ್ರಕೃತಿಯ ಅಂಗವು. ಎರಡನೆಯದು ಅಂತರಾತ್ಮನ ಅಂಗವು. ಈ ಪ್ರಕೃತಿ ಪುರುಷರಿಂದ ಯಾವತ್ತೂ ವಿಶ್ವವು ನಿರ್ಮಾಣವಾಯಿತು. ಯಾವ ಕ್ರಮದಿಂದ ವಿಶ್ವವು ಹುಟ್ಟಿಕೊಂಡಿತೋ ಅದೇ ಕ್ರಮದಿಂದ ಅದರ ವಿರುದ್ಧವಾಗಿ ವಿಶ್ವದ ಸಂಹಾರವೂ ಆಗುವದು. ಪಂಚಭೂತಾತ್ಮಕ ವಿಶ್ವವು ನಾಶವಂತವಿರುವದು. ಅನಿತ್ಯವಿರುವದು. ಆದರೆ ಅದೇ ಆತ್ಮವು ಮಾತ್ರ ಶಾಶ್ವತವಿರುವದು, ಈ ವಿಶ್ವದ

ಕರ್ತಾ ಯಾರು? ಎಂಬ ಪ್ರಶ್ನೆಯನ್ನು ವಿಚಾರಿಸಲಿಕ್ಕೆ ಬರುವದಿಲ್ಲ. ಯಾಕೆಂದರೆ ವೇದಾಂತದಲ್ಲಿಯ ಸದ್ವಸ್ತುವಿನ ದೃಷ್ಟಿಯಿಂದ ಈ ವಿಶ್ವವೇ ಸುಳ್ಳಿರುವದರಿಂದ ಯಾವುದು ಇಲ್ಲವೇ ಇಲ್ಲವೋ ಅಂಥದಕ್ಕೆ ಯಾರೂ ಕರ್ತಾ ಇರುವ ದಿಲ್ಲ. ಈ ವಿಶ್ವವು ಮಾನವೀ ಮನಸ್ಸಿಗೆ ಬೇರೆತನದಿಂದ ಭಾಸವಾಗುವದು. ಮೂಲದಲ್ಲಿ ಇದು ಪರಮಾತ್ಮ ಸ್ವರೂ ಪವೇ ಇರುವದು. ಆಮೇಲೆ ಯಾವುದು ಆಯಿತು ಅಂತಾ ಕಾಣುವದೋ ಅದು ಸ್ವಭಾವತಃ ಆಗಿ ಹೋಗುವದೇ ಇರುವದು. ಆದ್ದರಿಂದ ಆತ್ಮಾನಾತ್ಮ ವಿವೇಕ ಮಾಡಿ ಅನಾತ್ಮನನ್ನು ಹಿಂದಕ್ಕೆ ಸರಿಸಬೇಕು. ಅನಾತ್ಮವು ಹೊರ ಹೊರಟ ಕೂಡಲೇ ವೃತ್ತಿಯು ಮೂಲ ಮಾಯೆಯು ವರೆಗೂ ಹೋಗಿ ಮುಟ್ಟುವದು. ಅಲ್ಲಿ ಜ್ಞಾನ ಮತ್ತು ಉಪಾಸನಾ ಒಂದೇ ಆಗುವವು. "ನಾನು ಅವನವ ಇರುವೆನು" ಇಲ್ಲಿಂದ ಉಪಾಸನೆಯ ಆರಂಭವಾಗುವದು. "ನಾನು ಅವನೇ ಇರುವೆನು" ಈ ಅವಸ್ಥೆಯಲ್ಲಿ ಇದರ ಪರ್ಯಾವಸಾನವಾಗುವದು, (ಕೊನೆಯಾಗುವದು). ಭಕ್ತನು ದೇವ ನೊಂದಿಗೆ ಏಕರೂಪನಾಗುವನು. ಇದೇ ಜ್ಞಾನದ ಲಕ್ಷಣವಿರುವದು. ನಾನು ನಿಜವಾದ ಕರ್ತಾ ಅಲ್ಲ. ಅಂತರಾತ್ಮನೇ ಸರ್ವ ಕರ್ತಾ ಇರುವನು-ಅನ್ನುವ ಅನುಭವದವರೆಗೆ ಮುಟ್ಟಿದ ಮೇಲೆ ಅಲ್ಲಿ ನಿಲ್ಲಬಾರದು. ಏಕೆಂದರೆ ಈ ಅನುಭವ ದಲ್ಲಿ ವೃತ್ತಿಯು ಮೂಲ ಮಾಯೆಯು ವರೆಗೆ ಮುಟ್ಟುವದು. ಆದರೆ ಇದು ಸಂಪೂರ್ಣ ಇಲ್ಲದಾಗುವದಿಲ್ಲ. ಸಮಾಪ್ತ (ನಿವೃತ್ತ) ವಾಗುವದಿಲ್ಲ. ಆಗ ಇಲ್ಲಿ ಸಾರಾಸಾರ ವಿಚಾರ ಮಾಡಬೇಕು. ನಿಮಗೆ ಯಾವ ಅರ್ಥ ತಿಳಿಯು ವದೋ ಅದರೊಂದಿಗೆ ಆತ್ಮಾ ತದ್ರೂಪವಾಗುವದು. ನಾನು ಅನ್ನುವದು ಸಂಪೂರ್ಣ ವಿಲೀನವಾಗಿ ವೃತ್ತಿಯು ನಿಃಸಂದೇಹ ವ ನಿರ್ವಿಕಲ್ಪವಾಯಿತೆಂದರೆ ಆಗ ಆತ್ಮಾ ಸಹ ಅದರಂತೇ ಆಗುವದು. ಆದ್ದರಿಂದ ಅಗದೀ ಸಂಪೂರ್ಣ ಸಂಗತ್ಯಾಗ ಮಾಡಿ ಮೂಲ ಮಾಯೆಯ ಹತ್ತಿರ ಸ್ಥಿರ ಆದಂಥ ವೃತ್ತಿಯನ್ನು ಮೌನಗರ್ಭ ಬ್ರಹ್ಮದಲ್ಲಿ ಲೀನ ಮಾಡಬೇಕು. ಈ ಪ್ರಕಾರ ತಿಳಿಯುತ್ತ ತಿಳಿಯುತ್ತ ವೃತ್ತಿಯು ಪರಬ್ರಹ್ಮದೊಂದಿಗೆ ತದ್ರೂಪವಾಗುವದು. ಅಲ್ಲಿ ಜ್ಞಾನವು ವಿಜ್ಞಾನವಾಗುವದು. ಮನವು ಉನ್ಮನವಾಗುವದು. ಇದೇ ನಿಜವಾದ ಆತ್ಮನಿವೇದನವು ನಿರ್ಗುಣದೊಂದಿಗೆ ಅನನ್ಯವಾಗುವವನು ಅರ್ಥಾತ್ ನಿರ್ವಿಕಾರದಲ್ಲಿ ಲೀನಗೊಳ್ಳುವವನು ಬಹಳ ದೊಡ್ಡ ಸಾಧು-ಸಂತನೆನಿಸುವನು. ಇವನೇ ನಿಜವಾದ ಸತ್ಪುರುಷನು. ತಾತ್ಪರ್ಯ:- ಎಲ್ಲವನ್ನೂ ಬಿಟ್ಟುಕೊಟ್ಟು ನಿಜವಾದ ದೇವರನ್ನು ಹುಡುಕ ಬೇಕು. ಮುಖ್ಯ ಕರ್ತಾನನ್ನು ಕಂಡು ಹಿಡಿಯಬೇಕು. ಅಂತರಾತ್ಮಾ ಸರ್ವ ಸ್ಥಳದಲ್ಲಿಯೂ ವ್ಯಾಪಿಸಿರುವನು. ಇದು ನಿಜವೇ ಅವೆ. ಆದರೆ ಎಲ್ಲ ಪ್ರಾಣಿಗಳಲ್ಲಿ ಮತ್ತು ಮನುಷ್ಯರಲ್ಲಿ ಒಂದೇ ಸಮವಾದ ಸಾಮರ್ಥ್ಯದಿಂದ ಇವನು ಪ್ರಕಟವಾಗುವದಿಲ್ಲ. ಆದ್ದರಿಂದ ಬ್ರಹ್ಮಜ್ಞಾನಿ ಪುರುಷನು ಲೋಕ ಸಂಗ್ರಹ ಮಾಡುವಾಗ ಅವರವರ ಯೋಗ್ಯತೆಯ ಪ್ರಕಾರ ಜನರನ್ನು ನಡೆಸಿಕೊಳ್ಳಬೇಕು. ಸರ್ವರ ಅಂತರಂಗದೊಂದಿಗೆ ತದಾಕಾರ ಅಥವಾ ತದ್ರೂಪವಾಗಿರಬೇಕು. ನಾವು ಸಣ್ಣ ಹುಡುಗರಿಗೆ ಹೇಗೆ ಕಲಿಸುತ್ತೇವೆಯೋ ಅದೇ ಪ್ರಕಾರ ಜನತೆಗೂ ಕಲಿಸಿ ತಿಳಿಸಿ ಹೇಳಿ ಸಾವಕಾಶವಾಗಿ ತಯಾರ ಮಾಡಬೇಕು. ನೀವು ಎಲ್ಲರ ಮನೋಗತ ತಿಳಿದು ಅವರಿಗೆ ಗೌರವ ಕೊಡಬೇಕು. ಯಾರ ಅಂತಃಕರಣವನ್ನೂ ನೋಯಿಸಬಾರದು. ಅಂತಃಕರಣವನ್ನು ನೋಯಿಸದೆ ಕಲಿಸುವ ಮಹಂತನು ಬಹಳ ದೊಡ್ಡವ, ಸರ್ವಶ್ರೇಷ್ಠ, ಅಂತಾ ತಿಳಿಯಬೇಕು. ಅಂದರೆ ಜನ ಭಕ್ತಿ ಜ್ಞಾನದಲ್ಲಿ ಮುಂದುವರೆಯುವರು.

ದಶಕ ತ್ರಯೋದಶ : ಸಮಾಸ ಪ್ರಥಮ : ಆತ್ಮಾನಾತ್ಮ ವಿವೇಕ

॥ಶ್ರೀರಾಮ॥ ಆತ್ಮಾನಾತ್ಮ ವಿವೇಕ ಕರಾವಾ । ಕರೂನ ಬರಾ ವಿವರಾವಾ ।
ವಿವರೋನ ಸದೃಢ ಧರಾವಾ । ಜೀವಾಮಧ್ಯೇ ॥೧॥

ಆತ್ಮಾ ಕೋಣ ಅನಾತ್ಮಾ ಕೋಣ । ತ್ಯಾಚೇ ಕರಾವೇ ವಿವರಣ ।
ತೇ ಚಿ ಆತಾ ನಿರೂಪಣ । ಸಾವಧ ಐಕಾ ॥೨॥

ಚ್ಯಾರಿ ಖಾಣೀ ಚ್ಯಾರೀ ವಾಣೀ । ಚೌರ್‍ಯಾಸಿ ಲಕ್ಷ ಜೀವಪ್ರಾಣೀ ।
ಸಂಖ್ಯಾ ಬೋಲಿಲೀ ಪುರಾಣೀ । ವರ್ತತೀ ಆತಾ ॥೩॥

ನಾನಾ ಪ್ರಕಾರೀಚೀ ಶರೀರೇ । ಸೃಷ್ಟೀತ ದಿಸತೀ ಅಪಾರೇ ।
ತಯಾಮಧೇ ನಿರ್ಧಾರೇ । ಆತ್ಮಾ ಕವಣು ॥೪॥

ದೃಷ್ಟೀಮಧೇ ಪಾಹಾತೋ । ಶ್ರವಣಾಮಧ್ಯೇ ಐಕತೋ ।
ರಸನೇಮಧ್ಯೇ ಸ್ವಾದ ಘೇತೋ । ಪ್ರತ್ಯಕ್ಷ ಆತಾ ॥೫॥

# ದಶಕ ೧೩. ಸಮಾಸ ೧. ಆತ್ಮಾನಾತ್ಮ ವಿವೇಕ (ನುಡಿ ೩೧)

ಸಾಧಕನು ಆತ್ಮಾನಾತ್ಮ ವಿವೇಕ ಮಾಡಬೇಕು. ಜಗದಲ್ಲಿ ಅನಂತವಾಗಿ ಶರೀರಧಾರೀ ಪ್ರಾಣಿಗಳಿರುವವು. ಇವುಗಳ ಜೀವನವನ್ನು ನೋಡಿ ವಿವೇಕ ಮಾಡಿದರೆ ಕಂಡು ಬರುವದೇನಂದರೆ:- ಪ್ರಾಣಿ ಅಂದರೆ ದೇಹ ವ ಆತ್ಮಾ ಇವುಗಳ ಸಂಯೋಗವು. ದೇಹ ದೃಶ್ಯವು, ಜಡವು, ಮತ್ತು ಅನಿತ್ಯವಾದದ್ದಿರುವದು. ಅದೇ ಆತ್ಮಾ ಅದೃಶ್ಯವು, ಸೂಕ್ಷ್ಮವು ಮತ್ತು ನಿತ್ಯವಾದದ್ದಿರುವದು. ಆತ್ಮಾ ಇಲ್ಲದ ದೇಹವು ಪ್ರೇತವಾಗುವದು. ಮತ್ತು ದೇಹವಿಲ್ಲದ ಆತ್ಮವು ಅಜ್ಞಾತವಿರುವದು. ದೇಹದ ಮುಖಾಂತರ. —

— ಆತ್ಮಾ ಅನೇಕ ಕ್ರಿಯೆಗಳನ್ನು ಮಾಡಿಸುತ್ತದೆ. ಶರೀರದ ಇಂದ್ರಿಯಗಳ, ಮನಸ್ಸಿನ, ಬುದ್ಧಿಯ, ಸರ್ವ ವ್ಯಾಪಾರವನ್ನು ಆತ್ಮಾ ಮಾಡಿಸುವದು. ಚಲೋ-ಕೆಟ್ಟ, ಒಳಿತು-ಕೆಡಕುಗಳ ಸಾಮಾಜಿಕ ಪ್ರಸಂಗಗಳನ್ನು ಆತ್ಮಾ ಮಾಡಿಸುವವನು, ವಿದ್ಯೆಯಲ್ಲಿ ಹೇಗೋ ಅವಿದ್ಯೆಯಲ್ಲಿ ಸಹ ಹಾಗೇ ಅದೇ ಆನಂದ ರೂಪ ಆತ್ಮಾ (ಎರಡೂ ಕಡೆಗೂ) ಹಾಜರ ಇರುವದು. ಜಗತ್ತಿನಲ್ಲಿ ಘಟಿಸುವ ಸರ್ವ ಘಟನೆ (ಘಡಾಮೋಡಿ)ಗೆ ಮೂಲಕಾರಣವು ಸೂಕ್ಷ್ಮವಾದ ಆತ್ಮಾ ದಲ್ಲಿಯೇ ಇರುವದು. ಇದನ್ನು ಜ್ಞಾನಿ ಪುರುಷರು ಗುರುತಿಸುವರು. ಈ ಆತ್ಮಾ, ಪಿಂಡದಲ್ಲಿ ಜೀವ ಅಂತಾ ಇದ್ದರೆ ಬ್ರಹ್ಮಾಂಡದಲ್ಲಿ ಶಿವ ಅಂತಾ ಇರುವದು. ಇದರ ಆಚೆಗೆ (ಇದನ್ನು ದಾಟಿ ಮುಂದೆ ಹೋದಾಗ) ಅರ್ಧನಾರೀ ನಟೇಶ್ವರ ಇರುವನು. ಸಾಧಕನು ತನ್ನ ವೃತ್ತಿಯನ್ನು ಅತಿ ಸೂಕ್ಷ್ಮದಲ್ಲಿ ಒಯ್ದು, ಒಯ್ದು ಕೊನೆಗೆ ಮೂಲ ಮಾಯೆಯವರೆಗೆ ಒಯ್ದು ಮುಟ್ಟಿಸಬೇಕು.

## ದಶಕ ೧೩ : ಸಮಾಸ ೧ : ಆತ್ಮಾನಾತ್ಮ ವಿವೇಕ (ನುಡಿ ೩೧)

ಸಾಧಕನು ಆತ್ಮಾನಾತ್ಮ ವಿವೇಕ ಮಾಡಬೇಕು. ಅಂದರೆ ಆತ್ಮಾ ಯಾರು? [ಯಾವದು?] ಮತ್ತು ಅನಾತ್ಮಾ ಯಾವುದು? ಇದರ ವಿವರಣೆಯು ಸ್ಪಷ್ಟೀಕರಣ ಮಾಡಬೇಕು:- ಸಾಧಕನು ಆತ್ಮಾನಾತ್ಮ ವಿವೇಕ ಮಾಡಬೇಕು. ಆ ವಿವೇಕದ ವಿವರಣೆಯನ್ನು ಚನ್ನಾಗಿ ಮಾಡಬೇಕು. ಹೀಗೆ ವಿವರಣ ಮಾಡಿದ ನಂತರ ಆಮೇಲೆ ಆ ವಿವೇಕವನ್ನು ಅಂತಃಕರಣದಲ್ಲಿ ದೃಢವಾಗಿಡಬೇಕು. [೧] ಆತ್ಮಾ ಯಾವುದು? ವ ಅನಾತ್ಮಾ ಯಾವುದು? ಇದರ ಸೂಕ್ಷ್ಮ ವಿವರಣೆ ಮಾಡಬೇಕು. ಈಗ ಇದರ ವಿವರಣೆ ಹೇಳುವೆ. ನೀವು ಲಕ್ಷ್ಯಗೊಟ್ಟು ಕೇಳಿರಿ. [೨] ಮೊದಲಿಗೆ ಆತ್ಮಾ ಯಾವುದು? ಇದರ ವರ್ಣನೆಯನ್ನು ಮಾಡುವರು:— ಜಗತ್ತಿನಲ್ಲಿ ಆ ಯಾವ ಜೀವ ಪ್ರಾಣಿಗಳು ಕಂಡು ಬರುವವೋ ಅವುಗಳಲ್ಲಿ ಚಾರಖಾಣಿ (ಖಾಣಿ ಅಂದರೆ ಅಂಡಜಾದಿ ಉತ್ಪತ್ತಿ ಸ್ಥಾನ) ಚಾರವಾಣಿ (ವಾಣಿ ಅಂದರೆ ಪರಾ, ಪಶ್ಯಂತಿ ಮೊದಲಾದ ಬಾಯಿಯಿಂದ ಹೊರಡುವ ಧ್ವನಿಯ ಪೂರ್ವ ಅವಸ್ಥೆ) ಕೂಡಿ ೮೪ ಲಕ್ಷ ಯೋನಿಗಳು ಇರುವವು. ಹೀಗೆ ಪುರಾಣಾದಿಗಳಲ್ಲಿ ವರ್ಣನೆ ಕಾಣುವದು. [3] ಈ ೮೪ ಲಕ್ಷ ಯೋನಿಗಳಲ್ಲಿ ಅನೇಕ ಪ್ರಕಾರದ ಅನಂತ ಶರೀರಗಳು ಕಾಣುವವು. ಇವುಗಳ ಅಂತರ್ಯಾಮಿ ಆತ್ಮಾ ಯಾವುದು? ಅದನ್ನು ನಿಶ್ಚಯಾತ್ಮಕ ರೀತಿಯಿಂದ ಶೋಧಿಸಿ ತೆಗೆಯಬೇಕು. ತಿಳಿಯಬೇಕು. [೪] ಶರೀರವನ್ನು ಜೀವಂತ ಇಡುವ ಇಂದ್ರಿಯಗಳಿಗೆ ಚೇತನಾ ಕೊಡುವ ಮನಸ್ಸಿನ ವ್ಯಾಪಾರಕ್ಕೆ,ಪ್ರೇರಣಾ ಮಾಡುವ ಬುದ್ಧಿಗೆ, ವಿಚಾರ ಮಾಡಲಿಕ್ಕೆ ಹಚ್ಚುವ ಮತ್ತು ಜೀವತನ (ಜೀವ ಅನ್ನುವದು) ದಿಂದ ನಾನಾ ಸುಖ ದುಃಖ ಭೋಗಿಸುವ ಮತ್ತು ಉದ್ವೇಗ, ಚಿಂತೆ, ಮಾಯಾ, ಮಮತಾ, ಅನುಭವಿಸುವ ಆ ಯಾವ ಸೂಕ್ಷ್ಮ ಚಿತ್ಕಲಾ ಇರುವವೋ ಇದೇ ಆತ್ಮಾ ಇರುವದು:-ದೇಹದಲ್ಲಿರುವ ಆತ್ಮನು ಕಣ್ಣೊಳಗಿದ್ದು ನೋಡುವವನು, ಕಿವಿಯೊಳಗಿದ್ದು ಕೇಳುವವನು, ನಾಲಿಗೆಯಲ್ಲಿದ್ದು ರುಚಿ ಸ್ವಾದ ಪಡೆಯುವನು. ಇವೆಲ್ಲ ಪ್ರತ್ಯಕ್ಷ ಕಾಣುವದು. [೫]

ಘ್ರಾಣಾಮಧೇ ವಾಸ ಘೇತೋ । ಸರ್ವಾಂಗೀ ತೋ ಸ್ಪರ್ಶತೋ ।
ವಾಚೇಮಧೇ ಬೋಲವಿತೋ । ಜಾಣೋನಿ ಶಬ್ದ ॥೬॥
ಸಾವಧಾನ ಆಣಿ ಚಂಚಳ । ಚಹೂಕಡೆ ಚಳವಳ ।
ಯೇಕಲಾ ಚಿ ಚಾಲವೀ ಸಕಳ । ಇಂದ್ರಿಯೇದ್ವಾರಾ ॥೭॥
ಪಾಯೆ ಚಾಲವೀ ಹಾತ ಹಾಲವೀ । ಭೃಕುಟೀ ಪಾಲವೀ ಡೋಳಾ ಘಾಲವೀ ।
ಸಂಕೇತಖುಣಾ ಬೋಲವೀ । ತೋ ಚಿ ಆತ್ಮಾ ॥೮॥
ಧಿಟಾಇ ಲಾಜವೀ ಖಾಜವೀ । ಖೋಕವೀ ವೋಕವೀ ಥುಂಕವೀ ।
ಅನ್ನ ಜೇವೂನ ಉದಕ ಸೇವೀ । ತೋ ಚಿ ಆತ್ಮಾ ॥೯॥
ಮಳಮೂತ್ರತ್ಯಾಗ ಕರೀ । ಶರೀರ ಮಾತ್ರ ಸಾವರೀ ।
ಪ್ರವೃತ್ತಿ ನಿವೃತ್ತಿ ವಿವರೀ । ತೋ ಚಿ ಆತ್ಮಾ ॥೧೦॥
ಏಕೆ ದೇಖೆ ಹುಂಗೆ ಚಾಖೆ । ನಾನಾ ಪ್ರಕಾರೇ ವೋಳಖೇ ।
ಸಂತೋಷ ಪಾವೇ ಆಣೇ ಧಾಕೇ । ತೋ ಚಿ ಆತ್ಮಾ ॥೧೧॥
ಆನಂದ ವಿನೋದ ಉದೇಗ ಚಿಂತಾ । ಕಾಯಾ ಛ್ಯಾಯಾ ಮಾಯಾ ಮಮತಾ ।
ಜೀವಿತ್ವೇ ಪಾವೇ ನಾನಾ ವೆಥಾ । ತೋ ಚಿ ಆತ್ಮಾ ॥೧೨॥
ಪದಾರ್ಥಾಚೀ ಆಸ್ಥಾ ಧರೀ । ಜನೀ ವಾಈಟ ಬರೇ ಕರೀ ।
ಆಪಲ್ಯಾ ರಾಖೇ ಪರಾವ್ಯಾ ಮಾರೀ । ತೋ ಚಿ ಆತ್ಮಾ ॥೧೩॥
ಯುದ್ಧ್ಯೆ ಹೋತಾ ದೋಹಿಕಡೆ । ನಾನಾ ಶರೀರೀ ವಾವಡೆ ।
ಪರಸ್ಪರೇ ಪಾಡೀ ಪಡೆ । ತೋ ಚಿ ಆತ್ಮಾ ॥೧೪॥
ತೋ ಯೇತೋ ಜಾತೋ ದೇಹೀ ವರ್ತತೋ ।
ಹಾಸತೋ ರಡತೋ ಪ್ರಸ್ತಾವತೋ ।
ಸಮರ್ಥ ಕರಂಟಾ ಹೋತೋ । ನ್ಯಾಪಾಸಾರಿಖಾ ॥೧೫॥
ಹೋತೋ ಲಂಡೀ ಹೋತೋ ಬಳಕಟ ।
ಹೋತೋ ವಿದ್ಯಾವಂತ ಹೋತೋ ಧಟ ।
ನ್ಯಾಯೆವಂತ ಹೋತೋ ಉದ್ಧಟ । ತೋಚಿ ಆತ್ಮಾ ॥೧೬॥
ಧೀರ ಉದಾರ ಆಣಿ ಕೃಪಣ । ವೇಡಾ ಆಣಿ ವಿಚಕ್ಷಣ ।
ಉಥಳ ಆಣಿ ಸಹಿಷ್ಣ । ತೋ ಚಿ ಆತ್ಮಾ ॥೧೭॥
ವಿದ್ಯಾ ಕುವಿದ್ಯಾ ದೋಹೀಕಡೆ । ಆನಂದರೂಪ ವಾವಡೆ ।
ಜೇಥೇ ತೇಥೇ ಸರ್ವಾಕಡೆ । ತೋ ಚಿ ಆತ್ಮಾ ॥೧೮॥

ಇವನು ಮೂಗಿನಿಂದ ವಾಸನೆ ತೆಗೆದುಕೊಳ್ಳುವನು, ಸರ್ವಾಂಗಗಳಲ್ಲಿ ಇದ್ದು ಸ್ಪರ್ಶ ಮಾಡುವನು. ಶಬ್ದಗಳನ್ನು ಗುರುತಿಸಿ ಬಾಯಿಯಿಂದ (ವಾಣಿಯಿಂದ) ಮಾತನಾಡಿಸುವವನೂ ಇವನೇ ಇರುವನು. (೬) ಆತ್ಮಾ ಬಹು ದೊಡ್ಡ ಸಾವಧಾನವುಳ್ಳದಿದ್ದು ಚಂಚಲವಿರುವದು. ಗತಿಮಾನ್ (ಚಲನಶೀಲ, ಚಳಚಳ, ಚಪಲ) ಇರುವದು. ಇಂದ್ರಿಯಗಳ ಮುಖಾಂತರ ಇವನೊಬ್ಬನೇ ಎಲ್ಲ ಕಡೆಗೂ, ಎಲ್ಲ ತರಹದ ಚಲನವಲನ (ಹಾಲಚಾಲ) ನಡೆಸುವನು. (೭) ಇವನು ಕಾಲಿನಲ್ಲಿದ್ದು ನಡೆಯಿಸುವನು. ಕೈಗಳನ್ನು ಅಲ್ಲಾಡಿಸುವನು. ಹುಬ್ಬುಗಳನ್ನು ಕುಣಿಸುವನು. (ಹುಬ್ಬು ಹಾರಿಸುವನು)ಕಣ್ಣು ಮುಚ್ಚುವನು. ಈ ಆತ್ಮನೇ ಸಂಕೇತ (ಗುರುತು) ಮಾಡಿ ಮನಸ್ಸಿನಲ್ಲಿಯ ಹೇತು ಸ್ಪಷ್ಟ ಮಾಡುವನು. (೮) ಆತ್ಮವೇ ದಿಟ್ಟತನವನ್ನು ಕೊಡುವದು. ಇದೇ ನಾಚಿಸುವದು, ತುರಿಸುವದು, ಇದರಂತೆ ಕೆಮ್ಮಲಿಕ್ಕೆ, ಓಕರಿಸಲಿಕ್ಕೆ ಮತ್ತು ಉಗುಳಲಿಕ್ಕೆ ಹಚ್ಚುವದು. ಊಟವಾದ ಮೇಲೆ ನೀರು ಕುಡಿಯಲಿಕ್ಕೂ ಸಹ ಆತ್ಮವೇ ಹಚ್ಚುವದು. (೯) ಇದೇ ಆತ್ಮವೇ ಮಲ ಮೂತ್ರಗಳ ತ್ಯಾಗ ಮಾಡಲಿಕ್ಕೆ ಹಚ್ಚುವದು, ಸರ್ವ ಶರೀರವನ್ನು ಸಮತೋಲದಲ್ಲಿರುವಂತೆ ಸಾವರಿಸಿ ಹಿಡಿಯುವದು. ಪ್ರವೃತ್ತಿ ಮತ್ತು ನಿವೃತ್ತಿಗಳನ್ನು ತಿಳಿದು ನೋಡಿ ಇವನೇ ವಿವರಣೆ ಮಾಡುವನು. (೧೦) ಇವನೇ (ಈ ಆತ್ಮನೇ) ಕೇಳುವನು, ನೋಡುವನು, ಮೂಸುವನು, ನೆಕ್ಕುವನು, ಅನೇಕ ರೀತಿಯಿಂದ ಗುರುತಿಸುವನು. ಕಂಡುಹಿಡಿಯುವನು, ಸಂತೋಷ ಹೊಂದುವನು. ಮತ್ತು ಗಾಬರಿಪಡುವನು. (೧೧) ಆನಂದ, ವಿನೋದ, ಉದ್ವೇಗ (ತಳಮಳ, ಹೆದರಿಕೆ, ಭಯ) ಚಿಂತೆ, ಇತ್ಯಾದಿಗಳ ಅನುಭವವನ್ನು ಆತ್ಮನೇ ಕೊಡುವನು. ಆತ್ಮನ ಛಾಯೆ ಇರುವಂಥ ದೇಹದ ಬಗ್ಗೆ ಖರೇತನದ (ನಿಜತ್ವದ) ಭ್ರಮೆ ಮತ್ತು ಮಮತೆ ಇವನ್ನು ಇವನೇ ನಿರ್ಮಾಣ ಮಾಡುವನು. ಜೀವದ ದೆಶೆಯಿಂದಾಗಿ (ಸುಳ್ಳು ಅಹಂಕಾರದಿಂದಾಗಿ) ಭೋಗಿಸಬೇಕಾದ ಅನೇಕ ತರಹದ ಕ್ಲೇಶಗಳನ್ನು ಸಹ ಈ ಆತ್ಮನೇ ಭೋಗಿಸುವನು. (೧೨) ಅನೇಕ ಪದಾರ್ಥಗಳಲ್ಲಿ ಆಸಕ್ತಿ ಹಿಡಿಯುವನು. ಜನರಲ್ಲಿ ಉತ್ತಮ ಮತ್ತು ಕೆಟ್ಟ ಕೆಲಸ (ಕರ್ಮ) ಮಾಡುವವನು, ತನ್ನ ಜನರನ್ನು ಸಂಬಾಳಿಸುವವನು, ಮತ್ತು ಪರಕೀಯರನ್ನು ಹೊಡೆಯುವವನು, ಈ ಆತ್ಮನೇ ಆಗಿರುವನು. (೧೩) ಯಾವಾಗ ಒಂದು ಯುದ್ಧ ಪ್ರಾರಂಭವಾಗುವದೋ ಆಗ ಎರಡೂ ಬಾಜೂದ (ಕಡೆಯ) ಸರ್ವ ಶರೀರಗಳಲ್ಲಿ ಈ ಆತ್ಮನೇ ಇರುವನು. ಯುದ್ಧ ಮಾಡುವ ಜನರ ಪೈಕಿ ಈ ಆತ್ಮನಿಂದಲೇ ಒಬ್ಬನು ಕೆಡವುತ್ತಾನೆ. ಮತ್ತು ಇನ್ನೊಬ್ಬ ಇವನಿಂದಲೇ ನೆಲಕ್ಕೆ ಬೀಳುತ್ತಾನೆ. ಸಾಯುವ ಮತ್ತು ಸಾಯಿಸುವವರೆಲ್ಲರಲ್ಲಿ ಇವನೇ ಇರುವನು. (೧೪) ಇವನು ದೇಹದಲ್ಲಿ ಬರುವನು, ದೇಹದೊಳಗಿಂದ ಹೋಗುವನು ಮತ್ತು ದೇಹದಲ್ಲಿ ಇರುವನು, ಇವನು ನಗುವನು. ಅಳುವನು ಮತ್ತು ಪಶ್ಚಾತ್ತಾಪ ಪಡುವನು, ಅವರವರ ವ್ಯಾಪದಂತೆ ಈ ಆತ್ಮನೇ ಭಾಗ್ಯವಂತ ಅಥವಾ ಭಾಗ್ಯಹೀನ ಆಗುವನು. (೧೫) ಈ ಆತ್ಮನೇ ಬಲಹೀನ, ಅಂಜುಬುರಕ ಅಥವಾ ಬಲವಂತ, ದಾಂಡಿಗ ಆಗುವನು. ವಿದ್ಯಾಸಂಪನ್ನ ಅಥವಾ ಮೂರ್ಖ, ಸೊಕ್ಕಿನವ (ಉರ್ಮಟ), ವಿಚಾರಗೇಡಿ, ನ್ಯಾಯಪ್ರಿಯ ಅಥವಾ ನ್ಯಾಯಹೀನ, ಉದ್ಧಟ ಆಗುವನು. (೧೬) ಈ ಆತ್ಮನೇ ಧೀರ, ಉದಾರ, ಜಿಪುಣ ಆಗುವನು. ಹುಚ್ಚ, ಜಾಣ ಇವನೇ. ಉಚ್ಛೃಂಖಲ,(ಸ್ವೈರವೃತ್ತಿಯ) ಮತ್ತು ಸಹನಶೀಲ ಇವನೇ ಇರುವನು(೧೭) ವಿದ್ಯಾ ವ ಅವಿದ್ಯಾ ಇವೆರಡರಲ್ಲಿಯೂ ಆತ್ಮನೇ ಇರುವನು. ಆನಂದ ರೂಪದಿಂದ ಈ ಆತ್ಮವೇ ಒಳಗೂ ಹೊರಗೂ ಎಲ್ಲ ಕಡೆಗೂ ಸರ್ವತ್ರವಲ್ಲಿಯೂ ಇರುವದು. (೧೮)

ನಿಜೆ ಉಠೆ ಬೈಸೆ ಚಾಲೇ । ಧಾವೆ ಧಾವಡಿ ಡೋಲೆ ತೋಲೇ ।
ಸೋಇರೆ ಧಾಯರೆ ಕೇಲೆ । ತೋ ಚಿ ಆತ್ಮಾ ॥೧೯॥
ಪೋಥೀ ವಾಚೀ ಅರ್ಥ ಸಾಂಗೆ । ತಾಳ ಧರೀ ಗಾಊ ಲಾಗೇ ।
ವಾದ ವೆವಾದ ವಾಉಗೆ । ತೋ ಚಿ ಆತ್ಮಾ ॥೨೦॥
ಆತ್ಮಾ ನಸ್ತಾ ದೇಹಾಂತರೀ । ಮಮ ತೇ ಪ್ರೇತ ಸಚರಾಚರೀ।
ದೇಹಸಂಗೇ ಆತ್ಮಾ ಕರೀ । ಸರ್ವ ಕಾಹೀ ॥೨೧॥
ಯೇಕೇವಿಣ ಯೇಕ ಕಾಯೆ । ಕಾಮಾ ನಯೆ ವಾಯಾ ಜಾಯೆ ।
ಮ್ಹಣೋನಿ ಹಾ ಉಪಾಯೆ । ದೇಹಯೋಗೇ ॥೨೨॥
ದೇಹ ಅನಿತ್ಯ ಆತ್ಮಾ ನಿತ್ಯ । ಹಾ ಚಿ ವಿವೇಕ ನಿತ್ಯಾನಿತ್ಯ ।
ಅವಘೇ ಸೂಕ್ಷ್ಮಾಚೇ ಕೃತ್ಯ । ಜಾಣತೀ ಜ್ಞಾನೀ ॥೨೩॥
ಪಿಂಡೀ ದೇಹಧರ್ತಾ ಜೀವ । ಬ್ರಹ್ಮಾಂಡೀ ದೇಹಧರ್ತಾ ಶಿವ ।
ಈಶ್ವರ ತನು ಚತುಷ್ಟಯೆ ಸರ್ವ । ಈಶ್ವರ ಧರ್ತಾ ॥೨೪॥
ತ್ರಿಗುಣಾಪರ್ತಾ ಜೋ ಈಶ್ವರ । ಅರ್ಧನಾರೀನಟೇಶ್ವರ ।
ಸಕಳ ಸೃಷ್ಟೀಚಾ ವಿಸ್ತಾರ । ತೇಥೂನ ಜಾಲಾ ॥೨೫॥
ಬರವೇ ವಿಚಾರೂನ ಪಾಹೀ । ಸ್ತ್ರೀ ಪುರುಷ ತೇಥೇ ನಾಹೀ ।
ಚಂಚಳರೂಪ ಯೇತೇ ಕಾಹೀ । ಪ್ರತ್ಯಯಾಸೀ ॥೨೬॥
ಮುಳೀಹೂನ ಸೇವಟವರೀ । ಬ್ರಹ್ಮಾದಿ ಪಿಪ್ಲೀಕಾ ದೇಹಧಾರೀ ।
ನಿತ್ಯಾನಿತ್ಯ ವಿವೇಕ ಚತುರೀ । ಜಾಣಿಜೆ ಐಸಾ ॥೨೭॥
ಜಡ ತಿತುಕೇ ಅನಿತ್ಯ । ಆಣಿ ಸೂಕ್ಷ್ಮ ತಿತುಕೇ ನಿತ್ಯ ।
ಯಾಹಿಮಧ್ಯೇ ನಿತ್ಯಾನಿತ್ಯ । ಪುಢೇ ನಿರೋಪಿಲೇ ॥೨೮॥
ಸ್ಥೂಳ ಸೂಕ್ಷ್ಮ ವೋಲಾಂಡಿಲೇ । ಕಾರಣ ಮಹಾಕಾರಣ ಸಾಂಡಿಲೇ ।
ವಿರಾಟ ಹಿರಣ್ಯಗರ್ಭ ಖಂಡಿಲೇ । ವಿವೇಕಾನೇ ॥೨೯॥
ಅವ್ಯಾಕೃತ ಮೂಳಪ್ರಕೃತೀ । ತೇಥೇ ಜಾಊನ ಬೈಸಲೀ ವೃತ್ತೀ ।
ತೇ ವೃತ್ತಿ ವ್ಹಾವಯಾ ನಿವೃತ್ತಿ । ನಿರೂಪಣ ಐಕಾ ॥೩೦॥
ಆತ್ಮಾನಾತ್ಮ ವಿವೇಕ ಬೋಲಿಲಾ । ಚಂಚಳಾತ್ಮಾ ಪ್ರತ್ಯಯಾ ಆಲಾ ।
ಪುಢಿಲೇ ಸಮಾಸೀ ನಿರೋಪಿಲಾ । ಸಾರಾಸಾರ ವಿಚಾರ ॥೩೧॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಆತ್ಮಾನಾತ್ಮ ವಿವೇಕ' ನಾಮ ಸಮಾಸ ಪ್ರಥಮ ॥

ಈ ಆತ್ಮವೇ ಮಲಗುವದು, ಏಳುವದು, ಕೂಡುವದು, ನಡೆಯುವದು, ಓಡುವದು, ಓಡಿಸುವದು, ದಬ್ಬುವದು, ಹಿಂದೆ ಮುಂದು ತೂಗಾಡುವದು, ತಲೆ ಅಲ್ಲಾಡುವದು, ಜೋಲಿ ಹೊಡೆಯುವದು, ಮತ್ತು ಬೇಗ ಬಿಜ್ಜರನ್ನು ಕೂಡಿಸುವದು, ನೆಂಟಿಸ್ತನ ಬೆಳೆಸುವದು, ಇವೆಲ್ಲ ಇವನದೇ ಇರುವದು. [೧೯] ಈ ಆತ್ಮವೇ ವೇದಾಂತ ಶ್ಲೋಕ, ಪುರಾಣ, ಪುಸ್ತಕ ಓದುವದು. ವ ಅರ್ಥ ಹೇಳುವದು, ತಾಳ ಹಿಡಿಯುವದು. ವ ಹಾಡುವದು, ಗಾಯನ ಮಾಡುವದು, ಮತ್ತು ವಿನಾಕಾರಣ ವಾದ ವಿವಾದ ಮಾಡುವದು, [೨೦] ಒಟ್ಟಿನಲ್ಲಿ ದೇಹದಲ್ಲಿ ಆತ್ಮವೇ ಇಲ್ಲದಿದ್ದರೆ ಆ ದೇಹವು ಪ್ರೇತ [ಹೆಣ] ವೆನಿಸುವದು. ಈ ಜಗದಲ್ಲಿ ದೇಹದ ಮುಖಾಂತರ, ಆತ್ಮಾ ಎಲ್ಲವನ್ನೂ ಮಾಡುವದು. [೨೧] ದೇಹ ವ ಆತ್ಮಾ ಇವುಗಳಲ್ಲಿ ಒಂದು ಇದ್ದರೆ ಮತ್ತು ಇದರ ಸಂಗಡ ಇನ್ನೊಂದು ಇಲ್ಲದಿದ್ದರೆ ಎರಡೂ ಕೆಲಸಕ್ಕೆ ಬರುವದಿಲ್ಲ. ನಿರುಪಯುಕ್ತ [ವ್ಯರ್ಥ] ಅನಿಸುವವು. ಆದ್ದರಿಂದ ಆತ್ಮ ಮತ್ತು ದೇಹ ಇವುಗಳ ಸಂಯೋಗವಾಗುವದರಿಂದ ಮಾತ್ರ ಎರಡೂ ಉಪಯೋಗಕ್ಕೆ ಬರುವಂತಾಗುವವು. [೨೨] ದೇಹ ನಾಶವಂತ ಇರುವದು. ಆದರೆ ಆತ್ಮಾ ಶಾಶ್ವತವಾದದ್ದಿರುವದು. ಇದು ವಿಚಾರದಿಂದ ಮನಗಾಣುವದಕ್ಕೇ ನಿತ್ಯಾನಿತ್ಯ ವಿವೇಕ ಅನ್ನುವರು. ಜಗತ್ತಿನಲ್ಲಿಯ ಯಾವತ್ತೂ ಘಟನೆಗಳು ಸೂಕ್ಷ್ಮ ಆತ್ಮನ ಅಧಿಕಾರದಿಂದಲೇ [ಸತ್ತಾದಿಂದಲೇ]ನಡೆಯುವವು. ಈ ವಿಚಾರವನ್ನು ಜ್ಞಾನಿಗಳಾದವರು ತಿಳಿಯುವರು. [೨೩] ಪಿಂಡದ ದೃಷ್ಟಿಯಿಂದ ದೇಹಧಾರಣ ಮಾಡುವಂಥ ಆತ್ಮಾ ಇವನೇ "ಜೀವನು"ಅಂತಾ ಅನಿಸಿಕೊಳ್ಳುವನು. ಆದರೆ ಬ್ರಹ್ಮಾಂಡದ ದೃಷ್ಟಿಯಿಂದ ವಿಶ್ವಧಾರಣ ಮಾಡುವ ಆತ್ಮಾ ಇವನು "ಶಿವನು" ಅಂತಾ ಅನಿಸುವನು. ವಿರಾಟ್, ಹಿರಣ್ಯಗರ್ಭ, ಅವ್ಯಾಕೃತ ಮತ್ತು ಮೂಲ ಪ್ರಕೃತಿ ಈ ನಾಲ್ಕು ದೇಹದಿಂದ ಈಶ್ವರನು ಯಾವತ್ತೂ ವಿಶ್ವವನ್ನು ಧಾರಣ ಮಾಡಿರುವನು. [೨೪] ಮೂರು ಗುಣಗಳ ಆಚೆಗೆ ಇರುವಂಥ ಆ ಯಾವ ಈಶ್ವರ ಅಥವಾ ಅರ್ಧನಾರೀ ನಟೇಶ್ವರ ಇವನಿಂದ ಯಾವತ್ತೂ ವಿಶ್ವವು ವಿಸ್ತಾರ ಹೊಂದಿರುವದಾಗಿದೆ. [೨೫]"ಅರ್ಧನಾರೀ ನಟೇಶ್ವರ" ಹೀಗೆ ಅನ್ನುವಾಗ ಇಲ್ಲಿ ಸ್ತ್ರೀ ಅಥವಾ ಪುರುಷ ಅನ್ನುವ ಭೇದ ಇರುವದಿಲ್ಲ. ಇದನ್ನು ನೀವು ಚನ್ನಾಗಿ ವಿಚಾರ ಮಾಡಿ ತಿಳಿದುಕೊಳ್ಳಿರಿ. ಇದರಲ್ಲಿ ಸ್ವಲ್ಪ ಮಟ್ಟಿಗೆ ಚಂಚಲತನವು ಅನುಭವಕ್ಕೆ ಬರುವದು. ಇದಕ್ಕಿಂತಲೂ ಹೆಚ್ಚೇನೂ ಅಲ್ಲ. ನಿರ್ವಿಕಾರ ಬ್ರಹ್ಮದಲ್ಲಿ ಆ ಯಾವ ಸಂಕಲ್ಪ ಏಳುವದೋ ಅದು ಅಹಂ ಸ್ಫುರಣರೂಪ ಇರುವದು. ಇದರ ಪಂಚಭೂತ ತ್ರಿಗುಣಾತ್ಮಕ ಅಂಗವು ಮೂಲ ಪ್ರಕೃತಿ ಅನಿಸುವದು ಮತ್ತು ಇದರಲ್ಲಿಯ ಶುದ್ಧ ಅರಿವು [ಜಾಣೀವ, ತಿಳುವಳಿಕೆ] ಇದು ಅಂತರಾತ್ಮಾ ಅಥವಾ ಮೂಲ ಪುರುಷನಿರುವನು. [೨೬] ಅತ್ಯಂತ ಮೂಲದಿಂದ ಅದು ಕೊನೆಯವರೆಗೆ ಅಥವಾ ಬ್ರಹ್ಮಾದಿ ದೇವತೆಗಳಿಂದ ಹಿಡಿದು ಒಂದು ಸೂಕ್ಷ್ಮ [ಇರುವೆ] ಜೀವಿಯವರೆಗೆ ಯಾವತ್ತೂ ದೇಹಧಾರಿ ಇರುವವು. ಸಾಕಾರವಿರುವವು. ಇದಕ್ಕೆ ಅನುಸರಿಸಿ ಬುದ್ಧಿವಂತ ಮನುಷ್ಯರು "ನಿತ್ಯಯಾವುದು ? ಅನಿತ್ಯಯಾವುದು ?" ಇದರ ವಿವೇಕ ಮಾಡಬೇಕು. [೨೭] ಯಾವ ಯಾವುದು ಜಡವಿರುವದೋ ಅದೆಲ್ಲವೂ ಅನಿತ್ಯವೆಂದು ತಿಳಿಯಿರಿ. [ಜಡ ಅಂದರೆ ಅಚೇತನ, ನಿರ್ಜೀವ]. ಯಾವ ಯಾವುದು ಸೂಕ್ಷ್ಮ ಅದೆಯೋ ಅದೆಲ್ಲವೂ ನಿತ್ಯವೆಂದು ತಿಳಿಯಿರಿ. [ನಿತ್ಯ ಅಂದರೆ ಶಾಶ್ವತ]. ಇದರ ಬಗ್ಗೆ ಹೆಚ್ಚು ಆಳವಾಗಿ ಪ್ರವೇಶಿಸಿ [ಹೆಚ್ಚು ವಿಚಾರಿಸಿ] ಇನ್ನಷ್ಟು "ನಿತ್ಯಾನಿತ್ಯ ವಿವೇಕ ಹೇಗೆ ಮಾಡಬೇಕು?"ಎಂಬ ಬಗ್ಗೆ ಮುಂದೆ ಹೇಳಲಾಗಿದೆ. [ಮುಂದಿನ ಸಮಾಸದಲ್ಲಿ] [೨೮] ಈ ಆಳವಾದ, ಗಹನವಾದ ವಿವೇಕದಲ್ಲಿ ಸ್ಥೂಲ ವ ಸೂಕ್ಷ್ಮಗಳನ್ನು ಹಿಂದೆ ಅಥವಾ ಬಾಜೂಕ್ಕೆ ಸರಿಸಿ ಬಿಡಬೇಕು. ಮತ್ತು ಕಾರಣ, ಮಹಾಕಾರಣ ದೇಹವನ್ನು ಸಹ ವಿವೇಕದಿಂದ ಹಿಂದಕ್ಕೆ ಸರಿಸಿಬಿಟ್ಟು ಇಷ್ಟೇಅಲ್ಲ ವಿರಾಟ ಹಿರಣ್ಯ-ಗರ್ಭ ಇವನ್ನೂ ಸಹ ಹಿಂದಕ್ಕೆ ಸರಿಸಿ ದಾಟಿ ಮುಂದೆ ಹೋಗಬೇಕಾಗುವದು [೨೯] ಈ ರೀತಿಯಿಂದ ವೃತ್ತಿಯು ಸೂಕ್ಷ್ಮ ವ ವಿಶಾಲ ಆಗುತ್ತಾ, ಆಗುತ್ತಾ ಅವ್ಯಾಕೃತ [ವಿಕಾರರಹಿತ] ಮತ್ತು ಮೂಲ ಪ್ರಕೃತಿಯಲ್ಲಿ ಹೋಗಿ ಕೂಡುವದು.[ಇದು ಇಲ್ಲಿಗೆ ಮುಗಿಯಲಿಲ್ಲ]ಈ ವೃತ್ತಿಯೂ ನಿವೃತ್ತಿ ಆಗಬೇಕು. ಇದರ ಬಗ್ಗೆ ಸವಿಸ್ತಾರ ಉಪಾಯ ಹೇಳುವೆ ಕೇಳಿರಿ. [೩೦] ಈ ಸಮಾಸದಲ್ಲಿ ಸಾಧಕನಿಗೆ ಆತ್ಮಾ-ನಾತ್ಮ ವಿಚಾರ ಹೇಳಿರುವೆವು. ಇದರ ಯೋಗದಿಂದ ಚಂಚಲ ಅಂತರಾತ್ಮಾ ಮಾತ್ರ ಅನುಭವಕ್ಕೆ ಬರುವದು. ಇದರ ಆಚೆಗೆ ಹೋಗುವ ವಿಷಯವನ್ನು ಮುಂದಿನ ಸಮಾಸದಲ್ಲಿ ಸಾರಾಸಾರ ವಿಚಾರದ ರೂಪದಲ್ಲಿ ಹೇಳಿರುವೆನು. [೩೧]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹದಿಮೂರನೆಯ ದಶಕದೊಳಗಿನ
"ಆತ್ಮಾನಾತ್ಮ ವಿವೇಕ" ಎಂಬ ಒಂದನೆಯ ಸಮಾಸವು ಮುಗಿದುದು.

ದಶಕ ತ್ರಯೋದಶ : ಸಮಾಸ ದ್ವಿತೀಯ : ಸಾರಾಸಾರ ನಿರೂಪಣ

॥ಶ್ರೀರಾಮ॥ ಏಕಾ ಸಾರಾಸಾರ ವಿಚಾರ । ಉಭಾರಲೇ ಜಗಡಂಬರ ।
ತ್ಯಾತ ಕೋಣ ಸಾರ ಕೋಣ ಅಸಾರ । ವಿವೇಕೇ ವೊಳಖಾ ॥೧॥

ದಿಸೇಲ ತೇ ನಾಸೇಲ । ಆಣಿ ಯೇಈಲ ತೇ ಜಾಈಲ ।
ಜೇ ಅಸತ ಚಿ ಅಸೇಲ । ತೇಚಿ ಸಾರ ॥೨॥

ಮಾಗಾ ಆತ್ಮಾನಾತ್ಮವಿವೇಕ ಬೋಲಿಲಾ। ಅನಾತ್ಮಾ ವೊಳಖೋನ ಸಾಂಡಿಲಾ ।
ಆತ್ಮಾ ಜಾಣತಾ ಲಾಗಲಾ । ಮುಳೀಚಾ ಮೂಳತಂತು ॥೩॥

# ದಶಕ ೧೩. ಸಮಾಸ ೨. ಸಾರಾಸಾರ ನಿರೂಪಣ (ನುಡಿ ೩೦)

ಆತ್ಮಾನಾತ್ಮ ವಿವೇಕದಿಂದ ಅಂತರಾತ್ಮನು ಮಾತ್ರ ನಿತ್ಯನು. ಮತ್ತು ಉಳಿದ ಯಾವತ್ತೂ ಅನಾತ ಗಳೆಲ್ಲವೂ ಅನಿತ್ಯವು. ಅನ್ನುವದು ಪ್ರಚೀತಿ (ಅನುಭವ) ಯಿಂದ ತಿಳಿಯಿತು. ಅನಾತ್ಮವು ಸ್ಥೂಲವು ಮತ್ತು ನಾಶ ವಂತ ಇದ್ದದ್ದರಿಂದ ಸಾಧಕನು ಇದರೊಳಗಿಂದ ತನ್ನ ವೃತ್ತಿಯನ್ನು ಹಿಂದಕ್ಕೆ ಎಳೆದುಕೊಂಡನು. ಹಿಂದಕ್ಕೊಯ್ಯುತ್ತ ಒಯ್ಯುತ್ತ ಅದನ್ನು ಅಂತರಾತ್ಮದವರೆಗೂ ಎಳೆದು ಮುಟ್ಟಿಸಿದನು. ಅಲ್ಲಿ ಮೂಲದ ಮೂಲ ತಂತುವಾದ ಮೂಲ ಮಾಯೆಯು ದರ್ಶನವಾಯಿತು. ಮೂರು ಅನಾತ್ಮಾಗಳು ಅಂದರೆ ಜಾಗ್ರತಿ, ಸ್ವಪ್ನ, ಸುಷುಪ್ತಿ, ಈ ಅವಸ್ಥೆಗಳನ್ನು ಬಿಟ್ಟುಕೊಟ್ಟು ಸಾಧಕನು ತುರೀಯ ಅಥವಾ ತುರ್ಯಾವಸ್ಥೆ ಅಂದರೆ ಮೇಲೆ ಹೇಳಿದ ಮೂರೂ ಅವಸ್ಥೆಗಳನ್ನು ದಾಟಿದ ನಂತರ ಇರುವ ನಾಲ್ಕನೆಯ ಅವಸ್ಥೆ (ಕೊನೆಯ ಅವಸ್ಥೆ)ಯ ವರೆಗೆ ಹೋದರೂ ಸಹ ಆ ಸ್ಥಳದಲ್ಲಿ(ಸಾಧ ಕನಲ್ಲಿ) ಶುದ್ಧ ಸತ್ವಮಯ "ನಾನು" ಶಿಲುಕು ಉಳಿಯುವದು. ನಿರಾಕಾರದಲ್ಲಿ ಹೋಗಬೇಕು ಅನ್ನುವ ಉದ್ದೇಶ (ಹೇತು) ಉಳಿದುಕೊಂಡದ್ದರಿಂದ ಸ್ವಲ್ಪವೇ ಯಾಕಾಗಲೊಲ್ಲದು ಅಲ್ಲಿ ಚಂಚಲತನವು ಅನುಭವಕ್ಕೆ ಬರುವದು."ನಾನು ದ್ರಷ್ಟಾ ಇರುವೆ, ಸಾಕ್ಷಿ ಅಂತರಾತ್ಮಾ ಇರುವೆನು, ನಾನು ಜ್ಞಾನಧನ ಇರುವೆನು, ನಾನು ದೇವ ಇದ್ದು ಚೈತನ್ಯ ಸತ್ತಾರೂಪ ಇರುವೆನು." ಹೀಗೆ ಶುದ್ಧ ಜ್ಞಾನಮಯ ವೃತ್ತಿ [ಭಾವನೆ] ಇರುವದು. ಉಪಾಸನಾ ಮಾಡುತ್ತ ಮಾಡುತ್ತ ಕೊನೆಗೆ ಉಪಾಸಕ ಅಥವಾ ಭಕ್ತ ಉಪಾಸ್ಯ ದೇವತೆಯೊಂದಿಗೆ ಅಥವಾ ಈಶ್ವರನೊಂದಿಗೆ ಏಕರೂಪ ವಾಗುವನು. ಆದ್ದರಿಂದ ಆತ್ಮಾನಾತ್ಮ ವಿವೇಕದ ಅಂತ್ಯಕ್ಕೆ ಜ್ಞಾನ ಮತ್ತು ಉಪಾಸನಾ ಎರಡೂ ಏಕರೂಪವಾಗುವವು ಚಂಚಲತನದ ಕಲ್ಪನಾ ಇರುವತನಕಾ ನಿರಾಕಾರದಲ್ಲಿ ಪ್ರವೇಶವಾಗುವದಿಲ್ಲ. ದೇಹಬುದ್ಧಿಯ ಚರ್ಮ ಚಕ್ಷುಗಳು ಮತ್ತು ಆತ್ಮಬುದ್ಧಿಯ ಜ್ಞಾನ ಚಕ್ಷು ಇವೆರಡೂ ನಿರ್ಗುಣದ ಈಚೆಗೇ ಇರುವವು. ಕೊನೆಗೆ "ನಾನು ಅಂತರಾತ್ಮನಿರು ವೆನು." ಅನ್ನುವ ಈ ಸಂಗ ಕಳಚಿದ ಕೂಡಲೇ ವೃತ್ತಿಯದು ನಿವೃತ್ತಿ ಆಗುವದು. ಮತ್ತು ಕೇವಲ ನಿಃಶಬ್ದ ಅವ ಸ್ಥೆಯು ಬರುವದು. ಅಲ್ಲಿ ನಿಶ್ಚಲ, ನಿರ್ವಿಕಲ್ಪ ನಿರ್ಗುಣ ಮತ್ತು ನಿರಾಕಾರ, ಮೌನಗರ್ಭವೆನಿಸಿದ ಬ್ರಹ್ಮ ಸ್ವರೂಪ ದಲ್ಲಿ ಪ್ರವೇಶವಾಗುವದು. ಸ್ವತಃ (ಸಾಧಕ) ಕಲ್ಪನಾತೀತನಾಗಿ ನಿರ್ವಿಕಲ್ಪ ಸದ್ವಸ್ತುವಾಗುವನು. ಆಗ ಇವನು ಮಹಾನ್ ಸಂತ ಸಾಧುವಾಗಿ ಹೋಗುವನು. ಸ್ವಸ್ವರೂಪವನ್ನು ತಿಳಿಯುತ್ತ ತಿಳಿಯುತ್ತ ವೃತ್ತಿ ತದಾಕಾರವಾಗಿ ಸಚ್ಚಿದಾನಂದವ ಆವಿಷ್ಕಾರ [ಶೋಧ ಅರ್ಥಾತ್ ಕಂಡು ಹಿಡಿದದ್ದು]ಆಗುವದು. ಇದಕ್ಕೆ ಆತ್ಮನಿವೇದನ ಅನ್ನುವರು.

## ದಶಕ ೧೩ : ಸಮಾಸ ೨ : ಸಾರಾಸಾರ ನಿರೂಪಣ (ನುಡಿ ೩೦)

**ಆತ್ಮಾನಾತ್ಮ ವಿವೇಕದಿಂದಾಗಿ ನಿತ್ಯನಾದ ಆತ್ಮನ ನಿಶ್ಚಯವಾಯಿತು. [ನಿರ್ಣಯವಾಯಿತು, ಗೊತ್ತಾಯಿತು] ಮತ್ತು ವೃತ್ತಿಯು ಅಂತರಾತ್ಮನ ಹತ್ತಿರ ಸ್ಥಿರಗೊಂಡಿತು. ಅಲ್ಲಿ ಜ್ಞಾನವು ಮತ್ತು ಉಪಾಸನೆಯು ಎರಡೂ ಏಕರೂಪವಾಗುವವು:-** ಈಗ ಸಾರಾಸಾರ ವಿಚಾರ ಹೇಳುವೆ ಕೇಳಿರಿ. ವಿಶ್ವದ ಇಷ್ಟೊಂದು ಅಫಾಟ, ಅಪಾರ, ವಿಸ್ತಾರವು ನಮ್ಮ ಎದುರಿಗೆ ಕಾಣುವದು. ಇದರಲ್ಲಿ ಸಾರ ಯಾವುದು ? ಅಸಾರ ಯಾವುದು ? ಇವನ್ನು ನೀವು ವಿವೇಕದಿಂದ ಗುರುತಿಸಬೇಕು. [೧] ಯಾವುದು ಕಾಣುವದೋ ಅದೆಲ್ಲವೂ ನಾಶ ವಾಗುವದು. ಯಾವುದು ಬರುವದೋ ಅದೆಲ್ಲವೂ ಹೋಗುವದು. ಇದೆಲ್ಲ ಅಸಾರವಾದದ್ದಿರುವದು. ಆದರೆ ಯಾವುದು ಸದಾಕಾಲವೂ ಇದ್ದೇ ಇರುವದೋ ಅದು ಸಾರವಿರುವದೆಂದು ತಿಳಿಯಿರಿ, [೨] ಈ ಮೊದಲು ಆತ್ಮಾನಾತ್ಮ ವಿವೇಕ ಹೇಳಲಾಗಿದೆ. ಅವರಲ್ಲಿ ಯಾವುದು ಅನಾತ್ಮವಾದದ್ದಿರುವದೋ ಅದನ್ನು ತಿಳಿದು ಗುರುತಿಸಿ ಅದನ್ನು ಹಿಂದಕ್ಕೆ ಸರಿಸಿ [ತಿರಸ್ಕರಿಸಿ] ಒಗೆದು ಆತ್ಮಾವನ್ನು ತಿಳಿಯುತ್ತ ತಿಳಿಯುತ್ತ ಅದರ ಮೂಲದ ವರೆಗೆ ಹೋದಾಗ ಅಲ್ಲಿ ಮೂಲ ಮಾಯೆಯ ಮೊದಲನೆಯ ಎಳೆಯು ಕೈಗೆ ಹತ್ತುವದು. [೩]

ಮುಳೀ ಜೆ ರಾಹಿಲೀ ವೃತ್ತಿ । ಜಾಲೀ ಪಾಹಿಜೆ ನಿವೃತ್ತಿ ।
ಸಾರಾಸಾರ ವಿಚಾರ ಶ್ರೋತೀ । ಬರಾ ಪಾಹಾವಾ ॥೪॥

ನಿತ್ಯಾನಿತ್ಯ ವಿವೇಕ ಕೇಲಾ । ಆತ್ಮಾ ನಿತ್ಯಸಾ ನಿವಡಿಲಾ ।
ನಿವೃತ್ತಿರೂಪೇ ಹೇತ ಉರಲಾ । ನಿರಾಕಾರೀ ॥೫॥

ಹೇತ ಮ್ಹಣಿಜೆ ತೋ ಚಂಚಳ । ನಿರ್ಗುಣ ಮ್ಹಣಿಜೆ ನಿಶ್ಚಳ ।
ಸಾರಾಸಾರ ವಿಚಾರೇ ಚಂಚಳ । ಹೋಊನ ಜಾತೇ ॥೬॥

ಚಳೆ ಮ್ಹಣೋನಿ ತೇ ಚಂಚಳ । ನ ಚಳೆ ಮ್ಹಣೋನಿ ನಿಶ್ಚಳ ।
ನಿಶ್ಚಳೀ ಉಡೇ ಚಂಚಳ । ನಿಶ್ಚಯೇಸೀ ॥೭॥

ಜ್ಞಾನ ಆಣಿ ಉಪಾಸನಾ । ದೋನೀ ಯೇಕ ಚಿ ಪಾಹಾನಾ ।
ಉಪಾಸನೇ ಕರಿತಾ ಜನಾ । ಜಗೋದ್ಧಾರ ॥೮॥

ದೃಷ್ಟಾ ಸಾಕ್ಷೀ ಜಾಣತಾ । ಜ್ಞಾನಘನ ಚೈತನ್ಯಸತ್ತಾ ।
ಜ್ಞಾನ ದೇವ ಚಿ ತತ್ವತಾ । ಬರೇ ಪಾಹಾ ॥೯॥

ತ್ಯಾ ಜ್ಞಾನಾಚೇ ವಿಜ್ಞಾನ ಹೋತೇ । ಶೋಧೂನ ಪಾಹಾ ಬಹುತ ಮತೇ ।
ಚಂಚಳ ಅವಘೇ ನಾಸತೇ । ಯೇಣೇ ಪ್ರಕಾರೇ ॥೧೦॥

ನಾಸಿವಂತ ನಾಸೇಲ ಕೀ ನಾಸೇನಾ । ಐಸಾ ಅನುಮಾನ ಚಿ ಆಹೆ ಮನಾ ।
ತರೀ ತೋ ಪುರುಷ ಸಹಸಾ ಜ್ಞಾನಾ । ಅಧಿಕಾರೀ ನವ್ಹೆ ॥೧೧॥

ನಿತ್ಯ ನಿಶ್ಚಯೆ ಕೇಲಾ । ಸಂದೇಹ ಉರತ ಚಿ ಗೇಲಾ ।
ತರೀ ತೋ ಜಾಣಾವಾ ವಾಹಾವಲಾ। ಮಾಹಾ ಮೃಗಜಳೀ ॥೧೨॥

ಕ್ಷಯೆ ಚಿ ನಾಹೀ ಜೋ ಅಕ್ಷಈ । ವ್ಯಾಪಕಪಣೇ ಸರ್ವಾ ಠಾಈ।
ತೇಥೇ ಹೇತ ಸಂದೇಹ ನಾಹೀ। ನಿರ್ವಿಕಾರೀ ॥೧೩॥

ಜೇ ಉದಂಡ ಘನದಾಟ । ಆದ್ಯ ಮಧ್ಯ ಸೇವಟ ।
ಅಚಳ ಅಢಳ ಅತುಟ । ಜೈಸೇ ತೈಸೇ ॥೧೪॥

ಪಾಹಾತಾ ಜೈಸೇ ಗಗನ । ಗಗನಾಹೂನ ತೇ ಸಘನ ।
ಜನ ಚಿ ನಾಹೀ ನಿರಂಜನ । ಸದೋದಿತ ॥೧೫॥

ವೃತ್ತಿಯು ಮೂಲ ಮಾಯೆಯ ಹತ್ತಿರ ಹೋಗಿ ಕುಳಿತದ್ದೇನೋ ನಿಜ ಆದರೆ ಅದು ಅಲ್ಲಿಂದಲೂ ಸಹ ನಿವೃತ್ತನಾಗಬೇಕು. ಬಿಡುಗಡೆ ಹೊಂದಬೇಕು. ಆದ್ದರಿಂದ ಶ್ರೋತಾ ಜನ ಇದರ ಬಗ್ಗೆ ವಿಚಾರ ಮಾಡುವದು ಅವಶ್ಯವಿರುವದು. [೪] ನಿತ್ಯಾನಿತ್ಯ ವಿವೇಕ ಮಾಡಿದ್ದು ಸರಿಯಾಯಿತು. (ಫಲಿಸಿತು). ಇದರಿಂದ ನಿತ್ಯನಾದ ಸರ್ವ ಸಾಕ್ಷಿ ಅಂತರಾತ್ಮನನ್ನು ಹುಡುಕಿ ಗುರುತಿಸಿ ತಿಳಿದು ಅಲ್ಲಿ ವೃತ್ತಿಯನ್ನು ಅಂಟಿಸಿದೆನು. (ತೊಡಗಿಸಿದೆನು) ಅಥವಾ ಅಂಟಿಕೊಂಡಿತು. ಆದರೆ ಇಲ್ಲಿಂದಲೂ ನಿವೃತ್ತಿಯಾಗಿ (ಬಿಡುಗಡೆ ಹೊಂದಿ) ಇದಕ್ಕೂ ಮೇಲಿನ ನಿರಾಕಾರದಲ್ಲಿ ಹೋಗಬೇಕೆನ್ನುವ ಮುಖ್ಯ ಹೇತು (ಉದ್ದೇಶ) ಇದು ಹಾಗೆಯೇ ಉಳಿಯುತ್ತದೆ. [೫] ಉದ್ದೇಶ ಇದು ಯಾವಾಗಲೂ ಅಶಾಶ್ವತವೇ ಇರುವದು. ಮತ್ತು ನಿರ್ಗುಣ ಸ್ವರೂಪವಾದರೋ ಯಾವಾಗಲೂ ಶಾಶ್ವತವೇ ಇರುವದು. ಯಾವುದು ಬರುವದೋ ಮತ್ತು ಹೋಗುವದೋ ಅದೆಲ್ಲ ಅಶಾಶ್ವತವೇ ಇರುವದು. ಇದೆಲ್ಲ ಸಾರಾಸಾರ ವಿಚಾರ ಮಾಡಿದರೆ ತಿಳಿಯುವದು. [೬] ಚಲಿಸುವದೆಂದು ಇದಕ್ಕೆ ಚಂಚಲ ಅನ್ನುವರು. ಚಲಿಸುವದಿಲ್ಲವೆಂದು ಇದಕ್ಕೆ ನಿಶ್ಚಲ ಎಂದು ಅನ್ನುವರು. ನಿಶ್ಚಲ ಸ್ವರೂಪದಲ್ಲಿ ಚಂಚಲಕ್ಕೆ ಎಷ್ಟೂ ಸ್ಥಾನವಿಲ್ಲವೆಂಬುದನ್ನು ನಿಶ್ಚಿತವಾಗಿ ತಿಳಿಯಿರಿ. [೭] ಕೊನೆಗೆ ಜ್ಞಾನ ಮತ್ತು ಉಪಾಸನಾ ಎರಡೂ ಏಕರೂಪವೇ ಆಗುವವು. ಆದರೆ ಉಪಾಸನೆಯಿಂದಾಗಿ ಜಗದ ಉದ್ಧಾರವಾಗುವದೆಂಬ ಮಾತು ನಿಜವಿರುವದು. [೮] **ಅಂತರಾತ್ಮಾ ಅನುಭವಕ್ಕೆ ಬಂದು "ನಾನು ಜ್ಞಾನಧನ ಇರುವೆನು" ಹೀಗೆ ಜ್ಞಾನವಾಗುವದು. ಆದರೂ ಸಹ ಈ ಜ್ಞಾನವು ವಿಜ್ಞಾನವಾಗುವದು ಅಗದೀ ಅವಶ್ಯವು [ವಿಜ್ಞಾನ ಅಂದರೆ ವಿಶೇಷ ಜ್ಞಾನ ವೃತ್ತಿ ಶೂನ್ಯ ಅವಸ್ಥೆ] ವಿಜ್ಞಾನದಲ್ಲಿ ಹೇತು [ಉದ್ದೇಶ] ಇಲ್ಲ, ಸಂದೇಹ ಇಲ್ಲ, ಚಂಚಲದ ಸುಳಿವೇ ಇಲ್ಲ**:— ದ್ರಷ್ಟಾ, ಸಾಕ್ಷಿ, ತಿಳಿದವ, ಜ್ಞಾನ ಧನ, ಚೈತನ್ಯ, ಸತ್ತಾ, ಜ್ಞಾನ, ಮೂರ್ತಿ ದೇವ ಇವೆಲ್ಲ ಬೇರೆ ಬೇರೆ ಹೆಸರುಗಳು ಒಬ್ಬನೇ ಒಬ್ಬ ಅಂತರಾತ್ಮನವೇ ಇರುವವು. ಇದನ್ನು ಚನ್ನಾಗಿ ಲಕ್ಷ್ಯದಲ್ಲಿಡಿರಿ. [೯] ಈ ಜ್ಞಾನವೇ ಕೊನೆಗೆ ವಿಜ್ಞಾನವಾಗುವದು. ಅನೇಕ ಪ್ರಕಾರದ ಮತಗಳ ಅಭ್ಯಾಸ ಮಾಡಿ ನೋಡಿದಾಗ ಕಂಡುಬರುವದೇನಂದರೆ ಯಾವತ್ತೂ (ಸರ್ವ) ಚಂಚಲ ಇಲ್ಲದಾಗಿ ಬಿಡುವದು. ಅದೇ ಕಾಲಕ್ಕೇನೆ ಜ್ಞಾನವು ವಿಜ್ಞಾನವಾಗುವದು. [೧೦] ಆತ್ಮಾನಾತ್ಮ ವಿವೇಕದಿಂದ ಯಾವುದು ಅಶಾಶ್ವತವೆಂದು ಠರಾಯಿಸಲ್ಪಡುವದೋ ಅದು ನಾಶ ಹೊಂದುವದೇ ಅಥವಾ ಇಲ್ಲವೇ ಅನ್ನುವ ಸಂದೇಹವು ಎಲ್ಲಿಯವರೆಗೆ ನಮಗೆ ಇರುವದೋ ಅಲ್ಲಿಯ ವರೆಗೆ ಮನುಷ್ಯನು ಜ್ಞಾನದ ಅಧಿಕಾರಿ ಆಗವದಿಲ್ಲ ಆಗಲಿಕ್ಕೂ ಸಾಧ್ಯವಿಲ್ಲ. [೧೧] ಅನಾತ್ಮಾ ನಾಶವಂತವಿರುವದು ಅನ್ನುವವರ ನಿಶ್ಚಯವನ್ನು ಸತತವಾಗಿ ಮಾಡಿದೆವು, ಆದರೂ ಸಹ ಇದರ ಬಗ್ಗೆ ಸಂದೇಹ ಹಾಗೇ ಉಳಿಯಿತೆಂದರೆ ಸಂದೇಹ ಹೊಂದಿದವನು ದೃಶ್ಯದ ದೊಡ್ಡ ಮೃಗಜಲದ ಮಹಾಪೂರದಲ್ಲಿಯ ಸೆಳವಿಗೆ ಸಿಕ್ಕು ಹರಿದು ಹೋದಂತಾಗುವದು. [೧೨] ಪರಬ್ರಹ್ಮಕ್ಕೆ ಎಂದೂ ಕ್ಷಯವಿಲ್ಲ. ಅಂತೆಯೇ ಅದು ಅಕ್ಷಯವೆನಿಸಿದೆ. ವ್ಯಾಪಕತನದಿಂದ ಎಲ್ಲ ಕಡೆಗೂ ಇದು ತುಂಬಿಯೇ ಇರುವದು. ಇಂಥ ಈ ನಿರ್ವಿಕಾರ ಸ್ವರೂಪದಲ್ಲಿ ಹೇತು (ಉದ್ದೇಶ) ಮತ್ತು ಸಂದೇಹ ಇವು ಇರುವದೇ ಇಲ್ಲ. [೧೩] ಈ ಅಕ್ಷಯ ಸ್ವರೂಪವು ಸರ್ವ ಚಂಚಲ ಧರ್ಮದ ಆಚೆಗೆ ಇರುವದು. ನಾನು ಅವನ್ನು ನೋಡುವೆನು ಅಂತಾ ಅಂದರೂ ಯಾರಿಗೂ ಅವನ್ನು ಗುರುತಿಸಲಿಕ್ಕೆ ಸಾಧ್ಯವಿಲ್ಲ. ಸಂಪೂರ್ಣ ಸಂಗತ್ಯಾಗ, ಇದೊಂದೇ ಅವನ್ನು ಗುರುತಿಸಲಿಕ್ಕೆ ಉಪಾಯವಿರುವದು. ವೃತ್ತಿಶೂನ್ಯ ಅವಸ್ಥಾ ಪ್ರಾಪ್ತವಾಯಿತೆಂದರೆ ಅದರ ತದಾಕಾರದಿಂದ ಅನುಭವ ಬರುವದು:– ನಿಶ್ಚಲ ಪರಬ್ರಹ್ಮವು ಅತಿ ವಿಶಾಲ ಇರುವದು. ಮತ್ತು ಇದು ಎಲ್ಲ ಕಡೆಗೂ ಸಂಪೂರ್ಣ (ಭರಪೂರ) ತುಂಬಿದೆ. ಈ ಪರಬ್ರಹ್ಮವು ಆರಂಭ, ಮಧ್ಯ, ಮತ್ತು ಕೊನೆ (ಅಖೈರ) ಈ ಮೂರು ಅವಸ್ಥೆಗಳಲ್ಲಿಯೂ ಅಗದೀ ಹೇಗಿದ್ದಿತೋ ಹಾಗೆಯೇ ಅಚಲವಿರುವದು. ಅಥಳ [ಸ್ಥಿರ] ಮತ್ತು ಅಕ್ಷಯ [ಸತತ] ಇರುವದು. [೧೪] ಇದರ ಅನುಭವ ಬಂದರೆ ಅದು ಆಕಾಶದಂತೆ ಅನಿಸುವದು. ಆದರೆ ಅದು ಆಕಾಶಕ್ಕಿಂತ ಅಧಿಕ ಘನ ಅಂದರೆ ಬಹಳಷ್ಟು ದಟ್ಟವಿರುವದು. ಆಕಾಶ ರಹಿತಸ್ಥಳ ಎಲ್ಲಿಯಾದರೂ ಒಂದು ಇರಬಹುದು. ಆದರೆ ಬ್ರಹ್ಮ ವ್ಯಾಪಿಸಿರದೇ ಇದ್ದದ್ದು ಯಾವುದೂ ಎಲ್ಲಿಯೂ ಇರುವದಿಲ್ಲ. ಸರ್ವದರಲ್ಲಿಯೂ ಬ್ರಹ್ಮವೇ ವ್ಯಾಪಿಸಿರುವದು. ಯಾವನಲ್ಲಿ ಪ್ರಾಣಿಗಳ ಸಂಬಂಧವೇ ಇಲ್ಲವೋ ಅಂಥವನು ನಿರಂತರ ನಿರಂಜನನಾಗಿಯೇ ಇರುವನು. [೧೫]

ಚರ್ಮಚಕ್ಷು ಜ್ಞಾನಚಕ್ಷು । ಹಾ ತೋ ಅವಘಾ ಚ ಪೂರ್ವಪಕ್ಷು ।
ನಿರ್ಗುಣ ಠಾಈಚಾ ಅಲಕ್ಷ್ಯ । ಲಕ್ಷವೇನಾ ॥೧೬॥

ಸಂಗತ್ಯಾಗೇವಿಣ ಕಾಹೀ । ಪರಬ್ರಹ್ಮ ಹೋಣಾರ ನಾಹೀ ।
ಸಂಗತ್ಯಾಗ ಕರೂನ ಪಾಹೀ । ಮೌನ್ಯಗರ್ಭಾ ॥೧೭॥

ನಿರ್ಶತಾ ಅವಘೇ ಚಿ ನಿರ್ಶಲೇ । ಚಂಚಳ ತಿತುಕೇ ನಿಘೋನ ಗೇಲೇ ।
ನಿಶ್ಚಳ ಪರಬ್ರಹ್ಮ ಉರಲೇ । ತೇ ಚಿ ಸಾರ ॥೧೮॥

ಆತಮಾ ದೇಹ ಮೂಳಮಾಯಾ । ನಿಶೋನ ಗೇಲ್ಯಾ ಅಷ್ಟಕಾಯಾ ।
ಸಾಧು ಸಾಂಗತೀ ಉಪಾಯಾ । ಕೃಪಾಳುಪಣೇ ॥೧೯॥

ಸೋಹಂ ಹಂಸಾ ತತ್ತ್ವಮಸಿ । ತೇ ಬ್ರಹ್ಮ ತೂ ಆಹೇಸೀ ।
ವಿಚಾರ ಪಾಹಾತಾ ಸ್ಥಿತಿ ಏಸೀ। ಸಹಜ ಚಿ ಹೋತೇ ॥೨೦॥

ಸಾಧಕ ಅಸೋನ ಬ್ರಹ್ಮ ಉರಲೇ । ತೇಥೇ ವೃತ್ತಿಸುನ್ಯ ಜಾಲೇ ।
ಸಾರಾಸಾರ ವಿಚಾರಿಲೇ । ಯೇಣೇ ಪ್ರಕಾರೇ ॥೨೧॥

ತೇ ತಾಪೇನಾ ನಾ ನಿವೇನಾ । ಉಜಳೇನಾ ನಾ ಕಾಳವಂಡೇನಾ ।
ಡಹುಳೇನಾ ನಾ ನಿವಳೇನಾ । ಪರಬ್ರಹ್ಮ ತೇ ॥೨೨॥

ದಿಸೇನಾ ನಾ ಭಾಸೇನಾ । ಉಪಜೇನಾ ನಾ ನಾಸೇನಾ ।
ತೇ ಯೇನಾ ನಾ ಜಾಈನಾ । ಪರಬ್ರಹ್ಮ ತೇ ॥೨೩॥

ತೇ ಭಿಜೇನಾ ನಾ ವಾಳೇನಾ । ತೇ ವಿಝೋನಾ ನಾ ಜಳೇನಾ ।
ಜಯಾಸ ಕೋಣೇ ಚ ನೇಈನಾ । ಪರಬ್ರಹ್ಮ ತೇ ॥೨೪॥

ಜೇ ಸನ್ಮುಖ ಚಿ ಚಹೂ ಕಡೇ । ಜೇಥೇ ದೃಶ್ಯ ಭಾಸ ಉಡೇ ।
ಧನ್ಯ ಸಾಧು ತೋ ಪವಾಡೇ । ನಿರ್ವಿಕಾರೀ ॥೨೫॥

ಚರ್ಮ ಚಕ್ಷುವಿನಿಂದ ಅನುಭವ ಪಡೆಯುವದೇ ದೇಹ ಬುದ್ಧಿಯ ಭೂಮಿಕೆ ಇರುವದು. ಆದರೆ ಜ್ಞಾನ ಚಕ್ಷುವಿನಿಂದ ಅನುಭವ ಹೊಂದುವದು· ಆತ್ಮಬುದ್ಧಿಯ ಭೂಮಿಕೆ ಇರುವದು. ಈ ಎರಡೂ ಭೂಮಿಕೆಗಳು ಬ್ರಹ್ಮಾನುಭವದ ಈಚಿಗಿನವೇ ಇರುವವು. [ಕೆಳಗಿನವು ಇರುವವು]. ನಿರ್ಗುಣ ಬ್ರಹ್ಮಸ್ವರೂಪವು ಸ್ವಭಾವತಃ ಮೇಲ್ಮಟ್ಟದಲ್ಲಿ ಅಂದರೆ ತಿಳಿಯುವದರ ಆಚೆಗೆ ಇರುವದರಿಂದ ಇದನ್ನು ತಿಳಿಯಲು ಹೋದರೂ ತಿಳಿಯಲಿಕ್ಕೆ ಬರುವದಿಲ್ಲ. [೧೬] ನಾನು ಅನ್ನುವದನ್ನು ಸಂಪೂರ್ಣ ತ್ಯಾಗ ಮಾಡದ ಹೊರತು, ಯಾರಿಗೂ ಬ್ರಹ್ಮಸ್ವರೂಪರಾಗಲಿಕ್ಕೆ ಬರುವದಿಲ್ಲ. ಆದ್ದರಿಂದ ಸಾಧಕನು ನಾನು ಅನ್ನುವದನ್ನು ನಿಃಶೇಷವಾಗಿ ತ್ಯಾಗ ಮಾಡಬೇಕು. ಮತ್ತು ಮೌನ ಗರ್ಭ ಅಂದರೆ ಶಬ್ದಾತೀತ ಇರುವಂಥ ಅನಿರ್ವಚನೀಯ ಪರಬ್ರಹ್ಮದ ಅನುಭವ ಪಡೆಯಬೇಕು. [ಹೊಂದಬೇಕು] [೧೭] ಅಸಾರದ ನಿರಸನ ಮಾಡುತ್ತಾ ಮಾಡುತ್ತಾ ಯಾವತ್ತೂ ಅಸಾರವನ್ನು ಬಾಜೂಕ್ಕೆ ಸರಿಸಬೇಕು. ಅಶಾಶ್ವತವೆಲ್ಲವೂ ಇಲ್ಲದಂತಾಗಿ ಬಿಟ್ಟಿತು, ಆಮೇಲೆ ಯಾವುದು ನಿಶ್ಚಲಪರಬ್ರಹ್ಮವೋ ಅದು ಮಾತ್ರ ಉಳಿಯಿತು. ಇದೇ ನಿಜವಾದ ಸಾರವು. ಇದನ್ನೇ ತಿಳಿಯಬೇಕಾದದ್ದು. [೧೮] ಮೂಲ ಪ್ರಕೃತಿಯ ಎಂಟು ದೇಹಗಳ ವಿಸ್ತಾರ [ಪ್ರಸಾರ]ವನ್ನು ಬಾಜೂಕ್ಕೆ ಸರಿಸಬೇಕು. ಮತ್ತು ಆಮೇಲೆ ಬ್ರಹ್ಮರೂಪದ ಅನುಭವ ಪಡೆಯಬೇಕು, ಇಂಥ ಉಪಾಯಗಳನ್ನು ಸಾಧು ಸಂತರು ಹೇಳುವರು. ಆ ಬ್ರಹ್ಮ ಸ್ವರೂಪವು, ಸರ್ವ ಮಾನವೀಕಲ್ಪನೆಯ ಅನುಭವದ ಮತ್ತು ವಿಚಾರಗಳಿಗೆ ಅತೀತವಾದದ್ದಿರುವದು. ಇಂಥ ಆ ಸ್ವರೂಪದಲ್ಲಿ ಕೂಡಿಕೊಳ್ಳುವ ಸಾಧು ಸಂತರು ನಿಜವಾಗಿಯೂ ಧನ್ಯರು. ಇವರೇ ಮುಕ್ತರು ಅಂತಾ ತಿಳಿಯಬೇಕು, ಪಿಂಡ ಬ್ರಹ್ಮಾಂಡ ದೇಹಗಳ ಪೈಕಿ ಎಂಟನೆಯ ದೇಹ ಅಂದರೆ ಮೂಲ ಮಾಯಾ ಇರುವದು. ಇವಳನ್ನು ಹಿಡಿದು ಎಂಟೂ ದೇಹಗಳ ನಿರಾಸ ಮಾಡುವ ಸಿದ್ಧತೆ ಆದಮೇಲೆ ಸಾಧು ಪುರುಷ [ಗುರುನಾಥ] ಕೃಪಾಳುವಾಗಿ ಬ್ರಹ್ಮ ಜ್ಞಾನದ ಉಪಾಯ ಹೇಳುವನು. ಎಂಟೂ ದೇಹಗಳ ನಿರಾಸವಾದ ಮೇಲೆ ಶೂನ್ಯವು ಮುಂದೆ ಬಂದು ನಿಲ್ಲುವದು. ಆಗ ನೀವು ಗಾಬರಿ ಪಡಬೇಡಿರಿ. ಗೊಂದಲಗೊಳ್ಳಬೇಡಿರಿ. ಯಾಕಂದರೆ ಈಗ ನಿಮಗೆ ಸರಿಯಾದ ಮಾರ್ಗದರ್ಶನ ಮಾಡಲು ಸಾಧು ಸತ್ಪುರುಷರ ಅವಶ್ಯಕತೆ ಇರುವದು. [೧೯] ಸಃ ಅಹಂ ಅಂದರೆ ಅವನು ನಾನೇ ಇರುವೆ [ಅವನೇ ನಾನಾಗಿರುವೆ]. ಹಂಸಃ ಅಂದರೆ ಅಹಂ ಸಃ ಅಂದರೆ ನಾನು ಅವನಿರುವೆನು [ನಾನೇ ಅವನಾಗಿರುವೆನು]. ತತ್ವಮಸಿ ಅಂದರೆ ಆ ಬ್ರಹ್ಮ ನೀನೇ ಇರುವೆ. ಸಾಧಕನು ಸಾರಾಸಾರ ವಿಚಾರ ಮಾಡಿದರೆ ತನ್ನ ಬ್ರಹ್ಮ ಸ್ವರೂಪವು ಸಹಜವಾಗಿಯೇ ಅವನ ಅನುಭವಕ್ಕೆ ಬರುವದು. [೨೦] ಸಾಧಕತನದಿಂದ ಇದ್ದು ಸಂಪೂರ್ಣ ಸಂಗತ್ಯಾಗ [ಅಹಂಕಾರ, ದೇಹ ಬುದ್ಧಿ ಇವುಗಳ ತ್ಯಾಗ] ಆಯಿತೆಂದರೆ ಕೇವಲ ಬ್ರಹ್ಮವು ಉಳಿಯುವದು· ಸಾಧಕನದು ವೃತ್ತಿಶೂನ್ಯ [ವೃತ್ತಿರಹಿತ] ಅವಸ್ಥಾ ಆಗುವದು. ಸಾರಾಸಾರ ವಿಚಾರದಿಂದ ಸಾಧಿಸಿಕೊಳ್ಳಬೇಕಾದದ್ದು ಇದೇ ಇರುವದು. ಈ ಪ್ರಕಾರ ವೃತ್ತಿಶೂನ್ಯತೆಯನ್ನು ಸಾಧಿಸುವದೇ ಖರೇ ಸಾರಾಸಾರ ವಿಚಾರ ಅಂತಾ ತಿಳಿಯಿರಿ. [೨೧] ಆ ಪರಬ್ರಹ್ಮವು ಕಾಯುವದಿಲ್ಲ. ಮತ್ತು ತಣ್ಣಗೂ ಆಗುವದಿಲ್ಲ. ಇದು ಥಳ ಥಳ ಲಕಲಕ, ಚಕಚಕ ಬೆಳಗುವದಿಲ್ಲ. ಮತ್ತು ಕಪ್ಪು-ಕರ್ರಗಾಗುವದಿಲ್ಲ. ಇದು ಕಲಕಿ ರಾಡಿಯಾಗುವದಿಲ್ಲ. ತಳಕ್ಕೆ ರಾಡಿ ಕುಳಿತು ಅದು ಸ್ವಚ್ಛವಾಗುವದಿಲ್ಲ. [ಅದು ಯಾವಾಗಲೂ ಇದ್ದಂತೆಯೇ ಇರುತ್ತದೆ][೨೨] ಇದು ಇಂದ್ರಿಯಗಳಿಗೆ ಕಾಣಿಸುವದಿಲ್ಲ. ಮತ್ತು ಮನಕ್ಕೆ ಭಾಸವಾಗುವದಿಲ್ಲ. ಇದು ಹುಟ್ಟುವದಿಲ್ಲ. ಮತ್ತು ಸಾಯುವದಿಲ್ಲ. ನಾಶವಾಗುವದಿಲ್ಲ, ಇದು ಬರುವದಿಲ್ಲ ಮತ್ತು ಹೋಗುವದಿಲ್ಲ. [೨೩] ಇದು ತೊಯ್ಯುವದಿಲ್ಲ ಮತ್ತು ಒಣಗುವದಿಲ್ಲ. ಇದು ಉರಿಯುವದಿಲ್ಲ ಮತ್ತು ಆರುವದಿಲ್ಲ· ಮತ್ತು ಇದನ್ನು ಯಾರೂ ಎಲ್ಲಿಗೂ ಒಯ್ಯಲಿಕ್ಕೆ ಶಕ್ಯವಿಲ್ಲ. [೨೪] ಇದು ನಾಲ್ಕೂ ಕಡೆಗೆ ಹಾಗೂ ಎಲ್ಲಿ ಎತ್ತ ನೋಡಿದತ್ತ ಕಡೆಗೆ ಇದು ಎದುರಿಗೇ ನಿಲ್ಲುವದು. ಇದರಲ್ಲಿ ಎಲ್ಲ ದೃಶ್ಯದ ಭಾಸಗಳೂ ಹಾರಿ ಹೋಗುವವು[ಇಲ್ಲದಾಗಿ ಬಿಡುವವು]. ಇಂಥ ಈ ನಿರ್ವಿಕಾರ ಬ್ರಹ್ಮದಲ್ಲಿ ಯಾರು ತದಾಕಾರರಾಗುವರೋ [ವಿಶ್ರಾಂತಿ,ಸಮಾಧಾನ]ಹೊಂದುವರೋ ಅಂಥ ಸಾಧು ಸಂತರು ಸರ್ವ ಶ್ರೇಷ್ಠರು. ಇವರೇ ಧನ್ಯರು!ಧನ್ಯರು!![೨೫]

ನಿರ್ವಿಕಲ್ಪೀ ಕಲ್ಪನಾತೀತ । ತೋ ಚಿ ವೋಳಖಾವಾ ಸಂತ ।
ಯೇರ ಅವಘೇ ಚಿ ಅಸಂತ । ಭ್ರಮರೂಪ ॥೨೬॥

ಖೋಟೇ ಸಾಂಡೂನ ಖರೇ ಘ್ಯಾವೇ । ತರೀ ಚ ಪರೀಕ್ಷವಂತ ಮ್ಹಣಾವೇ ।
ಅಸಾರ ಸಾಂಡೂನ ಸಾರ ಘ್ಯಾವೇ । ಪರಬ್ರಹ್ಮ ತೇ ॥೨೭॥

ಜಾಣತಾ ಜಾಣತಾ ಜಾಣೀವ ಜಾತೇ । ಆಪಲೀ ವೃತ್ತಿ ತದ್ರೂಪ ಹೋತೆ ।
ಆತ್ಮನಿವೇದನ ಭಕ್ತಿ ತೆ । ಐಸೀ ಆಹೆ ॥೨೮॥

ವಾಚ್ಯಾಂಶೇ ಭಕ್ತಿ ಮುಕ್ತಿ ಬೋಲಾವೀ। ಲಕ್ಷ್ಯಾಂಶೇ ತದ್ರೂಪತಾ ವಿವರಾವೀ ।
ವಿವರತಾ ಹೇತು ಮುರಾವೀ । ತೇ ತದ್ರೂಪತಾ ॥೨೯॥

ಸದ್ರೂಪ ಚಿದ್ರೂಪ ಆಣಿ ತದ್ರೂಪ । ಸಸ್ವರೂಪ ಮ್ಹಣಿಜೆ ಆಪಲೇ ರೂಪ।
ಆಪಲೇ ರೂಪ ಮ್ಹಣಿಜೆ ಅರೂಪ । ತತ್ತ್ವ ನಿರ್ಶನಾಉಪರೀ ॥೩೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಸಾರಾಸಾರ ನಿರೂಪಣ' ನಾಮ ಸಮಾಸ ದ್ವಿತೀಯ ॥

ಕೊನೆಯಲ್ಲಿ ಸಂತರ ವ್ಯಾಖ್ಯೆಯನ್ನು ಹೇಳಿ ಆತ್ಮನಿವೇದನದ ಖರೇ ಸ್ವರೂಪದ ವರ್ಣನೆ ಮಾಡುವರು:- ಸ್ವತಃ ಕಲ್ಪನಾತೀತರಾಗಿ[ನಾನು ದೇಹ, ನಾನು ಜೀವ, ಈ ಕಲ್ಪನೆ ಪೂರ್ಣ ನಾಶವಾಗಿ] ಯಾರು ನಿರ್ವಿಕಲ್ಪ ಬ್ರಹ್ಮದಲ್ಲಿ ಲೀನರಾಗುವರೋ ಅವರೇ ಖರೇ ಸಂತರೆಂದು ತಿಳಿಯಬೇಕು, ಬಾಕಿ ಉಳಿದವರೆಲ್ಲ ಮಾಯೆಯು ಹಿಡಿತದಲ್ಲಿರುವ ಅಸಂತರೆಂದು ತಿಳಿಯಬೇಕು, ಇವರು ಭ್ರಮರೂಪ ಇರುವರು, (೨೬) ಯಾವುದು ಸುಳ್ಳೋ, ಖೊಟ್ಟಿ ಇರುವದೋ ಅದನ್ನು ತ್ಯಜಿಸಿ ಬಿಟ್ಟು ಅಥವಾ ಬಾಜೂಕ್ಕೆ ಸರಿಸಿ ನಿಜವಿರುವದನ್ನು ಯಾವನು ಗ್ರಹಣ ಮಾಡುವನೋ ಅವನಿಗೇನೇ ಪರೀಕ್ಷಾವಂತನೆಂದು ಅನ್ನುವರು, ಆದ್ದರಿಂದ ತಿಳಿದವರು ಭ್ರಮರೂಪವಿರುವ ಅಸಾರವನ್ನು ತ್ಯಜಿಸಿಬಿಟ್ಟು ಪರಬ್ರಹ್ಮ ಸ್ವರೂಪ ಸಾರವನ್ನು ಮಾತ್ರ ಸ್ವೀಕರಿಸಬೇಕು, [೨೭] ಸಾರ ವಸ್ತುವನ್ನು ತಿಳಿಯುತ್ತಾ ತಿಳಿಯುತ್ತಾ ಕೊನೆಗೆ ನಿಮ್ಮ ತಿಳುವಳಿಕೆ ಅರ್ಥಾತ್ ಅರಿವು ಇಲ್ಲದಾಗಿ ಹೋಗುವದು, [ಲೀನವಾಗುವದು], ವೃತ್ತಿಯು ಬ್ರಹ್ಮಸ್ವರೂಪದೊಂದಿಗೆ ತದಾಕಾರವಾಗುವದು. ನಿಜವಾದ ಆತ್ಮನಿವೇದನ ಭಕ್ತಿ ಅನ್ನುವದು ಹೀಗಿರುವದು. [೨೮] ಭಕ್ತಿ ಮತ್ತು ಮುಕ್ತಿಯು ಬಗ್ಗೆ ಶಬ್ದಗಳಿಂದ (ವಾಣಿಯಿಂದ) ವರ್ಣನೆ ಮಾಡಬೇಕು. ಈ ಶಬ್ದಗಳ ಅರ್ಥವನ್ನು ಲಕ್ಷ್ಯದಲ್ಲಿ ತೆಗೆದುಕೊಂಡು ತಾದಾತ್ಮ್ಯತಾ [ತದ್ರೂಪತಾ] ಅನ್ನುವದು ಹೇಗಿರುವದೆಂಬುದನ್ನು ನಿಮ್ಮ ಬುದ್ಧಿಯಿಂದ ಸರಿಯಾಗಿ ತಿಳಿದುಕೊಳ್ಳಬೇಕು, ಇದರ ಮೇಲೆ ಚಿಂತನ ಮಾಡತಾ ಮಾಡತಾ ನಾನು ಅನ್ನುವದು ಇಲ್ಲದಾದ ಕೂಡಲೇ ತದ್ರೂಪತಾ-ತದಾತ್ಮ್ಯತಾ ಸಾಧಿಸುವದು, (೨೯) ಆ ಪರಬ್ರಹ್ಮ ಸದ್ರೂಪ ಇರುವದು, ಮತ್ತು ಚಿದ್ರೂಪವೂ ಸಹ ಇರುವದು, ಇದರೊಂದಿಗೆ ನಮ್ಮ ಸ್ವಸ್ವರೂಪವೂ ತದ್ರೂಪವಿರುವದು. ಆದರೆ ಸರ್ವ ತತ್ವಗಳ ನಿರಸನ ಆದ ಮೇಲೆ ನಮ್ಮ ರೂಪವು ಅರೂಪವೇ ಇರುವದು ಅನ್ನುವ ಅನುಭವ ನಿಮಗೆ ಬರುವದು, [೩೦]

ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಹದಿಮೂರನೆ ದಶಕದೊಳಗಿನ
"ಸಾರಾಸಾರ ನಿರೂಪಣ"ವೆಂಬ ಎರಡನೆಯ ಸಮಾಸವು ಮುಗಿದುದು

● ●

### ದಶಕ ತ್ರಯೋದಶ : ಸಮಾಸ ತೃತೀಯ : ಉಭಾರಣೀ ನಿರೂಪಣ

॥ಶ್ರೀರಾಮ॥ ಬ್ರಹ್ಮ ಘನ ಆಣಿ ಪೋಕಳ । ಆಕಾಶಾಹೂನ ವಿಶಾಳ ।
ನಿರ್ಮಳ ಆಣಿ ನಿಶ್ಚಳ । ನಿರ್ವಿಕಾರೀ ॥೧॥
ಐಸೇ ಚಿ ಅಸತಾ ಕಿತ್ಯೇಕ ಕಾಳ । ತೇಥೇ ಆರಂಭಲಾ ಭೂಗೋಳ ।
ತಯಾ ಭೂಗೋಳಾಚೇ ಮೂಳ । ಸಾವಧ ಐಕಾ ॥೨॥
ಪರಬ್ರಹ್ಮ ಅಸತಾ ನಿಶ್ಚಳ । ತೇಥೇ ಸಂಕಲ್ಪ ಉಠಿಲಾ ಚಂಚಳ ।
ತಯಾಸ ಬೋಲಿಜೆ ಕೇವಳ । ಆದಿ ನಾರಾಯೆಣ ॥೩॥
ಮೂಳಮಾಯಾ ಜಗದೇಶ್ವರ । ತ್ಯಾಸೀ ಚ ಮ್ಹಣಿಜೆ ಷಡ್ಗುಣೈಶ್ವರ ।
ಅಷ್ಟಧಾ ಪ್ರಕೃತೀಚಾ ವಿಚಾರ । ತೇಥೇ ಪಾಹಾ ॥೪॥
ಐಲಿಕಡೆ ಗುಣಕ್ಷೋಭಿಣೀ । ತೇಥೇ ಜನ್ಮ ಘೇತಲಾ ತ್ರಿಗುಣೀ ।
ಮೂಳ ಮ್ರೋಂಕಾರಾಚೀ ಮಾಂಡಣೀ । ತೇಥೂನ ಜಾಣಾವೀ ॥೫॥
ಅಕಾರ ಉಕಾರ ಮಕಾರ । ತಿನೀ ಮಿಳೋನ ಮ್ರೋಂಕಾರ ।
ಪುಢೇ ಪಂಚಭೂತಾಚಾ ವಿಸ್ತಾರ । ವಿಸ್ತಾರಲಾ ॥೬॥
ಆಕಾಶ ಮ್ಹಣಿಜೆತೇ ಅಂತರಾತ್ಮ್ಯಾಸೀ । ತಯಾಪಾಸೂನ ಜನ್ಮ ವಾಯೋಸೀ ।
ವಾಯೋಪಾಸೂನ ತೇಜಾಸೀ । ಜನ್ಮ ಜಾಲಾ ॥೭॥
ವಾಯೋಚಾ ಕಾತರಾ ಘಸವಟೇ । ತೇಣೇ ಉಷ್ಣೇ ವನ್ಹಿ ಪೇಟೇ ।
ಸೂರ್ಯಬಿಂಬ ತೇ ಪ್ರಗಟೇ । ತಯೇ ಠಾಈ ॥೮॥
ವಾರಾ ವಾಜತೋ ಸೀತಳ । ತೇಥೇ ನಿರ್ಮಾಣ ಜಾಲೇ ಜಳ ।
ತೇ ಜಳ ಆಳೋನ ಭೂಗೋಳ । ನಿರ್ಮಾಣ ಜಾಲಾ ॥೯॥
ತ್ಯಾ ಭೂಗೋಳಾಚೆ ಪೋಟೀ । ಅನಂತ ಬೀಜಾಚಿಯಾ ಕೋಟೀ ।
ಪೃಥ್ವೀ ಪಾಣ್ಯಾ ಹೋತಾ ಭೇಟೀ । ಅಂಕುರ ನಿಘತೀ ॥೧೦॥

## ದಶಕ ೧೩. ಸಮಾಸ ೩. ಉಭಾರಣಿ (ಸೃಷ್ಟಿ) ನಿರೂಪಣ (ನುಡಿ ೨೨)

ನಿರ್ಗುಣ ಬ್ರಹ್ಮದಲ್ಲಿ ಪ್ರಥಮದಲ್ಲಿ ಒಂದು ಸಂಕಲ್ಪ ನಿರ್ಮಾಣವಾಯಿತು. ಇದಕ್ಕೆ ಎರಡು ಅಂಗಗಳು ಇರುವವು. ಇದರಲ್ಲಿ ಅಂದರೆ ಸಂಕಲ್ಪದಲ್ಲಿ ಇರುವ ಶುದ್ಧ ತಿಳುವಳಿಕೆ, [ಶುದ್ಧ ಅರಿವು] ಇದು ಒಂದು ಅಂಗವು. ಮತ್ತು ಅಷ್ಟಧಾ ಪ್ರಕೃತಿ ಇದು ಎರಡನೆಯ ಅಂಗವು. ಇದಕ್ಕೆ ಅರ್ಧನಾರೀ ನಟೇಶ್ವರ ಅನ್ನುವರು. ಇದರೊಳಗಿಂದ ಗುಣಕ್ಷೋಭಿಣಿಯು [ತ್ರಿಗುಣಗಳು] ಪ್ರಕಟವಾಯಿತು. ಮತ್ತು ಮೂರೂವರೆ ಮಾತ್ರಾ [ಅಕ್ಷರ]ದ ಓಂಕಾರದ ಉದಯವಾಯಿತು. ಇದರೊಳಗಿಂದ ಪಂಚಭೂತಗಳ ವಿಸ್ತಾರವಾಗಿ ಈ ಸರ್ವ ವಿಶ್ವವು ರಚನೆಗೊಂಡಿತು. ನೀರಿನಿಂದ ಹಿಡಿದು ಸರ್ವಜೀವ ಪ್ರಾಣಿಗಳು ಉತ್ಪನ್ನವಾದವು. ಮೂಲದಿಂದ ಕೊನೆಯವರೆಗಿನ ವಿಶ್ವದ ವ್ಯವಹಾರದಲ್ಲಿಯ ಎಲ್ಲ ಕರ್ತಾತನವು [ಹಿರಿತನ, ಸತ್ತಾತನ] ಅಂತರಾತ್ಮದ ಕಡೆಗೇ ಇರುವದು. ಇವನು ಎಲ್ಲವನ್ನೂ ಮಾಡುವನು. ಸರ್ವಕ್ಕೂ ಇವನೇ ಅಧಿಕಾರಿಯು. ಆದರೆ ಈ ಎಲ್ಲ ವಿಷಯವನ್ನು ಅನುಭವದಿಂದ ನೋಡಬೇಕು, ಮತ್ತು ತಿಳಿಯಬೇಕು. ಪ್ರಪಂಚದಲ್ಲಿಯಾಗಲೀ ಅಥವಾ ಪರಮಾರ್ಥದಲ್ಲಿಯಾಗಲೀ ಪ್ರಚೀತಿ [ಅನುಭವ] ಬರದ ಹೊರತು ಖರೇ ಸಮಾಧಾನವಾಗುವದಿಲ್ಲ.

### ದಶಕ ೧೩. ಸಮಾಸ ೩. ಉಭಾರಣಿ (ಸೃಷ್ಟಿ) ನಿರೂಪಣ (ನುಡಿ ೨೨)

**ಹಿಂದೆ ಹೇಳಿದ ವಿಶ್ವನಿರ್ಮಾಣದ ಕ್ರಮವನ್ನು ಪುನಃ ಸ್ವಲ್ಪದರಲ್ಲಿ ಹೇಳುವರು:**– ಬ್ರಹ್ಮವು ಸರ್ವತ್ರದಲ್ಲಿಯೂ [ಎಲ್ಲ ಕಡೆಗೂ] ಭರಪೂರ [ಸಂಪೂರ್ಣ] ತುಂಬಿರುವದು. ಆದರೆ ಇದು ಅಗದೀ ಸೂಕ್ಷ್ಮ ಇದ್ದದರಿಂದ ಪೋಕಳ ಅಥವಾ ರಿಕಾಮಿ [ಒಣ ಒಣ, ಶೂನ್ಯ] ಅನಿಸುವದು. ಆಕಾಶಕ್ಕಿಂತಲೂ ಬಹಳ ವಿಶಾಲ ಇರುವಂಥ ಈ ಬ್ರಹ್ಮವು ನಿರ್ಮಲ ನಿಶ್ಚಲ ಮತ್ತು ನಿರ್ವಿಕಾರಿ ಇರುವದು. [೧] ಈ ಅವಸ್ಥೆಯಲ್ಲಿಯೇ ಬಹಳಷ್ಟು ಕಾಲ ಕಳೆದು ಹೋಯಿತು. ಆಮೇಲೆ ಇದರಲ್ಲಿ ವಿಶ್ವನಿರ್ಮಾಣವು ಆರಂಭವಾಯಿತು. ಈ ವಿಶ್ವದ ಮೂಲದ ಬಗ್ಗೆ ಹೇಳುವೆ. ಲಕ್ಷ್ಯಗೊಟ್ಟು ಕೇಳಿರಿ. [೨] ಪರಬ್ರಹ್ಮವು ನಿಶ್ಚಲತನದಿಂದ ಇರುತ್ತಿರಲು ಅದರಲ್ಲಿ ಚಂಚಲ ಸಂಕಲ್ಪದ ಉದಯವಾಯಿತು. ಇದಕ್ಕೆ ಆದಿನಾರಾಯಣ ಎಂದು ಅನ್ನುವರು. [೩] ಮೂಲ ಮಾಯೆಯು, ಜಗದೀಶ್ವರ ಇವನಿಗೇ ಷಡ್ಗುಣೇಶ್ವರ ಅನ್ನುವರು. ಅಷ್ಟಧಾ ಪ್ರಕೃತಿಯ ವಿಚಾರವು ಇಲ್ಲಿಯೇ ಪ್ರಾರಂಭವಾಗುವದು. [೪] ಇದರಿಂದ [ಕೆಳಗೆ] ಈಚೆಗೆ ಗುಣಕ್ಷೋಭಿಣಿ ಇರುವಳು, ಯಾಕಂದರೆ ಸತ್ವ, ರಜ, ತಮ ಈ ಮೂರು ಗುಣಗಳು ಇದರಲ್ಲಿ ಜನ್ಮತಳೆಯುವವು. ಇಲ್ಲಿ ಮೂಲ ಓಂಕಾರವು ರಚನೆಯಾಯಿತು. [೫] ಅಕಾರ, ಉಕಾರ, ಮಕಾರ, (ಅರ್ಧಮಾತ್ರಾ) ಕೂಡಿ ಓಂಕಾರ ಘಟಿಸುವದು ಆಮೇಲೆ ಪಂಚಭೂತಗಳ ವಿಸ್ತಾರವು ಸರ್ವತ್ರ (ಎಲ್ಲೆಂದರಲ್ಲೆಲ್ಲ ಕಡೆಗೆ) ಪಸರಿಸಿತು. [೬] ಅಂತರಾತ್ಮನಿಗೆ ಆಕಾಶ ಅನ್ನುವರು. ಆಕಾಶದಿಂದ ವಾಯು ಹುಟ್ಟಿತು. ಮತ್ತು ವಾಯುವಿನಿಂದ ತೇಜ ಹುಟ್ಟಿತು. [೭] ಎದುರುಬದುರು ಬರುವ ವಾಯುವಿನಿಂದ ಅಂದರೆ ಎರಡು ವಾಯು ಪ್ರಹಾರವು ಒಂದಕ್ಕೊಂದು ತಿಕ್ಕಾಡಿ (ಘರ್ಷಣೆಯಾಗಿ) ಅದರಿಂದ ಅಗ್ನಿಯು ಹುಟ್ಟಿತು. ಸೂರ್ಯ ಬಿಂಬವೂ ಅಲ್ಲಿಯೇ ಪ್ರಕಟವಾಯಿತು. [೮] ಆ ಯಾವ ವಾಯು (ಗಾಳಿ) ದಿಂದ ತಣ್ಣನ್ನ ಶೀತಲ ಗಾಳಿ ಬೀಸಿ ಅದರಿಂದ ನೀರು ಉತ್ಪನ್ನವಾಯಿತು. ಈ ನೀರು ನಿಂತಲ್ಲಿ ಆಟ್ಟಿಸಿ ಅದರಿಂದ ಭೂಮಿ ತಯಾರಾಯಿತು. [೯] ಭೂಮಿಯ ಒಡಲಿನಲ್ಲಿ (ಪೃಥ್ವಿಯ ಒಡಲಿನಲ್ಲಿ) ಕೋಟ್ಯಾವಧಿ ಬೀಜಗಳಿರುವವು. ಈ ಬೀಜಗಳಿಗೆ ಮಣ್ಣು ಮತ್ತು ನೀರಿನ ಜೋಡು ಆದ ಕೂಡಲೇ (ಭೆಟ್ಟಿಯಾದ ಕೂಡಲೇ) ಅದರೊಳಗಿಂದ ಅಂಕುರ (ಮೊಳಕೆ) ಏಳುವವು. (ಹುಟ್ಟುವವು). [೧೦]

ಪೃಥ್ವೀ ವಲ್ಲೀ ನಾನಾ ರಂಗ । ಪತ್ರೆ ಪುಷ್ಪಾಂಚೆ ತರಂಗ ।
ನಾನಾ ಸ್ವಾದ ತೇ ಮಂಗ । ಫಳೇ ಜಾಲೀ ॥೧೧॥
ಪತ್ರೇ ಪುಷ್ಪೇ ಫಳೇ ಮುಳೇ । ನಾನಾ ವರ್ಣ ನಾನಾ ರಸಾಳೇ ।
ನಾನಾ ಧಾನ್ಯೇ ಅನ್ನೇ ಕೇವಳೇ । ತೇಥೂನ ಜಾಲೀ ॥೧೨॥
ಅನ್ನಾಪಾಸೂನ ಜಾಲೇ ರೇತ । ರೇತಾಪಾಸೂನ ಪ್ರಾಣೀ ನಿಪಜತ ।
ಐಸೀ ಹೇ ರೋಕಡೀ ಪ್ರಚಿತ । ಉತ್ಪತ್ತೀಚೀ ॥೧೩॥
ಅಂಡಜ ಜಾರಜ ಸ್ವೇತಜ ಉದ್ಭಿಜ । ಪೃಥ್ವೀ ಪಾಣೀ ಸಕಳಾಂಚೇ ಬೀಜ ।
ಐಸೇ ಹೇ ನವಲ ಚೋಜ । ಸೃಷ್ಟಿರಚನೇಚೇ ॥೧೪॥
ಚ್ಯಾರೀ ಖಾಣೀ ಚ್ಯಾರೀ ವಾಣೀ । ಚೌರ್‍ಯಾಸಿ ಲಕ್ಷ ಜೀವಯೋನೀ ।
ನಿರ್ಮಾಣ ಝಾಲೆ ಲೋಕ ತಿನೀ । ಪಿಂಡ ಬ್ರಹ್ಮಾಂಡ ॥೧೫॥
ಮುಳೀ ಅಷ್ಟಧಾ ಪ್ರಕೃತೀ । ಅವಘೇ ಪಾಣ್ಯಾಪಾಸೂನ ಜನ್ಮತೀ ।
ಪಾಣೀ ನಸ್ತಾ ಮರತೀ । ಸಕಳ ಪ್ರಾಣೀ ॥೧೬॥
ನವ್ಹೆ ಅನುಮಾನಾಚೇ ಬೋಲಣೇ । ಯಾಚಾ ಬರಾ ಪ್ರತ್ಯಯೊ ಘೇಣೇ ।
ವೇದಶಾಸ್ತ್ರೇ ಪುರಾಣೇ । ಪ್ರತ್ಯಯೋ ಘ್ಯಾವೀ ॥೧೭॥
ಜೇ ಆಪಲ್ಯಾ ಪ್ರತ್ಯಯಾ ಯೇನಾ ॥ ತೇ ಅನುಮಾನಿಕ ಘ್ಯಾವೇನಾ ।
ಪ್ರತ್ಯಯಾವಿಣ ಸಕಳ ಜನಾ । ಮೆವಸಾಯು ನಾಹೀ ॥೧೮॥
ಮೆವಸಾಯೆ ಪ್ರವೃತ್ತೀ ನಿವೃತ್ತೀ । ದೋಹೀಕಡೆ ಪಾಹಿಜೆ ಪ್ರಚಿತೀ ।
ಪ್ರಚಿತೀವಿಣ ಅನುಮಾನೇ ಅಸತೀ । ತೇ ವಿವೇಕಹೀನ ॥೧೯॥
ಐಸಾ ಸೃಷ್ಟಿರಚನೇಚಾ ವಿಚಾರ । ಸಂಕಳಿತ ಬೋಲಿಲಾ ಪ್ರಕಾರ ।
ಆತಾ ವಿಸ್ತಾರಾಚಾ ಸಂವ್ಹಾರ । ತೋ ಹಿ ಐಕಾ ॥೨೦॥
ಮುಳಾಪಾಸೂನ ಸೇವಟವರೀ । ಅವಘಾ ಆತ್ಮಾರಾಮು ಚಿ ಕರೀ ।
ಕರೀ ಆಣಿ ವಿವರೀ । ಯಥಾಯೋಗ್ಯ ॥೨೧॥
ಪುಢೇ ಸಂಹಾರ ನಿರೋಪಿಲಾ । ಶ್ರೋತೀ ಪಾಹಿಜೆ ಐಕಿಲಾ ।
ಇತುಕ್ಯಾ ಉಪರೀ ಜಾಲಾ । ಸಮಾಸ ಪೂರ್ಣ ॥೨೨॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಉಭಾರಣೀ ನಿರೂಪಣ' ನಾಮ ಸಮಾಸ ತೃತೀಯ ॥

ಆದರಿಂದ ನಾನಾ ಪ್ರಕಾರದ ಗಿಡ, ಮರ, ಬಳ್ಳಿ, ನಾನಾ ಬಣ್ಣದ ಎಲೆ ಹೂವು ಮತ್ತು ನಾನಾ ಪ್ರಕಾರದ ರುಚಿ ಇರುವ ಹಣ್ಣುಗಳು ತಯಾರಾದವು. [೧೧] ಅನೇಕ ರಂಗಿನ ಮ ರಸದಿಂದ ತುಂಬಿದ ಎಲೆಗಳು, ಹೂವುಗಳು, ಫಲಗಳು, ಗಡ್ಡೆ ಗೆಣಸುಗಳು, ಇದರಂತೆ ಅನೇಕ ಪ್ರಕಾರದ ತೆನೆಗಳು, ಅನೇಕ ಪ್ರಕಾರದ ಅನ್ನಧಾನ್ಯಗಳೆಲ್ಲವೂ ಆ ಅಂಕುರದಿಂದಲೇ ನಿರ್ಮಾಣವಾಗುವವು. [೧೨] ಅನ್ನದಿಂದ ರಕ್ತ, ರಕ್ತದಿಂದ ವೀರ್ಯ ಉತ್ಪನ್ನವಾಗುವದು ಮತ್ತು ವೀರ್ಯದಿಂದ ಪ್ರಾಣಿಗಳು ಹುಟ್ಟುವವು. ಇದಾದರೋ ಜೀವ ಉತ್ಪತ್ತಿಯ ಬಗ್ಗೆ ಪ್ರತ್ಯಕ್ಷ ಕಂಡ ಅನುಭವವೇ ಇರುವದು. [೧೩] ಅಂಡಜ (ತತ್ತಿಯಿಂದ), ಜಾರಜ [ಮೈಥುನದಿಂದ], ಸ್ವೇದಜ (ಬೆವರಿನಿಂದ), ಉದ್ಭಿಜ (ಭೂಮಿಯಿಂದ), ಇವು ನಾಲ್ಕೂ ಪ್ರಕಾರದ ಜೀವ ಪ್ರಾಣಿಗಳು ಭೂಮಿ ಮತ್ತು ನೀರು ಇವುಗಳಿಂದ ಹುಟ್ಟುವವು. ಅರ್ಥಾತ್ ಇವೇ ಬೀಜ ಭೂತವಿರುವವು. ಹೀಗಿವೆ ಸೃಷ್ಟಿ ರಚನೆಯ ರೀತಿ, ಎಷ್ಟು ವಿಚಿತ್ರವಾಗಿದೆ? ಎಷ್ಟು ಕೌತುಕಾಸ್ಪದವಾದದ್ದಿರುವದು. [೧೪] ನಾಲ್ಕು ಖಾಣಿ, ನಾಲ್ಕು ವಾಣಿ, ೮೪ ಲಕ್ಷ ಜೀವಯೋನಿ, ಮೂರು ಲೋಕ ಮತ್ತು ಯಾವತ್ತೂ ಪಿಂಡ ಬ್ರಹ್ಮಾಂಡ ಇವೆಲ್ಲವೂ ಈ ರೀತಿಯಲ್ಲಿ ನಿರ್ಮಾಣವಾದವು. [೧೫] ಎಲ್ಲದರ ಮೂಲವು ಅಷ್ಟಧಾ ಪ್ರಕೃತಿ ಇರುವದು. ಇದರಲ್ಲಿಯ ಪಂಚಭೂತಗಳಲ್ಲಿ ನೀರು ಇರುವದು ಆ ನೀರಿನಿಂದ ಯಾವತ್ತೂ ಜೀವಗಳು ಜನ್ಮ ಹೊಂದುವವು. ನೀರು ಸಿಗದಿದ್ದರೆ ಎಲ್ಲ ಪ್ರಾಣಿಗಳೂ ಸಾಯುವವು. [೧೬] ಇದೇನೂ ಸುಮ್ಮನೆ ಕಲ್ಪನೆಯ ಮಾತಲ್ಲ. ನೀರಿನಿಂದ ಯಾವತ್ತೂ ಜೀವ ಜನ್ಮತಳೆಯುವವು. ಇದರ ಅನುಭವ ತೆಗೆದುಕೊಂಡು ನೋಡಿರಿ. ವೇದ, ಶಾಸ್ತ್ರ, ಪುರಾಣ ಇವನ್ನೆಲ್ಲ ನೋಡಿ ಪ್ರತ್ಯಕ್ಷ ಅನುಭವ ಹೊಂದಿ ಸ್ವೀಕರಿಸಿರಿ. [೧೭] **ಪ್ರಪಂಚದಲ್ಲಿ ಮತ್ತು ಪರಮಾರ್ಥದಲ್ಲಿ ಎಲ್ಲಕಡೆಗೂ ಪ್ರತ್ಯಕ್ಷ ಅನುಭವ ಬರದ ಹೋತು ಯಾವುದೇ ಸಿದ್ಧಾಂತವನ್ನು ಸ್ವೀಕಾರ ಮಾಡಬೇಡಿರಿ:-** ಯಾವುದೇ ಮತ ಅಭಿಪ್ರಾಯ, ಅಥವಾ ಯಾವುದೇ ಸಿದ್ಧಾಂತವು ನಿಮ್ಮ ಅನುಭವಕ್ಕೆ ಬರುವದಿಲ್ಲವೋ, ಪ್ರತ್ಯಕ್ಷ ಅನುಭವದ ಪರೀಕ್ಷೆಯಲ್ಲಿ ಇಳಿಯುವದಿಲ್ಲವೋ ಅದನ್ನು ಅನುಮಾನದಿಂದ ಸ್ವೀಕಾರ ಮಾಡಬೇಡಿರಿ. ಜೀವನದಲ್ಲಿ ಮ ವ್ಯವಹಾರದಲ್ಲಿ ಮನುಷ್ಯನಿಗೆ ನಿರ್ಣಯ ಪಡೆಯಬೇಕಾದರೆ ಪ್ರತ್ಯಕ್ಷ ಅನುಭವದ ಹೊರತಾಗಿ ಎರಡನೆಯ ಸಾಧನವಿಲ್ಲ. [೧೮] ಉದ್ಯೋಗ ವ್ಯವಹಾರವು ಪ್ರಪಂಚದ್ದಿರಲಿ, ಅಥವಾ ಪರಮಾರ್ಥದ್ದಿರಲಿ ಎರಡೂ ಕಡೆಗೆ ಅನುಭವ ಪ್ರಚೀತಿ ಬೇಕೇ ಬೇಕು. ಅನುಭವ ತೆಗೆದುಕೊಳ್ಳದೇ ಕೇವಲ ಕಲ್ಪನೆಯಿಂದ ಯಾರು ನಡೆಯುವರೋ ಅವರು ವಿವೇಕ ಹೀನರಾಗಿ ತಾರತಮ್ಯರಹಿತರಾಗುವರು. [೧೯] ಇಲ್ಲಿಯವರೆಗೆ ವಿಶ್ವರಚನೆ ಹೇಗೆ ಆಗುವದು. ಇದರ ಬಗ್ಗೆ ಸ್ವಲ್ಪದರಲ್ಲಿ ವರ್ಣನೆ ಮಾಡಿ ಹೇಳಿದ್ದಾಯಿತು. ಈಗ ಈ ನಿರ್ಮಾಣಗೊಂಡ ವಿಶ್ವ ವಿಸ್ತಾರವು ಹೇಗೆ ಸಂಹಾರವಾಗುವದು? ಇದನ್ನು ಹೇಳುವೆ ಕೇಳಿರಿ. [೨೦] ಆಗದೀ ಆರಂಭದಿಂದ ಕೊನೆಯವರೆಗೆ ಯಾವತ್ತನ್ನೂ ಒಬ್ಬ ಅಂತರಾತ್ಮನೇ ಮಾಡುತ್ತಾನೆ. ಮಾಡುವವನು ಅವನೇ ಇದ್ದು ಹೇಗೆ ಮಾಡಿದನೋ ಅದರಂತೆಯೇ ಅವನೇ ಎಲ್ಲದರ ವಿಸ್ತಾರ, ಉಲಗಡಾ ಮಾಡುವವನೂ ಬಗೆಹರಿಸುವವನೂ ಅವನೇ ಇರುವನು. [೨೧] ಮುಂದಿನ ಸಮಾಸದಲ್ಲಿ ಸಂಹಾರ ವಿಷಯ ಹೇಳುವೆವು. ಅದನ್ನು ಅವಶ್ಯವಾಗಿ ಕೇಳಿರಿ. ಇಲ್ಲಿಗೆ ಈ ಸಮಾಸ ಮುಗಿಯಿತು. [೨೨]

ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಹದಿಮೂರನೆ ದಶಕದೊಳಗಿನ
"ಉಭಾರಣಿ ನಾಮ ನಿರೂಪಣ"ವೆಂಬ ಮೂರನೆಯ ಸಮಾಸವು ಮುಗಿದುದು

● ●

ದಶಕ ತ್ರಯೋದಶ : ಸಮಾಸ ಚತುರ್ಥ : ಪ್ರಲಯ ನಿರೂಪಣ

॥ಶ್ರೀರಾಮ॥ ಪೃಥ್ವೀಸ ಹೋಈಲ ಅಂತ । ಭೂತಾಸ ಮಾಂಡೇಲ ಕಲ್ಪಾಂತ ।
ಐಸಾ ಸಮಾಚಾರ ಸಾದ್ಯಂತ । ಶಾಸ್ತ್ರೀಂ ನಿರೋಪಿಲಾ ॥೧॥
ಶತ ವರುಷೇ ಅನಾವೃಷ್ಟಿ । ತೇಣೇ ಜಳೀಲ ಹೇ ಸೃಷ್ಟಿ ।
ಪರ್ವತ ಮಾತೀ ಐಸೀ ಪೃಷ್ಮೀ । ಭೂಮೀಚೀ ತರಕೇ ॥೨॥
ಬಾರಾ ಕಳೀ ಸೂರ್ಯ ಮಂಡಳಾ । ಕಿರ್ಣಾಪಾಸೂನ ನಿಘತೀಜ್ವಾಳಾ ।
ಶತ ವರುಷೇ ಭೂಗೋಳಾ । ದಹನ ಹೋಯೆ ॥೩॥
ಸಿಂಧುರವರ್ಣ ವಸುಂಧರಾ । ಜ್ವಾಳಾ ಲಾಗತೀ ಫಣಿವರಾ ।
ತೋ ಆಹಾಳೋನ ಸರಾರಾ । ವಿಷ ವಮೀ ॥೪॥
ತ್ಯಾ ವಿಷಾಚ್ಯಾ ಜ್ವಾಳಾ ನಿಘತೀ । ತೇಣೇ ಪಾತಾಳೇ ಜಳತೀ ।
ಮಹಾಪಾವಕೇ ಭಸ್ಮ ಹೋತೀ । ಪಾತಾಳ ಲೋಕ ॥೫॥
ತೇಥೇ ಮಹಾಭೂತೇ ಖವಳತೀ । ಪ್ರಳಯೆವಾತ ಸುಟತೀ ।
ಪ್ರಳಯೋ ಪಾವಕ ವಾಢತೀ । ಚಹುಕಡೆ ॥೬॥
ತೇಥೇ ಅಕ್ರಾ ರುದ್ರ ಖವಳಲೇ । ಬಾರಾ ಸೂರ್ಯ ಕಡಕಡಿಲೇ ।
ಪಾವಕಮಾತ್ರ ಯೇಕವಟಲೇ । ಪ್ರಳಯೋ ಕಾಳೀ ॥೭॥
ವಾಯೋ ವಿಜಾಂಚೆ ತಡಾಖೇ । ತೇಣೇಂ ಪೃಥ್ವೀ ಅವಘೀಂ ತರಖೇ ।
ಕಠಿಣತ್ವ ಅವಘೇಚಿ ಫಾಂಕೇ । ಚಹೂಕಡೆ ॥೮॥
ತೇಥೇ ಮೇರೂಚೀ ಕೋಣ ಗಣನಾ । ಕೋಣ ಸಾಂಭಾಳಿಲ ಕೋಣಾ ।
ಚಂದ್ರ ಸೂರ್ಯ ತಾರಾಂಗಣಾ । ಮೂಸ ಜಾಲೀ ॥೯॥
ಪೃಥ್ವೀನೇ ವಿರೀ ಸಾಂಡಿಲೀ । ಅವಘೀ ಧಗಧಗಾಯೆಮಾನ ಜಾಲೀ ।
ಬ್ರಹ್ಮಾಂಡಭಟೀ ಜಳೋನ ಗೇಲೀ । ಯೇಕಸರಾ ॥೧೦॥

# ದಶಕ ೧೩. ಸಮಾಸ ೪. ಪ್ರಳಯ ನಿರೂಪಣ (ನುಡಿ ೨೪)

ವಿಶ್ವದ ಉತ್ಪತ್ತಿಯು ಯಾವ ಕ್ರಮದಿಂದ ಆಯಿತೋ ಸಂಪೂರ್ಣ ಅದರ ವಿರುದ್ಧವಾಗಿ ಸಂಹಾರದ ಕ್ರಮ ಇರುವದು. ಪ್ರಥಮದಲ್ಲಿ ಭೂಮಿಯು ನೀರಿನಲ್ಲಿ ಕರಗಿ ಹೋಗುವದು. ನೀರು ತೇಜದಲ್ಲಿ ಆಟ್ಟಿಸಿ ಹೋಗುವದು. ತೇಜವು ವಾಯುವಿನಲ್ಲಿ ಹೋಗುವದು. ವಾಯು ಆಕಾಶದಲ್ಲಿ ಶಾಂತವಾಗಿ ಬಿಡುವನು. ಆಕಾಶವು ಪ್ರಕೃತಿಯಲ್ಲಿ ಇಲ್ಲದಾಗುವದು. ಮತ್ತು ಪ್ರಕೃತಿಯು ಮೂಲ ಮಾಯೆಯಲ್ಲಿ ಗುಪ್ತವಾಗಿ ಬಿಡುವದು. ಕೊನೆಗೆ ಶಾಶ್ವತ ಅಖಂಡವೆನಿಸಿದ ಕೇವಲ ಬ್ರಹ್ಮವೊಂದೇ ಶಿಲುಕು ಉಳಿಯುವದು.

## ದಶಕ ೧೩ : ಸಮಾಸ ೪ : ಪ್ರಳಯ ನಿರೂಪಣ (ನುಡಿ ೨೪)

**ಕಲ್ಪಾಂತ್ಯದ ವರ್ಣನೆ ಈ ಮೊದಲು ಬಂದು ಹೋಗಿದೆ. ಅದನ್ನೇ ಪುನಃ ಸ್ವಲ್ಪದರಲ್ಲಿ ಹೇಳುತ್ತಾರೆ:—** ಸಂಹಾರ ಕಾಲದಲ್ಲಿ ಮೊದಲಿಗೆ ಪೃಥ್ವಿಯ [ಭೂಮಿಯು] ಅಂತ್ಯವಾಗುವದು. ಮತ್ತು ಪಂಚ ಭೂತಗಳ ಕಲ್ಪಾಂತವಾಗುವದು. (ನಾಶವಾಗುವದು). ಇದರ ಬಗ್ಗೆ ಸವಿಸ್ತಾರ ಮಾಹಿತಿ ಶಾಸ್ತ್ರಗಳಲ್ಲಿ ಹೇಳಿರುತ್ತಾರೆ. [೧] ನೂರು ವರ್ಷ ಮಳೆ ಬೀಳದ್ದರಿಂದ ಸೃಷ್ಟಿಯು ಸುಡಲಿಕ್ಕೆ ಹತ್ತುವದು. ಭೂಮಿಯಲ್ಲಿ ಪರ್ವತಗಳು ಅಡಗುವವು. ಪರ್ವತ ಕಾಣದಷ್ಟು ಭೂಮಿಯಲ್ಲಿ ಬಿರುಕು ಬಿಡುವದು. [೨] ಮತ್ತು ಆಗ, ೧]ಧಾತು, ೨]ಮಿತ್ರ ೩] ಆರ್ಯಮನ್ ೪] ರುದ್ರ ೫] ವರುಣ ೬] ಸೂರ್ಯ ೭] ಭಗ ೮] ವಿವಸ್ವತ್ ೯] ಪೂಷನ್ ೧೦] ಸವಿತ್ರು ೧೧] ತ್ವಷ್ಟ್ರ ೧೨] ವಿಷ್ಣು ಅನ್ನುವ ಸೂರ್ಯನ ಹನ್ನೆರಡು ಕಲೆಗಳಲ್ಲಿಯ ಕಿರಣಗಳಿಂದ ಪ್ರಖರ ಜ್ವಾಲೆಗಳು ಹೊರ ಬಿದ್ದು ಬರುವವು. ಮತ್ತು ಇವುಗಳಿಂದ ನೂರು ವರ್ಷಗಳವರೆಗೆ ಭೂಮಿ [ಪೃಥ್ವಿ] ಸುಡುತ್ತಲಿರುವದು. [೩] ಪೃಥ್ವಿಯು ಸುಡುತ್ತಿರುವಾಗ ಆ ಜ್ವಾಲೆಯ ಬಣ್ಣ ಸಿಂಧೂರ(ಕೇಸರಿ)ಬಣ್ಣದ್ದಾಗಿರುವದು. ಈ ಸಿಂಧೂರ ಬಣ್ಣದ ಜ್ವಾಲೆಯ ಝಳವು ಆದಿಶೇಷನವರೆಗೂ ಹೋಗುವದು. ಆ ಜ್ವಾಲಾ ಝಳದಿಂದ ಶೇಷನು ಸುಡುವನು. ಆಗ ಬಹಳಷ್ಟು ವಿಷಕಾರುವನು. [೪] ಆ ವಿಷದಿಂದ ಜ್ವಾಲೆಗಳು ಮತ್ತಷ್ಟು ಉಗ್ರವಾಗಿ ಅದರಿಂದ ಪಾತಾಳ ಲೋಕವು ಸುಡಹತ್ತುವದು. ಮಹಾ ಅಗ್ನಿಯ ಈ ಪ್ರಚಂಡ ಜ್ವಾಲೆಯ ಸಂಬಂಧದಿಂದಾಗಿ ಪಾತಾಳ ಲೋಕವೇ ಭಸ್ಮವಾಗಿ ಬಿಡುವದು. [೫] ಆ ಮೇಲೆ ಮಹಾ ಭೂತಗಳು ಖತಿಗೊಳ್ಳುವವು. ಕ್ಷುಬ್ಧವಾಗುವವು. ಆಗ ಪ್ರಳಯ ವಾಯು [ಗಾಳಿ] ಬೀಸಹತ್ತುವದು. ಅಗ್ಗೆ ಪ್ರಳಯಾಗ್ನಿಯೂ ಪ್ರಕ್ಷುಬ್ಧಗೊಂಡು ಉರಿದೇಳುವದು. ಹೀಗೆ ಎರಡೂ ಉಕ್ಕೇರಿ ಎಲ್ಲವನ್ನೂ ವ್ಯಾಪಿಸಿ ಬಿಡುವದು [೬] ಆ ಹೊತ್ತಿಗೆ ೧) ರೈವತ ೨) ಅಜ ೩) ಭೀಮ ೪) ಭವ ೫) ವಾಮ ೬) ವೃಷಾಕಪಿ ೭) ಅಜೈಕಪಾಲ ೮) ಉಗ್ರ ೯) ಅಹಿರ್ಬುಧ್ನ್ಯ ೧೦) ಬ್ರಹ್ಮರೂಪ ೧೧) ಮಹಾನ್ ಎಂಬ ಹನ್ನೊಂದು ರುದ್ರರು ಉರಿದೇಳುವರು. ಹಾಗೂ ಹನ್ನೆರಡು ಸೂರ್ಯರೂ ಕ್ಷುಬ್ಧರಾಗಿ ಧಗಧಗಿಸುವರು. ಈ ರೀತಿಯಲ್ಲಿ ಪ್ರಳಯ ಕಾಲ ಸನ್ನಿಹಿತವಾಯಿತೆಂದು [೭] ಅಗ್ನಿಗಳು ಅಂದರೆ ಜೀವದ ದೇಹದಲ್ಲಿರುವ ಜಠರಾನಳ, ೨] ಸಮುದ್ರದಲ್ಲಿಯ ವಡವಾನಳ ೩] ಶಿವನ ನೇತ್ರದಲ್ಲಿಯ ವಿದ್ಯುಲ್ಲತಾಗ್ನಿ ೪] ಭೂಗೋಲದ ಹೊರಗಿನ ಆವರಣಾನಳ ಇದರ ಶಿವಾಯ ಅಗ್ನಿ ಸರ್ಪಾದಿ ಪ್ರಾಣಿಗಳಲ್ಲಿರುವ ಅಗ್ನಿತೇಜ ಇತ್ಯಾದಿ ಎಲ್ಲ ಅಗ್ನಿಗಳೂ ಏಕತ್ರವಾಗಿ ಆರ್ಭಟಿಸುತ್ತ ಬರುವವು. [೮] ಗಾಳಿ ಮತ್ತು ಸಿಡಿಲು ಇವುಗಳ ಹೊಡೆತ ಬೀಳಲು ಇವರ ಯೋಗದಿಂದ ಎಲ್ಲ ಪೃಥ್ವಿ ಒಮ್ಮೆಂದೊಮ್ಮೆಲೇ ಸೀಳು ಬಿಡುವದು. ಘರ್ಷಣೆ ಆಗಿ ಹೋಳಾಗುವದು. ಪೃಥ್ವಿಯ ಕಠಿಣತೆಯು ನಾಲ್ಕೂ ಕಡೆಗೆ ಹರಡುವದು. (ಪಸರಿಸುವದು). [೯] ಆಗ ಮೇರು ಪರ್ವತದ ಕಿಮ್ಮತ್ತು ಉಳಿಯುವದಿಲ್ಲ. ಯಾರು ಯಾರನ್ನು ರಕ್ಷಿಸಬಲ್ಲರು? ಸಂಭಾಳಿಸಬಲ್ಲರು? ಅರ್ಥಾತ್ ಇಲ್ಲ. ಸಾಧ್ಯವೇ ಇಲ್ಲ. ಚಂದ್ರ, ಸೂರ್ಯ, ನಕ್ಷತ್ರ ಇವೆಲ್ಲವುಗಳು ಒಂದೇ ಮುದ್ದಿಯಾಗಿ ಬಿಡುವವು. [೧೦] ಪೃಥ್ವಿಯು ತನ್ನ ಕಠಿಣತೆಯನ್ನು ಕಳೆದುಕೊಂಡು ಪುಡಿಪುಡಿ[ಭಾಡಿ]ಯಾಗಹತ್ತುವದು. ಮತ್ತು ಉಷ್ಣತೆಯಿಂದ ಧಗಧಗಿಸುತ್ತಿ ಬ್ರಹ್ಮಾಂಡವೇ ಹೊತ್ತಿ ಉರಿಯುವ ಪ್ರಜ್ವಲಿತ ಭಟ್ಟಿಯಲ್ಲಿ ಇದು [ಪೃಥ್ವಿಯು]ಒಮ್ಮೆಲೇ ಸಂಪೂರ್ಣ ಸುಟ್ಟು ಹೋಗುವದು.[೧೦]

ಜಳೋನಿ ವಿರೀ ಸಾಂಡಿಲೀ । ವಿಶೇಷ ಮಹಾವೃಷ್ಟೀ ಜಾಲೀ ।
ತೇಣೇ ಪೃಥ್ವೀ ವಿರಾಲೀ ॥ ಜಳಾಮಧೇ ॥೧೧॥
ಭಾಜಲಾ ಚುನಾ ಜಳೀ ವಿರೇ । ತೈಸಾ ಪೃಥ್ವೀಸ ಧೀರ ನ ಧರೇ ।
ವಿರೀ ಸಾಂಡೂನಿಯಾ ತ್ವರೇ । ಜಳೀ ಮಿಳಾಲೀ ॥೧೨॥
ಶೇಷ ಕೂರ್ಮ ವಾರ್‍ಹಾವ ಗೇಲಾ । ಪೃಥ್ವೀಚಾ ಆಧಾರ ತುಟಲಾ ।
ಸತ್ವ ಸಾಂಡೂನ ಜಳಾಲಾ । ಮಿಳೋನ ಗೇಲೀ ॥೧೩॥
ತೇಥೇ ಪ್ರಳಯಮೇಘ ಉಚಲಲೇ । ಕಠಿಣ ಘೋಷೇ ಗರ್ಜಿನಲೇ ।
ಅಖಂಡ ವಿಜಾ ಕಡಕಡಿಲೇ । ಧ್ವನಿ ಘೋಷ ॥೧೪॥
ಪರ್ವತಪ್ರಾಯ ಪಡತೀ ಗಾರಾ । ಪರ್ವತ ಉಡತೀ ಐಸಾ ವಾರಾ ।
ನಿಬಿಡ ತಯಾ ಅಂಧಕಾರಾ । ಉಪಮಾ ಚಿ ನಾಹೀ ॥೧೫॥
ಸಿಂಧು ನದ್ಯಾ ಏಕವಟಲ್ಯಾ । ನೇಣೋ ನಭೀಹೂನ ರಿಚವಲ್ಯಾ ।
ಸಂಧಿ ಚ ನಾಹೀ ಧಾರಾ ಮಿಳಾಲ್ಯಾ । ಅಖಂಡ ಪಾಣೀ ॥೧೬॥
ತೇಥೇ ಮಥ ಕೂರ್ಮ ಸರ್ಪ ಪಡತೀ । ಪರ್ವತಾಸಾರಿಖೇ ದಿಸತೀ ।
ಗರ್ಜನಾ ಹೋತಾ ಮಿಸಳತೀ । ಜಳಾತ ಜಳೇ ॥೧೭॥
ಸಪ್ತ ಸಿಂಧು ಆವರ್ಣೀ ಗೇಲೆ । ಆವರ್ಣವೇಡೆ ಮೋಕಳೆ ಜಾಲೆ ।
ಜಳರೂಪ ಜಾಲಿಯಾ ಖವಳಲೆ । ಪ್ರಳಯಪಾವಕ ॥೧೮॥
ಬ್ರಹ್ಮಾಂಡಾ ಐಸಾ ತಪ್ತಲೋಹೋ । ಶೋಷೀ ಜಳಾಚಾ ಸಮೂಹೋ ।
ತೈಸೇ ಜಳಾಸ ಜಾಲೇ ಪಾಹೋ । ಮೋಠೆ ಅಪೂರ್ವ ॥೧೯॥
ತೇಣೇ ಆಟೋನ ಗೇಲೇ ಪಾಣೀ । ಅಸಂಭಾವ್ಯ ಮಾಜಲಾ ವನ್ಹೀ ।
ತಯಾ ವನ್ಹೀಸ್ ಕೇಲೀ ಝಾಡಪಣೀ । ಪ್ರಳಯವಾತೇ ॥೨೦॥
ದೀಪಾಸ ಪಾಲವ ಘಾತಲಾ । ತೈಸಾ ಪ್ರಳಯಪಾವಕ ವಿಝಾಲಾ ।
ಪುಢೇ ವಾಯೋ ಪ್ರಬಳಲಾ । ಅಸಂಭಾವ್ಯ ॥೨೧॥
ಉದಂಡ ಪೋಕಳೀ ಥೋಡಾ ವಾರಾ । ತೇಣೇ ವಿತಳೋನ ಗೇಲಾ ಸಾರಾ ।
ಪಂಚಭೂತಾಚಾ ಪಸಾರಾ । ಆಟೋಪಲಾ ॥೨೨॥
ಮಹತದ್ಭೂತ ಮೂಳಮಾಯಾ । ವಿಸ್ಮರಣೇ ವಿತುಳೇ ಕಾಯಾ ।
ಪದಾರ್ಥಮಾತ್ರ ರಾಹಾವಯಾ । ಠಾವ ನಾಹೀ ॥೨೩॥
ದೃಶ್ಯ ಹಲಕಾಲೋಳೇ ನೇಲೇ । ಜಡ ಚಂಚಳ ವಿತುಳಲೇ ।
ಯಾ ಉಪರೀ ಶಾಶ್ವತ ಉರಲೇ । ಪರಬ್ರಹ್ಮ ತೇ ॥೨೪॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಪ್ರಳಯ ನಾಮ' ಸಮಾಸ ಚತುರ್ಥ ॥

ಆ ಮೇಲೆ ಭಯಂಕರವಾದ ವೃಷ್ಟಿಯಾಗುವದು. ಈ ಮಹಾ ಮಳೆಯ ನೀರಿನಲ್ಲಿ ಸುಟ್ಟು ಬೂದಿಯಾದ ಪೃಥ್ವಿ ಕರಗಿ ಹೋಗುವದು. [೧೧] ಭಟ್ಟಿ ಹಾಕಿ ಸುಟ್ಟ ಸುಣ್ಣದ ಹರಳು ನೀರಿನಿಂದಾಗಿ ಕರಗಿ ಹೋಗುವದು. ಇದರಂತೆಯೇ ಪೃಥ್ವಿಯು ಪ್ರಳಯ ಕಾಲದ ಅತಿವೃಷ್ಟಿಯಿಂದಾಗಿ ಕ್ಷಣಾರ್ಧದಲ್ಲಿ ಕರಗಿ ಹೋಗುವದು.[೧೨] ಪೃಥ್ವಿಗೆ ಆಧಾರಸ್ತಂಭರಾದ ಶೇಷ, ಕೂರ್ಮ, ವರಾಹ, ಇವರೆಲ್ಲ ಇದರಲ್ಲಿ ಹೋಗಿ ಬಿಟ್ಟದ್ದರಿಂದ ಪೃಥ್ವಿಯು ತನ್ನ ಕಠಿಣತನವನ್ನು ಬಿಟ್ಟು ಕೊಟ್ಟು ನೀರಿನಲ್ಲಿ ಕರಗಿ ಹೋಗುವದು. [೧೩] ಆ ಮೇಲೆ ಆಕಾಶದಲ್ಲಿ ಪ್ರಳಯ ಕಾಲದ ಪ್ರಚಂಡ ಮೇಘ[ಮೋಡ]ಗಳು ಎದ್ದು ಅವುಗಳ ಸಂಘರ್ಷದಿಂದ ಭಯಂಕರ ಗಡ ಗಡ ಕರ್ಕಶವಾದ ಗರ್ಜನೆ ಆಗ ಹತ್ತಿ ಸಿಡಿಲು ಮಿಂಚು ಗುಡುಗುಗಳ ಖಡ ಖಡಾಟದ ಭಯಂಕರ ಶಬ್ದ[ಆವಾಜ]ಒಂದೇ ಸವನೇ ಆಗುವದು.[೧೪] ಆಗ ಗುಡ್ಡದಂತಹ ಆಣೆಕಲ್ಲುಗಳು ಬೀಳುವವು.ಪರ್ವತಗಳು ಹಾರಿ ಹೋಗುವಂತಹ ಪ್ರಚಂಡ ಗಾಳಿ ಬೀಸಹತ್ತುವದು. ಆಗ ಅತ್ಯಂತ ಕಗ್ಗತ್ತಲೆ ಬೀಳುವದು. ಈ ಕತ್ತಲೆಯು ಸಾಟಿಯೇ ಇಲ್ಲದ ಕತ್ತಲೆಯಾಗಿರುವದು. [೧೫] ಸಮುದ್ರ ನದಿಗಳೆಲ್ಲ ಏಕರೂಪವಾಗಿ ಆಕಾಶದಿಂದ ಒಮ್ಮೆಲೇ ಹರಿದು ಬಂದಂತೆ ಆಗುವದು. ಬೇರೆ ಪ್ರವಾಹಗಳೇ ಇಲ್ಲ. ಈ ಅಪರಂಪಾರ ನೀರೇ ಎತ್ತ ನೋಡಿದತ್ತ ಆಗಿ ಅದರ ಹೊರತಾಗಿ ಬೇರೆ ಯಾವುದೂ ಕಾಣಿಸದಂತಾಗಿ ಬಿಡುವದು. [೧೬] ಅಲ್ಲಿ ಮೀನ, ಆಮೆ, ಸರ್ಪ ಮೊದಲಾದ ಗುಡ್ಡದಂತಹ ಪ್ರಾಣಿಗಳು ಕಾಣಿಸುವವು. ಆದರೆ ಈ ಪ್ರಳಯ ವೃಷ್ಟಿಯ ಗರ್ಜನೆ ಆದ ಕೂಡಲೇ ಇವೆಲ್ಲ ಗರ್ಜಿಸುತ್ತ, ಕೂಗುತ್ತ, ಚಡಪಡಿಸಿ ನೀರಿನಲ್ಲಿ ಕಾಣದಂತೆ ಆಗಿ ಬಿಡುವವು. [೧೭] ಏಳು ಸಮುದ್ರ [ಕ್ಷಾರ, ಕ್ಷೀರ, ಸುರಾ, ಸರ್ಪಿ, [ಘೃತ] ದಧಿ, ಇಕ್ಷು ಮತ್ತು ಜಲ]ಗಳು ಒಂದೇ ಸವನೆ ಬೆಳೆದವು. ಇದರ ಪ್ರವಾಹದ ನೀರು ಆವರಣೋದಕ [ಸುತ್ತೆಲ್ಲ ಇದ್ದ ಅಪರಂಪಾರ] ನೀರಿನ ಪ್ರವಾಹದ ವರೆಗೂ ಬೆಳೆಯಿತು. [ಹೆಚ್ಚಿತು]. ಎರಡೂ ಕೂಡಿದವು. ಇದರಿಂದ ವಿಶ್ವವನ್ನು ಆವರಿಸಿದ ಆವರಣೋದಕವು ಸೀಮೆ ಮೀರಿ ಹೋಗಿ ಎಲ್ಲವೂ ಜಲಮಯವಾದ ನಂತರ ಪ್ರಳಯಾಗ್ನಿಯು ಭುಗಿಲ್ಲೆಂದು ಉರಿದೆದ್ದಿತು. [೧೮] ಕಬ್ಬಿಣವು ಕಾದರೆ ಅದು ಕೆಂಡದ ಉಂಡೆಯಂತೆ ಹೇಗೆ ಕಾಣುವದೋ ಅದರಂತೆ, ವಿಶ್ವವು ಕಾದ ಕೆಂಡದ ಉಂಡೆಯಂತೆ ಆಗಿ ಇದು ಎಲ್ಲ ಕಡೆಗೂ ಭರಪೂರ ತುಂಬಿದ ನೀರನ್ನು ಶೋಷಿಸಿ ಬಿಟ್ಟಿತು.[ನೀರು ಆಟ್ಟಿಸಿ ಹೋಯಿತು]. ನೋಡಿರಿ, ನೀರಿನ ಬಗ್ಗೆ ಆದ ವಿಲಕ್ಷಣ ಮತ್ತು ಚಮತ್ಕಾರ ಹೀಗೆ ಘಟಿಸಿತು. [೧೯] ಪ್ರಳಯಾಗ್ನಿಯಿಂದ ಎಲ್ಲ ನೀರೂ ಆಟ್ಟಿಸಿ ಹೋಗುವದು. ಮತ್ತು ಆ ಮೇಲೆ ಕಲ್ಪನಾ ಮಾಡಲಿಕ್ಕೆ ಬಾರದಷ್ಟು ಪ್ರಮಾಣದಲ್ಲಿ ಬೆಂಕಿ [ಅಗ್ನಿ] ಮಿತಿ ಮೀರಿ ಬಲಿಯುವದು. ಈ ಬೆಂಕಿಯನ್ನು ಪ್ರಳಯ ಕಾಲದ ವಾಯು [ಗಾಳಿ] ಬೀಸಿ ಮುಚ್ಚಿ ಹಾಕಿತು. [೨೦] ಸೀರೆ ಅಥವಾ ಧೋತರದ ಪದರಿನಿಂದ ದೀಪವನ್ನು ಹೇಗೆ ಆರಿಸುವೆವೋ ಅದರಂತೆ ಗಾಳಿಯಿಂದ ಪ್ರಳಯಾಗ್ನಿ ಆರಿ ಹೋಗುವದು. ಆ ಮೇಲೆ ಕಲ್ಪನಾ ಮಾಡಲಿಕ್ಕೆ ಬರದ ರೀತಿಯಲ್ಲಿ ಗಾಳಿ ಭರದಿಂದ ಬೀಸ ಹತ್ತುವದು. [೨೧] ಆದರೆ ಆಕಾಶದಲ್ಲಿ ಅವಕಾಶವುಂಟು. ರಿಕಾಮಿ ಪೊಳ್ಳು ಅನಂತ ಇರುವದು. ಇದರ ಮಾನದಿಂದ ಗಾಳಿ ಅಲ್ಪವೆನಿಸುವದು. ಅದರಿಂದ ಗಾಳಿಯು ಆ ಪೊಳ್ಳಿನಲ್ಲಿ ಸೇರಿ ಕಾಣದಂತಾಗಿ ಬಿಟ್ಟಿತು. ಈ ರೀತಿಯಿಂದ ಪಂಚಭೂತಗಳ ವಿಸ್ತಾರ ಮುರಿದು ಹೋಗುವದು. [೨೨] ಅಂತರಾತ್ಮಾ ಮತ್ತು ಮೂಲಮಾಯಾ ಇವುಗಳಿಗೆ ತಮ್ಮ ಸ್ವತಃದ ಬಗ್ಗೆಯೇ ಮರೆವು ಉಂಟಾಗುವುದು. ಮತ್ತು ಅವುಗಳ ಆಕಾರ, ಅಥವಾ ದೇಹ ಕರಗಿ ಹೋಗುವದು. ಅಲ್ಲಿ ಯಾವುದೇ ನಿರ್ಮಿತ ಪದಾರ್ಥ ಇರಲಿಕ್ಕೆ ಸ್ಥಳವೇ ಇರುವದಿಲ್ಲ [೨೩] ಮೇಲೆ ಹೇಳಿದ ವಿಶ್ವಸಂಹಾರದ [ಧೂಮಕಾಳ]ಗೊಂದಲದಲ್ಲಿ [ಗಡಬಿಡಿಯಲ್ಲಿ] ಯಾವತ್ತೂ ದೃಶ್ಯವು ನಷ್ಟವಾಗುವದು. ಜಡ ಮತ್ತು ಚಂಚಲ ಕರಗಿ ಹೋಗುವವು. ಹೀಗೆ ಎಲ್ಲವೂ ನಾಶವಾದ ಮೇಲೆ ಯಾವುದು ಉಳಿಯುವದೋ ಅದು ಕೇವಲ ಪರಬ್ರಹ್ಮವು. ಇದು ಸದಾ ಸರ್ವಕಾಲ ಶಾಶ್ವತವಿರುವಂತಹದಿರುವದು [೨೪]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹದಿಮೂರನೆಯ ದಶಕದೊಳಗಿನ
"ಪ್ರಳಯ ನಿರೂಪಣ" ಎಂಬ ನಾಲ್ಕನೆಯ ಸಮಾಸವು ಮುಗಿದುದು.

● ●

### ದಶಕ ತ್ರಯೋದಶ : ಸಮಾಸ ಪಂಚಮ : ಕಹಾಣಿ ನಿರೂಪಣ

॥ಶ್ರೀರಾಮ॥ ಕೋಣೇ ಯೇಕ ದೋಘೇ ಜಣ । ಪೃಥ್ವೀ ಫಿರತೀ ಉದಾಸೀನ ।
ಕಾಳಕ್ರಮಣೇ ಲಾಗೂನ । ಕಥಾ ಆರಂಭಿಲೀ ॥೧॥
ಶ್ರೋತಾ ಪುಸೇ ವಕ್ತಯಾಸೀ । ಕಾಹಾಣೀ ಸಾಂಗಾ ಜೀ ಬರವೀಸೀ ।
ವಕ್ತಾ ಮ್ಹಣೇ ಶ್ರೋತಯಾಸೀ । ಸಾವಧ ಏಕೇ ॥೨॥
ಯೇಕೇ ಸ್ತ್ರೀಪುರುಷೇ ಹೋತೀ । ಉಭಯೆತಾಮಧೇ ಬಹುಪ್ರೀತಿ ।
ಯೇಕ ರೂಪೇ ಚಿ ವರ್ತತೀ । ಭಿನ್ನ ನಾಹೀ ॥೩॥
ಏಸಾ ಕಾಹೀ ಯೇಕ ಕಾಳ ಲೋಟಲಾ । ತಯಾಸ ಯೇಕ ಪುತ್ರ ಜಾಲಾ ।
ಕಾರ್ಯಕರ್ತಾ ಆಣೀ ಭಲಾ । ಸರ್ವ ವಿಷೀ ॥೪॥

## ದಶಕ ೧೩. ಸಮಾಸ ೫. ಕಹಾಣಿ ನಿರೂಪಣ (ನುಡಿ ೨೫)

ಈ ಸಮಾಸದಲ್ಲಿ ಸಹ ಇದೇ ವಿಷಯವಿರುವದು. ಅಂದರೆ ವಿಶ್ವದ ಉತ್ಪತ್ತಿ ಮತ್ತು ಸಂಹಾರದ ವಿಷಯವು. ಆದರೆ ಇದನ್ನು ಕಥೆಯ ರೂಪದಲ್ಲಿ ಹೇಳಿರುವರು. ಪ್ರಕೃತಿ ವ ಪುರುಷ ಇವರು ಗಂಡ ಹೆಂಡರಾಗಿದ್ದು ಇವರು ಒಳ್ಳೇ ಪ್ರೇಮದ ಜೋಡಿಯು. ವಿಷ್ಣು ಅಥವಾ ಸತ್ವಗುಣವೇ ಇವರ ಮಗನು. ವಿಷ್ಣುವಿನ ಮಗ ಬ್ರಹ್ಮದೇವ ಅಥವಾ ರಜೋಗುಣವು ಇವನು ಜ್ಞಾನ ವ ಅಜ್ಞಾನದ ಮಿಶ್ರಗುಣದವನು. ಇದರಿಂದ ಇವನು ಉತಾವಳ ಅವಸರಪಡುವ ಉತ್ಸುಕ (ಹವ್ಯಾಸಿ) ಇರುವನು. ವ್ಯಾಪ ಬೆಳೆಸುವದಕ್ಕೆ ಯೋಗ್ಯ ಇರುವನು. ಈ ಬ್ರಹ್ಮದೇವನ ಮಗ ರುದ್ರ ಅಥವಾ ತಮೋಗುಣವು. ಇದು ತಿಳುವಳಿಕೆ ಇಲ್ಲದ್ದು. ಅಜ್ಞಾನವುಳ್ಳದ್ದಿರುವದು. ರುದ್ರನು ಬಹಳ ಸಿಟ್ಟಿನವನು. ತಪ್ಪಿ ನಡೆದರೆ-ತಪ್ಪು ಆದರೆ ಸಂಹಾರ ಮಾಡುವದೇ ಇವನ ಕೆಲಸವಿರುವದು. ತಂದೆಯು ಮೂಲ ಪುರುಷ ಶಿವನು.ತಾಯಿಯು ಮೂಲ ಪ್ರಕೃತಿ ಶಕ್ತಿಯು. ಮಗನು ಸತ್ವಗುಣವುಳ್ಳ ವಿಷ್ಣುವು. ಮೊಮ್ಮಗನು ರಜೋಗುಣವುಳ್ಳ ಬ್ರಹ್ಮದೇವನು. ಮರಿ ಮೊಮ್ಮಗನು ತಮೋಗುಣವುಳ್ಳ ರುದ್ರನು. ಇದೊಂದು ಇಂಥ ಕುಟುಂಬವಿರುವದು. ಮುಂದೆ ಈ ವಂಶ ಬಹಳಷ್ಟು ಬೆಳೆಯಿತು. ಪ್ರಾರಂಭದ ಕಾಲ ಬಹಳಷ್ಟು ಆನಂದದಲ್ಲಿ ಕಳೆಯಿತು. ಅನಂತರ ಈ ವಂಶ ಬೇಸುಮಾರ (ಲೆಕ್ಕ ಹತ್ತದಷ್ಟು) ಬೆಳೆಯಿತು. ಆಗ ಹಿರಿಯರನ್ನು ಯಾರೂ ಮನ್ನಿಸದಾದರು. ತಮ್ಮ ತಮ್ಮೊಳಗಿನ ಜಗಳ ಮೇರೆ ಮೀರಿತು. ಪರಸ್ಪರದಲ್ಲಿ ಸಂಘರ್ಷ(ತಿಕ್ಕಾಟ) ನಿರ್ಮಾಣವಾಗಿ ಅದು ವಿಕೋಪಕ್ಕೆ ಹೋಯಿತು. ಕೊನೆಗೆ ಎಲ್ಲರೂ (ಸರ್ವರೂ) ನಿಃಪಾತವಾದರು. ಹೀಗಾಗಿ ಎಲ್ಲ ವಂಶವೇ ನಿರ್ವಂಶವಾಯಿತು. ಒಳ್ಳೇ ಮೋಜಿನ ಈ ಒಂದು ರೂಪಕವನ್ನು ನಿಮ್ಮ ಮುಂದೆ ಮಂಡಿಸಿ ಶ್ರೀ ಸಮರ್ಥರು ಹೇಳುವದೇನೆಂದರೆ ಇಂಥ ಈ ಕಥೆಯು ಯಾವಾಗಲೂ ಘಟಿಸುವಂಥವಿರುವದು. ಬುದ್ಧಿವಂತರಾದ ಜನರು ಇದನ್ನು ತಿಳಿದುಕೊಳ್ಳಬೇಕು. ಇದರ ಮನನ ಮಾಡಿಕೊಳ್ಳಬೇಕು. ಅನುಭವ ಪಡೆಯಬೇಕು. ತತ್ವದ ಒಗಟನ್ನು ಬಿಡಿಸಿ ತಿಳಿಯಿರಿ. ಮತ್ತು ನಿಃಸಂದೇಹಿಗಳಾಗಿರಿ. ಅಂದರೆ ಆಗ ನಿಮ್ಮ ಪದರಿನಲ್ಲಿ ಸಮಾಧಾನ ಬೀಳುವದು.

### ದಶಕ ೧೩. ಸಮಾಸ ೫. ಕಹಾಣಿ (ಕಥಾ) ನಿರೂಪಣ (ನುಡಿ ೨೫)

ಅನಾಸಕ್ತರಾಗಿ ಜಗದಲ್ಲಿ ಸಂಚರಿಸುವ ಸದ್ಗುರು ಮತ್ತು ಸತ್‌ಶಿಷ್ಯ ಹೀಗೆ ಇಬ್ಬರು ಇರುವರು. ಸಂಚಾರ ಕಾಲದಲ್ಲಿ ಸದ್ಗುರುವು ಸತ್‌ಶಿಷ್ಯನಿಗೆ ವಿಶ್ವದ ಉತ್ಪತ್ತಿ ಮತ್ತು ಸಂಹಾರದ ವಿಷಯವನ್ನು ತಿಳಿಸಿ ಕೊಡುವನು. ಪ್ರಕೃತಿ ವ ಪುರುಷ ಇವರು ಅತ್ಯಂತ ಪ್ರೇಮದ ಗಂಡ ಹೆಂಡಿರು:- ಒಮ್ಮೆ ಇಬ್ಬರು ಮಿತ್ರರು ಜೋಡಿಯಾಗಿ ಜಗದಲ್ಲಿ ಪ್ರವಾಸಕ್ಕೆ ಹೊರಟರು. ಆಗ ಅವರು ಹೊತ್ತುಗಳೆಯಲು ಮತ್ತು ಮನರಂಜನೆಯೂ ಆಗಬೇಕೆಂದು ಗಮ್ಮತ್ತಿನಿಂದ ಒಬ್ಬನು ಇನ್ನೊಬ್ಬನಿಗೆ ಕಥೆ ಹೇಳಲಿಕ್ಕೆ ಆರಂಭಿಸಿದನು. [೧] ಆಗ ಕೇಳುವವನು ಕಥೆ ಹೇಳುವವನಿಗೆ ಅನ್ನುವದೇನಂದರೆ, ಗೆಳೆಯಾ ನೀನು ಒಂದು ಉತ್ತಮವಾದ ಕಥೆಯನ್ನು ಹೇಳು. ಅಂದಾಗ ಹೇಳುವವನು ನಿನಗಿಷ್ಟ ವಾಗುವಂತಹ ಕಥೆಯನ್ನೇ ಹೇಳುವೆ ಆದರೆ ನೀನು ಅಗದೀ ಲಕ್ಷ್ಯಗೊಟ್ಟು ಕೇಳಬೇಕು.[೨] ಸ್ತ್ರೀ ಪುರುಷರ ಜೋಡಿ ಅಂದರೆ ಗಂಡ ಹೆಂಡಿರಿಬ್ಬರು ಇದ್ದರು. ಅವರಿಬ್ಬರಲ್ಲಿಯೂ ಪರಸ್ಪರ ಪ್ರೇಮವಿತ್ತು. ಇವರ ಪ್ರೇಮವು ಬಹಳ ಗಾಢವಾಗಿತ್ತು. ಇಬ್ಬರಲ್ಲಿ ಭಿನ್ನತ್ವವು ಎಳ್ಳಷ್ಟೂ ಇರಲಿಲ್ಲ. ಇಬ್ಬರೂ ಏಕತ್ರರಾಗಿ, ಅಭಿನ್ನರಾಗಿ ನಡೆಯುತ್ತಿದ್ದರು. [೩] ಕಾಲಾಂತರದಲ್ಲಿ ಮೊದಲಿಗೆ ಸತ್ವಗುಣ ಅಂದರೆ ವಿಷ್ಣು ನಿರ್ಮಾಣವಾದನು. ಅನಂತರ ರಜೋಗುಣ ಅಂದರೆ ಬ್ರಹ್ಮದೇವ ನಿರ್ಮಾಣವಾದನು. ಮತ್ತು ಕೊನೆಗೆ ತಮೋಗುಣ ಅಂದರೆ ರುದ್ರ ನಿರ್ಮಾಣವಾದನು. ವಿಷ್ಣುವು ಶುದ್ಧ ಅರಿವಿನ ರೂಪ[ಜ್ಞಾನರೂಪ]ನು. ಬ್ರಹ್ಮ ದೇವ ಜ್ಞಾನ+ಅಜ್ಞಾನ ಮಿಶ್ರಿತನು. ರುದ್ರನು ಅಜ್ಞಾನಮಯ ರೂಪ ಇರುವನು:- ಹೀಗೆ ಬಹುಕಾಲ ಗತಿಸಿತು. ಮತ್ತು ಆಗ ಇವರಿಗೆ ಒಂದು ಗಂಡು ಮಗು ಆಯಿತು. ಅವನ ಹೆಸರು ವಿಷ್ಣು. ಇವನು ಯಾವತ್ತೂ ವಿಷಯದಲ್ಲಿ ಉತ್ತಮ ಮತ್ತು ಸಾತ್ವಿಕನಾಗಿದ್ದು ಬಹುಮೋಲ್ಯ ಕಾರ್ಯಕರ್ತಾ ಇದ್ದನು. [೪]

ಪುಢೇ ತ್ಯಾಸ ಹೀ ಜಾಲಾ ಕುಮರ। ತೋ ಪಿತ್ಯಾಹೂನ ಆತುರ।
ಕಾಂಹೀ ತದರ್ಥ ಚತುರ। ವ್ಯಾಪಕಪಣೇ ॥೫॥

ತೇಣೇ ವ್ಯಾಪ ಉದಂಡ ಕೇಲಾ। ಬಹುತ ಕನ್ಯಾಪುತ್ರ ವ್ಯಾಲಾ।
ಉದಂಡ ಲೋಕ ಸಂಚಿಲಾ। ನಾನಾ ಪ್ರಕಾರೇ ॥೬॥

ತ್ಯಾಚಾ ಪುತ್ರ ಜೇಷ್ಠ। ತೋ ಅಜ್ಞಾನ ಆಣೆ ರಾಗಿಟ।
ಅಥವಾ ಚುಕತಾ ನೀಟ। ಸಂವ್ಹಾರ ಕರೀ ॥೭॥

ಪಿತಾ ಉಗಾ ಚ ಬೈಸಲಾ। ಲೇಕೇ ಬಹುತ ವ್ಯಾಪ ಕೇಲಾ।
ಸರ್ವಜ್ಞ ಜಾಣತಾ ಭಲಾ। ಜೇಷ್ಠ ಪುತ್ರ ॥೮॥

ನಾತು ತ್ಯಾಚೇ ಅರ್ಥ ಜಾಣೆ। ಪಣತು ತೋ ಕಾಹೀಚ ನೇಣೇ।
ಚುಕತಾ ಸಂವ್ಹಾರಣೇ। ಮಹಾಕ್ರೋಧೀ ॥೯॥

ಲೇಕ ಸಕಳಾಚೇ ಪಾಳಣ ಕರೀ। ನಾತು ಮೋಳವೀ ವರಿಚಾವರೀ।
ಪಣತು ಚುಕಲ್ಯಾ ಸಂವ್ಹಾರ ಕರೀ। ಅಕಸ್ಮಾತ ॥೧೦॥

ನೇಮಸ್ತಪಣೇ ವಂಶ ವಾಢಲಾ। ವಿಸ್ತಾರ ಉದಂಡ ಚೀ ಜಾಲಾ।
ಐಸಾ ಬಹುತ ಕಾಳ ಗೇಲಾ। ಆನಂದರೂಪ ॥೧೧॥

ವಿಸ್ತಾರ ವಾಢಲಾ ಗಣವೇನಾ। ವಡಿಲಾಸ ಕೋಣೇ ಚ ಮಾನೀನಾ।
ಪರಸ್ಪರೇ ಕಿಂತ ಮನಾ। ಬಹುತ ಪಡಿಲಾ ॥೧೨॥

ಉದಂಡ ಘರಕಳ್ಹೋ ಲಾಗಲಾ। ತೇಣೇ ಕಿತ್ಯೇಕ ಸಂಹಾರ ಜಾಲಾ।
ವಿಪಟ ಪಡಿಲೇ ಥೋರ ಥೋರಾಲಾ। ಬೇಬಂದ ಜಾಲೇ ॥೧೩॥

ನೇಣಪಣೇ ಭರೀ ಭರಲೇ। ಮಗ ತೇ ಅವಘೇ ಚ ಸಂಹಾರಲೇ।
ಜೈಸೆ ಯಾದವ ನಿಮಾಲೇ। ಉನ್ಮತ್ತಪಣೇ ॥೧೪॥

ಬಾಪ ಲೇಕ ನಾತು ಪಣತು। ಸಕಳಾಚಾ ಜಾಲಾ ನಿಪಾತು।
ಕನ್ಯಾ ಪುತ್ರ ಹೇತು ಮಾತು। ಅಣುಮಾತ್ರ ನಾಹೀ ॥೧೫॥

ಅನಂತರ ವಿಷ್ಣುವಿಗೂ ಮಗ ಹುಟ್ಟಿದನು. ಇವನು ತಂದೆಗಿಂತ ಅಧೀರ, ಚಂಚಲ, ಉತ್ಸುಕ, ಅವಸರ ಪಡುವವನಾಗಿದ್ದನು. ತಂದೆಯು ಅರ್ಧದಷ್ಟು ಜಾಣನಿದ್ದನು. ಇವನ ಹೆಸರು ಬ್ರಹ್ಮದೇವ. ಇವನು ರಜೋಗುಣಿಯು ಇವನು ಉಪಾಧಿಯನ್ನು ಬಹಳಷ್ಟು ಬೆಳೆಸಿದನು. (೫) ಇವನು ಬಹಳಷ್ಟು ವ್ಯಾಪ- ವಿಸ್ತಾರಗೊಳಿಸಿದನು. ಇವನು ಹೆಣ್ಣು ಗಂಡುಗಳ ಸಂತತಿಯನ್ನು ಮಿತಿ ಮೀರಿ ಬೆಳೆಸಿ ಜನಸಂಖ್ಯಾ ವಿಸ್ತಾರಗೊಳಿಸಿದನು. ನಾನಾಪ್ರಕಾರದ ಬಹಳಷ್ಟು ಜನರ ನಿರ್ಮಾಣ ಮಾಡಿದನು. ಇದರಿಂದ ಇವನ ವ್ಯಾಪ ಲೆಕ್ಕವಿಲ್ಲದಷ್ಟು ಅಪಾರ ಬೆಳೆಯಿತು. (೬) ಇವನ ಹಿರಿಯ ಮಗ ರುದ್ರನು. ಇವನು ಬಹಳ ಸಿಟ್ಟಿನವನು. ತಮೋಗುಣಿಯು ಅಜ್ಞಾನಿಯಾಗಿದ್ದನು ಯಾರೇ ಆಗಲಿ ಸ್ವಲ್ಪ ತಪ್ಪು ಮಾಡಿದರೂ ಸಹ ಅವರನ್ನು ಸಂಹಾರ ಮಾಡುವದೇ ಇವನ ಕಾರ್ಯವಾಗಿತ್ತು.[೭] **ಸತ್ವಗುಣಿ,ಅರಿವುಳ್ಳವ ವಿಷ್ಣು ಸರ್ವರ ಪಾಲನ ಪೋಷಣ [ವ ಪರಮಾರ್ಥ ಎರಡನ್ನೂ] ಮಾಡುವನು. ರಜೋಗುಣಿ ಬ್ರಹ್ಮದೇವ ಜ್ಞಾನ-ಅಜ್ಞಾನಗಳ ಸಮ್ಮಿಶ್ರ ಗುಣದವನು. ಇವನು ವಿಶ್ವದ ಖಟಾಟೋಪ [ಸೃಷ್ಟಿಕಾರ್ಯ]ದಲ್ಲಿ ತೊಡಗಿರುವನು. ತಮೋಗುಣಿ, ಅಜ್ಞಾನಿ ರುದ್ರನು [ಶಂಕರ] ಸಂಹಾರ ಕಾರ್ಯ ಮಾಡುವನು:–** ಮೂಲಪುರುಷ ತಂದೆಯು ಸ್ವಸ್ಥ [ಸುಮ್ಮನೆ] ಕುಳಿತನು. ಅವನ ಮಗನು ಅಂದರೆ ವಿಷ್ಣುವು ಬಹಳ ಉಪಾಧಿ-ವ್ಯಾಪ ಮಾಡಿದನು. ಇವನು ಸರ್ವಜ್ಞ. ತಿಳುವಳಿಕೆಯು [ಅರಿವಿದ್ದ] ವ, ಬುದ್ಧಿವಂತ, [ಚಲೋ] ಉತ್ತಮ ಸ್ವಭಾವದವನಿದ್ದನು. ಇವನೇ ಎಲ್ಲರಕಿಂತ ಹಿರಿಯ ಮಗನಾಗಿದ್ದನು. [೮] ಮೊಮ್ಮಗನಾದ ಬ್ರಹ್ಮದೇವನು ಅರ್ಧ ತಿಳಿದವನಿದ್ದನು. ಮತ್ತು ಮರಿ ಮಗ ರುದ್ರನು ಏನೂ ತಿಳಿಯದವನಿದ್ದನು. ಇವನು ಭಯಂಕರ ಸಿಟ್ಟಿನವನೂ ಇದ್ದನು.ಏನಾದರೂ ತಪ್ಪು ಆದಕೂಡಲೇ ಸಂಹಾರ ಮಾಡಲಿಕ್ಕೇ ತಯಾರಾಗುವನು. [೯] ಮಗ ವಿಷ್ಣು ಎಲ್ಲರ ಪಾಲನ ಪೋಷಣ ಮಾಡುವನು. ಮೊಮ್ಮಗ ಬ್ರಹ್ಮದೇವ ಮೇಲಿಂದ ಮೇಲೆ ಪರಸ್ಪರರಲ್ಲಿ ಉಪಾಧಿಯನ್ನು ಉತ್ಪನ್ನ ಮಾಡಿ ಸೃಷ್ಟಿ ಕಾರ್ಯ ನಡೆಸುವನು. ಮತ್ತು ಬೆಳೆಸುವನು. ಮರಿ ಮಗ ರುದ್ರನು ತಪ್ಪಿದವರನ್ನು ತತ್ಕಾಲ ಸಂಹಾರ ಮಾಡುವನು. [೧೦] ಆದರೆ ಮುಂದೆ ಈ ಕುಟುಂಬದ ವಿಸ್ತಾರ ಬಹಳ ಬೆಳೆಯಿತು. ಮೊದಲಿನ ಎಷ್ಟೋ ಕಾಲ ಆನಂದದಲ್ಲಿ ಕಳೆಯಿತು. ಅಂದರೆ ಇದರ ಅರ್ಥವು ಹೀಗೆ:– ಸಂಸ್ಕೃತಿಯ ಬಾಲ್ಯಾವಸ್ಥೆಯಲ್ಲಿ ಮಾನವೀ ಜೀವನ ಬಹಳ ಸುಖಕರವಿತ್ತು. ಮುಂದೆ ಅನೇಕ ವಿದ್ಯೆಗಳು ಬೆಳೆದವು. ಅನೇಕ ಸುಧಾರಣೆಗಳು ಆದವು ಮತ್ತು ಜೀವನವು ತೊಡಕಿನದೂ, ಕಷ್ಟಕರವೂ ಆಯಿತು. ಇದರಿಂದಾಗಿ ಸಂಘರ್ಷ ಬೆಳೆಯಿತು. ಪ್ರೇಮ ಕಡಿಮೆಯಾಯಿತು. ಕೊನೆಗೆ ಯುದ್ಧದ ಕಿಡಿ ಹಾರಿ ದೊಡ್ಡ ಪ್ರಮಾಣದಲ್ಲಿ ಸಂಹಾರವಾಯಿತು:- ಈ ಕುಟುಂಬದಲ್ಲಿ ನಿಯಮಿತವಾಗಿ ವಂಶ ಬೆಳೆಯುತ್ತ ಹೋಯಿತು. ಮತ್ತು ಅಪಾರವಾಗಿ ವ್ಯಾಪವು ವಿಸ್ತಾರವಾಗಿ ಬೆಳೆಯಿತು. ಆದರೂ ಪ್ರಥಮದ ಬಹುಕಾಲವು ಬಹಳ ಆನಂದದಲ್ಲಿ ಕಳೆಯಿತು. [೧೧] ಆದರೆ ಬೆಳವಣಿಗೆ ಯಾವಾಗ ಅಮರ್ಯಾದವಾಗಿ ಬೆಳೆಯಿತೋ ಆಗ ಕಾಲ ಬದಲಾದಂತೆ ಕಂಡು ಬರಹತ್ತಿತು. ಹಿರಿಯರನ್ನು ಯಾರೂ ಕೇಳದಾದರು. ಅವರ ಮಾತನ್ನು ಯಾರೂ ಮನ್ನಿಸದಾದರು. ಮಕ್ಕಳು ದೇವರನ್ನು ಮರೆತರು. ತಮ್ಮ ತಮ್ಮಲ್ಲಿಯ ವಿಶ್ವಾಸ ಹಾರಿತು. ಒಬ್ಬರನ್ನೊಬ್ಬರು ಸಂಶಯದಿಂದ ನೋಡಹತ್ತಿದರು. ಹೀಗಾಗಿ ಅವರಲ್ಲಿಯ ಸಾಮಾಜಿಕ ಸಂಬಂಧವು ಸಡಿಲಾಯಿತು. [ವಿಸ್ಕಳಿತವಾಯಿತು]. [೧೨] ಬಹಳ ದೊಡ್ಡ ಪ್ರಮಾಣದಲ್ಲಿ ಗೃಹ ಕಲಹಗಳು ಬೆಳೆದವು. ಕುಟುಂಬ ಸಂಸ್ಥೆಗೆ [ಹುಳಕು ಹಿಡಿಯಿತು]. ಹಾಳಾಗುವ ಕಾಲವು ಬಂದಂತೆ ಅನಿಸಹತ್ತಿತು. ಇದರಿಂದಾಗಿ ಬಹಳ ಜನ ಬಡಿದಾಡಹತ್ತಿದರು. ಮನೆಯ ದೊಡ್ಡ ದೊಡ್ಡವರಲ್ಲಿಯೇ ಭಿನ್ನಾಭಿಪ್ರಾಯ ಪ್ರಾರಂಭವಾಯಿತು. ಇಷ್ಟು ಪರಿಸ್ಥಿತಿ ಬಂದ ಮೇಲೆ ಅವ್ಯವಸ್ಥೆಯು ಹೆಚ್ಚಾಗಿ ಬೆಳೆಯಿತು. [೧೩] ತಮ್ಮ ನಡವಳಿಕೆಯ ಪರಿಣಾಮ ಇಷ್ಟೊಂದು ಘೋರ ತನಕ್ಕೆ ಹೋದೀತೆಂದು ಇವರಿಗೆ ಅಜ್ಞಾನದಿಂದ ತಿಳಿಯಲೇ ಇಲ್ಲ, ಎಲ್ಲರೂ ಭಾರೀ ವಿನಾಶದ ಹೊಂಡಕ್ಕೆ ಬಿದ್ದರು. ಉನ್ಮತ್ತತನದಿಂದಾಗಿ ಯಾದವರು ದ್ವಾರಕೆಯಲ್ಲಿ ಹೇಗೆ ಸಮೂಲ ನಾಶವಾದರೋ ಅದರಂತೆ ಇಲ್ಲಿಯೂ ಸಹ ಎಲ್ಲರ ಸಂಹಾರವಾಯಿತು. [೧೪] ತಂದೆ, ಮಗ, ಮೊಮ್ಮಗ, ಮರಿಮಗ ಮತ್ತು ಇತರರೆಲ್ಲರ ನಿಃಪಾತವಾಯಿತು. ಇದರಿಂದಾಗಿ ಇವರ ಹೆಣ್ಣು ಮತ್ತು ಗಂಡು ಸಂತಾನ ಮತ್ತು ಅವರ ಬಾಲ ಬಾಲಿಕೆಯರ ಉದ್ದೇಶ [ಹೇತು] ವ ಅವರ ಜೀವನ ಕಥೆ ಇವುಗಳಲ್ಲಿ ಎಳ್ಳಷ್ಟು ಏನೇನೂ ಬಿಲುಕು ಉಳಿಯಲಿಲ್ಲ. ನಿರ್ನಾಮವಾಗಿ ಹೋಯಿತು. [೧೫]

ಐಸೀ ಕಾಹಾಣೀ ಜೋ ವಿವರಲಾ। ತೋ ಜನ್ಮಾಪಾಸೂನ ಸುಟಲಾ।
ಶ್ರೋತಾ ವಕ್ತಾ ಧನ್ಯ ಜಾಲಾ। ಪ್ರಚೀತೀನೇ ॥೧೬॥

ಐಸೀ ಕಾಹಾಣೀ ಅಪೂರ್ವ ಜೀ ತೇ। ಉದಂಡ ವೇಳ ಹೋತ ಜಾತೇ।
ಇತುಕೇ ಬೋಲೋನ ಗೋಸಾವೀ ತೇ। ನಿವಾಂತ ಜಾಲೇ ॥೧೭॥

ಆಮುಚೀ ಕಾಹಾಣೀ ಸರೋ। ತುಮ್ಹಚೀ ಅಂತರೀ ಭರೋ।
ಐಸೇ ಬೋಲಣೇ ವಿವರೋ। ಕೋಣೀತರೀ ॥೧೮॥

ಚುಕತ ವಾಂಕತ ಆಠವಲೇ। ಇತುಕೇ ಸಂಕಳಿತ ಬೋಲಿಲೇ।
ನ್ಯೂನಪೂರ್ಣ ಕ್ಷಮಾ ಕೇಲೇ। ಪಾಹಿಜೆ ಶ್ರೋತೀ ॥೧೯॥

ಐಸೀ ಕಾಹಾಣೀ ನಿರಂತರ। ವಿವೇಕೇ ಐಕತೀ ಜೇ ನರ।
ದಾಸ ಮ್ಹಣೆ ಜಗ್ಗೋದ್ಧಾರ। ತೇ ಚಿ ಕರಿತೀ ॥೨೦॥

ತ್ಯಾ ಜಗೋದ್ಧಾರಾಚೇ ಲಕ್ಷಣ। ಕೇಲೇ ಪಾಹಿಜೆ ವಿವರಣ।
ಸಾರ ನಿವಡಾವೇ ನಿರೂಪಣ। ಯಾಸ ಬೋಲಿಜೇ ॥೨೧॥

ನಿರೂಪಣೀ ಪ್ರತ್ಯಯೋ ವಿವರಾವೇ। ನಾನಾ ತತ್ವಕೋಡೇ ಉಕಲಾವೇ।
ಸಮಜತಾ ಸಮಜತಾ ವ್ಹಾವೇ। ನಿಃಸಂದೇಹ ॥೨೨॥

ವಿವರೋನ ಪಾಹಾತಾ ಅಷ್ಟದೇಹ। ಪುಢೇ ಸಹಜ ಚಿ ನಿಃಸಂದೇಹ।
ಅಖಂಡ ನಿರೂಪಣೇ ರಾಹೆ। ಸಮಾಧಾನ ॥೨೩॥

ತತ್ವಾಚಾ ಗಲ್ಬಲಾ ಜೇಥೇ। ನಿವಾಂತ ಕೈಚೇ ಅಸೇಲ ತೇಥೇ।
ಯಾಕಾರಣೇ ಗುಲ್ಲೀಪರತೇ। ಕೋಣೇ ಯೇಕೇ ಅಸಾವೇ ॥೨೪॥

ಐಸಾ ಸೂಕ್ಷ್ಮ ಸಂವಾದ। ಕೇಲಾ ಚಿ ಕರಾವಾ ವಿಶದ।
ಪುಢಿಲೇ ಸಮಾಸೀ ಲಘುಬೋಧ। ಸಾವಧ ಐಕಾ ॥೨೫॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಕಹಾಣೀ ನಿರೂಪಣ' ನಾಮ ಸಮಾಸ ಪಂಚಮ ॥

ಈವರೆಗೆ ಈ ವಿಶ್ವದ ಉತ್ಪತ್ತಿಯು ಮತ್ತು ಸಂಹಾರದ ವಿಷಯವನ್ನು ಕಥಾರೂಪದಿಂದ ವರ್ಣನೆ ಮಾಡಲಾಗಿದೆ. ಇದರ ಮೇಲೆ ಮನನ ಮಾಡಬೇಕು. ಮತ್ತು ಮನನವು ಮೂಲ ಮಾಯೆಯವರೆಗೂ ಹೋಗಿ ಮುಟ್ಟಬೇಕು:- ನಾನು ಹೇಳಿದ ಈ ಕಥೆಯು ಬಗ್ಗೆ ಮನನ ಮಾಡುವವರು ಜನ್ಮ ಮರಣದ ಚಕ್ರದಿಂದ ಮುಕ್ತರಾಗುವರು. ಕೇಳುವ ಶ್ರೋತಾಜನ ಮತ್ತು ಹೇಳುವ ವಕ್ತಾ ಇವರೂ ಸ್ವಾನುಭವದಿಂದ ಧನ್ಯರಾಗಿ ಹೋಗುವರು.(೧೬) ಈ ಕಥೆ ಬಹಳ ಅಪೂರ್ವವಿರುವದು. ಇದು ಯಾವಾಗಲೂ ಆಗುತ್ತಿರುವಂಥದೇ ಇರುವದು. ಇಷ್ಟು ಹೇಳಿ ಶ್ರೀ ಸಮರ್ಥ ಸ್ವಾಮಿಯು ತನ್ನ ಮಾತನ್ನು ನಿಲ್ಲಿಸಿದನು. (೧೭) ನಾವು ಹೇಳಿದ ಕಥೆಯು ಮುಗಿಯಿತು. ಇದು ತ್ವರೆಯಿಂದ ನಿಮ್ಮ ಅಂತಃಕರಣದಲ್ಲಿ ಪೂರ್ಣವಾಗಿ ತುಂಬಲಿ, ಈ ಕಥೆಯನ್ನು ಯಾರಾದರೂ ಮನನ ಮಾಡಿಕೊಳ್ಳಲಿ. [೧೮] ಅಪ್ಪಿ ತಪ್ಪಿ ನೆನಪಾದಷ್ಟು ಕಥೆಯನ್ನು ಒಂದುಗೂಡಿಸಿ ಹೇಳಿದೆನು. ಹೇಳುವಾಗ ಇದರಲ್ಲಿ ಏನಾದರೂ ಹೆಚ್ಚು ಕಡಿಮೆ ದೋಷವಾಗಿದ್ದರೆ ಇದರ ಸಲುವಾಗಿ ಶ್ರೋತಾಜನ ಕ್ಷಮಾ ಮಾಡಬೇಕು. [೧೯] ಇಂಥ ಈ ಕಥೆಯನ್ನು ಯಾರು ನಿರಂತರವಾಗಿ ಅತ್ಯಂತ ವಿವೇಕದಿಂದ ಕೇಳುವರೋ ಅವರೇ ಜಗದ ಉದ್ಧಾರ ಮಾಡುವರು, ಎಂದು ಶ್ರೀ ರಾಮದಾಸರು ಅನ್ನುವರು, [೨೦] ಈ ಕಥೆಯನ್ನು ಕೇಳಿ ತಿಳಿಯುವ ಜನರಿಗೆ ವಿಶ್ವದ ರಹಸ್ಯ ಸ್ಪಷ್ಟವಾಗಿ ತಿಳಿಯುವದು, ಇವರು ಸ್ವತಃ ಉದ್ಧಾರವಾಗುವರು. ಅಂತೆಯೇ ಇತರರ ಉದ್ಧಾರ ಮಾಡುವ ಸಾಮರ್ಥ್ಯ ಇವರಲ್ಲಿ ಬರುವದು. ಪಿಂಡ ಬ್ರಹ್ಮಾಂಡದ ಎಂಟು ದೇಹ ಇವನ್ನು ಹಿಂದಕ್ಕೆ [ಬಾಜೂಕ್ಕೆ] ಸರಿಸಿ ನಿವಾಂತನಾದ ನಿಶ್ಚಲ ಬ್ರಹ್ಮದ ದರ್ಶನ ಪಡೆಯುವ ಸಾಮರ್ಥ್ಯವನ್ನು ತಂದುಕೊಡುವದೇ ಜಗತ್ತಿನ ಉದ್ಧಾರವಿರುವದು:- ಜಗತ್ತಿನ ಉದ್ಧಾರ ಅಂದರೇನು? ಇದರ ವಿವೇಚನ ಮಾಡುವದು ಅಗದೀ ಅವಶ್ಯವಿರುವದು. ಸಾರ-ಅಸಾರ ಇದರ ಮಿಶ್ರಣದೊಳಗಿಂದ ಸಾರವನ್ನು ತಥ್ಯಾಂಶ ಅಥವಾ ಸತ್ಯವನ್ನು ಮಾತ್ರ ಆರಿಸಿಕೊಂಡು ಅಸಾರವನ್ನು ಬಿಟ್ಟು ಬಿಡುವದಕ್ಕೆ ವೇದಾಂತ ಅದ್ವೈತ ಚರ್ಚೆಯ ಪ್ರವಚನಕ್ಕೆ ನಿರೂಪಣವೆನ್ನುವರು. [೨೧] ಮನುಷ್ಯರು ನಿರೂಪಣವನ್ನು ಕೇಳಬೇಕು. ತಾವು ಕೇಳಿದ್ದನ್ನು ಮನನ ಮಾಡಿ ಅದರ ಪ್ರತ್ಯಕ್ಷ ಅನುಭವ ಪಡೆಯಬೇಕು. ಅದನ್ನೇ ಉತ್ತಮ ರೀತಿಯಿಂದ ತಿಳಿಯುವ ಪ್ರಯತ್ನ ಮಾಡಬೇಕು. ಅಂದಾಗ ವಿಶ್ವರಚನೆಯಲ್ಲಿ ಕಂಡು ಬರುವ ಅನೇಕ ತತ್ವಗಳ ಕಗ್ಗಂಟು [ತೊಡಕು] ಬಿಟ್ಟು ಎಲ್ಲದರ ಮರ್ಮ ಅರಿವಾಗುವದು. ಆಮೇಲೆ ವಿಷಯದ ಮರ್ಮ [ಕಥೆಯ ಮರ್ಮ] ತಿಳಿಯುತ್ತಾ, ತಿಳಿಯುತ್ತಾ ಸಂಪೂರ್ಣವಾಗಿ ಸಂದೇಹ ರಹಿತರಾಗಿ ಹೋಗುವಿರಿ. [೨೨] ಪಿಂಡ ಮತ್ತು ಬ್ರಹ್ಮಾಂಡ ಕೂಡಿ ಎಂಟು ದೇಹಗಳು ಇರುವವು. ಇವುಗಳ ವಿವರ ವಿವೇಚನೆ ಮಾಡಿದ್ದಾದರೆ ಮನುಷ್ಯನಿಗೆ ತನ್ನಿಂದ ತಾನೇ ನಿಃಸ್ಸಂದೇಹತೆ ಬರುವದು. ಸಾರರೂಪ ಬ್ರಹ್ಮ ಕೈಗೆ ಹತ್ತುವದರಿಂದ ಅಖಂಡ ಸಮಾಧಾನದ ಪ್ರಾಪ್ತಿಯಾಗುವದು. [೨೩] ಎಲ್ಲಿ ತತ್ವದ ಗಡಿಬಿಡಿ, ಗೊಂದಲ ಘೋಟಾಳೆ ಇರುವದೋ ಅಲ್ಲಿ ಅಂದರೆ ತತ್ವದ ಗೊಂದಲದಲ್ಲಿ ತೊಡಗಿದವನಿಗೆ ಶಾಂತಿ ಸಮಾಧಾನಇರುವದು ಶಕ್ಯವಿಲ್ಲ. ಆದ್ದರಿಂದ ಯಾರಿಗೆ ನಿಜವಾದ ಸಮಾಧಾನ ಬೇಕಾಗಿರುವದೋ,ಅವರು ಈ ಗೊಂದಲ ಗಡಿಬಿಡಿಯನ್ನುದಾಟಿ ಇರಬೇಕು. ಇದು ಅವಶ್ಯವು. [೨೪] ಇಂಥ ಈ ಸೂಕ್ಷ್ಮ ವಿವೇಚನವನ್ನು ಮೇಲಿಂದ ಮೇಲೆ ವಿವೇಕದಿಂದ ಸ್ಪಷ್ಟ ಮಾಡಿಕೊಂಡು ತಿಳಿಯಬೇಕು. ಮುಂದಿನ ಸಮಾಸದಲ್ಲಿ ಲಘುಬೋಧ ಹೇಳುವವನಿರುವೆನು. ಅದನ್ನು ಲಕ್ಷ್ಯಗೊಟ್ಟು ಕೇಳಿರಿ. [೨೫]

ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಹದಿಮೂರನೆ ದಶಕದೊಳಗಿನ
"ಕಹಾಣಿ ನಿರೂಪಣ"ವೆಂಬ ಐದನೆಯ ಸಮಾಸವು ಮುಗಿದುದು

● ●

### ದಶಕ ತ್ರಯೋದಶ : ಸಮಾಸ ಷಷ್ಠಮ : ಲಘುಬೋಧ

॥ಶ್ರೀರಾಮ॥ ಜೇ ಬೋಲಿಲೀ ಪಂಚ ತತ್ವೇಂ । ತ್ಯಾಚೀ ಅಭ್ಯಾಸಾಯಾ ನಾವೇಂ ।
ತದುಪರೀ ಸ್ವಾನುಭವೇಂ । ರೂಪೇಂ ಜಾಣಾವೀಂ ॥೧॥

ಯಾಮಧೇ ಶಾಶ್ವತ ಕೋಣ । ಆಣೀ ಅಶಾಶ್ವತ ಕೋಣ ।
ಐಸೇಂ ಕರಾವೇಂ ವಿವರಣ । ಪ್ರತ್ಯಯಾಚೇಂ ॥೨॥

ಪಂಚಭೂತಾಚಾ ವಿಚಾರ । ನಾನಾರೂಪ ಸಾರಾಸಾರ ।
ತೋ ಚಿ ಬೋಲಿಲಾ ನಿರ್ಧಾರ । ಸಾವಧ ಐಕಾ ॥೩॥

ಪೃಥ್ವೀ ಆಪ್ ತೇಜ ವಾಯೋ ಆಕಾಶ । ನಾವೇಂ ಬೋಲಿಲೀಂ ಸಾವಕಾಸ ।
ಆತಾ ರೂಪಾಚಾ ವಿಶ್ವಾಸ । ಶ್ರವಣೇಂ ಧರಾವಾ ॥೪॥

ಪೃಥ್ವೀ ಮ್ಹಣಿಜೆ ತೇ ಧರಣೀ । ಆಪ ಮ್ಹಣಿಜೆ ತೇ ಪಾಣೀ ।
ತೇಜ ಮ್ಹಣಿಜೆ ಅಗ್ನಿ ತರಣೀ । ಸತೇಜಾದಿಕ ॥೫॥

ವಾಯೋ ಮ್ಹಣಿಜೆ ತೋ ವಾರಾ । ಆಕಾಶ ಮ್ಹಣಿಜೆ ಪೈಸ ಸಾರಾ ।
ಆತಾ ಶಾಶ್ವತ ತೇ ವಿಚಾರಾ । ಆಪಲೇ ಮನೀಂ ॥೬॥

ಯೇಕ ಶೀತ ಚಾಚಪಾವೇಂ । ಮ್ಹಣಿಜೆ ಮರ್ಮ ಪಡೆ ಠಾವೇಂ ।
ತೈಸೇಂ ಥೋಡ್ಯಾ ಅನುಭವೇಂ । ಬಹುತ ಜಾಣಾವೇಂ ॥೭॥

ಪೃಥ್ವೀ ರಚತೇ ಆಣಿ ಖಚತೇ । ಹೇಂ ತೋ ಪ್ರತ್ಯಯಾಸ ಯೇತೇ ।
ನಾನಾ ರಚನಾ ಹೋತ ಜಾತೇ । ಸೃಷ್ಟಿಮಧೇಂ ॥೮॥

## ದಶಕ ೧೩. ಸಮಾಸ ೬. ಲಘುಬೋಧ (ನುಡಿ ೩೧)

ಈ ಸಮಾಸದಲ್ಲಿ ಶ್ರೀ ಸಮರ್ಥರು ಅತ್ಯಂತ ಸ್ವಲ್ಪದರಲ್ಲಿ ಆದರೆ ಸ್ಪಷ್ಟವಾಗಿ ಮತ್ತು ನಿಶ್ಚಿತವಾದ ನಿರ್ಧಾರದ ಸಾಧನೆ ಮತ್ತು ಅದರ ತಾತ್ವಿಕ ಪಾರ್ಶ್ವ ಭೂಮಿ [ಹಿನ್ನೆಲೆ] ಕುರಿತು ಹೇಳಿರುವರು. ಪಂಚಭೂತಗಳ ಯಾವತ್ತು ವಿಸ್ತಾರವು ಸಾಕಾರವಿರುವದು. ಮತ್ತು ಇದೆಲ್ಲವೂ ನಾಶವಂತವಿರುವದು. ಆತ್ಮಾ ಮಾತ್ರ ನಿರಾಕಾರ ಮತ್ತು ಅವಿನಾಶಿ ಇರುವದು. ಮನಸ್ಸಿಗೆ ಯಾವಾಗಲೂ ದೃಶ್ಯವನ್ನು ತಿಳಿಯುವ ಚಟ [ಸವಯ, ರೂಢಿ] ಹತ್ತಿದ್ದರಿಂದ ಇದಕ್ಕೆ [ಮನಕ್ಕೆ] ಆತ್ಮಾವನ್ನು ಹೇಗೆ ತಿಳಿಯಬೇಕೆಂಬುದು ಗೊತ್ತಾಗುವದಿಲ್ಲ. ಅದಕ್ಕಾಗಿ ಸಂತ ಸಾಧುಗಳ ಹತ್ತಿರ ಹೋಗುವದು ಅವಶ್ಯವು. ಆತ್ಮಜ್ಞಾನವಾಗುವದಕ್ಕಾಗಿ ನಿತ್ಯಾನಿತ್ಯ ವಿವೇಕ ಮತ್ತು ಸಾರಾಸಾರ ವಿಚಾರ ಹೇಗೆ ಮಾಡಬೇಕು ಅನ್ನುವದನ್ನು ಸಂತ ಸಾಧುಗಳು ಕಲಿಸುವರು. ನಿತ್ಯಾನಿತ್ಯ ವಿವೇಕದಿಂದ ನಿಜವಾಗಿಯೂ "ನಾನು ಯಾರು?" ಇದರ ಶೋಧ ಮಾಡಿ ತಿಳಿಯಬೇಕು. ಸಾರಾಸಾರ ವಿಚಾರದಿಂದ ನಿಜವಾದ ಕರ್ತಾ ಯಾರು? ಇದರ ಶೋಧ ಮಾಡಬೇಕು. ಸಗುಣ ಸಾಕಾರವೆಲ್ಲವೂ ಚಂಚಲವು ಮತ್ತು ಉಚಿಗಿನದು. ಆದ್ದರಿಂದ ಇದರ ಆಚೆಗೆ ದೃಷ್ಟಿಯನ್ನು ಹರಿಸಬೇಕು. ಅಂದರೆ ಸಂಪೂರ್ಣ ಆತ್ಮ ನಿವೇದನ ಮಾಡಬೇಕು. ಮತ್ತು ನಿರ್ಗುಣದೊಂದಿಗೆ ಅನನ್ಯವಾಗಬೇಕು. ಹೀಗೆ ಮಾಡಿ ಧನ್ಯರಾಗಿ ಹೋಗಬೇಕು.

### ದಶಕ ೧೩ ಸಮಾಸ ೬. ಲಘುಬೋಧ (ನುಡಿ ೩೧)

ಈ ಪಂಚಭೂತದ ವಿಸ್ತಾರವು ಬಹಳ ಅಪಾರವಾಗಿ ಕಾಣುವದು ನಿಜವಿರುವದು. ಪರಂತು ಇದು ನಶ್ವರ ಇರುವದು. ಇದನ್ನು ಇಲ್ಲಿ ತಿಳಿಸಿ ಕೊಡುವರು:- ಪಂಚ ತತ್ವಗಳೆಂದು ಯಾವುದಕ್ಕೆ ಅನ್ನುವರೋ ಅವುಗಳ ಹೆಸರುಗಳನ್ನು ಹೇಳುವೆ, ತಿಳಿಯಿರಿ, ಆಮೇಲೆ ಪ್ರತ್ಯಕ್ಷವಾಗಿ ಅನುಭವ ಪಡೆದು ಅವುಗಳ ಸ್ವರೂಪವನ್ನು ಸರಿಯಾಗಿ ತಿಳಿದುಕೊಳ್ಳಿರಿ. [೧] ಇವುಗಳಲ್ಲಿ ಶಾಶ್ವತವಾದವು ಯಾವವು? ಅಶಾಶ್ವತವಾದವು ಯಾವವು? ಇದನ್ನು ಪ್ರತ್ಯಕ್ಷ ಪ್ರಮಾಣದಿಂದ ತಿಳಿದು ನಿಶ್ಚಯ ಮಾಡಿಕೊಳ್ಳಿರಿ. [೨] ಈಗ ಪಂಚಭೂತದ ಬಗ್ಗೆ ವಿಚಾರ ಮಾಡುವಾ:-ಇವುಗಳ ಹೆಸರು ಯಾವವು? ಇವುಗಳ ಸ್ವರೂಪವೇನು? ಇವುಗಳಲ್ಲಿ ಸಾರಾಸಾರವಿರುವದು ಯಾವುದು?ಇದೆಲ್ಲದರ ಬಗ್ಗೆ ಈಗ ಸ್ಪಷ್ಟವಾಗಿ ಹೇಳುವೆನು. ಲಕ್ಷ್ಯಗೊಟ್ಟು ಕೇಳಿರಿ. [೩] ಪೃಥ್ವಿ, ಆಪ್, ತೇಜ ವಾಯು ಮತ್ತು ಆಕಾಶ ಹೀಗೆ ಪಂಚಭೂತಗಳ ಹೆಸರುಗಳು ಇರುವವು. ಇನ್ನು ಮೇಲೆ ಇವುಗಳ ಸ್ವರೂಪದ ಬಗ್ಗೆ ಹೇಳುವೆನು. ಕೇಳಿರಿ. [೪] ಪೃಥ್ವಿ ಅಂದರೆ ಭೂಮಿ [ಜಮೀನು]. ಆಪ್ ಅಂದರೆ ಜಲ ಅಥವಾ ನೀರು, ತೇಜ ಅಂದರೆ ಅಗ್ನಿ ಸೂರ್ಯ ಇತ್ಯಾದಿ ತೇಜಯುಕ್ತ [ಹೊಳೆಯುವ] ಪದಾರ್ಥವೆಂದು ತಿಳಿಯಿರಿ. [೫] ವಾಯು ಅಂದರೆ ಗಾಳಿ, ಆಕಾಶ ಅಂದರೆ [ಅವಕಾಶ] ಎಲ್ಲ ಸ್ಥಳ [ಜಾಗೆ] ಪ್ರದೇಶ, ರಿಕಾಮಿ ಸ್ಥಳ, ಇನ್ನು ಈಗ ನೀವು ನಿಮ್ಮ ಮನದಲ್ಲಿ ಶಾಶ್ವತವಿರುವದರ ಬಗ್ಗೆ ಮನದಲ್ಲಿಯೇ ವಿಚಾರಿಸಿರಿ. [೬] ಪ್ರಪಂಚದ ವ್ಯವಹಾರದಲ್ಲಿ ಅಡಿಗೆ ಮಾಡುವಾಗ ಅನ್ನದ ಒಂದು ಅಗುಳು ಹಿಸುಕಿ ನೋಡುವರು. ಇದರ ಮೇಲಿಂದ ಯಾವತ್ತೂ ಅನ್ನದ ಸ್ವರೂಪ ಗೊತ್ತಾಗುವದು. ಇದರಂತೆಯೇ ಸ್ವಲ್ಪೇ ಅನುಭವದ ಮೇಲಿಂದ ಯಾವತ್ತೂ ವಿಶ್ವದ ಸ್ವಭಾವವನ್ನು ತಿಳಿದುಕೊಳ್ಳಬೇಕು. ತಿಳಿಯಲಿಕ್ಕೂ ಬರುವದು [೭] ಪೃಥ್ವಿಯ ಬಗ್ಗೆ ಹೀಗೆ ಕಂಡು ಬರುವದು: ಮಣ್ಣಿನಿಂದ ಏನನ್ನಾದರೂ ರಚಿಸಲಿಕ್ಕೆ ಬರುತ್ತದೆ. ಆದರೆ ಅದು ಒಡೆಯುವದು. ಇದಾದರೋ ಎಲ್ಲರಿಗೂ ಪ್ರತ್ಯಕ್ಷ ಅನುಭವ ವೇದ್ಯವೇ ಇರುವದು. ಈ ದೃಶ್ಯ ವಿಶ್ವದಲ್ಲಿ ಇಂಥ ಎಷ್ಟೆಷ್ಟೋ ರಚನೆ ಆಗುವವು. ಅವು ಕಾಲಾಂತರದಿಂದ ಮುರಿದು ಬೀಳುವವು. [ಮಣ್ಣು, ಭೂಮಿ ಎಂದಿಗೂ ಶಾಶ್ವತವಲ್ಲ. [೮]

ಮ್ಹಣೌನ ರಚತೇ ತೇ ಖಚತೇ। ಆಪ ತೇ ಹಿ ಆಟೋನ ಜಾತೇ।
ತೇಜ ಹಿ ಪ್ರಗಟೋನ ವಿಝೋತೇ। ವಾರೇ ಹಿ ರಾಹೇ ॥೯॥

ಅವಕಾಶ ನಾಮಮಾತ್ರ ಆಹೆ। ತೇಹಿ ವಿಚಾರಿತಾ ನ ರಾಹೆ।
ಏವಂ ಪಂಚಭೂತಿಕ ರಾಹೆ। ಹೇ ತೋ ಘಡೇನಾ ॥೧೦॥

ಐಸಾ ಪಾಚಾಭೂತಾಂಚಾ ವಿಸ್ತಾರ। ನಾಸಿವಂತ ಹಾ ನಿರ್ಧಾರ।
ಶಾಶ್ವತ ಆತ್ಮಾ ನಿರಾಕಾರ। ಸತ್ಯ ಜಾಣಾವಾ ॥೧೧॥

ತೋ ಆತ್ಮಾ ಕೋಣಾಸ ಕಳೇನಾ। ಜ್ಞಾನೇವಿಣ ಆಕಳೇನಾ।
ಮ್ಹಣೋನಿಯಾ ಸಂತಜನಾ। ವಿಚಾರಾವೇ ॥೧೨॥

ವಿಚಾರಿತಾ ಸಜ್ಜನಾಸೀ। ತೇ ಮ್ಹಣತೀ ಕೀ ಅವಿನಾಸೀ।
ಜನ್ಮ ಮೃತ್ಯು ಆತ್ಮಯಾಸೀ। ಬೋಲೋ ಚ ನಯೆ ॥೧೩॥

ನಿರಾಕಾರೀ ಭಾಸೆ ಆಕಾರ। ಆಣೀ ಆಕಾರೀ ಭಾಸೆ ನಿರಾಕಾರ।
ನಿರಾಕಾರ ಆಣೀ ಆಕಾರ। ವಿವೇಕೇ ಓಳಖಾವಾ ॥೧೪॥

ನಿರಾಕಾರ ಜಾಣಾವಾ ನಿತ್ಯ। ಆಕಾರ ಜಾಣಾವಾ ಅನಿತ್ಯ।
ಯಾಸ ಬೋಲಿಜೆ ನಿತ್ಯಾನಿತ್ಯ। ವಿಚಾರಣಾ ॥೧೫॥

ಸಾರೀ ಭಾಸೆ ಅಸಾರ। ಆಣಿ ಅಸಾರೀ ಭಾಸೆ ಸಾರ।
ಸಾರಾಸಾರ ವಿಚಾರ। ಶೋಧೂನ ಪಾಹಾವಾ ॥೧೬॥

ಪಂಚಭೂತಿಕ ತೇ ಮಾಇಕ। ಪರಂತು ಭಾಸೆ ಅನೇಕ।
ಆಣಿ ಆತ್ಮಾ ಯೇಕ। ವ್ಯಾಪೂನ ಅಸೆ ॥೧೭॥

ಚಹು ಭೂತಾಮಧೇ ಗಗನ। ತೈಸೇ ಗಗನೀ ಅಸೆ ಸಘನ।
ನೆಹಟೂನ ಪಾಹತಾ ಅಭಿನ್ನ। ಗಗನ ಆಣಿ ವಸ್ತು ॥೧೮॥

ಉಪಾಧೀಯೋಗೇ ಚಿ ಆಕಾಶ। ಉಪಾಧೀ ನಸ್ತಾ ನಿರಾಭಾಸ।
ನಿರಾಭಾಸ ತೇ ಅವಿನಾಶ। ತೈಸೆ ಗಗನ ॥೧೯॥

ಆತಾ ಅಸೋ ಹೇ ವಿವಂಚನಾ। ಪರಂತು ಜೇ ಪಾಹಾತಾ ನಾಸೇನಾ।
ತೇ ಗೇ ತೇ ಚಿ ಅನುಮಾನಾ। ವಿವೇಕೇ ಆಣಾವೇ ॥೨೦॥

ಅಂತೆಯೇ ಮಣ್ಣಿನಿಂದ ಮತ್ತು ಮಣ್ಣಿನಲ್ಲಿರುವ ವಸ್ತುಗಳಿಂದ ರಚಿಸಿದವೆಲ್ಲ ಮುರಿದು ಬೀಳುವವು. ನಾಶವಾಗುವವು. ಇದು ಪೃಥ್ವಿಯ ಬಗ್ಗೆ ಅನುಭವ ಬಂದ [ಬರುವ] ಮಾತಾಗಿದೆ, ಇದರಂತೆಯೇ ನೀರಿನ ಬಗ್ಗ ಅನುಭವವಿರುವದು, ಯಾಕೆಂದರೆ ನೀರು ಆಟ್ಟಿಸಿ ಹೋಗುತ್ತದೆ· ಹಾಗೂ ಅಗ್ನಿ ಹೊತ್ತಿ ಉರಿಯುತ್ತದೆ. ಮತ್ತು ಆರಿಹೋಗುವದು, ಮತ್ತು ಗಾಳಿ ಬೀಸುವದು. ಮತ್ತು ನಿಲ್ಲುವದು. [೯] ಆಕಾಶದಲ್ಲಿರುವ ಅವಕಾಶವು ಹೆಸರಿಗೆ ಮಾತ್ರ ಇರುವದು. ವಿಚಾರ ಮಾಡಿದ ಮೇಲೆ ಇದೂ ಉಳಿಯುವದಿಲ್ಲ. ತಾತ್ಪರ್ಯವೇನಂದರೆ, ಪಂಚಭೂತಗಳಿಂದ ನಿರ್ಮಾಣವಾದದ್ದೆಲ್ಲವೂ ಶಾಶ್ವತವಾಗಿ ಉಳಿಯುವದಿಲ್ಲ. ಕಾಯಂ ಉಳಿಯುವದು ಶಕ್ಯವೂ ಇಲ್ಲ [೧೦] ಈ ಪ್ರಕಾರ ಪಂಚಭೂತಗಳ ವಿಸ್ತಾರ (ಬಜಾರ) ವೆಲ್ಲ ನಶ್ವರವಿರುವದು. ಈ ಮಾತು ಅಗದೀ ನಿಃಸಂಶಯವಾಗಿ ಖರೇ ಇರುವದು. ಆತ್ಮಾ ಮಾತ್ರ ಶಾಶ್ವತವಿರುವದು. ಸತ್ಯವಿರುವದು. ಆದರೆ ಇದು ನಿರಾಕಾರವಿರುವದು.[೧೧] ಸಾಕಾರ (ಆಕಾರ)ವಿರುವದೆಲ್ಲವೂ ನಶ್ವರವು, ನಿರಾಕಾರವು ಶಾಶ್ವತವೂ, ಸತ್ಯವೂ ಇರುವದು. ಆದರೆ ಸಾಕಾರ ವ ನಿರಾಕಾರ ಇವು ಒಂದರೊಳಗೊಂದು ಮಿಶ್ರವಾಗಿರುವವೆಂದು ಅನಿಸುವದು. ಸಾರಾಸಾರ ವಿಚಾರದಿಂದ ವಿವೇಕ ಮಾಡಿ ಇವು ಗಳನ್ನು ಬೇರೆ ಮಾಡಬೇಕು. ಮತ್ತು "ನಾನು ಯಾರು ?" ಇದರ ಶೋಧ ಮಾಡಿರಿ. ಆತ್ಮ ವಸ್ತುವು ತಿಳಿಯಲು ಬಹಳ ಕಠಿಣವಿರುವದು. ಇದು ಜ್ಞಾನವಿಲ್ಲದೇ ಇತರ ಯಾವುದರಿಂದಲೂ ಆಕಲನವಾಗುವದಿಲ್ಲ. ಆದ್ದರಿಂದ ಸಂತ ಸಾಧುಗಳ ಕಡೆಗೆ ಹೋಗಬೇಕು. ಮತ್ತು ಅವರಿಗೆ ನಮ್ರತೆಯಿಂದ ಆತ್ಮನನ್ನು ಹೇಗೆ ಗುರುತಿಸಬೇಕು ಅಂತಾ ವಿಚಾರಿಸಬೇಕು. [೧೨] ಆತ್ಮಸ್ವರೂಪ ಹೇಗಿರುವದೆಂದು ಕೇಳಿದ ಪ್ರಶ್ನೆಗೆ ಸಂತರು ಹೀಗೆ ಉತ್ತರ ಕೊಡುವರು. ಆತ್ಮನು ಅವಿನಾಶಿ ಇರುವನು. ಆತ್ಮನಿಗೆ ಜನ್ಮವೂ ಇಲ್ಲ. ಅದರಂತೆ ಮರಣವೂ ಇಲ್ಲ. [೧೩] ನಿರಾಕಾರದಲ್ಲಿ ಆಕಾರದ ಭಾಸವಾಗುವದು. ಮತ್ತು ಆಕಾರದಲ್ಲಿ ನಿರಾಕಾರದ ಭಾಸವಾಗುವದು. ಇವೆರಡೂ ಒಂದರೊಳಗೊಂದು ಮಿಶ್ರವಾಗಿರುವಂತೆ ಭಾಸವಾಗುವವು. ಆದ್ದರಿಂದ ನಿರಾಕಾರ ಮತ್ತು ಆಕಾರ ಇವನ್ನು ವಿವೇಕದಿಂದ ಗುರುತಿಸಿ ಎರಡನ್ನೂ ಬೇರೆ ಮಾಡಬೇಕು. [೧೪] ಯಾವುದು ನಿರಾಕಾರ ಇರುವದೋ ಅದು ನಿತ್ಯ ಮತ್ತು ಶಾಶ್ವತವಿರುವದು. ಸಾಕಾರವು ಅನಿತ್ಯ ವ ಅಶಾಶ್ವತವಿರುವದು. ಸಾಕಾರ ಮತ್ತು ನಿರಾಕಾರ ಇವುಗಳ ಗುಣಧರ್ಮವನ್ನು ವಿವೇಕದಿಂದ ತಿಳಿಯುವರು. ಇವಕ್ಕೇ ನಿತ್ಯಾನಿತ್ಯ ವಿಚಾರ ಅನ್ನುವರು. [೧೫] ಇದರಂತೆ ಯಾವುದು ಸಾರವಿರುವದೋ ಅದರಲ್ಲಿ ಅಸಾರದ ಭಾಸವಾಗುವದು. ಮತ್ತು ಯಾವುದು ಅಸಾರವಿರುವದೋ ಅದರಲ್ಲಿ ಸಾರದ ಭಾಸವಾಗುವದು. ಆದರೆ ಮನುಷ್ಯನು ಸಾರಾಸಾರದ ವಿಚಾರ ಮಾಡಿ ವಿವೇಕದಿಂದ ಸಾರ ಯಾವುದು ? ಮತ್ತು ಅಸಾರ ಯಾವುದು ? ಇದನ್ನು ಶೋಧಿಸಿ ಗುರುತಿಸಬೇಕು. [೧೬] ವಾಸ್ತವಿಕವಾಗಿ ಪಂಚಭೂತಗಳಿಂದ ನಿರ್ಮಾಣಗೊಂಡ ಎಲ್ಲವೂ ಮಾಯಿಕವಿರುವದು. ಅಂದರೆ ಅದು ಹೇಗಿರುವದೋ ಅದರಂತೆ ಕಾಣುವದಿಲ್ಲ. ಅದು ಒಂದೇ ಅಲ್ಲ ಅನೇಕವಾಗಿ ಕಾಣುವದು. ಇದರ ವಿರುದ್ಧವಾಗಿ ಆತ್ಮವು ಅಗದೀ ಒಂದೇ ಇರುವದು. ಮತ್ತು ಇದು ಸರ್ವ ವಿಶ್ವವನ್ನು ವ್ಯಾಪಿಸಿ ಇರುವದು.[೧೭] ನಾಲ್ಕು ಭೂತ (ಪೃಥ್ವಿ, ಆಪ್, ತೇಜ, ವಾಯು)ಗಳಲ್ಲಿ ಆಕಾಶವು ವ್ಯಾಪಿಸಿರುವದು. ಆದರೆ ಇದು ಬೇಗ ಲಕ್ಷ್ಯಕ್ಕೆ ಬರುವದಿಲ್ಲ. ಇದರಂತೆ ಆಕಾಶದಲ್ಲಿ ಆತ್ಮಸ್ವರೂಪವು ಅಗದೀ ದಟ್ಟವಾಗಿ ಭರಪೂರ ತುಂಬಿರುವದು. ನಿಶ್ಚಯದಿಂದ ಸೂಕ್ಷ್ಮ ವಿಚಾರ ಮಾಡಿ ನೋಡಿದರೆ ಆಕಾಶ ಮತ್ತು ಬ್ರಹ್ಮವಸ್ತು ಇವುಗಳಲ್ಲಿ ಭೇದವೇ ಇಲ್ಲ. ಅನ್ನುವ ಅನುಭವ ಬರುವದು. [೧೮] ಆಕಾಶವು ನಮಗೆ ಭಾಸವಾಗುವದು. ಇಂದ್ರಿಯಗಳಿಗೆ ಗೊತ್ತಾಗುವದು. (ಕಾಣುವದು).ಅಂದರೆ ಇದು ಸ್ಥಳ ಕಾಲಗಳ ಉಪಾಧಿಯಿಂದ ಆವರಿಸಲ್ಪಟ್ಟಿದೆ. ಈ ಉಪಾಧಿಯನ್ನು ಬಾಜೂಕ್ಕೆ ಸರಿಸಿದರೆ ಅದು ಅತೀಂದ್ರಿಯವೇ ಇರುವದು. ಆದ್ದರಿಂದ ಅತೀಂದ್ರಿಯ, ನಿರುಪಾಧಿ, ನಿರಾಭಾಸ, ವ ಅವಿನಾಶಿ, ಗಗನದಂತೆ ಬ್ರಹ್ಮಸ್ವರೂಪ ಇರುವದು. [೧೯] ಈಗ ಇಷ್ಟಕ್ಕೇ ವಿವೇಚನೆಯನ್ನು ಸಾಕು ಮಾಡೋಣ. ಯಾರು ಅನುಭವ ಪಡೆಯಲು ಹೋಗುವರೋ ಅವರು ಅವಿನಾಶಿ ಇರುವದೇ ಬ್ರಹ್ಮವು; ಅದೇ ಬ್ರಹ್ಮಸ್ವರೂಪವು; ಮನನ-ನಿಧಿ-ಧ್ಯಾಸಗಳಿಂದ ಇದನ್ನು ನಮ್ಮ ಅನುಭವದ ಕಕ್ಷೆಯಲ್ಲಿ ತಂದುಕೊಳ್ಳಬೇಕು. [೨೦]

ಪರಮಾತ್ಮಾ ತೋ ನಿರಾಕಾರ । ಜಾಣಿಜೆ ಹಾ ವಿಚಾರ ಸಾರ ।
ಆಣಿ ಆಪಣ ಕೋಣ ಹಾ ವಿಚಾರ । ಪಾಹಿಲಾ ಪಾಹಿಜೆ ॥೨೧॥

ದೇಹಾಸ ಅಂತ ಯೇತಾ । ವಾಯೋ ಜಾತೋ ತತ್ವತಾ ।
ಹೇ ಲಟಿಕೇ ಮ್ಹಣಾಲ ತರೀ ಆತಾ । ಸ್ವಾಸೋಸ್ವಾಸ ಧರಾವಾ ॥೨೨॥

ಸ್ವಾಸ ಕೋಂಡತಾ ದೇಹ ಪಡೆ । ದೇಹ ಪಡತಾ ಮ್ಹಣತೀ ಮಡೇ।
ಮಡ್ಯಾಸ ಕರ್ತೃತ್ವ ನ ಘಡೆ। ಕದಾಕಾಳೀ ॥೨೩॥

ದೇಹಾವೇಗಳಾ ವಾಯೋ ನ ಕರೀ । ವಾಯೋ ವೇಗಳಾ ದೇಹ ನ ಕರೀ ।
ವಿಚಾರ ಪಾಹಾತಾ ಕಾಹೀ ಚ ನ ಕರೀ । ಯೇಕಾ ವೇಗಳೇ ಯೇಕ ॥೨೪॥

ಉಗೇ ಚ ಪಾಹಾತಾ ಮನುಷ್ಯ ದಿಸೆ । ವಿಚಾರ ಘೇತಾ ಕಾಹೀಚ ನಸೆ ।
ಅಭೇದಭಕ್ತೀಚೇ ಲಕ್ಷಣ ಐಸೆ । ಮ್ರೊಳಖಾವೆ ॥೨೫॥

ಕರ್ತಾ ಆಪಣ ಐಸೆ ಮ್ಹಣಾವೇ । ತರೀ ಆಪಲೇ ಇಛೆಸಾರಿಖೇ ವ್ಹಾವೇ ।
ಇಛೆಸಾರಿಖೇ ನ ಹೋತಾ ಮಾನಾವೇ । ಅವಘೇ ಚ ವಾವ ॥೨೬॥

ಮ್ಹಣೋನ ಕರ್ತಾ ನವ್ಹೆ ಕಿ ಆಪಣ । ತೇಥೇ ಭೋಕ್ತಾ ಕೈಚಾ ಕೋಣ ।
ಹೇ ವಿಚಾರಾಚೇ ಲಕ್ಷಣ । ಅವಿಚಾರೇ ನ ಘಡೇ ॥೨೭॥

ಅವಿಚಾರ ಆಣಿ ವಿಚಾರ । ಜೈಸಾ ಪ್ರಕಾಶ ಅಂಧಕಾರ ।
ವಿಕಾರ ಆಣಿ ನಿರ್ವಿಕಾರ । ಯೇಕ ನವ್ಹೆ ಕೀ ॥೨೮॥

ಜೇಥೇ ನಾಹೀ ವಿನಂಚನಾ । ತೇಥೇ ಕಾಹೀ ಚ ಚಾಲೇನಾ ।
ಖರೇ ತೇ ಚಿ ಅನುಮಾನಾ। ಕದಾ ನ ಯೇ ॥೨೯॥

ಪ್ರತ್ಯಯಾಸ ಬೋಲಿಜೆ ನ್ಯಾಯೋ । ಅಪ್ರತ್ಯಯೋ ತೋ ಅನ್ಯಾಯೋ ।
ಜ್ಯಾತ್ಯಾಂಧಾಸ ಪರೀಕ್ಷಾ ಕಾಯೆ । ನಾನಾ ರತ್ನಾಚೀ ॥೩೦॥

ಮ್ಹಣೋನ ಜ್ಞಾತಾ ಧನ್ಯಧನ್ಯ । ಜೋ ನಿರ್ಗುಣೇ ಸೀ ಅನನ್ಯ ।
ಆತ್ಮನಿವೇದನೇ ಮಾನ್ಯ । ಪರಮ ಪುರುಷ ॥೩೧॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಲಘುಬೋಧ' ನಾಮ ಸಮಾಸ ಷಷ್ಟಮ ॥

● ●

ಪರಮಾತ್ಮ ಸ್ವರೂಪವು ನಿರಾಕಾರವಿರುವದು. ಇದೇ ಸರ್ವ ಸಾರಾಸಾರ ವಿಚಾರದ ತಾತ್ಪರ್ಯವಿರುವದು. ಇದರಂತೆಯೇ "ನಾನು ಯಾರು" ಇದರದೂ ವಿಚಾರ ಮಾಡಲಿಕ್ಕೆಬೇಕು. [೨೧] ಯಾವ ಕಾಲಕ್ಕೆ ದೇಹದ ಅಂತವಾಗುವದೋ ಆ ಕಾಲಕ್ಕೇ ವಾಯುವು ದೇಹಬಿಟ್ಟು ಹೋಗುವದು. ಇದು ನಿಮಗೆ ಖರೇ ಅನಿಸದಿದ್ದರೆ ನೀವು ಈಗಲೇ ನಿಮ್ಮ ಮೂಗು, ಬಾಯಿ ಮುಚ್ಚಿ ಶ್ವಾಸವನ್ನು ಬಿಗಿ ಹಿಡಿದು ನೋಡಿರಿ. [೨೨] ಹೀಗೆ ಮಾಡಿದರೆ ಶ್ವಾಸೋಚ್ಛ್ವಾಸ ಕಟ್ಟಿ (ಉಸಿರು ಬಂದಾಗಿ) ದೇಹ ಬೀಳುವದು.(ಸಾಯುವದು). ದೇಹ ಬಿದ್ದ ಕೂಡಲೇ ಅದಕ್ಕೆ ಹೆಣ ಅನ್ನುವರು. ಹೆಣದಲ್ಲಿ ಕರ್ತಾತನ, ಕರ್ತತ್ವ ಶಕ್ತಿ ಎಂದೂ ಕಂಡು ಬರಲಾರದು. (ಜೀವ ಹೋಗಿ ಹೆಣವಾದದ್ದು ಏಳಬಲ್ಲದೇ ? ಇಲ್ಲ ! ಇಲ್ಲ !!) [೨೩] ದೇಹವಿಲ್ಲದೇ ವಾಯುವಿಗೆ ಏನೂ ಮಾಡಲಿಕ್ಕೆ ಬರುವದಿಲ್ಲ. ವಾಯುವಿಲ್ಲದೆ ಬರೇ ದೇಹಕ್ಕೆ ಏನೂ ಮಾಡಲು ಸಾಧ್ಯವಿಲ್ಲ. ವಿಚಾರ ಮಾಡಿ ನೋಡಿದ್ದಾದರೆ ಕಂಡು ಬರುವದೇನಂದರೆ ಒಟ್ಟಿನಲ್ಲಿ ಒಂದನ್ನು ಬಿಟ್ಟು ಒಂದಕ್ಕೆ ಏನೂ ಮಾಡಲಿಕ್ಕೂ ಬರುವದಿಲ್ಲ. [೨೪] ಮೇಲಿನ ನೋಟದಿಂದ ಸಹಜವಾಗಿ ನೋಡಿದರೆ ಇವನೊಬ್ಬ ಮನುಷ್ಯನು ಅಂತಾ ಕಾಣುವದು. ವಿಚಾರ ಮಾಡಿ ನೋಡಿದರೆ ಏನೂ ಇಲ್ಲ ಅಂತಾ ಕಂಡುಬರುವದು. (ದೇಹ, ಗಾಳಿ, ವಾಯು ಇವು ಕಂಡರೂ ಸಹ ಇವೂ ನಶ್ವರ ಇರುವವು). ಇದರ ಮೇಲಿಂದ (ಅಹಂ ಇದನ್ನು ನಾಶ ಮಾಡಿ) ಅಭೇದ ಭಕ್ತಿಯ ಲಕ್ಷಣವೆಂದರೆ ಏನು? ಯಾವುದು? ಇದನ್ನು ಗುರುತಿಸಿ ತಿಳಿಯಿರಿ[೨೫] "ನಾನು ಕರ್ತಾ ಇರುವೆನು" ಹೀಗೆ ಅಂದರೆ ಎಲ್ಲವೂ ನಮ್ಮ ಇಚ್ಛೆಯಂತೆ ಆಗಬೇಕಾಗುವದು. ನಡೆಯಬೇಕಾಗುವದು. ಹಾಗೇನೂ ಆಗುವದಿಲ್ಲವೆಂದ ಮೇಲೆ "ನಾನು ಕರ್ತಾ ಇರುವೆನು" ಹೀಗೆ ಅನ್ನುವದು ಆಗದೀ ವ್ಯರ್ಥವೆಂದು (ಅನುಭವಕ್ಕೆ ಬರುವದು) ತಿಳಿಯಬೇಕಾಗುವದು. [೨೬] ಇದರಿಂದ "ನಾನು ಕರ್ತಾ ಅಲ್ಲ" ಅನ್ನುವದು ತನ್ನಿಂದ ತಾನೇ ಅನುಭವಕ್ಕೆ ಬರುವದು. "ನಾನು ಕರ್ತಾ ಅಲ್ಲ" ಅನ್ನುವದು ನಿಜವಾಗಿಯೂ ಖರೇ ಇದ್ದರೆ "ನಾನು ಭೋಕ್ತಾನೂ ಅಲ್ಲ" ಇದೂ ಸಹ ಅದರಷ್ಟೇ ಖರೇ ಇರುವದೆಂದು ಸ್ಥಿರವಾಗುವದು. ಪರಂತು ಯಾರು ಸೂಕ್ಷ್ಮ ವಿಚಾರ ಮಾಡಿ ನೋಡುವರೋ ಅವರಿಗೇ ಇದು ತಿಳಿಯುವದು. ಯಾರಿಗೆ ಸೂಕ್ಷ್ಮ ವಿಚಾರ ಮಾಡಲಿಕ್ಕೆ ಬರುವದಿಲ್ಲವೋ ಅವರಿಗೆ ಇದು ತಿಳಿಯುವದಿಲ್ಲ. [೨೭] ಪ್ರಕಾಶ (ಬೆಳಕು) ಮತ್ತು ಕತ್ತಲೆ ಇವು ಒಂದಕ್ಕೊಂದು ಉಲಟ (ವಿರುದ್ಧ) ಇರುವವು. ಇದರಂತೆಯೇ ಸೂಕ್ಷ್ಮ ವಿಚಾರ ಮಾಡುವದು ಮತ್ತು ಹಾಗೆ ವಿಚಾರ ಮಾಡದೆ ಇರುವದು. ಇವೂ ಸಹ ಒಂದಕ್ಕೊಂದು ವಿರೋಧಿಯಾಗಿಯೇ ಇರುವವು. ವಿಕಾರ ಹೊಂದುವ ದೃಶ್ಯ ಪಂಚಭೂತಾತ್ಮಕ ವಿಶ್ವವು ಮತ್ತು ನಿರ್ವಿಕಾರ ಬ್ರಹ್ಮ ವಸ್ತು ಇವೆರಡೂ ಆಗದೀ ಭಿನ್ನವಾದವುಗಳೇ ಇರುವವು. [೨೮] ಎಲ್ಲಿ ಸಾರಾಸಾರದ ಸೂಕ್ಷ್ಮ ಮನನ ಇಲ್ಲವೋ ಅಲ್ಲಿ ಪರಮಾರ್ಥ ಏನೂ ಇರುವದಿಲ್ಲ. ಯಾವುದು ಖರೇ ಸ್ವರೂಪ ಇರುವದೋ ಅದರ ಖರೇ ಕಲ್ಪನಾ ಇಲ್ಲಿ ಬರಲಿಕ್ಕೆ ಶಕ್ಯವೇ ಇಲ್ಲ. [೨೯] ಸೂಕ್ಷ್ಮ ವಸ್ತುವಿನ ಅನುಭವವೇ ನ್ಯಾಯವೆಂದು ಅನ್ನುವದಾದರೆ ಆ ವಸ್ತುವಿನ ಅನುಭವ ಇಲ್ಲದಿರುವದು ಅನ್ಯಾಯವೆಂದು ಅನ್ನಬೇಕಾಗುವದು. ಯಾವನು ಹುಟ್ಟು ಕುರುಡನೋ ಅವನಿಗೆ ಅನೇಕ ಪ್ರಕಾರದ ರತ್ನಗಳ ಪರೀಕ್ಷೆ ಮಾಡಲಿಕ್ಕೆ ಬರುವದು ಶಕ್ಯವೇ ಇಲ್ಲ. [೩೦] ಆದ್ದರಿಂದ ನಿರ್ಗುಣ ಸ್ವರೂಪದೊಂದಿಗೆ ಅನನ್ಯನಾಗುವವನು, ನಿರ್ಗುಣದೊಂದಿಗೆ ತದ್ರೂಪವಾಗುವವನು ನಿಜವಾದ ಜ್ಞಾನಿ ಪುರುಷನು. ಇವನು ತ್ರಿವಾರ ಧನ್ಯ! ಧನ್ಯ!! ಧನ್ಯ!!! ಇರುವನು. ಸಂಪೂರ್ಣ ಆತ್ಮನಿವೇದನ ಸಾಧಿಸಿದ್ದಾದರೆ ಅಂಥವನು ಬಹಳ ದೊಡ್ಡ ಪುರುಷ ಶ್ರೇಷ್ಠನೆಂದು ಮಾನ್ಯತೆ ಪಡೆಯುವನು. [೩೧]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹದಿಮೂರನೆಯ ದಶಕದೊಳಗಿನ
"ಲಘು ಬೋಧ" ಎಂಬ ಹೆಸರಿನ ಆರನೆಯ ಸಮಾಸವು ಮುಗಿದುದು.

● ●

ದಶಕ ತ್ರಯೋದಶ : ಸಮಾಸ ಸಪ್ತಮ : ಪ್ರತ್ಯಯ ವಿವರಣ

॥ಶ್ರೀರಾಮ॥ ನಿರ್ಮಳ ನಿಶ್ಚಳ ನಿರಾಭಾಸ । ತಯಾಸ ದೃಷ್ಟಾಂತ ಆಕಾಶ ।
ಆಕಾಶ ಮ್ಹಣಿಜೆ ಅವಕಾಶ । ಪಸರಲಾ ಪೈಸ ॥೧॥

ಆಧೀ ಪೈಸ ಮಗ ಪದಾರ್ಥ । ಪ್ರತ್ಯಯೆ ಪಾಹಾತಾ ಯಥಾರ್ಥ ।
ಪ್ರತ್ಯಯೇವಿಣ ಪಾಹಾತಾ ವೆರ್ಥ । ಸಕಳ ಕಾಹೀ ॥೨॥

ಬ್ರಹ್ಮ ಮ್ಹಣಿಜೆ ತೇ ನಿಶ್ಚಳ । ಆತ್ಮಾ ಮ್ಹಣಿಜೆ ತೋ ಚಂಚಳ ।
ತಯಾಸ ದೃಷ್ಟಾಂತ ಕೇವಳ । ವಾಯೋ ಜಾಣಾವಾ ॥೩॥

# ದಶಕ ೧೪. ಸಮಾಸ ೭. ಪ್ರತ್ಯಯ ವಿವರಣ (ನುಡಿ ೩೦)

ಮೊದಲು ಆತ್ಮಾನಾತ್ಮ ವಿವೇಕ ಮಾಡಬೇಕು. ಅದರಲ್ಲಿ ಆಗ ಅನುಭವದಿಂದ ಕಂಡುಬರುವದೇನಂದರೆ ಅನಾತ್ಮ ಅನೇಕ ಇರುವವು. ಆತ್ಮಾ ಮಾತ್ರ ಒಂದೇ ಒಂದು ಇರುವದು. ಅನಾತ್ಮವು ಜಡವಿರುವದರಿಂದ ಆತ್ಮಾ ಇದು ಸರ್ವ ಜಡಕ್ಕೂ ಚೇತನ ಕೊಡುವದು. ಯಾವತ್ತೂ ದೃಶ್ಯಕ್ಕೆ ಚೇತನ ಕೊಡುವಂಥವನು ಸರ್ವಾತ್ಮನು. ಅಥವಾ ಅಂತರಾತ್ಮಾ ಅನಿಸುವನು. ಇಲ್ಲಿಯವರೆಗಿನದು ಯಾವತ್ತೂ ಚಂಚಲದ ಸೀಮೆಯಂದಿರುವದು. ಅಂತೆಯೇ ಸಾರಾಸಾರ ವಿಚಾರ ಮಾಡಬೇಕು. ಇದರಲ್ಲಿ ಯಾವತ್ತೂ ಚಂಚಲದ ಅರ್ಥಾತ್ ಪ್ರಕೃತಿಯ ಸಂಪೂರ್ಣ ನಿರಾಸ ವಾಗುವದು. ಮತ್ತು ಸಾರರೂಪ ನಿಶ್ಚಲ ಬ್ರಹ್ಮವಷ್ಟೇ ಶಿಲುಕು ಉಳಿಯುವದು. ಇವೆರಡರಲ್ಲಿಯೂ ವಿಚಾರವೇ ಮುಖ್ಯವಾದದ್ದು. ವಿಚಾರವು ಅರ್ಥದ ವಾಹನವಿರುವದು. ವಿಚಾರದಿಂದ ಅರ್ಥ ನಿರ್ಮಾಣವಾದ ಕೂಡಲೇ ಅಂತ ರಾತ್ಮಾ ಆ ಅರ್ಥದಿಂದ ತುಂಬಿ ಬಿಡುವನು. ಅರ್ಥವು ಎಷ್ಟು ಸೂಕ್ಷ್ಮ ಮತ್ತು ವಿಶಾಲ ಇರುವದೋ ಅಷ್ಟು ಪ್ರಮಾಣದಲ್ಲಿ ಅಂತರಾತ್ಮನೂ ಸಹ ಅಷ್ಟೇ ಸೂಕ್ಷ್ಮ ಮತ್ತು ವಿಶಾಲವಾಗುವನು. ಅರ್ಥ ನಿಃಸಂಶಯ ಇದ್ದದ್ದಾದರೆ ಅಂತರಾತ್ಮನೂ ಸಹ ನಿಃಸಂಶಯನಾಗುವನು. ಆದ್ದರಿಂದ ದೇವರ ಶೋಧ ಮಾಡಬೇಕು. ದೇವರ ವಿಚಾರದಿಂದ ಅಂತ ರಾತ್ಮನನ್ನು (ಭಾರೂನ ಟಾಕಾವಾ) ತುಂಬಿ ಬಿಡಿರಿ. ಖರೇ ಕರ್ತಾ ಯಾರು ? ಇದನ್ನು ವಿವೇಕದಿಂದ ತಿಳಿಯುವ ದರಲ್ಲಿಯೇ ಖರೇ ಸುಖವಿರುವದು.

## ದಶಕ ೧೪ : ಸಮಾಸ ೭ : ಪ್ರತ್ಯಯ ನಿರೂಪಣ (ನುಡಿ ೩೦)

ಪರಮಾರ್ಥದಲ್ಲಿ ಅನುಭವವಿಲ್ಲದ್ದೆಲ್ಲವೂ ವ್ಯರ್ಥವಿರುವದು:– ಪರಮಾತ್ಮ ವಸ್ತುವು ನಿರ್ಮಲ, ನಿಶ್ಚಲ, ಮತ್ತು ನಿರಾಭಾಸ ಇರುವದು. ಇದಕ್ಕೆ ಆಕಾಶದ ದೃಷ್ಟಾಂತ ಒಂದನ್ನು ಮಾತ್ರ ಕೊಡಲಿಕ್ಕೆ ಬರುವದು. ಅಸೀಮ ಅಪಾರವಾಗಿ ಪಸರಿಸಿದ ಆ ಅವಕಾಶ ಇದಕ್ಕೇ ಆಕಾಶ ಅನ್ನುವರು, [೧] ಮೊದಲು ಮೋಕಳೀಕ ಆದ (ಸ್ವತಂತ್ರ ವಾದ, ಖುಲ್ಲಾ ಇದ್ದ) ರಿಕಾಮಿ ಜಾಗಾ ಇರುವದು. ಅದರಲ್ಲಿ ಆಮೇಲೆ ಪದಾರ್ಥಗಳು ಉತ್ಪನ್ನವಾದವು.(ಮೊದಲು ಅವಕಾಶ, ಆಕಾಶ ಆಮೇಲೆ ಬಾಕಿ ಉಳಿದ ನಾಲ್ಕು ಭೂತಗಳು ಆನಂತರ ಎಲ್ಲವೂ ಬರುವವು. ಅಥವಾ ಉತ್ಪನ್ನ ವಾಗುವವು). ಇದು ಅಗದೀ ಯೋಗ್ಯ ಪ್ರತ್ಯಕ್ಷ ಅನುಭವ ಬರುವದೇ ಆಗಿದೆ. ಯಾವುದರ ಬಗ್ಗೆ ಪ್ರತ್ಯಕ್ಷ ಅನು ಭವ ಬರುವದಿಲ್ಲವೋ ಅದು ಖರೇ ಅಂತಾ ಒಪ್ಪಲಿಕ್ಕೆ ಬರುವದಿಲ್ಲ. [೨] **ಜಡವಿರುವದೆಲ್ಲವೂ ಚಂಚಲವಿರು ವದು, ಮತ್ತು ಸೂಕ್ಷ್ಮ ವಿರುವದು, ನಿಶ್ಚಲವಿರುವದು, ಅನ್ನುವದರ ಪ್ರತ್ಯಕ್ಷ ಅನುಭವ ಬರುವದು:–** ಬ್ರಹ್ಮವಸ್ತು ನಿಶ್ಚಲವಿರುವದು. ಅಂತರಾತ್ಮಾ ಚಂಚಲವಿರುವದು. ಇದರ ಬಗ್ಗೆ ಖಾತ್ರಿಯಾದ ದೃಷ್ಟಾಂತ ಬೇಕಿದ್ದರೆ ವಾಯುವಿನದನ್ನು ತೆಗೆದುಕೊಳ್ಳಬೇಕು. ಆಕಾಶದಲ್ಲಿ ಹೇಗೆ ವಾಯುವೋ ಅದರಂತೆ ಬ್ರಹ್ಮದಲ್ಲಿ ಅಂತರಾತ್ಮಾ ಇರು ವನು. [೩]

ಘಟಾಕಾಶ ದೃಷ್ಟಾಂತ ಬ್ರಹ್ಮಾಚಾ । ಘಟಬಿಂಬ ದೃಷ್ಟಾಂತ ಆತ್ಮ್ಯಾಚಾ ।
ವಿವರತಾ ಅರ್ಥ ದೋಹೀಂಚಾ । ಭಿನ್ನ ಆಹೆ ॥೪॥

ಭೂತ ಮ್ಹಣಿಜೆ ಜಿತುಕೇ ಜಾಲೇ । ಜಾಲೇ ತಿತುಕೇ ನಿಮಾಲೇ ।
ಚಂಚಳ ಆಲೇ ಆಣೀ ಗೇಲೇ । ಐಸೇ ಜಾಣಾವೇ ॥೫॥

ಅವಿದ್ಯಾ ಜಡ ಆತ್ಮಾ ಚಂಚಳ । ಜಡ ಕರ್ಪೂರ ಆತ್ಮಾ ಅನಳ ।
ದೋನೀ ಜಳೋನ ತತ್ಕಾಳ । ವಿಝೋನ ಜಾತೀ ॥೬॥

ಬ್ರಹ್ಮ ಆಕಾಶ ನಿಶ್ಚಳ ಜಾತೀ । ಆತ್ಮಾ ವಾಯೋ ಚಂಚಳ ಜಾತೀ ।
ಪರೀಕ್ಷವಂತ ಪರಿಕ್ಷಿತೀ । ಖರೇ ಕೀ ಖೋಟೇ ॥೭॥

ಜಡ ಅನೇಕ ಆತ್ಮಾಯೇಕ । ಐಸಾ ಆತ್ಮಾನಾತ್ಮವಿವೇಕ ।
ಜಗಾ ವರ್ತವಿತಾ ಜಗನ್ನಾಯೆಕ । ತಯಾಸ ಮ್ಹಣಾವೇ ॥೮॥

ಜಡ ಅನಾತ್ಮಾ ಚೇತವೀ ಆತ್ಮಾ । ಸರ್ವೀ ವರ್ತೆ ಸರ್ವಾತ್ಮಾ ।
ಅವಘಾ ಮಿಳೋನ ಚಂಚಳಾತ್ಮಾ । ನಿಶ್ಚಳ ನವ್ಹೆ ॥೯॥

ನಿಶ್ಚಳ ತೇ ಪರಬ್ರಹ್ಮ । ಜೇಥೇ ನಾಹೀ ದೃಶ್ಯಭ್ರಮು ।
ವಿಮಳ ಬ್ರಹ್ಮ ತೇ ನಿಭ್ರಮು । ಜೈಸೇ ತೈಸೇ ॥೧೦॥

ಆಧೀ ಆತ್ಮಾನಾತ್ಮವಿವೇಕ ಥೋರ । ಮಗ ಸಾರಾಸಾರವಿಚಾರ ।
ಸಾರಾಸಾರವಿಚಾರೇ ಸಂವ್ಹಾರ । ಪ್ರಕೃತೀಚಾ ॥೧೧॥

ವಿಚಾರೇ ಪ್ರಕೃತಿ ಸಂವ್ಹಾರೇ । ದೃಶ್ಯ ಅಸ್ತಾ ಚ ವೋಸರೇ ।
ಅಂತರಾತ್ಮಾ ನಿರ್ಗುಣೀ ಸಂಚರೇ । ಅಧ್ಯಾತ್ಮ ಶ್ರವಣೇ ॥೧೨॥

ಘಟಾಕಾಶದ ದೃಷ್ಟಾಂತವನ್ನು ಬ್ರಹ್ಮನಿಗೆ ಕೊಡುವರು. ಮತ್ತು ಘಟ (ಬಿಂದಗಿ, ಗಡಗಿ)ದ ನೀರಿನಲ್ಲಿ ಬೀಳುವ ಪ್ರತಿಬಿಂಬಕ್ಕೆ ಅಂತರಾತ್ಮಾನನ್ನು ಹೋಲಿಸುವರು. (ಬಿಸಿಲಿನಲ್ಲಿ ಜಲ ತುಂಬಿದ ಘಟವಿಟ್ಟು ನೋಡಿದಾಗ ಕಾಣುವ ದೃಶ್ಯದ ಮೇಲಿಂದ ಹೇಳಲಾಗಿದೆ). ಇದರ ಮೇಲೆ ವಿಚಾರ ಮಾಡಿದರೆ ಈಗ ಇವೆರಡರ ಅರ್ಥ ಬೇರೆ ಇರುವದು ನಿಮಗೆ ತಿಳಿದು ಬರುವದು. ಖಾಲಿ ಇರುವ ಗಡಿಗೆಯಲ್ಲಿ (ಘಟದಲ್ಲಿ) ಆಕಾಶವು ತುಂಬಿಕೊಂಡಿರುವದು. ಗಡಿಗೆಯಲ್ಲಿ ಯಾವುದೇ ಹಾಲಚಾಲ ಆಗಲೀ, ಅಲ್ಲಾಡಿದರಾಗಲೀ ಅದರಲ್ಲಿಯ (ಅದರೊಳಗಿನ) ಆಕಾಶವು ನಿಶ್ಚಲ ವಿರುವದು. ಬ್ರಹ್ಮವೂ ಸಹ ಆ ಆಕಾಶದಂತೆ ನಿಶ್ಚಲವಿರುವದು. ಆದರೆ ಈಗ ಹೇಳುವೆ ತಿಳಿಯಿರಿ. ಖಾಲಿ ಇರುವ ಗಡಿಗೆಯಲ್ಲಿ ನೀರು ತುಂಬಿದ್ದಾದರೆ ಆ ನೀರಿನ ಉಪಾಧಿಯಿಂದ ಅದರಲ್ಲಿ (ಆ ನೀರಿನಲ್ಲಿ) ಬಿದ್ದ ಆಕಾಶದ ಪ್ರತಿಬಿಂಬವು ಗಡಿಗೆಯ ಹಾಲಚಾಲ ಅಲ್ಲಾಟದಿಂದ (ನೀರು ಅಲ್ಲಾಡಿ) ಆಕಾಶವು ಚಂಚಲದಂತೆ ಭಾಸವಾಗುವದು. ಜಾಣೀವರೂಪ ಅಂತರಾತ್ಮಾ ಈ ಪ್ರತಿಬಿಂಬದಂತೆ ಚಂಚಲವಿರುವದು. ಆಕಾಶವು ಒಂದೇ ಇರುವದು. ಅದು ನಿಶ್ಚಲವಿರುವದು. ನೀರಿನ ಉಪಾಧಿಯಿಂದ ಇದು ಚಂಚಲದಂತೆ ಭಾಸವಾಗುವದು. ಇದರಂತೆ ಬ್ರಹ್ಮವೂ ಒಂದೇ ಒಂದು ಇರುವದು. ಇದೂ ಸಹ ನಿಶ್ಚಲವೇ ಇರುವದು. ಅವಿದ್ಯೆಯ ಉಪಾಧಿಯಿಂದಾಗಿ ಅದೇ ಬ್ರಹ್ಮವು ಅಂತರಾತ್ಮಾ ಈ ರೂಪದಿಂದ, ಚಂಚಲತನದಿಂದ ಭಾಸವಾಗುವದು. [೪] ಯಾವ ಯಾವುದು ಆಯಿತೋ ಮತ್ತು ಹುಟ್ಟಿತೋ ಅದೆಲ್ಲ ಭೂತವೇ ಆಗಿರುವದು. ಯಾಕಂದರೆ ಯಾವ ಯಾವುದು ಹುಟ್ಟುವದೋ ಅದೆಲ್ಲವೂ ನಾಶ ಹೊಂದುವದು. ಇದರ ಮೇಲಿಂದ ಏನೇನು ಬರುವದೋ ಮತ್ತು ಹೋಗುವದೋ ಅದೆಲ್ಲವೂ ಚಂಚಲವೆಂದು ತಿಳಿಯಿರಿ. [೫] ಅವಿದ್ಯೆಯು ಜಡ ಸ್ವರೂಪವಿರುವದು. ಅಂತರಾತ್ಮವು ಚಂಚಲವಿರುವದು. ಅವಿದ್ಯೆಯು ಜಡಸ್ವರೂಪದ ಕರ್ಪೂರವಿದ್ದಂತೆ. ಮತ್ತು ಅಗ್ನಿಯು ಚಂಚಲ ಆತ್ಮಾ ಇರುವದು. ಕರ್ಪೂರಕ್ಕೆ ಬೆಂಕಿ ಹತ್ತಿದರೆ ಎರಡೂ ಸುಟ್ಟು ತತ್ಕಾಲದಲ್ಲಿ ಆರಿ ಹೋಗು ವವು. [ಆಗ ಕರ್ಪೂರದ ಶೇಷ ಸಹ ಇರುವದಿಲ್ಲ. ಅದರಂತೆ ಬೆಂಕಿ(ಅಗ್ನಿ)ಯೂ ಇರುವದಿಲ್ಲ]. ಇದರಂತೆ ಅವಿದ್ಯೆಯೂ ಹೋದರೆ ಇಲ್ಲದಂತಾದರೆ ಆ ಕೂಡಲೇ ಅಂತರಾತ್ಮಾ ಸಹ ಇಲ್ಲದಂತಾಗಿ ಅಲ್ಲಿ ನಿಶ್ಚಲ ಬ್ರಹ್ಮವೊಂದೇ ಶಿಲುಕು ಉಳಿಯುವದು. [೬] ಬ್ರಹ್ಮ ಮತ್ತು ಆಕಾಶ ಇವು ನಿಶ್ಚಲ ವರ್ಗದಲ್ಲಿಯವಿರುವವು. ಆದರೆ ಅಂತರಾತ್ಮಾ ಮತ್ತು ವಾಯು ಇವು ಚಂಚಲ ವರ್ಗದಲ್ಲಿಯವಿರುವವು. ಈ ಮಾತು ಖರೇ ಇರುವದೋ, ಖೊಟ್ಟಿ ಇರುವದೋ ಇದರ ಪರೀಕ್ಷೆಯನ್ನು ಪರೀಕ್ಷಕ ಜ್ಞಾನಿಯು ಮಾತ್ರ ಮಾಡಬಲ್ಲನು. [೭] ಜಡ ಮತ್ತು ಸ್ಥೂಲ ಪದಾರ್ಥಗಳು ಅನೇಕ ವಿರುವವು. ಆದರೆ ಅದೇ ಸೂಕ್ಷ್ಮ ಆತ್ಮಾ ಒಂದೇ ಇರುವದು, ಅನ್ನುವ ಬುದ್ಧಿಯ ಸ್ಥಿರತ್ವ ನಿಶ್ಚಿತ ತಿಳುವಳಿಕೆ ಉಂಟಾಗುವದಕ್ಕೆ ಆತ್ಮಾನಾತ್ಮ ವಿವೇಕ ಅಂತಾ ಅನ್ನುವರು. ಈ ಆತ್ಮಾನಿಗೇ ಜಗತ್ತನ್ನು ನಡೆಸುವಂಥ ಜಗನ್ನಾಯಕ ಅಂತಾ ಅನ್ನುವರು. [೮] ಜಡವಿರುವದೆಲ್ಲವೂ ಅನಾತ್ಮವೆಂದು ತಿಳಿಯಬೇಕು. ಇದಕ್ಕೆ ಅಂತರಾತ್ಮನು ಚೇತನಾ ಕೊಡುವನು. ಸರ್ವ ಜಡದಲ್ಲಿ ಇವನು ಇದ್ದು ಅದಕ್ಕೆ ಚೇತನಾ ಕೊಡುವನೆಂದು ಇವನಿಗೇ, ಈ ಅಂತರಾತ್ಮಾನಿಗೇ ಸರ್ವಾತ್ಮಾ ಅಂತಾ ಅನ್ನುವರು. ಆದರೆ ಇದೆಲ್ಲವೂ ಒಟ್ಟಿನಲ್ಲಿ ಚಂಚಲಾತ್ಮವೇ ಇರುವವು. ನಿಶ್ಚಲಾತ್ಮವಲ್ಲ, ನಿಶ್ಚಲ ಬ್ರಹ್ಮವೂ ಅಲ್ಲ. [೯] ಯಾವುದರಲ್ಲಿ ಎಳ್ಳಷ್ಟು ಸಹ ದೃಶ್ಯದ ಭ್ರಮೆ ಇಲ್ಲವೋ ಅದು ನಿಶ್ಚಲ ಪರಬ್ರಹ್ಮವೆಂದು ತಿಳಿಯಿರಿ. ವಿಮಲ ಬ್ರಹ್ಮವು ಅತ್ಯಂತ ಭ್ರಮರಹಿತ ಇರುವದು. ಇದು ಹೇಗಿರುವದೋ ಹಾಗೆಯೇ ಇರು ವದು. [೧೦] ಆತ್ಮಾನಾತ್ಮ ವಿವೇಕವು ಸ್ಥಿರಗೊಂಡ ಮೇಲೆ ಅನಾತ್ಮವು ಬದಿಗೆ ಸರಿಯುವದು. ಸಾಧಕನು ಅಂತ ರಾತ್ಮನವರೆಗೂ ಮುಟ್ಟುವನು. ಆಮೇಲೆ ಸಾರಾಸಾರ ವಿಚಾರದಿಂದ ಪ್ರಕೃತಿ (ಮಾಯೆ)ಯ ಸಂಹಾರ ಮಾಡಬೇಕಾ ಗುವದು:- ಮೊದಲು ದೊಡ್ಡದಾಗಿ ಅಂದರೆ ವಿಸ್ತಾರವಾಗಿ ಆತ್ಮಾನಾತ್ಮ ವಿವೇಕ ವಿಚಾರ ಮಾಡಬೇಕು. ಅನಂತರ ಸಾರಾಸಾರ ವಿಚಾರ ಮಾಡಬೇಕು. ಸಾರಾಸಾರ ವಿಚಾರದಿಂದ ಪ್ರಕೃತಿಯ ಸಂಹಾರವಾಗುವದು. (ನಾಶವಾಗು ವದು) [೧೧] ಸಾರಾಸಾರ ವಿಚಾರದಿಂದ ಪ್ರಕೃತಿಯ ನಿರಾಸ(ಪರಿಹಾರ)ಆಯಿತೆಂದರೆ ವಿವೇಕ ಪ್ರಳಯ ಸಾಧಿಸುವದು ಆಮೇಲೆ ದೃಶ್ಯ ವಿಶ್ವ ಇದ್ದೂ ಇಲ್ಲದಂತಾಗುವದು. ಸತತವಾದ ಅಧ್ಯಾತ್ಮ ಶ್ರವಣದಿಂದ ಅಂತರಾತ್ಮನು ನಿರ್ಗುಣ ಬ್ರಹ್ಮ ಸ್ವರೂಪದಲ್ಲಿ ಅದೃಶ್ಯನಾಗುವನು. [೧೨]

ಚಢತಾ ಅರ್ಥ ಲಾಗಲಾ । ತರೀ ಅಂತರಾತ್ಮಾ ಚಢತ ಚಿ ಗೇಲಾ ।
ಉತರಲ್ಯಾ ಅರ್ಥೇ ಉತರಲಾ । ಭೂಮಂಡಳೀ ॥೧೩॥

ಅರ್ಥಾಸಾರಿಖಾ ಆತ್ಮಾ ಹೋತೋ । ಜಿಕಡೆ ನೇಲಾ ತಿಕಡೆ ಜಾತೋ ।
ಅನುಮಾನೇ ಸಂದೇಹೀ ಪಡತೋ । ಕಾಂಹೀಯೇಕ ॥೧೪॥

ನಿಸಂದೇಹ ಅರ್ಥ ಚಾಲಿಲಾ । ತರೀ ಆತ್ಮಾ ನಿಸಂದೇಹ ಚಿ ಜಾಲಾ ।
ಅನುಮಾನಅರ್ಥೇ ಜಾಲಾ । ಅನುಮಾನರೂಪೀ ॥೧೫॥

ನವರಸಿಕ ಅರ್ಥ ಚಾಲೇ । ಶ್ರೋತೇ ತದ್ರೂಪ ಚಿ ಜಾಲೇ ।
ಚಾಟಪಣೇ ಹೋಊನ ಗೇಲೇ। ಚಾಟ ಚಿ ಆವಘೇ ॥೧೬॥

ಜೈಸಾ ಜೈಸಾ ಘಡೆ ಸಂಗ । ತೈಸೆ ಗುಹ್ಯರಾಚೆ ರಂಗ।
ಯಾಕಾರಣೇ ಉತ್ತಮ ಮಾರ್ಗ । ಪಾಹೋನ ಧರಾವಾ ॥೧೭॥

ಉತ್ತಮ ಅನ್ನೇ ಬೋಲತ ಗೇಲೇ । ತರೀ ಮನ ಅನ್ನಾಕಾರ ಚಿ ಜಾಲೇ ।
ಲಾವಣ್ಯ ವನಿತೇಚೇ ವರ್ಣಿಲೇ। ತರೀ ಮನ ತೇಥೇ ಚಿ ಬೈಸೆ ॥೧೮॥

ಪದಾರ್ಥ ವರ್ಣನ ಅಘವೇ । ಕಿತೀ ಮ್ಹಣೋನ ಸಾಂಗಾವೇ ।
ಪರಂತು ಅಂತರೀ ಸಮಜಾವೇ । ಹೋಯೆ ಕಿ ನಹ್ವೇ ॥೧೯॥

ಜೆ ಜೇ ದೇಖಿಲೇ ಆಣೀ ಏಕಿಲೇ । ತೇ ಅಂತರೀ ಸದೃಢ ಬೈಸಲೇ ।
ಹಿತ ಅನ್ಹಿತ ಪರೀಕ್ಷಿಲೇ । ಪರೀಕ್ಷವಂತೀ ॥೨೦॥

ಯಾಕಾರಣೇ ಸರ್ವ ಸಾಂಡಾವೇ । ಯೇಕ ದೇವಾಸ ಧುಂಡಾವೇ ।
ತರೀಚ ಮರ್ಮ ಪಡೆ ಠಾವೇ । ಕಾಹೀಯೇಕ ॥೨೧॥

ಶ್ರೀ ಸಮರ್ಥರು ವಿವೇಕದ ಮೇಲೆ ಬಹಳ (ವಿಲಕ್ಷಣ) ಜೋರು ಕೊಟ್ಟಿರುವರು. ವಿವೇಕ ಮಾಡುವ ಯುಂಕ್ತಿಯು ಸಾಧಿಸಿದ್ದಾದರೆ ಕೇಳುವದೇನಿದೆ ? ಸಾಧಕನ ಅಂತರಂಗವು ಅಧ್ಯಾತ್ಮವೆಂಬ ಅಮೃತದಿಂದ ಅಗದೀ ಭರ ಪೂರ ತುಂಬುವದು. ಅರ್ಥದೊಂದಿಗೆ ತದಾಕಾರ (ಏಕರೂಪ) ಆಗುವ ಕಲೆಯು ಬ್ರಹ್ಮದೊಂದಿಗೆ ತದಾಕಾರವಾಗಲು ಅಗದೀ ಉಪಯೋಗ ಬೀಳುವದು. ಆದ್ದರಿಂದ ಸಾಧಕರು ನಿಃಸಂದೇಹವಾದ ಅರ್ಥದೊಂದಿಗೆ ತದಾಕಾರರಾಗಬೇಕು ಅನ್ನುವದೇ ಇವರ ಆಗ್ರಹದ ಹೇಳಿಕೆ ಇರುವದು:- ಸೂಕ್ಷ್ಮದ ಕಡೆಗೆ ಒಯ್ಯುವ (ಮೇಲಕ್ಕೆ ಹೋಗುವ) ಅರ್ಥವು ಒಳಗೆ (ಅಂತರಂಗ, ಹೃದಯ) ಉದಯ ಹೊಂದಿದ್ದಾದರೆ ಅಂತರಾತ್ಮನು ಸೂಕ್ಷ್ಮದ ಕಡೆಗೆ ಹೋಗುವನು. ಸ್ವತಃ ಸೂಕ್ಷ್ಮನೇ ಆಗುವನು. ಸೂಕ್ಷ್ಮದ ಕಡೆಗೆ ಹೋಗದೆ ಸ್ಥೂಲದ ಕಡೆಗೆ ಎಳೆಯುವ ಅರ್ಥ ಒಳಗೆ ಪ್ರಕಟವಾದ ದ್ದಾದರೆ ಆಗ ಅಂತರಾತ್ಮನು ಸ್ಥೂಲದ ಕಡೆಗೆ ಅಂದರೆ ಕೆಳಗೆ ಬರುವನು. ಮತ್ತು ಸ್ವತಃ ಹೆಚ್ಚು ಹೆಚ್ಚು ಸ್ಥೂಲ ನಾಗುವನು ಆ ಮೇಲೆ ಈ ಸ್ಥೂಲನು ಜಗತ್ತಿನಲ್ಲಿಯ ಜಡವಸ್ತುಗಳಲ್ಲಿ ಅಂಟಿಕೊಳ್ಳುವನು. (ಸೇರುವನು). [೧೩] ಅಂತರಾತ್ಮನಲ್ಲಿಯ ಗುಣವು ಹೇಗಿರುವದೆಂದರೆ ಇವನು ಅರ್ಥದಂತೆ ರೂಪ ತಳೆಯುವನು. ಅರ್ಥವು ಎತ್ತ ಕಡೆಗೆ ಒಯ್ಯುವದೋ ಅತ್ತ ಕಡೆಗೆ ಇವನು ಹೋಗುವನು. ಕಲ್ಪನಾ ಮಾಡುತ್ತ ಹೋದದ್ದಾದರೆ ಅದರಂತೆ ಯಾವುದಾದ ರೊಂದು ಸಂಶಯದಲ್ಲಿ ತೊಡಕಿ ಅದರಂತೆ ಆ ಸಂಶಯದ ಕಟ್ಟಿನಲ್ಲಿ ಸಿಕ್ಕು ಬೀಳುವನು. ಅರ್ಥಾತ್ ಅದರಂತೆ ಆಗು ವನು. [೧೪] ಒಳಗಿನ ಅರ್ಥವು ಅಗದೀ ಸಂಶಯರಹಿತವಿದ್ದರೆ ಅಂತರಾತ್ಮಾ ಸಹ ಅತ್ಯಂತ ನಿಃಸಂಶಯನಾಗುವನು. ಅರ್ಥ ಅನಿಶ್ಚಿತ ಇದ್ದದ್ದಾದರೆ ಅಂತರಾತ್ಮನೂ ಸಹ ಅದರಂತೆ ಅನಿಶ್ಚಿತ ಸ್ವರೂಪದವನೇ ಆಗುವನು. [೧೫] ಅಂತ ರಾತ್ಮಾ ಬೇರೆ ಬೇರೆ ಪ್ರಕಾರದ ಅರ್ಥದೊಂದಿಗೆ ಹೇಗೆ ಹೇಗೆ ತದಾಕಾರ ಆಗುವನು. ಇದರ ವರ್ಣನೆ ಮಾಡುವರು:- ಶೃಂಗಾರ, ವೀರ, ಹಾಸ್ಯ, ಕರುಣಾ, ರೌದ್ರ, ಭಯಾನಕ, ಭೀಬತ್ಸ, ಅದ್ಭುತ, ಶಾಂತ ಅನ್ನುವ ನವರಸಗಳ ವರ್ಣನೆ ನಡೆದಿದ್ದರೆ ಶ್ರೋತಾ ಜನರ ಅಂತರಾತ್ಮಾ ಆಯಾ ರಸದೊಂದಿಗೆ ತದ್ರೂಪ ಆಗುವನು. ಹುಡುಗಾಟಿಕೆ (ಚೇಷ್ಟೆ) ನಡೆದರೆ ಅಂತರಾತ್ಮನೂ ಅದರೊಂದಿಗೆ ತದ್ರೂಪವಾಗುವನು. [೧೬] ಓತೀಕೇತ (ಓತೀಕಾಟ) ಗುಣವು ಹೇಗಿರುವ ದೆಂದರೆ ಯಾವ ರಂಗ (ಬಣ್ಣ)ದ ಕೂಡ ಅದರ ಸಂಗತಿ ಬರುವದೋ ಆ ರಂಗ (ಬಣ್ಣ)ದಂತೆ ಅದು ಕಾಣುವದು. ಮನುಷ್ಯರಲ್ಲಿಯ ಅಂತರಾತ್ಮದ ರೀತಿಯೂ ಹೀಗೇ ಇರುವದು. ಆದ್ದರಿಂದ ಮನುಷ್ಯರು ಉತ್ತಮ ಮಾರ್ಗವನ್ನು ಹುಡುಕಬೇಕು. ಮತ್ತು ಆ ಮಾರ್ಗದಿಂದ ನಡೆಯಬೇಕು. [೧೭] ಉತ್ತಮ ಗುಣದ ಅನ್ನದ ಬಗ್ಗೆ ಮಾತು ಹೊರ ಟರೆ ನಮ್ಮ ಮನವು ಆ ಅನ್ನದೊಂದಿಗೆ ತದ್ರೂಪವಾಗುವದು. ಒಬ್ಬ ಸ್ತ್ರೀಯಳ ಸೌಂದರ್ಯದ ವರ್ಣನೆ ಮಾಡಿದ್ದಾ ದರೆ ಮನವು ಆ ವರ್ಣನೆಯೊಂದಿಗೇ ತದಾಕಾರ ಹೊಂದುವದು. [೧೮] ಈ ಪ್ರಕಾರ ಯಾವ ಪದಾರ್ಥದ ವರ್ಣನೆ ಮಾಡುವೆವೋ ಆ ಪದಾರ್ಥಗಳೊಂದಿಗೇ ಮನವು ತದಾಕಾರವಾಗಿ ಹೋಗುವದು. ಇಂಥ ಎಷ್ಟೋ ಉದಾಹರಣೆ ಗಳನ್ನು ಕೊಡಲಿಕ್ಕೆ ಬರುವದು. ವರ್ಣಿತ ವಸ್ತುವಿನೊಂದಿಗ ಮನವು ತದಾಕಾರವಾಗುವದೇ ಅಥವಾ ಇಲ್ಲವೇ ಅನ್ನು ವದನ್ನು ಅವರವರೇ ತಮ್ಮ ಅಂತರಂಗದ ಅನುಭವದ ಮೇಲಿಂದ ಗುರುತಿಸಿ ತಿಳಿಯಬೇಕು. [೧೯] ಮನುಷ್ಯನು ಕಣ್ಣುಗಳಿಂದ ಯಾವ ಯಾವುದನ್ನು ನೋಡುವನೋ ಮತ್ತು ಕಿವಿಯಿಂದ ಏನೇನು ಕೇಳುವನೋ ಅವೆಲ್ಲವೂ ಅವನ ಅಂತರ್ಯಾಮದಲ್ಲಿ ಹೋಗಿ ಗಟ್ಟಿಯಾಗಿ ಕೂಡ್ರುವವು. ಇವುಗಳಲ್ಲಿ ಯಾವದು ತನ್ನ ಹಿತದ್ದು ಇರುವದು? ಮತ್ತು ಅಹಿತಕರವಾದದ್ದು ಯಾವುದು ? ಅನ್ನುವದರ ಪರೀಕ್ಷೆಯನ್ನು ಪರೀಕ್ಷಕನೇ ಮಾಡುವನು. [೨೦] ತನ್ನ ಅಂತರ್ಯಾ ಮದಲ್ಲಿ ದೇವರ ಕಡೆಗೆ ಒಯ್ಯುವ ಅರ್ಥವನ್ನೇ ಹಿಡಿದು ಸಂಗ್ರಹಿಸಿಕೊಳ್ಳುವಂಥ ವಿವೇಕವನ್ನು ಚತುರ ಮನುಷ್ಯನು ಮಾಡಬೇಕು. ಏನನ್ನಾದರೂ ಮಾಡಿರಿ, ಅದರಿಂದ ದೇವರ ಶೋಧ ಪಡೆದು ಆನಂದಮಯರಾಗುವದೇ ನಿಮ್ಮ ಗುರಿ ಇರಲಿ:- ಆದ್ದರಿಂದ ಉಳಿದೆಲ್ಲವನ್ನೂ ಬಿಟ್ಟುಕೊಟ್ಟು ಒಬ್ಬನೇ ಒಬ್ಬ ದೇವನ ಶೋಧ ಮಾಡಿರಿ. ಹೀಗೆ ಮಾಡಿದರೆ ಮಾತ್ರ ಜೀವನದ ರಹಸ್ಯವು ಕೆಲವೊಂದು ಪ್ರಮಾಣದಲ್ಲಿ ಗೊತ್ತಾದೀತು. [೨೧]

ನಾನಾ ಸುಖೇ ದೇವೇ ಕೇಲೀ । ಲೋಕೇ ತಯಾಸ ಚುಕಲೀ ।
ಏಸೀ ಚುಕತಾ ಚ ಗೇಲೀ । ಜನ್ಮವರೀ ॥೨೨॥

ಸರ್ವ ಸಾಂಡೂನ ಶೋಧಾ ಮಜಲಾ । ಏಸೆ ದೇವ ಚಿ ಬೋಲಿಲಾ ।
ಲೋಕೀ ಶಬ್ದ ಅಮಾನ್ಯ ಕೇಲಾ । ಭಗವಂತಾಚಾ ॥೨೩॥

ಮ್ಹಣೋನ ನಾನಾ ದುಃಖೇ ಭೋಗಿತೀ । ಸರ್ವಕಾಳ ಕಷ್ಟೀ ಹೋತೀ ।
ಮನೀ ಸುಖ ಚಿ ಇಛಿತೀ । ಪರೀ ತೇ ಕೈಚೇ ॥೨೪॥

ಉದಂಡ ಸುಖ ಜಯಾ ಲಾಗಲೇ । ವೇಡೇ ತಯಾಸ ಚುಕಲೇ ।
ಸುಖ ಸುಖ ಮ್ಹಣತಾ ಚ ಮೇಲೇ । ದುಃಖ ಭೋಗಿತಾ ॥೨೫॥

ಶಾಹಾಣ್ಯಾನೇ ಏಸೆ ನ ಕರಾವೇ । ಸುಖ ಹೋಯೆ ತೇ ಚಿ ಕರಾವೇ।
ದೇವಾಸೀ ಧುಂಡಿತ ಜಾವೇ । ಬ್ರಹ್ಮಾಂಡಾಪರತೇ ॥೨೬॥

ಮುಖ್ಯ ದೇವ ಚಿ ಠಾಊ ಪಡಿಲಾ । ಮಗ ಕಾಯೆ ಉಣೇ ತಯಾಲಾ ।
ಲೋಕ ವೇಡೆ ವಿವೇಕಾಲಾ । ಸಾಂಡೂನ ಜಾತೀ ॥೨೭॥

ವಿವೇಕಾಚೇ ಫಳ ತೇ ಸುಖ । ಅವಿವೇಕಾಚೇ ಫಳ ತೇ ದುಃಖ ।
ಯಾತ ಮಾನೇಲ ತೇ ಅವಶ್ಯಕ । ಕೇಲೇ ಪಾಹಿಜೆ ॥೨೮॥

ಕರ್ತಯಾಸೀ ವೊಳಖಾವೇ । ಯಾಸ ವಿವೇಕ ಮ್ಹಣಾವೇ ।
ವಿವೇಕ ಸಾಂಡಿತಾ ವ್ಹಾವೇ । ಪರಮ ದುಃಖೀ ॥೨೯॥

ಆತಾ ಅಸೋ ಹೇ ಬೋಲಣೆ । ಕರ್ತ್ಯಾಸ ವೊಳಖಣೇ ।
ಆಪಲೇ ಹಿತ ವಿಚಕ್ಷಣೇ । ಚುಕೋ ನಯೆ ॥೩೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಪ್ರತ್ಯಯೆ ವಿವರಣ' ನಾಮ ಸಮಾಸ ಸಪ್ತಮ ॥

● ●

ದೇವರು ಅನೇಕ ಪ್ರಕಾರದ ಉತ್ತಮ ಸುಖಗಳನ್ನು ನಿರ್ಮಿಸಿರುವನು. ಆದರೆ ಅಜ್ಞಾನದಿಂದಾಗಿ ಜನರಿಗೆ ಇವು ಪ್ರಾಪ್ತವಾಗುವದಿಲ್ಲ. ಸುಖದ ಮಾರ್ಗ ತಪ್ಪಿದ್ದರಿಂದ ಬದುಕಿರುವತನಕ(ಜನ್ಮಭರ)ಇಷ್ಟ ಸಿಗುವದಿಲ್ಲ[೨೨] "ಇತರ ಎಲ್ಲವನ್ನು ಬಿಟ್ಟು ನನ್ನ ಶೋಧವನ್ನು ಮಾಡಿರಿ" ಅಂತಾ ಭಗವಂತನೇ (ಭ. ಗೀ. ೧೮ ೬೬ ರಲ್ಲಿ) ಅಂದಿದ್ದಾನೆ. ಆದರೆ ಜನರು ಭಗವಂತನ ಶಬ್ದದ ಕಡೆಗೆ ಲಕ್ಷ್ಯ ಕೊಡುವದೇ ಇಲ್ಲ. [೨೩] ಇದರ ಪರಿಣಾಮವೇನಾಗುವದೆಂದರೆ ಜನರು ನಾನಾ ಪ್ರಕಾರದ ದುಃಖಗಳನ್ನು ಭೋಗಿಸಬೇಕಾಗುವದು. ಸದಾ ಸರ್ವಕಾಲ ಕಷ್ಟದಲ್ಲಿ ಕಳೆಯಬೇಕಾಗುವದು. ಮನುಷ್ಯನ ಮನದಲ್ಲಿ ಸದಾ ಸುಖ ಪ್ರಾಪ್ತಿಯ ಇಚ್ಛೆಯೇ ಇರುವದು ಪರಂತು ಅದು ಸಫಲವಾಗುವದಿಲ್ಲ. [೨೪] ನಿಜವಾಗಿ ನೋಡಿದರೆ ಮನುಷ್ಯನಲ್ಲಿ ಅಪಾರ ಸುಖದ ಸಂಗ್ರಹವೇ ಇರುವದು. ಆದರೆ ಹುಚ್ಚ ಮಾನವನು ತನ್ನ ಅಜ್ಞಾನದಿಂದ ಆ ಸುಖವನ್ನು ಪಡೆಯಲಾರದವನಾಗಿರುವನು. ನನಗೆ ಸುಖಬೇಕು ಅನ್ನುವ ಇಚ್ಛೆ, ಆಸೆ ಸದಾ ಇರುವದು. ಆದರೆ ಸಾಯುವವರೆಗೂ ದುಃಖ ಭೋಗಿಸುತ್ತಲೇ ಸತ್ತು ಹೋಗುವನು [೨೫] ಆದ್ದರಿಂದ ಬುದ್ಧಿವಂತರಾದವರು ಹೀಗೆ ಮಾಡಬಾರದು. ಈ ಜನ್ಮದಲ್ಲಿ ಭಗವಂತನ ಸುಖ ನಮಗೆ ಸಿಗುವಂತೆ ನಾವು ನಡೆಯಬೇಕು. ದೇವರ ಶೋಧ ಮಾಡುವಲ್ಲಿ ಬ್ರಹ್ಮಾಂಡವನ್ನೇ ತಿರುವಿ ಹಾಕಬೇಕು. (ಹುಡುಕಬೇಕು).ಕೊನೆಯಲ್ಲಿ ಬ್ರಹ್ಮಾಂಡದ ಆಚೆಗೆ ಹೋಗಬೇಕು.(೨೬) ಮುಖ್ಯ ದೇವನು ಹಸ್ತಗತವಾದನಂತರ ಆಮೇಲೆ ಯಾವುದಕ್ಕೂ ಏನೂ ಕಡಿಮೆ ಆಗಲಾರದು. ಆದರೆ ಜನರು ಹುಚ್ಚರಂತೆ ವರ್ತಿಸುವರು. ವಿವೇಕವನ್ನು ಬಿಟ್ಟುಬಿಡುವರು. ಅವಿವೇಕದಿಂದ ನಡೆಯುವರು. [೨೭] ವಿವೇಕದಿಂದ ನಡೆಯುವದರ ಫಲವು ಸುಖದಾಯಕವಾದರೆ, ಅವಿವೇಕದ ನಡತೆಯ ಫಲವು ದುಃಖದಾಯಕವಿರುವದು, ಇದರಲ್ಲಿ ನಿಮ್ಮ ಮನಸ್ಸಿಗೆ ಒಪ್ಪಿದ್ದನ್ನು ನೀವು ಮಾಡಬಹುದು. ವಿವೇಕದಿಂದ ಅಗದೀ ಯೋಗ್ಯವಾದುದನ್ನು ಮಾಡಿರಿ. [೨೮] ನಿಜವಾದ ಕರ್ತಾ ಯಾವನಿರುವನೋ ಅವನನ್ನೇ ಹುಡುಕಿ (ತಿಳಿದು)ಗುರುತಿಸುವದಕ್ಕೆ ವಿವೇಕವೆಂದು ಹೆಸರು ಇರುವದು ಯಾರು ಈ ವಿವೇಕವನ್ನು ಬಿಟ್ಟು ಬಿಡುವರೋ ಅವರು ದುಃಖಿಗಳಾಗುವರು. [೨೯] ಇಲ್ಲಿಗೆ ಈ ವಿಷಯದ ಮಾತುಗಳು ಸಾಕು. ಖರೇ ಕರ್ತಾನನ್ನು ಹುಡುಕುವದರಲ್ಲಿಯೇ ನಿಮ್ಮ ಹಿತ ಅಥವಾ ಕಲ್ಯಾಣ ಇರುವದು. ಬುದ್ಧಿವಂತರಾದ ಜನರು ಈ ಹಿತ ಸಾಧಿಸಿಕೊಳ್ಳಲಿಕ್ಕೆ ತಪ್ಪಬಾರದು. [೩೦]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹದಿಮೂರನೆಯ ದಶಕದೊಳಗಿನ "ಪ್ರತ್ಯಯ ವಿವರಣ" ಎಂಬ ಹೆಸರಿನ ಏಳನೆಯ ಸಮಾಸವು ಮುಗಿದುದು.

## ದಶಕ ೧೩. ಸಮಾಸ ೮. ಕರ್ತಾ ನಿರೂಪಣ (ನುಡಿ ೩೮)

ಶ್ರೀ ಸಮರ್ಥರು ಪರಮಾರ್ಥ ವಿಷಯದ ಬಗ್ಗೆ ಒಂದು ಅತಿ ಮಹತ್ವದ ಅಥವಾ ಕಠಿಣವಾದ ಪ್ರಶ್ನೆಯನ್ನು ಇಲ್ಲಿ ಎತ್ತಿ ಇಟ್ಟಿದ್ದಾರೆ. ಹಾಗಾದರೆ ಅದು ಯಾವುದು? ಈ ವಿಚಿತ್ರಮಯ ವಿಶ್ವದ ಕಡೆಗೆ ನಾವು ಸಹಜವಾಗಿ ನೋಡಿದ್ದಾದರೆ ವಿಚಾರವಂತ ಮನುಷ್ಯನ ಮನವು ಆಶ್ಚರ್ಯದಿಂದ ದಂಗಾಗುವದು. ಆದರೆ ನಮ್ಮ ವಿಚಾರದ ಮಟ್ಟವು ಸ್ಥಳ ಕಾಲ ಮತ್ತು ನಿಮಿತ್ತ (ಉದ್ದೇಶ, ಕಾರಣ) ಇವುಗಳ ಆಧಾರದಿಂದ ನಡೆಯುವದು. ಆದ್ದರಿಂದ ಆ ಕ್ಷಣದಲ್ಲಿಯೇ ಮನಸ್ಸಿನಲ್ಲಿ ಒಂದು ಪ್ರಶ್ನೆ ಏಳುತ್ತದೆ. ಅದು "ಈ ವಿರಾಟ ವಿಶ್ವದ ಕರ್ತಾ ಯಾರು?" ವಿಶ್ವದ ನಿಜವಾದ ಕರ್ತಾ ಯಾರು ಇರುವರು? ಅಥವಾ ವಿಶ್ವಕ್ಕೆ ಯಾರಾದರೂ ಕರ್ತಾ ಇರುವರೋ ಅಥವಾ ಇಲ್ಲವೋ? ಅನ್ನುವ ಪ್ರಶ್ನೆಗೆ ಖರೇ ಉತ್ತರವು ಕೇವಲ ಬ್ರಹ್ಮಜ್ಞಾನಿಯಾದ ಪುರುಷನಿಗೆ ಮಾತ್ರ ಗೊತ್ತಿರುವದು. ಆದರೂ ಸಹ ಪ್ರತಿಯೊಬ್ಬ ಸಾಮಾನ್ಯ ಮನುಷ್ಯರು ತಮ್ಮ ತಮ್ಮ ಅನಿಸಿಕೆಗೆ ಅನುಸಾರವಾಗಿ ವಿಶ್ವದ ಕರ್ತಾ ಯಾರಿರುವರೆಂಬ ಬಗ್ಗೆ ತಮ್ಮ ಮತವನ್ನು ಒತ್ತಿ (ನಿಶ್ಚಿತಾರ್ಥದಲ್ಲಿ) ಹೇಳುವರು. ಇಂಥ ಅನೇಕ ಮತಗಳನ್ನು ಉದಾಹರಿಸಿ ಹೇಳಿದ ನಂತರ ಶ್ರೀ ಸಮರ್ಥರು ಹೇಳುವದೇನಂದರೆ:- ವಿಶ್ವಕರ್ತಾನ ಶೋಧ ಮಾಡುವ ಬಗ್ಗೆ ಸ್ವಲ್ಪ ಬೇರೆ ತರದ ದೃಷ್ಟಿಯಿಂದ ವಿಚಾರ ಮಾಡುವದು ಅವಶ್ಯವಿರುವದು· ವ್ಯವಹಾರದಲ್ಲಿ ನಮಗೆ ಕಂಡು ಬರುವದೇನಂದರೆ- ಕರ್ತಾನು ಯಾವ ಯಾವುದನ್ನು ನಿರ್ಮಾಣ ಮಾಡುವನೋ ಅದೆಲ್ಲವೂ (ಹುಟ್ಟಿಸಿದ್ದೆಲ್ಲವೂ) ಕರ್ತಾನ ನಂತರ (ಹುಟ್ಟಿಸಿದವನ ನಂತರ) ಅಸ್ತಿತ್ವದಲ್ಲಿ ಬರುವದು ಅಂದರೆ ನಿರ್ಮಿಸುವವನು ಮೊದಲಿಗೆ ಇರುವನು. ಅನಂತರ ನಿರ್ಮಿತಗೊಂಡ ವಸ್ತು ತೋರಿಬರುವದು. ಇದು ಈ ದೃಶ್ಯ ಜಗತ್ತಿನಲ್ಲಿ (ಪೃಥ್ವಿಯಲ್ಲಿ) ಕಂಡು ಬರುವ ಸ್ಪಷ್ಟ ನಿಯಮ ವಿರುವದು. ಈ ನಿಯಮವನ್ನು ಸೃಷ್ಟಿಗೆ-ದೃಶ್ಯವಿಶ್ವಕ್ಕೆ ಹಚ್ಚಿದ್ದಾದರೆ ಏನು ಕಂಡು ಬರುವದೆಂಬುದನ್ನು ನೋಡೋಣ:— ಈ ಯಾವತ್ತೂ ಸೃಷ್ಟಿಯು ಪಂಚಭೂತಗಳಿಂದ ಕೂಡಿದ್ದಾಗಿರುವದು. ಬ್ರಹ್ಮ (ಸೃಷ್ಟಿಕರ್ತಾ ಅನಿಸಿಕೊಂಡವ) ಮೊದಲುಗೊಂಡು ಯಾವತ್ತೂ ದೇವ ದೇವತೆಗಳೂ ಪಂಚಭೂತಗಳಿಂದ ಕೂಡಿ ಆದವರೇ ಇರುವರು. ಇದರ ಅರ್ಥವು ಏನಾಗುವದೆಂದರೆ, ಪಂಚಭೂತಗಳು ಮೊದಲಿಗೆ ಇದ್ದವು. ಅನಂತರ ಈ ಪಂಚಭೂತಗಳಿಂದಲೇ ಈ ಯಾವತ್ತೂ ದೇವ ದೇವತೆಗಳು ಉತ್ಪನ್ನರಾದರು.ಆದ್ದರಿಂದ ಬ್ರಹ್ಮಾದಿ ದೇವತೆಗಳಿಗೆ ಈ ವಿಶ್ವ ಸೃಷ್ಟಿಯ ಕರ್ತೃತ್ವತನ ಬರುವದಿಲ್ಲ. ವಿಶ್ವವು ಪಂಚಭೂತಾತ್ಮಕವಿರುವದು ಅಂದ ಮೇಲೆ ಈ ಮೊದಲಿರುವ ಪಂಚಭೂತಗಳನ್ನು ಯಾವನು ನಿರ್ಮಾಣ ಮಾಡಿದನೋ ಆತನೇ ನಿಜವಾದ ಕರ್ತಾ ಇರಲಿಕ್ಕಬೇಕು. ಈ ಪಂಚಭೂತಗಳೆಲ್ಲವೂ ಮೂಲ ಮಾಯೆಯಲ್ಲಿ ಸಂಗ್ರಹಿತವಾಗಿರುವವು, ಆದ್ದರಿಂದ ನಾವು ಪಂಚಭೂತಗಳ ಕರ್ತಾನನ್ನು ಶೋಧಿಸುವದಕ್ಕಾಗಿ ಮೂಲ ಮಾಯೆಯ ಆಚೆಗೆ (ದಾಟಿ—ಮುಂದೆ) ಹೋಗಬೇಕಾಗುವದು. ಅಲ್ಲಿ ಕೇವಲ ನಿರ್ಗುಣ ಬ್ರಹ್ಮಸ್ವರೂಪವು ಮಾತ್ರ

ಶಿಲುಕು ಉಳಿಯುವದು. ನಿರ್ಗುಣದ(ಸ್ಥಳದ)ಲ್ಲಿ ಅಪ್ಪಟವಾದ ಕೇವಲತನದ ಹೊರತಾಗಿ ಇನ್ನೊಂದಾವುದೂ ಇರುವದಿಲ್ಲವಾದ್ದರಿಂದ ಅಲ್ಲಿ ಕರ್ತಾತನ ಇರುವದಿಲ್ಲ. ಈಗ ಇಲ್ಲಿ ಒಂದು ತೊಡಕಿನ ಅಡಚಣೆಯ ಪ್ರಶ್ನೆ ಮುಂದೆ ಬರುವದು. ನಿರ್ಗುಣವಂತೂ ಯಾವತ್ತೂ ಕಲ್ಪನೆಗಳಿಗೆ ಅತೀತವಾದದ್ದಿರುವದರಿಂದ ಇದರಲ್ಲಿ (ನಿರ್ಗುಣದಲ್ಲಿ) ಕರ್ತಾತನವೇ ಇಲ್ಲ. ಇನ್ನು ಸಗುಣವಾದದ್ದರಲ್ಲಿ ಅಥವಾ ನಿರ್ಮಿತ ವಸ್ತುವಿನಲ್ಲಿ (ಬ್ರಹ್ಮಾದಿ ದೇವತೆಗಳಲ್ಲಿ) ಪಂಚಭೂತಗಳಿರುವದರಿಂದ ಇವುಗಳಲ್ಲಿಯೂ ಕರ್ತಾತನವಿಲ್ಲ. ಅಂದ ಮೇಲೆ "ವಿಶ್ವದ ಕರ್ತಾ ಯಾರಿರುವರು? ಅನ್ನುವ ಪ್ರಶ್ನೆಯನ್ನು ಬಗೆಹರಿಸುವದು ಹೇಗೆ? ಅನ್ನುವ ಒಂದು ಹೊಸ ಪ್ರಶ್ನೆ ನಿರ್ಮಾಣವಾಗುವದು, ಇದಕ್ಕೆ ಸರಿಯಾದ ಉತ್ತರವನ್ನು ಶ್ರೀ ಸಮರ್ಥರು ಕೊಟ್ಟಿದ್ದಾರೆ. ಅವರ ಅಭಿಪ್ರಾಯವು ಹೀಗಿರುವದು."ಕರ್ತಾ ಯಾರು?" ಅನ್ನುವ ಈ ಪ್ರಶ್ನೆಯೇ ಸರಿಯಾದದ್ದಲ್ಲ.ಯಾಕಂದರೆ ಪ್ರಶ್ನೆಯನ್ನು ವಿಚಾರಿಸುವವನು ವಿಶ್ವವು ಸಂಪೂರ್ಣ ಖರೇ ಇರುವದು-ಸತ್ಯವಿರುವದು ಅನ್ನುವದನ್ನು ಆಧರಿಸಿ ಕೇಳುವವನಾಗಿರುವದರಿಂದ ಇವನು ಕೇವಲ ಅಜ್ಞಾನಿಯಾಗಿರುವನು. ಕಾರ್ಯಕಾರಣ ಭಾವವು ಮಾನವೀ ಬುದ್ಧಿಯ ಉಪಾಧಿ ಇರುವದು,ಅಳತೆಗೋಲಾಗಿರುವದು, ನಿಯಮಕ್ಕೊಳಪಟ್ಟದ್ದಿರುವದು. ಮಾನವ ಬುದ್ಧಿಯು ಎಲ್ಲಿಯವರೆಗೆ ದೃಶ್ಯ ಮತ್ತು ನಿರ್ಮಿತ ವಿಚಾರವನ್ನು ಸ್ಥಳ ಕಾಲಗಳ ಚೌಕಟ್ಟಿನಲ್ಲಿ ಅಂದರೆ ಒಂದು ನಿಯಮಿತ ಅಳತೆಯಲ್ಲಿ ಮಾಡುವದೋ ಅಲ್ಲಿಯವರೆಗೆ ಕಾರ್ಯಕಾರಣಭಾವವು ಉದ್ದೇಶದಿಂದ ಕೂಡಿದ್ದಾಗಿರುವದು-ಅರ್ಥಪೂರ್ಣವಾಗಿರುವದು. ಪರಂತು (ಆದರೆ) ವಿಶ್ವದ ಕಾರಣವನ್ನು ಶೋಧಿಸುವದಕ್ಕಾಗಿ ನಾವು ಸ್ಥಳ, ಕಾಲ ಇವೆರಡೂ ಕಲ್ಪನೆಗಳ ಆಚೆಗೆ (ದಾಟಿ) ಹೋಗಬೇಕಾಗುವದು. ಅಲ್ಲಿ ಕಾರ್ಯ ಕಾರಣ ಭಾವವು ವ್ಯರ್ಥವಾಗುವದು. ಬ್ರಹ್ಮಜ್ಞಾನಿಯಾದ ಪುರುಷನು ಮಾತ್ರ ದೃಶ್ಯ ವಿಶ್ವದ ಆಚೆಗೆ ಹೋಗಿ ಮುಟ್ಟಬಲ್ಲವನಾಗಿರುವನು. ಅಲ್ಲಿಗೆ ಹೋಗಿ ನೋಡಿದಾಗ ಅವನಿಗೆ ದೃಶ್ಯವಿಶ್ವವೆಲ್ಲವೂ ಸುಳ್ಳ-ಖೊಟ್ಟಿ ಅಂತಾ ಕಾಣುವದು. ಯಾವುದು ಮೂಲದಲ್ಲಿಯೇ ಇಲ್ಲವೋ ಅದಕ್ಕೆ ಕಾರಣವು ಹೇಗೆ ಇದ್ದೀತು? ಅರ್ಥಾತ್ ಇರುವದಿಲ್ಲ. ಈ ದೃಷ್ಟಿಯಿಂದ ಈ ಸೃಷ್ಟಿಗೆ ಯಾರು ಕರ್ತಾರೇ ಇರುವದಿಲ್ಲವೆಂದು ಅನ್ನಬಹುದು. ಆದರೂ ಸಹ ಈ ಕಾಣುವ ದೃಶ್ಯ ವಿಶ್ವವು ಯಾವ ಪ್ರಕಾರದ್ದಿರುವದು. ಈ ಪ್ರಶ್ನೆಯು ಮಾತ್ರ ಹಾಗೆಯೇ ಉಳಿಯುವದು. ಶ್ರೀ ಶಂಕರಾಚಾರ್ಯರ ಗುರು ಗೋವಿಂದ ಭಗವತ್ಪಾದಾಚಾರ್ಯರು ಇವರ ಗುರುಗಳು ಶ್ರೀ ಗೌಡಪಾದಾಚಾರ್ಯರು. ಇವರು ಮಾಂಡೂಕ ಕಾರಿಕೆಗಳ ಆಗಮ ಪ್ರಕರಣದಲ್ಲಿ ಈ ಮೇಲಿನ ಪ್ರಶ್ನೆಗೆ ಯಾವ ಬಗೆಯ ಉತ್ತರ ಕೊಟ್ಟಿರುವರೋ ಅದೇ ರೀತಿಯಲ್ಲಿಯೇ ಶ್ರೀ ಸಮರ್ಥರು ಇಲ್ಲಿ ಉತ್ತರ ಕೊಟ್ಟಿದ್ದಾರೆ. ಶ್ರೀ ಗೌಡಪಾದರು ಹೇಳುವದೇನಂದರೆ, ಸೃಷ್ಟಿಯ ವಿಷಯದಲ್ಲಿ ಈ ಮುಂದೆ ಹೇಳಿದಂತೆ ಬೇರೆ ಬೇರೆ ಬಗೆಯ ಮತಗಳು ಕಂಡು ಬರುವವು. (೧) ತನ್ನ ಐಶ್ವರ್ಯವನ್ನು ಪ್ರಕಟಗೊಳಿಸುವದಕ್ಕಾಗಿ ಈಶ್ವರನು ಈ ಸೃಷ್ಟಿಯನ್ನು ನಿರ್ಮಾಣ ಮಾಡಿದನು. (೨) ಈ ಸೃಷ್ಟಿಯು ಮಾಯಾಮಯ ಇರುವದು-ಸ್ವಪ್ನದಂತೆ ಇರುವದು. (೩) ಈಶ್ವರನು ಸತ್ಯ ಸಂಕಲ್ಪನಿರುವನು. ಇವನ ಸಂಕಲ್ಪದಿಂದಲೇ ಈ ಸೃಷ್ಟಿ ನಿರ್ಮಾಣವಾಯಿತು. (೪) ಕಾಲ ಈ ಸೃಷ್ಟಿ ನಿರ್ಮಾಣ ಮಾಡಿತು. (೫)ಸೃಷ್ಟಿಯು ಭೋಗಕ್ಕಾಗಿ ನಿರ್ಮಾಣಗೊಂಡಿದೆ. (೬) ಸೃಷ್ಟಿಯು ಕ್ರೀಡೆಗಾಗಿ (ಆಟ, ಲೀಲಾ) ನಿರ್ಮಾಣಗೊಂಡಿದೆ.ಈ ಆರೂ ಕಾರಣಗಳಲ್ಲಿ ಸಹ ದೋಷವಿರುವದು. ಇವುಗಳಲ್ಲಿ ಯಾವುದೊಂದೂ ನಿರ್ದೋಷವಾಗಿಲ್ಲ ಅಂದಮೇಲೆ ಕೊನೆಯದಾಗಿ ಈ ಸೃಷ್ಟಿಯು ಇರುವದಾದರೂ ಯಾವ ರೀತಿಯಲ್ಲಿ ಇರುವದು? ಶ್ರೀ ಗೌಡಪಾದರು ಉತ್ತರ ಹೇಳುತ್ತಾರೆ:-
**"ದೇವಸ್ಯೈಷ ಸ್ವಭಾವೋ ಯಂ ಆಪ್ತ ಕಾಮ್ಯಸ್ಯ ಕಾ ಸ್ಪೃಹಾ"** ಇದು ದೇವರ ಸ್ವಭಾವವಿರುವದು. ಶ್ರೀ ಸಮರ್ಥರು ಹೇಳುವದೇನಂದರೆ ಸುಳ್ಳಾಗಿರುವ (ಖೊಟ್ಟಿಯಾಗಿರುವ)ದರ ಕರ್ತಾ ಯಾರು ಇರುವರು? ಅಂತಾ ಕೇಳುವದೇ ಅಪ್ರಮಾಣವು, ಆದ್ದರಿಂದ ಯಾವುದು ಸ್ವಭಾವದಿಂದ ಅದೆಯೋ ಅದೇ ಪ್ರಮಾಣವಾಗಿರುವದು. ಲಟಿಕ್ಯಾಚಾ ಕರ್ತಾ ಕೋಣ ಹೇ ಪುಸಣೇ ಚಿ ಅಪ್ರಮಾಣ। ಮ್ಹಣೋನಿ ಹೇಚಿ ಪ್ರಮಾಣ ಜೇ ಸ್ವಭಾವೇಚಿ ಜಾಲೇ॥ (೧೩-೮-೩೧) ಯಾವತ್ತನ್ನೂ ಪ್ರಕಾಶಿತಗೊಳಿಸುವದೇ ಬ್ರಹ್ಮನ ಸ್ವಭಾವವಿರುವದು. ಅದೇ ತನ್ನನ್ನು ತಾನೇ ನೋಡುವದು.

### ದಶಕ ತ್ರಯೋದಶ : ಸಮಾಸ ಅಷ್ಟಮ : ಕರ್ತಾ ನಿರೂಪಣ

॥ಶ್ರೀರಾಮ॥ ಶ್ರೋತಾ ಮ್ಹಣೆ ವಕ್ತಯಾಸೀ । ಕೋಣ ಕರ್ತಾ ನಿಶ್ಚಯೇಸೀ ।
ಸಕಳ ಸೃಷ್ಟಿ ಬ್ರಹ್ಮಾಂಡಾಸೀ । ಕೋಣೇ ಕೇಲೇ ॥೧॥
ತವ ಬೋಲಿಲೆ ಸಭಾ ನಾಯೆಕ । ಜೆ ಬೋಲಿಕೆ ಯೇಕಾಹೂನ ಯೇಕ ।
ಯಾ ಬೋಲಣ್ಯಾಚೆ ಕೌತುಕ । ಶ್ರೋತೀ ಸಾದರ ಏಕಾವೇ ॥೨॥
ಯೇಕ ಮ್ಹಣತೀ ಕರ್ತಾ ದೇವ । ಯೇಕ ಮ್ಹಣತೀ ಕೋಣ ದೇವ ।
ಆಪುಲಾಲಾ ಅಭಿಪ್ರಾವ । ಬೋಲತೇ ಜಾಲೇ ॥೩॥
ಉತ್ತಮ ಮಧ್ಯಮ ಕನಿಷ್ಠ । ಭಾವಾರ್ಥೇ ಬೋಲತೀ ಪಷ್ಟ ।
ಆಪುಲಾಲೀ ಉಪಾಸನಾ ಶ್ರೇಷ್ಠ । ಮಾನಿತೀ ಜನೀ ॥೪॥
ಕೋಣಿಯೇಕ ಏಸೇ ಮ್ಹಣತೀ । ಕರ್ತಾ ದೇವ ಮಂಗಳಮೂರ್ತಿ ।
ಯೇಕ ಮ್ಹಣತೀ ಸರಸ್ವತೀ । ಸರ್ವ ಕರೀ ॥೫॥
ಯೇಕ ಮ್ಹಣತೀ ಕರ್ತಾ ಭೈರವ । ಯೇಕ ಮ್ಹಣತೀ ಖಂಡೇರಾವ ।
ಯೇಕ ಮ್ಹಣತೀ ಬೀರದೇವ । ಯೇಕ ಮ್ಹಣತೀ ಭಗವತೀ ॥೬॥
ಯೇಕ ಮ್ಹಣತೀ ನರಹರೀ । ಯೇಕ ಮ್ಹಣತೀ ಬನಶಂಕರೀ ।
ಯೇಕ ಮ್ಹಣತೀ ಸರ್ವ ಕರೀ । ನಾರಾಯೆಣು ॥೭॥
ಯೇಕ ಮ್ಹಣತೀ ಶ್ರೀರಾಮ ಕರ್ತಾ । ಯೇಕ ಮ್ಹಣತೀ ಶ್ರೀಕೃಷ್ಣ ಕರ್ತಾ ।
ಯೇಕ ಮ್ಹಣತೀ ಭಗವಂತ ಕರ್ತಾ । ಕೇಶವರಾಜ ॥೮॥
ಯೇಕ ಮ್ಹಣತೀ ಪಾಂಡುರಂಗ । ಯೇಕ ಮ್ಹಣತೀ ಶ್ರೀರಂಗ ।
ಯೇಕ ಮ್ಹಣತೀ ಝೋಟಿಂಗ । ಸರ್ವ ಕರೀ ॥೯॥
ಯೇಕ ಮ್ಹಣತೀ ಮುಂಜ್ಯಾ ಕರ್ತಾ । ಯೇಕ ಮ್ಹಣತೀ ಸೂರ್ಯ ಕರ್ತಾ ।
ಯೇಕ ಮ್ಹಣತೀ ಅಗ್ನಿ ಕರ್ತಾ । ಸಕಳ ಕಾಹೀ ॥೧೦॥
ಯೇಕ ಮ್ಹಣತೀ ಲಕ್ಷ್ಮೀ ಕರೀ । ಯೇಕ ಮ್ಹಣತೀ ಮಾರುತೀ ಕರೀ ।
ಯೇಕ ಮ್ಹಣತೀ ಧರತ್ರೀ ಕರೀ । ಸರ್ವ ಕಾಹೀ ॥೧೧॥
ಯೇಕ ಮ್ಹಣತೀ ತುಕಾಈ । ಯೇಕ ಮ್ಹಣತೀ ಯಮಾಈ ।
ಯೇಕ ಮ್ಹಣತೀ ಸಟವಾಈ । ಸರ್ವ ಕರೀ ॥೧೨॥
ಯೇಕ ಮ್ಹಣತೀ ಭಾರ್ಗವ ಕರ್ತಾ । ಯೇಕ ಮ್ಹಣತೀ ವಾಮನ ಕರ್ತಾ ।
ಯೇಕ ಮ್ಹಣತೀ ಪರಮಾತ್ಮಾ ಕರ್ತಾ । ಯೇಕ ಚಿ ಆಹೆ ॥೧೩॥

## ದಶಕ ೧೩ : ಸಮಾಸ ೮ : ಕರ್ತಾ ನಿರೂಪಣ (ನುಡಿ ೩೮)

**ಶ್ರೋತಾನು ವಕ್ತಾನಿಗೆ ಪ್ರಶ್ನೆ ಮಾಡುತ್ತಾನೆ:–** ಶ್ರೋತಾನು ವಕ್ತಾನಿಗೆ ಹೀಗೆ ಪ್ರಶ್ನೆ ಮಾಡುತ್ತಾನೆ. ಈ ಎಲ್ಲ ಸೃಷ್ಟಿ ಮತ್ತು ಬ್ರಹ್ಮಾಂಡಗಳನ್ನು ಯಾರು ರಚಿಸಿದರು? ಇವುಗಳ ನಿಜವಾದ ಕರ್ತಾ ಯಾರು ಇರುವರು? (೧) ಆಗ ಸಭೆಯಲ್ಲಿದ್ದ ಅನೇಕ ಜನರು ಒಬ್ಬರಿಗಿಂತ ಒಬ್ಬರು ಜಾಣರೆಂದು ತಿಳಿದವರು ಮುಂದೆ ಬಂದು ಅರ್ಥಾತ್ ವಕ್ತಾನಿಗೆ ಹೇಳಲು ಅವಕಾಶ ಕೊಡದೆ ತಾವೇ ತಮ್ಮ ತಮ್ಮ ಮತದಂತೆ ಉತ್ತರ ಕೊಡಹತ್ತಿದರು. ಅವರು ಹೇಳಿದ ಉತ್ತರಗಳ ಕೌತುಕವನ್ನು ಶ್ರೋತಾ ಜನರು ಸಾದರದಿಂದ ಕೇಳುವವರಾಗಿರಿ. (೨) ಇನ್ನು ಮೇಲೆ ಸಭಾಸದರು ಹೇಳಿದ ಕರ್ತಾ ಯಾರು? ಅನ್ನುವ ಒಂದು ದೀರ್ಘವಾದ ಯಾದಿಯನ್ನು ಕೊಟ್ಟಿರುವರು:– ಒಬ್ಬ ಅನ್ನುವನು, ದೇವರು ಕರ್ತಾ ಇರುವನು. ಆಗ ಇನ್ನೊಬ್ಬನು ವಿಚಾರಿಸುವದೇನಂದರೆ, ಆ ದೇವರು ಯಾರು? ಆಗ ಪುನಃ ಪ್ರತಿಯೊಬ್ಬರೂ ತಮ್ಮ ಅಭಿಪ್ರಾಯ ಹೇಳಿದರು. (೩) ಅವರವರ ಶ್ರದ್ಧಾದ ಪ್ರಕಾರ ಅವರವರೇ ತಮಗನಿಸಿದಂತೆ ಉತ್ತಮ, ಮಧ್ಯಮ, ಕನಿಷ್ಠ ದೇವರಿಗೆ ಕರ್ತಾತನವನ್ನು ಕೊಟ್ಟು ಹೇಳಿದರು. ಪ್ರತಿಯೊಬ್ಬರಿಗೂ ಅವರವರ ಉಪಾಸ್ಯ ದೇವತೆಯೇ ಶ್ರೇಷ್ಠವೆನಿಸುವದು ಸ್ವಾಭಾವಿಕವಿರುವದು. ಇದು ಲೋಕದ ಜನರ ರೀತಿಯೇ ಇರುವದು. (೪) ಒಬ್ಬ ಮಂಗಲ ಮೂರ್ತಿ ಅಂದರೆ ಗಣಪತಿಯೇ ಕರ್ತಾ ಇರುವನು ಅಂದಾಗ ಇನ್ನೊಬ್ಬನು ಸರಸ್ವತಿಯೇ ಎಲ್ಲವನ್ನೂ ಮಾಡುವವಳು ಅಂತಾ ಪ್ರತಿ ವಚನ ನುಡಿದನು. (೫) ಮತ್ತೆ ಕೆಲವರು ಭೈರವ ಅಥವಾ ಖಂಡೇರಾವ ಅಥವಾ ಬೀರದೇವ ಅಥವಾ ಭಗವತಿ (೬) ಅಥವಾ ನರಹರಿ ಅಥವಾ ಬನಶಂಕರಿ ಅಥವಾ ನಾರಾಯಣ ಇವರೇ ಎಲ್ಲವನ್ನೂ ಮಾಡುವರು. (೭) ಆಗ ಮತ್ತೆ ಕೆಲವರು ಶ್ರೀರಾಮ ಅಥವಾ ಶ್ರೀಕೃಷ್ಣ ಅಥವಾ ಕೇಶವರಾಜ ಭಗವಂತ. (೮) ಅಥವಾ ಪಾಂಡುರಂಗ ಅಥವಾ ಶ್ರೀರಂಗ ಅಥವಾ ಝೋಟಿಂಗ ಇವರೇ ಎಲ್ಲವನ್ನೂ ಮಾಡುವರು(೯) ಆಗ ಮತ್ತೆ ಕೆಲವರು ಮುಂಜ್ಯಾ ಅಥವಾ ಸೂರ್ಯ ಅಥವಾ ಅಗ್ನಿ (೧೦) ಅಥವಾ ಲಕ್ಷ್ಮೀ ಅಥವಾ ಮಾರುತಿ ಅಥವಾ ಪೃಥ್ವಿ.(೧೧) ಅಥವಾ ತುಕಾಯಿ ಅಥವಾ ಮಮ್ಮಾಯಿ ಅಥವಾ ಸಟಾವಾಯಿ ಇವರೇ ಎಲ್ಲವನ್ನೂ ಮಾಡುವರು(೧೨) ಕೆಲವರು ಅನ್ನುವರು ಭಾರ್ಗವ ಅಥವಾ ವಾಮನ ಪರಮಾತ್ಮಾ ಇವನೊಬ್ಬನೇ ಕರ್ತಾ ಇರುವನು. (೧೩)

ಯೇಕ ಮ್ಹಣತೀ ಖಿರಂಣಾ ಕರ್ತಾ । ಯೇಕ ಮ್ಹಣತೀ ಬಸ್ವಂಣಾ ಕರ್ತಾ ।
ಯೇಕ ಮ್ಹಣತೀ ರೇವಂಣಾ ಕರ್ತಾ । ಸರ್ವ ಕಾಹೀ ॥೧೪॥
ಕೋಣೀ ಮ್ಹಣತೀ ರವಳ್ಯಾ ಕರ್ತಾ।ಯೇಕ ಮ್ಹಣತೀ ಸ್ವಾಮೀ ಕಾರ್ತಿಕ ಕರ್ತಾ।
ಯೇಕ ಮ್ಹಣತೀ ವೆಂಕಟೇಶ ಕರ್ತಾ । ಸರ್ವ ಕಾಹೀ ॥೧೫॥
ಯೇಕ ಮ್ಹಣತೀ ಗುರು ಕರ್ತಾ । ಯೇಕ ಮ್ಹಣತೀ ದತ್ತ ಕರ್ತಾ ।
ಯೇಕ ಮ್ಹಣತೀ ಮುಖ್ಯ ಕರ್ತಾ । ಮೋಢ್ಯಾ ಜಗನ್ನಾಥ ॥೧೬॥
ಯೇಕ ಮ್ಹಣತೀ ಬ್ರಹ್ಮಾ ಕರ್ತಾ । ಯೇಕ ಮ್ಹಣತೀ ವಿಷ್ಣು ಕರ್ತಾ ।
ಯೇಕ ಮ್ಹಣತೀ ಮಹೇಶ ಕರ್ತಾ । ನಿಶ್ಚಯೇಸೀ ॥೧೭॥
ಯೇಕ ಮ್ಹಣತೀ ಪ್ರಜನ್ಯ ಕರ್ತಾ । ಯೇಕ ಮ್ಹಣತೀ ವಾಯೋ ಕರ್ತಾ ।
ಯೇಕ ಮ್ಹಣತೀ ಕರೂನ ಅಕರ್ತಾ । ನಿರ್ಗುಣ ದೇವ ॥೧೮॥
ಯೇಕ ಮ್ಹಣತೀ ಮಾಯಾ ಕರೀ । ಯೇಕ ಮ್ಹಣತೀ ಜೀವ ಕರೀ ।
ಯೇಕ ಮ್ಹಣತೀ ಸರ್ವ ಕರೀ । ಪ್ರಾರಬ್ಧಯೋಗ ॥೧೯॥
ಯೇಕ ಮ್ಹಣತೀ ಪ್ರೇತ್ನ ಕರೀ । ಯೇಕ ಮ್ಹಣತೀ ಸ್ವಭಾವ ಕರೀ ।
ಯೇಕ ಮ್ಹಣತೀ ಕೋಣ ಕರೀ । ಕೋಣ ಜಾಣೇ ॥೨೦॥
ಐಸಾ ಕರ್ತ್ಯಾಚಾ ವಿಚಾರ । ಪುಸತಾ ಭರಲಾ ಬಾಜಾರ ।
ಆತಾ ಕೋಣಾಚೇ ಉತ್ತರ । ಖರೇ ಮಾನಾವೇ ॥೨೧॥
ಜೇಹೀ ಜೋ ದೇವ ಮಾನಿಲಾ । ಕರ್ತಾ ಮ್ಹಣತೀ ತಯಾಲಾ ।
ಐಸಾ ಲೋಕಾಚಾ ಗಲ್ಬಲಾ । ಮೋಸರೇನಾ ॥೨೨॥
ಆಪುಲಾಲ್ಯಾ ಸಾಭಿಮಾನೇ । ನಿಶ್ಚಯೋ ಚಿ ಕೇಲಾ ಮನೇ ।
ಯಾಚಾ ವಿಚಾರ ಪಾಹಾಣೆ । ಘಡೇಚಿನಾ ॥೨೩॥
ಬಹು ಲೋಕಾಂಚಾ ಬಹು ವಿಚಾರ । ಅವಘಾ ರಾಹೋ ದ್ಯಾ ಬಾಜಾರ ।
ಪರಂತು ಯಾಚಾ ವಿಚಾರ । ಐಸಾ ಆಹೆ ॥೨೪॥
ಶ್ರೋತೀ ವ್ಹಾವೇ ಸಾವಧಾನ । ನಿಶ್ಚಯೋ ತೋಡಾವಾ ಅನುಮಾನ ।
ಪ್ರತ್ಯಯೋ ಮಾನಾವಾ ಪ್ರಮಾಣ । ಜಾಣತೇ ಪುರುಷೀ ॥೨೫॥
ಜೇ ಜೇ ಕರ್ತಯಾನೇ ಕೇಲೇ । ತೇ ತೇ ತ್ಯಾಉಪರೀ ಜಾಲೇ ।
ಕರ್ತ್ಯಾಪೂರ್ವೀ ಆಡಳಲೇ । ನ ಪಾಹಿಜೆ ಕೀ ॥೨೬॥
ಕೇಲೇ ತೇ ಪಂಚಭೂತಿಕ । ಆಣಿ ಪಂಚಭೂತಿಕ ಬ್ರಹ್ಮಾದಿಕ ।
ತರೀ ಭೂತಾಂಶೇ ಪಂಚಭೂತಿಕ । ಕೇಲೇ ತೇ ಘಡೇನಾ ॥೨೭॥

ಕೆಲವರು ಅನ್ನುವರು ವೀರಣ್ಣಾ ಅಥವಾ ಬಸವಣ್ಣ ಅಥವಾ ರೇವಣ್ಣಾ (೧೪) ಅಥವಾ ರವಳನಾಥ ಅಥವಾ ಕಾರ್ತಿಕ ಸ್ವಾಮಿ ಅಥವಾ ವೆಂಕಟೇಶ ಅಥವಾ (೧೫) ಗುರು ಅಥವಾ ದತ್ತ ಅಥವಾ ಪೋಡ್ಯಾ ಜಗನ್ನಾಥ ಇವರೆ ಮುಖ್ಯ ಕರ್ತಾ ಇರುವರು. (೧೬) ಕೆಲವರು ಅನ್ನುವರು ಬ್ರಹ್ಮ ಅಥವಾ ವಿಷ್ಣು ಅಥವಾ ಮಹೇಶ ಇವರೇ ನಿಶ್ಚಯವಾಗಿಯೂ ಕರ್ತಾ ಇರುವರು. (೧೭) ಕೆಲವರು ಪರ್ಜನ್ಯ(ಮಳೆ) ಅಥವಾ ವಾಯು ಕರ್ತಾ ಇರುವನು. ಕೆಲವರು ನಿರ್ಗುಣದೇವನು ಸರ್ವ ವನ್ನೂ ಮಾಡಿ ಅಕರ್ತಾ ಇರುವನು.(೧೮)ಕೆಲವರು ಅನ್ನುತ್ತಾರೆ. ಮಾಯಾ ಅಥವಾ ಜೀವ ಅಥವಾ ಪ್ರಾರಬ್ಧಯೋಗ ಎಲ್ಲವನ್ನೂ ಮಾಡುತ್ತದೆ. (೧೯) ಕೆಲವರು ಅನ್ನುವದೇನಂದರೆ, ಪ್ರಯತ್ನ ಅಥವಾ ಸ್ವಭಾವ ಎಲ್ಲವನ್ನೂ ಮಾಡು ವದು ಅಂದಾಗ ಬೇರೆ ಕೆಲವರು ಅನ್ನುವದೇನಂದರೆ ಇದೆಲ್ಲವನ್ನೂ ಯಾರು ಮಾಡುವರೋ ಏನೋ ಯಾರಿಗೆ ತಿಳಿದಿರುವದು. (೨೦) ಈ ಸೃಷ್ಟಿಯ ಕರ್ತಾ ಯಾರು? ಅನ್ನುವ ಪ್ರಶ್ನೆಯನ್ನು ಕೇಳಿದಾಗ ಉತ್ತರದ ಸಂತೆಯು ಬಾಜಾರವೇ ಕೂಡಿತು. (ಭರಿಸಿತು). ಈಗ ಅದರಲ್ಲಿಯ ಯಾವ ಉತ್ತರವು ಖರೇ ಎಂದು ಹೇಳಬೇಕು. ಅಥವಾ ಒಪ್ಪಬೇಕು ಹೇಳಿರಿ. (೨೧) ಯಾರು ಯಾವ ದೇವರನ್ನು ಮನ್ನಿಸುವರೋ ಅವನನ್ನೇ ಕರ್ತಾ ಅಂತಾ ಅನ್ನುವರು. ಅನೇಕ ದೇವರುಗಳನ್ನು ಮನ್ನಿಸುವ ಅನೇಕ ಜನರ ಈ ಗದ್ದಲವೇನೂ ಕಡಿಮೆಯಾಗುವದಿಲ್ಲ. (೨೨) ಪ್ರತಿಯೊಬ್ಬ ಮನುಷ್ಯನು ತನ್ನ ಆರಾಧ್ಯ ದೇವತೆಯ ಅಭಿಮಾನ ಹಿಡಿಯುವನು. ಮತ್ತು ಯಾವತ್ತೂ ಕರ್ತಾತನವು ತನ್ನ ದೇವರದೇ ಇರುವದೆಂದು ಅವನು ಮನಃಪೂರ್ವಕ ನಿಶ್ಚಯ ಮಾಡಿಕೊಳ್ಳುತ್ತಾನೆ. ಆದರೆ ಇದು ನಿಜವಾದದ್ದೋ ಅಥವಾ ಖೊಟ್ಟಿಯಾದದ್ದೋ ಅನ್ನುವ ವಿಚಾರ ಇವನು ಮಾಡುವದಿಲ್ಲ (೨೩) ಇದೇ ಪ್ರಕಾರವಲ್ಲಿ ಬಹಳಷ್ಟು ಜನರ ಬಹಳಷ್ಟು ಮತ ಅಭಿಪ್ರಾಯಗಳಿರುವವು. ಇರಲಿ, ಬೇರೆ ಬೇರೆ ಮತಗಳ ಎಲ್ಲ ವಿಚಾರದ ಈ ಬಾಜಾರ ವನ್ನು (ಸಂಗ್ರಹವನ್ನು) ಒತ್ತಟ್ಟಿಗೆ ಸರಿಸಿಬಿಡೋಣ. ಹಾಗೂ ಮೂಲ ಪ್ರಶ್ನದ ಬಗ್ಗೆ ಖರೇ ವಿಚಾರ ತಿಳಿಯೋಣ. ನಿಜವಾದ ವಿಚಾರವು ಹೀಗಿರುವದು· (೨೪) ನಮ್ಮ ಅನುಭವವು ಹೀಗಿರುವದು. ಮೊದಲಿಗೆ ಕರ್ತಾ ಇರುವನು. ಆಮೇಲೆ ಅವನು ನಿರ್ಮಾಣ ಮಾಡಿದ ವಸ್ತು ಹುಟ್ಟಿ ಬರುವದು. ಮೇಲೆವರ್ಣಿಸಿದ ಬ್ರಹ್ಮಾದಿಕ ದೇವದೇವತೆಗಳು ಪಂಚಭೂತಾತ್ಮಕರೇ ಇರುವದರಿಂದ ಇವರೇನೂ ಪಂಚಭೂತಮಯ ವಿಶ್ವವನ್ನು ನಿರ್ಮಾಣ ಮಾಡಲಿಕ್ಕೆ ಸಾಧ್ಯವಿಲ್ಲ ವೆಂಬುದು ನಿಜವೇ ಇರುವದು. ಆದ್ದರಿಂದ ಪಂಚಭೂತಗಳ ಆಚೆಗೆ ಹೋಗಿ ಕರ್ತಾನನ್ನು ಹುಡುಕಬೇಕಾಗುವದು ಆದರೆ ಆಚೆಗೆಅಂದರೆ ಕರ್ತಾಅನ್ನುವದರ ಆಚೆಗೆ ನಿರ್ಗುಣ ಸ್ವರೂಪಮಾತ್ರ ಇರುವದು:—ಇದು ನಿರ್ವಿಕಾರವಿದ್ದದ್ದರಿಂದ ಅದರಲ್ಲಿ ಕರ್ತಾತನ ಇರಲು ಶಕ್ಯವಿಲ್ಲ:- ಶ್ರೋತಾ ಜನರು ಈಗ ಸಾವಧರಾಗಿರಿ. ಕರ್ತಾನ ನಿಶ್ಚಯ ಮಾಡಿಕೊಂಡು ನಿಮ್ಮ ಅನುಮಾನದ ಕಲ್ಪನೆಯನ್ನು ತ್ಯಜಿಸುವವರಾಗಿರಿ. ತಿಳಿದವರು ಪ್ರತ್ಯಕ್ಷ ಪ್ರಮಾಣದಿಂದ ಅನುಭವ ಪಡೆದು ನೋಡಿ ಕರ್ತಾ ಯಾರು ಇದರ ನಿಶ್ಚಯ ಮಾಡಿರಿ (೨೫) ಕರ್ತಾನು ಯಾವ ಯಾವುದನ್ನೆಲ್ಲ ನಿರ್ಮಿಸುವನೋ ಅದೆಲ್ಲವೂ ಆ ನಿರ್ಮಿಸಿದ ಕರ್ತಾನ ನಂತರವೇ ಅಸ್ತಿತ್ವಕ್ಕೆ ಬಂದದ್ದಿರುವದು. ಇದು ಕರ್ತಾನಗಿಂತ ಮೊದಲೇ ಅಸ್ತಿತ್ವದಲ್ಲಿ ಇರುವದಿಲ್ಲ. (೨೬) ನಮ್ಮ ಅನುಭವಕ್ಕೆ ಬರುವಂಥಾ ಈ ದೃಶ್ಯವಿಶ್ವವು ಸಂಪೂರ್ಣವಾಗಿ ಪಂಚಭೂ ತಿಕವೇ ಇರುವದು. ಇದರಲ್ಲಿಯ ಬ್ರಹ್ಮಾದಿಕ ದೇವರೆಲ್ಲರೂ ಸಹ ಪಂಚಭೂತಿಕರೇ ಇರುವರು. ಅಂತೆಯೇ ಪಂಚ ಭೂತಿಕ ದೇವಾದಿಗಳು ಪಂಚಭೂತಿಕ ವಿಶ್ವವನ್ನು ನಿರ್ಮಾಣ ಮಾಡಿದರು ಅನ್ನಲಿಕ್ಕೆ ಶಕ್ಯವಿಲ್ಲ. ಸಾಧ್ಯವಿಲ್ಲ. ಯಾಕಂದರೆ ಪಂಚಭೂತಗಳ ಅಂಶದಿಂದ ಪಂಚಭೂತಿಕ ವಿಶ್ವವನ್ನು ನಿರ್ಮಾಣ ಮಾಡುವದು ಶಕ್ಯವಿಲ್ಲ. (೨೭)

ಪಂಚಭೂತಾಸ ವೇಗಳೇ ಕರಾವೇ । ಮಗ ಕರ್ತ್ಯಾಸ ವೊಳಖಾವೇ ।
ಪಂಚಭೂತಿಕ ತೇ ಸ್ವಭಾವೇ । ಕರ್ತ್ಯಾತ ಆಲೇ ॥೨೮॥

ಪಂಚಭೂತಾವೇಗಳೇ ನಿರ್ಗುಣ । ತೇಥೇ ನಾಹೀ ಕರ್ತೇಪಣ ।
ನಿರ್ವಿಕಾರಾಸ ವಿಕಾರ ಕೋಣ । ಲಾವೂ ಶಕೇ ॥೨೯॥

ನಿರ್ಗುಣಾಸ ಕರ್ತವ್ಯ ನ ಘಡೇ । ಸಗುಣ ಜಾಲ್ಯಾತ ಸಾಪಡೇ ।
ಆತಾ ಕರ್ತವ್ಯತಾ ಕೋಣೆಕಡೇ । ಬರೇ ಪಾಹಾ ॥೩೦॥

ಲಟಿಕ್ಯಾಚಾ ಕರ್ತಾ ಕೋಣ । ಹೇ ಪುಸಣೇ ಚಿ ಅಪ್ರಮಾಣ ।
ಮ್ಹಣೋನಿ ಹೇ ಚಿ ಪ್ರಮಾಣ । ಜೇ ಸ್ವಭಾವೇ ಚಿ ಜಾಲೇ ॥೩೧॥

ಯೇಕ ಸಗುಣ ಯೇಕ ನಿರ್ಗುಣ । ಕೋಣತೇ ಲಾವೂ ಕರ್ತೇಪಣ ।
ಯಾ ಅರ್ಥಾಚೇ ವಿವರಣ । ಬರೇ ಪಾಹಾ ॥೩೨॥

ಸಗುಣೇ ಸಗುಣ ಕೇಲೇ । ತರೀ ತೇ ಪೂರ್ವೀಂಚ ಆಹೆ ಜಾಲೇ ।
ನಿರ್ಗುಣಾಸ ಕರ್ತವ್ಯ ಲಾವಿಲೇ । ನ ವಚೇ ಕೀ ಕದಾ ॥೩೩॥

ಯೇಥೆ ಕರ್ತಾ ಚಿ ದಿಸೇನಾ । ಪ್ರತ್ಯಯೋ ಆಣಾವಾ ಅನುಮಾನಾ ।
ದೃಶ್ಯ ಸತ್ಯತ್ವೇ ಅಸೇನಾ । ಮ್ಹಣೋನಿಯಾ ॥೩೪॥

ಈಗ ಕರ್ತಾ ಯಾರು ಇದನ್ನು ಶೋಧಿಸುವದಕ್ಕಾಗಿ ಪಂಚಭೂತಗಳನ್ನು ಬಾಜೂಕ್ಕೆ ಸರಿಸಬೇಕು. ಆನಂತರವೇ ಕರ್ತಾ ಯಾರು ಇದನ್ನು ಗುರುತಿಸಿ ತಿಳಿಯಬೇಕು. ಯಾಕಂದರೆ ಪಂಚಭೂತಗಳು ಸ್ವತಃ ಜಡವಿರುವದರಿಂದ ಇವು ಸ್ವತಃ ತಾವಾಗಿಯೇ ಏನನ್ನೂ ನಿರ್ಮಾಣ ಮಾಡುವದಿಲ್ಲ. ಆದರೆ ಇವು ಯಾವನು ಕರ್ತಾ ಇರುವನೋ ಅವನಲ್ಲಿ ಸಹಜವಾಗಿ ಅಂತರ್ಭೂತವಾಗಿರುವವು. (೨೮) ಪಂಚಭೂತಗಳನ್ನು ಬೇರೆ ಮಾಡಿದೆವೆಂದರೆ ಆಗ ಫಕ್ತ ನಿರ್ಗುಣವೇ ಉಳಿಯುವದು. ಇದರಲ್ಲಿ ಯಾವ ವಿಕಾರವೂ ಇಲ್ಲ. ಅರ್ಥಾತ್ ಕರ್ತಾತನವಿಲ್ಲ. ಆದ್ದರಿಂದ ನಿರ್ಗುಣದ ದೃಷ್ಟಿಯಿಂದ ದೃಶ್ಯವಿಶ್ವವು ಸುಳ್ಳು ಖೊಟ್ಟಿ ಇರುವದು. ಯಾವುದು ಸುಳ್ಳು ಖೊಟ್ಟಿ ಇರುವದೋ ಅದಕ್ಕೆ ಕರ್ತಾ ಯಾರೂ ಇಲ್ಲ. ಈ ವಿಶ್ವದ ತೋರಿಕೆಯು (ಭಾಸವು) ನಿರ್ವಿಕಾರ ಬ್ರಹ್ಮದ ಆತ್ಮಪ್ರಚೀತಿ (ಆತ್ಮದ ಅನುಭವ) ಇರುವದು:- ಪಂಚಭೂತಗಳನ್ನು ಬೇರೆ ಮಾಡಿದ ಮೇಲೆ ನಿರ್ಗುಣವು ಉಳಿಯುವದು. ಅದರಲ್ಲಿ ಕರ್ತಾತನ ಇರುವದಿಲ್ಲ. ಕರ್ತಾತನ ಇದೊಂದು ವಿಕಾರವಿರುವದು. ಅಂತೆಯೇ ನಿರ್ವಿಕಾರ ಸ್ವರೂಪಕ್ಕೆ ವಿಕಾರವನ್ನು ಹಚ್ಚಲಿಕ್ಕೆ (ಆರೋಪಿಸಲಿಕ್ಕೆ) ಬರುವದಿಲ್ಲ. (೨೯) ಇಲ್ಲಿ ಒಂದು ಅಡಚಣೆ ಉದ್ಭವಿಸುವದು:- ನಿರ್ಗುಣಕ್ಕೆ ಕರ್ತಾತನ ಹಚ್ಚಲಿಕ್ಕೆ ಬರುವದಿಲ್ಲ. ಸಗುಣ ಇದು ನಿರ್ಮಾಣಗೊಂಡದ್ದಿರುವದರಿಂದ ಇದಕ್ಕೆ ಕರ್ತಾತನ ಕೊಡಲಿಕ್ಕೆ (ಅದೆ ಅಂತಾ ಅನ್ನಲಿಕ್ಕೆ) ಆಗುವದಿಲ್ಲ. ಅಂದ ಮೇಲೆ ಈಗ ನಾವು ಕರ್ತಾತನವನ್ನು ಯಾರಿಗೆ ಕೊಡಬೇಕು ಅನ್ನುವ ಪ್ರಶ್ನೆ ಮತ್ತೆ ಹಾಗೇ ಶಿಲ್ಲಕ ಉಳಿಯುವದು. [೩೦] ಇದಕ್ಕೆ ಉತ್ತರ ಹೇಳುವದಾದರೆ ಬ್ರಹ್ಮ ವಸ್ತುವಿನ ಕಡೆಯಿಂದ ನೋಡಿದ್ದಾದರೆ ಈ ಎಲ್ಲ ವಿಶ್ವವೇ ಸುಳ್ಳು ಖೊಟ್ಟಿ ಇರುವದು. ಭ್ರಮರೂಪವಿರುವದು. ಯಾವುದು ಮೂಲದಲ್ಲಿ ಇಲ್ಲವೇ ಇಲ್ಲವೋ ಇಂಥದರ ಕರ್ತಾ ಯಾರು ಇರುವರು? ಅನ್ನುವ ಪ್ರಶ್ನೆಯನ್ನು ವಿಚಾರ ಮಾಡುವದೇ ಯೋಗ್ಯವಲ್ಲ. ಗೈರ ಕಾಯದೇಶೀರ ಅನಿಸುವದು. ಅಂತೆಯೇ ಈ ವಿಶ್ವವು ಸ್ವಭಾವತಃ (ತನ್ನಷ್ಟಕ್ಕೆ ತಾನೇ) ಆಯಿತು ಅಂತಾ ಅನ್ನುವದು ಯೋಗ್ಯವಿರುವದು. ಅಖಂಡ ಜ್ಞಾನ ಇದು ಬ್ರಹ್ಮದ ಮೂಲ ಸ್ವಭಾವ ಇರುವದು. ಜ್ಞಾನದಲ್ಲಿ ಭೇದ ಭಾವವಿಲ್ಲ. ಕಾಲವಿಲ್ಲ. ದೇಶವಿಲ್ಲ, ಕಾರಣವಿಲ್ಲ, ಜ್ಞಾನದಲ್ಲಿ ಉತ್ಪತ್ತಿ ಇಲ್ಲ. ಸಂಹಾರವೂ ಇಲ್ಲ. ಜ್ಞಾನದಲ್ಲಿ ವಿರೋಧವಿಲ್ಲ. ಜ್ಞಾನದಲ್ಲಿ ಎರಡೆಂಬುದು ಇಲ್ಲ. ಇಂಥ ಜ್ಞಾನಮಯ ಬ್ರಹ್ಮವು ಎಲ್ಲ ಕಡೆಗೂ (ಸುತ್ತು ಮುತ್ತಲೂ, ಮೇಲೆ ಕೆಳಗೂ) ತಾನೇ ಸ್ವತಃ ತನ್ನನ್ನೇ (ಸ್ವತಃಕ್ಕೇ) ನೋಡುವದು ಇದೇ ಅದರ ಸ್ವಭಾವವಿರುವದು. ಯಾವದು ಪೂರ್ಣ ಇರುವದೋ ಅದು (ಸ್ವತಃ) ತನ್ನನ್ನು ತಾನು ನೋಡಲು ಆಗುವದಿಲ್ಲ. ಆದ್ದರಿಂದಲೇ ಇದು ಪರಿಪೂರ್ಣವಿರುವದು. ದೃಶ್ಯವಿಶ್ವದ ರೂಪದಿಂದ ಅಪೂರ್ಣವಾಗಿ ಒಂದು ಇದ್ದದ್ದು ಅನೇಕವಾಗಿ ಸ್ವತಃವೇ ಸ್ವತಃ (ತನ್ನನ್ನು)ವನ್ನು ನೋಡುವದು. [೩೧] ಈ ಗೂಢವಾಗಿರುವ ಪ್ರಮೇಯ [ವಿಷಯ, ಸಿದ್ಧಾಂತ]ವನ್ನು ಇನ್ನೊಂದು ರೀತಿಯಿಂದ ಪ್ರಸ್ತಾಪಿಸುತ್ತಾರೆ. ಒಂದು ಸಗುಣವು, ಇನ್ನೊಂದು ನಿರ್ಗುಣವು ಇರುವದು. ಈ ಎರಡರ ಪೈಕಿ ಯಾವುದರ ಕಡೆಗೂ ಸೃಷ್ಟಿಯ ಕರ್ತಾತನವನ್ನು ಕೊಡಲು [ಹಚ್ಚಲು] ಬರುವದಿಲ್ಲ. ಈ ಅರ್ಥದ ವಿವೇಚನೆಯು ಯಾವ ರೀತಿಯಲ್ಲಿ ಬರುವದೆಂಬುದನ್ನು ನೋಡಿರಿ. [೩೨] ಸಗುಣವು ಸಗುಣವನ್ನು ನಿರ್ಮಾಣ ಮಾಡಿತು ಅಂತಾ ಅಂದದ್ದಾದರೆ ಆ ಕರ್ತಾ ಸಗುಣವು ಮೊದಲಿಗೇ ನಿರ್ಮಾಣವಾದದ್ದಿರುವದು. ಇದರ ಅರ್ಥ ಹೀಗಿರುವದು. ಸಗುಣದ ಕರ್ತಾ ಸಗುಣದ ಮೊದಲಿಗೇ ಇರುವನು. ಇವನೇ ಸಗುಣವನ್ನು ನಿರ್ಮಾಣ ಮಾಡುವನು. ಇವನು ಸಗುಣದಲ್ಲಿ ಅಂತರ್ಭೂತನಾಗುವದಿಲ್ಲ, ಯಾವುದು ನಿರ್ಗುಣವಿರುವದೋ ಅದು ನಿರ್ವಿಕಾರಿಯಾದದ್ದಿರುವದರಿಂದ ಇದಕ್ಕೆ ಕರ್ತಾತನದ ವಿಕಾರವು ಸ್ಪರ್ಶ ಮಾಡುವದಿಲ್ಲ. [೩೩] ಈ ಬಗೆಯಿಂದ ವಿಚಾರ ಮಾಡಿದ್ದಾದರೆ ನಮಗೆ ಸೃಷ್ಟಿಯನ್ನು ನಿರ್ಮಾಣ ಮಾಡಿದ ಕರ್ತಾ ಯಾರೆಂಬುದೇ ಕಂಡು ಬರುವದಿಲ್ಲ. ಈ ನಿಶ್ಚಯ ]ಅನುಭವ]ದ ಮೇಲಿಂದ ಈ ರೀತಿಯ ಅನುಮಾನ ಪಡಬೇಕಾಗುವದು. ಅದು ಎಂತೆಂದರೆ, ಈ ದೃಶ್ಯ ವಿಶ್ವವು ಖರೇ ಅಲ್ಲ. ಆದ್ದರಿಂದಲೇ ಈ ಬಗೆಯ ಅಡಚಣೆ ಉತ್ಪನ್ನವಾಗುವದು. (೩೪)

ಕೇಲೇ ತೇ ಅವಘೇ ಚ ಲಟಿಕೆ । ತರೀ ಕರ್ತಾ ಹೇ ಬೋಲಣೇ ಚಿ ಫಿಕೇ।
ವಕ್ತ್ಯಾ ವಜ್ಞಣೆ ರೇ ವಿವೇಕೇ । ಬರೇ ಪಾಹಾ ॥೩೫॥

ಬರೇ ಪಾಹಾತಾ ಪ್ರತ್ಯಯೋ ಆಲಾ । ತರೀ ಕಾ ಕರಾವಾ ಗಲ್ಬಲಾ ।
ಪ್ರಚಿತ ಆಲಿಯಾ ಆಪಣಾಲಾ । ಅಂತರ್ಯಾಮೀ ॥೩೬॥

ಆತಾ ಅಸೋ ಹೇ ಬೋಲಣೇ । ವಿವೇಕೀ ತೋ ಚಿ ಹೇ ಜಾಣೇ ।
ಪೂರ್ವಪಕ್ಷ ಲಾಗೇ ಉಡವಣೇ । ಯೆರವೀ ಅನುವಾದ ॥೩೭॥

ತವ ಶ್ರೋತಾ ಕರೀ ಪ್ರಸ್ನ । ದೇಹೀ ಸುಖದುಃಖ ಭೋಕ್ತಾ ಕೋಣ ।
ಪುಢೇ ಹೇ ಚಿ ನಿರೂಪಣ । ಬೋಲಿಲೇ ಅಸೆ ॥೩೮॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ಕರ್ತಾ ನಿರೂಪಣ ನಾಮ' ಸಮಾಸ ಅಷ್ಟಮ

ಕರ್ತನು ಯಾವುದನ್ನು (ಏನನ್ನು) ಮಾಡಿದನು ಅಂತಾ ನಾವು ಅನ್ನುವೆವೋ ಅದು ಮೂಲದಲ್ಲಿಯೇ ಸುಳ್ಳಿರುವದು. ಖೊಟ್ಟಿ ಇರುವದು. ಅಂದ ಮೇಲೆ ಕರ್ತಾ ಯಾರು ಇರಬಹುದು? ಅನ್ನುವ ಚೌಕಶಿ(ವಿಚಾರ)ಯೇ ವ್ಯರ್ಥವೆಂದು ಅನಿಸುವದು. ವಕ್ತಾ ಹೇಳುವದೇನಂದರೆ ಈ ವಿಷಯ ಗಹನವಾದದ್ದರಿಂದ ನೀವು ಚನ್ನಾಗಿ ವಿಚಾರ ಮಾಡಿ ಇದನ್ನು ತಿಳಿದುಕೊಳ್ಳಿರಿ. (೩೫) ಚನ್ನಾಗಿ ವಿಚಾರ ಮಾಡಿ ಈ ವಿಷಯದ ವಿಚಾರ ಮನಸ್ಸಿಗೆ ಚನ್ನಾಗಿ ಮನದಟ್ಟಾಯಿತೆಂದರೆ ಯಾವ ಅಡ್ಡಿ ಅಡಚಣೆ ಆತಂಕಗಳು ಬರಲಾರವು. ಅಜ್ಞಾನದ ಘೋಟಾಳೆ (ಗೊಂದಲ)ಇಲ್ಲದಾಗುವದು. ಆದರೆ ನಿಮ್ಮ ಅಂತರ್ಯಾಮದಲ್ಲಿ ಇದರ ಪ್ರಚೀತಿ (ಅನುಭವ) ಮಾತ್ರ ಬರಲಿಕ್ಕೆಬೇಕಾಗುವದು(೩೬) ಇನ್ನು ಈ ವಿಷಯದ ಮಾತುಗಳನ್ನು ಇಲ್ಲಿಗೇ ನಿಲ್ಲಿಸೋಣ. ಯಾರು ವಿವೇಕಿಗಳಿರುವರೋ ಅಂಥವರೇ ಇದನ್ನು ತಿಳಿದುಕೊಳ್ಳುವರು. ಪೂರ್ವ ಪಕ್ಷದಲ್ಲಿ ಎತ್ತಿದ ಆಕ್ಷೇಪವು ಹೇಗೆ ಸದೋಷವಿರುವದು, ಇದನ್ನು ತೋರಿಸಿಕೊಡಬೇಕಾಗುವದು. ಇದರ ಹೊರತಾಗಿ ಈ ಸಿದ್ಧಾಂತವನ್ನು ಶಬ್ದಗಳಿಂದ ವರ್ಣನೆ ಮಾಡಲಿಕ್ಕೆ ಬರುವದಿಲ್ಲ. (೩೭) ಇದರ ಮೇಲೆ ಶ್ರೋತಾ ಪ್ರಶ್ನೆ ಮಾಡಿದನು. "ದೇಹದಲ್ಲಿಯ ಸುಖದುಃಖಗಳ ಭೋಕ್ತಾ ಅಂದರೆ ಭೋಗಿಸುವವನು ಯಾರು ?" ಅನ್ನುವದೇ ಪ್ರಶ್ನೆಯು. ಮುಂದಿನ ಸಮಾಸದಲ್ಲಿ ಇದರ ಬಗ್ಗೆ ವಿವೇಚಿಸುವೆವು. (೩೮)

ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಹದಿಮೂರನೆಯ ದಶಕದೊಳಗಿನ
"ಕರ್ತಾ ನಿರೂಪಣ"ವೆಂಬ ಹೆಸರಿನ ಎಂಟನೆಯ ಸಮಾಸವು ಮುಗಿದುದು.

● ●

ದಶಕ ತ್ರಯೋದಶ : ಸಮಾಸ ನವಮು : ಆತ್ಮ ವಿವರಣ

॥ಶ್ರೀರಾಮು॥ ಆತ್ಮಯಾಸ ಶರೀರಯೋಗೇ । ಉದ್ವೇಗ ಚಿಂತಾ ಕರಣೇ ಲಾಗೇ ।
ಶರೀರಯೋಗೇ ಆತ್ಮಾ ಜಗೇ । ಹೇ ತೋ ಪ್ರಗಟ ಚಿ ಆಹೆ ॥೧॥

ದೇಹ ಅನ್ನ ಚಿ ಖಾಯೆನಾ । ತರೀ ಆತ್ಮಾ ಕದಾಪಿ ಜಗೇನಾ।
ಆತ್ಮ್ಯಾವಿಣ ಚೇತನಾ । ದೇಹಾಸ ಕೈಚೀ ॥೨॥

ಹೇ ಯೇಕಾವೇಗಳೇ ಯೇಕ । ಕರೂ ಜಾತಾ ನಿರಾರ್ಥಕ ।
ಉಭಯೆಯೋಗೇ ಕೋಣೀಯೇಕ । ಕಾರ್ಯ ಚಾಲೇ ॥೩॥

ದೇಹಾಲಾ ನಾಹೀ ಚೇತನಾ । ಆತ್ಮ್ಯಾಸ ಪದಾರ್ಥ ಉಚಲೇನಾ ।
ಸ್ವಪ್ನ ಭೋಜನೇ ಭರೇನಾ । ಪೋಟ ಕಾಹೀ ॥೪॥

ಆತ್ಮಾ ಸ್ವಪ್ನ ಅವಸ್ಥೇತ ಜಾತೋ । ಪರಂತು ದೇಹಾಮಧ್ಯೇ ಹಿ ಅಸತೋ ।
ನಿದಸುರಪಣೆ ಖಾಜವಿತೋ । ಚಮತ್ಕಾರ ಪಾಹಾ ॥೫॥

# ದಶಕ ೧೩. ಸಮಾಸ ೯. ಆತ್ಮಾ ವಿವರಣ (ನುಡಿ ೪೦)

ಮುಖ್ಯವಾದ ಪ್ರಶ್ನೆ ಯಾವುದೆಂದರೆ ಮನುಷ್ಯರು ಜೀವನದಲ್ಲಿ ಸುಖದುಃಖಗಳನ್ನು ಭೋಗಿಸಲೇಬೇಕಾಗುವದು. ಇದನ್ನು ಭೋಗಿಸುವವರು ಯಾರು ? ಪರಬ್ರಹ್ಮವು ಅತ್ಯಂತ ನಿರ್ಮಲ, ನಿರ್ವಿಕಾರಿ, ಏಕರಸ (ಒಂದೇ ಒಂದಾದ) ಮತ್ತು ಅಖಂಡ (ಖಂಡರಹಿತ) ಇರುವದು. ಇದೇನೋ ನಿಜವೇ. ಆದರೆ ಇದರಲ್ಲಿಂದ ಉತ್ಪನ್ನವಾಗುವಂಥ ಮೂಲ ಮಾಯಾ ಮಾತ್ರ ಒಂದು ರೀತಿಯಲ್ಲಿ ಪಂಚಭೂತಾತ್ಮಕಳೆಂದು ಎನಿಸಿದರೆ ಇನ್ನೊಂದು ರೀತಿಯಲ್ಲಿ ಜಾಣೀವಯುಕ್ತ [ಜ್ಞಾನಯುಕ್ತ, ಬ್ರಹ್ಮಜ್ಞಾನಿ] ಇರುವಳು. ಅಂತೂ ಒಟ್ಟಿನಲ್ಲಿ ಹೀಗೆ ಇರಲೇಬೇಕು. ಯಾಕೆಂದರೆ ವಿಶ್ವದಲ್ಲಿಯ ಪದಾರ್ಥಗಳ ರಚನೆಯನ್ನು ನೋಡಿದ್ದಾದರೆ ಅದರಲ್ಲಿ [ಅಲ್ಲೆಲ್ಲದರಲ್ಲಿ] ಎರಡು ಅಂಗಗಳೇ ಕಂಡು ಬರುವವು. ಪ್ರತಿಯೊಂದು ವಸ್ತುವಿನಲ್ಲಿ ಸ್ಥೂಲ ಅಥವಾ ಹೊರಗಿನ [ತೋರುವ] ಅಂಗ ಮತ್ತು ಸೂಕ್ಷ್ಮ ಅಥವಾ ಒಳಗಿನ ಅಂಗ. ಅಂತೂ ಈ ಪ್ರಕಾರ ಎರಡು ಅಂಗಗಳು ಇದ್ದೇ ಇರುವವು. ಅಚೇತನ ಪದಾರ್ಥಗಳಲ್ಲಿ ಬಹಿರಂಗವು ಪಂಚಭೂತಗಳದ್ದಿರುವದಾದರೆ ಅಂತರಂಗವು ಗುಣಮಯ ಅಥವಾ ಶಕ್ತಿಮಯ ಇರುವದು. ಅದೇ ಸಚೇತನ ಪ್ರಾಣಿಗಳಲ್ಲಿ ದೇಹವು ಪಂಚಭೂತದ್ದಿರುವದು. ಹಾಗೂ ಅಂತರಂಗವು ಜಾಣೀವಮಯ [ಜ್ಞಾನಮಯ] ಇರುವದು. ಮನುಷ್ಯಮಾತ್ರರಲ್ಲಿ ಈ ಅರಿವು, ತಿಳುವಳಿಕೆಯು, [ಜಾಣೀವ] ಜ್ಞಾನವು ಬಹಳಷ್ಟು ನಿರ್ಮಲ ಸ್ವರೂಪದಲ್ಲಿರುವದು ಕಂಡು ಬರುವದು. ದೇಹ ಮತ್ತು ಅದರ ಒಳಗಿನ ಪ್ರಗತಿ ತಿಳವಳಿಕೆ ಜ್ಞಾನ ಇವುಗಳ ಜೋಡಿಗೆ ಶ್ರೀ ಸಮರ್ಥರು ದೇಹಾತ್ಮ-ಯೋಗವೆಂಬ ಸಾರ್ಥ ಸುಂದರ ಹೆಸರನ್ನು ಕೊಟ್ಟಿದ್ದಾರೆ. ಮೂಲ ಮಾಯೆಯಲ್ಲಿ ಹೇಗೆ ಅಂತರಾತ್ಮವೋ ಇದರಂತೆ ವಿಶ್ವದಲ್ಲಿ ವಿಶ್ವಾತ್ಮಾ, ಜಗದಲ್ಲಿ ಜಗದಾತ್ಮಾ, ಮತ್ತು ದೇಹದಲ್ಲಿ ಜೀವಾತ್ಮಾ ಇರುವವು.(ಅನಿಸುವದು). ಈ ಜೀವಾತ್ಮವೇ ಸುಖದುಃಖಗಳ ಭೋಗವನ್ನು ಭೋಗಿಸುವದು.

## ದಶಕ ೧೩. ಸಮಾಸ ೯. ಆತ್ಮಾ ವಿವರಣ (ನುಡಿ ೪೦)

ದೇಹ ಮತ್ತು ಜೀವಾತ್ಮಾ ಇವು ಎರಡೂ ಒಂದನ್ನೊಂದು ಅವಲಂಬಿಸಿದ ಹೊರತು ಗತ್ಯಂತರವಿಲ್ಲ. ಒಂದನ್ನು ಬಿಟ್ಟು ಇನ್ನೊಂದು ಏನೂ ಮಾಡಲಾರದು. ಮಾಡಲಿಕ್ಕೆ ಆಗುವದೂ ಇಲ್ಲ. ಅನೇಕ ಉದಾಹರಣೆ ಕೊಟ್ಟು ಇದನ್ನು ನಮ್ಮ ಮನಸ್ಸಿಗೆ ತಿಳಿಯು[ಪಟಾಯಿಸು]ವಂತೆ ಇಲ್ಲಿ ಮಾಡಿದ್ದಾರೆ:- ಶರೀರದೊಂದಿಗೆ ಸಂಬಂಧ ಬಂದದ್ದರಿಂದ ಜೀವಾತ್ಮನಿಗೆ ದುಃಖ ವ ಚಿಂತೆ ಮಾಡಬೇಕಾಗುವದು. ಶರೀರದ ಸಹಾಯದಿಂದ [ದೇಹದ ಸಹಾಯದಿಂದ] ಜೀವಾತ್ಮವು ಜೀವಿಸುವದು. ಈ ಮಾತಂತೂ ಅಗದೀ ಪ್ರತ್ಯಕ್ಷವಾಗಿ ಕಂಡುಬರುವದು. [೧] ದೇಹವು ಅನ್ನವನ್ನು ತಿನ್ನದಿದ್ದರೆ ಜೀವಾತ್ಮವು ಜೀವಂತವಿರಲಿಕ್ಕೆ ಎಷ್ಟೂ ಸಾಧ್ಯವಿಲ್ಲ. ಇದರಂತೆಯೇ ಜೀವಾತ್ಮಾ ದೇಹದಲ್ಲಿ ಇಲ್ಲದಿದ್ದರೆ ದೇಹವು ಜೀವಂತವಿರುವದಿಲ್ಲ. [೨] ದೇಹ ಮತ್ತು ಜೀವಾತ್ಮಾ ಇವನ್ನು ಒಂದರಿಂದ ಇನ್ನೊಂದನ್ನು ಬೇರ್ಪಡಿಸ ಹೋಗುವದು ವ್ಯರ್ಥವಿರುವದು. ಯಾಕೆಂದರೆ ಈ ಎರಡರ ಸಂಯೋಗದಿಂದಲೇ ಮನುಷ್ಯ ಜೀವನದಲ್ಲಿಯ ಯಾವತ್ತೂ ಕಾರ್ಯಗಳು ಘಟಿಸುವವು. [೩] ಫಕ್ತ [ಕೇವಲ] ದೇಹಕ್ಕೆ ಜೀವಂತತನ ಇರುವದಿಲ್ಲ. ಅದೇ ದೇಹವಿಲ್ಲದ ಕೇವಲ ಜೀವಾತ್ಮನಿಗೆ ಯಾವ ಪದಾರ್ಥಗಳನ್ನೂ ಎತ್ತಲಿಕ್ಕೆ ಆಗುವದಿಲ್ಲ. ಒಬ್ಬನು ಸ್ವಪ್ನದಲ್ಲಿ ಉಂಡನೆಂದರೆ ಅವನ ಹೊಟ್ಟೆಯೇನೂ ತುಂಬುವದಿಲ್ಲ. [೪] ಜೀವಾತ್ಮನು ಯಾವಾಗ ಸ್ವಪ್ನದಲ್ಲಿ ಹೋಗುವನೋ ಆಗ ದೇಹದಲ್ಲಿ ಸಹ ಅವನು ಇರುವನು. ನಿದ್ರೆಯಲ್ಲಿ ಇವನು ಶರೀರವನ್ನು ತುರಿಸುವನು, ಕೆರೆಯುವನು. ಇದು ಮೇಲಿನ ಮಾತಿಗೆ ಪ್ರಮಾಣವಾಗಿದೆ. ಇದು ಒಂದು ಚಮತ್ಕಾರವೇ ಸರಿ. [೫]

ಅನ್ನರಸೇ ವಾಢೆ ಶರೀರ । ಶರೀರ ಪ್ರಮಾಣೇ ವಿಚಾರ ।
ವೃದ್ಧಪಣೀ ತದನಂತರ । ದೋನೀ ಲಾಹಾನಾಳತೀ ॥೬॥
ಉತ್ತಮ ದ್ರವ್ಯ ದೇಹ ಖಾತೋ । ದೇಹಯೋಗೇ ಆತ್ಮಾ ಭುಲತೋ ।
ವಿಸ್ಮರಣೇ ಶುದ್ಧಿ ಸಾಂಡಿತೋ । ಸಕಳ ಕಾಂಹೀ ॥೭॥
ದೇಹಾನೇ ಘೇತಲೇ ವಿಷ । ಆತ್ಮಾ ಜಾಯೆ ಸಾವಕಾಸ ।
ವಾಢಣೇ ಮೋಡಣೇ ಆತ್ಮಯಾಸ । ನೇಮಸ್ತ ಆಹೇ ॥೮॥
ವಾಢಣೇ ಮೋಡಣೇ ಜಾಣೇ ಯೇಣೇ । ಸುಖದುಃಖ ದೇಹಾಚೇನಿ ಗುಣೇ ।
ನಾನಾ ಪ್ರಕಾರೇ ಭೋಗಣೇ । ಆತ್ಮಯಾಸ ಘಡೇ ॥೯॥
ವಾರುಳ ಮ್ಹಣಿಜೆ ಪೋಕಳ । ಮುಂಗ್ಯಾಚೆ ಮಾರ್ಗ ಚಿ ಸಕಳ ।
ತೈಸೇ ಚಿ ಹೇ ಕೇವಳ । ಶರೀರ ಜಾಣಾವೇ ॥೧೦॥
ಶರೀರೀ ನಾಡೀಚಾ ಖೇಟಾ । ನಾಡೀಮಧ್ಯೇ ಪೋಕಳ ವಾಟಾ ।
ಲಹಾನ ಥೋರ ಸಗಟಾ । ದಾಟಲ್ಯಾ ನಾಡೀ ॥೧೧॥
ಪ್ರಾಣೀ ಅನ್ನೋದಕ ಘೇತೋ । ತ್ಯಾಚಾ ಅನ್ನರಸ ಹೋತೋ ।
ತ್ಯಾಸ ವಾಯೋ ಪ್ರವರ್ತತೋ । ಸ್ವಾಸೋಸ್ವಾಸೇ ॥೧೨॥
ನಾಡೀದ್ವಾರಾ ಧಾವೇ ಜೀವನ । ಜೀವನಾಮಧೇ ಖೇಳೇ ಪವನ ।
ತ್ಯಾ ಪವನಾಸರಿಸಾ ಜಾಣ । ಆತ್ಮಾಹಿ ವಿವರೇ ॥೧೩॥
ತೃಷೇನೇ ಶೋಕಲೇ ಶರೀರ । ಆತ್ಮ್ಯಾಸ ಕಳೆ ಹಾ ವಿಚಾರ ।
ಮಗ ಉಠವೂನ ಶರೀರ । ಚಾಲವೀ ಉದಕಾಕಡೇ ॥೧೪॥
ಉದಕ ಮಾಗೇ ಶಬ್ದ ಬೋಲವೀ । ಮಾರ್ಗ ಪಾಹೋನ ಶರೀರ ಚಾಲವೀ ।
ಶರೀರ ಅವಘೇ ಚ ಹಾಲವೀ । ಪ್ರಸಂಗಾನುಸಾರ ॥೧೫॥
ಕ್ಷುಧಾ ಲಾಗತೇ ಐಸೇ ಜಾಣತೋ । ಮಗ ದೇಹಾಲಾ ಉಠವಿತೋ ।
ಆಚ್ಯಾವಾಚ್ಯಾ ಬೋಲವಿತೋ । ಜ್ಯಾಸೀ ತ್ಯಾಸೀ ॥೧೬॥
ಬಾಯೆಕಾತ ಮ್ಹಣೇ ಜಾಲೇ ಜಾಲೇ । ದೇಹ ಸೋವಳೇ ಕರೂನ ಆಣಿಲೇ ।
ಪಾಯಾತ ಭರೂನ ಚಾಲವಿಲೇ । ತಾಂತಡೀ ತಾಂತಡೀ ॥೧೭॥
ತ್ಯಾಸೀ ಪಾತ್ರಾವರೀ ಬೈಸವಿಲೇ । ನೇತ್ರೀ ಭರೋನ ಪಾತ್ರ ಪಾಹಿಲೇ ।
ಹಾತಾಕರವೀ ಆರಂಭಿಲೇ । ಆಪೋಶನ ॥೧೮॥
ಹಾತಾಕರವೀ ಗ್ರಾಸ ಉಚಲವೀ । ಮುಖೀ ಜಾಊನ ಮುಖ ಪಸರವೀ ।
ದಾಂತಾಕರವೀ ಚಾವವೀ । ನೇಟೇ ನೇಟೇ ॥೧೯॥

ಅನ್ನರಸದಿಂದ ಶರೀರದ ಬೆಳವಣಿಗೆ ಆಗುವದು. ಶರೀರದ ಬೆಳವಣಿಗೆ ಆದಂತೆ ವಿಚಾರದ ಬೆಳವಣಿಗೆಯೂ ಆಗುವದು. ಅನಂತರ ಮುಪ್ಪು ಆವರಿಸಿದಾಗ ಶರೀರ ವ ವಿಚಾರ ಇವೆರಡರ ಸಂಕೋಚವಾಗುವದು. ಎರಡೂ ಸಣ್ಣದಾಗುವವು. [೬] ದೇಹವು ಮಾದಕ ಪದಾರ್ಥಗಳನ್ನು ಸೇವನ ಮಾಡುವದು, ಇದರ ಅಮಲು [ಪ್ರಭಾವ] ಜೀವಾತ್ಮದ ಮೇಲೆ ಆಗಿ ಅದು ಭ್ರಮೆಗೊಳ್ಳುವದು. ಇವನಿಗೆ ಎಚ್ಚರ [ಪ್ರಜ್ಞೆ] ಇಲ್ಲದಾಗುವದು. ಮತ್ತು ಇವನು ಸಂಪೂರ್ಣ ಶುದ್ಧಿ-ಎಚ್ಚರ ತಪ್ಪಿದವನಾಗುವನು. [ಎಚ್ಚರ ಇಲ್ಲದಾಗುವದು].[೭] ದೇಹವು ವಿಷ ಕುಡಿದರೆ ಅದರ ಪರಿಣಾಮದಿಂದಾಗಿ ಜೀವಾತ್ಮವು ದೇಹಬಿಟ್ಟು ಹೋಗುವದು. ಬೆಳವಣಿಗೆ, ಕುಗ್ಗುವಿಕೆ, ಭಗ್ನವಾಗುವಿಕೆ, ಮುರಿದು ಬೀಳುವಿಕೆ, ಇವೆಲ್ಲವೂ ಜೀವಾತ್ಮನಿಗೆ ನಿಶ್ಚಿತವಾಗಿ ಭೋಗಿಸಬೇಕಾಗುವದು. [೮] ಬೆಳೆಯುವದು, ಮುರಿಯುವದು, ಹೋಗುವದು, ಬರುವದು ಸುಖ ಮತ್ತು ದುಃಖ ಈ ವಿಷಯಗಳೆಲ್ಲವೂ ದೇಹದೊಂದಿಗೆ ಜೀವಾತ್ಮದ ಸಂಯೋಗ ಆದದ್ದರಿಂದ ಜೀವಾತ್ಮನಿಗೆ ಅನೇಕ ರೀತಿಯಿಂದ ಇವುಗಳನ್ನು ಭೋಗಿಸಬೇಕಾಗುವದು. [೯] ಇರುವೆಯ ಮನೆಯು ಒಳಗೆ ಒಳಗೆ ಪೊಳ್ಳಾಗಿಯೇ ಇರುವದು. ಇದರಲ್ಲಿ ಇರುವೆಗಳಿಗೆ ಬರ ಹೋಗಲು ಮಾರ್ಗವಿರುವದು. ನಮ್ಮ ದೇಹವೂ ಸಹ ಇರುವೆಯ ಮನೆಯಂತೆಯೇ ಇರುವದು. [೧೦] ನಮ್ಮ ಶರೀರದಲ್ಲಿ ನಾಡಿಗಳು ದಟ್ಟವಾಗಿ ಹೆಣೆದುಕೊಂಡಿರುವವು. ಇವು ಪೊಳ್ಳಾಗಿರುವವು. ಇವು ಸಣ್ಣವು ಮತ್ತು ಬಹಳಷ್ಟು ದೊಡ್ಡವು ಇರುವವು, ಮತ್ತು ಶರೀರದಲ್ಲಿ ಬಹಳಷ್ಟು ತುಂಬಿಕೊಂಡಿರುವವು. [೧೧] ಪ್ರಾಣಿಗಳು ಅನ್ನ ತಿನ್ನುವವು. ಮತ್ತು ನೀರನ್ನು ಕುಡಿಯುವವು. ಇವುಗಳಿಂದ ಅನ್ನರಸ ತಯಾರ ಆಗುವದು. ಅನ್ನರಸವನ್ನು ವಾಯುವು ಶ್ವಾಸೋಚ್ಛ್ವಾಸದಿಂದ ಪ್ರವಾಹಿತ ಮಾಡುವದು. [೧೨] ಶರೀರದಲ್ಲಿಯ ನಾಡಿಗಳಿಂದ ನೀರು ಪ್ರವಹಿಸುವದು. [ಹರಿಯುವದು] ಈ ನೀರಿನಲ್ಲಿ ವಾಯುವೂ ಸಹ ಹರಿಯುವದು. ಮತ್ತು ಈ ವಾಯುವಿನ ಸಂಗಡ ಜೀವಾತ್ಮನೂ ಸಹ ನಾಡಿಗಳೊಳಗಿಂದ ಸಂಚರಿಸುವನು· ನಾಡಿಗಳೊಳಗಿಂದ ಆತ್ಮದ ಅಂದರೆ ತಿಳುವಳಿಕೆಯ, ಜ್ಞಾನದ[ಜಾಣೀವದ] ಪ್ರವಾಹವೂಸಹ ಇರುವದು. ಈ ಮಾತನ್ನು ಹೇಳುವದೇ ಇದರ ಉದ್ದೇಶವಿರುವದು. [೧೩] ನೀರಡಿಕೆಯಾಗಿ ಶರೀರ [ಗಂಟಲು] ಶೋಷಿತಗೊಂಡಿತೆಂದರೆ ಕೂಡಲೇ ಅದು ಜೀವಾತ್ಮನಿಗೆ ತಿಳಿಯುವದು. ಕೂಡಲೇ ಅವನು ಆ ಶರೀರವನ್ನು ಎಬ್ಬಿಸಿಕೊಂಡು ನೀರಿದ್ದ ಕಡೆಗೆ ಒಯ್ಯುವನು. [೧೪] "ನನಗೆ ನೀರು ಬೇಕು" ಅನ್ನುವ ಶಬ್ದವನ್ನು ಜೀವಾತ್ಮನು[ಅವಶ್ಯವೆನಿಸಿದರೆ] ಶರೀರದ ಕಡೆಯಿಂದ [ಬಾಯಿಯಿಂದ] ಮಾತಾಡಿಸುವನು. ದಾರಿ [ರಸ್ತೆ]ಯನ್ನು ಸರಿಯಾಗಿ ನೋಡಿ ಶರೀರವನ್ನು ನಡೆಯಿಸುವನು. ಹೇಗೆ ಹೇಗೆ ಪ್ರಸಂಗ ಬರುವದೋ ಆಯಾ ಪ್ರಕಾರದಲ್ಲಿ ಚಲನವಲನ [ಹಾಲಚಾಲ]ವನ್ನು ಈ ಜೀವಾತ್ಮನು ಶರೀರದ ಕಡೆಯಿಂದ ಮಾಡಿಸುವನು. [೧೫] ಹಸಿವೆ ಆಯಿತು ಅನ್ನುವದನ್ನು ಜೀವಾತ್ಮನು ತಿಳಿಯುವನು. ಆ ಕೂಡಲೇ ಅವನು ದೇಹವನ್ನು ಎಬ್ಬಿಸುವನು. ಆದರೆ ಊಟಕ್ಕೆ ತಡ [ಅವಕಾಶ]ವಿದ್ದರೆ, ತಡವೇಕಾಯಿತೆಂದು ಯಾರು ಯಾರಿಗೋ ಬಾಯಿಗೆ ಬಂದಂತೆ ಬಯ್ಯಲಿಕ್ಕೆ ಇವನೇ ಹಚ್ಚುವನು. [೧೬] ಆಗ ಹೆಂಡತಿಯ ಶರೀರದಲ್ಲಿಯ ಜೀವಾತ್ಮಾ ಅನ್ನುವದು. "ಆಯಿತು, ಊಟ ತಯಾರ ಆಯಿತು ನಡೆಯಿರಿ". ಆಗ ಇವನು ದೇಹಕ್ಕೆ ಮಡಿ ವಸ್ತ್ರ ಉಡಿಸುವನು ಮತ್ತು ಇವನು ಕಾಲಿನಲ್ಲಿ ಸೇರಿ ಗಡಿಬಿಡಿಯಿಂದ ನಡೆಯಿಸಿಕೊಂಡು ಊಟಕ್ಕೆ ಕರೆದೊಯ್ಯುವನು. [೧೭] ದೇಹವನ್ನು ಇವನು [ಜೀವಾತ್ಮನು] ಊಟದ ಎಲೆಯ ಹತ್ತಿರ ಕೂಡಿಸುವನು. ಆಮೇಲೆ ದೇಹದ ಕಣ್ಣಿನಲ್ಲಿ ಸೇರಿ ಬಡಿಸಿದ ಎಲೆಯನ್ನು ನೋಡುವನು ಮತ್ತು ಕೈಗೆ ಅಪೋಶನ ತೆಗೆದುಕೊಳ್ಳಲಿಕ್ಕೆ ಹಚ್ಚುವನು, [೧೮] ನಂತರ ಜೀವಾತ್ಮನು ಕೈಗೆ ತುತ್ತನ್ನು ಎತ್ತಲು ಹಚ್ಚುವನು. ಬಾಯಿಯ ಹತ್ತಿರ ಕೈಯಲ್ಲಿಯ ತುತ್ತು ಬಂದ ಕೂಡಲೇ ಬಾಯಿ ತೆರೆಯಲು ಹಚ್ಚುವನು. ಮತ್ತು ಹಲ್ಲುಗಳ ಕಡೆಯಿಂದ ಚನ್ನಾಗಿ ನುರಿಸಿ ನುರಿಸಿ ನುಂಗಲು ಹಚ್ಚುವನು. [೧೯]

ಆಪಣ ಜಿಹ್ವೇಮಧೇ ಖೇಳೇ । ಪಾಹಾತೋ ಪರಿಮಳ ಸೋಹಳೇ ।
ಕೇಸ ಕಾಡೀ ಖಡಾ ಕಳೇ । ತತ್ಕಾಳ ಥುಂಕೀ ॥೨೦॥

ಆಳಣೀ ಕಳತಾ ಮಿಠ ಮಾಗೇ । ಬಾಯಲೇಸಿ ವ್ಹಣೆ ಆಗೇ ಕಾಗೇ ।
ಡೋಳೆ ತಾಪೂನ ಪಾಹೋ ಲಾಗೇ । ರಾಗೇ ರಾಗೇ ॥೨೧॥

ಗೋಡೀ ಲಾಗತಾ ಚ ಆನಂದೇ । ಗೋಡ ನಸ್ತಾ ಪರಮ ಖೇದೇ ।
ವಾಕಡೀ ಗೋಷ್ಟೀ ಅಂತರೀ ಭೇದೆ । ಆತ್ಮಯಾಸೀ ॥೨೨॥

ನಾನಾ ಅನ್ನಾಚೀ ಗೋಡೀ । ನಾನಾ ರಸೆ ಸ್ವಾದ ನಿವಡೀ ।
ತಿಖಟ ಲಾಗತಾ ಮಸ್ತಕ ಝಾಡೀ । ಆಣೀ ಖೋಕೀ ॥೨೩॥

ಮಿರಪುಡೀ ಘಾತಲೀ ಘಾರ । ಕಾಯಸೇ ಕರಿತೇ ಖಾಪರ ।
ಜಿವ್ಹೆ ಕರವೀ ಕಠಿಣೋತ್ತರ । ಬೋಲವೀ ರಾಗೇ ॥೨೪॥

ಆಜ್ಯ ಉದಂಡ ಜೇವಿಲಾ । ಸವೇ ಚ ತಾಂಬ್ಯಾ ಉಚಲಿಲಾ ।
ಘುಳಘುಳಾ ಘೇಊ ಲಾಗಲಾ । ಸಾವಕಾಸ ॥೨೫॥

ದೇಹೀ ಸುಖದುಃಖ ಭೋಕ್ತಾ । ತೋ ಯೇಕ ಆತ್ಮಾ ಚಿ ಪಾಹಾತಾ ।
ಆತ್ಮ್ಯಾವಿಣ ದೇಹ ವೃಥಾ । ಮಡೇ ಹೋಯೆ ॥೨೬॥

ಮನಾಚ್ಯಾ ಅನಂತ ವೃತ್ತಿ । ಜಾಣಣೇ ತೇ ಚಿ ಆತ್ಮಸ್ಥಿತಿ ।
ತ್ರೈಲೋಕೀ ಜಿತುಕ್ಯಾ ವೆಕ್ತೀ । ತದಾಂತರೀ ಆತ್ಮಾ ॥೨೭॥

ಜಗಾಮಧ್ಯೇ ಜಗದಾತ್ಮಾ । ವಿಶ್ವಾಮಧೇ ವಿಶ್ವಾತ್ಮಾ ।
ಸರ್ವ ಚಾಲವೀ ಸರ್ವಾತ್ಮಾ । ನಾನಾರೂಪೇ ॥೨೮॥

ಹುಂಗೇ ಚಾಖೇ ಏಕೇ ದೇಖೇ । ವ್ಯದ ಕಠಿಣ ವೊಳಖೇ ।
ಶೀತ ಉಷ್ಣ ಠಾಉಕೇ । ತತ್ಕಾಳ ಹೋಯೆ ॥೨೯॥

ಸಾವಧಪಣೇ ಲಾಘವೀ । ಬಹುತ ಕರೀ ಉಠಾಠೇವೀ ।
ಯಾ ಧೂರ್ತಾಚ್ಯಾ ಉಗವೀ । ಧೂರ್ತ ಚಿ ಕರೀ ॥೩೦॥

ವಾಯೋ ಸರಿಸಾ ಪರಿಮಳ ಯೇತೋ। ಪರೀ ತೋ ಪರಿಮಳ ವಿತಳೋನ ಜಾತೋ।
ವಾಯೋ ಧುಳೀ ಘೇಉನೀ ಯೇತೋ । ಪರೀ ತೇ ಹಿ ಜಾಯೆ ॥೩೧॥

ಇದೇ ಜೀವಾತ್ಮನು ನಾಲಿಗೆಯಲ್ಲಿ ಸಂಚರಿಸಿ (ಸೇರಿ) ರುಚಿ, ಸ್ವಾದ ಮತ್ತು ಸುವಾಸ [ಕಮ್ಮಗಿನ ವಾಸನೆ] ಇವುಗಳ ಆನಂದವನ್ನು ಭೋಗಿಸುವನು. ಅನ್ನದಲ್ಲಿ ಕೂದಲು, ಕಡ್ಡಿ, ಹರಳು ವಗೈರೆ ಬಂದರೆ ಕೂಡಲೇ ಇವನು ತಿಳಿಯುವನು. ಮತ್ತು ತಡಮಾಡದೇ ಉಗಳಲಿಕ್ಕೆ ಹಚ್ಚುವನು. [೨೦] ಅಡಿಗೆ ಮಾಡಿದ ಪದಾರ್ಥಕ್ಕೆ ಉಪ್ಪು ಹಾಕಲು ಮರೆತು ಸಪ್ಪಗಾಗಿದ್ದರೆ, ಜೀವಾತ್ಮಾ ಉಪ್ಪು ಬೇಡುತ್ತಾನೆ. ಆಗ "ಏ ಏನೇ!!" ಅಂತಾ ಒದರಿ ಕೂಗಿ ಕಣ್ಣು ಕೆಂಪಗೆ ಮಾಡಿ [ಕಣ್ಣುಗಲಿಸಿ] ಕೆಕ್ಕರಿಸಿ ಸಿಟ್ಟಿನಿಂದ ನೋಡುವನು. [೨೧] ಸಿಹಿ ಪದಾರ್ಥ ತಿನ್ನುವಾಗ ಜೀವಾತ್ಮನಿಗೆ ಆನಂದವಾಗುವದು. ಪದಾರ್ಥ ಸರಿಯಾಗಿ ಸಿಹಿ ಆಗಿರದಿದ್ದರೆ ಇವನಿಗೆ ಬಹಳ ಕೆಡಕೆನಿಸುತ್ತದೆ, ಕೆಟ್ಟ ಸುದ್ದಿಗಳಿಂದ ಜೀವಾತ್ಮನ ಅಂತರ್ಯಾಮಕ್ಕೆ ಕ್ಲೇಶವಾಗುವದು. [೨೨] ಈ ಜೀವಾತ್ಮನು ಅನೇಕ ಪ್ರಕಾರದ ಅನ್ನಗಳ ಸವಿಯನ್ನು ಸವಿಯುವನು. ಅನೇಕ ರಸಗಳ ರುಚಿಯನ್ನು ಸವಿಯಬೇಕೆಂದು ಅಂಥ ಪದಾರ್ಥಗಳನ್ನು ಹುಡುಕಿ ತೆಗೆಯುವನು. ಪದಾರ್ಥ ಖಾರವಾಗಿದ್ದರೆ [ಖಾರ ಹತ್ತಿದರೆ] ಕೂಡಲೇ ತಲೆ ಝಾಡಿಸುವನು. ಖಾರ ಗಂಟಲಿಗೆ ಹತ್ತಿ ಕೆಮ್ಮು-ಠಸಕಾ ಬರುವದು. [೨೩] ಆಗ ಇವನು [ಜೀವಾತ್ಮನು] ಸಿಟ್ಟಿಗೆದ್ದು ಮಾತನಾಡಲಿಕ್ಕೆ ಹಚ್ಚುವನು. "ಖಾರದ ಪುಡಿ ಬಹಳ ಹಾಕಿರುವಿ, ಅಡಿಗೆ ಬಹಳ ಕಠೋರವಾಗಿದೆ. ಅಡಿಗೆ ಮಾಡಲು ನಿನಗೇನು ಮಣ್ಣು ಬರುವದು?" ಇಂಥ ಕಠೋರ ಮಾತುಗಳನ್ನು ನಾಲಿಗೆಯು ಕಡೆಯಿಂದ ಮಾತನಾಡಿಸುವನು.[೨೪]ತುಪ್ಪ ಹಾಕಿದ ಪಕ್ವಾನ್ನವನ್ನು ಬಹಳತಿಂದದ್ದರಿಂದ ನೀರಡಿಕೆಯಾಗುವದು. ಅಂತೆಯೇ ಜೀವಾತ್ಮನು ನೀರಿನ ತಂಬಿಗೆಯನ್ನು ಎತ್ತಲಿಕ್ಕೆ ಹಚ್ಚುವನು. ಹಾಗೂ ಗಟಗಟ ನೀರನ್ನು ಕುಡಿಯಲಿಕ್ಕೆ ಹಚ್ಚುವನು. [೨೫] ಈ ರೀತಿ(ಪ್ರಕಾರ)ಯಲ್ಲಿ ದೇಹದಲ್ಲಿದ್ದುಕೊಂಡು ದೇಹದ ಮುಖಾಂತರ [ದೇಹದ್ವಾರದಿಂದ] ಜೀವಾತ್ಮನು ಅನೇಕ ಪ್ರಕಾರದ ಸುಖ ದುಃಖಗಳನ್ನು ಭೋಗಿಸುವನು. ಜೀವಾತ್ಮನು ದೇಹ ವನ್ನು ನಡೆಯಿಸುವನು. ಜಗದಾತ್ಮನು ಜಗತ್ತನ್ನು ನಡೆಯಿಸುವನು. ಮತ್ತು ವಿಶ್ವಾತ್ಮಾ ವಿಶ್ವವನ್ನು ನಡೆಯಿಸು ವನು. ಮೂಲ ಅಂತರಾತ್ಮನು ಒಟ್ಟಿನಲ್ಲಿ ಒಬ್ಬನೇ ಒಬ್ಬನಿದ್ದಾನೆ. ದೇಹದಲ್ಲಿ ಇರುವವನು ಮತ್ತು ಸುಖ ದುಃಖ ಗಳನ್ನು ಭೋಗಿಸುವವನು ಒಬ್ಬನೇ ಜೀವಾತ್ಮನು. ಜೀವಾತ್ಮನು ದೇಹದಲ್ಲಿ ಇರದಿದ್ದರೆ ದೇಹವು ಕೇವಲ ಪ್ರೇತ ವೆಂದು ಅನಿಸುವದು. [೨೬] ಮನಸ್ಸಿನಲ್ಲಿ ಅನಂತ ವೃತ್ತಿಗಳು (ಕಲ್ಪನೆ, ಭಾವನೆಗಳು)ನಿರ್ಮಾಣವಾಗುವವು. ಜೀವಾ ತ್ಮನು ಇವನ್ನೆಲ್ಲ ತಿಳಿಯುವನು. ಎಲ್ಲ ವೃತ್ತಿಗಳನ್ನು ತಿಳಿಯುವದೇ ಇವನ ಖರೇ ಧರ್ಮವಿರುವದು. ತ್ರೈಲೋಕ್ಯ ದಲ್ಲಿ ಎಷ್ಟು ವ್ಯಕ್ತಿಗಳಿರುವರೋ ಅವರೆಲ್ಲರ ಅಂತರ್ಯಾಮದಲ್ಲಿ ಜೀವಾತ್ಮಾ ವಾಸಮಾಡುವನು. [೨೭] ಜಗದ ಅಂತರ್ಯಾಮದಲ್ಲಿ ಇರುವವನು ಜಗದಾತ್ಮಾ, ವಿಶ್ವದ ಅಂತರ್ಯಾಮದಲ್ಲಿರುವವನು ವಿಶ್ವಾತ್ಮಾ ಎಂದು ಅನ್ನಿಸಿ ಕೊಳ್ಳುವನು. ಅಂತರಾತ್ಮಾ ಅಥವಾ ಸರ್ವಾತ್ಮನೇ ಈ ರೀತಿಯಲ್ಲಿ ಅನೇಕ ರೂಪ ತೆಗೆದುಕೊಂಡು ಸರ್ವ ವನ್ನೂ ನಡೆಸುವನು. [೨೮] ಈ ಅಂತರಾತ್ಮನಿಗೆ ಎಲ್ಲವನ್ನೂ ಗುರುತಿಸಿ ತಿಳಿಯಲು ಬರುವದು. ಇವನು ವಾಸನೆಯನ್ನು ತಿಳಿದುಕೊಳ್ಳುವನು. ಸ್ವಾದ ರುಚಿ ಪಡೆಯುವನು. ಕೇಳುವನು, ನೋಡುವನು, ಮೃದು ಮತ್ತು ಕಠಿಣ ಇವುಗಳನ್ನು ಗುರುತಿಸುವನು. ಉಷ್ಣ ಮತ್ತು ಶೀತ (ತಂಪು) ಇವು ಇವನಿಗೆ ತತ್ಕಾಲ ಗೊತ್ತಾಗುವವು.[೨೯] ಅತಿ ಚತುರ ಇರುವವನಾದ ಈ ಜೀವಾತ್ಮನು ಸರ್ವ ಕಡೆಗೂ ಸರ್ವದರಲ್ಲಿಯೂ ಲಕ್ಷ್ಯಕೊಟ್ಟು ಅನೇಕಾನೇಕ ಪ್ರಕಾರದ ಖಟಪಟಿ [ಪ್ರಯತ್ನ] ಮಾಡುವನು. ಈ ಚತುರನಾದ ಜೀವಾತ್ಮನ ಖರೇ ಇರುವನ್ನು ಖರೇ ಚತುರ ಚಾಣಾಕ್ಷ, ಕುಶಾಗ್ರ ಬುದ್ಧಿಯ ಪುರುಷನೇ ತಿಳಿಯಬಲ್ಲನು. [೩೦] ಇನ್ನು ಮೇಲೆ ವಾಯು ಮತ್ತು ಜೀವಾತ್ಮಾ ಇವುಗಳ ತುಲನಾ ಇರುವದು. ಇವುಗಳ ತುಲನಾ ಮಾಡಿ ಶ್ರೀ ಸಮರ್ಥರು ತೋರಿಸಿ ಕೊಡುವದೇನಂದರೆ, ಜೀವಾತ್ಮಾ ವಾಯುವಿಗಿಂತ ಹೆಚ್ಚು ಸೂಕ್ಷ್ಮ ಮತ್ತು ಕಾರ್ಯಕ್ಷಮ ಇರುವನು:- ಗಾಳಿ ಬೀಸಲಿಕ್ಕೆ ಹತ್ತಿತೆಂದರೆ ಆಗ ಅದರ ಕೂಡ ಸುಗಂಧ ವಾಸನೆ ಬರುವದು. ಆದರೆ ಆ ಸುಗಂಧದ ವಾಸನೆಯು ಕೆಲವು ಹೊತ್ತಿನ ನಂತರ ಇಲ್ಲ ದಾಗುವದು. ಗಾಳಿ ಯಾವಾಗ ಬೀಸುವದೋ ಆಗ ಅದರ ಸಂಗಡ ಧೂಳು ಸಹ ಬರುವದು. ಆದರೆ ಈ ಧೂಳು ಸಹ ಕೆಲವು ಹೊತ್ತಿನ ನಂತರ ಇಲ್ಲದಾಗುವದು. [೩೧]

ಶೀತ ಉಷ್ಣ ವಾಯೋಸರಿಸೇ । ಸುವಾಸೇ ಅಥವಾ ಕುವಾಸೇ ।
ಅಸಿಜೇ ಪರೀ ಸಾವಕಾಸೇ । ತಗಣೇ ನ ಘಡೇ ॥೩೨॥

ವಾಯೋಸರಿಸೆ ರೋಗ ಯೇತೀ । ವಾಯೋಸರಿಸೀ ಭೂತೇ ಧಾವತೀ ।
ಧೂರ ಆಣಿ ಧುಕಟೇ ಯೇತೀ । ವಾಯೋಸವೇ ॥೩೩॥

ವಾಯೋಸವೇ ಕಾಂಹೀ ಚ ಜಗೇನಾ । ಆತ್ಮ್ಯಾಸವೇ ವಾಯೋ ತಗೇನಾ ।
ಆತ್ಮ್ಯಾಚೀ ಚಪಳತಾ ಜಾಣಾ । ಅಧಿಕ ಆಹೆ ॥೩೪॥

ವಾಯೋ ಕಠಿಣಾಸ ಆಡತೋ । ಆತ್ಮಾ ಕಠಿಣ ಭೇದೂನ ಜಾತೋ ।
ಕಠಿಣ ಪಾಹೋ ತರೀ ತೋ । ಭೇದೇಹಿನಾ ॥೩೫॥

ವಾಯೋ ಝುಡಝುಡಾ ವಾಜೆ । ಆತ್ಮಾ ಕಾಹೀ ಚ ನ ವಾಜೆ ।
ವೊನೇ ಚಿ ಅಂತರೀ ಸಮುಜೆ । ವಿವರೋನ ಪಾಹಾತಾ ॥೩೬॥

ಶರೀರಾಸ ಬರೇ ಕೇಲೇ । ತೇ ಆತ್ಮಯಾಸ ಪಾವಲೇ ।
ಶರೀರಯೋಗೇ ಜಾಲೇ । ಸಮಾಧಾನ ॥೩೭॥

ದೇಹಾವೇಗಳೇ ಉಪಾಯೆ ನಾನಾ । ಕರಿತಾ ಆತ್ಮಯಾಸ ಪಾವೇನಾ ।
ಸಮಾಧಾನ ಪಾವೇ ವಾಸನಾ । ದೇಹಾಚೇನಿ ॥೩೮॥

ದೇಹಆತ್ಮಯಾಚೇ ಕೌತುಕ । ಪಾಹೋ ಜಾತಾ ಹೇ ಅನೇಕ ।
ದೇಹಾವೇಗಳೀ ಆಡಣುಕ । ಆತ್ಮಯಾಸ ಹೋಯೆ ॥೩೯॥

ಯೇಕ ಅಸತಾ ಉದಂಡ ಘಡೇ । ವೇಗಳೇ ಪಾಹಾತಾ ಕಾಹೀ ಚ ನ ಘಡೇ ।
ವಿವೇಕೇ ತ್ರೈಲೋಕೀ ಪವಾಡೆ । ದೇಹಾತ್ಮಯೋಗೇ ॥೪೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಆತ್ಮ ವಿವರಣ' ನಾಮ ಸಮಾಸ ನವಮ ॥

ಬಿಸಿ [ಉಷ್ಣ] ಮತ್ತು ಥಂಡ [ತಣ್ಣಗಿನ] ಮತ್ತು ಸುಗಂಧ ದುರ್ಗಂಧ ಇತ್ಯಾದಿಗಳು ವಾಯುವಿನ ಕೂಡ [ಗಾಳಿಯ ಸಂಗಡ] ಹರಿದು ಬರುವವು. ಪರಂತು ಇದು ಬಹಳ ಹೊತ್ತು ಇರುವದಿಲ್ಲ. [೩೨] ವಾಯುವಿನ ಸಂಗಡ ರೋಗ ಜಂತುಗಳು ಬರುವವು. ಭೂತಗಳು ಓಡುವವು. ಇದೇ ರೀತಿಯಲ್ಲಿ ಹೊಗೆ, ಧೂಳು, (ಧೂಮ್ರ) (ಮೋಡ) ಸಹಿತ ಬರುವವು. [೩೩] ಆದರೆ ಇವುಗಳ ಪೈಕಿ ಒಂದೂ ವಾಯುವಿನ ಕೂಡ ಕಾಯಂ ಉಳಿಯುವದಿಲ್ಲ. ಜೀವಾತ್ಮದೊಂದಿಗೆ ತುಲನಾ ಮಾಡಿದರೆ ವಾಯು ಇವನ ಸರಿಸಮನೆನಿಸುವದು ಸಾಧ್ಯವಿಲ್ಲ. ವಾಯುವಿಗಿಂತ ಜೀವಾತ್ಮನು ಹೆಚ್ಚು ಸೂಕ್ಷ್ಮ ಮತ್ತು ಚಪಲ ಇರುವನು. (೩೪) ಕಠಿಣ ಪದಾರ್ಥ ಅಥವಾ ವಸ್ತು ಮಧ್ಯದಲ್ಲಿ ಅಡ್ಡ ಬಂದರೆ ವಾಯು ಅಲ್ಲಿ ತಡೆದು ನಿಲ್ಲುವದು. ಆದರೆ ಅದೇ ಜೀವಾತ್ಮನು ತನಗೆ ಅಡ್ಡ ಬಂದ ಎಂಥ ಕಠಿಣ ಪದಾರ್ಥವನ್ನಾದರೂ ಭೇದಿಸಿ ಆ ಕಡೆಗೆ ಪಾರಾಗುವನು. (ಹೋಗುವನು). ಜೀವಾತ್ಮನ ಕಠಿಣತನವು ಎಷ್ಟಿರುವದೆಂದು ನೋಡಬೇಕೆನಿಸಿ ಅವನ ಭೇದ ಮಾಡ ಹೋದರೆ ಭೇದ ಮಾಡಲಿಕ್ಕೇ ಆಗುವದಿಲ್ಲ(೩೫) ಗಾಳಿ[ವಾಯು]ಯಿಂದ ಝುಂಡ-ಝುಂಡ ಸರ-ಸರ ಸೊಂಯಿ-ಸೊಂಯಿ ಎಂದು ಸಪ್ಪಳ[ಅವಾಜ]ಆಗುವದು. ಆದರೆ ಜೀವಾತ್ಮನದು ಎಷ್ಟೂ ಸಪ್ಪಳ[ಅವಾಜ]ಆಗುವದಿಲ್ಲ. ಯಾರಾದರೊಬ್ಬರು ಮೌನ ಧಾರಣ ಮಾಡಿ ಪೂರ್ಣ ನಿಃಶಬ್ದ ರಾಗಿಯೇ ಇವನ ಚಿಂತನ-ಮನನ ಮಾಡಿದಾಗ ಅವರಿಗೆ ಅವರ ಸ್ವತಃದ ಅಂತರ್ಯಾಮದಲ್ಲಿಯೇ ಜೀವಾತ್ಮನ ಇರುವಿನ ಬಗ್ಗೆ ತಿಳಿದು ಬರುವದು. [೩೬] ಈಗ ಕೊನೆಯಲ್ಲಿ ಹೇಳುವದೇನಂದರೆ, ಯಾವ ಯಾವ ಉಪಚಾರವನ್ನು ದೇಹಕ್ಕೆ ಮಾಡಲಾಗುವದೋ ಅದೆಲ್ಲವೂ ಜೀವಾತ್ಮನಿಗೆ ಮುಟ್ಟುವದು. ದೇಹ ಇಲ್ಲದಿದ್ದರೆ ಜೀವಾತ್ಮನಿಗೆ ಬಹಳಷ್ಟು ಅಡಚಣಿ ಆಗುವದು. ಶರೀರಕ್ಕೆ ಚಲೋ ಉಪಚಾರ ಮಾಡಿದರೆ ಅದು ಜೀವಾತ್ಮನಿಗೆ ಮುಟ್ಟುವದು. ಶರೀರದ ಮುಖಾಂತರ ಜೀವಾತ್ಮನಿಗೆ ಸಮಾಧಾನ ಸಿಗುವದು. [೩೭] ದೇಹದ ವ್ಯತಿರಿಕ್ತವಾಗಿ ನಾವು ಏನೇ ಉಪಚಾರ ಮಾಡಿದರೂ ಅದು ಜೀವಾತ್ಮನಿಗೆ ಮುಟ್ಟುವದಿಲ್ಲ. ಫಕ್ತ ದೇಹದ್ವಾರದಿಂದಲೇ ಜೀವಾತ್ಮನ ವಾಸನಾದ ಸಮಾಧಾನವಾಗುವದು. [೩೮] ದೇಹ ಮತ್ತು ಜೀವಾತ್ಮಾ ಇವುಗಳ ಸಂಯೋಗದ ಕೌತುಕಗಳು ಇನ್ನೂ ಇಂಥವು ಅನೇಕ ಇರುವವು. ದೇಹ ಇಲ್ಲದಿದ್ದರೆ ಜೀವಾತ್ಮನಿಗೆ ಎಲ್ಲ ಕಡೆಯಿಂದಲೂ ಅಡಚಣಿ ಆಗುವದು. ಅವನಿಗೆ ಹಿಡಿದುಬಿಟ್ಟಂತೆ ಹರಕತ್ತು (ತಡೆ) ಆದಂತೆ ಆಗುವದು. [೩೯] ದೇಹ ಮತ್ತು ಜೀವಾತ್ಮಾ ಏಕತ್ರವಾಗಿದ್ದರೆ ಅಕ್ಷರಶಃ ಅಸಂಖ್ಯ ಗೋಷ್ಟಿ ಘಟಿಸಲು ಸಾಧ್ಯವಾಗುವದು. ಇವರನ್ನು ಪ್ರತ್ಯೇಕಿಸಿದರೆ ಒಂಟಿಯಾಗಿ ಒಬ್ಬೊಬ್ಬರಿಂದ ಯಾವುದೂ ಆಗಲು ಸಾಧ್ಯವಿಲ್ಲ. ಇಬ್ಬರ ಸಂಯೋಗ ಇದ್ದದ್ದಾದರೆ ವಿವೇಕದ ಬಲದಿಂದ ತ್ರೈಲೋಕ್ಯದ ಪತ್ತೆ ಹಚ್ಚಬಹುದು. ಅಲ್ಲಿಗೆ ಹೋಗಿ ಅಡ್ಡಾಡಿ ನೋಡಿ ಬರಬಹುದು. [೪೦]

ಶ್ರೀ ದಾಸಬೋಧದಲ್ಲಿಯ ಗುರುಶಿಷ್ಯರ ಸಂವಾದದೊಳಗಿನ ಹದಿಮೂರನೆ ದಶಕದೊಳಗಿನ
"ಆತ್ಮವಿವರಣ" ವೆಂಬ ಒಂಭತ್ತನೆಯ ಸಮಾಸವು ಮುಗಿದುದು

● ●

### ದಶಕ ತ್ರಯೋದಶ : ಸಮಾಸ ದಶಮ : ಶಿಕವಣ ನಿರೂಪಣ

॥ಶ್ರೀರಾಮ॥ ಪಾಲೇಮಾಳಾ ಸುಮನಮಾಳಾ । ಫಳಮಾಳಾ ಬೀಜಮಾಳಾ ।
ಪಾಷಾಣಮಾಳಾ ಕವಡೇಮಾಳಾ । ಸೂತ್ರೇ ಚಾಲತೀ ॥೧॥

ಸ್ಫಟಿಕಮಾಳಾ ಮೋಹರೇಮಾಳಾ । ಕಾಷ್ಠಮಾಳಾ ಗಂಧಮಾಳಾ ।
ಧಾತುಮಾಳಾ ರತ್ನಮಾಳಾ । ಜಾಳ್ಯಾ ವೋಲಿ ಚಾಂದೋವೇ ॥೨॥

# ದಶಕ ೧೩. ಸಮಾಸ ೧೦. ಶಿಕವಣ ನಿರೂಪಣ (ನುಡಿ ೨೯)

ಈ ವಿಶ್ವವು ಐದುಂ ಭೌತಿಕ (ಪಂಚಭೂತಗಳು) ದೃಶ್ಯ ವಸ್ತುಗಳಿಂದ ಭರಪೂರ (ವಿಪುಲ) ವಾಗಿ ತುಂಬಿರುವದು. ಈ ಎಲ್ಲ ವಸ್ತುಗಳಲ್ಲಿಯೂ ಅಂತರಾತ್ಮನು ಸಮಾನವಾಗಿ ತುಂಬಿರುವನು. ಹೀಗಿದ್ದರೂ ಸಹ ಈ ಅಂತರಾತ್ಮನು ಸರ್ವ (ಎಲ್ಲ) ಸ್ಥಳದಲ್ಲಿ ಸಮಾನತನದಿಂದ ಪ್ರಕಟನಾಗುವದಿಲ್ಲ. ಈ ಕಾರಣದಿಂದಾಗಿ ಜಗದಲ್ಲಿಯ ವಸ್ತುಗಳಲ್ಲಿ, ಪ್ರಾಣಿಗಳಲ್ಲಿ ಮತ್ತು ಮನುಷ್ಯರಲ್ಲಿ ಭೇದ ಅಸಮಾನತೆ ಕಂಡುಬರುವದು. ಪ್ರಾಣಿ ಮತ್ತು ಪ್ರಾಣಿಗಳಿಗಿಂತ ಮನುಷ್ಯರಲ್ಲಿ ಅಂತರಾತ್ಮನು ಅಧಿಕವಾಗಿ ಪ್ರಕಟವಾಗಿರುವನು. ಇದರಲ್ಲಿ ಯಾವ ಸಂಶಯವೂ ಇಲ್ಲ. ಪರಂತು ಮನುಷ್ಯ ಮನುಷ್ಯರಲ್ಲಿಯೂ ಸಹ ಇವನು ಹೆಚ್ಚು ಕಡಿಮೆಯಿಂದ ಪ್ರಕಟಗೊಂಡದ್ದು ಕಂಡು ಬರುವದು. ಆಚಾರ ಶುದ್ಧ, ವಿಚಾರ ಶುದ್ಧ, ಸುಬುದ್ಧ ಮತ್ತು ವೀತರಾಗಿ ಇದ್ದ(ಆಸಕ್ತಿರಹಿತ) ಮನುಷ್ಯರ ಆತ್ಮಿಕ ದರ್ಜೆಯು ಆಚಾರಹೀನ, ವಿಚಾರಹೀನ, ನಿರ್ಬುದ್ಧ (ಮೂರ್ಖ) ಮತ್ತು ಲೋಭಿ ಈ ಜನರಿಗಿಂತ ನಿಶ್ಚಿತವಾಗಿಯೂ ಶ್ರೇಷ್ಠ ವಿರುವದು. ಇದನ್ನು ವಿಂಗಡಿಸಿ ಹೇಳಬೇಕಾಗಿಲ್ಲ. ಪ್ರತ್ಯಕ್ಷ ಎಲ್ಲರಿಗೂ ಕಂಡು ಬರುವಂಥದೇ ಇರುವದು. ಪ್ರಾಣಿ ಮಾತ್ರರ ಅಂತಃಕರಣದೊಂದಿಗೆ ಮನದಿಂದ ಅಧಿಕಾಧಿಕ ಏಕರೂಪರಾಗಿ ಹೋಗುವದೇ ಆಧ್ಯಾತ್ಮಿಕ ಪ್ರಗತಿಯ ಪ್ರಧಾನ ಆಧಾರ (ಪ್ರಮಾಣ) ಇರುವದು. ಇಂಥ ಪ್ರಕಾರದ ಸಂಪೂರ್ಣ ಏಕರೂಪತಾ (ಅಖಂಡ) ಯಾವ ಮನುಷ್ಯನಿಗೆ ಸಾಧಿಸುವದೋ ಅವನೇ ಉತ್ತಮ ಪುರುಷನು. ಇಂಥವರು ಲೋಕ ಸಂಗ್ರಹ ಮಾಡಬೇಕು. ಇವರು ಎಂದೂ ಯಾರದೂ ಅಂತಃಕರಣವನ್ನು ದುಃಖಿತಗೊಳಿಸಬಾರದು. ಲೋಕದ ಜನ ಸ್ವಭಾವವು ಮಕ್ಕಳಂತೆ ಇರುವದು. ಆದ್ದರಿಂದ ಇವರನ್ನು ಸಣ್ಣ ಮಕ್ಕಳಂತೆಯೇ ಪ್ರೇಮದಿಂದ ಕಾಣಬೇಕು. ಮತ್ತು ನಡೆಸಿಕೊಳ್ಳಬೇಕು. ಸಾವಕಾಶವಾಗಿ ಜನರನ್ನು ಪುಣ್ಯ ಶ್ಲೋಕರನ್ನಾಗಿ ತಯಾರಿಸಬೇಕು. ಮಾಡಬೇಕು.

ದಶಕ ೧೩. ಸಮಾಸ ೧೦. ಶಿಕವಣ ನಿರೂಪಣ (ನುಡಿ ೨೯)

ಶ್ರೀ ಭಗವದ್ಗೀತೆಯ ಏಳನೆಯ ಅಧ್ಯಾಯದಲ್ಲಿ ಶ್ರೀ ಕೃಷ್ಣನು ಹೇಳುವದೇನೆಂದರೆ: "ಮಯಿ ಸರ್ವಮ್ ಇದಮ್ ಪ್ರೋತಮ್ ಸೂತ್ರೇ ಮಣಿಗಣಾ ಇವ" ಅರ್ಥ:- ಒಂದು ದಾರದಲ್ಲಿ ಅನೇಕಾನೇಕ ಮಣಿಗಳನ್ನು ಹೇಗೆ ಪೋಣಿಸಿರುವರೋ ಅದರಂತೆ ಈ ಎಲ್ಲ ವಿಶ್ವವು ನನ್ನಲ್ಲಿಯೇ ಪೋಣಿಸಿರುವದು. ಅರ್ಥಾತ್ ಅಡಕವಾಗಿರುವದು. ಶ್ರೀ ಸಮರ್ಥರು ಈ ಕಲ್ಪನೆಯನ್ನೇ ಇಲ್ಲಿ ಅನುವಾದ ಮಾಡುವರು. ಮತ್ತು ಇದು (ಈ ಸಾಮ್ಯ) ಅಪೂರ್ಣ ಅದೆ ಅಂತಾ ಹೇಳುತ್ತಾರೆ:- ಗಿಡದ ಎಲೆಗಳು, ಹೂಗಳು, ಫಲಗಳು, ಬೀಜಗಳು, ಕಲ್ಲುಗಳು ಮತ್ತು ಕವಡೆಗಳು ಇವುಗಳ ಮಾಲೆಯನ್ನು ಮಾಡುವರು. ಆದರೆ ಇವೆಲ್ಲವುಗಳು ದಾರದಿಂದ ಕಟ್ಟಿ ಅಥವಾ ಪೋಣಿಸಿ ಮಾಡುವದರಿಂದ ಆಗುವವು. ಒಟ್ಟಿನಲ್ಲಿ ದಾರವಿದ್ದದ್ದರಿಂದಲೇ ಮಾಲೆಯಾಯಿತು. [೧] ಇದರಂತೆ ಸ್ಫಟಿಕ ಮಣಿ, ಮೊಹರ ಮಣಿ ಅಂದರೆ ಸರ್ಪಮಸ್ತಕದಲ್ಲಿಯ ವಿಷನಾಶಕ ಮಣಿ, ಬಂಗಾರದ ಮೋಹರಿನ ಮಣಿ, ಒಂದು ಅಮೌಲ್ಯ ಔಷಧೀ ಮಣಿ, ಕಾಷ್ಠ, ಬೇರು (ತುಳಸಿ, ಚಂದನ, ರುದ್ರಾಕ್ಷಿ ಇತ್ಯಾದಿ) ಗಂಧ, ಧಾತು, ರತ್ನ ಇವುಗಳ ಮಾಲೆಯನ್ನೂ ಸಹ ಮಾಡುವರು. ಇವುಗಳ ಹೊರತಾಗಿ ಹೆಣಿಕೆ ಹಾಕಿ ಮಾಡಿದ ಛತ್ತು, ಸಣ್ಣ ಮುತ್ತಿನಿಂದ ಹೆಣೆದ ವಸ್ತುವ ಮಾಲೆ ಅಥವಾ ಅಲಂಕಾರಿಕ ವಸ್ತುಗಳು ಮತ್ತು ಮೀನುಗಾರರ ಬಲೆ, ಕಿಡಕಿ, ಬಾಗಿಲು, ಡೇರೆ, ಮಂಟಪಗಳ ಶೋಭೆಗಾಗಿ ದಾರದಿಂದ ಹೆಣೆದ ವಸ್ತುಗಳು ಮತ್ತು ಹೆಣಿಕೆಯ ಟೊಪ್ಪಿಗೆ ಇತ್ಯಾದಿಗಳು ಇವೆಲ್ಲವುಗಳನ್ನೂ ದಾರದಿಂದಲೇ ತಯಾರಿಸುವರು. [೨]

ಪರೀ ಹೇ ತಂತೂನೇ ಚಾಲತೇ । ತಂತು ನಸ್ತಾ ವಿಸ್ಕಳಿತ ಹೋತೇ ।
ತೈಸೆ ಮ್ಹಣೋ ಆತ್ಮಯಾತೇ । ತರೀ ಸಾಹಿತ್ಯ ನ ಪಡೆ ॥೩॥

ತಂತೂಸ ಮಣೀ ಬೋವಿಲಾ । ತಂತೂ ಮಧ್ಯೇಚಿ ರಾಹಿಲಾ ।
ಆತ್ಮಾ ಸರ್ವಾಂಗೀ ವ್ಯಾಪಲಾ । ಪಾಹಾನಾ ಕಾ ॥೪॥

ಆತ್ಮಾ ಚಪಳ ಸಹಜ ಗುಣೇ । ದೋರೀ ಕಾಯೆ ಚಳೋ ಜಾಣೇ ।
ಮ್ಹಣೋನ ದೃಷ್ಟಾಂತ ದೇಣೇ । ಸಾಹಿತ್ಯ ನ ಘಡೆ ॥೫॥

ನಾನಾ ವಲ್ಲೀತ ಜಳಾಂಶ । ಉಸಾಮಧ್ಯೇ ದಾಟಲಾ ರಸ ।
ಪರೀ ತೋ ರಸ ಆಣೀ ಬಾಕಸ । ಯೇಕ ನವ್ಹೇ ॥೬॥

ದೇಹೀ ಆತ್ಮಾ ದೇಹ ಅನಾತ್ಮಾ । ತ್ಯಾಹೂನ ಪರ ತೋ ಪರಮಾತ್ಮಾ ।
ನಿರಂಜನಾಸ ಉಪಮಾ । ಅಸೇಚಿನಾ ॥೭॥

ರಾಯಾಪಾಸೂನ ರಂಕವರೀ । ಅವಘ್ಯಾ ಮನುಷ್ಯಾಂಚಿಯಾ ಹಾರೀ ।
ಸಗಟ ಸಮಾನ ಸರೀ । ಕೈಸೀ ಕರಾವೀ ॥೮॥

ದೇವ ದಾನವ ಮಾನವ । ನೀಚ ಯೋನೀ ಹೀನ ಜೀವ ।
ಪಾಪೀ ಸುಕೃತಿ ಅಭಿಪ್ರಾವ । ಉದಂಡ ಆಹೆ ॥೯॥

ಯೇಕಾಂಶೇ ಜಗ ಚಾಲೇ । ಪರೀ ಸಾಮರ್ಥ್ಯ ವೇಗಳಾಲೇ ।
ಯೇಕಾಸಂಗೇ ಮುಕ್ತ ಕೇಲೇ । ಯೇಕಾಸಂಗೇ ರವರವ ॥೧೦॥

ಸಾಕರ ಮೂತೀ ಪೃಥ್ವೀ ಹೋಯೆ । ಪರೀ ತೇ ಮೂತೀ ಖಾತಾ ನಯೆ ।
ಗರಳ ಆಪ ನವ್ಹೇ ಕಾಯೆ । ಪರೀ ತೇ ಖೋಟೇ ॥೧೧॥

ಪುಣ್ಯಾತ್ಮಾ ಆಣೀ ಪಾಪಾತ್ಮಾ । ದೋಹೀಕಡೆ ಅಂತರಾತ್ಮಾ ।
ಸಾಧು ಭೋಂದು ಸೀಮಾ । ಸಾಂಡೂ ಚ ನಯೆ ॥೧೨॥

ಅಂತರ ಯೇಕ ತೋ ಖರೇ। ಪರೀ ಸಾಂಗಾತೇ ಘೇಊ ನ ಯೇತೀ ಮಾಹಾರೇ।
ಪಂಡಿತ ಆಣಿ ಚಾಟೇ ಪೋರೇ । ಯೇಕ ಕೈಸೀ ॥೧೩॥

ಮನುಷ್ಯ ಆಣಿ ಗಧಡೆ । ರಾಜಹಂಸ ಆಣಿ ಕೋಂಬಡೇ ।
ರಾಜೆ ಆಣಿ ಮಾಕಡೇ । ಯೇಕ ಕೈಸೀ ॥೧೪॥

ಈ ಎಲ್ಲವುಗಳಲ್ಲಿ (ಮಾಲೆ ಮತ್ತು ಹೆಣೆದ ವಸ್ತುಗಳಲ್ಲಿ) ದಾರವು ಸೇರಿರುತ್ತದೆ. ದಾರದಿಂದಾಗಿಯೇ ಮಣಿಗಳು ಚನ್ನಾಗಿ ಏಕತ್ರದಲ್ಲಿ ಬರುವವು. ದಾರವಿಲ್ಲದಿದ್ದರೆ (ದಾರ ಹರಿದು ಹೋದರೆ) ಮಣಿಗಳೆಲ್ಲ ಅಸ್ತವ್ಯಸ್ತವಾಗುವವು. ಮಾಲೆಯು ಮಣಿಗಳಲ್ಲಿ ದಾರವು ಯಾವ ಪ್ರಕಾರ ಸೇರಿರುವದೋ ಅದೇ ಪ್ರಕಾರದಲ್ಲಿ ಆತ್ಮನು ಸರ್ವ ವಸ್ತುಗಳಲ್ಲಿ ಸೇರಿರುತ್ತಾನೆ. ಅಂತಾ ಅನ್ನುವರು. ಆದರೆ ದಾರದ ದೃಷ್ಟಾಂತವು ಆತ್ಮನಿಗೆ ಸಂಪೂರ್ಣವಾಗಿ ಹೋಲಿಕೆ ಆಗುವದಿಲ್ಲ. [೩] ದಾರವು ಮಣಿಗಳಲ್ಲಿಯ ತೂತಿನೊಳಗಿಂದ ಹಾಯ್ದು ಹೋಗುವದು. ಮಣಿಯು ದಾರದ ಆಧಾರದಿಂದ ಇರುವದು. ಪರಂತು ದಾರವು ಮಣಿಯನ್ನೇನೂ ವ್ಯಾಪಿಸಿರುವದಿಲ್ಲ ಆದರೆ ದೇಹದಲ್ಲಿ ಆತ್ಮಾ ಇರುವದು. ಈ ಆತ್ಮಾ ದೇಹದ ಸರ್ವಾಂಗವನ್ನೂ ವ್ಯಾಪಿಸಿರುವದು. ಇದನ್ನು ಮುಖ್ಯವಾಗಿ ಲಕ್ಷ್ಯದಲ್ಲಿ ತಂದುಕೊಳ್ಳಬೇಕು. [೪] ಆತ್ಮನಲ್ಲಿ ಚೇತನಾ ಇದು ಸಹಜವಾಗಿ ಇರುವದು. ಅದೇ ದಾರದಲ್ಲಿ ಇದು ಇರುವದಿಲ್ಲ. ಆದ್ದರಿಂದ ದಾರದ ದೃಷ್ಟಾಂತವು ಆತ್ಮನಿಗೆ ಲಾಗೂ ಆಗುವದಿಲ್ಲ. [೫] ಯಾವತ್ತೂ ವಸ್ತುಗಳಲ್ಲಿ ಆತ್ಮಾ ವ್ಯಾಪಿಸಿಯೇ ಇರುವನೆಂಬ ಮಾತೇನೂ ಸುಳ್ಳಲ್ಲ. ಪರಂತು, ಎಲ್ಲ ಕಡೆಗೂ ಒಂದೇ ಪ್ರಮಾಣದಲ್ಲಿ ಇವನು ಪ್ರಕಟವಾಗುವದಿಲ್ಲ. ಅಂತೆಯೇ ವಸ್ತುಗಳಲ್ಲಿ ಮತ್ತು ಪ್ರಾಣಿಗಳಲ್ಲಿ ಉಚ್ಚ, ನೀಚತ್ವ ಅಂದರೆ ಶ್ರೇಷ್ಠ ಮತ್ತು ಕನಿಷ್ಠತನ ಕಂಡು ಬರುವದು:- ಅನೇಕ ಬಳ್ಳಿಗಳಲ್ಲಿ ಜಲಾಂಶ ಅಂದರೆ ರಸವಿರುವದು. ಕಬ್ಬಿನಲ್ಲಿಯೂ ರಸ ತುಂಬಿರುವದು. ಆದರೆ ಆ ರಸ ಮತ್ತು ರಸಹೀನವಾದ ಕಬ್ಬಿನ ಸಿಪ್ಪಿ (ಚರಟ) ಇವು ಒಂದೇ ಸಮವಾಗಲಾರವು. [೬] ದೇಹವು ಅನಾತ್ಮವು. ಆದರೆ ದೇಹದಲ್ಲಿ ಇರುವವನು ಆತ್ಮನು. ಇದಕ್ಕಿಂತ ಶ್ರೇಷ್ಠನಾದವನು ಪರಮಾತ್ಮನು. ಈ ನಿರಂಜನ ಪರಮಾತ್ಮನಿಗೆ ಯಾವುದರ ಉಪಮೆಯನ್ನೂ ಕೊಡಲಿಕ್ಕೆ ಬರುವದಿಲ್ಲ. [೭] ರಾಜನಿಂದ ರಂಕನವರೆಗೆ ಜನ ಸಮುದಾಯವು ಎಲ್ಲ ಕಡೆಗೂ ಕಂಡು ಬರುವದು. ಆದರೆ ಇವರೆಲ್ಲರನ್ನೂ ಒಂದೇ ಸಮವಾದ ಒಂದೇ ದರ್ಜೆಯ ಅಥವಾ ಒಂದೇ ರೀತಿಯ ಅರ್ಹತೆಯವರೆಂದು ಒಪ್ಪಲಿಕ್ಕೆ ಬರುವದಿಲ್ಲ. [೮] ದೇವ, ದಾನವ, ಮಾನವ, ನೀಚ ಯೋನಿ, ಹೀನಜೀವಿ, ಪಾಪಿ, ಪುಣ್ಯವಾನ ಇತ್ಯಾದಿ ಅನೇಕ ಪ್ರಕಾರದ ಭೇದಗಳು ಇರುವವು. [೯] ಆದರೆ ಈಶ್ವರನ ಒಂದು ಅಂಶದಿಂದ ತತ್ವದಿಂದ ಜಗತ್ತು ನಡೆಯುವದು. (ಭ ಗೀ. ೧೦-೪೨) ಈಶ್ವರನ ಕೆಲವೊಂದು ಭಾಗ ಜಗತ್ತನ್ನು ವ್ಯಾಪಿಸಿರುವದು. ಇದು ಅಗದೀ ನಿಜವೇ ಇರುವದು. ಆದರೆ ಪ್ರತಿಯೊಂದು ವಸ್ತು ಮತ್ತು ವ್ಯಕ್ತಿಯ ಸಾಮರ್ಥ್ಯ ಬೇರೆ ಬೇರೆ ಇರುವದು ಕಂಡು ಬರುವದು. ಒಬ್ಬನ ಸಂಗತಿಯಿಂದ ಮೋಕ್ಷ ದೊರಕುವದು. ಅದೇ ಇನ್ನೊಬ್ಬನ ಸಂಗತಿಯಿಂದ ಥೇಟ ನರಕಕ್ಕೆ ಹೋಗಬೇಕಾಗುವದು. [೧೦] ಸಕ್ಕರಿ ಮತ್ತು ಮಣ್ಣು ಇವೆರಡೂ ಪೃಥ್ವಿಯ ರೂಪವೇ ಇರುವದಾದರೂ ಮಣ್ಣನ್ನು ತಿನ್ನಲಿಕ್ಕೆ ಬರುವದಿಲ್ಲ. ಹಾವಿನ ವಿಷ (ಸರ್ಪದ ವಿಷ) ಮತ್ತು ನೀರು ಇವೆರಡೂ ನೀರಿನ (ಅಂಶ) ರೂಪವೇ ಇರುವವು. ಆದರೆ ಈ ಸಮಾನತೆಯು (ಸಾಮ್ಯತೆಯು) ಖೊಟ್ಟಿ ಇರುವದು. [೧೧] ಒಬ್ಬ ಪುಣ್ಯವಂತ ಸದ್ಗುಣಿ, ಸದಾಚಾರವಂತ ಮನುಷ್ಯ ಮತ್ತು ಒಬ್ಬ ಅತ್ಯಂತ ಪಾಪಿ ಮನುಷ್ಯ ಇವರಿಬ್ಬರಲ್ಲಿಯೂ ಅಂತರಾತ್ಮಾ ಒಂದೇ ಇರುವದು ಆದರೆ ಸಾಧು ಮತ್ತು ಭೋಂದು (ಠಕ್ಕ, ಮೋಸಗಾರ) ಇವರಿಬ್ಬರನ್ನೂ ಒಂದೇ ಸಮ ಮನ್ನಿಸಲಿಕ್ಕೆ ಬಂದೀತೆ ? ಅರ್ಥಾತ್ ಬರುವದಿಲ್ಲ. ಇವರನ್ನು ಸಮಾನವೆಂದು ಮನ್ನಿಸಿದರೆ ನೀತಿ, ನ್ಯಾಯ, ಮರ್ಯಾದೆಯನ್ನು ಮುರಿದಂತೆ ಆಗುವದು. ಇದು ಯೋಗ್ಯವಲ್ಲ. [೧೨] ಎಲ್ಲದರಲ್ಲೂ ಅಂತರಾತ್ಮಾ ಒಂದೇ ಇರುವದು ನಿಜವೇ ಅದೆ ಹೀಗೆಂದು ಒಬ್ಬ ಹೀನನನ್ನು, ಅಸ್ವಚ್ಛನನ್ನು ಪಂಕ್ತಿಗೆ (ಹತ್ತಿರ) ಕೂಡಿಸಿಕೊಂಡು ಊಟ ಮಾಡುವದು ಯೋಗ್ಯವಲ್ಲ. ವಿದ್ವಾನ್, ಪಂಡಿತ ಮತ್ತು ಉಡಾಳ ಹುಡುಗ ಇವರಿಬ್ಬರನ್ನು ಒಂದೇ ಯೋಗ್ಯತೆಯವರೆಂದು ಮನ್ನಿಸಲಿಕ್ಕೆ ಬರುವದಿಲ್ಲ. [೧೩] ಮನುಷ್ಯ ಮತ್ತು ಕತ್ತೆ ರಾಜಹಂಸ ಮತ್ತು ಕೋಳಿ, ರಾಜ ಮತ್ತು ಮಂಗ ಇವುಗಳ ಯೋಗ್ಯತೆ ಒಂದೇ ಆಗಲಾರವು. [೧೪]

ಭಾಗೀರಥೀಚೇ ಜಳ ಆಪ । ನೋರೀ ಸಂವದಣೇ ತೇಹಿ ಆಪ ।
ಕುಶ್ಚಿಳ ಉದಕ ಅಲ್ಪ । ಸೇವವೇನಾ ॥೧೫॥

ಯಾಕಾರಣೇ ಆಚಾರಶುದ್ಧ । ತ್ಯಾಉಪರೀ ವಿಚಾರಶುದ್ಧ ।
ವೀತರಾಗೀ ಆಣಿ ಸುಬುದ್ಧ । ಏಸಾ ಪಾಹಿಜೆ ॥೧೬॥

ಶೂರಾಹೂನ ಮಾನಿಲೇ ಲಂಡೀ । ತರೀ ಯುದ್ಧಪ್ರಸಂಗೀ ನರಕಾಡೀ ।
ಶ್ರೀಮಂತ ಸಾಂಡೂನ ಬರಾಡೀ । ಸೇವಿತಾ ಕೈಸೇ ॥೧೭॥

ಯೇಕಾ ಉದಕೇ ಸಕಳ ಜಾಲೇ । ಪರೀ ಪಾಹೋನ ಪಾಹಿಜೆ ಸೇವಿಲೇ ।
ಸಗಟ ಅವಘೇಚ ಘೇತಲೇ । ತರೀ ತೇ ಮೂರ್ಖಪಣ ॥೧೮॥

ಜೀವನಾಚೇ ಚ ಜಾಲೇ ಅನ್ನ । ಅನ್ನಾಚೇ ಜಾಲೇ ವಮನ ।
ಪರೀ ವಮನಾಚೇ ಭೋಜನ । ಕರಿತಾ ನ ಯೇ ॥೧೯॥

ತೈಸೇ ನಿಂದ್ಯ ಸೋಡೂನ ದ್ಯಾವೇ । ವಂದ್ಯ ತೇ ಹೃದಈ ಧರಾವೇ ।
ಸತ್ಕೀರ್ತೀನೇ ಭರಾವೇ । ಭೂಮಂಡಳ ॥೨೦॥

ಉತ್ತಮಾಸಿ ಉತ್ತಮ ಮಾನೇ । ಕನಿಷ್ಠ್ಯಾಸ ತೇ ನ ಮಾನೇ ।
ಮ್ಹಣೌನ ಕರಂಟೆ ದೇವಾನೇ । ಕರೂನ ಠೇವಲೇ ॥೨೧॥

ಸಾಂಡಾ ಅವಘೇ ಕರಂಟಪಣ ।.ಧರಾವೇ ಉತ್ತಮ ಲಕ್ಷಣ ।
ಹರಿಕಥಾ ಪುರಾಣ ಶ್ರವಣ । ನೀತಿ ನ್ಯಾಯೆ ॥೨೨॥

ವರ್ತಾಯಾಚಾ ವಿವೇಕ । ರಾಜೀ ರಾಖಣೇ ಸಕಳಲೋಕ ।
ಹಳುಹಳು ಪುಣ್ಯಶ್ಲೋಕ । ಕರೀತ ಜಾವೇ ॥೨೩॥

ಮುಲಾಚೆ ಚಾಲೀನೇ ಚಾಲಾವೇ । ಮುಲಾಚ್ಯಾ ಮನೋಗತೇ ಬೋಲಾವೇ ।
ತೈಸೆ ಜನಾಸ ಸಿಕವಾವೇ । ಹಳುಹಳು ॥೨೪॥

ಮುಖ್ಯ ಮನೋಗತ ರಾಖಣೇ । ಹೇ ಚಿ ಚಾತುರ್ಯಾಚೀ ಲಕ್ಷಣೇ ।
ಚತುರ ತೋ ಚತುರಾಂಗ ಜಾಣೇ । ಇತರ ತೀ ವೇಡೀ ॥೨೫॥

ವೇಡ್ಯಾಸ ವೇಡೇ ಮ್ಹಣೋ ನಯೆ । ವರ್ಮ ಕದಾಪಿ ಬೋಲೋ ನಯೇ ।
ತರೀ ಚ ಘಡೇ ದಿಗ್ವಿಜಯೆ । ನಿಸ್ಪೃಹಾಸೀ ॥೨೬॥

ಗಂಗೆಯ ನೀರು ಬಚ್ಚಲ ಮೋರೆಯ ನೀರು ಮತ್ತು ಅರಿವೆ (ವಸ್ತ್ರ) ಗಳನ್ನು ಹಿಂಡಿ ಒಗೆದ ನೀರು ಇವೆಲ್ಲ ನೀರೇ ಇರುವವು ಆದರೆ ಇವು ಹೊಲಸಾಗಿರುವವು. ಇವನ್ನು ಸ್ವಲ್ಪ ಪ್ರಮಾಣದಲ್ಲಿಯಾದರೂ ಕುಡಿಯಲಿಕ್ಕೆ ಬರುವದಿಲ್ಲ. [೧೫] ತಾತ್ಪರ್ಯವೇನಂದರೆ ಶುದ್ಧ ಆಚಾರ ಇದ್ದವರು ಅದರಲ್ಲಿಯೂ ಶುದ್ಧ ವಿಚಾರವಿದ್ದವರು ಮತ್ತು ಅನಾಸಕ್ತ ಮನದವರು ಮತ್ತು ಶುದ್ಧ ಬುದ್ಧಿ ಇರುವಂಥ ಮನುಷ್ಯರು ಇತರ ಸಾಮಾನ್ಯ ಮನುಷ್ಯರಿಗಿಂತ ಯಾವಾಗಲೂ ಶ್ರೇಷ್ಠ ದರ್ಜೆಯವರು ಇರುವರು. [೧೬] ತಿಳಿಯಿರಿ, ಒಬ್ಬ ಅಂಜುಬುರುಕ ಮನುಷ್ಯನಿಗೆ ನಿಜವಾದ ಶೂರ ಮನುಷ್ಯನಿಗಿಂತ ಹೆಚ್ಚಿನ ದರ್ಜೆಯನ್ನು ಕೊಟ್ಟಿದ್ದಾದರೆ ಯುದ್ಧದ ಪ್ರಸಂಗದಲ್ಲಿ ಫಜೀತಿಆಗದೇ ಇರಲಾರದು. ಒಬ್ಬ ಶ್ರೀಮಂತ ಮನುಷ್ಯನನ್ನು ಹಿಂದಕ್ಕೆ ಸರಿಸಿ ದಟ್ಟ ದರಿದ್ರನ ಸೇವಾ ಚಾಕರಿ ಮಾಡಿದರೆ ಪ್ರತಿಫಲವೇನು ಸಿಕ್ಕೀತು ? ಅರ್ಥಾತ್ ಸಿಗಲಾರದು. (೧೭) ಒಂದೇ ನೀರಿನಿಂದ ಎಲ್ಲವೂ ಉತ್ಪನ್ನವಾದುದು ನಿಜ, ನಿಜವಿದ್ದರೂ ಯಾವುದನ್ನು ಸೇವಿಸಬೇಕೋ ಅದನ್ನು ಚನ್ನಾಗಿ ಪರೀಕ್ಷಿಸಿಯೇ ಸೇವಿಸಬೇಕಾಗುವದು. ಒಟ್ಟಾಗಿ ಎಲ್ಲವನ್ನೂ ತಿಂದದ್ದಾದರೆ ಮೂರ್ಖತನದ್ದಾಗುವದು. [೧೮] ನೀರಿನಿಂದ ಅನ್ನವಾಗುವದು. ಅನ್ನವು ವಾಂತಿಯಾಗಿ ಹೊರಗೆ ಬಂದರೂ ಅದು ಅನ್ನವೆಂದು ವಾಂತಿಯನ್ನು ತಿನ್ನಲಿಕ್ಕೆ ಬರುವದಿಲ್ಲ. [೧೯] ಇದರಂತೆಯೇ ಯಾವುದು ನಿಂದ್ಯವಿರುವದೋ ಅದನ್ನು ಬಿಟ್ಟು ಬಿಡಬೇಕು. ಯಾವುದು ಯೋಗ್ಯ (ಹೃದ್ಯ) ವಿರುವದೋ ಅದನ್ನು ಅಂತಃಕರಣದಲ್ಲಿ ಧರಿಸಿ ನಡೆಯಬೇಕು. ಈ ಪ್ರಕಾರ ನಡೆದು ಜಗತ್ತಿನಲ್ಲಿ ತಮ್ಮ ಕೀರ್ತಿಯನ್ನು ಬೆಳಗಿಸಬೇಕು. [೨೦] ಹೀನರ ಅವಲಂಬನ (ಸಂಪರ್ಕ) ಮಾಡುವದು-ನಂಬುವದು ಇದು ಭಿಕಾರಿತನವೆನಿಸುವದು. ಅಭಾಗಿತನವೆನಿಸುವದು. ಇಂಥದನ್ನು ಪೂರ್ಣ ತ್ಯಜಿಸಿ ಉತ್ತಮ ಪುರುಷರಾಗಬೇಕು. ಯಾವತ್ತೂ ಜನರನ್ನು ಪ್ರಸನ್ನಗೊಳಿಸಬೇಕು. ಜನರ ಮನೋಗತವನ್ನು ತಿಳಿದು ಅವರಿಗೆ ಸಾವಕಾಶವಾಗಿ ಭಕ್ತಿ ಜ್ಞಾನಾದಿಗಳನ್ನು ಕಲಿಸಬೇಕು. ಯಾರ ಮನಸ್ಸನ್ನೂ ನೋಯಿಸದೆ ಎಲ್ಲರ ಸಂಗಡ ಮನಸಾ ಸಮರಸರಾಗಬೇಕು:- ಉತ್ತಮ ಮನುಷ್ಯರಿಗೆ ಯಾವ ಯಾವುದು ಉತ್ತಮ ಹಾಗೂ ಯೋಗ್ಯವಿರುವದೋ ಅದೇ ಅವರಿಗೆ ಸಂತೋಷದಾಯಕವೆನಿಸುವದು. ಅದೇ ಹೀನ ಮನುಷ್ಯರಿಗೆ ಇದು ಸರಿ ಎನಿಸುವದಿಲ್ಲ. ಅಂತೆಯೇ ದೇವರು ಇವರನ್ನು ಭಿಕಾರಿಗಳನ್ನಾಗಿ (ದರಿದ್ರರನ್ನಾಗಿ) ಮಾಡಿದ್ದಾನೆ. [೨೧] ಜಾಣ ಮನುಷ್ಯರು ಎಲ್ಲ ಅವ್ಯವಹಾರ ಅನೀತಿ ಅನ್ಯಾಯಗಳನ್ನು ತ್ಯಜಿಸಬೇಕು. ಉತ್ತಮ ಲಕ್ಷಣಗಳನ್ನು ಸ್ವೀಕರಿಸಬೇಕು. ಮತ್ತು ಹರಿಕಥೆ ನಿರೂಪಣ (ಪ್ರವಚನ) ನೀತಿ, ನ್ಯಾಯ ಇವುಗಳನ್ನು ಕೇಳಬೇಕು. ತಿಳಿಯಬೇಕು. ಇವು ಉತ್ತಮ ಲಕ್ಷಣಗಳಾಗಿವೆ. (೨೨) ಎಲ್ಲರನ್ನೂ ಸಂತುಷ್ಟ ವಿಡಬೇಕು. ಇದೇ ಉತ್ತಮ ವಿವೇಕಿಯ ಲಕ್ಷಣವು. ಇದು ಲೋಕ ಸಂಗ್ರಾಹಕನ ಗುರುತಿನದೇ ಆಗಿರುವದು. ಜನರನ್ನು ಸಾವಕಾಶವಾಗಿ ಪುಣ್ಯಶೀಲ ಮಾರ್ಗದ ಕಡೆಗೆ ಒಯ್ಯಬೇಕು. [೨೩] ಜನರ ಮನಸ್ಸು ಮತ್ತು ನಡವಳಿಕೆಯು ಸಣ್ಣ ಮಕ್ಕಳಂತೆ ಇರುವದು. ಇದನ್ನು ಗುರುತಿಸಿ ತಿಳಿದು ಜನರ ಕೂಡ ನಡೆಯುವಾಗ (ವ್ಯವಹರಿಸುವಾಗ) ಮಕ್ಕಳ ನಡೆಯಿಂದಲೇ ನಡೆದು ಅವರನ್ನು ತಿದ್ದಬೇಕು. ಮಕ್ಕಳ ಮನಃಪ್ರಕಾರವೇ ಇವರ ಕೂಡ ಮಾತನಾಡಬೇಕು. ಈ ರೀತಿಯಲ್ಲಿ ನಡೆದು ಜನರಿಗೆ ಕ್ರಮೇಣ ಕಲಿಸಬೇಕು. (೨೪) ಲೋಕ ಸಂಗ್ರಹ ಮಾಡುವ ಪುರುಷನು. ಮುಖ್ಯವಾಗಿ ಜನರ ಮನೋಗತವನ್ನು ಅರಿತು ಅದಕ್ಕನುಗುಣವಾಗಿ ಅವರನ್ನು ಸಂಬಾಳಿಸಬೇಕು. ಇದೇ ಖರೇ ಚಾತುರ್ಯದ ಲಕ್ಷಣವಿರುವದು. ಹೀಗೆ ಯಾರು ಚತುರರಿರುವರೋ ಅವರು ಸಾಮ ದಾನ, ದಂಡ ಮತ್ತು ಭೇದ ಅನ್ನುವ ಚತುರೋಪಾಯಗಳ ಸರ್ವ ಮಾರ್ಗಗಳನ್ನೂ ತಿಳಿದಿರುವರು. ಆದರೆ ತಿಳಿಯದವರು ಹುಚ್ಚಪ್ಪಗಳು ಎಂದು ತಿಳಿಯಬೇಕು. [೨೫] ಆದರೆ ಹೆಚ್ಚಾಗಿ ಲೋಕ ಸಂಗ್ರಾಹಕನು ಹುಚ್ಚನಿಗೆ ಹುಚ್ಚನೆಂದು ಸ್ಪಷ್ಟವಾಗಿ ಜನರಲ್ಲಿ ಅನ್ನಬಾರದು. ಯಾರ ಕುಂದನ್ನೂ ಬಹಿರಂಗದಲ್ಲಿ ಆಡಿ ತೋರಿಸಬಾರದು. ಜನರ ಕೂಡ ಒಳ್ಳೇ ರೀತಿಯ ನಡವಳಿಕೆಯನ್ನು ಇಟ್ಟುಕೊಂಡರೆ ಮಾತ್ರ ನಿಸ್ಪೃಹ ಮಹಂತನಿಗೆ ತನ್ನ ಪ್ರಯತ್ನದಲ್ಲಿ ದಿಗ್ವಿಜಯ ಪ್ರಾಪ್ತವಾಗುವದು. (ಪುಢಾರಿತನಕ್ಕೆ ಯಶ ದೊರಕುವದು). [೨೬]

ಉದಂಡ ಸ್ಥಳೀ ಉದಂಡ ಪ್ರಸಂಗ । ಜಾಣೋನಿ ಕರಣೇ ಯಥಾಸಾಂಗ।
ಪ್ರಾಣಿಮಾತ್ರಾಚಾ ಅಂತರಂಗ । ಹೋಊನ ಜಾವೇ ॥೨೭॥

ಮನೋಗತ ರಾಖೋನ ಜಾತಾ । ಪರಸ್ಪರೇ ಹೋಯ ಅವಸ್ಥಾ ।
ಮನೋಗತ ತೋಡಿತಾ ಮಮಸ್ಥಾ । ಬರೀ ನಾಹೀ ॥೨೮॥

ಯಾಕಾರಣೇ ಮನೋಗತ । ರಾಖೇಲ ತೋ ಮೋಠಾ ಮಹಂತ ।
ಮನೋಗತ ರಾಖತಾ ಸಮಸ್ತ । ಮೊಢೋನ ಯೇತೀ ॥೨೯॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ಸಿಕವಣ ನಿರೂಪಣ ನಾಮ' ಸಮಾಸ ದಶಮ ॥

• •

— ದಶಕ ತ್ರಯೋದಶ ಸಮಾಪ್ತ —

ಮಹಂತನಿಗೆ ಅನೇಕ ಸ್ಥಳದಲ್ಲಿ ಅನೇಕ ಪ್ರಕಾರದ ಪ್ರಸಂಗಗಳು ಬರುವವು. ಯಾವುದೇ ಪ್ರಸಂಗ ಬಂದರೂ ಅದನ್ನು ಸಮಾಧಾನದಿಂದ, ಧೈರ್ಯದಿಂದ ಗುರುತಿಸಿ ಅದಕ್ಕೆ ಯೋಗ್ಯವಾದದ್ದನ್ನು ಮಾಡಬೇಕು. ಮತ್ತು ನಡೆಯಬೇಕು. ಇವನು ಪ್ರಾಣಿ ಮಾತ್ರರ ಅಂತರಂಗದೊಂದಿಗೆ ಏಕರೂಪವಾಗಿ ಹೋಗಬೇಕು. (ಜೀವದ ಗೆಳೆಯನಂತೆ ನಡೆಯಬೇಕು) [೨೭] ಇನ್ನೊಬ್ಬರ ಮನೋಗತವನ್ನು ಅರಿತು ಸಂಬಾಳಿಸಿ ನಡೆದದ್ದಾದರೆ ಪರಸ್ಪರರಲ್ಲಿ ಏಕರೂಪತೆ, ಸದಿಚ್ಛೆ ಬೆಳೆಯುವದು. ಇನ್ನೊಬ್ಬರ (ಎರಡನೆಯವರ) ಮನೋಗತ ಭಂಗಗೊಂಡರೆ ಪರಸ್ಪರರಲ್ಲಿ ಸಂಘರ್ಷ, ವ್ಯಾಕುಲತೆ ನಿರ್ಮಾಣವಾಗಿ ಕಾರ್ಯದ ಹಾನಿಯಾಗುವದು. [೨೮] ಆದ್ದರಿಂದ ಎರಡನೆಯವರ ಅಂತಃಕರಣವನ್ನು ನೋಯಿಸದೆ ದುಃಖಿಸದೆ ನಡೆಯುವದನ್ನು ಸಾಧಿಸಿದ ಮಹಂತನು ನಿಜವಾಗಿಯೂ ಶ್ರೇಷ್ಠನೆಂದು ತಿಳಿಯಬೇಕು. ಮನೋಗತವನ್ನು ಸಂಬಾಳಿಸಿದರೆ ಮಾತ್ರ ಯಾವತ್ತೂ ಜನರು ಆಕರ್ಷಿತರಾಗಿ ತಮ್ಮಿಂದ ತಾವೇ ಹಿಂದುಗಟ್ಟಿ ಬರುವರು. [೨೯]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹದಿಮೂರನೆಯ ದಶಕದೊಳಗಿನ
"ಸಿಕವಣ ನಿರೂಪಣ" ಎಂಬ ಹೆಸರಿನ ಹತ್ತನೆಯ ಸಮಾಸವು ಮುಗಿದುದು.

● ●

# ದಶಕ ೧೪. ಅಖಂಡ ಧ್ಯಾನ

ಶ್ರೀ ಸಮರ್ಥರ ಕಾಲದಲ್ಲಿ ಯುರೋಪ ದೇಶದಲ್ಲಿ ಗಣಿತ ವಿಷಯದ ಅಭ್ಯಾಸಕ್ಕೆ ಬಹಳ ಸುಧಾರಣೆಯ ಗಾಳಿ ಜೋರಿನಿಂದ ಬೀಸುತ್ತಿತ್ತು. ಮತ್ತು ವಿಜ್ಞಾನದ ಬೆಳವಣಿಗೆ ಆಗಹತ್ತಿತ್ತು. ಆದರೂ ಸಹ ಖರೇ ವಿಚಾರ ವಂತ ಜನರ ಮನದಲ್ಲಿ ಧರ್ಮದ ಮೇಲೆ ಶ್ರದ್ಧೆಯು ಹಿಡಿತವಿತ್ತು. ಆಗ ಭಾರತೀಯ ಸಮಾಜದಲ್ಲಿಯ ವಿಚಾರ ವಂತರ ಮಾನಸಿಕ ದೃಷ್ಟಿಯು ಶಿಥಿಲಗೊಂಡಿತ್ತು. ಇವರಲ್ಲಿ ಮೂಲಭೂತ ಭೌತಿಕ ಶಾಸ್ತ್ರ (ಪಂಚಭೂತಗಳಿಗೆ ಸಂಬಂಧಿಸಿದ ಶಾಸ್ತ್ರ)ಗಳ ಬಗ್ಗೆ ಅನಾಸಕ್ತಿ ಹಾಗೂ ಅದನ್ನು ತಿಳಿಯಬೇಕೆಂಬ ಲವಲವಿಕೆ ಕೂಡಾ ಇರಲಿಲ್ಲ. ಇಷ್ಟೇ ಅಲ್ಲ, ಅಧ್ಯಾತ್ಮದ ದೃಷ್ಟಿಯಿಂದ ಸಹ ಭಾರತೀಯ ಸಮಾಜವು ಮಂದ (ಸುಸ್ತು)ಗೊಂಡಿತ್ತು. ತಣ್ಣಗಾಗಿತ್ತು. ಇಂಥ ಸಮಾಜದ ಮುಂದೆ ಓರ್ವ ನಿಸ್ಪೃಹ ಹಾಗೂ ಜೊತೆಗೇ ನಿಃಸ್ವಾರ್ಥಿಯಾಗಿ ಲೋಕ ಸಂಗ್ರಹ ಮಾಡುವಂಥ ಪುರುಷನ ಆದರ್ಶವನ್ನು ಇಡದ ಹೊರತು (ಎತ್ತಿ ತೋರಿಸದ ಹೊರತು) ಸಮಾಜೋನ್ನತಿಗೆ ಅನ್ಯ ಮಾರ್ಗವೇ ಇರಲಿಲ್ಲ. ಇಂಥ ನಿಃಸ್ವಾರ್ಥಿ, ನಿಸ್ಪೃಹ (ಪಕ್ಷಪಾತವಿಲ್ಲದ, ಸ್ವಾರ್ಥರಹಿತ, ನಿರ್ಭಿಡೆ) ಅರ್ಥಾತ್ ಆಚಾರ, ವಿಚಾರ ಉಚ್ಚಾರ ಶುದ್ಧನಾಗಿರುವ ಲೋಕ ನೇತಾರನ ಚರಿತ್ರೆಯು ಹೇಗಿರಬೇಕೆಂಬ ಬಗೆಗಿನ ಪರಿಪೂರ್ಣ ವರ್ಣನೆಯು ಈ ದಶಕದಲ್ಲಿ ಕಂಡು ಬರುವದು. ಜನರಿಗೆ ಬುದ್ಧಿವಂತಿಕೆ [ಜಾಣತನ, ಶಹಾಣೇತನ]ಯನ್ನು ಕಲಿಸಿ ತಯಾರ ಮಾಡ ಬೇಕಾದರೆ ಜನತೆಯ ಮೇಲೆ ಇವರಿಗೆ ಅಪಾರ ನಿಃಸ್ವಾರ್ಥ ಪ್ರೇಮವಿರಬೇಕಾಗುವದು. ನಿಃಸ್ವಾರ್ಥ ಪ್ರೇಮ ಉತ್ಪನ್ನವಾಗಬೇಕಾದರೆ ದೇಹಬುದ್ಧಿ ಸಂಪೂರ್ಣ ನಾಮಶೇಷವಾಗಿರಬೇಕಾಗುವದು. ದೇಹಬುದ್ಧಿ ಕ್ಷೀಣವಾಗಬೇಕಾದರೆ ಅವನಲ್ಲಿ ಆತ್ಮಬುದ್ಧಿಯು ಉದಯವಾಗಬೇಕಾಗುವದು. ಈ ಆತ್ಮಬುದ್ಧಿಯು ಅವನಲ್ಲಿ ಸ್ಥಿರಗೊಳ್ಳಬೇಕಾದರೆ ಭಗವಂತನ ಧ್ಯಾನವನ್ನು ಅಖಂಡವಾಗಿ ಹಿಡಿಯಬೇಕಾಗುವದು. ಯಾರು ಭಗವಂತನ ಧ್ಯಾನವನ್ನು ಅಖಂಡವಾಗಿ ಮಾಡುವರೋ ಅವರಲ್ಲಿ ನಿಃಸ್ವಾರ್ಥ ಪ್ರೇಮವು ಸಹಜವಾಗಿ ನಿರ್ಮಾಣವಾಗುವದು. ಆಮೇಲೆ ಜನರಿಗೆ ಮಾರ್ಗದರ್ಶನ ಮಾಡುವ ಸಾಮರ್ಥ್ಯವು ಅವನಲ್ಲಿ ಪ್ರಕಟವಾಗುವದು. ಯಾವುದೇ ಸಮಾಜದಲ್ಲಿಯ ಸಾಮಾನ್ಯ ಮನುಷ್ಯನು ಸ್ವಾರ್ಥೀ ಇರುವನು. ಪ್ರಪಂಚದಲ್ಲಿಯೇ ಸದಾ ಆಸಕ್ತನಾಗಿರುವನು. ಆದರೆ ಇದರ ಸಂಗಡವೇ ಪ್ರತಿಯೊಂದು ಸಮಾಜದಲ್ಲಿ ಕೆಲವೊಂದು ಜನ ನಿಃಸ್ವಾರ್ಥಿಗಳೂ ಇರುವರು. ಭಾರತೀಯ ಸಮಾಜದಲ್ಲಿ ಬ್ರಾಹ್ಮಣ ವರ್ಗವೊಂದು ನಿಸ್ವಾರ್ಥ ರೀತಿಯಲ್ಲಿ ಇದ್ದಿತು. ಅನಂತರ ಇವರು ಅಧಃಪಾತಿಗಳಾಗಿ ಯಾವಾಗ ಇವರೂ ಸಹ ಸ್ವಾರ್ಥಿಗಳಾದರೋ ಆಗ ಭಾರತೀಯ ಸಮಾಜ ಕೆಡಹತ್ತಿತು. ಇದನ್ನೆಲ್ಲ ನೋಡಿ ಶ್ರೀ ಸಮರ್ಥರಿಗೆ ಬಹಳ ಕೆಡಕೆನಿಸಿತು. ಭಾರತದಲ್ಲಿಯ ಸಮಾಜವನ್ನು ಮೇಲಕ್ಕೆತ್ತುವದೆಂದರೆ ಹಿಮಾಲಯವನ್ನು ಎತ್ತಿದಂತೆಯೇ ಇರುವದು. ಈ ಕೆಲಸವನ್ನು ಅಂಶತಃ ವಾದರೂ ಶ್ರೀ ಸಮರ್ಥರು ಮಾಡಿದರು. ಇದೇನೂ ಸಾಮಾನ್ಯವಾದುದಲ್ಲ. ನಮ್ಮ ಮೇಲೆ ಬಹು ದೊಡ್ಡ ಉಪಕಾರ ಮಾಡಿರುವರೆಂಬುದನ್ನು ನಾವು ಸದಾ ಸ್ಮರಿಸಬೇಕು.

### ದಶಕ ಚತುರ್ದಶ : ಸಮಾಸ ಪ್ರಥಮ : ನಿಸ್ಪೃಹ ಲಕ್ಷಣ

॥ಶ್ರೀರಾಮ॥ ಐಕಾ ನಿಸ್ಪೃಹಾಚೀ ಸಿಕವಣ । ಯುಕ್ತಿ ಬುದ್ಧಿ ಶಾಹಾಣಪಣ ।
ಜೇಣೇ ರಾಹೆ ಸಮಾಧಾನ । ನಿರಂತರ ॥೧॥

ಸೋಪಾ ಮಂತ್ರ ಪರೀ ನೇಮಸ್ತ । ಸಾಧೇ ವೋಷಧ ಗುಣವಂತ ।
ಸಾಧೇ ಬೋಲಣೇ ಸಪ್ರಚೀತ । ತೈಸೇ ಮಾರ್ಗೇ ॥೨॥

# ದಶಕ ೧೪. ಸಮಾಸ ೧. ನಿಸ್ಪೃಹ ಲಕ್ಷಣ (ನುಡಿ ೪೦)

ಇತರ ಸಮಾಸಗಳಿಗಿಂತ ಈ ಸಮಾಸ ಬಹಳ ದೊಡ್ಡದು. ಅಂದರೆ ಎಂಭತ್ತು ಓವಿಯದು ಇರುವದು. ಈ ಸಮಾಸದಲ್ಲಿ ಮುಖ್ಯವಾಗಿ ಆರು ಮಾತು (ಪ್ರಕಾರ) ಗಳು ಪ್ರಾಮುಖ್ಯವಾಗಿ ಎದ್ದು ಕಾಣುವವು. [೧]ಶ್ರೀಸಮರ್ಥರು ತಮ್ಮ ಸ್ವತಃದ ಭಾಷಾ ಹೇಗಿರುವದೆಂಬುದನ್ನು ಹೇಳಿರುವರು, ತಮ್ಮ ಭಾಷೆ ಅಗದೀ ಸಾದಾ ಮತ್ತು ಸ್ಪಷ್ಟ ನಿರ್ಭಿಡೆ ಉಳ್ಳದ್ದು ಮತ್ತು ಪರಿಣಾಮಕಾರಿಯುಳ್ಳದ್ದಿರುವದೆಂದು ಇವರು ಅನ್ನುವರು. [2] ಇಡೀ ಸಮಾಜದಲ್ಲಿ ನಿಸ್ಪೃಹ ಪುರುಷನು ಏನನ್ನು ಮತ್ತು ಯಾವುದನ್ನು ಮಾಡಬಾರದು ಅನ್ನುವದರ ವರ್ಣನೆಯೇ ಇರುವದು. ಇದರ ಮೇಲಿಂದ ಶ್ರೀ ಸಮರ್ಥರ ಕಾಲದಲ್ಲಿ ಸಾಮಾನ್ಯರಾದ ಸಮಾಜ ನೇತಾರರು, ಮುಖಂಡರು, ಹೇಗೆ ನಡೆಯುತ್ತಿರಬಹುದೆಂಬುದರ ಸರಿಯಾದ ಕಲ್ಪನೆ ಬರುವದು. ಇವರೊಂದಿಗೆ ಜನರು ನೇತಾರನಿಗೆ ಹೇಗೆ ಭಿಡೆ ಮುರವತ್ತಿಗೆ ಒಳಪಡಿಸುತ್ತಿದ್ದರೆಂಬುದೂ ಸಹ ತಿಳಿಯುವದು.[೩]ನಿಸ್ಪೃಹನಿಗೆ ಲೋಕ ಸಂಗ್ರಹ ಮಾಡುವದಿರುವದು. ಇದನ್ನು ಮಾಡುವಾಗ ಜನರ ವರ್ತಮಾನ ಜೀವನ ಪದ್ಧತಿಯೊಂದಿಗೆ ಇವರ ನಿಕಟ ಸಂಬಂಧ ಬರುವದು. ಆಗ ಜನರ ಮನಸ್ಸನ್ನು ಕಾಯ್ದುಕೊಳ್ಳುವದಕ್ಕಾಗಿ ಮುಖಂಡನು ಕೇವಲ ಏಕಾಂತಿಕನಾಗಿ ಜನರ ಭಿಡೆಗೆ–ಆಗ್ರಹಕ್ಕೆ ಬಿದ್ದು ವರ್ತಿಸಿದರೆ ನಡೆಯುವದಿಲ್ಲ. ಅರ್ಥಾತ್ ಮುಖಂಡನ ನಡೆ ಸಮತೋಲವಿರಬೇಕು. ಜನರೊಂದಿಗೆ ಸಮರಸರಾದರೂ ಆಗದವರಂತೆ ಇರಬೇಕು. ಅಂತೆಯೇ ವಿರೋಧೀ ಗುಣಗಳ [ಯುಗಲ-ಮಿಲನ] ಕೂಡಿಕೆ ಈ ಸಮಾಸದಲ್ಲಿ ಕಂಡು ಬರುವವು. [೪] ಜನರಕೂಡ ವ್ಯವಹರಿಸುವಾಗಲೂ ನಿಸ್ಪೃಹ ಮುಖಂಡನು [ಮಹಂತ, ಸಾಧಕ ಇತ್ಯಾದಿ] ತನ್ನ ನಿತ್ಯ ಸಾಧನೆಯನ್ನು ಬಿಡಬಾರದು.. ತನ್ನ ನಿಧಿಧ್ಯಾಸಾದಿಗಳನ್ನು ಎಚ್ಚರಿಕೆಯಿಂದ ಸಾಧಿಸಿ ಸಂಬಾಳಿಸಿಕೊಳ್ಳಬೇಕು. [೫] ನಿಸ್ಪೃಹನು ಜನಕಲ್ಯಾಣದ್ದೆಲ್ಲವನ್ನೂ ಮಾಡಿದರೂ ತಾನೇ ಕರ್ತಾ ಅನ್ನುವ ಹಮ್ಮಿಗೆ ಒಳಗಾಗದೇ [ಯಾವುದರಲ್ಲಿಯೂ ಸಿಗದೆ]ಇರಬೇಕು. ಲೋಕಕಲ್ಯಾಣದ ಎಲ್ಲ ಕೆಲಸಗಳನ್ನು ಪರಸ್ಪರವಾಗಿಯೇ ಮಾಡಿಸುವ ಖೂಬಿಯುಳ್ಳವನಾಗಿರಬೇಕು [೬] ಏನೇ ಬರಲಿ, ಏನೇ ಆಗಲಿ, ತನ್ನ ಸಮಾಧಾನವನ್ನು ಅಭಂಗವಾಗಿ ಇಟ್ಟುಕೊಳ್ಳಬೇಕು. ಇಂಥ ಗುಣಗಳಿಂದ ಕೂಡಿದ ನೇತಾ ಸಮಾಜಕ್ಕೆ ಲಭಿಸುವದೆಂದರೆ ಆ ಸಮಾಜದ ದೊಡ್ಡ ಭಾಗ್ಯವೇ ಸರಿ.

## ದಶಕ ೧೪ : ಸಮಾಸ : ೧ ನಿಸ್ಪೃಹ ಲಕ್ಷಣ (ನುಡಿ ೪೦)

ತಮ್ಮ ಭಾಷೆಯ ಡೌಲು, ರಚನಾ ಪದ್ಧತಿ ಹೇಗಿರುವದು ಮತ್ತು ಈ ಸಮಾಸದಲ್ಲಿ ಏನೇನು ಹೇಳಲಾಗಿದೆ. ಇವುಗಳ ಉಲ್ಲೇಖವನ್ನು ಆರಂಭದಲ್ಲಿಯೇ ಹೇಳುತ್ತಾರೆ:- ನಿಸ್ಪೃಹ ಪುರುಷನ ಗುಣಗಳು ಯಾವವು? ಅವುಗಳನ್ನು ಹೇಳುವೆ ಕೇಳಿರಿ. ಮತ್ತು ಇವನು ಹೇಗೆ ವರ್ತಿಸಬೇಕು ಅನ್ನುವದನ್ನು ಹೇಳುವೆವು. ಕೇಳಿರಿ:- ಯಾವುದರಿಂದ ನಿರಂತರ ಮನಸ್ಸಿನ ಸಮಾಧಾನ ಕಾಯಂ ಆಗಿ ಉಳಿಯುವದೋ ಅಂಥ ಯುಕ್ತಿ, ಬುದ್ಧಿ ಮತ್ತು ಜಾಣತನ ಇವುಗಳ ಸ್ಥಿತಿಯು ಮುಂದೆ ಹೇಳಿದ ಪ್ರಕಾರ ಇರುವದು. [೧] ಒಂದು ಮಂತ್ರ ಬಹಳ ಸಾದಾ [ಸೋಪೆ]ಇದ್ದರೂ ಅದು ಖಾತ್ರಿಯಿಂದ ಫಲ ಕೊಡುವದು. ಅಥವಾ ಒಂದು ಔಷಧ ಬಹಳ ಸಾದಾ ಇದ್ದರೂ ಅದು ಖಾತ್ರಿಯಿಂದ ಗುಣ ಕೊಡುವದು. ಇದರಂತೆ ನನ್ನ ಮಾತುಗಳು ಸಾದಾ ಸೀದಾ ಇದ್ದರೂ ಇವು ನನ್ನ ಸ್ವಾನುಭವದವೇ ಇರುವವು. [೨]

ತತ್ಕಾಳ ಚಿ ಅವಗುಣ ಜಾತೀ। ಉತ್ತಮ ಗುಣಾಚೀ ಹೋಯೆ ಪ್ರಾಪ್ತೀ।
ಶಬ್ದ ಮೋಷಧ ತೀವ್ರ ಶ್ರೋತೀ। ಸಾಕ್ಷಪೇ ಸೇವಾವೇ ॥೩॥

ನಿಸ್ಪೃಹತಾ ಧರೂ ನಯೇ। ಧರಿಲೀ ತರೀ ಸೋಡೂ ನಯೇ।
ಸೋಡಿಲೀ ತರೀ ಹಿಂಡೋ ನಯೇ। ಮೊಳಖೀಮಧೇ ॥೪॥

ಕಾಂತಾ ದೃಷ್ಟೀ ರಾಖೋ ನಯೇ। ಮನಾಸ ಗೋಡೀ ಚಾಖವೂ ನಯೇ।
ಧಾರಿಷ್ಟ ಚಳತಾ ದಾಖವೂ ನಯೇ। ಮುಖ ಆಪುಲೇ ॥೫॥

ಯೇಕೇ ಸ್ಥಳೀ ರಾಹೋ ನಯೇ। ಕಾನಕೋಂಡೇ ಸಾಹೋ ನಯೇ।
ದ್ರವ್ಯ ದಾರಾ ಪಾಹೋ ನಯೇ। ಆಳಕೇಪಣೇ ॥೬॥

ಆಚಾರ ಭ್ರಷ್ಟ ಹೋಊ ನಯೇ। ದಿಲ್ಹಾ ದ್ರವ್ಯ ಘೇಊ ನಯೇ।
ಉಣಾ ಶಬ್ದ ಯೇಊ ನಯೇ। ಆಪಣಾವರೀ ॥೭॥

ಭಿಕ್ಷೇವಿಷೀ ಲಾಜೋ ನಯೇ। ಬಹುತ ಭಿಕ್ಷಾ ಘೇಊ ನಯೇ।
ಪುಸತಾ ಹಿ ದೇಊ ನಯೇ। ಮೊಳಖೀ ಆಪಲೀ ॥೮॥

ಧಡ ಮಳಿಣ ನೇಸೋ ನಯೇ। ಗೋಡ ಅನ್ನ ಖಾಊ ನಯೇ।
ದುರಾಗ್ರಹ ಕರೂ ನಯೇ। ಪ್ರಸಂಗೇ ವರ್ತಾವೇ ॥೯॥

ಭೋಗೀ ಮನ ಅಸೋ ನಯೇ। ದೇಹ ದುಃಖೇ ತ್ರಾಸೋ ನಯೇ।
ಪುಢೇ ಆಶಾ ಧರೂ ನಯೇ। ಜೀವಿತ್ವಾಚೀ ॥೧೦॥

ವಿರಕ್ತೀ ಗಳೋ ದೇಊ ನಯೇ। ಧಾರಿಷ್ಟ ಚಳೋ ದೇಊ ನಯೇ।
ಜ್ಞಾನ ಮಳಿಣ ಹೋಊ ನಯೇ। ವಿವೇಕ ಬಳೇ ॥೧೧॥

ಕರುಣಾಕೀರ್ತನ ಸೋಡೂ ನಯೇ। ಅಂತರ್ಧ್ಯಾನ ಮೋಡೂ ನಯೇ।
ಪ್ರೇಮತಂತು ತೋಡೂ ನಯೇ। ಸಗುಣಮೂರ್ತೀಚಾ ॥೧೨॥

ಪೋಟೀ ಚಿಂತಾ ಧರೂ ನಯೇ। ಕಷ್ಟೇ ಖೇದ ಮಾನೂ ನಯೇ।
ಸಮಈ ಧೀರ ಸಾಂಡೂ ನಯೇ। ಕಾಹೀ ಕೇಲ್ಯಾ ॥೧೩॥

ಈ ನನ್ನ ಸ್ವಾನುಭವದ ಹಿತ ನುಡಿಗಳನ್ನು ಚನ್ನಾಗಿ ಲಕ್ಷ್ಯಕೊಟ್ಟು ಕೇಳಿದ್ದಾದರೆ ನಿಮ್ಮಲ್ಲಿಯ ಅವಗುಣಗಳೆಲ್ಲವೂ ನೋಡ ನೋಡುವಷ್ಟರಲ್ಲಿ ದೂರವಾಗುವವು. ಮತ್ತು ಉತ್ತಮ ಗುಣಗಳು ನಿಮ್ಮಲ್ಲಿ ಸೇರಿ ಕೊಳ್ಳುವವು. ನಾನು ಹೇಳುವ ಮಾತುಗಳು ಜಾಣ ವೈದ್ಯನು ಕೊಡುವ ಕಡಕ ಶೀಘ್ರ ಪರಿಣಾಮಕಾರಕ ಔಷಧ ದಂತೆ [ಅಧರಕ್ಕೆ ಕಹಿ, ಉದರಕ್ಕೆ ಸಿಹಿ] ಇರುವವು· ಆದ್ದರಿಂದ ಶ್ರೋತಾ ಜನರು ನಾನು ಹೇಳಿದ್ದನ್ನು ತಿಳಿಯುವ ಪ್ರಯತ್ನ ಮಾಡಬೇಕು. ಮತ್ತು ಪೂರ್ಣ ಅರಗಿಸಿಕೊಳ್ಳಬೇಕು. [೩] ಇನ್ನು ಮೇಲೆ ಈ ಸಮಾಸದ ಕೊನೆಯ ವರೆಗೂ ನಿಸ್ಪೃಹ ಮನುಷ್ಯರು ಲೋಕ ಸಂಗ್ರಹ [ಜನಸಂಗ್ರಹ] ಮಾಡುವಾಗ ಅವರೊಂದಿಗೆ ಹೇಗೆ ಯುಕ್ತಿಯಿಂದ ಮತ್ತು ಜಾಣತನದಿಂದ ನಡೆಯಬೇಕು. ಇದರ ಬಗ್ಗೆ ಅಗದೀ ಸವಿಸ್ತಾರ ವರ್ಣನೆ ಇರುವದು. ಮುಖಂಡರಿ [ಪುಢಾರಿ]ಗೆ ಮಾರ್ಗದರ್ಶನವು ಮತ್ತು ವಿವಿಧ ರೀತಿಯ ವಿವರಣೆಯು ಮರಾಠಿ ಭಾಷೆಯ ಇತರ ಗ್ರಂಥಗಳಲ್ಲಿ [ಕನ್ನಡದಲ್ಲಿ] ಕೂಡಾ ಇರುವದಿಲ್ಲ:– ನಿಶ್ಚಿತ ನಿರ್ಧಾರದ ವಿಚಾರವಿಲ್ಲದೆ ಒಮ್ಮೆಲೇ ನಿಸ್ಪೃಹತೆ [ತ್ಯಾಗ] ಯನ್ನು ಹಿಡಿಯಬಾರದು. ಹಿಡಿದ ಮೇಲೆ ಏನೇ ಅಡ್ಡಿ ಬಂದರೂ ಬಿಡಬಾರದು. ಒಂದು ವೇಳೆ ಬಿಟ್ಟದ್ದಾದರೆ (ಇದು ನಾಚಿಕೆಗೇಡಿನ ಕೆಲಸವು] ನಿನ್ನ ಗುರುತಿನ ಜನರಲ್ಲಿ ಮಾನಗೇಡಿಯಾಗಿ ಅಡ್ಡಾಡಬೇಡ. ಎಲ್ಲಿಯಾದರೂ ಹೊರಟು ಹೋಗುವದು ಒಳಿತು. [೪] ಇನ್ನೊಂದು ಮುಖ್ಯವಾದದ್ದೇನಂದರೆ, ಅನ್ಯ ಸ್ತ್ರೀಯರನ್ನು ಲೋಲುಪತೆಯಿಂದ ನೋಡಬಾರದು. ಸ್ತ್ರೀಯು ಭೋಗ್ಯ ವಸ್ತು ಅನ್ನುವ ದೃಷ್ಟಿಯಿಂದ ನೋಡಬಾರದು. ಕಾಮವಾಸನಾ ತೃಪ್ತಿಯ ಚಟವನ್ನು ಮನಸ್ಸಿಗೆ ಹಚ್ಚಬೇಡ, ಮನಸ್ಸನ್ನು ಧೈರ್ಯದಿಂದ ಹಿಡಿತದಲ್ಲಿಡಬೇಕು. ಒಂದು ವೇಳೆ ಈ ಬಾಬತ್ತಿನಲ್ಲಿ ಮನಸಂಯಮನ ತಪ್ಪಿದರೆ [ಕಾಲು ಜಾರಿದರೆ] ಜನರಿಗೆ ನಿನ್ನ ಮುಖ ತೋರಿಸಬೇಡ. [ದೂರ ಎಲ್ಲಿಯಾದರೂ ಹೋಗ ಬೇಕು]. ಒಟ್ಟಿನಲ್ಲಿ ಸ್ತ್ರೀ ವಿಷಯಕ ಕಾಮುಕ ವೃತ್ತಿಯನ್ನು ಪೂರ್ಣ ಗೆದಿಯಬೇಕು. ಇದನ್ನು ನಿಜವಾಗಿ ಗೆದ್ದವನೇ ನಿಸ್ಪೃಹನೆಂದು ಅನ್ನಿಸಿಕೊಳ್ಳುವನು. [೫] ಲೋಕ ಸಂಗ್ರಾಹಕನು ಒಂದೇ ಸ್ಥಳದಲ್ಲಿ ಬಹಳ ದಿನ ಇರಬಾರದು. ಯಾರ ಛಿಡೆಗೆ ಒಳಗಾಗಬಾರದು. ಇನ್ನೊಬ್ಬರ ಆಜ್ಞಾಪಾಲಕನಾಗಬಾರದು· ತಲೆ ತಗ್ಗಿಸುವಂಥ ಅಲ್ಲದ ಕೆಲಸ ಮಾಡಬಾರದು ಹಣದ ಕಡೆಗೆ ಮತ್ತು ಸ್ತ್ರೀಯರ ಕಡೆಗೆ ಆಶೆಬುರುಕುತನದಿಂದ ನೋಡಬಾರದು. ಇದರಿಂದ ಹೀನತನ ಬರುವದು. (೬) ಆಚಾರ ಭ್ರಷ್ಟನಾಗಬಾರದು. ಯಾರಾದರೂ ಹಣ ಕೊಡಲು ಬಂದರೆ ತೆಗೆದುಕೊಳ್ಳಬಾರದು. ತನ್ನ ಮೇಲೆ ಯಾರಿಂದಲೂ ಅಪಶಬ್ದ ಬರದಂತೆ ನಡೆ ನುಡಿ ಇರಬೇಕು. (೭) ಭಿಕ್ಷೆ ಬೇಡುವದಕ್ಕೆ ನಾಚಬಾರದು. ಆದರೆ ಅಲ್ಪ ಪ್ರಮಾಣದಲ್ಲಿ ಭಿಕ್ಷೆ ಸ್ವೀಕರಿಸಬೇಕು. ಜನರು ಕೇಳಿದರೂ ಸಹ ತನ್ನ ಸ್ವತಃದ ಮಾಹಿತಿಯನ್ನು ಹೇಳಬಾರದು. [೮] ಧರಿಸುವ ವಸ್ತ್ರಗಳು ಸಾದಾ ವ ಸ್ವಚ್ಛವಾಗಿರಬೇಕು. ಹೊಲಸು ಅರಿವೆಗಳನ್ನು ಧರಿಸಬಾರದು. ಪಕ್ವಾನ್ನಗಳನ್ನು ಉಣ್ಣಬಾರದು, ಪ್ರಸಂಗ ವಿಶೇಷದಲ್ಲಿ ದುರಾಗ್ರಹಿ ಆಗಬಾರದು. ಸಮಯಕ್ಕೆ ಸರಿಯಾಗಿ ಯೋಗ್ಯ ರೀತಿಯಲ್ಲಿ ನಡೆಯ ಬೇಕು. [೯] ಸುಖ ಭೋಗಗಳ ಆಶೆ ಮನದಲ್ಲಿ ಸಹ ಬರಬಾರದು. ದೇಹ ದುಃಖಗಳಿಗೆ ಅಂಜಬಾರದು, ಬೇಸರಪಡ ಬಾರದು· ತಾನು ಬಹುದಿವಸ ಬದುಕಿರಬೇಕೆಂಬ ಆಶೆ ಇರಬಾರದು. [೧೦] ಲೋಕ ಸಂಗ್ರಾಹಕನು ತನ್ನ ವೈರಾಗ್ಯವು ಅಳಿಯದಂತೆ ನಡೆಯಬೇಕು. ಅಧೈರ್ಯಕ್ಕೆ ಒಳಗಾಗಬಾರದು. ಎಂಥ ಕಷ್ಟದಲ್ಲಿಯೂ ವಿವೇಕಯುಕ್ತ ಧೈರ್ಯವು ಮುಂದಿನ ಯಶೋಮಾರ್ಗಕ್ಕೆ ಕಾರಣವಾಗಿರುವದು· ವಿವೇಕ ವಿಚಾರ ಸಾಮರ್ಥ್ಯದಿಂದ ಇವನ ಜ್ಞಾನವು ಸದಾ ಬೆಳಗುತ್ತಲಿರಬೇಕು. ಮಲಿನಕ್ಕೆ ಆಸ್ಪದ ಕೊಡಬಾರದು. [೧೧] ಕೀರ್ತನ ಮಾಡುವಾಗ ದೇವರಲ್ಲಿ ಕರುಣಾ ಭಕ್ತಿಗಳನ್ನು ಇಡಬೇಕು. (ಬೇಡಬೇಕು). ಅಂತಃಕರಣದಲ್ಲಿಯ ಭಗವಂತನ ಧ್ಯಾನವು ಸದಾ ಜಾಗೃತವಿರುವಂತೆ ನೋಡಿಕೊಳ್ಳಬೇಕು ಅಂತಃಕರಣದಲ್ಲಿ ವ್ಯಗ್ರತೆಗೆ ಇಂಬುಗೊಡಬಾರದು. ಸಗುಣ ಮೂರ್ತಿಯ ಮೇಲಿನ ಪ್ರೇಮ ಸಂಬಂಧವನ್ನು ಎಂದೂ ಬಿಡಬಾರದು, ಕೀರ್ತನ–ಪ್ರವಚನಾದಿಗಳಲ್ಲಿ ಸಗುಣವನ್ನು ಹಳಿಯುವದನ್ನು ಮಾಡಬಾರದು. (೧೨) ಮನದಲ್ಲಿ ಯಾವು ದರ ಬಗ್ಗೆಯೂ ಚಿಂತಾಕ್ರಾಂತರಾಗಬಾರದು. ಕಷ್ಟ ಬಂದರೆ ದುಃಖ ಮಾಡಬಾರದು. ಎಂಥ ಪ್ರಸಂಗವು ಬಂದರೂ ಎಷ್ಟೂ ಧೈರ್ಯಗೆಡಬಾರದು. (೧೩)

ಅಪಮಾನಿತಾ ಸಿಣೋ ನಯೇ । ನಿಖಂದಿತಾ ಕಷ್ಟೋ ನಯೇ ।
ಧಿಃಕಾರಿತಾ ಝುರೋ ನಯೇ । ಕಾಹೀ ಕೇಲ್ಯಾ ॥೧೪॥

ಲೋಕಲಾಜ ಧರೂ ನಯೇ । ಲಾಜವಿತಾ ಲಾಜೋ ನಯೇ ।
ಖಿಜವಿತಾ ಖಿಜೋ ನಯೇ । ವಿರಕ್ತ ಪುರುಷೇ ॥೧೫॥

ಶುದ್ಧಮಾರ್ಗ ಸೋಡೂ ನಯೇ । ದುರ್ಜನಾಸೀ ತಂಡೋ ನಯೇ ।
ಸಮಂಧ ಪಡೋ ದೇಊ ನಯೇ । ಚಾಂಡಾಳಾಸೀ ॥೧೬॥

ತಪೀಳಪಣ ಧರೂ ನಯೇ । ಭಾಂಡವಿತಾ ಭಾಂಡೋ ನಯೇ ।
ಉಡವಿತಾ ಉಡವೂ ನಯೇ । ನಿಜಸ್ಥಿತೀ ಆಪುಲೀ ॥೧೭॥

ಹಾಸವಿತಾ ಹಾಸೋ ನಯೇ । ಬೋಲವಿತಾ ಬೋಲೋ ನಯೇ ।
ಚಾಲವಿತಾ ಚಾಲೋ ನಯೇ । ಕ್ಷಣಕ್ಷಣಾ ॥೧೮॥

ಯೇಕ ವೇಷ ಧರೂ ನಯೇ । ಯೇಕ ಸಾಜ ಕರೂ ನಯೇ ।
ಯೇಕ ದೇಸೀ ಹೋಊ ನಯೇ । ಭ್ರಮಣ ಕರಾವೇ ॥೧೯॥

ಸಲಗೀ ಪಡೋ ದೇಊ ನಯೇ । ಪ್ರತಿಗ್ರಹ ಘೇಊ ನಯೇ ।
ಸಭೆಮಧ್ಯೇ ಬೈಸೋ ನಯೇ । ಸರ್ವಕಾಳ ॥೨೦॥

ನೇಮ ಆಂಗೀ ಲಾವೂ ನಯೇ । ಭರವಸಾ ಕೋಣಾಸ ದೇಊ ನಯೇ ।
ಅಂಗೀಕಾರ ಕರೂ ನಯೇ । ನೇಮಸ್ತಪಣಾಚಾ ॥೨೧॥

ನಿತ್ಯನೇಮ ಸಾಂಡೂ ನಯೇ । ಅಭ್ಯಾಸ ಬುಡೋ ದೇಊ ನಯೇ ।
ಪರತಂತ್ರ ಹೋಊ ನಯೇ । ಕಾಹೀ ಕೇಲ್ಯಾ ॥೨೨॥

ಸ್ವತಂತ್ರತಾ ಮೋಡೂ ನಯೇ । ನಿರಾಪೇಕ್ಷಾ ತೋಡೂ ನಯೇ ।
ಪರಾಪೇಕ್ಷಾ ಹೋಊ ನಯೇ । ಕ್ಷಣಕ್ಷಣಾ ॥೨೩॥

ವೈಭವ ದೃಷ್ಟೀ ಪಾಹೋ ನಯೇ । ಉಪಾಧೀಸುಖೇ ರಾಹೋ ನಯೇ ।
ಯೇಕಾಂತ ಮೋಡೂ ದೇಊ ನಯೇ । ಸ್ವರೂಪಸ್ಥಿತೀಚಾ ॥೨೪॥

ಯಾರಾದರೂ ಅಪಮಾನ ಮಾಡಿದರೆ ಬೇಜಾರು ಪಟ್ಟುಕೊಳ್ಳಬಾರದು. (ಆನೆ ಹೋಗುವಾಗ ಶ್ವಾನ ಬೊಗಳುವದು ಸ್ವಾಭಾವಿಕವಾದ್ದರಿಂದ ಆನೆಯೇನೂ ಬೇಜಾರು ಮಾಡಿಕೊಳ್ಳದೆ ತನ್ನ ದಾರಿಯಲ್ಲಿ ತಾನು ಯಥಾ ಪ್ರಕಾರ ಹೋಗುತ್ತಲೇ ಇರುವದು). ಯಾರಾದರೂ ಮರ್ಮಭೇದಕ (ಮನಸ್ಸಿಗೆ ಹತ್ತುವಂಥ) ಅಥವಾ ತಿರಸ್ಕಾರದ ಮಾತುಗಳನ್ನು ಆಡಿದರೂ ಸಹ ಮನಸ್ಸಿಗೆ ಹಚ್ಚಿಕೊಳ್ಳಬಾರದು. (ಸಿಟ್ಟಿಗೇಳಬಾರದು)· ಯಾರಾದರೂ ತುಚ್ಛವಾಗಿ ಕಂಡರೆ, ಮರ್ಯಾದೆ ಕೊಡದಿದ್ದರೆ ಆಗ ನೀವು ಎಷ್ಟೂ ಖಿನ್ನರಾಗಬಾರದು. ದುಃಖದಿಂದ ಕ್ಷೀಣರಾಗಬಾರದು. (೧೪) ಲೋಕ ಸಂಗ್ರಾಹಕ ವಿರಕ್ತ ಮಹಂತರು ನೀತಿ ಮಾರ್ಗದಲ್ಲಿ ನಡೆಯುವಾಗ ಜನರ ಭಿಡೆ-ಸಂಕೋಚಗಳಿಗೆ ಬೀಳಬಾರದು. ನಿರ್ಲಜ್ಜೆಯ ಜನರು ಆಡುವ ಮಾತಿಗೆ ಹೆದರಬಾರದು, ಯಾರಾದರೂ ನಾಚಿಕೆಪಡುವಂತೆ ಪ್ರಯತ್ನ ಮಾಡಿದರೂ ಸಹ ಅದಕ್ಕೆ ಬಲಿ ಬೀಳಬಾರದು. ಯಾರಾದರೂ ಸಿಟ್ಟಿಗೆಬ್ಬಿಸುವಂತೆ ಮಾಡಿದರೂ ಸಹ ವಿರಕ್ತ ಪುರುಷನು ಸಿಟ್ಟಿಗೇಳಬಾರದು. (೧೫) ಶುದ್ಧ ಸರಳ ಮಾರ್ಗ ಬಿಡಬಾರದು. ದುರ್ಜನರ ಕೂಡ ಸೆಡವಿನ ಮಾತು ಬೇಡ. ಜಗಳ ತಂಟೆ ಉಂಟಾಗುವಂಥ ಪ್ರಸಂಗ ಬರದಂತೆ ನಡೆಯುವ ಖೂಬಿ (ಚತುರತೆ) ಇರಲಿ· ದುಷ್ಟ ಜನರಿಂದ ದೂರ ಇರಬೇಕು. (೧೬) ವಿರಕ್ತನಲ್ಲಿ ಶೀಘ್ರ ಕೋಪಿತನ, ಸಿಡುಕುತನ, ಇವು ಇರಬಾರದು. ಯಾರಾದರೂ ಜಗಳಕ್ಕೆಳೆಸಿದರೂ ಇವನು ಜಗಳವಾಡಬಾರದು. ಯಾರಾದರೂ ಇವರ ಸ್ವರೂಪಾನುಸಂಧಾನದ (ಆತ್ಮಸ್ಥಿತಿಯ) ಇರುವಿಕೆಯನ್ನು ಭ್ರಷ್ಟಗೊಳಿಸುವ ಪ್ರಯತ್ನ ಮಾಡಿದರೂ ಸಹ ಅದಕ್ಕೆ ಬಲಿಬೀಳಬಾರದು. ಮೊದಲು ಹೇಗಿತ್ತೋ ಹಾಗೆಯೇ ಸ್ಥಿರವಿಟ್ಟುಕೊಳ್ಳುವ ಧೈರ್ಯ, ಹಟ (ಛಲ) ಇರಬೇಕು. ಅಸ್ಥಿರ ಮನಸ್ಸಿರಬಾರದು· [೧೭] ಯಾರಾದರೂ ಮುದ್ದಾಂ ನಗಿಸುವ ಪ್ರಯತ್ನ ಮಾಡಿದರೆ ನಗಬಾರದು. ಯಾರಾದರೂ ಮುದ್ದಾಂ ಮಾತನಾಡಿಸುವ ಪ್ರಯತ್ನ ಮಾಡಿದರೆ ಮಾತಾಡಬಾರದು. ಯಾರಾದರೂ ಅತ್ತ ಬರಬೇಕು, ಇತ್ತ ಬರಬೇಕು. ಆಕಡೆ ನಡೆಯಿರಿ. ಈಕಡೆ ನಡೆಯಿರಿ ಅಂತಾ ಮೇಲಿಂದ ಮೇಲೆ ನಾಟಕೀಯತನ ನಡೆಯಿಸಿದರೆ (ಹೇಳಿದರೆ) ಅವರ ಹೇಳಿಕೆಯಂತೆ ನಡೆಯಬಾರದು. (೧೮) ಒಂದೇ ಪ್ರಕಾರದ ವೇಷವಿರಬಾರದು (ಉಡುಪು). ಒಂದೇ ಪ್ರಕಾರದ ಫ್ಯಾಶನ್ (ರೀತಿ) ಇರಬಾರದು. ಒಂದೇ ಸ್ಥಳದಲ್ಲಿ ಬಹಳ ಹೊತ್ತು ಇರದೇ ಅತ್ತ ಇತ್ತ ತಿರುಗುತ್ತಿರಬೇಕು. ಪ್ರವಾಸ ಮಾಡುತ್ತಿರಬೇಕು. (೧೯) ಅತಿ ಪರಿಚಯ, ಅತಿ ಸಲಿಗೆ ಇಡಬಾರದು. ಮತ್ತು ಇದಕ್ಕೆ ಅಸ್ಪದವನ್ನು ಕೊಡಬಾರದು. ಯಾರಿಂದಲೂ ದಾನ-ದೇಣಿಗೆ ಇತ್ಯಾದಿ ಏನೂ ತೆಗೆದುಕೊಳ್ಳಬಾರದು. ಏಕಾಂತಕ್ಕೆ ಅವಕಾಶವಿಲ್ಲದಂತೆ ಯಾವಾಗಲೂ ಸಭೆ ಸಮ್ಮೇಲನಗಳಲ್ಲಿ ಖಾಯಂ ಕೂಡ್ರಬಾರದು. ಮತ್ತು ನಾಲ್ಕೆಂಟು ಜನರಿದ್ದ ಸಮೂಹದಲ್ಲಿಸಹ ಬಹಳ ಹೊತ್ತು ಕೂಡ್ರಬಾರದು. ಯಾವಾಗಲೂ ವ್ಯರ್ಥ ಹರಟೆಯ ಮಾತು ಇರಬಾರದು. (೨೦) ಯಾವದೇ ಕಟ್ಟುನಿಟ್ಟಿನ ನಿಯಮಗಳನ್ನೂ ಹಾಕಿಕೊಂಡಿರಬಾರದು. (ಗುರು ಹೇಳಿದ್ದರ ಹೊರತಾಗಿ). ಯಾರಿಗೂ ತನ್ನ ಮೇಲೆ ಭರವಸೆ (ನಂಬಿಗೆ)ಯನ್ನು ಇಟ್ಟು ಸ್ವಸ್ಥ ಇರಲು ಹೇಳಬಾರದು. ತಾನು ಯಾವ ನಿಯಮವನ್ನೂ, ಭರವಸೆಯನ್ನೂ ನಂಬಿ ಕೂಡಬಾರದು. ಸಲ್ಲದ ನಿಶ್ಚಿತತನ ನಿರ್ಧಾರದ ವಿಷಯ ಮತ್ತು ನಿಯಮಿತತನದ ಕ್ರಮವಿಟ್ಟುಕೊಳ್ಳಬಾರದು. ಇತರರಿಗೂ ಹೇಳಬಾರದು. (೨೧) ಆದರೆ ತನ್ನ ನಿತ್ಯ ನಿಯಮಗಳನ್ನು ಯಾವಾಗಲೂ ತಪ್ಪದೇ ಮಾಡುತ್ತಿರಬೇಕು. ತನ್ನ ಸಾಧನೆ ಮತ್ತು ಅಭ್ಯಾಸವನ್ನು ಬಿಡಬಾರದು. ಏನೇ ತೊಂದರೆಗಳು ಬಂದರೂ ಪರತಂತ್ರನಾಗಬಾರದು. ಇನ್ನೊಬ್ಬರ ಆಧೀನನಾಗಬಾರದು. ಕೇವಲ ಬಾಹ್ಯಾಡಂಬರದ ನೇಮ ನಿತ್ಯಗಳಲ್ಲಿ ಅಂಟಿಕೊಳ್ಳಬಾರದು· (೨೨) ತನ್ನ ಸ್ವಾತಂತ್ರ್ಯವನ್ನು ಕಾಪಾಡಿಕೊಂಡೇ ಇರಬೇಕು. ತನ್ನ ನಿರಪೇಕ್ಷ ವೃತ್ತಿಯನ್ನು ಕಾಯ್ದುಕೊಂಡಿರಬೇಕು. ಮೇಲಿಂದ ಮೇಲೆ (ಯಾವಾಗಲೂ) ಪರರಿಂದ ಏನನ್ನಾದರೂ ಬಯಸಬಾರದು. ಬಯಸಿ (ಆಶೆಯಿಂದ) ಪರ ಸ್ವಾಧೀನನಾಗಬಾರದು. (೨೩) ಲೋಕ ಸಂಗ್ರಾಹಕ ಸಾಧುವು ವೈಭವ, ಐಶ್ವರ್ಯ, ಅಧಿಕಾರ ಮೊದಲಾದವುಗಳನ್ನು ಕಣ್ಣೆತ್ತಿ ಸಹ ನೋಡಬಾರದು. ಇದರಿಂದ ಲಾಲಸೆ–ಆಶೆ ಉಂಟಾಗಿ ದುರಾಶೆಗೆ ಹಾದಿ ಆಗಬಹುದು. ಉಪಾಧಿಗಳ ಸುಖದಲ್ಲಿ ತೊಡಕಿಕೊಳ್ಳಬಾರದು. (ತನ್ನ) ಸ್ವಸ್ವರೂಪಾನುಭವದ ಏಕಾಂತವನ್ನು ಯಾವಾಗಲೂ ಭಂಗವಾಗಗೊಡಬಾರದು. [೨೪]

ಅನರ್ಗಳತಾ ಕರೂ ನಯೇ । ಲೋಕಲಾಜ ಧರೂ ನಯೇ ।
ಕೋಠೇತರೀ ಹೋಊ ನಯೇ । ಆಸಕ್ತ ಕದಾ ॥೨೫॥
ಪರಂಪರಾ ತೋಡೂ ನಯೇ । ಉಪಾಧೀ ವೋಡೂ ದೇಊ ನಯೇ ।
ಜ್ಞಾನಮಾರ್ಗ ಸೋಡೂ ನಯೇ । ಕದಾಕಾಳೀ ॥೨೬॥
ಕರ್ಮಮಾರ್ಗ ಸಾಂಡೂ ನಯೇ । ವೈರಾಗ್ಯ ವೋಡೂ ದೇಊ ನಯೇ ।
ಸಾಧನ ಭಜನ ಖಂಡೂ ನಯೇ । ಕದಾಕಾಳೀ ॥೨೭॥
ಅತಿವಾದ ಕರೂ ನಯೇ । ಅನಿತ್ಯ ಪೋಟೀ ಧರೂ ನಯೇ ।
ರಾಗೇ ಭರೀ ಭರೋ ನಯೇ । ಭಲತೀಕಡೆ ॥೨೮॥
ನ ಮನೀ ತ್ಯಾಸ ಸಾಂಗೋ ನಯೇ । ಕಂಟಾಳವಾಣೇ ಬೋಲೋ ನಯೇ ।
ಬಹುಸಾಲ ಅಸೋ ನಯೇ । ಯೇಕೇ ಸ್ಥಳೀ ॥೨೯॥
ಕಾಹೀ ಉಪಾಧೀ ಕರೂ ನಯೇ । ಕೇಲೀ ತರೀ ಧರೂ ನಯೇ ।
ಧರಿಲೀ ತರೀ ಸಾಂಪಡೋ ನಯೇ । ಉಪಾಧೀ ಮಧ್ಯೇ ॥೩೦॥
ಥೋರಪಣೇ ಅಸೋ ನಯೇ । ಮಹತ್ವ ಧರೂನ ಬೈಸೋ ನಯೇ ।
ಕಾಹೀ ಮಾನ ಇಚ್ಛೂ ನಯೇ । ಕೋಠೇತರೀ ॥೩೧॥
ಸಾಧೇಪಣ ಸೋಡೂ ನಯೇ । ಸಾನೇಪಣ ಮೋಡೂ ನಯೇ ।
ಬಳಾತ್ಕಾರೇ ಜೋಡೂ ನಯೇ । ಅಭಿಮಾನ ಆಂಗೀ ॥೩೨॥
ಅಧಿಕಾರೇವೀಣ ಸಾಂಗೋ ನಯೇ ' ದಾಟೂನ ಉಪದೇಶ ದೇಊ ನಯೇ ।
ಕಾನಕೋಂಡಾ ಕರೂ ನಯೇ । ಪರಮಾರ್ಥ ಕದಾ ॥೩೩॥
ಕಠಿಣ ವೈರಾಗ್ಯ ಸೋಡೂ ನಯೇ । ಕಠಿಣ ಅಭ್ಯಾಸ ಸಾಂಡೂ ನಯೇ ।
ಕಠಿಣತಾ ಧರೂ ನಯೇ । ಕೋಣೇಕೇವಿಶೀ ॥೩೪॥
ಕಠಿಣ ಶಬ್ದ ಬೋಲೋ ನಯೇ । ಕಠಿಣ ಆಜ್ಞಾ ಕರೂ ನಯೇ ॥
ಕಠಿಣ ಧೀರತ್ವ ಸೋಡೂ ನಯೇ। ಕಾಂಹೀ ಕೇಲ್ಯಾ ॥೩೫॥
ಆಪಣ ಆಸಕ್ತ ಹೋಊ ನಯೇ । ಕೇಲ್ಯಾವೀಣ ಸಾಂಗೋ ನಯೇ ।
ಬಹುಸಾಲ ಮಾಗೋ ನಯೇ । ಶಿಷ್ಯವರ್ಗಾಸೀ ॥೩೬॥
ಉದ್ಧಟ ಶಬ್ದ ಬೋಲೋ ನಯೇ । ಇಂದ್ರಿಯೆಂಸ್ಮರಣ ಕರೂ ನಯೇ ।
ಶಾಕ್ತಮಾರ್ಗೇ ಭರೋ ನಯೇ । ಮುಕ್ತಪಣೇ ಭರೀ ॥೩೭॥
ನೀಚ ಕೃತೀ ಲಾಜೋ ನಯೇ । ವೈಭವ ಹೋತಾ ಮಾಜೋ ನಯೇ ।
ಕ್ರೋಧೇ ಭರೀ ಭರೋ ನಯೇ । ಜಾಣಪಣೇ ॥೩೮॥

ನೀತಿ ಬಾಹ್ಯ (ಸ್ವೇಚ್ಛಾಚಾರ)ದ ಅಮರ್ಯಾದಕರ ವರ್ತನೆ ಮಾಡಬಾರದು. ಜನರ ಭಿಡೆಗೆ ಬೀಳಬಾರದು. ಹೀಗೆ ಇರುವಾಗ ಜನ ಲಜ್ಜೆಗೆ ಹೆದರಬಾರದು. ಸುಮ್ಮ ಸುಮ್ಮನೆ ಎಲ್ಲಿಯಾದರೂ ಅರ್ಥವಿಲ್ಲದ್ದರಲ್ಲಿ ಆಸಕ್ತನಾಗಿ ಸಿಕ್ಕಿ ಹಾಕಿಕೊಂಡು ತನ್ನ ಮೂಲ ಕಾರ್ಯದ ಹಾನಿಯನ್ನು ಮಾಡಿಕೊಳ್ಳಬಾರದು. [೨೫] ತನ್ನ ಸಾಂಪ್ರದಾಯ (ಗುರು ಹೇಳಿದ ಸಾಂಪ್ರದಾಯ) ವನ್ನು ತಾನೇ ಎಂದೂ ಮುರಿಯಬಾರದು. ಉಪಾಸನೆಯ ಉಪಾಧಿಯನ್ನು ತಾನು ಮುರಿಯಬಾರದು. ಇತರರಿಗೆ ಮುರಿಯಲುಗೊಡಬಾರದು. ಇಷ್ಟೆಲ್ಲ ಮಾಡಿಯೂ ಜ್ಞಾನಮಾರ್ಗವೇ ಮುಖ್ಯವೆಂದು ತಿಳಿದು ಅದನ್ನು ಬಿಡಲೇಬಾರದು. [೨೬] ಕರ್ಮ ಮಾರ್ಗವನ್ನು ತಿರಸ್ಕರಿಸಿ ಬಿಡಬಾರದು. ತನ್ನ ವೈರಾಗ್ಯಕ್ಕೆ ಧಕ್ಕೆ (ಆತಂಕ) ಆಗದಂತೆ ನೋಡಿಕೊಳ್ಳಬೇಕು. ತನ್ನ ಸಾಧನ ಮತ್ತು ಭಗವಂತನ ಭಜನೆ ಇವನ್ನು ಏನಾದರೂ ಬಿಡಬಾರದು. [೨೭] ಯಾರೊಡೆಯೂ ಬಹಳ ವಾದ ಹಾಕಬಾರದು. ಅನೀತಿಯಿಂದ ನಡೆಯುವ ಪ್ರವೃತ್ತಿ ಇರಬಾರದು. ಸಿಟ್ಟಿನ ಭರದಲ್ಲಿ ಏನಾದರೊಂದು ಅನಾಹುತ ಕೆಲಸವಾಗದಂತೆ ಎಚ್ಚರದಿಂದ ಇರಬೇಕು. [೨೮] ಯಾರು ನಿಮ್ಮ ಮಾತನ್ನು ಕೇಳುವದಿಲ್ಲವೋ ಅಂಥವರಿಗೆ ಹೇಳುವ ಹವ್ಯಾಸವನ್ನು ಬಿಟ್ಟುಬಿಡಬೇಕು. ನಿಮ್ಮ ಮಾತುಗಳು ಸುಮ್ಮನೇ ಬೇಸರ ತರಿಸುವಂಥವಿರಬಾರದು. ಒಂದೇ ಸ್ಥಳದಲ್ಲಿ ಬಹುಕಾಲ ಇರಬಾರದು[೨೯] ಆದಷ್ಟು ಉಪಾಧಿಯನ್ನುಂಟು ಮಾಡಬಾರದು. (ಸಾರ್ವಜನಿಕ ಕಾರ್ಯದ ಭಾನಗಡಿ ಅಥವಾ ಲಚ್ಚಾಂಡತನಕ್ಕೆ ಒಳಗಾಗಬಾರದು). ಮಾಡಿದರೂ ಸಹ ಕೇವಲ ಆಸಕ್ತಿಯಿಂದ ಅದರ ಬೆನ್ನು ಹತ್ತಬಾರದು. ಒಂದು ವೇಳೆ ಬೆನ್ನುಹತ್ತಿದರೂ ಅದರಲ್ಲಿ ಕಾಯು ಸಿಕ್ಕಿ ಹಾಕಿಕೊಳ್ಳಬಾರದು. ಮತ್ತು ಇಂಥ ಕಾರ್ಯಗಳ ಆಸಕ್ತಿಯಲ್ಲಿ ಮಗ್ನರಾಗಬಾರದು. (೩೦) ನಾನೊಬ್ಬ ದೊಡ್ಡವನೆಂಬ ಗರ್ವದ ಭಾವನೆ ಇರಬಾರದು. ತನ್ನದೇ ಮಹತ್ವ ಹೆಚ್ಚಿನದೆಂಬ ದೃಢ ಭಾವನೆಯನ್ನು ಹೊಂದಿರಬಾರದು. ಎಲ್ಲಿಯೇ ಆಗಲಿ, ಎಂಥದೇ ಆಗಲಿ, ತನಗೆ ಮಾನ ಸಿಗಬೇಕೆಂಬ ಇಚ್ಛೆಯನ್ನು ಮನಸ್ಸಿನಲ್ಲಿ ಎಷ್ಟೂ ತರಬಾರದು. (೩೧) ಆಗದೀ ಸಾದಾ ರೀತಿಯ ಇರುವಿಕೆಯನ್ನು ಬಿಡಬಾರದು. ಅಲ್ಪತನ (ಸಣ್ಣತನ)ವನ್ನು ಆಧರಿಸಿ ನಮ್ಮ ನಡೆ ನುಡಿ ಇರಬೇಕು. ಸುಮ್ಮನೆ ಜಬರದಸ್ತಿಯಿಂದ ತನ್ನಲ್ಲಿ ಅಭಿಮಾನ ಸೇರಿಸಿಕೊಳ್ಳುವ ಅಂದರೆ ಬಾಯಿ ಬಡಾಯಿಯಿಂದ ತನ್ನನ್ನೇ ತಾನು ಹೊಗಳಿಕೊಳ್ಳುವದನ್ನು ಮಾಡಬಾರದು. [೩೨] ಯಾರಿಗೆ ಯಾವುದರ ಬಗ್ಗೆ ಯೋಗ್ಯತೆ ಇಲ್ಲವೋ ಅಂಥವರಿಗೆ ಆ ಕೆಲಸವನ್ನು ಹೇಳಬಾರದು. ಯಾರಿಗೂ ಬಲವಂತವಾಗಿ ಅಥವಾ ಜಬರದಸ್ತಿಯಿಂದ ಬಡಾಯಿ ಕೊಚ್ಚಿಕೊಂಡು ಉಪದೇಶ ಕೊಡಬಾರದು. ಅರ್ಧವಟ(ಅರ್ಧಮರ್ಧ) ಪರಮಾರ್ಥ ಇರಬಾರದು. ಇದನ್ನು ಎಂದೂ ಜನರಿಗೆ ಹೇಳಬಾರದು. ನೀವೂ ಮಾಡಬಾರದು. [೩೩] ಪ್ರಖರ ವೈರಾಗ್ಯವಿರಬೇಕು. ಉದರ ವೈರಾಗ್ಯವಿರಬಾರದು. ತಿಳಿಯದ ವಿಷಯ ಕಠಿಣವಿದ್ದರೂ ಅಭ್ಯಾಸವನ್ನು ಏಕಚಿತ್ತದಿಂದ ಮಾಡಬೇಕು. ಯಾರ ಕೂಡಾ ಆದರೂ ಕಠೋರವಾಗಿ ವರ್ತಿಸಬಾರದು. [೩೪] ಯಾರಿಗೂ ಕಠೋರ ಶಬ್ದ ಮಾತನಾಡಬಾರದು. ಪಾಲಿಸಲಿಕ್ಕೆ ಆಗದಂತಹ ಆಜ್ಞೆಯನ್ನು ಯಾರಿಗೂ ಮಾಡಬಾರದು. ಏನೇ ಬರಲಿ, ಏನೇ ಆಗಲಿ, ಸಂತನು ಧೈರ್ಯ ಕಳೆದುಕೊಳ್ಳಬಾರದು. ಗಟ್ಟಿಯಾಗಿ ಎದೆ ಕೊಟ್ಟು ನಿಂತು ಎದುರಿಸಬೇಕು. [೩೫] ಇವನು (ಮಹಂತ, ವ ಸಾಧಕ) ಯಾವುದರಲ್ಲಿಯೂ ಮನಃ ಪೂರ್ವಕ (ಆಸಕ್ತಿಯಿಂದ) ತೊಡಕಿಕೊಳ್ಳಬಾರದು. ತಾನು ಸ್ವತಃ ಮಾಡದ ಹೊರತು ಎರಡನೆಯವರಿಗೆ ಹೇಳಬಾರದು. ಶಿಷ್ಯನ ಹತ್ತಿರ ಸಹಸಾ ಏನನ್ನೂ ಬೇಡಬಾರದು(೩೬) ಉದ್ಧಟ (ಉರ್ಮಟ) ಕಠೋರ ಶಬ್ದಗಳನ್ನು ಮಾತನಾಡಬಾರದು. ಇಂದ್ರಿಯಗಳ ಹಾಗೂ ಇಂದ್ರಿಯ ಸುಖದ ಸ್ಮರಣೆ ಮಾಡಬಾರದು. ಮತ್ತು ಮನದಲ್ಲಿ ಸಹ ಎಷ್ಟೂ ತರಬಾರದು. ಶಾಕ್ತ ಮಾರ್ಗ ಅಂದರೆ ಮುಕ್ತಮಾರ್ಗ, ಕರ್ಮಾಕರ್ಮರಹಿತ ಸ್ವೈರಾಚಾರ ಮಾರ್ಗ ಹಿಡಿಯಬಾರದು. ಇದರಿಂದ ಸ್ವಚ್ಛಂದವಾಗಿ ವರ್ತಿಸಿ ತನ್ನ ಸಾಧನೆಯನ್ನು ಹಾಳು ಮಾಡಿಕೊಳ್ಳುವದು ತಿಳಿಗೇಡಿತನದ್ದಾಗುವದು. (೩೭) ಹಲಕಾ ಅಂದರೆ ಕೀಳು ಕೆಲಸ, ಸಣ್ಣ ಕೆಲಸಗಳನ್ನು ಮಾಡಲು ನಾಚಬಾರದು. ದೇವಾದಿಕ ಕೆಲಸ ಗುರು, ಸಾಧು ಸಂತರ ಸೇವಾ ಕಾರ್ಯ, ಉತ್ತಮ ಸಾರ್ವಜನಿಕ ಉತ್ಸವಾದಿ ಕಾರ್ಯಗಳಲ್ಲಿ ದುಡಿಯಬೇಕು. ವೈಭವ ಬಂದರೂ ಸಹ ಗರ್ವಿಷ್ಠರಾಗಬಾರದು. ತಾನು ಜಾಣನೆಂಬ ಅರಿವು ಇದ್ದೂ ಸಿಟ್ಟಿನ ಕೈಯಲ್ಲಿ ಬುದ್ಧಿಯನ್ನು ಕೊಡಬಾರದು. ಸಿಟ್ಟಿಗೇಳಬಾರದು. [೩೮]

ಥೋರಪಣೇ ಚುಕೋ ನಯೇ । ನ್ಯಾಯೆ ನೀತಿ ಸಾಂಡೂ ನಯೇ ।
ಅಪ್ರಮಾಣ ವರ್ತೋ ನಯೇ । ಕಾಂಹೀ ಕೇಲ್ಯಾ ॥೩೯॥

ಕಳಲ್ಯಾವೀಣ ಬೋಲೋ ನಯೇ । ಅನುಮಾನೇ ನಿಶ್ಚಯೆ ಕರೂ ನಯೇ ।
ಸಾಂಗತಾ ದುಃಖ ಧರೂ ನಯೇ । ಮೂರ್ಖಪಣೇ ॥೪೦॥

ಸಾವಧಪಣ ಸೋಡೂ ನಯೇ । ವ್ಯಾಪಕಪಣ ಸಾಂಡೂ ನಯೇ ।
ಕದಾ ಸುಖ ಮಾನೂ ನಯೇ । ನಿಸುಗಪಣಾಚೇ ॥೪೧॥

ವಿಕಲ್ಪ ಪೋಟೀ ಧರೂ ನಯೇ । ಸ್ವಾರ್ಥ ಆಜ್ಞಾ ಕರೂ ನಯೇ ।
ಕೇಲೀ ತರೀ ಟಾಕೂ ನಯೇ । ಆಪಣಾಸ ಪುಢೇ ॥೪೨॥

ಪ್ರಸಂಗೇವೀಣ ಬೋಲೋ ನಯೇ । ಅನ್ವಯೇವೀಣ ಗಾಊ ನಯೇ ।
ವಿಚಾರೇವೀಣ ಜಾಊ ನಯೇ । ಅವಿಚಾರಪಂಥೇ ॥೪೩॥

ಪರೋಪಕಾರ ಸಾಂಡೂ ನಯೇ । ಪರಪೀಡಾ ಕರೂ ನಯೇ ।
ವಿಕಲ್ಪ ಪಡೋ ದೇಊ ನಯೇ । ಕೋಣೇಯೇಕಾಸೀ ॥೪೪॥

ನೇಣಪಣ ಸೋಡೂ ನಯೇ । ಮಹಂತಪಣ ಸಾಂಡೂ ನಯೇ ।
ದ್ರವ್ಯಾಸಾಠೀ ಹಿಂಡೋ ನಯೇ । ಕೀರ್ತನ ಕರೀತ ॥೪೫॥

ಸಂಶಯಾತ್ಮಕ ಬೋಲೋ ನಯೇ । ಬಹುತ ನಿಶ್ಚಯೆ ಕರೂ ನಯೇ ।
ನಿರ್ವಾಹೇವೀಣ ಧರೂ ನಯೇ । ಗ್ರಂಥ ಹಾತೀ ॥೪೬॥

ಜಾಣಪಣೇ ಪುಸೋ ನಯೇ । ಅಹಂಭಾವ ದಿಸೋ ನಯೇ ।
ಸಾಂಗೇನ ಏಸೇ ಮ್ಹಣೋ ನಯೇ । ಕೋಣೇಯೇಕಾಸೀ ॥೪೭॥

ಜ್ಞಾನಗರ್ವ ಧರೂ ನಯೇ । ಸಹಸಾ ಛಳಣಾ ಕರೂ ನಯೇ ।
ಕೋಠೇ ವಾದ ಘಾಲೂ ನಯೇ । ಕೋಣೇಯೇಕಾಸೀ ॥೪೮॥

ಸ್ವಾರ್ಥಬುದ್ಧೀ ಜಡೋ ನಯೇ । ಕಾರಬಾರೀ ಪಡೋ ನಯೇ ।
ಕಾರ್ಯೇಕರ್ತೇ ಹೋಊ ನಯೇ । ರಾಜದ್ವಾರೀ ॥೪೯॥

ಕೋಣಾಸ ಭರ್ವಸಾ ದೇಊ ನಯೇ । ಜಡ ಭಿಕ್ಷಾ ಮಾಗೋ ನಯೇ ।
ಭಿಕ್ಷೇಸಾಠೀ ಸಾಂಗೋ ನಯೇ । ಪರಂಪರಾ ಆಪುಲೀ ॥೫೦॥

ಸೋಇರಿಕೀತ ಪಡೋ ನಯೇ । ಮಧ್ಯಾವರ್ತಿ ಘಡೋ ನಯೇ ।
ಪ್ರಪಂಚಾಚೀ ಜಡೋ ನಯೇ । ಉಪಾಧೀ ಅಂಗೀ ॥೫೧॥

ತಾನು ದೊಡ್ಡವನು ಅನ್ನುವ ಅಹಂದಿಂದ ಅಲ್ಲದ ಕೆಲಸ, ಅನ್ಯಾಯದ ಕೆಲಸಗಳನ್ನು ಮಾಡಬಾರದು. ನಿನ್ನಲ್ಲಿ ಗೈರ ನಡೆತೆ ಇರಬಾರದು. ನೀತಿ ನ್ಯಾಯಂಗಳ ಮೇರೆ ಮೀರಿ ನಡೆಯಬಾರದು. ಎಂಥ ಪ್ರಸಂಗದಲ್ಲಿಯೂ ಸಹ ಏನೇ ಘಟಿಸಿದರೂ ನೀನು ಸ್ವೈರಾಚಾರಿಯಾಗಬಾರದು. [೩೯] ನಿನಗೆ ಯಾವುದು ತಿಳಿದಿಲ್ಲವೋ ಅದರ ಬಗ್ಗೆ ಇನ್ನೊಬ್ಬರಿಗೆ ಹೇಳಲಿಕ್ಕೆ ಹೋಗಬೇಡ. (ಅದನ್ನು ನೀನು ತಿಳಿದುಕೊಳ್ಳುವ ಪ್ರಯತ್ನ ಮಾಡು). ಕೇವಲ ಕಲ್ಪನೆಯಿಂದ, ಊಹೆಯಿಂದ, ಅನುಮಾನದಿಂದ, ಅದು ಹೀಗೆ ಇರಲಿಕ್ಕೆಬೇಕು ಅಥವಾ ಹಾಗೇ ಇರುವದು ಎಂದು ನಿಶ್ಚಿತಾರ್ಥದಲ್ಲಿ ಹೇಳಬಾರದು. ಯಾರೇ ಆಗಲಿ, ಯಾವುದೇ ಒಂದು ಉತ್ತಮ ವಿಷಯದ ಬಗ್ಗೆ ಹೇಳಿದರೆ ಅದನ್ನು ಸರಿಯಾಗಿ ತಿಳಿದುಕೊಳ್ಳಬೇಕು. ತಿಳಿಯದಿದ್ದರೆ ಅವರಿಂದ ಕೇಳಿ ತಿಳಿದುಕೊಳ್ಳಬೇಕು. ಇಂಥಲ್ಲಿ ಅಥವಾ ಯಾವ ಕಾಲದಲ್ಲಿಯೇ ಆಗಲೀ ತನ್ನ ಅಜ್ಞಾನದ ಬಗ್ಗೆ ತಿಳಿದವರು ಹೇಳಿದರೆ ದುಃಖಿತನಾಗಬಾರದು. [೪೦] ಎಲ್ಲ ಕಡೆಗೂ ದಕ್ಷತೆಯಿಂದ ಲಕ್ಷ್ಯವಿಟ್ಟಿರಬೇಕು. ಮನಸ್ಸು ದೊಡ್ಡದಿರಬೇಕು. ಕ್ಷುಲ್ಲಕತನ ಸಲ್ಲದು. ಆಲಸ್ಯತನದಲ್ಲಿ ಸುಖವಿರುವದೆಂದು ಖಂಡಿತವಾಗಿ ತಿಳಿಯಬಾರದು (೪೧) ಮನಸದಲ್ಲಿ ಸಂಶಯ ಹಿಡಿಯಬಾರದು. ತನ್ನ ಸ್ವಾರ್ಥ ಸಾಧನೆಗಾಗಿ ಯಾರಿಗೂ ಯಾವ ತರಹದ ಆಜ್ಞೆ ಮಾಡಬಾರದು. ಒಂದು ವೇಳೆ ಏನೇ ಆಜ್ಞೆ ಮಾಡುವ ಪ್ರಸಂಗ ಬಂದದ್ದೇ ಆದಲ್ಲಿ ಅದು ಕೇವಲ ತನ್ನದೊಬ್ಬನದೇ ಲಾಭದ್ದಾಗಿರಬಾರದು. ಎಲ್ಲರ ಹಿತದ್ದೇ ಆಗಿರಬೇಕು. [೪೨] ವೇಳೆ-ಪ್ರಸಂಗ ನೋಡಿ ಮಾತನಾಡಬೇಕು. ಯೋಗ್ಯವಿದ್ದರೆ ಮಾತ್ರ ಆ ಪ್ರಸಂಗಕ್ಕೆ ತಕ್ಕಂತೆ ಹಾಡಬೇಕು. ಮತ್ತು ಸುವಿಚಾರವನ್ನು ಬದಿಗೆ ಸರಿಸಿ (ಬಿಟ್ಟು) ಅವಿಚಾರದ ಮಾರ್ಗ ಹಿಡಿದು ಎಂದೂ ಹೋಗಬಾರದು. [೪೩] ಪರೋಪಕಾರ ಮಾಡುವದನ್ನು ತ್ಯಜಿಸಬಾರದು. ಇನ್ನೊಬ್ಬರಿಗೆ ಎಂದೂ ಕಷ್ಟ ಕೊಡಬೇಡ. ನಿನ್ನ ಬಗ್ಗೆ ವಿಕಲ್ಪ ಭಾವನೆ ಇನ್ನೊಬ್ಬರಲ್ಲಿ ಉಂಟಾಗದಂತೆ ನೀನು ಎಚ್ಚರವಹಿಸಬೇಕು. [೪೪] ನನಗೆ ಎಲ್ಲದರ ಜ್ಞಾನವಿರುವದು. ನಾನು ಸರ್ವಜ್ಞಾನಿ ಅನ್ನುವ ಭಾವನೆ ಸದಾ ಇರಬಾರದು. ನಾನು ತಿಳಿದುಕೊಳ್ಳುವದು ಇನ್ನೂ ಬಹಳವಿದೆ, ಅನ್ನುವ ಭಾವನೆ ಸದಾ ಇರಲಿ ಮಹಂತತನವನ್ನು ಬಿಡಬಾರದು. ಕೇವಲ [ಫಕ್ತ] ದುಡ್ಡು ಗಳಿಸುವ ಉದ್ದೇಶದಿಂದಲೇ ಕೀರ್ತನೆ ಮಾಡುತ್ತ ತಿರುಗಬಾರದು. (೪೫) ಕೇಳುವವರ ಮನದಲ್ಲಿ ಸಂಶಯ ಉಂಟಾಗುವಂತಹ ಮಾತುಗಳನ್ನು ಆಡಬಾರದು. ಅನೇಕ ಪ್ರಕಾರದ (ಅತಿ ಆಗ್ರಹ, ಹೇವ, ಜಿದ್ದಿನಿಂದ ಕೂಡಿದ) ನಿಶ್ಚಯಕ್ಕಿಳಿಸಬಾರದು. ಎಷ್ಟನ್ನು ಪಾಲಿಸಲಿಕ್ಕೆ ಸಾಧ್ಯವಿರುವದೋ ಅಷ್ಟರ ಮಟ್ಟಿಗೆ ನಿಶ್ಚಯ ಮಾಡಬೇಕು. ಗ್ರಂಥದ ಅಭ್ಯಾಸ ಚನ್ನಾಗಿ ಮಾಡದೇ ಜನರಿಗೆ ಹೇಳುವ ಕಾರ್ಯ ಕೈಕೊಳ್ಳಬಾರದು. (೪೬) "ನಾನು ಎಲ್ಲವನ್ನೂ ತಿಳಿದಂಥವನಿರುವೆ" ಅನ್ನುವ ಭಾವನೆಯಿಂದ ಯಾರಿಗೂ ಪ್ರಶ್ನೆ ಕೇಳಬಾರದು ನಾನೇ ತಿಳಿದವ ಅನ್ನುವ ಅಹಂಕಾರ ಪ್ರದರ್ಶನ ಮಾಡಬಾರದು. "ನಾನು ಹೇಳುತ್ತೇನೆ ಅದರಲ್ಲೇನು ಮಹತ್ವವಿದ" ಹೀಗೆ ಯಾರಿಗೂ ಹೇಳಬಾರದು. (ನೀವು ತಿಳಿದವರಲ್ಲ, ಎಲ್ಲವನ್ನೂ ನಾನೇ ತಿಳಿದಿರುವೆನು. ಅನ್ನುವ ಅಹಂ ಇರಬಾರದು). [೪೭] ತಾನು ಜಾಣನಾಗಿದ್ದರೂ ಸಹ ಜ್ಞಾನದ ಗರ್ವ ಇರಬಾರದು. ಇನ್ನೊಬ್ಬರನ್ನು ನೋಡಿ ಛಲಿಸಬಾರದು. ಬುದ್ಧಿ ಭೇದ ಮಾಡಲಿಕ್ಕೆ ಹೋಗಬಾರದು. ಯಾರೊಡನೆಯೂ, ಎಲ್ಲಿಯೂ ಮುದ್ದಾಂ ವಾದಕ್ಕೆ ತೊಡಗಬಾರದು. ಕರೆದರೂ ವಾದಕ್ಕೆ ಹೋಗಬಾರದು. [೪೮] ನಿನ್ನಲ್ಲಿ ಸ್ವಾರ್ಥ ಬುದ್ಧಿ ಇರಬಾರದು. ಇದು ಬರದಂತೆ ಇರಬೇಕು. ಕೇವಲ ನಿಃಸ್ವಾರ್ಥತನವೇ ಶ್ರೇಷ್ಠವಾದದ್ದು. ಯಾವದಾದರೊಂದು ಇಲ್ಲ ಸಲ್ಲದ ಕಾರಭಾರದಲ್ಲಿ ತೊಡಗಬಾರದು. ರಾಜನ (ಸರಕಾರದ) ಆಶ್ರಯದ ಕೆಳಗೆ ಕೆಲಸ ಸ್ವೀಕರಿಸಬಾರದು. [೪೯] ಯಾರಿಗೂ ಸುಮ್ಮನೆ ಆಶ್ವಾಸನೆ ಕೊಡಬಾರದು. (ನೌಕರಿ ಕೊಡಿಸುವ ವಗೈರೆ ಭಾನಗಡಿಯಲ್ಲಿ ಬೀಳಬಾರದು). ಯಾರಿಗೂ ಜಡವಾಗುವಂತಹ ಭಿಕ್ಷೆ ಬೇಡಬಾರದು. ಭಿಕ್ಷೆ ಹಾಕಲಿ ಅನ್ನುವ ಆಶೆಯಿಂದ ತನ್ನ ಗುರು ಪರಂಪರೆಯನ್ನು ಮತ್ತು ಉಪಾಸನಾ ಪರಂಪರೆಯನ್ನು ವರ್ಣಿಸಿ ಹೇಳಬಾರದು. [೫೦] ಯಾರಿಗೂ ಬೀಗತನ ಮಾಡಿಸುವ (ಹೊಂದಿಸುವ)ಗೊಂದಲದಲ್ಲಿ ಬೀಳಬಾರದು. ಎಲ್ಲಿಯೂ ಮಧ್ಯಸ್ಥಿ (ಹಿರಿತನ) ವಹಿಸುವ ಕೆಲಸದಲ್ಲಿ ತೊಡಗಬಾರದು. ಪ್ರಪಂಚದ ಉಪಾಧಿಯು ತನ್ನ ಬೆನ್ನಿಗೆ ಹತ್ತದಂತೆ ಇರಬೇಕು. [೫೧]

ಪ್ರಪಂಚ ಪ್ರಸ್ತಿೀ ಜಾಲಾ ನಯೇ । ಬಾಷ್ಕಳ ಅನ್ನ ಖಾಲಾ ನಯೇ ।
ಪಾಹುಣ್ಯಾಸರಿಸೇ ಘೇಲಾ ನಯೇ । ಆಮಂತ್ರಣೇ ಕದಾ ॥೫೨॥

ಶ್ರಾಧ ಪಕ್ಷ ಸಟೀ ಸಾಮಾಸೇ । ಶಾಂತೀ ಫಳಶೋಬನ ಬಾರಸೇ ।
ಭೋಗ ರಾಹಾಣ ಬಹುವಸೇ । ನವಸ ವ್ರತೇ ಉದ್ಯಾಪನೇ ॥೫೩॥

ತೇಥೇ ನಿಸ್ಪ್ರಹೇ ಜಾಲಾ ನಯೇ । ತ್ಯಾಚೇ ಅನ್ನ ಖಾಲಾ ನಯೇ ।
ಯೆಳಿಲವಾಣೇ ಕರೂ ನಯೇ । ಆಪಣಾಸೀ ॥೫೪॥

ಲಗ್ನಮುಹೂರ್ತೀ ಜಾಲಾ ನಯೇ । ಪ್ರೋಟಾಸಾಠೀ ಗಾಲಾ ನಯೇ ।
ಮೋಲೇ ಕೀರ್ತನ ಕರೂ ನಯೇ । ಕೋಣೇತರೀ ॥೫೫॥

ಆಪಲೀ ಭಿಕ್ಷಾ ಸೋಡೂ ನಯೇ । ವಾರೇ ಅನ್ನ ಖಾಲಾ ನಯೇ ।
ನಿಸ್ಪೃಹಾಸಿ ಘಡೋ ನಯೇ । ಮೋಲಯಾತ್ರಾ ॥೫೬॥

ಮೋಲೇ ಸುಕೃತ ಕರೂ ನಯೇ । ಮೋಲಪುಜಾರೀ ಹೋಊ ನಯೇ ।
ದಿಲ್ಹಾ ತರೀ ಘೇಲಾ ನಯೇ । ಇನಾಮ ನಿಸ್ಪ್ರಹೇ ॥೫೭॥

ಕೋಠೇ ಮಠ ಕರೂ ನಯೇ । ಕೇಲಾ ತರೀ ತೋ ಧರೂ ನಯೇ ।
ಮಠಪತೀ ಹೋಊನ ಬೈಸೋ ನಯೇ । ನಿಸ್ಪ್ರಹ ಪುರೂಷೇ ॥೫೮॥

ನಿಸ್ಪ್ರಹೇ ಅವಘೇ ಚಿ ಕರಾವೇ । ಪರೀ ಆಪಣ ತೇಥೇ ನ ಸಂಪಡಾವೇ।
ಪರಸ್ಪರೇ ಉಭಾರಾವೇ । ಭಕ್ತಿಮಾರ್ಗಾಸೀ ॥೫೯॥

ಪ್ರೀತ್ನೀವಿಣ ರಾಹೋ ನಯೇ । ಆಳಸ ದೃಷ್ಟೀ ಆಣೂ ನಯೇ ।
ದೇಹ ಅಸ್ತಾ ಪಾಹೋ ನಯೇ । ವಿಯೋಗ ಉಪಾಸನೇಚಾ ॥೬೦॥

ಉಪಾಧೀಮಧ್ಯೇ ಪಡೋ ನಯೇ । ಉಪಾಧೀ ಅಂಗೀ ಜಡೋ ನಯೇ ।
ಭಜನ ಮಾರ್ಗ ಮೋಡೂ ನಯೇ । ನಿಸಂಗಳಪಣೇ ॥೬೧॥

ಬಹು ಉಪಾಧೀ ಕರೂ ನಯೇ । ಉಪಾಧೀವಿಣ ಕಾಮಾ ನಯೇ ।
ಸಗುಣಭಕ್ತಿ ಸೋಡೂ ನಯೇ । ವಿಭಕ್ತಿ ಖೋಟೀ ॥೬೨॥

ಬಹುಸಾಲ ಧಾವೋ ನಯೇ । ಬಹುಸಾಲ ರಾಹೋ ನಯೇ ।
ಬಹುತ ಕಷ್ಟ ಕರೂ ನಯೇ । ಅಸುದೇ ಖೋಟೀ ॥೬೩॥

ಬಹುಸಾಲ ಬೋಲೋ ನಯೇ । ಅಬೋಲಣೇ ಕಾಮಾ ನಯೇ ।
ಬಹುತ ಅನ್ನ ಖಾಲಾ ನಯೇ । ಉಪವಾಸ ಖೋಟಾ ॥೬೪॥

ಎಲ್ಲಿ ಪ್ರಾಪಂಚಿಕರ ಪ್ರಸ್ತದ ಅಂದರೆ ಕೇವಲ ಸಂಸಾರಿಕರ ಕಾರ್ಯವೇ ಮುಖ್ಯವಾಗಿರುವಂಥ ಭೋಜನ ಸಮಾರಂಭ, ಅಥವಾ ಕೇವಲ ಪ್ರಾಪಂಚಿಕರ ನಾನಾ ಪ್ರಕಾರದ ಸಮೂಹ, ಅವರದೇ ಹಿರಿತನವಿದ್ದಲ್ಲಿ ಹೋಗಬೇಡ ಅಪವಿತ್ರ ಅನ್ನ ತಿನ್ನಬೇಡ. ಅತಿಥಿಯು ಕೂಡ ಆಮಂತ್ರಣ ಪಡೆಯಬೇಡ, ಮತ್ತು ಹೋಗಬೇಡ. (೫೨) ಶ್ರಾದ್ಧ, ಪಕ್ಷ, ಹಡೆದ ಮನೆಯಲ್ಲಿಯ ಸಟವಿ ಪೂಜೆಯ ಊಟ, ಷಾಣ್ಮಾಸಿಕ ಶ್ರಾದ್ಧ, ಶಾಂತಿ, ಫಲಶೋಭನ, ಹೆಸರಿಡುವ ಕಾರ್ಯ, ಹರಿಕೆ ಕಾರ್ಯ, ಭೂತ ಪಿಶಾಚಿಗಳ ಶಾಂತ್ಯರ್ಥದ ಕಾರ್ಯ, ವ್ರತ, ಉದ್ಯಾಪನ ಇತ್ಯಾದಿ. (೫೩) ಪ್ರಸಂಗಗಳಲ್ಲಿ ನಿಸ್ಪೃಹನಾದ ಮಹಂತನು ಹೋಗಬಾರದು. ಅಲ್ಲಿಯ ಅನ್ನ ತಿನ್ನಬಾರದು. ಇಂಥ ಅನ್ನವನ್ನು ತಿನ್ನುವದರಿಂದ ದೈನ್ಯತನ ಬರುವದು. ಇದು ಬರದಂತೆ ಎಚ್ಚರ ವಹಿಸುವದು ಅವಶ್ಯವು. (೫೪) ಲಗ್ನ ಮುಹೂರ್ತಾದಿಗಳಿಗೆ ಹೋಗಬಾರದು. ಹೊಟ್ಟೆಪಾಡಿಗಾಗಿ ಹಾಡಬಾರದು. ಎಲ್ಲಿಯೂ ಹಣ ಪಡೆದು ಕೀರ್ತನೆ ಮಾಡಬಾರದು(೫೫) ಭಿಕ್ಷೆ ಬೇಡುವ ವ್ರತ ಬಿಡಬಾರದು. ವಾರ ಹಚ್ಚಿಕೊಂಡು ದಿನಕ್ಕೊಬ್ಬರಲ್ಲಿ ಊಟ ಮಾಡಬಾರದು. (ವಾರಾನ್ನವು ವಿರಕ್ತನಿಗೆ ನಿಷಿದ್ಧವು) ನಿಸ್ಪೃಹ ವಿರಕ್ತ ಸಂತನು ಎರಡನೆಯವರ ಹಣದಿಂದ ಯಾತ್ರಾ ಮಾಡಬಾರದು. (೫೬) ದುಡ್ಡು ತೆಗೆದುಕೊಂಡು ಪುಣ್ಯ ಕರ್ಮದ ಕಾರ್ಯ ಮಾಡಬಾರದು. ಪಗಾರ (ಸಂಬಳ) ತೆಗೆದುಕೊಂಡು ಪೂಜಾರಿತನವನ್ನು ಮಾಡಬಾರದು. ರಾಜನಾಗಲಿ ಅಥವಾ ಯಾರೇ ಆಗಲಿ ಇನಾಮು (ಬಹುಮಾನ) ಕೊಡುವ ಇಚ್ಛೆ ವ್ಯಕ್ತಪಡಿಸಿದರೆ ವಿರಕ್ತನು ಅದನ್ನು ಪಡೆಯಬಾರದು (೫೭) ಎಲ್ಲಿಯೂ ಮಠವನ್ನು ಕಟ್ಟಬಾರದು. ಒಂದು ವೇಳೆ ಕಟ್ಟಿದ್ದೇ ಆದರೆ ಅದರಲ್ಲಿ ಕಾಯಂ ಇರಬಾರದು. ವಿರಕ್ತ ಪುರುಷನು ಮಠಾಧಿಪತಿಯಾಗಿ ಇರಬಾರದು. (೫೮) ನಿಸ್ಪೃಹ ಪುರುಷನು ಏನೆಲ್ಲವನ್ನೂ ಮಾಡಲಿ, ಆದರೆ ಅವನ್ನೆಲ್ಲ ಮಾಡಿದವನು ನಾನು. ಅನ್ನುವ ಅಹಂ ಹೊಂದಿರಬಾರದು. ಮತ್ತು ಮಾಡಿದ ಕಾರ್ಯದಲ್ಲಿ ನಾನು ಮಾಡಿದವ ಅನ್ನುವವರಿಂದಾಗಿ ಅದರಲ್ಲಿ ಸಿಕ್ಕಿಹಾಕಿಕೊಳ್ಳಬಾರದು. ಜನರಿಂದಲೇ ಭಕ್ತಿ ಮಾರ್ಗದ ಬೆಳವಣಿಗೆ ಆಗುವಂತೆ ಪರಸ್ಪರವಾಗಿ ಅದನ್ನು ಖೂಬಿಯಿಂದ ಮಾಡಿಸಬೇಕು.(೫೯) ಸಂತನು ಸದಾಕಾಲ ಲೋಕ ಕಲ್ಯಾಣದ ಕಾರ್ಯವನ್ನು ಮಾಡುತ್ತಲೇ ಇರಬೇಕು. ಬಿಡಬಾರದು ಆಲಸ್ಯವು ಎಷ್ಟೂ ಎದುರಿಗೆ ಬರದಂತೆ ಕಾರ್ಯ ಸಾಂಗವಾಗಿ ನಡೆದಿರಬೇಕು. ಮತ್ತು ದೇಹ ಜೀವಂತ ಇರುವವರೆಗೂ ಉಪಾಸನೆಯಲ್ಲಿ ಎಷ್ಟೂ ಖಂಡ (ಬಂದು) ಬೀಳದಂತೆ ನಡೆಸಬೇಕು. (೬೦) ವಿರಕ್ತನು ಸ್ವತಃ ಉಪಾಧಿಗಳಲ್ಲಿ ಬೀಳಬಾರದು. ಮತ್ತು ಉಪಾಧಿಯನ್ನು ಹಚ್ಚಿಕೊಳ್ಳಬಾರದು. ಮತ್ತು ಭಗವಂತನ ಭಜನೆ ಹಾಗೂ ಅವನ ಉಪಾಸನೆಯನ್ನು ಬಿಡಬಾರದು. ಕೇವಲ ನಿರ್ಲಜ್ಜತನದಿಂದ ಅವ್ಯವಸ್ಥಿತವಾಗಿ ನಡೆಸಿ ಅಥವಾ ನಡೆದು ಮುರಿಯಲಿಕ್ಕೆ ಹೋಗಬಾರದು. ಇದಲ್ಲದೇ ತಾನು ನಿಃಸ್ಸಂಗವಾಗಿದ್ದರೂ ಸಹ ಭಗವಂತನ ಭಜನೆ, ಉಪಾಸನೆ ಬಿಡಬಾರದು. (೬೧) ನಿಸ್ಪೃಹನು ಬಹಳ ಉಪಾಧಿ ಮಾಡಬಾರದು. ಬೆಳೆಸಬಾರದು. ಆದರೆ ಅಗದೀ ಉಪಾಧಿ ಇಲ್ಲದೇ ಇರುವದೂ ಸರಿಯಲ್ಲ. (ಇವೆರಡರ ಮಧ್ಯದ ದಾರಿ ಅಂದರೆ ಸುವರ್ಣ ಮಧ್ಯದ ವರ್ತನೆ ಇರುವದು ಯೋಗ್ಯವು). ಇವನು ಸಗುಣದ ಭಕ್ತಿಯನ್ನು ಬಿಡಬಾರದು (ದಾ. ದಶಕ ೪. ಸಮಾಸ ೯. ನುಡಿ ೬ ನೋಡಿರಿ). ದೇವರು ಬೇರೆ, ನಾನು ಬೇರೆ ಅಂತಾ ಇರುವದೂ ಯೋಗ್ಯವಲ್ಲ. ಸಗುಣ ಭಕ್ತಿಯಲ್ಲಿ ದೇವರು ಮತ್ತು ಭಕ್ತ ಬೇರೆಯಾಗಿಯೇ ಇರುವರೆಂಬುದು ನಿಜವೇ ಇರುವದು ಆದರೆ ಅಂತರ್ಯಾಮಿ ಭಕ್ತನು ದೇವರೊಂದಿಗೆ ತದಾಕಾರ ಇರಬೇಕು. ( ದಾ. ದಶಕ. ೧೧. ಸಮಾಸ ೮. ನುಡಿ ೧೩. ನೋಡಿರಿ) (೬೨) ಯಾವಾಗಲೂ ಗಡಬಿಡಿಯ ಓಡಾಟವಿರಬಾರದು. ಅದರಂತೆ ಒಂದೇ ಸ್ಥಳದಲ್ಲಿ ಬಹಳ ದಿವಸ ಇರಬಾರದು. ಅತ್ಯಧಿಕ ಕಷ್ಟ ಮಾಡಬಾರದು. ಅದರಂತೆ ಸುಮ್ಮನೆ ಕುಳಿತು ಆಲಸಿಗನಾಗುವದಂತೂ ಬಹಳ ಕೆಟ್ಟದು(೬೩) ಬಹಳಷ್ಟು ಮಾತನಾಡಬಾರದು. ಅದರಂತೆ ಅಗದೀ ಗುಮ್ಮನ ಗುಸುಗನಂತೆ ಮಾತಾಡದೆಯೂ ಇರಬಾರದು. ಬಹಳ ಅನ್ನ ತಿನ್ನಬಾರದು. ಅದರಂತೆ ಅತಿ ಉಪವಾಸವನ್ನೂ ಮಾಡಬಾರದು. (೬೪)

ಬಹುಸಾಲ ನಿಜೋ ನಯೇ । ಬಹುತ ನಿದ್ರಾ ಮೋಡೂ ನಯೇ ।
ಬಹು ನೇಮು ಧರೂ ನಯೇ । ಬಾಶ್ಕಳ ಖೋಟೇ ॥೬೫॥

ಬಹು ಜನೀ ಅಸೋ ನಯೇ । ಬಹು ಆರಣ್ಯ ಸೇವ್ರೂ ನಯೇ ।
ಬಹು ದೇಹ ಪಾಳೂ ನಯೇ । ಆತ್ಮಹತ್ಯಾ ಖೋಟೇ ॥೬೬॥

ಬಹು ಸಂಗ ಧರೂ ನಯೇ । ಸಂತಸಂಗ ಸಾಂಡೂ ನಯೇ ।
ಕರ್ಮಠಪಣ ಕಾಮಾ ನಯೇ । ಅನಾಚಾರ ಖೋಟಾ ॥೬೭॥

ಬಹು ಲೋಕಿಕ ಸಾಂಡೂ ನಯೇ । ಲೋಕಾಧೇನ ಹೋಊ ನಯೇ ।
ಬಹು ಪ್ರೀತೀ ಕಾಮಾ ನಯೇ । ನಿಷ್ಠುರತಾ ಖೋಟೇ ॥೬೮॥

ಬಹು ಸಂಶಯೆ ಧರೂ ನಯೇ । ಮುಕ್ತಮಾರ್ಗ ಕಾಮಾ ನಯೇ ।
ಬಹುಸಾಧನೀ ಪಡೋ ನಯೇ । ಸಾಧನೇವೀಣ ಖೋಟೇ ॥೬೯॥

ಬಹು ವಿಷಯೆ ಭೋಗೂ ನಯೇ । ವಿಷಯತ್ಯಾಗ ಕರಿತಾ ನಯೇ ।
ದೇಹಲೋಭ ಧರೂ ನಯೇ । ಬಹು ತ್ರಾಸ ಖೋಟಾ ॥೭೦॥

ವೇಗಳಾ ಅನುಭವ ಘೇಊ ನಯೇ । ಅನುಭವೇವೀಣ ಕಾಮಾ ನಯೇ ।
ಆತ್ಮಸ್ಥಿತೀ ಬೋಲೋ ನಯೇ । ಸ್ತಬ್ಧತಾ ಖೋಟೇ ॥೭೧॥

ಬಹಳಷ್ಟು ನಿದ್ರೆ ಮಾಡಬಾರದು. ಯಾವಾಗಲೂ ಮಲಗಿರಬಾರದು. ಆದರಂತೆ ಹೆಚ್ಚು ನಿದ್ದೆಗೆಡಬಾರದು. ಅಳತೆ ಮೀರಿ ಎದ್ದು ಕಾಲ ಕಳೆಯಬಾರದು. ಬಹಳಷ್ಟು ನೇಮ (ನಿಯಮ) ಹಿಡಿಯಬಾರದು. ಆದರಂತೆ ನಿಯಮರಹಿತನಾಗಿಯೂ ಇರಬಾರದು, (೬೫) ಬಹಳಷ್ಟು ಜನರೊಂದಿಗೆ ಕೆಲಸವಿಲ್ಲದೇ ಸುಮ್ಮನೆ ಬಹಳ ಕಾಲ ಇರಬಾರದು. ಅದರಂತೆ ಸದಾಕಾಲ ಅರಣ್ಯದಲ್ಲಿಯೂ ಇರಬಾರದು. ದೇಹವನ್ನು ಬಹಳಷ್ಟು ಪ್ರೀತಿಸಬಾರದು. ಅಚ್ಚೆ (ಮುದ್ದಿಸುವದನ್ನು) ಮಾಡಬಾರದು. ಅದರಂತೆ ದೇಹವನ್ನು ಅತಿ ದಂಡಿಸುವದು. ಅಥವಾ ಆತ್ಮಹತ್ಯೆಗೆಳೆಸುವದನ್ನು ಮಾಡಬಾರದು. ಇದು ನಿಂದ್ಯ ಕೆಲಸವು. [೬೬] ಸುಮ್ಮ ಸುಮ್ಮನೇ ಬಹಳಷ್ಟು ಜನರ ಸಂಗತಿ ಸಹವಾಸ ಮಾಡಬಾರದು. ಆದರೆ ಸಂತರ ಸಂಗತಿಯನ್ನು ಬಿಡಬಾರದು. ಶಕ್ಯವಿದ್ದರೆ ಸದಾ ಸಂತರ ಸಹವಾಸವಿರಬೇಕು. ಆಚಾರದಲ್ಲಿ ಕರ್ಮಠತನವಿರಬಾರದು. (ಅತಿ ಕರ್ಮಠತನವಂತೂ ಇರಲೇಬಾರದು). ಅದರಂತೆ ಆಚಾರಹೀನ, ವಿಚಾರಹೀನನೂ ಇರಬಾರದು. [೬೭] ಲೋಕರೂಢಿ-ಲೋಕಾಚಾರಗಳನ್ನು ಬಹಳ ಬಿಡಬಾರದು. ತಾಳಗೆಟ್ಟು ನಡೆಯಬಾರದು."ಯದ್ಯಪಿ ಶುದ್ಧಂ ಲೋಕ ವಿರುದ್ಧಂ"ಆಗಬಾರದು.ಅದರಂತೆ ಅಗದೀ ಜನರ ಕೈವಾರಿಯೂ ಆಗಬಾರದು. ಯಾರ ಮೇಲೆಯೂ ಅತಿ ಪ್ರೇಮ ಮಾಡಬಾರದು. ಆದರೆ ಅಗದೀ ಪ್ರೇಮಹೀನನಾಗಿಯೂ ವರ್ತಿಸಬಾರದು.[೬೮] ಬಹಳ ಸಂಶಯಖೋರ-ಸಂಶಯಪಿಶಾಚಿತನ ಇರಬಾರದು. ಅದರಂತೆ ಅಗದೀ ಬಂಧನರಹಿತತನವೂ ಇರಬಾರದು, [ಮನ ಬಂದಂತೆ ನಡೆಯಬಾರದು]. ಅಗದೀ ಬಹಳ ಸಾಧನೆ ಮಾಡುವ ಮಾರ್ಗ ಬಹಳ ಕಠಿಣ ಮಾರ್ಗ ಒಮ್ಮೆಲೆ ಹಿಡಿಯಬಾರದು. ಆದರೆ ಏನೂ ಸಾಧನೆ ಮಾಡದೇ ಇರಬಾರದು. [೬೯] ಅತಿಶಯ ಇಂದ್ರಿಯ ಸುಖ ಭೋಗಿಸಬಾರದು. ಆದರಂತೆ ಇಂದ್ರಿಯ ಸುಖವನ್ನು ಸಂಪೂರ್ಣವಾಗಿ ಬಿಡಬಾರದು. [ಮಿತವ್ಯಯತನವಿರಬೇಕು] ದೇಹದ ಮೇಲೆ ಅತಿ ಲೋಭಿತನ ಬೇಡ ಆದರೆ ಅವಕ್ಕೆ ಬಹಳ ತೊಂದರೆ, ಕಷ್ಟ ಕೊಡಬಾರದು. [೭೦] ಪ್ರತಿಯೊಂದು ವಿಷಯದ ಬಗ್ಗೆ ನೀವು ಸ್ವತಃ ನಿಮ್ಮದೇ ಆದ ಪ್ರತ್ಯೇಕ ಅನುಭವ ಹೊಂದುವ [ಪಡೆಯುವ]ದರ ಬೆನ್ನು ಹತ್ತಬಾರದು. ಆದರೆ ಕೆಲವು ವಿಷಯದ ಬಗ್ಗೆ ಮಾತ್ರ ಅನುಭವ ಪಡೆಯದೇ ಇರಬಾರದು. ನಿಮ್ಮ ಅಂತರ್ಯಾಮದ ಸ್ವರೂಪಾನುಭೂತಿ ಸ್ಥಿತಿಯನ್ನು [ಆತ್ಮಸ್ಥಿತಿಯನ್ನು] ಅನ್ಯ ವಸ್ತುವಿನಂತೆ ಸ್ಪಷ್ಟವಾಗಿ ಬೈಲಿಗಿಡಬಾರದು. ಮಾತನಾಡಬಾರದು ಅನ್ನುವದು ನಿಜವಿದ್ದರೂ ಸಹ ಇದರ ಬಗ್ಗೆ ಅಗದೀ ಮೌನ ಧರಿಸುವದು ಯೋಗ್ಯವಾಗುವದಿಲ್ಲ.(೭೧)

ಮನ ಉರೋ ದೇಊ ನಯೋ । ಮನೇವಿಣ ಕಾಮಾ ನಯೋ ।
ಅಲಕ್ಷ ವಸ್ತು ಲಕ್ಷಾ ನಯೋ । ಲಕ್ಷೇವಿಣ ಖೋಟೇ ॥೭೨॥

ಮನ ಬುದ್ಧೀ ಅಗೋಚರ । ಬುದ್ಧೀವಿಣ ಅಂಧಕಾರ ।
ಜಾಣೇವೇಚಾ ಪಡೋ ವಿಸರ । ನೇಣೇವ ಖೋಟೇ ॥೭೩॥

ಜ್ಞಾತೇಪಣ ಧರೂ ನಯೋ । ಜ್ಞಾನೇವಿಣ ಕಾಮಾ ನಯೋ ।
ಅತರ್ಕ್ಯ ವಸ್ತು ತರ್ಕಾ ನಯೋ । ತರ್ಕೇವಿಣ ಖೋಟೇ ॥೭೪॥

ವೇದಾಂತವು ಏನು ಹೇಳುವದೆಂದರೆ:- ಈ ದೃಶ್ಯ ವಿಶ್ವವು ಅಧ್ಯಾಸ-ಆಭಾಸಮಯವಿರುವದು, ಇದು ಖರೇ(ನಿಜ) ಮತ್ತು ಖೊಟ್ಟಿ (ಸುಳ್ಳು) ಇವೆರಡರ ಮಿಶ್ರಣವಿರುವದು. ಅಂದರೆ ಮಾನವ ಜೀವನದಲ್ಲಿ ಖರೆ ಮತ್ತು ಖೊಟ್ಟಿ ಇವೆರಡೂ ಕಂಡು ಬರುವವು. ಲೋಕಸಂಗ್ರಹ (ಜನಸಂಗ್ರಹ) ಮಾಡುವಂಥ ನಿಸ್ಪೃಹ ಮನುಷ್ಯನ ಜೀವನದಲ್ಲಿ ಇವೆರಡರ ಸಮತೋಲನವಿರಬೇಕೆಂಬುದು ಶ್ರೀ ಸಮರ್ಥರ ಆಗ್ರಹ, ಅಪೇಕ್ಷೆ ಇರುವದು. ಇಂಥ ಸಮತೋಲ ಜೀವನವೇ ಸಾಮಾನ್ಯ ಜನರಿಗೆ ಬಹಳ ಉಪಯೋಗ ಬೀಳುವದು. ಹಾಗಾದರೆ ಸಮತೋಲತನವು ಹೇಗಿರಬೇಕು? ಅಂದರೆ ಅದು ಹೀಗಿರಬೇಕು:- ಬ್ರಹ್ಮ ವಸ್ತುವಿನ ಸಾಕ್ಷಾತ್ಕಾರವಾಗುವದಕ್ಕೆ ಸದ್ಯದ ನಿಮ್ಮ ಮನವನ್ನು ಹೊಡೆದೊಗೆಯಬೇಕಾಗುವದು. ಏಕೆಂದರೆ ಅದು ಉನ್ಮನವಾಗಬೇಕಾಗುವದು. ಈ ಮಾತು ನಿರ್ವಿವಾದವೇ ಇರುವದು. ಆದರೆ ಇಂಥ ಉನ್ಮನ ಸಂಪನ್ನ ಆತ್ಮಜ್ಞಾನಿ ಮನುಷ್ಯನೂ ಸಹ ಕೊನೆಗೆ ಈ ಸಮಾಜದಲ್ಲಿಯೇ ಇರಬೇಕಾಗುವದು. ಸಮಾಜದ ಜನರ ಮಧ್ಯದಲ್ಲಿದ್ದು ಅವರಿಗೆ ಕಲಿಸಬೇಕಾಗುವದು. ಅಂದರೆ ಜ್ಞಾನೀ ಪುರುಷರಿಗಾದರೂ ಸದ್ಯದ ಸಾಮಾನ್ಯ ಮನದಿಂದಲೇ ಕೆಲಸ ತೆಗೆದುಕೊಳ್ಳಬೇಕಾಗುವದು. ಯಾಕೆಂದರೆ ಅಲ್ಲಿ ಉನ್ಮನವು ಉಪಯೋಗ ಬೀಳುವದಿಲ್ಲ. ಆದ್ದರಿಂದಲೇ ಅವನಲ್ಲಿ ಮನ ಮತ್ತು ಉನ್ಮನ ಇವುಗಳ ಸಮತೋಲನ ಬೇಕಾಗುವದು. ಅಂತರ್ಯಾಮಿ ಜ್ಞಾನದ ಜಾಗ್ರತಿಯನ್ನು ಕಾಯಮ್ ಇಟ್ಟುಕೊಂಡು ಹೊರಗೆ (ಬಹಿರಂಗದಲ್ಲಿ) ಜ್ಞಾನದ ವಿಸ್ಮೃತಿಯನ್ನು ಮರೆಮಾಡಿಕೊಳ್ಳದ ಹೊರತು ಅಂದರೆ ಜ್ಞಾನಕ್ಕೆ ತಾತ್ಪೂರ್ತಿಕ ಮುಸುಕು ಹಾಕದ ವಿನಃ ಜ್ಞಾನೀ ಮನುಷ್ಯನಿಗೆ ಜನರೊಂದಿಗಿನ ವ್ಯವಹಾರವನ್ನು ನಿಭಾಯಿಸು (ಸಂಬಾಳಿಸು) ವುದಕ್ಕೆ ಬರುವದಿಲ್ಲ-ಆಗುವದಿಲ್ಲ. ಈ ರೀತಿಯಿಂದ ಜ್ಞಾನ ಮತ್ತು ಅಜ್ಞಾನ, ಬ್ರಹ್ಮ ಮತ್ತು ಮಾಯಾ, ಭೇದ ಮತ್ತು ಅಭೇದ ತಿಳುವಳಿಕೆ (ಜಾಣೀವ) ಮತ್ತು ಅಜ್ಞಾನ, ಪ್ರತಿಭಾ (ವಿಶೇಷ ಪ್ರಜ್ಞೆ) ಮತ್ತು ಬುದ್ಧಿ, ಜ್ಞಾನ, ಮತ್ತು ಕರ್ಮ, ನಿರ್ಗುಣ ಮತ್ತು ಸಗುಣ ಅಥವಾ ಪ್ರಪಂಚ ಮತ್ತು ಪರಮಾರ್ಥ, ಇವುಗಳನ್ನು ಗೊತ್ತಿಲ್ಲದಂತೆ (ಬೇಮಾಲೂಮ) ತಳಕುಹಾಕಿ ಲೋಕಸಂಗ್ರಹ ಮಾಡುತ್ತ ಇರುವದೇ ಒಂದು ದೊಡ್ಡ ಕಲೆ ಇರುವದು. ಮನವನ್ನು ಉಳಿಸಗೊಡಬೇಡಿರಿ. ಅದನ್ನು ಹೊಡೆದಟ್ಟಿರಿ. ಅದು ಶಿಲುಕು ಉಳಿಯಬಾರದು. (ಅದು ಉನ್ಮನವಾಗಬೇಕು). ಆದರೆ ಮನದ ಹೊರತು ಇರಲಿಕ್ಕೆ ಸಾಧ್ಯವಿಲ್ಲ. ಏಕೆಂದರೆ ವಿವೇಕ ಮೊದಲಾದ ರೂಪದಿಂದ ಮನವು ಬೇಕೇ ಬೇಕು. ಸದ್ವಸ್ತು (ಅಲಕ್ಷ್ಯ ವಸ್ತು)ವು ಧ್ಯಾನದ ಕಕ್ಷೆಯಲ್ಲಿ ಬರುವದಿಲ್ಲವೆಂಬುದು ನಿಜವಾದರೂ ಸಹ ಧ್ಯಾನವಿಲ್ಲದೆ ಇರುವದು ಒಳಿತಲ್ಲ ಅರ್ಥಾತ್ ಧ್ಯಾನ ಅವಶ್ಯವು, (ಇಲ್ಲಿ ಸಮರ್ಥರ ಕರುಣಾಷ್ಟಕದಲ್ಲಿ "ಜನೀ ಮನಾವಾಚುನಿ ಸೂಖನಾಹೀ। ಮನೇಚಿ ಲಾಭೆ ಗುಜ ಸರ್ವಕಾಹೀ। ಪರಂತು ತೇ ಸ್ವಾಧಿನ ಹೋ ಕರಾವೆ। ನಿರೂಪಣೇ ಮಾನಸ ಆವರಾವೆ।" ಅನ್ನುವದು ಯೋಗ್ಯವಾಗಿವೆ). [೭೨] ಬ್ರಹ್ಮ ವಸ್ತು ಮನಸ್ಸಿಗೆ ಮತ್ತು ಬುದ್ಧಿಗೆ ಆಕಲನವಾಗು[ತಿಳಿಯು]ವದಿಲ್ಲ. ಮನ ಮತ್ತು ಬುದ್ಧಿ ಇವು ಬ್ರಹ್ಮ ವಸ್ತುವಿನವರೆಗೆ ಹೋಗಿ ಮುಟ್ಟಲಿಕ್ಕೆ ಸಾಧ್ಯವಿಲ್ಲ. ಆದರೆ ಬುದ್ಧಿಯಿಂದ ವಿವೇಕ ಮಾಡದಿದ್ದರೆ ಆಗ ಒಳಗೂ ಮತ್ತು ಹೊರಗೂ ಎಲ್ಲವೂ ಅಜ್ಞಾನದ ಅಂಧಕಾರದ ಕಗ್ಗತ್ತಲೆಯೇ ಇರುವದು. ನಾನು ಅನ್ನುವ ತಿಳುವಳಿಕೆಯು ಸಂಪೂರ್ಣ ಮರೆವಾಗಬೇಕು [ಮರೆತು ಬಿಡಬೇಕು]. ಈ ಮಾತು ನಿಜವಿದ್ದರೂ ಸಹ ಕೇವಲ ಅಜ್ಞಾನವನ್ನು ಆಧರಿಸಿ ಇರುವದು. ಉಪಯೋಗದ್ದಲ್ಲವೆಂದ ಮೇಲೆ ಜ್ಞಾನರಹಿತ ಅಜ್ಞಾನ ಕೆಲಸಕ್ಕೆ ಬಾರದ್ದು. ಒಟ್ಟಿನಲ್ಲಿ ಜ್ಞಾನದ ವಿಜ್ಞಾನವು-ಸ್ವಾನುಭವಿಕ ಜ್ಞಾನವಾಗಬೇಕು. [೭೩] ನಾನು ಜ್ಞಾತಾ ಇರುವೆನು. (ತಿಳಿದವನಿರುವೆನು). ಅನ್ನುವ ತಿಳುವಳಿಕೆಯನ್ನು ಹೊಂದಬೇಡ. [ತಿಳಿದವ ಅನ್ನುವ ಗರ್ವ ಯೋಗ್ಯವಲ್ಲ.]. ಆದರೆ ಅಭಿಮಾನ ಬರುವದೆಂದು ಅಂಜಿ ಜ್ಞಾನವನ್ನು ಬಿಟ್ಟು ಬಿಡಬಾರದು. ಅಭಿಮಾನ ರಹಿತ ಜ್ಞಾನವು ಶ್ರೇಷ್ಠವು. ಬ್ರಹ್ಮವಸ್ತುವು ತರ್ಕದ ಆಚೆಗೆ (ತರ್ಕಕ್ಕೆ ಮೀರಿದ್ದು) ಇರುವದು. ತರ್ಕದ ಅಳವಿನಲ್ಲಿ ಇದು ಬರುವದಿಲ್ಲ. ಈ ಮಾತು ಸತ್ಯವಿದ್ದರೂ ಸಹ ತರ್ಕದ ಉಪಯೋಗ ಮಾಡದೇ ಇರುವದು ಸಾಧ್ಯವಿದೆಯೇ? ಅಂತೂ ತರ್ಕ ಮಾಡದಿರುವದು ಸಾಧ್ಯವಿಲ್ಲ. ಮಾಡಲೇಬೇಕಾಗುವದೆಂಬ ಮಾತು ಸತ್ಯವೇ ಇರುವದು. [೭೪]

ದೃಶ್ಯಸ್ಮರಣ ಕಾಮಾ ನಯೇ । ವಿಸ್ಮರಣ ಪಡೋ ನಯೇ ।
ಕಾಂಹೀ ಚರ್ಚಾ ಕರೂ ನಯೇ । ಕೇಲಿಯಾವೀಣ ನ ಚಲೇ ॥೭೫॥

ಜಗೀ ಭೇದ ಕಾಮಾ ನಯೇ । ವರ್ಣಸಂಕರ ಕರೂ ನಯೇ ।
ಆಪಲಾ ಧರ್ಮ ಉಡವೂ ನಯೇ । ಅಭಿಮಾನ ಖೋಟಾ ॥೭೬॥

ಆಶಾಬದ್ಧತ ಬೋಲೋ ನಯೇ । ವಿವೇಕೇವೀಣ ಚಾಲೋ ನಯೇ ।
ಸಮಾಧಾನ ಹಾಲೋ ನಯೇ । ಕಾಂಹೀ ಕೇಲ್ಯಾ ॥೭೭॥

ಅಬದ್ಧ ಪೋಥೀ ಲೇಹೋ ನಯೇ । ಪೋಥೀವೀಣ ಕಾಮಾ ನಯೇ ।
ಅಬದ್ಧ ವಾಚೂ ನಯೇ । ವಾಚಿಲ್ಯಾವೀಣ ಖೋಟೇ ॥೭೮॥

ನಿಸ್ಪೃಹೇ ವಗತ್ರುತ್ವ ಸಾಂಡೂ ನಯೇ। ಆಶಂಕಾ ಘೇತಾ ಭಾಂಡೋ ನಯೇ।
ಶ್ರೋತಯಾಚಾ ಮಾನೂ ನಯೇ । ವೀಟ ಕದಾ ॥೭೯॥

ಹೇ ಸಿಕವಣ ಧರಿತಾ ಚಿತ್ತೀ । ಸಕಳ ಸುಖೇ ವೋಳಗತೀ ।
ಆಂಗೀ ಬಾಣೇ ಮಹಂತೀ । ಅಕಸ್ಮಾತ ॥೮೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ನಿಸ್ಪೃಹ ಲಕ್ಷಣ ನಾಮ' ಸಮಾಸ ಪ್ರಥಮ ॥

ಭಗವಂತನ ಸ್ಮರಣೆಗೆ ಅಡ್ಡ ಬರುವದೆಂದು ಕಾಣುವ ಜಗತ್ತಿನ [ದೃಶ್ಯದ] ಸ್ಮರಣ ಮಾಡಬಾರದು. ಆದರೆ ದೃಶ್ಯದ ಸಂಪೂರ್ಣ ವಿಸ್ಮರಣವೂ [ಮರೆವು] ಆಗಬಾರದು. ಹಾಗೆ ಆದರೆ ಮನುಷ್ಯರ ಎಲ್ಲ ವ್ಯವಹಾರವೂ ಅಸ್ತವ್ಯಸ್ತವಾಗಬಹುದು, ಅಥವಾ ನಿಂತು ಹೋಗಬಹುದು. ಕೆಲಸಕ್ಕೆ ಬಾರದ ಅರ್ಥವಿಲ್ಲದ ಚರ್ಚೆ ಮಾಡಬಾರದೆನ್ನುವದು ನಿಜವೇ ಇರುವದು. ಆದರೆ ಪ್ರಸಂಗಾನುಸಾರ ಅವಶ್ಯವಿದ್ದಷ್ಟು ಚರ್ಚೆ ಮಾಡದ ಹೊರತು ಗತ್ಯಂತರವಿಲ್ಲವೆನ್ನುವದೂ ಅಷ್ಟೇ ಖರೇ ಇರುವದು. [೭೫] ಜಗತ್ತಿನಲ್ಲಿ ಭೇದವಿರಬಾರದು. ಆದರೆ ಭೇದ ಬೇಡವೆಂದು (ಮುದ್ದಾಂ) ವರ್ಣಸಂಕರ ಮಾಡಬಾರದು. ನೀವು ನಿಮ್ಮ ಧರ್ಮವನ್ನು ಎಂದೂ ಬಿಡಬಾರದು. ಮತ್ತು ತುಚ್ಛೀಕರಿಸಬಾರದು. ಆದರೆ ಧರ್ಮದ ಬಗ್ಗೆ ದುರಭಿಮಾನವೂ ಇರಬಾರದು. ಲೋಕಕಲ್ಯಾಣ ಕಾರ್ಯಕರ್ತರು ಈ ಮಾತುಗಳನ್ನು ನಿತ್ಯವೂ ಸ್ಮರಣೆಗೆ ತಂದುಕೊಂಡು ಅದರಂತೆ ತಾವು ಆಚರಿಸಬೇಕು. ಮತ್ತು ಜನರಿಗೂ ಇದರಂತೆ ನಡೆಯಲು ಹೇಳಬೇಕು. (೭೬) ಮನದಲ್ಲಿ ಸ್ವಾರ್ಥತನ ಅಥವಾ ಯಾವುದೇ ಆಶೆ ಇಟ್ಟುಕೊಂಡು ಮಾತನಾಡಬಾರದು. ವಿವೇಕದಿಂದ ವಿಚಾರ ಮಾಡದ ಹೊರತು ನಡೆಯಬಾರದು. ನುಡಿಯಲೂಬಾರದು, ಏನೇ ಘಟಿಸಲಿ, ಏನೇ ಆಗಲಿ ನಿಮ್ಮ ಸಮಾಧಾನ ಭಂಗಗೊಳ್ಳದಂತೆ ನಿಮ್ಮಲ್ಲಿ ಸಾತ್ವಿಕ ಕೆಚ್ಚು ಇರಲಿ. (೭೭) (ಶ್ರೀ ಸಮರ್ಥರ ಕಾಲದಲ್ಲಿ ಮುದ್ರಣದ ಸೌಕರ್ಯ ಇರದ್ದರಿಂದ ಜನರು ಗ್ರಂಥಾದಿಗಳನ್ನು ಕೈಯಿಂದ ಬರೆದುಕೊಳ್ಳಬೇಕಾಗಿತ್ತು. ಈ ಸಂದರ್ಭದ ಬಗ್ಗೆ ಇಲ್ಲಿ ವಿಷಯ ಬಂದಿರುವದು). ಅವ್ಯವಸ್ಥಿತ ತನದಿಂದ ಗ್ರಂಥ ಬರೆಯಬಾರದು. ಆದರೆ ಈ ಭೀತಿಯಿಂದ ಗ್ರಂಥ ಬರೆಯುವದನ್ನೇ ಬಿಡಬಾರದು. ಗ್ರಂಥವನ್ನು ಅವ್ಯವಸ್ಥಿತತನದಿಂದ ಲಕ್ಷ್ಯ ಕೊಡದೇ ತಪ್ಪು ತಪ್ಪಾಗಿ ಓದಬಾರದು. ಆದರೆ ಗ್ರಂಥ ಓದುವದನ್ನೇ ಬಿಡಬಾರದು. (೭೮) ನಿಸ್ಪೃಹ ಪುರುಷನು ನಿರೂಪಣ (ಅದ್ವೈತ ಚರ್ಚೆ, ಕಥಾ, ಪುರಾಣಾದಿಗಳ ಚರ್ಚೆ, ವಿವೇಚನೆ, ವ್ಯಾಖ್ಯಾನ) ಪ್ರವಚನ ಮಾಡುವದನ್ನು ಬಿಡಬಾರದು. ಶ್ರೋತಾ ಜನರ ಪೈಕಿ ಯಾರಾದರೂ ಆಕ್ಷೇಪ ತೆಗೆದರೆ ಅಥವಾ ಶಂಕಾ ಸಂಶಯಗಳನ್ನು ಉಪಸ್ಥಿತ ಮಾಡಿದರೆ ಅವರ ಸಂಗಡ ಜಗಳವಾಡಬಾರದು. ಖೊಟ್ಟಿ ಮಾತು-ಚುಚ್ಚು ಮಾತು ಆಡಬಾರದು. ಶ್ರೋತಾ ಜನ ಎಂದೂ ಯಾವಾಗಲೂ ಬೇಸರಗೊಳ್ಳದಂತೆ ನಿಮ್ಮ ನಡತೆಯು ಸರಳವಿರಲಿ. ಅವರನ್ನು ಉಪೇಕ್ಷಿಸುವದು ಎಷ್ಟೂ ಉಚಿತವಲ್ಲ. ಶಂಕಾ ಸಂಶಯ ಉಂಟಾಗುವದು ಅಜ್ಞಾನದ ಲಕ್ಷಣವೆಂದು ತಿಳಿಯಿರಿ ಶ್ರೋತಾಜನ ಎಲ್ಲಿಯವರೆಗೆ ಅಜ್ಞಾನಿ ಇರುವರೋ ಅಲ್ಲಿಯವರೆಗೂ ಅವರ ಮನದಲ್ಲಿ ಸಂಶಯ ಹುಟ್ಟುವದು ಸ್ವಾಭಾವಿಕವೇ ಇರುವದು. ಮತ್ತು ಶ್ರೋತಾ ಶಂಕಾ ತೆಗೆಯುವನು ಅಂತಾ ಅವನನ್ನು ನಿರ್ಲಕ್ಷಿಸಿದ್ದಾದರೆ ವಕ್ತನಲ್ಲಿ ಸಂಪೂರ್ಣ ಜ್ಞಾನ ಉದಯವಾಗಿಲ್ಲವೆಂದು ಅನ್ನಬೇಕಾಗುವದು. ಇದಲ್ಲದೆ ಪುನ: ಪುನಃ ಹೇಳುವದಕ್ಕೆ ಬೇಸರಪಡದೆ ಶ್ರೋತಾ ಜನರ ಬಗ್ಗೆ ನಿರಾಶಾಭಾವನೆ ತಳೆಯದೇ ಮತ್ತು ಶ್ರೋತಾನ ಬಗ್ಗೆ ತಿರಸ್ಕಾರ ಭಾವನೆ ತಾಳದೆ ಯಾವನು ಕೊನೆಯವರೆಗೆ ನಿರೂಪಣ, ಪ್ರವಚನ, ಮೊದಲಾದವುಗಳನ್ನು ಹೇಳುತ್ತಲೇ ಇರುವನೋ ಅಂಥವನು ಮಾತ್ರ ಸಮಾಜದ ಉದ್ಧಾರ ಮಾಡುವನು,[೭೯] ನಾನು ಹೇಳಿದ ಮಾತುಗಳನ್ನು ಯಾರು ಮನದಲ್ಲಿ ಗ್ರಹಿಸಿ ಅದರಂತೆ ನಡೆಯುವರೋ ಅಂಥವರಿಗೆ ಯಾವತ್ತೂ ಸುಖ ಸಮಾಧಾನಗಳು ವಶವಾಗುವವು. ಹಾ ಹಾ ಅನ್ನುವಷ್ಟರಲ್ಲಿ ಬಹುಬೇಗ ಅಂಥವನಲ್ಲಿ ಮಹಂತತನದ ಸಾಮರ್ಥ್ಯವು ಬರುವದು. (೮೦)

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹದಿನಾಲ್ಕನೆಯ ದಶಕದೊಳಗಿನ
"ನಿಸ್ಪೃಹ ನಾಮು" ವೆಂಬ ಹೆಸರಿನ ಒಂದನೆಯ ಸಮಾಸವು ಮುಗಿದುದು

## ದಶಕ ೧೪. ಸಮಾಸ ೨. ಭಿಕ್ಷಾ ನಿರೂಪಣ (ನುಡಿ ೨೨)

ಸುಶ್ಲೋಕ ಲಾಘವ ಅನ್ನುವದರಲ್ಲಿ ಶ್ರೀ ವಿಠೋಬಾ ಅಣ್ಣಾ ಅವರು ಅನ್ನುವರು : ಶ್ರೀ ಸಮರ್ಥರ ವರ್ಣನೆ ಮಾಡುವಾಗ ಮೋಜಿನದಾದರೂ ಅತಿ ಮಾರ್ಮಿಕವಾದ ಶ್ಲೋಕವನ್ನು ಹೇಳಿದ್ದಾರೆ. ಆ ಶ್ಲೋಕವು ಹೀಗಿರುವದು.

ಶ್ಲೋಕ:- ಆಕಿಂಚ ನ ವರೇಣ್ಯೋಪಿ ಸಮರ್ಥ ಪದವೀಂ ಗತಃ ।
ದಾಸೋಪಿ ಯಃಕಿಲ ಸ್ವಾಮೀ ಸ ಸಾಧುಃ ಕೋsಪಿರಾಜತೇ ॥

ಅರ್ಥ:- ಈ ಪುರುಷನು ಭಿಕ್ಷೆ ಬೇಡುವವರಲ್ಲಿ ಶ್ರೇಷ್ಠನಾಗಿದ್ದನು. ಆದರೂ ಸಹ ಸಮರ್ಥ ಪದವಿಗೆ ಮುಟ್ಟಿದನು. ಹಾಗೆಯೇ ದಾಸನಾಗಿದ್ದೂ ಸಹ ಇವನು ಸ್ವಾಮೀ ಪದವನ್ನು ಹೊಂದಿದನು. ಇಂಥ ಆ ಯಾವ ಸಾಧು ರಾಮದಾಸರ ಶೋಭೆಯನ್ನು [ಶ್ರೇಷ್ಠತ್ವವನ್ನು] ಏನೆಂದು ವರ್ಣಿಸುವದು!

ಆಗದೀ ಆರಂಭದಲ್ಲಿಯೇ ಒಂದು ಮಾತನ್ನು ಸ್ಪಷ್ಟಪಡಿಸುವೆನು. ಶ್ರೀ ಸಮರ್ಥರ ಭಿಕ್ಷಾ ಅಂದರೆ ಭಿಕಾರಿತನದ್ದಲ್ಲ. ಬಡತನದ್ದಲ್ಲ. ದೈನ್ಯತೆಯದೂ ಅಲ್ಲ, ಸಂತರಿಗೆ ವಿಶೇಷತಃ ಶ್ರೀ ಸಮರ್ಥರಿಗೆ ದೈನ್ಯತನದಿಂದ ಬದುಕುವದು ಎಳ್ಳಷ್ಟೂ ಮಾನ್ಯವಿಲ್ಲ. ಸಂಪತ್ತನ್ನು ಗಳಿಸುವ ತಾಕತ್ತು ಇದ್ದರೂ ಸಹ ಭಗವಂತನ ಸಲುವಾಗಿ ಅಥವಾ ತನ್ನ ಧ್ಯೇಯಕ್ಕಾಗಿ ಸ್ವಖುಷಿಯಿಂದ ದಾರಿದ್ರ್ಯವನ್ನು ಪಥಕರಿಸುವದಕ್ಕೆ ಭಿಕ್ಷೆ ಅನ್ನುವ ಹೆಸರು ಇರುವದು. ಇನ್ನೇನಾದರೂ ಮಾಡಿ ಹೊಟ್ಟೆ ತುಂಬಿಕೊಳ್ಳಲಿಕ್ಕೆ ಬರುವದಿಲ್ಲವೆಂದು ಭಿಕ್ಷಾ ಪಾತ್ರೆಯ ಅವಲಂಬನವು ಲಜ್ಜೆಗೇಡಿತನದ [ನಿರ್ಲಜ್ಜತೆಯ]ಕೆಲಸ ಅನಿಸುವದು. ಇಂಥವರಿಗೆ ಸಾದಾ ಪ್ರಪಂಚವೂ ಸಹ ಸರಿಯಾಗಿ ಸಾಧಿಸುವದಾಗುವದಿಲ್ಲವೆಂಬುದು ಸತ್ಯವೇ ಇರುವದು.

ಇವರಿಗೆ ಪರಮಾರ್ಥವೆಂತು ಸಾಧ್ಯವಾದೀತು ? ಶ್ರೀ ಸಮರ್ಥರು ಪುರಸ್ಕಾರ ಮಾಡಿದ (ಬೆಂಬಲಿಸಿದ) ಭಿಕ್ಷೆಯಲ್ಲಿ ನಾಲ್ಕು ಭಾಗಗಳು ಇರುವವು. ೧) ನಿಜವಾದ ಸಾಧಕ ಮನುಷ್ಯನು ಧ್ಯಾನ ಧಾರಣೆಯಲ್ಲಿ ಮಗ್ನನಾಗಲು ಹತ್ತಿದ ನೆಂದರೆ ಪ್ರಪಂಚದ ಕಡೆಗೆ ಅಷ್ಟೇಏಕೆ ಸ್ವತಃದ ದೇಹದ ಕಡೆಗೆ ಸಹ ಲಕ್ಷ್ಯಕೊಡಲಿಕ್ಕೆ ಅವನಿಗೆ ಸವಡು (ವೇಳೆ)ಇರು ವದಿಲ್ಲ. ಇಂಥ ಅವಸ್ಥೆಯಲ್ಲಿ ಕೇವಲ ದೇಹಧಾರಣ ಮಾಡಿಕೊಳ್ಳುವ ಮಟ್ಟಿಗೆ ಅನ್ನವನ್ನು ಯಾರಲ್ಲಿಯಾದರೂ ಬೇಡಲು ಶಾಸ್ತ್ರಕಾರರು ಪರವಾನಿಗೆ ಕೊಡುವರು. ಸರ್ವಸಂಗ ಪರಿತ್ಯಾಗ ಮಾಡಿ ಆತ್ಮ ಸಾಕ್ಷಾತ್ಕಾರದ ಬೆನ್ನುಹತ್ತಿದ ಸನ್ಯಾಸಿಗೆ ಇಂಥ ಭಿಕ್ಷೆ ಬೇಡುವ ಅಧಿಕಾರ ಪ್ರಾಪ್ತವಾಗುವದು. ಇದು ಆಧ್ಯಾತ್ಮಿಕ ಅಂಗವೆನಿಸುವದು. ೨) ದೇಹ ಬುದ್ಧಿಯ ಮನುಷ್ಯನಿಗೆ ಕೊನೆಯದಾದ ಕಾಳಜಿ ಎಲ್ಲಕ್ಕಿಂತ ದೊಡ್ಡದು ಯಾವುದೆಂದರೆ ಅದು ಸ್ವತಃದ ದೇಹದ ಭರಣ ಪೋಷಣದ ಅಥವಾ ಅನ್ನ ವಸ್ತ್ರದ್ದಿರುವದು. ಇದಕ್ಕಾಗಿ ಸಾಮಾನ್ಯ ಮನುಷ್ಯನು ಕೇವಲ ಹಣ(ರೊಕ್ಕ)ದ ಅಧೀನವಿರುವನು. ಹಣ ಇಲ್ಲದಿದ್ದರೆ ಏನಾಗುವದೋ ಅನ್ನುವ ಚಿಂತೆ ಇರುವದು. (ಹಣವಿಲ್ಲದವನು ಹೆಣಕ್ಕಿಂತ ಕಡೆ) ಹಣ ಇರದಿದ್ದರೆ ಅನ್ನುವ ಕಲ್ಪನೆಯೂ ಸಹ ಸಹಿಸಲಾಗುವದಿಲ್ಲ. ಮನುಷ್ಯ ಒಂದು ವೇಳೆ ಕಾಮವಾಸನೆ ಯಿಂದ ದೂರವಿರಲು ಸಾಧ್ಯವಾಗಬಹುದು ಮಾನ ಮರ್ಯಾದೆ ಸಿಗದಿದ್ದರೂ ಸಹ ಇವನು ಜೀವನ ಸಾಗಿಸುವನು. ಪರಂತು "ದುಡ್ಡಿಲ್ಲದೆ ನಾನು ಬದುಕಬಹುದು ಅನ್ನುವ ವಿಶ್ವಾಸ ಮಾತ್ರ ಉಂಟಾಗುವದಿಲ್ಲ. ಆದ್ದರಿಂದ "ಭಗವಂತ ನನ್ನನ್ನು ಕಾಯುವನು" ಅನ್ನುವ ನಂಬಿಕೆಯು ಇದಕ್ಕೆ (ಹಣ, ಹಣ, ಅನ್ನುವದಕ್ಕೆ) ಖಾತ್ರಿಯಿಂದ ರಾಮಬಾಣ ದಂತೆ ಮಾರಕವಾಗಿದೆ. ಒಟ್ಟಿನಲ್ಲಿ ಭಗವಂತನ ಮೇಲೆ ಪೂರ್ಣ ನಿಷ್ಠಾ ನಿರ್ಮಾಣವಾಗುವದಕ್ಕೆ ಹಣದ ಮೇಲಿನ ಆಶೆ ನಿಷ್ಠೆ ಸಮೂಲ ನಾಶವಾಗಬೇಕು. (ಭಂಗವಾಗಬೇಕು). ಭಿಕ್ಷೆಯಿಂದ ಇವೆಲ್ಲ ಸಾಧ್ಯವಾಗುವವು. ಇದು ಭಿಕ್ಷೆಯು-ವೈರಾಗ್ಯದ ಅಂಗವೆನಿಸುವದು. ೩) ಯಾವ ಸಮಾಜದಲ್ಲಿ ಜ್ಞಾನ ವಿಷಯದ ವಿವಿಧ ಶಾಖೆಗಳ ಬಗ್ಗೆ ಜೀವಿಸಿ ಇರುವವರೆಗೂ ಮನಃಪೂರ್ವಕವಾಗಿ ಅಭ್ಯಾಸ ಮಾಡುವಂಥ ಜನರಿರುವರೋ ಆ ಸಮಾಜ ಜೀವಂತ ಸಮಾಜವೆನಿ ಸುವದು. ಅದು ಬಹುಕಾಲ ಉಳಿಯುವದು. ಈ ಬಗೆಯಲ್ಲಿ ಅಧ್ಯಯನ (ಕಲಿಯುವದು), ಅಧ್ಯಾಪನ(ಕಲಿಸುವದು) ಮಾಡುವ ಜನರು ಇತರ ಬೇರೆ ಬೇರೆ ಕೆಲಸಗಳನ್ನು ಕೇವಲ ಹೊಟ್ಟೆಯ ಪಾಡಿಗಾಗಿ ಮಾಡದೇ ತಮ್ಮ ಹೊಟ್ಟೆಯ ಮಟ್ಟಿಗೆ ಮುಖ್ಯವಾಗಿ ಅನ್ನ ವಸ್ತ್ರ ಬೇಡುವ ಅಧಿಕಾರ ಇಂಥವರಿಗೆ ಬರುವದು. ಇಂಥ ಮನುಷ್ಯರಿಗೆ ಯಾರು ಅನ್ನ ವಸ್ತ್ರ ಕೊಡುವರೋ ಅಂಥವರಿಗೆ ಧನ್ಯತೆ ಅನಿಸುವದು. ಇದು ಜ್ಞಾನದ ಅಂಗವೆನಿಸುವದು. ೪) ಇನ್ನು ಲೋಕ ಸಂಗ್ರಹಿ ಪುರುಷ ನಿಸ್ವಾರ್ಥಿತನದಿಂದ ತನ್ನ ಎಲ್ಲ ಸರ್ವಸ್ವವನ್ನು ಸಮಾಜ ಕಲ್ಯಾಣಕ್ಕಾಗಿ ಕೊಡುವನು. ೯ಗ ಸಮಾಜವು ಇಂಥ ನಿಃಸ್ವಾರ್ಥಿ ಸಮಾಜ ಹಿತಚಿಂತಕನ ಉದರ ಪೋಷಣಾದಿಗಳ ವ್ಯವಸ್ಥೆ ಮಾಡುವದು, ಉಚಿತವೇ ಇರುವದು. ಪರಂತು ಹೀಗೆ ಮಾಡಿದರೂ ಸಹ ಈ ಮನುಷ್ಯ ಭಿಕ್ಷಾ ಬೇಡುವನು. ಇದರ ಕಾರಣವೇನಂದರೆ ಭಿಕ್ಷೆ ಯಲ್ಲಿ ಸ್ವಾತಂತ್ರ್ಯವಿರುವದು. ಸ್ವಾವಲಂಬನವಿರುವದು. ಶರೀರವು ವ್ಯಾಯಾಮದಿಂದ ಚಟುವಟಿಕೆಯುಳ್ಳದ್ದಾಗುವದು. ಯಾವಾಗಲೆಂದರೆ ಆವಾಗ್ಗೆ ಮತ್ತು ಎಲ್ಲಿಗೆ ಅಂದರೆ ಅಲ್ಲಿಗೆ ಹೋಗಲಿಕ್ಕೆ ಬರುವದು. ಇಷ್ಟೇ ಅಲ್ಲ, ಬಡವರಲ್ಲಿ ಅತಿ ಬಡವರವರೆಗೂ ಅವರಲ್ಲಿ ಕೂಡಿಕೊಂಡು ಸುಖದುಃಖಾದಿಗಳಲ್ಲಿ ಭಾಗವಹಿಸಲಿಕ್ಕೆ ಬರುವದು. ಹೊಸ ಹೊಸ ಸಜ್ಜ ನರನ್ನು ಮತ್ತು ಇತರ ಅನೇಕ ಜನರನ್ನು ಕಾಣಲು ಅವಕಾಶವುಂಟಾಗುವದು. ಹೊಸ ಹೊಸ ಅನುಭವ ಪಡೆಯಲು ಬರುವದು. ಒಟ್ಟಿನಲ್ಲಿ ಮನುಷ್ಯನು ಚತುರನಾಗುವನು. ಅರ್ಥಾತ್ ಕಾಲಮಾನದ ಪ್ರಕಾರ ಭಿಕ್ಷೆಯ ಸ್ವರೂಪ, ಪದ್ಧತಿ ಮತ್ತು ಪ್ರಮಾಣಾದಿಗಳು ಬದಲಾಗುವವು. ಇದು ಅನಿವಾರ್ಯವು.

ದಶಕ ಚತುರ್ದಶ : ಸಮಾಸ ದ್ವಿತೀಯ : ಭಿಕ್ಷಾ ನಿರೂಪಣ

॥ಶ್ರೀರಾಮ॥ ಬ್ರಾಹ್ಮಣಾಚೀ ಮುಖ್ಯ ದೀಕ್ಷಾ । ಮಾಗಿತಲೀ ಪಾಹಿಜೆ ಭಿಕ್ಷಾ ।
ಓಂ ಭವತಿ ಯಾ ಪಕ್ಷಾ । ರಕ್ಷಿಲೇ ಪಾಹಿಜೆ ॥೧॥

ಭಿಕ್ಷಾ ಮಾಗೋನ ಜೋ ಜೇವಿಲಾ । ತೋ ನಿರಾಹಾರಿ ಬೋಲಿಲಾ ।
ಪ್ರತಿಗ್ರಹಾವೇಗಳಾ ಜಾಲಾ । ಭಿಕ್ಷಾ ಮಾಗತಾ ॥೨॥

ಸಂತಾಸಂತ ಜೇ ಜನ । ತೇಥೇ ಕೋರಾನ್ನ ಮಾಗೋನ ಕರೀ ಭೋಜನ ।
ತೇಣೇ ಕೇಲೇ ಅಮೃತಪ್ರಾಶನ । ಪ್ರತಿದಿನೀ ॥೩॥

॥ಶ್ಲೋಕ॥ ಭಿಕ್ಷಾಹಾರೀ ನಿರಾಹಾರೀ ಭಿಕ್ಷಾ ನೈವ ಪ್ರತಿಗ್ರಹಃ ।
ಅಸಂತೋ ವಾಪಿ ಸಂತೋ ವಾ ಸೋಮಪಾನಂ ದಿನೇ ದಿನೇ॥

ಐಸಾ ಭಿಕ್ಷೇಚಾ ಮಹಿಮಾ । ಭಿಕ್ಷಾ ಮಾನೇ ಸರ್ವೋತ್ತಮಾ ।
ಈಶ್ವರಾಚಾ ಅಗಾಧ ಮಹಿಮಾ। ತೋ ಹಿ ಭಿಕ್ಷಾ ಮಾಗೇ ॥೪॥

ದತ್ತ ಗೋರಕ್ಷ ಆದಿಕರೂನೀ । ಸಿದ್ಧ ಭಿಕ್ಷಾ ಮಾಗತೀ ಜನೀ ।
ನಿಸ್ಪೃಹತಾ ಭಿಕ್ಷೇಪಾಸುನೀ । ಪ್ರಗಟ ಹೋಯೆ ॥೫॥

ವಾರ ಲಾವೂನ ಬೈಸಲಾ । ತರೀ ತೋ ಪರಾಧೀನ ಜಾಲಾ ।
ತೈಸೀ ಚ ನಿತ್ಯಾವಳೀಲಾ । ಸ್ವತಂತ್ರತಾ ಕೈಚೀ ॥೬॥

ಆತಾ ದಿವಸಾ ಧಾನ್ಯ ಮೆಳವಿಲೇ । ತರೀ ತೇ ಕಂಟಾಳವಾಣೇ ಜಾಲೇ ।
ಪ್ರಾಣೀ ಯೇಕಾಯೇಕೀ ಚೇವಲೇ । ನಿತ್ಯನೂತನತೇಪಾಸುನೀ ॥೭॥

ನಿತ್ಯ ನೂತನ ಹಿಂಡಾವೇ । ಉದಂಡ ದೇಶಾಟಣ ಕರಾವೇ ।
ತರೀ ಚ ಭಿಕ್ಷಾ ಮಾಗತಾ ಭರವೇ । ಶ್ಲಾಘ್ಯವಾಣೇ ॥೮॥

ಅಖಂಡ ಭಿಕ್ಷೇಚಾ ಅಭ್ಯಾಸ । ತಯಾಸ ವಾಟೇನಾ ಪರದೇಶ ।
ಜಿಕಡೆ ತಿಕಡೆ ಸ್ವದೇಶ । ಭುವನತ್ರ್ಯ ॥೯॥

## ದಶಕ ೧೪. ಸಮಾಸ ೨. ಭಿಕ್ಷಾ ನಿರೂಪಣ (ನುಡಿ ೨೨)

ಎಲ್ಲಕ್ಕೂ ಮೊದಲು ಭಿಕ್ಷೆಯ ಮಹಿಮೆಯನ್ನು ಹೇಳುತ್ತಾರೆ. ದೊಡ್ಡ ದೊಡ್ಡ ಜ್ಞಾನಿ ಪುರುಷರು ಭಿಕ್ಷಾ ಬೇಡುವರು. ಇದು ನಮಗೆ ಪ್ರತ್ಯಕ್ಷ ಕಂಡು ಬರುವದೇ ಆಗಿದೆ. ಬ್ರಾಹ್ಮಣನ ಜೀವನ ಪದ್ಧತಿಯ ಪ್ರಧಾನ ಲಕ್ಷಣ ಯಾವದೆಂದರೆ ಇವನು ಭಿಕ್ಷೆ ಬೇಡಲಿಕ್ಕೇಬೇಕು. "ಓಂ ಭವತಿ ಭಿಕ್ಷಾಂದೇಹಿ" ಅನ್ನುವ ಮುಖ್ಯ ಬಿರುದನ್ನು ರಕ್ಷಿಸಲೇಬೇಕು. ಈ ಆಚಾರವು ಅತಿ ಅವಶ್ಯವು. (೧) ಯಾವ ಮನುಷ್ಯನು ಅದರಲ್ಲಿಯೂ ವಿಶೇಷವಾಗಿ ಸಾಧಕನು ಭಿಕ್ಷೆ ಬೇಡಿ ಉಣ್ಣುವನೋ ಅಂಥವನು ನಿರಾಹಾರಿಯೆಂದೇ ತಿಳಿಯಲಾಗುವದು. ಇವನು ಭಿಕ್ಷೆ ಬೇಡಿಯೇ ಹೊಟ್ಟೆ ತುಂಬಿಕೊಳ್ಳುವದರಿಂದ ಇವನಿಗೆ ಜನರಿಂದ ಪ್ರತ್ಯಕ್ಷ ದಾನ ತೆಗೆದುಕೊಂಡ ದೋಷ ಹತ್ತುವದಿಲ್ಲ. (೨) ಸಜ್ಜನರು ಮತ್ತು ದುರ್ಜನರು ಇವರಿಬ್ಬರೂ ಇದ್ದ ಕಡೆಯಲ್ಲಿ ಇವನು ಕೋರಾನ್ನ (ಒಣಧಾನ್ಯ, ಕಾಳುಕಡಿ, ಹಿಟ್ಟು, ನುಚ್ಚು) ಬೇಡಿ ಹೊಟ್ಟೆ ತುಂಬಿಕೊಳ್ಳುವನು. ಇಂಥವನು ದಿನನಿತ್ಯವೂ ಅಮೃತಾನ್ನ ಸೇವಿಸಿದಂತೆ ಆಗುವದು. (೩)

**ಶ್ಲೋಕ:—** ಭಿಕ್ಷಾಹಾರೀ ನಿರಾಹಾರೀ ಭಿಕ್ಷಾನ್ನೈವ ಪ್ರತಿಗ್ರಹಃ ।
ಅಸಂತೋ ವಾಪಿ ಸಂತೋ ವಾ । ಸೋಮ ಪಾನಂ ದಿನೇ ದಿನೇ ॥೧॥

**ಶ್ಲೋಕದ ಅರ್ಥ:—** ಭಿಕ್ಷೆ ಬೇಡಿ ಹೊಟ್ಟೆ ತುಂಬಿಕೊಳ್ಳುವ ಮನುಷ್ಯ ಮಿತಾಹಾರಿ ಇರುವನು. ಭಿಕ್ಷಾ ತೆಗೆದುಕೊಳ್ಳುವದು ಅಂದರೆ ದಾನ ಸ್ವೀಕಾರ ಮಾಡಿದಂತೆ ಆಗುವದಿಲ್ಲ. ಭಿಕ್ಷೆ ಹಾಕುವ ಜನರು ಸಜ್ಜನರಿರಲಿ ಅಥವಾ ದುರ್ಜನರಿರಲಿ ಇವರು ಹಾಕಿದ ಭಿಕ್ಷೆಯಿಂದ ಹೊಟ್ಟೆ ತುಂಬಿಕೊಳ್ಳುವದೆಂದರೆ ದಿನವೂ ಸೋಮ(ಅಮೃತ) ಪಾನ ಮಾಡಿದ ಪುಣ್ಯ ಬರುವದು. ಭಿಕ್ಷೆ ಬೇಡುವದರ ಮಹತ್ವ(ಮಹಿಮೆ) ಹೀಗಿರುವದು:-ಭಗವಂತನಿಗೆ ಭಿಕ್ಷೆಯು ಬಹು ಪ್ರಿಯವಾದದ್ದಿರುವದು. ಅಪಾರ ಮಹಿಮನಾದ ಶ್ರೀ ಶಂಕರನು ಸಹ ಭಿಕ್ಷೆ ಬೇಡುವನು. ಇವನ ದೊಡ್ಡಸ್ತನವು ಹಿರಿದಾದದ್ದು. (೪) ಶ್ರೀದತ್ತ, ಗೋರಖನಾಥ ಇತ್ಯಾದಿ ಸಿದ್ಧ ಪುರುಷರೂ ಸಹ ಜನತೆಯಲ್ಲಿ ಹೋಗಿ ಭಿಕ್ಷೆ ಬೇಡುವರು. ಇದರಿಂದ ಭಿಕ್ಷೆ ಬೇಡುವದರಲ್ಲಿ ಸಹ ನಿಸ್ಪೃಹತೆ ಪ್ರಕಟವಾಗುವದು. (೫) ಇನ್ನು ಮೇಲೆ ಭಿಕ್ಷೆಯ ಲಾಭ, ಭಿಕ್ಷೆಯ ಪರಿಣಾಮ ಮತ್ತು ಭಿಕ್ಷೆಯ ಪದ್ಧತಿ ಇವನ್ನು ಹೇಳುವರು:- ಯಾವ ಮನುಷ್ಯನು ವಾರ ಹಚ್ಚಿಕೊಂಡು ಊಟ ಮಾಡುವದು ಅಥವಾ ಹೊಟ್ಟೆ ತುಂಬಿಕೊಳ್ಳುವದು ಮಾಡುವನೋ ಅವನು ಪರಾಧೀನನಾಗುವನು. ಇದರಂತೆ ಯಾವನೊಬ್ಬನ ಮನೆಯಲ್ಲಿಯೇ ಕಾಯಂ ಆಗಿ ಊಟ [ಇದಕ್ಕೆ ನಿತ್ಯಾವಳಿಯ ಊಟ, ದೇವರ ಪೂಜೆ ಮಾಡಿ ಊಟ ಮಾಡುವದು] ಮಾಡುವದರಿಂದ ಇವನ ಸ್ವಾತಂತ್ರ್ಯ ನಷ್ಟವಾಗುವದು. [೬] ದಿನಾಲೂ ಭಿಕ್ಷೆಗೆ ಹೋಗದೇ ಎಂಟು ದಿವಸಕ್ಕೊಮ್ಮೆ ಭಿಕ್ಷೆಗೆ ಹೋಗುವ ಪದ್ಧತಿಯೂ ಒಳ್ಳೆಯದಲ್ಲ. ಇದು ಸಂಗ್ರಹ ಮಾಡುವ ಅಭಿಲಾಷೆ ಉಂಟಾಗಿ ಬೇಸರ ತರಿಸುವದೇ ಆಗುವದು. ದಿನಾಲೂ ಭಿಕ್ಷೆ ಬೇಡಿದರೆ ನಿತ್ಯ ನೂತನತನದ ಹೊಸ ಹೊಸ ಅನುಭವಗಳು ಬರುವವು. ಇಲ್ಲದಿದ್ದರೆ ಇವೆಲ್ಲವೂ ಇಲ್ಲದಾಗುವವು. (ಸಂಗ್ರಹ ವೃತ್ತಿ, ಆಶೆ, ಆಲಸ್ಯಗಳನ್ನು ತರಿಸುವದು), [೭] ದಿನಾಲೂ ಭಿಕ್ಷೆಗೆ ಒಂದೇ ಕಡೆಗೆ ಹೋಗಬಾರದು. ಹೊಸ ಹೊಸ ಸ್ಥಳಗಳ ಕಡೆಗೆ ಹೋಗಬೇಕು. ಹೀಗೆ ಮಾಡುತ್ತ ಬಹಳ ಕಡೆಗೆ [ಪ್ರವಾಸ-ಪರ್ಯಟನ] ಹೋಗಬೇಕು. ಹೀಗೆ ಮಾಡಿದರೇ ಭಿಕ್ಷಾ ಬೇಡುವದರಲ್ಲಿ ಖರೇ ಕೌತುಕವಿರುವದು. [೮] ಯಾವನಿಗೆ ಯಾವಾಗಲೂ ಭಿಕ್ಷಾ ಬೇಡಿಯೇ ಹೊಟ್ಟೆ ತುಂಬಿಕೊಳ್ಳುವ ಸವಯು (ರೂಢಿ) ಇರುವವೋ ಅಂಥವನಿಗೆ ಯಾವ [ಶಹರ, ಹಳ್ಳಿ]ಕಡೆಗೆ ಹೋದರೂ ಪರದೇಶವೆಂದು ಅನಿಸುವದಿಲ್ಲ. ಎತ್ತ ಕಡೆಗೇ ಹೋಗಲಿ ಎಲ್ಲ ಕಡೆಗೂ [ಭುವನ ತ್ರಯದಲ್ಲಿ] ಸ್ವದೇಶವೆಂದೇ ಅನಿಸುವದು. [೯]

ಭಿಕ್ಷಾ ಮಾಗತಾ ಕಿರಕೋ ನಯೇ । ಭಿಕ್ಷಾ ಮಾಗತಾ ಲಾಜೋ ನಯೇ ।
ಭಿಕ್ಷಾ ಮಾಗತಾ ಭಾಗೋ ನಯೇ । ಪರಿಭ್ರಮಣ ಕರಾವೇ ॥೧೦॥
ಭಿಕ್ಷಾ ಆಣಿ ಚಮತ್ಕಾರ । ಚಾಕಾಟಿತೀ ಲಹಾನ ಥೋರ ।
ಕೀರ್ತಿ ವರ್ಣೀ ನಿರಂತರ । ಭಗವಂತಾಚೀ ॥೧೧॥
ಭಿಕ್ಷಾ ಮ್ಹಣಜೆ ಕಾಮಧೇನು । ಸದಾ ಫಳ ನವ್ಹೆ ಸಾಮಾನ್ಯ ।
ಭಿಕ್ಷೇಸ ಕರೀ ಜೋ ಅಮಾನ್ಯ । ತೋ ಕರಂಟಾ ಜೋಗೀ ॥೧೨॥
ಭಿಕ್ಷೇನೇ ವೊಳಖೀ ಹೋತೀ। ಭಿಕ್ಷೇನೇ ಭರಮ ಚುಕತೀ ।
ಸಾಮಾನ್ಯ ಭಿಕ್ಷಾ ಮಾನ್ಯ ಕರಿತೀ । ಸಕಳ ಪ್ರಾಣೀ ॥೧೩॥
ಭಿಕ್ಷಾ ಮ್ಹಣಿಜೆ ನಿರ್ಭಯ ಸ್ಥಿತೀ । ಭಿಕ್ಷೇನೇ ಪ್ರಗಟೆ ಮಹಂತೀ ।
ಸ್ವತಂತ್ರತಾ ಈಶ್ವರಪ್ರಾಪ್ತೀ । ಭಿಕ್ಷಾಗುಣೇ ॥೧೪॥
ಭಿಕ್ಷೇಸ ನಾಹೀ ಆಡಥಾಳಾ । ಭಿಕ್ಷಾಹಾರೀ ತೋ ನೋಕಳಾ ।
ಭಿಕ್ಷೇಕರಿತಾ ಸಾರ್ಥಕ ವೇಳಾ । ಕಾಳ ಜಾತೋ ॥೧೫॥
ಭಿಕ್ಷಾ ಮ್ಹಣಿಜೆ ಅಮರವಲ್ಲೀ । ಜಿಕಡೆ ತಿಕಡೆ ಲಗಡಲೀ ।
ಅವಕಾಳೀ ಫಳದಾಯೆನೀ ಜಾಲೀ । ನಿರ್ಲಜಾಸೀ ॥೧೬॥
ಪೃಥ್ವೀಮಧೇ ದೇಶ ನಾನಾ । ಫಿರತಾ ಉಪವಾಸೀ ಮರೇನಾ ।
ಕೋಣೇ ಯೇಕೇ ಠಾಈ ಜನಾ । ಜಡ ನವ್ಹೇ ॥೧೭॥
ಗೋರಜ್ಯ ವಾಣಿಜ್ಯ ಕೃಷೀ । ತ್ಯಾಹೂನ ಪ್ರತಿಷ್ಠಾ ಭಿಕ್ಷೇಸೀ ।
ವಿಸಂಭೋ ನಯೇ ಝೋಳೀಸೀ । ಕದಾಕಾಳೀ ॥೧೮॥
ಭಿಕ್ಷೇ ಐಸೇ ನಾಹೀ ವೈರಾಗ್ಯ । ವೈರಾಗ್ಯಾಪರತೇ ನಾಹೀ ಭಾಗ್ಯ ।
ವೈರಾಗ್ಯ ನಸ್ತಾ ಅಭಾಗ್ಯ । ಯೇಕದೇಸೀ ॥೧೯॥
ಕಾಹೀ ಭಿಕ್ಷಾ ಆಹೆ ಮ್ಹಣಾವೇ । ಅಲ್ಪ ಸಂತೋಷೀ ಅಸಾವೇ ।
ಬಹುತ ಆಣಿತಾ ಘ್ಯಾವೇ । ಮುಷ್ಟೀ ಯೇಕ ॥೨೦॥
ಸುಖರೂಪ ಭಿಕ್ಷಾ ಮಾಗಣೇ । ಐಸೀ ನಿಸ್ಪೃಹತೇಚೀ ಲಕ್ಷಣೇ ।
ಮೃದ ವಾಗವಿಳಾಸ ಕರಣೇ । ಪರಮ ಸೌಖ್ಯಕಾರೀ ॥೨೧॥
ಐಸೀ ಭಿಕ್ಷೇಚೀ ಸ್ಥಿತೀ । ಅಲ್ಪ ಬೋಲಿಲೇ ಯೆಥಾಮತೀ ।
ಭಿಕ್ಷಾ ವಾಂಚವೀ ವಿಪತ್ತೀ । ಹೋಣಾರ ಕಾಳೀ ॥೨೨॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಭಿಕ್ಷಾ ನಿರೂಪಣ' ನಾಮ ಸಮಾಸ ದ್ವಿತೀಯ ॥

ಭಿಕ್ಷೆ ಬೇಡಲು ಮಿಜಿ ಮಿಜಿ ಮಾಡಬೇಡ. ಕಷ್ಟ ಮಾಡಿಕೊಳ್ಳಬೇಡ, ಭಿಕ್ಷೆ ಬೇಡಲು ನಾಚಬೇಡ, ಭಿಕ್ಷೆ ಬೇಡುವಾಗ ಸೋತು ಹೋಗಬೇಡ [ದಣಿದು ಹೋಗಬೇಡ]; ಬೇಡುವಾಗ ಕಿರಿಕಿರಿ ತ್ರಾಸ ಮಾಡಬೇಡ. ಭಿಕ್ಷೆಯ ನಿಮಿತ್ತದಿಂದ ನಿರಾಯಾಸವಾಗಿ ನಿರಂತರ ಪ್ರವಾಸ ಮಾಡಬೇಕು. [೧೦] ಭಿಕ್ಷೆ ಬೇಡುವದರ ಜೊತೆಗೆ ನೀತಿ, ನ್ಯಾಯ, ಪಾಪ, ಪುಣ್ಯ ಇತ್ಯಾದಿಗಳ ಬಗ್ಗೆ ಇವನು ಅನ್ನುವ ಶ್ಲೋಕಗಳು ಜನರಲ್ಲಿ ಆಶ್ಚರ್ಯ ಹುಟ್ಟಿಸುವವು, ಇವನಲ್ಲಿ ಏನೋ ಚಮತ್ಕಾರವಿರುವದೆಂದು ಜನರು ಚಕಿತರಾಗುವರು· ಕೌತುಕ ಪಡುವರು. ಭಗವಂತನ ನಾಮ ಘೋಷದ ಅರಿವಾಗುವದು, [೧೧] ಭಿಕ್ಷೆಯ ಮಹತ್ವವನ್ನು ಅನೇಕ ಪ್ರಕಾರದಿಂದ ವರ್ಣಿಸಿ ಹೇಳುವರು. ಭಿಕ್ಷೆಯೆಂದರೆ ಕಾಮಧೇನು ಇದ್ದಂತೆ. ಇದು ಯಾವಾಗಲೂ ಫಲಕೊಡುವಂತಹದು ಇರುವದರಿಂದ ಇದೇನೂ ಸಾಮಾನ್ಯವಲ್ಲ. ಭಿಕ್ಷೆಯು ಯಾರಿಗೆ ಮಾನ್ಯವಿಲ್ಲವೋ ಅಂಥ ಯತಿ ಅಥವಾ ಬೈರಾಗಿ ಇತ್ಯಾದಿ ಜನರು ಭಾಗ್ಯಹೀನರೆಂದು ತಿಳಿಯಬೇಕು. [೧೨] ಭಿಕ್ಷೆಯಿಂದ ಹೊಸ ಹೊಸ ಜನರ ಪರಿಚಯವಾಗುವದು. ಭಿಕ್ಷೆಯಿಂದ ತಪ್ಪು ಕಲ್ಪನೆಯ ಭ್ರಮೆ ಬಯಲಾಗಿ ತಪ್ಪಿನ ಅರಿವುಂಟಾಗುವದು. ಭಿಕ್ಷೆಯು ನೋಡಲಿಕ್ಕೆ ಅಗದೀ ಸಾದಾ ಕಾಣುವದು. ಆದರೆ ಇದು ಎಲ್ಲರಿಗೂ ಮಾನ್ಯವಿರುವದರಲ್ಲಿ ಸಂಶಯವಿಲ್ಲ. [೧೩] ಭಿಕ್ಷೆ ಬೇಡುವ ಮನುಷ್ಯನು ಯಾವಾಗಲೂ ನಿರ್ಭಯನಾಗಿರುವನು. ಭಿಕ್ಷೆ ಬೇಡುವದರಿಂದಾಗಿ ಮಹಂತತನ [ಅಧ್ಯಾತ್ಮಿಕ ಪ್ರಧಾರಿತನ]ವು ಎಲ್ಲ ಕಡೆಗೂ ಪ್ರಕಟವಾಗುವದು. ಸ್ವಾತಂತ್ರ್ಯ ಮತ್ತು ಭಗವಂತನ ಪ್ರಾಪ್ತಿ ಈ ಎರಡೂ ಗುಣಗಳು ಭಿಕ್ಷೆ ಬೇಡುವವನಿಗೆ ಪ್ರಾಪ್ತವಾಗುವವು. [೧೪] ಭಿಕ್ಷೆಗೆ ಎಂದೂ ಯಾವ ಅಡೆತಡೆಗಳೂ ಬರುವದಿಲ್ಲ, ಭಿಕ್ಷೆಯಿಂದ ನಿರ್ವಾಹ [ಉಪಜೀವನ] ಸಾಗಿಸುವವನು, ಸದಾ ಸ್ವತಂತ್ರನಿರುವನು. ಭಿಕ್ಷೆಯ ಯೋಗದಿಂದ ಎಲ್ಲ ವೇಳೆಯನ್ನು ಸಾರ್ಥಕ ಕೆಲಸದಲ್ಲಿ ತೊಡಗಿಸಲು ಬರುವದು·[೧೫] ಭಿಕ್ಷೆಯೆಂದರೆ ಅಮೃತದ ವಿಶಾಲ ಬಳ್ಳಿಯು. ಇದು ಎಲ್ಲ ಕಡೆಗೂ ಹೂವು, ಹಣ್ಣುಗಳಿಂದ ತುಂಬಿರುವದು. ಯಾರಿಗಾದರೂ ಆಕಸ್ಮಾತ್ ಇಳಿಕೆಯ [ದುರ್ದೆಶೆಯ] ಕಾಲ ಬರುವದು. ಆಗ ಲಜ್ಜೆಯನ್ನು ಬಿಟ್ಟು ಭಿಕ್ಷೆಯನ್ನು ಬೇಡಹತ್ತಿದರೆ ಇದು ಬಹಳ ಫಲದಾಯಕವಾಗುವದು. ಕಠಿಣ ಪ್ರಸಂಗದಲ್ಲಿ ಉಪಕಾರಕವಿರುವದು. [೧೬] ಭೂಮಿಯ ಮೇಲೆ ಅನೇಕ ದೇಶಗಳಿರುವವು, ಆ ದೇಶಗಳಲ್ಲಿಂದ ಪರ್ಯಟನ ಮಾಡುವಾಗ ಉಪವಾಸದಿಂದ ಸಾಯುವ ಪ್ರಸಂಗ ಬರುವದಿಲ್ಲ ಭಿಕ್ಷೆ ಬೇಡುವವನು ಯಾವ ಸ್ಥಳಕ್ಕೇ ಹೋಗಲಿ ಜನರಿಗೆ ಭಾರವಾಗುವದಿಲ್ಲ.[೧೭] ಆಕಳನ್ನು ಸಾಕುವದು, ವ್ಯಾಪಾರ ಮಾಡುವದು, ಮತ್ತು ಒಕ್ಕಲುತನದ ವ್ಯವಸಾಯಕ್ಕಿಂತ ಭಿಕ್ಷೆಯು ಪ್ರತಿಷ್ಠೆ. ಸಾಮಾಜಿಕ ಸ್ಥಾನ ಹೆಚ್ಚಿನದಿರುವದು. ಆದ್ದರಿಂದ ಮಹಂತನು ತನ್ನ ಭಿಕ್ಷೆಯ ಜೋಳಿಗೆಯನ್ನು ಅಲಕ್ಷಿಸಬಾರದು, ಬಿಡಬಾರದು. [೧೮] ಭಿಕ್ಷೆಯು ವೈರಾಗ್ಯದ ಖಣಿಯು. ವೈರಾಗ್ಯವುಭಾಗ್ಯದಖಣಿಯು, ಯಾವನಲ್ಲಿ ವೈರಾಗ್ಯ ಭಾಗ್ಯವಿಲ್ಲವೋ ಆ ಮನುಷ್ಯನು ಆಕುಂಚಿತ [ಸಂಕೋಚ ಉಳ್ಳವ] ಮತ್ತು ಭಾಗ್ಯಹೀನನೆಂದು ತಿಳಿಯಬೇಕು.[೧೯] ಕೊನೆಯಲ್ಲಿ ಭಿಕ್ಷೆ ಹೇಗೆ ಬೇಡಬೇಕು, ಇದರ ಬಗ್ಗೆ ಹೇಳುವರು:– ಭಿಕ್ಷೆಗಾಗಿ ಯಾರೊಬ್ಬರ ಬಾಗಿಲ ಮುಂದೆ ಹೋಗಿ ನಿಂತು "ನಿಮ್ಮಲ್ಲಿ ಏನಾದರೂ ಭಿಕ್ಷೆ ಸಿಗುವದೇ?" ಎಂದು ದೊಡ್ಡ ಧ್ವನಿಯಿಂದ ಅನ್ನಬೇಕು. ಬಹಳಷ್ಟು ಭಿಕ್ಷೆ ತಂದರೆ ಅದರೊಳಗಿಂದ ಒಂದು ಮುಷ್ಟಿ ಮಾತ್ರ ಪಡೆಯಬೇಕು. ಭಿಕ್ಷೆ ಬೇಡುವವನು ಅಲ್ಪ ಸಂತೋಷಿಯಾಗಿರಬೇಕು. (೨೦) ಬಹಳ ಪ್ರಸನ್ನತೆಯಿಂದ ಭಿಕ್ಷೆ ಬೇಡಬೇಕು. ನಿಸ್ಪೃಹತೆಯ ಲಕ್ಷಣವೆಂದರೆ ಹೀಗಿರುವದು ಜನತೆಯ ಕೂಡ ಮಾತನಾಡುವಾಗ ಅಥವಾ ಸಂಭಾಷಣ ಮಾಡುವಾಗ ಅಗದೀ ಮೃದು ಮತ್ತು ಮಧುರ ಶಬ್ದಗಳನ್ನು ಉಪಯೋಗಿಸಬೇಕು. ಕೇಳುವವರಿಗೆ ಆನಂದವಾಗುವಂತೆ ನಿಮ್ಮ ನಡೆ ನುಡಿ ಇರಬೇಕು. [೨೧] ನಿಜವಾದ ಭಿಕ್ಷೆಯ ಸ್ಥಿತಿಯು ಹೀಗಿರುವದು. ಇದನ್ನು ನಿಮಗೆ ನಾನು ತಿಳಿದಷ್ಟು ಸ್ವಲ್ಪದರಲ್ಲಿ ಹೇಳಿರುವೆನು. ಮುಂದೆ ಬರುವಂಥ ಆಪತ್ಕಾಲದಿಂದ ಭಿಕ್ಷೆಯು ಮನುಷ್ಯನನ್ನು ರಕ್ಷಿಸುವದು [ಉಳಿಸುವದು]. [೨೨]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹದಿನಾಲ್ಕನೆಯ ದಶಕದೊಳಗಿನ "ಭಿಕ್ಷಾ ನಿರೂಪಣ" ಎಂಬ ಹೆಸರಿನ ಎರಡನೆಯ ಸಮಾಸವು ಮುಗಿದುದು.

● ●

## ದಶಕ ೧೪. ಸಮಾಸ ೩. ಕವಿತ್ವ ಕಲಾ ನಿರೂಪಣ (ನುಡಿ ೫೪)

ಮಧ್ಯಯುಗದಲ್ಲಿ ಮತ್ತು ಶ್ರೀ ಸಮರ್ಥರ ಕಾಲದಲ್ಲಿ ಕಲಾ, ನೀತಿ ತತ್ವಜ್ಞಾನ ಮತ್ತು ಪರಮಾರ್ಥ ಇವುಗಳಲ್ಲಿ ಬಹಳ ನಿಕಟ ಸಂಬಂಧವಿತ್ತು. ಕಾವ್ಯ, ಕಲಾ, ಶಾಸ್ತ್ರ. ಮತ್ತು ತತ್ವಜ್ಞಾನ ಹಾಗೂ ಪರಮಾರ್ಥ ಇವುಗಳಲ್ಲಿ ಪಾರಂಗತ ಇರುವಂಥ ಜನರು ನಿಃಸ್ವಾರ್ಥತನದಿಂದ ಸಮಾಜಕ್ಕೆ ಮಾರ್ಗದರ್ಶನ ಮಾಡುತ್ತಿದ್ದರು. ರಾಜ ಮಹಾರಾಜರೂ ಸಹ ಇವರಿಗೆ ಮಾನ ಮರ್ಯಾದೆ ಕೊಡುತ್ತಿದ್ದರು. ಪರಮಾರ್ಥದ ಕ್ಷೇತ್ರದಲ್ಲಿ ಕವಿಗೆ ಬಹಳ ಉಚ್ಚ ಸ್ಥಾನವಿತ್ತು. ಸಾಧಕನು ತನ್ನ ಸಾಧನದಲ್ಲಿ ಪ್ರಗತಿ ಹೊಂದ ಹತ್ತಿದನೆಂದರೆ ಅವನ ಅಂತಃಕರಣ ಬಹಳ ಮೃದುವಾಗುವದು, ಭಾರರಹಿತವಾಗುವದು, ಸೂಕ್ಷ್ಮವಾಗುವದು. ಇಂಥ ಸೂಕ್ಷ್ಮ ಅಂತಃಕರಣದಿಂದ ವಿಶ್ವಾಂತರ್ಗತ ಅಸೀಮ (ಎಣೆಇಲ್ಲದ) ಸೌಂದರ್ಯದ ಅನುಭವ [ಪ್ರಚೀತಿ] ಬರುವದು. ಇದರ ಪರಿಣಾಮದಿಂದಾಗಿ ಸಾಧಕನು ಸುಂದರ ಸುರಮ್ಯ ಭಾವಗೀತೆಗಳನ್ನು ಕವಿತೆಗಳನ್ನು ರಚಿಸಹತ್ತುವನು. ಅಂತೆಯೇ ನೂರರಲ್ಲಿ ತೊಂಭತ್ತೊಂಭತ್ತು ಸಂತರು ಕವಿಗಳೇ ಇರುವರು. ಕವಿಗಳ ಮಹತ್ವವನ್ನು ಇನ್ನೂ ಒಂದು ದೃಷ್ಟಿಯಿಂದ ಹೇಳಬಹುದು. ಮನುಷ್ಯನು

ರಸಲೋಲುಪ ಪ್ರಾಣಿ ಇರುವನು. ರಸ ಸೇವನ ಮಾಡುವ ಇವನ ಲಾಲಸೆಯನ್ನು ಕವಿಯು ತೃಪ್ತಿಪಡಿಸುವನು. ಪ್ರತಿಭೆಯ ವರದಾನ ಲಭಿಸಿದ ಕವಿಯು ಜೀವನದ ಉಚ್ಚಮಟ್ಟದಲ್ಲಿರುವನು. ಅಥವಾ ಉಚ್ಚಮಟ್ಟವನ್ನು ಏರುವನು. ಆಗ ಅಲ್ಲಿ ಅವನಿಗೆ ಸಮಗ್ರ ಜೀವನವನ್ನು ತಿಳಿದುಕೊಳ್ಳುವ ಶಕ್ತಿ ಬರುವದು. ಅವನಿಗೆ ಆಕಲನವಾದ[ತಿಳಿದ-ಗ್ರಹಿಸಿದ] ಜೀವನದ ಅರ್ಥವನ್ನು ವ್ಯಕ್ತಪಡಿಸುವಂಥ ಅನೇಕಾನೇಕ ಮಾರ್ಗಗಳು ಪ್ರತಿಭೆಯ ಮೂಲಕ ಅವನಿಗೆ ಕವಿಗೆ] ಕಾಣುವವು. ಇದರೊಳಗಿಂದ ಹೊಸ ಹೊಸ ಕಾವ್ಯ ರಚನೆಗಳು ತಯಾರ ಆಗುವವು. ಪ್ರತಿಭೆಯ ಕೃಪಾ ಇರುವಂಥ ಕವಿಯು ಕಾವ್ಯದಲ್ಲಿ ಓಜ [ಶಕ್ತಿ], ತೇಜ ಮತ್ತು ಪ್ರಸಾದ ಈ ಗುಣಗಳು ಭರಪೂರ ಇರುವವು. ಇಂಥ ಪ್ರತಿಭೆಯ ಕೃಪೆ ಇರುವ ಕವಿಯು ಕಾವ್ಯದಲ್ಲಿ ಓಜ, ತೇಜ, ಮತ್ತು ಪ್ರಸಾದ ಈ ಗುಣಗಳು ಇರುವವು. ಇಂಥ ಕಾವ್ಯದಲ್ಲಿ ಬಹಳ ದೊಡ್ಡ ವಿಷಯವನ್ನು ಸ್ವಲ್ಪದರಲ್ಲಿ ಹೇಳಲು ಸಾಧ್ಯವಾಗುವದು. ಮಾನವ ಜೀವನದಲ್ಲಿಯ ಅಪೂರ್ಣತೆ, ಅಸಹಾಯತೆ, ಚಮತ್ಕೃತಿಯ ಗೂಢತ್ವ, ಸೂಕ್ಷ್ಮ ಸಂಘರ್ಷ (ಸ್ಪರ್ಧೆ, ಘರ್ಷಣೆ, ಕಲಹ,) ಮತ್ತು ಮಾಸನಾದ ಗುದ್ದಾಟ, ಚೆಲ್ಲಾಟ ಇವೆಲ್ಲವನ್ನು ಕವಿಯು ತನ್ನ ದಿವ್ಯ ದೃಷ್ಟಿಯಿಂದ ನೋಡುವನು. ಮತ್ತು ಅನುಭವಿಸುವನು. ಆಮೇಲೆ ಇವನು ಬಹಳ ಮಾರ್ಮಿಕವಾಗಿ ಯುಕ್ತಿಯುಕ್ತ ವಿಶಿಷ್ಟ ಗುಣಗಳಿಂದ ಪರಿಣಾಮಕಾರಕವಾಗಿ ಮತ್ತು ನಾದ ಮಧುರ ಭಾಷೆಯಿಂದ ವ್ಯಕ್ತ ಮಾಡುವನು. ಇಂಥ ಕಾವ್ಯದ ಶ್ರವಣ ಮಾಡುವದರಿಂದ ದುಃಖ, ಕಷ್ಟದ ಈ ಸಂಸಾರದಿಂದ ತ್ರಸ್ತನಾದ ಸಾಮಾನ್ಯ ಮನುಷ್ಯನು ತನ್ನ ಪರಿಸ್ಥಿಯ ಮತ್ತು ದೇಹದ ಕೆಲವೊಂದು ವೇಳೆಯನ್ನು ಮರೆಯುವನು. ಅದರಲ್ಲಿಯೂ ಯಾರಿಗೆ ಭಕ್ತಿಯ ವರದಾನವಿರುವದೋ ಅಂಥ ಕವಿಯು ತನ್ನ ಕಾವ್ಯದಿಂದ ಸಾಮಾನ್ಯ ಜನರಲ್ಲಿಯೂ ಸಹ ಭಗವಂತನ ವಿಷಯದಲ್ಲಿ ಆಸಕ್ತಿ, ಪ್ರೇಮ, ಭಕ್ತಿಯ ಮರ್ಮವನ್ನು ನಿರ್ಮಾಣ ಮಾಡುವನು. ಭಕ್ತಿ ಮಾರ್ಗವು ಮೂಲತಃ ನಾದ ಬ್ರಹ್ಮನ ಉಪಾಸನಾ ಇದ್ದುದರಿಂದ ಭಕ್ತಿಯ ಮಾರ್ಗದಲ್ಲಿಯ ಕವಿಯ ಮೇಲೆ ಶಾರದೆಯು ಬಹುಬೇಗ ಕೃಪೆ ಮಾಡುವಳು. ಇದರಿಂದ ಇವನ ಪ್ರತಿಭಾ ಜಾಗ್ರತವಾಗಿ ಇವನ ಅಗದೀ ಒಳಗಿನಿಂದ ಶಬ್ದಗಳು ಸ್ಫುರಿಸುವವು. ಇವನ ಮುಖದಿಂದ ಪ್ರಾಸಾದಿಕ ವಾಣಿಯು ಹೊರಬೀಳುವದು. ಇಂಥ ಪುರುಷನಿಂದ ಸಾಧನ ಕಾಲದಲ್ಲಿ ಅನುತಾಪ (ಕನಿಕರ, ಪಶ್ಚಾತ್ತಾಪ) ಯುಕ್ತ ಮತ್ತು ಪ್ರಾರ್ಥನಾ ಪ್ರಧಾನ ಕಾವ್ಯವು ಹೊರಡುವದು. ಅವೇ ಸಿದ್ಧತನದ ಅವಸ್ಥೆಯಲ್ಲಿ ಸ್ವರೂಪಾನುಭೂತಿಯ(ಬ್ರಹ್ಮಾನುಭವ, ಆತ್ಮಾನುಭವ) ರಮ್ಯ ವರ್ಣನೆಯ ಕಾವ್ಯವು ಹೊರಡುವದು. ಅಥವಾ ಉಚ್ಚಮಟ್ಟದ ಉಪದೇಶ ಪರವಾದ ವಚನಗಳು ಹೊರಡುವವು. ಇಂಥ ಕವಿತೆಗಳು ಸ್ವಾಭಾವಿಕವಾಗಿ ಸ್ಥಳ ಕಾಲಗಳ ಬಂಧನದ ಆಚೆಗೆ ಇರುವವು. ಇಂಥ ಕಾವ್ಯದಲ್ಲಿಯ ಪ್ರಾಣ ಅಥವಾ ಜೀವಂತತನವು ಅಂದರೆ ಕವಿಯ ಆತ್ಮ ಸಾಕ್ಷಾತ್ಕಾರವೇ ಇರುವದು. ಇದರ ಹೊರತಾಗಿ ಇದರಲ್ಲಿ ಭಾಷಾ ಪ್ರಭುತ್ವ, ಚಮತ್ಕಾರ, ರಸಭಾವ, ಚೈತನ್ಯ, ಸೌಂದರ್ಯ, ಭವ್ಯತೆ, ಪವಿತ್ರತೆ, ವ್ಯಕ್ತಿವರ್ಣನೆ, ಜೀವನ ದರ್ಶನ ಮತ್ತು ಜೀವನಭಾಗ್ಯ ಇವೂ ಸಹ ಇವನ ಕಾವ್ಯದಲ್ಲಿ ಇರುವವು. ಇದರಿಂದಾಗಿ ಇವನ ಕಾವ್ಯವನ್ನು ಕೇಳಿದ ಮೇಲೆ ಶ್ರೋತೃನ ಮೇಲೆ ತ್ವರಿತ ಸುಪರಿಣಾಮವಾಗುವದು. ಮೊದಲು ಕಾವ್ಯದ ರಸಸ್ವಾದತೆಗೆದುಕೊಂಡ ನಂತರ ಶ್ರೋತೃ ತನ್ನಷ್ಟಕ್ಕೆ ತಾನೇ ಚಿಂತನ ಮಾಡುವನು. ಈ ಚಿಂತನದೊಳಗಿಂದಲೇ ಶ್ರೋತೃನ ಜೀವನವು ಭಗವಂತನ ಕಡೆಗೆ ತಿರುಗುವದು. ಈ ರೀತಿಯಿಂದ ರಂಜನೆ ಮತ್ತು ಆತ್ಮಬೋಧ ಇವು ಸುಲಭವಾಗಿ ಫಲ ಕೊಡುವಂಥ ಕಾವ್ಯ ಕರ್ತ ಕವಿಯು ಮತ್ತು ಅವನ ಕವಿತಾ ಕಲೆಯ ವರ್ಣನೆಯನ್ನು ಶ್ರೀ ಸಮರ್ಥರು ಈ ಸಮಾಸದಲ್ಲಿ ಮಾಡಿರುವರು.

### ದಶಕ ಚತುರ್ದಶ : ಸಮಾಸ ತೃತೀಯ : ಕವಿತ್ವ ಕಲಾ ನಿರೂಪಣ

॥ಶ್ರೀರಾಮ॥ ಕವಿತ್ವ ಶಬ್ದ ಸುಮನಮಾಳಾ । ಅರ್ಥ ಪರಿಮಳ ಆಗಳಾ ।
ತೇಣೇ ಸಂತಷಟ್ಪದಕುಳಾ । ಆನಂದ ಹೋಯೆ ॥೧॥

ಐಸೀ ಮಾಳಾ ಅಂತಃಕರಣೇ । ಗುಂಫೂನ ಪೂಜಾ ರಾಮಚರಣೇ ।
ವ್ಹೋಂಕಾರತಂತ ಅಖಂಡ ಪಣೇ । ಖಂಡೋಚ ನಯೇ ॥೨॥

ಪರೋಪಕಾರಾಕಾರಣೇ । ಕವಿತ್ವ ಅಗತ್ಯ ಕರಣೇ ।
ತಯಾ ಕವಿತ್ವಾಚೀ ಲಕ್ಷಣೇ । ಬೋಲಿಜೇತೀ ॥೩॥

ಜೇಣೇ ಘಡೇ ಭಗವದ್ಭಕ್ತೀ । ಜೇಣೇ ಘಡೇ ವಿರಕ್ತೀ ।
ಐಸಿಯಾ ಕವಿತ್ವಾಚೀ ಯುಕ್ತೀ । ಆಧೀ ಸಾಧವಾವೀ ॥೪॥

ಕ್ರಿಯೆವೀಣ ಶಬ್ದಜ್ಞಾನ । ತಯಾ ನ ಮಾನಿತೀ ಸಜ್ಜನ ।
ಮ್ಹಣೌನೀ ದೇವ ಪ್ರಸನ್ನ । ಅನುತಾಪೇ ಕರಾವಾ ॥೫॥

ದೇವಾಚೇನ ಪ್ರಸನ್ನಪಣೇ । ಜೇ ಜೇ ಘಡೆ ಬೋಲಣೇ ।
ತೇ ತೇ ಅತ್ಯಂತ ಶ್ಲಾಘ್ಯವಾಣೇ । ಯಾ ನಾವ ಪ್ರಾಸಾದಿಕ ॥೬॥

ಧೀಟ ಪಾಠ ಪ್ರಾಸಾದಿಕ । ಐಸೇ ಬೋಲತೀ ಅನೇಕ ।
ತರೀ ಹಾ ತ್ರಿವಿಧ ವಿವೇಕ । ಬೋಲಿಜೇಲ ॥೭॥

ಧೀಟ ಮ್ಹಣಿಜೆ ಧೀಟಪಣೇ ಕೇಲೇ । ಜೇ ಜೇ ಆಪುಲ್ಯಾ ಮನಾಸ ಆಲೇ ।
ಬಳೇ ಚಿ ಕವಿತ್ವ ರಚಿಲೇ । ಯಾ ನಾವ ಧೀಟ ಬೋಲಿಜೆ ॥೮॥

ಪಾಠ ಮ್ಹಣಿಜೆ ಪಾಠಾಂತರ । ಬಹುತ ಪಾಹಿಲೇ ಗ್ರಂಥಾಂತರ ।
ತಯಾಸಾರಿಖಾ ಉತಾರ । ಆಪಣ ಹಿ ಕೇಲಾ ॥೯॥

ಸೀಘ್ರಚಿ ಕವಿತ್ವ ಜೋಡಿಲೇ । ದೃಷ್ಟೀ ಪಡಿಲೇ ತೇಚಿ ವರ್ಣಿಲೇ ।
ಭಕ್ತೀವಾಚೂನ ಜೇ ಕೇಲೇ । ತ್ಯಾ ನಾವ ಧೀಟಪಾಠ ॥೧೦॥

## ದಶಕ ೧೪. ಸಮಾಸ ೩. ಕವಿತ್ವ ಕಲಾ ನಿರೂಪಣ (ನುಡಿ ೫೪)

ಕವಿತೆಯಿಂದ ಭಗವಂತನ ಪೂಜೆ ಹೇಗೆ ಮಾಡಬೇಕೆಂಬುದನ್ನು ಹೇಳುವರು:- ಶಬ್ದರೂಪಿ ಹೂವಿನ ಮಾಲೆ ಅಂದರೆ ಕಾವ್ಯವೇ ಆಗಿದೆ. ಇದರ ಹೂವಿನ ಸುಂದರ ಸುಗಂಧವೆಂದರೆ ಕವಿತೆಯು ಅರ್ಥವಾಗಿದೆ. ಇದರ ಸುಗಂಧವು ಒಂದು ಅಮೌಲ್ಯ ರೀತಿಯದೇ ಇರುವದು. ಸಂತ ರೂಪದ ಭ್ರಮರಗಳು ಆ ವಿಶಿಷ್ಟ ಸುಗಂಧಿತ ಹೂವಿನ ಮೇಲೆ ಕುಳಿತುಕೊಳ್ಳುವವು. ಆಗ ಸಂತನಿಗೆ ಅರ್ಥರೂಪ ಸುಗಂಧದಿಂದ ಆನಂದವಾಗುವದು. [೧] ಇಂಥ ಶಬ್ದರೂಪಿ ಹೂವಿನ ಹಾರವನ್ನು [ಓಂಕಾರ ರೂಪಿ ದಾರದಿಂದ] ಅಂತಃಕರಣದಲ್ಲಿ ತಯಾರಿಸಿ ಮತ್ತು ಪೂಜೆ ಎಂದು ತಿಳಿದುಕೊಂಡು ಇದನ್ನು ಶ್ರೀರಾಮ ಚರಣದಲ್ಲಿ ಅರ್ಪಿಸಬೇಕು. ಆದರೆ ಸರ್ವ ಶಬ್ದದ ಮೂಲವು. ಓಂಕಾರವಿರುವದು. ಪರಾವಾಣಿಯಿಂದ ವೈಖರೀ ವರೆಗಿನ ಅದರ ತಂತು (ಎಳೆ) ಅಖಂಡವಿರುವದು. ಇದು ಹರಿಯದಂತೆ ಬಹಳ ಎಚ್ಚರ ವಹಿಸಬೇಕು. ಓಂಕಾರಕ್ಕೆ ಶಬ್ದಬ್ರಹ್ಮ ಅನ್ನುವರು. ನಿರ್ಮಲವಾದಸ್ಫೂರ್ತಿರೂಪದಿಂದಿರುವ ಪರಾವಾಣಿಯು ಅಲ್ಲಿ ಅಖಂಡವಾಗಿ ಇರುವಳು. ಪರಾವಾಣಿಯಲ್ಲಿಯ ಸ್ಫೂರ್ತಿಯು ಅರ್ಥದರೂಪವನ್ನು ಧರಿಸುವದು. ಆಗ ಇದು ಪಶ್ಯಂತಿ ಅನ್ನುವದಾಗುವದು. ಅರ್ಥವು ಯಾವಾಗ ಸೂಕ್ಷ್ಮ ಶಬ್ದದ ರೂಪವನ್ನು ಧಾರಣ ಮಾಡುವದೋ ಅದೇ ಮಾಧ್ಯಮಾವಾಣಿ ಅಂತಾ ಆಗುವದು. ಮತ್ತು ಸೂಕ್ಷ್ಮ ಶಬ್ದವು ಯಾವಾಗ ಸ್ಥೂಲ ಶಬ್ದದಲ್ಲಿ ರೂಪಾಂತರ ಹೊಂದುವದೋ ಆಗ ಇದಕ್ಕೆ ವೈಖರಿ ಅಂತಾ ಅನ್ನುವರು. ಪಶ್ಯಂತಿಯಲ್ಲಿಯ ಅರ್ಥ ಯಾವಾಗ ಶಬ್ದಾಕಾರ ಹೊಂದುವದೋ [ಆಗುವದೋ] ಆಗ ಅದಕ್ಕೆ ದೃಶ್ಯ ಜಗತ್ತಿನ ಗಾಳಿ ಬಡೆಯುವದು. ಈ ಸಂಧಿಯಲ್ಲಿ ಮನುಷ್ಯನಿಗೆ ಮೂಲ ಸ್ಫೂರ್ತಿ ಸ್ಥಾನದ ಮರೆವು ಆಗುವ ಸಂಭವ ಇರುವದು. "ನಾನು ಈ ಕಾವ್ಯ ರಚಿಸಿದೆನು" ಅನ್ನುವ ದೇಹ ಬುದ್ಧಿಯ [ಅಹಂ] ಜೋರು ಉಂಟಾಗುವ ಸಂಭವ ಇರುವದು. ಹೀಗೆ ಆಯಿತೆಂದರೆ ಓಂಕಾರ ತಂತು ಹರಿಯುವದು. ಇದು ಆಗದಂತೆ ಎಚ್ಚರ ವಹಿಸಬೇಕು. ಹಾಗೆ ಆಗಗೊಡಬಾರದು, ನಾನು ಅನ್ನುವ ಹೊಲಸು ಇಲ್ಲದ ಸುಂದರ ಸುಗಂಧಿ ಕಾವ್ಯವನ್ನು ಭಗವಂತನ ಚರಣದಲ್ಲಿ ಅರ್ಪಿಸಬೇಕು, (೨) ಕವಿತೆಯಲ್ಲಿ ಧೀಟ, ಪಾಠ, ಮತ್ತು ಪ್ರಾಸಾದಿಕ ಅನ್ನುವ ಮೂರು ಪ್ರಕಾರಗಳಿರುವವೆನ್ನುವದನ್ನು ಹೇಳುವರು. ಭಕ್ತಿಯು ಬೆಳೆಯುವಂತಹ ಕವಿತೆ ಮಾಡಬೇಕು ಎಂದು ಅನ್ನುವರು:- ಜನತೆಯ ಕಲ್ಯಾಣವಾಗಬೇಕೆಂಬ ಉದ್ದೇಶದಿಂದ ಕವಿತೆಗಳನ್ನು ಅಗತ್ಯವಾಗಿ ಮಾಡಬೇಕು. ಈ ಕವಿತೆಗಳು ಹೇಗಿರಬೇಕೆಂಬುದನ್ನು ಈಗ ಹೇಳುವೆನು. [೩] ಮುಖ್ಯವಾಗಿ ಭಗವಂತನ ಭಕ್ತಿ ಬೆಳೆಯಬೇಕು. ಮತ್ತು ವೈರಾಗ್ಯ ವಿರಕ್ತಿ ಉತ್ಪನ್ನವಾಗಬೇಕು. ಇಂಥ ಕವಿತೆಗಳನ್ನು ಮೊದಲಿಗೆ ಬಹಳಷ್ಟು ರಚಿಸಬೇಕು. [೪] ಸ್ವಾನುಭವವಿಲ್ಲದ ಶಬ್ದಜ್ಞಾನಕ್ಕೆ ಸಂತ ಸಾಧು, ಸಜ್ಜನರು ಮಹತ್ವ ಕೊಡುವದಿಲ್ಲವಾದ್ದರಿಂದ ಅನುತಾಪದಿಂದ ದೇವರನ್ನು ಪ್ರಸನ್ನ ಮಾಡಿಕೊಳ್ಳಬೇಕು. [೫] ದೇವರು ಪ್ರಸನ್ನನಾದ ಮೇಲೆ ಯಾವ ಯಾವ ಶಬ್ದಗಳು ಬರುವವೋ ಹಾಗೂ ಯಾವ ಯಾವವು ವಾಣಿಯಿಂದ ಪ್ರಕಟಗೊಳ್ಳುವವೋ ಅವೆಲ್ಲವುಗಳು ಅತಿಶಯ ಉತ್ತಮವಿರುವವು. ಇದಕ್ಕೆ ಪ್ರಾಸಾದಿಕವೆಂದು ಅನ್ನುವರು. [೬] ಧೀಟ (ದಿಟ್ಟ), ಪಾಠ ಮತ್ತು ಪ್ರಾಸಾದಿಕ ಹೀಗೆ ಕವಿತೆಯಲ್ಲಿ ಮೂರು ಪ್ರಕಾರಗಳು ಇರುವವು ಎಂದು ಅನ್ನುವರು. ಈ ಮೂರು ಪ್ರಕಾರಗಳ ವಿವರವನ್ನು ಸರಿಯಾಗಿ ತಿಳಿಸಿಕೊಡುವೆನು. [೭] ದಿಟ್ಟತನದಿಂದ ಮಾಡಿದ ಕಾವ್ಯವು ದಿಟ್ಟ (ಧೀಟ) ಕವಿತ್ವವು ತಮ್ಮ ಮನಸ್ಸಿಗೆ ಬಂದದ್ದರ ಮೇಲೆಲ್ಲ ಜಬರದಸ್ತಿಯಿಂದ ಮನಸ್ಸಿಗೆ ಬಂದಂತೆ ಪ್ರಯಾಸಪಟ್ಟು ರಚಿಸುವ ಕಾವ್ಯಕ್ಕೆ ದಿಟ್ಟ [ಧೀಟ] ಕವಿತ್ವವೆನ್ನುವರು [೮] ಪಾಠ ಅಂದರೆ ಪಾಠಾಂತರ ಅನೇಕ ಬಗೆಯ ಗ್ರಂಥಗಳ ಅಭ್ಯಾಸ ಮಾಡಿ ಅವುಗಳಲ್ಲಿಯ ಕಾವ್ಯದಂತೆ ಕವಿತೆಯನ್ನು ತಾನು ರಚಿಸುವದಕ್ಕೆ ಪಾಠ ಕವಿತ್ವವೆನ್ನುವರು. [೯] ತತ್ಕಾಲ ಕವಿತಾ ರಚಿಸುವ ಶಕ್ತಿಯನ್ನು ಸಂಪಾದಿಸಿದ ಮೇಲೆ ಯಾವುದು ದೃಷ್ಟಿಗೆ ಬೀಳುವದೋ ಅದರ ಮೇಲೆ ಕವಿತೆ ರಚಿಸಿದರೆ ಅದು ಭಗವಂತನ ಭಕ್ತಿಗೆ ಹೊರತಾದದ್ದು ಇರುವದು. ಇದಕ್ಕೆ ದಿಟ್ಟ, ಪಾಠ ಕವಿತಾ ಅನ್ನುವರು. [೧೦]

ಕಾಮಿಕ ರಸಿಕ ಶೃಂಗಾರಿಕ । ವೀರ ಹಾಸ್ಯ ಪ್ರಸ್ತಾವಿಕ ।
ಕೌತುಕ ವಿನೋದ ಅನೇಕ । ಯಾ ನಾವ ಧೀಟಪಾಠ ॥೧೧॥

ಮನ ಜಾಲೇ ಕಾಮಾಕಾರ । ತೈಸೇ ಚಿ ನಿಘತೀ ಉದ್ಗಾರ ।
ಧೀಟಪಾಠೇ ಪರಪಾರ । ಪಾವಿಜೇತ ನಾಹೀ ॥೧೨॥

ವ್ಹಾವಯಾ ಉದರಶಾಂತೀ । ಕರಣೇ ಲಾಗೇ ನರಸ್ತುತೀ ।
ತೇಥೇ ಕೇಲೀ ಜೇ ವಿತ್ಪತ್ತೀ । ತ್ಯಾ ನಾವ ಧೀಟಪಾಠ ॥೧೩॥

ಕವಿತ್ವ ನಸಾವೇ ಧೀಟಪಾಠ । ಕವಿತ್ವ ನಸಾವೇ ಖಟಪಟ ।
ಕವಿತ್ವ ನಸಾವೇ ಉದ್ಧಟ । ಪಾಷಾಂಡಮತ ॥೧೪॥

ಕವಿತ್ವ ನಸಾವೇ ವಾದಾಂಗ । ಕವಿತ್ವ ನಸಾವೇ ರಸಭಂಗ ।
ಕವಿತ್ವ ನಸಾವೇ ರಂಗಭಂಗ । ದೃಷ್ಟಾಂತಹೀನ ॥೧೫॥

ಕವಿತ್ವ ನಸಾವೇ ಪಾಲ್ಹಾಳ । ಕವಿತ್ವ ನಸಾವೇ ಬಾಷ್ಕಳ ।
ಕವಿತ್ವ ನಸಾವೇ ಕುಟೀಳ । ಲಕ್ಷುನಿಯಾ ॥೧೬॥

ಹೀನ ಕವಿತ್ವ ನಸಾವೇ । ಬೋಲಿಲೇಚಿ ನ ಬೋಲಾವೇ ।
ಛಂದಭಂಗ ನ ಕರಾವೇ । ಮುದ್ರಾಹೀನ ॥೧೭॥

ವಿತ್ಪತ್ತೀಹೀನ ತರ್ಕಹೀನ । ಕಳಾಹೀನ ಶಬ್ದಹೀನ ।
ಭಕ್ತಿಜ್ಞಾನ ವೈರಾಗ್ಯಹೀನ । ಕವಿತ್ವ ನಸಾವೇ ॥೧೮॥

ಭಕ್ತಿಹೀನ ಜೇ ಕವಿತ್ವ । ತೇ ಚಿ ಜಾಣಾವೇ ಠೋಂಬೇ ಮತ ।
ಆವಡೀಹೀನ ಜೆ ವಗತೃತ್ವ । ಕಂಟಾಳ ವಾಣೇ ॥೧೯॥

ಭಕ್ತಿವಿಣ ಜೋ ಅನುವಾದ । ತೋ ಚಿ ಜಾಣಾವಾ ವಿನೋದ ।
ಪ್ರೀತೀವಿಣ ಸಂವಾದ । ಘಡೇ ಕೈಸೀ ॥೨೦॥

ಅಸೋ ಧೀಟ ಪಾಠ ತೇ ಐಸೇ । ನಾಥಿಲೇ ಅಹಂತೇಚೇ ಪಿಸೇ ।
ಆತಾ ಪ್ರಸಾದಿಕ ತೇ ಕೈಸೇ । ಸಾಂಗಿಜೇಲ ॥೨೧॥

ವೈಭವ ಕಾಂತಾ ಕಾಂಚನ । ಜಯಾಸ ವಾಟೇ ಹೇ ವಮನ ।
ಅಂತರೀ ಲಾಗಲೇ ಧ್ಯಾನ । ಸರ್ವೋತ್ತಮಾಚೇ ॥೨೨॥

ಯಾವ ಕವಿತೆಯು ಕಾಮಿಕ, ಶೃಂಗಾ, ಮತ್ತು ಉದ್ರೇಕದ ವಿರುವಂಥದ್ದರಲ್ಲಿ ಮತ್ತು ಶೃಂಗಾರ, ವೀರರಸ, ಹಾಸ್ಯ, ಪಶ್ಚಾತ್ತಾಪ, ಕೌತುಕ, ವಿನೋದ ಇತ್ಯಾದಿ ಅನೇಕ ವಿಷಯ ವರ್ಣಿಸುವಂಥ ಕವಿತೆಗೂ ಸಹ ದಿಟ್ಟ, ಪಾಠ ಕವಿತಾ ಅನ್ನುವರು. [೧೧] ಕವಿಯ ಮನ ಕಾಮವಾಸನೆಯಿಂದ ಕಾಮಾಕಾರವಾಯಿತೆಂದರೆ ಅದಕ್ಕನುಸಾರವಾಗಿಯೇ ಅವುಗಳ ಬಗ್ಗೆ ಉದ್ಗಾರ ಹೊರಡುವವು. ಇಂಥ ದಿಟ್ಟ, ಪಾಠ ಕವಿತೆಯಿಂದ ಭವಸಾಗರದಾಟಲಿಕ್ಕಾಗುವದಿಲ್ಲ; ಪರಮಾರ್ಥವೆಷ್ಟೂ ಸಾಧಿಸುವದಿಲ್ಲ. [೧೨] ಹೊಟ್ಟೆಯ ಹಸಿವನ್ನು ಶಾಂತಗೊಳಿಸುವದಕ್ಕಾಗಿ ಕವಿಗೆ ನರರ [ಮನುಷ್ಯರ]ಸ್ತುತಿಯನ್ನು ಮಾಡಬೇಕಾಗುವದು. ಇಂಥ ನರಸ್ತುತಿ ಮಾಡುವದಕ್ಕಾಗಿ ಉಪಯೋಗಿಸಿದ ಕವಿತೆಯೂ ಸಹ ದಿಟ್ಟ ಪಾಠ ಕವಿತೆಯೇ ಆಗಿರುವದು. [೧೩] ಈಗ ಎಂಥ ಕವಿತೆಗಳು ಇರಬಾರದು ಅನ್ನುವ ಬಗ್ಗೆ ವರ್ಣನೆ ಮಾಡುವರು:- ಕವಿತಾ ದಿಟ್ಟ, ಪಾಠದವು ಇರಬಾರದು. ಕವಿತೆಯು ಎಳೆದು, ಜಗ್ಗಿ-ಪಗ್ಗಿ ಜುಲುಮೆಯಿಂದ ಹೇಗೋ ಪ್ರಾಸ ವಗೈರೆ ಜೋಡಿಸಿ ಮಾಡಿದವು ಇರಬಾರದು. ಕವಿತೆಯು ಉದ್ಧಟ-ಮೂರ್ಖ ಅಥವಾ ಪಾಖಂಡ ಮತ ಪ್ರತಿಪಾದನ ಮಾಡುವಂಥವು, ಭಾವ ಭಕ್ತಿಹೀನವಾದಂಥವು ಇರಬಾರದು [೧೪] ಕವಿತೆಯಲ್ಲಿ ವಾದವಿವಾದದ ಅಂಗವು ಇರಬಾರದು. ಕವಿತೆಯಲ್ಲಿ ರಸಭಂಗ, ಮತ್ತು ಕವಿತೆಯ ರಂಗವು ಬೇರಂಗದ್ದಾಗಿರಬಾರದು. ದೃಷ್ಟಾಂತವಿಲ್ಲದೆ ಕವಿತೆ ಇರಬಾರದು. [೧೫] ಕವಿತೆಯಲ್ಲಿ ಜಾಬಾಳ-ವಿಸ್ತಾರ, ಭಾಷ್ಯಳ, ತಾಳ ತಂತ್ರ ಇಲ್ಲದ ಅಸಂಬದ್ಧವಾದದ್ದು ಇರಬಾರದು. ದುಷ್ಟ ಅಥವಾ ಲಬಾಡ ಜನರನ್ನು ಉದ್ದೇಶಿಸಿ ಕವಿತೆ ಮಾಡಬಾರದು. [೧೬] ಹಲಕಾತನದ ಕೀಳ ದರ್ಜೆಯ ಕವಿತ್ವ ಇರಬಾರದು. ಕವಿತೆಯಲ್ಲಿ ಹೇಳಿದ್ದನ್ನೇ ಪುನಃ ಪುನಃ ಹೇಳಬಾರದು. ಕಾವ್ಯಶಾಸ್ತ್ರದ ನಿಯಮ ವನ್ನು ಮುರಿಯುವಂಥ ಕವಿತ್ವ ಇರಬಾರದು. ಛಂದ, ಮಾತ್ರಾ, ವೃತ್ತ ಇತ್ಯಾದಿ ನಿಯಮಗಳನ್ನು ಮುರಿಯ ಬಾರದು. [೧೭] ವಿದ್ಯಾವಿಲಾಸ, ತರ್ಕ, ಕಲಾ, ಉಚಿತ, ಯೋಗ್ಯ, ಶಬ್ದ, ಭಕ್ತಿ, ಜ್ಞಾನ, ವೈರಾಗ್ಯ ಇವುಗಳ ಅಭಾವ ಇರುವಂಥ ಕವಿತ್ವ ಇರಬಾರದು. (೧೮) ಯಾವ ಕಾವ್ಯದಲ್ಲಿ ಭಕ್ತಿಯು ಇಲ್ಲವೋ ಅದು ಜಡಮತಿ, ಮಂದ ಮತಿ, ಬುದ್ಧಿಗೇಡಿ (ಅಕ್ಕಲಶೂನ್ಯ) ಮತದ್ದಾಗುವದು. ಯಾವ ಕಾವ್ಯದಲ್ಲಿ ಭಕ್ತಿರಸದ ಪ್ರೇಮವಿರುವದಿಲ್ಲವೋ ಅದು ಬೇಸರತರಿಸುವಂತಹದ್ದಾಗಿರುವದು. [೧೯] ಭಕ್ತಿ ಇಲ್ಲದ ಕಾವ್ಯ ರಚನೆಯು ಕೇವಲ ನಗಚಾಟಿಕೆಯ ಮನ ರಂಜನೆಯದೆಂದು ತಿಳಿಯಬೇಕು. ಭಗವಂತನೊಂದಿಗೆ ಪ್ರೇಮದ ಹೊರತಾಗಿ ಅವನೊಂದಿಗೆ ಖರೇ ವಾರ್ತಾಲಾಪ ಮಾಡಲಿಕ್ಕಾಗುವದಿಲ್ಲ. [೨೦] ಇರಲಿ, ದಿಟ್ಟ ಪಾಠ ಕವಿತೆ ಅಂದರೆ ಅವು ಹೀಗಿರುವವು ಮಿಥ್ಯೆಯಾಗಿರುವ ಅಹಂ ಕಾರಕ್ಕೆ ಹತ್ತಿದಂಥ ಅದು ಒಂದು ಪ್ರಕಾರದ ಹುಚ್ಚು ಇರುವದು. ಪ್ರಾಸಾದಿಕ ಕವಿತೆ ಹೇಗೆ ಇರುವವೆಂಬುದನ್ನು ಈಗ ಹೇಳುವೆನು. [೨೧] ಕಾವ್ಯದ ಸಮೀಕ್ಷೆ ಮಾಡುವವರ ದೃಷ್ಟಿಯಿಂದ ಶ್ರೀಸಮರ್ಥರ ಈ ಮತವು ಏಕಪಕ್ಷದ್ದು ಅನಿಸಬಹುದು. ಆದರೆ ಅವರು ಶ್ರೇಷ್ಠ ಸಾಕ್ಷಾತ್ಕಾರಿ ಸಂತರಿದ್ದರು. ಸಂತರ ಅಭಿಪ್ರಾಯವೇನಂದರೆ, ಮನುಷ್ಯರಲ್ಲಿ ಪ್ರತ್ಯಕ್ಷ ಭಗವಂತನ ಶಕ್ತಿಯು ಶಾರದೆಯ ರೂಪದಿಂದ ಅಂದರೆ ವಾಣಿಯ ರೂಪದಿಂದ ಅವತಾರ ಮಾಡಿರುವಳು. ಇಂಥ ಈ ಪವಿತ್ರ ಶಕ್ತಿಯ ನಿಜವಾದ ಉಪಯೋಗವನ್ನು ನಾವು ಭಗವಂತನ ದರ್ಶನಕ್ಕಾಗಿ ಉಪಯೋಗ ಮಾಡಿ ಕೊಳ್ಳಬೇಕು. ವಾಣಿಯ ಇತರ ಉಪಯೋಗವು ಗೌಣವು. ಅಂದರೆ ಕೆಳಮಟ್ಟದ್ದಾಗುವದು. ಇದನ್ನು ಒಪ್ಪಿದೆವೆಂದರೆ ಭಗವಂತನ ಭಕ್ತಿಪ್ರದಾನ ಮಾಡುವಂಥ ಕವಿತೆಯೇ ಉತ್ತಮ ಕವಿತೆ ಎಂದು ತಿಳಿಯಬೇಕಾಗುವದು. ಭಗವಂತನ ನಿರಂತರ ಚಿಂತನದಿಂದ ಭಕ್ತಿಯಿಂದ ಸಂಪೂರ್ಣ ತುಂಬಿದ ರಸಾಳ ಕವಿತೆಯು ಸ್ಫುರಿಸುವದು. (ಹೊರ ಬರುವದು) ಮತ್ತು ಇದೇ ಶ್ರೋತಾ ಜನರ ಅಂತಃಕರಣದಲ್ಲಿ ಭಕ್ತಿಯ ಅವ್ಯಾತಬಳ್ಳಿಯನ್ನು ಹಬ್ಬಿಸಲು ಸಹಾಯ ಮಾಡು ವದು. ಇಂಥ ಕವಿತೆಗಳು ಅತ್ಯಂತ ಸಹಜವಾಗಿ ಸಂತ ಸಾಧುಗಳ ಹೃದಯ ರೂಪವೆಂಬ ಗುಹೆಯಿಂದ ಅಖಂಡವಾಗಿ ಹರಿಯುವವು. ಇದೇ ನಿಜವಾದ ಪ್ರಾಸಾದಿಕ ಕವಿತೆ ಆಗಿರುವದು. ಇದರಲ್ಲಿ ಸಂಶಯವಿಲ್ಲ:- ಯಾರಿಗೆ ವೈಭವ, ಹಣ, ಮತ್ತು ಕಾಮವಾಸನಾ ಇವು ಮೂರೂ ವಾಂತಿಯಂತೆ ಬೇಸರ ತರಿಸುವವೋ, ಯಾರ ಹೃದಯದಲ್ಲಿ ಭಗ ವಂತನ ಧ್ಯಾನ ಅಖಂಡವಾಗಿ ಚಾಲೂ ಇರುವದೋ [೨೨]

ಜಯಾಸ ಘಡೀನೇ ಘಡೀ । ಲಾಗೇ ಭಗವಂತೀ ಆವಡೀ ।
ಚಢತೀ ವಾಢತೀ ಗೋಡೀ । ಭಗವದ್ಭಜನಾಚೀ ॥೨೩॥

ಜೋ ಭಗವದ್ಭಜನೇವೀಣ । ಜಾಊ ನೇದೀ ಯೇಕ ಕ್ಷಣ ।
ಸರ್ವಕಾಳ ಅಂತಃಕರಣ । ಭಕ್ತಿರಂಗೇ ರಂಗಲೇ ॥೨೪॥

ಜಯಾ ಅಂತರೀ ಭಗವಂತ । ಅಚಳ ರಾಹಿಲಾ ನಿವಾಂತ ।
ತೋ ಸ್ವಭಾವೇ ಜೇ ಬೋಲತ । ತೇ ಬ್ರಹ್ಮನಿರೂಪಣ ॥೨೫॥

ಅಂತರೀ ಬೈಸಲಾ ಗೋವಿಂದ । ತೇಣೇ ಲಾಗಲಾ ಭಕ್ತಿಛಂದ ।
ಭಕ್ತೀವಿಣ ಅನುವಾದ । ಆಣೀಕ ನಾಹೀ ॥೨೬॥

ಆವಡೀ ಲಾಗಲೀ ಅಂತರೀ । ತೈಸೀ ಚ ವದೆ ವೈಖರೀ ।
ಭಾವೇ ಕರುಣಾಕೀರ್ತನ ಕರೀ । ಪ್ರೇಮಭರೇ ನಾಚತು ॥೨೭॥

ಭಗವಂತೀ ಲಾಗಲೇ ಮನ । ತೇಣೇ ನಾಠವೇ ದೇಹಭಾನ ।
ಶಂಕಾ ಲಜ್ಜಾ ಪಳೋನ । ದುರೀ ಠೇಲೀ ॥೨೮॥

ತೋ ಪ್ರೇಮರಂಗೇ ರಂಗಲಾ । ತೋ ಭಕ್ತಿಮದೇ ಮಾತಲಾ ।
ತೇಣೇ ಅಹಂಭಾವ ಘಾತಲಾ । ಪಾಯಾತಳೀ ॥೨೯॥

ಗಾತ ನಾಚತ ನಿಶಂಕ । ತಯಾಸ ಕೈಚೇ ದಿಸತೀ ಲೋಕ ।
ದೃಷ್ಟೀ ತ್ರೈಲೋಕ್ಯನಾಯೆಕ । ವಸೋನ ಠೇಲಾ ॥೩೦॥

ಐಸಾ ಭಗವಂತೀ ರಂಗಲಾ । ಆಣೀಕ ಕಾಹೀ ನಲಗೆ ತ್ಯಾಲಾ ।
ಸ್ವಇಚ್ಛಾ ವರ್ಣೂ ಲಾಗಲಾ । ಧ್ಯಾನ ಕೀರ್ತೀ ಪ್ರತಾಪ ॥೩೧॥

ನಾನಾ ಧ್ಯಾನೇ ನಾನಾ ಮೂರ್ತೀ । ನಾನಾ ಪ್ರತಾಪ ನಾನಾ ಕೀರ್ತೀ ।
ತಯಾಪುಢೇ ನರಸ್ತುತೀ । ತೃಣತುಲ್ಯ ವಾಟೇ ॥೩೨॥

ಅಸೋ ಐಸಾ ಭಗವದ್ಭಕ್ತ । ಜೋ ಯೇ ಸಂಸಾರೀ ವಿರಕ್ತ ।
ತಯಾಸ ಮಾನಿತೀ ಮುಕ್ತ । ಸಾಧುಜನ ॥೩೩॥

ತ್ಯಾಚೆ ಭಕ್ತೀಚೇ ಕೌತುಕ । ತಯಾ ನಾವ ಪ್ರಸಾದಿಕ ।
ಸಹಜ ಬೋಲತಾ ವಿವೇಕ । ಪ್ರಗಟ ಹೋಯ ॥೩೪॥

ಯಾರಿಗೆ ಕ್ಷಣ ಕ್ಷಣಕ್ಕೆ ಭಗವಂತನ ಸ್ಮರಣವಾಗುವದೋ ಮತ್ತು ಇದರಿಂದಾಗಿ ಭಗವಂತನ ಮೇಲೆ ಇರುವ ಇವರ ಪ್ರೇಮವು ಒಂದೇ ಸಮನೆ ಹೆಚ್ಚುತ್ತ ಇರುವದೋ ಯಾರಿಗೆ ಭಗವಂತನ ಭಕ್ತಿ ಮತ್ತು ಇದರ ಪ್ರೇಮದ ರುಚಿಯು ಅಧಿಕಾಧಿಕವಾಗಿ ಬೆಳೆಯುತ್ತ ಹೋಗುವದೋ [೨೩] ಅಂಥವನು ಭಗವಂತನ ಭಜನೆ ಇಲ್ಲದೆ ಒಂದು ಕ್ಷಣವನ್ನೂ ಸಹ ವ್ಯರ್ಥ ಹೋಗಗೊಡಲಾರದವನಾಗುವನು. ಯಾರ ಅಂತಃಕರಣದಲ್ಲಿ ಸದಾಕಾಲ ಭಗವಂತನ ಪ್ರೇಮವೇ ತುಂಬಿರುವದೋ [೨೪] ಯಾರ ಅಂತರ್ಯಾಮದಲ್ಲಿ ಭಗವಂತನು ಅಚಲ ಮತ್ತು ಸ್ಥಿರವಾಗಿ ಇರುವನೋ ಇಂಥ ಪುರುಷ ಸಹಜವಾಗಿ ಏನನ್ನು ಉಚ್ಚರಿಸುವನೋ-ಮಾತಾಡುವನೋ ಅದು ಕೇವಲ ಬ್ರಹ್ಮನಿರೂಪಣವೇ ಇರುವದು. [೨೫] ಇಂಥವನ ಅಂತಃಕರಣದಲ್ಲಿ ಭಗವಂತನು ಸ್ಥಿರವಾಗಿ ನೆಲಿಸಿರುವನು. ಇದರಿಂದ ಇವನಿಗೆ ಭಕ್ತಿಯು ಛಂದ, ನಾದ, ಹತ್ತಿರುತ್ತದೆ. ಇದರಿಂದಾಗಿ ಇವನು ಭಕ್ತಿಯು ಹೊರತಾಗಿ ಬೇರಾವುದನ್ನೂ ಮಾತನಾಡುವದೇ ಇಲ್ಲ. [೨೬] ಅಂತರ್ಯಾಮದಲ್ಲಿ [ಅಂತಃಕರಣದಲ್ಲಿ] ಯಾರ ಬಗ್ಗೆ ನಿತಾಂತ ಪ್ರೇಮವಿರುವದೋ ಅದಕ್ಕನುಸಾರವಾಗಿ ಇವನ ವಾಣಿಯಿಂದ ಶಬ್ದಗಳು ಹೊರ ಬೀಳುವವು. ಬಹಳ ಪ್ರೇಮದಿಂದ ಮತ್ತು ಶ್ರದ್ಧೆಯಿಂದ ಇವನು ಕರುಣಾರಸ ಪ್ರಧಾನಭರಿತ ಕೀರ್ತನೆಯನ್ನು ಮಾಡುವನು. ಕೀರ್ತನದಲ್ಲಿ ಪ್ರೇಮವು ಉಕ್ಕೇರಿ ಆ ಆನಂದದಲ್ಲಿ ಕುಣಿಯುಹತ್ತುವನು. ಪ್ರೇಮಾಶ್ರುಗಳು ಉದುರುವವು. [೨೭] ಇವನ ಮನವು ಭಗವಂತನಿಗೆ ಅಂಟಿಕೊಂಡದ್ದರಿಂದ ದೇಹದ ಮೇಲೆ ಎಚ್ಚರವಿರುವದಿಲ್ಲ. ಶಂಕಾ ಸಂಶಯ ಮತ್ತು ಲಜ್ಜೆಗಳು ಇವನನ್ನು ಬಿಟ್ಟು ದೂರ ಓಡಿ ಹೋಗುವವು. [೨೮] ಭಕ್ತಿ ಪ್ರೇಮದಲ್ಲಿ ಮುಳುಗಿದ ಮತ್ತು ಭಕ್ತಿಯ ಮದದಿಂದ ಮತ್ತನಾದ ಇವನು ಸ್ವತಃದ ಅಹಂಭಾವವನ್ನು ತನ್ನ ಕಾಲಕೆಳಗೆ ಹಾಕಿ ತುಳಿದು ಬಿಡುವನು. [೨೯] ಇವನು ತೆರೆದ [ಮುಕ್ತ] ಮನಸ್ಸಿನಿಂದ ಹಾಡುವನು. ಮತ್ತು ಕುಣಿಯುವನು. ತನ್ನ ಸುತ್ತುಮುತ್ತಲೂ ಜನರಿರುವರೆಂಬುದು ಇವನ ಲಕ್ಷ್ಯಕ್ಕೆ ಬರುವದೇ ಇಲ್ಲ. ಯಾಕೆಂದರೆ ಇವನ ಕಣ್ಣಲ್ಲಿ [ದೃಷ್ಟಿಯಲ್ಲಿ] ತ್ರೈಲೋಕ್ಯ ನಾಯಕನಾದ ಭಗವಂತನೇ ಪರಿಪೂರ್ಣ ತುಂಬಿ ಬಿಟ್ಟಿರುತ್ತಾನೆ. [೩೦] ಈ ರೀತಿಯಲ್ಲಿ ಯಾರು ಭಗವಂತನಲ್ಲಿ ಏಕರೂಪದಾಗಿರುವರೋ ಅವರಿಗೆ ಯಾವುದರ ವಾಸನೆಯೂ ಶಿಲುಕು [ಬಾಕಿ] ಉಳಿಯುವದಿಲ್ಲ. ಇದರಿಂದಾಗಿ ಇವನು ಸ್ವಚ್ಛಂದದಿಂದ ಭಗವಂತನ ಧ್ಯಾನ ಮೂರ್ತಿಯು ಮತ್ತು ಅವನ ಪ್ರತಾಪ ವ ಕೀರ್ತಿಯು ವರ್ಣನೆಯನ್ನು ಸತತ ಮಾಡಲಿಕ್ಕೆ ಹತ್ತುವನು. [೩೧] ಭಗವಂತನ ಅನೇಕ ಪ್ರಕಾರದ ಧ್ಯಾನಮೂರ್ತಿ. ಸಗುಣಮೂರ್ತಿ ಮತ್ತು ಅವನ ಕೀರ್ತಿ, ಹಾಗೂ ಪರಾಕ್ರಮ ಇವುಗಳ ವರ್ಣನೆಯನ್ನು ಮಾಡುವದರ ಹೊರತಾಗಿ ನರರ ಸ್ತುತಿ ಮಾಡುವದು, ಇವನಿಗೆ ಸೇರುವದಿಲ್ಲ. ಇಷ್ಟೇ ಅಲ್ಲ ಮನುಷ್ಯರ ಸ್ತುತಿಯು ಅಗದೀ ಕ್ಷುಪದಾರ್ಥವೆನಿಸುವದು. ಇದಕ್ಕೆ ಬೆಲೆ ಕೊಡುವದಿಲ್ಲ. (೩೨) ಯಾವತ್ತೂ ಸಂಸಾರದ ಬಗ್ಗೆ ವಿರಕ್ತವಿರುವಂಥ ಮತ್ತು ಮೇಲೆ ವರ್ಣನೆ ಮಾಡಿದಂಥ ಆ ಯಾವ ಭಗವದ್ಭಕ್ತ ಇರುವನೋ ಅವನಿಗೆ ಸಂತ ಸಾಧು ಮಂಡಳಿಯು ಮುಕ್ತ ಪುರುಷನೆಂದು ಮನ್ನಿಸುವರು. [೩೩] ಇಂಥ ಮುಕ್ತ ಪುರುಷನ ಭಕ್ತಿಯು ಯಾವಾಗ ಶಬ್ದರೂಪ ಧರಿಸಿ ಪ್ರಕಟವಾಗುವದೋ ಅಗ ಅದಕ್ಕೆ ಪ್ರಾಸಾದಿಕವಾಣಿ ಎಂದು ಅನ್ನುವರು. ಇವನು ಸಹಜವಾಗಿ ಮಾತನಾಡಿದರೂ ಸಹ ಆತ್ಮಾನಾತ್ಮ ವಿವೇಕದ್ದೇ ಪ್ರಕಟವಾಗುವದು. [೩೪]

ಏಕಾ ಕವಿತ್ವಲಕ್ಷಣ । ಕೇಲೇಚ ಕರೂ ನಿರೂಪಣ ।
ಜೇಣೇ ನಿವೇ ಅಂತಃಕರ್ಣ । ಶ್ರೋತಯಾಂಚೇ ॥೩೫॥

ಕವಿತ್ವ ಅಸಾವೇ ನಿರ್ಮಳ । ಕವಿತ್ವ ಅಸಾವೇ ಸರಳ ।
ಕವಿತ್ವ ಅಸಾವೇ ಪ್ರಾಂಜಳ । ಅನ್ವಯಾಚೇ ॥೩೬॥

ಕವಿತ್ವ ಅಸಾವೇ ಭಕ್ತಿಬಳೇ । ಕವಿತ್ವ ಅಸಾವೇ ಅರ್ಥಾಗಳೇ ।
ಕವಿತ್ವ ಅಸಾವೇ ವೇಗಳೇ । ಅಹಂತೇಸೀ ॥೩೭॥

ಕವಿತ್ವ ಅಸಾವೇ ಕೀರ್ತಿವಾಡ । ಕವಿತ್ವ ಅಸಾವೇ ರಮ್ಯಗೋಡ ।
ಕವಿತ್ವ ಅಸಾವೇ ಜಾಡ । ಪ್ರತಾಪವಿಷೀ ॥೩೮॥

ಕವಿತ್ವ ಅಸಾವೇ ಸೋಪೇ । ಕವಿತ್ವ ಅಸಾವೇ ಅಲ್ಪರೂಪೇ ।
ಕವಿತ್ವ ಅಸಾವೇ ಸುಲ್ಲಪೇ । ಚರಣಬಂದ ॥೩೯॥

ಮೃದು ಮಂಜುಳ ಕೋಮಳ । ಭವ್ಯ ಅದ್ಭುತ ವಿಶಾಳ ।
ಗೌಲ್ಯ ಮಾಧುರ್ಯ ರಸಾಳ । ಭಕ್ತಿರಸೇ ॥೪೦॥

ಅಕ್ಷರಬಂದ ಪದಬಂದ । ನಾನಾ ಚಾತುರ್ಯ ಪ್ರಬಂದ ।
ನಾನಾ ಕೌಶಲ್ಯತಾ ಛಂದಬಂದ । ಧಾಟೀ ಮುದ್ರಾ ಅನೇಕ ॥೪೧॥

ನಾನಾ ಯುಕ್ತೀ ನಾನಾ ಬುದ್ಧೀ । ನಾನಾ ಕಳಾ ನಾನಾ ಸಿದ್ಧೀ ।
ನಾನಾ ಅನ್ವಯೆ ಸಾಧೀ । ನಾನಾ ಕವಿತ್ವ ॥೪೨॥

ನಾನಾ ಸಾಹಿತ್ಯ ದೃಷ್ಟಾಂತ । ನಾನಾ ತರ್ಕ ಧಾತ ಮಾತ ।
ನಾನಾ ಸಂಮತಿ ಸಿದ್ಧಾಂತ । ಪೂರ್ವಪಕ್ಷೇಸೀ ॥೪೩॥

ಸಮಾಸದ ಆರಂಭದಲ್ಲಿ ಓಂಕಾರದ ಎಳೆ ಹರಿಯಬಾರದು. ಎಂದು ಎಚ್ಚರಿಸಿರುವರು. ಓಂಕಾರವು ಪರಾ ವಾಣಿ ಇರುವದು. ಇದರವರೆಗೆ ಬಂದು ಮುಂಟ್ಟಲು ಪಶ್ಯಂತಿ ಎಂಬ ವಾಣಿಯೊಳಗಿಂದ ಹೋಗಬೇಕಾಗುವದು. ಪಶ್ಯಂತಿಯು ಅರ್ಥರೂಪವಿರುವದು. ಯಾರ ಅಂತರ್ಯಾಮದಲ್ಲಿ ಒಬ್ಬನೇ ಒಬ್ಬ ಭಗವಂತನು ತುಂಬಿರುವನೋ, ಯಾರ ಮನದ ಸರ್ವ ಅಂಗಗಳೂ ಭಗವಂತನಲ್ಲಿಯೇ ಕೂಡಿಕೊಂಡಿರುವವೋ ಅಂಥವನ ಪಶ್ಯಂತಿವಾಣಿಯಲ್ಲಿ ಭಗ ವಂತನ ಹೊರತಾದ ಇತರ ಕಲ್ಪನೆ, ಭಾವನೆ, ವಾಸನಾ, ವಿಚಾರ, ಸ್ಮೃತಿ, ಲಕ್ಷ್ಯ ಮತ್ತು ಸಂವೇದನ [ಅರಿವು, ಅನಿಸಿಕೆ, ಅನುಭವ] ಇವುಗಳಿಗೆ ಇಂಬು [ಸ್ಥಾನ] ಇರುವದಿಲ್ಲ. ಈ ಅವಸ್ಥೆ ಪ್ರಾಪ್ತವಾದ ಕೂಡಲೇ ಇವನ ದೇಹದ ಮೇಲಿನ ಭಾನ (ನೆನಪು, ಲಕ್ಷ, ಎಚ್ಚರ) ಲೋಪವಾಗುವದು. ಮತ್ತು ಪರಾವಾಣಿಯ ಉದಯವಾಗುವದು. ಅಂದರೆ ಇದೇ ಪ್ರತಿಭೆಯ ಉದಯ (ಜನ್ಮ)ವೇ ಆಗುವದು. (ಕವಿಯಲ್ಲಿ ದಿವ್ಯದೃಷ್ಟಿ, ವಿಶೇಷ ಪ್ರಜ್ಞೆಗಳ ಉದಯ ವಾಗುವಿಕೆ). ಭಕ್ತನ ಬಾಬತಿನಲ್ಲಿ (ವಿಷಯದಲ್ಲಿ) ಈ ಪ್ರತಿಭೆಯು ದಿನ ದಿನಕ್ಕೂ ಅಗದೀ ಚಿಕ್ಕ ಬಾಲಕನಂತೆ ಪರಿ ಪುಷ್ಟವಾಗುತ್ತ ಹೋಗುವದು. ಇದು ಯಾವ ಕಾಲಕ್ಕೂ ಮರೆಯಾಗುವದಿಲ್ಲ. ಸದಾ ಜಾಗ್ರತವಿರುವದು. ಇದರಿಂ ದಾಗಿ ಇವನು ಏನೇನು ಮಾತನಾಡುವನೋ ಅದೆಲ್ಲವೂ ಓಂಕಾರಮಯವಿರುವದರಿಂದ ಅತ್ಯಂತ ಶ್ರೇಷ್ಠ ಪ್ರಾಸಾದಿಕ ವಾಣಿಯೇ ಇದಾಗಿರುವದು. ಇನ್ನು ಶ್ರೀ ಸಮರ್ಥರು ಉತ್ತಮ ಕಾವ್ಯ ರಚನೆಯ ಬಗ್ಗೆ ತಮ್ಮ ಸ್ವತಃದ ಕಲ್ಪನೆ ಯನ್ನು ವರ್ಣಿಸುತ್ತಾರೆ:- ಈಗ ಉತ್ತಮ ಕವಿತೆಯ ಲಕ್ಷಣಗಳ ಬಗ್ಗೆ ಕೇಳಿರಿ. ಹಿಂದೆ ಇದರ ಬಗ್ಗೆ ಹೇಳಲಾಗಿದೆ. ಆದರೂ ಪುನಃ ಅದನ್ನೇ ಹೇಳುವೆನು. ಇದನ್ನು ಹೇಳುವದರಿಂದ ಶ್ರೋತಾ ಜನರ ಅಂತಃಕರಣ ತೃಪ್ತವಾಗು ವದು. [೩೫] ಉತ್ತಮ ಕವಿತೆಯು ನಿರ್ಮಲ, ಸರಳ ಮತ್ತು ಹಿಂದು ಮುಂದಿನ ಸಂದರ್ಭವನ್ನು ಸ್ಪಷ್ಟ ತಿಳಿಸು ವಂಥದು ಇರಬೇಕು. (ದೂರಾನ್ವಯದವು ಇರಬಾರದು). [೩೬] ಕವಿತೆಯು ಭಕ್ತಿ ರಸದಿಂದ ಓತ ಪ್ರೋತ ತುಂಬಿ ದ್ದಾಗಿರಬೇಕು. ಕವಿತೆಯು ಒಳ್ಳೇ ಅಭಿಪ್ರಾಯದಿಂದ ಪೂರ್ಣ [ಭರಪೂರ] ತುಂಬಿದ್ದಾಗಿರಬೇಕು. ಇದರಲ್ಲಿ ಅಹಂಕಾ ರದ ಸೊಲ್ಲು ಇರಬಾರದು. [೩೭] ಕವಿತೆಯಲ್ಲಿ ಕೇವಲ ಭಗವಂತನ ಕೀರ್ತಿಯೇ ಸಂಪೂರ್ಣ(ಭರಪೂರ)ಇರಬೇಕು. ಕವಿತೆಯು ಮನಸ್ಸನ್ನು ಪ್ರಸನ್ನಗೊಳಿಸುವಂತಹದು ಮತ್ತು ಮಧುರ ಹಾಗೂ ಸುಂದರವಾಗಿರಬೇಕು. ಕವಿತೆಯಲ್ಲಿ ದೇವರ ಪರಾಕ್ರಮ ಅಗದೀ ಬಹಳಷ್ಟು ಭರಪೂರ ವರ್ಣಿಸಿದ್ದಾಗಿರಬೇಕು. [೩೮] ಕವಿತೆಯು ತಿಳಿಯಲಿಕ್ಕೆ ಬಹಳ ಸುಲಭವಿರಬೇಕು. ಹಾಗೂ ಅದು ಬಹಳ ದೊಡ್ಡದಾಗಿರಬಾರದು. ಚುಟುಕಾಗಿ ಸಣ್ಣದಾಗಿರಬೇಕು. ಕವಿತಾ ಕ್ಲಿಷ್ಟ ವಾಗಿರಬಾರದು. ಕವಿತೆಯ ಚರಣಗಳು ಕವಿತಾ ನಿಯಮದಂತೆ (ಛಂದಸ್ಸಿನಂತೆ,) ರಚಿಸಿದವಾಗಿರಬೇಕು (೩೯) ಕವಿ ತೆಯಲ್ಲಿ ಮುಖ್ಯವಾಗಿ ಭಕ್ತಿರಸ ಹೆಚ್ಚು ಇರಬೇಕು. ಭಕ್ತಿ ರಸದಿಂದ ಕವಿತೆಯು ಮೃದು, ಮಂಜುಳ, ಕೋಮಲ, ಮತ್ತು ಭವ್ಯ, ಪ್ರಶಸ್ತ, ಮತ್ತು ಅದ್ಭುತ, ಅಪೂರ್ವ, ವಿಶಾಲ, ಮತ್ತು ವ್ಯವಸ್ಥಿತವಾಗಿ ರಚಿಸಿದ್ದು, ಮತ್ತು ಮಧುರ, ಹಾಗೂ ಸುರಮ್ಯರಸದಿಂದ ತುಂಬಿದ್ದಾಗಿರಬೇಕು. [೪೦] ಉತ್ತಮ ಕವಿತೆಯಲ್ಲಿ ಮುಂದೆ ಹೇಳಿದ ಅನೇಕ ಪ್ರಕಾರಗಳು ಇರಬೇಕು. ಅಕ್ಷರ ಬಂಧ(ಅಂದರೆ ಸರಿಯಾದ ಅಕ್ಷರಗಳ ಸ್ವರಬದ್ಧ ಜೋಡಣೆಯು),ಪದಬಂಧ(ಅಂದರೆ ಸರಿಯಾದ ಪದಗಳ ರಚನೆಯು) ಇದಕ್ಕೆ ಚಿತ್ರ ಕಾವ್ಯವೆಂದೂ ಅನ್ನುವರು. (ಚಿತ್ರ ಕಾವ್ಯವೆಂದರೆ ಇದರಲ್ಲಿ ವ್ಯಂಗ್ಯ ಪ್ರಧಾನ ಶಬ್ದಗಳು ಇರುವದಿಲ್ಲ. ಕೇವಲ ಶಬ್ದ ಅಥವಾ ಅರ್ಥ ಇವುಗಳ ಚಮತ್ಕಾರ ಮಾತ್ರ ಇರುವ ಕಾವ್ಯವು). ಅನೇಕ ಚತುರ ರಚನೆಯುವು, ಚಾತುರ್ಯದಿಂದ ರಚಿಸಿದ ಅನೇಕ ಪ್ರಕಾರದ ಛಂದಸ್ಸಿನವು, ಬೇರೆ ಬೇರೆ ಧಾಟಿ ಮುದ್ರಾದಿಗಳಿಂದ ಕೂಡಿದವೂ ಇರಬೇಕು. [೪೧] ಅನೇಕ ಪ್ರಕಾರದ ಯುಕ್ತಿ ಯುಕ್ತ ಮತ್ತು ಯೋಗ್ಯವಾದ ರೀತಿಯುವು, ಅನೇಕ ಪ್ರಕಾರದ ಸುಬುದ್ಧಿ ಯುಕ್ತ ಉತ್ತಮ ವಿಚಾರವುಳ್ಳವೂ, ಸುಂದರ ಕಲಾ ಪ್ರಕಾರಗಳೂ, ಅನೇಕ ಪ್ರಕಾರದ ಸಣ್ಣ ದೊಡ್ಡ ಸಿದ್ಧಿಯ ಮೇಲಿನವೂ,ನಾನಾ ಕಾರ್ಯ ಕಾರಣ ಭಾವದವೂ ಇನ್ನೂ ಅನೇಕ ಛಂದೋ ಬದ್ಧ ಪ್ರಕಾರವುಳ್ಳ ಕವಿತ್ವವಿರಬೇಕು. [೪೨] ಅನೇಕ ತರಹದ ಯೋಗ್ಯ ಮಾಹಿತಿಯುಳ್ಳವು ಅನೇಕ ಅಲಂಕಾರ, ದೃಷ್ಟಾಂತಗಳಿಂದ ಕೂಡಿದವೂ ತರ್ಕದಿಂದ ಕೂಡಿದವೂ, ಕಥಾ ಕೀರ್ತನ, ಇತರ ಕತೆಗಳವು ಅನೇಕ ಆಧಾರ ಯುಕ್ತ ರಚನೆಯುವು ಮತ್ತು ಪೂರ್ವ ಪಕ್ಷ ಸಹಿತ ಸಿದ್ಧಾಂತವಿರುವ ಕವಿತ್ವಗಳು ಇರಬೇಕು. [೪೩]

ನಾನಾ ಗತಿ ನಾನಾ ವಿತ್ಪತ್ತೀ । ನಾನಾಮತೀ ನಾನಾಸ್ಫೂರ್ತಿ ।
ನಾನಾಧಾರಣಾ ನಾನಾಧೃತೀ । ಯಾ ನಾವ ಕವಿತ್ವ ॥೪೪॥
ಶಂಕಾ ಆಶಂಕಾ ಪ್ರತ್ಯೋತ್ತರೇ । ನಾನಾ ಕಾವ್ಯೇ ಶಾಸ್ತ್ರಾಧಾರೇ ।
ತುಟೆ ಸಂಶಯೆ ನಿರ್ಧಾರೇ । ನಿರ್ಧಾರಿತಾ ॥೪೫॥
ನಾನಾ ಪ್ರಸಂಗ ನಾನಾ ವಿಚಾರ । ನಾನಾ ಯೋಗ ನಾನಾ ವಿವರ ।
ನಾನಾ ತತ್ವಚರ್ಚಾಸಾರ । ಯಾ ನಾವ ಕವಿತ್ವ ॥೪೬॥
ನಾನಾ ಸಾಧನೇ ಪುರಶ್ಚರಣೇ । ನಾನಾ ತಪೇ ತೀರ್ಥಾಟಣೇ ।
ನಾನಾ ಸಂದೇಹ ಫೇಡಣೇ । ಯಾ ನಾವ ಕವಿತ್ವ ॥೪೭॥
ಜೇಣೇ ಅನುತಾಪ ಉಪಜೆ । ಜೇಣೇ ಲೋಕಿಕ ಲಾಜೆ ।
ಜೇಣೇ ಜ್ಞಾನ ಉಮಜೆ । ಯಾ ನಾವ ಕವಿತ್ವ ॥೪೮॥
ಜೇಣೇ ಜ್ಞಾನ ಹೇ ಪ್ರಬಳೇ । ಜೇಣೇ ವೃತ್ತೀ ಹೇ ಮಾವಳೇ ।
ಜೇಣೇ ಭಕ್ತಿಮಾರ್ಗ ಕಳೆ । ಯಾ ನಾವ ಕವಿತ್ವ ॥೪೯॥
ಜೇಣೇ ದೇಹಬುದ್ಧೀ ತುಟೇ । ಜೇಣೇ ಭವಸಿಂಧು ಆಟೇ ।
ಜೇಣೇ ಭಗವಂತ ಪ್ರಗಟೇ । ಯಾ ನಾವ ಕವಿತ್ವ ॥೫೦॥
ಜೇಣೇ ಸದ್‌ಬುದ್ಧಿ ಲಾಗೇ । ಜೇಣೇ ಪಾಷಾಂಡ ಭಂಗೇ ।
ಜೇಣೇ ವಿವೇಕ ಜಾಗೇ । ಯಾ ನಾವ ಕವಿತ್ವ ॥೫೧॥
ಜೇಣೇ ಸದ್ವಸ್ತು ಭಾಸೇ । ಜೇಣೇ ಭಾಸ ಹಾ ನಿರಸೇ ।
ಜೇಣೇ ಭಿನ್ನತ್ವ ನಾಸೇ । ಯಾ ನಾವ ಕವಿತ್ವ ॥೫೨॥
ಜೇಣೇ ಹೋಯೆ ಸಮಾಧಾನ । ಜೇಣೇ ತುಟೆ ಸಂಸಾರಬಂಧನ ।
ಜಯಾ ಮಾನಿತೀ ಸಜ್ಜನ । ತಯಾ ನಾವ ಕವಿತ್ವ ॥೫೩॥
ಐಸೇ ಕವಿತ್ವ ಲಕ್ಷಣ । ಸಾಂಗತಾ ತೇ ಅಸಾಧಾರಣ ।
ಪರಂತು ಕಾಹೀ ಯೇಕ ನಿರೂಪಣ । ಬುಝಾವಯಾ ಕೇಲೇ ॥೫೪॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಕವಿತ್ವ ಕಳಾ ನಿರೂಪಣ' ನಾಮ ಸಮಾಸ ತೃತೀಯ ॥

ಅನೇಕ ಪ್ರಕಾರದ ಸ್ಥಿತಿ, ಸನ್ನಿವೇಶಗಳ ವರ್ಣನೆ, ಭಿನ್ನ ಭಿನ್ನ ಕ್ಷೇತ್ರಗಳಲ್ಲಿಯ ವಿದ್ವತ್ತು, ಕಲ್ಪನೆ, ಮತ್ತು ಸ್ಫೂರ್ತಿ ಇವುಗಳ ಬೇರೆ ಬೇರೆ ಪ್ರಕಾರಗಳು ಅನೇಕ ಪ್ರಕಾರದ ಧಾರಣ (ಅಂದರೆ ಸ್ಥಿರತೆ, ನಿಶ್ಚಿತತನ, ಬುದ್ಧಿ ಗ್ರಹಣ ಶಕ್ತಿ)ದ ಮತ್ತು ಧೈರ್ಯದ ಪ್ರಕಾರಗಳು ಮತ್ತು ಇಂಥ ಅನೇಕ ವಿಷಯಗಳ ಸುಂದರ ವರ್ಣನೆಯು ಯಾವುದರಲ್ಲಿ ಕಂಡುಬರುವದೋ ಅದು ಉತ್ತಮ ಕವಿತೆಯೆಂದು ತಿಳಿಯಬೇಕು. [೪೪] ಉತ್ತಮ ಕವಿತೆಯಲ್ಲಿ ಶಂಕಾ, (ಸಂದೇಹ) ಕುಶಂಕಾ (ದುಷ್ಟ ಸಂದೇಹ) ಮತ್ತು ಆಶಂಕಾ (ಭಯ, ಆತಂಕ) ಇವುಗಳನ್ನು ಕವಿತ್ವದಲ್ಲಿ ಮಂಡಿಸಿ ನಂತರ ಪ್ರತಿ ಉತ್ತರದಿಂದ ಇವುಗಳ ನಿರಸನ (ನಿವಾರಣೆ) ಮಾಡಿರಬೇಕು. ಅನೇಕ ಕಾವ್ಯಗ್ರಂಥಗಳು ಮತ್ತು ಶಾಸ್ತ್ರಗ್ರಂಥ ಇವುಗಳ ವಚನದ ಆಧಾರವನ್ನು ಕೊಟ್ಟು ನಿಶ್ಚಿತ ನಿರ್ಣಯ ಮಾಡಬೇಕು. ಮತ್ತು ಈ ರೀತಿಯಿಂದ ಮಾಡಿ ಸಂಶಯಗಳನ್ನೆಲ್ಲ ದೂರ ಮಾಡಬೇಕು. [೪೫] ಮುಂದಿನ ವಿಷಯಗಳು ಯಾವ ಸಾಹಿತ್ಯದಲ್ಲಿ ಕಂಡುಬರುವವೋ ಅದಕ್ಕೆ ಮಾತ್ರ ನಿಜವಾದ ಕಾವ್ಯವೆಂದು ಅನ್ನಲಿಕ್ಕೆ ಬರುವದು. ಉತ್ತಮ ಕವಿತೆಯಲ್ಲಿ ಅನೇಕ ಪ್ರಸಂಗಗಳು, ವಿಚಾರಗಳು, ಯೋಗ ವಿಷಯ, ಸ್ಪಷ್ಟೀಕರಣಗಳು ತತ್ವದ ಬಗೆಗಿನ ಚರ್ಚೆಯ ಸಾರಾಂಶ ಮತ್ತು[೪೬] ಸಾಧನಗಳು ಮತ್ತು ಪುರಶ್ಚರಣಗಳು ತಪಶ್ಚರ್ಯದ ಪ್ರಕಾರ, ತೀರ್ಥಯಾತ್ರೆಯ ಬಗ್ಗೆ ಮತ್ತು ಅನೇಕ ಶಂಕೆಗಳ ನಿವಾರಣೆಯ ಬಗ್ಗೆಯೂ ಸಹ ಇರಬೇಕು.[೪೭] ಯಾವ ಕವಿತೆಯ ಯೋಗದಿಂದ ಅನುತಾಪ ಉತ್ಪನ್ನವಾಗುವದೋ ಅಂಥದರಿಂದ ಲೌಕಿಕ ಜೀವನದ ಬಗ್ಗೆ ಅಂದರೆ ದೇಹ ಬುದ್ಧಿಯ ಸ್ವಾರ್ಥಿ ಜೀವನದ ಬಗ್ಗೆ ಲಜ್ಜೆಯೆನಿಸುವದು. ಅನುತಾಪದಿಂದ ಆತ್ಮಜ್ಞಾನ ಅಂದರೆ ಏನು ಅನ್ನುವದರ ಬಗ್ಗೆ ಸರಿಯಾದ ಕಲ್ಪನೆಯು ಬರುವದು. (ಲಕ್ಷ್ಯಕ್ಕೆ ಬರುವದು.) [೪೮] ಪ್ರಾಸಾದಿಕ ಕವಿತೆಯಿಂದ ಜ್ಞಾನದ ಉತ್ಕರ್ಷವಾಗುವದು. ವೃತ್ತಿಯು ಅದೃಶ್ಯವಾಗುವದು. (ಮನಸ್ಸಿನ ಭಾವನೆ ಮತ್ತು ಸ್ಥಿತಿ ಇವು ಮರೆಯಾಗುವವು). ಭಕ್ತಿ ಮಾರ್ಗವು ತಿಳಿಯಹತ್ತುವದು. [೪೯] ದೇಹ ಬುದ್ಧಿ ನಾಶವಾಗುವದು, ದೃಶ್ಯದ ಭವಸಾಗರ ಬತ್ತಿ ಹೋಗುವದು. ಭಗವಂತನು ಪ್ರಕಟವಾಗುವನು. [೫೦] ಸದ್ಬುದ್ಧಿ ಉಂಟಾಗುವದು, ಆತ್ಮಜ್ಞಾನಕ್ಕೆ ವಿರೋಧವಿರುವ ಮತಗಳು ಭಂಗ ಹೊಂದುವವು. ಆತ್ಮಾನಾತ್ಮ ವಿವೇಕವು ಜಾಗೃತವಾಗುವದು. [೫೧] ಸದ್ವಸ್ತುವಾದ ಪರಬ್ರಹ್ಮವು ಅನುಭವಕ್ಕೆ ಬರುವದು. ಮಿಥ್ಯೆಯಾದ ದೃಶ್ಯದ ಭಾಸವು ನಾಶವಾಗುವದು. ಭೇದಗಳೆಲ್ಲ ಇಲ್ಲದಾಗುವವು. [೫೨] ಜೀವಕ್ಕೆ ಸಮಾಧಾನ ಪ್ರಾಪ್ತವಾಗುವದು. ಸಂಸಾರದ ಬಂಧನದಿಂದ ಬಿಡುಗಡೆ ಪ್ರಾಪ್ತವಾಗುವದು. ಮತ್ತು ಸಂತ ಸಾಧುಗಳು ಮಾನ್ಯ ಮಾಡುವಂಥ ಕವಿತೆಯು ಉತ್ತಮವೂ, ಪ್ರಾಸಾದಿಕವಾದದ್ದೂ ಇರುವದು. [೫೩] ಉತ್ತಮ ಕವಿತೆಯ ಲಕ್ಷಣಗಳನ್ನು ಹೇಳುವದು. ನಿಜವಾಗಿಯೂ ಕಠಿಣವಿರುವದು. ಯಾಕೆಂದರೆ ಇದು ಬಹಳಷ್ಟು ವಿಲಕ್ಷಣವಿರುವದು. ಆದರೂ ಇದರ ಸ್ವರೂಪವನ್ನು ನಿಮಗಾಗಿ ಸ್ವಲ್ಪ ಮಟ್ಟಿಗೆ ಹೇಳಿದ್ದೇನೆ. ಇದರಿಂದ ಕವಿತ್ವದ ಸ್ವರೂಪವು ಸ್ವಲ್ಪವಾದರೂ ನಿಮ್ಮ ಲಕ್ಷ್ಯದಲ್ಲಿ ಬರುವದೆಂದು ತಿಳಿದು ಸ್ವಲ್ಪದರಲ್ಲಿ ವರ್ಣನೆ ಮಾಡಿರುವೆನು. [೫೪]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹದಿನಾಲ್ಕನೆಯ ದಶಕದೊಳಗಿನ "ಕವಿತ್ವ ಕಲಾ ನಿರೂಪಣ" ಎಂಬ ಹೆಸರಿನ ಮೂರನೆಯ ಸಮಾಸವು ಮುಗಿದುದು.

● ●

### ದಶಕ ಚತುರ್ದಶ : ಸಮಾಸ ಚತುರ್ಥ : ಕೀರ್ತನ ಲಕ್ಷಣ

॥ಶ್ರೀರಾಮ॥ ಕಲಿಯುಗೀ ಕೀರ್ತನ ಕರಾವೇ। ಕೇವಳ ಕೋಮಳ ಕುಶಳ ಗಾವೇ।
ಕರೀಣ ಕರ್ಕಶ ಕುರ್ಟೇ ಸಾಂಡಾವೇ। ಯೇಕೀಕಡೆ ॥೧॥

ಖಟಖಟ ಖುಂಟೂನ ಟಾಕಾವೀ। ಖಳಖಳ ಖಳಾಸೀ ನ ಕರಾವೀ।
ಖರೇ ಖೋಟೇ ಖವಳೋ ನೇದಾವೀ। ವೃತ್ತೀ ಆಪುಲೀ ॥೨॥

ಗರ್ವಗಾಣೇ ಗಾಊ ನಯೇ। ಗಾತಾ ಗಾತಾ ಗಳೋ ನಯೇ।
ಗೋಷ್ಯ ಗುಜ ಗರ್ಜೋ ನಯೇ। ಗುಣ ಗಾವೇ ॥೩॥

ಘುಷ್ಣೇ ಘಿಸಣೇ ಘುಸ್ಮರಪಣೇ। ಘುಸರ ಘುಸರೂ ಘುಸಾ ಖಾಣೇ।
ಘುಮಘುಮೋ ಚಿ ಘುಮುಣೇ। ಯೋಗ್ಯ ನವ್ಹೇ ॥೪॥

ನಾನಾ ನಾಮೇ ಭಗವಂತಾಚೀ। ನಾನಾ ಧ್ಯಾನೇ ಸಗುಣಾಚೀ।
ನಾನಾ ಕೀರ್ತನೇ ಕೀರ್ತೀಚೀ। ಅದ್ಭುತ ಕರಾವೀ ॥೫॥

ಚಕ ಚಕ ಚುಕಾವೇನಾ। ಚಾಟ ಚಾವಟ ಚಳಾವೇನಾ।
ಚರಚರ ಚುರಚುರ ಲಾಗೇನಾ। ಐಸೇ ಕರಾವೇ ॥೬॥

ಛಳಛಳ ಛಳಣಾ ಕರೂ ನಯೇ। ಛಳಿತಾ ಛಳಿತಾ ಛಳೋ ನಯೇ।
ಛಳಣೇ ಛಳಣಾ ಕರೂ ನಯೇ। ಕೋಣೇಯೇಕಾಚೀ ॥೭॥

# ದಶಕ ೧೪. ಸಮಾಸ ೪. ಕೀರ್ತನ ಲಕ್ಷಣ (ನುಡಿ ೩೫)

ಶಬ್ದ ಚಮತ್ಕಾರವು ಉತ್ತಮ ಕವಿತೆಯ ಒಂದು ಅಂಗವಾಗುವದೆಂದು ಇದೀಗ ಶ್ರೀ ಸಮರ್ಥರು ಮೂರನೆಯ ಸಮಾಸದಲ್ಲಿ ಹೇಳಿದರು. ಈ ಸಮಾಸದಲ್ಲಿ ಅಂಥದೇ ಒಂದು ಸಣ್ಣ ಶಬ್ದ ಚಮತ್ಕಾರ ಕಂಡು ಬರುವದು. ಇದರಲ್ಲಿ ಮೂವತ್ತೈದು ಓವಿಗಳು ಇರುವವು. ಕ ದಿಂದ ಕ್ಷ ದವರೆಗೆ ಒಂದೊಂದು ವ್ಯಂಜನಾಕ್ಷರಗಳಿಗೆ ಒಂದೊಂದು ಓವಿ ಹಾಕಿದ್ದಾರೆ. ಇದರಲ್ಲಿ ಓ ದ ಬದಲು ನ, ಞ ದ ಬದಲು ಯ, ಣ ದ ಬದಲು ನ, ಷ ದ ಬದಲು ಸ, ಳ ದ ಬದಲು ಲ, ಹೀಗೆ ಅಕ್ಷರಗಳನ್ನು ಯೋಜಿಸಿರುವದು ಕಂಡು ಬರುವದು. ಜ್ಞ ಅಕ್ಷರದ ಬಗ್ಗೆ ಓವಿ ಬರೆದಿಲ್ಲ. ವಿಷಯುವು ಕೀರ್ತನ ಮತ್ತು ಕೀರ್ತನಕಾರ ಮತ್ತು ಕೇಳುವವರು ಇವರ ಬಗ್ಗೆ ಇರುವದು. ಕೆಲವೊಂದು ಓವಿಗಳಲ್ಲಿ ಕೇವಲ ಶಬ್ದಗಳ ಭಾವಾರ್ಥವನ್ನು ಗ್ರಹಿಸುವದು ಯೋಗ್ಯವೆನಿಸುವದು.

## ದಶಕ ೧೪. ಸಮಾಸ ೪. ಕೀರ್ತನ ಲಕ್ಷಣ (ನುಡಿ ೩೫)

ಕೀರ್ತನ ಹೇಗೆ ಮಾಡಬೇಕು, ಜನರನ್ನು ಹೇಗೆ ಆನಂದದಲ್ಲಿ ಇಡಬೇಕು, ಕೀರ್ತನಕಾರನಲ್ಲಿ ಯಾವ ಗುಣಗಳು ಇರಬೇಕು. ಇತ್ಯಾದಿ ಸಾಮಾನ್ಯ ವರ್ಣನೆಯನ್ನು ಈಗ ಕೇಳಿರಿ:- ಕಲಿಯುಗದಲ್ಲಿ ಮಹತ್ವದ್ದಾದ ಕೀರ್ತನೆಯನ್ನು ಮಾಡಬೇಕು. ಇದರಲ್ಲಿ ಕೇವಲ ಕೋಮಲವಾಗಿ (ಇಂಪಾಗಿ) ಹಾಡಬೇಕು. ಆದರೆ ಕೌಶಲ್ಯಪೂರ್ಣವಾಗಿ ಹಾಡಬೇಕು. ಕಠೋರ ಮತ್ತು ಕರ್ಕಶ ಹಾಗೂ ದುರ್ಮುಖವಿರುವ ಕಪಟ-ಚೋರಟೆ ಅಂದರೆ ಕ್ಷುದ್ರ ವೃತ್ತಿಯ, ಮನೋಭೇದಕ, ಕುಹಕ ಗಾಯನ ಮಾಡಬಾರದು. ಹಾಡಬಾರದು. (೧) ಜಗಳ ತಂಟೆ, ತಕರಾರುಗಳನ್ನು ಬಿಟ್ಟು ಬಿಡಬೇಕು. ದುಷ್ಟರ ಕೂಡ ವಿರೋಧ ಕಟ್ಟಿಕೊಳ್ಳಬೇಡ, ಈರ್ಷೆಯ ವಾದಕ್ಕೆ ಇಂಬುಗೊಡಬೇಡ. ಖರೇ (ನಿಜ) ಯಾವುದು? ಸುಳ್ಳು ಯಾವುದು ? ಇದರ ಎಳೆದಾಟದಲ್ಲಿ ನಿನ್ನ ವೃತ್ತಿ ಕ್ಷೋಭೆಗೊಳ್ಳದೇ ಇರಲಿ. [೨] ಅಭಿಮಾನದಿಂದ(ಅದರಲ್ಲೂ ದುರಭಿಮಾನದಿಂದ)ಹಾಡನ್ನು ಹಾಡಬೇಡ. ಗಾಯನ ಮಾಡುವ ಮಧ್ಯದಲ್ಲಿ ಸೋತು ಹಾಡನ್ನು ಅರ್ಧಕ್ಕೆ ಬಿಡಬೇಡ. ಯಾರದೇ ಗುಪ್ತ ಗೋಷ್ಠಿ ಇದ್ದರೂ ಅದನ್ನು ಬಹಿರಂಗದಲ್ಲಿ ದೊಡ್ಡದು ಮಾಡಿ ಹೇಳಬೇಡ. ಉತ್ತಮ ಗುಣಗಳನ್ನು ಮಾತ್ರ ವರ್ಣಿಸಿ ಹೇಳಬೇಕು. [೩] ಅಭಿಮಾನ ಅಥವಾ ಈರ್ಷೆಯಿಂದ ತಿಕ್ಕಾಟ ಮತ್ತು ಒಣ ರಂಭಾಟ (ಘರ್ಘರ, ಗುಸ್‌ಘುಸ್) ಮಾಡುತ್ತ ಗಂಟಲನ್ನು ಸರಿಪಡಿಸಿಕೊಳ್ಳಲು ಕರ್ಕಶ, ಮತ್ತು ಕಠೋರವಾಗಿ ಕ್ಯಾಕರಿಸುತ್ತ (ತಿಣಕಾಟದಿಂದ) ಗಂಟಲು ಸರಿಪಡಿಸಿಕೊಳ್ಳುವದನ್ನು ಮಾಡಬಾರದು. ಹಾಡುವಾಗ ಮೇಲಿಂದ ಮೇಲೆ ಕ್ಯಾಕರಿಸಬಾರದು. ಗಂಟಲಿಗೆ ಹೆಚ್ಚು ಶ್ರಮ ಕೊಡಬಾರದು. (ಜನರ ಕೂಡ ಇದಕ್ಕಾಗಿ ಘರ್ಷಣೆಗೆ ಇಳಿಯಬಾರದು.) ಕೀರ್ತನದಲ್ಲಿ ಒಂದೇ ಸಮನೆ ಮೈಯಲ್ಲಿ ಗಾಳಿ ಸಂಚಾರವಾದವರಂತೆ ನಡೆ ನುಡಿ ಇರಬಾರದು. [೪] ಭಗವಂತನ ನಾನಾ ಪ್ರಕಾರದ ಅನೇಕ ನಾಮಗಳನ್ನು ಕೀರ್ತನದಲ್ಲಿ ಮೇಲಿಂದ ಮೇಲೆ ಹೇಳಬೇಕು. ಭಗವಂತನ ಸಗುಣ ರೂಪದ ಅನೇಕ ಪ್ರಕಾರಗಳನ್ನು ವರ್ಣನೆ ಮಾಡಬೇಕು. ಭಗವಂತನ ಅನೇಕ ಪ್ರಕಾರದ ಅದ್ಭುತ ಕೀರ್ತಿಯ ಅನೇಕ ಉದಾಹರಣೆಗಳನ್ನು ಕೀರ್ತನದಲ್ಲಿ ಹೇಳಬೇಕು. [೫] ಕೀರ್ತನಕಾರನು ಚಕ ಚಕ ಅಂದರೆ ಚಪಲ ಹಾಗೂ ವ್ಯವಸ್ಥಿತನಿರಬೇಕು. [ಚಕ ಚಕ ಅಂದರೆ ಥಳ ಥಳ ಹೊಳೆಯುವಂತೆ ಸ್ವಚ್ಛ ಹಾಗೂ ತನಗೆ ಒಪ್ಪುವ ಉತ್ತಮ ವೇಷವಿರಬೇಕು.] ಆದರಂತೆ ಚು. ಚು ಅಂತಾ ಲೊಚಗುಟ್ಟುವಂತಾಗಬಾರದು. ಅಂದರೆ ತಪ್ಪು ಹೇಳಿ ಘಸಾಯಿಸುವದು ಇರಬಾರದು. ಲಬಾಡ ಮತ್ತು ಕೆಟ್ಟ. ಜನರೊಂದಿಗೆ ಆವೇಶಗೊಳ್ಳಬಾರದು. ಏಕೆಂದರೆ ಇವರೆಲ್ಲ ನಿಮ್ಮ ಮೇಲೆ ಅಸಂತುಷ್ಟರಾಗುವರು. ಜನರು ಅಸಂತುಷ್ಟರಾಗದಂತೆ ನೀವು ಇರಬೇಕು. ಜನರ ಮನಸ್ಸಿಗೆ ನಾಟುವಂತಹ ಕುಹಕ ಶಬ್ದಾದಿಗಳನ್ನು ಒತ್ತಿ, ಒತ್ತಿ, ಬಳಿಸಬಾರದು. [೬] ಯಾರನ್ನೂ ಮುದ್ದಾಂ ಘಸಾಯಿಸಬಾರದು. ಯಾರನ್ನೂ ಸುಮ್ಮನೆ ಛಳಿಸಬಾರದು. ತಿಳಿಯಿರಿ:- ಯಾವನೊಬ್ಬನು ನಿಮ್ಮನ್ನು ಛಳಿಸಿದನೆಂದರೆ ಉಲಟ ನೀವೂ ಅವನನ್ನು ಛಳಿಸಬಾರದು. [೭]

ಜಿ ಜಿ ಜಿ ಜಿ ಮ್ಹಣಾವೇನಾ । ಜೋ ಜೋ ಜಾಗೆ ತೋ ತೋ ಪಾವನಾ ।
ಜಪಜಪೋ ಜನೀಜನಾರ್ದನಾ । ಸಂತುಷ್ಟ ಕರಾವೇ ॥೮॥

ಝಿುರಪೇ ಝುರೇ ಪಾಝುರೇ ಜಳ । ಝುಳಕೇ ದುರುನೀ ಝುಳಾಳ ।
ಝುಡಝುಡಾ ಝುಳಕತೀ ಸಕಳ । ಪ್ರಾಣೀ ತೇಥೇ ॥೯॥

ಯಾ ಯಾ ಯಾ ಯಾ ಮ್ಹಣಾವೇ ನಲಗೇ ।
ಯಾ ಯಾ ಯಾ ಯಾ ಉಪಾವ ನಲಗೇ ।
ಯಾ ಯಾ ಯಾ ಯಾ ಕಾಹೀ ಚ ನಲಗೇ। ಸುಬುದ್ಧಾಸೀ ॥೧೦॥

ಟಕ ಟಕ ಟಕ ಕರೂ ನಯೇ । ಟಾಳಾಟಾಳೀ ಟಿಕೋ ನಯೇ ।
ಟಮು ಟಮು ಟಮು ಟಮು ಲಾವೂ ನಯೇ । ಕಂಟಾಳವಾಣೇ ॥೧೧॥

ಠಸ ಠೋಂಬಸ ಠಾಕಾವೇನಾ । ಠಕ ಠಕ ಠಕ ಕರಾವೇನಾ ।
ಠಾಕೇ ಠಮುಕೇ ಠಸಾವೇನಾ । ಮೂರ್ತಿಧ್ಯಾನ ॥೧೨॥

ಡಳಮಳ ಡಳಮಳ ಡಕೋ ನಯೇ । ಡಗಮಗ ಡಗಮಗ ಕಾಮಾ ನಯೇ ।
ಡಂಡಳ ಡಂಡಳ ಚುಕೋ ನಯೇ । ಹೇ ಕಾಡಪಣೇ ॥೧೩॥

ಢಿಸಾಳ ಢಾಲಾ ಢಳತೀ ಕುಂಚೇ । ಢೋಬಳಾ ಢಸಕಣ ಡುಲೇ ನಾಚೇ ।
ಢಳೀಚಿನಾ ಢಿಗಢಿಗಾಂಚೇ । ಕಂಟಾಳವಾಣೇ ॥೧೪॥

ನಾನಾ ನೇಟಕ ನಾಗರ । ನಾನಾ ನಮ್ರ ಗುಣಾಗರ ।
ನಾನಾ ನೇಮಕ ಮಧುರ । ನೇಮಸ್ತಗಾಣೇ ॥೧೫॥

ತಾಳ ತಂಬುರೇ ತಾನಮಾನೇ । ತಾಳಬದ್ಧ ತಂತಗಾಣೇ ।
ತೂರ್ತ ತಾರ್ಕಿಕ ತನೇ ಮನೇ । ತಲ್ಲೀನ ಹೋತೀ ॥೧೬॥

ಥರ್ಥರಾ ಥರಕತೀ ರೋಮಾಂಚ । ಥೈ ಥೈ ಥೈ ಸ್ವರೇ ಉಂಚ ।
ಥಿರಥಿರ ಥಿರಾವೇ ನಾಚ । ಪ್ರೇಮಳ ಭಕ್ತಾಚಾ ॥೧೭॥

ದಕ್ಷದಾಕ್ಷಣ್ಯ ದಾಟಲೇ । ಬಂದೇ ಪ್ರಬಂದೇ ಕೋಂದಾಟಲೇ ।
ದಮುದಮು ದುಮುದುಮೋ ಲಾಗಲೇ । ಜಗದಾಂತರ ॥೧೮॥

ಧೂರ್ತ ತೂರ್ತ ಧಾನ್ವೋನ ಆಲಾ । ಧಿಂಗಬುದ್ಧೀನೇ ಧಿಂಗ ಜಾಲಾ ।
ಧಾಕೇ ಧಾಕೇ ಧೋಕಲಾ । ರಂಗ ಅವಘಾ ॥೧೯॥

ಯಾರನ್ನೂ ಮುಂದಿಟ್ಟುಕೊಂಡು ಜೀ, ಜೀ (ಹಾ.ಜೀ ಹಾ.ಜೀ) ಅನ್ನಬಾರದು. ಕೀರ್ತನ ನಾಮಸ್ಮರಣಾದಿಗಳಲ್ಲಿ ಬೇಗಂ ಬೆಳಗೂ ಎಚ್ಚರಿರುವವರೆಲ್ಲರಿಗೂ ಪರಮಾತ್ಮ ಪ್ರಾಪ್ತಿಯಾಗುವದಿಲ್ಲ. ನಿರಂತರ ಜಪವನ್ನು ಮಾಡಿ ಸರ್ವ ಭೂತಗಳಲ್ಲಿ ಇರುವಂಥ ಭಗವಂತನನ್ನು ಪ್ರಸನ್ನಗೊಳಿಸಬೇಕು. [೮] ನೀರು ಸಣ್ಣಾಗಿ ಹರಿಯುವಂಥ ಮತ್ತು ನೀರಿನ ಝರಿಯ ಪ್ರವಾಹದಿಂದ ನೀರು ಬರುವದು. ಈ ನೀರು ದೂರದಿಂದ ಬರುವಾಗ ಸಳಸಳ ಅಥವಾ ಕಲಕಲ ಎಂದು ಪ್ರಕಾಶಮಾನವಾಗಿ ಬರುವದು. ಈ ನೀರನ್ನು ಕುಡಿಯುವದಕ್ಕಾಗಿ ಪ್ರಾಣಿ ಮಾತ್ರರೆಲ್ಲ (ಜನಜಂಗುಳಿ) ಗುಂಪು ಕಟ್ಟಿ ಝರಿಯ ಹತ್ತಿರ ಬರುವರು. (ಇದರಂತೆ ಕೀರ್ತನಕ್ಕೂ ಸಹ ಜನಬರುವರು) [೯] ಇದರಂತೆ ಯಾವನು ಬುದ್ಧಿವಂತ ಜಾಣ ಮತ್ತು ತಿಳುವಳಿಕೆಯುಳ್ಳವನಿರುವನೋ ಅವನಿಗೆ "ಬರಬೇಕು-ಬರಬೇಕು" ಅನ್ನುವ ಅವಶ್ಯಕತೆ ಇರುವದಿಲ್ಲ. ಮತ್ತು ಅವನು ಬರಬೇಕು ಎಂದು ಯಾವ ಉಪಾಯ ಮಾಡಬೇಕಾಗಿಲ್ಲ. ಯಾಕಂದರೆ ಎಲ್ಲಿ ಏನಾದರೂ ವಿಶೇಷ ಮಹತ್ವದ್ದಿದ್ದರೆ ಅಲ್ಲಿಗೆ ಬರುವದಕ್ಕಾಗಿ ಜಾಣನಿಗೆ ಮುದ್ದಾಂ ಹೇಳಬೇಕಾಗುವದಿಲ್ಲ.(ಬಂದೇ ಬರುವನು). [೧೦] ಸತತ ಕಟಕಟ ಮಾಡಬಾರದು. ಟಾಳಾಟಾಳ (ಅಂದರೆ ಹೈಗೈ, ದುರ್ಲಕ್ಷ್ಯ, ಅನಾದರ) ಮಾಡಬಾರದು. ಬೇಸರ ಬರುವಂತಹ ಮಾತುಗಳನ್ನು ಒಂದೇ ಸಮನೇ ಬಡಬಡಿಸಬಾರದು. [ಮನತುಂಬಿ ಬರುವಂತೆ ಕೀರ್ತನ ಇರಬೇಕು]. (೧೧) ಅಡಮುಟ್ಟ (ಎಟ್ಟ) ಮತ್ತು ಮೂರ್ಖ ಜನರ ಸಂಗತಿ ಇರಬಾರದು. ಸುಮ್ಮ ಸುಮ್ಮನೆ ಕಿರಿ ಕಿರಿ, ಪಿರಿ ಪಿರಿ, ತಗಾದೆ ಹಚ್ಚಬಾರದು. ಜನಕ್ಕೆ ಕಾಣುವಂತೆ ಠಾಕು ಠೀಕಾಗಿ, ಮತ್ತು ಚಾಕಚಕ್ಯತೆ, ಡೌಲಿನ ಪೋಷಾಕು ಧರಿಸಿದರೆ, ಸೋಗಲಾಡಿತನ ಮಾಡಿದರೆ ಇದರಿಂದಲೇನೂ ಉಪಯೋಗವಿಲ್ಲ. ಯಾಕೆಂದರೆ ಇದರಿಂದ ಅಂತಃಕರಣದಲ್ಲಿ ಧ್ಯಾನ (ಭಗವಂತನ ಮೂರ್ತಿ) ಸ್ಥಿರಗೊಳ್ಳುವದಿಲ್ಲ. [೧೨] ಅನಿಶ್ಚಿತ ಹಾಗೂ ಅಲ್ಪ ಬುದ್ಧಿಯ ಮನಸ್ಸಿರಬಾರದು. ಸ್ಥಿರ ಮನಸ್ಸು ಇರಬೇಕು. ಹೊಯ್ದಾಡುವ ವೃತ್ತಿ ಒಳ್ಳೆಯದಲ್ಲ. ಅನಿಶ್ಚಿತ ಮನಸ್ಸಿಗೆ ಒಳಗಾಗಿ ಹುಚ್ಚುತನಕ್ಕೆ ಬೀಳಬಾರದು. ತಪ್ಪು ವರ್ತನ ಮಾಡಬಾರದು. [೧೩] ಕೀರ್ತನಕಾರರು ಅಥವಾ ಅವರ ಜನರು ಚವರಿ ಚಾಮರ ನಿಶಾನೆಗಳನ್ನು ಅಸ್ತವ್ಯಸ್ತತನದಿಂದ ಅಲ್ಲಾಡಿಸುವರು. ಗಟ್ಟಿಮುಟ್ಟಾದ ದೊಡ್ಡ ದೇಹದ ಜನರು. ದುಂಡಾಗಿ ಒಂದೇ ಕಡೆಗೆ ಕುಣಿಯುವರು.(ಹಾರಾಡುವರು). ನರ್ತಿಸುವರು. ಮತ್ತು ಒಮ್ಮೊಮ್ಮೆ ಒಂದೇ ಸ್ಥಳದಲ್ಲಿ ಅಲ್ಲಾಡದೇ ಸ್ತಬ್ಧರಾಗಿ ಬೇಸರ ತರಿಸುವವರೆಗೂ ನಿಲ್ಲುವರು. ಇದು ಸಲ್ಲದು. [೧೪] ಶಿಸ್ತು ಮತ್ತು ಸುಸಂಸ್ಕೃತತನವಿರಬೇಕು. ಅನೇಕ ಗುಣಗಳಿಂದ ಕೂಡಿದ ಸಂಪನ್ನ [ನಮ್ರ] ತನವಿರಬೇಕು. ನಿಯಮ ಬಂಧನದಿಂದ ಕೂಡಿದ ವರ್ತನೆ ಇರಬೇಕು. ಸುಮಧುರ ಹಾಡುಗಳನ್ನು ಸಮಯಕ್ಕೆ ತಕ್ಕಂತೆ ಹಾಡಬೇಕು. ಗಾಯನ ಮಾಡಬೇಕು. [೧೫] ಗಾಯನದ ಜೊತೆಗೆ ತಾಳ, ತಂಬೂರಿ, ತಾನ.[ಸ್ವರ ವಿಸ್ತಾರ] ಸ್ವರಸೂರು [ತಂತು ವಾದ್ಯ] ಇತ್ಯಾದಿ ಸಾಹಿತ್ಯಗಳು ಯೋಗ್ಯವಾದವು ಇರಬೇಕು. ಇದರಿಂದ ಆಗಿನ ಮಟ್ಟಿಗೆ ಅಂದರೆ ಕೀರ್ತನ ಕಾಲದ ಗಾಯನದ ವೇಳೆಗೆ ಗಾಯನ ತಜ್ಞರಾದ ಬುದ್ಧಿವಂತ ಶ್ರೋತಾ ಜನರು ದೇಹದಿಂದ ವ ಮನದಿಂದ ಸಂಪೂರ್ಣ ತನ್ಮಯರಾಗಿ ಸಮಾಧಾನ ಹೊಂದುವರು. [ತಲ್ಲೀನರಾಗುವರು]. [೧೬] ಕೀರ್ತನೆ ಮಾಡುವ ಪ್ರೇಮಳ ಭಕ್ತನು ಭಕ್ತಿಯ ಪ್ರೇಮಾನಂದದ ಆವೇಶದಲ್ಲಿ ಥೈ ಥೈ ಎಂದು ಕುಣಿಯುತ್ತ ಭಕ್ತಿಯ ಹಾಡನ್ನು ಉಚ್ಚ ಸ್ವರದಲ್ಲಿ ಹಾಡುವನು. ಥರ ಥರ ಕಂಪಿಸುವ ಇವನ ಶರೀರವು ರೋಮಾಂಚನಗೊಳ್ಳುವದು.ಈ ರೀತಿಯ ಕುಣಿತ ಬಹಳ ಹೊತ್ತು ನಡೆಯುವದು. [೧೭] ಆಗ ಶ್ರೋತಾ ಜನರ ಮನದಲ್ಲಿ ಕೀರ್ತನದ ಬಗ್ಗೆ ತುಂಬಾ ಆದರ ಉಂಟಾಗಿ ಇವರು ಹೇಳುವದರ ಕಡೆಗೆ ಪೂರ್ಣ ಲಕ್ಷ್ಯ ಕೊಟ್ಟು ಕೇಳುವರು. ಶ್ರೋತಾ ಜನರ ಬುದ್ಧಿಯಲ್ಲಿ ಬಂಧ, ಪ್ರಬಂಧ.[ಚಾತುರ್ಯಯುಕ್ತ ಕಾವ್ಯ] ಇತ್ಯಾದಿ ಸಾಹಿತ್ಯವು ಭರಪೂರ ತುಂಬುವದು. ಶ್ರೋತಾ ಜನರ ಅಂತರಂಗವು ಕೀರ್ತನದ ಘೋಷಣೆಯಿಂದ ತುಂಬಿ ಹೊರಸೂಸುವದು. [ದುಮದುಮಿಸುವದು] [೧೮] ಈ ರೀತಿಯಲ್ಲಿ ಕೀರ್ತನವು ಒಳ್ಳೇ ರಂಗಿನಲ್ಲಿ ನಡೆದಾಗ ಒಬ್ಬ ಅಡದಾಂಡಿಗನಾದ ಟೊಣಪ ಮನುಷ್ಯನು ಕೀರ್ತನೆ ನಡೆದಲ್ಲಿಗೆ ಬಂದು ಗೊಂದಲ ಹಾಕ ಹತ್ತುವನು. ಅವನ ಗೊಂದಲದಿಂದ ಕೀರ್ತನವು ವಿರಸಗೊಂಡು ಏನಾಗುವದೋ ಏನೋ ಅನ್ನುವ ಭೀತಿ ಆಗ ಅನಿಸುವದು[೧೯]

ನಾನಾ ನಾಟಕ ನೇಟಕೇ। ನಾನಾ ಮಾನೇ ತುಕೇ ಕೌತುಕೇ।
ನಾನಾ ನೇಮುಕ ಅನೇಕೇ। ವಿದ್ಯಾಪಾತ್ರೇ ॥೨೦॥

ಪಾಪ ಪಳೋನ ಗೇಲೇ ದುರೀ। ಪುಣ್ಯ ಪುಷ್ಕಳ ಪ್ರಗಟೇ ವರೀ।
ಪರತರತೋ ಪರೇ ಅಂತರೀ। ಚಟಕ ಲಾಗೇ ॥೨೧॥

ಫುಕಟ ಫಾಕಟ ಫಟವಣೇ ನಾಹೀ। ಫಟಕಳ ಫುಗಡೀ ಪಿಂಗಾ ನಾಹೀ।
ಫಿಕೇ ಫಸಕಟ ಫೋಲ ನಾಹೀ। ಭಕಾಧ್ಯಾ ನಿಂದಾ ॥೨೨॥

ಬರೇ ಬರೇ ಬರೇ ಮ್ಹಣತೀ। ಬಾಬಾ ಬಾಬಾ ಉದಂಡ ಕರಿತೀ।
ಬಳೇ ಬಳೇ ಚಿ ಬಳಾವಿತೀ। ಕಥೇಲಾಗೀ ॥೨೩॥

ಭಲಾ ಭಲಾ ಭಲಾ ಲೋಕೀ। ಭಕ್ತಿಭಾವೇ ಭವ್ಯ ಅನೇಕೀ।
ಭೂಷಣ ಭಾವಿಕ ಲೋಕೀ। ಪರೋಪಕಾರೇ ॥೨೪॥

ಮಾನೇಲ ತರೀ ಮಾನಾವೇ ಮನೇ। ಮತ್ತ ನ ವ್ಹಾವೇ ಮುಮುತೇನೇ।
ಮೀ ಮೀ ಮೀ ಮೀ ಬಹುತ ಜನೇ। ಮ್ಹಣಿಜೇತ ಆಹೇ ॥೨೫॥

ಯೇಕೆ ಟೋಕತ ಯೇಕಾಪಾಸೀ। ಯೇಊ ಯೇಊ ಯೇತೀ ಝುಡೇಸೀ।
ಯಾ ಯಾ ಯಾ ಯಾ ಅಸೇ ತಯಾಸೀ। ಮ್ಹಣಾವೇ ನಲಗೇ ॥೨೬॥

ರಾಗ ರಂಗ ರಸಾಳ ಸುರಂಗೇ। ಅಂತರ ಸಂಗಿತ ರಾಗೇ।
ರತ್ನ ಪರೀಕ್ಷಾ ರತ್ನಾನುರಾಗೇ। ಧಾವತೀ ಲೋಕ ॥೨೭॥

ಲವಲವಾ ಲವತೀ ಲೋಚನ। ಲಕಲಕಾ ಲಕಲೇ ಮನ।
ಲಪಲಪೋ ಲಪತೀ ಜನ। ಆವಡೀನೇ ॥೨೮॥

ವಚನೇ ವಾಲುಗೀ ವದೇನಾ। ವಾವರೇ ವಿವರೇ ವಸೇನಾ।
ವಗತ್ಪ್ರತ್ಯೇ ನಿವವೀ ಜನಾ। ವಿನಿತ ಹೋಉನೀ ॥೨೯॥

ಸಾರಾಸಾರ ಸಮುಸ್ತಾಲಾ। ಸಿಕವೂ ಸಿಕವೂ ಜನಾಲಾ।
ಸಾಹಿತ ಸಂಗಿತ ಸಜ್ಜನಾಲಾ। ಬರೇ ವಾಟೇ ॥೩೦॥

ಖರೇ ಖೋಟೇ ಖರೇ ನಾಟಲೇ। ಖರ್ಖರ ಖುಖುರ್ರ ಖುಂಟಲೇ।
ಖೋಟೇ ಖೋಟೇಪಣೇ ಗೇಲೇ। ಖೋಟೇ ಮ್ಹಣೋನಿಯಾ ॥೩೧॥

ಶಾಹಾಣೇ ಶೋಧಿತಾ ಶೋಧೇನಾ। ಶಾಸ್ತ್ರಾರ್ಥ ಶ್ರುತೀ ಬೋಧೇನಾ।
ಶುಕ ಶಾರಿಕಾ ಶಮೋನಾ। ಶಬ್ದ ತಯಾಚಾ ॥೩೨॥

ಆದರೆ ಕೀರ್ತನದಲ್ಲಿ ನಡೆದಿರುವ ಆಖ್ಯಾನದ್ದೇ ಇದೊಂದು ಭಾಗವೆಂದು ತಿಳಿದು ನಡೆದದ್ದೆಲ್ಲವೂ ನಾಟಕವಾಗಿತ್ತೆಂಬುದೂ ತಿಳಿದು ಬಂದ ಮೇಲೆ ಶ್ರೋತಾ ಕೌತುಕ ಪಡುವನು. ಶ್ರೋತಾ ಜನರ ಪೈಕಿ ಯಾರು ಅಜಾಣರಿರುವರೋ ಅಂಥವರೂ ಸಹ ನಟನ ಕೌಶಲ್ಯವನ್ನು ನೋಡಿ ತಲೆದೂಗಿ ಹರ್ಷ ಸೂಚಿಸುವರು. [೨೦] ಇಂಥ ಕೀರ್ತನದ ಪ್ರಭಾವದಿಂದ ಪಾಪವು ದೂರ ಓಡಿ ಹೋಗುವದು. ವಿಶೇಷ ಪುಣ್ಯವುಂಟಾಗುವದು. ಮತ್ತು ಜನರ ಅಂತಃಕರಣದಲ್ಲಿ ಆಳವಾಗಿ ಕೀರ್ತನದ ರುಚಿ ಹತ್ತಿ ಮನಸ್ಸುಗೊಟ್ಟು ಕೀರ್ತನ ಕೇಳಬೇಕೆಂದು ಪುನಃ ಪುನಃ ಬರುವರು. [೨೧] ಉತ್ತಮ ಕೀರ್ತನದಲ್ಲಿ ಫಡಪೋಸಿತನ ಮತ್ತು ಫಸವೇಗಿರಿ ಇರುವದಿಲ್ಲ. ಫುಗಡಿ [ಬಗಾಟಬಗರಿ] ಪಿಂಗಾ [ಹೆಣ್ಣುಮಕ್ಕಳ ಒಂದು ಆಟ, ಮಂಗನ ಕುಣಿತ, ಗೊಂದಲ, ಯಂದ್ವಾ ತದ್ವಾ ಕುಣಿಯುವದು.] ಇಂಥ ಹಲಕಾ ಕೆಲಸ ಇರುವದಿಲ್ಲವಾದ್ದರಿಂದ ಕೀರ್ತನದಲ್ಲಿ ಬೇಚವ. [ರುಚಿ ಇಲ್ಲದ] ನಿಸ್ಸತ್ವ, ಕುತ್ಸಿತತನ, ನಿಂದೆ,ಕುಚುಕುಚು ಗುಜುಗುಟ್ಟುವಿಕೆ, ಇವು ಇರುವದಿಲ್ಲ. [೨೨] ಯಾರು ಇಂಥ ಉತ್ತಮ ಕೀರ್ತನ ಮಾಡುವರೋ ಅವರಿಗೆ ಜನರು ಉತ್ತಮ ಕೀರ್ತನಕಾರ ಅನ್ನುವರು. ಬಾಬಾ, ಬಾಬಾ, [ತಾತಾ-ತಾತಾ] ಎಂದು ಇವನಿಗೆ ಎಲ್ಲ ಸೌಕರ್ಯ ಮಾಡಿಕೊಡುವರು, ಮತ್ತು ಆಗ್ರಹದಿಂದ ಕೀರ್ತನ ಕಥಾ ಮಾಡಲಿಕ್ಕೆ ನಮ್ಮಲ್ಲಿಗೆ ಬನ್ನಿರಿ-ನಮ್ಮಲ್ಲಿಗೆ ಬನ್ನಿರಿ ಎಂದು ಆಮಂತ್ರಣ ಕೊಡುವರು. [ಕರೆಯುವರು]. [೨೩] ಇಂಥ ಕೀರ್ತನಕಾರನು ಭಾವಿಕ ಮಂಡಳಿಯಲ್ಲಿ ಭೂಷಣಪ್ರಾಯನಾಗಿ ಕಾಣುವನು. ಇವನಲ್ಲಿಯ ಭಕ್ತಿಭಾವದಿಂದಾಗಿ ಜನಸಮುದಾಯದಲ್ಲಿ ಇವನು ಎದ್ದುಕಾಣುವನು. ಇವನಲ್ಲಿಯ ಪರೋಪಕಾರತನದಿಂದ ಭಾವಿಕ ಜನಸಮುದಾಯದಲ್ಲಿ ಇವನು ಭೂಷಣಪ್ರಾಯನಾಗಿ ಕಂಡುಬರುವನು.[೨೪] ಈಗ ಹೇಳಿದ್ದೆಲ್ಲವೂ ನಿಮಗೆ ಪಟಾಯಿಸಿದ್ದರೆ ಆ ಎಲ್ಲವನ್ನೂ ಮನದಲ್ಲಿ ಹಿಡಿದಿಟ್ಟುಕೊಳ್ಳಿರಿ. ನಾನು ಅನ್ನುವ ಅಹಂದಿಂದ ಸುಮ್ಮನೇ ಮೆರೆಯಬೇಡಿರಿ. ಉನ್ಮತ್ತರಾಗಬೇಡಿರಿ. "ನಾನು ನಾನು" ಅನ್ನುವ ಅಹಂಕಾರದ ದರ್ಪ ಅಥವಾ ಮಸ್ತಿಯನ್ನು ಜಗದಲ್ಲಿ ಮೆರೆಯಿಸುವ ಜನ ಬಹಳಷ್ಟು ಇರುವರು. [೨೫] ಸ್ವಾರ್ಥಿ-ಕಲಾಹೀನ ಕೀರ್ತನಕಾರನು "ನಾನು ನಿಮ್ಮಲ್ಲಿಗೆ ಕೀರ್ತನಕ್ಕೆ ಬರುವೆ" ಎಂದು ಅನ್ನುತ್ತ ಜಬರದಸ್ತಿಯಿಂದ ಬೆನ್ನು ಹತ್ತುವನು. ನಮ್ಮ ಕಡೆಗೆ ಕೀರ್ತನಕ್ಕಾಗಿ ಬರಬೇಕು. ಎಂದು ಅವನಿಗೆ ಅನ್ನಬೇಕಾಗುವದಿಲ್ಲ. [೨೬] ಯಾವ ಕೀರ್ತನವು ಭರಪೂರ ರಂಗದಲ್ಲಿ ನಡೆಯುವದೋ, ಯಾವುದು ರಸಾಳವಿರುವದೋ ಇದರ ಹೊರತಾಗಿ ಅತ್ಯಂತ ಸುರೇಖರಾಗದ ಸಂಗೀತ ಇರುವದೋ ಅಂಥ ಕೀರ್ತನಕ್ಕೆ ಜನರು ತಾವಾಗಿ ಧಾವಿಸಿ ಹೋಗುವರು. ಇದು ಯೋಗ್ಯವೇ ಇರುವದು. ಯಾಕೆಂದರೆ ರತ್ನ ಪರೀಕ್ಷಕ ಜನರು ರತ್ನಗಳ ಹಿಂದೆ ಓಡುವರು. [೨೭] ಶ್ರೋತಾ ಜನರ ಕಣ್ಣಿನಿಂದ ಆನಂದದ ನೀರು ಭರಪೂರ ಹರಿಯುವವು ಮನವು ಕೌತುಕದಿಂದ ಮತ್ತು ಆನಂದದಿಂದ ತುಂಬಿ ಬರುವದು. ಮತ್ತು ಜನರು ಗುಂಪು ಗುಂಪಾಗಿ ಕೀರ್ತನೆ ಕೇಳಲಿಕ್ಕೆ ಪ್ರೇಮದಿಂದ ಬರುವರು. ಮತ್ತು ಶಾಂತವಾಗಿ ಕುಳಿತು ಕೇಳುವರು. [೨೮] ಕೀರ್ತನಕಾರನು ವ್ಯರ್ಥ ಶಬ್ದಗಳನ್ನು ಮಾತನಾಡುವದಿಲ್ಲ. ಇವನ ಮನದಲ್ಲಿ ಕೆಟ್ಟ ಮಾತು, ಅಲ್ಲದ ವಿಷಯಗಳಿಗೆ ಇಂಬು ಇರುವದಿಲ್ಲ. ಇವನು ಅತ್ಯಂತ ನಮ್ರನಾಗಿ ಮಾತನಾಡುವನು. ತನ್ನ ನಮ್ರ ವ ಸುಶಿಕ್ಷಿತ ವಕ್ತೃತ್ವದಿಂದ ಶ್ರೋತಾ ಜನರ ಮನಸ್ಸನ್ನು ಶಾಂತಗೊಳಿಸುವನು. [೨೯] ಕೀರ್ತನ ಕೇಳಲು ಬರುವ ಎಲ್ಲ ಜನರನ್ನು ಇವನು ಸಾರಾಸಾರ ವಿಚಾರ ಮಾಡಲು ಮೇಲಿಂದ ಮೇಲೆ ತಿಳಿಸಿ ಕೊಡುವನು. ಮತ್ತು ಸಾರಾಸಾರ ವಿಚಾರ ಮಾಡಲಿಕ್ಕೆ ಹಚ್ಚುವನು. ಉತ್ತಮ ಸಾಹಿತ್ಯ ಮತ್ತು ಸಂಗೀತ ಕೇಳುವಲ್ಲಿ ಸಜ್ಜನರ ಮನಸ್ಸು ಮುಳುಗುವದು. [ಆನಂದ ಹೊಂದುವದು]. [೩೦] ಜಗತ್ತಿನಲ್ಲಿ ಖರೇ ಮತ್ತು ಖೊಟ್ಟಿ ಇವುಗಳ ಮಿಶ್ರಣವು ಎಲ್ಲ ಕಡೆಗೂ ತುಂಬಿರುವದು. ಇದರಲ್ಲಿ ಖರೇ ಯಾವುದು? ಅನ್ನುವದು ತಿಳಿಯಿತೆಂದರೆ ಜೀವನದೊಳಗಿನ ಕಾಳಜಿ, ಕಿರಿ ಕಿರಿ ತಿಕ್ಕಾಟ, ತೊಳಲಾಟಗಳೆಲ್ಲ ಬಂದು ಆಗುವವು. ದೂರವಾಗುವವು. ಖೊಟ್ಟಿ ಖೊಟ್ಟಿಯೇ ಇರುವದು. ಅರ್ಥಾತ್ ಖೊಟ್ಟಿ ಅನ್ನುವ ನಿಶ್ಚಯದಿಂದ ಇದು ಸುಳ್ಳಾಗುವದು [ಇಲ್ಲವಾಗುವದು] [೩೧] ಕೇವಲ ಓದಿ ಜಾಣರೆನಿಸಿಕೊಂಡವರಿಗೆ ಶೋಧ ಮಾಡಿಯೂ ಸಹ ಮೂಲ ಸ್ವರೂಪದ ಪ್ರಾಪ್ತಿಯಾಗುವದಿಲ್ಲ. ಶಾಸ್ತ್ರದ ಖರೇ ಅರ್ಥ ಮತ್ತು ಶ್ರುತಿಯ ಭಾವ ಇವು ಅವನ ಲಕ್ಷ್ಯಕ್ಕೆ ಬರುವದಿಲ್ಲ.ಆದರೆ ಗಿಳಿ ಮತ್ತು ಸಾಳುಂಕೆ[ಶಕುನದಪಕ್ಷಿ]ಈ ಪಕ್ಷಿಗಳಂತೆ ಇವನು ತನ್ನ ಶಬ್ದಜ್ಞಾನವನ್ನು ಬಡಬಡಿಸುತ್ತಲೇ ಇರುವನು[೩೨]

ಹರುಷೇ ಹರುಷೇ ಹಾಸಿಲಾ । ಹಾಹಾಹೋಹೋನೇ ಭುಲಲಾ ।
ಹಿತ ಹೋಈನಾ ತಯಾಲಾ । ಪರತ್ರೀಚೇ ॥೩೩॥

ಲಕ್ಷಾವೇ ಲಕ್ಷಿತಾ ಅಲಕ್ಷೀ । ಲಕ್ಷಿಲೇ ಲೋಚನಾತೇ ಲಕ್ಷೀ ।
ಲಂಗಲೇ ಲಯೋತೇ ಅಲಕ್ಷೀ । ವಿಹಿಂಗಮ ಮಾರ್ಗೇ ॥೩೪॥

ಕ್ಷೇತ್ರ ಕ್ಷೇತ್ರಜ್ಞ ಕ್ಷೋಭತೋ । ಕ್ಷಮೋನೇ ಕ್ಷಮೂನ ಕ್ಷಮವಿತೋ ।
ಕ್ಷಮಣೇ ಕ್ಷೋಭಣೇ ಕ್ಷೇತ್ರಜ್ಞ ತೋ । ಸರ್ವಾ ಠಾಈ ॥೩೫॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಕೀರ್ತನ ಲಕ್ಷಣ ನಾಮ' ಸಮಾಸ ಚತುರ್ಥ ॥

● ●

ಹರ್ಷದಿಂದ ಸಂತೋಷಗೊಂಡು ಯಾವನು ನಗುವನೋ ಮತ್ತು ಶ್ರೋತಾ ಜನರು (ತಿಳಿದೋ ತಿಳಿಯು ದೆಯೋ) ಹಾ! ಹಾ!! ಹೋ! ಹೋ!! ಮಾಡಿದ ಕೂಡಲೇ ಯಾವನು ಹರ್ಷದಿಂದ ಉಬ್ಬುವನೋ ಇಂಥ ಕೀರ್ತ ನಕಾರನಿಗೆ ಪರಮಾರ್ಥ ಸಾಧಿಸುವದಿಲ್ಲ. (೩೩) ಅಲಕ್ಷ್ಯವಿರುವ ಆ ಯಾವ ಪರಮಾತ್ಮ ಸ್ವರೂಪದ ಕಡೆಗೆ ಲಕ್ಷ್ಯ ಹಚ್ಚುವ ಪ್ರಯತ್ನ ಮಾಡಬೇಕು. ಕಣ್ಣಿನಿಂದ ಎಲ್ಲವನ್ನೂ ನೋಡಲಿಕ್ಕೆ ಬರುವದು. ಈ ಕಣ್ಣಿನ ಕಣ್ಣಾದ ಜ್ಞಾನ ದೃಷ್ಟಿಯಿಂದ ಜ್ಞಾನ ಮೂರ್ತಿಯಾದ ಆತ್ಮ ಸ್ವರೂಪವನ್ನು ನೋಡಬೇಕು. ದೇಹ ಬುದ್ಧಿಯನ್ನು ಉಲ್ಲಂ ಘಿಸಿ (ದಾಟಿ) ಸೂಕ್ಷ್ಮ ವಿಹಂಗಮ ಮಾರ್ಗದಿಂದ (ಶೂನ್ಯವನ್ನು ಸಹ ಉಲ್ಲಂಘಿಸಿ) ಅಲಕ್ಷ್ಯದಲ್ಲಿ ಲಯ ಏಕಾಗ್ರತೆ ಸಾಧಿಸಬೇಕು, (೩೪) ಶರೀರದಲ್ಲಿ ಇರುವವನಾದ ಆತ್ಮಾ ವಿಕಾರವಂತನಿರುವನು. ಇವನು ಸಿಟ್ಟಿಗೂ ಏಳುವನು. ಪ್ರಕ್ಷುಬ್ಧಗೊಳ್ಳುವನು. ಆಗ ಇವನನ್ನು ಶಾಂತಗೊಳಿಸಿ ಇತರರನ್ನೂ ಶಾಂತ ಮಾಡುವವನೇ ಧನ್ಯನು. ಕ್ಷುಬ್ಧ ಆಗುವದು. ಮತ್ತು ಶಾಂತವಾಗುವದು. ಇವೆರಡೂ ಗುಣಗಳು ಯಾರಲ್ಲಿ ಕಂಡು ಬರುವವೋ ಆ ಆತ್ಮಾ ಎಲ್ಲರಲ್ಲಿಯೂ ಇರುವನು. (೩೫)

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹದಿನಾಲ್ಕನೆಯ ದಶಕದೊಳಗಿನ "ಕೀರ್ತನ ಲಕ್ಷಣ" ವೆಂಬ ಹೆಸರಿನ ನಾಲ್ಕನೆಯ ಸಮಾಸವು ಮುಗಿದುದು.

## ದಶಕ ೧೪. ಸಮಾಸ ೫. ಹರಿಕಥಾ ಲಕ್ಷಣ (ನುಡಿ ೪೧)

ಕಲಿಯುಗದಲ್ಲಿ ಕೀರ್ತನಕ್ಕೆ [ಹರಿಕಥೆಗೆ] ಬಹಳ ಮಹತ್ವವಿರುವದು. ಈ ಮಾತನ್ನು ಎಲ್ಲ ಶಾಸ್ತ್ರಕಾರರೂ ಮತ್ತು ಸಾಧು ಸಂತಾದಿಗಳೂ ಹೇಳುತ್ತ ಬಂದಿರುವರು. ಪರಮಾರ್ಥದಲ್ಲಿ ವೃತ್ತಿಯು ಹೃದಯದಲ್ಲಿ ಸ್ಥಿರವಾಗಬೇಕಾಗುವದು. ಜ್ಞಾನ ಮಾರ್ಗದಲ್ಲಿ ಅತ್ಯಂತ ಏಕಾಗ್ರರಾಗಿ ಸೂಕ್ಷ್ಮ ವಿಚಾರ ಮಾಡುತ್ತ ಹೋದರೆ ವೃತ್ತಿಯು ತನ್ನಿಂದ ತಾನೇ ಅಂತರ್ಮುಖವಾಗುವದು, ಸೂಕ್ಷ್ಮವಾಗುವದು, ಮತ್ತು ಹೃದಯದಲ್ಲಿ ಸ್ಥಿರವಾಗಿ ವಾಸವಾಗುವದು. ಯೋಗ ಮಾರ್ಗದಲ್ಲಿ ತಮ್ಮ ಮನಸ್ಸಿನದೇ ಸಾಮರ್ಥ್ಯವನ್ನು ಬಳಿಸಿಕೊಂಡು [ವಾಪರಿಸಿಕೊಂಡು] ವೃತ್ತಿಯನ್ನು ಪಸರಿಸ ಕೊಡುವದಿಲ್ಲ. ಮತ್ತು ಅಂಕುರ [ಪ್ರಾದುರ್ಭಾವ, ಮೊಳಕೆ] ಸಹ ಆಗಗೊಡುವದಿಲ್ಲ. ಈ ರೀತಿಯಿಂದ ವೃತ್ತಿಯಲ್ಲಿ ಹರಿದಾಡುವ ಮನೋಬಲವನ್ನು ಹಿಡಿದಿಟ್ಟರೆ. [ಅಡಕಾಯಿಸಿಟ್ಟರೆ] ಅದು ಕುಂಡಲಿನಿಯ ಸಹಾಯದಿಂದ ಸುಷುಮ್ನಾದಿಂದ ಮೇಲಕ್ಕೆ ಏರುವದು. ಮತ್ತು ಅದು ಹೃದಯದಲ್ಲಿ ಸ್ಥಿರವಾಗುವದು.

ಈ ವಿಜ್ಞಾನ ಯುಗದಲ್ಲಿ ಮನುಷ್ಯನು ಅವಿಚಾರಿಯಾಗಿ ಭೇದಾ ಭೇದಗಳನ್ನು ಎಣಿಸದೆ ಹದ್ದುಮೀರಿ [ಅಳತೆ ಮೀರಿ] ವಿಷಯಾಸಕ್ತನಾಗಿ ವಿಷಯದ ಬೆನ್ನು ಹತ್ತಿದ್ದರಿಂದ ಮೇಲೆ ಹೇಳಿದ ಎರಡೂ ಮಾರ್ಗಗಳು

ಸಾಮಾನ್ಯ ಮನುಷ್ಯನ ಹಿಡಿತಕ್ಕೆ ಸಿಗದೆ ದೂರ ಹೋಗಿರುವವು. ಭಕ್ತಿ ಮಾರ್ಗದಲ್ಲಿಯೂ ಸಹ ಏಕಾಂತದಲ್ಲಿ ಕುಳಿತು ಭಗವಂತನ ಚಿಂತನೆ ಮಾಡುವ ಸಮಯ [ರೂಢಿ, ಅಭ್ಯಾಸ]ವಿಲ್ಲ. ಇದಕ್ಕೆ ಅನುಕೂಲವೂ ಇರುವದಿಲ್ಲ. (ಉಳಿದಿಲ್ಲ). ಇಂಥ ಪರಿಸ್ಥಿತಿಯಲ್ಲಿ ಒಂದೇ ವಿಚಾರದಿಂದ ಕೂಡಿದ ಸಮೂಹದಲ್ಲಿ ಯಾವ ಸಮಷ್ಟಿ ಮನ[ಸಮಗ್ರ ಮನ] ಅಥವಾ ದೊಡ್ಡ (ವಿಶಾಲ) ಸಮೂಹ ಮನ ತಯಾರ ಆಗುವದೋ ಅದರ ಲಾಭವನ್ನು ವ್ಯಕ್ತಿಯು ಮಾಡಿಕೊಳ್ಳಲು ಶಕ್ಯವಿರುವದು. ಇದು ಕೀರ್ತನದಲ್ಲಿಯಂತೂ ಸಹಜ ಸಾಧಿಸುವದು. ಹರಿ ಕೀರ್ತನವು ಬಹು ಅಗಾಧವಿರುವದು. ಇದರಲ್ಲಿ ರಸಭರಿತ ಕಥೆ ನಾಟ್ಯ, ಸಂಗೀತ, ನೃತ್ಯ, ವಿನೋದ, ನೀತಿ, ನ್ಯಾಯ, ಭಕ್ತಿ, ಅಧ್ಯಾತ್ಮ, ಇವುಗಳದು ಬಹಳ ವಿಲಕ್ಷಣ ಮಿಶ್ರಣವಿರುವದು. ಇದರಿಂದಾಗಿ ಯಾವತ್ತೂ ಸ್ತರ (ಹಂತ) ದ, ಸರ್ವ ಸ್ವಭಾವದ, ಸರ್ವ ವ್ಯವಸಾಯದ, ಸರ್ವ ಪರಿಸ್ಥಿತಿಯಲ್ಲಿಯ, ಜನರನ್ನು ಒಂದೇ ಒಂದು ಭಗವಂತನ ಪ್ರೇಮದ ಪೂರ್ಣಮಯ ವಾತಾವರಣದಲ್ಲಿ ತಂದು ಬಿಡಲಿಕ್ಕೆ ಬರುವದು. ಅಲ್ಲಿ ಅಗದೀ ಸಾಮಾನ್ಯ ಮನುಷ್ಯನೂ ಸಹ ಕೆಲವೊಂದು ಕಾಲವಾದರೂ ಸ್ವಲ್ಪ ಅಂತರ್ಮುಖನಾಗದೇ ಇರಲಾರನು. ಈ ರೀತಿಯಲ್ಲಿ ತಿಳಿಯದೇ ಬಿತ್ತಿದ ಅಂತರ್ಮುಖ ಬೀಜವು ಕಾಲಾಂತರದಲ್ಲಿ ಬೆಳೆಯುವದು. ಮತ್ತು ಪರಮಾರ್ಥದ ಮಾರ್ಗದ ಮೇಲೆ ತಂದು ಬಿಡುವದು. ನಮ್ಮ ಕೀರ್ತನ ಸಂಸ್ಥೆಗಳು ಪರಮಾರ್ಥವನ್ನು ಉಳಿಸಿ ಬೆಳೆಸುವ ವಿಷಯದಲ್ಲಿ ಬಹಳಷ್ಟು ಮಹತ್ವದ ಕಾರ್ಯ ಮಾಡಿರುವವು.ಅನ್ನುವದರಲ್ಲಿ ಸಂಶಯವಿಲ್ಲ. ಕೀರ್ತನ ಮಾಡುವ ಹರಿದಾಸನು ಹೇಗಿರಬೇಕು ? ಮತ್ತು ಅವನು ಕೀರ್ತನ ಹೇಗೆ ಮಾಡಬೇಕು. ? ಈ ಎರಡು ಮಹತ್ವದ ಮಾತುಗಳ ಬಗ್ಗೆ ಈ ಸಮಾಸದಲ್ಲಿ ಸಂಕ್ಷಿಪ್ತವಾಗಿ ಆದರೆ ಬಹಳ ಮಾರ್ಮಿಕವಾಗಿ ವರ್ಣನೆ ಮಾಡಿರುವರು. ೧] ಕೀರ್ತನಕಾರ (ಹರಿದಾಸ)ನು ಉತ್ತಮ ಪ್ರಕಾರದ ಸಾಧಕನಿರಬೇಕು. ೨] ಇವನಲ್ಲಿ ಎಲ್ಲ ಪ್ರಕಾರದ ವಿದ್ಯೆ ಇರಬೇಕು. ೩] ಇವನು ಉತ್ತಮ ಕಲಾವಂತ ಅದರಲ್ಲಿಯೂ ಗಾಯನ(ಹಾಡುಗಾರಿಕೆ) ಇರಬೇಕು. ಆದರೆ ಗಾಯನ ಮಾಡುವದಕ್ಕೆ ಕೀರ್ತನದಲ್ಲಿ ಒಂದು ಮರ್ಯಾದೆ (ಕಾಲದ, ಅವಧಿಯ ನಿರ್ಬಂಧ) ಇರಬೇಕು. ೪] ಹರಿದಾಸನು ಅತ್ಯಂತ ನಿರ್ಮತ್ಸರಿ ಇರಬೇಕು. ೫] ಇವನು ಸಂತ ಸಾಧುಗಳ ಪ್ರೇಮ ಗಳಿಸಿದವನಾಗಿರಬೇಕು. ೬] ಭಗವಂತನ ನಾಮದ ಮೇಲೆ ಸ್ವತಃ ಇವನ ಪ್ರೇಮವಿರಬೇಕು. ಮತ್ತು ಸಂಪೂರ್ಣ ವಿಶ್ವಾಸವಿರಬೇಕು. ಹರಿದಾಸನು ಕೀರ್ತನವನ್ನು ಕೆಳಗೆ ಕಾಣಿಸಿದ ಸಂಗತಿಗಳನ್ನು ಗಮನಿಸಿ ಮಾಡಬೇಕು. ೧] ಸಗುಣದ ಪ್ರೇಮವನ್ನು ಹೆಚ್ಚಿಸಬೇಕು. ೨] ಭಗವಂತನಲ್ಲಿ ಪ್ರೇಮ ಉತ್ಪನ್ನವಾಗುವಂತಹ ಕಥೆ ಇರಬೇಕು. ೩] ಶ್ರೋತಾ ಜನರ ಗುಣದೋಷಗಳ ಚರ್ಚೆ ಮಾಡಬಾರದು. ೪] ಮೇಲಿಂದ ಮೇಲೆ ಪರಮಾತ್ಮನ ನಾಮ ಘೋಷವನ್ನು ದೊಡ್ಡ ಧ್ವನಿಯಿಂದ ಮಾಡಬೇಕು. ೫] ಸಾಧು ಸಂತರು ಕೇಳಲಿಕ್ಕೆ ಕುಳಿತಿದ್ದರೆ ಹೆಚ್ಚಾಗಿ ಅದ್ವೈತದ ಪ್ರತಿಪಾದನೆಯನ್ನು ಮಾಡಬೇಕು. ಭಾವಿಕರಾದ ಸಾಮಾನ್ಯ ಜನರ ಮುಂದೆ ವೈರಾಗ್ಯ ಮತ್ತು ಅನುತಾಪಗಳ ವಿಷಯ ಪ್ರತಿಪಾದನೆ ಮಾಡಬೇಕು. ೬] ಅಂತೂ ಒಟ್ಟಿನಲ್ಲಿ ಕೀರ್ತನದಲ್ಲಿ ಎಲ್ಲ ರಸಗಳೂ ಇರಬೇಕು. ಆದರೆ ಶೃಂಗಾರ ರಸ ಹೇಳುವಾಗ ಸ್ತ್ರೀಯರ ರೂಪ ಲಾವಣ್ಯಗಳನ್ನು ಹೇಳಬಾರದು. ಕೀರ್ತನದಲ್ಲಿ ಭಕ್ತಿರಸ ಹೆಚ್ಚಾಗಿ ತುಂಬಿರಬೇಕು. ೭] ಕೀರ್ತನ ಹೇಳುವವನು ತನ್ನ ಮನವನ್ನು ಭಗವಂತನಲ್ಲಿ ತೊಡಗಿಸಿ ಕೀರ್ತನ ಮಾಡಬೇಕು. ಮತ್ತು ಶ್ರೋತಾ ಜನರ ಮನದಲ್ಲಿ ಭಗವಂತನನ್ನು ತುಂಬಿ ಬಿಡಬೇಕು. ಇಂಥ ಹರಿಕಥೆಯಿಂದ ಸ್ವತಃದ ವ ಜಗತ್ತಿನ ಕಲ್ಯಾಣವಾಗುವದು.

## ದಶಕ ಚತುರ್ದಶ : ಸಮಾಸ ಪಂಚಮ : ಹರಿಕಥಾ ಲಕ್ಷಣ

॥ಶ್ರೀರಾಮ॥ ಮಾಗಾ ಹರಿಕಥೇಚೇ ಲಕ್ಷಣ । ಶ್ರೋತೀ ಕೇಲಾ ಹೋತಾ ಪ್ರಶ್ನ ।
ಸಾವಧ ಹೋಊನ ವಿಚಕ್ಷಣ । ಪರಿಸೋತ ಆತಾ ॥೧॥

ಹರಿಕಥಾ ಕೈಸೀ ಕರಾವೀ । ರಂಗೇ ಕೈಸೀ ಭರಾವೀ ।
ಜೇಣೇ ಪಾವಿಜೆ ಪದವೀ । ರಘುನಾಥ ಕೃಪೇಚೀ ॥೨॥

ಸೋನೇ ಆಣೀ ಪರಿಮಳೇ । ಯುಕ್ಷದಂಡಾ ಲಾಗತೀ ಫಳೇ ।
ಗೌಲ್ಯ ಮಾಧುರ್ಯ ರಸಾಳೇ । ತರೀ ತೇ ಅಪೂರ್ವತಾ ॥೩॥

ತೈಸಾ ಹರಿದಾಸ ಆಣೀ ವಿರಕ್ತ । ಜ್ಞಾತಾ ಆಣೀ ಪ್ರೇಮಳ ಭಕ್ತ ।
ವಿತ್ಪನ್ನ ಆಣಿ ವಾದರಹಿತ । ತರೀ ಹೇ ಹಿ ಅಪೂರ್ವತಾ ॥೪॥

ರಾಗಜ್ಞಾನೀ ತಾಳಜ್ಞಾನೀ । ಸಕಳಕಳಾ ಬ್ರಹ್ಮಜ್ಞಾನೀ ।
ನಿರಾಭಿಮಾನೇ ವರ್ತೇ ಜನೀ । ತರೀ ಹೇ ಹಿ ಅಪೂರ್ವತಾ ॥೫॥

ಮಥರ ನಾಹೀ ಜಯಾಸೀ । ಜೋ ಅತ್ಯಂತ ಪ್ರಿಯೆ ಸಜ್ಜನಾಸೀ ।
ಚತುರಂಗ ಜಾಣೇ ಮಾನಸೀ । ಅಂತರನಿಷ್ಠ ॥೬॥

ಜಯಂತ್ಯಾದಿಕೇ ನಾನಾ ಪರ್ವೇ । ತೀರ್ಥೇ ಕ್ಷೇತ್ರೇ ಜೇ ಅಪೂರ್ವೇ ।
ಜೇಥೇ ವಸಿಜೆ ದೇವಾಧಿದೇವೇ । ಸಾಮರ್ಥ್ಯರೂಪೇ ॥೭॥

ತಯಾ ತೀರ್ಥಾತೇ ಜೇ ನ ಮಾನಿತೀ । ಶಬ್ದಜ್ಞಾನೇ ಮಿಥ್ಯಾ ಮ್ಹಣತೀ ।
ತಯಾ ಪಾಮರಾ ಶ್ರೀಪತೀ । ಜೋಡೆಲ ಕೈಚಾ ॥೮॥

ನಿರ್ಗುಣ ನೇಲೇ ಸಂದೇಹಾನೇ । ಸಗುಣ ನೇಲೇ ಬ್ರಹ್ಮಜ್ಞಾನೇ ।
ದೋಹೀಕಡೆ ಅಭಿಮಾನೇ । ವೋಸ ಕೇಲೇ ॥೯॥

## ದಶಕ ೧೪. ಸಮಾಸ ೫. ಹರಿಕಥಾ ಲಕ್ಷಣ (ನುಡಿ ೪೧)

ಶ್ರೋತಾ ಜನರು ಹಿಂದೆ ಹರಿಕಥಾ ಲಕ್ಷಣಗಳು ಯಾವವು ? ಎಂದು ಪ್ರಶ್ನೆ ಕೇಳಿದ್ದರು, ಅದಕ್ಕೆ ಇಲ್ಲಿ ಉತ್ತರ ಕೊಡುವ ಮೊದಲು ಹರಿದಾಸನು ಹೇಗೆ ಇರಬೇಕು ? ಅನ್ನುವದರ ವರ್ಣನೆಯನ್ನು ಮಾಡುವರು :–

ಹರಿಕಥೆಯ ಲಕ್ಷಣಗಳು ಯಾವವು ? ಅನ್ನುವ ಪ್ರಶ್ನೆಯನ್ನು ಶ್ರೋತಾ ಈ ಮೊದಲು ಕೇಳಿದ್ದನು. ಇದಕ್ಕೆ ಉತ್ತರ ಹೇಳುವೆವು. ತಿಳಿದವರಾದ ನೀವು ಸಾವಧಾನರಾಗಿ ಈಗ ಕೇಳಿರಿ.[೧] ಹರಿಕಥಾ ಹೇಗೆ ಮಾಡಬೇಕು? ಇದರಲ್ಲಿ ರಂಗ (ರಮ್ಯತೆ) ಬರುವಂತೆ ಹೇಗೆ ಮಾಡಬೇಕು ? ಅಂದರೆ ಇಂಥ ಹರಿಕಥೆಯ ಯೋಗದಿಂದ ಭಗವಂತನ ಕೃಪೆ ಸಂಪಾದನ ಮಾಡುವ ಯೋಗ್ಯತೆಯು ಬರುವದು. ಇಂಥದರ ಬಗ್ಗೆ ಈಗ ಹೇಳುವೆನು. [೨] ತಿಳಿಯಿರಿ:– ಬಂಗಾರಕ್ಕೆ ಸುಗಂಧ ವಾಸನೆ ಬರಹತ್ತಿದರೆ ಅಥವಾ ಕಬ್ಬಿಗೆ ಸುಂದರ, ಸ್ವಾದಿಷ್ಟ, ಮಧುರ, ಮತ್ತು ಒಳ್ಳೇ ರಸ ಭರಿತ ಇರುವ ಫಲ (ಹಣ್ಣು) ಉಂಟಾದರೆ ಇದು ಒಂದು ದೊಡ್ಡ ಅಪೂರ್ವ ಯೋಗವೆನಿಸೀತು? (ಕಬ್ಬಿನ ಮೇಲೆ ಜೇನು ಇಟ್ಟಂತಾಗುವದು). [೩] ಇದರಂತೆ ಹರಿದಾಸನು. ವಿರಕ್ತ, ಶ್ರೇಷ್ಠ ಜ್ಞಾನವಂತನಿದ್ದು, ಪ್ರೇಮಲ ಭಕ್ತನಾಗಿದ್ದರೆ, ದೊಡ್ಡ ವಿದ್ವಾನನಾಗಿದ್ದು ವಾದಶೂನ್ಯನಾದ ಕೀರ್ತನಕಾರ ಇದ್ದದ್ದಾದರೆ ಇದೂ ಸಹ ಮೇಲಿನಂತೆ ಒಂದು ಅಪೂರ್ವ ಯೋಗವೆಂದೇ ತಿಳಿಯಬೇಕಾಗುವದು. (೪) ಉತ್ತಮ ರಾಗ ಜ್ಞಾನ, ಉತ್ತಮ ತಾಳ ಜ್ಞಾನ, ಹಿಂದು ಮುಂದಿನ ಮತ್ತು ಸದ್ಯದ ಕಾಲದ ಉತ್ತಮ ತಿಳುವಳಿಕೆ ಇದ್ದು ಇದರ ಹೊರತಾಗಿ ಬ್ರಹ್ಮಜ್ಞಾನವಿರುವಂಥವನಿದ್ದರೂ ಜನರ ಸಂಗಡ ಅತ್ಯಂತ ನಿರಭಿಮಾನದಿಂದ ನಡೆಯುವಂಥವನಾದ ಹರಿದಾಸನು ಸಿಗುವದೆಂದರೆ ಅಪೂರ್ವ ಯೋಗವೆಂದೇ ತಿಳಿಯಬೇಕು. [೫] ದ್ವೇಷ–ಮತ್ಸರ ಮಾಡುವದು ಎಷ್ಟೂಗೊತ್ತಿರದವ, ಸಂತ ಸಾಧುಗಳಿಗೆ ಅತ್ಯಂತ ಪ್ರಿಯನಾಗಿರುವವ, ಹಾಗೂ ಸರ್ವ ಅಂಶಗಳಿಂದ (ಬಾಜೂದಿಂದ)ಹಿಂದು ಮುಂದಿನದನ್ನು ತಿಳಿದವ ಮತ್ತು ಯಾರ ಮನದಲ್ಲಿ ಭಗವಂತನ ಮೇಲೆ ಪೂರ್ಣ ನಿಷ್ಠೆ ಇರುವದೋ ಇಂಥ ಹರಿದಾಸನು. ಅರ್ಥಾತ್ ಕೀರ್ತನಕಾರನು ನಿಜವಾಗಿಯೂ ಉತ್ತಮನೆಂದು ತಿಳಿಯಬೇಕು. ಜ್ಞಾನ, ವಿಜ್ಞಾನ, ಕಲೆ, ಮತ್ತು ಲೋಕ ಸಂಗ್ರಹ ಇವು ನಾಲ್ಕು ಚತುರ ಅಂಗಗಳು ಇರುವವು. ಜ್ಞಾನ ಅಂದರೆ ಭಗವಂತನ ಬಗ್ಗೆ ಜ್ಞಾನವು. ವಿಜ್ಞಾನ ಅಂದರೆ ದೃಶ್ಯವಿಶ್ವದ ಜ್ಞಾನವು. ಕಲಾ ಅಂದರೆ ಸಾಹಿತ್ಯ, ಸಂಗೀತ, ನೃತ್ಯ, ಇತ್ಯಾದಿಗಳ ಜ್ಞಾನವು. ಮತ್ತು ಲೋಕ ಸಂಗ್ರಹ ಅಂದರೆ ಸಮಾಜ ಸಂಘಟನೆಯನ್ನು ಮಾಡುವ ಜ್ಞಾನವು. ಉತ್ತಮ ಹರಿದಾಸನಲ್ಲಿ ಇರಬೇಕು. [೬] ದೇವರಜಯಂತಿ, ಸಂತ ಸಾಧುಗಳ ಪುಣ್ಯತಿಥಿ, ಇಂಥವು ಇನ್ನೂ ಅನೇಕ ಮತ್ತು ಪರ್ವಣಿ-ಪುಣ್ಯಕಾಲಗಳು, ಪರಮಾತ್ಮನು ಎಲ್ಲಿ ಸಮರ್ಥ ರೂಪದಿಂದ ವಾಸ ಮಾಡಿರುವನೋ ಅಂಥ ಶ್ರೇಷ್ಠ ತೀರ್ಥ ಕ್ಷೇತ್ರಗಳು (೭) ಇವುಗಳನ್ನು ಯಾವನು ಮನ್ನಿಸುವದಿಲ್ಲವೋ ಮತ್ತು ಶಬ್ದ ಪಾಂಡಿತ್ಯದ ಅಭಿಮಾನದಿಂದ "ಅದರಲ್ಲಿ ಏನೂ ಅರ್ಥವಿಲ್ಲ"ವೆಂದು ಯಾವನು ಅನ್ನುವನೋ ಅಂಥ ಪಾಮರನಿಗೆ (ಬುದ್ಧಿಗೇಡಿಗೆ) ಭಗವಂತನ ಪ್ರಾಪ್ತಿ ಆಗುವದಿಲ್ಲ. (೮) ಒಂದು ಕಡೆಗೆ ನಿರ್ಗುಣ ಖರೆ ಇದೆ ಅಥವಾ ಇಲ್ಲ. ಅನ್ನುವ ಸಂಶಯದಿಂದ ನಿರ್ಗುಣವು ಕೈತಪ್ಪಿ ಹೋಯಿತು. (ಸಂಶಯದಿಂದ ನಿರ್ಗುಣದ ಅನುಭವ ಪಡೆಯುಲಿಕ್ಕೆ ಆಗದೇ ಹೋಯಿತು. ಇದರಮೇಲೆವಿಶ್ವಾಸವಿಲ್ಲದ್ದರಿಂದ ನಿರ್ಗುಣ ದೂರಾಯಿತು). ಇನ್ನೊಂದು ಕಡೆಗೆ ಕೇವಲ ಬ್ರಹ್ಮಸ್ವರೂಪದ ಶಬ್ದ ಜ್ಞಾನದ ಬಡಬಡಿಕೆಯಿಂದ ಸಗುಣವು ಖರೇ(ನಿಜ) ಅಲ್ಲವೆಂದು ಅನಿಸಹತ್ತಿತು. ಸಗುಣದ ಮೇಲಿನ ಆದರ ಭಾವ ನಷ್ಟವಾಯಿತು. (ತೇಲನಹಿ, ತೂಪನಹಿ ಅನ್ನುವಂತೆ) ಅಂತೂ ದೇಹಾಭಿಮಾನದಿಂದಾಗಿ ಸಗುಣ ವ, ನಿರ್ಗುಣ ಇವು ಎರಡೂ ಕಡೆಗೂ ಇವನನ್ನು ಹಾಳು ಮಾಡಿಬಿಟ್ಟವು ಅಥವಾ ಹಾಳುಗೆಡವಿದವು. ಮುಖ್ಯವಾಗಿ ಸಾಧಿಸಬೇಕಾದ ಗುರಿ ಹಾಳಾಯಿತು. ನಿರ್ಗುಣದ ಶಬ್ದಜ್ಞಾನಇದ್ದರೂಸಹ ಅದರ ಅನುಭವ ಇಲ್ಲದ್ದರಿಂದ ಇದರ ಬಗೆಗಿನ ಸಂದೇಹ ಹೋಗುವದಿಲ್ಲವೆಂದೇ ಇದು ಕೈತಪ್ಪಿ ಹೋಯಿತು. ಇದೇ ಶಬ್ದಜ್ಞಾನದಿಂದಾಗಿಯೇ ಸಗುಣದ ಮೇಲೆ ಖರೇ ಪ್ರೇಮ ಮಾಡಲಿಕ್ಕೆ ಬರದಂತಾಯಿತು. ಅಂತೆಯೇ ಇದೂ ಸಹ ಕೈತಪ್ಪಿ ಹೋಯಿತು. ಈ ಪ್ರಕಾರ ಮನುಷ್ಯನು ಎರಡೂ ಕಡೆಯಿಂದ ಮೋಸ ಹೋಗಿ ಫಸಗಿ ಬಿದ್ದನು. (೯)

ಪುಢೇ ಅಸತಾ ಸಗುಣಮೂರ್ತೀ । ನಿರ್ಗುಣ ಕಥಾ ಜೇ ಕರಿತೀ ।
ಪ್ರತಿಪಾದೂನ ಉಛೇದಿತೀ । ತೇ ಚಿ ಪಢತಮೂರ್ಖ ॥೧೦॥

ಐಸೀ ನ ಕೀಜೆ ಹರಿಕಥಾ । ಅಂತರ ಪಡೆ ಉಭಯೆ ಪಂಥಾ ।
ಪರಿಸ ಲಕ್ಷಣೇ ಆತಾ । ಹರಿಕಥೇಚೀ ॥೧೧॥

ಸಗುಣಮೂರ್ತೀಪುಢೇ ಭಾವೇ । ಕರುಣಾಕೀರ್ತನ ಕರಾವೇ ।
ನಾನಾ ಧ್ಯಾನೇ ವರ್ಣಾವೇ । ಪ್ರತಾಪಕೀರ್ತೀತೇ ॥೧೨॥

ಐಸೇ ಗಾತಾ ಸ್ವಭಾವೇ । ರಸಾಳ ಕಥಾ ವೋಢವೇ ।
ಸರ್ವಾಂತರೀ ಹೇಲಾವೇ । ಪ್ರೇಮಸುಖ ॥೧೩॥

ಕಥಾ ರಚಾಯಾಚೀ ಖೂಣ । ಸಗುಣೇ ನಾಣಾವೇ ನಿರ್ಗುಣ ।
ನ ಬೋಲಾವೇ ದೋಷ ಗುಣ । ಪುಢಿಲಾಚೇ ಕದಾ ॥೧೪॥

ದೇವಾಚೇ ವರ್ಣಾವೇ ವೈಭವ । ನಾನಾ ಪ್ರಕಾರೇ ಮಹತ್ವ ।
ಸಗುಣೇ ತೇವ್ಹೂನಿಯಾ ಭಾವ । ಹರಿಕಥಾ ಕರಾವೀ ॥೧೫॥

ಲಾಜ ಸಾಂಡೂನ ಜನಾಚೀ । ಆಸ್ಥಾ ಸಾಂಡೂನ ಧನಾಚೀ ।
ನೀಚ ನವೀ ಕೀರ್ತನಾಚೀ । ಆವಡೀ ಧರಾವೀ ॥೧೬॥

ನಮ್ರ ಹೋಊನ ರಾಜಾಂಗಣೀ । ನಿಃಶಂಕ ಜಾವೇ ಲೋಟಾಂಗಣೀ ।
ಕರತಾಳಿಕಾ ನೃತ್ಯ ವಾಣೀ । ನಾಮ ಘೋಷೇ ಗರ್ಜಾವೇ ॥೧೭॥

ಯೇಕಾಚೀ ಕೀರ್ತಿ ಯೇಕಾಪುಢೇ । ವರ್ಣಿತಾ ಸಾಹಿತ್ಯ ನ ಪಡೇ ।
ಮ್ಹಣೋನಿಯಾ ನಿವಾಡೇ । ಜೇಥೀಲ ತೇಥೇ ॥೧೮॥

ಮೂರ್ತೀ ನಸ್ತಾ ಸಗುಣ । ಶ್ರವಣೀ ಬೈಸಲೇ ಸಾಧುಜನ ।
ತರೀ ಅದ್ವೈತನಿರೂಪಣ । ಅವಶ್ಯ ಕರಾವೇ ॥೧೯॥

ನಾಹೀ ಮೂರ್ತೀ ನಾಹೀ ಸಜ್ಜನ । ಶ್ರವಣೀ ಬೈಸಲೇ ಭಾವಿಕ ಜನ ।
ತರೀ ಕರಾವೇ ಕೀರ್ತನ । ಪ್ರಸ್ತಾವಿಕ ವೈರಾಗ್ಯ ॥೨೦॥

ಶೃಂಘಾರಿಕ ನವರಸಿಕ । ಯಾಮಧೇ ಸಾಂಡಾವೇ ಯೇಕ ।
ಸ್ತ್ರೀಯಾದಿಕಾಚೇ ಕೌತುಕ । ವರ್ಣೂ ನಯೇ ಕೀ ॥೨೧॥

ಲಾವಣ್ಯ ಸ್ತ್ರಿಯಾಚೇ ವರ್ಣಿತಾ । ವಿಕಾರ ಬಾಧಿಜೆ ತತ್ವತಾ ।
ಧಾರಿಷ್ಟ್ಯಾಪಾಸೂನ ಶ್ರೋತಾ । ಚಳೇ ತತ್ಕಾಳ ॥೨೨॥

ಸಗುಣ ಮೂರ್ತಿಯ ಮುಂದೆ ಕೀರ್ತನದ ಕಥೆ ಮಾಡುವಾಗ "ನಿರ್ಗುಣವೇ ಖರೆ, ಸಗುಣವು ಖರೇ ಅಲ್ಲ" ಹೀಗೆ ಪ್ರತಿಪಾದನ ಮಾಡಿ ಯಾರು ಸಗುಣವನ್ನು ಅಲ್ಲಗಳೆಯುವರೋ ಅಂಥ ಹರಿದಾಸರು ಪಢತ ಮೂರ್ಖ [ಪಂಡಿತ ಮೂರ್ಖ]ನೆಂದು ತಿಳಿಯಬೇಕು.(೧೦) ಹೀಗೆ ಹರಿ ಕಥಾ ಕೀರ್ತನೆ ಎಂದೂ ಮಾಡಬಾರದು. ಇದರಿಂದಾಗಿ ಸಗುಣ ಮತ್ತು ನಿರ್ಗುಣ ಎರಡಕ್ಕೂ ಎರವಾಗುವನು. ಆದ್ದರಿಂದ ಹರಿ ಕಥೆ ಹೇಗಿರಬೇಕು. ಅನ್ನುವದರ ಲಕ್ಷಣ ಗಳನ್ನು ಈಗ ಹೇಳುವೆನು ಇದನ್ನು ಕೇಳಿರಿ. (೧೧) ಇನ್ನು ಮೇಲೆ ಉತ್ತಮ ಕೀರ್ತನೆ ಹೇಗೆ ಇರಬೇಕು ಇದರ ಬಗ್ಗೆ ಕೆಲವೊಂದು ಮಹತ್ವದ ಸೂಚನೆಗಳನ್ನು ಮುಂದೆ ಕೊಟ್ಟಿರುವರು:- ಸಗುಣಮೂರ್ತಿಯ ಮುಂದೆ ಬಹಳ ಶ್ರದ್ಧೆಯಿಂದ ಮತ್ತು ಪ್ರೇಮದಿಂದ ಕೀರ್ತನೆಯನ್ನು ಮಾಡಬೇಕು. ಇದರಲ್ಲಿ ಕರುಣೆಯಿಂದ ಭಗವಂತನನ್ನು ಹೊಗಳಬೇಕು. ಭಗವಂತನ ಆನೇಕ ಪ್ರಕಾರದ ರೂಪ ಮತ್ತು ಅವನ ಅನೇಕ ಪ್ರಕಾರಗಳ ವರ್ಣನೆಯನ್ನು ಮಾಡಬೇಕು. ಭಗವಂತನ ಕೀರ್ತಿಯನ್ನು ವಿಶಾಲವಾಗಿ ಹೊಗಳುತ್ತ ಹೋಗಬೇಕು. (ಹೇಳಬೇಕು). (೧೨) ಈ ಪ್ರಕಾರವಾಗಿ ಭಗವಂತನ ಕೀರ್ತಿಯನ್ನು ಬಹುವಾಗಿ ಹೊಗಳುತ್ತ ಹಾಡಿದರೆ ಕೀರ್ತನವು ಬಹಳಷ್ಟು ರಸಭರಿತವಾಗುವದು. ಇಂಥ ಕೀರ್ತನೆಯನ್ನು ಕೇಳಿ ಶ್ರೋತಾ ಜನರ ಅಂತಃಕರಣದಲ್ಲಿ ಭಗವಂತನ ಪ್ರೇಮ ತುಂಬಿ ಹೊರಸೂಸುವದು. ಮತ್ತು ಎಲ್ಲರಿಗೂ ಆನಂದವಾಗುವದು. (೧೩) ಉತ್ತಮ ಕೀರ್ತನೆ ಮಾಡುವ ಯುಕ್ತಿಯು ಹೀಗಿರುವದು. ಸಗುಣದ ಬಗ್ಗೆ ಪ್ರತಿಪಾದಿಸುವಾಗ ನಿರ್ಗುಣವನ್ನು ಪ್ರತಿಪಾದಿಸಬಾರದು. ಇದರಂತೆಯೇ ಎದುರಿನಲ್ಲಿ ಕೀರ್ತನೆಯನ್ನು ಕೇಳುತ್ತ ಕುಳಿತಂಥ ಶ್ರೋತಾ ಜನರ ಗುಣ ದೋಷಗಳನ್ನು ಕೆದಕಿ ಎತ್ತಿ ತೋರಿಸಬಾರದು. ಮತ್ತು ಅವರ ಟೀಕೆಯನ್ನು ಮಾಡಬಾರದು. (೧೪) ದೇವರ ವೈಭವದ ಬಗ್ಗೆ ವರ್ಣಿಸಿ ಮಾತನಾಡಬೇಕು. ಅನೇಕ ಪ್ರಕಾರದಿಂದ ದೇವರ ಮಹತ್ವವನ್ನು ವಿಸ್ತಾರವಾಗಿ ವಿವರಿಸಿ ಹೇಳಿ ಬಿಂಬಿಸಬೇಕು. ಸಗುಣದಲ್ಲಿ ಸಂಪೂರ್ಣ ಭಾವವನ್ನು ಇಟ್ಟು ಕೀರ್ತನೆಯನ್ನು ಮಾಡಬೇಕು. (೧೫) ಜನ ಲಜ್ಜೆಯನ್ನು ತ್ಯಜಿಸಬೇಕು. ಹಣದ ಆಶೆಯನ್ನು ಬಿಡಬೇಕು. ಕೀರ್ತನದಲ್ಲಿ ನಿತ್ಯವೂ ಹೊಸದಾಗಿ ಪ್ರೇಮ ಉತ್ಪನ್ನವಾಗುವಂತೆ ಮಾಡಬೇಕು. ಇತರ ವಿಷಯಗಳು ಕ್ಷುಲ್ಲಕವೆಂದು ಮನಸ್ಸಿನಿಂದ ಅವನ್ನು ತ್ಯಜಿಸಿ ಬಿಡಬೇಕು. ಮತ್ತು ಶುದ್ಧ ಕೀರ್ತನದ ಬಗ್ಗೆ ಪ್ರೇಮ ಬೆಳಿಸಬೇಕು. (೧೬) ದೇವರ ಸಮ್ಮುಖದಲ್ಲಿಯ ದೇವಾಲಯದ ಅಂಗಳದಲ್ಲಿ ಕೀರ್ತನಕ್ಕೆ ಎದ್ದು ನಿಂತಮೇಲೆ ಅತ್ಯಂತ ನಮ್ರರಾಗಬೇಕು. ಅತ್ಯಂತ ನಿಶ್ಶಂಕ ಮನದಿಂದ ದೇವರಿಗೆ ಸಾಷ್ಟಾಂಗ ನಮಸ್ಕಾರ ಹಾಕಬೇಕು. ತಾಳ-ಚಿಟಿಕೆಯನಾದವಿರಬೇಕು. ಅಥವಾ ಕೈಯಿಂದ ಚಪ್ಪಾಳೆ ಹೊಡೆಯಬೇಕು. (ಬಾರಿಸಬೇಕು). ಕಾಲಿನಿಂದ ನೃತ್ಯ ಮಾಡಬೇಕು. ಮತ್ತು ಬಾಯಿಯಿಂದ (ಮುಖದಿಂದ) ಭಗವಂತನ ನಾಮದ ಜಯಘೋಷ ಮಾಡಬೇಕು. (೧೭) ಪ್ರಥಮದಲ್ಲಿ ಯಾವ ದೇವರ ಮುಂದೆ ಕೀರ್ತನವಿರುವದೋ ಆ ದೇವರ ಕೀರ್ತಿಯ ವರ್ಣನೆಯನ್ನು ಮಾಡಬೇಕು. ಒಬ್ಬ ದೇವರ ಎದುರಿಗೆ ಇನ್ನೊಬ್ಬ ದೇವರ ಕೀರ್ತಿಯನ್ನು ಹೊಗಳಿದರೆ ಕಥೆಗೆ ಹೆಚ್ಚಾಗಿ ರಂಗು ಬರುವದಿಲ್ಲ. ಆದ್ದರಿಂದ ಯಾವ ದೇವರ ಎದುರು ಕೀರ್ತನೆ ಇರುವದೋ ಆ ದೇವರದೇ ಕೀರ್ತಿಯನ್ನು ವರ್ಣಿಸುವ ಕಥೆಯನ್ನು ಕೀರ್ತನಕಾರನು ಹೆಚ್ಚಾಗಿ ಆರಿಸಿಕೊಳ್ಳಬೇಕು. (೧೮) ತಿಳಿಯಿರಿ. ಎದುರಿಗೆ ಸಗುಣ ಮೂರ್ತಿ ಇಲ್ಲ. ಆದರೆ ಸಾಧು ಸಂತರು ಶ್ರವಣ ಮಾಡಲಿಕ್ಕೆ ಬಂದು ಕುಳಿತಿದ್ದಾರೆ. ಇಂಥ ಪ್ರಸಂಗದಲ್ಲಿ ಕೀರ್ತನದಲ್ಲಿ ಅದ್ವೈತದ ಬಗ್ಗೆ ವಿಷಯ ಪ್ರತಿಪಾದನೆಯನ್ನು ಅವಶ್ಯವಾಗಿ ಮಾಡಬೇಕು. (೧೯) ತಿಳಿಯಿರಿ. ಎದುರಿಗೆ ಸಗುಣ ಮೂರ್ತಿ ಇಲ್ಲ. ಮತ್ತು ಸಂತ ಸಾಧುಗಳೂ ಹಾಜರ ಇಲ್ಲ. ಕೇವಲ ಭಾವಿಕ ಜನರೇ ಶ್ರವಣ ಮಾಡಲಿಕ್ಕೆ ಕುಳಿತಿದ್ದಾರೆ. ಇಂಥ ಪ್ರಸಂಗದಲ್ಲಿ,ಕೀರ್ತನದಲ್ಲಿ ಪ್ರಪಂಚದ ಬಗ್ಗೆ ಅನುತಾಪ ಮತ್ತು ವೈರಾಗ್ಯ ಇವುಗಳ ಬಗ್ಗೆ ಪ್ರತಿಪಾದನೆ ಮಾಡಬೇಕು. (೨೦) ಕೀರ್ತನದಲ್ಲಿ ಶೃಂಗಾರ, ವೀರ, ಕರುಣ, ಹಾಸ್ಯ, ಅದ್ಭುತ, ಭಯಾನಕ, ಭೀಭತ್ಸ, ರೌದ್ರ, ವ ಶಾಂತ ಈ ನವರಸಗಳು ಅವಶ್ಯವಿರಬೇಕು, ಆದರೂ ಅದರಲ್ಲಿ ಒಂದನ್ನು ಬಿಡಬೇಕು. ಸ್ತ್ರೀಯರ ಹಾವಭಾವ, ಅವರ ಲೀಲೆ, ಕೌತುಕ, ಇವುಗಳ ವರ್ಣನೆಯನ್ನು ಮಾಡಬಾರದು. (೨೧) ಕೀರ್ತನದಲ್ಲಿ ಸ್ತ್ರೀಯರ ಸೌಂದರ್ಯದ ವರ್ಣನೆಯನ್ನು ಸಿಕ್ಕಾಪಟ್ಟೆ ಮಾಡಿದೆವೆಂದರೆ ಶ್ರೋತಾ ಜನರ ಮನದಲ್ಲಿ ಕಾಮವಾಸನೆಯ ವಿಕಾರವು ನಿರ್ಮಾಣವಾಗುವದು. ಇದರಿಂದ ಶ್ರೋತಾ ಜನರ ಸಂಯಮ ತತ್ಕಾಲ ದೂರಾಗುವದು. (೨೨)

ವ್ಹಣಉನ ತೇ ತಜಾವೇ । ಜೇ ಬಾಧಕ ಸಾಧಕಾ ಸ್ವಭಾವೇ ।
ಘೇತಾ ಅಂತರೀ ಠಸಾವೇ । ಧ್ಯಾನ ಸ್ತ್ರಿಯಾಂಚೇ ॥೨೩॥

ಲಾವಣ್ಯ ಸ್ತ್ರಿಯಾಂಚೇ ಧ್ಯಾನ । ಕಾಮಾಕಾರ ಜಾಲೇ ಮನ ।
ಕೈಚೇ ಆಠವೇಲ ಧ್ಯಾನ । ಈಶ್ವರಾಚೇ ॥೨೪॥

ಸ್ತ್ರೀ ವರ್ಣಿತಾ ಸುಖಾವಲಾ । ಲಾವಣ್ಯಾಚೇ ಭರೀ ಭರಲಾ ।
ತೋ ಸ್ವಯೇ ಜಾಣಾವಾ ಚೇವಲಾ । ಈಶ್ವರಾಪಾಸುನೀ ॥೨೫॥

ಹರಿಕಥೇಸೀ ಭಾವಬಳೇ । ಗೇಲಾ ರಂಗ ತೋ ತುಂಬಳೇ ।
ನಿಮಿಷ್ಯ ಯೇಕ ಜರೀ ಆಕಳೇ । ಧ್ಯಾನೀ ಪರಮಾತ್ಮಾ ॥೨೬॥

ಧ್ಯಾನೀ ಗುಂತಲೇ ಮನ । ಕೈಚೇ ಆಠವೇಲ ಜನ ।
ನಿಶಂಕ ನಿರ್ಲ್ಲಜ ಕೀರ್ತನ । ಕರಿತಾ ರಂಗ ಮಾಜೇ ॥೨೭॥

ರಾಗಜ್ಞಾನ ತಾಳಜ್ಞಾನ । ಸ್ವರಜ್ಞಾನೇಸೀ ಪ್ರಿತ್ಪನ್ನ ।
ಅರ್ಥಾನ್ವಯಾಚೇ ಕೀರ್ತನ । ಕರೂ ಜಾಣೇ ॥೨೮॥

ಛಪ್ಪನ್ನ ಭಾಷಾ ನಾನಾ ಕಳಾ । ಕಂಠಮಾಧುರ್ಯ ಕೋಕಿಳಾ ।
ಪರೀ ತೋ ಭಕ್ತಿಮಾರ್ಗ ವೇಗಳಾ । ಭಕ್ತ ಜಾಣತೀ ॥೨೯॥

ಭಕ್ತಾಸ ದೇವಾಚೇ ಧ್ಯಾನ । ದೇವಾ ವಾಚೂನ ನೇಣೇ ಅನ್ನ ।
ಕಳಾವಂತಾಚೇ ಜೇ ಮನ । ತೇ ಕಳಾಕಾರಜಾಲೇ ॥೩೦॥

ಶ್ರೀಹರಿವೀಣ ಜೆ ಕಳಾ । ತೇ ಚಿ ಜಾಣಾವೀ ಅವಕಳಾ ।
ದೇವಾಸ ಸಾಂಡೂನ ವೇಗಳಾ । ಪ್ರತ್ಯಕ್ಷ ಪಡಿಲಾ ॥೩೧॥

ಸರ್ಪೀ ವೇಢಿಲೇ ಚಂದನಾಸೀ । ನಿಧಾನಾಆಡ ವಿವಸೀ ।
ನಾನಾ ಕಳಾ ದೇವಾಸೀ । ಆಡ ತೈಸ್ಯಾ ॥೩೨॥

ಸಾಂಡೂನ ದೇವ ಸರ್ವಜ್ಞ । ನಾದಾಮಧ್ಯೇ ವ್ಹಾವೇ ಮಗ್ನ ।
ತೇ ಪ್ರತ್ಯಕ್ಷ ವಿಘ್ನ । ಆಡವೇ ಆಲೇ ॥೩೩॥

ಆದ್ದರಿಂದ ಸಾಧಕನಿಗೆ ಯಾವುದು ಬಾಧಿಸುವದೋ ಅದನ್ನು ಕೀರ್ತನದಲ್ಲಿ ತಪ್ಪಿಸಿ ಬಿಡಬೇಕು. ಇಲ್ಲದಿದ್ದರೆ ಸ್ತ್ರೀಯರ ವರ್ಣನೆಯಿಂದ ಸಾಧಕನ ಮನದಲ್ಲಿ ಸ್ತ್ರೀಯರ ಧ್ಯಾನ ಗಟ್ಟಿಯಾಗಿ ಉಳಿಯುವದು. (೨೩) ಸುಂದರ ಸ್ತ್ರೀಯರ ಲಾವಣ್ಯ ವರ್ಣನೆಯಿಂದ ಅವಳ ಧ್ಯಾನವೇ ಮನದಲ್ಲಿ ಬಿಂಬಿಸುತ್ತದೆ. ಇಷ್ಟೇಅಲ್ಲ. ಈ ಸಂಬಂಧ ಮನವು ಕಾಮವಿಕಾರದಿಂದ ತುಂಬಿ ಹೋಗುವದು. ಹೀಗೆ ಆದ ಮೇಲೆ ಈಶ್ವರನ ಧ್ಯಾನ ಹತ್ತುವದು ಅಶಕ್ಯ ಮತ್ತು ಅಸಾಧ್ಯವಾಗುವದು. (೨೪) ಸ್ತ್ರೀಯರ ವರ್ಣನೆಯನ್ನು ಮೇಲಿಂದ ಮೇಲೆ ಕೇಳಿ ಕೇಳಿ ಸಾಧಕನ ಮನಸ್ಸಿಗೆ ಹಿತವೆನಿಸುವದು. ಆ ಮೇಲೆ ಆ ಸ್ತ್ರೀಯ ಸೌಂದರ್ಯದ ಚಿಂತೆಯಿಂದ ಅವನ ಮನಸ್ಸು ಸಂಪೂರ್ಣ ಕಾಮಾಕಾರವಾಗಿ ಅವಳ ನೆನಪಿನಲ್ಲಿಯೇ ಪೂರ್ಣ ತುಂಬಿ ಹೋಗುವದು. ಇಂಥ ಸಾಧಕನು ತಾನಾಗಿಯೇ ಈಶ್ವರನಿಂದ ದೂರ ಹೋದನೆಂದು ತಿಳಿಯಬೇಕು. (ತನ್ನಕಾಲಮೇಲೆ ತಾನೇಕಲ್ಲುಹಾಕಿಕೊಂಡಂತೆ, ರಾತ್ರಿ ಕಂಡ ಬಾವಿಯಲ್ಲಿ ಹಗಲು ಬಿದ್ದಂತೆ ಆಗುವದು. (೨೫) ತಿಳಿಯಿರಿ. ಕೀರ್ತನದಲ್ಲಿ ಈಶ್ವರನ ವರ್ಣನೆಯ ರಂಗು ಅಕಸ್ಮಾತ್ ಕಳೆಗುಂದಿದ್ದಾದರೆ, ರಸಭಂಗವಾದರೆ, ಆಗ ನೀವು (ಕೀರ್ತನಕಾರರು) ಒಂದು ಕ್ಷಣದಷ್ಟಾದರೂ ಭಗವಂತನ ಧ್ಯಾನವನ್ನು ಭಾವ ತುಂಬಿ ಮಾಡಿದ್ದಾದರೆ ಆ ಪ್ರೇಮ ಭಕ್ತಿಯ ಬಲದಿಂದ ಭಂಗವಾದ ಕೀರ್ತನದ ರಂಗು ಪುನಃ ಉಕ್ಕೇರಿ ಹೊರ ಸೂಸುವದು. (೨೬) ಮನವು ಒಮ್ಮೆ ಭಗವಂತನ ಧ್ಯಾನದಲ್ಲಿ ತೊಡಗಿತೆಂದರೆ ಮನುಷ್ಯನಿಗೆ (ಕೀರ್ತನಕಾರನಿಗೆ)ಇತರ ಜನರ ಸ್ಮರಣೆಯು ಉಳಿಯುವದಿಲ್ಲ. ಆಮೇಲೆ ನಿಃಶಂಕ, ನಿರ್ಲಜ್ಜನಾಗಿ (ಸಂಕೋಚರಹಿತನಾಗಿ) ಕೀರ್ತನೆಯ ಕಥೆಯನ್ನು ಪ್ರಾರಂಭ ಮಾಡಿದರೆ ಆಗ ಭರಪೂರ ರಂಗ ತುಂಬಿ ಬರುವದು. (೨೭) ಉತ್ತಮ ಹರಿದಾಸನಿಗೆ ಉತ್ತಮ ರಾಗಜ್ಞಾನ, ತಾಳಜ್ಞಾನ, ಮತ್ತು ಸ್ವರಜ್ಞಾನವಿರುವದು. ಇವನು ವಿದ್ವಾನನಿದ್ದು ವಿಷಯವನ್ನು ಅತ್ಯಂತ ತರ್ಕಶುದ್ಧವಾಗಿ ಹೇಗೆ ಮಂಡಿಸಬೇಕು. ? ಅರ್ಥ ವ ಅನ್ವಯಾದಿಗಳನ್ನು ಹೇಗೆ ತಿಳಿಸಿ ಹೇಳಬೇಕು. ಇದನ್ನೆಲ್ಲ ಇವನು ತಿಳಿದಿರುವನು. [೨೮] ಕೀರ್ತನದಲ್ಲಿ ಇನ್ನೊಂದು ವಿಷಯವಿರುವದು. ಅದೇನೆಂದರೆ ಅನೇಕ ಭಾಷೆಗಳು ಇರುವವು, ಅನೇಕ ಕಲೆಗಳು ಇರುವವು, ಕೋಕಿಲೆಯಂತಹ ಕಂಠಮಾಧುರ್ಯವಿರುವದು. ಇವೆಲ್ಲವೂ ಹರಿದಾಸನಲ್ಲಿ ಇರಬೇಕಾದವುಗಳೇ, ಇವು ಇದ್ದೂಇರುವವು. ಆದರೆ ಭಕ್ತಿಮಾರ್ಗವೆನ್ನುವದು ಇದೊಂದು ಬೇರೆಯೇ ಇರುವದು. ಇದನ್ನು ಮಾತ್ರ ಕೇವಲ ಭಕ್ತನಾದವನೇ ತಿಳಿದಿರುವನು. [೨೯] ಭಕ್ತನಿಗೆ ಕೇವಲ ಒಬ್ಬ ದೇವರದೇ ಧ್ಯಾನ ಮಾಡುವದಿರುವದರಿಂದ ದೇವರ ಹೊರತಾಗಿ ಇತರ ಯಾವುದನ್ನೂ ಇವನು ತಿಳಿದಿರುವದಿಲ್ಲ. ಮತ್ತು ಇವನು ಲಕ್ಷ್ಯಕ್ಕೆ ತರುವದೂ ಇಲ್ಲ. ಕಲಾವಂತನ ಮನವು ಹೇಗೆ ಸಂಪೂರ್ಣವಾಗಿ ಕಲೆಯಿಂದಲೇ ತುಂಬಿ ಹೋಗಿರುವದೋ ಇದರಂತೆಯೇ ಭಕ್ತನ ಮನವು ಸಂಪೂರ್ಣವಾಗಿ ಭಗವಂತನಿಂದಲೇ ತುಂಬಿ ಹೋಗಿರುವದು. [೩೦] ಭಗವಂತನು ಇಲ್ಲದ ಕಲೆಯು ನಿಜವಾದ ಕಲೆಯಲ್ಲ. ಇದು ನಿಜವಾಗಿಯೂ ಅವಕಳೆಯಾಗಿರುವದು. ಕಲೆಯಿಂದಾಗಿ ಕಲಾವಂತ ಭಗವಂತನನ್ನು ಬಿಟ್ಟು ಅವನಿಂದ ಬೇರೆಯಾಗುವನು. ಇದು ಪ್ರತ್ಯಕ್ಷ ಕಂಡು ಬರುವದೇ ಆಗಿದೆ. [೩೧] ಕೀರ್ತನದಲ್ಲಿ ಸಂಗೀತವಿರಬೇಕನ್ನುವದು ನಿಜವೇ ಇರುವದು. ಆದರೆ ಹರಿದಾಸನು ಒಂದು ವೇಳೆ ಸಂಗೀತಕ್ಕೇ ಹೆಚ್ಚುಮಹತ್ವಕೊಟ್ಟು ಅದರ ನಾದಿಗೆ ಬಿದ್ದು ಅದರಲ್ಲಿ ತಲ್ಲೀನನಾದರೆ ಇದರಿಂದ ಭಗವಂತನೊಂದಿಗೆ ತದಾಕಾರವಾಗುವದರಲ್ಲಿ ವಿಘ್ನ ಉತ್ಪನ್ನವಾಗುವದು:- ಚಂದನ ಗಿಡಕ್ಕೆ ಹಾವು ಸುತ್ತಿಕೊಂಡು ಕೂಡುವದು. ಹುಗಿದಿಟ್ಟ ದ್ರವ್ಯದ ಮೇಲೆ ಹೆಣ್ಣು ಪಿಶ್ಯಾಚಿ ಕುಳಿತಿರುವದು. ಗಿಡದಲ್ಲಿ ಹಾವು ಇದ್ದದ್ದರಿಂದ ಚಂದನ ಸಿಗುವದಿಲ್ಲ. ಮತ್ತು ದ್ರವ್ಯದ ಮೇಲೆ ಸ್ತ್ರೀ ಪಿಶಾಚಿ ಇದ್ದದ್ದರಿಂದ ದ್ರವ್ಯವು ಕೈಗೆ ಬರುವದಿಲ್ಲ. ಇದರಂತೆಯೇ ಬೇರೆ ಬೇರೆ ಕಲೆಗಳು ಭಗವಂತನ ಪ್ರಾಪ್ತಿಗೆ ಅಡ್ಡ ಬರುವವು. [೩೨] ಕೀರ್ತನೆ ಮಾಡುವಾಗ ಸರ್ವಜ್ಞನಾದ ಭಗವಂತನನ್ನು ಅಲಕ್ಷಿಸಿ (ಮರೆತು) ಯಾವನು ಗಾಯನದಲ್ಲಿ ತಲ್ಲೀನನಾಗುವನೋ ಅವನಿಂದ ದೇವನು ಮರೆಯಾಗುವನು. ನಾದದಲ್ಲಿ ತಲ್ಲೀನನಾಗುವದೆಂದರೆ ಭಗವಂತನಿಗೆ ಅಡ್ಡವಾಗಿ ಬರುವಂಥ ನಿಜವಾದ ವಿಘ್ನವಾಗಿರುವದು. [೩೩]

ಯೇಕ ಮನ ಗುಂತಲೇ ಸ್ವರೀ । ಕೋಣೇ ಚಿಂತಾವಾ ಶ್ರೀಹರೀ ।
ಬಳೇಂಚಿ ಧರೂನಿಯಾ ಚೋರೀ । ಶಿಶ್ರೂಷಾ ಘೇತಲೀ ॥೩೪॥

ಕರಿತಾ ದೇವಾಚೇ ದರ್ಶನ । ಆಡವೇ ಆಲೇ ರಾಗಜ್ಞಾನ ।
ತೇಣೇ ಧರೂನಿಯಾ ಮನ । ಸ್ವರಾವರೀ ನೇಲೇ ॥೩೫॥

ಭೇಟೋ ಜಾತಾ ರಾಜದ್ವಾರೀ । ಬಳೇ ಚಿ ಧರಿಲಾ ಬೆಗಾರೀ ।
ಕಳಾವಂತಾ ತೈಸೀ ಪರೀ । ಕಳೇನೇ ಕೇಲೀ ॥೩೬॥

ಮನ ಠೇವೂನ ಈಶ್ವರೀ । ಜೋ ಕೋಣೇ ಹರಿಕಥಾ ಕರೀ ।
ತೋ ಚಿ ಯೇ ಸಂಸಾರೀ । ಧನ್ಯ ಜಾಣಾ ॥೩೭॥

ಜಯಾಸ ಹರಿಕಥೇಚೀ ಗೋಡೀ । ಉಠೆ ನೀಚ ನವೀ ಆವಡೀ ।
ತಯಾಸ ಜೋಡಲೀ ಜೋಡೀ । ಸರ್ವೋತ್ತಮಾಚೀ ॥೩೮॥

ಹರಿಕಥಾ ಮಾಂಡಲೀ ಜೇಥೇ । ಸರ್ವ ಸಾಂಡೂನ ಧಾವೇ ತೇಥೇ ।
ಆಲಸ್ಯ ನಿದ್ರಾ ದವಡೂನ ಸ್ವಾರ್ಥೇ । ಹರಿಕಥೇಸಿ ಸಾದರ ॥೩೯॥

ಹರಿಭಕ್ತಾಂಚಿಯೇ ಘರೀ । ನೀಚ ಕೃತ್ಯ ಅಂಗಿಕಾರೀ ।
ಸಾಹೇಭೂತ ಸರ್ವಾಪರೀ । ಸಾಕ್ಷಪೇ ಹೋಯೇ ॥೪೦॥

ಯಾ ನಾವ ಹರಿದಾಸ । ಜಯಾಸಿ ನಾಮೀ ವಿಶ್ವಾಸ ।
ಯೇಥೂನ ಹಾ ಸಮಾಸ । ಸಂಪೂರ್ಣ ಜಾಲಾ ॥೪೧॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಹರಿಕಥಾಲಕ್ಷಣ ನಿಶ್ಚಯು' ನಾಮ ಸಮಾಸ ಪಂಚಮು ॥

ಒಬ್ಬ ಕಳ್ಳನಿದ್ದನು ಅವನು ಒಬ್ಬ ಮನುಷ್ಯನನ್ನು ಬಲಾತ್ಕಾರದಿಂದ ಹಿಡಿದಿಟ್ಟನು. ಮತ್ತು ಅವನ ಕಡೆಯಿಂದ ತನ್ನ ಸೇವೆಯನ್ನೂ ಮಾಡಿಸಿಕೊಂಡನು. ಇದರಂತೆಯೇ ಮನವು ಒಮ್ಮೆ ಸ್ವರ[ನಾದ]ದಲ್ಲಿ ಸಿಲುಕಿ ಕೊಂಡು ಬಿಟ್ಟಮೇಲೆ ಅದಕ್ಕೆ ಭಗವಂತನ ಚಿಂತನೆಯನ್ನು ಮಾಡುವ ಸ್ವಾತಂತ್ರ್ಯವು ಉಳಿಯುವದಿಲ್ಲ. ಮನವು ಸ್ವರ[ನಾದ]ದ ಗುಲಾಮವಾಗುವದು. [೩೪] ಕೀರ್ತನಕಾರ ಭಗವಂತನ ದರ್ಶನಕ್ಕೆಂದು ಹೊರಟನು, ಹೋಗುವಾಗ ಕೀರ್ತನೆ ಮಾಡಹತ್ತಿದನು. ಮತ್ತೂ ಹಾಡಲೂ ಹತ್ತಿದನು. ದೇವರ ಹಾಡು ಹಿಂದೆಉಳಿದು ರಾಗ ತಾಳಗಳು [ಸಂಗೀತ ಜ್ಞಾನ] ಮಧ್ಯದಲ್ಲಿ ಅಡ್ಡ ಬಂದವು. ಇವನು ಮನವನ್ನು ದೇವರ ಕಡೆಗೆ ಸ್ಥಿರವಿಡುವದನ್ನು ಬಿಟ್ಟು ಸ್ವರದ ಬೆನ್ನು ಹತ್ತಿದನು. ಇದರಿಂದ ಹರಿದಾಸನು ನಿಜವಾದ ಹರಿದಾಸನಾಗಲಿಲ್ಲ. ಹಾಡುಗಾರನಾಗಿ ಭಗವಂತನಿಂದ ದೂರವಾದನು. [೩೫] ಒಬ್ಬ ಮನುಷ್ಯನು ರಾಜನನ್ನು ಭೆಟ್ಟಿಯಾಗಬೇಕೆಂದು ರಾಜವಾಡೆಯ ಕಡೆಗೆ ಹೊರಟನು. ಹಾದಿಯಲ್ಲಿ ಇವನಾರೋ ಬೇಹುಗಾರನಿರುವನೆಂದು ಬೆದರಿಸಿ ಒತ್ತಾಯಮಾಡಿ ಹಿಡಿದುಕೊಂಡರು. ಕಲಾವಂತನ ಬಗ್ಗೆ ಒಮ್ಮೊಮ್ಮೆ ಕಲಾ ಇದೇ ಪ್ರಕಾರ ಮಾಡುವದು. ದರ್ಶನಕ್ಕೆಂದು ಹೊರಟವನು ಅದನ್ನು ಬಿಟ್ಟು ಅದೆಲ್ಲಿಯೋ ನಿಂತು ಬಿಟ್ಟನು. ಹೀಗಾಗಿ ಹರಿದಾಸ ದಾರಿ ತಪ್ಪುವ ಸಂಭವವಿರುವದು. [೩೬] ಯಾವ ಹರಿದಾಸನು ಭಗವಂತನಲ್ಲಿ ಪೂರ್ಣ ಮನಸ್ಸಿಟ್ಟು ಹರಿಕಥಾ ಕೀರ್ತನ ಮಾಡುವನೋ ಅವನೇ ಈ ಜಗದಲ್ಲಿ ಧನ್ಯನೆಂದು ತಿಳಿಯಬೇಕು. [೩೭] ಯಾರಿಗೆ ಹರಿಕಥೆಯಲ್ಲಿ ಪ್ರೇಮವಿರುವದೋ ಮತ್ತು ಭಗವಂತನ ಕಥೆಯನ್ನು ಕೇಳಬೇಕೆಂಬ ಪ್ರೇಮ ಹೆಚ್ಚೆಚ್ಚು ವೃದ್ಧಿಸುತ್ತಿರುವದೋ ಅಂಥವರು ಭಗವಂತನನ್ನು ತಮ್ಮವನನ್ನಾಗಿ ಮಾಡಿಕೊಂಡರು. ಅವನ ಕೃಪಾ ಸಂಪಾದಿಸಿದರು, ಎಂದು ನಿಶ್ಚಿತವಾಗಿ ತಿಳಿಯಬೇಕು. [೩೮] ಯಾವ ಸ್ಥಳದಲ್ಲಿ ಹರಿಕಥಾ ಪ್ರಾರಂಭವಾಗುವದೋ ಆ ಸ್ಥಳಕ್ಕೆ ನಿಜ ವಾದ ಸಾಧಕನು ಎಲ್ಲ ಕೆಲಸಗಳನ್ನು ಬಿಟ್ಟು ಹರಿಕಥೆ ಕೇಳಲು ಧಾವಿಸಿ ಹೋಗುವನು. ಇವನು ಆಲಸ್ಯ, ನಿದ್ದೆ, ಮತ್ತು ಇತರ ಸ್ವಾರ್ಥಗಳನ್ನೆಲ್ಲ ಬಿಟ್ಟುಕೊಟ್ಟು ಹೋಗಿ ಕೀರ್ತನ ಕೇಳುವನು. [೩೯] ಯಾರು ಖರೇ ಭಗವಂತನ ಭಕ್ತರಿರುವರೋ ಅಥವಾ ಹರಿದಾಸರಿರುವರೋ ಅವರ ಮನೆಯಲ್ಲಿಯ ಹಲಕಾ ಅಂದರೆ ಕಡಿಮೆ ತರಗತಿಯ ಕೀಳು ಕೆಲಸಗಳನ್ನೂ ಸಹ ಭಗವಂತನು ಮನಃಪೂರ್ವಕ ಮಾಡುವನು. ಪ್ರಸಂಗ ಬಿದ್ದರೆ ಅವರ ಮನೆಯ ಕೆಲಸಕ್ಕೂ ನೆರ ವಾಗುವನು. ಅಂತೂ ಸರ್ವ ದೃಷ್ಟಿಯಿಂದ ಭಗವಂತನು ಅಗದೀ ಮನಃಪೂರ್ವಕವಾಗಿ ಸಹಾಯ ಮಾಡುವನು.[೪೦] ಭಗವಂತನ ನಾಮದ ಮೇಲೆ ಯಾರದು ವಿಶ್ವಾಸವಿರುದದೋ ಅಂಥವನಿಗೆ ಹರಿದಾಸ ಅನ್ನುವ ಈ ಹೆಸರು ಶೋಭಿ ಸುವದು. ಇವನಿಗೆ ಸರ್ವೋತ್ತಮನ ಕೃಪೆಯು ಲಾಭವಾಗುವದು. ಇಲ್ಲಿಗೆ ಈ ಸಮಾಸ ಮುಗಿಯಿತು, [೪೧]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹದಿನಾಲ್ಕನೆಯ ದಶಕದೊಳಗಿನ
"ಹರಿಕಥಾ ನಿಶ್ಚಯ" ವೆಂಬ ಹೆಸರಿನ ಐದನೆಯ ಸಮಾಸವು ಮುಗಿದುದು.

● ●

### ದಶಕ ಚತುರ್ದಶ : ಸಮಾಸ ಷಷ್ಠಮ : ಚಾತುರ್ಯ ಲಕ್ಷಣ

॥ಶ್ರೀರಾಮ॥ ರೂಪ ಲಾವಣ್ಯ ಅಭ್ಯಾಸಿತಾ ನ ಯೇ ।
ಸಹಜಗುಣಾಸ ನ ಚಲೆ ಉಪಾಯೆ ।
ಕಾಂಹೀ ತರೀ ಧರಾವೀ ಸೋಯೆ । ಅಗಾಂತುಕ ಗುಣಾಚೀ ॥೧॥

ಕಾಳೇ ಮಾಣುಸ ಗೋರೇ ಹೋಯೆನಾ । ವನಾಳಾಸ ಯೆತ್ನ ಚಾಲೇನಾ ।
ಮುಕ್ಯಾಸ ವಾಚಾ ಫುಟೇನಾ । ಹಾ ಸಹಜಗುಣ ॥೨॥

## ದಶಕ ೧೪. ಸಮಾಸ ೬. ಚಾತುರ್ಯ ಲಕ್ಷಣ (ನುಡಿ ೩೩)

ಈ ದೃಶ್ಯ ವಿಶ್ವವು ಭ್ರಾಂತಿ (ಭಾಸ) ಉಳ್ಳದ್ದಿರುವದು, ತಾತ್ಪೂರ್ತಿಕವಿರುವದು, ಮಿಥ್ಯಾ ಇರುವದು ಎಂದು ಯಾರೇ ಆಗಲಿ, ಎಷ್ಟೇ ಆಗಲಿ, ಆಕ್ರೋಶ, ರಂಭಾಟ ಮಾಡಿದರೂ ಸಹ ಮನುಷ್ಯನಿಗೆ (ಕೊನೆಯಲ್ಲಿ) ಈ ಜಗತ್ತಿನಲ್ಲಿಯೇ ಅಂದರೆ ಇಲ್ಲಿಯು ಮಾನವ ಸಮಾಜದಲ್ಲಿಯೇ ತನ್ನ ಜೀವನವನ್ನು ಸವೆಸಬೇಕಾಗುವದು. ಜೀವಿಸ ಬೇಕಾಗುವದು. ಇದರ ಹೊರತಾಗಿ ಜೀವನದಲ್ಲಿ ಹೆಚ್ಚೆಂದರೆ ಹೆಚ್ಚು ಲಾಭ ಆಗುವದಕ್ಕಾಗಿ ಮನುಷ್ಯನು ಪ್ರಯತ್ನ ಮಾಡಿದ್ದಾದರೆ ಅದನ್ನು ಮಾಡುವ ಸಾಮರ್ಥ್ಯವೂ ಅವನಲ್ಲಿ ಇರುವದು. ಆದ್ದರಿಂದ ಪ್ರತಿಯೊಬ್ಬ ಮನುಷ್ಯನು ಸ್ವಪ್ರಯತ್ನದಿಂದ ಬೇರೆ ಬೇರೆ ಗುಣಗಳ ವಿಕಾಸ ಮಾಡಿಕೊಳ್ಳಬೇಕಾಗುವದು. ಮತ್ತು ತನ್ನ ವ್ಯಕ್ತಿ ಮಹತ್ವವನ್ನು ಪ್ರಭಾವಶಾಲಿಯಾಗಿ ಮಾಡಿಕೊಳ್ಳಬೇಕು. ಹೀಗೆಂದು ಶ್ರೀಸಮರ್ಥರು ಪುನಃ ಪುನಃ ಹೇಳುತ್ತಲಿದ್ದಾರೆ. ಪ್ರತಿಯೊಬ್ಬ ಮನುಷ್ಯನು ಜಗದಲ್ಲಿ ಸ್ವಲ್ಪವಾದರೂ ಬದಲಾವಣೆಯನ್ನು ಮಾಡಲು ಶಕ್ತನಿರುವನು. ಇಂಥ ಬದಲಾವಣೆಯನ್ನು ಇವನೇ ಸ್ವತಃ (ತನ್ನಿಂದಲೇ) ಪ್ರಾರಂಭ ಮಾಡಬೇಕು. ಇದನ್ನು ತನ್ನಲ್ಲಿ ತಂದುಕೊಂಡ ಮೇಲೆ ಇವನು ಇತರ ಜನರಲ್ಲಿ ಇಂಥ ಬದಲಾವಣೆ ಆಗುವಂತೆ ಹಾಗೂ ಜನರೆಲ್ಲ ಇವನ ಬದಲಾವಣೆಯನ್ನು ಸ್ವೀಕರಿಸಿ ಆಚರಿಸುವಂತೆ ಮಾಡುವ ವ್ರತವನ್ನು ಇವನು ಸ್ವೀಕಾರ ಮಾಡಬೇಕು. ಈ ರೀತಿಯಿಂದ ಯಾವ ಪ್ರಕಾರದ ಪರಿಸ್ಥಿತಿಯಲ್ಲಿ ನಾವು ಈ ಜಗದಲ್ಲಿ ಕಾಲಿಟ್ಟೆವೋ ಅದರಲ್ಲಿ ಸ್ವಲ್ಪವಾದರೂ ಆಗಲೊಲ್ಲದೇಕೆ ಸುಧಾರಣೆಯನ್ನು ಮಾಡಿ ನಾವು ಈ ಜಗ ವನ್ನು ಬಿಡಬೇಕು. ಸ್ವತಃದಲ್ಲಿ ಮತ್ತು ಜಗದಲ್ಲಿ ಯಾವ ಪ್ರಕಾರದ ಸುಧಾರಣೆ ಮಾಡಲಿಕ್ಕೆ ಶಕ್ಯವಿರುವದೆಂಬುದರ ವರ್ಣನೆಯನ್ನು ಈ ಸಮಾಸದಲ್ಲಿ ಮಾಡಿದ್ದು ಕಂಡುಬರುವದು. ಒಟ್ಟಿನಲ್ಲಿ ಶ್ರೀಸಮರ್ಥರು ಹೇಳುವದರ ಭಾವಾರ್ಥ ವೇನಂದರೆ:- ೧] ಮನುಷ್ಯನಿಗೆ ಜಾಣನಾಗಲು ಬುದ್ಧಿವಂತನಾಗಲು ಬರುವದು. ೨] ನಿಮ್ಮಲ್ಲಿ ಇಲ್ಲದಂಥ ಉತ್ತಮ ಗುಣಗಳ ಬಗ್ಗೆ ಮನಸ್ಸು ಕೊಟ್ಟು ಅಭ್ಯಾಸ ಮಾಡಬೇಕು. ೩] ಐಶ್ವರ್ಯವನ್ನು ಸ್ವತಃ ದುಡಿದು ಸಂಪಾದಿಸಿ ಅದರ ಭೋಗ ಪಡೆಯಬೇಕು. ೪] ಶರೀರ ಮತ್ತು ಮನಸ್ಸನ್ನು ಕಷ್ಟಪಡಿಸಬೇಕು. ದುಡಿಸಬೇಕು. ೫] ವ್ಯಾಪ [ವ್ಯವಹಾರ ಉದ್ಯೋಗ ಇತ್ಯಾದಿ]ವನ್ನು ಬೆಳಿಸಿ ಗಳಿಸಿ ವೈಭವ ಭೋಗಿಸಬೇಕು. ಉತ್ತಮ ಕಾರ್ಯದಲ್ಲಿ–ಪುಣ್ಯ ಕಾರ್ಯದಲ್ಲಿ ಶಕ್ತ್ಯಾನುಸಾರ ಹಣ ವಿನಿಯೋಗಿಸಬೇಕು. ೬] ಬಹು ಜನರ ಅಂತರಂಗವನ್ನು ಗೆದ್ದುಕೊಳ್ಳಬೇಕು. ಎಲ್ಲ ರಿಗೂ ಬೇಕಾದವನಾಗಿರಬೇಕು. ೭] ಸಾಮಾನ್ಯ ಜನರನ್ನು ಜಾಣರನ್ನಾಗಿ ಮಾಡಬೇಕು. ಎಲ್ಲರೂ ಬುದ್ಧಿವಂತರಾಗು ವಂತೆ ಮಾಡಬೇಕು. ಪತಿತರಾದವರನ್ನು ಪಾವನರನ್ನಾಗಿ ಮಾಡಬೇಕು. ೮] ಜಗದಲ್ಲೆಲ್ಲ ಕಡೆಗೂ ಭಗವಂತನ ಭಜನೆ ನಾಮಸ್ಮರಣ, ಘೋಷಣೆಗಳನ್ನು ಬೆಳೆಸಬೇಕು.

### ದಶಕ ೧೪. ಸಮಾಸ ೬. ಚಾತುರ್ಯ ಲಕ್ಷಣ (ನುಡಿ ೩೩)

ತಾಯಿ ತಂದೆಗಳಿಂದ ದೊರೆತಂಥ ಶರೀರದ ರೂಪವನ್ನೇನೂ ನಮಗೆ ಬದಲಾಯಿಸಲಿಕ್ಕೆ ಬರುವದಿಲ್ಲ. ಆದರೆ ಅವಗುಣಗಳನ್ನು ತ್ಯಜಿಸಿ ಉತ್ತಮ ಗುಣಗಳನ್ನು ನಮ್ಮಲ್ಲಿ ತಂದುಕೊಳ್ಳಲಿಕ್ಕೆ ಬರುವದು. ಆದ್ದರಿಂದ ಮನು ಷ್ಯನು ಸದ್ಗುಣಿಯಾಗಬೇಕು. ನಿಮ್ಮ ಅಂತರಂಗವನ್ನು ಚಾತುರ್ಯ (ಜಾಣತನ) ಸಂಪನ್ನವನ್ನಾಗಿ ಮಾಡಬೇಕು. ಮತ್ತು ಜಗತ್ತಿನಲ್ಲಿ ಶ್ರೇಷ್ಠತನವನ್ನು ಸಂಪಾದನೆ ಮಾಡಬೇಕು. ಸ್ವತಃ ಸಮಾಧಾನವನ್ನು ಹೊಂದಬೇಕು. ಪಡೆಯ ಬೇಕು. ಮತ್ತು ಇತರರಿಗೂ ಸಹ ಸಮಾಧಾನ ಕೊಡಬೇಕು:- ನಮ್ಮ ಶರೀರದ ರೂಪ ಮತ್ತು ಸೌಂದರ್ಯ ಈ ಗುಣಗಳು ಅಭ್ಯಾಸದಿಂದ ಏನು ಮಾಡಿದರೂ ಬದಲಿಸಲಿಕ್ಕೆ ಆಗುವದಿಲ್ಲ. ಯಾಕೆಂದರೆ ಇವು ಜನ್ಮ ಜಾತವಿರುವ ದರಿಂದ ಇವುಗಳ ಮೇಲೆ ಯಾವ ಇಲಾಜೂ (ಉಪಾಯವೂ) ನಡೆಯುವದಿಲ್ಲ. ಆದ್ದರಿಂದ ಅಭ್ಯಾಸದಿಂದ ಸಾಧ್ಯ ವಾಗುವಂತಹ ಆಗಂತುಕ ಉತ್ತಮ ಗುಣಗಳ ಬೆನ್ನು ಹತ್ತಬೇಕು. [೧] ಮನುಷ್ಯ ಕರ‍್ರಗಿದ್ದವನು ಕೆಂಪಗಾಗಲಿಕ್ಕೆ ಸಾಧ್ಯವಿಲ್ಲ. ಮೊದಲಿನಿಂದಲೂ ಇದ್ದ ಮುಖದ ಮೇಲಿನ ಕಲೆ, [ಮಚ್ಚೆ, ವ್ರಣ, ಘಾಯ, ಮೈಲಿ ಇತ್ಯಾದಿ] ಯನ್ನು ಪ್ರಯತ್ನದಿಂದ ಬದಲಿಸಲಿಕ್ಕೆ ಆಗುವದಿಲ್ಲ. ಮನುಷ್ಯನು ಮೂಕನಾಗಿದ್ದರೆ ಅವನಿಗೆ ಮಾತನಾಡಲಿಕ್ಕೆ ಬರು ವದಿಲ್ಲ. ಇವೆಲ್ಲವೂ ಹುಟ್ಟಿನಿಂದ ಬಂದ [ಜನ್ಮತಹ] ವಿಷಯಗಳು. ಇವುಗಳ ಮೇಲೆ ಉಪಾಯವಿರುವದಿಲ್ಲ. [೨]

ಆಂಧಳೇ ಡೋಳಸ ಹೋಯೆನಾ । ಬಧಿರ ತೇ ಐಕೇನಾ ।
ಪಾಂಗುಳ ಪಾಯೆ ಘೇಈನಾ । ಹಾ ಸಹಜಗುಣ ॥೩॥

ಕುರೂಪತೇಚೀ ಲಕ್ಷಣೇ । ಕಿತೀ ವ್ಹ್ಹಣೋನಿ ಸಾಂಗಣೇ ।
ರೂಪ ಲಾವಣ್ಯ ಯಾಕಾರಣೇ । ಪಾಲಟೇನಾ ॥೪॥

ಅವಗುಣ ಸೋಡಿತಾ ಜಾತೀ । ಉತ್ತಮ ಗುಣ ಅಭ್ಯಾಸಿತಾ ಯೇತೀ ।
ಕುವಿದ್ಯಾ ಸಾಂಡೂನ ಸಿಕತೀ । ಶಾಹಾಣೇ ವಿದ್ಯಾ ॥೫॥

ಮೂರ್ಖಪಣ ಸಾಂಡಿತಾ ಜಾತೇ । ಶಾಹಾಣಪಣ ಸಿಕತಾ ಯೇತೇ ।
ಕಾರಬಾರ ಕರಿತಾ ಉಮಜತೇ । ಸಕಳ ಕಾಹೀ ॥೬॥

ಮಾನ್ಯತಾ ಆವಡೇ ಜೀವೀ । ತರೀ ಕಾ ಉಪೇಕ್ಷಾ ಕರಾವೀ ।
ಚಾತುರ್ಯೇವಿಣ ಉಂಚ ಪದವೀ । ಕದಾಪಿ ನಾಹೀ ॥೭॥

ಐಸೀ ಪ್ರಚಿತ ಯೇತೇ ಮನಾ । ತರೀ ಕಾ ಸ್ವಹಿತ ಕರಾನಾ ।
ಸನ್ಮಾರ್ಗೇ ಚಾಲತಾ ಜನಾ । ಸಜ್ಜನಾ ಮಾನೇ ॥೮॥

ದೇಹೆ ನೆಟಕೇ ಶೃಂಘಾರಿಲೇ । ಪರೀ ಚಾತುರ್ಯೇವಿಣ ನಾಸಲೇ ।
ಗುಣೇವಿಣ ಸಾಜಿರೇ ಕೇಲೇ । ಬಾಷ್ಕಳ ಜೈಸೇ ॥೯॥

ಅಂತರ್ಕಳಾ ಶೃಂಘಾರಾವೀ । ನಾನಾ ಪರೀ ಉಮಜವಾವೀ ।
ಸಂಪದಾ ಮೇಳಊನ ಭೋಗಾವೀ । ಸಾವಕಾಸ ॥೧೦॥

ಪ್ರೇತ್ನ ಕರೀನಾ ಸಿಕೆನಾ । ಶರೀರ ತೇ ಹಿ ಕಷ್ಟವೀನಾ ।
ಉತ್ತಮ ಗುಣ ಘೇಈನಾ । ಸದಾ ಕೋಪಿ ॥೧೧॥

ಆಪಣ ದುಸರ್ಯಾಸ ಕರಾವೇ । ತೇ ಉಸಿಣೇ ಸವೇ ಚಿ ಘ್ಯಾವೇ ।
ಜನಾ ಕಷ್ಟವಿತಾ ಕಷ್ಟಾವೇ । ಲಾಗೇಲ ಬಹು ॥೧೨॥

ನ್ಯಾಯೇ ವರ್ತೇಲ ತೋ ಶಾಹಾಣಾ । ಅನ್ಯಾಇ ತೋ ದೈನ್ಯವಾಣಾ ।
ನಾನಾ ಚಾತುರ್ಯಾಚ್ಯಾ ಖುಣಾ । ಚತುರ ಜಾಣೇ ॥೧೩॥

ಜೇ ಬಹುತಾಸ ಮಾನಲೇ । ತೇ ಬಹುತೀ ಮಾನ್ಯ ಕೇಲೇ ।
ಯೇರ ತೇ ವೆರ್ಥ ಚಿ ಗೇಲೇ । ಜಗ ನಿಂದ್ಯ ॥೧೪॥

ಮನುಷ್ಯ ಹುಟ್ಟು ಕುರುಡನಾಗಿದ್ದರೆ ಅವನಿಗೆ ದೃಷ್ಟಿ ಬರುವದಿಲ್ಲ. ಹುಟ್ಟು ಕಿವುಡನಾಗಿದ್ದರೆ ಅವನಿಗೆ ಕೇಳಲಿಕ್ಕೆ ಬರುವದಿಲ್ಲ. ಹುಟ್ಟು ಹೆಳವ (ಲಂಗಡಾ) ಆಗಿದ್ದರೆ ಅವನಿಗೆ ನಡೆಯಲಿಕ್ಕೆ ಬರುವದಿಲ್ಲ. ಇವೆಲ್ಲ ಹುಟ್ಟಿದಾಗಲೇ ಇದ್ದಂಥವು. ಇವಕ್ಕೆ ಉಪಾಯ ಇರುವದಿಲ್ಲ. [೩] ಇಂಥ ವ್ಯಂಗಗಳು ಇನ್ನೂ ಬಹಳಷ್ಟು ಇರುವವು, ಅವೆಲ್ಲವುಗಳನ್ನು ಹೇಳಲಿಕ್ಕೆ ಆಗುವದಿಲ್ಲ. ಅಂತೆಯೇ ಶರೀರದ ರೂಪ ಮತ್ತು ಸೌಂದರ್ಯಗಳನ್ನು ಬದಲಿಸಲಿಕ್ಕೆ ಬರುವದಿಲ್ಲವೆಂದು ನಾವು ಈ ಮೇಲೆಯೇ ಹೇಳಿರುವೆವು [೪] ಆದರೆ ಗುಣಗಳದು ಮಾತ್ರ ಹಾಗಲ್ಲ. ಅವಗುಣಗಳನ್ನು ಬಿಡಬೇಕೆಂದರೆ ಅವನ್ನು ಬಿಡಲಿಕ್ಕೆ ಬರುವದು. ಅದರಂತೆ ಉತ್ತಮ ಗುಣದ ಅಭ್ಯಾಸ ಮಾಡಿ ಪಡೆಯಲಿಕ್ಕೆ ಬರುವದು. ಜಾಣ ಜನರು ಕುವಿದ್ಯಾ [ದುಷ್ಟವಿದ್ಯಾ] ಬಿಟ್ಟುಕೊಟ್ಟು ಸುವಿದ್ಯೆಯನ್ನು ಕಲಿಯುವರು. [೫] ಮೂರ್ಖತನವನ್ನು ಬಿಡಬೇಕೆಂದರೆ ಬಿಡಲಿಕ್ಕೆ ಬರುವದು. ಮತ್ತು ವಿದ್ಯಾ ಸಂಪನ್ನ [ಜಾಣತನ] ರಾಗಬೇಕೆಂದು ಮನಸ್ಸು ಮಾಡಿದರೆ ವಿದ್ಯಾ ಕಲಿಯಲು ಬರುವದು. ಈ ದೃಷ್ಟಿಯಿಂದ ಅಭ್ಯಾಸ ಮಾಡಿದರೆ ಎಲ್ಲವನ್ನೂ ತಿಳಿಯಬಹುದು. [೬] ಮನುಷ್ಯನಿಗೆ ಮಾನ ದೊರೆತರೆ ಇದು ಮನಃಪೂರ್ವಕವಾಗಿ ಆನಂದದಾಯಕವಾಗಿರುವದು. ಅಂದಮೇಲೆ ಜಾಣತನದ ಹೆಚ್ಚಿನ ಅನೇಕ ವಿಷಯ ಕಲಿಯಲು ಅನುಮಾನ ಪಡಬಾರದು. ನಿಮ್ಮಲ್ಲಿ ಚತುರತೆ ಅಥವಾ ವಿದ್ಯಾ ಇಲ್ಲದ ಹೊರತು ಸಮಾಜದಲ್ಲಿ ದೊಡ್ಡಸ್ತನ ಎಂದೂ ಸಿಗುವದಿಲ್ಲ. [೭] ಈ ವಿಷಯಗಳೆಲ್ಲ ಜೀವನದಲ್ಲಿ ನಮ್ಮ ಪ್ರತ್ಯಕ್ಷ ಅನುಭವಕ್ಕೆ ಬರುವಂಥವೇ ಇರುವವು. ಆದ್ದರಿಂದ ನಾವು ನಮ್ಮ ಹಿತವನ್ನು ಮಾಡಿಕೊಳ್ಳುವದು ಅತ್ಯಂತ ಅವಶ್ಯವಿರುವದು. ಯಾರು ಸನ್ಮಾರ್ಗದಲ್ಲಿ ನಡೆಯುವರೋ ಅವರು ಸಾಧು ಸಂತರಿಗೂ ಮತ್ತು ಸಾಮಾನ್ಯ ಜನರಿಗೂ ಕೂಡಿಯೇ ಮಾನ್ಯರಾಗುವರು.[೮] ತಿಳಿಯಿರಿ, ಒಬ್ಬನು ತನ್ನ ಶರೀರವನ್ನು ಬಹಳಷ್ಟು ಶೃಂಗರಿಸಿದನು. ಆದರೆ ಅವನಲ್ಲಿ ಜಾಣತನ ಬುದ್ಧಿವಂತಿಕೆ ಇರದಿದ್ದರೆ ಈ ಶೃಂಗಾರ ವ್ಯರ್ಥವಾಗುವದು. ಒಬ್ಬ ಗುಣಹೀನ ಹುಚ್ಚನಿಗೆ ಸುಂದರವಾಗಿ ಶೃಂಗರಿಸಿದಂತೆಯೇ ಇದೂ ಆಗುವದು. [ಒಬ್ಬ ಕಲ್ಲು ಒಗೆಯುವ ಹುಚ್ಚನು, ಇನ್ನೊಬ್ಬ ಕಲ್ಲು ಒಗೆಯದೇ ಇರುವಂಥ ಹುಚ್ಚನು, ಇವರಲ್ಲಿ ಹೇಳಿಕೊಳ್ಳುವ ವ್ಯತ್ಯಾಸವಿರುವದಿಲ್ಲ.] [೯] ಮನುಷ್ಯನು ತನ್ನ ಅಂತರಂಗದಲ್ಲಿಯ ಅರಿವನ್ನು [ಜಾಣೀವ] ತಿಳುವಳಿಕೆಯನ್ನು ಶೃಂಗರಿಸಬೇಕು. ಹೆಚ್ಚು ಹೆಚ್ಚು ಸುಂದರವಾಗಿ ಶೋಭಿಸುವಂತೆ ಶೃಂಗರಿಸಬೇಕು. ಇದರಲ್ಲಿ ಅನೇಕ ಪ್ರಕಾರದ ಜ್ಞಾನವನ್ನು ಸಂಗ್ರಹಿಸಬೇಕು. ಇದರ ಬಲದ ಮೇಲೆ (ಈ ಜ್ಞಾನ ಬಲದಿಂದ) ಸಂಪತ್ತನ್ನು ಗಳಿಸಬೇಕು. ಮತ್ತು ಮನಸೋಕ್ತ[ಮುಕ್ತವಾಗಿ]ಇದನ್ನು ಅನುಭವಿಸಬೇಕು[೧೦] ಯಾವ ಮನುಷ್ಯನು ಪ್ರಯತ್ನ ಮಾಡುವದಿಲ್ಲವೋ ಮತ್ತು ಜಾಣತನವನ್ನು [ವಿದ್ಯೆಯನ್ನು] ಕಲಿಯುವದಿಲ್ಲವೋ, ಶರೀರವನ್ನು ಕಷ್ಟಪಡಿಸುವದಿಲ್ಲವೋ ಇಂಥವನು ಸದಾಕಾಲ ದುಸು ಮುಸು ಮಾಡುವವ, ಕಿರಿ ಕಿರಿಯನ್ನೂ ಕೋಪವನ್ನೂ ಉಂಟು ಮಾಡುವವನಾಗಿರುವನು. [೧೧] ನಾವು ಇನ್ನೊಬ್ಬರ ಕೂಡ ಹೇಗೆ ವರ್ತನ ಮಾಡಬೇಕೆಂದರೆ, ಕೈಗಡ [ಉದ್ರಿ] ಇಸಿದುಕೊಂಡಿದ್ದನ್ನು ಅದಷ್ಟು ಬೇಗ ಪರತ ಕೊಡಬೇಕಾಗುವದು. ಅದರಂತೆ ನಮ್ಮ ವರ್ತನೆ ಇರಬೇಕು. ನಾವು ಜನರಿಗೆ ತೊಂದರೆಯನ್ನು ಕೊಟ್ಟರೆ ನಮಗೂ ಸಹ ಅನೇಕ ಕಷ್ಟನಷ್ಟಗಳನ್ನು ಸೋಸಬೇಕಾಗುವದು. ಇದೆಲ್ಲ ಯಾರಿಗೆ ತಿಳಿಯುವದಿಲ್ಲವೋ ಅವನು ಅಭಾಗಿಯು. ದುರ್ಭಾಗ್ಯದ ತಿಳಿಗೇಡಿಯೆನಿಸುವನು. [೧೨] ಯಾವನು ನ್ಯಾಯದಿಂದ ನಡೆಯುವನೋ ಅವನು ಬುದ್ಧಿವಂತನು ಮತ್ತು ಯಾವನು ಅನ್ಯಾಯದಿಂದ ನಡೆಯುವನೋ ಅವನು ಗತಿಗೇಡಿ ದೀನನು. ಚತುರನಾದ ಜಾಣನಿಗೆ ಚತುರತೆಯ ಅನೇಕ ಉಪಾಯದ ರೀತಿಗಳು ಗೊತ್ತಿರುವವು. [೧೩] ಯಾವ ಮಾತು ಅಥವಾ ವಿಷಯವು ಬಹು ಜನರಿಗೆ ಒಪ್ಪಿಗೆಯದಿರುವದೋ ಅದರ ಪ್ರಸಾರವು ಬಹುಬೇಗ ಜನರಲ್ಲಿ ಆಗುವದು. ಬಹು ಜನರಿಗೆ ಒಪ್ಪಿಗೆ ಇಲ್ಲದ [ನಾಪಸಂತ] ವಿಷಯವು ವ್ಯರ್ಥವಾಗಿ ಹೋಗುವದು. [೧೪]

ಲೋಕ ಆಪಣಾಸಿ ವೊಳಾವೇ । ಕಿಂವಾ ಆವಘೇ ಚ ಕೋಸಳಾವೇ ।
ಆಪಣಾಸ ಸಮಾಧಾನ ಘಾವೇ । ಐಸೇ ಕರಾವೇ ॥೧೫॥

ಸಮಾಧಾನೇ ಸಮಾಧಾನ ವಾಢೇ । ಮಿತ್ರಿನೇ ಮಿತ್ರಿ ಜೋಡೇ ।
ಮೋಡಿತಾ ಕ್ಷಣಮಾತ್ರೆ ಮೋಡೇ । ಬರೇಪಣ ॥೧೬॥

ಅಹೋ ಕಾಹೋ ಅರೇ ಕಾರೇ । ಜನೀ ಐಕಿಜೇತೇ ಕಿ ರೇ ।
ಕಳತ ಅಸತಾ ಚ ಕಾ ರೇ । ನಿಕಾಮೀಪಣ ॥೧೭॥

ಚಾತುರ್ಯೇ ಶೃಂಘಾರೇ ಅಂತರ । ವಸ್ತ್ರೇ ಶೃಂಘಾರೇ ಶರೀರ ।
ದೋಹೀಮಧೇ ಕೋಣ ಥೋರ । ಬರೇ ಪಾಹಾ ॥೧೮॥

ಬಾಹ್ಯಾಕಾರ ಶೃಂಘಾರಿಲೇ । ತೇಣೇ ಲೋಕಾಚ್ಯಾ ಹಾತಾಸೀ ಕಾಯೆ ಆಲೇ ।
ಚಾತುರ್ಯೇ ಬಹುತಾಸೀ ರಕ್ಷಿಲೇ । ನಾನಾ ಪ್ರಕಾರೇ ॥೧೯॥

ಬರೇ ಖಾವೇ ಬರೇ ಜೇವಾವೇ । ಬರೇ ಲ್ಯಾವೇ ಬರೇ ನೇಸಾವೇ ।
ಸಮಸ್ತೀ ಬರೇ ಮ್ಹಣಾವೇ । ಐಸೀ ವಾಸನಾ ॥೨೦॥

ತನೇ ಮನೇ ಝಿಜಾವೇ । ತೇಣೇ ಭಲೆ ಮ್ಹಣೋನ ಘ್ಯಾವೇ ।
ಉಗೇ ಚಿ ಕಲ್ಪಿತಾ ಶಿಣಾವೇ । ಲಾಗೇಲ ಪುಢೇ ॥೨೧॥

ಲೋಕೀ ಕಾರ್ಯಭಾಗ ಆಡೇ । ತೋ ಕಾರ್ಯಭಾಗ ಜೇಥೇ ಘಡೇ ।
ಲೋಕ ಸಹಜ ಚಿ ವೋಢೇ । ಕಾಮಾಸಾಠೀ ॥೨೨॥

ಮ್ಹಣೋನ ದುಸರ್ಯಾಸ ಸುಖೀ ಕರಾವೇ । ತೇಣೇ ಆಪಣ ಸುಖೀ ವ್ಹಾವೇ ।
ದುಸರ್ಯಾಸ ಕಷ್ಟವಿತಾ ಕಷ್ಟಾವೇ । ಲಾಗೇಲ ಸ್ವಯೇ ॥೨೩॥

ಹೇ ತೋ ಪ್ರಗಟ ಚಿ ಆಹೇ । ಪಾಹಿಲ್ಯಾವಿಣ ಕಾಮಾ ನಯೇ ।
ಸಮಜಣೇ ಹಾ ಉಪಾಯೆ । ಪ್ರಾಣಿಮಾತ್ರಾಸೀ ॥೨೪॥

ಬಹಳಷ್ಟು ಜನರು ನಮ್ಮ ಅನುಯಾಯಿಗಳಾಗುವದು, ಅಥವಾ ಬಹಳಷ್ಟು ಜನ ನಮ್ಮ ವಿರುದ್ಧ ಹೋಗುವದು, ಇವೆರಡೂ ಮಾತುಗಳು ನಿಜವಾಗಿಯೂ ನಮ್ಮ ಕೈಯಲ್ಲಿಯೇ ಇರುವವು. ಆದ್ದರಿಂದ ನಮಗೆ ಸಮಾಧಾನವು ಪ್ರಾಪ್ತವಾಗುವಂತೆ ನಾವು ನಡೆಯಬೇಕು. (೧೫) ಸಮಾಧಾನದಿಂದ ಸಮಾಧಾನವು ಬೆಳೆಯುತ್ತ ಹೋಗುವದು, ಸ್ನೇಹದಿಂದ ಸ್ನೇಹವು ಮತ್ತಷ್ಟು ದೃಢವಾಗುವದು ಒಳ್ಳೆಯತನವನ್ನು ಇಲ್ಲದಂತೆ ಮಾಡಬೇಕೆಂದರೆ ಇದನ್ನು ಒಂದು ಕ್ಷಣದಲ್ಲಿ ಇಲ್ಲದಂತೆ ಮಾಡಲಿಕ್ಕೆ ಬರುವದು. (೧೬) "ಏನರೀ ಅಂದರೆ ಯಾಕರೀ" ಮತ್ತು "ಏನೋ ಅಂದರೆ ಯಾಕೋ" ಅಥವಾ "ಏನಲೇ ಅಂದರೆ ಯಾಕಲೇ" ಇವು ಜನವಾಡಿಕೆಯ ಮಾತುಗಳೆಂದು ಅನ್ನುವದನ್ನು ನಾವೆಲ್ಲ ಕೇಳುತ್ತೇವೆ. ಒಟ್ಟಿನಲ್ಲಿ ಮರ್ಯಾದೆ ಕೊಟ್ಟು ಮರ್ಯಾದೆ ಪಡೆಯಬೇಕು. ಇಷ್ಟೆಲ್ಲ ಗೊತ್ತಿದ್ದರೂ ಸಹ ಮನುಷ್ಯರು (ಅಂದರೆ ನಾವು) ಬುದ್ಧಿವಂತರಾಗುವ ಪ್ರಯತ್ನ ಮಾಡದೇ ಇರುವದು ಯೋಗ್ಯ ವೆನಿಸಲಾರದು. (೧೭) ಜಾಣತನದಿಂದ ಅಂತರಂಗವನ್ನು ಶೃಂಗಾರಗೊಳಿಸಬೇಕು. ವಸ್ತ್ರದಿಂದ ದೇಹವನ್ನು ಶೃಂಗಾರ ಮಾಡಬೇಕು. ಆದರೆ ಈ ಎರಡರಲ್ಲಿ ಯಾವುದು ಶ್ರೇಷ್ಠವಿರುವದೆಂಬುದನ್ನು ನೀವೇ ವಿಚಾರ ಮಾಡಬೇಕು. (೧೮) ಯಾವ ಮನುಷ್ಯನು ಜಾಣತನ (ಶಹಣೇತನ) ದಿಂದ ತನ್ನ ಅಂತರಂಗವನ್ನು ಶೃಂಗಾರಗೊಳಿಸುವನೋ ಅವನೇ ಇನ್ನೊಬ್ಬರ (ಎರಡನೇಯವರ) ಕಾರ್ಯಭಾಗ (ಕಲ್ಯಾಣ ಕಾರ್ಯ, ಉಚಿತ ಕಾರ್ಯ) ಮಾಡಲು ಶಕ್ತನಾಗುವನು. ತನ್ನ ಜಾಣತನದಿಂದ ಯಾವನು ಜಗತ್ತಿಗೆ ಸುಖವನ್ನು ಮಾಡುವನೋ ಅವನೇ ಖರೇ ಭಾಗ್ಯವಾನ್ ಪುರುಷನೆನಿಸು ವನು. ಆದ್ದರಿಂದ ಮನುಷ್ಯನು ಬಹಳಷ್ಟು ಉತ್ತಮ ಗುಣಗಳನ್ನು ಸಂಪಾದಿಸಬೇಕು. ಮತ್ತು ಲೋಕ ಕಲ್ಯಾಣಕ್ಕೆ ಉಪಯೋಗ ಬೀಳಬೇಕು. ಅಜ್ಞಾನಿ ಜನರನ್ನು ಸುಜ್ಞಾನಿಗಳನ್ನಾಗಿ ಮಾಡಬೇಕು. ಮತ್ತು ಭಗವಂತನ ಭಜನೆ ನಾಮಸ್ಮರಣಾದಿಗಳನ್ನು ಬೆಳೆಯಿಸಬೇಕು:– ಯಾವನೊಬ್ಬನು ತನ್ನ ಶರೀರವನ್ನು ಬಹಳಷ್ಟು ಚನ್ನಾಗಿ ಶೃಂಗಾರ ಮಾಡಿಕೊಂಡದ್ದಾದರೆ ಅದರಿಂದ ಜನರಿಗೆ ಏನೂ ಲಾಭವಿಲ್ಲ. ಮನುಷ್ಯನಲ್ಲಿ ಚಾತುರ್ಯ, ಜಾಣತನ, ಇದ್ದದ್ದಾದರೆ ಅವನು ಬಹಳಷ್ಟು ಜನರಿಗೆ ಅನೇಕ ರೀತಿಯಿಂದ ಉಪಯೋಗ ಬೀಳುವನು. ಮತ್ತು ಅವರನ್ನು ರಕ್ಷಣ ಮಾಡು ವನು. ಕಲ್ಯಾಣ ಮಾಡುವನು. [೧೯] ಉತ್ತಮವಿದ್ದದ್ದನ್ನು ತಿನ್ನಬೇಕು. ಉತ್ತಮವಾದದ್ದನ್ನು ಉಣ್ಣಬೇಕು. ಉತ್ತಮ ವಸ್ತ್ರಗಳನ್ನು ಉಡಬೇಕು, ತೊಡಬೇಕು. [ಧರಿಸಬೇಕು]. ಎಲ್ಲರೂ ತನ್ನನ್ನು ಉತ್ತಮನೆಂದು ಅನ್ನಬೇಕು, ಈ ತರಹದ ವಾಸನಾ ಸಾಮಾನ್ಯ ಮನುಷ್ಯರಲ್ಲಿ ಇರುವದು ಸಹಜ. [೨೦] ಆದರೆ ಹೀಗೆ ಅನ್ನುವವನು ಶರೀರದಿಂದ ಮತ್ತು ಮನದಿಂದ ಜನರ ಸಲುವಾಗಿ ಕಷ್ಟಪಟ್ಟರೆ-ದುಡಿದರೆ ಕಾರ್ಯವನ್ನು ಕೃತಿ ರೂಪದಲ್ಲಿ ತಂದರೆ ಮಾತ್ರ ಜನ ರಿಂದ ಭಲೆ ಭಲೆ ಅನ್ನಿಸಿಕೊಳ್ಳಲಿಕ್ಕೆ ಬರುವದು. ಜನರೂ ತಾವಾಗಿಯೇ ಭಲೇ ಅನ್ನುವರು. ಹೀಗೆ ಮಾಡದೇ ಯಾವನು ಕೇವಲ ಕಲ್ಪನೆಗಳನ್ನು ಮಾಡುತ್ತ ಕೂಡ್ರುವನೋ ಅವನಿಗೆ ಮುಂದೆ ಕಷ್ಟ ನಷ್ಟಗಳನ್ನು ಎದುರಿಸಬೇಕಾ ಗುವದು. ಅನುಭವಿಸಬೇಕಾಗುವದು. [೨೧] ತಿಳಿಯಿರಿ. ಜನರ ಯಾವುದೋ ಒಂದು ದೊಡ್ಡ ಕಾರ್ಯ ಅಡಚಣೆ ಯಿಂದ ಅಥವಾ ಯಾವುದೋ ಒಂದು ನೆಪದಿಂದ [ಅಡ್ಡಬಂದು] ಅರ್ಧಕ್ಕೇ ನಿಂತಿದೆ, ಇದರ ಅಡಚಣೆ ದೂರಮಾಡಿ ಕಾರ್ಯ ಸುಗಮವಾಗಿ ನೆರವೇರಿದರೆ ಆಗ ಯಾವ ಮನುಷ್ಯನು ಈ ಕಾರ್ಯವನ್ನು ಸುಗಮವಾಗಿ ಪಾರು ಮಾಡಿ ಕೊಟ್ಟನೋ ಆ ಮನುಷ್ಯನ ಕಡೆಗೆ ಅನೇಕ ಜನರು ತಮ್ಮ ತಮ್ಮ ಕೆಲಸಕ್ಕಾಗಿ ತಮ್ಮಿಂದ ತಾವೇ ಬರಲಿಕ್ಕೆ ಹತ್ತು ವರು. [೨೨] ಆದ್ದರಿಂದ ಯಾವನು ಎರಡನೆಯವರನ್ನು ಸುಖಿಗೊಳಿಸುವನೋ ಅವನು ತಾನೂ ಸ್ವತಃ ಸುಖ ಅನು ಭವಿಸುವನು. ಯಾವನು ಎರಡನೆಯವರಿಗೆ ಕಷ್ಟ, ದುಃಖ ಕೊಡುವನೋ ಅವನು ಮುಂದೆ ಕಷ್ಟ, ದುಃಖಗಳನ್ನು ತಾನೂ ಅನುಭವಿಸಬೇಕಾಗುವದು. [೨೩] ಮೇಲೆ ತಿಳಿಸಿ ಹೇಳಿದ ಮಾತುಗಳು ಅಗದೀ ಸ್ಪಷ್ಟವಿರುವವು. ಆದರೆ ಇವುಗಳನ್ನು ಚನ್ನಾಗಿ ಪರಿಶೀಲಿಸಿ ತಿಳಿದುಕೊಳ್ಳದ ಹೊರತು ಕಾರ್ಯರೂಪದಲ್ಲಿ ಬರುವದಿಲ್ಲ. ಅಂತೆಯೇ ಇವು ಗಳನ್ನು ತಿಳಿದುಕೊಳ್ಳುವವನು ನಿಜವಾಗಿ ಭಾಗ್ಯವಾನನೆನಿಸುವನು. ಇದನ್ನು ಸಾಧಿಸಿದರೆ ಭಾಗ್ಯವಾನನಾಗುವ ಉಪಾ ಯಗಳೆಲ್ಲವೂ ಇದರಲ್ಲಿಯೇ ಇರುವವು. [೨೪]

ಸಮಜಲೇ ಆಣೀ ವರ್ತಲೇ । ತೇ ಚಿ ಭಾಗ್ಯಪುರುಷ ಜಾಲೇ ।
ಯಾವೇಗಳೇ ಉರಲೇ । ಕರಂಟೇ ಪುರುಷ ॥೨೫॥
ಜಿತುಕಾ ವ್ಯಾಪ ತಿತುಕೇ ವೈಭವ । ವೈಭವಾಸಾರಿಖಾ ಹಾವಭಾವ ।
ಸಮಜಲೇ ಪಾಹಿಜೆ ಉಪಾವ । ಪ್ರಗಟ ಚಿ ಆಹೇ ॥೨೬॥
ಆಳಸೇ ಕಾರ್ಯಭಾಗ ನಾಸತೋ । ಸಾಕ್ಷೇಪ ಹೋತ ಹೋತ ಹೋತೋ ।
ದಿಸತೆ ಗೋಷ್ಟೀ ಕಳೇನಾ ತೋ । ಶಾಹಾಣಾ ಕೈಸಾ ॥೨೭॥
ಮಿತ್ರ ಕರಿತಾ ಹೋತೇ ಕೃತ್ಯ । ವೈರ ಕರಿತಾ ಹೋತೋ ಮೃತ್ಯ ।
ಬೋಲಿಲೇ ಹೇ ಸತ್ಯ ಕಿ ಅಸತ್ಯ । ವೊಳಖಾವೇ ॥೨೮॥
ಆಪಣಾಸ ಶಾಹಾಣೇ ಕರೂ ನೇಣೇ । ಆಪಲೇ ಹಿತ ಆಪಣ ನೇಣೇ ।
ಜನೀ ಮೈತ್ರಿ ರಾಖೋ ನೇಣೆ । ವೈರ ಕರೀ ॥೨೯॥
ಐಸೇ ಪ್ರಕಾರೀಚೆ ಜನ । ತ್ಯಾಸ ಮ್ಹಣಾವೇ ಅಜ್ಞಾನ ।
ತಯಾಪಾಸೀ ಸಮಾಧಾನ । ಕೋಣ ಪಾವೇ ॥೩೦॥
ಆಪಣ ಯೇಕಾಯೇಕೀ ಯೇಕಲಾ । ಸೃಷ್ಟೀತ ಭಾಂಡತ ಚಾಲಿಲಾ ।
ಬಹುತಾಮಧ್ಯೇ ಯೇಕಲ್ಯಾಲಾ । ಯಶ ಕೈಚೇ ॥೩೧॥
ಬಹುತಾಚೆ ಮುಖೀ ಉರಾವೇ । ಬಹುತಾಚೇ ಅಂತರೀ ಭರಾವೇ ।
ಉತ್ತಮ ಗುಣೀ ವಿಸರಾವೇ । ಪ್ರಾಣಿಮಾತ್ರಾಸೀ ॥೩೨॥
ಶಾಹಾಣೇ ಕರಾವೇ ಜನ । ಪತಿತ ಕರಾವೇ ಪಾವನ ।
ಸೃಷ್ಟಿಮಧೇ ಭಗವದ್ಭಜನ । ವಾಢವಾವೇ ॥೩೩॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಚಾತುರ್ಯ ಲಕ್ಷಣ ನಾಮ' ಸಮಾಸ ಷಷ್ಠಮ ॥

ಈ ಪ್ರಕಾರ ಜೀವನದ ಖರೇ ಇರುವನ್ನು ತಿಳಿದುಕೊಂಡು ಯಾವನು ನಡೆಯುವನೋ ಅವನೇ ಭಾಗ್ಯವಂತನಾಗುವನು. ಇನ್ನುಳಿದ ಜನರು ಅಂದರೆ ಹೇಳಿದ್ದನ್ನು ತಿಳಿದುಕೊಳ್ಳದೇ ಇರುವಂಥ ಪುರುಷರು. ದೈವಹೀನರು, ದುರ್ಭಾಗ್ಯವಂತರು ಎಂದು ತಿಳಿಯಬೇಕು. [೨೫] ಎಷ್ಟು ವ್ಯಾಪವೋ ಅಷ್ಟು ವೈಭವ (ಕೈಕೆಸರಾದರೆ ಬಾಯಿ ಮೊಸರು) ಇದು ಒಂದು ಸತ್ಯವಾದ ನಿಯಮವು. ಯಾವ ಮಾನದಿಂದ (ಅಳತೆಯಿಂದ) ವೈಭವ ಇರುವದೋ ಆ ಮಾನದ ಪ್ರಕಾರ ನಡೆಯಬೇಕಾಗುವದು. (ಹಾಸಿಗೆ ಇದ್ದಷ್ಟು ಕಾಲು ಚಾಚಬೇಕಾಗುವದು). ಮನುಷ್ಯನಿಗೆ ಇದು ತಿಳಿದಿರಬೇಕು. ವೈಭವ ಪ್ರಾಪ್ತ ಮಾಡಿಕೊಳ್ಳುವ ಉಪಾಯು ಅತ್ಯಂತ ಸ್ಪಷ್ಟ (ಉಘಡ) ಇರುವದು. ಆದ್ದರಿಂದ ವ್ಯಾಪದಿಂದ ಸಂತಾಪವೆಂಬ ಲೋಕರೂಢಿಯು ಮಾತಿಗೆ ಎಳ್ಳಷ್ಟೂ ಬೆಲೆ ಕೊಡಬಾರದು. [೨೬] ಯಾವುದೇ ಕಾರ್ಯ ಆಲಸ್ಯತನದಿಂದ ಕೆಡುವದು. ಆದರೆ ಮನುಷ್ಯನು ಪ್ರಯತ್ನ ಮಾಡುತ್ತಲೇ ಇರಬೇಕು. ಅಂದರೆ ಕ್ರಮ ಕ್ರಮದಿಂದ ಇದು ಸಿದ್ಧಿಗೆ ಹೋಗುವದು. ಇವೆಲ್ಲ ಸ್ಪಷ್ಟವಾಗಿ ಕಾಣುವಂಥವೇ ಇರುವವು. ಯಾರಿಗೆ ತಿಳಿಯುವದಿಲ್ಲವೋ ಅವರಿಗೆ ಜಾಣರೆಂದು ಅನ್ನಲಿಕ್ಕೆ ಬರುವದಿಲ್ಲ. [೨೭] ಮಿತ್ರತ್ವ ಸಾಧನೆಯಿಂದ ಕಾರ್ಯವು ಸಂಗಮವಾಗಿ ನೆರವೇರುವದು; ವೈರತ್ವದಿಂದ ಸಾಯುವ ಪ್ರಸಂಗ ಬರಬಹುದು. ಈ ನನ್ನ ಮಾತು ಖರೇ ಇರುವದೋ ಅಥವಾ ಸುಳ್ಳು ಇರುವದೋ ಅನ್ನುವದನ್ನು ನೀವೇ ಕಂಡುಕೊಳ್ಳಿರಿ. [೨೮] ನಾವು ಹೇಗೆ ಜಾಣರಾಗಬೇಕೆಂಬುದು ನಮಗೆ ತಿಳಿದಿಲ್ಲ. ನಮ್ಮ ಹಿತವು ನಮಗೇ ತಿಳಿದಿರುವದಿಲ್ಲ. ಜನರ ಕೂಡ ಸ್ನೇಹವನ್ನು ಹೇಗೆ ಇಡಬೇಕು. ಮತ್ತು ಅದನ್ನು ಹೇಗೆ ಬೆಳೆಸಬೇಕು, ಇದು ಬರುವದಿಲ್ಲ. ಸುಮ್ಮನೇ ಕಾರಣವಿಲ್ಲದೇ ಗರ್ವದಿಂದ ನಡೆಯುವೆವು, ವೈರತ್ವ ಮಾಡುವೆವು.[೨೯] ಇಂಥ ರೀತಿಯು ಜನರಿಗೆ ಅಜ್ಞಾನಿ ಅನ್ನಬೇಕು. ಯಾರಿಗೂ ಇಂಥವರ ಹತ್ತಿರ ಸಮಾಧಾನ ಸಿಗುವದಿಲ್ಲ. [೩೦] ನಾವು ಒಬ್ಬರೇ ಒಬ್ಬರಾಗಿದ್ದುಕೊಂಡು ಜಗತ್ತಿನಲ್ಲಿಯು ಎಲ್ಲರ ಸಂಗಡ ಜಗಳ, ತಂಟೆ, ಮಾಡುತ್ತ ಹೊರಟರೆ ಬಹು ಜನರ ಮಧ್ಯದಲ್ಲಿ ಇವನೊಬ್ಬನಿಗೇ ಇದರಿಂದ ಯಾವ ಯಶ ದೊರಕುವದೂ ಶಕ್ಯವಿಲ್ಲ. [೩೧] ಆದ್ದರಿಂದ ಬಹು ಜನರ ಬಾಯಿಯಲ್ಲಿ ನಿಮ್ಮ ಹೆಸರು ಇರಬೇಕು. ಭಲೆ ! ಭಲೆ !! ಅನ್ನಿಸಿಕೊಳ್ಳಬೇಕು. ಬಹುಜನರ ಅಂತಃಕರಣದಲ್ಲಿ ನೀವು ಪ್ರೇಮ ರೂಪದಿಂದ ತುಂಬಿ ಹೋಗಬೇಕು. ಮತ್ತು ನಿಮ್ಮ ಉತ್ತಮ ಗುಣದಿಂದ ಅನೇಕ ಜನರನ್ನು ವಿವೇಕಿಗಳನ್ನಾಗಿ ಮಾಡಬೇಕು. [೩೨] ಬಹು ಜನರನ್ನು ಜಾಣರನ್ನಾಗಿ ಮಾಡಬೇಕು. ಯಾರು ಭ್ರಷ್ಟರಿರುವರೋ ಅವರನ್ನು ಪವಿತ್ರರನ್ನಾಗಿ ಮಾಡಬೇಕು. ಮತ್ತು ಜಗತ್ತಿನಲ್ಲಿ ಭಗವಂತನ ಭಕ್ತಿ ಭಜನೆಗಳನ್ನು ಬೆಳೆಸಬೇಕು. [೩೩]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹದಿನಾಲ್ಕನೆಯ ದಶಕದೊಳಗಿನ
"ಚಾತುರ್ಯ ಲಕ್ಷಣ" ನಾಮ ಎಂಬ ಹೆಸರಿನ ಆರನೆಯ ಸಮಾಸವು ಮುಗಿದುದು.

● ●

## ದಶಕ ೧೪. ಸಮಾಸ ೭. ಯುಗಧರ್ಮ ನಿರೂಪಣ (ನುಡಿ ೪೦)

ಸಂಸ್ಕೃತಿ, ಸಮಾಜ ಮತ್ತು ಮನುಷ್ಯ ಇವು ಮಾನವ ಜೀವನದಲ್ಲಿಯ ಮೂರು ಅಂಗಗಳಿರುವವು. ಯಾವುದೇ ಮಾನವ ಸಮೂಹವನ್ನು ಲಕ್ಷಿಸಿದರೆ ಕುಟುಂಬ, ಶಾಸನ, ಮಂದಿರ, ವಿದ್ಯಾಲಯ, ವ್ಯಾಪಾರ, ಮಂಡಲ ಅಥವಾ ವಿಜ್ಞಾನ, ಭವನ, ಇತ್ಯಾದಿ ಯಾವವೇ ಇರಲೊಲ್ಲವೇಕೆ ಅವುಗಳಿಗೆ ಮೇಲಿನ ಮೂರು ಅಂಗಗಳು ಇದ್ದೇ ಇರುವವು. ಮೂಲ್ಯದ ರೂಪದಿಂದ ಸಂಸ್ಕೃತಿಯು ಸಾಕಾರವಾಗುವದು. ಮನುಷ್ಯ ಮನುಷ್ಯರಲ್ಲಿಯ ಪರಸ್ಪರ ಸಂಬಂಧ ಬರುವಂಥ ಪಾಶ ಅಥವಾ ಒಂದು ಹಿಡಿತ, ನಿರ್ಬಂಧ, ನಿರ್ಮಾಣವಾಗುವದು. ಇದರಲ್ಲಿಂದ ಸಾಮಾಜಿಕ ಜೀವನವು ಆಕಾರ ಹೊಂದುವದು. ಮತ್ತು ಪ್ರತಿಯೊಬ್ಬ ಮನುಷ್ಯನ ಬಗ್ಗೆ ಸಮಾಜದಲ್ಲಿಯ ಸ್ಥಾನ, ಅವನ ದರ್ಜೆ ಅವನ ಅಧಿಕಾರ ಯೋಗ್ಯತೆ, ಅವನ ಭೂಮಿಕೆ (ಹಿನ್ನೆಲೆ, ಪೀಠಿಕೆ) ಅವನ ಹಕ್ಕುಗಳು, ಅವನ ಕರ್ತವ್ಯ ಈ ಎಲ್ಲದರೊಳಗಿಂದ ವ್ಯಕ್ತಿಯ ಜೀವನವು ವಿಕಸಿತವಾಗುವದು. ಸಮಾಜದಲ್ಲಿ ಸಾಮಾನ್ಯ ಮನುಷ್ಯನು ಸಂಸ್ಕೃತಿಯಿಂದ ಪೂಜ್ಯವೆಂದು ಒಪ್ಪಿಕೊಂಡ ಮೂಲ್ಯಗಳ ಸಿದ್ಧಿಗಾಗಿ ಸಮಾಜವು ಹಾಕಿಕೊಟ್ಟಂಥ ಜೀವನ ಪದ್ಧತಿಗೆ ಅನುಸರಿಸಿ ಆಯುಷ್ಯವನ್ನು ಕಳೆಯುವನು. [ವ್ಯಯಿಸುವನು]. ಮಾನವೀ ಜೀವನದಲ್ಲಿ ಎಂದೂ ಬದಲಾಗದ ನಿಯಮವೊಂದು ಹೀಗಿರುವದು. ಅದು ಯಾವುದೆಂದರೆ ಕಾಲಾಂತರದಲ್ಲಿ ಮೂಲ್ಯಗಳಲ್ಲಿ ಮತ್ತು ಜೀವನ ಪದ್ಧತಿಗಳಲ್ಲಿ ಕೆಲವೊಂದು ಪರಿವರ್ತನೆಯನ್ನು ಮಾಡಿಕೊಳ್ಳಬೇಕಾಗುವದು. ಹಾಗೆ ಮಾಡದಿದ್ದರೆ ಸಮಾಜದಲ್ಲಿಯ ಬಹುಸಂಖ್ಯೆಯ ವ್ಯಕ್ತಿಗಳು ಅತ್ಯಂತ ಸ್ವಾರ್ಥಿಗಳಾಗಿ ಬಿಡುವರು. ಸಮಾಜದಲ್ಲಿಯ ಜೀವಂತ ತನವು ಕಡಿಮೆ ಆಗುವದು. ಸಮಾಜದ ಪ್ರಗತಿ ಕುಂಗ್ಗುವದು. ಪ್ರತಿಯೊಬ್ಬರೂ ಜೀವಂತವಾಗಿ ಜೀವನ ಸಾಗಿಸುವಂಥ ಸಮಾಜದಲ್ಲಿ ನಿಃಸ್ವಾರ್ಥಿ ಮನುಷ್ಯರ ಪ್ರಮಾಣವೂ ಸಹ ಇದ್ದೇ ಇರುವದು. ಇರಲಿಕ್ಕೇಬೇಕು ನಾನು ಇನ್ನೊಬ್ಬರಿಗಾಗಿ ಇರುವೆನು. ಸಮಾಜಕ್ಕಾಗಿ ಇರುವೆನು. ಅನ್ನುವ ವೃತ್ತಿಯಿಂದ ಜೀವಿಸುವಂಥ ಶ್ರೇಷ್ಠ ಮನುಷ್ಯರು ಯಾವ ಸಮಾಜದಲ್ಲಿ ಇರುವದಿಲ್ಲವೋ ಆ ಸಮಾಜದಲ್ಲಿಯ ಜನರಲ್ಲಿ ಪರಸ್ಪರ ಸಂಶಯ, ಅವಿಶ್ವಾಸ ತಮ್ಮ ತಮ್ಮೊಳಗೆ ವೈರತ್ವ ಮತ್ತು ಪರಸ್ಪರರಲ್ಲಿ ಘಾತುಕ ಅಥವಾ ಹೀನ

ವೃತ್ತಿಯು ದಾಂಡಿಗತನ ನಡೆಯುವವು. ಶ್ರೀ ಸಮರ್ಥರ ಕಾಲದಲ್ಲಿ ಭಾರತೀಯ ಸಮಾಜ ಇಂಥ ಸ್ವಾರ್ಥದಿಂದ ಕಲಂಕಿತಗೊಂಡಿತ್ತು. (ಹೆಸರು ಕೆಡಿಸಿಕೊಂಡಿತ್ತು). ಶ್ರೀ ಸಮರ್ಥರು ಆಗ ಭಾರತದ ತುಂಬೆಲ್ಲ ಪ್ರವಾಸ ಮಾಡಿದರು. ಮತ್ತು ಸಮಾಜದ ಪುನರುಜ್ಜೀವನ ಮಾಡುವದಕ್ಕಾಗಿ ಮಹಾರಾಷ್ಟ್ರವನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡರು. ಸಮಾಜದಲ್ಲಿ ಪರಿವರ್ತನೆಯನ್ನು ತರಬೇಕಾದರೆ ಅನುಕೂಲವಾದ ರಾಜಸತ್ತೆ ಇದ್ದರೆ ಅದು ಉಪಕಾರಕವಾಗಿ ಪರಿಣಮಿಸುವದು. ರಾಜ್ಯ ಕ್ರಾಂತಿ ಮತ್ತು ಧರ್ಮ ಕ್ರಾಂತಿ ಇವು ಸಮಾಂತರವಾಗಿ ನಡೆದದ್ದಾದರೆ ಸಮಾಜ ಪರಿವರ್ತನೆಯು ತ್ವರಿತವಾಗಿ ಆಗುವದು. ಮಹಾರಾಷ್ಟ್ರದಲ್ಲಿ ಶ್ರೀ ಶಿವಾಜಿ ಮಹಾರಾಜನ ಉದಯವಾದದ್ದರಿಂದ ಧರ್ಮ ಕ್ರಾಂತಿಯು ಸುಗಮವಾಗಿ ಆಯಿತು. ಇದನ್ನೆಲ್ಲ ಹೇಳುವ ಕಾರಣವೇನಂದರೆ ಶ್ರೀ ಸಮರ್ಥರು ಸಮಾಜ ಪರಿವರ್ತನೆಯನ್ನು ಮಾಡುವದಕ್ಕಾಗಿ ವ್ಯಕ್ತಿಯ ಸುಧಾರಣೆಯ ಕಡೆಗೆ ಅತಿ ಮಹತ್ವವನ್ನು ಕೊಟ್ಟರು. ವ್ಯಕ್ತಿಯ ಅಂತರಂಗವು ಯಾವತ್ತೂ ಮಾನವೀಯ ಸಂಬಂಧದ ಮತ್ತು ಮೂಲ್ಯಗಳ ಪ್ರಚೀತಿಯ [ಅನುಭವದ] ಕೇಂದ್ರವಿರುವದು. ಈ ರೀತಿಯ ದೃಢ ವಿಶ್ವಾಸ ಶ್ರೀ ಸಮರ್ಥರದಾಗಿತ್ತು. ಅಂತೆಯೇ ದಾಸಬೋಧದ ಪ್ರಥಮಾರ್ಧದಲ್ಲಿ ಇವರು ಸಂಪೂರ್ಣವಾಗಿ ಶ್ರೀ ಶಂಕರರ ಅದ್ವೈತವನ್ನು ಪ್ರತಿಪಾದಿಸಿದ್ದಾರೆ. ಆದರಲ್ಲಿ ಈ ಎಲ್ಲ ದೃಶ್ಯವಿಶ್ವವು ಮಿಥ್ಯೆಯಾಗಿರುವದು. ತಾತ್ಪೂರ್ತಿಕವಿರುವದು. [ಶಾಶ್ವತವಾದದ್ದಲ್ಲ]. ಅಪೂರ್ಣ ಮತ್ತು ದುಃಖಮಯವಿರುವದು. ಈ ರೀತಿಯಲ್ಲಿ ಅತ್ಯಂತ ನಿಃಸಂದೇಹವಾಗಿ ಅಲ್ಲಿ ಹೇಳಿರುವರು. ಆದರೆ ಅವರ ದಾಸಬೋಧದ ಉತ್ತರಾರ್ಧದಲ್ಲಿ ಪ್ರಪಂಚವಿಲ್ಲದೆ-ಪ್ರಪಂಚದ ಹೊರತಾಗಿ ಪರಮಾರ್ಥ ಸಾಧಿಸುವದಕ್ಕೆ ಸಾಧ್ಯವೇ ಇಲ್ಲ ಎಂಬುದನ್ನೂ ಅಷ್ಟೇ ನಿಸ್ಸಂದೇಹವಾಗಿ ಹೇಳಿದ್ದಾರೆ. ಮೂಲ್ಯದಲ್ಲಿಯ ಪರಿವರ್ತನೆಯೆಂದರೆ ಇದೇ ಆಗಿರುವದು. ಯಾವುದೇ ವ್ಯಕ್ತಿಯನ್ನು ಸಮಾಜದಿಂದ ಬೇರ್ಪಡಿಸಿ ತೆಗೆದು ಬಿಡಲಿಕ್ಕೆ ಬರುವದಿಲ್ಲ. ಏಕೆಂದರೆ ಅನೇಕ ಜನರೊಂದಿಗೆ ನಾನಾ ತರಹದಿಂದ ಬೇರೆ ರೀತಿಯ ಸಂಬಂಧಗಳು ಇವನಿಂದ ಬಂದಿರುವವು. ಈ ಎಲ್ಲ ಸಂಬಂಧಗಳು ಅತ್ಯಂತ ಪ್ರೇಮದವು, ರಕ್ತಸಂಬಂಧದವು, ತನ್ನವರೆಂಬ ಭಾವನೆಯವು, ಮತ್ತು ನಿಃಸ್ವಾರ್ಥತನದವು ಇತ್ಯಾದಿ ಇರಬಹುದಾಗಿರುತ್ತವೆ. (ಇವರೆಲ್ಲರೂ ಇದರಿಂದ ಅಸಮಾಧಾನಗೊಳ್ಳಬಹುದು.) ಈ ರೀತಿಯ ದೃಷ್ಟಿಕೋನವು ಶ್ರೀ ಸಮರ್ಥರದಾಗಿರುವದು. "ಬಹುತಾಚೆ ಮುಖೀ ಉರಾವೆ, ಬಹುತಾಚೇ ಅಂತರೀ ಭರಾವೆ, ಶಹಾಣೆ ಕರಾವೆ ಜನ, ಪತಿತ ಕರಾವೆ ಪಾವನ, ದುಸರ್ಯಾಸ. ಸುಖೀ ಕರಾವೆ. ತೇಣೆ ಆಪಣ ಸುಖೀವ್ಹಾವೆ." ಅರ್ಥ:- "ಬಹು ಜನರ ಮುಖದಲ್ಲಿ ನಿನ್ನ ಹೊಗಳಿಕೆ ಇರಲಿ, ಬಹು ಜನರ ಅಂತರಂಗದಲ್ಲಿ ನೀನು ತುಂಬಿರು, (ಹೀಗೆ ನಿನ್ನ ನಡೆ ಇರಲಿ.) ಜನಸಾಮಾನ್ಯರನ್ನು ಜಾಣರನ್ನಾಗಿ ಮಾಡಬೇಕು, ಪತಿತರನ್ನು ಪಾವನರನ್ನಾಗಿ ಮಾಡಬೇಕು, ಜನರು ಸುಖಿಗಳು ಮತ್ತು ಸಮಾಧಾನಿಗಳಾಗುವಂತೆ ಮಾಡಬೇಕು. ಅಂದರೆ ಇದರಿಂದ ನೀನೂ ಸುಖಿ ಸಮಾಧಾನಿಯಾಗುವೆ" ಈ ತರಹದ ಜಾಣ ಪುರುಷರ ಆದರ್ಶವನ್ನು ಶ್ರೀ ಸಮರ್ಥರು ಜನತೆಯ ಮುಂದೆ ಇಟ್ಟರು. ಸಾಮಾಜಿಕ ಜೀವನದಲ್ಲಿಯ ಪರಿವರ್ತನೆ ಅಂದರೆ ಇದೇ ಆಗಿರುವದು. ಭಾರತೀಯ ಸಮಾಜದಲ್ಲಿ ಆಗ ಬ್ರಾಹ್ಮಣನು ಪುಢಾರಿ ಆಗಿದ್ದನು. ಇವನು ಬುದ್ಧಿವಂತ, ವಿದ್ವಾನ, ತಿಳುವಳಿಕೆಯುಳ್ಳವ ಮತ್ತು ಕಾರ್ಯಕ್ಷಮ (ಕರ್ತವ್ಯದಲ್ಲಿ ಸಾಮರ್ಥ್ಯ) ವುಳ್ಳವನಿದ್ದನು. ಇಂಥವನೇ ಈಗ ಭ್ರಷ್ಟನಾದನು. ಅತ್ಯಂತ ಸ್ವಾರ್ಥಿಯಾದನು. ಅತ್ಯಂತ ಧ್ಯೇಯಚ್ಯುತನಾದನು. ಮತ್ತು ಅತಿ ಹೀನ ಮಟ್ಟದಲ್ಲಿ ಜೀವನವನ್ನು ನಡೆಯಿಸಹತ್ತಿದನು. ಇದರಿಂದಾಗಿ ಯಾವತ್ತೂ ಸಮಾಜವೇ ದಾರಿ ತಪ್ಪಿ (ದಿಕ್ಕೆಟ್ಟು) ವಿಸ್ಖಲಿತ (ಅವ್ಯಸ್ಥಿತ)ವಾಯಿತು. ಇದನ್ನು ನೋಡಿ ದಯಾಳುಗಳಾದ ಶ್ರೀ ಸಮರ್ಥರಿಗೆ ಬಹಳ ಕೆಡುಕೆನಿಸಿತು. ಕಸವಿಸಿಯಾಯಿತು. ಇತರ ಶ್ರೇಷ್ಠರಾದ ಸಂತರಂತೆಯೇ ಇವರೂ ಸಹ ಬ್ರಾಹ್ಮಣ್ಯದ ಅಂದರೆ ಉತ್ತಮ ಜೀವನ ಪದ್ಧತಿಯ ಪಕ್ಷಪಾತಿಗಳಾಗಿದ್ದರು. ಆದರೆ ಬ್ರಾಹ್ಮಣ ಅನ್ನುವ ವ್ಯಕ್ತಿಯ ಪಕ್ಷಪಾತಿಗಳಾಗಿರಲಿಲ್ಲ. ಸಮಾಜದಲ್ಲಿಯ ಬಹಳಷ್ಟು ಜನರು ನಿಃಸ್ವಾರ್ಥಿಗಳಾಗಿರಬೇಕು. ಯಾವತ್ತರೂ ಪರಸ್ಪರವಾಗಿ ಪ್ರೇಮಉಳ್ಳವರಾಗಿರಬೇಕು. ಮತ್ತು ಅವರಲ್ಲಿಯೂ ಯಾವಾಗಲೂ ಭಗವಂತನ ಸ್ಮರಣೆಉಳ್ಳವರಾಗಿರಬೇಕು. ಈ ರೀತಿಯಿಂದ ಪ್ರಪಂಚ ಮತ್ತು ಪರಮಾರ್ಥ ಎರಡನ್ನೂ ಸಾಧಿಸಿ ಸಮಾಧಾನವನ್ನು ಅನುಭವಿಸಬೇಕು. ಶ್ರೀ ಸಮರ್ಥರ ಸಾಮಾಜಿಕ ತತ್ವಜ್ಞಾನವು ಹೀಗಿರುವದು.

## ದಶಕ ಚತುರ್ದಶ : ಸಮಾಸ ಸಪ್ತಮ : ಯುಗಧರ್ಮ ನಿರೂಪಣ

॥ಶ್ರೀರಾಮ॥ ನಾನಾ ವೇಶ ನಾನಾ ಆಶ್ರಮ। ಸರ್ವಾಂಚೇ ಮೂಳ ಗೃಹಸ್ಥಾಶ್ರಮ।
ಜೇಥೇ ಪಾವತೀ ವಿಶ್ರಾಮ । ತ್ರೈಲೋಕ್ಯವಾಸೀ ॥೧॥

ದೇವ ಋಷಿ ಮುನೀ ಯೋಗೀ । ನಾನಾ ತಾಪಸೀ ವೀತರಾಗೀ ।
ಪಿತೃ ಆದಿಕರೂನ ವಿಭಾಗೀ । ಅತೀತ ಅಭ್ಯಾಗತ ॥೨॥

ಗೃಹಸ್ಥಾಶ್ರಮೀಂ ನಿರ್ಮಾಣ ಜಾಲೇ । ಆಪಲಾ ಆಶ್ರಮ ಟಾಕೂನ ಗೇಲೇ ।
ಪರಂತು ಗೃಹಸ್ಥಾಗೃಹೀ ಹಿಂಡೋ ಲಾಗಲೇ। ಕೀರ್ತಿರೂಪೇ ॥೩॥

ಯಾಕಾರಣೇ ಗೃಹಸ್ಥಾಶ್ರಮ । ಸಕಳಾಂಮಧೇ ಉತ್ತಮೋತ್ತಮ ।
ಪರಂತು ಪಾಹಿಜೆ ಸ್ವಧರ್ಮ । ಆಣಿ ಭೂತದಯಾ ॥೪॥

ಜೇಥೇ ಶಡಕರ್ಮೇಂ ಚಾಲತೀ । ವಿಧ್ಯೋಕ್ತ ಕ್ರಿಯಾ ಆಚರತೀ ।
ವಾಗ್ಮಾಧುರ್ಯೇಂ ಬೋಲತೀ । ಪ್ರಾಣಿಮಾತ್ರಾಸೀ ॥೫॥

ಸರ್ವ ಪ್ರಕಾರೇ ನೇಮಕ । ಶಾಸ್ತ್ರೋಕ್ತ ಕರಣೇ ಕಾಹೀಯೇಕ ।
ತ್ಯಾಹಿಮಧ್ಯೇ ಅಲೋಕಿಕ । ತೋ ಹಾ ಭಕ್ತಿಮಾರ್ಗ ॥೬॥

ಪುರಶ್ಚರಣೇ ಕಾಯಾ ಕ್ಲೇಶಿ । ದೃಢವೃತೀ ಪರಮ ಸಾಯಾಸೀ।
ಜಗದೀಶಾವೇಗಳೇ ಜಯಾಸೀ । ಥೋರ ನಾಹೀ ॥೭॥

ಕಾಯಾ ವಾಚಾ ಜೀವೇ ಪ್ರಾಣೇ । ಕಷ್ಟೆ ಭಗವಂತಾಕಾರಣೇ ।
ಮನೇ ಘೇತಲೇ ಧರಣೇ । ಭಜನಮಾರ್ಗೀಂ ॥೮॥

ಐಸಾ ಭಗವಂತಾಚಾ ಭಕ್ತ । ವಿಶೇಷ ಅಂತರೀ ವಿರಕ್ತ ।
ಸಂಸಾರ ಸಾಂಡೂನ ಝಾಲಾ ಮುಕ್ತ। ದೇವಾಕಾರಣೇ ॥೯॥

## ದಶಕ ೧೪. ಸಮಾಸ ೭. ಯುಗಧರ್ಮ ನಿರೂಪಣ (ನುಡಿ ೪೦)

ಸರ್ವ ಆಶ್ರಮಗಳಿಗೂ ಗೃಹಸ್ಥಾಶ್ರಮದ ಆಧಾರವಿರುವದು. ಶ್ರೇಷ್ಠ ಪುರುಷರು ಗೃಹಸ್ಥಾಶ್ರಮದಲ್ಲಿ ಹುಟ್ಟಿ ಬಂದವರೇ ಇರುವರು. (ಮುಂದೂ ಬರುವರು.) ಮತ್ತು ಗೃಹಸ್ಥಾಶ್ರಮದ ಆಶ್ರಯದಿಂದ ಜೀವಿಸುವರು. ಈಗೂ ಸಹ ಜೀವಿಸುತ್ತಿರುವರು:— ಅನೇಕ ಪ್ರಕಾರದ ವೇಷಗಳು ಮತ್ತು ಅನೇಕ ಪ್ರಕಾರದ ಆಶ್ರಮಗಳು ಇರುವವು. (ಮುಖ್ಯವಾಗಿ ಬ್ರಹ್ಮಚರ್ಯ, ಗೃಹಸ್ಥ. ವಾನಪ್ರಸ್ಥ, ಸನ್ಯಾಸ, ಇವು ನಾಲ್ಕು ಆಶ್ರಮಗಳು ಇರುವವು.) ಆದರೆ ಗೃಹಸ್ಥಾಶ್ರಮವು ಎಲ್ಲಕ್ಕೂ ಮೂಲ ಆಧಾರವಾಗಿರುವದು. ತ್ರೈಲೋಕ್ಯ (ಸ್ವರ್ಗ, ಮೃತ್ಯು, ಪಾತಾಳ)ದಲ್ಲಿಯ ಎಲ್ಲರಿಗೂ ಕೊನೆಗೆ (ಆಖೈರದಲ್ಲಿ) ಗೃಹಸ್ಥಾಶ್ರಮದಲ್ಲಿಯೇ ವಿಶ್ರಾಂತಿ ಸಿಗುವದು. (೧) ದೇವ, ಋಷಿ, ಮುನಿ, ಯೋಗಿ, ಅನೇಕ ತಾಪಸಿ, (ತಪಸ್ವಿ) ಮತ್ತು ವಿರಕ್ತ ಪುರುಷರು, ಪಿತೃಗಳು ಮತ್ತು ಇನ್ನುಳಿದ ಹವಿಷ್ಯಾನ್ನದ ಭಾಗೀ (ಪಾಲು)ದಾರರು, ಅದರಂತೆ ಅತಿಥಿ ಅಭ್ಯಾಗತರು.(೨)ಇವರೆಲ್ಲರೂ ಗೃಹಸ್ಥಾಶ್ರಮದಲ್ಲಿಯೇ ಹುಟ್ಟಿ ಬಂದವರು. ಅನಂತರ ಈ ಆಶ್ರಮವನ್ನು ಬಿಟ್ಟು ಹೋಗುವರು. ಮತ್ತು ಸಾಧನಗಳನ್ನು ಮಾಡುವರು. ಆದರೂ ಮುಂದೆ ಕೀರ್ತಿ (ಯಶ) ದೊರೆತ ತರುವಾಯ ಇವರು ಗೃಹಸ್ಥರ ಆಶ್ರಯದಲ್ಲಿ ಪುನಃ ಇದ್ದುಕೊಂಡು ಗೃಹಸ್ಥರ ಮನೆಮನೆಗೆ ಸಂಚಾರ ಮಾಡುವರು, (೩) ಅಂತೆಯೇ ಗೃಹಸ್ಥಾಶ್ರಮವು ಎಲ್ಲ ಆಶ್ರಮಗಳಲ್ಲಿ ಪ್ರಶಸ್ತವಾದ ಸೋಯಿಸ್ಕರ, ಸುಲಭ ಸಾಧ್ಯ. ಆಶ್ರಮವಿರುವದು. ಆದರೆ ಇದರಲ್ಲಿ ಸ್ವಧರ್ಮದ ಆಚರಣೆ ಮತ್ತು ಭೂತದಯು ಈ ಎರಡೂ ಮಾತಿಗೆ ಮನ್ನಣೆ ಇರಬೇಕು. (೪) ಅಧ್ಯಯನ, ಅಧ್ಯಾಪನ, ಯಜನ, ಯಾಜನ, ದಾನ, ಮತ್ತು ಪ್ರತಿಗ್ರಹ ಈ ಆರು ಕರ್ಮಗಳು ಎಲ್ಲಿ ನಡೆಯುವವೋ ಅಲ್ಲಿ ಧರ್ಮ ಶಾಸ್ತ್ರದ ಪ್ರಕಾರ ಯಾವತ್ತೂ ಕ್ರಿಯೆಗಳ ಆಚರಣೆ ನಡೆಯುವದು. ಮತ್ತು ಅಲ್ಲಿ ಯಾವತ್ತೂ ಜನರ ಕೂಡ ಮಧುರ ವಾಣಿಯಿಂದ ಮಾತುಕತೆಗಳು ನಡೆಯುವವು. (೫) ಏನಾದರೂ ಮಾಡುವದಿದ್ದರೆ ಅದನ್ನು ಸರ್ವರೀತಿಯಿಂದ ನಿಯಮಿತತನದಿಂದ ಮತ್ತು ಶಾಸ್ತ್ರೋಕ್ತ ರೀತಿಯಿಂದ ಮಾಡುವಂಥದು ಎಲ್ಲಿ ಇರುವದೋ ಅಂಥ ಗೃಹಸ್ಥಾಶ್ರಮವು ಉತ್ತಮವಿರುವದು. ಅದರಲ್ಲಿಯೂ ಸಹ ಎಲ್ಲಿ ಅಲೌಕಿಕವಾದ ಭಕ್ತಿ ಮಾರ್ಗವೂ ಇದರೊಂದಿಗೆ ಹೊಂದಿಕೊಂಡು ನಡೆದಿರುವದೋ ಅಂಥ ಗೃಹಸ್ಥಾಶ್ರಮವು ಪರಮ ಧನ್ಯವಾದದ್ದೆಂದು ಹೇಳಬಹುದು. (೬) ಗೃಹಸ್ಥಾಶ್ರಮವು ಉತ್ತಮವೆಂಬುದು ನಿಜವಿರುವದು. ಆದರೆ ಯಾರ ಚಿತ್ತವು ಭಗವಂತನ ಕಡೆಗೇ ಪೂರ್ಣವಾಗಿ ಹೋಗುವದೋ ಮತ್ತು ಯಾರ ಅಂತಃಕರಣದಲ್ಲಿ ಖರೇ ವೈರಾಗ್ಯ ಉದಯ ಹೊಂದಿರುವದೋ ಅವನು ಸರ್ವಸಂಗಪರಿತ್ಯಾಗ ಮಾಡಿ ಸಾಕ್ಷಾತ್ಕಾರ ಪಡೆಯುವ ಮಾರ್ಗವನ್ನು ಹಿಡಿಯುವನು. ಇಂಥ ಉದಾಸೀನ ವ್ಯಕ್ತಿಯ ಆತ್ಮಜ್ಞಾನಿಪುರುಷನನ್ನು ನೋಡಿದೆವೆಂದರೆ ಸಮಾಧಾನವಾಗುವದು. ಆದರೆ ಇಂಥ ದಿವ್ಯ ಪುರುಷನ ಭೆಟ್ಟಿಯು ಆಗಬೇಕಾದರೆ ಬಹಳಷ್ಟು ಪುಣ್ಯ ಮಾಡಿರಬೇಕಾಗುವದು:— ಯಾವನು ಪುರಶ್ಚರಣ ಮಾಡುವನೋ ಅವನು ಶರೀರವನ್ನು ಕಷ್ಟಪಡಿಸಲು ಹಿಂದು ಮುಂದು ನೋಡುವದಿಲ್ಲ. ದೃಢ ಮನದಿಂದ ತನ್ನ ವ್ರತವನ್ನು ಸಂಬಾಳಿಸಿಕೊಳ್ಳುವನು. ಬಹಳಷ್ಟು ಶ್ರಮ ಮಾಡುವನು. ಇದೆಲ್ಲವೂ ಇದ್ದೂ ಒಬ್ಬ ಭಗವಂತನ ಹೊರತು ಇತರವೆಲ್ಲವೂ ಶ್ರೇಷ್ಠವಲ್ಲವೆಂದು ಈ ವ್ರತನಿಷ್ಠನಿಗೆ ಅನಿಸುವದು. (೭) ಶರೀರದಿಂದ ವಾಣಿಯಿಂದ ಜೀವದಿಂದ, ಪ್ರಾಣದಿಂದ ಯಾವನು ಭಗವಂತನಿಗಾಗಿ ಕಷ್ಟಪಡುವನೋ, ಯಾವನ ಮನಸ್ಸು ಭಜನ ಮಾರ್ಗದಲ್ಲಿ ಅತ್ಯಂತ ಪಕ್ಕಾರೀತಿಯಲ್ಲಿ ಧರಣೇ ಕುಳಿತುಬಿಟ್ಟಿರುವದೋ ಭಕ್ತಿಯಿಂದ ಮನಸ್ಸು ಎಷ್ಟೂ ಚ್ಯುತವಾಗುವದಿಲ್ಲವೋ(೮) ಇಂಥ ಆ ಯಾವ ಭಗವಂತನ ಭಕ್ತನಿರುವನೋ ಮತ್ತು ಅದರಲ್ಲಿಯೂ ಅಂತರಂಗದಲ್ಲಿ ವಿರಕ್ತನಿರುವನೋ ಅಂಥವನು ಕೇವಲ ಭಗವಂತನ ಸಲುವಾಗಿ ಸಂಸಾರವನ್ನು ತ್ಯಜಿಸಿ ನಿಶ್ಚಿಂತನಾಗುವನು. ಗೃಹಸ್ಥಾಶ್ರಮವು ಎಷ್ಟೇ ಉತ್ತಮವಿದ್ದರೂ ಸಹ ಅತಿ ವೈರಾಗ್ಯ ಸಂಪನ್ನನಾದ ಬ್ರಹ್ಮಜಿಜ್ಞಾಸು ಪುರುಷನಿಗೆ ಇದರಲ್ಲಿ ಇರುವದು ಕಠಿಣವಾಗುವದು. ಅಂತೆಯೇ ಇಂಥ ಅತಿ ವೈರಾಗ್ಯಶೀಲ ಪುರುಷನಿಗೆ ಮಾತ್ರ ಸಂಸಾರವನ್ನು ತ್ಯಜಿಸಲು ಸಂತರು ಒಪ್ಪಿಗೆ ಕೊಡುವರು. (೯)

ಅಂತರಾಪಾಸೂನ ವೈರಾಗ್ಯ । ತೇ ಚಿ ಜಾಣಾವೇ ಮಹದ್ಭಾಗ್ಯ।
ಲೋಲಂಗತೆಯೆವಢೇ ಅಭಾಗ್ಯ । ಆಣೀಕ ನಾಹೀ ॥೧೦॥

ರಾಜೇ ರಾಜ್ಯ ಸಾಂಡೂನ ಗೇಲೇ । ಭಗವಂತಾಕಾರಣೇ ಹಿಂಡಲೇ ।
ಕೀರ್ತಿರೂಪೇ ಪಾವನ ಜಾಲೇ । ಭೂಮಂಡಳೀ ॥೧೧॥

ಐಸಾ ಜೋ ಕಾ ಯೋಗೇಶ್ವರ । ಅಂತರೀ ಪ್ರತ್ಯಯಾಚಾ ವಿಚಾರ ।
ಉಕಲೂ ಜಾಣೇ ಅಂತರ । ಪ್ರಾಣಿಮಾತ್ರಾಚೇ ॥೧೨॥

ಐಸೀ ವೃತ್ತೀ ಉದಾಸೀನ । ತ್ಯಾಹಿವರೀ ವಿಶೇಷ ಆತ್ಮಜ್ಞಾನ ।
ದರ್ಶನಮಾತ್ರೇ ಸಮಾಧಾನ । ಪಾವತೀ ಲೋಕ ॥೧೩॥

ಬಹುತಾಸೀ ಕರೀ ಉಪಾಯೆ । ತೋ ಜನಾಚ್ಯಾ ವಾಟ್ಯಾ ನ ಯೇ ।
ಅಖಂಡ ಜಯಾಚೇ ಹೃದಯೆ । ಭಗವದ್ರೂಪ ॥೧೪॥

ಜನಾಸ ದಿಸೆ ಹಾ ದುಶ್ಚಿತ । ಪರೀ ತೋ ಆಹೆ ಸಾವಚಿತ ।
ಅಖಂಡ ಜಯಾಚೇ ಚಿತ್ತ । ಪರಮೇಶ್ವರೀ ॥೧೫॥

ಉಪಾಸನಾಮೂರ್ತಿಧ್ಯಾನೀ । ಅಥವಾ ಆತ್ಮಾನುಸಂಧಾನೀ ।
ನಾಹೀ ತರೀ ಶ್ರವಣ ಮನನೀ । ನಿರಂತರ ॥೧೬॥

ಪೂರ್ವಜಾಂಚ್ಯಾ ಪುಣ್ಯ ಕೋಟೀ । ಸಂಗ್ರಹ ಅಸಿಲ್ಯಾ ಗಾಂಠೀ ।
ತರೀ ಚ ಐಸಿಯಾಚೀ ಭೇಟೀ । ಹೋಯೆ ಜನಾಸೀ ॥೧೭॥

ಪ್ರಚೀತಿವಿಣ ಜೇ ಜ್ಞಾನ । ತೋ ಅವಘಾ ಚಿ ಅನುಮಾನ ।
ತೇಥೇ ಕೈಚೇ ಪರತ್ರಸಾಧನ । ಪ್ರಾಣಿಯಾಸೀ ॥೧೮॥

ಯಾಕಾರಣೇ ಮುಖ್ಯ ಪ್ರತ್ಯಯೆ । ಪ್ರಚೀತಿವಿಣ ಕಾಮಾ ನಯೇ ।
ಉಪಾಯಾಸಾರಿಖಾ ಅಪಾಯೆ । ಶಾಹಾಣೇ ಜಾಣತೀ ॥೧೯॥

ವೇಡೇ ಸಂಸಾರ ಸಾಂಡೂನ ಗೇಲೇ । ತರೀ ತೇ ಕಷ್ಟಕಷ್ಟೋ ಚಿ ಮೇಲೇ ।
ದೋಹೀಕಡೆ ಅಂತರಲೇ । ಇಹಲೋಕ ಪರತ್ರ ॥೨೦॥

ಯಾವನಿಗೆ ಅತ್ಯಂತ ಅಂತಃಕರಣ ಪೂರ್ವಕವಾಗಿ ವೈರಾಗ್ಯವಿರುವದೋ, ಅಂಥವನು ಭಾಗ್ಯವಂತನೆಂದು ತಿಳಿಯಬೇಕು. ಯಾವನಿಗೆ ಅತಿಶಯವಾದ ಆಸಕ್ತಿ ಅಥವಾ ಲೋಭವಿರುವದೋ ಅವನು ದುರ್ಭಾಗ್ಯವಂತನೆಂದು ತಿಳಿಯಬೇಕು. [೧೦] ದೊಡ್ಡ ದೊಡ್ಡ ರಾಜರು ರಾಜ್ಯವನ್ನು ಬಿಟ್ಟು ಹೊರಟು ಹೋಗಿರುವರು. ಮತ್ತು ಭಗವಂತನಿಗಾಗಿ ವಣ ವಣ, ಪಿರಿ ಪಿರಿ ಸುತ್ತಾಡಿ (ತಿರುಗಾಡಿ) ಭಗವಂತನ ಪ್ರಾಪ್ತಿ ಮಾಡಿಕೊಂಡದ್ದರಿಂದಾಗಿ ಇವರು ಈ ಜಗತ್ತಿನಲ್ಲಿ ಕೀರ್ತಿ ರೂಪದಿಂದ ಪಾವನರಾಗಿ ಹೋಗಿರುವರು. [೧೧] ಇಂಥ ಆ ಯಾವ ಯೋಗೀಶ್ವರನಿರುವನೋ ಅವನ ಅಂತರ್ಯಾಮದಲ್ಲಿ ಸ್ವಾನುಭವದಿಂದ ನಿರ್ಮಾಣವಾದಂಥ ವಿವೇಕವಿರುವದು. ಇಂಥ ಯೋಗೀಶ್ವರನೇ ಸಾಮಾನ್ಯ ಮನುಷ್ಯರ ಅಂತರ್ಯಾಮದಲ್ಲಿ ಅಧ್ಯಾತ್ಮದ ವಿಕಾಸ ಮಾಡಲು ಶಕ್ತನಿರುವನು. [೧೨] ಇವನ ವೃತ್ತಿಯು ಉದಾಸೀನವಿರುವದು. ಅನಾಸಕ್ತ ಅಥವಾ ವೈರಾಗ್ಯವು ಇವನಲ್ಲಿ ತುಂಬಿರುವದು. ಇದಕ್ಕಿಂತಲೂ ವಿಶೇಷವಾದದ್ದೆಂದರೆ ಇವನಿಗೆ ಆತ್ಮಸಾಕ್ಷಾತ್ಕಾರವಾಗಿರುತ್ತದೆ. ಕೇವಲ ಇವನ ದರ್ಶನ ಮಾತ್ರದಿಂದ ಜನರು ಸಮಾಧಾನ ಹೊಂದುವರು. [೧೩] ಯಾವನು ಬಹಳಷ್ಟು ಜನರನ್ನು ಉದ್ಧಾರ ಮಾಡುವನೋ ಅಂಥ ಮಹಾತ್ಮನ ಸಂಗತಿಯು ಲಾಭ ಅಥವಾ ಉಪದೇಶದ ಲಾಭ ಎಲ್ಲರಿಗೂ ಸಿಗುವದಿಲ್ಲ. (ಇದಕ್ಕೆಲ್ಲ ಉದ್ಧಾರವಾಗುವ ಕಾಲ ಮತ್ತು ಸುಕೃತ ಬೇಕಾಗುವದು). ಇವನ ಮನವು ನಿರಂತರವೂ ಪರಮಾತ್ಮ ಸ್ವರೂಪದೊಂದಿಗೆ ತದಾಕಾರ ಹೊಂದಿರುವದು. [೧೪] ಇವನ ಲಕ್ಷ್ಯ ಒಂದೇ ಕಡೆಗೆ ಇರುವದಿಲ್ಲ. ಚಂಚಲ ಚಿತ್ತನಂತೆ ಕಾಣುವನು. ಆದರೆ ಇವನು ಸ್ಥಿರಚಿತ್ತನು. ಅಂದರೆ ಅಂತರ್ಯಾಮದಲ್ಲಿ ಅತಿ ಸಾವಧನಿರುವನು. ಯಾಕೆಂದರೆ ಇವನ ಚಿತ್ತವು ಪರಮಾತ್ಮನಲ್ಲಿ (ರೂಪ ಧ್ಯಾನದಲ್ಲಿಯಾಗಲೀ, ನಾಮಸ್ಮರಣದಲ್ಲಿಯಾಗಲೀ,) ಅಖಂಡವಾಗಿ ಮಗ್ನವಾಗಿರುವದು. [೧೫] ಇವನು ತನ್ನ ಉಪಾಸ್ಯ ದೇವತೆಯ ಧ್ಯಾನದಲ್ಲಿಯಾಗಲೀ, ಅಥವಾ ಆತ್ಮಾನುಸಂಧಾನ (ಆತ್ಮಸ್ವರೂಪದ ಅನುಸಂಧಾನ)ದಲ್ಲಿಯಾಗಲೀ ಲೀನವಾಗಿರುವನು. ಇಲ್ಲವೆ ಶ್ರವಣ, ಮನನದಲ್ಲಿಯಾಗಲೀ ಇವನು ಸದಾಕಾಲ ತೊಡಗಿರುವನು. [೧೬] ಪೂರ್ವಜರ ಪುಣ್ಯ ಕರ್ಮದ ದೊಡ್ಡ ಸಂಗ್ರಹ ನಮ್ಮ ಪದರಿನಲ್ಲಿ ಇದ್ದದ್ದಾದರೆ ಮಾತ್ರ ಇಂಥ ಸಾಕ್ಷಾತ್ಕಾರಿ ದೊಡ್ಡ ಸತ್ಪುರುಷರ ಭೆಟ್ಟಿಯು ಸುಯೋಗ ಜನರಿಗೆ ಒದಗಿ ಬರುವದು. [೧೭] ಪರಮಾರ್ಥದಲ್ಲಿ ಪ್ರತ್ಯಕ್ಷ ಅನುಭವಕ್ಕೆ ಅತಿಶಯ ಮಹತ್ವವಿರುವದು. ಯಾವನೋ ಒಬ್ಬ ಮನುಷ್ಯನು ಸುಮ್ಮನೇ ಸಂಸಾರ ಬಿಟ್ಟು ಹೊರಟು ಹೋದನು. ಆದರೆ ಅವನಿಗೆ ಯಾವ ಅನುಭವವನ್ನೂ ಸಾಧಿಸಲಿಕ್ಕೆ ಆಗಲಿಲ್ಲ. ಅಥವಾ ಸಾಧಿಸಲಿಲ್ಲವೆಂದರೆ ಇಂಥವನ ಜೀವನವು ಎರಡೂ ಕಡೆಯಿಂದಲೂ ವ್ಯರ್ಥವಾಗಿ ಹೋಗುವದು. ಸಂಸಾರದ ಬಗ್ಗೆ ಇದು ಖೊಟ್ಟಿ ಇದೆ ಅನ್ನುವದು ನಿಜವಾಗಿ ಮನವರಿಕೆಯಾಗಿ(ಪಟಾಯಿಸಿ) ಯಾವನು ಸಂಸಾರ ಬಿಡುವನೋ ಅಂಥವನಿಗೆ ಆತ್ಮಜ್ಞಾನವು ಪ್ರಾಪ್ತವಾಗುವದು. ಇಂಥ ಮನುಷ್ಯನೇ ಸ್ವತಃ ತಾನು ಉದ್ಧಾರವಾಗಿ ಜಗತ್ತನ್ನೂ ಉದ್ಧಾರ ಮಾಡುವನು. ಯಾವ ಜ್ಞಾನವು ಪ್ರತ್ಯಕ್ಷ ಅನುಭವಕ್ಕೆ ಬರುವದಿಲ್ಲವೋ ಅದು ಸಂಪೂರ್ಣವಾಗಿ ಕಲ್ಪನಾಮಯವಿರುವದು. ಇಂಥ ಜ್ಞಾನದಿಂದ ಜನರನ್ನು ಅಧ್ಯಾತ್ಮದ ಸಾಧನ ಮಾರ್ಗದಲ್ಲಿ ಒಯ್ಯಲು ಇದು ಮಾರ್ಗದರ್ಶಕವಾಗುವದಿಲ್ಲ. [೧೮] ಆದ್ದರಿಂದಲೇ ಪರಮಾರ್ಥದಲ್ಲಿ ಸ್ವಾನುಭವಕ್ಕೆ ಪ್ರಾಧಾನ್ಯವಿರುವದು. ಸ್ವಾನುಭವದ ಹೊರತಾಗಿ ಇತರ ಮಾತುಗಳು ಕೆಲಸಕ್ಕೆ ಬಾರದವು. ಇಂಥದರಲ್ಲಿ ಉಪಾಯ ಮಾಡಲು ಹೋದದ್ದಾದರೆ ಅದೇ ಅಪಾಯವಾಗುವದು. ಈ ಮಾತನ್ನು ಬುದ್ಧಿವಂತರಾದ ಜಾಣ ಜನರು ತಿಳಿಯುವರು. (ಉಪಾಯ = ಕಲ್ಯಾಣ ಮಾರ್ಗ, ಅಪಾಯ = ಅಕಲ್ಯಾಣದ ಮಾರ್ಗ) [೧೯] ಒಬ್ಬ ಹುಚ್ಚ ಮನುಷ್ಯನು ಸುಮ್ಮನೇ ಸಂಸಾರ ಬಿಟ್ಟು ಹೋಗುವನು. ವಿನಾಕಾರಣ ಕಷ್ಟ ಭೋಗಿಸುತ್ತಲೇ ಸತ್ತು ಹೋಗುವನು. ಇತ್ತ ಪ್ರಪಂಚವಿಲ್ಲ. ಅತ್ತ ಪರಮಾರ್ಥವಿಲ್ಲದಂತಹ ಪರಿಸ್ಥಿತಿಯಾಗಿ ಎರಡೂ ಕಡೆಗೂ ಇವನು ವ್ಯರ್ಥವಾಗುವನು. ಹಾಳಾಗುವನು. ದೂರಾಗುವನು. [೨೦]

ರಾಗೇ ರಾಗೇ ನಿಘೋನ ಗೇಲಾ । ತರೀ ತೋ ಭಾಂಡಭಾಂಡೋ ಚಿ ಮೇಲಾ।
ಬಹುತ ಲೋಕ ಕಷ್ಟೀ ಕೇಲಾ । ಆಪಣ ಹಿ ಕಷ್ಟೀ ॥೨೧॥

ನಿಘೋನ ಗೇಲಾ ಪರೀ ಅಜ್ಞಾನ । ತ್ಯಾಚಿ ಸಂಗತೀ ಲಾಗಲೇ ಜನ ।
ಗುರು ಶಿಷ್ಯ ದೋಘೇ ಸಮಾನ । ಅಜ್ಞಾನರೂಪೇ ॥೨೨॥

ಆಶಾಬದ್ಧೀ ಅನಾಚಾರೀ । ನಿಘೋನಿ ಗೇಲಾ ದೇಶಾಂತರೀ ।
ತರೀ ತೋ ಅನಾಚಾರ ಚಿ ಕರೀ । ಜನಾಮಧ್ಯೇ ॥೨೩॥

ಗೃಹೀ ಪೋಟೇವಿಣ ಕಷ್ಟತೀ । ಕಷ್ಟೀ ಹೋಊನ ನಿಘೋನ ಜಾತೀ ।
ತ್ಯಾಸ ಠಾಈ ಠಾಈ ಮಾರಿತೀ । ಚೋರೀ ಭರತಾ ॥೨೪॥

ಸಂಸಾರ ಮಿಥ್ಯಾ ಏಸಾ ಕಳಲಾ । ಜ್ಞಾನ ಸಮಜೋನ ನಿಘೋನ ಗೇಲಾ ।
ತೇಣೇ ಜನ ಪಾವನ ಕೇಲಾ । ಆಪಣಾ ಏಸಾ ॥೨೫॥

ಯೇಕೇ ಸಂಗತೀನೇ ತರತೀ । ಯೇಕೇ ಸಂಗತೀನೇ ಬುಡತೀ ।
ಯಾಕಾರಣೇ ಸತ್ಸಂಗತೀ । ಬರೀ ಪಾಹಾವೀ ॥೨೬॥

ಜೇಥೇ ನಾಹೀ ವಿವೇಕಪರೀಕ್ಷಾ । ತೇಥೇ ಕೈಚೀ ಅಸೇಲ ದೀಕ್ಷಾ ।
ಘರೋಘರೀ ಮಾಗತಾ ಭಿಕ್ಷಾ । ಕೋಠೇ ಹಿ ಮಿಳೇನಾ ॥೨೭॥

ಜೋ ದುಸರ್ಯಾಚೇ ಅಂತರ ಜಾಣೇ । ದೇಶ ಕಾಳ ಪ್ರಸಂಗ ಜಾಣೇ ।
ತಯಾ ಪುರುಷಾ ಕಾಯ ಉಣೇ । ಭೂಮಂಡಳೀ ॥೨೮॥

ನೀಚ ಪ್ರಾಣೀ ಗುರುತ್ವ ಪಾವಲಾ । ತೇಥೇ ಆಚಾರ ಚಿ ಬುಡಾಲಾ ।
ವೇದಶಾಸ್ತ್ರ ಬ್ರಾಹ್ಮಣಾಲಾ । ಕೋಣ ಪುಸೇ ॥೨೯॥

ಬ್ರಹ್ಮಜ್ಞಾನಾಚಾ ವಿಚಾರೂ । ತ್ಯಾಚಾ ಬ್ರಾಹ್ಮಣಾಸೀ ಚ ಅಧಿಕಾರೂ ।
ವರ್ಣಾನಾಂ ಬ್ರಾಹ್ಮಣೋ ಗುರುಃ । ಏಸೇ ವಚನ ॥೩೦॥

ಬ್ರಾಹ್ಮಣ ಬುದ್ಧೀಪಾಸೂನ ಚೇವಲೆ । ಆಚಾರಾಪಾಸೂನ ಭ್ರಷ್ಟಲೆ ।
ಗುರುತ್ವ ಸಾಂಡೂನ ಜಾಲೆ । ಶಿಷ್ಯ ಶಿಷ್ಯಾಚೆ ॥೩೧॥

ಯಾವನೋ ಒಬ್ಬ ಸಿಟ್ಟಿನ ಭರದಲ್ಲಿ ಮನೆ ಬಿಟ್ಟು ಹೋಗುವನು. ಮತ್ತು ಆಮೇಲೆ ಅವರಿವರ ಸಂಗಡ ಜಗಳ ತಂಟೆ ಮಾಡಿ ಮಾಡಿ ಒಂದು ದಿನ ಸತ್ತು ಹೋಗುವನು. ಇಂಥವರು ಬಹಳ ಜನರಿಗೆ ಕಷ್ಟ ಕೊಡು ವರು. ಮತ್ತೂ ತಾವೂ ಸಹ (ಸಿಟ್ಟಿನ ಕಾರಣದಿಂದ) ಕಷ್ಟ ಸೋಸುತ್ತಲೇ ಸತ್ತು ಹೋಗುವರು. [೨೧] ಒಬ್ಬ ಮನುಷ್ಯನು ಮನೆ ಬಿಟ್ಟು ಹೊರಟು ಹೋದನು. ಆದರೆ ಸ್ವಾನುಭವವಿಲ್ಲದ್ದರಿಂದ ಅಂದರೆ ಏನೂ ಸಾಧನೆ ವಗೈರೆ ಮಾಡದೇ ಇದ್ದದ್ದರಿಂದ ಅಜ್ಞಾನಿಯಾಗಿಯೇ ಉಳಿದನು. ಆದರೆ ಕೆಲವು ಜನ ಇವನ ಬೆನ್ನು ಹತ್ತಿದರು. ಇಂಥದರಲ್ಲಿ ಗುರು ಮತ್ತು ಶಿಷ್ಯ ಇಬ್ಬರೂ ಸಮಾನವಾದ ಅಜ್ಞಾನದಲ್ಲಿಯೇ ಉಳಿಯುವರು. ಇಂಥ ಗುರುವಿಗೆ ಗುಟುಕು ನೀರು. ಶಿಷ್ಯನಿಗೆ ಮುಳುಗುನೀರೇಗತಿ [೨೨] ವಾಸನಾದಿಂದ ಭ್ರಷ್ಟನಾದವನು ಅಂದರೆ ಆಶಾಬದ್ಧ–ದುರಾಶೆಯುಳ್ಳವ ಕೆಟ್ಟ ವರ್ತನದ ಅನಾಚಾರಿಯಾದವನೊಬ್ಬನು ತನ್ನ ದೇಶಬಿಟ್ಟು ಎರಡನೆಯ ದೇಶಕ್ಕೆ ಹೋದರೂ ಸಹ ಅಲ್ಲಿಯ ಜನರಲ್ಲಿ ಸಹ ಇವನ ದುರಾಚರಣೆಯು ಸಾಗಿರುತ್ತದೆ. (ಹುಟ್ಟು ಗುಣ ಹೇಗೆ ಹೋದೀತು ?) [೨೩] ಮನೆಯಲ್ಲಿ ಹೊಟ್ಟೆಗಿಲ್ಲದೆ ಒಬ್ಬನು ಕಷ್ಟಪಟ್ಟವನಾಗಿ ಮನೆ ಬಿಟ್ಟು ಹೋದನು. ಆದರೆ ಕಳ್ಳತನದಲ್ಲಿ ತೊಡಗಿದ್ದನೆಂದು ಅಥವಾ ಕಳ್ಳತನದ ಆರೋಪ ಒಂದು ಅಲ್ಲಿಯ ಜನರು ಹೊಡೆ ಬಡೆಯುವದನ್ನು ಮಾಡಿದರು. ಊರು ಬಿಟ್ಟು ಬಂದವನು ಹೊಡೆತ ತಿನ್ನಬೇಕಾಯಿತು. [೨೪] ಈ ವರೆಗೆ ಹೇಳಿದ್ದರ ವಿರುದ್ಧ (ಉಲಟ) ಸಂಸಾರವು ನಿಜವಾಗಿ ಮಿಥ್ಯಾ ಇರು ವದು. ಇದರಲ್ಲಿ ಏನೂ ಅರ್ಥವಿಲ್ಲವೆಂದು ಸತ್ಯವಾಗಿ ಯಾರಿಗೆ ತಿಳಿದಿರುವದೋ ಅವರು ಆತ್ಮಜ್ಞಾನ ಹೊಂದಲು ಯೋಗ್ಯರಾಗುವರು, ಪಾತ್ರರಾಗುವರು. ಇಂಥವನು ಮನೆ ಮ ಸಂಸಾರ ಬಿಟ್ಟು ಹೋದ ಮೇಲೆ ಇವನು ಸ್ವತಃ ಪಾವನನಾಗುವನು. (ಇದು ನಿಜವಾದದ್ದೇ ಸರಿ). ತಾನಲ್ಲದೇ ಅನೇಕ ಜನರನ್ನೂ ಕೂಡಾ ತನ್ನಂತೆ ಪಾವನರನ್ನಾಗಿ ಮಾಡುವನು. [೨೫] ಮನುಷ್ಯನು ಇಂಥ ಒಂದು ಸಂಗತಿಯಿಂದ ಉದ್ಧಾರವಾದರೆ ಇನ್ನೊಂದು ಸಂಗತಿಯಿಂದ ಮುಳುಗುವನು. (ಒಬ್ಬರ ಸಂಗತಿಯಿಂದ ತೇಲುವದು. ಮತ್ತು ಒಬ್ಬರ (ದುಷ್ಟ–ನಷ್ಟರ) ಸಂಗತಿಯಿಂದ ಮುಳ ಗುವದು). ಆದ್ದರಿಂದ ಪೂರ್ಣ ಶೋಧ ಮಾಡಿ ಸತ್ಸಂಗತಿಯನ್ನು ಹಿಡಿಯಬೇಕು. [೨೬] ಯಾವ ಸಾಧುವು ವಿವೇ ಕದ ವರೆಗಲ್ಲಿಗೆ ಹತ್ತುವದಿಲ್ಲವೋ, ವಿವೇಕದಿಂದ ತೆಗೆದುಕೊಂಡ ಪರೀಕ್ಷೆಯಲ್ಲಿ ಇಳಿಯುವದಿಲ್ಲವೋ ಅಂಥವನಲ್ಲಿ ಅಧ್ಯಾತ್ಮದ ಮಾರ್ಗದರ್ಶನ ಮಾಡುವ ಸಾಮರ್ಥ್ಯ ಇಲ್ಲವೆಂದು ತಿಳಿಯಬೇಕು. ಸುಮ್ಮನೇ ಮನೆ ಮನೆ ತಿರುಗಿ ಭಿಕ್ಷೆ ಯನ್ನು ಬೇಡಿದ್ದಾದರೆ ಅದು ಎಲ್ಲಿಯೂ ಸಿಗುವದಿಲ್ಲ. (ಭಿಕ್ಷೆ ಸಿಕ್ಕರೂ ಅದು ಕೂಳಿನ ಭಿಕ್ಷೆ ಅನಿಸುವದು. ಅಧ್ಯಾ ತ್ಮದ ಭಿಕ್ಷೆ ಆಗಲಾರದು). ಇದರಂತೆಯೇ ಸುಮ್ಮನೇ ಅವರಿವರಿಂದ (ಕೆಲಸಕ್ಕೆ ಬಾರದ ಪಡ್ಡರಿಂದ) ಪರಮಾರ್ಥ ಪ್ರಾಪ್ತವಾಗುವದಿಲ್ಲ. [೨೭] ಯಾವನು ಇನ್ನೊಬ್ಬನ ಅಂತಃಕರಣವನ್ನು ಗುರುತಿಸುವನೋ ಮತ್ತು ದೇಶ, ಕಾಲ, ಪ್ರಸಂಗಗಳನ್ನು ತಿಳಿದಿರುವನೋ ಇಂಥ ಚತುರ ಪುರುಷನಿಗೆ ಜಗತ್ತಿನೊಳಗೆ ಎಲ್ಲಿ ಹೋದರೂ ಯಾವುದೂ ಕಡಿಮೆ ಬೀಳುವದಿಲ್ಲ. [೨೮] ಇನ್ನು ಮುಂದೆ ಸಮಾಸದ ಕೊನೆಯವರೆಗೂ ಆ ಕಾಲದ ಬ್ರಾಹ್ಮಣ ವರ್ಗದ ದೈನ್ಯಾ ವಸ್ಥೆಯು ಹೇಗೆ ಇದ್ದಿತು? ಇದರ ವರ್ಣನೆಯು ಇರುವದು. ಹೀನ ವಿಷಯದಿಂದ ಮನಸ್ಸನ್ನು ತೆಗೆದು ಉಚ್ಚ ಧ್ಯೇಯ ಕ್ಕಾಗಿ ನಾವು ಜೀವಿಸಬೇಕು. ಮತ್ತು ಅತ್ಯಂತ ನಿಃಸ್ವಾರ್ಥತನದಿಂದ ಜನರನ್ನು ಜಾಣರನ್ನಾಗಿ ಮಾಡಬೇಕು. ಇದು ನಿಜವಾದ ಬ್ರಾಹ್ಮಣನ ಜೀವನ ಕ್ರಮವಿರುವದು. ಇದನ್ನು ಬಿಟ್ಟು ಇವರು ಅಂದರೆ ಆಗಿನ ಬ್ರಾಹ್ಮಣರು ಎಷ್ಟು ಭ್ರಷ್ಟರಾಗಿದ್ದರೆಂಬುದನ್ನು ಹೇಳುವರು:- ಕೆಳಮಟ್ಟದ (ಹೀನ) ದರ್ಜೆಯ ಮನುಷ್ಯರ ಕಡೆಗೆ ಗುರುತ್ವವು ಹೋದರೆ ಅಲ್ಲಿ ಆಚಾರದ ಲೋಪವಾಗುವದು. ಆಚಾರ ಲೋಪವಾದರೆ ವೇದ, ಶಾಸ್ತ್ರ, ವ, ಬ್ರಾಹ್ಮಣ ಇವುಗಳ ಪೂಜ್ಯತನ ಇಲ್ಲದಾಗಿ ಹೋಗುವದು. [೨೯] ಬ್ರಾಹ್ಮಣನಿಗಷ್ಟೇ ಬ್ರಹ್ಮಜ್ಞಾನದ ಅಧಿಕಾರವಿರುವದು. ಬ್ರಾಹ್ಮಣನು ಎಲ್ಲ ವರ್ಗದವರಿಗೂ(ಎಲ್ಲ ವರ್ಣದವರಿಗೂ)ಗುರು ಆಗಿರುವನೆಂದು ಹಿಂದಿನ ಆಧಾರ ವಚನಗಳಿಂದ ಕಂಡುಬರುವದು[೩೦] ಆದರೆ ಸಧ್ಯದಲ್ಲಿಯ ಬ್ರಾಹ್ಮಣರ ಬುದ್ಧಿ ಒಳ್ಳೆಯದರಿಂದ ಹಾರಿಹೋಗಹತ್ತಿದೆ. ಇವರು ಆಚಾರ ಭ್ರಷ್ಟರಾಗಿರು ವರು. ತಮ್ಮ ಉಚ್ಚ ಸ್ಥಾನವನ್ನು ಬಿಟ್ಟು ಶಿಷ್ಯರ ಶಿಷ್ಯರಾಗಿರುವರು. [೩೧]

ಕಿತ್ಯೇಕ ದಾವಲಮಲಕಾಸ ಜಾತೀ । ಕಿತ್ಯೇಕ ಪೀರಾಸ ಭಜತೀ ।
ಕಿತ್ಯೇಕ ತುರುಕ ಹೋತೀ । ಆಪಲೇ ಇಛ್ಛೇನೇ ॥೩೨॥

ಐಸಾ ಕಲಿಯುಗೀಚಾ ಆಚಾರ । ಕೋಣೀ ರಾಹಿಲಾ ವಿಚಾರ ।
ಪುಢೇ ಪುಢೇ ವರ್ಣಸಂಕರ । ಹೋಣಾರ ಆಹೇ ॥೩೩॥

ಗುರುತ್ವ ಆಲೇ ನೀಚಯಾತೀ । ಕಾಂಹೀಯೆಕ ವಾಢಲೀ ಮಹಂತೀ ।
ಶೂದ್ರ ಆಚಾರ ಬುಡವಿತೀ । ಬ್ರಾಹ್ಮಣಾಚಾ ॥೩೪॥

ಹೇ ಬ್ರಾಹ್ಮಣಾಸ ಕಳೇನಾ । ತ್ಯಾಚೀ ವೃತ್ತಿಚ ವಳೇನಾ ।
ಮಿಥ್ಯಾ ಅಭಿಮಾನ ಗಳೇನಾ । ಮೂರ್ಖಪಣಾಚಾ ॥೩೫॥

ರಾಜ್ಯ ನೇಲೇ ಮ್ಲೇಂಛೆ ಕ್ಷೇತ್ರೀ । ಗುರುತ್ವ ನೇಲೇ ಕುಪಾತ್ರೀ ।
ಆಪಣ ಅರತ್ರೀ ನಾ ಪರತ್ರೀ । ಕಾಂಹೀಚ ನಾಹೀ ॥೩೬॥

ಬ್ರಾಹ್ಮಣಾಸ ಗ್ರಾಮಣೀನೇ ಬುಡವಿಲೇ । ವಿಷ್ಣೂನೇ ಶ್ರೀವತ್ಸ ಮಿರವಿಲೇ ।
ತ್ಯಾ ಚ ವಿಷ್ಣೂನೇ ಶ್ರಾಪಿಲೇ । ಫರಶರಾಮೇ ॥೩೭॥

ಆಮ್ಹೀ ಹಿ ತೇಚಿ ಬ್ರಾಹ್ಮಣ । ದುಃಖೇ ಬೋಲಿಲೇ ಹೇ ವಚನ ।
ವಡಿಲ ಗೇಲೇ ಗ್ರಾಮಣೀ ಕರೂನ । ಆಮ್ಹಾ ಭೋವತೇ ॥೩೮॥

ಅತಾಂಚೆ ಬ್ರಾಹ್ಮಣೀ ಕಾಯೆ ಕೇಲೇ । ಅನ್ನ ಮಿಳೇನಾ ಐಸೇ ಜಾಲೇ ।
ತುಮ್ಹಾ ಬಹುತಾಂಚೆ ಪ್ರಚಿತೀಸ ಆಲೇ । ಕಿಂವಾ ನಾಹೀ ॥೩೯॥

ಬರೇ ವಡಿಲಾಸ ಕಾಯೆ ಮ್ಹಣಾವೇ । ಬ್ರಾಹ್ಮಣಾಚೇ ಅದೃಷ್ಟ ಜಾಣಾವೇ ।
ಪ್ರಸಂಗೇ ಬೋಲಿಲೇ ಸ್ವಭಾವೇ । ಕ್ಷಮಾ ಕೇಲೇ ಪಾಹಿಜೇ ॥೪೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಯುಗಧರ್ಮ ನಿರೂಪಣ' ನಾಮ ಸಮಾಸ ಸಪ್ತಮ ॥

• •

ಬಹಳ ಜನ ಬ್ರಾಹ್ಮಣರು ದಾವಾಮಲಕ ಅನ್ನುವ ಪ್ರಸಿದ್ಧ ಪೀರನಲ್ಲಿಗೆ ಹೋಗುವರು. ಕೆಲವು ಬ್ರಾಹ್ಮಣರು ಇತರ ಪೀರರನ್ನೂ ಭಜಿಸುವರು. ಕೆಲವು ಬ್ರಾಹ್ಮಣರು ತಾವಾಗಿ ಮುಸಲ್ಮಾನರಾಗುತ್ತಿರುವರು. [೩೨] ಈ ಕಲಿಯುಗದಲ್ಲಿ ಈ ರೀತಿಯಲ್ಲಿ ಆಚಾರಲೋಪವಾಗಿರುವದು. ಅರ್ಥಾತ್ ವಿಚಾರವೆಂಬುದು ಎಷ್ಟೂ ಎಲ್ಲಿಯೂ ಉಳಿದಿರುವದಿಲ್ಲ. ಮುಂದೆ ಬರುವ ಕಾಲದಲ್ಲಿಯಂತೂ ವರ್ಣಸಂಕರ (ಬೇರೆ ಬೇರೆ ಜಾತಿಗಳ ಕೂಡುವಿಕೆ) ಆಗುವದಿರುವದು. [೩೩] ಆಧ್ಯಾತ್ಮಿಕ ಗುರುತ್ವವು ಕೆಳದರ್ಜೆಯ ಜನರ ಕಡೆಗೆ ಹೋದದ್ದರಿಂದ ಆ ಜನರು ತಮ್ಮ ಮಹಂತತನವನ್ನು ಅಲ್ಪುಸ್ವಲ್ಪು ಪ್ರಮಾಣದಲ್ಲಿ ಬೆಳೆಸುವರು. (ಬೆಳೆಸಿದ್ದಾರೆ) ಶೂದ್ರಜನರು ಬ್ರಾಹ್ಮಣರ ಆಚಾರವನ್ನು ಮುಳುಗಿಸುವರು. ಭ್ರಷ್ಟಗೊಳಿಸುವರು. [೩೪] ತಮ್ಮ ಅಧಃಪಾತ ಆಗುತ್ತಲಿದೆ ಅನ್ನುವದೇನೂ ಈ ಬ್ರಾಹ್ಮಣರ ಲಕ್ಷ್ಯದಲ್ಲಿ ಬರಲೊಲ್ಲದಾಗಿದೆ. ಇವರ ನಡತೆಯೇನೂ ಸುಧಾರಿಸಲೊಲ್ಲದಾಗಿದೆ. ಮೂರ್ಖತನದ ಅಭಿಮಾನವನ್ನು ಬಿಡಲೊಲ್ಲರು. ಇದೇ ಇವರು ಹಾಳಾಗಲಿಕ್ಕೆ ಕಾರಣವಾಗಿದೆ. [೩೫] ಮುಸಲ್ಮಾನರು ಕ್ಷತ್ರಿಯರ ರಾಜ್ಯವನ್ನು ಗೆದ್ದುಕೊಂಡರು. ರಾಜಾಶ್ರಯವಿಲ್ಲದಾಯಿತು. ಇವರ ಗುರುತ್ವವನ್ನು ಅಪಾತ್ರರು (ಕುಕರ್ಮಿಗಳು) ಪಡೆದುಕೊಂಡರು. ಅಥವಾ ಅವರ ಕಡೆಗೆ ಹೋಯಿತು. ಇತ್ತ ಇಹಲೋಕವಿಲ್ಲ, ಅತ್ತ ಪರಲೋಕವಿಲ್ಲ. ಒಟ್ಟಿನಲ್ಲಿ ಏನೂ ಇಲ್ಲದವರಾದರು. ಇಂಥ ಅವಸ್ಥೆ ಇವರಿಗೆ ಬಂದಿತು. [೩೬] ಬ್ರಾಹ್ಮಣರು ತಮ್ಮದನ್ನು ಬಿಟ್ಟು ಇಲ್ಲ ಸಲ್ಲದ ಕಾರಭಾರ ಮಾಡಿದ್ದರಿಂದ ಇಂಥ ಹೀನ ಅವಸ್ಥೆಯು ಬಂದಿತು. ವಿಷ್ಣುವು ಶ್ರೀವತ್ಸ ಅನ್ನುವ ಗುರುತನ್ನು ಧರಿಸಿ ಮೆರೆಸಿದನು. ಇದು ಬ್ರಾಹ್ಮಣರ ಶ್ರೇಷ್ಠತನವನ್ನು ತೋರುವದು. ಆದರೆ ಅದೇ ವಿಷ್ಣುವು ಪರಶುರಾಮನ ಅವತಾರವನ್ನು ತಾಳಿ (ಬ್ರಾಹ್ಮಣರ ಅಧಾರ್ಮಿಕ, ಅಮರ್ಯಾದತನದ ವರ್ತನಕ್ಕೆ ಬೇಸತ್ತು) ಬ್ರಾಹ್ಮಣರನ್ನು ಶಪಿಸಿದನು. [೩೭] ನಾವೂ ಸಹ ಬ್ರಾಹ್ಮಣರೇ ಇರುವೆವು. ಬ್ರಾಹ್ಮಣರ ದುಸ್ಥಿತಿಯ ಬಗ್ಗೆ ನಾವು ದುಃಖದಿಂದ ಇದ್ದದ್ದನ್ನು ಸ್ಪಷ್ಟವಾಗಿ ಹೇಳಿದೆವು. ನಮ್ಮ ಹಿರಿಯರು ಹಳ್ಳಿಯ ಹುಂಬ. ಸೊಕ್ಕಿನ [ಉರ್ಮಟ.] ಮನುಷ್ಯರಂತೆ ನಡೆದು ಹೋದರು. ಇದನ್ನೇ ನಾವು ಈಗ ಅನುಭವಿಸುವೆವು. [ಇದು ನಮ್ಮನ್ನು ಕಾಡುತ್ತಿರುವದು]. [೩೮] ಇರಲಿ, ಸದ್ಯದ ಬ್ರಾಹ್ಮಣರಾದರೂ ಸರಿಯಾಗಿ ನಡೆಯುವರೇನು ? ತಿನ್ನಲಿಕ್ಕೆ ಅನ್ನ ಸಿಗುವದಿಲ್ಲವೆನ್ನುವ ಪರಿಸ್ಥಿತಿ ಒದಗಿದೆ. ಇದು ನಿಮ್ಮ ಪೈಕಿ ಹಲವಾರು ಜನರ ಅನುಭವಕ್ಕೆ ಬಂದಿರುವದೆಂದು ತಿಳಿದು ನಾನು ಈ ಮಾತನ್ನು ಹೇಳಿದೆನು. [೩೯] ಹೋಗಲಿ ಬಿಡಿ. ಆದದ್ದಾಯಿತು. ಹಿರಿಯರಿಗೆ ದೋಷ ಕೊಟ್ಟರೆ ಈಗ ನಮಗೆ ಬರುವ ಲಾಭವೇನು ? ನಮ್ಮ ಹಿಂದಿನ ದೈವವೇ ಕೆಟ್ಟದ್ದಿರುವದೆಂದು ನಾವೇ ಅಂದುಕೊಂಡು ಸಮಾಧಾನ ಮಾಡಿಕೊಳ್ಳೋಣ. ಮುಂದಿನ ದಾರಿಯನ್ನು ಸುಗಮ ಮಾಡಿಕೊಳ್ಳೋಣ. ಸಹಜ ವಿಷಯ ಹೊರಟಿತೆಂದು ಈ ನಾಲ್ಕು ಮಾತುಗಳನ್ನು ಆಡಿದೆನು. ಇದರ ಬಗ್ಗೆ ಶ್ರೋತಾರರು ನನ್ನನ್ನು ಕ್ಷಮಿಸಬೇಕು. [೪೦]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹದಿನಾಲ್ಕನೆಯ ದಶಕದೊಳಗಿನ "ಯುಗಧರ್ಮ ನಿರೂಪಣ"ವೆಂಬ ಹೆಸರಿನ ಏಳನೆಯ ಸಮಾಸವು ಮುಗಿದುದು.

● ●

ದಶಕ ಚತುರ್ದಶ : ಸಮಾಸ ಅಷ್ಟಮ : ಅಖಂಡ ಧ್ಯಾನ ನಿರೂಪಣ

॥ಶ್ರೀರಾಮ ಸಮರ್ಥ॥ ಬರೇ ಏಸಾ ಪ್ರಸಂಗ ಜಾಲಾ ।
ಜಾಲಾ ತೋ ಹೊಊನ ಗೇಲಾ ।
ಆತಾ ತರೀ ಬ್ರಾಹ್ಮಣೇ ಆಪಣಾಲಾ । ಶಾಹಾಣೇ ಕರಾವೇ ॥೧॥

ದೇವ ಪೂಜಾವಾ ವಿಮಳಹಸ್ತೀ। ತೇಣೇ ಭಾಗ್ಯ ಪಾವಿಜೆ ಸಮಸ್ತೀ ।
ಮೂರ್ಖ ಅಭಕ್ತ ವೆಸ್ತೀ । ದರಿದ್ರ ಭೋಗಿಜೇ ॥೨॥

ಆಧೀ ದೇವಾಸ ವೊಳಖಾವೇ । ಮಗ ಅನನ್ಯಭಾವೇ ಭಜಾವೇ ।
ಅಖಂಡ ಧ್ಯಾನ ಚಿ ಧರಾವೇ । ಸರ್ವೋತ್ತಮಾಚೇ ॥೩॥

## ದಶಕ ೧೪. ಸಮಾಸ ೮. ಅಖಂಡ ಧ್ಯಾನ ನಿರೂಪಣ (ನುಡಿ ೪೯)

ಯಾವ ಮನುಷ್ಯನು ಬಹಳಷ್ಟು ಹಣ ದೊರಕಿಸುವನೋ [ಗಳಿಸುವನೋ] ಮತ್ತು ಅನೇಕ ಪ್ರಕಾರದ ಶರೀರ ಸುಖಗಳನ್ನು ಭೋಗಿಸುವನೋ ಅಂಥವನು ಭಾಗ್ಯವಂತನೆಂದು ನಾವು ತಿಳಿಯುವೆವು. ಆದರೆ ಸಂತರು ಮತ್ತು ಶ್ರೀ ಸಮರ್ಥರು ಭಾಗ್ಯವಂತ ಪುರುಷನ ವ್ಯಾಖ್ಯೆಯನ್ನು ಬೇರೆಯೇ ಮಾಡಿದ್ದಾರೆ. ಯಾವನ ಅಂತಃಕರಣದಲ್ಲಿ ಭಗವಂತನಿಗೆ ಅಗ್ರಸ್ಥಾನ (ಉಚ್ಚಸ್ಥಾನ) ಇರುವದೋ ಅವನೇ ನಿಜವಾದ ಭಾಗ್ಯವಂತನು ಎಂದು ಅನ್ನುವರು. ಇದು ಶ್ರೀ ಸಮರ್ಥರ ಕಲ್ಪನೆಯ ಭಾಗ್ಯವಂತನ ವಿವರವು. ಇವರು ಇನ್ನೂ ವಿವರಿಸಿ ಹೇಳುವದೇನಂದರೆ ಭಾಗ್ಯ ವಂತ ಪುರುಷನು ಕೇವಲ ಶುದ್ಧ ಅರಿವಿನ ಸ್ವರೂಪವಿರುವನು. ಇವನು ಜಗತ್ತಿನಲ್ಲಿಯ ಯಾವತ್ತೂ ಪ್ರಾಣಿಗಳ ಅಂತರ್ಯಾಮಿಯಲ್ಲಿ ಇರುವನು. ಇವನು ಶುದ್ಧ ಅರಿವನ್ನು ವಶ ಮಾಡಿಕೊಳ್ಳುವನು. ಇವನಿಗೆ ಎಲ್ಲ ಪ್ರಾಣಿಗಳೂ ತಮ್ಮಿಂದ ತಾವೇ ವಶವಾಗುವವು. ಎಲ್ಲ ಪ್ರಾಣಿಗಳು ವಶವಾದವೆಂದರೆ ಮನುಷ್ಯನಿಗೆ ಏನೂ (ಯಾವುದರದೂ) ಕೊರತೆಯಾಗುವದಿಲ್ಲ. ಇದೇ ಭಾಗ್ಯವಂತನ ನಿಜವಾದ ಲಕ್ಷಣವಿರುವದು. ಮನುಷ್ಯರಲ್ಲಿಯ ಶುದ್ಧ ಅರಿವು(ಜಾಣೀವ) ಅಂದರೆ ಅವನ ಹೃದಯದಲ್ಲಿ ವಾಸ ಮಾಡುವ ಆತ್ಮಸ್ವರೂಪವೆಂದು ತಿಳಿಯಬೇಕು. ಇದರ ಜ್ಞಾನವನ್ನು ಮಾಡಿ ಕೊಳ್ಳಬೇಕಾದರೆ ಇದರ (ಆತ್ಮಸ್ವರೂಪದ) ಅಖಂಡ ಧ್ಯಾನವನ್ನು ಮಾಡಬೇಕು. ಅಖಂಡ ಧ್ಯಾನ ಹತ್ತಬೇಕಾದರೆ ಇದರ (ಆತ್ಮಸ್ವರೂಪದ) ಅಖಂಡ ಸ್ಮರಣೆ ಮಾಡಬೇಕು. ಇದರ ಹೊರತಾಗಿ ಅನ್ಯಮಾರ್ಗ(ಉಪಾಯ)ವಿಲ್ಲ. ಮನು ಷ್ಯರು ಮಾನಸ ಪೂಜೆಯನ್ನು ಮಾಡುವರು ಅದರಲ್ಲಿ ಅವರ ಉಪಾಸನಾ ಮೂರ್ತಿಯ ಧ್ಯಾನವಿರುವದು. ಆದರೆ ಈ ಧ್ಯಾನದಲ್ಲಿ ಧ್ಯಾನ ಮಾಡುವವನು "ನಾನು" ಮತ್ತು ಯಾವುದರ ಅಥವಾ ಯಾರ ಧ್ಯಾನ ಮಾಡುವದಿರುವದೋ "ಅವರು" ಬೇರೆಯಾಗಿ ಉಳಿಯುವರು. (ಇದು ದ್ವೈತದ ಧ್ಯಾನ, ಸಗುಣದ ಧ್ಯಾನವು) ಇದರಿಂದಾಗಿ ಬಹಳಷ್ಟು ಸಾಧನ ಮಾಡಿದರೂ ಕೂಡ ಇಂಥ ಜನರು ಸ್ವರೂಪದ ಕಡೆಗೆ ಹೋಗಿ ಮುಟ್ಟಲಿಕ್ಕೆ ಶಕ್ತರಾಗುವದಿಲ್ಲ. ನಿಜವಾಗಿ ನಾವು ನಮ್ಮ ಸ್ವರೂಪದೊಂದಿಗೆ ಅನನ್ಯರೇ ಇರುವೆವು. ಆದರೆ ಭ್ರಮದಿಂದಾಗಿ ನಾವು ನಮ್ಮನ್ನೇ ಬೇರೆತನದಿಂದ [ಪ್ರತ್ಯೇಕವಾಗಿ] ನೋಡುವೆವು. ಈ ಭ್ರಮೆ ದೂರಾಗಿ ಅನನ್ಯತೆ ಸಾಧಿಸಿತೆಂದರೆ ಆಗ ನಿಜವಾದ ದೇವರ ದರ್ಶನ ಲಭಿಸುವದು. ಸ್ವಸ್ವರೂಪದ ದರ್ಶನವಾಗುವದು.

### ದಶಕ ೧೪. ಸಮಾಸ ೮. ಅಖಂಡ ಧ್ಯಾನ ನಿರೂಪಣ (ನುಡಿ ೪೯)

ಈಗ ಕಠಿಣ ಪ್ರಸಂಗ ಬಂದಿರುವದಂತೂ ನಿಜವಿರುವದು. ಇದಕ್ಕೆ ಉಪಾಯ ಯಾವುದೆಂದರೆ ಭಗವಂತ ನನ್ನು ಹುಡುಕಿ ಗುರುತಿಸುವದು. ಮತ್ತು ಅನನ್ಯರಾಗಿ ಅವನನ್ನು ಭಜಿಸುವದೇ ಆಗಿದೆ. ಭಾಗ್ಯವಂತನಾಗುವ ನಿಜ ವಾದ ಉಪಾಯವು ಇದೇ ಹೌದು, ಇದೇ ಇರುವದು:- ಇರಲಿ, ಬ್ರಾಹ್ಮಣರ ಅವಸ್ಥೆಯಂತೂ ಹೀಗಾದುದು ನಿಜವೇ ಇರುವದು. ಆದರೆ ಆದದ್ದು ಆಗಿ ಹೋಯಿತು. ತಿರುತಿರುಗಿ ಅದನ್ನು ಅಂದರೂ ಉಪಯೋಗವಿಲ್ಲ. ಈಗ ಬ್ರಾಹ್ಮಣರು ಸ್ವತಃ ಬುದ್ಧಿವಂತರಾಗಬೇಕು. ಜಾಣರಾಗಬೇಕು. [೧] ಪವಿತ್ರ ಕೈಗಳಿಂದ ದೇವರ ಪೂಜೆಯನ್ನು ಮಾಡಬೇಕು. ಹೀಗೆ ಮಾಡಿದರೆ ಎಲ್ಲರಿಗೂ ಭಾಗ್ಯ ಪ್ರಾಪ್ತಿಯಾಗುವದು. ಯಾರು ಅಭಕ್ತರಿರುವರೋ ಅವರು ಅವ್ಯವಸ್ಥಿತ ಮೂರ್ಖರು, ಭ್ರಷ್ಟರು, ಇವರು ದರಿದ್ರತನವನ್ನು ಭೋಗಿಸುವರು. [೨] ಮೊದಲು ದೇವರನ್ನು ಗುರು ತಿಸಬೇಕು. ಆಮೇಲೆ ಏಕನಿಷ್ಠೆಯಿಂದ ಅವನ ಭಕ್ತಿಯನ್ನು ಮಾಡಬೇಕು. ಈ ಸರ್ವೋತ್ತಮನನ್ನು ಬಿಟ್ಟುಬಿಡದೇ(ನಿಶ್ಚ ಯದಿಂದ) ಅಖಂಡವಾಗಿ ಇವನ ಧ್ಯಾನವನ್ನು ಮಾಡಬೇಕು. [೩]

ಸರ್ವಾಂಮಧೇ ಜೋ ಉತ್ತಮು । ತಯಾ ನಾವ ಸರ್ವೋತ್ತಮು ।
ಆತ್ಮಾನಾತ್ಮ ವಿವೇಕ ವರ್ಮ । ಠಾಈ ಪಾಡಾವೇ ॥೪॥

ಜಾಣಜಾಣೋ ದೇಹ ರಕ್ಷೀ । ಆತ್ಮಾ ದೃಷ್ಟಾ ಅಂತರಸಾಕ್ಷೀ ।
ಪದಾರ್ಥಮಾತ್ರಾಸ ಪರೀಕ್ಷೀ । ಜಾಣಪಣೇ ॥೫॥

ತೋ ಸಕಳ ದೇಹಾಮಧೇ ವರ್ತತೋ । ಇಂದ್ರಿಯೆಗ್ರಾಮು ಚೇಷ್ಟವಿತೋ ।
ಪ್ರಚಿತೀನೇ ಪ್ರತ್ಯಯೆ ಯೇತೋ । ಪ್ರಾಣಿಮಾತ್ರೀ ॥೬॥

ಪ್ರಾಣಿಮಾತ್ರೀ ಜಗದಾಂತರೇ । ಮ್ಹಣೋನಿ ರಾಖಾವೀ ಅಂತರೇ ।
ದಾತಾ ಭೋಕ್ತಾ ಪರಸ್ಪರೇ । ಸಕಳ ಕಾಂಹೀ ॥೭॥

ದೇವ ವರ್ತತೋ ಜಗದಾಂತರೀ । ತೋಚಿ ಆಪುಲೇ ಅಂತರೀ ।
ತ್ರೈಲೋಕೀಚೆ ಪ್ರಾಣಿಮಾತ್ರೀ । ಬರೇ ಪಾಹಾ ॥೮॥

ಮುಳೀ ಪಾಹಾಣಾರ ತೋ ಯೇಕಲಾ । ಸಕಳಾ ಠಾಈ ವಿಭಾಗಲಾ ।
ದೇಹ ಪ್ರಕೃತೀನೇ ಜಾಲಾ । ಭಿನ್ನ ಭಿನ್ನ ॥೯॥

ಭಿನ್ನ ಭಾಸೇ ದೇಹಾಕಾರೇ । ಪ್ರಸ್ತುತ ಯೇಕ ಚಿ ಅಂತರೇ।
ಬೋಲಣೇ ಚಾಲಣೇ ನಿರ್ಧಾರೇ । ತ್ಯಾಸೀ ಚ ಘಡೇ ॥೧೦॥

ಆಪುಲೇ ಪಾರಿಖೇ ಸಕಳ ಲೋಕ । ಪಕ್ಷೀ ಸ್ವಾಪದ ಪಶ್ವಾದಿಕ ।
ಕಿಡಾ ಮುಂಗೀ ದೇಹಧಾರಕ । ಸಕಳ ಪ್ರಾಣೀ ॥೧೧॥

ಖೇಚರ ಭೂಚರ ವನಚರ । ನಾನಾ ಪ್ರಕಾರೇ ಜಳಚರ ।
ಚತ್ವಾರ ಖಾಣೀ ವಿಸ್ತಾರ । ಕಿತೀ ಮ್ಹಣೋನ ಸಾಂಗಾವಾ ॥೧೨॥

ಸಮಸ್ತ ಜಾಣೀವೇನೇ ವರ್ತತೀ । ರೋಕಡೀ ಪಾಹಾವೀ ಪ್ರಚಿತೀ ।
ತ್ಯಾಚೀ ಆಪುಲೀ ಸಂಗತೀ । ಅಖಂಡ ಆಹೇ ॥೧೩॥

ಸರ್ವದರಲ್ಲಿಯೂ ಯಾವನು ಉತ್ತಮನೋ ಅವನಿಗೇ ಸರ್ವೋತ್ತಮನೆಂದು ಅನ್ನುವರು. ಇವನೇ ಆತ್ಮಾ ಇರುವನು. ಉಳಿದವುಗಳೆಲ್ಲವೂ ಅನಾತ್ಮವಾಗಿರುವವು. ಆತ್ಮಾನಾತ್ಮ ವಿವೇಕದಲ್ಲಿಯು ಈ ರಹಸ್ಯವನ್ನು ಚನ್ನಾಗಿ ವಿಚಾರ ಮಾಡಿ ತಿಳಿದುಕೊಳ್ಳಬೇಕು. [೪] ಆತ್ಮಾ ಇದು ಅರಿವಿನ (ಜಾಣೀವದ) ರೂಪವಿರುವದು. ಇವನು ಸರ್ವ ಪ್ರಾಣಿಗಳ ಅಂತರ್ಯಾಮದಲ್ಲಿದ್ದುಕೊಂಡು ಅರಿವಿನಿಂದ ಪ್ರಾಣಿಗಳ ವರ್ತನವನ್ನು(ನಡೆಯುವ ರೀತಿ, ನಡವಳಿಕೆಯು ರೀತಿಯನ್ನು) ಮಾಡಿರುವನು. (ಅವುಗಳಲ್ಲಿ ನಡವಳಿಕೆಯನ್ನುಂಟು ಮಾಡಿ ಅವುಗಳಿಂದಲೇ ಹೊರಗೆಡ ವುತ್ತಾನೆ.):– ಆತ್ಮಾ ದೃಷ್ಟಾ [ನೋಡುವವ] ಇರುವನು. ಅಂತರಸಾಕ್ಷಿ ಇರುವನು. ಅರಿವಿನ ರೂಪದಿಂದ ಇವನು ದೇಹದ ರಕ್ಷಣೆಯನ್ನು ಮಾಡುವನು. ಅರಿವಿನ ಸಾಧನದಿಂದಲೇ ಎಲ್ಲ ಪದಾರ್ಥಗಳ ಪರೀಕ್ಷೆಯನ್ನು ಮಾಡುವನು[೫] ಇವನು ಸರ್ವ ಶರೀರದಲ್ಲಿಯೂ ಇರುವನು. ಇಂದ್ರಿಯಗಳ ಕಡೆಯಿಂದ ತನ್ನ ಕೆಲಸಗಳನ್ನು ಮಾಡಿಸಿಕೊಳ್ಳುವನು. ಎಲ್ಲ ಜನರಿಗೂ ಅನುಭವದಿಂದ ಈ ಮಾತು ತಿಳಿದು ಬರುವದು. [೬] ಒಂದು ಪ್ರಾಣಿಯು ಅಂತಃಕರಣವೆಂದರೆ ನಿಜವಾಗಿಯೂ ಸರ್ವ ಜಗತ್ತಿನ ಅಂತಃಕರಣವೇ ಇರುವದು. ಆದ್ದರಿಂದ ಎಲ್ಲರ ಅಂತಃಕರಣವನ್ನೂ ಸಂಬಾಳಿಸ ಬೇಕು. ಇದನ್ನು ದುಃಖಿಸುವಂತೆ ಮಾಡಬಾರದು. ಆಮೇಲೆ ದಾತಾ ಮತ್ತು ಭೋಕ್ತಾ, ಕೊಡುವವ ಮತ್ತು ತೆಗೆ ದುಕೊಂಡದನ್ನು ಭೋಗಿಸುವವ ಇವರಲ್ಲಿ ಪರಸ್ಪರ ಪ್ರೇಮ ಸಂಬಂಧ ಕೂಡುವದು. ಆಮೇಲೆ ಎನೆಲ್ಲವೂ ಕೂಡಿ ಕೊಂಡು ಹೋಗುವವು. (ಅನುಕೂಲವಾಗುವವು). [೭] ಅರಿವಿನ ರೂಪದ ದೇವನು ಎಲ್ಲ ಜಗತ್ತಿನಲ್ಲಿಯೂ ಇರು ವನು. ಇವನೇ ನಮ್ಮ ಅಂತಃಕರಣದಲ್ಲಿಯೂ ವಾಸ ಮಾಡಿರುವನು. ತ್ರಿಲೋಕದಲ್ಲಿಯು ಎಲ್ಲ ಪ್ರಾಣಿಗಳಲ್ಲಿ ಇದೇ ಅರಿವಿನ ರೂಪದ ದೇವನು ಇರುವನು. ಇದನ್ನು ಚನ್ನಾಗಿ ನೋಡಿ ತಿಳಿಯಿರಿ. [೮] ಮೂಲದಲ್ಲಿ ನೋಡುವವನು, ಅಥವಾ ದೃಷ್ಟಾ-ಅನ್ನುವವ ಇವು ಎರಡೂ ಒಂದೇ ಇರುವವು. ಇವನು ಸರ್ವದರಲ್ಲಿ (ಎಲ್ಲದರಲ್ಲಿ) ಹಂಚಿ ಹೋಗಿ ರುವನು. ಪ್ರತಿಯೊಂದು ಪ್ರಾಣಿಯು ದೇಹ ಸ್ವಭಾವದಿಂದಾಗಿ ಇವನು ಬೇರೆ ಬೇರೆಯಾಗಿ ತೋರುವನು. [೯] ಪ್ರತಿಯೊಂದು ಪ್ರಾಣಿಗಳ ದೇಹದ ಆಕಾರದಂತೆ ಇವನು ಬೇರೆ ಬೇರೆಯಾಗಿ ಭಾಸವಾಗುವನು. ಆದರೂ ದೇಹದ ಆಚೆಗೆ ಅಂತಃಕರಣದ ದೃಷ್ಟಿಯಿಂದ ಇವನು ಒಬ್ಬನೇ ಇರುವನು. ಮನುಷ್ಯರ ಮಾತು ಕತೆ, ರೀತಿ, ನೀತಿ, ಇತ್ಯಾ ದಿಗಳನ್ನು ಇವನೇ ಮಾಡುವನು. [೧೦] ನಮ್ಮವರಾಗಿರುವ ಮತ್ತು ನಮ್ಮವರಲ್ಲದ ಎಲ್ಲ ಜನರು, ಪಕ್ಷಿ, ಶ್ವಾಪದ (ಕ್ರೂರ ಮೃಗ) ಪಶು, ಕೀಟ, ಇರಿವೆ ಇತ್ಯಾದಿ ಎಲ್ಲವೂ ದೇಹ ಧಾರಣ ಮಾಡಿದ ಪ್ರಾಣಿಗಳು [೧೧] ಖೇಚರ ಅಂದರೆ ಆಕಾಶದಲ್ಲಿ ತಿರುಗಾಡುವಂತಹ (ಇದರಲ್ಲಿ ಪಿಶ್ಯಾಚಿಗಳೂ ಬರುವವು). ಭೂಚರ ಅಂದರೆ, ಭೂಮಿಯ ಮೇಲೆ ಸಂಚರಿಸುವಂತಹವು. ವನಚರ ಅಂದರೆ ಅರಣ್ಯ, ಗುಡ್ಡ, ಗವಿಗಳಲ್ಲಿ ಸಂಚರಿಸುವಂತಹವು. ಅನೇಕ ಪ್ರಕಾರದ ಜಲಚರ ಅಂದರೆ–ನೀರಿನಲ್ಲಿರುವಂಥ ಮೀನ, ಮೊಸಳೆ ಇತ್ಯಾದಿಗಳು ಹೀಗೆ ಪ್ರಾಣಿಗಳಲ್ಲಿ ನಾಲ್ಕು ಪ್ರಕಾರಗಳಿರುವವು, ಇವುಗಳ ವಿಸ್ತಾರವನ್ನೆಲ್ಲ ಹೇಳುವದು ಕಠಿಣವಿರುವದು. [೧೨] ಆದರೆ ಈ ಎಲ್ಲ ಪ್ರಾಣಿಗಳು ಅರಿವಿನಿಂದ ಅಂದರೆ ಚೈತನ್ಯದಿಂದಲೇ ನಡೆಯುವವು. (ವರ್ತಿಸುವವು). ಈ ಮಾತು ನನ್ನ ಸಾಕ್ಷಾತ್ ಅನುಭವಕ್ಕೆ ಬಂದಂಥ ಸ್ವಾನುಭವ ವಿರುವದು. (ಜಾಣೀವ = ಜಾಣತೀ ಕಲಾ = ಚೈತನ್ಯ = ಅರಿವು) ಈ ಚೈತನ್ಯದ-ಅರಿವಿನೊಂದಿಗೆ ನಮ್ಮ ಸಂಬಂಧ (ಸಂಗತಿ) ಅತ್ಯಂತ ಅಖಂಡವಿರುವದು. [೧೩]

ಜಗದಂತರೇ ವೊಳಲಾ ಧಣೀ । ಕಿತೀ ಯೇಕವಟೀಲ ಪ್ರಾಣೀ ।
ಪರೀ ತೇ ವೊಳಾಯಾಚೀ ಕರಣೀ । ಆಪಣಾಪಾಸೀ ॥೧೪॥

ಹೇ ಆಪಣಾಕಡೇಚ ಯೇತೇ । ರಾಜೀ ರಾಖಿಜೆ ಸಮಸ್ತೇ ।
ದೇಹಾಸೀ ಬರೇ ಕರಾವೇ ತೇ । ಆತ್ಮಯಾಸ ಪಾವೇ ॥೧೫॥

ದುರ್ಜನ ಪ್ರಾಣೀ ತ್ಯಾಂತೀಲ ದೇವ । ತ್ಯಾಚಾ ಲಾತಾಡ ಸ್ವಭಾವ ।
ರಾಗಾಸ ಆಲಾ ಜರೀ ರಾವ । ತರೀ ತಂಡೋ ನಯೇ ಕೀ ॥೧೬॥

ಪ್ರಸಂಗೀ ಸಾಂಡೀ ಚ ಕರಣೇ । ಪುಢೇ ವಿವೇಕೇ ವಿವರಣೇ ।
ವಿವೇಕೆ ಸಜ್ಜನ ಚಿ ಹೋಣೇ । ಸಕಳ ಲೋಕೀ ॥೧೭॥

ಆತ್ಮತ್ವೀ ದಿಸತೋ ಭೇದ । ಹಾ ಅವಘಾ ಚಿ ದೇಹಸಮಂಧ ।
ಯೇಕಾ ಜೀವನೇ ನಾನಾ ಸ್ವಾದ । ಔಷಧೀಭೇದೇ ॥೧೮॥

ಗರಳ ಆಣಿ ಅಮೃತ ಜಾಲೇ । ಪರೀ ಆಪಪಣ ನಾಹೀ ಗೇಲೇ।
ಸಾಕ್ಷತ್ವೇ ಆತ್ಮಯಾಸ ಪಾಹಿಲೇ । ಪಾಹಿಜೆ ತೈಸೇ ॥೧೯॥

ಅಂತರನಿಷ್ಠ ಜೋ ಪುರುಷ । ತೋ ಅಂತರನಿಷ್ಠೇನೇ ವಿಶೇಷ ।
ಜಗಾಮಧೇ ಜೋ ಜಗದೀಶ । ತೋ ತಯಾಸ ವೊಳಖೇ ॥೨೦॥

ನಯನೇ ಚಿ ಪಾಹಾವಾ ನಯೆನ । ಮನೇ ಶೋಧಾವೇ ಮನ।
ತೈಸಾ ಚಿ ಹಾ ಭಗವಾನ್ । ಸಕಳಾ ಘಟೀ ॥೨೧॥

ತೇಣೇವಿಣ ಕಾರ್ಯಭಾಗ ಅಡೇ । ಸಕಳ ಕಾಹೀ ತೇಣೇ ಚಿ ಘಡೇ ।
ಪ್ರಾಣೀ ವಿವೇಕೇ ಪವಾಡೇ । ತೇಣೇಚಿ ಯೋಗೇ ॥೨೨॥

ಜಾಗೃತೀಸ ವ್ಯಾಪಾರ ಘಡತೋ । ಸಮಂಧ ತಯಾಸೀ ಚ ಪಡತೋ ।
ಸ್ವಪ್ನಾಮಧೇ ಘಡೆ ಜೋ ತೋ । ಯೇಣೇ ಚಿ ನ್ಯಾಯೇ ॥೨೩॥

ಜಗತ್ತಿನಲ್ಲಿರುವ ಸರ್ವ ಪ್ರಾಣಿಗಳ ಅಂತರ್ಯಾಮದಲ್ಲಿ ವ್ಯಾಪಿಸಿ ಇರುವಂಥ ಈ ಅರಿವನ್ನು(ಚೈತನ್ಯವನ್ನು) ಅನುಕೂಲ ಮಾಡಿಕೊಳ್ಳಬೇಕು. ಇದನ್ನು ಸಾಧಿಸಿದ ಮೇಲೆ ಸರ್ವ ಪ್ರಾಣಿಗಳು ನಿಮ್ಮ ವಶವಾಗುವವು. ಇದರ ಸಲುವಾಗಿ ಅಂತರ್ನಿಷ್ಠರಾಗುವದು ಅವಶ್ಯವಿರುವದು. (ಅಂತರ್‌ನಿಷ್ಠ=ಆತ್ಮನಿಷ್ಠ, ಬ್ರಹ್ಮಜ್ಞಾನಿ) ಅಂತರ್ನಿಷ್ಠನಾಗಿ ಅರಿವಿನ (ಚೈತನ್ಯದ) ಅಖಂಡ ಸ್ಮರಣೆ ಮಾಡಿದೆವೆಂದರೆ ಇದರ ಅಖಂಡ ಜ್ಞಾನ ಹತ್ತುವದು. ಆಮೇಲೆ ಅದು ಪ್ರಸನ್ನವಾಗಿ ನಮ್ಮ ಕೈವಶವಾಗುವದು:- ಅರಿವಿನ ರೂಪವಾಗಿರುವಂಥ ಜಗತ್ತಿನ ಅಂತರಾತ್ಮನು ಜಗತ್ತಿನ ನಿಜವಾದ ಸ್ವಾಮಿ ಆಗಿರುವನು. ಇವನನ್ನು ಪ್ರಸನ್ನ ಮಾಡಿಕೊಳ್ಳಬೇಕು. ಅಂದರೆ ಆಗ್ಗೆ ಬಹಳಷ್ಟು ಜನ ನಿಮ್ಮ ಸುತ್ತು ತಿರುಗುವರು. ನಿಮ್ಮ ಬೆನ್ನು ಹತ್ತುವರು. ಆದರೆ ಈ ಸ್ವಾಮಿ (ಅಂತರಾತ್ಮ) ಯನ್ನು ಪ್ರಸನ್ನ ಮಾಡಿಕೊಳ್ಳುವ ಕಲೆ ನಿಮ್ಮ ವರ್ತನೆಯಲ್ಲಿ ಇರುವದು. ಒಂದೇ ಒಂದಾಗಿರುವ ಅರಿವು (ಚೈತನ್ಯ) ಎಲ್ಲ ಪ್ರಾಣಿಗಳ ಅಂತಃಕರಣದಲ್ಲಿ ಇರುವದು. ಇದರಿಂದಾಗಿ ಇವನಿಗೆ (ಸಾಧಿಸಿಕೊಂಡವನಿಗೆ) ಬಹು ಜನ ಸಮಾಜವು ವಶವಾಗುವದು.ಅಂದರೆ ಇವನಿಗೆ ಜಗತ್ತಿನ ಸ್ವಾಮಿ ಪ್ರಸನ್ನನಾದನೆಂದು ತಿಳಿಯಬೇಕು. ಇದನ್ನು ಹೇಗೆ ಸಾಧಿಸಬೇಕು, ಇದನ್ನು ಹೇಳುವೆವು, ಕೇಳಿರಿ. (೧೪) ಜಗತ್ತಿಗೆ ಸ್ವಾಮಿಯಾದವನನ್ನು ಪ್ರಸನ್ನನಾಗುವಂತೆ ಮಾಡಿಕೊಳ್ಳಬೇಕಾಗಿದ್ದರೆ ಮೊದಲನೆಯದಾಗಿ ನಾವು ಎಲ್ಲರನ್ನೂ ಪ್ರೀತಿಯಿಂದ ಕಾಣಬೇಕು. ಮತ್ತು ಅವರನ್ನು ಸಂತುಷ್ಟರನ್ನಾಗಿಡಬೇಕು. ಮನುಷ್ಯನ ದೇಹಕ್ಕೆ ಸಂತೋಷವಾಗುವಂತೆ ಮಾಡಿದರೆ ಅದು ನೆಟ್ಟಗೇ ಆತ್ಮನವರೆಗೆ ಹೋಗಿ ಮುಟ್ಟುವದು. [೧೫] ದುಷ್ಟ ಮನುಷ್ಯರ ಅಂತರ್ಯಾಮದಲ್ಲಿಯೂ ದೇವರು ಇರುವನು ಆದರೆ ಅವರ ಸ್ವಭಾವವು (ಜಗಳಗಂಟತನದ್ದು, ಕಾಲುಕೆದರಿ ಜಗಳ ತೆಗೆಯುವದು). ಕಾಲು ಹಾರಿಸುವದೇ ಇರುವದು (ಅಂದರೆ ಒದೆಯುವದು). ತಿಳಿಯಿರಿ, ರಾಜನು ಸಿಟ್ಟಿಗೆದ್ದರೆ ನಾವು ಅವನಿಗೆ ತಿರುಗಿ ಉತ್ತರ ಕೊಡುವದಿಲ್ಲ. ಜಗಳವಾಡುವದಿಲ್ಲ. ಇದರಂತೆ ದುರ್ಜನರನ್ನು ಸರಿಗಟ್ಟಿಕೊಳ್ಳಬಾರದು. (ಜಗಳಕ್ಕೆ ಹೋಗಬಾರದು). [೧೬] ಪ್ರಸಂಗಾನುಸಾರವಾಗಿ ಆ ಮನುಷ್ಯನನ್ನು ಅಥವಾ ಆ ಸ್ಥಳವನ್ನು ತ್ಯಜಿಸಿ ಬೇರೆ ಕಡೆಗೆ ಹೋಗುವದು ಹಿತಕಾರಕವೆನಿಸಿದರೆ ಆ ಪ್ರಕಾರ ಮಾಡಬೇಕು. (ದುರ್ಜನರನ್ನು ಕಂಡರೆ ದೂರ ಇರು). ಆ ಮೇಲೆ ವಿವೇಕದಿಂದ ನಿಮ್ಮ ಮನವನ್ನು ಶಾಂತ ಮಾಡಬೇಕು. ಈ ಪ್ರಕಾರದಿಂದ ವಿವೇಕದ ಸಾಧನ ಬಳಸಿ ಎಲ್ಲರಲ್ಲಿಯೂ ಸಜ್ಜನತನ ಉಂಟಾಗುವಂತೆ ಮಾಡಬೇಕು. [೧೭] ಆತ್ಮವು ನಿಜವಾಗಿ ಒಂದೇ ಒಂದು ಇದ್ದರೂ ಇವನಲ್ಲಿ [ವ್ಯಕ್ತಿ ವ್ಯಕ್ತಿಗಳಲ್ಲಿ] ಯಾವ ಭೇದ ಕಾಣುವದೋ ಇದು ದೇಹದ ಮೂಲಕ ಕಾಣುವದು. ನೀರು ಅನ್ನುವದು ಒಂದೇ ಇರುವದು. ವನಸ್ಪತಿಗಳ ಭೇದದಿಂದ ಇವುಗಳಲ್ಲಿ ಬೇರೆ ಬೇರೆ ಸ್ವಾದಗಳು ಉತ್ಪನ್ನವಾಗುವವು. ಆತ್ಮನಾದರೂ ಇದರಂತೆಯೇ ಇರುವನು. [೧೮] ಉಗ್ರ ವಿಷ ಮತ್ತು ಅಮೃತ ಇವುಗಳ ಸ್ವಾದ (ರುಚಿ) ಮತ್ತು ಕಾರ್ಯ ಅತ್ಯಂತ ಭಿನ್ನವಾಗಿರುವವು. ಆದರೆ ಇವುಗಳಲ್ಲಿರುವ ನೀರಿನದ್ರವವು ಮಾತ್ರ ಹೇಗಿರುವದೋ ಹಾಗೆಯೇ ಇರುವದು. ಇದರಂತೆ ಯಾವತ್ತೂ ಪ್ರಾಣಿಗಳಲ್ಲಿ ಸ್ವರೂಪದಿಂದ ಹಾಗೆಯೇ (ಅದರಂತೆಯೇ) ಇರುವ ಆತ್ಮನನ್ನು ಸಾಕ್ಷಿರೂಪದಿಂದ ನೋಡಬೇಕು. (೧೯) ಯಾವನು ಅಂತರ್ನಿಷ್ಠ ಪುರುಷನಿರುವನೋ ಅವನ ಆತ್ಮನಿಷ್ಠೆಯು ವಿಶೇಷ ಪ್ರಕಾರದ್ದಿರುವದು. ಇದು ಜಗದಲ್ಲೆಲ್ಲ ವ್ಯಾಪಿಸಿ ಇರುವಂಥ ಜಗದೀಶನನ್ನು ಗುರುತಿಸುವದು. (೨೦) ನಾವು ನಮ್ಮ ಕಣ್ಣುಗಳಿಂದ ಇನ್ನೊಬ್ಬರ ಕಣ್ಣನ್ನು ನೋಡುವೆವು. ಮನದಿಂದ ಮನದ ಶೋಧ ಮಾಡುವೆವು. (ತಿಳಿಯುವೆವು) ಇದರಂತೆ ಸ್ವತಃದ ಅಂತಃಕರಣದಲ್ಲಿ ಇರುವಂಥ ಅಂತರಾತ್ಮನ ಸಾಧನ (ನೆರವಿನಿಂದ) ದಿಂದ ಸರ್ವ ಪ್ರಾಣಿಗಳಲ್ಲಿ ತುಂಬಿಕೊಂಡಿರುವ ಭಗವಂತನನ್ನು ನೋಡಬೇಕು. (೨೧) ಈ ಅಂತರಾತ್ಮನಿಲ್ಲದೇ ಯಾವ ಕೆಲಸಗಳೂ ನಡೆಯಲಾರವು. ಅಂದರೆ ಇವನಿಲ್ಲದಿದ್ದರೆ ಕಾರ್ಯಭಾರ ಹರಕತ್ತಾಗಿ (ತಡೆದು) ನಿಲ್ಲುವದು. ಏನೆಲ್ಲವೂ ಇವನ ಸತ್ತೆಯಿಂದ ಘಟಿಸುವದು. ಇವನಿಂದಲೇ ಮನುಷ್ಯನು ಬಹು ದೊಡ್ಡ ವಿವೇಕ ಸಂಪನ್ನನಾಗುವನು. (೨೨) ನಾವು ಎಚ್ಚರದಿಂದ ಇದ್ದಾಗ ಏನೇನು ಚಲನವಲನ ಮಾಡುವೆವೋ ಇದೆಲ್ಲ ಅಂತರಾತ್ಮನೊಡನೆ ಸಂಬಂಧವಿರುವದೇಆಗಿದೆ. ಸ್ವಪ್ನದಲ್ಲಿ ಏನೇನು ಘಟಿಸುವದೋ ಅದರ ಸಂಬಂಧವೂ ಸಹ ಇವನಿಗೆ ಸಂಬಂಧವಿರುವದೇ ಆಗಿದೆ. (ಜಾಗ್ರತಿ. ಸ್ವಪ್ನಗಳಲ್ಲಿ ನಡೆಯುವ ಘಟನೆಗಳಿಗೆ ಇವನೇ ಕಾರಣನು. ಇವನ ಸಂಬಂಧದಿಂದಾಗಿಯೇ ಎಲ್ಲ ನಡೆಯುವವು.) (೨೩)

ಅಖಂಡ ಧ್ಯಾನಾಚೇ ಲಕ್ಷಣ । ಅಖಂಡ ದೇವಾಚೇ ಸ್ಮರಣ ।
ಯಾಚೇ ಕಳತಾ ವಿವರಣ । ಸಹಜ ಚಿ ಘಡೇ ॥೨೪॥

ಸಹಜ ಸಾಂಡೂನ ಸಾಯಾಸ । ಹಾ ಚಿ ಕೋಣೇಯೇಕ ದೋಷ ।
ಆತ್ಮಾ ಸಾಂಡೂನ ಅನಾತ್ಮ್ಯಾಸ । ಧ್ಯಾನೀ ಧರಿತೀ ॥೨೫॥

ಪರೀ ತೇ ಧರಿತಾ ಹಿ ಧರೇನಾ । ಧ್ಯಾನೀ ಯೆತೀ ವೆಕ್ತಿ ನಾನಾ ।
ಉಗೇ ಚಿ ಕಷ್ಟತೀ ಮನಾ । ಕಾಸಾವೀಸ ಕರೂನೀ ॥೨೬॥

ಮೂರ್ತಿಧ್ಯಾನ ಕರಿತಾ ಸಾಯಾಸೇ । ತೇಥೇ ಯೇಕಾಚೇ ಯೇಕ ಚಿ ದಿಸೇ ।
ಭಾಸೋ ನಯೇ ತೇ ಚಿ ಭಾಸೇ । ವಿಲಕ್ಷಣ ॥೨೭॥

ಧ್ಯಾನ ದೇವಾಚೇ ಕರಾವೇ । ಕಿಂವಾ ದೇವಾಲ್ಯಾಚೇ ಕರಾವೇ ।
ಹೇ ಚಿ ಬರೇ ವಿವರಾವೇ । ಆಪಲೇ ಠಾಈ ॥೨೮॥

ದೇಹ ದೇಉಳ ಆತ್ಮಾ ದೇವ । ಕೋಠೇ ಧರೂ ಪಾಹಾತಾ ಭಾವ ।
ದೇವ ವೊಳಖೋನ ಜೀವ । ತೇಥೇ ಚಿ ಲಾವಾವಾ ॥೨೯॥

ಅಂತರನಿಷ್ಠಾ ಧ್ಯಾನ ಐಸೇ । ದಂಡಕಧ್ಯಾನ ಅನಾರಿಸೇ ।
ಪ್ರತ್ಯಯೆವಿಣ ಸಕಳ ಪಿಸೇ । ಅನುಮಾನಧ್ಯಾನ ॥೩೦॥

ಅನುಮಾನೇ ಅನುಮಾನ ವಾಢೇ । ಧ್ಯಾನ ಧರಿತಾ ಸವೇ ಚಿ ಮೋಡೇ ।
ಉಗೇ ಚಿ ಕಷ್ಟತೀ ಬಾಪುಡೇ । ಸ್ಥೂಳಧ್ಯಾನೇ ॥೩೧॥

ದೇವಾಸ ದೇಹಧಾರೀ ಕಲ್ಪಿತೀ । ತೇಥೇ ನಾನಾ ವಿಕಲ್ಪ ಉಠತೀ ।
ಭೋಗಣೇ ತ್ಯಾಗಣೇ ವಿಪತ್ತಿ । ದೇಹಯೋಗೇ ॥೩೨॥

ಐಸೇ ಮನೀ ಆಠವತೇ । ವಿಚಾರಿತಾ ಭಲತೇ ಚಿ ಹೋತೇ ।
ದಿಸೋ ನಯೇ ತೇ ದಿಸತೇ । ನಾನಾ ಸ್ವಪ್ನೀ ॥೩೩॥

ದಿಸತೇ ತೇ ಸಾಂಗತಾ ನಯೆ । ಬಳೇ ಭಾವಾರ್ಥ ಧರಿತಾ ನಯೆ ।
ಸಾಧಕ ಕಾಸಾವಿಸ ಹೋಯೆ । ಅಂತರ್ಯಾಮೀ ॥೩೪॥

ಇವನ ಅಖಂಡ ಧ್ಯಾನವನ್ನು ಮಾಡಬೇಕು. ಇವನನ್ನು ಹಿಡಿದಿಟ್ಟು ರಕ್ಷಿಸಬೇಕು. ಅಖಂಡ ಧ್ಯಾನದ ಲಕ್ಷಣವೆಂದರೆ ದೇವರ ಅಖಂಡ ಸ್ಮರಣವೇ ಇರುವದು. ಧ್ಯಾನ ಮತ್ತು ಸ್ಮರಣ ಇವುಗಳ ಪರಸ್ಪರ ಸಂಬಂಧ ವೆಂಥದೆಂಬುದು ಲಕ್ಷ್ಯದಲ್ಲಿ ಬಂದ ಕೂಡಲೇ ಅಖಂಡ ಸ್ಮರಣವು ಸಹಜವಾಗಿ ಸಾಧಿಸುವದು. (ಮುದ್ದಾಂ ಮಾಡಬೇಕಾಗುವದಿಲ್ಲ) (೨೪) ಈ ಮರ್ಮವು ಬಹು ಜನರ ಲಕ್ಷ್ಯದಲ್ಲಿ ಬರುವದಿಲ್ಲ. ಇವರೆಲ್ಲರೂ ಅನಾತ್ಮನ ಧ್ಯಾನ ಮಾಡುತ್ತಾರೆ, ಆಗ ಮಾಡಹೋದದ್ದನ್ನು ಬಿಟ್ಟು ಯಾವದೋ ಒಂದು ತರಹದ್ದು ಕಾಣುವದು. ದೇವರನ್ನು ಸ್ಥೂಲವೆಂದು ತಿಳಿದು ಇಂಥ ಒಂದು ಸ್ಥೂಲದ ಧ್ಯಾನವನ್ನು ಮಾಡಿದ್ದಾದರೆ ಉಪಯೋಗವೇನೂ ಆಗಲಾರದು. ಉತ್ತಮ ಧ್ಯಾನ ಹೇಗಿರುವದೆಂಬದಕ್ಕೆ ನಿಮ್ಮ ಮನವೇ ಸಾಕ್ಷಿಯಾಗಿರುವದು. ಇಂಥ ಸಹಜ ರೀತಿಯಲ್ಲಿ ಆಗುವ ಧ್ಯಾನವನ್ನು ಬಿಟ್ಟು ನಿಷ್ಕಾರಣವಾಗಿ ಶ್ರಮಮಾಡುವದು ಒಂದು ಪ್ರಕಾರದ ದೋಷವೆಂದು ತಿಳಿಯಬೇಕು. ಯಾಕೆಂದರೆ ಜನರು ಅಂತರಾತ್ಮನನ್ನು ಬಿಟ್ಟು ಅನಾತ್ಮನ ಧ್ಯಾನ (ಜಡ ಶರೀರದ, ದೃಶ್ಯ ಆಕಾರದ ಧ್ಯಾನ "ಅರ್ಥಾತ್" ಇತರ ಪ್ರಕಾರದ ಧ್ಯಾನ) ಮಾಡುವ ಪ್ರಯತ್ನವನ್ನು ಮಾಡುವರು, (೨೫) ಆದರೆ ಪ್ರಯತ್ನ ಮಾಡಿದರೂ ಕೂಡ ಇವರ ಆ ಧ್ಯಾನವು ಸ್ಥಿರವಾಗಿ ಉಳಿಯುವದಿಲ್ಲ. ಧ್ಯಾನದಲ್ಲಿ ಅನೇಕ ವ್ಯಕ್ತಿಗಳು ಬರುವವು. ಇದರಿಂದ ಮನವು ಕಸವಿಸಿಗೊಳ್ಳುವದು. ಮತ್ತು ಜೀವಕ್ಕೆ ಸುಮ್ಮನೇ ವ್ಯರ್ಥ ಕಷ್ಟ ಮಾತ್ರ ಆಗುವದು. [೨೬] ಬಹಳ ಕಷ್ಟಪಟ್ಟು [ಹಟದಿಂದ] ಒಂದು ಮೂರ್ತಿಯ ಧ್ಯಾನ ಮಾಡಲು ಹತ್ತಿದರೆ ಆಗ ಅಲ್ಲಿ ಈ ಒಂದರ ಬದಲು ಇನ್ನೊಂದು ಕಾಣುವದು. ಯಾವುದು ನಿಜವಾಗಿ ಭಾಸವಾಗಲು ಬೇಡವಾಗಿತ್ತೋ, ಮನದ ಮುಂದೆ ಬರಬಾರದಾಗಿತ್ತೋ ಅದೇ ರೂಪ ವಿಲಕ್ಷಣ ರೀತಿಯಲ್ಲಿ ಭಾಸವಾಗುವದು. [೨೭] ಆದ್ದರಿಂದ ನಾವು ಧ್ಯಾನ್ಯಮಾಡುವದು ದೇವರನ್ನು ಕುರಿತೋ ಅಥವಾ ದೇವಾಲಯದ್ದೋ ಅನ್ನುವದರ ಬಗ್ಗೆ ನೀವು ನಿಮ್ಮಲ್ಲಿಯೇ ಸರಿಯಾಗಿ ವಿಚಾರ ಮಾಡಿರಿ [೨೮] ಆತ್ಮಾದೇವನಿದ್ದು ದೇಹವೆನ್ನುವದು ಅವನ ದೇವಾಲಯವು. ಅದರಲ್ಲಿ [ದೇಹದಲ್ಲಿ] ಇರುವ ಆತ್ಮವು ದೇವರು ಅಂದ ಮೇಲೆ ನಾವು ಶ್ರದ್ಧೆಯನ್ನು ಯಾವುದರಲ್ಲಿ ಇಡಬೇಕು? ಇದನ್ನು ನಿರ್ಣಯಿಸಿರಿ. ಮುಖ್ಯನಾದ ದೇವರನ್ನು ಗುರುತಿಸಿ ನಿಮ್ಮ ಜೀವವನ್ನು ಅವನಲ್ಲಿಯೇ ಸ್ಥಿರಗೊಳಿಸಿರಿ. [೨೯] ಅಂತರ್ನಿಷ್ಠೆಯ ಮೇಲೆ ಆಧಾರಗೊಂಡ ಧ್ಯಾನವು ಅದು ಹೀಗಿರುವದು:-ಇನ್ನು ದಂಡಕ ಧ್ಯಾನವೆಂದರೆ ಪರಂಪರೆಯಿಂದ ಅನೂಚಾನವಾಗಿ ನಡೆಯುತ್ತ ಬಂದ ರೂಢಿಗತ ಧ್ಯಾನವು: ಇದು ಒಂದು ಬೇರೆ ರೀತಿಯದು (ಇದು ಅನುಮಾನದ ಧ್ಯಾನವೆನಿಸುವದು.) ಯಾವ ಧ್ಯಾನದಲ್ಲಿ ಅಂತರಾತ್ಮನ ಸಾಕ್ಷಾತ್ ಅನುಭವ ಬರುವದಿಲ್ಲವೋ ಅದು ಅನುಮಾನ ಧ್ಯಾನವು. ಇಂಥದರ ಮೇಲೆ ಆಧಾರಗೊಂಡ ಧ್ಯಾನವೆಂದರೆ ಹುಚ್ಚರ ಆಟವೇಸರಿ. [೩೦] ಕಲ್ಪನೆಯಿಂದ ಕಲ್ಪನೆ ಬೆಳೆಯುತ್ತಲೇ ಹೋಗುವದು. ಅದರ ಸಂಗಡ [ಅಂಥದರ ಕೂಡ] ಯಾವ ಧ್ಯಾನ ಹಿಡಿಯಲಾಗುವದೋ ಅರ್ಥಾತ್ ಆಧಾರಿತವಾಗುವದೋ ಅದು ಮುರಿದು ಬೀಳುವದು. ಸ್ಥೂಲದ ಧ್ಯಾನ ಮಾಡುವಂಥ ಸಾಮಾನ್ಯ [ಭೋಳೇ ಸ್ವಭಾವದ] ಜನರು ವಿನಾಕಾರಣ ಕಷ್ಟಪಡುವರು. [೩೧] ಇಂಥ ಧ್ಯಾನದಲ್ಲಿ ದೇವರನ್ನು ದೇಹಧಾರಿಯಾದ ದೇವರೆಂದು ನಂಬಬೇಕಾಗುವದು. ಆಮೇಲೆ ಆ ಸ್ಥಳದಲ್ಲಿ ಅನೇಕ ತರಹದ ವಿಕಲ್ಪಗಳು ನಿರ್ಮಾಣವಾಗುವವು. ದೇಹದ ಸಂಬಂಧ ಬಂದಿತೆಂದರೆ ಅಲ್ಲಿ ಭೋಗ ಭೋಗಿಸುವಿಕೆ, ಭೋಗ ತ್ಯಾಗಮಾಡುವಿಕೆ, ಸಂಪತ್ತು ಮತ್ತು ವಿಪತ್ತು ಇವೆಲ್ಲ ಬರುವವು. [೩೨] ಇವೆಲ್ಲವೂ ಮನದಲ್ಲಿ ಬರಹತ್ತಿದವೆಂದರೆ ಅದರ ಮೇಲೆ ವಿಚಾರ ಪ್ರಾರಂಭವಾಗುವದು. ವಿಚಾರ ಪ್ರಾರಂಭವಾಯಿತೆಂದರೆ ಆಮೇಲೆ ಏನಾದರೂ ಆಗುವದು, ಸ್ವಪ್ನದಲ್ಲಿ ಆಗುತ್ತಿರುವಂತೆ ಯಾವುದು ಕಾಣಲಾರದ್ದೋ, ಅದು ಕಾಣಹತ್ತುವದು. ನೀವು ಮಾಡುವ ಧ್ಯಾನವು ನಿಲ್ಲುವದು. [ಸ್ಮರಣದಿಂದ ಸರಿದು ಬಿಡುವದು] (೩೩) ಧ್ಯಾನ ಮಾಡುವಾಗ ಯಾವುದು ಕಾಣುವದೋ ಅದನ್ನು ಹೇಳಲಿಕ್ಕೆ ಬರುವದಿಲ್ಲ, ಮತ್ತು ಯಾವುದು ಕಾಣುವದೋ ಅದರ ಮೇಲೆ ಒತ್ತಾಯದಿಂದ ಶ್ರದ್ಧಾ ಇಡಲಿಕ್ಕೂ ಬರುವದಿಲ್ಲ. ಆಗ ಸಾಧಕನು ವ್ಯಾಕುಲನಾಗುವನು. ಗಾಬರಿಗೊಳ್ಳುವನು, [೩೪]

ಸಾಂಗೋಪಾಂಗ ಘಡೇ ಧ್ಯಾನ । ತ್ಯಾಸ ಸಾಕ್ಷ ಆಪುಲೇ ಮನ ।
ಮನಾಮದ್ಯೇ ವಿಕಲ್ಪದರ್ಶನ । ಹೋಊಚ ನಯೆ ॥೩೫॥

ಘಟಕ ಮನ ಯೆಕವಟಲೇ । ತೇಣೇ ತುಟಕ ಧ್ಯಾನ ಕೇಲೇ ।
ತೇಥೇ ಕೋಣ ಸಾರ್ಥಕ ಜಾಲೇ । ಪಾಹಾನಾ ಕಾ ॥೩೬॥

ಅಖಂಡ ಧ್ಯಾನೇ ನ ಘಡೇ ಹಿತ । ತರೀ ತೋ ಜಾಣಾವಾ ಪತಿತ ।
ಹಾ ಚಿ ಅರ್ಥ ಸಾವಚಿತ । ಬರಾ ಪಾಹಾವಾ ॥೩೭॥

ಧ್ಯಾನ ಧರಿತೇ ತೇ ಕೋಣ । ಧ್ಯಾನೀ ಆಠವತೇ ತೇ ಕೋಣ ।
ದೋನೀಮಧೇ ಅನನ್ಯ ಲಕ್ಷಣ । ಅಸಿಲೇ ಪಾಹಿಜೆ ॥೩೮॥

ಅನನ್ಯ ಸಹಜ ಚಿ ಆಹೇ । ಸಾಧಕ ಶೋಧೂನ ನ ಪಾಹೆ ।
ಜ್ಞಾನೀ ತೋ ವಿವರೋನ ರಾಹೆ । ಸಮಾಧಾನೇ ॥೩೯॥

ಐಸೀ ಹೆ ಪ್ರತ್ಯಯಾಚೀ ಕಾಮೇ । ಪ್ರತ್ಯಯೇವಿಣ ಬಾಧಿಜೇ ಭ್ರಮೇ ।
ಲೋಕದಂಡಕಸಂಭ್ರಮೇ । ಚಾಲತೀ ಪ್ರಾಣೀ ॥೪೦॥

ದಂಡಕಧ್ಯಾನಾಚೇ ಲಕ್ಷಣ । ಧರೂನ ಬೈಸಲೇ ಅವಲಕ್ಷಣ ।
ಪ್ರಮಾಣ ಆಣಿ ಅಪ್ರಮಾಣ । ಬಾಜಾರೀ ನೇಣತೀ ॥೪೧॥

ಮಿಥ್ಯಾ ಸಮಾಚಾರ ಉಠವಿತೀ । ವಾಉಗ್ಯಾ ಚ ಬೊಂಬಾ ಘಾಲಿತೀ ।
ಮನಾಸ ಆಣಿತಾ ಅಂತೀ । ಆವಘೇ ಚಿ ಮಿಥ್ಯಾ ॥೪೨॥

ಸಾಂಗೋಪಾಂಗ ಅಂದರೆ ಸರ್ವದೃಷ್ಟಿಯಿಂದಲೂ ಸರಿಯಾದ ರೀತಿಯಿಂದ ಧ್ಯಾನವಾಯಿತೋ ಅಥವಾ ಇಲ್ಲವೋ ಅನ್ನುವದಕ್ಕೆ ಸಾಕ್ಷಿಯಾವುವೆಂದರೆ, ನಮ್ಮ ಸ್ವತಃದ ಮನಸ್ಸೇ ಸಾಕ್ಷಿಯಾಗಿರುವದು. ಧ್ಯಾನ ಪ್ರಾರಂಭ ಮಾಡುವಾಗ, ಧ್ಯಾನವು ನಡೆದಾಗ ನಮ್ಮ ಮನದಲ್ಲಿ ಒಂದೂ ವಿಕಲ್ಪ ಬರದಿರುವದೇ (ಸಾಂಗೋಪಾಂಗ) ಯಥಾ ಪ್ರಕಾರದಿಂದ ಕ್ರಮಬದ್ಧವಾಗಿ ಸಾಗಿದ ಧ್ಯಾನದ ಲಕ್ಷಣವೆನಿಸುವದು. [ ೩೫ ] ಧ್ಯಾನದಲ್ಲಿ ಸಾಧಕನ ಮನವು ಒಂದೇ ಕಡೆಗೆ ಕೇಂದ್ರೀಕೃತವಾಗಬೇಕು. ಅಸ್ಥಿರ ಮನದಿಂದ ಅಪೂರ್ಣ [ಅರ್ಧಂಬರ್ಧ] ಧ್ಯಾನವಾಗುವದು. ಇದು ಕೆಲಸಕ್ಕೆ ಬರುವದಿಲ್ಲ ಯಾವನಿಗೆ ಧ್ಯಾನ ಸಾಧಿಸುವದೋ ಅವನು ಮೇಲಿನ ದರ್ಜೆಗೆ [ಮೇಲಿನ ಮಟ್ಟಕ್ಕೆ] ಹೋಗಲಿಕ್ಕೆ ಬೇಕು. ಧ್ಯಾತಾ ಮತ್ತು ಧ್ಯೇಯ ವಸ್ತು ಈ ಎರಡೂ ಅನನ್ಯವಾಗುವಿಕೆ, ಏಕರೂಪ ಮತ್ತು ಸಮರಸವಾಗುವಿಕೆ ಇದರಲ್ಲಿಯೇ ಧ್ಯಾನದ ಮರ್ಮ ಸಂಚಯಗೊಂಡಿರುವದು. ಈ ಮರ್ಮ ಕರಗಿ [ನಷ್ಟವಾಗಿ] ಪರಂಪರಾಗತ ಧ್ಯಾನದ [ದಂಡಕ ಧ್ಯಾನ, ಅನಾತ್ಮ ಧ್ಯಾನ] ಹವ್ಯಾಸಕ್ಕೆ [ನಾದಿಗೆ] ಬೆನ್ನು ಹತ್ತುವವರ ಪದರಿಗೆ ಏನೂ ಬೀಳುವದಿಲ್ಲ. ಆದ್ದರಿಂದ ಮನುಷ್ಯರಾದವರು ಬುದ್ಧಿಯನ್ನು ಸರಿಯಾಗಿ ಉಪಯೋಗಿಸಿಕೊಂಡು, ತಿಳಿದು ಈ ಕೆಲಸದಲ್ಲಿ ಸರಿಯಾದ ದಾರಿಯನ್ನು ಹಿಡಿಯಬೇಕು. ಎಲ್ಲ ಕಡೆಗೂ ತೊಡಗಿ ಕೊಂಡಿರುವ ಅಪೂರ್ಣ [ತುಟಕ], ಒಡಕ [ಚಂಚಲ], ಮನಸ್ಸನ್ನು ಒಂದುಗೂಡಿಸಿ ಯಾವನಾದರೂ ಧ್ಯಾನ ಮಾಡುವ ಮನಸ್ಸನ್ನು ಮಾಡಿದ್ದಾದರೆ[ಪ್ರಯತ್ನ ಮಾಡಿದ್ದಾದರೆ] ಹರಕ ಮುರಕ[ಅಪೂರ್ಣ] ಧ್ಯಾನ ಹತ್ತಬಹುದು. ಇದರಿಂದ ಸಾರ್ಥಕವಾಗುವದಿಲ್ಲ. ಇದರ ಬಗ್ಗೆ ನೀವೇ ವಿಚಾರ ಮಾಡಿರಿ.[೩೬] ಅಖಂಡ ಧ್ಯಾನಮಾಡಿದರೂ ಸಹ ಯಾರಿಗೆ ಹಿತವಾಗುವದಿಲ್ಲವೋ ಅಂಥವನು ಪತಿತನೆನ್ನಲಿಕ್ಕೆ ಅಡ್ಡಿ ಇಲ್ಲ ಆದರೆ ಹೀಗಾಗುವದು ಶಕ್ಯವಿಲ್ಲ. [ಅಕಸ್ಮಾತ್ ಒಂದು ವೇಳೆ ಆದರೆ] ಈ ಮಾತನ್ನು ಚನ್ನಾಗಿ ವಿಚಾರ ಪೂರ್ವಕದಿಂದ ಶೋಧಿಸಿ ನೋಡಬೇಕು ಹಾಗಾಗದಂತೆ ಕಾರಣ ತಿಳಿದು ನೋಡಿರಿ, ವರ್ತಿಸಿರಿ.[೩೭] ಧ್ಯಾನ ಮಾಡುವಾಗ ಯಾವನು ಧ್ಯಾನ ಹಿಡಿಯುವನೋ ಅವನು ಮತ್ತು ಯಾರ ಧ್ಯಾನ ಹಿಡಿಯಲಾಗುವದೋ ಅದು ಹೀಗೆ ಎರಡು ಅಂಗಗಳಿರುವವು. [ಧ್ಯಾತಾ ಅಂದರೆ ಧ್ಯಾನ ಮಾಡುವವ ಮತ್ತು ಧ್ಯೇಯ ವಸ್ತು] ಈ ಎರಡರಲ್ಲಿ ಸಮರಸತೆ ಇರಬೇಕು. ಇವುಗಳಲ್ಲಿಯ ಬೇರೆತನ ಲೋಪವಾಗಬೇಕು. ಎರಡೂ ಅನನ್ಯವಾಗಿರಬೇಕು, ಇವು ಧ್ಯಾನದ ಪ್ರಧಾನ ಲಕ್ಷಣಗಳಿರುವವು. [೩೮] ವಾಸ್ತವಿಕವಾಗಿ ಧ್ಯಾನ ಮಾಡುವವ ಮತ್ತು ಅಂತರಾತ್ಮಾ ಇವರಿಬ್ಬರಲ್ಲಿಯೂ ಮೂಲದಲ್ಲಿಯೇ [ಜನ್ಮತಃ] ಅನನ್ಯತೆ ಅಂದರೆ ಏಕತ್ವವಿರುವದು. ಈ ಮಾತನ್ನು ಸಾಧಕನು ಶೋಧಿಸಿ ನೋಡುವದಿಲ್ಲ. ವಿಚಾರ ಮಾಡುವದಿಲ್ಲ. ಆದರೆ ಜ್ಞಾನಿ ಪುರುಷನು, ಇದರ ಶೋಧಮಾಡಿ ಸಮಾಧಾನ ಹೊಂದುವನು. ಅನನ್ಯತೆಯನ್ನು ಹೊಂದುವನು. [ಅನುಭವಿಸುವನು] [೩೯] ಅನುಭವ ಪಡೆಯುವ ರೀತಿ ಹೀಗಿರುವದು. ಆತ್ಮ ಪ್ರತ್ಯಯ ದೃಢ [ವಿಶ್ವಾಸ] ಇಲ್ಲದಿದ್ದರೆ ಮಾತ್ರ ಭ್ರಮದ ಬಾಧೆ ಆಗುವದು. ಆಮೇಲೆ ಮನುಷ್ಯನು ಪರಂಪರಾಗತವಾದ ಭ್ರಾಮಕ ಪದ್ಧತಿ ಯಿಂದ ನಡೆಯುವನು. [೪೦] ಪರಂಪರಾಗತ [ರೂಢಿಗತ] ಪದ್ಧತಿಯಿಂದ ಧ್ಯಾನ ಮಾಡುವದೆಂದರೆ ಅದು ಧ್ಯಾನದ ಲಕ್ಷಣವಲ್ಲ. ನಿಜವಾಗಿಯೂ ಇದು ಧ್ಯಾನದ ಅವಲಕ್ಷಣವೆನಿಸುವದು. ಭ್ರಮದಲ್ಲಿ ಓಡಾಡುವ [ವ್ಯವಹರಿಸುವ] ಜನರು ಇದನ್ನೇ ಗಟ್ಟಿಯಾಗಿ ಹಿಡಿದು ಕೂಡ್ರುವರು. ತೀರ ಸಾಮಾನ್ಯ ಮನುಷ್ಯರಿಗೆ ನಿಜವಾದ ಧ್ಯಾನ ಯಾವುದು ಮತ್ತು ಖೊಟ್ಟಿ ಧ್ಯಾನ ಯಾವುದು ? ಇದು ತಿಳಿಯುವದಿಲ್ಲ. [೪೧] ಇಂಥ ಹಸಿ ಬಿಸಿ ಜನರು ಖೊಟ್ಟಿ, ಸುಳ್ಳು ಸುದ್ದಿಗಳನ್ನು ಅಥವಾ ಕಲ್ಪನಾ ಅಥವಾ ಮತ ಇವುಗಳ ಪ್ರಸಾರ ಮಾಡುವರು. ನಿಷ್ಕಾರಣವಾಗಿ ಆಡಂಬರದ ಮಾತುಗಳನ್ನು ಒದರಿ, ಒದರಿ, ಚೀರಿ ಚೀರಿ ಹೇಳುವರು [ಆಮೇಲೆ ಢೋಂಗೀ ಗುರುವಿನ ಸೈತಾನ ಲೀಲೆ ಪ್ರಾರಂಭವಾಗುವದು] ಆದರೆ ಇದರ ಬಗ್ಗೆ ಶಾಂತ ಮನದಿಂದ ಶೋಧಮಾಡಿ ನೋಡಿದರೆ ತಾನು ಮಾಡಿದ್ದೆಲ್ಲವೂ ಖೊಟ್ಟಿ ಅದೆ ಅನ್ನುವದು ಕೊನೆಗೆ ತಿಳಿಯುವದು. [೪೨]

ಕೋಣೀಯೇಕ ಧ್ಯಾನಸ್ತ ಬೈಸಲಾ । ಕೋಣೀಯೇಕ ಸಿಕವೀ ತ್ಯಾಲಾ ।
ಮುಕುಟೆ ಕಾಢೂನಿ ಮಾಳ ಘಾಲಾ । ಮ್ಹಣೆಜೆ ಬರೇ ॥೪೩॥

ಮನಾಚೇಥೇ ಕಾಯಿ ದುಷ್ಕಾಳ । ಜೇ ಆಖುಡ ಕಲ್ಪಿಲೀ ಮಾಳ ।
ಸಾಂಗತೇ ಏಕತೇ ಕೇವಳ । ಮೂರ್ಖ ಜಾಣಾವೇ ॥೪೪॥

ಪ್ರತ್ಯಕ್ಷ ಕಷ್ಟ ಕರಾವೇ ನ ಲಗತೀ । ದೋರೇ ಫುಲೇ ಗುಂಫಾವೀ ನ ಲಗತೀ ।
ಕಲ್ಪನೇಚೀ ಮಾಳ ಥಿಟೇ ಕರಿತೀ । ಕಾಯಿ ನಿಮಿತ್ಯ ॥೪೫॥

ಬುಧೀವಿಣ ಪ್ರಾಣೀ ಸಕಳ । ತೆ ಅವಘೇ ಚಿ ಬಾಷ್ಕಳ ।
ತಯಾ ಮೂರ್ಖಾಸೀ ಖಳಖಳ । ಕೋಣೇ ಕರಾವೀ ॥೪೬॥

ಜೇಣೇ ಜೈಸಾ ಪರಮಾರ್ಥ ಕೇಲಾ । ತೈಸಾಚ ಪೃಥ್ವೀವರೀ ದಂಡಕ ಚಾಲಿಲಾ।
ಸಾತಾ ಪಾಂಚಾಚಾ ಬಳಾವಲಾ । ಸಾಭಿಮಾನ ॥೪೭॥

ಪ್ರತ್ಯಯೇವಿಣ ಸಾಭಿಮಾನ । ರೋಗೀ ಮಾರಿಲೇ ಝಾಂಕೂನ ।
ತೇಥೇ ಅವಘಾಚಿ ಅನುಮಾನ । ಜ್ಞಾನ ಕೈಚೇ ॥೪೮॥

ಸರ್ವ ಸಾಭಿಮಾನ ಸಾಂಡಾವಾ । ಪ್ರತ್ಯಯೇ ವಿವೇಕ ಮಾಂಡಾವಾ ।
ಮಾಯಾ ಪೂರ್ವಪಕ್ಷ ಖಂಡಾವಾ । ವಿವೇಕಬಳೇ ॥೪೯॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಅಖಂಡ ಧ್ಯಾನ ನಿರೂಪಣ' ನಾಮ ಸಮಾಸ ಅಷ್ಟಮ ॥

ಒಮ್ಮೆ ಒಬ್ಬ ಮನುಷ್ಯನು ಧ್ಯಾನಕ್ಕೆ ಕುಳಿತನು. ಮುಕುಟ ಧರಿಸಿದ ಮೂರ್ತಿಯ ಧ್ಯಾನ ಮಾಡಹತ್ತಿದನು. ಮೂರ್ತಿಯ ಕೊರಳಿಗೆ ಹಾಕುವ ಹಾರ ಸಣ್ಣದಾಯಿತು, ಹಾರಹಾಕಲಿಕ್ಕೆ ಬರುವದಿಲ್ಲವೆಂದು ಗಲಬಿಲಿಗೊಂಡನು ಆಗ ಇನ್ನೊಬ್ಬನು ಅವನಿಗೆ ಸೂಚಿಸಿದ್ದೇನಂದರೆ, "ಎಲಾ ಇದರಲ್ಲೇನಿದೆ-ಮುಕುಟ ತೆಗೆದು ಹಾರ ಹಾಕು ಅಂದರಾಯಿತು." ಈ ರೀತಿಯಲ್ಲಿ ಧ್ಯಾನ ಮಾಡುವವ ಮತ್ತು ಇವನಿಗೆ ಯುಕ್ತಿ ಹೇಳಿ ಕೊಡುವವರಿಬ್ಬರೂ ಭ್ರಮಂದಲ್ಲಿಯೇ ತಿರುಗುವವರಾಗುವರು. [೪೩] ಎಲ್ಲಿ ಮನದಿಂದಲೇ ಕೇವಲ ಕಲ್ಪನಾ ಮಾಡುವದು ಇರುವದೋ ಅಲ್ಲಿ ಕಲ್ಪನಾ ಮಾಡಲಿಕ್ಕೆ ಏನೂ ಬೇಕಾಗುವದಿಲ್ಲ. ಆವರೂ ಧ್ಯಾನ ಮಾಡುವವನು ಸುಮ್ಮಸುಮ್ಮನೇ ಗಿಡ್ಡ ಸಣ್ಣ ಹಾರದ ಖೊಟ್ಟಿ ಕಲ್ಪನೆ ಮಾಡುವನು. ಅದೇ ದೊಡ್ಡ ಹಾರದ ಕಲ್ಪನೆ ಮಾಡಲಿಕ್ಕೆ ಇವನಿಗೆ ಏನು ಬೇಕಾಗುತ್ತಿತ್ತು. ಇಂಥಲ್ಲಿ ಹೇಳುವವ ಮತ್ತು ಅವನ ಮಾತನ್ನು ಕೇಳುವವರಿಬ್ಬರೂ ಮೂರ್ಖರೆಂದು ತಿಳಿಯಬೇಕು. [೪೪] ಮನದಲ್ಲಿ ಧ್ಯಾನ ಮಾಡುವಾಗ ಪ್ರತ್ಯಕ್ಷವಾಗಿ ಯಾವ ಪ್ರಯತ್ನವನ್ನೂ ಮಾಡಬೇಕಾಗುವದಿಲ್ಲ. ಪ್ರತ್ಯಕ್ಷದಾರ ತೆಗೆದುಕೊಂಡು ಆವರಲ್ಲೇನೂ ಪ್ರತ್ಯಕ್ಷ ಹೂಗಳನ್ನು ಪೋಣಿಸಬೇಕಾಗುವದಿಲ್ಲ. ಖರೇ ಸಂಗತಿ ಹೀಗಿದ್ದರೂ ಕೂಡಾ ಕಲ್ಪನೆಯಿಂದ ರಚಿಸಿದ ಮಾಲೆಯನ್ನು ಗಿಡ್ಡದಾಗಿ ಮಾಡುವದಕ್ಕೆ ಯಾವ ಕಾರಣವಿರುವದಿಲ್ಲ [೪೫] ತಾತ್ಪರ್ಯವೇನಂದರೆ, ಇಂಥ ಬುದ್ಧಿಹೀನ ಜನರೆಲ್ಲ ಪಕ್ಕಾ ಮೂರ್ಖರಿರುವರು. ಇಂಥ ಮೂರ್ಖರಿಗೆ ತಿಳಿಸಿ ಹೇಳುವ ಪ್ರಯತ್ನ ಮಾಡುವದರಲ್ಲಿ ಅರ್ಥವಿರುವದಿಲ್ಲ. [ಒಮ್ಮೊಮ್ಮೆ ಹೇಳುವವರೇ ಇವರ ಮುಂದೆ ಮೂರ್ಖರೆನಿಸಿಕೊಳ್ಳುವರು] ಇದು ಲೋಕದ ರೂಢಿ [೪೬] ಯಾವ ಪುರುಷನು ಯಾವ ರೀತಿಯ ಪರಮಾರ್ಥವನ್ನು ಮಾಡುವನೋ ಆ ಪ್ರಕಾರ ಅವನ ಪರಂಪರೆಯು ಜಗತ್ತಿನಲ್ಲಿ ನಡೆಯುವದು. ಇಂಥವನಿಗೆ ಕೆಲವೇ 5–7 ಜನ ಅನುಯಾಯಿಗಳು ಸಿಗುವರು. ಮತ್ತು ಇವರು ತಮ್ಮ ಪರಂಪರೆಯ ಅಭಿಮಾನ ಹಿಡಿಯುವರು. [೪೭] ತಮ್ಮ ಸಾಧನದಿಂದ ಪ್ರತ್ಯಕ್ಷ ಅನುಭವ ಬರದಿದ್ದರೂ ಕೂಡಾ ಅಂಥವರ ಅಭಿಮಾನ ಹಿಡಿಯುವದು ಯೋಗ್ಯವೆನಿಸಲಾರದು. ಔಷಧದಿಂದ ಏನೂ ಗುಣ ಬರದಿದ್ದಾಗ ರೋಗಿಯನ್ನು ಮುಚ್ಚಿಟ್ಟು ಸಾಯಿಸಿದಂತೆ. [ವೈದ್ಯನು ರೋಗಿ ಗುಣವಾಗುತ್ತಾನೆ ಕಾಳಜಿಬೇಡ ಬೇರೆ ಕಡೆ ಹೋಗುವದೂ ಬೇಡ ಎಂದು ಅವನು ಹೇಳಿದ್ದರಿಂದ ಬೇರೆ ಕಡೆಗೆ ಹೋಗದೇ ಅವನ ಅಂದರೆ ರೋಗಿಯು ವ್ಯರ್ಥ ಸತ್ತುಹೋದನು] ಇದು ಆಗುವದು. ಇಂಥಲ್ಲಿ ಎಲ್ಲವೂ ಕಲ್ಪನೆಯ ಗೊಂದಲವಿರುವದು. ಜ್ಞಾನ ಮಾತ್ರ ಇರುವದಿಲ್ಲ, [೪೮] ಆದ್ದರಿಂದ ನಿಜವಾದ ಸಾಧಕನು ಸರ್ವಸಂಪ್ರದಾಯದ ಅಭಿಮಾನವನ್ನು ಬಿಡಬೇಕು. ಅನುಭವ ಪಡೆದುಕೊಂಡು ಆಮೇಲೆ ವಿವೇಕವನ್ನು ಬಲಿಸಿಕೊಂಡು ಅದರ ಉಪಯೋಗ ಮಾಡಿಕೊಂಡು ಆ ಬಲದ ಮೇಲೆ ಮಾಯೆಯ ಪೂರ್ವಪಕ್ಷವನ್ನು ಖಂಡಿಸಬೇಕು. ಮಾಯೆಯ ನಿರಾಸ ಪರಿಹಾರಮಾಡಿ ಪರಬ್ರಹ್ಮನನ್ನು ಸ್ಪರ್ಶಿಸಬೇಕು. ಆತ್ಮ ಸಿದ್ಧಾಂತವನ್ನು ಸ್ವೀಕಾರ ಮಾಡಬೇಕು, [೪೯]

ಶ್ರೀ ದಾಸಬೋಧದ ಹದಿನಾಲ್ಕನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದಲ್ಲಿಯ
"ಅಖಂಡ ಧ್ಯಾನ ನಿರೂಪಣ" ವೆಂಬ ಹೆಸರಿನ ಎಂಟನೆಯ ಸಮಾಸವು ಮುಗಿದುದು.

• •

### ದಶಕ ಚತುರ್ದಶ : ಸಮಾಸ ನವಮ : ಶಾಶ್ವತ ನಿರೂಪಣ

॥ಶ್ರೀರಾಮ ಸಮರ್ಥ॥ ಪಿಂಡಾಚೇ ಪಾಹಿಲೇ ಕೌತುಕ ।
ಶೋಧಿಲಾ ಆತ್ಮಾನಾತ್ಮಾ ವಿವೇಕ ।
ಪಿಂಡ ಅನಾತ್ಮಾ ಆತ್ಮಾ ಯೇಕ । ಸಕಳ ಕರ್ತಾ ॥೧॥
ಆತ್ಮ್ಯಾಸ ಅನನ್ಯತಾ ಬೋಲಿಲೀ । ತೇ ವಿವೇಕೇ ಪ್ರತ್ಯಯಾ ಆಲೀ ।
ಆತಾ ಪಾಹಿಜೆ ಸಮಜಲೀ । ಬ್ರಹ್ಮಾಂಡರಚನಾ ॥೨॥
ಆತ್ಮಾನಾತ್ಮ ವಿವೇಕ ಪಿಂಡೀ । ಸಾರಾಸಾರ ವಿಚಾರ ಬ್ರಹ್ಮಾಂಡೀ ।
ವಿವರವಿವರೋ ಹೇ ಗೋಡೀ । ಘೇತಲೀ ಪಾಹಿಜೆ ॥೩॥
ಪಿಂಡ ಕಾರ್ಯ ಬ್ರಹ್ಮಾಂಡ ಕಾರಣ । ಯಾಚೇ ಕರಾವೇ ವಿವರಣ ।
ಹೇ ಚಿ ಪುಢೇ ನಿರೂಪಣ । ಬೋಲಿಲೇ ಅಸೇ ॥೪॥
ಅಸಾರ ಮ್ಹಣಿಜೆ ನಾಶಿವಂತ । ಸಾರ ಮ್ಹಣಿಜೆ ತೇ ಶಾಶ್ವತ ।
ಜಯಾಸ ಹೋಈಲ ಕಲ್ಪಾಂತ । ತೇ ಸಾರ ನವ್ಹೆ ॥೫॥
ಪೃಥ್ವೀ ಜಳಾಪಾಸೂನ ಜಾಲೀ । ಪುಢೇ ತೇ ಜಳೀ ಮಿಳಾಲೀ ।
ಜಳಾಚೀ ಉತ್ಪತ್ತಿ ವಾಢಲೀ । ತೇಜಾಪಾಸುನೀ ॥೬॥
ತೇ ಜಳ ತೇಜೇ ಶೋಷಿಲೇ । ಮಹತ್ತೇಜೇ ಆಟೋನ ಗೇಲೇ ।
ಪುಢೇ ತೇಜ ಚಿ ಉರಲೇ । ಸಾವಕಾಶ ॥೭॥

## ದಶಕ ೧೪. ಸಮಾಸ ೯. ಶಾಶ್ವತ ನಿರೂಪಣ (ನುಡಿ ೩೩)

ಸಾಧಕನು ಆತ್ಮಾನಾತ್ಮ ವಿವೇಕ ಮಾಡಿ ಪಿಂಡದ (ದೇಹದ) ಕೌತುಕ ನೋಡಬೇಕು. "ನಾನು ಆತ್ಮನೇ ಇರುವೆನು" ಅನ್ನುವದರ ಪ್ರತ್ಯಕ್ಷ ಅನುಭವ ಇದರಲ್ಲಿ ಬರುವದು, ಆ ಮೇಲೆ ಸಾರಾಸಾರ ವಿಚಾರದಿಂದ ಬ್ರಹ್ಮಾಂಡ ರಚನೆಯ ಕೌತುಕ ನೋಡಬೇಕು, ಇದರಲ್ಲಿ ನಾಶವಂತವಿರುವ ಅಸಾರವು ಹೊರಟು ಹೋಗುವದು. ಮತ್ತು ಶಾಶ್ವತ ಸಾರವಷ್ಟೇ ಸ್ಥಿರವಾಗಿ ಉಳಿಯುವದು. ಇದೇ ಪರಬ್ರಹ್ಮವಿರುವದು. ಅಂತರಾತ್ಮಾ ಸಗುಣವಿರುವನು. ಇವನನ್ನೇ ದೇವರೆಂದು ತಿಳಿಯಬೇಕು. ಇವನ ಜ್ಞಾನವಾಯಿತೆಂದರೆ ಸಾಧಕನು ನಂತರ ನಿರ್ಗುಣದವರೆಗೆ ಹೋಗಿ ಮುಟ್ಟುವನು. ನಿರ್ಗುಣದ ಸಾಕ್ಷಾತ್ಕಾರದಿಂದ ಜ್ಞಾನವು ವಿಜ್ಞಾನವಾಗುವದು. ಅಜ್ಞಾನ, ವಿಪರೀತ ಜ್ಞಾನ, ಮತ್ತು ಜ್ಞಾನ ಈ ಮೂರೂ ಲೋಪವಾಗುವವು. ಇಷ್ಟಾದಾಗಲೇ ವಿಜ್ಞಾನದಉದಯವಾಗುವದು. ನಿರಂತರ ನಿರ್ವಿಕಾರನಾಗಿರುವ ಬ್ರಹ್ಮವನ್ನು ಜ್ಞಾನ ದೃಷ್ಟಿಯಿಂದ ನೋಡಬೇಕು, ಮತ್ತು ಇವನೊಂದಿಗೆ ಅನನ್ಯ (ಏಕರೂಪ) ವಾಗಿರಬೇಕು. ಇಂಥ ಅನನ್ಯತೆಗೆ ಆತ್ಮನಿವೇದನ ಅನ್ನುವರು. ಮಾಯೆಯ ಭಿಡೆ, ಮುರವತ್ತಿಗೆ ವಶವಾಗದೇ ಯಾವುದು ಭ್ರಮರೂಪವಿರುವದೋ ಅದನ್ನೆಲ್ಲ ಬಾಜೂಕ್ಕೆ ಸರಿಸಿ ತ್ಯಜಿಸಿ ಬಿಡಬೇಕು. ಅಂದರೆ ಪರಬ್ರಹ್ಮನು ದೊರಕುವನು.

### ದಶಕ ೧೪. ಸಮಾಸ ೯. ಶಾಶ್ವತ ನಿರೂಪಣ (ನುಡಿ ೩೧)

ಮೊದಲಿಗೆ ಪಿಂಡದ ಕೌತುಕ ನೋಡಿರಿ. ಮತ್ತು ನಂತರ ಬ್ರಹ್ಮಾಂಡದ ಕೌತುಕ ನೋಡಿರಿ. ಆತ್ಮಾನಾತ್ಮ ವಿವೇಕದಿಂದ ಆತ್ಮಜ್ಞಾನವನ್ನು ಮಾಡಿಕೊಳ್ಳಿರಿ. ಮತ್ತು ಸಾರಾಸಾರ ವಿಚಾರದಿಂದ ಬ್ರಹ್ಮಜ್ಞಾನ ಮಾಡಿಕೊಳ್ಳಿರಿ:- ನಾವು ಪಿಂಡದ (ದೇಹದ) ಕೌತುಕವನ್ನು ನೋಡಿದೆವು. ಆತ್ಮಾನಾತ್ಮ ವಿವೇಕದಿಂದ ಪಿಂಡದ ರಚನೆಯನ್ನು ಶೋಧಿಸಿ ನೋಡಿದೆವು. ಇದರಲ್ಲಿ ನಮ್ಮ ಅನುಭವಕ್ಕೆ ಬಂದದ್ದೇನಂದರೆ, ಪಿಂಡ ಅಥವಾ ದೇಹ ಇದು ಅನಾತ್ಮಾ ಇರುವದು. ಮತ್ತು ಆತ್ಮಾ ಒಬ್ಬನೇ ಒಬ್ಬನು ಇರುವನು. ಮತ್ತು ಇವನು ಸರ್ವ ಕರ್ತಾ ಇರುವನು- [೧] "ನಾನು ಆತ್ಮನೇ ಇರುವೆನು-" ಎಂದು ವೇದಾಂತ ಶಾಸ್ತ್ರವು ಹೇಳುವದು. ವಿವೇಕದಿಂದ ಇದರ ಅನುಭವ ಬಂದಿತು. (ಆತ್ಮದಿಂದ ನಾನು ಬೇರೆ ಆಗಿಲ್ಲ ಅನ್ನುವ ಅನುಭವ ಬಂದಿತು). ಈಗ ಬ್ರಹ್ಮಾಂಡದ ರಚನೆಯ ಬಗ್ಗೆ ತಿಳಿದುಕೊಳ್ಳುವದು ಅವಶ್ಯವಿರುವದು. [೨] ಪಿಂಡ (ದೇಹ)ದ ರಚನೆಯನ್ನು ತಿಳಿಯಬೇಕಾದರೆ: ಆತ್ಮಾನಾತ್ಮ ವಿವೇಕ ಬೇಕಾಗುವದು. ಮತ್ತು ಬ್ರಹ್ಮಾಂಡರಚನೆಯ ಬಗ್ಗೆ ತಿಳಿಯಬೇಕಾದರೆ ಸಾರಾಸಾರ ವಿಚಾರಮಾಡಬೇಕು. ಇದರ ವಿಚಾರವನ್ನು ಸತತವಾಗಿ ಮಾಡುತ್ತ ಹೋದೆವೆಂದರೆ ಆಗ ಅದರ ಅನುಭವದ ಸವಿಯನ್ನು (ರುಚಿಯನ್ನು) ಸವಿಯಲಿಕ್ಕೆ ಬರುವದು(ಸಿಗುವದು). [೩] ಪಂಚ ಭೂತಾತ್ಮಕವಾದ ಬ್ರಹ್ಮಾಂಡ ಇದು ಪಿಂಡ ದೇಹಕ್ಕೆ ಮೂಲಕಾರಣವಿರುವದು. ಬ್ರಹ್ಮಾಂಡವು ಕಾರಣವೆನಿಸಿದರೆ ಪಿಂಡ ದೇಹವು ಅದರ ಕಾರ್ಯವೆನಿಸುವದು. ಇವುಗಳ ವಿವರಣೆಯನ್ನು ಈ ಸಮಾಸದಲ್ಲಿ ಹೇಳಲಾಗಿದೆ. ಈ ವಿಷಯವನ್ನು ಸರಿಯಾಗಿ ತಿಳಿಯಿರಿ. [೪] ಪಂಚಭೂತಗಳೆಲ್ಲವೂ ಮಾಯೆಯಲ್ಲಿ ಹೇಗೆ ಲಯವಾಗುವವು ಎಂಬುದನ್ನು ಹೇಳುವರು:- ಅಸಾರವಿರುವದೆಲ್ಲವೂ ನಾಶವಂತವಿರುವದು. ಆದರೆ ಸಾರವು ಶಾಶ್ವತವು. ಕೊನೆಯವರೆಗೂ ಇರುವಂತಹದು, ಎಂದು ತಿಳಿಯಬೇಕು. ಇಂದಿಲ್ಲದಿದ್ದರೆ ನಾಳೆ ಅಥವಾ ಯಾವಾಗ ಲಾದರೂ. ಎಂದಾದರೂ ನಾಶವಾಗುವಂತಹದು. ಸಾರವೆನಿಸುವದಿಲ್ಲ. [೫] ನೀರಿನಿಂದ ಪೃಥ್ವಿಯಾಯಿತು. ಆದರೆ ಮುಂದೆ ಅದು ನೀರಿನಲ್ಲಿ ಕರಗಿ ಹೋಯಿತು. ತೇಜದಿಂದ ನೀರಿನ ಉತ್ಪತ್ತಿ ಆಗುವದು. [೬] ತೇಜವು ನೀರನ್ನು ಸೋಸಿ ಬಿಡುವದು. (ಆಟ್ಟಿಸುವದು, ಬತ್ತಿಸುವದು) ಅಂದರೆ ಮಹಾತೇಜದಿಂದ ಎಲ್ಲ ನೀರೂ ಆಟ್ಟಿಸಿ ಇಲ್ಲದಂತಾಗಿ ಹೋಯಿತು. ಈಗ ತೇಜವೊಂದು ಉಳಿದಂತಾಯಿತು. [೭]

ತೇಜ ಜಾಲೇ ವಾಯೋಪಾಸುನೀ । ವಾಯೋ ಝುಡಪೀ ತಯಾಲಾಗುನೀ ।
ತೇಜ ಜಾಉನೀ ದಾಟಣೇ । ವಾಯೋಚೀ ಚ ಜಾಲೀ ॥೮॥

ವಾಯೋ ಗಗನಾಪಾಸುನೀ ಜಾಲಾ । ಮಾಗುತಾ ತೇಥೇ ಚಿ ವಿರಾಲಾ ।
ಐಸಾ ಕಲ್ಪಾಂತ ಬೋಲಿಲಾ । ವೇದಾಂತಶಾಸ್ತ್ರೀ ॥೯॥

ಗುಣಮಾಯಾ ಮೂಳಮಾಯಾ । ಪರಬ್ರಹ್ಮೀ ಪಾವತೀ ಲಯಾ ।
ತೇ ಪರಬ್ರಹ್ಮ ವಿವರಾಯಾ । ವಿವೇಕ ಪಾಹಿಜೆ ॥೧೦॥

ಸರ್ವ ಉಪಾಧೀಚಾ ಸೇವಟ । ತೇಥೇ ನಾಹೀ ದೃಶ್ಯ ಖಟಪಟ ।
ನಿರ್ಗುಣ ಬ್ರಹ್ಮ ಘನದಾಟ । ಸಕಳಾ ಠಾಈ ॥೧೧॥

ಉದಂಡ ಕಲ್ಪಾಂತ ಜಾಲಾ । ತರೀ ನಾಶ ನಾಹೀ ತಯಾಲಾ ।
ಮಾಯಾತ್ಯಾಗೇ ಶಾಶ್ವತಾಲಾ । ವೊಳಖಾವೇ ॥೧೨॥

ದೇವ ಅಂತರಾತ್ಮಾ ಸಗುಣ । ಸಗುಣೇ ಪಾವಿಜೆ ನಿರ್ಗುಣ ।
ನಿರ್ಗುಣಜ್ಞಾನೇ ವಿಜ್ಞಾನ । ಹೋತ ಅಸೆ ॥೧೩॥

ಕಲ್ಪನೇತೀತ ಜೇ ನಿರ್ಮಳ । ತೇಥೇ ನಾಹೀ ಮಾಯಾಮಳ ।
ಮಿಥ್ಯತ್ವೇ ದೃಶ್ಯ ಸಕಳ । ಹೋತ ಜಾತೇ ॥೧೪॥

ಜೇ ಹೋತೇ ಆಣಿ ಸವೇ ಚಿ ಜಾತೇ । ತೇ ತೇ ಪ್ರತ್ಯಯಾಸ ಯೇತೇ ।
ಜೇಥೇ ಹೋಣೇ ಜಾಣೇ ನಾಹೀ ತೇ । ವಿವೇಕೇ ವೊಳಖಾವೇ ॥೧೫॥

ಯೇಕ ಜ್ಞಾನ ಯೇಕ ಅಜ್ಞಾನ । ಯೇಕ ಜಾಣಾವೇ ವಿಪರೀತ ಜ್ಞಾನ ।
ಹೇ ತ್ರಿಪುಟೀ ಹೋಯ ಕ್ಷೀಣ । ತೇ ಚಿ ವಿಜ್ಞಾನ ॥೧೬॥

ವೇದಾಂತ ಸಿಧಾಂತ ಧಾದಾಂತ । ಯಾಚೀ ಪಾಹಾವೀ ಪ್ರಚಿತ ।
ನಿರ್ವಿಕಾರ ಸದೋದಿತ । ಜೇಥೇ ತೇಥೇ ॥೧೭॥

ವಾಯುವಿನಿಂದ ತೇಜ ಉತ್ಪನ್ನವಾಯಿತು ಕಾಲಾಂತರದಲ್ಲಿ ವಾಯುವೇ ತೇಜವನ್ನು ಆರಿಸಿ ಬಿಡುವದು. ಆ ಮೇಲೆ ತೇಜ ಹೋಗಿ ವಾಯುವೊಂದೇ ಎಲ್ಲ ಕಡೆಗೂ (ಅತ್ರಿತ್ರ ಸುತ್ತುಮುತ್ತ) ಪೂರ್ಣ ತುಂಬಿ ಉಳಿಯಿತು. (೮) ವಾಯುವು ಆಕಾಶದಿಂದ ಆದದ್ದಿರುವದು. ತಿರುಗಿ ಇದು ಆಕಾಶದಲ್ಲಿಯೇ ಲೀನವಾಗಿ ಕರಗಿ ಹೋಗುವದು. ಇಲ್ಲಿಗೆ ಪಂಚ ಭೂತಗಳು ಲಯವಾದಂತಾದವು. ವೇದಾಂತ ಶಾಸ್ತ್ರದಲ್ಲಿ ಕಲ್ಪಾಂತ್ಯವು ಹೇಗೆ ಆಗುವದು ಅನ್ನುವದರ ವರ್ಣನೆಯು ಹೀಗಿರುವದು. [೯] ಆ ಮೇಲೆ ಗುಣಮಾಯಾ [ಸತ್ವ, ರಜ, ತಮ ಅನ್ನುವ ತ್ರಿಗುಣಯುಕ್ತ ಮಾಯೆ] ಮತ್ತು ಮೂಲಮಾಯಾ ಇವೂ ಸಹ ಕ್ರಮವಾಗಿ ಪರಬ್ರಹ್ಮದಲ್ಲಿ ಲಯ ಹೊಂದುವವು. ಈ ಪರ ಬ್ರಹ್ಮನ ಬಗ್ಗೆ ಚನ್ನಾಗಿ ಸರಿಯಾಗಿ ತಿಳಿದುಕೊಳ್ಳಬೇಕಾದರೆ: ಇದರ ಕಲ್ಪನೆಯು ಬರಬೇಕಾದರೆ ವಿವೇಕವು ಅತಿ ಅವಶ್ಯವಿರುವದು. [೧೦] ಪರ ಬ್ರಹ್ಮವು ಎಲ್ಲ ಉಪಾಧಿ (ಬಾಹ್ಯಪಾಶ) ಗಳಿಂದಾಚೆಗೆ ಇರುವದು. ಅಲ್ಲಿ ಮಾಯೆಯು ಮೂಲ ಸಹ ಇಲ್ಲ. ದೃಶ್ಯದ ಸ್ಪರ್ಶವಿಲ್ಲ. ವಿಶ್ವವು ಬಂದರಾಗಲೀ, ವಿಶ್ವವು ಹೋದರಾಗಲೀ ಪರಬ್ರಹ್ಮವು-ಅತ್ಯಂತ ಮೂಲದಲ್ಲಿ ಹೇಗಿತ್ತೋ ಹಾಗೆಯೇ ಇರುವದು. ಇವನ ಅನುಭವದಿಂದಲೇ ಜ್ಞಾನವು, ವಿಜ್ಞಾನವಾಗುವದು: ಎಲ್ಲ ಉಪಾಧಿಗಳ ಕೊನೆಯಾದ ಮೇಲೆ ಅಂದರೆ ಅಲ್ಲಿ ದೃಶ್ಯದ ಗುರುತು ಸಹ (ಕೂಡಾ) ಉಳಿಯುವದಿಲ್ಲ- ಆ ಸ್ಥಳದಲ್ಲೆಲ್ಲ ಕಡೆಗೂ ಸಂಪೂರ್ಣವಾಗಿ ತುಂಬಿರುವ ನಿರ್ಗುಣ ಬ್ರಹ್ಮ ಮಾತ್ರ ಇರುವದು. [೧೧] ದೊಡ್ಡ ಕಲ್ಪಾಂತ್ಯವಾಗಿ ಎಲ್ಲ ವಿಶ್ವವು ಇಲ್ಲದಾಗಿ ಹೋದರೂ ಕೂಡಾ ಪರ ಬ್ರಹ್ಮನು ನಾಶ ಹೊಂದುವದಿಲ್ಲ. ಮಾಯೆಯು ತ್ಯಾಗ ಮಾಡಿ ಈ ಶಾಶ್ವತ ಪರಬ್ರಹ್ಮವನ್ನು ಗುರುತಿಸಬೇಕು. ತಿಳಿಯಬೇಕು. [೧೨] ಅಂತರಾತ್ಮಾ ಇವನೇ ನಿಜವಾದ ದೇವರು. ಇವನು ಸಗುಣನಿರುವನು. ಇವನ ಆಧಾರದಿಂದ ನಾವು ನಿರ್ಗುಣದವರೆಗೆ ಹೋಗಿ ಮುಟ್ಟಲು ಬರುವದು. ನಿರ್ಗುಣ ಜ್ಞಾನವಾದ ಕೂಡಲೇ ವಿಜ್ಞಾನದ ಪ್ರಾಪ್ತಿಯಾಗುವದು. [೧೩] ಮಾನವೀ ಕಲ್ಪನೆಯ ಆಚೆಗೆ ಇರುವದಾದ ಬ್ರಹ್ಮವು ಅತ್ಯಂತ ನಿರ್ಮಲವಿರುವದು. ಇವನಲ್ಲಿ ಮಾಯೆಯು-ಮಲ ಇಲ್ಲ. ಇವನಲ್ಲಿ ಎಲ್ಲ ದೃಶ್ಯಗಳ ಆಗುವಿಕೆ, ಇರುವಿಕೆ ಮತ್ತು ಇವನಲ್ಲಿಂದಲೇ ಅವುಗಳ ಹೋಗುವಿಕೆ, ಇದು ನಿಜವೇ ಇರುವದು. ಆದರೆ ಇದೆಲ್ಲವೂ ಸುಳ್ಳಾಗಿ ಹೋಗುವದು. (ಖೊಟ್ಟಿತನದಿಂದ ಘಟಿಸುವದು). [೧೪] ಯಾವುದು ಆಗುವದೋ ಮತ್ತು ಕಾಲಾಂತರದಲ್ಲಿ ಇಲ್ಲದಾಗುವದೋ ಈ ದೃಶ್ಯವು ನಮ್ಮ ಅನುಭವಕ್ಕೂ ಬರುವದು. ಆದರೆ ಪರಬ್ರಹ್ಮದಲ್ಲಿ ಆಗುವದೇನೂ ಇರುವದಿಲ್ಲ. ಮತ್ತು ಹೋಗುವದೇನೂ ಇರುವದಿಲ್ಲ. ಇದನ್ನು ವಿವೇಕದಿಂದ ಅನುಭವಕ್ಕೆ ತಂದುಕೊಳ್ಳಬೇಕು. [೧೫] ಅಜ್ಞಾನ, ವಿಪರೀತಜ್ಞಾನ, ಜ್ಞಾನ ಇವೆಲ್ಲವೂ ದೃಶ್ಯ ವಿಶ್ವದೊಳಗಿನ ಅನುಭವದಲ್ಲಿಯ ಕಲ್ಪನೆಗಳಿರುವವು. ಇವೆಲ್ಲವೂ ಲೋಪವಾದವೆಂದರೆ ಬ್ರಹ್ಮ ಸಾಕ್ಷಾತ್ಕಾರ ಘಟಿಸುವದು (ಸಾಧಿಸುವದು. ಲಭಿಸುವದು) ಇದು ವಿಜ್ಞಾನವಿರುವದು. ನಿರ್ವಿಕಾರಬ್ರಹ್ಮವನ್ನು ಜ್ಞಾನ ದೃಷ್ಟಿಯಿಂದ ನೋಡಿ ಅದರೊಂದಿಗೆ ಅನನ್ಯ (ಏಕರೂಪ) ಆಗಬೇಕು. ಇದೇ ಆತ್ಮ ನಿವೇದನವು! ಒಂದು ಜ್ಞಾನವು, ಎರಡನೆಯದು ಅಜ್ಞಾನವು. ಮೂರನೆಯದೇ ವಿಪರೀತ ಜ್ಞಾನವು, ಹೀಗಿರುವ ಇವು ತ್ರಿಪುಟಿಯೆನಿಸಿರುವವು. ಈ ತ್ರಿಪುಟಿ ಪೂರ್ಣ ಕ್ಷಯವಾದ ಕೂಡಲೇ ವಿಜ್ಞಾನವು ಪ್ರಕಟಗೊಳ್ಳುವದು. ವಿಪರೀತ ಜ್ಞಾನವು ಭ್ರಮ ರೂಪವಿರುವದು. ಇದು ಅಜ್ಞಾನದ ಸ್ವಾಭಾವಿಕ ಪರಿಣಾಮವಿರುವದು. ಮೊದಲಿಗೆ ವಿಪರೀತ ಜ್ಞಾನವು ನಾಶ ಹೊಂದುವದು. ಆದರೆ ಅಜ್ಞಾನ ಹಾಗೆಯೇ ಉಳಿಯುವದು. ಆತ್ಮಜ್ಞಾನದಿಂದ ಈ ಅಜ್ಞಾನದ ನಾಶವಾಗುವದು. ಆ ನಂತರ ಅಜ್ಞಾನವನ್ನು ದೂರಮಾಡುವ ಈ ಜ್ಞಾನವೂ (ಆತ್ಮಜ್ಞಾನವೂ) ಶಾಂತವಾಗುವದು. ಮತ್ತು ಕೊನೆಯಲ್ಲಿ ವಿಜ್ಞಾನವು ಸ್ಥಿರವಾಗಿ ಬರುವದು: [ಉಳಿಯುವದು] [ಇದಕ್ಕೆ ನಾಶವಿಲ್ಲ]. [೧೬] ವೇದಾಂತ [ಶಾಸ್ತ್ರ ಪ್ರಚೀತಿ], ಸಿದ್ಧಾಂತ [ಗುರು ಪ್ರಚೀತಿ], ಅಂದರೆ ಶಾಸ್ತ್ರ ವ ಗುರು ಪ್ರಚೀತಿ ಮತ್ತು ಧಾದಾಂತ ಅಂದರೆ ಆತ್ಮ ಪ್ರಚೀತಿ [ಅನುಭವಿಕ ಸಿದ್ಧಾಂತ, ಸ್ವಾನುಭವ] ಈ ಎಲ್ಲ ಪ್ರಚೀತಿ [ಅನುಭವ] ಗಳನ್ನು ಹೋಲಿಸಿ ತುಲನಾ ಮಾಡಿ ತಿಳಿಯಬೇಕು. ನಿರ್ವಿಕಾರ ಪರಬ್ರಹ್ಮವು ನಿರಂತರವಾಗಿ ಹೇಗಿರುವದೋ ಹಾಗೆಯೇ ಇರುವದು- ಅನ್ನುವ ಅನುಭವವೇ ನಿಮಗೆ ಬರುವದು. [೧೭]

ತೇ ಜ್ಞಾನದೃಷ್ಟೀನೇ ಪಾಹಾವೇ। ಪಾಹೋನ ಅನನ್ಯ ರಾಹಾವೇ।
ಮುಖ್ಯ ಆತ್ಮನಿವೇದನ ಜಾಣಾವೇ। ಯಾಚೇ ನಾವ ॥೧೮॥

ದೃಶ್ಯಾಸ ದಿಸ ತೇ ದೃಶ್ಯ। ಮನಾಸ ಭಾಸ ತೋ ಭಾಸ।
ದೃಶ್ಯಭಾಸಾತೀತ ಅವಿನಾಶ। ಪರಬ್ರಹ್ಮ ತೇ ॥೧೯॥

ಪಾಹೋ ಜಾತಾ ದುರೀಚ್ಯಾ ದುರೀ। ಪರಬ್ರಹ್ಮ ಸಬಾಹೇ ಅಂತರೀ।
ಅಂತ ಚಿ ನಾಹೀ ಅನಂತ ಸರೀ। ಕೋಣಾಸ ದ್ಯಾವೀ ॥೨೦॥

ಚಂಚಳ ತೇ ಸ್ಥಿರಾವೇನಾ। ನಿಶ್ಚಳ ತೇ ಕದಾಪೀ ಚಳೇನಾ।
ಆಭಾಳ ಯೇತೇ ಜಾತೇ ಗಗನಾ। ಚಳಣ ನಾಹೀ ॥೨೧॥

ಜೇ ವಿಕಾರೇ ವಾಢೇ ಮೋಡೇ। ತೇಥೇ ಶಾಶ್ವತತಾ ಕೈಚೀ ಘಡೇ।
ಕಲ್ಪಾಂತ ಹೋತಾ ಚ ವಿಘಡೇ। ಸಕಳ ಕಾಹೀ ॥೨೨॥

ಜೇ ಅಂತರೀ ಚ ಭ್ರಮಲೇ। ಮಾಯಾಸಂಭ್ರಮೇ ಸಂಭ್ರಮಲೇ।
ತಯಾಸ ಹೇ ಕೈಸೇ ಉಕಲೇ। ಅವ್ಘಾಟ ಚಕ್ರ ॥೨೩॥

ಭಿಡೇನೇ ವೆವ್ಹಾರ ನಿವಡೇನಾ। ಭಿಡೇನೇ ಸಿಧಾಂತ ಕಳೇನಾ।
ಭಿಡೇನೇ ದೇವ ಆಕಳೇನಾ। ಅಂತರ್ಯಾಮೀ ॥೨೪॥

ವೈದ್ಯಾಚೀ ಪ್ರಚಿತ ಯೇಈನಾ। ಆಣಿ ಭೀಡ ಹಿ ಉಲಂಘೇನಾ।
ತರೀ ಮಗ ರೋಗೀ ವಾಂಚೇನಾ। ಐಸೇ ಜಾಣಾವೇ ॥೨೫॥

ಜೇಣೇ ರಾಜಾ ವೊಳಖಿಲಾ। ತೋ ರಾವ ಮ್ಹಣೇನಾ ಭಲತ್ಯಾಲಾ।
ಜೇಣೇ ದೇವ ವೊಳಖಿಲಾ। ತೋ ದೇವರೂಪೀ ॥೨೬॥

ಜಯಾಸ ಮಾಈಕಾಚೀ ಭೀಡ। ತೇ ಕಾಯ ಬೋಲೇಲ ದ್ವಾಡ।
ವಿಚಾರ ಪಾಹಾತಾ ಉಘಡ। ಸಕಳ ಕಾಹೀ ॥೨೭॥

ಭೀಡ ಮಾಯೇಐಲೀಕಡೇ। ಪರಬ್ರಹ್ಮ ತೇ ಪೈಲೀಕಡೇ।
ಪೈಲೀಕಡೇ ಐಲೀಕಡೇ। ಸದೋದಿತ ॥೨೮॥

ಪರಬ್ರಹ್ಮವನ್ನು ಜ್ಞಾನ ದೃಷ್ಟಿಯಿಂದ ನೋಡಬೇಕು. ಅದನ್ನು ಹಾಗೆಯೇ ( ಅದೇ ದೃಷ್ಟಿ, ಜ್ಞಾನ ದೃಷ್ಟಿ) ನೋಡಿ ಅವರೊಂದಿಗೆ ಏಕರೂಪವಾಗಬೇಕು. ಇದಕ್ಕೇ ಮುಖ್ಯ ಆತ್ಮ ನಿವೇದನ ಅನ್ನುವರು. (೧೮) ದೃಶ್ಯಕ್ಕೆ (ದೃಷ್ಟಿಗೆ) ದೃಶ್ಯವೇ ಕಾಣುವದು. ಮನಕ್ಕೆ ಭಾಸವಾಗುವದು. ಆದರೆ ಪರಬ್ರಹ್ಮವು ದೃಶ್ಯ ಮತ್ತು ಭಾಸ ಇವುಗಳ ಆಚೆಗೆ ಅವಿನಾಶತನದಿಂದ ಇರುವದು. ಹೀಗೆ ಅವಿನಾಶವಾಗಿ ಇರುವಂಥದೇ ಪರಬ್ರಹ್ಮವಿರುವದು.[೧೯] ದೃಶ್ಯದ ದೃಷ್ಟಿಯಿಂದ ನೋಡ ಹೋದರೆ ಆಗ ಪರಬ್ರಹ್ಮವು ಎಲ್ಲಿಂದೆಲ್ಲಿಗೋ ಬಹುದೂರ ಇರುವದೆಂದು ಅನಿಸುವದು. ಆದರೆ ಇದು ಎಲ್ಲ ಕಡೆಗೂ ಒಳಗೂ ಹೊರಗೂ ಕೂಡಾ ಸರ್ವತ್ರದಲ್ಲಿ ತುಂಬಿರುವದು. ಇದು ಅನಂತ (ಅಂತ ಇಲ್ಲದ್ದು) ಇರುವದು, ಇದಕ್ಕೆ ಎಲ್ಲಿಯೂ ಅಂತವಿಲ್ಲ. ಇದನ್ನು ಸರಿಗಟ್ಟುವ ವಸ್ತುವು ವಿಶ್ವದಲ್ಲಿಯೇ ಇಲ್ಲ. [೨೦] ಯಾವುದು ಚಂಚಲವಿರುವದೋ ಅದು ಎಂದೂ ಸ್ಥಿರವಾಗಿ ಉಳಿಯುವದಿಲ್ಲ– ಯಾವುದು ನಿಶ್ಚಲ ವಿರುವದೋ ಅದರಲ್ಲಿ ಎಂದೂ ಅಸ್ಥಿರತನ ಇರುವದಿಲ್ಲ. ಆಕಾಶದಲ್ಲಿ ಮೋಡಗಳು ಬರುವವು ಮತ್ತು ಹೋಗುವವು, ಆದರೂ ಆಕಾಶವು ಇದ್ದಂತೆಯೇ ಇರುವದು. ಇದರಂತೆಯೇ ಪರಬ್ರಹ್ಮವು ನಿಶ್ಚಲವಿರುವದು. [೨೧] ಯಾವುದರಲ್ಲಿ ವಿಕಾರ (ದೋಷ. ಭೇದ) ಉಂಟಾಗುವದೋ ಮತ್ತು ಯಾವುದರಿಂದ ಅದು ಬೆಳೆಯುವದೋ ಮತ್ತು ಮುರಿಯುವದೋ ಇಂಥ ವಿಷಯದಲ್ಲಿ ಶಾಶ್ವತತನದ ಅಪೇಕ್ಷೆ ಮಾಡಲಿಕ್ಕೆ ಬರುವದಿಲ್ಲ. ಕಲ್ಪಾಂತ ಸಮಯದಲ್ಲಿ ವಿಕಾರಶೀಲವಿರುವದೆಲ್ಲವೂ ಸಂಪೂರ್ಣ ನಾಶವಾಗಿ ಹೋಗುವದು. (೨೨) ಯಾರ ಅಂತರ್ಯಾಮದಲ್ಲಿ ಭ್ರಮೆಗೆ ಸ್ಥಳವಿರುವದೋ ಮತ್ತು ಮಾಯೆಯ ಅಮಲಿನಿಂದ ಯಾರು ಗೊಂದಲಗೊಂಡಿರುವರೋ ಅಂಥವರಿಗೆ ಈ ವಿಲಕ್ಷಣ ದುರ್ಧರ (ಅವಘಡ) ಚಕ್ರದ ರಹಸ್ಯವು ತಿಳಿಯುವದು ಶಕ್ಯವಿಲ್ಲ. ಭ್ರಮದಿಂದ ಅವ್ಯತನಾದ ಮನುಷ್ಯನಿಗೆ ಈ ಅವಘಡದ—ದುರ್ಧರ ಸಮಸ್ಯೆಯು ಬಗೆಹರೆಯುವದಿಲ್ಲ. ಯಾಕೆಂದರೆ ಮಾಯಾ ಮೋಹದಿಂದ ಗೊಂದಲ ಗೊಂಡಿರುವನು....ಮೋಹಿತನಾಗಿರುವನು. ( ೨೩ ) ದೃಶ್ಯದ ಒತ್ತಡದಿಂದ ಭ್ರಮೆಯಲ್ಲಿದ್ದ ಮನುಷ್ಯನಿಗೆ ವ್ಯವಹಾರದ ಸ್ವರೂಪ ತಿಳಿಯುವದಿಲ್ಲ, ಇದೇ ಒತ್ತಡದಿಂದ ಶಾಸ್ತ್ರ ಸಿದ್ಧಾಂತವು ಹೇಗಿರುವದು? ಏನು ಇರುವದು? ಇದೂ ಸಹಿತ ತಿಳಿಯುವದಿಲ್ಲ. ಮತ್ತು ಇದೇ ಒತ್ತಡದಿಂದ ಅಂತರ್ಯಾಮದಲ್ಲಿ ಇರುವಂಥ ಅಂತರಾತ್ಮನದೂ ಸಹಿತ ಇವನಿಗೆ ಆಕಲನವಾಗುವದಿಲ್ಲ. (ತಿಳಿಯುವದಿಲ್ಲ). [೨೪] ತಿಳಿಯಿರಿ. ಒಬ್ಬ ರೋಗಿಯು ಒಬ್ಬ ವೈದ್ಯರ ಔಷಧ ತೆಗೆದುಕೊಳ್ಳುತ್ತಲಿರುವನು. ರೋಗಿಗೆ ವೈದ್ಯರ ಔಷಧದಿಂದ ಏನೂ ಗುಣಲಕ್ಷಣ (ಅನುಭವ) ಕಂಡು ಬರಲಿಲ್ಲ. ಔಷಧದಿಂದ ರೋಗದಲ್ಲಿ ಏನೂ ಕಡಿಮೆ ಆಗಲಿಲ್ಲ. ಇಂಥ ಪರಿಸ್ಥಿತಿ ಇರುವದು- ಆದರೆ ಆ ರೋಗಿಗೆ ವೈದ್ಯರ ಭಿಡೆಯಿಂದಾಗಿ ಅವರಿಗೆ ಸ್ಪಷ್ಟವಾಗಿ ಹೇಳಲಿಕ್ಕೆ ಆಗಲೊಲ್ಲದು, ಹಾಗೂ ಇನ್ನೊಬ್ಬ ವೈದ್ಯರ ಕಡೆಗೆ ಹೋಗಲಿಕ್ಕೂ ಆಗಲೊಲ್ಲದು. ಅಂದಮೇಲೆ ಇಂಥ ರೋಗಿಯೇನೂ ಬದುಕಲಾರನೆಂಬುದನ್ನು ಖಚಿತವಾಗಿ ತಿಳಿಯಬೇಕು. (೨೫) ಯಾವನು ರಾಜನನ್ನು ಸರಿಯಾಗಿ ಗುರುತಿಸಿರುವನೋ ಅವನು ಯಾವನೋ ಒಬ್ಬನಿಗೆ ರಾಜನೆಂದು ಅನ್ನಲಾರನು. ಇದರಂತೆ ಯಾವನು ನಿರ್ಗುಣ ದೇವರನ್ನು ಸರಿಯಾಗಿ ಗುರುತಿಸಿರುವನೋ ಅವನು ಸಂಬಂಧವಿಲ್ಲದ ಯಾವುದೋ ಒಂದು ಸಗುಣಕ್ಕೆ ದೇವರೆಂದು ಅನ್ನುವದಿಲ್ಲ· ಇಂಥವನು ಸ್ವತಃ ದೇವರೂಪನೇ ಆಗುವನು. (೨೬) ಯಾರು ಮಾಯಿಕ ಅಶಾಶ್ವತದ ಅಥವಾ ದೃಶ್ಯದ ಭಿಡೆಗೆ (ದಾಕ್ಷಿಣ್ಯಕ್ಕೆ) ಒಳಗಾಗುವರೋ ಮತ್ತು ಯಾರು ದೃಶ್ಯದ ತೀವ್ರತೆ ಅಥವಾ ಹಿಡಿತದಲ್ಲಿ ಇರುವರೋ ಅಂಥವರು ಅಂದರೆ ಅರೆಬೆಂದವರು(ಅಪೂರ್ಣ ಜನರು) ನಿಜವಾದ ದೇವರ ಬಗ್ಗೆ ಸರಿಯಾಗಿ ಹೇಳಲಿಕ್ಕೆ ಶಕ್ಯವಿಲ್ಲ. ನಾವು ವಿಚಾರಪೂರ್ವಕ ತಿಳಿದುಕೊಂಡರೆ ಇದೆಲ್ಲವೂ ಸ್ಪಷ್ಟವಾಗಿ ತಿಳಿಯುವದು. (೨೭) ಮಾಯೆಯ ಒತ್ತಡವು ಈಚೆಗಿನದು. ಮತ್ತು ಪರಬ್ರಹ್ಮವು ಮಾತ್ರ ಮಾಯೆಯ ಆಚೆಗಿನದು ಇದೆ. ಮಾಯಾ ಇತ್ತೀಚಿನದು. ಮತ್ತು ಪರಬ್ರಹ್ಮವು ಆಚೆಗಿನದು· ಇದು ಹೀಗೆ ಕಾಯಂ ಪ್ರಕಾರದ್ದು ಇರುವದು· (೨೮)

ಲಟಿಕ್ಯಾಚೀ ಭೀಡ ಧರಣೇ । ಭ್ರಮೋ ಭಲತೇ ಚಿ ಕರಣೇ ।
ಐಸೀ ನವ್ಹೇತೀ ಲಕ್ಷಣೇ । ವಿವೇಕಾಚೀ ॥೨೯॥

ಖೋಟೇ ಆವಘೇ ಚಿ ಸಾಂಡಾವೇ । ಖರೇ ಪ್ರತ್ಯಯೋ ವೋಳಖಾವೇ ।
ಮಾಯಾತ್ಯಾಗೇ ಸಮಜಾವೇ । ಪರಬ್ರಹ್ಮ ॥೩೦॥

ತೇ ಮಾಯೇಚೇ ಜೇ ಲಕ್ಷಣ । ತೇ ಚಿ ಪುಢೇ ನಿರೂಪಣ।
ಸುಚಿತಪಣೇ ವಿವರಣ । ಕೇಲೇ ಪಾಹಿಜೆ ॥೩೧॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಶಾಶ್ವತ ನಿರೂಪಣ ನಾಮ' ಸಮಾಸ ನವಮ ॥

● ●

ಯಾವುದು ನಿಜವಲ್ಲವೋ ಅದರ ಭಿಡೆಗೆ ಬೀಳುವದು (ಒಳಗಾಗುವದು) ಮಾಯೆಯು ಭ್ರಮದಿಂದ ಅಲ್ಲ ಸಲ್ಲದ್ದನ್ನು ಮಾಡುವದು. ಇವೆಲ್ಲವುಗಳು ವಿವೇಕದ [ನಿಜವಾದ] ಲಕ್ಷಣಗಳೇನೂ ಅಲ್ಲ. [೨೯] ಯಾವುದು ಮಾಯಿಕ ಇದೆಯೋ, ಖೊಟ್ಟಿ ಇರುವದೋ ಇಂಥದನ್ನೆಲ್ಲ ಸಂಪೂರ್ಣವಾಗಿ ಬಿಡಬೇಕು. ಸ್ವತಃ ಅನುಭವ ಪಡೆದು ನಿಜವಾದದ್ದು ಯಾವುದೆನ್ನುವದನ್ನು ಗುರುತಿಸಬೇಕು. ಮಾಯೆಯ ತ್ಯಾಗವನ್ನು ಮಾಡಬೇಕು. ಪರಬ್ರಹ್ಮನ ದರ್ಶನ ಪಡೆಯಬೇಕು. ಸಮಾಧಾನ ಹೊಂದಬೇಕು. [೩೦] ಮಾಯೆಯ ಲಕ್ಷಣಗಳನ್ನು ಮುಂದಿನ ಸಮಾಸದಲ್ಲಿ ಚೆನ್ನಾಗಿ ಹೇಳಿರುವೆವು. ಶಾಂತ ಮನಸ್ಸಿನಿಂದ ಅವುಗಳ ಬಗ್ಗೆ ವಿವರವಾಗಿ ತಿಳಿಯಬೇಕು. [೩೧]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹದಿನಾಲ್ಕನೆಯ ದಶಕದೊಳಗಿನ
"ಶಾಶ್ವತ ನಿರೂಪಣ"ವೆಂಬ ಹೆಸರಿನ ಒಂಭತ್ತನೆಯ ಸಮಾಸವು ಮುಗಿದುದು.

ದಶಕ ಚತುರ್ದಶ : ಸಮಾಸ ದಶಮ : ಮಾಯಾ ನಿರೂಪಣ

॥ಶ್ರೀರಾಮ ಸಮರ್ಥ॥ಮಾಯಾ ದಿಸೆ ಪರೀ ನಾಸೇ।ವಸ್ತು ನ ದಿಸೆ ಪರೀ ನ ನಾಸೇ।
ಮಾಯಾ ಸತ್ಯ ವಾಟೇ ಪರೀ ಮಿಥ್ಯಾ ಅಸೇ । ನಿರಂತರ ॥೧॥

ಕರಂಟಾ ಪಡೋನೀ ಉತಾಣಾ । ಕರೀ ನಾನಾಪರೀ ಕಲ್ಪನಾ ।
ಪರೀ ತೇ ಕಾಹೀ ಚ ಘಡೇನಾ । ತೈಸೀ ಮಾಯಾ ॥೨॥

ದ್ರವ್ಯದಾರೇಚೇ ಸ್ವಪ್ನವೈಭವ । ನಾನಾ ವಿಳಾಸೇ ಹಾವಭಾವ ।
ಕ್ಷಣೇಕ ವಾಟೆ ಪರೀ ವಾವ । ತೈಸೀ ಮಾಯಾ ॥೩॥

ಗಗನೀ ಗಂಧರ್ವನಗರೇ । ದಿಸತಾತೀ ನಾನಾ ಪ್ರಕಾರೇ ।
ನಾನಾರೂಪೇ ನಾನಾವಿಕಾರೇ । ತೈಸೀ ಮಾಯಾ ॥೪॥

ಲಕ್ಷುಮೀ ರಾಯೆ ವಿನೋದಾಚೀ । ಬೋಲತಾ ವಾಟೇ ಸಾಚೀ ।
ಮಿಥ್ಯಾ ಪ್ರಚಿತ ತೇಥೀಚೀ । ತೈಸೀ ಮಾಯಾ ॥೫॥

# ದಶಕ ೧೪. ಸಮಾಸ ೧೦. ಮಾಯಾ ನಿರೂಪಣ (ನುಡಿ ೨೧)

ಸದ್ವಸ್ತು ಹೇಗೆ ಇರುವದೋ ಹಾಗೆಯೇ ಅದು ಮನುಷ್ಯನ ಅನುಭವಕ್ಕೆ ಒಂದು ವೇಳೆ ಬಂದಿದ್ದರೆ ಮನುಷ್ಯನಿಗೆ ಭ್ರಮೆ ಆಗುತ್ತಲೇ ಇರಲಿಲ್ಲ. ಆದರೆ ಮನುಷ್ಯನ ಮನವು ಅಜ್ಞಾನಮಯವಿರುವದರಿಂದ ಸದ್ವಸ್ತು ಹೇಗೆ ಇರುವದೋ ಅದರಂತೆ ಅದರ ಅನುಭವ ಪಡೆಯಲು ಶಕ್ಯವಾಗುವದಿಲ್ಲ. ಯಾವುದು ಹೇಗಿರುವದಿಲ್ಲವೋ ಅದು ಅದರಂತೆ ಮನುಷ್ಯನ ಮನಸ್ಸಿಗೆ ಭಾಸವಾಗುವದು. ಒಟ್ಟಿನಲ್ಲಿ ಇರುವದು ಒಂದು, ಮತ್ತು ಕಾಣುವದು ಮತ್ತೊಂದು [ಇಲ್ಲದ್ದು], ಇದರ ಹೆಸರು ಮಾಯೆ. ಮಾಯಾ ಮಯ ವಿಶ್ವವು ಇಂದ್ರಿಯ ಗೋಚರವಿರುವದು. ಇಂದ್ರಿಯಗಳಿಗೆ ಪ್ರತ್ಯಕ್ಷ ಕಾಣುವದು. ಸದ್ವಸ್ತು ಅಥವಾ ಪರಬ್ರಹ್ಮವು ಅತೀಂದ್ರಿಯವಿರುವದು. ಇಂದ್ರಿಯಗಳ ಅನುಭವದ ಆಚೆಗೆ ಇರುವದು. ಆದರೆ ಮಾಯಾಮಯ ವಿಶ್ವವು ಕಾಣಿಸುತ್ತಿದ್ದರೂ ಇದು ನಾಶವಂತವಿರುವದು. ಸದ್ವಸ್ತು ಕಾಣಿಸದಿದ್ದರೂ ಇದು ಅವಿನಾಶಿ ಇರುವದು. ಮಾಯಾ ಕಲ್ಪನಾ ಮಾತ್ರದಲ್ಲಿ ಹೇಗಿರುವದೆಂಬುದನ್ನು ತಿಳಿಸಿಕೊಡುವದಕ್ಕಾಗಿ ಈ ಸಮಾಸದಲ್ಲಿ ಶ್ರೀ ಸಮರ್ಥರು ನಾನಾ ರೀತಿಯಲ್ಲಿ ಬಹಳಷ್ಟು ದೃಷ್ಟಾಂತಗಳನ್ನುಕೊಟ್ಟು ತಿಳಿಸಿ ಹೇಳಿರುವರು:-

## ದಶಕ ೧೪. ಸಮಾಸ ೧೦. ಮಾಯಾ ನಿರೂಪಣ (ನುಡಿ ೨೧)

ಮಾನವ ಜೀವನದಲ್ಲಿ ಕೇವಲ ಕಲ್ಪನೆಯನ್ನು ಉಪಯೋಗಿಸಿಕೊಂಡು ನಾವು ಹೇಗೆ ನಡೆಯುವೆವು ಎನ್ನುವ ಬಗ್ಗೆ ಒಳ್ಳೆ ತಿಳುವಳಿಕೆ ಉಂಟಾಗುವಂತೆ ಶ್ರೀ ಸಮರ್ಥರು ಇಲ್ಲಿ ಕೊಟ್ಟ ದೃಷ್ಟಾಂತಗಳು ಉಪಯೋಗಕ್ಕೆ ಬರುವಂಥವು ಇರುವವು:- ಮಾಯಾ ಕಾಣುವದು ನಿಜವಿದ್ದರೂ ಇದು ನಾಶ ಹೊಂದುವದು. ಸದ್ವಸ್ತು ಅಂದರೆ ಪರಬ್ರಹ್ಮವು ಕಾಣುವದಿಲ್ಲವೆಂಬುದು ನಿಜವೇ ಆಗಿದೆ. ಆದರೆ ಇದು ಎಂದೆಂದಿಗೂ ನಾಶ ಹೊಂದುವದಿಲ್ಲ. ಮಾಯಾ ಮನಕ್ಕೆ ನಿಜವೆನಿಸುವದು, ಆದರೆ ಇದು ನಿರಂತರ ಅಥವಾ ಯಾವಾಗಲೂ ಯಾವ ಕಾಲದಲ್ಲಿಯೂ ಅತ್ಯಂತ ಸುಳ್ಳು (ಖೊಟ್ಟಿ) ಇರುವದು. (೧) ಒಬ್ಬ ಅಭಾಗಿ ದರಿದ್ರನು ಬೈಲಿನಲ್ಲಿ ಅಂಗಾತ ಮಲಗಿಕೊಂಡು ಆಕಾಶವನ್ನು ನೋಡ ನೋಡುತ್ತ ಮಲಗಿಕೊಂಡೇ ಅನೇಕ ಪ್ರಕಾರದ ಕಲ್ಪನೆಗಳನ್ನು ಮಾಡುತ್ತಾನೆ. ಆದರೆ ಈ ಕಲ್ಪನೆಗಳಲ್ಲಿ ಒಂದೂ ಸಹಿತ ಪ್ರತ್ಯಕ್ಷದಲ್ಲಿ ಘಟಿಸುವದಿಲ್ಲ. ಇದರಂತೆ ಮಾಯೆಯು ಸ್ಥಿತಿಯೂ ಇರುವದು. (೨) ಒಬ್ಬ ಮನುಷ್ಯನಿಗೆ ಸ್ವಪ್ನ ಬೀಳುವದು. ಅದರಲ್ಲಿ ಅವನು ಸುಂದರ ಹೆಂಡತಿ ಮತ್ತು ಬಹಳಷ್ಟು ಹಣ ದೊರೆತಂಥ ವೈಭವವನ್ನು ನೋಡಿದನು. ನಾನಾ ಪ್ರಕಾರದ ವಿಲಾಸಗಳನ್ನು ಭೋಗಿಸಿದನು. ಮತ್ತು ಮೋಹಕವಾದಂಥ ಹಾವಭಾವವನ್ನು ನೋಡಿದನು. ಇದೆಲ್ಲವೂ ಸ್ವಪ್ನದ ಮಟ್ಟಿಗೆ ಮಾತ್ರ ನಿಜವೆನಿಸುವದು. ಎಚ್ಚರಾದ ಮೇಲೆ ಏನೂ ಇರುವದಿಲ್ಲ. ಆದರೆ ಇದೆಲ್ಲವೂ ಭಾಸವಿರುವದು. ಮಾಯಾ ಇದೂ ಸಹ ಹೀಗೆಯೇ ಇರುವದು. (೩) ಆಕಾಶದಲ್ಲಿ ಅನೇಕ ಪ್ರಕಾರದ ಗಂಧರ್ವ ನಗರ, ಅನೇಕ ಪ್ರಕಾರದ ಆಕಾರಗಳು ಕಾಣುವವು. ಇದರಲ್ಲಿ ಅನೇಕ ರೂಪ ಮತ್ತು ಅನೇಕ ವಿಕಾರಗಳು ಕಾಣುವವು. (ಇದೆಲ್ಲ ಆಕಾಶದಲ್ಲಿಯ ಬಿಳಿ ಮತ್ತು ಇತರ ಬಣ್ಣದ ಮೋಡಗಳಿಂದ ಕಾಣುವದು.) ಆದರೆ ಇದೆಲ್ಲವೂ ಕೇವಲ ತೋರಿಕೆಯದಾಗಿರುವದು. ಮಾಯಾ ಸಹ ಹೀಗೆಯೇ ಇರುವದು. (೪) ಒಬ್ಬ ವೇಷಗಾರ (ವೇಷಧಾರಿ) ಇರುವನು. ಇವನು ಶ್ರೀಮಂತನ ಸೋಗು ಹಾಕಿ ಕೇವಲ ಐಶ್ವರ್ಯದ ಮಾತುಗಳನ್ನೇ ಆಡುವನು. ಇವನು ಮಾತನಾಡುವಾಗ ಮಾತ್ರ ಅವು ನಿಜವೆನಿಸುವವು. ಆದರೆ ಅವು ಅನುಭವಕ್ಕೇನೂ ಬರುವದಿಲ್ಲ. ಇದೆಲ್ಲ ಖೊಟ್ಟಿಯೇ ಇರುವದು. ಮಾಯಾ ಸಹ ಹೀಗೆಯೇ ಇರುವದು. (೫)

ದಸರ್‍ಯಾಚೆ ಸುವರ್ಣಾಚೆ ಲಾಟೇ । ಲೋಕ ಮ್ಹಣತೀ ಪರೀ ತೆ ಕಾಂಟೇ ।
ಪರೀ ಸರ್ವತ್ರ ರಾಹಾಟೇ । ತೈಸೀ ಮಾಯಾ ॥೬॥

ಮೇಲ್ಯಾಚಾ ಮೋಹೋಭಾವ ಕರಣೇ । ಸತೀಚೇ ವೈಭವ ವಾಢವಣೇ।
ಮಸಣೀ ಜಾಊನೀ ರುದನ ಕರಣೇ । ತೈಸೀ ಮಾಯಾ ॥೭॥

ರಾಖೇಸೀ ಮ್ಹಣತೀ ಲಕ್ಷ್ಮೀ । ದುಸರೀ ಭಾರದೋರೀ ಲಕ್ಷುಮೀ ।
ತಿಸರೀ ನಾಮಮಾತ್ರ ಲಕ್ಷುಮೀ । ತೈಸೀ ಮಾಯಾ ॥೮॥

ಮುಳೀ ಬಾಳವಿಧವಾ ನಾರೀ । ತಿಚೇ ನಾವ ಜನ್ಮಸಾವಿತ್ರೀ ।
ಕುಬೇರ ಹಿಂಡೆ ಘರೋಘರೀ । ತೈಸೀ ಮಾಯಾ ॥೯॥

ದಶಅವತಾರಾಂತೀಲ ಕೃಷ್ಣಾ । ಉಪಜೆ ಜೀರ್ಣ ವಸ್ತ್ರಾಂಚೀ ತೃಷ್ಣಾ।
ನದೀ ನಾಮೇ ಪೀಯುಷ್ಣಾ । ತೈಸೀ ಮಾಯಾ ॥೧೦॥

ಬಹುರೂಪಾಂತೀಲ ರಾಮದೇವರಾವ। ಗ್ರಾಮಸ್ಥಾಪುಢೇ ದಾಖವೀ ಹಾವಭಾವ।
ಕಾ ಮಹಾರಾಜ ಮ್ಹಣೋನೀ ಲಾಘವ । ತೈಸೀ ಮಾಯಾ ॥೧೧॥

ದೇವ್ಹಾರಾ ಅಸೆ ಅನ್ನಪೂರ್ಣಾ । ಆಣೀ ಗೃಹೀ ಅನ್ನ ಚಿ ಮಿಳೇನಾ ।
ನಾಮೇ ಸರಸ್ವತೀ ಸಿಕೇನಾ । ಶುಭಾವಳು ॥೧೨॥

ಸುಣ್ಯಾಸ ವ್ಯಾಘ್ರ ನಾಮ ಠೇವಿಲೇ । ಪುತ್ರಾಸ ಇಂದ್ರನಾಮೇ ಪಾಚಾರಿಲೇ ।
ಕುರೂಪ ಪರೀ ಆಳವಿಲೇ । ಸುಂದರಾ ಐಸೇ ॥೧೩॥

ಮೂರ್ಖ ನಾಮೇ ಸಕಳಕಳಾ । ರಾಶಭೀ ನಾಮೇ ಕೋಕಿಳಾ ।
ನಾತರೀ ಡೋಳಸೆಚಾ ಡೋಳಾ । ಘಟಿಕಾ ಜೈಸಾ ॥೧೪॥

ಮಾತಂಗೀಚೇ ನಾಮ ತುಳಸೀ । ಚರ್ಮಕೀಚೇ ನಾಮ ಕಾಶೀ ।
ಬೋಲತೀ ಅತಿಶೂದ್ರಿಣೇಸೀ । ಭಾಗೀರಥೀ ಐಸೇ ॥೧೫॥

ದಸರಾ ಹಬ್ಬದ ದಿವಸ ಬನ್ನಿಯನ್ನು ತಂದು ಪೂಜಿಸುವರು ಜನರು ಇದಕ್ಕೆ ಬಂಗಾರವೆಂದು ಅನ್ನುವರು. ಆದರೆ ಅದು ಶಮಿವೃಕ್ಷದ [ಬನ್ನಿ ಗಿಡದ] ಟೊಂಗೆಯಲ್ಲಿಯ ತಪ್ಪಲು ಇರುವದು.[ಕೆಲವು ಕಡೆಗೆ ಆರಿಗಿಡದ-ಕಾರಿಗಿಡದ ತಪ್ಪಲು ಉಪಯೋಗಿಸುವರು]ಇದನ್ನೇ ಬಂಗಾರವೆಂದು ತಿಳಿದು ಪೂಜಿಸಿ ಜನರಿಗೆ ಕೊಡುವಾಗ ಬಂಗಾರ ತೆಗೆದುಕೊಳ್ಳಿರಿ ನಾವೂ ನೀವೂ ಬಂಗಾರದಂತೆ ಇರೋಣ ಎಂದು ಅನ್ನುವರು.ತಂದ ಟೊಂಗೆಗೆ ಮುಳ್ಳುಗಳು ಇರುವವು. ಈ ಪದ್ಧತಿಯು ಎಲ್ಲ ಕಡೆಗೂ ಇರುವದು. ಮಾಯಾ ಸಹಿತ ಹೀಗೆಯೇ ಇರುವದು. [೬] ಒಂದು ಪ್ರೇತ [ಶವ]ದ ದೊಡ್ಡ ಉತ್ಸವ ಮಾಡುವರು. ಸತಿ ಹೋಗಲಿಕ್ಕೆಂದು ಹೊರಟ ಸ್ತ್ರೀಯಳನ್ನು ಬಹಳಷ್ಟು ಶೃಂಗರಿಸಿ ವೈಭವ ಬೆಳಿಸುವರು. [ಹಾಡುವದು, ಕುಣಿಯುವದು, ಭಜನೆ ಮಾಡುವದು, ಬಾಜಾ ಬಜಂತ್ರಿ ಬೇಂಡವಾದ್ಯ ತಂದು ಹುರುಪಿನಿಂದ ಬಾರಿಸುವದು ಮದ್ದು ಸುಡುವದು ಇತ್ಯಾದಿ]. ನಂತರ ಸ್ಮಶಾನದಲ್ಲಿ ಅಳುವರು. ಇದರಂತೆಯೇ ಮಾಯಾ ಇರುವದು. [೭] ಇಟ್ಟುಕೊಂಡ ಹೆಂಗಸಿಗೆ ಲಕ್ಷ್ಮೀ ಅನ್ನುವರು. ಅಕಾಲದಲ್ಲಿ ಗರ್ಭಪಾತವಾಗಬಾರದೆಂದು ಮಂತ್ರಿಸಿದ ದಾರವನ್ನು ಗರ್ಭವತಿಯ [ಟೊಂಕ, ನಡ] ಸೊಂಟಕ್ಕೆ ಕಟ್ಟುವರು. ಈ ಮಂತ್ರಿಸಿದ ದಾರಕ್ಕೆ ಲಕ್ಷ್ಮೀ ಅನ್ನುವರು. ಇವಳು ಎರಡನೆಯ ಲಕ್ಷ್ಮಿಯು ಇನ್ನು ಮೂರನೆಯವಳು ಬರಿಯ ಲಕ್ಷ್ಮಿಯು. ಇವುಗಳಲ್ಲಿ ಯಾರೂ ನಿಜವಾದ ಲಕ್ಷ್ಮೀ ಇರುವದಿಲ್ಲ. ಮಾಯೆಯೂ ಹೀಗೆಯೇ ಇರುವದು. [೮] ಒಬ್ಬ ಬಾಲ ವಿಧವೆ ಇರುವಳು ಇವಳ ಹೆಸರು ಮಾತ್ರ ಜನ್ಮಸಾವಿತ್ರಿ ಎಂದು ಇರುವದು. ಅಥವಾ ಒಬ್ಬನ ಅಡ್ಡಹೆಸರು ಕುಬೇರ ಎಂದು ಇರುವದು. ಆದರೆ ಇವನು ಮನೆಮನೆಗೂ ಭಿಕ್ಷೆ ಬೇಡುತ್ತ ತಿರುಗುವನು. ಮಾಯಾ ಸಹಿತ ಹೀಗೆಯೇ ಇರುವದು.[೯] ದಶಾವತಾರದ ಆಟ ಆಡುವವನು ಕೃಷ್ಣನ ವೇಷ ಧರಿಸಿ ದ್ರೌಪತಿ ಪಾತ್ರಧಾರಿಗೆ ಬಹಳಷ್ಟು ವಸ್ತ್ರಗಳನ್ನು ಪೂರೈಸುವನು. ಆದರೆ ಆಟ ಮುಗಿದ ಮೇಲೆ ಜನರ ಹತ್ತಿರ ಯಾವುದಾದರೂ ಒಂದು ಹಳೆಯ ವಸ್ತ್ರವನ್ನು ಕೊಡಿರೆಂದು ಬೇಡಿಕೊಳ್ಳುವನು. ಅಲ್ಪ ಸ್ವಲ್ಪ ಅಸ್ವಚ್ಛ, ಅಲ್ಪ ನೀರು ಇರುವ ಒಂದು ನದಿ ಇರುವದು. ಅದರ ಹೆಸರು "ಪಿಯೂಷ್ಣಾ" ಅಂದರೆ ಅಮೃತದ ನದಿ [ದೂಧಾಮೃತದ ನದಿ] ಇದರಂತೆ ಮಾಯಾ ಇರುವದು. [೧೦] ಒಬ್ಬ ಬಹುರೂಪಿ ವೇಷಗಾರ ರಾಮದೇವರಾಜನ ವೇಷಧರಿಸಿ ಗ್ರಾಮದ ಜನರ ಮುಂದೆ ಮಹಾರಾಜನಂತೆ ಉತ್ತಮ ಹಾವಭಾವ ಮಾಡುವನು. ತನ್ನ ಅಭಿನಯ ಕೌಶಲ್ಯವನ್ನು ತೋರಿಸುವನು. ಇದರಂತೆ ಮಾಯಾ ಇರುವದು (೧೧) ಮನೆಯದೇವರಮಂಟಪದಲ್ಲಿ ಅನ್ನಪೂರ್ಣೆಯು ಪ್ರತಿಮೆ ಇರುವದು. ಆದರೆ ಮನೆಯಲ್ಲಿ ಹೊಟ್ಟೆಗೆ ತಿನ್ನಲು ಅನ್ನವಿಲ್ಲ. ಒಬ್ಬಳ ಹೆಸರು ಸರಸ್ವತಿ, ಆದರೆ ಅವಳು ವಿದ್ಯಾಭ್ಯಾಸ ಮಾಡುವದಿಲ್ಲ.ಮಾಡುವ ಮನಸ್ಸೂ ಇಲ್ಲ. ಕೇವಲ ಶಗಣೀ ತರುವದು, ಬೆರಣಿ(ಕುರುಳು)ತಟ್ಟುವದನ್ನು ಮಾಡುತ್ತಾಳೆ. ಮಾಯಾ ಕೂಡಾ ಹೀಗೆಯೇ ಇರುವದು(೧೨) ಒಂದು ನಾಯಿಗೆ ವಾಘ್ಯಾ ಎಂದು ಹುಲಿಯ ಹೆಸರಿಟ್ಟರೆ, ಮನೆಯ ಹುಡುಗನಿಗೆ ಇಂದ್ರ ಎಂದು ಹೆಸರಿಟ್ಟು ಕೂಗಿದರೆ, ಒಬ್ಬ ಕುರೂಪ ಸ್ತ್ರೀಯನ್ನು ಸುಂದರೀ ಎಂದು ಕೌತುಕ ಮಾಡಿದರೆ, ನಿಜವೆನಿಸುವದೇ ? ಮಾಯಾ ಸಹಿತ ಹೀಗೆಯೇ ಇರುವದು. [೧೩] ಒಬ್ಬ ಮೂರ್ಖನಿಗೆ ಸಕಲ ಕಲಾ ಪ್ರವೀಣ ಅನ್ನುವದು, ಗಾರ್ಧಬಗಾಯನ ಒದರುವವಳಿಗೆ ಕೋಕಿಲೆಯೆಂದು ಅನ್ನುವದು, ಕಣ್ಣು ವಿದ್ರೂಪವಿದ್ದವನಿಗೆ, ಗೊಡಚಿ ಬೆಳೆದ ವಿಕರಾಳ ಕಣ್ಣಿನ ಮನುಷ್ಯನಿಗೆ ಸುಂದರ ಅಥವಾ ಸುಂದರ ಕಣ್ಣಿನವ ಅನ್ನುವದು, ಇದರಂತೆ ಮಾಯೆಯೂ ಇರುವದು. [೧೪] ಚಾಂಡಾಲ ಸ್ತ್ರೀಯ ಹೆಸರು ತುಳಸಿ, ಚಮ್ಮಾರ [ಸಮಗಾರ] ಸ್ತ್ರೀಯ ಹೆಸರು ಕಾಶಿ, ಅಥವಾ ಅತಿ ಶೂದ್ರ ಸ್ತ್ರೀಯ ಹೆಸರು ಭಾಗೀರಥಿ ಹೀಗೆ ಇದ್ದಂತೆ ಮಾಯಾ ಇರುವದು. ಇಲ್ಲಿಯ ವರೆಗೆ ಹೇಳಿದ ಅನೇಕ ಪ್ರಕಾರಗಳು ನಿಜವಾದವು ಅಲ್ಲವೇ ಅಲ್ಲ. ಆದರೆ ಕಾಣಿಸುವವು. ವ್ಯವಹಾರದಲ್ಲಿಯೂ ನಡೆಯುವವು. ಇದರಂತೆ ಈ ದೃಶ್ಯ ವಿಶ್ವವು ಕಾಣುವದು. ಮತ್ತು ವ್ಯವಹಾರದಲ್ಲಿಯೂ ಉಪಯೋಗ ಬೀಳುವದು. ಆದರೆ ಇದು ಅಂತಿಮ ಸತ್ಯವಲ್ಲ. [೧೫]

ಸಾಉಲೀ ಆಣೀ ಅಂಧಕಾರ । ಯೇಕ ಹೋತಾ ತೇಥೀಚಾ ವಿಚಾರ ।
ಉಗಾ ಚಿ ದಿಸೆ ಭಾಸಮಾತ್ರ । ತೈಸೀ ಮಾಯಾ ॥೧೬॥

ಶ್ರವಣ ಬೋಟೀ ಸಂಧೀ ಕರತಳ । ರವಿರಶ್ಮೀ ದಿಸತೀ ಇಂಗಳ ।
ರಮ್ಯ ಆರಕ್ತ ಕಲ್ಲೋಳ । ತೈಸೀ ಮಾಯಾ ॥೧೭॥

ಭಗವೇ ವಸ್ತ್ರ ದೇಖತಾ ಮನಾಲಾ । ವಾಟೆ ಅಗ್ನ ಚಿ ಲಾಗಲಾ ।
ವಿಮಂಚಿತಾ ಪ್ರತ್ಯೇ ಆಲಾ । ತೈಸೀ ಮಾಯಾ ॥೧೮॥

ಜಳೀ ಚರಣ ಕರಾಂಗುಳೀ । ಆಖುಡ ಲಾಂಬೇ ಕಿರಕೋಳೀ ।
ವಿಪರೀತ ಕಾಣೇ ದಿಸತೀ ಜಳೀ । ತೈಸೀ ಮಾಯಾ ॥೧೯॥

ಭೋವಂಡೀನೇ ಪೃಥ್ವೀ ಕಲಥಲೀ । ಕಾಮಿಣೀನೇ ಪಿವಳೀ ಜಾಲೀ ।
ಸನ್ನಿಪಾತಸ್ಥಾ ಅನುಭವಲೀ । ತೈಸೀ ಮಾಯಾ ॥೨೦॥

ಕೋಣೀಯೇಕ ಪದಾರ್ಥವಿಕಾರ । ಉಗಾ ಚಿ ದಿಸೆ ಭಾಸಮಾತ್ರ ।
ಅನನ್ಯಾಚಾ ಅನ್ಯ ಪ್ರಕಾರ । ತೈಸೀ ಮಾಯಾ ॥೨೧॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ಮಾಯಾ ನಿರೂಪಣ ನಾಮ' ಸಮಾಸ ದಶಮ ॥

● ●

— ದಶಕ ಚತುರ್ದಶ ಸಮಾಪ್ತ —

ಪ್ರತಿಬಿಂಬ. ಅಥವಾ ಛಾಯೆ, ನೆರಳು, ಮತ್ತು ಕತ್ತಲೆ, ಎರಡೂ ಏಕತ್ರ ಕೂಡಿದರೆ ಏನಾಗುವದೆಂಬ ವಿಚಾರವನ್ನು ಮಾಡಬೇಕು. ಇದರಲ್ಲಿ ಏನೋ ಅಲ್ಪುಸ್ವಲ್ಪು (ಮಸಮಸಕಾಗಿ) ಕಾಣುವದು. ಇದು ಭಾಸ ಮಾತ್ರ ಇರುವದು. ಇದರಂತೆಯೇ ಈ ಮಾಯೆ ಇರುವದು. ನೆರಳು ಮತ್ತು ಕತ್ತಲೆ ಇವೆರಡೂ ಪ್ರಕಾಶಹೀನವಿರುತ್ತವೆ. ಇದರಲ್ಲಿ ಪ್ರತ್ಯಕ್ಷ ವಸ್ತು ಕಾಣಿಸುವದೇ ಇಲ್ಲ. ವಸ್ತುವಿನ ಆಕಾರದ ನೆರಳು ಮಾತ್ರ ಕಿಂಚಿತ್ತಾಗಿ ಕಾಣುವದು. ಇದರ ಮೇಲಿಂದ ವಸ್ತುವಿನ ಕಲ್ಪನೆಯನ್ನು ಮಾಡಿದರೆ ಆಗ ಅದು ಭಾಸ ಮಾತ್ರವೇ ಇರುತ್ತದೆ. ಇದರಂತೆಯೇ ಮಾಯಾ ಅಂದರೆ ಕತ್ತಲು, ಮತ್ತು ದೃಶ್ಯ ಅಂದರೆ ಸದ್ವಸ್ತುವಿನ ನೆರಳು. ಮಾಯಾಮಯ "ನಾನು"ಇದು ಛಾಯಾ ರೂಪದ ದೃಶ್ಯವನ್ನು ನೋಡುವದು. ಆಗ ಏನಾದರೂ ಭಾಸವಾಗುವದು. ಇದರಲ್ಲಿ ಸಂಶಯವಿಲ್ಲ. ಆದರೆ ಇದರ ಮೇಲಿಂದ ಪರಮಾತ್ಮ ಸ್ವರೂಪದ ಕಲ್ಪನೆಯನ್ನು ಮಾಡಲಿಕ್ಕೆ ಬರುವದು ಶಕ್ಯವಿಲ್ಲ. ಅಜ್ಞಾನದ ಅಂಧಃಕಾರ (ಕತ್ತಲೆ) ದಲ್ಲಿ ಇರುವ "ನಾನು" ಇದಕ್ಕೆ ಛಾಯಾರೂಪದ ವಿಶ್ವವು ಭಾಸವಾಗುವದು. ಅಜ್ಞಾನಿಯಾದ ಅಹಂಕಾರಕ್ಕೆ ಜ್ಞಾನಮಯ ಬ್ರಹ್ಮಸ್ವರೂಪದ ನಿಜವಾದ ಜ್ಞಾನವಾಗುವದು ಶಕ್ಯವಿಲ್ಲ. ತಿಳಿಯಿತು ಎಂದು ಅನಿಸುವದು. ಇದು ಒಂದು ಭ್ರಮವೇ ಇರುವದು[೧೬] ನಮ್ಮ ಕಿವಿ, ಬೆರಳು, ಬೆರಳು ಸಂದುಗಳು, ಅಂಗೈ ಇವು ಸೂರ್ಯ ಕಿರಣದಲ್ಲಿ(ಬಿಸಿಲಿನಲ್ಲಿ)ನೋಡಿದರೆ ಕೆಂಡದಂತೆ ಬಹಳ ಕೆಂಪಾಗಿ ಕಾಣುವವು. ಆದರೆ ಈ ರೀತಿಯಾಗಿ ಕಾಣುವ ರಮ್ಯವಾದ ಕೆಂಪು ನಿಜವಿರುವದಿಲ್ಲ. ಇದರಂತೆ ಮಾಯಾ ಇರುವದು. (೧೭) ಒಬ್ಬನು ಒಳ್ಳೆಯ ಉತ್ತಮವಾದ ಕ್ಯಾವೀಬಣ್ಣದ ವಸ್ತ್ರ (ಭಗವಾ ವಸ್ತ್ರ ಕಿತ್ತಳೆ ಬಣ್ಣದ್ದು) ಹಾಕಿಕೊಂಡದ್ದನ್ನು ನೋಡಿದರೆ ಇವನ ಮೈಗೆ ಬೆಂಕಿ ಹತ್ತಿದೆ ಎಂದು ದೂರಿನಿಂದ ನೋಡಿದರೆ ಭಾಸವಾಗುವದು. ಆದರೆ ಚನ್ನಾಗಿ ಪರೀಕ್ಷಿಸಿ ನೋಡಿದರೆ ಆಗ ಇದು ಬೆಂಕಿ ಅಲ್ಲ ಅನ್ನುವ ನಿಜಸ್ಥಿತಿಯ ಅರಿವು ಆಗುವದು. ಇದರಂತೆ ಮಾಯಾ ಇರುವದು. (೧೮) ಕೈಕಾಲುಗಳ ಬೆರಳನ್ನು ನೀರಿನಲ್ಲಿ ಮುಳುಗಿಸಿದರೆ ಅವು ಗಿಡ್ಡ, ಉದ್ದ, ಸಣ್ಣಗೆ, ಸೊಟ್ಟ, ಡೊಂಕ. ಹೀಗೆ ವಿಚಿತ್ರವಾಗಿ ಕಾಣುವವು. ನೀರಿನ ಮೂಲಕ ಇವು ಹೀಗೆ ಕಾಣಿಸುವವು. ಮಾಯೆಯೂ ಕೂಡಾ ಹೀಗೆಯೇ ಇರುವದು,(೧೯)ಚಕ್ಕರ ಅಂದರೆ ತಲೆ ತಿರುಗಹತ್ತಿದ ಮನುಷ್ಯನಿಗೆ ಭೂಮಿಯೇ ತಿರುಗಿದಂತೆ ಅನಿಸುವದು. ಕಾಮಣಿ ಆದವನ ಕಣ್ಣಿಗೆ ಎಲ್ಲವೂ ಹಳದಿಯಾಗಿ ಕಾಣುವದು. ಸನ್ನಿಪಾತ ಜ್ವರ ಹೆಚ್ಚಿದಾಗ (ವಾತ-ಭ್ರಮ) ಮನುಷ್ಯನು ಅವಾಸ್ತವವಾಗಿ ಬಡಬಡಿಸುವನು, ಒದರುವನು, ಚೀರುವನು, ಇಲ್ಲದ ಕಲ್ಪನೆಯನ್ನು ತಂದು ಅಥವಾ ಉದ್ವೇಗಗೊಂಡು ಯದ್ವಾತದ್ವಾ ಮಾಡುವನು. ಭಯಗೊಳ್ಳುವನು. (ಅರಿವಿಲ್ಲದೆ ಇವನು [ರೋಗಿಯು] ಬಡಬಡಿಸುವದೆಲ್ಲವೂ ನಿಜವೆಂದೇ ಅವನಿಗೆ ಭಾಸವಾಗುವದು).ಇದರಂತೆ ಮಾಯಾ ಇರುವದು.[೨೦] ಯಾವದೊಂದು ಪದಾರ್ಥದ ಮೂಲ ಸ್ವರೂಪವು ಒಂದು ತರಹದ್ದಿರುವದು. ಆಕಸ್ಮಾತ್ತಾಗಿ ಅದರಲ್ಲಿ ಏನಾದರೂ ಬದಲಾವಣೆಯಾಯಿತೆಂದರೆ ಅದು ಬೇರೆ ಇರುವದು. ಅನ್ನುವ ಭಾಸವು ಸುಮ್ಮ-ಸುಮ್ಮನೆ ನಮಗೆ ಆಗುವದು. ಅಂದರೆ ವಸ್ತು ಒಂದೇ ಇದ್ದು [ಅದೇ ಇದ್ದು] ಬೇರೆ ಏನೋ ಇರುವದು ಅನ್ನುವಂತೆ ಕಾಣುವದು. ಮಾಯಾ ಸಹ ಹೀಗೆಯೇ ಇರುವದು. ವಿಶ್ವವು ಬ್ರಹ್ಮಸ್ವರೂಪವಿದ್ದರೂ ದೃಶ್ಯತನದಿಂದ ಕಾಣುವದು. ಇದೆಲ್ಲ ಮಾಯೆಯಿಂದ ಘಟಿಸುವದು. [ಭ್ರಮೆಗೊಂಡ ವಿಕಾರಿ ದೃಷ್ಟಿಯ ಅವಿವೇಕಿಗಳು ಮಾಯೆಯನ್ನು ನಿಜವೆಂದು ನಂಬುವರು]. [೨೧]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹದಿನಾಲ್ಕನೆಯ ದಶಕದೊಳಗಿನ "ಮಾಯಾ ನಿರೂಪಣ"ಎಂಬ ಹೆಸರಿನ ಹತ್ತನೆಯ ಸಮಾಸವು ಮುಗಿದುದು.

● ●

## ॥ ಹದಿನಾಲ್ಕನೆಯ ದಶಕ ಮುಗಿಯಿತು ॥

● ●

## ದಶಕ ೧೫. ಆತ್ಮ ದಶಕ

ಸಾಧಕರ ದೃಷ್ಟಿಯಿಂದ ಈ ದಶಕದಲ್ಲಿ ಅತಿ ಮಹತ್ವದ ಕೆಲವೊಂದು ಸೂಚನೆಗಳು ಕಂಡು ಬರುವವು. ಶ್ರೀ ಸಮರ್ಥರ ಅಭಿಪ್ರಾಯವೇನಂದರೆ, ಕೇವಲ ಮನುಷ್ಯರಲ್ಲಿಯೇ ಮಾತ್ರ ಭಗವಂತನ ಸ್ಮರಣಮಾಡುವ ಸಾಮರ್ಥ್ಯವಿರುವದು. ಕೆಳಗಿನ ಪ್ರಾಣಿಗಳಲ್ಲಿ ಇದು ಇಲ್ಲ. ಭಗವಂತ ಅಂದರೆ ಅಂತರಾತ್ಮನು. ಯಾವತ್ತೂ ಪ್ರಾಣಿಗಳಲ್ಲಿ ಇವನು ಅರಿವಿನ ರೂಪದಲ್ಲಿ ಇರುವನು. ಜಗತ್ತಿನಲ್ಲಿ ಅನಂತ ಪ್ರಾಣಿಗಳು ಇರುವವು. ಭೂಮಿಯ ಮೇಲೆ, ನೀರಿನಲ್ಲಿ ಮತ್ತು ಆಕಾಶದಲ್ಲಿ ಎಷ್ಟೆಷ್ಟೋ ಪ್ರಾಣಿಗಳಿರುವವು. ಅವುಗಳಲ್ಲಿ ಬಹಳಷ್ಟು ಅತ್ಯಂತ ಸಣ್ಣ ಜಂತುಗಳೂ ಇರುವವು ಅರ್ಥಾತ್ ಇವುಗಳ ಶರೀರಮಾನದಿಂದ ಇವುಗಳಿಗೆ ಆಯುಷ್ಯ, ಯುಕ್ತಿ, ಬುದ್ಧಿ, ಜ್ಞಾನ ಮತ್ತು ವಿಷಯ ಭೋಗ ಇವು ಇರುವವು. (ಹಸಿವೆ, ನೀರಡಿಕೆ, ನಿದ್ರೆ ಇವೂ ಇರುವವು)- ಅಂತರಾತ್ಮನ ಈ ಅಚಾಟ (ವಿಲಕ್ಷಣ) ಕಾರ್ಯದ ಬಗ್ಗೆ ವಿವೇಕಪೂರ್ವಕವಾಗಿ ನೋಡಿದೆವೆಂದರೆ, ಮನಸ್ಸು ಆಶ್ಚರ್ಯದಿಂದ ತುಂಬಿಹೋಗುವದು. ನಮಗಾದರೋ ನಮ್ಮ ಸ್ವತಃದ ಶರೀರದ ಬಗ್ಗೆ ಮತ್ತು ಅಂತರಂಗದ ಬಗ್ಗೆ ಪೂರ್ಣ ಜ್ಞಾನವಿರುವದಿಲ್ಲ. (ಅಂತರಂಗದ ಜ್ಞಾನವೂ ನಮಗಿಲ್ಲ). ಅಂದ ಮೇಲೆ ಜಗತ್ತಿನಲ್ಲಿರುವ ಜೀವಿಗಳ ಜೀವನದ ಜ್ಞಾನ ನಮಗೆ ಹೇಗೆ ಬಂದೀತು ? (ಇದ್ದೀತು?). ಅರ್ಥಾತ್ ಇವುಗಳ ಬಗ್ಗೆ ನಮಗೆ ಜ್ಞಾನವಿಲ್ಲ. ಸಾಮಾನ್ಯಮನುಷ್ಯರೆಲ್ಲರೂ ತಮ್ಮ ತಮ್ಮ ಪ್ರಪಂಚದವ್ಯವಸಾಯದಲ್ಲಿ ಮುಳುಗಿರುವರು. ಇವರ ಎಲ್ಲ ಆಯುಷ್ಯವೂ ಇದರಲ್ಲಿಯೇ ವ್ಯಯವಾಗಿ ಹೋಗುವದು. ಅಂತರಾತ್ಮನ ಜ್ಞಾನವನ್ನು ಮಾಡಿಕೊಂಡು ಈ ಆತ್ಮನ ವಿಲಕ್ಷಣ ಕೌತುಕವನ್ನು ನೋಡುವ ಪುಣ್ಯಪುರುಷರು ಬಹಳ ಕ್ವಚಿತ್ತಾಗಿ ಕಾಣುವರು. ವಾಸ್ತವಿಕವಾಗಿ ಯಾವತ್ತೂ ವಿಶ್ವದ ಆಡಂಬರ, ವಿಸ್ತಾರ, ಸಾಹಸಕ್ಕೆ ಶುದ್ಧವಾದ ಅರಿವಿನ (ಶುದ್ಧ ಚಾಣೀವದ) ಅಧಿಷ್ಠಾನ (ಆಧಾರ) ವಿರುವದು. ಯಾವುದು ಎಲ್ಲಿ ನಿರ್ಮಾಣವಾಗುವದೋ ಅದು ಅಲ್ಲಿಯೇ ಲಯವಾಗುವದು. ಇದು ಮೂಲ ನಿಯಮವಿರುವದು. ಮೂಲ ಮಾಯೆಯೇ ಪುರುಷ ಮತ್ತು ಪ್ರಕೃತಿಯೆಂಬ ಈಎರಡು ಅಂಗದಿಂದ

ವಿಶ್ವವೆಲ್ಲವನ್ನು ನಿರ್ಮಾಣಮಾಡುವಳು. ಈ ಮಾಯೆಯ ಬಗ್ಗೆ ನಿಃಶೇಷ ನಿರಸನ (ಅಜ್ಞಾನದ ಪರಿಹಾರ) ವಾದ ಕೂಡಲೇ ಸಂಪೂರ್ಣ ಆತ್ಮನಿವೇದನವಾಗುವದು. ಯಾವತ್ತೂ ಇಲ್ಲದಾಗಿ (ನಾಶವಾಗಿ) ಹೋದ ಮೇಲೆ ಕೊನೆಗೆ ಶಾಶ್ವತ ಬ್ರಹ್ಮವೊಂದೇ ಉಳಿಯುವದು. ಅಖಿಲ ದೃಶ್ಯವಿಶ್ವವನ್ನು ಧಾರಣ ಮಾಡುವಂಥ ಆ ಯಾವ ಅರಿವು ಎನ್ನುವದು ಇರುವದೋ ಅದೇ ನಿಜವಾದ ದೇವರು. ಅಥವಾ ಭಗವಂತ. ಅಥವಾ ಅಂತರಾತ್ಮವು. ಇದೇ ನಿಜವಾದ ವ ಶ್ರೇಷ್ಠ ಹಾಗೂ ಹಿರಿಯದಾದದ್ದಿರುವದು. ಸಾಮಾನ್ಯವಾಗಿ ಮನುಷ್ಯರಲ್ಲಿ ಇವನು ನಿದ್ರಾವಸ್ಥೆಯಲ್ಲಿರುತ್ತಾನೆ. (ಮಲಗಿರುತ್ತಾನೆ). ಯಾರ ಅಂತರ್ಯಾಮದಲ್ಲಿ ಇವನು (ಅಂತರಾತ್ಮಾ ದೇವನು) ಜಾಗ್ರತಗೊಳ್ಳುವನೋ ಅವನಿಗೆ ಮಾತ್ರ ಹಿರಿತನ (ಶ್ರೇಷ್ಠತನ) ಬರುವದು. ಅಂತರಾತ್ಮನು ಅತ್ಯಂತ ಸೂಕ್ಷ್ಮನಿರುವದರಿಂದ ಅವನ ಭೆಟ್ಟಿಯಾಗಲು ನಾವು ಸೂಕ್ಷ್ಮದಲ್ಲಿ ಪ್ರವೇಶಿಸಬೇಕಾಗುವದು. ಆದ್ದರಿಂದ ಯಾರು ಅಂತರ್ನಿಷ್ಠ (ಆತ್ಮನಿಷ್ಠ)ರಾಗಿರುವರೋ ಅವರಿಗೆ ಮಾತ್ರ ಇದು ತಿಳಿಯುವದು. ಅಂತರಾತ್ಮಾ ದೇವನು ಅತಿ ಸೂಕ್ಷ್ಮವಿದ್ದು ಇವನು ಸಗುಣ (ಸಾಕಾರ)ನಿರುವನು. ದೃಶ್ಯದೊಂದಿಗೆ ಇವನು ಸಾಕ್ಷಿಯಾಗಿ (ತ್ರಯಸ್ಥತನದಿಂದ, ತ್ರಿರಾಯಿತತನದಿಂದ) ನೋಡುವವನಾಗಿರುವನು. (ಅರ್ಥಾತ್ ದೂರದಿಂದಲೇ ಎಲ್ಲವನ್ನೂ ಸುಮ್ಮನೇ ನೋಡುವನು). ಆದ್ದರಿಂದ ನಾವು ನಮ್ಮ ಅರಿವನ್ನು(ಜಾಣೀವ, ತಿಳುವಳಿಕೆ) ಅತ್ಯಂತ ಸೂಕ್ಷ್ಮ ಮಾಡಬೇಕು. ಮತ್ತು ಇದನ್ನು ಎರಡನೆಯವರ ಆತ್ಮದೊಂದಿಗೆ ತದಾಕಾರ ಮಾಡ ಬೇಕು. ಹೀಗೆ ಮಾಡಿದೆವೆಂದರೆ ಯಾವತ್ತೂ ಜೀವಗಳೊಂದಿಗೆ ಏಕರೂಪರಾಗಲು ಬರುವದು. ಈ ಮಾರ್ಗದಿಂದ ಹೋಗಿ ಯಾರ ಅರಿವು ಮತ್ತು ವಿವೇಕ. ಇವು ಬಹಳಷ್ಟು ವಿಶಾಲ ವಿಸ್ತಾರ (ಅಮರ್ಯಾದ)ವಾಗುವವೋ ಅಂಥ ವರಿಗೆ ಅವತಾರಿ ಪುರುಷರೆನ್ನುವರು. ಇಂಥ ಪುಣ್ಯಪುರುಷನು ಜಗತ್ತಿನಲ್ಲಿ ನಿಜವಾದ ಭಾಗ್ಯವಾನನೆಂದು ತಿಳಿಯ ಬೇಕು. ಮೊದಲು ವೃತ್ತಿಯ ಶೋಧನ ಮಾಡಬೇಕು. ವೃತ್ತಿ ಶೋಧನೆಯನ್ನು ಮಾಡುತ್ತಾ ಮಾಡುತ್ತಾ ನಿವೃತ್ತಿ ಉಂಟಾಗಿ ಅಂತರಾತ್ಮನೊಂದಿಗೆ ಅಖಂಡ (ಸತತವಾದ) ಭೆಟ್ಟಿಯ ಯೋಗ ಬರುವದು. ಆದ್ದರಿಂದ ವಿಕಾರಗಳನ್ನು ಗೆದ್ದು ಅವರೆ ದೋಷರಹಿತ (ಚೊಕ್ಕ ಚಿನ್ನ)ನಾಗಿ ವಿವೇಕದಿಂದ ವೃತ್ತಿಶೋಧನ ಮಾಡುವಂಥ ಯಾವತ್ತೂ ಸಾಧಕರನ್ನು ಸನ್ಯಾಸಿಯೆಂದು ತಿಳಿಯಬೇಕು. ಅಂತರಾತ್ಮನ ಅಖಂಡ ಭೆಟ್ಟಿ ಆಯಿತೆಂದರೆ ಆಗ ಅಲ್ಲಿಗೆ ಉಪಾಸನೆಯ ವಿರಾಮ ಹೊಂದುವದು. ಅದರಲ್ಲಿಂದ ಮುಂದೆ ಅಲಕ್ಷಿಯಲ್ಲಿ ಅಂದರೆ ಪರಬ್ರಹ್ಮದಲ್ಲಿ ಲಕ್ಷ್ಯಹತ್ತಿತೆಂದರೆ ಸಾಧಕನು ಶಬ್ದ, ಕಲ್ಪನೆ, ಮನ ಮತ್ತು ಬುದ್ಧಿ ಇವುಗಳನ್ನು ದಾಟಿ ಹೋಗುವನು, ಇವನ ವಾಸನಾ ಬೀಜ ಸುಟ್ಟು ದಗ್ಧ ವಾಗುವದು. ಇವನ (ಸಾಧಕನ) ಮನವು ಉನ್ಮನ (ಈಶ ಚಿಂತನದಲ್ಲಿ ನಿಮಗ್ನ) ವಾಗುವದು. ಪ್ರಥಮದಲ್ಲಿ ಇವನ ಅಜ್ಞಾನ ಹೋಗಿ ಜ್ಞಾನ ಬರುವದು. ಆ ಮೇಲೆ ಜ್ಞಾನವೂ ಹೋಗಿ ವಿಜ್ಞಾನ-ವಿಶೇಷ ಜ್ಞಾನ–ವೃತ್ತಿಶೂನ್ಯ ಅವಸ್ಥೆಯು ಬರುವದು. ಇವನ ದೇಹವು ಪ್ರಾರಬ್ಧವಿದ್ದಂತೆ ನಡೆಯುವದು. ತನ್ನ ವ್ಯವಸಾಯ ಮಾಡುತ್ತಿರುವಾ ಗಲೂ ಇವನ ಸ್ವರೂಪಾನುಸಂಧಾನ ಭಂಗಗೊಳ್ಳುವದಿಲ್ಲ. ಇವನ ನಡೆನುಡಿಗಳಲ್ಲಿ ವ್ಯಂಗ ಬರುವದಿಲ್ಲ.(ಆಗುವದಿಲ್ಲ) ಸಾರಾಂಶ:– ಈ ಪ್ರಕಾರ ತನ್ನ ಅರಿವನ್ನು ಬೆಳೆಸಿಕೊಂಡು ಎಲ್ಲದರಲ್ಲಿಯೂ ಆಂತರಿಕ ಐಕ್ಯ ಅನುಭವಿಸುವಂಥ ಪುರು ಷನು ನಿಜವಾಗಿಯೂ ಸರ್ವ ಶ್ರೇಷ್ಠನು. ಇವನು ಅತಿಶಯ ನಿಸ್ಪೃಹನಿರುವನು. ಮತ್ತು ನಿತ್ಯವೂ ಹೊಸ ಬಗೆಯ ನಿತ್ಯನೂತನ ಬ್ರಹ್ಮಜ್ಞಾನಾನುಭವವನ್ನು ಹೊಂದುವನು. ಇಂಥವನು ಜನರನ್ನು ಭಗವಂತನ ಕಡೆಗೆ ತಿರಗಿಸಬೇಕು. ಅಥವಾ ತಿರುಗಿಸುವನು. ಇಂಥವನಿಗೇ ಎಲ್ಲರ ಮನವನ್ನೂ ಶಾಂತಗೊಳಿಸಲು ಶಕ್ಯವಿರುವದು. ಇಂಥ ನಿಸ್ಪೃಹನು ಮೊದಲು ಜನರ ಅಂತಃಕರಣವನ್ನು ತನ್ನ ಕಡೆಗೆ ಎಳೆದುಕೊಳ್ಳುವನು. ಜನರ ಕೂಡ ಅತೀ ಲೀನತೆಯಿಂದ ನಡೆಯು ವನು. ಆ ಮೇಲೆ ಆ ಜನರ ಅಂತರ್ಯಾಮವನ್ನು ಸಾವಕಾಶವಾಗಿ ಅರಳಿಸುವನು. ನಿಸ್ಪೃಹನು ತನ್ನ ಬಾಹ್ಯಾಂಗವನ್ನು ಅತ್ಯಂತ ಸಾದಾ ಇಡಬೇಕು. ಆದರೆ ತನ್ನ ಅಂತರಂಗವನ್ನು ಕಲೆಯಿಂದ (ಅನೇಕ ವಿದ್ಯೆಯಿಂದ) ತುಂಬಿ ಇಡಬೇಕು. ಇವನು ಜನರನ್ನು ಯೋಗ್ಯಮಾರ್ಗಕ್ಕೆ ಹಚ್ಚಬೇಕೆಂಬುದು ನಿಜವಿದ್ದರೂ ಸದಾಕಾಲ ಇದರಲ್ಲಿ ತೊಡಗದೇ ಕೆಲವೊಂದು ವೇಳೆಯನ್ನು ಏಕಾಂತದಲ್ಲಿ ಕಳೆಯಬೇಕು. ಏಕಾಂತವಾಸ ಎಷ್ಟೂ ಬಿಡಬಾರದು. ಇಂಥ ಮನುಷ್ಯನು ಸರ್ವರಿಗೂ ಮಾನ್ಯನಾಗುವನು. ಇವನೇ ಅಸಾಮಾನ್ಯ ಪುರುಷನೆಂದು ಹೇಳಬಹುದು.

### ದಶಕ ಪಂಚದಶಕ : ಸಮಾಸ ಪ್ರಥಮ : ಚಾತುರ್ಯ ಲಕ್ಷಣ

॥ಶ್ರೀರಾಮ ಸಮರ್ಥ॥ ಅಸ್ತಿಮಾಂಸಾಚೀ ಶರೀರೇ। ತ್ಯಾಂತ ರಾಹಿಜೆ ಜೀವೇಶ್ವರೇ।
ನಾನಾ ವಿಕಾರೀ ವಿಕಾರೇ। ಪ್ರವಿಣ ಹೋಇಜೇ ॥೧॥

ಘಸವಟ ಪೋಂಚಟ ಸ್ವಭಾವೇ। ವಿವರೋನ ಜಾಣಿಜೆ ಜೀವೇ।
ವ್ಹಾವೇ ನ ವ್ಹಾವೇ ಆಘವೇ। ಜೀವ ಜಾಣೇ ॥೨॥

# ದಶಕ ೧೫. ಸಮಾಸ ೧. ಚಾತುರ್ಯ ಲಕ್ಷಣ [ನುಡಿ ೩೫]

ಜೀವದ ಅಂತರ್ಯಾಮದಲ್ಲಿ ಇರುವ ಈಶ್ವರರೂಪಿಯಾದ ಅಂತರಾತ್ಮನನ್ನು ಯಾರು ತಿಳಿಯುವರೋ ಅವರು ನಿಜವಾದ ಚತುರರೆನಿಸುವರು. ಇಂಥವರೇ ನಿಜವಾದ ಭಾಗ್ಯವಂತರಿರುವರೆಂದು ಶ್ರೀ ಸಮರ್ಥರು ಸ್ಪಷ್ಟವಾಗಿ ಅಭಿಪ್ರಾಯಪಡುವರು. ನಿಜವಾದ ಜಾಣ ಬುದ್ಧಿವಂತನು ಯಾರು ಮುಕ್ಕುರಿಯುವರೋ ಅಂಥವರೊಂದಿಗೆ ಸ್ನೇಹ ಮಾಡುವನು. ಇದರಿಂದ ಆಮೇಲೆ ಇವನ ಕಡೆಗೆ ತನ್ನಿಂದ ತಾನಾಗಿಯೇ ಜನರು ಬರುವರು. ಇವನವರಾಗುವರು. ಈ ದೃಷ್ಟಿಯನ್ನು ಇಟ್ಟುಕೊಂಡು ಲೋಕ ಸಂಗ್ರಹಿ ಮನುಷ್ಯನು ಮೊದಲು ತನ್ನ ಅಂತರಾತ್ಮಾ ದೇವನನ್ನು ತನ್ನವ ನನ್ನಾಗಿ ಮಾಡಿಕೊಳ್ಳಬೇಕು. ಅಂದರೆ ಆ ಮೇಲೆ ಸಾಮಾನ್ಯ ಜನರು ತಾವಾಗಿಯೇ ಬರುವರು. ಅವರೆಲ್ಲ ನಿಮ್ಮ ವರೇ ಆಗುವರು. ಜನರನ್ನು ವಶಮಾಡಿಕೊಳ್ಳಲು ವಿವೇಕದ ಮಾರ್ಗವೇ ಉತ್ತಮವಾದದ್ದು. ಈ ಮಾರ್ಗವನ್ನು ಬಿಟ್ಟು ಕೆಲವರು ವಶೀಕರಣಾದಿಗಳ ಪ್ರಯೋಗ ಮಾಡುವ ಮಾರ್ಗ ಹಿಡಿಯುವರು. ಅವನ ಪ್ರಯೋಗಗಳು ಅಲ್ಲಲ್ಲಿ ಸುಳ್ಳಾಗುವವು. ಹುಚ್ಚು ಜನರು ಸುಳ್ಳಿನ ಅಭಿಮಾನ ಹಿಡಿದು ಅವನಂತೆ ಹೋಗುವರು. ಮತ್ತು ಕೊನೆಗೆ ಮೋಸ ಹೋಗುವರು. ಯಾರಿಗೆ ಜನವಶ ಬೇಕಾಗಿರುವದೋ ಅವರು ತಮ್ಮ ಜೀವವನ್ನು ಇನ್ನೊಬ್ಬರ ಜೀವದಲ್ಲಿ ಏಕೀಕರಿಸ ಬೇಕು. ಕಷ್ಟ ಸುಖಗಳಲ್ಲಿ ಒಂದು ಮಾಡಬೇಕು. ನಿಮ್ಮ ಅಂತರಾತ್ಮವನ್ನು ಜನರ ಅಂತರಾತ್ಮದೊಂದಿಗೆ ಕೂಡಿಸ ಬೇಕು. ನಿಮ್ಮ ಬಾಹ್ಯಾಂಗವನ್ನು ಅತ್ಯಂತ ಸಾದಾ ಇಡಬೇಕು. (ಆಡಂಬರ ಜೀವನ ಇರಬಾರದು). ನಿಸ್ಪೃಹತೆ ಇರ ಬೇಕು. ಯಾವಾಗಲೂ ಬ್ರಹ್ಮಜ್ಞಾನದ ಹೊಸ ಹೊಸವಾದ ಅನುಭವಗಳು ಇರಬೇಕು. ಮತ್ತು ಅನೇಕ ಲೌಕಿಕ ವಿಷಯಗಳ ಜ್ಞಾನವೂ ಇರಬೇಕು. ಗುರುತಿನಿಂದ ಗುರುತನ್ನು ಮಾಡಿಕೊಳ್ಳಬೇಕು. ಅಂದರೆ ಹೊಸ ಹೊಸ ಜನರ ಪರಿಚಯವಾಗುವದು. ಜನರಿಗೆ ನೀತಿ ನ್ಯಾಯ ತಿಳಿಸಿ ಹೇಳಬೇಕು. ಮತ್ತು ಅವರು ತಮ್ಮ ಬುದ್ಧಿಯಿಂದ ವಿಚಾರ ಮಾಡುವ ಶಿಕ್ಷಣವನ್ನು ಕೊಡಬೇಕು. ಜನತೆಯ ಪ್ರೇಮವನ್ನು ಮುರಿಯಬಾರದು. ಅವರ ಮನಸ್ಸು ಸಮಾಧಾನ ಆಗುವಂತೆ ಮಾಡಬೇಕು. ಒಂದೇ ಸ್ಥಳದಲ್ಲಿ ಬಹಳ ಕಾಲ ಇರುವದರಿಂದ ವ್ಯಾಪವನ್ನು ನಿಯಂತ್ರಿಸುವದಕ್ಕೆ (ಸಂಬಾಳಿಸಲಿಕ್ಕೆ) ಆಗುವದಿಲ್ಲ. ಆದ್ದರಿಂದ ಒಂದೇ ಸ್ಥಳದಲ್ಲಿ ಸ್ಥಿರವಾಗಿ ಇರದೇ ಸಾವಧತನದಿಂದ ಎಲ್ಲರನ್ನೂ ಆಗಾಗ ಭೆಟ್ಟಿ ಯಾಗುತ್ತ ಹೋಗಬೇಕು. ಮತ್ತು ಭೆಟ್ಟಿಯಾಗಿ ಅವರ ಮನವನ್ನು ಸಮಾಧಾನದಲ್ಲಿಡಬೇಕು. ಸ್ವತಃ ನೀವು ಉತ್ತಮ ಗುಣವುಳ್ಳವರಾದರೆ ನಿಮ್ಮ ಗುಣಗಳನ್ನು ನೋಡಿ ಮನುಷ್ಯರಿಗೆ ಸಮಾಧಾನವಾಗುವದು.

## ದಶಕ ೧೫. ಸಮಾಸ ೧. ಚಾತುರ್ಯ ಲಕ್ಷಣ (ನುಡಿ ೩೫)

ದೇಹವು ಎಲುಬು ಮಾಂಸಗಳಿಂದ ಕೂಡಿದ್ದಾಗಿದ್ದರೂ ಇದರಲ್ಲಿ ಈಶ್ವರನು ವಾಸ ಮಾಡಿದ್ದಾನೆ. ಇವನ ಜೊತೆಯಲ್ಲಿ ಜೀವವೂ ಇರುವದು. ಮನುಷ್ಯರನ್ನು ವಶಮಾಡಿಕೊಳ್ಳಲು ಅವರ ಜೀವದಲ್ಲಿ ನಿಮ್ಮ ಜೀವವನ್ನು ಹಾಕಬೇಕು. (ಒಂದು ಮಾಡಬೇಕು). ಅವರ ಅಂತರಾತ್ಮದಲ್ಲಿ ನಿಮ್ಮ ಅಂತರಾತ್ಮವನ್ನು ಬೆರೆಸಬೇಕು. ಸುಮ್ಮನೇ ಇಲ್ಲದ ಗೊಂದಲವನ್ನು ಮಾಡದೇ ವಿವೇಕದಿಂದ ಇಬ್ಬರ ಮನವನ್ನು ಒಂದುಗೂಡಿಸಿ ಬಿಡಿರಿ:- ಶರೀರವು ಎಲುಬು ಮಾಂಸಗಳಿಂದ ಕೂಡಿದ್ದಿರುವದು. ಆದರೆ ಆದರಲ್ಲಿ ಜೀವರೂಪದ ಈಶ್ವರನ ವಾಸವಿರುವದು. ಶರೀರದಲ್ಲಿ ಅನೇಕ ಪ್ರಕಾರದ ಬದಲಾವಣೆಗಳಾಗುವವು. ಈ ಬದಲಾವಣೆಗಳ ಜೊತೆಗೇ ತಾನೂ ಬದಲಾಗುವದರಲ್ಲಿ ಜೀವೇಶ್ವರನು ಬಹಳ ಕುಶಲ ಪ್ರವೀಣನಾಗಿರುವನು. [೧] ವಸ್ತುಗಳಲ್ಲಿ ಗಟ್ಟಿ ಯಾವುದು. ಪೊಳ್ಳು ಯಾವುದು, ಇವುಗಳ ಬಗ್ಗೆ ವಿವೇಕ ವಿಚಾರದಿಂದ ಜೀವವು ತಾನೇ ಎಲ್ಲವನ್ನು ಸರಿಯಾಗಿ ತಿಳಿಯುವದು. ನಮಗೆ ಯಾವುದು ಬೇಕು. ಮತ್ತು ಯಾವುದು ಬೇಡ ಇವನ್ನೆಲ್ಲ ಜೀವವು ತಿಳಿಯುವದು. [೨]

ಯೇಕೀ ಮಾಗಮಾಗೋ ಘೇಣೇ । ಯೇಕಾ ನ ಮಾಗತಾಚ ದೇಣೇ ।
ಪ್ರಚೀತೀನೇ ಸುಲಕ್ಷಣೇ । ವೊಳಖಾವೀ ॥೩॥

ಜೀವ ಜೀವಾಂತ ಘಾಲಾವಾ । ಆತ್ಮಾ ಆತ್ಮ್ಯಾಂತ ಮಿಸಳಾವಾ ।
ರಾಹರಾಹೋ ಶೋಧ ಘ್ಯಾವಾ । ಪರಾಂತರಾಚಾ ॥೪॥

ಜಾನವೇ ಹೇವಡಕಾರೇ ಜಾಲೇ । ಢಿಲೇಪಣೇ ಹೇವಡ ಆಲೇ ।
ನೇಮಸ್ತಪಣೇ ಶೋಭಲೇ । ದೃಷ್ಟೀಪುಢೇ ॥೫॥

ತೈಸೇ ಚಿ ಹೇ ಮನಾಸ ಮನ । ವಿವೇಕೇ ಜಾವೇ ಮಿಳೋನ ।
ಢಿಲೇಪಣೇ ಅನುಮಾನ । ಹೋತ ಆಹೇ ॥೬॥

ಅನುಮಾನೇ ಅನುಮಾನ ವಾಢತೋ । ಭಿಡೇನೇ ಕಾರ್ಯಭಾಗ ನಾಸತೋ ।
ಯಾಕಾರಣೇ ಪ್ರತ್ಯಯೊ ತೋ । ಆಧೀ ಪಾಹಾವಾ ॥೭॥

ದುಸರ್ಯಾಚೆ ಜೀವೀಚೇ ಕಳೇನಾ । ಪರಾಂತರ ತೇ ಜಾಣವೇನಾ ।
ವಶ್ಯ ಹೋತೀ ಲೋಕ ನಾನಾ । ಕೋಣ್ಯಾ ಪ್ರಕಾರೇ ॥೮॥

ಆಕಲ ಸಾಂಡೂನ ಪರತೀ । ಲೋಕ ವಶ್ಯಕರ್ಣ ಕರಿತೀ ।
ಅಪೂರ್ಣಪಣೇ ಹಳು ಪಡತೀ । ಠಾಈ ಠಾಈ ॥೯॥

ಜಗದೀಶ ಆಹೆ ಜಗದಾಂತರೀ । ಚೇಟಕೇ ಕರಾವೀ ಕೋಣಾವರೀ ।
ಜೋ ಕೋಣೇ ವಿವೇಕೇ ವಿವರೀ । ತೋ ಚಿ ಶ್ರೇಷ್ಠ ॥೧೦॥

ಶ್ರೇಷ್ಠ ಕಾರ್ಯೇ ಕರೀ ಶ್ರೇಷ್ಠ । ಕೃತ್ರಿಮ ಕರೀ ತೋ ಕನಿಷ್ಠ ।
ಕರ್ಮಾನುಸಾರ ಪ್ರಾಣೀ ನಷ್ಟ । ಅಥವಾ ಭಲೇ ॥೧೧॥

ರಾಜೆ ಜಾತೀ ರಾಜಪಂಥೇ । ಚೋರ ಜಾತೀ ಚೋರಪಂಥೇ ।
ವೇಡೇ ಠಕೇ ಅಲ್ಪಸ್ವಾರ್ಥೇ । ಮೂರ್ಖಪಣೇ ॥೧೨॥

ಮೂರ್ಖಾಸ ವಾಟೆ ಮೀ ಶಾಹಾಣಾ । ಪರೀ ತೋ ವೇಡಾ ದೈನ್ಯವಾಣಾ ।
ನಾನಾ ಚಾತುರ್ಯಾಚಾ ಖುಣಾ । ಚತುರ ಜಾಣೇ ॥೧೩॥

ಜೋ ಜಗದಾಂತರೇ ಮಿಳಾಲಾ । ತೋ ಜಗದಾಂತರ ಚಿ ಜಾಲಾ ।
ಅರತ್ರೀ ಪರತ್ರೀ ತಯಾಲಾ । ಕಾಯ ಉಣೇ ॥೧೪॥

ಒಂದು ಜೀವವು ಒಂದೇ ಸವನೆ ಬೇಡಿ ಪಡೆದುಕೊಂಡು ಕಾಲಕಳೆಯುವದು. ಆದರೆ ಇನ್ನೊಂದು ಜೀವವು ಎಲ್ಲಿಯೂ ಬೇಡದೇ ಇದ್ದರೂ ಅದಕ್ಕೆ ಇದ್ದಲ್ಲಿಯೇ ಸಿಗುವದು. ಇಂಥವುಗಳನ್ನು ನೋಡಿ ಉತ್ತಮ ಲಕ್ಷಣಗಳನ್ನು ಅನುಭವದಿಂದ ತಿಳಿಯಬೇಕು. (೩) ಇನ್ನೊಬ್ಬರ ಜೀವದೊಂದಿಗೆ ನಿಮ್ಮ ಜೀವವನ್ನು ಏಕರೂಪಮಾಡಿರಿ. ಅವರ ಆತ್ಮದೊಂದಿಗೆ ನಿಮ್ಮ ಆತ್ಮವನ್ನು ಸಮರಸಮಾಡಿರಿ. ಈ ಪ್ರಕಾರದಿಂದ ಎರಡನೆಯವರ ಅಂತಃಕರಣದಲ್ಲಿ ಏನೇನು ಇರುವದೆಂದು ಶೋಧಿಸಿ ನೋಡಿರಿ. (೪) ಯಜ್ಞೋಪವೀತವನ್ನು [ಜನಿವಾರವನ್ನು] ಉದ್ದಾಗಿ ಸಡಿಲು ಬಿಟ್ಟಿದ್ದಾದರೆ ಅವುಗಳ ಎಳೆಗಳು ಒಂದರಲ್ಲೊಂದು ತೊಡಕಿಕೊಂಡು ಬಿಡುವವು. ಮೊದಲೇ ನಾವು ಜನಿವಾರವನ್ನು ಚನ್ನಾಗಿ ವ್ಯವಸ್ಥಿತ ವಾಗಿ ಇಟ್ಟರೆ ಎಳೆಗಳು ತೊಡಕು- ಬೀಳುವದಿಲ್ಲ ಮತ್ತು ನೋಡಲಿಕ್ಕೂ ಚಂದಕಾಣುವದು. (೫) ಇದರಂತೆಯೇ ವಿವೇಕದಿಂದ ನಮ್ಮ ಮನವನ್ನು ಎರಡನೆಯವರ ಮನದೊಂದಿಗೆ ಏಕರೂಪಗೊಳಿಸಬೇಕು. ಇದರಲ್ಲಿ ಅಲಕ್ಷ್ಯ ಅನಾದರ ಮಾಡಿದರೆ ಕಲ್ಪನೆಗೆ [ಊಹೆಗೆ] ವ್ಯರ್ಥವಾಗಿ ಅವಕಾಶಮಾಡಿಕೊಟ್ಟಂತಾಗುವದು. (೬) ಕಲ್ಪನೆಯಿಂದ- ಕಲ್ಪನೆಯು ಬೆಳೆಯುತ್ತ ಬೆಳೆಯುತ್ತ ಹೋಗುವದು. ಪರಸ್ಪರರಲ್ಲಿ ಸಂಕೋಚದ ಮೂಲಕವಾಗಿ ಕಾರ್ಯದ ಹಾನಿಯಾಗುವದು. ಆದುದರಿಂದ ಪ್ರತ್ಯಕ್ಷ ಅನುಭವ ಏನಿರುವದು? ಎಂತಿರುವದು? ಇದನ್ನು ಮೊದಲಿಗೆ ನೋಡಬೇಕು-ತಿಳಿಯಬೇಕು. (೭) ಜನರನ್ನು ವಶಪಡಿಸಿಕೊಳ್ಳುವದಕ್ಕಾಗಿ ಕೆಲವು ಹುಚ್ಚು ಜನರು ವಶೀಕರಣಾದಿಗಳನ್ನು ಉಪಯೋಗಿಸುವರು. ಆದರೆ ಇದು ಯಾವಾಗಲೂ ಕೃತ್ರಿಮ [ನಿರರ್ಥಕ] ವೆನಿಸುವದು. ಇಂಥ ಹೀನ ಭಾನಗಡಿಯ ಕೆಲಸವನ್ನು ಮಾಡಬಾರದು. ಇದಕ್ಕಿಂತ ಆ ಜನರ ಅಂತರಾತ್ಮನನ್ನು ವಶಪಡಿಸಿಕೊಳ್ಳಬೇಕು. ಅಂದರೆ ಯಾವತ್ತೂ ಜನರು ನಿಮ್ಮವರಾಗಿ ತಾವೇ ತಾವಾಗಿ ಬರುವರು:- ಇನ್ನೊಬ್ಬರ [ಮನಸ್ಸಿನಲ್ಲಿ] [ಜೀವನದಲ್ಲಿ] ಯದು ಎಲ್ಲಿಯವರೆಗೆ ತಿಳಿಯುವದಿಲ್ಲವೋ ಅಲ್ಲಿಯ ವರೆಗೆ ಅವರ [ಆ ಜನರ] ಅಂತಃಕರಣದಲ್ಲಿ ಏನಿರುವದೆಂಬುದು ತಿಳಿಯಲಾರದು. ಅದು ತಿಳಿಯುವ ವರೆಗೆ- ಜನರು ನಿಮ್ಮ ವಶವಾಗುವದು ಕಠಿಣವು. (೮) ಕೆಲವೊಂದು ಜನರು ತಿಳಿಗೇಡಿತನದಿಂದ ಮೂರ್ಖರಾಗಿ ವಶೀಕರಣಾಧಿಗಳ ಬೆನ್ನು ಹತ್ತುವರು. ಆದರೆ ವಶೀಕರಣವು ಅಪೂರ್ಣವಾದದ್ದು. ಇದರಿಂದ ಕಾಯಂ ಕೆಲಸವಾಗುವದಿಲ್ಲ. ಆದ್ದರಿಂದ ಅಲ್ಲಲ್ಲಿ ಇಂಥ ಜನರ ವರ್ಚಸ್ಸು ಜನತೆಯ ಮೇಲೆ ಬೀಳುವದಿಲ್ಲ. (೯) ಅಂತರಾತ್ಮನು ಜಗತ್ತಿನಲ್ಲೆಲ್ಲ ತುಂಬಿ ಇರುವದ ರಿಂದ ವಶೀಕರಣ ಮಾಟ, ಮದ್ದು, ಮಂತ್ರ ಇವುಗಳನ್ನು ಯಾರು ಯಾರ ಮೇಲೆ ಮಾಡಬೇಕು? ಇವೆಲ್ಲ ಮೂರ್ಖ ತನದವೇ ಇರುವವು. ಜನರನ್ನು ವಶಪಡಿಸಿಕೊಳ್ಳಲು ಯಾವನು ವಿವೇಕದಿಂದ ವಿಚಾರಮಾಡಿ ಸತ್ಯದ ದಾರಿಯನ್ನು- ಹಿಡಿಯುವನೋ ಅವನೇ ಶ್ರೇಷ್ಠರಲ್ಲಿ ಶ್ರೇಷ್ಠನು. (೧೦) ಶ್ರೇಷ್ಠ ಜನರು ಯಾವಾಗಲೂ ಉತ್ತಮವಾದ ಕೆಲಸಗಳನ್ನೇ ಮಾಡುವರು. ಕೃತ್ರಿಮ [ಕಂಟ್ರಿ] ಕೆಲಸ [ಕಪಟ, ಮೋಸ, ವಂಚನೆ, ಮಾಟ, ಮಂತ್ರಾದ ಸಹಜವಲ್ಲದ ಕೃತಕವಾದ ಕೆಲಸ ಕಾರ್ಯ] ಗಳನ್ನು ಮಾಡುವವನು ಸದಾ ಕನಿಷ್ಠನಾಗಿಯೇ ಇರುವನು. ಅವರವರ ಕೆಲಸದ ಪ್ರಕಾರ [ಉತ್ತಮ ಮತ್ತು ಕೆಟ್ಟ ಕೆಲಸದಂತೆ] ಅವರು ನಾಲ್ಕು ಜನರಿಂದ [ಸಜ್ಜನರಿಂದ] ಭಲೆ ಅಥವಾ ಕೆಟ್ಟ ಎಂದು ಅನ್ನಿಸಿಕೊಳ್ಳು ವರು. (೧೧) ರಾಜನಾದವನು ರಾಜಮಾರ್ಗದಿಂದ ಹೋಗುವನು, ಕಳ್ಳನು ಚೋರ ಮಾರ್ಗದಿಂದ ಹೋಗುವನು. ಹುಚ್ಚ ಜನರು [ಬುದ್ಧಿಗೇಡಿಗಳು] ಅಲ್ಪ ಸ್ವಾರ್ಥಕ್ಕಾಗಿ ಮೂರ್ಖತನದಿಂದ ಮೋಸ ಹೋಗುವರು. ತೊಂದರೆಗೆ ಒಳಗಾಗುವರು. (೧೨) ನಾವು ಬಹಳ ದೊಡ್ಡ ಜಾಣರಿರುವೆವೆಂದು ಮೂರ್ಖ ಜನರಿಗೆ ಅನಿಸುವನು. ಆದರೆ ಅವರ ಅನಿಸಿಕೆ ನಿಜವಾಗಿಯೂ ಹುಚ್ಚುತನ ಮತ್ತು ದೀನತನದ್ದಿರುವದು. ಚತುರತನದ ನಿಜವಾದ ಗುರುತನ್ನು ಚತುರನಾ- ದವನೇ ತಿಳಿಯುವನು (೧೩). ಜಗತ್ತಿನ ಅಂತರಂಗದೊಂದಿಗೆ ಯಾರು ಕೂಡಿಕೊಳ್ಳುವರೋ ಅವರು ಸ್ವತಃ ಆ ಅಂತರಂಗದಲ್ಲಿ ಲೀನರಾಗಿ ಬಿಡುವರು. ಅರ್ಥಾತ್ ಅವರೆ ಸ್ವತಃ ಅಂತರಂಗರಾಗಿಬಿಡುವರು. ಆಮೇಲೆ ಇವರಿಗೆ ಇಹಲೋಕ ಮತ್ತು ಪರಲೋಕದಲ್ಲಿ ಯಾವುದರದೂ ಕಡಿಮೆಯಾಗುವದಿಲ್ಲ. (೧೪)

ಬುದ್ಧಿ ದೇಣೇ ಭಗವಂತಾಚೇ । ಬುದ್ಧಿವಿಣ ಮಾಣುಸ ಕಾಚೇ ।
ರಾಜ್ಯ ಸಾಂಡೂನ ಫುಕಾಚೇ । ಭೀಕ ಮಾಗೇ ॥೧೫॥

ಜೇ ಜೇ ಜೇಥೇ ನಿರ್ಮಾಣ ಜಾಲೇ । ತೇ ತೇ ತಯಾಸ ಮಾನಲೇ ।
ಅಭಿಮಾನ ದೇಊನ ಗೋವಿಲೇ । ಠಾಈ ಠಾಈ ॥೧೬॥

ಅವಘೇ ಚ ಮ್ಹಣತೀ ಆಮ್ಹೀ ಥೋರ। ಅವಘೇ ಚಿ ಮ್ಹಣತೀ ಆಮ್ಹೀ ಸುಂದರ।
ಅವಘೇ ಚಿ ಮ್ಹಣತೀ ಆಮ್ಹೀ ಚತುರ । ಭೂಮಂಡಳೀ ॥೧೭॥

ಏಸಾ ವಿಚಾರ ಆಣಿತಾ ಮನಾ । ಕೋಣೀ ಚ ಲಹಾನ ಮ್ಹಣವೀನಾ ।
ಜಾಣತೇ ಆಣಿತೀ ಅನುಮಾನಾ । ಸಕಳ ಕಾಂಹೀ ॥೧೮॥

ಆಪುಲಾಲ್ಯಾ ಸಾಭಿಮಾನೇ । ಲೋಕ ಚಾಲಿಲೇ ಅನುಮಾನೇ ।
ಪರಂತು ಹೇ ವಿವೇಕಾನೇ । ಪಾಹಿಲೇ ಪಾಹಿಜೆ ॥೧೯॥

ಲಟಿಕ್ಯಾಚಾ ಸಾಭಿಮಾನ ಘೇಣೇ। ಸತ್ಯ ಅವಘೇ ಚ ಸೋಡಣೇ ।
ಮೂರ್ಖ ಪಣಾಚೀ ಲಕ್ಷಣೇ । ತೀ ಹೇ ಏಸೀ ॥೨೦॥

ಸತ್ಯಾಚಾ ಜೋ ಸಾಭಿಮಾನ । ತೋ ಜಾಣಾವಾ ನಿರಭಿಮಾನ ।
ನ್ಯಾಯೆ ಅನ್ಯಾಯೆ ಸಮಾನ । ಕದಾಪಿ ನವ್ಹೆ ॥೨೧॥

ನ್ಯಾಯೆ ಮ್ಹಣಿಜೆ ತೋ ಶಾಶ್ವತ । ಅನ್ಯಾಯೆ ಮ್ಹಣಿಜೆ ತೋ ಅಶಾಶ್ವತ ।
ಬಾಷ್ಕಳ ಆಣಿ ನೇಮಸ್ತ । ಯೇಕ ಕೈಸಾ ॥೨೨॥

ಯೇಕ ಉಘಡ ಭಾಗ್ಯ ಭೋಗಿತೀ । ಯೇಕ ತಶ್ಕರ ಪಳೋನ ಜಾತೀ ।
ಯೇಕಾಂಚೀ ಪ್ರಗಟ ಮಹಂತೀ । ಯೇಕಾಂಚೀ ಕಾನಕೋಂಡೀ ॥೨೩॥

ಆಚಾರ ವಿಚಾರೇವೀಣ । ಜೇ ಜೇ ಕರಣೇ ತೋ ತೋ ಸೀಣ ।
ಧೂರ್ತ ಆಣಿ ವಿಚಕ್ಷಣ । ತೇ ಚಿ ಶೋಧಾವೇ ॥೨೪॥

ಉದಂಡ ಬಾಜಾರೀ ಮಿಳಾಲೇ। ಪರೀ ತೇ ಧೂರ್ತೇ ಚಿ ಆಳಿಲೇ ।
ಧೂರ್ತಾಪಾಸೀ ಕಾಂಹೀ ನ ಚಲೇ । ಬಾಜಾರ್ಯಾಂಚೇ ॥೨೫॥

ಯಾ ಕಾರಣೇ ಮುಖ್ಯ ಮುಖ್ಯ । ತಯಾಸೀ ಕರಾವೇ ಸಖ್ಯ ।
ಯೇಣೇ ಕರಿತಾ ಅಸಂಖ್ಯ । ಬಾಜಾರೀ ಮಿಳತೀ ॥೨೬॥

ಮನುಷ್ಯನಿಗೆ ಬಂದ (ದೊರೆತ) ಬುದ್ಧಿಯು ದೇಣಿಗೆಯು ಬಹಳ ಶ್ರೇಷ್ಠವಾದದ್ದಿರುವದು. ಆದರೆ ಇದರ ಉಪಯೋಗವನ್ನು ಇವನು ಸರಿಯಾಗಿ ಮಾಡಿಕೊಳ್ಳುವದಿಲ್ಲ. ಮನುಷ್ಯನು ಇಲ್ಲದ ನಿರರ್ಥಕ ಮಾತಿನ ಅಭಿಮಾನ ಹಿಡಿಯುವನು. ಹೇಗೆ ಹೇಗೋ ನಡೆಯುವನು. ಸಮಾಜದಲ್ಲಿ ಜಾಣ ಮತ್ತು ಸಾಧಾರಣ ಹೀಗೆ ಎರಡು ತರಹದ ಜನರಿರುವರು. ಇವರಲ್ಲಿ ಜಾಣರಾದವರನ್ನು ನೀವು ಹಿಡಿದುಕೊಳ್ಳಬೇಕು. ಮತ್ತು ಇದನ್ನು ಯಾರಿಗೂ ಬಹಳಷ್ಟು ಹೇಳದೇ, ತಿಳಿಯಗೊಡದೇ ಯೋಗ್ಯ ರೀತಿಯಲ್ಲಿ ಲೋಕ ಸಂಗ್ರಹ ಕಾರ್ಯವನ್ನು ಪ್ರಾರಂಭಿಸಬೇಕು. ಕಾರ್ಯ ಮಾಡಿ ಯಶೋವಂತರಾಗಬೇಕು. ಬುದ್ಧಿ, ಇದು ಈಶ್ವರನು ಮನುಷ್ಯನಿಗೆ ದಯಪಾಲಿಸಿದ ದೇಣಿಗೆಯಾಗಿರುವದು, ಯಾವ ಮನುಷ್ಯನಲ್ಲಿ ಬುದ್ಧಿ ಇಲ್ಲವೋ ಅವನು ಅಶಿಕ್ಷಿತ(ಕಚ್ಚಾ)ನೆಂದು ತಿಳಿಯಬೇಕು. ಯಾರು ತಮ್ಮ ಬುದ್ಧಿಯ ಉಪಯೋಗವನ್ನು ಮಾಡುವದಿಲ್ಲವೋ ಅವರು ರಾಜ್ಯವನ್ನು ತೊರೆದು ಭಿಕ್ಷೆ ಬೇಡಲಿಕ್ಕೆ ಹೋದಂತಾಗುವದು(೧೫). ಯಾವ ಸ್ಥಳದಲ್ಲಿ ಯಾವುದು ನಿರ್ಮಾಣವಾಗುವದೋ ಅಲ್ಲಿಯ ಜನರಿಗೆ ಅದು ಮಾನ್ಯವಾಗುವದು. ಮತ್ತು ಸರಿ ಬೀಳುವದು. ಅವರಿಗೆ ಅದರ ಅಭಿಮಾನವೆನಿಸುವದು, ಅಲ್ಲಲ್ಲಿಯ ಜನರು ಅಲ್ಲಲ್ಲಿಯ ಅಭಿಮಾನದಿಂದ ಅಲ್ಲಿಯೇ ತೊಡಕಿಕೊಳ್ಳುವರು (೧೬). ಜಗತ್ತಿನಲ್ಲಿರುವವರೆಲ್ಲರೂ ನಾವು ದೊಡ್ಡವರು,ಶ್ರೇಷ್ಠರು, ಅಥವಾ ನಾವು ಎಲ್ಲರಕ್ಕಿಂತ ಸುಂದರರು ಅಥವಾ ಬಹು ಚತುರರು ಎಂದು (ಅನ್ನುವರು) ತಿಳಿದಿರುವರು. (೧೭) ಈ ಮಾತನ್ನು ನಾವು ಲಕ್ಷ್ಯದಲ್ಲಿ ತಂದುಕೊಂಡು ನೋಡಿದೆವೆಂದರೆ ಜಗತ್ತಿನಲ್ಲಿರುವವರೆಲ್ಲರೂ ನಾವು ಸಣ್ಣವರು ಎಂದು ಅಂದುಕೊಳ್ಳಲಿಕ್ಕೆ ಯಾರೂ ಸಿದ್ಧರಿಲ್ಲ(ಎಲ್ಲರೂ ತಾವೇದೊಡ್ಡವರೆಂದು ತಿಳಿದಿರುವರು).ಶಹಾಣೇ ಜನರುಮಾತ್ರ ದೊಡ್ಡವರಾರುಅನ್ನುವದನ್ನುಸರಿಯಾಗಿ ತಿಳಿದಿರುವರು(೧೮)ತಮಗೆ ಒಪ್ಪಿಗೆಯಾದ(ಯೋಗ್ಯವಾದ)ಮಾತನ್ನೇ ಅಭಿಮಾನದಿಂದ ಹಿಡಿದುಕೊಂಡು ಅನೇಕ ಕಲ್ಪನೆಗಳನ್ನು ಕಟ್ಟಿಕೊಳ್ಳುತ್ತ ಬಾಳುವರು. ಆದರೆ ನಾವು ವಿವೇಕದಿಂದ ಇದನ್ನೆಲ್ಲ ಸರಿಯಾಗಿ ತಿಳಿದುಕೊಳ್ಳಬೇಕು (೧೯). ಯಾವುದು ನಿಜವಲ್ಲವೋ ಅದರ ಅಭಿಮಾನ ಹಿಡಿಯುವದು, ಮತ್ತು ಯಾವುದು ಸತ್ಯವೋ ನಿಜವೋ ಅದನ್ನು ಪೂರ್ಣ ಬಿಟ್ಟು ಬಿಡುವದು, ಇದು ಕೇವಲ ಮೂರ್ಖತನದ ಲಕ್ಷಣವಿರುವದು (೨೦). ಸತ್ಯದ ಬಗ್ಗೆ ಇರುವ ಅಭಿಮಾನವು ಅದು ನಿಜವಾಗಿಯೂ ಅಭಿಮಾನವಲ್ಲ. ಅದು ನಿರಭಿಮಾನವೇ ಆಗಿರುವದು. ನ್ಯಾಯ ಮತ್ತು ಅನ್ಯಾಯ ಇವೆರಡೂ ಒಂದೇ ಸಮ ಇರುವದೇ ಇಲ್ಲ [೨೧]. ಯಾವುದು ನ್ಯಾಯವಾದದ್ದಿರುವದೋ ಅದು ಶಾಶ್ವತವು. ಯಾವುದು ಅನ್ಯಾಯಮಯವಿರುವದೋ ಅದು ಅಶಾಶ್ವತವಿರುವದು. ಬಹಳ ವರಟ ಮಾತನಾಡುವ ಮತ್ತು ಶಿಸ್ತು ಇಲ್ಲದ ಮನುಷ್ಯ ಮತ್ತು ನಿಯಮಿತತನವುಳ್ಳ [ಶಿಸ್ತುಬದ್ಧ] ಮನುಷ್ಯ ಈ ಇಬ್ಬರೂ ಒಂದೇ ಸಮ ಇರುವದಿಲ್ಲ [೨೨]. ಒಬ್ಬನು ಬಹಿರಂಗವಾಗಿಯೇ ಭಾಗ್ಯ ಭೋಗಿಸುವನು. ಇನ್ನೊಬ್ಬನು ಚೋರನೆನಿಸಿಕೊಂಡು ಓಡಿ ಹೋಗುವನು. [ಕಳುವಿನ ಧನವನ್ನು ಇವನು ಮುಚ್ಚಿಡುವನು.ಆದರೆ ಬಹಿರಂಗಗೊಳಿಸುವದಿಲ್ಲ] ಒಬ್ಬನು ಬಹಿರಂಗವಾಗಿ ಮಹಂತನೆಂದು ಮೆರೆಯುವನು. ಇನ್ನೊಬ್ಬನು ತುಡುಗಿನಿಂದ [ಮುಚ್ಚಿ] ಮಹಂತಗಿರಿ ಮಾಡುವನು. [ಮಹಂತ ಅಂದರೆ ಶ್ರೇಷ್ಠ ತರಗತಿಯ ಸಾಧು, ವಿರಕ್ತ ಹರಿದಾಸ, ಜನರ ನಾಯಕ)[೨೩] ಆಚಾರ, ವಿಚಾರ ಇವುಗಳನ್ನು ಕಾಯ್ದುಕೊಳ್ಳದೆ [ಸಂಬಾಳಿಸಿಕೊಳ್ಳದೆ] ಮನುಷ್ಯನು ಏನನ್ನು ಮಾಡುವನೋ ಅದು ವ್ಯಥಾ ಶ್ರಮದ್ದೆನಿಸುವದು. ಆದ್ದರಿಂದ ಲೋಕಸಂಗ್ರಹೀ ಪುರುಷರು ಚತುರ ಮತ್ತು ಬುದ್ಧಿವಂತ ಮನುಷ್ಯರನ್ನು ಶೋಧಿಸುವರು [೨೪]. ಬಜಾರದಲ್ಲಿ ಸೇರಿದಂತೆ ಸೇರಿದ ದೊಡ್ಡ ಜನಸಮುದಾಯವನ್ನು ಕೇವಲ ಒಬ್ಬ ಚತುರ ಮನುಷ್ಯನು ತನ್ನ ಪ್ರಭಾವದಿಂದ ಅಂಕೆಯಲ್ಲಿ ತರಬಲ್ಲನು. ಇಂಥ ಚತುರ ಪುರುಷ [ಮಹಂತ, ಸಾಧು, ಸಂತ]ರ ಮುಂದೆ ಬಾಜಾರೀ ಜನರ [ನಕಲಿ ಜನರ, ಢೋಂಗೀಸಾಧುಸಂತರ] ಆಟವೇನೂ ನಡೆಯುವದಿಲ್ಲ [೨೫]. ಈ ದೃಷ್ಟಿಯಿಂದ ಸಮಾಜದಲ್ಲಿ ಮುಖ್ಯರಾಗಿರುವಂಥ ಹಿರಿಯರ ಜೊತೆಗೆ ಸ್ನೇಹ ಸಂಬಂಧ ಹೊಂದಬೇಕು. ಹೀಗೆ ಮಾಡಿದ್ದಾದರೆ ಬಹಳಷ್ಟು ಸಾಮಾನ್ಯ ಜನರು ನಿಮ್ಮ ಕಡೆಗೆ ಬರುವರು. ಈ ಜನಸಮುದಾಯವೇ ನಿಮ್ಮ ವಶವಾಗುವದು[೨೬]

ಧೂರ್ತಾಸಿ ಧೂರ್ತ ಚಿ ಆವಡೆ । ಧೂರ್ತ ಧೂರ್ತೀ ಚ ಪವಾಡೆ ।
ಉಗೇ ಚಿ ಹಿಂಡತೀ ವೇಡೆ । ಕಾರ್ಯೇವಿಣ ॥೨೭॥

ಧೂರ್ತಾಸಿ ಧೂರ್ತಪಣ ಕಳಲೇ । ತೇಣೇ ಮನಾಸ ಮನ ಮಿಳಾಲೇ ।
ಪರೀ ಹೇ ಗುಪ್ತರೂಪೇ ಕೇಲೇ । ಪಾಹಿಜೆ ಸರ್ವೇ ॥೨೮॥

ಸಮರ್ಥಾಚೇ ರಾಖತಾ ಮನ । ತೇಥೇ ಯೆತೀ ಉದಂಡ ಜನ ।
ಜನ ಆಣಿ ಸಜ್ಜನ । ಆರ್ಜವ ಕರಿತೀ ॥೨೯॥

ಮೊಳಖೀನೇ ಮೊಳಖೀ ಸಾಧಾವೀ । ಬುದ್ಧೀನೇ ಬುದ್ಧಿ ಬೋಧಾವೀ ।
ನೀತಿ ನ್ಯಾಯೇ ವಾಟ ರೋಧಾವೀ । ಪಾಷಾಂಡಾಚೀ ॥೩೦॥

ವೇಷ ಧರಾವಾ ಬಾವಳಾ । ಅಂತರೀ ಅಸಾವ್ಯಾ ನಾನಾ ಕಳಾ ।
ಸಗಟ ಲೋಕಾಂಚಾ ಜಿವ್ಹಾಳಾ । ಮೋಡೂ ನಯೆ ॥೩೧॥

ನಿಸ್ಪೃಹ ಆಣಿ ನಿತ್ಯ ನೂತನ । ಪ್ರತ್ಯಯಾಚೇ ಬ್ರಹ್ಮಜ್ಞಾನ ।
ಪ್ರಗಟ ಜಾಣತಾ ಸಜ್ಜನ । ದುಲ್ಲಭ ಜಗೀ ॥೩೨॥

ನಾನಾ ಜಿನಸಪಾಠಾಂತರೇ । ನಿವತೀ ಸಕಳಾಂಚೀ ಅಂತರೇ ।
ಚಂಚಳಪಣೇ ತದನಂತರೇ । ಸಕಳಾ ಠಾಈ ॥೩೩॥

ಯೇಕೇ ಠಾಈ ಬೈಸೋನ ರಾಹಿಲಾ । ತರೀ ಮಗ ವ್ಯಾಪ ಚಿ ಬುಡಾಲಾ ।
ಸಾವಧಪಣೇ ಜ್ಯಾಲಾ ತ್ಯಾಲಾ । ಭೇಟೇ ದ್ಯಾವೀ ॥೩೪॥

ಭೇಟ ಭೇಟೋ ಉರೀ ರಾಖಣೇ । ಹೆ ಚಾತುರ್ಯಾಚೀ ಲಕ್ಷಣೇ ।
ಮನುಷ್ಯ ಮಾತ್ರ ಉತ್ತಮ ಗುಣೇ । ಸಮಾಧಾನ ಪಾವೇ ॥೩೫॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಚಾತುರ್ಯ ಲಕ್ಷಣ' ನಾಮ ಸಮಾಸ ಪ್ರಥಮ ॥

● ●

ಚತುರನಿಗೆ ಚತುರನೇ ಬೇಕಾಗುವವನಾಗುವನು. ಚತುರನ ಚತುರತನವು ಚತುರ ಜನರಲ್ಲಿಯೇ ಕೌತುಕವನ್ನು ಹುಟ್ಟಿಸುವದು. ಚತುರನ ನಿಜಜ್ಞಾನ ಹೊರಬೀಳುವದು. ಎಲ್ಲರಿಗೂ ಇವನ ಬೆಲೆ[ವರ್ಚಸ್ಸು] ಗೊತ್ತಾಗುವದು. ಯಾರಿಗೆ ಈ ಮರ್ಮ ತಿಳಿಯುವದಿಲ್ಲವೋ ಅಂತಹ ಹುಚ್ಚಪ್ಪಗಳು ಏನೂ ಕಾರ್ಯ ಮಾಡಲಾರರು. ಸುಮ್ಮನೇ ಒಣಒಣ ತಿರುಗಾಡುವರು. [೨೭] ಒಬ್ಬ ನಿಜವಾದ ಚತುರನಿಗೆ ಇನ್ನೊಬ್ಬನ ಚತುರತನ ತಿಳಿಯಿತೆಂದರೆ ಇಬ್ಬರ ಮನಸ್ಸೂ ಜೊತೆಗೂಡುವವು. ಆದರೆ ಇದೆಲ್ಲವೂ ಗುಪ್ತವಾಗಿ ನಡೆಯಬೇಕು. [೨೮] ಪರಿಚಯದಿಂದ ಪರಿಚಯವನ್ನು ಹೆಚ್ಚಿಸಬೇಕು. ಆದರೆ ಅತ್ಯಂತ ಸಾದಾ ರೀತಿಯಲ್ಲಿ ಇರಬೇಕು. ಜನರ ಬುದ್ಧಿಗೆ ಆವ್ಹಾಹನ ಮಾಡಿ ಅವರನ್ನು ಜಾಣರನ್ನಾಗಿ ಮಾಡಬೇಕು. ಅತ್ಯಂತ ನಮ್ರತನ (ಸವಿಮಾತು) ಇರಬೇಕು. ನಿಮ್ಮ ಜ್ಞಾನ ಅತ್ಯಂತ ತಾಜಾ (ಶುದ್ಧ) ಇರಬೇಕು. ಹೊಸ ಹೊಸ ವಿಷಯಗಳನ್ನು ಸದಾ ತಿಳಿಯಬೇಕು. ತಿಳಿಯುವ ಪ್ರಯತ್ನ ಮಾಡಬೇಕು:- ಸುಜ್ಞರೂ, ಬುದ್ಧಿವಂತರೂ ಆದ ಪ್ರತಿಷ್ಠಿತ (ದೊಡ್ಡ) ಜನರನ್ನು ನಿಮ್ಮವರನ್ನಾಗಿ ಮಾಡಿಕೊಂಡರೆ ಆಮೇಲೆ ಬಹಳಷ್ಟು ಸಾಮಾನ್ಯ ಜನರೂ ನಿಮ್ಮ ಕಡೆಗೆ ಆಕರ್ಷಿತರಾಗುವರು. ಸಭ್ಯ ಮತ್ತು ಮುಗ್ಧರಾದ ಸಾದಾ ಜನರು ಮತ್ತು ಸಜ್ಜನ ಜನರು ವಿನಯದಿಂದ ನಡೆಯುವರು. (ಸುಖ ದುಃಖ ಕೇಳುವರು, ನಿಮ್ಮ ಸಲಹೆ ಕೇಳುವರು, ಸಮಚಿತ್ತದಿಂದ ಇರಲಿಕ್ಕೆ ಪ್ರಯತ್ನಿಸುವರು. ಅರ್ಥಾತ್ ನಿಮ್ಮ ಅನುಯಾಯಿಗಳಾಗುವರು). (೨೯) ಪರಿಚಯದಿಂದ ಜನರ ಪರಿಚಯ ಹೆಚ್ಚುಹೆಚ್ಚು ಬೆಳೆಯುವಂತೆ ಮಾಡಬೇಕು. ನಿಮ್ಮ ಬುದ್ಧಿಯಿಂದ ಜನರ ಬುದ್ಧಿಯು ಪ್ರಗಲ್ಭಗೊಳ್ಳುವಂತೆ ಮಾಡಬೇಕು. ನೀತಿ ನ್ಯಾಯಗಳ ವಿಷಯದಲ್ಲಿ ಸಮಾಜಘಾತುಕ ಮತಕ್ಕೆ ಇಂಬು ಕೊಡಬೇಡಿರಿ. [೩೦] ನಿಮ್ಮ ಬಾಹ್ಯ ವೇಷವು ಯಾವಾಗಲೂ ಅತ್ಯಂತ ಸಾದಾ ಇರಬೇಕು. ಆದರೆ ಅಂತರ್ಯಾಮದಲ್ಲಿ ಅನೇಕ ವಿದ್ಯೆಗಳು ಇರಬೇಕು. ಅನೇಕ ಕಲಾ ನಿಪುಣತೆಯೂ ಇರಬೇಕು. ಎಲ್ಲರ ಅಂತಃಕರುಣವನ್ನು ಸಮದೃಷ್ಟಿಯಿಂದ ನೋಡಿಕೊಂಡು ಹೋಗಬೇಕು.(೩೧) ಅತ್ಯಂತ ನಿಸ್ಪೃಹ, ನಿತ್ಯನೂತನ, ಸದೈವ (ಯಾವಾಗಲೂ) ತಾಜಾ ಇರುವಂಥ ಸ್ವಾನುಭವದ ಬ್ರಹ್ಮಜ್ಞಾನವು ಯಾರಲ್ಲಿ ಇರುವದೋ ಅಂಥ ನಿಜವಾದ ಬ್ರಹ್ಮಜ್ಞಾನಿಯಾದವನು. ಮತ್ತು ಪ್ರಕಟವಾಗಿ ಜನಕಲ್ಯಾಣಕ್ಕಾಗಿ ಸಮಾಜದಲ್ಲಿ ತಿರುಗಾಡುವ ಜ್ಞಾನಿ, ಸಾಧು, ಸಂತರು ಬಹಳ ದುರ್ಲಭರು.(೩೨) ಇವರಲ್ಲಿ ಅನೇಕ ವಿಷಯದ ಪಾಠಾಂತರವಿರುವದರಿಂದ ಇಂಥವರು ಎಲ್ಲರ ಅಂತಃಕರುಣವನ್ನು ಶಾಂತಗೊಳಿಸುವರು. ಆದರೆ ಇಂಥವರು ಒಂದೇ ಸ್ಥಳದಲ್ಲಿ ಬಹಳ ದಿವಸ ಇರಲಾರರು. ಇವರು ಯಾವಾಗಲೂ ಎಲ್ಲ ಕಡೆಗೂ ತಿರುಗಾಡುತ್ತಲೇ ಇರುವರು. (೩೩) ಇಂಥವರು ಒಂದೇ ಕಡೆಗೆ ಸ್ಥಿರವಾಗಿ ಉಳಿದರೆ ಅವರ ಲೋಕ ಸಂಗ್ರಹ ಕಾರ್ಯವು ಮುಳುಗುವದು. ಅಂತೆಯೇ ಇವರು ಎಲ್ಲರನ್ನೂ ಸಾವಧತನದಿಂದ ಭೆಟ್ಟಿಯಾಗುತ್ತಿರುವರು. [೩೪] ಪ್ರತಿಯೊಬ್ಬರನ್ನೂ ಪುನಃ ಪುನ: ಭೆಟ್ಟಿಯಾಗಿ ಆ ಜನರನ್ನು ಸರಿಯಾದ ಮಾರ್ಗದಲ್ಲಿ ಇಡುವ ಕೆಲಸ ಮಾಡಬೇಕು. ಇವೆಲ್ಲ ಚತುರತನದ ಕೆಲಸಗಳಾಗಿರುವವು. ಎಲ್ಲ ಜನರಿಗೆ ಇಂಥ ಉತ್ತಮ ಗುಣಗಳ ಯೋಗದಿಂದ ಸಮಾಧಾನದ ಲಾಭವಾಗುವದು. (೩೫)

ಶ್ರೀ ದಾಸಬೋಧದ ಹದಿನೈದನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದಲ್ಲಿಯ
"ಚಾತುರ್ಯ ಲಕ್ಷಣ" ವೆಂಬ ಹೆಸರಿನ ಒಂದನೆಯ ಸಮಾಸವು ಮುಗಿದುದು.

## ದಶಕ ೧೫. ಸಮಾಸ ೨. ನಿಸ್ಪೃಹ ವ್ಯಾಪ [ನುಡಿ ೩೦]

ನಾಶಿಕದ ಹತ್ತಿರ ಟಾಕಳಿ ಎನ್ನುವಲ್ಲಿ ಶ್ರೀ ಸಮರ್ಥರು ಹನ್ನೆರಡು ವರ್ಷ ಪೂರ್ತಿ ಶ್ರೀ ರಾಮನ ಉಪಾಸನೆಯನ್ನು ಮಾಡಿದರು. ಧ್ಯಾನ, ಧಾರಣೆ[ಚಿಂತನ]ಯು ಈ ಉಪಾಸನೆಯ ಪ್ರಾಣವಾಗಿತ್ತು. ಇದರಿಂದ ಆತ್ಮಸಾಕ್ಷಾತ್ಕಾರ ಪಡೆದು ಆಮೇಲೆ ಹನ್ನೆರಡು ವರ್ಷಗಳವರೆಗೆ ಇವರು ಇಡೀ ಹಿಂದುಸ್ಥಾನವನ್ನು ಪಾದಚಾರಿಗಳಾಗಿ ತಿರುಗಿದರು. ತಮ್ಮ ಸಂಚಾರ ಕಾಲದಲ್ಲಿ ಇವರು ಒಟ್ಟಿನಲ್ಲಿ (ಬಹುತರ ಎಲ್ಲ ಕಡೆಗೂ) ಭಾರತೀಯ ಸಮಾಜದ ದೈನ್ಯಾವಸ್ಥೆಯನ್ನು ಪ್ರತ್ಯಕ್ಷವಾಗಿ ನೋಡಿದರು. ಮಹಾರಾಷ್ಟ್ರದಲ್ಲಿ ಮಾತ್ರ ಅಲ್ಪಸ್ವಲ್ಪ ಜೀವಂತತನ ಇದ್ದುದು

ಇವರ ದೃಷ್ಟಿಗೆ ಬಿದ್ದಿತು. ಆ ಕಾಲದ ಗಂಭೀರ ಪರಿಸ್ಥಿತಿಯು ಬಗ್ಗೆ ಸ್ವಲ್ಪುವಟ್ಟಿಗೆ ವರ್ಣಿಸಿ ಈ ಸಮಾಸದಲ್ಲಿ ಹೇಳಿರುವರು. ಶ್ರೀ ಸಮರ್ಥರು ಹೇಳುವದೇನಂದರೆ:– "ಜಗತ್ತಿನಲ್ಲಿ ಅಸಂಖ್ಯ ಜನರಿರುವರು. ಇವರಲ್ಲಿ ಒಬ್ಬರಂತೆ ಒಬ್ಬರಿಲ್ಲ. ಭಾರತೀಯರ ಪೈಕಿ ಬಹಳ ಜನ ಮುಸಲ್ಮಾನರಾದರು. ಸಾಕಷ್ಟು ಜನ ಪೋರ್ತುಗೀಜ ರಾಜ್ಯದಲ್ಲಿ ಹೋದರು. (ಪೋರ್ತುಗೀಜರಾದರು). ಬಹು ಜನರು ದೇಶ ಭಾಷೆಯ ಭೇದದಿಂದ ಆತಂಕಗೊಂಡು ತಾಳಮೇಳ ವಿಲ್ಲದೇ ಇರುವವರಾದರು. ಕೇವಲ ಮಹಾರಾಷ್ಟ್ರದಲ್ಲಿ ಮಾತ್ರ ಅಲ್ಪ ಸ್ವಲ್ಪ ರಾಜಕೀಯ ಸ್ವಾತಂತ್ರ್ಯ ಉಳಿದಿರು ವದು. ಕೆಲಸ ಮಾಡುವ ಮನುಷ್ಯನಿಗೆ ಊಟಕ್ಕೆ ಸವಡು ಇಲ್ಲದಷ್ಟು ಕೆಲಸಗಳು ಇಲ್ಲಿ ಉಳಿದಿರುವವು. ಕೆಲವರು ಯುದ್ಧದಲ್ಲಿ ತೊಡಗಿರುವರು. ಕೆಲವರು ವ್ಯಾಪಾರದಲ್ಲಿ ಮತ್ತು ಕೆಲವರು ನಿತ್ಯ ಜೀವನದ (ಹೊಟ್ಟೆಯ ಪಾಡಿನ) ಧಂದೆಯಲ್ಲಿ ತೊಡಗಿರುವರು. ಬುದ್ಧಿಯ ಕ್ಷೇತ್ರದಲ್ಲಿಯೂ ಕೂಡಾ ಇಂಥದೇ ಗೊಂದಲವಿರುವದು. ಷಡ್‌ದರ್ಶನಗಳು [೧) ಸಾಂಖ್ಯ ೨) ಯೋಗ ೩) ನ್ಯಾಯ ೪) ವೈಶೇಷಿಕ ೫) ಮೀಮಾಂಸೆ ಮತ್ತು ೬) ವೇದಾಂತ ಹೀಗೆ (ಆರು) ಷಡ್‌ದರ್ಶನಗಳು ಇವು ತತ್ವಜ್ಞಾನದ ಮುಖ್ಯ ಶಾಖೆಗಳು] ಇರುವವು. ಅನೇಕ ಪ್ರಕಾರದ ಪಾಖಂಡ ಮತಗಳಿರುವವು. ಜಗತ್ತಿನಲ್ಲಿ ಎಲ್ಲ ಕಡೆಗೂ ಕೇವಲ ಉಪದೇಶವು ಭರದಿಂದ ನಡೆದಿರುವದು. ಇವೆಲ್ಲವುಗಳಿಂದ ಪಾರಾಗಿ ಉಳಿದ ಅಲ್ಪಸ್ವಲ್ಪ ಜನರನ್ನು ಸ್ಮಾರ್ತ ಮತ್ತು ವೈಷ್ಣವ ಜನರು ತಮ್ಮ ತಮ್ಮ ಸಂಪ್ರದಾಯದ ಕಡೆಗೆ ಎಳೆಯುವರು. ಇನ್ನೂ ಕೆಲವು ಕಾಮನೆಯ ಭಕ್ತ ಜನರು ವ್ರತ ವೈಕಲ್ಯಗಳ ನಾದಿಗೆ ಬಿದ್ದಿರುವರು. ವೈದಿಕ ಜನರು ಇವರನ್ನು ದ್ವೇಷಿಸುವರು. ಇದರಲ್ಲಿಯೇ ಹರಿದಾಸರು ತಮ್ಮ ಕಡೆಗೆ ಕೆಲವರನ್ನು ಕರೆಯುವರು. (ಎಳೆಯುವರು). ಈ ಕಾರಣದಿಂದಾಗಿ ನಿಜವಾದ ಜ್ಞಾನವು ಬಹಳ ದುರ್ಲಭವಾಗಿರುವದು. ಇದೆಲ್ಲ ದೈನ್ಯಾವಸ್ಥೆಯನ್ನು ನೋಡಿ ಶ್ರೀ ಸಮರ್ಥರು ಸುಮ್ಮನೆ ಕೂಡ್ರಲಿಲ್ಲ. ಇವರ ಆದೇಶವೇನಿರುವದೆಂದರೆ ನಿಜಸಂಗತಿ ತಿಳಿದರೂ ಸಹ ಸ್ಪಷ್ಟವಾಗಿ ಹೇಳುವದಕ್ಕಾಗುವದಿಲ್ಲವೆಂಬುದು ನಿಜವಿದ್ದರೂಕೂಡಾ ವಿಚಾರವಂತನಿಗೆ ಜ್ಞಾನವು ಸುಲಭವೇ ಇರುವದು. ಜಾಣರು ಬುದ್ಧಿವಂತರಾದವರು ಜ್ಞಾನವನ್ನು ಮಾಡಿಕೊಳ್ಳಬೇಕು. ಮತ್ತು ಪಾಖಂಡ ಜನರಮತವನ್ನು ಸ್ಪಷ್ಟವಾಗಿ ಖಂಡಿಸ ಬೇಕು. ಸ್ವಾನುಭವದ ಮಾತುಗಳಿಂದ ಜನರಿಗೆ ಜ್ಞಾನದ ಕಡೆಗೆ ಒಲವು ಉಂಟಾಗುವದು. ಲವಲವಿಕೆ ಹುಟ್ಟುವದು. ಆಮೇಲೆ ಜನರು ನಮ್ರರಾಗಿ ಶರಣು ಬರುವರು. ಜ್ಞಾನಿ ಪುರುಷನು ತನ್ನ ಉದಾಸ ವೃತ್ತಿ (ನಿಸ್ಪೃಹತನ, ನಿರ್ವಿ ಕಾರತನ, ಅಲಿಪ್ತ ಸ್ಥಿತಿ)ಯನ್ನು ಬಿಡಬಾರದು. ಜನರನ್ನು ಭಗವಂತನ ಮಾರ್ಗದ ಕಡೆಗೆ ಒಯ್ಯಬೇಕು. ಏನೆಲ್ಲ ಮಾಡಿದರೂ ನೀವು ಶಕ್ಯವಾದಷ್ಟು ಅಲಿಪ್ತರಾಗಿಯೇ ಇರಬೇಕು. ಅಡವಿ–ಅರಣ್ಯದಲ್ಲಿಯೇ ಇರಬೇಕು. ಆದರೆ ಸರ್ವಜನರ ಕಲ್ಯಾಣ ಚಿಂತನೆ ಜಾಗೃತವಿರಬೇಕು. ಉಪಾಸನೆಯ ಗರ್ಜನೆಯನ್ನು ಮೊಳಗಿಸಬೇಕು. ಜನರು ಭಗವಂತನ ನಾಮಘೋಷದ ಗರ್ಜನೆಯನ್ನು ಮಾಡುವಂತಾಗಬೇಕು. ಬಹಳಷ್ಟು ಜನಸಮುದಾಯವನ್ನು ಕೂಡಿಸಿ ರಾಜಕಾರಣದ ಕಡೆಗೂ ಲಕ್ಷ್ಯಕೊಡುವಂತೆ ಪ್ರೇರೇಪಿಸಬೇಕು. ಈ ಪ್ರಕಾರ ಜನರನ್ನು ಜಾಣರನ್ನಾಗಿ ಮಾಡಿ ಕಾರ್ಯ ಮಾಡುವದ ರಲ್ಲಿ ಸಮರ್ಥರಾಗುವಂತೆ ಮಾಡಬೇಕು. ಹೀಗೆ ಮಾಡಿ ಹೆಸರು ಪಡೆಯುವಲ್ಲಿ ನಿಜವಾದ ಪುರುಷಾರ್ಥವಿದೆ. ದೊಡ್ಡಸ್ತನವಿದೆ.

ದಶಕ ಪಂಚದಶಕ : ಸಮಾಸ ದ್ವಿತೀಯ : ನಿಸ್ಪೃಹ ವ್ಯಾಪ

॥ಶ್ರೀರಾಮ॥ ಪೃಥ್ವೀಮಧೇ ಮಾನವೀ ಶರೀರೇ ।
ಉದಂಡ ದಾಟಲೀ ಲಹಾನಥೋರೇ ।
ಪಾಲಟತೀ ಮನೋವಿಕಾರೇ । ಕ್ಷಣಾ ಕ್ಷಣಾ ॥೧॥

ಜಿತುಕ್ಯಾ ಮೂರ್ತೀ ತಿತುಕ್ಯಾ ಪ್ರಕೃತೀ । ಸಾರಿಖ್ಯಾ ನಸ್ತೀ ಆದಿಅಂತೀ ।
ನೇಮ ಚಿ ನಾಹೀ ಪಾಹಾವೇ ಕಿತೀ । ಕಾಯೆ ಮ್ಹಣೋನೀ ॥೨॥

ಕಿತ್ಯೇಕ ಮ್ಲೇಂಚ ಹೋಊನ ಗೇಲೇ । ಕಿತ್ಯೇಕ ಫಿರಂಗಣಾಂತ ಆಟಲೇ ।
ದೇಶಭಾಷಾನೇ ರುಧಿಲೇ । ಕಿತೀಯೇಕ ॥೩॥

ಮರ್‍ಹಾಷ್ಟ ದೇಶ ಥೋಡಾ ಉರಲಾ । ರಾಜಕಾರಣೇ ಲೋಕ ರುಧಿಲಾ ।
ಅವಕಾಶ ನಾಹೀ ಜೇವಾಯಾಲಾ । ಉದಂಡ ಕಾಮೇ ॥೪॥

ಕಿತ್ಯೇಕ ಯುದ್ಧಪ್ರಸಂಗೀ ಗುಂತಲೇ । ತೇಣೇ ಗುಣೇ ಉನ್ಮತ್ತ ಜಾಲೇ ।
ರಾತ್ರಂದಿವಸ ಕರೂ ಲಾಗಲೇ । ಯುದ್ಧ್ಯಚರ್ಚಾ ॥೫॥

ಉದಿಮ್ಯಾಸ ವ್ಯಾಸಂಗ ಲಾಗಲಾ । ಅವಕಾಶ ನಾಹೀಂಸಾ ಜಾಲಾ ।
ಅವಘಾ ಪೋಟಧಂದಾ ಚ ಲಾಗಲಾ । ನಿರಂತರ ॥೬॥

ಶಡದರ್ಶನೇ ನಾನಾ ಮತೇ । ಪಾಷಾಂಡೇ ವಾಢಲೀ ಬಹುತೇ ।
ಪೃಥ್ವೀಮಧೇ ಜೇಥತೇಥೇ । ಉಪದೇಸಿತೀ ॥೭॥

ಸ್ಮಾರ್ಥೀ ಆಣಿ ವೈಷ್ಣವೀ । ಉರಲೀ ಸುರಲೀ ನೇಲೀ ಆಘವೀ ।
ಏಸೀ ಪಾಹಾತಾ ಗಥಾ ಗೋವೀ । ಉದಂಡ ಜಾಲೀ ॥೮॥

ಕಿತ್ಯೇಕ ಕಾಮನೇಚೆ ಭಕ್ತ । ಠಾಈ ಠಾಈ ಜಾಲೆ ಆಸಕ್ತ ।
ಯುಕ್ತ ಅಥವಾ ಅಯುಕ್ತ । ಪಾಹಾತೋ ಕೋಣ ॥೯॥

ಯಾ ಗಲ್ಬಲ್ಯಾಮಧೇ ಗಲ್ಬಲಾ । ಕೋಣೀ ಕೋಣೀ ವಾಢವಿಲಾ ।
ತ್ಯಾಸ ದೇಖೋ ಸಕೇನಾಸಾ ಜಾಲಾ । ವೈದಿಕ ಲೋಕ ॥೧೦॥

ತ್ಯಾಹಿಮಧೇ ಹರಿಕೀರ್ತನ । ತೇಥೇ ಮೋಢಲೇ ಕಿತ್ಯೇಕ ಜನ ।
ಪ್ರತ್ಯಯಾಚೇ ಬ್ರಹ್ಮಜ್ಞಾನ । ಕೋಣ ಪಾಹೇ ॥೧೧॥

ಯಾ ಕಾರಣೇ ಜ್ಞಾನ ದುಲ್ಲಭ । ಪುಣ್ಯೇ ಘಡೇ ಅಲಭ್ಯ ಲಾಭ ।
ವಿಚಾರವಂತಾ ಸುಲ್ಲಭ । ಸಕಳ ಕಾಂಹೀ ॥೧೨॥

ವಿಚಾರ ಕಳಲಾ ಸಾಂಗತಾ ನಯೆ । ಉದಂಡ ಯೆತಿ ಅಂತರಾಯೆ ।
ಉಪಾಯೆ ಯೋಜಿತಾ ಅಪಾಯೆ । ಆಡವೇ ಯೆತೀ ॥೧೩॥

## ದಶಕ ೧೫. ಸಮಾಸ ೨. ನಿಸ್ಪೃಹ ವ್ಯಾಪ (ನುಡಿ ೩೦)

ಭಾರತೀಯ ಸಮಾಜದ ಸ್ಥಿತಿಯು ಯಾವತ್ತೂ ಕಡೆಯಿಂದ ದಯನೀಯವಾಗಿತ್ತು. ಈ ಪರಿಸ್ಥಿತಿಯ ವರ್ಣನೆಯನ್ನು ಮೊದಲು ಹೇಳುತ್ತಾರೆ:- ಜಗತ್ತಿನಲ್ಲಿ ಅಕ್ಷರಶಹ ಅಸಂಖ್ಯಜನ ಸಣ್ಣವರು-ದೊಡ್ಡವರು ಇರುವರು, ಇವರು ತಮ್ಮ ತಮ್ಮ ಮನೋವಿಕಾರದ ಪ್ರಕಾರ ಕ್ಷಣಕ್ಷಣಕ್ಕೂ ಬೇರೆ ಬೇರೆ ರೀತಿಯಲ್ಲಿ ವರ್ತಿಸುವರು.(೧)ಎಷ್ಟು ವ್ಯಕ್ತಿಗಳೋ ಅಷ್ಟು ಪ್ರಕೃತಿ (ಗುಣಸ್ವಭಾವ) ಅನ್ನುವರು. ಆರಂಭದಿಂದ ಕೊನೆಯವರೆಗೆ ಮನುಷ್ಯನ ನಡವಳಿಕೆಯು ಒಂದೇ ಸಮ ಉಳಿಯುವದಿಲ್ಲ. ಇದರ ಬಗ್ಗೆ ಯಾವ ನಿಯಮವೂ ಇಲ್ಲದ್ದರಿಂದ ಮನುಷ್ಯರಲ್ಲಿ ಎಷ್ಟು ತರಹ ಮತ್ತು ಯಾವವೆನ್ನುವದನ್ನು ಹೇಗೆ ಹೇಳುವದು. ಏನೆಂದು ಹೇಳುವದು. (೨) ಬಹಳಷ್ಟು ಜನ ಮತಾಂತರ ಹೊಂದಿ ಮುಸಲ್ಮಾನರಾದರು. ಬಹಳಷ್ಟು ಜನರು ಪೋರ್ತುಗೀಜ ರಾಜ್ಯ (ಗೋವಾ, ದೀವ, ದಮಣ)ದಲ್ಲಿ ಹೋಗಿ ಬಿಟ್ಟರು. (ಇಲ್ಲವಾದರು). ಪೋರ್ತುಗೀಜ-ಕ್ರಿಶ್ಚನ್‌ರಾದರು. ಬಹಳಷ್ಟು ಜನ ದೇಶಭಾಷೆಯ ಭೇದದಿಂದ (ಹಿಂದಿ, ಕನ್ನಡ, ತೆಲಗು, ತಮಿಳು, ಗುಜರಾತಿ, ಮರಾಠಿ ಮೊದಲಾದವುಗಳಿಂದ) ಒಬ್ಬರಿಂದೊಬ್ಬರು ದೂರಾಗಿಬಿಟ್ಟರು. [೩] ಇದ್ದದ್ದರಲ್ಲಿಯೋ ಮಹಾರಾಷ್ಟ್ರದಲ್ಲಿ ಅಲ್ಪಸ್ವಲ್ಪ ಚೈತನ್ಯವಿರುವದು. ಇಲ್ಲಿ ರಾಜಕಾರಣ ಮಾಡಲಿಕ್ಕೆ ಅನುವು ಇರುವದು, ಜನರಿಗೆ ಊಟ ಮಾಡಲಿಕ್ಕೂ ಪುರುಸೊತ್ತಿಲ್ಲದಾಗಿದೆ. ಕೆಲಸ ಬಹಳಷ್ಟು ಬಾಕಿ ಉಳಿದಿರುವದು.(೪) ಬಹಳಷ್ಟು ಜನರು ಯುದ್ಧದಲ್ಲಿ ತೊಡಗಿದ್ದಾರೆ. ಇವರಿಗೆ ಇದೇ ವಿಚಾರವು ತಲೆಯಲ್ಲಿ ತುಂಬಿದ್ದರಿಂದ ಇವರೆಲ್ಲ ಸದಾ ಯುದ್ಧದ ಚರ್ಚೆಯನ್ನೇ ಮಾಡುವರು. (೫) ವ್ಯಾಪಾರಿ ಜನರಿಗೆ ಅವರ ವ್ಯಾಪಾರವು ಬೆನ್ನು ಹತ್ತಿದೆ, (ಇದರಲ್ಲಿ ಎಷ್ಟು ಹೆಚ್ಚು ಲಾಭ ದೊರಕೀತು ಅನ್ನುವ ವಿಚಾರ ಇವರ ಬೆನ್ನು ಹತ್ತಿದೆ)· ಇದರಿಂದಾಗಿ ಇವರಿಗೆ ಎಷ್ಟೂ ಪುರಸೊತ್ತಿಲ್ಲದಾಗಿದೆ, ಇನ್ನುಳಿದ ಜನಕ್ಕೆ ಅವರವರ ಹೊಟ್ಟೆಯ ಪಾಡೇ ಅವರನ್ನು ಕಾಡುತ್ತಿರುವದು ಅಂತೆಯೋ ಅದರ ಬೆನ್ನು ಹತ್ತಿದರು. (೬) ಬುದ್ಧಿವಂತರೆನ್ನುವವರಲ್ಲಿ ಷಡ್ದರ್ಶನ (ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಮೀಮಾಂಸ(ಪೂರ್ವಮೀಮಾಂಸ) ಮತ್ತು ವೇದಾಂತ(ಉತ್ತರ ಮೀಮಾಂಸ)ಮತಗಳ ಹಾಗೂ ಇತರ ಅನೇಕ ಪಂಥಗಳ ಜನರು ಹಾಗೂ ಪಾಖಂಡಾದಿ ಇತರ ಅನೇಕ ಮತ ಪಂಥದ ಜನರು ಮತ್ತು ಬಹಳಷ್ಟು ಸಮಾಜಘಾತುಕ ಮತ ಪಂಥಗಳು ಇವೆಲ್ಲ ಬಹಳಷ್ಟು ಬೆಳೆದಿರುವವು, ಜಗತ್ತಿನಲ್ಲಿ ಎಲ್ಲಿ ನೋಡಿದಲ್ಲೆಲ್ಲ ಕಡೆಗೂ ಕೇವಲ ಉಪದೇಶ ಮಾತ್ರ ತೆರಪಿಲ್ಲದೇ (ಒಂದೇ ಸಮನೆ) ನಡೆದಿರುವದು. (೭) ಇವೆಲ್ಲವುಗಳಿಂದ ಪಾರಾಗಿ ಉಳಿದ ಜನರನ್ನು ಸ್ಮಾರ್ತರು.(ಸ್ಮೃತಿ ಅಥವಾ ಶೈವ ಪಂಥವನ್ನು ಅನುಸರಿಸುವವರು ) ಮತ್ತು ವೈಷ್ಣವರು ತಮ್ಮ-ತಮ್ಮ ಸಂಪ್ರದಾಯದತ್ತ ಜುಲುಮೆಯಿಂದ ಎಳೆದುಕೊಂಡರು. ಒಟ್ಟಿನ ಮೇಲಿಂದ ನೋಡಿದರೆ ಎಲ್ಲವೂ ಬಹಳ ಗೊಂದಲವಾಗಿಬಿಟ್ಟಿದೆ. (೮) ಹಲಕೆಲವು ಸಕಾಮ ಭಕ್ತರು ಅಲ್ಲಲ್ಲಿ ಆಸಕ್ತರಾಗಿ ಕುಳಿತಿರುವರು. ಇದರಲ್ಲಿ ಯಾವುದು ಯೋಗ್ಯ. ಯಾವುದು ಅಯೋಗ್ಯ ಅನ್ನುವದನ್ನು ಇವರಲ್ಲಿ ಯಾರೂ ವಿಚಾರ ಮಾಡುವದಿಲ್ಲ. (೯) ಈ ಎಲ್ಲ ಗೊಂದಲ ಮತ್ತು ಗಡಬಿಡಿಯಲ್ಲಿ ಹಲ ಕೆಲವರು ತಮ್ಮ ಪಂಥವನ್ನು ಹೆಚ್ಚಿಸಿಕೊಂಡರು. ಇವರನ್ನು ವೈದಿಕ ಜನರು ದ್ವೇಷ ಮಾಡುತ್ತಾರೆ. (೧೦) ಇಂಥದರಲ್ಲಿಯೋ ಇನ್ನೂ ಕೆಲವು ಜನ ಹರಿಕೀರ್ತನದ ಕಡೆಗೆ ಸೆಳೆಯಲ್ಪಡುತ್ತಿದ್ದಾರೆ. ಪ್ರತ್ಯಕ್ಷ ಅನುಭವದ ಬ್ರಹ್ಮಜ್ಞಾನವು ಇವುಗಳಲ್ಲಿ ಅದೆಯೋ ಇಲ್ಲವೋ ಅನ್ನುವದರ ಚೌಕಶಿಯನ್ನು ಯಾರೂ ಮಾಡುವದಿಲ್ಲ. (೧೧) ಈ ಎಲ್ಲ ಭಾನಗಡಿಯಿಂದ ನಿಜವಾದಜ್ಞಾನ ದುರ್ಲಭವಾಗಿದೆ· ಪೂರ್ವಪುಣ್ಯಪದರಿನಲ್ಲಿ ಇದ್ದರೆ ಮಾತ್ರ ಈ ನಿಜವಾದ ಜ್ಞಾನದ ಲಾಭ ಪ್ರಾಪ್ತವಾಗುವದು. ಆದರೆ ಯಾರು ವಿಚಾರವಂತರಿರುವರೋ ಅವರಿಗೆ ಈ ಜ್ಞಾನವು ಸುಲಭವೇ ಇರುವದು. (೧೨) ಒಬ್ಬನಿಗೆ ನಿಜವಾದ ಜ್ಞಾನವಾದರೂ ಅಥವಾ ಇದರ ಅನುಭವದ ವಿಚಾರ ತಿಳಿದರೂಹೊಳೆದರೂ ಕೂಡಾ ಇದನ್ನು ಇನ್ನೊಬ್ಬರಿಗೆ ಹೇಳಲಿಕ್ಕೆ ಬರುವದಿಲ್ಲ. ಇದು ಬಹಳ ಕಠಿಣ ಹೋಗುವದು. ಇದರಲ್ಲಿ ಅನೇಕ ಅಡಚಣೆಗಳು, ತೊಡಕುಗಳು ಅಡ್ಡಬರುವವು. ಉಪಾಯ ಮಾಡಲು ಹೋದರೆ ಅಪಾಯ ಅಡ್ಡ ಬರುವದು. (೧೩)

ತ್ಯಾಹೀಮಧ್ಯೇ ಜೋ ತಿಕ್ಷಣ । ರಿಕಾಮಾ ಜಾಊ ನೇದೀ ಕ್ಷಣ ।
ಧೂರ್ತ ತಾರ್ಕಿಕ ವಿಚಕ್ಷಣ । ಸಕಳಾ ಮಾನೇ ॥೧೪॥

ನಾನಾ ಜಿನಸ ಉದಂಡ ಪಾಠ । ವದೋ ಲಾಗಲಾ ಘಡಘಡಾಟ ।
ಅವ್ಘಾಟ ಚೀ ಕೇಲೀ ವಾಟ । ಸಾಮರ್ಥ್ಯಬಳೇ ॥೧೫॥

ಪ್ರಬೋಧಶಕ್ತೀಚೀ ಅನಂತ ದ್ವಾರೇ । ಜಾಣೇ ಸಕಳಾಚೀ ಅಂತರೇ ।
ನಿರೂಪಣೇ ತದನಂತರೇ । ಚಟಕ ಲಾಗೇ ॥೧೬॥

ಮತೇ ಮತಾಂತರೇ ಸಗಟ । ಪ್ರತ್ಯಯೆ ಬೋಲೋನ ಕರೀ ಸಪಾಟ ।
ದಂಡಕ ಸಾಂಡೂನ ನೀಟ । ವೇಧೀ ಜನಾ ॥೧೭॥

ನೇಮಕೇ ಭೇದಕೇ ವಚನೇ । ಅಖಂಡ ಪಾಹೆ ಪ್ರಸಂಗಮಾನೇ ।
ಉದಾಸ ವೃತ್ತೀಚ್ಯಾ ಗುಮಾನೇ । ಉಠೋನ ಜಾತೋ ॥೧೮॥

ಪ್ರತ್ಯಯೆ ಬೋಲೋನ ಉಠೋನ ಗೇಲಾ । ಚಟಕ ಲಾಗಲೀ ಲೋಕಾಲಾ ।
ನಾನಾ ಮಾರ್ಗ ಸಾಂಗೂನ ತ್ಯಾಲಾ । ಶರಣ ಯೆತೀ ॥೧೯॥

ಪರೀ ತೋ ಕೋಠೇ ಆಡಳೇನಾ । ಕೋಣೇ ಸ್ಥಳೀ ಸಾಂಪಡೇನಾ ।
ವೇಷ ಪಾಹಾತಾ ಹೀನ ದೀನಾ । ಸಾರಿಖಾ ದಿಸೇ ॥೨೦॥

ಉದಂಡ ಕರೀ ಗುಪ್ತರೂಪೇ । ಭಿಕಾರ್ಯಾಸಾರಿಖಾ ಸ್ವರೂಪೇ ।
ತೇಥೇ ಯಶಕೀರ್ತಿಪ್ರತಾಪೇ । ಸೀಮಾ ಸಾಂಡಿಲೀ ॥೨೧॥

ಠಾಈ ಠಾಈ ಭಜನ ಲಾವೀ । ಆಪಣ ತೇಥೂನ ಚುಕಾವೀ ।
ಮತ್ಸರ ಮತಾಂಚೀ ಗೋವೀ । ಲಾಗೋ ಚ ನೇದೀ ॥೨೨॥

ಖನಾಳಾಮಧ್ಯೇ ಜಾಊನ ರಾಹೇ । ತೇಥೇ ಕೋಣೀ ಚ ನ ಪಾಹೇ ।
ಸರ್ವತ್ರಾಂಚೀ ಚಿಂತಾ ವಾಹೇ । ಸರ್ವಕಾಳ ॥೨೩॥

ಅವಘಡ ಸ್ಥಳೀ ಕಠೀಣ ಲೋಕ । ತೇಥೇ ರಾಹಣೇ ನೇಮಕ ।
ಸೃಷ್ಟೀಮಧ್ಯೇ ಸಕಳ ಲೋಕ । ಧುಂಡೀತ ಯೆತೀ ॥೨೪॥

ತೇಥೇ ಕೋಣಾಚೇ ಚಾಲೇನಾ । ಅನುಮಾತ್ರ ಅನುಮಾನೇನಾ ।
ಕಟ್ಟೆ ಘಾಲೂನ ರಾಜಕಾರಣಾ । ಲೋಕ ಲಾವೀ ॥೨೫॥

ಇಂಥ ಪರಿಸ್ಥಿತಿ ಇದ್ದಾಗಲೂ ಕೂಡಾ ಒಬ್ಬ ಅತಿ ಹುಷಾರ, ಬುದ್ಧಿವಂತ, ವಿಚಾರಶೀಲ, ಮನುಷ್ಯನು ಕಾಣಿಸಿಕೊಳ್ಳುವನು. ಇವನು ಒಂದು ಕ್ಷಣವೂ ಸಹ ತಡಮಾಡದೇ ಸಮಯ ಕಳೆಯದೇ ಕಾರ್ಯ ಪ್ರಾರಂಭಿಸುವನು. ಎಲ್ಲರಿಗೂ ಬೇಕಾದವನಾಗುವನು. ಇವನ ಚತುರತೆ, ಬುದ್ಧಿವಂತಿಕೆ ಮತ್ತು ತಾರತಮ್ಯಗಳು ಇಲ್ಲಿ ಕೆಲಸ ಮಾಡು ವವು. [೧೪] ಪರಿಸ್ಥಿತಿ ಚನ್ನಾಗಿಲ್ಲವೆಂಬ ಮಾತು ನಿಜವಿದೆ. ಆದರೆ ಚತುರ ಜ್ಞಾನಿ ಪುರುಷನು ಇಂಥದರಲ್ಲಿಯೇ ಭೇದ ಹುಡುಕಿ ಮಾರ್ಗ ತೋರುವನು. ದಾರಿ ಹಿಡಿಸುವನು. ಸಮಾಸದ ಪೂರ್ತಿ, ಇಂಥ ಚತುರನು ಲೋಕಸಂಗ್ರಹ ಮಾಡುವ ಕೌಶಲ್ಯದ ವರ್ಣನೆಯು ಇರುವದು:- ಇವನಿಗೆ ಅನೇಕ ವಿಷಯಗಳ ಜ್ಞಾನ ಬಾಯಿಪಾಠ ಇರುವದು. ಇವನು ಮಾತನಾಡಲಿಕ್ಕೆ ಹತ್ತಿದನೆಂದರೆ ಹೇಳುವ ವಿಷಯದ ಜ್ಞಾನವನ್ನು ಒಂದೇಸವನೆ ಏಕಪ್ರಕಾರವಾಗಿ ಮತ್ತು ಉದುರಿದಂತೆ ಹೇಳಹತ್ತುವನು. ಇವನು ತನ್ನ ಜ್ಞಾನದ ಸಾಮರ್ಥ್ಯದಿಂದ ಡೊಂಕಾದ ಅಡ್ಡಾತಿಡ್ಡಾ ಇರುವ ದಾರಿ ಯನ್ನು [ಜ್ಞಾನಕ್ಕೆ ಅಡ್ಡವಾದವುಗಳನ್ನು] ಸರಳ ಮಾಡಿ ತೋರಿಸುವನು. (೧೫) ಜನರನ್ನು ಜಾಗ್ರತಗೊಳಿಸಿ ಜಾಣರನ್ನಾಗಿ ಮಾಡುವ ಅನೇಕ ಮಾರ್ಗಗಳನ್ನು ಇವನು ತಿಳಿದವನಿರುವನು. ಜನರ ಅಂತಃಕರಣವನ್ನು ಇವನು ಸರಿಯಾಗಿ ಗುರುತಿಸುವನು. ಇದರಿಂದಾಗಿ ಇವನ ನಿರೂಪಣ (ಅದ್ವೈತದ ಚರ್ಚೆ) ಕೇಳಿದ ನಂತರ ಜನರಿಗೆ ಇದರ ರುಚಿ ಹತ್ತುವದು. (೧೬) ತನ್ನ ಸ್ವಾನುಭವದ ಮಾಹಿತಿ ಹೇಳಿ ಅನುಭವ ತೋರಿಸಿಕೊಟ್ಟು ಇತರ ಜನರ ಗೊಳ್ಳು ಮತಮತಾಂತರಗಳನ್ನೆಲ್ಲ ಮಣ್ಣುಪಾಲು ಮಾಡಿ ಬಿಡುವನು. ಅರ್ಥಹೀನವಾದ ಜೊಳ್ಳು ಪರಂಪರೆ(ಸಾಂಪ್ರದಾಯ) ಗಳನ್ನೆಲ್ಲ ಬಿಡಿಸಿ ಜನರು ಸರಿಯಾದ ಮಾರ್ಗದಲ್ಲಿ ಹೋಗುಫಂತೆ ಮಾರ್ಗದರ್ಶನ ಮಾಡುವನು. (೧೭) ಇವನ ಮಾತುಗಳು ಸರಿಯಾಗಿ ಅರ್ಥಕೊಡುವಂಥವು. ಮತ್ತು ಜನ ಒಪ್ಪುವಂಥವು ಇರುವವು. ಸಂಶಯದ ಭೇದ ಮಾಡಿ ಬಿಡುವವು. ಇವನು ಪ್ರಸಂಗ ವೇಳೆ ನೋಡಿಕೊಂಡು ನಡೆಯುವವನಾಗಿರುವನು, ತನ್ನ ವೈರಾಗ್ಯಶೀಲವೃತ್ತಿಯ ಬಲದಿಂದ (ಹೆಚ್ಚು ಕಾಲ ಕಳೆಯದೆ) ಅಲ್ಲಿಂದ ಬೇರೆ ಕಡೆಗೆ ಎದ್ದು ಹೋಗುವನು. (೧೮) ಸ್ವಾನುಭವದ ಜ್ಞಾನ ವನ್ನು ನಿರ್ಭಯವಾಗಿ ಅಷ್ಟೇ ಸುಂದರವಾಗಿ ಮಾತಾಡಿ ಹೊರಟುಹೋದದ್ದರಿಂದ ಜನರಿಗೆ ಇವನ ಮಾತುಗಳ ರುಚಿ ಹತ್ತುವದು. ಆಮೇಲೆ ಜನರು ಅನೇಕ ಪ್ರಕಾರದ ಮಾರ್ಗಗಳನ್ನು ಬಿಟ್ಟು ಇವನಿಗೆ ಶರಣು ಹೋಗುವರು. (೧೯) ಆದರೆ ಇವನನ್ನು ಹುಡುಕಿದರೆ ಇವನ ಶೋಧ ಎಲ್ಲಿಯೂ ಬೇಗ ಹತ್ತುವದಿಲ್ಲ, ಯಾವುದೇ ಒಂದು ಸ್ಥಳದಲ್ಲಿ ಇವನು ಸಿಗುವದಿಲ್ಲ. ಇವನ ವೇಷವಾದರೋ ಕೇವಲ ಸಾದಾ (ಹೀನ-ದೀನ) ಜನರಂತೆ ಇರುವದು. [೨೦] ಇವನು ಸ್ವತಃ ಗುಪ್ತವಾಗಿದ್ದುಕೊಂಡು ಅನೇಕ ಕಾರ್ಯ ಮಾಡುವನು. ಹೊರಗಿನಿಂದ ನೋಡುವವರಿಗೆ ಭಿಕಾರಿಯಂತೆ ಕಾಣುವನು. ಆದರೆ ಇವನ ಯಶ, ಇವನ ಕೀರ್ತಿ ಮತ್ತು ಇವನ ಪ್ರತಾಪಗಳು ಸುತ್ತೂ ಕಡೆಗೆ ಹಬ್ಬುವವು. [೨೧] ಅಲ್ಲಲ್ಲಿ ಬಹಳ ಕಡೆಗೆ ಜನರನ್ನು ಭಜನೆ [ನಾಮಸ್ಮರಣೆ]ಗೆ ಹಚ್ಚುವನು. ಆದರೆ ತಾನು ಮಾತ್ರ ಅಲ್ಲಿಂದ ಜಾರಿ ಕಣ್ಮರೆಯಾಗುವನು. ತನ್ನ ಮೇಲೆ ಮತ್ಸರದಿಂದ ಆಪಾದನೆ ಬರುವಂಥ ಪೀಕಲಾಟದ ಪ್ರಸಂಗಗಳಲ್ಲಿ ಎಂದೂ ಸಿಕ್ಕು ಬೀಳುವದಿಲ್ಲ, (ಬೀಳುವಂತಹ ಕೆಲಸ ಮಾಡುವದೂ ಇಲ್ಲ). (೨೨) ಇವನು ಗುಡ್ಡದಲ್ಲಿಯ ಗುಪ್ತ ಗವಿಯಲ್ಲಿ [ಚಾಫಳದಲ್ಲಿಯ ರಾಮಘಳ, ಶಿವಥರದಘಳ, ಚಂದ್ರಗಿರಿಯಲ್ಲಿಯ ಗುಹೆ ಇವು ಶ್ರೀ ಸಮರ್ಥರ ಕಾಲದಲ್ಲಿಯ ಏಕಾಂತ ಸ್ಥಳಗಳಾಗಿದ್ದವು. ಇಂಥವು ಇನ್ನೂ ಅನೇಕವಿರುವವು.] ಗುಹೆಗಳಲ್ಲಿ ಹೋಗಿ ಇರುವನು. ಅಲ್ಲಿಗೆ ಹೋಗಿ ಯಾರೂ ಭೆಟ್ಟಿಯಾಗುವದಿಲ್ಲ. ಆದರೆ ಅಲ್ಲಿ ಸಹ ಇವನು ಎಲ್ಲರ ಹಿತಚಿಂತನೆಯ[ಕಾಳಜಿಯ]ನ್ನೇ ಮಾಡುವನು. [೨೩] ಗುಡ್ಡದಲ್ಲಿ ಇವನು ದುರ್ಗಮ ಮತ್ತು ಇಕ್ಕಟ್ಟಿನ ಸ್ಥಳದಲ್ಲಿ ವಾಸಮಾಡುವನು. [ಇಲ್ಲಿ ಸಹ ಇವನು ಕಾಯಂ ಇರುವದಿಲ್ಲ.] ಇವನ ಸಮೀಪದಲ್ಲಿ ಗುಡ್ಡಗಾಡಿನ ಕಾಡು ಜನರ ವಸತಿ ಇರುವದು. ಇಂಥಲ್ಲಿ ಇವನ ವಾಸ್ತವ್ಯ ಇದ್ದರೂ ಸಹ ಜಗತ್ತಿನಲ್ಲಿಯ ಜನರು ಇವನನ್ನು ಹುಡುಕಿಕೊಂಡು ಬರುವರು. [೨೪] ಇವನ ತಪಃಪ್ರಭಾವದ ಮುಂದೆ ಯಾರ ಆಟವೂ ನಡೆಯುವದಿಲ್ಲ. ಇವನ ಗುಟ್ಟು ಇವನ ವಿಷಯದ ಬಗ್ಗೆ ಮಾಹಿತಿ ಸ್ವಲ್ಪವೂ ಕೂಡಾ ಸಾಮಾನ್ಯಜನರ ಕಲ್ಪನೆಗೆ ಬರುವದಿಲ್ಲ. ಇವನು ಸಮೂಹ ನಿರ್ಮಾಣ ಮಾಡಿ ನಿಯಮ ನಿಷ್ಠುರತೆಗಳನ್ನು ತಿಳಿಸಿ ಕೊಟ್ಟು ರಾಜಕಾರಣ ಮಾಡುವದು ಹೇಗೆಂಬುದನ್ನು ಕಲಿಸುವನು. [೨೫]

ಲೋಕೀ ಲೋಕ ವಾಢವಿಲೇ । ತೇಣೇ ಅಮರ್ಯಾದ ಜಾಲೇ ।
ಭೂಮಂಡಳೀ ಸತ್ತಾ ಚಾಲೇ । ಗುಪ್ತರೂಪೇ ॥೨೬॥

ಶಾಕಾ ಶಾಕಾ ಉದಂಡ ತಾಬೇ । ಮನುಷ್ಯಮಾತ್ರ ತಿತುಕೇ ಝೊಂಬೇ ।
ಚಹುಕಡೆ ಉದಂಡ ಲಾಂಬೇ । ಪರಮಾರ್ಥಬುದ್ಧೀ ॥೨೭॥

ಉಪಾಸನೇಚಾ ಗಜರ । ಸ್ಥಳೋಸ್ಥಳೀ ಥೋರ ಥೋರ ।
ಪ್ರತ್ಯಯಾನೇ ಪ್ರಾಣಿಮಾತ್ರ । ಸೋಡವಿಲೇ ॥೨೮॥

ಐಸೇ ಕೈವಾಡೆ ಉದಂಡ ಜಾಣೇ । ತೇಣೇ ಲೋಕ ಹೋತೀ ಶಹಾಣೇ ।
ಜೇಥೇ ತೇಥೇ ಪ್ರತ್ಯೆಯ ಬಾಣೇ । ಪ್ರಾಣಿಮಾತ್ರಾಸೀ ॥೨೯॥

ಐಸೀ ಕೀರ್ತಿ ಕರೂನ ಜಾವೇ। ತರೀ ಚ ಸಂಸಾರಾಸ ಯಾವೇ ।
ದಾಸ ಮ್ಹಣೇ ಹೇ ಸ್ವಭಾವೇ । ಸಂಕೇತೇ ಬೋಲಿಲೇ ॥೩೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ನಿಸ್ಪೃಹ ವ್ಯಾಪ ಲಕ್ಷಣ' ನಾಮ ಸಮಾಸ ದ್ವಿತೀಯ ॥

ಒಂದು ಜನಸಮೂಹದಿಂದ ಇನ್ನೊಂದು ಜನಸಮೂಹ ಅರ್ಥಾತ್ ಸಮೂಹದಿಂದ ಸಮೂಹ ನಿರ್ಮಾಣವಾಗುವದು. ಇದರಿಂದಾಗಿ ದೊಡ್ಡ ಸಂಘಟನೆ ತಯಾರ ಆಗುವದು. ಈ ಪ್ರಕಾರ ಸಂಘಟನೆಯು ಗುಪ್ತವಾಗಿಯೇ ಇದ್ದು ಇವನ (ಸತ್ತಾ) ಅಧಿಕಾರ ಸಮಾಜದ ಮೇಲೆ ನಡೆಯುವದು. [೨೬] ಅಲ್ಲಲ್ಲಿ ಇವನ ಅನುಯಾಯಿಗಳ ಸಮೂಹ ಇರುವದರಿಂದ ಇಂಥ ಸಮೂಹದ ಕಡೆಗೆ ಜನರು ಆಕರ್ಷಿತರಾಗುವರು. ಸಮಾಜದಲ್ಲೆಲ್ಲ ಕಡೆಗೂ ಪರಮಾರ್ಥ ಬುದ್ಧಿಯು ವೃದ್ಧಿಯಾಗಿ ಅದು ದೂರ ದೂರದವರೆಗೂ ಹರಡುವದು. [೨೭] ಇದರಿಂದಾಗಿ ಗ್ರಾಮ ಗ್ರಾಮಗಳಲ್ಲಿ ಮತ್ತು ಎಲ್ಲ ಕಡೆಗೆ ಉಪಾಸನೆಯು ದೊಡ್ಡದಾದ ಜಯ ಜಯಕಾರಗಳ ಗರ್ಜನೆಯು ಕೇಳಬರುವದು. ಈ ಪ್ರಕಾರ ತಮ್ಮ ಸ್ವಾನುಭವದ ಸಾಮರ್ಥ್ಯದಿಂದ ಅನೇಕ ಜನರನ್ನು ಮುಕ್ತಗೊಳಿಸುವನು. [೨೮] ಲೋಕಸಂಗ್ರಹದ ಅನೇಕ ಸುಯುಕ್ತಿಗಳು ಇವನಲ್ಲಿ ಇರುವವು. ಇವುಗಳ ಉಪಯೋಗದಿಂದ ಜನರು ಜಾಣರಾಗುವರು. ಪ್ರತಿಯೊಂದು ಸ್ಥಳದಲ್ಲಿಯು ಜನರಿಗೆ ಇವನ ಜ್ಞಾನದ ಅನುಭವ ಬರುವದು. [೨೯] ಇಂಥ ಕೀರ್ತಿಯನ್ನು ಸಂಪಾದನೆ ಮಾಡಿಕೊಂಡು ಹೋದರೆ ಮಾತ್ರ ಜನ್ಮಕ್ಕೆ ಬಂದದ್ದು (ಸಂಸಾರದಲ್ಲಿ ಹುಟ್ಟಿದ್ದಕ್ಕೆ) ಸಾರ್ಥಕವೆನಿಸುವದು. ಶ್ರೀರಾಮದಾಸರನ್ನುವದೇನಂದರೆ, ಅತ್ಯಂತ ಸಹಜ ಆದರೆ ಸ್ವಲ್ಪದರಲ್ಲಿ ಸಂಕೇತ ರೂಪದಲ್ಲಿ ನಾನು ಇದನ್ನು ಹೇಳಿರುವೆನು[೩೦]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹದಿನೈದನೆಯ ದಶಕದೊಳಗಿನ
"ನಿಸ್ಪೃಹವ್ಯಾಪ ಲಕ್ಷಣ"ವೆಂಬ ಹೆಸರಿನ ಎರಡನೆಯ ಸಮಾಸವು ಮುಗಿದುದು.

● ●

### ದಶಕ ಪಂಚದಶಕ : ಸಮಾಸ ತೃತೀಯ : ಶ್ರೇಷ್ಠ ಅಂತರಾತ್ಮ ನಿರೂಪಣ

॥ಶ್ರೀರಾಮ॥ ಮೂಳಾ ಪಾಸೂನ ಸೈರಾ ವೈರಾ। ಅವಘಾ ಪಂಚೀಕರ್ಣ ಪಸಾರಾ।
ತ್ಯಾಂತ ಸಾಕ್ಷತ್ವಾಚಾ ದೋರಾ। ತೋ ಹಿ ತತ್ವರೂಪ ॥೧॥

ದುರಸ್ತಾ ದಾಟಲ್ಯಾ ಫೌಜಾ। ಉಂಚ ಸಿಂಹಾಸನೀ ರಾಜಾ।
ಯಾಚಾ ವಿಚಾರ ಸಮಜಾ। ಅಂತರ್ಯಾಮೀ ॥೨॥

# ದಶಕ ೧೫. ಸಮಾಸ ೩. ಶ್ರೇಷ್ಠ ಅಂತರಾತ್ಮ ನಿರೂಪಣ [ನುಡಿ ೩೦]

ಸಂಪೂರ್ಣ ಅದ್ವೈತವಾದಿಯಾದ ಶ್ರೀಸಮರ್ಥರಿಗೆ ಬ್ರಹ್ಮಜ್ಞಾನದ ಸಂಗಡವೇ ತಮ್ಮ ಸುತ್ತುಮುತ್ತ ಲಿರುವ ಸಾಮಾಜಿಕ ಪರಿಸ್ಥಿತಿಯ ಅರಿವು ಕೂಡಾ ಸಂಪೂರ್ಣ ಇದ್ದಿತೆಂಬುದನ್ನೇನೂ ಮೇಲಿಂದ ಮೇಲೆ ಬಿಡಿಸಿ ಹೇಳ ಬೇಕಾಗಿಲ್ಲ. ಆದ್ದರಿಂದ ತಮ್ಮ ಪರಿಸರದಲ್ಲಿಯ ಮಾನವತೆಯನ್ನು ವಿವೇಕಸಂಪನ್ನ ಮಾಡಿ ಉತ್ಸಾಹಯುಕ್ತ ಹಾಗೂ ಪ್ರಯತ್ನಶೀಲವಾಗುವಂತೆ ಮಾಡುವ ಜವಾಬ್ದಾರಿಯು ಜ್ಞಾನಿ ಪುರುಷರ ಮೇಲಿರುವದು, ಅನ್ನುವ ಸಮರ್ಥರ ಈ ಅನಿಸಿಕೆಯು ನಮಗೆ ತಿಳಿಯಿತು. ಆದರೆ ಜ್ಞಾನಿ ಪುರುಷನು ಯಾವ ವಿವೇಕವನ್ನು ಮತ್ತು ಎಂಥ ಪ್ರಯತ್ನವನ್ನು ಹೇಳುವನೋ ಅದರ ದಿಶೆ ಯಾವುದಿರಬೇಕು? ಎಂಥದಿರಬೇಕು? ಇದನ್ನು ಹೇಳುವದಕ್ಕೆ ಯಾವಾಗಲೂ ಎಂದೂ ಮರೆಯುವದಿಲ್ಲ. ಈ ಎಲ್ಲ ವಿಶ್ವದ ಪಸಾರವು ಪಂಚಭೂತಗಳಿಂದ ಹೆಣೆಯಲ್ಪಟ್ಟಿರುವದು. ಒಂದುಹಾರದಲ್ಲಿ ದಾರವು ಆ ತುದಿಯಿಂದ ಈ ತುದಿಯವರೆಗೆ ಅಖಂಡವಾಗಿ ಹೂವಿನೊಂದಿಗೇ ಇರುವದು. ಇದರಂತೆಯೇ ಅಂತರಾ ತ್ಮನು ಎಲ್ಲ ದೃಶ್ಯಗಳಲ್ಲಿ ಅಂತರ್ಯಾಮಿಯಾಗಿ ವಾಸ ಮಾಡುವನು. ಇವನು ಶುದ್ಧ ಅರಿವಿ(ತಿಳುವಳಿಕೆಯುಳ್ಳ) ನಿಂದ ಕೂಡಿದವನಿರುವನು. ಸಾಕ್ಷೀ ರೂಪದಿಂದ ಇರುವನು. ಸಗುಣತನದಿಂದ ಇರುವನು. ಇವನು ಸರ್ವಜ್ಞಾನ ಸಂಪನ್ನ, ಸರ್ವಗುಣ ಸಂಪನ್ನ, ಮತ್ತು ಸರ್ವ ಸಾಮರ್ಥ್ಯ ಸಂಪನ್ನನಿರುವನು. ಸಾಮಾನ್ಯ ಮನುಷ್ಯರಲ್ಲಿ ಇವನು ಇದ್ದೂ ಇಲ್ಲ ದವರಂತೆ ಇರುವನು. ಆದರೆ ಯಾವ ಪುರುಷನ ಅಂತಃಕರಣದಲ್ಲಿ ಇವನು(ಅಂತರಾತ್ಮಾ, ಶುದ್ಧ ಅರಿವಿನ ರೂಪನು) ಜಾಗ್ರತನಾಗುವನೋ ಅವನ ಅರಿವು ಪಸರಿಸಲಿಕ್ಕೆ ಹತ್ತುವದು. ಯಾರಲ್ಲಿ ಅತಿಶಯ ವಿಶಾಲ ಅರಿವು ಕಂಡುಬರು ವದೋ ಅವರಿಗೆ ಅವತಾರಿ ಪುರುಷರೆನ್ನುವರು. ಅರಿವು ವಿಶಾಲವಾಗಿರುವಂಥ ಜನರು ನಿಜವಾಗಿಯೂ ದೊಡ್ಡವರು ಮತ್ತು ಭಾಗ್ಯಶಾಲಿಗಳೆಂದು ತಿಳಿಯಬೇಕು. ವಯಸ್ಸಿನಿಂದ ಅಥವಾ ಇತರ ರೀತಿಯಿಂದ ಬರುವಂಥ ದೊಡ್ಡಿಸ್ತನವು ನಿಜವಾದ ದೊಡ್ಡಿಸ್ತನವಲ್ಲ. ಅಂತರಾತ್ಮಾ ನಿಜವಾದವನು. ಮತ್ತು ಎಲ್ಲರಕಿಂತ ದೊಡ್ಡವನು(ಹಿರಿಯವನು). ಇವನು ಜಾಗ್ರತಗೊಳ್ಳಲಿಕ್ಕೇ ಮಾತ್ರ ಬೇಕು. ಮನುಷ್ಯರ ಅಂತಃಕರಣದಲ್ಲಿ ಇದನ್ನು ಜಾಗ್ರತಗೊಳಿಸುವ ಕೆಲಸವು ಜ್ಞಾನಿ ಪುರುಷನ ಮುಖ್ಯ ಲಕ್ಷಣವಾಗಿರುವದು. ಮತ್ತು ಕಾರ್ಯವಾಗಿರುವದು. ಮನುಷ್ಯನು ಬೇಕಾದ್ದನ್ನು ಮಾಡಲಿ, ಆದರೆ ಶಹಾಣೆ(ಜಾಣ)ತನವನ್ನು ಕಲಿಯಬೇಕು. ಯಾವನು ಬಹಳಷ್ಟು ಜನರಿಗೆ ಬೇಕಾದವನಾಗುವನೋ, ಸರಿ ಬೀಳುವನೋ, ಪ್ರಿಯನಾಗುವನೋ ಅವನೇ ನಿಜವಾದ ಶಹಾಣೆ (ಜಾಣ) ಎನಿಸುವನು. ಸಾಧಕರು ಇದನ್ನು ಸರಿಯಾಗಿ ತಿಳಿದು ಕೊಳ್ಳಿರಿ. ತಿಳಿಯದಿದ್ದರೆ ಗ್ರಂಥಗಳನ್ನು ನೋಡಿರಿ (ತಿಳಿದವರನ್ನು ಕೇಳಿರಿ) ಅಂತರಾತ್ಮಾ ಅಂದರೆ ದೇವರೇ ಇರುವನು.

## ದಶಕ ೧೫. ಸಮಾಸ ೩. ಶ್ರೇಷ್ಠ ಅಂತರಾತ್ಮ ನಿರೂಪಣ (ನುಡಿ ೩೦)

ಇಡೀ ವಿಶ್ವದಲ್ಲಿ ಪಂಚಭೂತದ ಪಸಾರಾ (ಆಟ, ಇರವು) ಇದ್ದರೂ ಕೂಡಾ ಅವರಲ್ಲಿ ಅಂತರಾತ್ಮಾ ತುಂಬಿರುವನು. ಇವನು ತತ್ವಗಳಲ್ಲಿಯೇ ಅಡಗಿದ್ದರೂ ಕೂಡಾ ಇವನ ಸತ್ತೆಯಿಂದಲೇ ಏನೆಲ್ಲವೂ ಘಟಿಸುವವು. ಯಾವನಲ್ಲಿ ಅಂತರಾತ್ಮನ ಅರಿವು ಬಹಳ ಪ್ರಮಾಣದಲ್ಲಿ ಪ್ರಕಟಗೊಳ್ಳುವದೋ ಅವನಿಗೆ ಅವತಾರಿಕನೆನ್ನುವರು:— ಈ ದೃಶ್ಯ ವಿಶ್ವವು ಪಂಚಭೂತಗಳ ಮಿಶ್ರಣದಿಂದ ಉತ್ಪನ್ನವಾಗಿ ಸ್ವಚ್ಛಂದವಾಗಿ ಅಥವಾ ಸಿಕ್ಕಾಪಟ್ಟೆ [ಸ್ವೈರತನ ದಿಂದ] ಬೆಳೆದ ಈ ವಿಸ್ತಾರವು ನಮಗೆ ಕಾಣುವದು. ಇದರ ಮೂಲವು ಅತ್ಯಂತ ಮೂಲ ಮಾಯೆಯಲ್ಲಿರುವದು. ಆದರೆ ಈ ವಿಸ್ತಾರಗೊಂಡ ವಿಶ್ವದಲ್ಲಿ ಎಲ್ಲವರಲ್ಲಿಯೂ ಸಾಕ್ಷಿತನದಿಂದ [ಸಾಕ್ಷಿಯಾಗಿ ನಿಂತು] ಅಥವಾ ದೃಷ್ಟಾತನದಿಂದ ಅಂತರಾತ್ಮನ ಅಖಂಡ ತಂತು [ಎಳೆ] ಇರುವದು. ಅರ್ಥಾತ್ ಅಂತರಾತ್ಮಾ ಇವನೂ ಕೂಡಾ ತತ್ವಗಳ ಪೈಕಿ ಒಬ್ಬ ನಿರುವನು. [೧] ರಾಜನು ಉಚ್ಚ ಸಿಂಹಾಸನದ ಮೇಲೆ ಕೂಡ್ರುವನು. ಇವನ ಎರಡೂ ಬಾಜೂಕ್ಕೆ ಸೈನ್ಯವು ಒಳ್ಳೇ ಶಿಸ್ತಿನಿಂದ ನಿಂತಿರುವದು. ಇದರಂತೆ ಈ ಜಗತ್ತಿನಲ್ಲಿ ಕಂಡುಬರುವ ತತ್ವಗಳು ಸೈನಿಕ ಫೌಜುಗಳು ಇದ್ದಂತೆ. ಈ ಸೈನಿಕ ರಲ್ಲಿರುವ ಸಾಕ್ಷಿರೂಪ ಅಂತರಾತ್ಮಾ ರಾಜನಿದ್ದಂತೆ, ಇದರ ವಿಚಾರವನ್ನು ಮನದಲ್ಲಿ ಸಮಾಧಾನದಿಂದ ಮಾಡಿ ಇದರ ಅರ್ಥವನ್ನು ತಿಳಿದುಕೊಳ್ಳಿರಿ. [೨]

ದೇಹಮಾತ್ರ ಅಸ್ತಿಮಾಂಶಾಚೇ । ತೈಸೇ ಚಿ ಜಾಣಾವೇ ನೃಪತೀಚೇ।
ಮುಳಾಪಾಸೂನ ಸೃಷ್ಟೀಚೇ । ತತ್ವರೂಪ ॥೩॥

ರಾಯಾಚೇ ಸತ್ತೇನೇ ಚಾಲತೇ । ಪರಂತು ಅವಘೇ ಪಂಚಭೂತೇ ।
ಮೂಳೀ ಅಧಿಕ ಜಾಣಿವೇಚಿ ತೇ । ಅಧಿಷ್ಠಾನ ಆಹೇ ॥೪॥

ವಿವೇಕೇ ಬಹುತ ಪೈಸಾವಲೇ । ಮ್ಹಣೌನ ಅವತಾರೀ ಬೋಲಿಲೇ ।
ಮನು ಚಕ್ರವತೀ ಜಾಲೇ । ಯೇಣೇ ಚಿ ನ್ಯಾಯೇ ॥೫॥

ಜೇಥೇ ಉದಂಡ ಜಾಣೀವ । ತೇ ಚಿ ತಿತುಕೇ ಸದೇವ ।
ಥೋಡೆ ಜಾಣೀವೆನೇ ನರ್ದೇವ । ಹೋತೀ ಲೋಕ ॥೬॥

ವ್ಯಾಪ ಆಟೋಪ ಕರಿತೀ । ಧಕೆ ಚಪೇಟೇ ಸೋಸಿತೀ ।
ತೇಣೇ ಪ್ರಾಣೀ ಸದೇವ ಹೋತೀ । ದೇಖತದೇಖತಾ ॥೭॥

ಐಸೇ ಹೇ ಆತಾ ವರ್ತತೇ । ಮೂರ್ಖ ಲೋಕಾಸ ಕಳೇನಾ ತೇ ।
ವಿವೇಕೀ ಮನುಷ್ಯ ಸಮಜತೇ । ಸಕಳ ಕಾಂಹೀ ॥೮॥

ಥೋರ ಲಹಾನ ಬುದ್ಧೀಪಾಸೀ । ಸಗಟ ಕಳೇನಾ ಲೋಕಾಸೀ ।
ಆಧೀ ಉಪಜಲೇ ತಯಾಸೀ । ಥೋರ ಮ್ಹಣತೀ ॥೯॥

ವಯೇ ಧಾಕುಟಾ ನೃಪತೀ । ವೃದ್ಧ ತಯಾಸ ನಮಸ್ಕಾರ ಕರಿತೀ ।
ವಿಚಿತ್ರ ವಿವೇಕಾಚೀ ಗತೀ । ಕಳಲೀ ಪಾಹಿಜೆ ॥೧೦॥

ಸಾಮಾನ್ಯ ಲೋಕಾಂಚೇ ಜ್ಞಾನ । ತೋ ಅವಘಾ ಚ ಅನುಮಾನ ।
ದೀಕ್ಷಾದಂಡಕಾಚೇ ಲಕ್ಷಣ । ಯೇಣೇ ಚಿ ಪಾಡೇ ॥೧೧॥

ನವ್ಹೇ ಕೋಣಾಸ ಮ್ಹಣಾವೇ । ಸಾಮಾನ್ಯಾಸ ಕಾಯೇ ಠಾವೇ ।
ಕೋಣಕೋಣಾಸ ಮ್ಹಣಾವೇ । ಕಿತೀ ಮ್ಹಣೋನೀ ॥೧೨॥

ಧಾಕುಟಾ ಭಾಗ್ಯಾಸ ಚಢಲಾ । ತರೀ ತುಚ್ಛ ಕರಿತೀ ತಯಾಲಾ ।
ಯಾಕಾರಣೇ ಸಲಗೀಚ್ಯಾ ಲೋಕಾಲಾ । ದುರೀ ಧರಾವೇ ॥೧೩॥

ಸೈನಿಕರ ದೇಹವು ಹೇಗೆ ಎಲುವು ಮಾಂಸಗಳದ್ದಿರುವದೋ ಅದರಂತೆ ರಾಜನ ದೇಹವೂ ಕೂಡಾ ಅದೇ ಎಲುವು ಮಾಂಸಗಳದ್ದೇ ಇರುವದು. ಇದರಂತೆ ಪಂಚಭೂತಾತ್ಮಕ ಜಗತ್ತು ಮತ್ತು ಅದರ ಸಾಕ್ಷಿಯಾದ ಅಂತರಾತ್ಮಾ ಈ ಎರಡೂ ತತ್ವರೂಪವೇ ಇರುವವು. [೩] ರಾಜನ ಸತ್ತೆಯಿಂದ ಸೈನ್ಯ ನಡೆಯುವದು. [ಕೆಲಸ ಕಾರ್ಯ ಮಾಡುವದು]. ಆದರೆ ರಾಜ ಮತ್ತು ಅವನ ಸೈನ್ಯ ಇವೆರಡೂ ಪಂಚಭೂತಾತ್ಮಕವೇ ಇರುವವು. ಆದರೆ ವ್ಯತ್ಯಾಸ ಇಷ್ಟೇ ಇರುವದು: ಏನೆಂದರೆ ರಾಜನಲ್ಲಿ ಸತ್ತೆಯು ಅಧಿಷ್ಠಾನವು ಹೆಚ್ಚಿನ ಪ್ರಮಾಣದಲ್ಲಿ ಇರುವದು. ಅಂತರಾತ್ಮನಲ್ಲಿ ಅರಿವಿನ ಅಧಿಷ್ಠಾನವು ಮೂಲದಲ್ಲಿಯೇ ಹೆಚ್ಚಿಗೆ ಇರುವದು. ಈ ಕಾರಣದಿಂದ ಆ ದೃಷ್ಟಾನು ಸಾಕ್ಷಿಯಾಗುವನು. ವಿಶ್ವವು ಸಂಪೂರ್ಣ ಇಲ್ಲದಾದ ಕೂಡಲೇ ಸಾಕ್ಷಿತನವೂ ಮುಗಿಯುವದು. ಇಲ್ಲದಾಗುವದು. ಈ ದೃಷ್ಟಿಯಿಂದ ದೃಷ್ಟಾತನವು ತಾತ್ಪೂರ್ತಿಕವಿರುವದು. [೪] "ನಾನು ದೇಹವಲ್ಲ ಆತ್ಮನೇ ಇರುವೆನು" ಈ ವಿವೇಕದಿಂದ ಯಾರು ಅತಿ ವಿಶಾಲರಾದರೋ (ಆಗುವರೋ) ಅವರಿಗೆ ಅವತಾರಿ ಪುರುಷರು ಎಂದು ಅನ್ನುವರು. ಇದೇ ನ್ಯಾಯದಿಂದ ಮನುವು ಚಕ್ರವರ್ತಿಯಾದನು. [೫] ಯಾವ ಮನುಷ್ಯನಲ್ಲಿ ಅತಿಶಯ ವಿಶಾಲವಾದ ಅರಿವು ಇರುವದೋ ಅವನು ಅಷ್ಟೇ (ವಿಶಾಲ-ದೊಡ್ಡ) ಭಾಗ್ಯವಂತನಿರುವನು. ಯಾವ ಮನುಷ್ಯನಲ್ಲಿ ಅಲ್ಪವಾದ ಅರಿವು ಇರುವದೋ ಅವನು ದುರ್ದೈವಿಯಾಗಿರುವನು. [೬] ಯಾರು (ಭಗವಂತನ ಬಗ್ಗೆ) ವ್ಯಾಪ ಬೆಳೆಸುವರೋ,ಜೀವನದಲ್ಲಿಯ ಕಷ್ಟ ಕೋಟಲೆಗಳನ್ನು ಸಹಿಸುವರೋ ಇಂಥವರೆಲ್ಲರೂ ನೋಡ ನೋಡುವದರಲ್ಲಿ ಭಾಗ್ಯವಾನರಾಗುವರು. [೭] ಮಾನವ ಜೀವನ (ಸಂಸಾರ)ದಲ್ಲಿ ಕೂಡಾ ಇಂದಿಗೂ ಇದೇ ರೀತಿ ಇರುವದು. (ಪರಮಾರ್ಥ ಮಾರ್ಗದಲ್ಲಿಯೂ ಬಹಳ ಅಡ್ಡಿ ಆತಂಕ ಕಷ್ಟಗಳು ಬರುವವು. ಅದರಂತೆ ಸಂಸಾರದಲ್ಲಿ ಕೂಡಾ ಅನೇಕ ಕಷ್ಟ ದುಃಖ ಅಡ್ಡಿ-ಆತಂಕಗಳು ಬರುವವು. ಅನ್ನುವ ಅಭಿಪ್ರಾಯ). ಆದರೆ ನಮ್ಮ ಮೂರ್ಖ ಶಿಖಾಮಣಿಗಳಿಗೆ (ಜನರಿಗೆ) ಇದು ತಿಳಿಯಲೊಲ್ಲದಾಗಿದೆ. ಯಾರು ವಿವೇಕಿಗಳಿರುವರೋ ಅವರಿಗೆ ಮಾತ್ರ ಇದೆಲ್ಲವೂ ತಿಳಿಯುವದು. [೮] ನಿಜವಾದ ದೊಡ್ಡಿಸ್ತನವು ಅಥವಾ ಅಲ್ಪತನವು ವಯಸ್ಸನ್ನು ಅವಲಂಬಿಸಿ ಇರುವದಿಲ್ಲ. ಇದು ಗುಣದ ಮೇಲೆ ಮತ್ತು ಬುದ್ಧಿಯ ಮೇಲೆ ಅವಲಂಬಿಸಿರುವದು. ಗುಣದ್ದು ಮತ್ತು ಬುದ್ಧಿಯದು ಅಂದರೇನೇ ಆತ್ಮಾನಾತ್ಮ ವಿವೇಕದ ಬೆಳವಣಿಗೆ ಹೆಚ್ಚಲಿಕ್ಕೆ ಅಂತರಾತ್ಮನು ಜಾಗ್ರತನಾಗಬೇಕಾಗುವದು. ಇವನು ಯಾವತ್ತರಲ್ಲಿಯೂ ಹಿರಿಯವನು (ದೊಡ್ಡವನು) ಇದ್ದುದರಿಂದ ಇವನ ಮೂಲಕವಾಗಿ ನಿಜವಾದ ದೊಡ್ಡಿಸ್ತನವು [ಜಗತ್ತಿನಲ್ಲಿ] ಲಭ್ಯವಾಗುವದು:- ಜಗತ್ತಿನಲ್ಲಿಯ ನಿಜವಾದ ದೊಡ್ಡಿಸ್ತನ ಮತ್ತು ಅಲ್ಪತನ ಇವು ಮನುಷ್ಯನ ವಿವೇಕ ಶಕ್ತಿಯಲ್ಲಿ ಇರುವವು. ಆದರೆ ಸಾಮಾನ್ಯ ಜನರಿಗೆ ಇದು ತಿಳಿಯುವದಿಲ್ಲ. ಯಾವನು ಮೊದಲು ಜನ್ಮ ತಳೆಯುವನೋ ಅವನಿಗೆ ಜನರು ದೊಡ್ಡವನೆನ್ನುವರು. [೯] ರಾಜನು ವಯಸ್ಸಿನಿಂದ ಸಣ್ಣವನಿದ್ದರೂ ಸಹ ಜನರು ಅವನಿಗೆ ನಮಸ್ಕಾರ ಮಾಡುವರು. ವಿವೇಕಶಕ್ತಿ ಹೇಗೆ ವಿಚಿತ್ರವಾಗಿ ಕೆಲಸ ಮಾಡುವದು, ಇದನ್ನು ತಿಳಿಯುವದು ಅವಶ್ಯವಿರುವದು.[೧೦]ಸಾಮಾನ್ಯ ಜನರ ಜ್ಞಾನವೆಲ್ಲವೂ ಅನುಮಾನದ ಮೇಲೆಯೇ ಆಧಾರಿತವಾಗಿರುವದು. ಇವರ ಸಂಪ್ರದಾಯ ದೀಕ್ಷೆ ಮತ್ತು ಲೋಕ ಪರಂಪರೆ [ರೂಢಿ] ಇವು ಎರಡೂ ಅನುಮಾನದ ಮೇಲಿಂದಲೇ ನಡೆಯುವವು. [೧೧] ಅನುಮಾನದ ಆಧಾರದ ಮೇಲಿಂದ ನಡೆಯುವಂಥವೆಲ್ಲವೂ ನಿಜವಲ್ಲವೆಂದು ಜನರಿಗೆ ಎಷ್ಟೆಂದು ಹೇಳುವದು? ಸಾಮಾನ್ಯ ಜನತೆಗೆ ಇದರಲ್ಲಿ ಹೆಚ್ಚಾಗಿ ತಿಳಿಯುವದಿಲ್ಲ. ಮತ್ತು ಸಾಮಾನ್ಯ ಜನರ ಸಂಖ್ಯೆಯೇ ಬಹಳಷ್ಟು ಹೆಚ್ಚಾಗಿರುವದರಿಂದ ಯಾರು ಯಾರಿಗೆ ಹೇಳುತ್ತ ಹೋಗಬೇಕು ? ಇದಕ್ಕೆ ಕೊನೆಯಾದರೂ ಎಲ್ಲಿದೆ ? ಅರ್ಥಾತ್ ಇಲ್ಲ. [೧೨] ನಮಗಿಂತ ವಯಸ್ಸಿನಿಂದ ಚಿಕ್ಕವನಾದವನು ಒಂದು ವೇಳೆ ಭಾಗ್ಯವಂತನಾದರೆ ಜನರು ಅವನನ್ನು ತುಚ್ಛವಾಗಿ ಕಾಣುವರು. ಅವನಿಗೆ ಮಹತ್ವ ಕೊಡುವದೇ ಇಲ್ಲ. ಆದ್ದರಿಂದ ನಮ್ಮೊಂದಿಗೆ ಸ್ನೇಹದ ಸಲಗಿ ಮಾಡುವವರನ್ನೂ ಮತ್ತು ಸ್ನೇಹದ ಸಲಗಿ ಇರುವಂಥವರನ್ನೂ ದೂರ ಇಡಿರಿ. ಹೆಚ್ಚು ಸಂಪರ್ಕ ಬೆಳಿಸಬೇಡಿರಿ. [೧೩]

ನೇಮುಸ್ತ ಕಳೇನಾ ವಚನ । ನೇಮುಸ್ತ ನಯೇ ರಾಜಕಾರಣ ।
ಉಗೇ ಚಿ ಧರಿತೀ ಥೋರಪಣ । ಮೂರ್ಖ ಪಣೇ ॥೧೪॥

ನೇಮುಸ್ತ ಕಾಂಹೀ ಚ ಕಳೇನಾ । ನೇಮುಸ್ತ ಕೋಣೇ ಚ ಮಾನೀನಾ ।
ಆಧೀ ಉಪಜಲೇ ತ್ಯಾ ಥೋರಪಣಾ । ಕೋಣ ಪುಸೇ ॥೧೫॥

ವಡಿಲಾ ವಡಿಲಪಣ ನಾಹೀ । ಧಾಕುಟ್ಯಾ ಧಾಕುಟಪಣ ನಾಹೀ ।
ಏಸೇ ಬೋಲತೀ ತ್ಯಾಸ ನಾಹೀ । ಶಾಹಾಣಪಣ ॥೧೬॥

ಗುಣೇವಿಣ ವಡಿಲಪಣ । ಹೇ ತೋ ಅವಘೇ ಚ ಅಪ್ರಮಾಣ ।
ತ್ಯಾಚೀ ಪ್ರಚೀತ ಪ್ರಮಾಣ । ಥೋರಪಣೇ ॥೧೭॥

ತಥಾಪಿ ವಡಿಲಾಸ ಮಾನಾವೇ । ವಡಿಲೇ ವಡಿಲಪಣ ಜಾಣಾವೇ ।
ನೇಣತಾ ಪುಢೇ ಕಷ್ಟಾವೇ । ಥೋರಪಣೇ ॥೧೮॥

ತಸ್ಮಾತ್ ವಡಿಲ ಅಂತರಾತ್ಮಾ । ಜೇಥೇ ಚೇತಲಾ ತೇಥೇ ಮಹಿಮಾ ।
ಹೇ ತೋ ಪ್ರಗಟ ಚಿ ಆಹೆ ಆಮ್ಹಾ । ಶಬ್ದ ನಾಹೀ ॥೧೯॥

ಯಾಕಾರಣೇ ಕೋಣೇಯೇಕ । ಶಾಹಾಣಪಣ ಸಿಕಾವೇ ವಿವೇಕೇ ।
ವಿವೇಕ ನ ಸಿಕತಾ ತುಕೇ । ತುಟೋನ ಜಾತೀ ॥೨೦॥

ತುಕ ತುಟಲೇ ಮ್ಹಣಿಜೆ ಗೇಲೇ । ಜನ್ಮಾ ಯೇಊನ ಕಾಯ ಕೇಲೇ ।
ಬಳೇಚಿ ಸಾಂದೀಸ ಘಾತಲೇ । ಆಪಣಾಸೀ ॥೨೧॥

ಸಗಟ ಬಾಯೆಕಾ ಸಿವ್ಯಾ ದೇತೀ । ಸಾಂದೀಸ ಪಡಿಲಾ ಏಸೇ ಮ್ಹಣತೀ ।
ಮೂರ್ಖಪಣಾಚೀ ಪ್ರಾಪ್ತೀ । ಠಾಕೂನ ಆಲೀ ॥೨೨॥

ಏಸೇ ಕೋಣೇಯೇಕೇ ನ ಕರಾವೇ । ಸರ್ವ ಸಾರ್ಥಕ ಚಿ ಕರಾವೇ ।
ಕಳೇನಾ ತರೀ ವಿವರಾವೇ । ಗ್ರಂಥಾಂತರೀ ॥೨೩॥

ಶಾಹಾಣ್ಯಾಸ ಕೋಣೇತರೀ ಬಾಹಾತೀ। ಮೂರ್ಖಾಸ ಲೋಕ ದವಡೂನ ದೇತೀ।
ಜೀವಾಸ ಆವಡೆ ಸಂಪತ್ತಿ । ತರೀ ಶಾಹಾಣೇ ವ್ಹಾವೇ ॥೨೪॥

ಅಹೋ ಯಾ ಶಾಹಾಣಪಣಾ ಕಾರಣೇ । ಬಹುತಾಂಚೆ ಕಷ್ಟ ಕರಣೇ ।
ಪರಂತು ಶಾಹಾಣಪಣ ಶಿಕಣೇ । ಹೇ ಉತ್ತಮೋತ್ತಮ ॥೨೫॥

ಜೋ ಬಹುತಾಸ ಮಾನಲಾ । ತೋ ಜಾಣಾವಾ ಶಾಹಾಣಾ ಜಾಲಾ ।
ಜನೀ ಶಾಹಾಣ್ಯಾ ಮನುಷ್ಯಾಲಾ । ಕಾಯೆ ಉಣೇ ॥೨೬॥

ಯಾವನಿಗೆ ಮಾತಾಡಿದ ಶಬ್ದದ ನಿಶ್ಚಿತ ಅರ್ಥ ಸರಿಯಾಗಿ ತಿಳಿಯುವದಿಲ್ಲವೋ ಯಾರಿಗೆ ನಿಶ್ಚಿತವಾದ ರಾಜಕಾರಣ ಮಾಡಲಿಕ್ಕೆ ಬರುವದಿಲ್ಲವೋ ಇಂಥ ಕೆಲವರು ಮೂರ್ಖತನದಿಂದ ತಾವೇ ದೊಡ್ಡವರೆಂದು ಬಡಾಯಿ ಕೊಚ್ಚಿಕೊಳ್ಳುವರು. (೧४) ಯಾವ ಮನುಷ್ಯನಿಗೆ ನಿಶ್ಚಿತವಾಗಿ [ಸರಿಯಾಗಿ] ಏನನ್ನೂ ತಿಳಿಯುವ ಶಕ್ತಿ ಇಲ್ಲವೋ ಯಾವನನ್ನು ನಿಜವಾದ ಮನುಷ್ಯನೆಂದು ಮನ್ನಿಸುವದಿಲ್ಲವೋ ಅಂಥ ಮನುಷ್ಯನು ಮೊದಲು ಜನ್ಮ ತಾಳಿ ಬಂದವನೆಂದು ಮಾತ್ರ ಹಿರಿಯನಾಗುವನು. ದೊಡ್ಡ ಮನುಷ್ಯನೆನಿಸುವನು. ಇಂಥವನ ಹಿರಿಯತನವನ್ನು ಯಾರೂ ವಿಚಾರಿಸುವದಿಲ್ಲ. [ಕಿಮ್ಮತ್ತು ಕೊಡುವದಿಲ್ಲ] (೧೫) ವಯಸ್ಸಿನಿಂದ ಚಿಕ್ಕವನಿರುವ ಜ್ಞಾನಿ ಮನುಷ್ಯ ಏನಾದರೂ ಹೇಳಿದರೆ ಆಗ ವೃದ್ಧರು, ಹಿರಿಯರಾದವರು "ಇನ್ನು ಹಿರಿಯರ ಹಿರಿಯತನ ಉಳಿಯಲಿಲ್ಲ. ಚಿಕ್ಕವರಾದವರು ತಮ್ಮ ಚಿಕ್ಕ [ಸಣ್ಣ] ತನವನ್ನು ಬಿಟ್ಟು ಬಿಟ್ಟರು. [ಚಿಕ್ಕವರಿಂದ ದೊಡ್ಡವರು ಬುದ್ಧಿ ಹೇಳಿಸಿಕೊಳ್ಳಬೇಕಾಯಿತು. ಕಾಲ ಕೆಟ್ಟಿತು ಅನ್ನುವರು"] ಹೀಗೆ ಯಾರು ಮಾತನಾಡುವರೋ ಅವರಲ್ಲಿ ಶಹಾಣತನ [ಜಾಣತನ] ಇರುವದಿಲ್ಲ. [೧೬] ಗುಣವಿಲ್ಲದೆ ಹಿರಿತನ ಬರುವದು ಅನ್ನುವ ತಿಳುವಳಿಕೆ ಇರುವದೇ ತಪ್ಪು ತಿಳವಳಿಕೆ ಎಂದು ಹೇಳಬಹುದು. ನಿಜವಾದ ಹಿರಿಯತನದ ಮೇಲಿಂದ ಇದರ ಅನುಭವ ಪಡೆಯಲು ಬರುವದು. ಯಾಕೆಂದರೆ ಒಳ್ಳೇ ಗುಣಗಳಿಲ್ಲದೆ ನಿಜವಾದ ದೊಡ್ಡಿಸ್ತನವು ಬರಲಿಕ್ಕೆ ಸಾಧ್ಯವೇ ಇಲ್ಲ. ಅನ್ನುವ ಅನುಭವ ನಿಮಗೆ ಬರುವದು. ಇದರಲ್ಲಿ ವಯಸ್ಸಿನ ಸಂಬಂಧ ಇರುವದಿಲ್ಲ.[೧೭] ಈ ಮಾತು ನಿಜವಿದ್ದರೂ ಕೂಡಾ ವಯಸ್ಸಿನಿಂದ ಹಿರಿಯರಾದವರಿಗೆ ಮಾನ ಮರ್ಯಾದೆಯನ್ನು ಕೊಡಬೇಕು. ಆದರೆ ಹಿರಿಯರೂ ಕೂಡಾ ತಾವು ದೊಡ್ಡವರೆನ್ನುವದು ಕೇವಲ ವಯಸ್ಸಿನಿಂದ ನಿಜವಲ್ಲ ಅನ್ನುವದನ್ನು ವಿಚಾರದಿಂದ ತಿಳಿದು ನಡೆಯಬೇಕು. ಹೀಗೆ ಮಾಡದಿದ್ದರೆ ನಿಮ್ಮ ವೃದ್ಧಾಪ್ಯದಲ್ಲಿ ನಿಮಗೇ ತೊಂದರೆಯಾಗುವದು.[೧೮] ಇಷ್ಟೆಲ್ಲ ಹೇಳುವದರ ಇತ್ಯರ್ಥವೇನಂದರೆ ಅಂತರಾತ್ಮ ದೊಡ್ಡವನಿರುವನು. ಹಿರಿಯನೆಂದರೆ ಇವನೇ ಆಗಿರುವನು. ಇವನು ಯಾರ ಅಂತಃಕರಣದಲ್ಲಿ ಜಾಗ್ರತನಾಗುವನೋ ಅವರಲ್ಲಿ ದೊಡ್ಡಿಸ್ತನ ಬರುವದು. ಈ ಮಾತು ಅತ್ಯಂತ ಸ್ಪಷ್ಟವಿರುವದು. ಆದ್ದರಿಂದ ನಮ್ಮ ಕಡೆಗೆ [ಹೀಗೆ ಹೇಳಿದೆನೆಂದು] ದೋಷವಿಲ್ಲ. ಅರ್ಥಾತ್ ನಿಜವಾದ ಸಂಗತಿಯನ್ನು ಸ್ಪಷ್ಟಪಡಿಸಿದ್ದೇನೆ.[ಅಂದ ಮೇಲೆ ನನಗೇಕೆ ದೋಷ ಬರುವದು?] [೧೯] ಆದ್ದರಿಂದ ಜನರು ವಿವೇಕದ ಬಲದಿಂದ ಬುದ್ಧಿವಂತರಾಗಬೇಕು. ಜಾಣತನ ಕಲಿಯಬೇಕು. ಯಾವ ಮನುಷ್ಯನು ವಿವೇಕವನ್ನು ಕಲಿಯುವದಿಲ್ಲವೋ ಅವನಿಗೆ ಜನತೆಯಲ್ಲಿ ಏನೂ ಮಹತ್ವ ಉಳಿಯುವದಿಲ್ಲ. [೨೦] ವಿವೇಕದಿಂದ ಬರುವಂಥ ಜಾಣತನವು ಮನುಷ್ಯನ ಜನ್ಮವನ್ನು ಸಾರ್ಥಕಗೊಳಿಸುವದು. ಇದರ ವಿರುದ್ಧ ಜಾಣತನವಿಲ್ಲದಂಥ ಮನುಷ್ಯನು ದುರ್ದೈವಿಯೇ ಇರುತ್ತಾನೆ. ಇಂಥವನನ್ನು ಅವನ ಹೆಂಡತಿ, ಮಕ್ಕಳೂ ಸಹ ಅವಹೇಳನ ಮಾಡುವರು: ಯಾವ ಮನುಷ್ಯನಿಗೆ ಜನರಲ್ಲಿ ಗೌರವ ಇರುವದಿಲ್ಲವೋ ಅವನ ಜನ್ಮ ಸುಮ್ಮನೇ ವ್ಯರ್ಥ ಹೋದಂತಾಯಿತು. ಇಂಥವರು ತಾನಾಗಿ ತನ್ನಲ್ಲಿ ಹೀನತನವನ್ನು ತಂದು ಕೊಂಡಂತಾಗುವದು. ತಾನೇ ತನ್ನ ಹಿತಘಾತಕನೆನಿಸುವನು [೨೧] ಯಾವತ್ತೂ ಸ್ತ್ರೀಯರೂ ಸಹ ಇವನಿಗೆ ಬಾಯಿಗೆ ಬಂದಂತೆ ಹೆಸರಿಡಹತ್ತುವರು. ಇವನನ್ನು ಇಕ್ಕಟ್ಟಿನಲ್ಲಿ ಸಿಕ್ಕು ಗೊಂದಲದ ಗುಂಡಿಯಲ್ಲಿ ಬಿದ್ದನೆಂದು ಅನ್ನುವರು. ಈ ಪ್ರಕಾರ ತಾನಾಗಿಯೇ ಹೀನದೆಶೆ ಪ್ರಾಪ್ತಮಾಡಿಕೊಳ್ಳುವನು. ಮೂರ್ಖತನವನ್ನು ಪದರಿನಲ್ಲಿ ಕಟ್ಟಿಕೊಳ್ಳುವನು.[೨೨] ನಿಜವಾಗಿ ಅಂದರೆ ಮನುಷ್ಯನು ಹೀಗೆ ಮಾಡಬಾರದು. ತನ್ನ ಜೀವನದ ಸರ್ವಪ್ರಕಾರದ ಸಾರ್ಥಕತೆಯನ್ನೂ ಮಾಡಿಕೊಳ್ಳಬೇಕು. ಇದು ಹೇಗೆ ಅನ್ನುವದು ತಿಳಿಯದಿದ್ದರೆ ಗ್ರಂಥಗಳ ಅಭ್ಯಾಸಮಾಡಿ ಅದರಿಂದ ತಿಳಿಯಬೇಕು.[೨३] ಜಾಣ ಮನುಷ್ಯರನ್ನು ಜನರು ತಾವಾಗಿ ಕರೆಯುವರು. ಮೂರ್ಖರನ್ನು ಬಾಜೂಕ್ಕೆ ಸರಿಸಿ ಬಿಡುವರು. ಯಾರಿಗೆ ಸಂಪತ್ತು ಪ್ರೇಮದ್ದಾಗಿರುವದೋ ಮತ್ತು ಅದು ಬೇಕಾಗಿದ್ದರೆ ಅವರು ಜಾಣರಾಗಬೇಕು. [೨४] ನೋಡಿರಿ ಈ ಜಾಣತನವನ್ನು ಕಲಿಯುವದಕ್ಕಾಗಿ ಬಹಳಷ್ಟು ಜನರ ಸೇವೆಮಾಡುವ ಕಷ್ಟವನ್ನು ಸಹಿಸಬೇಕಾಗುವದು. ಈ ಮಾತು ನಿಜವೇ ಇರುವದು. ಆದರೆ ಹೇಗಾದರೂ ಆಗಲಿ, ಕಷ್ಟಪಟ್ಟು ಜಾಣತನವನ್ನು ಕಲಿಯಬೇಕು. ಯಾಕೆಂದರೆ ಜಾಣ ತನದಂತಹ ಉತ್ತಮವಾದದ್ದು ಇನ್ನೊಂದಿಲ್ಲ. [೨೫] ಯಾವನು ಬಹಳ ಜನರಿಗೆ ಬೇಕಾಗುವನೋ ಅವನು ಜಾಣ ನಾದವನೆಂದು ತಿಳಿಯಿರಿ. ಜಾಣ ಮನುಷ್ಯನಿಗೆ ಜಗತ್ತಿನಲ್ಲಿ ಯಾವುದರ ಕೊರತೆಯೂ ಆಗುವದಿಲ್ಲ. [೨೬]

ಆಪಲೇ ಹಿತ ನ ಕರೀ ಲೋಕಿಕೀ । ತೋ ಜಾಣಾವಾ ಆತ್ಮಘಾತಕೀ ।
ಯಾ ಮೂರ್ಖಾಯೆವಢಾ ಪಾತಕೀ । ಆಣಿಕ ನಾಹೀ ॥೨೭॥

ಆಪಣ ಸಂಸಾರೀ ಕಷ್ಟತೋ । ಲೋಕಾಂಕರವೀ ರಾಗೆಜೋನ ಘೇತೋ ।
ಜನಾಮಧ್ಯೇ ಶಹಾಣಾ ತೋ । ಐಸೇ ನ ಕರೀ ॥೨೮॥

ಸಾಧಕಾ ಸಿಕವಿಲೇ ಸ್ವಭಾವೇ । ಮಾನೇಲ ತರೀ ಸುಖೇ ಘ್ಯಾವೇ ।
ಮಾನೇನಾ ತರೀ ಸಾಂಡಾವೇ । ಯೆಕೀಕಡೇ ॥೨೯॥

ತುಮ್ಹಿ ಶ್ರೋತೆ ಪರಮ ದಕ್ಷ । ಅಲಕ್ಷಾಸ ಲಾವಿತಾ ಲಕ್ಷ ।
ಹೇ ತೋ ಸಾಮಾನ್ಯ ಪ್ರತ್ಯಕ್ಷ । ಜಾಣತಸಾ ॥೩೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಶ್ರೇಷ್ಠ ಅಂತರಾತ್ಮ ನಿರೂಪಣ' ನಾಮ ಸಮಾಸ ತೃತೀಯ ॥

● ●

ಯಾವನು ಈ ಜಗತ್ತಿನಲ್ಲಿ ಹುಟ್ಟಿಬಂದಿರುವನೋ ಅವನು ತನ್ನ ಹಿತವನ್ನು ತಾನು ಮಾಡಿಕೊಳ್ಳದಿದ್ದರೆ ಅವನು ಆತ್ಮಘಾತಕಿ ಎಂದು ತಿಳಿಯಬೇಕು. ಈ ಮೂರ್ಖನಂತಹ ಪಾಪಿಗಳು ಇನ್ನೊಬ್ಬರಿರುವದಿಲ್ಲ. (೨೭) ಮೂರ್ಖ ಮನುಷ್ಯನು ಸಂಸಾರದಲ್ಲಿ ಬಹಳಷ್ಟು ಕಷ್ಟಪಡುವನು. ಜನರಿಂದ ಏನೇನೋ ಅನ್ನಿಸಿಕೊಳ್ಳುವನು. ಆದರೆ ಜಗತ್ತಿನಲ್ಲಿ ಯಾವನು ಜಾಣನಿರುವನೋ ಅವನು ಹೀಗೆ ಮಾಡುವದಿಲ್ಲ. ಆದ್ದರಿಂದ ಅನ್ನಿಸಿಕೊಳ್ಳುವ ಪ್ರಸಂಗವೂ ಬರುವದಿಲ್ಲ. (೨೮) ಸಾಧಕನು ಹೇಗೆ ನಡೆಯಬೇಕು ಅನ್ನುವದನ್ನು ನಾನು ಸಹಜ ಮತ್ತು ಸುಲಭ ರೀತಿಯಲ್ಲಿ ಕಲಿಸಿಕೊಟ್ಟೆನು. ನಾನು ಹೇಳಿದ್ದು ನಿಮ್ಮ ಮನಕ್ಕೆ ಒಪ್ಪಿಗೆಯಾದರೆ ಆನಂದದಿಂದ ಇವನ್ನೆಲ್ಲ ಸ್ವೀಕಾರ ಮಾಡಬೇಕು. ಇವು ನಿಮಗೆ ಒಪ್ಪಿಗೆ ಆಗದಿದ್ದರೆ, ಸರಿ ಅನಿಸದಿದ್ದರೆ ಒಂದು ಕಡೆಗೆ ಬಿಸಾಕಿಬಿಡಿರಿ ಬಿಟ್ಟು ಬಿಡಿರಿ. (೨೯) ಶ್ರೋತಾ ಜನರೇ! ನೀವು ಬಹಳ ದಕ್ಷರಿರುವಿರಿ. ನೀವು ಅಲಕ್ಷ್ಯದ ಕಡೆಗೆ (ಪರಬ್ರಹ್ಮದ ಕಡೆಗೆ) ಲಕ್ಷ್ಯ ಹಚ್ಚುವಿರಿ. ಪರಮಾತ್ಮ ಸ್ವರೂಪದ ಧ್ಯಾನಮಾಡುವಿರಿ. ಅಂದ ಮೇಲೆ ನಾನು ಏನನ್ನು ಹೇಳಿರುವೆನೋ ಅದೆಲ್ಲವೂ ಅತ್ಯಂತ ಸಾಮಾನ್ಯ ವಿರುವದು. ಯೋಗ್ಯವಿರುವದು. ಇದೆಲ್ಲವೂ ದೃಶ್ಯದಲ್ಲಿಯದೇ ಇರುವದೆಂಬುದನ್ನು ನೀವು ಗುರುತಿಸುವಿರೆಂದು ನಾನು ತಿಳಿದಿರುವನು. (೩೦)

ಶ್ರೀ ದಾಸಬೋಧದ ಹದಿನೈದನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದಲ್ಲಿಯ
"ಶ್ರೇಷ್ಠ ಅಂತರಾತ್ಮಾ ನಿರೂಪಣ" ವೆಂಬ ಹೆಸರಿನ ಮೂರನೆಯ ಸಮಾಸವು ಮುಗಿದುದು.

● ●

**ದಶಕ. ಪಂಚದಶಕ : ಸಮಾಸ. ಚತುರ್ಥ : ಶಾಶ್ವತ ಬ್ರಹ್ಮ ನಿರೂಪಣ**

॥ಶ್ರೀರಾಮ॥ ಪೃಥ್ವೀಪಾಸೂನ ಜಾಲೀ ಝಾಡೇ ।
ಝಾಡಾಪಾಸೂನ ಹೋತೀ ಲಾಂಕಡೇ ।
ಲಾಂಕಡೇ ಭಸ್ಮೋನ ಪುಢೇ । ಪೃಥ್ವೀ ಚ ಹೋಯೆ ॥೧॥

ಪೃಥ್ವೀಪಾಸೂನ ವೇಲ ಹೋತೀ । ನಾನಾ ಜಿನಸ ಫಾಪಾವತೀ ।
ವಾಳೋನ ಕುಜೋನ ಮಾಗುತೀ । ಪೃಥ್ವೀಚ ಹೋಯೆ ॥೨॥

ನಾನಾ ಧಾನ್ಯಾಚೀ ನಾನಾ ಅನ್ನೇ । ಮನುಷ್ಯೇ ಕರಿತೀ ಭೋಜನೇ ।
ನಾನಾ ವಿಷ್ಠಾ ನಾನಾ ವಮನೇ । ಪೃಥ್ವೀಚ ಹೋಯೆ ॥೩॥

ನಾನಾ ಪಕ್ಷ್ಯಾದಿಕೀ ಭಕ್ಷಿಲೇ । ತರೀ ಪುಢೇ ತೈಸೇ ಚಿ ಜಾಲೇ ।
ವಾಳೋನ ಭಸ್ಮ ಹೋಊನ ಗೇಲೇ । ಪುನ್ಹಾ ಪೃಥ್ವೀ ॥೪॥

ಮನುಷ್ಯೇ ಮರತಾಚ ಐಕಾ । ಕ್ರಿಮಿ ಭಸ್ಮ ಕಾ ಮೃತ್ತಿಕಾ ।
ಐಶಾ ಕಾಯಾ ಪಡತೀ ಅನೇಕಾ । ಪುಢೇ ಪೃಥ್ವೀ ॥೫॥

ನಾನಾ ತೃಣೇ ಪದಾರ್ಥ ಕುಜತೀ । ಪುಢೇ ತ್ಯಾಚಿ ಹೋಯೆ ಮಾತೀ ।
ನಾನಾ ಕಿಡೇ ಮರೋನ ಜಾತೀ । ಪುಢೇ ಪೃಥ್ವೀ ॥೬॥

# ದಶಕ ೧೫. ಸಮಾಸ ೪. ಶಾಶ್ವತ ಬ್ರಹ್ಮ ನಿರೂಪಣ (ನುಡಿ ೩೧)

ಈ ದೃಶ್ಯ ವಿಶ್ವವು ಸಾಕಾರವಿದೆ. ಆದರೆ ಏನೇನು ಯಾವ ಯಾವುದು ಆಕಾರ ಹೊಂದುವದೋ ಅದೆಲ್ಲವೂ ಪೃಥ್ವಿ ಅಥವಾ ಜಡ ದ್ರವ್ಯ ಅಥವಾ ಮ್ಯಾಟರ [Matter] ಆಗಿರುವದು. ಒಂದು ಭೂತವು ಎರಡನೇ ಭೂತದಲ್ಲಿ ವಿಲೀನವಾಗುವದು. ಕೊನೆಯಲ್ಲಿ ಎಲ್ಲ ದೃಶ್ಯವು ಲಯಹೊಂದಿ ಮೂಲದ ಶಾಶ್ವದ ಬ್ರಹ್ಮವು ಮಾತ್ರ ಉಳಿಯುವದು. ಇದರ ಜ್ಞಾನ ಆಗುವವರೆಗೆ ಜನ್ಮ ಮತ್ತು ಮೃತ್ಯು ಈ ಚಕ್ರ ತಪ್ಪಿದ್ದಲ್ಲ. ಪೂರ್ವಪಕ್ಷ ಅನ್ನುವದೇನಂದರೆ ಈ ವಿಶ್ವ ಉಂಟಾಯಿತು. ಮತ್ತು ಇದು ಸತ್ಯವಿರುವದು. ಸಿದ್ಧಾಂತ ಪಕ್ಷ [ಉತ್ತರ ಪಕ್ಷ] ಅನ್ನುವದೇನಂದರೆ ಈ ವಿಶ್ವ ಉಂಟಾದಂತೆ ಕಾಣುವದು. ಆದರೆ ಇದು ನಾಶವಂತವಿರುವದು ಸತ್ಯವಾದದ್ದಲ್ಲ. ಇವೆರಡೂ ಪಕ್ಷಗಳು ಎಲ್ಲಿ ವಿರಾಮ ಹೊಂದುವವೋ ಅಲ್ಲಿ ಆ ಶಾಶ್ವತ ಪರ ಬ್ರಹ್ಮವು ನಿರಂತರ ಸದಾ ಸರ್ವತ್ರ ತುಂಬಿರುವದು. ವಿಚಾರಮಾಡಿ ಇವನ ಗುರುತನ್ನು ತಿಳಿಯಬೇಕು. ಮತ್ತು ಆ ಮೇಲೆ ಇದರ ಅನುಭವ ಪಡೆಯಬೇಕು. ಮಾಯೆಯ ವ್ಯಾಪ್ತಿ (ಪರಿಮಿತಿ) ಮುಗಿಯಿತೆಂದರೆ ಅವಸ್ಥಾ (ಸ್ಥಿತಿ, ದಶಾ) ಉಳಿಯುವದಿಲ್ಲ. ಮಾಯೆಯ ಸಂಪೂರ್ಣ ನಿರಶನವಾಗುವದೇ ಆತ್ಮ ನಿವೇದನವು. ಆದ್ದರಿಂದ ಜನತೆಯು ನಾದಿಗೆ [ಹಂಬಲಕ್ಕೆ] ಹೋಗದೇ ಪುನಃ ಪುನಃ ಪ್ರತ್ಯಯ[ಅನುಭವ]ದ ಬೆನ್ನು ಹತ್ತಬೇಕು, ಸ್ವರೂಪದ ಅನುಭವ [ಪ್ರತ್ಯಯ]ವು ಶಬ್ದದ ಆಚೆಗೆ ಇರುವದು.

## ದಶಕ ೧. ಸಮಾಸ ೪. ಶಾಶ್ವತ ಬ್ರಹ್ಮ ನಿರೂಪಣ (ನುಡಿ ೩೧)

ಈ ದೃಶ್ಯ ವಿಶ್ವದಲ್ಲಿ ಎಷ್ಟೊಂದು ಬದಲಾವಣೆ [ಹೆಚ್ಚು ಕಡಿಮೆ] ನಡೆದಿರುವದು. ಆದರೆ ಆಗುವ ಘಟನೆ ಸಣ್ಣದಿರಲಿ ಅಥವಾ ದೊಡ್ಡದಿರಲಿ ಕೊನೆಯಲ್ಲಿ ಇವೆಲ್ಲಕ್ಕೂ ಪೃಥ್ವಿಯು [ಭೂಮಿಯು] ಆಧಾರವೇ ಗತಿ ಇರುವದು. ಇಲ್ಲಿ ಪೃಥ್ವಿ ಅಂದರೆ ಜಡ ದ್ರವ್ಯ [ಸ್ಥೂಲ, ಅಚೇತನ]ವು ದೃಶ್ಯ ವಿಶ್ವದ ಅಡಿಪಾಯಾ [ಬುನಾದಿ]ವನ್ನು ಮೊದಲು ಜಡ ದ್ರವ್ಯದಲ್ಲಿ ಹಾಕಿದ್ದಾರೆ.[ಎಲ್ಲ ಜಡ ಸ್ಥೂಲಗಳಿಗೆ ಭೂಮಿಯೇ ಆಧಾರವು]. ಅರಿವು ಇದು ಜೀವವಿಲ್ಲದೇ ವ್ಯಕ್ತ ವಾಗುವದಿಲ್ಲ. ಆದರೆ ಅದೇ ಜೀವವು ಶರೀರದ ಆಶ್ರಯವಿಲ್ಲದೇ ಕರ್ಮವಮಾಡಲಿಕ್ಕೆ ಶಕ್ತ ಆಗುವದಿಲ್ಲ. ಮತ್ತು ಈ ಶರೀರವು ಜಡದ್ರವ್ಯಗಳಿಂದ ಆಗುವದು. ಅಂತೆಯೇ ವಿಶ್ವಕ್ಕೆಲ್ಲ ಕೊನೆಗೆ ಪೃಥ್ವಿಯೇ ಆಧಾರವಾಗಿರುವದು: ಪೃಥ್ವಿ ಯಿಂದ ಗಿಡಗಳು ನಿರ್ಮಾಣವಾಗುವವು. ಗಿಡಗಳಿಂದ ಕಟ್ಟಿಗೆಯಾಗುವವು. ಕಟ್ಟಿಗೆ ಸುಟ್ಟು ಅದರಿಂದ ಬೂದಿ ಆಗುವದು. ಈ ಬೂದಿಯು ಮಣ್ಣಿನ ಭಾಗವೇ ಸರಿ. ಅರ್ಥಾತ್ ಮಣ್ಣು ಅನಿಸುವದು. ಮಣ್ಣೇ ಭೂಮಿ [ಪೃಥ್ವಿ] ಅನಿಸಿಕೊಳ್ಳುವದು. (೧) ಇದರಂತೆ ಪೃಥ್ವಿಯಿಂದ ಬಳ್ಳಿಗಳು ನಿರ್ಮಾಣವಾಗುವವು. ಇದರ ಮೇಲೆ ಎಲೆ, ಹೂವು, ಕಾಯಿಗಳು, ಹಣ್ಣುಗಳು ಆಗುವವು. ಆಮೇಲೆ ಅವು ಒಣಗುವವು. ಮತ್ತು ಕೊಳೆಯುವವು. ಕೊನೆಗೆ ಭೂಮಿಯಲ್ಲಿ ಅವೆಲ್ಲ ಮಣ್ಣಾಗುವವು. (೨) ಅನೇಕ ಬಗೆಯ ಧಾನ್ಯಗಳಿಂದ ಅನ್ನವು ತಯಾರ ಆಗುವದು. ಜನರು ಇದನ್ನು ತಿನ್ನುವರು. ಈ ಅನ್ನದಿಂದ ಕೊನೆಗೆ ಮಲ ತಯಾರ ಆಗುವದು. ಒಮ್ಮೊಮ್ಮೆ ವಾಂತಿಯೂ ಕೂಡಾ ಆಗುವದು. ಒಟ್ಟಿನಲ್ಲಿ ಇದೆಲ್ಲವೂ ಮಣ್ಣಿನಲ್ಲಿ ಕೂಡಿ ಮಣ್ಣಾಗಿ ಹೋಗುವದು. (೩) ನಾನಾ ಪ್ರಕಾರದ ಪಕ್ಷಿಗಳು ಅಥವಾ ಪಶುಗಳು ಧಾನ್ಯ ಭಕ್ಷಣ ಮಾಡಿದರೂ ಕೂಡಾ ಅದೆಲ್ಲ ಮಲವಾಗುವದು. ಅದೇ ನಂತರ ಒಣಗಿ ಪುಡಿಯಾಗಿ ಮಣ್ಣಿನಲ್ಲಿ ಕೂಡಿ ಮಣ್ಣಾಗಿ ಬಿಡುವದು. (೪) ಮನುಷ್ಯನು ಸತ್ತ ನಂತರ ಸುಡುವರು. ಅಥವಾ ಮಣ್ಣಿನಲ್ಲಿ ಹುಗಿಯುವರು. ಅಥವಾ ಕ್ರಿಮಿಗೆ ತಿನ್ನಲು ಕೊಡುವರು. ಹೀಗೆ ಎಷ್ಟೋ ಮಾನವ ಶರೀರಗಳು ಸಾಯುವವು. ಆದರೆ ಇವೆಲ್ಲವುಗಳೂ ಕೊನೆಗೆ ಮಣ್ಣಲ್ಲಿ ಕೂಡಿ ಮಣ್ಣೇ ಆಗುವದು. (೫) ಅನೇಕ ವನಸ್ಪತಿಗಳು, ಹುಲ್ಲು, ಕಿರಿಕಿ ಮೊದಲಾದವುಗಳು ಕೊಳೆತು ಕೊನೆಗೆ ಇವೆಲ್ಲ ಮಣ್ಣೇ ಆಗುವವು. ಎಷ್ಟೋ ಹುಳ ಹುಪ್ಪಡಿಗಳು ಪ್ರಾಣಿಗಳು ಸಾಯುವವು ಇವೂ ಸಹ ಕೊನೆಗೆ ಮಣ್ಣಲ್ಲಿ ಕೂಡಿ ಮಣ್ಣಾಗಿ ಬಿಡುವವು. [೬]

ಪದಾರ್ಥ ದಾಟಲೆ ಅಪಾರ । ಕಿತೀ ಸಾಂಗಾವಾ ವಿಸ್ತಾರ ।
ಪೃಥ್ವೀ ವಾಂಚೂನ ಥಾರ । ಕೋಣಾಸ ಆಹೆ ॥೭॥

ಝಾಡ ಪಾಲೇ ಆಣಿ ತೃಣ । ಪಶು ಭಕ್ಷಿತಾ ಹೋತೇ ಶೇಣ ।
ಖಾತ ಮೂತ ಭಸ್ಮ ಮಿಳೋನ । ಪುನ್ಹಾ ಪೃಥ್ವೀ ॥೮॥

ಉತ್ಪತ್ತಿ ಸ್ಥಿತಿ ಸಂವ್ಹಾರತೇ । ತೇ ತೇ ಪೃಥ್ವೀಸ ಮಿಳೋನ ಜಾತೇ ।
ಜಿತುಕೇ ಹೋತೇ ಆಣಿ ಜಾತೇ । ಪುನ್ಹಾ ಪೃಥ್ವೀ ॥೯॥

ನಾನಾ ಬೀಜಾಂಚಿಯಾ ರಾಸೀ । ವಿರೂಢೋನ ಲಾಗತೀ ಗಗನಾಸೀ ।
ಪುಢೇ ಸೇವಟೀ ಪೃಥ್ವೀಸೀ । ಮಿಳೋನ ಜಾತೀ ॥೧೦॥

ಲೋಕ ನಾನಾ ಧಾತು ಪುರಿತೀ । ಬಹುತಾ ದಿವಸಾ ಹೋಯೆ ಮಾತೀ ।
ಸುವರ್ಣ ಪಾಷಾಣಾಚೀ ಗತೀ । ತೈಸೀ ಚ ಆಹೆ ॥೧೧॥

ಮಾತೀಚೇ ಹೋತೇ ಸುವರ್ಣ । ಆಣೀ ಮೃತ್ತಿಕೇಚೆ ಹೋತೀ ಪಾಷಾಣ ।
ಮಹಾ ಅಗ್ನಿಸಂಗೇ ಭಸ್ಮೋನ । ಪೃಥ್ವೀ ಚ ಹೋಯೆ ॥೧೨॥

ಸುವರ್ಣಾಚೇ ಜರ ಹೋತೇ । ಜರ ಸೇವಟೇ ಕುಜೋನ ಜಾತೇ ।
ರಸ ಹೋಊನ ವಿತುಳತೇ । ಪುನ್ಹಾ ಪೃಥ್ವೀ ॥೧೩॥

ಪೃಥ್ವೀಪಾಸೂನ ಧಾತು ನಿಪಜತೀ । ಅಗ್ನಿಸಂಗೇ ರಸ ಹೋತೀ ।
ತಯಾ ರಸಾಚೀ ಹೋಯೆ ಜಗತೀ । ಕಠಿಣರೂಪೇ ॥೧೪॥

ನಾನಾ ಜಳಾಸೀ ಗಂಧೀ ಸುಟೇ । ತೇಥೇ ಪೃಥ್ವೀಚೇ ರೂಪ ಪ್ರಗಟೇ ।
ದಿನಸೇದಿವಸ ಜಳ ಆಟೇ । ಪುಢೇ ಪೃಥ್ವೀ ॥೧೫॥

ಪತ್ರೇ ಪುಷ್ಪೇ ಫಳೇ ಯೇತೀ । ನಾನಾ ಜೀವ ಖಾಊನ ಜಾತೀ ।
ತೇ ಜೀವ ಮರತಾ ಜಗತೀ । ನೇಮಸ್ತ ಹೋಯೆ ॥೧೬॥

ಜಿತುಕಾ ಕಾಂಹೀ ಜಾಲಾ ಆಕಾರ । ತಿತುಕ್ಯಾಸ ಪೃಥ್ವೀಚಾ ಆಧಾರ ।
ಹೋತೀ ಜಾತೀ ಪ್ರಾಣಿಮಾತ್ರ । ಸೇವಟಿ ಪೃಥ್ವೀ ॥೧೭॥

ಹೇಃ ಕಿತೀ ಮ್ಹಣೌನ ಸಾಂಗಾವೇ । ವಿವೇಕೇ ಅವಘೇಚಿ ಜಾಣಾವೇ ।
ಖಾಂಜಣೀ ಭಾಜಣೀಚೇ ಸಮಜಾವೇ । ಮೂಳ ತೈಸೇ ॥೧೮॥

ಆಪ ಆಳೋನ ಪೃಥ್ವೀ ಜಾಲೀ । ಪುನ್ಹಾ ಆಪೀಚ ವಿರಾಲೀ ।
ಅಗ್ನಿಯೋಗೇ ಭಸ್ಮ ಜಾಲೀ । ಮ್ಹಣೋನಿಯಾ ॥೧೯॥

ಜಗತ್ತಿನಲ್ಲಿ ಅಗಣಿತ ಪದಾರ್ಥಗಳು ತುಂಬಿರುವವು. ಇವುಗಳ ಇರುವಿಕೆಯ ವಿಸ್ತಾರ ಹೇಳಲು ಶಕ್ಯವಿಲ್ಲ. ಆದರೆ ಇವೆಲ್ಲವೂ ಕೊನೆಗೆ ಪೃಥ್ವಿಯಲ್ಲಿಯೇ ಆಧಾರ ಪಡೆದು ಕೊನೆಗೆ ಮಣ್ಣಾಗುವವು. (೭) ಪಶುಗಳು ಗಿಡದ ತೊಪ್ಪಲು, ಹುಲ್ಲು, ಕರಿಕಿ ಇತ್ಯಾದಿಗಳನ್ನು ತಿನ್ನುವವು. ತಿಂದಮೇಲೆ ಅದರಿಂದ ಶಗಣಿ, ಮೂತ್ರ, ಬೂದಿಆಗುವದು. ಮುಂದೆ ಅದೇ ಗೊಬ್ಬರವಾಗಿ ಕೊನೆಗೆ ಮಣ್ಣೇ ಆಗುವದು. (೮) ವಿಶ್ವದಲ್ಲಿ ಏನೇನು, ಯಾವ ಯಾವುದು-ನಿರ್ಮಾಣವಾಗುವದೋ ಅದು ಕೇವಲ ಕೆಲವು ಕಾಲ ಇರುವದು. ಮತ್ತು ಕೊನೆಗೆ ನಾಶವಾಗುವದು. ನಾಶವಾದದ್ದೆಲ್ಲ ಕಡೆಗೆ ಮಣ್ಣಿನಲ್ಲಿ ಬೆರೆತು ಮಣ್ಣಾಗುವದು. ಯಾವ ಯಾವುದು ಆಗುವದೋ ಅದೆಲ್ಲವೂ ಕೊನೆಯಲ್ಲಿ ಮಣ್ಣಾಗಿ ಬಿಡುವದು. (೯) ಅನೇಕ ಬೀಜಗಳನ್ನು ಬಿತ್ತಿದ ಮೇಲೆ ಅವು ಹುಟ್ಟುವವು ಮತ್ತು ಬೆಳೆಯುವವು. ಹೀಗೆ ಬೆಳೆದು ಬಹಳ ಎತ್ತರವಾಗುವವು. ಆಕಾಶದವರೆಗೆ ಬೆಳೆಯುವವು. ಆದರೆ ಕೊನೆಗೆ ಅವೆಲ್ಲವೂ ಮಣ್ಣಿನಲ್ಲಿ ಕೂಡಿ ಮಣ್ಣಾಗುವವು. (೧೦) ಅನೇಕ ಬಗೆಯ ಧಾತುಗಳನ್ನು ಮಣ್ಣಲ್ಲಿ ಹುಗಿದು ಇಡುವರು. ಬಹಳಷ್ಟು ಕಾಲ ಕಳೆದ ಮೇಲೆ ಅವೆಲ್ಲ ಮಣ್ಣೇ ಆಗುವವು. ಬಂಗಾರ ಮತ್ತು ಕಲ್ಲುಗಳ ಗತಿಯೂ ಹೀಗೇ ಆಗುವದು. (೧೧) ಮಣ್ಣಿನಿಂದ ಬಂಗಾರ ವಾಗುವದು, ಮಣ್ಣಿನಿಂದಲೇ ಕಲ್ಲುಗಳ ಉತ್ಪತ್ತಿಯಾಗುವದು. ಬಹಳ ತೀವ್ರವಾದ ಅಗ್ನಿಯಿಂದ ಕಲ್ಲುಗಳು ಒಡೆಯುವವು. ಮುಂದೆ ಅವು ಕರಗಿ ಸುಟ್ಟು ಬೂದಿಯಾಗುವವು. ಅಂದರೆ ಕಲ್ಲೂ ಸಹಿತ ಕೊನೆಗೆ ಮಣ್ಣೇ ಆಗುವದು. (೧೨) ಬಂಗಾರದಿಂದ ಜರ [ಕಲಾಬತ್ತು]ತಯಾರ ಆಗುವದು. ಅದು ಕೊನೆಗೆ ಕೊಳೆತು ಹೋಗುವದು, ಅಥವಾ ಧ್ರವವಾಗಿ ರಸವಾಗುವದು. ಏನೇ ಆದರೂ ಪುನಃ ಅದು ಮಣ್ಣಾಗುವದು. (೧೩) ಪೃಥ್ವಿಯಿಂದ ಧಾತು ಗಳು ಉತ್ಪನ್ನವಾಗುವವು. ಅಗ್ನಿಯಿಂದ ಇವುಗಳ ರಸ. ತಯಾರ ಆಗುವದು. ಈ ರಸದಿಂದ ಪುನಃ ಕಠಿಣ ಪದಾರ್ಥ ಗಳು ಆಗುವವು. ಇವೆಲ್ಲ ಪೃಥ್ವಿಯುವೇ ಇರುವದು. (೧೪) ಬಹುತರವಾಗಿ [ಅನೇಕ ಸಲ] ನೀರಿಗೆ ವಾಸನೆ ಬರುವದು. ವಾಸನೆ ಅಥವಾ ಗಂಧ ಇದು ಪೃಥ್ವಿಯ ಗುಣವಿರುವದು. ಆದ್ದರಿಂದ ಯಾವ ನೀರಿಗೆ ವಾಸನೆ ಬರುವದೋ ಅದರಲ್ಲಿ ಪೃಥ್ವಿಯ ಅಂಶವಿರುವದು. ಸಾವಕಾಶವಾಗಿ ನೀರು ಆಟ್ಟಿಸಿತೆಂದರೆ ಆಗ ಉಳಿಯುವದು ಪೃಥ್ವಿಯೇ.(೧೫) ಭೂಮಿಯಲ್ಲಿ ಅನೇಕ ಗಿಡ ಗಂಟಿಗಳಲ್ಲಿ ಎಲೆಗಳು, ಹೂವುಗಳು, ಹಣ್ಣುಗಳು ಆಗುವವು. ಅನೇಕ ಪಶು ಪಕ್ಷಿಗಳು ಇವನ್ನು ತಿಂದು ಹೋಗುವವು. ಆ ಪ್ರಾಣಿ ಸತ್ತ ನಂತರ ಅದು ಮಣ್ಣಿನಲ್ಲಿ ಬೆರೆತು ಮಣ್ಣೇ ಆಗುವದು. (೧೬) ಯಾವ ಯಾವ ವಸ್ತುಗಳು ಆಕಾರ ಹೊಂದುವವೋ ಆಯಾ ವಸ್ತುಗಳಿಗೆಲ್ಲ ಪೃಥ್ವಿಯೇ ಆಧಾರವಾಗಿರುವದು. ಅಸಂಖ್ಯ ಪ್ರಾಣಿಗಳು ಹುಟ್ಟುವವು ಮತ್ತು ಸಾಯುವವು. ಇವೆಲ್ಲವುಗಳ ಕೊನೆಯು ಭೂಮಿಯಲ್ಲಿಯೇ ಆಗು ವದು. (೧೭) ಇದರ ಬಗ್ಗೆ ಎಷ್ಟು ಹೇಳಿದರೂ ಕಡಿಮೆಯೇ ಇರುವದು. ನಾವು ವಿವೇಕ ಹಾಗೂ ವಿಚಾರದಿಂದ ಎಲ್ಲವನ್ನೂ ತಿಳಿದುಕೊಳ್ಳಬೇಕು. ವಿಶ್ವದ ನಿರ್ಮಾಣ [ಹುಟ್ಟು] ಮತ್ತು ಸಂಹಾರ [ನಾಶ]ದ ಮೂಲವು ಇದರಲ್ಲಿಯೇ ಇರುವದೆಂಬುದನ್ನು ತಿಳಿಯಬೇಕು. ಪೃಥ್ವಿಯಿಂದ ಪದಾರ್ಥಗಳು ಹೇಗೆ ಉತ್ಪನ್ನವಾಗುವವೋ ಹಾಗೆಯೇ ಅವೆಲ್ಲ ಕೊನೆಗೆ ಪೃಥ್ವಿಯಲ್ಲಿಯೇ ಕರಗಿ ಹೋಗುವವು. ಇದರಂತೆಯೇ ಈ ಎಲ್ಲ ವಿಶ್ವವು ಮೂಲ ಮಾಯೆಯಲ್ಲಿಂದ ಪ್ರಕಟ ವಾಗುವದು. ಮತ್ತು ಕೊನೆಗೆ ಇವಳಲ್ಲಿಯೇ ಲಯ ಹೊಂದುವದು. [ಶ್ರೀ ಸಮರ್ಥರು ಇದನ್ನು ಖಾಂಜಣಿ ಭಾಂಜಣಿ (ಉತ್ಪತ್ತಿ-ಸಂಹಾರ) ಎಂದು ಹೇಳಿರುವರು] (೧೮) ಈಗ ವಿಶ್ವದ ಸಂಹಾರದ ಬಗ್ಗೆ ಹೇಳಿ ಮಾಯೆಯ ಆಚೆಗಿರುವಂಥ ನಿಶ್ಚಲ ಪರ ಬ್ರಹ್ಮನನ್ನು ಗುರುತಿಸಬೇಕು. ಎಂದು ಶ್ರೀ ಸಮರ್ಥರು ಆಗ್ರಹ ಮಾಡುವರು. ನೀರು ಆಟ್ಟಿಸಿ ಪೃಥ್ವಿ ಆಯಿತು ಅನ್ನುವ ಮಾತು ನಿಜವಿರುವದು. ಆದರೆ ಮುಂದೆ ಪ್ರಳಯ ಕಾಲದಲ್ಲಿ ಅಗ್ನಿಯು ಪೃಥ್ವಿ ಯನ್ನು ಸುಟ್ಟು ಭಸ್ಮಮಾಡುವನು. ಆಗ ಪೃಥ್ವಿಯು ಪುನಃ ನೀರಿನಲ್ಲಿ ಕರಗಿ [ಕೂಡಿ] ಹೋಗುವದು. (೧೯)

ಆಪ ಜಾಲೇ ತೇಜಾ ಪಾಸುನೀ । ಪುಢೇ ತೇಜೇ ಘೇತಲೇ ಸೋಖುನೀ ।
ತೇ ತೇಜ ಜಾಲೇ ವಾಯೋಚೆನೀ । ಪುಢೇ ವಾಯೋ ಝುಡಪೀ ॥೨೦॥
ವಾಯೋ ಗಗನೀ ನಿರ್ಮಾಣ ಜಾಲಾ । ಪುಢೇ ಗಗನೀ ಚ ವಿರಾಲಾ ।
ಏಸೇ ಖಾಂಜಣೀಭಾಂಜಣೀಲಾ । ಬರೇ ಪಾಹಾ ॥೨೧॥
ಜೇ ಜೇ ಜೇಥೇ ನಿರ್ಮಾಣ ಹೋತೇ । ತೇ ತೇ ತೇಥೇ ಲಯಾ ಜಾತೇ ।
ಯೇಣೇ ರಿತೀ ಪಂಚಭೂತೇ । ನಾಶ ಪಾವತೀ ॥೨೨॥
ಭೂತ ಮ್ಹಣಿಜೆ ನಿರ್ಮಾಣ ಜಾಲೇ । ಪುನ್ಹಾ ಮಾಗುತೇ ನಿಮಾಲೇ ।
ಪುಢೇ ಶಾಶ್ವತ ಉರಲೇ । ಪರಬ್ರಹ್ಮ ತೇ ॥೨೩॥
ತೇ ಪರಬ್ರಹ್ಮ ಜೋ ಕಳೇನಾ । ತೋ ಜನ್ಮಮೃತ್ಯ ಚುಕೇನಾ ।
ಚತ್ವಾರ ಖಾಣೀ ಜೀವ ನಾನಾ । ಹೋಣೇ ಘಡೆ ॥೨೪॥
ಜಡಾಚೇ ಮೂಳ ತೇ ಚಂಚಳ । ಚಂಚಳಾಚೇ ಮೂಳ ತೇ ನಿಶ್ಚಳ ।
ನಿಶ್ಚಳಾಸೀ ನಾಹೀ ಮೂಳ । ಬರೇ ಪಾಹಾ ॥೨೫॥
ಪೂರ್ವಪಕ್ಷ ಮ್ಹಣಿಜೆ ಜಾಲೇ । ಸಿದ್ಧಾಂತ ಮ್ಹಣಿಜೆ ನಿಮಾಲೇ ।
ಪಕ್ಷಾತೀತ ಜೇ ಸಂಚಲೇ । ಪರಬ್ರಹ್ಮ ತೇ ॥೨೬॥
ಹೇ ಪ್ರಚೀತೀನೇ ಜಾಣಾವೇ । ವಿಚಾರೇ ಖುಣೇಸೀ ಬಾಣಾವೇ ।
ವಿಚಾರೇವಿಣ ಶಿಣಾವೇ । ತೇ ಚಿ ಮೂರ್ಖ ಪಣೆ ॥೨೭॥
ಜ್ಞಾನೀ ಭಿಡೇನೇ ದಡಪಲಾ । ನಿಶ್ಚಳ ಪರಬ್ರಹ್ಮ ಕೈಚೇ ತ್ಯಾಲಾ ।
ಉಗಾಚಕರಿತೋ ಗಲ್ಬಲಾ । ಮಾಯೇ ಮಧೇ ॥೨೮॥
ಮಾಯಾ ನಿಶೇಷ ನಾಸಲೀ । ಪುಢೇ ಸ್ಥಿತಿ ಕೈಸೀ ಉರಲೀ ।
ವಿಚಕ್ಷಣೇ ವಿವರಿಲೀ । ಪಾಹಿಜೆ ಸ್ವಯೇ ॥೨೯॥
ನಿಶೇಷ ಮಾಯೇಚೇ ನಿರ್ಶನ । ಹೋತಾ ಆತ್ಮನಿವೇದನ ।
ವಾಚ್ಯಾಂಶ ನಾಹೀ ವಿಜ್ಞಾನ । ಕೈಸೇ ಜಾಣಾವೇ ॥೩೦॥
ಲೋಕಾಂಚೆ ಬೋಲೀ ಜೋ ಲಾಗಲಾ । ತೋ ಅನುಮಾನೇಚ ಬುಡಾಲಾ ।
ಯಾಕಾರಣೇ ಪ್ರತ್ಯಯಾಲಾ । ಪಾಹಿಲೇ ಚ ಪಾಹಾವೇ ॥೩೧॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ಶಾಶ್ವತ ಬ್ರಹ್ಮ ನಿರೂಪಣ' ನಾಮ ಸಮಾಸ ಚತುರ್ಥ ॥

ಈಗ ಕೇವಲ ನೀರು ಮಾತ್ರ ಉಳಿಯಿತು. ಈ ನೀರು ಮೊದಲು ತೇಜದಿಂದ ನಿರ್ಮಾಣಗೊಂಡಿರುವದು. ಆದರೆ ಮುಂದೆ ಪ್ರಳಯಕಾಲದಲ್ಲಿ ತೇಜವೇ ನೀರನ್ನು ಹೀರಿ ಬಿಡುವದು. ಈಗ ತೇಜ ಮಾತ್ರ ಉಳಿಯಿತು. ಈ ತೇಜವು ವಾಯುವಿನಿಂದ ನಿರ್ಮಾಣವಾಗಿರುವದು. ಮುಂದೆ ಪ್ರಳಯಕಾಲದಲ್ಲಿ ವಾಯು ಬಲವಾಗಿ ಬೀಸಿ ತೇಜವನ್ನು ಆರಿಸಿ ಬಿಡುವದು. (೨೦) ಈಗ ವಾಯುವು ಮಾತ್ರ ಉಳಿಯಿತು. ಈ ವಾಯುವು ಆಕಾಶದಲ್ಲಿ ಹುಟ್ಟಿದ್ದು [ನಿರ್ಮಾಣವಾದದ್ದು] ಪ್ರಳಯ ಕಾಲದಲ್ಲಿ ಆಕಾಶದಲ್ಲಿಯೇ ಅಡಗಿ ಹೋಗುವದು. [ಲೀನವಾಗುವದು]. ಅಂತೂ ವಿಶ್ವದ ನಿರ್ಮಾಣ ಮತ್ತು ಸಂಹಾರದ ಕ್ರಮಗಳನ್ನು ವಿಚಾರ ಪೂರ್ವಕ ತಿಳಿದುಕೊಳ್ಳಿರಿ. (೨೧) ಇಲ್ಲಿ ಮುಖ್ಯವಾಗಿ ಲಕ್ಷಿಸತಕ್ಕದ್ದೇನಂದರೆ ಯಾವುದು ಯಾವ ತತ್ವದಿಂದ ನಿರ್ಮಾಣವಾಗುವದೋ ಕೊನೆಗೆ ಅದು ಆ ತತ್ವದಲ್ಲಿಯೇ ಲಯ ಹೊಂದುವದು. ಈ ನಿಯಮದಿಂದ ಪಂಚಭೂತಗಳು ಲಯ ಹೊಂದುವವು [೨೨] ಭೂತ ಶಬ್ದದ ಅರ್ಥವು ಇಷ್ಟೇ ಇರುವದು: "ಏನೆಲ್ಲ ನಿರ್ಮಾಣವಾಗಿರುವದೋ ಅದು" ಅನ್ನುವದೇ ಇರುವದು. ಅದ್ದರಿಂದಲೇ ಪಂಚಭೂತಗಳು ನಾಶವಾಗುವವು. ಇವೆಲ್ಲ ನಾಶವಾದ ಮೇಲೆ ಶಾಶ್ವತವಾದದ್ದು ಮಾತ್ರ ಉಳಿಯುವದು. ಇದೇ ಪರಬ್ರಹ್ಮವಾಗಿರುವದು. [೨೩] ಈ ಪರಬ್ರಹ್ಮನ ವಿಷಯ [ಗುಟ್ಟು] ಎಲ್ಲಿಯವರೆಗೆ ನಮಗೆ ತಿಳಿಯುವದಿಲ್ಲವೋ ಅಲ್ಲಿಯವರೆಗೆ ಜನ್ಮ ಮೃತ್ಯು ತಪ್ಪಿದ್ದಲ್ಲ. ನಾಲ್ಕು [ಚಾರ] ಖಾಣಿಯಲ್ಲಿ ಒಂದಿಲ್ಲ ಒಂದರಲ್ಲಿ ಅನೇಕ ಜೀವಗಳ ರೂಪದಲ್ಲಿ ಜನ್ಮ ತಾಳಿ ಬಗಬೇಕಾಗುವದು. [೨೪] ಜಡದ [ಸ್ಥೂಲ, ಕಠಿಣ] ಮೂಲವು ಚಂಚಲದಲ್ಲಿ ಇರುವದು. ಮತ್ತು ಚಂಚಲದ ಮೂಲವು ನಿಶ್ಚಲದಲ್ಲಿ- ಇರುವದು. ಆದರೆ ನಿಶ್ಚಲದ ಮೂಲ ಇನ್ನಾವುದರಲ್ಲಿಯೂ ಇಲ್ಲವೆಂಬುದನ್ನು ಚನ್ನಾಗಿ ತಿಳಿದುಕೊಳ್ಳಿರಿ. ನಿಶ್ಚಲ ಅಂದರೆ ಸ್ಥಿರವುಳ್ಳ, ಸ್ವಯಂಭು ಆಗಿರುವ ಪರಬ್ರಹ್ಮವೇ ಆಗಿರುವದು. [೨೫] ಯಾವುದು ನಿರ್ಮಾಣವಾಗಿರುವದೋ ಆ ದೃಶ್ಯ ವಿಶ್ವವನ್ನು ನಿಜವೆಂದು, ಸತ್ಯವೆಂದು, ಒಪ್ಪುವದು, ಅದದ್ದೆಲ್ಲವೂ- ನಿಜವೆಂದು ಒಪ್ಪುವದು ಇದಕ್ಕೆ ಪೂರ್ವ ಪಕ್ಷವೆಂದು ಅನ್ನುವರು. ಯಾವುದು ನಿರ್ಮಾಣವಾಗಿದೆ ಮತ್ತು ಅದು ಕಣ್ಣಿಗೆ ಕಂಡರೂ ಸಹಿತ ನಿಜವಲ್ಲ ಮಿಥ್ಯಾ ಇರುವದು, ನಷ್ಟಪ್ರಾಯವಿರುವದು. ಎಂದು ಹೇಳುವದು ಸಿದ್ಧಾಂತ [ಉತ್ತರ] ಪಕ್ಷವೆಂದು ಅನ್ನುವರು ಒಟ್ಟಿನಲ್ಲಿ ಇವೆರಡೂ ಪಕ್ಷಗಳ ಆಚೆಗೆ ಇರುವವನು ಮತ್ತು ಸರ್ವತ್ರದಲ್ಲಿ ತುಂಬಿರುವವನು ಯಾರೆಂದರೆ ಪರಬ್ರಹ್ಮನು ಇವನೇ ಮೂಲಕ್ಕೆ ಮೂಲನು. [೨೬] ಅನುಭವದಿಂದ ಇದರ ಜ್ಞಾನವನ್ನು ಮಾಡಿಕೊಳ್ಳಬೇಕು. ವಿಚಾರದಿಂದ ವಿವೇಕದಿಂದ ಇವನ ಗುರುತನ್ನು [ಅಗದೀ] ಅತ್ಯಂತ ಖಾತ್ರಿ ಪೂರ್ವಕವಾಗಿ ಮಾಡಿಕೊಳ್ಳಬೇಕು. ಪೂರ್ವ ಪಕ್ಷ, ಸಿದ್ಧಾಂತ ಪಕ್ಷಗಳ ಆಚೆಗೆ ಪರಬ್ರಹ್ಮ ಇರುವದು. ಇದನ್ನು ಲಕ್ಷ್ಯದಲ್ಲಿಡಬೇಕು. ವಿಚಾರಮಾಡದೇ ಹುಂಬತನದಿಂದ ಸುಮ್ಮನೆ ಶ್ರಮಪಡುವದು ಮೂರ್ಖತನದ ಕೆಲಸವಾಗುವದು. [೨೭] ಯಾವನೋ ಒಬ್ಬ ಜ್ಞಾನ ಮಾರ್ಗದಲ್ಲಿದ್ದ ಮನುಷ್ಯನು ಒಂದುವೇಳೆ- ಮಾಯೆಯ ಭಿಡೆಗೆ ಬಲಿ ಬಿದ್ದದ್ದಾದರೆ ಅವನಿಗೆ ನಿಶ್ಚಲ ಪರಬ್ರಹ್ಮನ ಪ್ರಾಪ್ತಿಯಾಗುವದಿಲ್ಲ. ಇವನು ಮಾಯೆಯ ಜಾಲದಲ್ಲಿ ಸಿಲುಕಿಕೊಂಡು ಸುಮ್ಮನೆ ಒಣ ಗಡಬಿಡಿ ಗುಲ್ಲುಮಾಡುತ್ತ [ಡಾಂಭಿಕತನದಿಂದ] ಇರುವನು. [೨೮] ಮಾಯಾ ಸಂಪೂರ್ಣವಾಗಿ ನಾಶ ಹೊಂದಿತೆಂದರೆ ಆ ಮೇಲೆ ಯಾವ ಅವಸ್ಥೆಯೂ ಉಳಿಯುವದಿಲ್ಲ. ಈ ವಿಷಯವನ್ನು ಚತುರ ಸಾಧಕನು ಸ್ವತಃ ವಿಚಾರದಿಂದ ತಿಳಿದುಕೊಳ್ಳಬೇಕು. ಇದು ಸ್ವಾನುಭವದಿಂದ ಗೋಚರವಾಗುವದು. [೨೯]ಮಾಯಾ ನಿಃಶ್ಶೇಷ ನಿರಾಸ ಹೊಂದಿದ ಮೇಲೆಯೇ ನಿಜವಾದ ಆತ್ಮ ನಿವೇದನವು ಘಟಿಸುತ್ತದೆ. ಯಾವ ಸ್ಥಳಕ್ಕೆ ಶಬ್ದಗಳು ಹೋಗಿ ಮುಟ್ಟಲು ಶಕ್ಯವಿಲ್ಲವೋ ಅಂಥ ವಿಜ್ಞಾನದ ಜ್ಞಾನವು ಸ್ವಾನುಭವ ಪಡೆಯದೆ ತಿಳಿಯಲು ಶಕ್ಯವಿಲ್ಲ [೩೦] ಜನರು ಮಾತನಾಡುವದೇನಂದರೆ: ಇವನ ನಾದಿಗೆ ಯಾವನು ಹತ್ತುವನೋ ಅವನು ಅನುಮಾನದ ಚಂಚಲತನದಿಂದ ಮುಳುಗುವನು. ಅಥವಾ ವ್ಯರ್ಥವಾಗಿ ಹೋಗುವನು. ಆದ್ದರಿಂದ ಸಾಧಕನು ಪುನಃ ಪುನಃ ಅನುಭವಯುಕ್ತ ಜ್ಞಾನದ ಕಡೆಗೆ ತಿರುಗಬೇಕು. [ಹೋಗಬೇಕು] [೩೧]

ಶ್ರೀ ದಾಸಬೋಧದ ಹದಿನೈದನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದಲ್ಲಿಯ
"ಶಾಶ್ವತ ಬ್ರಹ್ಮ ನಿರೂಪಣ" ವೆಂಬ ಹೆಸರಿನ ನಾಲ್ಕನೆಯ ಸಮಾಸವು ಮುಗಿದುದು.

● ●

## ದಶಕ ೧೫. ಸಮಾಸ ೫. ಚಂಚಳ ಲಕ್ಷಣ [ನುಡಿ ೩೨]

ವಿಶ್ವದ ರಚನೆಯನ್ನು ಚೆನ್ನಾಗಿ ತಿಳಿದು ನೋಡದ್ದಾದರೆ ೧) ಅನಂತ ಜಡ ಪದಾರ್ಥಗಳು. ೨) ಜೀವನ ಕಲೆಯಿಂದ ಸಂಪನ್ನವಾದ ಅನಂತ ಪ್ರಾಣಿಗಳು ೩) ಇವೆಲ್ಲವುಗಳಲ್ಲಿಯು ವಿಲಕ್ಷಣ ವಿವಿಧತೆಗಳು. ಮತ್ತು ೪) ನಿಯಮಾನುಸಾರದ ವ್ಯವಸ್ಥೆಯು ಈ ರೀತಿ ನಾಲ್ಕು ಪ್ರಕಾರಗಳು ಕಂಡು ಬರುವವು. ವಿಶ್ವದ ಮೂಲವು ಯಾವುದಿರುವದೋ ಆದರಲ್ಲಿ ಬೀಜ ರೂಪದಿಂದ ಈ ನಾಲ್ಕು ಪ್ರಕಾರಗಳು ಇರಲಿಕ್ಕೇ ಬೇಕಾಗುವದು. ಮೂಲ ಮಾಯೆಯು

ವಿಶ್ವದ ಮೂಲಳಿರುವಳು. ಪ್ರಕೃತಿ ವ ಪುರುಷ ಎನ್ನುವ ಎರಡು ಅಂಗಗಳು ಇವಳಿಗೆ ಇರುವವು. ಜಡ ಪದಾರ್ಥ ಗಳ ಸಲುವಾಗಿ ಪಂಚಭೂತಾತ್ಮಕವಾದ ಪ್ರಕೃತಿಯನ್ನು ಒಪ್ಪಬೇಕಾಗುವದು. ಮತ್ತು ಜೀವನ ಕಲೆಯ ಸಲುವಾಗಿ ಅಥವಾ ಅರಿವಿನ ಸಲುವಾಗಿ ಪುರುಷನನ್ನು ಒಪ್ಪಬೇಕಾಗುವದು. ವಿವಿಧ ಪ್ರಕಾರಗಳು ಹೇಗೆ ಪ್ರಕಟವಾಗುವವು? ಇದನ್ನು ಹೇಳುವದಕ್ಕಾಗಿ ಮೂರು ಗುಣಗಳನ್ನು ಒಪ್ಪಬೇಕಾಗುವದು. ಮತ್ತು ವಿಶ್ವದಲ್ಲಿಯ ವ್ಯವಸ್ಥೆಯ ಮಾಲಕ ಮತ್ತು ಚಾಲಕನೆಂದು ವಿಶ್ವದ ಅಂತರ್ಯಾಮಿಯಾದ ಅಂತರಾತ್ಮಾನನ್ನು ಒಪ್ಪಬೇಕಾಗುವದು. ಒಟ್ಟಿನಲ್ಲಿ ಶ್ರೀಸಮರ್ಥರು ಅನ್ನುವದೇನಂದರೆ:- ಪುರುಷ ಮತ್ತು ಪ್ರಕೃತಿ ಇವುಗಳಿಗನುಸರಿಸಿ ಮೂರು ಗುಣ ಮತ್ತು ಪಂಚಭೂತ (ಒಟ್ಟು ಎಂಟು)ಗಳು ಈ ವಿಶ್ವದ ಕಾರಭಾರ ಮಾಡುವವು. ಈ ಕಾರಭಾರ ಮಾಡುವ ಎಂಟರಲ್ಲಿ ಅಂತರಾತ್ಮಾ ಇವನು ಹಿರಿಯನೂ, ಮುಖ್ಯನೂ ಆಗಿರುವನು. ಇವನ ಪ್ರೇರಣೆಯಿಂದ ಯಾವತ್ತೂ ವಿಶ್ವವು ನಡೆದಿರುವದು. ಆದರೆ ಎಲ್ಲವನ್ನೂ ನಡೆಯಿಸುವ ಇವನೇ ಗುಪ್ತನಾಗಿ, ನಾಪತ್ತೆಯಾಗಿರುವನು. ಇವನನ್ನು ಪ್ರಯತ್ನಪೂರ್ವಕ ಶೋಧಿಸಿ ತೆಗೆಯಬೇಕು. (ಗುರುತಿಸಬೇಕು). ಇವನನ್ನು ಸಂತುಷ್ಟಗೊಳಿಸಬೇಕು. ಪ್ರಾಣಿಗಳ ದೇಹ-ಇದು ದೇವಾಲಯವು. ಎಂದು ಕಲ್ಪನೆಯನ್ನು ಮಾಡಿದರೆ ಅದರಲ್ಲಿಯೇ ಇರುವ ದೇವನು ಅಲ್ಲಿಯೇ ಅಡಗಿ ಕುಳಿತಂತೆ (ಇವನು) ಇರುವನು. ದೇವಾಲಯವನ್ನು ಪೂಜಿಸಿದರೆ ಅದು ಆ ದೇವನಿಗೆ ಮುಟ್ಟುವದು. ಎಂದು ಅನ್ನುವದು ನಿಜವಿರುವದು. ಆದರೆ ಈ ದೇವನ ಸಾಕ್ಷಾತ್ ಭೆಟ್ಟಿ ಎಂದೂ ಆಗುವದಿಲ್ಲ. ಈ ಮಾತಾದರೂ ನಿಜವೇ ಇರುವದು. ಆ ದೇವನ ಅಥವಾ ಅಂತರಾತ್ಮನ ಚಮತ್ಕಾರ ಹೇಗಿರುವದೆಂದರೆ ಒಬ್ಬನೇ ಒಬ್ಬನಿರುವ ಅಂತರಾತ್ಮನು ಸರ್ವ ಸ್ಥಳದಲ್ಲಿ ಮತ್ತು ಸರ್ವ ವಸ್ತುಗಳಲ್ಲಿ ಪಸರಿಸಿರುವನು. (ತುಂಬಿರುವನು). ಆದರೂ ಸಹ ಇವನು ಮೊದಲಿದ್ದಂತೆಯೇ ಪುನಃ ಒಬ್ಬನೇ ಆಗಿ ಉಳಿವನು. ಎಲ್ಲದರಲ್ಲಿ ಹಂಚಿ ಹೋಗಿಯೂ ಪುನಃ ಇವನು ಒಬ್ಬನೇ ಒಬ್ಬನಾಗಿ ಇರುವವನಾದ ಆ ಜಗದಂತರಂಗದಲ್ಲಿ ಇರುವ ಆತ್ಮನನ್ನು ಗುರುತಿಸಿ ತಿಳಿಯಬೇಕು. ಇದರ ಸಲುವಾಗಿ ಅಂತರ್ನಿಷ್ಠ (ಆತ್ಮನಿಷ್ಠ) ನಾಗಿ ಅಲಕ್ಷಿತವಾದ (ಪರಬ್ರಹ್ಮದಲ್ಲಿ) ವಸ್ತುವಿನಲ್ಲಿ ಲಕ್ಷ್ಯ ಹಚ್ಚುವ ಸಾಧನ (ಅಭ್ಯಾಸ) ಮಾಡಬೇಕು. ಎಲ್ಲರ ದೇಹದಲ್ಲಿ ಚಂಚಲವು (ಮಾಯೆಯ ಚಕ್ರವು) ಗಡಬಿಡಿ ಮಾಡುವದು. ಚಂಚಲ ಮನದಿಂದ ಚಂಚಲದ ವಿವರಣೆ(ಸ್ಪಷ್ಟೀಕರಣ, ನಿರೂಪಣ) ಮಾಡಿದರೆ ಅದು ಸಾಕಾಗುವದಿಲ್ಲ. ಕೆಲಸ ಮಾಡುವದಿಲ್ಲ. ಏಕದೇಶೀ (ಏಕಪಕ್ಷದ) ಮನವು ಸರ್ವದೇಶಿ (ಬೃಹತ್ ವಿಶಾಲದೇಶಿ) ಬ್ರಹ್ಮನಿಗೆ ಆಚ್ಛಾದನ (ಮುಸುಕು) ಹಾಕಲಿಕ್ಕೆ ಶಕ್ಯವಿಲ್ಲ. ಅದಕ್ಕಾಗಿ ಚಂಚಲವನ್ನು ದಾಟಿ ಮುಂದೆ ಹೋಗಬೇಕು. ಮಹತ್ ತತ್ವ ಅಥವಾ ಮಹತ್ ಭೂತ ಅಂದರೇನೇ ಭಗವಂತನಾಗಿರುವನು. ಸಾಧಕನ (ನಮ್ಮ) ಉಪಾಸನೆಯು ಭಗವಂತನ ವರೆಗೆ ಹೋಗಿ ಮುಟ್ಟಿತೆಂದರೆ ಉಪಾಸನಾ ಪೂರ್ಣವಾಗುವದು. ಮತ್ತು ಇಲ್ಲಿಗೆ ಈ ಕಾರ್ಯ ಮುಗಿಯುವದು.

### ದಶಕ ಪಂಚದಶ : ಸಮಾಸ ಪಂಚಮ : ಚಂಚಳ ಲಕ್ಷಣ

॥ಶ್ರೀರಾಮ॥ ದೋಘಾ ಏಸೀ ತೀನ ಚಾಲತೀ । ಅಗುಣೀ ಅಷ್ಟಧಾ ಪ್ರಕೃತೀ ।
ಅಧೋರ್ಧ್ವ ಸಾಂಡೂನ ವರ್ತತೀ । ಇಂದ್ರುಫಣೀ ಏಸೀ ॥೧॥

ಪಣತೋಂಡೇ ಭಕ್ತಿತೋ ಪಣಜಾ । ಮೂಳ ಬಾಪಾಸ ಮಾರೀ ಪೋಜಾ ।
ಚುಕಾರ್‍ಯಾ ಗೇಲಾ ರಾಜಾ । ಚೌಘಾ ಜಣಾಂಚಾ ॥೨॥

ದೇವ ದೇವಾಳ್ಯಾಮಧೇ ಲಪಾಲಾ । ದೇಊಳ ಪೂಜಿತಾ ಪಾವೇ ತ್ಯಾಲಾ ।
ಸೃಷ್ಟೀಮಧೇ ಜ್ಯಾಲಾ ತ್ಯಾಲಾ । ಏಸೇ ಚಿ ಆಹೆ ॥೩॥

## ದಶಕ ೧೫. ಸಮಾಸ ೫. ಚಂಚಲ ಲಕ್ಷಣ (ನುಡಿ ೩೨)

ವಿಶ್ವ ಅಂದರೆ ಪ್ರಕೃತಿ ಮತ್ತು ಪುರುಷ ಇವರಲ್ಲಿಯ ಇದೊಂದು ಆಟವಿರುವದು. ಅನ್ನುವ ಕಲ್ಪನೆಯನ್ನು ಮಾಡಿ ಮೊದಲಿಗೆ ವಿಶ್ವರಚನೆಯ ವರ್ಣನೆಯನ್ನು ಮಾಡುವರು:– ಶಕ್ತಿಮಯ ವಾಯುರೂಪ ಪ್ರಕೃತಿ ಮತ್ತು ಅರಿವು (ಜಾಣೀವ)ಮಯ ಪುರುಷ ಈ ಇಬ್ಬರ ಮಾರ್ಗದರ್ಶನದಂತೆ ಸತ್ವ, ರಜ, ತಮ, ಈ ಮೂರು ಗುಣಗಳು ನಡೆಯುವವು. ಈ ಮೂರು ಗುಣಗಳು ಮತ್ತು ಪಂಚಭೂತಗಳು ಕೂಡಿ ಅಷ್ಟಧಾ ಪ್ರಕೃತಿ (ಅಂದರೆ ಎಂಟು ಪ್ರಕಾರಗಳಿಂದ ಕೂಡಿದ, ವಿಶ್ವ ಉತ್ಪತ್ತಿಗೆ ಕಾರಣವಾಗಿರುವ) ಆಗಿರುವದು. ಇದು ನಿರ್ಗುಣ ಬ್ರಹ್ಮದಲ್ಲಿಯೇ ಇರುವದು. ಆದರೆ ಇದು ಸೂಕ್ಷ್ಮ ಮತ್ತು ಚಂಚಲವಿರುವದು. ಒಂದು ಕಡೆಗೆ ಅತ್ಯಂತ ಮೇಲೆ, ನಿಶ್ಚಲ ಪರಬ್ರಹ್ಮ ಇರುವನಾದರೆ ಎರಡನೇ ಕಡೆಗೆ ಅತ್ಯಂತ ಕೆಳಗೆ ಜಡ ಮತ್ತು ಚಂಚಲ ಪದಾರ್ಥಗಳಿಂದ ತುಂಬಿದ ದೃಶ್ಯ ವಿಶ್ವವಿರುವದು. ಪರಬ್ರಹ್ಮವು ಅವ್ಯಕ್ತವಿರುವದಾದರೆ ವಿಶ್ವವು ವ್ಯಕ್ತವಿರುವದು. ಬೆಕ್ಕು ಮತ್ತು ಹಾವು (ಸರ್ಪ) ಇವು ಹೇಗೆ ಪರಸ್ಪರ ವೈರಿಗಳಾಗಿರುವವೋ ಅದರಂತೆಯೇ ವ್ಯಕ್ತ ಮತ್ತು ಅವ್ಯಕ್ತ ಇವು ಒಂದಕ್ಕೊಂದು ಪರಸ್ಪರ ವಿರುದ್ಧ ಇರುವವು. ವ್ಯಕ್ತವು ಅವ್ಯಕ್ತವನ್ನು ಕೆಳಗಡೆಗಿರುವ ದೃಶ್ಯದ ಕಡೆಗೆ ಎಳೆಯುವದು. ಆದರೆ ಅವ್ಯಕ್ತವು ದೃಶ್ಯ-ವ್ಯಕ್ತವನ್ನು ಅದೃಶ್ಯದಲ್ಲಿ ಇಲ್ಲದಂತೆ ಮಾಡುವದು. ಪರಬ್ರಹ್ಮವು ನಿಶ್ಚಲವಾದ್ದರಿಂದ ಅದು ಏನೂ ಮಾಡುವದಿಲ್ಲ. ದೃಶ್ಯವಾದ ಜಡ ವಿಶ್ವವು ಜಡತ್ವದ ಕಾರಣದಿಂದ ಇದು ಏನೂ ಮಾಡಲಿಕ್ಕೆ ಶಕ್ಯವಾಗುವದಿಲ್ಲ. ಆದ್ದರಿಂದ ಇವೆರಡರಲ್ಲಿಯೂ ಇರುವಂಥ ಸೂಕ್ಷ್ಮ ಮತ್ತು ಚಂಚಲವಿರುವಂಥ ಅಷ್ಟಧಾ ಪ್ರಕೃತಿಯು ವಿಶ್ವರಚನೆಯ ಎಲ್ಲ ಆಟವನ್ನು ಆಡುವದು. [೧] ಸರ್ವ ವಿಶ್ವಕ್ಕೂ ಪರಬ್ರಹ್ಮನು ರಾಜನಾಗಿರುವನು. ಅಂತರಾತ್ಮನು ಮೂಲಪುರುಷನಿರುವನು. ಇವನ ಮಗ ಸತ್ವಗುಣ ಅಥವಾ ವಿಷ್ಣುವು.ಮತ್ತು ಮೊಮ್ಮಗನು ರಜೋಗುಣ ಅಥವಾ ಬ್ರಹ್ಮದೇವನು.ಮತ್ತು ಮರಿಮಗನ ತಮೋಗುಣ ಅಥವಾ ರುದ್ರನು. (ಮಹೇಶನು). ಮೂಲ ಪುರುಷ ಅಂತರಾತ್ಮಾ ಸರ್ವಜ್ಞನು. ಈ ಅಂತರಾತ್ಮಾ ಜ್ಞಾನಮಯ ಇರುವನೆಂಬುದು ನಿಜವಿದೆ. ಆದರೆ ಜೀವನದಲ್ಲಿಯ ಅಜ್ಞಾನದ ಕಾರಣದಿಂದಾಗಿ ಸ್ವಸ್ವರೂಪದ ಜ್ಞಾನವು ಲೋಪವಾಗುವದು. (ಕಾಣದಾಗುವದು). ಈ ಪ್ರಕಾರದಿಂದ ತಮೋಗುಣ ಅಂದರೆ ಅಜ್ಞಾನವು ಅಂತರಾತ್ಮನಿಗೆ ಅಂದರೆ ಜ್ಞಾನವನ್ನು ಮುಚ್ಚಿಬಿಡುವದು. [ಮರೆಮಾಡಿ ಬಿಡುವದು]. ಮರಿಮಗನು. [ತಮೋಗುಣವು] ಮುತ್ತಜ್ಜನನ್ನು [ಅಂತರಾತ್ಮನನ್ನು] ತಿಂದುಬಿಡುತ್ತಾನೆ. ರಜೋಗುಣ ಅಂದರೆ ಇಂದ್ರಿಯ ಸುಖದ ಅನಿವಾರ ಲಾಲಸೆಯು. ಸತ್ವಗುಣ ಅಂದರೆ ಸ್ವಸ್ವರೂಪದ ಕಡೆಗಿರುವ ಅಭಿರುಚಿಯು. ರಜೋಗುಣದ ಜೋರು ಆದ ಮೇಲೆ ಸತ್ವಗುಣವು ಲೋಪವಾಗುವದು. ಮನುಷ್ಯನು ಇಂದ್ರಿಯ ಭೋಗ–ಸುಖಗಳ ಅನಿವಾರ ಲಾಲಸೆಯ ನಾದಿಗೆ ಬಿದ್ದನೆಂದು [ಹತ್ತಿದರೆ] ಭಗವಂತನನ್ನೇ ಮರೆಯುವನು. ಇದು ಅವನಿಗೆ ತಿಳಿಯದೇ ಸಹಜವಾಗಿ [ಯುಕ್ತಿಯಿಂದ]ಘಟಿಸುವದು. ಮಗ [ರಜೋಗುಣ]ನು ತಂದೆಯನ್ನು [ಸತ್ವಗುಣವನ್ನು] ಬಹಳ ಚತುರತೆಯಿಂದ ಹೊಡೆದು ಒಗೆಯುವನು. ಅಂತೂ ಅಜ್ಞಾನದಿಂದಾಗಿ ಸ್ವಸ್ವರೂಪದ ಲೋಪವಾಯಿತು. ಮತ್ತು ಇಂದ್ರಿಯ ಭೋಗಸುಖದ ಲಾಲಸೆಯಿಂದಾಗಿ ಸ್ವಸ್ವರೂಪದ ಕಡೆಗೆ ಹೋಗುವ ಪ್ರವೃತ್ತಿ [ಒಲವು] ಇಲ್ಲದಾಯಿತು. [ನಾಶವಾಯಿತು]. ಅಂತೂ ಈ ನಾಲ್ವರ ಮಾರಾಮಾರಿಯ ಗೊಂದಲದಲ್ಲಿ ಕೊನೆಗೆ ಸರ್ವರ ರಾಜನಾದ ಆ ಪರಬ್ರಹ್ಮನು ಕಳೆದು ಹೋಗುವನು.[ಮರೆಯಾಗಿ ಬಿಡುವನು, ತಪ್ಪಿಸಿಕೊಂಡು ಹೋಗುವನು]. ಅಂತೂ ಮನುಷ್ಯನಿಗೆ ಪರಮಾತ್ಮ ಪ್ರಾಪ್ತಿಯ ಯೋಗ ಒದಗಿ ಬರಲಿಲ್ಲ. ಅಂದರೆ ಪರಮಾತ್ಮ ಪ್ರಾಪ್ತಿ ಆಗುವದಿಲ್ಲ. [೨] ದೇವಾಲಯದಲ್ಲಿ ದೇವರಿರುವನು. ಆದರೆ ಅವನು ಅಡಗಿಕೊಂಡು ಇರುವನು. ಗುಡಿಯ ಪೂಜೆಯನ್ನು ಮಾಡಿದರೆ ಅದು ಅಲ್ಲಿ ಅಡಗಿದ ದೇವನಿಗೆ ಮುಟ್ಟುವದು. ಜಗದೊಳಗಿನ ಪ್ರತಿಯೊಬ್ಬರ ಬಾಬತ್ತಿನಲ್ಲಿಯೂ ಹೀಗೆಯೇ ಇರುವದು. ಪ್ರತಿಯೊಂದು ಪಿಂಡದಲ್ಲಿ [ದೇಹದಲ್ಲಿ] ಅಂತರಾತ್ಮನು ವಾಸಮಾಡುವನು. ಆದರೆ ಇವನ ಪ್ರತ್ಯಕ್ಷ ದರ್ಶನ ಯಾರಿಗೂ ಆಗುವದಿಲ್ಲ. ಇವನ ಪ್ರತ್ಯಕ್ಷ ಪೂಜಾ ಮಾಡಲಿಕ್ಕೆ ಯಾರಿಗೂ ಬರುವದಿಲ್ಲ. ದೇಹದ ಪೂಜೆಯನ್ನು ಮಾಡಿದೆವೆಂದರೆ ಅದು ಅಂತರಾತ್ಮನಿಗೆ ಮುಟ್ಟುವದು. [೩]

ದೋನೀ ನಾಮೇ ಯೇಕಾಸ ಪಡಿಲೀ । ಲೋಕೀ ನೇಮಸ್ತ ಕಲ್ಪಿಲೀ ।
ವಿವೇಕೇ ಪ್ರತ್ಯಯೇ ಪಾಹಿಲೀ । ತೋ ಯೇಕ ಚಿ ನಾಮ ॥೪॥

ನಾಹೀ ಪುರುಷ ನಾ ವನಿತಾ । ಲೋಕೀ ಕಲ್ಪಿಲೇ ತತ್ತ್ವತಾ ।
ತ್ಯಾಚಾ ಬರಾ ಶೋಧ ಘೇತಾ । ಕಾಂಹೀ ಚ ನಾಹೀ ॥೫॥

ಸ್ತ್ರೀ ನದೀ ಪುರುಷ ಖಳಾಳ । ಐಸೇ ಬೋಲತೀ ಸಕಳ ।
ವಿಚಾರ ಪಾಹಾತಾ ನಿವಳ । ದೇಹ ನಾಹೀ ॥೬॥

ಆಪಣ ಆಪಣಾಸ ಕಳೇನಾ । ಪಾಹೋ ಜಾತಾ ಆಕಳೇನಾ ।
ಕಶಾಸ ಕಾಂಹೀ ಚ ಮಿಳೇನಾ । ಉದಂಡಪಣೇ ॥೭॥

ಯೇಕಲಾ ಚಿ ಉದಂಡ ಜಾಲಾ । ಉದಂಡ ಚಿ ಯೇಕಲಾ ಪಡಿಲಾ ।
ಆಪಣಾಸಿ ಆಪಲಾ ಗಲ್ಬಲಾ । ಸೋಸವೇನಾ ॥೮॥

ಯೇಕ ಅಸೋನ ಫುಟೇ ಪಡಿಲೀ । ಫುಟೇ ಅಸೋನ ಸ್ಥಿತಿ ಏಕಲೀ ।
ವಿಚಿತ್ರ ಕಳಾ ಪೈಸಾವಲೀ । ಪ್ರಾಣಿ ಮಾತ್ರೀ ॥೯॥

ವಲ್ಲಿಮಧೇ ಜಳ ಸಂಚರೇ । ಕೊರಡೇಪಣೇ ಹೇ ವಾವರೇ ।
ಬೋಲೇ ವಾಚೂನ ನ ಥಿರೇ । ಕಾಂಹೀ ಕೇಲ್ಯಾ ॥೧೦॥

ಝಾಡಾಮಧೇ ಕೇಲೀ ಆಳೀ । ಝಾಡೇ ಧಾವತೀ ನಿರಾಳೀ ।
ಕಿತ್ಯೇಕ ಝಾಡೇ ಅಂತರಾಳೀ । ಉಡೋನ ಜಾತೀ ॥೧೧॥

ಭೂಮೀಪಾಸೂನ ವೇಗಳೀ ಜಾಲೀ । ಪರೀ ತೇ ನಾಹೀತ ವಾಳಲೀ ।
ನಿರಾಳೀ ಚ ಬಳಾವಲೀ । ಜೇಥ ತೇಥೇ ॥೧೨॥

ಪ್ರಕೃತಿ ಮತ್ತು ಪುರುಷ– ಹೀಗೆ ಎರಡು ಹೆಸರುಗಳನ್ನು ಜನರು ಉಪಯೋಗಿಸುವರು. ಆದರೆ ಜನರೇ ತಮ್ಮ ಕಲ್ಪನೆಯಿಂದ ಇವುಗಳನ್ನು ನಿರ್ಮಾಣ ಮಾಡಿರುವರು. ವಿಚಾರದಿಂದ ಮತ್ತು ಅನುಭವದಿಂದ ನೋಡಿದ್ದಾದರೆ ಮೂಲವಸ್ತು ಒಂದೇ ಒಂದು ಇರುವದೆಂಬುದು ಕಂಡುಬರುವದು. ಈ ಇಬ್ಬರೂ ಮೂಲ ಮಾಯೆಯಿಂದ ಬಂದ ವರಿರುವರು [೪] ಪ್ರಕೃತಿ ಮತ್ತು ಪುರುಷ ಎಂದು ಅನ್ನುವಾಗ ಸ್ತ್ರೀ ಮತ್ತು ಪುರುಷ ಎಂಬ ಭಾಸವಾಗುವದು. ಆದರೆ ಅಲ್ಲಿ ಸ್ತ್ರೀಯೂ ಇಲ್ಲ ಮತ್ತು ಪುರುಷನೂ ಇಲ್ಲ. ಇದು ಕೇವಲ ಜನರ ಕಲ್ಪನೆಯಾಗಿದೆ. ಈ ಕಲ್ಪನೆಯ ಬಗ್ಗೆ ಚನ್ನಾಗಿ ಪರಿಶೀಲಿಸಿ ನೋಡಿದೆವೆಂದರೆ ಆಗ ನಮಗೆ ಮೂಲದಲ್ಲಿ ಏನೂ ಇಲ್ಲ ಅನ್ನುವ ಸತ್ಯವು ಕಂಡು ಬರುವದು. [೫] ನದಿಯು ಸ್ತ್ರೀ ಮತ್ತು ಹಳ್ಳವು ಪುರುಷ ಎಂದು ಎಲ್ಲರೂ ಅನ್ನುವರು. [ಮರಾಠಿ ಭಾಷೆಯಲ್ಲಿ ನದಿ ಇದು ಸ್ತ್ರೀ ಲಿಂಗವು ಮತ್ತು ಹಳ್ಳ [ಓಢಾ=ಖಳಾಳ] ಇದು ಪುಲ್ಲಿಂಗವೂ ಆಗಿದೆ ] ಆದರೆ ವಿಚಾರಮಾಡಿದ್ದಾದರೆ ಇವುಗಳಿಗೇನೂ ಸ್ತ್ರೀ ಪುರುಷರ ದೇಹವಿಲ್ಲವೆಂಬುದು ನಿಮಗೇ ತಿಳಿಯುವದು. [೬] ನೀರು ಅನ್ನುವದು ಮೂಲದಲ್ಲಿ ಒಂದೇ ಇರುವದು. ಆದರೆ ನಾನಾ ಪ್ರಕಾರದ ಬಳ್ಳಿ ಮತ್ತು ಗಿಡಗಳಲ್ಲಿ ಇದು ರಸ ರೂಪದಿಂದ ಪ್ರಕಟವಾಗುವದು. ಇದರಂತೆ ಅಂತರಾತ್ಮವು ಒಬ್ಬನೇ ಒಬ್ಬನಿರುವನು. ಬೇರೆ ಬೇರೆ ತರಹದ ಜೀವ ಪ್ರಾಣಿಗಳಲ್ಲಿ ಇವನು ವ್ಯಕ್ತನಾಗಿ ಕಂಡು ಬರುವನು. ಆದರೂ ಇವನ ಏಕತ್ವತನವು ಭಂಗಗೊಳ್ಳುವದಿಲ್ಲ. "ನಾನು ಯಾರು" ಇದು ನಮಗೇ ತಿಳಿಯು ವದಿಲ್ಲ.–ತಿಳಿದಿಲ್ಲ. ಇದನ್ನು ನೋಡಹೋದರೆ ನಿಜವಾದ "ನಾನು" ಅನ್ನುವದು ಆಕಲನವಾಗುವದಿಲ್ಲ. ಅತಿ ವಿಶಾಲ ತನದಿಂದಾಗಿ [ವಿಸ್ತಾರದಿಂದಾಗಿ] ಯಾತರದೂ ಏನೂ ಮೇಳ ಹೊಂದುವದಿಲ್ಲ. [೭] ನಾವೆಲ್ಲ ಅಂತರಾತ್ಮಾ ಇರುವೆವು. ಅಂತರಾತ್ಮಾ ಒಬ್ಬನೇ ಇರುವನು. ಇವನು ಅಸಂಖ್ಯ ರೂಪಗಳನ್ನು ಧಾರಣ ಮಾಡಿದನು. ಆದರೆ ಅಸಂಖ್ಯ ರೂಪ ಗಳಲ್ಲೆಲ್ಲ ಅವನೊಬ್ಬನೇ ತುಂಬಿಕೊಂಡಿರುವನು. ಅವನು ಸ್ವತಃ ತಾನೇ ಅನೇಕ (ಬಹಳ) ಆದನೆಂಬುದು ನಿಜವಿದೆ ಆದರೆ ಈ ವಿಪುಲತನದ (ಹಬ್ಬುವಿಕೆಯ) ಗೊಂದಲ ಇವನಿಗೆ ಬೇಡವೆನಿಸಿತು. ಬೇಸರ ತರಿಸಿತು. [೮] ಇವನು ಒಬ್ಬನೇ ಇರುವನು ಆದರೆ ಒಡೆದು [ವಿಭಾಗವಾಗಿ] ಬಹಳ ಅಥವಾ ಅನೇಕವಾದಂತೆ ಕಾಣುವನು. ವಿಪುಲತನದಿಂದ ಅಥವಾ ಅನೇಕ ತನದಿಂದ ಕಾಣಿಸಿಕೊಂಡರೂ ಪುನಃ ತನ್ನ ಏಕತ್ವದ ಅವಸ್ಥೆಯಲ್ಲಿ ಬದಲಾಗುವದಿಲ್ಲ.ಅನೇಕ ತನದಿಂದ ಕಂಡರೂ ಪುನಃ ತನ್ನ ಏಕತ್ವವನ್ನು ಭಂಗವಾಗಗೊಡದ ಅಂತರಾತ್ಮನ ಈ ದೊಡ್ಡದಾದ ಮತ್ತು ವಿಲಕ್ಷಣವಾದ ಕಲೆಯು ಸರ್ವ ಪ್ರಾಣಿಗಳಲ್ಲಿ ಹಬ್ಬಿರುವದು [ಪಸರಿಸುವದು]. [೯] ವನಸ್ಪತಿಯಲ್ಲಿ ನೀರು ತುಂಬಿರುವದು. ಹಸಿ ಇಲ್ಲದ ಹೊರತು ವನಸ್ಪತಿ ಜೀವಂತ ಉಳಿಯುವದೇ ಇಲ್ಲ. ಆದರೆ ಇವು ಹೊರಗಿನಿಂದ ಒಣ– ಒಣವಿರುವವು. [೧೦] ಗಿಡಗಳಿಗೆ ನೀರು ಬೇಕು. ಅದಕ್ಕಾಗಿ ಗಿಡದ ಬುಡಕ್ಕೇ [ಬೊಡ್ಡೆಗೆ] ಸುತ್ತಲೂ ಪಾತಿ (ಮಡಿ) ಮಾಡುವರು. ಆದರಲ್ಲಿ ನೀರು ನಿಂತದ್ದರಿಂದ ಗಿಡವು ಬಹಳ ಎತ್ತರದವರೆಗೂ ಬೆಳೆಯುವದು. ಕೆಲವೊಂದು ಗಿಡಗಳು ಆಕಾಶದಲ್ಲಿ ಹಾರಿ ಹೋಗುವವು. [ದೇಹಕ್ಕೆ ಗಿಡ ಎಂದು ಹೆಸರಿಟ್ಟದ್ದರಿಂದ ಪಕ್ಷ್ಯಾದಿ- ಗಿಡಗಳು ಆಕಾಶದಲ್ಲಿ ಹಾರುವವು.] ಗಿಡದ ಅಂತರ್ಯಾಮದಲ್ಲಿ ಬೇರು ಬೊಡ್ಡೆಯಿಂದ ಹಿಡಿದು ಗಿಡದ ಕೊನೆಯ– ಟೊಂಗೆಯವರೆಗೂ [ಗಿಡದ ತುಂಬೆಲ್ಲಾ] ನೀರು ತುಂಬಿರುವದು. ಆದರೆ ಹೊರಗಿನಿಂದ ಒಣ ಒಣದಾಗಿಯೇ ಕಾಣುವದು. ಇದರಂತೆ ಅಂತರಾತ್ಮಾ ಸರ್ವ ಪ್ರಾಣಿಗಳಲ್ಲಿಯೂ ತುಂಬಿರುವನು. ಇವನು ಹೊರಗಿನಿಂದ ನೋಡುವವರಿಗೆ ಕಾಣುವದಿಲ್ಲವೆಂಬುದು ನಿಜವಿದೆ. ಮನುಷ್ಯ, ಪಶು, ಪಕ್ಷಿ ಇತ್ಯಾದಿ ಪ್ರಾಣಿಗಳ ದೇಹವೂ ಗಿಡ [ಮರ]ವೇ ಆಗಿರುವವು. ಯಾಕಂದರೆ ಅಂತರಾತ್ಮಾ ಇದುವೇ ಸರ್ವರ ಜೀವನ ಇರುವದು. [೧೧] ಕೆಲವು ಗಿಡಗಳು (ಅಂದರೆ ಆಕಾಶದಲ್ಲಿ ಹಾರಿ ಹೋಗುವ ಪಕ್ಷಿಗಳು] ಭೂಮಿಯಿಂದ ಬೇರೆ ಆದವೆಂದು ಒಣಗುವದಿಲ್ಲ. ಆಕಾಶದಲ್ಲಿ ವಾಸ್ತವ್ಯಮಾಡಿದರೂ ಸಹ ಇವುಗಳು ತಾವಿದ್ದ ತಮ್ಮ ತಮ್ಮ ಸ್ಥಳಗಳಲ್ಲಿಯೇ ಬೆಳೆಯುವವು [೧೨]

ದೇವಾಕರಿತಾ ಚಾಲತೀ ಝಗಡೇ । ದೇವ ನಸ್ತಾ ಹೋತೀ ಲಾಕಡೇ ।
ನೀಟ ಚಿ ಆಹೆ ಕುವಾಡೇ । ಸರ್ವಥಾ ನವ್ಹೆ ॥೧೩॥

ಝಗಡಾಪಾಸೂನ ಝಗಡೇ ಹೋತೀ । ತೇ ಹಿ ಅಂತರೀಕ್ಷ ಜಾತೀ ।
ಮುಳಾನೇ ಭೇದಿಲೀ ಜಗತೀ । ಕದಾಪಿ ನಾಹೀ ॥೧೪॥

ಝಗಡಾಸ ಝಗಡೇ ಖಾತಪಾಣೀ । ಘಾಲೂನ ಪಾಳಿಲೀ ಪ್ರತಿದಿನೀ ।
ಬೋಲಕೀ ಝಗಡೇ ಶಬ್ದಮಥನೀ । ವಿಚಾರ ಘೇತೀ ॥೧೫॥

ಹೋಣಾರ ತಿತುಕೇ ಆಧೀಚ ಜಾಲೇ । ಮಗ ಕಲ್ಪಕಲ್ಪೂನ ಬೋಲಿಲೇ ।
ಜಾಣತಯಾಸೀ ಸಮಜಲೇ । ಸಕಳ ಕಾಂಹೀ ॥೧೬॥

ಸಮಜಲೇ ತರೀ ಉಮಜೇನಾ । ಉಮಜಲೇ ತರೀ ಸಮಜೇನಾ ।
ಪ್ರತ್ಯಯೇವಿಣ ಅನುಮಾನೇನಾ । ಸಕಳ ಕಾಂಹೀ ॥೧೭॥

ಸರ್ವತ್ರಾಂಚಾ ವಡಿಲ ಕೋಣ । ಹೇ ಚಿ ಪಾಹಾವೀ ವೋಳಖಣ ।
ಭೇಟಿ ಆಸಣಾಸ ಆಪಣ । ಜಗದಾಂತರೇ ॥೧೮॥

ಅಂತರ ನಿಷ್ಠಾಂಚೀ ಉಂಚ ಕೋಟೀ। ಬಾಹೇರಮುದ್ರ್ಯಾಚೀ ಸಂಗತೀ ಖೋಟೀ।
ಮೂರ್ಖ ಕಾಯೆ ಸಮಜೇಲ ಗೋಷ್ಟೀ । ಶಾಹಾಣೆ ಜಾಣತೀ ॥೧೯॥

ಅಂತರೇ ರಾಖತಾ ರಾಜೀ । ಭಲತ್ಯಾಸ ಭಲತಾ ಚ ನಮಾಜೀ ।
ಅಂತರೇ ನ ರಾಖತಾ ಭಾಜೀ । ಮಿಳಣಾರ ನಾಹೀ ॥೨೦॥

ಅಂತರಾತ್ಮನಿಂದ ಗಿಡಗಳು ನಡೆಯುವವು. ಇವುಗಳ ಅಂತರ್ಯಾಮಿಯಲ್ಲಿ ಅಂತರಾತ್ಮಾ ಇಲ್ಲದಿದ್ದರೆ ಆಗ ಅವು ಫಕ್ತ [ಕೇವಲ] ಕಟ್ಟಿಗೆಗಳಾಗುವವು. [ದೇಹದಲ್ಲಿ ಜೀವವಿಲ್ಲದಿದ್ದರೆ ಅದು ನಿರ್ಜೀವ ದೇಹವೆನಿಸುವದು- ಅದರಂತೆ ಗಿಡಗಳಲ್ಲಿ ರಸ [ಜೀವ] ಇಲ್ಲದಿದ್ದರೆ ಅವು ಒಣಗಿ ಕಟ್ಟಿಗೆಗಳಾಗುವವು].ಇದರಲ್ಲಿ ಯಾವದೂ ಗುಪ್ತ ಇಲ್ಲ. ಇದೆಲ್ಲವೂ ಸ್ಪಷ್ಟವಾದದ್ದೇ ಇರುವದು. [೧೩] ಗಿಡ [ದೇಹ] ಗಳಿಂದ ಗಿಡ[ದೇಹ]ಗಳಾಗುವವು. ಆದರೆ ಈ ಗಿಡಗಳೂ[ಪ್ರಾಣಿ] ಕೂಡಾ ಮೇಲೆ ಆಕಾಶದಲ್ಲಿ ಬೆಳೆಯುವವು. ಇವುಗಳ [ಪ್ರಾಣಿಗಳ] ಬೇರುಗಳು ಪೃಥ್ವಿಯನ್ನು ಭೇದಿಸಿದವು ಎಂದು ಅನ್ನಲು ಬರಲಾರದು. ಇದು ಶಕ್ಯವೂ ಇಲ್ಲ. [೧೪] ಗಿಡಗಳದೇ ಗೊಬ್ಬರ, ನೀರು ಬೇರೆ ಗಿಡಗಳಿಗೆ ದೊರೆಯುವದು. ಮತ್ತು ಪ್ರತಿ ದಿನವೂ ಇವುಗಳ ಪಾಲನ ಪೋಷಣವೂ ಆಗುವದು. ಗಿಡಗಳ ಪೈಕಿ ಕೆಲವು ಮಾತನಾಡುವ ಗಿಡ [ಮನುಷ್ಯ ವ ಇತರ ಪ್ರಾಣಿ] ಗಳಿರುವವು. ಈ ಗಿಡಗಳು ಶಬ್ದಗಳ ಮಂಥನ [ಚರ್ಚೆ, ಆಲೋಚನೆ] ಮಾಡುವವು. ಅದರಲ್ಲಿಯ ಅರ್ಥ ಅಥವಾ ವಿಚಾರಗಳನ್ನುಗ್ರಹಣ ಮಾಡುವವು. ಮನುಷ್ಯರು ಇತರ ಮನುಷ್ಯರಿಗೆ- ಕಲಿಸುವರು. ಮತ್ತು ಸಂಭಾಳಿಸುವರು. [೧೫] ಈ ಯಾವತ್ತೂ ವಿಶ್ವವು ಈಗಾಗಲೇ ನಿರ್ಮಾಣವಾಗಿ ಹೋಗಿದೆ. ವಿಚಾರವಂತ ರಾದವರು ಇದರ ನಿರ್ಮಾಣದ ಬಗ್ಗೆ ಅನೇಕ ಕಲ್ಪನೆಗಳನ್ನು ಮಾಡುವರು. ನಿಜ ಹೇಳಬೇಕೆಂದರೆ- ಈ ಎಲ್ಲದರ ಮೂಲವು ಅಂತರಾತ್ಮಾ ಇರುವನು. ಇವನ ಗುರುತನ್ನು ಗುರುತಿಸಿ ತಿಳಿಯಿರಿ. ಇವನು ಅಂತರ್ಯಾಮಿ ಆಗಿರುವನು. ಇವನ ದರ್ಶನ ಆಗಲಿಕ್ಕೆ ಮನುಷ್ಯನು ಅಂತರ್ನಿಷ್ಠ- ಆತ್ಮನಿಷ್ಠನಾಗಬೇಕಾಗುವದು: ಏನಾಗಬೇಕಾಗಿತ್ತೋ ಅದು ಈ ಮೊದಲೇ ಆಗಿಹೋಗಿದೆ. ಈಗ ವಿಚಾರವಂತರೆನಿಸಿರುವ ಜನರು ಬೇರೆ ಬೇರೆ ಕಲ್ಪನೆಗಳನ್ನು ಮಾಡಿಕೊಂಡು ಇದರ ಬಗ್ಗೆ ಹೇಳುವರು.ಆದರೆ ಇವೆಲ್ಲವೂ ಕೇವಲ ಕಲ್ಪನಾದಿಂದ ಕಲ್ಪಿತವಾದವುಗಳೇ ಇರುವವು. ಯಾರು ನಿಜ ತಿಳಿದವರು- ಬುದ್ಧಿವಂತ ವಿಚಾರದವರಿರುವರೋ ಇಂಥವರಿಗೆ ಈ ಎಲ್ಲವೂ ಗೊತ್ತಿದ್ದಂಥವೇ ಇರುವವು. ಮನುಷ್ಯನು ಸ್ವತಃದ ಬುದ್ಧಿಯ ಪ್ರಕಾರ ವಿಶ್ವದ ಉತ್ಪತ್ತಿಯ ಬಗ್ಗೆ ಕಲ್ಪನೆಯನ್ನು ಮಾಡುವನು. ಇದು ಕೊನೆಗೆ ಮಾನವೀ ಕಲ್ಪನೆ ಇರುವದೆಂಬುದನ್ನು ತಿಳಿದವರು ಗುರುತಿಸುತ್ತಾರೆ. [೧೬] ಒಬ್ಬನಿಗೆ ತರ್ಕದಿಂದ ತಿಳಿದರೂ ಸಹಿತ ಇದರ ಮರ್ಮ ರಹಸ್ಯ ಲಕ್ಷ್ಯಕ್ಕೆ ಬರುವದಿಲ್ಲ. ಒಬ್ಬನಿಗೆ ಇದು ಲಕ್ಷ್ಯಕ್ಕೆ ಬಂದರೂ ಸಹಿತ ತರ್ಕದಿಂದ ಇದರ ಸಂಸಂಬಂಧವನ್ನು ಜೋಡಿಸಿಕೊಳ್ಳಲಿಕ್ಕೆ ಗೊತ್ತಾಗುವದಿಲ್ಲ. ಅಂತೂ ಸ್ವಾನುಭವದ ಹೊರತಾಗಿ, ಆತ್ಮ ಸಾಕ್ಷಾತ್ಕಾರದ ಹೊರತು ಇವೆಲ್ಲವುಗಳನ್ನು ಸರಿಯಾದ ರೀತಿಯಲ್ಲಿ ತಿಳಿಯಲಿಕ್ಕೆ ಕಲ್ಪನೆಯನ್ನು ಮಾಡಲಿಕ್ಕೆ ಬರುವದಿಲ್ಲ. [೧೭] ಈ ವಿಶ್ವದಲ್ಲಿಯ ಸರ್ವ ತತ್ವಗಳ ಮೂಲಜನಕ [ಹಿರಿಯ] ನಾರು ಇರುವರು ? ಅವನ ಗುರುತನ್ನು ಮಾಡಿಕೊಳ್ಳಬೇಕು. ಆ ಮೇಲೆ ಜಗದ ಅಂತರ್ಯಾಮಿ [ಪ್ರಾಣಿ ಮಾತ್ರರ ಅಂತರ್ಯಾಮಿ]ಯು ನಮಗೆ [ನಮ್ಮಲ್ಲಿಯೂ ಅವನೇ ಇದ್ದದ್ದರಿಂದ] ನಾವೇ ಭೆಟ್ಟಿಮಾಡಿಕೊಂಡೆವು. ನಾವು ಜಗದ ಅಂತರಂಗದಲ್ಲಿಯೂ ವ್ಯಾಪಿಸಿ ಇರುವೆವು. ಅನ್ನುವ ಅನುಭವವು ಇದರಿಂದ ಬರುವದು. [೧೮] ಅಂತರ್ಮುಖರಾಗಿ ಅಂತರಾತ್ಮನೊಂದಿಗೆ ಸ್ಥಿರವಾಗುವಂಥ (ಸಮರಸವಾಗುವಂಥ) ಪುರುಷರ ಮಟ್ಟವು ಬಹಳ ಶ್ರೇಷ್ಠವಿರುವದು. ಯಾರು ಕೇವಲ ಬಹಿರ್ಮುಖರಿರುವರೋ ಅಂಥವರ ಸಂಗತಿಯು ಕೆಲಸಕ್ಕೆ ಬಾರದ್ದು ಬೇಕಾರತನದ್ದಾಗಿರುವದು. ಈ ಸತ್ಯ ಸಂಗತಿಯು ಮೂರ್ಖರಿಗೆ ತಿಳಿಯುವದೇ ಇಲ್ಲ. ಜಾಣರು ಮತ್ತು ವಿವೇಕವುಳ್ಳವರಿಗೆ ಮಾತ್ರ ತಿಳಿಯುವದು. [ದಾ.ಬೋ.ದ. ೧೫ ಸ ೩ ಓ ೧೯ ನೋಡಿರಿ] [೧೯] ಸಾಧಕನು ತನ್ನ ಮನವನ್ನು ಸೂಕ್ಷ್ಮ ಮಾಡಿ ಇದನ್ನು ಇತರರ ಮನದಲ್ಲಿ ಕೂಡಿಸಬೇಕು. ಹೀಗೆ ಮಾಡುವದರಿಂದ ಮನವು ವಿಶಾಲ ವಾಗುತ್ತ ಹೋಗುವದು. ಮತ್ತು ಕೊನೆಗೆ ಜಗದಾತ್ಮನೊಂದಿಗೆ ಏಕರೂಪವಾಗುವದು. ಎಲ್ಲಿಯವರೆಗೆ ಮನವು ಏಕದೇಶಿ ಮರ್ಯಾದಿತ [ವ್ಯಾಪಕವಲ್ಲದ್ದು] ಇರುವದೋ ಅಲ್ಲಿಯವರೆಗೆ ಪರಬ್ರಹ್ಮನವರೆಗೆ ಹೋಗಿ ಮುಟ್ಟಲಿಕ್ಕೆ ಆಗುವದಿಲ್ಲ. ನಾವು ಜನರ ಅಂತಃಕರಣವನ್ನು ಸಂತಸದಲ್ಲಿ ಇಟ್ಟರೆ ಯಾರಿಗೆ ಯಾರೋ ತಾವಾಗಿ ಸಹಾಯ ಮಾಡುವರು. ಮತ್ತು ಉಪಯೋಗ ಬೀಳುವರು. ಆದರೆ ಜನರನ್ನು ಒಲಿಸಿಕೊಳ್ಳದಿದ್ದರೆ ಸಂತೋಷದಲ್ಲಿಡದಿದ್ದರೆ ಅವರ ಮನ ಗೆದೆಯದಿದ್ದರೆ ಆಗ ನಮಗೆ ತೊಪ್ಪಲ ಪಲ್ಯೆಸಹಿತ ತಿನ್ನಲಿಕ್ಕೆ ಸಿಗಲಾರದು.ಅರ್ಥಾತ್ ಹೀನರಾಗುವೆವು[೨೦]

ಐಸೇ ವರ್ತತೇ ಪ್ರತ್ಯಕ್ಷ । ಅಲಕ್ಷೀ ಲಾವಾವೇ ಲಕ್ಷ ।
ದಕ್ಷಾಸ ಭೇಟತಾ ದಕ್ಷ । ಸಮಾಧಾನ ಹೋತೇ ॥೨೧॥

ಮನಾಸ ಮಿಳತಾ ಮನ । ಪಾಹೋನ ಯೆತೀ ನಿರಂಜನ ।
ಚಂಚಳ ಚಕ್ರ ಉಲ್ಲಂಘೂನ । ಪೈಲಾಡ ಜಾತೀ ॥೨೨॥

ಯೇಕದಾ ಜಾಲೂನ ಪಾಹೋನ ಆಲೇ । ಮಗ ತೇ ಸನ್ನಿಧ ದೇಖಿಲೇ ।
ಚರ್ಮಚಕ್ಷೀ ಲಕ್ಷಿಲೇ । ನ ವಚೆ ಕದಾ ॥೨೩॥

ನಾನಾ ಶರೀರೀ ಚಂಚಳ । ಅಖಂಡ ಕರೀ ಚಳವಳ ।
ಪರಬ್ರಹ್ಮ ತೇ ನಿಶ್ಚಳ । ಸರ್ವಾಂ ಠಾಈ ॥೨೪॥

ಚಂಚಳ ಧಾಂವೆ ಯೇಕೀಕಡೆ । ವೋಸ ಪಡೆ ದುಸರೀಕಡೆ ।
ಚಂಚಳ ಪುರೇ ಸರ್ವಾಂಕಡೆ । ಹೇ ತೋ ಘಡೇನಾ ॥೨೫॥

ಚಂಚಳ ಚಂಚಳಾಸ ಪುರೇನಾ। ಅವಘೇ ಚಂಚಳ ವಿವರೇನಾ ।
ನಿಶ್ಚಳ ಅಪಾರ ಅನುಮಾನಾ । ಕೈಸೇ ಯೇತೇ ॥೨೬॥

ಗಗನೀ ಚಾಲಿಲೀ ಹವಾವೀ । ಕೈಸೀ ಪಾವೇಲ ಪಾರ ಪದವೀ ।
ಜಾತಾ ಮಧೇ ಚಿ ವಿಝಾವೀ । ಹಾ ಸ್ವಭಾವಚಿ ತಿಚಾ ॥೨೭॥

ಮನೋಧರ್ಮ ಯೇಕದೇಶೀ । ಕೈಸಾ ಆಕಳೀಲ ವಸ್ತುಸೀ ।
ನಿರ್ಗುಣ ಸಾಂಡೂನ ಅಪೇಸೀ । ಸರ್ವ ಬ್ರಹ್ಮ ಮ್ಹಣೆ ॥೨೮॥

ಜಗತ್ತಿನ ವ್ಯವಹಾರವೇ ಹೀಗಿರುವದು. ಪ್ರತ್ಯಕ್ಷದ ಅನುಭವ ಕೂಡಾ ಇದೇ ಪ್ರಕಾರದ್ದಿರುವದು. ಅಲಕ್ಷ್ಯ ಅಂದರೆ ಎಲ್ಲಿ ಲಕ್ಷ್ಯ ಹಚ್ಚುವದು ಕಠಿಣ ಹೋಗುವದೋ ಅಂಥ ಅಸ್ವಸ್ವರೂಪವು ಈ ಸ್ವಸ್ವರೂಪದಲ್ಲಿ ಲಕ್ಷ್ಯ ಹಚ್ಚಬೇಕು. ಅಲಕ್ಷಿಯಲ್ಲಿ ಲಕ್ಷ್ಯ ಹಚ್ಚುವದರಲ್ಲಿ ಯಾರು ತತ್ಪರರಿರುವರೋ ಅವರಿಗೆ ಇನ್ನೊಬ್ಬ ಅಂಥ ತತ್ಪರ ಮನುಷ್ಯನ ಭೆಟ್ಟಿಯಾಯಿತೆಂದರೆ ಸಮಾಧಾನವಾಗುವದು.[೨೧]ಸದ್ಗುರುವಿನ ಕೃಪೆಯಿಂದ ತನ್ನ ಮನವನ್ನು ಇನ್ನೊಬ್ಬರ ಮನದೊಂದಿಗೆ ತದಾಕಾರಗೊಳಿಸಲು ಬಂದಿತೆಂದರೆ ಆಗ ನಿರಂಜನ ಪರಮಾತ್ಮ ಸ್ವರೂಪವನ್ನು ಅನುಭ ವಿಸುವ ಶಕ್ತಿ ಬರುವದು. ಚಂಚಲದ ಚಕ್ರವನ್ನು ದಾಟಿ ಅದರಾಚೆಗೆ ಹೋಗಲಿಕ್ಕೆ ಬರುವದು. ನಮ್ಮ ಮನವನ್ನು ಇನ್ನೊಂದು ಮನದೊಂದಿಗೆ ತದಾಕಾರ ಮಾಡಿದೆವೆಂದರೆ ನಮ್ಮ "ನಾನು" ಅನ್ನುವದು ಕರಗಿ ಹೋಗುವದು. (ಇಲ್ಲ ದಾಗುವದು.) ಕಲ್ಪನೆಯು ವಿರಾಮ ಹೊಂದುವದು. ಮತ್ತು ದ್ವೈತತನ (ಬೇರೆ ಅನ್ನುವದು) ಕುಂಠಿತಗೊಳ್ಳುವದು. ಚಂಚಲದಿಂದ ಆಚೆಗೆ (ಚಂಚಲವನ್ನು ದಾಟಿ) ಹೋಗಲಿಕ್ಕೆ ಇದು ಅತಿಶಯ ಉಪಯೋಗ ಬೀಳುವದು. [೨೨] ಚಂಚಲವನ್ನು ದಾಟಿ ಯಾವನು ಒಮ್ಮೆ ನಿಶ್ಚಲ ಬ್ರಹ್ಮವನ್ನು ನೋಡಿ ಬರುವನೋ ಅವನಿಗೆ ಅದು (ನಿಶ್ಚಲ ಬ್ರಹ್ಮವು) ಸ್ವತಃದ ಹತ್ತಿರವೇ [ಸ್ವತಃದಲ್ಲಿಯೇ] ಕಾಣಹತ್ತುವದು. [ಸದಾ ಸರ್ವದಾ ದೇವ ಸಮೀಪದಲ್ಲಿ– ತನ್ನ ಲ್ಲಿಯೇ ಇರುವನೆಂಬ ಅನುಭವ ಬರುವದು]. ನಮ್ಮ ಈ ಸಾದಾ ಕಣ್ಣಿನಿಂದ [ಭೌತಿಕ ದೃಷ್ಟಿಯಿಂದ] ಇದನ್ನು ಎಂದೂ ನೋಡಲಿಕ್ಕೆ ಬರುವದಿಲ್ಲ. ಇದನ್ನು ಕೇವಲ ಜ್ಞಾನ ದೃಷ್ಟಿಯಿಂದ ನೋಡಬೇಕಾಗುವದು. (೨೩) ಚಂಚಲ ರೂಪದ ಮನವು ಅನೇಕ ಪ್ರಕಾರದ ದೇಹದಲ್ಲಿ ಅಖಂಡವಾಗಿ ಚಳವಳಿ [ಗಡಬಿಡಿ-ಹಾಲಚಾಲ] ಮಾಡುತ್ತಲಿರುವದು. ಆದರೆ ಪರಬ್ರಹ್ಮವು ಮಾತ್ರ ನಿಶ್ಚಲವಿದ್ದು ಸರ್ವ ಸ್ಥಳದಲ್ಲಿ ಸರ್ವತ್ರವಾಗಿ ಒಂದೇ ಸಮ ಇರುವದು. (೨೪) ಚಂಚಲವು ಸಂಕುಚಿತ ವ ಮರ್ಯಾದಿತವಿರುವದು. ಅದು ಒಂದು ಕಡೆಗೆ [ಒಂದು ಮಗ್ಗಲಿಗೆ] ಹೋದ ಕೂಡಲೇ ಇನ್ನೊಂದು ಮಗ್ಗಲು [ಬಾಜು] ಹಾಳು ಬೀಳುವದು. ಅಂದರೆ ಚಂಚಲವು ಎಲ್ಲ ಕಡೆಗೂ ಇರಲಿಕ್ಕೆ ಶಕ್ಯವಿಲ್ಲ. (೨೫) ಚಂಚಲ ಜೀವವು ಚಂಚಲಕ್ಕೇನೆ ಸಾಕಾಗುವದಿಲ್ಲ. ಕಡಿಮೆ ಬೀಳುವದು. (ಅಂದರೆ ವ್ಯಾಪಕ ಅಂತರಾತ್ಮನ ಪೂರ್ಣ ಶೋಧ ಮಾಡಲು ಶಕ್ಯವಾಗುವದಿಲ್ಲ ಅಥವಾ ಚಂಚಲ ತತ್ವಗಳು ಚಂಚಲವಾದ ಮೂಲ ಮಾಯೆಯನ್ನು ತಿಳಿಯಲು ಶಕ್ಯ ವಾಗುವದಿಲ್ಲ.) ಚಂಚಲಕ್ಕೆ ಚಂಚಲದ ಮೂಲ ಮಾಯೆಯ ಎಲ್ಲ ವಿಸ್ತಾರವು ಆಕಲನವಾಗುವದಿಲ್ಲ. ಅಂದ ಮೇಲೆ ನಿಶ್ಚಲವಾದರೋ ಅಪಾರವಿರುವದರಿಂದ ಇದು ಮನುಷ್ಯರ ಕಲ್ಪನೆಗೆ ಬರಲು ಶಕ್ಯವೇ ಇಲ್ಲ. ಮನುಷ್ಯರ ಮನ ಚಂಚಲವಿರುವದು– ನಿಜವಿದೆ. ಆದರೆ ಅದು ಚಂಚಲದ ಸಮಗ್ರಜ್ಞಾನ ಮಾಡಿಕೊಳ್ಳಲು ಆಗುವದಿಲ್ಲ. ವಿಶ್ವದ ವಿಸ್ತಾರವು ಚಂಚಲವಿರುವದು. ಆದರೆ ಇದು ಮಾನವೀ ಅನುಮಾನದ ಶಕ್ತಿಯ ಆಚೆಗಿನದು ಇರುವದು. ಮನುಷ್ಯನ ಅನುಮಾನವು ಚಂಚಲದ ಬಾಬತ್ತಿನಲ್ಲಿಯೇ ಎಲ್ಲಿ ಸುಳ್ಳು ಬೀಳುವದೋ ಅಲ್ಲಿ ಆ ಅನಂತ ಮತ್ತು ಅಪಾರನಾದ ನಿಶ್ಚಲ ಪರಬ್ರಹ್ಮನ ಜ್ಞಾನ ಮಾಡಿಕೊಡುವದೆಂದು ಅನ್ನಲೂ ಸಹ ಬರುವದಿಲ್ಲ. ಇದು ಶಕ್ಯವಿಲ್ಲದ್ದೇ ಆಗಿದೆ.(೨೬) ಮದ್ದಿನ ಬಾಣವನ್ನು ಆಕಾಶದಲ್ಲಿ ಹಾರಿಸಿದ್ದಾದರೆ ಅದು ಬಹಳಷ್ಟು ಮೇಲೆ ಹೋಗುವದು.ಆದರೆ ಅದು ಆಕಾಶವನ್ನು ದಾಟಿ ಅದರಾಚೆಗೆ ಹೋಗಲು ಶಕ್ಯವಾಗುವದಿಲ್ಲ. ಅದು ಮಧ್ಯದಲ್ಲಿಯೇ ಆರಿ ಹೋಗುವದು. ಹೀಗೆ ಆಗುವದು ಅದರ ಸ್ವಾಭಾವಿಕ ಗುಣವಿರುವದು. (೨೭) ಇದರಂತೆಯೇ ಮಾನವನ ಮನವು ಏಕದೇಶಿ ಅಂದರೆ ಮರ್ಯಾದಿತ ವಿರುವದು. ಮತ್ತು ಪರಬ್ರಹ್ಮವು ಅಮರ್ಯಾದ (ಸರ್ವದೇಶಿ) ಇರುವದು. ಅಂತೆಯೇ ಮನವು ಪರಬ್ರಹ್ಮವನ್ನು ತಿಳಿಯಲು ಶಕ್ಯವಾಗುವದಿಲ್ಲ. ಆಕಾಶ ಬುಟ್ಟಿ ಅಥವಾ ಮದ್ದಿನ ಬಾಣವು ಹೇಗೆ ಮಧ್ಯದಲ್ಲಿಯೇ ಆರುವದೋ ಇದರಂತೆ ಮನುಷ್ಯನ ಮನವು ಬ್ರಹ್ಮವನ್ನು ಶೋಧಿಸುತ್ತ, ಶೋಧಿಸುತ್ತ ಮಧ್ಯದಲ್ಲಿಯೇ ಪರಾಭೂತವಾಗುವದು. ಮತ್ತು ಅದು ಹಿಂದಕ್ಕೆ ತಿರುಗುವದು. ಇಂಥ ಅಪಯಶದ ಜನರು ನಿರ್ಗುಣ ಬಿಟ್ಟುಕೊಟ್ಟು ಸರ್ವವೂ ಬ್ರಹ್ಮವೇ ಇರುವದು ಎಂದು ಅನ್ನಹತ್ತುವರು, (ಅನುಕೂಲಾರ್ಥ ಕಲ್ಪಿಸಿ ಹೇಳಹತ್ತುವರು). (೨೮)

ನಾಹೀ ಸಾರಾಸಾರ ವಿಚಾರ । ತೇಥೇ ಅವಘಾ ಅಂಧಕಾರ ।
ಖರೇ ಸಾಂಡೂನ ಖೋಟೇ ಪೋರ । ನೇಣತೇ ಘೇತೇ ॥೨೯॥

ಬ್ರಹ್ಮಾಂಡಾಚೇ ಮಹಾಕಾರಣ । ತೇಥೂನ ಹೇ ಪಂಚೀಕರ್ಣ ।
ಮಹಾವಾಕ್ಯಾಚೇ ವಿವರ್ಣ । ವೇಗಳೇ ಅಸೇ ॥೩೦॥

ಮಹತ್ತತ್ತ್ವ ಮಹದ್‌ಭೂತ । ತೋ ಚಿ ಜಾಣಾವಾ ಭಗವಂತ ।
ಉಪಾಸನಾ ಹೇ ಸಮಾಪ್ತ । ಯೇಥೂನ ಜಾಲೀ ॥೩೧॥

ಕರ್ಮ ಉಪಾಸನಾ ಆಣಿ ಜ್ಞಾನ । ತ್ರಿಕಾಂಡ ವೇದ ಹೇ ಪ್ರಮಾಣ ।
ಜ್ಞಾನಾಚೇ ಹೋತೇ ವಿಜ್ಞಾನ । ಪರಬ್ರಹ್ಮೀ ॥೩೨॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಚಂಚಳ ಲಕ್ಷಣ ನಿರೂಪಣ' ನಾಮ ಸಮಾಸ ಪಂಚಮ ॥

ಮೂಲ ಮಾಯೆಯಿಂದ ವಿಶ್ವದ ಪಸಾರ-ವಿಸ್ತಾರವು ಆರಂಭವಾಗುವದು. ಮೂಲ ಮಾಯೆಯಲ್ಲಿ ಇರುವಂಥ ಶುದ್ಧ ಅರಿವು ಮತ್ತು ಸಾಮ್ಯಾವಸ್ಥೆ ಸರ್ವ ವ್ಯಾಪಿತ್ವತನವೇ ಭಗವಂತನ ಸ್ವರೂಪವಿರುವದು. ಇಲ್ಲಿಗೆ ಬರುವವರೆಗೆ ಉಪಾಸನೆಯನ್ನು ಮಾಡಬೇಕಾಗುವದು. ಜ್ಞಾನ ಮತ್ತು ಉಪಾಸನೆ ಇವೆರಡೂ ಏಕರೂಪವಾಗಿ ಕೊನೆಗೆ ಜ್ಞಾನವು ವಿಜ್ಞಾನ (ವೃತ್ತಿ ಶೂನ್ಯ ಅವಸ್ಥೆಯನ್ನು ಹೊಂದುವದು) ವಾಗುವದು: ಸಾರಾಸಾರ ವಿಚಾರವೆಲ್ಲಿರುವದಿಲ್ಲವೋ ಅಲ್ಲಿ ಎಲ್ಲವೂ ಅಜ್ಞಾನದ ಅಂಧಕಾರವೇ ಆಗಿರುವದು. ಅಜ್ಞಾನಿ ಬಾಲಕ (ಹುಡುಗ) ನಿಜವಾಗಿ ಇರುವದನ್ನು ಬಿಟ್ಟು ಯಾವ ಪ್ರಕಾರ ಖೊಟ್ಟಿ ಇರುವದನ್ನೇ ತೆಗೆದುಕೊಳ್ಳುವನೋ ಇದರಂತೆ ಅಜ್ಞಾನಿ ಮನುಷ್ಯನು ಸಾರ (ನಿತ್ಯ ಸತ್ಯ) ವಾದದ್ದನ್ನು ಬಿಟ್ಟು ಅಸಾರ (ಅನಿತ್ಯ, ಅಸತ್ಯ,) ವಾದದ್ದನ್ನು ತೆಗೆದುಕೊಳ್ಳುವನು. (೨೯) ಬ್ರಹ್ಮಾಂಡದ ಮಹಾ ಕಾರಣ ದೇಹವೆಂದರೆ ಮೂಲ ಮಾಯೆಯು. ಇವಳಿಂದ ಪಂಚಭೂತಗಳು ಮತ್ತು ಪಂಚಭೂತಗಳಿಂದ ಯಾವತ್ತೂ ಪಂಚೀಕರಣವಾಯಿತು. ಆದರೆ ಮಹಾವಾಕ್ಯದ ವಿವರಣೆಯು ಬೇರೆಯೇ ಇರುವದು. ಇದು ಪಂಚೀಕರಣದ ಕಕ್ಷೆಯಲ್ಲಿ (ಅಳವಿನಲ್ಲಿ) ಬರುವದಿಲ್ಲ. (೩೦) ಮಹತ್ ತತ್ವ ಅಂದರೆ ಎಲ್ಲ ತತ್ವಗಳಲ್ಲಿ ದೊಡ್ಡದಾದದ್ದು ಅಥವಾ ಶ್ರೇಷ್ಠ ತತ್ವವು, ಅದು ಯಾವುದೆಂದರೆ ಶುದ್ಧ ಅರಿವು(ಜಾಣೀವ) ಅಥವಾ ಜಗಜ್ಜ್ಯೋತಿ ಅಥವಾ ಅಂತರಾತ್ಮವೇ ಆಗಿರುವದು. ಮಹತ್ ಭೂತ ಅಂದರೆ ಸರ್ವ ಭೂತಗಳಲ್ಲಿ ಅಥವಾ ಆದಂಥ ವಸ್ತುಗಳಲ್ಲಿ ಶ್ರೇಷ್ಠ ಅಥವಾ ದೊಡ್ಡ ವಸ್ತುವು. ಅದು ಯಾವುದೆಂದರೆ ಗುಣ ಸಾಮ್ಯ ಅವಸ್ಥೆಯಲ್ಲಿ ಇರುವಂಥ ಮೂಲ ಮಾಯೆಯೇ ಇರುವದು. ಮಹತ್ ತತ್ವ-ಮತ್ತು ಮಹದ್ ಭೂತ ಇವುಗಳಿಗೆ ಭಗವಂತನೆನ್ನುವರು. ಉಪಾಸನಾ ಆಗುವದಕ್ಕೆ, ಉಪಾಸನಾ ನಡೆಯಿಸುವದಕ್ಕೆ ಜೀವ ಮತ್ತು ಶಿವ ಈ ದ್ವೈತದ ಜೋಡಿ ಬೇಕಾಗುವದು. ಆದರೆ ಜೀವವು ಶಿವರೂಪವನ್ನು ಹೊಂದಿತೆಂದರೆ ಆ ಕ್ಷಣದಲ್ಲಿ ಜ್ಞಾನವಾಗಿ ಉಪಾಸನಾ ಮುಗಿಯುವದು. ದ್ವೈತದ ಸಮಾಪ್ತಿಯಾಗುವದು, ಆದ್ದರಿಂದ ಮಹತ್ ತತ್ವದ ಹತ್ತಿರವೇ ಉಪಾಸನಾ ಸಮಾಪ್ತವಾಗುವದು. (೩೧) ಕರ್ಮ, ಉಪಾಸನಾ, ಮತ್ತು ಜ್ಞಾನ ಹೀಗೆ ವೇದದಲ್ಲಿ ಮೂರು ವಿಭಾಗಗಳಿರುವವು. ವೇದದ ಹದ್ದು (ಪರಿಮಿತಿ) ಜ್ಞಾನದ ವರೆಗೆ ಮಾತ್ರ ಇರುವದು. ಪರಬ್ರಹ್ಮದ ಸಾಕ್ಷಾತ್ ಅನುಭವ ಆಯಿತೆಂದರೆ ಆ ಕೂಡಲೇ ಜ್ಞಾನವು ವಿಜ್ಞಾನವಾಗುವದು. ವಿಜ್ಞಾನ ಅಂದರೆ ಆತ್ಮ ಸ್ವರೂಪದ ಅನುಭವ, ಅಪರೋಕ್ಷಾನುಭವ ಆಗುವದರ ಆಚೆಗೆ ಇರುವಂಥ ವೃತ್ತಿ ಶೂನ್ಯ ಅವಸ್ಥೆಯು ಅರ್ಥಾತ್ ವೇದದ ಆಚೆಗೆ ಇರುವಂಥ ಸ್ಥಿತಿಯೇ ಆಗಿರುವದು. (೩೨)

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹದಿನೈದನೆಯ ದಶಕದೊಳಗಿನ
"ಚಂಚಲ ಲಕ್ಷಣ"ವೆಂಬ ಹೆಸರಿನ ಐದನೆಯ ಸಮಾಸವು ಮುಗಿದುದು.

### ದಶಕ ಪಂಚದಶ : ಸಮಾಸ ಷಷ್ಠಮ : ಚಾತುರ್ಯ ವಿವರಣ

॥ಶ್ರೀರಾಮ॥ ಪೀತಾಪಾಸೂನ ಕೃಷ್ಣ ಜಾಲೇ । ಭೂಮಂಡಳೀ ವಿಸ್ತಾರಲೇ ।
ತೇಣೇವಿಣ ಉಮಜಲೇ । ಹೇ ತೋ ಘಡೇನಾ ॥೧॥

ಆಹೆ ತರೀ ಸ್ವಲ್ಪ ಲಕ್ಷಣ । ಸರ್ವತ್ರಾಂಚೀ ಸಾಠವಣ ।
ಅಧಮ ಆಣೀ ಉತ್ತಮ ಗುಣ । ತೇಥೇಚಿ ಅಸತೀ ॥೨॥

## ದಶಕ ೧೫. ಸಮಾಸ ೬. ಚಾತುರ್ಯ ವಿವರಣ [ನುಡಿ ೩೦]

ಮಾನವ ಜೀವನದಲ್ಲಿ ಜ್ಞಾನಕ್ಕೆ ಪರಮೋಚ್ಚ ಸ್ಥಾನವಿರುವದು. ಅನ್ನುವ ಅತ್ಯಂತ ಸ್ಪಷ್ಟ ಅಭಿಪ್ರಾಯವು ಶ್ರೀ ಸಮರ್ಥರದಿರುವದೆಂಬುದು ಈ ಸಮಾಸದಲ್ಲಿ ಸ್ಪಷ್ಟವಾಗಿ ನಮಗೆ ಕಂಡುಬರುವದು. ಆತ್ಮ ಜ್ಞಾನದ ಪಾವಿತ್ರ್ಯದ ಬಗ್ಗೆ, ಶ್ರೇಷ್ಠತ್ವದ ಬಗ್ಗೆ ಮತ್ತು ಸಾಮರ್ಥ್ಯದ ಬಗ್ಗೆ ಏನೂ ಸಂದೇಹ ತಾಳುವ ಪ್ರಶ್ನೆಯೇ ಇಲ್ಲ. ಆದರೆ ಬುದ್ಧಿಯ ಮತ್ತು ಶಬ್ದಜ್ಞಾನದ ಭೂಮಿಕೆಯ ಮೇಲೆ ಜೀವನ ಸಾಗಿಸುವ ಸಾಮಾನ್ಯ ಜನಕ್ಕೂ ಸಹಿತ ಕೊನೆಗೆ ಜ್ಞಾನವೇ ನಿಜವಾದ ಸಾಮರ್ಥ್ಯವನ್ನು ಪ್ರದಾನ ಮಾಡುವದು. ಈ ಜ್ಞಾನವು ಕಾಗದದ ಮೇಲೆ ಬರೆಯಲ್ಪಡುವದು. ಎಂದು ಅನ್ನುವದರಿಂದ ಈ ಸಮಾಸವು ಆರಂಭವಾಗುವದು. ಜ್ಞಾನದ ಗಟ್ಟಿಮುಟ್ಟ ಆಧಾರ ಹಿಡಿದು ಮನುಷ್ಯನು ಪ್ರಯತ್ನ ಮಾಡಹತ್ತಿದನೆಂದರೆ ಪ್ರಾರಬ್ಧದ (ಹಣೇಬರಹ) ಗೆರೆಯನ್ನು ಸಹಿತ ಇವನು ಬದಲಿಸಿ ಬಿಡಲು ಶಕ್ತನಾಗುವನು. ಇದು ಪ್ರತ್ಯಕ್ಷ ಅನುಭವಕ್ಕೆ ಬರುವಂಥದೇ ಇರುವದು. ಆದ್ದರಿಂದ ಮನುಷ್ಯನು ಸುಮ್ಮಸುಮ್ಮನೆ ಅಜ್ಞಾನಿ ಜನರ ಮಾತನ್ನು ಕೇಳಬಾರದು. ನಿಜ ಮತ್ತು ಖೊಟ್ಟಿ ಯಾವದಿರುವದೆನ್ನುವದನ್ನು ಹುಡುಕಿ ತೆಗೆಯಬೇಕು. ದೃಢ ನಿಶ್ಚಯ ತಾಳಬೇಕು. ಮತ್ತು ಪರಮಾರ್ಥವನ್ನು ಸಾಧಿಸಬೇಕು. ಲೋಕ ಸಂಗ್ರಹ ಮಾಡುವ ಮನುಷ್ಯನು ಯಾರನ್ನೂ ಅಸಂತುಷ್ಟಗೊಳಿಸಬಾರದು. ಪ್ರಸಂಗ ವಿಶೇಷದಲ್ಲಿ ದುರಾಗ್ರಹಿ ಹಟಸ್ವಭಾವದವನ ಮಾತನ್ನೂ ಕೇಳಬೇಕು. (ಇದು ನಿಮ್ಮ ಒಳ್ಳೆಯ ಕಾರ್ಯಸಾಧನೆಗೆ ಅನಿವಾರ್ಯವಿದ್ದರೆ ಮಾತ್ರ). ನಿಮ್ಮ ಮನವನ್ನು ಎರಡನೆಯವರ ಮನದೊಂದಿಗೆ ಏಕರೂಪಗೊಳಿಸಿ ನಡೆಯಬೇಕು. ಪ್ರಾರಂಭದಲ್ಲಿ ಎಲ್ಲರ ಮನವನ್ನೂ ವಶಪಡಿಸಿಕೊಳ್ಳಿರಿ. ಮತ್ತು ಆಮೇಲೆ ಸಾವ ಕಾಶವಾಗಿ ಅವರ ಮನವನ್ನು ಅರಳಿಸಿರಿ. ವಿಶಾಲಗೊಳಿಸಿರಿ. ಈ ಪ್ರಕಾರದಿಂದ ಹುಚ್ಚ, ದಡ್ಡ ಜನರನ್ನು ಶಹಾಣೆ (ಬುದ್ಧಿವಂತ)ರನ್ನಾಗಿ ಮಾಡಿರಿ. ಇವರಿಗೆ ಪರಮಾರ್ಥ ಕಲಿಸಿರಿ. ಈ ಕಾರ್ಯದಲ್ಲಿ ಅರ್ಥಾತ್ ಜೀವನದಲ್ಲಿ ದುಃಖ, ಕಷ್ಟ. ಹೊಡೆತ, ಬಡೆತ, ಕುಹಕ ಮಾತು, ನಿಂದಾ ನುಡಿ ಇವುಗಳನ್ನು ಸಹಿಸಬೇಕು. ದುಷ್ಟ ನೀಚ ಶಬ್ದಗಳನ್ನು ನುಂಗಿಬಿಡಬೇಕು–ಸಹಿಸಬೇಕು. ಪ್ರಸಂಗ ನೋಡಿ ಪೂರ್ಣ ತಿಳುವಳಿಕೆಯಿಂದ ಮಾತನಾಡಬೇಕು. ಆದರೆ ನೀವೇ ಜಾಣರು, ತಿಳಿದವರು, ಅನ್ನುವ ಕುಹಕ ಮಾತಿಗೆ ಬಲಿ ಬೀಳಬೇಡಿರಿ. [ತಿಳಿದವರೇ ಹೀಗೆ ಮಾಡಿದರು ಅನ್ನುವ ಮಾತು ಬರದಂತೆ ನಡೆಯಿರಿ]. ಆದರೆ ನಾವೇ ಜಾಣರು, ಎಲ್ಲ ತಿಳಿದವರು ಅನ್ನುವ ಅಹಂಭಾವ ನಿಮ್ಮಲ್ಲಿ ಎಷ್ಟೂ ಇರಬಾರದು. ನಿಮ್ಮಲ್ಲಿ ಯಾವಾಗಲೂ ನಮ್ರತೆ ಇರಲಿ. ಭಿಕ್ಷೆಗೆ ಹೋಗುವ ನಿಮಿತ್ಯದಿಂದ ಬಹಳಷ್ಟು ಊರುಗಳನ್ನು ನಿರೀಕ್ಷಿಸಿರಿ. ಬಹಳಷ್ಟು ಜನರನ್ನು ಸೂಕ್ಷ್ಮ ದೃಷ್ಟಿಯಿಂದ ನೋಡಿದರೆ ಎಲ್ಲೆಲ್ಲಿ ಏನೇನು ನಡೆದಿದೆ ಅನ್ನುವದು ಕಂಡು ಬರುವದು. [ವಿಶೇಷ ವಿಷಯವೂ ತಿಳಿಯಬಹುದು]. ಜನರ ಶಂಕೆಗಳನ್ನು ನಿವಾರಿಸಬೇಕು. ಶಕ್ಯವಿದ್ದರೆ ಗ್ರಂಥ ಬರೆಯ ಬೇಕು. ಉತ್ತಮ ಗ್ರಂಥಗಳನ್ನು ಬರೆಯುವದೂ ಒಂದು ಉಪಕಾರ ಕಾರ್ಯವು. ಈ ಪ್ರಕಾರವಾಗಿ ನಡೆಯುವವನು ಬಹು ಜನರಿಗೆ ಪ್ರಿಯನಾಗುವನು. ಇವನು ಅಸಾಮಾನ್ಯ ಪುರುಷನೆನಿಸುವನು.

### ದಶಕ ೧೫. ಸಮಾಸ ೬. ಚಾತುರ್ಯ ವಿವರಣ (ನುಡಿ ೩೦)

ಬರೆಯುವದರಿಂದ ಜ್ಞಾನವು ಸ್ಥಿರಗೊಳ್ಳುವದು. ಮತ್ತು ಪ್ರಪಂಚ ಹಾಗೂ ಪಾರಮಾರ್ಥ ಎರಡನ್ನೂ ಸಾಧಿಸಲಿಕ್ಕೆ ಇದು ಅತಿ ಉಪಯೋಗ ಬೀಳುವದು: ದೀಪವು ಹಳದಿ ಮತ್ತು ಆದರ ಕಾಡಿಗೆಯು ಕಪ್ಪು ಇರುವದು. ಹಳದೀ ದೀಪದಿಂದ ಕರಿಯ ಕಾಡಿಗೆಯಾಯಿತು. ಕಾಡಿಗೆಯಿಂದ ಮಸಿ ತಯಾರ [ಇಂಕ್, ಶ್ಯಾಯಿ] ಆಗುವದು. ಜಗತ್ತಿನಲ್ಲಿ ಎಲ್ಲ ಕಡೆಗೂ ಮಸಿಯ [ಶಾಯಿಯ] ಪ್ರಸಾರವಾಯಿತು. ಇದರಿಂದ ಗ್ರಂಥಗಳನ್ನು ಬರೆಯಲಾಯಿತು. ಆದ್ದರಿಂದ ಮಸಿ ಇಲ್ಲದೇ ಜ್ಞಾನ ಪ್ರಾಪ್ತಿ ಆಗುವದು ಶಕ್ಯವಿಲ್ಲ. [೧] ಕಾಡಿಗೆಯು ಅತ್ಯಂತ ಸಾದಾ ವಸ್ತು ಇರುವದು. [ಬೆಲೆಕೊಡಬೇಕಾಗಿಲ್ಲ]. ಆದರೆ ಇದು ಎಲ್ಲ ಜ್ಞಾನವನ್ನು ಸಂಗ್ರಹ ಮಾಡುವದಕ್ಕೆ ಸಹಕಾರಿಯಾದ ಶ್ರೇಷ್ಠ ವಸ್ತುವು. ಉತ್ತಮ ಮತ್ತು ಕೆಟ್ಟ ಇವೆರಡೂ ಗುಣಗಳು ಇದರಲ್ಲಿಯೇ ಇರುವವು. [ಇದರಿಂದ ಉತ್ತಮವಾದದ್ದನ್ನೂ ಬರೆಯ ಬಹುದು. ಕೆಟ್ಟದಾದದ್ದನ್ನೂ ಬರೆಯಬಹುದು.]ಮಸಿಯಿಂದ ಉತ್ತಮ ಗುಣಗಳ ವರ್ಣನೆಯನ್ನೂ ಅದರಂತೆ ಹೀನ ಗುಣ ವರ್ಣನೆಯನ್ನೂ ಮಾಡಲಿಕ್ಕೆ ಬರುವದು. [೨]

ಮಹೀಸುತ ಸರಸಾವಿಲಾ । ಸರಸಾಊನ ದ್ವಿಧಾ ಕೇಲಾ ।
ಉಭಯೆತಾ ಮಿಳೋನ ಚಾಲಿಲಾ । ಕಾರ್ಯಭಾಗ ॥೩॥

ಸ್ವೇತಾ ಸ್ವೇತಾಸ ಗಾಠೀ ಪಡತಾ । ಮಧೇ ಕೃಷ್ಣ ಮಿಶ್ರಿತ ಹೋತಾ ।
. ಇಹಲೋಕ ಸಾರ್ಥಕತಾ । ಹೋತ ಆಹೆ ॥೪॥

ವಿವರತಾ ಯಾಚಾ ವಿಚಾರ । ಮೂರ್ಖ ತೋ ಚಿ ಹೋಯೆ ಚತುರ।
ಸದ್ಯಪ್ರಚಿತ ಸಾಕ್ಷಾತ್ಕಾರ । ಪರಲೋಕೀಚಾ ॥೫॥

ಸಕಳಾಸ ಜೇ ಮಾನ್ಯ । ತೇ ಚಿ ಹೋತಸೇ ಸಾಮಾನ್ಯ ।
ಸಾಮಾನ್ಯಾಸ ಅನನ್ಯ । ಹೋಈಜೇತ ನಾಹೀ ॥೬॥

ಉತ್ತಮ ಮಧ್ಯಮ ಕನಿಷ್ಠ ರೇಖಾ । ಅದೃಷ್ಟೀಚೀ ಗುಪ್ತ ರೇಖಾ ।
ಚತ್ವಾರ ಅನುಭವ ಸಾರಿಖಾ । ಹೋತ ನಾಹೀ ॥೭॥

ಚೌದಾ ಪಿಡ್ಯಾಂಚೆ ಪವಾಡೆ । ಸಾಂಗತೀ ತೇ ಶಾಹಾಣೇ ಕೀ ವೇಡೆ ।
ಏಕತ್ಯಾನೇ ಘಡೇ ಕೀ ನ ಘಡೇ । ಏಸೇ ಪಾಹಾವೇ ॥೮॥

ರೇಖಾ ತಿತುಕೀ ಪುಸೋನ ಜಾತೇ । ಪ್ರತ್ಯಕ್ಷ ಪ್ರತ್ಯಯಾ ಯೇತೇ ।
ಡೋಳೇ ಝಾಂಕಣೇ ಕರಾವೀ ತೇ । ಕಾಯೆ ನಿಮಿತ್ಯ ॥೯॥

ಬಹುತಾಂಚೇ ಬೋಲೀ ಲಾಗಲೇ । ತೇ ಪ್ರಾಣೀ ಅನುಮಾನೀ ಬುಡಾಲೇ ।
ಮುಖ್ಯ ನಿಶ್ಚಯೆ ಚುಕಲೇ । ಪ್ರತ್ಯಯಾಚಾ ॥೧೦॥

ಮಹಿಸಂತ ಅಂದರೆ ಪೃಥ್ವಿಯ ಹೊಟ್ಟೆಯೊಳಗಿಂದ ಸಹಜವಾಗಿ ಮೇಲೆ ಬಂದ ಗಲಗು ಲೇಖನಿಯನ್ನು ಮಾಡಲು ಬಳಸುವ ಸಸ್ಯ ಜಾತಿಯ ಕಡ್ಡಿ. ಇದನ್ನು ಕೆತ್ತಿ ತುದಿಮಾಡಿ ಇದರ ತುದಿಯ ಮಧ್ಯದಲ್ಲಿ ಸ್ವಲ್ಪ ಸೀಳಿದರೆ ಇದು ತುದಿಯಂತೆ [ನಿಬ್ಬಿನಂತೆ] ಆಯಿತು. ಇದರಿಂದ ಬರೆಯುವ ಕಾರ್ಯ ನಡೆಯುವದು. [ಮೊದಲಿನ ಕಾಲದಲ್ಲಿ ಈಗಿನಂತೆ ಟಾಕು, ಪೆನ್ನುಗಳಿರಲಿಲ್ಲ]. (೩) ಬಿಳಿ ಕಾಗದ ಮತ್ತು ಬಿಳಿಯದಲ್ಲದ ಗಲಗಿನ ಟಾಕು ಇವುಗಳ ಭೆಟ್ಟಿ [ಸಂಬಂಧ] ಯಾಗುವದು. ಇವರಿಬ್ಬರ ನಡುವೆ ಕರಿಯ ಮಸಿಯು ಬಂದು ಕೂಡುವದು. ಆಗ ಲೇಖನಿಯ ಕಾರ್ಯ ನಡೆಯುವದು. ಇದರಿಂದ ಇಹಲೋಕದಲ್ಲಿಯ ಜೀವನದ ಸಾರ್ಥಕತೆಯು ಘಟಿಸುವದು. [೪] ಲೇಖನದ ಬಗೆಗಿನ ವಿಚಾರಗಳೆಲ್ಲವನ್ನೂ ಚನ್ನಾಗಿ ತಿಳಿದುಕೊಂಡೆವು. ಬರೆದಂಥ ಗ್ರಂಥಗಳಲ್ಲಿಯ ಜ್ಞಾನ ಸಂಬಂಧದ ಮಹತ್ವವೂ ಲಕ್ಷ್ಯಕ್ಕೆ ಬಂದಿತು. ಇವುಗಳಿಂದ ಮೂರ್ಖ ಮನುಷ್ಯನೂ ಸಹಿತ ಜಾಣನಾಗುವನು. ಇದರಂತೆಯೇ ಪರಮಾರ್ಥದ ಅನುಭವ ಬರಲೂ ವೇಳೆ ಹತ್ತುವದಿಲ್ಲ. [ಬರವಣಿಗೆ ಸಾಹಾಯಕವಾಗುವದು]. (೫) ಗ್ರಂಥಗಳಲ್ಲಿಯ ಜ್ಞಾನವು ಶಬ್ದಾಂಕಿತ ವಿರುವದು. ಶಬ್ದವು ರೇಖಾಮಯ ಇರುವದು. ರೇಖೆಗಳನ್ನು ಒರೆಸಲು, ಅಳಿಸಲು ಬರುವದು. ಇದರ ಮೇಲಿಂದ ಶ್ರೀಸಮರ್ಥರು ಹೇಳುವದೇನಂದರೆ, ಜ್ಞಾನದಿಂದ ಮನುಷ್ಯನು ತನ್ನ ಪ್ರಾರಬ್ಧ ರೇಖೆಯನ್ನು ಖಾತ್ರಿಯಿಂದ ಬದಲಿಸಿ ಕೊಳ್ಳಲು ಸಾಧ್ಯವಿರುವದು. ಇದು ಅನುಭವದಿಂದ ಹೇಳಿರುವದಾಗಿದೆ. ಆದ್ದರಿಂದ ಈ ಅನುಭವವನ್ನು ಪ್ರತಿ ಯೊಬ್ಬರೂ ಜಮೆಯ ಲೆಕ್ಕದಲ್ಲಿ ಹಿಡಿಯಬೇಕು: ಎಲ್ಲರಿಗೂ ಮಾನ್ಯವಾಗುವಂತಹ ವಿಷಯದ ಪ್ರಸಾರವು ಸಾಮಾನ್ಯ ವಾಗಿ ಸಮಾಜದಲ್ಲಿ ಆಗುವದು. ಆದರೆ ಚತುರ ಮನುಷ್ಯನು ಇದರೊಂದಿಗೆ ಸಹಮತಗೊಳ್ಳುವದಿಲ್ಲ. ಪ್ರಾರಬ್ಧದ ಗೆರೆಯನ್ನು ಅಳಿಸಲು ಬರುವದಿಲ್ಲ. ಈ ಮಾತನ್ನು ಸಾಮಾನ್ಯವಾಗಿ ಎಲ್ಲ ಜನರೂ ಒಪ್ಪುತ್ತಾರೆ. ಆದರೆ ಅದು ಹಾಗಿರುವದಿಲ್ಲ. [೬] ರೇಖೆಗಳ ವಿಚಾರದಲ್ಲಿ ಹೇಳುವದೇನಂದರೆ, ಇದರಲ್ಲಿ ನಾಲ್ಕು ಪ್ರಕಾರಗಳಿರುವವು, [೧] ಉತ್ತಮ ರೇಖೆ [೨] ಮಧ್ಯಮ ರೇಖೆ. [೩] ಕನಿಷ್ಠ ರೇಖೆ. ಮತ್ತು [೪] ಅದೃಷ್ಟ ರೇಖೆಯು. ಇದರಲ್ಲಿ ಅದೃಷ್ಟ ರೇಖೆಯು ಗುಪ್ತವಿರುವದು. ಈ ರೇಖೆಯನ್ನು ನೋಡಿ ಭವಿಷ್ಯ ಹೇಳುವವರ ಭವಿಷ್ಯದಲ್ಲಿ ಒಂದೇ ಪ್ರಕಾರದ ಅನುಭವವು ಬರುವದಿಲ್ಲ. [೭] ಸುಮ್ಮನೆ ಹಿಂದಿನ ಹಿರಿಯರ ಹದಿನಾಲ್ಕು ತಲೆಮಾರಿನ ಪರಾಕ್ರಮದ ಮಾತುಗಳನ್ನು ಹೇಳು ವವರು ಜಾಣರೋ ಅಥವಾ ಹುಚ್ಚರೋ ಏನೆಂದು ಅನ್ನುವದು? ಹುಚ್ಚರೆಂದು ಅನ್ನುವದೇ ಸೂಕ್ತವೆಂದು ತಿಳಿಯಿರಿ. ಯಾಕಂದರೆ ಕೇಳುವವನು ತನ್ನ ಕೈಯಿಂದ ಏನು ಮಾಡಲಿಕ್ಕೆ ಆಗುವದು. ಅಥವಾ ಏನು ಮಾಡಲಿಕ್ಕೆ ಆಗುವದಿಲ್ಲ. ಇದನ್ನು ತಿಳಿಯಬೇಕು. ನೋಡಬೇಕು. [೮] ಕಾಗದದ ಮೇಲಿನ ಗೆರೆಗಳನ್ನು ಒರಿಸಲಿಕ್ಕೆ (ಅಳಿಸಲಿಕ್ಕೆ) ಬರುವದು ಇದು ನಮ್ಮ ನಿಮ್ಮೆಲ್ಲರಿಗೆ ಗೊತ್ತಿದ್ದ ಅನುಭವದ ಮಾತೇ ಆಗಿರುವದು. ಇದರಂತೆ ಅಂಗೈಯಲ್ಲಿಯ ಗೆರೆಗಳೂ ಸಹ ಒಮ್ಮೊಮ್ಮೆ ಅಳಿಸಿ ಹೋಗುವವು. ಇದೂಸಹಿತ ಅನುಭವದ ಮಾತಾಗಿದೆ. ಅದರಂತೆ ಅದೃಷ್ಟದ ಗುಪ್ತ ಗೆರೆಯನ್ನೂ ಸಹಿತ ಅಳಿಸಲಿಕ್ಕೆ ಬರಬಹುದಾಗಿದೆ. ಈ ಮಾತಿನ ಕಡೆಗೆ ಅಲಕ್ಷ್ಯಮಾಡಬಾರದು. ಕಣ್ಣು ಮುಚ್ಚಿ ಕೂಡ್ರಬಾರದು. ಯಾಕಂದರೆ ಕಣ್ಣು ಮುಚ್ಚಿ ಕೂಡ್ರುವದಕ್ಕೆ ಯಾವ ಕಾರಣವೂ ಇಲ್ಲ. [೯] ಮನುಷ್ಯನು ಸ್ವತಃ ವಿಚಾರವನ್ನು ಮಾಡಬೇಕು. ಎಲ್ಲರ ಹೇಳಿಕೆಯನ್ನೂ ಕೇಳಬೇಕು. ಆದರೆ ಇದರಲ್ಲಿ ನಿಜ [ಖರೆ] ಯಾವುದು? ಸುಳ್ಳು [ಖೊಟ್ಟಿ] ಯಾವುದು? ಇದನ್ನು ಸರಿಯಾಗಿ ಗುರುತಿಸಬೇಕು. ಹಾಗೂ ಅದರಿಂದ ಪರಮಾರ್ಥವನ್ನು ಸಾಧಿಸಬೇಕು. ಎರಡನೆ ಯವರ ಮನಸ್ಸನ್ನು ವಶಮಾಡಿಕೊಳ್ಳಬೇಕು. ತಿಳುವಳಿಕೆ ಇಲ್ಲದ ಹುಚ್ಚ ಜನರನ್ನು ಜಾಣರನ್ನಾಗಿ ಮಾಡಬೇಕು. ಜನರ ಕೂಡ ಜನ ಸಮೂಹದ ಕೂಡ ಸುಮ್ಮನೇ ವಾದವನ್ನು ಬೆಳಿಸಬಾರದು: ಯಾವ ಮನುಷ್ಯನು ಬಹಳ ಜನರು ಹೇಳಿದ್ದನ್ನು ಕೇಳುವ ಹವ್ಯಾಸಕ್ಕೆ ಬೀಳುವನೋ– ಅವನು ಅನುಮಾನದಲ್ಲಿ ಮುಳುಗುವನು. ಪ್ರತ್ಯಕ್ಷ ಅನುಭವ ದಿಂದ ಆಗುವ ಮನೋ ನಿಶ್ಚಯವು ಅನುಮಾನದ್ದಾಗುವದಿಲ್ಲ. [೧೦]

ಉದಂಡಾಚೇ ಉದಂಡ ಐಕಾವೇ । ಪರೀ ತೇ ಪ್ರತ್ಯಯೇ ಪಾಹಾವೇ ।
ಖರೇ ಖೋಟೇ ನಿವಡಾವೇ । ಅಂತರ್ಯಾಮೀ ॥೧೧॥

ಕೋಣಾಸೀ ನಷ್ಠ ಮ್ಹಣೋ ನಯೇ । ಸಮಜಾವೇ ಅಪಾಯ ಉಪಾಯ ।
ಪ್ರತ್ಯಯ ಘ್ಯಾವಾ ಬಹುತ ಕಾಯ । ಬೋಲೋನಿಯಾ ॥೧೨॥

ಮಾಣುಸ ಹೇಂಕಾಡ ಆಣೀ ಕಚ್ಚೇ । ಮಾನ್ಯ ಕರಾವೇ ತಯಾಚೇ ।
ಯೇಣೇ ಪ್ರಕಾರೇ ಬಹುತಾಂಚೇ । ಅಂತರ ರಾಖಾವೇ ॥೧೩॥

ಅಂತರೀ ಸೀಳ ಪೇಚ ವಳಸಾ । ತೋ ಚಿ ವಾಢವೀ ಬಹುವಸಾ ।
ತರೀ ಮಗ ಶಾಹಾಣಾ ಕೈಸಾ । ನಿವಳೂ ನೇಣೇ ॥೧೪॥

ವೇಡೇ ಕರಾವೇ ಶಾಹಾಣೇ । ತರೀ ಚ ಜಿಣೇ ಶ್ಲಾಘ್ಯವಾಣೇ ।
ಉಗೇ ಚ ವಾದಾಂಗ ವಾಢವಿಣೇ । ಹೇ ಮೂರ್ಖಪಣ ॥೧೫॥

ಮಿಳೋನ ಜಾಊನ ಮೇಳವಾವೇ । ಪಡೀ ಘೇಊನ ಉಲಥಾವೇ ।
ಕಾಂಹೀ ಚ ಕಳೋ ನೇದಾವೇ । ವಿವೇಕ ಬಳೇ ॥೧೬॥

ದುಸರ್‍ಯಾಚೆ ಚಾಲಣೇ ಚಾಲಾವೇ । ದುಸರ್‍ಯಾಚೆ ಬೋಲಣೇ ಬೋಲಾವೇ ।
ದುಸರ್‍ಯಾಚೆ ಮನೋಗತೇ ಜಾವೇ । ಮಿಳೋನಿಯಾ ॥೧೭॥

ಜೋ ದುಸರ್‍ಯಾಚ್ಯಾ ಹಿತಾವರೀ । ತೋ ವಿಪಟ ಕಾಂಹಿ ಚ ನ ಕರೀ ।
ಮಾನತ ಮಾನತ ವಿವರೀ । ಅಂತರ ತಯಾಚೇ ॥೧೮॥

ಆಧೀ ಅಂತರ ಹಾತೀ ಘ್ಯಾವೇ । ಮಗ ಹಳುಹಳು ಉಕಲಾವೇ ।
ನಾನಾ ಉಪಾಯೇ ನ್ಯಾವೇ । ಪರಲೋಕಾಸೀ ॥೧೯॥

ಹೇಂಕಾಡಾಸ ಹೇಂಕಾಡ ಮಿಳಾಲಾ । ತೇಥೇ ಗಲ್ಬಲಾ ಚಿ ಜಾಲಾ ।
ಕಳ್ಹೋ ಉಠತಾ ಚ್ಯಾತುರ್ಯಾಲಾ । ಠಾವ ಕೈಂಚಾ ॥೨೦॥

ಉಗೀ ಚ ಕರಿತೀ ಬಡಬಡ । ಪರೀ ಕರೂನ ದಾಖವಿಣೇ ಹೇ ಅವಘಡ ।
ಪರಸ್ಥಳ ಸಾಧಣೇ ಜಡ । ಕಠಿಣ ಆಹೆ ॥೨೧॥

ಧಕೆ ಚಪೇಟೇ ಸೋಸಾವೇ । ನೀಚ ಶಬ್ದ ಸಾಹಾತ ಜಾವೇ ।
ಪ್ರಸ್ತಾವೋನ ಪರಾವೇ । ಆಪಲೇ ಹೋತೀ ॥೨೨॥

ಬಹು ಜನರಿಂದ ಬಹಳಷ್ಟು ಹೇಳಿದ್ದನ್ನೆಲ್ಲ ಕೇಳಿರಿ ಆದರೆ ಸ್ವತಃ ಅನುಭವ ಪಡೆದು ಅದರ ಕಿಮ್ಮತ್ತನ್ನು ನಿಶ್ಚಯಿಸಿರಿ. ನೀವು ನಿಮ್ಮ ಬುದ್ಧಿಯಿಂದ ಇದರ ಬಗ್ಗೆ ಖರೇ ಅಥವಾ ಸುಳ್ಳು ಯಾವುದು ಅನ್ನುವದನ್ನು ನಿಶ್ಚಯು ಮಾಡಿರಿ. [೧೧] ಯಾರಿಗೂ ಇಲ್ಲ ಎಂದು ಅನ್ನಬಾರದು. ಆದರೆ ಅಪಾಯ ಯಾವುದು ? ಉಪಾಯು ಯಾವುದು. ಇದನ್ನು ಮಾತ್ರ ತಿಳಿದುಕೊಂಡಿರಬೇಕು. ಅದಕ್ಕನುಸಾರವಾಗಿ ನಿಮ್ಮ ವರ್ತನವಿರಲಿ. ಆದರೆ ನೀವು ಸ್ವತಃ ಅನುಭವ ಪಡೆದು ನೋಡಿರಿ. ನಿಶ್ಚಯಿಸಿರಿ, ಸುಮ್ಮನೆ ಹೆಚ್ಚು ಮಾತನಾಡುವಲ್ಲಿ ಏನೂ ಅರ್ಥವಿಲ್ಲ. (೧೨) ಒಬ್ಬ ಮನುಷ್ಯನು ಹಟವಾದಿ,ದುರಾಗ್ರಹಿ ಮತ್ತು ಕಡಿಮೆ ಬುದ್ಧಿ ಇದ್ದವ ಇದ್ದರೂ ಸಹಿತ ಪ್ರಸಂಗಾನುಸಾರ ಇವನ ಅಭಿಪ್ರಾಯವನ್ನೂ ಕೂಡಾ ಕೇಳಬೇಕು. ಯೋಗ್ಯವಿದ್ದರೆ ಅದರಂತೆ ಮಾಡಬೇಕು. ಈ ಪ್ರಕಾರದಿಂದ ಬಹಳ ಜನರನ್ನು ಸಂಬಾಳಿಸ ಬೇಕು. [೧೩] ಮನುಷ್ಯನು ಮನದಲ್ಲಿ ಸಂಕಟ ತರುವ ಮಾರ್ಗ, ವಕ್ರಮಾರ್ಗ [ಪೇಚಿನ ಪ್ರಸಂಗ] ಹಟಮಾರಿತನ-ದ್ವೇಷಮಾರ್ಗ ಹಿಡಿದರೆ ಇದೇ ಬಹಳಷ್ಟು ಬೆಳೆಯುತ್ತ ಹೋಗುವದು. ಇಂಥ ಮನುಷ್ಯನಿಗೆ ಜಾಣನೆಂದು ಅನ್ನಲಿಕ್ಕೆ ಬರುವದಿಲ್ಲ. ಜನರ ಅಂತಃಕರಣವನ್ನು ಇವನು ಶಾಂತ ಗೊಳಿಸಲಾರನು. (೧೪) ಯಾರು ಹುಚ್ಚನನ್ನು ಜಾಣರನ್ನಾಗಿ ಮಾಡುವರೋ ಅವರ ಜೀವನವು ನಿಜವಾಗಿ ಹೊಗಳುವಂತಹದು ಇರುವದು. ಜನರಲ್ಲಿ ಸುಮ್ಮನೆ ಕಾರಣವಿಲ್ಲದೇ ವಾದ ಬೆಳೆಸುವದು ಮೂರ್ಖತನದ್ದಿರುವದು. (೧೫) ನಾವು ಎರಡನೆಯವರೊಂದಿಗೆ ಸಮರಸರಾಗಿ ಅವರನ್ನು ನಮ್ಮ ವರನ್ನಾಗಿ ಮಾಡಿಕೊಳ್ಳಬೇಕು. ಪ್ರಸಂಗ ಬಿದ್ದರೆ ನಮ್ರತನದಿಂದ [ಬಿದ್ದು ಕುಸ್ತಿ ಒಗೆದಂತೆ] ಹಿಂದಕ್ಕೆ ಸರಿದು ಕೆಲಸ ಸಾಧಿಸಿಕೊಳ್ಳಬೇಕು. ಮತ್ತು ನಂತರ ಅವರನ್ನು ಎತ್ತಿ ಬಾಜೂಕ್ಕೆ ಸರಿಸಿ ಬಿಡಬೇಕು. [ಬುದ್ಧಿ ಬರುವಂತೆ ಮಾಡ ಬೇಕು).ಆದರೆ ಏನೇ ಮಾಡಿದರೂ ವಿವೇಕದ ಬಲದ ಮೇಲೆ ಮಾಡಬೇಕು. ಆದರೆ ನಿಮ್ಮ ಅಂತರಂಗದ ಗುಟ್ಟನ್ನು ತಿಳಿಯಗೊಡಬಾರದು. (೧೬) ಜನರ ಒಲವಿನಂತೆ ನಡೆದು ಅವರ ಮನವನ್ನು ಮೊದಲು ವಶಪಡಿಸಿಕೊಳ್ಳಬೇಕು. ಆಮೇಲೆ ಅವರಿಗೆ ಸಾವಕಾಶವಾಗಿ ತಿಳಿಸಿ ಹೇಳಬೇಕು. ನಿಮ್ಮಲ್ಲಿ ಲೀನತೆ ಇರಬೇಕು. ಮತ್ತು ನೀಚ [ದುಷ್ಟ] ಶಬ್ದ ಗಳನ್ನು ಸಹಿಸಬೇಕು. ಎಲ್ಲ ಕಡೆಗೂ ಎಲ್ಲದರ ಬಗ್ಗೆ ಲಕ್ಷ್ಯಗೊಡಬೇಕು. ಯಾರಿಗೆ ಯಾವುದು ಬೇಕೋ ಅದನ್ನು ಅವರಿಗೆ ಕೊಡಬೇಕು. ಕೊಡುವ ಪ್ರಯತ್ನ ಮಾಡಬೇಕು. ಇಂಥ ಮನುಷ್ಯನು ಸರ್ವರಿಗೂ ಮಾನ್ಯವಾಗಿರುವನು: ಜನರು ನಡೆದಂತೆ ನಡೆದು, ಅವರು ಮಾತನಾಡಿದಂತೆ ಮಾತನಾಡಿ ಅವರ ಮನೋಭಾವದಲ್ಲಿ ನಾವು ಸಮರಸರಾಗಿ ಕೂಡಿ ಹೋಗಬೇಕು. (೧೭) ಯಾರು ಎರಡನೆಯವರ ಹಿತವನ್ನು ಬಯಸುವರೋ ಅವರು ಆ ಹಿತದ ವಿರುದ್ಧ (ಆ ಜನರ ವಿರುದ್ಧ) ವಿತುಷ್ಟವಾದದ್ದನ್ನು ಮಾಡಬಾರದು. ಅವರಿಗೆ ತಿಳಿಸಿ ಬುದ್ಧಿಕಲಿಸಿ ಸಾವಕಾಶವಾಗಿ ಅವರ ಅಂತರಂಗವನ್ನು ಸುಧಾರಿಸಬೇಕು. (೧೮) ಮೊದಲು ಜನರ ಮನವನ್ನು ವಶಪಡಿಸಿಕೊಳ್ಳಬೇಕು. ಆಮೇಲೆ ಸಾವಕಾಶ ವಾಗಿ ಅವರ ಮನವನ್ನು ಅರಳಿಸಿ ಸಂಶಯಗಳನ್ನು ಅಡ್ಡಾತಿಡ್ಡಾ ವಿಚಾರಗಳನ್ನು ಹೊರದೂಡಿಸಿ ಅನೇಕ ಬಗೆಯಿಂದ ಅವರಲ್ಲಿ ಪಾರಮಾರ್ಥ ಸಾಧಿಸುವಂತೆ ಮಾಡಬೇಕು. (೧೯) ಹಟಮಾರಿ ಮನುಷ್ಯನಿಗೆ ಇನ್ನೊಬ್ಬ ಹಟಮಾರಿಯು ಭೆಟ್ಟಿಯಾದರೆ ಜಗಳ ತಂಟೆ ಆಗಿ ಒದರಾಟ_ಚೀರಾಟದ ಗೊಂದಲವೇಳುವದು. ತಂಟೆ ನಿವರ್ಾಣವಾದ ಮೇಲೆ ಅಲ್ಲಿ ವಿವೇಕದ ವಿಚಾರಕ್ಕೆ ಆಸ್ಪದವೇ ಉಳಿಯುವದಿಲ್ಲ. [೨೦] ಅರ್ಥವಿಲ್ಲದ ಬಡ ಬಡಿಕೆಯಿಂದ ಗೊಂದಲ ಉಂಟು ಮಾಡುವದು ಕಠಿಣವಲ್ಲ. ಆದರೆ ಪ್ರತ್ಯಕ್ಷ ಕೃತಿಮಾಡಿ (ಆಚರಣೆಯಲ್ಲಿ ತಂದು) ತೋರಿಸುವದು ಮಾತ್ರ ಕಠಿಣ ವಿರುವದು. ಎರಡನೆಯವರ ಸ್ಥಾನ, ಶತ್ರುವಿನ ಸ್ಥಾನ,ಇವನ್ನು ಹಸ್ತಗತ ಮಾಡಿಕೊಳ್ಳುವದು ಬಹಳ ಕಠಿಣವಿರುವದು. [ಕೇವಲ ಉತ್ತರ ಕುಮಾರನಂತೆ ಆಗಬಾರದು] (೨೧) ಸಂಕಟಗಳ ಆಘಾತವನ್ನು ಸಹಿಸಬೇಕು. ಯಾರಾದರೂ ಅಪಶಬ್ದಗಳನ್ನು ಮಾತನಾಡಿದರೆ ಅದನ್ನು ಬಯಲಿಗೆ ಇಡಬಾರದು. ಆ ಮಾತುಗಳನ್ನು ಹೊಟ್ಟೆಯಲ್ಲಿಯೇ ಇಟ್ಟು ಕೊಳ್ಳಬೇಕು[ನುಂಗಬೇಕು]. ಹೀಗೆ ನಡೆಯುವದರಿಂದ ನಿಮಗೆ ವಿರೋಧ ಮಾಡುವ ಜನರು ಪಶ್ಚಾತ್ತಾಪ ಹೊಂದಿ ನಿಮ್ಮಲ್ಲಿಗೆ ಬಂದು ನಿಮ್ಮವರಾಗುವರು. (೨೨)

ಪ್ರಸಂಗ ಜಾಣೋನಿ ಬೋಲಾವೇ । ಜಾಣಪಣ ಕಾಂಹೀ ಚ ನ ಘ್ಯಾವೇ ।
ಲೀನತಾ ಧರೂನ ಜಾವೇ । ಜೇಥ ತೇಥೇ ॥೨೩॥

ಕುಗ್ರಾಮೇ ಅಥವಾ ನಗರೇ । ಪಾಹಾವೀ ಘರಾಂಚೀ ಘರೇ ।
ಭಿಕ್ಷಾಮಿಸೇ ಲಹಾನ ಥೋರೇ । ಪರೀಕ್ಷೂನ ಸೋಡಾವೀ ॥೨೪॥

ಬಹುತೀ ಕಾಂಹೀತರೀ ಸಾಪಡೇ । ವಿಚಕ್ಷಣ ಲೋಕೀ ಮಿತ್ರೀ ಘಡೇ ।
ಉಗೇ ಚ ಬೈಸತಾ ಕಾಂಹೀ ಚ ನ ಘಡೇ । ಫಿರ್ಣೇ ವಿವರಣೇ ॥೨೫॥

ಸಾವಧಪಣೇ ಸರ್ವ ಜಾಣಾವೇ । ವರ್ತಮಾನ ಆಧೀ ಚ ಘ್ಯಾವೇ ।
ಜಾಲಿಯಾ ಯೇ ತಿಕಡೇ ಜಾವೇ । ವಿವೇಕೇ ಸಹಿತ ॥೨೬॥

ನಾನಾ ಜಿನಸ ಪಾಠಾಂತರೇ । ನಿವತೀ ಸಕಳಾಂಚೀ ಅಂತರೇ ।
ಲೇಹೋನ ದೇತಾ ಪರೋಪಕಾರೇ । ಸೇವಾ ಸಾಂಡಾವೀ ॥೨೭॥

ಜೈಸೇ ಜಯಾಸ ಪಾಹಿಜೇ । ತೈಸೇ ತಯಾಸ ದೀಜೇ ।
ತರೀ ಮಗ ಶ್ರೇಷ್ಠ ಚಿ ಹೋಇಜೇ । ಸಕಳಾ ಮಾನ್ಯೆ ॥೨೮॥

ಭೂಮಂಡಳೀ ಸಕಳಾಸ ಮಾನ್ಯ । ತೋ ಮ್ಹಣೋ ನಯೇ ಸಾಮಾನ್ಯ ।
ಕಿತ್ಯೇಕ ಲೋಕ ಅನನ್ಯ । ತಯಾ ಪುರುಷಾಸೀ ॥೨೯॥

ಐಸೀ ಚಾತುರ್ಯಾಚೀ ಲಕ್ಷಣೇ । ಚಾತುರ್ಯೇ ದಿಗ್ವಿಜಯೊ ಕರಣೇ ।
ಮಗ ತಯಾಸ ಕಾಯೊ ಉಣೇ । ಜೇಥ ತೇಥೇ ॥೩೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ಚಾತುರ್ಯ ವಿವರಣ' ನಾಮ ಸಮಾಸ ಷಷ್ಠಮ ॥

ಹೊತ್ತು ವೇಳೆ ಪ್ರಸಂಗ ನೋಡಿಕೊಂಡು ಒಳ್ಳೆಯ ಮಾತುಗಳನ್ನು ಆಡಬೇಕು. ಆದರೆ ನಾನೇ ತಿಳಿದವ ಅನ್ನುವ ಅಹಂಭಾವ ಬರದಂತೆ ನಿಮ್ಮ ನಡೆ ಇರಬೇಕು. ನುಡಿ ಇರಬೇಕು. ನೀವು ಎಲ್ಲಿಗೇ ಹೋದರೂ ಅಲ್ಲಿ ಅತ್ಯಂತ ಲೀನರಾಗಿ ಹೋಗಬೇಕು. ಯಾವುದೇ ಅಪವಾದ ಹೊರಿಸಲು ಬರದಂತೆ ನಿಮ್ಮ ವರ್ತನವಿರಬೇಕು. (೨೩) ನಿಮ್ಮ ಸಂಚಾರ ಕಾಲದಲ್ಲಿ ಶಹರ, ಪಟ್ಟಣ, ಗ್ರಾಮ, ಕುಗ್ರಾಮ ಮತ್ತು ಪ್ರತಿ ಮನೆ ಮನೆಯನ್ನೂ ಸೂಕ್ಷ್ಮವಾಗಿ ನಿರೀಕ್ಷಿಸಬೇಕು. ಭಿಕ್ಷಾ ನಿಮಿತ್ತದಿಂದ ಸಣ್ಣವರು, ದೊಡ್ಡವರು ಎಲ್ಲರನ್ನೂ ಪರೀಕ್ಷಿಸಿ ನೋಡಬೇಕು. [೨೪] ಬಹಳ ಜನರನ್ನು ಪರೀಕ್ಷಿಸಿದೆವೆಂದರೆ ಆಗ ಒಬ್ಬರಲ್ಲಾದರೂ ಅನುಕರಣ ಮಾಡುವಂಥ ಒಂದು ದೊಡ್ಡ ಗುಣ ಕಂಡುಬರುವದು. ಮತ್ತು ಅವರೊಂದಿಗೆ ಮತ್ತು ಚತುರ ಮತ್ತು ಜಾಣ ಜನರೊಂದಿಗೆ ಸ್ನೇಹವಾಗುವದು. ಆದರೆ ಸುಮ್ಮನೆ ಒಂದೇ ಕಡೆಗೆ ಮನುಷ್ಯನು ಕುಳಿತರೆ, ಆಲಸ್ಯ ತಲೆದೋರುವದು ಮತ್ತು ನಿದ್ರೆ ಮೂಲ ಧ್ಯೇಯವಾದ ಅಡ್ಡಾಟ, ಅಪಸಾತ [ಪರಸ್ಪರ] ಚರ್ಚೆಮಾಡುವ ಕಾಯಕ ನಿಂತು ಬಿಡುವದು. [೨೫] ಸಾವಧಾನದಿಂದ ಇದ್ದು ಎಲ್ಲ ಕಡೆಯ ವಿಷಯ ತಿಳಿದುಕೊಳ್ಳಬೇಕು. ನೀವು ಎಲ್ಲಿಗೆ ಹೋಗುವದಿರುವದೋ ಅಲ್ಲಿಯ ವಿಷಯವನ್ನು ಮುಂಚಿತವಾಗಿ ತಿಳಿದುಕೊಂಡಿರಬೇಕು. ಆಮೇಲೆ ವಿವೇಕ ವಿಚಾರಮಾಡಿಕೊಂಡು ಅಲ್ಲಿಗೆ ಹೋಗಬೇಕು. [೨೬] ಅನೇಕ ವಿಷಯದ ಜ್ಞಾನ ಪಾಠ ಇರಬೇಕು. ಇದನ್ನು ಹೇಳುವದರಿಂದ ಎಲ್ಲರ ಮನಕ್ಕೂ ಬಹಳ ಸಮಾಧಾನವಾಗುವದು. ಜನರಿಗೆ ನೀವು ಗ್ರಂಥ ಬರೆದುಕೊಟ್ಟರೆ ಅವರ ಮೇಲೆ ಬಹಳ ದೊಡ್ಡ ಉಪಕಾರ ಮಾಡಿದಂತಾಗುವದು. [೨೭] ಯಾರಿಗೆ ಏನು ಬೇಕಾಗಿರುವದೋ ಅದನ್ನು ಅವರಿಗೆ ಕೊಡಬೇಕು. ಅಂದರೆ ನಿಮಗೆ ಶ್ರೇಷ್ಠತನ ಬರುವದು. ಇದು ಸರ್ವ ಮಾನ್ಯವಾಗುವದು.[೨೮] ಜಗತ್ತಿನಲ್ಲಿ ಯಾರು ಸರ್ವ ಮಾನ್ಯರಾಗುವರೋ ಅವರಿಗೆ ಸಾಮಾನ್ಯ ಮನುಷ್ಯನೆಂದು ಅನ್ನಲಿಕ್ಕೆ ಬಂದೀತೇ? ಎಂದೂ ಬರಲಾರದು. ಸಮಾಜದಲ್ಲಿಯು ಬಹಳಷ್ಟು ಜನ ಇವನ ಕೂಡ ಏಕನಿಷ್ಠರಾಗುವರು. [೨೯] ಚಾತುರ್ಯದ ಲಕ್ಷಣಗಳು ಹೀಗಿರುವವು. ಮನುಷ್ಯನು ಚಾತುರ್ಯದಿಂದ ದಿಗ್ವಿಜಯ ಮಾಡಬೇಕು. ಆಗ ಅವನಿಗೆ ಎಲ್ಲಿಯೂ ಏನೂ ಕಡಿಮೆ ಬೀಳುವದಿಲ್ಲ. [೩೦]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹದಿನೈದನೆಯ ದಶಕದೊಳಗಿನ
"ಚಾತುರ್ಯ ವಿವರಣ"ವೆಂಬ ಹೆಸರಿನ ಆರನೆಯ ಸಮಾಸವು ಮುಗಿದುದು.

● ●

## ದಶಕ ೧೫. ಸಮಾಸ ೭. ಅಧೋರ್ಧ್ವ ನಿರೂಪಣ (ನುಡಿ ೪೨)

ಈ ವಿಶ್ವ ರಚನೆಯು ಬಗ್ಗೆ ಶ್ರೀಸಮರ್ಥರಿಗೆ ಏನು ಹೇಳಬೇಕಾಗಿದೆಯೆಂದರೆ, ವಿಶ್ವದಲ್ಲಿ ಎರಡು ತಿರುವು ಮುರುವು ಪ್ರವಾಹಗಳು [ಸೊಟ್ಟಾ ಡೊಂಕಾಗಿ] ಅಖಂಡವಾಗಿ ಹರಿಯುವವು, ಒಂದು ಪ್ರವಾಹವು ಮೇಲಿನಿಂದ ಕೆಳಗಡೆಗೆ ಬರುವದು. ಇದರಂತೆ ಎರಡನೆಯ ಪ್ರವಾಹವು ಕೆಳಗಿನಿಂದ ಮೇಲಕ್ಕೆ ಹೋಗುವದು. ಮೇಲಿನಿಂದ ಕೆಳಗೆ ಬರುವ ಪ್ರವಾಹವು ಅತಿಶಯ ಸೂಕ್ಷ್ಮ, ಅತಿ ಅತಿ ಸೂಕ್ಷ್ಮ, ಸೂಕ್ಷ್ಮ, ಮತ್ತು ಸ್ಥೂಲ ಈ ಕ್ರಮದಿಂದ ಕೆಳಗೆ ಸರಿಯುವದು. ಕೆಳಗಿನಿಂದ ಮೇಲೆ ಹೋಗುವ ಪ್ರವಾಹವು ಸ್ಥೂಲ, ಸೂಕ್ಷ್ಮ, ಅತಿ ಸೂಕ್ಷ್ಮ. ಅತಿ ಅತಿ ಸೂಕ್ಷ್ಮ, ಸೂಕ್ಷ್ಮ. ಈ ಕ್ರಮದಿಂದ ಮೇಲಕ್ಕೆ ಏರುವದು. ಇವುಗಳ ಎರಡು ತುದಿಗಳು ಹೀಗಿರುವವು. ಇದರಲ್ಲಿ ವಾಯು ಮತ್ತು ಅರಿವು. (ಜಾಣೀವ) ಕೂಡಿ ಇರುವಂಥ ಮೂಲ ಮಾಯೆಯು ಮೇಲ್ಗಡೆಯ ತುದಿಯು ಮತ್ತು

ಪೃಥ್ವಿಯಿಂದ ಅಥವಾ ಜಡ ದ್ರವ್ಯಗಳಿಂದ ತುಂಬಿದ ವಿಶ್ವ ಅಥವಾ ದೃಶ್ಯ ಸಾಮ್ರಾಜ್ಯ, ಇದು ಕೆಳಗಡೆಯ ತುದಿಯು ಇರುವದು. ಮೂಲ ಮಾಯೆಯಲ್ಲಿ ಶುದ್ಧ ಅರಿವಿನ ರೂಪದಲ್ಲಿರುವ ಜ್ಞಾನಮಯನಾದ ಅಂತರಾತ್ಮನು ಸ್ವಸ್ವರೂಪದಲ್ಲಿ ಚಕಚಕಿತನಾಗಿ ಶೋಭಿಸುವನು. ಇಲ್ಲಿ ಇವನ ಮೇಲೆ ತ್ರಿಗುಣದ ಅಥವಾ ಪಂಚಭೂತಗಳ ಒತ್ತಡ, ಆವರಣ, ಎಳ್ಳಷ್ಟೂ ಇರುವದಿಲ್ಲ. ಜಡ ದ್ರವ್ಯಗಳಲ್ಲಿ ಅಂತರಾತ್ಮಾ ಇರುವನೆಂಬುದರಲ್ಲಿ ಸಂಶಯವೇ ಇಲ್ಲ. ಆದರೆ ಪಂಚಭೂತಗಳ ಮತ್ತು ತ್ರಿಗುಣ ಇವುಗಳ ಅತಿಶಯ ದಪ್ಪ (ದಟ್ಟ) ಆವರಣ ಇವನ ಮೇಲೆ ಬಂದದ್ದರಿಂದ ಹೊರಗಿನಿಂದ ಇವನ ಅಸ್ತಿತ್ವದ ಗುರುತು ಗೊತ್ತಾಗುವದಿಲ್ಲ. (ತಿಳಿಯುವದಿಲ್ಲ). ಪ್ರಾಣಿಗಳಲ್ಲಿ ಅರಿವಿನ ರೂಪದಿಂದ ಇವನು ಪ್ರಕಟವಾಗಿ ಕಂಡುಬರುವನೆಂಬುದು ನಿಜವಿದೆ. ಆದರೆ ಅಲ್ಲಿ ಅವನಿಗೆ ಸ್ವತಃದ ಎಚ್ಚರ ಇರುವದಿಲ್ಲ. ಅದೇ ಮನುಷ್ಯರಲ್ಲಿಯ ಅಂತರಾತ್ಮನಿಗೆ ಸ್ವತಃದ ಎಚ್ಚರ ಇರುವದು. ಆದರೆ ಅಲ್ಲಿ ಅವನ ಸ್ಮರಣ ಮತ್ತು ವಿಸ್ಮರಣ ಇವುಗಳ ಮಿಶ್ರಣ ಇರುವದು. ವಿಸ್ಮರಣಕ್ಕೆ ಅವಕಾಶ ಕೊಡದೆ ಅಂತರಾತ್ಮನ ಸತತ ಸ್ಮರಣವನ್ನು ಸಂಬಾಳಿಸಿಕೊಂಡು ಹೋಗುವದು ಸಾಧಕನ ಜೀವನದಲ್ಲಿಯ ಮುಖ್ಯ ರಹಸ್ಯವಿರುವದು. ಹಾಗಾದರೆ ಈ ಸ್ಮರಣವನ್ನು ಏಕೆ ಸಂಬಾಳಿಸಬೇಕು. ಮತ್ತು ಹೇಗೆ ಸಂಬಾಳಿಸಬೇಕು· ಇದನ್ನೇ ತಿಳಿಸಿ ಕೊಡುವದಕ್ಕಾಗಿ ಸಂತರು ಗ್ರಂಥಗಳನ್ನು ಬರೆದಿರುವರು, ಈಗ್ಯೂ ಸಹ ಬರೆಯುವರು. ಅಂತರಾತ್ಮಾ ಅತಿಶಯ ಸೂಕ್ಷ್ಮವಿರುವನು. ಇವನ ಸ್ಮರಣ ಸತತ ಇರುವದಕ್ಕಾಗಿ ನಮ್ಮ ಅಂತರಂಗವನ್ನು ಅವನಷ್ಟೇ ಸೂಕ್ಷ್ಮ ಮಾಡುವದು ಅವಶ್ಯವಿರುವದು. ಶ್ರೀ ಸಮರ್ಥರು ಈ ಸಮಾಸದಲ್ಲಿ ಹೇಳುವದೇನಂದರೆ– ವಿಶ್ವದಲ್ಲಿಯ ಎಲ್ಲ ಬದಲಾವಣೆಗೂ ಮೂಲಳಾಗಿರುವಂಥ ಮೂಲ ಮಾಯಾ ಸ್ವತಃ ಚಂಚಲವಿರುವಳು. ಅತಿಶಯ ಸೂಕ್ಷ್ಮಳೂ ಇರುವಳು. ಇವಳಲ್ಲಿ ಇರುವಂಥ ಶುದ್ಧ ಅರಿವು ಇದೇ ಷಡ್ಗುಣೈಶ್ವರ್ಯ ಸಂಪನ್ನನಾದ ಈಶ್ವರನೇ ಇರುವದು. ಮಾಯವು ಸಂಕಲ್ಪಕ್ಕೆ ಚಾಲನಾ [ಪ್ರವೃತ್ತಿ, ದಾರಿ] ಕೊಡುವನು. ಆಮೇಲೆ ತ್ರಿಗುಣಗಳು ಮತ್ತು ಪಂಚಭೂತ ಇವುಗಳಿಂದ ವಿಶ್ವವು ಆಕಾರ ಹೊಂದಿತು. ನಮಗೆ ಒಂದು ಬಳ್ಳಿಯ ಮೂಲದಲ್ಲಿ [ತಾಯಿ ಬೇರಿನಲ್ಲಿ] ಎಲೆಗಳು, ಹೂವುಗಳು, ಫಲಗಳು ಇತ್ಯಾದಿ ಕಾಣುವದಿಲ್ಲ. ಆದರೆ ಈ ಬಳ್ಳಿ ಜೋರಿನಿಂದ ವಿಸ್ತಾರವಾಯಿತೆಂದರೆ ಆಗ ಇವೆಲ್ಲವುಗಳು ಪ್ರಕಟವಾಗುವವು. ಕಾಲಾಂತರದಲ್ಲಿ ಬಳ್ಳಿ ಒಣಗುವದು. ಅಥವಾ ಒಣಗಹತ್ತುವದು. ಆಗ ಅದಕ್ಕೆ ನೀರು ಹಾಕಿದರೆ ಪುನಃ ಜೋರಿನಿಂದ ಚಿಗಿತು ಬೆಳೆಯುವದು. ವಿಶ್ವರೂಪಿ ಬಳ್ಳಿಯ ಪ್ರಕಾರವೂ ಹೀಗೆಯೇ ಇರುವದು. ಇದರೊಳಗಿಂದ ಅನಂತ ಜೀವಗಳು ಬರುವವು. ಜೀವಿಸುವವು. ಸತ್ತು ಹೋಗುವವು. ಮತ್ತು ಕಾಲಾಂತರದಲ್ಲಿ ಪುನಃ ಜನ್ಮ ತಾಳುವವು. ಈ ಬಳ್ಳಿಯ ಮೂಲ ಬೇರನ್ನು ಕಿತ್ತಿದ ಕೂಡಲೇ ಅದು ಹೇಗೆ ಸಾಯುವದೋ [ನಾಶವಾಗುವದೋ] ಅದೇ ಪ್ರಕಾರ ಸೂಕ್ಷ್ಮದಲ್ಲಿ ಅತಿಶಯ ಆಳವಾಗಿ ಪ್ರವೇಶ ಮಾಡಿ ಮೂಲ ಮಾಯೆಯವರೆಗೂ ಹೋಗಿ ಮುಟ್ಟದ ಹೊರತು ಮನುಷ್ಯನಿಗೆ ಜನನ ಮರಣಗಳಿಂದ ನಿಜವಾದ ಬಿಡುಗಡೆ ಸಾಧ್ಯವಿಲ್ಲ. ಸ್ಥೂಲವನ್ನು ಬಿಟ್ಟು ಸೂಕ್ಷ್ಮದಲ್ಲಿ ಪ್ರವೇಶ ಮಾಡಬೇಕು. ಆತ್ಮಗಳಲ್ಲಿ ಭೇದ ಕಾಣುವದು. ಆದರೆ ಅದು ತೋರಿಕೆಗೆ ಮಾತ್ರ ಇರುವದು. ನಮ್ಮ ನಿಮ್ಮೆಲ್ಲರ ಅಂತರಾತ್ಮಾ ಒಬ್ಬನೇ ಇರುವನು. ಇವನೇ ಜಗತ್ತಿನ ಅಂತರಾತ್ಮನೂ ಇರುವನು.[ಇವನಿಗೆ ಜಗದಂತರಾತ್ಮಾ ಅನ್ನುವರು]. ಸೂಕ್ಷ್ಮದಿಂದ ಸೂಕ್ಷ್ಮದ ಆಕಲನ [ತಿಳುವಳಿಕೆ, ಜ್ಞಾನ]ವಾಗುವದು. ತುರ್ಯಾವಸ್ಥೆ ಇದು ಖರೇ ಶುದ್ಧ ಸ್ಮರಣವಾದರೆ ಸುಷುಪ್ತಿ ಇದು ವಿಸ್ಮರಣವಾಗಿದೆ. ವಿಸ್ಮರಣದಿಂದ ಮನುಷ್ಯನು ಏಕದೇಶಿ, ಏಕಾಂಗಿ ಆಗುವನು, [ಎಲ್ಲದರ ಮರಲು ಹರಿದುಕೊಂಡು ಖರೇ ನಿಸ್ಸಂಗನಾಗುವನು–ತಾನೇತಾನಾದವನು ಆಗುವನು].

## ದಶಕ ಪಂಚದಶ : ಸಮಾಸ ಸಪ್ತಮ : ಅಧೋರ್ಧ್ವ ನಿರೂಪಣ

॥ಶ್ರೀರಾಮ॥ ನಾನಾ ವಿಕಾರಾಚೇ ಮೂಳ। ತೇ ಹೇ ಮೂಳಮಾಯಾ ಚ ಕೇವಳ।
ಅಚಂಚಳೀ ಜೇ ಚಂಚಳ। ಸೂಕ್ಷ್ಮರೂಪೇ ॥೧॥

ಮೂಳ ಮಾಯಾ ಜಾಣೇವೇಚೀ। ಮುಳೀಚ್ಯಾ ಮೂಳ ಸಂಕಲ್ಪಾಚೀ।
ಮೊಳಖೀ ಶಡಗುಣೈಶ್ವರಾಚೀ। ಯೇಣೇ ಚಿ ನ್ಯಾಯೇ ॥೨॥

ಪ್ರಕೃತಿ ಪುರುಷ ಶಿವಶಕ್ತೀ। ಅರ್ಧನಾರೀ ನಟೇಶ್ವರ ಮ್ಹಣತೀ।
ಪರೀ ತೇ ಆವಘೀ ಜಗಜ್ಜ್ಯೋತೀ। ಮೂಳ ತ್ಯಾಸೀ ॥೩॥

ಸಂಕಲ್ಪಾಚೇ ಜೇ ಚಳಣ। ತೇ ಚಿ ವಾಯೋಚೇ ಲಕ್ಷಣ।
ವಾಯೋ ಆಣೀ ತ್ರಿಗುಣ। ಆಣೀ ಪಂಚಭೂತೇ ॥೪॥

ಪಾಹಾತಾ ಕೋಣೀಯೇಕ ವೇಲ। ತ್ಯಾಚ್ಯಾ ಮುಳ್ಯಾ ಅಸತೀ ಖೋಲ।
ಪತ್ರೇ ಪುಷ್ಪೇ ಫಳೇ ಕೇವಳ। ಮೂಳಾಚಪಾಸೀ ॥೫॥

ಯಾಹಿವೇಗಳೆ ನಾನಾ ರಂಗ। ಆಕಾರ ವಿಕಾರ ತರಂಗ।
ನಾನಾ ಸ್ವಾದ ಅಂತರಂಗ। ಮುಳಾಮಧ್ಯೇ ॥೬॥

ತೇ ಚಿ ಮೂಳ ಫೋಡೂನ ಪಾಹಾತಾ। ಕಾಂಹೀ ಚ ನಾಹೀ ವಾಟೇ ಆತಾ।
ಪುಢೇ ವಾಢತಾ ವಾಢತಾ। ದಿಸೋ ಲಾಗೇ ॥೭॥

ಕಡ್ಯಾವರೀ ವೇಲ ನಿಘಾಲಾ। ಅಧೋಮುಖೇ ಬಳೇ ಚಾಲಿಲಾ।
ಘಾಂಪಾವೋನ ಪುಢೇ ಆಲಾ। ಭೂಮಂಡಳೀ ॥೮॥

ತೈಸೀ ಮೂಳಮಾಯಾ ಜಾಣ। ಪಂಚಭೂತೇ ಆಣೀ ತ್ರಿಗುಣ।
ಮುಳೀ ಆಹೇತ ಹೇ ಪ್ರಮಾಣ। ಪ್ರತ್ಯಯೇ ಜಾಣಾವೇ ॥೯॥

ಅಖಂಡ ವೇಲ ಪುಢೇ ವಾಢಲಾ। ನಾನಾ ವಿಕಾರೀ ಶೋಭಲಾ।
ವಿಕಾರಾಚಾ ವಿಕಾರ ಜಾಲಾ। ಅಸಂಭಾವ್ಯ ॥೧೦॥

## ದಶಕ ೧೫. ಸಮಾಸ ೭. ಅಧೋರ್ಧ್ವ ನಿರೂಪಣ (ನುಡಿ ೪೨)

ನಿಶ್ಚಲ ಪರಬ್ರಹ್ಮದಲ್ಲಿ ಚಂಚಲವೆಂದು ಉತ್ಪನ್ನವಾದಂಥ ಮೂಲ ಮಾಯೆಯು ವಿಶ್ವದ ರಚನೆಯನ್ನು ಮಾಡುವಳು [ಮಾಡುತ್ತಾಳೆ]. ಈ ವಿಶ್ವದಲ್ಲಿ ಅನೇಕ ಪ್ರಕಾರದ ಬೇರೆಬೇರೆ ತರಹದ ಬದಲಾವಣೆಗಳಾಗುವದು ಕಂಡು ಬರುವ ಮಾತಾಗಿದೆ. ಇದಕ್ಕೆಲ್ಲ ಮೂಲ ಕಾರಣಳೆಂದರೆ, ಕೇವಲ ಮೂಲ ಮಾಯೆಯೇ ಆಗಿರುವಳು. ನಿಶ್ಚಲವಾದ ಪರಬ್ರಹ್ಮದಲ್ಲಿ ಇವಳು ಚಂಚಲತನದಿಂದ ಮತ್ತು ಅತಿ ಸೂಕ್ಷ್ಮತನದಿಂದ ಇರುವಳು. [೧] ಮೂಲ ಮಾಯಾ ಇವಳು ಅರಿವಿನಿಂದ ತಯಾರಾದವಳಿರುವಳು. ಮೂಲ ಪರಬ್ರಹ್ಮದಲ್ಲಿ ಮೊಟ್ಟಮೊದಲು ಉಂಟಾದ ಸಂಕಲ್ಪವು ಅರಿವಿನ ರೂಪದಲ್ಲಿಯೇ ಇರುವದು. ಮತ್ತು ಇದೇ ಮೂಲಮಾಯೆಯ ಸ್ವರೂಪವೆಂದು ತಿಳಿಯಬೇಕು. ಸಕಲ ಐಶ್ವರ್ಯ, ಧರ್ಮ, ಯಶ, ಶ್ರೀ, ಜ್ಞಾನ ಮತ್ತು ವೈರಾಗ್ಯ ಇವು ಆರು ಗುಣಗಳು ಯಾರಲ್ಲಿ ಇರುವವೋ ಅಂಥ ಆ ಈಶ್ವರನ ಗುರುತು ಇಲ್ಲಿಯೇ ಆಗುವದು. [೨] ಪ್ರಕೃತಿ, ಪುರುಷ, ಶಿವಶಕ್ತಿ, ಅರ್ಧನಾರೀ ನಟೇಶ್ವರ, ಇತ್ಯಾದಿ ಅನೇಕ ಹೆಸರುಗಳೂ ಇವನಿಗೆ ಇರುವವು. ಆದರೆ ಈ ಎಲ್ಲದರ ಮೂಲವು ಜಗಜ್ಜ್ಯೋತಿಯೇ [ಜಗತ್ ಪ್ರಕಾಶಕ ಚಿದ್ರೂಪ-ಚೈತನ್ಯವೇ] ಇರುವದು. (೩) ಮೂಲ ಸಂಕಲ್ಪ ಯಾವಾಗ ಪ್ರಕಟವಾಯಿತೋ ಆವಾಗಲೇ ನಿಶ್ಚಲದಲ್ಲಿ ಚಂಚಲವು ನಿರ್ಮಾಣವಾಯಿತು. ನಿಶ್ಚಲ ಸದ್ವಸ್ತುವಿಗೆ ಚಂಚಲತನ ಬಂದಿತು. ಸಂಕಲ್ಪದಲ್ಲಿ ಇರುವ ಚಂಚಲತನವನ್ನು ಹೊರತರುವ ಶಕ್ತಿಯೇ ವಾಯುವಾಗಿರುವದು. ವಾಯು ಇವನು ತ್ರಿಗುಣ ಮತ್ತು ಪಂಚ ಭೂತ ಗಳನ್ನು ತರುವನು. ಚಂಚಲತನ [ವಾಯು] ದಲ್ಲಿ ಮೊದಲಿನಿಂದಲೇ ತ್ರಿಗುಣ ಮತ್ತು ಪಂಚ ಮಹಾಭೂತಗಳು ಇರುವವು. [೪] ಮೂಲ ಮಾಯೆಯಲ್ಲಿ ಮೂರು ಗುಣ ಮತ್ತು ಐದು [ಪಂಚ] ಭೂತಗಳು ಸೂಕ್ಷ್ಮ ರೂಪದಿಂದ ಹೇಗೆ ಇರುವವು ಎನ್ನುವದನ್ನು ತಿಳಿಸಿ ಹೇಳುವದಕ್ಕಾಗಿ ಬಳ್ಳಿಯ ದೃಷ್ಟಾಂತ ಕೊಡುತ್ತಾರೆ: ಒಂದಾನೊಂದು ಬಳ್ಳಿಯನ್ನು ನೋಡಿರಿ. ಇದರ ಬೇರುಗಳು ಆಳವಾಗಿ ಭೂಮಿಯಲ್ಲಿ ಹೋಗಿರುವವು. ಬಳ್ಳಿಯಲ್ಲಿ ಕಾಣಿಸುವ ಎಲೆಗಳ, ಹೂವುಗಳ ಮತ್ತು ಫಲಗಳಿಗೆಲ್ಲಕ್ಕೂ ಮೂಲ ಕಾರಣವು ಬಳ್ಳಿಯ ಬೇರೇ ಆಗಿರುವದು. ಇದರಲ್ಲಿಯೇ ಇವೆಲ್ಲ ಇರುವವೆಂದು ಹೇಳಬಹುದು. [೫] ಇದರ ಹೊರತಾಗಿ ಬಳ್ಳಿಯ ಅನೇಕ ಬಣ್ಣಗಳು, ಆಕಾರ, ವಿಕಾರ, ತರಂಗ, ಸ್ವಾದ [ನಾನಾ ಬಗೆಯ ರುಚಿ] ಮತ್ತು ಅಂತರಂಗ [ಒಳಗಿನ ರಚನೆ] ಇವೆಲ್ಲವುಗಳು ಆ ಬಳ್ಳಿಯ ಮೂಲ [ತಾಯಿ] ಬೇರಿನಲ್ಲಿಯೇ ಇರುವವು. [೬] ಆದರೆ ಆ ತಾಯಿ ಬೇರನ್ನು ಒಡೆದು ಅಥವಾ ಕೊಯ್ದು ನೋಡಿದ್ದಾದರೆ ಅದರಲ್ಲಿ ಇವುಗಳು ಅಥವಾ ಇವುಗಳಲ್ಲೊಂದಾದರೂ ಕಾಣುವದಿಲ್ಲ [ಇರುವದಿಲ್ಲ]. ಬಳ್ಳಿಯು ಹೇಗೆ ಹೇಗೆ ಬೆಳೆಯುತ್ತ ಹೋಗುವದೋ ಹಾಗೆಯೇ ತಮ್ಮಷ್ಟಕ್ಕೆ ತಾವೇ ಇವು ಪ್ರಕಟವಾಗಿ ಕಾಣಿಸಹತ್ತುವವು. [೭] ಬಳ್ಳಿಯು ಗುಡ್ಡದ ಓರೆಯ ಮೇಲ್ಗಡೆಯಲ್ಲಿ ಹುಟ್ಟುವದು. ಮತ್ತು ಕೆಳಗೆ ಮುಖ ಮಾಡಿ ಭೂಮಿಯ ದಿಕ್ಕಿನ ಕಡೆಗೆ ಜೋರಿನಿಂದ ಬೆಳೆಯುತ್ತದೆ. ಹೀಗೆ ಹೆಚ್ಚು ವಿಸ್ತಾರಗೊಂಡು ಕೊನೆಗೆ ಭೂಮಿಯ ಮೇಲೆ ಬರುವದು. [೮] ಮೂಲ ಮಾಯೆಯು ರೀತಿಯೂ ಸಹಿತ ಅಗದೀ ಹೀಗೆಯೇ ಇರುವದು. ಇದನ್ನು ತಿಳಿಯಿರಿ. ಎಲೆ, ಹೂವು ಮತ್ತು ಫಲ ಇವುಗಳ ಮೂಲವು ಅತ್ಯಂತ ಸೂಕ್ಷ್ಮವಾಗಿ ಬಳ್ಳಿಯ ಬೇರಿನಲ್ಲಿಯೇ ಇರುವದು. ಇದರಂತೆಯೇ ಮೂರು ಗುಣ ಮತ್ತು ಪಂಚ ಭೂತಗಳು ಇವೆರಡೂ ಅತ್ಯಂತ ಸೂಕ್ಷ್ಮ ರೀತಿಯಿಂದ ಮೂಲ ಮಾಯೆಯಲ್ಲಿಯೇ ಇರುವವು. ಇದರ ಬಗ್ಗೆ ಅನುಭವದಿಂದ ನೀವೇ ಸ್ವತಃ ಖಾತ್ರಿ ಮಾಡಿಕೊಳ್ಳಿರಿ. [೯] ಬಳ್ಳಿಯು ಬೆಳವಣಿಗೆ ಸಂಪೂರ್ಣವಾದ ನಂತರ ಅದು ಒಣಗುವದು. ಕಾಲಾಂತರದಲ್ಲಿ ಪುನಃ ಅದು ಹುಟ್ಟುವದು. ಅಥವಾ ಚಿಗಿಯುವದು, ಬೆಳೆಯುವದು, ಮತ್ತು ಒಣಗುವದು. ಹೀಗೆಯೇ ಈ ಚಕ್ರ ಚಾಲೂ ಇರುವದು. ಆದರೆ ಬಳ್ಳಿಯ ಮೂಲ ಬೇರನ್ನೇ ಕಿತ್ತು ಒಗೆದರೆ ಆಗ ಮಾತ್ರ ಅದು ಪುನಃ ಹುಟ್ಟುವದಿಲ್ಲ. ಮಾಯೆಯದೂ ಹೀಗೆಯೇ ಇರುವದು. ಮಾಯೆಯ ಮೂಲವು ಸ್ಥಿರವಾಗಿ [ಕಾಯಂ] ಇರುವವರೆಗೆ ಜನ್ಮ ಮರಣದ ಚಕ್ರ ಚಾಲೂ ಇರುವದು. ಆದರೆ ಆತ್ಮಜ್ಞಾನದಿಂದ ಅದರ ಮೂಲವನ್ನೇ ಕಿತ್ತು ಬಿಟ್ಟರೆ ಜನ್ಮ ಮೃತ್ಯು ಇಲ್ಲದಾಗುವದು [ತಪ್ಪುವದು]– ಮೂಲಮಾಯೆಯ ಬಳ್ಳಿಯು ಒಂದೇ ಸವನೆ ಬೆಳೆ ಯುತ್ತಲೇ ಇರುವದು. ಇದರಲ್ಲಿ ಅನೇಕ ಪ್ರಕಾರದ ಬದಲಾವಣೆಯಾಗಿ ಇದು ಶೋಭಿಸಹತ್ತುವದು. ಈ ಬದಲಾ ವಣೆಯಲ್ಲಿ ಪುನಃ ಬದಲಾವಣೆಯಾಗಿ ಬಳ್ಳಿಯ ವಿಸ್ತಾರವು ಕಲ್ಪನೆ ಮೀರಿ ಬೆಳೆಯುವದು. [೧೦]

ನಾನಾ ಫಡಗರೀ ಫುಟಲೀ । ನಾನಾ ಜುಂಬಾಡೇ ವಾಢಲೀ ।
ಅನಂತ ಅಗ್ರೇ ಚಾಲಿಲೀ । ಸೃಷ್ಟೀಮಧೇ ॥೧೧॥

ಕಿತ್ಯೇಕ ಫಳೇ ತೀ ಪಡತೀ । ಸವೇ ಚಿ ಆಣೀಕ ನಿಘತೀ ।
ಐಸೀ ಹೋತೀ ಆಣಿ ಜಾತೀ । ಸರ್ವಕಾಳ ॥೧೨॥

ಯೇಕ ವೇಲ ಚಿ ವಾಳಲೇ । ಪುನ್ಹಾ ತಿಥೇ ಚಿ ಫುಟಲೇ ।
ಐಸೇ ಆಲೇ ಆಣೀ ಗೇಲೇ । ಕಿತೀಯೇಕ ॥೧೩॥

ಪಾನೇ ಝಡತೀ ಆಣೀ ಫುಟತೀ । ಪುಷ್ಪೇ ಫಳೇ ತೇಣೇ ಚಿ ರೀತೀ ।
ಮಧ್ಯೇ ಜೀವ ಹೇ ಜಗತೀ । ಅಸಂಭಾವ್ಯ ॥೧೪॥

ಅವಘಾ ವೇಲ ಚಿ ಕರ್಩ತೋ । ಮೂಳಾಪಾಸೂನ ಪುನ್ಹಾ ಹೋತೋ ।
ಐಸಾ ಅವಘಾ ವಿಚಾರ ಜೋ ತೋ । ಪ್ರತ್ಯಕ್ಷ ಜಾಣಾವಾ ॥೧೫॥

ಮೂಳ ಖಾಣೋನ ಕಾಢಿಲೇ । ಪ್ರತ್ಯಯೆಜ್ಞಾನೇ ನಿರ್ಮೂಳ ಕೇಲೇ ।
ತರೀ ಮಗ ವಾಢಣೇ ಚಿ ರಾಹಿಲೇ । ಸಕಳ ಕಾಂಹೀ ॥೧೬॥

ಮುಳೀ ಬೀಜ ಸೇವಟೀ ಬೀಜ । ಮಧ್ಯೇ ಜಳರೂಪ ಬೀಜ ।
ಐಸಾ ಹಾ ಸ್ವಭಾವ ಸಹಜ । ವಿಸ್ತಾರಲಾ ॥೧೭॥

ಮುಳಾಮಧೀಲ ಜ್ಯಾ ಗೋಷ್ಟೀ । ಸಾಂಗತಾಹೇ ಬೀಜಸೃಷ್ಟೀ ।
ಜೀಥೀಲ ಅಂಶ ತೇಥೇ ಕಷ್ಟೀ । ನ ಹೋತಾ ಜಾತೋ ॥೧೮॥

ಜಾತೋ ಯೇತೋ ಪುನ್ಹಾ ಜಾತೋ । ಐಸಾ ಪ್ರತ್ಯಾವೃತ್ತಿ ಕರಿತೋ ।
ಪರಂತು ಆತ್ಮಜ್ಞಾನೀ ಜೋ ತೋ । ಅನ್ಯಥಾ ನ ಘಡೇ ॥೧೯॥

ನ ಘಡೇ ಐಸೇ ಜರೀ ಮ್ಹಣಾವೇ । ತರೀ ಕಾಂಹೀತರೀ ಲಾಗೇ ಜಾಣಾವೇ ।
ಅಂತರೀ ಚ ಪರೀ ಶಾವೇ । ಸಕಳಾಸ ಕೈಚೇ ॥೨೦॥

ತೇಣೇಸೀ ಚ ಕಾರ್ಯಭಾಗ ಕರಿತೀ । ಪರಂತು ತಯಾಸ ನೇಣತೀ ।
ದಿಸೇನಾ ತೇ ಕಾಯೆ ಕರಿತೀ । ಬಾಪುಡೇ ಲೋಕ ॥೨೧॥

ಇದಕ್ಕೆ ಅನೇಕ ಟಿಸಿಲುಗಳು ಒಡೆಯುವವು. ಇವು ಒಂದರಲ್ಲೊಂದು ಸೇರಿ ಹೆಣೆಯುವವು. ಝುಂಡವು ಗಟ್ಟುವವು. ಈ ಮಾಯಾ ಬಳ್ಳಿಯು ಅನೇಕ ಟಿಸಿಲು ಹಾಗೂ ಅವುಗಳ ಒಂದೊಂದು ಟೊಂಗೆಗೆ ಅಸಂಖ್ಯ ಕವಲುಗಳು ವಿಶ್ವದಲ್ಲೆಲ್ಲ ಕಡೆಗೂ ಪಸರಿಸಿರುವವು. [೧೦] ಕೆಲವೊಂದು ಹಣ್ಣುಗಳು ಬೀಳುವವು. ಆದರೆ ಕೂಡಲೇ ಹೊಸ ಫಲಗಳು ಕಾಣಿಸಿಕೊಳ್ಳುವವು. [ಹುಟ್ಟುವವು]. ಫಲಗಳ ಈ ಆಗುವ ಹೋಗುವ ಕಾರ್ಯ ಸತತ ಚಾಲೂ ಇರುವದು. [೧೨] ಒಂದು ಬಳ್ಳಿ ಒಣಗಿದರೆ ಪುನಃ ಅಲ್ಲಿಯೇ ಮತ್ತೊಂದು ಬಳ್ಳಿ ಹುಟ್ಟುವದು. ಈ ಪ್ರಕಾರ ಇಲ್ಲಿಯವರೆಗೆ ಅನೇಕಾನೇಕ ಬಳ್ಳಿಗಳು ಎಷ್ಟೆಷ್ಟೋ ಹುಟ್ಟಿದವು ಮತ್ತು ಒಣಗಿದವು. [೧೩] ಎಲೆಗಳು ಉದುರುವವು. ಮತ್ತೆ ಚಿಗಿತು ಹುಟ್ಟುವವು. ಹೂವು ಮತ್ತು ಹಣ್ಣುಗಳಿಗೂ ಕೂಡಾ ಈ ನಿಯಮವು ಅನ್ವಯಿಸುವದು. ಈ ಕ್ರಿಯೆಯಲ್ಲಿ ಅಕ್ಷರಶಃ ಅಸಂಖ್ಯ ಜೀವಗಳು ಜೀವಿಸುವವು. [೧೪] ಮುಂದೆ ಪೂರ್ಣ ಬಳಿಯೇ ಒಣಗಿ (ಕಮರಿ) ಹೋಗುವದು. ಆಮೇಲೆ ಮೂಲ ಬೇರಿನಿಂದ ಅದು ಪುನಃ ಬೆಳೆಯುವದು. ಈ ಎಲ್ಲ ವಿಚಾರವನ್ನು ನೀವು ತಿಳಿಯಲು ವಿಶ್ವ ರಚನೆಯನ್ನು ಪ್ರತ್ಯಕ್ಷ ನೋಡಿ ತಿಳಿದುಕೊಳ್ಳಬೇಕು. [೧೫] ಬಳ್ಳಿಯ ಮೂಲವನ್ನು ಅಗಿದು ಹೊರಗೆ ತೆಗೆಯಬೇಕು. (ಪ್ರಪಂಚ ವೃಕ್ಷದ ಮೂಲವನ್ನು) ಸ್ವಾನುಭವ ಜ್ಞಾನದಿಂದ ಬಳ್ಳಿಯನ್ನು ಬೇರು ಸಹಿತ ನಿರ್ಮೂಲ ಮಾಡಿದರೆ (ಅಂದರೆ ಅಹಂ ವೃತ್ತಿ ಅಥವಾ ವಾಸನಾ ಅಂದರೆ ಮೂಲಮಾಯೆಯನ್ನು ಸಂಪೂರ್ಣ ನಿರ್ಮೂಲ ಮಾಡಬೇಕು). ಆಮೇಲೆ ಬಳ್ಳಿಯ ಬೆಳವಣಿಗೆಯು ತನ್ನಷ್ಟಕ್ಕೆ ತಾನೇ ಮುಗಿಯುವದು. [೧೬] ಆರಂಭದ ಮೂಲದಲ್ಲಿ ಬೀಜಾವಸ್ಥೆಯು. ಮತ್ತು ಕೊನೆಯ ಪರ್ಯವಸಾನವೂ ಬೀಜಾವಸ್ಥೆಯು. ಮಧ್ಯದಲ್ಲಿ [ವೃಕ್ಷದ ನಡುವೆಯೂ] ಬೀಜದ ಜಲರೂಪದ ಅವಸ್ಥೆಯು. ಈ ಪ್ರಕಾರ ವಿಶ್ವದಲ್ಲಿಯ ಘಟನೆಯ ಸ್ವಭಾವವಿರುವದು. ಇದು ಎಲ್ಲ ಸ್ಥಳದಲ್ಲಿ ಪಸರಿಸಿರುವದು ಕಂಡು ಬರುವದು. [೧೭] ಬೀಜದಿಂದ (ಬೀಜ ಸೃಷ್ಟಿಯಿಂದ) ಏನೇನು ಉತ್ಪನ್ನವಾಗುವವೋ ಅವುಗಳ ಮೇಲಿಂದ ಮೂಲದಲ್ಲಿ ಏನು ಇತ್ತು ಅನ್ನುವದನ್ನು ಹೇಳಲಿಕ್ಕೆ ಬರುವದು. ಯಾವುದರಿಂದ ಯಾವುದು ನಿರ್ಮಾಣವಾಗುವದೋ ಅದು ಅದರಲ್ಲಿಯೇ ಸಹಜವಾಗಿ ಲೀನವಾಗುವದು. ವಿಶ್ವದಲ್ಲಿಯ ಮೂರು ಗುಣಗಳು ಮತ್ತು ಪಂಚಭೂತಗಳು ಇವುಗಳ ವಿಸ್ತಾರದ ಮೇಲಿಂದ ಮೂಲಮಾಯಾ ಹೇಗಿರಬಹುದೆಂಬ- ಕಲ್ಪನೆಯು ನಿಮಗೆ ಬರುವದು. ಇದರ ಹೊರತಾಗಿ ಈ ದೃಶ್ಯ ವಿಶ್ವವು ಕೊನೆಗೆ ನಿರಾಯಾಸದಿಂದ ಮೂಲಮಾಯೆಯಲ್ಲಿ ಲಯವಾಗಿ ಬಿಡುವದು. [೧೮] ಸಾಮಾನ್ಯವಾದ ಅಜ್ಞಾನಿ ಜೀವವು ಸಾಯುವದು; ಪುನಃ ಜನ್ಮತಳೆಯುವದು. [ಹುಟ್ಟುವದು]. ಮತ್ತು ಪುನಃ ಸಾಯುವದು. ಈ ಪ್ರಕಾರ ಜನ್ಮ ಮರಣದ ಚಕ್ರ ಒಂದೇ ಸಮನೆ ಚಾಲೂ ಇರುವದು. (ನಡೆದಿರುವದು). ಆದರೆ ಯಾವನು ಆತ್ಮಜ್ಞಾನೀ ಪುರುಷನಿರುವನೋ ಅವನಿಗೆ ಮಾತ್ರ ಪುನರ್ಜನ್ಮದ ಜಂಜಾಟ [ತಿರುತಿರುಗಿ ಹುಟ್ಟುವದು ಮತ್ತು ಸಾಯುವದು ಇದರ ಎಡತಾಕ ಪಟ್ಟಿಯಿಂದ ಶ್ರಮದ [ಜಂಜಾಟ] ಇರುವದಿಲ್ಲ. [೧೯] ಆತ್ಮಜ್ಞಾನೀ ಪುರುಷನಿಗೆ ಜನ್ಮ ಮರಣದ ಕಷ್ಟವಿಲ್ಲ. ಆದರೆ ಹೀಗೆಂದ ಮಾತ್ರಕ್ಕೆ ಅವನಿಗೆ ಏನೂ ಮಾಡುವ ಅವಶ್ಯಕತೆ ಇರುವದಿಲ್ಲವೆಂದು ತಿಳಿಯಬಾರದು. ಇವನು ಆತ್ಮಜ್ಞಾನ ಸಂಪಾದನೆ ಮಾಡುವದಕ್ಕಾಗಿ ಸಾಧನೆಯನ್ನು ಮಾಡಬೇಕಾಗುವದು. ಇದರಲ್ಲಿ ಶಂಕೆ ಪಡುವ ಕಾರಣವಿಲ್ಲ. ವಾಸ್ತವಿಕವಾಗಿ ಪ್ರತಿಯೊಬ್ಬರ ಅಂತರಂಗದಲ್ಲಿ ಆತ್ಮಜ್ಞಾನ ಇದ್ದೇ ಇರುವದು. ಆದರೆ ಇದು ಇರುವದು. ಅನ್ನುವ ವಿಷಯ ಎಲ್ಲರಿಗೂ ಸುಲಭವಾಗಿ ತಿಳಿಯುವದಿಲ್ಲ. ಆದ್ದರಿಂದ ಸಾಧನಾ ಮಾಡಬೇಕಾಗುವದು. [೨೦] ಆತ್ಮ ಸ್ವರೂಪದ ತಿಳುವಳಿಕೆ ಇರಲಿ ಅಥವಾ ಇಲ್ಲದಿರಲಿ ಪ್ರತಿಯೊಂದು ಪ್ರಾಣಿಯೂ ಇದರ ಪ್ರಕಾಶದಲ್ಲಿ- ಬಾಳುವದು. ಈ ಸ್ವರೂಪವು ಸೂಕ್ಷ್ಮವಿದ್ದದ್ದರಿಂದ ನಾವೂ ಸೂಕ್ಷ್ಮರಾಗಿ ಇದನ್ನು ಗುರುತಿಸಬೇಕಾಗುವದು. ತಿಳಿಯಬೇಕಾಗುವದು. ಈ ಸ್ವರೂಪವು ಹೇಗೆ ನಮ್ಮಲ್ಲಿರುವದೋ ಇದರಂತೆಯೇ ಜಗದಾಂತರದಲ್ಲಿಯೂ ಇರುವದು. ದೇಹದ ಭೇದ ತೋರಿಕೆಯದಾಗಿರುವದು: ಒಳಗೆ ಇರುವಂಥ ಆತ್ಮಜ್ಞಾನದ ಪ್ರಕಾಶದಲ್ಲಿಯೇ ಎಲ್ಲ ಜೀವಗಳು ತಮ್ಮ ತಮ್ಮ ಕರ್ಮವನ್ನು ಮಾಡುವವು. ಆದರೆ ಈ ಆತ್ಮ-ಜ್ಞಾನದ ಬಗ್ಗೆ ತಿಳುವಳಿಕೆ ಇವುಗಳಿಗೆ ಇರುವದಿಲ್ಲ. ಈ ಜ್ಞಾನವು ಪ್ರಕಟವಾಗಿ ಕಾಣುವದಿಲ್ಲ. ಇದಕ್ಕೆ ಈ ಬಡ ಅಜ್ಞಾನಿ ಜನರೇನು ಮಾಡಬೇಕು? [೨೧]

ವಿಷಯಭೋಗ ತೇಣೇ ಚಿ ಘಡೆ। ತೇಣೇವಿಣ ಕಾಂಹೀ ಚ ನ ಘಡೆ।
ಸ್ಥೂಳ ಸಾಂಡೂನ ಸೂಕ್ಷ್ಮೀ ಪವಾಡೇ। ಏಸಾ ಪಾಹಿಜೆ ॥೨೨॥

ಜೇ ಆಪಲೇ ಚಿ ಅಂತರ। ತದ್ರೂಪ ಚಿ ಜಗದಾಂತರ।
ಶರೀರಭೇದಾಚೆ ವಿಕಾರ। ವೇಗಳಾಲೆ ॥೨೩॥

ಆಂಗೋಳೀಚೀ ಆಂಗೋಳೀಸ ವೇಧನಾ। ಯೇಕೀಚೀ ಯೇಕೀಸ ಕಳೇನಾ।
ಹಾತ ಪಾಯೆ ಅವೇವ ನಾನಾ। ಯೇಣೇ ಚಿ ನ್ಯಾಯೇ ॥೨೪॥

ಅವೇವಾಚೇ ಅವೇವ ನೇಣೇ। ಮಾ ತೋ ಪರಾಚೇ ಕಾಯೆ ಜಾಣೆ।
ಪರಾಂತರ ಯಾ ಕಾರಣೇ। ಜಾಣವೇನಾ ॥೨೫॥

ಯೇಕಾ ಚಿ ಉದಕೇ ಸಕಳ ವನಸ್ಪತೀ। ನಾನಾ ಅಗ್ರೀಭೇದ ದಿಸತೀ।
ಖಾಂಡಿಲೀ ತಿತುಕೀ ಚ ಸುಕತೀ। ಯೇರ ತೆ ಟವಟವೀತ ॥೨೬॥

ಯೇಣೇ ಚಿ ನ್ಯಾಯೇ ಭೇದ ಜಾಲಾ। ಕಳೇನಾ ಯೇಕಾಚೇ ಯೇಕಾಲಾ।
ಜಾಣಪಣೇ ಆತ್ಮಯಾಲಾ। ಭೇದ ನಾಹೀ ॥೨೭॥

ಆತ್ಮತ್ವೀ ಭೇದ ದಿಸೆ। ದೇಹ ಪ್ರಕೃತಿಕರಿತಾ ಭಾಸೆ।
ತರೀ ಜಾಣತ ಚಿ ಅಸೆ। ಬಹುತೇಕ ॥೨೮॥

ದೇಖೋನ ಏಕೋನ ಜಾಣತೀ। ಶಾಹಾಣೆ ಅಂತರ ಪರೀಕ್ಷಿತೀ।
ಧೂರ್ತ ತೇ ಅವಘೇ ಚ ಸಮಜತೀ। ಗುಪ್ತರೂಪೇ ॥೨೯॥

ಜೋ ಬಹುತಾಂಚೇ ಪಾಳಣ ಕರೀ। ತೋ ಬಹುತಾಂಚೇ ಅಂತರ ವಿವರೀ।
ಧೂರ್ತಪಣೇ ಠಾಲುಕೇ ಕರೀ। ಸಕಳ ಕಾಂಹೀ ॥೩೦॥

ಆಧೀ ಮನೋಗತ ಪಾಹಾತೀ। ಮಗ ವಿಶ್ವಾಸ ಧರಿತೀ।
ಪ್ರಾಣಿಮಾತ್ರ ಯೇಣೇ ರೀತೀ। ವರ್ತತಾಹೇ ॥೩೧॥

ಸ್ಮರಣಾಮಾಗೇ ವಿಸ್ಮರಣ। ರೋಕಡೀ ಪ್ರಚಿತ ಪ್ರಮಾಣ।
ಆಪಲೇ ಠೇವಣೇ ಆಪಣ। ಚುಕತಾಹೆ ॥೩೨॥

ಆಪಲೇ ಚ ಆಪಣಾ ಸ್ಮರೇನಾ। ಬೋಲಿಲೇ ತೇ ಆಠವೇನಾ।
ಉಠತೀ ಅನಂತ ಕಲ್ಪನಾ। ಠಾಲುಕ್ಯಾ ಕೈಚ್ಯಾ ॥೩೩॥

ಏಸೇ ಹೇ ಚಂಚಳ ಚಕ್ರ। ಕಾಂಹೀ ನೀಟ ಕಾಂಹೀ ವಕ್ರ।
ಜಾಲಾ ರಂಕ ಅಥವಾ ಶಕ್ರ। ತರೀ ಸ್ಮರಣಾಸ್ಮರಣೇ ॥೩೪॥

ಈ ಜ್ಞಾನದ ಪ್ರಕಾಶದಲ್ಲಿಯೇ ನಾವು ಇಂದ್ರಿಯಗಳ ಭೋಗವನ್ನು ಭೋಗಿಸುವೆವು. ಇವನಿಲ್ಲದೇ ಅರ್ಥಾತ್ ಇವನ ಹೊರತಾಗಿ ಯಾವುದೂ ಏನೂ ಆಗುವದಿಲ್ಲ [ಘಟಿಸುವದಿಲ್ಲ]. ಈ ಜ್ಞಾನದ ತಿಳುವಳಿಕೆ ಆಗಲು ನಾವು ಸ್ಥೂಲದ ತ್ಯಾಗಮಾಡಿ ಸೂಕ್ಷ್ಮದ ಕ್ಷೇತ್ರದಲ್ಲಿ ಸೇರುವಂಥ ಮತ್ತು ವ್ಯಾಪಕಗೊಳ್ಳುವಂಥ ಮನುಷ್ಯರಾಗ ಬೇಕಾಗುವದು. [೨೨] ನಮ್ಮ ಅಂತರ್ಯಾಮದಲ್ಲಿ ಯಾವ ಸ್ವರೂಪ ಇರುವದೋ ಅದೇ ಸ್ವರೂಪವು ಜಗತ್ತಿನ ಅಂತರ್ಯಾಮದಲ್ಲಿಯೂ ತುಂಬಿರುವದು. ಪ್ರಾಣಿಗಳ ಶರೀರದ ಆಕಾರ ಬೇರೆ ಬೇರೆಯಾಗಿ ಕಾಣುವವು. [೨೩] ಮನುಷ್ಯನಿಗೆ ಅನಿಸುವದೇನಂದರೆ, ಒಂದು ಬೆರಳಿಗೆ ಆದ ನೋವು ಇನ್ನೊಂದು ಬೆರಳಿಗೆ ತಿಳಿಯುವದಿಲ್ಲ. ಕೈ ಕಾಲು, ಇತ್ಯಾದಿ ಬೇರೆ ಬೇರೆ ಅವಯವಗಳಿರುವವು. ಇವುಗಳಿಗೂ ಸಹಿತ ಇದೇ ನಿಯಮ ಹತ್ತುವದು. [೨೪] ಒಂದು ಅವಯವದ ದುಃಖವು ಇನ್ನೊಂದು ಅವಯವಕ್ಕೆ ತಿಳಿಯುವದಿಲ್ಲವೆಂದಾದರೆ, ನಮಗೆ ಇನ್ನೊಬ್ಬರ ಶರೀರದ ದುಃಖ ವನ್ನು ತಿಳಿಯಲಿಕ್ಕೆ [ಅನುಭವಿಸಲಿಕ್ಕೆ] ಹೇಗೆ ಶಕ್ಯವಿರುವದು ? ಯಾಕಂದರೆ ಎರಡನೆಯವರ ಅಂತಃಕರಣವನ್ನು ಚನ್ನಾಗಿ ತಿಳಿಯಲು ನಮಗೆ ಬಂದಿಲ್ಲವೆಂಬುದೇ ಇದರ ಅರ್ಥವು. [೨೫] ಈಗ ಈ ಆಕ್ಷೇಪಗಳಿಗೆ ಉತ್ತರ ಕೊಡು ವರು: ನೀರು ಅನ್ನುವದು ಒಂದೇ ಇರುವದು. ಒಂದೇ ನೀರಿನಿಂದ ಎಲ್ಲ ವನಸ್ಪತಿಗಳೂ ಜೀವಿಸುವವು. ಮತ್ತು ಬೆಳೆಯುವವು. ಇವು ಬೆಳೆಯುತ್ತಿರುವಾಗ ಅವುಗಳ ಟೊಂಗೆ ಎಲೆ, ಮುಗುಳು, ತುದಿ[ಅಗ್ರ]ಇವುಗಳಲ್ಲಿ ಭೇದವಿರುವದು ಕಂಡುಬರುವದು. ಇವುಗಳಲ್ಲಿ ನಾವು ಯಾವುದನ್ನು ಮುರಿಯುವೆವೋ ಅದಷ್ಟೇ ಒಣಗುವದು. ಬಾಕಿ ಉಳಿದೆಲ್ಲವೂ ಪ್ರಫುಲ್ಲಿತವಿರುವವು. [೨೬] ಇದು ಹೇಗೆ ನಡೆಯುವದೋ ಇದರಂತೆಯೇ ದೇಹದಲ್ಲಿ ಬೇರೆ ಬೇರೆ ಭೇದಗಳು ಆಗುವವು. ಮತ್ತು ಒಂದು ದೇಹದ್ದು ಇನ್ನೊಂದು ದೇಹಕ್ಕೆ ತಿಳಿಯುವದಿಲ್ಲ. ಆದರೆ ಅರಿವಿನ ದೃಷ್ಟಿಯಿಂದ ಆತ್ಮನಲ್ಲಿ ಭೇದವಿಲ್ಲ. ಯಾವ ಅರಿವಿನಿಂದ [ತಿಳುವಳಿಕೆಯಿಂದ] ಒಂದು ಶರೀರಕ್ಕೆ ದುಃಖ ತಿಳಿಯುವದೋ ಅದೇ ಅರಿವಿನಿಂದ ಎರಡನೆಯ ಶರೀರಕ್ಕೂ ಅದರ ದುಃಖ ತಿಳಿಯುವದು. [೨೭] ಪ್ರತಿಯೊಂದು ದೇಹದಲ್ಲಿರುವ ಆತ್ಮನು ಬೇರೆ ಬೇರೆ ಇರುವನು. ಎಂದು ಅನಿಸುವದು. ಆದರೆ ಪ್ರತ್ಯೇಕ ದೇಹದ ಸ್ವಭಾವ ಭಿನ್ನ ಭಿನ್ನವಾಗಿದ್ದರಿಂದ ಹೀಗೆ ಭೇದವು ಭಾಸವಾಗುವದು. ಆದರೆ ಇದು ನಿಜವಿರುವದಿಲ್ಲ. ಈ ವಿಷಯವನ್ನು ಬಹಳಷ್ಟು ಜನರು ತಿಳಿದಿರುವರು. [೨೮] ಕೆಲವು ಜನರನ್ನು ನೋಡಿ, ಮತ್ತು ಕೇಳಿ ಇದನ್ನು ತಿಳಿಯುವರು. ಜಾಣ ಜನರು ಅಂತರಂಗದ ಪರೀಕ್ಷಾ ಮಾಡಿ ಇದನ್ನು ತಿಳಿಯುವರು. ಚತುರ ಮನುಷ್ಯರು ಗುಪ್ತ ರೀತಿಯಿಂದ ಯಾರಿಗೂ ತಿಳಿಯಗೊಡದೆ ಇದನ್ನೆಲ್ಲ ತಿಳಿಯು ವರು. [೨೯] ಚತುರ ಮನುಷ್ಯನಾದವನು ಬಹಳಷ್ಟು ಜನರನ್ನು ಸಂಬಾಳಿಸುವನು. ಯಾವನು ಜನರ ಅಂತಃಕರಣ ವನ್ನು ವಶಮಾಡಿಕೊಳ್ಳುವನೋ ಅವನು ಚತುರತನದಿಂದ ಯಾವತ್ತೂ ಮಾಹಿತಿಯನ್ನು ಮಾಡಿಕೊಳ್ಳುವನು [೩೦] ಮೊದಲು ಜನರು ನಮ್ಮ ಮನಸ್ಸಿನಲ್ಲಿ ಏನಿರುವದೆಂಬುದನ್ನು ನೋಡುವರು. ಮತ್ತು ಆಮೇಲೆ ವಿಶ್ವಾಸವಿಡುವರು. ಎಲ್ಲ ಜನರೂ ಈ ರೀತಿಯಿಂದಲೇ ನಡೆಯುವರು. [೩೧] ಕೆಳಗಿನ ಹಲಕಾವರ್ಜಿಯ ಪ್ರಾಣಿಗಳಿಗೆ ಸೂಕ್ಷ್ಮದಲ್ಲಿ ಪ್ರವೇಶಿಸುವ ಶಕ್ತಿಯೇ ಇಲ್ಲ. ಕೇವಲ ಮನುಷ್ಯರಲ್ಲಿ ಇದು ಇರುವದು. ಆದರೆ ಇದಕ್ಕೆ (ಮನುಷ್ಯ ಜೀವಕ್ಕೆ) ಸೂಕ್ಷ್ಮದ ವಿಸ್ಮರಣ ಸ್ವಾಭಾವಿಕವಾಗಿಯೇ ಘಟಿಸುವದು. ಆದ್ದರಿಂದ ಮನುಷ್ಯರಲ್ಲಿ ಸ್ಮರಣ [ನೆನಪು] ಮತ್ತು ವಿಸ್ಮರಣ [ಮರೆವು] ಇವುಗಳ ಮಿಶ್ರಣವು ಕಂಡುಬರುವದು. ಸ್ಮರಣವನ್ನು ಅಖಂಡವಾಗಿ ಇರುವಂತೆ ಕಾಯುವದೇ ಪರಮಾರ್ಥದ ಅಭ್ಯಾಸವಿರುವದು: ಸ್ಮರಣದ ನಂತರ ನಿಮಗೆ ವಿಸ್ಮರಣ ಉಂಟಾಗುವದು, ಇದು ನಮ್ಮ ಪ್ರತ್ಯಕ್ಷದ ಅನುಭವವಿರುವದು, ನಾವು ಇಟ್ಟಂಥ ವಸ್ತುವು ವಿಸ್ಮರಣದಿಂದಾಗಿ ನಮಗೇ ಸಿಗುವದಿಲ್ಲ. [೩೨] ನಮ್ಮದೇ ನಮಗೆ ಸ್ಮರಣವಿರುವದಿಲ್ಲ, ನಾವು ಮಾತನಾಡಿದ್ದೇ ನಮಗೆ ಜ್ಞಾಪಕವಿರುವದಿಲ್ಲ. ನಮ್ಮ ಮನದಲ್ಲಿ ಅನಂತ ಕಲ್ಪನೆಗಳು ಏಳುವವು, ಅವೆಲ್ಲವೂ ಜ್ಞಾಪಕದಲ್ಲಿರಲು ಶಕ್ಯವಿಲ್ಲ. (೩೩) ಹೀಗಿರುವ ಈ ಚಂಚಲ ಚಕ್ರವು ಬಹು ವಿಚಿತ್ರವಿರುವದು. ಕೆಲವೊಂದು ಸಲ ಅಥವಾ ಕೆಲವೊಂದು ಕಡೆ ಬಹಳ ಸರಳವಿದ್ದರೆ ಕೆಲವೊಂದು ಸಲ– ಕೆಲವೊಂದು ಕಡೆ ವಕ್ರ ಗತಿಯಲ್ಲಿ ತಿರುಗುವದು. ಭಿಕಾರಿ-ಬಡವನಿರಲಿ, ಅಥವಾ ಇಂದ್ರನೇ ಇರಲಿ ಇವರ ಸ್ಥಿತಿಯು ಸ್ಮರಣ ಮತ್ತು ವಿಸ್ಮರಣ ಇದರ ಮೇಲೆ ಅವಲಂಬಿಸಿರುವದು. (೩೪)

ಸ್ಮರಣ ಮ್ಹಣಿಜೆ ದೇವ । ವಿಸ್ಮರಣ ಮ್ಹಣಿಜೆ ದಾನವ ।
ಸ್ಮರಣ ವಿಸ್ಮರಣೇ ಮಾನವ । ವರ್ತತೀ ಆತಾ ॥೩೫॥

ಮ್ಹಣೋನಿ ದೇವೀ ಆಣಿ ದಾನವೀ । ಸಂಪತ್ತಿ ದ್ವಿಧಾ ಜಾಣಾವೀ ।
ಪ್ರಚಿತ ಮಾನಸೀ ಆಣಾವೀ । ವಿವೇಕೇಸಹಿತ ॥೩೬॥

ವಿವೇಕೇ ವಿವೇಕ ಜಾಣಾವಾ । ಆತ್ಮ್ಯಾನೇ ಆತ್ಮಾ ವೋಳಖಾವಾ ।
ನೇತ್ರೇ ನೇತ್ರಚಿ ಪಹಾವಾ । ದರ್ಪಣೇಂಚಾ ॥೩೭॥

ಸ್ಥೂಳೇ ಸ್ಥೂಳ ಖಾಜವಾವೇ । ಸೂಕ್ಷ್ಮೇ ಸೂಕ್ಷ್ಮ ಸಮಜಾವೇ ।
ಖೂಣೇನೇ ಖೂಣೇಸಿ ಬಾಣಾವೇ । ಅಂತರ್ಯಾಮೀ ॥೩೮॥

ವಿಚಾರೇ ಜಾಣಾವಾ ವಿಚಾರ । ಅಂತರೇ ಜಾಣಾವೇ ಅಂತರ ।
ಅಂತರೇ ಜಾಣಾವೇ ಪರಾಂತರ । ಹೋಊನಿಯಾ ॥೩೯॥

ಸ್ಮರಣಾಮಾಜೀ ವಿಸ್ಮರಣ । ಹೇ ಚಿ ಭೇದಾಚೇ ಲಕ್ಷಣ ।
ಯೇಕದೇಸೀ ಪರಿಪೂರ್ಣ । ಹೋತ ನಾಹೀ ॥೪೦॥

ಪುಢೇ ಸಿಕೇ ಮಾಗೇ ವಿಸರೇ । ಪುಢೇ ಉಜೆಡೆ ಮಾಗೇ ಅಂಧಾರೇ ।
ಪುಢೇ ಸ್ಮರೇ ಮಾಗೇ ವಿಸ್ಮರೇ । ಸಕಳ ಕಾಂಹೀ ॥೪೧॥

ತುರ್ಯಾ ಜಾಣಾವೀ ಸ್ಮರಣ । ಸುಷುಪ್ತಿ ಜಾಣಾವೀ ವಿಸ್ಮರಣ ।
ಉಭಯೆತಾ ಶರೀರೀ ಜಾಣ । ವರ್ತತೀ ಆತಾ ॥೪೨॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಅಧೋರ್ಧ್ವ ನಿರೂಪಣ' ನಾಮ ಸಮಾಸ ಸಪ್ತಮ ॥

ಸ್ಮರಣ ಅಂದರೆ ದೇವ, ವಿಸ್ಮರಣ ಅಂದರೆ ದಾನವ, ಮತ್ತು ಸ್ಮರಣ, ವಿಸ್ಮರಣ ಇವುಗಳ ಮಿಶ್ರಣ ವೆಂದರೆ ಮನುಷ್ಯ ಪ್ರಾಣಿ ಆಗಿರುವನು. [೩೫] ಇದರಿಂದಾಗಿ ದೈವೀ ಸಂಪತ್ತು ಮತ್ತು ಆಸುರೀ ಸಂಪತ್ತು ಹೀಗೆ ಎರಡು ಪ್ರಕಾರಗಳು ಜಗತ್ತಿನಲ್ಲಿ ನಮಗೆ ಕಂಡುಬರುವವು. ವಿಚಾರ-ವಿವೇಕದಿಂದ ಇದರ ಅನುಭವವನ್ನು ಮನಸ್ಸಿನಿಂದ ತಿಳಿಯಬೇಕು. ಅನುಭವವನ್ನು ತಿಳಿಯಬೇಕು. [೩೬] ವಿವೇಕವನ್ನು ಉಪಯೋಗಿಸಿ ವಿವೇಕವು ಹೇಗಿರುವದೆಂಬುದನ್ನು ತಿಳಿಯಬೇಕು. ಅದರಂತೆ ನಿಮ್ಮ ಆತ್ಮದಿಂದ ಎರಡನೆಯವರ ಆತ್ಮವನ್ನು ಗುರುತಿಸಬೇಕು. ತಿಳಿಯಬೇಕು. ನೀವು ಆತ್ಮಸ್ವರೂಪರಾಗಿ ಆತ್ಮವನ್ನು ಗುರುತಿಸಿ ತಿಳಿಯಬೇಕು. ಕನ್ನಡಿಯಲ್ಲಿ ಕಾಣುವ ನಿಮ್ಮ ಕಣ್ಣನ್ನು ನಿಮ್ಮ ಕಣ್ಣಿನಿಂದಲೇ ನೋಡಬೇಕಾಗುವದು. ಅದರಂತೆ ಇದೂ ಇರುವದು. (೩೭) ಸ್ಥೂಲ [ಜಡ] ದಿಂದ ಸ್ಥೂಲ [ಜಡ] ವನ್ನು ತಿಳಿದುಕೊಳ್ಳುವಂತೆ, ಜಡ ವಸ್ತುವಿನಿಂದ ಜಡ ದೇಹವನ್ನು ತುರಿಸಿಕೊಳ್ಳುವಂತೆ ಸೂಕ್ಷ್ಮವನ್ನು ಸೂಕ್ಷ್ಮದಿಂದ ತಿಳಿದುಕೊಳ್ಳಬೇಕು. ಸೂಕ್ಷ್ಮದ ಗುರ್ತನ್ನು ಸೂಕ್ಷ್ಮದಿಂದಲೇ ಅರಿಯಬೇಕು. ನಮ್ಮ ಅಂತರ್ಯಾಮದಲ್ಲಿ (ಮರ್ಮವನ್ನು) ಬಿಂಬಿಸಿಕೊಳ್ಳಬೇಕು. (೩೮) ನಿಮ್ಮ ವಿಚಾರದ ಮೇಲೆ ಇನ್ನೊಬ್ಬರ ವಿಚಾರ ಏನಿರುವದೆಂಬುದನ್ನು ತುಲನಾ ಮಾಡಿ ನೋಡಿ ತಿಳಿಯಬೇಕು. ನಿಮ್ಮ ಅಂತರಂಗದ ಮೇಲಿಂದ ಎರಡನೆಯವರ ಅಂತರಂಗ ಹೇಗೆ ಇರುವದು ಎಂಬುದನ್ನು ತಿಳಿಯಬೇಕು. ಎರಡನೆಯವರ ಅಂತಃಕರಣದೊಂದಿಗೆ ತದಾಕಾರ ಹೊಂದಿ ಅವರ ಅಂತರಂಗವನ್ನು ತಿಳಿಯಬೇಕು. ಸ್ಥೂಲದಲ್ಲಿಯ ಜ್ಞಾನ ಸಾಧನೆ ಮತ್ತು ಸೂಕ್ಷ್ಮದಲ್ಲಿಯ ಜ್ಞಾನ ಸಾಧನೆ ಇವುಗಳಲ್ಲಿ ವ್ಯತ್ಯಾಸವಿರುತ್ತದೆ. ಸ್ಥೂಲದಲ್ಲಿ ಜ್ಞಾತಾನು ಜ್ಞೇಯದಿಂದ ಸದಾಕಾಲ [ಯಾವಾಗಲೂ] ಬೇರೆಯಾಗಿ [ಪ್ರತ್ಯೇಕವಾಗಿ] ಇರುವನು. ಆದರೆ ಸೂಕ್ಷ್ಮದಲ್ಲಿ ಜ್ಞಾತಾನು ಜ್ಞೇಯದೊಂದಿಗೆ ಅಧಿಕಾಧಿಕ (ಅತಿ ಹೆಚ್ಚು ಹೆಚ್ಚಾಗಿ) ತಾದಾತ್ಮ್ಯ ಹೊಂದುವನು. ಅಂತೆಯೇ ಎರಡನೆಯವರ ಅಂತರಂಗದ ಪ್ರತಿಬಿಂಬವು ಜ್ಞಾತಾನ ಅಂತರಂಗದಲ್ಲಿ ಬೀಳುವದು. ಈ ಪ್ರತಿಬಿಂಬದ ಮೇಲಿಂದ ಎರಡನೆಯವರ ವಿಚಾರ, ಭಾವನೆ, ವಾಸನಾ ಮತ್ತು ವಿಕಾರ ಇವು ಸೂಕ್ಷ್ಮದಲ್ಲಿ ಪ್ರವೇಶ ಮಾಡಿದ ಜ್ಞಾತಾನಿಗೆ ಸಹಜವಾಗಿ ತಿಳಿಯುವವು, "ಸೂಕ್ಷ್ಮೇ ಸೂಕ್ಷ್ಮ ಸಮಜಾವೆ" (ಸೂಕ್ಷ್ಮದಿಂದ ಸೂಕ್ಷ್ಮವನ್ನು ತಿಳಿಯಬೇಕು) ಅನ್ನುವ ಶ್ರೀ ಸಮರ್ಥರ ವಚನದ ಅರ್ಥ ಈ ಪ್ರಕಾರವಿರುವದು. (೩೯) ಸ್ಮರಣದಲ್ಲಿ ವಿಸ್ಮರಣ [ಅರಿವಿನಲ್ಲಿ ಮರೆವು) ಉತ್ಪನ್ನವಾಗುವದೇ ಭೇದದ ಲಕ್ಷಣವಿರುವದು. ವಿಸ್ಮರಣದಿಂದ ಅಜ್ಞಾನ ರೂಪದ (ಮರ್ಯಾದಿತವಾಗಿರುವ) ಏಕದೇಶಿತ್ವತನ, ಏಕಾಂಗಿತನ ಬರುವದು. ಯಾವುದು ಅಪೂರ್ಣವಿರುವದೋ ಅದು ಪೂರ್ಣವಾಗುವದಿಲ್ಲ. "ನಾನು ಆತ್ಮಸ್ವರೂಪ ಇರುವೆನು" ಇದು ಸ್ಮರಣವೆನಿಸುವದು. "ನಾನು ದೇಹ ಇರುವೆನು" ಇದು ವಿಸ್ಮರಣವೆನಿಸುವದು. ಸ್ಮರಣವು ವಿಶಾಲವಿರುವದು, ಪೂರ್ಣವಿರುವದು. ಆದರೆ ವಿಸ್ಮರಣವು ಆಕುಂಚಿತವಿರುವದು. ಅಪೂರ್ಣ ವ ಏಕದೇಶೀ ಏಕಾಂಗಿ ಇರುವದು. (೪೦) ಮುಂದಿನ ಪಾಠ ಕಲಿಯುವದು, ಆದರೆ ಹಿಂದಿನ ಪಾಠ ಮರೆಯುವದು. ಮುಂದೆ ಬೆಳಕು ಆದರೆ ಹಿಂದೆ ಕತ್ತಲೆ. ಮುಂದಿನದನ್ನು ಸ್ಮರಿಸುವದರಲ್ಲಿ ಹಿಂದಿನದನ್ನೆಲ್ಲ ಮರೆಯುವದು. ಮನುಷ್ಯರಲ್ಲಿ ಸ್ಮರಣ ವಿಸ್ಮರಣಗಳ ಮಿಶ್ರಣವಿದ್ದುದರಿಂದ ಮನುಷ್ಯರ ಅವಸ್ಥೆಯೂ ಕೂಡಾ ಹೀಗೆಯೇ ಇರುವದು. ಜ್ಞಾನ ಮತ್ತು ಅಜ್ಞಾನ ಇವುಗಳ ವಿಚಿತ್ರ ಮಿಶ್ರಣವು ಮನುಷ್ಯರಲ್ಲಿರುವದು ಕಂಡುಬರುತ್ತದೆ. (೧) ಸಮಜತೆ ಪಣ ಉಮಜತನಾಹಿ (೨) ಕಳತೆಪಣ ವಳತನಾಹಿ (೩) ಬೋಲತಾಪಿತೆ ಪಣಕೃತಿ ಘಡತನಾಹಿ ಇತ್ಯಾದಿ – ಪರಿಣಾಮವು ಮೇಲಿನ ಮಿಶ್ರಣದ್ದೇ ಇರುವದು. (೪೧) ತುರ್ಯಾ (ಜಾಗ್ರತಿ, ಸ್ವಪ್ನ ವ ಸುಷುಪ್ತಿ ಇದರ ಆಚೆಗೆ) ಇದು ಸಮಾಧಿ ರೂಪದ ನಾಲ್ಕನೆಯ ಅವಸ್ಥೆಯು. ಇದು ಜ್ಞಾನಮಯ ಅವಸ್ಥೆ ಇರುವದು. ಇದು ಸ್ಮರಣ ರೂಪದ್ದೆಂದು ತಿಳಿಯಬೇಕು. ಮತ್ತು ಸುಷುಪ್ತಿ ಇದು ಅಜ್ಞಾನಮಯ ಅವಸ್ಥೆ (ಜ್ಞಾನ ಶೂನ್ಯ ಜೀವಾವಸ್ಥೆ) ಇದ್ದು ವಿಸ್ಮರಣ ರೂಪದ್ದೆಂದು ತಿಳಿಯಬೇಕು. ಮನುಷ್ಯರ ಶರೀರದಲ್ಲಿ ಇವೆರಡೂ ಅವಸ್ಥೆಗಳು ಇರುವವು. (೪೨)

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹದಿನೈದನೆಯ ದಶಕದೊಳಗಿನ
"ಅಧೋರ್ಧ್ವ ನಿರೂಪಣ"ವೆಂಬ ಹೆಸರಿನ ಏಳನೆಯ ಸಮಾಸವು ಮುಗಿದುದು.

● ●

दशक पंचदश : समास अष्टम : सूक्ष्मजीव निरूपण (ನುಡಿ ೪೦)

**ದಶಕ ಪಂಚದಶ : ಸಮಾಸ ಅಷ್ಟಮ : ಸೂಕ್ಷ್ಮಜೀವ ನಿರೂಪಣ (ನುಡಿ ४०)**

॥ಶ್ರೀರಾಮ॥ರೇಣೂಹೂನ ಸೂಕ್ಷ್ಮ ಕಿಡೇ। ತ್ಯಾಚೇ ಆಯುಷ್ಯ ನಿಪಟ ಚಿ ಥೋಡೇ।
ಯುಕ್ತಿ ಬುದ್ಧಿ ತೇಣೇ ಚಿ ಪಾಡೇ । ತಯಾಮಧೇ ॥೧॥

ಐಸೆ ನಾನಾ ಜೀವ ಅಸತೀ । ಪಾಹೋ ಜಾತಾ ನ ದಿಸತೀ ।
ಅಂತಃಕರ್ಣ ಪಂಚಕಾಚೀ ಸ್ಥಿತೀ । ತೇಥೇ ಹೀ ಆಹೇ ॥೨॥

ತ್ಯಾಪುರತೇ ತ್ಯಾಚೇ ಜ್ಞಾನ । ವಿಷಯೆ ಇಂದ್ರಿಯೇ ಸಮಾನ ।
ಸೂಕ್ಷ್ಮ ಶರೀರೇ ವಿವರೋನ । ಪಾಹಾತೋ ಕೋಣ ॥೩॥

ತ್ಯಾಸ ಮುಂಗೀ ಮಹಾ ಥೋರ । ನೇಣೋ ಚಾಲಿಲಾ ಕುಂಜರ ।
ಮುಂಗೀಸ ಮುತಾಚಾ ಪೂರ । ಐಸೇ ಬೋಲತೀ ॥೪॥

## ದಶಕ ೧೫. ಸಮಾಸ ೮. ಸೂಕ್ಷ್ಮಜೀವ ನಿರೂಪಣ [ನುಡಿ ೪೦]

ವಿಶ್ವದಲ್ಲಿ ಅಚೇತನ ಮತ್ತು ಸಚೇತನ ಹೀಗೆ ಎರಡು ಪದಾರ್ಥಗಳು ಕಂಡುಬರುವವು. ಆದರೆ ಈ ಎರಡರ ಅಭ್ಯಾಸ ಮಾಡಲಿಕ್ಕೆ ಹತ್ತಿದೆವೆಂದರೆ, ಮನುಷ್ಯನು ತನ್ನ ಆಕುಂಚಿತ ಜಗತ್ತಿನಿಂದ ಅನಂತನ ಜಗತ್ತಿನಲ್ಲಿ ಹೋಗುವನು. ಅನಂತನ ಜಗತ್ತಿನಲ್ಲಿ ನಾವು ಇರುವಾಗ ನಮ್ಮ ಕ್ಷುದ್ರಅಹಂ ಅನ್ನುವದು ಬಾಜೂಕ್ಕೆ ಸರಿದು ಬಿಡುವದು. ಮತ್ತು ನಾವು ಕೆಲವು ಕಾಲವಾದರೂ ವಿಶಾಲತನದ ಅನುಭವ ಪಡೆಯುವೆವು. ಈ ಜಗತ್ತಿನಲ್ಲಿ ನಮ್ಮಂತೆಯೇ ಜೀವನ ನಡೆಸುವವರು ಕೋಟ್ಯಾವಧಿ ಜೀವರಿರುವರು. ಇದರ ಬಗ್ಗೆ ವಿಚಾರ ಮಾಡುತ್ತಾ ಮಾಡುತ್ತಾ ನಮ್ಮ ಮನಸ್ಸು ದೇಹ ಬುದ್ಧಿಯಿಂದ ಹೇಗೆ ಹೊರಗೆ ಬೀಳುವದು ಎಂಬ ಬಗ್ಗೆ ಈ ಸಮಾಸದಲ್ಲಿ ಸ್ವಲ್ಪದರಲ್ಲಿ ವರ್ಣಿಸಿದ್ದಾರೆ. ಶ್ರೀ ಸಮರ್ಥರು ಹೇಳುವದೇನಂದರೆ: ಈ ವಿಶ್ವದಲ್ಲಿ ಅನಂತ ಜೀವಿಗಳು ಇರುವವು. ಭೂಮಿಯ ಮೇಲೆ, ನೀರಿನಲ್ಲಿ, ಮತ್ತು ಆಕಾಶದಲ್ಲಿ ಅಲ್ಲಲ್ಲಿ ಜೀವ ಜಂತುಗಳು ಇರುವವು. ಇವುಗಳ ಪ್ರಕಾರ ರಂಗ, (ನಮೂನೆ) ರೀತಿ, ಏನೆಲ್ಲವು ಬಹಳ ವಿಲಕ್ಷಣವಿರುವವು. ಕೆಲವು ಜೀವಗಳು ನಮ್ಮ ಇಂದ್ರಿಯುಗಳಿಗೆ ಸಹ ಕಾಣದಷ್ಟು ಅತಿ ಸೂಕ್ಷ್ಮ ವಿರುವವು. ಇವುಗಳ ಜೀವನ ಮತ್ತು ಆಯುಷ್ಯ ಇವುಗಳ ಆಕಾರಕ್ಕೆ ಒಪ್ಪುವಷ್ಟೇ ಇರುವವು. ಇದರ ಹೊರತಾಗಿ ಕಲ್ಪನೆಯಿಂದ, ಶಾಪದಿಂದ, ಜಾದೂದಿಂದ ನಿರ್ಮಾಣವಾದ ಜೀವಗಳೂ ಅಸಂಖ್ಯ ಇರುವವು. ಜಗತ್ತಿನಲ್ಲಿರುವ ಯಾವತ್ತೂ ಜೀವಗಳ ಜ್ಞಾನ ಯಾರಿಗೂ ಇರುವದಿಲ್ಲ. ಆದ್ದರಿಂದ ಯಾರೇ ಆದರೂ ಅಲ್ಪಜ್ಞಾನದಿಂದ ಮೂರ್ಖ ರಂತೆ ನಡೆಯುವವರಾಗಬಾರದು. ಅಂತರಾತ್ಮಾ ಅಥವಾ ಭಗವಂತನೊಬ್ಬ ಮಾತ್ರ ನಿಜವಾದ ಜ್ಞಾನಿಯಾಗಿರುವನು. ಭಗವಂತನ ಈ ವಿಸ್ತಾರವು ಮನಸ್ಸಿಗೆ ಗೊತ್ತಾಗುವದಿಲ್ಲ. ಆದ್ದರಿಂದ ಮನುಷ್ಯನು ದೇಹದ ಅಹಂತಾ ಹಿಡಿಯ ಬಾರದು. ಇದನ್ನು ಒಂದು ಕಡೆಗೆ ಸರಿಸಬೇಕು. ಮತ್ತು ದೇವರ ಕರ್ತೃತ್ವವನ್ನು ಕೌತುಕದಿಂದ ನೋಡಬೇಕು. ಈ ಪ್ರಕಾರ ವಿವೇಕದಿಂದ ಭಗವಂತನನ್ನು ಹುಡುಕುವಂಥ ಉತ್ತಮ ಮಾರ್ಗ ಇನ್ನೊಂದಿಲ್ಲ.

### ದಶಕ ೧೫. ಸಮಾಸ ೮. ಸೂಕ್ಷ್ಮಜೀವ ನಿರೂಪಣ (ನುಡಿ ೪೦)

ಜಗತ್ತಿನಲ್ಲಿ ಅನಂತ ಪ್ರಕಾರದ ಜೀವಗಳು ಇರುವವು. ಇವುಗಳ ಬಗ್ಗೆ ಮತ್ತು ಇವುಗಳ ಜೀವನದ ಬಗ್ಗೆ ಕಿಂಚಿತ್ ದಿಗ್ದರ್ಶನ ಮಾಡುತ್ತಾರೆ: ಧೂಳೀ ಕಣಕ್ಕಿಂತ ಅತ್ಯಂತ, ಸೂಕ್ಷ್ಮವಾಗಿರುವ ಹುಳು, ಜಂತು, ಕ್ರಿಮಿ, ಕೀಟ ಇರುವವು. ಇವುಗಳ ಆಕಾರ ಹೇಗೆ ಹೇಗೆ ಅತಿ ಸೂಕ್ಷ್ಮವಾದದ್ದೋ ಅದರಂತೆ ಅವುಗಳ ಆಯುಷ್ಯವೂ ಕೂಡಾ ಅಲ್ಪಕಾಲದ್ದಾಗಿರುವದು. ಇವುಗಳ ಯುಕ್ತಿ ಮತ್ತು ಬುದ್ಧಿ ಇವೂ ಸಹಿತ ಅಲ್ಪವಿರುವವು. (೧) ಇಂಥ ಅನೇಕ ಪ್ರಕಾರದ ಜೀವಗಳು ಇರುವವು. ಸಾದಾ ಕಣ್ಣುಗಳಿಗೆ ಇವುಗಳಲ್ಲಿ ಕೆಲವು ಎಷ್ಟೂ ಕಾಣಿಸುವದಿಲ್ಲ. ಆದರೆ ಇವು ಗಳಲ್ಲಿಯೂ ಕೂಡಾ ಅಂತಃಕರಣ, ಮನ ಬುದ್ಧಿ, ಚಿತ್ತ, ಮತ್ತು ಅಹಂಕಾರ ಈ ಐದು ಪಂಚಕಗಳ ಸೂಕ್ಷ್ಮ ಅಸ್ತಿತ್ವ ಇರುವದು (೨) ಈ ಸೂಕ್ಷ್ಮ ಜಂತುಗಳ ಜೀವ ಎಷ್ಟೊಂದು ಅಲ್ಪವಿರುವದೋ ಇದಕ್ಕೆ ತಕ್ಕಷ್ಟೇ ಜ್ಞಾನ ವಿರುವದು. ಇವುಗಳ ಇಂದ್ರಿಯುಗಳು ಮತ್ತು ಇಂದ್ರಿಯ ಭೋಗ ಇವೂ ಕೂಡಾ ಅಷ್ಟಷ್ಟೇ ಇರುವವು. ಆದರೆ ಈ ಅತ್ಯಂತ ಸೂಕ್ಷ್ಮ ಶರೀರದ ಬಗ್ಗೆ ಯಾರೂ ಚೆನ್ನಾಗಿ ವಿವರಿಸಿ ತಿಳಿದುಕೊಳ್ಳುವದಿಲ್ಲ. (೩) ಈ ಜಂತುಗಳು ಅತ್ಯಂತ ಸೂಕ್ಷ್ಮವಿರುವವು. ಇವುಗಳಿಗೆ ಇರುವೆಯೂ ಕೂಡಾ ಬಹಳ ಪ್ರಚಂಡ ಮತ್ತು ದೊಡ್ಡದು ಇರುವದೆಂದು ಅನಿಸು ವದು. ಇವಕ್ಕೆ ಇರುವೆಯೂ ಒಂದು ಆನೆಯು ಹೊರಟಂತೆ ಮತ್ತು ಅದರ ಆಕಾರವೂ ಕೂಡಾ ಬಹಳ ದೊಡ್ಡದಾಗಿ ಕಾಣುವದು. ಆದರೆ ನಮ್ಮ ದೃಷ್ಟಿಯಲ್ಲಿ ಇರುವೆಯು ಬಹಳ ಕ್ಷುದ್ರವೆನಿಸುವದು. ಇದರ ಬಗ್ಗೆ ಒಂದು ಗಾದೆಯು ಹೀಗಿದೆ : "ಮನುಷ್ಯನ ಮೂತ್ರವು ಇರುವೆಗೆ ಒಂದು ಮಹಾಪೂರದಂತೆ" [ಇರುವೆಗೆ ಮೂತ್ರ ಪ್ರವಾಹವೇ ದೊಡ್ಡದು ಅನಿಸುವದು] ಎಂದು ಇರುವದು. (೪)

ತೇ ಮುಂಗೀಸಮಾನ ಶರೀರೇ । ಉದಂಡ ಅಸತೀ ಲಾಹಾನಥೋರೇ ।
ಸಮಸ್ತಾಮಧ್ಯೇ ಜೀವೇಶ್ವರೇ । ವಸ್ತಿ ಕಿಜೇ ॥೫॥

ಐಸಿಯಾ ಕಿಡ್ಯಾಂಚಾ ಸಂಭಾರ । ಉದಂಡ ದಾಟಲಾ ವಿಸ್ತಾರ ।
ಅತ್ಯಂತ ಸಾಕ್ಷಪಿೀ ಜೋ ನರ । ತೋ ವಿವರೋನ ಪಾಹೇ ॥೬॥

ನಾನಾ ನಕ್ಷತ್ರೀ ನಾನಾ ಕಿಡೆ । ತ್ಯಾಸ ಭಾಸತೀ ಪರ್ವತಾಯೇವಢೆ ।
ಆಯುಷ್ಯ ಹಿ ತೇಣೇ ಚಿ ಪಾಡೇ । ಉದಂಡ ವಾಟೆ ॥೭॥

ಪಕ್ಷಾಯೇವಢೇ ಲಾಹಾನ ನಾಹೀ । ಪಕ್ಷಾಯೇವಢೇ ಥೋರ ನಾಹೀ ।
ಸರ್ಪ ಆಣಿ ಮಥ ಪಾಹೀ । ಯೇಣೇ ಚಿ ಪಾಡೇ ॥೮॥

ಮುಂಗೀಪಾಸೂನ ಥೋರ ಥೋರೇ । ಚಢತೀ ವಾಢತೀ ಶರೀರೇ ।
ತ್ಯಾಚೀ ನಿರ್ಧಾರಿತಾ ಅಂತರೇ । ಕಳೋ ಯೇತೀ ॥೯॥

ನಾನಾ ವರ್ಣ ನಾನಾ ರಂಗ । ನಾನಾ ಜೀವನಾಚೆ ತರಂಗ ।
ಯೇಕ ಸುರಂಗ ಯೇಕ ವಿರಂಗ । ಕಿತೀ ವ್ಹಣೌನೀ ಸಾಂಗಾವೇ ॥೧೦॥

ಯೇಕೇ ಸಕುಮಾರೇ ಯೇಕೇ ಕಠೋರೇ । ನಿರ್ಮಾಣ ಕೇಲೀ ಜಗದೇಶ್ವರೇ ।
ಸುವರ್ಣಾಸಾರಿಖೀ ಶರೀರೇ । ದೈದಿಪ್ಯಮಾನೇ ॥೧೧॥

ಶರೀರಭೇದೇ ಆಹಾರಭೇದೇ । ವಾಚಾಭೇದೇ । ಗುಣಭೇದೇ ।
ಅಂತರೀ ವಸಿಜೇ ಅಭೇದೇ। ಯೇಕರೂಪೇ ॥೧೨॥

ಯೇಕ ತ್ರಾಸಕೇ ಯೇಕ ಮಾರಕೇ । ಪಾಹೋ ಜಾತಾ ನಾನಾ ಕೌತುಕೇ ।
ಕಿತೀಯೇಕ ಅನೋಲಿಕೇ । ಸೃಷ್ಟೀಮಧ್ಯೇ ॥೧೩॥

ಐಸೀ ಅವಘೀ ವಿವರೋನ ಪಾಹೇ । ಐಸಾ ಪ್ರಾಣೀ ಕೋಣ ಆಹೇ ।
ಆಪಲ್ಯಾಪುರತೇ ಜಾಣೋನ ರಾಹೇ । ಕಿಂಚಿತಮಾತ್ರ ॥೧೪॥

ನವಖಂಡ ಹೇ ವಸುಂಧರಾ । ಸಪ್ತಸಾಗರಾಂಚಾ ಫೇರಾ ।
ಬ್ರಹ್ಮಾಂಡಾ ಬಾಹೇರೀಲ ನೀರಾ । ಕೋಣ ಪಾಹೇ ॥೧೫॥

ಇರುವೆಯು ಗಾತ್ರದ ಸಣ್ಣ ಪುಟ್ಟ ಜೀವಗಳು ಅಸಂಖ್ಯವಿರುವವು. ಇವೆಲ್ಲವುಗಳಲ್ಲಿಯೂ ಜೀವದ ಮಾಲಕನಾದ ಅಂತರಾತ್ಮಾ ವಾಸಮಾಡಿರುವನು. (೫) ಒಟ್ಟಿನಲ್ಲಿ ಇಂಥ ಹುಳುಗಳ ಸಂಖ್ಯೆಯು ಬಹಳ ದೊಡ್ಡದಿರುವದು. ಎಲ್ಲ ಕಡೆಗೂ ಇವು ದಟ್ಟವಾಗಿ ಪಸರಿಸಿರುವವು. ಆದರೆ ಯಾವನು ಅತಿಶಯ ಕಷ್ಟಪಡುವವ ಮತ್ತು ಜಿಜ್ಞಾಸು ಚಿಕಿತ್ಸಕನಿರುವನೋ ಅವನು ಮಾತ್ರ ಇವುಗಳ ನಿರೀಕ್ಷಣ ಮಾಡಿ ಜ್ಞಾನ ಸಂಪಾದನೆಯನ್ನು ಮಾಡಿಕೊಳ್ಳುವನು. (೬) ಬೇರೆ ಬೇರೆ ನಕ್ಷತ್ರಗಳ ಮೇಲೆ ಬೇರೆ ಬೇರೆ ಪ್ರಕಾರದ ಕ್ರಿಮಿ, ಜಂತುಗಳು ಇರುವವು. ಮನುಷ್ಯನಿಗೆ ಇವುಗಳ ಕಲ್ಪನೆಯು ಬರುವದಿಲ್ಲ. ಪೃಥ್ವಿಯ ಮೇಲಿನ ಕ್ರಿಮಿ,ಜಂತು, ಇರುವೆ ಇವುಗಳ ಮಾನದಿಂದ ಅವು ಪರ್ವತದ ಸಮಾನವಾಗಿರುವವೆಂದು ಅನಿಸುವದು. ಇವುಗಳ ಆಳತೆ ಆಕಾರಗಳ ಪ್ರಕಾರ ಇವುಗಳ ಆಯುಷ್ಯವೂ ಕೂಡಾ ದೀರ್ಘವಿರುವದೆಂದು ಅನಿಸುವದು. (೭) ಪಕ್ಷಿಗಳ ಸಮುದಾಯದಲ್ಲಿ ಕೆಲವೊಂದು ಬಹಳ ಚಿಕ್ಕವೂ ಇರುವವು. ಮತ್ತು ಕೆಲವು ಅತಿಶಯ ದೊಡ್ಡವೂ ಪ್ರಚಂಡವಾದ ಆಕಾರದವೂ ಇರುವವು. ಸರ್ಪ ಮತ್ತು ಮೀನ ಇವು ಸಹಿತ ಅತ್ಯಂತ ಚಿಕ್ಕಆಕಾರದಿಂದ ಅತಿಶಯ ಪ್ರಚಂಡಆಕಾರದವೂ ಕೂಡಾ ಇರುವವು. (೮) ಇರುವೆ ಅತ್ಯಂತ ಸಣ್ಣಜೀವಿಯು. ಇದರಿಂದ ಆರಂಭಮಾಡಿ ನೋಡಿದರೆ ಮುಂದಿನ ಪ್ರಾಣಿಗಳ ದೇಹ ಒಂದಕ್ಕಿಂತ ಒಂದು ದೊಡ್ಡವಿರುವದು. ನಾವು ಸರಿಯಾಗಿ ನಿರೀಕ್ಷಣೆ ಮಾಡಿ ವಿಚಾರ ಮಾಡಿದ್ದಾದರೆ ಇವುಗಳ ಮನೋರಚನೆಯು ತಿಳಿದು ಬರುವದು. ಒಂದೇ ಆತ್ಮವು ಸರ್ವತ್ರದಲ್ಲಿರುವದು ಕಂಡುಬರುವದು. (೯) ಪ್ರಾಣಿಗಳಲ್ಲಿ ಅನೇಕ ತರಹದ ರಂಗು ಅನೇಕ ತರಹದ ವರ್ಣ (ಜಾತಿ) ಧ್ವನಿ ಭೇದ, ಇವುಗಳ ಜೀವನದ ನಾನಾ ತರಂಗ ಅಥವಾ ಚಲನವಲನ, ಕೆಲವು ಪ್ರಾಣಿಗಳ ಬಣ್ಣ ಸುಂದರ. ಆದರೆ ಕೆಲವು ಪ್ರಾಣಿಗಳ ಬಣ್ಣ ಅತ್ಯಂತ ಹೊಲಸಾದ ಕನಿಷ್ಠ ತರಗತಿಯದು ಇರುವದು. ಈ ರೀತಿಯ ವಿವರವನ್ನು ಎಷ್ಟೆಂದು ಹೇಳುವದು? ಅರ್ಥಾತ್ ಶಕ್ಯವಿಲ್ಲ. [೧೦] ಕೆಲವು ಪ್ರಾಣಿಗಳ ಶರೀರ ದೊಡ್ಡದು. ಬಹು ಮೃದು (ಮೆತ್ತಗೆ) ಹಾಗೂ ನಾಜೂಕು. ಇರುವದಾದರೆ ಕೆಲವು ಪ್ರಾಣಿಗಳ ಶರೀರ, ಕಠಿಣ. ವ ಕಡಕ [ಬಿರುಸು] ಇರುವದು ಆದರೆ ಇವೆಲ್ಲ ಪ್ರಾಣಿಗಳನ್ನು ಜಗದೀಶ್ವರನು ಅಥವಾ ಅಂತರಾತ್ಮನೇ ನಿರ್ಮಾಣ ಮಾಡಿರುವನು. ಕೆಲವು ಪ್ರಾಣಿಗಳ ದೇಹವು ಬಂಗಾರ ಬಣ್ಣ [ಸೊನೇರಿ ಬಣ್ಣ] ದಂತೆ ಥಳಥಳ ಹೊಳೆಯುವದು. [೧೧] ಬಹಿರಂಗದಲ್ಲಿ ಅನೇಕ ಭೇದಗಳು ಕಂಡರೂ ಕೂಡಾ ಪ್ರತ್ಯೇಕ ಪ್ರಾಣಿಗಳ ಅಂತರ್ಯಾಮದಲ್ಲಿ ಅಂತರಾತ್ಮಾ ಇರುವನು. ಅರ್ಥಾತ್ ಅವನ-ಆಟವೇ ಇದಾಗಿರುವದು. ಮನುಷ್ಯನು ವಿಶಾಲ ಮತ್ತು ಅನಂತ ಜೀವ ಸೃಷ್ಟಿಯ ಕಡೆಗೆ ನೋಡುವದೇ ಇಲ್ಲ. ಕೇವಲ ತನ್ನದನ್ನಷ್ಟೇ ತಾನು ನೋಡಿಕೊಂಡು ಜೀವಿಸುವನು. ಪೃಥ್ವಿಯ ಮೇಲೆ, ನೀರಿನಲ್ಲಿ ಮತ್ತು ಆಕಾಶದಲ್ಲಿ ಪ್ರಾಣಿಗಳು ಇದ್ದೇ ಇರುತ್ತವೆ. ಆದರೆ ಕಲ್ಪನೆಯಿಂದ, ಶಾಪದಿಂದ, ಮತ್ತು ಜಾದೂದಿಂದ ನಿರ್ಮಾಣ ಮಾಡಿದ ಪ್ರಾಣಿಗಳೂ ಕೂಡಾ ಇರುವವು. ನಾವು ಯಾವ ಪ್ರಾಣಿಗಳನ್ನು ನೋಡುವೆವೋ ಅವುಗಳಲ್ಲಿ ತಿನ್ನುಣ್ಣುವ ಮತ್ತು ಕುಡಿಯುವ, ಶರೀರ ರಚನೆಯು, ಧ್ವನಿಯು ಮತ್ತು ಗುಣಗಳಲ್ಲಿ ಭೇದ ಕಾಣುವದು. ಇದರಲ್ಲಿ ಏನೂ ಸಂಶಯವಿಲ್ಲ. ಆದರೆ ಪ್ರತಿಯೊಂದು ಪ್ರಾಣಿಯಲ್ಲಿ ಇರುವಂಥ ಅಂತರಾತ್ಮನಲ್ಲಿ ಮಾತ್ರ ಎಷ್ಟೂ ಭೇದವಿಲ್ಲ. ಇವನು ಒಬ್ಬನೇ ಒಬ್ಬನು. ಎಲ್ಲದರಲ್ಲಿ ತುಂಬಿರುವನು, (ಬೇರೆಯೂ ಇರುವನು). [೧೨] ಒಂದು ಪ್ರಾಣಿ ಸಿಡುಕು ಸ್ವಭಾವದಿದ್ದರೆ ಇನ್ನೊಂದು ಮಾರಕ [ಹಾಯುವ, ಇರಿಯುವ] ಸ್ವಭಾವದ್ದು ಇರುವದು. ನಾವು ಚನ್ನಾಗಿ ನಿರೀಕ್ಷಣೆಯನ್ನು ಮಾಡಿದ್ದಾದರೆ ಈ ಸೃಷ್ಟಿಯಲ್ಲಿ ಇಂಥ ಅನೇಕ ಪ್ರಕಾರದ ಮತ್ತು ಅಮೌಲ್ಯವಾದ ಹಾಗೂ ಆಶ್ಚರ್ಯಕರವೆನಿಸುವಂಥವುಗಳು ನೋಡಲಿಕ್ಕೆ ಸಿಗುವವು. [೧೩] ಸೃಷ್ಟಿಯಲ್ಲಿಯ ಈ ಅಮೌಲ್ಯ ಕೌತುಕಗಳನ್ನು ಚನ್ನಾಗಿ ನಿರೀಕ್ಷಿಸುವಂಥವರಾರೂ ಕಾಣಬರುವದಿಲ್ಲ. ಎಲ್ಲರೂ ತಮ್ಮ ತಮ್ಮ ಮಟ್ಟಿಗೆ ಕೇವಲ ಅಲ್ಪ ಸ್ವಲ್ಪ ಜ್ಞಾನವನ್ನು ಪಡೆಯುವರು. ಮತ್ತು ಜೀವನ ನಡೆಯಿಸುವರು. (೧೪) ನವಖಂಡ [ಒಂಭತ್ತು ಭಾಗ] ಅಂದರೇ (೧) ವಸುಂಧರಾ = ಇಳಾವೃತ್ತ (೨) ಭದ್ರಾಶ್ವ (೩) ಹರಿವರ್ಷ (೪) ಕಿಂಪುರುಷ (೫) ಕೇತುಮಾಲ (೬) ರಮ್ಯಕ (೭) ಭರತ (೮) ಹಿರಣ್ಮಯ (೯) ಉತ್ತರ ಕುರು. ಇವೆಲ್ಲ ಕೂಡಿ ಪೃಥ್ವಿಯ ವಿಸ್ತಾರವಾಗಿದೆ. ಇದರ ಸುತ್ತು ಮುತ್ತು ಸಪ್ತ [ಏಳು] ಸಮುದ್ರಗಳ ಸುತ್ತರಿಕೆ (ಸುತ್ತು ಹಾಕು) ಇರುವದು. ಆದರೆ ಬ್ರಹ್ಮಾಂಡದ ಹೊರಗೆ ಇರುವ ನೀರನ್ನು ಯಾರೂ ನೋಡಿಲ್ಲ. (೧೫)

ತ್ಯಾ ನೀರಾಮಧ್ಯೇ ಜೀವ ಅಸತೀ । ಪಾಹೋ ಜಾತಾ ಅಸಂಖ್ಯಾತೀ।
ತ್ಯಾ ವಿಶಾಳ ಜೀವಾಂಚೀ ಸ್ಥಿತೀ । ಕೋಣ ಜಾಣೇ ॥೧೬॥

ಜೇಥೇ ಜೀವನ ತೇಥೇ ಜೀವ । ಹಾ ಉತ್ಪತ್ತೀಚಾ ಸ್ವಭಾವ ।
ಪಾಹಾತಾ ಯಾಚಾ ಅಭಿಪ್ರಾವ । ಉದಂಡ ಅಸೇ ॥೧೭॥

ಪೃಥ್ವೀ ಗರ್ಭೀ ನಾನಾ ನೀರೇ । ತ್ಯಾ ನೀರಾಮಧೇ ಶರೀರೇ ।
ನಾನಾ ಜಿನಸ ಲಾಹಾನಥೋರೇ । ಕೋಣ ಜಾಣೇ ॥೧೮॥

ಯೇಕ ಪ್ರಾಣೀ ಅಂತರಿಕ್ಷ ಅಸತೀ । ತೇಹೀ ನಾಹೀ ದೇಖಿಲೀ ಕ್ಷಿತೀ ।
ವರೀಚ್ಯಾವರೀ ಉಡೋನ ಜಾತೀ । ಪಕ್ಷ ಫುಟಲ್ಯಾನಂತರೇ ॥೧೯॥

ನಾನಾ ಖೇಚರೇ ಆಣಿ ಭೂಚರೇ । ನಾನಾ ವನಚರೇ ಆಣಿ ಜಳಚರೇ ।
ಚೌರ್ಯ್ಯಾಸಿ ಯೋನಿ ಪ್ರಕಾರೇ । ಕೋಣಜಾಣೇ ॥೨೦॥

ಉಷ್ಣ ತೇಜ ವೇಗಳೇ ಕರೂನೀ । ಜೇಥೇ ತೇಥೇ ಜೀವಯೋನೀ ।
ಕಲ್ಪನೇ ಪಾಸುನೀ ಹೋತೀ ಪ್ರಾಣೀ । ಕೋಣ ಜಾಣೇ ॥೨೧॥

ಯೇಕ ನಾನಾ ಸಾಮರ್ಥ್ಯೇ ಕೇಲೇ । ಯೇಕ ಇಚ್ಛೇಪಾಸೂನ ಜಾಲೇ ।
ಯೇಕ ಶಬ್ದಾಸರಿಸೇ ಪಾವಲೇ । ಶ್ರಾಪದೇಹ ॥೨೨॥

ಯೇಕ ದೇಹ ಬಾಜೀಗರೀಚೇ । ಯೇಕ ದೇಹ ವೋಡಂಬರೀಚೇ ।
ಯೇಕ ದೇಹ ದೇವತಾಂಚೇ । ನಾನಾ ಪ್ರಕಾರೇ ॥೨೩॥

ಯೇಕ ಕ್ರೋಧಾ ಪಾಸೂನ ಜಾಲೇ । ಯೇಕ ತಪಾಪಾಸೂನ ಜನ್ಮಲೇ ।
ಯೇಕ ಉಶ್ರಾಪೇ ಪಾವಲೇ । ಪೂರ್ವ ದೇಹ ॥೨೪॥

ಐಸೇ ಭಗವಂತಾಚೇ ಕರಣೇ । ಕಿತೀ ವ್ಹ್ಮಣೌನ ಸಾಂಗಣೇ ।
ವಿಚಿತ್ರ ಮಾಯೇಚ್ಯಾ ಗುಣೇ । ಹೋತ ಜಾತೇ ॥೨೫॥

ನಾನಾ ಅವಘಡ ಕರಣೇ ಕೇಲೀ । ಕೋಣೇ ದೇಖಿಲೀ ನಾ ಐಕಿಲೀ ।
ವಿಚಿತ್ರ ಕಳಾ ಸಮಜಲೀ । ಪಾಹಿಜೆ ಸರ್ವ್ವೆ ॥೨೬॥

ಈ ನೀರಿನಲ್ಲಿ ಅಸಂಖ್ಯ ಜೀವಿಗಳು ಇರುವವು. ಅದರಲ್ಲಿಯ ಪ್ರಚಂಡ ಹಾಗೂ ವಿಶಾಲ ಜೀವಗಳ ಸ್ಥಿತಿಯು ಯಾರಿಗೂ ಗೊತ್ತಿಲ್ಲ. [೧೬] ಎಲ್ಲಿ ನೀರು ಇರುವದೋ ಅಲ್ಲಿ ಜೀವಗಳು ಇರುವವು. ಇದು ಉತ್ಪತ್ತಿಯ ಮೂಲ ಸ್ವಭಾವವಿರುವದು. ಈ ತತ್ವದ ರಹಸ್ಯ ಬಹಳ ಆಳವಾಗಿರುವದು. [೧೭] ಪೃಥ್ವಿಯ ಹೊಟ್ಟೆಯಲ್ಲಿ ಅನೇಕ ಪ್ರಕಾರದ ನೀರು ಇರುವದು. ಈ ನೀರಿನಲ್ಲಿ ಸಹ ಜೀವಗಳು ಇರುವವು. ಅನೇಕ ಪ್ರಕಾರದ ಚಿಕ್ಕ ದೊಡ್ಡ ಪದಾರ್ಥಗಳೂ ಇರುವವು. ಇವುಗಳ ಜ್ಞಾನ ಯಾರಿಗೂ ಇರುವದಿಲ್ಲ. (೧೮) ಕೆಲವು ಪ್ರಾಣಿಗಳು ಆಕಾಶದಲ್ಲಿಯೇ ಇರುವವು. ಅವು ಎಂದೂ ಪೃಥ್ವಿಯನ್ನು ನೋಡಿರುವದಿಲ್ಲ. ಮೇಲೆ ಆಕಾಶದಲ್ಲಿಯೇ ಅವುಗಳಿಗೆ ರೆಕ್ಕೆಗಳು ಉತ್ಪನ್ನವಾಗುವವು. ಮತ್ತು ಇವು ಆಮೇಲೆ ಮೇಲಿನಿಂದಲೇ ಮೇಲಕ್ಕೆ ಹಾರಿ ಹೋಗುವವು. (೧೯) ಎಂಭತ್ನಾಲ್ಕು ಲಕ್ಷ ಜೀವರಾಶಿಗಳಲ್ಲಿಯ ಅನೇಕ ಪ್ರಕಾರದವು ಆಕಾಶದಲ್ಲಿರುವಂಥವು, ಭೂಮಿಯ ಮೇಲೆ ಇರುವಂಥವು, ಅರಣ್ಯದಲ್ಲಿ ಜೀವಿಸುವಂಥವು, ಮತ್ತು ನೀರಿನಲ್ಲಿ ಇರುವ ಜೀವ ಪ್ರಾಣಿಗಳು ಇವೆಲ್ಲವುಗಳ ಜ್ಞಾನವು ಯಾರಿಗೂ ಇರುವದಿಲ್ಲ.(೨೦) ಅತಿ ಉಷ್ಣ- ಅಗ್ನಿ ಇವನ್ನು ಬಿಟ್ಟು ಉಳಿದೆಲ್ಲ ಕಡೆಗೂ ಜೀವ ಪ್ರಾಣಿಗಳು ಕಂಡುಬರುವವು. ಇಷ್ಟೇ ಅಲ್ಲ, ಕಲ್ಪನೆಯಿಂದ ಕೂಡಾ (ಸನಕಾದಿ ಮಾನಸ ಪುತ್ರರು) ಪ್ರಾಣಿಗಳು ನಿರ್ಮಾಣವಾಗುವವು. ಇದರ ಜ್ಞಾನ ಯಾರಿಗೂ ಇರುವದಿಲ್ಲ. [೨೧] ಇದರಂತೆಯೇ ಕೆಲವೊಂದು ಪ್ರಾಣಿಗಳು ಸಾಮರ್ಥ್ಯದಿಂದ ಅರ್ಥಾತ್ ಸಿದ್ಧಿಯಿಂದ ಕೂಡಾ (ವಿಶ್ವಾಮಿತ್ರ- ಪ್ರತಿ ಸೃಷ್ಟಿ) ನಿರ್ಮಾಣವಾಗುವವು. ಕೆಲವು ಇಚ್ಛಾ ಮಾತ್ರದಿಂದ ಆಗುವವು. (ಗೋರಕ್ಷಕನು ಭರ್ತೃಹರಿಗೆ ಅನೇಕ ಪಿಂಗಲಾ ತೋರಿಸಿದ್ದು). ಕೆಲವು ಶಾಪದ ಶಬ್ದೋಚ್ಚಾರದಿಂದ ಕೆಲವು ಶಾಪದೇಹಿಗಳಾಗುವವು.(೨೨) ಕೆಲವು ದೇಹಗಳು ಮನುಷ್ಯ ವಿದ್ಯೆಯಾದ ಜಾದೂದಿಂದ ನಿರ್ಮಾಣವಾದವುಗಳು ಇರುವವು. [ಆಟ ಮುಗಿಯುವ ವರೆಗೆ ಜೀವಂತವಿರುವವು]. ಕೆಲವು ದೇಹಗಳು ಓಡಂಬರಿಯವು ಅಂದರೆ ರಾಕ್ಷಸ ಮಾಯಾ ವಿದ್ಯೆಯವು. [ರಾವಣನು ಯುದ್ಧ ಕಾಲದಲ್ಲಿ ಮಾಯಾ ಸೀತೆಯನ್ನು ಮಾಡಿದ್ದನು] ಇರುವವು. ಇನ್ನು ಕೆಲವು ದೇವತೆಗಳು ಅವತಾರ ತಾಳಿ-ಬಂದದ್ದು [ಕೃಷ್ಣನು ಕರ್ಣನಲ್ಲಿಗೆ ಬ್ರಾಹ್ಮಣ ವೇಷದಿಂದ ಹೋದದ್ದು, ಮತ್ತು ದೇವರು ಅನೇಕ ಅವತಾರ ತಾಳಿದ್ದು ಇದಕ್ಕೆ ಉದಾಹರಣೆ ಇರುವದು] (೨೩) ಕೆಲವು ದೇಹ ಕ್ರೋಧದಿಂದ ಜನ್ಮ ತಳೆಯುವವು. (ಶಿವನ ಸಿಟ್ಟಿನಿಂದ-ಜಟೆ ಅಪ್ಪಳಿಸಿದಾಗ ವೀರಭದ್ರ ಹುಟ್ಟಿದನು ) ಕೆಲವು ದೇಹಗಳು ತಪಶ್ಚರ್ಯದಿಂದ ಜನ್ಮ ತಾಳುವವು. ಶ್ರೀ ಶಂಕರರ ಶಿಷ್ಯ ಪದ್ಮಪಾದರು ತಪಸ್ಸಿನ ಬಲದಿಂದ ತಾವೇ ನರಸಿಂಹ ಸ್ವರೂಪರಾದರು. ಕೆಲವು ದೇಹ ಉಃಶಾಪದಿಂದ ಶಾಪ ದೇಹ ತ್ಯಜಿಸಿ ಮೂಲ ದೇಹ ಧಾರಣ ಮಾಡುವರು. [ಗುರು ಚರಿತ್ರೆಯಲ್ಲಿಯ ರಾಜಾ ಮಿತ್ರಸೇನನು, ಕಲ್ಮಾಷ ಪಾದನು ರಾಕ್ಷಸರಾದರು. ಪುನಃ ಉಶ್ಶಾಪದಿಂದ ಮತ್ತೆ ಮನುಷ್ಯರಾದರು. ಇದು ವಶಿಷ್ಠರ ಶಾಪದಿಂದ ಆದದ್ದು](೨೪) ಭಗವಂತನ ಕರ್ತೃತ್ವವು ಬಹು ವಿಲಕ್ಷಣವಿರುವದು. ಅದನ್ನೆಲ್ಲ ವರ್ಣನೆ ಮಾಡಲು ಶಕ್ಯವಿಲ್ಲ. ಮಾಯಾ ಬಹಳ ವಿಚಿತ್ರವಿರುವದು. ಇವಳ ಯೋಗದಿಂದ ಇಷ್ಟೆಲ್ಲವೂ ಆಗುವದು. (೨೫) ಮಾಯೆಯ ಯಾವತ್ತೂ ಕಾರ್ಯ ನಿಜವಾಗಿಯೂ ಮಾನವೀ ಬುದ್ಧಿಗೆ ನಿಲುಕದ್ದಾಗಿರುವದು. ಒಬ್ಬ ಅಂತರಾತ್ಮನಿಗೆ ಅಂದರೆ ಭಗವಂತನಿಗೆ ಮಾತ್ರ ಈ ಎಲ್ಲ ವಿಷಯಗಳ ಬಗ್ಗೆ ನಿಜವಾದ ಜ್ಞಾನವಿರುವದು. ಆದರೆ ಅಲ್ಪ ಸ್ವಲ್ಪ ಜ್ಞಾನವಾದ ಕೂಡಲೇ ಅಹಂತಾ ಪಾಪಿಣಿಯು ಮನುಷ್ಯನಿಗೆ ಬಡಿದುಕೊಳ್ಳುವದು. ಏನು ಬೇಕಾದರೂ ಮಾಡಿರಿ. ಆದರೆ ಈ ಅಹಂತಾ ರೂಪದ ಪಾಪಿಣಿಯನ್ನು ಸಮೂಲವಾಗಿ ನಾಶ ಮಾಡಬೇಕು. ಮತ್ತು ನೀವು ಮನಸಾ ಭಗವಂತನನ್ನು ಶೋಧಮಾಡಬೇಕು. ಇದೇ ಸರ್ವೋತ್ತಮವಾದ ಮಾರ್ಗವಿರುವದು. ಮಾಯೆಯು ಇಂಥ ಒಂದು ಕಠಿಣವಾದ ಜಾದು ಅಥವಾ ಅದ್ಭುತವನ್ನು ಮಾಡಿ ಇಟ್ಟಿದ್ದಾಳೆ. ಇಂಥದನ್ನು ಯಾರೂ ಎಂದೂ ನೋಡಿಲ್ಲ. ಮತ್ತು ಯಾರೂ ಕೇಳಿಲ್ಲ. ಇದು ಮಾಯೆಯ ವಿಲಕ್ಷಣ ಕಲಾ ಇರುವದು. ಇದನ್ನು ಸಂಪೂರ್ಣವಾಗಿ ತಿಳಿದುಕೊಳ್ಳಬೇಕು. (೨೬)

ಥೋಡೇ ಬಹುತ ಸಮಜಲೇ । ಪೋಟಾಪುರತೀ ವಿದ್ಯಾ ಸಿಕಲೇ ।
ಪ್ರಾಣೀ ಉಗೇ ಚ ಗರ್ವೇ ಗೇಲೇ । ಮೀ ಜ್ಞಾತಾ ಮ್ಹಣೋನೀ ॥೧೭॥

ಜ್ಞಾನೀ ಯೇಕ ಅಂತರಾತ್ಮಾ । ಸರ್ವಾಮಧೇ ಸರ್ವಾತ್ಮಾ ।
ತ್ಯಾಚಾ ಕಳಾವಯಾ ಮಹಿಮಾ । ಬುದ್ಧಿ ಕೈಚೀ ॥೧೮॥

ಸಪ್ತಕಂಚುಕ ಬ್ರಹ್ಮಾಂಡ । ತ್ಯಾತ ಸಪ್ತಕಂಚುಕ ಪಿಂಡ ।
ತ್ಯಾ ಪಿಂಡಾಮಧೇ ಉದಂಡ । ಪ್ರಾಣೀ ಅಸತೀ ॥೧೯॥

ಆಪಲ್ಯಾ ದೇಹಾತೀಲ ನ ಕಳೇ । ಮಾ ತೇ ಅವಘೇ ಕೈಚೇ ಕಳೇ ।
ಲೋಕ ಹೋತೀ ಉತಾವಳೇ । ಅಲ್ಪಜ್ಞಾನೇ ॥೨೦॥

ಅನುರೇಣಾಐಸೇ ಜಿನಸ । ತ್ಯಾಚೆ ಆವ್ಹೀ ವಿರಾಟ ಪುರುಷ ।
ಆಮುಚೇ ಉದಂಡ ಚಿ ಆಯುಷ್ಯ । ತ್ಯಾಂಚ್ಯಾ ಹಿಸೇಬೇ ॥೨೧॥

ತ್ಯಾಂಚ್ಯಾ ರಿತೀ ತ್ಯಾಂಚೇ ದಂಡಕ । ವರ್ತಾಯಾಚೆ ಅಸತೀ ಅನೇಕ ।
ಜಾಣೇ ಸರ್ವ ಹಿ ಕೌತುಕ । ಐಸಾ ಕೈಚಾ ॥೨೨॥

ಧನ್ಯ ಪರಮೇಶ್ವರಾಚೀ ಕರಣೀ । ಅನುಮಾನೇನಾ ಅಂತಃಕರಣೀ ।
ಉಗೀ ಚ ಅಹಂತಾ ಪಾಪಿಣೀ । ವೇಢಾ ಲಾವೀ ॥೨೩॥

ಅಹಂತಾ ಸಾಂಡೂನ ವಿವರಣೇ । ಕಿತ್ಯೇಕ ದೇವಾಚೇ ಕರಣೇ ।
ಪಾಹಾತಾ ಮನುಷ್ಯಾಚೇ ಜಿಣೇ । ಥೋಡೇ ಆಹೇ ॥೨೪॥

ಥೋಡೇ ಜಿಣೇ ಅರ್ಧ ಪುಡೀ ಕಾಯಾ । ಗರ್ವ ಕರಿತೀ ರಡಾಯಾ ।
ಶರೀರ ಅವಘೇ ಪಡಾಯಾ । ವೇಳ ನಾಹೀ ॥೨೫॥

ಕುಶ್ಚೀಳ ಠಾಈ ಜನ್ಮಲೇ । ಆಣಿ ಕುಶ್ಚೀಳ ರಸೇ ಚಿ ವಾಢಲೇ ।
ಯಾಸ ಮ್ಹಣತೀ ಥೋರಲೇ । ಕೋಣ್ಯಾ ಹಿಸೇಬೇ ॥೨೬॥

ಕುಶ್ಚೀಳ ಆಣಿ ಕ್ಷಣಭಂಗುರ । ಅಖಂಡ ವೆಥಾ ಚಿಂತಾತುರ ।
ಲೋಕ ಉಗೇ ಚ ಮ್ಹಣತೀ ಥೋರ । ವೇಡ ಪಣೇ ॥೨೭॥

ಕಾಯಾ ಮಾಯಾ ದೋ ದಿಸಾಂಚೀ । ಆದಿ ಅಂತೀ ಅವಘೀ ಚೀ ಚೀ ।
ಝಾಂಕಾತಾಪಾ ಕರೂನ ಉಗೀ ಚಿ । ಥೋರೀವ ದಾವಿತೀ ॥೨೮॥

ಯಾವನೊಬ್ಬನಿಗೆ ಅಲ್ಪ ಸ್ವಲ್ಪ ತಿಳಿದರೆ ಹೊಟ್ಟೆ ಹೊರೆಯುವಷ್ಟರ ಮಟ್ಟಿಗೆ ಕಲಿತರೆ ಆಗ ಅವನಿಗೆ "ನಾನು ಬಹಳ ತಿಳಿದವನಿರುವೆನು" ಅನ್ನುವ ಗರ್ವ ಸಹಜವಾಗಿ ಬಂದು ಬಿಡುವದು. ಮತ್ತು ಇವನು ಇದರಿಂದ ವ್ಯರ್ಥವಾಗಿ ಹೋಗುವನು. [೨೭] ಜಗತ್ತಿನಲ್ಲಿ ಅಂತರಾತ್ಮಾ ಇವನೊಬ್ಬನೇ ನಿಜವಾದ ಜ್ಞಾನಿ ಇರುವನು. ಇವನೇ ಎಲ್ಲರ ಅಂತರ್ಯಾಮದಲ್ಲಿಯೂ ಆತ್ಮರೂಪದಿಂದ ಇರುವನು. ಇವನ ಮಹಿಮೆ–ಇವನ ಜ್ಞಾನ ಆಕಲನ ಮಾಡಿ ಕೊಳ್ಳುವಂಥ ಬುದ್ಧಿವಂತರು ಅತ್ಯಂತ ಕ್ವಚಿತ್ತಾಗಿ ಕಂಡುಬರುವರು. [೨೮] ಪಂಚಮಹಾಭೂತ, ಅಹಂಕಾರ, ಮತ್ತು ಮಹತ್ ತತ್ವ (ಶುದ್ಧ ಅರಿವು) ಈ ಏಳು ವೇಷ್ಟನಗಳು ಅಂದರೆ ಆವರಣ ಆಚ್ಛಾದನೆಗಳು ಬ್ರಹ್ಮಾಂಡದವು ಇರುವವು. ಇದರಲ್ಲಿ ಇರುವಂಥ ಪಿಂಡಕ್ಕೆ ಸಹಿತ ಇದೇ ತರಹದ ಏಳು ಆವರಣಗಳು ಇರುತ್ತವೆ. ಈ ಪಿಂಡದಲ್ಲಿ ಅಸಂಖ್ಯ ಪ್ರಾಣಿಗಳು ಇರುವವು. [೨೯] ನಿಮ್ಮ ದೇಹದಲ್ಲಿರುವಂಥ ಪ್ರಾಣಿಗಳ ಬಗ್ಗೆ ನಿಮಗೆ ತಿಳಿದಿಲ್ಲವೆಂದ ಮೇಲೆ ಇಡೀ ವಿಶ್ವದಲ್ಲಿ ಇರುವಂಥ ಪ್ರಾಣಿಗಳ ಬಗ್ಗೆ ತಿಳಿಯುವದು ನಿಮಗೆ ಹೇಗೆ ಶಕ್ಯವಿರುವದು? ಅಲ್ಪ ಜ್ಞಾನದಿಂದಾಗಿ (ಅರ್ಧ ಜ್ಞಾನ) ಮನುಷ್ಯನು ಉತಾವಳಿ ಅಂದರೆ ಅಧೀರ ಅಥವಾ ಉಚ್ಛೃಂಖಲ ವೃತ್ತಿಯವನಾಗುವದು ಮಾತ್ರ ನಿಜ ವಿರುವದು. [೩೦] ಅಣುರೇಣುವಿನಂತಹ ಅತಿ ಸೂಕ್ಷ್ಮ ಪದಾರ್ಥ ಮತ್ತು ಅಷ್ಟೇ ಸೂಕ್ಷ್ಮ ಜೀವ ಸಹ ಇರುವವು. ಇವುಗಳ ದೃಷ್ಟಿಯಿಂದ ನೋಡಿದಾಗ ದೇಹಧಾರಿಗಳಾದ ನಾವು ವಿಶ್ವದಷ್ಟು ವಿರಾಟ ಪುರುಷರಂತೆ ಕಾಣುವೆವು. ಇವುಗಳ ಅಲ್ಪಾಯುಷ್ಯದ ಮೇಲಿಂದ ಲೆಕ್ಕಹಾಕಿದರೆ ನಮ್ಮ ಆಯುಷ್ಯವೂ ಸಹಿತ ಅತಿಶಯ ದೀರ್ಘವಿರುವದು. [೩೧] ಅಣುರೇಣುವಿನ ಸಮಾನವಾಗಿರುವ ಸೂಕ್ಷ್ಮಜೀವಿಗಳ ಇರುವಿಕೆ ಮತ್ತು ನಿಯಮಗಳು ಅನೇಕ ಪ್ರಕಾರದವು ಇರುವವು. ಇವೆಲ್ಲವುಗಳ ಜ್ಞಾನ ಯಾರಿಗೂ ಇರುವದಿಲ್ಲ. [೩೨] ಸಾರಾಂಶ: ಪರಮೇಶ್ವರನ ಅಘಟಿತ ಘಟನಾ ಕಾರ್ಯವು ನಿಜವಾಗಿಯೂ ಬಹಳ ವಿಸ್ಮಯ ಕಾರಕವಿರುವದು. ಮನುಷ್ಯನಿಗೆ ಅವನ ಬುದ್ಧಿಯಿಂದ ಇದರ ಕಲ್ಪನೆ ಬರುವದು ಶಕ್ಯವಿಲ್ಲ. ಹೀಗಿದ್ದರೂ ಕೂಡಾ ಅಹಂತಾ (ನಾನು ಅನ್ನುವ) ಪಾಪಿಣಿಯು ಮನುಷ್ಯನನ್ನು ಹಿಡಿದು ಕೊಳ್ಳುವದು. ಇವನನ್ನು ಪುಟ್ಟಾ ಪೂರಾ ಮುತ್ತಿ ಬಿಡುವದು. [೩೩] ನಿಮ್ಮ ಅಹಂತಾವನ್ನು ದೃಢ ಮನದಿಂದ ಬದಿಗೆ ಸರಿಸಿ ಭಗವಂತನ ಅನೇಕ ಅಘಟಿತ ಲೀಲೆಗಳ ಬಗ್ಗೆ ಮನನ, ಚಿಂತನ, ಮಾಡಬೇಕು. ಮನುಷ್ಯನ ಆಯುಷ್ಯ ಬಹಳ ಅಲ್ಪ ಕಾಲದ್ದಿರುವದು. [೩೪] ಆಯುಷ್ಯವು ಅಲ್ಪವು ಮತ್ತು ದೇಹವು ಕ್ಷಣ ಭಂಗುರವಾದ್ದದ್ದಿರುವದು. ಮನುಷ್ಯನು ನಿಷ್ಕಾರಣವಾಗಿ ಗರ್ವತಾಳುತ್ತಾನೆ. ಶರೀರ ಬೀಳಲಿಕ್ಕೆ ಬಹಳ ಹೊತ್ತು ಹತ್ತುವದಿಲ್ಲ. [೩೫] ಈ ದೇಹವು ಬಹಳ ಹೊಲಸು ಜಾಗೆಯಲ್ಲಿ ಹುಟ್ಟುವದು. ಮತ್ತು ಹೊಟ್ಟೆಯಲ್ಲಿಯ ಹೊಲಸುರಸದಿಂದಲೇ ಪೋಷಿಸಲ್ಪಡುವದು. ಇಂಥ ಈ ಕ್ಷಣ ಭಂಗುರವಾದ ದೇಹಕ್ಕೆ ಬಹಳ ಶ್ರೇಷ್ಠವೆಂದು ಅಂದುಕೊಂಡು ಇದರ ಅಭಿಮಾನ ತಾಳುವರು. ಇದಕ್ಕೇ ನಾದರೂ ಅರ್ಥವಿದೆಯೇ? ಅರ್ಥಾತ್ ಇಲ್ಲ. [೩೬] ಹೊಲಸು, ಕ್ಷಣಭಂಗುರ, ನಿರಂತರ ವ್ಯಥೆಯಿಂದ ಮತ್ತು ಚಿಂತೆಯಿಂದ ಆವರಿಸಿದಂಥ ಶರೀರದ ಹಣೆಬರೆಹ ಒಳ್ಳೆಯದಲ್ಲ. ಇಂಥದಕ್ಕೆ ಜನರು ಸುಮ್ಮನೇ ಹುಚ್ಚುತನದಿಂದ ದೊಡ್ಡದು ಶ್ರೇಷ್ಠವಾದದ್ದು ಎಂದು ಅನ್ನುವರು. [೩೭] ಶರೀರವಾಗಲೀ ಐಶ್ವರ್ಯವಾಗಲೀ (ಕಾಯಾ ವ ಮಾಯಾ) ಇವೆಲ್ಲ ಎರಡು ದಿನದ ಆಟದಂತಿರುವವು. ಆರಂಭದಲ್ಲಿ ಮತ್ತು ಕೊನೆಯಲ್ಲಿ ಏನೆಲ್ಲ ಫಜೀತಿ ಇರುವದು. [ಬರುವಾಗ ಬತ್ತಲೆ, ಹೋಗುವಾಗ ಬತ್ತಲೆ.] ನಿಜವಾದ ಸ್ಥಿತಿ ಹೀಗಿದ್ದರೂ ಈ ದೇಹಕ್ಕೆ ವಸ್ತ್ರ, ಸುವರ್ಣಾದಿಗಳಿಂದ ಶೃಂಗಾರ ಮಾಡಿಕೊಂಡು ಜನರು ಸುಮ್ಮನೇ ದೊಡ್ಡಿಸ್ತನ ಮೆರೆಸುವರು. [೩೮]

ಝಾಂಕಿಲೇ ತರೀ ಉಪಂಥರ ಪಡೇ । ದುರ್ಗಂಧೀ ಸುಟೇ ಜಿಕಡೇ ತಿಕಡೇ ।
ಜೋ ಕೋಣೀ ವಿವೇಕೀ ಪವಾಡೇ । ತೋ ಚಿ ಧನ್ಯ ॥೩೯॥

ಉಗೇ ಚಿ ಕಾಯಾ ತಂಡಾವೇ । ನೋಡಾ ಅಹಂತೇಚೇ ಪುಂಡಾವೇ ।
ವಿವೇಕೇ ದೇವಾಸ ಧುಂಡಾವೇ । ಹೇ ಉತ್ತಮೋತ್ತಮು ॥೪೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ಸೂಕ್ಷ್ಮ ಜೀವ ನಿರೂಪಣ' ನಾಮು ಸಮಾಸ ಅಷ್ಟಮು ॥

• •

ದೇಹ ಜೀವಂತವಿದ್ದಾಗ ಎಷ್ಟೇ ವಸ್ತ್ರಾದಿಗಳಿಂದ ಹೊದಿಸಿದರೂ ಕೊನೆಗೆ ಇದು ಬಯಲಿಗೆ ಬೀಳುವದು. [ಬತ್ತಲೆಯಾಗುವದು]. ಇದರ ದುರ್ಗಂಧ ಅತ್ತಿತ್ತ ಪಸರಿಸಿರುವದು. ಹಬ್ಬುವದು. [ದೇಹದ ದುರ್ಗಣ, ದುಷ್ಟ ಕೃತ್ಯ ಇವನ್ನು ಎಷ್ಟು ಮುಚ್ಚಿದರೂ ಒಂದು ದಿನ ಹೊರ ಬೀಳುವದೇನೂ ತಪ್ಪುವದಿಲ್ಲ]. ಆದ್ದರಿಂದ ಯಾವನು ವಿವೇಕದಿಂದ ಸುವಿಚಾರದಿಂದ ವಿಶಾಲನಾಗುವನೋ, ತಿಳಿದವನಾಗುವನೋ ಅವನು ಧನ್ಯನು. ಯಾವನು ದೇಹ ಬುದ್ಧಿಯಿಂದ [ಪ್ರಾಪಂಚಿಕ ಬುದ್ಧಿಯಿಂದ] ಹೊರಬೀಳುವನೋ ಅವನು ನಿಜವಾಗಿಯೂ ಧನ್ಯನು.(೩೯) ಸುಮ್ಮನೆ ವ್ಯರ್ಥವಾಗಿ ಶಬ್ದಜಾಲದಲ್ಲಿ ತೊಡಕಿಕೊಳ್ಳಬಾರದು. ಮತ್ತು ಅಹಂಕಾರದ ಪುಂಡತನ, ಉರ್ಮಟತನವನ್ನು ಸಮೂಲವಾಗಿ ಕಿತ್ತು ಬಿಸಾಡಬೇಕು. ವಿವೇಕದಿಂದ ಭಗವಂತನ ಶೋಧ ಮಾಡಬೇಕು. ಇದು ಉತ್ತಮವಾದದ್ದರಲ್ಲಿ ಅತಿ ಉತ್ತಮವಾದದ್ದು ಇರುವದು. [೪೦]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹದಿನೈದನೆಯ ದಶಕದೊಳಗಿನ
"ಸೂಕ್ಷ್ಮಜೀವ ನಿರೂಪಣ"ವೆಂಬ ಹೆಸರಿನ ಎಂಟನೆಯ ಸಮಾಸವು ಮುಗಿದುದು.

● ●

### ದಶಕ ಪಂಚದಶ : ಸಮಾಸ ನವಮ : ಪಿಂಡೋತ್ಪತ್ತಿ ನಿರೂಪಣ (ನುಡಿ ೩೪)

॥ಶ್ರೀರಾಮ॥ ಚೌಖಾಣೀಚೆ ಪ್ರಾಣೀ ಅಸತೀ । ಅವಘೇ ಉದಕೇ ಚಿ ವಾಢತೀ।
ಐಸೆ ಹೋತೀ ಆಣಿ ಜಾತೀ । ಅಸಂಖ್ಯಾತ ॥೧॥

ತತ್ವಾಂಚೇ ಶರೀರ ಜಾಲೇ । ಅಂತರಾತ್ಮ್ಯಾಸಗಟ ವಳಲೇ ।
ತ್ಯಾಂಚೇ ಮೂಳ ಜೋ ಶೋಧಿಲೇ । ತೋ ಉದಕರೂಪ ॥೨॥

ಶರತ್ಕಾಳೀಚೀ ಶರೀರೇ । ಪೀಳಪೀಳೋ ಝಿರಪತೀ ನೀರೇ ।
ಉಭಯೆ ರೇತೇ ಯೇಕತ್ರೇ । ಮಿಸಳತೀ ರಕ್ತೇ ॥೩॥

# ದಶಕ ೧೫. ಸಮಾಸ ೯. ಪಿಂಡೋತ್ಪತ್ತಿ ನಿರೂಪಣ (ನುಡಿ ೩೪)

ನಾಲ್ಕು ಖಾಣಿ [ಉತ್ಪತ್ತಿ ಸ್ಥಾನ] ಗಳಲ್ಲಿಯ ಎಲ್ಲ ಜೀವ ಪ್ರಾಣಿಗಳು ನೀರಿನಿಂದ ನಿರ್ಮಾಣವಾಗುವವು. ಉದಾ; ಬೀಜಕ್ಕೆ ನೀರು ದೊರೆತರೆ ಮಾತ್ರ ಅದು ಅಂಕುರಿಸುವದು. ಮತ್ತು ಆಮೇಲೆ ಸಹಿತ ನೀರಿನಿಂದಲೇ ಬೆಳೆಯುವದು. ಇದರ ಬೇರುಗಳು ಕೆಳಗೆ[ಭೂಮಿಯೊಳಗೆ]ಇಳಿಯುವವು.[ಬೆಳೆಯುವವು]ಮತ್ತು ತುದಿ (ಅಗ್ರ) ಹಾಗೂ ಟೊಂಗೆಗಳು ಮೇಲಕ್ಕೆ ಬೆಳೆಯುವವು. ಮುಂದೆ ಇದಕ್ಕೆ ಕ್ರಮದಿಂದ ಎಲೆ, ಹೂವು, ಮತ್ತು ಕಾಯಿ (ಫಲ) ಬರುವವು. ಫಲದಲ್ಲಿ ಅದರದೇ ಬೀಜ ಇರುವದು. ಈ ಕ್ರಮದಲ್ಲಿ ಹಿರಿಯಾರು ಯಾರು? ಅನ್ನುವದನ್ನು ನೋಡಿದ್ದಾದರೆ ನಮಗೆ ಅನಿಸುವದೇನಂದರೆ ಫಲಕ್ಕಿಂತ ಮೊದಲು ಹೂವು, ಹೂವಿನಕ್ಕಿಂತ ಮೊದಲು ಎಲೆ, ಎಲೆಗಳಕ್ಕಿಂತ ಮೊದಲು ಟೊಂಗೆ, ಟೊಂಗೆಯಕ್ಕಿಂತ ಮೊದಲು ಕಾಂಡ, [ಅಂದರೆ ಬೊಡ್ಡೆ ಅಥವಾ ಮರದ ಕೆಳಭಾಗ],ಕಾಂಡಕ್ಕಿಂತ ಮೊದಲು ಬೇರುಗಳು, ಬೇರಿಗಿಂತ ಮೊದಲು ನೀರು, ನೀರು ಅಟ್ಟಿಸಿ ಪೃಥ್ವಿ ಆಗುವದು. ಪೃಥ್ವಿಗಿಂತ ನೀರು ಹಿರಿದು. ನೀರಿಗಿಂತ ಹಿರಿದು ತೇಜ, ತೇಜಕ್ಕಿಂತ ಹಿರಿದು ವಾಯು. ಮತ್ತು ವಾಯುವಿಗಿಂತ ಹಿರಿಯದು ಅಂತರಾತ್ಮಾ ಆಗಿರುವದು. ಮನುಷ್ಯ ದೇಹದ ಉತ್ಪತ್ತಿ ಸಹಿತ ಹೀಗೆಯೇ ರಸದಿಂದ ಅಂದರೆ ನೀರಿನಿಂದ ಆಗುವದು ಅರ್ಥಾತ್ ಸರ್ವ ಪಿಂಡ ದೇಹಗಳಿಗೆ ಅಂತರಾತ್ಮನು ಹಿರಿಯನು. ಇವನನ್ನು ಗುರುತಿಸಬೇಕು. ಯಾಕೆಂದರೆ ಇವನನ್ನು ತಿಳಿಯದಿರುವವನೇ ದುರಾತ್ಮನು, ಎಂದು ತಿಳಿಯಬೇಕು. ಇವನು ಸತತ ನಿಕಟ [ಹತ್ತಿರ] ಇದ್ದೂ ಮನುಷ್ಯನು ಇವನನ್ನು ತಿಳಿಯುವದಿಲ್ಲ. [ಮರೆಯುತ್ತಾನೆ, ತಪ್ಪುತ್ತಾನೆ]. ಅಂತರಾತ್ಮನೊಂದಿಗೆ ಅನನ್ಯವಾದೆವೆಂದರೆ ಪ್ರಕೃತಿಯ ಸ್ವಭಾವ ಬದಲಾಗಹತ್ತುವದು. ಯಾರ ಅಂತಃಕರಣದಲ್ಲಿ ಹಿರಿಯನಾದ ಅಂತರಾತ್ಮಾ ಎಚ್ಚರಾದನೆಂದರೆ [ಜಾಗ್ರತನಾದರೆ] ಆ ಪುರುಷನೇ ಭಾಗ್ಯವಂತ ಪುರುಷನೆಂದು ತಿಳಿಯಬೇಕು. ಇಂಥ ಪುರುಷನು ತನ್ನ ವ್ಯವಸಾಯವನ್ನು ಮಾಡುತ್ತ (ತನ್ನ ಕಾಯಕವನ್ನು ಮಾಡುತ್ತ) ಇದ್ದರೂ ಕೂಡಾ ತನ್ನ ಧ್ಯಾನ ಭಂಗವಾಗಗೊಡುವದಿಲ್ಲ. ವಿಶ್ವವ್ಯಾಪಿ ಅಂತರಾತ್ಮನ ಉಪಾಸನೆಯನ್ನು ಮಾಡುವದರಿಂದ ಈ ಉಪಾಸನೆಯು ವಿಶ್ವವ್ಯಾಪಿಯಾಗುವದು. ಇದೇ ಉಪಾಸನೆಯು ಕೊನೆಗೆ ದೃಶ್ಯವನ್ನು ದಾಟಿ ಅಂದರೆ ದೃಶ್ಯದ ಆಚೆಗೆ ನಿಮ್ಮನ್ನು ಒಯ್ದು ಬಿಡುವದು.

## ದಶಕ ೧೫. ಸಮಾಸ ೯. ಪಿಂಡೋತ್ಪತ್ತಿ ನಿರೂಪಣ (ನುಡಿ ३४)

ಜೀವ ಪ್ರಾಣಿಗಳ ಜನ್ಮವು ಜೀವನದಲ್ಲಿಯೇ [ನೀರಿನಲ್ಲಿಯೇ] ಆಗುವದು. ಇದನ್ನು ಹೇಳಿ ಮಾನವೀ ಶರೀರವು ನೀರಿನಿಂದ ಹೇಗೆ [ಆಯಿತು]. ಬೆಳೆಯುತ್ತ ಬೆಳೆಯುತ್ತ ಹೋಗುವದು. ಇದರ ವರ್ಣನೆಯನ್ನು ಮೊದಲಿಗೆ ಮಾಡುವರು: ನಾಲ್ಕು ಖಾಣಿ ಅಂದರೆ ಅಂಡಜ, ಜಾರಜ, ಸ್ವೇದಜ. ಉದ್ಭಿಜ ಎಂಬ ನಾಲ್ಕು ವರ್ಗಗಳಲ್ಲಿ ಜನ್ಮ ತಾಳುವ ಪ್ರಾಣಿಗಳೆಲ್ಲ ನೀರಿನಿಂದಲೇ ಬೆಳೆಯುವವು. ಹೀಗೆ ಅಸಂಖ್ಯ ಪ್ರಾಣಿಗಳು ಜನ್ಮ ಹೊಂದುವವು. ಮತ್ತು ಸತ್ತು ಹೋಗುವವು. [೧] ಮೂರು ಗುಣಗಳು, ಪಂಚಭೂತಗಳು ಮತ್ತು ಅಂತರಾತ್ಮಾ ಇವೆಲ್ಲವೂ ಒಂದೇ ಕಡೆಗೆ ಕಲಿಸಿ [ಕೂಡಿ] ಮಿಶ್ರವಾಗಿ ಮಾನವ ಶರೀರ ತಯಾರ ಆಗುವದು. ಆದರೆ ಮೂಲವನ್ನು ಶೋಧಿಸಿದರೆ ಇದು ಆಪರೂಪ (ಜಲರೂಪ) ಇರುವದು, ಕೇಡು ಬರುವದು. [೨] ಮಳೆಗಾಲದ ನಂತರ ಹುಟ್ಟುವ ವನಸ್ಪತಿಯನ್ನು ತಿಕ್ಕಿ, ಜಜ್ಜಿ ಹಿಂಡಿ ನೋಡಿದರೆ ಅದರೊಳಗಿಂದ ನೀರು ಸೋರುವದು. [ರಸವು ನೀರಿನ ಅಂಶವೇ ಇರುವದು]. ಮಾನವೀ ಶರೀರದ ವಿಷಯದಲ್ಲಿ ಸ್ತ್ರೀ ಮತ್ತು ಪುರುಷ ಇವರ ರೇತಸ್ಸು-ರಕ್ತದಲ್ಲಿ ಏಕತ್ರ ಕೂಡಿಕೊಳ್ಳುವದು.(೩)

ಅನ್ನರಸ ದೇಹರಸ । ರಕ್ತರೇತೇ ಬಾಂಧೇ ಮೂಸ ।
ರಸದ್ವಯೇ ಸಾವಕಾಸ । ವಾಢೋ ಲಾಗೇ ॥೪॥
ವಾಢತಾ ವಾಢತಾ ವಾಢಲೇ । ಕೋಮಳಾಚೇ ಕಠೀಣ ಜಾಲೇ ।
ಪುಢೇ ಉದಕ ಪೈಸಾವಲೇ । ನಾನಾ ಅವೇವೀ ॥೫॥
ಸಂಪೂರ್ಣ ಹೋತಾ ಬಾಹೇರಿ ಪಡೆ । ಭೂಮೀಸ ಪಡತಾ ಮಗ ತೇ ರಡೆ ।
ಅವಘ್ಯಾಚೇ ಅವಘೇ ಚ ಘಡೇ । ಐಸೇ ಆಹೇ ॥೬॥
ಕುಡೀ ವಾಢೇ ಕುಬುದ್ಧಿ ವಾಢೇ । ಮುಳಾಪಾಸೂನ ಅವಘೇ ಚ ಘಡೇ ।
ಅವಘೇ ಚಿ ಮೋಡೆ ಆಣಿ ವಾಢೇ । ದೇಖತದೇಖತಾ ॥೭॥
ಪುಢೇ ಅವಘಿಯಾಂಚೇ ಶರೀರ । ದಿವಸೇಂದಿವಸ ಜಾಲೇ ಥೋರ ।
ಸುಚೋ ಲಾಗಲಾ ವಿಚಾರ । ಕಾಂಹೀ ಕಾಂಹೀ ॥೮॥
ಫಳಾಮಧೇ ಬೀಜ ಆಲೇ । ತೇಣೇ ನ್ಯಾಯೇ ತೇಥೇ ಜಾಲೇ ।
ಏಕತಾ ದೇಖತಾ ಉಮಜಲೇ । ಸಕಳ ಕಾಂಹೀ ॥೯॥
ಬೀಜೇ ಉದಕೇ ಅಂಕುರತೀ । ಉದಕ ನಸ್ತಾ ಉಡೋನ ಜಾತೀ ।
ಯೇಕೆ ಠಾಈ ಉದಕ ಮಾತೀ । ಹೋತಾ ಬರೇ ॥೧೦॥
ದೋಹೀಮಧೇ ಅಸತಾ ಬೀಜ । ಭಿಜೋನ ಅಂಕುರ ಸಹಜ ।
ವಾಢತಾ ವಾಢತಾ ಪುಢೇ ರೀಝು । ಉದಂಡ ಆಹೇ ॥೧೧॥
ಇಕಡೆ ಮುಳ್ಯಾ ಧಾವಾ ಘೇತೀ । ತಿಕಡೆ ಅಗ್ರೇ ಹೇಲಾವತೀ ।
ಮುಳೇ ಅಗ್ರ ದ್ವಿಧಾ ಹೋತೀ । ಬೀಜಾಪಾಸೂನ ॥೧೨॥
ಮುಳ್ಯಾ ಚಾಲಿಲ್ಯಾ ಪಾತಾಳೀ । ಅಗ್ರೇ ಧಾವತೀ ಅಂತರಾಳೀ ।
ನಾನಾ ಪತ್ರೀ ಪುಷ್ಪೀ ಫಳೀ । ಲಗಡಲೀ ಝಾಡೇ ॥೧೩॥
ಫಳಾವಡಿಲ ಸುಮನೇ । ಸುಮನಾ ವಡಿಲ ಪಾನೇ ।
ಪಾನಾ ವಡಿಲ ಅನುಸಂಧಾನೇ । ಕಾಷ್ಟೇ ಅವಘೀ ॥೧೪॥
ಕಾಷ್ಟಾವಡಿಲ ಮುಳ್ಯಾ ಬಾರಿಕ । ಮುಳ್ಯಾವಡೀಲ ತೇ ಉದಕ ।
ಉದಕ ಆಳೋನ ಕೌತುಕ । ಭೂಮಂಡಳಾಚೇ ॥೧೫॥
ಯಾಚೀ ಐಸೀ ಆಹೆ ಪ್ರಚಿತೀ । ತೇವ್ಹಾ ಸಕಳಾವಡಿಲ ಜಗತೀ ।
ಜಗತೀ ವಡಿಲ ಮೂರ್ತೀ । ಆಪೋ ನಾರಾಯೇಣಾಚೀ ॥೧೬॥
ತಯಾವಡಿಲ ಅಗ್ನಿದೇವ । ಅಗ್ನೀ ವಡಿಲ ವಾಯೋ ದೇವ ।
ವಾಯೋ ದೇವಾ ವಡಿಲ ಸ್ವಭಾವ । ಅಂತರಾತ್ಮ್ಯಾಚಾ ॥೧೭॥

ರಕ್ತ ವ. ರೇತಸ್ಸಿನ- ಸಂಯೋಗದಿಂದ ಅನ್ನ ರಸ ಮತ್ತು ದೇಹರಸ ಇವೆರಡೂ ಕೂಡಿ ಮುಂಸಿ ಅಂದರೆ (ಮಿಶ್ರಣದ ರಸವನ್ನು ಹಿಡಿದಿಡುವ ದೇಹ ರಚನೆಯ ಒಂದು ಆವರಣ ಮುದ್ದೆ,(ಗೋಳಾ)ತಯಾರ ಆಗುವದು. ಈ ಎರಡೂ ರಸಗಳ ಸಂಯೋಗದಿಂದ ಮುಂಸಿ ಅಥವಾ ಆ ಪಿಂಡವು ಸಾವಕಾಶವಾಗಿ ಬೆಳೆಯ ಹತ್ತುವದು. [೪] ಹೀಗೆ ಬೆಳೆಯುತ್ತ ಹೋಗುವಾಗ ಅದರಲ್ಲಿಯ ಆ ಕೋಮಲವಾಗಿರುವಂತಹದು ಗಟ್ಟಿ [ಕಠಿಣ] ಯಾಗುವದು, ಆ ಮೇಲೆ ಎಲ್ಲ ಅವಯವಗಳಲ್ಲಿ ಜೀವನ ರಸ ಹರಿಯುವದು. [ಪಸರಿಸುವದು] (೫) ಶರೀರವು ಸಂಪೂರ್ಣವಾಗಿ ತಯಾರ ಆಯಿತೆಂದರೆ ಜೀವ [ಕೂಸು] ಹೊರಗೆ ಬರುವದು. ಇದು ಭೂಮಿಯ ಮೇಲೆ ಬಿದ್ದ ತಕ್ಷಣ ಅಳಲಿಕ್ಕೆ ಪ್ರಾರಂಭಿಸುವದು. ಎಲ್ಲ ಮನುಷ್ಯರ ವಿಷಯದಲ್ಲಿ ಇದರಂತೆಯೇ ಆಗುವದು. [೬] ದೇಹವು ಬೆಳೆಯುತ್ತ ಹೋಗುವದು. ಅದರ ಸಂಗಡ ಬುದ್ಧಿಯೂ ಕೂಡಾ ಬೆಳೆಯುವದು. ಇದೆಲ್ಲ ಮೂಲದಿಂದ ಘಟಿಸುವದು. ನೋಡ ನೋಡುವಷ್ಟರಲ್ಲಿ ಎಲ್ಲವೂ ಬೆಳೆಯುವವು. ಮತ್ತು ಮುರಿಯುವವು. (೭) ಎಲ್ಲ ಶರೀರವು ದಿನ ದಿನಕ್ಕೆ ದೊಡ್ಡದಾಗುತ್ತ ಹೋಗುವದು. ಆ ಮೇಲೆ ಬೇರೆ ಬೇರೆ ವಿಚಾರಗಳು ಹೊಳೆಯುವವು. ತಿಳಿಯ ಹತ್ತುವವು. [೮] ಗಿಡದಲ್ಲಿಯ ಫಲದೊಳಗೆ ಹೇಗೆ ಬೀಜವಿರುವದೋ ಅದರಂತೆ ಮಾನವೀ ಜೀವನದಲ್ಲಿಯೂ ಕೂಡಾ [ಉತ್ತಮ ಮತ್ತು ಕೆಟ್ಟ ಸಂಸ್ಕಾರದಿಂದ] ಘಟಿಸುವದು. [ಜೀವವು ಹುಟ್ಟುವದು]. ಇದರ ಬಗ್ಗೆ ಸ್ವತಃ ನೋಡಿದರೆ ಅಥವಾ ಕೇಳಿ ತಿಳಿದರೆ ಆಗ ಎಲ್ಲವೂ ಲಕ್ಷ್ಯಕ್ಕೆ ಬರುವದು. [೯] ಬೀಜಕ್ಕೆ ನೀರು ದೊರೆತ ನಂತರವೇ ಅದು ಮೊಳಕೆಯೊಡೆಯುವದು. ಬೀಜಕ್ಕೆ ನೀರು ಒದಗದಿದ್ದರೆ ಅದು ಒಣಗುವದು. ಅಂಕುರಿಸುವದಿಲ್ಲ. ಬೀಜಕ್ಕೆ ಮಣ್ಣು ಮತ್ತು ನೀರು ಇವುಗಳ ಮಿಶ್ರಣವಾದರೆ ಉತ್ತಮ ಸಹಾಯವಾಗುವದು. [೧೦] ನೀರು ಮತ್ತು ಮಣ್ಣು ಇದರಲ್ಲಿ ಬೀಜ ಇದ್ದರೆ ಅದು ಹಸಿಯಾಗಿ [ತೊಯ್ದು] ಅಂಕುರ ಉತ್ಪನ್ನವಾಗುವದು. ಅಂಕುರವು ತನ್ನಷ್ಟಕ್ಕೆ ತಾನೇ ಬೆಳೆಯುತ್ತ ಹೋಗುವದು. ಇದರ ಬೆಳವಣಿಗೆಯಲ್ಲಿ ಬಹಳ ಆನಂದವಿರುವದು. [೧೧] ಬೇರುಗಳು ಭೂಮಿಯ ಒಳಗೆ ಇಳಿಯುವವು. ಹಾಗೆಯೇ ಟೊಂಗೆಗಳು ಮೇಲಕ್ಕೆ ಬೆಳೆಯುವವು. ಬೇರು ಮತ್ತು ಟೊಂಗೆಗಳು ಬೀಜದಲ್ಲಿ ಒಂದೇ ಆಗಿರುವವು. ಆದರೆ ನಂತರ ಎರಡೂ ಬೇರೆ ಬೇರೆಯಾಗಿ ಬೆಳೆಯುವವು. [೧೨] ಬೇರು ಭೂಮಿಯಲ್ಲಿ ಕೆಳಗೆ ಆಳವಾಗಿ ಇಳಿಯುವವು. ಅದೇ ಗಿಡದ ಕಾಂಡ ಮತ್ತು ಟೊಂಗೆಗಳು ಮೇಲಕ್ಕೆ ಆಕಾಶದ ಕಡೆಗೆ ಹೋಗುವವು. ಮತ್ತು ಅನೇಕ ಪ್ರಕಾರದ ಎಲೆಗಳಿಂದ ಹೂವು ಮತ್ತು ಹಣ್ಣುಗಳಿಂದ ಗಿಡವು ಸಂಪೂರ್ಣ ತುಂಬುವದು. [೧೩] ಗಿಡದ ಉದಾಹರಣೆಯಿಂದ ಏನನ್ನು ತೋರಿಸಿ ತಿಳಿಸಿಕೊಡುವರೆಂದರೆ ಹಿಂದೆ [ಮೂಲಕ್ಕೆ] ಹೋದ ಹೋದಂತೆ ನಿಮಗೆ ಕೊನೆಯಲ್ಲಿಯ ಅಂತರಾತ್ಮನವರೆಗೂ ಹೋಗಬೇಕಾಗುವದು. ಇದು ಎಲ್ಲದರ ಮೂಲ [ಬೇರು] ಇರುವದು: ಗಿಡದ ಬೆಳವಣಿಗೆಯ ಬಗ್ಗೆ ನೋಡಿದ್ದಾದರೆ ನಮಗೆ ಕಂಡು ಬರುವದೇನಂದರೆ ಫಲಕ್ಕಿಂತ ಹೂವು ಹಿರಿಯದು, ಹೂವಿಗಿಂತ ಹಿರಿಯದು ಎಲೆ, ಇದೇ ಕ್ರಮದಿಂದ ಎಲೆಗಿಂತ ಕಾಂಡ [ಕಟ್ಟಿಗೆಯು] ಹಿರಿಯದಿರುವದು. [೧೪] ಕಾಂಡಕ್ಕಿಂತ ಸಣ್ಣ ಬೇರುಗಳು ಹಿರಿಯವು. ಬೇರಿಗಿಂತ ನೀರು ಹಿರಿಯದು. ನೀರು ಗಟ್ಟಿಯಾಗುವದು. ಮತ್ತು ಇದರಿಂದಾಗಿ ಪೃಥ್ವಿಯ ಮೇಲೆ ಅನೇಕ ಪ್ರಕಾರದ ಪಿಂಡಗಳ ಕೌತುಕ ನೋಡಲಿಕ್ಕೆ ಸಿಗುವದು. [೧೫] ಮೇಲೆ ಹೇಳಿದ್ದರ ಮೇಲಿಂದ ಜಗದಲ್ಲಿಯ ಪಿಂಡೋತ್ಪತ್ತಿಯ ವಿಷಯದಲ್ಲಿ ನಾನು ಹೇಳಿದ್ದರ ಬಗ್ಗೆ ಪ್ರತ್ಯಕ್ಷ ಅನುಭವವು ಬರುತ್ತದೆ. ಆದ್ದರಿಂದ ಪೃಥ್ವಿಯು ಎಲ್ಲಕ್ಕಿಂತ ಹಿರಿಯದು. ಆದರೆ ಈ ಸೃಷ್ಟಿಯಲ್ಲಿ ಪೃಥ್ವಿಗಿಂತ ನೀರು ಶ್ರೇಷ್ಠ ಅಥವಾ ಹಿರಿಯದು. [೧೬] ನೀರಿಗಿಂತ ಅಗ್ನಿಯು ಶ್ರೇಷ್ಠವಿರುವದು. ಅಗ್ನಿಗಿಂತ ವಾಯು ಶ್ರೇಷ್ಠವಿರುವದು. ಮತ್ತು ವಾಯುವಿಗಿಂತ ಅಂತರಾತ್ಮಾ ಸ್ವಾಭಾವಿಕವಾಗಿಯೇ ಶ್ರೇಷ್ಠವಿರುವದು. [೧೭]

ಸಕಳಾವಡಿಲ ಅಂತರಾತ್ಮಾ । ತ್ಯಾಸಿ ನೇಣೇ ತೋ ದುರಾತ್ಮಾ ।
ದುರಾತ್ಮಾ ಮ್ಹಣಿಜೆ ದುರೀ ಆತ್ಮಾ । ಅಂತರಲಾ ತಯಾ ॥೧೮॥

ಜವಳೀ ಅಸೋನ ಚುಕಲೇ । ಪ್ರತ್ಯಯಾಸ ನಾಹೀ ಸೋಕಲೇ ।
ಉಗೇಚಿ ಆಲೇ ಆಣೀ ಗೇಲೇ । ದೇವಾಚಕರಿತಾ ॥೧೯॥

ಮ್ಹಣೌನ ಸಕಳಾವಡಿಲ ದೇವ । ತ್ಯಾಸೀ ಹೋತಾ ಅನನ್ಯಭಾವ ।
ಮಗ ಹೇ ಪ್ರಕೃತೀಚಾ ಸ್ವಭಾವ । ಪಾಲಟೋ ಲಾಗೇ ॥೨೦॥

ಕರೀ ಆಪುಲಾ ವ್ಯಾಸಂಗ । ಕದಾಪಿ ನವ್ಹೇ ಧ್ಯಾನಭಂಗ ।
ಬೋಲಣೇ ಚಾಲಣೇ ವೆಂಗ । ಪಡೋ ಚ ನೆದೀ ॥೨೧॥

ಜೇ ವಡಿಲೀ ನಿರ್ಮಾಣ ಕೇಲೇ । ತೇ ಪಾಹಿಜೆ ಪಾಹಿಲೇ ।
ಕಾಯೆ ಕಾಯೆ ವಡಿಲೀ ಕೇಲೇ । ಕಿತೀ ಪಾಹಾವೇ ॥೨೨॥

ತೋ ವಡಿಲ ಜೇಥೇ ಚೇತಲಾ । ತೋ ಚಿ ಭಾಗ್ಯಪುರುಷ ಜಾಲಾ ।
ಅಲ್ಪ ಚೇತನೇ ತಯಾಲಾ । ಅಲ್ಪಭಾಗ್ಯ ॥೨೩॥

ತಯಾ ನಾರಾಯಣಾಲಾ ಮುನೀ । ಅಖಂಡ ಆಠವಾವೇ ಧ್ಯಾನೀ ।
ಮಗ ತೇ ಲಕ್ಷ್ಮೀ ತಯಾಪಾಸುನೀ । ಜಾಈಲ ಕೋಠೇ ॥೨೪॥

ನಾರಾಯೆಣ ಅಸೇ ವಿಶ್ವೀ । ತ್ಯಾಚೀ ಪೂಜಾ ಕರೀತ ಜಾವೀ ।
ಯಾಕಾರಣೇ ತೋಷವಾವೀ । ಕೋಣೇತರೀ ಕಾಯಾ ॥೨೫॥

ಉಪಾಸನಾ ಶೋಧೂನ ಪಾಹಿಲೀ । ತೋ ತೇ ವಿಶ್ವಪಾಳಿತೀ ಜಾಲೀ ।
ನ ಕಳೇ ಲೀಳಾ ಪರೀಕ್ಷಿಲೀ । ನ ವಚೇ ಕೋಣಾ ॥೨೬॥

ಇಂಥ ಈ ಅನುಕ್ರಮದಿಂದ ನೋಡಿದರೆ ಅಂತರಾತ್ಮನು ಎಲ್ಲರಿಗಿಂತ ಹಿರಿಯನು. ಅಥವಾ ಶ್ರೇಷ್ಠನಿರುವನು. ಇವನನ್ನು ಯಾರು ತಿಳಿಯುವದಿಲ್ಲವೋ ಅವರು ದುರಾತ್ಮರು–ಅಭಾಗಿಗಳು. ಆತ್ಮದಿಂದ ಯಾರು ದೂರಾಗುವರೋ ಅಥವಾ ಆತ್ಮಾ ಯಾರಿಗೆ ದೂರಾಯಿತೋ ಅವರು ದುರಾತ್ಮರಾಗಿರುವರು. [೧೮] ಅಂತರಾತ್ಮನನ್ನು ಗುರುತಿಸಿದ್ದೇವೆಂದರೆ ಪ್ರಕೃತಿಯು ಸ್ವಭಾವವೇ ಬದಲಾಗುವದು [ಬದಲಾವಣೆ ಹೊಂದುವದು]. ಇಂಥ ಮನುಷ್ಯನು ವ್ಯವಹಾರಮಾಡುತ್ತ ಹೋದರೂ ಸಹ ಇವನ ಅನುಸಂಧಾನವು ಭಂಗ ಹೊಂದುವದಿಲ್ಲ. ಅಂತರಾತ್ಮಾ ಜಾಗ್ರತಗೊಳ್ಳುವದೆಂದರೆ ಇದೊಂದು ಅಪೂರ್ವ ಭಾಗ್ಯ ಲಕ್ಷಣವೇ ಆಗಿರುವದು. ಅಂತರಾತ್ಮನ ಉಪಾಸನೆಯು ವಿಶ್ವವ್ಯಾಪಿಯಾಗುವದು. ಆ ಮೇಲೆ ಇದೇ ಉಪಾಸಕನನ್ನು ಆಚೆಯ ದಂಡೆಗೆ ಒಯ್ದು ಪರಬ್ರಹ್ಮದಲ್ಲಿ ವಿಲೀನಮಾಡಿ ಬಿಡುವದು. ನಿಜವಾದ ದುಃಖದ ಸಂಗತಿ ಯಾವುದೆಂದರೆ ಅಂತರಾತ್ಮನು ಹತ್ತಿರವಿದ್ದರೂ ಕೂಡಾ ಜನರು ಇವನನ್ನೂ ಮರೆತು ಬಿಡುವರು. ಇವನ ಅನುಭವವನ್ನು ಪಡೆಯುವ ಲಾಲಸೆಯು ಯಾರಿಗೂ ಹತ್ತುವದಿಲ್ಲ. ಯಾರಿಗೂ ಇವನ ಬಗ್ಗೆ ಜಿಜ್ಞಾಸೆ ಇರುವದಿಲ್ಲ. ದೇವರು ಜನ್ಮಕೊಟ್ಟು ಕಳಿಸಿದನೆಂದು ಬರುವರು. ಸುಮ್ಮನೆ ವ್ಯರ್ಥವಾಗಿ ಬದುಕಿ ಬಾಳಿ ಕೊನೆಗೆ ಹಾಗೆಯೇ ಹೋಗಿ ಬಿಡುವರು. [೧೯] ಆದ್ದರಿಂದ ಹೀಗೆ ಮಾಡದೇ ಎಲ್ಲಕ್ಕಿಂತ ಶ್ರೇಷ್ಠನಾದ ಅಂತರಾತ್ಮನೊಂದಿಗೆ ಅನನ್ಯರಾಗಬೇಕು. ಆ ಮೇಲೆ ಪ್ರಕೃತಿಯು ಸ್ವಭಾವವು ಬದಲಾವಣೆಯಾಗಹತ್ತುವದು. [೨೦] ಅಂತರಾತ್ಮನ ಕೂಡ ಅನನ್ಯತನವನ್ನು ಸಾಧಿಸಿದಂಥ ಪುರುಷನು ತನ್ನ ನಿತ್ಯದ ವ್ಯವಸಾಯವನ್ನು ಮಾಡುವನು. ಆದರೆ ಇದನ್ನು ಮಾಡುತ್ತಿರುವಾಗ ಇವನ ಧ್ಯಾನವು ಭಂಗವಾಗುವದಿಲ್ಲ. ಇವನ ಅನುಸಂಧಾನ ತಪ್ಪುವದಿಲ್ಲ. ಇವನ ನಡೆ ನುಡಿಯಲ್ಲಿ ಯಾವ ದೋಷ-ನ್ಯೂನತೆ (ಕೊರತೆ) ಅಥವಾ ವಿಪರೀತತನ ಕಂಡುಬರುವದಿಲ್ಲ. [೨೧] ಹಿರಿಯರು (ಪೂರ್ವಜರು) ಏನನ್ನು ನಿರ್ಮಾಣಮಾಡಿ ಇಟ್ಟಿರುವರೋ ಅದನ್ನು ನಾವು ನೋಡಲಿಕ್ಕೆ ಬೇಕಾಗುವದು. ಇದು [ಪ್ರಪಂಚ] ವ್ಯವಹಾರದಲ್ಲಿಯ ನಿಯಮ, ರೂಢಿ ಇರುವದು. ಆದರೆ ಈ ಹಿರಿಯನಾದ ಅಂತರಾತ್ಮನು ಏನನ್ನೆಲ್ಲ ನಿರ್ಮಾಣ ಮಾಡಿರುವನೋ ಅದನ್ನೆಲ್ಲ ನೋಡಲಿಕ್ಕೆ ಹತ್ತಿದೆವೆಂದರೆ ಮನವು ದಂಗಾಗುವದು. ಇವನು ಏನೇನು ನಿರ್ಮಾಣ ಮಾಡಿರುವನೋ ಅವುಗಳಲ್ಲಿ ನಾವು ಯಾವ ಯಾವುದನ್ನು ನೋಡಬೇಕು-ಯಾವುದನ್ನು ಬಿಡಬೇಕು. ಎಂದು ಆಶ್ಚರ್ಯವಾಗುವದು. [೨೨] ಈ ಹಿರಿಯನಾದ ಅಂತರಾತ್ಮನು ಯಾರ ಅಂತಃಕರಣದಲ್ಲಿ ಜಾಗ್ರತನಾಗುವನೋ ಅವನೇ ಭಾಗ್ಯವಂತನು. ಇವನ ಜಾಗ್ರತಿ [ಎಚ್ಚರ] ಅಲ್ಪವಾದದ್ದಿದ್ದರೆ ಆದರಂತೆ ಅವನ ಭಾಗ್ಯವೂ ಅಲ್ಪವೇ ಇರುವದು. [೨೩] ಈ ಅಂತರಾತ್ಮ ರೂಪಿ ನಾರಾಯಣನನ್ನು ಅಖಂಡವಾಗಿ ಮನಮುಟ್ಟಿ ಧ್ಯಾನ ಮಾಡಬೇಕು. ಅಂದರೆ ಲಕ್ಷ್ಮಿಯು ಇವನಿಂದ ದೂರ ಹೋಗಲಾರಳು. [೨೪] ಅಂತರಾತ್ಮನು ವಿಶ್ವದಲ್ಲೆಲ್ಲ ಕಡೆಗೂ ವ್ಯಾಪಿಸಿರುವನು. ಇವನ ಪೂಜೆಯನ್ನು ಮಾಡುತ್ತ ಇರಬೇಕು. ಇದಕ್ಕಾಗಿ ಯಾವುದೇ ಒಂದು ಜೀವವನ್ನು ಪೂರ್ತಿ ಸಂತುಷ್ಟಪಡಿಸಬೇಕು. ದೇಹಕ್ಕೆ ಮಾಡಿದ್ದನ್ನು ಅಂತರಾತ್ಮನು ಗ್ರಹಣಮಾಡುವನು. ಅವನ ಕಡೆಗೆ [ಅಂತರಾತ್ಮನವರೆಗೆ] ಇದು ಮುಟ್ಟುವದು. ಆದ್ದರಿಂದ ಯಾರದಾದರೊಂದು ದೇಹದ ಮನಃಪೂರ್ವಕ ಸೇವೆಯನ್ನು ಮಾಡಬೇಕು. (ದೇಹಕ್ಕೆ ಸುಖ ಕೊಡುವದೆಂದರೆ ದೇವನ ಪೂಜೆ ಮಾಡುವದೆಂಬುದನ್ನು ಲಕ್ಷ್ಯಕ್ಕೆ ತರಬೇಕು) [೨೫] ನಿಜವಾದ ಉಪಾಸನೆಯು ಯಾವುದೆಂಬುದನ್ನು ವಿಚಾರಪೂರ್ವಕವಾಗಿ ಶೋಧಿಸಿ ನೋಡಿದ್ದಾದರೆ ಉಪಾಸನಾ ಅಂದರೆ ವಿಶ್ವದ ಮೇಲೆ [ವಿಶ್ವದೊಂದಿಗೆ] ಪ್ರೇಮಮಾಡುವದೇ ನಿಜವಾದ ಉಪಾಸನಾ ಎಂದು ಕಂಡುಬರುವದು. ವಿಶ್ವದ ಎಲ್ಲ ಪ್ರಾಣಿಗಳಲ್ಲಿ ಅಂತರಾತ್ಮನು ಇರುವನು. ಆದ್ದರಿಂದ (೧) ಯಾರ ಅಂತಃಕರಣವನ್ನೂ ದುಃಖಿಸಬಾರದು (೨) ಮತ್ತು ಯಾರು ಯಾರು ಭೆಟ್ಟಿಯಾಗುವರೊ ಅವರೆಲ್ಲರೂ ನಮ್ಮವರೇ ಎಂದು ತಿಳಿಯುವದು ಇವು ಉಪಾಸನೆಯ ಎರಡು ಗುರುತುಗಳಾಗಿರುವವು. ಅಂತರಾತ್ಮನ ಆಟವು ಯಾರಿಗೂ ತಿಳಿಯುವದಿಲ್ಲ. ಅವನ ಪರೀಕ್ಷೆಯನ್ನು ಮಾಡುವದು ಯಾರಿಗೂ ಶಕ್ಯವಿಲ್ಲ. [೨೬]

ದೇವಾಚೀ ಲೀಳಾ ದೇವೇವಿಣ । ಆಣೀಕ ದುಸರಾ ಪಾಹೆ ಕೋಣ ।
ಪಾಹಾಣೇ ತಿತುಕೇ ಆಪಣ । ದೇವ ಚಿ ಅಸೇ ॥೨೭॥

ಉಪಾಸನಾ ಸಕಳಾ ಠಾಈ । ಆತ್ಮಾರಾಮು ಕೋಠೇ ನಾಹೀ ।
ಯಾಕಾರಣೇ ಠಾಈ ಠಾಈ । ರಾಮೇ ಆಟೋಪಿಲೇ ॥೨೮॥

ಐಸೀ ಮಾಝೀ ಉಪಾಸನಾ । ಆಣಿತಾ ನಯೆ ಅನುಮಾನಾ ।
ನೇಊನ ಘಾಲೀ ನಿರಂಜನಾ । ಪೈಲಿಕಡೆ ॥೨೯॥

ದೇವಾಕರಿತಾ ಕರ್ಮೆ ಚಾಲತೀ । ದೇವಾಕರಿತಾ ಉಪಾಸಕ ಹೋತೀ ।
ದೇವಾಕರಿತಾ ಜ್ಞಾನೀ ಅಸತೀ । ಕಿತಿಯೇಕ ॥೩೦॥

ನಾನಾ ಶಾಸ್ತ್ರೇ ನಾನಾ ಮತೇ । ದೇವ ಚಿ ಬೋಲಿಲಾ ಸಮಸ್ತೇ ।
ನೇಮಕಾನೇಮಕ ವೆಸ್ತಾವೆಸ್ತೇ । ಕರ್ಮಾನುಸಾರ ॥೩೧॥

ದೇವಾಸ ಅವಘೇ ಲಾಗೇ ಕರಾವೇ । ತ್ಯಾತ ಘೇಊ ಯೇ ತಿತುಕೇ ಘ್ಯಾವೇ ।
ಅಧಿಕಾರಾಸಾರಿಖೇ ಚಾಲಾವೇ । ಮ್ಹಣಿಜೆ ಬರೇ ॥೩೨॥

ಆವಾಹನ ವಿಸರ್ಜನ । ಐಸೇ ಚಿ ಬೋಲಿಲೇ ವಿಧಾನ ।
ಪೂರ್ವ ಪಕ್ಷ ಜಾಲಾ ಯೇಥೂನ । ಸಿದ್ಧಾಂತ ಪುಢೇ ॥೩೩॥

ವೇದಾಂತ ಸಿದ್ಧಾಂತ ಧಾದಾಂತ । ಪ್ರಚಿತ ಪ್ರಮಾಣ ನೇಮಸ್ತ ।
ಪಂಚಿಕರ್ಣ ಸಾಂಡೂನ ಹಿತ । ವಾಕ್ಯಾರ್ಥ ಪಾಹಾವಾ ॥೩೪॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಪಿಂಡೋತ್ಪತ್ತಿ ನಿರೂಪಣ' ನಾಮ ಸಮಾಸ ನವಮ ॥

● ●

ಅಂತರಾತ್ಮನ ಈ ಆಟವನ್ನು ಅಂತರಾತ್ಮನ ಹೊರತು ಇನ್ನಾರಿಗೂ ನೋಡಲಿಕ್ಕೆ ಬರುವದಿಲ್ಲ. ಯಾವ ಪ್ರಮಾಣದಲ್ಲಿ ಈ ಆಟವನ್ನು ನೋಡುವದಕ್ಕೆ ಹೋಗುವೆವೋ ಆ ಪ್ರಮಾಣದಲ್ಲಿ ನೋಡುವವನು ಅಂತರಾತ್ಮನೊಂದಿಗೆ ತದಾಕಾರವಾಗುತ್ತ ಹೋಗುವನು. [೨೭] ಅಂತರಾತ್ಮನು ಇಲ್ಲದ ಜಾಗೆಯು ಯಾವುದೂ ಇಲ್ಲ. ಅವನು ಎಲ್ಲ ಕಡೆಗೂ ತುಂಬಿರುವನು. ಇವನ ಉಪಾಸನೆಯು ಎಲ್ಲ ಕಡೆಗೂ ತುಂಬಿರುವದರಿಂದ ಎಲ್ಲೆಂದರಲ್ಲಿ [ಎಲ್ಲ ಕಡೆಗೂ] ಭಗವಂತನ ಸತ್ತಾ ಕೆಲಸ ಮಾಡುವದು. ಭಗವಂತ ವ್ಯಾಪಿಸಿದ್ದಾನೆ, ಸಂಬಾಳಿಸುತ್ತಾನೆ. [೨೮] ನನ್ನ (ಶ್ರೀ ಸಮರ್ಥರ) ಉಪಾಸನಾ ಅಂದರೆ ಸ್ವತಃ ಆಚರಿಸಿ ಅನುಭವಿಸಿ ಮನಗಂಡ ಉಪಾಸನಾ ಇದಾಗಿರುವದು. ಕೇವಲ ತರ್ಕದಿಂದ ಕಲ್ಪನೆ ಮಾಡಿದರೆ ಇದು ತಿಳಿಯುವದಿಲ್ಲ. ಈ ಉಪಾಸನೆಯು ಉಪಾಸಕನನ್ನು ಮೂಲ ಮಾಯೆಯ ಆಚೆಗೆ ಅಂದರೆ ನಿರಂಜನ ಪದದವರೆಗೆ ಒಯ್ದು ಮುಟ್ಟಿಸುವದು. [೨೯] ಅಂತರಾತ್ಮನ ಸತ್ತಾದಿಂದಲೇ ಎಲ್ಲ ಕೆಲಸ ಕಾರ್ಯಗಳು ನಡೆಯುವವು. ಇವನ ಕೃಪೆಯಿಂದ ಮನುಷ್ಯನು ಉಪಾಸಕನಾಗುವನು. ಇವನ ಅನುಭವದಿಂದ ಎಷ್ಟೋ ಜನರು ಜ್ಞಾನ ಸಂಪನ್ನರಾಗುವರು. [೩೦] ಅನೇಕ ಶಾಸ್ತ್ರಗಳು ಅನೇಕ ಮತಗಳು ಇವೆಲ್ಲವೂ ಕೊನೆಗೆ ಅಂತರಾತ್ಮನೊಳಗಿಂದಲೇ ಪ್ರಕಟವಾಗುವವು. ನಿಯಮಿತ ಮತ್ತು ಅನಿಯಮಿತ ಇದರಂತೆ ವ್ಯವಸ್ಥಿತ ಮತ್ತು ಅವ್ಯವಸ್ಥಿತ ಇವೆಲ್ಲ ಪ್ರಕಾರಗಳು ಅವರವರ ಕರ್ಮಾನುಸಾರ ಘಟಿಸುವವು. ಇವೆಲ್ಲವುಗಳಿಗೂ ಮೂಲ ಪ್ರೇರಣೆಯು ಅಂತರಾತ್ಮನದಿರುವದು. [೩೧] ದೇವರ ಪ್ರೇರಣೆಯಿಂದ ಅಂದರೆ ಅಂತರಾತ್ಮನ ಪ್ರೇರಣೆಯಿಂದ ಮತ್ತು ಅವನ ಅಧಿಕಾರದ ಸತ್ತಾ ಶಕ್ತಿಯಿಂದ ಏನೆಲ್ಲ ಆಗುವದೆಂಬ ಮಾತು ನಿಜವಿರುವದು. ಆದರೆ ಇವುಗಳಲ್ಲಿ ನಮಗೆ ಯಾವುದು ಯೋಗ್ಯವಿದೆಯೋ ಮತ್ತು ತೆಗೆದುಕೊಳ್ಳಲಿಕ್ಕೆ ಸರಿ ಇರುವಂಥದ್ದಿರುವದೋ ಅದನ್ನು ಮಾತ್ರ ನಾವು ತೆಗೆದುಕೊಳ್ಳಬೇಕು. ನಮ್ಮ ಶಕ್ತಿಯನ್ನು ನೋಡಿಕೊಂಡು ಮತ್ತು ನಮ್ಮ ಯೋಗ್ಯತೆ (ಮಟ್ಟ) ಯನ್ನು ತಿಳಿದುಕೊಂಡು ಅದರಂತೆ ನಾವು ನಡೆಯಬೇಕು. ಇದು ಯಾವಾಗಲೂ ಒಳಿತಾದದ್ದು ಮತ್ತು ಕ್ಷೇಮಂಕರವಾದದ್ದಿರುವದು. [೩೨] ಕರ್ಮದ ಮಾರ್ಗದಲ್ಲಿ ಆವಾಹನ ಮತ್ತು ವಿಸರ್ಜನ ಎಂದು ಪೂಜಾ ವಿಧಾನವನ್ನು ಹೇಳಲಾಗಿದೆ. ಆವಾಹನ ಅಂದರೆ ಆಮಂತ್ರಣ ಅಥವಾ ಕರೆಯುವದು. ಮತ್ತು ವಿಸರ್ಜನ ಅಂದರೆ ನಿರೋಪ ಕೊಡುವದು. ಇದು ಪೂರ್ವ ಪಕ್ಷವೆನಿಸುವದು. ಈಗ ಮುಂದೆ ಸಿದ್ಧಾಂತದ ಪರಮತತ್ವದ ವರ್ಣನೆಯು ಇರುವದು. ಭಗವಂತನು ನನಗಿಂತ ಬೇರೆ ಅಂದರೆ ಭಗವಂತನು ಬೇರೆ ಮತ್ತು ನಾನು ಬೇರೆ ಅನ್ನುವ ಭಾವನೆಯು ಎಲ್ಲಿಯವರೆಗೆ ಇರುವದೋ ಅಲ್ಲಿಯವರೆಗೆ ದೇವನ ಆವಾಹನ ಮತ್ತು ವಿಸರ್ಜನ ನಡೆಯುವದು. ಇದು ಉಪಾಸನೆಯ ಕ್ಷೇತ್ರವಿರುತ್ತದೆ. ಆದರೆ ಭಗವಂತನಿಂದ ನಾನು ಬೇರೆಯವನೇ ಅಲ್ಲ ಅನ್ನುವ ಭಾವನೆಯು ಬಂದಿತೆಂದರೆ ಆವಾಹನ ಮತ್ತು ವಿಸರ್ಜನ ಎರಡೂ ಮುಗಿಯುವವು. ಅಂದರೆ ಚಂಚಲದ ಸೀಮೆ ಇಲ್ಲಿಗೆ ಮುಗಿಯುವದು. ಮತ್ತು ನಿಶ್ಚಲ ಸೀಮೆ ಹತ್ತುವದು. [೩೩] ವೇದಾಂತ ಅಂದರೆ ಶಾಸ್ತ್ರ ಪ್ರಚೀತಿ, ಸಿದ್ಧಾಂತ ಅಂದರೆ ಗುರುಪ್ರಚೀತಿ ಮತ್ತು ಧಾದಾಂತ ಅಂದರೆ ಆತ್ಮಪ್ರಚೀತಿ. ಈ ಮೂರು ಪ್ರಚೀತಿಗಳಲ್ಲಿ ಆತ್ಮಪ್ರಚೀತಿಯು ನಿಶ್ಚಿತವಾದ ಮುಖ್ಯ ಪ್ರಮಾಣವಿರುವದು. [ಪ್ರಚೀತಿ ಅಂದರೆ ಅನುಭವ] ಪಂಚಭೂತಗಳ ಅವಾಢವ್ಯ ಹರಡುವಿಕೆ [ಪಸಾರ] ಯನ್ನು ಅಂದರೆ ಅಷ್ಟದೇಹದ ನಿರಾಸವನ್ನು ಮಾಡಿ ಅಸಾರವನ್ನು ಬದಿಗೆ ಸರಿಸಬೇಕು. ಮತ್ತು ನಮ್ಮ ಆತ್ಮ ಹಿತವನ್ನು ಮಾಡಿಕೊಡುವ ಮಹಾವಾಕ್ಯದ ಅರ್ಥವನ್ನು ನೋಡಬೇಕು. ಇದರ ಮೇಲೆ ಮನನ ಚಿಂತನ ಮಾಡಬೇಕು. [೩೪]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹದಿನೈದನೆಯ ದಶಕದೊಳಗಿನ
"ಪಿಂಡೋತ್ಪತ್ತಿ ನಿರೂಪಣ"ವೆಂಬ ಹೆಸರಿನ ಒಂಭತ್ತನೆಯ ಸಮಾಸವು ಮುಗಿದುದು.

● ●

## ದಶಕ ೧೫. ಸಮಾಸ ೧೦. ಸಿದ್ಧಾಂತ ನಿರೂಪಣ (ನುಡಿ ೪೪)

ಶ್ರೀ ಸಮರ್ಥರಂತಹ ಶ್ರೇಷ್ಠ ಜ್ಞಾನಿ ಭಕ್ತರಲ್ಲಿ ಒಂದು ದೊಡ್ಡ ವೈಶಿಷ್ಟ್ಯವಿರುವದು. ಇವರು ಸ್ವತಃ ಬಹು ದೊಡ್ಡ ಉಪಾಸಕರಿರುವರು. ಮತ್ತು ವೇಳೆ ಬಂದಾಗ ಉಪಾಸನೆಯ ಮಹತ್ವವನ್ನು ಹೇಳುವಾಗ ಅದರೊಂದಿಗೆ ತಾವೂ ತನ್ಮಯರಾಗಿ ಹೋಗುವರು. ಆದರೆ ಇವರು ಇದರ ಜೊತೆಗೇ ಉಪಾಸನೆಯ ಹದ್ದನ್ನು [ಗಡಿ, ಮೇರೆ] ತಿಳಿಸಿ ಹೇಳದೇ ಇರುವದಿಲ್ಲ. ಈ ಸಮಾಸದಲ್ಲಿ ಹೀಗೆಯೇ ಇರುವದು. [ಕಂಡುಬರುವದು] ಹಿಂದಿನ ಸಮಾಸದಲ್ಲಿ

ಅಂತರಾತ್ಮನ ಶ್ರೇಷ್ಠತೆಯನ್ನು ಹೇಳಿ ಅವನ ಉಪಾಸನೆಯ ಬಗ್ಗೆ ಬಹಳ ಗೌರವ ತೋರಿರುವರು. ಆದರೆ ಇದೆಲ್ಲವೂ ಪೂರ್ವ ಪಕ್ಷವಿರುವದು. ಉತ್ತರ ಪಕ್ಷ ಅಂದರೆ ಸಿದ್ಧಾಂತವು, ಮುಂದೆ ಇರುವದು. ಎಂದು ಸೂಚಿಸಿ [ತಿಳಿಸಿ]ದ್ದಾರೆ. ಈ ಸಮಾಸದಲ್ಲಿ ಸಂಪೂರ್ಣ ಅದ್ವೈತದ ಅನುಭವವನ್ನು ವರ್ಣಿಸಿರುವದು ಕಂಡುಬರುತ್ತದೆ. ಶ್ರೀ ಸಮರ್ಥರು ಹೇಳುವದೇನಂದರೆ: ವಿವೇಕದಿಂದ ಚಂಚಲವನ್ನು ಹಿಂದೆ ಹಾಕಿ ನಿಶ್ಚಲದ ಮಹತಿಯನ್ನು ತಿಳಿಯುವ ದಾರಿಯನ್ನು ಹಿಡಿಯಬೇಕು. ಅಂದರೆ ಸಾಧಕನಿಗೆ ತನ್ನ ಅಂತರಂಗದಲ್ಲಿ ತನ್ನಷ್ಟಕ್ಕೆ ತಾನೇ ಅವನಿಗೆ ಎಲ್ಲವೂ ತಿಳಿಯುವದು. ಇವನ ವೃತ್ತಿಯ- ಮನಸ್ಥಿತಿಯ ಶೋಧನ [ದೋಷನಿವಾರಣೆ]ಆಗುತ್ತ ಹೋಗುವದು. ಮತ್ತು ಕೊನೆಗೆ ವೃತ್ತಿಯ ನಿವೃತ್ತಿಯಾಗುವದು. ಮೊದಲು ಅಜ್ಞಾನವು ಹೋಗಿ ಜ್ಞಾನವು ಬರುವದು. ಆ ಮೇಲೆ ಜ್ಞಾನವು ವಿಜ್ಞಾನವಾಗುವದು. ಆಗ ಅಲ್ಲಿ ನಿರಂಜನನ ಅಖಂಡ [ಸತತ] ಭೆಟ್ಟಿಯಾಗುವದು ಅಂತರಾತ್ಮನ ಶೋಧವನ್ನು ಮಾಡುತ್ತಾ, ಮಾಡುತ್ತಾ, ಚಂಚಲವು ನಿಶ್ಚಲವಾಗಿ ಪರಿವರ್ತನ ಹೊಂದುವದು. ಅಂದರೆ ವೃತ್ತಿ ಶೂನ್ಯ ಅವಸ್ಥೆ ಬರುವದು. ಅಂದರೆ ಮನವು ಉನ್ಮನವಾಗುವದು. ಆಗ ಅವನಲ್ಲಿ [ಸಾಧಕನಲ್ಲಿ] ದೇವಭಕ್ತ ಅನ್ನುವದು ಉಳಿದಿರುವದಿಲ್ಲ. [ಉಳಿಯುವದಿಲ್ಲ]. ಚಂಚಲದಲ್ಲಿ ಇರುವ ಸಾಧಕನು ಚಂಚಲವನ್ನು ಕೈಯಲ್ಲಿ ಹಿಡಿದುಕೊಂಡೇ ಸಾಧನೆ ಮಾಡುತ್ತಾನೆ. ಆದ್ದರಿಂದ ಚಂಚಲದ ಚಕ್ರದಿಂದ ಹೊರಬೀಳುವದು ಅವನಿಗೆ ಕಠಿಣವಾಗುವದು. ಇಂಥ ಕಠಿಣ ಸಮಯದಲ್ಲಿ ಶ್ರೀ ಸಮರ್ಥರು ಅಂದರೆ ಶ್ರೀ ಸದ್ಗುರುವು ತನ್ನ ಶಿಷ್ಯ ಸಾಧಕನಲ್ಲಿ [ಸಾಧಕನ ಮೇಲೆ] ಶಕ್ತಿ ಪಾತಮಾಡಿ ಚಂಚಲದ ಪ್ರವಾಹದಿಂದ ಹೊರ ಬರುವಂತೆ ಅನುಕೂಲ ಮಾಡಿಕೊಡುವದು. [ಶಕ್ತಿಪಾತ ಅಂದರೆ ಗುರುವು ಶಿಷ್ಯನಿಗೆ ಕೊಟ್ಟಂಥ ಅಥವಾ ಕೊಡುವ ಅಧ್ಯಾತ್ಮ ಶಕ್ತಿಯ ಉಪಯೋಗ ಮಾಡಿಕೊಳ್ಳುವ ಸ್ವತಃದ ಸಾಮರ್ಥ್ಯವು] ಕಾಮ, ಕ್ರೋಧ, ಲೋಭ ಇತ್ಯಾದಿ ಆರು ವಿಕಾರಗಳನ್ನು ತ್ಯಜಿಸಿ ಅಥವಾ ಒಗೆದು ಯಾವನು ಆತ್ಮಾನಾತ್ಮ ವಿಚಾರದಲ್ಲಿ ಇರುವನೋ ಅವನು ಸನ್ಯಾಸಿ ಎಂದು ತಿಳಿಯಬೇಕು. ಇಲ್ಲಿಯವರೆಗೆ ಇಂಥ ಬಹಳಷ್ಟು ವಿಚಾರೀ ಪುರುಷರು ನಿಃಸಂಗರಾಗಿ ಜ್ಞಾನಿಗಳಾದರು. ಆದ್ದರಿಂದ ಸಾಧಕನು ಶಾಶ್ವತದ ಶೋಧ ಮಾಡಬೇಕು. ಇದನ್ನು ಮಾಡುವಾಗ ಶಬ್ದ, ಕಲ್ಪನೆ, ಮನ ಮತ್ತು ಬುದ್ಧಿ ಇವುಗಳ ಆಚೆಗೆ ಹೋಗಬೇಕು. ಅಲ್ಲಿ ನಿರಂಜನನ ಭೆಟ್ಟಿಯಾಗುವದು. ಇದರಿಂದ ಸಾಧಕನು ಜ್ಞಾನಿಯಾಗುವನು. ನಿರ್ವಿಕಾರನಾಗುವನು. ಇವನ ವಾಸನಾ ಬೀಜವು ಸುಟ್ಟುಹೋಗುವದು. ಮತ್ತು ಇವನ ದೇಹವು ಪ್ರಾರಬ್ಧವಿದ್ದಂತೆ ನಡೆಯುವದು. ದೃಶ್ಯವು ಇಲ್ಲದಾಗಿ[ನಾಶವಾಗಿ]ಹೋಗುವದಿಲ್ಲ. ಇವನ ಮಿಥ್ಯಾತನ[ಅಸಾರ ವಿಷಯ] ಮಾತ್ರ ಖಾತ್ರಿಯಿಂದ ತಿಳಿಯುವದು. [ನಾನು ಶಾಶ್ವತನಲ್ಲ ಮತ್ತು ಕಾಣುವದೆಲ್ಲ ಶಾಶ್ವತವಲ್ಲ ಅನ್ನುವ ಜ್ಞಾನವಾಗುವದು]. ಜ್ಞಾನಿ ಮನುಷ್ಯನು ಜಗತ್ತಿನಲ್ಲಿ ಭಕ್ತಿಯ ಪ್ರಸಾರಮಾಡಿ ಉಪಾಸನೆಯ ಋಣವನ್ನು ತೀರಿಸಬೇಕು.

### ದಶಕ ೧೫. ಸಮಾಸ ೧೦. ಸಿದ್ಧಾಂತ ನಿರೂಪಣ (ನುಡಿ ೩೩)

॥ಶ್ರೀರಾಮ॥ ಗಗನೀ ಅವಘೇ ಚಿ ಹೋತ ಜಾತೇ । ಗಗನಾಐಸೇ ತಗೇನಾ ತೇ ।
ನಿಶ್ಚಳೀ ಚಂಚಳ ನಾನಾ ತೇ । ಯೋಣೇ ಚಿ ನ್ಯಾಯೇ ॥೧॥

ಅಂಧಾರ ದಾಟಲಾ ಬಳೀ । ವಾಟೇ ಗಗನ ಜಾಲೇ ಕಾಳೇ ।
ರವಿಕಿರ್ಣೇ ತೇ ಪಿವಳೇ । ಸವೇ ಚಿ ವಾಟೇ ॥೨॥

ಉದಂಡ ಹಿಂವ ಜೇವ್ಹಾ ಪಡಿಲೇ । ಗಮೆ ಗಗನ ಥಂಡ ಜಾಲೇ ।
ಉಷ್ಣ ಝಳೇನೇ ವಾಳಲೇ । ಐಸೇ ವಾಟೇ ॥೩॥

ಐಸೇ ಜೇ ಕಾಂಹೀ ವಾಟಲೇ । ತೇ ತೇ ಜಾಲೇ ಆಣಿ ಗೇಲೇ ।
ಆಕಾಶಾಸಾರಿಖೇ ತಗಲೇ । ಹೇ ತೋ ಘಡೇನಾ ॥೪॥

ಉತ್ತಮ ಜಾಣೇವೇಚಾ ಜಿನಸ । ಸಮಜೋನ ಪಾಹೇ ಸಾವಕಾಸ ।
ನಿರಾಭಾಸ ತೇ ಆಕಾಶ । ಭಾಸ ಮಿಥ್ಯಾ ॥೫॥

ಉದಕ ಪಸರೇ ವಾಯೋ ಪಸರೇ । ಆತ್ಮಾ ಅತ್ಯಂತ ಚಿ ಪಸರೇ ।
ತತ್ತ್ವೇ ತತ್ತ್ವ ಅವಘೇ ಚಿ ಪಸರೇ । ಅಂತರ್ಯಾಮೀ ॥೬॥

ಚಳತೇ ಆಣೀ ಚಳೇನಾ ತೇ । ಅಂತರೀ ಅವಘೇ ಚ ಕಳತೇ ।
ವಿವರಣೇ ಚಿ ನಿವಳತೇ । ಪ್ರಾಣಿಮಾತ್ರಾಸೀ ॥೭॥

ವಿವರತಾ ವಿವರತಾ ಶೇವಟೀ । ನಿವೃತ್ತಿಪದೀ ಅಖಂಡ ಭೇಟೀ ।
ಜಾಲಿಯಾನೇ ತುಟೀ । ಹೋಣಾರ ನಾಹೀ ॥೮॥

ಜೇಥೇ ಜ್ಞಾನಾಚೇ ಹೋತೇ ವಿಜ್ಞಾನ । ಆಣಿ ಮನಾಚೇ ಹೋತೇ ಉನ್ಮನ ।
ತತ್ತ್ವನಿರ್ಸನೀ ಅನನ್ಯ । ವಿವೇಕೇ ಹೋತೇ ॥೯॥

ವಡಿಲಾಸ ಶೋಧೂನ ಪಾಹಿಲೇ । ತೋ ಚಂಚಳಾಚೇ ನಿಶ್ಚಳ ಜಾಲೇ ।
ದೇವ ಭಕ್ತಪಣ ಗೇಲೇ । ತಯೋ ಠಾಈ ॥೧೦॥

ಠಾವ ಮ್ಹಣತಾ ಪದಾರ್ಥ ನಾಹೀ । ಪದಾರ್ಥಮಾತ್ರ ಮುಳೀ ನಾಹೀ ।
ಜೈಸೆ ತೈಸೇ ಬೋಲೋ ಕಾಂಹೀ । ಕಳಾವಯಾ ॥೧೧॥

## ದಶಕ ೧೫. ಸಮಾಸ ೧೦. ಸಿದ್ಧಾಂತ ನಿರೂಪಣ (ನುಡಿ ೩೩)

ಆಕಾಶವು ಸರ್ವವ್ಯಾಪಿ ಮತ್ತು ನಿಶ್ಚಲವಿರುವದು. ಇದರಲ್ಲಿಯೇ ಎಲ್ಲವೂ ಆಗುವವು. ಮತ್ತು ಇಲ್ಲದಾಗಿಯೂ ಹೋಗುವವು. ಇದು ಚಂಚಲವಿರುವದು. ಆದ್ದರಿಂದ ನಿಶ್ಚಲ ಮತ್ತು ಚಂಚಲ ಇವೆರಡನ್ನೂ ನಿಮ್ಮ ಅಂತರ್ಯಾಮದಲ್ಲಿ ವಿಶದವಾಗಿ ವಿವರಿಸಿ ನೋಡಿರಿ. ಅಂದರೆ ಆಮೇಲೆ ನಿರಂಜನನ ಭೆಟ್ಟಿಯಾಗುವದು. ವಿಜ್ಞಾನವಾಗುವದು. ಮತ್ತು ಉನ್ಮನಿಯು ಸಾಧ್ಯವಾಗುವದು. ಆಕಾಶದಲ್ಲಿಯೇ ಎಲ್ಲ ಘಟನೆಗಳು ಆಗುವವು. ಮತ್ತು ಹೋಗುವವು. ಆಗುವಂಥ ಮತ್ತು ಹೋಗುವಂಥ ಘಟನೆಗಳು ಕಾಯಮ ಆಗಿ ಉಳಿಯುವದಿಲ್ಲ. ನಿಶ್ಚಲದಲ್ಲಿ ಚಂಚಲದ ಅನೇಕ ಪ್ರಕಾರಗಳೂ ಸಹಿತ ಹೀಗೆಯೇ ಆಗುವವು. ಮತ್ತು ಹೋಗುವವು. ಇವು ಸ್ಥಿರವಾಗಿ ನಿಲ್ಲುವದಿಲ್ಲ. [೧] ಅತ್ಯಂತ ಕಗ್ಗತ್ತಲೆ ಇದ್ದಾಗ ನೋಡಿದರೆ ಆಕಾಶವು ಕರ್‍ರಗಾಗಿದೆಯೆಂದು ಅನಿಸುವದು. ಇದೇ ಆಕಾಶವು ಸೂರ್ಯ ಕಿರಣಗಳಿಂದ ಹಳದೀ ಆಗಿದೆಯೆಂದು ಅನಿಸುವದು. [೨] ಬಹಳ ತೀವ್ರವಾದ ಚಳಿ ಬಿದ್ದಾಗ ಆಕಾಶವು ತಣ್ಣಗಾಗಿದೆಯೆಂದು ಅನಿಸುವದು. ಉಷ್ಣತೆ ತೀವ್ರವಾಯಿತೆಂದರೆ ಇದೇ ಆಕಾಶವು ಅಗದೀ ಒಣಗಿ ಹೋಗಿದೆಯೆಂದು ಅನಿಸುವದು. [೩] ಈ ಪ್ರಕಾರ ನಮಗೆ ಏನೇನು ಅನಿಸುವದೋ ಅದೆಲ್ಲವೂ ಆಕಾಶದಲ್ಲಿ ಆಯಿತು. ಮತ್ತು ಹೋಯಿತು. ಆದರೆ ಇವು ಆಕಾಶದಂತೆ ಕಾಯಮ ಉಳಿದು ಇರುವವು ಎಂದು ಅನ್ನುವದು ಎಂದಿಗೂ ಶಕ್ಯವಿಲ್ಲ. [೪] ಶುದ್ಧ ಅರಿವು [ಆತ್ಮಾರಾಮ] ಇದು ಸರ್ವೋತ್ತಮ ವಸ್ತುವಾಗಿರುವದು. ಇದನ್ನು ಗುರುತಿಸಿ ತಿಳಿದು ಸಮಾಧಾನದಿಂದ ಶಾಂತವಾಗಿ ನೋಡಿದ್ದಾದರೆ ಆಗ ಕಂಡು ಬರುವದೇನಂದರೆ ಆಕಾಶದ ಭಾಸವಾಗುವದಿಲ್ಲ. [ಅಂದರೆ ಆಕಾಶವು ನಿರಾಭಾಸವೆಂದೂ, ದೃಶ್ಯವೆಲ್ಲವೂ ಭಾಸವೆಂದೂ ಅನಿಸುವದು.] ಅಂದರೆ ಯಾವ ಯಾವುದು ಕಾಣುವದೋ ಭಾಸವಾಗುವದೋ ಅದೆಲ್ಲ ಖೊಟ್ಟಿ [ಮಿಥ್ಯಾ] ಎಂದು ತಿಳಿಯುವದು. [೫]ನೀರು ವ್ಯಾಪಕವಿರುವದು. [ಪಸರಿಸುವದು] ವಾಯುವು ವ್ಯಾಪಕವಿರುವದು. ಆತ್ಮ ಆದರೋ ಅತಿಶಯ ವ್ಯಾಪಕವಿರುವದು. ಅಂತೂ ಒಂದೇ ಒಂದು ತತ್ತ್ವವು ಅಂದರೆ ಅಂತರ್ಯಾಮದಲ್ಲಿ ವ್ಯಾಪಕವಾಗಿರುವ ನಿರಾಭಾಸವೇ [ಅರಿವೇ] ಅನುಭವಕ್ಕೆ ಬರುವದು. [೬] ಯಾವುದು ಚಂಚಲವೋ ಅದು ಮತ್ತು ಯಾವುದು ಚಂಚಲ ರಹಿತ ಅಂದರೆ ನಿಶ್ಚಲವಾದುದೋ ಅದು ಇದೆಲ್ಲವೂ ನಮ್ಮ ಅಂತರ್ಯಾಮದಲ್ಲಿಯೇ ತಿಳಿಯುವದು. ಇದು ಮನನ ಚಿಂತನದಿಂದಲೇ ಮನುಷ್ಯನ ಅಂತರ್ಯಾಮದಲ್ಲಿ ಸ್ಪಷ್ಟವಾಗಿ ಕಂಡುಬರುವದು. [೭] ನಿರಂತರವೂ ಚಿಂತನ ಮಾಡುತ್ತಾ ಮಾಡುತ್ತಾ ಕೊನೆಗೆ ಮನುಷ್ಯನು ನಿವೃತ್ತಿ ಪದಕ್ಕೆ ಮುಟ್ಟುವನು. (ಜೀವ- ಶಿವ ಭೆಟ್ಟಿ ಆಗಿ) ಅಲ್ಲಿ ಅವನಿಗೆ ಸ್ವರೂಪ (ಆತ್ಮ ಸ್ವರೂಪದ) ಅಖಂಡ ಭೆಟ್ಟಿಯಾಗುವದು. ಒಮ್ಮೆ ಸ್ವರೂಪದ ದರ್ಶನವಾಯಿತೆಂದರೆ ಆ ಮೇಲೆ ಎಂದೂ ಇದರ ವಿಯೋಗವಾಗುವದಿಲ್ಲ (೮) ಸ್ವರೂಪ ದರ್ಶನದಿಂದಾದ ಜ್ಞಾನವು ವಿಜ್ಞಾನವಾಗುವದು. ಮತ್ತು ಮನವು ಉನ್ಮನ [ಈಶ ಚಿಂತನದಲ್ಲಿ ಸದಾ ನಿಮಗ್ನ]ವಾಗುವದು. ಇಲ್ಲಿಗೆ ಎಲ್ಲ ತತ್ತ್ವಗಳು ನಿರಸನ [ಪರಿಹಾರ] ವಾಗುವವು. ಇಲ್ಲಿಗೆ ದ್ವೈತ ಮುಗಿಯಿತು. ವಿವೇಕದಿಂದ ಪರಬ್ರಹ್ಮದೊಂದಿಗೆ ಅನನ್ಯತನ ಘಟಿಸುವದು. (೯) ಉಪಾಸನಾ ಮಾಡಿ ಅಂತರಾತ್ಮನ ಶೋಧವನ್ನು ಮಾಡುತ್ತಾ ಮಾಡುತ್ತಾ ಎಲ್ಲ ಅಶಾಶ್ವತವೂ ಕೂಡಾ ಶಾಶ್ವತ ರೂಪಹೊಂದುವದು. ಉಪಾಸಕ ಮತ್ತು ಉಪಾಸ್ಯ ಅನ್ನುವ ಈ ಭೇದವು ಮರೆಯಾಗುವದು. (ಮೊದಲು) ಅಜ್ಞಾನವು ಹೋಗುವದು. (ಕೊನೆಗೆ) ಜ್ಞಾನವೂ ಹೋಗುವದು. ಮತ್ತು ಕೇವಲ ವೃತ್ತಿ ಶೂನ್ಯ ಅವಸ್ಥೆಯು ಉಳಿಯುವದು. ಚಂಚಲದ ಅಡಳಿತ [ಅಧಿಕಾರ]ದ ಕೈಯಿಂದ ಬಿಡುಗಡೆ ಹೊಂದುವದೇ ಆಗಿದೆ. ಇದೇ ನಿಜವಾದ ಶಕ್ತಿಪಾತದ ಲಕ್ಷಣವಿರುವದು; ಅಂತರಾತ್ಮನ ಶೋಧವನ್ನು ಮಾಡಲಿಕ್ಕೆ ಹೊರಟ ಸಾಧಕನಿಗೆ ಬರುವ ಅನುಭವವೇನಂದರೆ ಯಾವುದು ಚಂಚಲವಿದೆಯೋ ಅದು ನಿಶ್ಚಲವಾಗುವದು. ಅಲ್ಲಿಗೆ (ಆ ಸ್ಥಳದಲ್ಲಿ) ದೇವ ಮತ್ತು ಭಕ್ತ ಅನ್ನುವ ಭೇದ [ಬೇರೆತನ] ಮುಗಿಯುವದು. ಇಬ್ಬರೂ ದೇವ ಮತ್ತು ಭಕ್ತ ಅಂದರೆ, ಜೀವ–ಶಿವ ಏಕಜೀವರಾಗಿ ಬಿಡುವರು. (೧೦) "ಅಲ್ಲಿ" ಅನ್ನುವ ಶಬ್ದವನ್ನು ನಾನು ಹಾಕಿರುವದು ನಿಜವೇ ಇದ್ದರೂ ಆ ಅನುಭವದಲ್ಲಿ ಸ್ಥಳ ಇಲ್ಲ. ಯಾವುದೇ ದೃಶ್ಯ ಪದಾರ್ಥಗಳಂತೂ ಎಷ್ಟೆಷ್ಟೂ ಇಲ್ಲ. ಆದರೆ ಆ ಅನುಭವದ ಬಗ್ಗೆ ಸ್ವಲ್ಪವಾದರೂ ಕಲ್ಪನೆ ನಿಮಗೆ ಬರಲಿ ಅನ್ನುವ ಉದ್ದೇಶದಿಂದ ಹೇಗೆ ಬಂದಿತೋ ಹಾಗೆ ನಾನು ಮಾತನಾಡಿದೆನು(೧೧)

ಅಜ್ಞಾನಶಕ್ತಿ ನಿರಸಲೀ । ಜ್ಞಾನಶಕ್ತಿ ಮಾವಳಲೀ ।
ವೃತ್ತಿಸುನ್ಯೇ ಕೈಸೀ ಜಾಲೀ । ಸ್ಥಿತೀ ಪಾಹಾ ॥೧೨॥

ಮುಖ್ಯ ಶಕ್ತಿಪಾತ ತೋ ಐಸಾ । ನಾಹೀ ಚಂಚಳಾಚಾ ವಳಸಾ ।
ನಿವಾಂತೀ ನಿವಾಂತ ಕೈಸಾ । ನಿರ್ವಿಕಾರೀ ॥೧೩॥

ಚಂಚಳಾಚೀ ವಿಕಾರ ಬಾಲಟೇ । ತೇ ಚಂಚಳ ಚಿ ಜೇಥೇ ಆಟೇ।
ಚಂಚಳ ನಿಶ್ಚಳ ಘನವಟೇ । ಹೇ ತೋ ಘಡೇನಾ ॥೧೪॥

ಮಹಾವಾಕ್ಯಾಚಾ ವಿಚಾರು । ತೇಥೇ ಸನ್ಯಾಶಾಸ ಅಧಿಕಾರು ।
ದೈವೀಕೃಪೇಚಾ ಜೋ ನರು । ತೋ ಹಿ ವಿವರೋನ ಪಾಹೆ ॥೧೫॥

ಸನ್ಯಾಸೀ ಮ್ಹಣಿಜೆ ಶಡನ್ಯಾಸೀ । ವಿಚಾರವಂತ ಸರ್ವ ಸನ್ಯಾಸೀ ।
ಆಪುಲೀ ಕರಣೀ ಆಪಣಾಸೀ । ನಿಶ್ಚಯೇಸೀ ॥೧೬॥

ಜಗದೀಶ ವೊಳಲ್ಯಾವರೀ । ತೇಥೇ ಕೋಣ ಅನುಮಾನ ಕರೀ ।
ಆತಾ ಅಸೋ ಹೇ ವಿಚಾರೀ । ವಿಚಾರ ಜಾಣತೀ ॥೧೭॥

ಈ ಸ್ಥಿತಿ ಹೇಗಿರುವದೆಂದರೆ ಇವರಲ್ಲಿ ಅಜ್ಞಾನ ಮತ್ತು ಅಜ್ಞಾನದ ಭ್ರಮ ಇವೆಲ್ಲವೂ ಸಮೂಲ ನಾಶ ವಾಗುವವು. ಇದರಂತೆಯೇ ಕೊನೆಗೆ ಜ್ಞಾನ ಮತ್ತು ಅದರ ಪರಿಣಾಮಗಳೂ ಶಾಂತವಾಗಿ ಬಿಡುವವು. ಆ ಮೇಲೆ ಕೊನೆಯದಾಗಿ ವೃತ್ತಿಯು ಶೂನ್ಯವಾಗಿ ಕೇವಲ ಶುದ್ಧ ವಸ್ತು (ಬ್ರಹ್ಮವು) ಮಾತ್ರ ಉಳಿಯುವದು. (೧೨) ಇವತ್ತಿನವರೆಗೆ ಚಂಚಲದ ಚಕ್ರದಲ್ಲಿ (ಚಂಚಲ ಅನ್ನುವ ತಿರುಗಣಿಮಂಡದ ಸುಳಿಯಲ್ಲಿ) ಸಿಕ್ಕು ತಿರುಗುತ್ತ ಒದ್ದಾಡುತ್ತಲಿದ್ದ ಜೀವವನ್ನು ಚಕ್ರದ ಸುಳಿಯಿಂದ ಹೊರಗೆ ಎಳೆಯುವದೇ ಶಕ್ತಿಪಾತದ ಪ್ರಧಾನ ಲಕ್ಷಣವಿರುವದು. ಚಂಚಲದ ಚಕ್ರದಿಂದ ಹೊರಬಂದ ಜೀವವು ಪರಮಾತ್ಮಸ್ವರೂಪವಾಗುವದು.ಮತ್ತು ಆ ಶಾಂತ ಮತ್ತು ಉಪದ್ರವ ರಹಿತ ಮತ್ತು ನಿರ್ವಿಕಾರ ಸ್ವರೂಪದಲ್ಲಿ ಶಾಂತಿಯು ಸಮಾಧಾನದಿಂದ ಸ್ಥಿರಗೊಳ್ಳುವದು. (೧೩) ಶ್ರೀ ಸದ್ಗುರು ಅಂದರೆ ಆಧ್ಯಾತ್ಮಿಕ ಶಕ್ತಿಯ ಪ್ರಚಂಡ ಭಂಡಾರವೇ ಇರುವನು. ಇಷ್ಟೇ ಅಲ್ಲ ಶ್ರೀ ಸದ್ಗುರು ಅಂದರೆ ಅಧ್ಯಾತ್ಮಿಕ ಶಕ್ತಿಯನ್ನು ಅಖಂಡವಾಗಿ ನಿರ್ಮಾಣಮಾಡುವ ಯಂತ್ರವೇ ಇರುವನು. ಈ ಸದ್ಗುರು ಶಕ್ತಿಯ ಉಪಯೋಗ ಮಾಡಿಕೊಂಡು ಸಾಧಕನು ತನ್ನ ಅಂತಃಕರಣವನ್ನು ಅಂತರಾತ್ಮ [ನೋದಿಗೆ] ನಲ್ಲಿ ಸ್ಥಿರಮಾಡಿಕೊಳ್ಳಲಿಕ್ಕೆ ಶಕ್ಯ ವಾಗುವದು. ಶ್ರೀ ಸದ್ಗುರು ತನ್ನ ಶಕ್ತಿಯನ್ನು ಕೊಡಲಿಕ್ಕೆ ಸದಾಕಾಲ ತಯಾರ ಇರುತ್ತಾನೆ. ಆದರೆ ಶಕ್ತಿಯನ್ನು ಪಡೆಯುವ ಶಿಷ್ಯನು ಇದಕ್ಕಾಗಿ ಮನಸಾ ತಯಾರ ಇರಬೇಕಾಗುವದು. ದರ್ಶನ, ಸ್ಪರ್ಶ, ಭಾಷಣ, ಸ್ಮರಣ, ಸಂಕಲ್ಪ, ಆಜ್ಞಾ, ಸ್ವಪ್ನ ಇತ್ಯಾದಿ ಶಕ್ತಿಪ್ರಧಾನ ಮಾಡುವ ಅನೇಕ ಮಾರ್ಗಗಳು ಇರುವವು. ಯಾವ ಸಾಧಕನಿಗೆ ಯಾವ ಮಾರ್ಗವನ್ನು ಯೋಜಿಸಬೇಕು ಅನ್ನುವದರ ಅಚೂಕ [ನಿಶ್ಚಿತವಾದ] ಜ್ಞಾನವು ಸದ್ಗುರು ಒಬ್ಬನಿಗೇ ಇರುತ್ತದೆ. ಒಂದು ಜ್ಯೋತಿಯಿಂದ ಎರಡನೆಯ ಜ್ಯೋತಿಯನ್ನು ಹಚ್ಚಬೇಕಾಗುವದು. ಇದರಂತೆ ಪರಮಾತ್ಮ ಸ್ವರೂಪದಲ್ಲಿ ವಿಲೀನವಾದಂಥ ಸಂತರು ಸಾಧಕನ ಅಂತರಾತ್ಮವನ್ನು ಚೇತರಿಸುವರು. ಬೆಳಕು ತೋರುವರು. ಎಚ್ಚರಗೊಳಿಸುವರು. ಸಂತರು ಕೊಟ್ಟ ಭಗವಂತನ ನಾಮವೂ ಕೂಡಾ ಇದೇ ಕೆಲಸವನ್ನು ಮಾಡುವದು ಸಂತ ಸದ್ಗುರು ಶಕ್ತಿಪಾತಮಾಡಿದ ನಂತರ ಇದರ ಜೋಪಾನಮಾಡಿ ಇದನ್ನು ಬೆಳೆಸುವದು ಸಾಧಕನ ಕೆಲಸ ಇರುವದು. ಇಲ್ಲಿ ಒಂದು ಮಹತ್ವದ ಮಾತನ್ನು ಲಕ್ಷ್ಯದಲ್ಲಿಡಬೇಕು. ಅದು ಯಾವುದೆಂದರೆ ಶಕ್ತಿ ಕೊಡುವವನಲ್ಲಿ ಯಾವ ನ್ಯೂನ ಅಥವಾ ಕುಂದುಕೊರತೆಯೂ ಇರುವದಿಲ್ಲ. ಗುರು ಅನುಗ್ರಹಿಸುವ ಶಕ್ತಿಯನ್ನು ಪಡೆಯುವ ಸಾಧಕ ಶಿಷ್ಯನಲ್ಲಿ ಮಾತ್ರ ಇದನ್ನು ಪಡೆದು ಸಂಭಾಳಿಸುವದರಲ್ಲಿಯೇ ನ್ಯೂನ ಅಥವಾ ಕುಂದುಕೊರತೆ ಇರುವದು. ಎಲ್ಲಿಯವರೆಗೆ ಚಂಚಲವಿರುವದೋ ಅಲ್ಲಿಯವರೆಗೆ ಈ ಬದಲಾಗುವ (ಅಸ್ಥಿರ, ನಶ್ವರ) ದೃಶ್ಯದ ಭ್ರಮವು ಇರತಕ್ಕದ್ದಾಗಿದೆ. ಈ ಚಂಚಲವು ಸಂಪೂರ್ಣ ಹೋದರೆ [ದೂರಾದರೆ] ಆ ಮೇಲೆ ಭ್ರಮವು ಬಾಕಿ ಉಳಿಯುವದಿಲ್ಲ. ಚಂಚಲ ಮತ್ತು ನಿಶ್ಚಲ ಈ ಎರಡೂ ಎಂದೂ ಏಕರೂಪವಾಗುವದಿಲ್ಲ. ಆಗಲಿಕ್ಕೆ ಶಕ್ಯವೇ ಇಲ್ಲ. [೧೪] ನಿಜವಾದ ವಿಚಾರವಂತ ಮನುಷ್ಯನು ಮಹಾವಾಕ್ಯದ ಬಗ್ಗೆ ವಿಚಾರಮಾಡಿ ನಿಃಸಂಗನಾಗುವನು. ಪರಬ್ರಹ್ಮವು ಅಂತರಂಗದಲ್ಲಿ ಸ್ಥಿರಗೊಂಡ ಮೇಲೆ ಮಾಯಾ ಕರಗಿ ಹೋಗುವದು. [ಇಲ್ಲದಾಗುವದು]. ಅದ್ವೈತಾನುಭವದ ಅವಸ್ಥೆಯು ಮನ, ಬುದ್ಧಿ, ಶಬ್ದ, ಕಲ್ಪನಾ ಈ ಎಲ್ಲವುಗಳ ಸೀಮೆ (ಹದ್ದು) ದಾಟಿ ಆಚೆಗೆ ಇರುವದು ಯಾರು ಸನ್ಯಾಸಿ ಇರುವರೋ ಅವರಿಗೇ ಮಹಾವಾಕ್ಯದ ಬಗ್ಗೆ ವಿಚಾರಮಾಡುವ ಅಧಿಕಾರವಿರುವದು. ಈಶ್ವರೀಕೃಪಾ ಯಾರ ಮೇಲೆ ಇರುವದೋ ಅಂಥ ಭಾಗ್ಯವಂತ ಪುರುಷನೂ ಸಹ ಮಹಾವಾಕ್ಯದ ವಿಚಾರಮಾಡಲು ಶಕ್ಯನಿರುವನು. (೧೫) ಮನಸ್ಸಿನೊಳಗಿನ ಆರೂ ವಿಕಾರಗಳನ್ನು ಯಾರು ಬಿಡುವರೋ ದೂರಮಾಡುವರೋ ಅವರೇ ನಿಜವಾದ ಸನ್ಯಾಸಿ ಅನಿಸುವರು, ಖರೇ ವಿಚಾರವಂತ ಮನುಷ್ಯರೆಲ್ಲರೂ ಸನ್ಯಾಸಿಗಳೆಂದೇ ತಿಳಿಯಬೇಕು, ನಾವು ಎಷ್ಟು ಸಾಧನೆಯನ್ನು ಮಾಡುವೆವೋ ಅಷ್ಟು ಅಂದರೆ ಆ ಪ್ರಮಾಣದ ಮೇಲಿಂದ ಅದರ ಫಲ ನಮ್ಮ ಉಪಯೋಗಕ್ಕೆ ಖಾತ್ರಿಯಿಂದ ಬರುವದು. ಇದರಲ್ಲಿ ಯಾವ ಸಂಶಯವೂ ಇಲ್ಲ. (೧೬) ಒಮ್ಮೆ ಜಗತ್ತಿನ ಮಾಲಕನು ಪ್ರಸನ್ನನಾದ ಮೇಲೆ ವ್ಯರ್ಥ ಕಲ್ಪನೆಯನ್ನು ಮಾಡುತ್ತ ಯಾರೂ ಕೂಡುವದಿಲ್ಲ. ಇರಲಿ,ಯಾರು ವಿಚಾರವಂತರಿರುವರೋ ಅವರಿಗೆ ಮಾತ್ರ ಈ ವಿಚಾರವೆಲ್ಲ ತಿಳಿಯುವದು(೧೭)

ಜೇ ಜೇ ವಿಚಾರೀ ಸಮಜಲೇ । ತೇ ತೇ ನಿಃಸಂಗ ಹೋಊನ ಗೇಲೇ ।
ದೇಹಾಭಿಮಾನೀ ಜೇ ಉರಲೇ । ತೇ ದೇಹಾಭಿಮಾನ ರಕ್ಷಿತೀ ॥೧೮॥

ಲಕ್ಷೀ ಬೈಸಲೇ ಅಲಕ್ಷ । ಉಡೋನ ಗೇಲಾ ಪೂರ್ವ ಪಕ್ಷ ।
ಹೇತುರೂಪೇ ಅಂತರಸಾಕ್ಷ । ತೋ ಹಿ ಮಾವಳಲಾ ॥೧೯॥

ಆಕಾಶ ಆಣಿ ಪಾತಾಳ । ದೋನೀ ನಾಮೋ ಅಂತರಾಳ ।
ಕಾಢಿತಾ ದೃಶ್ಯಾಚೇ ಚಡಳ । ಅಖಂಡ ಜಾಲೇ ॥೨೦॥

ತೇ ತೋ ಅಖಂಡ ಚಿ ಆಹೆ । ಮನ ಉಪಾಧೀ ಲಕ್ಷೂನ ಪಾಹೆ ।
ಉಪಾಧೀ ನಿರಾಸೇ ಸಾಹೆ । ಶಬ್ದ ಕೈಸಾ ॥೨೧॥

ಶಬ್ದಪರ ಕಲ್ಪನೇಪರ । ಮನಬುದ್ಧಿ ಅಗೋಚರ ।
ವಿಚಾರೇ ಪಾಹಾವಾ ವಿಚಾರ । ಅಂತರ್ಯಾಮೀ ॥೨೨॥

ಪಾಹಾತಾ ಪಾಹಾತಾ ಕಳೋ ಯೇತೇ । ಕಳಲೇ ತಿತುಕೇ ವ್ಯರ್ಥ ಜಾತೇ ।
ಅವಘಡ ಕೈಸೇ ಬೋಲಾವೇ ತೇ। ಕೋಣ್ಯಾಪ್ರಕಾರೇ ॥೨೩॥

ವಾಕ್ಯಾರ್ಥ ವಾಚ್ಯಾಂಶ ಶೋಧಿಲಾ । ಅಲಕ್ಷೀ ಲಕ್ಷ್ಯಾಂಶ ಬುಡಾಲಾ ।
ಪುಢೇ ಸಮಜೋನ ಬೋಲಾ । ಕೋಣೇತರೀ ॥೨೪॥

ಶಾಶ್ವತಾಸ ಶೋಧೀತ ಗೇಲಾ । ತೇಣೇ ಜ್ಞಾನೀ ಸಾಚ ಜಾಲಾ ।
ವಿಕಾರ ಸಾಂಡೂನ ಮಿಳಾಲಾ । ನಿರ್ವಿಕಾರೀ ॥೨೫॥

ಯಾವ ಯಾವ ವಿಚಾರವಂತರಿಗೆ ಇದು ತಿಳಿಯಿತೋ ಆ ಎಲ್ಲರೂ ನಿಃಸಂಗರೇ ಆದರು. ನಿರಭಿಮಾನಿಗಳಾದರು. (ಅಭಿಮಾನ ಕಳಚಿ ಬಿಟ್ಟವರಾದರು.) ಇದರ ತರುವಾಯ ದೇಹ ಬುದ್ಧಿಯುಳ್ಳವರು ಯಾರು ಯಾರು ಉಳಿದಿದ್ದರೋ ಅವರೆಲ್ಲ ದೇಹಾಭಿಮಾನಕ್ಕೆ ಅಂಟಿಕೊಂಡು ಕುಳಿತರು. ದೇಹಾಭಿಮಾನವನ್ನು ನೆಚ್ಚಿ (ಸಂಬಾಳಿಸಿ) ಉಳಿದರು. (ಇರುವವರಾದರು). [೧೮] ಎಲ್ಲಿ ಲಕ್ಷ್ಯವು ಹೋಗಿ ಮುಟ್ಟುವದಿಲ್ಲವೋ ಅಂಥ ಆ ಅಲಕ್ಷ್ಯ ಬ್ರಹ್ಮವು ಮನವನ್ನು ವ್ಯಾಪಿಸಿದ ಮೇಲೆ-ಬುದ್ಧಿಯಲ್ಲಿ ಬ್ರಹ್ಮನು ಸ್ಥಿರವಾಗಿ ನಿಂತ ಮೇಲೆ ಮಾಯಾ ರೂಪದ ಪೂರ್ವ ಪಕ್ಷ ಇಲ್ಲದಾಯಿತು. ಅರ್ಥಾತ್ ಕಳಚಿ ಹೋಯಿತು. ವಾಸನೆಯ ಪ್ರೇರಕ ಶಕ್ತಿಯಾಗಿರುವ ಮತ್ತು ಅಂತರ್ಯಾಮಿಯಲ್ಲಿ ಸಾಕ್ಷಿ ರೂಪದಿಂದ ಇರುವಂಥವನೂ ಕೂಡಾ ಇಲ್ಲದಾಗಿ ಬಿಡುವನು. [೧೯] ಆಕಾಶ ಮತ್ತು ಪಾತಾಳ ಈ ಎರಡೂ ಹೆಸರು ಒಂದೇ ಒಂದಾದ ಅವಕಾಶದವೇ ಇರುವವು. ಇವುಗಳಲ್ಲಿ ಭೇದ ಉತ್ಪನ್ನಮಾಡುವ ದೃಶ್ಯದ ಪರದೆ ದೂರಾಯಿತೆಂದರೆ [ಹೋದರೆ] ಕೇವಲ ಒಂದೇ ಒಂದಾದ ಅಖಂಡ ಅವಕಾಶವು ಉಳಿಯುವದು. [೨೦] ಮೂಲದಲ್ಲಿ ಎಲ್ಲ ಅವಕಾಶವೂ (ಆಕಾಶ) ಒಂದೇ ಇರುವದು. ಅಖಂಡ ಇರುವದು. ಉಪಾಧಿಯ ಕಡೆಗೆ ನೋಡಿ ಮನಸ್ಸಿಗೆ ಇದರಲ್ಲಿ ಭೇದ ತೋರುವದು. ಅಥವಾ ಇದರಲ್ಲಿ ಖಂಡ [ಭಾಗ] ತೋರುವದು. ಈ ಉಪಾಧಿಯು ಇಲ್ಲದಾದ ಮೇಲೆ ಅಂದರೆ ಆಕಾಶತತ್ವ ದಾಟಿ ಹೋದ ಮೇಲೆ ಅಲ್ಲಿ ಶಬ್ದದ ವ್ಯವಹಾರವೇ ಸಹನವಾಗುವದಿಲ್ಲ. ಅವಕಾಶವೇ ಇರುವದಿಲ್ಲ. (೨೧) ಪರಮಾತ್ಮನು ಆಕಾಶದಂತೆ ಅಖಂಡ ಮತ್ತು ನಿರಾಭಾಸ [ಭಾಸ ರಹಿತ] ವಾಗಿರುವನು. ಇವನು ಶಬ್ದದ ಮತ್ತು ಕಲ್ಪನೆಯ ಆಚೆಗೆ ಇರುವನು. ಮನ ಮತ್ತು ಬುದ್ಧಿ ಇವುಗಳಿಗೆ ಅಗೋಚರವಿರುವನು. ನಮ್ಮ ಅಂತರ್ಯಾಮದಲ್ಲಿ ಮೇಲಿಂದ ಮೇಲೆ ವಿಚಾರಮಾಡಿ ನೋಡಿ ಇದನ್ನು ತಿಳಿಯಬೇಕು. (೨೨) ಸತತ ಚಿಂತನ ಮಾಡುತ್ತ ಹೋದರೆ ಇಂಥ ವಿಷಯಗಳು ತಿಳಿಯಹತ್ತುವವು. ಆದರೆ ನಮಗೆ ಅಷ್ಟು ಇಷ್ಟು ತಿಳಿಯಿತು ಅನ್ನುವದೆಲ್ಲವೂ ವ್ಯರ್ಥವಿರುವದು ಎಂಬ ಅನುಭವ ಬರುವದು. ನನಗೆ ತಿಳಿಯಿತು-ನನಗೆ ಹೀಗೆ ಅನಿಸುವದು ಅನ್ನುವ ಭಾವ ಇರುವವರೆಗೆ ಅದು ನಿಜವಾಗಿ ಅವನಿಗೆ ತಿಳಿದಿರುವದಿಲ್ಲ. ಯಾಕಂದರೆ ಈ ವಿಷಯವೇ ಅವಘಡ [ಕಠಿಣ] ಇರುವದು. ಇದನ್ನು [ಈ ವಿಷಯವನ್ನು] ಹೇಗೆ ಹೇಳಬೇಕು. ಮತ್ತು ಯಾವ ರೀತಿಯಿಂದ ವಿಷಯವನ್ನು ಮಂಡಿಸಬೇಕು. ಇದು ತಿಳಿಯುವದಿಲ್ಲ, ಹೊಳೆಯುವದಿಲ್ಲ. (೨೩) ಯಾವನು ಶಾಶ್ವತವನ್ನು ಶೋಧಿಸುತ್ತ ಹೋಗುವನೋ ಅವನು ನಿರ್ವಿಕಾರಿಯಾಗಿ ಏಕ ರಸನಾಗಿ ಜ್ಞಾನಿಯಾಗುವನು ಇವನ ದೇಹವು ಪ್ರಾರಬ್ಧದಂತೆ ವರ್ತಿಸುವದು. ಇವನ ವಾಸನಾ ದಗ್ಧಬೀಜವಾಗುವದು. ಆದರೂ ಕೂಡಾ ಜ್ಞಾನಿ ಪುರುಷನು ಜಗತ್ತಿನಲ್ಲಿ ಭಕ್ತಿಯನ್ನು ಬೆಳಸುವವನಾಗಬೇಕು. ಸ್ವಾನುಭವದ ಪ್ರಕಾರ ಹೀಗಿರುವದು. ಮಹಾವಾಕ್ಯದ [ತತ್ವಮಸ್ಯಾದಿಗಳ] ಲ್ಲಿಯ ಅಹಂಬ್ರಹ್ಮಾಸ್ಮಿ-ತತ್ತ್ವಮಸಿ ಇತ್ಯಾದಿ. ಶಬ್ದಗಳಿಗೆ ಯಾವ ಅರ್ಥವಿರುವದೋ ಅದು ವಾಚ್ಯಾಂಶ(ಶಾಬ್ದಿಕ ಜ್ಞಾನ)ವಿರುವದು. ಇದನ್ನು ಚೆನ್ನಾಗಿ ಶೋಧಿಸಿ ನೋಡಿದೆನು. "ನಾನು ಬ್ರಹ್ಮ ಇರುವೆನು" ಅನ್ನುವ ಇದರ ಅರ್ಥ ತಿಳಿಯಿತು. ಇದರ ಮನನ ಚಿಂತನವನ್ನು ಸತತಮಾಡುತ್ತ ಹೋದದ್ದರಿಂದ ಅನುಸಂಧಾನ (ಲಕ್ಷ್ಯ) ಹತ್ತಿತು. ಮನವು ಒಂದೇ ಸವನೆ ಸ್ವಸ್ವರೂಪದಲ್ಲಿ ರಮಿಸಹತ್ತಿತು. ಇದು ಲಕ್ಷ್ಯದ ಅಂಶವಿರುವದು. ಲಕ್ಷ್ಯವು ಸ್ವಸ್ವರೂಪವು, ಅಲ್ಲಿ ಸ್ಥಿರವಾಗುವದು, ಆದರೆ ಲಕ್ಷ್ಯಾಂಶವನ್ನು ಸಾಧಿಸುವವೇ ಆಗಿದೆ. ಆ ನಂತರ ಧ್ಯಾನಮಾಡುವಂಥ ಮನವೂ ಇಲ್ಲದಾಗಿ ವೃತ್ತಿ ಶೂನ್ಯತೆ ಬರುವದು. [ಬಂದಿತೆಂದರೆ] ಈ ಲಕ್ಷ್ಯಾಂಶವು ಅಲಕ್ಷ್ಯನಾದ ಪರಬ್ರಹ್ಮದಲ್ಲಿ ಲೀನವಾಗುವದು. ಅನುಭವಪಡೆಯುವವ ಮಾತನಾಡುವವ, ಹೇಳುವವ, ನೋಡುವವ, ಸಾಕ್ಷಿ, ಇವರೆಲ್ಲರೂ ಲಯವಾದ ಮೇಲೆ ಮಾತಾಡುವವರು ಯಾರು ಏನನ್ನು ಅರ್ಥಾತ್ ಮುಂದೆ ಮಾತನಾಡುವದಕ್ಕೆ ಏನೂ ಬಾಕಿ ಉಳಿಯುವದಿಲ್ಲ. [೨೪] ಯಾವನು ಶಾಶ್ವತದ ಶೋಧಮಾಡುತ್ತ ಹೋದನೋ ಅವನೇ ಯಥಾರ್ಥ ದಿಟವಾದ ಬ್ರಹ್ಮಜ್ಞಾನಿಯಾದನು. ವಿಕಾರ ರೂಪದ ಚಂಚಲವನ್ನು ಹಿಂದೆ ಒಗೆದು ಇವನು ನಿರ್ವಿಕಾರನಾದ ಬ್ರಹ್ಮದೊಂದಿಗೆ ತದಾಕಾರ (ಏಕರೂಪ) ವಾಗುವನು. (೨೫)

ದುಃಸ್ವಪ್ನ ಉದಂಡ ದೇಖಿಲೇ । ಜಾಗೇ ಹೋತಾ ಲಟಿಕೇ ಜಾಲೇ ।
ಪುನ್ಹಾ ಜರೀ ತೇ ಆಠವಿಲೇ । ತರೀ ತೇ ಮಿಥ್ಯಾ ॥೨೬॥

ಪ್ರಾರಬ್ಧಯೋಗೇ ದೇಹ ಅಸೆ । ಅಸೆ ಅಥವಾ ನಾಸೆ ।
ವಿಚಾರ ಅಂತರೀ ಬೈಸೇ । ಚಳೇನಾ ಐಸಾ ॥೨೭॥

ಬೀಜ ಅಗ್ನೀನೇ ಭಾಜಲೇ । ತ್ಯಾಚೇ ವಾಢಣೇ ಖುಂಟಲೇ ।
ಜ್ಞಾತ್ಯಾಸ ತೈಸೇ ಜಾಲೇ । ವಾಸನಾಬೀಜ ॥೨೮॥

ವಿಚಾರೇ ನಿಶ್ಚಳ ಜಾಲೀ ಬುದ್ಧಿ । ಬುದ್ಧಿಪಾಸೀ ಕಾರ್ಯಸಿದ್ಧಿ ।
ಪಾಹಾತಾ ವಡಿಲಾಂಚೀ ಬುದ್ಧಿ । ನಿಶ್ಚಳೀ ಗೇಲೀ ॥೨೯॥

ನಿಶ್ಚಳಾಸ ಧ್ಯಾತೋ ತೋ ನಿಶ್ಚಳ । ಚಂಚಳಾಸ ಧ್ಯಾತೋ ತೋ ಚಂಚಳ ।
ಭೂತಾಸ ಧ್ಯಾತೋ ತೋ ಕೇವಳ । ಭೂತ ಹೋಯೆ ॥೩೦॥

ಜೋ ಪಾವಲಾ ಸೇವಟವರೀ । ತಯಾಸ ಹೇ ಕಾಂಹೀ ಚ ನ ಕರೀ ।
ಅಂತರನಿಷ್ಠಾ ಬಾಜೀಗರೀ । ತೈಸೀ ಮಾಯಾ ॥೩೧॥

ಮಿಥ್ಯಾ ಐಸೇ ಕಳೋ ಆಲೇ । ವಿಚಾರಾನೇ ಸದೃಢ ಜಾಲೇ ।
ಅವಘೇ ಭಯೋ ಚಿ ಉಡಾಲೇ । ಅಕಸ್ಮಾತ ॥೩೨॥

ಉಪಾಸನೇ ಚೆ ಉತ್ತೀರ್ಣ ವ್ಹಾವೇ । ಭಕ್ತಜನೇ ವಾಢವಾವೇ ।
ಅಂತರೀ ವಿವೇಕೇ ಉಮಜಾವೇ । ಸಕಳ ಕಾಂಹೀ ॥೩೩॥

ಇತಿ ಶ್ರೀ ದಾಸಬೋಧೇ ಗುರುಶಿಷ್ಯ ಸಂವಾದೇ
'ಸಿದ್ಧಾಂತ ನಿರೂಪಣ' ನಾಮ ಸಮಾಸ ದಶಮ ॥

— ದಶಕ ಪಂಚದಶ ಸಮಾಪ್ತ —

ಅಜ್ಞಾನದ ಅವಸ್ಥೆಯಲ್ಲಿ ಇದ್ದಾಗ ಈ ದೃಶ್ಯ ರೂಪದ ಕೆಟ್ಟ ಸ್ವಪ್ನವನ್ನು ಇವನು ಬಹಳ ದೊಡ್ಡ ಪ್ರಮಾಣದಲ್ಲಿ ನೋಡಿದ್ದನು. ಆದರೆ ಈಗ ಬ್ರಹ್ಮಜ್ಞಾನ ರೂಪದ ಜಾಗ್ರತಿ ಬಂದ ಮೇಲೆ ಆ ನಶ್ವರ ದೃಶ್ಯವೆಲ್ಲವೂ ಖೊಟ್ಟಿ ಇತ್ತು ಅನ್ನುವ ಅನುಭವ ಬಂದಿತು. ಈಗ ಒಂದು ವೇಳೆ ನಶ್ವರವು ನೆನಪಿಗೆ ಬಂದರೂ ಕೂಡಾ ಇದು ಖೊಟ್ಟಿ ಇರುವದು ಅನ್ನುವ ಖಾತ್ರಿ ಇದ್ದೇ ಇರುವದು. ಯಾಕೆಂದರೆ ಇವನು ಸತ್ಯ– ಪರಬ್ರಹ್ಮಸ್ವರೂಪನಾಗಿರುವದರಿಂದ ಯಾವ ದೃಶ್ಯ ಪರಿಣಾಮಗಳೂ ಆಗಲಾರವು. (೨೬) ಜ್ಞಾನವಾದ ನಂತರ ಪ್ರಾರಬ್ಧ [ನಶಿಬ-ದೈವ] ಕ್ಕನುಸಾರವಾಗಿ ಇವನ ದೇಹ ನಡೆಯುವದು. ದೇಹ ಇರಬಹುದು ಅಥವಾ ಹೋಗಬಹುದು. ಆದರೆ ಇವನ ಅಂತಃಕರಣದಲ್ಲಿ ಬ್ರಹ್ಮ ವಿಚಾರವು ಅತ್ಯಂತ ಸ್ಥಿರವಿರುವದು. (೨೭) ಬೀಜವು ಬೆಂಕಿಯಿಂದ ಹುರಪಳಿಸಿದ್ದರೆ [ಹುರಿದಿದ್ದರೆ, ಸುಟ್ಟಿದ್ದರೆ) ಆ ಬೀಜವು ಪುನಃ ಹುಟ್ಟುವದಿಲ್ಲ. ಇದರಂತೆ ಜ್ಞಾನಿ ಪುರುಷನ ವಾಸನಾದ ಬೀಜವು ಸುಟ್ಟು ಹುರಪಳಿಸಿ ಹೋಗುವದು. ಇದರಿಂದಾಗಿ ಅವನಲ್ಲಿ ವಾಸನಾ ಉಳಿಯುವದಿಲ್ಲ. (೨೮) ಸಾಧಕನು ಆತ್ಮಾನಾತ್ಮ ವಿಚಾರವನ್ನು ಸತತಮಾಡಿ ತನ್ನ ಬುದ್ಧಿಯನ್ನು ನಿಶ್ಚಲ (ಸ್ಥಿರ) ಮಾಡಿಕೊಳ್ಳಬೇಕು. ನಿಶ್ಚಲ ಬುದ್ಧಿಯಿಂದಲೇ ಬ್ರಹ್ಮಜ್ಞಾನವು ಸಿದ್ಧವಾಗುವದು. [ಪ್ರಾಪ್ತವಾಗುವದು.] ಈ ಪೂರ್ವದಲ್ಲಿ ಆಗಿಹೋದ ಶ್ರೇಷ್ಠ ಸಂತರ ಬುದ್ಧಿಯೂ ಕೂಡಾ ಈ ರೀತಿಯಿಂದಲೇ ನಿಶ್ಚಲ ಬ್ರಹ್ಮದಲ್ಲಿ ಕೂಡಿ ಹೋಯಿತು. ಅನ್ನುವದು ಕಂಡುಬರುವದು. (೨೯) ಯಾರು ನಿಶ್ಚಲದ ಧ್ಯಾನವನ್ನು ಮಾಡುವರೋ ಅವರು ನಿಶ್ಚಲರಾಗಿ ಬಿಡುವರು. ಆದರೆ ಯಾರು ಚಂಚಲದ ಧ್ಯಾನ ಮಾಡುವರೋ ಅವರು ಚಂಚಲ ರೂಪರಾಗಿ ಬಿಡುವರು. ಯಾರು ದೃಶ್ಯದ ಧ್ಯಾನ ಮಾಡುವರೋ ಅವರು ದೃಶ್ಯ ರೂಪರಾಗಿ ಬಿಡುವರು. (೩೦) ಯಾರು ಕೊನೆಯುವರೆಗೂ ಅಂದರೆ ಪರಬ್ರಹ್ಮದವರೆಗೆ ಹೋಗುವರೋ ಅವರಿಗೆ ಚಂಚಲ ಮತ್ತು ದೃಶ್ಯ ಇವುಗಳು ಏನೂ ಮಾಡುವದಿಲ್ಲ. ಮಾಡಲಿಕ್ಕೆ ಆಗುವದೇ ಇಲ್ಲ. ಯಾರು ಖರೇ ಅಂತರ್ನಿಷ್ಠರಿರುವರೋ ಅವರಿಗೆ ಮಾಯೆಯು ಜಾದೂ ಆಟದಂತೆ ಖೊಟ್ಟ ಅನಿಸುವದು. (೩೧) ಈ ದೃಶ್ಯವೆಲ್ಲವೂ ಮಿಥ್ಯೆಯಾಗಿರುವದೆಂಬುದು ನಮಗೆ ಮೊದಲು ತಿಳಿಯುವದು. ಆ ಮೇಲೆ [ನಾವು] ಸತತ ಚಿಂತನ ಮಾಡಿದರೆ ಅದು ಮನದಲ್ಲಿ ಅತ್ಯಂತ ಗಟ್ಟಿಯಾಗಿ ಸ್ಥಿರಗೊಳ್ಳುವದು. ಈ ರೀತಿಯಿಂದ ದೃಶ್ಯದ ಮಿಥ್ಯಾತನವು. ಅಂತರಂಗದಲ್ಲಿ ಸ್ಥಿರಗೊಂಡಿತೆಂದರೆ ಆಗ ಏಕಾಏಕಿ [ಒಮ್ಮಿಂದೊಮ್ಮೆಲೆ] ಭಯವು ಸಮೂಲ ನಷ್ಟವಾಗುವದು. [ಮಾಯಾ ಭಯ, ದೃಶ್ಯ ಭಯಗಳೆಲ್ಲ ಓಡಿ ಹೋಗುವವು.] (೩೨) ಯಾವ ಉಪಾಸನೆಯಿಂದ ಸಾಧಕನು ಬ್ರಹ್ಮಜ್ಞಾನದವರೆಗೆ ಹೋಗಿ ಮುಟ್ಟುವನೋ ಇವನು ಸಮಾಜ-ಜಗತ್ತಿನ ಋಣವನ್ನು ತೀರಿಸುವದು ಅವಶ್ಯವಾದದ್ದು. ಜಗತ್ತಿನಲ್ಲಿ ಭಕ್ತಿಯ ಪ್ರಸಾರಮಾಡಿ ಆ ಋಣವನ್ನು ಜ್ಞಾನಿ ಮನುಷ್ಯನು ತೀರಿಸಬೇಕು. ಅಂತರ್ಯಾಮದಲ್ಲಿ ವಿವೇಕಮಾಡಿ ಎಲ್ಲವನ್ನು ಸರಿಯಾಗಿ ತಿಳಿದುಕೊಂಡಿರಬೇಕು. ವಾಸ್ತವಿಕವಾಗಿ ಮನುಷ್ಯನು ಬ್ರಹ್ಮಜ್ಞಾನಿ ಆದನೆಂದರೆ ಅವನಿಗೆ ಯಾವ ವಿಧಿ ಮತ್ತು ನಿಷೇಧಗಳೂ ಉಳಿಯುವದಿಲ್ಲ. ಇವನು ಸಂಪೂರ್ಣ ಸ್ವತಂತ್ರನಿರುವನು. ಹೀಗೆಂದು ಸಾರಾಸಗಟ (ಯಾವತ್ತೂ) ಶಾಸ್ತ್ರಕಾರರು ಹೇಳುವರು. ಹೀಗಿದ್ದರೂ ಕೂಡಾ ಶ್ರೀ ಸಮರ್ಥರು ಅನ್ನುವದೇನಂದರೆ, ಜ್ಞಾನಿ ಪುರುಷನು ಉಪಾಸನೆಯ ಉಪಕಾರದ ಋಣವನ್ನು ತೀರಿಸಬೇಕು. [ಹೆಚ್ಚು ಹೆಚ್ಚು ಉಪಾಸನೆಯನ್ನು ಜನರಲ್ಲಿ ಬೆಳೆಯುವಂತೆ ಮಾಡಬೇಕು.] ಇದು ಒಂದು ವಿಧಿಯೇ ಆಗುವದು. ಅಂದರೆ ಒಂದು ಶುದ್ಧ ಮಾರ್ಗ [ಪದ್ಧತಿ] ಆಗುವದು. ಇದೇ ನಮ್ಮ ಮರಾಠಿ ಸಂತರ ಬಹಳ ದೊಡ್ಡ ವೈಶಿಷ್ಟ್ಯವಿರುವದು. ಅತ್ಯಂತ ಶ್ರೇಷ್ಠರಲ್ಲಿ ಅತಿ ಶ್ರೇಷ್ಠ ಬ್ರಹ್ಮಜ್ಞಾನಿಯು ಒಂದು ವೇಳೆ ಆಗಿದ್ದರೂ ಕೂಡಾ ಇವರ ಜ್ಞಾನದ ಉಪಯೋಗವು ಸಮಾಜಕ್ಕೆ ಆಗಲಿಕ್ಕೇ ಬೇಕು ಎಂದು ಶ್ರೀ ಸಮರ್ಥರು ಹಟದಿಂದ ಹೇಳುವರು. ಈ ಬಗ್ಗೆ ಇತರ ಕೆಲವು ಸಂತರು ಅರ್ಧವಟ ಅಸ್ಪಷ್ಟವಾಗಿ ಹೇಳಿದರೂ ನಮ್ಮ ಶ್ರೀ ಸಮರ್ಥರು ಅತ್ಯಂತ ಖಡಾ ಖಂಡಿತವಾಗಿ ಹೇಳುತ್ತಾರೆ. ಇವರ ವಾಙ್ಮಯದಲ್ಲಿ ಈ ದೃಷ್ಟಿಕೋನದ ಅವರ ಹೇಳಿಕೆಯು ಮೇಲಿಂದ ಮೇಲೆ ನಮ್ಮ ಅನುಭವಕ್ಕೆ ಬರುವದು. ಅಥವಾ ಕಂಡುಬರುವದು. (೩೩)

ಶ್ರೀ ದಾಸಬೋಧದ ಹದಿನೈದನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದಲ್ಲಿಯ
"ಸಿದ್ಧಾಂತ ನಿರೂಪಣ" ವೆಂಬ ಹೆಸರಿನ ಹತ್ತನೆಯ ಸಮಾಸವು ಮುಗಿದುದು.

— ದಶಕ ಹದಿನೈದು ಸಮಾಪ್ತ —

# ದಶಕ ೧೬. ಸಪ್ತತಿನ್ವಯ

ಸಪ್ತ ಸಪ್ತಿ ಎಂದು ಸೂರ್ಯನಿಗೆ ಹೆಸರು ಇರುವದು. ಅನ್ವಯ ಅಂದರೆ ವಂಶ ಸಪ್ತ ಸಪ್ತಿ-ಅನ್ವಯ-ಅಂದರೆ ಸೂರ್ಯನ ವಂಶವು. ಉಪಾಸನೆಯ ಹಾದಿಯ ಮೇಲೆ ಉಪಾಸನೆಯು ತಿಳಿಯಬೇಕೆಂಬ ಮಟ್ಟದಲ್ಲಿ ಇರುವ ಪ್ರತಿಯೊಬ್ಬ ಸಾಧಕನಿಗೆ ಆತ್ಮಾನಾತ್ಮ ವಿವೇಕ ಮತ್ತು ಸಾರಾಸಾರ ವಿಚಾರ ಮಾಡಬೇಕಾಗುವದು. ಆತ್ಮಾನಾತ್ಮ ವಿವೇಕವನ್ನು ಮಾಡುವಾಗ ತಮ್ಮ ಉಪಾಸ್ಯ ದೇವತೆಯ ಬಗ್ಗೆ ಮತ್ತು ಆ ದೇವತೆಯ ಚರಿತ್ರದ ಬಗ್ಗೆ ಸತತ ಚಿಂತನ ಮಾಡಬೇಕಾಗುವದು. ಇದರ ಜೊತೆಗೇನೇ ಈ ದೇವತೆಯ ಶ್ರೇಷ್ಠ ಭಕ್ತರ ಸ್ಮರಣ ಚಿಂತನವು ಬಹಳ ಉಪಕಾರಕವಾಗುವದು. ಉಪಯೋಗ ಬೀಳುವದು. ಇದರಂತೆಯೇ ಸಾರಾಸಾರ ವಿಚಾರದಲ್ಲಿ ಮೂರು ಗುಣಗಳು ಮತ್ತು ಐದು ಭೂತಗಳು ಇವು ಹಗಲೂ ರಾತ್ರಿ ಒಂದೇ ಸಮನೆ ನಡೆಸಿರುವ ಆಟದ ವಿವರ ಮತ್ತು ವಿಶ್ವ ವ್ಯವಹಾರದ ತಿಳುವಳಿಕೆಯಾಗಲು ಬಹಳ ಸಹಾಯ ಮಾಡುವವು. ಆದ್ದರಿಂದ ಈ ದಶಕದಲ್ಲಿಯ ಮೊದಲಿನ ಏಳು ಸಮಾಸದಲ್ಲಿ ವಾಲ್ಮೀಕಿ, ಸೂರ್ಯ, ಪೃಥ್ವಿ, ಅಪ್, (ನೀರು) ತೇಜ, ವಾಯು, ಮತ್ತು ಆತ್ಮಾರಾಮ[ಅಂತರಾತ್ಮಾ]ಇವರುಗಳ ಸ್ತವನರೂಪಿ ವರ್ಣನೆಯು ಇರುವದು. ಆದರೆ ಇದರಲ್ಲಿ ಬರುವ ಅಂತರಾತ್ಮಾ ಇದೇ ನಿಜವಾದ (ಖರೇ) ಉಪಾಸ್ಯ ದೇವತೆಯ ಮೂಲ ಸ್ವರೂಪವಿರುವದು. ಈ ಅಂತರಾತ್ಮನು ಪಿಂಡದಲ್ಲಿ, ಉಪಾಸ್ಯ ದೇವತೆಗಳಲ್ಲಿ, ಮತ್ತು ಇಡೀ ಬ್ರಹ್ಮಾಂಡದಲ್ಲಿ ಆಗುವ ಯಾವತ್ತೂ ಘಟನೆಗಳನ್ನು ಉಂಟು ಮಾಡುವನು.(ಉತ್ಪನ್ನ ಮಾಡುವನು). ಯಾವತ್ತೂ ದೇವತೆಗಳ ಉಪಾಸನೆಯು ಕೊನೆಗೆ ಅಂತರಾತ್ಮನಲ್ಲಿಗೆ ಬಂದು ಮುಟ್ಟುವದು. ಈ ಸರ್ವ ವಿಶ್ವಕ್ಕೂ ಚೇತನವನ್ನು ಉಂಟು ಮಾಡುವ ಅಂತರಾತ್ಮನ ಚಿಂತನೆಯು ಸಾಧಕನಿಗೆ ಅತಿ ಅವಶ್ಯವಿರುವದು. ಇಷ್ಟೇ ಅಲ್ಲ, ಇವರ ಉಪಾಸನೆಯ ಪರ್ಯವಸಾನವು (ಕೊನೆಯು) ಅಖಂಡ ಆತ್ಮಾನುಸಂಧಾನದಲ್ಲಿಯೇ ಆಗಬೇಕು. ಅಂತೆಯೇ ಈ ದಶಕದಲ್ಲಿಯ ಕೊನೆಯ ಮೂರು ಸಮಾಸಗಳಲ್ಲಿ ಆತ್ಮಾರಾಮನ ವರ್ಣನೆಯು ಇರುವದು ಕಂಡುಬರುವದು. ರವಿಕುಲ ಭೂಷಣ ಪ್ರಭು ರಾಮಚಂದ್ರನು ಶ್ರೀ ಸಮರ್ಥರ ಉಪಾಸ್ಯ ದೇವರಿರುವನು. ಇದು ಜಗತ್ತಿಗೇ ತಿಳಿದ ವಿಷಯವಾಗಿರುವದು. ಶ್ರೀ ಮಾರುತಿ ರಾಯನು ಇವನ ಆದರ್ಶ ಭಕ್ತನಿರುವನು.

### ದಶಕ ಷೋಡಶ : ಸಮಾಸ ಪ್ರಥಮ : ವಾಲ್ಮೀಕಿ ಸ್ತವನ ನಿರೂಪಣ (ನುಡಿ ೨೧)

॥ಶ್ರೀರಾಮ ಸಮರ್ಥ॥ಧನ್ಯ ಧನ್ಯ ತೋ ವಾಲ್ಮೀಕ।ಋಷೀಮಾಜೀ ಪುಣ್ಯಶ್ಲೋಕ।
ಜಯಾಚೇನ ಹಾ ತ್ರಿಲೋಕ್ಯ । ಪಾವನ ಜಾಲಾ ॥೧॥
ಭವಿಷ್ಯ ಆಣೀ ಶತಕೋಟೀ । ಹೇ ತೋ ನಾಹೀ ದೇಖಿಲೇ ದೃಷ್ಟೀ ।
ಧಾಂಡೋಳಿತಾ ಸಕಳ ಸೃಷ್ಟಿ । ಶ್ರುತ ನವ್ಹೆ ॥೨॥
ಭವಿಷ್ಯಾಚೇ ಯೇಕ ವಚನ । ಕದಾಚಿತ ಜಾಲೇ ಪ್ರಮಾಣ ।
ತರೀ ಆಶ್ಚರ್ಯ ಮಾನಿತೀ ಜನ । ಭೂಮಂಡಳೀಚೆ ॥೩॥
ನಸತಾ ರಘುನಾಥ ಅವತಾರ । ನಾಹೀ ಪಾಹಿಲಾ ಶಾಸ್ತ್ರಾಧಾರ ।
ರಾಮಕಥೇಚಾ ವಿಸ್ತಾರ । ವಿಸ್ತಾರಿಲಾ ಜೇಣೇ ॥೪॥
ಐಸಾ ಜಯಾಚಾ ವಾಗ್ವಿಳಾಸ । ಐಕೋನಿ ಸಂತೋಷಲಾ ಮಹೇಶ ।
ಮಗ ವಿಭಾಗಿಲೇ ತ್ರೈಲೋಕ್ಯಾಸ । ಶತಕೋಟೀ ರಾಮಾಯೆಣ ॥೫॥

## ದಶಕ ೧೬. ಸಮಾಸ ೧. ವಾಲ್ಮೀಕಿ ಸ್ತವನ ನಿರೂಪಣ (ನುಡಿ ೨೧)

ನಮ್ಮ ಕಡೆಗೆ ಇಲ್ಲಿಯವರೆಗೆ ಆಗಿ ಹೋದ ದೊಡ್ಡ ದೊಡ್ಡ ಭಕ್ತ ಶ್ರೇಷ್ಠರೆಲ್ಲರ ಚರಿತ್ರೆಗಳಲ್ಲಿ ವಾಲ್ಮೀಕಿಯ ಚರಿತ್ರೆಯು ಸಾಧಕರ ದೃಷ್ಟಿಯಿಂದ ಬಹಳಷ್ಟು ಉತ್ತಮ ತಿಳುವಳಿಕೆಯನ್ನುಂಟು ಮಾಡುವಂಥದಿರುವದು. ಇವರ ಚರಿತ್ರೆಯಿಂದ ಮುಖ್ಯವಾಗಿ ನಾಲ್ಕು ವಿಷಯ (ಮಾತು) ಗಳನ್ನು ಶ್ರೀ ಸಮರ್ಥರು ಈ ಸಮಾಸವಲ್ಲಿ ಒತ್ತಿ ಹೇಳಿದ್ದಾರೆ. ೧) ವಾಲ್ಮೀಕಿಯಲ್ಲಿಯ ನಾಮನಿಷ್ಠೆ ೨) ವಾಲ್ಮೀಕಿಯಲ್ಲಿಯ ವೈರಾಗ್ಯ (ಉಪರತಿ) ೩) ವಾಲ್ಮೀಕಿಯಲ್ಲಿಯ ಅನುತಾಪ (ಪಶ್ಚಾತ್ತಾಪ) ೪) ವಾಲ್ಮೀಕಿಯ ಕಠಿಣ ತಪಶ್ಚರ್ಯ. ಇವು ನಾಲ್ಕು ಮಾತುಗಳು ಇರುವವು. ಇವನು ಒಮ್ಮೆ ನಾಮ ತೆಗೆದುಕೊಳ್ಳಲಿಕ್ಕೆ (ಅನ್ನಲಿಕ್ಕೆ) ಪ್ರಾರಂಭ ಮಾಡಿದ ನಂತರ ಆಮೇಲೆ ಇವನು ಇನ್ನಾವುದೇ ಸಾಧನದ ವಿಚಾರವನ್ನು ತನ್ನ ಮನದಲ್ಲಿ ಎಳ್ಳಷ್ಟೂ ತರಲಿಲ್ಲ. ಅಂತೆಯೇ ಇದರಿಂದಾಗಿ ಇವನಲ್ಲಿ ನಾಮದ ಪುಣ್ಯರಾಶಿ ಒಗ್ಗೂಡಿತು. ಮತ್ತೂ ಇವನ ಪಾಪದ ಪರ್ವತ ಸುಟ್ಟು ಭಸ್ಮವಾಗಿ ಹೋಯಿತು. ಅರ್ಥಾತ್ ಪ್ರಚಂಡ ಪುಣ್ಯ-ರಾಶಿಯು ಸಂಚಯವಾಯಿತು. (ಸಂಗ್ರಹವಾಯಿತು). ಇದರಂತೆಯೇ ತನ್ನ ದೇಹ ಮತ್ತು ದೇಹ ಸಂಬಂಧಿಕ ಜನರು ತನಗೆ ನಿಜವಾದ ಸುಖ ಕೊಡುವವರಲ್ಲವೆಂದು ಇವನಿಗೆ ಅನಿಸಿತು. ಇದು (ಈ ಮಾತು) ಒಮ್ಮೆ ಖಾತ್ರಿ ಆದಮೇಲೆ ಇವನು (ವಾಲ್ಮೀಕಿಯು) ಪುನಃ ದೇಹ ಸುಖದ ಅಪೇಕ್ಷೆಯನ್ನು ತಪ್ಪಿಯೂ ಒಂದು ಸಲ ಕೂಡಾ ಮಾಡಲಿಲ್ಲ. ಇಷ್ಟೇ ಅಲ್ಲ, ಇವತ್ತಿನವರೆಗೆ ತಾನು ಯಾವ ರೀತಿಯಿಂದ ಆಯುಷ್ಯವನ್ನು ಕಳೆದನೋ ಅದೆಲ್ಲವೂ ವ್ಯರ್ಥವಾಗಿ ಹೋಯಿತು. ಅನ್ನುವ ಅರಿವು ಉಂಟಾಗಿ ಇವನಿಗೆ ಬಹಳಷ್ಟು ಪಶ್ಚಾತ್ತಾಪವಾಯಿತು. ಈ ಪಶ್ಚಾತ್ತಾಪದ ಝಳದಿಂದ ಇವನ ದೇಹ ಮತ್ತು ಮನ ಎಷ್ಟೊಂದು ಹುರುಪಳಿಸಿ (ಸುಟ್ಟು) ಹೋಯಿತೆಂದರೆ ಇವನು ಸತ್ತು ಪುನಃ ಹೊಸ ಜನ್ಮ ಧರಿಸಿ ಬಂದಂತಾಯಿತು. ಒಟ್ಟಿನಲ್ಲಿ ಹಳೆಯ ವಾಲ್ಮೀಕಿಯು ಸುಟ್ಟು ಅದರೊಳಗಿಂದ ಹೊಸ ವಾಲ್ಮೀಕಿಯು ಜನ್ಮ ತಳೆದು ಬಂದನು. ಮತ್ತು ಒಮ್ಮೆ ನಿರ್ಧಾರದಿಂದ ನಾಮದ ಸಾಧನವನ್ನು ಹಿಡಿದ ಮೇಲೆ ಇವನು ವಿಲಕ್ಷಣ ರೀತಿಯ ಹಟದಿಂದ ದೀರ್ಘ ಪರಿಶ್ರಮದಿಂದ ನಾಮದ ಅಭ್ಯಾಸವನ್ನು ಮಾಡಿದನು. ದೇಹದ ಪರಿವೆಯೇ ಇಲ್ಲದ್ದರಿಂದಾಗಿ ಇವನ ಮೈಮೇಲೆ ಹುತ್ತ (ಪುತ್ತ) ಬೆಳೆಯಿತು. ಇದರ ಅರಿವೇ ಇವನಿಗೆ ಎಳ್ಳಷ್ಟೂ ಇರಲಿಲ್ಲ. ಈ ರೀತಿಯಲ್ಲಿ ಇವನ ಕಠಿಣ ತಪಸ್ಸು ಇದ್ದಿತು. ಸಾಧಕರೆಲ್ಲರೂ ಈ ನಾಲ್ಕು ಮಾತುಗಳನ್ನು ತಿಳಿದುಕೊಳ್ಳುವದು ಅತಿ ಅವಶ್ಯವಿರುವದು.

### ದಶಕ ೧೬. ಸಮಾಸ ೧. ವಾಲ್ಮೀಕಿ ಸ್ತವನ ನಿರೂಪಣ (ನುಡಿ ೨೧)

ಮೊದಲು ವಾಲ್ಮೀಕಿಯ ಸಾಮಾನ್ಯ ವರ್ಣನೆಯನ್ನು ಹೇಳುತ್ತಾರೆ: ಋಷಿಗಳಲ್ಲಿ ಪುಣ್ಯ ಶ್ಲೋಕನೆನಿಸಿದಂಥ ವಾಲ್ಮೀಕಿಯು ಅತಿಶಯ[ಬಹಳ] ಧನ್ಯನೆನಿಸಿರುವನು. ಈ ಮೂರೂ ಲೋಕಗಳನ್ನು ಪಾವನಗೊಳಿಸಿದನು.(೧) ಭವಿಷ್ಯ ಕಾಲದಲ್ಲಿ ಅಂದರೆ ಮುಂದೆ ಬರುವ ಕಾಲದಲ್ಲಿ ಆಗುವ [ಘಟಿಸುವ] ಒಂದು ಅವತಾರ ಶ್ರೀ ರಾಮಾವತಾರದ ಬಗ್ಗೆ ಒಂದಲ್ಲ ಶತಕೋಟಿ ರಾಮಾಯಣವನ್ನು ವಾಲ್ಮೀಕಿಯು ಮೊದಲಿಗೇ [ಆಗಾವು] ರಚಿಸಿದನು. ಸಮಸ್ತ ಸೃಷ್ಟಿಯಲ್ಲಿ ಹುಡುಕಾಡಿದರೂ ಈ ಕಾರ್ಯವನ್ನು ಬೇರೆ ಯಾರೂ ಮಾಡಿರುವದಿಲ್ಲ. ಯಾರೂ ನೋಡಿರುವದಿಲ್ಲ, ಕೇಳಿರುವದೂ ಇಲ್ಲ. ಅಂದ ಮೇಲೆ ಇದು ಅತಿ ಅದ್ಭುತವಾದದ್ದೇ ಸರಿ. [೨] ಯಾವದೊಂದು ಘಟನೆಯ ಬಗ್ಗೆ ಭವಿಷ್ಯ ಕಾಲದಲ್ಲಿ ಹೀಗಾಗುವದು ಎಂದು ಹೇಳಿದರೆ ಮತ್ತು ಆ ವೇಳೆಗೆ ಆ ಕಾರ್ಯ ಸರಿಯಾಗಿ ಆದರೆ ಜಗತ್ತಿನಲ್ಲಿಯ ಜನರಿಗೆ ಬಹಳಷ್ಟು ಆಶ್ಚರ್ಯವಾಗುವದು. [೩] ಆದರೆ ಶ್ರೀ ರಾಮನ ಅವತಾರ ಇನ್ನೂ ಆಗಿರಲಿಲ್ಲ. ಎರಡನೆಯ ಯಾವ ಶಾಸ್ತ್ರಾಧಾರವೂ ಇಲ್ಲಿಲ್ಲ. ಹೀಗಿದ್ದರೂ ಕೂಡಾ ಈ ಪುಣ್ಯಾತ್ಮನು ರಾಮ ಕಥೆಯನ್ನು ಸವಿಸ್ತಾರವಾಗಿ ಹೇಳಿದನು, ರಚಿಸಿದನು. [೪] ವಾಲ್ಮೀಕಿಯ ವಾಗ್ವಿಲಾಸ [ಶಬ್ದ ಚಾತುರ್ಯ] ವು ಈ ಬಗೆಯಲ್ಲಿ ಇದ್ದಿತು. ಇದನ್ನು ಕೇಳಿ ಶ್ರೀ ಶಂಕರನು ಇವನ ಮೇಲೆ ಪ್ರಸನ್ನನಾದನು. ಅನಂತರ ಇವನು ರಚಿಸಿದ ಶತಕೋಟಿ ರಾಮಾಯಣದಲ್ಲಿ ಮೂರು ಭಾಗಮಾಡಿ ಮೂರು ಲೋಕಗಳ ಜನರ ಉದ್ಧಾರಕ್ಕಾಗಿ ಹಂಚಿಕೊಟ್ಟನು. [೫]

ಜ್ಯಾಚೇ ಕವಿತ್ವ ಶಂಕರೇ ಪಾಹಿಲೇ । ಇತರಾ ನ ವಚೆ ಅನುಮಾನಲೇ ।
ರಾಮ ಉಪಾಸಕಾಸೀ ಜಾಲೇ । ಪರಮ ಸಮಾಧಾನ ॥೬॥

ಋಷೀ ಹೋತೇ ಥೋರ ಥೋರ । ಬಹುತೀ ಕೇಲಾ ಕವಿತ್ವ ವಿಚಾರ ।
ಪರೀ ವಾಲ್ಮೀಕಾ ಸಾರಿಖಾ ಕವೇಶ್ವರ । ನ ಭೂತೋ ನ ಭವಿಷ್ಯತಿ ॥೭॥

ಪೂರ್ವೀ ಕೇಲೀ ದೃಷ್ಟ ಕರ್ಮೇ । ಪರೀ ಪಾವನ ಜಾಲಾ ರಾಮನಾಮೇ ।
ನಾಮ ಜಪತಾ ದೃಢ ನೇಮೇ । ಪುಣ್ಯೇ ಸೀಮಾ ಸಾಂಡಿಲೀ ॥೮॥

ಉಫರಾಟೇ ನಾಮ ಮ್ಹಣತಾ ವಾಚೇ । ಪರ್ವತ ಫುಟಲೇ ಪಾಪಾಚೇ ।
ಧ್ವಜ ಉಭಾರಲೇ ಪುಣ್ಯಾಚೇ । ಬ್ರಹ್ಮಾಂಡಾವರುತೆ ॥೯॥

ವಾಲ್ಮೀಕೇ ಜೇಥೇ ತಪ ಕೇಲೇ । ತೇ ವನ ಪುಣ್ಯಪಾವನ ಜಾಲೇ ।
ಶುಷ್ಕಕಾಷ್ಠೀ ಅಂಕುರ ಫುಟಲೇ । ತಪೋಬಳೇ ಜಯಾಚ್ಯಾ ॥೧೦॥

ಪೂರ್ವೀ ಹೋತಾ ವಾಲ್ಹಾಕೋಳೀ । ಜೀವಘಾತಕೀ ಭೂಮಂಡಳೀ ।
ತೋ ಚಿ ವಂದಿಜೆ ಸಕಳೀ । ವಿಬುಧೀ ಆಣಿ ಋಷೇಶ್ವರೀ ॥೧೧॥

ಉಪರತಿ ಆಣಿ ಅನುತಾಪ । ತೇಥೇ ಕೈಚೆ ಉರೇಲ ಪಾಪ ।
ದೇಹ್ಯಾಂತ ತಪೇ ಪುಣ್ಯರೂಪ । ದುಸರಾ ಜನ್ಮ ಜಾಲಾ ॥೧೨॥

ಅನುತಾಪೇ ಆಸನ ಘಾತಲೇ । ದೇಹ್ಯಾಚೇ ಮಾರುಳ ಜಾಲೇ ।
ತೇ ಚಿ ನಾಮ ಪುಢೇ ಪಡಿಲೇ । ವಾಲ್ಮೀಕ ಐಸೇ ॥೧೩॥

ಮಾರುಳಾಸ ವಾಲ್ಮೀಕ ಬೋಲಿಜೇ । ಮ್ಹಣೋನಿ ವಾಲ್ಮೀಕ ನಾಮ ಸಾಜೇ ।
ಜಯಾಚ್ಯಾ ತೀವ್ರ ತಪೇ ಝುಜೇ । ಹೃದಯ ತಾಪಸಾಚೇ ॥೧೪॥

ಜೋ ತಾಪಸಾಮಾಜೀ ಶ್ರೇಷ್ಠ । ಜೋ ಕವೇಶ್ವರಾಮಧೇ ವರಿಷ್ಠ ।
ಜಯಾಚೇ ಬೋಲಣೇ ಪಷ್ಟ । ನಿಶ್ಚಯಾಚೇ ॥೧೫॥

ಜೋ ನಿಷ್ಠಾವಂತಾಚೇ ಮಂಡಣ । ರಘುನಾಥ ಭಕ್ತಾಂಚೇ ಭೂಷಣ ।
ಜ್ಯಾಚೇ ಧಾರಣಾ ಅಸಾಧಾರಣ । ಸಾಧಕಾ ಸದೃಢ ಕರೀ ॥೧೬॥

ಧನ್ಯ ವಾಲ್ಮೀಕ ಋಷೇಶ್ವರ । ಸಮರ್ಥಾಚಾ ಕವೇಶ್ವರ ।
ತಯಾಸೀ ಮಾಝಾ ನಮಸ್ಕಾರ । ಸಾಷ್ಟಾಂಗ ಭಾವೇ ॥೧೭॥

ಸಾಮಾನ್ಯ ಜನರಿಗೆ ವಾಲ್ಮೀಕಿಯ ಕಾವ್ಯ ಶಕ್ತಿಯ ಕಲ್ಪನೆಯನ್ನು ಮಾಡಲಿಕ್ಕೆ ಬರುವದು. ಅಸಾಧ್ಯವಾದ ಮಾತಾಗಿದೆ. ಸಮರ್ಥನಾದ ಶ್ರೀ ಶಂಕರನಿಗೆ ಇದನ್ನು ಮಾಡಲಿಕ್ಕೆ ಶಕ್ಯವಾಯಿತು. ಇದರಿಂದ ಶ್ರೀ ರಾಮನ ಉಪಾಸಕರೆಲ್ಲರಿಗೂ ಬಹಳಷ್ಟು ಸಮಾಧಾನವಾಯಿತು. [೬] ಪೂರ್ವ ಕಾಲದಲ್ಲಿ ಬಹಳಷ್ಟು ಋಷಿಗಳು ಕವಿತ್ವದ ರಚನೆಯನ್ನು ಮಾಡಿದ್ದಾರೆ. ಆದರೆ ವಾಲ್ಮೀಕಿಯೊಬ್ಬನೇ ಕವೀಶ್ವರನೆಂದು ಅನ್ನಿಸಿಕೊಳ್ಳಲು ಯೋಗ್ಯನು. ಯಾಕೆಂದರೆ "ನ ಭೂತೋ ನ ಭವಿಷ್ಯತಿ" [ಹಿಂದೆ ಆಗಿಲ್ಲ ಮತ್ತು ಮುಂದೆ ಆಗುವದಿಲ್ಲ] ಅನ್ನುವದಕ್ಕೆ ಅವನ ಅಪಾರ ಕವಿತ್ವದ ರಾಶಿಯೇ ಸಾಕ್ಷಿಯಾಗಿದೆ. [೭] ಈಗ ನಾಮದಿಂದ ಇವನು ಹೇಗೆ ಉದ್ಧಾರವಾದನು ಅನ್ನುವದನ್ನು ಹೇಳುತ್ತಾರೆ: ವಾಲ್ಮೀಕಿಯು ಪೂರ್ವಾಯುಷ್ಯದಲ್ಲಿ ಬಹಳಷ್ಟು ದುಷ್ಕರ್ಮ[ದುಷ್ಟಕೆಲಸ] ಮಾಡಿದ್ದನು. ಆದರೆ ರಾಮನಾಮದಿಂದ ಇವನು ಪಾವನನಾದನು. ಅತ್ಯಂತ ದೃಢ ನಿಶ್ಚಯದಿಂದ ಇವನು ರಾಮನಾಮದ ಜಪ ಮಾಡಿದನು. ಇದರಿಂದಾಗಿ ಇವನ ಪುಣ್ಯಕ್ಕೆ ಅಳತೆ ಇರಲಿಲ್ಲ. [ಅಪಾರ ಪುಣ್ಯ ರಾಶಿಯೇ ಕೂಡಿ ಬಿದ್ದಿತು.] (೮) ಇವನು ತನ್ನ ಬಾಯಿಯಿಂದ ಅನ್ನುವಾಗ ರಾಮನ ಹೆಸರನ್ನು ತಿರುವು ಮುರುವು [ಉಪರಾಟಿ] ಆಗಿ ಮರಾ ಮರಾ ಎಂದು ಅನ್ನುತ್ತಿದ್ದನು. ಆದರೂ ಇವನ ಬ್ರಹ್ಮಹತ್ಯಾದಿ ಪಾಪದ ಪರ್ವತವು ಒಡೆದು ಚೂರು ಚೂರಾಗಿ ನಾಶವಾಗಿ ಹೋಯಿತು. ಪಾಪನಾಶದಿಂದಾಗಿ ಜಗತ್ತಿನಲ್ಲಿ ಇವನ ಪುಣ್ಯದ ಧ್ವಜವು [ನಿಶಾನೆಯು] ಹಾರಾಡಹತ್ತಿತು. [೯] ಯಾವ ವನದಲ್ಲಿ ವಾಲ್ಮೀಕಿಯು ತಪಸ್ಸು ಮಾಡುತ್ತಿದ್ದನೋ ಆ ವನವೂ ಸಹ ಇವನ ಪುಣ್ಯದ ಪ್ರಭಾವದಿಂದಾಗಿ ಪವಿತ್ರವಾಗಿ ಹೋಯಿತು. ಇವನ ತಪಸ್ಸಿನ ಬಲದಿಂದಾಗಿ ಒಣಗಿದ ಕಟ್ಟಿಗೆಗೆ [ಕೊರಡಕ್ಕೆ] ಅಂಕುರಗಳು ಹುಟ್ಟಿದವು. [೧೦] ಉಪರತಿ [ವೈರಾಗ್ಯ] ಮತ್ತು ಅನುತಾಪ [ಪಶ್ಚಾತ್ತಾಪ] ಇವುಗಳ ಪ್ರಭಾವದಿಂದ ವಾಲ್ಹ್ಯಾಕೋಳಿ ["ವಾಲ್ಹ್ಯಾಕೋಳಿ" ಇದು ವಾಲ್ಮೀಕಿಯ ಪೂರ್ವಾಶ್ರಮದ ಹೆಸರು] ಸತ್ಪುರುಷ ಮತ್ತು ವಾಲ್ಮೀಕಿ ಎಂದು ಹೊಸದಾಗಿ ಗೌರವದ ಹೆಸರು ಧರಿಸಿ ಬಂದನು. ಮತ್ತು ಇವನು ಸರ್ವರಿಗೂ ವಂದ್ಯನಾದನು: ಮೊದಲಿಗೆ ವಾಲ್ಹ್ಯಾಕೋಳಿ ಎಂದು ಇದ್ದನು. ಇವನು ಜಗದಲ್ಲಿ ಬಹಳಷ್ಟು ಜೀವಗಳ ಹತ್ಯಾ ಮಾಡಿದ್ದನು, ಆದರೆ ಮುಂದೆ ಪಂಡಿತರು ದೊಡ್ಡ ದೊಡ್ಡ ಋಷಿಗಳು ಇವನಿಗೆ ವಂದನ ಮಾಡಹತ್ತಿದರು. [೧೧] ಯಾರಿಗೆ ವೈರಾಗ್ಯ [ಉಪರತಿ] ಉಂಟಾಗಿರುವದೋ ಮತ್ತು ಯಾರಿಗೆ ಪಶ್ಚಾತ್ತಾಪ ಆಗುವದೋ ಅಂಥವರಲ್ಲಿ ಪಾಪವು ಉಳಿಯಲಿಕ್ಕೆ [ಇರಲಿಕ್ಕೆ] ಶಕ್ಯವಿರುವದಿಲ್ಲ. ದೇಹದ [ದೇಹದಲ್ಲಿಯ ಅಹಂಕಾರ "ನಾನು" "ನಾನು" ಅನ್ನುವದು ನಾಶವಾಗುವಿಕೆ–ಅದು ಇಲ್ಲದಾಗುವಿಕೆ] ನಾಶ ಮಾಡುವವರೆಗೆ ತಪ ಮಾಡಿದ್ದರಿಂದ ಆದರೆ ತಪಾಚರಣೆಯಿಂದ ಅತ್ಯಂತ ಪುಣ್ಯರೂಪವಾದ ಹೊಸ ಜನ್ಮವು ಅವನಿಗೆ ಬಂದಿತೋ ಏನೋ ಅನ್ನುವಂತೆ ಪಾಪಿ ಹೋಗಿ ಶ್ರೇಷ್ಠ ಪುಣ್ಯ ಪುರುಷನಾದನು [ಹೊಸ ಜನ್ಮ ತಳೆದನು] (೧೨) ತಾನು ಮಾಡಿದ ತಪ್ಪಿನ ಅರಿವಾಗಿ ಪಶ್ಚಾತ್ತಾಪದಿಂದ ಇವನು ದೃಢ [ಸ್ಥಿರ] ಆಸನ ಹಾಕಿದನು ಇವನ ದೇಹದ ಮೇಲೆಲ್ಲ ಕಡೆಗೂ ಹುತ್ತ ಬೆಳೆಯಿತು. ಇದರಿಂದಲೇ ಇವನಿಗೆ ಜನರು ವಾಲ್ಮೀಕಿಯೆಂದು ಅನ್ನಹತ್ತಿದರು.(೧೩) ಹುತ್ತಕ್ಕೆ ವಾಲ್ಮೀಕ ಎಂದು ಅನ್ನುವರು. ಅಂತೆಯೇ ಇವನಿಗೆ ವಾಲ್ಮೀಕಿ ಅನ್ನುವ ಹೆಸರು ಶೋಭಿಸುವದು. ಇವನ ಕಠಿಣ ತಪಶ್ಚರ್ಯವನ್ನು ನೋಡಿ ತಪಸ್ವೀ ಜನರ ಹೃದಯವು ಕಂಪಿಸುವದು. [ನಡುಗುವದು] [೧೪] ವಾಲ್ಮೀಕಿಯು ಎಷ್ಟೊಂದು ಶ್ರೇಷ್ಠ ಮತ್ತು ಬಹಳಷ್ಟು ಕೆಲಸ ಮಾಡಿರುವನು, ಅನ್ನುವದರ ವರ್ಣನೆಯನ್ನು ಮಾಡುವರು: ವಾಲ್ಮೀಕಿಯು ತಪಸ್ವೀ ಜನರಲ್ಲಿಯೇ ಶ್ರೇಷ್ಠನು ಕವಿಗಣದಲ್ಲಿ ಇವನು ಬಹಳ ಮೇಲಿನ ದರ್ಜೆಯ ಕವಿಯಾಗಿರುವನು. ಇವನ ಮಾತುಗಳು ಬಹಳ ಸ್ಪಷ್ಟ ಮತ್ತು ನಿಶ್ಚಿತ ಸ್ವರೂಪದ್ದಿರುವವು, [೧೫] ಇವನ ಅಸಾಧಾರಣ ನಿಷ್ಠೆಯಿಂದಾಗಿಯೇ ಇವನು ನಿಷ್ಠಾವಂತರಲ್ಲಿ ಶೋಭಾಯಮಾನವಾಗಿ ಎದ್ದು [ಒಡೆದು] ಕಾಣುವಂಥವನಿರುವನು. ಇದರಲ್ಲಿಯೂ ಶ್ರೀ ರಾಮ ಭಕ್ತರಲ್ಲಿಯಾದರೋ ಇವನು ಭೂಷಣ ಪ್ರಾಯದ ಮುಕುಟಮಣಿ ಆಗಿರುವನು. ಇವನ ವಿಲಕ್ಷಣ ಸ್ಮರಣ ಶಕ್ತಿ, ನಿಗ್ರಹ ಶಕ್ತಿ, ಬುದ್ಧಿ ಶಕ್ತಿ, ಮನದ ಧೈರ್ಯ ಶಕ್ತಿ ಇತ್ಯಾದಿಗಳನ್ನು ನೋಡಿ ಸಾಧಕರ ಸಾಧನ ನಿಷ್ಠೆ ದೃಢ ಆಯಿತು. ಮಜಬೂತ ಆಯಿತು. [೧೬] ಸಮರ್ಥ ಶ್ರೇಷ್ಠನಾದ ರಾಮರಾಯನ ಯಶ ಕೀರ್ತಿಗಳನ್ನು ಹಾಡುವ, ಗಾಯನ ಮಾಡುವ ಈ ಕವೀಶ್ವರ ವಾಲ್ಮೀಕಿಯು ಧನ್ಯ–ಧನ್ಯನು! ಇಂಥ ಪುಣ್ಯ ಶ್ರೇಷ್ಠ ಋಷೀಶ್ವರ ವಾಲ್ಮೀಕಿಗೆ ನಾನು ಶ್ರದ್ಧಾಪೂರ್ವಕ ಸಾಷ್ಟಾಂಗ ನಮಸ್ಕಾರ ಮಾಡುವೆನು. [೧೭]

ವಾಲ್ಮೀಕ ಋಷೀ ಬೋಲಿಲಾ ನಸತಾ । ತರೀ ಆಮ್ಹಾಸೀ ಕೈಚೀ ರಾಮಕಥಾ ।
ಮ್ಹಣೋನಿಯಾ ಸಮರ್ಥಾ । ಕಾಯ ಮ್ಹಣೋನಿ ವರ್ಣಾವೇ ॥೧೮॥

ರಘುನಾಥ ಕೀರ್ತಿ ಪ್ರಗಟ ಕೇಲೀ । ತೇಣೇ ತಯಾಚೀ ಮಹಿಮಾ ವಾಢಲೀ ।
ಭಕ್ತಮಂಡಳೀ ಸುಖೀ ಜಾಲೀ । ಶ್ರವಣ ಮಾತ್ರೇ ॥೧೯॥

ಆಪುಲಾ ಕಾಳ ಸಾರ್ಥಕ ಕೇಲಾ । ರಘುನಾಥಕೀರ್ತೀಮಧೇ ಬುಡಾಲಾ ।
ಭೂಮಂಡಳೀ ಉಧರಿಲಾ । ಬಹುತ ಲೋಕ ॥೨೦॥

ರಘುನಾಥ ಭಕ್ತ ಥೋರ ಥೋರ । ಮಹಿಮಾ ಜಯಾಚಾ ಅಪಾರ ।
ತ್ಯಾ ಸಮಸ್ತಾಚಾ ಕಿಂಕರ । ರಾಮದಾಸ ಮ್ಹಣೇ ॥೨೧॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ವಾಲ್ಮೀಕ ಸ್ತವನ ನಿರೂಪಣ' ನಾಮ ಸಮಾಸ ಪ್ರಥಮ ॥

ವಾಲ್ಮೀಕಿ ಋಷಿಯು ರಾಮಾಯಣವನ್ನು ರಚಿಸಿ ಹಾಡದಿದ್ದರೆ ನಮಗೆ ರಾಮ ಕಥಾ ಸಿಗುತ್ತಿದ್ದಿಲ್ಲ. ಇಂಥ ಶ್ರೇಷ್ಠ ವಾಲ್ಮೀಕಿಯ ವರ್ಣನೆಯನ್ನು ಎಷ್ಟು ಮಾಡಿದರೂ ಕಡಿಮೆ ಅನಿಸುವದು. [೧೮] ಶ್ರೀ ರಾಮನ ಯಶೋ ಕೀರ್ತಿಯನ್ನು ಹಾಡಿ ಹೊಗಳಿದ್ದರಿಂದ ಅವನ ಯಶೋ ಕೀರ್ತಿ ಪ್ರಕಟವಾದದ್ದರಿಂದಾಗಿ ವಾಲ್ಮೀಕಿಯ ಹಿರಿಮೆಯೂ ಸಹ ಬೆಳೆಯಿತು. ಮತ್ತು ರಾಮನ ಯಶೋ ಕೀರ್ತಿಯ ಕಥೆ ಕೇಳಿ ಭಕ್ತಮಂಡಳಿ ಸುಖಿಯಾದರು. ಸಮಾಧಾನ ಹೊಂದಿದರು. [೧೯] ಶ್ರೀ ರಾಮನ ಯಶೋ ಕೀರ್ತಿ ಅನ್ನುವ ಅಮೃತದಲ್ಲಿ ವಾಲ್ಮೀಕಿಯು ಮುಳುಗಿದ್ದರಿಂದ ಇವನು ತನ್ನ ಆಯುಷ್ಯವನ್ನು ಸಾರ್ಥಕಪಡಿಸಿಕೊಂಡನು. ಮತ್ತು ಇದರ ಸಂಗಡವೇ ಜಗತ್ತಿನಲ್ಲಿಯ ಬಹಳಷ್ಟು ಜನರ ಉದ್ಧಾರವೂ ಆಯಿತು. [೨೦] ಯಾವನ ಮಹಿಮೆಯು ಅಪಾರವಿರುವದೋ ಅಂಥ ಶ್ರೀ ರಾಮ ಭಕ್ತರು ಶ್ರೇಷ್ಠರೆನಿಸಿಕೊಂಡು ಆಗಿ ಹೋದರು. ಶ್ರೀ ರಾಮದಾಸರು ಅನ್ನುವದೇನಂದರೆ ನಾನು ಇಂಥ ದಾಸರ ದಾಸನಾಗಿರುವೆನು. ನಾನು ಇಂಥ ಶ್ರೇಷ್ಠ ಭಕ್ತರೆಲ್ಲರಿಗೂ ನಮಸ್ಕಾರ ಮಾಡುವೆನು. [೨೧]

**ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹದಿನಾರನೆಯ ದಶಕದೊಳಗಿನ "ವಾಲ್ಮೀಕಿ ಸ್ತವನ ನಿರೂಪಣ"ವೆಂಬ ಹೆಸರಿನ ಒಂದನೆಯ ಸಮಾಸವು ಮುಗಿದುದು.**

ದಶಕ ಷೋಡಶ : ಸಮಾಸ ದ್ವಿತೀಯ : ಸೂರ್ಯ ಸ್ತವನ ನಿರೂಪಣ (ನುಡಿ ೨೨)

॥ಶ್ರೀರಾಮ ಸಮರ್ಥ॥ ಧನ್ಯ ಧನ್ಯ ಹಾ ಸೂರ್ಯವಂಶ ।
ಸಕಳ ವಂಶಾಮಧೇ ವಿಶೇಷ ।
ಮಾರ್ತಂಡ ಮಂಡಳಾಚಾ ಪ್ರಕಾಶ । ಫಾಂಕಲಾ ಭೂಮಂಡಳೀ ॥೧॥

ಸೋಮಾ ಅಂಗೀ ಆಹೆ ಲಾಂಛನ । ಪಕ್ಷಾ ಯೇಕಾ ಹೋಯ ಕ್ಷೀಣ ।
ರವಿಕಿರ್ಣ ಫಾಂಕತಾ ಆಪಣ । ಕಳಾಹೀನ ಹೋಯೆ ॥೨॥

ಯಾಕಾರಣೇ ಸೂರ್ಯಾಪುಢೇ । ದುಸರೀ ಸಾಮ್ಯತಾ ನ ಘಡೇ ।
ಜಯಾಚ್ಯಾ ಪ್ರಕಾಶೇ ಉಜೇಡೇ । ಪ್ರಾಣೀ ಮಾತ್ರಾಸೀ ॥೩॥

ನಾನಾ ಧರ್ಮ ನಾನಾ ಕರ್ಮೇ । ಉತ್ತಮೇ ಮಧ್ಯಮೇ ಅಧಮೇ ।
ಸುಗಮೇ ದುರ್ಗಮೇ ನಿತ್ಯನೇಮೇ । ಸೃಷ್ಟೀಮಧೇ ಚಾಲತೀ ॥೪॥

ವೇದಶಾಸ್ತ್ರೇ ಆಣೀ ಪುರಾಣೇ । ಮಂತ್ರ ಯಂತ್ರ ನಾನಾ ಸಾಧನೇ ।
ಸಂಧ್ಯಾ ಸ್ನಾನ ಪೂಜಾ ವಿಧಾನೇ । ಸೂರ್ಯೇವಿಣ ಬಾಪುಡೀ ॥೫॥

ನಾನಾ ಯೋಗ ನಾನಾ ಮತೇ । ಪಾಹೋ ಜಾತಾ ಅಸಂಖ್ಯಾತೇ ।
ಜಾತೀ ಆಪುಲಾಲ್ಯಾ ಪಂಥೇ । ಸೂರ್ಯ ಉದಯ ಜಾಲಿಯಾ ॥೬॥

ಪ್ರಪಂಚಿಕ ಅಥವಾ ಪರಮಾರ್ಥಿಕ । ಕಾರ್ಯ ಕರಣೇ ಕೋಣೀಯೇಕ ।
ದಿವಸೇವಿಣ ನಿರಾರ್ಥಕ । ಸಾರ್ಥಕ ನವ್ಹೆ ॥೭॥

ಸೂರ್ಯಾಚೇ ಅಧಿಷ್ಠಾನ ಡೋಳೇ । ಡೋಳೇ ನಸತಾ ಸರ್ವ ಆಂಧಳೆ ।
ಯಾಕಾರಣೇ ಕಾಂಹೀ ಚ ನ ಚಲೇ । ಸೂರ್ಯೇವಿಣ ॥೮॥

ಪ್ಹಿಣಾಲ ಅಂಧ ಕವಿತ್ವೇ ಕರಿತೀ । ತರೀ ಹೇ ಹಿ ಸೂರ್ಯಾಚೀಚ ಗತೀ ।
ಥಂಡ ಜಾಲಿಯಾ ಆಪುಲೀ ಮತೀ । ಮಗ ಮತಿಪ್ರಕಾಶ ಕೈಚಾ ॥೯॥

# ದಶಕ ೧೬. ಸಮಾಸ ೨. ಸೂರ್ಯ ಸ್ತವನ ನಿರೂಪಣ (ನುಡಿ ೨೨)

ತೇಜೋರಾಶಿ ಸೂರ್ಯನು ಯಾವತ್ತೂ ಜಗತ್ತನ್ನು ಜೀವಂತವಿಡುವವನು. ಪ್ರಕಾಶವು ಜ್ಞಾನರೂಪ ವಿರುವದು. ಆದರೆ ಕತ್ತಲೆ (ಅಂಧಕಾರ) ಅಜ್ಞಾನರೂಪವಿರುವದು. ಸೂರ್ಯನ ಪ್ರಕಾಶದ ಮೂಲಕ ನಾವು ಪ್ರಪಂಚ ಮತ್ತು ಪರಮಾರ್ಥ ಎರಡನ್ನೂ ಮಾಡುವೆವು. (ಮಾಡಲಿಕ್ಕೆ ಸಾಧ್ಯವಾಗುವದು.) ಶ್ರೀರಾಮನಿಗೆ ಇವನು ಪೂರ್ವಜನು [ಶ್ರೀರಾಮನು ಸೂರ್ಯ ಕುಲ ಸಂಭೂತನು]. ಸೂರ್ಯನಿಗೆ ನಮಸ್ಕಾರ ಮಾಡುವದರಿಂದ ಯಾವತ್ತೂ ದೋಷಗಳು ಇಲ್ಲದಾಗುವವು. ಇದರಂತೆಯೇ ಸೂರ್ಯದರ್ಶನ ಮಾಡಿದರೆ ನಿರಂತರ [ಸತತ]ವೂ ಸ್ಫೂರ್ತಿಯು ಬೆಳೆಯುವದು.

## ದಶಕ ೧೬. ಸಮಾಸ ೨. ಸೂರ್ಯ ಸ್ತವನ ನಿರೂಪಣ (ನುಡಿ ೨೨)

ಸೂರ್ಯ ಪ್ರಕಾಶದಿಂದ ಯಾವತ್ತೂ ಪ್ರಾಣಿ ಮಾತ್ರರು ಜೀವಿಸುವರು ಮತ್ತು ತಮ್ಮ ತಮ್ಮ ವ್ಯವಹಾರ ಮಾಡುವರು. ಸರ್ವಸಾಧನ ಮಾರ್ಗ ಮತ್ತು ಸರ್ವಕರ್ಮ ಮಾರ್ಗ ಇವು ಸೂರ್ಯನನ್ನು ಅವಲಂಬಿಸಿ ಇರುವವು; ಯಾವತ್ತೂ, ವಂಶಗಳಲ್ಲಿ ವಿಶೇಷವಾಗಿರುವ ಸೂರ್ಯವಂಶವು ಧನ್ಯವಿರುವದು. ಸೂರ್ಯ ಮೇಡಲದ ಪ್ರಕಾಶವು ಜಗತ್ತಿನತುಂಬೆಲ್ಲ ಪಸರಿಸಿರುವದು. [೧] ಚಂದ್ರಬಿಂಬದ ಮೇಲೆ ಕಲಂಕ[ಕಪ್ಪುಕಲೆ]ಕಂಡುಬರುವದು. ಮತ್ತು ತಿಂಗಳದಲ್ಲಿ ಒಂದು ಪಕ್ಷ ಅಂದರೆ ಹದಿನೈದು ದಿನ ಚಂದ್ರನು ಕ್ಷೀಣವಾಗುವನು. ಇದರ ಶಿವಾಯ ಸೂರ್ಯ ಹುಟ್ಟಿದ ಕೂಡಲೇ ಇವನ ಕಿರಣಗಳಿಂದ ಚಂದ್ರನು ನಿಸ್ತೇಜನಾಗಿ ಕಾಣುವನು. [೨] ಅಂತೂ ಒಟ್ಟನಲ್ಲಿ ಬೇರೆ ಯಾರೂ ಸೂರ್ಯನನ್ನು ಸರಿಗಟ್ಟಲಾರರು.. ಸರಿಗಟ್ಟಲಿಕ್ಕೆ ಸಾಧ್ಯವೇ ಇಲ್ಲ. ಸೂರ್ಯನ ಪ್ರಕಾಶದಿಂದ ಬೆಳಗಾದ ಕೂಡಲೇ ಯಾವತ್ತೂ ಪ್ರಾಣಿಗಳು ತಮ್ಮ ತಮ್ಮ ಕಾರ್ಯವನ್ನು ಆರಂಭಿಸುವವು. [೩] ಉತ್ತಮ, ಮಧ್ಯಮ, ಮತ್ತು ಅಧಮ ಸುಗಮ ಹಾಗೂ ದುರ್ಗಮ ಇತ್ಯಾದಿ ಅನೇಕ ಪ್ರಕಾರದ ಧರ್ಮ ಮತ್ತು ಅನೇಕ ಪ್ರಕಾರದ ಕರ್ಮ ಇವು ಅಗದೀ ನಿಯಮದಿಂದ ಜಗತ್ತಿನಲ್ಲಿ ಒಂದೇ ಸಮನೆ ನಡೆಯುತ್ತಿರುವವು. [೪] ಇದರಂತೆಯೇ ವೇದ, ಶಾಸ್ತ್ರ, ಪುರಾಣ, ಮಂತ್ರ, ಯಂತ್ರ ಅನೇಕ ತರಹದ ಸಾಧನ, ಸಂಧ್ಯಾ, ಸ್ನಾನ, ಪೂಜೆಯು ಪ್ರಕಾರ ಇವೆಲ್ಲ ಕಾರ್ಯಗಳು ಸೂರ್ಯನ ಮೇಲೆ ಅವಲಂಬಿಸಿರುವವು. ಸೂರ್ಯನಿಲ್ಲದಿದ್ದರೆ ಈ ಎಲ್ಲ ಕಾರ್ಯಗಳೂ ಸುಳ್ಳಾಗುವವು [ನಿಲ್ಲುವವು.] (೫) ಭಿನ್ನಯೋಗ ಮತ್ತು ಭಿನ್ನಮತ ಇವನ್ನು ನೋಡಿದ್ದಾದರೆ ಇವು ಅಸಂಖ್ಯವಿರುವವೆಂಬುದು ಕಂಡುಬರುವದು. ಸೂರ್ಯನು ಉದಯ ಹೊಂದಿದ ಕೂಡಲೇ ಇವುಗಳಿಗೆ ಗತಿ [ಚಾಲನೆ] ದೊರೆಯುವದು. ಮತ್ತು ಇವು ತಮ್ಮ ತಮ್ಮ ಮಾರ್ಗದಿಂದ ಸಾಗಿ ಹೋಗಹತ್ತುವವು. (೬) ಕೆಲಸ ಕಾರ್ಯ ಯಾವುದೇ ಇರಲಿ ಪ್ರಾಪಂಚಿಕವಿರಲಿ ಅಥವಾ ಪಾರಮಾರ್ಥಿಕವಿರಲಿ ಇವೆಲ್ಲವನ್ನು ಮಾಡಬೇಕಾದರೆ [ಈ ಕಾರ್ಯಕ್ಕೆ] ದಿನದ ಮುಂಜಾವು [ಸೂರ್ಯ ಉದಯದ ನಂತರ] ಬೇಕು. ಹಗಲು ಮತ್ತು ಸೂರ್ಯ ಪ್ರಕಾಶ ಇವು ಇಲ್ಲದಿದ್ದರೆ ಆ ಕಾರ್ಯ ಚನ್ನಾಗಿ ಆಗುವದಿಲ್ಲ. [೭] ಪ್ರಾಣಿ ಮಾತ್ರರ ಕಣ್ಣಿನಲ್ಲಿ. ಸೂರ್ಯನ ಅಧಿಷ್ಠಾನವಿರುವದು. ಕಣ್ಣಿಲ್ಲದಿದ್ದರೆ ಎಲ್ಲವೂ ಕುರುಡುತನವೇ ಆಗುವದು. [ಎಲ್ಲವೂ ಕತ್ತಲು–ಏನೂ ಕಾಣಿಸುವದಿಲ್ಲ]. ಆದ್ದರಿಂದ ಸೂರ್ಯನಿಲ್ಲದೇ ಯಾವುದೂ ಏನೂ ನಡೆಯುವದಿಲ್ಲ. (ನಿಂತು ಬಿಡುವದು) [೮] ಆಗ ಇದರ ಬಗ್ಗೆ ಒಬ್ಬ ಕೇಳಬಹುದು: "ಏನು ಕಣ್ಣಿಲ್ಲದ ಕುರುಡನು ಕಾವ್ಯ ರಚಿಸು ವನಲ್ಲಾ ?" ಆದರೆ ಇದೂ ಕೂಡಾ ಸೂರ್ಯದೇವನದೇ ಪ್ರಭಾವವು ಇರುವದು. ತಿಳಿಯಿರಿ, ನಮ್ಮ ಬುದ್ಧಿಯು ಒಂದು ವೇಳೆ ತಣ್ಣಗಾಗಿ ಹೋದರೆ ಅಥವಾ ಮಂದ ಅಥವಾ ಸುಸ್ತು ಬಿದ್ದದ್ದಾದರೆ ಆಗ ಅದರಲ್ಲಿ ಜ್ಞಾನದ ಪ್ರಕಾಶವು ಕಂಡುಬರುವದಿಲ್ಲ. ಜ್ಞಾನವೆಂಬ ಪ್ರಕಾಶ ಇದ್ದರೇನೇ ಕುರುಡನು ಕಾವ್ಯವನ್ನು ಬರೆಯಬಲ್ಲನು. (೯)

ಉಷ್ಣ ಪ್ರಕಾಶ ತೋ ಸೂರ್ಯಾಚಾ । ಶೀತ ಪ್ರಕಾಶ ತೋ ಚಂದ್ರಾಚಾ ।
ಉಷ್ಣತ್ವ ನಸ್ತಾ ದೇಹ್ಯಾಚಾ । ಘಾತ ಹೋಯೇ ॥೧೦॥
ಯಾ ಕಾರಣೇ ಸೂರ್ಯೇವಿಣ । ಸಹಸಾ ನ ಚಲೇ ಕಾರಣ ।
ಶ್ರೋತೇ ತುಮ್ಹೀ ವಿಚಕ್ಷಣ । ಶೋಧೂನ ಪಾಹಾ ॥೧೧॥
ಹರಿಹರಾಚ್ಯಾ ಅವತಾರ ಮೂರ್ತೀ । ಶಿವಶಕ್ತೀಚ್ಯಾ ಅನಂತ ವ್ಯಕ್ತೀ ।
ಯಾ ಪೂರ್ವೀ ಹೋತಾ ಗಭಸ್ತೀ । ಆತಾ ಹಿ ಆಹೆ ॥೧೨॥
ಜಿತುಕೇ ಸಂಸಾರಾಸೀ ಆಲೇ । ತಿತುಕೇ ಸೂರ್ಯಾಖಾಲೇ ವರ್ತಲೇ ।
ಅಂತೀ ದೇಹೆ ತ್ಯಾಗೂನ ಗೇಲೇ । ಪ್ರಭಾಕರಾದೇಖತಾ ॥೧೩॥
ಚಂದ್ರ ಏಲೀಕಡೇ ಜಾಲಾ । ಕ್ಷೀರಸಾಗರೀ ಮಂಥೂನ ಕಾಢಿಲಾ ।
ಚೌದಾ ರತ್ನಾಮಧೇ ಆಲಾ । ಬಂಧು ಲಕ್ಷುಮೀಚಾ ॥೧೪॥
ವಿಶ್ವಚಕ್ಷು ಹಾ ಭಾಸ್ಕರ । ಏಸೇ ಜಾಣತೀ ಲಾಹಾನ ಥೋರ ।
ಯಾ ಕಾರಣೇ ದಿವಾಕರ । ಶ್ರೇಷ್ಠಾಹೂನ ಶ್ರೇಷ್ಠ ॥೧೫॥
ಅಪಾರ ನಭಮಾರ್ಗ ಕ್ರಮಣೇ । ಏಸೇ ಚಿ ಪ್ರತ್ಯಹೀ ಯೇಣೇ ಜಾಣೇ ।
ಯಾ ಲೋಕೋಪಕಾರಾಕಾರಣೇ । ಆಜ್ಞಾ ಸಮರ್ಥಾ ಚೀ ॥೧೬॥
ದಿವಸ ನಸ್ತಾ ಅಂಧಕಾರ । ಸರ್ವಾಸೀ ನಕಳೇ ಸಾರಾಸಾರ ।
ದಿವಸೇವಿಣ ತಸ್ಕರ । ಕಾ ದಿವಾಭೀತ ಪಕ್ಷೀ ॥೧೭॥
ಸೂರ್ಯಾಪುಢೇ ಆಣಿಕ ದುಸರೇ । ಕೋಣ ಆಣಾವೇ ಸಾಮೋರೇ ।
ತೇಜೋರಾಸೀ ನಿರ್ಧಾರೇ । ಉಪಮೇರಹಿತ ॥೧೮॥
ಏಸಾ ಹಾ ಸವಿತಾ ಸಕಳಾಂಚಾ । ಪೂರ್ವಜ ಹೋಯ ರಘುನಾಥಾಚಾ ।
ಅಗಾಧ ಮಹಿಮಾ ಮಾನವೀ ವಾಚಾ। ಕಾಯ ವ್ಹಣೋನಿ ವರ್ಣಾವೀ ॥೧೯॥
ರಘುನಾಥ ವಂಶ ಪೂರ್ವಾಪರ । ಯೇಕಾಹೂನಿ ಯೇಕ ಥೋರ।
ಮಜ ಮತಿಮಂದಾಸ ಹಾ ವಿಚಾರ । ಕಾಯ ಕಳೇ ॥೨೦॥
ರಘುನಾಥಾಚಾ ಸಮುದಾವ । ತೇಥೇ ಗುಂತಲಾ ಅಂತರ್ಭಾವ ।
ವ್ಹಣೋನೀ ವರ್ಣಿತಾ ಮಹತ್ವ । ವಾಗ್ದುರ್ಬಳ ಮೀ ॥೨೧॥
ಸಕಳ ದೋಷಾಚಾ ಪರಿಹಾರ । ಕರಿತಾ ಸೂರ್ಯಾಸ ನಮಸ್ಕಾರ ।
ಸ್ಫೂರ್ತಿ ವಾಢೆ ನಿರಂತರ । ಸೂರ್ಯ ದರ್ಶನ ಘೇತಾ ॥೨೨॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ಸೂರ್ಯಸ್ತವನ ನಿರೂಪಣ' ನಾಮ ಸಮಾಸ ದ್ವಿತೀಯ ॥

ಸೂರ್ಯ ಪ್ರಕಾಶ ಉಷ್ಣ (ಬಿಸಿ, ಗರಮ) ವಿರುವದು. ಚಂದ್ರನ ಪ್ರಕಾಶವು ತಣ್ಣಗೆ–ತಂಪು ಇರುವದು. ಶರೀರದಲ್ಲಿ ಉಷ್ಣತೆಯು ಇರದಿದ್ದರೆ ಆ ಶರೀರ ಜೀವಂತ ಇರುವದಿಲ್ಲ. (೧೦) ಇದರ ಮೇಲಿಂದ ಏನು ಕಂಡು ಬರುವದೆಂದರೆ, ಸೂರ್ಯನಿಲ್ಲದೆ ಜಗತ್ತಿನಲ್ಲಿ ಯಾವ ಕೆಲಸವೂ ನಡೆಯಲಾರದು. ನೀವು ಚಿಕಿತ್ಸಕರಾದ ಶ್ರೋತಾ ಜನರೇ ಇರುವಿರಿ. ನಿಮ್ಮಲ್ಲಿ ನೀವೇ ಇದನ್ನು ಶೋಧಿಸಿ ನೋಡಿರಿ ತಿಳಿಯಿರಿ. (೧೧) ಜಗತ್ತಿನ ಯಾವತ್ತೂ ಇತಿಹಾಸವು ಸೂರ್ಯನ ಕಣ್ಣೆದುರಿನಲ್ಲಿಯೇ ಘಟಿಸುವದು. ಜನತೆಯ ಮೇಲೆ ಉಪಕಾರ ಮಾಡಬೇಕೆಂಬ ಉದಾರ ಬುದ್ಧಿಯಿಂದಲೇ ಸೂರ್ಯನು ಪ್ರತಿದಿನವೂ ಅಪಾರವಾದ ಆಕಾಶವನ್ನು ಆಕ್ರಮಣಮಾಡುವನು. ಇವನು ಶ್ರೀ ರಾಮ ಚಂದ್ರನ ಪೂರ್ವಜನಿರುವನು. ಇವನಿಗೆ ನಮಸ್ಕಾರ ಮಾಡಬೇಕು. ಮತ್ತು ಇವನ ದರ್ಶನವನ್ನು ಪಡೆಯುತ್ತಿರಬೇಕು- ಜಗತ್ತಿನಲ್ಲಿ ಹರಿಹರರ ಅನೇಕ ಅವತಾರಗಳು ಆದವು. ಶಿವ ಮತ್ತು ಶಕ್ತಿಯರು ಅನಂತರೂಪದಿಂದ ದೃಶ್ಯ ಜಗತ್ತಿನಲ್ಲಿ ಬಂದಿರುವರು. ಆದರೆ ಈ ಎಲ್ಲರಿಗಿಂತ ಪೂರ್ವದಲ್ಲಿಯೇ ಸೂರ್ಯನಿದ್ದನು. ಆಗಿದ್ದುತೆಯೇ ಈಗಲೂ ಇರುವನು. (೧೨) ಯಾವ ಯಾವುವು ಜೀವ ಧರಿಸಿ ಈ ಸಂಸಾರದಲ್ಲಿ ದೃಶ್ಯ ರೂಪಧಾರಣಮಾಡಿ ಬಂದಿರುವವೋ ಅವೆಲ್ಲವುಗಳ ಆರಂಭ ಮತ್ತು ಕೊನೆ ಎರಡೂ ಸೂರ್ಯನ ದೃಷ್ಟಿಯಲ್ಲಿಯೇ-ಇವನ ಎದುರಿಗೇ ಆದವು. ಸಂಸಾರದಲ್ಲಿ ಬಂದಂಥ ಪ್ರಾಣಿಗಳು ಕೊನೆಗೆ ಸೂರ್ಯನ ಕಣ್ಣೆದುರಿಗೇ ದೇಹ ಬಿಟ್ಟು ಹೋಗುವವು. [ಸೂರ್ಯನು ಎಲ್ಲಕ್ಕಿಂತಲೂ ಮೊದಲು ಇದ್ದನೆಂಬ ಭಾವ] (೧೩) ಚಂದ್ರನ ಜನ್ಮ ಇತ್ತೀಚಿನದು. ಕ್ಷೀರಸಾಗರವನ್ನು ದೇವದಾನವರು ಕಡೆದಾಗ ಅದರೊಳಗಿಂದ ಚಂದ್ರನು ಬಂದನು. ಆಗ ಒಟ್ಟು ಹದಿನಾಲ್ಕು ಅಮೌಲ್ಯ ರತ್ನಗಳು ಹೊರಟವು. ಅದರಲ್ಲಿ ಲಕ್ಷ್ಮಿಯೂ ಬಂದಳು. ಬೆನ್ನ ಹಿಂದೆಯೇ ಬಂಧುವಾಗಿ ಚಂದ್ರನೂ ಬಂದನು. (೧೪) ಸೂರ್ಯನು ವಿಶ್ವದ ಕಣ್ಣಾಗಿರುವನು. ಈ ಮಾತನ್ನು ಎಲ್ಲ ಸಣ್ಣವರೂ ಮತ್ತು ದೊಡ್ಡವರೂ ತಿಳಿದಿರುವರು. ಆದ್ದರಿಂದ ಸೂರ್ಯನು ಶ್ರೇಷ್ಠರಿಗಿಂತ ಅತಿ ಶ್ರೇಷ್ಠ ನಿರುವನು. (೧೫) ಸೂರ್ಯನು ಅಪಾರ–ಅಳತೆಯಿಲ್ಲದ ಆಕಾಶ ಮಾರ್ಗದಲ್ಲಿ ನಡೆಯುವನು. ದಿನಂಪ್ರತಿ ತನ್ನ ನಿಶ್ಚಿತ ಮಾರ್ಗದಿಂದ ಬರುವದು ಮತ್ತು ಹೋಗುವದು ನಡೆದೇ ಇರುವದು. ಈ ರೀತಿಯ ಲೋಕೋಪಕಾರ ಕಾರ್ಯವನ್ನು ಮಾಡಲಿಕ್ಕೇಬೇಕು ಎಂದು ಸೂರ್ಯನಿಗೆ ಭಗವಂತನ ಆಜ್ಞೆ ಇರುವದು. (೧೬) ದಿವಸ [ಹಗಲು] ಇರದಿದ್ದರೆ ಅಂಧಕಾರ [ಕತ್ತಲು] ಇರುವದು. ಕತ್ತಲಲ್ಲಿ ಎಲ್ಲರಿಗೂ ಸಾರಾಸಾರ, ಒಳ್ಳೆಯದು ಮತ್ತು ಕೆಟ್ಟದ್ದು ಇದು ಸರಿಯಾಗಿ ತಿಳಿಯ ದಂತೆ ಆಗುವದು. ಹಗಲು ಇಲ್ಲದೆ ಕತ್ತಲೆ ಇದ್ದದ್ದಾದರೆ ಕಳ್ಳಕಾಕರು ಮತ್ತು ಗೂಗೆ [ಗೂಬೆ] ಗಳಿಗೆ ಸಮಾಧಾನ [ಆನಂದ] ವಾಗುವದು. [೧೭] ತುಲನೆಗಾಗಿ ಸೂರ್ಯನ ಮುಂದೆ ಯಾರನ್ನೂ ತರಲು ಶಕ್ಯವಿಲ್ಲ. ಸೂರ್ಯನು ತೇಜದ ರಾಶಿಯೇ ಇರುವನು. ಇವನಿಗೆ ಬೇರೆ ಉಪಮೆಯೇ ಇಲ್ಲ. [೧೮] ಈ ರೀತಿಯು ಸೂರ್ಯನು ಎಲ್ಲರವನೂ ಇರುವನು. ಅವರಲ್ಲಿಯೂ ಶ್ರೀರಾಮನ ಪೂರ್ವಜನೇ ಸೂರ್ಯನಿರುವನು. ಇವನ ಮಹಿಮೆಯು ಅಗಾಧವಿರುವದು. ಮನುಷ್ಯನಿಗೆ ತನ್ನ ಮುಖದಿಂದ ಇವನ ವರ್ಣನೆಯನ್ನು ಮಾಡಲಿಕ್ಕೆ ಆಗುವದಿಲ್ಲ. [೧೯] ಶ್ರೀ ರಾಮನ ವಂಶ ಪೂರ್ವಾಪರದಿಂದ [ಮೊದಲಿನಿಂದ] ನಡೆದು ಬಂದದ್ದಾಗಿದೆ. ಇದರಲ್ಲಿ ಒಬ್ಬರಿಗಿಂತ ಒಬ್ಬರು ಶ್ರೇಷ್ಠ ರಾಜ ಪುರುಷರೆನಿಸಿ ಹೋದರು. ನನ್ನಂತಹ ಮತಿ ಮಂದನಿಗೆ ಸೂರ್ಯವಂಶದ ಮಹತಿ, ಕಾರ್ಯದ ಕಲ್ಪನೆ ಪೂರ್ತಿ ಬರಲಿಕ್ಕೆ ಶಕ್ಯವಿಲ್ಲ. [೨೦] ಯಾವ ಸ್ಥಳದಲ್ಲಿ ರಾಮ ಭಕ್ತರ ಸಮುದಾಯವಿರುವದೋ ಅಲ್ಲಿ ನನ್ನ ಅಂತರಂಗ ನಿಮಗ್ನವಾಗಿರುವದು. ಆದ್ದರಿಂದಲೇ ಸೂರ್ಯವಂಶದ ಮಹಿಮೆಯ ವರ್ಣನೆಯು ನನ್ನ ದುರ್ಬಲ ವಾಣಿಯಿಂದ ಮಾಡಲು ಶಕ್ಯವಿಲ್ಲ [೨೧] ಸೂರ್ಯನಿಗೆ ನಮಸ್ಕಾರ ಮಾಡಿದರೆ ಎಲ್ಲ ದೋಷಗಳೂ ಇಲ್ಲದಾಗಿ ಹೋಗುವವು. ಸೂರ್ಯ ದರ್ಶನ ಮಾಡಿಕೊಳ್ಳುತ್ತ ಹೋದರೆ ಸ್ಫೂರ್ತಿಯು ನಿರಂತರವಾಗಿ ಹೆಚ್ಚುತ್ತ ಹೋಗುವದು. [೨೨]

ಶ್ರೀ ದಾಸಬೋಧದ ಹದಿನಾರನೆಯ ದಶಕದಲ್ಲಿಯ ಗುರುಶಿಷ್ಯರ ಸಂವಾದದ
"ಸೂರ್ಯ ಸ್ತವನ ನಿರೂಪಣ" ವೆಂಬ ಎರಡನೆಯ ಸಮಾಸವು ಮುಗಿದುದು.

● ●

### ದಶಕ ಷೋಡಶ : ಸಮಾಸ ತೃತೀಯ : ಪೃಥ್ವೀ ಸ್ತವನ ನಿರೂಪಣ [ನುಡಿ ೩೦]

॥ಶ್ರೀರಾಮ ಸಮರ್ಥ॥ ಧನ್ಯ ಧನ್ಯ ಹೇ ವಸುಮತೀ ।
ಇಚಾ ಮಹಿಮಾ ಸಾಂಗೋ ಕಿತೀ ।
ಪ್ರಾಣಿಮಾತ್ರ ತಿತುಕೇ ರಾಹಾತೀ । ತಿಚ್ಯಾ ಆಧಾರೇ ॥೧॥

ಅಂತರಿಕ್ಷ ರಾಹಾತೀ ಜೀವ । ತೋ ಹೀ ಪೃಥ್ವೀಚಾ ಸ್ವಭಾವ ।
ದೇಹೆ ಜಡ ನಸ್ತಾ ಜೀವ । ಕೈಸೇ ತಗತೀ ॥೨॥

ಜಾಳಿತೀ ಪ್ರೋಳಿತೀ ಕುದಳಿತೀ । ನಾಂಗರಿತೀ ಉಕರಿತೀ ಖಾಣಿತೀ ।
ಮಳ ಮೂತ್ರ ತಿಜವರೀ ಕರಿತೀ । ಆಣೀ ವಮನ ॥೩॥

ನಾಸಕೇ ಕುಜಕೇ ಜರ್ಜರ । ಪೃಥ್ವೀವಿಣ ಕೈಚೀ ಥಾರ ।
ದೇಹ್ಯಾಂತಕಾಳೀ ಶರೀರ । ತಿಜವರೀ ಪಡೆ ॥೪॥

## ದಶಕ ೧೬. ಸಮಾಸ ೩. ಪೃಥ್ವೀ ಸ್ತವನ ನಿರೂಪಣ (ನುಡಿ ೩೦)

ಯಾವತ್ತೂ ಪ್ರಾಣಿಗಳು ಪೃಥ್ವಿಯ ಆಧಾರದಿಂದ ಜೀವಿಸುವವು. ದೇಹವು ಪೃಥ್ವೀ ತತ್ವದಿಂದ ತಯಾರಾಗಿರುವದರಿಂದ ಪೃಥ್ವೀ ಇಲ್ಲದೇ ಜೀವಕ್ಕೆ ಗತ್ಯಂತರವಿರುವದಿಲ್ಲ. ಪೃಥ್ವೀ ಬಿಟ್ಟು ಪ್ರಾಣಿಗಳಿಗೆ ಎಲ್ಲಿಗೂ ಹೋಗಲಿಕ್ಕೆ ಬರುವದಿಲ್ಲ.(ಆಗುವದಿಲ್ಲ). ದೇವ, ದಾನವ(ರಾಕ್ಷಸ), ಮಾನವ, ಸುಷ್ಟ (ಒಳ್ಳೆಯ), ದುಷ್ಟ, ಮಹಾಬಲಿಷ್ಠ ದುರ್ಬಲ ಇವರೆಲ್ಲರೂ ಈ ಭೂಮಿಯ ಮೇಲೆ ಇರುತ್ತಾರೆ. ಕೋಟ್ಯಾವಧಿ ಜೀವ ಮತ್ತು ಭಗವಂತನ ಅನೇಕ ಅವತಾರಗಳು ಇತ್ಯಾದಿ ಯಾವತ್ತೂ ಪೃಥ್ವಿಯ ಮೇಲೆ ಇರುವವು. ಜನರು ಭೂಮಿಯ ಮೇಲೆ ಬೆಂಕಿಹಚ್ಚುವರು, ಸುಡುವರು, ಅಗಿಯುವರು. ಕಡಿಯುವರು, ರಂಟೆ ಹೊಡೆಯುವರು. ಮಲಮೂತ್ರವನ್ನು ಚೆಲ್ಲುವರು. ಅಂತ್ಯಕಾಲದಲ್ಲಿ ಎಲ್ಲರ ದೇಹವು ಭೂಮಿಯ ಮೇಲೆಯೇ ಬೀಳುವದು. ಪೃಥ್ವಿಯು ಎಲ್ಲ ಕಡೆಗೂ (ಸುತ್ತುಮುತ್ತಲೂ) ಅತಿಶಯವಾಗಿ ಹಬ್ಬಿರುವದು. ವಿಸ್ತಾರಗೊಂಡಿರುವದು. ಇದೆಲ್ಲವನ್ನೂ ತಿರುಗಾಡಿ ನೋಡಲು ಯಾರಿಗೂ ಶಕ್ಯವಿಲ್ಲ. ಇವಲ್ಲದೆ ಇದರ ಮೇಲೆ ಅನೇಕ ಪ್ರಕಾರದ ಪಾಷಾಣ (ಕಲ್ಲು) ಮತ್ತು ಅನೇಕ ತರಹದ ವನಸ್ಪತಿಗಳು ಹರಡಿರುವವು. (ಅಲ್ಲಲ್ಲಿ ಪಸರಿಸಿರುವವು). ಈ ಭೂಮಿಯ ಹೊಟ್ಟೆಯಲ್ಲಿ ಅನೇಕ ಪ್ರಕಾರದ ರತ್ನಗಳು ಸಿಗುವವು. ಜನರು ನನ್ನ ಭೂಮಿ (ನನ್ನ ಹೊಲ, ನನ್ನ ಮನೆ) ಅನ್ನುವರು. ಆದರೆ ಕಾಲನ ಕರೆ ಬಂದಾಗ (ಕೊನೆಯಲ್ಲಿ) ಇದನ್ನು ಇಲ್ಲಿಯೇ ಬಿಟ್ಟು ಹೋಗಬೇಕಾಗುವದು. ಪೃಥ್ವಿಯು ಮಾತ್ರ ಹೇಗೆ ಇರುತ್ತದೆಯೋ ಹಾಗೆಯೇ ಇರುವದು.

### ದಶಕ ೧೬. ಸಮಾಸ ೩. ಪೃಥ್ವೀ ಸ್ತವನ ನಿರೂಪಣ (ನುಡಿ ೩೦)

ಸರ್ವ ಜೀವಿಗಳು ಪೃಥ್ವಿಯ ಆಧಾರದಿಂದ ಇರುವವು. ದೇಹ ಪೃಥ್ವೀ ತತ್ವದಿಂದ ತಯಾರ ಆಗಿರುವದು. ಜನರು ಭೂಮಿಯನ್ನು ತಮಗೆ ಬೇಕಾದ ರೀತಿಯಲ್ಲಿ ಉಪಯೋಗಿಸುವರು. ಆದರೆ ಒಳ್ಳೆಯ ಮತ್ತು ಕೆಟ್ಟವರೆಲ್ಲರಿಗೂ ಭೂಮಿಯೇ ಆಧಾರವಾಗಿದೆ. ಈ ಭೂಮಿಯು ನಿಜವಾಗಿ ಧನ್ಯವಿರುವದು. ಈ ಭೂಮಿ ತಾಯಿಯ ಮಹಿಮೆಯನ್ನು ಎಷ್ಟು ಹೇಳಿದರೂ ಕಡಿಮೆಯೇ ಇರುವದು. ಯಾವತ್ತೂ ಪ್ರಾಣಿಗಳು ಇವಳ ಆಧಾರದಿಂದಲೇ ಇರುವವು. [೧] ಆಕಾಶದಲ್ಲಿ ಇರುವಂಥ ಜೀವಿಗಳಿಗೆ ಕೂಡಾ ಪೃಥ್ವಿಯ ಆಧಾರವೇ ಇರುವದು. ಯಾಕೆಂದರೆ ದೇಹವು ಪೃಥ್ವೀ ತತ್ವದಿಂದ ತಯಾರಾದದ್ದಿರುವದು. ಮತ್ತು ದೇಹವಿಲ್ಲದೆ (ದೇಹದ ಹೊರತಾಗಿ)ಜೀವವು ಜೀವಂತವಿರಲಿಕ್ಕೆ ಶಕ್ಯವಿಲ್ಲ. [೨] ಜನರು ಪೃಥ್ವಿಯನ್ನು ಸುಡುವರು, ಹುರಪಳಿಸುವರು. ಗುದ್ದಲಿಯಿಂದ ಕಡಿಯುವರು, ನೇಗಿಲು ಹೊಡೆಯುವರು, ಕೆದರುವರು. ಕಡಿ ಕಡಿದು ಮಣ್ಣು ತೆಗೆಯುವರು. ಭೂಮಿಯ ಮೇಲೆಯೇ ಮಲ-ಮೂತ್ರ ಬಿಡುವರು. (ಚೆಲ್ಲುವರು). ಮತ್ತು ಇದರ ಮೇಲೆ ವಾಂತಿಯನ್ನೂ ಕೂಡಾ ಮಾಡುವರು. [೩] ಕೆಟ್ಟದ್ದನ್ನು, ಕೊಳೆತದ್ದನ್ನು ಮತ್ತು ಅತೀ ಜೀರ್ಣ ಆದಂಥ ಪದಾರ್ಥಗಳಿಗೆಲ್ಲ ಭೂಮಿಯೇ ಆಧಾರವು. (ಆಶ್ರಯವಿರುವದು.) ಅಂತ್ಯಕಾಲದಲ್ಲಿ ಪ್ರಾಣಿಗಳ ದೇಹ ಭೂಮಿಯ ಮೇಲೆಯೇ ಬೀಳುವದು. [೪]

ಬರೀ ವಾಈಟ ಸಕಳ ಕಾಂಹೀ । ಪೃಥ್ವೀವಿಣ ಥಾರ ನಾಹೀ ।
ನಾನಾ ಧಾತು ದ್ರವ್ಯ ತೇಹೀ । ಭೂಮೀಚೆ ಪೋಟೀ ॥೫॥

ಯೇಕಾಸ ಯೇಕ ಸಂವ್ಹಾರಿತೀ । ಪ್ರಾಣೀ ಭೂಮೀವರೀ ಅಸತೀ ।
ಭೂಮೀ ಸಾಂಡೂನ ಜಾತೀ । ಕೋಣೀಕಡೆ ॥೬॥

ಗಡ ಕೋಠ ಪುರೇ ಪಟ್ಟಣೇ । ನಾನಾ ದೇಶ ಕಳತೀ ಅಟ್ಟಣೇ ।
ದೇವ ದಾನವ ಮಾನವ ರಾಹಾಣೇ । ಪೃಥ್ವಿವರೀ ॥೭॥

ನಾನಾ ರತ್ನೇ ಹಿರೇ ಪರೀಸ । ನಾನಾ ಧಾತು ದ್ರವ್ಯಾಂಶ ।
ಗುಪ್ತ ಪ್ರಗಟ ಕರಾವ್ಯಾಸ । ಪೃಥ್ವೀವಿಣ ನಾಹೀ ॥೮॥

ಮೇರು ಮಾಂದಾರ ಹಿಮಾಚಳ । ನಾನಾ ಅಷ್ಟಕುಳಾಚಳ ।
ನಾನಾ ಪಕ್ಷೀ ಮುಥವ್ಯಾಳ । ಭೂಮಂಡಳೀ ॥೯॥

ನಾನಾ ಸಮುದ್ರಾ ಪೈಲೀಕಡೇ । ಭೋವತೇ ಆವರ್ಣೋದಕಾ ಕಡೇ ।
ಅಸಂಭಾವ್ಯ ತುಟಲೇ ಕಡೇ । ಭೂಮಂಡಳಾಚೇ ॥೧೦॥

ತ್ಯಾಮಧೇ ಗುಪ್ತ ವಿವರೇ । ಲಾಹಾನಥೋರೇ ಅಪಾರೇ ।
ತೇಥೇ ನಿಬಿಡ ಅಂಧಕಾರೇ । ವಸ್ತೀ ಕೀಜೆ ॥೧೧॥

ಆವರ್ಣೋದಕ ತೇ ಅಪಾರ । ತ್ಯಾಚಾ ಕೋಣ ಜಾಣೆ ಪಾರ ।
ಉದಂಡ ದಾಟಲೇ ಜಳಚರ । ಅಸಂಭಾವ್ಯ ಮೋಠೆ ॥೧೨॥

ತ್ಯಾ ಜೀವನಾಸ ಆಧಾರ ಪವನ । ನಿಬಿಡ ದಾಟ ಆಣೀ ಘನ ।
ಫುಟೋ ಶಕೇನಾ ಜೀವನ । ಕೋಣೆ ಕಡೆ ॥೧೩॥

ತ್ಯಾ ಪ್ರಭಂಜನಾಸೀ ಆಧಾರ । ಕಠೀಣಪಣೇ ಅಹಂಕಾರ ।
ಏಸಾ ತ್ಯಾ ಭೂಗೋಳಾಚಾ ಪಾರ । ಕೋಣಜಾಣೇ ॥೧೪॥

ನಾನಾ ಪದಾರ್ಥಾಚ್ಯಾ ಖಾಣೀ । ಧಾತುರತ್ನಾಚ್ಯಾ ದಾಟಣೀ ।
ಕಲ್ಪತರು ಚಿಂತಾಮಣೀ । ಅಮೃತಕುಂಡೇ ॥೧೫॥

ಯಾವತ್ತೂ ಒಳ್ಳೆಯ ಮತ್ತು ಕೆಟ್ಟವು(ಪದಾರ್ಥಗಳು)ಯಾವವು ಇರುವವೋ ಅದಕ್ಕೆಲ್ಲ ಭೂಮಿಯೇ ಆಶ್ರಯ ಕೊಟ್ಟಿರುವದು. ಅನೇಕ ಧಾತು ಮತ್ತು ದ್ರವ್ಯಾದಿಗಳು ಭೂಮಿಯ ಹೊಟ್ಟೆಯಲ್ಲಿಯೇ ಸಿಗುವವು. [೫] ದೇವ, ದಾನವ, ಮಾನವ, ಕಿಲ್ಲಾ, ಶಹರ, ಪಟ್ಟಣ, ಮೇರು, ಮಂದಾರ, ಆವರಣೋದಕ ಇವೆಲ್ಲವುಗಳಿಗೂ ಪೃಥ್ವಿಯೇ ಆಧಾರವಾಗಿರುವದು:- ಯುದ್ಧ, (ಕಾಳಗ) ಹೊಡೆದಾಟ, ಬಡಿದಾಟಗಳಲ್ಲಿ ಒಬ್ಬರನ್ನೊಬ್ಬರು ಸಂಹಾರ ಮಾಡುವದು, ಸಾಯುವದು. ಈ ಭೂಮಿಯ ಮೇಲೆಯೇ ಅಲ್ಲವೇ? (ಹೌದು, ಸತ್ತರೂ ಭೂಮಿಯ ಮೇಲೆಯೇ ಉಳಿದರೂ ಇದರಲ್ಲಿಯೇ ಇರಬೇಕಾಗುವದು. ಇವೆಲ್ಲವೂ ಹೊನ್ನು ಹೆಣ್ಣು ಮಣ್ಣಿಗಾಗಿಯೇ ಆಗುವವು. ಈ ಮೂರೂ ಪೃಥ್ವಿಯ ತತ್ವದವೇ ಇರುವವು.) ಒಟ್ಟಿನಲ್ಲಿ ಪೃಥ್ವಿ ಬಿಟ್ಟುಕೊಟ್ಟು ಎರಡನೆಯ ಕಡೆಗೆ ಹೋಗಲಿಕ್ಕೆ ಯಾರಿಗೂ ಸಾಧ್ಯವಿಲ್ಲ. [೬] ಕೋಟೆ, ಕೊತ್ತಳ, ಗ್ರಾಮ (ಊರು) ಪಟ್ಟಣ, ಶಹರ, ಮತ್ತು ಅನೇಕ ಪ್ರಕಾರದ ದೇಶ, ಎಲ್ಲವೂ ಪೃಥ್ವಿಯ ಮೇಲೆಯೇ ಇರುವವು. ಪ್ರವಾಸ ಮಾಡಿದೆವೆಂದರೆ ಇವೆಲ್ಲ ನಮಗೆ ತಿಳಿಯುವವು. ದೇವ, ದಾನವ, ಮತ್ತು ಮಾನವ ಇವರೆಲ್ಲರ ವಾಸವು ಭೂಮಿಯ ಮೇಲೆಯೇ ಇರುವದು. [೭] ಅನೇಕ ಪ್ರಕಾರದ ರತ್ನ, ಹೀರಾ–ವಜ್ರ, ಪರಿಸಗಲ್ಲು(ಸ್ಪರ್ಶಮಣಿ) ಅನೇಕ ಪ್ರಕಾರದ ಧಾತುಗಳು ಮತ್ತು ದ್ರವ್ಯ ಇವೆಲ್ಲವುಗಳು ಭೂಮಿಯಲ್ಲಿ ಗುಪ್ತವಿರುವವು. ಇವುಗಳನ್ನು ಪ್ರಕಟ ಮಾಡಬೇಕೆಂದರೆ ಪೃಥ್ವಿಯ ಹೊರತಾಗಿ ಬೇರೆ ಮಾರ್ಗವಿಲ್ಲ. [೮] ಮೇರು, ಮಂದಾರ, ಹಿಮಾಲಯ ಇತ್ಯಾದಿ ಇದರಂತೆ ಎಂಟು ಕುಲಾಚಲ ಪರ್ವತಗಳು (ಮೇರು ಪರ್ವತದ ನಾಲ್ಕು ದಿಕ್ಕಿಗೆ ಆ ಯಾಮ, ಕುರು, ಹಿರಣ್ಮಯ, ರಮ್ಯಕ, ಇಲಾವೃತ್ತ, ಹರಿ, ಕೇತುಮಾಲ, ಭದ್ರಾಶ್ವ, ಕಿನ್ನರ ಮತ್ತು ಭರತ ಇವು ಒಂಭತ್ತು ಖಂಡ, ವರ್ಷ, ಭೂಭಾಗ-ವಿಭಾಗಗಳಿರುವವು. ಈ ಖಂಡಗಳ ಮೇರೆ ಅಥವಾ ಸೀಮೆಯನ್ನು ತೋರಿಸುವ (ಪ್ರತ್ಯೇಕ ಖಂಡಭಾಗಗಳ) ಪರ್ವತಗಳಿಗೆ ಅಷ್ಟ ಕುಲಾಚಲ ಅನ್ನುವರು. ಕುಲಾಚಲ ಅಂದರೆ ಪರ್ವತದ ಸಂಕೇತವು. ಈ ಎಂಟು ಪರ್ವತಗಳ ಹೆಸರುಗಳು:– ನೀಲ, ನಿಷಾಧ, ವಿಂಧ್ಯಾಚಲ, ಮಾಲ್ಯವಾನ, ಮಲಯ, ಗಂಧ ಮಾದನ, ಹೇಮಕೂಟ, ಮತ್ತು ಹಿಮಾಲಯ [ಹಿಮಾಚಲ] ಹೀಗೆ ಇರುವವು. ಮತ್ತು ಅನೇಕ ಪ್ರಕಾರದ ಪಕ್ಷಿ, ಮೀನ, ಮತ್ತು ಸರ್ಪ, (ಹಾವು) ಇವುಗಳಿಗೆಲ್ಲ ಆಧಾರವು ಈ ಭೂಮಿ (ಪೃಥ್ವಿ) ಯೇ ಇರುವದು. [೯] ಅನೇಕ ಸಮುದ್ರದ ಆಚೆಗೆ ಪೃಥ್ವಿಯ ಸುತ್ತು ಮುತ್ತು (ಆವರಿಸಿರುವ) ಇರುವ ಆವರಣೋದಕ (ಭೂಮಿಯ ಸುತ್ತು ಮುತ್ತೆಲ್ಲ ನೀರು ಸುತ್ತುವರಿದಿದೆ). ಅಂದರೆ ಸುತ್ತಲೂ ನೀರು ನಟ್ಟ ನಡುವೆ ಭೂಮಿ ಇರುವದು. ಅಥವಾ ಸರ್ವ ಸೃಷ್ಟಿಗೆ ಸುತ್ತು ಹಾಕಿರುವ (ಸುತ್ತುವರಿದ) ಆಪತತ್ವ (ಜಲ ತತ್ವದ) ಸುತ್ತುವರಿಯುವಿಕೆ ಅಥವಾ ಆವರಣ, (ಆವರಿಸುವಿಕೆ) ಕಡೆಗೆ ಅರ್ಥಾತ್ ನೀರಿನ ರಭಸದ ಅಪ್ಪಳಿಸುವಿಕೆಯಿಂದ ಭೂಮಿಯ ದಂಡೆಯು ಅಲ್ಲಲ್ಲಿ ಕೊರೆದು ಬಿದ್ದಿರುವದು. [೧೦] ಇವುಗಳಲ್ಲಿ ಸಣ್ಣ ದೊಡ್ಡವಾದ ಬಹಳಷ್ಟು ಗುಹೆ ಗುಹ್ವರಗಳು ಇರುವವು. ಈ ಗುಪ್ತ ವಿವರಗಳಲ್ಲಿ ಗಾಢ ಕತ್ತಲೆಯು ಆವರಿಸಿರುವದು. [೧೧] ಭೂಮಿಗೆ ಸುತ್ತು ಹಾಕಿದ ಆವರಣೋದಕವು ಬಹಳಷ್ಟು ಅಪಾರವಾಗಿ ಆವರಿಸಿದೆ. ಇದರ ಅಂತ–ಅಳತೆ ಹತ್ತುವದಿಲ್ಲ. ಇದರಲ್ಲಿ ಪ್ರಚಂಡ ಶರೀರದ ಜಲಚರ ಪ್ರಾಣಿಗಳು ಬಹಳಷ್ಟು ಇರುವವು. [೧೨] ಈ ಆವರಣೋದಕಕ್ಕೆ ಗಾಳಿಯ (ವಾಯುವಿನ) ಆಧಾರವಿರುವದು. ವಾಯು ಗಹನ ಮತ್ತು ದಟ್ಟ, ಹಾಗೂ ಅತಿ ಗಟ್ಟಿ (ದಟ್ಟ) ಆದದ್ದಿರುವದು. ಇದರಿಂದಾಗಿ ನೀರು ಯಾವುದೇ ಕಡೆಯಿಂದ ಹರಿದು ಹೋಗುವದಿಲ್ಲ. [೧೩] ಈ ವಾಯುವಿಗೆ ಆಧಾರವಾಗಿರುವದು ಯಾವುದೆಂದರೆ, ಘಟ್ಟಿ ಮತ್ತು ಕಠಿಣವಾಗಿರುವ ಅಹಂಕಾರವು. ಈ ಅಹಂಕಾರವು ಜಡ ದ್ರವ್ಯಗಳದಿರುವದು. ಅಂದರೆ ಪೃಥ್ವಿಯಿಂದ ತಯಾರಾಗಿರುವದು. ಹೀಗಿರುವ ಆ ಭೂಗೋಲದ ಅತಿ ವಿಸ್ತಾರ ವಿಷಯವನ್ನು ಯಾರೂ ತಿಳಿದಿರುವದಿಲ್ಲ. [೧೪] ಪೃಥ್ವಿಯ ಮೇಲೆ ಅನೇಕ ಪದಾರ್ಥಗಳ ಖಣಿಗಳು ಇರುವವು. ಅವುಗಳಲ್ಲಿ ಬಹಳಷ್ಟು ಧಾತು [ಬಂಗಾರ ವಗೈರೆ] ಮತ್ತು ರತ್ನದವೂ ಇರುವವು. ಇತರ ಪದಾರ್ಥಗಳ ಖಣಿಗಳೂ ಇರುವವು. ಅಲ್ಲದೆ ಕಲ್ಪತರು, ಚಿಂತಾಮಣಿ ಮತ್ತು ಅಮೃತ ಕುಂಡಗಳೂ ಕೂಡಾ ಪೃಥ್ವಿಯಲ್ಲಿ ಇರುವವು. [೧೫]

ನಾನಾ ದ್ವೀಪೇ ನಾನಾ ಖಂಡೇ । ವಸತೀ ಉದ್ವಸೇ ಉದಂಡೇ ।
ತೇಥೇ ನಾನಾ ಜೀವನಾಚೀ ಬಂಡೇ । ವೇಗಳಾಲೀ ॥೧೬॥

ಮೇರುಭೋವತೀ ಕಡೆ ಕಾಪಲೆ । ಅಸಂಭಾವ್ಯ ಕಡೋಸೇ ಪಡಿಲೇ ।
ನಿಬಿಡ ತರು ಲಾಗಲೇ । ನಾನಾ ಜಿನಸೀ ॥೧೭॥

ತ್ಯಾಸನ್ನಿಧ ಲೋಕಾಲೋಕ । ಜೇಥೇ ಸೂರ್ಯಾಚೇ ಫಿರೇ ಚಾಕ।
ಚಂದ್ರಾದ್ರಿ ದ್ರೋಣಾದ್ರಿ ಮೈನಾಕ । ಮಹಾ ಗಿರೀ ॥೧೮॥

ನಾನಾ ದೇಶೀ ಪಾಷಾಣಭೇದ । ನಾನಾ ಜಿನಸೀ ಮೃತ್ತಿಕಾಭೇದ ।
ನಾನಾ ವಿಭೂತಿ ಛಂದಬಂದ । ನಾನಾ ಖಾಣೀ ॥೧೯॥

ಬಹುರತ್ನ ಹೇ ವಸುಂಧರಾ । ಐಸಾ ಪದಾರ್ಥ ಕೈಚಾ ದುಸರಾ ।
ಅಫಾಟ ಪಡಿಲೇ ಸೈರಾವೈರಾ । ಜಿಕಡೇ ತಿಕಡೇ ॥೨೦॥

ಅವಘೀ ಪೃಥ್ವೀ ಫಿರೋನ ಪಾಹೇ । ಐಸಾ ಪ್ರಾಣೀ ಕೋಣ ಆಹೇ ।
ದುಜೀ ತುಳಣಾ ನ ಸಾಹೇ । ಧರಣೀವಿಷೀ ॥೨೧॥

ನಾನಾ ವಲ್ಲೀ ನಾನಾ ಪಿಕೇ । ದೇಸೋದೇಸೀ ಅನೇಕೇ ।
ಪಾಹೋ ಜಾತಾ ಸಾರಿಖ್ಯಾ ಸಾರಿಖೇ । ಯೇ ಕಹಿ ನಾಹೀ ॥೨೨॥

ಸ್ವರ್ಗ ಮೃತ್ಯ ಆಣಿ ಪಾತಾಳೇ । ಅಪೂರ್ವ ರಚಿಲೀ ತೀನ ತಾಳೇ ।
ಪಾತಾಳಲೋಕೀ ಮಹಾವ್ಯಾಳೇ । ವಸ್ತೀ ಕೀಜೇ ॥೨೩॥

ನಾನಾ ವಲ್ಲೀ ಬೀಜಾಂಚೀ ಖಾಣೀ । ತೇ ಹೇ ವಿಶಾಳ ಧರಣೀ ।
ಅಭಿನವ ಕರ್ತ್ಯಾಚೀ ಕರಣೀ । ಹೋಊನ ಗೇಲೀ ॥೨೪॥

ಗಡ ಕೋಠ ನಾನಾ ನಗರೇ । ಪುರೇ ಪಟ್ಟಣೇ ಮನೋಹರೇ ।
ಸಕಳಾಂತಾಈ ಜಗದೇಶ್ವರೇ । ವಸ್ತೀ ಕೀಜೇ ॥೨೫॥

ಮಹಾಹಾ ಬಳೀ ಹೋಊನ ಗೇಲೇ। ಪೃಥ್ವೀವರೀ ಚೌತಾಳಲೇ ।
ಸಾಮರ್ಥ್ಯೇ ನಿರಾಳೆ ರಾಹಿಲೆ । ಹೇ ತೋ ಘಡೇನಾ ॥೨೬॥

ಅಸಂಭಾವ್ಯ ಹೇ ಜಗತೀ । ಜೀವ ಕಿತೀಯೇಕ ಜಾತೀ ।
ನಾನಾ ಅವತಾರ ಪಂಗತೀ । ಭೂಮಂಡಳಾವರೀ ॥೨೭॥

ಅನೇಕ ದ್ವೀಪ [ಬೇಟ] ಗಳು ಇರುವವು. ಇವುಗಳಲ್ಲಿ ಸಪ್ತದ್ವೀಪಗಳು ಜಂಬು, ಕುಶ, ಪ್ಲಕ್ಷ, ಶಾಲ್ಮಲಿ ಕ್ರೌಂಚ, ಶಾಕ, ಪುಷ್ಕರ ಇವು ಪೃಥ್ವಿಯ ಅನೇಕ ಖಂಡ [ಭೂಭಾಗ]ಗಳು ಇರುವವು. ಇವುಗಳಲ್ಲಿ ಯಾರೂ ವಾಸ ಮಾಡದಂಥ ಸ್ಥಳವೂ ಸಹ ಇರುವದು. ಇದರಂತೆಯೇ ಅನೇಕ ಪ್ರಕಾರದ ಜೀವ ಜಂತು ಪ್ರಾಣಿಗಳಿಂದ ತುಂಬಿದ ಪ್ರದೇಶವೂ ಇರುವದು. [೧೬] ನೇರು ಪರ್ವತದ ಸುತ್ತ ಮುತ್ತಲದ [ಗುಡ್ಡದ] ದಂಡೆಯು ಕತ್ತರಿಸಿ ಬಿದ್ದಿರುವದು. ಇಲ್ಲಿ ಕಗ್ಗತ್ತಲು ಇರುವದು. ಇದರೊಳಗೆ ಅನೇಕ ಕಿಂಡಿಗಳು ಇದ್ದು ಅದರೊಳಗಿಂದ ಮಂದ ಪ್ರಕಾಶ ಕಾಣುವದು. ಅನೇಕ ಪ್ರಕಾರದ ವೃಕ್ಷಗಳು ನಿಬಿಡವಾಗಿ ಹುಟ್ಟಿ ಬೆಳೆದಿರುವವು. [೧೭] ಇದರ ಹತ್ತಿರ ಲೋಕಾಲೋಕ ಪರ್ವತವಿರುವದು. ಇಲ್ಲಿ ಸೂರ್ಯನ ಚಕ್ರ ತಿರುಗುತ್ತಿರುವದು. ಅಲ್ಲದೆ ಚಂದ್ರ ಪರ್ವತ, ದ್ರೋಣ ಪರ್ವತ, ಮೈನಾಕ ಹೀಗೆ ದೊಡ್ಡ ಪರ್ವತಗಳು ಇರುವವು. [೧೮] ಬೇರೆ ಬೇರೆ ದೇಶಗಳಲ್ಲಿ ಬೇರೆಬೇರೆ ಕಲ್ಲು[ಪಾಷಾಣ]ಗಳು ಇರುವವು. ಬೇರೆ ಬೇರೆ ತರಹದ ಮಣ್ಣು ಇರುವದು. ಅನೇಕ ಪ್ರಕಾರದ ವಿಭೂತಿ [ಭಸ್ಮ]ನಾನಾ ಬಗೆಯ [ನಾನಾ ಛಂದದ] ಅನೇಕ ಗುಪ್ತ ಖಣಿಗಳು ಇರುವವು. [೧೯] ಅಂತೆಯೇ ಇದಕ್ಕೆ "ಬಹು ರತ್ನಾ ವಸುಂಧರಾ" ಎಂದು ಅನ್ನುತ್ತಾರೆ. ಪೃಥ್ವಿಯಂತಹ ಪದಾರ್ಥ ಇನ್ನೊಂದಿಲ್ಲ. ಪೃಥ್ವಿಯು ಸುತ್ತುಮುತ್ತು ಅತ್ತ ಇತ್ತ ಬಹು ವಿಸ್ತಾರವಾಗಿ ಪಸರಿಸಿರುವದು. [೨೦] ಯಾವತ್ತೂ ಭೂಮಿಯ(ಜಗತ್ತ)ನ್ನು ತಿರುಗಾಡಿ ನೋಡುವವರು ಯಾರೂ ಇಲ್ಲ. ಪೃಥ್ವಿಯೊಂದಿಗೆ (ತುಲನಾ) ಹೋಲಿಸಲಿಕ್ಕೆ ಬರುವಂತಹ ಎರಡನೇ ಪದಾರ್ಥ ಯಾವುದೂ ಇರುವದಿಲ್ಲ. [೨೧] ಈ ಭೂಮಿಯ ಮೇಲೆ ಸಾವಿರಾರು ಪ್ರಕಾರದ ವನಸ್ಪತಿಗಳು ಇರುವವು. ಪರಮಾತ್ಮನು ಒಂದು ಸಲ ಇವನ್ನು ನಿರ್ಮಾಣ ಮಾಡಿ ಹೋದನು. ಪೃಥ್ವೀ ಮೇಲೆ ಅಸಂಖ್ಯ ಜೀವ ಬರುವವು. ಮತ್ತು ಹೋಗುವವು. ಅವತಾರ ಮಾಲೆ (ಶ್ರೇಣಿ, ಸಾಲು) ಆಗಿ ಹೋಗುವದು. ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ವನಸ್ಪತಿ ಮತ್ತು ಬೆಳೆಗಳು ಬೆಳೆಯುವವು. ಪರಿಶೀಲಿಸಿ ಚಿಕಿತ್ಸಕ ದೃಷ್ಟಿಯಿಂದ ನೋಡಿದರೆ ಅವು ಒಂದರಂತೆ ಒಂದು ಇರುವದಿಲ್ಲ. (೨೨) ಸ್ವರ್ಗ, ಮೃತ್ಯು ಮತ್ತು ಪಾತಾಳ ಅನ್ನುವ ಮೂರು ಅಪೂರ್ವ ಸ್ಥಾನಗಳು ರಚಿಸಲ್ಪಟ್ಟಿರುವವು. ಪಾತಾಳದಲ್ಲಿ ಅಸಂಖ್ಯ ಸರ್ಪ(ಹಾವು)ಗಳ ವಸತಿ ಇರುವದು. (೨೩) ಈ ಅತಿ ವಿಶಾಲ ಪೃಥ್ವಿ ಅಂದರೆ ನಾನಾ ಪ್ರಕಾರದ ವನಸ್ಪತಿಗಳ ಬೀಜದ ಕಣಜವೇ ಇರುವದು. ಅಥವಾ ಬೀಜಗಳ ಉತ್ಪತ್ತಿ ಸ್ಥಾನವೇ ಇರುವದು. ಇದು ಸೃಷ್ಟಿಕರ್ತಾ ಬ್ರಹ್ಮದೇವ ಅರ್ಥಾತ್ ಅಂತರಾತ್ಮನದೊಂದು ದೊಡ್ಡ ವಿಲಕ್ಷಣ ಕಾರ್ಯ ಕೃತಿ ಆಗಿ ಹೋಯಿತು.[೨೪] ಕೋಟೆ, ಕೊತ್ತಳ, ಅನೇಕ ಗ್ರಾಮಗಳು ಮತ್ತು ಸಣ್ಣ ದೊಡ್ಡ ಸುಂದರ ಶಹರಗಳು ಇವೆಲ್ಲವುಗಳಲ್ಲಿ ಜಗದೀಶ್ವರನ ಶಕ್ತಿ (ವಸತಿ)ಇರುವದು.[೨೫]ಪೂರ್ವದಲ್ಲಿ(ಹಿಂದೆ)ಅತಿಶಯ ಬಲವಾನ್ ಪುರುಷರು ಆಗಿ ಹೋದರು. ಇವರೂ ಕೂಡಾ ಪೃಥ್ವಿಯ ಮೇಲೆಯೇ ಬಹಳಷ್ಟು ಮನ ಬಂದಂತೆ ಗುಡುಗಬ್ಬಿಸಿ ಗೊಂದಲ ಹಾಕಿದರು. ಆದರೆ ಇವರಿಗೂ ಕೂಡಾ ತಮ್ಮದೇ ಆದ ಸಾಮರ್ಥ್ಯದ ಮೇಲೆ ಪೃಥ್ವಿಯನ್ನು ಬಿಟ್ಟು ಬೇರೆ ನಿಲ್ಲಲಿಕ್ಕೆ ಆಗಲಿಲ್ಲ. ಇವರ ಮೇಲೆಯೇ ನಿಂತು ಏನೆಲ್ಲ ಮಾಡಬೇಕಾಯಿತು. (೨೬) ಈ ಪೃಥ್ವಿಯು ಪುನಃ ಹೀಗಾಗುವ ಸಂಭವ ತೋರುವದಿಲ್ಲ. ಈ ಪೃಥ್ವಿಯ ಮೇಲೆ ಅಸಂಖ್ಯ ಜೀವಿಗಳು ಹುಟ್ಟಿ (ಆಗಿ) ಹೋಗುವವು. ಅನೇಕ ಪ್ರಕಾರದ ಅವತಾರಗಳೂ ಕೂಡಾ ಈ ಭೂಮಂಡಲದ ಮೇಲೆಯೇ ಆದವು [೨೭]

ಸಧ್ಯಾ ರೋಕಡೇ ಪ್ರಮಾಣ । ಕಾಂಹೀ ಕರಾವಾ ನಲಗೇ ಅನುಮಾನ ।
ನಾನಾ ಪ್ರಕಾರೀಚೇ ಜೀವನ । ಪೃಥ್ವೀಚೆನಿ ಆಧಾರೇ ॥೨೮॥

ಕಿತ್ಯೇಕ ಭೂಮೀ ಮಾಝೀ ಮ್ಹಣತೀ। ಸೇವಟೀ ಆಪಣ ಚಿ ಮರೋನ ಜಾತೀ।
ಕಿತ್ಯೇಕ ಕಾಳ ಹೋತಾ ಜಗತೀ । ಜೈಸೀ ತೈಸೀ ॥೨೯॥

ಏಸಾ ಪೃಥ್ವೀಚಾ ಮಹಿಮಾ । ದುಸರೀ ಕಾಯೆ ದ್ಯಾವೀ ಉಪಮಾ ।
ಬ್ರಹ್ಮಾದಿಕಾಪಾಸುನೀ ಆಮ್ಹಾ । ಆಶ್ರಯೋ ಚಿ ಆಹೇ ॥೩೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ಪೃಥ್ವೀ ಸ್ತವನ ನಿರೂಪಣ' ನಾಮ ಸಮಾಸ ತೃತೀಯ ॥

● ●

ಇಂದಿಗೂ ಸಹಿತ ಅಂಥ ಪ್ರತ್ಯಕ್ಷ ಪುರಾವೆ ಇರುವವು. ಪೃಥ್ವಿಯ ಆಧಾರದಿಂದಲೇ ನಾನಾ ಪ್ರಕಾರದ ಜೀವಿಗಳು ಬದುಕಿ ಬಾಳುವವು. ಅದಕ್ಕಾಗಿ ಪ್ರತ್ಯೇಕವಾಗಿ ಕಲ್ಪನೆಯನ್ನು ಮಾಡುವ ಕಾರಣವಿಲ್ಲ. [೨೮] ಕೆಲವು ಅಜ್ಞಾನಿ ಜನರು. (ಸಾಮಾನ್ಯ ಜನರು) ಈ ಜಮೀನು ನನ್ನದು, ಈ ಭೂಮಿ ನನ್ನದು ಅನ್ನುವರು. ಕೊನೆಗೆ ಸತ್ತು ತಾವೇ ಅದರಲ್ಲಿ ಕೂಡಿಕೊಳ್ಳುವರು. ಆದರೆ ಎಷ್ಟೋ ಕಾಲ ಗತಿಸಿದರೂ ಸಹಿತ ಭೂಮಿ ಮಾತ್ರ ಇದ್ದದ್ದು ಇದ್ದಂತೆಯೇ ಇರುವದು. [೨೯] ಪೃಥ್ವಿಯ ಮಹಿಮೆಯು ಒಟ್ಟಿನಲ್ಲಿ ಹೀಗಿರುವದು. ಈ ಭೂಮಿ ತಾಯಿಗೆ ಬೇರಾವುದೇ ಉಪಮೆಯನ್ನು ಹೋಲಿಸಲಿಕ್ಕೆ ಆಗುವದಿಲ್ಲ. ಬೇರೆ ಉಪಮೆ ಕೊಡಲಿಕ್ಕೆ ಬರುವದಿಲ್ಲ. ಬ್ರಹ್ಮಾದಿಗಳಿಂದ ಇದು ನೇರವಾಗಿ (ಸರಳ) ನಮ್ಮವರೆಗೂ ಅರ್ಥಾತ್ ಸರ್ವರಿಗೂ (ಸರ್ವಕ್ಕೂ) ಪೃಥ್ವಿಯೇ ಆಧಾರವಿರುವದು. (೩೦)

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹದಿನಾರನೆಯ ದಶಕದೊಳಗಿನ
"ಪೃಥ್ವಿ ಸ್ತವನ ನಿರೂಪಣ"ವೆಂಬ ಹೆಸರಿನ ಮೂರನೆಯ ಸಮಾಸವು ಮುಗಿದುದು.

● ●

**ದಶಕ ಷೋಡಶ : ಸಮಾಸ ಚತುರ್ಥ : ಆಪನಿರೂಪಣ (ನುಡಿ ೩೧)**

॥ಶ್ರೀರಾಮ॥ ಆತಾ ಸಕಳಾಂಚೇ ಜನ್ಮಸ್ಥಾನ । ಸಕಳ ಜೀವಾಂಚೇ ಜೀವನ ।
ಜಯಾಸ ಆಪೋ ನಾರಾಯೆಣ । ಐಸೇ ಬೋಲಿಜೆ ॥೧॥

ಪೃಥ್ವೀಸ ಆಧಾರ ಆವರ್ಣೋದಕ । ಸಪ್ತ ಸಿಂಧೂಚೇ ಸಿಂಧೋದಕ ।
ನಾನಾ ಮೇಘೀಂಚೇ ಮೇಘೋದಕ । ಭೂಮಂಡಳೀ ಚಾಲಿಲೇ ॥೨॥

ನಾನಾ ನದ್ಯಾ ನಾನಾ ದೇಸೀ । ವಾಹಾತ ಮಿಳಾಲ್ಯಾ ಸಾಗರಾಸಿ ।
ಲಾಹಾನ ಥೋರ ಪುಣ್ಯರಾಸೀ । ಅಗಾಧ ಮಹಿಮೆ ॥೩॥

ನದ್ಯಾ ಪರ್ವತೀ ಹೂನ ಕೋಸಳಲ್ಯಾ । ನಾನಾ ಸಾಂಕಡೀ ಮಧೇ ರಿಚವಲ್ಯಾ ।
ಧಬಾಬಾ ಖಳಾಳಾ ಚಾಲಿಲ್ಯಾ । ಅಸಂಭಾವ್ಯ ॥೪॥

ಕೂಪ ಬಾವೀ ಸರೋವರೇ । ಉದಂಡ ತಳೀ ಥೋರ ಥೋರೇ ।
ನಿರ್ಮಾಳೇ ಉಚಂಬಳತೀ ನೀರೇ । ನಾನಾ ದೇಸೀ ॥೫॥

# ದಶಕ ೧೬. ಸಮಾಸ ೪. ಆಪನಿರೂಪಣ (ನುಡಿ ೩೧)

ಜಲ [ನೀರು] ಇದು ಸರ್ವದರ ಜನ್ಮ ಸ್ಥಾನವಿರುವದು. ಸರ್ವ ಜೀವಗಳ ಜೀವನ ಇರುವದು. ಜಗತ್ತಿನಲ್ಲಿ ಹರಿಯುವ ನೀರು ಬಹಳಷ್ಟು ಇರುವದು. ನದಿಗಳು, ನಾಲೆಗಳು, ಹಳ್ಳಗಳು,ಮಡುವುಗಳು, ಸರೋವರ, ಕೆರೆ, ಬಾವಿ ಇತ್ಯಾದಿ ಅನೇಕ ಪ್ರಕಾರಗಳು ಇದರಲ್ಲಿ ಇರುವವು. ನದಿಗಳ ಮಹಿಮೆಯಾದರೋ ಬಹಳ ಅಗಾಧವಿರುವದು. ಯಾಕಂದರೆ ವಸಾಹತು, ಗ್ರಾಮ, ಶಹರ, ಪಟ್ಟಣ ಇವು ಹೆಚ್ಚಾಗಿ ನದಿಯ ದಂಡೆಗೆ ಸಮೀಪದಲ್ಲಿ ಇರುವವು. ನೀರಿನ ತಂಪು ಮತ್ತು ಉಷ್ಣ ಝರಿಗಳೂ ಇರುವವು. ಎಷ್ಟೆಷ್ಟೋ ಪದಾರ್ಥಗಳಲ್ಲಿ ನೀರು ಕಂಡುಬರುವದು. ಉದಾ: ಗೋರಸ [ಹಾಲು], ಕಬ್ಬಿನ ರಸ, ಅನೇಕ ತರಹದ ಫಲ [ಹಣ್ಣು]ಗಳ ರಸ, ಇವುಗಳಲ್ಲಿ ಜಲಾಂಶವೇ ಇರುವದು. ಮಂತ್ರಗಳಿಗೆ ಮತ್ತು ಶಸ್ತ್ರಗಳಿಗೆ ನೀರು ಅತಿ ಅವಶ್ಯವಿರುವದು. ಜಗದಲ್ಲಿ ನೀರು ಬಹಳಷ್ಟು [ವಿಪುಲ] ಇರುವದು. ಯಾಕೆಂದರೆ ಅನೇಕ ಪ್ರಕಾರದ ಸಮುದ್ರಗಳಿರುವವು. ಪೃಥ್ವಿಯ ಹೊಟ್ಟೆಯಲ್ಲಿ ಸಹ ನೀರಿನ ಸಂಗ್ರಹ ಮತ್ತು ಸೆಲೆಗಳು ಇರುವವು. ಭೂಮಿಯ ಮೇಲೆ ಒಂದಕ್ಕಿಂತ ಒಂದು ಪವಿತ್ರ ತೀರ್ಥಗಳಿರುವವು. ಗಂಗೆಯಾದರೋ ತ್ರೈಲೋಕ್ಯದಲ್ಲೆಲ್ಲ ಹರಿಯುವಳು. ನೀರು ಎಷ್ಟು ತಾರಕವೋ ಅಷ್ಟೇ ಮಾರಕವೂ ಇರುವದು. ನಮ್ಮ ದೇಹ ಮತ್ತು ಪೃಥ್ವಿ ಇವು ಮೂಲದಲ್ಲಿ ಜಲದಿಂದಲೇ ನಿರ್ಮಾಣವಾಗುವವು. ಪೃಥ್ವಿಗಿಂತ ನೀರು ಹೆಚ್ಚಿನದು. ನೀರಿಗಿಂತ ತೇಜವು ಹೆಚ್ಚಿನದು. ತೇಜದಕ್ಕಿಂತ ವಾಯುವು ಹೆಚ್ಚಿನದು. ವಾಯುವಿನಕ್ಕಿಂತ ಅಂತರಾತ್ಮಾ ಹೆಚ್ಚಿನದು. ಇವನಿಗಿಂತ ಹೆಚ್ಚಿನವನು ಸಾಕ್ಷಾತ್ ಪರಬ್ರಹ್ಮ ಈಶ್ವರನೇ ಆಗಿರುವನು. ಇವನಿಗಿಂತ ಹೆಚ್ಚಿನವರಾರೂ ಇಲ್ಲವೇ ಇಲ್ಲ.

### ದಶಕ ೧೬. ಸಮಾಸ ೪. ಆಪನಿರೂಪಣ (ನುಡಿ ೩೧)

ಜೀವನದ ಮೂಲವು ಹೇಗೆ ನೀರಿನಲ್ಲಿರುವದೋ ಹಾಗೆಯೇ ಜೀವನದ ಜೀವನವು ನೀರನ್ನೇ ಅವಲಂಬಿಸಿರುವದು. ಭೂಮಿಯ ಮೇಲೆ ಬಹಳ ಪ್ರಕಾರದ ನೀರು ಕಂಡುಬರುವದು. ನೀರು ತಾರಕವೂ ಇರುವದು ಮತ್ತು ಮಾರಕವೂ ಇರುವದು. ನೀರಿನಿಂದಾಗಿಯೇ ತೀರ್ಥಗಳಿಗೆ ಮಹತ್ವವಿರುವದು: ನೀರು ಎಲ್ಲದರ ಜನ್ಮಸ್ಥಾನವಿರುವದು. ಯಾವತ್ತೂ ಜೀವಿಗಳ ಬಾಳುವಿಕೆಯು–ಬದುಕುವಿಕೆಯು ನೀರನ್ನೇ ಅವಲಂಬಿಸಿರುವದು ನೀರಿಗೆ"ಆಪೋ ನಾರಾಯಣ" ಎಂದು ಅನ್ನುವರು. (೧) ಭೂಮಿಗೆ ಆವಣೋದಕದ [ಆಸರೆ] ಆಧಾರ ಇರುವದು. ಭೂಮಿಯ ಮೇಲೆ ಏಳು ಸಮುದ್ರ [ಕ್ಷೀರ, ಕ್ಷಾರ, ಘೃತ, ಇಕ್ಷುರಸ, ಸುರಾ, ದಧಿ, ಮತ್ತು ಸಿದ್ಧೋದಕ, ಹೀಗೆ ಏಳು ಸಮುದ್ರಗಳಲ್ಲಿಯ ಜಲತತ್ವ]ದ ನೀರು ಇರುವದು. ಇದರಂತೆ ಮಳೆಯ ನೀರೂ ಹರಿಯುವದು. (೨) ಬೇರೆ ಬೇರೆ ದೇಶದಲ್ಲಿಯ ನದಿಗಳು ಹರಿಯುತ್ತ ಹರಿಯುತ್ತ ಕೊನೆಗೆ ಸಮುದ್ರಕ್ಕೆ ಹೋಗಿ ಕೂಡುವವು. ನದಿಗಳು ಹೆಚ್ಚು ಕಡಿಮೆ ಪುಣ್ಯದವು ಇರುವವು. ಎಂದು ನಮ್ಮವರು ತಿಳಿಯುವರು. ಕೆಲವು ನದಿಗಳ ಮಹಿಮೆಯು ಮಾತ್ರ ಅಗಾಧವಿರುವದು. (೩) ನದಿಗಳು ಪರ್ವತದ ಮೇಲಿಂದ ನುಗ್ಗಿ ಆರ್ಭಟಿಸುತ್ತ ಬೀಳುವವು. ಜಲಾಶಯ, ತೆಗ್ಗು, ಗುಂಡಿ, ದೊಡ್ಡ ಹೊಂಡ ಇವುಗಳಲ್ಲಿ ನೀರು ನಿಲ್ಲುವದು. ಮತ್ತು ಇಕ್ಕಟ್ಟಾದ ಸ್ಥಳದಿಂದ ನೀರು ಹರಿಯುವಾಗ, ಮತ್ತು ಮೇಲಿನಿಂದ ಬೀಳುವಾಗ ಧಬ್ ಧಬ್ ಎಂದು-ಖಳ್ ಖಳ್ ಎಂದು ಶಬ್ದ ಮಾಡುತ್ತ ಹರಿಯುವದು. [೪] ಕೈ ಬಾವಿ, ಬಾವಿ, ಸರೋವರ, ಅತಿಶಯ ಪ್ರಶಾಂತ ಜಲಾಶಯಗಳೂ ಇರುವವು. ಇವುಗಳ ಸ್ವಚ್ಛವಾದ ನೀರು ಬೇರೆ ಬೇರೆ ದೇಶಗಳಲ್ಲಿ ಹೊರಸೂಸುವವು. [೫]

ಗಾಯಿ ಮುಖೀ ಪಾಟ ಜಾತಿ । ನಾನಾ ಕಾಲವೇ ವಾಹಾತೀ ।
ನಾನಾ ಝುರ್‍ಯಾ ಝಿರಪತಿ । ಝುರತೀ ನೀರೇ ॥೬॥
ಡುರೇ ವಿಹೀರೆ ಪಾಝುರ । ಪರ್ವತ ಫುಟೋನ ವಾಹೆ ನೀರ ।
ಏಸೆ ಉದಕಾಚೆ ಪ್ರಕಾರ । ಭೂಮಂಡಳೀ ॥೭॥
ಜಿತುಕೆ ಗಿರಿ ತಿತುಕ್ಯಾ ಧಾರಾ । ಕೋಸಳತೀ ಭಯಂಕರಾ ।
ಪಾಭಳ ನಾಹಾಳಾ ಅಪಾರಾ । ಉಕಳ್ಯಾ ಸಾಂಡಿತೀ ॥೮॥
ಭೂಮಂಡಳೀಚೇ ಜಳ ಆಘವೇ । ಕಿತೀ ಮ್ಹಣೋನೀ ಸಾಂಗಾವೇ ।
ನಾನಾ ಕಾರಂಜೀ ಆಣಾವೇ । ಬಾಂಧೋನೀ ಪಾಣೀ ॥೯॥
ಡೋಹೊ ಡಬಕೇ ಖಬಾಡೀ ಟಾಕೀ । ನಾನಾ ಗಿರಿ ಕಂದರೀ ಅನೇಕೀ ।
ನಾನಾ ಜಳೇ ನಾನಾ ಲೋಕೀ । ವೇಗಳಾಲೀ ॥೧೦॥
ತೀರ್ಥೇ ಯೇಕಾಹೂನ ಯೇಕ । ಮಾಹಾ ಪವಿತ್ರ ಪುಣ್ಯದಾಯಕ ।
ಅಗಾಧ ಮಹಿಮಾ ಶಾಸ್ತ್ರಕಾರಕ । ಬೋಲೋನಿ ಗೇಲೆ ॥೧೧॥
ನಾನಾ ತೀರ್ಥಾಚೀ ಪುಣ್ಯೋದಕೇ । ನಾನಾ ಸ್ಥಳೋಸ್ಥಳೀ ಸೀತಳೋದಕೇ ।
ತೈಸೀ ಚ ನಾನಾ ಉಷ್ಣೋದಕೇ । ಠಾಈ ಠಾಈ ॥೧೨॥
ನಾನಾ ವಲ್ಲೀಮಧೇ ಜೀವನ । ನಾನಾ ಫಳೀಫುಲೀ ಜೀವನ ।
ನಾನಾ ಕಂದೀ ಮುಳೀ ಜೀವನ । ಗುಣಕಾರಕೇ ॥೧೩॥
ಕ್ಷಾರೋದಕೇ ಸಿಂಧೋದಕೇ । ವಿಷೋದಕೇ ಪೀಯೂಷೋದಕೇ ।
ನಾನಾ ಸ್ಥಳಾಂತರೀ ಉದಕೇ । ನಾನಾ ಗುಣಾಚೀ ॥೧೪॥
ನಾನಾ ಯಿಕ್ಷುದಂಡಾಚೆ ರಸ । ನಾನಾ ಫಳಾಚೇ ನಾನಾರಸ ।
ನಾನಾ ಪ್ರಕಾರೀಚೆ ಗೋರಸ । ಮಧ ಪಾರಾ ಗುಳತ್ರ ॥೧೫॥
ನಾನಾ ಮುಕ್ತ ಫಳಾಚೇ ಪಾಣೀ । ನಾನಾ ರತ್ನೀ ತಳಪೇ ಪಾಣೀ ।
ನಾನಾ ಶಸ್ತ್ರಾಮಧೇ ಪಾಣೀ । ನಾನಾ ಗುಣಾಚೇ ॥೧೬॥
ಶುಕ್ಲೀತ ಶ್ರೋಣೀತ ಲಾಳ ಮೂತ್ರ ಸ್ವೇದ। ನಾನಾ ಉದಕಾಚೇ ನಾನಾ ಭೇದ।
ವಿವರೋನ ಪಾಹಾತಾ ವಿಶದ । ಹೋತ ಜಾತೇ ॥೧೭॥
ಉದಕಾಚೇ ದೇಹಕೇವಳ । ಉದಕಾಚೇ ಚಿ ಭೂಮಂಡಳ ।
ಚಂದ್ರಮಂಡಳ ಸೂರ್ಯಮಂಡಳ । ಉದಕಾಕರಿತಾ ॥೧೮॥
ಕ್ಷಾರಸಿಂಧು ಕ್ಷೀರಸಿಂಧು । ಸುರಾಸಿಂಧು ಆಜ್ಯಸಿಂಧು ।
ದಧಿಸಿಂಧು ಯಿಕ್ಷುರಸಸಿಂಧು । ಶುದ್ಧಸಿಂಧು ಉದಕಾಚಾ ॥೧೯॥

ಗೋಮುಖಗಳಿಂದ, ನೀರಿನ ಸಣ್ಣ ಕಾಲುವೆಗಳಿಂದ, [ಶಾಖಾ ಕಾಲುವೆಗಳಿಂದ] ಮತ್ತು ದೊಡ್ಡ ಕಾಲುವೆಗಳಿಂದ ಈ ಪ್ರಕಾರ ಅನೇಕ ರೀತಿಯಿಂದ ನೀರು ಹರಿಯುವದು. ಅನೇಕ ಸ್ಥಳಗಳಲ್ಲಿ ಝರಿಯಿಂದ ಸಣ್ಣಾಗಿ ನೀರು ಬರುವದು. ಮತ್ತು ಕೆಲವು ಕಡೆಗೆ ಝರಿಯಿಂದ ನೀರು ಪುಟಿಯುವದು. (೬) ಗುಡ್ಡ ಪರ್ವತಗಳ ಕಲ್ಲಿನ ಘಡೆಯಲ್ಲಿ ಗುಡ್ಡ ಒಡೆದು ನೀರು ಹೊರಬಿದ್ದು ಹರಿದು ಬಂದು ನೀರಿನ ಜಲ ಸಂಚಯ ತಯಾರಾಗುವದು. ಕುಂಡಗಳಲ್ಲಿ ನೀರು ಬರುವದು, ಅದರೊಳಗಿಂದ ಹರಿಯುತ್ತಲಿರುವದು. ಭೂಮಿಯ ಮೇಲೆ ಇಂಥ ಅನೇಕ ಪ್ರಕಾರಗಳು ಕಂಡು ಬರುವವು. (೭) ಎಷ್ಟು ಗುಡ್ಡಗಳಿರುವವೋ ಅವುಗಳಲ್ಲಿಂದ ಬಹಳಷ್ಟು ನೀರು ಹೊರಬೀಳುವದು. ಝರಿಗಳಿಂದ, ಹಳ್ಳಗಳಿಂದ ನೀರು ಹರಿಯುತ್ತಲೇ ಇರುವದು. ಇದಲ್ಲದೆ ಭೂಮಿಯೊಳಗಿಂದ ನೀರು ಕಾರಂಜಿಯಂತೆ ಪುಟಿಯುತ್ತ ಹರಿಯುವದು. (೮) ಭೂಮಿಯ ಮೇಲಿರುವ ನೀರಿನ ಯಾವತ್ತೂ ಪ್ರಕಾರದ ಬಗ್ಗೆ ಸಂಪೂರ್ಣ ವರ್ಣನೆಯನ್ನು ಮಾಡಲಿಕ್ಕೆ ಶಕ್ಯವಿಲ್ಲ. ನಳ ಹಾಕಿ ಕಾರಂಜಿಯಿಂದ ನೀರನ್ನು ತರುವರು. (೯) ಮಡುವು, ಗುಂಡಿ, ಸಣ್ಣ ಟಾಕಿ, ದೊಡ್ಡ ಟಾಕಿ ಹೀಗೆ ಸಣ್ಣ ದೊಡ್ಡ ಜಲಾಶಯಗಳು ಗುಡ್ಡದಲ್ಲಿ ಕಂಡುಬರುವವು. ಬೇರೆ ಬೇರೆ ದೇಶಗಳಲ್ಲಿ ನೀರು ಬೇರೆ ಬೇರೆಯಾಗಿ ಇರುವದು. (೧೦) ಅತಿಶಯ ಪವಿತ್ರ ಮತ್ತು ಪುಣ್ಯದಾಯಕವಾದ ಮತ್ತು ಒಂದಕ್ಕಿಂತ ಒಂದು ಶ್ರೇಷ್ಠವಾದ ತೀರ್ಥಗಳು [ಭೂಮಿಯಲ್ಲಿ] ಇರುವವು. ಶಾಸ್ತ್ರಕಾರರು ಇವುಗಳ ಮಹಿಮೆಯನ್ನು ಬಹಳಷ್ಟು ವರ್ಣಿಸಿದ್ದಾರೆ. (೧೧) ಅನೇಕ ತೀರ್ಥಗಳ ನೀರು ಪುಣ್ಯದಾಯಕವಾಗಿರುವವು. ಅನೇಕ ಸ್ಥಳಗಳಲ್ಲಿಯ ನೀರು ಬಹಳ ಶೀತ ಹಾಗೂ ಜಡವಿರುವದು. ಅನೇಕ ಸ್ಥಳದಲ್ಲಿಯ ನೀರು (ಗರಮ್-ಬಿಸಿ) ಉಷ್ಣ ಇರುವದು. (೧೨) ಯಾವತ್ತೂ ಪ್ರಕಾರದ ಬಳ್ಳಿಗಳಲ್ಲಿ, ಫಲಗಳಲ್ಲಿ ಮತ್ತು ಹೂವುಗಳಲ್ಲಿ ನೀರಿನ ಅಂಶವಿರುವದು. ಕೆಲವೊಂದು ಕಂದ ಮೂಲ,ಗಡ್ಡೆ ಗೆಣಸು, ನಾರುಬೇರುಗಳಲ್ಲಿಯ ರಸ ಗುಣಕಾರಕವಿರುವದು. (೧೩) ಉಪ್ಪು [ಸವುಳು] ಸಿಹಿ-ವಿಷಗಾರ ಮತ್ತು ಅಮೃತದಂತೆ ಮಧುರ ಈ ಪ್ರಕಾರದ ಗುಣಗಳ ನೀರು ಬೇರೆ ಬೇರೆ ಸ್ಥರಗಳಲ್ಲಿ ಇರುವದು ಕಂಡುಬರುವದು. (೧೪) ಅನೇಕ ಪ್ರಕಾರದ ಕಬ್ಬಿನ ರಸ, ಅನೇಕ ಪ್ರಕಾರದ ಹಣ್ಣಿನ ರಸ, ಅನೇಕ ಪ್ರಕಾರದ ಗೋರಸ (ಆಕಳ ಹಾಲು) ಅಮಲು ಬರುವ ಮಾದಕ ರಸ ಅಥವಾ ಮಧುರರಸ ಪಾರಜ ರಸ, (೧) ಕಾಕಂಬಿ ಅಥವಾ ಕಾಕವಿ, (೨) ರಾಬ, (ರಾಪು, ಕೆನೆ ಬೆಲ್ಲ) (೩) ಬೆಲ್ಲದ ನೀರು, (ಈ ಮೂರಕ್ಕೆ ಗುಳತ್ರ ಅಥವಾ ಗುಲನ್ನ ಎಂದು ಅನ್ನುವರು). ಇವು ಮೂರು ಬೆಲ್ಲದ ರಸಗಳು ಹೀಗೆ ಇನ್ನೂ ಅನೇಕ ಪ್ರಕಾರದ ರಸಗಳಿರುವವು. (೧೫) ನಾನಾ ಪ್ರಕಾರದ ಮುತ್ತಿನಲ್ಲಿ ಜಲಾಂಶವಿರುವದು. ಅನೇಕ ಪ್ರಕಾರದ ರತ್ನಗಳಿಗೆ ಜಲಾಂಶದ ಥಳಕು ಇರುವದು. ಅನೇಕ ಪ್ರಕಾರದ ಹತ್ಯಾರಗಳಿಗೆ ಬೇರೆ ಬೇರೆ ಪ್ರಕಾರದ ಗುಣವುಳ್ಳ ನೀರಿನ ಅಂಶವಿರುವದು.[೧೬] ರೇತ (ಧಾತು), ರಕ್ತ, ಜೊಲ್ಲು, ಕಫ, ಮೂತ್ರ, ಬೆವರು ಇವೆಲ್ಲ ನೀರಿನ ಪ್ರಕಾರದವೇ ಇರುವವು. ಇದರ ಬಗ್ಗೆ ವಿಚಾರಮಾಡಿದರೆ ನಿಜಾಂಶ ನಿಮಗೆ ತಿಳಿಯುವದು.(೧೭) ದೇಹ-ಶರೀರವು ನೀರಿನಿಂದ ರಚಿತವಾಗಿರುವದು. ಭೂಮಿ ನೀರಿನಿಂದಲೇ ಆಗಿರುವದು. ಚಂದ್ರಮಂಡಲ, ಸೂರ್ಯ ಮಂಡಲ ಇವೂ ಕೂಡಾ ನೀರಿನಿಂದಲೇ ಆಗಿರುವವು. [೧೮] ಉಪ್ಪು [ಸವಳು] ಸಮುದ್ರ, ಹಾಲಿನ ಸಮುದ್ರ, ದಾರೂ [ಮದ್ಯದ] ಸಮುದ್ರ, ತುಪ್ಪದ ಸಮುದ್ರ, ಮೊಸರಿನ ಸಮುದ್ರ, ಕಬ್ಬಿನ ರಸದ ಸಮುದ್ರ, ಶುದ್ಧ ಮತ್ತು ಸಿಹಿ ನೀರಿನ ಸಮುದ್ರ. [೧೯]

ಏಸೇ ಉದಕ ವಿಸ್ತಾರಲೇ । ಮುಳಾಪಾಸೂನ ಸೇವಟಾ ಆಲೇ ।
ಮಧೇ ಹಿ ಠಾಈ ಠಾಈ ಉಮಟಲೇ । ಠಾಈ ಠಾಈ ಗುಪ್ತ ॥೨೦॥
ಜೇ ಜೇ ಬೀಜೀ ಮಿಶ್ರಿತ ಜಾಲೇ। ತೋ ತೋ ಸ್ವಾದ ಘೇಊನ ಉಠಿಲೇ ।
ಉಸಾಮಧೇ ಗೋಡಿೇಸ ಆಲೇ । ಪರಮ ಸುಂದರ ॥೨೧॥
ಉದಕಾಚೇ ಬಾಂಧಾ ಹೇ ಶರೀರ । ಉದಕ ಚಿ ಪಾಹಿಜೇ ತದನಂತರ ।
ಉದಕಾಚಾ ಉತ್ಪತ್ತಿ ವಿಸ್ತಾರ । ಕಿತೀ ಮ್ಹಣೋನಿ ಸಾಂಗಾವಾ ॥೨೨॥
ಉದಕ ತಾರಕ ಉದಕ ಮಾರಕ । ಉದಕ ನಾನಾ ಸೌಖ್ಯ ದಾಯಕ ।
ಪಾಹಾತಾ ಉದಕಾಚಾ ವಿವೇಕ । ಅಲೋಲಿಕ ಆಹೆ ॥೨೩॥
ಭೂಮಂಡಳೀ ಧಾವೇ ನೀರ । ನಾನಾ ಧ್ವನೀ ತ್ಯಾ ಸುಂದರ ।
ಧಬಾಬಾ ಧಬಾಬಾ ಥೋರ । ರಿಚವತೀ ಧಾರಾ ॥೨೪॥
ಠಾಈ ಠಾಈ ಡೋಹೋ ತುಂಬತೀ । ವಿಶಾಳ ತಳೀ ಡಬಾಬಿತೀ ।
ಚಬಾಬಿತೀ ಥಬಾಬಿತೀ । ಕಾಲವೆ ಪಾಟ ॥೨೫॥
ಯೇಕೀ ಪಾಲಥ್ಯಾ ಗಂಗಾ ವಾಹಾತೀ । ಉದಕೇ ಸನ್ನಿಧ ಚಿ ಅಸತೀ ।
ಖಳಾಳಾ ಝುರೆ ವಾಹಾತೀ । ಭೂಮೀಚೆ ಪೋಟೀ ॥೨೬॥
ಭೂಮೀ ಗರ್ಭೀ ಡೋಹೋ ಭರಲೇ । ಕೋಣ್ಹೀ ದೇಖಿಲೆ ನಾ ಏಕಿಲೇ ।
ಠಾಈ ಠಾಈ ಝೋರೀವೀರೆ ಜಾಲೆ । ವಿದುಲ್ಯತಾಂಚೇ ॥೨೭॥
ಪೃಥ್ವೀತಳೀ ಪಾಣೀ ಭರಲೇ । ಪೃಥ್ವೀಮಧೇ ಪಾಣೀ ಖೇಳೆ ।
ಪೃಥ್ವೀವರೀ ಪ್ರಗಟಲೇ । ಉದಂಡ ಪಾಣೀ ॥೨೮॥
ಸ್ವರ್ಗ ಮೃತ್ಯ ಪಾತಾಳೀ । ಯೇಕ ನದೀ ತೀನ ತಾಳೀ ।
ಮೇಘೋದಕ ಅಂತರಾಳೀ । ವೃಷ್ಟೀಕರೀ ॥೨೯॥
ಪೃಥ್ವೀಚೇ ಮೂಳ ಜೀವನ । ಜೀವನಾಚೇ ಮೂಳ ದಹನ ।
ದಹನಾಚೇ ಮೂಳ ಪವನ । ಥೋರಾಹೂನ ಥೋರ ॥೩೦॥
ತ್ಯಾಹೂನ ಥೋರ ಪರಮೇಶ್ವರ । ಮಹದ್ಭೂತಾಂಚಾ ವಿಚಾರ ।
ತ್ಯಾಹೂನ ಥೋರ ಪರಾತ್ಪರ । ಪರಬ್ರಹ್ಮ ಜಾಣಾವೇ ॥೩೧॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ಆಪನಿರೂಪಣ' ನಾಮ ಸಮಾಸ ಚತುರ್ಥ ॥

● ●

ಈ ಪ್ರಕಾರವಾಗಿ ನೀರು ಅತ್ತ, ಇತ್ತ, ಸುತ್ತು ಮುತ್ತು ಹಬ್ಬಿರುವದು. ಮೂಲದಿಂದ [ಕೆಳಗಿನಿಂದ] ಮೇಲಿನವರೆಗೆ ಅಂದರೆ ಚಂಡಿಕೆಯುವರೆಗೆ [ತಲೆಯ ಮೇಲಿನವರೆಗೆ] ನೀರು ಹೋಗುವದು. ಮಧ್ಯದಲ್ಲಿ ಅಲ್ಲಲ್ಲಿ ಜಲವು ಪ್ರಕಟವಾಗುವದು. ಅದರಂತೆ ಅಲ್ಲಲ್ಲಿಯೇ ಗುಪ್ತ ಇರುವದು. [೨೦] ಯಾವ ತರಹದ ಬೀಜದಲ್ಲಿ ಎಂಥ ನೀರಿನ ಸಂಪರ್ಕ ಸೇರುವದೋ ಆ ಬೀಜದ ಸ್ವಾದ [ರುಚಿ] ನೀರಿನಲ್ಲಿ ಇಳಿಯುವದು. ಉದಾ: ಕಬ್ಬಿನಲ್ಲಿಯ ನೀರಿಗೆ ಅತಿಶಯ ಸುಂದರ ಮಾಧುರ್ಯ ಬರುವದು. [೨೧] ನಮ್ಮ ಈ ಶರೀರವು ನೀರಿನಿಂದ ಕಟ್ಟಿ ತಯಾರ ಆದದ್ದಿರುವದು. ಆದರೆ ಕಟ್ಟಿದ ನಂತರವೂ ಸಹ ಈ ಶರೀರಕ್ಕೆ ನೀರು ಬೇಕೇ ಬೇಕು. ನೀರಿನಿಂದ ಎಷ್ಟೊಂದು ಕೆಲಸ ಕಾರ್ಯಗಳಾಗುವವೆಂಬ ಬಗ್ಗೆ ಯಾವತ್ತನ್ನೂ ಸವಿಸ್ತಾರವಾಗಿ ಹೇಳಲಿಕ್ಕೆ ಸಾಧ್ಯವಿಲ್ಲ. [೨೨] ನೀರು ಹೇಗೆ ತಾರಕವಿರುವದೋ ಹಾಗೆಯೇ ಮಾರಕವೂ ಇರುವದು. ನೀರು ಅನೇಕ ಪ್ರಕಾರಗಳಿಂದ ಮನುಷ್ಯನಿಗೆ ಸುಖವನ್ನು ಕೊಡುವದು. ವಿಚಾರ ಮಾಡಿದ್ದಾದರೆ ನೀರು ಬಹಳ [ದೊಡ್ಡ] ಅಲೌಕಿಕವಿರುವದೆಂಬುದು ಕಂಡು ಬರುವದು. [೨೩] ಭೂಮಿಯ ಮೇಲೆ ಹರಿಯುವ ನೀರಿನ ಧ್ವನಿ [ಆವಾಜ] ಬಹಳ ಸುಂದರವಿರುವದು. ಮಂಜುಳವಿರುವದು. ನೀರಿನ ಓಟವು ಧಬಾ ಧಬಾ. ಧಬಾ ಧಬಾ, ಎಂದು ಧ್ವನಿ [ಆವಾಜ] ಮಾಡುತ್ತ ನೀರಿನ ಧಾರೆ ವೇಗವಾಗಿ ಸಾಗುವಾಗಿನ ಸ್ವರವು ಬಹಳ ಆನಂದ ಕೊಡುವ ದಾಗಿರುತ್ತದೆ. [೨೪] ನೀರಿನ ಪ್ರವಾಹದಿಂದ ಆಗಿರುವ ದೊಡ್ಡ [ವಿಶಾಲ] ತಗ್ಗು, ಅಥವಾ ಕೆರೆಯಲ್ಲಿ ನೀರು ಸದಾ ತುಂಬಿರುವದು. ಅಲ್ಲಲ್ಲಿ ಸಣ್ಣ ತರಗತಿಯ ನೀರಿನ ಸಂಗ್ರಹದ ತಗ್ಗು ಅಥವಾ [ಹೊಂಡಗಳಲ್ಲಿ] ಕೆರೆಯಲ್ಲಿ ನೀರು ಸದಾ ತುಂಬಿರುವದು. ಇವಲ್ಲದೆ ಕಾಲುವೆಗಳಿಂದ ಮತ್ತು ಕಿರು ಕಾಲುವೆ, ಶಾಖಾ ಕಾಲುವೆಗಳಿಂದ ಡಬ್ ಡಬ್ ಎಂದು, ಚಬ್ ಚಬ್ ಎಂದು, ಥಬ್ ಥಬ್ ಎಂದು ಅನ್ನುವ ಧ್ವನಿಯು ಕೇಳ ಬರುವದು.(೨೫) ಕೆಲವು ಸ್ಥಳದಲ್ಲಿ ಗುಪ್ತಗಂಗಾ [ಕೆಳ ಮುಖ ಮಾಡಿ] ಹರಿಯುವಳು. ಅಂದರೆ ಗುಪ್ತಗಾಮಿನಿಯಾಗಿರುವಳು. ಇವಳ ನೀರು ಭೂಮಿಯ ಒಳಗೆಇದರೂ ಅತ್ಯಂತ ಸಮೀಪವೇ ಇರುವದು. ಎಷ್ಟೋ ಸ್ಥಳಗಳಲ್ಲಿ-ಭೂಮಿಯ ಹೊಟ್ಟೆಯಲ್ಲಿ ನೀರಿನ ಝರಿಗಳು ಖಳ್ ಖಳ್ ಎಂದು ಶಬ್ದಮಾಡುತ್ತ ಹರಿಯುವವು. [೨೬] ಯಾರೂ ಎಂದೂ ನೋಡದೇ ಇದ್ದ ಮತ್ತು ಕೇಳದೇ ಇದ್ದಂಥ ನೀರಿನ ಮಡುವುಗಳು ಭೂಮಿಯ ಹೊಟ್ಟೆಯಲ್ಲಿ ತುಂಬಿರುವವು. ಕೆಲವು ಕಡೆಯಲ್ಲಿ ವಿದ್ಯುತ್ [ಸಿಡಿಲು, ಗುಡುಗು, ಮಿಂಚು] ಭೂಮಿಯ ಮೇಲೆ ಬಿದ್ದು ಬಹಳ ದೊಡ್ಡ ಆಳವಾದ ತಗ್ಗು ಬಿದ್ದು ಅದರೊಳಗಿಂದ ನೀರು ಮೇಲಕ್ಕೆ ಬಂದು ಹರಿಯುವ ಝರಿಗಳೂ ಅಲ್ಲಲ್ಲಿ ಕಾಣುವವು. [೨೭] ಈ ಪ್ರಕಾರವಾಗಿ ಭೂಮಿಯ ಕೆಳಗೆ ನೀರು ತುಂಬಿರುವದು. ಭೂಮಿಯ ಹೊಟ್ಟೆಯಲ್ಲಿ ನೀರು ಆಡುತ್ತದೆ. ಮತ್ತು ಪೃಥ್ವಿಯ ಮೇಲೆ ಸಹ ನೀರು ಸಾಕಷ್ಟು ಇರುವದು. [೨೮] ಸ್ವರ್ಗ, ಮೃತ್ಯು, ಪಾತಾಳ ಈ ಮೂರೂ ಲೋಕಗಳಲ್ಲಿ ಸಹಿತ ಒಂದೇ ಗಂಗಾ ನದಿಯು ಹರಿ ಯುವದು. ಅಲ್ಲದೆ ಆಕಾಶದಿಂದ ಮೇಘಗಳು ಮಳೆಯನ್ನು ಸುರಿಸುವವು. [೨೯] ಪೃಥ್ವಿಯ ಮೂಲವು [ಆದಿ] ನೀರು. ನೀರಿನ ಆದಿಯು ಅಗ್ನಿ,[ತೇಜ] ಅಗ್ನಿಯ ಆದಿಯು ವಾಯು. ಈ ವಾಯುವು ದೊಡ್ಡವ [ಶ್ರೇಷ್ಠ]ನಿಗಿಂತ ಶ್ರೇಷ್ಠನಿರುವನು. [೩೦] ವಾಯುವಿಗಿಂತಲೂ ಶ್ರೇಷ್ಠನಾದವನು ಪರಮೇಶ್ವರನು ಅಂದರೆ ಅಂತರಾತ್ಮಾ ಇರುವನು. ಅಂತರಾತ್ಮಾ ಅಂದರೆ ಸರ್ವ ಭೂತಗಳಲ್ಲಿ ಶ್ರೇಷ್ಠ ಭೂತ [ಅದಂಥದ್ದು] ವು ಇರುವದು. ಪರಬ್ರಹ್ಮವು ಅಂತರಾತ್ಮ ನಿಗಿಂತ ಶ್ರೇಷ್ಠ ಮತ್ತು ಶ್ರೇಷ್ಠರಲ್ಲಿಯೇ ಎಲ್ಲರಿಗಿಂತ ಸರ್ವ ಶ್ರೇಷ್ಠನೂ ಇರುವನು. [೩೧]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹದಿನಾರನೆಯ ದಶಕದೊಳಗಿನ
"ಆಪ ನಿರೂಪಣ"ವೆಂಬ ಹೆಸರಿನ ನಾಲ್ಕನೆಯ ಸಮಾಸವು ಮುಗಿದುದು.

● ●

### ದಶಕ ಷೋಡಶ : ಸಮಾಸ ಪಂಚಮ : ಅಗ್ನಿ ನಿರೂಪಣ (ನುಡಿ ೩೦)

॥ಶ್ರೀರಾಮ॥ ಧನ್ಯ ಧನ್ಯಹಾ ವೈಶ್ವಾನರು। ಹೋಯೆ ರಘುನಾಥಾಚಾ ಶ್ವಶುರು ।
ವಿಶ್ವವ್ಯಾಪಕ ವಿಶ್ವಂಭರು । ಪಿತಾ ಜಾನಕೀಚಾ ॥೧॥

ಜಾಚ್ಯಾ ಮುಖೇ ಭಗವಂತ ಭೋಕ್ತಾ । ಜೋ ಋಷೀಚಾ ಫಳದಾತಾ ।
ತಮುಹಿಮರೋಗಹರ್ತಾ । ಭರ್ತಾ ವಿಶ್ವಜನಾಚಾ ॥೨॥

ನಾನಾ ವರ್ಣ ನಾನಾ ಭೇದ । ಜೀವ ಮಾತ್ರಾಸ ಅಭೇದ ।
ಅಭೇದ ಆಣೀ ಪರಮ ಶುಧ । ಬ್ರಹ್ಮಾದಿಕಾಸೀ ॥೩॥

ಅಗ್ನೀಕರಿತಾ ಸೃಷ್ಟೀ ಚಾಲೇ । ಅಗ್ನೀಕರಿತಾ ಲೋಕ ಧಾಲೇ ।
ಅಗ್ನೀಕರಿತಾ ಸಕಳ ಜ್ಯಾಲೇ । ಲಾಹಾನ ಥೋರ ॥೪॥

## ದಶಕ ೧೬. ಸಮಾಸ ೫. ಅಗ್ನಿ ನಿರೂಪಣ (ನುಡಿ ೩೦)

ಅಗ್ನಿ ದೇವನು ಸೀತಾ ಮಾತೆಯು ಪಿತನೂ ಮತ್ತು ಶ್ರೀ ರಾಮಚಂದ್ರನ ಮಾವನೂ ಆಗಿರುವನು. ಅಗ್ನಿಯು ಘರ್ಷಣೆಯಿಂದ [ತಿಕ್ಕುವದರಿಂದ] ಪ್ರಕಟವಾಗುವನು. ಇವನು ಕತ್ತಲು, ಥಂಡಿ[ಚಳಿ] ಮತ್ತು ರೋಗಗಳ ನಿವಾರಣ ಮಾಡುವನು. ಸೃಷ್ಟಿಯು ಅಗ್ನಿಯಿಂದ ನಡೆಯುವದು. ಅಗ್ನಿಯಿಂದಾಗಿ ಜನರು ಜೀವಂತವಿರುವರು. ಮತ್ತು ತೃಪ್ತ [ಸಮಾಧಾನ] ವಾಗುವರು. ಅಗ್ನಿಯು ವಿಶ್ವವನ್ನು ವ್ಯಾಪಿಸಿ ಇಗುವನು. ಇವನು ಜಗತ್ತಿನ ಜೀವಗಳ ಪೋಷಣೆಯನ್ನು ಮಾಡುವನು. ಅಗ್ನಿಯು ಈಶ್ವರನ ಮುಖವಾಗಿರುವನು. ಇವನು ಅತಿ ಪವಿತ್ರನಿರುವನು. ಯಾವತ್ತೂ ಯಜ್ಞ, ಯಾಗಗಳು ಅಗ್ನಿಯ ಮುಖಾಂತರವೇ ನಡೆಯುವವು. ಋಷಿಗಳಿಗೆ ತಪಶ್ಚರ್ಯದ ಫಲವನ್ನು ಇವನೇ ಕೊಡುವನು, ಪೃಥ್ವಿಯು ಇವನಿಂದ ಆಯಿತು. ದೇಹದ ಸರ್ವಾಂಗಗಳಲ್ಲಿಯೂ ವ್ಯಾಪಿಸಿರುವನು. ಇವನಿಂದಾಗಿ ಹಸಿವೆಯಾಗುವದು. ದೀಪಗಳು ಇವನ ಸಹಾಯದಿಂದಲೇ ಹತ್ತುವವು. ಮತ್ತು ಉರಿಯುವವು. ರಾತ್ರಿ ಕತ್ತಲೆಯಲ್ಲಿ ಮತ್ತು ಚಳಿಯಲ್ಲಿ ಇವನೇ ಉಪಯೋಗ ಬೀಳುವನು. ಇವನ ಬಲ [ಜೋರು] ದಿಂದ ಶತ್ರುವನ್ನು ಗೆಲ್ಲಲು ಸಾಧ್ಯ ವಾಗುವದು. ಉಷ್ಣ ಔಷಧದಿಂದ ರೋಗ ನಾಶವಾಗುವದು. ಮಹಾ ರೋಗವೂ ಸಹಿತ ನೆಟ್ಟಗಾಗುವದು. ಲಗ್ನ ಸಮಾರಂಭದಲ್ಲಿ ಶೋಭೆಯು ಬಿರುಸು,ಬಾಣ,ಮದ್ದು [ಅಂದರೆ ಅಗ್ನಿ] ಇವು ಇದ್ದರೆ ಲಗ್ನಕ್ಕೆ ಒಳ್ಳೇ ಶೋಭೆ ಬರುವದು. ಅಗ್ನಿಯು ಹೇಗೆ ಉಪಯುಕ್ತನಿರುವನೋ ಅದರಂತೆ ಅಪಾಯಕರನೂ ಇರುವನು. ಸೂರ್ಯ ಮತ್ತು ಅಗ್ನಿ ಇವರು ಬಹಳ ದೊಡ್ಡ ದೇವತೆಗಳಾಗಿದ್ದಾರೆ. ಜೀವಂತ ಇದ್ದಾಗ ಇವನು ಹೇಗೆ ರಕ್ಷಣ ಮಾಡುವನೋ ಅದರಂತೆ ಸತ್ತ ಮೇಲೆ ದೇಹವನ್ನು ಸುಟ್ಟು ಭಸ್ಮಮಾಡಿ ಬಿಡುವನು. ಅಗ್ನಿಯು ಸರ್ವ ಸಂಹಾರಕನಿರುವನು. ಜಗತ್ತಿನಲ್ಲಿ ಅಗ್ನಿ ದಿವ್ಯ [ಸೀತೆಯ ಅಗ್ನಿ ಪ್ರವೇಶ] ವು ಪ್ರಸಿದ್ಧವೇ ಇರುವದು. ಅಷ್ಟಧಾ ಪ್ರಕೃತಿ ಮತ್ತು ಮೂರು ಲೋಕ ಗಳನ್ನು ಇವನು ವ್ಯಾಪಿಸಿರುವನು.

### ದಶಕ ೧೬. ಸಮಾಸ ೫. ಅಗ್ನಿ ನಿರೂಪಣ (ನುಡಿ ೩೦)

ಪ್ರಾಚೀನ ಆರ್ಯರು ಅಗ್ನಿ ಪೂಜಕರಿದ್ದರು. ಭಾರತೀಯ ಸಂಸ್ಕೃತಿಯಲ್ಲಿ ಅಗ್ನಿಗೆ ದೇವರ ಪ್ರತಿನಿಧಿ ಎಂದು ಮನ್ನಿಸುವರು. ಅಗ್ನಿಯು ಕೊಡುವಂಥ ಉಷ್ಣತೆಯಿಂದ ಮನುಷ್ಯರ ಶರೀರದಲ್ಲಿಯ ಸರ್ವ ಕ್ರಿಯೆಗಳು ಸುರಳೀತ ನಡೆಯುವವು. ಅಗ್ನಿಯು ಅತ್ಯಂತ ಪವಿತ್ರನಿರುವನು. ಇವನು ಸರ್ವದರ ಸಂಹಾರವನ್ನು ಮಾಡುವನು: ಈ ವೈಶ್ವಾನರ ಅಗ್ನಿಯು ಧನ್ಯ ಧನ್ಯನಿರುವನು. ಇವನು ರಾಮನ ಮಾವನಿರುವನು. ಸೀತೆಯು ಅಗ್ನಿ [ದಿವ್ಯ] ಪ್ರವೇಶಮಾಡಿದಾಗ ಸಾಕ್ಷಾತ್ ವೈಶ್ವಾನರ [ಅಗ್ನಿ] ಪ್ರಕಟನಾಗಿ ಅಂದನು. "ರಾಮಾ ಇವಳು ನನ್ನ ಮಗಳು ಅತ್ಯಂತ ಪವಿತ್ರಳಿರುವಳು." ಅಂತೆಯೇ ಅಗ್ನಿಯು ಸೀತೆಯ ಪಿತನೆನಿಸಿದನು. ಶ್ರೀ ರಾಮನಿಗೆ ಮಾವನೆನಿಸಿದನು.ವೈಶ್ವಾನರನು ವಿಶ್ವವನ್ನು ವ್ಯಾಪಿಸಿರುವನು. ಮತ್ತು ಅದರ ಪೋಷಣವನ್ನೂ ಸಹಿತಮಾಡುವನು. (೧) ಅಗ್ನಿಯ ಮುಖದಿಂದ ಯಾವತ್ತೂ ದೇವರಿಗೆ ಯಜ್ಞದಲ್ಲಿಯ ಹವಿರ್ಭಾಗ [ಯಜ್ಞದಲ್ಲಿ ಅಗ್ನಿಗೆ ಆಹುತಿ ಕೊಡುವ [ಹಾಕುವ] ಹಾಲು, ತುಪ್ಪ, ಧಾನ್ಯ ಮೊದಲಾದವುಗಳಲ್ಲಿ ಆ ಆ ದೇವತೆಗಳಿಗೆ ಮುಟ್ಟುವ ಭಾಗಕ್ಕೆ ಹವಿರ್ಭಾಗ ಎಂದು ಅನ್ನುವರು]ವು ಮುಟ್ಟುತ್ತದೆ. ಋಷಿಗಳು ಮಾಡುವ ತಪಶ್ಚರ್ಯಕ್ಕೆ ಅಗ್ನಿಯೇ ಫಲವನ್ನು ಕೊಡುವನು. ಕತ್ತಲು, ಥಂಡಿ,[ಚಳಿ] ಮತ್ತು ರೋಗ ಇವುಗಳನ್ನು ಇವನು ನಿವಾರಣ ಮಾಡುವನು ಇವನೇ ಸರ್ವ ಜೀವವನ್ನೂ ಸಂಬಾಳಿಸುವನು. ಮತ್ತು ಕಾಯುವನು. [೨] ಪ್ರಾಣಿಗಳಲ್ಲಿ ವರ್ಣ ಮತ್ತು ಭೇದ ಬಹಳ ಇರುವವು. ಆದರೆ ಅಗ್ನಿಯು ಸರ್ವರನ್ನೂ ಬ್ರಹ್ಮಾದಿಗಳನ್ನೂ ಕೂಡಾ ಅಭೇದದಿಂದ ಕಾಣುವನು. ಮತ್ತು ಎಲ್ಲರೊಂದಿಗೆ ಏಕರೂಪದಿಂದ ಅತ್ಯಂತ ಶುದ್ಧ ವಾಗಿ ಇರುವನು. [೩] ಅಗ್ನಿಯಿಂದಲೇ ಸೃಷ್ಟಿಯು ನಡೆಯುವದು. ಅಗ್ನಿಯಿಂದ ಜನರು ತೃಪ್ತರಾಗುವರು. ಯಾವತ್ತೂ ಸಣ್ಣ ದೊಡ್ಡ ಪ್ರಾಣಿಗಳು ಅಗ್ನಿಯಿಂದಾಗಿ ಜೀವಂತ ಇರುವವು. [೪]

ಅಗ್ನೀನೇ ಆಳಲೇ ಭೂಮಂಡಳ। ಲೋಕಾಸ ರಾಹಾವ್ಯಾ ಜಾಲೇ ಸ್ಥಳ।
ದೀಪ ದೀಪಿಕಾ ನಾನಾ ಜ್ವಾಳ। ಜೇಥೇ ತೇಥೇ ॥೫॥
ಪೋಟಾಮಧೇ ಜಠರಾಗ್ನೀ। ತೇಣೇ ಕ್ಷುಧಾ ಲಾಗೇ ಜನೀ।
ಅಗ್ನೀಕರಿತಾ ಭೋಜನೀ। ರುಚೀ ಯೇತೇ ॥೬॥
ಅಗ್ನೀ ಸರ್ವಾಂಗೀ ವ್ಯಾಪಕ। ಉಷ್ಣೇ ರಾಹೇ ಕೋಣೀ ಯೇಕ।
ಉಷ್ಣ ನಸ್ತಾ ಸಕಳ ಲೋಕ। ಮರೋನ ಜಾತೀ ॥೭॥
ಆಧೀ ಅಗ್ನೀ ಮಂದ ಹೋತೋ। ಪುಢೇ ಪ್ರಾಣೀ ತೋ ನಾಸತೋ।
ಏಸಾ ಹಾ ಅನುಭವ ಯೇತೋ। ಪ್ರಾಣೀ ಮಾತ್ರಾಸೀ ॥೮॥
ಅಸತಾ ಅಗ್ನೀಚೇ ಬಳ। ಶತ್ರು ಜಿಂಕೆ ತಾತ್ಕಾಳ।
ಅಗ್ನೀ ಆಹೆ ತಾವತ್ಕಾಳ। ಜಿಣೇ ಆಹೆ ॥೯॥
ನಾನಾ ರಸ ನಿರ್ಮಾಣ ಜಾಲೇ। ಅಗ್ನೀಕರಿತಾ ನಿಪಜಲೇ।
ಮಹಾರೋಗೀ ಆರೋಗ್ಯ ಜಾಲೇ। ನಿಮಿಷಮಾತ್ರೇ ॥೧೦॥
ಸೂರ್ಯ ಸಕಳಾಹೂನ ವಿಶೇಷ। ಸೂರ್ಯಾಉಪರೀ ಅಗ್ನಿಪ್ರಕಾಶ।
ರಾತ್ರಭಾಗೀ ಲೋಕ ಅಗ್ನೀಸ ಸಾಹೇ ಕರಿತೀ ॥೧೧॥
ಅಂತ್ಯಜ ಗೃಹೀಚಾ ಅಗ್ನೀ ಆಣಿಲಾ। ತ್ಯಾಸ ದೋಷ ನಾಹೀ ಬೋಲಿಲಾ।
ಸಕಳಾ ಗೃಹೀ ಪವಿತ್ರ ಜಾಲಾ। ವೈಶ್ವಾನರು ॥೧೨॥
ಅಗ್ನಿಹೋತ್ರ ನಾನಾ ಯಾಗ। ಅಗ್ನೀಕರಿತಾ ಹೋತೀ ಸಾಂಗ।
ಅಗ್ನೀ ತೃಪ್ತ ಹೋತಾ ಮಗ। ಸುಪ್ರಸನ್ನ ಹೋತೋ ॥೧೩॥
ದೇವ ದಾನವ ಮಾನವ। ಅಗ್ನೀಕರಿತಾ ಚಾಲೇ ಸರ್ವ।
ಸಕಳ ಜನಾಸೀ ಉಪಾವ। ಅಗ್ನೀ ಆಹೇ ॥೧೪॥
ಲಗ್ನೆ ಕರಿತೀ ಥೋರ ಥೋರ। ನಾನಾ ದಾರೂಚಾ ಪ್ರಕಾರ।
ಭೂಮಂಡಳೀ ಯಾತ್ರಾ ಥೋರ। ದಾರೂನೇ ಶೋಭತೀ ॥೧೫॥
ನಾನಾ ಲೋಕ ರೋಗೀ ಹೋತೀ। ಉಷ್ಣ ಔಷಧೇ ಸೇವಿತೀ।
ತೇಣೇ ಲೋಕ ಆರೋಗ್ಯ ಹೋತೀ। ವನ್ಹೀ ಕರಿತಾ ॥೧೬॥
ಬ್ರಾಹ್ಮಣಾಸ ತನುಮನು। ಸೂರ್ಯದೇವ ಹುತಾಶನು।
ಯೇತದ್ವಿಷಈ ಅನುಮಾನು। ಕಾಂಹೀ ಚ ನಾಹೀ ॥೧೭॥
ಲೋಕಾಮಧ್ಯೇ ಜಠರಾನಳು। ಸಾಗರೀ ಆಹೆ ವಡವಾನಳು।
ಭೂಗೋಳಾಬಾಹೇರ ಆವರ್ಣಾನಳು। ಶಿವನೇತ್ರೀ ವಿದುಲ್ಯತಾ ॥೧೮॥

ಅಗ್ನಿಯಿಂದ ನೀರು ಆಟ್ಟಿಸಿತು. ಭೂಮಿ ತಯಾರ ಆಯಿತು. ಇದರಿಂದ ಪ್ರಾಣಿ ಮಾತ್ರರಿಗೆಲ್ಲ ವಾಸ ಮಾಡಲಿಕ್ಕೆ ಸ್ಥಳ ದೊರೆಯಿತು. ಅಗ್ನಿಯಿಂದ ದೀಪಗಳು ಪ್ರಣತಿ (ಹಣತೆ) ಗಳು (ಅನೇಕ ಪ್ರಕಾರದ ಜ್ವಾಲೆ ದೀಪ ಗಳು] ಎಲ್ಲ ಕಡೆಗೂ ಕಾಣುವವು.[೫] ಹೊಟ್ಟೆಯಲ್ಲಿ ಜಠರಾಗ್ನಿ ಇರುವದು. ಇದರಿಂದಾಗಿ ಮನುಷ್ಯರಿಗೆ ಹಸಿವೆಯು ಆಗುವದು. ಅಗ್ನಿಯಿಂದ ಅನ್ನಕ್ಕೆ ರುಚಿ ಬರುವದು. [೬] ಮನುಷ್ಯನ ಶರೀರದ ಅಂಗದಲ್ಲೆಲ್ಲ ಅಗ್ನಿಯು ವ್ಯಾಪಿಸಿ ಇರುವನು. ಇವನ ಉಷ್ಣತೆಯಿಂದ ಎಲ್ಲ ಪ್ರಾಣಿಗಳು ಜೀವಂತವಿರುವವು. ದೇಹದಲ್ಲಿಯ ಉಷ್ಣತೆ ಪೂರ್ಣ ಇಲ್ಲ ದಂತಾದರೆ ಆ ಎಲ್ಲ ಪ್ರಾಣಿಗಳೂ ಸತ್ತು ಹೋಗುವವು. [೭] ಪ್ರಥಮದಲ್ಲಿ ದೇಹದೊಳಗಿನ ಅಗ್ನಿಯು ಮಂದ ವಾಗುವನು. ನಂತರ ಆ ಪ್ರಾಣಿಯ ಪ್ರಕೃತಿ ಕೆಡುತ್ತ ಹೋಗುವದು. ಈ ಪ್ರಕಾರದ ಪ್ರತ್ಯಕ್ಷ ಅನುಭವ ಎಲ್ಲರಿಗೂ ಇರುವದು. [೮] ಅಗ್ನಿಯು ಅಂದರೆ ಯುದ್ಧ ಸಾಮಗ್ರಿಯು (ಮದ್ದು ಗುಂಡು ಇತ್ಯಾದಿ) ಸಾಕಷ್ಟು ಬಲ ಇದ್ದದ್ದಾ ದರೆ ಶತ್ರುವನ್ನು ಬೇಗ ಗೆಲ್ಲಲಿಕ್ಕೆ ಬರುವದು. ಎಲ್ಲಿಯವರೆಗೆ ಉಷ್ಣತೆ ಇರುವದೋ ಅಲ್ಲಿಯವರೆಗೆ ಜೀವವು (ಪ್ರಾಣವು) ಇರುವದು. [೯] ಜಗತ್ತಿನಲ್ಲಿ ಅನೇಕ ರೀತಿಯ ಅನೇಕ ರಸಗಳು ನಿರ್ಮಾಣವಾಗಿರುವವು. ಅವೆಲ್ಲವೂ ಅಗ್ನಿಯಿಂದಲೇ ಉತ್ಪನ್ನವಾದವುಗಳಿರುವವು. ಅಗ್ನಿಯಿಂದ ಮಹಾರೋಗವೂ ಸಹ ಬಹುಬೇಗ ನೆಟ್ಟಗಾಗುವದು[೧೦] ಸೂರ್ಯನು ಎಲ್ಲರಿಗಿಂತಲೂ ವಿಶೇಷ ತರದವನಿರುವನು. ಇದರಲ್ಲಿ ವಾದವಿಲ್ಲ. ಆದರೆ ಸೂರ್ಯ ಮುಳುಗಿದ ಮೇಲೆ ಅಗ್ನಿಯೇ ಪ್ರಕಾಶ ಕೊಡುವನು. ರಾತ್ರಿಯ ಹೊತ್ತಿನಲ್ಲಿ ಜನರು ಅಗ್ನಿಯ ಸಹಾಯವನ್ನೇ ತೆಗೆದುಕೊಳ್ಳುವರು[೧೧] ಅಗ್ನಿಗೆ ಮೈಲಿಗೆ ಇಲ್ಲ. ಶೂದ್ರರ ಮನೆಯ ಅಗ್ನಿಯನ್ನು ತಂದು ಉಪಯೋಗಿಸಿದರೂ ನಡೆಯುವದು. ಇದಕ್ಕೆ ದೋಷವಿಲ್ಲವೆಂದು ಶಾಸ್ತ್ರಕಾರರು ಹೇಳುವರು. ಎಲ್ಲರ ಮನೆಯ ಅಗ್ನಿಯೂ ಒಂದೇ ತರಹದಲ್ಲಿ ಪವಿತ್ರವಿರುವದು. ಎಂದು ತಿಳಿಯಿರಿ. [೧೨] ಅಗ್ನಿ ಹೋತ್ರ ಮತ್ತು ಅನೇಕ ಯಾಗ, ಯಜ್ಞ ಇವು ಅಗ್ನಿಯಿಂದೇ ಸರಿಯಾಗಿ ಆಗು ವವು. ಅಗ್ನಿಯು ತೃಪ್ತನಾದನೆಂದರೆ ಆ ಮೇಲೆ ಅವನು ಬಹುಬೇಗ ಪ್ರಸನ್ನನಾಗುವನು. [೧೩] ದೇವ, ದಾನವ, ಮತ್ತು ಮಾನವ ಈ ಎಲ್ಲರ ವ್ಯವಹಾರವು ಅಗ್ನಿಯ ಬಲದ ಮೇಲೆ ನಡೆಯುವವು. ಯಾವತ್ತೂ ಜನರಿಗೆ ಅಗ್ನಿಯೇ ತಾರಕ ಉಪಾಯಗಾರನಿರುವನು. (೧೪) ಶ್ರೀಮಂತ ಜನರು ಲಗ್ನ ಸಮಾರಂಭ ಮಾಡುವರು. ಆಗ ಸಿಡಿಮದ್ದು, ಬಾಣ ಬಿರುಸು ಇತ್ಯಾದಿ ಅನೇಕ ಪ್ರಕಾರಗಳು ಶೋಭೆಯನ್ನು ತರುವವು. ಜಗತ್ತಿನಲ್ಲಿ ದೊಡ್ಡ ದೊಡ್ಡ ಜಾತ್ರೆ (ಉತ್ಸವ) ಕೂಡುವದು. ಆಗ ಅಲ್ಲಿ ಸಹ, ಮದ್ದು ಬಾಣಗಳ ಶೋಭೆ ಹುರುಪಿನಿಂದ ನಡೆಯುವದು. ಇದೆಲ್ಲದರಲ್ಲಿ ಅಗ್ನಿಯದೇ ಮೋಜು, ಹೆಗ್ಗಳಿಕೆ, ಉತ್ಸಾಹ ಇರುವದು. (೧೫) ಬಹಳಷ್ಟು ಜನರಿಗೆ ರೋಗ ಆಗುವದು. ಅದ ಕ್ಕಾಗಿ ಉಷ್ಣ ಔಷಧ ತೆಗೆದುಕೊಳ್ಳುವರು. ಇದರಿಂದ ಆ ಜನರಿಗೆ (ಸಮಾಧಾನವಾಗುವದು) ಆರಾಮವಾಗುವದು. ಆರೋಗ್ಯ ಲಭಿಸುವದು. ಆದರೆ ಇದೆಲ್ಲದಕ್ಕೆ ಅಗ್ನಿಯೇ ಕಾರಣೀಭೂತನಿರುವನು. (೧೬) ಸೂರ್ಯ ಮತ್ತು ಅಗ್ನಿ ಇವರೇ ಬ್ರಾಹ್ಮಣರಿಗೆ ಸರ್ವಸ್ವವಾಗಿರುವರು. ಈ ಮಾತು ಬಹಳಷ್ಟು ಅನುಭವ ಸಿದ್ಧವಾದದ್ದಿರುವದು. ಇದರ ಬಗ್ಗೆ ಇನ್ನಾವುದೇ ಕಲ್ಪನೆಗೆ ಅವಕಾಶವಿಲ್ಲ. (೧೭) ಜನರ ದೇಹದಲ್ಲಿ ಜಠರಾನಲ [ಜಠರಾಗ್ನಿ] ಇರುವದು. ಸಾಗರ ದಲ್ಲಿ ವಡವಾನಲ (ವಡವಾಗ್ನಿ) ಇರುವದು. ಭೂಗೋಲದ ಹೊರಗೆ ಆವರಣಾನಲ [ಆವರಣಾಗ್ನಿ] ಇರುವದು. ಮತ್ತು ಶಂಕರನ ಮೂರನೇ ಕಣ್ಣಲ್ಲಿ ವಿದ್ಯುತ್ ರೂಪಿ ಸಿಡಿಲಿನಗ್ನಿ ರೂಪದ ಅನಿಲವಿರುವದು. [೧೮]

ಕಾಪೀಪಾಸೂನ ಅಗ್ನೀ ಹೋತೋ । ಉಂಚದರ್ಪಣೀ ಅಗ್ನೀ ನಿಘತೋ ।
ಕಾಷ್ಠ ಮಂಥನೀ ಪ್ರಗಟತೋ । ಚಕಮಕೇನೇ ॥೧೯॥
ಅಗ್ನೀ ಸಕಳಾಂ ಠಾಈ ಆಹೇ । ಕಠಿಣ ಘಿಸಣೀ ಪ್ರಗಟ ಹೋಯೆ ।
ಆಗ್ಯಾಸರ್ಪೇ ದಗ್ಧ ಹೋಯೆ । ಗಿರೀಕಂದರೇ ॥೨೦॥
ಅಗ್ನೀಕರಿತಾ ನಾನಾ ಉಪಾಯೆ । ಅಗ್ನೀಕರಿತಾ ನಾನಾ ಅಪಾಯ ।
ವಿವೇಕೇವಿಣ ಸಕಳ ಹೋಯೆ । ನಿರಾರ್ಥಕ ॥೨೧॥
ಭೂಮಂಡಳೀ ಲಾಹಾನ ಥೋರ । ಸಕಳಾಸ ವನ್ಹೀಚಾ ಆಧಾರ ।
ಅಗ್ನಿಮುಖೇ ಪರಮೇಶ್ವರ । ಸಂತುಷ್ಟ ಹೋಯೇ ॥೨೨॥
ಐಸಾ ಅಗ್ನೀಚಾ ಮಹಿಮಾ । ಬೋಲಿಜೆ ತಿತುಕೀ ಉಣೇ ಉಪಮಾ ।
ಉತ್ತರೋತ್ತರ ಅಗಾಧ ಮಹಿಮಾ । ಅಗ್ನೀ ಪುರುಷಾಚಾ ॥೨೩॥
ಜೀತ ಅಸತಾ ಸುಖೀ ಕರೀ । ಮೇಲ್ಯಾ ಪ್ರೇತ ಭಸ್ಮ ಕರೀ ।
ಸರ್ವಭಕ್ಷಕು ತ್ಯಾಚೀ ಥೋರೀ । ಕಾಯೆ ಮ್ಹಣೋನೀ ಸಾಂಗಾವೀ ॥೨೪॥
ಸಕಳ ಸೃಷ್ಟೀಚಾ ಸಂಹ್ವಾರ । ಪ್ರಳಯ ಕರೀ ವೈಶ್ವಾನರ ।
ವೈಶ್ವಾನರೇ ಪದಾರ್ಥ ಮಾತ್ರ । ಕಾಂಹೀ ಚ ಉರೇನಾ ॥೨೫॥
ನಾನಾ ಹೋಮ ಉದಂಡ ಕರಿತೀ । ಘರೋಘರೀ ವೈಶದೇವ ಚಾಲತೀ ।
ನಾನಾ ಕ್ಷೇತ್ರೀ ದೀಪ ಜಳತೀ । ದೇವಾಪಾಸೀ ॥೨೬॥
ದೀಪಾರಾಧನೇ ನೀಲಾಂಜನೇ । ದೇವ ವೋವಾಳಿಜೆ ಜನೇ ।
ಖರೇ ಖೋಟೇ ನಿವಡಣೇ । ದಿವ್ಯ ಹೋತಾ ॥೨೭॥
ಅಷ್ಟಧಾ ಪ್ರಕೃತೀ ಲೋಕ ತಿನ್ಹೀ । ಸಕಳ ವ್ಯಾಪೂನ ರಾಹಿಲಾ ವನ್ಹೀ ।
ಅಗಾಧ ಮಹಿಮಾ ವದನೀ । ಕಿತೀ ಮ್ಹಣೋನೀ ಬೋಲಾವಾ । ॥೨೮॥
ಚಾರೀ ಶೃಂಗೇ ತ್ರಿಪದೀ ಜಾತ । ದೋನೀ ಶಿರೇ ಸಪ್ತಹಾತ ।
ಐಸಾ ಬೋಲಿಲಾ ಶಾಸ್ತ್ರಾರ್ಥ । ಪ್ರಚಿತೀವಿಣ ॥೨೯॥
ಐಸಾ ವನ್ಹೀ ಉಷ್ಣಮೂರ್ತೀ । ತೋ ಮೀ ಬೋಲಿಲೋ ಯೆಥಾಮತೀ ।
ನ್ಯೂನ್ಯಪೂರ್ಣ ಕ್ಷಮಾ ಶ್ರೋತೀ । ಕೇಲೇ ಪಾಹಿಜೇ ॥೩೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ಅಗ್ನೀನಿರೂಪಣ' ನಾಮ ಸಮಾಸ ಪಂಚಮ ॥

ಕಾಜಿನಿಂದ ತೇಜಾಪದಿಂದ ಅಗ್ನಿ ಹೊರಡುವದು. ಇದರಂತೆ ಉದ್ದನ್ನ ವಕ್ರ ಕನ್ನಡಿಯಿಂದ ಅಂದರೆ ಸೂರ್ಯಕಾಂತ ಕಾಜಿನಿಂದ ಇದು ಪ್ರಕಟವಾಗುವದು. ಕಟ್ಟಿಗೆಯಿಂದ ಕಟ್ಟಿಗೆಗೆ ತಿಕ್ಕಿದರೆ ಮತ್ತು ಚಕಮಕಿಯಿಂದಲೂ ಅಗ್ನಿ ಪ್ರಕಟವಾಗುವನು. (೧೯) ಅಗ್ನಿಯು ಎಲ್ಲ ಕಡೆಗೂ ಇರುವನು. ಜೋರಾದ ಘರ್ಷಣೆಯಿಂದ ಇವನು ಪ್ರಕಟನಾಗುವನು. ಮುಖದಿಂದ ಅಗ್ನಿಯನ್ನು ಕಾರುವ ಸರ್ಪದ ಫೂತ್ಕಾರದಿಂದಾಗಿ (ಹಾವಿನ ಬಾಯಿಂದ ಬರುವ ಅಗ್ನಿಯಿಂದ) ಗುಡ್ಡ ಪರ್ವತಗಳಿಗೆ ಬೆಂಕಿ ಹತ್ತಿ ಸುಟ್ಟು ಹೋಗುವವು. [೨೦] ಅಗ್ನಿಯಿಂದ ಅನೇಕ ರೀತಿಯ ಉಪಾಯವು [ಲಾಭ] ಆಗುವದು. ಅದರಂತೆ ಅಗ್ನಿಯಿಂದ ಅನೇಕ ಅಪಾಯಗಳು ಕೂಡಾ ಆಗುವವು. ಇದರ ಬಗ್ಗೆ ವಿವೇಕ, ವಿಚಾರ ಮಾಡದಿದ್ದರೆ ಇದೆಲ್ಲ ವ್ಯರ್ಥವಾಗುವದು. [೨೧] ಜಗತ್ತಿನಲ್ಲಿಯ ಎಲ್ಲ ಸಣ್ಣ ದೊಡ್ಡವರಿಗೂ ಸಹಿತ ಅಗ್ನಿಯೊಬ್ಬನೇ ಆಧಾರನಾಗಿರುವನು. ಅಗ್ನಿಯ ಮುಖದಿಂದಲೇ ಪರಮೇಶ್ವರನು ಸಂತೋಷ ಹೊಂದುವನು. (೨೨) ಅಗ್ನಿಯ ಮಹಿಮೆಯು ಒಟ್ಟಿನಲ್ಲಿ ಹೀಗಿರುವದು. ಅಗ್ನಿಯ ಮಹಿಮೆ ವರ್ಣನ ಮಾಡಲಿಕ್ಕೆ ಯಾವುದೇ ಸಾದೃಶ್ಯವೂ ಸರಿ ಹೊಂದುವದಿಲ್ಲ. ಅಗ್ನಿ ಪುರುಷನ ಮಹಿಮೆಯನ್ನು ವಿಚಾರಮಾಡಿದ್ದಾದರೆ ಅದು ಹೆಚ್ಚು ಬೆಳೆಯುತ್ತ ಹೋಗುವದು. (೨೩) ಮನುಷ್ಯನು ಜೀವಂತವಿದ್ದಾಗ ಅಗ್ನಿಯು ಅವನಿಗೆ ಸುಖವನ್ನು ಕೊಡುವನು. ಅದೇ ಅವನು ಸತ್ತ ಮೇಲೆ ಇವನ ದೇಹವನ್ನು ಭಸ್ಮಮಾಡುವನು. ಅಗ್ನಿಯು ಸರ್ವ ಭಕ್ಷಕನಿರುವನು. ಇವನ ಹಿರಿಮೆಯನ್ನು-ದೊಡ್ಡಸ್ತಿಕೆಯನ್ನು, ಎಷ್ಟು ಹೊಗಳಿ ಹೇಳಿದರೂ ಕಡಿಮೆಯೇ ಸರಿ. [೨೪] ಪ್ರಳಯ ಕಾಲದಲ್ಲಿ ಅಗ್ನಿಯು ಸರ್ವ ಸೃಷ್ಟಿಯ ಸಂಹಾರ ಮಾಡುವನು. ಪ್ರಳಯ ಕಾಲದ ಅಗ್ನಿಯ ಮುಂದೆ ಯಾವ ಪದಾರ್ಥಗಳು ಬಂದರೂ ಅವೆಲ್ಲವು ಬದುಕಿ ಉಳಿಯುವದಿಲ್ಲ, ಭಸ್ಮವಾಗಿ ಬಿಡುವವು. (೨೫) ಅಗ್ನಿಯ ಯೋಗದಿಂದ ಅನೇಕ ಹೋಮ ಮಾಡುವರು. ಮನೆ ಮನೆಯಲ್ಲಿ ವೈಶ್ವದೇವ [ನಿತ್ಯವೂ ಗೃಹಸ್ಥನು ಅಗ್ನಿಯಲ್ಲಿ ಅನ್ನ ತುಪ್ಪಗಳಿಂದ ಹವನ ಹೋಮ ಮಾಡುವದು ಅರ್ಥಾತ್ ನಿತ್ಯವೂ ಮಾಡಬೇಕಾದ ಪಂಚ ಯಜ್ಞಗಳಲ್ಲಿ ಒಂದು] ಮಾಡುವರು. ಬೇರೆ ಬೇರೆ ಕ್ಷೇತ್ರಗಳಲ್ಲಿಯ ದೇವರ ಮುಂದೆ ಅಗ್ನಿಯಿಂದ ದೇವರ ಮುಂದೆ ದೀಪವನ್ನು ಉರಿಸುವರು. (೨೬) ದೀಪಾರಾಧನೆ ಮತ್ತು ನೀರಾಂಜನ [ನೀಲಾಂಜನ] ಇವನ್ನು ಅಗ್ನಿಯಿಂದ ಹಚ್ಚಿಕೊಂಡು ಜನರು ದೇವರಿಗೆ ಆರತಿಯನ್ನು ಮಾಡುವರು. ಅಗ್ನಿ ದಿವ್ಯ [ಅಗ್ನಿಯನ್ನು ಹಿಡಿದು ತನ್ನ ಪ್ರಾಮಾಣಿಕತನವನ್ನು ಸಿದ್ಧಪಡಿಸುವ ಪರೀಕ್ಷೆ ಅಂದರೆ ಅಗ್ನಿ ಪರೀಕ್ಷೆ] ಮಾಡಿ ಜನರು ಸತ್ಯಾಸತ್ಯತೆಯ ಬಗ್ಗೆ ಪರೀಕ್ಷೆಯನ್ನು ಕೊಡುವರು. ಖಳ ಖಳ ಕಾಯ್ದ ತುಪ್ಪ ಅಥವಾ ಎಣ್ಣೆಯ ಬಾಣಲೆ [ಕರಿಯುವ ಸಣ್ಣ ಪಾತ್ರೆ]ಯಲ್ಲಿ ಬಂಗಾರದ ನಾಣ್ಯವನ್ನು ಹಾಕುವದು, ಆ ಕಾದ ಎಣ್ಣೆ-ತುಪ್ಪದ ಬಾಣಲೆಯಲ್ಲಿ ಕೈ ಬೆರಳಿನಿಂದ ಕಾಯ್ದ ಬಂಗಾರದ ನಾಣ್ಯವನ್ನು ಹೊರ ತೆಗೆಯಬೇಕು. ಇದೇ ಅಗ್ನಿ ದಿವ್ಯವು. ಬೆರಳು ಸುಡದಿದ್ದರೆ ಅವನು ಸತ್ಯವಂತನು. ಮತ್ತು ಬೆರಳು ಸುಟ್ಟರೆ ಅವನು ಅಸತ್ಯವಂತನು. [ಸುಳ್ಳ]. ಅಂತಾ ನಿರ್ಣಯಿಸುವರು. [೨೭] ಮೂರೂ ಲೋಕ ಮತ್ತು ಅಷ್ಟಧಾ ಪ್ರಕೃತಿ ಇವುಗಳಿಗೆಲ್ಲ ಅಗ್ನಿಯು ವ್ಯಾಪಿಸಿರುವನು. ಇವನ ಮಹಿಮೆಯನ್ನು ಬಾಯಿಯಿಂದ ಹೊಗಳಲಿಕ್ಕೆ ಸಾಧ್ಯವಿಲ್ಲ.[೨೮] ಅಗ್ನಿಯ ರೂಪ ವರ್ಣನೆ ಮಾಡುವಾಗ ಇವನಿಗೆ ನಾಲ್ಕು ಕೋಡು, ಮೂರು ಕಾಲು, ಎರಡು ತಲೆ, ಮತ್ತು ಏಳು ಕೈಗಳು ಇರುವವು. ಹೀಗೆ ಶಾಸ್ತ್ರ ಹೇಳುವದು. ಅರ್ಥಾತ್ ಅದು ಅನುಭವದಿಂದಲೇ ಹೇಳುತ್ತದೆ. [೨೯] ಉಷ್ಣ ಮೂರ್ತಿಯಾದ ಅಗ್ನಿಯು ಈ ರೀತಿಯಾಗಿರುವನು. ನನ್ನ ಬುದ್ಧಿಯ ಪ್ರಕಾರ ನಾನು ಅಗ್ನಿಯ ವರ್ಣನೆಯನ್ನು ಮಾಡಿರುವೆನು, ಇದರಲ್ಲಿ ಹೆಚ್ಚು ಕಡಿಮೆ ಆಗಿದ್ದರೆ ಇದರ ಬಗ್ಗೆ ವಾಚಕರು ಕ್ಷಮಾಮಾಡಬೇಕು. [೩೦]

ಶ್ರೀ ದಾಸಬೋಧದ ಹದಿನಾರನೆಯ ದಶಕದಲ್ಲಿಯ ಗುರುಶಿಷ್ಯರ ಸಂವಾದದ
"ಅಗ್ನಿ ನಿರೂಪಣ" ವೆಂಬ ಐದನೆಯ ಸಮಾಸವು ಮುಗಿದುದು.

### ದಶಕ ಷೋಡಶ : ಸಮಾಸ ಷಷ್ಠಮ : ವಾಯುಸ್ತವನ [ನುಡಿ ೩೪]

॥ಶ್ರೀರಾಮ॥ ಧನ್ಯ ಧನ್ಯ ಹಾ ವಾಯುದೇವ । ಯಾಚಾ ವಿಚಿತ್ರ ಸ್ವಭಾವ ।
ವಾಯೋಕರಿತಾ ಸಕಳ ಜೀವ । ವರ್ತತೀ ಜನೀ ॥೧॥

ವಾಯೋಕರಿತಾ ಶ್ವಾಸೋಚ್ಛ್ವಾಸ । ನಾನಾ ವಿದ್ಯಾಚಾ ಅಭ್ಯಾಸ ।
ವಾಯೋಕರಿತಾ ಶರೀರಾಸ । ಚಳಣ ಘಡೇ ॥೨॥

ಚಳಣ ವಳಣ ಪ್ರಸಾರಣ । ನಿರೋಧನ ಆಣೀ ಆಕೋಚನ ।
ಪ್ರಾಣ ಅಪಾನ ವ್ಯಾನ ಉದಾನ । ಸಮಾನ ವಾಯು ॥೩॥

ನಾಗ ಕೂರ್ಮ ಕರ್ಕಶ ವಾಯೋ । ದೇವದತ್ತ ಧನಂಜಯೋ ।
ಐಸೇ ಹೇ ವಾಯೋಚೆ ಸ್ವಭಾವೋ । ಉದಂಡ ಅಸತೀ ॥೪॥

ವಾಯೋ ಬ್ರಹ್ಮಾಂಡೀ ಪ್ರಗಟಲಾ । ಬ್ರಹ್ಮಾಂಡದೇವತಾಸ ಪುರವಲಾ ।
ತೇಥುನೀ ಪಿಂಡೀ ಪ್ರಗಟಲಾ । ನಾನಾ ಗುಣೇ ॥೫॥

ಸ್ವರ್ಗಲೋಕೀ ಸಕಳ ದೇವ । ತೈಸೇ ಚಿ ಪುರುಷಾರ್ಥೀ ದಾನವ ।
ಮೃತ್ಯಲೋಕೀಚೆ ಮಾನವ । ವಿಖ್ಯಾತ ರಾಜೇ ॥೬॥

# ದಶಕ ೧೬. ಸಮಾಸ ೬. ವಾಯುಸ್ತವನ (ನುಡಿ ೩೪)

ವಾಯುವಿನ ಸ್ವಭಾವವು ಬಹಳ ವಿಚಿತ್ರವಿರುವದು. ವಾಯುವಿನ ಯೋಗದಿಂದ ಪಂಚಭೂತಗಳು ಒಂದೇ ಸ್ಥಳದಲ್ಲಿ ಒತ್ತಟ್ಟಿಗೆ ಕೂಡುವವು. ಮತ್ತು ಅವು ಒಂದರಲ್ಲೊಂದು ಕೂಡಿಕೊಳ್ಳುವವು. ಕೂಡಿದ ಮೇಲೆ ಅವುಗಳನ್ನು ಪ್ರತ್ಯೇಕಿಸುವದು ಸುಲಭವಲ್ಲ. ವಾಯುವು ದೊಡ್ಡ ಕಾರ್ಯನಿರ್ವಾಹಕ ಕಾರಭಾರಿ ಇರುವನು. ಇವನು ಅತ್ಯಂತ ವ್ಯಾಪಕನಿರುವನು. ಮೊದಲಿಗೆ ಇವನು ಬ್ರಹ್ಮಾಂಡ [ವಿಶ್ವ]ದಲ್ಲಿ ಪ್ರಕಟನಾದನು. ದೊಡ್ಡ ದೊಡ್ಡ ದೇವತೆಗಳು ನಿರ್ಮಾಣರಾದ ಮೇಲೆ ಇವನು ಪಿಂಡ [ದೇಹ] ದಲ್ಲಿ ಇಳಿಯುವನು. [ಪ್ರವೇಶ ಮಾಡಿದನು]. ಈ ವಿಶ್ವದಲ್ಲಿರುವ ಪ್ರಾಣಿಗಳೆಲ್ಲವೂ ವಾಯುವಿನಿಂದ ಜೀವಂತವಿರುವವು. ಮತ್ತು ಚಲನವಲನ ಮಾಡುವವು. ದೇವ. ದಾನವ, ಮಾನವ, ಬಲಾಢ್ಯ ಪುರುಷ, ಜಲಚರಗಳು, ವನಚರಗಳು,[ಅಡವಿ ಪ್ರಾಣಿಗಳು] ಶ್ವಾಪದ[ಹಿಂಸ್ರ-ಕ್ರೂರ] ಪ್ರಾಣಿಗಳು, ಇವೆಲ್ಲವುಗಳಲ್ಲಿ ವಾಯುವಿನ ಸಂಚಾರವಿರುವದು. ಆದಿಶೇಷನು ಗಾಳಿಯನ್ನು ಸೇವಿಸುವನು. ಮತ್ತು ತಲೆಯ ಮೇಲೆ ಭೂಮಿಯನ್ನು ಹೊತ್ತಿರುವನು. ಕೂರ್ಮ ಮತ್ತು ವರಾಹ ಅವತಾರಗಳಿಗೆ ವಾಯುವಿನಿಂದಲೇ ಶಕ್ತಿ ಪ್ರಾಪ್ತವಾಯಿತು. ವಿಶ್ವದಲ್ಲಿಯ ಎಲ್ಲ ದೇವ ದೇವತೆಗಳು ಭೂತ ಇತ್ಯಾದಿಗಳು ವಾಯುರೂಪವಿರುವವು. ಹನುಮಾನ್ ಇವನು ವಾಯುವಿನ ಮಗನು. ಈ ತಂದೆ-ಮಗ ಇಬ್ಬರ ಪರಾಕ್ರಮವು ಒಂದೇ ಸಮವಿರುವದು. ಹನುಮಾನ್ ಇವನು ಈಶ್ವರೀ ಅವತಾರನೇ ಇರುವನು. ದೇವತೆಗಳಿಗೆ ಇವನ ಆಧಾರ ಬೇಕಾಯಿತು. ಇವನು ದೇವತೆಗಳನ್ನು ಬಿಡಿಸಿದನು. [ಬಂಧ ಮುಕ್ತಮಾಡಿದನು].ಮತ್ತು ಪ್ರಾಣಿ ಮಾತ್ರರನ್ನು ಸುಖಿಗಳನ್ನಾಗಿ ಮಾಡಿದನು.

ದಶಕ ೧೬. ಸಮಾಸ ೬. ವಾಯುಸ್ತವನ (ನುಡಿ ೩೪)

ವಿಶ್ವದಲ್ಲಿಯ ಯಾವತ್ತೂ ಕಾರ್ಯಗಳು ಶಕ್ತಿಯಿಂದ ನಡೆದಿರುವವು. ಆ ಶಕ್ತಿಯು ದೃಶ್ಯ ಸ್ವರೂಪ. ಅಂದರೆ ವಾಯುವೇ ಇರುವದು. ದೃಶ್ಯ ಜಗತ್ತಿನಲ್ಲಿ ಇವನು ಗಾಳಿಯ ರೂಪದಲ್ಲಿ ಕಾಣುವನು. ಆದರೆ ಪ್ರಾಣಿಗಳ ದೇಹದಲ್ಲಿ ಪ್ರಾಣ ರೂಪದಿಂದ ಕಂಡುಬರುವನು. ದೇಹದ ಅಂಗಗಳ ಚಲನ ವಲನವಾಗುವದಕ್ಕೆ ಬೇಕಾಗುವ ಶಕ್ತಿಯನ್ನು ಇವನು ಕೊಡುವನು: ಈ ವಾಯು ದೇವನು ಧನ್ಯ ಧನ್ಯನು. ಇವನ ಸ್ವಭಾವವು ಬಹಳ ವಿಲಕ್ಷಣವಿರುವದು. ಈ ವಾಯುವಿನ ಯೋಗದಿಂದ ವಿಶ್ವದಲ್ಲಿಯ ಸರ್ವಜೀವ ಪ್ರಾಣಿಗಳು ನಡೆಯುವವು. [ವರ್ತಿಸುವವು] (೧)ವಾಯುವಿನಿಂದ ಶ್ವಾಸೋಚ್ಛ್ವಾಸ ಮಾಡಲಿಕ್ಕೆ ಬರುವದು. ಅನೇಕ ವಿದ್ಯೆಗಳ ಅಭ್ಯಾಸ ಇದರಿಂದ ಕಲಿಯಲು ಬರುವದು. ವಾಯುವಿನಿಂದ ಶರೀರದ ಚಲನವಲನ ಶಕ್ಯವಾಗುವದು. [೨] ಚಲನ (ಅಳಗಾಡುವ-ಅಲ್ಲಾಡುವ) ವಲನ (ಗತಿ. ಸರಿದಾಡು) ಪ್ರಸರಣ (ಹಬ್ಬುವಿಕೆ, ಹರಡುವಿಕೆ) ನಿರೋಧನ (ಒತ್ತಡ, ಅಡ್ಡಿ.) ಮತ್ತು ಆಕುಂಚನ (ಮುಂದಡು, ಸಂಕುಚಿತ) ಈ ಕಾರ್ಯ ವಾಯುವಿನಿಂದ ಆಗುವದು. ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನ ಈ ರೀತಿ ಐದು ಪ್ರಕಾರಗಳಿಂದ ಇದು [ವಾಯು] ಮನುಷ್ಯನ ಶರೀರದಲ್ಲಿ ವ್ಯವಹರಿಸುವದು. ಇವು ಐದು ಮುಖ್ಯ ಪ್ರಾಣಗಳಿರುವವು. (೩) ನಾಗ, ಕೂರ್ಮ, ಕೃಕಲ, ದೇವದತ್ತ, ಧನಂಜಯ ಇವು ಐದು ಉಪ ಪ್ರಾಣಗಳಿರುವವು. ಈ ರೀತಿಯಿಂದ ವಾಯುವು ವಿಭಾಗ ಹೊಂದಿ ಶರೀರವನ್ನು ನಡೆಯಿಸುವನು. [ದಾ.ದ. ೮. ಸ. ೫. ಓ. ೩೨ ಮತ್ತು ದಾ.ದ. ೧೭.ರ ಸ. ೮ರಲ್ಲಿ ಈ ಬಗ್ಗೆ ನೋಡಬಹುದು.] (೪)ವಾಯು ಮೊದಲಿಗೆ ಬ್ರಹ್ಮಾಂಡದಲ್ಲಿ ಪ್ರಕಟವಾದನು. ಇವನು ಅನೇಕ ಬ್ರಹ್ಮಾಂಡ ದೇವತೆಗಳನ್ನು ಅಲ್ಲಿ ನಿರ್ಮಾಣ ಮಾಡಿದನು. ಆ ಮೇಲೆ ಇವನು ಅನೇಕ ಪ್ರಕಾರಗಳಿಂದ ಪಿಂಡದಲ್ಲಿ [ದೇಹದಲ್ಲಿ] ಪ್ರಕಟವಾದನು. (೫) ಸ್ವರ್ಗ ಲೋಕದ ಎಲ್ಲ ದೇವ ದೇವತೆಗಳು ಮತ್ತು ಬಹಳ ಪರಾಕ್ರಮಿ ರಾಕ್ಷಸರು, ಮೃತ್ಯು ಲೋಕದೊಳಗಿನ ವಿಖ್ಯಾತ ಮಾನವರಾಜರು. (೬)

ನರದೇಹೀ ನಾನಾ ಭೇದೇ । ಅನಂತ ಭೇದಾಚೀ ಶ್ವಾಪದೇ ।
ವನಚರೇ ಜಳಚರೇ ಆನಂದೇ ಕ್ರೀಡಾ ಕರಿತೀ ॥೭॥
ತ್ಯಾ ಸಮುಸ್ತಾಮಧೇ ವಾಯು ಖೇಳೇ । ಖೇಚರಕುಳ ಅವಘೇ ಚಳೇ ।
ಉಠತೀ ಪಕ್ಷಿಯಾಂಚೇ ಉಬಾಳೇ । ವಾಯೋಕರಿತಾ ॥೮॥
ವಾಯೋ ಮೇಘಾಂಚೇ ಭರಣ ಭರೀ । ಸವೇಚ ಪಿಟೂನ ಪರತೇ ಸಾರೀ ।
ವಾಯೋ ಐಸಾ ಕಾರಬಾರೀ । ದುಸರಾ ನಾಹೀ ॥೯॥
ಪರೀ ತೇ ಆತ್ಮಯಾಚೀ ಸತ್ತಾ । ವರ್ತೇ ಶರೀರೀ ತತ್ವತಾ ।
ಪರೀ ವ್ಯಾಪಕಪಣೇ ಯಾ ಸಮರ್ಥಾ । ತುಳಣಾ ನಾಹೀ ॥೧೦॥
ಗಿರೀಹೂನ ದಾಟ ಫೌಜಾ । ಮೇಘ ಉಠಿಲೇ ಲೋಕಕಾಜಾ ।
ಗರ್ಜಗರ್ಜೋ ತಡಕ ವಿಜಾ । ವಾಯೋಬಳೇ ॥೧೧॥
ಚಂದ್ರ ಸೂರ್ಯ ನಕ್ಷತ್ರಮಾಳಾ । ಗ್ರಹಮಂಡಳೇ ಮೇಘಮಾಳಾ ।
ಯೇ ಬ್ರಹ್ಮಾಂಡೀ ನಾನಾ ಕಳಾ । ವಾಯೋಕರಿತಾ ॥೧೨॥
ಯೇಕ ವಟಲೇ ತೇ ನಿವಡೇನಾ । ಕಾಲವಲೇ ತೇ ವೇಗಳೇ ಹೋಯೇನಾ ।
ತೈಸೆ ಹೇ ಬೆಚಾಡ ನಾನಾ । ಕೇವೀ ಕಳೇ ॥೧೩॥
ವಾಯೋ ಸುಟೇ ಸರಾರಾ । ಅಸಂಭಾವ್ಯ ಪಡತೀ ಗಾರಾ ।
ತೈಸೇ ಜೀವ ಹೇ ನೀರಾ-। ಸರಿಸೇ ಪಡತೀ ॥೧೪॥
ವಾಯು ರೂಪೇ ಕಮಳಕಳಾ । ತೋ ಚಿ ಆಧಾರ ಜಳಾ ।
ತಯಾ ಜಳಾಚ್ಯಾ ಆಧಾರೇ ಭೂಗೋಳಾ । ಶೇಷೇ ಧರಿಲೇ ॥೧೫॥
ಶೇಷಾಸ ಪವನಾಚಾ ಆಹಾರ । ಆಹಾರೇ ಫುಗೇ ಶರೀರ ।
ತರೀ ಮಗ ಪೇಲಾ ಭಾರ । ಭೂಮಂಡಳಾಚಾ ॥೧೬॥
ಮಾಹಾಕೂರ್ಮಾಚೇ ಶರೀರ ಭಲೇ। ನೇಣೋ ಬ್ರಹ್ಮಾಂಡ ಪಾಲಥೇ ಘಾತಲೇ।
ಯೇವಢೇ ಶರೀರ ತೇ ರಾಹಿಲೇ । ವಾಯೋಚೆನೀ ॥೧೭॥
ವಾರಾಹೇ ಆಪುಲೇ ದಂತೀ । ಪೃಥ್ವೀ ಧರಿಲೀ ಹೋತೀ ।
ತಯಾಚೀ ಯೆವಢೀ ಶಕ್ತೀ । ವಾಯುಬಳೇ ॥೧೮॥
ಬ್ರಹ್ಮ ವಿಷ್ಣು ಮಹೇಶ್ವರ । ಚೌಥಾ ಆಪಣ ಜಗದೇಶ್ವರ ।
ವಾಯೋ ಸ್ವರೂಪ ವಿಚಾರ । ವಿವೇಕೀ ಜಾಣತೀ ॥೧೯॥
ತೆತಿಸ ಕೋಟೀ ಸುರವರ । ಅಠ್ಯಾಸೀ ಸಹಸ್ರ ಋಷೇಶ್ವರ ।
ಸಿಧಯೋಗೀ ಭಾರೇಭಾರ । ವಾಯೋಕರಿತಾ ॥೨೦॥

ಇದರಂತೆ ಅನೇಕ ಪ್ರಕಾರದ ಭೇದ ಇದ್ದಂಥ ನರದೇಹಗಳು, ಅನಂತ ಪ್ರಕಾರದ ಭೇದ ಇದ್ದ ಶ್ವಾಪದಗಳು[ಕ್ರೂರ ಪ್ರಾಣಿಗಳು], ವನಚರಗಳು ಕಾಡಿನಲ್ಲಿ ತಿರುಗಾಡುವವು ಜಲಚರಗಳು ಆನಂದದಿಂದ ಕ್ರೀಡಿಸುವ ಈ ಎಲ್ಲ ಪ್ರಾಣಿಗಳು. (೭) ಇವೆಲ್ಲವುಗಳಲ್ಲಿ ವಾಯು ಇರುವನು. [ಹರಿದಾಡುವನು]. ಆಕಾಶದಲ್ಲಿ ಇರುವಂಥ ಪಕ್ಷಿಗಳಿಗೆ ವಾಯುವಿನಿಂದ ಹಾರಲು ಶಕ್ಯವಾಗುವದು. ಬೆಂಕಿಯ ಉನ್ನತ ಜ್ವಾಲೆಗಳು ವಾಯುವಿನಿಂದ ಏಳುವವು. (೮) ವಾಯುವಿನಿಂದ ಆಕಾಶದಲ್ಲಿ ಮೊದಲಿಗೆ ಮೇಘ [ಮೋಡ] ಗಳು ಬಹಳಷ್ಟು ಕೂಡುವವು. ಆ ಮೇಲೆ ಆಗಿಂದಾಗ್ಗೆ ಅವುಗಳನ್ನು ವಾಯುವು ಶಕ್ತಿಯಿಂದ ರಭಸದಿಂದ ಓಡಿಸುವನು [ಸರಿಸುವನು]. ಅಂತೆಯೇ ವಾಯುವಿನಂತೆ ಕಾರ್ಯ ಮಾಡುವವರು ಇನ್ನೊಬ್ಬರು ಯಾರೂ ಇಲ್ಲ. [೯] ನಿಜವಾಗಿ ಹೇಳುವದಾದರೆ ಈ ವಾಯುವಿನ ಹಿಂದೆ [ಬೆಂಬಲವಾಗಿ] ಅಂತರಾತ್ಮನ ಸತ್ತಾದ ಪ್ರೇರಣೆ ಇರುವದು. ಈ ಪ್ರೇರಣೆಯೇ ವಾಯುವಿನ ರೂಪದಿಂದ ಶರೀರದಲ್ಲಿ ಸಹ [ನಿಜವಾಗಿ] ಕೆಲಸ ಮಾಡುವದು. ಆದ್ದರಿಂದ ವ್ಯಾಪಕತನದ [ವಿಸ್ತಾರ, ಹರಡುವ, ಪಸರಿಸುವ] ದೃಷ್ಟಿಯಿಂದ ನೋಡಿದರೆ ಈ ಸಮರ್ಥ ವಾಯುವಿನ ತುಲನಾ [ಸಾಮ್ಯ] ಯಾರ ಜೊತೆಗೆ ಮಾಡುವದೂ ಶಕ್ಯವಿಲ್ಲ. (೧೦) ಗುಡ್ಡ, ಪರ್ವತಗಳ ತಲೆಯ ಮೇಲೆ ಮೋಡಗಳ ದಟ್ಟ ಸೈನ್ಯ [ಬಹಳಷ್ಟು ಮೋಡಗಳ ಸಂಗ್ರಹ] ವನ್ನು ಜನರ ಕಲ್ಯಾಣಕ್ಕಾಗಿ ವಾಯುವೇ ಒತ್ತಟ್ಟಿಗೆ ಕೂಡಿಸುವನು. [ಸಂಗ್ರಹಿಸುವನು]. ದೊಡ್ಡ ದೊಡ್ಡ ಗುಡುಗು-ಮಿಂಚು, ಸಿಡಿಲುಗಳು ಖಟ್ ಖಡಲ್ ಎಂದು ಶಬ್ದಮಾಡುವವು. ಆಗ [ಆಮೇಲೆ] ಮಳೆ ಬೀಳುವದು. ಇದೆಲ್ಲವೂ ವಾಯುವಿನ ಬಲದಿಂದಲೇ ಆಗುವದು. [೧೧] ಚಂದ್ರ, ಸೂರ್ಯ, ನಕ್ಷತ್ರ, ಗ್ರಹ ಮಂಡಲ, ಮೇಘಮಾಲೆ, ಇತ್ಯಾದಿ ಶ್ರೇಷ್ಠವಾದವುಗಳು ಈ ವಿಶ್ವದಲ್ಲಿ ಕಂಡುಬರುವವು. ಇವುಗಳೆಲ್ಲ ವಾಯುವಿನಿಂದಲೇ ಆದಂಥವು ಇರುವವು.[೧೨] ವಾಯುವಿನ ಬಲ ಸಾಮರ್ಥ್ಯದಿಂದ ಪಂಚಭೂತಗಳು ಒಂದೇ ಕಡೆಗೆ ಬಂದು ಅವು ಒಂದರಲ್ಲೊಂದು ಕೂಡಿಕೊಂಡವು. [ಸೇರಿಕೊಂಡವು]. ಈಗ ಇವುಗಳನ್ನು ಬೇರೆ ಮಾಡಲಿಕ್ಕೆ ಬರುವದಿಲ್ಲ. ಪಂಚಭೂತಗಳ ತೊಡಕು. ಸಹಜವಾಗಿ [ಸುಲಭವಾಗಿ] ತಿಳಿಯುವಂಥದಲ್ಲ. ಬೇಗ ಗೊತ್ತಾಗುವಂಥದಲ್ಲ. [೧೩] ಭಾರಿ ಜೋರಾದ ಗಾಳಿ ಬೀಸ ಹತ್ತಿದ ಕೂಡಲೇ ಆಣೆಕಲ್ಲುಗಳು ಬೀಳುವವು. ಇದರ ಕೂಡ ಮಳೆಯೂ ಸುರಿಯುವದು. ಈ ಮಳೆಯ ಸಂಗಡ ಬಹಳಷ್ಟು ಜೀವಗಳು ಭೂಮಿಯ ಮೇಲೆ ಬೀಳುವವು. [೧೪] ಆ ಯಾವ ಸೂಕ್ಷ್ಮ ಕಮಲದಲ್ಲಿ ಬ್ರಹ್ಮದೇವ ಇರುವನೋ ಆ ಕಮಲ ಕೋಶವು ವಾಯು ರೂಪವಿರುವದು. ನೀರಿಗೆ ಇದರದೇ ಆಧಾರವಿರುವದು. ನೀರಿನ ಆಧಾರದಿಂದ ಶೇಷನು ತನ್ನ ತಲೆಯ ಮೇಲೆ ಭೂ ಗೋಲವನ್ನು ಹಿಡಿದಿರುವನು. [೧೫] ವಾಯು ಇದು ಆದಿಶೇಷನ ಆಹಾರವಿರುವದು. ಈ ವಾಯುವಿನಿಂದ ಆದಿಶೇಷನ ಶರೀರ ಉಬ್ಬುತ್ತದೆ. ಇದರಿಂದಲೇ ಭೂ ಗೋಲದ ಭಾರ [ಒಜ್ಜೆ] ಸಹಿಸುವ ಶಕ್ತಿ ಆದಿಶೇಷನಿಗೆ ಬಂದಿರುವದು. (೧೬) ಮಹಾ ಕೂರ್ಮನ ಅಂದರೆ ಆಮೆಯ ರೂಪದಿಂದ ಭಗವಂತನ ಕೂರ್ಮ ಅವತಾರ ಆಯಿತು. ಅವನ ಶರೀರ ಅತಿ ಅತಿ ಪ್ರಚಂಡವು. ಬಹಳ ಅಂದರೆ ಅತಿ ಅಪಾರವಾದ ಇದರ ಮೇಲ್ಭಾಗ [ಕವಚ] ಬಹಳ ವಿಸ್ತಾರ ಮತ್ತು ದೊಡ್ಡದು. ಇದನ್ನು ನೋಡಿದರೆ ಬ್ರಹ್ಮಾಂಡವನ್ನೇ ಡಬ್ಬು ಹಾಕಿರುವದೋ ಏನೋ ಅನ್ನುವಷ್ಟು ದೊಡ್ಡದಿರುವದು. ಈ ಕೂರ್ಮದ ಪ್ರಚಂಡ ಅಪಾರವಾದ ಶರೀರವು ವಾಯುವಿನಿಂದಲೇ ಸ್ಥಿರಗೊಂಡು ಬಹುಸಾಮರ್ಥ್ಯ ಉಳ್ಳದ್ದಾಗಿರುವದು. (೧೭) ವರಾಹ ಅವತಾರದಲ್ಲಿ ವರಾಹನು ತನ್ನ ಕೋರೆ ಹಲ್ಲುಗಳಿಂದ ಪೃಥ್ವಿಯನ್ನು ಎತ್ತಿಹಿಡಿದನು. ಇವನಿಗೂ ವಾಯುವಿನಿಂದಲೇ ಇಷ್ಟೊಂದು ಪ್ರಚಂಡ ಶಕ್ತಿ ಬಂದಿದ್ದಿತು. (೧೮) ಬ್ರಹ್ಮ, ವಿಷ್ಣು, ಮಹೇಶ, ಮತ್ತು ನಾಲ್ಕನೆಯವನು ಸ್ವತಃ ಜಗದೀಶ್ವರ ಅಂತರಾತ್ಮಾ ಇವರೆಲ್ಲರೂ ವಾಯು ಸ್ವರೂಪರೇ ಇರುವರು. ಅನ್ನುವದನ್ನು ವಿಚಾರವಂತರು - ವಿವೇಕಿ ಪುರುಷರು ಮಾತ್ರ ತಿಳಿದವರಾಗಿರುವರು. (೧೯) ಮೂವತ್ತೂರು ಕೋಟಿ ದೇವತೆಗಳು, ಎಂಭತ್ತೆಂಟು ಸಾವಿರ ಋಷಿ, ಸಿದ್ಧರು, ಯೋಗಿಗಳು, ಇವರೆಲ್ಲರ ದೊಡ್ಡ ಸಮುದಾಯವಿರುವದು, ಇವರೆಲ್ಲರಿಗೆ ವಾಯುವಿನದೇ ಬಲವಿರುವದು. (೨೦)

ನವ ಕೋಟೀ ಕಾತ್ಯಾಯಣೀ । ಛಪನ ಕೋಟೀ ಚಾಮುಂಡಿಣೀ ।
ಔಟ ಕೋಟೀ ಭೂತಖಾಣೀ । ವಾಯೋರೂಪೇ ॥೨೧॥

ಭೂತೇ ದೇವತೇ ನಾನಾ ಶಕ್ತೀ । ವಾಯೋರೂಪ ತ್ಯಾಚ್ಯಾ ವೆಕ್ತೀ ।
ನಾನಾ ಜೀವನೇಣೋ ಕಿತೀ । ಭೂಮಂಡಳೀ ॥೨೨॥

ಪಿಂಡೀ ಬ್ರಹ್ಮಾಂಡೀ ಪುರವಲಾ । ಬಾಹೇರ ಕಂಚುಕಾಸ ಗೇಲಾ ।
ಸಕಳಾ ಠಾಈ ಪುರವಲಾ । ಸಮರ್ಥ ವಾಯು ॥೨೩॥

ಐಸಾ ಹಾ ಸಮರ್ಥ ಪವನ । ಹನುಮಂತ ಜಯಾಚಾ ನಂದನ ।
ರಘುನಾಥಸ್ಮರಣೀ ತನಮನ । ಹನುಮಂತಾಚೇ ॥೨೪॥

ಹನುಮಂತ ವಾಯೋಚಾ ಪ್ರಸಿಧ । ಪಿತ್ಯಾಪುತ್ರಾಸ ನಾಹೀ ಭೇದ ।
ಮ್ಹಣೋನೀ ದೋಘೇಹಿ ಅಭೇದ । ಪುರುಷಾರ್ಥವಿಷೀ ॥೨೫॥

ಹನುಮಂತಾಸ ಬೋಲಿಜೆ ಪ್ರಾಣನಾಥ । ಯೇಣೇ ಗುಣೇ ಹಾ ಸಮರ್ಥ ।
ಪ್ರಾಣೇವಿಣ ಸಕಳ ವೆರ್ಥ । ಹೋತ ಜಾತೇ ॥೨೬॥

ಮಾಗೇ ಮೃತ್ಯ ಆಲಾ ಹನುಮಂತಾ । ತೇವ್ಹಾ ವಾಯೋ ರೋಧಲಾ ಹೋತಾ ।
ಸಕಳ ದೇವಾಸ ಆವಸ್ತಾ । ಪ್ರಣಾಂತ ಮಾಂಡಲೇ ॥೨೭॥

ದೇವ ಸಕಳ ಮಿಳೋನ । ಕೇಲೇ ವಾಯೂಚೇ ಸ್ತವನ ।
ವಾಯೋ ಪ್ರಸನ್ನ ಹೋಊನ । ಮೋಕಳೇ ಕೇಲೇ ॥೨೮॥

ಮ್ಹಣೋನಿ ಪ್ರತಾಪೀ ಥೋರ । ಹನುಮಂತ ಈಶ್ವರೀ ಅವತಾರ ।
ಯಾಚಾ ಪುರುಷಾರ್ಥ ಸುರವರ । ಪಾಹಾತಚಿ ರಾಹಿಲೇ ॥೨೯॥

ದೇವ ಕಾರಾಗೃಹೀ ಹೋತೇ । ಹನುಮಂತೇ ದೇಖಿಲೇ ಅವಚಿತೇ ।
ಸಂವ್ಹಾರ ಕರೂನಿ ಲಂಕೇ ಭೋವತೇ । ವಿಟಂಬೂನ ಪಾಡಿಲೇ ॥೩೦॥

ಉಸಿಣೇ ಘೇತಲೇ ದೇವಾಂಚೇ । ಮೂಳ ಶೋಧಿಲೇ ರಾಕ್ಷಸಾಂಚೇ ।
ಮೋಠೇ ಕೌತುಕ ಪುಚ್ಛಕೇತಾಚೇ । ಆಶ್ಚರ್ಯ ವಾಟೇ ॥೩೧॥

ರಾವಣ ಹೋತಾ ಸಿಂಹ್ಯಾಸನಾವರೀ । ತೇಥೇ ಜಾಊನ ಠೋಂಸರೇ ಮಾರೀ ।
ಲಂಕೇಮಧೇ ನಿರೋಧ ಕರೀ । ಉದಕ ಕೈಚೇ ॥೩೨॥

೯ ಕೋಟಿ ಕಾತ್ಯಾಯಿನಿಯರು, ೫೬ ಕೋಟಿ ಚಾಮುಂಡಾದಿ ದೇವಿಯರು, ೩॥ ಕೋಟಿ ಭೂತಗಳು ಇವೆಲ್ಲವೂ ವಾಯು ರೂಪವೇ ಇರುವವು.(೨೧) ಭೂತಗಳು, ದೈವತಗಳು, ಅನೇಕ ಪ್ರಕಾರದ ಶಕ್ತಿಯರು, ಇವರೆಲ್ಲ ವಾಯು ರೂಪ ತೆಗೆದುಕೊಂಡೇ ಪ್ರಕಟರಾಗುವರು. ಇಂಥ ಪ್ರಕಾರದ ವಾಯು ರೂಪ ಜೀವಿಗಳು ಈ ಭೂಮಂಡಲದ ಮೇಲೆ ಎಷ್ಟಿರುವವು ಎಂದು ಕೇಳಿದರೆ ಹೇಳಲಿಕ್ಕೆ ಬರುವದಿಲ್ಲ. (೨೨) ಪಿಂಡದಲ್ಲಿ ಮತ್ತು ಬ್ರಹ್ಮಾಂಡದಲ್ಲಿ ವಾಯು ಇದ್ದೇ ಇರುವನು, ಆದರೆ ಹೊರಗಿನ ಆವರಣದ (ಬ್ರಹ್ಮಾಂಡದ ಕೊನೆಯವರೆಗೆ) ವರೆಗೆ ಇವನ ಹಬ್ಬುವಿಕೆ ಇರುವದು, ಈ ಪ್ರಕಾರ ಎಲ್ಲರಲ್ಲಿ ಇದ್ದು ಹೆಚ್ಚಾಗಿ ಉಳಿಯುವ ಈ ವಾಯುವು ಪ್ರಚಂಡ ಸಾಮರ್ಥ್ಯವಂತ ನಿರುವನು. (೨೩) ಇನ್ನು ಮೇಲೆ ಶ್ರೀ ಸಮರ್ಥರು ವಾಯು ನಂದನ ಶ್ರೀ ಮಾರುತಿರಾಯನ ಸ್ತುತಿಯನ್ನು ಮತ್ತು ವರ್ಣನೆಯನ್ನು ಸ್ವಲ್ಪದರಲ್ಲಿ ಮಾಡಿರುವರು. ಪ್ರಪ್ರಥಮ ರಾಮ ಭಕ್ತನಾದ ಮಾರುತಿಯು ಇವರ ಆದರ್ಶನಾಗಿದ್ದನು: ಇಂಥ ಮಹಾ ಬಲವಂತ ವಾಯುವಿನ ಮಗನೇ ಸರ್ವ ಸಮರ್ಥನಾದ ಹನುಮಂತನು. ಶ್ರೀ ರಾಮನ ಸ್ಮರಣೆಯಲ್ಲಿ ಇವನ ದೇಹ ಮತ್ತು ಮನಸ್ಸು (ತನು ಮತ್ತು ಮನ) ಅಖಂಡವಾಗಿ ತೊಡಗಿರುವವು. (೨೪) ಹನುಮಂತನು ವಾಯುವಿನ ಪುತ್ರನೇ ಇರುವನೆಂಬ ಮಾತು ಪ್ರಸಿದ್ಧವೇ ಇರುವದು. ತಂದೆ ಮತ್ತು ಮಗ ಇವರಲ್ಲಿ ಏನೂ ಭೇದವೇ ಇಲ್ಲ.(೨೫)ಹನುಮಂತನಿಗೆ ಪ್ರಾಣನಾಥ ಎಂದು ಅನ್ನುವರು. ಇದರ ಮೇಲಿಂದ ನೋಡಿದರೆ ಇವನ ಅತುಲ ಸಾಮರ್ಥ್ಯದ ಬಗ್ಗೆ ಕಲ್ಪನೆಯನ್ನು ಮಾಡಲಿಕ್ಕೆ ಬರುವದು. ಪ್ರಾಣವೊಂದು ಇಲ್ಲದಿದ್ದರೆ ಉಳಿದವು ಇದ್ದೇನು ಫಲ. ಅರ್ಥಾತ್ ಎಲ್ಲವೂ ವ್ಯರ್ಥವಾಗಿ ಹೋಗುವವು. (೨೬) ಹಿಂದೊಮ್ಮೆ ಹನುಮಂತನ ಮೇಲೆ ಮೃತ್ಯುವಿನ ಪ್ರಸಂಗ ಒದಗಿ ಬಂದಿದ್ದಿತು. ಆ ಹೊತ್ತಿನಲ್ಲಿ ವಾಯುವು ಎಲ್ಲರ ಪ್ರಾಣವನ್ನು ಆಕರ್ಷಿಸಿ ಹಿಡಿದನು. ಇದರಿಂದ ಎಲ್ಲ ದೇವತೆಗಳೂ ಗಾಬರಿಯಾದರು. ಇವರೆಲ್ಲರ ಮೃತ್ಯು ಇವರ ಮುಂದೆ ಬಂದು ನಿಂತನು. ಹುಟ್ಟಿದ ಕೂಡಲೇ ಮಾರುತಿಯು ಸೂರ್ಯ ಬಿಂಬವನ್ನು ನುಂಗಲು ಅದರ ಹತ್ತಿರಕ್ಕೆ ಹಾರಿದನು. ಆಗ ಇಂದ್ರನು ಇವನ ಮೇಲೆ ವಜ್ರಾಯುಧವನ್ನು ಒಗೆದನು. ಇದು ಇವನ ಗದ್ದಕ್ಕೆ ಬಡಿದು ಮಾರುತಿಯು ಮೂರ್ಛೆ ಹೊಂದುವವನಾದನು. ಆ ವೇಳೆಯಲ್ಲಿ ಆದ ಪ್ರಸಂಗ ಇದು. (೨೭) ಆ ಮೇಲೆ ಎಲ್ಲ ದೇವತೆಗಳೂ ಒಗ್ಗೂಡಿ ಬಂದು ವಾಯುವಿನ ಸ್ತುತಿಮಾಡಲಿಕ್ಕೆ ಹತ್ತಿದರು. ಆಗ ವಾಯು ಪ್ರಸನ್ನನಾದನು. ಆಗ ಇವನು ಎಲ್ಲರ ಪ್ರಾಣವನ್ನು ಬಿಡುಗಡೆ ಮಾಡಿದನು. (೨೮) ಆದ್ದರಿಂದ ದೊಡ್ಡ ಪ್ರತಾಪಿ ಆಗಿರುವ ಈ ಹನುಮಂತನು ಈಶ್ವರನ ಅವತಾರವಿರುವನು. ಇವನ ಪರಾಕ್ರಮವನ್ನು ದೇವತೆಗಳು ಆಗ ಸುಮ್ಮನೆ ನೋಡುತ್ತ ನಿಂತರು. (೨೯) ಯಾವತ್ತೂ ದೇವತೆಗಳು ರಾವಣನ ಬಂಧನದಲ್ಲಿ ಇದ್ದರು. ಹನುಮಂತನು ಅಕಸ್ಮಾತ್ ಒಮ್ಮೆ ನೋಡಿದನು. ಮಾರುತಿಯು ರಾಕ್ಷಸರ ವಿಡಂಬನೆಯನ್ನು ಮಾಡಿದನು. ಮತ್ತು ಅವರನ್ನು ಕೊಂದು ಲಂಕೆಯು ಸುತ್ತುಮುತ್ತು ಒಗೆದನು. (೩೦) ದೇವರನ್ನು ಬಂಧನದಲ್ಲಿ ಇಟ್ಟಿದ್ದರ ಸೇಡನ್ನು ಮಾರುತಿಯು ತೀರಿಸಿದನು. ರಾಕ್ಷಸರು ಎಲ್ಲೆಲ್ಲಿ ಇದ್ದರೋ ಅಲ್ಲಿ ಮುನ್ನುಗ್ಗಿ ಹಲ್ಲೆಮಾಡಿ ಅವರ ತಾಣವನ್ನು ಬುಡ ಸಹಿತ ಕಿತ್ತು ಹಾಕಿದನು. ಇದೆಲ್ಲವೂ ಮಾರುತಿರಾಯನ ಪುಚ್ಛಕೇತು (ಪ್ರೀತಿಯ ಬಾಲ) ಮಾಡಿದ ಕಾರ್ಯದ ಕೌತುಕವು. ಬಹಳ ಆಶ್ಚರ್ಯಕಾರಕವೆನಿಸುವದು. (೩೧) ರಾವಣನು ಸಿಂಹಾಸನದ ಮೇಲೆ ಕುಳಿತಾಗ ಅಲ್ಲಿಗೆ ಮಾರುತಿಯು ಬಂದನು. ಮತ್ತು ಅವನಿಗೆ ಕೆಲವೊಂದು ಮುಷ್ಟಿ ಹೊಡೆತಗಳನ್ನು ಕೊಟ್ಟನು. ಲಂಕೆಯನ್ನು ಪುಚ್ಛ ಬಲದಿಂದ ನಿರೋಧಿಸಿ ಬಿಟ್ಟನು. ಅಲ್ಲಿ ನೀರು ಸಹಿತ ಸಿಗದಂತೆ ಆಯಿತು. (೩೨)

ದೇವಾಸ ಆಧಾರ ವಾಟಲಾ । ಮೋಠಾ ಪುರುಷಾರ್ಥ ದೇಖಿಲಾ ।
ಮನಾಮಧೇ ರಘುನಾಥಾಲಾ । ಕರುಣಾ ಕರಿತೀ ॥೩೩॥

ದೈತ್ಯ ಅವಘೇ ಸಂವ್ಹಾರಿಲೇ । ದೇವ ತತ್ಕಾಳ ಸೋಡಿಲೇ ।
ಪ್ರಾಣಿಮಾತ್ರ ಸುಖೀ ಜಾಲೇ । ತ್ರಯಲೋಕ್ಯವಾಸೀ ॥೩೪॥

ಇತಿ ಶ್ರೀ ದಾಸಬೋಧೇ ಗುರುಶಿಷ್ಯ ಸಂವಾದೇ
'ವಾಯೋ ಸ್ತವನ ನಿರೂಪಣ' ನಾಮ ಸಮಾಸ ಷಷ್ಠಮ ॥

● ●

ಮಾರುತಿಯು ಈ ಪ್ರಚಂಡ ಪರಾಕ್ರಮವನ್ನು ನೋಡಿ ದೇವತೆಗಳಿಗೆ ಒಂದು ರೀತಿಯ ಸಮಾಧಾನವಾಯಿತು. [ಆಧಾರ ದೊರಕಿತೆಂದು] ದೇವತೆಗಳು ಮನದಲ್ಲಿ ಶ್ರೀರಾಮನನ್ನು ಸ್ಮರಿಸಿ ವಂದಿಸಿದರು. (೩೩) ಅಲ್ಲಿ ಇದ್ದ ಎಲ್ಲ ದೈತ್ಯರನ್ನು ಕೊಂದು ಹಾಕಿದನು. ದೇವತೆಗಳನ್ನೆಲ್ಲ ಕೂಡಲೇ ಬಿಡುಗಡೆ ಮಾಡಿದನು. ಮೂರೂ ಲೋಕದಲ್ಲಿಯ ಯಾವತ್ತೂ ಪ್ರಾಣಿ ಮಾತ್ರರಿಗೆಲ್ಲ ಈ ಪ್ರಕಾರ ಸುಖ ಸಂತೋಷವನ್ನು ತಂದುಕೊಟ್ಟನು. (೩೪)

ಶ್ರೀ ದಾಸಬೋಧದ ಹದಿನಾರನೆಯ ದಶಕದಲ್ಲಿಯ ಗುರುಶಿಷ್ಯರ ಸಂವಾದದ
"ವಾಯು ಸ್ತವನ ನಿರೂಪಣ" ವೆಂಬ ಆರನೆಯ ಸಮಾಸವು ಮುಗಿದುದು.

## ದಶಕ ಷೋಡಶ : ಸಮಾಸ ಸಪ್ತಮ : ಮಹದ್ಭೂತ ನಿರೂಪಣ (ನುಡಿ ೪೩)

॥ಶ್ರೀರಾಮ ಸಮರ್ಥ॥ ಪೃಥ್ವೀಚೇ ಮೂಳ ಜೀವನ। ಜೀವನಾಚೇ ಮೂಳ ಅಗ್ನಿ।
ಅಗ್ನೀಚೇ ಮೂಳ ಪವನ। ಮಾಗಾ ನಿರೋಪಿಲೇ ॥೧॥

ಆತಾ ಏಕಾ ಪವನಾಚೇ ಮೂಳ। ತೋ ಹಾ ಅಂತರಾತ್ಮಾಚಿ ಕೇವಳ।
ಅತ್ಯಂತ ಚಿ ಚಂಚಳ। ಸಕಳಾಂಮಧೇ ॥೨॥

ತೋ ಯೇತೋ ಜಾತೋ ದಿಸೇನಾ। ಸ್ಥಿರ ಹೋಊನ ಬೈಸೇನಾ।
ಜ್ಯಾಚೇ ರೂಪ ಅನುಮಾನೇನಾ। ವೇದಶ್ರುತೀಸೀ ॥೩॥

ಮುಳೀ ಮುಳೀಚೇ ಸ್ಫುರ್ಣ। ತೇ ಚಿ ಅಂತರಾತ್ಮ್ಯಾಚೇ ಲಕ್ಷಣ।
ಜಗದೇಶ್ವರಾ ಪಾಸೂನ ತ್ರಿಗುಣ। ಪುಢೇ ಜಾಲೇ ॥೪॥

## ದಶಕ ೧೬. ಸಮಾಸ ೭. ಮಹದ್ಭೂತ ನಿರೂಪಣ (ನುಡಿ ೪೩)

ಪೃಥ್ವಿಯು ಮೂಲ ನೀರು, ನೀರಿನ ಮೂಲ ಅಗ್ನಿ, ಅಗ್ನಿಯ ಮೂಲ ವಾಯು, ಇದರಂತೆ ವಾಯುವಿನ ಮೂಲ ಅಂತರಾತ್ಮಾ ಅಂದರೆ ಪರಬ್ರಹ್ಮದಲ್ಲಿ ಆದ ಪ್ರಥಮ ಸ್ಫುರಣ [ಮನಸ್ಸಿನಲ್ಲಿ ಒಮ್ಮೆಂದೊಮ್ಮೆ ಏಕಾ ಏಕಿ ಬರುವಿಕೆ] ವು ಇದಾಗಿರುವದು. ಅಂತರಾತ್ಮನಿಂದ ಮೂರು ಗುಣಗಳು ಆದವು. ಇವುಗಳಿಂದ ಪಂಚಭೂತಗಳು ಆದವು. ಇವುಗಳ ಪೈಕಿ ಆಕಾಶ ಇದು ಮುಖ್ಯವಾದದ್ದಿರುವದು. ಈ ಆದಂಥ ಸರ್ವ ವಸ್ತುಗಳಲ್ಲಿ ಅಂತರಾತ್ಮಾ ಸರ್ವದರಲ್ಲಿಯೂ ಹಿರಿಯನು ಅಥವಾ ದೊಡ್ಡವನು ಇದ್ದುದರಿಂದ ಇವನೇ ನಿಜವಾದ ಅರ್ಥದಿಂದ ಮಹದ್ಭೂತ ವಿರುವನು. ಅಂತರಾತ್ಮಾ ಅತ್ಯಂತ ಸೂಕ್ಷ್ಮ ಮತ್ತು ಅತಿ ಚಪಲ ಇದ್ದುದರಿಂದ ಇವನು ಬರುವದು ಹೋಗುವದು. ಮಾಡುತ್ತಿದ್ದರೂ ಯಾರಿಗೂ ಕಾಣಿಸುವದಿಲ್ಲ. ವೇದ ಶ್ರುತಿಗಳಿಗೆ ಇವನ ರೂಪ ತಿಳಿಯುವದಿಲ್ಲ. ಇವನು [ಅಂತ ರಾತ್ಮನು] ಪಿಂಡ ಮತ್ತು ಬ್ರಹ್ಮಾಂಡ ಎಲ್ಲವನ್ನೂ ವ್ಯಾಪಿಸಿ ಇರುವನು. ಮಾನವೀ ಶರೀರದಲ್ಲಿ ಇವನೇ ಶೋಭಿ ಸುವನು. [ಇರುವನು]. ವಿವೇಕಿ ಪುರುಷರಿಗೆ ಇವನು ಜಗದಾಂತರ್ಯದಲ್ಲಿ ಅನುಭವಕ್ಕೆ ಬರುವನು. ಇಂದ್ರಿಯಗಳ ಎಲ್ಲ ವ್ಯಾಪಾರವನ್ನು ಇವನೇ ನಡೆಯಿಸುವನು. ಪ್ರಪಂಚ ಮತ್ತು ಪರಮಾರ್ಥ ಎರಡನ್ನೂ ಇವನೇ ಮಾಡುವನು. ಮನುಷ್ಯರ ಸರ್ವ ವ್ಯವಹಾರಗಳು ಇವನ ಮೂಲಕ [ಯೋಗದಿಂದ] ಘಟಿಸುವವು. ವಿಶ್ವದಲ್ಲಿಯ ಸರ್ವ ವ್ಯಾಪಾರ ವನ್ನು ಇವನೇ ಮಾಡುವನು. [ಮಾಡಿಕೊಡುವನು]. ಇವನು ದೊಡ್ಡ ಬಹುರೂಪಿ ವೇಷಗಾರನಿರುವನು. ಅನೇಕ ದೇಹಗಳಲ್ಲಿ ನಟಿಸುವನು. ದೇಹಾತ್ಮ ಯೋಗದಿಂದ ಎಲ್ಲ ತರಹದ ಅನುಭವವು ಬರುವದು. ಇದರ ಆಚೆಗೆ ನಿರ್ವಿಕಾರಿಯಾದ ಪರಬ್ರಹ್ಮನಿರುವನು. ಸ್ಥೂಲದಲ್ಲಿ ಸ್ತ್ರೀ ಪುರುಷ ಹೀಗೆ ಭೇದವಿರುವದು. ಸೂಕ್ಷ್ಮದಲ್ಲಿ ಈ ಭೇದ ಇರುವದಿಲ್ಲ. ದ್ವೈತದ ಇಚ್ಛೆಯು ಮೂಲದಲ್ಲಿಯೇ ಆಯಿತು. ಇದರೊಳಗಿಂದ ಸರ್ವ ವಿಶ್ವವು ಪ್ರಕಟವಾಯಿತು. ಪಿಂಡದಲ್ಲಿಯ ಆತ್ಮನನ್ನು ಗುರುತಿಸಬೇಕು ಮತ್ತು ತಿಳಿಯಬೇಕು. ಆ ಮೇಲೆ ಪಿಂಡದ ಮೇಲಿಂದ ಬ್ರಹ್ಮಾಂಡದ ಗುರುತನ್ನು ಮಾಡಿಕೊಳ್ಳಬೇಕು. ಅನುಭವದಿಂದ ಅನುಭವವನ್ನು ಹೊಂದಬೇಕು ತಿಳಿಯಬೇಕು.

### ದಶಕ ೧೬. ಸಮಾಸ ೭. ಮಹದ್ಭೂತ ನಿರೂಪಣ (ನುಡಿ ೪೪)

ಒಬ್ಬನೇ ಒಬ್ಬನಾಗಿರುವ ಪರಬ್ರಹ್ಮನು ಮಾತ್ರ ನಿಶ್ಚಲನು. ಬಾಕಿ[ಉಳಿದ] ಸರ್ವವೂ ಚಂಚಲವು. ಅಂದರೆ ವಿಕಾರಿ ಅಂದರೇನೇ ಬದಲಾಗುವಂಥದು. ನಿಶ್ಚಲದಲ್ಲಿ ಮೊಟ್ಟ ಮೊದಲು ಬದಲಾವಣೆಯ ಕ್ರಿಯೆಯು ಯಾವಾಗ ಆರಂಭವಾಯಿತೋ ಆಗ ಅದು ಮೊದಲನೆಯ ಸ್ಫುರಣದಿಂದ ಆಯಿತು. ಈ ಸ್ಫುರಣರೂಪ ಸಂಕಲ್ಪವೇ ಅಂತ ರಾತ್ಮನ ಶುದ್ಧ ಸ್ವರೂಪವಿರುವದು. ಸರ್ವದರಲ್ಲಿ ಹಿರಿಯ ಜ್ಯೇಷ್ಠ ಭೂತನೆಂದೇ ಇವನಿಗೆ ಮಹದ್ಭೂತ ಎಂದೂ ಅನ್ನುವರು. ಭೂತ ಅಂದರೆ ಆವಂಥ! ಪೃಥ್ವಿಯ ಮೂಲವು ನೀರು. ನೀರಿನ ಮೂಲವು ಅಗ್ನಿ. ಅಗ್ನಿಯ ಮೂಲವು ವಾಯು. ಇದನ್ನೆಲ್ಲ ಹಿಂದೆ ಹೇಳಲಾಗಿದೆ. (೧) ಈಗ ವಾಯುವಿನ ಮೂಲವನ್ನು ಹೇಳುವೆ ಕೇಳಿರಿ. ಅಂತರಾತ್ಮಾ ಇವನೇ ವಾಯುವಿನ ಮೂಲನು. ಯಾವತ್ತೂ [ಸರ್ವ] ಸಗುಣಗಳಲ್ಲಿ ಅರ್ಥಾತ್ ಎಲ್ಲ ತತ್ವಗಳಲ್ಲಿ ಇವನು ಚಂಚಲ ನಿರುವನು. (೨) ಅಂತರಾತ್ಮನು ಬರುತ್ತಾನೆ ಮತ್ತು ಹೋಗುತ್ತಾನೆ. ಆದರೆ ಇವನು ಕಾಣಿಸುವದಿಲ್ಲ. ಇವನು ಎಂದೂ ಸ್ಥಿರವಾಗಿ ಒಂದು ಕಡೆಗೆ ಕೂಡ್ರುವದಿಲ್ಲ, ಇರುವದಿಲ್ಲ. ವೇದ ಶ್ರುತಿಗಳಿಗೆ ಸಹಿತ ಇವನ ರೂಪದ ಕಲ್ಪನೆ ಯನ್ನು ಮಾಡಲಿಕ್ಕೆ ಬರುವದಿಲ್ಲ. ಮಾಡಲಿಕ್ಕೆ ಸಾಧ್ಯವೂ ಆಗಿಲ್ಲ. (೩) ಮೂಲ ಪರಬ್ರಹ್ಮದಲ್ಲಿ ಮೊಟ್ಟಮೊದಲಿಗೆ ಯಾವ ಸ್ಫುರಣ ಆಯಿತೋ ಅದೇ ಅಂತರಾತ್ಮನ ಲಕ್ಷಣವಿರುವದು. ಇದೇ ಜಗದೀಶ್ವರವಿದ್ದು ಇವನಿಂದ ಮುಂದೆ [ಆ ಮೇಲೆ] ಮೂರು ಗುಣಗಳು ಆದವು. (೪)

ತ್ರಿಗುಣಾಪಾಸೂನ ಜಾಲೀ ಭೂತೇ। ಪಾವಲೀ ಪಷ್ಟ ದಶೇತೇ।
ತ್ಯಾ ಭೂತಾಂಚೇ ಸ್ವರೂಪ ತೇ। ವಿವೇಕೇ ವೊಳಖಾವೇ ॥೫॥

ತ್ಯಾಮಧೇ ಮುಖ್ಯ ಆಕಾಶ। ಚೌ ಭೂತಾಮಧೇ ವಿಶೇಷ।
ಯಾಚ್ಯಾ ಪ್ರಕಾಶೇ ಪ್ರಕಾಶ। ಸಕಳ ಕಾಂಹೀ ॥೬॥

ಯೇಕ ವಿಷ್ಣು ಮಹದ್ಭೂತ। ಐಸಾ ಭೂತಾಂಚಾ ಸಂಕೇತ।
ಪರಂತು ಯಾಚೀ ಪ್ರಚೀತ। ಪಾಹಿಲೀ ಪಾಹಿಜೇ ॥೭॥

ವಿಸ್ತಾರೇ ಬೋಲಿಲೀ ಭೂತೇ। ತ್ಯಾ ಭೂತಾಮಧೇ ವ್ಯಾಪಕ ತೇ।
ವಿವರೋನ ಪಾಹಾತಾ ಯೇತೇ। ಪ್ರತ್ಯಯಾಸೀ ॥೮॥

ಆತ್ಮಯಾಚ್ಯಾ ಚಪಳಪಣಾಪುಢೇ। ವಾಯೋ ತೇ ಕಿತೀ ಬಾಪುಡೇ।
ಆತ್ಮ್ಯಾಚೇ ಚಪಳಪಣ ರೋಕಡೇ। ಸಮಜೋನ ಪಾಹಾವೇ ॥೯॥

ಆತ್ಮ್ಯಾವೇಗಳೇ ಕಾಮ ಚಾಲೇನಾ। ಆತ್ಮಾ ದಿಸೇನಾ ನಾ ಆಡಳೇನಾ।
ಗುಪ್ತರೂಪೇ ವಿಚಾರ ನಾನಾ। ಪಾಹೋನ ಸೋಡೀ ॥೧೦॥

ಪಿಂಡ ಬ್ರಹ್ಮಾಂಡ ವ್ಯಾಪೂನ ಧರಿಲೇ। ನಾನಾ ಶರೀರೀ ವಿಳಾಸಲೇ।
ವಿವೇಕೀ ಜನಾಸಿ ಭಾಸಲೇ। ಜಗದಾಂತರೀ ॥೧೧॥

ಆತ್ಮ್ಯಾವಿಣ ದೇಹೆ ಚಾಲತೀ। ಹೇ ತೋ ನ ಘಡೇ ಕಲ್ಪಾಂತೀ।
ಅಷ್ಟಧಾ ಪ್ರಕುರ್ತೀಚ್ಯಾ ವೆಕ್ತಿ। ರೂಪಾಸೀ ಆಲ್ಯಾ ॥೧೨॥

ಮೂಳಾಪಾಸೂನ ಸೇವಟವರೀ। ಸಕಳ ಕಾಹೀ ಆತ್ಮಾಚ ಕರೀ।
ಆತ್ಮ್ಯಾಪೈಲೀಕಡೆ ನಿರ್ವಿಕಾರೀ। ಪರಬ್ರಹ್ಮ ತೇ ॥೧೩॥

ಆತ್ಮಾ ಶರೀರೀ ವರ್ತತೋ। ಇಂದ್ರಿಯೇ ಗ್ರಾಮ ಚೇಷ್ಟವಿತೋ।
ನಾನಾ ಸುಖದುಃಖೇ ಭೋಗಿತೋ। ದೇಹ್ಯಾತ್ಮಯೋಗೇ ॥೧೪॥

ಸಪ್ತಕಂಚುಕ ಹೇ ಬ್ರಹ್ಮಾಂಡ। ತ್ಯಾಮಧೇ ಸಪ್ತಕಂಚುಕ ಪಿಂಡ।
ತ್ಯಾ ಪಿಂಡಾಮಧೇ ಆತ್ಮಾ ಜಾಡ। ವಿವೇಕೇ ವೊಳಖಾ ॥೧೫॥

ಶಬ್ದ ಐಕೋನ ಸಮಜತೋ। ಸಮಜೋನ ಪ್ರತ್ಯೋತ್ತರ ದೇತೋ।
ಕಠೀಣ ಮೃದು ಸೀತೋಷ್ಣ ಜಾಣತೋ। ತ್ವಚೇಮಧೇ ॥೧೬॥

ನೇತ್ರೀ ಭರೋನೀ ಪದಾರ್ಥ ಪಾಹಾಣೇ। ನಾನಾ ಪದಾರ್ಥ ಪರೀಕ್ಷಣೇ।
ಉಂಚ ನೀಚ ಸಮಜಣೇ। ಮನಾ ಮಧೇ ॥೧೭॥

ಈ ಮೂರು ಗುಣಗಳಿಂದ ಪಂಚಭೂತಗಳು ಆದವು. ಮತ್ತು ಮುಂದೆ ಇವುಗಳಿಗೆ ಸ್ಪಷ್ಟ ಸ್ಥಿತಿ ಅಥವಾ ವ್ಯಕ್ತದಶೆ ಬಂದಿತು. ಪಂಚಭೂತಗಳ ಸ್ಥಿತಿ (ಪ್ರಕಟವಾದ, ಸ್ಪಷ್ಟ ಕಾಣಿಸಿಕೊಂಡ) ಮತ್ತು ಅವ್ಯಕ್ತ [ಅಸ್ಪಷ್ಟ, ಕಾಣಿಸಿಕೊಳ್ಳದ] ಸ್ವರೂಪದ ಬಗ್ಗೆ ವಿವೇಕದಿಂದ ಗುರುತಿಸಬೇಕು. ತಿಳಿಯಬೇಕು. (೫) ಪಂಚ ಮಹಾಭೂತಗಳಲ್ಲಿ ಆಕಾಶವು ಮುಖ್ಯವಾಗಿರುವದು. ಇನ್ನುಳಿದ ನಾಲ್ಕು ಭೂತಗಳಿಗಿಂತ ಆಕಾಶವು ಏನೋ ಒಂದು ರೀತಿಯಲ್ಲಿ ವಿಶೇಷವಿರುವದು. ಇದರ ಪ್ರಕಾಶದಿಂದ ಇತರ ಎಲ್ಲವುಗಳು ಪ್ರಕಾಶವನ್ನು ಹೊಂದಿರುವವು. ಅಥವಾ ಪಡೆಯಲು ಸಾಧ್ಯವಾಗಿರುವದು. (೬) ಎಲ್ಲ ಭೂತಗಳಲ್ಲಿ ವಿಷ್ಣುವು ಒಬ್ಬ ಮಹದ್ಭೂತವಿರುವನು. ಹೀಗೆ ಎಲ್ಲ ಭೂತಗಳ ಬಗ್ಗೆ ಸಂಕೇತವಿರುವದು. ಆದರೆ ಇದರ ಅರ್ಥವೇನಿರುವದೆಂಬುದರ ಬಗ್ಗೆ ಸ್ವಾನುಭವದಿಂದ ನೋಡಿ ತಿಳಿಯಬೇಕಾಗುವದು. (೭) ಎಲ್ಲ ಭೂತಗಳಲ್ಲಿ ಪರಮ ಶ್ರೇಷ್ಠ ಇರುವಂತಹ ಅಂತರಾತ್ಮಾ ಇವನು ಪಿಂಡ ಬ್ರಹ್ಮಾಂಡಗಳೆಲ್ಲದರ ಕಾರ್ಯಗಳನ್ನು ರಚಿಸಿ ಕೊಡುವನು. ವ್ಯಕ್ತರೂಪದಲ್ಲಿ ತರುವನು.[ಮಾಡಿಸುವನು]. ವಿಶ್ವಕ್ಕೆ ಜೀವನ ಕೊಡುವಂಥ ಚೈತನ್ಯ ಅಂದರೆ ಅಂತರಾತ್ಮನೇ ಇರುವನು. ಮಾನವ ಜೀವನದಲ್ಲಿ ಏನೆಲ್ಲ ಅನುಭವಕ್ಕೆ ಬರುವವೋ ಯಾವ ಯಾವ ಚಟುವಟಿಕೆಗಳು ಆಗುವವೋ ಅವಕ್ಕೆಲ್ಲ ಪ್ರೇರಣೆಯು ಅಂತರಾತ್ಮನಿಂದ ಬರುವದು: ಈ ಮೊದಲು ಪಂಚಭೂತಗಳ ಬಗ್ಗೆ ವಿಸ್ತಾರದಿಂದ ವರ್ಣನೆಯನ್ನು ಮಾಡಿರುವೆನು. ಆದರಲ್ಲಿ ಯಾವ ಮೂಲ ತತ್ವವು ವ್ಯಾಪಿಸಿರುವದು ಅನ್ನುವದರ ಬಗ್ಗೆ ವಿವೇಚಿಸಿ ನೋಡಿರಿ. ಅಂದರೆ ನಿಮಗೆ ಅಂತರಾತ್ಮನ ಪ್ರಚೀತಿ [ಅನುಭವ] ಬರುವದು. (೮) ಅಂತರಾತ್ಮನು ಅತ್ಯಂತ ಸೂಕ್ಷ್ಮ ಮತ್ತು ಚಪಲನಿರುವನು. ಗತಿಮಾನ, ಬುದ್ಧಿವಂತ, ವೇಗವಂತನಿರುವನು. ಇವನ ಮುಂದೆ ವಾಯುವಿನ ಚಪಲತನವು ಕಡಿಮೆಯದು. [ಸರಿ ಸಮವೆನಿಸುವದಿಲ್ಲ]. ಅಂತರಾತ್ಮನ ಚಪಲತನದ ಬಗ್ಗೆ ಪ್ರತ್ಯಕ್ಷ ಅನುಭವದಿಂದ ತಿಳಿದು ಖಚಿತಮಾಡಿಕೊಳ್ಳಿರಿ. (೯) ಆತ್ಮನ ಹೊರತಾಗಿ ಯಾವುದೇ ಕಾರ್ಯ ನಡೆಯುವದಿಲ್ಲ. ಆದರೆ ಈ ಅಂತರಾತ್ಮನು ನೋಡಲಿಕ್ಕೆ ಎಲ್ಲಿಯೂ ಸಿಗುವದಿಲ್ಲ ಅಥವಾ ಕಾಣುವದಿಲ್ಲ. ಇವನು ಸ್ವತಃ ಗುಪ್ತನಿದ್ದು ಅನೇಕ ಪ್ರಕಾರದ ವಿಚಾರವನ್ನು ತಿಳಿಯುವನು. ಮತ್ತು ಮಾಡುವನು. (೧೦) ಇವನು ಪಿಂಡದಲ್ಲಿ ಮತ್ತು ಬ್ರಹ್ಮಾಂಡದಲ್ಲಿ ವ್ಯಾಪಿಸಿರುವನು. ಅನೇಕ ಪ್ರಕಾರದ ದೇಹಗಳಲ್ಲಿ ಇವನ ವಿಲಾಸದ ಹೊಳಪು ಶೋಭಿಸುವದು. ಆತ್ಮಾನಾತ್ಮ ವಿವೇಕಿಗಳಿಗೆ [ ಅನುಭವಿಗಳಿಗೆ ] ಜಗದ ಅಂತರ್ಯಾಮದಲ್ಲಿ ಇವನು ಇರುವದು ಅನುಭವಕ್ಕೆ ಬರುವದು. (೧೧) ಆತ್ಮನಿಲ್ಲದೇ ದೇಹದ ಕಾರ್ಯ–ಕೆಲಸ ನಡೆಯಲಿಕ್ಕೆ ಎಂದೂ ಶಕ್ಯವಿಲ್ಲ. ಅಷ್ಟಧಾ ಪ್ರಕೃತಿಯಲ್ಲಿ ಇರುವಂಥ ಅವ್ಯಕ್ತ ಘಟಕ ಅಂದರೆ ಪಂಚಭೂತಗಳು ಮತ್ತು ಮೂರು ಗುಣ ( ತ್ರಿಗುಣ ) ಗಳು ಇವುಗಳಿಗೆ [೫+೩=೮] ಅಷ್ಟಧಾ ಪ್ರಕೃತಿಗೆ ಅಂತರಾತ್ಮನಿಂದ ಅಥವಾ ಅಂತರಾತ್ಮನ ಮೂಲಕ ವ್ಯಕ್ತರೂಪ ಪ್ರಾಪ್ತವಾಗುವದು. (೧೨) ನಿಜವಾದ ಮೊಟ್ಟಮೊದಲಿನ ಮೂಲದಿಂದ ಕೊನೆಯವರೆಗೆ (ನೇರವಾಗಿ) ಏನೆಲ್ಲ ಆಗುಹೋಗುಗಳು ಆಗುವವೋ ಅವೆಲ್ಲವುಗಳನ್ನು ಅಂತರಾತ್ಮನೇ ಮಾಡುವನು. ಮಾಡಿಸುವನು. ಇಂಥ ಈ ಆತ್ಮನ ಆಚೆಗೆ ನಿರ್ವಿಕಾರವಾದಂಥ ಪರಬ್ರಹ್ಮವಿರುವದು. (೧೩) ಅಂತರಾತ್ಮನು ದೇಹದಲ್ಲಿ ಇರುವನು. ಮತ್ತು ಎಲ್ಲ ಇಂದ್ರಿಯಗಳಿಗೆ ಚಲನ ವಲನ ಚೇತನ ಕೊಡುವನು. ದೇಹದೊಂದಿಗೆ ಇವನ ಸಂಬಂಧ ಬಂದದ್ದರಿಂದ ಅನೇಕ ಪ್ರಕಾರದ ಸುಖ ದುಃಖಗಳನ್ನು ಇವನು ಭೋಗಿಸುವನು.(೧೪)ಬ್ರಹ್ಮಾಂಡವು ಏಳುಹೊದಿಕೆಗಳಿಂದ ಸಪ್ತಕಂಚುಕದಿಂದ ಅಂದರೆ ಪೃಥ್ವಿಯನ್ನುಮೊದಲ್ಗೊಂಡು ಸಪ್ತಆವರಣಗಳಿಂದ[ಪಂಚಭೂತ+ಅಹಂಕಾರ+ಮಹತ್‌ತತ್ವ ಅಂತೂ ಏಳು]ಸುತ್ತುವರಿಯಲ್ಪಟ್ಟಿದೆ.ಇದರಂತೆ ಪಿಂಡಕ್ಕೂ ಸಹ ಏಳು ಹೊದಿಕೆಗಳ[ಸಪ್ತ ಕಂಚುಕಗಳ]ಆವರಣವು ಸುತ್ತುಹಾಕಿರುವದು.ಪಿಂಡದಲ್ಲಿರುವಂಥ ಅತಿ ಸೂಕ್ಷ್ಮ ಅಂತರಾತ್ಮನನ್ನು ವಿವೇಕದಿಂದ ವಿಚಾರದಿಂದ ತಿಳಿಯಬೇಕು. (೧೫) ಶಬ್ದ ಕೇಳಿದ ಕೂಡಲೇ ಆತ್ಮನಿಗೆ ಅದರ ಅರ್ಥ ತಿಳಿಯುವದು. ಅರ್ಥ ತಿಳಿದುಕೊಂಡೇ ಅದಕ್ಕೆ ಉತ್ತರವನ್ನೂ ಇವನು ಕೊಡುವನು. ತ್ವಚೆಯ [ಚರ್ಮದ]ಮೂಲಕ ಆತ್ಮವು ಕಠಿಣ,ಮೃದು,ತಂಪು,ಬಿಸಿ ಇವುಗಳನ್ನು ತಿಳಿಯುವದು.(೧೬)ಕಣ್ಣಲ್ಲಿ ಇದ್ದುಕೊಂಡು ಆತ್ಮವು ಪದಾರ್ಥವನ್ನು ನೋಡುವದು. ಅನೇಕ ವಸ್ತುಗಳ ಪರೀಕ್ಷೆ ಮಾಡುವದು. ಉತ್ತಮ, ಕನಿಷ್ಠ ಇವುಗಳನ್ನು ಮನಸ್ಸಿನಿಂದ ಆತ್ಮವು ತಿಳಿಯುವದು. (೧೭)

ಕ್ರೂರದೃಷ್ಟೀ ಸೌಮ್ಯದೃಷ್ಟೀ। ಕಪಟದೃಷ್ಟೀ ಕೃಪಾದೃಷ್ಟೀ।
ನಾನಾ ಪ್ರಕಾರೀಚ್ಯಾ ದೃಷ್ಟೀ। ಭೇದ ಜಾಣೇ ॥೧೮॥
ಜಿವ್ಹೇಮಧೇ ನಾನಾ ಸ್ವಾದ। ನಿವಡೂ ಜಾಣೇ ಭೇದಾಭೇದ।
ಜೇ ಜೇ ಜಾಣೇ ತೇ ತೇ ವಿಶದ। ಕರುನೀ ಬೋಲೇ ॥೧೯॥
ಉತ್ತಮ ಅನ್ನಾಚೆ ಪರಿಮಳ। ನಾನಾ ಸುಗಂಧ ಪರಿಮಳ।
ನಾನಾ ಫಳಾಚೇ ಪರಿಮಳ। ಘ್ರಾಣಇಂದ್ರಿಯೇ ಜಾಣೇ ॥೨೦॥
ಜಿವ್ಹೇನೇ ಸ್ವಾದ ಘೇಣೇ ಬೋಲಣೇ। ಪಾಣೀಇಂದ್ರಿಯೇ ಘೇಣೇ ದೇಣೇ।
ಪಾದಇಂದ್ರಿಯೇ ಯೇಣೆ ಜಾಣೇ। ಸರ್ವಕಾಳ ॥೨೧॥
ಶಿಸ್ನಇಂದ್ರಿಯೇ ಸುರತ ಭೋಗ। ಗುದಇಂದ್ರಿಯೇ ಮಳೋತ್ಸರ್ಗ।
ಮನೇಕರೂನೀ ಸಕಳ ಸಾಂಗ। ಕಲ್ಪೂನ ಪಾಹೇ ॥೨೨॥
ಐಸೇ ವ್ಯಾಪಾರ ಪರೋಪರೀ। ತ್ರಿಭುವನೀ ಯೇಕಲಾ ಚಿ ಕರೀ।
ತ್ಯಾಚೇ ವರ್ಣಾವಯಾ ಥೋರೀ। ದುಸರಾ ನಾಹೀ ॥೨೩॥
ತ್ಯಾವೀಣ ದುಸರಾ ಕೈಚಾ। ಜೇ ಮಹಿಮಾ ಸಾಂಗಾವಾ ತಯಾಚಾ।
ವ್ಯಾಪ ಆಟೋಪ ಆತ್ಮಯಾಚಾ। ನ ಭೂತೋ ನ ಭವಿಷ್ಯತಿ ॥೨೪॥
ಚೌದಾ ವಿದ್ಯಾ ಚೌಸಷ್ಟೀ ಕಳಾ। ಧೂರ್ತಪಣಾಚ್ಯಾ ನಾನಾ ಕಳಾ।
ವೇದ ಶಾಸ್ತ್ರ ಪುರಾಣ ಜಿವ್ಹಾಳಾ। ತೇಣೇವಿಣ ಕೈಚಾ ॥೨೫॥
ಯೆಹಲೋಕೀಚಾ ಆಚಾರ। ಪರಲೋಕೀ ಸಾರಾಸಾರ ವಿಚಾರ।
ಉಭಯ ಲೋಕೀಚಾ ನಿರ್ಧಾರ। ಆತ್ಮಾಚ ಕರೀ ॥೨೬॥
ನಾನಾ ಮತೇ ನಾನಾ ಭೇದ। ನಾನಾ ಸಂವಾದ ವೆವಾದ।
ನಾನಾ ನಿಶ್ಚಯ ಭೇದಾಭೇದ। ಆತ್ಮಾಚ ಕರೀ ॥೨೭॥
ಮುಖ್ಯ ತತ್ವ ವಿಸ್ತಾರಲೇ। ತೇಣೇ ತಯಾಸ ರೂಪ ಆಣಿಲೇ।
ಯೇಣೇಕರಿತಾ ಸಾರ್ಥಕ ಜಾಲೇ। ಸಕಳ ಕಾಹೀ ॥೨೮॥
ಲಿಹಿಣೇ ವಾಚಣೇ ಪಾಠಾಂತರ ಕರಣೇ। ಪುಸಣೇ ಸಾಂಗಣೇ ಅರ್ಥ ಕರಣೇ।
ಗಾಣೇ ವಾಜವಣೇ ನಾಚಣೇ। ಆತ್ಮ್ಯಾಚ ಕರಿತಾ ॥೨೯॥
ನಾನಾ ಸುಖೇ ಆನಂದತೋ। ನಾನಾ ದುಃಖೇ ಕಷ್ಟೀ ಹೋತೋ।
ದೇಹೆ ಧರಿತೋ ಆಣೀ ಸೋಡಿತೋ। ನಾನಾ ಪ್ರಕಾರೇ ॥೩೦॥
ಯೆಕಲಾ ಚಿ ನಾನಾ ದೇಹೆ ಧರೀ। ಯೆಕಲಾ ಚಿ ನಟೇ ಪರೋಪರೀ।
ನಟ ನಾಟ್ಯಕಳಾ ಕುಸರೀ। ತ್ಯಾವಿಣ ನಾಹೀ ॥೩೧॥

ಕ್ರೂರ ದೃಷ್ಟಿ, ಸೌಮ್ಯ ದೃಷ್ಟಿ, ಕಪಟ ದೃಷ್ಟಿ, ಕೃಪಾ ದೃಷ್ಟಿ, ಕರುಣಾ ದೃಷ್ಟಿ. ಪ್ರೇಮ ದೃಷ್ಟಿ ಇತ್ಯಾದಿ ಅನೇಕ ಪ್ರಕಾರದ ದೃಷ್ಟಿ ಭೇದಗಳನ್ನೆಲ್ಲ ಆತ್ಮವೇ ತಿಳಿಯುವದು. (೧೮) ಇವನು ನಾಲಿಗೆಯಲ್ಲಿ ಇದ್ದು ಕೊಂಡು ನಾಲಿಗೆಯಿಂದ ಅನೇಕ ಪ್ರಕಾರದ [ಖಾರ, ಸಿಹಿ, ಕಹಿ ಇತ್ಯಾದಿ] ಸ್ವಾದ [ರುಚಿ] ದ ಗುರುತು ಹಿಡಿಯು ವನು. ತಿಳಿಯುವನು. ಮತ್ತು ಇವುಗಳಲ್ಲಿಯ ಹೆಚ್ಚು ಕಡಿಮೆ ಭೇದ ಮತ್ತು ಅಭೇದ ಎರಡನ್ನೂ ತಿಳಿಯುವನು. ಇದರ ಹೊರತಾಗಿ ಆತ್ಮಾ ಏನನ್ನು ತಿಳಿಯುವನೋ ಅದನ್ನೆಲ್ಲ ಸ್ಪಷ್ಟಮಾಡಿ [ವಿವರಿಸಿ] ಹೇಳುವನು. (೧೯) ಮೂಗಿನಿಂದ ಉತ್ತಮ ಅನ್ನದ ಸುಗಂಧವನ್ನು ಆತ್ಮನೇ ತಿಳಿಯುವನು. ಇದರಂತೆ ಇತರ ಸುಗಂಧ ಮತ್ತು ಫಲ [ಹಣ್ಣು] ಗಳ ಸುಗಂಧ ಇವನ್ನೆಲ್ಲ ಇವನು ಮೂಗಿನಿಂದ ಗುರುತಿಸುವನು. (೨೦) ನಾಲಿಗೆಯಿಂದ ರುಚಿ ಸ್ವಾದ ತೆಗೆದುಕೊಳ್ಳುವನು. ಮತ್ತು ಮಾತನಾಡುವನು, ಕೈಯಿಂದ ಕೊಡುವನು, ಮತ್ತು ತೆಗೆದುಕೊಳ್ಳುವನು. ಕಾಲಿ ನಿಂದ ಬರುವನು, ಮತ್ತು ಹೋಗುವನು. (೨೧) ಜನನೇಂದ್ರಿಯದಿಂದ ಕಾಮ ಭೋಗಿಸುವನು. ಮೂತ್ರ ವಿಸರ್ಜನೆಮಾಡುವನು, ಮತ್ತು ಗುದದಿಂದ ಮಲ ವಿಸರ್ಜನೆಯನ್ನು ಮಾಡುವನು. ಮನದಿಂದ ಸಾದ್ಯಂತವಾಗಿ ಎಲ್ಲವನ್ನೂ ಕಲ್ಪನಾ ಮಾಡಿ ನೋಡುವನು. (೨೨) ಹೀಗೆ ನಾನಾ ಪ್ರಕಾರದ ವ್ಯಾಪಾರ ವ್ಯವಹಾರಗಳನ್ನೆಲ್ಲ ಇಡೀ ತ್ರಿಭುವನದಲ್ಲಿ ಒಬ್ಬನೇ ಆದ ಈ ಅಂತರಾತ್ಮನೇ ಮಾಡುವನು. ಇವನ ಮಹಿಮೆಯಂತೆ ಇರುವವರನ್ನು ವರ್ಣಿಸಲು ಹೋದರೆ ಇನ್ನೊಬ್ಬರು ಯಾರೂ ಈ ಜಗತ್ತಿನಲ್ಲಿ ಇವನಂತೆ ಇರುವದಿಲ್ಲ. (೨೩) ಇಂಥ ಅಗಾಧ ಮಹಿಮೆಯುಳ್ಳ ಪುರುಷರು ಜಗತ್ತಿನಲ್ಲಿ ಇರುವರೆಂದು ಹೇಳಬೇಕೆಂದರೆ ಈ ಅಂತರಾತ್ಮನ ಹೊರತು ಎರಡನೆಯವರು ಯಾರೂ ಇಲ್ಲ. ಅಂತರಾತ್ಮನ ವಿಸ್ತಾರ ಮತ್ತು ಇವನ ಕಾರ್ಯ ಶಕ್ತಿಗೆ ಸಮವಾದದ್ದು ಈವರೆಗೆ ಎಲ್ಲಿಯೂ ನಡೆದೇ ಇಲ್ಲ. ಮತ್ತು ಮುಂದೆಯೂ ಕೂಡಾ ಎಂದೂ ಆಗುವದೇ ಇಲ್ಲ. ಅಂತೂ ಒಟ್ಟಿನಲ್ಲಿ ಅಂತರಾತ್ಮನ ಕಾರ್ಯ ಅದ್ವಿತೀಯವಾಗಿ ರುವದು. (೨೪) ಹದಿನಾಲ್ಕು ವಿದ್ಯಾ [ಚೌದಾ ವಿದ್ಯೆ] ಅರವತ್ತನಾಲ್ಕು ಕಲಾ [ಚೌಸಷ್ಟ ಕಲಾ] ಚತುರತನದ ಅನೇಕ ಕಲಾ, ವೇದ, ಶಾಸ್ತ್ರ, ಪುರಾಣ ಇವುಗಳ ರಹಸ್ಯ ಈ ಎಲ್ಲವೂ ಅಂತರಾತ್ಮನಿಂದಲೇ ಹಸ್ತಗತವಾಗಲು ಸಾಧ್ಯವು. (೨೫) ಈ ಜಗತ್ತಿನಲ್ಲಿಯ ಆಚಾರ, ಪರಮಾರ್ಥದಲ್ಲಿಯ ಸಾರಾಸಾರವಿಚಾರ ಪ್ರಪಂಚ ಮತ್ತು ಪರ ಮಾರ್ಥ ಈ ಎರಡರ ನಿಶ್ಚಿತ ಜ್ಞಾನ ಇವನ್ನು ಅಂತರಾತ್ಮನೇ ಮಾಡಿಕೊಡುವನು. (೨೬) ಅನೇಕ ಪ್ರಕಾರದ ಮತ ಜಾತಿಗಳು ಇವುಗಳಲ್ಲಿಯ ಅನೇಕ ಪ್ರಕಾರದ ಭೇದಗಳು ನಾನಾ ಪ್ರಕಾರದ ವಾದಗಳು ಮತ್ತು ಸಂವಾದ ಸಂಭಾಷಣೆ, ಪ್ರಶ್ನೋತ್ತರ ರೂಪ ಸಂಭಾಷಣೆಗಳು, ಅನೇಕ ಪ್ರಕಾರದ ನಿಶ್ಚಿತ ನಿರ್ಣಯ ಮತ್ತು ಅನೇಕ ಪ್ರಕಾರದ ಭೇದಾ ಭೇದ ಇವೆಲ್ಲವುಗಳನ್ನು ಆತ್ಮನೇ ಮಾಡುವನು. (೨೭) ಈ ಇಡೀ (ಎಲ್ಲರ) ಚಂಚಲ ವಿಶ್ವದ ಮುಖ್ಯ ತತ್ತ್ವವು ಅಂತರಾತ್ಮವೇ ಇರುವದು. ಈ ಆತ್ಮನೊಬ್ಬನಿಂದಲೇ ಇಷ್ಟೆಲ್ಲ ವಿಸ್ತಾರವಾಯಿತು. ಇವನಿಂದ ಇದರಲ್ಲಿ ಅನೇಕ ವ್ಯಕ್ತ ರೂಪಗಳಾದವು. ಇದರಿಂದಾಗಿ ಈ ಎಲ್ಲ ದೃಶ್ಯ ವಿಶ್ವಕ್ಕೆ ಒಂದು ಪ್ರಕಾರದ ಸಾರ್ಥಕತೆ ಬಂದಿರುವದು. ಈ ಅಂತ ರಾತ್ಮನಿಂದಲೇ ಸರಿ. ಈ ಎಲ್ಲ ಆಟವೂ ಇವನದೇ ಇದ್ದುದರಿಂದ ಇದನ್ನು ತಿಳಿಯಲು ಯಾರಿಗೆ ಸಾಧ್ಯವಾಯಿತೋ ಅಥವಾಯಾರುತಿಳಿದರೋ ಅವರುಸಾರ್ಥಕರಾಗಿ ಹೋದರು.ಸಮಾಧಾನ ಪಡೆದರು.(೨೮)ಓದುವದು,ಓದಿಸುವದು, ಪಾಠಾಂತರ ಮಾಡುವದು. ವಿಚಾರ ಮಾಡುವದು, ಹೇಳುವದು, ಅರ್ಥಮಾಡುವದು, ಹಾಡುವದು, [ಗಾಯನ ಮಾಡುವದು] ಬಾರಿಸುವದು, ನೃತ್ಯಮಾಡುವದು, ಮಾಡಿಸುವದು, ಈ ಎಲ್ಲವೂ ಆತ್ಮನ ಪ್ರೇರಣೆಯಿಂದಲೇ ನಡೆಯುವವು. (೨೯) ಈ ಅಂತರಾತ್ಮನು ಸುಖದಿಂದ ಆನಂದ ಹೊಂದುವನು. ಆದರೆ ದುಃಖದಿಂದ ಕಷ್ಟ ಹೊಂದುವನು. ಇವನು ಅನೇಕ ಪ್ರಕಾರದ ದೇಹಧಾರಣ ಮಾಡುವನು. ಮತ್ತು ದೇಹ ಬಿಡುವನು. (೩೦) ಒಬ್ಬನೇ ಒಬ್ಬನಾದ ಅಂತರಾತ್ಮನು ಅನೇಕ ದೇಹಧಾರಣ ಮಾಡುವನು. ಒಬ್ಬನೇ ಅನೇಕ [ನಾನಾ] ರೀತಿಯಿಂದ ನಟಿಸುವನು. ನಟನ ಸೋಗು, ನಾಟ್ಯ ಮತ್ತು ಅಭಿನಯ ಚಾತುರ್ಯ ಇವೆಲ್ಲ ಅಂತರಾತ್ಮನ ಯೋಗದಿಂದ ನಡೆಯುವವು. (೩೧)

ಯೇಕಲಾ ಚಿ ಜಾಲಾ ಬಹುರೂಪೀ । ಬಹುರೂಪೀ ಬಹುಸಾಕ್ಷಪೀ ।
ಬಹುರೂಪೇ ಬಹುಪ್ರತಾಪೀ । ಆಣೀ ಲಂಡೀ ॥೩೨॥
ಯೆಕಲಾ ಚಿ ವಿಸ್ತಾರಲಾ ಕೈಸಾ । ಪಾಹೆ ಬಹುವಿಧ ತವಾಸಾ ।
ದಂಪತ್ಯೇವಿಣ ಕೈಸಾ । ವಿಸ್ತಾರಲಾ ॥೩೩॥
ಸ್ತ್ರಿಯಾಸ ಪಾಹಿಜೆ ಪುರುಷ । ಪುರುಷಾಸೀ ಪಾಹಿಜೆ ಸ್ತ್ರೀವೇಷ ।
ಐಸಾ ಆವಡೀಚಾ ಸಂತೋಷ । ಪರಸ್ಪರೇ ॥೩೪॥
ಸ್ಥೂಳಾಚೇ ಮೂಳ ತೇ ಲಿಂಗ । ಲಿಂಗಾಮಧೇ ಹೇ ಪ್ರಸಂಗ ।
ಯೇಣೇ ಪ್ರಕಾರೇ ಜಗ । ಪ್ರತ್ಯಕ್ಷ ಚಾಲೇ ॥೩೫॥
ಪುರುಷಾಚಾ ಜೀವ ಸ್ತ್ರಿಯಾಂಚೀ ಜೀವೀ । ಐಸೀ ಹೋತೇ ಉಠಾಠೇವೀ ।
ಪರೀ ಯಾ ಸೂಕ್ಷ್ಮಾಚೀ ಗೋವೀ । ಸಮಜಲೀ ಪಾಹಿಜೇ ॥೩೬॥
ಸ್ಥೂಳಾಕರಿತಾ ವಾಟೇ ಭೇದ । ಸೂಕ್ಷ್ಮೀ ಅವಘೇ ಚಿ ಅಭೇದ ।
ಐಸೇ ಬೋಲಣೇ ನಿರುಧ । ಪ್ರತ್ಯಯಾ ಆಲೇ ॥೩೭॥
ಬಾಯಕೋನೇ ಬಾಯಕೋಸ ಭೋಗಿಲೇ । ಐಸೇ ನಾಹೀ ಕೀ ಘಡಲೇ ।
ಬಾಯಕೋಸ ಅಂತರೀ ಲಾಗಲೇ । ಧ್ಯಾನ ಪುರುಷಾಚೇ ॥೩೮॥
ಸ್ತ್ರೀಸೀ ಪುರುಷ ಪುರುಷಾಸ ವಧು । ಐಸಾ ಆಹೇ ಹಾ ಸಮಂಧು ।
ಯಾಕಾರಣೇ ಸೂಕ್ಷ್ಮ ಸಂವಾದು । ಸೂಕ್ಷ್ಮೀಚ ಆಹೇ ॥೩೯॥
ಪುರುಷಇಛೆಮಧೇ ಪ್ರಕೃತೀ । ಪ್ರಕೃತೀಮಧೇ ಪುರುಷವೆಕ್ತೀ ।
ಪ್ರಕೃತೀ ಪುರುಷ ಬೋಲತೀ । ಯೇಣೇ ನ್ಯಾಯೇ ॥೪೦॥
ಪಿಂಡಾವರೂನ ಬ್ರಹ್ಮಾಂಡ ಪಾಹಾವೇ । ಪ್ರಚೀತೀನೇ ಪ್ರಚೀತೀಸ ಘ್ಯಾವೇ ।
ಉಮಜೇನಾ ತರೀ ಉಮಜಾವೇ। ವಿವರಾ ವಿವರೋ ॥೪೧॥
ದ್ವೈತ ಇಛಾ ಹೋತೇ ಮುಳೀ । ತರೀ ತೇ ಆಲೀ ಭೂಮಂಡಳೀ ।
ಭೂಮಂಡಳೀ ಆಣೀ ಮುಳೀ । ರುಜು ಪಾಹಾವೇ ॥೪೨॥
ಯೇಥೇ ನೋಶಾ ಜಾಲಾ ಸಾಕ್ಷೇಪ । ಫಿಟಲಾ ಶ್ರೋತಯಾಂಚಾ ಆಕ್ಷೇಪ ।
ಜೇ ಪ್ರಕೃತೀಪುರುಷಾಚೇ ರೂಪ । ನಿವಡೋನ ಗೇಲೇ ॥೪೩॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ಮಹದ್ಭೂತ ನಿರೂಪಣ' ನಾಮ ಸಮಾಸ ಸಪ್ತಮ ॥

● ●

ಅಂತರಾತ್ಮಾ ಇವನು ಒಬ್ಬನೇ ಒಬ್ಬನೆಂಬುದು ನಿಜವು ಆದರೆ ಬಹುರೂಪಿಯಂತೆ ಅನೇಕ ಸೋಗು ಹಾಕುವನು. ಇವನು ಬಹುರೂಪಿ ಇದ್ದು ದೊಡ್ಡ ಉದ್ಯೋಗಿಯಾಗಿರುವನು. ಇವನಲ್ಲಿ ಬಹಳಷ್ಟು ರೂಪಗಳಿರುವವು. [ಇದಕ್ಕೆ ಲೆಕ್ಕವಿಲ್ಲ]. ಇವನ ಪರಾಕ್ರಮವು ಅನೇಕ ಪ್ರಕಾರದ್ದಿರುವದು. ಕೆಲವು ರೂಪದಲ್ಲಿ ಇವನು ಅಂಜುಬರುಕನ ಸೋಗು ಸಹ ಹಾಕುವನು (೩೨) ಸ್ಥೂಲ ದೃಶ್ಯದಲ್ಲಿ ಸ್ತ್ರೀ ಪುರುಷ ಅನ್ನುವ ಭೇದವು ಕಂಡುಬರುವದು. ಸ್ತ್ರೀ ಪುರುಷರಲ್ಲಿ ಪರಸ್ಪರ ಆಕರ್ಷಣೆ ಇರುವದು. ಆದರೆ ಸೂಕ್ಷ್ಮದಲ್ಲಿ ಇಂಥ ಭೇದವಿರುವದಿಲ್ಲ. ಎಲ್ಲರ ವಾಸನಾ ಒಂದೇ ಆಗಿರುವದು. ಸರ್ವರ ಅಂತರಾತ್ಮಾ ಒಬ್ಬನೇ ಒಬ್ಬನಾಗಿರುವನು: ಅಂತರಾತ್ಮಾ ಒಬ್ಬನೇ ಒಬ್ಬನಾಗಿರುವನೆಂದ ಮೇಲೆ ಇವನ ವಿಸ್ತಾರ ಆಟ ಹೇಗೆ ಆಯಿತು. ಅನ್ನುವದು ಒಂದು ಆಶ್ಚರ್ಯಪಡುವಂಥ ಮಾತೇ [ಸಂಗತಿಯೇ] ಇರುವದು. ಇವನ ಪ್ರೇಕ್ಷಣೀಯ ಆಟ (ಸೋಗು) ನಾನಾ ಪ್ರಕಾರದ್ದಿರುವದು. ಗಂಡ-ಹೆಂಡತಿ ಅನ್ನುವದೇ ಇಲ್ಲದ ದಾಂಪತ್ಯ ರಹಿತನಾದ ಅಂತರಾತ್ಮನ ಕುಟುಂಬದ ವಿಸ್ತಾರವು ಎಷ್ಟೆಷ್ಟೋ ವಿಸ್ತಾರವಾಗಿದೆ. (೩೩) ಸ್ತ್ರೀಗೆ ಪುರುಷನು ಬೇಕೆನಿಸುವನು. ಪುರುಷನಿಗೆ ಸ್ತ್ರೀ ಬೇಕೆನಿಸುವಳು. ಇಬ್ಬರಲ್ಲಿಯು ಪರಸ್ಪರ ಪ್ರೀತಿಯಿಂದ ಪರಸ್ಪರರಲ್ಲಿ ಸಂತೋಷವಾಗುವವು. (೩೪) ಸ್ಥೂಲ ದೇಹದ ಮೂಲವು ಲಿಂಗ ದೇಹ ಅಥವಾ ವಾಸನಾತ್ಮಕ ಸೂಕ್ಷ್ಮ ದೇಹ (ಮನದ ವಾಸನಾ)ದಲ್ಲಿ ಇರುವದು. [ಸ್ಥೂಲ ದೇಹದಲ್ಲಿ ಇರುವ ಸ್ತ್ರೀ ಪುರುಷ ಅನ್ನುವ ಬೇರೆ ಬೇರೆ ಆ ಯಾವ ಅವಯವಗಳು ಕಾಣುವವೋ ಇದರ ಮೂಲವು ವಾಸನಾತ್ಮಕ ಲಿಂಗದೇಹ ಸೂಕ್ಷ್ಮ ಶರೀರವುನಸ್ಸಿನ ವಾಸನಾದಲ್ಲಿ ಇರುವವು). ಆದರಲ್ಲಿಯು ವಾಸನೆಯಂತೆ ಸ್ತ್ರೀ ದೇಹ ಅಥವಾ ಪುರುಷ ದೇಹ ಪ್ರಾಪ್ತವಾಗುವದು. ಇದರಂತೆ ಜಗದಲ್ಲಿ ಪ್ರತ್ಯಕ್ಷ ನಡೆದಿರುವದು. (೩೫) ಇದು ಪುರುಷನ ಜೀವ, ಇದು ಸ್ತ್ರೀಯಳ ಜೀವಿ ಎಂದು ಅಜ್ಞಾನಿ ಜನರು ತಿಳಿಯದೆ ತಪ್ಪು ಮಾತನಾಡುವರು ಪುರುಷ ದೇಹ, ಸ್ತ್ರೀ ದೇಹ [ಹುಟ್ಟುವದು] ಇದೆಲ್ಲ ಸೂಕ್ಷ್ಮ ದೇಹದಲ್ಲಿಯ ವಾಸಶೆಯ ತೊಡಕಿನ ಗುಟ್ಟನ್ನು ಅವಲಂಬಿಸಿರುವದು. ಇದನ್ನು ಲಕ್ಷ್ಯದಲ್ಲಿಡಬೇಕು. (೩೬) ಸ್ಥೂಲದಲ್ಲಿ ಈ ಭೇದ ಕಾಣುವದು. ನಿಜವೇ ಇರುವದು. ಆದರೆ ಸೂಕ್ಷ್ಮದಲ್ಲಿ ಈ ಭೇದವು ಎಷ್ಟೂ ಇಲ್ಲ. ಸೂಕ್ಷ್ಮದಲ್ಲಿ ಎಲ್ಲವೂ ಅಭೇದವಿರುವದು. ನಾನು ಹೇಳಿದ ಮಾತು ಅನುಭವದಿಂದ ಹೇಳಿದ್ದಾಗಿದೆ. ವಿವೇಕ ವಿಚಾರದಿಂದ ನೋಡಿದರೆ ನಿಶ್ಚಿತವಾಗಿ ನಿಮಗೂ ಮನದಟ್ಟಾಗುವದು. [೩೭[ ಸ್ತ್ರೀಯು ಸ್ತ್ರೀಯನ್ನೇ ಉಪಭೋಗಮಾಡಿದಳು [ಅಥವಾ ಪಡೆದಳು] ಅನ್ನುವದು ಎಂದೂ ಕಂಡು ಬಂದಿಲ್ಲ. ಕೇಳಿಲ್ಲ. ಸ್ತ್ರೀಯ ಮನದಲ್ಲಿ ಪುರುಷರ ಧ್ಯಾನವಿರುವದು. [೩೮] ಸ್ತ್ರೀಗೆ ಪುರುಷನ ಮತ್ತು ಪುರುಷನಿಗೆ ಸ್ತ್ರೀಯ ಸಹವಾಸ ಬೇಕೆನಿಸುವದು. ಆದ್ದರಿಂದ ಈ ಸಂಬಂಧದ ಸೂಕ್ಷ್ಮ ಪ್ರಕ್ರಿಯಾ ವಿವರವಾದ ವಿಚಾರ ಸೂಕ್ಷ್ಮ ದೇಹದಲ್ಲಿಯೇ ಸಿಗುವದು. ಗೊತ್ತಾಗುವದು. [೩೯] ಪುರುಷನ ಇಚ್ಛೆಯಲ್ಲಿ ಪ್ರಕೃತಿ [ಸ್ತ್ರೀ] ಯ ಇಚ್ಛೆಯು ಅಭಿವ್ಯಕ್ತವಾಗುವದು, ಅಥವಾ ಇರುವದು. ಮತ್ತು ಪ್ರಕೃತಿ [ಸ್ತ್ರೀ] ಯ ವಿಕಾಸ ಅಂದರೆ ಅರಳುವಿಕೆ ಪ್ರಫುಲ್ಲಗೊಳ್ಳುವಿಕೆಯಲ್ಲಿ ಪುರುಷನ ಇಚ್ಛೆಯು ಅಭಿವ್ಯಕ್ತವಾಗುವದು. ಹೀಗೆ ಪರಸ್ಪರ ಅಭೇದ್ಯವಾದ ಸಂಬಂಧವಿರುವದು. ಈ ನ್ಯಾಯದಿಂದಲೇ ಪ್ರಕೃತಿ, ಪುರುಷ ವೆಂದು ಲೋಕದ ಜನರು ಅನ್ನುವರು. [೪೦] ನಮ್ಮ ಪಿಂಡ ರಚನೆಯ ಮೇಲಿಂದ ಬ್ರಹ್ಮಾಂಡ ರಚನೆಯ ಬಗ್ಗೆ ತಿಳಿದುಕೊಳ್ಳಿರಿ. ಪಿಂಡದ ಬಗೆಗಿನ ಅನುಭವ [ಪ್ರಚೀತಿ] ದ ಮೇಲಿಂದ ಬ್ರಹ್ಮಾಂಡದ ಬಗ್ಗೆ ಸಹ ಅನುಭವ ಪಡೆಯಿರಿ. ಇದು [ಈ ವಿಷಯ] ಬೇಗ ತಿಳುವಳಿಕೆಗೆ [ಲಕ್ಷ್ಯಕ್ಕೆ] ಬರದಿದ್ದರೆ ನೀವು ಮೇಲಿಂದ ಮೇಲೆ ಇವರ ಬಗ್ಗೆ ವಿವೇಕದಿಂದ ಮನನಮಾಡಿರಿ.ವಿಚಾರಮಾಡಿ ತಿಳಿದುಕೊಳ್ಳಿರಿ. [೪೧] ದ್ವೈತದ ಇಚ್ಛೆಯು ಮೂಲದಲ್ಲಿಯೇ [ಮೂಲ ಮಾಯೆಯಿಂದಲೇ] ಆಯಿತು. ಅಲ್ಲಿಂದ ಅದು ದೃಶ್ಯದಲ್ಲಿ ಪೃಥ್ವಿಯ ಮೇಲೆ ಕಾಣಿಸಿಕೊಂಡಿತು. ಇಲ್ಲಿಯ ದ್ವೈತ ಇಚ್ಛೆ ಮತ್ತು ಆಗದೀ ಮೂಲ ದ್ವೈತ ಇಚ್ಛಾ ಈ ಎರಡರದೂ ಮೇಳ ಮಾಡಬೇಕು. [೪೨] ಪ್ರಕೃತಿ ಮತ್ತು ಪುರುಷ ಇವುಗಳ ಸ್ವರೂಪದ ಬಗ್ಗೆ ಚನ್ನಾಗಿ ಮತ್ತು ಸ್ಪಷ್ಟವಾಗಿ ವಿವರವಾಗಿ ತಿಳಿಯಿತು. ಮತ್ತು ಶ್ರೋತಾ [ವಾಚಕ] ಜನರ ಸಂಶಯದ ಸಮಾಧಾನವಾಯಿತು. ಅಂತೂ ಇದೊಂದು ದೊಡ್ಡ ಕೆಲಸವಾಯಿತು. ಎಂದು ಅನ್ನಲಿಕ್ಕೆ ಏನೂ ಅಡ್ಡಿ ಇಲ್ಲ. [೪೩]

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹದಿನಾರನೆಯ ದಶಕದೊಳಗಿನ "ಮಹದ್ಭೂತ ನಿರೂಪಣ"ವೆಂಬ ಹೆಸರಿನ ಏಳನೆಯ ಸಮಾಸವು ಮುಗಿದುದು.

## ದಶಕ ೧೬. ಸಮಾಸ ೮. ಆತ್ಮಾರಾಮ ನಿರೂಪಣ (ನುಡಿ ೪೧)

ಈ ಸಮಾಸದಲ್ಲಿ ಮೊದಲಿಗೆ ಶುದ್ಧ ಅರಿವಿನ ರೂಪನಾದ ಗಣೇಶನಿಗೆ ಮತ್ತು ಪರಮೇಶ್ವರ ಅಂತರ್ಯಾಮಿದಲ್ಲಿ ಜ್ಞಾನದ ಪ್ರಕಾಶವನ್ನು ಉಂಟುಮಾಡುವ [ಬೆಳಗುವ] ವಳಾದ ಶಾರದೆಗೆ ವಂದನೆ ಹೇಳಿರುವರು. ಆಮೇಲೆ ಸ್ಥೂಲದಿಂದ ಸೂಕ್ಷ್ಮದಲ್ಲಿ, ಸೂಕ್ಷ್ಮದಿಂದ ಅಧಿಕ ಸೂಕ್ಷ್ಮದಲ್ಲಿ ಮತ್ತು ಕೊನೆಯ [ಅಖೈರದ]ಲ್ಲಿ ಅಧಿಕ ಸೂಕ್ಷ್ಮದಿಂದ ಅತಿ ಅತಿ ಸೂಕ್ಷ್ಮದೊಳಗೆ ಜೀವವನ್ನು ತೆಗೆದುಕೊಂಡು ಹೋಗುವಂಥ ನಾಮಕ್ಕೆ ವಂದನೆ ಇರುವದು. ಆಮೇಲೆ ಇಡೀ ಸಮಾಸದಲ್ಲಿ ಆತ್ಮಾರಾಮನ [ಸ್ವಸಂತುಷ್ಟನಾದ ಸಮಾಧಾನಿಯ] ಸರ್ವಂಕಷ [ಎಲ್ಲವನ್ನೂ ಒರೆಗೆ ಹಚ್ಚುವಂಥ ಅಂದರೆ ಕೇವಲ ನಿಜ-ಸತ್ಯವಾದಂಥ] ಮಹಿಮೆಯನ್ನು ಹೇಳಿರುವದು ಕಂಡುಬರುತ್ತದೆ. ಆತ್ಮಾರಾಮನು ಸರ್ವತ್ರವೂ ಸ್ವತಃ ಹಾಜರ ಇರುವದರಿಂದ ಜಗತ್ತಿನಲ್ಲಿಯ ಸರ್ವ ವ್ಯವಹಾರ ನಡೆಯುವವು. ಅಂತರಾತ್ಮಾ ಇಲ್ಲದಿದ್ದರೆ ದೇಹ ಬೀಳುವದು. ಇವನಿಗೆ ಜೀವಾತ್ಮಾ. ಶಿವಾತ್ಮಾ, ಪರಮಾತ್ಮಾ, ಜಗದಾತ್ಮಾ, ವಿಶ್ವಾತ್ಮಾ, ಗುಪ್ತಾತ್ಮಾ, ಆತ್ಮಾ, ಅಂತರಾತ್ಮಾ, ಸೂಕ್ಷ್ಮಾತ್ಮಾ ಹೀಗೆ ಅನೇಕ ಹೆಸರುಗಳು ಇರುವವು. ಇವನು ನಾದ ರೂಪ, ಜ್ಯೋತಿ ರೂಪ, ಸಾಕ್ಷ್ಯ[ಸಾಕ್ಷಿ] ರೂಪ, ಸತ್ತಾ ರೂಪ, ಚೈತನ್ಯ ರೂಪ, ಸ್ವಸ್ವರೂಪ, ಮತ್ತು ದ್ರಷ್ಟಾ ರೂಪ,

ಇರುವನು. ಇವನನ್ನೇ ಸರ್ವೋತ್ತಮ, ಉತ್ತಮೋತ್ತಮ, ಪುರುಷೋತ್ತಮ, ನರೋತ್ತಮ, ವೀರೋತ್ತಮ, ರಘೋತ್ತಮ ಮತ್ತು ತ್ರೈಲೋಕವಾಸಿ ಇತ್ಯಾದಿ ಹೆಸರುಗಳಿಂದಲೂ ಕರೆಯುವರು. ಈ ಅಂತರಾತ್ಮನಿಂದಾಗಿ [ಇವನ ಇಚ್ಛೆಯಿಂದ] ಈ ಬ್ರಹ್ಮಾದಿಕ ದೇವರು ಮತ್ತು ದೊಡ್ಡ ದೊಡ್ಡ ಅವತಾರಗಳು ಆದವು. ಮತ್ತು ಆಗುವವು. ಜೀವನದಲ್ಲಿ ಕಂಡುಬರುವ ಯಾವತ್ತೂ ಚೇತನವು ಇವನಿಂದಲೇ ಇರುವದು. ಇವನು ಎಲ್ಲಿ ಇರುವದಿಲ್ಲವೋ ಅಲ್ಲಿ, ಅಂಥಲ್ಲಿ ಯಾವತ್ತೂ [ಸರ್ವವೂ] ತಣ್ಣಗಿರುವದು [ಮುದತ್ತ್ವ,ಸುಸ್ತು]. ಮತ್ತು ಸರ್ವವೂ ಶೂನ್ಯ ಉಳ್ಳದ್ದಾಗುವದು. ಮಾನವೀ ಭಾವನೆ, ಕಲ್ಪನೆ ಸುಖ ದುಃಖ ಇವೆಲ್ಲವೂ ಇವನಿಂದ [ಆತ್ಮಾರಾಮ. ಅಂತರಾತ್ಮನಿಂದ]ಲೇ ಅನುಭವಕ್ಕೆ ಬರುವವು. ಅಂದರೆ ಇವನೇ ಅನುಭವಕ್ಕೆ ತರುವನು. ಇವನೇ (ರಂಕನಿಂದ) ದರಿದ್ರನಿಂದ [ಥೇಟ-ಸೀದಾ] ಬ್ರಹ್ಮ ದೇವರ ವರೆಗೆ ಒಬ್ಬನೇ ಅಂತರಾತ್ಮನು ಎಲ್ಲ ಕಾರ್ಯಕಲಾಪಗಳ ಕಾರ್ಯಭಾರವನ್ನು ನಡೆಯಿಸುವನು. ಆತ್ಮಜ್ಞಾನಿ ಪುರುಷರು ಮಾತ್ರ ಜಗದಲ್ಲಿ ಉಂಟಾಗುವ ಘಟನೆಗಳಲ್ಲಿ ಇವನ ಇರುವಿಕೆಯನ್ನು (ಕರ್ತೃತ್ವ-ಅಸ್ತಿತ್ವವನ್ನು) ನೋಡುವರು. ತಿಳಿಯುವರು.ಈ ಅಂತರಾತ್ಮಾ ಇಂದ್ರಿಯಗಳಿಗೆ ಕಾಣುವದಿಲ್ಲ. ಮನಕ್ಕೆ ಭಾಸವಾಗುವದಿಲ್ಲ. ಯಾವುದೇ ಹೊರಗಿನ ಅಥವಾ ಸ್ಥೂಲ ಸಾಧನದಿಂದ ಇವನ ಕಲ್ಪನೆಯನ್ನು ಮಾಡಲಿಕ್ಕೆ ಬರುವದೇ ಇಲ್ಲ. ನಿತ್ಯಾನಿತ್ಯವಿವೇಕ ದಿಂದಲೇ ಇವನ ಶೋಧಮಾಡಲು ಅಥವಾ ಇವನನ್ನು ತಿಳಿಯಲು ಬರುವದು, [ಸಾಧ್ಯವಾಗುವದು]. ಇವನು ಶರೀರದಲ್ಲಿ ಎಷ್ಟು ಕಾಲ ಇರುವನೋ ಅಷ್ಟು ಸಮಯದವರೆಗೆ ಮನವು ಅನೇಕ ಕಲ್ಪನೆಗಳನ್ನು ಮಾಡಲಿಕ್ಕೆ ಶಕ್ಯ ವಾಗುವದು. ಜೀವವು ಅನೇಕ ಭಾವನೆಗಳನ್ನು ಮತ್ತು ಅನೇಕ ವಾಸನೆಗಳನ್ನು, ನಿರ್ಮಿಸಿಕೊಳ್ಳುವದು [ಭಾವನೆ ಅಂದರೆ: ಕಲ್ಪನೆ, ಊಹೆ, ವಿಚಾರ, ಮತ್ತು ವಾಸನಾ ಅಂದರೆ: ಇಚ್ಛೆ. ಕರ್ಮದ್ದು ಮನಸ್ಸಿನ ಮೇಲೆ ಇರುವ ಸಂಸ್ಕಾರ, [ಪರಿಣಾಮ] ಇದರಿಂದಾದಿ ಅನೇಕ ಇಚ್ಛೆ, ಪ್ರೀತಿ ಪ್ರೇಮ, ವಿಚಾರ]. ಇಷ್ಟೇ ಅಲ್ಲ ಮನುಷ್ಯನು ಸಮಗ್ರ ಬ್ರಹ್ಮಾಂಡದ ಬಗ್ಗೆ ವಿಚಾರಮಾಡಬಲ್ಲನು. ಅನಂತಾನೇಕ ಪ್ರಾಣಿಗಳಿರುವವು. ಅವುಗಳ ವೃತ್ತಿ, ಕಾರ್ಯ ಮತ್ತು ಕಲ್ಪನೆ ಇವೂ ಸಹ ಅನೇಕವಿರುವವು. ಒಟ್ಟಿನಲ್ಲಿ ಈ ಎಲ್ಲವುಗಳಿಗೆ ಮೂಲವಾದದ್ದು ಅಂತರಾತ್ಮದಲ್ಲಿ ಇರುವದು. ಮನುಷ್ಯನ ಯಾವತ್ತೂ ಸಾಮಾಜಿಕ ವ್ಯವಹಾರ ಒಳ್ಳೆಯ ಬುದ್ಧಿ ಮತ್ತು ಕೆಟ್ಟ ಬುದ್ಧಿ ಇವುಗಳ [ಎಣಿಕೆ,] ಅರಿಸುವಿಕೆ, ಪರಸ್ಪರ ಶತ್ರುತ್ವದ ಅಥವಾ ಮಿತ್ರತ್ವದ ಸಂಬಂಧ, ಭಕ್ತನ ಪರೋಪಕಾರ, ಒಬ್ಬನು ಇನ್ನೊಬ್ಬನನ್ನು ಮೋಸಗೊಳಿಸುವದು, ರಾಜಕಾರಣ ಗುಪ್ತವಿಡುವದು ಇತ್ಯಾದಿ ಎಲ್ಲ ಕಾರ್ಯವು ಅಂತರಾತ್ಮನ ಯೋಗದಿಂದ ಉಂಟಾ ಗುವದು. ಮೂಲ ಅಂತರಾತ್ಮನು ಒಬ್ಬನೇ ಒಬ್ಬನು. ಅನ್ನುವದೇನೋ ನಿಜವೇ ಇರುವದು. ಆದರೆ ದೇಹದ ಯೋಗದಿಂದ ಅನಂತ ಭೇದಗಳು- ಕಾಣುವವು. ಸ್ತ್ರೀ ಪುರುಷರ ಭೇದ, ಆಹಾರ ಭೇದ ಆಕಾರ ಭೇದ ಇತ್ಯಾದಿ ಎಲ್ಲ ಭೇದಗಳಲ್ಲಿ ಒಬ್ಬನೇ ಅಂತರಾತ್ಮನು ಅಭೇದ ತನದಿಂದ ಇರುವನು, ನಾವು ಸೂಕ್ಷ್ಮ ದೃಷ್ಟಿಯಿಂದ ವಿವೇಕದಿಂದ ವಿಚಾರಮಾಡಿದರೂ, ಕೂಡಾ ನಮ್ಮ ಸ್ಥೂಲ ಶರೀರದ ಬಗ್ಗೆ ಸಂಪೂರ್ಣ ಜ್ಞಾನವಾಗುವದಿಲ್ಲ ಅಂದ ಮೇಲೆ ಅಂತ ರಾತ್ಮನಾದರೋ ಮೂಲದಲ್ಲಿಯೇ ಅತಿಶಯ ಸೂಕ್ಷ್ಮ ಇರುವನು. ಇವನ ಸಂಪೂರ್ಣ ಜ್ಞಾನ ಆಗುವದು. ಕಷ್ಟಕರವು. [ಸುಲಭದಲ್ಲಿ ಆಗುವದಿಲ್ಲ] ದೇಹಾತ್ಮ ಯೋಗ ಶೋಧಮಾಡಿ ನೋಡಿದ್ದಾದರೆ ಮಾತ್ರ ಆತ್ಮನ ಬಗ್ಗೆ ಅಲ್ಪ ಸ್ವಲ್ಪ ಕಲ್ಪನೆಯು ಬರುವದು. ಇಲ್ಲದಿದ್ದರೆ ಸ್ಥೂಲ ಮತ್ತು ಸೂಕ್ಷ್ಮ ಇವುಗಳ ವಿಷಯ ಬಹಳ ತೊಡಕಿನ ಕಗ್ಗಂಟಾಗಿರುವದು. ಈ ತೊಡಕನ್ನು ಬಿಡಿಸುವದಕ್ಕಾಗಿ ದೊಡ್ಡ ದೊಡ್ಡ ಸೂಕ್ಷ್ಮ ಜ್ಞಾನಿ ಪಂಡಿತರು ಇಲ್ಲಿಯವರೆಗೆ ಬಹಳಷ್ಟು ಹೇಳಿ [ಬಿಟ್ಟಿರುವರು] ಹೋಗಿರುವರು.

## ದಶಕ ಷೋಡಶ : ಸಮಾಸ ಅಷ್ಟಮ : ಆತ್ಮಾರಾಮ ನಿರೂಪಣ (ನುಡಿ ೩೧)

॥ಶ್ರೀರಾಮ ಸಮರ್ಥ॥ ನಮೂ ಗಣಪತೀ ಮಂಗಳಮೂರ್ತೀ ।
ಜಯಾಚೇನಿ ಮತಿಸ್ಫೂರ್ತೀ ।
ಲೋಕ ಭಜತೀ ಸ್ತವನ ಕರಿತೀ । ಆತ್ಮಯಾಚೇ ॥೧॥

ನಮೂ ವೈಖರೀ ವಾಗೇಶ್ವರೀ । ಅಭ್ಯಾಂತರೀ ಪ್ರಕಾಶ ಕರೀ ।
ನಾನಾ ಭರೋವರೀ ವಿವರೀ । ನಾನಾ ವಿದ್ಯಾ ॥೨॥

ಸಕಳ ಜನಾಮಧೇ ನಾಮ । ರಾಮನಾಮ ಉತ್ತಮೋತ್ತಮ ।
ಶ್ರಮ ಜಾಉನೀ ವಿಶ್ರಾಮ । ಚಂದ್ರಮೌಳೀ ಪಾವಲಾ ॥೩॥

## ದಶಕ ೧೬. ಸಮಾಸ ೮. ಆತ್ಮಾರಾಮ ನಿರೂಪಣ (ನುಡಿ ೩೧)

ಗಣೇಶ, ಶಾರದಾ, ಮತ್ತು ನಾಮ, ಈ ಮೂರರಕ್ಕೆ ಮೊದಲು ವಂದನೆ ಮಾಡುವರು: ಮಂಗಲ ಮೂರ್ತಿ ಗಣಪತಿಗೆ ನಾನು ವಂದನೆ ಮಾಡುವೆನು. ಇವನ ಸತ್ತಾ ಪ್ರಭುತ್ವದಿಂದ ಬುದ್ಧಿಯಲ್ಲಿ ಸ್ಫೂರ್ತಿ, ಅಂದರೆ ಬುದ್ಧಿಗೆ ಹೊಳೆಯುವದು, ಮತ್ತು ಪ್ರೋತ್ಸಾಹ, ಉತ್ತೇಜನ, ಪ್ರೇರಣೆ, ಪ್ರಚೋದನೆ ಉಂಟಾಗುವದು. ಈ ಸ್ಫೂರ್ತಿಯಿಂದ ಜನರು ಆತ್ಮನ ಭಜನೆ ಮತ್ತು ಸ್ತುತಿ ಮಾಡುವರು. ಕೇವಲ ಬುದ್ಧಿಯಿಂದ ಆತ್ಮನ ಪರೋಕ್ಷ, ಅಂದರೆ ಅಪ್ರತ್ಯಕ್ಷದ ಜ್ಞಾನವಾಗುವದು. ಆದರೆ ಸ್ಫೂರ್ತಿಯಿಂದ ಆತ್ಮನ ಅಪರೋಕ್ಷ ಅಂದರೆ ಪ್ರತ್ಯಕ್ಷ ಜ್ಞಾನವಾಗುವದು. (೧) ವಾಣಿಯ ಸ್ವಾಮಿನಿಯಾದ ಆ ಯಾವ ವೈಖರಿ ಅಂದರೆ ನಾದ, ಶಬ್ದ ಪ್ರಕಟವಾಗುವ ಸ್ಪಷ್ಟವಾದ ವಾಣಿಗೆ- ಶಾರದೆಗೆ ನಾನು ವಂದಿಸುವೆನು. ಮನುಷ್ಯರ ಅಂತರ್ಯಾಮದಲ್ಲಿ ಇವಳು ಪ್ರಕಾಶವನ್ನು ಉತ್ಪನ್ನ ಮಾಡುವಳು. ಅನೇಕ ವಿದ್ಯೆಗಳ ರಹಸ್ಯವನ್ನು ಇವಳು [ಶಾರದೆಯು]ಸಂಪೂರ್ಣವಾಗಿ ಸ್ಪಷ್ಟವಾಗಿ ತಿಳಿಸಿಕೊಡುವಳು: ಮಾಡಿಕೊಡುವಳು. ಶ್ರೀ ಸಮರ್ಥರು ಇಲ್ಲಿ ವೈಖರಿಗೆ ಅತಿಶಯ ಮಹತ್ವ ಕೊಟ್ಟಿರುವರು. ಇದರ ಕಾರಣವು ಹೀಗಿರುವದು: ಯಾವುದೇ ಜ್ಞಾನವಿದ್ದರೂ ಅದು ಕೊನೆಗೆ ಮನುಷ್ಯನ ಬುದ್ಧಿಗೆ ಆಗುವದು. ಆತ್ಮಜ್ಞಾನದಲ್ಲಿ ಬುದ್ಧಿಯು ಪ್ರತಿಭಾ [ವಿಶೇಷ ಪ್ರಜ್ಞೆಯ, ಜ್ಞಾನ, ಅರಿವಿನ] ಮಯವಾಗುವದು. ಮತ್ತು ಜ್ಞೇಯ ವಸ್ತು ಅಂದರೆ ತಿಳಿಯಬೇಕಾದ ಯೋಗ್ಯ ವಸ್ತುವಿನೊಂದಿಗೆ ಏಕರೂಪ [ತದಾಕಾರ] ವಾಗುವದು. ಈ ಅವಸ್ಥೆಯಲ್ಲಿ ಪರಾವಾಣಿಯು [ಮೊದಲನೆಯ ವಾಣಿ] ಮಾತ್ರ ಕಾರ್ಯ ರತ [ಆಸಕ್ತ] ಇರುವದು. ಇನ್ನುಳಿದ ಮೂರು ವಾಣಿಗಳಾದ ಪಶ್ಯಂತಿ, ಮಾಧ್ಯಮಾ, ವೈಖರಿಗಳು ಸ್ವಸ್ಥ ಇರುವವು. ಆದರೆ ಕೊನೆಯದಾದ ತುರೀಯಅವಸ್ಥೆ [ನಾಲ್ಕನೆಯ ಅವಸ್ಥೆ ಪರಬ್ರಹ್ಮದಲ್ಲಿ ತದಾತ್ಮ್ಯ ಹೊಂದುವ ಸ್ಥಿತಿ] ಯ ಭರಾಟೆ [ವೇಗ] ಕಡಿಮೆ ಆಯಿತೆಂದರೆ [ತುರ್ಯಾವಸ್ಥೆಯು ಸರಿಯಾಗಿ ಆಯಿತೆಂದರೆ] ಅರ್ಥರೂಪ, ಪಶ್ಯಂತಿ ವಾಣಿ ಅಂದರೆ ನಾಭಿಯಲ್ಲಿ ಉಂಟಾಗುವ ಕಿಂಚಿತ್ ಧ್ವನಿ, ವಾಣಿಯು ಮುಂದೆ ಬರುವದು. [ಜಾಗ್ರತವಾಗುವದು] ಮತ್ತು ಇದು ಅಪರೋಕ್ಷಾನುಭೂತಿಯ [ಆತ್ಮ ಸಾಕ್ಷಾತ್ಕಾರದ ಅನುಭವದ]ಅರ್ಥವನ್ನು ತಿಳಿಸಿಕೊಡುವದು.ಆದರೆ ಯಾವುದೇ ಜ್ಞಾನವಿರಲಿ, ಅದು ಜೀವಂತ ಇರುವದು. ಗತಿಮಾನ ಅಂದರೆ ಬುದ್ಧಿವಂತ, ಜ್ಞಾನವಂತ [ಪ್ರಜ್ಞಾವಂತ] ಇರುವದು ಅಂತೆಯೇ ಪಶ್ಯಂತಿಯಲ್ಲಿ ಸ್ಥಿರ ಆದಂಥ ಅರ್ಥವು ಮಧ್ಯಮಾದ ದ್ವಾರಾ ವೈಖರಿಯಲ್ಲಿ ಇಳಿಯದೇ ಇರುವದಿಲ್ಲ. ಅಂದರೆ ಇಳಿಯುವದು ಅಲ್ಲದೆ ಜ್ಞಾನ ಇವೇನೂ ಯಾರ ಸ್ವಂತದ ಖಾಸಗಿ ವಸ್ತು ಅಲ್ಲ. ಅದರಲ್ಲಿಯೂ ಆತ್ಮಜ್ಞಾನವಂತೂ ಯಾರ ಸ್ವಂತದ್ದೂ ಅಲ್ಲವೇ ಅಲ್ಲ. ಆದ್ದರಿಂದ ಸ್ವಸ್ವರೂಪದ ಅತಿಶಯ ಸೂಕ್ಷ್ಮ ಅನುಭವವೂ ಸಹ ವೈಖರಿಯಲ್ಲಿ ಹೇಗಾದರೂ ಪ್ರಕಟವಾಗದ ಹೊರತು ಜ್ಞಾನಿ ಪುರುಷನಿಗೆ ಸಮಾಧಾನವಾಗುವದಿಲ್ಲ. ಇದರಂತೆ ಜ್ಞಾನದ ವ್ಯವಹಾರ ಆಗದ ಹೊರತು. ಅಂದರೆ ಜ್ಞಾನವು ಒಬ್ಬ ವ್ಯಕ್ತಿಯಿಂದ ಇನ್ನೊಬ್ಬ ವ್ಯಕ್ತಿಯ ಕಡೆಗೆ ಹೋಗದ ಹೊರತು ಮಾನವೀ ಸಂಸ್ಕೃತಿಯಲ್ಲಿಯ ಜ್ಞಾನ ಪರಂಪರೆಯು ಸ್ಥಿರವಾಗಿ ಉಳಿಯಲಿಕ್ಕಿಲ್ಲ. ವೈಖರಿ ಇದು ಇಂಥ ಜ್ಞಾನಸಂಕ್ರಮಣದ ಅಂದರೆ ಮುನ್ನಡೆಯುವ, ಪ್ರಗತಿಪರ ಮುಖ್ಯ ಸಾಧನವಾಗುವದು. ಇದರ ಮೇಲಿಂದ ನೋಡಿದರೆ ಶ್ರೀ ಸಮರ್ಥರು ವೈಖರಿಗೇ ವಾಣಿಯ ಸ್ವಾಮಿನಿ ಎಂದು ಏಕೆ ಅಂದರು ಅನ್ನುವದರ ನಿರ್ಣಯ ಆಗುವದು. (೨) ಎಲ್ಲರಿಗೂ ರಾಮನಾಮವು ಸರ್ವಶ್ರೇಷ್ಠವಾದುದು. ಉತ್ತಮೋತ್ತಮವಾದುದು ಇರುವದು. ರಾಮನಾಮದ ಸ್ಮರಣೆ ಮಾಡಿದ್ದರಿಂದ ಶ್ರೀ ಶಂಕರನ ದಣಿವು ತೊಂದರೆ ಇಲ್ಲದಾಗಿ ಅವನಿಗೆ ವಿಶ್ರಾಂತಿ ದೊರಕಿತು. (೩)

ನಾವಾಚಾ ಮಹಿಮಾ ಥೋರ। ರೂಪ ಕೈಸೇ ಉತ್ತರೋತ್ತರ।
ಪರಾತ್ಪರ ಪರಮೇಶ್ವರ। ತ್ರಯಲೋಕ್ಯಧರ್ತಾ ॥೪॥

ಆತ್ಮಾರಾಮ ಚಹುಕಡೇ। ಲೋಕ ಪಾವಡೆ ಜಿಕಡೆ ತಿಕಡೆ।
ದೇಹೆ ಪಡೆ ಮೃತ್ಯ ಘಡೇ। ಆತ್ಮಯಾವಿಣ ॥೫॥

ಜೀವಾತ್ಮಾ ಶಿವಾತ್ಮಾ ಪರಮಾತ್ಮಾ। ಜಗದಾತ್ಮಾ ವಿಶ್ವಾತ್ಮಾ ಗುಪ್ತಾತ್ಮಾ।
ಆತ್ಮಾ ಅಂತರಾತ್ಮಾ ಸೂಕ್ಷ್ಮಾತ್ಮಾ। ದೇವ ದಾನವ ಮಾನವೀ ॥೬॥

ಸಕಳ ಮಾರ್ಗ ಚಾಲತೀ ಬೋಲತೀ। ಅವತಾರ ಪಂಗತೀಚೀ ಗತೀ।
ಆತ್ಮ್ಯಾಕರಿತಾ ಹೋತ ಜಾತೀ। ಬ್ರಹ್ಮಾದಿಕ ॥೭॥

ನಾದರೂಪ ಜ್ಯೋತಿರೂಪ। ಸಾಕ್ಷರೂಪ ಸತ್ತಾರೂಪ।
ಚೈತನ್ಯರೂಪ ಸಸ್ವರೂಪ। ದೃಷ್ಟಾರೂಪ ಜಾಣಿಜೆ ॥೮॥

ನರೋತ್ತಮು ವೀರೋತ್ತಮು। ಪುರುಷೋತ್ತಮು ರಘೋತ್ತಮು।
ಸರ್ವೋತ್ತಮು ಉತ್ತಮೋತ್ತಮು। ತ್ರಯಲೋಕ್ಯವಾಸೀ ॥೯॥

ನಾನಾ ಖಟಪಟ ಆಣೀ ಚಟಪಟ। ನಾನಾ ಲಟಪಟ ಆಣೀ ಝಟಪಟ।
ಆತ್ಮಾ ನಸತಾ ಸರ್ವ ಸಪಾಟ। ಚಹುಕಡೆ ॥೧೦॥

ಆತ್ಮ್ಯಾವಿಣ ವೇಡೆ ಕುಡೇ। ಆತ್ಮ್ಯಾವಿಣ ಮಡೇ ಬಾಪುಡೇ।
ಆತ್ಮ್ಯಾವಿಣ ಥಡೇ ರೋಕಡೇ। ಶರೀರಾಚೇ ॥೧೧॥

ನಾಮದ ಮಹಿಮೆಯು ಬಹಳ ಶ್ರೇಷ್ಠವಾದದ್ದಿರುವದು. ತ್ರೈಲೋಕ್ಯದೊಡೆಯನಾದ ಆತ್ಮಾರಾಮ ರೂಪಿ ಪರಮೇಶ್ವರ ಮತ್ತು ಪರಾತ್ಪರ ಅಂದರೆ ಶ್ರೇಷ್ಠರಲ್ಲಿ ಸರ್ವ ಶ್ರೇಷ್ಠನಾಗಿರುವ ನಿರ್ಗುಣ ಮತ್ತು ನಿರ್ವಿಕಾರಿ ಯಾಗಿರುವ ಪರಬ್ರಹ್ಮನಾದ ಭಗವಂತನ ಉತ್ತರೋತ್ತರ ಬೆಳೆಯುತ್ತ ಹೋಗುವ ಶ್ರೇಷ್ಠ ರೂಪವು ನಾಮಕ್ಕೆ ಪ್ರಾಪ್ತವಾಗುವದು. ಪುರುಷ ಮತ್ತು ಪ್ರಕೃತಿ ಇವು ಯಾವ ಪ್ರಕಾರ ಒಂದೇ ಮೂಲ ಮಾಯೆಯ ಎರಡು ಅಂಗ ಗಳಿರುವವೋ ಇದರಂತೆ ನಾಮ ಮತ್ತು ರೂಪ ಇವು ಒಂದೇ ಅಂತರಾತ್ಮನ ಎರಡು ಅಂಗಗಳಿರುವವು. ನಾಮವು ಸ್ಥೂಲದಲ್ಲಿರುವ ವರೆಗೆ ಉಪಾಸ್ಯ ದೇವತಾ ರೂಪಿ ಅಂತರಾತ್ಮನು ಸಗುಣ ಮೂರ್ತಿಯ ರೂಪದಿಂದ ಬೇರೆಯಾಗಿ, ಪ್ರತ್ಯೇಕನಾಗಿ ಕಾಣುವನು. ಆದರೆ ಸೂಕ್ಷ್ಮದಲ್ಲಿ ಈ ಭೇದವಿರುವದಿಲ್ಲ. ಆದ್ದರಿಂದ ನಾಮವು ಸೂಕ್ಷ್ಮ ಆಯಿತೆಂದ ಕೂಡಲೇ ರೂಪವು ನಾಮವನ್ನು ಬಿಟ್ಟು ಪ್ರತ್ಯೇಕವಾಗಿ ಉಳಿಯುವದಕ್ಕೆ ಸಾಧ್ಯವಾಗುವದೇ ಇಲ್ಲ. ಅಂತೂ ಒಟ್ಟಿನಲ್ಲಿ ನಾಮ ಮತ್ತು ರೂಪ ಈ ಎರಡೂ ನಾಮ ರೂಪವೇ ಆಗುವವು. ಸಾಧಕನ ವೃತ್ತಿ [ಇರುವಿಕೆ] ಹೇಗೆ ಹೇಗೆ ಸೂಕ್ಷ್ಮ ಮತ್ತು ವಿಶಾಲವಾಗುತ್ತ ಹೋಗುವದೋ ಆ ಆ ಪ್ರಕಾರ ಇವನ ನಾಮವೂ ಸಹ ಸೂಕ್ಷ್ಮ ಮತ್ತು ವಿಶಾಲವಾಗುವದು. ಇದೇ ನಾಮವು ಮುಂದೆ ತ್ರೈಲೋಕ್ಯವನ್ನು ವ್ಯಾಪಿಸುವದು, ಸ್ವತಃ ಪರಮೇಶ್ವರ ಅಥವಾ ಓಂಕಾರ ಸ್ವರೂಪದ ನಾದಬ್ರಹ್ಮನೇ ಇರುವನು. ಅನ್ನುವ ಅನುಭವ ನಿಮಗೆ ಬರುವದು. ಕೊನೆಗೆ ನಾಮವು ಪರಬ್ರಹ್ಮ ಸ್ವರೂಪ ಆಗಿ ಹೋಗುವದು. ಏಕರೂಪವಾಗುವದು (೪) ಒಬ್ಬ ಆತ್ಮಾರಾಮನು ಅಂತರ್ಯಾಮಿ ರೂಪದಿಂದ ಎಲ್ಲ ಕಡೆಗೂ ವ್ಯಾಪಿಸಿರುವನು. ಇವನ ಯೋಗದಿಂದ ಜಗತ್ತಿನಲ್ಲಿ ಅತ್ತ ಇತ್ತ, ಸುತ್ತುಮುತ್ತು ಎಲ್ಲ ಕಡೆಗೂ ಜನರ ವ್ಯವಹಾರ ನಡೆಯುವದು. ಇವನು ಎಲ್ಲಿ ಇರುವದಿಲ್ಲವೋ ಅಲ್ಲಿ ದೇಹ ಬೀಳುವದು. ಮರಣ ಒದಗಿ ಬರುವದು. (೫) ದೇವ, ದಾನವ, ಮತ್ತು ಮಾನವ, ಇವರಲ್ಲಿ ಅಂತರಾತ್ಮನಿಗೆ ಈ ಕೆಳಗಿನ ಹೆಸರುಗಳು ಇರುವದು ಕಂಡುಬಂದಿವೆ. ಜೀವಾತ್ಮಾ, ಶಿವಾತ್ಮಾ, ಪರಮಾತ್ಮಾ, ಜಗದಾತ್ಮಾ, ವಿಶ್ವಾತ್ಮಾ, ಗುಪ್ತಾತ್ಮಾ, ಆತ್ಮಾ, ಅಂತರಾತ್ಮಾ, ಸೂಕ್ಷ್ಮಾತ್ಮಾ (೬) ಈ ಪ್ರಕಾರ ಅನೇಕ ಹೆಸರು ಪಡೆದ ಅಂತರಾತ್ಮನ ಯೋಗದಿಂದಲೇ ಜಗತ್ತಿನಲ್ಲಿಯ ಯಾವತ್ತೂ ಮಾರ್ಗಗಳು ಅಂದರೆ ರೀತಿ-ನೀತಿ ರೂಢಿ, ಸಂಪ್ರದಾಯ ಮತ್ತು ನಡಾವಳಿಗಳು ನಡೆಯುವವು. ಎಲ್ಲ ಪ್ರಕಾರದ ವ್ಯವಹಾರಗಳು ಘಟಿಸುತ್ತವೆ. ಹಾಗೂ ನಡೆಯುತ್ತವೆ. ಅವತಾರಗಳ ಆ ಯಾವ ಮಾಲಿಕೆ ಕ್ರಮ ಇರುವದೋ ಅದರಂತೆ ಅವತಾರ ಕಾರ್ಯಗಳೆಲ್ಲವೂ ಅಂತರಾತ್ಮನ ಯೋಗದಿಂದಲೇ ಆಗುವವು. ಇವನಿಂದಲೇ ಬ್ರಹ್ಮಾದಿಕ ದೇವತೆ ಗಳು ಉತ್ಪನ್ನರಾಗುವರು. ಮತ್ತು ಹೋಗುವರು (೭) ಈ ಅಂತರಾತ್ಮನಿಗೆ ಇರುವ ಕೆಲವು ಹೆಸರುಗಳನ್ನು ಮೇಲೆ ಹೇಳ ಲಾಗಿದ್ದರೂ ಇನ್ನೂ ಕೆಲವು ಹೆಸರುಗಳು ಇವನಿಗೆ ಇರುವವು. ಅವುಗಳು ಯಾವುವೆಂದರೆ: ನಾದ ರೂಪ, ಜ್ಯೋತಿ ರೂಪ, ಸಾಕ್ಷಿ ರೂಪ, ಸತ್ತಾ ರೂಪ, ಚೈತನ್ಯ ರೂಪ, ಸ್ವಸ್ವರೂಪ, ದೃಷ್ಟಾ ರೂಪ. (೮) ನರೋತ್ತಮ, ವೀರೋ ತ್ತಮ, ಪುರುಷೋತ್ತಮ, ರಘೋತ್ತಮ, ಸರ್ವೋತ್ತಮ, ಉತ್ತಮೋತ್ತಮ ಮತ್ತು ತ್ರೈಲೋಕ್ಯವಾಸಿ ಇತ್ಯಾದಿ. (೯) ಜಗತ್ತಿನಲ್ಲಿ ಆಗುವ, ಹೋಗುವ ಅಘಟಿತ ಘಟನೆಗಳು ಮತ್ತು ಮನುಷ್ಯನಿಂದ ಆಗುವಂಥ ಯಾವತ್ತೂ ಕರ್ಮ, ಕಾರ್ಯ, ಕೆಲಸ ಮನುಷ್ಯನ ಜೀವನದಲ್ಲಿಯ ಒಳ್ಳೆಯ, ಕೆಟ್ಟ ಮತ್ತು ಅವಸರ, ಗದ್ದಲ, ಯುಕ್ತಿ ಇವೆಲ್ಲಕ್ಕೂ ಅಂತರಾತ್ಮನೇ ಮೂಲ ಕಾರಣನಾಗಿರುವನು. ಇವನು ಒಂದುವೇಳೆ ಇಲ್ಲದಂತಾದರೆ ಎಲ್ಲ ಕಡೆಗೂ ನಿಷ್ಪ್ರಾಣ(ಜೀವ ವಿಲ್ಲದ ದೇಹ) ವಾಗುವದು. (೧೦) ಆತ್ಮಾ ಇಲ್ಲದಿದ್ದರೆ ಶರೀರಕ್ಕೆ ಯಾವ ಮಹತ್ವವೂ ಇರುವದಿಲ್ಲ. ಆಗ ಇದು ಜೀವವಿಲ್ಲದ ಶರೀರವು ಸೊಟ್ಟಾ ಡೊಂಕಾ ವಿಕಾರದ್ದು ಆಗುವದು. ಆತ್ಮಾ ಇಲ್ಲದ ಶರೀರವು ಹೆಣ (ಪ್ರೇತ)ವೆನಿಸುವದು. ಆತ್ಮಾ ಇಲ್ಲದ ಶರೀರವು ಗೋರಿ, ಸಮಾಧಿ ಅನ್ನಿಸಿಕೊಳ್ಳುವದು. (೧೧)

ಆತ್ಮಜ್ಞಾನೀ ಸಮಜೆ ಮನೀ । ಸಾಹೆ ಜನೀ ಆತ್ಮಯಾಲಾಗುನೀ ।
ಭುವನೀ ಅಥವಾ ತ್ರಿಭುವನೀ । ಆತ್ಮ್ಯಾವಿಣೇ ವೋಸ ॥೧೨॥

ಪರಮ ಸುಂದರ ಆಣೀ ಚತುರ । ಜಾಣೇ ಸಕಳ ಸಾರಾಸಾರ ।
ಆತ್ಮ್ಯಾವಿಣ ಅಂಧಕಾರ । ಉಭಯ ಲೋಕೀ ॥೧೩॥

ಸರ್ವಾಂಗೀ ಸಿಧ ಸಾವಧ । ನಾನಾ ಭೇದ ನಾನಾ ವೇಧ ।
ನಾನಾ ಖೇದ ಆಣೀ ಆನಂದ । ತೇಣೇಚಿ ಕರಿತಾ ॥೧೪॥

ರಂಕ ಅಥವಾ ಬ್ರಹ್ಮಾದಿಕ । ಯೇಕ ಚಿ ಚಾಲವೀ ಅನೇಕ।
ಪಾಹಾವಾ ನಿತ್ಯಾನಿತ್ಯವಿವೇಕ । ಕೋಣ್ಹೀಯೇಕೇ ॥೧೫॥

ಜ್ಯಾಚೇ ಘರೀ ಪದ್ಮಿಣೀ ನಾರೀ । ಆತ್ಮಾ ತವರೀ ಆವಡೀ ಧರೀ ।
ಆತ್ಮಾ ಗೇಲಿಯಾ ಶರೀರೀ । ತೇಜ ಕೈಚೇ ॥೧೬॥

ಆತ್ಮಾ ದಿಸೇನಾ ನಾ ಭಾಸೇನಾ । ಬಾಹ್ಯಾತ್ಕಾರೇ ಅನುಮಾನೇನಾ ।
ನಾನಾ ಮನಾಚ್ಯಾ ಕಲ್ಪನಾ । ಆತ್ಮಯಾಚೆನೀ ॥೧೭॥

ಆತ್ಮಾ ಶರೀರೀ ವಾಸ್ತವ್ಯ ಕರೀ । ಆವಘೇ ಬ್ರಹ್ಮಾಂಡ ವಿವರೀ ಭರೀ ।
ವಾಸನಾ ಭಾವನಾ ಪರೋಪರೀ । ಕಿತೀ ಮ್ಹಣೋನೀ ಸಾಂಗಾವ್ಯಾ ॥೧೮॥

ಮನಾಚ್ಯಾ ಅನಂತ ವೃತ್ತೀ । ಅನಂತ ಕಲ್ಪನಾ ಧರಿತೀ ।
ಅನಂತ ಪ್ರಾಣೀ ಸಾಂಗೋ ಕಿತೀ । ಅಂತರ ತ್ಯಾಂಚೇ ॥೧೯॥

ಆತ್ಮವು ಅತಿ ಸೂಕ್ಷ್ಮವಿರುವದು. ಇದರ ಕಾರ್ಯ ಹೇಗೆ ನಡೆಯುವದು? ಅನ್ನುವದರ ತಿಳುವಳಿಕೆಯು
ನಿಮ್ಮ ಧ್ಯಾನದಲ್ಲಿ ಬರಬೇಕಾದರೆ ನೀವು ನಿಮ್ಮ ದೃಷ್ಟಿಯನ್ನು ಸೂಕ್ಷ್ಮ ಮಾಡಿಕೊಳ್ಳಬೇಕಾಗುವದು. ಆತ್ಮಜ್ಞಾನಿಯು
ದೃಷ್ಟಿಯು ಸೂಕ್ಷ್ಮವಾಗಿರುವದರಿಂದಲೇ ವಿಶ್ವದಲ್ಲಿ ಮತ್ತು ಮಾನವ ಜೀವನದಲ್ಲಿಯು ಸರ್ವತ್ರದಲ್ಲೂ ಅವನಿಗೆ
(ಆತ್ಮಜ್ಞಾನಿಗೆ) ಆತ್ಮನಿಂದ ನಡೆದಿರುವ ಈ ಎಲ್ಲ ಆಟವನ್ನು ನೋಡಲಿಕ್ಕೆ ಶಕ್ಯವಾಗುವದು (ಸಾಧ್ಯವಾಗುವದು) :
ಆತ್ಮಜ್ಞಾನಿ ಪುರುಷನು ಅಂತರಾತ್ಮನ ಈ ಅಗಾಧ ಕರ್ತೃತ್ವವನ್ನು ಮನದಲ್ಲಿ ನಿಶ್ಚಿತವಾಗಿ ತಿಳಿಯುವನು. ಇದರಿಂದಾಗಿ
ಜನರಲ್ಲಿ ಸೂಕ್ಷ್ಮತನದಿಂದ ತನ್ನ ಕಾರ್ಯಮಾಡುವ ಆತ್ಮನ ಕಡೆಗೇ ಇವನ (ಜ್ಞಾನಿಯ) ದೃಷ್ಟಿ ಇರುವದು. ಅಂದರೆ
ಜನತೆಯಲ್ಲಿ ಸಹ ಆತ್ಮನ ರೂಪ ನೋಡುವನು. ಪೃಥ್ವಿಯ ಮೇಲೆ ಇಷ್ಟೇ ಅಲ್ಲ,ಇಡೀ ತ್ರಿಭುವನದಲ್ಲಿಯೂ ಕೂಡಾ
[ಮನೆಯಲ್ಲಿ ಮತ್ತು ಹೊರಗೆಲ್ಲ ಕಡೆಗೂ] ಅಂತರಾತ್ಮನಿಲ್ಲದಿದ್ದರೆ ಎಲ್ಲವೂ ಹಾಳು ಬೀಳುವದು. ಅಂತರಾತ್ಮಾ ಇವನೇ
ಎಲ್ಲ ಕಡೆಯ ಜೀವಂತತನಕ್ಕೂ ಮತ್ತು ಚೈತನ್ಯಕ್ಕೂ ಮೂಲವಿರುವನು. (೧೨) ಈ ಅಂತರಾತ್ಮಾ ಅತಿಶಯ ಸುಂದರ
ಮತ್ತು ಚತುರನಿರುವನು. ಇವನು ಎಲ್ಲದರ ಯಾವತ್ತರ ಸಾರಾಸಾರವನ್ನು ತಿಳಿದವನಿರುವನು. ಇವನ ಜ್ಞಾನಮಯ
ನಿದ್ದದ್ದರಿಂದ ಇವನಿಲ್ಲದಿದ್ದರೆ ಇಹಲೋಕ ಮತ್ತು ಪರಲೋಕಗಳಲ್ಲಿ, ಪ್ರಪಂಚದಲ್ಲಿ ಮತ್ತು ಪರಮಾರ್ಥದಲ್ಲಿ ಅರ್ಥಾತ್
ಯಾವತ್ತೂ ಕಡೆಗೆ ಅಜ್ಞಾನ-ಅಂಧಃಕಾರವು ತುಂಬಿ ಹೋಗುವದು. (೧೩) ಇವನು ಸರ್ವಅಂಗಗಳಿಂದ ಸಿದ್ಧನಿರುವನು.
ಪರಿಪೂರ್ಣನಿರುವನು. ಇವನು ಸದಾ ಸರ್ವಕಾಲ [ಸದೈವ] ಎಚ್ಚರನಿರುವನು. ಇವನ ಲಕ್ಷ್ಯವು ಸದೈವ ತತ್ಪರ
ವಿರುವದು. ಕಾರ್ಯಶೀಲವಿರುವದು. ಅನೇಕ ಪ್ರಕಾರದ ಭೇದ ಅಂದರೆ ರಹಸ್ಯ ಗುಟ್ಟು ಬಯಲಾಗುವಿಕೆಯ
ಪ್ರಕಾರ, ಇತ್ಯಾದಿ ವೇಧ ಅಂದರೆ ಛಂದ, ಲಕ್ಷ, ಪ್ರಕಾಶ, ಸೂಕ್ಷ್ಮ ಅವಲೋಕನ ಇತ್ಯಾದಿ. ಖೇದ ಅಂದರೆ ದುಃಖ,
ಶೋಕ, ಆಯಾಸ ಇತ್ಯಾದಿ. ಮತ್ತು ಆನಂದ ಇವೆಲ್ಲವುಗಳೂ ಅಂತರಾತ್ಮನ ಯೋಗದಿಂದಲೇ ಆಗುವವು. (೧೪)
ಬಡವನಿರಲಿ ಅಥವಾ ಬ್ರಹ್ಮಾದಿಕ ದೇವರೇ ಇರಲಿ ಒಬ್ಬನೇ ಒಬ್ಬ ಅಂತರಾತ್ಮಾ ಈ ಎಲ್ಲರನ್ನೂ ಮತ್ತು ಎಲ್ಲವನ್ನೂ
ನಡೆಯಿಸುವನು. ಮನುಷ್ಯನು ನಿತ್ಯಾನಿತ್ಯ ವಿವೇಕವನ್ನು ಮಾಡಿನೋಡಬೇಕು. ಅಂದರೆ ಇದೆಲ್ಲ (ನಾನು ಈಗ ಹೇಳಿದ್ದೆಲ್ಲ)
ತಿಳಿಯುವದು. (೧೫) ಒಂದು ಉದಾಹರಣೆ ಹೇಳುವೆ ಕೇಳಿರಿ. ಒಬ್ಬನ ಮನೆಯಲ್ಲಿ ಪದ್ಮಿನಿ ಜಾತಿಯ ಸ್ತ್ರೀ, ಸುಂದರ
ಸ್ತ್ರೀ ಇರುವಳು. ಪದ್ಮಿನಿಯು ಅತಿ ಸುಂದರಿ ಮತ್ತು ಗುಣವಂತಿ ಇದ್ದುದಲ್ಲದೇ ಬಹು ಭಾಗ್ಯವಂತಳಿರುವಳು. ಆದರೆ
ಇವಳ ಶರೀರದಲ್ಲಿ ಎಲ್ಲಿಯವರೆಗೆ ಆತ್ಮಾ ಇರುವನೋ ಅಲ್ಲಿಯವರೆಗೆ ಇವಳ ಮೇಲೆ ಪ್ರೇಮವಿರುವದು. ಆತ್ಮಾ
ಶರೀರ ಬಿಟ್ಟು ಹೊರಟುಹೋದ ಮೇಲೆ ಅಲ್ಲಿ ಆ ಶರೀರದಲ್ಲಿ ಏನೂ ತೇಜವು ಉಳಿದಿರುವದೇ ಇಲ್ಲ. ಇದು
ಯಾತಕ್ಕೂ ಬಾರದ ಹೆಣ ಮಾತ್ರವಾಗಿರುವದು. (೧೬) ಆತ್ಮಾ ಇಂದ್ರಿಯಗಳಿಗೆ ಕಾಣುವದಿಲ್ಲ. ಇವನು ಮನದ
ಅಳವಿನಲ್ಲಿ ಬರುವದಿಲ್ಲ. ಯಾವುದೇ ಹೊರಗಿನ ಅಥವಾ ದೃಶ್ಯ ಮತ್ತು ಸ್ಥೂಲ ಸಾಧನಗಳಿಂದ ಇವನ ಕಲ್ಪನೆಯನ್ನು
ಮಾಡಲಿಕ್ಕೆ ಬರುವದಿಲ್ಲ. ನಮ್ಮ ಮನದಲ್ಲಿ ಏನೇನು ಯಾವ ಯಾವ ಪ್ರಕಾರದ ಅನೇಕ ಕಲ್ಪನೆಗಳು ನಿರ್ಮಾಣ
ವಾಗುವವೋ ಅವೆಲ್ಲವುಗಳೂ ಅಂತರಾತ್ಮನಿಂದಲೇ ಆಗುವವು. (೧೭) ಅಂತರಾತ್ಮನು ಶರೀರದಲ್ಲಿ ವಾಸ್ತವ್ಯಮಾಡುವನು.
ಅಲ್ಲಿ ಇವನು ಇದ್ದು ಯಾವತ್ತೂ ಬ್ರಹ್ಮಾಂಡದ ವಿಚಾರಮಾಡುವನು. ಮತ್ತು ಬ್ರಹ್ಮಾಂಡವನ್ನು ತುಂಬಿ ವ್ಯಾಪಿಸಿ
ಇರುವನು. ಇದರಂತೆ ಶರೀರದಲ್ಲಿ ಅನೇಕ ಪ್ರಕಾರದ ವಾಸನಾ ಉಂಟುಮಾಡುವವನು ಭಾವನೆ, ಕಲ್ಪನೆ, ಚಿಂತನೆ,
ಊಹೆ ಇತ್ಯಾದಿ ಏನೊಂದು ಹೇಳುವದು. ಇವೆಲ್ಲವುಗಳನ್ನೂ ಇವನ ಬಲದಿಂದ ಮನವು ಕಲ್ಪಿಸುವದು. ಅನುಭ
ವಿಸುವದು. ಇದೆಲ್ಲವನ್ನೂ ಹೇಳುವದು ಕಠಿಣವಿರುವದು. (೧೮) ಅಂತರಾತ್ಮನು ಶರೀರದ ಅಂತರ್ಯಾಮಿ ಇರುವಾಗ
ಮನದಲ್ಲಿ ಅನಂತ ವೃತ್ತಿ [ವರ್ತನೆ, ನಡವಳಿಕೆ, ಧಂದೆ, ಮನದ ಸ್ಥಿತಿ, ಟೀಕೆ, ಭಾವನೆ ಇತ್ಯಾದಿ] ಗಳು ಬಂದು
ಹೋಗುವವು. ಅನೇಕ ಪ್ರಕಾರದ ಕಲ್ಪನೆಯ ತರಂಗಗಳು ಏಳುವವು. ಜಗದಲ್ಲಿ ಅನಂತ ಪ್ರಾಣಿಗಳು ಇರುವವು.
ಇವೆಲ್ಲವುಗಳ ಅಂತರಂಗದ ಸಂಪೂರ್ಣ ವರ್ಣನೆ ಮಾಡಲಿಕ್ಕೆ ಶಕ್ಯವಿಲ್ಲ. (೧೯)

ಅನಂತ ರಾಜಕಾರಣೇ ಧರಣೇ । ಕುಬುಧೀ ಸುಬುಧೀ ವಿವರಣೇ ।
ಕಳೋ ನೇದಣೇ ಚುಕಾವಣೇ । ಪ್ರಾಣೀಮಾತ್ರಾಸೀ ॥೨೦॥

ಯೇಕಾಸ ಯೇಕ ಜಪತೀ ಟಪತೀ । ಯೇಕಾಸ ಯೇಕ ಖಪತೀ ಲಪತೀ ।
ಶತ್ರುಪಣಾಚೀ ಸ್ಥಿತೀಗತೀ । ಚಹೂಕಡೆ ॥೨೧॥

ಪೃಥ್ವೀಮಧೇ ಪರೋಪರೀ । ಯೇಕಾಸ ಯೇಕ ಸಿಂತರೀ ।
ಕಿತ್ಯೇಕ ಭಕ್ತ ಪರೋಪರೀ । ಪರೋಪಕಾರ ಕರಿತೀ ॥೨೨॥

ಯೇಕ ಆತ್ಮಾ ಅನಂತ ಭೇದ । ದೇಹ ಪರತ್ವೇ ಘೇತೀ ಸ್ವಾದ ।
ಆತ್ಮಾ ಠಾಈಚಾ ಅಭೇದ । ಭೇದ ಹಿ ಧರೀ ॥೨೩॥

ಪುರುಷಾಸ ಸ್ತ್ರೀ ಪಾಹಿಜೇ । ಸ್ತ್ರೀಸ ಪುರುಷ ಪಾಹಿಜೇ ।
ನವರೀಸ ನವರೀ ಪಾಹಿಜೇ । ಹೇ ತೋ ಘಡೇನಾ ॥೨೪॥

ಪುರುಷಾಚಾ ಜೀವ ಸ್ತ್ರಿಯಾಚೀ ಜೀವೀ । ಐಸೀ ನಾಹೀ ಉಠಾಠೇವೀ ।
ವಿಷಯಸುಖಾಚೀ ಗೋಮೀ । ತೇಥೇ ಭೇದ ಆಹೇ ॥೨೫॥

ಜ್ಯಾ ಪ್ರಾಣ್ಯಾಸ ಜೋ ಆಹಾರ । ತೇಥೇ ಚಿ ಹೋತೀ ತತ್ಪರ ।
ಪಶೂಚೆ ಆಹಾರೀ ನರ । ಅನಾದರೇ ವರ್ತತೀ ॥೨೬॥

ಆಹಾರಭೇದ ದೇಹೇಭೇದ । ಗುಪ್ತ ಪ್ರಗಟ ಉದಂಡ ಭೇದ ।
ತೈಸಾ ಚಿ ಜಾಣಾವಾ ಆನಂದ । ವೇಗಳಾಲಾ ॥೨೭॥

ಸಿಂಧುಭೂಗರ್ಭೀಚೀ ನೀರೇ । ತ್ಯಾ ನೀರಾಮಧೀಲ ಶರೀರೇ ।
ಆವರ್ಣೋದಕಾಚೀ ಜಳಚರೇ । ಅತ್ಯಂತ ಮೋಠೀ ॥೨೮॥

ಸೂಕ್ಷ್ಮ ದೃಷ್ಟೀ ಆಣಿತಾ ಮನಾ । ಶರೀರಾಚಾ ಅಂತ ಲಾಗೇನಾ ।
ಮಗ ತೋ ಅಂತರಾತ್ಮಾ ಅನುಮಾನಾ । ಕೈಸಾ ಯೇತೋ ॥೨೯॥

ಅನೇಕ ಪ್ರಕಾರದ ರಾಜಕಾರಣ ಮಾಡುವದೆಂದರೆ ಅನೇಕ ಪ್ರಕಾರದ ಖಟಪಟಿ, ಲಟಪಟಿ, ಉಲಾಢಾಲ, ಗಡಬಿಡಿ ಗೊಂದಲಗಳಲ್ಲಿ ಚಾಣಾಕ್ಷತನದಿಂದ ಕೆಲಸ ಮಾಡುವದು. ಉತ್ತಮ ಮತ್ತು ಕೆಟ್ಟ ಬುದ್ಧಿ ಇವುಗಳಲ್ಲಿ ಫರಕ [ವ್ಯತ್ಯಾಸ] ಮಾಡುವದು, ತನ್ನ ಬೇತು[ಉದ್ದೇಶ],ಯೋಜನೆ, ಯುಕ್ತಿಗಳನ್ನು ಯಾರಿಗೂ ತಿಳಿಯಗೊಡದಿರುವದು. ಕೆಲವರನ್ನು ತಪ್ಪಿಸುವದು. ಈ ಎಲ್ಲ ಕಾರ್ಯವನ್ನು ಜೀವ ಪ್ರಾಣಿಯು ಅಂತರಾತ್ಮನ ಯೋಗದಿಂದ ಪ್ರೇರಣೆಯಿಂದ ಮಾಡಲು ಶಕ್ತನಾಗುವನು. (೨೦) ಒಬ್ಬನು ಒಬ್ಬನನ್ನು ಕಾಯುವದು-ರಕ್ಷಣೆಮಾಡುವದು, ಒಬ್ಬನು ಒಬ್ಬನನ್ನು ಹೊಡೆಯುವದಕ್ಕಾಗಿ ಹೊಂಚುಹಾಕಿ ಕಾಯುತ್ತ ಕೂಡ್ರುವದು, ಒಬ್ಬ ಒಬ್ಬನನ್ನು ಜಗಳ ತೆಗೆದು ಹೊಡೆಯುವದು. ಒಬ್ಬನು ಒಬ್ಬನಿಂದ ತಪ್ಪಿಸಿಕೊಂಡು ಅಡಗಿ ಕೂಡುವದು, ಒಬ್ಬನು ಇನ್ನೊಬ್ಬನ ಸಂಗಡ ಶತ್ರುತ್ವಮಾಡುವದು, ಈ ಪ್ರಕಾರ ಸುತ್ತೂ ಕಡೆಯಿಂದ ಆಗುವದೆಲ್ಲವೂ ಅಂತರಾತ್ಮನ ಕ್ರಮವೇ ಇರುವದು. (೨೧) ಜಗತ್ತಿನಲ್ಲಿ ಒಬ್ಬನು ಇನ್ನೊಬ್ಬನನ್ನು ಸತತ ಮೋಸಗೊಳಿಸುವನು. ಆದರೆ ಇದರ ಜೊತೆಗೇನೆ ಅನೇಕರು ಭಕ್ತರಂತೆ ಸತತವಾಗಿ ಪರೋಪಕಾರವನ್ನು ಮಾಡುವರು. ಇದೆಲ್ಲ ಅಂತರಾತ್ಮನಿಂದಲೇ ಉಂಟಾಗುವದು. (೨೨) ಮೂಲದಲ್ಲಿ ಅಂತರಾತ್ಮನು ಒಬ್ಬನೇ ಒಬ್ಬ ಇರುವನು. ಆದರೆ ದೇಹ ಪರತ್ವ [ಉಪಾಧಿ ಭೇದ] ದಿಂದ ಅನಂತ ಭೇದಗಳಾಗುವವು. ಮತ್ತು ಪ್ರತಿಯೊಂದು ದೇಹಾನುಸಾರವಾಗಿ ಬೇರೆ ಬೇರೆ ರೀತಿಯಲ್ಲಿ ಭೋಗ ಪಡೆಯುವದು ನಡೆಯುವದು. ಇದರ ಅರ್ಥವು ಹೀಗಿರುವದು. ಮೂಲ ಅಂತರಾತ್ಮನು ಒಬ್ಬನೇ ಒಬ್ಬನಿದ್ದರೂ ಕೂಡಾ ಇವನು ಭೇದದಿಂದಲೂ ಸಹಿತ ಇರಬಲ್ಲವನಾಗಿರುವನು.(೨೩) ಜಗತ್ತಿನಲ್ಲಿ ಎತ್ತ ನೋಡಿದರತ್ತ ಭೇದವು [ಅನೇಕ ಪ್ರಕಾರದಲ್ಲಿ] ಕಣ್ಣಿಗೆ ಕಂಡುಬರುವದು. ವಿವಿಧ ರೀತಿಯುವು ದೃಷ್ಟಿಗೆ ಬೀಳುವವು. ಈ ಪ್ರಕಾರ ಅನಂತ ಭೇದಗಳು ಕಂಡರೂ ಕೂಡಾ ಮೂಲ ಅಂತರಾತ್ಮಾ ಅಭೇದ ತನದಿಂದ ಇರುವನು. ಸೂಕ್ಷ್ಮ ದೃಷ್ಟಿ ಸಾಧಿಸಿ ಪಡೆದು ಇದನ್ನು ನೋಡಲಿಕ್ಕೆ, ತಿಳಿಯಲಿಕ್ಕೆ ಸಿದ್ಧರಾಗಬೇಕು. ಇದನ್ನು ಕಲಿಯಬೇಕು. ಪುರುಷನಿಗೆ ಸ್ತ್ರೀ ಬೇಕೆನಿಸುವದು. ಅದರಂತೆ ಸ್ತ್ರೀಗೆ ಪುರುಷ ಬೇಕೆನಿಸುವದು. ವಧುವಿಗೆ ವಧು ಬೇಕು ಎಂದು ಅನಿಸುವದಿಲ್ಲ. ಇದು ಎಂದೂ ನಡೆಯುವದಿಲ್ಲ. (೨೪) ಇದು ಪುರುಷ ಜೀವ, ಇದು ಸ್ತ್ರೀ ಜೀವ ಹೀಗೇನೂ ಸ್ತ್ರೀಲಿಂಗ-ಪುಲ್ಲಿಂಗದ ಭೇದಮಾಡಲಿಕ್ಕೆ ಬರುವದಿಲ್ಲ. ಇಂದ್ರಿಯ ಸುಖವನ್ನು ಭೋಗಿಸುವ ಬಾಬತಿನಲ್ಲಿ ಮಾತ್ರ ಭೇದ ಕಂಡುಬರುವದು. (೨೫) ಯಾವ ಪ್ರಾಣಿಯದು ಯಾವ ತರಹದ ಆಹಾರವಿರುವದೋ ಆ ಆ ಆಹಾರದ ಬಗ್ಗೆ ಆ ಆ ಪ್ರಾಣಿಗಳು ಬಹಳ ತತ್ಪರ (ಆಸಕ್ತ) ವಿರುವವು. ಉದಾ: ಪಶುಗಳ ಆಹಾರವೇನೂ ಮನುಷ್ಯರಿಗೆ ಬೇಕೆನಿಸುವದಿಲ್ಲ [ಅನಾದರ ತೋರುವನು].(೨೬) ಪ್ರಾಣಿಗಳಲ್ಲಿ ಆಹಾರ ಭೇದವಿರುವದು. ಶರೀರದ ಭೇದವಿರುವದು. ಇಂತಹವೇ ಹಲವು ಪ್ರಕಟ ಭೇದಗಳು ಮತ್ತು ಹಲವು ಗುಪ್ತ ಭೇದಗಳೂ ಇರುವವು. ಇದೇ ಪ್ರಕಾರ ಪ್ರತಿಯೊಂದು ಪ್ರಾಣಿಯ ಆನಂದವು ಬೇರೆ ಬೇರೆ ರೀತಿಯವಿರುವವು. (೨೭) ಸಮುದ್ರದಲ್ಲಿ ಮತ್ತು ಪೃಥ್ವಿಯ ಹೊಟ್ಟೆಯಲ್ಲಿ ನೀರಿನ ಸಂಗ್ರಹ [ಸಾಠಾ] ಇರುವದು. ಈ ನೀರಿನಲ್ಲಿ ಮತ್ತು ಹೊರಗಿನ ನೀರಿನಲ್ಲಿ ಅಂದರೆ ಆವರಣೋದಕದಲ್ಲಿ ಅಂದರೆ ಬ್ರಹ್ಮಾಂಡವನ್ನು ಸುತ್ತುವರಿದ ಅಪಾರ ನೀರಿನಲ್ಲಿ ಬಹಳ ದೊಡ್ಡ ದೊಡ್ಡ ಜಲಚರಗಳು ಇರುವವು. ಇವುಗಳ ಆಹಾರ ಮತ್ತು ಇವುಗಳ ಆನಂದ ಬೇರೆ ಪ್ರಕಾರದ್ದೇ ಇರುವದು. (೨೮) ಮನುಷ್ಯನು ಸೂಕ್ಷ್ಮ ದೃಷ್ಟಿಯಿಂದ ನೋಡಿದರೂ ಸಹಿತ ಶರೀರದ ಅಂತ ಮತ್ತು ಆಳತೆಯು ಹತ್ತುವದಿಲ್ಲ. [ತಿಳಿಯುವದಿಲ್ಲ].ಶರೀರವಾದರೋ ಎಲ್ಲರಿಗೂ ಕಾಣಿಸುವಂಥದು, ಪ್ರತ್ಯಕ್ಷ ಎದುರಿಗೆ ಇರುವಂಥ ಸ್ಥೂಲವಾಗಿರುವ ಈ ದೇಹದ ಬಗ್ಗೆ ಎಷ್ಟು ಅಂತ ಹತ್ತುವದಿಲ್ಲ. ಇದರ ಸಂಪೂರ್ಣ ಜ್ಞಾನವಾಗುವದಿಲ್ಲ. ಅಂದ ಮೇಲೆ ಅಂತರಾತ್ಮನಾದರೋ ಅತಿಶಯ ಸೂಕ್ಷ್ಮನಾಗಿರುವನು. ಇವನ ಸಂಪೂರ್ಣ ಜ್ಞಾನವಾಗುವದು ಇನ್ನೂ ಕಠಿಣ, ಬಹಳ ಕಠಿಣವಿರುವದು. (೨೯)

ದೇಹ್ಯಾತ್ಮಯೋಗ ಶೋಧೂನ ಪಾಹಿಲಾ । ತೇಣೇ ಕಾಹೀ ಅನುಮಾನಲಾ ।
ಸ್ಥೂಳಸೂಕ್ಷ್ಮಾಚಾ ಗಲಬಲಾ । ಗಥಾಗೋವೀ ॥೩೦॥

ಗಥಾಗೋವೀ ಉಗವಾ ವ್ಯಾಕಾರಣೇ । ಕೇಲೀ ನಾನಾ ನಿರೂಪಣೇ ।
ಅಂತರಾತ್ಮಾ ಕೃಪಾಳುಪಣೇ । ಬಹುತಾ ಮುಖೇ ಬೋಲಿಲಾ ॥೩೧॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ಆತ್ಮಾರಾಮು ನಿರೂಪಣ' ನಾಮ ಸಮಾಸ ಅಷ್ಟಮ ॥

• •

ದೇಹ ಮತ್ತು ಆತ್ಮಾ ಇವುಗಳಸಂಯೋಗ ಆಗಿರುವದು. ಈ ಸಂಯುಕ್ತ ದೇಹಾತ್ಮ ಸಂಬಂಧದ ಶೋಧವನ್ನು ಮಾಡಿದ್ದಾದರೆ ಆಗ ನಿಮಗೆ ಅಂತರಾತ್ಮನ ಬಗ್ಗೆ ಸ್ವಲ್ಪವಾದರೂ ಕಲ್ಪನೆಯು ಬರುವದು. ಆತ್ಮಾ ಇದು ಅತ್ಯಂತ ಸೂಕ್ಷ್ಮವಾದರೆ ದೇಹವು ಅತ್ಯಂತ ಸ್ಥೂಲವಿರುವದು. ಈ ಸ್ಥೂಲ ಸೂಕ್ಷ್ಮ ಸಂಯೋಗದ ತೊಡಕು [ಗೊಂದಲ]ಬಹಳ ಗದ್ದಲವನ್ನು ಮಾಡುವದು· ಅಂತೂ ಎಲ್ಲವೂ ದೊಡ್ಡ ಗೊಂದಲಮಯವಾಗಿ ಕಾಣುವದು.(೩೦) ಈ ತೊಡಕನ್ನು ಈ ರಹಸ್ಯದ, ನಿಜ ಸ್ವರೂಪವನ್ನು ಬಿಡಿಸಲಿಕ್ಕೆ ಬರಬೇಕಾದರೆ, ಅನೇಕ ಪ್ರಕಾರದ ನಿರೂಪಣ [ಬ್ರಹ್ಮಜ್ಞಾನದ ಪ್ರವಚನ, ವ್ಯಾಖ್ಯಾನ] ಕೇಳಬೇಕಾಗುವದು. ಮಾಡಬೇಕಾಗುವದು. ಆತ್ಮನ ಕೃಪೆಯು ಆದದ್ದರಿಂದ ಅಥವಾ ಆದವರಿಂದಲೇ ಇಂಥ ನಿರೂಪಣಗಳು ಬಹಳಷ್ಟು ಸಂತ, ಶರಣ, ಸಾಧುಗಳ ಮುಖಗಳಿಂದ ಹೊರಬಿದ್ದಿರುವವು. [ಹೇಳಲ್ಪಟ್ಟಿರುವವು] (೩೧)

ಶ್ರೀ ದಾಸಬೋಧದ ಹದಿನಾರನೆಯು ದಶಕದಲ್ಲಿಯು ಗುರುಶಿಷ್ಯರ ಸಂವಾದದ "ಆತ್ಮಾರಾಮ ನಿರೂಪಣ" ವೆಂಬ ಎಂಟನೆಯು ಸಮಾಸವು ಮುಗಿದುದು.

● ●

ದಶಕ ಷೋಡಶ : ಸಮಾಸ ನವಮ : ನಾನಾ ಉಪಾಸನಾ ನಿರೂಪಣ [ನುಡಿ ೨೯]

॥ಶ್ರೀರಾಮ ಸಮರ್ಥ॥ ಪೃಥ್ವೀಮಧೇ ಲೋಕ ನಾನಾ। ತ್ಯಾಸ ನಾನಾ ಉಪಾಸನಾ।
ಭಾವಾರ್ಥೇ ಪ್ರವರ್ತಲೇ ಭಜನಾ । ಠಾಈ ಠಾಈ ॥೧॥

ಆಪುಲ್ಯಾ ದೇವಾಸ ಭಜತೀ । ನಾನಾ ಸ್ತುತೀ ಸ್ತವನೇ ಕರಿತೀ ।
ಜೇ ತೇ ನಿರ್ಗುಣ ಮ್ಹಣತೀ । ಉಪಾಸನೇಸೀ ॥೨॥

ಮೊದಲು ಭಾವ ಭಕ್ತಿಯಿಂದ ಮತ್ತು ವಿಚಾರದಿಂದ ಮತ್ತು ಸಾಧನದಿಂದ ಯಾರು ಅಂತರಂಗದಲ್ಲಿ [ಒಳಗೆ] ನೋಡುತ್ತ ಹೋಗುವರೋ ಮತ್ತು ನೋಡಿದಂತೆಲ್ಲ ಅಂತರಂಗವು ತಿಳಿಯುತ್ತ ಹೋಯಿತೆಂದರೆ ಅವರು ಗುರಿಯನ್ನು ಮುಟ್ಟುವರು. ಅಥವಾ ಕೊನೆಯುವರೆಗೆ ಹೋಗಿ ಮುಟ್ಟುವರು. ಅರ್ಥಾತ್ ಅವರು ಆತ್ಮಸ್ವರೂಪದ ವರೆಗೆ ಹೋಗಿ ಮುಟ್ಟುವರು. ಇವರೇ ಉತ್ತಮ ವಿವೇಕವಂತ ಮನುಷ್ಯರು. ಅಶಾಶ್ವತ ತತ್ವಗಳನ್ನು ಹಿಂದಕ್ಕೆ ಬಿಟ್ಟು [ಸರಿಸಿ, ಬಿಟ್ಟುಕೊಟ್ಟು] ಇವರು ನಿರ್ಮಲ ಬ್ರಹ್ಮದವರೆಗೆ ಹೋಗಿ ಮುಟ್ಟುವರು. (೧೭) ಎಲೋ ಶಿಷ್ಯನೇ ಕೇಳು, ಯಾವ ಯಾವುದು ಆಕಾರಕ್ಕೆ ಬರುವದೋ ದೃಷ್ಟಿಗೆ ಕಾಣುವದೋ ಅದೆಲ್ಲವೂ ನಾಶ ಹೊಂದುವದು. ಆಕಾರಮಯ ರೂಪಗೊಂಡಂಥ ಅಶಾಶ್ವತದ ಗೊಂದಲ ಗಡಬಡಿಯ ಆಚೆಗೆ ಇರುವಂಥಾದ್ದೇ ಆ ಪರಬ್ರಹ್ಮ ವಿರುವದು. (೧೮) ದೇವನು ಚಂಚಲನು ಆದರೆ ಪರಬ್ರಹ್ಮವು ನಿಶ್ಚಲವಿರುವದು. ಪರಬ್ರಹ್ಮನಲ್ಲಿ ಭ್ರಮವೆಂಬುದಿಲ್ಲ. ನಾವೆಲ್ಲರೂ ಭ್ರಮದಲ್ಲಿರುವೆವು. ಆದ್ದರಿಂದ ಬ್ರಹ್ಮನ ಪ್ರತ್ಯಕ್ಷ ಅನುಭವವನ್ನು ಪಡೆದು ನಾವು ಭ್ರಮರಹಿತರಾಗ ಬೇಕು. (೧೯) ಅನುಭವ ಪಡೆಯದೆ ನಾವು ಯಾವುದನ್ನು ಮಾಡುವೆವೋ ಅದೆಲ್ಲವೂ ವ್ಯರ್ಥವಾಗಿ ಹೋಗುವದು. ಕರ್ಮದ ಅವಘಡ [ಹಿಡಿತ, ಸಂಕಟ, ಇರುಕಿನಲ್ಲಿ] ದಲ್ಲಿ ಸಿಕ್ಕು ಮನುಷ್ಯನು ಕಷ್ಟ ಭೋಗಿಸುತ್ತಲೇ ಸತ್ತು ಹೋಗುವನು. ಎಲ್ಲಿಯುವರೆಗೆ ನಮಗೆ ಸೂಕ್ಷ್ಮದಲ್ಲಿ ಸೇರಲಿಕ್ಕೆ ಬರುವದಿಲ್ಲವೋ ಮತ್ತು ಎಲ್ಲಿಯುವರೆಗೆ ನಮಗೆ ಅನುಭವ ಬರುವದಿಲ್ಲವೋ ಅಲ್ಲಿಯುವರೆಗೆ ಕರ್ಮದ ಬಂಧನ ಸಡಿಲು ಆಗುವದಿಲ್ಲ. ಕರ್ಮದ ಬಂಧನ ಎಲ್ಲಿಯುವರೆಗೆ ಸಡಿಲು ಆಗುವದಿಲ್ಲವೋ ಅಲ್ಲಿಯುವರೆಗೆ ಜೀವದ ತಳಮಳವೇನೂ ಕಡಿಮೆ ಆಗುವದಿಲ್ಲ. ಈ ರೀತಿಯಿಂದಾಗಿ ಮನುಷ್ಯನು ದುಃಖದಲ್ಲಿಯೇ ಸಾಯುವನು. (೨೦) ಕರ್ಮ ಬಂಧನದಿಂದ ಬಿಡುಗಡೆ ಆಗದಿದ್ದರೆ ಅಥವಾ ಇದರಿಂದ ಮುಕ್ತನಾಗದಿದ್ದರೆ ಅಂದರೆ ನಿಷ್ಕರ್ಮನಾಗಲಿಕ್ಕೆ ಬರದಿದ್ದರೆ ದೇವರ ಭಜನೆ ಇತ್ಯಾದಿಗಳನ್ನು ಏತಕ್ಕೆ ಮಾಡುವದು? ಈ ವಿಷಯವು ವಿವೇಕಿ ಪುರುಷರಿಗೆ ಸರಿಯಾಗಿ ತಿಳಿಯುವದು. ಮೂರ್ಖರು, ದಡ್ಡರು ಇದನ್ನು ತಿಳಿಯುವದಿಲ್ಲ. ಕರ್ಮವು ಸಗುಣವಿರುವದು, ದೃಶ್ಯವಿರುವದು, ಸ್ಥೂಲವಿರುವದು. ನಮಗೆ ದೃಶ್ಯವನ್ನು ದಾಟಿ ಮುಂದೆ ಸೂಕ್ಷ್ಮದಲ್ಲಿ ಹೋಗಬೇಕಾಗಿದೆ ಎಂಬ ಮಾತು ನಿಜವಿರುವದು. ಆದರೂ ನಮ್ಮಲ್ಲಿ ದೇಹಾಭಿಮಾನವು ಎಲ್ಲಿಯುವರೆಗೆ ಇರುವದೋ ಅಲ್ಲಿಯುವರೆಗೆ ನಾವು ಸಗುಣದಲ್ಲಿರುವೆವು. ಸಗುಣಕ್ಕೆ ಸಗುಣದ ಉಪಾಸನೆಯನ್ನು ಮಾಡಲು ಶಕ್ಯವಿರುವದು. ಆದರೆ ಈ ಸಗುಣ ಉಪಾಸನೆಯಿಂದ ನಮ್ಮ ನಾನು [ಅಹಂ] ಅನ್ನುವದು ಕ್ಷೀಣವಾಗಿ ಪೂರ್ಣ ಇಲ್ಲದಾಗಿ ಬಿಡುವದು. ಆಗ ಅನಾಯಾಸದಿಂದ ನಾವು ನಿರ್ಗುಣದಲ್ಲಿ ಪ್ರವೇಶಮಾಡುವೆವು. ಅರ್ಥಾತ್ ತಾನಾಗಿಯೇ ಪ್ರವೇಶ ಘಟಿಸು ವದು. (೨೧) ಖರೇ ವಿಚಾರಮಾಡಿ ನೋಡಿದರೆ ದೇವರು ಜಗತ್ತಿನ ಅಂತರ್ಯಾಮದಲ್ಲಿ ತುಂಬಿ ತುಳುಕುವನೆಂಬುದರ ಕಲ್ಪನೆಯು ಬರುತ್ತದೆ. ಈ ಖರೇ ದೇವರನ್ನು ಭಜಿಸುವದಕ್ಕೆ ಸಗುಣದ ಆಧಾರ ಹಿಡಿಯಲಿಕ್ಕೆ ಬೇಕು. ಈ ರೀತಿ ಯಿಂದ ಸಗುಣದ ಉಪಾಸನೆಯನ್ನು ಮಾಡಿದೆವೆಂದರೆ ಆಗ ನಿಶ್ಚಯುವಾಗಿ ನಿರ್ಗುಣ ಸ್ವರೂಪದ ಪ್ರಾಪ್ತಿಯಾಗು ವದು. (೨೨) ನಾಮ ರೂಪಾತ್ಮಕ ಸಗುಣದಲ್ಲಿ ಶೋಧ ಮಾಡುತ್ತಾ ಮಾಡುತ್ತಾ ಅನುಭವವನ್ನು ಹೊಂದುತ್ತ ಕೊನೆಗೆ ಮೂಲ ಮಾಯೆಯುವರೆಗೆ ಬಂದು ಮುಟ್ಟುವನು. ಅಲ್ಲಿ ಅವನಿಗೆ ಸಹಜವಾಗಿ ನಿರ್ಗುಣ ಸ್ವರೂಪದ ಪ್ರಾಪ್ತಿ ಯಾಗುವದು. ಅಲ್ಲಿಗೆ ಉಪಮಾಸನೆಯ ಕೊನೆಯು ಬರುವದು. ಉಪಾಸಕನ "ನಾನು" ಅನ್ನುವ ಅಹಂ ಇಲ್ಲಿಗೆ ಸಂಪೂರ್ಣವಾಗಿ ಇಲ್ಲದಾಗಿ ಬಿಡುವದು. ನಾನು ಅನ್ನುವದು ಸಂಪೂರ್ಣವಾಗಿ ಇಲ್ಲದಾಗಿ ಹೋದ ಮೇಲೆ ಯಾವತ್ತೂ ದೃಶ್ಯ ರೂಪವಾದ ಸಗುಣದಿಂದ ಇವನು [ಉಪಾಸಕನು] ಮುಕ್ತನಾಗುವನು. ಹೀಗೆ ಮುಕ್ತನಾದಂಥ ಸಾಧಕನು ಕೊನೆಯಲ್ಲಿ ಬ್ರಹ್ಮರೂಪವಾಗುವನು. (೨೩)

ಪರಮೇಶ್ವರೀ ಅನುಸಂಧಾನ। ಲಾವಿತಾ ಹೋಇಜೆ ಪಾವನ।
ಮುಖ್ಯ ಜ್ಞಾನೇಚಿ ವಿಜ್ಞಾನ। ಪಾವಿಜೇತೇ ॥೨೪॥

ಏಸೀ ಹೇ ವಿವೇಕಾಚೀ ವಿವರ್ಣೇ। ಪಾಹಾವೀ ಸುಚಿತ ಅಂತಃಕರ್ಣೇ।
ನಿತ್ಯಾನಿತ್ಯವಿವೇಕಶ್ರವಣೇ। ಜಗದೋಧಾರ ॥೨೫॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ಅಂತರ್ದೇವ ನಿರೂಪಣ' ನಾಮ ಸಮಾಸ ಅಷ್ಟಮ ॥

● ●

ಅಂತರಾತ್ಮನ ಅಖಂಡ ಅನುಸಂಧಾನ ಹಚ್ಚಬೇಕು. ಈ ಪ್ರಕಾರದಲ್ಲಿ ಅನುಸಂಧಾನ ಹತ್ತಿದ ಕೂಡಲೇ ಮನುಷ್ಯನು ಪಾವನನಾಗುವನು. ಇವನಿಗೆ ಆತ್ಮಜ್ಞಾನವಾಗುವದು. ಈ ಜ್ಞಾನದಿಂದ ಮುಂದೆ ಅನುಭವರೂಪ ವಿಜ್ಞಾನವು ಪ್ರಾಪ್ತವಾಗುವದು. ಜೀವಕ್ಕೆ ಭಗವಂತನ ಹೊರತಾಗಿ ಇತರ ಎಲ್ಲವೂ ಲೋಪವಾಗಿ ಮರೆವು ಆಗಿ ಅರ್ಥಾತ್ ಉಳಿದೆಲ್ಲವುಗಳ ಸ್ಮರಣವೆಷ್ಟೂ ಉಳಿಯದಂತಾಗುವದಕ್ಕೇ ಅನುಸಂಧಾನ-ಅನುಸಂಧಾನವೆಂದು ಅನ್ನುವರು. (೨೪) ಅಂತಃಕರಣ ಏಕಾಗ್ರಮಾಡಬೇಕು. ಮತ್ತು ವಿವೇಕದಿಂದ ಇಂಥವುಗಳ ವಿವರಣೆ ಮಾಡಬೇಕು. ನಿತ್ಯಾನಿತ್ಯವಿವೇಕ ಅಂದರೆ ಈ ಸೃಷ್ಟಿಯಲ್ಲಿ ಶಾಶ್ವತ ಯಾವುದು ? ಅಶಾಶ್ವತ ಯಾವುದು ? ಈ ವಿಷಯದ ಬಗ್ಗೆ ನಿತ್ಯವೂ ಶ್ರವಣಮಾಡಿದರೆ ಮನನ ನಿಧಿ ಧ್ಯಾಸ ಮಾಡಿದರೆ ಸರ್ವ ಜಗತ್ತಿನ [ಜಗತ್ತಿನಲ್ಲಿಯ ಜೀವಗಳ] ಉದ್ಧಾರವಾಗುವದು. (೨೫)

ಶ್ರೀ ದಾಸಬೋಧದ ಹದಿನೆಂಟನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ಅಂತರ್ದೇವ ನಿರೂಪಣ"ವೆಂಬ ಹೆಸರಿನ ಎಂಟನೇ ಸಮಾಸವು ಮುಗಿದುದು.

● ●

ದಶಕ ಅಷ್ಟದಶ : ಸಮಾಸ ನವಮ : ನಿದ್ರಾನಿರೂಪಣ (ನುಡಿ ೨೪)

॥ಶ್ರೀರಾಮ ಸಮರ್ಥ॥ ವಂದೂನಿಯಾ ಆದಿಪುರುಷ ।
ಬೋಲೋ ನಿದ್ರೇಚಾ ವಿಳಾಸ ।
ನಿದ್ರಾ ಆಲಿಯಾ ಸಾವಕಾಸ । ಜಾಣಾರ ನಾಹೀ ॥೧॥

ನಿದ್ರೇನೇ ವ್ಯಾಪಿಲೀ ಕಾಯಾ । ಆಳಸ ಅಂಗ ಮೋಡೇ ಜಾಂಭಯಾ ।
ತೇಣೇ ಕರಿತಾ ಬೈಸಾವಯಾ । ಧೀರ ನಾಹೀ ॥೨॥

# ದಶಕ ೧೮. ಸಮಾಸ ೯. ನಿದ್ರಾ ನಿರೂಪಣ (ನುಡಿ ೨೪)

ಈ ಸಮಾಸದಲ್ಲಿ ಶ್ರೀ ಸಮರ್ಥರು ನಿದ್ರೆಯ ವರ್ಣನೆಮಾಡಿದ್ದಾರೆ. ಮಾನವ ಜೀವನದಲ್ಲಿ ನಿದ್ರೆಗೆ ಎಷ್ಟು ಮಹತ್ವವಿರುವದೆಂಬುದನ್ನು ಯಾರಿಗೂ ಬಿಡಿಸಿ ಹೇಳಲಿಕ್ಕೆ ಬೇಡ. ತಿನ್ನುವದು, ಕುಡಿಯುವದು, ನಿದ್ರೆ, ಮಲಮೂತ್ರ ವಿಸರ್ಜನೆ ಇತ್ಯಾದಿ ಮಾನವ ಶರೀರದ ಮೂಲಭೂತ ಅವಶ್ಯಕತೆಗಳಿರುವವು ಆದರೂ ಅದರಲ್ಲಿಯೇ ನಿದ್ರೆಗೆ ವಿಶೇಷ ಸ್ಥಾನವಿರುವದು. ಯಾವೊಬ್ಬನಿಗೆ ಒಂದು ದಿವಸ ಅನ್ನ ಸಿಗದಿದ್ದರೆ ಆ ಬಗ್ಗೆ ಅವನಿಗೆ ವಿಶೇಷವೆನಿಸುವದಿಲ್ಲ. ಆದರೆ ಅದೇ ಒಂದು ದಿವಸ ಎಷ್ಟೂ ನಿದ್ರೆ ಆಗದಿದ್ದರೆ ಅವನಿಗೆ ಬಹಳ ಬೇಚೈನ ಆಗುವದು. ಸಂತರು ನಿದ್ರೆಯನ್ನು ಬೇರೆ ಬಗೆಯಿಂದ ನೋಡುವರು. ವ್ಯವಹಾರದಲ್ಲಿ ಮನುಷ್ಯನು ಯಾವಾಗ ಎಚ್ಚರವಿರುವನೋ ಆಗ ಅವನ ವಿವೇಕವು ಸತೇಜವಿರುವದು.[ಪ್ರಫುಲ್ಲಿತವಿರುವದು]. ಅವನ ಜ್ಞಾನ ಕ್ರಿಯೆ ವ್ಯವಸ್ಥಿತ ಕೆಲಸಮಾಡುವದು. ಆದರೆ ಯಾವಾಗ ಮನುಷ್ಯ ನಿದ್ರೆಯ ಆಧೀನನಾಗುವನೋ ಆಗ ಅವನು ಅಜ್ಞಾನದ ಅಂಧಕಾರದಲ್ಲಿ ಮುಳುಗುವನು. ಅರ್ಥಾತ್ ಅವನ ಎಚ್ಚರದಲ್ಲಿಯ ಜ್ಞಾನವೇನೂ ಖರೇ ಅಜ್ಞಾನನಾಶಕ ಜ್ಞಾನವಲ್ಲ. ಅಂತೆಯೇ ಎಚ್ಚರದಲ್ಲಿ ಜಗತ್ತಿನ ದೊಡ್ಡಸ್ತನವನ್ನು ಭೋಗಿಸುವವರು ಮತ್ತು ಸೊಕ್ಕಿನಿಂದ ಮೆರೆಯುವ ಜನರು ನಿದ್ರೆಯಲ್ಲಿ ಅತ್ಯಂತ ಬೇರೆ ತರಹದಿಂದ ಕಾಣಿಸುವರು.ಮನುಷ್ಯನು ನಿದ್ರೆ ಹೋದನೆಂದರೆ ಎಷ್ಟೋ ದು ಹಾಸ್ಯಾಸ್ಪದವಾಗುವದು? ಅನ್ನುವ ವಿಷಯ ಈ ಸಮಾಸದಲ್ಲಿ ನೋಡಿರಿ. ಯಾರು ನಿಜವಾದ ಸಾಧನಮಾಡುವ ಸಾಧಕರಿರುವರೋ ಅವರ ನಿದ್ರೆ ಪ್ರಥಮದಲ್ಲಿ ಕಡಿಮೆ ಆಗುವದು. ಮತ್ತು ಸಂತರ ನಿದ್ರೆಯ ಮೇಲೆ ಅವರ ಅಧಿಕಾರ [ಹಿಡಿತ] ಬರುವದು. ಆತ್ಮಜ್ಞಾನವಾದ ಮೇಲೆ ಜ್ಞಾನಿಗೆ ಬರುವ ನಿದ್ರೆಯು ನಿದ್ರೆಯಾಗಿರುವದಿಲ್ಲ. ಅಂದರೆ ಅದು ನಿದ್ರೆಯಾಗಿ ಉಳಿಯುವದಿಲ್ಲ. ಜ್ಞಾನೀ ಮನುಷ್ಯನು ಮಲಗಿಕೊಂಡಂತೆ [ನಿದ್ರಿಸ್ತನಂತೆ] ಕಾಣಿಸಿದರೂ ಕೂಡಾ ಅಂತರ್ಯಾಮದಲ್ಲಿ ಅವನು ಎಚ್ಚರಾಗಿ ಜಾಗ್ರತನಾಗಿಯೇ ಇರುವನು. ನಿದ್ರೆ ಬರುವದು ಅಜ್ಞಾನದ ಅಸ್ತಿತ್ವದ ಸೂಚಕವಿರುವದು. ಅಷ್ಟಧಾ ಪ್ರಕೃತಿಯ ಪ್ರಕ್ರಿಯೆ, ರೀತಿ, ಪದ್ಧತಿಯ ಸಣ್ಣ ಆವೃತ್ತಿ [ನಮೂನೆ] ಯೇ ಈ ನಿದ್ರೆ ಇರುವದು. ಎಚ್ಚರಿದ್ದಾಗ ಎಲ್ಲ ವ್ಯವಹಾರಮಾಡಿ ಮನುಷ್ಯನ ಜೀವವು ಹೇಗೆ ರಾತ್ರಿಯಲ್ಲಿ ನಿದ್ರಾದೇವಿಯಲ್ಲಿ ಸೇರುವದೋ [ನಿದ್ರಾಧೀನನಾಗುವನೋ] ಇದರಂತೆ ಅಷ್ಟಧಾ ಪ್ರಕೃತಿಯು ಯಾವತ್ತೂ ದೃಶ್ಯ ವಿಶ್ವವನ್ನು ನಿರ್ಮಾಣಮಾಡುವದು. ಕೆಲವು ಕಾಲ ಇದನ್ನು ನಡೆಯಿಸುವದು. ಮತ್ತು ಕೊನೆಗೆ ಇದನ್ನು ನುಂಗಿ ಬಿಡುವದು. ದೃಶ್ಯ ವಿಶ್ವವನ್ನು ನುಂಗಿದ ಮೇಲೆ ಗಾಢವಾಗಿ ಹತ್ತಿದ ನಿದ್ರೆಯಂತೆ ಇದರ ಅವಸ್ಥೆ ಇರುವದು. ಆತ್ಮಜ್ಞಾನಿ ಪುರುಷರು ಮೂಲ ಮಾಯೆಯವರೆಗೆ ಹೋಗುವರು. ತುರ್ಯೆಯಲ್ಲಿ ಪ್ರವೇಶಮಾಡುವರು. ಅಂತೆಯೇ ಆತ್ಮಜ್ಞಾನಿಗೆ ಲೌಕಿಕದ ಅರ್ಥದಲ್ಲಿ ನಿದ್ರೆಯು ಹತ್ತುವದಿಲ್ಲ.

## ದಶಕ ೧೮. ಸಮಾಸ ೯. ನಿದ್ರಾ ನಿರೂಪಣ (ನುಡಿ ೨೪)

ರಾತ್ರಿಯಾಗಿ ಕತ್ತಲೆಯಾಯಿತು. ಊಟ, ಉಪಚಾರಗಳು ಮುಗಿದವು ಅಂದರೆ ಆಗ ಸಾಮಾನ್ಯ ಜನರು ಮಲಗಿ ನಿದ್ರಿಸುವರು. ನಿದ್ರೆ ಹತ್ತುವವರೆಗೆ ಸ್ವತಃದ ನಡೆ-ನುಡಿ ಇತ್ಯಾದಿಗಳ ಮೇಲೆ ಅವರ ಅಧಿಕಾರ ನಡೆಯುವದು. ಆದರೆ ನಿದ್ರೆ ಹತ್ತಿದ ಮೇಲೆ ಅವರ ಅಧಿಕಾರ [ತಾಬಾ] ಉಳಿಯುವದಿಲ್ಲ. ಆಗ ಒಂದೊಂದು ತರಹಗಳು ದೃಷ್ಟಿಗೆ ಬೀಳುವವು: ಶ್ರೀ ಸಮರ್ಥರು ಅನ್ನುವದೇನಂದರೆ ಆದಿ ಪುರುಷನಿಗೆ,ಮೂಲ ಪುರುಷನಿಗೆ ನಮಸ್ಕಾರಮಾಡಿ ನಿದ್ರೆಯ ವಿಲಾಸದ ಸಮಯ, ರೂಢಿಯ ಬೆಡಗನ್ನು ಹೇಳುವೆನು. ಒಮ್ಮೆ ನಿದ್ರೆ ಬಾಧಿತೆಂದರೆ ಅದು ಸಹಜವಾಗಿ ಹೋಗುವದಿಲ್ಲ. ಮನುಷ್ಯನಿಗೆ ನಿದ್ರೆಯು ಬಹಳ ಗಾಢವಾಗಿ ಬರುವದು. ಮತ್ತು ಬಹಳ ಹೊತ್ತಿನವರೆಗೆ ಇರುವದು. (೧) ನಿದ್ರೆಯು ಶರೀರವನ್ನೆಲ್ಲ ವ್ಯಾಪಿಸಿತೆಂದರೆ ಸುಸ್ತಿ (ಆಯಾಸ, ಬಳಲಿಕೆ, ದಣವು) ಬರುವದು. ಆಗ ಮೈಮುರಿಯುವಿಕೆ, ಒಡಮುರಕಿ, ಆಕಳಿಕೆ,ಇವೆಲ್ಲ ಕಾಣಿಸುವವು.ಅಥವಾ ಬರಹತ್ತುವವು. ಮನುಷ್ಯನಿಗೆ ಅನಂತರ ಕೂಡಲಿಕ್ಕಾಗುವದಿಲ್ಲ(೨)

ಕಡಕಡಾ ಜಾಂಭಯಾ ಯೇತೀ । ಚಟಚಟಾ ಚಟಕ್ಯಾ ವಾಜತೀ ।
ಡಕಡಕಾ ಡುಕಲ್ಯಾ ದೇತೀ । ಸಾವಕಾಸ ॥೩॥

ಯೇಕಾಚೆ ಡೋಳೇ ಝಾಂಕತೀ । ಯೇಕಾಚೆ ಡೋಳೇ ಲಾಗತೀ ।
ಯೇಕ ತೇ ವಚಕೋನ ಪಾಹಾತೀ । ಚಹುಕಡೆ ॥೪॥

ಯೇಕ ಉಲಥೋನ ಪಡಿಲೇ । ತಿಹೀ ಬ್ರಹ್ಮವಿಣೇ ಘೋಡಿಲೇ ।
ಹುಡಕಾಚೇ ಟುಕಡೇ ಜಾಲೇ । ಸುಧೀ ನಾಹೀ ॥೫॥

ಯೇಕ ಟಕೋನ ಬೈಸಲೇ । ತೇಥೇ ಚಿ ಘೋರೋ ಲಾಗಲೇ ।
ಯೇಕ ಉತಾಣೇ ಪಸರಲೇ । ಸಾವಕಾಸ ॥೬॥

ಕೋಣೀ ಮುರ್ಕುಂಡೀ ಘಾಲಿತೀ । ಕೋಣೀ ಕಾನವಡೇ ನಿಜತೀ ।
ಕೋಣೀ ಚಕ್ರೀ ಫಿರತೀ । ಚಹುಕಡೇ ॥೭॥

ಯೇಕ ಹಾತ ಹಾಲವಿತೀ । ಯೇಕ ಪಾಯೆ ಹಾಲವಿತೀ ।
ಯೇಕ ದಾತ ಖಾತೀ । ಕರ್ಕರಾಟೇ ॥೮॥

ಯೇಕಾಚೀ ವಸ್ತ್ರೇ ನಿಘೋನಿ ಗೇಲೀ । ತೇ ನಾಗವೀ ಚ ಲೋಳೋ ಲಾಗಲೀ ।
ಯೇಕಾಚೀ ಮುಂಡಾಸೀ ಗಡಬಡಲೀ । ಚಹುಕಡೇ ॥೯॥

ಯೇಕ ನಿಜೇಲೀ ಅವ್ಯಾವೆಸ್ತೇ । ಯೇಕ ದಿಸತೀ ಜೈಸೀ ಪ್ರೇತೇ ।
ದಾತ ಪಸರುನೀ ಜೈಸೀ ಭೂತೇ । ವಾಈಟ ದಿಸತೀ ॥೧೦॥

ಯೇಕ ವೊಸಣತ ಚಿ ಉಠಿಲೇ । ಯೇಕ ಅಂಧಾರೀ ಫಿರೋ ಲಾಗಲೇ ।
ಯೇಕ ಜಾಊನ ನಿಜೇಲೇ । ಉಕರಡ್ಯಾವರೀ ॥೧೧॥

ಯೇಕ ಮಡಕೀ ಉತರಿತೀ । ಯೇಕ ಭೋಈ ಚಾಂಚಪತೀ ।
ಯೇಕ ಉಠೋನ ವಾಟಾ ಲಾಗತೀ । ಭಲತೀಕಡೇ ॥೧೨॥

ಯೇಕ ಪ್ರಾಣೀ ವೊಸಣಾತೀ । ಯೇಕ ಘುಂದಘುಂದೋ ರಡತೀ ।
ಯೇಕ ಖದಖದಾ ಹಾಸತೀ । ಸಾವಕಾಸ ॥೧೩॥

ಯೇಕ ಹಾಕಾ ಮಾರೂ ಲಾಗಲೇ । ಯೇಕ ಬೊಂಬಲಿತ ಉಠಿಲೇ ।
ಯೇಕ ವಚಕೋನ ರಾಹಿಲೇ । ಆಪುಲೇ ಠಾಈ ॥೧೪॥

ಯೇಕ ಕ್ಷಣಕ್ಷಣಾ ಖುರಡತೀ । ಯೇಕ ಡೋಈ ಖಾಜವಿತೀ ।
ಯೇಕ ಕಢೋ ಲಾಗತೀ । ಸಾವಕಾಸ ॥೧೫॥

ನಿದ್ರೆ ಬಂದ ಮನುಷ್ಯನಿಗೆ ಜೋರಾಗಿ ಮೇಲಿಂದ ಮೇಲೆ ಆಕಳಿಕೆ ಬರುವವು. ಆಗ ಇವನು ಕೈಬೆರಳುಗಳನ್ನು ಚಟ ಚಟ ಎಂದು ಅನ್ನಿಸುವನು. ಚುಟಿಕಿ ಹೊಡೆಯುವನು. [ಬಾರಿಸುವನು.] ಮತ್ತು ತೂಕಡಿಕೆಯು ಮೇಲೆ ತೂಕಡಿಕೆ ಹೊಡೆಯುವನು. ತಲೆ ಅಲ್ಲಾಡಿಸುವನು. (೩) ನಿದ್ರೆ ಬಂದಿತೆಂದರೆ ಕೆಲವರ ಕಣ್ಣು ಮುಚ್ಚುವವು, ಕೆಲವರವು ಅರ್ಧ ಕಣ್ಣು ಮುಚ್ಚುವವು. ಮತ್ತು ಕೆಲವರು ಅಥವಾ ಎಲ್ಲಿಯೋ ಒಬ್ಬಿಬ್ಬರು ಬೆಚ್ಚಿ ಗಾಬರಿಯಿಂದ ಅತ್ತ ಇತ್ತ ನೋಡಹತ್ತುವರು. (೪) ನಿದ್ರೆಯ ಭರದಲ್ಲಿ ಕೀರ್ತನೆ ಕೇಳಲು ಬಂದು ಕುಳಿತ ಒಬ್ಬ ಶ್ರೋತಾ ಒಮ್ಮಿಂದೊಮ್ಮೆಲೇ ಏಳಲಿಕ್ಕೆ ಹೋಗಿ ಬಕಬರಲಾಗಿ ಅಥವಾ ತೊಡಕಾಗಿ ಮುಡಚಿಕೊಂಡು ಬೀಳುತ್ತಾನೆ. ಇವನು ಕೀರ್ತನಕಾರನ ವೀಣೆ [ಬ್ರಹ್ಮವೀಣೆ] ಯು ಮೇಲೆ ಬಿದ್ದದ್ದರಿಂದ ವೀಣೆಯು ಒಡೆಯಿತು. ಅಥವಾ ಹುಡುಕಿ ಅನ್ನುವ [ಡಮರು, ಬುಡು ಬುಡಿಕೆಯಂತಹ ವಾದ್ಯ] ವಾದ್ಯದ ಮೇಲೆ ಬಿದ್ದ ಭಾರದಿಂದ ಅದು ತುಕಡಿ-ತುಕಡಿ ಆಯಿತು. ಆದರೆ ಅವನಿಗೆ [ನಿದ್ರೆಯ ಮಬ್ಬಿನಲ್ಲಿದ್ದವನಿಗೆ] ಇದರ ಎಚ್ಚರವಿರುವದಿಲ್ಲ. (೫) ಒಬ್ಬನು ಆನಿಸಿಕೊಂಡು [ಆಧಾರ ಹೊಂದಿ] ಕುಳಿತವನು ಕುಳಿತಲ್ಲಿಯೇ ಘೊರ್ ಘೊರ್ ಎಂದು ಗೊರಕಿ ಹೊಡೆಯ ಹತ್ತಿದನು. ಮತ್ತೊಬ್ಬನು ಸಾವಕಾಶವಾಗಿ ಅಂಗಾತ ಮಲಗಿ ಕಾಲುಚಾಚಿ ನಿದ್ರೆಹೊಡೆಯ ಹತ್ತಿದನು. (೬) ಒಬ್ಬನು ಕೈ ಕಾಲುಗಳನ್ನು ಮುಡಚಿಕೊಂಡು ಮುದುಡೆಯಾಗಿ ಮಲಗಿದರೆ ಇನ್ನೊಬ್ಬನು ಮಗ್ಗಲಾಗಿ ಮಲಗಿದ್ದನು. ಮತ್ತೊಬ್ಬ ನಿದ್ರೆಯಲ್ಲಿ ಚಕ್ರಾಕಾರ [ದುಂಡಗಾಗಿ,] ತಿರುಗುತ್ತ ನಿದ್ರಿಸುತ್ತಿದ್ದನು. (೭) ನಿದ್ರೆಯಲ್ಲಿ ಒಬ್ಬನು ಕೈಯನ್ನು ತಿರುವುತ್ತಾನೆ. ಇನ್ನೊಬ್ಬನು ಕಾಲನ್ನು ಅಲ್ಲಾಡಿಸುತ್ತಾನೆ. ಮತ್ತೊಬ್ಬನು ಕರ್ ಕರ್ ಎಂದು ಹಲ್ಲು ತಿನ್ನುವನು. (೮) ಒಬ್ಬನಿಗೆ ನಿದ್ರೆ ಆಗದೀ ಜೋರಾಗಿ ಹತ್ತಿದೆ. ಯಾಕೆಂದರೆ ಅವನ ಮೈ ಮೇಲೆ ಅರಿವೆಗಳೇ ಇಲ್ಲ.ಬರೇ ಬತ್ತಲಾಗಿಯೇ ಹೊರಳಾಡುತ್ತಿದ್ದಾನೆ. ಇನ್ನೊಬ್ಬನ ತಲೆಯ ಮೇಲಿನ ಮುಂಡಾಸ [ರುಮಾಲ] ಬಿಚ್ಚಿ ಅವನ ಸುತ್ತಲೂ ಪಸರಿಸಿದೆ. (೯) ಒಬ್ಬನು ನಿದ್ರೆಯಲ್ಲಿ ಆಗದೀ ಅಸ್ತವ್ಯಸ್ತ ಬಿದ್ದಿದ್ದರೆ ಇನ್ನೊಬ್ಬನು ಆಗದೀ ಹೆಣದಂತೆ [ಪ್ರೇತವತ್] ಕಾಣುತ್ತಾನೆ. ಮತ್ತೊಬ್ಬನು ಆ ಎಂದು ಬಾಯಿ ತೆರೆದು ತನ್ನ ಹಲ್ಲನ್ನು ಹೊರಗೆಡವಿದ್ದರಿಂದ ಕೇವಲ ಭೂತದಂತೆ ಭಯಂಕರ ಕೆಟ್ಟದಾಗಿ ಕಾಣುವನು. (೧೦) ನಿದ್ರೆಯಲ್ಲಿದ್ದವನೊಬ್ಬ ಬಡಬಡಿಸುತ್ತಲೇ ಏಳುವನು. ಮತ್ತೊಬ್ಬನು ಕತ್ತಲ ಕಡೆಗೆ ಹೋಗಿ ಅಲ್ಲಿ ತಿರುಗಾಡುವನು. ಇನ್ನೊಬ್ಬನಾದರೂ ನಿದ್ರೆಯಲ್ಲಿ ಎದ್ದವನೇ ಸರಳವಾಗಿ ತಿಪ್ಪೆಯ ಕಡೆಗೆ ಹೋಗಿ ಅಲ್ಲಿಯೇ ಮಲಗಿದನು. (೧೧) ಒಬ್ಬನು ನಿಲುವಿನ ಮೇಲಿಟ್ಟ ಮಡಿಕೆಯನ್ನು ಕೆಳಗೆ ಇಳಿಸುವನು. ಆದರೆ ಅದೇ ಇನ್ನೊಬ್ಬನು ಭೂಮಿಯ ಮೇಲೆ ಬರಿ ನೆಲದಲ್ಲಿ ಕೈಯಿಂದ ಸವರಾಡುವನು. ಅದೇ ಮತ್ತೊಬ್ಬನು ಸರಕ್ಕನೇ ಎದ್ದು ನಿದ್ರೆಯಲ್ಲಿಯೇ ಸಿಕ್ಕ ಹಾದೀ ಹಿಡಿದು ಎತ್ತಕಡೆಗೋ ಹೋಗಹತ್ತುವನು. (೧೨) ಒಬ್ಬನು ನಿದ್ರೆಯಲ್ಲಿ ಸುಮ್ಮನೇ ಕೂಗಿದನು. ಚೀರಿದನು, ಒದರಿದನು. ಇನ್ನೊಬ್ಬನು ಬಿಕ್ಕಿ ಬಿಕ್ಕಿ ಅಳಹತ್ತಿದನು. ಮತ್ತೊಬ್ಬನು ಖೊಕ್ ಖೊಕ್ ಎಂದು ನಗುತ್ತಲೇ ಹೊರಟನು. (೧೩) ಒಬ್ಬನು ನಿದ್ರೆಯಲ್ಲಿ ಕೂಗಿ ಕೂಗಿ ಒದರ ಹತ್ತುವನು. ಇನ್ನೊಬ್ಬನು ಬೊಬ್ಬೆ ಹೊಡೆಯುತ್ತ [ಶಂಖ ಹೊಡೆಯುತ್ತ] ಏಳುವನು. ಮತ್ತೊಬ್ಬನು ನಿದ್ರೆಯಲ್ಲಿಯೇ ಭೀತಿಗೊಂಡು ನಡುಗುತ್ತ ಕುಳಿತನು. (೧೪) ಒಬ್ಬನು ಕ್ಷಣ ಕ್ಷಣಕ್ಕೊಮ್ಮೆ ಕಾಲಿನಿಂದ ನೆಲ ತಿಕ್ಕುವನು. ಅಥವಾ ಕಾಲಿಗೆ ಕಾಲು ತಿಕ್ಕುವನು. ಇನ್ನೊಬ್ಬನು ತಲೆಯನ್ನು ಕರ್ ಪರ್ ಎಂದು ತುರಿಸುವನು, ಕೆರೆಯುವನು. ಮತ್ತೊಬ್ಬನು, ಒಂದೇ ಸವನೇ ಮೆತ್ತಗೆ ನರಳುವನು. (೧೫)

ಯೇಕಾಚ್ಯಾ ಲಾಳಾ ಗಳಾಲ್ಯಾ । ಯೇಕಾಚ್ಯಾ ಪಿಕಾ ಸಾಂಡಲ್ಯಾ ।
ಯೇಕೀ ಲಘುಶಂಕಾ ಕೇಲ್ಯಾ । ಸಾವಕಾಸ ॥೧೬॥

ಯೇಕ ರಾಊತ ಸೋಡಿತೀ । ಯೇಕ ಕರ್ಪಟ ಢೇಕರ ದೇತೀ ।
ಯೇಕ ಖಾಂಕರೂನೀ ಥುಂಕಿತೀ । ಭಲತೀಕಡೇ ॥೧೭॥

ಯೇಕ ಹಾಗತೀ ಯೇಕ ವೋಕಿತೀ । ಯೇಕ ಖೋಕಿತೀ ಯೇಕ ಸಿಂಕಿತೀ ।
ಯೇಕ ತೇ ಪಾಣೀ ಮಾಗತೀ । ನಿದಸುರ್ಯಾ ಸ್ವರೇ ॥೧೮॥

ಯೇಕ ದುಸ್ವಪ್ನೇ ನಿಬುಜಲೇ । ಯೇಕ ಸುಸ್ವಪ್ನೇ ಸಂತೋಷಲೇ ।
ಯೇಕ ತೇ ಗಾಢಮುದ್ಧೀ ಪಡಿಲೇ । ಸುಷುಪ್ತಿಮಧೇ ॥೧೯॥

ಇಕಡೇ ಉಜೆಡಾಯಾ ಜಾಲೇ । ಕೋಣ್ಹೀ ಪಢಣೇ ಆರಂಭಿಲೇ ।
ಕೋಣೇ ಪ್ರಾತಃಸ್ಮರಾಮಿ ಮಾಂಡಿಲೇ । ಹರಿಕೀರ್ತನ ॥೨೦॥

ಕೋಣೇ ಆಠವಿಲ್ಯಾ ಧ್ಯಾನಮೂರ್ತಿ । ಕೋಣೇ ಯೇಕಾಂತೀ ಜಪ ಕರಿತೀ ।
ಕೋಣೇ ಪಾಠಾಂತರ ಉಜಳಿತೀ । ನಾನಾ ಪ್ರಕಾರೇ ॥೨೧॥

ನಾನಾ ವಿದ್ಯಾ ನಾನಾ ಕಳಾ । ಆಪಲಾಲ್ಯಾ ಸಿಕತೀ ಸಕಳಾ ।
ತಾನಮಾನೇ ಗಾಯೆನಕಳಾ । ಯೇಕ ಗಾತೀ ॥೨೨॥

ಮಾಗೇ ನಿದ್ರಾ ಸಂಪಲೀ । ಪುಢೇ ಜಾಗೃತೀ ಪ್ರಾಪ್ತ ಜಾಲೀ ।
ವೇವಸಾಈ ಬುದ್ಧಿ ಆಪುಲೀ । ಪ್ರೇರಿತೇ ಜಾಲೇ ॥೨೩॥

ಜ್ಞಾತಾ ತತ್ವೇ ಸಾಂಡೂನ ಪಳಾಲಾ । ತುರ್ಯೆ ಪೈಲಿಕಡೆ ಗೇಲಾ ।
ಆತ್ಮ ನಿವೇದನೇ ಜಾಲಾ । ಬ್ರಹ್ಮರೂಪ ॥೨೪॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ನಿದ್ರಾ ನಿರೂಪಣ' ನಾಮ ಸಮಾಸ ನವಮ ॥

ಒಬ್ಬನ ಬಾಯಿಯಿಂದ ಜೊಲ್ಲು ಸೋರುವದು. ಇನ್ನೊಬ್ಬನ ಬಾಯಿಯಿಂದ ಉಗುಳು ಹೊರ ಬರುವದು. ಮತ್ತೊಬ್ಬನು ನಿದ್ರೆಯಲ್ಲಿಯೇ ಸಾಕಷ್ಟು ಮೂತ್ರಮಾಡುವನು. (೧೬) ಒಬ್ಬನು ಥು, ಥುಸ್, ಠುಸ್ ಎಂದು ಹೂಸು [ಅಪಾನವಾಯು] ಬಿಡುವನು. ಇನ್ನೊಬ್ಬನಿಗೆ ಢರ್ ಎಂದು ಹುಳಿ ತೇಗು ಬರುವದು. ಮತ್ತೊಬ್ಬನು ನಿದ್ರೆಯಲ್ಲಿ ಸಿಕ್ಕಾಪಟ್ಟೆ ಉಗುಳುವನು. (೧೭) ಒಬ್ಬನಿಗೆ ನಿದ್ರೆಯಲ್ಲಿಯೇ ಮಲವಿಸರ್ಜನೆ ಆಗುವದು. ಇನ್ನೊಬ್ಬನು ವಾಂತಿ ಮಾಡಿಕೊಳ್ಳುವನು. ಮತ್ತೊಬ್ಬನು ಕೆಮ್ಮಿ ಖ್ಯಾಕರಿಸುವನು. ಮುಂಗದೊಬ್ಬನು ನಿದ್ರೆಯಲ್ಲಿ ಸುಂಬಳ ಸೀನುವನು. ಅಥವಾ ಮೂಗಿನಿಂದ ತಾನೇ ಸುಂಬಳ ಸೋರುವದು. ನಿದ್ರೆಯಲ್ಲಿದ್ದವನೊಬ್ಬನು ಕುಡಿಯಲು ನೀರು ಬೇಡುವನು. ಅಥವಾ ಗಟ ಗಟ ನೀರು ಕುಡಿಯುವನು. (೧೮) ಒಬ್ಬನಿಗೆ ನಿದ್ರೆಯಲ್ಲಿ ಬಹು ಕೆಟ್ಟ ಕನಸು ಬಿದ್ದು ಗಾಬರಿಗೊಳ್ಳುವನು. ಇನ್ನೊಬ್ಬನು ಒಳ್ಳೇ ಕನಸು ಕಂಡು ಖುಷಿಪಡುವನು. ಮತ್ತೊಬ್ಬ ಅತ್ಯಂತ ಗಾಢ ನಿದ್ರೆಯಲ್ಲಿ ಆರಾಮಾಗಿ ಬಿದ್ದು ಬಿಟ್ಟಿರುವನು. [ಮಲಗಿರುವನು] [೧೯] ಈ ತರಹ ಬೇರೆ ಬೇರೆ ಅವಸ್ಥೆಯಲ್ಲಿ ನಿದ್ರಿಸುವ ಜನರು ಬೆಳಗಾದ ಕೂಡಲೇ ಎಚ್ಚರಗೊಳ್ಳುವರು. ಮತ್ತು ಪ್ರತಿಯೊಬ್ಬರೂ ಸ್ವಾಭಾವಿಕ ತರಹದ ಶುದ್ಧಿಯು ಮೇಲೆ ಬಂದವರಂತೆ ಕಾರ್ಯ ತತ್ಪರರಾಗುವರು:–ಇತ್ತ ಸೂರ್ಯನು ಉದಯಿಸುವ ಸಮಯವಾದ ಕೂಡಲೇಒಬ್ಬರು ತಮ್ಮ ನಿತ್ಯ ಪಾಠ ಆರಂಭಿಸುವರು. ಒಬ್ಬರು ಪ್ರಾತಃಸ್ಮರಣ ಮಾಡುವರು.ಮತ್ತು ಹರಿಕೀರ್ತನೆ ಆರಂಭಿಸುವರು[೨೦] ಒಬ್ಬರು ಧ್ಯಾನಮೂರ್ತಿಯನ್ನು ಮನದಲ್ಲಿ ಸ್ಮರಿಸುವರು. ಇನ್ನೊಬ್ಬರು ಏಕಾಂತದಲ್ಲಿ ಕುಳಿತು ಜಪ ಮಾಡುವರು. ಕೆಲವರು ಅನೇಕ ಪ್ರಕಾರದ ತಮ್ಮ ಪಾಠಾಂತರಗಳನ್ನು ಉಜಳಣೆ ಮಾಡುವರು. [೨೧] ಈ ಸಮಯದಲ್ಲಿ ಎಲ್ಲರೂ ತಮ್ಮ ತಮ್ಮ ವಿದ್ಯೆ ಕಲಾ ಇವುಗಳನ್ನು ಕಲಿಯುವರು. ಒಬ್ಬರು ತಾನಮಾನದಿಂದ ರಾಗಾಲಾಪಗಳಿಂದ ಗಾಯನದ ಅಭ್ಯಾಸವನ್ನು ಮಾಡುವರು. [೨೨] ರಾತ್ರಿಯು ನಿದ್ರೆ ಆದನಂತರ [ಚನ್ನಾಗಿ ನಿದ್ರೆ ಆದನಂತರ] ಎಚ್ಚರವೂ ಆಯಿತು. ಎಲ್ಲರೂ ತಮ್ಮ ತಮ್ಮ ವ್ಯವಸಾಯದಲ್ಲಿ ಲಕ್ಷ್ಯ ಹಾಕಹತ್ತುವರು. [೨೩] ಜ್ಞಾನಿ ಪುರುಷ ದೃಶ್ಯವಾಗಿರುವ ಅಶಾಶ್ವತ ತತ್ವಗಳನ್ನು ಬಿಟ್ಟು ಕೊಟ್ಟು [ಮಾಯಾರೂಪದ ನಿದ್ರೆಯನ್ನು ಸಂಪೂರ್ಣ ತ್ಯಾಗ ಮಾಡಿ] ದೂರ ಸರಿಯುವನು. ತುರ್ಯಾವಸ್ಥೆಯ ಆಚೆಗೆ ಹೋಗುವನು. ಮತ್ತು ಸಂಪೂರ್ಣ ಆತ್ಮನಿವೇದನ ಮಾಡಿಕೊಂಡು ಬ್ರಹ್ಮರೂಪವೇ ಆಗುವನು. [೨೪]

ಶ್ರೀ ದಾಸಬೋಧದ ಹದಿನೆಂಟನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ನಿದ್ರಾ ನಿರೂಪಣ"ವೆಂಬ ಹೆಸರಿನ ಒಂಭತ್ತನೆಯ ಸಮಾಸವು ಮುಗಿದುದು.

• •

**ದಶಕ ಅಷ್ಟದಶ : ಸಮಾಸ ದಶಮ : ಶ್ರೋತಾ ಅವಲಕ್ಷಣ ನಿರೂಪಣ (ನುಡಿ ೫೦)**

॥ಶ್ರೀರಾಮ ಸಮರ್ಥ॥ ಕೋಣೀ ಯೇಕಾ ಕಾರ್ಯಾಚಾ ಸಾಕ್ಷೆಪ ।
ಕಾಂಹೀ ತರ್ಹೀ ಘಡೇ ವಿಕ್ಷೇಪ ।
ಕಾಳ ಸಾಹೇ ತೇ ಆಪೇಆಪ । ಹೋತ ಜಾತೇ ॥೧॥

ಕಾರ್ಯಭಾಗ ಹೋತ ಚಾಲಿಲಾ । ತೇಣೇ ಪ್ರಾಣೀ ಶೋಕ ಜಾಲಾ ।
ವಿಚಾರ ಹಿ ಸುಚೋ ಲಾಗಲಾ । ದಿವಸೇದಿವಸ ॥೨॥

ಕೋಣೀ ಯೇಕ ಪ್ರಾಣೀ ಜನ್ಮಾಸೀ ಯೇತೋ ।
ಕಾಹೀ ತರ್ಹೀ ಕಾಳ ಸಾಹೇ ಹೋತೋ ।
ದುಃಖಾಉಪರೀ ಸುಖ ದೇತೋ । ದೇವ ಕೃಪಾಳುಪಣೇ ॥೩॥

ನಮ್ಮ ದೇಹವು ಎಲುವು ಮಾಂಸ ಮಜ್ಜೆಗಳಿಂದ ಕೂಡಿ ಗಟ್ಟಿಗೊಂಡಂತೆ ಕಾಣುವದು. ಆದರೆ ರಕ್ತ ಮತ್ತು ರೇತ [ಧಾತು] ಇವೇ ಇದಕ್ಕೆ ಮೂಲವಿರುವವು. ನಿಜವಾಗಿ ರಕ್ತ ಮತ್ತು ರೇತ ಇವು ನೀರೇ ಇರುವವು. ಮತ್ತು ಇವುಗಳಿಂದ ಹಲ್ಲುಗಳು ಉತ್ಪನ್ನವಾಗುವವು. ಅನೇಕ ರತ್ನಗಳೂ ಕೂಡಾ ಇದೇ ರೀತಿಯಲ್ಲಿ ದ್ರವದಿಂದಲೇ ಆಗುವವು. ಇದು ಜಗದಲ್ಲಿ ಎಲ್ಲರ ಅನುಭವಕ್ಕೆ ಬಂದದ್ದಾಗಿದೆ. (೧೭) ಯಾವತ್ತೂ ದೃಶ್ಯ ಜಡ ಪದಾರ್ಥಗಳ ಮೂಲ [ರಚನೆ, ನಿರ್ಮಾಣ, ಕಾರಣ] ನೀರಿನಿಂದಲೇ ಆದದ್ದಿರುವದು. ನೀರಿನ ಸಹಾಯದಿಂದಲೇ ಸರ್ವ ವ್ಯವಹಾರ ನಡೆಯುವದು. ನೀರಿಲ್ಲದಿದ್ದರೆ [ಹರಿಗೋವಿಂದಾ!] ಸರ್ವನಾಶವಾಗುವದು. ಅರ್ಥಾತ್ ದೇವರು, ಪ್ರಾಣಿ, [ಜೀವ ಜಂತು] ಯಾವವೂ ಬದುಕಲಾರವು. ನೀರಿಲ್ಲದೇ ಜೀವ ಇರಲಿಕ್ಕೆ ಶಕ್ಯವೇ ಇಲ್ಲ. (೧೮) ತೇಜಸ್ವಿ, ಸುರೇಖ, ಮುತ್ತು, ರತ್ನ, ಹೀರಾ, ಮಾಣಿಕ್ಯ, ಇಂದ್ರ ನೀಲ, ಇತ್ಯಾದಿಗಳೆಲ್ಲ ನೀರಿನಿಂದಲೇ ತಯಾರ ಆದವು. (೧೯) ಒಟ್ಟಿನಲ್ಲಿ ಯಾವ ಭೂತದ ಮಹಿಮಾ ಹೇಳಬೇಕೆಂಬುದೇ ಬೇಗ ತಿಳಿಯುವದಿಲ್ಲ. ಯಾಕೆಂದರೆ ಎಲ್ಲದರಲ್ಲಿಯೂ ಪಂಚಭೂತಗಳು ಒಂದರಲ್ಲೊಂದು ಮಿಶ್ರವಾಗಿ (ಕೂಡಿ)ಯೇ ಇರುವವು. ಈ ಮಿಶ್ರಣದಲ್ಲಿಯ ಪ್ರತಿಯೊಂದು ಭೂತವನ್ನು ಬೇರೆ ಬೇರೆ ಮಾಡುವದು ಕಠಿಣವಿರುವದು. (೨೦) ಆದರೆ ಸಾಮಾನ್ಯ ಮನುಷ್ಯರ ಮನಕ್ಕೆ ಪಟಾಯಿಸಲಿ-ಖಾತ್ರಿಯಾಗಲಿ ಎಂದು ಕೆಲವನ್ನು ಸ್ವಲ್ಪದರಲ್ಲಿ ವರ್ಣನೆ ಮಾಡಿರುವೆವು. ಜಗದಲ್ಲಿ ತರ್ಕ ತೀಕ್ಷ್ಣ ಬುದ್ಧಿಯುವರು ಅಂದರೆ ಯಾರು ವಿಚಾರವಂತರಿರುವರೋ ಅವರಿಗೇ ಪಂಚಭೂತಗಳ ಗುಣ ಧರ್ಮದ ಬಗ್ಗೆ ಸರಿಯಾದ ಕಲ್ಪನೆಯು ಬರುವದು. (೨೧) ಎಲ್ಲವನ್ನು ತಿಳಿದವರಿರುವರೆಂಬ ಮಾತು ಧಾರ್ಷ್ಟ್ಯದ್ದಾಗುವದು. ಅರ್ಥಾತ್ ಏನೆಲ್ಲವನ್ನೂ ತಿಳಿದವರಿರುವದು ಅಸಂಭವವು. ಇರಲಿ, ಬೇರೆ ಬೇರೆ ಶಾಸ್ತ್ರಗಳಲ್ಲಿಯ ನಿರ್ಣಯಗಳಲ್ಲಿ ಪರಸ್ಪರ ವಿರೋಧವಿರುವದು ಕಂಡುಬರುವದು. ಇದರಿಂದಾಗಿ ಕೇವಲ ಅನುಮಾನದ ಸಿದ್ಧಾಂತಗಳಿಂದ ನಿಶ್ಚಿತ ಜ್ಞಾನವಾಗುವದಿಲ್ಲ. (೨೨) ಭಗವಂತನ ಗುಣ ಅಗಾಧ ವಾದದ್ದಿರುವದು. ಪ್ರತ್ಯಕ್ಷ ಆದಿಶೇಷನಿಗೂ ಇವನ ವರ್ಣನೆಯನ್ನು ಮಾಡಲಿಕ್ಕೆ ಆಗಲಿಲ್ಲ. ಅಂತರಾತ್ಮನು ಇರದಿದ್ದರೆ ವೇದ ವಿಧಿಗಳು ಕೂಡಾ ಸುಳ್ಳಾಗುತ್ತಿದ್ದವು. (೨೩) ಅಂತರಾತ್ಮಾ ಎಲ್ಲರ ಪಾಲನೆಯನ್ನು ಮಾಡುವನು. ಯಾವತ್ತೂ ತ್ರೈಲೋಕ್ಯವನ್ನೂ ಇವನೇ ಸಂಬಾಳಿಸುವನು. ಒಬ್ಬ ಅಂತರಾತ್ಮನ ಹೊರತಾಗಿ ಉಳಿದವರೆಲ್ಲರೂ ಗಾಳಿಗೆ ಹಾರಿ ಹೋಗುವರು. ಎಲ್ಲರೂ ಮಣ್ಣಿನಲ್ಲಿ ಮಣ್ಣಾಗಿ ಹೋಗುವರು. (೨೪) ಎಲ್ಲಿ ಆತ್ಮಾರಾಮ ಇಲ್ಲವೋ ಅಲ್ಲಿ ಏನೂ ಉಳಿಯುವದು ಸಾಧ್ಯವಿಲ್ಲ. ಇವನು ಇಲ್ಲದಿದ್ದರೆ ತ್ರೈಲೋಕ್ಯದಲ್ಲಿಯ ಎಲ್ಲ ಪ್ರಾಣಿಗಳು ಪ್ರೇತರೂಪವಾಗಿ ಹೋಗುವುವವು. (೨೫) ಅಂತರಾತ್ಮಾ ಇಲ್ಲದಿದ್ದರೆ ಮರಣ ಬರುವದು. (ದೇಹದಲ್ಲಿಯ ಆತ್ಮನು ಅಲ್ಲಿಂದ ಹೋದರೆ ಮರಣ ಬಂದಿತು ಅನ್ನುವರು. ಅರ್ಥಾತ್ ದೇಹವು ಹೆಣವಾಗುವದು.) ಅಂತರಾತ್ಮನಿಲ್ಲದೇ ಜೀವಂತತನವು ಇರುವದಿಲ್ಲ. ಮನುಷ್ಯರಾದವರು ಈ ಮಾತನ್ನು ವಿವೇಕದಿಂದ ನಿಮ್ಮ ಅಂತರ್ಯಾಮದಲ್ಲಿ ತಿಳಿದುಕೊಳ್ಳಬೇಕು. (೨೬) ವಿವೇಕದ ಉಪಯೋಗ ಮಾಡಿಕೊಂಡು ಮನುಷ್ಯನು ಯಾವುದನ್ನು ತಿಳಿದುಕೊಳ್ಳುವನೋ ಅದೂ ಸಹ ಅಂತರಾತ್ಮನ ಹೊರತು ಅಂದರೆ ಅವನಿಲ್ಲದೆ ಆಗುವದಿಲ್ಲ. (ಆತ್ಮಾ ಇಲ್ಲದೆ ವಿಚಾರಮಾಡಲಿಕ್ಕೇ ಸಾಧ್ಯವಿಲ್ಲ). ಅಂತರಾತ್ಮನ ಈ ಮಹತ್ವವನ್ನು ಗುರುತಿಸಿ ತಿಳಿದು ಪ್ರತಿಯೊಬ್ಬರೂ ಇವನ ಅಂದರೆ ಅಂತರಾತ್ಮಾ ಜಗದೀಶ್ವರನ ಭಜನೆಯನ್ನು ಮಾಡಬೇಕು. (೨೭) ಯಾರ ಅಂತರ್ಯಾಮದಲ್ಲಿ ಉಪಾಸನೆಯು ಪ್ರಕಟವಾಗುವದೋ ಅಂದರೆ ಯಾರ ಅಂತರ್ಯಾಮದಲ್ಲಿ ಅಂತರಾತ್ಮನ ಅಸ್ತಿತ್ವದ ಗುರುತು ಹತ್ತಿ ಅದು ಖಾತ್ರಿಯಾಗುವದೋ ಅವರಿಗೆ ಮಾತ್ರ ಅಂತರಾತ್ಮನ ಸರ್ವಕರ್ತಾತನವು ಲಕ್ಷ್ಯದಲ್ಲಿ ಬರುವದು. ಖಾತ್ರಿಯಾಗುವದು. ಇದರ ಸಲುವಾಗಿ ಸಾಧಕರು ಅಂತರಾತ್ಮಾ ಸರ್ವಕರ್ತಾ ಇರುವನು ಅನ್ನುವದನ್ನು ಉಪಾಸನೆಯು ಮುಖಾಂತರ ಮನಕ್ಕೆ ಖಾತ್ರಿಮಾಡಿ ಕೊಡಬೇಕು. (೨೮)

ಉಪಾಸನೇಚಾ ಮೋಠಾ ಆಶ್ರಯೋ। ಉಪಾಸನೇವಿಣ ನಿರಾಶ್ರಯೋ।
ಉದಂಡ ಕೇಲೇ ತರೀತೋ ಜಯೋ। ಪ್ರಾಪ್ತ ನಾಹೀ ॥೨೯॥

ಸಮರ್ಥಾಚೀ ನಾಹೀ ಪಾಠೀ। ತಯಾಸ ಭಲತಾ ಚ ಕುಟೀ।
ಯಾಕಾರಣೇ ಉಠಾಉಠೀ। ಭಜನ ಕರಾವೇ ॥೩೦॥

ಭಜನ ಸಾಧನ ಅಭ್ಯಾಸ। ಯೇಣೇ ಪಾವಿಜೆ ಪರಲೋಕಾಸ।
ದಾಸ ಮ್ಹಣೇ ಹಾ ವಿಶ್ವಾಸ। ಧರಿಲಾ ಪಾಹಿಜೆ ॥೩೧॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ಗುಣಭೂತ ನಿರೂಪಣ' ನಾಮ ಸಮಾಸ ದಶಮ ॥

● ●

— ದಶಕ ಷೋಡಶ ಸಮಾಪ್ತ —

ಉಪಾಸನಾ ಅಥವಾ ಅಂತರಾತ್ಮಾ ನಮ್ಮ ಅಂತರ್ಯಾಮದಲ್ಲಿ ಇರುವನು. ಅನ್ನುವ ಈ ತಿಳುವಳಿಕೆಯು ಮನಕ್ಕೆ ಬಹಳ ಧೈರ್ಯ ಕೊಡುವದು. ಈ ತಿಳುವಳಿಕೆಯು ಇರದಿದ್ದರೆ ಮನಕ್ಕೆ ಧೈರ್ಯಬರುವದಿಲ್ಲ. ತಾತ್ಪರ್ಯ: ತಿಳುವಳಿಕೆಯ (ಜಗದೀಶ್ವರ, ಅಂತರ್ಯಾಮಿ, ಪರಮಾತ್ಮನ ಇರುವಿಕೆಯ ಬಗ್ಗೆ) ಅಭಾವ ಇದ್ದು ನಾವು ಒಂದೇ ಸವನೆ ಧಡಪಡಿಸಿದರೆ ಮನುಷ್ಯನಿಗೆ ಯಶ ಸಿಗುವದಿಲ್ಲ. (೨೯) ನಮ್ಮ ಹಿಂದೆ ಬೆಂಬಲವಾಗಿ ಒಬ್ಬ ಬಲವಂತ ವ್ಯಕ್ತಿ ಅಥವಾ ಶಕ್ತಿಯು ಜೋರು ಇರದಿದ್ದರೆ ಆಗ ನಮ್ಮನ್ನು ಒಬ್ಬ ಬಲಹೀನ ಸಾಮಾನ್ಯ ಮನುಷ್ಯನೂ ಕೂಡಾ ಬಂದು ಹೊಡೆಯಬಹುದು. ಆದ್ದರಿಂದ ನಿಮ್ಮ ಬೆನ್ನಿಗೆ ಸರ್ವಶಕ್ತ ಅಂತರಾತ್ಮನ ಬಲವು ಇರಬೇಕು. ನೀವು ವ್ಯರ್ಥ ವೇಳೆಯನ್ನು ಕಳೆಯದೇ ಜಗದೀಶ್ವರನ ಭಜನೆಯನ್ನು ಮಾಡಬೇಕು. (೩೦) ಭಜನ + ಸಾಧನ + ಮತ್ತು ಅಭ್ಯಾಸ, ಈ ತ್ರಯಿಗಳಿಂದ ಅಂದರೆ ಧ್ಯಾನಯೋಗ, ಕರ್ಮಯೋಗ, ಸಾಂಖ್ಯಯೋಗಯೆಂಬತ್ರಯಿಗಳಿಂದ ಮನುಷ್ಯನು ಪರಮಾರ್ಥವನ್ನು ಸಾಧಿಸಿಕೊಳ್ಳಬೇಕು. ಪರಲೋಕ ಪ್ರಾಪ್ತಿಮಾಡಿಕೊಳ್ಳಬೇಕು. ಶ್ರೀ ರಾಮದಾಸರು ಅನ್ನುವದೇನಂದರೆ ನಾನು ಹೇಳಿದ್ದರ ಮೇಲೆ ನೀವು ವಿಶ್ವಾಸ ಇಡುವದು ಅತಿ ಅವಶ್ಯವಿರುವದು. (೩೧)

ಶ್ರೀ ದಾಸಬೋಧದ ಗುರುಶಿಷ್ಯರ ಸಂವಾದದಲ್ಲಿಯ ಹದಿನಾರನೆಯ ದಶಕದೊಳಗಿನ
"ಗುಣಭೂತ ನಿರೂಪಣ"ವೆಂಬ ಹೆಸರಿನ ಹತ್ತನೆಯ ಸಮಾಸವು ಮುಗಿದುದು.

• •

## — ದಶಕ ಹದಿನಾರು ಮುಕ್ತಾಯ —

# ದಶಕ ೧೭. ಪ್ರಕೃತಿ ಪುರುಷ

ಮಾನವನು ಜೀವನದಲ್ಲಿ ಅನೇಕ ಪ್ರಕಾರದ ದುಃಖಗಳನ್ನು ಭೋಗಿಸಬೇಕಾಗುವದು. ಹುಟ್ಟಿನಿಂದ ಹಿಡಿದು ಸಾಯುವವರೆಗೂ ಸುಖ ದುಃಖಗಳ ಚಕ್ರವು ಏನು ಮಾಡಿದರೂ ಮನುಷ್ಯನ ಬೆನ್ನು ಬಿಡುವದಿಲ್ಲ. ನಿಜವಾಗಿ ಅಂತರಾತ್ಮನು ಬಹಳ ಶುದ್ಧನಿರುವನು. ಮತ್ತು ನಿರ್ಲೇಪ–ಅಲಿಪ್ತ–ಯಾವುದಕ್ಕೂ ಅಂಟಿಕೊಳ್ಳದವನಿರುವನು. ಆದರೆ ದೇಹದ ಸಂಗತಿಯಿಂದ ಇವನಿಗೆ ಅನೇಕ ಸುಖ ದುಃಖಗಳನ್ನು ಅನುಭೋಗಿಸಬೇಕಾಗುವದು. ಈ ಭೋಗದ ಸಂಕಟ–ದುಷ್ಕರಗಳ ಅಡಚಣಿಯಿಂದ ಪಾರಾಗಲಿಕ್ಕೆ (ಬಿಡುಗಡೆಯಾಗಲಿಕ್ಕೆ) ಆತ್ಮಾನಾತ್ಮ ವಿವೇಕವನ್ನು ಮಾಡುವದೇ ನಿಜವಾದ ಉಪಾಯವಿರುವದು. ವಿವೇಕವು ನಿಜವಾಗಿಯೂ ಒಂದು ದೊಡ್ಡ ಶಕ್ತಿ ಇರುವದು. ಇದರ ಯೋಗ್ಯ ಉಪಯೋಗ ಮಾಡಿದರೆ–ಮಾಡಿಕೊಂಡರೆ ನಾವು ನಮ್ಮ ಮಿತ್ರರಾಗುವೆವು. ಇದರ ಯೋಗ್ಯ ಉಪಯೋಗ ಮಾಡಿಕೊಳ್ಳದಿದ್ದರೆ ನಾವೇ ನಮ್ಮ ಶತ್ರು ಆಗುವೆವು. ಆದ್ದರಿಂದ ಸಾಧು–ಸಂತ ಶರಣರ ಸಂಗತಿಯನ್ನು ಹಿಡಿದು ಆತ್ಮಾನಾತ್ಮ ವಿವೇಕವನ್ನು ಮಾಡಲಿಕ್ಕೆ ಕಲಿಯಬೇಕು. ಈ ಸೂಕ್ಷ್ಮ ವಿವೇಕದ ಭಾವಾರ್ಥ ಹೇಗಿರುವದೆಂದರೆ ಪ್ರತಿಯೊಂದು ಪ್ರಾಣಿಯ ಅಂತರ್ಯಾಮದಲ್ಲಿ ಅಂದರೆ ಹೃದಯದ ಆಳವಾದ ಗುಹೆಯಲ್ಲಿ ಅಂತರಾತ್ಮನು ವಾಸ ಮಾಡಿರುವನು. ಇವನು ಅತಿಶಯ ಸೂಕ್ಷ್ಮ ಇದ್ದದ್ದರಿಂದ ಸ್ಥೂಲ ದೇಹದ ಆಧಾರದಿಂದ ಇವನ ಕಾರ್ಯವು ಜಗತ್ತಿನಲ್ಲಿ ನಡೆಯುವದು. ನಾವು ಇವನ ಅಖಂಡ ಮನನ ಮತ್ತು ಚಿಂತನ ಮಾಡಿದ್ದಾದರೆ ಇವನೊಂದಿಗೆ ಯೋಗ (ಸಂಬಂಧ, ಸಹ

ವಾಸ) ಸಾಧಿಸುವದು. ಮತ್ತು ಈ ರೀತಿಯಿಂದ ಇವನ ಅಖಂಡ ಸಹವಾಸ ಘಟಿಸಹತ್ತಿತೆಂದರೆ ಇವನ ಅದ್ಭುತ ಕಾರ್ಯದ ಬಗ್ಗೆ ಕಿಂಚಿತ್ ಅಂದರೆ ಅಲ್ಪಸ್ವಲ್ಪ ಕಲ್ಪನೆಯು ಬರುವದು. ಆದ್ದರಿಂದ ಅಂತರಾತ್ಮನ ಜ್ಞಾನವನ್ನು ಮಾಡಿಕೊಳ್ಳಲಿಕ್ಕೆ ಸತ್ಸಂಗತಿ, ಸತ್‌ಶಾಸ್ತ್ರ ಶ್ರವಣ, ಅಖಂಡ ವಿವರಣ ಸವಿಸ್ತಾರ ನಿರೂಪಣ, ಸ್ಪಷ್ಟೀಕರಣ ಮತ್ತು ಸಾಕ್ಷಾತ್ಕಾರ ಈ ಮಾರ್ಗದಿಂದ ಹೋಗಬೇಕು. ಮೂಲ ಪರಬ್ರಹ್ಮವು ಶಾಶ್ವತ, ಸತ್ಯ, ಅಕ್ಷಯ ತ್ರಿಕಾಲಾಬಾಧಿತ, ಮತ್ತು ನಿರ್ವಿಕಾರ ಇರುವದು. ಇದರೊಳಗಿಂದ ಅಂದರೆ ಪರಬ್ರಹ್ಮದಲ್ಲಿ ಮೂಲ ಸಂಕಲ್ಪವು ಸ್ಫುರಿಸುವದು. ಮಿಂಚುವದು-ಗೋಚರಿಸುವದು. ಇದರಲ್ಲಿಯೇ ಸ್ತ್ರೀ ಪುರುಷ ಅನ್ನುವ ಭೇದದ ಬೀಜ ಇರುವದು. ಸೃಷ್ಟಿಯು ಸ್ಥೂಲ ಆಕಾರ ತಳೆಯಲು ಹತ್ತಿತೆಂದರೆ ಇದು (ಬೀಜವು) ಪ್ರಕಟಗೊಳ್ಳುವದು. ಸಂತರ ಸಂಬಂಧ – ಸಹವಾಸ ಬಂದರೆ ಬಹಳ ಉತ್ತಮ ಆಗುವದು. ಒಂದು ವೇಳೆ ಇವರ ದರ್ಶನ-ಸಹವಾಸ. ಆಗದಿದ್ದರೆ ಸಂತ ಶರಣರ ಗ್ರಂಥಗಳನ್ನು ಓದಿ ಅಭ್ಯಾಸ ಮಾಡಿರಿ. ವಿವೇಕ ಮಾಡುವದನ್ನು ಕಲಿಯಿರಿ. ಸ್ಥೂಲದ ಮೂಲವು ವಾಸನೆಯಲ್ಲಿ ಇರುವದು. (ಕರ್ಮದ್ದು ಮನದ ಮೇಲೆ ಇರುವಂಥ ಸಂಸ್ಕಾರದಲ್ಲಿ ಇರುವದು.] ಆದರೆ ಇದು ಸೂಕ್ಷ್ಮ ಇದ್ದದ್ದರಿಂದ ಕಾಣುವದಿಲ್ಲ. ಇದೇ ಆತ್ಮಜ್ಞಾನಕ್ಕೆ ಅಡ್ಡಬರುವದು. ಆತ್ಮಜ್ಞಾನವೇ ಜಗತ್ತಿನಲ್ಲಿ ಸರ್ವ ಶ್ರೇಷ್ಠವಿರುವದು. ಜಗತ್ತಿನಲ್ಲಿಯು ನಿಜವಾದ (ಖರೇ) ಪುರುಷರು ಆತ್ಮಶೋಧ ಮಾಡುತ್ತಲೇ ಜೀವಿಸಿದರು – ಕಾಲಕಳೆದರು. ಅಂತರಾತ್ಮನ ಶೋಧವನ್ನು ಹೇಗೆ ಮಾಡಬೇಕು ಅನ್ನುವದನ್ನು ಇವರು ಗ್ರಂಥದಲ್ಲಿ ಬರೆದು(ಹೇಳಿ)ಇಟ್ಟಿರುವರು. ಅವರು ಬರೆದಿಟ್ಟ ಹೇಳಿಕೆಯು ಆಧಾರದಿಂದ ಆತ್ಮವನ್ನು ಶೋಧಿಸಬೇಕು. ಮತ್ತು ಶೋಧ ಮುಗಿದ ಕೂಡಲೇ ಗ್ರಂಥವನ್ನು (ಬಾಜೂಕ್ಕೆ)ಬದಿಗೆ ತೆಗೆದಿಡಬೇಕು. ಅಂದರೆ ಅದರ ಕೆಲಸ ಅಲ್ಲಿಗೆ ಮುಗಿಯಿತು. ನೀವು ಸ್ವತಃ ಅನುಭವ(ಪ್ರಚೀತಿ) ಪಡೆದು-ತಿಳಿದು, ಅಮೇಲೆ ಆತ್ಮನ ಬಗ್ಗೆ ಹೊರಗೆ ಅಂದರೆ ಜಗತ್ತಿಗೆ ಹೇಳಲಿಕ್ಕೆ ಅಧಿಕಾರಿಗಳಾಗುವಿರಿ. ಆಗ ಜನರಿಗೆ ನೀವು ತಿಳಿಸಿ ಹೇಳಿರಿ. ನೀವು ಸ್ವತಃ ಅನುಭವವನ್ನು ಪಡೆಯದೆ ಹೇಳಹತ್ತಿದರೆ, ಬಹಳ ಗೊಂದಲವಾಗುವದು. (ಚೇಳಿನ ಮಂತ್ರ ಗೊತ್ತಿಲ್ಲದವನು ಹಾವಿನ ಬಿಲದಲ್ಲಿ (ಗಂದ್ದಿನಲ್ಲಿ) ಕೈ ಹಾಕಿದಂತೆ ಆಗುವದು). ನಿಮ್ಮಲ್ಲಿಯೇ ಇಪ್ಪತ್ನಾಲ್ಕು ತಾಸೂ ಅಜಪಾ(ಜಪ)ನಡೆದಿರುವದು. ಇದು ಸಹಜವಾಗಿ ನಡೆಯುವಂಥ ಜಪವು. ಇದನ್ನು ಏಕಾಂತದಲ್ಲಿ ಕುಳಿತು ಶಾಂತತನದಿಂದ ಸಮಾಧಾನದಿಂದ ನೋಡಬೇಕು. ಸಾಧಕರು ಸಹಜವಾಗಿ ಈ ಸಾಧನವನ್ನು ಮಾಡಲಿಕ್ಕೆ ಕಲಿಯಬೇಕು. ಈ ಅಜಪಾ ಸಾಧನದಿಂದ ಅತಿ ಸಹಜವಾಗಿ ಆತ್ಮಚಿಂತನವನ್ನು ಮಾಡಬೇಕು. ದೇಹದ ಮೇಲಿನ ಅಭಿಮಾನವನ್ನು ಸಂಪೂರ್ಣ ಬಿಡುವ ಜನರೇ ನಿಜವಾಗಿ ಧನ್ಯರಾಗುವರು. ಭಾಗ್ಯವಂತರಾಗುವರು. ಪಿಂಡದ ನಾಲ್ಕು ದೇಹಗಳು (೧. ಸ್ಥೂಲ, ೨. ಸೂಕ್ಷ್ಮ, ೩. ಕಾರಣ, ೪. ಮಹಾಕಾರಣ) ಮತ್ತು ಬ್ರಹ್ಮಾಂಡದವು ನಾಲ್ಕು ದೇಹಗಳು (೧. ವಿರಾಟ, ೨. ಹಿರಣ್ಯಗರ್ಭ, ೩. ಅವ್ಯಾಕೃತ, ೪. ಮೂಲ ಮಾಯಾ) ಹೀಗೆ ಒಟ್ಟು ಎಂಟು ದೇಹಗಳೆಂದು ಹೇಳಲಾಗಿದೆ. ಸೂಕ್ಷ್ಮ ದೇಹದವು ೨೫ ತತ್ವಗಳಿರುವವು. ನಾಲ್ಕು ದೇಹ, ನಾಲ್ಕು ಅವಸ್ಥಾ, ನಾಲ್ಕು ಗುಣ, ಇತ್ಯಾದಿ ಮೂವತ್ತೆರಡು ತತ್ವಗಳು ಇರುವವು. ಬ್ರಹ್ಮಾಂಡದವು ೨೫ ತತ್ವಗಳು ಇರುವವು. ಎಲ್ಲವೂ ಕೂಡಿ ೮೨ ತತ್ವಗಳಾಗುವವು–ಇವನ್ನು ಸಾಕ್ಷಿತ್ವದಿಂದ ಅಂದರೆ ತಿರಾಯತ–ಮಧ್ಯಸ್ಥಗಾರ–ತ್ರಯಸ್ಥನಂತೆ ಇದ್ದುಕೊಂಡು ವಿವೇಕದಿಂದ ಸ್ಥಿರಚಿತ್ತ, ಸ್ಥಿರ ಬುದ್ಧಿಯಿಂದ ಸ್ಥಿರಪಡಿಸಿಕೊಂಡು ಈ ತತ್ವಗಳನ್ನು ನಿರಸನ ಮಾಡಬೇಕು. (ಪರಿಹರಿಸಬೇಕು.) ಆಗ ಇದರಿಂದ ಜ್ಞಾನವು ಉತ್ಪನ್ನವಾಗುವದು. ಮತ್ತು ಇದರಿಂದ ಅಜ್ಞಾನವು ದೂರಾಗುವದು. ಆ ಮೇಲೆ ಜ್ಞಾನದಿಂದ ವಿಜ್ಞಾನವು ಪ್ರಾಪ್ತವಾಗುವದು. ಪರಬ್ರಹ್ಮವು ಉಪಾಧಿ ಶೂನ್ಯ ಅಂದರೆ ವಿಕಾರರಹಿತ,ಮಾಯಾ ರಹಿತ, ಪ್ರಪಂಚರಹಿತ ವಿರುವದು. ಇದು ಎಲ್ಲ ದೃಶ್ಯಗಳ ಆಚೆಗೆ [ದೃಶ್ಯವನ್ನು ದಾಟಿ]ಇರುವದು. ನಾವು ಸೂಕ್ಷ್ಮವನ್ನು ಕಂಡುಹಿಡಿಯುವ ಶಕ್ತಿಯನ್ನು ಸಂಪಾದನ ಮಾಡಿಕೊಂಡು ದೃಶ್ಯದ ಅಂದರೆ ಅಶಾಶ್ವತದ ಭೇದಮಾಡಬೇಕು. ದೃಶ್ಯ ಭೇದದ ಹಿಂದೆ ಇರುವ ಸೂಕ್ಷ್ಮವನ್ನು ಗುರುತಿಸಬೇಕು. ಅನಂತರ ಕೊನೆಗೆ ನಿರ್ಗುಣವನ್ನು ತದಾಕಾರತನದಿಂದ ಅದೇ ಆಗಿ ಅನುಭವ ಪಡೆಯಬೇಕು.

## ದಶಕ ೧೭. ಸಮಾಸ ೧. ದೇವ ಬಲಾತ್ಕಾರ (ನುಡಿ ೩೦)

ಈ ಸಮಾಸದ ಹೆಸರು ಸ್ವಲ್ಪ ಚಮತ್ಕಾರಿಕವಾಗಿ ಕಾಣುವದು. ಆದರೆ ಈ ಹೆಸರು ಇದಕ್ಕೆ ಯೋಗ್ಯವೇ ಇರುವದು. ಹೇಗೆ ಅನ್ನುವದನ್ನು ವಿವರಿಸುವೆ ನೋಡಿರಿ. ಶ್ರೀ ಸಮರ್ಥರು ಮೇಲಿಂದ ಮೇಲೆ [ಪುನಃ ಪುನಃ] ಹೇಳುವದೇನಂದರೆ ಅಂತರಾತ್ಮಾ ಅತ್ಯಂತ ಸೂಕ್ಷ್ಮನಿರುವನು. ಆದರೆ ನಮ್ಮ ದೇಹವು ಅತ್ಯಂತ ಜಡವಿರುವದು ಅಂತರಾತ್ಮನಿಗೆ ದೇವರೆಂದು ಅಂದದ್ದಾದರೆ ಜಡ ಸ್ವರೂಪದ ದೇಹವು ಇವನ ದೇವಾಲಯುವೆಂದು ಅನ್ನಲಿಕ್ಕೆ ಬರುವದು. ಅಂತರಾತ್ಮನು ನಿಜವಾಗಿಯೂ ಸುಖ ದುಃಖಗಳ ಸ್ಪರ್ಶವಾಗದವನು–ಕೇವಲ ಸಾಕ್ಷಿತ್ವದಿಂದ ತ್ರಯಸ್ಥನಂತೆ ಇರುವವನಾಗಿರುವನು. ಮತ್ತು ನಿರ್ದೋಷತನದಿಂದ ಸರ್ವರಲ್ಲಿಯೂ ಸಮವಾಗಿ ಸರಿಯಾಗಿ ಇರುವಂಥವನಿರುವನು. ಆದರೆ ದೇಹದಲ್ಲಿ ಇರಲಿಕ್ಕೆ ಬಂದ ಮೇಲೆ ದೇಹದ ಸಹವಾಸದಿಂದ ಮೂಲದಲ್ಲಿ ಸಂಗರಹಿತನಾಗಿರುವ ಅಂತರಾತ್ಮನು ಈಗ ಇಲ್ಲಿ ಸಂಗ ಸಹಿತನಾಗುವನು. ಇದರಿಂದ ಇವನಿಗೆ ಸುಖ ದುಃಖಗಳನ್ನು ಒತ್ತಾಯದಿಂದ ಕಡ್ಡಾಯವಾಗಿ ಭೋಗಿಸಬೇಕಾಗಹತ್ತುವದು. ಇದೇ ದೇವರ ಮೇಲೆ ಆದಂಥ ಬಲಾತ್ಕಾರವು. ಅಂತರಾತ್ಮರೂಪಿ ದೇವನು ದೇಹವೆಂಬ ದೇವಾಲಯದಲ್ಲಿ ಇರುವನು. ಮತ್ತು ಇಂದ್ರಿಯಗಳ ಮುಖಾಂತರ ಎದುರಿಗೆ ಬಂದ (ಬಂದಂಥ) ನೈವೇದ್ಯವನ್ನು ಒತ್ತಾಯದಿಂದ ಜಬರದಸ್ತಿನಿಂದ ಭೋಗ ಪಡೆಯುವನು ಕಾಲಾಂತರದಿಂದ ಇದೇ ಒಂದು ಚಟವಾಗಿ ಪರಿಣಮಿಸುವದು. ಇದರ ಪರಿಣಾಮದಿಂದಾಗಿ ಇಂದ್ರಿಯಗಳ ವಿಷಯದ ನೈವೇದ್ಯ ಇವನಿಗೆ ಅಂತರಾತ್ಮನಿಗೆ ಕೊಡದಿದ್ದರೆ

ಇವನು ದೇಹ ರೂಪದ ದೇವಾಲಯವನ್ನು ಬಿಟ್ಟುಹೋಗುವನು. ಇವನು ಅತಿಶಯ ಸೂಕ್ಷ್ಮ ಇದ್ದುದರಿಂದ ಇವನು ಹೋದದ್ದೇ ಯಾರಿಗೂ ತಿಳಿಯುವದಿಲ್ಲ. ಯಾರಿಗೂ ಇದರ ಕಲ್ಪನೆಯೂ ಕೂಡಾ ಬರಲಿಕ್ಕೆ ಶಕ್ಯವಿಲ್ಲ. ನಿಜ ಹೇಳುವದಾದರೆ ದೇವರಿಗೇ ದೇವರ ಕಲ್ಪನೆಯು ಬರಲಿಕ್ಕೆ ಸಾಧ್ಯವಿರುವದು. ಅಲ್ಲಿ-ಇಲ್ಲಿ ಎಲ್ಲೆಲ್ಲಿಯೂ ದೇವಾಲಯದ ದ್ವಾರಾ [ದೇಹದ ಮೂಲಕ] ದೇವರು ಪ್ರಕಟನಾಗುವದರಿಂದ ದೇವರನ್ನು ನೋಡಬೇಕಾದರೆ ಮೊದಲಿಗೆ ದೇವಾಲಯವನ್ನು ನೋಡಬೇಕಾಗುವದು. ಈ ಪ್ರಕಾರ ನಡೆದಾಡುವ, ಮಾತನಾಡುವ ದೇವಾಲಯಗಳು ಅನಂತವಿರುವವು. ಇವುಗಳಲ್ಲಿ ಅನೇಕ ತರಹದವೂ ಇರುವವೂ ಇರುವವು. ಕೆಲವು ದೇವಾಲಯದಲ್ಲಿ ಸುಖವೇ ತುಂಬಿರುವದು ಕಂಡುಬರುತ್ತದೆ. ಆದರೆ ಇದು ಸದಾ ಸರ್ವಕಾಲ ಟಿಕಾಯಿಸಿ ಇರುವಂಥದಲ್ಲ. ಮೂಲ ಪರಬ್ರಹ್ಮವು ನಿಶ್ಚಲ, ಚಲನ ರಹಿತ, ಸ್ಥಿರ ವಿರುವದು. ಆದರೆ ಅಂತರಾತ್ಮವು ಅತಿಶಯ ಚಂಚಲವಿರುವದು. ಇಷ್ಟೇ ಅಲ್ಲ ಎಷ್ಟೊಂದು ಚಂಚಲಗಳೆನ್ನುವವು ಇರುವವೋ ಅವಕ್ಕೆಲ್ಲ ಇವನು ಮುಕುಟ ಮಣಿ ಇರುವನು. ಇದೇ ಅಂತರಾತ್ಮವು ಈ ದೃಶ್ಯ ಜಗತ್ತಿನ [ವಿಶ್ವಕ್ಕೆ] ಈಶ್ವರ ಅಥವಾ ಒಡೆಯ (ಧನಿ) ಎಂದು ತಿಳಿಯಬೇಕು. ಇವನು ಕಾಣುವದಿಲ್ಲವೆಂದು ಯಾವ ವ್ಯತ್ಯಾಸ ಕೆಡಕು ತೊಂದರೆಗಳುಂಟಾಗುವದಿಲ್ಲ. ಯಾಕೆಂದರೆ ಈ ಸೃಷ್ಟಿಯು ಅವನ ದೇಣಿಗೆಯಾಗಿರುವದು. [ಇವನದೇ ಕೃತಿ, ಇಚ್ಛೆಯ ಅದ್ಭುತ ಕಾರ್ಯವಾಗಿರುವದು]. ಇವನಿಂದಲೇ ಇಷ್ಟೆಲ್ಲ ವಿಸ್ತಾರವಾಗಿರುವದು. ಇವನು ನಿಜವಾಗಿ ಭವ್ಯ ಮತ್ತು ಅಷ್ಟೇ ಶ್ರೇಷ್ಠನಿರುವನು. ಒಂದು ಕ್ಷಣವೂ ಕೂಡಾ ಒಂದು ಕಡೆಗೆ ಸ್ವಸ್ಥವಾಗಿ ಉಳಿಯುವದಿಲ್ಲ. ಆತ್ಮಾನಾತ್ಮ ವಿವೇಕ ಮಾಡಿ ಅಂತರಾತ್ಮನನ್ನು ಶೋಧಿಸಿ ತೆಗೆಯುವಂಥ ತಿಳಿಯುವಂಥ ಮತ್ತು ಅವನ ಚಿಂತನದಲ್ಲಿ ಅಖಂಡವಾಗಿ ಇರುವಂಥ ಪುರುಷನೇ ಈ ಜಗತ್ತಿನಲ್ಲಿ ಧನ್ಯ ಧನ್ಯವೆನಿಸುವನು. ಯಾವನು ಅಂತರಾತ್ಮನ ಅಖಂಡ ಚಿಂತನಮಾಡುವನೋ ಅವನಲ್ಲಿ ಅಂತರಾತ್ಮನು ಪ್ರಚೀತಿ [ಅನುಭವ] ರೂಪದಲ್ಲಿ ಅಖಂಡವಾಗಿ ಸತತವೂ ಜಾಗ್ರತ ಇರುವನು. ಈ ರೀತಿಯಲ್ಲಿ ಅವನ ಕೂಡ ಅಖಂಡ ಯೋಗವನ್ನು ಸಾಧಿಸುವವನೇ ನಿಜವಾದ ಯೋಗಿ ಎಂದು ಅನಿಸುವನು. ಆದರೆ ಸೂಕ್ಷ್ಮ ತತ್ವದ ಶೋಧವನ್ನು ತೆಗೆದುಕೊಂಡು ಅಂತರಾತ್ಮನ ಪ್ರಚೀತಿಯು ಅನುಭವ ಪಡೆಯುವ ಜನರು ಸ್ವಲ್ಪ ಇರುವರು. ವಿವೇಕಿ ಜನರು ನಿಜವಾಗಿಯೂ ಧನ್ಯರಿರುವರು. ಸಾಧು ಸಂತರ ಸಂಗತಿ ಹಿಡಿದು ವಿವೇಕಮಾಡಲು ಕಲಿಯಬೇಕು. ಪ್ರಥಮವಾಗಿ ಸತ್ಸಂಗ ಮಾಡಬೇಕು. ಆ ನಂತರ ಸಂತರ ಕಡೆಯಿಂದ ಸತ್‌ಶಾಸ್ತ್ರ ಶ್ರವಣವನ್ನು ಮಾಡಬೇಕು. ಆ ಮೇಲೆ ಪಂಚೀಕರಣ [ಪಂಚೀಕರಣ ಅಂದರೆ ಐದು ಭೂತಗಳ ಈ ಪಿಂಡ ಬ್ರಹ್ಮಾಂಡವು ಹೇಗೆ ತಯಾರ ಆಯಿತು. ಅನ್ನುವದರ ವಿವೇಚನೆಗೆ ಪಂಚೀಕರಣವೆಂದು ಅನ್ನುವರು] ವನ್ನು ತಿಳಿದುಕೊಂಡು ನಂತರ ಮಹಾವಾಕ್ಯದ [ಮಹಾವಾಕ್ಯ ಅಂದರೆ ನಾಲ್ಕು ವೇದದ ನಾಲ್ಕು ಮುಖ್ಯ ವಾಕ್ಯಗಳು] ಅಖಂಡ ವಿವರಣ ಸ್ಪಷ್ಟೀಕರಣ ಮಾಡಿಕೊಳ್ಳಬೇಕು. ಇಂಥವರಲ್ಲಿಯೇ ಇದರ ಜೊತೆಗೇನೇ ಶಕ್ಯವಿದ್ದಷ್ಟು ಪರೋಪಕಾರವನ್ನು ಮಾಡಬೇಕು. ಅಂದರೆ ಸಾಧಕನ ಮನಸ್ಸು ಶುದ್ಧ ವ ನಿಸ್ಸಂಗವಾಗಿ ಅದಕ್ಕೆ ತನ್ನಷ್ಟಕ್ಕೆ ತಾನೇ ಆತ್ಮ ಸಾಕ್ಷಾತ್ಕಾರವಾಗುವದು. ಇಂಥ ಸತ್ಕೀರ್ತಿಯ ಭಾಗ್ಯವಂತ ಪುರುಷರು ಅಂದರೆ ಪರಮೇಶ್ವರನ ಅಂಶವೇ ಇರುವರು. ಇಂಥವರ ಕೈಯಿಂದ ಜಗತ್ತಿನ ಉದ್ಧಾರವಾಗುವದು.

ದಶಕ ಸಪ್ತದಶ : ಸಮಾಸ ಪ್ರಥಮ : ಪ್ರಕೃತಿ ಪುರುಷ ನಾಮ (ನುಡಿ ೩೦)

॥ಶ್ರೀರಾಮ॥ ನಿಶ್ಚಳ ಬ್ರಹ್ಮೀ ಚಂಚಳ ಆತ್ಮಾ । ಸಕಳಾಂಪರ ಜೋ ಪರಮಾತ್ಮಾ ।
ಚೈತನ್ಯ ಸಾಕ್ಷೀ ಜ್ಞಾನಾತ್ಮಾ । ಷಡ್‌ಗುಣೈಶ್ವರು ॥೧॥

ಸಕಳ ಜಗಾಚಾ ಈಶ್ವರು । ಮ್ಹಣೌನ ನಾಮೇ ಜಗದೇಶ್ವರು ।
ತಯಾಪಾಸೂನ ವಿಸ್ತಾರು । ವಿಸ್ತಾರಲಾ ॥೨॥

ಶಿವಶಕ್ತಿ ಜಗದೇಶ್ವರೀ । ಪ್ರಕೃತಿಪುರುಷ ಪರಮೇಶ್ವರೀ ।
ಮೂಳಮಾಯಾ ಗುಣೇಶ್ವರೀ । ಗುಣಕ್ಷೋಭಿಣೀ ॥೩॥

ಕ್ಷೇತ್ರಜ್ಞ ದೃಷ್ಟಾಕೂಟಸ್ತ ಸಾಕ್ಷೀ । ಅಂತರಾತ್ಮಾ ಸರ್ವಲಕ್ಷೀ ।
ಶುದ್ಧಸತ್ವ ಮಹತ್ತತ್ವ ಪರೀಕ್ಷೀ । ಜಾಣತಾ ಸಾಧು ॥೪॥

ಬ್ರಹ್ಮಾ ವಿಷ್ಣು ಮಹೇಶ್ವರು । ನಾನಾ ಪಿಂಡೀ ಜೀವೇಶ್ವರು ।
ತ್ಯಾಸ ಭಾಸತೀ ಪ್ರಾಣೀಮಾತ್ರ । ಲಹಾನಥೋರ ॥೫॥

ದೇಹದೇಉಳಾಮಧೇ ಬೈಸಲಾ । ನ ಭಜತಾ ಮಾರಿತೋ ದೇಹಾಲಾ ।
ಮ್ಹಣೌನಿ ತ್ಯಾಚ್ಯಾ ಭೇಣೇ ತಯಾಲಾ । ಭಜತೀ ಲೋಕ ॥೬॥

ಜೇ ವೇಳೇಸಿ ಭಜನ ಚುಕಲೇ । ತೇ ತೇ ತೇವ್ಹಾ ಪಥ್ಯಾಡಿಲೇ ।
ಆವಡೀನೇ ಭಜೋ ಲಾಗಲೇ । ಸಕಳಲೋಕ ॥೭॥

ಜೇ ಜೇ ಜೇವ್ಹಾ ಆಕ್ಷೇಪಿಲೇ । ತೇ ತೇ ತತ್ಕಾಳ ಚಿ ದಿಧಲೇ ।
ತ್ರೈಲೋಕ್ಯ ಭಜೋ ಲಾಗಲೇ । ಯೇಣೇ ಪ್ರಕಾರೇ ॥೮॥

ಪಾಚಾ ವಿಷಯಾಂಚಾ ನೈವೇದ್ಯ । ಜೇವ್ಹಾ ಪಾಹಿಜೆ ತೇವ್ಹಾ ಸಿದ್ಧ ।
ಐಸೇ ನ ಕರಿತಾ ಸದ್ಯ । ರೋಗ ಹೋತೀ ॥೯॥

ಜೇಣೇ ಕಾಳೇ ನೈವೇದ್ಯ ಪಾವೇನಾ । ತೇಣೇ ಕಾಳೇ ದೇವ ರಾಹೇನಾ ।
ಭಾಗ್ಯ ವೈಭವ ಪದಾರ್ಥ ನಾನಾ । ಸಾಂಡೂನ ಜಾತೋ ॥೧೦॥

## ದಶಕ ೧೭. ಸಮಾಸ ೧. ಪ್ರಕೃತಿ ಪುರುಷನಾಮ (ನುಡಿ ೩೦)

ಪರಬ್ರಹ್ಮನು ಮೂಲದಲ್ಲಿ ಅತ್ಯಂತ ನಿಶ್ಚಲ ಇರುವನು. ಅಲ್ಲಿ ಅಂದರೆ ಇವನಲ್ಲಿ ಸಂಕಲ್ಪ ಅಥವಾ ಇಚ್ಛೆ, ಮೊಟ್ಟ ಮೊದಲು, ಎದ್ದಿತು. [ಉತ್ಪನ್ನವಾಯಿತು, ಹುಟ್ಟಿತು]. ಸದ್ವಸ್ತುವಿಗೆ ಸ್ವತಃದ ಅರಿವಾಯಿತು. ಈ ಅರಿವಿಕೆಗೆ[ತಿಳುವಳಿಕೆಗೆ] ಎರಡು ಅಂಗಗಳು. ಒಂದನೆಯದು ಜ್ಞಾನಮಯ ಅಂತರಾತ್ಮಾ ಅಥವಾ ಪರಮೇಶ್ವರ ಇದು ಒಂದು ಅಂಗವಾದರೆ ಎರಡನೆಯದು ಶಕ್ತಿಮಯ ಅಷ್ಟಧಾ ಪ್ರಕೃತಿಯು ಎರಡನೆಯ ಅಂಗವಾಗಿದೆ. ಪ್ರತ್ಯಕ್ಷ ದೃಶ್ಯ ವಿಶ್ವದಲ್ಲಿ ದೇಹದ ಆಧಾರದಿಂದ ಅಂತರಾತ್ಮನು ಅನುಭವಕ್ಕೆ ಬರುವನು. ಅಂತರಾತ್ಮನು ದೇವನಾದರೆ ದೇಹವು ಅವನ ದೇವಾಲಯ[ಗುಡಿ] ಆಗಿರುವದು. ಇಲ್ಲಿ ದೇವನಿದ್ದ ದೇವಾಲಯಕ್ಕೆ ಬಹಳ ಮಹತ್ವ ಇರುವದು: ಮೂಲ ಪರಬ್ರಹ್ಮ ನಿಶ್ಚಲನಿರುವನು. ಯಾವುದಕ್ಕೂ ಅಂಟಿಕೊಳ್ಳದವನಿರುವನು. ಅಲಿಪ್ತನಿರುವನು. ಇಂಥದರಲ್ಲಿ ಚಂಚಲವು ನಿರ್ಮಾಣ ವಾಗುವದು. ಇವನೇ ಈ ಚಂಚಲನೇ ಆತ್ಮಾ ಆಗಿರುವನು. ಇವನು ಎಲ್ಲವುಗಳಿಗಿಂತ ಶ್ರೇಷ್ಠ, ಜೇಷ್ಠನಿದ್ದದ್ದರಿಂದ ಇವನಿಗೆ ಪರಮಾತ್ಮಾ ಎಂದು ಅನ್ನುವರು. ಇದರ ಹೊರತಾಗಿ ಚೈತನ್ಯ, ಸಾಕ್ಷಿ, ಜ್ಞಾನಾತ್ಮಾ,ಷಡ್ಗುಣೇಶ್ವರ ಇವೂ ಸಹ ಇವನ ಹೆಸರೇ ಇರುವವು. (೧) ಇವನು ಸರ್ವ ಜಗತ್ತಿನ ಸ್ವಾಮಿಯು [ಒಡೆಯನು] ಅಂತೆಯೇ ಇವನಿಗೆ ಜಗದೀಶ್ವರ ಅನ್ನುವ ಹೆಸರೂ ಇರುವದು. ಇವನಿಂದಲೇ ಸರ್ವ ಸೃಷ್ಟಿಯು ಇಷ್ಟೊಂದು ವಿಸ್ತಾರವಾಯಿತು. (೨) ಶಿವಶಕ್ತಿ, ಜಗದೀಶ್ವರಿ, ಪ್ರಕೃತಿ ಪುರುಷ, ಪರಮೇಶ್ವರಿ, ಮೂಲ ಮಾಯಾ ಗುಣೇಶ್ವರಿ, ಗುಣಕ್ಷೋಭಿಣಿ. ಇವು ಮೂಲ ಮಾಯೆಯ ಹೆಸರು ಇರುವವು.(೩) ಕ್ಷೇತ್ರಜ್ಞ, ದ್ರಷ್ಟಾ, ಕೂಟಸ್ಥ, ಸಾಕ್ಷಿ ಅಂತರಾತ್ಮಾ, ಸರ್ವವನ್ನೂ [ಏನೆಲ್ಲವನ್ನೂ] ನೋಡುವವ, ಶುದ್ಧ ಸತ್ವ, ಮಹತ್ ತತ್ವ, ಈ ಎಲ್ಲವುಗಳನ್ನು ಯಾರು ಸರಿಯಾಗಿ [ಬರೋಬರ, ಅಚೂಕಾಗಿ] ಪರೀಕ್ಷೆಮಾಡುವರೋ ಮತ್ತು ಇವೆಲ್ಲವುಗಳನ್ನು ಯಾರು ಯಥಾರ್ಥವಾಗಿ ತಿಳಿಯುವರೋ ಅವರೇ ನಿಜವಾದ ಶಹಾಣೆ ಅರ್ಥಾತ್ ಜಾಣ ಅಥವಾ ಎಲ್ಲ ಬಲ್ಲಂಥ ಸಾಧು ಸಂತ ಶರಣರು. (೪) ಬ್ರಹ್ಮ, ವಿಷ್ಣು, ಮಹೇಶ್ವರ, ಪಿಂಡದಲ್ಲಿ ಇರುವವನಾದ, ಜೀವೇಶ್ವರ ಈ ಎಲ್ಲರ ಕಡೆಗೆ ದೃಷ್ಟಿ ಇಟ್ಟೇ ಯಾವತ್ತೂ ಸಣ್ಣ ದೊಡ್ಡ ಪ್ರಾಣಿಗಳನ್ನೂ ಇವನು ನೋಡುವನು. ಸಾಧುಸಂತರು ಸರ್ವ ಪ್ರಾಣಿಗಳನ್ನು ನೋಡುವರು : ಆದರೆ ಇವರ ದೃಷ್ಟಿಯು ಪ್ರಾಣಿಗಳ-ಜೀವಿಗಳ ಅಂತರ್ಯಾಮಿಯಲ್ಲಿ ಇರುವಂಥವನಾದ. ಅಂತರಾತ್ಮನ ಕಡೆಗೆ ಇರುವದು, [೫] ಈ ಅಂತರಾತ್ಮನು ದೇಹರೂಪ ದೇವಾಲಯದಲ್ಲಿ ಕುಳಿತಿರುವನು. ಇವನ ಸೇವೆ ಭಜನೆಯನ್ನು ಮಾಡದಿದ್ದರೆ, ಅವನಿಗೆ ಬೇಕೆನಿಸಿದ್ದನ್ನು ಕೊಡದಿದ್ದರೆ ಇವನು ದೇಹವನ್ನು ಜೀವಂತ ಇಡುವದಿಲ್ಲ. ಆದ್ದರಿಂದ ಈ ಅಂಜಿಕೆಯಿಂದಾಗಿ ಜನರು ಇವನನ್ನು ಭಜಿಸುವರು. [೬] ಯಾವ ಯಾವ ಸಮಯದಲ್ಲಿ ಇವನಿಗೆ ಏನೇನು ಬೇಕೋ ಅದನ್ನು ಕೊಡದಿದ್ದರೆ, ಅದು ಸಿಗದಿದ್ದರೆ ಆಯಾ ಸಮಯದಲ್ಲಿ ಇವನು ಜನರನ್ನು ಪೀಡಿಸುವನು. ಕಾಡುವನು. ತೊಂದರೆಯನ್ನು ಕೊಡುವನು. ಆದ್ದರಿಂದ ಜನರು ಪ್ರೀತಿಯಿಂದ ಇವನಿಗೆ ಬೇಕಾದದ್ದನ್ನು ಕೊಡುವರು. [೭] ಯಾವ ಹೊತ್ತಿಗೆ ಯಾವುದನ್ನು ಬೇಡುವನೋ. [ಇಚ್ಛಿಸುವನೋ, ಅಥವಾ ಕೊಡಲಿಲ್ಲವೆಂದು ಆಕ್ಷೇಪಿಸುವನೋ] ಆಗ ಅದನ್ನು ಜನರು ಇವನಿಗೆ ಪೂರೈಸುವರು-ಕೊಡುವರು. ಈ ಪ್ರಕಾರದಿಂದ ಇಡೀ ತ್ರೈಲೋಕ್ಯವೇ ಇವನ ಸೇವೆಯನ್ನು ಮಾಡುವದು. [೮] ಐದು ಇಂದ್ರಿಯಗಳಿಗೆ ಅವುಗಳ ಭೋಗದ ಯೋಗ್ಯ ನೈವೇದ್ಯ ಯಾವಾಗ ಬೇಕೋ ಆಗ್ಗೆ ಅದು ತಯಾರ ಇರಬೇಕು. ಒಂದುವೇಳೆ ದೊರಕದಿದ್ದರೆ ಕೂಡಲೇ ದೇಹದಲ್ಲಿ ರೋಗ ಉತ್ಪನ್ನವಾಗುವದು. [೯] ಯಾವಾಗ ಅಂತರಾತ್ಮರೂಪಿ ದೇವರಿಗೆ ನೈವೇದ್ಯ [ನಿವೇದನ ಮಾಡಲು ಯೋಗ್ಯ ಪದಾರ್ಥ ಅಥವಾ ಭೋಜನ] ಸಿಗುವದಿಲ್ಲವೋ ಆಗ ಇವನು ದೇಹದಲ್ಲಿ ಇರುವದಿಲ್ಲ. ಭಾಗ್ಯ, ವೈಭವ, ಮತ್ತು ಇತರ ಪದಾರ್ಥಗಳನ್ನೆಲ್ಲ ಅಲ್ಲಿಂವಲ್ಲಿ ಚೆಲ್ಲಿಕೊಟ್ಟು ಹೊರಟು ಹೋಗುವನು. ಆಗ ಮನುಷ್ಯನು ಸಾಯುವನು. [೧೦]

ಜಾತೋ ತೋ ಕಳೋ ದೇಈನಾ । ಕೋಣಾಸ ಠಾಉಕೇ ಹೋಯೇನಾ ।
ದೇವೇವಿಣ ಅನುಮಾನೇನಾ । ಕೋಣಾಸ ದೇವ ॥೧೧॥

ದೇವ ಪಾಹಾವಯಾ ಕಾರಣೇ । ದೇಉಳೇ ಲಾಗತೀ ಪಾಹಾಣೇ ।
ಕೋಠೇ ತರೀ ದೇಉಳಾಚ್ಯಾ ಗುಣೇ । ದೇವ ಪ್ರಗಟೇ ॥೧೨॥

ದೇಉಳೇ ಮ್ಹಣಿಜೆ ನಾನಾ ಶರೀರೇ । ತೇಥೇ ರಾಹಿಜೇ ಜೀವೇಶ್ವರೇ ।
ನಾನಾ ಶರೀರೇ ನಾನಾ ಪ್ರಕಾರೇ । ಅನಂತ ಭೇದೇ ॥೧೩॥

ಚಾಲತೀ ಬೋಲತೀ ದೇಉಳೇ । ತ್ಯಾಮಧೇ ರಾಹಿಜೇ ರಾಉಳೇ ।
ಜಿತುಕೀ ದೇಉಳೇ ತಿತುಕೀ ಸಕಳೇ । ಕಳಲೀ ಪಾಹಿಜೇ ॥೧೪॥

ಮಛಕೂರ್ಮ ವಾರಾಹ ದೇಉಳೇ । ಭೂಗೋಳ ಧರಿಲಾ ಸರ್ವಕಾಳೇ ।
ಕರಾಳೇ ವಿಕ್ರಾಳೇ ನಿರ್ಮಳೇ । ಕಿತಿಯೇಕ ॥೧೫॥

ಕಿತ್ಯೇಕ ದೇಉಳೀ ಸೌಖ್ಯ ಪಾಹೇ । ಭರತಾ ಆವಘೇ ಸಿಂಧ ಆಹೇ ।
ಪರೀ ತೇ ಸರ್ವಕಾಳ ನ ರಾಹೇ । ಅಶಾಶ್ವತ ॥೧೬॥

ಅಶಾಶ್ವತಾಚಾ ಮಸ್ತಕಮಣೀ । ಜಯಾಚೀ ಯೆವಢೀ ಕರಣೀ ।
ದಿಸೇನಾ ತರೀ ಕಾಯ ಜಾಲೇ ಧನೀ । ತಯಾಸೀ ಚ ಮ್ಹಣಾವೇ ॥೧೭॥

ಉದ್ಭವೋನ್ಮುಖ ಹೋತಾ ಅಭೇದ । ವಿಮುಖ ಹೋತಾ ಉದಂಡ ಖೇದ ।
ಐಸಾ ಅಧೋರ್ಧ ಸಂವಾದ । ಹೋತ ಜಾತೋ ॥೧೮॥

ಸಕಳಾಂಚೇ ಮೂಳ ದಿಸೇನಾ । ಭವ್ಯ ಭಾರೀ ಆಣೇ ಭಾಸೇನಾ ।
ನಿಮಿಷ್ಯ ಯೇಕ ವಸೇನಾ । ಯೇಕೇ ಠಾಈ ॥೧೯॥

ಇವನು ದೇಹ ಬಿಟ್ಟು ಹೋಗುವನು. ಇದು ನಿಮಗೆ ತಿಳಿಯಗೊಡದಂತೆ ಆಗುವದು ಅಥವಾ ನಿಮಗೆ ತಿಳಿಯಗೊಡದೇ ಹೋಗಿ ಬಿಡುವನು. ಇದು ಯಾರಿಗೂ ತಿಳಿಯುವದಿಲ್ಲ. ದೇವರ ಹೊರತಾಗಿ ದೇವರ ರಹಸ್ಯವು ತಿಳಿಯುವದಿಲ್ಲ. ಅದು ಇತರೇ ಜನರಿಗೆ ಹೇಗೆ ತಿಳಿದೀತು ? ಅಂದರೆ ಆತ್ಮಜ್ಞಾನಿಯು ಹೊರತಾಗಿ ಯಾರಿಗೂ ತಿಳಿಯುವದಿಲ್ಲ. [೧೧] ದೇವರ ದರ್ಶನ ತೆಗೆದುಕೊಳ್ಳಬೇಕಾದರೆ ಮೊದಲು ದೇವಾಲಕ್ಕೆ ಹೋಗಿ ನೋಡಬೇಕಾಗುವದು. ದೇವಾಲಯದ ಮಧ್ಯಭಾಗದಲ್ಲೆಲ್ಲಾದರೋ ದೇವರು ಕಾಣುವನು. [ಪ್ರಕಟವಾಗುವನು]. ಬಹಳಷ್ಟು ಜನರು ಬಂದು ನೋಡುವರು. ಆದರೆ ಇವರಲ್ಲಿ ಆತ್ಮಜ್ಞಾನಿಯೂ ಇರಬಹುದಾಗಿದೆ. [೧೨] ದೇವಾಲಯಗಳು ಅಂದರೆ ನಾನಾ ಪ್ರಕಾರದ ಶರೀರಗಳು, ಶರೀರದ ಒಳಗೆ ಅಂತರಂಗದಲ್ಲಿ ಜೀವೇಶ್ವರನು ಇರುವನು. ಅನೇಕ ಪ್ರಕಾರದ ಅನೇಕ ಶರೀರಗಳು ಇರುವವು. ಇವುಗಳಲ್ಲಿ ಅನೇಕ ಪ್ರಕಾರದ ಭೇದಗಳೂ ಇರುವವು. [೧೩] ಶರೀರಗಳೆಂದರೆ ನಡೆದಾಡುವ, ಮಾತನಾಡುವ ಗುಡಿಗಳು, [ದೇವಾಲಯ] ಇರುವವು. ಇಂಥದರಲ್ಲಿ ದೇವ ಆತ್ಮಾರಾಮ ಇರುವನು. ಎಷ್ಟು ಗುಡಿಗಳು ಅಂದರೆ ಎಷ್ಟು ಶರೀರಗಳಾಗಿರುವವೋ ಆ ಎಲ್ಲ ಶರೀರಗಳ ಮಾಹಿತಿ ತಿಳಿದುಕೊಳ್ಳುವದು ಅವಶ್ಯವಿರುವದು. ಎಷ್ಟು ಪ್ರಕಾರದ ಶರೀರಗಳು ಈ ಜಗತ್ತಿನಲ್ಲಿ ಕಂಡುಬರುವವೋ ಅವುಗಳ ಮಾಹಿತಿ ತಿಳಿದಿರಬೇಕು. [೧೪] ಆತ್ಮಾರಾಮನು ಮೇಲೆ ಹೇಳಿದ ಎಲ್ಲ ದೇವಾಲಯಗಳಲ್ಲಿಯ ಮುಖ್ಯ ದೇವನಾಗಿರುವನು. ಯಾವತ್ತೂ ಅಶಾಶ್ವತದ ಮುಕುಟ ಮಣಿ ಇವನೇ ಇರುವನು. ಅತಿಶಯ ಭವ್ಯನಿರುವನು. ಭಾರೀ ಜಡ ಇರುವನು. ಅಷ್ಟೇ ಅತಿ ಸೂಕ್ಷ್ಮನೂ ಇರುವನು. ಇವನ ಮಹಿಮೆ ಅಗಮ್ಯ ಅಗಾಧವಿರುವದು: ಮತ್ಸ್ಯ, ಕೂರ್ಮ, ಮತ್ತು ವರಾಹ [ಇವುಗಳಲ್ಲಿ ಸಹ ಅಂತರಾತ್ಮಾ ದೇವ ಇದ್ದೇ ಇರುವನು]. ಇದರ ಈ ಗುಡಿಗಳು [ದೇಹಗಳು] ಭೂಮಿಯನ್ನೇ ಹೊತ್ತು ನಿಂತಿರುವವು. ಎತ್ತಿಹಿಡಿಯಲ್ಪಟ್ಟಿರುವವು. ಇವು ಭೂಮಿಗೆ ಸದಾಕಾಲ ಆಶ್ರಯ ಕೊಟ್ಟಿರುವವು. ಆಧಾರವಾಗಿರುವವು. ಮತ್ಸ್ಯ, ಕೂರ್ಮ, ವರಾಹ ಇವುಗಳಲ್ಲಿ ಕೆಲವೊಂದು ಆಕರಾಳ ವಿಕರಾಳವಾಗಿದ್ದರೆ, ಕೆಲವೊಂದು ಸೌಮ್ಯವಾಗಿಯೂ ಇರುವವು. [೧೫] ಎಷ್ಟೋ ದೇವಾಲಯಗಳಲ್ಲಿ ಸುಖದ ಆಗರವು ಭರಪೂರ [ಸಾಕಷ್ಟು] ಇರುವದು. ಸುಖದ ಸಮುದ್ರವೇ ಇರುವದೆಂಬ ಭಾಸವಾಗುವದು. ಆದರೆ ಈ ಸುಖದ ಸಂಪತ್ತಿನ ಆಗರವು ಕ್ಷಣಿಕ, ತಾತ್ಪೂರ್ತಿಕವಿರುವದು. ಇದು ಕಾಯಂ ಟಿಕಾಯಿಸುವದಿಲ್ಲ. ಕೊನೆಯವರೆಗೆ ನಿಲ್ಲುವದಿಲ್ಲ, ಉಳಿಯುವಂಥದಲ್ಲ. [೧೬]ಈ ಅಶಾಶ್ವತ ವಿಶ್ವವನ್ನು ಯಾವನು ನಿರ್ಮಾಣ ಮಾಡಿದನೋ ಮತ್ತು ಚನ್ನಾಗಿ ಸರಿಯಾಗಿ ನಡೆಯಿಸಿಕೊಂಡು ಬಂದಿರುವನೋ ಆ ಅಂತರಾತ್ಮನು ಅಶಾಶ್ವತದ ರಾಜನಿರುವನು. ಮುಕುಟಮಣಿ ಇರುವನು. ಅಶಾಶ್ವತಗಳಲ್ಲಿಯ ಸರ್ವಶ್ರೇಷ್ಠ ತತ್ವವೂ ಇವನೇ ಇರುವನು. ಇವನು ಇಂದ್ರಿಯಗಳಿಗೆ ಗೋಚರನಲ್ಲ [ಕಾಣುವದಿಲ್ಲ] ವೆಂಬ ಮಾತು ನಿಜವಿರುವದು. ಆದರೆ ಇವನೇ ಸರ್ವ ದೃಶ್ಯಗಳ ಸ್ವಾಮಿ (ಧನಿ) ಎಂದು ತಿಳಿಯಬೇಕು. (೧೭) ಅಂತರಾತ್ಮನ ಕಡೆಗೆ ಮುಖ ಮಾಡಿದರೆ, ಪರಮಾತ್ಮನ ಕಡೆಗೆ ಮುಖ ಆಯಿತೆಂದರೆ ಭೇದದ [ದ್ವೈತದ] ಕಡೆಗೆ ಬೆನ್ನು ಮಾಡಿದಂತಾಗುವದು. ಆಗ ಸರ್ವತ್ರ ( ಎಲ್ಲ ಕಡೆಗೂ ) ಅಭೇದವು ಅನುಭವಕ್ಕೆ ಬರುವದು. ಇನ್ನು ಅಂತರಾತ್ಮನ ಕಡೆಗೆ ಮುಖ ಮಾಡದೆ ಮುಖವನ್ನು ತಿರುಗಿಸಿದರೆ ಆಗ ಅಭೇದದ ಕಡೆಗೆ ಬೆನ್ನು ಮಾಡಿದಂತಾಗುವದು. ಆಗ ಎಲ್ಲ ಕಡೆಗೆ ಭೇದವೇ ಅನುಭವಕ್ಕೆ ಬರುವದು. ಇದರಿಂದ ಬಹಳ ದುಃಖವನ್ನು ಭೋಗಿಸಬೇಕಾಗುವದು. ಒಟ್ಟಿನಲ್ಲಿ ಮನವು ಅಂತರಾತ್ಮನ ಕಡೆಗೆ, ಆದ್ಯ ಈ ಶ್ರೇಷ್ಠ ತತ್ವದ ಕಡೆಗೆ ಹರಿದರೆ ಇದು ಊರ್ಧ್ವಗತಿ [ಉನ್ನತಿ] ಅನಿಸುವದು. ಮನವು ವಿಷಯದ ಕಡೆಗೆ, ದೃಶದ ಕಡೆಗೆ ಹತ್ತಿದರೆ ಇದು ಅಧೋಗತಿ ಎಂದು ತಿಳಿಯಬೇಕು. ಮೇಲೆ ಕೆಳಗೆ ಹೋಗುವ [ಏರುವದು, ಇಳಿಯುವದು] ಈ ಕ್ರಮವು ವಿಶ್ವದಲ್ಲಿ ಸದಾಕಾಲ ಚನ್ನಾಗಿ ನಡೆಯುತ್ತಾ ಇರುವದು. (೧೮) ಈ ಅವಾಢವ್ಯ ವಿಶ್ವದ ಮೂಲನಾದ ಅಂತರಾತ್ಮನು ಬಹಳ ಭವ್ಯ ಮತ್ತು ಭಾರೀ ಪ್ರಚಂಡನಿರುವನು. ಆದರೆ ಇವನು ಬಹಳಷ್ಟು ಸೂಕ್ಷ್ಮ [ಅತಿ ಸೂಕ್ಷ್ಮ] ನೂ ಇದ್ದದ್ದರಿಂದ ಸಹಜವಾಗಿ ಅನುಭವಕ್ಕೆ ಬರುವದಿಲ್ಲ. ಆದರೆ ಇವನು ಅತಿ ಚಂಚಲನಿದ್ದುದರಿಂದ ಒಂದು ಕಡೆಗೆ ಒಂದು ಕ್ಷಣ ಹೊತ್ತೂ ಸ್ಥಿರವಾಗಿ ನಿಲ್ಲುವದಿಲ್ಲ. (೧೯)

ಏಸಾ ಅಗಾಧ ಪರಮಾತ್ಮಾ । ಕೋಣ ಜಾಣೆ ತ್ಯಾಚಾ ಮಹಿಮಾ ।
ತುರ್ಯೇ ಲೀಳಾ ಸರ್ವೋತ್ತಮಾ । ತೂ ಚ ಜಾಣಸೀ ॥೨೦॥

ಸಂಸಾರಾ ಆಲಿಯಾಚೇ ಸಾರ್ಥಕ । ಜೇಥೇ ನಿತ್ಯಾನಿತ್ಯ ವಿವೇಕ ।
ಯೆಹಲೋಕ ಆಣೀ ಪರಲೋಕ । ದೋನೀ ಸಾಧಿಲೇ ॥೨೧॥

ಮನನಸೀಳ ಲೋಕಾಪಾಸೀ । ಅಖಂಡ ದೇವ ಅಹಿರ್ನಿಶೀ ।
ಪಾಹಾತಾ ತ್ಯಾಚ್ಯಾ ಪೂರ್ವಸಂಚಿತಾಸೀ । ಜೋಡಾ ನಾಹೀ ॥೨೨॥

ಅಖಂಡ ಯೋಗ ಮ್ಹಣೋನಿ ಯೋಗೀ । ಯೋಗ ನಾಹೀ ತೋ ವಿಯೋಗೀ ।
ವಿಯೋಗೀ ತೋ ಹೀ ಯೋಗೀ। ಯೋಗಬಳೇ ॥೨೩॥

ಭಲ್ಯಾಂಚೀ ಮಹಿಮಾ ಏಸೀ । ಜೇ ಸನ್ಮಾರ್ಗ ಲಾವೀ ಲೋಕಾಸೀ ।
ಪೋಹಣಾರ ಅಸತಾ ಬುಡತಯಾಸೀ । ಬುಡೋ ನೇದಾವೇ । ॥೨೪॥

ಸ್ಥೂಳ ಸೂಕ್ಷ್ಮ ತತ್ವಝಾಡಾ । ಪಿಂಡ ಬ್ರಹ್ಮಾಂಡಾಚಾ ನಿವಾಡಾ ।
ಪ್ರಚಿತ ಪಾಹೆ ಏಸಾ ಥೋಡಾ । ಭೂಮಂಡಳೀ ॥೨೫॥

ವೇದಾಂತೀಚೇ ಪಂಚಿಕರ್ಣ । ಅಖಂಡ ತಯಾಚೆ ವಿವರ್ಣ ।
ಮಹಾವಾಕ್ಯೇ ಅಂತಃಕರಣ । ರಹಸ್ಯ ಪಾಹೇ ॥೨೬॥

ಯೇ ಪೃಥ್ವೀಮಧೇ ವಿವೇಕೀ ಅಸತೀ । ಧನ್ಯ ತಯಾಚೀ ಸಂಗತೀ ।
ಶ್ರವಣಮಾತ್ರೇ ಪಾವತೀ ಗತೀ । ಪ್ರಾಣಿಮಾತ್ರ ॥೨೭॥

ಇಂಥ ಅತಿ ಸೂಕ್ಷ್ಮ ಮತ್ತು ಚಂಚಲ ಅಂತರಾತ್ಮಾ ಅಥವಾ ಪರಮಾತ್ಮಾ ಹೀಗೆ ಅಗಾಧನಿರುವನು, ಇವನ ಮಹಿಮೆಯನ್ನು ತಿಳಿದವರು, ಅಥವಾ ಸಂಪೂರ್ಣ ತಿಳಿಯುವವರು ಯಾರೂ ಇಲ್ಲ. ಅಯ್ಯಾ, ಸರ್ವೋತ್ತಮಾ, ನಿನ್ನ ಲೀಲೆ ಕೇವಲ ನಿನಗೊಬ್ಬನಿಗೇ ಗೊತ್ತು ನಿನಗೆ ನಮೋ ನಮೋ. (೨೦) ಪ್ರಪಂಚ ಮತ್ತು ಪರಮಾರ್ಥ ಎರಡನ್ನೂ ಸಾಧಿಸುವದರಲ್ಲಿಯೇ ಮಾನವ ಜೀವನದ ಸಾರ್ಥಕ್ಯವಿರುವದು. ಅಂತರಾತ್ಮನ ಸತತವಾದ ಅನುಸಂಧಾನ ವಿರುವಂಥ ಚಿಂತನಶೀಲ ಜನರ ಹತ್ತಿರ ಪರಮಾತ್ಮಾ ಯಾವಾಗಲೂ ಇರುವನು ಇಂಥ ಮನುಷ್ಯನೇ ಯೋಗಿಯೆನಿ ಸುವನು. ಇಂಥವರೇ ಅನೇಕಾನೇಕ ಜನರನ್ನು ಭಗವಂತನ ಮಾರ್ಗಕ್ಕೆ ತಂದು ಹಚ್ಚುವರು. ಸ್ಥೂಲ ಮತ್ತು ಸೂಕ್ಷ್ಮ ತತ್ವ ಶೋಧ ಹೊಂದಿ ಆತ್ಮ ಪ್ರಚೀತಿ [ಅನುಭವ] ಪಡೆಯುವ ಜನರು ಬಹಳ ಸ್ವಲ್ಪ ಮಾತ್ರ ಇರುವರು. ನೀವು ಎಲ್ಲರೂ ಸತ್ಸಂಗದಲ್ಲಿ ಇದ್ದು ಸತ್ ಶಾಸ್ತ್ರ ಶ್ರವಣ ಮಾಡಬೇಕು. ಮತ್ತು ಅಂತರಾತ್ಮನ ಅಖಂಡ ಚಿಂತನ ಮಾಡಿ ಸಂಗತ್ಯಾಗ ಅಂದರೆ ನಾನು, ನನ್ನದು, ಅನ್ನುವದರತ್ಯಾಗ, ದೇಹ ಬುದ್ಧಿಯ ತ್ಯಾಗ, ಅಹಂಕಾರದತ್ಯಾಗವನ್ನು ಸಾಧಿಸಿ ಕೊಳ್ಳಬೇಕು. ಜೀವನದಲ್ಲಿ ನಿತ್ಯಾನಿತ್ಯ ವಿವೇಕವನ್ನು ಮಾಡಬೇಕು. ಇದನ್ನು ಸಾಧಿಸಬೇಕು ಮತ್ತು ಇದರ ಬಲದಿಂದ ಇಹಲೋಕ, ಪರಲೋಕ ಈ ಎರಡೂ ಕಡೆಗೂ ಯಶ ಪಡೆಯಬೇಕು. ಅಂದರೇನೇ ಭೂಮಿಯ ಮೇಲೆ ಹುಟ್ಟಿ ಬಂದದ್ದಕ್ಕೆ ಸಾರ್ಥಕವಾಗುವದು. (೨೧) ಚಿಂತನಶೀಲ – ಮನನಶೀಲ ಮನುಷ್ಯರ ಹತ್ತಿರವೇ ದೇವರು ಅಖಂಡ ಇಪ್ಪತ್ನಾಲ್ಕು ತಾಸೂ ಇರುವನು. ಇಂಥ ವ್ಯಕ್ತಿಯ ಪೂರ್ವ ಪುಣ್ಯಕ್ಕೆ ಎಣೆಯಿಲ್ಲವೆಂದು ತಿಳಿಯಬೇಕು. (೨೨) ಯಾರದು ಭಗವಂತನೊಂದಿಗೆ ಅಖಂಡ ಯೋಗ ಅಂದರೆ ಸಹವಾಸ ಏಕಾತ್ಮತೆ, ಸಂಯೋಗ, ಏಕಾಗ್ರತೆಯಿರುವದೋ ಅವರಿಗೆ ಯೋಗಿ ಎಂದು ಅನ್ನಬೇಕು. ಇಂಥ ಯೋಗ [ಸಂಯೋಗ] ಯಾರಿಗೆ ಸಾಧಿಸುವದಿಲ್ಲವೋ ಅಂಥವರು ವಿಯೋಗಿಗಳು, ನಿರ್ಭಾಗ್ಯರು. ಅಭಾಗಿಗಳು ಎಂದು ತಿಳಿಯಬೇಕು. ಆದರೆ ಸತತ ಚಿಂತನದ ಅಭ್ಯಾಸವನ್ನು ಮಾಡಿ ದ್ದಾದರೆ ಚಿಂತನ ಯೋಗದ ಬಲದಿಂದ ಯೋಗರಹಿತನಾದ ವಿಯೋಗಿಯೂ ಕೂಡಾ ಯೋಗಿಯಾಗುವನು (೨೩) ದೊಡ್ಡವರ ದೊಡ್ಡಿಸ್ತನವೆಂದರೆ ಇವರು ಜನರನ್ನು ಸನ್ಮಾರ್ಗಕ್ಕೆ ಹಚ್ಚುವರು. ಯಾವನು ಸ್ವತಃ ಈಸುವನೋ [ಈಸ ಬಲ್ಲವನಾಗಿರುವನೋ] ಅವನು ಮುಳುಗುವ ಮನುಷ್ಯರನ್ನು ಮುಳುಗಗೊಡಬಾರದು. ಮುಳುಗಗೊಡು ವದಿಲ್ಲ. (೨೪) ಯಾವನು ಸ್ಥೂಲ ಮತ್ತು ಸೂಕ್ಷ್ಮ ತತ್ವಗಳ ಸಂಪೂರ್ಣ ಶೋಧಮಾಡುವನೋ ಮತ್ತು ಪಿಂಡ ಹಾಗೂ ಬ್ರಹ್ಮಾಂಡ ಇವುಗಳ ಬಗ್ಗೆ ಸರಿಯಾದ ರೀತಿಯಲ್ಲಿ ವಿವರಣೆಯನ್ನು ಮಾಡುವನೋ ಅಂಥವನಿಗೆ ಆತ್ಮ ಪ್ರಚೀತಿ ಉಂಟಾಗುವದು. ಆದರೆ ಜಗತ್ತಿನಲ್ಲಿ ಇಂಥ ಜನರು ಬಹಳ ಸ್ವಲ್ಪ ಜನರಿರುವರು. (೨೫) ಇಂಥ ಜನರು ವೇದಾಂತದಲ್ಲಿಯ ಸಂಪೂರ್ಣ ಪಂಚೀಕರಣವನ್ನು ಅಖಂಡವಾಗಿ ವಿವರಿಸುವರು. [ಪಂಚೀಕರಣ ಅಂದರೆ ಆಕಾಶಾದಿ ಐದು ಮಹಾಭೂತಗಳ ಈ ಪಿಂಡ ಬ್ರಹ್ಮಾಂಡವು ಹೇಗೆ ತಯಾರ ಆಯಿತು ಅನ್ನುವದರ ವಿವರ ಪೂರ್ಣ ವಿವೇಚನೆ, ಅಥವಾ ಈ ವಿವೇಚನೆಯು ಯಾವುದರಲ್ಲಿ ಸಂಪೂರ್ಣವಾಗಿ ವಿವರವಾಗಿ ಬರೆದಿರುವದೋ ಅಂಥ ಪ್ರಕರಣಕ್ಕೆ ಪಂಚೀ ಕರಣ ಅನ್ನುವರು] ಇದರಂತೆಯೇ ತಮ್ಮ ಅಂತಃಕರಣದಲ್ಲಿ ಮಹಾ ವಾಕ್ಯದ ರಹಸ್ಯವನ್ನು ಶೋಧಿಸುವರು. [ಮಹಾವಾಕ್ಯ ಅಂದರೆ ೧] "ಅಹಂ ಬ್ರಹ್ಮಾಸ್ಮಿ" ೨] ತತ್ವಮಸಿ ೩] ಪ್ರಜ್ಞಾನಂ ಬ್ರಹ್ಮ ೪] "ಅಯಮಾತ್ಮಾ ಬ್ರಹ್ಮ" ಈ ನಾಲ್ಕು ಮಹಾ ವಾಕ್ಯಗಳು ಇರುವವು. ಇವು ೧] ಋಗ್ವೇದ ೨] ಯಜುರ್ವೇದ ೩] ಸಾಮವೇದ ೪] ಅಥರ್ವಣವೇದ ಈ ನಾಲ್ಕು ವೇದಗಳಲ್ಲಿಯ ಒಂದೊಂದು ಮಹಾ ವಾಕ್ಯಗಳು. [ಮೇಲಿನವು] ಇರುವವು.(೨೬) ಈ ಜಗತ್ತಿನಲ್ಲಿ ಇಂಥ ಪುಣ್ಯ ಪುರುಷರ, ಸಂತ–ಸಾಧು–ಶರಣರ–ದಾಸರ ಸಹವಾಸದ ಲಾಭ ದೊರಕುವದು. ನಿಜ ವಾಗಿಯೂ ಧನ್ಯಕರವು. ಇಂಥವರ ಕಡೆಯಿಂದ ಕೇವಲ ಪರಮಾರ್ಥ ನಿರೂಪಣದ ಶ್ರವಣ ಮಾಡಿದರೂ ಕೂಡಾ ಸಾಮಾನ್ಯ ಜನರು ಉತ್ತಮ ಗತಿಗೆ ಪ್ರಾಪ್ತರಾಗುವರು. (೨೭)

ಸತ್ಸಂಗ ಆಣೀ ಸಚ್ಛಾಸ್ತ್ರ ಶ್ರವಣ । ಅಖಂಡ ಹೋತಸೆ ವಿವರ್ಣ ।
ನಾನಾ ಸತ್ಸಂಗ ಆಣೀ ಉತ್ತಮ ಗುಣ । ಪರೋಪಕಾರಾಚೇ ॥೨೮॥

ಜೇ ಸದೂಕೀರ್ತೀಚೆ ಪುರುಷ । ತೇ ಪರಮೇಶ್ವರಾಚೆ ಅಂಶ ।
ಧರ್ಮಸ್ಥಾಪನೇಚಾ ಹವ್ಯಾಸ । ತೇಥೇ ಚಿ ವಸೆ ॥೨೯॥

ವಿಶೇಷ ಸಾರಾಸಾರ ವಿಚಾರ । ತೇಣೇ ಹೋಯ ಜಗ್ಗೋದ್ಧಾರ ।
ಸಂಗ ತ್ಯಾಗೇ ನಿರಂತರ । ಹೋಊನ ಗೇಲೇ ॥೩೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯಸಂವಾದೇ
'ದೇವ ಬಳಾತ್ಕಾರ' ನಾಮ ಸಮಾಸ ಪ್ರಥಮ ॥

● ●

ಸಂತರ ಸಂಗತಿ, ಸಹವಾಸ ಮತ್ತು ಅವರಿಂದಲೇ ಸತ್‌ಶಾಸ್ತ್ರ ಶ್ರವಣದ ಯೋಗ ಬಂದರೆ ಅದು ಅಮೃತ ಯೋಗವು. ಅಂಥಲ್ಲಿ ಅಖಂಡವಾಗಿ ಆತ್ಮಾನಾತ್ಮ ವಿವರಣೆ ನಡೆಯುವದು. ಮತ್ತು ಅಲ್ಲಿ ಇನ್ನೂ ಅನೇಕ ಸಂತ, ಶರಣ,ಸಾಧುಗಳ ಸಹವಾಸದ ಲಾಭ ದೊರಕುವದು. ಇದರಿಂದ ಲೋಕದ ಜನರಿಗೆ ಉಪಕಾರಮಾಡುವಂಥ ಮಾಡಲಿಕ್ಕೆ ಬರುವಂಥ ಅನೇಕ ಸದ್ಗುಣಗಳು ನಮ್ಮಲ್ಲಿ ನೆಲೆ ನಿಲ್ಲುವವು. (೨೮) ಅಖಂಡ, ಸತತ ಚಿಂತನಶೀಲರಾಗುವಂಥ, ಕೀರ್ತಿವಂತ, ಭಾಗ್ಯವಂತ ಪುರುಷರು ಯಾರು ಇರುವರೋ ಅವರು ಪರಮೇಶ್ವರನ ಅಂಶವೆಂದೇ ತಿಳಿಯಬೇಕು. ಧರ್ಮ ಸ್ಥಾಪನೆಯನ್ನು ಮಾಡುವ. ಮುಕ್ತರನ್ನಾಗಿ ಮಾಡುವ ಉತ್ಕಟೇಚ್ಛೆ ಮತ್ತು ಖಟಾಟೋಪ [ಸಾಹಸ, ಪ್ರಯತ್ನವು]ವು ಇವರಲ್ಲಿಯೇ ಕಾಡುಬರುವವು. (೨೯) ಇಂಥವರಲ್ಲಿ ಸಾರಾಸಾರ ವಿಚಾರವು ವಿಶೇಷವಾದ ರೀತಿಯಲ್ಲಿ ಇರುವದು.ಸೂಕ್ಷ್ಮವನ್ನು ವಿಶೇಷ ಸೂಕ್ಷ್ಮವಿಚಾರದಿಂದ ತಿಳಿದವರಾಗಿರುವರು.ಇಂಥ ವಿಚಾರದಿಂದ ಜಗತ್ತಿನ ಉದ್ಧಾರ ವಾಗುವದು. ಇವರಾದರೋ ಸ್ವತಃ ಸಂಗ ತ್ಯಾಗ, ನಾನು ಎನ್ನುವ ಅಹಂಕಾರದ ತ್ಯಾಗಮಾಡಿ ಚಿರಂಜೀವ ಸ್ವರೂಪ ಮಯರಾಗಿ ಹೋಗುವರು. ಅಖಂಡ ಸ್ವರೂಪಾಕಾರರಾಗುವರು. (೩೦)

ಶ್ರೀ ದಾಸಬೋಧದ ಹದಿನೇಳನೆಯ ದಶಕದಲ್ಲಿಯ ಗುರುಶಿಷ್ಯರ ಸಂವಾದದ
"ದೇವ ಬಲಾತ್ಕಾರ" ವೆಂಬ ಹೆಸರಿನ ಮೊದಲನೇ ಸಮಾಸವು ಮುಗಿದುದು.

● ●

### ದಶಕ ಸಪ್ತದಶ : ಸಮಾಸ ದ್ವಿತೀಯ : ಶಿವಶಕ್ತಿ ನಿರೂಪಣ [ನುಡಿ ೩೪]

॥ಶ್ರೀರಾಮ॥ ಬ್ರಹ್ಮ ನಿರ್ಮಳ ನಿಶ್ಚಳ । ಜೈಸೆ ಗಗನ ಅಂತರಾಳ ।
ನಿರಾಕಾರ ಕೇವಳ । ನಿರ್ವಿಕಾರೀ ॥೧॥

ಅಂತ ಚಿ ನಾಹೀ ತೇ ಅನಂತ । ಶಾಶ್ವತ ಆಣೀ ಸದೋದಿತ ।
ಅಸಂತ ನವ್ಹೆ ತೇ ಸಂತ । ಸರ್ವಕಾಳ ॥೨॥

ಪರಬ್ರಹ್ಮ ತೇ ಅವಿನಾಶ । ಜೈಸೆ ಆಕಾಶ ಅವಕಾಶ ।
ನ ತುಟೇ ನ ಫುಟೆ ಸಾವಕಾಸ । ಜೈಸೇ ತೈಸೇ ॥೩॥

ತೇಥೇ ಜ್ಞಾನ ನಾ ಅಜ್ಞಾನ । ತೇಥೇ ಸ್ಮರಣ ನಾ ವಿಸ್ಮರಣ ।
ತೇಥೇ ಅಖಂಡ ನಿರ್ಗುಣ । ನಿರಾವಲಂಬೀ ॥೪॥

ತೇಥೇ ಚಂದ್ರ ಸೂರ್ಯ ನಾ ಪಾವಕ । ನವ್ಹೇ ಕಾಳೋಖೇ ನಾ ಪ್ರಕಾಶಕ ।
ಉಪಾಧೀವೇಗಳೇ ಯೇಕ । ನಿರೋಪಾಧೀ ಬ್ರಹ್ಮ ॥೫॥

# ದಶಕ ೧೭. ಸಮಾಸ ೨. ಶಿವಶಕ್ತಿ ನಿರೂಪಣ (ನುಡಿ ೩೪)

ಮೂಲ ಪರಬ್ರಹ್ಮವು ಶಾಶ್ವತವಿರುವದು. ನಿರ್ವಿಕಾರ ಸಂತ, ಸತ್ಯ, ಸ್ಥಿರ, ಅಕ್ಷಯ, ತ್ರಿಕಾಲಾಬಾಧಿತ ನಿತ್ಯ, ನಿರ್ಮಲ ಮತ್ತು ನಿಶ್ಚಲವಿರುವದು. ಅದರಲ್ಲಿ ಇನ್ನೊಂದರ, ಎರಡನೇದರ-ದ್ವಿತ್ವದ ಮಿಶ್ರಣದ ಹೆಸರೇ ಇರುವದಿಲ್ಲವಾದ್ದರಿಂದ ಜ್ಞಾನ, ಅಜ್ಞಾನ, ಸ್ಮರಣ, ಮತ್ತು ವಿಸ್ಮರಣ, ಬೆಳಕು, ಮತ್ತು ಕತ್ತಲೆ, ಅನ್ನುವಂಥವುಗಳಿಗೆಲ್ಲ ಮೂಲ ಪರಬ್ರಹ್ಮದಲ್ಲಿ ಸ್ಥಾನವಿರುವದಿಲ್ಲ. ಹೊಚ್ಚಹೊಸ ತಾಜಾ ಇರುವ ನಿಶ್ಚಲ ಬ್ರಹ್ಮ ಸ್ವರೂಪದಲ್ಲಿ ಸ್ಮರಣ(ನಾನು ಅನ್ನುವ ನೆನಪು)ವು ಸ್ಫುರಿಸಿತು-ಉದಯವಾಯಿತು. ಹೊಗಟಿತು. ಇದಕ್ಕೆ ಚೈತನ್ಯ ಎಂದು ಅನ್ನುವರು. ಗುಣ ಸಾಮ್ಯವಿರುವಂಥ ನಿರ್ಗುಣದಲ್ಲಿಯು ಸಗುಣವೆಂದರೆ ಇದೇ ಇರುವದು. ಅರ್ಧನಾರೀನಟೇಶ್ವರ, ಷಡ್ಗುಣೇಶ್ವರ, ಆದಿಶಕ್ತಿ, ಶಿವಶಕ್ತಿ, ಇವೆಲ್ಲ ಹೆಸರು ಇವಳವೇ ಇರುವವು. ಮೂಲ ತತ್ವದಲ್ಲಿ ಅಥವಾ ಬೀಜದಲ್ಲಿ ಯಾವುದು ಇರುವದೋ ಅದೇ ಮುಂದೆ ಬೆಳೆದು ಬಂದಮೇಲೆ ಕಾಣುವದು. ನರನಾರೀ-ಗಂಡು-ಹೆಣ್ಣು ಅನ್ನುವ ಭೇದ ಮೂಲದಲ್ಲಿ ಇದೆ. ಎಂದೇ ಇದು ಮುಂದೆ ಪ್ರಕಟವಾಗುವದೇ. ಸ್ಥೂಲದ ಮೂಲವು ವಾಸನಾ ಇರುವದು. ಆದರೆ ವಾಸನಾ ಕಾಣುವದಿಲ್ಲ. ಇದು ಗೂಢತನದಿಂದ ಗುಪ್ತ ಇರುವದು. ಅಂತೆಯೇ ಇದು ದೃಶ್ಯ ವಿಶ್ವದಲ್ಲಿಯು ಎಲ್ಲ ಕಡೆಗೂ ಗೂಢವಾಗಿ ಗುಪ್ತವಾಗಿ ಇರುವದು. ಮೂಲದಲ್ಲಿ ವಾಸನಾ ಅಭೇದವಿದ್ದರೂ ಕೂಡಾ ಸೃಷ್ಟಿಯ ಕ್ರಮದಲ್ಲಿ ಅದು ಸ್ತ್ರೀ ಪುರುಷ ಅನ್ನುವ ಭೇದದಿಂದ ಕಾಣುವದು. ಇದರ ಬಂಧನದಿಂದ ಮನುಷ್ಯರು ಒಬ್ಬರಲ್ಲೊಬ್ಬರು ತೊಡಕಿಕೊಂಡು ಆಸಕ್ತರಾಗಿರುವರು. ಇದು ಈಶ್ವರನ ಆಟ ಮತ್ತು ಅವನ ಇಚ್ಛೆಯಂತೆ ನಡೆದ ನಾಟಕವಿರುವದು.

## ದಶಕ ೧೭. ಸಮಾಸ ೨. ಶಿವಶಕ್ತಿ ನಿರೂಪಣ (ನುಡಿ ೩೪)

ಶುದ್ಧ ಬ್ರಹ್ಮ ಸ್ವರೂಪವು ಅತ್ಯಂತ ಭೇದರಹಿತ ಮತ್ತು ನಿಶ್ಚಲವಿರುವದು. ಇವನಲ್ಲಿ ಸಂಕಲ್ಪ ಸ್ಮರಣ (ನೆನಪು) ಉದಯವಾಯಿತು. ಇದು ಶಿವಶಕ್ತಿ ರೂಪವಿರುವದು. ಇದರಲ್ಲಿ ಇರುವಂಥ ಗುಪ್ತ ಪ್ರಕಾರಗಳು ಮುಂದೆ ಪ್ರಕಟವಾಗುವವು:- ಸರ್ವ ಬಾಜೂದಿಂದ (ಪೋಕಳ) ಪೊಳ್ಳು ಇದ್ದಂಥ ಅವಕಾಶ ರೂಪದ ಆಕಾಶವು ನಿರ್ಮಲ ಮತ್ತು ನಿಶ್ಚಲವಿರುವದು. ಇದರಂತೆಯೇ ಬ್ರಹ್ಮವೂ ಕೂಡಾ ಇರುವದು. ಇವನು ನಿರಾಕಾರನಿದ್ದು ನಿರ್ವಿಕಾರನೂ ಇರುವನು. (೧) ಶಾಶ್ವತ ಮತ್ತು ಯಾವಾಗಲೂ ಹೊಳೆಯುವ, ಶೋಭಿಸುವ, ಬ್ರಹ್ಮನಿಗೆ ಅಂತವಿಲ್ಲ, ಆಳತೆ ಇಲ್ಲದ ಇವನು ಅನಂತನಿರುವನು. ಒಂದಿಲ್ಲ ಒಂದು ದಿನ, ಎಂದಾದರೂ ಒಂದು ದಿನ ಒಂದು ನಿಮಿಷವೂ ಕೂಡಾ ಇಲ್ಲದಂತೆ ಆಗದವನು. ಈಗ ಇಲ್ಲ ಎಂದು ಅನ್ನಿಸಿಕೊಳ್ಳದವನು, ಅರ್ಥಾತ್ ಸದಾ ಸರ್ವಕಾಲವೂ ಸತತ ಇವನು ಇದ್ದೇ ಇರುವನು. (೨) ಪೊಳ್ಳಿನಿಂದ ಕೂಡಿದ ಅವಕಾಶವುಳ್ಳ ಆಕಾಶವು ಹೇಗೆ ಅವಿನಾಶಿಯಾಗಿರುವದೋ ಅದರಂತೆ ಬ್ರಹ್ಮನು ಅವಿನಾಶಿ ಇರುವನು. ಇವನು ಮುರಿಯುವದಿಲ್ಲ, ಹರಿಯುವದಿಲ್ಲ, ಅಥವಾ ಒಡೆಯುವದಿಲ್ಲ. ಇದು ಹೇಗಿರುವದೋ ಹಾಗೆಯೇ ಸದಾಕಾಲವೂ ಒಳ್ಳೇ ಶಾಂತವಾಗಿರುವದು. (೩) ಬ್ರಹ್ಮನಲ್ಲಿ ಹೇಗೆ ಅಜ್ಞಾನವಿಲ್ಲವೋ ಅದರಂತೆ ಜ್ಞಾನವೂ ಸಹ ಇರುವದಿಲ್ಲ.ಹೇಗೆ ವಿಸ್ಮರಣ-ಮರೆವು ಅನ್ನುವದು ಇಲ್ಲವೋ ಅದರಂತೆ ಸ್ಮರಣ-ನೆನಪು ಅನ್ನುವದು ಕೂಡಾ ಇರುವದಿಲ್ಲ. ಇವನು ಅಖಂಡ, ನಿರ್ಗುಣ, ಮತ್ತು ಸಂಪೂರ್ಣ ನಿರಾವಲಂಬಿ-ಆಧಾರ ಇಲ್ಲದವ ಇರುವನು. (೪) ಅಲ್ಲಿ ಅಂದರೆ (ಬ್ರಹ್ಮದಲ್ಲಿ) ವಿಶ್ವದ-ದೃಶ್ಯ ಜಗತ್ತಿನ ಸುಳಿವು, ಗುರುತು, ಪತ್ತೆ ಕೂಡಾ ಇಲ್ಲದ್ದರಿಂದ ಚಂದ್ರ, ಸೂರ್ಯ, ಮತ್ತು ಅಗ್ನಿ ಇವರ ಅಸ್ತಿತ್ವವೇ ಇಲ್ಲ. ಕತ್ತಲೆ ಮತ್ತು ಬೆಳಕು ಮಾಡುವಂಥದು ಯಾವುದೂ ಇಲ್ಲ. ಇದು ಯಾವುದೊಂದೂ ಉಪಾಧಿ ಇಲ್ಲದಂಥ ಅತ್ಯಂತ ನಿರುಪಾಧಿಕ ಜಂಜಡರಹಿತವಾದ ಬ್ರಹ್ಮ ಇರುವದು. (೫)

ನಿಶ್ಚಳೀ ಸ್ಮರಣ ಚೇತಲೇ। ತ್ಯಾಸ ಚೈತನ್ಯ ಐಸೇ ಕಲ್ಪಿಲೇ।
ಗುಣಸಮಾನತ್ವೇ ಜಾಲೇ। ಗುಣಸಾಮ್ಯ ಐಸೇ ॥೬॥

ಗಗನೀ ಆಲೀ ಆಭ್ರಛ್ಯಾಯಾ। ತೈಸೀ ಜಾಣಿಜೆ ಮೂಳಮಾಯಾ।
ಉದ್ಭವ ಆಣೀ ವಿಲಯಾ। ವೇಳ ನಾಹೀ ॥೭॥

ನಿರ್ಗುಣೀ ಗುಣವಿಕಾರು। ತೋ ಚಿ ಷಡ್ಗುಣೈಶ್ವರು।
ಅರ್ಧನಾರೀ ನಟೇಶ್ವರು। ತಯಾಸ ಮ್ಹಣಿಜೇ ॥೮॥

ಆದಿಶಕ್ತಿ ಶಿವಶಕ್ತಿ। ಮೂಳೀ ಆಹೆ ಸರ್ವಶಕ್ತಿ।
ತೇಥೂನ ಪುಢೇ ನಾನಾ ವ್ಯಕ್ತೀ। ನಿರ್ಮಾಣ ಜಾಲ್ಯಾ ॥೯॥

ತೇಥೂನ ಪುಢೇ ಶುದ್ಧ ಸತ್ವ। ರಜತಮಾಚೇ ಗೂಢತ್ವ।
ತಯಾಸಿ ಮ್ಹಣಿಜೇ ಮಹತ್ತತ್ವ। ಗುಣಕ್ಷೋಭಿಣೀ ॥೧೦॥

ಮೂಳೀ ಅಸೇಚಿನಾ ವ್ಯಕ್ತೀ। ತೇಥೇ ಕೈಚೀ ಶಿವಶಕ್ತೀ।
ಐಸೇ ಮ್ಹಣಾಲ ತರೀ ಚಿತ್ತೀ। ಸಾವಧಾನ ಅಸಾವೇ ॥೧೧॥

ಬ್ರಹ್ಮಾಂಡಾವರೂನ ಪಿಂಡ। ಅಥವಾ ಪಿಂಡಾವರೂನ ಬ್ರಹ್ಮಾಂಡ।
ಅಧೋರ್ಧ್ವ ಪಾಹಾತಾ ನಿವಾಡ। ಕಳೋ ಯೇತೋ ॥೧೨॥

ಬೀಜ ಫೋಡೂನ ಆಣಿಲೇ ಮನಾ। ತೇಥೇ ಫಳ ತೋ ದಿಸೇನಾ।
ವಾಢತ ವಾಢತ ಪುಢೇ ನಾನಾ। ಫಳೇ ಯೇತೀ ॥೧೩॥

ಫಳ ಫೋಡಿತಾ ಬೀಜ ದಿಸೇ। ಬೀಜ ಫೋಡಿತಾ ಫಳ ನಸೇ।
ತೈಸಾ ವಿಚಾರ ಅಸೆ। ಪಿಂಡಬ್ರಹ್ಮಾಂಡೀ ॥೧೪॥

ನರ ನಾರೀ ದೋನೀ ಭೇದ। ಪಿಂಡೀ ದಿಸತೀ ಪ್ರಸಿದ್ಧ।
ಮೂಳೀ ನಸತಾ ವಿಶದ। ಹೋತೀಲ ಕೈಸೀ ॥೧೫॥

ನಾನಾ ಬೀಜರೂಪ ಕಲ್ಪನಾ। ತೀತ ಕಾಯೆ ಯೇಕ ಅಸೇನಾ।
ಸೂಕ್ಷ್ಮ ಮ್ಹಣೋನಿ ಭಾಸೇನಾ। ಯೇಕಾಯೇಕೀ ॥೧೬॥

ಸ್ಥೂಳಾಚೇ ಮೂಳ ತೇ ವಾಸನಾ। ತೇ ವಾಸನಾ ಆಧೀ ದಿಸೇನಾ।
ಸ್ಥೂಳಾವೇಗಳೇ ಅನುಮಾನೇನಾ। ಸಕಳ ಕಾಂಹೀ ॥೧೭॥

'ಇಂಥ ಈ ನಿಶ್ಚಲ ಬ್ರಹ್ಮನಲ್ಲಿ ಸ್ವತಃದ ನಾನು ಅನ್ನುವ ಸ್ಫುರಣ ಸ್ಫುರಿಸಿತು. ಹೊರಬಿದ್ದಿತು. ಇದು ಚಿತ್ ಸ್ವರೂಪ ಚೈತನ್ಯ ಸ್ವರೂಪ ಇರುವದು. ಅನ್ನುವ ಕಲ್ಪನೆ ಮಾಡಿತು. [ಅಂತೆಯೇ ಚೈತನ್ಯ, ಈ ಹೆಸರು ಇಡಲಾಯಿತು] ಮೂಲ ಸಂಕಲ್ಪದಲ್ಲಿ ಮೂರು ಗುಣಗಳು ಸಮತೋಲತನದಿಂದ ಇರುವವು. ಅಂತೆಯೇ ಇದು ಗುಣ ಸಾಮ್ಯ ಗುಣ ಮಾಯೆ ಅನಿಸಿಕೊಂಡಿತು. [೬] ಆಕಾಶದಲ್ಲಿ ಯಾವ ಪ್ರಕಾರ ಮೋಡಗಳು ಕಾಣಿಸಿಕೊಳ್ಳುವವೋ ಮತ್ತು ಅವು ಆಕಾಶವನ್ನು ಹೇಗೆ ಮರೆಮಾಡುವವೋ [ಮುಸುಕು ಹಾಕುವವೋ] ಇದೇ ಪ್ರಕಾರ ಬ್ರಹ್ಮದಲ್ಲಿ ಸ್ಫುರಣ ರೂಪದಿಂದ ಮೂಲ ಮಾಯೆಯು ಉತ್ಪನ್ನಳಾದಳು. ಇವಳು ನಿರ್ಮಾಣವಾಗಲು ಮತ್ತು ಲಯವಾಗಲು ವೇಳೆ ಹತ್ತುವದಿಲ್ಲ. (೭) ನಿರ್ಗುಣದಲ್ಲಿ ಆ ಯಾವ ಸಂಕಲ್ಪ ರೂಪ ಗುಣ ವಿಕಾರ [ತ್ರಿಗುಣ ವಿಕಾರ] ನಿರ್ಮಾಣ ವಾಗುವದೋ ಅಥವಾ ನಿರ್ಮಾಣಗೊಂಡಿತೋ ಅದಕ್ಕೆ ಷಡ್ಗುಣೇಶ್ವರ ಅಥವಾ ಅರ್ಧನಾರೀ ನಟೇಶ್ವರ ಅನ್ನುವರು. (೮) ಆದಿಶಕ್ತಿ, ಶಿವಶಕ್ತಿ ಇತ್ಯಾದಿ ಸರ್ವಶಕ್ತಿ ಇವೆಲ್ಲವೂ ಮೂಲ ಮಾಯೆಯಲ್ಲಿಯೇ ಇರುವವು. ಇದರೊಳಗಿಂದಲೇ ಮುಂದೆ ಅನೇಕ ವ್ಯಕ್ತ–ಪ್ರಕಟಗೊಂಡ ದೃಶ್ಯ ಪದಾರ್ಥಗಳು ನಿರ್ಮಾಣವಾದವು. (೯) ಮೂಲ ಮಾಯೆಯಿಂದ ನಂತರ ಶುದ್ಧ ಸತ್ವದ ನಿರ್ಮಾಣವಾಯಿತು. ಇದರೊಳಗೆ ರಜೋಗುಣ ಮತ್ತು ತಮೋಗುಣಗಳು ಗುಪ್ತರೂಪದಲ್ಲಿ ವಾಸಮಾಡುವವು. ಇದಕ್ಕೆ ಮಹತ್ ತತ್ವ ಅಥವಾ ಗುಣ ಕ್ಷೋಭಿಣಿ ಅನ್ನುವರು. [ಗುಣ ಕ್ಷೋಭಿಣಿ ಅಂದರೆ ಗುಣತ್ರಯಗಳನ್ನು ಹೆಚ್ಚು ಕಡಿಮೆಮಾಡುವವಳು] (೧೦) ಮೂಲ ಮಾಯೆಯಲ್ಲಿ ವ್ಯಕ್ತಿ [ಆಕಾರ] ಇರುವದಿಲ್ಲ. ಇಲ್ಲಿ ಆಕಾರ [ರೂಪ] ಇರುವದಿಲ್ಲ. ಅಂದ ಮೇಲೆ ಶಿವಶಕ್ತಿ ಎಂದು ಅನ್ನುವಿರಲ್ಲಾ ? ಆ ಶಿವಶಕ್ತಿ ಹೇಗೆ ಇರುವದು ? ಅನ್ನುವ ಪ್ರಶ್ನೆಯನ್ನು ನೀವು ವಿಚಾರಿಸುವಿರಾದರೆ ಈಗ ಹೇಳುವೆ, ಚನ್ನಾಗಿ ಲಕ್ಷ್ಯಗೊಟ್ಟು ಕೇಳಿರಿ. (೧೦) ಬ್ರಹ್ಮಾಂಡವನ್ನು ಶೋಧಿಸಿ ಪಿಂಡದ ವಿಷಯವನ್ನು ಗುರುತಿಸಿ ತಿಳಿಯಿರಿ ಅಥವಾ ಪಿಂಡದ ಬಗ್ಗೆ ಶೋಧಿಸಿ ತಿಳಿದುಕೊಂಡು ಬ್ರಹ್ಮಾಂಡದ ವಿಷಯವನ್ನು ತಿಳಿಯಿರಿ. ಅರ್ಥಾತ್ ಸ್ಥೂಲದ ಕಡೆಯಿಂದ ಸೂಕ್ಷ್ಮದ ಕಡೆಗೆ ಅಥವಾ ಸೂಕ್ಷ್ಮದಿಂದ ಸ್ಥೂಲದ ಕಡೆಗೆ ವಿಚಾರಮಾಡುತ್ತ, ತಿಳಿಯುತ್ತ ಹೋದದ್ದಾದರೆ ಇದರ ಅಂದರೆ ವಿಷಯದ ಸ್ಪಷ್ಟೀಕರಣವಾಗುವದು. (೧೨) ಹಣ್ಣಿನಲ್ಲಿ ಬೀಜವಿರುವದು. ಆ ಬೀಜವನ್ನು ಒಡೆದು ಸೀಳಿ ನೋಡಿದರೆ ಅದರಲ್ಲಿ [ಹಣ್ಣು] ಫಲವೇನೂ ಕಾಣುವದಿಲ್ಲ. ಆದರೆ ಅದೇ ಬೀಜವನ್ನು ಭೂಮಿಯಲ್ಲಿ ಬಿತ್ತಿದರೆ, ನೆಟ್ಟರೆ, ಅದು ಹುಟ್ಟಿ ಆ ಮೇಲೆ ಬೆಳೆದು ದೊಡ್ಡದಾಗುವದು. ಆಗ ಅದಕ್ಕೆ ಅನೇಕ ಫಲಗಳು ಉತ್ಪನ್ನವಾಗುವವು.[೧೩]ಫಲವನ್ನು ಒಡೆದು ನೋಡಿದರೆ ಅದರಲ್ಲಿ ಬೀಜಕಾಣುವದು ಆದರೆ ಬೀಜ ಒಡೆದುಹೋದರೆ ಅದರಲ್ಲಿ ಹಣ್ಣುಕಾಣುವದಿಲ್ಲ.ಇದೇವಿಚಾರವು ಪಿಂಡ ಬ್ರಹ್ಮಾಂಡದ ವಿವರಣೆಗೆ [ಬಿಡಿಸಿ ಹೇಳಲು] ಅನ್ವಯ [ಲಾಗೂ] ಬೀಳುವದು. ಬಿಡಿಸಿ ಹೇಳಲು ತಿಳಿಸಿಕೊಡಲು ಸುಲಭವಾಗುವದು. [೧೪] ಪಿಂಡದಲ್ಲಿ ನರನಾರಿ ಅನ್ನುವ ಭೇದ ಕಾಣುವದು. ಇದು ಎಲ್ಲರಿಗೂ ತಿಳಿದದ್ದೇ ಇರುವದು. ಮೂಲದಲ್ಲಿಯೇ ಈ ಭೇದ ಇರಲಿಕ್ಕೆ ಬೇಕೆಂದು ಅನಿಸುವದು. ಇಲ್ಲದಿದ್ದರೆ ಈ ಪ್ರಕಾರವು ಮುಂದೆ [ಆ ಮೇಲೆ] ಪ್ರಕಟವಾಗುತ್ತಿರಲಿಲ್ಲ. ಈ ಕಾರಣದಿಂದಲೇ ಮೂಲ ಮಾಯೆಗೆ ಶಿವಶಕ್ತಿ ಅಥವಾ ಅರ್ಧನಾರೀ ನಟೇಶ್ವರ ಅನ್ನುವರು. [೧೫] ಮೂಲ ಮಾಯೆಯಲ್ಲಿ ಅನೇಕ ಕಲ್ಪನೆಗಳು ಬೀಜ ರೂಪದಿಂದ ಇರುವವು. ಮುಂದೆ ವ್ಯಕ್ತ ದೆಶೆಯಲ್ಲಿ ಕಾಣುವಂಥವೆಲ್ಲವೂ ಇವಳಲ್ಲಿ ಇರುವವು. ಆದರೆ ಇವು ಅತ್ಯಂತ ಸೂಕ್ಷ್ಮ ರೂಪದಲ್ಲಿರುವದರಿಂದ ಸಹಜ ವಾಗಿ ಸುಲಭದಲ್ಲಿ ಅನುಭವಕ್ಕೆ ಬರುವದಿಲ್ಲ. [೧೬] ಯಾವ ದೃಶ್ಯವು ಸ್ಥೂಲ ರೂಪದಲ್ಲಿ ಕಾಣುವದೋ ಅದರ ಮೂಲವು ವಾಸನಾದಲ್ಲಿ ಇರುವದು. ವಾಸನಾ, ಇದು ಸೂಕ್ಷ್ಮ ಇದ್ದದ್ದರಿಂದ ಇದು ಮೊದ ಮೊದಲಿಗೆ [ವಿಕದು] ಕಾಣುವದಿಲ್ಲ ಆದ್ದರಿಂದ ಸ್ಥೂಲದಕಿಂತ ಬೇರೆ ಯಾವುದೋ ಇನ್ನೊಂದು ಸೂಕ್ಷ್ಮವಿರುವದು. ಅನ್ನುವ ಕಲ್ಪನೆಯೇ ಬರುವದಿಲ್ಲ. [೧೭]

ಕಲ್ಪನೇಚೀ ಸೃಷ್ಟೀ ಕೇಲೀ । ಏಸೀ ವೇದಶಾಸ್ತ್ರೇ ಬೋಲಿಲೀ ।
ದಿಸೇನಾ ಮ್ಹಣೋನ ಮಿಥ್ಯಾ ಕೇಲೀ । ನ ಪಾಹಿಜೇತ ಕೀ ॥೧೮॥

ಪಡದಾ ಯೇಕಾ ಯೇಕಾ ಜನ್ಮಾಚಾ । ತೇಥೇ ವಿಚಾರ ಕಳೇ ಕೈಚಾ ।
ಪರಂತು ಗೂಢತ್ವ ಹಾ ದೇವಾಚಾ । ಠಾವ ಆಹೇ ॥೧೯॥

ನಾನಾ ಪುರುಷಾಚೇ ಜೀವ । ನಾನಾ ಸ್ತ್ರಿಯಾಚೇ ಜೀವ ।
ಯೇಕ ಚಿ ಪರೀ ದೇಹಸ್ವಭಾವ । ವೇಗಳಾಲೇ ॥೨೦॥

ನವರೀಸ ನವರೀ ನಲಗೇ । ಏಸಾ ಭೇದ ದಿಸೋ ಲಾಗೇ ।
ಪಿಂಡಾವರೂನ ಉಮಗೇ । ಬ್ರಹ್ಮಾಂಡಬೀಜ ॥೨೧॥

ನವರೀಚೇ ಮನ ನವರ್ಯಾವರೀ । ನವರ್ಯಾಚೇ ಮನ ನವರೀವರೀ ।
ಏಸೀ ವಾಸನೇಚೀ ಪರೀ । ಮುಳೀಹೂನ ಪಾಹಾವೀ ॥೨೨॥

ವಾಸನಾ ಮುಳೀಚೇ ಅಭೇದ । ದೇಹಸಮಂಧೇ ಜಾಲಾ ಭೇದ ।
ತುಟತಾ ದೇಹಾಚಾ ಸಮಂಧ । ಭೇದ ಗೇಲಾ ॥೨೩॥

ನರನಾರೀಚೇ ಬೀಜಕಾರಣ । ಶಿವಶಕ್ತೀಮಧೇ ಜಾಣ ।
ದೇಹ ಧರಿತಾ ಪ್ರಮಾಣ । ಕಳೋ ಆಲೇ ॥೨೪॥

ನಾನಾ ಪ್ರೀತೀಚ್ಯಾ ವಾಸನಾ । ಯೇಕಾಚೇ ಯೇಕಾಸ ಕಳೇನಾ ।
ತಿಕ್ಷಣ ದೃಷ್ಟೀನೇ ಅನುಮಾನಾ । ಕಾಂಹೀಸೇ ಯೇತೇ ॥೨೫॥

ಬಾಳಕಾಸ ವಾಢವೀ ಜನನೀ । ಹೇ ತೋ ನವ್ಹೇ ಪುರುಷಾಚೆನೀ ।
ಉಪಾಧೀ ವಾಢೇ ಜಯೇಚೆನೀ । ತೇ ಹೇ ವನಿತಾ ॥೨೬॥

ವೀಟ ನಾಹೀ ಕಂಟಾಳಾ ನಾಹೀ । ಆಲಸ್ಯ ನಾಹೀ ತ್ರಾಸ ನಾಹೀ ।
ಇತುಕೀ ಮಾಯಾ ಕೋಠೇ ಚಿ ನಾಹೀ । ಮಾತೆವೇಗಳೀ ॥೨೭॥

ನಾನಾ ಉಪಾಧೀ ವಾಢವೂ ಜಾಣೇ। ನಾನಾ ಮಾಯೇನೇ ಗೋವೂ ಜಾಣೇ।
ನಾನಾ ಪ್ರೀತಿ ಲಾವೂ ಜಾಣೇ । ನಾನಾ ಪ್ರಪಂಚಾಚೀ ॥೨೮॥

ಪುರುಷಾಸ ಸ್ತ್ರೀಚಾ ವಿಶ್ವಾಸ । ಸ್ತ್ರೀಸ ಪುರುಷಾಚಾ ಸಂತೋಷ ।
ಪರಸ್ಪರೇ ವಾಸನೇಸ । ಬಾಂಧೋನ ಟಾಕಿಲೇ ॥೨೯॥

ಕೇವಲ ಕಲ್ಪನೆಯೊಳಗಿಂದ ಸೃಷ್ಟಿಯು ನಿರ್ಮಾಣವಾಯಿತು. ಎಂದು ವೇದ ಮತ್ತು ಶಾಸ್ತ್ರಗಳು ಹೇಳುವವು. ಈ ಕಲ್ಪನೆಯು ಸ್ಥೂಲದಲ್ಲಿ ಕಾಣುವದಿಲ್ಲವೆಂದು ಇದನ್ನು ಸುಳ್ಳು ಖೊಟ್ಟಿ. ಎಂದು ಅನ್ನುವದು ಯೋಗ್ಯವಾಗಲಾರದು. (೧೮) ಜೀವ ಮತ್ತು ಬ್ರಹ್ಮ ಇವರ ನಡುವೆ ಅನೇಕ ಪಡದೆ (ಪರದೆ) ಗಳು ಇರುವವು. ಜೀವದ ಒಂದೊಂದು ಜನ್ಮ ಅಂದರೆ ಒಂದೊಂದು ಪಡದೆ ಇರುವದು. ಜೀವಕ್ಕೆ ಜನ್ಮಗಳು ಎಷ್ಟು ಹೆಚ್ಚೋ ಅಷ್ಟು ಪಡದೆಗಳು ಜೀವ-ಬ್ರಹ್ಮರ ನಡುವೆ ಇರುವವು. ಹೀಗೆ ಅನೇಕ ಜನ್ಮದ ಪಡದೆ[ಪರದೆ]ಇದ್ದದ್ದರಿಂದ ಜೀವಕ್ಕೆ ಸೂಕ್ಷ್ಮ ವಿಚಾರವು ಆಕಲನವಾಗುವದಿಲ್ಲ. ಆದರೆ ವಿಶ್ವದಲ್ಲಿಯ ರಹಸ್ಯವು ಸೂಕ್ಷ್ಮವೇ ಇರುವದು. ಗೂಢವೂ ಇರುವದು. ರಹಸ್ಯವು ಸೂಕ್ಷ್ಮ ಮತ್ತು ಗೂಢ ಇರುವದೆಂದರೆ ಇದು ಒಂದು ನಿಸರ್ಗದ ನಿಯಮವೇ ಆಗಿರುವದು(೧೯) ಮೂಲದಲ್ಲಿಯ ವಾಸನಾನದಲ್ಲಿ ಏನೂ ಹೆಚ್ಚು ಕಡಿಮೆ ಇರುವದಿಲ್ಲ. ಇದು ಸರ್ವರಿಗೂ ಒಂದೇ ಸಮ ಇರುವದು. ಪುರುಷರಿಗೆ ಸ್ತ್ರೀಯಳದು, ಸ್ತ್ರೀಯಳಿಗೆ ಪುರುಷನದು ವಾಸನಾ ಇರುವದು. ಇಬ್ಬರೂ ಒಬ್ಬರಲ್ಲೊಬ್ಬರು ಆಸಕ್ತಿ ಹೊಂದಿರುವರು-ತೊಡಕಿಕೊಂಡಿರುವರು-ಸೇರಿಕೊಂಡಿರುವರು. ಆದ್ದರಿಂದ ಜೀವನವು ಚನ್ನಾಗಿ ನಡೆಯುವದು. ಆದರೆ ಈ ಎಲ್ಲದರ ಮೂಲವು ಶಿವಶಕ್ತಿಯವರೆಗೆ ಹೋಗಿ ಮುಟ್ಟುವದು. ಜಗತ್ತಿನಲ್ಲಿ ಎಷ್ಟೋ (ಬಹಳಷ್ಟು)ಪುರುಷರು ಮತ್ತು ಎಷ್ಟೋ (ಬಹಳಷ್ಟು) ಸ್ತ್ರೀಯರು ಇರುವರು. ಪ್ರತಿಯೊಬ್ಬರ ದೇಹ ಸ್ವಭಾವವು ಬೇರೆ ಬೇರೆಯೇ ಇರುವದು. ಆದರೆ ಸರ್ವರ ಜೀವವು ಮಾತ್ರ ಒಂದೇ ಇರುವದು. [೨೦] ವಧುವಿಗೆ [ಕನ್ಯೆಗೆ] ವರನೇ [ಪತಿಯೇ] ಬೇಕೆಂಬ ಇಚ್ಛೆ ಇರುವದೇ ಹೊರತು ವಧುವಿಗೆ-ವಧು [ಕನ್ಯೆಗೆ-ಕನ್ಯೆ] ಬೇಡವಾಗಿರುವದು. ಹೀಗೆ ಭೇದ ಇರುವದು ಕಂಡುಬರುವದು. ಪಿಂಡದಲ್ಲಿಯೇ ಕಾಣುವ ಈ ಭೇದದ ಮೇಲಿಂದ ಬ್ರಹ್ಮಾಂಡದ ಬೀಜ ಹೇಗೆ ಇರಬಹುದಾಗಿದೆ ಎಂಬುದರ ಕಲ್ಪನೆಯು ಸಾಧಕನಿಗೆ ಬರುವದು.[೨೧] ವಧುವಿನ ಮನವು ಗಂಡನ ಮೇಲೆ ಅಂದರೆ ಹೆಣ್ಣಿನ ಮನಸ್ಸು ಗಂಡಸಿನ ಮೇಲೆ ಇರುವದು. ಅದರಂತೆ, ಗಂಡನ ಮನವು ಹೆಂಡತಿಯ ಮೇಲೆ ಅಂದರೆ ಗಂಡಸಿನ ಮನಸ್ಸು ಹೆಣ್ಣಿನ ಮೇಲೆ ಇರುವದು. ಇದು ವಾಸನಾದಿಂದ ಆಗುವದು. ವಾಸನಾದ ಪ್ರಕಾರವನ್ನು ಅತ್ಯಂತ ಮೂಲದಿಂದ (ಆದಿಯಿಂದ) ಶೋಧಿಸಿ ನೋಡಬೇಕು. ತಿಳಿಯಬೇಕು. [೨೨] ವಾಸ್ತವಿಕವಾಗಿ ಮೂಲ ವಾಸನಾದಲ್ಲಿ ಸ್ತ್ರೀ ಪುರುಷ ಅನ್ನುವ ಭೇದವಿಲ್ಲ. ಕೇವಲ ದೇಹ ಸಂಬಂಧದಿಂದ ಈ ಭೇದ ಕಾಣುವದು. ದೇಹದ ಸಂಬಂಧ ಇಲ್ಲವಾದರೆ(ಬಿಟ್ಟು ಹೋದರೆ) ಆಗ ಈ ಭೇದ ಇಲ್ಲದಾಗುವದು. [೨೩] ಸ್ತ್ರೀ ಮತ್ತು ಪುರುಷ ಅನ್ನುವ ಭೇದದ ಮೂಲ ಕಾರಣವು ಶಿವಶಕ್ತಿಯಲ್ಲಿ ಇರುವದು. ದೇಹವು ಆಕಾರಕ್ಕೆ ಬಂದಿತೆಂದರೆ ಆಗ ಆಕಾರದ ಮೇಲಿಂದ ಇದು ತಿಳಿಯುವದು[೨೪] ಪ್ರೇಮದಲ್ಲಿ ವಾಸನಾದ ಅನೇಕ ಪ್ರಕಾರಗಳಿರುವವು. ಒಂದು ಪ್ರಕಾರವು ಇನ್ನೊಂದರಲ್ಲಿ ಇರುವದಿಲ್ಲ. ಸೂಕ್ಷ್ಮ ದೃಷ್ಟಿಯಿಂದ ನೋಡಿದರೆ ಮಾತ್ರ ಆಗ ಇದು ಅಲ್ಪಸ್ವಲ್ಪ ಲಕ್ಷ್ಯದಲ್ಲಿ ಬರುವದು. [೨೫] ತಾಯಿ ಮಕ್ಕಳನ್ನು ಬೆಳೆಸುವಳು ಇದು ಪುರುಷರಿಂದ ಸರಿಯಾಗಿ ಆಗುವದಿಲ್ಲ. ಸ್ತ್ರೀಯ ಯೋಗದಿಂದ [ಸಂಬಂಧದಿಂದ] ಉಪಾಧಿ [ಮಾಯಾ, ಪ್ರಪಂಚ, ವಿಕಾರ, ಅಡ್ಡಿ, ಆಪತ್ತಿ]ಯು ಬೆಳೆಯುವದು-ಬೆಳೆಯುತ್ತಲೇ ಇರುವದು. [ಹೆಚ್ಚುವದು]. [೨೬] ನಿಜವಾಗಿ ಹೇಳುವದಾದರೆ ತಾಯಿಗೆ ಬೇಸರವಿಲ್ಲ. ಆಲಸ್ಯವಿಲ್ಲ. ಹೇಸಿಕೆ ಎನಿಸುವದಿಲ್ಲ. ಮತ್ತು ಇದು ಒಂದು ಉಪದ್ರವವೆಂದೂ ಅವಳಿಗೆ ಅನಿಸುವದಿಲ್ಲ. ತೊಂದರೆ ತ್ರಾಸು ಮಾಡಿಕೊಳ್ಳುವದಿಲ್ಲ. ಅಂತೆಯೇ ತಾಯಿಯ ಹೊರತಾಗಿ ಇಷ್ಟೊಂದು ಮಾಯೆ ಪ್ರೀತಿ ಬೇರೆಲ್ಲಿಯೂ ಕಂಡು ಬರುವದಿಲ್ಲ.(ತಾಯಿಗಿಂತ ಶ್ರೇಷ್ಠ ಬಂಧುವಿಲ್ಲ. ಉಪ್ಪಿಗಿಂತ ಶ್ರೇಷ್ಠರುಚಿ ಇಲ್ಲವೆಂಬ ಗಾದೆ ಇದೆ). [೨೭] ಮಾನವ ಜೀವನದಲ್ಲಿ ಸ್ತ್ರೀಯು ಅನೇಕ ಉಪಾಧಿಗಳನ್ನು ಬೆಳೆಸುವಳು-ಹೆಚ್ಚಿಸುವಳು, ಪ್ರೇಮದಲ್ಲಿ ಹಿಡಿದಿಡುವಳು ಮತ್ತು ಅನೇಕ ಪ್ರಕಾರದ ಪ್ರಪಂಚದ ಪ್ರೇಮದಲ್ಲಿ ಸಿಲುಕಿಸುವಳು. ತೊಡಗಿಸುವಳು. [೨೮] ಪುರುಷನಿಗೆ ಸ್ತ್ರೀಯ ಮೇಲೆ ಹೆಚ್ಚಿನ ವಿಶ್ವಾಸವಿರುವದು. ಸ್ತ್ರೀಯಳಿಗೆ ಪುರುಷನಲ್ಲಿ ಹೆಚ್ಚು ಸಂತೋಷವಿರುವದು. ಈ ರೀತಿಯಲ್ಲಿ ವಾಸನಾ ಅನ್ನುವದು ಒಬ್ಬರನ್ನು ಒಬ್ಬರಲ್ಲಿ ಸಿಲುಕಿಸಿ-ತೊಡಕಿಸಿ ಇಬ್ಬರನ್ನೂ ಒಂದು ಕಡೆಗೆ ಕಟ್ಟಿ ಇಡುವದು. [೨೯]

ಈಶ್ವರೇಂ ಮೋಠೇಂ ಸೂತ್ರ ಕೇಲೇಂ । ಮನುಷ್ಯಮಾತ್ರ ಗುಂತೋನ ರಾಹಿಲೇಂ ।
ಲೋಭಾಚೇಂ ಗುಂಡಾಳೇಂ ಕೇಲೇಂ । ಉಗವೇನಾ ಐಸೇಂ ॥೩೦॥

ಐಸೀ ಪರಸ್ಪರೇಂ ಆವಡೀ । ಸ್ತ್ರೀ ಪುರುಷಾಂಚೀ ಮಹಾಗೋಡೀ ।
ಹೇ ಮುಳೀಂಹೂನ ಚಾಲಿಲೀ ರೋಕಡೀ । ವಿವೇಕೇಂ ಪಾಹಾವೀ ॥೩೧॥

ಮುಳೀಂ ಸೂಕ್ಷ್ಮ ನಿರ್ಮಾಣ ಜಾಲೇಂ । ಪುಢೇಂ ಪಷ್ಟ ದಿಸೋನ ಆಲೇಂ ।
ಉತ್ಪತ್ತೀಚೇಂ ಕಾರ್ಯ ಚಾಲೇಂ । ಉಭಯತಾಕರಿತಾ ॥೩೨॥

ಮುಳೀಂ ಶಿವಶಕ್ತೀ ಖರೇಂ । ಪುಢೆ ಜಾಲೀಂ ವಧುವರೇಂ ।
ಚೌರ್‍ಯಾಸೀ ಲಕ್ಷ ವಿಸ್ತಾರೇಂ । ವಿಸ್ತಾರಲೀಂ ಜೇಂ ॥೩೩॥

ಯೇಥೇಂ ಶಿವಶಕ್ತೀಚೇಂ ರೂಪ ಕೇಲೇಂ । ಶ್ರೋತೀಂ ಮನಾಸ ಪಾಹಿಜೆ ಆಣಿಲೇಂ ।
ವಿವರಲಿಯಾವಿಣ ಬೋಲಿಲೇಂ । ತೇಂ ವ್ಯರ್ಥ ಜಾಣಾವೇಂ ॥೩೪॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ಶಿವಶಕ್ತಿ ನಿರೂಪಣ' ನಾಮ ಸಮಾಸ ದ್ವಿತೀಯ ॥

• •

ಇದೆಲ್ಲವೂ ಈಶ್ವರನು ಮಾಡಿದ ಒಂದು ಯುಕ್ತಿಯಾಗಿದೆ. [ಮೋಡಿಕಾರನ ಒಂದು ಆಟವಾಗಿದೆ, ಮಾಯೆಯು ಲೀಲೆಯಾಗಿದೆ.] ಇದರಿಂದಾಗಿ ಯಾವತ್ತೂ ಮಾನವ ಜನಾಂಗವು ಪರಸ್ಪರರಲ್ಲಿ ವಿಶ್ವಾಸವುಳ್ಳವರಾಗಿ ಅನುರಕ್ತರಾಗಿ ತೊಡಕಿಕೊಂಡಿರುವರು. ಇದರಿಂದ ಅಂದರೆ ವಾಸನಾ ಅನ್ನುವ ಬಂಧನದಿಂದ ಲೋಭದ ಗಂಟನ್ನು ಹಾಕಿಟ್ಟಿರುವದು. ಇದನ್ನು ಬಿಚ್ಚಿಕೊಳ್ಳಬೇಕೆಂದರೆ ಗಂಟು ಬಿಚ್ಚಲೊಲ್ಲದಾಗಿದೆ. ಕಗ್ಗಂಟು ಹೇಗೆ ಬಿಚ್ಚೀತು? (೩೦) ಸ್ತ್ರೀ ಪುರುಷರಿಬ್ಬರಲ್ಲಿಯೂ ಪ್ರೇಮವಿರುವದು-ಪರಸ್ಪರ ನಲಿದಾಟವಿರುವದು. ಈ ಪರಸ್ಪರರ ಬಗೆಗಿನ ಆಕರ್ಷಣವು ಬಹಳ ಮೂಲದಿಂದ ನಡೆದುಬಂದದ್ದಾಗಿದೆ. ಇದು ಸ್ಪಷ್ಟವಾಗಿ ಕಂಡುಬರುವಂಥದೇ ಇರುವದು. ಸೂಕ್ಷ್ಮ ವಿವೇಕದಿಂದ ಇದನ್ನು ನೋಡಬೇಕು-ತಿಳಿಯಬೇಕು. (೩೧) ಅತ್ಯಂತ ಮೂಲದಲ್ಲಿ ಸ್ತ್ರೀ ಪುರುಷ ಅನ್ನುವ ಭೇದವು ಅತಿ ಸೂಕ್ಷ್ಮತನದಿಂದ ನಿರ್ಮಾಣವಾಗುವದು. ಆ ನಂತರ ಇದು ಸ್ಪಷ್ಟವಾಗಿ ತೋರಿಬರುವದು-ಕಂಡುಬರುವದು. ಸ್ತ್ರೀ ಪುರುಷರ ಜೋಡಿಯಿಂದ ಉತ್ಪತ್ತಿಯ ಕಾರ್ಯವು ನಡೆಯುವದು. (೩೨) ಆರಂಭದಲ್ಲಿ [ಮೊಟ್ಟ ಮೊದಲಿಗೆ] ಮೂಲದಲ್ಲಿ ಶಿವ-ಶಕ್ತಿ [ಪ್ರಕೃತಿ-ಪುರುಷ] ಇದು ನಿಜವೇ ಇರುವದು. ಆದರೆ ಇದೇ ಮುಂದೆ ಗಂಡ-ಹೆಂಡತಿ ಎಂದು ಆಯಿತು. ಈ ಶಿವ-ಶಕ್ತಿಯರಿಂದಲೇ [ಸ್ತ್ರೀ-ಪುರುಷರಿಂದಲೇ] ೮೪ ಲಕ್ಷ ಯೋನಿಯು [ಜೀವರಾಶಿಯು] ವಿಸ್ತಾರ ಉತ್ಪನ್ನವಾಯಿತು. (೩೩) ಈ ಸಮಾಸದಲ್ಲಿ ಶಿವಶಕ್ತಿಯು ಸ್ವರೂಪದ ವರ್ಣನೆ ಮಾಡಿದ್ದಾಯಿತು. ಶ್ರೋತಾ ಜನರು ಇದನ್ನು ತಿಳಿದುಕೊಳ್ಳಬೇಕು. ಚನ್ನಾಗಿ ತಿಳಿಯದ ಹೊರತು ಈ ವಿಷಯ ಮನಸ್ಸಿಗೆ ಖಾತ್ರಿಯಾಗುವದಿಲ್ಲ. ಅರ್ಥಾತ್ ಅನುಭವ ಹೊಂದದೆ ವಿನಾಕಾರಣ ಇದರ ಬಗ್ಗೆ ಮಾತನಾಡಬಾರದು. ಯಾಕಂದರೆ ಅನುಭವವಿಲ್ಲದಲೇ ಮಾತನಾಡಿದ್ದು ವ್ಯರ್ಥವಾಗುವದು. (೩೪)

ಶ್ರೀ ದಾಸಬೋಧದ ಹದಿನೇಳನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ಶಿವಶಕ್ತಿ ನಿರೂಪಣ ನಾಮ"ವೆಂಬ ಹೆಸರಿನ ಎರಡನೇ ಸಮಾಸವು ಮುಗಿದುದು.

• •

## ದಶಕ ೧೭. ಸಮಾಸ ೩. ಶ್ರವಣ ನಿರೂಪಣ (ನುಡಿ ೩೦)

ಆತ್ಮಜ್ಞಾನವನ್ನು ಸಾಧ್ಯಮಾಡಿಕೊಳ್ಳುವದಕ್ಕಾಗಿ ರೂಢಿಯಲ್ಲಿ ಅನೇಕ ಮಾರ್ಗಗಳಿರುವವು. ಆದರೆ ಶ್ರುತಿ ಮಾವುಲಿ [ತಾಯಿ] ಯು ಹೇಳಿದಂಥ ಮತ್ತು ಅನೇಕ ದೊಡ್ಡ ದೊಡ್ಡ ಆತ್ಮಜ್ಞಾನಿಗಳು ಶೋಧಿಸಿ ಕಂಡು ಹಿಡಿದ ರಾಜ ಮಾರ್ಗವೇ ಶ್ರೀ ಸಮರ್ಥರಿಗೆ ಪ್ರೀತಿಯದೆನಿಸಿದೆ. ೧] ಶ್ರವಣ ೨] ಮನನ ೩] ನಿಧಿಧ್ಯಾಸನ ಮತ್ತು ಪ್ರತ್ಯಕ್ಷ ಸ್ವತಃ ಅನುಭವ ಸಿದ್ಧವಾದ ೪] ಆತ್ಮಸಾಕ್ಷಾತ್ಕಾರ ಹೀಗೆ ನಾಲ್ಕು ಪಾವುಟಿಗೆ [ಮೆಟ್ಟಿಲು]ಗಳನ್ನು ಏರುವ ಮಾರ್ಗವಿರುವದು. ಈ ಸಮಾಸದಲ್ಲಿ ಇದರ ಬಗ್ಗೆ ಸ್ವಲ್ಪದರಲ್ಲಿ ವರ್ಣಿಸಿ ಹೇಳಿದ್ದು ಕಂಡುಬರುವದು. ಶ್ರೀ ಸಮರ್ಥರು

ಅನ್ನುವವೇನಂದರೆ: ಈ ಗ್ರಂಥವನ್ನು ಈಗಲೇ ಕೇವಲ ನೋಡಿ ಬಿಟ್ಟು ಬಿಡಬೇಡಿರಿ. ಇದರಲ್ಲಿ ಏನು ಹೇಳಲಾಗಿದೆ ಅನ್ನುವದನ್ನು ಚೆನ್ನಾಗಿ ಸ್ವತಃ ಪರಿಶೀಲಿಸಿ ನೋಡಿರಿ. ಯಾಕೆಂದರೆ ಯಾವುದೇ ಜ್ಞಾನವಾಗಲಿಕ್ಕೆ ಮೊದಲನೆಯದಾಗಿ ವ್ಯವಸ್ಥಿತ ರೀತಿಯಿಂದ ಆ ವಿಷಯದ ಶ್ರವಣವಾಗಲಿಕ್ಕೇಬೇಕು. ಆಮೇಲೆ ಕೇಳಿದ, ಶ್ರವಣಮಾಡಿದ ವಿಷಯವನ್ನು ಮನನ, ಚಿಂತನ, ವಿಚಾರಮಾಡುವದು ಅತಿ ಅವಶ್ಯವಿರುವದು. ಜ್ಞಾನದ ವಿಷಯವು ಎಷ್ಟೊಂದು ಸೂಕ್ಷ್ಮವೋ ಅಷ್ಟೊಂದು ಸೂಕ್ಷ್ಮ ವಿಚಾರದಿಂದ ವಿಷಯದ ಮನನ ಮಾಡಬೇಕಾಗುವದು. ಪರಮಾರ್ಥದಲ್ಲಿ ಆತ್ಮ ಸ್ವರೂಪದ ಮೇಲೆ ವಿಚಾರಮಾಡುವದಿರುತ್ತದೆ. ಅಂತರಾತ್ಮನು ಯುಗಾನುಯುಗದಿಂದ ಒಂದೇಸಮನೇ ವಿಶ್ವವನ್ನು ನಡೆಸುತ್ತಲೇ ಬಂದಿರುವನು. ಜಗತ್ತಿನಲ್ಲಿಯ ದೊಡ್ಡ ದೊಡ್ಡ ಜ್ಞಾನಿ ಪುರುಷರು ಇವನ ಸಲುವಾಗಿಯೇ ಬದುಕಿದರು. ಇವನಿಗಾಗಿಯೇ ಜೀವ ಸವೆಸಿದರು. ಇವನು ಇಲ್ಲವಾದರೆ ಯಾವತ್ತೂ ವ್ಯರ್ಥವಾಗಿ ಹೋಗುವದು. ಆದ್ದರಿಂದ ಸರ್ವ ಜ್ಞಾನದಲ್ಲಿ ಆತ್ಮಜ್ಞಾನವು ಅತಿ ಶ್ರೇಷ್ಠವಿರುವದು. ಯಾರು ಅತ್ಯಂತ ಮನನಶೀಲರಿರುವರೋ ವಿವೇಕ ಸಂಪನ್ನರಿರುವರೋ ಅವರಿಗೆ ಪಂಚಭೂತಗಳ ಆಚೆಗೆ ಸ್ವತಃದ ಹತ್ತಿರವೇ [ನಿನ್ನಲ್ಲಿಯೇ ಆ ಆತ್ಮಾ ದೊರಕುವನು. [ಸಿಗುವನು] ಇದಕ್ಕಾಗಿ ಸೂಕ್ಷ್ಮದಲ್ಲಿ ಪ್ರವೇಶಮಾಡುವದು ಒಳಗೆ ಸೇರುವದು, ಅವಶ್ಯವಿರುವದು. ಆದರೆ ಈ ಮಾಯಾದೇವಿಯ ಗಲಿಬಿಲಿ ಗೊಂದಲದ ಧಾಂದಲೆಯಲ್ಲಿ ಮನುಷ್ಯನಿಗೆ ಸೂಕ್ಷ್ಮದಲ್ಲಿ ಲಕ್ಷ್ಯವನ್ನು ಕೇಂದ್ರೀಕರಿಸಲಿಕ್ಕೆ–ತೊಡಗಿಸಲಿಕ್ಕೆ ಆಗುವದಿಲ್ಲ. ಒಮ್ಮೆ ಅದು ಸಾಧ್ಯವಾದರೂ, ಅದು ಕ್ವಚಿತ್ತಾಗಿ ಕಂಡುಬರುವದು. ದೃಶ್ಯದ ಬೆನ್ನು ಹತ್ತಿದ್ದರಿಂದ, ದೃಶ್ಯದ ನಾದಿಗೆ ಬಿದ್ದವರಿಗೆ ಅಧೋಗತಿ ತಪ್ಪಿದ್ದಲ್ಲ. ಆದ್ದರಿಂದ ಸಾಧಕರು ವಿಚಾರವನ್ನು ಚುರುಕುಗೊಳಿಸಬೇಕು. [ವಿಚಾರವನ್ನು ಮೇಲಕ್ಕೆ ಎತ್ತರಿಸಬೇಕು]. ಹೀಗೆ ಮಾಡುವದು ಅಂದರೇನೇ ಸೂಕ್ಷ್ಮದಲ್ಲಿ ಸೇರುವದೇ ಆಗಿದೆ. ಸೂಕ್ಷ್ಮದಲ್ಲಿ ಸೇರಿ ಯಾರು ನಿರಂಜನನನ್ನು ಹುಡುಕುತ್ತ ಹುಡುಕುತ್ತ ದೇಹಾತೀತರಾಗುವರೋ ಅವರು ಧನ್ಯರೆನಿಸುವರು. ಉಪಾಸನೆಯಿಂದ ಪೂರ್ತಿ ಮೂಲ ಸಂಕಲ್ಪದವರೆಗೆ ಹೋಗಿ ಮುಟ್ಟಬೇಕು. ಹೀಗೆ ಮುಟ್ಟುವದು ಭಾಗ್ಯದ ಕೆಲಸವು. ಯಾಕೆಂದರೆ ಇದರ ಆಚೆಗೇನೇ ನಿಶ್ಚಲ ಬ್ರಹ್ಮ ಇರುತ್ತದೆ. ಈ ಬ್ರಹ್ಮನ ವಿಚಾರವಾದರೋ ಸೂಕ್ಷ್ಮಕ್ಕಿಂತ ಇನ್ನೂ ಅತಿ ಸೂಕ್ಷ್ಮವಿರುವದು. ಸಾಧಕರು ವಿವೇಕ ಪ್ರಲಯದಿಂದ ನಿಶ್ಚಲದ ಕಡೆಗೆ ಹೋಗಬೇಕು. ಇದು ಸಾಧಿಸಿತೆಂದರೆ ಆ ಕೂಡಲೇ ಗ್ರಂಥವನ್ನು ಬದಿಗೆ ಇಡಬೇಕು. ಇದರ ಅರ್ಥವು. ಸಾಧಕನ ಶ್ರಮವು ಸಾರ್ಥಕವಾಯಿತು ಎಂದು ತಿಳಿಯಬೇಕು.

ದಶಕ ಸಪ್ತದಶ : ಸಮಾಸ ತೃತೀಯ : ಶ್ರವಣ ನಿರೂಪಣ (ನುಡಿ ೩೦)

॥ಶ್ರೀರಾಮ॥ ಥಾಂಬಾ ಥಾಂಬಾ ಏಕಾ ಏಕಾ । ಆಧೀ ಚ ಗ್ರಂಥ ಸೋಡೂ ನಕಾ।
ಸಾಂಗಿತಲೇ ತೇ ಏಕಾ । ಸಾವಧಪಣೇ ॥೧॥

ಶ್ರವಣಾಮಧ್ಯೇ ಸಾರ ಶ್ರವಣ । ತೇ ಹೇ ಅಧ್ಯಾತ್ಮನಿರೂಪಣ ।
ಸುಚಿತ ಕರೂನ ಅಂತಃಕರ್ಣ । ಗ್ರಂಥಾಮಧೇ ವಿವರಾವೇ ॥೨॥

ಶ್ರವಣ ಮನನಾಚಾ ವಿಚಾರ । ನಿಜಧ್ಯಾಸೇ ಸಾಕ್ಷಾತ್ಕಾರ ।
ರೋಕಡಾ ಮೋಕ್ಷಾಚಾ ಉಧಾರ। ಬೋಲೋ ಚಿ ನಯೇ ॥೩॥

ನಾನಾ ರತ್ನೇ ಪರೀಕ್ಷಿತಾ । ಅಥವಾ ವಜನೇ ಕರಿತಾ ।
ಉತ್ತಮ ಸೋನೇ ಪುಟೇ ಘಾಲಿತಾ । ಸಾವಧಾನ ಅಸಾವೇ ॥೪॥

ನಾನಾ ನಾಣೇ ಮೋಜೂನ ಘೇಣೇ । ನಾನಾ ಪರೀಕ್ಷಾ ಕರಣೇ ।
ವಿವೇಕೀ ಮನುಷ್ಯಾಸೀ ಬೋಲಣೇ । ಸಾವಧಪಣೇ ॥೫॥

ಜೈಸೇ ಲಾಖೋಲೀಚೆ ಧಾನ್ಯ । ನಿವಡೂನ ವೇಚಿತಾ ಹೋತೇ ಮಾನ್ಯ ।
ಸಗಟ ಮಾನಿತಾ ಅಮಾನ್ಯ । ದೇವ ಕ್ಷೋಭೇ ॥೬॥

ಯೇಕಾಂತೀ ನಾಜುಕ ಕಾರಬಾರ । ತೇಥೇ ಅಸಾವೇ ಅತಿ ತತ್ಪರ ।
ತ್ಯಾಚ್ಯಾ ಕೋಟಿಗುಣೇ ವಿಚಾರ । ಅಧ್ಯಾತ್ಮಗ್ರಂಥೀ ॥೭॥

ಕಾಹಿಣ್ಯಾ ಕಥಾ ಗೋಷ್ಟೀ ಪವಾಡ । ನಾನಾ ಅವತಾರ ಚರಿತ್ರೇ ವಾಡ ।
ತ್ಯಾ ಸಮಸ್ತಾಮಧ್ಯೇ ಜಾಡ । ಅಧ್ಯಾತ್ಮ ವಿದ್ಯಾ ॥೮॥

ಗತ ಗೋಷ್ಟೀಸ ಏಕಿಲೇ । ತೇಣೇ ಕಾಯ ಹಾತಾಸ ಆಲೇ ।
ಮ್ಹಣತೀ ಪುಣ್ಯ ಪ್ರಾಪ್ತ ಜಾಲೇ । ಪರೀ ತೇ ದಿಸೇನಾ ಕೀ ॥೯॥

## ದಶಕ ೧೭. ಸಮಾಸ ೩. ಶ್ರವಣ ನಿರೂಪಣ (ನುಡಿ ೩೦)

ಪರಮಾರ್ಥದ ಸಾಧನೆಯಲ್ಲಿ ೧] ಶ್ರವಣ ೨] ಮನನ ೩] ನಿಧಿಧ್ಯಾಸನ ಮತ್ತು ೪] ಸಾಕ್ಷಾತ್ಕಾರ ಹೀಗೆ ಒಂದು ಕ್ರಮ ಇರುವದು. ಇದರಲ್ಲಿ ಶ್ರವಣ-ಮನನ ಈ ಎರಡು ಹಂತಗಳು ಬಹಳ ಮಹತ್ವದ್ದಿರುವವು. ಸತ್ಪುರುಷರ ಸಂಗತಿಯಲ್ಲಿ ಇದ್ದುಕೊಂಡು ಸತತ ಪರಮಾರ್ಥ ಶ್ರವಣಮಾಡಬೇಕು. ಪ್ರತ್ಯಕ್ಷ ಸಹವಾಸ ಘಟಿಸದಿದ್ದರೆ ಅಥವಾ ಸಾಧ್ಯವಿರದಿದ್ದರೆ ಆಗ ಇಂಥ ಸತ್ಪುರುಷರು ಬರೆದ ಗ್ರಂಥದ ಶ್ರವಣವನ್ನು ಅಥವಾ ಓದುವದನ್ನು ಮಾಡ ಬೇಕು. ನಂತರ ಇದರ ಮೇಲೆ ಅತ್ಯಂತ ಸೂಕ್ಷ್ಮ ಮನನ ಆಗಬೇಕು–ಮಾಡಬೇಕು. ಶ್ರೀ ಸಮರ್ಥರು ಶ್ರೋತಾ ಜನರಿಗೆ ಆಗ್ರಹಪೂರ್ವಕವಾಗಿ ಮತ್ತು ಅಷ್ಟೇ ಅಧಿಕಾರ ವಾಣಿಯಿಂದ ಹೇಳುವದೇನಂದರೆ, "ಭಾವುಕರೇ ಸ್ವಲ್ಪ ನಿಲ್ಲಿರಿ. ಮೊದಲು ನಾನು ಹೇಳುವದನ್ನು ಅಥವಾ ನನ್ನ ಅಂಬೋಣವನ್ನು ಸ್ವಲ್ಪ ಲಕ್ಷ್ಯಕೊಟ್ಟು ಕೇಳಿರಿ. ಗ್ರಂಥ ಓದುವ ಮೊದಲೇ ಅದರಲ್ಲೇನಿದೆ ಎಂದು ಅಲಕ್ಷ್ಯಮಾಡಿ ಬಿಡಬೇಡಿರಿ. ಗ್ರಂಥದಲ್ಲಿ ಏನು ಹೇಳಲಾಗಿದೆಯೋ ಅದನ್ನೆಲ್ಲ ಲಕ್ಷ್ಯಪೂರ್ವಕ ಓದಬೇಕು. ಅಥವಾ ಓದಿದ್ದನ್ನು ಪೂರ್ಣ ಕೇಳಬೇಕು. (೧) ಜ್ಞಾನ ಸಂಪಾದನೆ ಮಾಡಿ ಕೊಳ್ಳುವದಕ್ಕಾಗಿ ಏನೇನು ಶ್ರವಣಮಾಡುವೆವೋ ಅವುಗಳಲ್ಲಿ ಆತ್ಮಸ್ವರೂಪದ ಬಗ್ಗೆ ಇರುವದನ್ನು ಶ್ರವಣಮಾಡು ವದು ಸರ್ವೋತ್ತಮವೆನಿಸುವದು. ನಿಮ್ಮ ಅಂತಃಕರಣವನ್ನು ಏಕಾಗ್ರಮಾಡಬೇಕು. ಮತ್ತು ಗ್ರಂಥದಲ್ಲಿ ಯಾವುದನ್ನು ಪ್ರತಿಪಾದನ ಮಾಡಲಾಗಿರುವದೋ ಅದರ ವಿವರ ನೋಡಬೇಕು. ತಿಳಿಯಬೇಕು. (೨) ಯಾವುದನ್ನು ಶ್ರವಣಮಾಡುವಿರೋ ಅದರ ಮನನ [ಆಲೋಚಿಸುವದು, ಚಿಂತಿಸುವದು ವಿಷಯವನ್ನು ಸರಿಯಾಗಿ ತಿಳಿದುಕೊಳ್ಳುವದು] ವನ್ನು ಸರಿಯಾಗಿ ಮಾಡಿಕೊಂಡು ವಿಚಾರವನ್ನು ಬೆಳೆಸಬೇಕು. ಮತ್ತು ವಿಚಾರವು ವಿಸ್ತಾರಗೊಳ್ಳುತ್ತ ಹೋಗಬೇಕು. ಆ ನಂತರ [ಸತತ ಚಿಂತನ = ಏಕಾಗ್ರ ಮನದಿಂದ ತಿಳಿಯುವದು. ಒಂದು ಪ್ರಕಾರದ ಧ್ಯಾನ = ಗುರು ಮುಖದಿಂದ ಕೇಳಿದ್ದನ್ನು ಮನದಟ್ಟು ಮಾಡಿಕೊಳ್ಳುವದಕ್ಕಾಗಿ ಏಕಾಗ್ರ ಮನದಿಂದ ಧ್ಯಾನಿಸುವದು, ತಿಳಿಯುವದು] ಅಥವಾ ನಿಧಿಧ್ಯಾಸವನ್ನು ಹಿಡಿದು ಸಾಕ್ಷಾತ್ಕಾರವನ್ನು ಮಾಡಿಕೊಳ್ಳಬೇಕು. ಸಾಧಿಸ ಬೇಕು. ಈ ಕಾರ್ಯ ಅಂದರೆ ಮೋಕ್ಷ. ಸಾಕ್ಷಾತ್ಕಾರದ ವ್ಯವಹಾರವು ರೋಖಡಿ ವ್ಯವಹಾರದ್ದಾಗಿರುವದು. ಇದರಲ್ಲಿ ಉದ್ರಿ ವ್ಯಾಪಾರದ ಮಾತೇ ಇಲ್ಲ. (೩) ಅನೇಕ ರತ್ನಗಳ ಪರೀಕ್ಷೆ ಮಾಡುವಾಗ ಮೌಲ್ಯವುಳ್ಳ ನಾಣ್ಯಗಳನ್ನು ತೂಕ ಮಾಡುವಾಗ ಎಣಿಸುವಾಗ ಅಥವಾ ಉತ್ತಮ ಬಂಗಾರವನ್ನು ಮೂಸಿ [ಮೂಸೆ] ಯಲ್ಲಿ ಹಾಕುವಾಗ ಅತಿಶಯ ಎಚ್ಚರದಿಂದ ಕೆಲಸಮಾಡಬೇಕಾಗುವದು. (೪) ಅನೇಕ ನಾಣ್ಯಗಳನ್ನು ಎಣಿಕೆ ಮಾಡಿಕೊಳ್ಳುವಾಗ, ಅನೇಕ ವಸ್ತುಗಳ ಪರೀಕ್ಷೆ ಮಾಡುವಾಗ, ಮತ್ತು ವಿವೇಕವುಳ್ಳವರ ಸಂಗಡ ಮಾತನಾಡುವಾಗ ಬಹಳ ಎಚ್ಚರದಿಂದ ನಡೆಯಬೇಕಾ ಗುವದು, (೫) ದೇವರಿಗೆ ಧಾನ್ಯದ [ಅಕ್ಕಿಕಾಳು ಇತ್ಯಾದಿ] ಲಕ್ಷ ಲಾಖೋಲಿ [ನಾಮಕ್ಕೊಂದು ಕಾಳು ಏರಿಸುವದು] ಅರ್ಪಿಸುವಾಗ-ಏರಿಸುವಾಗ ಧಾನ್ಯದಕಾಳನ್ನು ಆರಿಸಿ ಅಂದರೆ ಒಡಕಲು ಭಿನ್ನವಾದವುಗಳನ್ನು ಬೇರ್ಪಡಿಸಿ ಉತ್ತಮವಾದ ಧಾನ್ಯವನ್ನು ಏರಿಸಬೇಕಾಗುವದು. ಹೀಗೆ ಮಾಡಿದರೇನೇ ದೇವರಿಗೆ ಮುಟ್ಟುವದು. ಮಾನ್ಯವಾಗುವದು. ಚಲೋ– ಕೆಟ್ಟ ಇವುಗಳನ್ನು ವಿಂಗಡಿಸದೆ ಒಂದುವೇಳೆ ಸರಸಗಡ ಯಾವತ್ತೂ ಧಾನ್ಯವನ್ನು ದೇವರಿಗೆ ಏರಿಸಿದರೆ ಅರ್ಪಿಸಿದರೆ] ಅದು ದೇವರಿಗೆ ಮಾನ್ಯವಾಗುವದಿಲ್ಲ. ದೇವರ ಕ್ಷೋಭವಾಗುವದು. [೬] ಏಕಾಂತದಲ್ಲಿ ಕುಳಿತು ಯಾವುದಾದ ರೊಂದು ಅತ್ಯಂತ ನಾಜೂಕ ವ ಗುಪ್ತ ವಿಷಯದ ಚರ್ಚೆಮಾಡುವದಿದ್ದರೆ ಅಂಥಲ್ಲಿ ಮನವು ಅತ್ಯಂತ ದಕ್ಷ ಮತ್ತು ಸಾವಧವಿರಬೇಕಾಗುವದು. ಅಧ್ಯಾತ್ಮ ಗ್ರಂಥದಲ್ಲಿಯಾದರೋ ಅದಕ್ಕಿಂತ ಎಷ್ಟೋ ಪಟ್ಟು ಹೆಚ್ಚು ಸೂಕ್ಷ್ಮ ವಿಚಾರ ಗಳು ಇರುತ್ತವೆ. (೭) ಹಾಡು, ಕಥೆ, ಗೋಷ್ಟಿ, ಪೊವಾಡಾ [ಒಂದು ಪ್ರಕಾರದ ಲಾವಣಿ ಪದಗಳು] ಮತ್ತು ಅನೇಕ ದೇವರ ಅವತಾರದ ದೊಡ್ಡದೊಡ್ಡ ಚರಿತ್ರೆ, ಪುರಾಣ ಈ ಎಲ್ಲವುಗಳಿಗಿಂತ ಅಧ್ಯಾತ್ಮ ವಿದ್ಯೆ ಹೆಚ್ಚು ಕಠಿಣ ಗಹನ ವಿರುವದು. (೮) ಹಿಂದೆ ಆಗಿ ಹೋದ ಮಾತುಗಳನ್ನು ಕೇಳಿದರೆ ಅದರಿಂದ ಈಗ ನಮ್ಮ ಕೈಗೆ ಏನು ಸಿಗುವದು ಎಂದು ಯಾರಾದರೂ ವಿಚಾರಿಸಿದರೆ ಅದಕ್ಕೆ ನಿಮ್ಮ ಪದರಿನಲ್ಲಿ ಬಹಳ ಪುಣ್ಯ ಬರುವದು. ಎಂದು ಜನರು ಉತ್ತರ ಕೊಡುವರು. ಆದರೆ ಈ ಪುಣ್ಯವಾದರೋ ನಮ್ಮ ಕಣ್ಣಿಗೆ ಕಾಣುವದಿಲ್ಲ. (೯)

ತೈಸೇ ನವ್ಹೇ ಅಧ್ಯಾತ್ಮಸಾರ । ಹಾ ಪ್ರಚೀತೀಚಾ ವಿಚಾರ ।
ಕಳತಾ ಅನುಮಾನಾಚಾ ಸಂವ್ಹಾರ । ಹೋತ ಜಾತೋ ॥೧೦॥

ಮೋಠೇ ಮೋಠೇ ಯೇಊನ ಗೇಲೇ । ಆತ್ಮ್ಯಾಕರಿತಾ ಚ ವರ್ತಲೇ ।
ತ್ಯಾ ಆತ್ಮ್ಯಾಚಾ ಮಹಿಮಾ ಬೋಲೇ । ಐಸಾ ಕವಣು ॥೧೧॥

ಯುಗಾನಯುಗೇ ಯೇಕಟಾ ಯೇಕ । ಚಾಲವಿತೋ ತಿನೀ ಲೋಕ ।
ತ್ಯಾ ಆತ್ಮ್ಯಾಚಾ ವಿವೇಕ । ಪಾಹಿಲಾ ಚ ಪಾಹಾವಾ ॥೧೨॥

ಪ್ರಾಣೀ ಆಲೇ ಯೇಊನ ಗೇಲೇ । ತೇ ಜೈಸೆ ಜೈಸೇ ವರ್ತಲೇ ।
ತೇ ವರ್ತಣುಕೇಚೇ ಕಥನ ಕೇಲೇ । ಇಥೇಸಾರಿಖೇ ॥೧೩॥

ಜೇಥೇ ಆತ್ಮಾ ನಾಹೀ ದಾಟ । ತೇಥೇ ಅವಘೇ ಸರಸಪಾಟ ।
ಆತ್ಮ್ಯಾವಿಣ ಬಾಪುಡೇ ಕಾಷ್ಠ । ಕಾಯೆ ಜಾಣೇ ॥೧೪॥

ಐಸೇ ವರಿಷ್ಠ ಆತ್ಮಜ್ಞಾನ । ದುಸರೇ ನಾಹೀ ಯಾಸಮಾನ ।
ಸೃಷ್ಟೀಮಧೇ ವಿವೇಕೀ ಸಜ್ಜನ । ತೇ ಚಿ ಹೇ ಜಾಣತೀ ॥೧೫॥

ಪೃಥ್ವೀ ಆಣೀ ಆಪ ತೇಜ । ಯಾಚಾ ಪೃಥ್ವೀಮಧ್ಯೇ ಸಮಜ ।
ಅಂತರಾತ್ಮಾ ತತ್ವ ಬೀಜ । ತೇ ವೇಗಳೇ ಚಿ ರಾಹಿಲೇ ॥೧೬॥

ವಾಯೋಪಾಸೂನ ಪೈಲಿಕಡೇ । ಜೋ ಕೋಣೀ ವಿವೇಕೇ ಪವಾಡೇ ।
ಜವಳೀ ಚ ಆತ್ಮಾ ಸಾಂಪಡೇ । ತಯಾ ಪುರುಷಾಸೀ ॥೧೭॥

ವಾಯೋ ಆಕಾಶ ಗುಣಮಾಯಾ । ಪ್ರಕೃತಿಪುರುಷ ಮೂಳಮಾಯಾ ।
ಸೂಕ್ಷ್ಮರೂಪೇ ಪ್ರಚಿತ ಯೇಯಾ । ಕಠಿಣ ಆಹೇ ॥೧೮॥

ಮಾಯಾದೇವೀಚ್ಯಾ ಧಾಂದಲೀ । ಸೂಕ್ಷ್ಮೀ ಕೋಣ ಮನ ಘಾಲೀ ।
ಸಮಜಲಾ ತ್ಯಾಚೀ ತುಟಲೀ । ಸಂದೇಹವೃತ್ತೀ ॥೧೯॥

ಆದರೆ ಅಧ್ಯಾತ್ಮ ವಿದ್ಯೆಯು ವಿಷಯವು [ರಹಸ್ಯ] ಹೀಗಲ್ಲ. ಅಧ್ಯಾತ್ಮದಲ್ಲಿ ಪ್ರತ್ಯಕ್ಷ ಅನುಭವ ಪಡೆಯುವದು-ಹೊಂದುವದು ಇರುವದು. ಅಂತೆಯೇ ಇದರಲ್ಲಿ ಹೇಗೆ ಹೇಗೆ ಅನುಭವ ಬರುತ್ತ ಹೋಗುವದೋ ಹಾಗೆ ಹಾಗೆ ಅದರ ಪ್ರಕಾರ ಕಲ್ಪನೆ ಅನ್ನುವದು ನಾಶವಾಗುತ್ತ ಹೋಗುವದು. (೧೦) ಅಂತರಾತ್ಮ ಸರ್ವದರಲ್ಲಿಯೂ ಎಲ್ಲಕ್ಕಿಂತಲೂ ಶ್ರೇಷ್ಠನಿರುವನು. ಇವನ ಜ್ಞಾನವೂ ಸಹಿತ ಸರ್ವೋತ್ತಮ ಇರುವದು. ಇವನನ್ನು ಸರಿಗಟ್ಟುವವರು ಯಾರೂ ಇಲ್ಲ. ಜಗತ್ತಿನಲ್ಲಿಯ ದೊಡ್ಡ ದೊಡ್ಡ ಪುರುಷರು ಆತ್ಮನಿಗಾಗಿಯೇ - ಆತ್ಮಪ್ರಾಪ್ತಿಗಾಗಿಯೇ ಬಾಳಿ ಬದುಕಿದರು. ಜಗತ್ತಿನಲ್ಲಿ ದೊಡ್ಡವರೆಂದು ಹೆಸರು ಗಳಿಸಿದವರೆಷ್ಟೋ ಜನ ಆಗಿ ಹೋದರು. ಅವರೆಲ್ಲರೂ ಆತ್ಮ ಶೋಧ ಮಾಡುತ್ತಲೇ ಬಾಳಿದರು. ಇಂಥ ಆತ್ಮನ ಮಹಿಮೆಯನ್ನು ಯಾರಿಗೂ ವರ್ಣಿಸಲಿಕ್ಕೆ ಆಗುವದಿಲ್ಲ. ಹೇಳಲಿಕ್ಕೂ ಸಾಧ್ಯವಾಗುವದಿಲ್ಲ. (೧೧) ಈ ಒಬ್ಬನೇ ಒಬ್ಬನಿರುವ ಅಂತರಾತ್ಮನು ಯುಗಾನುಯುಗಗಳಾಗಿದ್ದರೂ ಕೂಡಾ ಮೂರೂ ಲೋಕಗಳನ್ನು ನಡೆಸುತ್ತಿರುವನು. ಇಂಥ ಆತ್ಮನ ಶೋಧ ಪುನಃ ಪುನಃ ಮಾಡಿರಿ ಅನುಭವ ಹೊಂದಿರಿ(೧೨) ಈ ಜಗತ್ತಿನಲ್ಲಿ ಬಹಳಷ್ಟು ಪ್ರಾಣಿಗಳು ಜನ್ಮ ಹೊಂದುವವು. ಮತ್ತು ಅವು ಜಗತ್ತನ್ನು ಬಿಟ್ಟು ಹೋಗುವವು. ಇವು ಹೇಗೆ ಹೇಗೆ ನಡೆದವು ಅನ್ನುವದನ್ನು ನಾವು ನಮ್ಮ ಮನಕ್ಕೆ ಅನಿಸಿದಂತೆ ವರ್ಣನೆ ಮಾಡಲಿಕ್ಕೆ ಬರುವದು. ಆದರೆ ಇವುಗಳ ವರ್ತನೆಯ ಹಿಂದೆ ಅಂತರಾತ್ಮನ ಪ್ರೇರಣೆ ಇದ್ದಿತು ಅನ್ನುವದನ್ನು ನಾವು ಮರೆಯುವೆವು. (೧೩) ಎಲ್ಲಿ-ಯಾವಲ್ಲಿ ಸೂಕ್ಷ್ಮ ವ ಭರಪೂರ ಘನದಾಟ, ಅಖಂಡ ತುಂಬಿದ ಅಂತರಾತ್ಮಾ ಇಲ್ಲವೋ ಅಲ್ಲಿಯ ಎಲ್ಲವೂ ಚೈತನ್ಯ ಹೀನವಿರುವದು. ಅಂತರಾತ್ಮಾ ಎಲ್ಲಿ ಇರುವದಿಲ್ಲವೋ ಅಲ್ಲಿ ಚೈತನ್ಯ ಹೀನವಾದ ಶುಷ್ಕ ಒಣಗಿದ ಕಟ್ಟಿಗೆ ಉಳಿಯುವದು. ಒಣಗಿದ ಕಟ್ಟಿಗೆಯಂಥ ವಸ್ತುವಿಗೆ ಅಂತರಾತ್ಮನ ಬಗ್ಗೆ ತಿಳಿಯುವದಿಲ್ಲ [ಗೊತ್ತಾಗುವದಿಲ್ಲ]. ಎಲ್ಲಿ ಅಂತರಾತ್ಮಾ ಪ್ರಕಟವಾಗುವನೋ ಅಲ್ಲಿಯೇ ಇವನ ಜ್ಞಾನಮಾಡಿಕೊಳ್ಳಲಿಕ್ಕೆ ಬರುವ ಸಾಧ್ಯತೆ ಇರುವದು. (೧೪) ಈ ಜಗತ್ತಿನಲ್ಲಿ ಆತ್ಮಜ್ಞಾನವು ಎಲ್ಲ ಜ್ಞಾನಗಳಿಗಿಂತ ಸರ್ವ ಶ್ರೇಷ್ಠವಿರುವದು. ಇದರಂತಹದು ಇನ್ನೊಂದು ಯಾವುದೂ ಇಲ್ಲ. ಜಗತ್ತಿನಲ್ಲಿಯ ವಿವೇಕವುಳ್ಳ ಸಜ್ಜನರು ಮಾತ್ರ ಈ ಮಾತಿನ ಸತ್ಯತೆಯನ್ನು ಬಲ್ಲವರಾಗಿ ರುವರು, (೧೫) ಅಂತರಾತ್ಮಾ ಸರ್ವಭೂತಗಳ ಆಚೆಗೆ ಇರುವನು. ಈ ಮಾಯೆಯ ಜಂಜಡ-ಗೊಂದಲದಿಂದ ಮನವನ್ನು ಹಿಂತೆಗೆದುಕೊಂಡು ಆತ್ಮನ ಕಡೆಗೆ ನಿಮ್ಮ ಮನಸವನ್ನು ಹರಿಸಿರಿ [ಹಚ್ಚಿರಿ.] ಮತ್ತು ವಿಚಾರದಿಂದ ಸೂಕ್ಷ್ಮದಲ್ಲಿ ಪ್ರವೇಶಮಾಡಿರಿ: ಪೃಥ್ವಿ, ಆಪ, ತೇಜ ಈ ಮೂರರ ಗಣನೆಯನ್ನು ಪೃಥ್ವೀ ತತ್ವದಲ್ಲಿಯೇ ಮಾಡು ವದು ಯೋಗ್ಯವಿರುವದು. [ಯಾಕೆಂದರೆ ಇವುಗಳಲ್ಲಿ ಪೃಥ್ವೀ ತತ್ವವು ಅಧಿಕವಿರುವದು] ಇರಲಿ. ಈ ಎಲ್ಲ ತತ್ವಗಳಿಗೂ ಮೂಲನಾಗಿರುವ ಅಂತರಾತ್ಮಾ ಎಲ್ಲ ಭೂತಗಳಿಗಿಂತ ಭಿನ್ನನಿರುವನು. [೧೬] ಭಾಗ್ಯಶಾಲಿಯೊಬ್ಬನು ಆತ್ಮಾನಾತ್ಮ ವಿವೇಕಮಾಡಿ ವಾಯುವಿನ ಆಚೆಗೆ [ವಾಯುವನ್ನು ದಾಟಿ] ಹೋಗುವನೋ ಅವನಿಗೆ ಆಗ ಅವನ ಹತ್ತಿರವೇ ಅಂತ ರಾತ್ಮನು ಸಿಗುವನು. [೧೭] ವಾಯು, ಆಕಾಶ, ಗುಣಮಾಯಾಪ್ರಕೃತಿ, ಪುರುಷ ಮತ್ತು ಮೂಲಮಾಯಾ ಇವೆಲ್ಲವೂ ಅತಿ ಸೂಕ್ಷ್ಮವಿರುವವು. ಪೃಥ್ವಿ, ಆಪ, ಮತ್ತು ತೇಜ, ಈ ತತ್ವಗಳಿಗೆ ಅಲ್ಪ ಸ್ವಲ್ಪಾದರೂ ವ್ಯಕ್ತರೂಪ [ಕಣ್ಣಿಗೆ ಕಾಣುವಂತಹದು] ಇದ್ದದ್ದರಿಂದ ಇವುಗಳ ಅನುಭವ ಹೊಂದಲು ಬರುವದು. ಆದರೆ ಇವುಗಳ ನಂತರದಲ್ಲಿಯ ತತ್ವಗಳು [ವಾಯು, ಆಕಾಶ,] ಸೂಕ್ಷ್ಮ ಇದ್ದುದರಿಂದ ಇವುಗಳ ಅನುಭವ ಪಡೆಯುವದು ಮಾತ್ರ ಕಠಿಣವಿರುವದು. ಇವುಗಳ ಆಚೆಗೆ ಅಂತರಾತ್ಮಾ ಇರುವನು. [೧೮] ಮೂಲಮಾಯೆಯಿಂದಾಗಿ ನಿರ್ಮಾಣವಾದ ಈ ಪಂಚಭೂತಗಳ ಅಬ್ಬರದ ಗೊಂದಲದಲ್ಲಿ ಸೂಕ್ಷ್ಮ ಅಂತರಾತ್ಮನ ಬಗ್ಗೆ ವಿಚಾರಮಾಡಲಿಕ್ಕೆ ಯಾರಿಗೂ ಅವಕಾಶವೇ [ಪುರುಸೊತ್ತೇ] ಸಿಗಲೊಲ್ಲದಾಗಿದೆ. ಆದರೆ ಯಾವನಾದರೊಬ್ಬ ಪುಣ್ಯವಂತನು ಸೂಕ್ಷ್ಮದ ವಿಚಾರವನ್ನು ಮಾಡುವನು. ಈ ಪುಣ್ಯ ವಂತನ ಅಜ್ಞಾನ ಅಥವಾ ಸಂದೇಹಗಳು ದೂರವಾಗುವವೆಂಬ ಮಾತು ಮಾತ್ರ ಅತ್ಯಂತ ಸತ್ಯವಿರುವದು. [೧೯]

ಮೂಳಮಾಯಾ ಚೌಥಾ ದೇಹ। ಜಾಲಾ ಪಾಹಿಜೆ ವಿದೇಹ।
ದೇಹಾತೀತ ಹೋಊನ ರಾಹೇ। ಧನ್ಯ ತೋ ಸಾಧು ॥೨೦॥

ವಿಚಾರೇ ಊರ್ಧ್ವ ಚಢತೀ। ತಯಾಸೀ ಚ ಊರ್ಧ್ವಗತೀ।
ಯೇರಾ ಸಕಳಾ ಅಧೋಗತೀ। ಪದಾರ್ಥಜ್ಞಾನೇ ॥೨೧॥

ಪದಾರ್ಥ ಚಾಂಗಲೇ ದಿಸತೀ। ಪರೀ ತೇ ಸರ್ವೇ ಚಿ ನಾಸತೀ।
ಅತೋ ಭ್ರಷ್ಟ ತತೋ ಭ್ರಷ್ಟ ಹೋತೀ। ಲೋಕ ತೇಣೇ ॥೨೨॥

ಯಾಕಾರಣೇ ಪದಾರ್ಥಜ್ಞಾನ। ನಾನಾ ಜಿನಸೀಚಾ ಅನುಮಾನ।
ಸರ್ವ ಸಾಂಡೂನ ನಿರಂಜನ। ಧುಂಡೀತ ಜಾವೇ ॥೨೩॥

ಅಷ್ಟಾಂಗ ಯೋಗ ಪಿಂಡಜ್ಞಾನ। ತ್ಯಾಹೂನ ಥೋರ ತತ್ವಜ್ಞಾನ।
ತ್ಯಾಹೂನ ಥೋರ ಆತ್ಮಜ್ಞಾನ। ತೇ ಪಾಹಿಲೇ ಪಾಹಿಜೇ ॥೨೪॥

ಮೂಳಮಾಯೇಚೆ ಸೇವಟೀ। ಹರಿಸಂಕಲ್ಪ ಮುಳೀ ಉಠೀ।
ಉಪಾಸನಾಯೋಗೇ ಮಿಠೀ। ತೇಥೇ ಘಾತಲೀ ಪಾಹಿಜೇ ॥೨೫॥

ಮಗ ತ್ಯಾಪೈಲಿಕಡೆ ಜಾಣ। ನಿಖಳ ಬ್ರಹ್ಮ ನಿರ್ಗುಣ।
ನಿರ್ಮಳ ನಿಶ್ಚಳ ತ್ಯಾಚೀ ಖೂಣ। ಗಗನಾಸಾರಿಖೀ ॥೨೬॥

ಯೇಥೂನ ತೇಥವರೀ ದಾಟಲೇ। ಪ್ರಾಣಿಮಾತ್ರಾಸ ಭೇಟಲೇ।
ಪದಾರ್ಥ ಮಾತ್ರೀ ಲಿಗಟಲೇ। ವ್ಯಾಪೂನ ಆಹೇ ॥೨೭॥

ತ್ಯಾಐಸೇ ನಾಹೀ ಥೋರ। ಸೂಕ್ಷ್ಮಾಹೂನ ಸೂಕ್ಷ್ಮ ವಿಚಾರ।
ಪಿಂಡ ಬ್ರಹ್ಮಾಂಡಾಚಾ ಸಂಹಾರ। ಹೋತಾ ಕಳೇ ॥೨೮॥

ಮೂಲಮಾಯಾ ಅಂದರೆ ಮೂಲ ಸಂಕಲ್ಪವು. "ನಾನು ಬ್ರಹ್ಮ ಇರುವೆ" ಅನ್ನುವ ಅರಿವು ಇಲ್ಲಿ ಇದಕ್ಕೆ ಇರುವದು. ಇದು ಬ್ರಹ್ಮಾಂಡದ ನಾಲ್ಕನೆಯ ದೇಹವು. ಇದೇ ಪಿಂಡದಲ್ಲಿಯ ಮಹಾಕಾರಣ ದೇಹವು. ಈ ಎರಡೂ ದೇಹಗಳ ಬಗೆಗಿನ ಅಭಿಮಾನ ಅಂದರೆ ನೆನಪು [ಅರಿವು] ಹೋಗಬೇಕು. ಅಂದರೆ ಆಗ ಅಲ್ಲಿ ವಿದೇಹವಾಗಲು ಬರುವದು. ಈ ಪ್ರಕಾರವಾಗಿ [ಈ ರೀತಿಯಿಂದ] ಯಾರು ಸರ್ವದೇಹ ಅಂದರೆ ಪಿಂಡದಲ್ಲಿಯ ನಾಲ್ಕು ದೇಹಗಳು ಮತ್ತು ಬ್ರಹ್ಮಾಂಡದಲ್ಲಿಯ ನಾಲ್ಕು ದೇಹಗಳು ಅಂತೂ ಒಟ್ಟು ಎಂಟು ದೇಹಗಳನ್ನು ದಾಟಿ ಹೋಗಬೇಕು. ಹೀಗೆ ಪಾರಾಗಿ ಬಂದಂಥ ಸಾಧು ಸಂತರು ಧನ್ಯರೆನಿಸುವರು. (೨೦) ಯಾರು ವಿಚಾರದಿಂದ ಅಧಿಕಾಧಿಕ ಹೆಚ್ಚು ಹೆಚ್ಚಾಗಿ ಸೂಕ್ಷ್ಮದಲ್ಲಿ ಹೋಗುವರೋ ಅವರು ಮಾತ್ರ ಅತ್ಯಂತ ಸೂಕ್ಷ್ಮವಾಗಿರುವಂತಹ ಬ್ರಹ್ಮದವರೆಗೂ ಮೇಲಕ್ಕೆ ಹೋಗುವರು. ಅವರಿಗೆ ಬ್ರಹ್ಮದ ವಿಚಾರದಲ್ಲಿ ಸಮರಸ ಉಂಟಾಗಿ ಬ್ರಹ್ಮ ಸ್ಥಿತಿ ಪ್ರಾಪ್ತವಾಗುವದು. ಇನ್ನುಳಿದ ವರೆಲ್ಲರೂ ದೃಶ್ಯ ಪದಾರ್ಥದ ಜ್ಞಾನದಲ್ಲಿ ತೊಡಗುವರು. ಅರ್ಥಾತ್ ಇವರೆಲ್ಲರೂ ಕೆಳಗೇ ತೊಡಕುಹಾಕಿಕೊಂಡು ಬಂಧನದಲ್ಲಿ ಸಿಕ್ಕು, ಇದ್ದಲ್ಲಿಯೇ ಉಳಿದು ಬಿಡುವರು. (೨೧) ದೃಶ್ಯ ಪದಾರ್ಥವು ನೋಡಲಿಕ್ಕೆ ಚಂದವಾಗಿರುವ- ದೇನೋ ನಿಜವೇ ಇರುವದು. ಆದರೆ ಅದೆಲ್ಲ ತೀವ್ರ ನಾಶಹೊಂದುವದು. ನಿಜಸ್ಥಿತಿ ಹೀಗಿರುವದರಿಂದ ದೃಶ್ಯದಲ್ಲಿ ತೊಡಕಿಕೊಂಡು ಇರುವಂಥವರಿಗೆ ಈ ಲೋಕ ಮತ್ತು ಪರಲೋಕ ಎರಡೂ ದೂರಾಗುವವು. ಅತೋಭ್ರಷ್ಟ ತತೋಭ್ರಷ್ಟರಾಗುವರು. (೨೨) ದೃಶ್ಯದಹವ್ಯಾಸದ ನಾದಬಿಡಬೇಕು. ಉಪಾಸನಾದಿಂದ ಮೂಲಮಾಯೆಯ ವರೆಗೆ ಹೋಗಿ ಮುಟ್ಟಬೇಕು. ಮತ್ತು ಅಲ್ಲಿಂದ ನಿಶ್ಚಲ ಪರಬ್ರಹ್ಮನಿಗೆ ಅಪ್ಪಿಕೊಳ್ಳಬೇಕು. ಇದು ವಿವೇಕ ಪ್ರಲಯ ದಿಂದ ಸಾಧಿಸುವದು: ಇದನ್ನು ಸಾಧಿಸುವದಕ್ಕಾಗಿ ಅನೇಕ ದೃಶ್ಯ ಪದಾರ್ಥಗಳ ಜ್ಞಾನದ ಜಿಜ್ಞಾಸೆಯನ್ನು ಬಿಡಬೇಕು. ಅದೇ ಪ್ರಕಾರ ದೃಶ್ಯ ವಿಷಯಕ್ಕೆ ಸಂಬಂಧದ ಅನೇಕ ಪ್ರಕಾರದ ಕಲ್ಪನೆ-ತರ್ಕ ಇತ್ಯಾದಿಗಳನ್ನು ಬದಿಗೆ ಸರಿಸಬೇಕು. ಮತ್ತು ಆಶೆ, ಆಕಾಂಕ್ಷೆ, ಹವ್ಯಾಸ, ಇತ್ಯಾದಿ ಎಲ್ಲವನ್ನೂ ಬಿಟ್ಟುಕೊಟ್ಟು ನಿಶ್ಚಿಂತರಾಗಿ ನಿರುಬಳರಾಗಿ ಸ್ವಚ್ಛ ಶುದ್ಧ ಬ್ರಹ್ಮವನ್ನು ಶೋಧಿಸಬೇಕು. (೨೩) ಅಷ್ಟಾಂಗ ಯೋಗ ಮತ್ತು ಪಿಂಡ ಜ್ಞಾನ ಇವುಗಳು ಜ್ಞಾನ ವಿಷಯುಗಳಿರುವದು ನಿಜವೇ ಆದರೂ ಇವಕ್ಕಿಂತ ತತ್ವಜ್ಞಾನವು ಹೆಚ್ಚು ಶ್ರೇಷ್ಠವಿರುವದು. ಮತ್ತು ತತ್ವಜ್ಞಾನಕ್ಕಿಂತ ಆತ್ಮಜ್ಞಾನವು ಅತ್ಯಂತ ಹೆಚ್ಚು ಶ್ರೇಷ್ಠವಿರುವದು. ಆದ್ದರಿಂದ ಮನುಷ್ಯನು ಆತ್ಮಜ್ಞಾನವನ್ನು ಅವಶ್ಯವಾಗಿ ಮಾಡಿಕೊಳ್ಳಬೇಕು.(೨೪) ತತ್ವಶೋಧ ಮಾಡುತ್ತ ಮಾಡುತ್ತ ಮೂಲಮಾಯೆಯ ಮೂಲದವರೆಗೂ ಹೋಗಬೇಕು. ಆಗ ಅಲ್ಲಿ ಪ್ರಥಮ ಸ್ಫುರಣವು ಕಂಡುಬರುವದು. ಈ ಪ್ರಥಮ ಸ್ಫುರಣ ಸಂಕಲ್ಪಕ್ಕೆ ಉಪಾಸನೆಯ ಸಹಾಯದ ಬೆಂಬಲದ ಬಲದಿಂದ ಅಪ್ಪಿಕೊಳ್ಳಬೇಕು. ಆಲಿಂಗನ ಮಾಡಿಕೊಳ್ಳಬೇಕು. ಉಪಾಸನೆಯಲ್ಲಿ ನಾನು ಉಪಾಸಕ ಮತ್ತು ಅಂತರಾತ್ಮನು ಉಪಾಸ್ಯ ದೇವತೆಯಾಗಿರುತ್ತಾನೆ. ನಾವು ಅಂತರಾತ್ಮನೊಂದಿಗೆ ಏಕರೂಪ-ತದಾಕಾರ ಆದ ಕೂಡಲೇ ಉಪಾಸನೆಯು ಫಲದ್ರೂಪವಾಯಿತು. ಉಪಾಸನೆಯು ಫಲಿಸಿತು ಎಂದು ತಿಳಿಯಬೇಕು. [ಹರಿ ಸಂಕಲ್ಪದೊಂದಿಗೆ ಸಾಧಕನ ಚಿತ್ತವು ಏಕರೂಪವಾಯಿತು-ಸಮಾಧಾನ ಲಭಿಸಿತು] (೨೫) ಅಂತರಾತ್ಮನ ಆಚೆಗೆ ಅತ್ಯಂತ ಕೇವಲ ಏಕರಸ, ನಿರ್ಗುಣ, ನಿರ್ಮಲ ಮತ್ತು ನಿಶ್ಚಲ ಪರಬ್ರಹ್ಮ ಇರುವದು. ಇದು ಆಕಾಶದಂತೆ ಇರುವದು. ಇದೇ ಆದರ ಅಂದರೆ ಪರ ಬ್ರಹ್ಮದ ಗುರುತಾಗಿರುವದೆಂಬುದನ್ನು ತಿಳಿಯಿರಿ. (೨೬) ಇಲ್ಲಿಂದ ಅಲ್ಲಿಯವರೆಗೆ ಈ ಬ್ರಹ್ಮವು ಸರ್ವತ್ರವೂ ದಟ್ಟ ವಾಗಿ ತುಂಬಿದೆ. ಎಲ್ಲ ಪ್ರಾಣಿಗಳಿಗೆ ಇದು ಸರ್ವಕಾಲವೂ ಭೆಟ್ಟಿಯಾಗುವದು. ಸರ್ವ ಪದಾರ್ಥಗಳಿಗೆ ಇದು ಒಳಗೂ ಹೊರಗೂ ಹತ್ತಿಕೊಂಡು ಹೊಂದಿಕೊಂಡೇ ಇರುವದು. ಯಾಕೆಂದರೆ ಇದು ಸರ್ವತ್ರದಲ್ಲಿಯೂ ಎಲ್ಲ ಸ್ಥಳದಲ್ಲಿಯೂ ವ್ಯಾಪ್ತವಿರುವದು. ತುಂಬಿರುವದು. (೨೭) ಈ ಬ್ರಹ್ಮನಿಗಿಂತ ಎರಡನೆಯದಾವುದೂ ಶ್ರೇಷ್ಠವಾಗಿಲ್ಲ. ಇದು ಸೂಕ್ಷ್ಮ ಕ್ಕಿಂತ ಸೂಕ್ಷ್ಮವಿರುವದು. ಅತ್ಯಂತ ಸೂಕ್ಷ್ಮ ವಿಚಾರದಿಂದ ಪಿಂಡ ಬ್ರಹ್ಮಾಂಡಗಳ ಸೂಕ್ಷ್ಮವು ನಿರಾಸವಾದರೆ-ಪರಿಹಾರ ವಾದರೆ ಎಲ್ಲ ಸಂಶಯುಗಳು ದೂರಾಗುವವು. ಮತ್ತು ಆಗ ಈ ಬ್ರಹ್ಮವು ನಿಮಗೆ ತಿಳಿಯುವದು. (೨೮)

ಅಥವಾ ಪಿಂಡ ಬ್ರಹ್ಮಾಂಡ ಅಸತಾ । ವಿವೇಕಪ್ರಳಯೆ ಪಾಹೋ ಜಾತಾ ।
ಶಾಶ್ವತ ಕೋಣ ಹೇ ತತ್ವತಾ । ಉಮಜೋ ಲಾಗೇ ॥೨೯॥

ಕರೂನ ಅವಘಾ ತತ್ವಝಾಡಾ । ಸಾರಾಸಾರಾಚಾ ನಿವಾಡಾ ।
ಸಾವಧಪಣೇ ಗ್ರಂಥ ಸೋಡಾ । ಸುಖಿನಾವೇ ॥೩೦॥

ಇತಿ ಶ್ರೀ ದಾಸಬೋಧೇ ಗುರುಶಿಷ್ಯ ಸಂವಾದೇ
'ಶ್ರವಣ ನಿರೂಪಣ'ನಾಮ ಸಮಾಸ ತೃತೀಯ ॥

● ●

ಅಥವಾ ಪಿಂಡ ಬ್ರಹ್ಮಾಂಡವು ಹೇಗಿತ್ತೋ ಹಾಗೆಯೇ ಉಳಿದು ವಿವೇಕ ಪ್ರಳಯದಿಂದ ನೋಡಲಿಕ್ಕೆ ಹತ್ತಿದರೆ ಆಗ ಖರೇ ಶಾಶ್ವತ ಏನಿರುವದು ಅನ್ನುವ ಅನುಭವ ಅಥವಾ ತಿಳುವಳಿಕೆಗೆ ಬರಲು ಪ್ರಾರಂಭವಾಗುವದು. ಹೊಳೆಯು ಹತ್ತುವದು. [೨೯] ಸರ್ವತತ್ವದ ಶೋಧಮಾಡಿ ತಿಳಿದು ಅದನ್ನು ನಿರಾಸಮಾಡಬೇಕು. ದೂರ ಸರಿಸಬೇಕು. ಖಂಡಿಸಿ ಕೈ ಬಿಡಬೇಕು. ಸಾರಾಸಾರ ವಿಚಾರಮಾಡಿ ಅದರೊಳಗಿಂದ ಸಾರ ಸತ್ಯವನ್ನು ಹುಡುಕಿ ತೆಗೆಯಬೇಕು. ಮತ್ತು ಅದರ ಅನುಭವ ಪಡೆಯಬೇಕು. ಆಮೇಲೆ ಸದ್ಗ್ರಂಥವನ್ನು ಸಾವಧಾನದಿಂದ ಬದಿಗೆ ಸರಿಸಿ ಸುಖಿಗಳಾಗಿರಿ. ಸಮಾಧಾನ ಹೊಂದಿರಿ. [೩೦]

ಶ್ರೀ ದಾಸಬೋಧದ ಹದಿನೇಳನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ಶ್ರವಣ ನಿರೂಪಣ ನಾಮ"ವೆಂಬ ಹೆಸರಿನ ಮೂರನೇ ಸಮಾಸವು ಮುಗಿದುದು.

● ●

ದಶಕ ಸಪ್ತದಶ : ಸಮಾಸ ಚತುರ್ಥ : ಅನುಮಾನ ನಿರಸನ (ನುಡಿ ೩೧)

॥ಶ್ರೀರಾಮಚಂದ್ರ॥ ಬಹುತ ಜನಾಸೀ ಉಪಾಯೋ ।
ವಕ್ತಯಾಸ ಪುಸತಾ ತ್ರಾಸೋ ನಯೋ ।
ಬೋಲತಾ ಬೋಲತಾ ಅನ್ವಯೋ । ಸಾಂಡೂ ನಯೋ ॥೧॥

ಶ್ರೋತ್ಯಾನೇ ಆಶಂಕಾ ಘೇತಲೀ । ತೇ ತತ್ಕಾಳ ಪಾಹಿಜೇ ಫೇಡಿಲೀ ।
ಸ್ವಗೋಷ್ಟೀನೇ ಸ್ವಗೋಷ್ಟೀ ಪೇಚಲೀ । ಐಸೇ ನ ವ್ಹಾವೇ ॥೨॥

## ದಶಕ ೧೭. ಸಮಾಸ ೪. ಅನುಮಾನ ನಿರಸನ (ನುಡಿ ೩೧)

ನಮ್ಮ ದೇಶದಲ್ಲಿ ಅಧ್ಯಾತ್ಮವು ಬಹಳ ಸೋವಿಯಲ್ಲಿ ಅಗ್ಗದಲ್ಲಿ ಸಿಗುವದು. ಅಂತೆಯೇ ಇದರಲ್ಲಿ ಬಹಳಷ್ಟು ಕಲಬೆರಕೆಯು ಮಿಸಳ, ಮಿಶ್ರಣ ಕಂಡುಬರುವದು. ಅಧ್ಯಾತ್ಮದ ಯಾವ ಗ್ರಂಥವಿದ್ದರೂ ಅದರಲ್ಲಿ ತತ್ವಜ್ಞಾನ ಇದ್ದೇ ಇರುತ್ತದೆ. ಮತ್ತು ತತ್ವಜ್ಞಾನ ತಿಳಿಯಲಿಕ್ಕೆ ಮತ್ತು ತಾವು ತಿಳಿದು-ತಿಳಿಯುವಂತೆ ಹೊರಗೆ ಅಂದರೆ ಬಹುಜನ ಸಮುದಾಯದ ಮುಂದೆ ಹೇಳಲಿಕ್ಕೆ ಬುದ್ಧಿಯು ಚುರುಕಾಗಿ ಉತ್ತಮವಾಗಿ ತಯಾರ ಇರಬೇಕು. ಅಥವಾ ತಯಾರ ಇಡಬೇಕು. ಆದರೆ ಈ ಮಾತು ಮನುಷ್ಯ ಸ್ವಾಭಾವಿಕವಾಗಿ ಸಹಜ ರೀತಿಯಲ್ಲಿ ಮರೆಯುವನು. ಅಂದ ಮೇಲೆ ಇಂಥ ಅನಧಿಕಾರಿ ಮನುಷ್ಯನು ಅಧ್ಯಾತ್ಮ ಗ್ರಂಥ ಹೇಳಹತ್ತಿದನೆಂದರೆ ಅನೇಕ ತಪ್ಪುಗಳು ಇವನಿಂದ ಆಗುವವು. ಅನೇಕ ಘೋಟಾಳೆ, ಗೊಂದಲ, ತೊಡಕುಗಳು ಉತ್ಪನ್ನವಾಗುವವು. ಇಂಥದನ್ನು ಅನಧಿಕಾರಿಗಳು-ಹಸಿಬಿಸಿ-ಅರ್ಧ ಮುಗ್ಧ ಜನರು ಮಾಡಬಾರದು. ಎಂದು ಶ್ರೀ ಸಮರ್ಥರು ಈ ಸಮಾಸದಲ್ಲಿ ಕಟ್ಟುನಿಟ್ಟಾಗಿ ಎಚ್ಚರಿಕೆ ಹೇಳಿರುತ್ತಾರೆ. ಜನರಿಗೆ ಹೇಳುತ್ತಿರುವಾಗ ನಿಮ್ಮ ಹೇಳಿಕೆಯಲ್ಲಿ ಮತ್ತು ವಿಷಯ ಮಂಡಿಸುವಲ್ಲಿ ಹೆಚ್ಚು ಕಡಿಮೆ ಅಥವಾ ಘೋಟಾಳೆ [ಗೊಂದಲ] ಇರಬಾರದು. ಯಾವ ಶಬ್ದವನ್ನು ಉಪಯೋಗಿಸಬೇಕಾಗಿದೆಯೋ ಅದರ ಸ್ವರೂಪವನ್ನು ಸರಿಯಾಗಿ ತಿಳಿದು ಉಪಯೋಗಿಸಬೇಕು. ಸುಮ್ಮನೇ ಇಲ್ಲದ [ಜಾಬಾಳ] ರಗಳೆಯನ್ನು ಮಾಡಬಾರದು, ಹಚ್ಚಬಾರದು, ಹರಟಬಾರದು. ಹೊಸದಾಗಿ ಹೇಳುವವನು ಯಾವುದನ್ನು ಮತ್ತು ಏನನ್ನು ಹೇಳುವನೋ ಅದರ ಪ್ರಚೀತಿ [ಅನುಭವ] ಅವನಿಗೆ ಮೊದಲು ಬಂದಿರಬೇಕು. ಆಗಿರಬೇಕು. ಇಲ್ಲದಿದ್ದರೆ ಹೇಳುವವನು ಸರ್ವ ಬ್ರಹ್ಮವಾದವನ್ನು ಮಂಡಿಸುವನು-ಆದರೆ ಅವನಿಗೆ ಇದರ ಅನುಭವ ಏನೂ ಇರುವದಿಲ್ಲ. ಇಂಥ ಪರಿಸ್ಥಿತಿ ಇರುವದು ಒಳಿತಲ್ಲ. ಹೇಳುವವನೂ ಯಾವಾಗಲೂ ಬುದ್ಧಿಯ ಭೂಮಿಕೆಯ ಮೇಲಿಂದಲೇ ಹೇಳುತ್ತಿರುವನು. ಆದ್ದರಿಂದ ಇವನು ಅಂದರೆ ಹೇಳುವವನು ಮೌನ ಗರ್ಭ ಬ್ರಹ್ಮವನ್ನು ವೇದ ಶಾಸ್ತ್ರಗಳ ಗುಹ್ಯವನ್ನು ಅನುಮಾನದ ಕಕ್ಷೆಯಲ್ಲಿ ತರ್ಕದ ಕಲ್ಪನೆಯ ಅಳವಿನಲ್ಲಿ ತಂದುಬಿಡಬೇಕು. ಕೇಳುವವನೂ ಕೂಡಾ ಎಲ್ಲರದನ್ನೂ ಅಂದರೆ ಹೇಳುವವರೆಲ್ಲರದನ್ನೂ ಸ್ವೀಕರಿಸಬಾರದು. ಕೇಳಬಾರದು. ಸ್ವತಃ ಅನುಭವ ಪಡೆದು ಯಾರು ಹೇಳುವರೋ ಅವರದನ್ನಷ್ಟೇ ಕೇಳಬೇಕು. ಇಂಥ ಅನುಭವವುಳ್ಳ ಜನರು ಹೇಳಿದ್ದನ್ನು ಕೇಳಿದೆವೆಂದರೆ ಆತ್ಮ ಸಾಕ್ಷಾತ್ಕಾರದ ಗುರುತು ಮನದಲ್ಲಿ ಕೂಡಲೇ ನಾಟುವದು. ಅನುಭವ ಹೊಂದಿದ ಅಧ್ಯಾತ್ಮವನ್ನು ಹೇಳುವವರು ದೊರೆಯುವದು ಮಾತ್ರ ಕಠಿಣ. ಸುಲಭವಾಗಿ ದೊರಕುವದಿಲ್ಲ. ಅಂಥವರು ಮೇಲಿಂದ ಮೇಲೆ ದೊರಕಲಿ ಎಂದು ಶ್ರೀ ಸಮರ್ಥರಲ್ಲಿ ಪ್ರಾರ್ಥಿಸೋಣ.

### ದಶಕ ೧೭. ಸಮಾಸ ೪. ಅನುಮಾನ ನಿರಸನ (ನುಡಿ ೩೧)

ಅಧ್ಯಾತ್ಮವನ್ನು ಹೇಳುವ ಮನುಷ್ಯನು. ಸ್ವಚ್ಛ, ಶುದ್ಧ ಬುದ್ಧಿಯವನಿರಬೇಕು. ಇವನ ವಿಚಾರದಲ್ಲಿ ಘೋಟಾಳೆ, ಗೊಂದಲ ಇರಬಾರದು. ಇವನು ಪರಸ್ಪರ ವಿರೋಧದ ಮಾತುಗಳನ್ನು ಆಡಬಾರದು. ಹೇಳುವವನು ಯಾವ ಶಬ್ದವನ್ನು ಉಪಯೋಗಿಸುವನೋ ಅದರ ಸರಿಯಾದ ಕಲ್ಪನೆಯು ಮಾಹಿತಿಯು ಸ್ಪಷ್ಟವಾಗಿ ಅವನಿಗೆ ಗೊತ್ತಿರಬೇಕು ಸ್ವತಃದ ಅನುಭವ ಮತ್ತು ಬುದ್ಧಿಯು ತಯಾರಿ ಈ ಎರಡನ್ನೂ ಸಾಧಿಸಿಕೊಂಡ ನಂತರ ಅಂದರೆ ಅನುಭವ ಯುಕ್ತಜ್ಞಾನ ಸಾಧ್ಯ ಮಾಡಿಕೊಂಡೇ ಆ ಮೇಲೆ ಜನರಿಗೆ ಅಧ್ಯಾತ್ಮವನ್ನು ಹೇಳುವದಕ್ಕಾಗಿ ಹೊರಬೀಳಬೇಕು. ಲೋಕದ ಜನರಲ್ಲಿ ಜನತಾ ಜನಾರ್ದನರಲ್ಲಿ ಅಧ್ಯಾತ್ಮದ ಪ್ರಸಾರ ಮಾಡುವದರಿಂದ ಬಹಳಷ್ಟು ಜನರಿಗೆ ಲಾಭವಾಗುವದು. ಜನರು ಅನೇಕ ಮತ್ತು ನಾನಾ ತರಹದ ಪ್ರಶ್ನೆಗಳನ್ನು ವಿಚಾರಿಸುವರು. ಹೀಗೆ ಕೇಳಿದರೆ ವಕ್ತಾನು [ಜ್ಞಾನಿಯು] ಸಿಟ್ಟಿಗೇಳಬಾರದು. ಸಿಡುಕುತನದಿಂದ ಉತ್ತರಕೊಡಲು ಹೋಗಬಾರದು. ಕೇಳಿದ ಪ್ರಶ್ನೆಗೆ ಉತ್ತರ ಕೊಡುವಾಗ ಹಿಂದು ಮುಂದಿನ ಸಂಬಂಧಕ್ಕೆ ಬಾಧೆ ಬರದಂತೆ ಉತ್ತರವನ್ನು ಸಮಾಧಾನದಿಂದ ವಿವರವಾಗಿ ತಿಳಿಸಿ ಹೇಳಬೇಕು. ಹೇಳುವಾಗ ಪ್ರಸನ್ನ ಮುಖ ಮುದ್ರೆ ಇರಬೇಕು. (೧) ಯಾರಾದರೂ ಒಬ್ಬ ಶ್ರೋತಾನು ಪ್ರಶ್ನೆಯನ್ನು ಕೇಳಿದರೆ ಅದಕ್ಕೆ ಸರಿಯಾದ ಉತ್ತರವನ್ನು ತಡಮಾಡದೇ ಕೊಡಬೇಕು. ಅವನ ಸಂಶಯ ಶಂಕಾ ಪರಿಹರಿಸಬೇಕು. ನೀವು ಇಲ್ಲಿ ಮಾತನಾಡಿದ್ದಕ್ಕೂ ಮತ್ತು ಇನ್ನೊಂದು ಕಡೆಗೆ ಮಾತನಾಡಿದ್ದಕ್ಕೂ ವಿರೋಧ ಬರದಂತೆ ನಿಮ್ಮ ಮಾತುಗಳು ಇರಲಿ. ಒಟ್ಟಿನಲ್ಲಿ ನೀವು ಎಲ್ಲಿಯೇ ಮಾತನಾಡಲಿ, ಅಲ್ಲಿಯ ಎಲ್ಲ ಮಾತುಗಳಲ್ಲಿ ಮೇಳವಿರಬೇಕು. (೨)

ಪುಢೇ ಧರಿತಾ ಮಾಗೇ ಪೇಚಲಾ । ಮಾಗೇ ಧರಿತಾ ಪುಢೇ ಉಡಾಲಾ ।
ಐಸಾ ಸಾಂಪಡತ ಚಿ ಗೇಲಾ । ಠಾಈ ಠಾಈ ॥೩॥

ಪೋಹಣಾರಚಿ ಗುಚಕ್ಯಾ ಖಾತೋ । ಜನಾಸ ಕೈಸಾ ಕಾಢೂ ಪಾಹಾತೋ ।
ಆಶಯು ಲೋಕಾಚಾ ರಾಹಾತೋ । ಠಾಈ ಠಾಈ ॥೪॥

ಆಪಣ ಚಿ ಬೋಲಿಲಾ ಸಂವ್ಹಾರ । ಆಪಣ ಚಿ ಬೋಲಿಜೆ ಸರ್ವಸಾರ।
ದುಸ್ತರ ಮಾಯೇಚಾ ಪಾರ । ಟಾಕಿಲಾ ಪಾಹಿಜೇ ॥೫॥

ಜೇ ಜೇ ಸೂಕ್ಷ್ಮ ನಾಮ ಘ್ಯಾವೇ । ತ್ಯಾಚೇ ರೂಪ ಬಿಂಬಲೂನ ದ್ಯಾವೇ ।
ತರೀಚ ವಕ್ತ್ಯಾ ಮ್ಹಣಾವೇ । ವಿಚಾರವಂತ ॥೬॥

ಬ್ರಹ್ಮ ಕಸೇ ಮೂಳಮಾಯಾ ಕೈಸೀ । ಅಷ್ಟಧಾಪ್ರಕೃತಿ ಶಿವಶಕ್ತಿ ಕೈಸೀ ।
ಶಡಗುಣೇಶ್ವರಾಚೀ ಸ್ಥಿತಿ ಕೈಸೀ । ಗುಣಸಾಮ್ಯಾಚೀ ॥೭॥

ಅರ್ಧನಾರೀ ನಟೇಶ್ವರ । ಪ್ರಕೃತಿಪುರುಷಾಚಾ ವಿಚಾರ ।
ಗುಣಕ್ಷೋಭಿಣೀ ತದನಂತರ । ತ್ರಿಗುಣ ಕೈಸೇ ॥೮॥

ಪೂರ್ವಪಕ್ಷ ಕೋಠೂನ ಕೋಠವರೀ । ವಾಚ್ಯಾಂಶ ಲಕ್ಷ್ಯಾಂಶಾಚೀ ಪರೀ ।
ಸೂಕ್ಷ್ಮ ನಾನಾ ವಿಚಾರ ಕರೀ । ಧನ್ಯ ತೋ ಸಾಧು ॥೯॥

ನಾನಾ ಪಾಲ್ಹಾಳೀ ಪಡೇನಾ । ಬೋಲಿಲೇ ಚಿ ಬೋಲಾವೇನಾ ।
ಮೌನ್ಯಗರ್ಭ ಅನುಮಾನಾ । ಆಣೂನ ಸೋಡೀ ॥೧೦॥

ತಿಳಿಯಿರಿ, ಒಬ್ಬ ವಕ್ತಾ ಭಾಷಣಮಾಡಿದನು. ಅದರಲ್ಲಿ ಅವನು ಪರಸ್ಪರ ವಿರೋಧ ಉಂಟಾಗುವಂತಹ ವಿಧಾನಗಳನ್ನು ಹೇಳಿದನು. ಆ ನಂತರ ತಾನೇ ಮಾತನಾಡಿದ ವಿಧಾನದ ಮೇಲೆ ಆಕ್ಷೇಪ ಎತ್ತಿದನು.ಹೀಗಾದರೆ ತನ್ನವೇ ಆದ ಎರಡೂ ಮಾತುಗಳಲ್ಲಿ ಉಂಟಾಗುವ ವ್ಯತ್ಯಾಸದ ಪೇಚಿನಲ್ಲಿ ತಾನೇ ಬಿದ್ದು ಒದ್ದಾಡಬೇಕಾಗುವದು. ಒಟ್ಟಿನಲ್ಲಿ ತನ್ನದೇ ಒಂದು ಮಾತಿಗೆ ತನ್ನದೇ ಆದ ಮತ್ತೊಂದು ಮಾತಿನಿಂದ ವ್ಯತ್ಯಾಸವಾಗಬಾರದು. ಪರಸ್ಪರ ವಿರೋಧಿ ಮಾತುಗಳನ್ನಾಡಿ ವಕ್ತಾ ಪೇಚಿನಲ್ಲಿ ಸಿಗಬಾರದು. ಒಮ್ಮೆ ಖರೇ ಎಂದು ಹೇಳಿದ್ದು ಮತ್ತೊಂದು ಕಡೆಗೆ ಅದೇ ಮಾತು ಸುಳ್ಳು ಅಥವಾ ನಿರರ್ಥಕ ಎಂದು ಹೇಳಿದರೆ ಪೇಚಿನಲ್ಲಿ ಸಿಗದೇ ಹೇಗಿರುವನು ? ಆದ್ದರಿಂದ ಹೀಗಾಗದಂತೆ ಮಾತನಾಡಬೇಕು. ಮಾತನಾಡಿದಂತೆ ನಡೆಯಬೇಕು. ಮುಂದಿನದನ್ನು ಹಿಡಿದರೆ ಹಿಂದಿನ ಪೇಚಿನಲ್ಲಿ ಸಿಕ್ಕುಬೀಳುವನು. ಹಿಂದಿನದನ್ನು ಹಿಡಿದರೆ ಮುಂದಿನದು ಹಾರಿಹೋಗುವದು. ವ್ಯರ್ಥವೆನಿಸುವದು. ಹೀಗೆ ಮೇಲಿಂದ ಮೇಲೆ ಆದರೆ ವಕ್ತಾ ಅಡಚಣೆಯು ಪೇಚಿನಲ್ಲಿ ಗೊಂದಲದಲ್ಲಿ ಸಿಗುವನು. [ಇವನ ಪಾಂಡಿತ್ಯವು ಕಾಸಿಗೆ ಪಂಚೇರಾಗಿ ಹೋಗುವದು. ಅಂದರೆ ಏನೂ ಕಿಮ್ಮತ್ತು ಇಲ್ಲದಂತಾಗುವದು.] (೩) ಈಸ ಬಲ್ಲವನೇ ಸ್ವತಃ ಮುಳುಗುತ್ತಿದ್ದರೆ ಅರ್ಥಾತ್ ಗುಟುಕು ನೀರು ಕುಡಿಯುತ್ತಿದ್ದರೆ ಮುಳುಗುತ್ತಿರುವ ಇತರರನ್ನು ಅವನೇನೂ ನೀರಿನಿಂದ ಪಾರುಮಾಡಲಾರನು. ಅಂದರೆ ಅಂಥವನಿಂದ ಪಾರುಮಾಡುವದು ಶಕ್ಯವಿಲ್ಲ. ಇದರಂತೆಯೇ ವಿಷಯವನ್ನು ತಾನೇ ಚನ್ನಾಗಿ ತಿಳಿದುಕೊಂಡಿರದವನ ಭಾಷಣದಲ್ಲಿ ವ್ಯತ್ಯಾಸ ಘೋಟಾಳೆ ಇದ್ದೇ ಇರುವದು. ಇಂಥ ಭಾಷಣವನ್ನು ಅಲ್ಲಲ್ಲಿ ಕೇಳಿದವರ ಸಂಶಯಗಳು ಹೇಗೆ ನಿವಾರಣೆಗೊಂಡಾವು ? ಅರ್ಥಾತ್ ನಿವಾರಣೆಗೊಳ್ಳುವದಿಲ್ಲ. (೪) ಒಂದು ಕಡೆಗೆ ಯಾವತ್ತೂ ನಾಶವಂತ ಇರುವದೆಂದು ನಾವು ಅನ್ನುವೆವು. ಅಥವಾ ಹೇಳುವೆವು. ಮತ್ತು ಇನ್ನೊಂದು ಕಡೆಗೆ ಎಲ್ಲವೂ ಸಾರವಿರುವದು, ಸತ್ಯ ಶ್ರೇಷ್ಠವಿರುವದು ಇದು ತೆಗೆದುಕೊಳ್ಳುವದಕ್ಕೆ ಯೋಗ್ಯವಿರುವದು ಎಂದು ನಾವೇ ಹೇಳುವೆವು. ಅರ್ಥಾತ್ ವಕ್ತಾನ ಇಂಥ ಮಾತುಗಳಿಂದ ಘೋಟಾಳೇ [ತೊಂದರೆ] ಉಂಟಾಗುವದು. ಫಜೀತಿಗಿಟ್ಟುಕೊಳ್ಳುವದು ಆದರೆ ವಕ್ತಾನ ಭಾಷಣ ನಿಜವಾಗಿ ಹೇಗಿರಬೇಕೆಂದರೆ ಇವನ ಭಾಷಣದ ಯೋಗದಿಂದ ಅತ್ಯಂತ ಕಠಿಣವಾದ ಮತ್ತು ಪಾರಾಗಿ ಹೋಗಲು ತಿಳಿಯದ ಮಾಯಾ ನದಿಯಿಂದ ಸಹಜವಾಗಿ ಈಸಿ ಪಾರಾಗಲು ಬರುವಂತಿರಬೇಕು. (೫) ಯಾವ ಯಾವ ಸೂಕ್ಷ್ಮ ತತ್ವಗಳಿರುವವೋ ಅವುಗಳನ್ನು ಕ್ರಮವಾಗಿ ಕೇಳಿ ತಿಳಿದು ಅವುಗಳ ಸ್ವರೂಪವನ್ನು ವಿವರವಾಗಿ ಸ್ಪಷ್ಟವಾಗಿ ಜನರಿಗೆ ತಿಳಿಸಿಕೊಡಬೇಕು. ಹೀಗೆ ಮಾಡಿದರೆ ಮಾತ್ರ ವಿಚಾರವಂತ ಭಾಷಣಕಾರನು [ವಕ್ತಾ] ಎಂದು ಅನ್ನಿಸಿಕೊಳ್ಳುವನು. (೬) ಉದಾ: ಬ್ರಹ್ಮ ಹೇಗೆ ಇರುವನು ? ಮೂಲಮಾಯಾ ಹೇಗಿರುವಳು ? ಅಷ್ಟಧಾ ಪ್ರಕೃತಿ ಮತ್ತು ಶಿವ-ಶಕ್ತಿ ಹೇಗಿರುವವು ? ಷಡ್ಗುಣೇಶ್ವರನ, ಷಡ್ಗುಣೈಶ್ವರ್ಯ ಸಂಪನ್ನನಾದ ಈಶ್ವರ, ಮತ್ತು ಗುಣ ಸಾಮ್ಯ-ಗುಣಮಾಯೆ ಗುಣ ಕ್ಷೋಭಿಣಿಯ ಸ್ಥಿತಿ ಹೇಗಿರುವದು ? (೭) ಅರ್ಧನಾರೀ ನಟೇಶ್ವರ, ಮತ್ತು ಪ್ರಕೃತಿ-ಪುರುಷ ಇವುಗಳ ವಿಚಾರ ಎಂಥದು?ಗುಣ ಕ್ಷೋಭಿಣಿ ಮತ್ತು ಆಮೇಲೆ [ಅನಂತರ] ತ್ರಿಗುಣ ಹೇಗಿರುವವು ? (೮) ಪೂರ್ವ ಪಕ್ಷದ ಕ್ಷೇತ್ರದಮೇರೆ, ಎಲ್ಲಿಂದ ಎಲ್ಲಿಯವರೆಗೆ ಇರುವದು? ವಾಚ್ಯಾಂಶ ಮತ್ತು ಲಕ್ಷ್ಯಾಂಶ ಇವುಗಳ ಪ್ರಕಾರಗಳು ಯಾವವು? ಈ ರೀತಿಯ ಅನೇಕ ಸೂಕ್ಷ್ಮ ವಿಚಾರವನ್ನು ಯಾರು ಮಾಡುವರೋ ಮತ್ತು ಹೇಳುವರೋ ಅಂಥ ಸಾಧು ಸಂತ ಶರಣರು ಧನ್ಯರಿರುವರು.(೯)ಚತುರನಾದ ಅಧ್ಯಾತ್ಮದ ವಕ್ತಾ. ಸುಮ್ಮನೇ ಇಲ್ಲದ ರಗಳೆ ಪುರಾಣ ತೆಗೆದು ಬೇಸರ ತರಿಸುವದಿಲ್ಲ. (ಇಲ್ಲದ [ಜಾಬಾಳದ] ರಗಳೆ ಹಚ್ಚುವದಿಲ್ಲ) ಇವನು ಒಮ್ಮೆ ಒಂದು ಸಲ ಏನನ್ನು ಮಾತನಾಡುವನೋ ಅವನ್ನೇ ಪುನಃ ಪುನಃ ಮಾತನಾಡುವದಿಲ್ಲ. ಆದರೆ ವಾಣಿಗೆ [ಮಾತಿಗೆ] ಎಲ್ಲಿ ಮೌನ ಬೀಳುವದೋ ಅಥವಾ ಬರುವದೋ ಇಂಥ ಬ್ರಹ್ಮಸ್ವರೂಪವನ್ನು ತಮ್ಮ ವಕ್ತೃತ್ವದಿಂದ ಇವನು ಅಂದರೆ ವಕ್ತಾನು ಶ್ರೋತಾಜನರ ಕಲ್ಪನೆಯಲ್ಲಿ ತಂದುಬಿಡುವನು. [ಮೌನ ಗರ್ಭ, ಮೌನ ಸ್ಥಿತಿಯ ಅಂತರ್ಭಾಗವಾದ ಬ್ರಹ್ಮ ವಸ್ತು.ಮೌನ = [ಅನಿರ್ವಾಚ್ಯ] ಗರ್ಭಾಚಾ = ವೇದಶಾಸ್ತ್ರ. ಸಂತ ಇವರ ಅನುಭವದ ಗುಹ್ಯಸಾರ ಬ್ರಹ್ಮದ ಅನುಮಾನ = [ಪರೋಕ್ಷಜ್ಞಾನ]ಆಗುವಂತೆ ಮಾಡುವನು.] [ಮೌನ = [ನಿಶ್ಶಬ್ಧತೆ,ಅನಿರ್ವಚನೀಯಂತೆ,ತಿಚಾಗಾಭಾ ಅಂದರೆ ಬ್ರಹ್ಮ] ವೇದಶಾಸ್ತ್ರಗಳ ಪರಮಗುಹ್ಯ ಅಂದರೆ ಬ್ರಹ್ಮ-ಪರಬ್ರಹ್ಮ] (ಆದ ಅನುಭವ ಹೇಳಲಿಕ್ಕೆ ಶಬ್ದಗಳೇ ಇರುವದಿಲ್ಲ ಅದೇ ಮೌನ ಗರ್ಭ = ಪರಬ್ರಹ್ಮ = ಬ್ರಹ್ಮ) [೧೦]

ಘಡೀ ಯೇಕ ವಿಮಳ ಬ್ರಹ್ಮ । ಘಡೀ ಯೇಕ ಮ್ಹಣೇ ಸರ್ವ ಬ್ರಹ್ಮ ।
ದೃಷ್ಟಾ ಸಾಕ್ಷೀ ಸತ್ತಾ ಬ್ರಹ್ಮ । ಕ್ಷಣ ಯೇಕ ॥೧೧॥

ನಿಶ್ಚಳ ತೇ ಚಿ ಜಾಲೇ ಚಂಚಳ । ಚಂಚಳ ತೇ ಚಿ ಬ್ರಹ್ಮ ಕೇವಳ ।
ನಾನಾ ಪ್ರಸಂಗೀ ಖಳಖಳ । ನಿವಾಡಾ ನಾಹೀ ॥೧೨॥

ಚಳತೇ ಆಣೀ ನಿಶ್ಚಳ । ಅವಘೇ ಚೈತನ್ಯ ಚಿ ಕೇವಳ ।
ರೂಪೇ ವೇಗಳಾಲೀ ಪ್ರಾಂಜಳ । ಕದಾಪಿ ಬೋಲವೇನಾ ॥೧೩॥

ಉಗೀ ಚ ಕರೀ ಗಥಾಗೋವೀ । ತೋ ಲೋಕಾಸ ಕೈಸೇ ಉಗವೀ ।
ನಾನಾ ನಿಶ್ಚಯೇ ನಾನಾ ಗೋವೀ । ಪಡತ ಜಾತೀ ॥೧೪॥

ಭ್ರಮಾಸ ಮ್ಹಣೆ ಪರಬ್ರಹ್ಮ । ಪರಬ್ರಹ್ಮಾಸ ಮ್ಹಣೆ ಭ್ರಮ ।
ಜ್ಞಾತಿಪಣಾಚಾ ಸಂಭ್ರಮ । ಬೋಲೋನ ದಾವೀ ॥೧೫॥

ಘಾಲೀ ಶಾಸ್ತ್ರಾಚೀ ದಡಪಣ । ಪ್ರಚಿತಿವಿಣ ನಿರೂಪಣ ।
ಪುಸೋ ಜಾತಾ ಉಗಾ ಚ ಸೀಣ । ಅತ್ಯಂತ ಮಾನೀ ॥೧೬॥

ಜ್ಞಾತ್ಯಾಸ ಆಣಿ ಪದಾರ್ಥಭಿಡಾ । ತೋ ಕಾಯ ಬೋಲೇಲ ಬಾಪುಡಾ ।
ಸಾರಾಸಾರಾಚಾ ನಿವಾಡಾ । ಜಾಲಾ ಪಾಹಿಜೇ ॥೧೭॥

ವೈದ್ಯ ಮಾತ್ರೇಚೀ ಸ್ತುತೀ ಕರೀ । ಮಾತ್ರಾ ಗುಣ ಕಾಂಹೀ ಚ ನ ಕರೀ ।
ಪ್ರಚಿತಿವಿಣ ತೈಸೀ ಪರೀ । ಜ್ಞಾನಾಚೀ ಜಾಲೀ ॥೧೮॥

ಜೇಥೇ ನಾಹೀ ಸಾರಾಸಾರ । ತೇಥೇ ಅವಘಾ ಅಂಧಕಾರ ।
ನಾನಾ ಪರೀಕ್ಷೇಚಾ ವಿಚಾರ । ರಾಹಿಲಾ ತೇಥೇ ॥೧೯॥

ಪಾಪ ಪುಣ್ಯ ಸ್ವರ್ಗ ನರ್ಕ । ವಿವೇಕ ಆಣಿ ಅವಿವೇಕ ।
ಸರ್ವಬ್ರಹ್ಮೀ ಕಾಯೆ ಯೇಕ । ಸಾಂಪಡಲೇ ನಾಹೀ ॥೨೦॥

ಒಮ್ಮೆ ಅನ್ನುವನು ಬ್ರಹ್ಮ ನಿರ್ಮಲ ಇರುವನು. ಆಮೇಲೆ ಅನ್ನುತ್ತಾನೆ. ಏನೇನು ಇರುವದೋ ಅದೆಲ್ಲವೂ ಬ್ರಹ್ಮವಿರುವದು. ಕೂಡಲೇ ಪುನಃ ಅನ್ನುತ್ತಾನೆ. ಬ್ರಹ್ಮ ದೃಷ್ಟಾ ಇರುವನು. [ದೃಷ್ಟಾ=ನೋಡುವವ] ಸಾಕ್ಷಿ ಇರುವನು ಮತ್ತು ಸತ್ತಾರೂಪವೂ ಇರುವನು. (೧೧) ಒಮ್ಮೆ ಅನ್ನುವನು ಬ್ರಹ್ಮನು ನಿಶ್ಚಲನಿದ್ದನು: ಅವನು ಚಂಚಲವಾದನು. ಮತ್ತು ಆಮೇಲೆ ಅನ್ನುವನು. ಯಾವುದು ಚಂಚಲವಿರುವದೋ ಅದೇ ಬ್ರಹ್ಮವಾಗಿರುವದು. ಈ ಪ್ರಕಾರ ಪರಸ್ಪರ ವಿರೋಧಿ ವಿಧಾನದ ರೀತಿ, ಕ್ರಮ, ನಿಯಮಗಳನ್ನು ಬೇರೆ ಬೇರೆ ಪ್ರಸಂಗಗಳಲ್ಲಿ ಯಾವ ವಕ್ತಾ ಮಾಡುವನೋ ಅವನಿಗೇ ವಿಷಯ ಚನ್ನಾಗಿ ಮನದಟ್ಟಾಗಿರುವದಿಲ್ಲ. ಇಂಥವರ ಕಲ್ಪನಾ ಸ್ಪಷ್ಟವಿರುವದಿಲ್ಲ. [೧೨] ಪ್ರತ್ಯಕ್ಷ ಚಂಚಲವಿದ್ದು ಅದು ನಿಶ್ಚಲ ಹೇಗೆ? ಎಂದು ವಕ್ತಾನಿಗೆ ಕೇಳಿದರೆ ಅವನು ಹೇಳುವದೇನಂದರೆ, ಒಂದು ಚಿತ್ ಸ್ವರೂಪವೇ ಎಲ್ಲ ಕಡೆಗೂ ಇದ್ದದರಿಂದ ಚಂಚಲವೂ ಸಹ ಮೂಲ ಸ್ವರೂಪವೇ ಇರುವದೆಂದು ತಿಳಿಯಬೇಕು. ಇವು ಒಂದೇ ಚೈತನ್ಯದ ಭಿನ್ನ ರೂಪಗಳೇ ಇರುವವು. ಆದರೆ ಈತನಿಗೆ ತನ್ನ ವಿಚಾರವನ್ನು ಸ್ಪಷ್ಟೀಕರಿಸಿ ಸಯುಕ್ತಿಕ ರೀತಿಯಲ್ಲಿ ಹೇಳಲಿಕ್ಕೆ ಬರುವದೇ ಇಲ್ಲ. (೧೩) ಈ ಪ್ರಕಾರ ಗೊಂದಲ, ಹಸಿಬಿಸಿ ಜ್ಞಾನ, ಯಾರ ವಿಚಾರದಲ್ಲಿ ಇರುವದೋ ಅಂಥವರು ಜನರಿಗೆ ಯೋಗ್ಯ ರೀತಿಯಲ್ಲಿ ತಿಳುವಳಿಕೆ ನೀಡಲಾರರು. ಮತ್ತು ಅವರಿಗೆ ಒಪ್ಪಿಗೆ ಆಗುವಂತೆ ವಿವರಿಸಲಿಕ್ಕೆ ಸಮರ್ಥರಾಗುವದಿಲ್ಲ. ಜನರಿಗೆ ಯೋಗ್ಯ ಮತ್ತು ನಿಜವಾದ [ಖರೇ] ಜ್ಞಾನವನ್ನು ಕೊಡಲಿಕ್ಕೆ ಸಮರ್ಥ ರಾಗುವದಿಲ್ಲ. ಬೇರೆ ಬೇರೆ ಪಂಥಗಳ ಮತ್ತು ಬೇರೆ ಬೇರೆ ಮತಗಳ ಅಭಿಪ್ರಾಯಗಳನ್ನು ಕೇಳುತ್ತ ಹೋದದ್ದರಿಂದ ಅಥವಾ ಹೋಗುವದರಿಂದ ಹೊಸ ಹೊಸ ತೊಡಕು ತೊಂದರೆಗಳು ಹುಟ್ಟುವವು. (೧೪) ಇಂಥ ಅಪೂರ್ಣ ಹಸಿ ಬಿಸಿಯ ವಕ್ತಾನು ಭ್ರಮಕ್ಕೆ ಅಂದರೆ ವಿಪರೀತ ಜ್ಞಾನಕ್ಕೆ ಪರಬ್ರಹ್ಮ ಅನ್ನುವನು. ಮತ್ತು ಪರಬ್ರಹ್ಮಕ್ಕೆ ಭ್ರಮ, ವಿಪರೀತ ಜ್ಞಾನ ಎಂದು ಅನ್ನುವನು. ನಾನು ಖರೇ ಜ್ಞಾನಿ ಇರುವೆನು. ಅನ್ನುವ ಅಭಿಮಾನದಿಂದ ಇವನು ಮಾತ ನಾಡುತ್ತಿರುವನು. (೧೫) ತಾನು ಹೇಳಿದ ತಪ್ಪು ವಿಧಾನಗಳಿಗೆ ಇವನು ಶಾಸ್ತ್ರದಲ್ಲಿಯ ಅರೆಬರೆ ವಚನಗಳ ಅಧಾರ ವನ್ನು ತೋರಿಸುವನು. ಆದರೆ ಒಟ್ಟಿನಲ್ಲಿ ಇವನ ಮಾತುಗಳು ಪ್ರಚೀತಿ [ಅನುಭವ] ಪಡೆದವುಗಳಾಗಿರುವದಿಲ್ಲ. ಮತ್ತು ಇವನಿಗೆ ಪ್ರಶ್ನೆಗಳನ್ನು ಕೇಳಿದ್ದಾದರೆ ಇವನು ಅತ್ಯಂತ ಬೇಸರಗೊಂಡವರಂತೆ ಕಾಣುವನು. [ಮೀತಿ ಮೀರಿ ಸಿಡಿಮಿಡಿಗೊಂಡ ಮಾತು ಮತ್ತು ತಲೆ ತಿರುಕತನದ ವರ್ತನೆ ಆಗ ಅಲ್ಲಿ ತೋರುವದು.] (೧೬) ಯಾವನು ಸ್ವತಃ ತಾನು ಜ್ಞಾನಿ ಅಂದುಕೊಳ್ಳುವನೋ, ಮತ್ತು ಹೀಗೆಂದುಕೊಂಡವನೇ ವಸ್ತುವಿನ [ಪದಾರ್ಥಗಳ] ಅಪೇಕ್ಷ ಹಿಡಿಯುವನು [ಅಂದರೆ, ದೃಶ್ಯ ಪದಾರ್ಥಗಳನ್ನು ಸತ್ಯವೆಂದು ಮನ್ನಿಸುವನೋ ಆ ಬಡಪಾಯಿಯು ನಿರ್ಭಯ ತನದಿಂದ ಸತ್ಯವನ್ನು ಹೇಳಲು ಶಕ್ತನಾಗಿರುವದಿಲ್ಲ. ಸಾರ ಯಾವುದು ? ಮತ್ತು ಅಸಾರ ಯಾವುದು ? ಇದರ ನಿರ್ಣಯ ಸರಿಯಾಗಿ ಆಗಲಿಕ್ಕೆ ಬೇಕು. ವಕ್ತಾ ಇದನ್ನು ಸರಿಯಾಗಿ ತಿಳಿದಿರಬೇಕು. ಅಂದರೇನೇ ಇವನು ನಿಜವಾದ [ಖರೇ] ಜ್ಞಾತಾ. [ಜ್ಞಾನಿ ತಿಳಿದವ] ಎಂದು ಅನ್ನಿಸಿಕೊಳ್ಳುವನು. (೧೭) ತಿಳಿಯಿರಿ, ಒಬ್ಬ ವೈದ್ಯನು ತನ್ನಲ್ಲಿರುವ ಮಾತ್ರೆಗಳ ಬಗ್ಗೆ ಬಹಳಷ್ಟು ವರ್ಣನೆಮಾಡಿ ಹೊಗಳುವನು. ಆದರೆ ಆ ಮಾತ್ರೆಯಲ್ಲಿ ಖರೇ ಗುಣ ಅದೆ ಅನ್ನುವ ಖಾತ್ರಿ ಮಾತ್ರ ಕಂಡುಬರುವದೇ ಇಲ್ಲ. ಅಂದ ಮೇಲೆ ವೈದ್ಯನ ಶಿಫಾರಸು, ಹೊಗಳಿಕೆ ಎಲ್ಲವೂ ವ್ಯರ್ಥವೆನಿಸುವವು. ಇದರಂತೆ ಪ್ರತ್ಯಕ್ಷ ಅನುಭವ ಇಲ್ಲದಂಥ ಜ್ಞಾನದ ಅವಸ್ಥೆಯೂ ಕೂಡಾ ವೈದ್ಯನ ಮಾತ್ರೆಯಂತೆ ಜೊಳ್ಳೆನಿ ಸುವದು. (೧೮) ಸಾರಾಸಾರ ವಿಚಾರ ಇಲ್ಲದ ಕಡೆಗೆ ವಿಚಾರದ ಅಭಾವವಿರುವದು. ಅಂಥಲ್ಲಿ ಎಲ್ಲವೂ ಅಜ್ಞಾನದ ಅಂಧಕಾರ [ಕತ್ತಲೆ] ವೇ ಇರುವದು. ಅಜ್ಞಾನಿ ಮತ್ತು ಅಪೂರ್ಣ-ಅರಕಳಿ ಜ್ಞಾನ ಇರುವವರೆಲ್ಲರೂ ಬೇರೆ ಬೇರೆ ತರಹದಿಂದ ಪರೀಕ್ಷೆಮಾಡಿ ನೋಡಿ ಸರಿಯಾದ ಜ್ಞಾನವನ್ನು ತಿಳಿಯಬೇಕು. ತಿಳಿದದ್ದನ್ನು ಗಟ್ಟಿಗೊಳಿಸಿ ಖಾತ್ರಿ ಮಾಡಿಕೊಳ್ಳಬೇಕು. ಆದರೆ ಈ ಅರ್ಧಮರ್ಧ ಜನರಿಗೆ ನಾನೇ ತಿಳಿದವ ಅನ್ನುವ ಹಸಿಬಿಸಿ-ಹುಡಬುಡ ಜನಕ್ಕೆ ಈ ವಿಚಾರ ಹೊಳೆಯುವದಿಲ್ಲ, [ತಾನೂ ಕೆಡುತ್ತಾನೆ, ಜನರನ್ನೂ ಕೆಡಿಸುತ್ತಾನೆ] ಇಂಥ ಜನರಿಗೆ ಯಾವಾಗ ತಿಳುವಳಿಕೆ ಬರುವದೋ, ಏನೋ, ಭಗವಂತನಿಗೇ ಗೊತ್ತು(೧೯)ಸರ್ವವೂ ಬ್ರಹ್ಮ ಇರುವದು. ಹೀಗೆ ಒಮ್ಮೆ ಅಂದದ್ದಾದರೆ ಆಗ ಅದರಲ್ಲಿ ಪಾಪ, ಪುಣ್ಯ, ಸ್ವರ್ಗ, ನರಕ, ವಿವೇಕ, ಅವಿವೇಕ ಇವುಗಳಿಗೆ ಸ್ಥಾನವೇ ಉಳಿಯುವದಿಲ್ಲ. [ಒಳ್ಳೆ ಮತ್ತು ಕೆಟ್ಟ ಎರಡೂ ಒಂದೇ ಆಗಿ ಬಿಡುವವು]. (೨೦)

ಪಾವನ ಆಣಿ ತೇ ಪತನ । ದೋನೀ ಮಾನಿಲೀ ತತ್ವಮಾನ ।
ನಿಶ್ಚಯೊ ಆಣಿ ಅನುಮಾನ । ಬ್ರಹ್ಮರೂಪ ॥೨೧॥

ಬ್ರಹ್ಮರೂಪ ಜಾಲೇ ಆಘವೇ । ತೇಥೇ ಕಾಯೊ ನಿವಡಾವೇ ।
ಅವಘೀ ಸಾಕರ ಚಿ ಟಾಕಾವೇ । ಕಾಯೊ ಕೋಠೇ ॥೨೨॥

ತೈಸೇ ಸಾರ ಆಣಿ ಅಸಾರ । ಅವಘಾ ಜಾಲಾ ಯೇಕಂಕಾರ ।
ತೇಥೇ ಬಳಾವಳಾ ಅವಿಚಾರ । ವಿಚಾರ ಕೈಚಾ ॥೨೩॥

ವಂದ್ಯ ನಿಂದ್ಯ ಯೇಕ ಜಾಲೇ । ತೇಥೇ ಕಾಯೊ ಹಾತಾ ಆಲೇ ।
ಉನ್ಮತ್ತ ದ್ರವ್ಯೇ ಜೇ ಭುಲಲೇ । ತೇ ಭಲತೇಚ ಬೋಲೇ ॥೨೪॥

ತೈಸಾ ಅಜ್ಞಾನ ಭ್ರಮೇ ಭುಲಲಾ । ಸರ್ವ ಬ್ರಹ್ಮ ಮ್ಹಣೋನ ಬೈಸಲಾ ।
ಮಹಾಪಾಪೀ ಆಣಿ ಭಲಾ । ಯೇಕ ಚಿ ಮಾನೀ ॥೨೫॥

ಸರ್ವಸಂಗ ಪರಿತ್ಯಾಗ । ಅನ್ಯಾಸವಾ ವಿಷಯೊಭೋಗ ।
ದೋಘೇ ಯೇಕ ಚಿ ಮಾನಿತಾ ಮಗ । ಕಾಯೊ ಉರಲೇ ॥೨೬॥

ಭೇದ ಈಶ್ವರ ಕರೂನ ಗೇಲಾ । ತ್ಯಾಚ್ಯಾ ಬಾಚೇನ ನ ವಚೆ ಮೋಡಿಲಾ ।
ಮುಖಾಮಧೇ ಘಾಸ ಘಾತಲಾ । ತೋ ಅಪಾನೀ ಘಾಲಾವಾ ॥೨೭॥

ಜ್ಯಾ ಇಂದ್ರಿಯಾಸ ಜೋ ಭೋಗ । ತೋ ತೋ ಕರೀ ಯೆಥಾಸಾಂಗ ।
ಈಶ್ವರಾಚೇ ಕೇಲೇ ಜಗ । ಮೋಡಿತಾ ಉರೇನಾ ॥೨೮॥

ಮತ್ತು ಪತಿತ [ಪಾಪಿ] ಪಾವನ [ಪುಣ್ಯವಂತ] ಇವೆರಡೂ ಬ್ರಹ್ಮರೂಪವೇ ಆಗುವವು. ನಿಶ್ಚಯದ [ಸಿದ್ಧಾಂತದ] ಜ್ಞಾನ, ಕೇವಲ ಅನುಮಾನದ ಜ್ಞಾನ, ಎರಡೂ ಬ್ರಹ್ಮರೂಪವೇ ಆಗಿ ಬಿಡುವವು. (೨೧) ಎಲ್ಲ ಕಡೆಗೂ ಎಲ್ಲಿ ನೋಡಿದರಲ್ಲಿ ಸಕ್ಕರೆಯೇ ಸಕ್ಕರೆಯಾದರೆ ಸಕ್ಕರೆಯನ್ನು ಬೇರೆ ತೆಗೆದು ಒಂದು ಬದಿಗೆ ಇಡಲಿಕ್ಕೆ ಬರುವದಿಲ್ಲ. ಇದರಂತೆಯೇ ಏನೇನು ಅದೆಯೋ ಅದೆಲ್ಲವೂ ಬ್ರಹ್ಮರೂಪವೇ ಆದ ಮೇಲೆ ಅಲ್ಲಿ ಸಾರ ಯಾವುದು ಅಸಾರ ಯಾವುದು? ಇದನ್ನು ಆರಿಸಿ ತೆಗೆಯಲಿಕ್ಕೆ ಸ್ಥಳವೇ [ಇರುವದಿಲ್ಲ] ಉಳಿಯುವದಿಲ್ಲ. ಅಂದ ಮೇಲೆ ಸಾರವನ್ನು ತೆಗೆದು ಇಡುವದೆಲ್ಲಿ? ಅಸಾರವನ್ನು ತೆಗೆದು ಇಡುವದೆಲ್ಲಿ? ಒಗೆಯುವದೆಲ್ಲಿ? ಅಂತೂ ಇದು ಹುಂಬ ವೇದಾಂತವೆನಿಸುವದು. (೨೨) ಇದರಂತೆ ಅದು ಅಂದರೆ ಯಾವಲ್ಲಿ ಸಾರ ಮತ್ತು ಅಸಾರ ಅನ್ನುವ ಈ ಭೇದವೇ ಇಲ್ಲದಂತಾಗಿ ಏಕರೂಪ ಕಲಬೆರಿಕೆ, ಆದ ಮೇಲೆ ಅಲ್ಲಿ ವಿಚಾರವು ಉಳಿಯುವದಿಲ್ಲ. ಅವಿಚಾರ ಪ್ರಾಬಲ್ಯ, ಹೆಚ್ಚಳವೇ ಆಗುವದು. (೨೩) ಎಲ್ಲಿ ವಂದ್ಯ ಮತ್ತು ನಿಂದ್ಯ ಇವುಗಳಲ್ಲಿಯು ಭೇದವು ಇಲ್ಲದಾಗುವದೋ ಅಲ್ಲಿ ಏನೂ ಕೈಗೆ ಹತ್ತುವದಿಲ್ಲ. ಅಲ್ಲಿಯು ಮನುಷ್ಯನು ಭ್ರಷ್ಟಚರಿತನಾಗುವನು. ಮಾದಕ ಅಮಲಿನ ಪದಾರ್ಥ ಕುಡಿದ ಮೇಲೆ ಅದರ ನಿಶೆಯು ಅಮಲಿನಲ್ಲಿ ಮನುಷ್ಯನು ಬಾಯಿಗೆ ಬಂದದ್ದನ್ನು ಹೇಗೆ ಬಕಾಯಿಸುವನೋ,ಅಸಂಬದ್ಧವಾದ ಮಾತುಗಳನ್ನು ಹೇಗೆ ಬಡಬಡಿಸುವನೋ ಅದರಂತೆ ಈ ಸರ್ವ ಬ್ರಹ್ಮವಾದಿಯೂ ಬಡಬಡಿಸುವನು.(೨೪) ಅನೇಕ ಜನ್ಮವೂ ನೀತಿ ಧರ್ಮದಿಂದ ನಡೆದು ಉಪಾಸನಾ ಮಾಡಿದ ನಂತರ ಮನುಷ್ಯನು ಆತ್ಮಜ್ಞಾನದ ಅಧಿಕಾರಿಯಾಗಿ ಮಾರ್ಪಡುವನು. ಹುಟ್ಟುವನು–ಉತ್ಪನ್ನನಾಗುವನು. ಇಂಥ ಜನರ ಅಂತಃಕರಣವು ಅತ್ಯಂತ ವಿಕಾರ ರಹಿತವೂ ಮತ್ತು ನಿರ್ಮಲವೂ ಇರುವದು. ಆತ್ಮಜ್ಞಾನವಾದ ಮೇಲೆ ಅವನ ದೇಹ ಬುದ್ಧಿಯು ಸಾಯುವದು [ನಾಶ ಹೊಂದುವದು]. ಅವನ ನೀತಿ ಧರ್ಮದ ಮತ್ತು ಸಮಾಜದ ರೀತಿ ನೀತಿಯು ಅಥವಾ ಸಮಾಜ ವರ್ತನ [ಸಮಾಜ ಧರ್ಮ] ದ ಬಂಧನ ಹರಿಯುವವು. ಅನ್ನುವ ಮಾತು ನಿಜವಿರುವದು. ಆದರೆ ಅದರ ಅರ್ಥ ಹೀಗಾಗುವದಿಲ್ಲ. ಅಂದರೆ ಇವನು ಹೇಗೆ ಬೇಕೋ ಹಾಗೆ ಅಂದರೆ ಅನೀತಿಯಿಂದ ಮತ್ತು ಅಧರ್ಮದಿಂದ ನಡೆಯುವನೆಂದು ಅರ್ಥವಾಗುವದಿಲ್ಲ.ಅನೇಕ ಜನ್ಮದ ಅಭ್ಯಾಸ ಬಲದಿಂದ ಅವನ ನಡವಳಿಕೆಯಲ್ಲಿ ನೀತಿ ಮತ್ತೆಯು ಮೂರ್ತಿಮಂತ ಸಾಕಾರವಾಗುವದು. ವ್ಯವಹಾರದಲ್ಲಿ ಇವನು ವ್ಯವಹಾರದಲ್ಲಿಯು ಭೇದಾನುರೂಪ, ರೀತಿ ರಿವಾಜುಗಳಂತೆ ನಡೆಯುವನು. ಆದರೆ ಲಬಾಡ ಲುಚ್ಚಾ ಜನರು ಮತ್ತು ಅಜ್ಞಾನಿ ಜನರು ಈ ಸರ್ವರೂ ಬ್ರಹ್ಮವಾದದ ಗೈರ ಫಾಯದೆ ಪಡೆದು ಸ್ವೈರಾಚಾರದಿಂದ ನಡೆಯುವರು. ಇಂಥವರ ಮೇಲೆ ಶ್ರೀ ಸಮರ್ಥರು ಉಗ್ರವಾಗಿ, ಕಠೋರವಾಗಿ ಖಾರವಾಗಿ ಟೀಕೆಯನ್ನು ಮಾಡುವರು: ಸೇಂದಿ, ಸರಾಯಿ, ಗಾಂಜಾ, ಅಫು ಇತ್ಯಾದಿ ಮಾದಕ ದ್ರವ್ಯ ಸೇವಿಸುವ ಅರಿವುಗೇಡಿ ಮನುಷ್ಯನು ಹೇಗೆ ಸಿಕ್ಕಾಪಟ್ಟೆ ಬಡಬಡಿಸುವನೋ ಇದರಂತೆಯೇ ಅಜ್ಞಾನದಿಂದ ಉದಯಹೊಂದಿದ ಭ್ರಮದಿಂದ ಯಾರು ಮೋಹ ಹೊಂದಿರುವರೋ ಈ ಹುಂಬಗುತ್ತಿಗೆಯ ಜನರು ಮಾತ್ರ ಸರ್ವವೂ ಬ್ರಹ್ಮ ಇರುವದು.ಎಲ್ಲವೂ ಬ್ರಹ್ಮವೇ ಎಂದು ಬಡಬಡಿಸುತ್ತ ಕೂಡುವರು. ಮಹಾಪಾಪಿ ಮತ್ತು ಪುಣ್ಯವಂತ ಇವರಿಬ್ಬರಿಗೂ ಒಂದೇ ಅನ್ನುವದು ಹೇಗೆ ಸರಿ ಹೋಗುವದು? (೨೫) ಸರ್ವಸಂಗ ಪರಿತ್ಯಾಗದ ಪ್ರಖರ ವೈರಾಗ್ಯಾವಸ್ಥೆಯನ್ನು, ಮತ್ತು ಬಂಧನ ರಹಿತ ಸ್ವೈರ ವಿಷಯೋಪ ಭೋಗವನ್ನು ಒಂದೇ ಸ್ಥಿತಿಯೆಂದು ಮನ್ನಿಸಿದ ಮೇಲೆ ಇದರ ಮುಂದೆ ಏನೂ ಹೇಳುವದಕ್ಕೆ ಆಸ್ಪದವೇ ಇಲ್ಲದಾಯಿತು. ಇದು ಎಂಥ ದುರ್ದೈವದ ಮಾತಾಯಿತು ! ಇದಕ್ಕಿಂತ ಹೇಸಿ ಮತ್ತು ಕೆಟ್ಟದ್ದಾವುದೂ ಇರುವದಿಲ್ಲ. (೨೬) ವಾಸ್ತವಿಕ ಜಗತ್ತಿನಲ್ಲಿ ಈಶ್ವರನೇ ಭೇದಗಳನ್ನು ನಿರ್ಮಾಣಮಾಡಿ ಇಟ್ಟಿರುವನು. ಇದನ್ನು ಯಾರಪ್ಪನಿಂದಲೂ ಮುರಿಯಲಿಕ್ಕೆ ಆಗುವದಿಲ್ಲ. ಜಗತ್ತಿನಲ್ಲಿ ಭೇದವು ಇರುವದೇ ಆಗಿದೆ. ಯಾವ ಅನ್ನದ ತುತ್ತನ್ನು ಬಾಯಿಯಲ್ಲಿ ಹಾಕುವದಿರುವದೋ ಅದನ್ನು ಅಧೋದ್ವಾರದಲ್ಲಿ [ಗುದದ್ವಾರದಲ್ಲಿ] ಹಾಕಲಿಕ್ಕೆ ಬರುವದೇ ? ಅರ್ಥಾತ್ ಶಕ್ಯವಿಲ್ಲ (೨೭) ಯಾವ ಇಂದ್ರಿಯದ ಭೋಗ ಯಾವದಿರುವದೋ ಅದು ನಿಸರ್ಗದಿಂದ ನಿಯಮಿತವಾದದ್ದು [ಠರಾಯಿಸಿದ್ದು] ಇರುವದು. ಆ ಭೋಗವನ್ನು ಆ ಇಂದ್ರಿಯವು ಯಥಾ ಕ್ರಮದಿಂದ ಯೋಗ್ಯ ರೀತಿಯಲ್ಲಿ ಭೋಗಿಸಬಹುದು. ಈಶ್ವರನು ಜಗತ್ತಿನ ರಚನೆಯನ್ನು ಮಾಡಿದನು. ಇದನ್ನು ನಮಗೆ ಅಥವಾ ಯಾರಿಗೂ ಯಾರಪ್ಪನಿಗೂ ಮುರಿಯಲಿಕ್ಕೆ ಬರುವದಿಲ್ಲ. (೨೮)

ಅವಘೇ ಭ್ರಾಂತೀಚೀ ಭುಟಾಟಕೀ । ಪ್ರಚಿತಿವಿಣ ಗೋಷ್ಟೀ ಲಟಿಕೀ ।
ವೇಡ ಲಾಗಲೇ ಜೆ ಬಟಿಕೀ । ತೇ ಭಲತೇ ಚಿ ಬೋಲೇ ॥೨೯॥

ಪ್ರತ್ಯಯಜ್ಞಾತಾ ಸಾವಧಾನ । ತ್ಯಾಚೇ ಏಕಾವೇ ನಿರೂಪಣ ।
ಆತ್ಮಸಾಕ್ಷಾತ್ಕಾರಾಚೀ ಖೂಣ । ತತ್ಕಾಳ ಬಾಣೇ ॥೩೦॥

ವೇಡೇ ವಾಂಕಡೇ ಜಾಣಾವೇ । ಆಂಧಳೇ ಪಾಉಲೀ ವೊಳಖಾವೇ ।
ಬಾಶ್ಕಳ ಬೋಲಣೇ ಸಾಂಡಾವೇ । ವವುಕ ಜೈಸೇ ॥೩೧॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯಸಂವಾದೇ
‘ಅನುಮಾನ ನಿರಸನ’ ನಾಮ ಸಮಾಸ ಚತುರ್ಥ ॥

• •

ಸರ್ವ ಬ್ರಹ್ಮ ವಾದಿಗಳ ಅಂಬೋಣವೇನಂದರೆ, ಜಗತ್ತಿನಲ್ಲಿ ಭೇದವೆಂಬುದು ಎಷ್ಟೂ ಇಲ್ಲವೇ ಇಲ್ಲ. ಎಂದು ಅನ್ನುವರು. ಮತ್ತು ಅದರಂತೆ ಅವರು ನಡೆಯುವರು. ಇದೆಲ್ಲ ಅಜ್ಞಾನದ ಭ್ರಮದ ಬೂಟಾಟಿಕೆ ಇರುವದು. ಭ್ರಮದ ಬಾಧೆ ಆದ ಮನುಷ್ಯನ ಮಾತು ಇದಾಗಿರುವದು. ಇಂಥ ಮಾತಿಗೆ ಪ್ರತ್ಯಕ್ಷ ಅನುಭವದ ಅಭಾವವಿರುವ ದರಿಂದ ಮಾತುಗಳು ಸುಳ್ಳು ಇರುವವು. ಒಬ್ಬ ದಾಸಿಗೆ ಹುಚ್ಚು ಹಿಡಿಯಿತೆಂದರೆ ಅವಳು ಹೇಗೆ ಭಲ್ತೆ ಭಲ್ತೆ[ಇಲ್ಲದ ಸಲ್ಲದ್ದನ್ನು] ಬಡ ಬಡಿಸುವಳೋ ಇದರಂತೆ ಈ ಸರ್ವ ಬ್ರಹ್ಮವಾದಿಗಳ ಹೇಳಿಕೆಯು ತಲೆ ಕೆಟ್ಟ ಭ್ರಮಿಷ್ಠರ ಬಡ ಬಡಿಕೆಯಂತೆ ಇರುವದೆಂದು ತಿಳಿಯಬೇಕು. (೨೯) ಯಾರು ಸ್ವತಃ ಅನುಭವ ಹೊಂದಿ ಆತ್ಮನ ಜ್ಞಾನವನ್ನು ಸಂಪಾದಿಸಿರುವರೋ ಮತ್ತು ಯಾರು ಸಾವಧಾನರಿರುವರೋ ಅಂಥವರ ನಿರೂಪಣ ಪ್ರವಚನವನ್ನು ಕೇಳಬೇಕು. ಇಂಥವರ ನಿರೂಪಣವನ್ನು ಕೇಳಿದ ಮೇಲೆ ಆತ್ಮ ಸಾಕ್ಷಾತ್ಕರದ ಗುರುತು ತಡವಿಲ್ಲದೆ ಅಂತಃಕರಣದಲ್ಲಿ ನೆಲೆಸುವದು. ರಹಸ್ಯ ಬಿಂಬಿಸುವದು. (೩೦) ಯಾರು ಅರೆಹುಚ್ಚರು ಇರುವರೋ ಅವರನ್ನು ಶ್ರೋತಾ ಜನರು ಸರಿಯಾಗಿ ತಿಳಿಯ ಬೇಕು. ಮನುಷ್ಯನು ಕುರುಡನಿರುವನೆಂಬುದನ್ನು ಅವನು ನಡೆಯುವದರ ಮೇಲಿಂದ ಗುರುತಿಸುವರು. ಇದರಂತೆ ಸರ್ವ ಬ್ರಹ್ಮವಾದಿಯು ಹಾಗೆ ಹುಚ್ಚಾಬಟ್ಟೆ ಹೇಳುವಂಥವರು ಜ್ಞಾನಿಯಾಗಿರುವರೇ? ಅಥವಾ ಅನುಭವ ಹೊಂದಿ ಹೇಳುವ ಜ್ಞಾನಿಯಾಗಿರುವರೇ ? ಅಥವಾ ಇಲ್ಲವೇ? ಇದನ್ನು ತಿಳಿಯಬೇಕು. ಸ್ವಾನುಭವಿ ಇರುವನೋ ಅಥವಾ ಇಲ್ಲವೋ? ಇದೆಲ್ಲವನ್ನೂ ಅವನ ಪ್ರತ್ಯಕ್ಷ ನಡವಳಿಕೆಯ ಮೇಲಿಂದ ಗುರುತಿಸಿ ತಿಳಿಯಬೇಕು. ಅನುಭವವಿಲ್ಲದ ಭಾಷ್ಕಳ ವಕ್ತೃತ್ವವನ್ನು ಓಕರಿಕೆ (ವಾಂತಿ)ಯಂತೆ ಬಿಟ್ಟು(ಹೋಗಿ) ಬಿಡಬೇಕು. [ಅಂಥಲ್ಲಿ ಸುಮ್ಮನೇ ಕಾಲಹರಣ ಮಾಡುತ್ತ ನಿಲ್ಲಬಾರದು. (೩೧)

ಶ್ರೀ ದಾಸಬೋಧದ ಹದಿನೇಳನೆಯ ದಶಕದಲ್ಲಿಯ ಗುರುಶಿಷ್ಯರ ಸಂವಾದದ
"ಅನುಮಾನ ನಿರಸನ" ವೆಂಬ ಹೆಸರಿನ ನಾಲ್ಕನೇ ಸಮಾಸವು ಮುಗಿದುದು.

• •

## ದಶಕ ೧೭. ಸಮಾಸ ೫. ಅಜಪಾ ನಿರೂಪಣ (ನುಡಿ ೨೪)

ಶ್ರೀ ಸಮರ್ಥರು ಈ ಸಮಾಸದಲ್ಲಿ ಅಜಪಾಜಪದ ಬಗ್ಗೆ ಸ್ವಲ್ಪದರಲ್ಲಿ ಪರಾಮರ್ಶೆ [ಪರಿಶೀಲನೆ] ಮಾಡಿದ್ದಾರೆ. ನಿಜ ಹೇಳಬೇಕೆಂದರೆ ಸಾಧಕರ ದೃಷ್ಟಿಯಲ್ಲಿ ಈ ಅಜಪಾಜಪದ ಮಹತ್ವವನ್ನು ಎಷ್ಟು ಹೇಳಿದರೂ ಕಡಿಮೆಯೇ ಅನಿಸುವದು. ವೇದ, ಉಪನಿಷತ್ತು, ನ್ಯಾಯ, ವೈಶೇಷಿಕ, ಸಾಂಖ್ಯಯೋಗ, ತಂತ್ರ, ಮತ್ತು ಬೌದ್ಧ ದರ್ಶನ ಈ ಎಲ್ಲವುಗಳಲ್ಲಿ ಅಜಪಾಜಪದ ಮಹತ್ವ ಹೇಳಿರುವದು ಕಂಡುಬರುವದು. "ಜಪಾ" ಶಬ್ದವು ಜಪ್ ಧಾತುವಿನಿಂದ ಹುಟ್ಟಿದೆ. ಜಪ್ ಅಂದರೆ ಮಂತ್ರ ಇತ್ಯಾದಿಗಳನ್ನು ಮನದಲ್ಲಿ ಅನ್ನುವದು. ನಾವಾಗಿ ಪ್ರಯತ್ನ ಮಾಡದೇ ಯಾವ ಜಪವು ತನ್ನಷ್ಟಕ್ಕೆ ತಾನೇ ನಡೆಯುವದೋ ಅದು ಅಜಪವೆನಿಸುವದು. ಇದಕ್ಕೆ ಗಾಯತ್ರಿ ಎಂದು ಅನ್ನುವರು. "ಅಜಪಾನಾಮ ಗಾಯತ್ರೀಮ್ ಜೀವೋ ಜಪತಿ ಸರ್ವದಾ" ಗಾಯತ್ರಿ ಸ್ತ್ರೀಲಿಂಗ ಇರುವದರಿಂದ ಅಜಪಾ ಹೀಗೆ ಹೆಸರು [ರೂಪ] ಹುಟ್ಟಿದೆ. ನಾವು ಪ್ರಯತ್ನಮಾಡದೇ ಯಾವುದು ತನ್ನಷ್ಟಕ್ಕೆ ತಾನೇ ಜಪವಾಗುವದೋ ಅವಕ್ಕೆ ಅಜಪಾಜಪ ಎಂದು ಅನ್ನುವರು. "ಹಂಸಃ ಅಥವಾ ಹಂಸೋ" ಈ ಮಂತ್ರಕ್ಕೆ ಅಜಪಾ ಎಂದು ಹೆಸರಿರುವದು. ವಿದ್ಯಾರಣ್ಯ ಮುನಿಯು ಸರ್ವ ದರ್ಶನ ಸಂಗ್ರಹದಲ್ಲಿಯ ಪಾತಂಜಲ ದರ್ಶನದ ಮೇಲೆ ಭಾಷ್ಯ ಮಾಡುವಾಗ ಅಭ್ಯಂಕರ ಶಾಸ್ತ್ರಿಗಳು ಬರೆಯುವರು : "ಅಜಪಾಮಂತ್ರೇತಿ ಸ್ವಭಾವಸಿದ್ಧ ವಿಷಯಂ ಶ್ವಾಸ ಪ್ರಶ್ವಾಸ ರೂಪಃ ಅಜಪಾ ಮಂತ್ರಃ; ಸ್ವಭಾವ ಸಿದ್ಧತ್ವಾತ್ ನ ಅಯಮ್ ಇತರ ಮಂತ್ರವತ್ ಜಪ್ಯತೆ, ತೇನ ಅಜಪಾ ಇತಿ, ಉಚ್ಯತೆ, ತತ್ರ ಶ್ವಾಸ ಪ್ರಶ್ವಾಸಯೋಃ "ಹಂಸಃ" ಇತಿ ಭಾವನಾ ಕ್ರಿಯಂತೆ" ಹೊರಗಿನ ವಾಯುವನ್ನು ಒಳಗೆ ತೆಗೆದು [ಎಳೆದು] ಕೊಳ್ಳುವದು ಇದು ಶ್ವಾಸವಾದರೆ ಒಳಗಿನ ವಾಯುವನ್ನು ಹೊರಗೆ ಬಿಡುವದು ಇದು ಪ್ರಶ್ವಾಸವು. ಶ್ವಾಸ ತೆಗೆದುಕೊಳ್ಳುವಾಗ ಸೋಕಾರ ಆದರೆ ಶ್ವಾಸ ಬಿಡುವಾಗ ಹಂಕಾರವಾಗುವದು. ಸೋಕಾರವು ಶಕ್ತಿರೂಪವಿರುವದು. ಮತ್ತು ಹಂಕಾರವು ಶಿವರೂಪವಿರುವದು. ಹಂಸಃ ಮತ್ತು ಸೋಹಂ ಇವೆರಡೂ ಒಂದೇ ಎಂದು ತಿಳಿಯಬೇಕು. ಮರಾ ಮರಾ ಇದು ಯಾವಾಗ ಅಜಪಾ ಆಯಿತೋ ಆಗ ಅದೇ ತನ್ನಷ್ಟಕ್ಕೆ ತಾನೇ ರಾಮ ರಾಮ ಆಯಿತು. ಇದರಿಂದ ವಾಲ್ಯಾ ಎಂದು ಇದ್ದವನು ವಾಲ್ಮೀಕಿ ಆದನು. ಇದರಂತೆಯೇ ಸೋಹಂ ಮತ್ತು ಓಂಕಾರ ಇವೆರಡೂ ಒಂದೇ ಇರುವವು. ಸೋಹಂ ಪ್ರಣವ ರೂಪವಿರುವದು. ಪ್ರತಿಯೊಂದು ಜೀವನವು ಸರ್ವ ದೇಹದಲ್ಲಿ ಸರ್ವ ಅವಯವದಲ್ಲಿ ವ್ಯಾಪಿಸಿ ಸೋಹಂ ಸೋಹಂ ಮಾಡುತ್ತ ಇವು ಹೃದಯದಲ್ಲಿ ಇರುವದು. ಭಕ್ತಿವಂತ ಯೋಗಿಗಳಿಗೆ ಪ್ರಣವ ಜಪ ಅತಿ ಪ್ರಿಯವಿರುವದು. ಪ್ರಣವದಲ್ಲಿ [ಓಂಕಾರದಲ್ಲಿ] ಪರಮೇಶ್ವರನ ಭಾವನೆ ಮಾಡಿ ಹಗಲೂ ರಾತ್ರಿ ಬಿಟ್ಟೂ ಬಿಡದೆ ಯೋಗಿ ಜನರು ಭಕ್ತಿಪೂರ್ವಕವಾಗಿ ಪ್ರಣವದ (ಓಂಕಾರದ) ಜಪಮಾಡುವರು. ಜ್ಞಾನ ಪ್ರಧಾನರಾದ ವೇದಾಂತೀ ಜನರು ಪರಮೇಶ್ವರನೊಂದಿಗೆ ತದಾಕಾರ (ಏಕರೂಪ) ದ ಭಾವನೆಯಿಂದ ಹಗಲೂ ರಾತ್ರಿಯೂ ಬಿಟ್ಟೂ ಬಿಡದೇ ಸೋಹಂ ದ ಜಪವನ್ನು ಮಾಡುವರು. ಸ್ವರ ಸಾಧನೆ ಮಾಡುವ ಕೆಲವು ಜನರು ಕೇವಲ ಕುಂಭಕ [ಅಂದರೆ ಶ್ವಾಸವನ್ನು ತಡೆಯುವದು. ಇದು ಪ್ರಾಣಾಯಾಮದಲ್ಲಿಯ ಒಂದು ಭಾಗವಾಗಿರುವದು.] ವನ್ನು ಮಾಡಿ ಅಜಪಾ ಜಪಿಸುವರು. ಈ ರೀತಿಯ ಜಪದಿಂದ ಅವರಿಗೆ ತ್ರಿಕಾಲ ಜ್ಞಾನವಾಗುವದು. ಅಲೌಕಿಕ ಸಿದ್ಧಿಗಳು ಪ್ರಾಪ್ತವಾಗುವವು. ಮತ್ತು ಕೊನೆಗೆ ಮೋಕ್ಷ ದೊರಕುವದು. ಅಜಪಾ ಜಪಮಾಡುವ ಅದ್ವೈತ ವೇದಾಂತಿಗಳು

ಅಭೇದದಿಂದ ಸಗುಣ ಬ್ರಹ್ಮದ ಉಪಾಸನೆಯನ್ನು ಮಾಡುವರು ಇದಕ್ಕೆ "ಅಹಂ ಗ್ರಹೋಪಾಸನಾ" ಅನ್ನುವರು. ಈ ಉಪಾಸನೆಯಲ್ಲಿಯು ಜಪದಿಂದ ಜೀವವು ಬೇಗನೇ ಅಂದರೆ ಕೂಡಲೇ-ಚಟಕ್ಕನೇ ಸ್ವರೂಪಮಯವಾಗಿ ಹೋಗುವದು. ಬೇರೆ ಬೇರೆ ಸಗುಣ ದೇವತೆಗಳ ಉಪಾಸನಾ ಮಾಡುವ ಭಕ್ತಿಮಾರ್ಗದ ಸಂತರು ಅಖಂಡ ಸತತ ನಾಮಸ್ಮರಣ ಮಾಡುವರು. ನಾಮದ ಸತತ ಅಭ್ಯಾಸದಿಂದ ಇವರಿಗೆ ನಾಮದ ಅಜಪಾ ಜಪ ಸಾಧಿಸುವದು. ಮತ್ತು ಪ್ರೇಮ ಸಮಾಧಿಯು ಅನುಭವ ಬರುವದು. ಆ ಮೇಲೆ ಮುಂದೆಯೂ ಅವನ [ಸಂತನ] ನಾಮವು ತನ್ನಷ್ಟಕ್ಕೆ ತಾನೇ ಇಪ್ಪತ್ನಾಲ್ಕು ತಾಸೂ ಅಖಂಡವಾಗಿ ನಡೆಯುವದು. ವಾಣಿ ನಾಲ್ಕು ಪ್ರಕಾರದ್ದಿರುವದು. ಇವುಗಳ ಪೈಕಿ ಪರಾ ವಾಣಿಯು ಕೇವಲ ಮೂಲ ಸಂಕಲ್ಪ ರೂಪ [ಮಾಯಾ], ಸ್ಫುರಣ ರೂಪ, ಉನ್ಮೇಷ ರೂಪ [ಜಾಗ್ರತ ರೂಪ] ಅಥವಾ ಶಿವಶಕ್ತಿ [ಪ್ರಕೃತಿ ಪುರುಷ] ರೂಪವಿರುವದು. ಇದು ಭಾವಮಯ, ಶಾಂತ, ಸ್ವಸ್ಥ ಮತ್ತು ಆನಂದಮಯ ಹೀಗೆ ಈ ರೀತಿಯಲ್ಲಿ ಇದು ಅನುಭವಕ್ಕೆ ಬರುವದು. ಇದರಲ್ಲಿ ಕೇವಲ ಆನಂದದ ಅರಿವು ಮಾತ್ರ ಇರುವದು. ಇದರೊಳಗಿಂದ ಮೊದಲಿಗೆ ನಾದ ಬರುವದು ಇದು ಪ್ರಣವ ರೂಪ ಅಥವಾ ಓಂಕಾರಮಯ ಇರುವದು. ಇದು ವೇದದ ಸನಾತನ ಬೀಜವಿರುವದು. ದಹರಾಕಾಶ [ಹೃದಯ] ವು ಇದರ ವಸತಿ ಸ್ಥಾನವಾಗಿದೆ. ಇದಕ್ಕೆ ನಾದ ಬ್ರಹ್ಮ ಎಂದು ಅನ್ನುವರು. ಪಶ್ಯಂತಿ ರೂಪವಾದ ಬ್ರಹ್ಮವು ಅರ್ಥ ಪ್ರಧಾನ (ಒಂದು ವಸ್ತು ಅಲ್ಲ. ತಿಳಿದು ಅನುಭವಿಸು ವಂಥದು) ಇರುವದು. ಸರ್ವ ಚರಾಚರದಲ್ಲಿ ವ್ಯಾಪಿಸಿರುವದು. ಸೂಕ್ಷ್ಮ ನಾದ ರೂಪದಿಂದ ಪ್ರತಿಯೊಂದು ಜೀವದ ಅಂತರ್ಯಾಮದಲ್ಲಿ ಇದು ವಾಸಮಾಡುತ್ತದೆ. ನಾದ ಶ್ರವಣದ ಅಭ್ಯಾಸಮಾಡುವ ಸಾಧಕರು ಕಿವಿಯಲ್ಲಿ ಅರಳಿ-ಹತ್ತಿ ಇಟ್ಟುಕೊಂಡು ಧ್ಯಾನದಲ್ಲಿ ಒಳಗಿನ ಪ್ರಣವ ನಾದವನ್ನು ಕೇಳುವರು. ಈ ನಾದ ಶ್ರವಣವು [ಕೇಳುವಿಕೆಯು]ಮುಂದ ವಾಯಿತೆಂದರೆ ಸ್ವರೂಪದ ಪ್ರಚೀತಿ [ಅನುಭವ] ಮುಂದವಾಯಿತು ಎಂದು ತಿಳಿಯಬೇಕು. ಶ್ರೀ ಸಮರ್ಥರು ಈ ಸಮಾಸದಲ್ಲಿ ಹೇಳುವದೇನಂದರೆ, ಪ್ರತಿದಿನ ೨೪ತಾಸಿನಲ್ಲಿ ನಿಮ್ಮವು [ಆರೋಗ್ಯವಂತನವು] ೨೧೬೦೦ ಇಷ್ಟು ಶ್ವಾಸ ಪ್ರಶ್ವಾಸಗಳಾಗುವವು ಇದೇ ಅಜಪಾಜಪದ ಸಂಖ್ಯೆಯು. [೨೪ ತಾಸಿಗೆ ೨೧೬೦೦ ಅಂದರೆ ಒಂದು ತಾಸಿಗೆ ೯೦೦ ಒಂದು ಮಿನಿಟಿಗೆ ೧೫ ಶ್ವಾಸ ಪ್ರಶ್ವಾಸಗಳಾಗುವವು]. ಸ್ವರದ ಜನ್ಮ ಸ್ಥಾನವು ಒಳಗಿರುವದು. ಏಕಾಂತದಲ್ಲಿ ಮೌನ ಹಿಡಿದು ಕೂಡ್ರಬೇಕು. ಮತ್ತು ಒಳಗೆ ಲಕ್ಷ್ಯಕೊಡಬೇಕು. ಅಂದರೆ ಸೋಹಂ ಸೂಕ್ಷ್ಮ ನಾದವು ಕೇಳಿಸುವದು. ಉಚ್ಚಾರವಾದರೋ ಇಲ್ಲ. ಆದರೆ ಶಬ್ದವು ಮಾತ್ರ ಇರುವದು. ಸೋಹಂ ಇದಕ್ಕೆ ಧ್ವನಿ ಇಲ್ಲ. ಅಂತೆಯೇ ಇದು ಸಹಜ ಶಬ್ದವೆನಿಸಿದೆ. ಶ್ವಾಸ ತೆಗೆದುಕೊಳ್ಳುವಾಗ "ಸೋ" ಮತ್ತು ಶ್ವಾಸ ಬಿಡುವಾಗ "ಹಂ" ಹೀಗಿರುವ ಸೋಹಂ ಮಂತ್ರವು ಅಜಪಾದಲ್ಲಿ ನಡೆಯುವದು. ಈ ಶಬ್ದವನ್ನು ಹಿಂದೆ ಹಾಕಿ ಬಿಟ್ಟು ಸೂಕ್ಷ್ಮದಲ್ಲಿ ಹೋಗುವವನೇ ನಿಜವಾದ [ಖರೇ] ಮೌನಿ ಅನಿಸುವನು. ಸರ್ವ ಜೀವಗಳ ಅಂತರ್ಯಾಮದಲ್ಲಿ "ಅಜಪಾ" ಇರುವದು. ನಮ್ಮಲ್ಲಿಯು ಅಜಪಾವನ್ನು ನಾವು ಅತಿ ಸಹಜವಾಗಿ ನೋಡಬಹುದು. [ನೋಡಲು ಖಾತ್ರಿಯಿಂದ ಸಾಧ್ಯವಿರುವದು] (ಇದರ ಸಹಾಯದಿಂದ) ಅಂತರಾತ್ಮನನ್ನು ಸಹಜವಾಗಿ ನೋಡಬೇಕು. ಕಷ್ಟದಿಂದ ನೋಡಬಾರದು. ಇವನ ದರ್ಶನವಾಯಿತೆಂದರೆ ಧ್ಯಾನವು ಸಹಜವಾಗಿ ಘಟಿಸುವದು. ಮನುಷ್ಯನು ಸಹಜವಾಗಿ ನಡೆದರೆ, ಬಾಳಿ ಬದುಕಿದರೆ ಇದರಿಂದಾಗಿ ಅಂತರಾತ್ಮಾ ಪ್ರಸನ್ನ ವಾಗುವನು. ತಿಳಿಯಿರಿ, ಒಬ್ಬ ಮನುಷ್ಯನ ಮನೆಯ ಆಜೂ ಬಾಜೂದಲ್ಲಿ ಒಳಗೂ ಹೊರಗೂ ದ್ರವ್ಯವು ಗುಪ್ತವಾಗಿ ತುಂಬಿರುವದು. ಆದರೆ ಇದು ಇರುವದು ಅವನಿಗೆ ಗೊತ್ತಿಲ್ಲದ್ದರಿಂದ ಆ ಮನುಷ್ಯ [ ಮಾಲಕ ] ದಾರಿದ್ರ್ಯವನ್ನು ಭೋಗಿಸುವನು. ತನ್ನ ಮನೆಯಲ್ಲಿ ದ್ರವ್ಯ ಗುಪ್ತವಾಗಿ ಇರುವದು ಅನ್ನುವ ವಿಷಯವನ್ನು (ಸಮಜೂತ) ತಿಳಿಯಪಡಿಸುವದೇ (ಪಟಾಯಿಸುವದೇ) ಕಷ್ಟದ ಕಾರ್ಯವಿರುವದು. ತಿಳಿದ ನಂತರ ಆ ಹಣವನ್ನು ಹಸ್ತಗತ ಮಾಡಿಕೊಳ್ಳುವದು ತಡವಾಗುವದಿಲ್ಲ. ಕಷ್ಟವಾಗುವದಿಲ್ಲ. ಇದರಂತೆ ನಮ್ಮ ಅಂತರ್ಯಾಮದಲ್ಲಿ ಅಜಪಾ ತುಂಬಿರುವದೆಂದು ಏನುಮಾಡಿದರೂ ನಮಗೆ ತಿಳಿಯದಾಗಿದೆ. ಹೊಳೆಯದಾಗಿದೆ. ನಮ್ಮ ಅಂತರ್ಯಾಮದಲ್ಲಿ ಅದು ಇರುವದು ಅನ್ನುವ ತಿಳುವಳಿಕೆ ಒಮ್ಮೆ ಮನವರಿಕೆಯಾಗಿ ಖಾತ್ರಿ ಆಯಿತೆಂದರೆ ಆ ಮೇಲೆ ಅಜಪಾ ಸಾಧಿಸುವದು ಕಠಿಣ ಹೋಗುವದಿಲ್ಲ.

**ದಶಕ ಸಪ್ತದಶ : ಸಮಾಸ ಪಂಚಮ : ಅಜಪಾ ನಿರೂಪಣ [ನ. ಡಿ ೨೪]**

॥ಶ್ರೀರಾಮ॥ ಯೆಕವೀಸ ಸಹಶ್ರ ಸಾಸೇ ಜಪಾ। ನೇಮೂನ ಗೇಲೀ ತೇ ಅಜಪಾ।
ವಿಚಾರ ಪಾಹಾತಾ ಸೋಪಾ। ಸಕಳ ಕಾಂಹೀ ॥೧॥

ಮುಖೀ ನಾಸಿಕೀ ಅಸಿಜೆ ಪ್ರಾಣೇ। ತಯಾಸ ಅಖಂಡ ಯೇಣೇ ಜಾಣೇ।
ಯಾಚಾ ವಿಚಾರ ಪಾಹಾಣೇ। ಸೂಕ್ಷ್ಮದೃಷ್ಟೀ ॥೨॥

ಮುಳೀ ಪಾಹಾತಾ ಯೇಕ ಸ್ವರ। ತ್ಯಾಚಾ ತಾರ ಮಂದ್ರ ಘೋರ।
ತ್ಯಾ ಘೋರಾಹೂನ ಸೂಕ್ಷ್ಮ ವಿಚಾರ। ಅಜಪಾಚಾ ॥೩॥

## ದಶಕ ೧೭. ಸಮಾಸ ೫ ಅಜಪಾ [ಜಪ] ನಿರೂಪಣ (ನುಡಿ ೨೪)

ನಾವು ಶಬ್ದಗಳನ್ನು ಮಾತನಾಡುವೆವು. ಇದರ ಮೂಲವು ನಮ್ಮ ಅಂತರ್ಯಾಮದಲ್ಲಿಯೇ ಇರುವದು. ಏಕಾಂತದಲ್ಲಿ ಕೂಡ್ರಬೇಕು. ಮತ್ತು ಒಳಗಿನ (ಅಂತರಂಗದಲ್ಲಿಯ) ಶಬ್ದದ ಮೂಲವನ್ನು ಶೋಧಿಸಬೇಕು: ಒಂದು ದಿವಸದ ಇಪ್ಪತ್ನಾಲ್ಕು ತಾಸುಗಳಲ್ಲಿ ಒಟ್ಟು ಮನುಷ್ಯನ ಶ್ವಾಸ ಪ್ರಶ್ವಾಸಗಳು ಇಪ್ಪತ್ತೊಂದು ಸಾವಿರದಾ ಆರುನೂರು (೨೧೬೦೦) ಆಗುವವು. ಇದು ನೈಸರ್ಗಿಕ ಜಪವಾಗಿದೆ. ಇದಕ್ಕೆ ಅಜಪಾಜಪ ಅನ್ನುವರು. ಖರೇ ವಿಚಾರಮಾಡಿ ನೋಡಿದ್ದಾದರೆ ಇದರಲ್ಲಿ ಯಾವ ತೊಂದರೆ ಕಠಿಣತೆಗಳು ಇಲ್ಲ. (೧) ಬಾಯಿ (ಮುಖ) ಮತ್ತು ಮೂಗು ಇದರಲ್ಲಿ ಪ್ರಾಣದ ವಾಸವಿರುವದು. ಪ್ರಾಣವು (ಉಸಿರು) ಒಂದೇ ಸವನೆ ಹೋಗುವದು ಮತ್ತು ಬರುವದು ಮಾಡುತ್ತದೆ. ಇದರ ಬಗ್ಗೆ ಸೂಕ್ಷ್ಮ ವಿಚಾರಮಾಡಬೇಕು. ಪ್ರಶ್ನೋಪನಿಷತ್ತದಲ್ಲಿ ಮುಂದಿನ ಮಂತ್ರವಿರುವದು. "ಮುಖನಾಸಿಕಾಭ್ಯಾಮ್ ಪ್ರಾಣಃ ಸ್ವಯಂ ಪ್ರತಿಷ್ಠತೆ" ಅರ್ಥ: ಮುಖ ಮತ್ತು ನಾಸಿಕ (ಮೂಗು) ಇವುಗಳ ದ್ವಾರದಿಂದ ಹೊರ ಬೀಳುವ ಪ್ರಾಣವು ಕಣ್ಣು ಮತ್ತು ಕಿವಿಗಳಲ್ಲಿ ಸ್ಥಿರವಾಗುವದು. (೩–೫-೪೭). ಶರೀರವು ಜೀವಂತವಿರುವವರೆಗೆ ಪ್ರಾಣದ ಬರ ಹೋಗುವಿಕೆಯು ಅಖಂಡವಾಗಿ ನಡೆಯುವದು. ಶ್ವಾಸ ಪ್ರಶ್ವಾಸಗಳು ಅತ್ಯಂತ ನೈಸರ್ಗಿಕ ಪ್ರಕೃತಿ ಸಿದ್ಧ ಮತ್ತು ಸಹಜ ರೀತಿಯಲ್ಲಿ ಆಗುವವು. ಇದರಲ್ಲಿ ಏನಾದರೂ ಗೂಢ ರಹಸ್ಯದ ಸಮಸ್ಯೆ ಇರಬಹುದೆಂಬ ಸಂಶಯ- ಸಂದೇಹ ಮನುಷ್ಯನಿಗೆ ಎಷ್ಟೂ ಬರುವದಿಲ್ಲ. ಆತೆಯೇ ಇದರ ಬಗ್ಗೆ ಸೂಕ್ಷ್ಮ ದೃಷ್ಟಿಯಿಂದ ಶಾಂತ ಮತ್ತು ಸಮಾಧನದಿಂದ ವಿಚಾರಮಾಡಬೇಕು ಎಂದು ಶ್ರೀ ಸಮರ್ಥರು ಹೇಳುವರು. (೨)ಮೂಲದಲ್ಲಿ ಸ್ವರವು ಅಂದರೆ ಧ್ವನಿಯು. ಆವಾಜು, ಶ್ರವಣೇಂದ್ರಿಯ ಗ್ರಾಹ್ಯ ಧ್ವನಿಯು ಒಂದೇ ಇರುವದು. ತಾರ ಅಂದರೆ ಉಚ್ಚ ಸ್ವರ (ತಾರಕ ಸ್ವರ, ಮೇಲಿನ ಷಡ್ಜ, ಏರಿದ ಧ್ವನಿ, ಏರುಗಡೆಯ ಧ್ವನಿ). ಮಂದ್ರ ಅಂದರೆ ಮಧ್ಯ ಸ್ವರ(ಮಧ್ಯದ ಷಡ್ಜ).ಗಂಭೀರನಾದ ಅಂದರೆ ನಾಭಿ ಸ್ಥಾನದಿಂದ ಹೊರಡುವ ಗಂಭೀರ ನಾದ ಮತ್ತು ಘೋರ ಅಂದರೆ ಕೆಳಗಿನ ಸ್ವರ (ಕೆಳಗಿನ ಷಡ್ಜ, ಖರ್ಜ).ಗೊಗ್ಗರ ಆವಾಜ ಹೀಗೆ ಸ್ವರದ ವಿಭಾಗವಿರುವದು. ಘೋರ ಅಥವಾ ಕೆಳಗಿನ ಸ್ವರದಕಿಂತಲೂ ಅಜಪಾ ಅಧಿಕ ಹೆಚ್ಚು ಸೂಕ್ಷ್ಮವಿರುವದು. ನಾಭಿಯ ಠಿಕಾಣೆಯಲ್ಲಿ (ಸ್ಥಳದಲ್ಲಿ) ಇರುವ ಪರಾವಾಣಿಯಲ್ಲಿ ಒಂದು ಅತಿಶಯ ಸೂಕ್ಷ್ಮ ಸ್ಫುರಣ ಆಗುವದು. ಅವಕ್ಕೆ ಉನ್ಮೇಷ ಎಂದು ಅನ್ನುವರು. ಅಂದರೆ ಜಾಗೃತವಾಗುವಿಕೆ; ಸ್ಫುರಣ ಆಗುವಿಕೆ, ಕಣ್ಣು ತೆರೆಯುವಿಕೆ ಈ ನಾಭಿಯಲ್ಲಿಯ ಪರಾವಾಣಿಯ ಸೂಕ್ಷ್ಮ ಸ್ಫುರಣ (ಉನ್ಮೇಷ) ವು ಹೃದಯದಲ್ಲಿ ಬಂದಿತೆಂದರೆ ಅದು ಪಶ್ಯಂತಿ ವಾಣಿಯಲ್ಲಿ ಇಳಿಯುವದು. ಅಲ್ಲಿ ಇದಕ್ಕೆ ಧ್ವನಿ ಎಂದು ಅನ್ನುವರು. ಧ್ವನಿಯು ಸೂಕ್ಷ್ಮವಿರುವದು. ಕೇವಲ ಅರ್ಥ ರೂಪ (ತಿಳಿಯುವದಿರುವದು) ಇರುವದು. ಧ್ವನಿಯು ಕಂಠದಲ್ಲಿ ಬಂದಿತೆಂದರೆ ಮಧ್ಯಮದಲ್ಲಿ ಪ್ರವೇಶಿಸುವದು. ಅಲ್ಲಿ ಇದಕ್ಕೆ ಶಬ್ದದ ಪೂರ್ವಾವಸ್ಥೆ ಪ್ರಾಪ್ತವಾಗುವದು, ಇದಕ್ಕೇ ನಾದ ಎಂದು ಅನ್ನುವರು. ನಾದವು (ಅಕ್ಷರಾಗಿ) ಕೊನೆಗೆ ಮುಖದಲ್ಲಿ ಪ್ರವೇಶಮಾಡುವದು. ಮತ್ತು ವೈಖರಿಯೊಳಗಿಂದ ಪ್ರಕಟ ಶಬ್ದ ಹೊರಬೀಳುವದು. ತಾರ ಸ್ವರವು ಮಧ್ಯ ನಾದದ ಎರಡಷ್ಟು (ದುಪ್ಪಟ್ಟು) ಪ್ರಮಾಣದ ಸ್ವರವಿರುವದು. ಇದರ ಸ್ಪರ್ಶವು ತಲೆಯ ಶಿರೋಭಾಗದಲ್ಲಿಯ ಸಹಸ್ರ ದಲ ಕಮಲ (ಬ್ರಹ್ಮರಂಧ್ರ)ದ ವರೆಗೆ ಆಗುವದು. ಮಧ್ಯ ಸ್ವರವು ಮನುಷ್ಯನ ಹೃದಯದಿಂದ ಹೊರಡುವದು. ಇದರ ಸ್ಪರ್ಶ ಅನಾಹತ ಚಕ್ರಕ್ಕೆ ಆಗುವದು. (ಅನಾಹತ ಧ್ವನಿ ಅಂದರೆ ಪ್ರಾಣಿಗಳ ದೇಹದಲ್ಲಿ ಆಘಾತ ವಿಲ್ಲದೇ ಸತತ ಚಾಲೂ ಇರುವ ಮತ್ತು ಯೋಗ ಸಾಧನದಿಂದ ಕೇಳಿ ಬರುವ ಚಿಣಿ, ಚಿಂಚಣಿ, ಘಂಟಾ, ಶಂಖ, ವೀಣಾ ತಾಳ, ಬಾಸರಿ, ಮೃದಂಗ, ನಗಾರಿ, ಮತ್ತು ಘನ ಗರ್ಜನೆ, ಈ ಹತ್ತು ನಾದಗಳ ಪೈಕಿ ಒಂದು ಅಥವಾ ಅನೇಕ ನಾದ) ಮತ್ತು ಘೋರ ಸ್ವರವು ಮನುಷ್ಯನ ನಾಭಿ [ಹೊಕ್ಕಳ] ಯಿಂದ ಹೊರಡುವದು. ಇದರ ಸ್ಪರ್ಶವು ಸೂರ್ಯ ಚಕ್ರಕ್ಕೆ ಅಥವಾ ಮಣಿ-ಪುರ ಚಕ್ರಕ್ಕೆ ಆಗುವದು. ಘೋರ ಸ್ವರಕ್ಕೇನೇ ಖರ್ಜ ಸ್ವರ (ಗೊಗ್ಗರ ಧ್ವನಿ) ಅನ್ನುವರು. ಅಜಪಾ ಜಪವು ಇವೆಲ್ಲಕ್ಕಿಂತ ಅತ್ಯಂತ ಸೂಕ್ಷ್ಮ ಇದ್ದು ಒಂದು ಪ್ರಕಾರದ [ರೀತಿಯಲ್ಲಿ] ಇದು ಸರ್ವ ಶರೀರದ ತುಂಬೆಲ್ಲ ವ್ಯಾಪಿಸಿರುವದು. (೩)

ಸರಿಗಮಪದನಿಸ । ಸರೀ ಮಾತೃಕಾ ಸಾಯಾಸ ।
ಪ್ರಥಮ ಸ್ವರೇ ಮಾತೃಕಾಸ । ಮ್ಹಣೋನ ಪಾಹಾವೇ ॥೪॥

ಪರೇವಾಚೆಹೂನ ಅರ್ತೀ । ಆಣಿ ಪಶ್ಯಂತೀಖಾಲತೇ ।
ಸ್ವರಾಚೆ ಜನ್ಮಸ್ಥಾನ ತೇ । ತೇಥೂನ ಉಠೇ ॥೫॥

ಯೇಕಾಂತೀ ಉಗೇ ಚ ಬೈಸಾವೇ । ತೇಥೇ ಹೇ ಸಮಜೋನ ಪಾಹಾವೇ ।
ಅಖಂಡ ಘ್ಯಾವೇ ಸಾಂಡಾವೇ । ಪ್ರಭಂಜನಾಸೀ ॥೬॥

ಯೇಕಾಂತೀ ಮೌನ್ಯ ಧರೂನ ಬೈಸೇ। ಸಾವಧ ಪಾಹಾತಾ ಕೈಸೇ ಭಾಸೇ ।
ಸೋಹಂ ಸೋಹಂ ಐಸೇ । ಶಬ್ದ ಹೋತೀ ॥೭॥

ಉಚ್ಚಾರೇವಿಣ ಜೇ ಶಬ್ದ । ತೇ ಜಾಣಾವೇ ಸಹಜಶಬ್ದ ।
ಪ್ರತ್ಯಯಾ ಯೇತೀ ಪರಂತು ನಾದ । ಕಾಹೀಚ ನಾಹೀ ॥೮॥

ತೇ ಶಬ್ದ ಸಾಂಡೂನ ಬೈಸಲಾ । ತೋ ಮೌನೀ ಮ್ಹಣಾವಾ ಭಲಾ ।
ಯೋಗಾಭ್ಯಾಸಾಚಾ ಗಲ್ಬಲಾ । ಯಾಕಾರಣೇ ॥೯॥

ಯೇಕಾಂತೀ ಮೌನ್ಯ ಧರೂನ ಬೈಸಲಾ। ತೇಥೇ ಕೋಣ ಶಬ್ದ ಜಾಲಾ ।
ಸೋಹಂ ಐಸಾ ಭಾಸಲಾ । ಅಂತರ್ಯಾಮೀ ॥೧೦॥

ಧರಿತಾ ಸೋ ಸಾಂಡಿತಾ ಹಂ । ಅಖಂಡ ಚಾಲೇ ಸೋಹಂ ಸೋಹಂ ।
ಯಾಚಾ ವಿಚಾರ ಪಾಹಾತಾ ಬಹು । ವಿಸ್ತಾರಲಾ ॥೧೧॥

ಗಾಯನ ಶಾಸ್ತ್ರದಲ್ಲಿಯು ಸಾ, ರೆ. ಗ, ಮ, ಪ, ಧ, ನಿ (ಸಾ) ೭ ಇವು ಏಳು ಸ್ವರಗಳಿರುವವು. ಷಡ್ಜ (ಷಡಜ್) ಋಷಭ, ಗಾಂಧಾರ. ಮಧ್ಯಮ ಪಂಚಮ, ಧೈವತ, ಮತ್ತು ನಿಷಾಧ ಇವು ಏಳು ಸ್ವರಗಳ ಹೆಸರು ಗಳಿರುವವು. ಪ್ರಥಮ ಸಪ್ತಕದಲ್ಲಿಯು ಸಾ ದಿಂದ ಆರಂಭಮಾಡಬೇಕು. ಮತ್ತು ಎರಡನೆಯ ಸಪ್ತಕದಲ್ಲಿಯು ರೆ ಪರ್ಯಂತ (ವರೆಗೆ) ಸ್ವರ ಮಾತ್ರಕಾ ಪ್ರಯತ್ನದಿಂದ ಅಂದು ನೋಡಬೇಕು. (೪) ಈ ಪ್ರಕಾರ ಏರು (ಚಢತೆ) ಇಳವು (ಉತರತೆ) ರೀತಿಯಲ್ಲಿ ಸ್ವರ ಅಂದು ನೋಡಬೇಕು. ಹೀಗೆ ಅಂದದ್ದಾದರೆ ಪರಾವಾಣಿಯು [ಪರಾವಾಚಿಯು] ಬಾಜೂಕ್ಕೆ ಈಚೆಗೆ ಅಂದರೆ ಹೊಕ್ಕಳ (ನಾಭಿ) ಮೇಲೆ ಮತ್ತು ಪಶ್ಯಂತಿಯು ಕೆಳಗೆ ಅಂದರೆ ಹೃದಯದ ಕೆಳಗೆ ಸ್ವರಗಳ ಜನ್ಮಸ್ಥಾನವಿರುವದೆಂದು ನಿಮಗೆ ಕಾಡುಬರುವದು. ಇಲ್ಲಿಂದಲೇ ಸ್ವರ ಉತ್ಪನ್ನವಾಗುವದು. [ಪ್ರಕಟವಾದ ಧ್ವನಿ ಅಲ್ಲ, ಅತಿ ಸೂಕ್ಷ್ಮ ಅಥವಾ ಸ್ವರೋತ್ಪಾದನ ಶಕ್ತಿ ಸ್ಥಾನ] (೫) ಅತ್ಯಂತ ಶಾಂತ ಉಪದ್ರವ ರಹಿತರಾಗಿ ಸ್ವಸ್ಥವಾಗಿ ನಿವಾಂತ ಸ್ಥಳದಲ್ಲಿ ಕುಳಿತುಕೊಂಡು ಮನವನ್ನು ಸ್ವಸ್ಥವಿರಿಸಿಕೊಂಡು ಆ ಮೇಲೆ ಅಲ್ಲಿ ಇದನ್ನೆಲ್ಲ ಚನ್ನಾಗಿ ಲಕ್ಷ್ಯ ಕೊಟ್ಟು ನೋಡಬೇಕು. ಅಖಂಡವಾಗಿ ಬರುವಂಥ ಮತ್ತು ಹೋಗುವಂಥ ವಾಯುವಿನ ಮೇಲೆ ಅಂದರೆ ನಾಶಿಕದಿಂದ ಅಖಂಡವಾಗಿ ಬರಹೋಗುವ ಶ್ವಾಸ ಪ್ರಶ್ವಾಸದ ಕಡೆಗೆ ಲಕ್ಷ್ಯವಿಡಬೇಕು. (೬) ಏಕಾಂತದಲ್ಲಿ ಮೌನ ಹಿಡಿದು ಕೂಡಬೇಕು. ಮತ್ತು ಸಾವಧ ತನದಿಂದ ಶ್ವಾಸ ಪ್ರಶ್ವಾಸದ ಬರ ಹೋಗುವದರ ಕಡೆಗೆ ಲಕ್ಷ್ಯಕೊಡಬೇಕು. ಆಗ ಬರುವ ಅನುಭವ ಯಾವುದೆಂದರೆ ಶ್ವಾಸದ ಬರ ಹೋಗುವಿಕೆಯಲ್ಲಿ ಸೋಹಂ, ಸೋಹಂ ಹೀಗೆ ಶಬ್ದ ಆಗುವ ದೆಂಬುದು ತಿಳಿಯುವದು. (೭) ನಾವಾಗಿ ಏನೂ ಪ್ರಯತ್ನಮಾಡದೆ ಮತ್ತು ಏನೂ ಉಚ್ಚಾರಮಾಡದೆ ಈ ಯಾವ ಸೋಹಂ ಶಬ್ದ ನಮಗೆ ಕೇಳಬರುವದೋ ಇದು ಸಹಜ ಶಬ್ದವೆಂದು ತಿಳಿಯಬೇಕು. ನಮ್ಮ ಜನ್ಮದಿಂದ [ಹುಟ್ಟಿದಾಗಿನಿಂದ] ಇದು ನಮ್ಮ ಸಂಗಡವೇ [ಜೊತೆಗೇ] ಇರುವದು. ಈ ಸೋಹಂ ಶಬ್ದದ ಉಚ್ಚಾರದ ಸಪ್ಪಳ ಆದದ್ದು ನಮಗೆ ತಿಳಿಯುವದು. ಆದರೆ ಇದಕ್ಕೆ ಧ್ವನಿಯು ವ್ಯಕ್ತ ಸ್ವರೂಪವಿರುವದಿಲ್ಲ. (೮) ಸೋಹಂ. ಸೋಹಂ ಎಂದು (ಹೀಗೆ) ಆಗುವ ಸಹಜ ಶಬ್ದವನ್ನು ಯಾರು ಹಿಂದೆ ಒಗೆದು (ಹಾಕಿ) ಕೂಡುವರೋ ಅವರೇ ನಿಜವಾಗಿ ಖರೇ ಶ್ರೇಷ್ಠ ಮೌನಿಯೆಂದು ಹೇಳಬಹುದು, ಇದನ್ನು ಸಾಧಿಸುವದಕ್ಕಾಗಿಯೇ ಯೋಗಾಭ್ಯಾಸದ ಖಟಪಟಿ ಪ್ರಯತ್ನ ಇರುವದು. ಏಕಾಂತದಲ್ಲಿ ಕುಳಿತು ಸೋಹಂ ಸೋಹಂ ಈ ಶಬ್ದ ಕೇಳುತ್ತಿರುವಾಗ ಕೇಳುವವನಾದ ನಾನು ಬೇರೆ ಯಾಗಿಯೇ ಇರುವನು. (ಉಳಿಯುವನು) "ನಾನು ಸೋಹಂ ಶಬ್ದ ಕೇಳುತ್ತೇನೆ" ಅನ್ನುವ ಭಾವನೆ ಇರುವದು. ಎಲ್ಲಿಯುವರೆಗೆ ಈ ವೃತ್ತಿ ಭಾವನೆ ಇರುವದೋ ಅಲ್ಲಿಯುವರೆಗೆ ಮನದ ಲಯ ಆಗಿರುವದಿಲ್ಲ. ಈ ಮಾತನ್ನು ಸ್ಪಷ್ಟ ವಾಗಿ ತಿಳಿಯಬೇಕು. ಎಲ್ಲಿಯುವರೆಗೆ ಮನೋಲಯ ಆಗಿಲ್ಲವೋ ಅಲ್ಲಿಯುವರೆಗೆ (ಆ ವರೆಗೆ) ಖರೇ ಮೌನವು ಸಾಧಿಸಿಲ್ಲ ವೆಂಬುದು ಸ್ಪಷ್ಟವೇ ಇರುವದು. ಆದ್ದರಿಂದ ಸಹಜ ಶಬ್ದ ಕೇಳುವ ವೃತ್ತಿ [ಭಾವನೆ] ಯನ್ನು ನಾಶ [ಲೀನ] ಮಾಡಿ ಯಾವನು ನಿವೃತ್ತಿಯಾಗುವನೋ ಅವನೇ ಉತ್ತಮ ಮೌನಿ ಇರುವನು. ಇಂಥ ವೃತ್ತಿ ರಹಿತ ಶಾಂತ ಅವಸ್ಥೆಯನ್ನು ಸಾಧಿಸುವದಕ್ಕಾಗಿ ಯೋಗದ ಅಭ್ಯಾಸ ಮಾಡುವರು. (೯) ನಾವು ಮೌನ ಹಿಡಿದು ಏಕಾಂತದಲ್ಲಿ ಕುಳಿತೆವು. ಆಗ ಯಾವುದಾದರೊಂದು ಶಬ್ದ ಎದ್ದದ್ದರ [ಹುಟ್ಟಿದ್ದರ, ಉದ್ಭವಿಸಿದ್ದರ] ಭಾಸವಾಗುವದು. ನಾವು ಇದಕ್ಕೆ ಸೋಹಂ ಎಂದು ಅನ್ನುವೆವು ಶ್ರೀ ಸಮರ್ಥರ ಅಂಬೋಣವೇನಂದರೆ, ವಾಸ್ತವಿಕವಾಗಿ ಪ್ರತಿಯೊಂದು ಪ್ರಾಣಿಯು ಶರೀರದಲ್ಲಿ ಕೇವಲ ಶ್ವಾಸ ಪ್ರಶ್ವಾಸದ ಅಖಂಡ ಬಾ-ಹೋಗು [ಬರುವದು, ಹೋಗುವದು] ಚಾಲೂ ಇರುವದು ಈ ವಾಯುವಿನ ಬಾ. ಹೋಗು ಮಾಡುವ ಗತಿಗೆ ಯಾವ ಮಂದ ವ ಸೂಕ್ಷ್ಮ ಅವಾಜ [ಶಬ್ದ] ಇರುವದೋ ನಾವು ಅದಕ್ಕೆ ಸೋಹಂ ಸೋಹಂ ಹೀಗೆ ರೂಪಕೊಡುವೆವು. ನಮ್ಮ ಮನವು ಕಲ್ಪಿಸಿದಂಥ ಇದೊಂದು ಭಾಸವೇ ಇರುವದು. ಆದರೆ ಸೋಹಂ, ಸೋಹಂ, ಶಬ್ದವು ಮನಃ ಸಂಕಲ್ಪ ಶೂನ್ಯ ಸ್ಥಿತಿಯಲ್ಲಿ ಕೇಳಿಸುವದು. ಇದು ಕಲ್ಪನಾರಹಿತ ಸ್ಥಿತಿ ಯಲ್ಲಿಯು ಶಬ್ದ ಇರುವದು. (೧೦) ಶ್ವಾಸ ತೆಗೆದುಕೊಳ್ಳುವಾಗ ಸೋ ಅನ್ನುವ ಸೂಕ್ಷ್ಮ ಅವಾಜ ಆಗುವದು. ಮತ್ತು ಶ್ವಾಸ ಬಿಡುವಾಗ ಹಂ ಅನ್ನುವ ಸೂಕ್ಷ್ಮ ಅವಾಜ ಆಗುವದು. ಈ ರೀತಿಯಿಂದ ಅಖಂಡ ಸತತವಾಗಿ ಸೋಹಂ ಸೋಹಂ ಶಬ್ದ ನಡೆಯುವದು. ಇದರ ಮೇಲೆ ವಿಚಾರಮಾಡುವದಾದರೆ ಇದರ ವಿಸ್ತಾರವು ಬಹಳವಿರುವದು. (೧೧)

ದೇಹಧಾರಕ ತಿತುಕಾ ಪ್ರಾಣೀ । ಸ್ವೇತಜ ಉದ್ಭಿಜಾದಿಕ ಖಾಣೀ ।
ಸ್ವಾಸೋಸ್ವಾಸ ನಸ್ತಾ ಪ್ರಾಣೀ । ಕೈಸೇ ಜಿತೀ ॥೧೨॥

ಐಸೀ ಹೇ ಅಜಪಾ ಸಕಳಾಂಸೀ । ಪರಂತು ಕಳೇ ಜಾಣತ್ಯಾಸೀ ।
ಸಹಜ ಸಾಂಡೂನ ಸಾಯಾಸೀ । ಪಡೋ ಚ ನಯೇ ॥೧೩॥

ಸಹಜ ದೇವ ಅಸತ ಚಿ ಅಸೆ । ಸಾಯಾಸೇ ದೇವ ಫುಟೆ ನಾಸೆ।
ನಾಸಿವಂತ ದೇವಾಸ ವಿಶ್ವಾಸೇ । ಐಸಾ ಕವಣು ॥೧೪॥

ಜಗದಾಂತರಾಚೆ ದರ್ಶನ । ಸಹಜ ಘಡೆ ಅಖಂಡ ಧ್ಯಾನ ।
ಆತ್ಮ ಇಥೇನೇ ಜನ । ಸಕಳ ವರ್ತತೀ ॥೧೫॥

ಆತ್ಮಯಾಚೆ ಸಮಾಧಾನ । ಘಡೇ ತೈಸೇ ಚಿ ಆಶನ ।
ಸಾಂಡಲೇ ಫಿಟಲೇ ಸಮರ್ಪಣ । ತಯಾಸೀ ಚ ಹೋಯೆ ॥೧೬॥

ಅಗ್ನಿಪುರುಷ ಪೋಟೀ ವಸತೀ । ತಯಾಸ ಅವದಾನೇ ಸಕಳ ದೇತೀ ।
ಲೋಕ ಆಜ್ಞೆಮಧೇ ಅಸತೀ । ಆತ್ಮಯಾಚೇ ॥೧೭॥

ಸ್ವೇದಜ, ಉದ್ಭಿಜ, ಜಾರಜ, ಮತ್ತು ಅಂಡಜ [ಬೆವರಿನಿಂದ, ಭೂಮಿಯಲ್ಲಿಂದ, ಮೈಥುನದಿಂದ, ಅಂಡ-ತತ್ತಿಯಿಂದ] ಹೀಗೆ ನಾಲ್ಕು ಖಾಣಿಯಲ್ಲಿಯ ಆ ಯಾವ ದೇಹಧಾರಕ ಪ್ರಾಣಿಗಳು ಇರುವವೋ ಆ ಜೀವ ಪ್ರಾಣಿಗಳಿಗೆಲ್ಲ ಶ್ವಾಸೋಚ್ಛ್ವಾಸ ಇರುವದು. ಶ್ವಾಸೋಚ್ಛ್ವಾಸದ ಹೊರತು ದೇಹ ಧರಿಸಿದ ಯಾವ ಪ್ರಾಣಿಯೂ ಬದುಕುವದೇ ಇಲ್ಲ. ವನಸ್ಪತಿಗಳಿಗೆ ಸಹಿತ ಪ್ರಾಣವಾಯುವಿನ ಅಗತ್ಯವಿರುವದು. ಇದರಲ್ಲಿ ಜೀವನ ಕಲಾ ಇರುವ ದೆಂದು ಅನ್ನುವರು. ಇದನ್ನು ಸಂತ ಸಾಧುಗಳು ತಿಳಿದಿರುವರು. [೧೨] ಈ ರೀತಿಯಿಂದ ಸರ್ವ ಸಜೀವ ಪ್ರಾಣಿಗಳಲ್ಲಿ ಶ್ವಾಸ ಪ್ರಶ್ವಾಸದ ಕೂಡ ಅಜಪಾ ಚಾಲೂ ಇರುವದು. ಇದು [ಅನಾಯಾಸ-ವಿನಾಸಾಯಾಸ] ಆಗುವ ಅಜಪಾ ಇರುವದು. ಇದು ಕೇವಲ ತಿಳಿದವರಾದ ಜಾಣ ಜನರಿಗೆ ಆಕಲನವಾಗುವದು. ಸಹಜವಾಗಿ ತಾನೇ ನಡೆಯುವ ಈ ಅಜಪಾ ಬಿಟ್ಟು ಕಷ್ಟದ ಸಾಧನಗಳ ಮಾರ್ಗಕ್ಕೆ ಹೋಗಬೇಡಿರಿ. [ದಾ ದ. ೫ ಸ. ೪ ಓ. ೨೫-೩೧ ಮತ್ತು ದಾ. ದ ೧೭ ಸ. ೫ ಓ. ೨೪ ನೋಡಿರಿ] [೧೩] ದೇವನು ನಮ್ಮ ಸ್ವಸ್ವರೂಪನಿರುವದರಿಂದ ಅವನು ನಿಮ್ಮಲ್ಲಿಯೇ ಸತತ ಅತಿ ಸಹಜವಾಗಿ ಇದ್ದೇ ಇರುವನು. ಪ್ರಯತ್ನ ಮತ್ತು ಕಷ್ಟದಿಂದ ನಿರ್ಮಾಣಮಾಡಿದ ದೇವರುಗಳು ಕಳಚಿ ಬೀಳುವವು-ಒಡೆಯುವವು. ಮತ್ತು ನಾಶ ಹೊಂದುವವು. ಯಾರೂ ಈ ನಾಶವಾಗುವ ದೇವರ ಮೇಲೆ ವಿಶ್ವಾಸ ವಿಡುವದಿಲ್ಲ. ಆದ್ದರಿಂದ ವಿವೇಕಮಾಡಿರಿ. (ದಾ. ದ. ೧೪ ಸ. ೮ ಓ. ೨೫ ಮತ್ತು ಅದರ ಮುಂದಿನ ೮-೯ ಓವಿ ನೋಡಿರಿ) (೧೪) ಜಗತ್ತಿನಲ್ಲಿ ಅಂತರ್ಯಾಮಿಯಾಗಿ ಇರುವಂಥ ಅಂತರಾತ್ಮನ ದರ್ಶನವು ಸಹಜವಾಗಿ ಘಟಿಸುವದು. ಇವನ ಧ್ಯಾನವು ಅಖಂಡವಾಗಿ ಸತತವೂ ನಡೆಯಿತೆಂದರೆ ಅದೇ ಅವನ ದರುಶನವು. ಈ ಅಂತರಾತ್ಮನ ಇಚ್ಛೆಯಿಂದ ಯಾವತ್ತೂ ಪ್ರಾಣಿ ಮಾತ್ರರು ನಡೆಯುವರು. ಪ್ರತಿಯೊಂದು ಪ್ರಾಣಿಯ ಅಂತರ್ಯಾಮದಲ್ಲಿ ವಾಸಮಾಡುವಂತಹ ಅಂತರಾತ್ಮನ ದರ್ಶನ ಘಟಿಸು (ಆಗು)ವದಕ್ಕೆ ಅತಿ ಕಷ್ಟಪಡುವ ಕಾರಣವಿಲ್ಲ. ಹೀಗೆ ಶ್ರೀ ಸಮರ್ಥರ ಸ್ಪಷ್ಟ ಮತ ವಿರುವದು. ಈ ಅಂತರಾತ್ಮನ ಇಚ್ಛೆಯಿಂದಲೇ ಯಾವತ್ತೂ ಕಾರ್ಯಗಳು ಘಟಿಸುವವು. ಇದು ಸಂಪೂರ್ಣ ಖಾತ್ರಿ ಯಾಗಿ ಆತ್ಮನ ಅಸ್ತಿತ್ವದ ಅಖಂಡ ಅರಿವು (ತಿಳವಳಿಕೆ) ಇರುವದೇ ಅವನ ದರ್ಶನವಾಗಿದೆ. ಜಗತ್ತಿನಲ್ಲಿಯ ದೃಶ್ಯ ಪದಾರ್ಥಗಳ ವ್ಯವಹಾರದಲ್ಲಿ ನಾವು ನಮ್ಮ ದೇಹ ಬುದ್ಧಿಯಿಂದಾಗಿ ಅಥವಾ ಅಜ್ಞಾನದ ಕಾರಣದಿಂದಾಗಿ ಕಾರ್ಯ ಕಾರಣ ಭಾವವನ್ನು ಶೋಧಿಸಲಿಕ್ಕೆ ಹತ್ತುವೆವು. ಆದರೆ ಈ ಕಾರ್ಯ ಕಾರಣ ಭಾವವು ಭ್ರಾಮಕವಿದ್ದು ಸರ್ವದರ ಮೂಲ ಕಾರಣವು ಕೇವಲ ಒಬ್ಬನೇ ಒಬ್ಬನಾದ ಅಂತರಾತ್ಮನಾಗಿರುವನು, ಅನ್ನುವದರ ಅನುಭವ ಪಡೆಯಬೇಕು. ಇದೇ ಮುಖ್ಯವಾಗಿ ಸಾಧಕನ ಖರೇ ಸಾಧನವಿರುವದು. ಜಗತ್ತಿನಲ್ಲಿಯ ಆಗು ಹೋಗುಗಳೆಲ್ಲವೂ ಅಂತರಾತ್ಮನ ಇಚ್ಛೆಯಿಂದ ಘಟಿಸುವವು. ಹೀಗೆ ಪೂರ್ಣ ಖಾತ್ರಿ ಆಯಿತೆಂದರೆ ಆಗ ಉಪಾಸನಾದ ಫಲ ಫಲಿಸಿತೆಂದು ತಿಳಿಯಬೇಕು. ಅಜ್ಞಾನವನ್ನು ಹಿಂದೆ ಸರಿಸಿ ಜ್ಞಾನದೊಳಗೆ ಪ್ರವೇಶಮಾಡುವಲ್ಲಿ ಇದು ಮಹಾದ್ವಾರವಿರುವದು. (ದಾ. ದ. ೧೫ ಸ. ೧೦ ಓ. ೨೧ ನೋಡಿರಿ) (೧೫) ಅಂತರಾತ್ಮನಿಗೆ ಸಮಾಧಾನವಾಗುವಂತಹ, ಪ್ರಕೃತಿ ಪೋಷಕವಾಗುವಂತಹ ಆಹಾರಾದಿಗಳು ಪ್ರತಿಯೊಂದು ಜೀವಾತ್ಮಕಪ್ರಾಣಿಗೆ ದೊರಕುತ್ತಿರುವವು. ಇದರಂತೆ ಚೆಲ್ಲಿಹೋಗುವ, ಕಣ್ಮರೆಯಾಗುವ, (ಒಂದು ಬಾಜೂಕ್ಕೆ ಬಿದ್ದು ಬಿಡುವ) ಕಳೆದು ಹೋಗುವಂಥವುಗಳೆಲ್ಲವೂಕೂಡಾ ಅಂತರಾತ್ಮನಿಗೇ ಸಮರ್ಪಣವಾಗುವವು. (ಹಾಲು ಇತ್ಯಾದಿಗಳು ಚೆಲ್ಲಿ ಭೂಮಿಯ ಮೇಲೆ ಬಿದ್ದರೂ ಕೂಡಾ ಅಂತರಾತ್ಮನಿಗೇ ಸಲ್ಲುವವು) (೧೬) ಪ್ರತಿಯೊಂದು ಪ್ರಾಣಿಯ ಹೊಟ್ಟೆಯಲ್ಲಿ ಅಗ್ನಿ ನಾರಾಯಣನು ವಾಸಮಾಡಿರುತ್ತಾನೆ. ಆ ಜಠರಾಗ್ನಿಗೇ ಸರ್ವ ಜನರೂ ಆಹುತಿ ಕೊಡುವರು. ಈ ರೀತಿಯಿಂದ ಸರ್ವ ಪ್ರಾಣಿಗಳು ಆ ಅಂತರಾತ್ಮನ ಆಜ್ಞೆಯಲ್ಲಿಯೇ ನಡೆಯುವವು. ಹಸಿವೆ ಆಯಿ ತೆಂದರೆ ಆ ಕೂಡಲೇ ಅಂತರಾತ್ಮನು ಆಹಾರ ಬೇಡುವನು. ಅವನು ಬೇಡಿದ ಆಹಾರ ಅವನಿಗೆ ಕೊಡುವದು ಅಂದರೆ ಅವನ ಆಜ್ಞಾಪಾಲನ ಮಾಡುವದೇ ಆಗಿದೆ. (೧೭)

ಸಹಜ ದೇವ ಜಪಧ್ಯಾನೇ। ಸಹಜ ಚಾಲಣೇ ಸ್ತುತೀ ಸ್ತವನೇ।
ಸಹಜ ಘಡೇ ತೇ ಭಗವಾನ್ನೇ। ಮಾನ್ಯ ಕೀಜೇ ॥೧೮॥

ಸಹಜ ಸಮಜಾಯಾಕಾರಣೇ। ನಾನಾ ಹಟಯೋಗ ಕರಣೇ।
ಪರಂತು ಯೇಕಾಯೇಕೀ ಸಮಜಣೇ। ಘಡತ ನಾಹೀ ॥೧೯॥

ದ್ರವ್ಯ ಚುಕತೇ ದರಿದ್ರ ಯೇತೇ। ತಳೀ ಲಕ್ಷ್ಮೀ ವರೀ ವರ್ತತೇ।
ಪ್ರಾಣೀ ಕಾಯೆ ಕರೀಲ ತೇ। ಠಾಊಕೇ ನಾಹೀ ॥೨೦॥

ತಳಘರಾಮಧೇ ಉದಂಡ ದ್ರವ್ಯ। ಭಿಂತೀಮಧೇ ಘಾತಲೇ ದ್ರವ್ಯ।
ಸ್ತಂಭೀ ತುಳವಟೀ ದ್ರವ್ಯ। ಆಪಣ ಮಧೇ ॥೨೧॥

ಲಕ್ಷ್ಮೀಮಧ್ಯೇ ಕರಂಟಾ ನಾಂದೇ। ತ್ಯಾಚೇ ದರಿದ್ರ ಅಧೀಕ ಸಾಂದೇ।
ನವಲ ಕೇಲೇ ಪರಮಾನಂದೇ। ಪರಮಪುರುಷೇ ॥೨೨॥

ನಮ್ಮ ಅಂತರ್ಯಾಮದಲ್ಲಿ ಅಂತರಾತ್ಮಾ ಅತಿ ಸಹಜವಾಗಿ ಇರುವನು. ಇವನ ಜಪ, ಧ್ಯಾನ, ಸಹಜವಾಗಿ ನಡೆಯುತ್ತಿರಲೇ ಬೇಕು. ನಮ್ಮ ಸಹಜ ಮಾತುಕತೆ, ನಡೆದಾಟ, ಇದೇ ಇವನ ಸ್ತುತಿ ಮತ್ತು ಸ್ತವನವಾಗಬೇಕು. ಈ ರೀತಿಯಿಂದ ಯಾವುದು ಸಹಜವಾಗಿ ಘಟಿಸುವದೋ ಅದು ಭಗವಂತನಿಗೆ ಮಾನ್ಯವಾಗುವದು. ಸಹಜ ಅವಸ್ಥೆಯು ಪರಮಾರ್ಥದ ಧ್ಯೇಯವೆಂದು ತಿಳಿಯಬೇಕು. ಸಹಜತನದಲ್ಲಿ ಕರ್ತೃತನ ನಾನು ಅನ್ನುವ ಅಭಿಮಾನವಿರುವದಿಲ್ಲ. ಅದು ಆಗಬೇಕು. ಇದು ಆಗಬೇಕು. ಅದು ಆಗಬಾರದು, ಇದು ಆಗಬಾರದು. ಅನ್ನುವ ಆಗ್ರಹವಿರುವದಿಲ್ಲ. ಇದನ್ನು ಪಡೆಯಬೇಕು. ಮತ್ತು ಅದನ್ನು ಬಿಡಬೇಕು ಅನ್ನುವ ತಳಮಳ ಇಲ್ಲ. ನಾವು ನೀರಿಗೆ ಹೇಗೆ ದಾರೀ ಹಚ್ಚುವೆವೋ [ಕಾಲುವೆ ಹಾಕುವೆವೋ] ಹಾಗೇ ನೀರು ಯಾವ ತಕರಾರೂ ಇಲ್ಲದೇ ಹರಿದುಹೋಗುವದು. ಇದರಂತೆ ಜಗತ್ತಿನಲ್ಲಿಯ ಘಟನಾ ಪ್ರವಾಹದಲ್ಲಿಯೇ ದೇಹವನ್ನು ಬಿಟ್ಟುಬಿಡಬೇಕು. ಭಗವಂತನು ಅದನ್ನು ಎತ್ತ ಕಡೆಗೆ ಒಯ್ಯುವನೋ ಅತ್ತ ಕಡೆಗೆ ನಾವು ಅವನ ಹಿಂದೆ ಎಷ್ಟೂ ಬಬ್ಬಾಟವಿಲ್ಲದೇ ಹೋಗಬೇಕು. ಇದೇ ಸಹಜಾವಸ್ಥೆಯ ರಹಸ್ಯವಿರುವದು. ಎಂಥದೇ [ಯಾವುದೇ] ಪರಿಸ್ಥಿತಿ ಪ್ರಾಪ್ತವಾದರೂ ಕೂಡಾ ಇಂಥ ಮನುಷ್ಯರ ಸಮಾಧಾನ ಅಭಂಗ ಉಳಿಯುವದು. ಅರ್ಥಾತ್ ಸಮಾಧಾನವೇ ಸಮಾಧಾನವು. (೧೮) ಈ ಸಹಜಾವಸ್ಥೆಯು ಹೇಗಿರುವದು-ಏನಿರುವದು ಅನ್ನುವದನ್ನು ತಿಳಿಯುವದಕ್ಕಾಗಿ ಸಾಧಕನು ಅನೇಕ ಕಠಿಣ ಸಾಧನಗಳನ್ನು ಮಾಡಬೇಕಾಗುವದು. ಅನೇಕ ಪ್ರಕಾರದ ಸಾಧನ ಮಾಡದ ಹೊರತು, ಸಹಜಾವಸ್ಥೆ ಹೇಗಿರುವದೆಂಬುದು ಕೂಡಲೇ ಲಕ್ಷ್ಯಕ್ಕೆ ಬರುವದಿಲ್ಲ. ತಿಳಿಯುವದಿಲ್ಲ. ಇದಕ್ಕೆ ಯೋಗ್ಯ ಸದ್ಗುರುವಿನ ಮಾರ್ಗದರ್ಶನ ಬೇಕೇಬೇಕಾಗುವದು. (೧೯) ಸಾಮಾನ್ಯ ಜನರ ಸ್ಥಿತಿಗತಿ ಹೇಗಾಗಿದೆ ಅನ್ನುವದರ ವರ್ಣನೆಯನ್ನು ಒಂದು ದೃಷ್ಟಾಂತದಿಂದ ತಿಳಿಸಿಕೊಡುವರು: ದ್ರವ್ಯ ಇರುವದು, ಆದರೆ ಹಿರಿಯರು ಅದನ್ನು ಹುಗಿದು [ಮಣ್ಣಿನಲ್ಲಿ ತೆಗ್ಗು ತೆಗೆದು ಅದರಲ್ಲಿಟ್ಟು ಮುಚ್ಚಿದ್ದಾರೆ] ಇಟ್ಟಿದ್ದಾರೆ. ಅದರ ಸ್ಥಳ ಸಿಗದಾಗಿದೆ. ಅಥವಾ ಹಣ ಬೇರೆಡೆಗೆ ಸರಿದಿರುವದು. ಇದರಿಂದ ದ್ರವ್ಯದ ಅಭಾವವಾಗಿ ದ್ರವ್ಯ ಇದ್ದೂ ದಾರಿದ್ರ್ಯ ಬರುವದು ಮನುಷ್ಯ ಯಾವ ಸ್ಥಳದಲ್ಲಿ ಕೂಡುವನೋ ಅದರ ಕೆಳಗೇ ದ್ರವ್ಯವು ತಳದಲ್ಲಿ ಇರುವದು. ಇವನು ತಳವನ್ನು ಶೋಧಿಸದೇ ಬರೇ ಮೇಲೆ ಮೇಲೆ ಹುಡುಕುತ್ತಾನೆ. ಕಾಣದ ದ್ರವ್ಯದ ಮೇಲೆ ಕುಳಿತು ವ್ಯವಹಾರವನ್ನು ನಡೆಸುವನು. ಈ ಬಡಪಾಯಿಗೆ ಇದು ಗೊತ್ತಿರುವದಿಲ್ಲ. ಅಂತೆಯೇ ಇವನು ದರಿದ್ರತನವನ್ನು ಭೋಗಿಸುವನು. (೨೦) ನೆಲ ಮನೆಯಲ್ಲಿ ಬಹಳಷ್ಟು [ಭರಪೂರ] ದ್ರವ್ಯ ಇರುತ್ತದೆ. ಗೋಡೆ, ಕಂಬ. ತೊಲೆಗಳಲ್ಲೆಲ್ಲ ದ್ರವ್ಯವು ತುಂಬಿರುತ್ತದೆ. ಹೀಗೆ ಎದುರಿಗೇ ದ್ರವ್ಯ ತುಂಬಿದ್ದರೂ ಇವನು ಅಲ್ಲಿ ದರಿದ್ರತನದಿಂದ ಇರುವನು. [೨೧] ಸುತ್ತು ಮುತ್ತು, ಅಜು-ಬಾಜು ಸಂಪತ್ತು ತುಂಬಿದ್ದರೂ ಇಂಥದರಲ್ಲಿ ಭಾಗ್ಯಹೀನನಂತೆ ಒಬ್ಬ ಇರುತ್ತಾನೆ. ಆಗ ಇವನ ದರಿದ್ರತನ ಅಥವಾ ಭಾಗ್ಯಹೀನತೆಯು ಹೆಚ್ಚು ಒಡೆದು ಕಾಣುವದು. ಪರಮಾನಂದ ಸ್ವರೂಪನಾದ ಪರಮಾತ್ಮನು ಅದೆಷ್ಟು ದೊಡ್ಡ ಚಮತ್ಕಾರದ ಲೀಲೆ [ಮಾಡಿರುವನು] ತೋರುವನು. ಅಂತರಾತ್ಮಾ ದೇಹದ ಒಳಗೆ ಮತ್ತು ಹೊರಗೆ ಸರ್ವ ಕಡೆಗೂ ಭರಗಚ್ಚಾಗಿ-ಸಂಪೂರ್ಣವಾಗಿ ತುಂಬಿ ಇರುವನು. ಹೀಗಿದ್ದರೂ ಇವನ ಅಂದರೆ ಅಂತರಾತ್ಮನ ಇರುವನ್ನು ತಿಳಿಯದ ಕಾರಣದಿಂದಾಗಿ ಅರ್ಥಾತ್ ಅಜ್ಞಾನದಿಂದಾಗಿ ಮನುಷ್ಯನು ಜಗತ್ತಿನಲ್ಲಿ ದುಃಖ ಭೋಗಿಸುತ್ತ ದಿವಸ ಕಳೆಯುವನು. ಜನ್ಮ ಮರಣದ ಚಕ್ರದಲ್ಲಿ ಒಂದೇ ಸಮನೇ ತಿರುಗುವನು. ನಾನು ಹೇಳುವದರ ಮುಖ್ಯ ಭಾವಾರ್ಥ ಇಷ್ಟು ಇರುವದು. (೨೨)

ಯೇಕ ಪಾಹಾತೀ ಯೇಕ ಖಾತೀ। ಐಸೀ ವಿವೇಕಾಚೀ ಗತೀ।
ಪ್ರವೃತ್ತಿ ಅಥವಾ ನಿವೃತ್ತೀ। ಯೇಣೇ ಚಿ ನ್ಯಾಯೇ ॥೨೩॥

ಅಂತರೀ ವಸತಾ ನಾರಾಯೇಣೇ। ಲಕ್ಷ್ಮೀಸ ಕಾಯೆ ಉಣೇ।
ಜ್ಯಾಚೀ ಲಕ್ಷ್ಮೀ ತೋ ಆಪಣೇ। ಬಳಕಟ ಧರಾವಾ ॥೨೪॥

ಇತಿ ಶ್ರೀ ದಾಸಬೋಧೇ ಗುರುಶಿಷ್ಯ ಸಂವಾದೇ
‘ಅಜಪಾ ನಿರೂಪಣ’ ನಾಮ ಸಮಾಸ ಪಂಚಮ ॥

ವ್ಯವಹಾರದಲ್ಲಿ ಯಾವ ಪ್ರಕಾರ ಶ್ರೀಮಂತರು, ಐಶ್ವರ್ಯವನ್ನು ಭೋಗಿಸುವರು, ಮತ್ತು ದರಿದ್ರ ಮನುಷ್ಯರು ಇಂಥವರ ಕಡೆಗೆ ಕೇವಲ [ಬರೇ] ನೋಡುತ್ತ ನಿಲ್ಲುತ್ತಾರೆ. ಇದರಂತೆ ಪರಮಾರ್ಥದಲ್ಲಿ ಯಾವನು ವಿವೇಕಶೀಲ ಇರುವನೋ ಅವನು ಮಾತ್ರ ಭಗವಂತನ ಆನಂದ ಭೋಗಿಸುವನು. ಮತ್ತು ಯಾರು ವಿವೇಕಶೀಲರಿಲ್ಲವೋ ಅವರು ಅವನ ಕಡೆಗೆ ಆಶೆ ಬುರುಕತನದಿಂದ ಸುಮ್ಮನೆ ನೋಡುತ್ತ ನಿಲ್ಲುವರು. ವಿವೇಕಶೀಲ ಮನುಷ್ಯರು ದೃಶ್ಯದಿಂದ ನಿವೃತ್ತರಾಗಿ ಅಂತರಾತ್ಮನನ್ನು ಗುರ್ತಿಸುವರು. ಆದರೆ ಅವಿವೇಕಿ ಮನುಷ್ಯರು ದೃಶ್ಯದಲ್ಲಿ ಪ್ರವೃತ್ತರಾಗಿ ನಾನಾ ಪ್ರಕಾರದ ಪ್ರಾಪಂಚಿಕ ದುಃಖಗಳನ್ನು ಭೋಗಿಸುವರು. (೨೩) ಯಾರ ಅಂತರ್ಯಾಮದಲ್ಲಿ ಅಂತರಾತ್ಮನು ನಾರಾಯಣನಾಗಿ ವಸತಿ ಮಾಡುವನೋ ಅವರಿಗೆ ಲಕ್ಷ್ಮಿಯು ಕೊರತೆ ಬರುವದು ಶಕ್ಯವೇ ಇಲ್ಲ. ಆದ್ದರಿಂದ ಲಕ್ಷ್ಮಿಯು ಯಾರ ಅಧೀನಳಿರುವಳೋ ಆ ನಾರಾಯಣನನ್ನು ನಾವು ಗಟ್ಟಿಯಾಗಿ ಹಿಡಿದುಕೊಳ್ಳಬೇಕು, ಒಲಿಸಿಕೊಳ್ಳಬೇಕು, [ದಾ.ದ. ೫ ಸ ೬. ಓ ೪೦ ರಿಂದ ೫೮ ನೋಡಿರಿ] ಎಲ್ಲಿ ಶಿವನೋ ಅಲ್ಲಿ ಶಕ್ತಿ, ಎಲ್ಲಿ ನಾರಾಯಣನೋ ಅಲ್ಲಿ ಲಕ್ಷ್ಮಿ, ಎಲ್ಲಿ ಕೃಷ್ಣನೋ ಅಲ್ಲಿ ರಾಧೆ, ಎಲ್ಲಿ ರಾಮನೋ ಅಲ್ಲಿ ಸೀತೆ-ಈ ಪೌರಾಣಿಕ ಕಲ್ಪನೆಯು ಉಪಯೋಗಮಾಡಿಕೊಂಡು, ಶ್ರೀ ಸಮರ್ಥರಿಗೆ ಏನು ಹೇಳಬೇಕಾಗಿದೆ ಅಂದರೆ, ಯಾರು ಅಂತರಾತ್ಮನನ್ನು ವಶಪಡಿಸಿಕೊಂಡು ಬಿಟ್ಟಿರುವರೋ ಅಥವಾ ವಶ ಮಾಡಿಕೊಂಡಿರುವರೋ – ವಶಮಾಡಿಕೊಳ್ಳುವರೋ ಅವರಿಗೆ ಜೀವನದಲ್ಲಿ ಯಾವದೂ ಕಡಿಮೆ ಆಗುವದಿಲ್ಲ ಅಥವಾ ಯಾವ ಕೊರತೆ ಉಂಟಾಗುವದಿಲ್ಲ. (೨೪)

ಶ್ರೀ ದಾಸಬೋಧದ ಹದಿನೇಳನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ "ಅಜಪಾ ನಿರೂಪಣ ನಾಮ"ವೆಂಬ ಹೆಸರಿನ ಐದನೇ ಸಮಾಸವು ಮುಗಿದುದು.

● ●

### ದಶಕ ಸಪ್ತದಶ : ಸಮಾಸ ಷಷ್ಠಮ : ದೇಹಾತ್ಮ ನಿರೂಪಣ (ನುಡಿ ೩೨)

॥ಶ್ರೀರಾಮ॥ ಆತ್ಮಾ ದೇಹಾಮಧ್ಯೇ ಅಸತೋ। ನಾನಾ ಸುಖದುಃಖೇ ಭೋಗಿತೋ।
ಸೇವಟೀ ಶರೀರ ಸಾಂಡೂನ ಜಾತೋ। ಯೇಕಾಯೇಕೀ ॥೧॥

ಶರೀರೀ ಶಕ್ತಿ ತಾರುಣ್ಯಪಣೀ। ನಾನಾ ಸುಖೇ ಭೋಗೀ ಪ್ರಾಣೀ।
ಅಶಕ್ತ ಹೋತಾ ವೃದ್ಧಪಣೀ। ದುಃಖೇ ಭೋಗೀ ॥೨॥

ಮರಾವೆನಾ ಐಸೀ ಆವಡೀ। ಹಾತಪಾಯ ಖೋಡೂನ ಪ್ರಾಣ ಸೋಡೀ।
ನಾನಾ ದುಃಖೇ ಅವಘಡೀ। ವೃದ್ಧಪಣೀ ॥೩॥

ದೇಹ ಆತ್ಮಯಾಚೀ ಸಂಗತೀ। ಕಾಹೀಯೇಕ ಸುಖ ಭೋಗಿತೀ।
ಚರ್ಫಡಚರ್ಫಡೂನ ಜಾತೀ। ದೇಹಾಂತಕಾಳೀ ॥೪॥

ಐಸಾ ಆತ್ಮಾ ದುಃಖದಾಯೆಕ। ಯೇಕಾಚೆ ಪ್ರಾಣ ಘೇತೀ ಯೇಕ।
ಆಣೀ ಸೇವಟೀ ನಿರಾರ್ಥಕ। ಕಾಹೀಚ ನಾಹೀ ॥೫॥

ಐಸಾ ದೋ ದಿಸಾಚಾ ಭ್ರಮ। ತ್ಯಾಸ ಮ್ಹಣತೀ ಪರಬ್ರಹ್ಮ।
ನಾನಾ ದುಃಖಾಚಾ ಸಂಭ್ರಮ। ಮಾನೂನ ಘೇತಲಾ ॥೬॥

ದುಃಖೀ ಹೋಊನ ಚರ್ಫಡೂನ ಗೇಲೇ। ತೇಥೇ ಕೋಣ ಸಮಾಧಾನ ಜಾಲೇ।
ಕಾಹೀಯೇಕ ಸುಖ ಭೋಗಿಲೇ। ತೋ ಸವೇಚಿ ದುಃಖ ॥೭॥

## ದಶಕ ೧೭. ಸಮಾಸ ೬. ದೇಹಾತ್ಮ ನಿರೂಪಣ (ನುಡಿ ೩೨)

ನಿಶ್ಚಲ ಪರಬ್ರಹ್ಮ ಇದು ಸರ್ವ ಮಾನವೀ ಕಲ್ಪನೆಯ ಆಚೆಗೆ ಇರುವದು. ಮನುಷ್ಯನು ಜನ್ಮ ತಳೆದು ಭೂಮಿಯ ಮೇಲೆ ಬಂದ ಕೂಡಲೇ ಅವನಿಗೆ ಅನೇಕ ಪ್ರಕಾರದ ದುಃಖಗಳನ್ನು ಭೋಗಿಸಬೇಕಾಗುವದು. ಜೀವನವು ಅಪೂರ್ಣವಿರುವದರಿಂದ ಅಶಾಶ್ವತ ಇರುವದರಿಂದ ನಾವು ಇದರಲ್ಲಿ ಖರೇ ತನದಿಂದ ಶ್ರದ್ಧಾ ವಿಶ್ವಾಸವನ್ನು ಇಟ್ಟಿದ್ದಾದರೆ ಸುಖ ದುಃಖದ ಚಕ್ರವು ನಮ್ಮ ಬೆನ್ನು ಹತ್ತುತ್ತದೆ. ಅಂತರ್ಯಾಮದಲ್ಲಿ ವಾಸಮಾಡಿರುವಂಥ ಅಂತರಾತ್ಮನಿಗೂ ಕೂಡಾ ಸುಖ ದುಃಖದ ಭೋಗ ಅನುಭವಿಸಬೇಕಾಗುವದು. ನಾನು ದೇಹವೇ ಇರುವೆನು ಅನ್ನುವ ದೃಢ ಭಾವನೆಯಿಂದಾಗಿ ಪ್ರಾರಬ್ಧದಿಂದ ಬರುವಂಥ ಸುಖ ದುಃಖಗಳ ಭೋಗವನ್ನು ಉಪಾಯವಿಲ್ಲದೇ ಅಂತರಾತ್ಮನೂ ಭೋಗಿಸಬೇಕಾಗುವದು. ಜೀವಂತ ಇರುವವರೆಗೆ ಈ ಚಂಚಲ ಪ್ರಪಂಚವು ಮನುಷ್ಯರಿಗೆ ತೊಂದರೆ ಕಷ್ಟಕೊಡುವದೇ ಆಗಿರುವದು. ಇಷ್ಟೇ ಅಲ್ಲ ಅಂತ್ಯ ಕಾಲದಲ್ಲಿ ಕೂಡಾ ಇದು ಪ್ರಾಣಿಗಳನ್ನು ದೀನ ದರಿದ್ರ ದುಃಖಿತರನ್ನಾಗಿ ಮಾಡುವದು. ಆದ್ದರಿಂದ "ನಾನು ದೇಹವಲ್ಲ. ಅಂತರಾತ್ಮಾ ಇರುವೆನು" ಅನ್ನುವ ಅನುಭವ ಪ್ರಚೀತಿ ಪಡೆಯುವ ಅಭ್ಯಾಸ ಮಾಡಬೇಕು.

### ದಶಕ ೧೭. ಸಮಾಸ ೬. ದೇಹಾತ್ಮ ನಿರೂಪಣ (ನುಡಿ ೩೨)

ದೇಹದೊಂದಿಗೆ ಆತ್ಮದ ಸಂಬಂಧ ಬಂದಿತೆಂದರೆ ಮನುಷ್ಯ ಜೀವನದಲ್ಲಿ ಇವನಿಗೆ ಅನೇಕ ರೀತಿಯ ದುಃಖ ಕಷ್ಟಗಳನ್ನು ಭೋಗಿಸಬೇಕಾಗುವದು. ನಿಜವಾಗಿ ನೋಡಿದರೆ ಆತ್ಮನಿಗೆ ಸುಖ ದುಃಖಗಳೇ ಇರುವದಿಲ್ಲ. ಆದರೆ ದೇಹಾತ್ಮ ಯೋಗದಿಂದಾಗಿ ಇದಕ್ಕೆ, ಆತ್ಮಕ್ಕೆ ಸುಖ ದುಃಖಾದಿಗಳ ಅನುಭವ ಪಡೆಯಬೇಕಾಗುವದು: ಆತ್ಮನು ದೇಹವಲ್ಲಿರುವನು. ಮತ್ತು ಅನೇಕ ಪ್ರಕಾರದ ಸುಖ ದುಃಖಾದಿಗಳನ್ನು ಭೋಗಿಸುವನು. ಕೊನೆಗೊಂದು ದಿನ ಆತ್ಮನು ಒಮ್ಮಿಂದೊಮ್ಮೆಲೇ ದೇಹವನ್ನು ಇಲ್ಲಿಯೇ ಬಿಟ್ಟು ಹೋಗಿಬಿಡುವನು. (೧) ತಾರುಣ್ಯದಲ್ಲಿ ಶಕ್ತಿ ಇರುವದು. ಇದರ ಬಲದ ಜೋರಿನ ಮೇಲೆ ಮನುಷ್ಯ ಅನೇಕ ಸುಖಗಳನ್ನು ಭೋಗಿಸುವನು ಇಳಿಕೆಯ ವಯಸ್ಸು ಪ್ರಾರಂಭವಾಯಿತೆಂದರೆ [ವೃದ್ಧಾಪ್ಯ ಕಾಲ ಬಂದರೆ] ಶಕ್ತಿ ಕ್ಷೀಣವಾಗುವದು. ಆ ಮೇಲೆ ಅನೇಕ ದುಃಖಗಳನ್ನು ಭೋಗಿಸಬೇಕಾಗುವದು. (೨) ತಾನು ಸಾಯಬಾರದೆಂದು ಪ್ರತಿಯೊಬ್ಬನೂ ಮನಸಾ ಬಯಸುವನು. ಆದರೆ ಮರಣ ಕಾಲ ಬಂದಿತೆಂದರೆ ಕೈ ಕಾಲು ಝಾಡಿಸಿ ಮನುಷ್ಯನು ಪ್ರಾಣ ಬಿಡುವನು. ವೃದ್ಧಾಪ್ಯದಲ್ಲಿ ಅನೇಕ ಪ್ರಕಾರದ ದುಃಖದಿಂದ ಮನುಷ್ಯನು [ಅಡಕಾಯಿಸುವನು] ತ್ರಸ್ತನಾಗುವನು. (೩) ದೇಹ ಮತ್ತು ಆತ್ಮಾ ಇವುಗಳ ಮಿಲನ ಅಂದರೆ ಸಂಗತ ಮೈತ್ರಿ, ಕೂಡುವಿಕೆ ಆಯಿತೆಂದರೆ ಏನೋ ಕೆಲವೊಂದು ಸುಖ ಭೋಗಿಸಲು ಸಿಗುವದೆಂಬ ಮಾತೇನೋ ನಿಜವಿರುವದು. ಆದರೆ ದೇಹ ಬಿಡುವ ಹೊತ್ತಿನಲ್ಲಿ ಜೀವವು ಬಹಳ ಚಡಪಡಿಸಿ ವಿಲಿ ವಿಲಿ ಒದ್ದಾಡಿ ಸಾಯುವದು. [೪] ದೇಹಾತ್ಮಾಯೋಗವು ಈ ರೀತಿಯಲ್ಲಿ ದುಃಖ ಕೊಡುವಂತಹುದಾಗಿದೆ. ಜಗತ್ತಿನಲ್ಲಿ ಸ್ವಾರ್ಥದಿಂದಾಗಿ ಜನರು ಒಬ್ಬರನ್ನೊಬ್ಬರು ಪ್ರಾಣ ತೆಗೆದುಕೊಳ್ಳುವರು. ಆದರೆ ಕೊನೆಗೊಮ್ಮೆ ಇದೆಲ್ಲವೂ ವ್ಯರ್ಥವಾಗಿ ಹೋಗುವದು. ಇವುಗಳಿಂದೇನೂ ಉಪಯೋಗವಾಗುವದೆಲ್ಲ. (೫) ಹೀಗಿದೆ ಈ ಎರಡು ದಿವಸದ ದೃಶ್ಯದ ಭ್ರಮವು. ಇದಕ್ಕೇ ಪರಬ್ರಹ್ಮವೆಂದು ಅಂತರಾತ್ಮನಿಗೆ-ಆತ್ಮನಿಗೇ ಪರಬ್ರಹ್ಮವೆಂದು ತಪ್ಪಾಗಿ ಭ್ರಮಿಸಿ ತಿಳಿದು ಇವನ್ನೇ ಸರ್ವಸ್ವವೆಂದು ಗಟ್ಟಿಯಾಗಿ ನಂಬಿ ಜನರು ಬಾಳುವರು. ಈ ದುಃಖದ ಪಿಸ್ತಾರ ಅರ್ಥಾತ್ ಬೇಸರದ ಹೊಲಸು ಬಾಳಿಗೆ, ದುಃಖ ಸಾಗರಕ್ಕೆ ಜನರು ಸಂತಸದ ಸುಖ ದೊರಕುವ ಸಂಭ್ರಮವೆಂದು ನಂಬಿ ನಡೆಯುವರು. [೬] ದುಃಖ ಭೋಗಿಸಬೇಕಾದ್ದರಿಂದ ಚಟಪಡಿಸುತ್ತ ತ್ರಸ್ತಗೊಂಡು ಹೋಗುವ ಸರತಿ [ಪಾಳಿ] ಬಂದದ್ದಾದರೆ ಅದರಲ್ಲಿ ಏನೂ ಸಮಾಧಾನ ಸಿಗುವದಿಲ್ಲ. ಅಲ್ಪ ಸ್ವಲ್ಪ ಸುಖ ಭೋಗಿಸಲಿಕ್ಕೆ ಹೋದದ್ದಾದರೆ ಅದರ ಹಿಂದೆಯೇ ದುಃಖ ಬೆನ್ನಟ್ಟಿ ಬರುವದು. ಅದನ್ನೂ ಭೋಗಿಸಬೇಕಾಗುವದು. [೭]

ಜನ್ಮದಾರಭ್ಯ ಆಠವಾವೇ। ಮ್ಹಣಿಜೆ ಅವಘೇ ಪಡೇಲ ಠಾವೇ।
ನಾನಾ ದುಃಖ ಮೋಜಾವೇ। ಕಾಯೆ ಮ್ಹಣೋನೀ ॥೮॥
ಏಸೀ ಆತ್ಮಯಾಚೀ ಸಂಗತೀ। ನಾನಾ ದುಃಖೇ ಪ್ರಾಪ್ತ ಹೋತೀ।
ದೈನ್ಯವಾಣೇ ಹೋಊನ ಜಾತೀ। ಪ್ರಾಣಿಮಾತ್ರ ॥೯॥
ಕಾಹೀ ಆನಂದ ಕಾಹೀ ಖೇದ। ಜನ್ಮವರೀ ಪಡಿಲಾ ಸಂಮಂಧ।
ನಾನಾ ಪ್ರಕಾರೀ ವಿರುದ್ಧ। ತಡಾತೋಡೀ ॥೧೦॥
ನಿದ್ರಾಕಾಳೀ ಢೇಕುಣ ಪಿಸಾ। ನಾನಾ ಪ್ರಕಾರೀ ವಳಸಾ।
ನಾನಾ ಉಪಾಯೇ ವಳಸಾ। ತ್ಯಾಸ ಹೋಯೆ ॥೧೧॥
ಭೋಜನಕಾಳೀ ಮಾಶ್ಯಾ ಯೇತೀ। ನಾನಾ ಪದಾರ್ಥ ಉಂದೀರ ನೇತೀ।
ಪುಢೆ ತ್ಯಾಚೀ ಹಿ ಫಜೀತೀ। ಮಾರ್ಜರೇ ಕರಿತೀ ॥೧೨॥
ನಾ ಚಾಮುವಾ ಗೋಚಿಡ। ಗಾಂಧೇಲೇ ಕಾನಟೇ ಉದಂಡ।
ಯೇಕಾಸ ಯೇಕ ಚರ್ಫಡ। ದೋಹಿಕಡೆ ॥೧೩॥
ವಿಂಚು ಸರ್ಪ ವಾಗ ರಿಸೇ। ಸುಸರೀ ಲಾಂಡಿಗೆ ಮಾಣಸಾಸ ಮಾಣಸೇ।
ಪರಸ್ಪರೇ ಸುಖ ಸಂತೋಷೇ। ಯೇ ಕಹಿ ನಾಹೀ ॥೧೪॥
ಚೌರ್‍ಯಾಸಿ ಲಕ್ಷ ಉತ್ಪತ್ತೀ। ಯೇಕಾಸ ಯೇಕ ಭಕ್ಷಿತೀ।
ನಾನಾ ಪೀಡಾ ದುಃಖಣೇ ಕಿತೀ। ಮ್ಹಣೌನ ಸಾಂಗಾವೇ ॥೧೫॥
ಏಸೀ ಅಂತರಾತ್ಮ್ಯಾಚೀ ಕರಣೀ। ನಾನಾ ಜೀವ ದಾಟಲೇ ಧರಣೀ।
ಪರಸ್ಪರೇ ಸಂಮ್ಹಾರಣೀ। ಯೇಕಯೇಕಾಂಚೀ ॥೧೬॥
ಅಖಂಡ ರಡತೀ ಚರ್ಫಡಿತೀ। ವಿವಳವಿವಳೋ ಪ್ರಾಣ ದೇತೀ।
ಮೂರ್ಖ ಪ್ರಾಣೀ ತ್ಯಾಸ ಮ್ಹಣತೀ। ಪರಬ್ರಹ್ಮ ॥೧೭॥
ಪರಬ್ರಹ್ಮ ಜಾಣಾರ ನಾಹೀ। ಕೋಣಾಸ ದುಃಖ ದೇಣಾರ ನಾಹೀ।
ಸ್ತುತಿ ನಿಂದಾ ದೋನೀ ನಾಹೀ। ಪರಬ್ರಹ್ಮೀ ॥೧೮॥
ಉದಂಡ ಶಿವ್ಯಾ ದಿಧಲ್ಯಾ। ತಿತುಕ್ಯಾ ಅಂತರಾತ್ಮ್ಯಾಸ ಲಾಗಲ್ಯಾ।
ವಿಚಾರ ಪಾಹತಾ ಪ್ರತ್ಯಯಾ ಆಲ್ಯಾ। ಯಥಾತಥ್ಯ ॥೧೯॥

ಹುಟ್ಟಿದಾಗಿನಿಂದ ನಮ್ಮ ಜೀವನದ ಬಗ್ಗೆ ನಾವೇ ನೆನಪಿಸಿಕೊಳ್ಳಬೇಕು. ಅಂದರೆ ಎಲ್ಲವೂ ತಾನೇ ತಾನಾಗಿ ಲಕ್ಷ್ಯದಲ್ಲಿ ಬರುವದು. ನಾವು ಎಷ್ಟೊಂದು ದುಃಖ ಭೋಗಿಸಿರುವೆವೆಂದರೆ ಅದರ ಲೆಕ್ಕಮಾಡಲಿಕ್ಕೆ ಆಗದಷ್ಟು ದುಃಖ ಭೋಗಿಸಿ ಆಗಿರುವದು. [ಇನ್ನು ಮುಂದೂ ಭೋಗಿಸುವದು ಇದ್ದೇ ಇದೆ.] (೮) ದೇಹದೊಂದಿಗೆ ಆತ್ಮನ ಸಂಗತಿ ಸಂಬಂಧ, ಸಂಪರ್ಕ ಈ ಬಗೆಯಲ್ಲಿ ಇರುವದು. ಅಂತೂ ದೇಹಾತ್ಮ ಯೋಗದಿಂದ ಜೀವಕ್ಕೆ ಅನೇಕ ದುಃಖ ಗಳನ್ನು ಭೋಗಿಸಬೇಕಾಗುವದು. ಆಯುಷ್ಯದ ಕೊನೆಗೆ ಯಾವತ್ತೂ ಪ್ರಾಣಿಗಳು ದೀನ, ಹೀನವಾಗುವವು. ಚಟ ಪಡಿಸುತ್ತ ಸಾಯುವವು. [೯] ಕೆಲವೊಂದು ಸುಖ ಮತ್ತು ಕೆಲವೊಂದು ದುಃಖ ಹೀಗೆ ಜನ್ಮದೊಂದಿಗೆ ಸಂಬಂಧ ವಿರುವದು. ಇದರೊಳಗೆ [ಇದರಲ್ಲಿ] ನಾನಾ ಪ್ರಕಾರದಲ್ಲಿ ಮನಸ್ಸಿನ ವಿರುದ್ಧದ ಕಾರ್ಯಗಳು ಘಟಿಸುವವು. ಇದರಂತೆ ಅನೇಕ ಜನರ ವಿಯೋಗವಾಗುವದು. (೧೦) ಮಲಗುವಾಗ, ಮಲಗಿದಾಗ ಸಹ, ಸ್ವಸ್ಥತನವಿರುವದಿಲ್ಲ ತಗಣೆ, ಚಿಕ್ಕಾಡ ಇತ್ಯಾದಿಗಳು ಅನೇಕ ಪ್ರಕಾರದಲ್ಲಿ ಮನುಷ್ಯನಿಗೆ ಕಚ್ಚಿ ತೊಂದರೆ ಕೊಡುವವು. ಮನುಷ್ಯನು ಇದಕ್ಕೆ ಪ್ರತೀಕಾರ ಸಹ ಮಾಡುವನು. ಆಗ ಇವನಿಗೂ ಕೂಡಾ ಅನೇಕ ಪ್ರಕಾರದಿಂದ ಮನಸ್ಸಿಗೆ ತೊಂದರೆಯಾಗುವದು. [ಇವು ಉಪವಾಸವಿರಬೇಕಾಗುವದು. ಅಥವಾ ಸಾಯುವವು. [೧೧] ಊಟಕ್ಕೆ ಕುಳಿತ ಕೂಡಲೇ ನೊಣಗಳು ಬಂದು ತೊಂದರೆ ಕೊಡುವವು. ಇಲಿಗಳು ನಮ್ಮ ಎಷ್ಟೋ ಪದಾರ್ಥಗಳನ್ನು ತೆಗೆದುಕೊಂಡು ಹೋಗಿ ನಾಶ ಮಾಡುವವು. ಆ ಮೇಲೆ ಬೆಕ್ಕು ಅವುಗಳನ್ನು ಹಿಡಿದು ಫಜೀತಿಮಾಡುವದು. ಅವುಗಳಿಗೆ ತೊಂದರೆಕೊಡುವದು. (೧೨) ಹೇನು, ಕೂರಿ, ಶೀರು, ಇವು ಶರೀರದ ಚರ್ಮದಲ್ಲಿ, ತಲೆಯಲ್ಲಿ, ಸೇರಿಕೊಂಡು ತೊಂದರೆಕೊಡುವವು. ಕುರುಡು ನೊಣ, ಕಣಜೀರಿಗಿ, ಕಾನಟೆ ಅನ್ನುವ ಒಂದು ಸರ್ಪ [ವಿಷಾರಿ ಹುಳು] ಹೀಗೆ ನಾನಾ ಪ್ರಕಾರದ ಪ್ರಾಣಿಗಳು ಇರುವವು. ಇವುಗಳಲ್ಲಿ ಸಹ ಪರಸ್ಪರ ವಿಷಯದಲ್ಲಿ ವೈರತ್ವವಿರುವದು. ಇದರಿಂದ ಯಾವತ್ತರಿಗೂ ದುಃಖ ಭೋಗಿಸಬೇಕಾ ಗುವದು. [೧೩] ಚೇಳು, ಸರ್ಪ, ಹುಲಿ, ಕರಡಿ, ಮೊಸಳಿ, [ನಕ್ರ] ತೋಳ ಮತ್ತು ಮನುಷ್ಯರು ಈ ಎಲ್ಲ ಪ್ರಾಣಿ ಗಳಲ್ಲಿ ಪರಸ್ಪರರ ಬಗ್ಗೆ ಪ್ರೇಮ, ಸುಖ, ಮತ್ತು ಸಂತೋಷ ಇದ್ದದ್ದು ಎಲ್ಲಿಯೂ ಕಂಡುಬಂದಿಲ್ಲ. ಬರುವದೂ ಇಲ್ಲ. (೧೪) ಜಗತ್ತಿನಲ್ಲಿ ೮೪ ಲಕ್ಷ ಪ್ರಾಣಿಗಳು ಇರುವವು. ಆದರೆ ಇವು ಒಂದನ್ನೊಂದು ತಿನ್ನುವವು. ವೈರ ಮಾಡುವವು. ಜಗತ್ತಿನಲ್ಲಿ ಪೀಡೆ ಕಷ್ಟ, ತ್ರಾಸು ಮತ್ತು ದುಃಖದ ಪ್ರಕಾರಗಳು ಅನಂತವಿರುವವು. ಅವೆಲ್ಲವುಗಳ ವರ್ಣನೆಯನ್ನು ಮಾಡುವದು ಅಶಕ್ಯ ಕೋಟಿಯದು [ಅಸಾಧ್ಯವಾದದ್ದು] ಇರುವದು, (ದಾ.ದ.೨೦ ಸ.೬ ಓ.೪-೫ ನೋಡಿರಿ) [೧೫] ಅಂತರಾತ್ಮನು ಒಮ್ಮೆ ದೇಹದಲ್ಲಿ ಇರಲು ಬಂದನೆಂದರೆ ಅವನಿಗೆ ಎಲ್ಲ ತರಹದ ದುಃಖವನ್ನು ಭೋಗಿಸಬೇಕಾಗುವದು. [ಶಿವ್ಯಾಶಾಪ] ಬೈಗಳ ಪೈಗಳ ಸ್ವೀಕರಿಸಬೇಕಾಗುವದು ಆದರೆ ಪರಬ್ರಹ್ಮ ಮಾತ್ರ ಇವೆಲ್ಲವು ಗಳಿಂದ [ಈ ಖಟಾಟೋಪದಿಂದ] ಅತೀತ [ಬೇರೆ] ಇರುವನು: ಈ ಅಂತರಾತ್ಮನ ಆಟ [ಕಾರಸ್ಥಾನ] ಬಹು ವಿಲಕ್ಷಣ ವಿರುವದು. ಈ ಭೂಮಿಯ ಮೇಲೆ ಅನೇಕ ಪ್ರಕಾರದ ಜೀವಗಳು ಸಾಕಷ್ಟು ತುಂಬಿರುವವು. ಅವುಗಳ ಗದ್ದಲವೂ ಇರುವದು. ಇವು ಪರಸ್ಪರರ ಸಂಹಾರವನ್ನೂ ಮಾಡುವವು. [೧೬] ಜೀವನದಲ್ಲಿ [ಇರುವವರೆಗೆ] ಮನುಷ್ಯನು ದುಃಖದಿಂದ ಒಂದೇಸವನೆ ಅಳುವನು. ಚಟಪಡಿಸುವನು. ದುಃಖದಿಂದ ಬೆಂದು ಬೆಂಡಾಗಿ ಕೊನೆಗೆ ಪ್ರಾಣ ಬಿಡುವನು. ಇಂಥ ಈ ದುಃಖಮಯ ಜೀವಾತ್ಮನಿಗೆ [ಅಂತರಾತ್ಮನಿಗೆ] ಮೂರ್ಖ ಜನರು ಪರಬ್ರಹ್ಮ ಎಂದು ಅನ್ನುವರು. ಮತ್ತು ಮನ್ನಿಸುವರು. [೧೭] ಪರಬ್ರಹ್ಮ ಶಾಶ್ವತ ಇರುವವನಾದ್ದರಿಂದ ಅವನು ಎಂದೂ ಹೋಗುವದಿಲ್ಲ. ಇವನು ಯಾರಿಗೂ ದುಃಖ ಕೊಡುವದಿಲ್ಲ. ಇವನಿಗೆ ನಿಂದೆ ಹಾಗೂ ಸ್ತುತಿ ಇವೆರಡೂ ಸ್ಪರ್ಶಮಾಡುವದಿಲ್ಲ. [ಮಾಡಲಿಕ್ಕೆ ಆಗುವದೇ ಇಲ್ಲ.] (೧೮) ಒಬ್ಬನು ಬಹಳಷ್ಟು ಬೈಗಳ ಬೈದನು. [ಅಂದನು] ಅಂದರೆ ಇವೆಲ್ಲವೂ ಅಂತರಾತ್ಮನಿಗೆ ಹತ್ತುವವು. ಆದರೆ ಪರಬ್ರಹ್ಮನಿಗಲ್ಲ. ಯಾಕೆಂದರೆ ಇವನು ಅಂತರಾತ್ಮನು ದೇಹಾಭಿಮಾನಿ ಇದ್ದು ದೇಹದಲ್ಲಿ ವಾಸ ಮಾಡಿರುವನಾದ್ದರಿಂದ ಈ ಜೀವ ಚೈತನ್ಯನಿಗೆ ಹತ್ತುವವು. ವಿಚಾರಮಾಡಿ ನೋಡಿದರೆ ಈ ಮಾತು ಪೂರ್ಣ ಸರಿ ಹೋಗುವದು. ಇದು ಅನುಭವಕ್ಕೆ ಬಂದ ಮಾತಾಗಿದೆ. ನಿಮಗೂ ಅನುಭವ ಬರುವದು. ಆದರೆ ವಿವೇಕ ವಿಚಾರ ಮಾಡಿ ನೋಡಬೇಕು. (೧೯)

ಧಗಡೀಚಾ ಬಟಕೀಚಾ ಲವಂಡೀಚಾ । ಗಧಡೀಚಾ ಕುತರೀಚಾ ಮೊಂಗಳೀಚಾ।
ಏಸಾ ಹಿಶೇಬ ಸಿನ್ಯಾಚಾ । ಕಿತೀ ಮ್ಹಣೋನಿ ಸಾಂಗಾವಾ ॥೨೦॥

ಇತುಕೇ ಪರಬ್ರಹ್ಮೀಂ ಲಾಗೇನಾ । ತೇಥೇ ಕಲ್ಪನಾ ಚಿ ಚಾಲೇನಾ ।
ತಡಾ ತೋಡೀಚೇ ಜ್ಞಾನ ಮಾನೇನಾ । ಕೋಣೇಯೇಕಾಸೀ ॥೨೧॥

ಸೃಷ್ಟೀಮಧೇ ಸಕಳ ಜೀವ । ಸಕಳಾಸ ಕೈಚೇ ವೈಭವ ।
ಯಾಕಾರಣೇ ಠಾಯಾಠಾವ । ನಿರ್ಮಿಲಾ ದೇವೇ ॥೨೨॥

ಉದಂಡ ಲೋಕ ಬಾಜಾರೀಚೇ । ಜೇ ಜೇ ಆಲೇ ತೇ ತೇ ವೇಚೇ ।
ಉತ್ತಮ ತಿತುಕೇ ಭಾಗ್ಯಾಚೇ । ಲೋಕ ಘೇತೀ ॥೨೩॥

ಯೇಣೇ ಚಿ ನ್ಯಾಯೇ ಅನ್ನವಸನ । ಯೇಣೇ ಚಿ ನ್ಯಾಯೇ ದೇವತಾರ್ಚನ ।
ಯೇಣೇ ಚಿ ನ್ಯಾಯೇ ಬ್ರಹ್ಮಜ್ಞಾನ। ಪ್ರಾಪ್ತವ್ಯಾಸಾರಿಖೇ ॥೨೪॥

ಅವಘೇ ಚ ಲೋಕ ಸುಖೀ ಅಸತೀ । ಸಂಸಾರ ಗೋಡ ಕರೂನ ನೇತೀ।
ಮಹಾರಾಜೇ ವೈಭವ ಭೋಗಿತೀ । ತೇ ಕರಂಟ್ಯಾಸ ಕೈಚೇ ॥೨೫॥

ಪರಂತು ಅಂತೀ ನಾನಾ ದುಃಖೇ । ತೇಥೇ ಹೋತೇ ಸಗಟ ಸಾರಿಖೇ ।
ಪೂರ್ವೀ ಭೋಗಿಲೀ ನಾನಾ ಸುಖೇ । ಅಂತೀ ದುಃಖ ಸೋಸವೇನಾ ॥೨೬॥

ಕಠಿಣ ದುಃಖ ಸೋಸವೇನಾ । ಪ್ರಾಣ ಶರೀರ ಸೋಡೀನಾ ।
ಮೃತ್ಯುದುಃಖ ಸಗಟ ಜನಾ । ಕಾಸಾವೀಸ ಕರೀ ॥೨೭॥

ಸೂಳೆಯ ಮಗನೇ, ಕಸ ಮುಸುರೆಯವಳ ಮಗನೇ, ವ್ಯಭಿಚಾರಿಯ ಮಗನೇ, ಚಾಂಡಾಲ ಪಾಪಿಯ ಮಗನೇ, ಚಾಂಡಾಲ ಸೂಳೆಯ ಮಗನೇ, ಅಮಂಗಲದವಳ ಮಗನೇ, ದಾಸಿಯ ಮಗನೇ, ಕತ್ತೆಯ ಮಗನೇ, ಶ್ವಾನ ಸೂಳೆಯ ಮಗನೇ (ನಾಯಿಯ ಮಗನೇ), ಹೀಗೆ ಬಹಳಷ್ಟು ಬೈಗಳುಗಳು ಇರುವವು. ಅವನ್ನೆಲ್ಲ ಇಲ್ಲಿ ಹೇಳಲಿಕ್ಕೆ ಆಗುವದಿಲ್ಲ. (೨೦) ಆದರೆ ಇವುಗಳಲ್ಲಿ ಯಾವವೂ ಎಷ್ಟೂ ಪರಬ್ರಹ್ಮನಿಗೆ ಹತ್ತುವದಿಲ್ಲ. ಸ್ಪರ್ಶಮಾಡಲಿಕ್ಕೆ ಶಕ್ಯವಾಗುವದಿಲ್ಲ. ಪರಬ್ರಹ್ಮನಲ್ಲಿ ಮಾನವೀ ಕಲ್ಪನಾ ಎಷ್ಟೂ ನಡೆಯುವದಿಲ್ಲ. ಅಸಂಬದ್ಧ ಅಂದರೆ ವಿಸಂಗತ, ಭೇದವುಳ್ಳ ಜ್ಞಾನವು ಯಾರಿಗೂ ಮಾನ್ಯವಾಗುವದಿಲ್ಲ. ಸುಖ, ದುಃಖ, ನಿಂದಾ, ಸ್ತುತಿ, ಬೈಗಳು, ಹೊಗಳುವದು ಇತ್ಯಾದಿ ವಿಷಯಗಳೆಲ್ಲವೂ ದೃಶ್ಯದ ಅಥವಾ ಚಂಚಲದ ಕ್ಷೇತ್ರದಲ್ಲಿಯೇ ಇರುವವು. ಇವುಗಳ ಸಂಬಂಧವನ್ನು ಪರಬ್ರಹ್ಮನಿಗೆ ಹಚ್ಚುವದೆಂದರೆ ಅದು ಅಸಂಬದ್ಧ–ತಿಳಿಗೇಡಿ ಜ್ಞಾನವಾಗುವದು. ಇದು ತಿಳಿದವರಾರಿಗೂ ಪಟಾಯಿಸುವದಿಲ್ಲ. (೨೧) ಜಗತ್ತಿನಲ್ಲಿಯ ಮನುಷ್ಯ ಎಂದು ಅನ್ನುವ ಮನುಷ್ಯರೆಲ್ಲರೂ ಸಮಾನರೇ ಇರುವರು. ಇದರಲ್ಲಿ ಯಾವ ಸಂಶಯವೂ ಇಲ್ಲ. ಆದರೂ ಪ್ರತಿಯೊಬ್ಬರಲ್ಲಿ ನಿಯತಿ [ದೈವ, ಅದೃಷ್ಟ, ವಿಧಿ, ನಿಯಮ, ನಿಸರ್ಗ] ಎಂದು ಅನ್ನುವದೊಂದು ಇರುವದು. ಅದು ಯಾವ ಮನುಷ್ಯನ ಕೈಯಿಂದ ಯಾವ ಕಾರ್ಯ ಎಷ್ಟರವರೆಗೆ ಆಗಬೇಕೆಂಬುದರ ಮಾಪನ್ನು-ಅಳತೆಯನ್ನು ತಿಳಿಸಿಕೊಡುವದು. ಜ್ಞಾನಿ ಜನರು ನಿಯತಿಯನ್ನು ಗುರುತಿಸಿ ತಿಳಿದು ನಡೆಯುವರು: ಎಲ್ಲ ಪ್ರಾಣಿಗಳೂ ಈ ಭೂಮಿಯ ಮೇಲೆಯೇ ಜೀವಿಸುವವು. ಆದರೆ ಅವೆಲ್ಲವೂ ವೈಭವವನ್ನು ಭೋಗಿಸುವದಿಲ್ಲ. ಎಲ್ಲಕ್ಕೂ ವೈಭವ ಭೋಗಿಸಲಿಕ್ಕೆ ಸಿಗುವದಿಲ್ಲ. ಆಗುವದಿಲ್ಲ. ಇದರ ಅರ್ಥವೇನೆಂದರೆ ಭಗವಂತನು ಪ್ರತಿಯೊಬ್ಬರ ಸ್ಥಾನವನ್ನು ಠರಾವಿಸಿ ಗೊತ್ತುಪಡಿಸಿಯೇ ಇವರನ್ನು ನಿರ್ಮಿಸಿದ್ದಾನೆ. ಭೂಮಿಗೆ ಕಳಿಸಿದ್ದಾನೆ (೨೨) ಬಾಜಾರ, ಸಂತೆ ನೆರೆಯಿತೆಂದರೆ ಕೂಡಿತೆಂದರೆ ಬಹು ಜನರು ಅಲ್ಲಿ ಕೂಡುವರು. ಇವರಲ್ಲಿ ಬಹಳಷ್ಟು ಜನರು ಹೇಗಿರುವರೆಂದರೆ ಮಾರಲಿಕ್ಕೆ ಬಂದಂಥ ಯಾವತ್ತೂ ಮಾಲನ್ನು ಇವರು ಮಾರಲಿಕ್ಕೆ ತೆಗೆದುಕೊಳ್ಳುವರು. ಆದರೂ ಹೀಗೆ ಖರೀದಿಸಿದವರಲ್ಲಿ ಯಾರು ಭಾಗ್ಯವಾನರಿರುವರೋ ಅವರು ಮಾತ್ರ ಉತ್ತಮ ವಸ್ತುಗಳನ್ನು ಶೋಧಿಸಿ ಖರೀದಿಸಿ ತೆಗೆದುಕೊಂಡು ಹೋಗುವರು. ಇದರಂತೆ ಈ ಸಂಸಾರವೆಂಬ ಬಜಾರದಲ್ಲಿ ಬಹು ಜನ ಸಮಾಜವು ಪ್ರಪಂಚ ವಸ್ತುವಿನ ಬೆನ್ನು ಹತ್ತಿ ಓಡುವರು. ಧಾವಿಸುವರು. ಆದರೆ ಸ್ವಲ್ಪ ಜನ ಪುಣ್ಯವಾನರು ಭಗವಂತನೆಂಬ ಉತ್ತಮ ವಸ್ತು–ಖರೇ ವಸ್ತುವಿನ ಬೆನ್ನು ಹತ್ತಿ ಅವನ್ನು ಪ್ರಾಪ್ತಿಮಾಡಿಕೊಳ್ಳುವರು [ದಾ.ದ. ೧೦ ಸ. ೧೦ ಓ. ೬೫ ನೋಡು]. ಬಹುಜನರು ಅನಾತ್ಮದ ಕಡೆಗೆ ಓಡುವರು. (೨೩) ಅನ್ನ, ವಸ್ತ್ರ, ದೇವ ಪೂಜಾ, ಮತ್ತು ಬ್ರಹ್ಮಜ್ಞಾನ ಇವುಗಳ ಬಗ್ಗೆ ಸಹ ಮೇಲೆ ಹೇಳಿದ ಮಾತೇ ಲಾಗೂ ಬೀಳುವದು. [೧] ಮನುಷ್ಯರ ಅನ್ನ, ವಸ್ತ್ರ, [೨] ಇವರ ಕೈಯಿಂದ ಮಾಡಲ್ಪಡುವ ದೇವತಾರ್ಚನೆ [೩] ಮತ್ತು ಇವರಿಗೆ ಪ್ರಾಪ್ತವಾಗುವಂತಹ ಬ್ರಹ್ಮಜ್ಞಾನ ಈ ಮೂರೂ ವಿಷಯಗಳು ನಿಯತಿಯ ಮೇಲೆ ಅವಲಂಬಿಸಿರುವವು. (೨೪) ಜಗತ್ತಿನಲ್ಲಿ ಎಲ್ಲ ಜನರೂ ದೈವವಿದ್ದಂತೆ ಸುಖಿಗಳೇ ಇರುವರು ತಮ್ಮ ಸಂಸಾರ ಹೇಗಿರುವದೋ ಅದಕ್ಕನುಣವಾಗಿ ಅದನ್ನೇ ಸವಿಮಾಡಿಕೊಂಡು ಸುಖಿಗಳೆಂದುಕೊಳ್ಳುವರು. ಆದರೆ ಮಹಾರಾಜಾದಿಗಳು ಯಾವ ವೈಭವವನ್ನು ಭೋಗಿಸುವರೋ ಅದು ಈ ಅಭಾಗ್ಯರ ದೈವಹೀನರ ಪಾಲಿಗೆ ಬರುವದಿಲ್ಲ. (೨೫) ಮನುಷ್ಯನಿಗೆ ಕೊನೆಯಲ್ಲಿ ಅನೇಕ ಪ್ರಕಾರದ ದುಃಖ ಭೋಗಿಸಬೇಕಾಗುವದು. ಯಾವತ್ತೂ ಜನರಿಗೆ ರಾಜ-ರಂಕ ಎಲ್ಲರಿಗೂ ಒಂದೇ ಪ್ರಮಾಣದಲ್ಲಿ ಒಂದೇ ಸ್ವರೂಪದಲ್ಲಿ ಇದನ್ನು ಭೋಗಿಸಬೇಕಾಗುವದು. ಆಯುಷ್ಯದಲ್ಲಿ ಮೊದಲಿಗೆ ಸಾಕಷ್ಟು ಸುಖ ಅನುಭೋಗಿಸಿರುವದರಿಂದ ಅಂತ್ಯಕಾಲದಲ್ಲಿ ಆಗುವ ದುಃಖವನ್ನು ತಡೆದುಕೊಳ್ಳಲಿಕ್ಕೆ ಆಗುವದಿಲ್ಲ [೨೬] ಅವರಲ್ಲಿಯೂ ಕಠಿಣ ದುಃಖಗಳನ್ನು ಎಷ್ಟೂ ಸಹಿಸಲಿಕ್ಕೆ ಆಗುವದಿಲ್ಲ. ಮತ್ತು ಪ್ರಾಣವಾದರೋ ಬೇಗ ಹೋಗಲಿ ಎಂದು ಅಂದರೂ ಹೋಗುವದಿಲ್ಲ. ಈ ಪ್ರಕಾರದಿಂದ ಮರಣ ಕಾಲದ ದುಃಖ ಯಾವತ್ತೂ ಜನರಿಗೆ ಒಂದೇ [ಸಮದಲ್ಲಿ] ರೀತಿಯಲ್ಲಿ ಕಸವಿಸಿಮಾಡಿ ಗಾಸಿಗೊಳಿಸಿ ಬಿಡುವದು. (೨೭)

ನಾನಾ ಅವೇವಹೀನ ಜಾಲೇ। ತೈಸೇ ಚಿ ಪಾಹಿಜೆ ವರ್ತಲೇ।
ಪ್ರಾಣೀ ಅಂತಕಾಳೀ ಗೇಲೇ। ಕಾಸಾವಿಸ ಹೋಉನೀ ॥೨೮॥

ರೂಪ ಲಾವಣ್ಯ ಅವಘೇ ಜಾತೇ। ಶರೀರ ಸಾಮರ್ಥ್ಯ ಅವಘೇ ರಾಹಾತೇ।
ಕೋಣೀ ನಸ್ತಾ ಮರತೇ। ಆಪದಆಪದೋ ॥೨೯॥

ಅಂತಕಾಳ ದೈನ್ಯ ದೀನ। ಸಕಳಿಕಾಸ ತತ್ಸಮಾನ।
ಐಸೇ ಚಂಚಳ ಅವಲಕ್ಷಣ। ದುಃಖಕಾರೀ ॥೩೦॥

ಭೋಗೂನ ಅಭೋಕ್ತಾ ಮ್ಹಣತೀ। ಹೇ ತೋ ಅವಘೀ ಚ ಫಜಿತೀ।
ಲೋಕ ಉಗೇ ಚ ಬೋಲತೀ। ಪಾಹಿಲ್ಯಾವಿಣ ॥೩೧॥

ಅಂತಕಾಳ ಆಹೆ ಕಠಿಣ। ಶರೀರ ಸೋಡಿನಾ ಪ್ರಾಣ।
ಬರಾಡ್ಯಾಸಾರಿಖೇ ಲಕ್ಷಣ। ಅಂತಕಾಳೀ ॥೩೨॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ದೇಹಾತ್ಮ ನಿರೂಪಣ' ನಾಮ ಸಮಾಸ ಷಷ್ಠಮ ॥

ರೋಗದಿಂದ ಅಥವಾ ಅಪಘಾತದಿಂದಾಗಿ ಕೆಲವರ ಅವಯವಗಳು ಕಾಯಂ ಊನಾಗಿ ಬಿಡುವವು. ಕೆಲಸಕ್ಕೆ ಬಾರದಂತಾಗುವವು. ಒಮ್ಮೊಮ್ಮೆ ಅವಶ್ಯವೆನಿಸಿದಷ್ಟು ಭಾಗವನ್ನು ಕತ್ತರಿಸಬೇಕಾಗುವದು. ಆದರೆ ಇಂಥ ಅವಯವ ಹೀನ ಅವಸ್ಥೆಯಲ್ಲಿಯೂ ಕೂಡಾ ಜೀವನದ ವ್ಯವಹಾರವನ್ನು ಮಾಡಬೇಕಾಗುವದು. ಹೀಗೆ ಎಲ್ಲರೂ ಅಂತ್ಯಕಾಲದಲ್ಲಿ ಕಸವಿಸಿಪಟ್ಟು ಗೋಳಾಡಿ ಸಾಯುವರು. (೨೮) ಮನುಷ್ಯನ ರೂಪ ಅಥವಾ ಸೌಂದರ್ಯ ಏನಿದ್ದರೂ ಎಲ್ಲವೂ ನಷ್ಟವಾಗುವದು. ಶರೀರದಲ್ಲಿಯ ಸಾಮರ್ಥ್ಯ ಇಲ್ಲದಾಗಿ ಹೋಗುವದು. ಹತ್ತಿರ ಯಾರೂ ಇರುವದಿಲ್ಲ. ಬರುವವರಂತೂ ದೂರಾಗಿ ಬಿಡುವರು. ಯಾರೂ ಬರುವದಿಲ್ಲ, ಇಂಥ ಪರಿಸ್ಥಿತಿಯಲ್ಲಿ ಯಾತನೆಗಳನ್ನು ಭೋಗಿಸುತ್ತ ಮನುಷ್ಯನು ಕೊನೆಗೆ ಸಾಯುವನು. (೨೯) ಅಂತ್ಯಕಾಲ, ಕೊನೆಕಾಲವು ಎಲ್ಲರಿಗೂ ಒಂದೇ ಸಮ ಇರುವದು. ಆ ಹೊತ್ತಿನಲ್ಲಿ ಸಾಯುವ ಮನುಷ್ಯನ ಅವಸ್ಥೆಯು ಬಹಳ ದಯನೀಯವಿರುವದು. ಇವೆಲ್ಲ ಅಶಾಶ್ವತದ ದುಃಖಕಾರಕ ಅವಲಕ್ಷಣಗಳಾಗಿರುವವು. [೩೦] ಭೋಗವನ್ನು ಭೋಗಿಸಿಯೂ ಅಭೋಕ್ತ್ಯಾತನ ಇರಬೇಕು. ಅಂದರೆ ಭೋಗಿಸದವ ನಂತಿರಬೇಕು. ಅಭೋಕ್ತ್ಯಾನಂತಿರಬೇಕು. ಅನ್ನುವ ಮಾತನ್ನು ಜನರು ಮಾತನಾಡುವರು. ಆದರೆ ಇದೆಲ್ಲವೂ ಬಹಳ ಫಜೀತಿಯುದಾಗಿದೆ. ನಿಜವಾದ [ಖರೆ] ವಿಷಯ ನೋಡದೇ ರಹಸ್ಯ ತಿಳಿಯದೇ ಜನ ಸುಮ್ಮನೆ ಏನಾದರೂ ಮಾತ ನಾಡುವರು. ಭೋಗ ಭೋಗಿಸುತ್ತಿರುವಾಗ ಮನದಿಂದ[ಮನಃಪೂರ್ವಕವಾಗಿ] ಅಲಿಪ್ತವಾಗಿ ಇರುವದೇನೂ ಸಾಮಾನ್ಯ ಮಾತಲ್ಲ. ದೇಹಕ್ಕೆ ದುಃಖ ಬಂದಾಗ ಎಷ್ಟೋ ದೊಡ್ಡ ದೊಡ್ಡ ಸಾಧಕರೂ ಕೂಡಾ ಅನುಸಂಧಾನದಿಂದ ಕೆಳಗೆ ಜಾರುವರು,-ಸರಿಯುವರು. ಆದರೆ ದೇಹ ದುಃಖ ಮತ್ತು ದಾರಿದ್ರ್ಯ ಈ ಎರಡೂ ಅವಸ್ಥೆಯಲ್ಲಿ ಭಗವಂತನಿಗೆ ಎಳ್ಳಷ್ಟು ದೋಷಕೊಡದೇ ಯಾರು ತಮ್ಮ ಅನುಸಂಧಾನವನ್ನು ಯಥಾಸ್ಥಿತಿ ಸಂಬಾಳಿಸಿಕೊಂಡು ಹೋಗುವರೋ ಅವರೇ ಸಾಧಕರ ಪದದಲ್ಲಿ ಸ್ಥಿರರಾದವರೆಂದು ಖಾತ್ರಿಯಿಂದ ತಿಳಿಯಬೇಕು. ಇನ್ನಿತರ [ಬಾಕಿ ಉಳಿದ] ಸಾಧಕರು ನಿಜವಾಗಿ ಪರೀಕ್ಷೆಯ ಎಲ್ಲ ವಿಷಯಗಳಲ್ಲಿ ತೇರ್ಗಡೆ ಆದ ಸಾಧಕರಲ್ಲವೆಂದು ತಿಳಿಯಿರಿ. [೩೧] ಅಂತ್ಯಕಾಲವು ಬಹಳ ಕಠಿಣವಿರುವದು. ಜೀವವು ವಾಸನೆಯಲ್ಲಿ ತೊಡಕು ಹಾಕಿಕೊಂಡಿದ್ದರಿಂದ ಪ್ರಾಣವು ಶರೀರವನ್ನು ಬಿಡಬೇಕೆಂದರೂ ಬಿಡುವದಿಲ್ಲ. ಇದರಿಂದಾಗಿ ಸಾಮಾನ್ಯ ಮನುಷ್ಯರ ಅವಸ್ಥೆಯ ಸ್ಥಿತಿಯು ಅನ್ನದ ಸಲುವಾಗಿ ಹಪಾಪಿಸಿದ ಒಬ್ಬ ಭಿಕ್ಷುಕ ಭಿಕಾರಿಯಂತೆ ಅತ್ಯಂತ ದೈನ್ಯಾವಸ್ಥೆಯದು [ದಯನೀಯ] ಆಗುವದು. [೩೨]

ಶ್ರೀ ದಾಸಬೋಧದ ಹದಿನೇಳನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ದೇಹಾತ್ಮ ನಿರೂಪಣ ನಾಮ"ವೆಂಬ ಹೆಸರಿನ ಆರನೇ ಸಮಾಸವು ಮುಗಿದುದು.

● ●

### ದಶಕ ಸಪ್ತದಶ : ಸಮಾಸ ಸಪ್ತಮ : ಜಗಜ್ಜೀವನ ನಿರೂಪಣ [ನುಡಿ ೩೦]

॥ಶ್ರೀರಾಮ॥ ಮುಳೀ ಉದಕ ನಿಮಳ ಅಸತೇ । ನಾನಾ ವಲ್ಲೀಮಧೇ ಜಾತೇ ।
ಸಂಗದೋಷೇ ತೈಸೇ ಹೋತೇ । ಆಂಬ್ಲ ತಿಕ್ಷಣ ಕಡವಟ ॥೧॥

ಆತ್ಮಾ ಆತ್ಮಪಣೇ ಅಸತೋ । ದೇಹಸಂಗೇ ವಿಕಾರತೋ ।
ಸಾಭಿಮಾನೇ ಭರೀ ಭರತೋ । ಭಲತಿಕಡೆ ॥೨॥

## ದಶಕ ೧೭. ಸಮಾಸ ೭. ಜಗಜ್ಜೀವನ ನಿರೂಪಣ (ನುಡಿ ೩೦)

ನಿಜವಾಗಿಯೂ [ಖರೇ] ಹೇಳುವದಾದರೆ, ಅಂತರಾತ್ಮ ಸ್ವಚ್ಛ ಮತ್ತು ಶುದ್ಧ ಇರುವನು. ದೇಹದ ಸಂಗತಿಯಿಂದಾಗಿ ಇವನಿಗೆ ಅನೇಕ ಪ್ರಕಾರದ ಸುಖ ದುಃಖಗಳ ಭೋಗವನ್ನು ಭೋಗಿಸಬೇಕಾಗುವದು. ಸಂಗತಿಯ ಪರಿಣಾಮವೆಂದರೆ ಇದು ಹೀಗಿರುವದು. ಆದ್ದರಿಂದ ದೇಹ ಧಾರಣಮಾಡಿದ ಮೇಲೆ ಯಾರು ಸತ್ಸಂಗತಿಯಿಂದ ಶಾಂತರಾಗುವರೋ, ಮತ್ತು ವಿವೇಕದಿಂದ ದೇಹಾಭಿಮಾನ ಬಿಟ್ಟುಕೊಡುತ್ತಾರೆಯೋ ಅಂಥವರೇ ಧನ್ಯರಾಗುವರು. ಜಗತ್ತಿನಲ್ಲಿ ನಾವೇ ನಮ್ಮ ಮಿತ್ರ ಅಥವಾ ಶತ್ರು ಆಗುವೆವು. ಮನುಷ್ಯನಿಗೆ ಸಂಗತಿ ಸಹವಾಸದಿಂದ ಗತಿ ಅಥವಾ ಅಧೋಗತಿ ಚಲೋ ಅಥವಾ ಕೆಟ್ಟ ಗತಿ ಪ್ರಾಪ್ತವಾಗುವದು. ಇದನ್ನು ಜ್ಞಾಪದಲ್ಲಿಟ್ಟುಕೊಂಡು ಮನುಷ್ಯನು ಉತ್ತಮರ ಸಂಗತಿಯನ್ನು ಹಿಡಿಯಬೇಕು. ಇವರ ಸಹವಾಸದಲ್ಲಿದ್ದ ಮನುಷ್ಯನು ಸಾಧಕನು ಆತ್ಮಚಿಂತನ ಮಾಡಬೇಕು. ಅರಿವನ್ನು (ತಿಳುವಳಿಕೆಯನ್ನು) ಸಂಪಾದನ ಮಾಡಬೇಕು. ಮತ್ತು ಜೀವನಕ್ಕೆ ಧನ್ಯತೆಯು ಬರುವಂತೆ ಉತ್ತಮ ಸಂಗತಿಯ ಸ್ವೀಕಾರಮಾಡಬೇಕು. ಆತ್ಮಸುಖ ಮತ್ತು ಯಾವತ್ತೂ ಸುಖಗಳು ಸಿಗುವದೂ ಸಹ ಉತ್ತಮ ಸಂಗತಿಯ ಫಲವಾಗಿರುವದು. ಜೀವನದಲ್ಲಿ ಮನುಷ್ಯನು ಅತ್ಯಂತ ವಿವೇಕದಿಂದ ನಡೆಯಬೇಕು. ಜಗತ್ತಿನಲ್ಲಿ ಸ್ಥಿರ ಎಂಬುದು ಏನೂ ಯಾವುದೂ ಇಲ್ಲ. ದೊಡ್ಡ ದೊಡ್ಡವರು ಕೆಳಗೆ ಹೋಗುವರು ಮತ್ತು ಕೆಳಗಿನವರು ದೊಡ್ಡವರಾಗುವರು. ವಿದ್ಯೆಯಲ್ಲಿ ಆಗಲೀ ಅಥವಾ ಜ್ಞಾನದ ಕ್ಷೇತ್ರದಲ್ಲಿಯಾಗಲೀ ಇದೇ ಅನುಭವ ಬರುವದು. ಈ ಚಕ್ರ ಸದಾಕಾಲ ಚಾಲೂ ಇರುವದು, ಯತ್ನ, ಪ್ರಯತ್ನ ಮಾಡುವದರಿಂದ ಕಾರ್ಯ ಸಾಧ್ಯವಾಗುವದು. ಇದನ್ನು ಲಕ್ಷ್ಯದಲ್ಲಿ ತಂದು ಮನುಷ್ಯನು ಪ್ರಯತ್ನವಾದಿಯಾಗಬೇಕು. ಖಟಪಟಿ ಮಾಡಬೇಕು. ಮತ್ತು ಕಾರ್ಯವನ್ನು ಸಾಧಿಸಿಕೊಳ್ಳಬೇಕು.

### ದಶಕ ೧೭. ಸಮಾಸ ೭. ಜಗಜ್ಜೀವನ ನಿರೂಪಣ (ನುಡಿ ೩೦)

ವಸ್ತುವಿಗೆ ಯಾವ ರೀತಿಯ [ಎಂಥವರ] ಸಂಗತಿ ಸಹವಾಸ ಗೆಳೆತನ ಸಂಪರ್ಕ ಬರುವದೋ ಅದರ ಪ್ರಕಾರ ಆ ವಸ್ತುವಿನಲ್ಲಿ ಬದಲಾವಣೆಯು ಆಗುವದು. ಇದೇ ನೀತಿ ನ್ಯಾಯದಂತೆ ಸತ್ ಸಂಗತಿ ಮಾಡುವದರಿಂದ ಮನುಷ್ಯನು ಉದ್ಧಾರವಾಗುವನು. ತೇಲುವನು, ಪಾರಾಗುವನು. ಆದ್ದರಿಂದ ನಾವು ನಮ್ಮ ಸ್ವತಃದ ಮಿತ್ರರಾಗಬೇಕು ಶತ್ರುಗಳಾಗಬಾರದು. ಜಗತ್ತಿನಲ್ಲಿ ಅರಿವಿಗೆ [ತಿಳುವಳಿಕೆಗೆ] ಕಿಮ್ಮತ್ತು ಬೆಲೆ ಇರುವದು. ಈ ಅರಿವು ಬರಬೇಕಾದರೆ ಅರಿವಿದ್ದವರ ತಿಳುವಳಿಕೆ ಇದ್ದವರ ಸಂಗತಿಯನ್ನು ಹಿಡಿಯಬೇಕು. ಉತ್ತಮರಾದ, ಶ್ರೇಷ್ಠರ ಸಂಗತಿ ಹಿಡಿದು ಆನಂದ ದಿಂದ ಸಮಾಧಾನದ ಭೋಗ ಪಡೆಯಬೇಕು: ಮೂಲದಲ್ಲಿ ನೀರು ಸ್ವಾಭಾವಿಕವಾಗಿ ಸ್ವಚ್ಛವಿರುವದು. ಅನೇಕ ಪ್ರಕಾರದ ಗಿಡ ಬಳ್ಳಿ, ವನಸ್ಪತಿ ಇತ್ಯಾದಿಗಳಿಗೆ ಈ ಸ್ವಚ್ಛವಾದ ನೀರನ್ನು ಹಾಕುವರು (ನೀರುಣಿಸುವರು) ಅಂತೂ ಈ ಸ್ವಚ್ಛ ನೀರು ಈ ಗಿಡ ಬಳ್ಳಿಗಳಲ್ಲಿ ಸೇರುತ್ತದೆ. ಮತ್ತು ಅವುಗಳ ಸಂಗತಿಯಿಂದ ಸಂಪರ್ಕದಿಂದ ದೋಷ ಉಂಟಾಗಿ ಆ ಗಿಡ ಬಳ್ಳಿಗಳಲ್ಲಿ ಸೇರಿದ ನೀರು ರಸರೂಪ ತಾಳುವದು, ಅದು ಹುಳಿ [ಆಮ್ಲ] ಖಾರ [ತೀಕ್ಷ್ಣ] ಅಥವಾ ಕಹಿ- ವಿಷ ಆಗುವದು (೧) ಇದರಂತೆ ಆತ್ಮನು ಮೂಲದಲ್ಲಿ ಆತ್ಮ ಸ್ವರೂಪದಿಂದ ಶುದ್ಧ ನಿರ್ಮಲನೇ ಇರುವನು. ಇಂಥವನಿಗೆ ದೇಹದ ಸಂಗತಿ ಸಹವಾಸ ಸಂಪರ್ಕ ದೊರಕಿತು. ಇದರಿಂದ ಅವನ ಶುದ್ಧ ಗುಣಗಳು ಲೋಪವಾದವು. ಮತ್ತು ಆ ಸ್ಥಳದಲ್ಲಿ ವಿಕಾರ, ವಿಕೃತಿ, ದೋಷ, ಭೇದ ಇವು ಉತ್ಪನ್ನವಾದವು. ಅಭಿಮಾನ ದುರಭಿಮಾನಗಳ ಭರಾಟಿಯಲ್ಲಿ ಇವು ಇಲ್ಲದ ಸಲ್ಲದ ಕಡೆ ಧಾವಿಸುವನು. ಅನಾರೋಗ್ಯದ ನಾದಿಗೆ ಬೀಳುವನು. (೨)

ಬರೀ ಸಂಗತೀ ಸಾಂಪಡಲೀ। ಜೈಸೀ ಉಸಾಸ ಗೋಡೀ ಆಲೀ।
ವಿಷವಲ್ಲೀ ಘಾಂಪಾವಲೀ। ಘಾತಕೀ ಪ್ರಾಣೀ ॥೩॥

ಅಠರಾಭಾರ ವನಸ್ಪತೀ। ಗುಣ ಸಾಂಗಾವೇ ತೇ ಕಿತೀ।
ನಾನಾ ದೇಹಾಚೇ ಸಂಗತೀ। ಆತ್ಮಯಾಸ ಹೋಯೇ ॥೪॥

ತ್ಯಾಮಧ್ಯೇ ಕೋಣೇ ಭಲೇ। ತೇ ಸಂತಸಂಗೇ ನಿವಾಲೇ।
ದೇಹಾಭಿಮಾನ ಸಾಂಡೂನ ಗೇಲೇ। ವಿವೇಕಬಳೇ ॥೫॥

ಉದಕಾಚಾ ನಾಶ ಚಿ ಹೋತೋ। ಆತ್ಮಾ ವಿವೇಕೇ ನಿವತೋ।
ಐಸಾ ಆಹೇ ಪ್ರತ್ಯಯು ತೋ। ವಿವೇಕೇ ಪಾಹಾ ॥೬॥

ಜ್ಯಾಸ ಸ್ವಹಿತ ಚಿ ಕರಣೇ। ತ್ಯಾಸ ಕಿತೀ ಮ್ಹಣೌನ ಸಾಂಗಣೇ।
ಹೇ ಜ್ಯಾಚೇ ತ್ಯಾನೇ ಸಮಜಣೇ। ಸಕಳ ಕಾಂಹೀ ॥೭॥

ಆಪಲಾ ಆಪಣ ಕರೀ ಕುಡಾವಾ। ತೋ ಆಪಲಾ ಮಿತ್ರ ಜಾಣಾವಾ।
ಆಪಲಾ ನಾಶ ಕರೀ ತೋ ಸಮಜಾವಾ। ವೈರೀ ಐಸಾ ॥೮॥

ಆಪಲೇ ಆಪಣ ಅನ್ಹಿತ ಕರಾವೇ। ತ್ಯಾಸ ಆಡವೇ ಕೋಣೇ ನಿವಾವೇ।
ಯೇಕಾಂತೀ ಜಾಊನ ಜೀವೇ। ಮಾರೀ ಆಪಣಾಸೀ ॥೯॥

ಜೋ ಆಪಲಾ ಆಪಣ ಘಾತಕೀ। ತೋ ಆತ್ಮಹತ್ಯಾರಾ ಪಾತಕೀ।
ಯಾಕಾರಣೇ ವಿವೇಕೀ। ಧನ್ಯ ಸಾಧು ॥೧೦॥

ಪುಣ್ಯವಂತಾ ಸತ್ಸಂಗತೀ। ಪಾಪಿಷ್ಟಾ ಅಸತ್ಸಂಗತೀ।
ಗತಿ ಆಣಿ ಅವಗತೀ। ಸಂಗತೀಯೋಗೇ ॥೧೧॥

ಉತ್ತಮ ಸಂಗತೀ ಧರಾವೀ। ಆಪಲೀ ಆಪಣ ಚಿಂತಾ ಕರಾವೀ।
ಅಂತರೀ ಬರೀ ವಿವರಾವೀ। ಬುದ್ಧಿ ಜಾಣತ್ಯಾಚೀ ॥೧೨॥

ಇಹಲೋಕ ಆಣಿ ಪರಲೋಕ। ಜಾಣತಾ ತೋ ಸುಖದಾಯೆಕ।
ನೇಣತ್ಯಾಕರಿತಾ ಅವಿವೇಕ। ಪ್ರಾಪ್ತ ಹೋತೋ ॥೧೩॥

ಜಾಣತಾ ದೇವಾಚಾ ಅಂಶ। ನೇಣತಾ ಮ್ಹಣಿಜೆ ತೋ ರಾಕ್ಷಸ।
ಯಾಮಧ್ಯೇ ಜೇ ವಿಶೇಷ। ತೇ ಜಾಣೋನ ಘ್ಯಾವೇ ॥೧೪॥

ನೀರಿಗೆ ಉತ್ತಮ ಸಂಗತಿ ಕೂಡಿದರೆ ಅದು ಉತ್ತಮವಾಗುವದು. ಉದಾ: ಕಬ್ಬಿನ ಸಂಗತಿ ದೊರಕಿದರೆ ನೀರಿನಿಂದ ಸಿಹಿ ರಸ ಹೊರಡುವದು. ಆದರೆ ವಿಷದ ಬಳ್ಳಿಯ ಸಂಗತಿ ಕೂಡಿದರೆ ಅದೇ ನೀರಿನಿಂದ ಪ್ರಾಣಘಾತುಕ ರಸ ನಿರ್ಮಾಣವಾಗುವದು [ಸಜ್ಜನರ ಸಂಗತಿಯೇ ಕಬ್ಬಿನ ರಸವು. ದುರ್ಜನರ ಸಂಗತಿಯೇ ವಿಷ ಬಳ್ಳಿ ರಸದ ಘಾತಕತನವು.] (೩) ಹದಿನೆಂಟು ಪ್ರಕಾರದ ವನಸ್ಪತಿಗಳಿರುವವು. ಪ್ರತಿಯೊಂದು ಪ್ರಕಾರದ ನೀರಿಗೆ ಆ ಆ ರಸಕ್ಕೆ ತಕ್ಕಂತೆ ಬೇರೆ ಬೇರೆ ಗುಣಗಳು ಪ್ರಾಪ್ತವಾಗುವವು. ಇದೆಲ್ಲವನ್ನು ಸವಿಸ್ತರ ಹೇಳಬೇಕೆಂದರೆ ಸಾಧ್ಯವಿಲ್ಲ. ಅಂತರಾತ್ಮನಿಗೂ ಕೂಡಾ ಹೀಗೆಯೇ ಆಗುವದು. ಬೇರೆ ಬೇರೆ ದೇಹಗಳ ಸಂಗತಿಯಿಂದ ಇವನಲ್ಲಿ [ಆತ್ಮನಲ್ಲಿ] ಬೇರೆ ಬೇರೆ ಗುಣಗಳು ಕಂಡು ಬರುವವು. (೪) ದೇಹಗಳಲ್ಲಿ ಯಾವುದು ಉತ್ತಮವಿರುವದೋ ಅದು ಸಂತ ಸಾಧುಗಳ ಸಂಗತಿಯಿಂದ ಕಾಲಕ್ರಮಣ ಮಾಡುವದು. ಸತ್ ಸಂಗತಿಯಲ್ಲಿ ಉತ್ಪನ್ನವಾಗುವ ವಿವೇಕದ ಜೋರು ಪ್ರಬಲತೆಯಿಂದಾಗಿ ಅದು ದೇಹಾಭಿಮಾನ ಬಿಟ್ಟು ಹೋಗುವದು. ಯಾವುದೋ ಒಂದು ಪುಣ್ಯ ಶರೀರವು ಭಾಗ್ಯವಾನವಿರುವದು. ಅದು ಸತ್ಸಂಗತಿ ಮಾಡುವದು. ಅದರ ತ್ರಿವಿಧ ತಾಪಗಳು ಶಾಂತವಾಗುವವು ವಿವೇಕದಿಂದ ಅದರ ದೇಹ ಬುದ್ಧಿ ನಷ್ಟವಾಗುವದು. ಅರ್ಥಾತ್ ಮುಕ್ತವಾಗುವದು. (೫) ಆದರೆ ನೀರು ಮತ್ತು ಅಂತರಾತ್ಮಾ ಇವುಗಳಲ್ಲಿ ಹೆಚ್ಚು ಕಡಿಮೆ ಇರುವದು. ನೀರು ಪಂಚಭೂತಗಳ ಪೈಕಿ ಒಂದು ಇರುವದು ಆದ್ದರಿಂದ ನೀರು ನಾಶವಾಗುವದು. ಅಂತರಾತ್ಮಾ ಅವಿನಾಶಿ ಇರುವದರಿಂದ ಇವನು ಆತ್ಮಾನಾತ್ಮ ವಿವೇಕದಿಂದ ಮಾತ್ರ ದೇಹದಿಂದ ಹೊರಬೀಳುವನು. ಹೀಗೆ ಪ್ರತ್ಯಕ್ಷ ಅನುಭವವೂ ಬರುವದು. ಇದನ್ನೆಲ್ಲ ವಿಚಾರದಿಂದ ಗುರುತಿಸಿ ತಿಳಿಯಬೇಕು (೬) ಯಾರಿಗೆ ತಮ್ಮ ಕಲ್ಯಾಣಮಾಡಿಕೊಳ್ಳಬೇಕಾಗಿದೆಯೋ ಅವರಿಗೆ ಇದಕ್ಕಿಂತ ಹೆಚ್ಚಿಗೆ ಹೇಳಬೇಕಾಗಿಲ್ಲ. [ಎಷ್ಟೆಂದು ಹೇಳುವದು] ಅವರೇ ಇದನ್ನೆಲ್ಲ ತಿಳಿದುಕೊಳ್ಳಬೇಕು. ಅರ್ಥಮಾಡಿಕೊಳ್ಳಬೇಕು (೭) ಯಾರು ತಮ್ಮನ್ನು ತಾವೇ ಸಂಬಾಳಿಸುವರೋ ಅವರೇ ತಮ್ಮ ಸ್ವತಃದ ಮಿತ್ರರು ಎಂದು ತಿಳಿಯಬೇಕು. ಯಾರು ಸ್ವತಃ ತಮ್ಮನ್ನೇ ನಾಶ ಮಾಡಿಕೊಳ್ಳುವರೋ ಅವರೇ ಸ್ವತಃದ ಶತ್ರು ಅಂತಾ ತಿಳಿಯಬೇಕು. (೮) ಯಾರು ತಮ್ಮ ಸ್ವತಃದ ಅಕಲ್ಯಾಣ ಮಾಡಿಕೊಳ್ಳಲು ಹೊರಟಿರುವರೋ ಅಂಥವರಿಗೆ ಅಡ್ಡಿಮಾಡಲು ಹೋಗುವದರಲ್ಲಿ ಅರ್ಥವಿಲ್ಲ. ಏಕಾಂತದಲ್ಲಿ ಹೋಗಿ ಅವನು ಸ್ವತಃ ತನ್ನ ಜೀವವನ್ನು ತೆಗೆಯುವನು [ಕುತ್ತಿಗೆ ಕೊಯ್ದುಕೊಳ್ಳುವನು, ಜನ್ಮದ ಘಾತ ಮಾಡಿಕೊಂಡು ಬಿಡುವನು.] (೯) ಯಾರು ತಮ್ಮ ಘಾತವನ್ನು ತಾವೇ ಮಾಡಿಕೊಳ್ಳುವರೋ ಅವರು ಆತ್ಮಹತ್ಯಾರಾ ಪಾತಕಿ ಎಂದು ತಿಳಿಯಬೇಕು. ಆದ್ದರಿಂದ ಆತ್ಮಾನಾತ್ಮ ವಿವೇಕ ಮಾಡುವಂಥ ಸಾಧು ಸಂತ ಶರಣರು ಧನ್ಯರು. (೧೦) ಪುಣ್ಯವಂತ ಪುರುಷನು ಸತ್ಸಂಗತಿ, ಸಂತ ಸಂಗತಿ ಹಿಡಿಯುವನು, ಆದರೆ ಪಾಪಿ ಮನುಷ್ಯನು ಕೆಟ್ಟ ಜನರ ಸಂಗತಿ ಹಿಡಿಯುವನು. ಇಂಥ ಸಂಗತಿಯಿಂದ ಒಬ್ಬನಿಗೆ ಉತ್ತಮ ಗತಿ ಸಿಗುವದು ಅದೇ ಇನ್ನೊಬ್ಬನಿಗೆ ಅಧೋಗತಿ ಸಿಗುವದು. (೧೧) ಅಂತೆಯೇ ಮನುಷ್ಯನು ಉತ್ತಮರ ಸಂಗತಿಯನ್ನು ಹಿಡಿಯಬೇಕು ತಾನೇ ತನ್ನ ಕಾಳಜಿಯನ್ನು ಮಾಡಿಕೊಳ್ಳಬೇಕು. ತಿಳಿದವರ ವಿವೇಕವುಳ್ಳವರ ವಿಚಾರವನ್ನು ಕೇಳಬೇಕು, ತಿಳಿದು ಅದರ ವಿವರವನ್ನು ಅಂತರ್ಯಾಮದಲ್ಲಿ ಮಾಡಿಕೊಳ್ಳಬೇಕು. (೧೨) ಇಹಲೋಕವೇ ಇರಲಿ, ಪರಲೋಕವೇ ಇರಲಿ, ಎರಡೂ ಕಡೆಗೆ ಯಾರು ತಿಳಿದವರಿರುವರೋ ಅರಿವುಳ್ಳವರಿರುವರೋ ಅವರಿಗೆ ಖಾತ್ರಿಯಿಂದ ಸುಖದ ಲಾಭ ದೊರಕುವದು. ಯಾವನು ತಿಳಿಗೇಡಿ ಅರಿವಿಲ್ಲದವನಿರುವನೋ ಅವನು ಎರಡೂ ಕಡೆಗೂ ಅವಿವೇಕಿಯಾಗಿ ನಡೆಯುವನು. [ಅತೋಭ್ರಷ್ಟ, ತತೋಭ್ರಷ್ಟ] (೧೩) ಯಾವನು ತಿಳಿದವನೂ ಅರಿವುಳ್ಳವನೂ ಇರುವನೋ ಅವನು ದೇವತಾ ಅಂಶನೆಂದು ತಿಳಿಯಬೇಕು. ಆದರೆ ಯಾರು ತಿಳಿದವರಿಲ್ಲವೋ, ಅರಿವುಗೇಡಿಗಳಿರುವರೋ ಅವರು ರಾಕ್ಷಸರ ಅಂಶವೆಂದು ತಿಳಿಯಿರಿ. ಇವೆರಡರಲ್ಲಿ ಯಾವುದು ವಿಶೇಷವಿರುವದೋ, ಯೋಗ್ಯವಾದದ್ದು ಮತ್ತು ಗ್ರಾಹ್ಯವಾದದ್ದು ಇರುವದೋ ಇದನ್ನೆಲ್ಲ ಗುರುತಿಸಿ ಗ್ರಹಣ (ಸ್ವೀಕಾರ) ಮಾಡಿರಿ. (೧೪)

ಜಾಣತಾ ತೋ ಸಕಳಾ ಮಾನ್ಯ । ನೇಣತಾ ಹೋತೋ ಅಮಾನ್ಯ ।
ಜೇಣೇಕರಿತಾ ಹೋಈಜೆ ಧನ್ಯ । ತೇ ಚಿ ಘ್ಯಾವೇ ॥೧೫॥

ಸಾಕ್ಷಪಿ ಶಾಹಣ್ಯಾಚೀ ಸಂಗತೀ । ತೇಣೇ ಸಾಕ್ಷಪಿ ಶಾಹಾಣೇ ಹೋತೀ ।
ಆಳಸೀ ಮೂರ್ಖಾಚೀ ಸಂಗತೀ । ಆಳಸೀ ಮೂರ್ಖ ॥೧೬॥

ಉತ್ತಮ ಸಂಗತೀಚೇ ಫಳ ಸುಖ । ಅಧಮ ಸಂಗತೀಚೇ ಫಳ ದುಃಖ ।
ಆನಂದ ಸಾಂಡುನಿಯಾ ಶೋಕ । ಕೈಸಾ ಘ್ಯಾವಾ ॥೧೭॥

ಐಸೇ ಹೇ ಪ್ರಗಟ ದಿಸೇ । ಜನಾಮಧೇ ಉದಂಡ ಭಾಸೇ ।
ಪ್ರಾಣಿಮಾತ್ರ ವರ್ತತಸೇ । ಉಭಯೆ ಯೋಗೇ ॥೧೮॥

ಯೇಕಾ ಯೋಗೇ ಸಕಳ ಯೋಗ। ಯೇಕಾ ಯೋಗೇ ಸಕಳ ವಿಯೋಗ।
ವಿವೇಕಯೋಗೇ ಸಕಳ ಪ್ರಯೋಗ । ಕರೀತ ಜಾವೇ ॥೧೯॥

ಅವಚಿತೇ ಸಾಂಕಡೀತ ಪಡಿಲೇ । ತರೀ ತೇಥೂನ ಪಾಹಿಜೆ ನಿಘಾಲೇ ।
ನಿಘೋನ ಜಾತಾ ಜಾಲೇ । ಪರಮ ಸಮಾಧಾನ ॥೨೦॥

ನಾನಾ ದುರ್ಜನಾಂಚಾ ಸಂಗ । ಕ್ಷಣಕ್ಷಣಾ ಮನಭಂಗ ।
ಯಾಕಾರಣೇ ಕಾಂಹೀ ರಂಗ । ರಾಖೋನ ಜಾವೇ ॥೨೧॥

ಶಾಹಾಣಾ ಯೆತ್ನ ತ್ಯಾಚ್ಯಾ ಗುಣೇ । ಪಾಹೋ ಜಾತಾ ಕಾಯೆ ಉಣೇ ।
ಸುಖ ಸಂತೋಷ ಭೋಗಣೇ । ನಾನಾ ಶ್ಲಾಘ್ಯತಾ ॥೨೨॥

ಆತಾ ಲೋಕೀ ಐಸೇ ಆಹೇ । ಸೃಷ್ಟೀಮಧೇ ವರ್ತತಾಹೇ ।
ಜೋ ಕೋಣೀ ಸಮಜೋನ ಪಾಹೇ । ತ್ಯಾಸ ಘಡೇ ॥೨೩॥

ಬಹುರತ್ನ ವಸುಂಧರಾ । ಜಾಣಜಾಣೋ ವಿಚಾರ ಕರಾ ।
ಸಮಜಲ್ಯಾ ಪ್ರತ್ಯಯೋ ಅಂತರಾ । ಮಾಜೀ ಯೇತೋ ॥೨೪॥

ಯಾರು ತಿಳಿದವರಿರುವರೋ ಅವರು ಸರ್ವರಿಗೂ ಮಾನ್ಯರಾಗುವರು ಅದೇ ಯಾರು ತಿಳಿದವರಿಲ್ಲವೋ ಅವರು ಸರ್ವರಿಗೂ ಅಮಾನ್ಯರಾಗುವರು. ಯಾವುದರ ಯೋಗದಿಂದ ನಾವು ಧನ್ಯರಾಗಿ ಹೋಗಬಹುದಾಗಿದೆಯೋ ಅದನ್ನೇ ಅಂದರೆ ಆ ನಿಜವಾದ ಮಾರ್ಗವನ್ನೇ ಹಿಡಿಯುವ ಶಪಥವನ್ನು ಮಾಡಬೇಕು. ಆ ಮಾರ್ಗದಿಂದಲೇ ಹೋಗಬೇಕು. (೧೫) ಉದ್ಯೋಗಿ ಮತ್ತು ಜಾಣ [ಶಹಾಣೆ] ಜನರ ಸಂಗತಿ ಸಹವಾಸ, ಸಂಪರ್ಕ, ಗೆಳೆತನ ಹಿಡಿದರೆ ನಾವೂ ಸಹ ಉದ್ಯೋಗಿ ಮತ್ತು ಜಾಣರಾಗುವೆವು. ಆಲಸಿಗ ಮತ್ತು ಮೂರ್ಖ, ನಿರುದ್ಯೋಗಿ ಜನರ ಸಂಗತಿಯನ್ನು ಹಿಡಿದರೆ ನಾವೂ ಸಹ ಆಲಸಿಗರು ಮತ್ತು ಮೂರ್ಖರೇ ಆಗುವೆವು. [೧೬] ಉತ್ತಮರ ಸಂಗತಿಯಿಂದ ಸುಖ ಅನ್ನುವ ಫಲ ಸಿಗುವದು. ಆದರೆ ಅದೇ ಅಧಮರ ಸಂಗತಿಯಿಂದ ದುಃಖ ಅನ್ನುವ ಫಲ ಸಿಗುವದು. ಹೀಗೆ ಇರುವದೇ ವಾಸ್ತವವಾದರೆ ಆನಂದದ ಧಿಃಕ್ಕಾರಮಾಡಿ ಮುದ್ದಾಂ ದುಃಖವನ್ನು ಸ್ವೀಕರಿಸುವದು ಯೋಗ್ಯವಲ್ಲ-ಜಾಣತನವಲ್ಲ. (೧೭) ಇದು ಜಗದಲ್ಲಿ [ಉಘಡವಾಗಿ] ಸ್ಪಷ್ಟವಾಗಿ ಕಾಣುವದು. ಜನರಲ್ಲಿ ಬಹಳಷ್ಟು ಇಂಥದನ್ನು ನೋಡಲು ಸಿಗುವದು. ಕೆಲವು ಜನರು ಸತ್ ಸಂಗತಿಯಿಂದ ನಡೆಯುವರು. ಆದೇ ಕೆಲವು ಜನರು ಅಸತ್ಯ ಸಂಗತಿಯಿಂದ ನಡೆಯುವರು. ಅದೇ ಇನ್ನೂ ಕೆಲವು ಜನರು ಅಸತ್ ಸಂಗತಿಯಿಂದ ಕೆಡುವರು-ಹಾಳಾಗುವರು. ಇವೆರಡೂ ಮಾತುಗಳು ನೋಡಲಿಕ್ಕೆ ಸಿಗುವವು. (೧೮) ಜಗತ್ತಿನಲ್ಲಿ ಸಜ್ಜನರು ಮತ್ತು ದುರ್ಜನರು ಇದ್ದೇ ಇರುವರು. ಸಜ್ಜನರು ಸುಖಿಗಳಾಗಿದ್ದರೆ, ದುರ್ಜನರು ದುಃಖಿಗಳೂ ಪೀಡಾಕಾರಕರೂ ಆಗಿರುತ್ತಾರೆ. [ಇದು ಯಾವ ಕಾಲಕ್ಕೂ ಎಲ್ಲಿ ಹೋದರೂ ಇರುವಂಥದೇ ಆಗಿದೆ.] ಹೀಗೆ ಈ ಅಶಾಶ್ವತವಾದ ಜೀವನದಲ್ಲಿ ಕೆಳಗೆ ಹೋಗುವದು, ಮೇಲಕ್ಕೇರುವದು. ಇವು ಸತತ ನಡೆದೇ ಇರತಕ್ಕವುಗಳಾಗಿವೆ. ಜೀವನದ ಈ ಧರ್ಮವನ್ನು ಗುರುತಿಸಿ ತಿಳಿದು ನಾವು ನಮ್ಮ ಕಲ್ಯಾಣವನ್ನು ಮಾಡಿಕೊಳ್ಳಬೇಕು. [ನೀವೇ ನಿಮ್ಮ ಹಿತ ಮಾಡಿಕೊಳ್ಳದಿದ್ದರೆ ಅದು ದುರ್ದೈವದ್ದಾಗುವದು.] ಸಜ್ಜನರೊಂದಿಗೆ ಸಂಪರ್ಕ ಯೋಗ ಬಂದದ್ದಾದರೆ ಎಲ್ಲ ಉತ್ತಮ ಕೆಲಸಗಳು ಕೈಗೂಡುವವು. ಮೇಳಗೂಡುವವು, ಒಂದುಗೂಡುವವು. ಅದೇ ದುರ್ಜನರ ಸಂಪರ್ಕ ಬಂದದ್ದಾದರೆ ಎಲ್ಲ ಕಾರ್ಯಗಳು ಹದಗೆಟ್ಟು ಹೋಗುವವು. ಹೀಗಿರುವದರಿಂದ ನಿಮ್ಮ ಎಲ್ಲ ಕೆಲಸಗಳನ್ನು ವಿವೇಕವುಳ್ಳ ಸಜ್ಜನರ ಸಲಹೆಯಂತೆ ಮಾಡುತ್ತ ಹೋಗಬೇಕು. (೧೯) ತಿಳಿಯಿರಿ, ಯಾವುದೋ ಒಂದು ಅನಪೇಕ್ಷಿತ ಸಂಕಟ ನಮ್ಮ ಮೇಲೆ ಬಂದರೆ ಅದಕ್ಕೆ ಗಾಬರಿ ಪಡದೆ ವಿವೇಕದಿಂದ ನಾವು ಅದರೊಳಗಿಂದ ಪಾರಾಗಿ ಹೊರಬರಬೇಕು. ವಿವೇಕದಿಂದ ಸಂಕಟವನ್ನು ದೂರಮಾಡಿ ಹೊರಬಿದ್ದರೆ ಮನಸ್ಸಿಗೆ ಬಹಳ ಸಮಾಧಾನ ಲಭಿಸುವದು. ಇಂಥಲ್ಲಿ ವಿವೇಕ ಉಳ್ಳವರ ಸಲಹೆ ಕೇಳಬೇಕು. (೨೦) ಜೀವನದಲ್ಲಿ ನಾನಾ ಪ್ರಕಾರದ ದುರ್ಜನರ ಸಂಗತಿ ಸಹವಾಸ ಬರುವದು. ಇದರಿಂದಾಗಿ ಮೇಲಿಂದ ಮೇಲೆ ನಮ್ಮ ಮನೋಭಂಗವಾಗುವ ಪ್ರಸಂಗ ಬರುವದು. ಮಾನಭಂಗವೂ ಆಗುವದು, ನಮ್ಮ ಮನಸ್ಸಿನ ವಿರುದ್ಧ ಕಾರ್ಯಗಳು ಘಟಿಸುವವು. ಆದ್ದರಿಂದ ನಮ್ಮ ಮಹತ್ವ [ಮರ್ಯಾದೆ, ವಜನ] ಉಳಿಯುವಂಥ ದಾರಿಯನ್ನು ಹಿಡಿಯಬೇಕು. ವಿವೇಕದಿಂದ, ತಿಳಿದ ಸಜ್ಜನರನ್ನು ಕೇಳಿ ಅಥವಾ ಮನಸ್ಸಿಗೆ ಅಗದೀ ಸರಿಯನಿಸಿದಂತೆ ನಡೆಯಬೇಕು. (೨೧) ಮನುಷ್ಯನು ಖರೇ ಜಾಣತನದಿಂದ ನಡೆದದ್ದಾದರೆ ಪ್ರಯತ್ನಮಾಡಿದ್ದಾದರೆ ಇಂಥ ಗುಣದಿಂದ ಮನುಷ್ಯನಿಗೆ ಏನೂ ಕಡಿಮೆ ಬೀಳಲಾರದು. ಈ ನಿಮ್ಮ ಪ್ರಯತ್ನದಿಂದ ನಿಮಗೂ ಉಳಿದವರಿಗೂ ಸುಖ ಸಂತೋಷ ಲಭಿಸಿಯೇ ಲಭಿಸುವದು. ಇದರಿಂದಾಗಿ ಜನರಲ್ಲಿ ನಿಮ್ಮ ಗೌರವವೂ ಹೆಚ್ಚುವದು. [೨೨] ಜಗತ್ತಿನಲ್ಲಿ ಮತ್ತು ಮಾನವ ಸಮಾಜದಲ್ಲಿಯು ಪರಿಸ್ಥಿತಿಯು ಹೀಗಿರುವದು. [ದುರ್ಜನರ ಸಂಗದಿಂದ ದುರ್ಗತಿ, ತೊಳಲಾಟ ಇತ್ಯಾದಿ ಉಂಟಾಗುವವು]. ಇದಕ್ಕೆ ಉಪಾಯವಿಲ್ಲ ಯಾವನು ಇವನ್ನು ತಿಳಿದು ಜೀವಿಸುವನೋ ಬಾಳುವನೋ ಅವನಿಗೆ ಸುಖ ಸಂತೋಷಗಳು ಲಭಿಸುವವು. (೨೩) ಈ ಭೂಮಿಯ ಮೇಲೆ ಬಹಳಷ್ಟು ನರ ರತ್ನರು [ಶ್ರೇಷ್ಠ ವಿಚಾರವಂತ ಮನುಷ್ಯರು] ಇರುವರು. ಇವರನ್ನು, ಇವರ ಸಾಧನ, ಸಂಪತ್ತನ್ನು ಗುರುತಿಸಿ ತಿಳಿದುಕೊಳ್ಳಬೇಕು ತಿಳಿಯಬೇಕು. ಮತ್ತು ನೀವು ಸ್ವತಃ ವಿವೇಕ ವಿಚಾರಮಾಡಬೇಕು. ಈ ಪ್ರಕಾರದಿಂದ ಜೀವನವನ್ನು ತಿಳಿದುಕೊಂಡಿರೆಂದರೆ ನಿಮ್ಮ ಅಂತರ್ಯಾಮದಲ್ಲಿಯೇ ನಿಮಗೆ ಅನುಭವ ಸಿಗುವದು. [ಅನುಭವ ಬರುವದು] (೨೪)

ದುರ್ಬಳ ಆಣಿ ಸಂಪನ್ನ । ವೇಡೇ ಆಣಿ ವಿತ್ಪನ್ನ ।
ಹೇ ಅಖಂಡ ದಂಡಾಯುಮಾನ। ಅಸತ ಚಿ ಅಸೇ ॥೨೫॥

ಯೇಕ ಭಾಗ್ಯ ಪುರುಷ ಮೋಡತೀ । ಯೇಕ ನವೇ ಭಾಗ್ಯವಂತ ಹೋತೀ ।
ತೈಸೀ ಚ ವಿದ್ಯಾ ವಿತ್ಪತ್ತೀ । ಹೋತ ಜಾತೇ ॥೨೬॥

ಯೇಕ ಭರೇ ಯೇಕ ರಿತೇ । ರಿತೇ ಮಾಗುತೇ ಭರತೇ ।
ಭರತೇ ಹೀ ರಿತೇ ಹೋತೇ । ಕಾಳಾಂತರೀ ॥೨೭॥

ಐಸೀ ಹೇ ಸೃಷ್ಟೀಚೀ ಚಾಲೀ । ಸಂಪತ್ತಿ ದುಪಾರಚೀ ಸಾಉಲೀ ।
ವಯೆಸಾ ತರೀ ನಿಘೋನ ಗೇಲೀ । ಹಳು ಹಳು ॥೨೮॥

ಬಾಳ ತಾರುಣ್ಯ ಆಪಲೇ । ವೃಧಾಪ್ಯ ಪ್ರಚೀತೀಸ ಆಲೇ ।
ಐಸೇ ಜಾಣೋನ ಸಾರ್ಥಕ ಕೇಲೇ । ಪಾಹಿಜೆ ಕೋಣೆಯೇಕೇ ॥೨೯॥

ದೇಹ ಜೈಸೇ ಕೇಲೇ ತೈಸೇ ಹೋತೇ । ಯೆತ್ನ ಕೇಲ್ಯಾ ಕಾರ್ಯೆ ಸಾಧತೇ ।
ತರೀ ಮಗ ಕಷ್ಟಾವೇ ತೇ । ಕಾಯೆ ನಿಮಿತ್ಯ ॥೩೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ಜಗಜೀವನ ನಿರೂಪಣ' ನಾಮ ಸಮಾಸ ಸಪ್ತಮ ॥

• •

ಈ ಭೂಮಿಯ ಮೇಲೆ ಒಬ್ಬ ದರಿದ್ರ ಭಿಕಾರಿ ಇದ್ದರೆ, ಇನ್ನೊಬ್ಬ ಶ್ರೀಮಂತ, ಒಬ್ಬ ಹುಚ್ಚನಿದ್ದರೆ, ಮತ್ತೊಬ್ಬ ವಿದ್ವಾನ್ ಹೀಗೆ ಜಗದ ಪದ್ಧತಿ [ಪರಂಪರಾ, ಶಿರಸ್ತಾ] ಚಕ್ರಾಕಾರವಾಗಿ ಪೂರ್ವದಿಂದಲೂ ನಡೆಯುತ್ತ ಬಂದಿರುವದು. ಈ ಭೇದವು ಹೀಗೆಯೇ ಕಾಯಂ ಇರುವದಾಗಿದೆ. (೨೫) ಒಂದು ಕಾಲದಲ್ಲಿ ಭಾರೀ ಶ್ರೀಮಂತನಾಗಿರುವ ಮನುಷ್ಯನು ಕಾಲಾಂತರದಲ್ಲಿ ಸಂಪತ್ತು ಕಳೆದುಕೊಂಡು ಬಡವನಾಗುವನು. ಮತ್ತು ಯಾವನೋ ಒಬ್ಬನು [ಇನ್ನೊಬ್ಬನು] ಹೊಸದಾಗಿ ಭಾರೀ ಶ್ರೀಮಂತನೆನಿಸಿ ಮೆರೆಯುವನು. ಇದರಂತೆ ವಿದ್ಯೆ ಮತ್ತು ಜ್ಞಾನದ ವಿಷಯದಲ್ಲಿಯೂ ಆಗುವದು. (೨೬) ಒಂದು ತುಂಬುವದು, ಒಂದು ಬರಿದಾಗುವದು, ಬರಿದಾದದ್ದು ಪುನಃ ತುಂಬುವದು. ಕಾಲಾಂತರದಿಂದ ಯಾವುದು ತುಂಬಿರುವದೋ ಅದು ಪುನಃ ಬರಿದಾಗಿ ಹೋಗುವದು. (೨೭) ಸೃಷ್ಟಿಯ ವ್ಯವಹಾರವು ಹೀಗೆ ನಡೆಯುವದಾಗಿದೆ. ಮಧ್ಯಾಹ್ನ ನೆರಳು ಯಾವ ರೀತಿ ಕಾಯಂ ಅಲ್ಲವೋ ಅಂದರೆ ತಾತ್ಪೂರ್ತಿಕವಿರುವದೋ ಅದರಂತೆ ಸಂಪತ್ತಿನ ಸ್ಥಿತಿಯೂ ಸ್ಥಿರವಾದದ್ದಲ್ಲ. (ಲಕ್ಷ್ಮೀ ಚಂಚಲಳಲ್ಲವೇ?). ಮನುಷ್ಯನ ಆಯುಷ್ಯವು ಗೊತ್ತಾಗದೇ ತಿಳಿಯದೇ ಸಾವಕಾಶವಾಗಿ ಕಡಿಮೆ ಕಡಿಮೆ ಆಗುತ್ತ ಹೋಗುತ್ತಿರುವದು. (೨೮) ಬಾಲ್ಯತನವು ಅಜ್ಞಾನದಿಂದಾಗಿ ಮತ್ತು ತಾರುಣ್ಯತನವು ಮೋಹಮದದಿಂದಾಗಿ ಇವು ನಮಗೆ ತಿಳಿಯದೇ [ಗೊತ್ತಾಗದೇ] ಹೋಗುವವು. ಆದರೆ ವೃದ್ಧಾಪ್ಯ [ಮುಪ್ಪು] ಬಂದದ್ದು ಅರಿವಿಗೆ ಬರುವದು. ಅನುಭವಕ್ಕೂ ಬರುವದು. ಇದನ್ನು ಗುರುತಿಸಿ ತಿಳಿದು ಪ್ರತಿಯೊಬ್ಬರೂ ತಮ್ಮ ಆಯುಷ್ಯವನ್ನು ಸಾರ್ಥಕ ಮಾಡಿಕೊಳ್ಳಬೇಕು. [ಜನ್ಮದ ಜಂಜಾಟ ಹರಿದು ಹೋಗುವಂತೆ ಸಾರ್ಥಕ ಮಾಡಿಕೊಳ್ಳಬೇಕು] (೨೯) ದೇಹವನ್ನು ಹೇಗೆ ನಡೆಯಿಸಿಕೊಳ್ಳುವಿರೋ ಅದರಂತೆ ಅದು ನಡೆಯಲು ಕಲಿಯುವದು. ಮನುಷ್ಯನು ಪ್ರಯತ್ನವನ್ನು ಮಾಡಿದ್ದಾದರೆ ಅವನಿಗೆ ಯಾವ ಕೆಲಸವನ್ನಾದರೂ ಸಾಧ್ಯಮಾಡಿಕೊಳ್ಳಲಿಕ್ಕೆ ಬರುವದು. ನಿಜವಾದ ವಿಷಯವು ಹೀಗಿರುವದರಿಂದ ವಿನಃಕಾರಣ ಕಷ್ಟಪಡುವದಕ್ಕೆ ಯಾವ ಕಾರಣವೂ ಇಲ್ಲ. (೩೦)

ಶ್ರೀ ದಾಸಬೋಧದ ಹದಿನೇಳನೆಯ ದಶಕದಲ್ಲಿಯ ಗುರುಶಿಷ್ಯರ ಸಂವಾದದ "ಜಗಜ್ಜೀವನ ನಿರೂಪಣ" ವೆಂಬ ಹೆಸರಿನ ಏಳನೇ ಸಮಾಸವು ಮುಗಿದುದು.

● ●

### ದಶಕ ಸಪ್ತದಶ : ಸಮಾಸ ಅಷ್ಟಮ : ತತ್ತ್ವ ನಿರಸನ (ನುಡಿ ೩೪)

॥ಶ್ರೀರಾಮ॥ನಾಭೀಪಾಸೂನ ಉನ್ಮೇಷವೃತ್ತೀ। ತೇ ಚಿ ಪರಾ ಜಾಣಿಜೇ ಶ್ರೋತೀ।
ಧ್ವನಿರೂಪ ಪಶ್ಯಂತೀ। ಹೃದಈ ವಸೇ ॥೧॥

ಕಂಠಾಪಾಸೂನ ನಾದ ಜಾಲಾ। ಮಧ್ಯಮಾ ವಾಚಾ ಬೋಲಿಜೇ ತ್ಯಾಲಾ।
ಉಚ್ಚಾರ ಹೋತಾ ಅಕ್ಷರಾಲಾ। ವೈಖರೀ ಬೋಲಿಜೇ ॥೨॥

# ದಶಕ ೧೭. ಸಮಾಸ ೮. ತತ್ತ್ವ ನಿರೂಪಣ (ನುಡಿ ೩೪)

ಈ ಸಮಾಸದಲ್ಲಿ ನಾಲ್ಕು ವಾಣಿಯ ವರ್ಣನೆಯನ್ನು ಮಾಡಿರುವರು. ನಂತರ ಅಂತಃಕರಣ ಪಂಚಕದ ಬಗ್ಗೆ ವಿವರಿಸಿರುವರು. ಆನಂತರ ಸೂಕ್ಷ್ಮ ದೇಹದ ಐದು ಪಂಚಕಗಳನ್ನು ಹೇಳಿರುವರು. ಆ ಮೇಲೆ ಪಂಚಭೂತಗಳ ಬಗ್ಗೆ ಮತ್ತು ಅವುಗಳ ವಿಷಯದ ವಿವರ ಹೇಳಿರುವರು. ಮತ್ತು ಕೊನೆಯಲ್ಲಿ ಪಿಂಡಗಳ ನಾಲ್ಕು ದೇಹಗಳ ವರ್ಣನೆಯನ್ನು ಹೇಳಿರುವರು. ಸಮಾಸದಲ್ಲಿ ಹೇಳಿದ ವಿಷಯಗಳನ್ನು ಕೊನೆಗೆ ಕೋಷ್ಟಕಗಳ ರೂಪದಲ್ಲಿ ಕೊಡಲಾಗಿರುವದು.

## ದಶಕ ೧೭. ಸಮಾಸ ೮. ತತ್ತ್ವ ನಿರೂಪಣ (ನುಡಿ ೩೪)

ಮೊದಲಿನ ಎರಡು ಓವಿಗಳಲ್ಲಿ ಶ್ರೀ ಸಮರ್ಥರು ಮನುಷ್ಯನಲ್ಲಿ ವಾಸಮಾಡಿರುವಂಥ ನಾಲ್ಕು ವಾಣಿಗಳ ಬಗ್ಗೆ ವರ್ಣನೆ ಮಾಡಿರುವರು. ವಾಣಿ ಅಥವಾ ಶಾರದಾ ಇವಳು ಸಚ್ಚಿದಾನಂದನ ಜ್ಞಾನಮಯ ಮಹಾ ಶಕ್ತಿಯಾಗಿರುವಳು. ಶಾರದೆಯು ಕೇವಲ [ಫಕ್ತ] ಸ್ಫುರಣ ರೂಪ [ವಿದ್ಯುತ್ ಚಮಂಕಿದಂತೆ ಸ್ಫೂರ್ತಿ, ಝಳಕ, ಝುಳಪ, ಕಂಪನ, ಬಹಳ ಬೇಗ ಹೊಳೆಯುವಿಕೆ] ಇರುವಳು. ಓಂಕಾರ ರೂಪದಿಂದ ಪರಾ ಅನಿಸಿ, ಇವಳು ನಾಭಿ ಸ್ಥಾನದಲ್ಲಿ ವಾಸವಾಗಿರುವಳು. ಇವಳು ಶುದ್ಧ ಅರಿವಿನ ರೂಪ [ಜ್ಞಾನ ಕಲಾ, ಶುದ್ಧ ಜ್ಞಾನ ರೂಪ] ಇದ್ದು ಪರಮಾರ್ಥವು ಪದರಿನಲ್ಲಿ ಬೀಳುವದಕ್ಕೆ–ಸ್ವಾಧೀನವಾಗಲಿಕ್ಕೆ ಇವಳು ಅನುಕೂಲಳಾಗಬೇಕಾಗುವದು. ಅರ್ಥಾತ್ ಇವಳ ಸಹಕಾರ, ಸಹಾಯ, ಪರಮಾರ್ಥಕ್ಕೆ ಬೇಕಾಗುವದು. ಪಶ್ಯಂತಿ ಇದು ಎರಡನೆಯ ವಾಣಿಯು. ಕೇವಲ ಜಾಣೀವರೂಪವಾಗಿ ಇರುವಂಥ ಪರಾ ಯಾವ ವೇಳೆಗೆ ಅರ್ಥದ ಆಕಾರ ತಳೆಯುವಳೋ ಆಗ ಅವಳಿಗೆ ಪಶ್ಯಂತಿ ಎಂದು ಅನ್ನುವರು. ಅನುಭವದಲ್ಲಿ ಸಿಲುಕಿದ ಸೇರಿದ, [ತೊಡಗಿದ] ವಸ್ತುವಿನ ಘಟನೆಗಳ ಅಥವಾ ಪ್ರಸಂಗಗಳ ಅರ್ಥ ನೋಡುವಳೆಂದು ಇವಳ ಹೆಸರು ಪಶ್ಯಂತಿ ಎಂದು ಇರುವದು. ಪಶ್ಯಂತಿಯ ಸ್ಥಾನವು ಹೃದಯವಿರುವದು. ಇವಳು ಕೇವಲ ಅರ್ಥಮಯಳೇ ಇರುವಳಾದ್ದರಿಂದ ಇಲ್ಲಿ ಭಾಷೆಯ ಜನ್ಮ ಆಗುವದಿರುವದು. ಮಾಧ್ಯಮಾ ಇದು ಮೂರನೆಯವಾಣಿಯು. ಸ್ಥೂಲ ಜಗತ್ ಮತ್ತು ಸೂಕ್ಷ್ಮ ಅರ್ಥ ಇವುಗಳನ್ನು ಜೋಡಿಸುವಂಥ ಮತ್ತು ಈ ಎರಡನ್ನೂ ತಳಕು [ಜೋಡಿಸು] ಹಾಕಿಕೊಡುವಂಥ ಮಧ್ಯದಲ್ಲಿಯ ಮಧ್ಯಸ್ಥಗಾರ ಸರಪಳಿ ಎಂದು ಇದಕ್ಕೆ ಮಧ್ಯಮಾ ಅನ್ನುತ್ತಾರೆ. ಮಧ್ಯಮಾದ ಸ್ಥಾನ ಕಂಠದಲ್ಲಿರುವದು. ಮಧ್ಯಮಾ ವಾಣಿಯಲ್ಲಿ ಭಾಷೆ ಇರುವದು. ಆದರೆ ಇದು ಮನದಲ್ಲಿಯೇ-ಮನಸ್ಸಿನೊಳಗೇ ಮಾತನಾಡುವದು. ಇದು ಒಂದು ಪ್ರಕಾರದ ಮೌನ ಭಾಷಾ ಇರುವದು. ಸಾಮಾನ್ಯವಾಗಿ ನಮ್ಮ ಚಿಂತನ ಈ ಆವಾಜರಹಿತ, ನಾದರಹಿತ, ಧ್ವನಿರಹಿತ ಭಾಷೆಯಲ್ಲಿ ಒಳಗೇ ಮನದಲ್ಲಿ ನಡೆಯುವದು. ವೈಖರಿ ಇದು ನಾಲ್ಕನೆಯ ವಾಣಿಯು. ವೈಖರಿ ವಾಣಿಯು ಸೂಕ್ಷ್ಮಕ್ಕೆ ಸ್ಥೂಲ ಮತ್ತು ಇಂದ್ರಿಯ ಗೋಚರ ರೂಪವನ್ನು ಕೊಡುವದು. ಒಳಗಿರುವ ಮೌನಭಾಷೆ ಆವಾಜರಹಿತ ಭಾಷೆಯು ಕಂಠದಲ್ಲಿ ಸ್ವರ ರೂಪದಿಂದ ಶಬ್ದ ತಯಾರ ಆಗಿ ಅದು ಮುಖದಿಂದ [ಬಾಯಿಯಿಂದ] ಹೊರ ಬೀಳುವದು. ಒಂದೇ ಶಕ್ತಿಯ ಈ ನಾಲ್ಕು ಅವಸ್ಥೆಗಳು ಇವಾಗಿರುವವು. ಇವು ಒಂದಕ್ಕೊಂದು ಅಂಟಿಕೊಂಡಿರುವವು. ಯಾವ ಹೊತ್ತಿನಲ್ಲಿ ನಾವು ಯಾವ ಒಂದು ಶಬ್ದ ಅನ್ನುವೆವೋ ಆ ಕಾಲಕ್ಕೆ ಅದರ ಹಿಂದೆ ಮಧ್ಯಮಾ, ಪಶ್ಯಂತಿ, ಮತ್ತು ಪರಾ ಈ ಮೂರರ ಸೂಕ್ಷ್ಮ ಹಾಲಚಾಲ ಚಲನವಲನ ಇರುವದು. ನಿತ್ಯದ ವ್ಯವಹಾರದಲ್ಲಿ ಈ ಮಾತು ನಮ್ಮ ಲಕ್ಷ್ಯದಲ್ಲಿ ಬರುವದಿಲ್ಲ. ಆದರೆ ಕಠಿಣ ಪ್ರಸಂಗದಲ್ಲಿ ಸಾಮಾನ್ಯ ಮನುಷ್ಯನಿಗೂ ಕೂಡಾ ಮಾತನಾಡುವ ಮೂಲವು ಅಗದೀ ಪೊಕ್ಕಳ ಹತ್ತಿರ ಇರುವದೆಂಬ ಅನುಭವ ಬರುವದು: ನಾಭಿಯ ಹತ್ತಿರ ಯಾವ ಪ್ರಥಮ [ಮೊದಲಿನ] ಸ್ಫುರಣ ಆಗುವದೋ ಅದಕ್ಕೆ ಪರಾವಾಣಿ ಎಂದು ಅನ್ನುವರು. ಇದರ ಸ್ಫುರಣ ರೂಪ ವ್ಯಕ್ತಿಯು ಹೃದಯದಲ್ಲಿ ಬಂದು ಕಿಂಚಿತ್ ಭಾಸರೂಪ-ನಾದರೂಪ [ಧ್ವನಿ ರೂಪ] ತಳೆಯುವದು. ಇದಕ್ಕೆ ಪಶ್ಯಂತಿ ವಾಣಿ ಅನ್ನುವರು. (೧) ಹೃದಯದಲ್ಲಿಯ ಧ್ವನಿ ಕಂಠದಲ್ಲಿ ಬಂದು ನಾದದ ಆವಾಜದ ರೂಪಧಾರಣ ಮಾಡುವದು. ಇದಕ್ಕೆ ಮಧ್ಯಮಾ ವಾಣಿ ಅನ್ನುವರು. ನಾಲಿಗೆಯಿಂದ ನಾದದ ಶಬ್ದರೂಪ ಉಚ್ಚಾರ ಹೊರಬೀಳುವದು. ಇದಕ್ಕೆ ವೈಖರಿ ವಾಣಿ ಅನ್ನುವರು. (೨)

ನಾಭಿಸ್ಥಾನೀ ಪರಾವಾಚಾ। ತೋ ಚಿ ಠಾವ ಅಂತಃಕರ್ಣಾಚಾ।
ಅಂತಃಕರ್ಣ ಪಂಚಕಾಚಾ। ನಿವಾಡಾ ಏಸಾ ॥೩॥

ನಿರ್ವಿಕಲ್ಪ ಜೇ ಸ್ಫುರಣ। ಉಗೇಚ ಅಸತಾ ಆಠವಣ।
ತೇ ಜಾಣಾವೇ ಅಂತಃಕರ್ಣ। ಜಾಣತೀಕಳಾ ॥೪॥

ಅಂತಃಕರ್ಣ ಆಠವಲೇ। ಪುಢೇ ಹೋಯೇ ನವ್ಹೇಸೇ ಗಮಲೇ।
ಕರೂ ನ ಕರೂ ಏಸೇ ವಾಟಲೇ। ತೇ ಚಿ ಮನ ॥೫॥

ಸಂಕಲ್ಪ ವಿಕಲ್ಪ ತೇ ಚಿ ಮನ। ಜೇಣೆ ಕರಿತಾ ಅನುಮಾನ।
ಪುಢೇ ನಿಶ್ಚಯೋ ತೋ ಜಾಣ। ರೂಪ ಬುದ್ಧೀ ಚೇ ॥೬॥

ಕರೀನ ಚಿ ಅಥವಾ ನಕರೀ। ಏಸಾ ನಿಶ್ಚಯೋ ಚಿ ಕರಿ।
ತೇ ಚಿ ಬುದ್ಧಿ ಹೇ ಅಂತರೀ। ವಿವೇಕೇ ಜಾಣಾವೀ ॥೭॥

ಜೇವಸ್ತು ಚಾ ನಿಶ್ಚಯೋಕೇಲಾ। ಪುಢೇ ತೇ ಚಿ ಚಿಂತೂ ಲಾಗಲಾ।
ತೇ ಚಿತ್ತ ಬೋಲಿಲ್ಯಾ ಬೋಲಾ। ಯೆಥಾರ್ಥ ಮಾನಾವೇ ॥೮॥

ಪುಢೇ ಕಾರ್ಯಾಚಾ ಅಭಿಮಾನ ಧರಣೇ। ಹೇ ಕಾರ್ಯೆ ತೋ ಅಗತ್ಯ ಕರಣೇ।
ಏಸ್ಯಾ ಕಾರ್ಯಾಸ ಪ್ರವರ್ತಣೇ। ತೋ ಚಿ ಅಹಂಕಾರೂ ॥೯॥

ಏಸೇ ಅಂತಃಕರ್ಣ ಪಂಚಕ। ಪಂಚವೃತ್ತೀ ಮಿಳೋನ ಯೇಕ।
ಕಾರ್ಯೆ ಭಾಗೇ ಪ್ರಕಾರ ಪಂಚಕ। ವೇಗಳಾಲೆ ॥೧೦॥

ಜೈಸೆ ಪಾಚ ಹಿ ಪ್ರಾಣ। ಕಾರ್ಯೆಭಾಗೇ ವೇಗಳಾಲೆ ಜಾಣ।
ನಾಹೀ ತರೀ ವಾಯೋಚೇ ಲಕ್ಷಣ। ಯೇಕ ಚಿ ಅಸೇ ॥೧೧॥

ಇನ್ನು ಮೇಲೆ ಅಂತಃಕರಣ ಪಂಚಕ ಯಾವವು ಅನ್ನುವದನ್ನು ಹೇಳುತ್ತಾರೆ: ನಾಭಿಯ ಹತ್ತಿರ ವಾಸ ಮಾಡಿರುವ ಕೇವಲ ಸ್ಫುರಣ ರೂಪದಿಂದ ಇರುವಂಥ ಪರಾವಾಣಿಗೆ ಈ ಅಂತಃಕರಣವೇ ಸ್ಥಾನವಾಗಿರುವದು. ಈಗ ಅಂತಃಕರಣ ಪಂಚಕದ ಸ್ವರೂಪದ ಬಗ್ಗೆ ಹೇಳುವೆ ಕೇಳಿರಿ. (೩) ನಾವು ಸುಮ್ಮನೆ ಕುಳಿತಾಗ ಸಹಜವಾಗಿ ಒಮ್ಮೆಂದೊಮ್ಮೆ ಒಂದು ನೆನಹು [ನೆನಪು, ಸ್ಮರಣ] ಉದಿಸು [ಹುಟ್ಟು]ವದು. ಇದರಂತೆಯೇ ಯಾವುದರಲ್ಲಿ ಕಲ್ಪನೆ ಇಲ್ಲವೋ ಅಂದರೆ ವಿಕಲ್ಪ ರಹಿತವಿರುವಂಥದೋ ಆ ಕೇವಲ ಆಕಸ್ಮಿಕ ಸ್ಫುರಣವೇ ಅಂತಃಕರಣವು– ಇದು ಅರಿವು ರೂಪವು ಎಂದು ತಿಳಿಯಿರಿ. ಅರಿವು ಅಥವಾ ಜ್ಞಾನ ಕಲಾ [ಜಾಗೃತಿ, ಎಚ್ಚರದ ಕಲಾ] ಅನ್ನುವದು ಇದೇ ಆಗಿರುವದು. ಅರಿವಿನ [ತಿಳುವಳಿಕೆಯು] ಅತ್ಯಂತ ಸ್ವಚ್ಛ ಸ್ವರೂಪ ಅಂದರೇನೇ ಅಂತಃಕರಣವಾಗಿದೆ. ಯಾವುದೇ ಪ್ರಕಾರದ ರೂಪ ಹೊಂದದೇ ಇದ್ದ ಅರೂಪಕ್ಕೆ ಮತ್ತು ಕೇವಲ ಜೀವದ ಇರುವಿಕೆಯ ನೆಸಪನ್ನು ಇಡುವ ಆ ಶುದ್ಧ, ಕಲ್ಪನಾ ರಹಿತ ಅರಿವಿಗೆ ಅಂತಃಕರಣ ಎಂದು ಹೆಸರಿರುವದು. (೪) ಅಂತಃಕರಣದಲ್ಲಿ ಸಹಜ ನೆನಪು ಹುಟ್ಟಿತು ಅಂದರೆ ಅಲ್ಲಿ ಅಂತಃಕರಣವು ಅನುಭವಕ್ಕೆ ಬಂದಿತು. ಎಂದು ತಿಳಿಯಿರಿ. ಆದರೆ ಯಾವುದು ನೆನಪಾಗುವದೋ ಅದು ಆದೀತೋ, ಅಥವಾ ಇಲ್ಲವೋ, ಮಾಡಬೇಕೋ ಅಥವಾ ಮಾಡಬಾರದೋ ಅನ್ನುವ ಹೊಯ್ದಾಟದ ಸ್ಥಿತಿಯು ಅರಿವಿಗೆ ಅನಂತರ ಉಂಟಾಯಿತು. ಇದೇ ಮನವೆಂದು ಅನಿಸಿಕೊಂಡಿತು. (೫) ಸಂಕಲ್ಪ ವಿಕಲ್ಪಗಳನ್ನು ಮಾಡುವ ಆ ಯಾವ ಅರಿವೇ ಮನವೆಂದು ತಿಳಿಯಿರಿ. ಅಂತರಂಗದಲ್ಲಿ (ಒಳಗೆ) ಯಾವಾಗ ಸಂಶಯಾತ್ಮಕ ಅನುಮಾನ ಮಾಡುವದು ನಡೆಯುವದೋ ಆವಾಗ ಅದರೊಳಗಿಂದಲೇ ನಂತರ ನಿಶ್ಚಯ ಹೊರಡುವದು. [ಹುಟ್ಟುವದು].ಆಗ ಅರಿವಿಗೆ ಬುದ್ಧಿಯ ರೂಪ ಬಂದಿತೆಂದು ತಿಳಿಯಬೇಕು. (೬) "ನಾನು ಇದನ್ನು ಮಾಡುವೆನು" ಅಥವಾ "ನಾನು ಇವನ್ನು ಮಾಡುವದಿಲ್ಲ." ಹೀಗೆ ನಿಶ್ಚಯಮಾಡುವದೇ ಬುದ್ಧಿ ಇರುವದು. ವಿವೇಕದಿಂದ ನಿಮ್ಮ ಅಂತರ್ಯಾಮದಲ್ಲಿ ಇವನ್ನೆಲ್ಲ ವಿವರವಾಗಿ ತಿಳಿಯಿರಿ. (೭) ಬುದ್ಧಿಯು ಯಾವ ಮಾತಿನ ವಿಷಯದ ಬಗ್ಗೆ ನಿಶ್ಚಯವನ್ನು ಮಾಡಿರುವದೋ, ಆ ವಿಷಯದ ಬಗ್ಗೆ ಆ ಮೇಲೆ ಚಿಂತನ ವಿಚಾರ ಪ್ರಾರಂಭವಾಗುವದು. ಹೀಗೆ ಚಿಂತನ ವಿಚಾರಮಾಡುವದೇ ಚಿತ್ತವಾಗಿರುವದು. ಇಲ್ಲಿ ಏನೆಲ್ಲ ಹೇಳಿರುವದೋ ಅದನ್ನೆಲ್ಲ ನಿಜವೆಂದು ನಂಬಿರಿ. [ತಿಳಿಯಿರಿ] (೮) ನಂತರ ಚಿಂತಿಸಿದ ಕಾರ್ಯದ ಅಭಿಮಾನ ಹಿಡಿದು "ಈ ಕಾರ್ಯವನ್ನು ನಾನು ಅವಶ್ಯವಾಗಿ ಮಾಡುವೆನು." ಈ ಪ್ರಕಾರ ಆಗ್ರಹದಿಂದ ಹಟದಿಂದ ಕಾರ್ಯ ಆರಂಭಮಾಡುವದಕ್ಕೆ ಅಹಂಕಾರ ಎಂದು ಹೆಸರು ಇರುವದು. ಅಹಂಕಾರದಲ್ಲಿ ಅರಿವಿಗೆ [ಜಾಣೀವಕ್ಕೆ] ಒಂದು ಪ್ರಕಾರದ ಗಟ್ಟಿ [ದಟ್ಟ, ಜಡ] ಸ್ವರೂಪ ಬರುವದು. ಅಂತೆಯೇ ಇದರಲ್ಲಿ ಹಟ ಅಥವಾ ಆಗ್ರಹ ಕಂಡುಬರುವದು. (೯) ಮೂಲ ಅಂತಃಕರಣ ಒಂದೇ ಇರುವದು. ಆದರೆ ಬೇರೆ ಬೇರೆ ಕಾರ್ಯದಿಂದಾಗಿ ಒಂದೇ ಅಂತಃಕರಣದಲ್ಲಿ ಐದು ರೂಪಗಳು ಕಾಣುವವು. ಪ್ರತಿಯೊಂದು ರೂಪಕ್ಕೆ ವೃತ್ತಿ ಅನ್ನುವರು. ಐದು ವೃತ್ತಿಗಳುಳ್ಳದ್ದು ಅಂತಃಕರಣ ಪಂಚಕ ಐದು ವೃತ್ತಿಗಳು ಕೂಡಿ ಅಂತಃಕರಣವು ಒಂದೇ ಇರುವದು. (೧೦) ಈಗ ಪ್ರಾಣ ಪಂಚಕ ಅಂದರೆ ಐದು ಪ್ರಾಣ ಅವುಗಳ ಸ್ಥಾನಗಳನ್ನು ಹೇಳುವರು: ಬೇರೆ ಬೇರೆ ಕಾರ್ಯಗಳಿಂದಾಗಿ ಐದು ಪ್ರಾಣಗಳು ಬೇರೆ ಬೇರೆ ಇವೆ ಎಂದು ಭಾಸವಾಗುವದು. ಆದರೆ ಇದು ವಾಯುವಿನ ವಿಭಾಗವಿರುವದು. ಮತ್ತು ಈ ವಾಯುವು ಮೂಲದಲ್ಲಿ ಒಬ್ಬನೇ ಇರುವನು. (೧೧)

ಸರ್ವಾಂಗೀ ವ್ಯಾನ ನಾಭೀ ಸಮಾನ । ಕಂಠೀಂಉದಾನ ಗುದೀ ಅಪಾನ ।
ಮುಖೀ ನಾಸಿಕೀ ಪ್ರಾಣ । ನೇಮಸ್ತ ಜಾಣಾವಾ ॥೧೨॥
ಬೋಲಿಲೇ ಹೇ ಪ್ರಾಣ ಪಂಚಕ । ಆತಾ ಜ್ಞಾನ ಇಂದ್ರಿಯೇಂ ಪಂಚಕ ।
ಶ್ರೋತ್ರ ತ್ವಚಾ ಚಕ್ಷು ಜಿವ್ಹಾ ನಾಸಿಕ । ಐಸೀಂ ಹೇಂ ಜ್ಞಾನೇಂದ್ರಿಯೇಂ ॥೧೩॥
ವಾಚಾ ಪಾಣಿಪಾದ ಶಿಸ್ನ ಗುದ । ಹೇಂ ಕರ್ಮ ಇಂದ್ರಿಯೇಂ ಪ್ರಸಿದ್ಧ ।
ಶಬ್ದ ಸ್ಪರುಷ ರೂಪ ರಸ ಗಂಧ । ಐಸೇಂ ಹೇಂ ವಿಷಯ ಪಂಚಕ ॥೧೪॥
ಅಂತಃಕರ್ಣ ಪ್ರಾಣಪಂಚಕ । ಜ್ಞಾನೇಂದ್ರಿಯೇಂ ಕರ್ಮೇಂದ್ರಿಯೇಂ ಪಂಚಕ ।
ಪಾಚವೇಂ ವಿಷಯ ಪಂಚಕ । ಐಸೀಂ ಹೇಂ ಪಾಚ ಪಂಚಕೇಂ ॥೧೫॥
ಐಸೇ ಹೇ ಪಂಚವಿಸ ಗುಣ । ಮಿಳೋನ ಸೂಕ್ಷ್ಮ ದೇಹ ಜಾಣ ।
ಯಾಚಾ ಕರ್ದಮು ಬೋಲಿಲಾ ಶ್ರವಣ । ಕೇಲೇಂ ಪಾಹಿಜೇ ॥೧೬॥
ಅಂತಃಕರ್ಣ ವ್ಯಾನ ಶ್ರವಣ ವಾಚಾ । ಶಬ್ದ ವಿಷಯೇಂ ಆಕಾಶಾಚಾ ।
ಪುಢೇಂ ವಿಸ್ತಾರ ವಾಯೋಚಾ । ಬೋಲಿಲಾ ಅಸೇ ॥೧೭॥
ಮನ ಸಮಾನ ತ್ವಚಾಪಾಣೀ । ಸ್ಪರ್ಶರೂಪ ಹಾ ಪವನೀ ।
ಐಸೇ ಹೇ ಅಡಾಖೇ ಸಾಧುನೀ । ಕೋಠಾ ಕರಾವಾ ॥೧೮॥
ಬುದ್ಧಿ ಉದಾನ ನಯೆನ ಚರಣ । ರೂಪವಿಷಯಾಚೇಂ ದರ್ಶನ ।
ಸಂಕೇತೇಂ ಬೋಲಿಲೇ ಮನ । ಘಾಲೂನ ಪಾಹಿಜೆ ॥೧೯॥
ಚಿತ್ತ ಅಪಾನ ಜಿವ್ಹಾ ಶಿಸ್ನ । ರಸ ವಿಷಯೇಂ ಆಪಜಾಣ ।
ಪುಢೇಂ ಏಕಾ ಸಾವಧಾನ । ಪೃಥ್ವಿಚೇಂ ರೂಪ ॥೨೦॥
ಅಹಂಕಾರ ಪ್ರಾಣ ಘ್ರಾಣ । ಗುದ ಗಂಧ ವಿಷಯೇಂ ಜಾಣ ।
ಐಸೇಂ ಕೇಲೇಂ ನಿರೂಪಣ । ಶಾಸ್ತ್ರ ಮತೇಂ ॥೨೧॥
ಐಸಾ ಹಾ ಸೂಕ್ಷ್ಮ ದೇಹೆ । ಪಾಹಾತಾ ಹೋಈಜೆ ನಿಸಂದೇಹೆ ।
ಯೆಥೇಂ ಮನ ಘಾಲೂನ ಪಾಹೆ । ತ್ಯಾಸೀ ಚ ಹೇ ಉಮಜೆ ॥೨೨॥
ಐಸೇ ಸೂಕ್ಷ್ಮ ದೇಹೆ ಬೋಲಿಲೇ । ಪುಢೇಂ ಸ್ಥೂಳ ನಿರೋಪಿಲೇಂ ।
ಆಕಾಶ ಪಂಚಗುಣೇಂ ವರ್ತಲೇಂ । ಕೈಸೇಂ ಸ್ಥೂಳೀಂ ॥೨೩॥
ಕಾಮ ಕ್ರೋಧ ಶೋಕ ಮೋಹೋ ಭಯೆ। ಹಾ ಪಂಚವಿಧ ಆಕಾಶಾಚಾ ಅನ್ವಯೆ।
ಪುಢೇಂ ಪಂಚವಿಧ ವಾಯೋ । ನಿರೋಪಿಲಾ ॥೨೪॥
ಚಳಣ ವಳಣ ಪ್ರಾಸಾರಣ । ನಿರೋಧ ಆಣಿ ಅಕೋಚನ ।
ಹೇಂ ಪಂಚವಿಧ ಲಕ್ಷಣ । ಪ್ರಭಂಜನಾ ಚೇಂ ॥೨೫॥

"ವ್ಯಾನ" ಎಂಬ ಹೆಸರಿನ ಪ್ರಾಣವು ಸರ್ವಾಂಗದಲ್ಲಿಯೂ ವ್ಯಾಪಿಸಿ ಇರುವಂಥದ್ದಾಗಿದೆ. "ಸಮಾನ"ವೆಂಬ ಪ್ರಾಣವು ನಾಭಿಯು (ಹೊಕ್ಕಳದ) ಸ್ಥಳದಲ್ಲಿ ಇರುವದು. "ಉದಾನ" ವೆಂಬ ಪ್ರಾಣವು ಕಂಠದಲ್ಲಿ ಇರುವದು. "ಅಪಾನ"ವೆಂಬ ಪ್ರಾಣವು ಗುದಸ್ಥಾನದಲ್ಲಿ ವಸತಿ ಮಾಡಿರುವದು. "ಪ್ರಾಣ"ವೆಂಬುದು ಬಾಯಿ (ಮುಖ) ಯಲ್ಲಿ ಮತ್ತು ಮೂಗಿನಲ್ಲಿರುವದು. ಇದು ಅಗದೀ ನಿಶ್ಚಿತವಾಗಿ ಖರೇ ಎಂದು ತಿಳಿಯಿರಿ. (೧೨) ಈಗ ಐದು ಜ್ಞಾನೇಂದ್ರಿಯಗಳು ಮತ್ತು ಐದು ಕರ್ಮೇಂದ್ರಿಯಗಳ ಬಗ್ಗೆ ವರ್ಣನೆ ಮಾಡುವರು:- ಪ್ರಾಣ ಪಂಚಕ ವಿವರಿಸಿದ್ದಾಯಿತು. ಈಗ ಜ್ಞಾನೇಂದ್ರಿಯ ಪಂಚಕಗಳನ್ನು ಹೇಳುವೆನು:- ಕಣ್ಣು, ಮೂಗು, ನಾಲಿಗೆ, ಕಿವಿ, ಚರ್ಮ ಇವು ಐದು ಜ್ಞಾನೇಂದ್ರಿಯಗಳು ಇರುವವು. (೧೩) ಕರ್ಮೇಂದ್ರಿಯಗಳು:-೧) ವಾಣಿ, ೨) ಕೈ, ೩) ಕಾಲು, ೪) ಜನನೇಂದ್ರಿಯ ೫) ಗುದ, ಇವು ಐದು ಕರ್ಮೇಂದ್ರಿಯಗಳೆಂದು ಪ್ರಸಿದ್ಧ ವಿರುವವು. ಐದು ವಿಷಯ ಪಂಚಕಗಳು ಯಾವುವೆಂದರೆ:- ೧) ಶಬ್ದ ೨) ಸ್ಪರ್ಶ ೩) ರೂಪ ೪) ರಸ ೫) ಗಂಧ ಇವು ಐದು ವಿಷಯ ಪಂಚಕಗಳಿರುವವು. (೧೪) ಐದೂ ಪಂಚಕಗಳು ಕೂಡಿ ೨೫ ತತ್ವಗಳಾಗುವವು. ಇನೆಲ್ಲವುಗಳ ಮಿಶ್ರಣದಿಂದಾಗಿ ಸೂಕ್ಷ್ಮ ದೇಹ ತಯಾರ ಆಗುವದು:- ೧) ಅಂತಃಕರಣ ಪಂಚಕ, ೨) ಪ್ರಾಣ ಪಂಚಕ ೩) ಜ್ಞಾನೇಂದ್ರಿಯ ಪಂಚಕ, ೪) ಕರ್ಮೇಂದ್ರಿಯ ಪಂಚಕ ೫) ವಿಷಯ ಪಂಚಕ ಹೀಗೆ ಐದು ಪಂಚಕಗಳಿರುವವು. (೧೫) ಈ ಐದು ಪಂಚಕಗಳು ಕೂಡಿ ೨೫ತತ್ವಗಳಾಗುವವು. ಈ ಇಪ್ಪತ್ತೈದು ತತ್ವಗಳು ಒಂದರಲ್ಲೊಂದು ಕೂಡಿಕೊಂಡು ಸೂಕ್ಷ್ಮ ದೇಹವು ತಯಾರಾಗುವದು. ಈ ಮಿಶ್ರಣದ ಮಾಹಿತಿ ನೀವು ಕೇಳುವದು ಅವಶ್ಯವಿರುವದು. (೧೬) ೧) ಅಂತಃಕರಣ, ೨) ವ್ಯಾನ, ೩) ಕಿವಿ, ೪) ವಾಣಿ, ಮತ್ತು ೫) ಶಬ್ದ ಇವುಗಳ ಸಂಬಂಧ ಆಕಾಶದೊಂದಿಗೆ ಇರುವದು. ಇನ್ನು ಮುಂದೆ ವಾಯುವಿನ ವಿಸ್ತಾರ ಹೇಳುವೆನು. (೧೭) ೧) ಮನ, ೨) ಸಮಾನ, ೩) ತ್ವಚೆ, ೪) ಕೈ, ೫) ಸ್ಪರ್ಶ ಇವುಗಳ ಸಂಬಂಧವು ವಾಯುವಿನೊಂದಿಗೆ ಇರುವದು. ಹೀಗೆ ಪರಸ್ಪರ ಸಂಬಂಧವನ್ನು ಮನದಲ್ಲಿ ಕೂಡಿಸಿ ಹೊಂದಿಸಿ ಒಂದು ಕೋಷ್ಟಕ ತಯಾರು ಮಾಡಬೇಕು. (೧೮) ೧] ಬುದ್ಧಿ, ೨] ಉದಾನ, ೩] ಕಣ್ಣು, ೪] ಕಾಲು, ೫] ರೂಪದರ್ಶನ ಇವುಗಳ ಸಂಬಂಧ ಅಗ್ನಿ ಅಥವಾ ತೇಜದೊಂದಿಗೆ ಇರುವದು. ಇವುಗಳನ್ನು ಗುರುತಿನಿಂದ [ಸಂಕೇತದಿಂದ] ಹೇಳಿದೆ ಇದರಲ್ಲಿ ಲಕ್ಷ್ಯ ಹಾಕಿ ವಿಚಾರವನ್ನು ಮಾಡಬೇಕು. [೧೯] ೧] ಚಿತ್ತ ೨] ಅಪಾನ ೩] ನಾಲಿಗೆ ೪] ಜನನೇಂದ್ರಿಯ ಮತ್ತು ೫] ರಸ ಇವುಗಳ ಸಂಬಂಧ ನೀರಿನೊಂದಿಗೆ ಇರುವದು. ಈಗ ಪೃಥ್ವಿಯ ರೂಪ ಹೇಳುವೆನು. ಇದನ್ನು ಲಕ್ಷ್ಯ-ಪೂರ್ವಕ ಕೇಳಿರಿ. [೨೦] ೧] ಅಹಂಕಾರ, ೨] ಪ್ರಾಣ, ೩] ಮೂಗು, ೪] ಗುದ, ಮತ್ತು ೫] ಗಂಧ ಇವುಗಳ ಸಂಬಂಧ ಪೃಥ್ವಿಯೊಂದಿಗೆ ಇರುವದು. ಶಾಸ್ತ್ರದ ಆಧಾರದಿಂದ ಮೇಲಿನದನ್ನು ಹೇಳಿದ್ದೇನೆ. [೨೧] ಇವೆಲ್ಲವುಗಳಿಂದ ಕೂಡಿದ ನಮ್ಮ ಸೂಕ್ಷ್ಮ ದೇಹವು ಹೀಗಿರುವದು. ಇದನ್ನೆಲ್ಲ ಚನ್ನಾಗಿ ತಿಳಿದು ನೋಡಿದರೆ ಮನುಷ್ಯನ ಸಂದೇಹ ದೂರಾಗಿ ನಿಃಸಂದೇಹಿಯಾಗುವನು. ಈ ವಿಷಯದಲ್ಲಿ ಮನವನ್ನು ತೊಡಗಿಸಿ ಯಾರು ನೋಡುವರೋ ಅವರಿಗೆ ಮಾತ್ರ ಇದು ಸರಿಯಾಗಿ ಲಕ್ಷ್ಯದಲ್ಲಿ ಬರುವದು. [೨೨] ಇನ್ನು ಮೇಲೆ ಪಂಚಭೂತಗಳು ಪ್ರತ್ಯಕ್ಷ ಹೇಗೆ ಕಾರ್ಯ ಮಾಡುವವು? ಇದನ್ನು ವರ್ಣನೆ ಮಾಡಿ ಹೇಳುವರು:- ಈ ಪ್ರಕಾರ ಸೂಕ್ಷ್ಮ ದೇಹದ ವರ್ಣನೆಯನ್ನು ಮಾಡಿ ಹೇಳಿದ್ದಾಯಿತು ಇನ್ನು ಮೇಲೆ ಸೂಕ್ಷ್ಮದ ವಿಚಾರ ಹೇಳುವೆನು. ಸ್ಥೂಲದಲ್ಲಿ ಆಕಾಶವು ಐದು ಗುಣಗಳಿಂದ ಹೇಗೆ ವ್ಯಕ್ತ ರೂಪ [ಸ್ಪಷ್ಟ ರೂಪ] ಧಾರಣ ಮಾಡುವದು ಇದನ್ನು ಈಗ ತಿಳಿಸುವೆನು. [೨೩] ೧] ಕಾಮ ೨] ಕ್ರೋಧ ೩] ಶೋಕ, ೪] ಮೋಹ, ೫] ಭಯ ಈ ಐದು ವಿಷಯಗಳು ಆಕಾಶದೊಂದಿಗೆ ಸಂಬಂಧವಿರುವವು. ಮುಂದೆ ವಾಯುವಿನ ಐದು ಪ್ರಕಾರಗಳನ್ನು ಹೇಳುವೆನು. [೨೪] ೧] ಚಲನ,ಹಾಲಚಾಲ, ಅಲ್ಲಾಡು ೨] ವಲನ,ಸರಿದಾಡು, ಹರಿದಾಡು ೩] ಪ್ರಸರಣ ೪] ನಿರೋಧ ಮತ್ತು ೫] ಆಕುಂಚನ ಈ ಐದು ಗುಣಗಳು ವಾಯುವಿನೊಂದಿಗೆ ಸಂಬಂಧವಿರುವವು. [೨೫]

ಕ್ಷುಧಾ ತೃಷಾ ಆಲಸ್ಯ ನಿದ್ರಾ ಮೈಥುನ । ಹೇ ತೇ ಜಾಚೇ ಪಂಚವಿಧ ಗುಣ ।
ಆತಾ ಪುಢೇ ಆಪ ಲಕ್ಷಣ । ನಿರೋಪಿಲೇ ಪಾಹಿಜೆ ॥೨೬॥

ಶುಕ್ಲೀತ ಶ್ರೋಣೀತ ಲಾಳ ಮೂತ್ರ ಸ್ವೇದ । ಹಾ ಪಂಚವಿಧ ಆಪಾಚಾ ಭೇದ ।
. ಪುಢೇ ಪೃಥ್ವೀ ವಿಶದ । ಕೇಲೀ ಪಾಹಿಜೇ ॥೨೭॥

ಅಸ್ತಿ ಮಾಂಷ ತ್ವಚಾ ನಾಡೀ ರೋಮ । ಹೇ ಪೃಥ್ವೀ ಚೇ ಪಂಚವಿಧ ಧರ್ಮ ।
ಐಸೇ ಸ್ಥೂಳ ದೇಹಾಚೇ ವರ್ಮ । ಬೋಲಿಲೇ ಅಸೇ ॥೨೮॥

ಪೃಥ್ವೀ ಆಪ ತೇಜ ವಾಯೋ ಆಕಾಶ । ಹೇ ಪಾಚಾಚೇ ಪಂಚವಿಸ ।
ಐಸೇ ಮಿಳೋನ ಸ್ಥೂಳ ದೇಹಾಸ । ಬೋಲಿಜೆತೇ ॥೨೯॥

ತಿಸರಾ ದೇಹ ಕಾರಣ ಅಜ್ಞಾನ । ಚೌಥಾ ದೇಹ ಮಹಾಕಾರಣ ಜ್ಞಾನ ।
ಹೇ ಚ್ಯಾರೀ ದೇಹ ನಿರ್ಶಿತಾ ವಿಜ್ಞಾನ । ಪರಬ್ರಹ್ಮ ತೇ ॥೩೦॥

ವಿಚಾರೇ ಚೌದೇಹಾವೇಗಳೇ ಕೇಲೇ । ಮೀಪಣ ತತ್ವಾ ಸರಿಸೆ ಗೇಲೇ ।
ಅನನ್ಯ ಆತ್ಮನಿವೇದನ ಜಾಲೇ । ಪರಬ್ರಹ್ಮೀ ॥೩೧॥

ವಿವೇಕೇ ಚುಕಲಾ ಜನ್ಮ ಮೃತ್ಯ । ನರದೇಹೀ ಸಾಧಿಲೇ ಮಹತ್ಕೃತ್ಯ ।
ಭಕ್ತಿಯೋಗೇ ಕೃತ್ಯ ಕೃತ್ಯ । ಸಾರ್ಥಕ ಜಾಲೇ ॥೩೨॥

ಇತಿ ಶ್ರೀ ಪಂಚೀಕರ್ಣ । ಕೇಲೇ ಚಿ ಕರಾವೇ ವಿವರ್ಣ ।
ಲೋಹಾಚೇ ಜಾಲೇ ಸುವರ್ಣ । ಪರಿಸಾಚೆನ ಯೋಗೇ ॥೩೩॥

ಹಾ ಹಿ ದೃಷ್ಟಾಂತ ಘಡೇನಾ । ಪರಿಸಾಚೇನ ಪರೀಸ ಕರವೇನಾ ।
ಶರಣ ಜಾತಾ ಸಾಧುಜನಾ । ಸಾಧು ಚ ಹೋಇಜೇ ॥೩೪॥

ಇತಿ ಶ್ರೀ ದಾಸಬೋಧೇ ಗುರುಶಿಷ್ಯ ಸಂವಾದೇ
'ತತ್ತ್ವ ನಿರೂಪಣ' ನಾಮ ಸಮಾಸ ಅಷ್ಟಮ ॥

೧] ಹಸಿವು, ೨] ನೀರಡಿಕೆ, ೩] ಆಲಸ್ಯ, ೪] ನಿದ್ರೆ, ೫] ಮೈಥುನ ಈ ಐದು ಗುಣಗಳು ತೇಜದ ಸಂಬಂಧವಿರುವವು. ಈಗ ನೀರಿನ ಗುಣ ಹೇಳುವೆನು. [೨೬] ೧] ರೇತ, [ವೀರ್ಯ] ೨] ರಕ್ತ, ೩] ಉಗುಳು [ಜೊಲ್ಲು] ೪] ಮೂತ್ರ ಮತ್ತು ೫] ಬೆವರು ಈ ಐದು ಆಪ ಅಂದರೆ ನೀರಿನ ಭೇದಗಳಿರುವವು. ಇನ್ನು ಪೃಥ್ವಿಯ ಭೇದಗಳನ್ನು ಸ್ಪಷ್ಟೀಕರಿಸುವೆನು. [೨೭] ೧] ಎಲುವು, ೨] ಮಾಂಸ, ೩] ಚರ್ಮ, ೪] ನಾಡಿ, ೫] ಕೂದಲು ಇವು ಐದು ಪೃಥ್ವಿಯ ಧರ್ಮದ ಭೇದಗಳು-ಇರುವವು:– ಈ ರೀತಿಯಲ್ಲಿರುವ ಸ್ಥೂಲ ದೇಹದ ಮರ್ಮ ತಿಳಿಸಿದೆವು. [೨೮] ೧] ಪೃಥ್ವಿ, ೨] ಆಪ, ೩) ತೇಜ, ೪) ವಾಯು, ಮತ್ತು ೫) ಆಕಾಶ ಈ ಐದು ಭೂತಗಳವು. ಒಟ್ಟು ೨೫ ಗುಣಗಳು ಇರುವವು. ಇವು ಒಟ್ಟುಗೂಡಿ ಸ್ಥೂಲ ದೇಹವು ತಯಾರ ಆಗುವದು. (೨೯) ಈಗ ಕಾರಣ ದೇಹ ಮತ್ತು ಮಹಾಕಾರಣ ದೇಹಗಳ ಬಗ್ಗೆ ಹೇಳುವರು:- ಮೂರನೆಯದೇಹವು ಕಾರಣ ದೇಹವು. ಇದು ಅಜ್ಞಾನ ರೂಪವಿರುವದು. ನಾಲ್ಕನೆಯ ದೇಹ ಮಹಾಕಾರಣ ದೇಹವು. ಇದು ಜ್ಞಾನ ರೂಪವಿರುವದು. ದೇಹಗಳು ನಾಲ್ಕು ಪ್ರಕಾರದವು ೧] ಸ್ಥೂಲದೇಹ, ೨) ಸೂಕ್ಷ್ಮದೇಹ, ೩) ಕಾರಣ, ಮತ್ತು ೪) ಮಹಾಕಾರಣ ಹೀಗಿರುವವು:– ಈ ನಾಲ್ಕೂ ದೇಹಗಳ ನಿರಸನ ಮಾಡಿದಾಗ ವಿಜ್ಞಾನವು ಪ್ರಾಪ್ತವಾಗುವದು. (ಆಗ ಕೇವಲ ಪರಬ್ರಹ್ಮ ಮಾತ್ರ ಉಳಿಯುವದು). ಒಟ್ಟಿನಲ್ಲಿ ಜೀವವು ಪರಬ್ರಹ್ಮ ರೂಪವಾಗಿ ಬಿಡುವದು. [೩೦] ಈ (ಪ್ರಕಾರ) ರೀತಿಯಲ್ಲಿ ಪಂಚೀಕರಣ ಮಾಡಿ ಆತ್ಮನಿವೇದನ ಮಾಡಬೇಕು. ನಾನು ಅನ್ನುವ ಅಹಂ ಇದನ್ನು ಇಲ್ಲದಂತೆ ಮಾಡಬೇಕು. ಮತ್ತು ಭಕ್ತಿಯೋಗದಿಂದ ಮಹತ್ ಕಾರ್ಯ ಸಾಧಿಸಬೇಕು:– ವಿಚಾರದಿಂದ ನಾಲ್ಕು ದೇಹಗಳಿಂದ ಬಿಡುಗಡೆ ಹೊಂದಬೇಕು. ತತ್ವಗಳ ಜೊತೆಗೇ "ಅಹಂ" (ನಾನು) ಅನ್ನುವದನ್ನು ಇಲ್ಲದಂತೆ ಮಾಡಬೇಕು. (ದೂರ ಮಾಡಬೇಕು). ಅಂದರೆ ಪರಬ್ರಹ್ಮನೊಂದಿಗೆ ಅನನ್ಯವಾಗುವ ಆತ್ಮನಿವೇದನವು ಸಾಧಿಸುವದು. [೩೧] ಆತ್ಮಾನಾತ್ಮ ವಿವೇಕದಿಂದ ಜನನ ಮರಣದ ಚಕ್ರದಿಂದ ಬಿಡುಗಡೆಯಾಗುವದು. ನರದೇಹ ಪ್ರಾಪ್ತವಾದದ್ದು ಸಾರ್ಥಕವಾದಂತಾಗುವದು. ನರದೇಹ ಧರಿಸಿ ಬಂದದ್ದಕ್ಕೂ ನಿಜವಾದ ದೊಡ್ಡ ಕಾರ್ಯ ಸಾಧಿಸಿ ಸಾಧ್ಯ ಮಾಡಿಕೊಂಡಂತಾಗುವದು. ಭಕ್ತಿಯೋಗದಿಂದ (ಐಕ್ಯ ಭಕ್ತಿಯಿಂದ) ಕಬ್ಬಿನ ಮೇಲೆ ಜೇನು ಇಟ್ಟಂತಾಗಿ ಕೃತ ಕೃತ್ಯರಾಗಿ ಹೋಗುವಿರಿ. ಜನ್ಮವು ಖರೇ ಸಾರ್ಥಕ ಸಾಧಿಸಿಕೊಂಡಿತು. [೩೨] ಪಂಚೀಕರಣವು ಇಲ್ಲಿಗೆ ಮುಗಿಯಿತು. ಈ ವಿಷಯವನ್ನು ಪುನಃ ಪುನಃ ವಿವರಣೆ ಮಾಡಬೇಕು. ಯಾಕೆಂದರೆ ಪರಸಗಲ್ಲಿನ ಸ್ಪರ್ಶದಿಂದ ಕಬ್ಬಿಣವೂ ಬಂಗಾರವಾಗುವದು. ಇದರಂತೆ ಪಂಚೀಕರಣ ವಿವೇಕದಿಂದ ಜೀವವು ಬ್ರಹ್ಮ ಸ್ವರೂಪವನ್ನು ಹೊಂದುವದು. [೩೩] ಆದರೆ ಈ ಪರಿಸಗಲ್ಲಿನ ದೃಷ್ಟಾಂತವೂ ಕೂಡಾ ಅಪೂರ್ಣವಿರುವದು. ಪರಿಸಕ್ಕೆ ಕಬ್ಬಿಣವನ್ನು ಪರಿಸವನ್ನಾಗಿ ಮಾಡಲಿಕ್ಕೆ ಬರುವದಿಲ್ಲ. ಆದರೆ ಮನುಷ್ಯನು ಸಾಧುವಿಗೆ ಶರಣು ಹೋದರೆ ಅವನು ಸ್ವತಃ ಸಾಧುವೇ ಆಗುವನು. ಸಾಧು ಸ್ವತಃ ಪರಬ್ರಹ್ಮ ಸ್ವರೂಪನಿರುವನು. ಶರಣಾಗತನಿಗೆ ಅವನು ತನ್ನಂತೆ ಪರಬ್ರಹ್ಮ ಸ್ವರೂಪನನ್ನಾಗಿ ಮಾಡುವನು. [೩೪]

ಶ್ರೀ ದಾಸಬೋಧದ ಹದಿನೇಳನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ

— "ತತ್ವ ನಿರೂಪಣ"ವೆಂಬ ಹೆಸರಿನ ಎಂಟನೆಯ ಸಮಾಸವು ಮುಗಿದುದು.

ಕೋಷ್ಟಕ ಪಹಲೆ : ಸೂಕ್ಷ್ಮ ದೇಹಾಚಿ ಪಂಚವೀಸ ತತ್ವೆ

| | | | | | |
|---|---|---|---|---|---|
| ೧. ಅಂತಃಕರಣ ಪಂಚಕ | ಅಂತಃಕರಣ | ಮನ | ಬುದ್ಧಿ | ಚಿತ್ತ | ಅಹಂಕಾರ |
| | ಆಠವಣ (ಪ್ರಥಮ ಸ್ಫುರಣ) | ಸಂಕಲ್ಪ ವಿಕಲ್ಪ | ನಿಶ್ಚಯ ಕರಣೆ | ಚಿಂತನ ಕರಣೆ | ಅಭಿಮಾನ ಧರಣೆ |
| ೨. ಪ್ರಾಣ ಪಂಚಕ | ವ್ಯಾನ ಸರ್ವಾಂಗ ಭರ್ | ಸಮಾನ ನಾಭಿ ಸ್ಥಾನ | ಉದಾನ ಕಂಠ ಸ್ಥಾನ | ಅಪಾನ ಗುದ ಸ್ಥಾನ | ಪ್ರಾಣ ನಾಕ್, ತೊಂಡ್ |
| ೩. ಜ್ಞಾನೇಂದ್ರಿಯ ಪಂಚಕ | ಕಾನ್ ಏಕಣೆ | ತ್ವಚಾ ಶೀತೋಷ್ಣ | ಡೋಳೆ ಪಾಹಣೆ | ಜೀಬ್ ರಸಾಸ್ವಾದ | ನಾಕ್ ಗಂಧ ಘೇಣೆ |
| ೪. ಕರ್ಮೇಂದ್ರಿಯ ಪಂಚಕ | ವಾಚಾ ಬೋಲಣೆ | ಹಾಥ ದೇಣೆ ಘೇಣೆ | ಪಾಯ ಜಾಣೆ ಏಣೆ | ಜನನೇಂದ್ರಿಯ ಮೂತ್ರ, ರತಿ | ಗುದ ಮಲತ್ಯಾಗ |
| ೫. ವಿಷಯ ಪಂಚಕ | ಶಬ್ದ | ಸ್ಪರ್ಶ | ರೂಪ | ರಸ | ಗಂಧ |

ಕೋಷ್ಟಕ ದುಸರೆ : ಸ್ಥೂಲ ದೇಹಾಚಿ ಪಂಚವೀಸ್ ತತ್ವೆ

| | | | | | |
|---|---|---|---|---|---|
| ೧. ಆಕಾಶ | ಕಾಮ | ಕ್ರೋಧ | ಶೋಕ | ಮೋಹ | ಭಯ |
| ೨. ವಾಯು | ಚಳಣ | ವಳಣ | ಪ್ರಸಾರಣ | ನಿರೋಧ | ಆಕುಂಚನ |
| ೩. ತೇಜ | ಭೂಕ್ | ತಹಾನ | ಆಳಸ | ಝೋಪ | ಮೈಥುನ |
| ೪. ಆಪ | ರೇತ | ರಕ್ತ | ಲಾಳ | ಮೂತ್ರ | ಘಾಮ |
| ೫. ಪೃಥ್ವೀ | ಹಾಡೇ | ಮಾಂಸ | ತ್ವಚಾ | ನಾಡೀ | ರೋಮ |

### ದಶಕ ೧೭. ಸಮಾಸ ೮ ಕ್ಕೆ ಸಂಬಂಧಿಸಿದ ಕೋಷ್ಟಕ ರೂಪಿ ವಿವರಗಳು

(ದ. ೧೭ ಸ. ೮ ಓ ೩ ರಿಂದ ೨೨) ಮತ್ತು (ದ. ೧೭ ಸ. ೯ ಓ ೧೮ ರಿಂದ ೨೨)

## ಕೋಷ್ಟಕ ೧. ಸೂಕ್ಷ್ಮ ದೇಹದ ೨೫ ತತ್ವಗಳು

(೫ ಮಹಾಭೂತಗಳು ಮತ್ತು ೫ ಪಂಚಕಗಳು ಕೂಡಿ ಆಗುವ ೨೫ ತತ್ವಗಳು)

| | | | | | | | |
|---|---|---|---|---|---|---|---|
| 1) | ಅಂತಃಕರಣ ಪಂಚಕ | ಅಂತಃಕರಣ<br>ನೆನಪು,ಸ್ಮರಣೆ ಪ್ರಥಮ ಸ್ಫುರಣ | ಮನ<br>ಸಂಕಲ್ಪ ವಿಕಲ್ಪ | ಬುದ್ಧಿ<br>ನಿಶ್ಚಯ ಮಾಡುವುದು | ಚಿತ್ತ<br>ಚಿಂತನ ಮಾಡುವುದು | ಅಹಂಕಾರ<br>ಅಭಿಮಾನ ಹಿಡಿಯುವುದು | ಆಕಾಶದ ಗುಣ |
| 2) | ಪ್ರಾಣ ಪಂಚಕ | ವ್ಯಾನ ಸರ್ವಾಂಗದಲ್ಲಿ | ಸಮಾನ ನಾಭಿ ಸ್ಥಾನ | ಉದಾನ ಕಂಠ ಸ್ಥಾನ | ಅಪಾನ ಗುದ ಸ್ಥಾನ | ಪ್ರಾಣ ಮೂಗು ಬಾಯಿ(ಮುಖ) | ವಾಯು-ವಿನ ಗುಣ |
| 3) | ಜ್ಞಾನೇಂದ್ರಿಯ ಪಂಚಕ | ಕಿವಿ ಕೇಳುವುದು | ಚರ್ಮ ಶೀತ-ಉಷ್ಣ ತಿಳಿಯುವುದು | ನೇತ್ರ ರೂಪ ನೋಡುವುದು | ನಾಲಿಗೆ ರಸ ಸ್ವಾದನ ಮಾಡುವುದು | ಮೂಗು ಗಂಧ [ವಾಸನೆ] ಮೂಸುವುದು (ಸುಗಂಧ–ದುರ್ಗಂಧ) | ತೇಜದ ಗುಣ |
| 4) | ಕರ್ಮೇಂದ್ರಿಯ ಪಂಚಕ | ವಾಚಾ ಮಾತ ನಾಡುವುದು [ಶಬ್ದೋಚ್ಚಾರ] | ಕೈ ಕೊಡುವುದು ತೆಗೆದು ಕೊಳ್ಳುವುದು | ಕಾಲು ಹೋಗುವುದು ಬರುವುದು | ಜನನೇಂದ್ರಿಯ ಮೂತ್ರ ತ್ಯಾಗ ರತಿ ಭೋಗ | ಗುದ ಮಲ ತ್ಯಾಗ | ಆಪದ ಗುಣ |
| 5) | ವಿಷಯ ಪಂಚಕ | ಶಬ್ದ | ಸ್ಪರ್ಶ | ರೂಪ | ರಸ | ಗಂಧ | ಪೃಥ್ವಿಯ ಗುಣ |

(ದ. ೧೭ ಸ. ೮ ಓ ೨೪ ರಿಂದ ೨೯) ಮತ್ತು (ದ. ೧೭ ಸ. ೯ ಓ ೧೨ ರಿಂದ ೧೬)

## ಕೋಷ್ಟಕ ೨. ಸ್ಥೂಲ ದೇಹದ ೨೫ ತತ್ವಗಳು

| | | | | | | |
|---|---|---|---|---|---|---|
| 1) | ಆಕಾಶ | ಕಾಮ | ಕ್ರೋಧ | ಶೋಕ | ಮೋಹ | ಭಯ |
| 2) | ವಾಯು | ಚಲನ | ವಲನ | ಪ್ರಸಾರಣ | ನಿರೋಧ | ಆಕುಂಚನ |
| 3) | ತೇಜ | ಹಸಿವೆ | ನೀರಡಿಕೆ | ಆಲಸ್ಯ | ನಿದ್ರೆ | ಮೈಥುನ |
| 4) | ಆಪ [ನೀರು] | ವೀರ್ಯ [ರೇತ] | ರಕ್ತ | ಜೊಲ್ಲು [ಉಗುಳು] | ಮೂತ್ರ | ಬೆವರು |
| 5) | ಪೃಥ್ವಿ | ಎಲುಬು [ಅಸ್ಥಿ] | ಮಾಂಸ | ಚರ್ಮ | ನಾಡಿ | ಕೂದಲು |

**ಕೋಷ್ಟಕ ತಿಸರೆ : ಪಂಚಭೂತಾಂಚೆ ಸಂಬಂಧಿತ ವಿಷಯ**

| | | | | | |
|---|---|---|---|---|---|
| ೧. ಭೂತ ಪಂಚಕ | ಆಕಾಶ | ವಾಯು | ತೇಜ | ಆಪ | ಪೃಥ್ವೀ |
| ೨. ವಿಷಯ ಪಂಚಕ | ಶಬ್ದ | ಸ್ಪರ್ಶ | ರೂಪ | ರಸ | ಗಂಧ |
| ೩. ಅಂತಃಕರಣ ಪಂಚಕ | ಅಂತಃಕರಣ | ಮನ | ಬುದ್ಧಿ | ಚಿತ್ತ | ಅಹಂಕಾರ |
| ೪. ಪ್ರಾಣ ಪಂಚಕ | ವ್ಯಾನ | ಸಮಾನ | ಉದಾನ | ಅಪಾನ | ಪ್ರಾಣ |
| ೫. ಜ್ಞಾನೇಂದ್ರಿಯ ಪಂಚಕ | ಕಾನ | ತ್ವಚಾ | ಡೋಳೆ | ಜೀಭ | ನಾಕ |
| ೬. ಕರ್ಮೇಂದ್ರಿಯ | ವಾಣೀ | ಹಾಥ | ಪಾಯ | ಜನನೇಂದ್ರಿಯ | ಗುದ |

**ಕೋಷ್ಟಕ ಚೌಥೆ : ಚಾರ ವಾಣೀ ವ ತ್ಯಾಚೀ ಸ್ಥಾನೇ**

| | | | | |
|---|---|---|---|---|
| ೧. ವೈಖರಿ | ಮಧ್ಯಮ | ಪಶ್ಯಂತೀ | ಪರಾ | ಪರಬ್ರಹ್ಮ |
| ೨. ಶಬ್ದರೂಪ | ನಾದರೂಪ | ಧ್ವನಿರೂಪ | ಸ್ಫುರಣರೂಪ | ನಿಃಶಬ್ದ |
| ೩. ತೊಂಡ | ಕಂಠ | ಹೃದಯ | ನಾಭಿ | ಸರ್ವವ್ಯಾಪಿ |

**ಕೋಷ್ಟಕ ಪಾಚವೆ : ಚಾರ ಚಾರ ದೇಹ ವ ತ್ಯಾಚೇ ಸ್ವರೂಪ**

| | | | | | |
|---|---|---|---|---|---|
| ೧. ಪಿಂಡ | ಸ್ಥೂಲ | ಸೂಕ್ಷ್ಮ | ಕಾರಣ | ಮಹಾಕಾರಣ | ದೇಹನಿರಸನ |
| | ಪಂಚ ಭೂತಾಚಾ | ವಾಸನಾಚಾ | ಅಜ್ಞಾನಾಚಾ | ಜ್ಞಾನಾಚಾ | ಅಂತರಾತ್ಮಾ |
| ೨. ಬ್ರಹ್ಮಾಂಡ | ವಿರಾಟ | ಹಿರಣ್ಯಗರ್ಭ | ಅವ್ಯಾಕೃತ | ಮೂಳ ಮಾಯಾ | ದೃಶ್ಯನಿರಸನ |
| | ದೃಶ್ಯವಿಶ್ವ | ವಿಶ್ವಮನ | ಗುಣಮಾಯಾ | ಶಿವಶಕ್ತಿ | ಪರಮಾತ್ಮಾ |

## ಕೋಷ್ಟಕ ೩. ಪಂಚ ಮಹಾಭೂತಗಳಿಗೆ ಸಂಬಂಧಿಸಿದ ವಿಷಯುಗಳು

(ಭೂತ ಪಂಚಕಗಳು) (ದ. ೧೭ ಸ. ೮ ಓ ೧೬ ರಿಂದ ೨೧)

| | | | | | | |
|---|---|---|---|---|---|---|
| 1) | ಭೂತ ಪಂಚಕ | ಆಕಾಶ | ವಾಯು | ತೇಜ | ಆಪ [ನೀರು] | ಪೃಥ್ವಿ |
| 2) | ವಿಷಯ ಪಂಚಕ | ಶಬ್ದ | ಸ್ಪರ್ಶ | ರೂಪ | ರಸ | ಗಂಧ |
| 3) | ಅಂತಃಕರಣ ಪಂಚಕ | ಅಂತಃಕರಣ | ಮನ | ಬುದ್ಧಿ | ಚಿತ್ತ | ಅಹಂಕಾರ |
| 4) | ಪ್ರಾಣ ಪಂಚಕ | ವ್ಯಾನ | ಸಮಾನ | ಉದಾನ | ಅಪಾನ | ಪ್ರಾಣ |
| 5) | ಜ್ಞಾನೇಂದ್ರಿಯ ಪಂಚಕ | ಕಿವಿ | ಚರ್ಮ | ಕಣ್ಣು [ನೇತ್ರ] | ನಾಲಿಗೆ | ಮೂಗು |
| 6) | ಕರ್ಮೇಂದ್ರಿಯ ಪಂಚಕ | ವಾಣಿ | ಕೈ | ಕಾಲು | ಜನನೇಂದ್ರಿಯ | ಗಂಧ |

## ಕೋಷ್ಟಕ ೪. ನಾಲ್ಕು ವಾಣಿಗಳು ಮತ್ತು ಅವುಗಳ ಸ್ಥಾನಗಳು

| | | | | | |
|---|---|---|---|---|---|
| 1) | ವೈಖರಿ | ಮಧ್ಯಮಾ | ಪಶ್ಯಂತಿ | ಪರಾ | ಪರಬ್ರಹ್ಮ |
| 2) | ಶಬ್ದ ರೂಪ | ನಾದ ರೂಪ | ಧ್ವನಿ ರೂಪ | ಸ್ಫುರಣ ರೂಪ | ನಿಶ್ಶಬ್ದ |
| 3) | ಮುಖ(ಬಾಯಿ) | ಕಂಠ | ಹೃದಯ | ನಾಭಿ | ಸರ್ವವ್ಯಾಪಿ |

## ಕೋಷ್ಟಕ ೫. ನಾಲ್ಕು ನಾಲ್ಕು ದೇಹ ಮತ್ತು ಅವುಗಳ ಸ್ವರೂಪಗಳು

| | | ಸ್ಥೂಲ ದೇಹ | ಸೂಕ್ಷ್ಮ ದೇಹ | ಕಾರಣ ದೇಹ | ಮಹಾಕಾರಣ ದೇಹ | ದೇಹ ನಿರಸನ |
|---|---|---|---|---|---|---|
| 1) | ಪಿಂಡ | ಪಂಚ ಭೂತಗಳದ್ದು | ವಾಸನಾದ್ದು | ಅಜ್ಞಾನದ್ದು | ಜ್ಞಾನದ್ದು | ಅಂತರಾತ್ಮಾ |
| 2) | ಬ್ರಹ್ಮಾಂಡ | ವಿರಾಟ | ಹಿರಣ್ಯ ಗರ್ಭ | ಅವ್ಯಾಕೃತ | ಮೂಲಮಾಯಾ | ದೃಶ್ಯ ನಿರಸನ |
| | | ದೃಶ್ಯ ವಿಶ್ವ | ವಿಶ್ವ ಮನ | ಗುಣಮಾಯಾ | ಶಿವಶಕ್ತಿ | ಪರಮಾತ್ಮಾ |

**ದಶಕ ಸಪ್ತದಶ : ಸಮಾಸ ನವಮ : ತನು ಚತುಷ್ಟಯ ನಿರೂಪಣ (ನುಡಿ ೨೨)**

॥ಶ್ರೀರಾಮ॥ ಸ್ಥೂಳ ಸೂಕ್ಷ್ಮ ಕಾರಣ ಮಹಾಕಾರಣ ।
ಐಸೇ ಹೇ ಚತ್ವಾರ ದೇಹಜಾಣ ।
ಜಾಗೃತಿ ಸ್ವಪ್ನ ಸುಷುಪ್ತಿ ಪೂರ್ಣ । ತುರ್ಯಾಜಾಣಾವೀ ॥೧॥

ವಿಶ್ವ ತೈಜಸ ಪ್ರಾಜ್ಞ । ಪ್ರತ್ಯಗಾತ್ಮಾ ಹೇ ಅಭಿಮಾನ ।
ನೇತ್ರಸ್ಥಾನ ಕಂಠಸ್ಥಾನ ಹೃದಯ ಸ್ಥಾನ । ಮೂರ್ಧನೀ ತೇ ॥೨॥

# ದಶಕ ೧೭. ಸಮಾಸ ೯. ತನು ಚತುಷ್ಟಯ ನಿರೂಪಣ (ನುಡಿ ೨೨)

ಈ ಸಮಾಸದಲ್ಲಿ ಪಂಚೀಕರಣದ ವಿಷಯವನ್ನೇ ಸ್ವಲ್ಪ ಬೇರೆ ರೀತಿಯಿಂದ ಪ್ರತಿಪಾದನೆ ಮಾಡಿದ್ದಾರೆ. ಅಂದರೆ ಹೀಗೆ:-ನಾಲ್ಕು ದೇಹ, ನಾಲ್ಕು ಅವಸ್ಥೆ, ನಾಲ್ಕು ಅಭಿಮಾನ, ನಾಲ್ಕು ಸ್ಥಾನ, ನಾಲ್ಕು ಭೋಗ, ನಾಲ್ಕು ಮಾತ್ರಾ [ಅಕ್ಷರಗಳು], ನಾಲ್ಕು ಗುಣ, ಮತ್ತು ನಾಲ್ಕು ಶಕ್ತಿ ಇವೆಲ್ಲ ಕೂಡಿ ಮೂವತ್ತೆರಡು ತತ್ವಗಳಾಗುವವು. ಸ್ಥೂಲ ದೇಹದವು ಇಪ್ಪತ್ತೈದು ತತ್ವಗಳು. ಸೂಕ್ಷ್ಮ ದೇಹದವು ಇಪ್ಪತ್ತೈದು ತತ್ವಗಳು. ಇವೆರಡೂ ಕೂಡಿ ಐವತ್ತು ತತ್ವಗಳಾಗುವವು. ಈ ಐವತ್ತು ತತ್ವ ಮತ್ತು ಮೂವತ್ತೆರಡು ತತ್ವಗಳು ಕೂಡಿ ಒಟ್ಟು ಎಂಭತ್ತೆರಡು ತತ್ವಗಳಾಗುವವು. ಇದರಲ್ಲಿ ಕಾರಣ ದೇಹದ ಅಜ್ಞಾನ ಮತ್ತು ಮಹಾಕಾರಣ ದೇಹದ ಜ್ಞಾನ ಹೀಗೆ ಮತ್ತೆರಡು ತತ್ವಗಳು ಕೂಡಿದವೆಂದರೆ ಎಲ್ಲ ಕೂಡಿ ಎಂಭತ್ನಾಲ್ಕು ತತ್ವಗಳಾಗುವವು. ಜ್ಞಾನದಿಂದ ಅಜ್ಞಾನವನ್ನು ಗುರುತಿಸಿ ತಿಳಿಯಬೇಕು. ಸಾಕ್ಷಿತನದಿಂದ ಅಂದರೆ ತ್ರಯಸ್ಥನಂತೆ [ಪಂಚ, ತಿರಾಯಿತ, ಮಧ್ಯಸ್ಥಗಾರನಂತೆ] ಇದ್ದು ಮೇಲಿನ ಎಂಭತ್ತೆರಡು ತತ್ವಗಳ ನಿರಸನ ಮಾಡಬೇಕು. ಅಂದರೆ ಇವುಗಳನ್ನು ಪೂರ್ಣ ವಿವೇಚಿಸಿ ತಿಳಿದು, ಬದಿಗೆ ಸರಿಸಬೇಕು. ಯಾಕೆಂದರೆ ಇವು ಖೊಟ್ಟಿ ಇರುವವು ಕೊನೆಗೆ ಜ್ಞಾನ ಮತ್ತು ಅಜ್ಞಾನ ಎರಡೂ ಲೋಪವಾಗಿ ಹೋಗುವವು. ಕೊನೆಗೆ ವಿಜ್ಞಾನ [ವಿಶೇಷ ಜ್ಞಾನ] ಮಾತ್ರ ಉಳಿಯುವದು.

## ದಶಕ ೧೭. ಸಮಾಸ ೯. ತನು ಚತುಷ್ಟಯ ನಿರೂಪಣ (ನುಡಿ ೨೨)

ಮೊದಲಿಗೆ ನಾಲ್ಕು ನಾಲ್ಕು ಸಂಖ್ಯೆಯಂತೆ ಒಟ್ಟು ೮ ಗುಂಪುಗಳಲ್ಲಿಯ ಮೂವತ್ತೆರಡು ತತ್ವಗಳ ಪ್ರತಿಪಾದನೆಯನ್ನು ಮಾಡುವರು. ನಾಲ್ಕು ದೇಹಗಳಂತೆ ಪ್ರತಿಯೊಂದು ತತ್ವದಲ್ಲಿ ನಾಲ್ಕು ಪ್ರಕಾರಗಳು ಆಗುವವು: ೧) ಸ್ಥೂಲ ೨) ಸೂಕ್ಷ್ಮ ೩) ಕಾರಣ ೪) ಮಹಾಕಾರಣ ಹೀಗೆ ನಾಲ್ಕು ದೇಹಗಳು ಇರುವವು. ೧] ಜಾಗ್ರತಿ, ೨] ಸ್ವಪ್ನ, ೩] ಸುಷುಪ್ತಿ, ೪] ತುರ್ಯಾ, ಇವು ನಾಲ್ಕು ಕ್ರಮವಾಗಿ ಅವುಗಳ ಅವಸ್ಥೆಗಳಿರುವವು. (೧) ೧] ವಿಶ್ವ ೨] ತೇಜಸ ೩] ಪ್ರಾಜ್ಞ ೪] ಪ್ರತ್ಯಗಾತ್ಮಾ ಇವು ಕ್ರಮವಾಗಿ ಆ ನಾಲ್ಕು ದೇಹಗಳ ಅಭಿಮಾನಗಳಿರುವವು. ಎಚ್ಚರದಲ್ಲಿ "ಈ ದೇಹ ನಾನಿರುವೆನು" ಹೀಗೆ ಅಭಿಮಾನ ಇರುವಂಥದೇ ಈ ವಿಶ್ವವಾಗಿರುವದು. ಇದು ೧ ನೆಯದಾದ ವಿಶ್ವ ಅಭಿಮಾನವು. [ಈ ದೇಹ ನಾನು ಮತ್ತು ಸರ್ವ ಸೃಷ್ಟಿಯು ನನ್ನ ಭೋಗ್ಯ ಅಂದರೆ ಭೋಗಿಸಲು ಯೋಗ್ಯದಾದ ವಿಷಯವಿರುವದು. ಅನ್ನುವ ಅಭಿಮಾನ]. ಸ್ವಪ್ನ ಬೀಳುವಾಗ ಇರುವ "ನಾನು" ಇದು ೨ನೆಯದಾದ ತೇಜದ ಅಭಿಮಾನ ಅಂದರೆ ಸ್ವಪ್ನಾವಸ್ಥೆಯ ಅಭಿಮಾನವು. ತೈಜಸವು. ಗಾಢನಿದ್ರೆಯಲ್ಲಿ ಶಾಂತವಾಗಿರುವ ಅಭಿಮಾನವು ೩ನೆಯದಾದ ಪ್ರಾಜ್ಞ ಅಭಿಮಾನವೆನಿಸುವದು. ಮತ್ತು ತುರೀಯ ಅವಸ್ಥೆಯಲ್ಲಿ ಯಾವುದು ಸಾಕ್ಷಿರೂಪದಿಂದ ಬ್ರಹ್ಮಾಂಶದಿಂದ ಇರುವದೋ ಆ ಅಂತರಾತ್ಮನೇ ೪ನೆಯದಾದ ಪ್ರತ್ಯಗಾತ್ಮಾ ಅಭಿಮಾನಿಯಾಗಿರುವನು. ೧] ಇನ್ನು. ವಿಶ್ವದ ಸ್ಥಾನ. ನೇತ್ರವು ೨] ತೈಜಸದ ಸ್ಥಾನ. ಕಂಠವು ೩) ಪ್ರಾಜ್ಞದ ಸ್ಥಾನ. ಹೃದಯವು. ಮತ್ತು ೪) ಪ್ರತ್ಯಗಾತ್ಮನಸ್ಥಾನ. ಶಿರವು [ತಲೆಯು] (೨)

ಸ್ಥೂಳ ಭೋಗ ಪ್ರವಿಕ್ತಭೋಗ । ಆನಂದ ಭೋಗ ಆನಂದಾವಭಾಸ ಭೋಗ ।
ಐಸೆ ಹೆ ಚತ್ವಾರ ಭೋಗ । ಚೌದೇಹಾಚೆ ॥೩॥

ಅಕಾರ ಉಕಾರ ಮಕಾರ । ಅರ್ಧಮಾತ್ರಾ ತೋ ಈಶ್ವರ ।
ಐಸ್ಯಾಮಾತ್ರಾ ಚತ್ವಾರ । ಚೌದೇ ಹಾಚ್ಯಾ ॥೪॥

ತಮೋಗುಣ ರಜೋಗುಣ । ಸತ್ವಗುಣ ಶುದ್ಧ ಸತ್ವಗುಣ ।
ಐಸೆ ಹೆ ಚತ್ವಾರ ಗುಣ । ಚೌದೇ ಹಾಚೆ ॥೫॥

ಕ್ರಿಯಾಶಕ್ತಿ ದ್ರವ್ಯಾಶಕ್ತಿ । ಇಛಾಶಕ್ತಿ ಜ್ಞಾನಶಕ್ತೀ ।
ಐಶಾ ಚತ್ವಾರ ಶಕ್ತೀ । ಚೌದೇಹಾಚ್ಯಾ ॥೬॥

ಐಸೀ ಹೇ ಬತ್ತೀಸ ತತ್ವೇ । ದೋಹೀಂಚೀ ಪನ್ನಾಸ ತತ್ವೇ ।
ಅವಘೀ ಮಿಳೋನ ಬ್ಯಾಸಿ ತತ್ವೇ । ಅಜ್ಞಾನ ಆಣೀ ಜ್ಞಾನ ॥೭॥

ಐಸೀ ಹೇ ತತ್ವೇ ಜಾಣಾವೀ । ಜಾಣೋನ ಮಾಇಕ ವೋಳಖಾವೀ ।
ಆಪಣ ಸಾಕ್ಷೀ ನಿರಸಾವೀ । ಯೇಣೇ ರಿತೀ ॥೮॥

ಸಾಕ್ಷೀ ಮ್ಹಣಿಜೇ ಜ್ಞಾನ । ಜ್ಞಾನೇ ವೋಳಖಾವೇ ಅಜ್ಞಾನ ।
ಜ್ಞಾನಾ ಜ್ಞಾನಾಚೇ ನಿರ್ಶನ । ದೇಹಾ ಸರಿಸೇ ॥೯॥

ಸ್ಥೂಲ ಭೋಗವು ಸ್ಥೂಲ ದೇಹದ್ದು, ಪ್ರವಿವಿಕ್ತಭೋಗ ಅಂದರೆ ಉಪಾಧಿರಹಿತ ಭೋಗವು ಸೂಕ್ಷ್ಮ ದೇಹದ್ದು. ಆನಂದ ಭೋಗವು ಕಾರಣ ದೇಹದ್ದು. ಮತ್ತು ಆನಂದಾವಭಾಸ ಭೋಗವು ಮಹಾಕಾರಣ ದೇಹದ್ದಾಗಿರುವದು. (ಪ್ರವಿವಿಕ್ತ ಅಥವಾ ಪವಿಕ್ತ ಭೋಗ ಅಂದರೆ ಆರಿಸಿ ಬೇರೆ ಮಾಡಿದಂಥ ಸ್ವಪ್ನದಲ್ಲಿಯು ಭೋಗ ವಿರುವದು. ಆದರೆ ಅದು ಮಾಮೂಲಿ ಸಾಮಾನ್ಯ ಸ್ಥೂಲ ಭೋಗವಿರುವದಿಲ್ಲ. ಇದು ಜ್ಞಾತಾ ಅಥವಾ ಭೋಕ್ತಾ ಇವರು ಒಂದು ಪ್ರಕಾರದಲ್ಲಿ ಆರಿಸಿ ಇಟ್ಟಂಥ ಭೋಗವಿರುವದು. ಅಂತೆಯೇ ಇದು ಪ್ರವಿವಿಕ್ತ ಭೋಗವಾಗಿರುವದು. ಉಪಾಧಿರಹಿತ ಅಂದರೆ ಸ್ವಪ್ನದಲ್ಲಿ ಅಥವಾ ಮನೋ ರಾಜ್ಯದಲ್ಲಿಯು ಕೇವಲ ವಸ್ತುಗಳ ಭಾಸದಿಂದ ಕಲ್ಪನೆಯಿಂದ ಆಗುವ ಅಸ್ಪಷ್ಟ ಭೋಗವು). ಇನ್ನು ಸುಷುಪ್ತಿಯು ಆಚೆಗೆ ಅಂದರೆ ಪರಬ್ರಹ್ಮದ ಈಚೆಗೆ ಇರುವ ಆನಂದಮಯ ಕೋಶದಲ್ಲಿ ಯಾವ ಆನಂದದ ಭೋಗ ಆಗುವದೋ ಅದು ಮಹಾಕಾರಣ ದೇಹದ ಆನಂದಾವಭಾಸಭೋಗ ಅನ್ನುವರು. (ದೇಹಾದಿ ಉಪಾಧಿಗಳು ಹೋಗಿ ನಿದ್ರೆಯಿಲ್ಲದಾಗ ಯಾವ ಪೂರ್ಣ ಆನಂದವಾಗುವದೋ ಅದರ ಸ್ವಲ್ಪ ಭಾಸ ತುರ್ಯಾವಸ್ಥೆಯಲ್ಲಿ ಇರುವದು. ಇದಕ್ಕೆ ಆನಂದಾವಭಾಸ ಅನ್ನುವರು) (೩) ಅಕಾರವು ಸ್ಥೂಲ ದೇಹದ ಮಾತ್ರಾ ಇರುವದು. ಉಕಾರವು ಸೂಕ್ಷ್ಮ ದೇಹದ ಮಾತ್ರಾ ಇರುವದು, ಮಕಾರವು ಕಾರಣ ದೇಹದ ಮಾತ್ರಾ ಇರುವದು. ಮತ್ತು ಯಾವುದಕ್ಕೆ ಈಶ್ವರ ಎಂದು ಅನ್ನುವರೋ ಅದು ಮಹಾಕಾರಣ ದೇಹದ ಅರ್ಧ ಮಾತ್ರಾ ಇರುವದು. (ಅರ್ಧ ಮಾತ್ರೆಯ ಚಿನ್ಹವು ◡ ಹೀಗಿರುವದು.) ಓಂಕಾರದೊಳಗಿಂದ ಸರ್ವ ವಿಶ್ವವು ನಿರ್ಮಾಣವಾಯಿತು. ಹೀಗೆ ಸಿದ್ಧಾಂತವಿರುವದು. ಓಂಕಾರದಲ್ಲಿಯು ಈ ಅರ್ಧ ಮಾತ್ರೆಯನ್ನು ◡ ಬಿಂದುವಿನಿಂದ ತೋರಿಸುವರು. ಅಕಾರ ಅಂದರೆ ಜಡ ಪಂಚಭೂತಗಳು. ಉಕಾರವೆಂದರೆ ಜೀವನಕಲಾ (ಜ್ಞಾನಕಲಾ) ಇರುವದು. ಮಕಾರ ಅಂದರೆ ಅಂತಃಕರಣವು. ಮತ್ತು ಅರ್ಧ ಮಾತ್ರಾ ಅಂದರೆ ಅಂತರಾತ್ಮಾ ಇರುವದು. (೪) ತಮೋ ಗುಣವು ಸ್ಥೂಲ ದೇಹದ್ದಾಗಿದೆ. ರಜೋಗುಣವು ಸೂಕ್ಷ್ಮ ದೇಹದ್ದಾಗಿದೆ. ಸತ್ವಗುಣವು ಕಾರಣ ದೇಹದ್ದಾಗಿದೆ. ಮತ್ತು ಶುದ್ಧ ಸತ್ವ ಗುಣವು ಮಹಾಕಾರಣವು ದೇಹದ್ದಾಗಿರುವದು. (೫) ಕ್ರಿಯಾ ಶಕ್ತಿಯು ಸ್ಥೂಲ ದೇಹದ್ದು.ದ್ರವ್ಯಶಕ್ತಿ ಸೂಕ್ಷ್ಮ ದೇಹದ್ದು.ಇಚ್ಛಾ ಶಕ್ತಿಯು ಕಾರಣ ದೇಹದ್ದು ಮತ್ತು ಜ್ಞಾನ ಶಕ್ತಿಯು ಮಹಾಕಾರಣ ದೇಹದ್ದಿರುವದು. ಕ್ರಿಯಾಶಕ್ತಿ ಅಂದರೆ ಕರ್ಮ (ಕೆಲಸ, ಕಾರ್ಯ, ಇತ್ಯಾದಿ) ಮಾಡುವ ಶಕ್ತಿಯು. ದ್ರವ್ಯಶಕ್ತಿ ಅಂದರೆ ದೃಶ್ಯ ಪದಾರ್ಥಗಳಲ್ಲಿ ಸುಪ್ತ ಶಕ್ತಿಯಾಗಿರುವದು. ಇಚ್ಛಾ ಶಕ್ತಿ ಅಂದರೆ ಮನುಷ್ಯರ ವಾಸನಾ ಇದನ್ನು ಸದಾ ಸತತವೂ ತಾಜಾತನದಿಂದ ಇಡುವದಕ್ಕಾಗಿ ಹತ್ತುವ (ಬೇಕಾಗುವ) ಅವಿದ್ಯೆಯಾಗಿರುವದು. ಜ್ಞಾನ ಶಕ್ತಿ ಅಂದರೆ "ನಾನು ಆತ್ಮ ಸ್ವರೂಪ ಇರುವೆನು" ಈ ಅನುವದಿಂದ ನಿರ್ಮಾಣವಾಗುವ ಸಾಮರ್ಥ್ಯವು. (೬) ಈ ಪ್ರಕಾರ ಇವು ಮೂವತ್ತೆರಡು (೩೨) ತತ್ವಗಳಿರುವವು. ಇವುಗಳಲ್ಲಿ ಮೊದಲಿಗೆ ಹೇಳಿದ [ದಶಕ ೧೭ ಸಮಾಸ ೮ ರಲ್ಲಿಯು] ಸ್ಥೂಲ ದೇಹ ದಲ್ಲಿಯು [೨೫] ಇಪ್ಪತ್ತೈದು ಮತ್ತು ಸೂಕ್ಷ್ಮ ದೇಹದಲ್ಲಿಯು (೨೫) ಇಪ್ಪತ್ತೈದು ಅಂತೂ ಐವತ್ತು ತತ್ವಗಳನ್ನು ಕೂಡಿಸಿದರೆ ಒಟ್ಟು [೮೨] ಎಂಭತ್ತೆರಡು ತತ್ವಗಳು ಆಗುವವು. ಇದರ ಹೊರತಾಗಿ ೧] ಜ್ಞಾನ, ೧] ಅಜ್ಞಾನ = ಇವು ಎರಡನ್ನು ಅದರಲ್ಲಿ ಕೂಡಿಸಿದರೆ ಒಟ್ಟು [೮೪] ತತ್ವಗಳಾಗುವವು. (೭) ಈ ತತ್ವಗಳೆಲ್ಲವೂ ಮಾಯಿಕವಿರುವವು. ಇವನ್ನು ಗುರುತಿಸಿ [ತಿಳಿದು] ಇವುಗಳ ನಿರಸನ ಮಾಡಬೇಕು. ಜ್ಞಾನದಿಂದ ಅಜ್ಞಾನವನ್ನು ಇಲ್ಲದಾಗಿಸಬೇಕು. ಅಂದರೆ ಆತ್ಮಜ್ಞಾನದಿಂದ ಸಮಾಧಾನ ಪ್ರಾಪ್ತವಾಗುವದು: ಈ ಪ್ರಕಾರವಿರುವ ತತ್ವಗಳೆಲ್ಲವನ್ನು ಅವುಗಳ ಗುಣ ಧರ್ಮ ಸಹಿತ ತಿಳಿದು ಇವೆಲ್ಲವೂ ಮಾಯಿಕ, ನಾಶವಂತ ಇರುವವೆಂದು ತಿಳಿಯಬೇಕು. ನಾವು ಸಾಕ್ಷಿ ರೂಪದಿಂದ [ತಿರಾಯಿತ, ಪಂಚರಂತೆ] ಇದ್ದು ಇವೆಲ್ಲ ತತ್ವಗಳು ಮಾಯಿಕ ಎಂದು ವಿವೇಕದಿಂದ ಗುರುತಿಸಿ ತಿಳಿದು ಬಿಟ್ಟು ಬಿಡಬೇಕು.[ನಿರಾಸಮಾಡಬೇಕು.][೮] ಸಾಕ್ಷಿತ್ವತನ ಅಂದರೆ ಜ್ಞಾನ ಅಥವಾ ಜ್ಞಾನಕ್ಕೆ ಸಾಕ್ಷಿ ಎಂತಲೂ ಅನ್ನಬಹುದು. ಈ ಜ್ಞಾನದಿಂದ ಅಜ್ಞಾನವನ್ನು ಗುರುತಿಸಬೇಕು, ತಿಳಿಯಬೇಕು. ದೇಹದ ನಿರಾಸ, ದೇಹದ ಜೊಳ್ಳುತನದ ಖಾತ್ರಿ ಯಾಗುವದು. ಹೀಗೆ ಆದ ಕೂಡಲೇ ಜ್ಞಾನ ಮತ್ತು ಅಜ್ಞಾನ ಈ ಎರಡೂ ನಿರಸನವಾಗುವವು, ದೂರಾಗುವವು. [೯]

ಬ್ರಹ್ಮಾಂಡೀ ದೇಹ ಕಲ್ಪಿಲೇ । ವಿರಾಟ ಹಿರಣ್ಯಗರ್ಭ ಬೋಲಿಲೇ ।
ತೇ ಹೇ ವಿವೇಕೇ ನಿರ್ಶಲೇ । ಆತ್ಮಜ್ಞಾನೇ ॥೧೦॥
ಆತ್ಮಾನಾತ್ಮ ವಿವೇಕ ಕರಿತಾ । ಸಾರಾಸಾರ ವಿಚಾರ ಪಾಹಾತಾ ।
ಪಂಚಭೂತಾಂಚೀ ಮಾಇಕ ವಾರ್ತಾ । ಪ್ರಚಿತ ಆಲೀ ॥೧೧॥
ಅಸ್ತಿ ಮಾಂಸ ತ್ವಚಾ ನಾಡೀ ರೋಮ। ಹೇ ಪಾಚ ಹಿ ಪೃಥ್ವೀಚೆ ಗುಣಧರ್ಮ।
ಪ್ರತ್ಯಕ್ಷ ಶರೀರೀ ಹೇ ಮರ್ಮ । ಶೋಧೂನ ಪಾಹಾವೇ ॥೧೨॥
ಶುಕ್ಲೀತ ಶ್ರೋಣೀತ ಲಾಳ ಮೂತ್ರ ಸ್ವೇದ । ಹೇ ಆಪಾಚೇ ಪಂಚಕಭೇದ ।
ತತ್ವೇ ಸಮಜೋನ ವಿಶದ । ಕರೂನ ಘ್ಯಾವೀ ॥೧೩॥
ಕ್ಷುಧಾ ತ್ರುಷಾ ಆಲಸ್ಯ ನಿದ್ರಾ ಮೈಥುನ । ಹೇ ಪಾಚ ಹೀತೇಜಾಚೇ ಗುಣ ।
ಯಾ ತತ್ವಾಚೇ ನಿರೂಪಣ । ಕೇಲೆ ಚಿ ಕರಾವೇ ॥೧೪॥
ಚಳಣ ವಳಣ ಪ್ರಾಸಾರಣ । ನಿರೋಧ ಆಣಿ ಆಕೋಚನ ।
ಹೇ ಪಾಚ ಹಿ ವಾಯೋಚೆ ಗುಣ । ಶ್ರೋತೀ ಜಾಣಾವೆ ॥೧೫॥
ಕಾಮ ಕ್ರೋಧ ಶೋಕ ಮೋಹೋ ಭಯೆ । ಹಾ ಆಕಾಶಾಚಾ ಪರಿಯಾಯೋ ।
ಹೇ ಪಿವರಲ್ಯಾವಿಣ ಕಾಯೋ । ಸಮಜೋ ಜಾಣೇ ॥೧೬॥
ಅಸೋ ಐಸೇ ಹೇ ಸ್ಥೂಳ ಶರೀರ । ಪಂಚವಿಸ ತತ್ವಾಂಚಾ ವಿಸ್ತಾರ ।
ಆತಾ ಸೂಕ್ಷ್ಮ ದೇಹಾಚಾ ವಿಚಾರ । ಬೋಲಿಜೆಲ ॥೧೭॥
ಅಂತಃಕರ್ಣ ಮನ ಬುದ್ಧಿ ಚಿತ್ತ ಅಹಂಕಾರ । ಆಕಾಶ ಪಂಚ ಕಾಚಾ ವಿಚಾರ ।
ಪುಢೇ ವಾಯೋ ನಿರೋತ್ತರ । ಹೋಊನ ಐಕಾ ॥೧೮॥
ವ್ಯಾನ ಸಮಾನ ಉದಾನ । ಪ್ರಾಣ ಆಣೀ ಅಪಾನ ।
ಐಸೇ ಹೇ ಪಾಚ ಹಿ ಗುಣ । ವಾಯೋತತ್ವಾಚೆ ॥೧೯॥
ಶ್ರೋತ್ರ ತ್ವಚಾಚಕ್ಷು ಜಿವ್ಹಾ ಘ್ರಾಣ । ಹೇ ಪಾಚ ಹಿ ತೇಜಾಚೆ ಗುಣ ।
ಆತಾ ಆಪ ಸಾವಧಾನ । ಹೋಊನ ಐಕಾ ॥೨೦॥
ವಾಚಾ ಪಾಣೀ ಪಾದ ಶಿಸ್ನ ಗುದ । ಹೇ ಆಪಾಚೆ ಗುಣ ಪ್ರಸಿದ್ಧ ।
ಆತಾ ಪೃಥ್ವೀ ವಿಶದ । ನಿರೋಪಿಲೀ ॥೨೧॥
ಶಬ್ದ ಸ್ಪರ್ಶರೂಪ ರಸ ಗಂಧ । ಹೇ ಪೃಥ್ವೀಚೆ ಗುಣ ವಿಶದ ।
ಐಸೇ ಹೇ ಪಂಚವೀಸ ತತ್ವಭೇದ । ಸೂಕ್ಷ್ಮ ದೇಹಾಚೆ ॥೨೨॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ತನು ಚತುಷ್ಟಯೋ' ನಾಮ ಸಮಾಸ ನವಮ ॥

ಪಿಂಡ ದೇಹಗಳ ಮೇಲಿಂದ ಬ್ರಹ್ಮಾಂಡದ ದೇಹಗಳ ಕಲ್ಪನೆ ಮಾಡಿರುವರು. ಇವು ೧] ವಿರಾಟ. ೨] ಹಿರಣ್ಯ ಗರ್ಭ ೩] ಅವ್ಯಾಕೃತ ೪] ಮೂಲ ಪ್ರಕೃತಿ,ಮೂಲಮಾಯಾ ಹೀಗೆ ಹೆಸರು ಹೊಂದಿರುವವು. ಆತ್ಮ ಜ್ಞಾನದಿಂದ ವಿವೇಕ ಮಾಡಿದ್ದಾದರೆ ಆಗ ಇವುಗಳೂ ಕೂಡಾ ನಿರಸನ ಹೊಂದುವವು. [ಇವು ಅಶಾಶ್ವತವೆನಿಸಿ ಬಿಡುವವು.] [೧೦] ಆತ್ಮಾನಾತ್ಮ ವಿವೇಕ ಮಾಡಿದ್ದಾದರೆ, ಮತ್ತು ಸಾರಾಸಾರವಿಚಾರಮಾಡಿ ನೋಡಿದ್ದಾದರೆ ಪಂಚಭೂತಗಳು ಮಾಯಿಕವಿರುವವೆಂಬುದು ಅನುಭವಕ್ಕೆ ಬರುವದು. (೧೧) ೧] ಎಲಬು, ೨] ಮಾಂಸ, ೩]ಚರ್ಮ ೪] ನಾಡಿ, ೫] ರೋಮ ಇವು ಐದೂ ಪೃಥ್ವಿಯ ಗುಣ ಧರ್ಮದವಿರುವವು. (ಇವು ಸರ್ವ ಶರೀರದಲ್ಲಿಯೂ ಇರುವವು). ನಮ್ಮ ಶರೀರದಲ್ಲಿದ್ದ ಇವುಗಳ ಮರ್ಮ ಅಂದರೆ, ರಹಸ್ಯ, ಇವನ್ನು ನಾವೇ ಪ್ರತ್ಯಕ್ಷ ಶೋಧಿಸಿ ನೋಡಬೇಕು. (೧೨) ೧] ರೇತ [ವೀರ್ಯ] ೨] ರಕ್ತ ೩] ಜೊಲ್ಲು (ಉಗುಳು) ೪] ಮೂತ್ರ ಮತ್ತು ೫] ಬೆವರು ಇವು ಐದೂ ನೀರಿನ [ಆಪದ] ಗುಣ ಧರ್ಮವಿರುವವು. ಇವನ್ನು ಪುನಃ ಪುನಃ ಶೋಧಿಸಿ ವಿವೇಚಿಸಿ ತಿಳಿಯಿರಿ [೧೩] ಹಸಿವೆ, ನೀರಡಿಕೆ, ಆಲಸ್ಯ, ನಿದ್ರೆ ಮತ್ತು ಮೈಥುನ ಇವು ಐದು ತೇಜದ [ಅಗ್ನಿಯ] ಗುಣ ಧರ್ಮದವಿರುವ ವೆಂಬದನ್ನು ನೀವು ವಿವೇಚಿಸಿ ಪುನಃ ಪುನಃ ಖಾತ್ರಿಮಾಡಿಕೊಳ್ಳಿರಿ. [೧೪] ಚಲನ, ವಲನ, ಪ್ರಸಾರಣ, ನಿರೋಧ [ನಿಗ್ರಹ,ನಿಯಮನ]ಮತ್ತು ಆಕುಂಚನ ಇವು ಐದುವಾಯುವಿನ ಗುಣ ಧರ್ಮವಿರುವವೆಂಬುದನ್ನು ನೀವು ವಿವೇಚಿಸಿ ಖಾತ್ರಿಮಾಡಿಕೊಳ್ಳಿರಿ.(೧೫) ೧] ಕಾಮ ೨] ಕ್ರೋಧ ೩]ಶೋಕ ೪]ಮೋಹ ೫]ಭಯ ಇವು ಐದುಆಕಾಶದ ಗುಣ ಧರ್ಮಗಳಿರುವವು. (ಆಕಾಶದ ತಾಮಸೀ-ತಮೋ ಗುಣದವು ಇವು ಇರುವವು) ಇವುಗಳ ವಿವರಣೆ ಮನಸ್ಸಿಗೊಟ್ಟು ಮಾಡದ ಹೊರತು ಇವುಗಳ ಮರ್ಮ ತಿಳಿಯುವದಿಲ್ಲ. ಪೂರ್ಣ ವಿಚಾರಮಾಡದೇ ಹೇಗೆ ತಿಳಿದಾವು.(೧೬) ಇರಲಿ ಹೀಗೆ ಸ್ಥೂಲ ಶರೀರ ಇರುವದು. ಇದರಲ್ಲಿ ಇಪ್ಪತ್ತೈದು ತತ್ವಗಳ ವಿಸ್ತಾರ ಕಂಡುಬರುವದು. ಇದನ್ನು ಹೇಳಿದ್ದಾ ಯಿತು. ಈಗ ಸೂಕ್ಷ್ಮ ದೇಹದ ವಿಚಾರವನ್ನು ತಿಳಿಸುವೆವು. (೧೭) ೧) ಅಂತಃಕರಣ ೨) ಮನ ೩) ಬುದ್ಧಿ ೪) ಚಿತ್ ಮತ್ತು ೫) ಅಹಂಕಾರ ಇವು ಆಕಾಶ ಪಂಚಕಗಳು.ಈಗ ವಾಯುವಿನ ವಿಚಾರವನ್ನು ಹೇಳುವೆವು. (೧೮) ೧) ವ್ಯಾನ, ೨) ಸಮಾನ, ೩) ಉದಾನ, ೪) ಪ್ರಾಣ ಮತ್ತು, ೫) ಅಪಾನ. ಇವು ಐದು, ವಾಯುವಿನ ಗುಣ ಇರುವವು. (೧೯) ೧] ಕಿವಿ, ೨] ಚರ್ಮ, ೩] ಕಣ್ಣು, ೪] ನಾಲಿಗೆ, ೫] ಮೂಗು ಇವು ತೇಜದ ಗುಣವಿರುವವು. ಈಗ ನೀರಿನ [ಆಪ] ಗುಣ ಹೇಳುವೆ ಕೇಳಿರಿ. [೨೦] ೧] ವಾಣಿ [ಮಾತು] ೨] ಕೈ ೩] ಕಾಲು ೪] ಜನನೇಂದ್ರಿಯ ಮತ್ತು ೫] ಗುದ ಇವು ನೀರಿನ ಗುಣಗಳೆಂಬುದು ಪ್ರಸಿದ್ಧವಿರುವವು.ಈಗ ಪೃಥ್ವಿಯ ಗುಣ ಹೇಳುವೆ ಕೇಳಿರಿ. [೨೧] ೧] ಶಬ್ದ ೨] ಸ್ಪರ್ಶ ೩] ರೂಪ ೪] ರಸ ಮತ್ತು ೫] ಗಂಧ ಅಂದರೆ ಸುವಾಸನೆ ಅಥವಾ ದುರ್ವಾಸನೆ ಇವು ಪೃಥ್ವಿಯ ಪ್ರಸಿದ್ಧ ಗುಣಗಳಿರುವವು. ಅಂತೂ ಇವು ಸೂಕ್ಷ್ಮ ದೇಹದ ಇಪ್ಪತ್ತೈದು ತತ್ವಗಳಿರುವವು. [೨೨]

ಶ್ರೀ ದಾಸಬೋಧದ ಹದಿನೇಳನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
— "ತನು ಚತುಷ್ಟಯ ನಾಮ"ವೆಂಬ ಹೆಸರಿನ ಒಂಭತ್ತನೇ ಸಮಾಸವು ಮುಗಿದುದು.

● ●

**ಕೋಷ್ಟಕ - ಪಿಂಡಾತೀಲ ಬತ್ತೀಸ ತತ್ವಾಚೆ**

| | | | | |
|---|---|---|---|---|
| ೧) ಚಾರ ದೇಹ. | ಸ್ಥೂಲ. | ಸೂಕ್ಷ್ಮ. | ಕಾರಣ. | ಮಹಾಕಾರಣ. |
| ೨) ಚಾರ ಅವಸ್ಥಾ. | ಜಾಗೃತಿ. | ಸ್ವಪ್ನ. | ಸುಷುಪ್ತಿ. | ತುರ್ಯಾ. |
| ೩) ಚಾರ ಅಭಿಮಾನ. | ವಿಶ್ವ. | ತೈಜಸ. | ಪ್ರಾಜ್ಞ. | ಪ್ರತ್ಯಗಾತ್ಮಾ. |
| ೪) ಚಾರ ಸ್ಥಾನೇ. | ನೇತ್ರ. | ಕಂಠ. | ಹೃದಯು. | ಮೂರ್ಧನ್. |
| ೫) ಚಾರ ಭೋಗ. | ಸ್ಥೂಲ. | ಪ್ರವಿವಿಕ್ತ. | ಆನಂದ. | ಆನಂದಾವಭಾಸ. |
| ೬) ಚಾರ ಮಾತ್ರಾ. | ಅಕಾರ. | ಉಕಾರ. | ಮಕಾರ. | ಅರ್ಧಮಾತ್ರಾ. |
| ೭) ಚಾರ ಗುಣ. | ತಮ. | ರಜ. | ಸತ್ವ. | ಶುದ್ಧ ಸತ್ವ. |
| ೮) ಚಾರ ಶಕ್ತಿ. | ಕ್ರಿಯಾ. | ದ್ರವ್ಯ. | ಇಚ್ಛಾ. | ಜ್ಞಾನ. |

## ದಶಕ ೧೭ ಸಮಾಸ ೯ ಕ್ಕೆ ಸಂಬಂಧಿಸಿದ ಕೋಷ್ಟಕ

ಈ ಕೋಷ್ಟಕವು ದಶಕ ೧೭ ಸಮಾಸ ೯ ನುಡಿ ೧ ರಿಂದ ೬ ನೋಡಿರಿ.

ತನುಚತುಷ್ಟಯ ವಿವರ [ಪಿಂಡದಲ್ಲಿಯ ತತ್ವ ವಿವರಣೆ]

## ಕೋಷ್ಟಕ ೧. ಪಿಂಡದಲ್ಲಿಯ ಮೂವತ್ತೆರಡು (೩೨) ತತ್ವಗಳು

| | | | | |
|---|---|---|---|---|
| ೧) ನಾಲ್ಕು ದೇಹ | ಸ್ಥೂಲ | ಸೂಕ್ಷ್ಮ | ಕಾರಣ | ಮಹಾ ಕಾರಣ |
| ೨) ನಾಲ್ಕು ಅವಸ್ಥಾ | ಜಾಗೃತಿ | ಸ್ವಪ್ನ | ಸುಷುಪ್ತಿ (ನಿದ್ರಾ) | ತುರ್ಯಾ |
| ೩) ನಾಲ್ಕು ಅಭಿಮಾನ | ವಿಶ್ವ | ತೈಜಸ | ಪ್ರಾಜ್ಞ (ತಿಳುವಳಿಕೆ) | ಪ್ರತ್ಯಗಾತ್ಮಾ ಬ್ರಹ್ಮ, ಕೂಟಸ್ಥ |
| ೪) ನಾಲ್ಕು ಸ್ಥಾನ | ನೇತ್ರ | ಕಂಠ | ಹೃದಯ | ಮೂರ್ಧನಿ ಮಸ್ತಕಶಿರ |
| ೫) ನಾಲ್ಕು ಭೋಗ | ಸ್ಥೂಲಭೋಗ | ಪ್ರವಿವಿಕ್ತ ಭೋಗ (ಉಪಾಧಿರಹಿತ ಭೋಗ) | ಆನಂದಭೋಗ | ಆನಂದಾವ ಭಾಸ ಭೋಗ |
| ೬) ನಾಲ್ಕು ಮಾತ್ರಾ | ಅಕಾರ | ಉಕಾರ | ಮಕಾರ | ಅರ್ಧಮಾತ್ರಾ |
| ೭) ನಾಲ್ಕು ಗುಣ | ತಮೋಗುಣ | ರಜೋಗುಣ | ಸತ್ವಗುಣ | ಶುದ್ಧ ಸತ್ವಗುಣ |
| ೮) ನಾಲ್ಕು ಶಕ್ತಿ | ಕ್ರಿಯಾ ಶಕ್ತಿ (ಕಾರ್ಯ ಶಕ್ತಿ) | ದ್ರವ್ಯಶಕ್ತಿ | ಇಚ್ಛಾಶಕ್ತಿ | ಜ್ಞಾನ ಶಕ್ತಿ |

**ಟಿಪ್ಪಣಿ :** ಸ್ಥೂಲ ದೇಹದ ೨೫ + ಸೂಕ್ಷ್ಮ ದೇಹದ೨೫ + ಪಿಂಡದ೩೨ + ಅಜ್ಞಾನ೧ + ಜ್ಞಾನ೧(ದ.೧೭-೯-೭) = ಒಟ್ಟು ೮೪ ತತ್ವಗಳು

**ದಶಕ ೧೬. ಸಮಾಸ ೯ ಕ್ಕೆ ಸಂಬಂಧಿಸಿದ ಕೋಷ್ಟಕ**

ಈ ಕೋಷ್ಟಕವು ದಶಕ ೧೬ ಸಮಾಸ ೯ ನುಡಿ ೧೮ ರಿಂದ ೨೨ ನೋಡಿರಿ

## ಕೋಷ್ಟಕ ೨. ಪಂಚ ಭೌತಿಕವಾದ ಮೂಲದೇಹದಲ್ಲಿ ಸೂಕ್ಷ್ಮದೇಹದ ತತ್ವಗಳು ಹೇಗೆ ಮಿಶ್ರಿತವಾಗಿರುವವು ಇದರ ವಿವರ ನೋಡಿರಿ.

| ೧) | ಆಕಾಶ | ವಾಯು | ತೇಜ ಅಗ್ನಿ | ಆಪ್ | ಪೃಥ್ವಿ |
|---|---|---|---|---|---|
| ೨) ಆಕಾಶ [ಪಂಚಕ] ತತ್ವದೊಂದಿಗೆ | ಅಂತಃ ಕರಣ | ವ್ಯಾನ | ಶ್ರೋತ್ರ ಕಿವಿ | ವಾಚಾ ವಾಣಿ | ಶಬ್ದ |
| ೩) ವಾಯು [ಪಂಚಕ] ತತ್ವದೊಂದಿಗೆ | ಮನ | ಸಮಾನ | ತ್ವಚೆ ಚರ್ಮ | ಪಾಣಿ ಕೈ | ಸ್ಪರ್ಶ |
| ೪) ತೇಜ [ಪಂಚಕ] ತತ್ವದೊಂದಿಗೆ | ಬುದ್ಧಿ | ಉದಾನ | ಚಕ್ಷು ನೇತ್ರ | ಪಾದ ಕಾಲು | ರೂಪ |
| ೫) ಆಪ್ [ಪಂಚಕ] ತತ್ವದೊಂದಿಗೆ | ಚಿತ್ತ | ಪ್ರಾಣ | ಜಿವ್ಹಾ (ನಾಲಿಗೆ) | ಮೂತ್ರೇಂದ್ರಿಯ (ಶಿಶ್ನ) | ರಸ |
| ೬) ಪೃಥ್ವಿ [ಪಂಚಕ] ತತ್ವದೊಂದಿಗೆ | ಅಹಂಕಾರ | ಅಪಾನ | ಘ್ರಾಣ (ಮೂಗು) | ಗುದ | ಗಂಧ |

**ದಶಕ ಸಪ್ತದಶ : ಸಮಾಸ ದಶಮ : ಟೊಣಪ ಸಿದ್ಧ ಲಕ್ಷಣ (ನುಡಿ ೩೦)**

॥ಶ್ರೀರಾಮ॥ ಆನರ್ಣೋದಕೀ ಹಟಕೇಶ್ವರ । ತ್ಯಾಸ ಘಡೆ ನಮಸ್ಕಾರ ।
ಮಹಿಮಾ ಅತ್ಯಂತ ಚಿ ಥೋರ । ತಯಾ ಪಾತಾಳ ಲಿಂಗಾಚಾ ॥೧॥

ಪರಂತು ತೇಥೇ ಜಾವವೇನಾ । ಶರೀರೇ ದರ್ಶನ ಘಡೇನಾ ।
ವಿವೇಕೇ ಆಣಾವೇ ಅನುಮಾನಾ । ತಯಾ ಈಶ್ವರಾಸೀ ॥೨॥

ಸಾತಾ ಸಮುದ್ರಾಚೇ ವೇಢೆ । ಉದಂಡ ಭೂಮಿ ಪೈಲಿಕಡೆ ।
ಸೇವಟೀ ತುಟಲೇ ಕಡೆ । ಭೂಮಂಡಳಾಚೆ ॥೩॥

ಸಾತ ಸಮುದ್ರ ವೋಲಾಂಡಾವೇ । ತೇಥೇ ಜಾಣೇ ಕೈಸೇ ಘಾವೇ ।
ಮ್ಹಣೋನ ವಿವೇಕೀ ಅಸಾವೇ । ಸಾಧು ಜನ ॥೪॥

# ದಶಕ ೧೭. ಸಮಾಸ ೧೦. ಟೊಣಪ ಸಿದ್ಧ ಲಕ್ಷಣ (ನುಡಿ ೩೦)

ಪರಬ್ರಹ್ಮವು ಪಾತಾಳ ಲಿಂಗದಂತೆ ಇರುವದು. ಈ ಲಿಂಗವಿದ್ದಲ್ಲಿಗೆ ಸ್ಥೂಲ ದೇಹದಿಂದ ಹೋಗಲಿಕ್ಕೆ ಬರುವದಿಲ್ಲ. ವಿವೇಕದಿಂದ ಇದರ ಕಲ್ಪನೆಯನ್ನು ಮಾಡಬೇಕಾಗುವದು. ಜ್ಞಾನ ದೃಷ್ಟಿಯ ಸಹಾಯ ತೆಗೆದುಕೊಂಡು ಯಾವತ್ತೂ ಬ್ರಹ್ಮಾಂಡವನ್ನು ತಿರುಗಾಡಿ ನೋಡಬೇಕು. ಬ್ರಹ್ಮಾಂಡದ ಬಗ್ಗೆ ವಿವರಣೆ ಅಂದರೆ ವಿಚಾರಮಾಡಿ ಸ್ಪಷ್ಟೀಕರಣಮಾಡಿ ನೋಡಬೇಕು. ಹಾಗೂ ತತ್ವ ಶೋಧನೆಮಾಡಿ ನೋಡಿ ತಿಳಿಯಬೇಕು. ಮತ್ತು ಸಮಾಧಾನದಿಂದ ಇರಬೇಕು. ಪರಬ್ರಹ್ಮವು ಅತ್ಯಂತ ಅಂದರೆ ಅತ್ಯಂತ [ಬಹಳ] ಸೂಕ್ಷ್ಮವಿರುವದು. ಇದು ಉಪಾಧಿ [ಮಾಯಾ, ಪ್ರಪಂಚ, ವಿಕಾರ] ಶೂನ್ಯವಿರುವದು. ಮತ್ತು ದೃಶ್ಯಶೂನ್ಯವೂ ಇರುವದು. ಇಂದ್ರಿಯಗಳು ಮತ್ತು ಮನವು ಅಲ್ಲಿಯವರೆಗೆ ಅಂದರೆ ಪರಬ್ರಹ್ಮದವರೆಗೆ ಹೋಗಲು ಆಗುವದಿಲ್ಲ ಹೋಗಲಿಕ್ಕೆ ಇವುಗಳಿಗೆ ಶಕ್ಯವೂ ಇಲ್ಲ. ಅತ್ಯಂತ ಸೂಕ್ಷ್ಮರಾಗಿ ಜಗತ್ತಿನ ಕಡೆಗೆ ಸೂಕ್ಷ್ಮ ದೃಷ್ಟಿಯಿಂದ ನೋಡುವವರು ಬಹಳ ಕಡಿಮೆ ಜನರಿರುವದು. ಅಥವಾ ಅತಿ ಕಡಿಮೆ ಸಿಗುವರು. ನಾವು ಅರ್ಥರೂಪರಾಗಿ ಹಂಬಲ ಉಳ್ಳವರಾಗಿ ನಿರ್ಗುಣದ ಅನುಭವವನ್ನು ಪಡೆಯಬೇಕು. ಆಚಾರ ವಿಚಾರಗಳನ್ನು ಸಂಬಾಳಿಸಬೇಕು–ಮನ್ನಿಸಬೇಕು. ಶ್ರವಣದಿಂದ ಮತ್ತು ಮನನದಿಂದ ಸೂಕ್ಷ್ಮ ದೃಷ್ಟಿಯನ್ನು ಬೆಳಿಸಬೇಕು. ವಿಶಾಲಗೊಳಿಸಬೇಕು ಮತ್ತು ಇದರ ಸಹಾಯದಿಂದ ಅಸಾರವನ್ನು ತ್ಯಜಿಸಿ ಸಾರವಾದದ್ದನ್ನು ಮಾತ್ರ ಸ್ವೀಕರಿಸಬೇಕು. ಇದಕ್ಕಾಗಿ ಸರ್ವಾಂಗೀಣ ಅಂದರೆ ನಮ್ಮ ಶರೀರದ ಸರ್ವ ಅಂಗಗಳಲ್ಲಿ ವ್ಯಾಪಿಸಿರುವ ಆತ್ಮನ ಬಗ್ಗೆ ಅಂತರಾತ್ಮನ ಬಗ್ಗೆ ಮೂಲ ಪರಬ್ರಹ್ಮ ವಸ್ತುವಿನ ಬಗ್ಗೆ ವಿವೇಕಮಾಡಿ ತಿಳಿಯುವದು ಅವಶ್ಯವಿರುವದು. ಆದ್ದರಿಂದ ನಮ್ಮ ನಿಜ ಹಿತಕ್ಕಾಗಿ ಸಂತ, ಶರಣ, ಸಾಧುಗಳ, ಸಹವಾಸ ಮಾಡಬೇಕು. ಸತ್‌ಸಂಗದಲ್ಲಿದ್ದು ಸತ್‌ಶಾಸ್ತ್ರ ಶ್ರವಣ ಮಾಡಬೇಕು. ಕೇಳಿದ್ದರ ಬಗ್ಗೆ ಮನನಮಾಡಬೇಕು. ಮತ್ತು ಉತ್ತಮ ಗುಣಗಳ ಬಗ್ಗೆ ಪ್ರಯತ್ನ ಪೂರ್ವಕ ಅಭ್ಯಾಸ ಮಾಡಬೇಕು. ಮಾಡಿದ್ದನ್ನು ತಿಳಿಯಬೇಕು. ತಿಳಿದು ಅರಗಿಸಿಕೊಳ್ಳಬೇಕು. ಇದರಿಂದ ಸಮಾಧಾನ ಹೊಂದುವ ಮಾರ್ಗ ಖಾತ್ರಿಯಿಂದ ಪ್ರಾಪ್ತವಾಗುವದು.

## ದಶಕ ೧೭. ಸಮಾಸ ೧೦. ಟೊಣಪ ಸಿದ್ಧ ಲಕ್ಷಣ (ನುಡಿ ೩೦)

ಪರಬ್ರಹ್ಮನು ಸೂಕ್ಷ್ಮನಿದ್ದಾನೆ. ಇವನ ವಿಷಯದಲ್ಲಿ ಸ್ಥೂಲ ದೃಷ್ಟಿಯು ಹೊರ ನೋಟವು ಉಪಯೋಗ ಬೀಳುವದಿಲ್ಲ. ಇವನನ್ನು ಜ್ಞಾನ ದೃಷ್ಟಿಯಿಂದಲೇ ನೋಡಲು ಬರುವದು. ಆದ್ದರಿಂದ ಶ್ರವಣದಿಂದ ಮತ್ತು ಮನನದಿಂದ ಸೂಕ್ಷ್ಮ ದೃಷ್ಟಿಯನ್ನು ಪಡೆದು ಅದನ್ನು ಕಾಪಾಡಿಕೊಂಡು ಇಡೀ ಬ್ರಹ್ಮಾಂಡವನ್ನೇ ಶೋಧಿಸಬೇಕು: ಪೃಥ್ವಿಯ ಸುತ್ತಲೂ ಏಳು ಸಮುದ್ರಗಳ ಆವರಣವಿರುವದು. ಈ ಸುತ್ತು ಹಾಕಿದ್ದಕ್ಕೆ ಆವರಣೋದಕವೆಂದು ಅನ್ನುವರು. ಈ ಆವರಣೋದಕದಲ್ಲಿ ಹಾಟಕೇಶ್ವರ ಅನ್ನುವ ಹೆಸರಿನ ಶಿವಲಿಂಗವಿರುವದು. ಇದಕ್ಕೆ ನಾನು ನಮಸ್ಕಾರ ಮಾಡುವೆನು. ಈ ಪಾತಾಳ ಲಿಂಗದ ಮಹಿಮೆ ಬಹಳ ದೊಡ್ಡದಿರುವದು. (೧) ಆದರೆ ಅಲ್ಲಿಗೆ ಈ ಸ್ಥೂಲ ದೇಹದಿಂದ ಹೋಗಿ ಲಿಂಗದ ಪ್ರತ್ಯಕ್ಷ ದರ್ಶನ ತೆಗೆದುಕೊಳ್ಳಲಿಕ್ಕೆ ಸಾಧ್ಯವಾಗುವದಿಲ್ಲ. ಆದ್ದರಿಂದ ಹಾಟಕೇಶ್ವರಲಿಂಗದ ಬಗ್ಗೆ ವಿವೇಕದಿಂದ ಕಲ್ಪನಾಮಾಡಬೇಕಾಗುವದು. (೨) ಮೊದಲಿಗೆ ಏಳು ಸಪ್ತ ಸಮುದ್ರಗಳು ಅಂದರೆ ೧) ಕ್ಷೀರ ೨) ಕ್ಷಾರ ೩) ಸುರಾ ೪) ಸರ್ಪಿ ಅಥವಾ [ಘೃತ] ೫) ಮೊಸರು ೬) ಇಕ್ಷು [ಕಬ್ಬಿನ ರಸ] ೭) ಜಲ ಇವು ಸುತ್ತುವರಿದಿರುವವು. ಅದರ ಆಚೆಗೆ ವಿಸ್ತೀರ್ಣವಾದ ಬಯಲು ಭೂಮಿ ಇರುವದು. ಅದನ್ನು ದಾಟಿದ ಮೇಲೆ ಭೂಮಂಡಲದ ಕಟ್ಟಕಡೆಯ ದಂಡೆ ಕಡಿದಾಗಿ ಅಲ್ಲಲ್ಲಿ ಬಿದ್ದು ಕೊರಕಲಾಗುವದು. [ಈ ಕೊರಕಲದಲ್ಲಿ ಹಾಟಕೇಶ್ವರಲಿಂಗ ಇರುವದು ಅನ್ನುವರು] (೩) ಇಂಥ ಅಘಾಟದ ಸಪ್ತ ಸಮುದ್ರವನ್ನು ದಾಟಿ ಹೋಗುವದೇನೂ ಶಕ್ಯವಾಗುವಮಾತಲ್ಲ. ಆದ್ದರಿಂದ ಸಂತ ಸಾಧು ಜನರು ವಿವೇಕದಿಂದಲೇ ಇದರ ಜ್ಞಾನಮಾಡಿಕೊಳ್ಳಬೇಕು. [ತಿಳಿಯದವರು ತಿಳಿದವರಿಂದ ಕೇಳಿ ತಿಳಿದುಕೊಳ್ಳಬೇಕು ] (೪)

ಜೇ ಆಪಣಾಸ ನವ್ಹೆ ಠಾವೇ । ತೇ ಜಾಣತಯಾಸ ಪುಸಾವೇ ।
ಮನೋವೇಗೇ ತನೇ ಫಿರಾವೇ । ಹೇ ತೋ ಘಡೆನಾ ॥೫॥

ಜೇ ಚರ್ಮದೃಷ್ಟೀಸ ನವ್ಹೆ ಠಾವೇ । ತೇ ಜ್ಞಾನ ದೃಷ್ಟೀನೇ ಪಾಹಾವೇ ।
ಬ್ರಹ್ಮಾಂಡ ವಿವರೋನ ರಾಹಾವೇ । ಸಮಾಧಾನೇ ॥೬॥

ಮಧ್ಯೇ ಆಹೆ ಭೂಮೀಚೇ ಚಡಳ । ಮ್ಹಣೌನ ಆಕಾಶ ಆಣೀ ಪಾತಾಳ ।
ತೇ ಚಡಳ ನಸ್ತಾ ಅಂತರಾಳ । ಚಹುಕಡೆ ॥೭॥

ತಯಾಸ ಪರಬ್ರಹ್ಮ ಮ್ಹಣಾವೇ । ಜೇ ಉಪಾಧೀ ವೇಗಳೇ ಸ್ವಭಾವೇ ।
ಜೇಥೇ ದೃಶ್ಯ ಮಾಯೇಚ್ಯಾ ನಾವೇ । ಸುನ್ಯಾಕಾರ ॥೮॥

ದೃಷ್ಟೀಚೇ ದೇಖಣೇ ದೃಶ್ಯ । ಮನಾಚೇ ದೇಖಣೇ ಭಾಸ ।
ಮನಾತೀತ ನಿರಾಭಾಸ । ವಿವೇಕೇ ಜಾಣಾವೇ ॥೯॥

ದೃಶ್ಯಭಾಸ ಅವಘಾ ವಿಘಡೇ । ವಿವೇಕ ತೇಥೇ ಪವಾಡೆ ।
ಭೂಮಂಡಳೀ ಜ್ಞಾತೇ ಥೋಡೆ । ಸೂಕ್ಷ್ಮ ದೃಷ್ಟೀಚೆ ॥೧೦॥

ವಾಚ್ಯಾಂಶ ವಾಚೆನೇ ಬೋಲಾವಾ । ನ ಬೋಲತಾ ಲಕ್ಷ್ಯಾಂಶ ಜಾಣಾವಾ ।
ನಿರ್ಗುಣ ಅನುಭವಾಸ ಆಣಾವಾ । ಗುಣಾಚೆ ನ ಯೋಗೇ ॥೧೧॥

ನಾನಾ ಗುಣಾಸ ಆಹೆ ನಾಶ । ನಿರ್ಗುಣ ತೇ ಅವಿನಾಶ ।
ಢೋಬಳ್ಯಾಹೂನ ವಿಶೇಷ । ಸೂಕ್ಷ್ಮ ದೇಖಣೇ । ॥೧೨॥

ಜೇ ದೃಷ್ಟೀಸ ನ ಪಡೆ ಠಾವೇ । ತೇ ಏಕೋನ ಜಾಣಾವೇ ।
ಶ್ರವಣಮನನೇ ಪಡೆ ಠಾವೇ । ಸಕಳ ಕಾಹೀ ॥೧೩॥

ಯಾವುದು ನಮಗೆ ಗೊತ್ತಿರುವದಿಲ್ಲವೋ ಅದನ್ನು ತಿಳಿದವರಿಂದ ಕೇಳಿ ತಿಳಿದುಕೊಳ್ಳಬೇಕು. ಮನವು ಯಾವ ವೇಗದಿಂದ ತಿರುಗಾಡುವದೋ ಅದರಂತೆ ಶರೀರಕ್ಕೆ ತಿರುಗಾಡಲು ಆಗುವದಿಲ್ಲ. (೫) ಯಾವುದು ಕಣ್ಣಿನ ದೃಷ್ಟಿಗೆ ಕಾಣುವದಿಲ್ಲವೋ ಅದನ್ನು ಜ್ಞಾನ ದೃಷ್ಟಿಯಿಂದ ನೋಡಬೇಕು. ಜ್ಞಾನ ದೃಷ್ಟಿಯಿಂದ ಯಾವತ್ತೂ ಬ್ರಹ್ಮಾಂಡದ ವಿವರಣಮಾಡಬೇಕು. ಮತ್ತು ಸಮಾಧಾನದಿಂದ ಇರಬೇಕು. (೬) ನಮ್ಮ ಈ ಭೂಮಿ ಪೃಥ್ವಿಯು ಮಧ್ಯದಲ್ಲಿಯೇ ಇರುವದು ಆದ್ದರಿಂದ ಮೇಲೆ ಆಕಾಶ ಮತ್ತು ಕೆಳಗೆ ಪಾತಾಳ ಹೀಗೆ ಭೇದಗಳಾದವು. ಈ ಭೂಮಿಯು ತುಕಡಿ ತುಣಕು ಒಂದುವೇಳೆ ಮಧ್ಯದಲ್ಲಿ ಇರದಿದ್ದರೆ ಆಗ ನಾಲ್ಕು ಕಡೆಗೂ ಒಂದೇ ಒಂದು ಖಾಲಿ ರಿಕಾಮಿ ಅಂತರಾಳ, ಪೋಕಳ ಜಾಗೆ, ಆಕಾಶವೇ ಆವರಿಸಿದಂತೆ ತುಂಬಿದಂತೆ ಕಾಣುತ್ತಿತ್ತು.(೭)ಯಾವುದು ಸ್ವಭಾವತಃ ಉಪಾಧಿಯಿಂದ ಮುಕ್ತವಾಗಿರುವದೋ ಮತ್ತು ಯಾವದರಲ್ಲಿ ಮಿಥ್ಯಾ [ಸುಳ್ಳಾದ] ದೃಶ್ಯದ ಸುಳಿವೇ ಇರುವ ದಿಲ್ಲವೋ ಅಂಥ ವಸ್ತುವಿಗೆ ಪರಬ್ರಹ್ಮ ಎಂದು ಹೆಸರು ಕೊಡಬೇಕು. [ಹೀಗೆ ಜ್ಞಾನಿಗಳು ಕೊಟ್ಟಿದ್ದಾರೆ] ಪರಬ್ರಹ್ಮವು ಅನಂತ ಅಪಾರ ಇರುವದು. ಅಮರ್ಯಾದ–ಅಳತೆಗೆ ಮೀರಿದ್ದು ಇರುವದು. ಮತ್ತು ದೃಶ್ಯರಹಿತ ಇರುವದು. (೮) ಯಾವುದು ಕಣ್ಣಿಗೆ ಕಾಣುವದೋ ಅದು ದೃಶ್ಯವು. ಯಾವುದು ಮನಕ್ಕೆ ತಿಳಿಯುವದೋ ಹೊಳೆಯುವದೋ ಅದು ಭಾಸವು [ಸ್ಫುರಣವು] ಮನಸ್ಸಿನ ಆಚೆಗೆ ಇರುವಂಥ ಆ ಯಾವ ನಿರಾಭಾಸವಾಗಿರುವ ಪರಬ್ರಹ್ಮನನ್ನು ವಿವೇಕದಿಂದ ಗುರುತಿಸಬೇಕು ತಿಳಿಯಬೇಕು. (೯) ದೃಶ್ಯ ಪದಾರ್ಥ ಮತ್ತು ಮನಸ್ಸಿನ ಭಾಸ ಇವೆರಡೂ ಎಲ್ಲಿ ಸಂಪೂರ್ಣವಾಗಿ ಹಿಂದೆ ಬೀಳುವವೋ ಅಲ್ಲಿಗೆ ಯಾವನು ವಿವೇಕದಿಂದ ದಾಟಿಹೋಗಿ ಅಥವಾ ವಿವೇಕದಿಂದ ಜಿಗಿದು ಹೋಗಿ ಮುಟ್ಟು ವನೋ ಅವನೇ ನಿಜವಾದ ಜ್ಞಾನ ದೃಷ್ಟಿಯುಳ್ಳವನು. ಮತ್ತು ಸದ್ವಸ್ತುವನ್ನು ನೋಡುವ ಅಧಿಕಾರವಂತನಾಗಿ ರುವನು. ಆದರೆ ಇಂಥವರು ಈ ಜಗತ್ತಿನಲ್ಲಿ ಅತ್ಯಂತ ಕಡಿಮೆ ಜನರಿರುವರು. ಅರ್ಥಾತ್ ಸೂಕ್ಷ್ಮ ದೃಷ್ಟಿಯ ಜ್ಞಾತಾಜನ ಬಹಳ ಕಡಿಮೆ ಇರುವರು. ವಿಜ್ಞಾನದಲ್ಲಾಗಲೀ, ತತ್ವಜ್ಞಾನದಲ್ಲಾಗಲೀ ಅಥವಾ ಆತ್ಮಜ್ಞಾನದಲ್ಲಾಗಲೀ ಯಾರು ಯಾರಲ್ಲಿ ಎಷ್ಟೆಷ್ಟು ಹೆಚ್ಚು ಸೂಕ್ಷ್ಮ ದೃಷ್ಟಿ ಅಥವಾ ಸೂಕ್ಷ್ಮಜ್ಞಾನ ದೃಷ್ಟಿ ಇರುವದೋ ಆಯಾ ಪ್ರಮಾಣದಲ್ಲಿ ಅವರು ದೊಡ್ಡ ದ್ರಷ್ಟಾ ಅನಿಸುವರು. ಇಂಥ ಈ ಸೂಕ್ಷ್ಮ ಮತ್ತು ವಿಶಾಲ ಜ್ಞಾನ ದೃಷ್ಟಿ ಇರುವದು. ಪರಮಾರ್ಥದಲ್ಲಿಯು ಜ್ಞಾನ ಶಕ್ತಿ ಅಂದರೆ, ಚಿತ್ಕಲೆಯೇ ಆಗಿರುವದು. (೧೦) ವಾಚ್ಯಾಂಶವನ್ನು ಬಾಯಿಯಿಂದಲೇ [ಮುಖದಿಂದಲೇ] ಮಾತನಾಡಬೇಕಾಗುವದು, ಆದರೆ ಲಕ್ಷ್ಯಾಂಶ ಇದನ್ನು ಮಾತನಾಡದೇ ತಿಳಿಯಬೇಕು. ಇದರಂತೆ ಗುಣಗಳ ಯೋಗದಿಂದ ನಿರ್ಗುಣದ ಅನುಭವವನ್ನು ಪಡೆಯಬೇಕು. ಮನದಲ್ಲಿಯ ಎಲ್ಲ ಅರ್ಥವನ್ನೂ ಕೆಲವೊಂದು ಶಬ್ದಗಳಲ್ಲಿ ಸರಿಯಾಗಿ ವ್ಯಕ್ತಮಾಡಲಿಕ್ಕೆ ಬರುವದಿಲ್ಲ. ಆಗುವದಿಲ್ಲ. ಆದ್ದರಿಂದ ಮಾತನಾಡಿ ದಂಥ ಶಬ್ದದ ಸಂಪೂರ್ಣ ಅರ್ಥ ಏನಿರುವದೋ ಅದನ್ನೆಲ್ಲ ಮನದಲ್ಲಿಯೇ ಗ್ರಹಣಮಾಡಬೇಕಾಗುವದು. ಯಾರ ಜ್ಞಾನ ದೃಷ್ಟಿ ಅಧಿಕ ಹೆಚ್ಚು ಸೂಕ್ಷ್ಮ ಇರುವದೋ ಅವರಿಗೆ ಮಾತ್ರ ಹೆಚ್ಚಿನ ಪ್ರಮಾಣದಲ್ಲಿ ಅರ್ಥ ತಿಳಿಯುವದು. ಇದರಂತೆ ತ್ರಿಗುಣಾತ್ಮಕ ದೃಶ್ಯದ ವಿವರಣದಿಂದ ಅದರ ಹಿಂದೆ ಮತ್ತು ಅದರ ಆಚೆಗೆ ಇರುವ ನಿರ್ಗುಣದ ಶಾಶ್ವತ ತತ್ವವನ್ನು ಸೂಕ್ಷ್ಮ ಜ್ಞಾನ ದೃಷ್ಟಿಯಿಂದ ತಿಳಿದುಕೊಳ್ಳಲಿಕ್ಕೆ ಬರುವದು. (೧೧) ಗುಣಗಳ ನಾಶವಾಗುವದೆಂದು ಅನ್ನುವದು ಪ್ರತ್ಯಕ್ಷ ಕಾಣುವದು. ನಿರ್ಗುಣವು ಅವಿನಾಶಿ ಇರುವದು. ಈ ಅವಿನಾಶೀ ನಿರ್ಗುಣವು ಅತ್ಯಂತ ಸೂಕ್ಷ್ಮ ವಿರುವದು. ಆದ್ದರಿಂದ ಇದನ್ನು ನೋಡುವದಕ್ಕೆ ಸ್ಥೂಲ ದೃಷ್ಟಿಯಿಂದ ಅಂದರೆ ವ್ಯವಹಾರಿಕವಾಗಿರುವ ಈ ನಮ್ಮ ಕಣ್ಣಿನ ಸಾಮಾನ್ಯ ದೃಷ್ಟಿಯು ಉಪಯೋಗಕ್ಕೆ ಬರುವದಿಲ್ಲ. ಇಲ್ಲಿ ಸೂಕ್ಷ್ಮವನ್ನು ತಿಳಿಯುವಂಥ ಮತ್ತು ಸ್ಥೂಲ ದೃಷ್ಟಿಗಿಂತ ವಿಶೇಷವಾಗಿರುವ ಜ್ಞಾನ ದೃಷ್ಟಿಯೇ ನಿರ್ಗುಣನಾದ ಪರಬ್ರಹ್ಮವನ್ನು ನೋಡಲಿಕ್ಕೆಬೇಕು. (೧೨) ಯಾವುದು ನಮ್ಮ ಸ್ಥೂಲ ದೃಷ್ಟಿಗೆ ಕಾಣಿಸುವದಿಲ್ಲವೋ ಅದರ ಬಗ್ಗೆ ಶ್ರವಣಮಾಡಿ ಅದರ ಜ್ಞಾನ ಮಾಡಿಕೊಳ್ಳ ಬೇಕು. ಶ್ರವಣ ಮತ್ತು ಮನನ ಇವುಗಳ ಸಹಾಯದಿಂದ ಎಲ್ಲವನ್ನೂ ತಿಳಿದುಕೊಳ್ಳಲಿಕ್ಕೆ ಬರುವದು. (೧೩)

ಅಷ್ಟಧೇಚೆ ಜಿನಸ ನಾನಾ । ಉದಂಡ ಪಾಹಾತಾ ಕಳೆನಾ ।
ಅವಘೇ ಸಗಟ ಪಿಟಾವೆನಾ । ಕೋಣೇ ಯೇಕೇ ॥೧೪॥

ಸಗಟ ಸಾರಿಖೀ ಸ್ಥಿತೀ ಜಾಲೀ । ತೇಥೇ ಪರೀಕ್ಷಾ ಚ ಬುಡಾಲೀ ।
ಚವಿನಟಾನೇ ಕಾಲವಿಲೀ । ನಾನಾ ಅನ್ನೇ ॥೧೫॥

ಟೋಣಪಾ ನವ್ಹೇ ಗುಣ ಗ್ರಾಹಿಕ । ಮೂರ್ಖಾಸ ಕಳೆನಾ ವಿವೇಕ ।
ವಿವೇಕ ಆಣೇ ಅವಿವೇಕ । ಯೇಕ ಚಿ ಮ್ಹಣತೀ ॥೧೬॥

ಉಂಚ ನೀಚ ಕಳೆನಾ ಜ್ಯಾಲಾ । ತೇಥೇ ಅಭ್ಯಾಸ ಚಿ ಬುಡಾಲಾ ।
ನಾನಾ ಅಭ್ಯಾಸೇ ಪ್ರಾಣಿಯಾಲಾ । ಸುಟಿಕಾ ಕೈಚೀ ॥೧೭॥

ವೇಡ ಲಾಗೋನ ಜಾಲೇ ವ್ರೊಂಗಳ । ತ್ಯಾಸ ಸಾರಿಖೇ ಚ ವಾಟೆ ಸಕಳ ।
ತೇ ಜಾಣಾವೇ ಬಾಶ್ಕಳ । ವಿವೇಕೀ ನವ್ಹೇತೀ ॥೧೮॥

ಜ್ಯಾಸ ಅಖಂಡ ಹೋತೋ ನಾಶ । ತ್ಯಾಸೀ ಚ ಮ್ಹಣತೀ ಅವಿನಾಶ ।
ಬಹು ಚಕಿ:ಚ್ಯಾ ಲೋಕಾಸ । ಕಾಯೆ ಮ್ಹಣಾವೇ ॥೧೯॥

ಈಶ್ವರೇ ನಾನಾ ಭೇದ ಕೇಲೆ । ಭೇದೇ ಸಕಳ ಸೃಷ್ಟೀ ಚಾಲೇ ।
ಆಂಧಳೇ ಪರೀಕ್ಷವಂತ ಮಿಳಾಲೆ । ತೇಥೇ ಪರಿಕ್ಷಾ ಕೈಚೀ ॥೨೦॥

ಜೇಥೇ ಪರೀಕ್ಷೇಚಾ ಅಭಾವ । ತೋ ಟೋಣಪಾ ಸಮುದಾವ ।
ಗುಣ ಚಿ ನಾಹೀ ಗೌರವ । ಯೆ ಈಲ ಕೈಚೇ ॥೨೧॥

ಯಾರಿಗೆ ಶ್ರವಣ ಮನನವಿರುವದಿಲ್ಲವೋ ಮತ್ತು ಯಾರು ಟೊಣಪ, ಟೊಣ್ಯಾ, ಅಂದರೆ ಮಂದಮತಿ, ಬುದ್ಧಿಹೀನ, ಅಥವಾ ಜ್ಞಾನ ದೃಷ್ಟಿಯಿಲ್ಲದವರಿರುವರೋ ಅವರು ಮಾತ್ರ ತಮಗೆ ಕಾಣುವ ದೃಶ್ಯ ಸೃಷ್ಟಿಯನ್ನೇ ಸತ್ಯವೆಂದು ನಂಬಿರುತ್ತಾರೆ. ಈ ಟೊಣಪರಿಗೆ ನಿಜವಾದ ಪರೀಕ್ಷೆಮಾಡಲು ಬರುವದಿಲ್ಲ. ಇಂಥ ಟೊಣ್ಯಾ ಟೊಣಪರಿಗೆ ವೇದ ಶಾಸ್ತ್ರಾದಿಗಳಾದರೂ ಏನು ಮಾಡಿಯಾವು? ಅರ್ಥಾತ್ ಏನೂ ಮಾಡಲಿಕ್ಕೆ ಆಗುವದಿಲ್ಲ-ಬರುವದಿಲ್ಲ: ಐದು ಭೂತಗಳು ಮತ್ತು ಮೂರು ಗುಣಗಳ ಅಷ್ಟಧಾಪ್ರಕೃತಿಯಿಂದಾಗಿ ಅನೇಕ ಪ್ರಕಾರದ ದೃಶ್ಯ ಪದಾರ್ಥಗಳು ನಿರ್ಮಾಣವಾದವು. ಈ ಎಲ್ಲ ಪದಾರ್ಥಗಳ ಜ್ಞಾನ ಮಾಡಿಕೊಳ್ಳಲಿಕ್ಕೆ ಎಲ್ಲರಿಗೂ ಶಕ್ಯವಾಗುವದಿಲ್ಲ. ಈ ಮಾತು ನಿಜವಿದ್ದರೂ ಕೂಡಾ ಎಲ್ಲ ಪದಾರ್ಥಗಳನ್ನು ಒಂದೇ ರೀತಿಯುವೆಂದು ಸರಸಗಟಾಗಿ ಒಂದೇ ಸಮವೆಂದು ಯಾರೂ ತಿಳಿಯಬಾರದು. (೧೪) ಒಂದುವೇಳೆ ಎಲ್ಲ ಪದಾರ್ಥಗಳನ್ನು ಒಂದೇ ಸಮವೆಂದು ಅಂದದ್ದಾದರೆ ಅವುಗಳಲ್ಲಿಯು ಚಲೋದು-ಕೆಟ್ಟದ್ದು, ನಾಶವಾಗುವಂಥದು, ನಾಶವಾಗದೇ ಇರುವಂಥದು, ಉತ್ತಮ ಅಧಮ, ಇತ್ಯಾದಿ ಭೇದವೇ ಇಲ್ಲದಾಗಿ ಯಾವುದನ್ನು ಏನನ್ನು ಪರೀಕ್ಷೆಮಾಡಬೇಕು, ಅನ್ನುವ ಪ್ರಶ್ನೆ ಹಾಗೆಯೇ ಉಳಿಯುವದು. ಅರ್ಥಾತ್ ಪರೀಕ್ಷಿಸಲಿಕ್ಕೆ ಏನೂ ಅವಕಾಶ ಉಳಿಯುವದಿಲ್ಲ. ಉದಾ: ತಿಳಿಯಿರಿ ಒಬ್ಬನ ಬಾಯಿಗೆ ರುಚಿ ಇಲ್ಲ. ಇದರಿಂದಾಗಿ ಇವನು ಎಲ್ಲ ಅನ್ನ ಮತ್ತು ಇತರ ಪದಾರ್ಥಗಳನ್ನು ಕೂಡಿಸಿ ಒಮ್ಮೆಲೇ ಕಲೆಸುವನು. ಇದರಿಂದ ಅದರಲ್ಲಿ ಆಯಾ ಪದಾರ್ಥಗಳ ರುಚಿ ಬೇರೆ ಬೇರೆ ಇದ್ದದ್ದು ಉಳಿಯುವದಿಲ್ಲ. ಎಲ್ಲವೂ ಸಮವೆಂದು ತಿಳಿದರೆ ಅದು ಇದರಂತೆಯೇ ಆಗುವದು. (೧೫) ಜ್ಞಾನ ದೃಷ್ಟಿಯಿಲ್ಲದ ಹೀನ ಮನುಷ್ಯನು ಗುಣಗ್ರಹಣ ಮಾಡಲಿಕ್ಕೆ ಶಕ್ತನಿರುವದಿಲ್ಲ. ಮೂರ್ಖ ಮನುಷ್ಯನು ವಿವೇಕಮಾಡಲು ಶಕ್ತನಾಗುವದಿಲ್ಲ. ವಿವೇಕ ಮತ್ತು ಅವಿವೇಕ ಇವೆರಡನ್ನೂ ಈ ಟೊಣಪ-ಟೊಣ್ಯಾ ಜನರು ಒಂದೇ ಎಂದು ತಿಳಿಯುವರು. (೧೬) ಶ್ರೇಷ್ಠವಾದದ್ದು ಯಾವುದು? ಮತ್ತು ಕನಿಷ್ಠವಾದದ್ದು ಯಾವುದು ಇದು ಯಾರಿಗೆ ತಿಳಿಯುವದಿಲ್ಲವೋ ಅವರಿಗೆ ಪರಮಾರ್ಥದ ಅಭ್ಯಾಸವನ್ನು ಮಾಡಲಿಕ್ಕೆ ಬರುವದಿಲ್ಲ. ಸೂಕ್ಷ್ಮ ಮತ್ತು ಶ್ರೇಷ್ಠ, ಸ್ಥೂಲ ಮತ್ತು ಕನಿಷ್ಠ ಇವು ತಿಳಿಯಬೇಕು. ಅಂದರೆ ಮಾತ್ರ ಪರಮಾರ್ಥ ಸಾಧನೆಮಾಡಲಿಕ್ಕೆ ಆಗುವದು. ಇದೆಲ್ಲ ವಿವರ ತಿಳಿಯದೆ ಸ್ಥೂಲದಲ್ಲಿಯು ಅನೇಕ ಪ್ರಕಾರದಲ್ಲಿ ಅಭ್ಯಾಸಮಾಡಿದರೆ ಆ ಮನುಷ್ಯನು ಬಂಧನದಿಂದ ಮುಕ್ತನಾಗುವದಕ್ಕೆ ಸಾಧ್ಯವಾಗುವದಿಲ್ಲ. ಇವನು ಕೇವಲ ಸಂಸಾರೀ ಟೊಣಪನೆನಿಸುವನು. (೧೭) ಯಾವ ಮನುಷ್ಯನಿಗೆ ಹುಚ್ಚು ಹಿಡಿದಿರುವದೋ ಅವನು ಸ್ವತಃ ತಾರತಮ್ಯ ಹೀನನಾಗಿರುವನು. ಹೊಲಸು ಯಾವುದು ಮತ್ತು ಚಲೋ ಪದಾರ್ಥ ಯಾವುದು ಇವುಗಳ ಅಂತರ ಅವನಿಗೆ ತಿಳಿಯುವದಿಲ್ಲ. ಎರಡೂ ಒಂದೇ ಸಮವೆನಿಸುವವು. ಇದರಂತೆ ಸ್ಥೂಲ ಮತ್ತು ಸೂಕ್ಷ್ಮ, ಅಶಾಶ್ವತ ಮತ್ತು ಶಾಶ್ವತ ಇವುಗಳಲ್ಲಿಯು ಅಂತರ ಯಾರಿಗೆ ತಿಳಿಯುವದಿಲ್ಲವೋ ಅವರು ಟೊಣಪರು, ಜ್ಞಾನಹೀನರು ಎಂದು ತಿಳಿಯಬೇಕು. ಇವರಿಂದ ಯಾವದೇ ವಿವೇಕದ ಕಾರ್ಯವೂ ಆಗುವದಿಲ್ಲ. (೧೮) ಯಾವ ದೃಶ್ಯ ವಸ್ತುಗಳ ನಾಶವು ಸತತ ಚಾಲೂ ಇರುವದೋ ಅಂಥವುಗಳಿಗೆ ಈ ಜನರು ಅವಿನಾಶವಾದವುಗಳೆಂದು ಅನ್ನುವರು. ಇಂಥ ದಾರಿಗೆಟ್ಟ ಅಡ್ಡದಾರೀ ಹಿಡಿದ ಟೊಣಪರು ತಾವು ಸ್ವತಃ ಶಹಾಣೆ ಪಂಡಿತರು ಎಂದು ತಿಳಿಯುವರು. ಇಂಥ ಈ ಟೊಣ್ಯಾ ಟೊಣಪ ಜನರಿಗೆ ಏನು ಅನ್ನಬೇಕು ? (೧೯) ಈಶ್ವರನು ಅನೇಕ ಪ್ರಕಾರದ ಭೇದ ಮಾಡಿರುವನು. ಈ ಭೇದದ ಹಿನ್ನೆಲೆಯು ಮೇಲೆಯೇ ಸರ್ವ ಜಗತ್ತು ನಡೆದಿರುವದು. ಈ ವಿಷಯವು ಪ್ರತ್ಯಕ್ಷದ್ದೇ ಇರುವದು. ಆದರೆ ಪರೀಕ್ಷಾ ಮಾಡುವವರೇ ಕುರುಡರಾಗಿದ್ದರೆ ಇವರೆಲ್ಲ ಅಂದರೆ ಈ ಕುರುಡು ಪರೀಕ್ಷಕರೆಲ್ಲ ಏಕತ್ರ ಕೂಡಿ ಈ ದೃಶ್ಯ ಜಗತ್ತಿನ ಪರೀಕ್ಷೆಯನ್ನು ಹೇಗೆ ಮಾಡುವರು ? ಯಾರಿಗೆ ಜ್ಞಾನ ದೃಷ್ಟಿ ಇಲ್ಲವೋ ಅಂಥ ಟೊಣಪರು. ಪರಮಾರ್ಥ ವಿಷಯದಲ್ಲಿ ಕುರುಡರೇ ಆಗಿರುವರು. (೨೦) ಯಾರಲ್ಲಿ ಯಾವ ಸ್ಥಳದಲ್ಲಿ ಪರೀಕ್ಷಾ ಮಾಡುವದಕ್ಕೆ ಬೇಕಾಗುವ ಜ್ಞಾನ ದೃಷ್ಟಿಯೇ ಇಲ್ಲವೋ ಅವರು ಟೊಣಪ ಸಮೂಹದ ಟೊಣ್ಯಾ ಆಗಿರುವರು. ಇಂಥವರಲ್ಲಿ ಅವಶ್ಯವಾಗಿ ಇರಬೇಕಾದ ಗುಣವೇ ಇರುವದಿಲ್ಲವಾದ್ದರಿಂದ ಪರೀಕ್ಷಕರೆಂದು ಇವರ ಗೌರವ ಮಾಡಲಿಕ್ಕೆ ಬರುವದಿಲ್ಲ. (೨೧)

ಖರೇ ಖೋಟೇ ಯೇಕ ಚಿ ಜಾಲೇ । ವಿವೇಕಾನೇ ಕಾಯೇ ಕೇಲೇ ।
ಅಸಾರ ಸಾಂಡೂನ ಸಾರ ಘೇತಲೇ । ಸಾಧು ಜನೀ ॥೨೨॥

ಉತ್ತಮ ವಸ್ತೂಚೀ ಪರೀಕ್ಷಾ । ಕೈಸೀ ಘಡೇ ಮತದ್ರುಕ್ಷಾ ।
ದೀಕ್ಷಾ ಹೀನಾ ಪಾಸೀ ದೀಕ್ಷಾ । ಯೆಈಲ ಕೈಚೀ ॥೨೩॥

ಆಪಲೇನ ಮೋಂಗಳಪಣೇ । ದಿಶಾ ಕರೂನ ಶೌಚ್ಯ ನೇಣೆ ।
ವೇದಶಾಸ್ತ್ರೇ ಪುರಾಣೇ । ತ್ಯಾಸ ಕಾಯೆ ಕರಿತೀ ॥೨೪॥

ಆಧಿ ರಾಖಾವಾ ಆಚಾರ । ಮಗ ಪಾಹಾವಾ ವಿಚಾರ ।
ಆಚಾರ ವಿಚಾರೇ ಪೈಲಪಾರ । ಪಾವಿಜೇತೋ ॥೨೫॥

ಜೇ ನೇಮಕಾಸ ನ ಕಳೆ । ತೇ ಬಾಶ್ಕಳಾಸ ಕೇವೀ ಕಳೆ ।
ಡೋಳಸ ಠಕತೀ ಆಂಧಳೇ । ಕೋಣ್ಯಾ ಕಾಮಾಚೆ ॥೨೬॥

ಪಾಪಪುಣ್ಯ ಸ್ವರ್ಗನರ್ಕ । ಅವಘೇಚ ಮಾನಿಲೇ ಯೇಕ ।
ವಿವೇಕ ಆಣೀ ಅವಿವೇಕ । ಕಾಯೆ ಮಾನಾವೇ ॥೨೭॥

ಅಮೃತ ವಿಷ ಯೇಕ ಮ್ಹಣತೀ । ಪರೀ ವಿಷ ಘೇತಾ ಪ್ರಾಣ ಜಾತೀ ।
ಕುಕರ್ಮೇ ಹೋತೆ ಫಜಿತೀ । ಸತ್ಕರ್ಮೆ ಕೀರ್ತಿವಾಢೇ ॥೨೮॥

ಮಾನವೀ ಜೀವನವು ಖರೇ ಮತ್ತು ಖೊಟ್ಟಿ ಇದರ ಮಿಶ್ರಣವೇ ಆಗಿದೆ. ಅಂದ ಮೇಲೆ ವಿವೇಕವು ಏನು ಮಾಡುವದು? ಆದರೆ ವಿವೇಕ ಮಾಡುವಂಥ ಸಾಧು-ಸಂತರು ಸಾರ-ಅಸಾರದ, ಮಿಶ್ರಣದಲ್ಲಿಯ ಸಾರವನ್ನು ಆರಿಸಿ ಸ್ವೀಕರಿಸುವರು. ಅಸಾರವನ್ನು ಮೊದಲಿಗೇ ತೆಗೆದೊಗೆದಿರುತ್ತಾರೆ. ಅರ್ಥಾತ್ ಅಸಾರವನ್ನು ಆರಿಸಿತೆಗೆದು ಬಿಟ್ಟು ಬಿಡುವರು. ಸಾರವನ್ನಷ್ಟೇ ಸ್ವೀಕರಿಸುವರು. [ಗ್ರಹಣ ಮಾಡುವರು] (೨೨) ನತದೃಷ್ಟ [ಟೊಣಪ] ರಿಗೆ ಅಂದರೆ ಕೀಳು ತರಗತಿಯ ಸಾಧಾರಣ ಹಲಕಾ ಜನರಿಗೆ ಉತ್ತಮ ವಸ್ತುವಿನ ಪರೀಕ್ಷೆ ಮಾಡಲಿಕ್ಕೆ ಬರುವದಿಲ್ಲ. [ಆಗುವದಿಲ್ಲ].ಯಾರು ಸ್ವತಃವೇ ದೀಕ್ಷಾ ಹೀನರಿರುವರೋ [ನೇಮ, ನಿಯಮಾಚರಣೆಯ ಹೀನರು] ಅವರ ಹತ್ತಿರ ದೀಕ್ಷೆಯ ತೇಜ ಮತ್ತು ಸಾಮರ್ಥ್ಯವು ಕಂಡುಬರುವದು ಶಕ್ಯವಿಲ್ಲ. (೨೩) ತಿಳಿಯಿರಿ. ಒಬ್ಬ ಮನುಷ್ಯನು ಮಲ ವಿಸರ್ಜನೆಗೆ ಹೋದನು. ಆ ಮೇಲೆ ಗುದ ಪ್ರಕ್ಷಾಲನ ಮಾಡಿಕೊಳ್ಳದೇ ಹಾಗೆಯೇ ಹೊಲಸಿಟ್ಟುಕೊಂಡನು. ಅಥವಾ ಸರಿಯಾಗಿ ಸ್ವಚ್ಛಮಾಡಿಕೊಳ್ಳಲಿಲ್ಲವೆಂದರೆ ಇದಕ್ಕೆ ವೇದ ಶಾಸ್ತ್ರ ಮತ್ತು ಪುರಾಣಗಳು ಇವನ ಮುಂದೆ ಇಂಥ ಆಚಾರಹೀನನಿಗೆ ಏನು ಮಾಡಬಲ್ಲವು? ಅರ್ಥಾತ್ ಏನೂ ಮಾಡಲು ಶಕ್ಯವಿಲ್ಲ. (೨೪) ಸೂಕ್ಷ್ಮ ಜ್ಞಾನ ದೃಷ್ಟಿ ಬರಬೇಕಾದರೆ ಯಾವ ಅಭ್ಯಾಸವನ್ನು ಮಾಡಬೇಕಾಗುವದೋ ಇದರ ಸಲುವಾಗಿ ಆಚಾರ ಮತ್ತು ವಿಚಾರ ಎರಡೂ ಪವಿತ್ರ ಇರಬೇಕಾಗುವದು. ಆಚಾರ ವಿಚಾರ ಶುದ್ಧ ಇಟ್ಟುಕೋಡು ಸತ್ಸಂಗದಲ್ಲಿ ಸತ್‌ಶಾಸ್ತ್ರ ಶ್ರವಣ ಮಾಡಿದ್ದಾದರೆ ಸೂಕ್ಷ್ಮದಲ್ಲಿ ಸೇರುವ ಯುಕ್ತಿಯು ಸಾಧಿಸುವದು; ಮೊದಲು ಆಚಾರವನ್ನು ಉತ್ತಮ ರೀತಿಯಿಂದ ಪಾಲಿಸಬೇಕು. ಆನಂತರ ಉತ್ತಮ ವಿಚಾರಮಾಡಲು ಕಲಿಯಬೇಕು. ಇಂಥ ಆಚಾರ ವಿಚಾರದಿಂದ ಸಂಪನ್ನನಾದ ಮನುಷ್ಯನು ಮಾತ್ರ ಪಾರುಗಾಣುವನು. ದಡ ಸೇರುವನು, ದಡ ಮುಟ್ಟುವನು. ಸಾಧಕರಿಗೆ ಈ ವಚನವು ಅತಿ ಅವಶ್ಯವಿರುವದು (೨೫) ಪರಮಾರ್ಥದ ನಿಯಮಗಳಿಂದ ಮತ್ತು ವ್ಯವಸ್ಥಿತತನದಿಂದ ಅಭ್ಯಾಸ ಮಾಡುವವರಿಗೆ ಕೂಡಾ ಪರಮಾತ್ಮ ಸ್ವರೂಪ ತಿಳಿಯುವದು ಕಠಿಣ ಹೋಗುವದು. ಕಠಿಣವಾಗುವದು. ಅಂದ ಮೇಲೆ ಅಭ್ಯಾಸ, ಆಚಾರ.ವಿಚಾರಮಾಡದ ಟೊಣಪ-ಟೊಣ್ಯಾಜನರಿಗೆ ಇದು ತಿಳಿಯುವದು ಶಕ್ಯವೇ ಇಲ್ಲ.ಯಾವಸ್ಥಳದಲ್ಲಿ ಕಣ್ಣಿದ್ದವರೇ ಮೋಸ ಹೋಗುವರೋ, ಅಲ್ಲಿ ಹುಟ್ಟುಗುರುಡರು ಮೋಸಹೋಗುವದು ಆಶ್ಚರ್ಯದ್ದಲ್ಲ. ಕುರುಡನದೇನೂ ನಡೆಯುವಂಥದೇ ಅಲ್ಲ. (೨೬) ಪಾಪ, ಪುಣ್ಯ, ಸ್ವರ್ಗ, ನರಕ, ಇವೆಲ್ಲವುಗಳನ್ನು ಯಾರು ಒಂದೇ ಎಂದು ತಿಳಿಯು ವರೋ ಅವರು ವಿವೇಕ ಮತ್ತು ಅವಿವೇಕ ಇವುಗಳಲ್ಲಿ ಅಂತರ-ವ್ಯತ್ಯಾಸ ಇರುವದೆಂದು ತಿಳಿಯುವವರಾಗಿರುವದಿಲ್ಲ. ಅಥವಾ ಹೆಚ್ಚು ಕಡಿಮೆ ಇರುವದೆಂದು ಒಪ್ಪುವವರಾಗಿರುವದಿಲ್ಲ. [ಇದು ಟೊಣಪರ ಕಾರ್ಯವೆನಿಸುವದು.] (೨೭) ಅಮೃತ ಮತ್ತು ವಿಷ ಇವೆರಡೂ ಒಂದೇ ಅಂದ ಮಾತ್ರಕ್ಕೆ ಏನೂ ಕೆಡಕಾಗುವದಿಲ್ಲ. ಆದರೆ ಎರಡೂ ಒಂದೇ ಎಂದು ವಿಷವನ್ನು ಸೇವಿಸಿದರೆ ಪ್ರಾಣ ಹೋಗುವದು. ಮಾತ್ರ ಖರೇ ಇರುವದು. ಇದರಂತೆ ಕೆಟ್ಟ ಕರ್ಮ ಮಾಡು ವದರಿಂದ ತೊಂದರೆ ಫಜೀತಿ ಆಗುವದು. ಮತ್ತು ಉತ್ತಮ ಕರ್ಮ ಮಾಡುವದರಿಂದ ಪ್ರಸಿದ್ಧಿ ಹೊಗಳಿಕೆ ಆಗುವದು ಮತ್ತು ಕೀರ್ತಿ ಹೆಚ್ಚುವದು. ಇದು ಪ್ರತ್ಯಕ್ಷ ಕಂಡ ಅನುಭವದ ಮಾತೇ ಆಗಿರುವದು. (೨೮)

ಇಹಲೋಕ ಆಣೀ ಪರಲೋಕ । ಜೇಥೇ ನಾಹೀ ಸಾಕಲ್ಯ ವಿವೇಕ ।
ತೇಥೇ ಅವಘೇ ಚ ನಿರಾರ್ಥಕ । ಸಕಳ ಕಾಹೀ ॥೨೯॥

ಮ್ಹಣೌನ ಸಂತಸಂಗೇ ಚಿ ಜಾವೇ । ಸತ್ಶಾಸ್ತ್ರಚಿ ಶ್ರವಣ ಕರಾವೇ ।
ಉತ್ತಮ ಗುಣಾಸ ಅಭ್ಯಾಸಾವೇ । ನಾನಾ ಪ್ರಯತ್ನೇ ॥೩೦॥

ಇತಿ ಶ್ರೀ ದಾಸಬೋಧೇ ಗುರುಶಿಷ್ಯ ಸಂವಾದೇ
'ಟೋಣಪ ಸಿದ್ಧ ಲಕ್ಷಣ' ನಾಮ ಸಮಾಸ ದಶಮ ॥

— ದಶಕ ಸತರಾವಾ ಸಮಾಪ್ತ —

ಇಹಲೋಕ ಮತ್ತು ಪರಲೋಕ ಪ್ರಪಂಚ ಮತ್ತು ಪರಮಾರ್ಥ, ಇವುಗಳಬಗ್ಗೆ ಸರ್ವಾಂಗೀಣವಿವೇಕವು ಯಾರಲ್ಲಿ ಇಲ್ಲವೋ ಅವರಜೀವನದಲ್ಲಿ ಯಾವುದಕ್ಕೂ ಎಂಥದೂ ಅರ್ಥ ಉಳಿಯುವದಿಲ್ಲ. ಎಲ್ಲವೂ ನಿರರ್ಥಕವಾಗಿ ಹೋಗುವದು. ಇದು ಟೊಣಪರಲ್ಲಿ ಮಾತ್ರ ಇರುವದು. (೨೯) ಆದ್ದರಿಂದ ಸತ್ ಸಂಗದಿಂದ ನಡೆಯಿರಿ. ಸತ್ ಶಾಸ್ತ್ರ ಶ್ರವಣ ಮಾಡಿರಿ. ಮತ್ತು ನಾನಾ ಪ್ರಕಾರದ ಪ್ರಯತ್ನದಿಂದ ಉತ್ತಮ ಗುಣಗಳ ಅಭ್ಯಾಸವನ್ನು ಮಾಡಿರಿ. ಪರಮಾರ್ಥವು ಹೇಗೆ ನಿಜ ವಿರುವದೆಂಬುದರ ನಿಜವಾದ ಕಲ್ಪನೆಯು ಬರುವದಕ್ಕಾಗಿ ಸಂತ ಶರಣರ ಸಂಗತಿಯ ಹೊರತಾಗಿ ಬೇರೆ ರಾಜ ಮಾರ್ಗ ವಿಲ್ಲ. ಇದರಂತೆ ಸಂತಶರಣರ ಕಡೆಯಿಂದ ಪರಮಾರ್ಥಪರವಿರುವ ಗ್ರಂಥಗಳ ಶ್ರವಣಮಾಡಿದರೇನೇ ನಿಮಗೆ ಅಧ್ಯಾತ್ಮದ ನಿಜವಾದ ಅರ್ಥ ಲಕ್ಷ್ಯದಲ್ಲಿ ಬರುವದು. ಇಂಥ ಖರೇ ಖಟಪಟಿ [ಪ್ರಯತ್ನ] ಯಿಂದ ಟೊಣಪತನವು ಹೋಗಿ ಶುದ್ಧವಾದ ಸಿದ್ಧಮಾರ್ಗ ದೊರಕುವದು. ಆದರೆ ಇಷ್ಟುಮಾಡಿಯೂ ಮುಗಿಯುವದಿಲ್ಲ. ಸ್ವತಃ ಸಾಧನೆಯನ್ನು ಮಾಡಲೇಬೇಕು. ಹೀಗೆ ಸ್ವತಃ ದುಡಿದವನಿಗೆ ಪರಮಾತ್ಮನು ದೂರವಿರುವದಿಲ್ಲ. (೩೦)

ಶ್ರೀ ದಾಸಬೋಧದ ಹದಿನೇಳನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ಟೊಣಪ ಸಿದ್ಧ ಲಕ್ಷಣ"ವೆಂಬ ಹೆಸರಿನ ಹತ್ತನೆಯ ಸಮಾಸವು ಮುಗಿದುದು.

## — ದಶಕ ಹದಿನೇಳು ಮುಕ್ತಾಯ —

• •

# ದಶಕ ೧೮. ಬಹುಜಿನಸಿ

ಈ ದಶಕದಲ್ಲಿ ಭಿನ್ನ ಭಿನ್ನ ಪ್ರಕಾರದ ಅನೇಕ ವಿಷಯಗಳು ಇದರಲ್ಲಿ ಬಂದದ್ದರಿಂದ ಇದಕ್ಕೆ ಬಹುಜಿನಸಿ ಎಂದು ಹೆಸರು ಕೊಟ್ಟಿರುವರು. ಮನುಷ್ಯನ ಜೀವನವು ಎಲ್ಲ ಕಡೆಯಿಂದ ಸಮೃದ್ಧವಾಗಬೇಕು; ಅನ್ನುವ ದೃಷ್ಟಿ ಶ್ರೀ ಸಮರ್ಥರದಾಗಿತ್ತು. ಇದರಿಂದಾಗಿಯೇ ಪ್ರಪಂಚ, ಮತ್ತು ಪರಮಾರ್ಥಗಳೆರಡಕ್ಕೂ ಉಪಯೋಗ ಬೀಳುವಂಥ ವಿಷಯುವನ್ನು ಈ ದಶಕದಲ್ಲಿ ಅವರು ಹೇಳಿ ತಿಳಿಸಿಕೊಟ್ಟಂತೆ ಕಾಣುವದು. ಇವುಗಳಲ್ಲಿ ವಿಶೇಷ ಮಹತ್ವದ್ದು ಯಾವುದೆಂದರೆ: (೧) ಈ ಜಗತ್ತಿನಲ್ಲಿ ಎಷ್ಟೆಷ್ಟೋ ದೇವರು ಕಂಡುಬರುವವು. ಆದರೆ ನಮ್ಮ ಅಂತರಂಗದಲ್ಲಿ ವಾಸ ಮಾಡಿರುವ ಅಂತರಾತ್ಮಾ ಇವನೇ ನಿಜವಾದ ದೇವರಿರುವನು. (೨) ನಿಜವಾದ ದೇವರು ಶುದ್ಧ ಅರಿವಿನ [ಜಾಣೀವ]

ರೂಪವಿರುವನು. ಇವನ ಅನುಸಂಧಾನ [ಸಂಗತಿ, ಧ್ಯಾನ, ಲಕ್ಷ್ಯ, ಅವಧಾನ] ವನ್ನು ಸಾಧಿಸುವದು ಬಹಳ ಪುಣ್ಯ ಕಾರಕವಿರುವದು. ನಮಗೆ ಇವನ ಅಖಂಡ ಧ್ಯಾನಹತ್ತಿದ್ದಾದರೆ ಇವನು ಕೃಪಾಳು ಇರುವದರಿಂದ ಊಟ ಉಪಚಾರಾದಿ ಗಳೆಲ್ಲವನ್ನು ಇವನೇ ಮಾಡಿಸುವನು. [ಹಾಕುವನು] (೩) ಅಂತರಾತ್ಮನನ್ನು ತಿಳಿಯುವವನೇ ಖರೇ ತಿಳಿದವನು. ಅಥವಾ ಜ್ಞಾನಿಯಾಗಿರುವನು. ಇಂಥ ಪುರುಷನ ಜೀವನದ ಸರ್ವ ಅಂಗವನ್ನೂ ಅಭ್ಯಾಸ ಮಾಡಬೇಕು. ಮತ್ತು ನೀವು ಸ್ವತಃ ಜ್ಞಾನಿಯಾಗಬೇಕು. (೪) ಜಗತ್ತಿನಲ್ಲಿಯ ಪ್ರತಿಯೊಬ್ಬರಿಗೂ ಇನ್ನೊಬ್ಬರಿಂದ ಕೇಳಿ, ಮತ್ತು ಕಲಿತು, ತಿಳಿದು, ನೋಡಿದಾಗ ಶಹಾಣೆತನ ಬರುವದು. ನಾವು ಮುಖ್ಯವಾಗಿ ಆಲಸ್ಯ ಮತ್ತು ಕೆಟ್ಟ ಜನರ ಸಂಗತಿ–ಕೆಟ್ಟ ಚಟ ಹಿಡಿಯಬಾರದು, ಮಾಡಬಾರದು. ಬಲು ಜಬರುದಸ್ತಿನಿಂದ ಸಾಧನೆಯನ್ನು ಮಾಡಬೇಕು. ಏಕಾಂತದಲ್ಲಿ ಹೋಗಿ ಕುಳಿತು ಅನೇಕಾನೇಕ ಗ್ರಂಥಗಳನ್ನು ಅಂದರೆ ಪರಮಾತ್ಮವಿಷಯಕ ಗ್ರಂಥಗಳನ್ನು ಹಾಗೂ ಇತರ ಉತ್ತಮ ಗ್ರಂಥಗಳನ್ನು ಅಭ್ಯಾಸ ಪೂರ್ವಕ ಓದಬೇಕು. ಕೇವಲ ಬರೇ ಗ್ರಂಥ ಪಾರಾಯಣವು ಕೆಲಸಕ್ಕೆಬಾರದ್ದು. ನಾವು ಅರ್ಥ ತಿಳಿದುಕೊಂಡು ಆ ಮೇಲೆ ಜನರಿಗೆ ತಿಳಿಸಿ ಹೇಳಬೇಕು. ನಿಮ್ಮ ಹೇಳಿಕೆಯು ನಿರ್ಧಾರದ್ದಿರಬೇಕು. (೫) ನರದೇಹವು ಬಹಳ ಮೌಲ್ಯದ್ದಿರುವದು. ಇದರ ಮುಖಾಂತರ ಹೇಗೆ ಸರ್ವೋತ್ತಮ ಧ್ಯೇಯ ಮುಟ್ಟಲು ಬರುವದೋ ಅದರಂತೆ ಹೀನತನದಿಂದ ಟೊಣ್ಯಾನಂತೆ ಜೀವನ ಸಾಗಿಸಲೂ ಬರುವದು. ಸಾಮಾನ್ಯ ಮನುಷ್ಯನು ಅತಿ ಸ್ವಾರ್ಥಿ ಇರುವನು ಆದರೆ ವಿಚಾರ [ಸುವಿಚಾರ] ಮತ್ತು ಕಷ್ಟ ಈ ಎರಡು ಸಾಧನದಿಂದ ಇವನು ನಿಃಸ್ವಾರ್ಥಿ ಮತ್ತು ಭಾಗ್ಯವಾನ ನಾಗುವನು. (೬) ಮನುಷ್ಯರಲ್ಲಿ ಪೂಜ್ಯ ಪುರುಷನಾರು ? ಯಾವ ಮನುಷ್ಯ ತನ್ನ ಶರೀರವನ್ನು ಅಂತರಾತ್ಮನ ಸಲುವಾಗಿ ಸವೆಸುವನೋ ಯಾವನಲ್ಲಿ ಉದಂಡ [ಬಹಳ, ಪುಷ್ಕಳ] ವಿಚಾರ ಸಂಪತ್ತು [ಸಂಪದಾ] ಇರುವದೋ ಮತ್ತು ಜನರಲ್ಲಿ ಜನಾರ್ದನನನ್ನು ಕಂಡದ್ದರಿಂದ ಯಾರು ಇತರೇ ಜನರ ಅಂತಃಕರಣವನ್ನು ದುಃಖಿಸುವದಿಲ್ಲವೋ ಮತ್ತು ಯಾರು ಭಗವಂತನ ಗುಣಗಾನವನ್ನು ಅಖಂಡವಾಗಿ ಮಾಡುವರೋ ಅಂಥವರೇ ನಿಜವಾದ ಪೂಜ್ಯರು. ವಂದನೀಯರು ಆಗಿರುವರು. ಇವರ ಪಾದಕ್ಕೆ ನಮಸ್ಕರಿಸಬೇಕು. (೭) ಜಗತ್ತಿನಲ್ಲಿಯ ಪ್ರತಿಯೊಂದು ಘಟನೆಯು ಕಾಲಕ್ಕನುಸಾರವಾಗಿ ಆಗುವದು ಕಾಲವು ಅನುಕೂಲ ಅಥವಾ ಪ್ರತಿಕೂಲವಿರುವದು. ಕಾಲವು ಅನುಕೂಲವಿದ್ದರೆ ಮಾತ್ರ ಕೆಲಸ ತನ್ನಿಂದ ತಾನೇ ಅರ್ಥಾತ್ ಸುರಳೀತವಾದಿ ಆಗುತ್ತ ಹೋಗುವದು. ಕಾಲವು ಎಲ್ಲರಿಗೂ ಸತತವಾಗಿ ಅನುಕೂಲ ಅಥವಾ ಪ್ರತಿಕೂಲವಾಗಿ ಉಳಿಯುವದಿಲ್ಲ. (೮) ಜಗತ್ತಿನಲ್ಲಿ ದೊಡ್ಡ ಮತ್ತು ಶ್ರೇಷ್ಠ ಕಾರ್ಯವನ್ನು ಮಾಡಿತೋರಿಸುವ ಜನರ ಪೈಕಿ ಕೆಲವು ಜನರು ಈಶ್ವರನ ಕೃಪೆಗೆ ಪಾತ್ರರಾದವರು ಇರುವರು. ಇತರರಿಗಿಂತ ಇವರು ಬೇರೆಯೇ ಇರುವಂಥವರಾಗಿರುವರೆಂದು ತಿಳಿಯಬೇಕು. "ಸರ್ವಭೂತ ಹಿತೇರತಃ" ಇದೇ ಇವರ ಮುಖ್ಯ ಲಕ್ಷಣ ವಾಗಿರುವದು. ಅನೇಕರಿಗೆ ಇಂಥವರ ಆಧಾರವಿರುವದು. ಇವರ ಕಡೆಯಿಂದ ಪರೋಪಕಾರ ಘಟಿಸುವದು. ಬಹಳಷ್ಟು ಜನರನ್ನು ಇವರು ಸಂಬಾಳಿಸುವರು ಮತ್ತು ಇವರು ಭಗವಂತನ ಮಹತ್ವವನ್ನು ಬೆಳೆಸುವರು. (೯) ಅಂತರಾತ್ಮನು ಕಾಣುವದಿಲ್ಲ. ಅಂತರ್ನಿಷ್ಠರಾಗಿ ಇವನ ಅನುಸಂಧಾನವನ್ನು ಸಾಧಿಸಬೇಕು. ನಾಮರೂಪಗಳು ಬದಿಗೆ ಸರಿದದ್ದರಿಂದ ಕರ್ಮದ ಹಿಡಿತದಿಂದ ಬಿಡುಗಡೆಯಾಗಲು ಬರುವದು. ಏಕಾಂತದಲ್ಲಿ ಹೋಗಿ ಭಗವಂತನನ್ನು ತಿಳಿಯುವ ಇಚ್ಛೆಯನ್ನು ಗಟ್ಟಿಹಿಡಿದು ಸಾಧನ ಮಾಡಬೇಕು. ಏಕಾಂತವನ್ನು ಸಾಧಿಸಬೇಕು. ಇದು ಸಾಧಿಸಿತೆಂದರೆ ಮನುಷ್ಯನು ಬಹುಬೇಗ ತಯಾರ ಆಗುವನು. ತೀವ್ರ ಮತ್ತು ಸ್ಥಿರ ಸಾಧನದಿಂದ ನಿಃಶಬ್ದವಾಗಿರುವ ಬ್ರಹ್ಮವನ್ನು ನೋಡಬೇಕು. ಸ್ವತಃ ಪಾವನರಾಗಬೇಕು. ಮತ್ತು ಜಗದ ಉದ್ಧಾರಮಾಡಬೇಕು. (೧೦) ಈ ಎಲ್ಲ ಉತ್ತಮ ವಿಷಯಕ ಕಾರ್ಯ ಸಾಧ್ಯ ವಾಗಬೇಕಾದರೆ ಶ್ರವಣ ಮತ್ತು ಮನನ ಇವೇ ಎರಡು ಖಾತ್ರಿ ಉಪಾಯಗಳಿರುವವು. ನಮ್ಮ ದೇಹ ಮತ್ತು ಮನಸ್ಸು ಇವು ಶ್ರವಣ ಮನನಗಳನ್ನು ಮಾಡುವದಕ್ಕೆ ಅಡ್ಡ ಬರುವವು. ನಾವೇ ನಮ್ಮ ಮನವನ್ನು ಆವರಿಸಬೇಕು. ಮತ್ತು ದೇಹದ ಅಡಚಣೆಯನ್ನೂ ಸಂಬಾಳಿಸಬೇಕು. ಮತ್ತು ಸ್ಥಿರಮನದಿಂದ ಶ್ರವಣ ಮಾಡಬೇಕು. ಶ್ರವಣ ಮಾಡಿದ್ದನ್ನು ಸಮಾಧಾನದಿಂದ ಮನನ ಮಾಡಬೇಕು. ಮತ್ತು ಪಾವನರಾಗಬೇಕು.

**ದಶಕ ಅಷ್ಟದಶ : ಸಮಾಸ ಪ್ರಥಮ : ಬಹುಜಿನಸೀ [ಬಹುದೇವಸ್ಥಾನ ನಿರೂಪಣ] [ನುಡಿ ೨೪]**

॥ಶ್ರೀರಾಮ ಸಮರ್ಥ॥ ತುಜ ನಮೂ ಗಜವದನಾ। ತುಝಾ ಮಹಿಮಾ ಕಳೇನಾ।
ವಿದ್ಯಾ ಬುದ್ಧಿ ದೇಸೀ ಜನಾ। ಲಾಹಾನ ಥೋರಾಸೀ ॥೧॥
ತುಜ ನಮೂ ಸರಸ್ವತೀ। ಚ್ಯಾರೀ ವಾಚಾ ತುಝೇನ ಸ್ಫೂರ್ತೀ।
ತುಝೇ ನಿಜರೂಪ ಜಾಣತೀ। ಐಸೆ ಥೋಡೆ ॥೨॥
ಧನ್ಯ ಧನ್ಯ ಚತುರಾನನಾ। ತಾ ಕೇಲೀ ಸೃಷ್ಟಿರಚನಾ।
ವೇದಶಾಸ್ತ್ರೇ ಭೇದ ನಾನಾ। ಪ್ರಗಟ ಕೇಲೆ ॥೩॥
ಧನ್ಯ ವಿಷ್ಣು ಪಾಳಣ ಕರಿಸೀ। ಯೇಕಾಶೇ ಸಕಳ ಜೀವಾಸೀ।
ವಾಢವಿಸೀ ವರ್ತವಿಸೀ। ಜಾಣಜಾಣೋ ॥೪॥
ಧನ್ಯ ಧನ್ಯ ಭೋಳಾಶಂಕರ। ಜಯಾಚ್ಯಾ ದೇಣ್ಯಾಸ ನಾಹೀ ಪಾರ।
ರಾಮನಾಮ ನಿರಂತರ। ಜಪತ ಆಹೇ ॥೫॥

## ದಶಕ ೧೮. ಸಮಾಸ ೧. ಬಹುಜಿನಸಿ–ಬಹು ದೇವಸ್ಥಾನ ನಿರೂಪಣ (ನುಡಿ. ೨೪)

ನಮ್ಮ ಸಂತರು ಮತ್ತು ಬಾಳಿ ಬದುಕುವ ಸಮಾಜದಕಡೆಗೆ ಒಂದು ವೇಳೆ ನೋಡಿದ್ದರೆ ಆಗ ನಮಗೆ ಕಂಡುಬರುವದೇನಂದರೆ ಜನರು ಅನೇಕ ಪ್ರಕಾರದ ದೇವರನ್ನು ಒಪ್ಪುವರು–ಆರಾಧಿಸುವರು. ಉದಾ: ಗಣಪತಿ, ಶಾರದಾ, ಬ್ರಹ್ಮ, ವಿಷ್ಣು, ಮಹೇಶ, ಇಂದ್ರ, ಯಮ, ವೆಂಕಟೇಶ, ಬನಶಂಕರಿ, ಖಂಡೇರಾಯ [ಮೈಲಾರಲಿಂಗ, ಖಂಡೋಬಾ, ಮಾಲಸಾಮಾರ್ತಾಂಡ] ತುಳಜಾಭವಾನಿ, ಕ್ಷೇತ್ರಪಾಲಕ, ಹನುಮಾನ [ಗ್ರಾಮದೇವತಾ, ಭೈರವ] ದೇವ, ದೇವಿ, ಇತ್ಯಾದಿ ಎಷ್ಟೆಂದು ಹೇಳುವದು? ಹೇಳಿದಷ್ಟೂ ಕಡಿಮೆ ಆಗುವದು. ಇದರಲ್ಲಿ ಪ್ರತಿಯೊಂದು ದೇವತೆಯ ಮಹಿಮಾ ವಿಶಿಷ್ಟವಾದದ್ದೇ ಇರುವದು. ಉದಾ: ಖಂಡೋಬಾ ದೇವರಿಗೆ ಉಳ್ಳಾಗಡ್ಡಿ ಭಜ್ಜಿ, ಮತ್ತು ರೋಟಗಾ ಅಥವಾ ರೋಟಗೆ, ರೋಡಗಾ [ಅಂದರೆ ೮ ಭಾಗ ಕಣಕಾ ೧ ಭಾಗ ಕಡಲಿಹಿಟ್ಟು ಕೂಡಿಸಿ ಇದರಲ್ಲಿ ಅಜಿವಾನ, ಜೀರಗಿ, ಇಂಗು, ಉಪ್ಪು, ತುಪ್ಪಹಾಕಿ ಮಾಡಿದ ದಪ್ಪನ್ನ [ಕೈರೊಟ್ಟಿ] ಚಪಾತಿ, ಇದನ್ನು ಕೆಂಡದ ಮೇಲೆ ಸುಟ್ಟು ಬೇಯಿಸಿ ನೈವೇದ್ಯಕ್ಕೆ ಇಡುವರು] ಇಡುವರು. ಖಂಡೋಬನಿಗೆ ಇದೇ ಅತೀ ಮಹತ್ವದ್ದು [ದೇವಿಗೂ ಸಹ ಇದು ಬೇಕಾಗುವದು] ಮಾರುತಿರಾಯನಿಗೆ ಉದ್ದಿನ ವಡೆಗಳನ್ನು ಮಾಡಿ ಇವುಗಳನ್ನು ದಾರದಲ್ಲಿ ಪೋಣಿಸಿ ಕೊರಳಿಗೆ ಹಾಕಬೇಕಬೇಕಾಗುವದು. ಪಾಂಡುರಂಗನ ಎದುರಿಗೆ ಸದೋದಿತ ಕೀರ್ತನ ಮತ್ತು ಭಜನೆ ಇರಲೇಬೇಕು. ಹೀಗೆ ಒಂದೊಂದು ರೀತಿಯಲ್ಲಿ ಸೇವೆ ಮಾಡುವದಿರುವದು. ಆದರೆ ಈ ಸರ್ವ ದೇವರ ಮೂಲವು ಒಬ್ಬ ಅಂತ ರಾತ್ಮನೇ ಇರುವನು. ಇವನ ಕರ್ತೃತ್ವ ನೋಡುವದೇ ಒಂದು ಖರೇ ಸಾರ್ಥಕ್ಯದ ಕೆಲಸವಿರುವದು. ಆದರೆ ಜನರು ಬರೋಬರ ಅವನನ್ನೇ ಮರೆಯುವರು. ಇವನು ನಮ್ಮ ಅಂತರ್ಯಾಮದಲ್ಲಿಯೋ ಇರುವದು ನಿಜವಿದ್ದರೂ ಇವನು ಕಾಣುವದಿಲ್ಲ. ವಿವೇಕದಿಂದ ಅನುಮಾನಮಾಡಿ ಆತ್ಮನ ಅನುಸಂಧಾನ ಗಟ್ಟಿಗೊಳ್ಳುವಂತಹ ಪ್ರಯತ್ನಮಾಡಬೇಕು. ಇವನ ಅನುಸಂಧಾನವು ಟಿಕಾಯಿಸಿ ಸ್ಥಿರವಾಗಿ ನಿಲ್ಲಬೇಕಾದರೆ ಪುಣ್ಯ ಬೇಕಾಗುವದು. ಅನುಸಂಧಾನದಿಂದ ಪಾಪವು ಭಸ್ಮವಾಗಿ ಹೋಗುವದು. ನಾವು ಅಂತರ್ಮುಖರಾಗದ ಹೊರತು ಅನುಸಂಧಾನವು ಸಾಧಿಸುವದಿಲ್ಲ. ಆದ್ದರಿಂದಲೇ ಅಂತರ್ನಿಷ್ಠರಾಗಿದ್ದವರು ಮಾತ್ರ ಉದ್ಧಾರವಾಗುವರು. ತೇಲುವರು, ಉಳಿದವರು ಮುಳಗುವರು.

### ದಶಕ ೧೮. ಸಮಾಸ ೧. ಬಹುಜಿನಸಿ-ಬಹುದೇವಸ್ಥಾನ ನಿರೂಪಣ (ನುಡಿ ೨೪)

ಪ್ರಾರಂಭದಲ್ಲಿ ಆ ಕಾಲದ ಜನರಲ್ಲಿ ಪ್ರಚಲಿತವಿದ್ದಂಥ ಅನೇಕ ದೇವ ದೇವತಾಗಳನ್ನು ಅಗದೀ ಸ್ವಲ್ಪ ದರಲ್ಲಿ ವರ್ಣನೆ ಮಾಡಿರುವರು: ಗಜವದನಾ, ನಾನು ನಿನಗೆ ನಮಸ್ಕರಿಸುವೆನು. ನಿನ್ನ ಮಹಿಮೆಯು ತಿಳಿಯುವದಿಲ್ಲ. ಅದು ಅಗಾಧವಿರುವದು. ಸಣ್ಣವರಿಗೂ ದೊಡ್ಡವರಿಗೂ ನೀನು ವಿದ್ಯಾ ಮತ್ತು ಬುದ್ಧಿಯನ್ನು ಕೊಡುವವ ನಾಗಿರುವೆ. (೧) ಸರಸ್ವತಿದೇವೀ ನಾನು ನಿನಗೆ ನಮಸ್ಕರಿಸುವೆನು. ನಾಲ್ಕೂ ವಾಣಿಗಳು ನಿನ್ನ ಸತ್ತಾದಿಂದಲೇ ಸ್ಫುರಿ ಸುವವು ನಿನ್ನ ನಿಜವಾದ ಸ್ವರೂಪವನ್ನು ತಿಳಿದವರು ಈ ಜಗತ್ತಿನಲ್ಲಿ ಬಹಳ ಕಡಿಮೆ ಇರುವರು. (೨) ಬ್ರಹ್ಮದೇವಾ ನೀನು ಧನ್ಯನಿರುವೆ. ನೀನೇ ಈ ಸೃಷ್ಟಿಯನ್ನು ರಚಿಸಿದವನು. ವೇದಶಾಸ್ತ್ರ, ಮತ್ತು ಇತರ ಅನೇಕ ಭೇದದ ಪ್ರಕಾರ ಮತ್ತು ರಹಸ್ಯ ವಿಷಯಗಳನ್ನು ಪ್ರಕಟಪಡಿಸಿರುವಿ. (೩) ವಿಷ್ಣುದೇವಾ ನೀನು ಧನ್ಯನಿರುವೆ. ನೀನು ಎಲ್ಲ ಜೀವ, ಪ್ರಾಣಿಗಳ ಪಾಲಕನಿರುವಿ, ನಿನ್ನ ಒಂದು ಅಂಶದಿಂದ ಸರ್ವ ಜೀವಗಳಿಗೆ ಅವುಗಳ ಅಂತರಂಗದ ಪ್ರಕಾರ ಅವನ್ನು ಬೆಳೆಸುವಿ. ಮತ್ತು ಅರಿವುಕೊಟ್ಟು ತಿಳುವಳಿಕೆಯಿಂದ ಕೆಲಸಕ್ಕೆ ಹಚ್ಚುರುವಿ. ಸಂರಕ್ಷಕನೇ ನಿನಗೆ ನಮಸ್ಕಾರವು. (೪) ಭೋಳಾ ಶಂಕರನೇ ನಿನಗೆ ನಮಸ್ಕಾರವು. ನೀನು ಧನ್ಯ ಧನ್ಯನು. ಭಕ್ತರಿಗೆ ವರ ಕೊಡುವಲ್ಲಿ ನಿನಗೆ ಆಳತೆಯೆಂಬುದೇ ಇಲ್ಲ. ನೀನು ಸದಾ ರಾಮ ನಾಮವನ್ನು ಜಪಿಸುವವನಾಗಿರುವಿ, ನಿನಗೆ ನಮಸ್ಕಾರವು. (೫)

ಧನ್ಯ ಧನ್ಯ ಇಂದ್ರದೇವ । ಸಕಳ ದೇವಾಚಾ ಹಿ ದೇವ ।
ಇಂದ್ರಲೋಕೀಚೇ ವೈಭವ । ಕಾಯೆ ಮ್ಹಣೌನಿ ಸಾಂಗಾವೇ ॥೬॥

ಧನ್ಯ ಧನ್ಯ ಯೆಮಧರ್ಮ । ಸಕಳ ಜಾಣತೀ ಧರ್ಮಾಧರ್ಮ ।
ಪ್ರಾಣೀಮಾತ್ರಾಚೇ ಮರ್ಮ । ಠಾಈ ಪಾಡಿತೀ ॥೭॥

ವೆಂಕಟೇಸೀ ಮಹಿಮಾ ಕಿತೀ । ಭಲೇ ಉಭ್ಯಾ ಅನ್ನಖಾತೀ ।
ವಡೇ ಧಿರಡೀ ಸ್ವಾದ ಘೇತಿ । ಆತಳಸ ಆಪಾಲಾಚಾ ॥೮॥

ಧನ್ಯ ತೂ ಮ್ಹೊ ಬನಶಂಕರೀ । ಉದಂಡ ಶಾಖಾ ಚಿಯಾ ಹಾರೀ ।
ವಿವರ ವಿವರೋ ಭೋಜನಕರೀ । ಐಸಾ ಕೈಚಾ ॥೯॥

ಧನ್ಯ ಭೀಮ ಗೋಲಾಂಗುಳಾ । ಕೋರಮಡ್ಯಾಚ್ಯಾ ಉದಂಡ ಮಾಳಾ ।
ದಹಿ ವಡೆ ಖಾತಾ ಸಕಳಾ । ಸಮಾಧಾನ ಹೋಯೆ ॥೧೦॥

ಧನ್ಯ ತೂ ಗಾ ಖಂಡೇರಾಯಾ । ಭಂಡಾರೇ ಹೋಯೆ ಪಿವಳೀ ಕಾಯಾ ।
ಕಾಂದೇಭರೀತ ರೋಟಗೆ ಖಾಯಾ। ಸಿದ್ಧ ಹೋತೀ ॥೧೧॥

ಧನ್ಯ ತುಳಜಾಭೋವಾನಿ । ಭಕ್ತಾ ಪ್ರಸನ್ನ ಹೋತೆ ಜನೀ ।
ಗುಣ ವೈಭವಾಸ ಗುಣೀ । ಐಸಾ ಕೈಚಾ ॥೧೨॥

ಧನ್ಯ ಧನ್ಯ ಪಾಂಡುರಂಗ । ಅಖಂಡ ಕಥೇಚಾ ಹೋತೋ ಧಿಂಗ ।
ತಾನ ಮಾನೇ ರಾಗರಂಗ । ನಾನಾ ಪ್ರಕಾರೀ ॥೧೩॥

ಧನ್ಯ ತೂ ಗಾ ಕ್ಷತ್ರಪಾಳಾ । ಉದಂಡ ಜನಾ ಲಾವಿಲಾ ಚಾಳಾ ।
ಭಾವೇ ಭಕ್ತಿ ಕರಿತಾ ಫಳಾ । ವೇಳ ನಾಹೀ ॥೧೪॥

ರಾಮಕೃಷ್ಣಾದಿಕ ಅವತಾರ । ತ್ಯಾಚಾ ಮಹಿಮಾ ಅಪಾರ ।
ಉಪಾಸನೇಸ ಬಹುತ ನರ । ತತ್ಪರ ಜಾಲೇ ॥೧೫॥

ಇಂದ್ರದೇವಾ ನೀನು ಧನ್ಯನು. ಎಲ್ಲ ದೇವತೆಗಳಿಗೆ ದೇವನಾಗಿರುವಿ. ಇಂದ್ರಲೋಕದ ಸ್ವರ್ಗಲೋಕದ ಒಡೆಯನೇ, ನಿನ್ನ ವರ್ಣನೆಯನ್ನು ಮಾಡಲಿಕ್ಕೆ ಅಸಾಧ್ಯವು. ಮತ್ತು ಕಠಿಣವು. (೬) ಯಮಧರ್ಮ, ಯಮರಾಜಾ [ಕಾಲ, ಕೃತಾಂತ, ವೈವಸ್ವತನೇ] ನೀನು ಧನ್ಯನು. ಎಲ್ಲರಿಗೂ ಧರ್ಮಾಧರ್ಮದ ಜ್ಞಾನ ಮಾಡಿಕೊಡುವೆ. ಜೀವವು ಧರ್ಮ ಪಾಲಿಸಿದ್ದೆಷ್ಟು ಮತ್ತು ಅಧರ್ಮದಿಂದ ನಡೆದದ್ದೆಷ್ಟು ಇದರ ಸರಿಯಾದ ಲೆಕ್ಕ ಇಡುವವನಾಗಿರುವಿ. (೭) [ಆಂಧ್ರ ಪ್ರದೇಶದಲ್ಲಿರುವ] ವೆಂಕಟೇಶನ ಮಹಿಮೆ ಅಪಾರವಿರುವದು. ಇವನಿರುವ ಸ್ಥಳಕ್ಕೆ ವೆಂಕಟಾಚಲ ಶೇಷಾಚಲ, ತಿರುಪತಿ ಅನ್ನುವರು. ಇಲ್ಲಿ ಉತ್ತಮ ಜನರೂ ಸಹ ಎದ್ದು ನಿಂತುಕೊಂಡೇ ಅನ್ನವನ್ನು ತಿನ್ನುವರು. [ಇದಕ್ಕೆ ದೋಷವಿಲ್ಲ]. ವಡಿ, ಗಾರಿಗೆ, ದೋಸೆ ಮೊದಲಾದ ಖಮಂಗ ಮತ್ತು ಸ್ವಾದಿಷ್ಟ ಪದಾರ್ಥಗಳನ್ನು ಸ್ವೀಕರಿಸಿ ರುಚಿ ನೋಡುವರು. (೮) ಹೇ, ಬನಶಂಕರಿ ದೇವಿಯೇ ನೀನು ಧನ್ಯಳು. ನಿನ್ನ ನೈವೇದ್ಯಕ್ಕೆ ಬಹಳಷ್ಟು ಪಲ್ಯಗಳು ಬೇಕಾಗುವವು. [ಬನಶಂಕರಿಗೆ ಶಾಕಾಂಭರೀ ಎಂದು ಅನ್ನುವರು. ಇವಳ ಮುಖ್ಯ ಸ್ಥಾನವು ಕರ್ನಾಟಕದಲ್ಲಿಯ ವಿಜಾಪೂರ ಜಿಲ್ಹೆಯ ಬಾದಾಮಿಯಲ್ಲಿ ಇರುವದು. ಇವಳ ನೈವೇದ್ಯಕ್ಕೆ ಒಂದುನೂರಾ ಎಂಟು ಪಲ್ಯಗಳು ಬೇಕು. ಅಲ್ಲ [ಖಾರಗೆಣಸು] ಅರವತ್ತು, ನೆಲ್ಲಿ ನಾಲ್ವತ್ತು, ಉಳಿದಪಲ್ಲೆಗಳು ಎಂಟು, ಅಂತೂ ೧೦೮ ಪಲ್ಯಗಳು ನೈವೇದ್ಯಕ್ಕೆ ಬೇಕಾಗುವವು.] ಇವುಗಳಲ್ಲಿಯ ಪ್ರತಿಯೊಂದು ಪಲ್ಯಯ ರುಚಿ ನೋಡಿ ಸ್ವಾದಪಡೆಯುವ ಭಕ್ತರು ಭೆಟ್ಟಿಯಾಗುವದು ಕಠಿಣವಿರುವದು. (೯) ವಾನರ ರೂಪದ ಬಲಭೀಮ-ಹನುಮಾನನು ಧನ್ಯನು. ಉದ್ದಿನಒಡೆಗಳನ್ನು ಕರಿದು ಅದರ ಮಾಲೆಮಾಡಿ ಆ ಮಾಲೆಯನ್ನು ಇವನಿಗೆ ಹಾಕುವರು. ನಿನ್ನ ನೈವೇದ್ಯದ ಮೊಸರುವಡೆ ತಿಂದರೆ ಎಲ್ಲರಿಗೂ ಸಮಾಧಾನವಾಗುವದು. [೧೦] ಖಂಡೋಬನೇ ನೀನು ಧನ್ಯನು. ನಿನ್ನ ದರ್ಶನಕ್ಕೆ ಬಂದವರ ಅಂಗಾಂಗವೆಲ್ಲ ಭಂಡಾರದಿಂದ ಅಂದರೆ ಅರಿಷಿಣ ಚೂರ್ಣದಿಂದ ಹಳದಿ ಆಗಿ ಬಿಡುವದು. ಆ ಮೇಲೆ ಉಳ್ಳಾಗಡ್ಡಿಯ [ಈರುಳ್ಳಿಯ] ಭಜ್ಜಿ ಮತ್ತು ರೋಡಗಾ ಪ್ರಸಾರವೆಂದು ತಿನ್ನಲು ಎಲ್ಲರೂ ಆತುರರಾಗಿರುವರು. ಏಳಕೋಟಿಗೋ ಎಂಬ ಭಕ್ತರ ಉದ್ಘೋಷವು ಆವೇಶದಿಂದ ಉಚ್ಚರಿಸಲ್ಪಡುವದು. ಮಲ್ಹಾರಿ, ಮ್ಹಾಲಸಾಕಾಂತ ಇತ್ಯಾದಿ ಹೆಸರುಗಳಿಂದ ನೀನು ಪ್ರಸಿದ್ಧನು. ಮಹಾರಾಷ್ಟ್ರದಲ್ಲಿಮತ್ತುಕರ್ನಾಟಕದಲ್ಲಿ ಇವನ ಉತ್ಸವ ಭರದಿಂದ ನಡೆಯುವದು. ಇವನ ಅನೇಕ ಪ್ರಸಿದ್ಧ ಸ್ಥಳಗಳು ಜೆಜುರಿ, ನಳದುರ್ಗ, ಪಾಲಿ, [ಪೆಂಬರ] ಕರ್ನಾಟಕದಲ್ಲಿ ಮಂಗಸೂಳಿ, ಮೈಲಾರ ಗುಡ್ಡ, ಮಣ್ಣಮೈಲಾರ ಮಧ್ಯಭಾರತದ ಸಾಗರಜಿಲ್ಹಾದ ಬಡಿದೇವರೀ ಇತ್ಯಾದಿ ಪ್ರಸಿದ್ಧವಿರುವವು. (೧೧) ತುಳಜಾ ಭವಾನೀ ನೀನು ಧನ್ಯಳು ! ಲೋಕದ ಜನರಲ್ಲಿ ಯಾರು ನಿನ್ನ ಭಕ್ತರಿರುವರೋ ಅವರ ಮೇಲೆ ನೀನು ಪ್ರಸನ್ನಳಾಗುವಿ. ನಿನ್ನ ಮಹಿಮಾ ಗುಣಗಳು ಅಪಾರವಿರುವವು. ನಿನ್ನ ಮಹಿಮೆಯ ಕಲ್ಪನೆಯನ್ನು ಮಾಡಲಿಕ್ಕೆ ಯಾರಿಗೂ ಸಾಧ್ಯವಿಲ್ಲ. ಮಹಾತಾಯಿ ನಿನಗೆ ನಮಸ್ಕಾರ [ಮಹಾರಾಷ್ಟ್ರದಲ್ಲಿ ಇವಳ ಮುಖ್ಯ ಸ್ಥಾನವಿರುವದು.] (೧೨) ಪಾಂಡುರಂಗ ವಿಠ್ಠಲ ನೀನು ಧನ್ಯನು. ನಿನ್ನ ಮುಂದೆ ಕಥಾ ಕೀರ್ತನ ಭಜನೆ ಸದಾ ಕಾಲವೂ ನಡೆಯುವದು. ಅನೇಕ ಪ್ರಕಾರದ ಅಭಂಗಾದಿಗಳು, ಹಾಡುಗಳು, ಭಜನೆಯ ರಾಗು ರಂಗು ಒಳ್ಳೆಯ ಹುರುಪಿನಿಂದ ನಡೆಯುವವು. [ಪಂಢರಪುರವು ಇವನ ಮುಖ್ಯ ಕ್ಷೇತ್ರವು] (೧೩) ಕ್ಷೇತ್ರಪಾಲ [ಕಾಶೀ ಕ್ಷೇತ್ರಪಾಲಕ] ನಾದ ಬಹಿರೋಬ [ಅಂದರೆ ಶಂಕರನ ಅವತಾರ] ಅಥವಾ ಭೈರವ ದೇವನೆ ನೀನು ಧನ್ಯನು. ಅನೇಕ ಜನರಿಗೆ ನೀನು ನಿನ್ನ ಪ್ರೇಮದ ರುಚಿಯನ್ನು ತೋರಿಸಿರುವೆ. ಅಥವಾ ಹಚ್ಚಿರುವೆ. ಮನಸಾ ನಿನ್ನ ಭಕ್ತಿಮಾಡಿದರೆ ಫಲ ಸಿಗಲಾ ತಡವಾಗುವದಿಲ್ಲ. ಅಷ್ಟೊಂದು ದಯಾಳುವು ನೀನು. ಗ್ರಾಮ ದೇವತಾ ಆಗಿರುವ ನಿನಗೆ ನಮಸ್ಕಾರವು. (೧೪) ರಾಮ, ಕೃಷ್ಣ, ಇತ್ಯಾದಿ ಅವತಾರಗಳಿರುವವು. ಈ ಅವತಾರಿಕರ ಮಹಿಮೆಯೂ ಅಪಾರವಿರುವದು. ಬಹಳಷ್ಟು ಜನರು ಇವರ ಉಪಾಸನೆಯನ್ನು ಮಾಡುವರು. [೧೫]

ಸಕಳ ದೇವಾಚೇ ಮೂಳ । ತೋ ಹಾ ಅಂತರಾತ್ಮಾ ಚಿ ಕೇವಳ ।
ಭೂಮಂಡಳೀ ಭೋಗ ಸಕಳ । ತ್ಯಾಸೀ ಚ ಘಡೆ ॥೧೬॥

ನಾನಾ ದೇವ ಹೋಊನ ಬೈಸಲಾ । ನಾನಾ ಶಕ್ತಿರೂಪೇ ಜಾಲಾ ।
ಭೋಕ್ತಾ ಸಕಳ ವೈಭವಾಲಾ । ತೋ ಚಿ ಯೇಕ ॥೧೭॥

ಯಾಚಾ ಪಾಹಾವಾ ವಿಚಾರ । ಉದಂಡ ಲಾಂಬಲಾ ಜೋಜಾರ ।
ಹೋತೀ ಜಾತೀ ದೇವನರ । ಕಿತೀ ಮ್ಹಣೋನಿ ॥೧೮॥

ಕೀರ್ತಿ ಆಣಿ ಅಪಕೀರ್ತಿ । ಉದಂಡ ನಿಂದಾ ಉದಂಡ ಸ್ತುತೀ ।
ಸರ್ವತ್ರಾಂಚೀ ಭೋಗಪ್ರಾಪ್ತೀ। ಅಂತರಾತ್ಮ್ಯಾಸೀ ಚ ಘಡೇ ॥೧೯॥

ಕೋಣ ದೇಹೀ ಕಾಯೇಕರಿತೋ । ಕೋಣ ದೇಹೀ ಕಾಯೇಭೋಗಿತೋ ।
ಭೋಗೀ ತ್ಯಾಗೀ ವೀತರಾಗೀ ತೋ । ಯೇಕ ಚಿ ಆತ್ಮಾ ॥೨೦॥

ಪ್ರಾಣೀ ಸಾಭಿಮಾನೇ ಭುಲಲೆ । ದೇಹ್ಯಾಕಡೆ ಪಾಹಾತ ಗೇಲೆ ।
ಮುಖ್ಯ ಅಂತರಾತ್ಮ್ಯಾಸ ಚುಕಲೇ । ಅಂತರೀ ಅಸೋನೀ ॥೨೧॥

ಆರೆ ಯಾ ಆತ್ಮಯಾಚೀ ಚಳವಳ ಪಾಹೇ । ಐಸಾ ಭೂಮಂಡಳೀ ಕೋಣ ಆಹೇ।
ಅಗಾಧ ಪುಣ್ಯೇ ಅನುಸಂಧಾನ ರಾಹೇ । ಕಾಂಹೀಯೇಕ ॥೨೨॥

ತ್ಯಾ ಅನುಸಂಧಾನಾಸರಿಸೇ । ಜಳೋನೀ ಜಾಈಜೇ ಕಿಲ್ಮಿಷೇ ।
ಅಂತರನಿಷ್ಠ ಜ್ಞಾನೀ ಐಸೇ । ವಿವರೋನ ಪಾಹಾತೀ ॥೨೩॥

ಅಂತರನಿಷ್ಠ ಕಿತುಕೆ ತರಲೇ । ಅಂತರಭ್ರಷ್ಟ ಕಿತುಕೆ ಬುಡಾಲೇ ।
ಬಾಹ್ಯಾತ್ಕಾರೇಭರಂಗಳಲೇ । ಲೋಕಾಚಾರೇ ॥೨೪॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ಬಹುದೇವಸ್ಥಾನ ನಿರೂಪಣ' ನಾಮ ಸಮಾಸ ಪ್ರಥಮ ॥

ಈ ಪ್ರಕಾರ ಆಕಾಲದಲ್ಲಿ ಲೋಕಪ್ರಿಯ ಇರುವಂಥ ದೇವ ದೇವತೆಗಳ ಉಲ್ಲೇಖಮಾಡಿ ಶ್ರೀ ಸಮರ್ಥರು ಪ್ರತಿಯೊಂದು ದೇವರ ವೈಶಿಷ್ಟ್ಯವನ್ನು ಹೇಳಿದ್ದಾರೆ ಆದರೆ ನಿಜವಾದ ದೇವರು ಬೇರೆಯೇ ಇರುವನು. ಅನ್ನುವದನ್ನು ಈಗ ಸ್ಪಷ್ಟಮಾಡುವರು. ಶುದ್ಧ ಅರಿವಿನ ರೂಪ ಅಂತರಾತ್ಮನೇ ನಿಜವಾದ ದೇವನಾಗಿರುವನು. ಅಂತರ್ನಿಷ್ಠರಾಗಿ ಇವನ ಅನುಸಂಧಾನವಿಡಬೇಕು. ಹೊರಗಿನ ದೇವರ ಪೂಜೆ ಅದ್ಭುತವಾಗಿ ಬಹಳಷ್ಟು ಮಾಡಿ ಮೂಲ ಮುಖ್ಯ ಅಂತರಾತ್ಮನ ಪೂಜೆಯನ್ನೇ ಮರೆತರೆ ಅಥವಾ ತಪ್ಪಿದರೆ ಮನುಷ್ಯ ಪೂರ್ಣ ತಪ್ಪಿದನೆಂದೇ ತಿಳಿಯಬೇಕು: ಎಲ್ಲ ದೇವ ದೇವತೆಗಳಿಗೆ ಮೂಲ ಯಾರು ಎಂದರೆ, ಅಂತರಾತ್ಮನೇ ಇರುವನು. ಈ ಜಗತ್ತಿನಲ್ಲಿಯ ಎಲ್ಲ ಭೋಗಗಳೂ ಕೊನೆಗೆ [ಅಖೈರದಲ್ಲಿ] ಅಂತರಾತ್ಮನಿಗೇ ಮುಟ್ಟುವವು. (೧೬) ಅಂತರಾತ್ಮಾ ಅನೇಕ ದೇವರ ರೂಪದಿಂದ ಮತ್ತು ಶಕ್ತಿಯ ರೂಪದಿಂದ ವ್ಯಕ್ತನಾಗುವನು. ಸರ್ವಪ್ರಕಾರದ ವೈಭವ ಭೋಗಗಳನ್ನು ಭೋಗಿಸುವವನು. ಇವನೊಬ್ಬನೇ ಇರುವನು. (೧೭) ಈ ವಿಚಾರಗಳನ್ನೆಲ್ಲ ಚನ್ನಾಗಿ ವಿವರಿಸಿ ನೋಡಿ ತಿಳಿಯಬೇಕು. ದೇವರ [ಆತ್ಮನ] ವರ್ಣನೆ ಮಾಡುವದೆಂದರೆ ಅದು ಬಹಳ ವಿಸ್ತಾರದ ಕೆಲಸವಿರುವದು. ದೇವರು ಮತ್ತು ಮನುಷ್ಯರು ಎಷ್ಟಿರುವರೆಂಬುದು ಮತ್ತು ಆಗಿ ಹೋದವರೆಷ್ಟು ಎಂಬುದರ ಲೆಕ್ಕಮಾಡಲಿಕ್ಕೆ ಶಕ್ಯವಿಲ್ಲ. (೧೮) ಜಗತ್ತಿನಲ್ಲಿ ಆಗುವ ಕೀರ್ತಿ ಮತ್ತು ಅಪಕೀರ್ತಿ, ಅತಿನಿಂದೆ ಮತ್ತು ಅತಿ ಸ್ತುತಿ ಈ ಎಲ್ಲವುಗಳನ್ನು ಕೊನೆಗೆ ಅಂತರಾತ್ಮನೇ ಭೋಗಿಸುವನು. [ಭೋಗಿಸಬೇಕಾಗುವದು] (೧೯) ಕೆಲವು ದೇಹಗಳಲ್ಲಿ ಇವನು ಕಾರ್ಯಮಾಡುವನು: ಕೆಲವು ದೇಹಗಳಲ್ಲಿ ಭೋಗ ಭೋಗಿಸುವನು. ಭೋಗವೇ ಇರಲಿ, ಅಥವಾ ತ್ಯಾಗವೇ ಇರಲಿ, ಅಥವಾ ವೈರಾಗ್ಯವೇ ಇರಲಿ, ಎಲ್ಲದರ ಅನುಭವವನ್ನು ಪಡೆಯುವವನು ಈ ಅಂತರಾತ್ಮನೊಬ್ಬನೇ ಇರುವನು. [೨೦] ಮನುಷ್ಯರು ದೇಹಾಭಿಮಾನದಿಂದ ಭ್ರಮೆಗೊಳಗಾಗುವರು. [ಮೋಹವಶರಾಗುವರು] ಮತ್ತು ಕೇವಲ ದೇಹದ ಕಡೆಗೆ ಅಷ್ಟೇ ನೋಡುವರು. ದೇಹವೇ ಖರೇ ಎಂದು ಅನ್ನುವರು. ಇದರಿಂದ ಅಂತರಾತ್ಮನು ದೇಹದಲ್ಲಿ ವಾಸವಾಗಿದ್ದರೂ ಸಹಿತ ಇವನನ್ನು ಮರೆಯುವವರಿಗೆ ಇವನ ಸಾನ್ನಿಧ್ಯ ತಪ್ಪುತ್ತದೆ. (೨೧) ನಿಜವೇನಂದರೆ ಈ ಅಂತರಾತ್ಮನ ಕರ್ತೃತನವನ್ನು ತಿಳಿಯುವಂಥವರು. ಮತ್ತು ತಿಳಿದವರು ಬಹಳ ಕ್ವಚಿತ್ತಾಗಿ ಕಂಡುಬರುವರು. ಬಹಳ ಪುಣ್ಯದ ರಾಶಿ ಇದ್ದರೇನೇ ಅವನ ಅನುಸಂಧಾನವನ್ನು ಹೋದಲು ಮತ್ತು ಅದನ್ನು ಕಾಯ್ದುಕೊಂಡು ಹೋಗಲು ಬರುವದು. (೨೨) ಇವನ ಅನುಸಂಧಾನ ಹತ್ತಿದ ಕೂಡಲೇ ಪಾಪ ಸುಟ್ಟುಹೋಗುವದು. ಯಾರು ಅಂತರ್ನಿಷ್ಠ ಮತ್ತು ಜ್ಞಾನಿ ಇರುವರೋ ಅವರು ಮಾತ್ರ ಇದನ್ನೆಲ್ಲ ಚನ್ನಾಗಿ ತಿಳಿಯುವರು, ತಿಳಿದಿರುತ್ತಾರೆ. (೨೩) ಯಾರು ಅಂತರ್ನಿಷ್ಠರಿರುವರೋ ಅವರಷ್ಟೇ ಮಾತ್ರ ಉದ್ಧಾರರಾಗುವರು. ಸಂಸಾರ ಬಂಧನದಿಂದ ಪಾರಾಗಿ ಹೋಗುವರು. ಯಾರು ಅಂತರ್ ಭ್ರಷ್ಟರಿರುವರೋ ಅವರೆಲ್ಲರೂ ಮುಳುಗಿ ಹೋಗುತ್ತಾರೆ. ವ್ಯರ್ಥರಾಗಿ ಹೋಗುತ್ತಾರೆ. ಆದ್ದರಿಂದ ಇಂಥವರು ಬಹಿರ್ಮುಖ ಲೋಕಾಚಾರದ ನಾದಿಗೆ ಹತ್ತಿ ಅಡ್ಡದಾರಿ ಬೀಳುವರು. ಮನಬಂದಂತೆ ವರ್ತಿಸುವರು. ಇವರು ನಿಂದನೀಯರೇ ಸರಿ. [೨೪]

ಶ್ರೀ ದಾಸಬೋಧದ ಹದಿನೆಂಟನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ಬಹುದೇವಸ್ಥಾನ ನಿರೂಪಣ"ವೆಂಬ ಹೆಸರಿನ ಒಂದನೆಯ ಸಮಾಸವು ಮುಗಿದುದು.

● ●

### ದಶಕ ಅಷ್ಟದಶ : ಸಮಾಸ ದ್ವಿತೀಯ : ಸರ್ವಜ್ಞ ಸಂಗ ನಿರೂಪಣ [ನುಡಿ ೩೦]

॥ಶ್ರೀರಾಮ ಸಮರ್ಥ॥ ನೇಣಪಣೇ ಜಾಲೇ ತೇ ಜಾಲೇ।
ಜಾಲೇ ತೇ ಹೋಊನ ಗೇಲೇ।
ಜಾಣತೆಪಣೇ ವರ್ತಲೇ। ಪಾಹಿಜೇ ನೇಮಸ್ತ ॥೧

ಜಾಣತ್ಯಾಚೀ ಸಂಗತೀ ಧರಾವೀ। ಜಾಣತ್ಯಾಚೀ ಸೇವಾ ಕರಾವೀ।
ಜಾಣತ್ಯಾಚೀ ಸದ್ಬುದ್ಧಿ ಘ್ಯಾವೀ। ಹಳುಹಳು ॥೨॥

ಜಾಣತ್ಯಾಪಾಸೀ ಲೇಹೋ ಸಿಕಾವೇ। ಜಾಣತ್ಯಾಪಾಸೀ ವಾಚೂ ಸಿಕಾವೇ।
ಜಾಣತ್ಯಾಪಾಸೀ ಪುಸಾವೇ। ಸಕಳ ಕಾಹೀ ॥೩॥

ಜಾಣತ್ಯಾಸ ಕರಾವಾ ಉಪಕಾರ। ಜಾಣತ್ಯಾಸ ಝಿಜವಾವೇ ಶರೀರ।
ಜಾಣತ್ಯಾಚಾ ಪಾಹಾವಾ ವಿಚಾರ। ಕೈಸಾ ಆಹೇ ॥೪॥

ಜಾಣತ್ಯಾಚೇ ಸಂಗತೀನೇ ಭಜಾವೇ। ಜಾಣತ್ಯಾಚೇ ಸಂಗತೀನೇ ಝಿಜಾವೇ।
ಜಾಣತ್ಯಾಚೇ ಸಂಗತೀನೇ ರಿಝಾವೇ। ವಿವರ ವಿವರೋ ॥೫॥

ಜಾಣತ್ಯಾ ಪಾಸೀ ಗಾವೇ ಗಾಣೇ। ಜಾಣತ್ಯಾ ಪಾಸೀ ವಾಜವಣೇ।
ನಾನಾ ಆಳಾಪ ಸಿಕಣೇ। ಜಾಣತ್ಯಾ ಪಾಸೀ ॥೬॥

## ದಶಕ ೧೮. ಸಮಾಸ ೨. ಸರ್ವಜ್ಞ ಸಂಗ ನಿರೂಪಣ (ನುಡಿ ೩೦)

ಅಂತರಾತ್ಮಾ ಇವನೇ ಜಗದೀಶ್ವರನಾಗಿರುವನು. ಇವನೇ ಈ ವಿಶ್ವವನ್ನೆಲ್ಲ ನಿರ್ಮಾಣಮಾಡಿದನು. ಇವನು ನಮ್ಮ ಈ ಸಾದಾ ಕಣ್ಣಿಗೆ ಕಾಣುವದಿಲ್ಲವೆಂಬ ಮಾತು ನಿಜವೇ ಇರುವದು. ಆದರೆ ನಮ್ಮ ವಿವೇಕ ಶಕ್ತಿಯಿಂದ ಇವನ [ಅಂತರಾತ್ಮನ] ಬಗ್ಗೆ ಸರಿಯಾದ ಕಲ್ಪನೆಯನ್ನು ಮಾಡಿಕೊಂಡು ನಂತರ ಇವನ ಅಖಂಡ ಧ್ಯಾನ ಹಚ್ಚುವ [ಮಾಡುವ] ಅಭ್ಯಾಸ ಮಾಡಬೇಕು. ಯಾರಿಗೆ ಇವನ ಅಖಂಡ ಧ್ಯಾನ ಹತ್ತುವದೋ ಅವರಿಗೆ ಇವನು ಕೃಪಾಳುತನದಿಂದ ನಿಮ್ಮ ಊಟ, ನೀರು, ಉಪಚಾರ, ಇತ್ಯಾದಿ ನಡೆಸುವನು [ಕಾಪಾಡುವನು]. ಈ ಪ್ರಕಾರದಿಂದ ಉಪಾಸನಾ ಮಾಡುತ್ತಾ, ಮಾಡುತ್ತಾ ಕೊನೆಗೆ ದೇವ ಮತ್ತು ಭಕ್ತರ ಅಖಂಡ ಭೆಟ್ಟಿಯಾಗುವದು. ಮತ್ತು ದ್ವೈತವು ನಾಶವಾಗಿ ಹೋಗುವದು. ಆದರೆ ಈ ಎಲ್ಲ ವಿಷಯವನ್ನು ತಿಳಿದವ[ಅರಿವುಳ್ಳವ] ಅಥವಾ ಸಂತ ಶರಣರ ಹತ್ತಿರ ಕಲಿಯಬೇಕು. ಅಂತರಾತ್ಮಾ ನಿಜವಾದ ಅರಿವುಳ್ಳವನಿರುವದರಿಂದ ಇವನನ್ನು ತಿಳಿದವನು. ಅಥವಾ ತಿಳಿಯುವವನೇ ಖರೇ ತಿಳಿವವ ಅಥವಾ ಜ್ಞಾನಿಯಾಗಿ ಬಿಡುವನು. ಆತ್ಮಾ ಇದು ಜ್ಞಾನಸ್ವರೂಪವಿರುವದು ಆದ್ದರಿಂದ ಆತ್ಮಜ್ಞಾನಿ ಪುರುಷನು ಸ್ವತಃ ಜ್ಞಾನಮಯನಾಗಿರುವನು. ಇಂಥ ಆತ್ಮಜ್ಞಾನಿಯ ಸಹವಾಸದಲ್ಲಿರಬೇಕು. ಮತ್ತು ಜೀವನದ ಸರ್ವ ಅಂಗಗಳನ್ನೆಲ್ಲ ಇವನಿಂದ ಪೂರ್ಣ ತಿಳಿದುಕೊಳ್ಳಬೇಕು. ಕಲಿತು ಅರಿಯಬೇಕು. ಭಗವಂತನ ಗುಣವನ್ನು ಅಖಂಡವಾಗಿ ಸ್ತುತಿಸಲು ಕಲಿಯಬೇಕು. ಭಗವಂತನ ಬಗ್ಗೆ ಅಖಂಡವಾಗಿ ಸಂಭಾಷಣೆ ಮಾಡಬೇಕು. ಅಂದರೆ ಇದರಿಂದ ಅತಿಶಯ ಆನಂದ ಸಮಾಧಾನ ಪ್ರಾಪ್ತವಾಗುವದು. ಇದೇ ಸತ್ ಸಂಗತಿಯಾಗಿರುವದು.

## ದಶಕ ೧೮. ಸಮಾಸ ೨. ಸರ್ವಜ್ಞ ಸಂಗ ನಿರೂಪಣ (ನುಡಿ ೩೦)

ಯಾರು ಆತ್ಮಜ್ಞಾನಿ ಇರುವರೋ ಯಾರು ತಿಳಿದವರಿರುವರೋ ಅವರ ಕಡೆಯಿಂದ ಏನೇನು ಕಲಿತುಕೊಳ್ಳಬೇಕು. ಇದರ ಬಗ್ಗೆ ಸವಿಸ್ತಾರವಾಗಿ ಹೇಳುತ್ತಾರೆ: ನಾವು ಅಜ್ಞಾನಿಗಳಿದ್ದದ್ದರಿಂದ ತಿಳವಳಿಕೆ ಇಲ್ಲದ ಬುದ್ಧಿಗೇಡಿಗಳಾಗಿ ಇಲ್ಲಿಯವರೆಗೆ ಏನೆಲ್ಲವೂ ನಮ್ಮಿಂದ ಆಗಹತ್ತಿರುವವೋ ಮತ್ತು ಆಗಿ ಹೋಗಿರುವವೋ ಅವುಗಳನ್ನು ಹಿಂದೆ ಸರಿಸಿ ಇನ್ನು ಮುಂದೆ ತಿಳುವಳಿಕೆಯಿಂದ ಬುದ್ಧಿವಂತರಾಗಿ ಚನ್ನಾಗಿ ಮತ್ತು ವ್ಯವಸ್ಥಿತವಾಗಿ ನಡೆಯುವವರಾಗಬೇಕು. [೧] ಮೊದಲಿಗೆ ತಿಳಿದವರು ಅಂದರೆ ಸಂಭಾವಿತರಿದ್ದು ಜ್ಞಾನವಿದ್ದವರು, ಇಂಥವರ ಸಂಗತಿಯನ್ನು ಹಿಡಿಯಬೇಕು. ಅವರ ಸೇವೆಯನ್ನು ಮಾಡಬೇಕು. ಅವರ ಸದ್ಬುದ್ಧಿಯನ್ನು ನೀವು ಸಾವಕಾಶವಾಗಿ ಸ್ವಲ್ಪ ಸ್ವಲ್ಪ ನಿಮ್ಮದನ್ನಾಗಿ ಮಾಡಿಕೊಳ್ಳಬೇಕು. [ನೀವೂ ಅದರಂತೆ ಆಗಬೇಕು]. ಸೂಕ್ಷ್ಮ ಜ್ಞಾನ ದೃಷ್ಟಿಯಿಂದ ಅಂತರಾತ್ಮನನ್ನು ನೋಡುವ ಆ ಬುದ್ಧಿಯ ಸ್ಥಿತಿಗೆ ಸದ್ಬುದ್ಧಿ ಎಂದು ಅನ್ನುವರು. (೨) ತಿಳಿದವರ–ಪಂಡಿತರ ಹತ್ತಿರ ಬರೆಯಲು ಓದಲು ಕಲಿಯಬೇಕು. ಏನೆಲ್ಲವನ್ನು [ಶಂಕಾದಿಗಳನ್ನು] ಅವರಲ್ಲಿ ಕೇಳಿ ಸಂಪೂರ್ಣ ವಿವರ ತಿಳಿದು ಶಂಕಾ ಪರಿಹರಿಸಿಕೊಳ್ಳಬೇಕು.–[೩] ತಿಳಿದವರಿಗೆ, ಸಜ್ಜನರಿಗೆ ಶಕ್ಯವಿದ್ದ ಉಪಕಾರವನ್ನು ಮಾಡಬೇಕು. ಇಂಥ ಗುಣಗ್ರಾಹೀ–ಗುಣಜ್ಞಾನರಾದವರ ಸಲುವಾಗಿಯೇ ನೀವು ಸ್ವತಃ ಶರೀರವನ್ನು ಝಿಜಿಸಬೇಕು.ಶ್ರಮಪಡಿಸಬೇಕು. ಈ ತಿಳಿದವರು ಹೇಗೆ ವಿಚಾರಮಾಡುವರೆಂಬುದನ್ನು ನೋಡಿ ತಿಳಿಯಬೇಕು. [೪] ತಿಳಿದವರ ಸಂಗತಿಯಲ್ಲಿದ್ದು ಭಜನೆ ಮಾಡಬೇಕು. ಇನ್ನಿತರ ಜನರ ಸಲುವಾಗಿಯೂ ಸಹ ನೀವು ಸ್ವತಃ ಶ್ರಮಮಾಡಬೇಕು. ಪುನಃ ಪುನಃ ಕೇಳಿದ್ದನ್ನು ಮನನಮಾಡಿ ಮನಸ್ಸನ್ನು ಪ್ರಸನ್ನೀಕರಿಸಬೇಕು. (೫) ತಿಳಿದವರ ಹತ್ತಿರವೇ ಗಾಯನ ಮತ್ತು ವಾದ್ಯಾದಿಗಳನ್ನು ಬಾರಿಸಲಿಕ್ಕೆ ಕಲಿಯಬೇಕು. ಆಲಾಪ, ಸ್ವರ ವಿಸ್ತಾರ [ತಾನ] (ಸಂಗೀತದ ಪ್ರಾರಂಭದಲ್ಲಿ ರಾಗದ ಛಾಯೆಯನ್ನು ವಿಸ್ತರಿಸಿ ತೋರಿಸುವಿಕೆ) ಇತ್ಯಾದಿ ಹೇಗೆ ಅನ್ನುವದನ್ನು ಸಂಗೀತಜ್ಞರಲ್ಲಿ ಕಲಿಯಬೇಕು. [೬]

ಜಾಣತ್ಯಾಚೇ ಕಾಸೇಸೀ ಲಾಗಾವೇ । ಜಾಣತ್ಯಾಚೇ ಔಷಧ ಘ್ಯಾವೇ ।
ಜಾಣತಾ ಸಾಂಗೇಲ ತೇ ಕರಾವೇ । ಪಥ್ಯ ಆಧೀ ॥೭॥
ಜಾಣತ್ಯಾಪಾಸೀ ಪರೀಕ್ಷಾ ಸಿಕಣೇ । ಜಾಣತ್ಯಾ ಪಾಸೀತಾಲಿಮ ಕರಣೇ ।
ಜಾಣತ್ಯಾಪಾಸೀ ಪೋಹಣೇ । ಅಭ್ಯಾಸಾವೇ ॥೮॥
ಜಾಣತಾ ಬೋಲೇಲ ತೈಸೇ ಬೋಲಾವೇ। ಜಾಣತಾ ಸಾಂಗೇಲ ತೈಸೇ ಚಾಲಾವೇ।
ಜಾಣತ್ಯಾಚೇ ಧ್ಯಾನ ಧ್ಯಾವೇ । ನಾನಾ ಪ್ರಕಾರೀ ॥೯॥
ಜಾಣತ್ಯಾಚ್ಯಾ ಕಥಾ ಸಿಕಾವ್ಯಾ । ಜಾಣತ್ಯಾಚ್ಯಾ ಯುಕ್ತಿ ಸಮಜಾವ್ಯಾ ।
ಜಾಣತ್ಯಾಚ್ಯಾ ಗೋಷ್ಟಿ ವಿವರಾವ್ಯಾ । ಸಕಳ ಕಾಂಹೀ ॥೧೦॥
ಜಾಣತ್ಯಾಚೇ ಪೇಚ ಜಾಣಾವೇ । ಜಾಣತ್ಯಾಚೇ ಪೀಳ ಉಕಲಾವೇ ।
ಜಾಣತಾ ರಾಖೇಲ ತೈಸೇ ರಾಖಾವೇ । ಲೋಕರಾಜೀ ॥೧೧॥
ಜಾಣತ್ಯಾಚೇ ಜಾಣಾವೇ ಪ್ರಸಂಗ । ಜಾಣತ್ಯಾಚೇ ಘ್ಯಾವೇ ರಂಗ ।
ಜಾಣತ್ಯಾಚೇ ಸ್ಫೂರ್ತೀಚೇ ತರಂಗ । ಅಭ್ಯಾಸಾವೇ ॥೧೨॥
ಜಾಣತ್ಯಾಚಾ ಸಾಕ್ಷೇಪ ಘ್ಯಾವಾ । ಜಾಣತ್ಯಾಚಾ ತರ್ಕ ಜಾಣಾವಾ ।
ಜಾಣತ್ಯಾಚಾ ಉಲ್ಲೇಖ ಸಮಜಾವಾ । ನ ಬೋಲತಾ ಚಿ ॥೧೩॥
ಜಾಣತ್ಯಾಚೇ ಧೂರ್ತಪಣ । ಜಾಣತ್ಯಾಚೇ ರಾಜಕಾರಣ ।
ಜಾಣತ್ಯಾಚೇ ನಿರೂಪಣ । ಏಕತ ಜಾವೇ ॥೧೪॥
ಜಾಣತ್ಯಾಚೇ ಕವಿತ್ವೇ ಸಿಕಾವೀ । ಗದ್ಯೇ ಪದ್ಯೇ ವೋಳಖಾವೀ ।
ಮಾಧುರ್ಯ ವಚನೇ ಸಮಜಾವೀ । ಅಂತರ್ಯಾಮೀ ॥೧೫॥
ಜಾಣತ್ಯಾಚೇ ಪಾಹಾವೇ ಪ್ರಬಂಧ । ಜಾಣತ್ಯಾಚೇ ವಚನ ಭೇದ ।
ಜಾಣತ್ಯಾಚೇ ನಾನಾ ಸಂವಾದ । ಬರೆ ಶೋಧಾವೇ ॥೧೬॥
ಜಾಣತ್ಯಾಚೀ ತೀಕ್ಷ್ಣತಾ । ಜಾಣತ್ಯಾಚೀ ಸಹಿಷ್ಣುತಾ ।
ಜಾಣತ್ಯಾಚೀ ಉದಾರತಾ । ಸಮಜೋನ ಘ್ಯಾವೀ ॥೧೭॥
ಜಾಣತ್ಯಾಚೀ ನಾನಾ ಕಲ್ಪನಾ । ಜಾಣತ್ಯಾಚೀ ದೀರ್ಘ ಸೂಚನಾ ।
ಜಾಣತ್ಯಾಚೀ ವಿವಂಚನಾ । ಸಮಜೋನ ಘ್ಯಾವೀ ॥೧೮॥
ಜಾಣತ್ಯಾಚಾ ಕಾಳಸಾರ್ಥಕ । ಜಾಣತ್ಯಾಚಾ ಅಧ್ಯಾತ್ಮ ವಿವೇಕ ।
ಜಾಣತ್ಯಾಚೇ ಗುಣ ಅನೇಕ । ಆವಘೇ ಚ ಘ್ಯಾವೆ ॥೧೯॥
ಜಾಣತ್ಯಾಚಾ ಭಕ್ತಿಮಾರ್ಗ । ಜಾಣತ್ಯಾಚಾ ವೈರಾಗ್ಯ ಯೋಗ ।
ಜಾಣತ್ಯಾಚಾ ಅವಘಾ ಪ್ರಸಂಗ । ಸಮಜೋನ ಘ್ಯಾವಾ ॥೨೦॥

ತಿಳಿದವರನ್ನು ಆಧಾರಮಾಡಿಕೊಳ್ಳಬೇಕು. ಅವರು ಹೇಳಿದಂತೆ ಔಷಧ ಪಥ್ಯ ಇತ್ಯಾದಿ ಮಾಡಬೇಕು.[೭] ತಿಳಿದವರ ಹತ್ತಿರ ಪರೀಕ್ಷಾ ಹೇಗೆ ಮಾಡಬೇಕು. ಇದನ್ನು ಕಲಿಯಬೇಕು. ತಿಳಿದವರಲ್ಲಿ ತಾಲೀಮು, ವ್ಯಾಯಾಮ ಅಂಗಸಾಧನೆ ಇತ್ಯಾದಿ ಕಲಿಯಬೇಕು. ತಿಳಿದವರಿಂದ ಈಸುವ ಅಭ್ಯಾಸವನ್ನು ಮಾಡಬೇಕು. (೮) ತಿಳಿದವರು ಹೇಗೆ ಮಾತನಾಡುವರೋ ಅದರಂತೆ ಮಾತನಾಡುವ ಕಲೆಯನ್ನು ಕಲಿಯಬೇಕು. ತಿಳಿದವರು ಹೇಳಿದಂತೆ ನೀವು ತಪ್ಪದೆ ನಡೆಯಬೇಕು. ತಿಳಿದವರು ಹೇಗೆ ಧ್ಯಾನ ಮಾಡುವರೋ ಅದರಂತೆಯೇ ಧ್ಯಾನ ಮಾಡುವದನ್ನು ನಾವೂ ಕಲಿಯಬೇಕು. ಪ್ರಯತ್ನಮಾಡಬೇಕು.[೯] ತಿಳಿದವರ, ಜ್ಞಾನಿಗಳ ಕಥೆಗಳನ್ನು ಕೇಳಿ ಓದಿ ತಿಳಿಯಬೇಕು. ಅದರಲ್ಲಿಯ ಯುಕ್ತಿ ಪ್ರಯುಕ್ತಿಯ ವಿಚಾರಗಳನ್ನು ತಿಳಿಯಬೇಕು. ಇದರಲ್ಲಿಯ ಯಾವತ್ತೂ ವಿಷಯಗಳನ್ನು ಚನ್ನಾಗಿ ವಿವರಣ ಮಾಡಬೇಕು. ಮಾಡಿ ತಿಳಿಯಬೇಕು. [೧೦] ತಿಳಿದವರು ಪೇಚುಗಳನ್ನು ಹೇಗೆ ಹಾಕುವರು ಅಥವಾ ಪೇಚುಗಳನ್ನು ಹೇಗೆ ಎದುರಿಸುವರು ಇದನ್ನೆಲ್ಲ ತಿಳಿಯಬೇಕು. ಇವರಲ್ಲಿಯ ಹಿಕಮತ್ತು, ಹಿಡಿತ, ಯುಕ್ತಿ, ಖುಬಿಗಳನ್ನೆಲ್ಲ ತಿಳಿದಿರಬೇಕು. ಮನದಲ್ಲಿಯ ಗುಪಿತವನ್ನು [ಹಟದ ಸ್ವಭಾವ ಕುವಿಚಾರಗಳನ್ನು] ಮುಂದಾಗಿ ತಿಳಿಯುವ ಜಾಣ್ಮೆ ಇವನ್ನೆಲ್ಲ ಕಲಿಯಬೇಕು. ಇದಲ್ಲದೆ ತಿಳಿದವನು ಲೋಕದ ಜನರನ್ನು ಹೇಗೆ ಸಂತಸದಲ್ಲಿ ಇಡುವನೆಂಬುದನ್ನು ತಿಳಿದು ನೀವೂ ಕೂಡಾ ಅವರಂತೆ ಮಾಡಬೇಕು [ಇಡಬೇಕು.] (೧೧) ತಿಳಿದವರ ಮೇಲೆ ಬರುವಂಥ ಪ್ರಸಂಗಗಳನ್ನು ಘಟನೆಗಳನ್ನು ಗುರುತಿಸಿ ತಿಳಿಯಬೇಕು. ಬೇರೆ ಬೇರೆ ಪ್ರಸಂಗಗಳಲ್ಲಿ ಇವರು ಯಾವ ರೀತಿಯಲ್ಲಿ ನಡೆಯುವರು ಇದನ್ನು ತಿಳಿಯಬೇಕು. ಅವರಿಗೆ ಯಾವ ಸ್ಫೂರ್ತಿ ಪ್ರೇರಣೆ ಉಂಟಾಗುವದೋ ಇದರ ಬಗ್ಗೆ ವಿವರವಾಗಿ ಅಭ್ಯಾಸವನ್ನು ಮಾಡಬೇಕು. ತಿಳಿದವರಲ್ಲಿರುವ ಹೊರಗಿನ ರೀತಿ ನಡತೆಗಿಂತ ಅವರ ಅಂತರಂಗದಲ್ಲಿಯ ಜೀವನವೇ ಹೆಚ್ಚು ಅಭ್ಯಾಸನೀಯವಿರುವದು. ತಿಳಿದವರ ಜೀವನದಲ್ಲಿ ಉಂಟಾಗುವ ಸ್ಫೂರ್ತಿಗೆ ಬಹಳ ಮಹತ್ವವಿರುವದು. ಇದರ ಸರ್ವಾಂಗೀಣ ಅಭ್ಯಾಸವನ್ನು ಮಾಡಬೇಕು. ಇದರ ಅಭ್ಯಾಸವನ್ನು ಮಾಡುವದು ಅತಿ ಮಹತ್ವದ್ದಾಗಿದೆ. (೧೨) ತಿಳಿದವರು ಪ್ರಯತ್ನಮಾಡುವ ಬಗೆಯನ್ನು ಮತ್ತು ಆಗಿನ ಅವರ ಸ್ವಭಾವವನ್ನೂ ಆಚರಣೆಯಲ್ಲಿ ತರಬೇಕು. ತಿಳಿದವರ ವಿಚಾರ ಮಾಡುವ ಪದ್ಧತಿಯನ್ನು ಕಲಿಯಬೇಕು. ಅದರಂತೆ ಪ್ರಯತ್ನಮಾಡಬೇಕು. ಮತ್ತು ಅವರು ಉಪಯೋಗಿಸುವ ಶಬ್ದಗಳ ಮೇಲಿಂದಲೇ ಅವರು ಹೇಳುವದಕ್ಕಿಂತ ಮೊದಲೇ ಅವರ ಮಾತಿನ ಭಾವಾರ್ಥವನ್ನು ಗ್ರಹಿಸಬೇಕು. [೧೩] ತಿಳಿದವರ ಧೂರ್ತತನ ಮತ್ತು ರಾಜಕಾರಣ ಎರಡನ್ನೂ ನೋಡಬೇಕು. ಇವರು ಹೇಳುವ ನಿರೂಪಣವನ್ನು ಕೇಳಬೇಕು. (೧೪) ತಿಳಿದವರ ಕವಿತ್ವವನ್ನು ಕಲಿಯಬೇಕು. ತಿಳಿದವರ ಗದ್ಯ ಮತ್ತು ಪದ್ಯ ಎರಡನ್ನೂ ತಿಳಿದುಕೊಳ್ಳಬೇಕು, ಇವರ ಮೃದು ಮಧುರ ವಚನಗಳನ್ನು ನಿಮ್ಮ ಅಂತರ್ಯಾಮದಲ್ಲಿ ವಿವರ ಪೂರ್ವಕ ತಿಳಿದುಕೊಳ್ಳಬೇಕು. (೧೫) ತಿಳಿದವರ ಪ್ರಬಂಧ, ಕಾವ್ಯ, ಗದ್ಯ, ಕಥೆ, ಸಿದ್ಧಾಂತ, ನಿಬಂಧಗಳ ರಚನೆಗಳನ್ನು ನೋಡಬೇಕು. ಇವರು ಹೇಳಿದ, ಮಾಡಿದ ಅನೇಕ ಬಗೆಯ ವಚನಗಳನ್ನು ಓದಬೇಕು. ಇವರ ಅನೇಕ ಸಂವಾದ ಸಂಭಾಷಣೆ, ಚರ್ಚೆಗಳನ್ನು ಲಕ್ಷ್ಯಪೂರ್ವಕ ಶೋಧಿಸಿ ನೋಡಬೇಕು. [೧೬] ತಿಳಿದವರ ಸೂಕ್ಷ್ಮ ಬುದ್ಧಿ, ಇವರ ಸಹನಶೀಲತೆ, ಇವರ ಉದಾರತನ, ಇತ್ಯಾದಿಗಳನ್ನು ತಿಳಿಯಬೇಕು. [೧೭] ತಿಳಿದವರ ಅನೇಕ ಕಲ್ಪನೆ, ಇವರ ದೀರ್ಘ ಸೂಚನೆಗಳು ಇವರ ವಿವಂಚನೆ ತೊಡಕಿನ ವಿಚಾರಗಳನ್ನು ನಾವು ತಿಳಿಯಬೇಕು. [೧೮] ತಿಳಿದವರು ತಮ್ಮ ವೇಳೆಯನ್ನು ಹೇಗೆ ಸಾರ್ಥಕಗೊಳಿಸುವರು, ಅಧ್ಯಾತ್ಮದ ಬಗ್ಗೆ ಇವರ ವಿವೇಕ ಹೇಗಿರುವದು ಮತ್ತು ಇವರು ವಿವೇಕದ ಬಗ್ಗೆ ಮಾಡುವ ಕೇಳುವ, ವಿಚಾರ ಎಂತಹದು. ಈ ಎಲ್ಲವುಗಳು ಮತ್ತು ತಿಳಿದವರಲ್ಲಿರುವ ಇನ್ನೂ ಅನೇಕ ಗುಣಗಳೆಲ್ಲವನ್ನೂ ನಾವು ತಿಳಿಯಬೇಕು. ತಿಳಿದು ಅದರಂತೆ ನಡೆಯಲು ಕಲಿಯಬೇಕು. [೧೯] ತಿಳಿದವರ ಭಕ್ತಿ ಮಾರ್ಗ, ಇವರ ವೈರಾಗ್ಯ ಪದ್ಧತಿ ಅನೇಕ ಪ್ರಸಂಗಗಳಲ್ಲಿಯ ಇವರ ವರ್ತನೆ [ನಡವಳಿಕೆ] ಯ ಬಗ್ಗೆ ನಾವು ತಿಳಿದುಕೊಳ್ಳಬೇಕು. [೨೦]

ಜಾಣತ್ಯಾಚೇ ಪಾಹಾವೇ ಜ್ಞಾನ। ಜಾಣತ್ಯಾಚೇ ಸಿಕಾವೇ ಧ್ಯಾನ।
ಜಾಣತ್ಯಾಚೇ ಸೂಕ್ಷ್ಮ ಚಿನ್ಹ। ಸಮಜೋನ ಘ್ಯಾವೇ ॥೨೧॥

ಜಾಣತ್ಯಾಚೇ ಅಲಿಪ್ತ ಪಣ। ಜಾಣತ್ಯಾಚೇ ವಿದೇಹ ಲಕ್ಷಣ।
ಜಾಣತ್ಯಾಚೇ ಬ್ರಹ್ಮವಿವರಣ। ಸಮಜೋನ ಘ್ಯಾವೇ ॥೨೨॥

ಜಾಣತಾ ಯೇಕ ಅಂತರಾತ್ಮಾ। ತ್ಯಾಚಾ ಕಾಯೆ ಸಾಂಗಾವಾ ಮಹಿಮಾ।
ವಿದ್ಯಾ ಕಳಾಗುಣ ಸೀಮಾ। ಕೋಣೇ ಕರಾವೀ ॥೨೩॥

ಪರಮೇಶ್ವರಾಚೇ ಗುಣಾನುವಾದ। ಅಖಂಡ ಕರಾವಾ ಸಂವಾದ।
ತೇಣೇ ಕರಿತಾ ಆನಂದ। ಉದಂಡ ಹೋತೋ ॥೨೪॥

ಪರಮೇಶ್ವರೇ ನಿರ್ಮಿಲೇ ತೇ। ಅಖಂಡ ದೃಷ್ಟೀಸ ಪಡತೇ।
ವಿವರ ವಿವರೋ ಸಮಜಾವೇ ತೇ। ವಿವೇಕೀ ಜನೀ ॥೨೫॥

ಜಿತುಕೇ ಕಾಹೀ ನಿರ್ಮಾಣ ಜಾಲೇ। ತಿತುಕೇ ಜಗದೇಶ್ವರೇ ನಿರ್ಮಿಲೇ।
ನಿರ್ಮಾಣ ವೇಗಳೇ ಕೇಲೇ। ಪಾಹಿಜೇ ಆಧೀ ॥೨೬॥

ತೋ ನಿರ್ಮಾಣ ಕರತೋ ಜನಾ। ಪರೀ ಪಾಹೋ ಜಾತಾ ದಿಸೇನಾ।
ವಿವೇಕಬಳೇ ಅನುಮಾನಾ। ಆಣೀತಜಾವಾ ॥೨೭॥

ತ್ಯಾಚೇ ಅಖಂಡ ಲಾಗತಾ ಧ್ಯಾನ। ಕೃಪಾಳುಪಣೇ ದೇತೋ ಆಶನ।
ಸರ್ವಕಾಳ ಸಂಭಾಷಣ। ತದಾಂಶೀ ಚಿ ಕರಾವೇ ॥೨೮॥

ತಿಳಿದವರ ಜ್ಞಾನ ನೋಡಬೇಕು. ಇವರು ಮಾಡುವ ಧ್ಯಾನವನ್ನು ಕಲಿಯಬೇಕು, ತಿಳಿದವರು ಅನೇಕ ಪದ್ಧತಿಯಿಂದ ಧ್ಯಾನ ಮಾಡುವರು. ನಮ್ಮ ಸಹವಾಸ ಅವರೊಂದಿಗೆ ಇದ್ದದ್ದಾದರೆ ಅವರ ಧ್ಯಾನದ ಪ್ರಕಾರಗಳನ್ನು ನಮಗೆ ಕಲಿಯಲು ಸಾಧ್ಯವಾಗುವದು. ತಿಳಿದವರಲ್ಲಿ, ಅರಿವುಉಳ್ಳವರಲ್ಲಿ ಯಾವ ಸೂಕ್ಷ್ಮ ಸಂಕೇತ [ಗುರುತು] ಗಳಿರುವವೋ ಅವನ್ನೆಲ್ಲ ನಾವು ತಿಳಿದುಕೊಳ್ಳಬೇಕು. [೨೧] ತಿಳಿದವರು ಅಲಿಪ್ತರಾಗಿರುವ ಬಗೆಯನ್ನು ಮತ್ತು ಇವರ ವಿದೇಹಾವಸ್ಥೆ [ದೇಹದ ವಿಷಯದಲ್ಲಿ ಆಸ್ಥೆ ಇರಲಾರದಂಥ ಜ್ಞಾನಿ ಮನುಷ್ಯನ ನಿರ್ವಿಕಲ್ಪ ಸ್ಥಿತಿ] ಯ ಲಕ್ಷಣ ಗಳು ಯಾವವು ? ಇವರು ಬ್ರಹ್ಮದ ಬಗ್ಗೆ ಹೇಗೆ ವಿವರಣೆ ಮಾಡುವರು ? ಇದನ್ನೆಲ್ಲ ನಾವು ಸಾಧಕರು ತಿಳಿದು ಕೊಳ್ಳಬೇಕು. [೨೨] ವಾಸ್ತವಿಕವಾಗಿ ಅಂತರಾತ್ಮನು ನಿಜವಾಗಿ ಅರಿವು ಉಳ್ಳವನೂ ಮತ್ತು ತಿಳಿದವನೂ ಆಗಿರುವನು. ಇವನನ್ನು ಯಾರು ಗುರುತಿಸುವರೋ, ತಿಳಿಯುವರೋ ಅವರು ಮಾತ್ರ ನಿಶ್ಚಯವಾಗಿ ತಿಳಿದವರಾಗುವರು. ಮತ್ತು ಅರಿವು ಉಳ್ಳವರಾಗುವರು. ಅಂತರಾತ್ಮನ ಸತ್ತೆಯಿಂದ ಅಧಿಕಾರ, ಶಕ್ತಿ, ಪ್ರಭುತ್ವದಿಂದ ಯಾವತ್ತೂ ಜಗತ್ತು ಬಾಳಿ ಬದುಕುವದು. ಏನೆಲ್ಲವೂ ಇವನಿಂದಲೇ ನಡೆದಿರುವದು ಈ ಅಂತರಾತ್ಮನ ಕರ್ತೃತ್ವದ ಶಕ್ತಿಯನ್ನು ಗುರುತಿಸಿ ತಿಳಿದು ಇವನ ಅಖಂಡ ಧ್ಯಾನ ಮಾಡಬೇಕು. ಇವನು ಅತ್ಯಂತ ಸೂಕ್ಷ್ಮ ಇರುವದರಿಂದ ನಮಗೆ ಕಾಣುವದಿಲ್ಲ. ಆದ್ದರಿಂದ ಅಂತರ್ಮುಖರಾಗಿ ಆತ್ಮಚಿಂತನಪರವಾಗಿ ಇವನನ್ನು ನೋಡಬೇಕಾಗುವದು: ಅಂತರಾತ್ಮನು ಒಬ್ಬನೇ ಅಂದರೆ ಒಬ್ಬನೇ ನಿಜವಾದ ಅರಿವುಳ್ಳವನೂ ತಿಳಿದವನೂ ಇರುವನು. ಇವನ ಮಹಿಮೆಯನ್ನು ಹೇಳಲಿಕ್ಕೆ ಶಕ್ಯವಾಗುವದಿಲ್ಲ. ಇವನ ವಿದ್ಯಾ, ಇವನ ಕಲಾ, ಮತ್ತು ಇವನ ಗುಣ ಇವುಗಳ ಅಂತ ಅಳತೆ ಹತ್ತುವದಿಲ್ಲ. ಇವನು ಸತ್ಯವಂತನು, ಜ್ಞಾನಮಯನು ಮತ್ತು ಅನಂತ ಅಪಾರನಿರುವನು. [೨೩] ಹೀಗಿರುವ ಆ ಅಂತರಾತ್ಮಾ ರೂಪದ ಪರಮೇಶ್ವರನ ಗುಣಾನುವಾದ ಅಂದರೆ ಗುಣಗಳನ್ನು ಕೊಂಡಾಡುವದು. ಅಥವಾ ಸ್ತುತಿಸುವದು ಆಗಿದೆ. ಇವನ ವಿಷಯವಾಗಿ ಸತತವೂ ಮಾತುಕತೆ ನಡೆಯಬೇಕು. ಚರ್ಚಾ ಸಲ್ಲಾಪ ನಡೆಯಬೇಕು. ಹೀಗೆ ಮಾಡುವದರಿಂದ ಅತಿಶಯವಾದ ಆನಂದದ ಅನುಭವ ಬರುವದು. [೨೪] ಪರಮೇಶ್ವರನು ನಿರ್ಮಾಣ ಮಾಡಿದ ಈ ವಿಶ್ವವು ಸತತವೂ ನಮ್ಮ ದೃಷ್ಟಿಗೆ ಬೀಳುವದು. ವಿವೇಕವುಳ್ಳ ಜನರು ತಿಳಿದವರ ಕಡೆಯಿಂದ ಮೇಲಿಂದ ಮೇಲೆ ಅಂತರಾತ್ಮನ ಬಗ್ಗೆ ವಿವರಣ ಅಂದರೆ ವಿಚಾರ ತಿಳಿದುಕೊಂಡು ಸ್ಪಷ್ಟಪಡಿಸಿಕೊಂಡು ಆತ್ಮನ ಬಗ್ಗೆ ಸಂದೇಹ ರಹಿತರಾಗಬೇಕು. [೨೫] ಯಾವ ಯಾವುದು ನಿರ್ಮಾಣವಾಗಿದೆಯೋ ಅದೆಲ್ಲವನ್ನೂ ಜಗದೀಶ್ವರನೇ ನಿರ್ಮಾಣ ಮಾಡಿರುವನು. ಆದರೆ ನಿರ್ಮಾಣ ಮಾಡಿದ ಎಲ್ಲ ದೃಶ್ಯವು ಜಗ ನಿರ್ಮಾಣ ಕರ್ತಾ ಜಗದೀಶ್ವರನಿಗಿಂತ ಬೇರೆಯಾಗಿರುವದೆಂಬುದನ್ನು ನಾವು ಮೊದಲಿಗೆ ತಿಳಿಯಬೇಕು. ಇವನು ನಿರ್ಮಾಣಗೊಂಡವನಲ್ಲ. ಅನಾದಿಯಾಗಿರುವನು. [೨೬] ಇವನು ಪ್ರಜಾ ಕೋಟಿಯನ್ನು ನಿರ್ಮಾಣ ಮಾಡುವನೆಂಬ ಮಾತು ನಿಜವಿರುವದು. ಆದರೆ ಇವನು ಅತ್ಯಂತ ಸೂಕ್ಷ್ಮ ಇದ್ದದ್ದರಿಂದ ನೋಡಲಿಕ್ಕೆ ಹೋದರೆ ದೃಷ್ಟಿಗೆ ಕಾಣುವದಿಲ್ಲ. ಆದ್ದರಿಂದ ವಿವೇಕ ಶಕ್ತಿಯ ಬಲದಿಂದ ಇವನನ್ನು ನಾವು ನಮ್ಮ ಕಲ್ಪನೆಯ ಕಕ್ಷೆಯಲ್ಲಿ ಅಂದರೆ ಅಳವಿನಲ್ಲಿ, ಪರಿಮಿತಿಯಲ್ಲಿ ತರಬೇಕು. [೨೭] ಅಂತರಾತ್ಮನ ಧ್ಯಾನ ಸಂಚಿತ ಪುಣ್ಯದಿಂದ ಒಂದು ವೇಳೆ ಹತ್ತಿದ್ದಾದರೆ ಇವನು ಕೃಪಾಳುತನದಿಂದ ಸಾಧಕನ ಎಲ್ಲ ಯೋಗ ಕ್ಷೇಮವನ್ನು ನಡೆಸುವನು. ತಿನ್ನಲು, ಕುಡಿ ಯಲು ಒದಗಿಸುವನು. ಸಾಧಕರಿಗೆ ಏನೇನು ಮಾತಾಡಬೇಕಾಗಿದೆಯೋ ಅದನ್ನೆಲ್ಲ ಅಂತರಾತ್ಮನ ಅನುಸಂಧಾನದಲ್ಲಿ ಅಂತರಾತ್ಮನ ಸಂಗತಿಯಲ್ಲಿ ಮಾತನಾಡಬೇಕು. [ಮಾತನಾಡುವವನು ಮತ್ತು ಯಾರ ಜೊತೆಗೆ ಮಾತನಾಡ ಬೇಕಾಗಿದೆಯೋ ಆವರು ಹೀಗೆ ಇಬ್ಬರೂ ಆತ್ಮಾರಾಮನ ಸ್ವರೂಪರೇ ಇರುವರು. ಇದನ್ನು ತಿಳಿದು ಯಾವಾಗಲೂ ಮಾತನಾಡುತ್ತಿರಬೇಕು.] (೨೮)

ಧ್ಯಾವ ಧರೀನಾ ತೋ ಅಭಕ್ತ। ಧ್ಯಾನ ಧರೀಲ ತೋ ಭಕ್ತ।
ಸಂಸಾರಾಪಾಸುನೀ ಮುಕ್ತ। ಭಕ್ತಾಸ ಕರೀ ॥೨೯॥

ಉಪಾಸನೇಚೇ ಸೇವಟೀ। ದೇವಾ ಭಕ್ತಾ ಅಖಂಡ ಭೇಟೀ।
ಅನುಭವೀ ಜಾಣೇಲ ಗೋಷ್ಟೀ। ಪ್ರತ್ಯಯಾಚೀ ॥೩೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ಸರ್ವಜ್ಞ ಸಂಗ ನಿರೂಪಣ' ನಾಮ ಸಮಾಸ ದ್ವಿತೀಯ ॥

• •

ಯಾರು ಧ್ಯಾನ ಧರಿಸುವದಿಲ್ಲ. ಹಿಡಿಯುವದಿಲ್ಲ ಅಂದರೆ ಯಾರು ಧ್ಯಾನ ಮಾಡಲಾರದವರಿರುವರೋ ಅವರೆಲ್ಲರೂ ಅಭಕ್ತರೆನಿಸುವರು. ಆದೇ ಯಾರು ಧ್ಯಾನ ಹಿಡಿಯುವರೋ ಅರ್ಥಾತ್ ಧ್ಯಾನ ಮಾಡುವರೋ ಅವರು ಭಕ್ತರೆನಿಸುವರು. ಅಂತರಾತ್ಮನು ತನ್ನ ಭಕ್ತರನ್ನು ಸಂಸಾರ ಪಾಶದಿಂದ ಮುಕ್ತರನ್ನಾಗಿ ಮಾಡುವನು. (೨೯) ಉಪಾಸನೆಯನ್ನು ಮಾಡುತ್ತಾ ಮಾಡುತ್ತಾ ಕೊನೆಯಲ್ಲಿ ದೇವರದು ಮತ್ತು ಭಕ್ತರದು ಅರ್ಥಾತ್ ಇಬ್ಬರದೂ ಅಖಂಡ ಐಕ್ಯತೆಯು ಆಗುವದು. ಇದು ಅನುಭವದ ಮಾತಾಗಿರುವದು. ಅನುಭವವುಳ್ಳ ಜನರೇ ಇದನ್ನು ತಿಳಿಯುವರು. [೩೦]

ಶ್ರೀ ದಾಸಬೋಧದ ಹದಿನೆಂಟನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ಸರ್ವಜ್ಞ ಸಂಗ ನಿರೂಪಣ"ವೆಂಬ ಹೆಸರಿನ ಎರಡನೇ ಸಮಾಸವು ಮುಗಿದುದು.

● ●

### ದಶಕ ಅಷ್ಟದಶ : ಸಮಾಸ ತೃತೀಯ : ನಿಸ್ಪೃಹ ಸಿಕವಣ (ನುಡಿ ೨೦)

॥ಶ್ರೀರಾಮ॥ ದುಲ್ಲಭ ಶರೀರೀ ದುಲ್ಲಭ ಆಯುಷ್ಯ ।
ಯಾಚಾ ಕರೂ ನಯೇ ನಾಸ ।
ದಾಸ ಮ್ಹಣೇ ಸಾವಕಾಸ । ವಿವೇಕ ಪಾಹಾವಾ ॥೧॥

ನ ಪಾಹಾತಾ ಉತ್ತಮ ವಿವೇಕ । ಅವಘಾ ಹೋತೋ ಅವಿವೇಕ ।
ಅವಿವೇಕೇ ಪ್ರಾಣೀ ರಂಕ । ಐಸಾ ದಿಸೇ ॥೨॥

ಹೇ ಆಪಲೇ ಆಪಣ ಕೇಲೇ । ಆಳಸೇ ಉದಾಸ ನಾಗವಿಲೇ ।
ವಾಈಟ ಸಂಗತೀನೇ ಬುಡವಿಲೇ । ದೇಖತ ದೇಖತಾ ॥೩॥

ಮೂರ್ಖಪಣಾಚಾ ಅಭ್ಯಾಸ ಜಾಲಾ । ಬಾಷ್ಕಳಪಣೇ ಘಾತಲಾ ಘಾಲಾ ।
ಕಾಮ ಚಾಂಡಾಳ ಉಠಿಲಾ । ತರುಣಪಣೇ ॥೪॥

ಮೂರ್ಖ ಆಳಸೀ ಆಣೀ ತರುಣಾ । ಸರ್ವಾವಿಷೀ ದೈನ್ಯವಾಣಾ ।
ಕಾಂಹೀ ಮಿಳೇನಾ ಕೋಣಾ । ಕಾಯ ಮ್ಹಣಾವೇ ॥೫॥

## ದಶಕ ೧೮. ಸಮಾಸ ೩. ನಿಸ್ಪೃಹ ಶಿಕವಣ (ನುಡಿ ೨೦)

ಈ ಸಮಾಸದ ಹೆಸರು ನಿಸ್ಪೃಹ ಶಿಕವಣ (ನಿಸ್ಪೃಹ ಶಿಕ್ಷಣ) ಎಂದು ಇರುವದು. ಮಹಂತನಾಗಿ ಸರ್ವ ಸಮಾಜದ ಜನರಿಗೆ ಅಧ್ಯಾತ್ಮದ ಶಿಕ್ಷಣ ಕೊಡಲಿಕ್ಕೆ ಮಹಂತನಾದವನು. ಯಾವ ತರಹದ ತಯಾರಿ ಮಾಡಬೇಕು ಅನ್ನುವ ಬಗ್ಗೆ ಸ್ವಲ್ಪದರಲ್ಲಿ ವರ್ಣನೆ ಮಾಡಿ ಹೇಳಿದ್ದು ಕಂಡು ಬರುವದು. ಶ್ರೀ ಸಮರ್ಥರು ತಮ್ಮ ವಾಙ್ಮಯದಲ್ಲಿ ಮೇಲಿಂದ ಮೇಲೆ ಆಗ್ರಹಪೂರ್ವಕ ಬಚಾಯಿಸಿ ಹೇಳಿದ್ದಾರೆ. ಅದೇನಂದರೆ ಆಲಸ್ಯ ಮತ್ತು ಕೆಟ್ಟವರ(ದುಷ್ಟರ) ಸಂಗತಿಯಿಂದ ಮನುಷ್ಯರ ಆಯುಷ್ಯವು ವ್ಯರ್ಥವಾಗಿ ಕಳೆದು ಹೋಗುವದು. ಯಾರ ಹತ್ತಿರ ವಿದ್ಯೆಯಿಲ್ಲ, ಜಾಣ–ತನವಿಲ್ಲ, ಉತ್ತಮ ಗುಣಗಳಿಲ್ಲ, ಮತ್ತು ಕಲಿಯುವ ತಿಳಿಯಬೇಕೆನ್ನುವ ಇಚ್ಛೆ ಕೂಡಾ ಇಲ್ಲವೋ ಇಂಥ ಜನರ ಜೀವನ ವ್ಯರ್ಥ ಹಾಳಾಗಿ ಹೋಗುವದು. ಜೀವನವನ್ನು ಸಾರ್ಥಕಪಡಿಸಿಕೊಳ್ಳುವದರಲ್ಲಿ ಅದನ್ನು ಹಚ್ಚಬೇಕಾಗು–ವದು. ಇದಕ್ಕಾಗಿ ಮನುಷ್ಯನು ಮೊದಲನೆಯದಾಗಿ ಆಲಸ್ಯವನ್ನು ದೂರಸರಿಸಬೇಕು. ಹಟದಿಂದ, ದೃಢತನದಿಂದ ಸಾಧನೆಯನ್ನು ಮಾಡಬೇಕು. ಅವಗುಣಗಳನ್ನು ಬಿಟ್ಟು ಉತ್ತಮಗುಣಗಳ ಅಭ್ಯಾಸ ಮಾಡಬೇಕು. ಏಕಾಂತವಾಸ ಮಾಡಿ ಬಹಳಷ್ಟು ಉತ್ತಮ ಗ್ರಂಥಗಳನ್ನು ಅಭ್ಯಾಸ ಮಾಡಬೇಕು. ಓದಿದ ವಿಷಯದ ಅರ್ಥವನ್ನು ಸರಿಯಾಗಿ ತಿಳಿಯಬೇಕು. ತಿಳಿದ ವಿಷಯದ ಅನುಭವ ಪಡೆಯಬೇಕು. ಮತ್ತು ಒಳ್ಳೆಯ ಆತ್ಮವಿಶ್ವಾಸದಿಂದ, ನಿರ್ಭಿಡೆಯಿಂದ ಸ್ಪಷ್ಟವಾಗಿ ಕಥಾ-ಕೀರ್ತನಾದಿಗಳನ್ನು ಮಾಡಬೇಕು.

### ದಶಕ ೧೮. ಸಮಾಸ ೩. ನಿಸ್ಪೃಹ ಶಿಕವಣ (ಶಿಕ್ಷಣ) (ನುಡಿ ೨೦)

ಮನುಷ್ಯನು ವಿವೇಕದಿಂದ ನಡೆಯಬೇಕು. ಆಲಸ್ಯವನ್ನು ಬಿಡಬೇಕು. ದುಷ್ಟರ (ಕೆಟ್ಟವರ) ಸಂಗತಿ ಸಹವಾಸ ಬಿಡಬೇಕು. ವಿದ್ಯೆ ಮತ್ತು ಉತ್ತಮ ಗುಣಗಳ ಅಭ್ಯಾಸವನ್ನು ಮಾಡಬೇಕು. ಬಹಳಷ್ಟು ಪಾಠಾಂತರ (ಓದಿದ್ದನ್ನು ಪುನಃ ಪುನಃ ಓದಿ ವಿಷಯವನ್ನು ಮನದಟ್ಟು ಮಾಡಿಕೊಳ್ಳುವದು) ಮಾಡಬೇಕು ಮತ್ತು ನಿಶ್ಚಯ ತನದಿಂದ (ಹಟದಿಂದ) ಸಾಧನ ಮಾಡಬೇಕು. ಅಲ್ಲಲ್ಲಿಯ ಪ್ರಸಂಗ ನೋಡಿ ವಿಷಯವನ್ನು ಹೇಳಬೇಕು. ಪ್ರತಿಪಾದಿಸಬೇಕು. ಮತ್ತು ಕೇಳಬೇಕು. ಇಂಥವರ ಜೀವನವು ಸಾರ್ಥಕ್ಯ ಹೊಂದುವದು:- ಮಾನವ ದೇಹ ಬರುವದೇ ದುರ್ಲಭವು. ಅದರಲ್ಲಿಯೂ ಆಯುಷ್ಯವಂತರಾಗುವದು-ಆಯುಷ್ಯವಂತರಾಗಿ ಹೌದೆನಿಸಿಕೊಂಡು ಬಾಳುವದು ದುರ್ಲಭವಿರುವದು. ಆದ್ದರಿಂದ ವ್ಯರ್ಥವಾಗಿ ಆಯುಷ್ಯವನ್ನು ನಾಶ ಮಾಡಿಕೊಳ್ಳಬೇಡಿರಿ. ಶ್ರೀ ರಾಮದಾಸರು ಅನ್ನುವದೇನಂದರೆ ನಿಮ್ಮಲ್ಲಿ ನೀವೇ ಶಾಂತರಾಗಿ ಸಮಾಧಾನದಿಂದ ವಿಚಾರ ಮಾಡಿ ನೋಡಿಕೊಳ್ಳಿರಿ. (೧) ಮನುಷ್ಯರು ಯಾವಾಗಲೂ ವಿಚಾರ ಮಾಡಬೇಕು. ವಿಚಾರ ಮಾಡದೆ ನಡೆದರೆ ಅದೆಲ್ಲವೂ ಅವಿಚಾರವಾಗುವದು. ವಿವೇಕಹೀನ–ವಿಚಾರಹೀನ ಮನುಷ್ಯರು ದೀನ ದರಿದ್ರರಾಗುವರು. (೨) ಹೀಗೆ ಆಗುವದಕ್ಕೆ ನಮಗೆ ನಾವೇ ಕಾರಣರಾಗುವೆವು. ಉದಾಸೀನ ವೃತ್ತಿಯ ಮನುಷ್ಯರೂ ಕೂಡಾ ಆಲಸ್ಯದಿಂದ ದುರ್ದೆಶೆಗೀಡಾಗುವರು. ದುಷ್ಟ, ದುರ್ಜನರ ಸಂಗತಿಯಿಂದ ಮನುಷ್ಯರು ನೋಡು ನೋಡುತ್ತಾ ಮುಳುಗಿ ಹೋಗುವರು. (೩) ಮೂರ್ಖತನವು ಮೈಗೂಡಿದರೆ, (ರೂಢಿಸಿದರೆ), ಹುಡುಗಾಟದಿಂದ ಸ್ವೇಚ್ಛಾಚಾರಿಯಾಗಿ ನಡೆಯಹತ್ತಿದರೆ, ತಾರುಣ್ಯದಶೆಯಿಂದಾಗಿ ಕಾಮವಾಸನೆಯು ಪ್ರಬಲವಾದರೆ, (೪) ಇಂಥ ರೀತಿಯ ಮೂರ್ಖರು, ಆಲಸ್ಯ ಉಳ್ಳವರು, ಮತ್ತು ತಾರುಣ್ಯಮದದಿಂದ ಸೊಕ್ಕಿದವರು–ಇವರೆಲ್ಲರೂ ಎಲ್ಲ ಬಾಬತಿನಲ್ಲಿಯೂ ಹೀನ ದೀನರಾಗುವರು. ಇವರಿಗೆ ಏನನ್ನೂ ಪಡೆಯಲು, ದೊರಕಿಸಲು ಅರ್ಥಾತ್ ಗಳಿಸಲಿಕ್ಕೆ ಆಗುವದಿಲ್ಲ. ಇದಕ್ಕೆ ಏನನ್ನಬೇಕು.? (೫)

ಜೇ ಜೇ ಪಾಹಿಜೆ ತೇ ತೇ ನಾಹೀ। ಅನ್ನವಸ್ತ್ರ ತೇ ಹಿ ನಾಹೀ।
ಉತ್ತಮ ಗುಣ ಕಾಂಹೀ ಚ ನಾಹೀ। ಅಂತರ್ಯಾಮೀ ॥೬॥

ಬೋಲತಾ ಯೇನಾ ಬೈಸತಾ ಯೇನಾ। ಪ್ರಸಂಗ ಕಾಂಹೀ ಚ ಕಳೇನಾ।
ಶರೀರ ಮನ ಹೇ ವಳೇನಾ। ಅಭ್ಯಾಸಾಕಡೇ ॥೭॥

ಲಿಹಿಣೇ ನಾಹೀ ವಾಚಣೇ ನಾಹೀ। ಪುಸಣೇ ನಾಹೀ ಸಾಂಗಣೇ ನಾಹೀ।
ನೇಮಸ್ತಪಣಾಚಾ ಅಭ್ಯಾಸ ನಾಹೀ। ಬಾಷ್ಕಳಪಣೇ ॥೮॥

ಆಪಣಾಸ ಕಾಂಹೀ ಚ ಯೇನಾ। ಆಣೀ ಸಿಕವಿಲೇ ಹೀ ಮಾನೇನಾ।
ಆಪಣ ವೇಡಾ ಆಣೀ ಸಜ್ಜನಾ। ಬೋಲ ಠೇವೀ ॥೯॥

ಅಂತರೀ ಯೇಕ ಬಾಹೇರ ಯೇಕ। ಐಸಾ ಜಯಾಚಾ ವಿವೇಕ।
ಪರಲೋಕಾಚೇ ಸಾರ್ಥಕ। ಕೈಸೇ ಘಡೇ ॥೧೦॥

ಆಪಲಾ ಸಂಸಾರ ನಾಸಲಾ। ಮನಾಮಧೇ ಪ್ರಸ್ತಾವಲಾ।
ತರೀ ಮಗ ಅಭ್ಯಾಸ ಕೇಲಾ। ಪಾಹಿಜೆ ವಿವೇಕಾಚಾ ॥೧೧॥

ಯೇಕಾಗ್ರ ಕರೂನಿಯಾ ಮನ। ಬಳೇ ಚಿ ಧರಾವೇ ಸಾಧನ।
ಯೆತ್ನೀ ಆಳಸಾಚೇ ದರ್ಶನ। ಹೋಊ ಚ ನಯೇ ॥೧೨॥

ಅವಗುಣ ಅವಘೇ ಚಿ ಸಾಂಡಾವೇ। ಉತ್ತಮ ಗುಣ ಅಭ್ಯಾಸಾವೇ।
ಪ್ರಬಂದ ಪಾಠ ಕರೀತ ಜಾವೇ। ಜಾಡ ಅರ್ಥ ॥೧೩॥

ಪದಪ್ರಬಂದ ಶ್ಲೋಕಪ್ರಬಂದ। ನಾನಾ ಧಾಟೀ ಮುದ್ರಾ ಛಂದ।
ಪ್ರಸಂಗಜ್ಞಾನೇ ಚಿ ಆನಂದ। ಹೋತ ಆಹೇ ॥೧೪॥

ಕೋಣೇ ಪ್ರಸಂಗೀ ಕಾಯ ಮ್ಹಣಾವೇ। ಐಸೇ ಸಮಜೋನ ಜಾಣಾವೇ।
ಉಗೇ ಚಿ ವಾಊಗೇ ಸಿಣಾವೇ। ಕಾಸಯಾಸೀ ॥೧೫॥

ದುಸರ್ಯಾಚೇ ಅಂತರ ಜಾಣಾವೇ। ಆದರ ದೇಖೋನ ಮ್ಹಣಾವೇ।
ಜೇ ಆಠವೇಲ ತೇ ಗಾವೇ। ಹೇ ಮೂರ್ಖಪಣ ॥೧೬॥

ಜ್ಯಾಚೀ ಜೈಸೀ ಉಪಾಸನಾ। ತೇ ಚಿ ಗಾವೇ ಚುಕಾವೇನಾ।
ರಾಗಜ್ಞಾನಾ ತಾಳಜ್ಞಾನಾ। ಅಭ್ಯಾಸಾವೇ ॥೧೭॥

ಸಾಹಿತ ಸಂಗೀತ ಪ್ರಸಂಗ ಮಾನೇ। ಕರಾವೀ ಕಥೇಚೀ ಘಮಶಾನೇ।
ಅರ್ಥಾಂತರ ಶ್ರವಣಮನನೇ। ಕಾಢೀತ ಜಾವೇ ॥೧೮॥

ಜೀವನಕ್ಕೆ ಯಾವ ಯಾವುದರ ಅವಶ್ಯಕತೆ ಇರುವದೋ ಅವುಗಳ ಪೈಕಿ ಯಾವುದೊಂದೂ ಇವರ ಹತ್ತಿರ ಇರುವದಿಲ್ಲ. ಇಷ್ಟೇ ಅಲ್ಲ. ಇವರ ಹತ್ತಿರ ಅವಶ್ಯವಾಗಿರುವಷ್ಟು ಅನ್ನ ವಸ್ತ್ರವೂ ಇರುವದಿಲ್ಲ. ಇವರ ಅಂತರ್ಯಾಮದಲ್ಲಿ ಉತ್ತಮ ಗುಣ ಇತ್ಯಾದಿಗಳು ಏನೂ ಇರುವದಿಲ್ಲ.[೬] ಚನ್ನಾಗಿ ಮಾತನಾಡಲಿಕ್ಕೆ ಬರುವದಿಲ್ಲ, ಸರಿಯಾಗಿ ಕೂಡಲಿಕ್ಕೆ ಬರುವದಿಲ್ಲ. ಸಮಯ ಸಂದರ್ಭಗಳ ಪರಿವೆಯೇ ಇರುವದಿಲ್ಲ. ಶರೀರ ಮತ್ತು ಮನ ಇವು ಅಭ್ಯಾಸದ ಕಡೆಗೆ ಹೊರಳುವದಿಲ್ಲ, ತಿಳಿಯಬೇಕೆಂಬ ಹಂಬಲವೂ ಇರುವದಿಲ್ಲ. [೭] ಬರೆಯುವದಿಲ್ಲ, ಓದುವದೂ ಇಲ್ಲ, ಯಾರ ಜೊತೆಗೂ ವಿಚಾರಿಸುವದಿಲ್ಲ.ಅಥವಾ ಯಾರಿಗೂ ಹೇಳುವದೂ ಇಲ್ಲ ಹುಡುಗತನದಿಂದಾಗಿ ಅಭ್ಯಾಸವು ನಿಯಮಿತ ತನದಿಂದ ನಡೆಯುವದಿಲ್ಲ. ಹೀಗೆ ಇವರ [ಆಲಸಿಗ, ದುಷ್ಟ, ದುರ್ಜನರ] ಕರುಣಾಜನಕ ಸ್ಥಿತಿ ಇರುವದು. (೮) ತನಗೆ ಏನೂ ಬರುವದಿಲ್ಲ. ಮತ್ತು ಯಾರಾದರೂ ಕಲಿಸಬೇಕೆಂದು ಇವನಿಗೆ ಹೇಳಹತ್ತಿದರೆ ಅದೂ ಬೇಡವೆನಿಸುವದು. ಕಲಿಯುವದರಲ್ಲಿ ಆಸ್ಥೆ ಇರುವದಿಲ್ಲ. ಇಂಥ ಮನುಷ್ಯರು ಹುಚ್ಚರಿರುವರು. ಬುದ್ಧಿಗೇಡಿಗಳಾಗಿರುವರು. ಇಂಥವರು ಸಜ್ಜನರಿಗೆ ಮಾತ್ರ ಸುಮ್ಮ ಸುಮ್ಮನೇ ದೋಷಕೊಡುವರು. (೯) ಮನದಲ್ಲೊಂದು ತರಹ ಇದ್ದರೆ ಹೊರಗೆ ಜನರಲ್ಲೊಂದು ತರಹದ ವಿಚಾರ [ರೀತಿ] ಇರುವದು. [ಒಳಗೊಂದು ತರ ಹೊರಗೊಂದು ತರ ಇರುವದು]ಇಂಥವರ ಕೈಯಿಂದ ಪರಲೋಕದ ಸಾರ್ಥಕತೆ ಅಥವಾ ಪರಮಾರ್ಥವು ಹೇಗೆ ಘಟಿಸುವದು? ಅರ್ಥಾತ್ ಏನೂ ಘಟಿಸುವದಿಲ್ಲ. (೧೦) ಈ ಪ್ರಕಾರದಿಂದ ಸಂಸಾರದಲ್ಲಿ ದಾರಿ ತಪ್ಪಿ ಮಾನಗೇಡಿತನ ಅನುಭವಿಸಿದ ಮೇಲೆ ಮನುಷ್ಯನ ಮನಕ್ಕೆ ಪಶ್ಚಾತ್ತಾಪವಾಗುವದು. ಆಗ ಇವನು ವಿವೇಕದ ಅಭ್ಯಾಸ ಮಾಡಬೇಕು. (೧೧) ಇಂಥ ಜನರು ಪಶ್ಚಾತ್ತಾಪ ಹೊಂದಿದವರು, ಮನವನ್ನು ಏಕಾಗ್ರಮಾಡಬೇಕು. ಮತ್ತು ಜಬರದಸ್ತಿಯಿಂದ ಬಲವಂತದಿಂದ ಪರಮಾರ್ಥ ಸಾಧನೆ ಮಾಡಲಿಕ್ಕೆ ಹತ್ತಬೇಕು. ನಿಮ್ಮ ಪ್ರಯತ್ನದಲ್ಲಿ ತಪ್ಪಿ ಕೂಡಾ ಆಲಸ್ಯವು ಹಣಕಿ ನೋಡಿರಬಾರದು ಹೀಗೆ ನಿಮ್ಮ ವರ್ತನವಿರಲಿ. (೧೨) ನಮ್ಮಲ್ಲಿರುವ ಯಾವತ್ತೂ ಅವ ಗುಣಗಳನ್ನು ಸಂಪೂರ್ಣ ತ್ಯಜಿಸಬೇಕು. ಉತ್ತಮ ಗುಣಗಳ ಅಭ್ಯಾಸವನ್ನು ಮಾಡಬೇಕು. ಸದ್ಗ್ರಂಥಗಳನ್ನು ಪಾಠಮಾಡಬೇಕು. ಮತ್ತು ಗ್ರಂಥಗಳಲ್ಲಿ ಬರುವ ಮಹತ್ವದ ಆಳವಾದ ಅರ್ಥವುಳ್ಳ ಗೂಢಾರ್ಥಗಳನ್ನು ಲಕ್ಷ್ಯದಲ್ಲಿಡಬೇಕು. (೧೩) ನಾನಾ ಪ್ರಕಾರದಿಂದ ರಚಿತಗೊಂಡ ಶ್ಲೋಕ ಮತ್ತು ಪದ ಪದ್ಯಗಳನ್ನು ಅದರಂತೆ ಅನೇಕ ಧಾಟಿಯ ರೀತಿ, ಪದ್ಧತಿ, ಶೈಲಿ, ಕವಿತೆ, ಮತ್ತು ಛಂದ ಅಂದರೆ ಕಾವ್ಯದ ವೃತ್-ವಿಶಿಷ್ಠ ರಚನೆಗಳನ್ನು ಯೋಗ್ಯ ಮುದ್ರಾದಿಂದ ಅಂದರೆ ಗಾಯನ ಕಾಲದಲ್ಲಿಯ ಮುಖ ಮುದ್ರೆ ಹಾವಭಾವಗಳೊಂದಿಗೆ ಪಾಠ ಮಾಡಬೇಕು. ಇವುಗಳನ್ನು ಯೋಗ್ಯ ಪ್ರಸಂಗಗಳಲ್ಲಿ ಯಥಾ ಕ್ರಮದಿಂದ ಉಪಯೋಗಮಾಡಿದ್ದಾದರೆ ಎಲ್ಲರಿಗೂ ಆನಂದವಾಗುವದು. (೧೪) ಯಾವ ಪ್ರಸಂಗದಲ್ಲಿ ಯಾವ ರಚನೆಯನ್ನು ಅಂದರೆ ಯೋಗ್ಯವಾಗುವದೆಂಬುದನ್ನು ತಿಳಿದಿರಬೇಕು. ಸುಮ್ಮನೇ ವ್ಯರ್ಥ ಅನಿಸುವದನ್ನು ಅನ್ನುವದರಿಂದ, ಬೇಸರ ಬರುವದು. [ಗುಡ್ಡಕ್ಕೆ ಕಲ್ಲು ಹೊತ್ತಂತೆ ಆಗುವದು.] (೧೫) ಶ್ರೋತಾ ಜನರ ಅಂತರಂಗವನ್ನು ಮೊದಲೇ ಗುರುತಿಸಬೇಕು. ನಾವು ಯಾವುದನ್ನು ಅನ್ನುವೆವೋ ಅವರ ಬಗ್ಗೆ ಶ್ರೋತಾ ಜನರ ಉತ್ಸುಕತೆ ಕಂಡು ಬಂದರೆ ಮಾತ್ರ ಆ ಪದ ಪದ್ಯ ಇತ್ಯಾದಿಗಳನ್ನು ಅನ್ನಬೇಕು. ಸುಮ್ಮನೇ ಯಾವುದು ನೆನಪಿಗೆ ಬರುವದೋ ಆ ಹಾಡನ್ನು ಅಥವಾ ಗಾಯನಯುಕ್ತ ಪದ್ಯವನ್ನು ಅನ್ನುವದು ಮೂರ್ಖತನದ್ದಾಗುವದು. (೧೬) ಯಾರದು ಎಂಥ ಉಪಾಸನೆ ಇರುವದೋ ಅದನ್ನೇ ಹಾಡಬೇಕು ಅನ್ನಬೇಕು. ಅದರಲ್ಲಿ ತಪ್ಪು [ಚೂಕು] ಮಾಡಬಾರದು. ರಾಗದ ಮತ್ತು ತಾಳದ ಅಭ್ಯಾಸಮಾಡಬೇಕು. (೧೭) ಸಾಹಿತ್ಯ, ಸಂಗೀತ, ಯೋಗ್ಯಕಥಾಪ್ರಸಂಗ ಇವುಗಳನ್ನು ಮೇಲು ಮಾಡಿಕೊಂಡು ಹೊಂದಿಸಿಕೊಂಡು ಒಳ್ಳೇ ನಿರ್ಭಯದಿಂದ ಜೋರಾಗಿ ಕಥಾ, ಕೀರ್ತನೆಯನ್ನು ಮಾಡಬೇಕು. ಶ್ರವಣ, ಮನನಮಾಡಿದ ಗ್ರಂಥಗಳಲ್ಲಿಯ ಬೇರೆ ಬೇರೆ ತರಹದ ಅರ್ಥವನ್ನು ಹುಡುಕಿ ತೆಗೆದು ಹೇಳಬೇಕು. (೧೮)

ಪಾಠ ಉದಂಡ ಚಿ ಅಸಾವೇ । ಸರ್ವಕಾಳ ಉಜಳೀತ ಜಾವೇ ।
ಸಾಂಗಿತಲೇ ಗೋಷ್ಟೀಚೇ ಅಸಾವೇ । ಸ್ಮರಣ ಅಂತರೀ ॥೧೯॥

ಅಖಂಡ ಯೇಕಾಂತ ಸೇವಾವಾ । ಗ್ರಂಥಮಾತ್ರ ಧಾಂಡೋಳಾವಾ ।
ಪ್ರಚಿತ ಯೇಊಲ ತೋ ಘ್ಯಾವಾ । ಅರ್ಥ ಮನೀ ॥೨೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ನಿಸ್ಪೃಹಸಿಕವಣ ನಿರೂಪಣ' ನಾಮ ಸಮಾಸ ತೃತೀಯ ॥

ಸಾಕಷ್ಟು ಪಾಠಾಂತರಗಳು ಬಾಯಿಂಪಾಠ ಇರಬೇಕು. ಮೇಲಿಂದ ಮೇಲೆ ಸತತವಾಗಿ ಪಾಠಾಂತರಗಳನ್ನು ಹೇಳಬೇಕು. ಯಾವ ಮಾತನ್ನು ಯಾವ ವಿಷಯವನ್ನು ಹೇಳಿರುವೆವೋ ಅದರ ಸ್ಮರಣ [ನೆನಪು] ಅಂತರಂಗದಲ್ಲಿಟ್ಟಿರಬೇಕು. (೧೯) ನಿರಂತರವೂ ಏಕಾಂತಸೇವನ ಮಾಡಬೇಕು. ಏಕಾಂತದಲ್ಲಿ ಎಲ್ಲ ಗ್ರಂಥಗಳನ್ನು ಸೂಕ್ಷ್ಮವಾಗಿ ಅಭ್ಯಾಸಮಾಡಬೇಕು. ಮತ್ತು ಯಾವ ಅರ್ಥವು ಅನುಭವಕ್ಕೆ ಬರುವದೋ ಅರ್ಥಾತ್ ಹೊಂದುವದೋ ಅದನ್ನು ಲಕ್ಷ್ಯದಲ್ಲಿಡಬೇಕು. [ಕೇವಲ ಮನರಂಜನೆಗಾಗಿ ಓದಬಾರದು ಎಂಬ ಭಾವವು.] (೨೦)

ಶ್ರೀ ದಾಸಬೋಧದ ಹದಿನೆಂಟನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ನಿಸ್ಪೃಹ ಸಿಕವಣ ನಿರೂಪಣ"ವೆಂಬ ಮೂರನೆಯ ಸಮಾಸವು ಮುಗಿದುದು.

● ●

### ದಶಕ ಅಷ್ಟದಶ : ಸಮಾಸ ಚತುರ್ಥ : ದೇಹ ದುರ್ಲಭ ನಿರೂಪಣ (ನುಡಿ ೪೦)

॥ಶ್ರೀರಾಮ ಸಮರ್ಥ॥ ದೇಹ್ಯಾಕರಿತಾ ಗಣೇಶಪೂಜನ ।
ದೇಹ್ಯಾಕರಿತಾ ಶಾರದಾವಂದನ ।
ದೇಹ್ಯಾಕರಿತಾ ಗುರು ಸಜ್ಜನ । ಸಂತ ಶ್ರೋತೇ ॥೧॥

ದೇಹ್ಯಾಕರಿತಾ ಕವಿತ್ವೇ ಚಾಲತೀ । ದೇಹ್ಯಾಕರಿತಾ ಅಧೇನೇ ಕರಿತೀ ।
ದೇಹ್ಯಾಕರಿತಾ ಅಭ್ಯಾಸಿತೀ । ನಾನಾ ವಿದ್ಯಾ ॥೨॥

ದೇಹ್ಯಾಕರಿತಾ ಗ್ರಂಥಲೇಖನ । ನಾನಾ ಲಿಪೀಮ್ಹೊಳಖಣ ।
ನಾನಾ ಪದಾರ್ಥಶೋಧನ । ದೇಹ್ಯಾಕರಿತಾ ॥೩॥

ದೇಹ್ಯಾಕರಿತಾ ಮಹಾಜ್ಞಾನೀ । ಸಿದ್ಧ ಸಾಧು ಋಷೀ ಮುನೀ ।
ದೇಹ್ಯಾಕರಿತಾ ತೀರ್ಥಾಟಣೇ । ಫಿರತೀ ಪ್ರಾಣೀ ॥೪॥

# ದಶಕ ೧೮. ಸಮಾಸ ೪. ದೇಹ ದುರ್ಲಭ ನಿರೂಪಣ (ನುಡಿ ೪೦)

ಗ್ರಂಥಾರಂಭದಲ್ಲಿಯೇ ಮಾನವ ದೇಹದ ಮಹತ್ವದ ಬಗ್ಗೆ ವರ್ಣನೆ ಮಾಡಿದ್ದಾಗಿದೆ. ಈ ಸಮಾಸದಲ್ಲಿ ಅದೇ ವಿಷಯವನ್ನು ಸ್ವಲ್ಪ ಭಿನ್ನ ಪ್ರಕಾರದಿಂದ ನಿಮ್ಮ ಮುಂದೆ ಮಂಡಿಸಿದ್ದಾರೆ. ಈ ಜಗತ್ತಿನಲ್ಲಿಯ ಮನುಷ್ಯನು ಯಾವ ಯಾವುದನ್ನು ಗಳಿಸಿದನೋ, ಸಂಗ್ರಹ ಮಾಡಿರುವನೋ ಮತ್ತು ಯಾವ ಯಾವುದನ್ನು ನಿರ್ಮಾಣ ಮಾಡಿದನೋ ಅದೆಲ್ಲವೂ ಮಾನವ ದೇಹದ ಸಹಾಯದಿಂದಲೇ ಪಡೆದುಕೊಂಡನು. ಅಥವಾ ದೊರಕಿಸಿರುವನು. ಇದರಲ್ಲಿ ಉತ್ತಮ ವಾದದ್ದೂ ಇರುವದು. ಕೆಟ್ಟದ್ದೂ ಇರುವದು. ಒಂದು ಕಡೆಗೆ [ಉತ್ತಮವಾದದ್ದರ ಕಡೆಗೆ] ಗ್ರಂಥ ಲೇಖನ, ತೀರ್ಥಾಟನ, ಶ್ರವಣ ಮನನ, ಉಪಾಸನೆ, ಸಾಧನ ಮಾರ್ಗ, ಅನುಷ್ಠಾನಗಳು, ಅವತಾರ, ಭುಕ್ತಿ ಮತ್ತು ಮುಕ್ತಿ [ಸುಖಾನುಭವ ಮತ್ತು ಮೋಕ್ಷ] ಇವು ಇರುವದು ಕಂಡುಬರುವದು. ಅದರಂತೆ ಇದರ ಜೊತೆಗೇ ಇನ್ನೊಂದು ಕಡೆಯಲ್ಲಿ ಪಾಪ, ನಾಸ್ತಿಕತನ, ಪಾಖಂಡತನ, ಕೀಳುತನ, ಭಂಡತನ ವಿಷಯ ಭೋಗ, ರೋಗ, ಸ್ವೈರಾಚಾರ, ಸ್ವಾರ್ಥ, ಅಪಕೀರ್ತಿ, ಭ್ರಮ, ಮತ್ತು ಭ್ರಷ್ಟಾಚಾರ,ಭ್ರಷ್ಟಾಕಾರ ಇವುಗಳೆಲ್ಲವೂ ಕೂಡಾ ದೇಹದ ಸಹಾಯದಿಂದಲೇ ಮಾಡಿದಂಥವು ಇರುವವೆಂಬುದು ಅನುಭವಕ್ಕೆ ಬರುವದು. ನಾವು ನೋಡುವದು ಹೇಗಿರುವದೆಂದರೆ ದೇಹದ ಮೂಲಕವೇ ಆತ್ಮಾರಾಮ ಪ್ರಕಟವಾಗುವನು. ಆದರೆ ಮಾನವ ದೇಹವು ದುರ್ಲಭದ್ದಾಗಿರುವದು. ಇದು ಸುಲಭದಲ್ಲಿ ಸಿಗುವಂತಹದಲ್ಲ, ಆದ್ದರಿಂದ ಇದನ್ನು ಹರಿಭಜನೆಗೆ ಹಚ್ಚಿ ನಾವು ಪಾವನರಾಗಬೇಕು. ಆತ್ಮನ ಸಲುವಾಗಿ ದೇಹವನ್ನು ಸವೆಸಬೇಕು, ದಂಡಿಸಬೇಕು. ಜನತೆಯೇ ಜನಾರ್ದನವೆನಿಸಿದೆ. ಇದನ್ನು ಗುರುತಿಸಿ ತಿಳಿದು ಜನತೆಯನ್ನು ಸಂತುಷ್ಟ ಗೊಳಿಸಬೇಕು. ಯಾವ ಶರೀರದಲ್ಲಿಂದ ಉದಂಡ [ಬಹಳಷ್ಟು] ವಿಚಾರಗಳು ಪ್ರಕಟವಾಗುವವೋ ಯಾವ ಶರೀರ ದಿಂದ ಆತ್ಮಾರಾಮನ ಜ್ಞಾನ ಪ್ರಸಾರವಾಗುವದೋ ಅದು ಖಾತ್ರಿಯಿಂದ ಪುಣ್ಯ ಶರೀರವಿರುವದು. ಅದು ಪೂಜಾ ಮಾಡಲಿಕ್ಕೆ ಅಧಿಕಾರಿಯಾಗಿರುವದು. ಸೂಕ್ಷ್ಮ ಸಂಕಲ್ಪಗಳಿಗೆ ದೇಹರೂಪದ ಫಲ ಬರುವದು. ಸಹಸಾ ಸಾಮಾನ್ಯ ವಾಗಿ ಯಾರ ಅಂತಃಕರಣವನ್ನೂ ದುಃಖಿತಗೊಳಿಸಬಾರದು. ಸಮಾಧಾನದಿಂದ ಇರಬೇಕು.

## ದಶಕ ೧೮. ಸಮಾಸ ೪. ದೇಹ ದುರ್ಲಭ ನಿರೂಪಣ (ನುಡಿ ೪೦)

ಪೃಥ್ವಿಯ ಮೇಲೆ ಎಷ್ಟೆಷ್ಟೋ ಪ್ರಾಣಿಗಳು ಇರುವವು. ಪ್ರತಿಯೊಂದು ಪ್ರಾಣಿಗೂ ದೇಹವಿರುವದು ನಿಜವೇ ಸರಿ. ಆದರೆ ಮನುಷ್ಯನೆನಿಸಿದ ಈ ಪ್ರಾಣಿಯೊಂದು ಮಾತ್ರ ಹೇಗಿರುವದೆಂದರೆ- ಇವನು ಪೃಥ್ವಿಯ ಮೇಲೆ ಸ್ವತಃ ಏನೋ ಒಂದನ್ನು ಅಂದರೆ ಏನೇನೋ, ಎಷ್ಟೆಷ್ಟೋ ನಿರ್ಮಾಣಮಾಡಿದ್ದಾನೆ. ಮನುಷ್ಯ ದೇಹ ಮತ್ತು ಅದರಲ್ಲಿ ವಾಸಮಾಡಿರುವಂತಹ ಅವನ ಬುದ್ಧಿ ಈ ಎರಡರಲ್ಲಿಯೂ ಅಚಾಟ- ಅಪಾರ ಸಾಮರ್ಥ್ಯ ತುಂಬಿರುವ ದೆನ್ನುವ ಮಾತಿನಲ್ಲಿ ಸಂಶಯವಿಲ್ಲ. ಆದರೆ ಇದರ ಜೊತೆಗೇನೇ ದೇಹದಿಂದ ಯಾವ ಪ್ರಕಾರದ ಉತ್ತಮ ಕಾರ್ಯ ಗಳನ್ನು ಮನುಷ್ಯನು ನಿರ್ಮಾಣ ಮಾಡಿದನೋ ಅದರಂತೆ ಕೆಟ್ಟ, ದುಷ್ಟ ಕೆಲಸಗಳನ್ನೂ ಸಹ ಉತ್ಪನ್ನಮಾಡಿದನು: ಮಾನವೀ ದೇಹ ಇರುವದರಿಂದಲೇ ಗಣೇಶ ಪೂಜೆ, ಶಾರದೆಗೆ ವಂದನೆ ಮಾಡಲಿಕ್ಕಾಗುವದು. ಗುರು, ಸಜ್ಜನ, ಶರಣ, ಸಂತ, ಸಾಧು ಮತ್ತು ಶ್ರೋತಾ ಇವರೆಲ್ಲರೂ ಮಾನವ ದೇಹಧಾರಿಗಳೇ ಆಗಿರುವರು. ಮತ್ತು ವಂದನೀ ಯರೂ ಇರುವರು.(೧)ದೇಹದಿಂದಲೇ ಕವಿತ್ವ,ದೇಹದಿಂದಲೇ ಅಧ್ಯಯನ,ದೇಹದಿಂದಲೇ ಅನೇಕ ವಿದ್ಯೆಯಅಭ್ಯಾಸ ಹೀಗೆಲ್ಲ ಕಾರ್ಯಗಳು ನಡೆಯುವವು.(೨) ದೇಹದಿಂದಲೇ ಗ್ರಂಥ ಲೇಖನ, ಲಿಪಿ ಶೋಧನೆ. ಹಾಗೂ ದೇಹದಿಂದಲೇ ಪದಾರ್ಥ ಶೋಧನೆ. ಇವೆಲ್ಲ ಕಾರ್ಯ ನಡೆಯುವವು.(೩) ದೇಹದಿಂದಲೇ ಮಹಾ ಜ್ಞಾನಿಗಳು ಸಿದ್ಧರು,ಸಾಧುಗಳು, ಸಂತ, ಶರಣರು, ಋಷಿಗಳು, ಮುನಿಗಳು, ಹೀಗೆ ಆಗುವರು. ದೇಹದಿಂದಲೇ ಜನರು ತೀರ್ಥಾಟನಾದಿಗಳನ್ನು ಮಾಡಲು ಶಕ್ತರಾಗುವರು. (೪)

ದೇಹ್ಯಾಕರಿತಾ ಶ್ರವಣ ಘಡೇ । ದೇಹ್ಯಾಕರಿತಾ ಮನನೀ ಪವಾಡೇ ।
ದೇಹ್ಯಾಕರಿತಾ ದೇಹೀ ಆತುಡೇ । ಮುಖ್ಯ ಪರಮಾತ್ಮಾ ॥೫॥
ದೇಹ್ಯಾಕರಿತಾ ಕರ್ಮಮಾರ್ಗ । ದೇಹ್ಯಾಕರಿತಾ ಉಪಾಸನಾ ಮಾರ್ಗ ।
ದೇಹ್ಯಾಕರಿತಾ ಜ್ಞಾನಮಾರ್ಗ । ಭೂಮಂಡಳೀ ॥೬॥
ಯೋಗೀ ವೀತರಾಗೀ ತಾಪಸೀ । ದೇಹ್ಯಾಕರಿತಾ ನಾನಾ ಸಾಯಾಸೀ ।
ದೇಹ್ಯಾಕರಿತಾ ಆತ್ಮಯಾಸೀ । ಪ್ರಗಟಣೇ ಘಡೇ ॥೭॥
ಇಹಲೋಕ ಆಣೀ ಪರಲೋಕ । ದೇಹ್ಯಾಕರಿತಾ ಸಕಳ ಸಾರ್ಥಕ ।
ದೇಹೇವಿಣ ನಿರಾರ್ಥಕ । ಸಕಳ ಕಾಂಹೀ ॥೮॥
ಪುರಶ್ಚರ್ಣೇ ಅನುಷ್ಠಾನೇ । ಗೋರಾಂಜನೇ ಧೂಮ್ರಪಾನೇ ।
ಸೀತೋಷ್ಣ ಪಂಚಾಗ್ನೀ ಸಾಧಣೇ। ದೇಹ್ಯಾಕರಿತಾ ॥೯॥
ದೇಹ್ಯಾಕರಿತಾ ಪುಣ್ಯಸೀಳ । ದೇಹ್ಯಾಕರಿತಾ ಪಾಪೀ ಕೇವಳ ।
ದೇಹ್ಯಾಕರಿತಾ ಅನರ್ಗಳ। ಸುಚಿಸ್ಮಂತ ॥೧೦॥
ದೇಹ್ಯಾಕರಿತಾ ಅವತಾರೀ । ದೇಹ್ಯಾಕರಿತಾ ವೇಷಧಾರೀ ।
ನಾನಾ ಬಂಡೇ ಪಾಷಾಂಡೇ ಕರೀ । ದೇಹ್ಯಾಕರಿತಾ ॥೧೧॥
ದೇಹ್ಯಾಕರಿತಾ ವಿಷಯಭೋಗ । ದೇಹ್ಯಾಕರಿತಾ ಸಕಳತ್ಯಾಗ ।
ಹೋತೀ ಜಾತೀ ನಾನಾರೋಗ । ದೇಹ್ಯಾಕರಿತಾ ॥೧೨॥
ದೇಹ್ಯಾಕರಿತಾ ನವವಿಧಾ ಭಕ್ತೀ । ದೇಹ್ಯಾಕರಿತಾ ಚತುರ್ವಿಧಾ ಮುಕ್ತೀ ।
ದೇಹ್ಯಾಕರಿತಾ ನಾನಾ ಯುಕ್ತೀ । ನಾನಾ ಮತೇ ॥೧೩॥
ದೇಹ್ಯಾಕರಿತಾ ದಾನಧರ್ಮ । ದೇಹ್ಯಾಕರಿತಾ ನಾನಾವರ್ಮ ।
ದೇಹ್ಯಾಕರಿತಾ ಪೂರ್ವಕರ್ಮ । ಮ್ಹಣತೀ ಜನೀ ॥೧೪॥
ದೇಹ್ಯಾಕರಿತಾ ನಾನಾ ಸ್ವಾರ್ಥ । ದೇಹ್ಯಾಕರಿತಾ ನಾನಾ ಅರ್ಥ ।
ದೇಹ್ಯಾಕರಿತಾ ಹೋಇಜೆ ವೆರ್ಥ । ಆಣೀ ಧನ್ಯ ॥೧೫॥
ದೇಹ್ಯಾಕರಿತಾ ನಾನಾ ಕಳಾ । ದೇಹ್ಯಾಕರಿತಾ ಉಣಾ ಆಗಳಾ ।
ದೇಹ್ಯಾಕರಿತಾ ಜಿವ್ಹಾಳಾ । ಭಕ್ತಿಮಾರ್ಗಾಚಾ ॥೧೬॥
ನಾನಾ ಸನ್ಮಾರ್ಗಸಾಧನೇ । ದೇಹ್ಯಾಕರಿತಾ ತುಟತೀ ಬಂಧನೇ ।
ದೇಹ್ಯಾಕರಿತಾ ನಿವೇದನೇ । ಮೋಕ್ಷ ಲಾಭೇ ॥೧೭॥
ದೇಹೆ ಸಕಳಾಮಧೇ ಉತ್ತಮು । ದೇಹೀ ರಾಹಿಲಾ ಆತ್ಮಾರಾಮು ।
ಸಕಳಾ ಘಟೀ ಪುರುಷೋತ್ತಮು । ವಿವೇಕೀ ಜಾಣತೀ ॥೧೮॥

ದೇಹದಿಂದಲೇ ಶ್ರವಣವು ಘಟಿಸುವದು. ದೇಹದಿಂದಲೇ ಮನನವು ಬಹಳಷ್ಟು ಬೆಳೆಯುವದು. ಈ ದೇಹದಲ್ಲಿಯೇ ಮುಖ್ಯ ಪರಮಾತ್ಮನನ್ನು ನಮ್ಮವನನ್ನಾಗಿ ಮಾಡಿಕೊಳ್ಳಲಿಕ್ಕೆ ಬರುವದು. (೫) ದೇಹದ ಸಹಾಯದಿಂದಲೇ ಕರ್ಮಮಾರ್ಗ, ಉಪಾಸನಾಮಾರ್ಗ ಮತ್ತು ಜ್ಞಾನಮಾರ್ಗಗಳನ್ನೆಲ್ಲ ಆಚರಿಸಲಿಕ್ಕೆ ಬರುವದು. ಭಕ್ತಿ ಮಾರ್ಗವೂ ಸಹ ಇದರಿಂದಲೇ ಸಾಧ್ಯವು. (೬) ಯೋಗಿ, ವಿರಕ್ತ, ಮತ್ತು ತಾಪಸಿ [ತಪಸ್ವಿ] ಇವರೆಲ್ಲ ದೇಹದ ಸಹಾಯದಿಂದ ಅನೇಕ ಸಾಧನಾದಿ ಕಷ್ಟಗಳನ್ನು ಮಾಡುವರು. ದೇಹದೊಳಗಿಂದಲೇ ಆತ್ಮಾ ಪ್ರಕಟವಾಗುವದು. (೭) ಇಹಲೋಕವೇ ಇರಲಿ, ಅಥವಾ ಪರಲೋಕವೇ ಇರಲಿ ಎರಡೂ ಕಡೆಗೂ ಈ ದೇಹದಿಂದಲೇ ಸಾರ್ಥಕ್ಯ ಘಟಿಸುವದು. ದೇಹವಿಲ್ಲದಿದ್ದರೆ ಯಾವುದಕ್ಕೂ ಏನೂ ಅರ್ಥವಿರುವದಿಲ್ಲ. (೮) ಪುರಶ್ಚರಣ, ಅನುಷ್ಠಾನ, ಗೋರಾಂಜನ [ಸ್ವತಃ ಸುಟ್ಟುಕೊಳ್ಳುವದು, ಅಗ್ನಿಕಾಷ್ಠ, ಕೆಂಡ ಭಕ್ಷಣಮಾಡುವ ಸಾಧನ] ಧೂಮ್ರಪಾನ, [ಧುನಿಯ ಮೇಲೆ ಅಗ್ನಿ ಕುಂಡದ ಮೇಲೆ ಉಲಟಾ ಜೋತುಬಿದ್ದು ಹೊಗೆ [ಧೂಮ] ಪಾನಮಾಡುವದು] ಶೀತೋಷ್ಣ ಸಾಧನ, ಮತ್ತು ಪಂಚಾಗ್ನಿ ಸಾಧನ, [ನಾಲ್ಕು ದಿಕ್ಕಿಗೆ ನಾಲ್ಕು ಅಗ್ನಿ ಕುಂಡ ಮೇಲೆ ಸೂರ್ಯನ ಬಿಸಿಲು ಇಂಥದರ ಮಧ್ಯದಲ್ಲಿ ಕುಳಿತು ಸಾಧನ ಮಾಡುವದು.] ಇವೆಲ್ಲವೂ ಈ ದೇಹದ ಸಹಾಯ ಸಾಧನದಿಂದಲೇ ಘಟಿಸುವವು. (೯) ಮನುಷ್ಯನು ಈ ದೇಹದಿಂದಲೇ ಪುಣ್ಯಶೀಲನಾಗುವನು. ಈ ದೇಹದಿಂದಲೇ ಪಾಪಿಯೂ ಸಹ ಆಗುವನು. ದೇಹದಿಂದಲೇ ಮನುಷ್ಯನು ಸ್ವೈರಾಚಾರಿ ಅಥವಾ ಸದಾಚಾರಿ ಯಾಗುವನು. (೧೦) ಈ ದೇಹದ ಸಹಾಯದಿಂದಲೇ ಅವತಾರಗಳು ಆಗುವವು. ದೇಹದಿಂದಲೇ ನಾನಾ ವೇಷಗಳನ್ನು ತೆಗೆದುಕೊಳ್ಳಲು-ಹಾಕಲು ಬರುವದು. ಅನೇಕ ಪ್ರಕಾರದ ಭಂಡ ಅಂದರೆ ಠಕ್ಕ, ಮೋಸತನ ಮತ್ತು ಪಾಖಂಡ, ನಾಸ್ತಿಕ, ಧರ್ಮಲಂಡತನ ಇವೆಲ್ಲ ದೇಹದ ಮೂಲಕವೇ ಮಾಡಲ್ಪಡುವವು. (೧೧) ಈ ದೇಹದಿಂದಲೇ ವಿಷಯ ಭೋಗವನ್ನು ಭೋಗಿಸಲಿಕ್ಕೆ ಬರುವದು. ಮತ್ತು ಈ ದೇಹದಿಂದಲೇ ಎಲ್ಲವನ್ನು ತ್ಯಾಗಮಾಡಲಿಕ್ಕೆ ಬರುವದು. ಈ ದೇಹಕ್ಕೆ ಅನೇಕ ರೋಗಗಳು ಬರುವವು. ಮತ್ತು ಗುಣವೂ ಬರುವದು. (೧೨) ಈ ದೇಹದ ಸಾಧನದ ನೆರವಿನಿಂದ ನವವಿಧ ಭಕ್ತಿಮಾಡಲಿಕ್ಕೆ ಬರುವದು. ನಾಲ್ಕು ಪ್ರಕಾರದ ಮುಕ್ತಿಯನ್ನು ಈ ದೇಹದಿಂದಲೇ ಸಾಧಿಸಲಿಕ್ಕೆ ಬರುವದು. ನಾನಾ ಪ್ರಕಾರದ ಯುಕ್ತಿ ಮತ್ತು ಮತ ವಿಚಾರಗಳು ಈ ದೇಹದ ಮೂಲಕ ಆಗುವವು. (೧೩) ಈ ದೇಹದ ಮೂಲಕವೇ ದಾನ ಧರ್ಮಮಾಡಲಿಕ್ಕೆ ಬರುವದು. ಈ ದೇಹದಿಂದಲೇ ಅನೇಕ ರಹಸ್ಯಗಳು ತಿಳಿಯುವವು. ಹೊಳೆಯುವವು. ಈ ದೇಹ ಸಂಬಂಧದಿಂದಲೇ ಪೂರ್ವ ಕರ್ಮದ ಭಾಷೆಯನ್ನು ಜನರು ಮಾತನಾಡುವರು. [ಪೂರ್ವಕರ್ಮ = ಹಿಂದಿನ ಕರ್ಮವನ್ನು ಈ ಜನ್ಮದಲ್ಲಿ ಭೋಗಿಸಬೇಕಾಗುವದೆಂದು ಅನ್ನುವದನ್ನು ಈಗಿದ್ದ ದೇಹವೇ ಅನುಭವಿಸಬೇಕಾಗುವದು.](೧೪)ಈ ದೇಹದ ನೆರವಿನಿಂದಲೇ ಅನೇಕ ಸ್ವಾರ್ಥಗಳನ್ನು ಸಾಧಿಸಿಕೊಳ್ಳಲಿಕ್ಕೆ ಬರುವದು. ದೇಹದಿಂದಲೇ ಅನೇಕ ವಸ್ತುಗಳನ್ನು ಪ್ರಾಪ್ತಮಾಡಿಕೊಳ್ಳಲಿಕ್ಕೆ ಬರುವದು. ಈ ದೇಹದ ಸಹಾಯದಿಂದ ಮನುಷ್ಯನು ವ್ಯರ್ಥವಾಗಿ ಹೋಗುವನು. ಅಥವಾ ಧನ್ಯನಾಗುವನು. (೧೫) ಈ ದೇಹದಿಂದಲೇ ಅನೇಕ ಕಲೆಗಳನ್ನು ಕಲಿಯಲಿಕ್ಕೆ ಬರುವದು. ಈ ದೇಹದಿಂದಲೇ ಇದು ಕಡಿಮೆ ಆಯಿತು. ಅಥವಾ ಹೆಚ್ಚಿಗೆ ಆಯಿತು ಎಂದು ಹೇಳಲಿಕ್ಕೆ ಬರುವದು. ಅಥವಾ ಇವನು ಕಡಿಮೆಯವ, ಕಡಿಮೆಕಿಮ್ಮತ್ತಿನವ, ಇವನು ಹೆಚ್ಚಿನವ ಅಥವಾ ಗೊಡ್ಡ ಗುಣದವನೆನಿಸುವನು. ಈ ದೇಹದಿಂದಲೇ ಭಕ್ತಿ ಮಾರ್ಗದ ಮರ್ಮ ಅಥವಾ ಮುಖ್ಯತತ್ವ, ಮಮತೆ, ಪ್ರೇಮ ಇವು ಉತ್ಪನ್ನವಾಗುವವು.(೧೬)ಈ ದೇಹದಿಂದ ಸನ್ಮಾರ್ಗದ ಅನೇಕ ಸಾಧನಗಳು ಸಾಧ್ಯವಾಗುವವು. ಇದರಿಂದ ಅನೇಕ ಬಂಧನಗಳು ಕಳಚಿ ಬೀಳುವವು. ದೇಹದ ಸಹಾಯದಿಂದ ಆತ್ಮನಿವೇದನಮಾಡಿ ಮೋಕ್ಷದ ಲಾಭ ಲಭ್ಯವಾಗುವದು. (೧೭) ಮಾನವ ದೇಹವು ಸರ್ವ ದೇಹಗಳಲ್ಲಿ ಉತ್ತಮ ಶ್ರೇಷ್ಠ ದೇಹವಿರುವದು. ಈ ದೇಹದಲ್ಲಿ ಅಂತರಾತ್ಮನು ವಾಸ ಮಾಡುವನು. ಈ ದೇಹದ ಪ್ರತಿಯೊಂದು ಘಟಕದಲ್ಲಿ ಅರ್ಥಾತ್ ಯಾವತ್ತೂ ದೇಹದಲ್ಲಿ ಪುರುಷೋತ್ತಮನಾದ ಭಗವಂತನಿರುವನು. ಈ ವಿಷಯವನ್ನು ವಿವೇಕವುಳ್ಳ ಪುರುಷನು ತಿಳಿಯುವನು(೧೮)

ದೇಹ್ಯಾಕರಿತಾ ನಾನಾ ಕೀರ್ತೀ । ಅಥವಾ ನಾನಾ ಅಪಕೀರ್ತೀ ।
ದೇಹ್ಯಾಕರಿತಾ ಹೋತೀ ಜಾತೀ । ಅವತಾರ ಮಾಳಿಕಾ ॥೧೯॥

ದೇಹ್ಯಾಕರಿತಾ ನಾನಾ ಭ್ರಮು । ದೇಹ್ಯಾಕರಿತಾ ನಾನಾ ಸಂಭ್ರಮು ।
ದೇಹ್ಯಾಚೇನ ಉತ್ತಮೋತ್ತಮು । ಭೋಗಿತೀ ಪದೇ ॥೨೦॥

ದೇಹ್ಯಾಕರಿತಾ ಸಕಳ ಕಾಂಹೀ । ದೇಹ್ಯಾವಿಣ ಕಾಂಹೀ ನಾಹೀ ।
ಆತ್ಮಾ ವಿರೇ ಠಾಈ ಠಾಈ । ನವ್ಹತಾ ಚ ಜೈಸಾ ॥೨೧॥

ದೇಹೇ ಪರಲೋಕೀಚೇ ತಾರೂ । ನಾನಾ ಗುಣಾಂಚಾ ಗುಣಾಗರೂ ।
ನಾನಾ ರತ್ನಾಂಚಾ ವಿಚಾರೂ । ದೇಹ್ಯಾಚೆನೀ ॥೨೨॥

ದೇಹ್ಯಾಚೆನ ಗಾಯನಕಳಾ । ದೇಹ್ಯಾಚೆನ ಸಂಗೀತಕಳಾ ।
ದೇಹ್ಯಾಚೆನ ಅಂತರ್ಕಳಾ। ಠಾಈ ಪಡೇ ॥೨೩॥

ದೇಹೆ ಬ್ರಹ್ಮಾಂಡಾಚೇ ಫಳ । ದೇಹೇ ದುಲ್ಲಭ ಚಿ ಕೇವಳ ।
ಪರೀ ಯಾ ದೇಹ್ಯಾಸ ನಿವಳ । ಉಮಜಲಾವೇ ॥೨೪॥

ದೇಹ್ಯಾಕರಿತಾ ಲಾಹಾನಥೋರ । ಕರಿತೀ ಆಪುಲಾಲೇ ವ್ಯಾಪಾರ ।
ತ್ಯಾಹಿಮಧೇ ಲಾಹಾನಥೋರ । ಕಿತೀಯೇಕ ॥೨೫॥

ಜೇ ಜೇ ದೇಹೆ ಧರುನೀ ಆಲೆ । ತೇ ತೇ ಕಾಂಹೀ ಕರೂನ ಗೇಲೆ ।
ಹರಿಭಜನೇ ಪಾವನ ಜಾಲೇ । ಕಿತೀಯೇಕ ॥೨೬॥

ಅಷ್ಟಧಾ ಪ್ರಕೃತೀಚೇ ಮೂಳ । ಸಂಕಲ್ಪರೂಪ ಚಿ ಕೇವಳ ।
ನಾನಾ ಸಂಕಲ್ಪೇ ದೇಹೆಫಳ । ಫೇಲೂನ ಆಲೇ ॥೨೭॥

ಹರಿಸಂಕಲ್ಪ ಮುಳೀ ಹೋತಾ । ತೋ ಚಿ ಫಳೀ ಪಾಹಾವಾ ಆತಾ ।
ನಾನಾ ದೇಹ್ಯಾಂತರೀ ತತ್ವತಾ । ಶೋಧಿತಾ ಕಳೇ ॥೨೮॥

ವೇಲಾಚೇ ಮುಳೀ ಬೀಜ । ಉದಕರೂಪ ವೇಲೀ ಸಮಜ ।
ಪುಢೇ ಫಳಾಮಧೇ ಬೀಜ । ಮೂಳೀಚ್ಯಾ ಅಂಶೇ ॥೨೯॥

ಮುಳಾಕರಿತಾ ಫಳ ಯೇತೇ । ಫಳಾಕರಿತಾ ಮೂಳ ಹೋತೇ ।
ಯೇಣೇಕರಿತಾ ಹೋತ ಜಾತೇ । ಭೂಮಂಡಳ ॥೩೦॥

ಈ ದೇಹದಿಂದ ಉತ್ತಮ ಪ್ರಕಾರದ ಕೀರ್ತಿಯನ್ನು ಪಡೆಯಬಹುದು. ಅಥವಾ ಬಹುವಿಧದಲ್ಲಿ ಅಪ ಕೀರ್ತಿಯನ್ನೂ ಸಂಪಾದಿಸಬಹುದು. ಈ ದೇಹದ ಆಧಾರದಿಂದಲೇ ಅನೇಕ ಅವತಾರಗಳ ಸರಮಾಲೆ ಆಗಿ ಹೋಗಿದೆ. (೧೯) ಈ ದೇಹದಿಂದ ಅನೇಕ ರೀತಿಯ ಭ್ರಮೆಯು ಉಂಟಾಗುವದು. ಇದರಂತೆ ಅನೇಕ ತರಹದ ಮೋಹ ಉಂಟಾಗುವದು. ಈ ದೇಹದ ಸಹಾಯದಿಂದ ಅತಿ ಉತ್ತಮ ಪದವಿಯ ಭೋಗ ಭೋಗಿಸಲಿಕ್ಕೆ ಸಾಧ್ಯ ವಾಗುವದು. (೨೦) ಈ ದೃಶ್ಯ ಜಗತ್ತಿನಲ್ಲಿ ಮಾನವದೇಹದಿಂದಲೇ ಏನೆಲ್ಲವನ್ನೂ ಸಾಧ್ಯಮಾಡಿಕೊಳ್ಳಲಿಕ್ಕೆ ಬರುವದು. ಈ ದೇಹವೇ ಇರದಿದ್ದರೆ ಆಗ ಏನನ್ನೂ ಸಾಧಿಸಲಿಕ್ಕೆ ಆಗುತ್ತಿರಲಿಲ್ಲ. ದೇಹದೊಳಗಿಂದ ಪ್ರಕಟವಾಗುವ ಆತ್ಮಾ ದೇಹದ ಅಭಾವದಿಂದಾಗಿ ಅರ್ಥಾತ್ ದೇಹವಿರದಿದ್ದರೆ ಆತ್ಮನುಅಲ್ಲಿಂದಲ್ಲಿಯೇ ಇಲ್ಲದಂತಾಗಿ ಹೋಗುವದು.(೨೧) ಈ ದೇಹವು ಹೇಗಿರುವದೆಂದರೆ ಪರಮಾರ್ಥದ ನೌಕೆಯಾಗಿರುವದು. ಈ ದೇಹವು ಅನೇಕ ಗುಣಗಳಿಗೆ ಆಶ್ರಯ ಸ್ಥಾನವಿರುವದು. ಈ ದೇಹದಿಂದಲೇ ಜಗತ್ತಿನಲ್ಲಿಯ ಅನೇಕ ಅಮೌಲ್ಯ ರತ್ನಗಳ ವಿಚಾರಮಾಡಲಿಕ್ಕೆ ಬರುವದು.(೨೨) ದೇಹದ ಸಾಧನದಿಂದಲೇ ಗಾಯನ ಕಲೆ ಮತ್ತು ಸಂಗೀತ ಕಲೆಗಳನ್ನು ಕಲಿಯಲು ಬರುವದು. ಅಂತರ್ಯಾಮದಲ್ಲಿ ವಾಸಮಾಡುವಂಥ ಜೀವನ ಕಲೆಯು ದೇಹದ ಸಹಾಯದಿಂದಲೇ ಹಸ್ತಗತವಾಗುವದು. (೨೩) ಈ ದೇಹವೆಂದರೆ ಇಡೀ ಬ್ರಹ್ಮಾಂಡವೆಂಬ ವೃಕ್ಷದ ಅಮೌಲ್ಯವಾದ ಸರ್ವೋತ್ತಮ ಫಲವಾಗಿರುವದು. ಮಾನವದೇಹ ಅತ್ಯಂತ ದುರ್ಲಭವಾದದ್ದಿರುವದು. ಆದರೆ ಈ ದೇಹವನ್ನು ಅತ್ಯಂತ ತಿಳುವಳಿಕೆ ಉಳ್ಳದ್ದನ್ನಾಗಿ ಮಾಡಬೇಕು. ಮತ್ತು ಇದರ ಯೋಗದಿಂದ ಆತ್ಮಸ್ವರೂಪದ ವಿಚಾರಗಳನ್ನು ತಿಳಿಯಬೇಕು. ಅಂದರೆ ಜನ್ಮದ ಸಾರ್ಥಕವಾಗುವದು. (೨೪) ಜಗತ್ತಿನಲ್ಲಿಯ ಸಣ್ಣವರು ದೊಡ್ಡವರು ಎಲ್ಲರೂ ದೇಹದ ಸಹಾಯದಿಂದಲೇ ತಮ್ಮ ತಮ್ಮ ಕರ್ಮವನ್ನು ಮಾಡುವರು. ಈ ಕರ್ಮದಲ್ಲಿ ಸಣ್ಣ ಕರ್ಮ, ಮತ್ತು ದೊಡ್ಡ ಕರ್ಮ ಹೀಗೆ ಭೇದವಿರುವದು. (೨೫) ಯಾವ ಯಾವ ಜೀವಗಳು ದೇಹ ಧಾರಣಮಾಡಿ ಬರುವವೋ ಆ ಎಲ್ಲ ಜೀವಗಳು ಏನಾದರೂ ಕರ್ಮಗಳನ್ನು ಮಾಡಿಯೇ ಹೋಗುವವು. ಇವುಗಳಲ್ಲಿ ಕೆಲವು [ಎಷ್ಟೋ] ಜೀವಗಳು ಭಗವಂತನ ಭಜನೆಯಿಂದ ಪಾವನವಾಗಿ ಹೋದವು. [ಹೋಗುವವು]. (೨೬) ಅತ್ಯಂತ ಮೊದಲಿಗೆ ಅಂದರೆ ಮೂಲದ ಸಂಕಲ್ಪದಲ್ಲಿ ಈ ಜಗತ್ತಿನಲ್ಲಿ ಜನ್ಮಹೊಂದಿ ಬರುವಂಥ ಮನುಷ್ಯನ ಮೂಲ ವಿರುವದು. ಅದ್ದರಿಂದ ಜಗತ್ತಿನಲ್ಲಿ ಬಾಳಿ ಬದುಕುವ ಮಾನವದೇಹದಲ್ಲಿ ಮೂಲದ ಭಗವತ್ ಸಂಕಲ್ಪವೇ ಕಾರ್ಯ ಮಾಡುತ್ತಿರುವದೆಂಬುದನ್ನು ಯಾರೂ ಮರೆಯಬಾರದು: ಅತ್ಯಂತ ಮೊದಲಿನ ಮೂಲ ಸಂಕಲ್ಪವು ಯಾವಾಗ ಆಯಿತೋ ಅದೇ ಅಷ್ಟಧಾ ಪ್ರಕೃತಿಯ ಮೂಲವಿರುವದು. [ಪಂಚಭೂತ, ಮೂರುಗುಣ ಕೂಡಿದ]. ಅಹುದ ಮೂಲ ಸಂಕಲ್ಪದೊಳಗಿಂದ ಅತ್ಯಂತ ಸಣ್ಣ ಸಣ್ಣ ಸಂಕಲ್ಪಗಳು ನಿರ್ಮಾಣ ಹೊಂದುವವು. ಇದರ ದಶ್ಯ ಫಲವೇ ದೇಹದ ರೂಪದಿಂದ ಕಾಣುವದು. (೨೭) ಅತ್ಯಂತ ಮೊದಲಿನ ಆ ಯಾವ ಮೂಲ ಸ್ಫುರಣವಿರುವದೋ ಅದನ್ನೇ ಜಗತ್ತಿನಲ್ಲಿಯ ಅನೇಕ ಮಾನವ ದೇಹಗಳಲ್ಲಿ ನೋಡುವದು ಯೋಗ್ಯವೆನಿಸುವದು. ಅನೇಕ ದೇಹಗಳ ಅಂತರ್ಯಾಮ ವನ್ನು ಶೋಧಿಸಿ ನೋಡಿದ್ದಾದರೆ ಆ ಮೂಲ ಸಂಕಲ್ಪವು ದೃಷ್ಟಿಗೆ ಗೋಚರವಾಗುವದು. (೨೮) ಒಂದು ಬಳ್ಳಿಯ ಮೂಲದಲ್ಲಿ ಬೀಜವಿರುವದು. ಅನಂತರವೇ ಬಳ್ಳಿಯ ಬೆಳವಣಿಗೆಯಾಗುತ್ತ ಹೋಗುವದು. ಈ ಬೆಳವಣಿಗೆಯಲ್ಲವೂ ಉದಕ ರೂಪವೇ ಇರುವದು. ಆದರೆ ಕೊನೆಯಲ್ಲಿ ಬಳ್ಳಿಗೆ ಯಾವ ಫಲ ಬರುವದೋ ಆ ಫಲದಲ್ಲಿ ಅದರ ಮೂಲದ ಅಂಶದಿಂದ ಬಂದಂಥ ಬೀಜವು ಕಾಣಿಸುವದು. [ಇರುವದು]. ಇದರಂತೆ ಮನುಷ್ಯನು ವಿಶ್ವವೆಂಬ ಬಳ್ಳಿಯ ಸರ್ವೋತ್ತಮ ಫಲವೇ ಇರುವದರಿಂದ ಮನುಷ್ಯನ ಅಂತರ್ಯಾಮದಲ್ಲಿ ವಿಶ್ವದ ಮೂಲ ಸಂಕಲ್ಪವು [ಬೀಜವು] ಪ್ರಕರ್ಷ [ಉತ್ಕರ್ಷ ಆಧಿಕ್ಯ. ಶ್ರೇಷ್ಠತಾ] ದಿಂದ ದೃಷ್ಟಿಗೆ ಬೀಳುವದು. (೨೯) ಯಾವುದೇ ವೃಕ್ಷವಿದ್ದರೂ ಅದರ ಮೂಲವು ಬೀಜದಲ್ಲಿಯೇ ಇರುವದು. ಈ ಬೀಜದೊಳಗಿಂದಲೇ ವೃಕ್ಷದ ಬೆಳವಣಿಗೆ ಆಗಿ ಕೊನೆಗೆ ಅದಕ್ಕೆ ಫಲ ಬರುವವು. ಆ ಫಲದಲ್ಲಿ ಮೂಲದ ಬೀಜವು ಪ್ರಕಟವಾಗುವದು. ಅಗದೀ ಇದೇ ಪದ್ಧತಿಯಿಂದ (ರೀತಿಯಿಂದ) ಜಗತ್ತಿನಲ್ಲಿಯ ಸರ್ವ ಘಟನೆಗಳೂ ಆಗುವವು. ಮತ್ತು ಹೋಗುವವು. (೩೦)

ಅಸೋ ಕಾಂಹೀ ಯೇಕ ಕರಣೇ। ಕೈಸೇ ಘಡೇ ದೇಹ್ಯಾವಿಣೇ।
ದೇಹೆ ಸಾರ್ಥಕೀ ಲಾವಣೇ। ಮ್ಹಣಿಜೆ ಬರೇ ॥೩೧॥
ಆತ್ಮ್ಯಾಕರಿತಾ ದೇಹೇ ಜಾಲಾ। ದೇಹ್ಯಾಕರಿತಾ ಆತ್ಮಾ ತಗಲಾ।
ಉಭಯಯೋಗೇ ಉದಂಡ ಚಾಲಿಲಾ। ಕಾರ್ಯಭಾಗ ॥೩೨॥
ಚೋರೂನ ಗುಪ್ತರೂಪೇ ಕರಾವೇ। ತೇ ಆತ್ಮಯಾಸೀ ಪಡೆ ಠಾವೇ।
ಕರ್ತೃತ್ವ ಯಾಚೇನ ಸ್ವಭಾವೇ। ಸಕಳ ಕಾಂಹೀ ॥೩೩॥
ದೇಹ್ಯಾಮಧೇ ಆತ್ಮಾ ಅಸತೋ। ದೇಹೇ ಪೂಜಿತಾ ಆತ್ಮಾ ತೋಷತೋ।
ದೇಹೆ ಪೀಡಿತಾ ಆತ್ಮಾ ಕ್ಷೋಭತೋ। ಪ್ರತಕ್ಷ ಆತಾ ॥೩೪॥
ದೇಹ್ಯಾ ವೇಗಳೀ ಪೂಜಾ ಪಾವೇನಾ। ದೇಹ್ಯಾವಿಣ ಪೂಜಾ ಘಾವೇನಾ।
ಜನೀ ಜನಾರ್ದನ ಮ್ಹಣೋನೀ ಜನಾ। ಸಂತುಷ್ಟ ಕರಾವೇ ॥೩೫॥
ಉದಂಡ ಪ್ರಗಟಲಾ ವಿಚಾರ। ಧರ್ಮಸ್ಥಾಪನಾ ತದನಂತರ।
ತೇಥೇ ಚ ಪೂಜೇಸ ಅಧಿಕಾರ। ಪುಣ್ಯ ಶರೀರೀ ॥೩೬॥
ಸಗಟ ಭಜನ ಕರೂ ಯೇತೇ। ತರೀ ಮೂರ್ಖಪಣ ಅಂಗೀ ಲಾಗತೇ।
ಗಾಢವಾಸೀ ಪೂಜಿತಾ ಕಳತೇ। ಕಾಯೆತ್ಯಾಲಾ ॥೩೭॥
ಪೂಜ್ಯ ಪೂಜೇಸಿ ಅಧಿಕಾರ। ಉಗೇ ಚಿ ತೋಷವಾವೇ ಇತರ।
ದುಃಖಊ ನಯೇ ಕೋಣಾಚೇ ಅಂತರ। ಮ್ಹಣಿಜೆ ಬರೇ ॥೩೮॥
ಸಕಳ ಜಗದಾಂತರೀಚಾ ದೇವ। ಕ್ಷೋಭತಾ ರಾಹಾವ್ಯಾ ಕೋಠೇ ಠಾವ।
ಜನಾವೇಗಳಾ ಜನಾಸ ಉಪಾವ। ಆಣೀಕ ನಾಹೀ ॥೩೯॥
ಪರಮೇಶ್ವರಾಚೇ ಅನಂತ ಗುಣ। ಮನುಷ್ಯೇ ಕಾಯೆ ಸಾಂಗಾವೀ ಖೂಣ।
ಪರಂತು ಅಧ್ಯಾತ್ಮಗ್ರಂಥಶ್ರವಣ। ಹೋತಾ ಉಮಜೆ ॥೪೦॥

ಇತಿ ಶ್ರೀ ದಾಸಭೋಧೆ ಗುರುಶಿಷ್ಯ ಸಂವಾದೇ
'ದೇಹ ದುಲ್ಲಭ ನಿರೂಪಣ' ನಾಮ ಸಮಾಸ ಚತುರ್ಥ ॥

ಈ ಮಾನವ ದೇಹವಿಲ್ಲದೇ ಜಗತ್ತಿನಲ್ಲಿ ಏನೂ ಮಾಡಲಿಕ್ಕೆ ಬರುವದಿಲ್ಲ [ಆಗುವದಿಲ್ಲ]. ದೇಹ ಮತ್ತು ಆತ್ಮಾ ಇವುಗಳ ಪರಸ್ಪರ ಯೋಗದಿಂದ ಜಗತ್ತಿನಲ್ಲಿಯ ಎಲ್ಲ ಪ್ರಾಣಿಗಳ ಕಾರಭಾರ ನಡೆಯುವದು. ದೇಹದ ಹೊರತಾಗಿ ನಾವು ಆತ್ಮನನ್ನು ಸಂತುಷ್ಟಪಡಿಸಲಾರೆವು. ಆದ್ದರಿಂದ ಯಾವ ಸ್ಥಳದಲ್ಲಿ [ದೇಹದಲ್ಲಿ] ಆತ್ಮಜ್ಞಾನ ಪ್ರಕಟವಾಗುವದೋ ಆ ದೇಹವು ಪೂಜ್ಯವಾಗಿರುವದು. ಪುಣ್ಯದ್ದಾಗಿರುವದು ಇದರಂತೆಯೇ ಜನತೆಯಲ್ಲಿ ಜನಾರ್ದನ ನಿರುವನು. ಅಂತೆಯೇ ಎಲ್ಲರನ್ನೂ ಸಂತುಷ್ಟರಾಗಿರಿಸಬೇಕು.ಯಾರ ಅಂತಃಕರಣವನ್ನೂ ದುಃಖಿಸಬಾರದು: ಇರಲಿ. ಏನಾದರೂ ಎಷ್ಟಾದರೂ ಮಾಡುವದೇ ಇದ್ದದ್ದಾದರೆ ಅದು ದೇಹದ ಹೊರತಾಗಿ ಮಾಡಲಿಕ್ಕೆ ಬರುವದಿಲ್ಲ. ಆದ್ದರಿಂದ ದೇಹವನ್ನು ಸಾರ್ಥಕಕ್ಕೆ ಹಚ್ಚುವದೇ ಯೋಗ್ಯವಿರುವದು. (೩೧) ಆತ್ಮನನ್ನು ತನ್ನಲ್ಲಿ [ಧರಿಸುವದಕ್ಕಾಗಿ] ಇಟ್ಟು ಕೊಳ್ಳುವದಕ್ಕಾಗಿಯೇ ದೇಹವು ಜನ್ಮತಳೆಯುವದು. ದೇಹದ ಯೋಗದಿಂದ ಆತ್ಮನು ಟಿಕಾವಾಗಿರುವನು. [ಜೀವಿಸಿ ರುವನು] ಅರ್ಥಾತ್ ದೇಹವಿದ್ದರೇ ಆತ್ಮಾ ಇರಲಿಕ್ಕೆ ಶಕ್ಯವಿರುವದು. ಇವರಿಬ್ಬರ ಸಂಯೋಗದಿಂದ ಜಗತ್ತಿನಲ್ಲಿ ಬಹಳಷ್ಟು ದೊಡ್ಡ ಕಾರ್ಯ ಕೆಲಸಗಳು ಘಟಿಸುವವು [ಆಗುವವು]. (೩೨) ಅಗದೀ ಕಳ್ಳತನದಿಂದ ಮತ್ತು ಗುಪ್ತವಾಗಿ ನಾವು ಯಾವುದೇ ಕೆಲಸವನ್ನು ಮಾಡಿದರೂ ಕೂಡಾ ಅದು ಅಂತರಾತ್ಮನಿಗೆ ತಿಳಿಯುವದು. ಯಾವತ್ತೂ ಕರ್ತೃತ್ವವು ಕೊನೆಗೆ ಸ್ವಾಭಾವಿಕವಾಗಿ ಅಂತರಾತ್ಮನದೇ ಇರುವದು. (೩೩) ಆತ್ಮನು ದೇಹದಲ್ಲಿ ಇರುವನು. ದೇಹದ ಪೂಜೆಯನ್ನು ಮಾಡಿದ್ದಾದರೆ ಆತ್ಮನು ಸಂತೋಷಪಡುವನು. ದೇಹಕ್ಕೆ ದುಃಖ ಕೊಟ್ಟಿದ್ದಾದರೆ ಆತ್ಮಾ ಕ್ಷೋಭಿತ ನಾಗುವನು. ಇದಾದರೂ ನಮಗೆ ಪ್ರತ್ಯಕ್ಷ ಅನುಭವಕ್ಕೆ ಬರುವದೇ ಆಗಿದೆ [ಸಂತೋಷದಿಂದ ಆನಂದ, ಅಸಂತೋಷ ದಿಂದ ಕ್ಷೋಭ ಇದು ಇದ್ದದ್ದೇ ಅಲ್ಲವೇ ?] (೩೪) ದೇಹದ ವಿನಃ [ದೇಹವಿಲ್ಲದೇ] ಆತ್ಮನಿಗೆ ಪೂಜೆಯು ಅರ್ಪಿತ ವಾಗುವದಿಲ್ಲ. ದೇಹದ ಅಭಾವದಿಂದ ಆತ್ಮನಿಗೆ ಪೂಜೆಯನ್ನು ಮಾಡಲಿಕ್ಕೆ ಬರುವದಿಲ್ಲ. [ಪೂಜ್ಯ-ಪೂಜಕ ಇಬ್ಬರೂ ದೇಹಧಾರಿಗಳೇ ಇರಬೇಕಾಗುವದು]. ಯಾವತ್ತೂ ಸರ್ವ ಜನತೆಯಲ್ಲಿ ಜನಾರ್ದನನು ತುಂಬಿರುವನು. ಆದ್ದರಿಂದ ಜನತೆಯನ್ನು ಸಂತುಷ್ಟಮಾಡಬೇಕು. ಇದರಿಂದಲೇ ಪರಮಾತ್ಮನು ಸಂತೋಷ ಹೊಂದುವನು. (೩೫) ಯಾವ ದೇಹದಲ್ಲಿ ಶ್ರೇಷ್ಠ ವಿಚಾರಗಳು ಬಹಳಷ್ಟು ಪ್ರಮಾಣದಲ್ಲಿ ಪ್ರಕಟವಾಗುವವೋ ಮತ್ತು ಯಾವ ದೇಹದಿಂದ ಆ ಮೇಲೆ ಆತ್ಮಜ್ಞಾನದ ಪ್ರಸಾರವಾಗುವದೋ ಅಂಥ ದೇಹವು ಪುಣ್ಯಮಯವಿರುವದು. ಇಂಥ ಪುಣ್ಯ ದೇಹಕ್ಕೆ ಪೂಜೆಗೊಳ್ಳುವ ಅಧಿಕಾರವಿರುವದು. (೩೬) ಯಾವತ್ತರನ್ನೂ ನಾವು ಸರಾಸಗಟವಾಗಿ ಒಂದೇ ರೀತಿಯಲ್ಲಿ ಪೂಜ್ಯ ರೆಂದು ಅಂದದ್ದಾದರೆ ನಮಗೆ ಮೂರ್ಖತನದ ಹೆಸರು ಬರುವದು. ಉದಾ: ನಾವು ಒಂದು ಕತ್ತೆಯ ಪೂಜೆಯನ್ನು ಮಾಡಿದ್ದಾದರೆ ಇದು ಆ ಕತ್ತೆಗೇನೂ ಗೊತ್ತಾಗುವದಿಲ್ಲ. (೩೭) ಯಾರು ಯೋಗ್ಯರು ಮತ್ತು ಪೂಜ್ಯರು ಇರುವರೋ ಅವರಿಗೆ ಪೂಜೆಯನ್ನು ಮಾಡಿಸಿಕೊಳ್ಳುವದಕ್ಕೆ ನಿಜವಾದ ಅಧಿಕಾರವಿರುವದು. ಆದರೆ ಇತರ ಜನರನ್ನೂ ಮನ್ನಿಸಿ ಮಾನಕೊಟ್ಟು ಸಂತುಷ್ಟಪಡಿಸಬೇಕು. ಯಾರ ಮನವನ್ನೂ ಯಾವಾಗಲೂ ದುಃಖಿಸಬಾರದು. ದುಃಖಕೊಡದೇ ಇರುವದೇ ಬಹಳ ಯೋಗ್ಯವೆನಿಸುವದು. (೩೮) ಜಗತ್ತಿನ ಅಂತರಂಗದಲ್ಲಿ ಯಾವತ್ತೂ ಕಡೆಗೆ ತುಂಬಿ ತುಳುಕುತ್ತಿರುವ ಅಂತರಾತ್ಮನು ಒಂದುವೇಳೆ ಕ್ಷೋಭೆಗೊಂಡದ್ದಾದರೆ ನಮಗ್ಯಾರಿಗೂ ಜಗತ್ತಿನಲ್ಲಿ ಇರಲಿಕ್ಕೆ ಸ್ಥಳವೇ ಇರುವದಿಲ್ಲ. ಮನುಷ್ಯರ ಹೊರತಾಗಿ ಮನುಷ್ಯರ ಜೀವನ ನಡೆಯುವದು ಶಕ್ಯವಿಲ್ಲ. (೩೯) ಪರಮೇಶ್ವರನಲ್ಲಿ ಅನಂತ, ಅಗಣಿತ, ಗುಣಗಳಿರುವವು. ಮನುಷ್ಯರಿಗೆ ಇವನ ಸಂಪೂರ್ಣ ವಿವರವಾದ [ತಪಶೀಲವಾರ] ಮಾಹಿತಿ ಹೇಳಲಿಕ್ಕೆ ಬರುವದಿಲ್ಲ, ಆಗುವದಿಲ್ಲ. ಆದರೆ ಅಧ್ಯಾತ್ಮಗ್ರಂಥಗಳ ಶ್ರವಣ ಮಾಡಿದ್ದಾದರೆ ಅಲ್ಪ ಸ್ವಲ್ಪ ಇವನ ಗುಣರೂಪದ [ಪರಮಾತ್ಮ ಸ್ವರೂಪ ಮತ್ತು ಅವನ ಗುಣದ] ಅನುಭವವಾಗುವದು. (೪೦)

ಶ್ರೀ ದಾಸಬೋಧದ ಹದಿನೆಂಟನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ದೇಹ ದುರ್ಲಭ ನಿರೂಪಣ"ವೆಂಬ ಹೆಸರಿನ ನಾಲ್ಕನೇ ಸಮಾಸವು ಮುಗಿದುದು.

● ●

ದಶಕ ಅಷ್ಟದಶ : ಸಮಾಸ ಪಂಚಮ : ಕರಂಟ ಪರೀಕ್ಷಾ ನಿರೂಪಣ [ನುಡಿ ೩೩]

॥ಶ್ರೀರಾಮ ಸಮರ್ಥ॥ ಧಾನ್ಯ ಉದಂಡ ಮೋಜಿಲೇ ।
ಪರೀ ತ್ಯಾ ಮಾಪೇ ನಾಹೀ ಭಕ್ಷಿಲೇ।
ವಿವರಲ್ಯಾವಿಣ ತೈಸೇ ಜಾಲೇ । ಪ್ರಾಣೀ ಮಾತ್ರಾಸೀ ॥೧॥

ಪಾಠ ಮ್ಹಣತಾ ಆವರೇನಾ । ಪುಸತಾ ಕಾಂಹೀ ಚ ಕಳೇನಾ ।
ಅನುಭವ ಪಾಹಾತಾ ಅನುಮಾನಾ । ಮಧೇ ಪಡೇ ॥೨॥

ಶಬ್ದರತ್ನೇ ಪರೀಕ್ಷಾವೀ । ಪ್ರತ್ಯಯಾಚೀ ಪಾಹೋನ ಘ್ಯಾವೀ ।
ಯೇರ ತೇ ಅವಘೀ ಸಾಂಡಾವೀ । ಯೇಕೀಕಡೆ ॥೩॥

ನಾಂವರೂಪ ಆವಘೇ ಸಾಂಡಾವೇ । ಮಗ ಅನುಭವಾಸ ಮಾಂಡಾವೇ ।
ಸಾರ ಅಸಾರ ಯೇಕ ಚಿ ಕರಾವೇ । ಹೇ ಮೂರ್ಖಪಣ ॥೪॥

ಲೇಖಕೇ ಕುಳ ಸಮಜವಾವೇ । ಕಿಂವಾ ಉಗೇ ಚ ವಾಚಾವೇ ।
ಯೇಣೇ ದೃಷ್ಟಾಂತೇ ಸಮಜಾವೇ । ಕೋಣೀತರೀ ॥೫॥

# ದಶಕ ೧೮. ಸಮಾಸ ೫. ಕರಂಟ ಪರೀಕ್ಷಾ ನಿರೂಪಣ (ನುಡಿ ೩೩)

ಜೀವನದಲ್ಲಿ ಯಾವತ್ತೂ ರೀತಿಯಿಂದ [ಬದಿಯಿಂದ] ವಿಚಾರ ಪೂರ್ವಕ ನಡೆಯುವದರ ಅವಶ್ಯಕತೆಯು ಬಹಳವಿರುವದು. ಕೇವಲ ಗ್ರಂಥದ ಪಾರಾಯಣವು ಉಪಯೋಗ ಬೀಳುವದಿಲ್ಲ. ಗ್ರಂಥದ ಅಭ್ಯಾಸವನ್ನು ಚನ್ನಾಗಿ ಮಾಡಬೇಕು. ಶಬ್ದಗಳ ಅರ್ಥವನ್ನು ಸಂದರ್ಭಕ್ಕನುಸಾರವಾಗಿ ಚನ್ನಾಗಿ ತಿಳಿದುಕೊಳ್ಳಬೇಕು. ಮತ್ತು ಆ ಮೇಲೆ ಜನರಿಗೆ ಅದನ್ನು ವಿವರಿಸಿ ಹೇಳಬೇಕು. ಎಲ್ಲರ ಅಂತಃಕರಣವನ್ನು ಸಂಬಾಳಿಸಬೇಕು. ಕೇವಲ ನಾಮರೂಪಗಳು ಕೆಲಸಕ್ಕೆ ಬರುವದಿಲ್ಲ. ಆದ್ದರಿಂದ ನಾಮರೂಪಗಳನ್ನು ಬದಿಗೆ ಸರಿಸಿ ಅಂತರಾತ್ಮನ ಅನುಭವವನ್ನು ಪಡೆಯಬೇಕು. ಮತ್ತು ಅನುಭವಪಡೆದು ಆ ಮೇಲೆ ಮಾತನಾಡಬೇಕು. ಅಸತ್ಯ ಮತ್ತು ಅನ್ಯಾಯಗಳನ್ನು ಬಿಟ್ಟುಕೊಟ್ಟು ಕೇವಲ ಸತ್ಯ ಮತ್ತು ನ್ಯಾಯ ಮಾರ್ಗದಿಂದ ನಡೆಯಬೇಕು. ದೃಶ್ಯವನ್ನು ದಾಟಿ ಹೋಗಿ ನಿಃಶಬ್ದದ ಮೂಲವನ್ನು ಶೋಧಿಸಬೇಕು. ಆತ್ಮಾನಾತ್ಮ ವಿವೇಕ ಮತ್ತು ಸಾರಾಸಾರ ವಿಚಾರಮಾಡಬೇಕು. ಅಲಕ್ಷ್ಯನಾದ ಪರಬ್ರಹ್ಮದಲ್ಲಿ ಲಕ್ಷ್ಯ ಹಚ್ಚಬೇಕು. ಕೊನೆಯಲ್ಲಿ ಆತ್ಮ ನಿವೇದನದಿಂದ ಸಮಾಧಾನ ಹೊಂದಬೇಕು.

## ದಶಕ ೧೮. ಸಮಾಸ ೫. ಕರಂಟ ಪರೀಕ್ಷಾ ನಿರೂಪಣ (ನುಡಿ ೩೩)

ಪ್ರಪಂಚದಲ್ಲಾಗಲೀ ಪಾರಮಾರ್ಥದಲ್ಲಿಯಾಗಲೀ ಮನುಷ್ಯನು ಬಹಳ ವಿಚಾರ ಪೂರ್ವಕವಾಗಿ ಮತ್ತು ಪ್ರಾಮಾಣಿಕತನದಿಂದ ನಡೆಯಬೇಕು. ನಾವು ಏನನ್ನು ಯಾವ ಶಬ್ದವನ್ನು ಮಾತಾಡುವೆವೋ ಅದರ ಸರಿಯಾದ ಯೋಗ್ಯ ಅರ್ಥವನ್ನು ತಿಳಿಸಿ ಹೇಳಬೇಕು. ನಾವು ಯಾವ ಪ್ರಶ್ನೆಯನ್ನು ಮಂಡಿಸುವೆವೋ ಅದಕ್ಕೆ ಸರಿಯಾದ ಉತ್ತರಕೊಡಬೇಕು. ಮಾತನಾಡುವದು ಅನುಭವದ್ದಾಗಿರಬೇಕು: ತಿಳಿಯಿರಿ. ಒಂದು[ಅಳತೆ] ಮಾಪಿನಿಂದ ಬಹಳಷ್ಟು ಧಾನ್ಯವನ್ನು ಅಳೆದರೆ ಆ ಮಾಪು ಧಾನ್ಯವನ್ನು ತಿನ್ನುವದಿಲ್ಲ. ಇದರಂತೆ ಯಾವ ಮನುಷ್ಯನು ವಿಚಾರವನ್ನೇ ಮಾಡುವದಿಲ್ಲವೋ ಅವನಿಗೆ ಅವನ ಜ್ಞಾನದ ಉಪಯೋಗ ಎಷ್ಟೂ ಆಗುವದಿಲ್ಲ. (೧) ಒಬ್ಬ ಮನುಷ್ಯನು ಬಹಳಷ್ಟು ಪಾಠಾಂತರ [ಕಂಠ ಪಾಠ] ಮಾಡಿದ್ದನು. ಇವನು ಒಮ್ಮೆ ಪಾಠವನ್ನು ಅನ್ನಹತ್ತಿದರೆ ಅದು ಮುಗಿಯುವವರೆಗೂ ಮಧ್ಯದಲ್ಲಿ ನಿಲ್ಲಿಸಲಿಕ್ಕಾಗುತ್ತಿರಲಿಲ್ಲ. ಒಳ್ಳೇ ಅಮೋಘವಾಗಿ, ಸರಾಗವಾಗಿ, ಒಂದೇಸಮನೆ ಪಾಠ ಸಾಗುತ್ತಿತ್ತು. ಆದರೆ ನೀನು ಈಗ ಅನ್ನುವ ಪಾಠದ ಅರ್ಥವೇನೆಂದು ವಿಚಾರಿಸಿದರೆ ಅವನಿಗೆ ಅದರ ಅರ್ಥ ಎಷ್ಟೂ ಗೊತ್ತಿರಲಿಲ್ಲ. ಇಂಥವರ ಅನುಭವ ನೋಡಿದರೆ ಇವರು ಕೇವಲ ಕಲ್ಪನೆ ಅಥವಾ ಸಂಶಯದಲ್ಲಿ ಮುಳುಗಿರುವರು. ಅರ್ಥಾತ್ ಅರ್ಥ ತಿಳಿಯದಿದ್ದರೆ ಹೀಗಾಗುವದೆಂಬ ಮಾತು ಗೊತ್ತಿದ್ದದ್ದೇ ಇರುವದು. (೨) ಗ್ರಂಥ ಓದುವಾಗ ಅದರಲ್ಲಿಯ ಶಬ್ದಗಳನ್ನು ಲಕ್ಷ್ಯಗೊಟ್ಟು ಪರೀಕ್ಷಿಸಬೇಕು. ಅವುಗಳಲ್ಲಿ ಸ್ವಾನುಭವದ ವಚನಗಳು ಎಷ್ಟಿರುವವೋ ಅವನ್ನೆಲ್ಲ ಗ್ರಹಣ [ಸ್ವೀಕಾರ] ಮಾಡಬೇಕು. ಬಾಕಿ ಗ್ರಂಥಗಳನ್ನು ಅಂದರೆ ಸ್ವಾನುಭವ ರಹಿತವಾದವುಗಳನ್ನು ದೂರಸರಿಸಿ ಬಿಡಬೇಕು. ಇಂಥವನ್ನು ಗ್ರಹಣಮಾಡಬಾರದು. (೩) ನಾಮರೂಪ ತುಂಬಿದ ದೃಶ್ಯವೆಲ್ಲವನ್ನೂ ಹಿಂದಕ್ಕೆ ಬಿಟ್ಟು ಬದಿಗೆ ಸರಿಸಿ ಆ ಮೇಲೆ ಅನುಭವದ ಬೆನ್ನು ಹತ್ತಬೇಕು. ಅನುಭವ ಪಡೆಯಬೇಕು, ತಿಳಿಯಬೇಕು. ದೃಶ್ಯವೆಲ್ಲವೂ ಅಸಾರವಿರುವದು. ಅವ್ಯಕ್ತನಿರುವ ಅಂತರಾತ್ಮಾ ಸಾರವಿರುವನು. ಸತ್ಯ, ಶ್ರೇಷ್ಠ, ಶಾಶ್ವತವಿರುವನು. ಸಾರ ಮತ್ತು ಅಸಾರ ಎರಡನ್ನೂ ಒಂದೇ ಎಂದು ತಿಳಿಯುವದು ಮೂರ್ಖತನದ್ದೆನಿಸುವದು. (೪) ಯಾವ ವಿಷಯ ಬರೆದಿರುವದೋ ಅಥವಾ ಏನನ್ನು ಬರೆದಿರುವದೋ ಅದನ್ನೆಲ್ಲ ಬರೆಯಲಿಕ್ಕೆ ಹೇಳಿದವನಿಗೆ ಲೇಖಕನು [ಬರೆದವನು] ಸರಿಯಾದ ರೀತಿಯಲ್ಲಿ ತಿಳಿಸಿ ಹೇಳಿಕೊಡಬೇಕು. ಯಾವುದನ್ನು ಬರೆದೇ ಇಲ್ಲವೋ ಅಂವರೆ ಸುಮ್ಮನೇ ಏನಾದರೂ [ಬರೆಯದ್ದನ್ನು] ಓದಬಾರದು. ಈ ದೃಷ್ಟಾಂತದ ಮೇಲಿಂದ ಪ್ರತಿಯೊಬ್ಬರೂ ಯೋಗ್ಯವಾದದ್ದುಯಾವುದು ಅನ್ನುವದನ್ನು ಚನ್ನಾಗಿ ತಿಳಿಯಬೇಕು. ನಾವು ಯಾವ ಗ್ರಂಥವನ್ನು ಹೇಳುವದಿರುವದೋ ಅದನ್ನು ಹೇಳುವಾಗ್ಗೆ ಗ್ರಂಥಕಾರನು ಗ್ರಂಥದಲ್ಲಿ ಏನನ್ನು ಹೇಳಿರುವನೋ ಅದನ್ನೇ ನಾವು ಹೇಳಬೇಕು. ಗ್ರಂಥಕಾರನಿಗೆ ಯಾವುದು ಒಪ್ಪಿಗೆ ಇಲ್ಲವೋ ಅದನ್ನು ಹೇಳಿ ಜನರನ್ನು ವಂಚಿಸಬಾರದು, ದಾರಿ ತಪ್ಪಿಸಬಾರದು. (೫)

ಜೇಥೇ ನಾಹೀ ಸಮಜಾವೀಸ । ತೇಥೇ ಅವಘೀ ಕುಸಮುಸ ।
ಪುಸೋ ಜಾತಾ ವಸವಸ । ವಕ್ತಾ ಕರೀ ॥೬॥

ನಾನಾ ಶಬ್ದ ಯೇಕವಟಿಲೇ । ಪ್ರಚೀತೀವೀಣ ಉಪಾವ ಕೇಲೇ ।
ಪರೀ ತೇ ಅವಘೇ ಚಿ ವೇರ್ಥ ಗೇಲೇ । ಘಡಪ್ರಸಂಗೀ ॥೭॥

ಪಸೇವರೀ ವೈರಣ ಘಾತಲೇ । ತಾಂತಡೀನೇ ಜಾತೇ ಮೋಡಿಲೇ ।
ತೇಣೇ ಪೀಠ ಬಾರೀಕ ಆಲೇ । ಹೇ ತೋ ಘಡೇನಾ ॥೮॥

ಘಾಸಾಮಾಗೇ ಘಾಸ ಘಾತಲಾ । ಆವಕಾಶ ನಾಹೀ ಚಾವಾಯಾಲಾ ।
ಅವಘಾ ಬೋಕಣಾ ಭರಿಲಾ । ಪುಢೇ ಕೈಸೇ ॥೯॥

ಏಕಾ ಘಡನಿಸೀಚೇ ಲಕ್ಷಣ । ವಿರಂಗ ಜಾಲೂ ನೇದೀ ಕ್ಷಣ।
ಸಮಸ್ತಾಂಚೇ ಅಂತಃಕರ್ಣ । ಸಾಂಭಾಳೀತ ಜಾವೇ ॥೧೦॥

ಸೂಕ್ಷ್ಮ ನಾಮೇ ಸುಖೇ ಘ್ಯಾವೀ । ತಿತುಕೀ ರೂಪೇ ವೋಳಖಾವೀ ।
ವೋಳಖೋನ ಸಮಜಾವೀ । ಶ್ರೋತಯಾಸೀ ॥೧೧॥

ಸಮಶ್ಯಾ ಪುರತಾ ಸುಖೀ ಹೋತೀ । ಶ್ರೋತೆ ಅವಘೆ ಆನಂದತೀ ।
ಅವಘೆ ಕ್ಷಣಕ್ಷಣಾ ವಂದಿತೀ । ಗೋಸಾವಿಯಾಸೀ ॥೧೨॥

ಸಮಶ್ಯಾ ಪುರತಾ ವಂದಿತೀ । ಸಮಶ್ಯಾ ನ ಪುರತಾ ನಿಂದಿತೀ ।
ಗೋಸಾವೀ ಚಿಣಚಿಣ ಕರಿತೀ । ಕೋಣ್ಯಾ ಹಿಶೇಬೇ ॥೧೩॥

ಶುಧ ಸೋನೇ ಪಾಹೋನ ಘ್ಯಾವೇ । ಕಸೀ ಲಾವುನೀ ತಾವಾವೇ ।
ಶ್ರವಣ ಮನನೇ ಜಾಣಾವೇ । ಪ್ರತ್ಯಯಾಸೀ ॥೧೪॥

ವೈದ್ಯಾಚೀ ಪ್ರಚಿತ ಯೇನಾ । ವೆಥಾ ಪರತೀ ಹೊಯೇನಾ ।
ಆಣೀ ರಾಗೇಜಾವೇ ಜನಾ । ಕೋಣ್ಯಾ ಹಿಶೇಬೇ ॥೧೫॥

ಖೋಟೇ ಕೊಠೇಚಿ ಚಾಲೇನಾ । ಖೋಟೇ ಕೋಣಾಸ ಮಾನೇನಾ ।
ಯಾಕಾರಣೇ ಅನುಮಾನಾ । ಖರೇ ಆಣಾವೇ ॥೧೬॥

ಯಾವುದೊಂದು ಗ್ರಂಥವನ್ನು ಜನರಿಗೆ ಚೆನ್ನಾಗಿ ವಿವರಿಸಿ ಹೇಳಲಿಕ್ಕೆ ಯಾರಿಗೆ ಬರುವದಿಲ್ಲವೋ ಅಂಥವನ ಹೇಳಿಕೆಯ ಬಗ್ಗೆ ಜನರು ಅಸಂತುಷ್ಟರಾಗುವರು. ಮತ್ತು ವಕ್ತಾ [ಹೇಳುವವ] ನಿಗೆ ಪ್ರಶ್ನೆ ಕೇಳಿ ತಿಳಿಯಬೇಕೆಂದರೆ ಅವನು [ವಕ್ತಾನು] [ವಸಕ್ಕೆಂದು] ಒಮ್ಮೆಲೇ ಸಿಟ್ಟಿಗೆದ್ದು ಮೈಮೇಲೆ ಬರುವನು. (೬) ಒಬ್ಬ ವಕ್ತಾ ಬಹಳಷ್ಟು ಶಬ್ದಗಳನ್ನು ಸುಂದರವಾಗಿ ಉಪಯೋಗಿಸಿ ಮಾತನಾಡಿದನು. ಆದರೆ ಅವನ ಮಾತಿನಲ್ಲಿ ಪ್ರಚೀತಿಯ ಅನುಭವದ ಪ್ರತಿಬಿಂಬ ಬೀಳದಿದ್ದರೆ ಆಗ ಆ ಅಪಾರ ಜನ ಸಮುದಾಯದಲ್ಲಿ ಇವನ ಮಾತುಗಳು ವ್ಯರ್ಥವಾಗುವವು. [ಹೊಳೆಯಲ್ಲಿ ಹುಣಸೀ ಹಣ್ಣು ತೊಳೆದಂತೆ ವ್ಯರ್ಥವಾಗಿ ಹೋಗುವದು.](೭) ಇದೆಲ್ಲ ಹೇಗಾಗುವದೆಂಬುದನ್ನು ನೋಡಿರಿ. ಬೀಸುವ ಕಲ್ಲಿನ ಮೇಲೆ ಬೀಸುವ ಕಾರ್ಯ ನಡೆದಿರುವದು. ಆಗ ಒಬ್ಬನು ಆ ಕಲ್ಲಿನ ಬಾಯಿಯಲ್ಲಿ ಮುಷ್ಟಿಯ ಮೇಲೆ ಮುಷ್ಟಿಯಂತೆ [ಭರಾ ಭರಾ] ಧಾನ್ಯವನ್ನು ಮೇಲಿಂದ ಮೇಲೆ ಹಾಕುತ್ತ ಮತ್ತು ಕಲ್ಲನ್ನು ಹೇಗೇಗೋ ಭರಭರಾ ಗರಾಗರಾ ಎಂದು ಅವಸರದಿಂದ ತಿರುಗಿಸಿದರೆ ಒಳ್ಳೇ ನುಣ್ಣದಾದ ಜಿನುಗು ಹಿಟ್ಟು ಬೀಳುವದು ಶಕ್ಯವಿಲ್ಲ. (೮) ಅಥವಾ ಒಬ್ಬನು ಊಟಕ್ಕೆ ಕುಳಿತನು ಮತ್ತು ಅವನು ತುತ್ತಿನ ಮೇಲೆ ತುತ್ತನ್ನು ಬಾಯಿಯಲ್ಲಿ ಅವಸರದಿಂದ ಹಾಕಿಕೊಂಡರೆ ಬಾಯಿ ಆಡಿಸಿ ಅನ್ನ ನುರಿಸಲು ಅಲ್ಲಿ ಅವಕಾಶವಿಲ್ಲದಂತಾಗಿ ಬಾಯಿ ತುಂಬ ಅನ್ನವೇ ಆಗಿ ಅದು ಗಂಟಲದಲ್ಲಿ ಇಳಿಯಲೂ ತೊಂದರೆ ಆಗುವದು. ಹೊಟ್ಟೆಯಲ್ಲಿ ಹೋದರೂ ಸರಿಯಾಗಿ ಪಚನವೂ ಆಗಲಾರದು. ಇದರಂತೆ ಮನುಷ್ಯನು ಬಿಡುವಿಲ್ಲದೇ ಅವಸರವಾಗಿ ಗ್ರಂಥಗಳನ್ನು ಓದಿದನು, ಆದರೆ ಅದರ ಮನನ ಮಾಡದಿದ್ದರೆ ಅದರ ವಿವರಣೆ ತಿಳಿಯುವ ಪ್ರಯತ್ನಮಾಡದಿದ್ದರೆ ಅಂಥವನಿಗೆ ಆ ಗ್ರಂಥಗಳ ಜ್ಞಾನ ಸರಿಯಾಗಿ ಆಗುವದಿಲ್ಲ. ಜ್ಞಾನದ ಪಚನವೇ ಆಗದಿದ್ದ ಮೇಲೆ ಗ್ರಂಥದ ನಿಜವಾದ ರಹಸ್ಯ ಹಾಗೂ ಸರಿಯಾದ ಅರ್ಥ ಆಗುವದಿಲ್ಲ. (೯) ಘಡಣೇಸನ [ಅಂದರೆ ಸಭಾ ಸಮ್ಮೇಲನಗಳನ್ನು ನಡೆಯಿಸುವ ಮುಖ್ಯ ಸಂಚಾಲಕನ] ಮುಖ್ಯ ಲಕ್ಷಣ ಹೇಗಿರುವದೆಂದರೆ ಇವನು ಯಾವುದೇ ಪ್ರಸಂಗದಲ್ಲಿ ಬೇರಂಗ ಆಗ ಗೊಡುವದಿಲ್ಲ. [ಹದಗೆಡುವಂತೆ ಮಾಡಗೊಡುವದಿಲ್ಲ] ಅಂತೆಯೇ ಸರ್ವರ ಅಂತಃಕರುಣವನ್ನು ಸಂಬಾಳಿಸಬೇಕು. [ರಕ್ಷಿಸಬೇಕು, ಕಾಯಬೇಕು.] ಘಡಣೇಸ ಅಂದರೆ ರಾಜ್ಯದ ಮಂತ್ರಿ ಅಥವಾ ಪ್ರತಿನಿಧಿ. ಇಲ್ಲಿ ವಕ್ತಾ ಅಂದರೆ ಸಂತ ಶರಣರ ಪ್ರತಿನಿಧಿ ಎಂದು ತಿಳಿಯಬೇಕು. (೧೦) ಅಧ್ಯಾತ್ಮದ ವಿವೇಚನೆಯನ್ನು ಮಾಡುವಾಗ ಸೂಕ್ಷ್ಮ ತತ್ವಗಳ ಹೆಸರನ್ನು ಉಪಯೋಗಿಸಬೇಕು. [ಹೇಳಬೇಕು] ನಾವು ಯಾವ ಶಬ್ದ ಹೇಳುವೆವೋ ಅದರ ಅರ್ಥ ಮತ್ತು ಆ ಶಬ್ದದಿಂದ ಉಚ್ಚರಿಸಲ್ಪಡುವ ತತ್ವದ ಸ್ವರೂಪವೆಲ್ಲ ನಮಗೆ ಸರಿಯಾಗಿ ಗೊತ್ತಿರಬೇಕು. ನಾವು ಅದನ್ನು ತಿಳಿದು ಶ್ರೋತಾ ಜನಕ್ಕೆ ತಿಳಿಸಿ ಹೇಳಬೇಕು. (೧೧) ಶ್ರೋತಾ ಜನರಲ್ಲಿ ಯಾವ ಸಮಸ್ಯೆಯು ತೋರಿ ಬಂದಿರುವದೋ ಅದನ್ನು ನಾವು ಸರಿಯಾಗಿ ಬಿಡಿಸಿ ತಿಳಿಸಿ ಹೇಳಿದರೆ ಎಲ್ಲ ಶ್ರೋತಾಜನಕ್ಕೂ ಆನಂದವಾಗುವದು. ಮತ್ತು ಆ ಮೇಲೆ ಅವರೆಲ್ಲರೂ ವಕ್ತಾನಿಗೆ ವಂದನೆ ಮಾಡುವರು. (೧೨) ಸಮಸ್ಯೆಯನ್ನು ಬಿಡಿಸಿ ಹೇಳಿ ಸಮಾಧಾನಮಾಡಿದರೆ ಶ್ರೋತಾ ಜನ ವಂದನೆಮಾಡುವರು, ಸಮಸ್ಯೆಯನ್ನು ಬಿಡಿಸಿ ಹೇಳದಿದ್ದರೆ ಶ್ರೋತಾ ಜನ ನಿಂದನೆ ಮಾಡುವರು. ಆಗ ವಕ್ತಾ ವ್ಯರ್ಥವಾಗಿ ಕುರ್ ಕುರ್, ಫುಸ್ ಫುಸ್, ಮಾಡುವ ಕಾರಣವಿಲ್ಲ. (ಮಾಡಿದರೂ ಉಪಯೋಗವಿಲ್ಲ) [೧೩] ಬಂಗಾರವು ಶುದ್ಧವಾಗಿದೆ ಅನ್ನುವದನ್ನು ಖಾತ್ರಿ ಮಾಡಿಕೊಂಡು ತೆಗೆದುಕೊಳ್ಳಬೇಕು. ಇದನ್ನು ಒರೆಗಲ್ಲಿಗೆ ಹಚ್ಚಿ ತಿಕ್ಕಿ ನೋಡಬೇಕು. ಬೆಂಕಿಯಲ್ಲಿಟ್ಟು ಕಾಯಿಸಿ ಪರೀಕ್ಷಿಸಬೇಕು. (ಅಂದರೆ ಮೋಸವಾಗುವದಕ್ಕೆ ಆಸ್ಪದವಿರುವದಿಲ್ಲ). ಇದರಂತೆ ಶ್ರವಣ ಮತ್ತು ಮನನ ಈ ಸಾಧನಗಳಿಂದ ಅನುಭವದ ಪರೀಕ್ಷೆಯನ್ನು ಮಾಡಬೇಕು. [೧೪] ತಿಳಿಯಿರಿ. ಒಬ್ಬನಿಗೆ ಯಾವುದೋ ಒಂದು ರೋಗ ಬಂದಿತು. ಅದಕ್ಕೆ ಒಬ್ಬ ವೈದ್ಯರಿಂದ ಔಷಧ ತೆಗೆದುಕೊಂಡನು. ಆದರೆ ಆ ಔಷಧದಿಂದ ಗುಣವಾದದ್ದರ ಅನುಭವ ಬರಲಿಲ್ಲ. ಅವನ ರೋಗ ನೆಟ್ಟಗಾಗಲಿಲ್ಲ. ಇದರ ಸಲುವಾಗಿ ಇತರ ಜನರ ಮೇಲೆ ಸಿಟ್ಟಿಗೇಳುವದು ಎಲ್ಲಿಯ ನ್ಯಾಯ ? [೧೫] ಯಾವುದು ಸುಳ್ಳು ಇರುವದೋ, ಖೊಟ್ಟಿ ಇರುವದೋ ಅದು ಎಲ್ಲಿಯೂ ನಡೆಯುವದಿಲ್ಲ. ಅದು ಯಾರಿಗೂ ಸರಿ ಬರುವದಿಲ್ಲ. ಆದ್ದರಿಂದ ಯಾವುದು ಖರೇ ಇರುವದೋ ಅದರ ಬಗ್ಗೆಯೇ ಪ್ರತಿಪಾದನ ಮಾಡಬೇಕು. [೧೬]

ಲಿಹಿಣೇ ನ ಯೇತಾ ವ್ಯಾಪಾರ ಕೇಲಾ । ಕಾಂಹೀ ಯೇಕ ದಿವಸ ಚಾಲಿಲಾ ।
ಪುಸತಾ ಸುರನೀಸ ಭೇಟಲಾ । ತೇವ್ಹಾ ಖೋಟೇ ॥೧೭॥

ಸರ್ವ ಆವಘೇ ಹಿಶೇಬೀ ಠಾವೇ । ಪ್ರತ್ಯಯ ಸಾಕ್ಷೀನೇ ಬೋಲಾವೇ ।
ಮಗ ಸುರನೀಸೇ ಕಾಯ ಕರಾವೇ । ಸಾಂಗಾನಾ ಕಾ ॥೧೮॥

ಸ್ವಯೇ ಆಪಣ ಚಿ ಗುಂತೇ । ಸಮಜಾವೀಸ ಕೈಸೀ ಹೋತೇ ।
ನೇಣತಾ ಕೋಣೇಯೇಕ ತೇ । ಆಪದೋ ಲಾಗತೀ ॥೧೯॥

ಬಳೇವಿಣ ಯುದ್ಧಾಸ ಗೇಲಾ । ತೋ ಸರ್ವಸ್ವೇ ನಾಗವಲಾ ।
ಶಬ್ದ ಠೇವಾವಾ ಕೋಣಾಲಾ । ಕೋಣ ಕೈಸಾ ॥೨೦॥

ಜೇ ಪ್ರಚೀತೀಸ ಆಲೇ ಖರೇ । ತೇ ಚಿ ಘ್ಯಾವೇ ಅತ್ಯಾದರೇ ।
ಅನುಭವೇವಿಣ ಜೇ ಉತ್ತರೇ । ತೇ ಫಲಕಟೇ ಜಾಣಾವೀ ॥೨೧॥

ಸಿಕಲೂ ಜಾತಾ ರಾಗ ಚಢೇ । ಪರಂತು ಪುಢೇ ಆದಳ ಘಡೇ ।
ಖೋಟಾ ನಿಶ್ಚಯ ತಾತ್ಕಾಳ ಉಡೇ । ಲೋಕಾಮಧೇ ॥೨೨॥

ಖರೇ ಸಾಂಡುನೀ ಖೋಟೇ ಘೇಣೇ । ಭಕಾಧೇಸ ಕಾಯ ಉಣೇ ।
ತ್ರಿಭುವನೀ ನಾರಾಯಣೇ । ನ್ಯಾಯ ಕೇಲಾ ॥೨೩॥

ತೋ ನ್ಯಾಯ ಸಾಂಡಿತಾ ಸೇವಟೀ । ಅವಘೇ ಜಗ ಚಿ ಲಾಗೇ ಪಾಠೀ ।
ಜನೀ ಭಾಂಡಭಾಂಡೋ ಹಿಂಪುಟೀ । ಕಿತೀ ವ್ಹಾವೇ ॥೨೪॥

ಅನ್ಯಾಯೇ ಬಹುತಾಸ ಪುರವಲೇ । ಹೇ ದೇಖಿಲೇ ನಾ ಐಕಿಲೇ ।
ವೇಡೇ ಉಗೇ ಚಿ ಭರೀ ಭರಲೇ। ಅಸತ್ಯಾಚೇ ॥೨೫॥

ಅಸತ್ಯ ಮ್ಹಣಿಜೆ ತೇ ಚಿ ಪಾಪ । ಸತ್ಯ ಜಾಣಾವೇ ಸ್ವರೂಪ ।
ದೋಹೀಮಧೇ ಸಾಕ್ಷಪ । ಕೋಣಾಚಾ ಕರಾವಾ ॥೨೬॥

ಮಾಯೆಮಧೇ ಬೋಲಣೇ ಚಾಲಣೇ ಸಾಚೇ।ಮಾಯಾ ನಸ್ತಾ ಬೋಲಣೇ ಕೈಚೇ।
ಯಾಕಾರಣೇ ನಿಶಬ್ದಾಚೇ । ಮೂಳ ಶೋಧಾವೇ ॥೨೭॥

ಒಬ್ಬ ಮನುಷ್ಯನಿಗೆ ಬರೆಯಲು ಬರುವದಿಲ್ಲ. ಅಂಥವನು ವ್ಯಾಪಾರ ಮಾಡಿದನು. ಇದು ಕೆಲವು ದಿವಸ ನಡೆಯಿತು. ಆ ಮೇಲೆ ಒಬ್ಬನು ಲೆಕ್ಕ ತಪಾಸಿಗನು ಭೆಟ್ಟಿಯಾದನು. ಇವನು ವ್ಯಾಪಾರಿಯ ಲೆಕ್ಕಪತ್ರ ತಪಾಸು ಮಾಡಿದನು. ಆಗ ಅವನಿಗೆ ವ್ಯಾಪಾರ ಖೊಟ್ಟಿ ಇರುವದೆಂದು ಕಂಡು ಬಂದಿತು. [೧೭] ಲೆಕ್ಕದ ಮೇಲಿಂದಲೇ ವ್ಯಾಪಾರದ ಬಗ್ಗೆ ಏನೆಲ್ಲವೂ ಗೊತ್ತಾಗುವದು. ಇದರಂತೆ ಮತ್ತೂ ಮಾತನಾಡುವಾಗ ತನ್ನ ಅನುಭವದ ಪುರಾವೆ ಯಿಂದ ಮಾತನಾಡಬೇಕು. ಲೆಕ್ಕವನ್ನು ಸರಿಯಾಗಿ ಇಟ್ಟಿದ್ದಾದರೆ ಆಗ ಸುರನೀಸ ಅಂದರೆ ಲೆಕ್ಕ ತಪಾಸಿಗನೇನು ಮಾಡುತ್ತಿದ್ದನು ಅರ್ಥಾತ್ ಏನೂ ಮಾಡಲಿಕ್ಕೆ ಅವನಿಗಾಗುತ್ತಿರಲಿಲ್ಲ. ಅಲ್ಲವೇ ? ನೀವೇ ಹೇಳಿರಿ. [೧೮] ಯಾರು ಮೇಲಿಂದ ಮೇಲೆ ಸ್ವತಃ ತೊಂದರೆಯಲ್ಲಿ ಸಿಕ್ಕು ಬೀಳುವರೋ ಅವರು ಎರಡನೆಯವರಿಗೇನು ಚನ್ನಾಗಿ ತಿಳಿಸಿಕೊಡ ಬಲ್ಲರು ? ತಿಳಿಸಿ ಕೊಡುವದು ಕಠಿಣವಿರುವದು. ಇಂಥವರ ನಾದಿಗೆ ಹತ್ತುವ ಅಡಾಣಿ (ಅಡ್ನಾಡಿ) ಜನರು ಅಡ ಚಣೆಯಲ್ಲಿ-ತೊಂದರೆಯಲ್ಲಿ ಸಿಕ್ಕು ಬೀಳುವರು.[೧೯] ತಿಳಿಯಿರಿ. ಒಬ್ಬ ಮನುಷ್ಯನಲ್ಲಿ ಬಲವಿಲ್ಲ.(ಸಾಮರ್ಥ್ಯವಿಲ್ಲ). ಇಂಥವನು ಲಢಾಯಿಗೆ [ಕಾಳಗಕ್ಕೆ] ಹೋದನು. ಆದರೆ ಅಲ್ಲಿ ಅವನು ಸರ್ವ ರೀತಿಯಿಂದಲೂ ಫಜೀತಿ ಹಾಗೂ ಕಷ್ಟದಲ್ಲಿ ಸಿಕ್ಕು ಬಿಡುವನು. ಇಂಥ ಪ್ರಸಂಗದಲ್ಲಿ ಯಾರು ಯಾರಿಗೆ ದೋಷ ಕೊಡಲಿಕ್ಕೆ ಬಂದೀತು ? [೨೦] ಯಾವುದು ನಿಜವಿರುವದೆಂದು ನಮ್ಮ ಅನುಭವಕ್ಕೆ ಬರುವದೋ ಅದನ್ನು ಬಹಳ ಆದರದಿಂದ ನಾವು ಗ್ರಹಣ ಮಾಡಬೇಕು. ಪ್ರಚೀತಿಗೆ ಬರಲಾರದ ಅನುಭವ ಸಿದ್ಧವಾಗಿರಲಾರದ ಬರವಣಿಗೆಯು ಅಥವಾ ಮಾತನಾಡಿದ ಮಾತು ಗಳು ಕೇವಲ ಗೊಳ್ಳು ಜೊಳ್ಳು ಇರುವವೆಂದು ತಿಳಿಯಬೇಕು. [೨೧] ಇಂಥ ಮಾತುಗಳನ್ನು ಮಾತನಾಡುವ ಮನು ಷ್ಯನಿಗೆ ಯಾರಾದರೂ ತಿಳಿಸಿ ಹೇಳುವದಕ್ಕೆ ಹೋದರೆ ಅವನಿಗೆ ಬಹಳ ಸಿಟ್ಟು ಬರುವದು. ಆದರೆ ಮುಂದೆ ಅವನಿಗೆ ಠೋಕರ ಅಂದರೆ ಹೊಡೆತ, ಒದೆತ ಬೀಳುವವು. ಅಯೋಗ್ಯನೆನಿಸುವನು. ನಿಜವಾಗಿ ಖೊಟ್ಟಿ ಇರುವದನ್ನು ಖರೇ ಇರುವದೆಂದು ಜನರ ಮುಂದೆ ಎಷ್ಟೇ ಡೌಲಿನಿಂದ [ಮಾತಿನ ಜಾಣ್ಮೆಯಿಂದ] ಮಂಡಿಸಿ ಇದೇ ನಿಜವೆಂದು ಎಷ್ಟೇ ಆಡಂಬರ ಮಾಡಿ ಹೇಳಿದರೂ ಅದೆಲ್ಲ ಆಗಲೇ ಖೊಟ್ಟಿ ಎಂದು ಗೊತ್ತಾಗುವದು. [೨೨] ಒಬ್ಬ ಮನುಷ್ಯನು ನಿಜ ವಾಗಿ ಇರುವದನ್ನು ಬಿಟ್ಟುಕೊಟ್ಟು ಉದ್ದೇಶಪೂರ್ವಕವಾಗಿ [ಮುದ್ದಾಂ]ಖೊಟ್ಟಿ ಇರುವದನ್ನು ಹೇಳಹತ್ತಿದರೆ ಆಗಲೇ ಅವನು ನಿಂದೆಗೆ ಒಳಗಾಗುವನು. ಅದಕ್ಕೆಂದೇ ದೇವರು ತ್ರಿಲೋಕದಲ್ಲಿ ನ್ಯಾಯ ಅನ್ನುವದನ್ನು ಮಾಡಿ ಇಟ್ಟಿರುವನು. ಯಾವುದು ಖೊಟ್ಟಿ ಇರುವದೋ ಅಂಥದರ ಸ್ವೀಕಾರ ಮಾಡಿದೆವೆಂದರೆ ದುರ್ದೆಶೆ ಪ್ರಾಪ್ತವಾಗುವಲ್ಲಿ ಸಂಶಯವಿಲ್ಲ. ಇದೇ ಆ ದೇವರು ಮಾಡಿದ ನ್ಯಾಯವಿರುವದು. [೨೩] ಈ ನ್ಯಾಯವನ್ನು ಮನುಷ್ಯನು ಬಿಟ್ಟಿದ್ದಾದರೆ ಅರ್ಥಾತ್ ಅನ್ಯಾಯದಿಂದ ನಡೆದದ್ದಾದರೆ ಇಡೀ ಜಗತ್ತೇ ಇವನ ಬೆನ್ನು ಹತ್ತುವದು-ಆಗ ಜನರ ಕೂಡ ಜಗಳವಾಡಿ ಒದ ರಾಡಿ ಇವನು ಅಗದೀ ಬೇಜಾರ ಹೊಂದಿ ಇವನಿಗೆ ಸಾಕು ಸಾಕೆನಿಸುವದು. [೨೪] ಅನ್ಯಾಯವು ಬಹಳಷ್ಟು ಜನರಿಗೆ ಆಧಾರವಾಗಿದೆ, ಬೆಂಬಲ ಕೊಟ್ಟಿದೆ ಎಂಬ ಮಾತನ್ನು ಈ ವರೆಗೆ ಯಾರೂ ಕೇಳಿಲ್ಲ. ಅಥವಾ ನೋಡಿಲ್ಲ. ಆದರೆ ಹುಚ್ಚ ಬುದ್ಧಿಗೇಡಿ ಜನರು ಸುಮ್ಮನೆ ಖೊಟ್ಟಿ ಆಗಿರುವದರ ಅಥವಾ ಅಸತ್ಯದ ಬೆನ್ನು ಬೀಳುವರು. [೨೫] ಸತ್ಯ ವೊಂದೇ ಸ್ವಸ್ವರೂಪವಿರುವದು. ಈ ಮಾತನ್ನು ನಂಬಿರಿ. ನಂಬಿ ಅರಿಯಿರಿ, ಆದೇ ಅಸತ್ಯವು-ಪಾಪವುಳ್ಳದ್ದು. ಈ ಎರಡರಲ್ಲಿ ನಾವು ಸತ್ಯವಾದದ್ದರ ಬೆನ್ನು ಹತ್ತಬೇಕು. ಸತ್ಯದ ಉದ್ಯೋಗವನ್ನೇ ಮಾಡಬೇಕು. [೨೬] ಮನುಷ್ಯರು ಮಾತನಾಡುವ, ನಡೆದಾಡುವ ಯಾವತ್ತೂ ಕಾರ್ಯಮಾಡುವದು ಮಾಯೆಯ ಕ್ಷೇತ್ರ ದಲ್ಲಿಯೇ ಇರುವದು. ಎಲ್ಲಿ ಮಾಯೆ ಇಲ್ಲವೋ ಅಲ್ಲಿ ಮಾತಾಡಲು ಸ್ಥಳವೇ ಇರುವದಿಲ್ಲ. ಆದ್ದರಿಂದ ನಾವು ನಿಃಶಬ್ದದ ಮೂಲವನ್ನು ಶೋಧಿಸಬೇಕು. ಮಾತುಕತೆ, ಹೋಗಿಬರುವದು. ಜನರಿಗೆ ಹೇಳುವದು. ಖರೇ ಮತ್ತು ಖೊಟ್ಟಿ ಇವುಗಳ ಅಂಗೀಕಾರ ಮಾಡುವಿಕೆ ಇತ್ಯಾದಿ ಮಾತುಗಳೆಲ್ಲವೂ ದೃಶ್ಯದಲ್ಲಿಯವಿರುವವು. ಸತ್ಯ ಅಂದರೆ ಸ್ವಸ್ವರೂಪವು. ಇದು ದೃಶ್ಯದ ಆಚೆಗೆ ಇರುವದು. ಈ ಸತ್ಯದ ಸಲುವಾಗಿ ಪ್ರಯತ್ನಮಾಡಬೇಕೆನ್ನುವವರು ದೃಶ್ಯವನ್ನು ದಾಟಿ ಹೋಗಬೇಕಾಗುವದು. ಅಲ್ಲಿ ಶಬ್ದಗಳು ಸುಳ್ಳಾಗುವವು. ಅಲ್ಲಿ ಕೇವಲ ನಿಃಶಬ್ದವು ಮಾತ್ರ ತುಂಬಿರುವದು. (೨೭)

ವಾಚ್ಯಾಂಶ ಜಾಣೋನೀ ಸಾಂಡಾವಾ । ಲಕ್ಷ್ಯಾಂಶ ವಿವರೋನ ಘ್ಯಾವಾ ।
ಯಾಕಾರಣೇ ನಿಶಬ್ದ ಮುಳೀಚಾ ಗೋವಾ । ಆಢಳೇನಾ ॥೨೮॥

ಅಷ್ಟಧಾ ಪ್ರಕೃತೀ ಪೂರ್ವಪಕ್ಷ । ಸಾಂಡೂನ ಅಲಕ್ಷ್ಯೀ ಲಾವಾವೇ ಲಕ್ಷ ।
ಮನನಸೀಳ ಪರಮ ದಕ್ಷ । ತೋ ಚಿ ಜಾಣೇ ॥೨೯॥

ನಾನಾ ಭೂಸ ಆಣಿ ಕಣ । ಯೇಕ ಚಿ ಮ್ಹಣಣೇ ಅಪ್ರಮಾಣ ।
ರಸ ಚೋಖಡಿಯಾ ಕೋಣ । ಶಾಹಾಣಾ ಸೇವೀ ॥೩೦॥

ಪಿಂಡೀ ನಿತ್ಯಾನಿತ್ಯ ವಿವೇಕ । ಬ್ರಹ್ಮಾಂಡೀ ಸಾರಾಸಾರ ಅನೇಕ ।
ಸಕಳ ಶೋಧೂನಿಯಾ ಯೇಕ । ಸಾರ ಘ್ಯಾವೇ ॥೩೧॥

ಮಾಯೇಕರಿತಾ ಕೋಣೇಯೇಕ । ಅನ್ವಯ ಆಣಿ ವಿತರೇಕ ।
ತೇ ಮಾಯಾ ನಸ್ತಾ ವಿವೇಕ । ಕೈಸಾ ಕರಾವಾ ॥೩೨॥

ತತ್ವೀ ತತ್ವ ಸರ್ವ ಶೋಧಾವೇ । ಮಹಾವಾಕೀ ಪ್ರವೇಶಾವೇ ।
ಆತ್ಮನಿವೇದನೇ ಪಾವಾವೇ । ಸಮಾಧಾನ ॥೩೩॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ಕರಂಟ ಪರೀಕ್ಷಾ ನಿರೂಪಣ' ನಾಮ ಸಮಾಸ ಪಂಚಮ ॥

● ●

ಶಬ್ದದ ಅರ್ಥವನ್ನು ತಿಳಿದುಕೊಳ್ಳಬೇಕು. ಹಾಗೂ ಶಬ್ದವನ್ನು ಹಿಂದೆ ಒಗೆದು ಬಿಡಬೇಕು. ಆ ನಂತರ ಅರ್ಥದ ಮೇಲೆ ಮನನಮಾಡಬೇಕು. ಮತ್ತು ಮನನವಾದ ಅರ್ಥದ ಲಕ್ಷ್ಯವು ಯಾವ ಸ್ವರೂಪದ್ದಿರುವದೋ ಅದನ್ನು ಗ್ರಹಣಮಾಡಬೇಕು. ಹೀಗೆ ಮಾಡಿದ್ದಾದರೆ ನಿಃಶಬ್ದದ ಮೂಲವಾಗಿರುವ ಆ ಸ್ವರೂಪದ ಬಗ್ಗೆ ಆ ಮೇಲೆ ಯಾವ ಘೋಟಾಳೆ, ಗೊಂದಲ ಉಳಿಯುವದಿಲ್ಲ. ಅಂದರೆ ಸ್ವರೂಪದ ಬಗ್ಗೆ ಅಗದೀ ಖರೇ ಸ್ಪಷ್ಟ ಕಲ್ಪನೆಯು ಬರುವದು. (೨೮) ಅಷ್ಟಧಾಪ್ರಕೃತಿ ಅಥವಾ ದೃಶ್ಯವಿಶ್ವ ಇದು ಮಿಥ್ಯೆ [ಸುಳ್ಳು] ಆಗಿರುವದರಿಂದ ಇದು ಪೂರ್ವ ಪಕ್ಷವಾಗಿರುವದು. ನಾವು ಈ ಸುಳ್ಳೆನಿಸುವ ಪೂರ್ವ ಪಕ್ಷವನ್ನು ಬಿಟ್ಟುಬಿಡಬೇಕು. ಆ ನಂತರ ಅಲಕ್ಷ್ಯನಾದ ಆ ಯಾವ ಸ್ವರೂಪ ಅಥವಾ ಪರಬ್ರಹ್ಮನಲ್ಲಿ ಲಕ್ಷ್ಯವನ್ನು ಇಡಬೇಕು. ಅಥವಾ ಲಕ್ಷ್ಯಹಚ್ಚಬೇಕು. [ಇದು ಎಲ್ಲರಿಗೂ ಸಾಧಿಸುವದಿಲ್ಲ.] ಮನವನ್ನು ಸ್ಥಿರಗೊಳಿಸಿ ಏಕಾಗ್ರಮಾಡಬೇಕು. ಈ ಮನವು ಅತಿಶಯ ದಕ್ಷ ಮತ್ತು ತತ್ಪರವಿದ್ದು ಮನನಶೀಲ ಇರುವದು. ಆದ್ದರಿಂದ ಈ ಮನಕ್ಕೇನೇ ಇದೆಲ್ಲವನ್ನೂ ಹೇಗೆ ಮಾಡಬೇಕು. ಹೇಗೆ ಸಾಧಿಸಬೇಕು ಅನ್ನುವದು ತಿಳಿಯುವದಾಗಿದೆ. (೨೯) ಹೊಟ್ಟು ಮತ್ತು ಕಾಳು ಇವೆರಡೂ ಒಂದೇ ಎಂದು ಅನ್ನುವದು ಅಯೋಗ್ಯವಿರುವದು. ಕಬ್ಬಿನ ರಸವನ್ನು ಚಲ್ಲಿಕೊಟ್ಟು ಜಾಣನಾದವನು ರಸಹೀನ ಸಿಪ್ಪೆಯನ್ನು ಮೆಲ ಕಾಡಿಸುತ್ತ ಕೂಡ್ರಲಾರನು. (೩೦) ಪಿಂಡ-ದೇಹ-ಶರೀರ ಇದರ ಬಗ್ಗೆ ಆತ್ಮಾನಾತ್ಮ ವಿವೇಕ ಅಥವಾ ನಿತ್ಯಾನಿತ್ಯ ವಿವೇಕ ಮಾಡಬೇಕು. ಬ್ರಹ್ಮಾಂಡದ[ವಿಶ್ವ–ಜಗತ್ತು] ಸಲುವಾಗಿ ಸಾರಾ ಸಾರ ವಿವೇಕಮಾಡಬೇಕು. ಈ ಪ್ರಕಾರ ಎಲ್ಲದರ ಅಂದರೆ ಪಿಂಡಾಂಡ ಮತ್ತು ಬ್ರಹ್ಮಾಂಡಗಳ ಬಗ್ಗೆ ಸಮಗ್ರ ಶೋಧಮಾಡಿ ಅದರ ಸಾರವಾದದ್ದನ್ನು ಯೋಗ್ಯವಾದದ್ದನ್ನು ಗ್ರಹಣಮಾಡಬೇಕು. (೩೧) ಮಾಯಾ ಇದು ಇರುವವರೆಗೆ ಅನ್ವಯ ಮತ್ತು ವ್ಯತಿರೇಕ ಇದರ ವಿಚಾರಮಾಡಬೇಕಾಗುವದು. ಅ.ನು ಇದ್ದದ್ದಾರೆ ಬ.ನು ಇರುವನು. ಇದು ಅನ್ವಯವೆನಿಸುವದು. ಅದೇ ಅ.ನು ಇರದಿದ್ದರೆ, ಬ.ನು ಇರುವದಿಲ್ಲ. ಇದು ವ್ಯತಿರೇಕವೆನಿಸುವದು. [ಅನ್ವಯ ಅಂದರೆ ಇಂಥದೊಂದು ಅದೆ ಅಂದರೆ ಇಂಥದೊಂದು ಆಗುವದು. ಘಟಿಸುವದು ಮತ್ತು ವ್ಯತಿರೇಕ ಅಂದರೆ ಇಂಥದೊಂದು ಆಗದಿದ್ದರೆ ಇಂಥ ದೊಂದು ಆಗುವದಿಲ್ಲ. ಅಥವಾ ಇಂಥದೊಂದು ದೋಷ ಆಗುವದು. ಹೇಗೆಂದರೆ ಹೊಗೆ ಇದೆ ಎಂದರೆ ಅಗ್ನಿ ಇರುವದು. ಇದು ಅನ್ವಯವು. ಮತ್ತು ಅಗ್ನಿ ಇಲ್ಲವೆಂದರೆ ಹೊಗೆ ಇರುವದಿಲ್ಲ ಇದು ವ್ಯತಿರೇಕವು.] ಆದರೆ ಎಲ್ಲಿ ಮಾಯಾ ಇಲ್ಲದಾಗುವದೋ ಅಲ್ಲಿ ಅಂದರೆ ಮಾಯೆಯೇ ಇರಲಾರದಂಥ ಸ್ಥಳದಲ್ಲಿ-ವಸ್ತುವಿನಲ್ಲಿ ಅನ್ವಯ ವ್ಯತಿರೇಕ ಗಳೆರಡೂ ಇರುವದಿಲ್ಲ. ಅಥವಾ ಉಳಿದಿರುವದಿಲ್ಲ. ಅಂಥಲ್ಲಿ ತರ್ಕದ ಪ್ರಯೋಜನವೂ ಆಗುವದಿಲ್ಲ ಅಲ್ಲಿ ತರ್ಕ ಮುಗಿದು ಬಿಡುವದು.(೩೨)ಒಂದು ತತ್ವದಿಂದ ಎರಡನೆಯದು, ಈ ರೀತಿಯಿಂದ ಸರ್ವ ತತ್ವದ ಶೋಧಮಾಡಬೇಕು. ನಂತರ ಮಹಾವಾಕ್ಯದ ಅರ್ಥದೊಂದಿಗೆ ತದಾಕಾರವಾಗಿ ಹೋಗಬೇಕು. ಮತ್ತು ಸಂಪೂರ್ಣ ಆತ್ಮ ನಿವೇದನಮಾಡಿ ಸಮಾಧಾನವನ್ನು ಹೊಂದಬೇಕು. ದೃಶ್ಯವು ಮಿಥ್ಯಾ-ಸುಳ್ಳು ಎಂದು ಅದನ್ನು ಹಿಂದಕ್ಕೆ ಸರಿಸಬೇಕು. ಸೂಕ್ಷ್ಮದಲ್ಲಿ ಪ್ರವೇಶಮಾಡಿ ಸ್ವಸ್ವರೂಪದವರೆಗೆ ಹೋಗಿ ಮುಟ್ಟಬೇಕು. ಕೊನೆಗೆ ಆತ್ಮನಿವೇದನದಿಂದ ಸಮಾಧಾನ ರೂಪ, ಆನಂದ ರೂಪರಾಗಿ ಹೋಗಬೇಕು. (೩೩)

---

ಶ್ರೀ ದಾಸಬೋಧದ ಹದಿನೆಂಟನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ "ಕರಂಟ ಪರೀಕ್ಷಾ ನಿರೂಪಣ"ವೆಂಬ ಐದನೆಯ ಸಮಾಸವು ಮುಗಿದುದು.

## ದಶಕ ೧೮. ಸಮಾಸ ೬. ಉತ್ತಮ ಪುರುಷ ನಿರೂಪಣ (ನುಡಿ ೨೨)

ಈ ದಶಕದ ನಾಲ್ಕನೆಯ ಸಮಾಸದಲ್ಲಿಯೇ ಶ್ರೀ ಸಮರ್ಥರು ನಮಗೆ ಸ್ಪಷ್ಟವಾಗಿ ಹೇಳಿರುವದೇನಂದರೆ "ಜೇಜೇ ದೇಹೇ ಧರೂನಿ ಆಲೆ ತೇ ತೇ ಕಾಂಹೀ ಕರೂನಿಗೇಲೇ" ಅರ್ಥ: "ಯಾರು ಯಾರು ಈ ಜಗತ್ತಿನಲ್ಲಿ ದೇಹ ಧಾರಣಮಾಡಿಬಂದರೋ ಆ ಪ್ರತಿಯೊಬ್ಬರೂ ಜಗತ್ತಿನಲ್ಲಿ ಏನಾದರೂ ಎಷ್ಟಾದರೂ ಕರ್ಮ ಮಾಡಿ ಹೋದರು."ಕರ್ಮ" ಮಾಡುವದೆಂದರೆ ಬದಲಮಾಡುವದು. ಅಂದರೆ ಹೆಚ್ಚು ಕಡಿಮೆ ಮಾಡುವದೇ ಆಗಿದೆ. ಈ ದೃಷ್ಟಿಯಿಂದ ಪ್ರತಿಯೊಬ್ಬ ಮನುಷ್ಯನು ಜಗತ್ತಿನೊಳಗೆ ಏನಾದರೂ ಬದಲು ಅಥವಾ ಹೆಚ್ಚು ಕಡಿಮೆ ಮಾಡುತ್ತಾನೆ. ಈ ಬದಲಾವಣೆಯು

ಒಳ್ಳೆಯದಾಗಿರಬಹುದು ಅಥವಾ ಕೆಟ್ಟದ್ದಾಗಿರಬಹುದು. ಯಾವ ಮನುಷ್ಯನ ಅಂತರಂಗದಲ್ಲಿ ವಿಶೇಷವಾದ ಕರ್ತೃತ್ವ ಶಕ್ತಿ ವಾಸಮಾಡಿರುವದೋ ಆ ಶಕ್ತಿಯೇ ಜಗದಲ್ಲಿ ಹೆಚ್ಚಿನ ಬದಲಾವಣೆಯನ್ನು ತರುವದಾಗಿರುವದು. ಆದರೆ ಈ ಎಲ್ಲ ವ್ಯವಹಾರವು ಸ್ವಾರ್ಥದ ಪಾರ್ಶ್ವ ಭೂಮಿಯ ಮೇಲೆ [ಹಿನ್ನೆಲೆಯಲ್ಲಿ] ಮಾಡಲಾಗುವದು. ಇದರ ವಿರುದ್ಧ ವಾಗಿ[ಉಲಟ]ಜಗತ್ತಿನಲ್ಲಿಯು ಕೆಲವುಜನರು ಈಬಗೆಯಲ್ಲಿ ಹುಟ್ಟಿ ಬಂದಿರುತ್ತಾರೆ.ಹೇಗೆಂದರೆ ಇವರ ಅಂಗದಲ್ಲಿ ಬಹಳ ದೊಡ್ಡ ಕರ್ತೃತ್ವವಿರುವದು. ಆದರೆ ಇವರ ಎಲ್ಲ ಕರ್ಮ ಸಂಭಾರ ಸಂಗ್ರಹವು ನಿಃಸ್ವಾರ್ಥತನದ ಪವಿತ್ರ ಹಿನ್ನೆಲೆಯ ಮೇಲೆ ಎದ್ದು ನಿಂತಿರುವದು. ಶ್ರೀ ಸಮರ್ಥರ ಅಬೋಣ ಹೇಗಿರುವದೆಂದರೆ, ಅಸಲ ಜನರು—ಯೋಗ್ಯ ಜನರು ಈಶ್ವರ ಕೃಪೆಗೆ ಪಾತ್ರರಾಗಿರುವರು. ಈಶ್ವರನ ಶಕ್ತಿಯು ಸದಾ ಇವರ ಹಿಂದೆ ಇದ್ದು ಇವರನ್ನು ರಕ್ಷಿಸುವದು. ರಕ್ಷಿಸಲು ಸದಾ ಸಿದ್ಧವಿರುವದು. ಈಶ್ವರನ ಕೃಪೆಗೆ ಪಾತ್ರರಾದವರ ಕೈಯಿಂದ ಘಟಿಸುವ ಕಾರ್ಯವು ಈಶ್ವರನ ಕಾರ್ಯವೇ ಇರುವದು. ಪ್ರತಿಯೊಂದು ಸಮಾಜದಲ್ಲಿ ಪ್ರತಿಯೊಂದು ಶತಕದಲ್ಲಿ ಮಾನವೀ ಜೀವನದಲ್ಲಿಯ ಭಿನ್ನ ಭಿನ್ನ ಕ್ಷೇತ್ರದಲ್ಲಿ ದೋಷರಹಿತರಾದ ಯೋಗ್ಯ ಜನರು ನಿರ್ಮಾಣವಾಗುತ್ತಿರುವರು. ಶ್ರೀ ಸಮರ್ಥರ ಕಾಲದಲ್ಲಿ ಭಾರತೀಯ ಹಿಂದೂಸಮಾಜದಲ್ಲಿ ಶ್ರೀ ಶಿವಾಜಿ ರಾಜನಂತಹ ಶ್ರೇಷ್ಠ ಮತ್ತು ಯೋಗ್ಯ ಪುರುಷನು ಆಗಿಹೋದನು. ಇವನ ಬಗ್ಗೆ ಇರುವ ಶಬ್ದ ಚಿತ್ರವು ಈ ಸಮಾಸದಲ್ಲಿ ಕಂಡುಬರುವದು. ಶಿವಾಜಿ ರಾಜನೇನೂ ಆತ್ಮಜ್ಞಾನಿ ಅಥವಾ ಬ್ರಹ್ಮಜ್ಞಾನಿ ಸಂತನಾಗಿರಲಿಲ್ಲ. ಆದರೆ "ಸರ್ವಭೂತ ಹಿತೇರತಃ"ಅಥವಾ"ಬಹುಜನ ಹಿತಾಯ ಬಹುಜನ ಸುಖಾಯಚ" ಇದೇ ಶಿವಾಜಿ ರಾಜನ ಪ್ರತಿಜ್ಞೆಯ ಗುರಿ [ಬಿರುದು] ಆಗಿತ್ತು. ಇಂಥ ಯೋಗ್ಯ ಮನುಷ್ಯರ ಕೈಯಿಂದ ದೊಡ್ಡ ಭವ್ಯವಾದ ಮತ್ತು ಅದ್ಭುತವಾದ ಕಾರ್ಯವು ನೆರವೇರುವದು. ಇವರ ಜೀವನದಲ್ಲಿ ಮೇಲಿಂದ ಮೇಲೆ ನಾಟ್ಯ ಪ್ರಸಂಗ, ಸೋಗುಹಾಕುವ ಪ್ರಸಂಗಗಳು ಉದ್ಭವಿಸುವವು. ಮತ್ತು ಇಂಥದರೊಳಗಿಂದ ಈಶ್ವರನ ಕೃಪೆಯಿಂದ ಸಹಿಸಲಾರಂತ್ ಅಂದರೆ ಸಂರಕ್ಷಿತವಾಗಿ ಹೊರಗೆ ಬರುವರು. ಅಥವಾ ಪಾರಾಗಿ ಬಿಡುವರು. ಇವರ ಪ್ರಭಾವ ಸಮಾಜದ ಸರ್ವ ಅಂಗದ ಮೇಲೂ ಬೀಳುವದು. ಇದರಿಂದಾಗಿ ಸಮಾಜದ ಜೀವನ ಪದ್ಧತಿಯಲ್ಲಿ ಆಮೂಲಾಗ್ರ ವಾಗಿ ಬದಲಾವಣೆಯಾಗುವದು. ಹೊಸ ಮೂಲ್ಯ ಅಂದರೆ ಕಿಮ್ಮತ್ತು,ಘನತೆ, ಗೌರವ ಹೊಸ ಕರ್ತೃತ್ವ ಸಾಮರ್ಥ್ಯ ಸಾಹಸ ಹೊಸ ಧ್ಯೇಯ ಇವು ಉದಯವಾಗುವವು. ಸಮಾಜವು ಗುಣಶೀಲವಾಗುವದು. ಚುರುಕಾಗುವದು. ಶ್ರೀ ಸಮರ್ಥರು ಇದಕ್ಕೆ ಧರ್ಮಸ್ಥಾಪನಾ ಎಂದು ಹೆಸರು ಕೊಟ್ಟಿರುವರು. ಇಂಥ ಪ್ರಕಾರದ ಧರ್ಮಸ್ಥಾಪನೆಯನ್ನು ಮಾಡುವಂಥ ಮಹಾಪುರುಷನು. ಸತತವೂ ಪರೋಪಕಾರವನ್ನು ಮಾಡುತ್ತಿರುವನು. ಬಹಳ ಜನರನ್ನು ಸಂಭಾಳಿ ಸುವನು. ರಕ್ಷಿಸುವನು. ಬಹಳ ಜನರಿಗೆ ಆಧಾರ ಮತ್ತು ಬೆಂಬಲವನ್ನು ಕೊಡುವನು. ಇಂಥ ಪುಣ್ಯ ಪುರುಷರು ಹಿಂದೆ ಆಗಿ ಹೋಗಿರುವರು. ಈಗ ಸಧ್ಯದಲ್ಲಿಯೂ ಇರುವರು. ಮತ್ತು ಮುಂದೆಯೂ ಖಾತ್ರಿಯಿಂದ ಆಗುವರು.

ದಶಕ ಅಷ್ಟದಶ : ಸಮಾಸ ಷಷ್ಠಮ : ಉತ್ತಮ ಪುರುಷ ನಿರೂಪಣ (ನುಡಿ ೨೨)

॥ಶ್ರೀರಾಮ ಸಮರ್ಥ॥ ನಾನಾ ವಸ್ತ್ರೇ ನಾನಾ ಭೂಷಣೇ ।
ಯೇಣೇ ಶರೀರ ಶೃಂಘಾರಣೇ ।
ವಿವೇಕೇ ವಿಚಾರೇ ರಾಜಕಾರಣೇ । ಅಂತರ ಶೃಂಘಾರಿಜೇ ॥೧॥

ಶರೀರ ಸುಂದರ ಸತೇಜ । ವಸ್ತ್ರೇ ಭೂಷಣೇ ಕೇಲೇ ಸಜ್ಜ ।
ಅಂತರೀ ನಸ್ತಾ ಚಾತುರ್ಯ ಬೀಜ । ಕದಾಪೀ ಶೋಭಾ ನ ಪವೇ ॥೨॥

ತುಂಡ ಹೇಕಾಡ ಕಠೋರವಚನೀ । ಅಖಂಡ ತೋಲೇ ಸಾಭಿಮಾನೀ ।
ನ್ಯಾಯ ನೀತಿ ಅಂತಃಕರ್ಣೀ । ಘೇಣಾರ ನಾಹೀ ॥೩॥

ತರ್ಹೀ ಸೀಘ್ರಕೋಪೀ ಸದಾ । ಕದಾಪಿ ನ ಧರೀ ಮರ್ಯಾದಾ ।
ರಾಜಕಾರಣ ಸಂವಾದಾ । ಮಿಳೋ ಚಿ ನೇಣೇ ॥೪॥

ಐಸೇ ಲೌಂದ ಬೇಇಮಾನೀ । ಕದಾಪಿ ಸತ್ಯ ನಾಹೀ ವಚನೀ ।
ಪಾಪೀ ಅಪಸ್ಮಾರ ಜನೀ । ರಾಕ್ಷೇಸ ಜಾಣಾವೇ ॥೫॥

ಸಮಯಾ ಸಾರಿಖಾ ಸಮಯೋ ಯೇನಾ । ನೇಮ ಸಹಸಾ ಚಾಲೇನಾ ।
ನೇಮ ಧರಿತಾ ರಾಜಕಾರಣಾ । ಅಂತರ ಪಡೇ ॥೬॥

ಅತಿ ಸರ್ವತ್ರ ವರ್ಜಾವೇ । ಪ್ರಸಂಗ ಪಾಹೋನ ಚಾಲಾವೇ ।
ಹಟನಿಗ್ರಹೀ ನ ಪಡಾವೇ । ವಿವೇಕೀ ಪುರುಷೇ ॥೭॥

ಬಹುತ ಚಿ ಕರಿತಾ ಹಟ । ತೇಥೇ ಯೇಊನ ಪಡಿಲೇ ತಟ ।
ಕೋಣೇಯೇಕಾಚಾ ಸೇವಟ । ಜಾಲಾ ಪಾಹಿಜೆ ॥೮॥

ಬರೇ ಈಶ್ವರ ಆಹೆ ಸಾಭಿಮಾನೀ । ವಿಶೇಷ ತುಳಜಾಭೊವಾನೀ ।
ಪರಂತು ವಿಚಾರ ಪಾಹೋನೀ । ಕಾರ್ಯೇಕರಣೇ ॥೯॥

## ದಶಕ ೧೮. ಸಮಾಸ ೬. ಉತ್ತಮ ಪುರುಷ ನಿರೂಪಣ (ನುಡಿ ೨೨)

ಮಾನವನಿಗೆ ಶರೀರದ ಮತ್ತು ಮನಸ್ಸಿನ ಹೀಗೆ ಎರಡು ಜೀವನಗಳು ಇರುವವು. ಶರೀರವು ವಸ್ತ್ರಾದಿಗಳಿಂದ ಸುಂದರಗೊಳ್ಳುವದು. ಅಥವಾ ಸುಂದರ ಮಾಡಲಾಗುವದು. ಆದರೆ ಅದೇ ಮನವು ವಿವೇಕದಿಂದ ಮತ್ತು ಚತುರತೆಯಿಂದ ಸುಶೋಭಿತ ಮಾಡಲ್ಪಡುವದು. ಮನಸ್ಸಿನ ಶೋಭವಂತತನಕ್ಕೆ ಅಧಿಕ ಮಹತ್ವವಿರುವದು: ಅನೇಕ ಪ್ರಕಾರದ ವಸ್ತ್ರಗಳು ಮತ್ತು ಭೂಷಣಗಳು ಇವುಗಳಿಂದ ಶರೀರವು ಶೋಭವಂತವಾಡಲ್ಪಡುವದು. ವಿವೇಕ ವಿಚಾರ ಮತ್ತು ರಾಜಕಾರಣ ಇವುಗಳಿಂದ ಅಂತರ್ಯಾಮವನ್ನು ಶೋಭವಂತವಾಡಲಾಗುವದು. (೧) ತಿಳಿಯಿರಿ: ಒಬ್ಬನ ಶರೀರವು ಬಹಳ ಸುಂದರ ಮತ್ತು ಸತೇಜವಿರುವದು. ಇದರ ಹೊರತಾಗಿ ಉತ್ತಮ ವಸ್ತ್ರದಿಂದ ಮತ್ತು ಭೂಷಣಗಳಿಂದ ಅವನ್ನು ಶೃಂಗಾರ ಮಾಡಿದರು. ಆದರೆ ಇವನ ಅಂತರ್ಯಾಮದಲ್ಲಿ ಚತುರತನವಿರದಿದ್ದರೆ ಮೇಲಿನ (ತೋರಿಕೆಯ) ಶೃಂಗಾರವು ನಿಜವಾಗಿ ಶೋಭಿಸಲಾರದು. (೨) ಯಾವ ಮನುಷ್ಯನು ಬಡಬಡ್ಯಾ ಅಂದರೆ ಇದ್ದದ್ದೊಂದು ಇಲ್ಲದ್ದೊಂದು ತಾಳಮೇಳವಿಲ್ಲದೆ ಸದಾ ಮಾತಿನ ಬುರುಡೆ ಹೊಡೆಯುವವನಿರುವನೋ, ಕಠೋರ ಮಾತಿನವನಿರುವನೋ, ಅಭಿಮಾನಿ, ದುರಭಿಮಾನಿ, ಮತ್ತು ಶೀಘ್ರಕೋಪಿ ಇರುವನೋ ದುಷ್ಟ ಮತ್ತು ವಿಶ್ವಾಸ ಘಾತಕಿ ಇರುವನೋ ಇಂಥವನು ಪಾಪಿ ಮತ್ತು ಕೆಟ್ಟ ಹಟವಾದಿ ರಾಕ್ಷಸನೆಂದೇ ತಿಳಿಯಬೇಕು: ಬಹಳ ಮಾತನಾಡುವ ಮಗರೂರ, ದುರಾಗ್ರಹಿ, ಹಟಮಾರಿ, ಸ್ವಭಾವದ ಮತ್ತು ಕಠೋರ ಶಬ್ದಗಳನ್ನೇ ಮಾತನಾಡುವ ಗರ್ವಿಷ್ಠ, ಮನುಷ್ಯನು ಸದಾಕಾಲ ಅಭಿಮಾನ [ದುರಭಿಮಾನ] ದ ಮನದಿಂದಲೇ ಯಾವಾಗಲೂ ಓಲಾಡುವನು. ಇಂಥವನ ಮನದಲ್ಲಿ ನ್ಯಾಯ ನೀತಿ ಇವುಗಳ ವಿಚಾರ ಬರುವದಿಲ್ಲ. ಇಂಥವರು ತರುವದೂ ಇಲ್ಲ. (೩) ಇಂಥವನು ಬಹಳ ಯದ್ವಾತದ್ವಾ ಇದ್ದು ಯಾವಾಗಲೂ ಶೀಘ್ರಕೋಪಿಯಾಗುವನು. ಎಂದೂ ಯಾರದೂ ಮರ್ಯಾದೆ ಇಟ್ಟವನಲ್ಲ. ರಾಜಕಾರಣದಲ್ಲಿ ಹೊಂದಿಸಿಕೊಂಡು ಹೋಗುವದಕ್ಕೆ ಎಂದೂ ತಯಾರ ಆಗುವದಿಲ್ಲ. (೪) ಇಂಥ ದುಷ್ಟ ಮನುಷ್ಯನು ಬೇ ಇಮಾನಿ ಅಥವಾ ಬೇ ಭರವಸೆ [ಕೃತಘ್ನ, ಅಪ್ರಮಾಣಿಕ, ಅವಿಶ್ವಾಸಿಕ] ಯುವನಿರುವನು. ಇವನ ಮಾತಿನಲ್ಲಿ ಯಾವಾಗಲೂ ಖರೇತನವಿರುವದಿಲ್ಲ. ಇಂಥ ಲಹರೀ ಮತ್ತು ಪಾಪಿಷ್ಠ ಜನರು ಸಮಾಜದಲ್ಲಿರುವ ರಾಕ್ಷಸರೆಂದೇ ತಿಳಿಯಬೇಕು. (೫) ರಾಜಕಾರಣದಲ್ಲಿ ಎಲ್ಲ ಪ್ರಸಂಗಗಳು ಒಂದೇ ಪ್ರಕಾರದಲ್ಲಿರುವದಿಲ್ಲ. ಇದರಲ್ಲಿ ಒಂದೇ ನಿಯಮವು ನಡೆಯಲಾರದು. ಅತಿ ಸರ್ವತ್ರ ವರ್ಜ್ಯಮಾಡಬೇಕು. ಬಹಳ ಆಗ್ರಹ ಹಿಡಿಯಬಾರದು. ಎಲ್ಲರ ಮೇಲೆ ಅದರಲ್ಲಿಯೂ ತಮ್ಮ ಮೇಲೆ ತುಳಜಾಭವಾನಿಯ ಕೃಪಾದೃಷ್ಟಿ ಇರುವದು. ಆದರೂ ವಿಚಾರದಿಂದ ಕಾರ್ಯಮಾಡಬೇಕು. ಯಾವಾಗಲೂ ದುಷ್ಟರಿಂದ ಸಾವಧಾನದಿಂದ ಇರಬೇಕು. ತಮ್ಮ ಮೇಲೆ ನಿಷ್ಠೆ ಇಟ್ಟಂಥ ಜನರನ್ನು ಸಂಬಾಳಿಸಬೇಕು. ದುರ್ಜನರ ಬಂಡು,ದಂಗೆ,ಧುಮಳಿ ಬಹಳ ದಿವಸದಿಂದ ಮನಸೋಕ್ತ ಬೆಳೆದಿರುವದು. ಆದ್ದರಿಂದ ತಾವು ಎಚ್ಚರದಿಂದ ಮೈಯೆಲ್ಲ ಕಣ್ಣಾದಿ ಮಾಡಿಕೊಂಡು ಇರಬೇಕು: ಪ್ರಸಂಗ, ವೇಳೆ ಇವು ಯಾವಾಗಲೂ ಒಂದೇ ಸಮನಾಗಿ ಇರುವದಿಲ್ಲ. ಅದಕ್ಕಾಗಿ ಒಂದೇ ನಿಯಮ ಸತತವಾಗಿ ನಡೆಯುವದು ಶಕ್ಯವಿಲ್ಲ. ಕೇವಲ ನಿಯಮವನ್ನೇ ನಡೆಯಿಸುವ ಆಗ್ರಹ ಹಿಡಿದರೆ ರಾಜಕಾರಣದಲ್ಲಿ ಅಡಚಣೆಗಳು ಉತ್ಪನ್ನವಾಗುವವು. (೬) ಯಾವುದೇ ಕಾರ್ಯದಲ್ಲಿ ಅತಿ ಅನ್ನುವದನ್ನು ವರ್ಜಿಸಬೇಕು. ಹೇಗೆ ಪ್ರಸಂಗ ಇರುವದೋ ಅದಕ್ಕೆ ತಕ್ಕ ರೀತಿಯಲ್ಲಿ ನಡೆಯಬೇಕು, ವಿಚಾರವಂತರಾದವರು ಹಟಕ್ಕೆ ತಕ್ಕ ರೀತಿಯಲ್ಲಿ ನಡೆಯಬೇಕು. ವಿಚಾರವಂತರಾದವರು ಹಟಕ್ಕೆ ಬಿದ್ದು ಸುಮ್ಮನೆ ಆಗ್ರಹಹಿಡಿವು ಕೂಡ್ರಬಾರದು.(೭) ಯಾವುದೊಂದು ವಿಷಯದಲ್ಲಿ ಬಹಳ ಹಟಹಿಡಿದು ಕುಳಿತೆವೆಂದರೆ ನಮ್ಮವರಲ್ಲಿ [ನಮ್ಮ ಪಕ್ಷದಲ್ಲಿ] ಯೇ ಒಡಕು ಉಂಟಾಗುವದು. ಇದರಿಂದಾಗಿ ಎರಡು ಅಥವಾ ಹೆಚ್ಚು ಪಕ್ಷಗಳು ನಿರ್ಮಾಣವಾಗುವವು. ಇಂಥ ಪರಿಸ್ಥಿತಿಯಲ್ಲಿ ಯಾವುದಾದರೊಂದು ಪಕ್ಷದ ಅವನತಿ ಅಥವಾ ಕೊನೆಯಾಗುವ ಪ್ರಸಂಗ ಬರುವದು. (೮) ಆದರೆ ಒಂದು ಮಾತು ಉತ್ತಮವಾದದ್ದಿರುವದು. ಅದು ಯಾವುದೆಂದರೆ ಈಶ್ವರನಿಗೆ ತಮ್ಮ ಮೇಲೆ ಅಭಿಮಾನವಿರುವದು. ಅವರಲ್ಲಿಯೂ ತಮಗೆ "ಇವನು ನಮ್ಮವನು" ಎಂದಿರುವನು. ಇಷ್ಟೆಲ್ಲದರ ಮೇಲೆ ಸ್ವತಃ ತುಳಜಾಭವಾನಿಯ ಕೃಪಾ ವಿಶೇಷವೂ ಇರುವದು. ಇವೆಲ್ಲವೂ ನಿಜವಿದ್ದರೂ ಕೂಡಾ ತಾವು ಯಾವಾಗಲೂ ವಿಚಾರಮಾಡಿಯೇ ಯಾವುದೇ ಕಾರ್ಯದಲ್ಲಿ ಕೈ ಹಾಕಬೇಕು. (೯)

ಅಖಂಡ ಚಿ ಸಾವಧಾನಾ । ಬಹುತ ಕಾಯೆ ಕರಾವೀ ಸೂಚನಾ ।
ಪರಂತು ಕಾಂಹೀ ಯೇಕ ಅನುಮಾನಾ । ಆಣಿಲೇ ಪಾಹಿಜೇ ॥೧೦॥

ಸಮುರ್ಥಾಪಾಸೀ ಬಹುತ ಜನ । ರಾಹಿಲಾ ಪಾಹಿಜೇ ಸಾಭಿಮಾನ ।
ನಿಶ್ಚಳ ಕರೂನಿಯಾ ಮನ । ಲೋಕ ಅಸತೀ ॥೧೧॥

ಮ್ಲೇಚ ದುರ್ಜನ ಉದಂಡ । ಬಹುತಾ ದಿಸಾಚೇ ಮಾಜಲೇ ಬಂಡ ।
ಯಾಕಾರಣೇ ಅಖಂಡ । ಸಾವಧಾನ ಅಸಾವೇ ॥೧೨॥

ಸಕಳಕರ್ತಾ ತೋ ಈಶ್ವರು । ತೇಣೇ ಕೇಲಾ ಅಂಗಿಕಾರು ।
ತಯಾ ಪುರುಷಾಚಾ ವಿಚಾರು । ವಿರುಳಾ ಜಾಣೇ ॥೧೩॥

ನ್ಯಾಯುನೀತಿ ವಿವೇಕ ವಿಚಾರ । ನಾನಾ ಪ್ರಸಂಗ ಪ್ರಕಾರ ।
ಪರೀಕ್ಷಿಣೇ ಪರಾಂತರ । ದೇಣೇ ಈಶ್ವರಾಚೇ ॥೧೪॥

ಮಾಹಾಯೆತ್ನ ಸಾವಧಪಣೇ । ಸಮುಈ ಧಾರಿಷ್ಟ ಧರಣೇ ।
ಅದ್ಭುತ ಚಿ ಕಾರ್ಯ ಕರಣೇ । ದೇಣೇ ಈಶ್ವರಾಚೇ ॥೧೫॥

ಯೆಶ ಕೀರ್ತಿ ಪ್ರತಾಪ ಮಹಿಮಾ । ಉತ್ತಮ ಗುಣಾಸೀ ನಾಹೀ ಸೀಮಾ ।
ನಾಹೀ ದುಸರೀ ಉಪಮಾ । ದೇಣೇ ಈಶ್ವರಾಚೇ ॥೧೬॥

ದೇವ ಬ್ರಾಹ್ಮಣ ಆಚಾರ ವಿಚಾರ । ಕಿತೇಕ ಜನಾಸೀ ಆಧಾರ ।
ಸದಾ ಘಡೇ ಪರೋಪಕಾರ । ದೇಣೇ ಈಶ್ವರಾಚೇ ॥೧೭॥

ಯೆಹಲೋಕ ಪರಲೋಕ ಪಾಹಾಣೇ । ಅಖಂಡ ಸಾವಧ ಪಣೇ ರಾಹಾಣೇ ।
ಬಹುತ ಜನಾಚೇ ಸಾಹಾಣೇ । ದೇಣೇ ಈಶ್ವರಾಚೇ ॥೧೮॥

ದೇವಾಚಾ ಕೈಪಕ್ಷ ಘೇಣೇ । ಬ್ರಾಹ್ಮಣಾಚೀ ಚಿಂತಾ ವಾಹಾಣೇ ।
ಬಹು ಜನಾಸೀ ಪಾಳಣೇ । ದೇಣೇ ಈಶ್ವರಾಚೇ ॥೧೯॥

ಯಾರು ಸತತವಾಗಿ ಸಾವಧಾನತನದಿಂದ ನಡೆಯುವರೋ ಅವರಿಗೆ ಬೇರೆ ಯಾವ ಸೂಚನೆಯನ್ನೂ ಕೊಡುವ ಅಗತ್ಯವಿಲ್ಲ. ಆದರೂ ಕೆಲವು ಮಾತುಗಳನ್ನು ಇವರು ಲಕ್ಷ್ಯದಲ್ಲಿ ಇಟ್ಟುಕೊಂಡು ನಡೆಯುವದು ಅತಿ ಅವಶ್ಯವಿರುವದು. (೧೦) ಬಹು ದೊಡ್ಡವರು ಮತ್ತು ಸಾಮರ್ಥ್ಯ ಸಂಪನ್ನರಾದ ಪುರುಷರ ಹತ್ತಿರ ಅನೇಕ ಜನರು ಇರುವರು. ನಮ್ಮವರೆನಿಸಿದ ಈ ಎಲ್ಲ ಜನರ ಅಭಿಮಾನವನ್ನು ನೀವು ಹಿಡಿಯಬೇಕು. ಯೋಗಕ್ಷೇಮ ವಿಚಾರಿಸಬೇಕು. ಇದನ್ನೆಲ್ಲ ನೋಡಿದ ನಿಮ್ಮ ಜನರೂ ಸಹಿತ ಮತ್ತಷ್ಟು ಏಕನಿಷ್ಠೆಯಿಂದ ನಡೆದುಕೊಳ್ಳುವರು. (೧೧) ಬಹಳ ದಿವಸಗಳಿಂದ ದುರ್ಜನರಾದ ಮ್ಲೇಂಛರು ಬಹಳ ಕೊಬ್ಬಿರುವರು. ಉಪಟಳ ಹೆಚ್ಚಿರುವದು. ಆದ್ದರಿಂದ ತಾವು ಸತತವೂ ಸಾವಧಾನತನದಿಂದ ಇರಬೇಕು. ಯಾವಾಗ ಧೋಕಾ ಅಪಾಯ ಉತ್ಪನ್ನವಾದೀತು, ಅನಿಷ್ಟ ಪ್ರಾಪ್ತಿಯಾಗುವ ಪ್ರಸಂಗ ಬಂದೀತು, ಇದರ ನಿಯಮ ಇರುವದಿಲ್ಲ. ವೇಳೆ-ಪ್ರಸಂಗಗಳು ಹೇಳಿ ತಿಳಿಸಿ ಬರುವದಿಲ್ಲ. (೧೨) ಈಶ್ವರನ ಕೃಪೆಯು ಯಾವ ಪುರುಷನ ಮೇಲೆ ಆಗಿರುತ್ತದೆಯೋ ಅವನ ಜೀವನದ ಇರುವು ತಿಳಿಯುವದು ಕಠಿಣವಿರುವದು. ಇವರ ಕೈಯಿಂದ ಕಲ್ಪನಾತೀತವಾಗಿ ಕಾರ್ಯಗಳು ಘಟಿಸುವವು. ಇವರ ಜೀವನದಲ್ಲಿ ಅದ್ಭುತತನ, ಭವ್ಯತನ. ನಾಟ್ಯ. ಚಮತ್ಕಾರ, ಧರ್ಮಸ್ಥಾಪನೆ, ಇತ್ಯಾದಿ ಕಾರ್ಯಗಳೆಲ್ಲ ಕಂಡುಬರುವವು; ಈಶ್ವರನೇ ನಿಜವಾದ ಸರ್ವಕರ್ತಾ ಇರುವನು. ಈ ಈಶ್ವರನು ಯಾರನ್ನು ತನ್ನವರೆಂದು ಅಂಗೀಕರಿಸುವನೋ, ಯಾರ ಮೇಲೆ ಪೂರ್ಣ ಕೃಪೆಮಾಡುವನೋ ಆ ಪುರುಷನ ಜೀವನದ ಸ್ಥಿತಿಯನ್ನು ತಿಳಿಯಲು ಎಲ್ಲರಿಗೂ ಸಾಧ್ಯವಿಲ್ಲ. [ಇವನ ಇರುವನ್ನು ತಿಳಿಯುವವರು ಯಾರೆಂದರೆ ಒಬ್ಬ ಪರಮಾತ್ಮ ಅಥವಾ ಒಬ್ಬ ಸದ್ಗುರುವಾಗಿರುವನು.] (೧೩) ನ್ಯಾಯ, ನೀತಿ, ವಿವೇಕ, ವಿಚಾರ, ಅನೇಕ ಪ್ರಕಾರದ ಪ್ರಸಂಗಗಳಿಗೆ ಎದೆಗೊಟ್ಟು ನಿಲ್ಲುವದು, ಎರಡನೆಯವರ ಅಂತಃಕರಣದ ಸರಿಯಾದ (ಬರೋಬರ) ಪರೀಕ್ಷೆಮಾಡುವದು, ಇವೆಲ್ಲವು ಯಾವ ಪುರುಷನಲ್ಲಿ ಕಂಡುಬರುವವೋ ಅಂಥವರ ಮೇಲೆ ಈಶ್ವರನ ಕೃಪೆ ಆರಿದೆಯೆಂದು ತಿಳಿಯಬೇಕು. (೧೪) ಸಾವಧತನದಿಂದ ಮಾಡಿದ ಅತಿ ದೊಡ್ಡ ಪ್ರಯತ್ನ ಮತ್ತು ಕಠಿಣ ಪ್ರಸಂಗದಲ್ಲಿ ತಾಳಿದ ದೊಡ್ಡ ಧೈರ್ಯ ಮತ್ತು ಅದ್ಭುತ ಹಾಗೂ ಶ್ರೇಷ್ಠ ಕಾರ್ಯವನ್ನು ಸಾಧಿಸುವದು ಇವೆಲ್ಲ ಈಶ್ವರನ ಕೃಪೆಯ ಲಕ್ಷಣಗಳಿರುವವು.(೧೫) ಇಂಥ ಪುರುಷನ ಯಶ, ಕೀರ್ತಿ, ಪ್ರತಾಪ, ಮಹಿಮೆ, ಮತ್ತು ಉತ್ತಮ ಗುಣಗಳಿಗೆ ಸೀಮೆಯೇ ಇರುವದಿಲ್ಲ. ಯಾರಿಗೆ ಇನ್ನೊಬ್ಬರ [ಎರಡನೆಯವರ] ಉಪಮೆಯನ್ನೇ ಕೊಡಲಿಕ್ಕೆ ಬರುವದಿಲ್ಲವೋ ಇಂಥವರ ಮೇಲೆ ಈಶ್ವರನ ಕೃಪೆಯು ಪೂರ್ಣ ಇರುವದೆಂದು ತಿಳಿಯಬೇಕು. (೧೬) ಯಾವ ಪುರುಷನು ದೇವ, ಬ್ರಾಹ್ಮಣರನ್ನು ಮನ್ನಿಸುವನೋ ಆಚಾರ ವಿಚಾರ ಇವುಗಳನ್ನು ಸಂಭಾಳಿಸುವನೋ ಬಹಳ ಜನರಿಗೆ ಆಧಾರ ಕೊಡುವವನಾಗಿರುವನೋ ಮತ್ತು ಯಾರ ಕೈಯಿಂದ ಸತತವೂ [ನಿರಂತರವೂ] ಪರೋಪಕಾರ ಘಟಿಸುವದೋ ಅಂಥ ಪುರುಷನು ಈಶ್ವರನ ಕೃಪೆಗೆ ಪಾತ್ರನಾದವನಿರುವನು. (೧೭) ಪ್ರಪಂಚ ಮತ್ತು ಪಾರಮಾರ್ಥ ಎರಡೂ ಕಡೆಗೆ ಯಾರದು ಯೋಗ್ಯ ರೀತಿಯಲ್ಲಿ ಲಕ್ಷ್ಯವಿರುವದೋ, ಯಾರು ಸತತ ಸಾವಧತನದಿಂದ ಇರುವರೋ, ಯಾರು ಬಹು ಜನರಿಗೆ ಬರುವ ತೊಂದರೆ, ಇತರ ಕಷ್ಟಾದಿಗಳು, ತಮಗೇ ಬಂದವುಗಳಾಗಿವೆಯೆಂದು ಭಾವಿಸಿ ತಿಳಿದು ಅವನ್ನೆಲ್ಲ ತಾವು ಅನುಭವಿಸಿ ಅವರಿಗೆಲ್ಲ ಸುಖಕೊಡುವ ಪ್ರಯತ್ನಮಾಡುವರೋ ಇವರೆಲ್ಲರೂ ಈಶ್ವರನ ಕೃಪೆಗೆ ಪಾತ್ರರಾಗುವರು. ಅಥವಾ ಆದಂಥವರಿರುವರು. (೧೮) ಯಾರು ಯಾವಾಗಲೂ ದೇವರ ಕಾರ್ಯದಲ್ಲಿ ಮುಂದಾಗಿರುವರೋ ಮತ್ತು ಬ್ರಾಹ್ಮಣರ ಬಗ್ಗೆ ಕಾಳಜಿಯನ್ನು ವಹಿಸುವರೋ, ಬಹು ಜನರನ್ನು ಸಂಭಾಳಿಸುವರೋ ಇವರ ಮೇಲೆ ಈಶ್ವರನ ಕೃಪೆಯು ಸದಾ ಇರುವದು. (೧೯)

ಧರ್ಮಸ್ಥಾಪನೇಚೆ ನರ । ತೇ ಈಶ್ವರಾಚೆ ಅವತಾರ ।
ಜಾಲೇ ಆಹೇತ ಪುಢೇ ಹೋಣಾರ । ದೇಣೇ ಈಶ್ವರಾಚೇ ॥೨೦॥

ಉತ್ತಮ ಗುಣಾಚಾ ಗ್ರಾಹಿಕ । ತರ್ಕ ತೀಕ್ಷ್ಣ ವಿವೇಕ ।
ಧರ್ಮವಾಸನಾ ಪುಣ್ಯಶ್ಲೋಕ । ದೇಣೇ ಈಶ್ವರಾಚೇ ॥೨೧॥

ಸಕಳ ಗುಣಾಮಧೇ ಸಾರ । ತಜವಿಜಾ ವಿವೇಕ ವಿಚಾರ ।
ಜೇಣೇ ಪಾವಿಜೆ ಪೈಲಪಾರ । ಅರತ್ರಪರತ್ರೀಚಾ ॥೨೨॥

ಇತಿ ಶ್ರೀ ದಾಸಭೋಧೆ ಗುರುಶಿಷ್ಯ ಸಂವಾದೇ
'ಉತ್ತಮಪುರುಷ ನಿರೂಪಣ' ನಾಮ ಸಮಾಸ ಷಷ್ಠಮ ॥

● ●

ಯಾವ ಪುರುಷನು ಧರ್ಮ ಸ್ಥಾಪನೆಯನ್ನು ಮಾಡುವನೋ ಅವನು. ಈಶ್ವರನ ಅವತಾರನೇ ಇರುವನು. ಇಂಥ ಮಹಾಪುರುಷರು ಪೂರ್ವದಲ್ಲಿ (ಹಿಂದೆ) ಆಗಿರುವರು. ಮತ್ತು ಈಗ ಸದ್ಯದಲ್ಲಿ ಇರುವರು. ಮತ್ತು ಮುಂದೆಯೂ ಸಹ ಆಗುವರು. ಇಂಥ ಪುರುಷರು ಹುಟ್ಟಿಬರುವದೂ, ಇಂಥ ಪುಣ್ಯ ಕಾರ್ಯವನ್ನು ಮಾಡುವದೂ ಈಶ್ವರನ ಕೃಪೆಯಿಂದೇ ತಿಳಿಯಬೇಕು. (೨೦) ಯಾವ ಪುರುಷನು ಉತ್ತಮ ಗುಣಗಳ ಪ್ರೇಮಿಯಾಗಿರುವನೋ ಯಾರ ಹತ್ತಿರ ತೀವ್ರ ಬುದ್ಧಿ ಮತ್ತು ವಿವೇಕ ಶಕ್ತಿ ಇರುವದೋ ಯಾರಿಗೆ ಕೇವಲ ಸದಿಚ್ಛೆಯ ಶುಭ ವಾಸನೆಯೇ ಇರುವದೋ ಮತ್ತು ಯಾರು ಅಪಾರ ಪುಣ್ಯ ಕಾರ್ಯ ಮಾಡಿರುವರೋ ಇಂಥ ಪುರುಷರೆಲ್ಲ ಈಶ್ವರ ಕೃಪೆಯ ಫಲವೇ ಆಗಿರುವರು. (೨೧) ಯಾರು ವಿವೇಕ ವಿಚಾರದಿಂದ ಮತ್ತು ವ್ಯವಸ್ಥಿತ ರೀತಿಯಿಂದ ಲೆಕ್ಕಾಚಾರದಿಂದ ಪ್ರಪಂಚ ಮತ್ತು ಪರಮಾರ್ಥಗಳೆರಡನ್ನೂ ಚನ್ನಾಗಿ ಪಾರುಗಾಣಿಸುವರೋ ಅಂಥವರ ವಿಚಾರವು ಮತ್ತು ಅಂಥವರ ಯೋಜನೆಯು ಸರ್ವ ಗುಣದ ಸಾರವೇ ಇರುವದು. (೨೨)

ಶ್ರೀ ದಾಸಬೋಧದ ಹದಿನೆಂಟನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ಉತ್ತಮ ಪುರುಷ ನಿರೂಪಣ"ವೆಂಬ ಆರನೆಯ ಸಮಾಸವು ಮುಗಿದುದು.

● ●

ದಶಕ ಅಷ್ಟದಶ : ಸಮಾಸ ಸಪ್ತಮ : ಜನಸ್ವಭಾವ ನಿರೂಪಣ [ನುಡಿ ೨೦]

॥ಶ್ರೀರಾಮ ಸಮರ್ಥ॥ ಜನಾಚಾ ಲಾಲಚೀ ಸ್ವಭಾವ। ಆರಂಭೀ ಚ ಮ್ಹಣತೀ ದೇವ।
ಮ್ಹಣೆಜೆ ಮಲಾ ಕಾಂಹೀ ದೇವ। ಐಸೀ ವಾಸನಾ ॥೧॥

ಕಾಂಹೀ ಚ ಭಕ್ತೀ ಕೇಲೀ ನಸ್ತಾ। ಆಣೀ ಇಚ್ಛಿತೀ ಪ್ರಸನ್ನತಾ।
ಜೈಸೇ ಕಾಂಹೀ ಚ ಸೇವಾ ನ ಕರಿತಾ। ಸ್ವಾಮೀಸ ಮಾಗತೀ ॥೨॥

ಕಷ್ಟೇವಿಣ ಫಳ ನಾಹೀ। ಕಷ್ಟೇವಿಣ ರಾಜ್ಯ ನಾಹೀ।
ಕೇಲ್ಯಾವಿಣ ಹೋತ ನಾಹೀ। ಸಾಧ್ಯ ಜನೀ ॥೩॥

ಆಳಸೇ ಕಾಮ ನಾಸತೇ। ಹೇ ತೋ ಪ್ರತ್ಯಯಾಸ ಯೇತೇ।
ಕಷ್ಟಾಕಡೇ ಚುಕಾವಿತೇ। ಹೀನ ಜನ ॥೪॥

ಆಧೀ ಕಷ್ಟಾಚೇ ದುಃಖ ಸೋಸಿತೀ। ತೇ ಪುಢೇ ಸುಖಾಚೇ ಫಳ ಭೋಗಿತೀ।
ಆಧೀ ಆಳಸೇ ಸುಖಾವತೀ। ತ್ಯಾಸೀ ಪುಢೇ ದುಃಖ ॥೫॥

## ದಶಕ ೧೮. ಸಮಾಸ ೭. ಜನಸ್ವಭಾವ ನಿರೂಪಣ (ನುಡಿ ೨೦)

ಸಾಮಾನ್ಯ ಮನುಷ್ಯನು ಅತ್ಯಂತ ಸ್ವಾರ್ಥಿ ಇರುವನು. ಇವನಿಗೆ ತನ್ನ ಸ್ವಾರ್ಥಕ್ಕಾಗಿ ದೇವರೂ ಸಹ ಬೇಕಾಗಿರುತ್ತಾನೆ ಮನುಷ್ಯನ ಸ್ವಭಾವ ಹೇಗಿರುವದೆಂದರೆ ಇವನಿಗೆ ಕಷ್ಟಪಡಲು ಬೇಡವಾಗಿರುತ್ತದೆ. ಆದರೆ ಅದರ ಫಲವಷ್ಟೇ ಬೇಕು. ಈ ಕರ್ಮ ಭೂಮಿಯ ನಿಯಮ ಹೇಗಿರುವದೆಂದರೆ ಇಲ್ಲಿ ಕಷ್ಟ-ಶ್ರಮಪಡದೇ ಫಲವು ಸಿಗುವದಿಲ್ಲ. ಯಾರು ಒಂದೇ ಸಮನೇ ದೀರ್ಘವಾಗಿ ಶ್ರಮಪಟ್ಟು ಕಾರ್ಯಮಾಡುವರೋ- ಮತ್ತು ಯಾರು ವಿವೇಕದಿಂದ ನಡೆಯುವರೋ ಅವರಷ್ಟೇ ಭಾಗ್ಯವನ್ನು ಭೋಗಿಸುವರು. ಹೀಗೆಮಾಡಿ ಎಷ್ಟೋ ಜನ ಹಿಂದೆ ಭೋಗಿಸಿ ಹೋದರು. ಪ್ರಪಂಚದಲ್ಲಿ ಮತ್ತು ಪರಮಾರ್ಥದಲ್ಲಿ ಎರಡೂ ಕಡೆಗೂ ವಿವೇಕವು ಒಂದೇ ಸಮವಿರುವದು. ದೇವರ ಕರ್ತಾತನ ಹೇಗೆ ನಿಜವಿರುವದು ? ಮತ್ತು ಯಾವ ಬಗೆಯಿಂದ ಇದೆ ಅನ್ನುವದನ್ನು ವಿವೇಕದಿಂದ ಚನ್ನಾಗಿ ತಿಳಿದುಕೊಳ್ಳಬೇಕು? ಯಾವ ಮನುಷ್ಯನಲ್ಲಿ ವಿಚಾರ ಅನ್ನುವದೇ ಇರುವದಿಲ್ಲವೋ ಅಲ್ಲಿ ಸಾರಾ ಸಾರ ವಿಚಾರವಂತೂ ಬಹುದೂರವಾಯಿತು. ವಿಚಾರ ಹೀನನು ಯಾವುದಕ್ಕೂ ಬಾರದವನು. ಎಷ್ಟು ಅರ್ಥವಿಲ್ಲದವನೆಂದು ಅನಿಸುವದು. ವಿಚಾರದಿಂದ ಪ್ರಪಂಚ ಮತ್ತು ಪರಮಾರ್ಥ ಎರಡನ್ನೂ ಸಹಜವಾಗಿ ಸಾಧಿಸಲಿಕ್ಕೆ ಬರುವದು. ಆದರೆ ಇದಕ್ಕೆ ವಿವೇಕದ ವಿಚಾರ ಅವಶ್ಯವು. ವಿವೇಕದಿಂದ ದೇವರ ಪ್ರಾಪ್ತಿಯಾಗುವದು:

### ದಶಕ ೧೮. ಸಮಾಸ ೭. ಜನಸ್ವಭಾವ ನಿರೂಪಣ (ನುಡಿ ೨೦)

ಮನುಷ್ಯನು ಭಾಗ್ಯಹೀನನಾಗುವದು ಅಥವಾ ಭಿಕಾರಿ, ಅಭಾಗಿಯಾಗಿರುವದು ಯಾಕೆ? ಯಾರ ಹತ್ತಿರ ವಿವೇಕ ವಿಚಾರ ಎಳ್ಳಷ್ಟು ಇಲ್ಲ. ಮತ್ತು ಕಷ್ಟ-ಶ್ರಮಪಡುವದಕ್ಕೆ, ಕೆಲಸಮಾಡುವದಕ್ಕೆ ಸಿದ್ಧತೆ ಅಥವಾ ತಯಾರಿ ಇಲ್ಲವೆಂಬುದೇ ಇದಕ್ಕೆ ಉತ್ತರವಿರುವದು. ಶ್ರೀ ಸಮರ್ಥರ ಅಭಿಪ್ರಾಯವೂ ಕೂಡಾ ಮೇಲಿನ ಪ್ರಶ್ನೆಗೆ ನಿಶ್ಚಿತ ಅಭಿಪ್ರಾಯ-ಇದೇ ಉತ್ತರವಿರುವದು. ಆಲಸ್ಯಉಳ್ಳ ಮತ್ತು ವಿವೇಕ ಹೀನ ಮನುಷ್ಯರು ಶ್ರೀ ಸಮರ್ಥರಿಗೆ ಎಷ್ಟು ಮಾನ್ಯರಿಲ್ಲದವರು ಎಂದು ನಿಶ್ಚಿತವಾಗಿ ಹೇಳಬಹುದು. ಕಷ್ಟಪಡುವ ಕಟ್ಟಾಳು ವಿವೇಕಶೀಲ ಮನುಷ್ಯರ ಹಿಂದೆ ಭಾಗ್ಯವು ಬೆನ್ನು ಹತ್ತುವದು. ಈ ಮಾತೂ ಕೂಡಾ ಶ್ರೀ ಸಮರ್ಥರಿಗೆ ಸಂಪೂರ್ಣ ಖಾತ್ರಿಯಾಗಿದೆ: ಸಾಮಾನ್ಯ ಜನರ ಸ್ವಭಾವವೇ ಮೂಲತಃ ಸ್ವಾರ್ಥಿ ಮತ್ತು ಲೋಭಿ ಇರುವದು. ಇವನು ಯಾವಾಗ "ದೇವಾ" ಎಂದು ಉಚ್ಚರಿಸುವನೋ ಅದರೊಂದಿಗೆ ಅಥವಾ ಆರಂಭದಲ್ಲಿಯೇ "ನನಗೆ ಏನಾದರೂ ಕೊಡು" ಅನ್ನುವ ಅಳುಬುರಕ ವಾಸನಾ ಇವನ ಮನದಲ್ಲಿ ಇರುವದು. (೧) ಇಂಥವರು ದೇವರ ನಿಜವಾದ ಭಕ್ತಿಯನ್ನು ಎಷ್ಟು ಮಾಡುವದಿಲ್ಲ. ಮತ್ತು ದೇವರ ಒಲುಮೆ ನಮ್ಮ ಮೇಲೆ ಆಗಲಿ ಅನ್ನುವ ಅಪೇಕ್ಷೆಯನ್ನು ಮಾತ್ರ ಮಾಡುವರು. ಯಾವೊಬ್ಬ ನೌಕರನು ಏನೇನೂ ಕೆಲಸ ಕಾರ್ಯಮಾಡದೇ ಮಾಲಕನ ಹತ್ತಿರ ಸಂಬಳ [ಪಗಾರ] ಬೇಡಿದರೆ ಹೇಗಾಗುವದೋ ಅದರಂತೆ ಇದೂ ಇರುವದು.(೨) ಈ ಜಗತ್ತಿನಲ್ಲಿ ಕಷ್ಟ ಶ್ರಮಮಾಡದೇ ಫಲ ದೊರಕುವದಿಲ್ಲ. ಕಷ್ಟಪಡದ ಹೊರತು ರಾಜ್ಯ ದೊರಕುವದಿಲ್ಲ. ಕಷ್ಟ-ಶ್ರಮಮಾಡದ ಹೊರತು ಜಗತ್ತಿನಲ್ಲಿ ಯಾವುದೇ ಕಾರ್ಯ ಸಾಧ್ಯವಾಗುವದಿಲ್ಲ. (೩) ಆಲಸ್ಯದಿಂದ ಕಾರ್ಯ ನಾಶವಾಗುವದು. ಈ ಮಾತು ಪ್ರತ್ಯಕ್ಷ ಅನುಭವಕ್ಕೆ ಬರುವದೇ ಆಗಿರುವದು. ಹೀಗಿದ್ದರೂ ಹೀನ ಜನರು ಕಷ್ಟಪಡುವಲ್ಲಿ, ಮೈಗಳ್ಳತನ ಮಾಡುವರು. (೪) ಯಾವ ಜನರು ಮೊದಲಿಗೆ ಕಷ್ಟದಿಂದ ದುಃಖವನ್ನು ಸೋಸುವರೋ ಈ ಜನರೇ ಮುಂದೆ ಸುಖದ ಫಲವನ್ನು ಭೋಗಿಸುವರು. ಯಾವಜನರು ಮೊದಲಿಗೆ ಆಲಸ್ಯದಿಂದ ಸುಖಪಡುವರೋ ಈ ಜನರು ಮುಂದೆ ಬಹಳ ದುಃಖ ಭೋಗಿಸುವರು, (೫)

ಯೆಹಲೋಕ ಅಥವಾ ಪರಲೋಕ । ದೋಹೀಕಡೆ ಸಾರಿಖಾ ಚಿ ವಿವೇಕ ।
ದೀರ್ಘ ಸೂಚನೇಚೆ ಕೌತುಕ । ಕಳಲೇ ಪಾಹಿಜೇ ॥೬॥

ಮೇಳವಿತೀ ತಿತುಕೇ ಭಕ್ಷಿತೀ । ತೇ ಕಠೀಣ ಕಾಳೀ ಮರೋನ ಜಾತೀ ।
ದೀರ್ಘ ಸೂಚನೇನೇ ವರ್ತತೀ । ತೇ ಚಿ ಭಲೇ ॥೭॥

ಯೆಹಲೋಕೀಚಾ ಸಂಚಿತಾರ್ಥ । ಪರಲೋಕೀಚಾ ಪರಮಾರ್ಥ ।
ಸಂಚಿತೇವಿಣ ವೆರ್ಥ । ಜೀತ ಮೇಲೇ ॥೮॥

ಯೇಕದಾ ಮೇಲ್ಯಾನೇ ಸುಟೇನಾ । ಪುನ್ಹಾ ಜನ್ಮೋಜನ್ಮೀ ಯಾತನಾ ।
ಆಪಣಾಸ ಮಾರೀ ನಾಂಚವಿನಾ । ತೋ ಆತ್ಮಹತ್ಯಾರಾ ॥೯॥

ಪ್ರತಿಜನ್ಮೀ ಆತ್ಮಘಾತ । ಕೋಣೇ ಕರಾವೇ ಗಣೀತ ।
ಯಾಕಾರಣೇ ಜನ್ಮಮೃತ್ಯ । ಕೇವೀ ಚುಕೇ ॥೧೦॥

ದೇವ ಸಕಳ ಕಾಂಹೀ ಕರಿತೋ । ಐಸೇ ಪ್ರಾಣಿಮಾತ್ರ ಬೋಲತೋ ।
ತ್ಯಾಚೇ ಭೇಟೀಚಾ ಲಾಭ ತೋ । ಅಕಸ್ಮಾತ ಜಾಲಾ ॥೧೧॥

ವಿವೇಕಾಚಾ ಲಾಭ ಘಡೇ । ಜೇಣೇ ಪರಮಾತ್ಮಾ ಠಾಈ ಪಡೇ ।
ವಿವೇಕ ಪಾಹಾತಾ ಸಾಪಡೇ। ವಿವೇಕೀ ಜನೀ ॥೧೨॥

ದೇವ ಪಾಹಾತಾ ಆಹೇ ಯೇಕ । ಪರಂತು ಕರಿತೋ ಅನೇಕ ।
ತ್ಯಾ ಅನೇಕಾಸ ಯೇಕ । ಮ್ಹಣೋ ನಯೇ ಕೀ ॥೧೩॥

ದೇವಾಚೇ ಕರ್ತೃತ್ವ ಆಣಿ ದೇವ । ಕಳಲಾ ಪಾಹಿಜೇ ಅಭಿಪ್ರಾವ ।
ಕಳಲ್ಯಾವಿಣ ಕಿತೇಕ ಜೀವ । ಉಗೇ ಚ ಬೋಲತೀ ॥೧೪॥

ಉಗೇಚ ಬೋಲತೀ ಮೂರ್ಖಪಣೇ । ಶಾಹಾಣಪಣ ವಾಢಾಯಾಕಾರಣೇ ।
ತೃಪ್ತಿಲಾಗೀ ಉಪಾವ ಕರಣೇ । ಐಸೇ ಜಾಲೇ ॥೧೫॥

ಜೇಹೀ ಉದಂಡ ಕಷ್ಟ ಕೇಲೇ । ತೇ ಭಾಗ್ಯ ಭೋಗೂನ ಠೇಲೇ ।
ಯೇರ ತೇ ಬೋಲತ ಚಿ ರಾಹಿಲೇ । ಕರಂಟೇ ಜನ ॥೧೬॥

ಕರಂಟ್ಯಾಚೇ ಕರಂಟಿ ಲಕ್ಷಣ । ಸಮಜೋನ ಜಾತೀ ವಿಚಕ್ಷಣ ।
ಭಲ್ಯಾಚೇ ಉತ್ತಮ ಲಕ್ಷಣ । ಕರಂಟ್ಯಾಸ ಕಳೇನಾ ॥೧೭॥

ಪ್ರಪಂಚವೇ ಇರಲಿ, ಪರಮಾರ್ಥವೇ ಇರಲಿ, ಎರಡೂ ಕಡೆಗೂ ವಿವೇಕವು ಒಂದೇ ಸಮನಾಗಿ ಇರುವದು. ಮುಂದಿನ ಯೋಜನೆಯನ್ನು ಸರಿಯಾಗಿ ತಯಾರಿಸಿ ಅದರಂತೆ ನಡೆಯುವದರ ಮಹತ್ವವನ್ನು ತಿಳಿದು ಕೊಳ್ಳಬೇಕು.(೬)ನಾವು ಎಷ್ಟು ಗಳಿಸಿರುವೆವೋ ಅದರ ಪೈಕಿ ಕೆಲವೊಂದು ಶಿಲುಕು ಇಡದೇ ಎಲ್ಲವನ್ನೂ ತಿಂದುಹಾಕಿ ಬಿಟ್ಟರೆ ಮುಂದೆ ಕಠಿಣ ಕಾಲ ಬಂದಾಗ ಜೀವಿಸಲಿಕ್ಕೆ ಕಠಿಣವಾಗುವದು. ಆದ್ದರಿಂದ ಮುಂದಿನ ಯೋಜನೆ [ಲೆಕ್ಕ] ಮಾಡಿ ಯಾರು ನಡೆಯುವರೋ ಅವರೇ ಜಾಣ ಅನಿಸುವರು. (೭) ಈ ಭೂಮಿಯ ಮೇಲೆ ಸುಖದಿಂದಿರಬೇಕಾದರೆ ಕೂಡಿಟ್ಟು ಸಂಗ್ರಹಿಸಿದ ಹಣವು ಇದ್ದರೆ[ಧನ ಧಾನ್ಯಾದಿಗಳು ಇದ್ದರೆ]ಮಾತ್ರ ಉಪಯೋಗ ಬೀಳುವದು.ಅದರಂತೆಯೇ ಪರಲೋಕದಲ್ಲಿ ಸಮಾಧಾನದಿಂದ ಇರಲಿಕ್ಕೆ ಪರಮಾರ್ಥವು (ಸಂಚಿತ ಪುಣ್ಯ ಸಂಚಯವು)ಉಪಯೋಗಕ್ಕೆ ಬರುವದು. ಯಾರ ಹತ್ತಿರ ಸ್ವಂತಕ್ಕೆ ಸಾಕಾಗುವಷ್ಟು ಸಂಗ್ರಹಿಸಿದ ಹಣವಿರುವದಿಲ್ಲವೋ ಅವರು ಜೀವಂತ ಇದ್ದರೂ ಸತ್ತಂತೆ [ಅನಿಸುವದು] ಆಗುವರು. (೮) ಒಂದು ಸಲ ಮನುಷ್ಯನು ಸತ್ತರೆ ಅಲ್ಲಿಗೆ ಅದು ಮುಗಿಯುವದಿಲ್ಲ. ಅವನಿಗೆ ಪುನಃ ಪುನಃ ಜನ್ಮ ಬರುವದು. ಬಂದಾಗ ಯಾತನೆ ಅನುಭವಿಸಬೇಕಾಗುವದು. ಯಾರು ಸ್ವತಃವೇ [ತನ್ನನ್ನೇ] ತಾನು ಉಳಿಸಿಕೊಳ್ಳದೆ ತನ್ನ ಘಾತ [ಕೆಡಕು] ವನ್ನು ತಾನೇ ಮಾಡಿಕೊಳ್ಳುವನೋ ಅಂಥವನು ಆತ್ಮಘಾತಕಿ [ಹತ್ಯಾರಾ]ಅನಿಸುವನು.(೯)ಈ ಪ್ರಕಾರದಿಂದ ಪ್ರತಿಯೊಂದು ಜನ್ಮದಲ್ಲಿ ಆತ್ಮಘಾತ ನಡೆಯುವದು.ಹೀಗೆ ಎಷ್ಟು ಜನ್ಮ ಆಗುವದೋ ಇದರ ಲೆಕ್ಕಮಾಡಲಿಕ್ಕೆ ಬರುವದಿಲ್ಲ. ಈ ರೀತಿಯಿಂದ ಜೀವನ ಸಾಗಿಸಿದರೆ ಜನ್ಮ-ಮರಣವೇನೂ ತಪ್ಪುವದಿಲ್ಲ. (೧೦) ದೇವರು ಏನೆಲ್ಲವನ್ನೂ ಮಾಡುವನು. ಹೀಗೆ ಎಲ್ಲ ಜನರೂ ಅನ್ನುವರು. ಆದರೆ ಭಗವಂತನ ಭೆಟ್ಟಿ ಅಕಸ್ಮಾತಾಗಿ ಮಾತ್ರ ಆಗುವದು. (೧೧) ಯಾರ ಹತ್ತಿರ ಖರೇ ಆತ್ಮಾನಾತ್ಮ ವಿವೇಕವಿರುವದೋ ಅವರಿಗೆ ಪರಮಾತ್ಮನು ದೊರಕುವನು. ಮತ್ತು ವಿವೇಕಿ ಪುರುಷನ ಹತ್ತಿರ ವಿವೇಕದ ಲಾಭ ದೊರಕುವದು. (೧೨) ನಿಜವಾಗಿ ಹೇಳುವದಾದರೆ ದೇವರು ಒಬ್ಬನೇ ಇರುವನು. ಸಾಮಾನ್ಯ ಜನರು ಅನೇಕ ದೇವರನ್ನು ಮನ್ನಿಸುವರು. ಆ ಅನೇಕ ದೇವರಿಗೇನೂ ಒಬ್ಬ ದೇವರೆಂದು ಅನ್ನಲಿಕ್ಕೆ ಬರುವದಿಲ್ಲ. (೧೩) ದೇವರ ಮೂಲ ಸ್ವರೂಪ ಮತ್ತು ದೇವರ ಕರ್ತೃತನ[ಸಾಮರ್ಥ್ಯ ಶಕ್ತಿ]ಇವೆರಡೂ ಯಾವ ರೀತಿಯಲ್ಲಿ ಮತ್ತು ಹೇಗೆ ಖರೇ ಇರುವವು. ಎಂಬುದನ್ನು ಸರಿಯಾದ ರೀತಿಯಿಂದ ತಿಳಿದುಕೊಳ್ಳಬೇಕು. ಇದನ್ನು ಸ್ವಲ್ಪವೂ ತಿಳಿಯದೇ ಇದ್ದ ಬಹಳ ಜನರು ಇದರ ಬಗ್ಗೆ ಅನುಭವವಿಲ್ಲದೇ ಮಾತನಾಡುವರು. (೧೪) ತಮ್ಮ ಜಾಣತನವನ್ನು ತೋರಿಸುವದಕ್ಕಾಗಿ ಕೆಲವು ಜನರು ಸುಮ್ಮನೇ ಮೂರ್ಖತನದಿಂದ ದೇವರ ಬಗ್ಗೆ ಮತ್ತು ಅವನ ಅಚಾಟ ಸಾಮರ್ಥ್ಯದ ಬಗ್ಗೆ [ಶಕ್ತಿಯ ಬಗ್ಗೆ] ಮಾತನಾಡುವರು. ಒಬ್ಬ ಮನುಷ್ಯನಿಗೆ ಹಸಿವೆಯಾಯಿತು ಆಗ ಹಸಿವೆಯು ತೃಪ್ತಿಯಾಗಬೇಕಾದರೆ ಭೋಜನ [ಊಟ] ಮಾಡುವದು, ಇದು ಸರಳ ಉಪಾಯವಾಗಿರುವದು. ಇದನ್ನು ಮಾಡದೆ ಇತರ ಉಪಾಯ ಮಾಡುತ್ತ ಕುಳಿತರೆ ಅವನ ಹಸಿವೆ ತೃಪ್ತಿಯಾಗಲಾರದು. ಇದೂ ಹಾಗೆಯೇ ಇರುವದು. (೧೫) ಯಾರು ಮನಸ್ವೀ ಕಷ್ಟಪಡುತ್ತಾರೋ ಅವರೇ ಭಾಗ್ಯ ಭೋಗಿಸುತ್ತ ಕೂಡ್ರುವರು. ಉಳಿದವರು ಭಾಗ್ಯಹೀನರು. ಈ ಜನರು ಸುಮ್ಮನೆ ಬಡ ಬಡ ಮಾಡುತ್ತ ಬಾಳುವರು. (೧೬) ಯಾರು ಜಾಣರು [ಶಹಾಣೆ] ಇರುವರೋ ಅವರು ಹತಭಾಗಿ ದರಿದ್ರರ ದರಿದ್ರ ಲಕ್ಷಣಗಳನ್ನು ತಿಳಿದು ಮುಂದೆ ಹೋಗುವರು. ಆದರೆ ಉತ್ತಮ ಜನರ ಉತ್ತಮ ಲಕ್ಷಣಗಳನ್ನು ಮಾತ್ರ ಈ ಹತಭಾಗಿ ದರಿದ್ರರಿಗೆ ತಿಳಿಯುವದಕ್ಕಾಗುವದಿಲ್ಲ. (೧೭)

ತ್ಯಾಚೀ ಪೈಸಾವಲೀ ಕುಬುದ್ಧೀ । ತೇಥೇ ಕೈಚೀ ಅಸೇಲ ಶುದ್ಧೀ ।
ಕುಬುದ್ಧೀ ತೇ ಚಿ ಸುಬುದ್ಧೀ । ಐಸೀ ವಾಟೇ ॥೧೮॥

ಮನುಷ್ಯ ಶುದ್ಧೀಸ ಸಾಂಡಾವೇ । ತ್ಯಾಚೇ ಕಾಯೆ ಖರೇ ಮಾನಾವೇ ।
ಜೇಥೇ ವಿಚಾರಾಚ್ಯಾ ನಾವೇ । ಸುನ್ಯಾಕಾರ ॥೧೯॥

ವಿಚಾರೇ ಯೆಹಲೋಕ ಪರಲೋಕ । ವಿಚಾರೇ ಹೋತಸೇ ಸಾರ್ಥಕ ।
ವಿಚಾರೇ ನಿತ್ಯಾನಿತ್ಯ ವಿವೇಕ । ಪಾಹಿಲಾ ಪಾಹಿಜೇ ॥೨೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ಜನಸ್ವಭಾವ ನಿರೂಪಣ' ನಾಮ ಸಮಾಸ ಸಪ್ತಮ ॥

ಯಾರು ಅಭಾಗಿ, ಭಿಕಾರಿ ದರಿದ್ರರಿರುವರೋ ಅವರ ಅಂಗದಲ್ಲಿ ಕುಬುದ್ಧಿಯು ಪ್ರಾಬಲ್ಯವಿರುವದು. ಇಂಥ ಅಭಾಗಿಗಳಲ್ಲಿ ಎಳ್ಳಷ್ಟೂ ನಿರ್ದೋಷತನ [ಶುದ್ಧತ್ವ] ಇರುವದಿಲ್ಲ. ಕುಬುದ್ಧಿಗೇ ಇವರು ಸುಬುದ್ಧಿ ಎಂದು ಅನ್ನುವರು. [ತಿಳಿಯುವರು] (೧೮) ಯಾವ ಮನುಷ್ಯನು ಚನ್ನಾಗಿ ಶುದ್ಧಿಯಲ್ಲಿ ಇಲ್ಲವೋ ಇಂಥವನ ಯಾವ ಮಾತುಗಳನ್ನೂ ನಿಜವೆಂದು ನಂಬಲಿಕ್ಕೆ ಬರುವದಿಲ್ಲ. ಇವರಲ್ಲಿ ವಿಚಾರವೆಂಬುದು ಬಂಡೀಗಾಲಿಯಾಗಿರುವದು.ಅಥವಾ ವಿಚಾರ ಶೂನ್ಯತನವು ಅಂದರೆ ವಿಚಾರವು ನೆಲ್ಲಿಕಾಯಿಯಷ್ಟು ಪೂಜಿ ಆಗಿರುವದು ಅರ್ಥಾತ್ ವಿಚಾರಕ್ಕೆ ಆಸ್ಪದವೇ ಇರುವದಿಲ್ಲ. (೧೯) ವಿಚಾರದಿಂದ ಇಹಲೋಕ ಮತ್ತು ಪರಲೋಕ ಸಾಧಿಸುವದು, ವಿಚಾರದಿಂದ ಜೀವನ ಸಾರ್ಥಕ ವಾಗುವದು. ವಿಚಾರದಿಂದಲೇ ನಿತ್ಯಾನಿತ್ಯ ವಿವೇಕ ನೋಡಬೇಕು. (೨೦)

ಶ್ರೀ ದಾಸಬೋಧದ ಹದಿನೆಂಟನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ಜನಸ್ವಭಾವ ನಿರೂಪಣ"ವೆಂಬ ಹೆಸರಿನ ಏಳನೆಯ ಸಮಾಸವು ಮುಗಿದುದು.

• •

### ದಶಕ ಅಷ್ಟದಶ : ಸಮಾಸ ಅಷ್ಟಮ : ಅಂತರ್ದೇವ ನಿರೂಪಣ (ನುಡಿ ೨೫)

॥ಶ್ರೀರಾಮ ಸಮರ್ಥ॥ ಬ್ರಹ್ಮ ನಿರಾಕಾರ ನಿಶ್ಚಳ । ಆತ್ಮ್ಯಾಸ ವಿಕಾರ ಚಂಚಳ ।
ತಯಾಸ ಮ್ಹಣತೀ ಸಕಳ । ದೇವ ಐಸೇ ॥೧॥

ದೇವಾಚಾ ಠಾವ ಚಿ ಲಾಗೇನಾ । ಯೇಕ ದೇವ ನೇಮಸ್ತ ಕಳೇನಾ ।
ಬಹುತ ದೇವೀ ಅನುಮಾನೇನಾ । ಯೇಕ ದೇವ ॥೨॥

ಮ್ಹಣೋನೀ ವಿಚಾರ ಅಸಾವಾ । ವಿಚಾರೇ ದೇವ ಶೋಧಾವಾ ।
ಬಹುತ ದೇವಾಂಚಾ ಗೋವಾ । ಪಡೋ ಚಿ ನಯೇ ॥೩॥

ದೇವ ಕ್ಷೆತ್ರೀ ಪಾಹಿಲಾ । ತ್ಯಾಸಾರಿಖಾ ಧಾತೂಚಾ ಕೇಲಾ ।
ಪೃಥ್ವೀಮಧೇ ದಂಡಕ ಚಾಲಿಲಾ । ಯೇಣೇ ರೀತೀ ॥೪॥

ನಾನಾ ಪ್ರತಿಮಾದೇವಾಂಚೇ ಮೂಳ । ತೋ ಹಾ ಕ್ಷೆತ್ರದೇವ ಚಿ ಕೇವಳ ।
ನಾನಾ ಕ್ಷೆತ್ರೇ ಭೂಮಂಡಳ । ಶೋಧೂನ ಪಾಹಾವೇ ॥೫॥

ಕ್ಷೆತ್ರ ದೇವ ಪಾಷಾಣಾಚಾ । ವಿಚಾರ ಪಾಹಾತಾ ತಯಾಚಾ ।
ತಂತ ಲಾಗಲಾ ಮುಳಾಚಾ । ಅವತಾರಾಕಡೇ ॥೬॥

## ದಶಕ ೧೮. ಸಮಾಸ ೮. ಅಂತರ್ದೇವ ನಿರೂಪಣ (ನುಡಿ ೨೫)

ದೇವರನ್ನು ಶೋಧಿಸಲು ಹುಡುಕಲು ಹೋಗಬೇಕೆಂದರೆ ಆ ದೇವರ ಪತ್ತೆಯೇ ಹತ್ತಲೊಲ್ಲದಾಗಿದೆ. ಕ್ಷೇತ್ರ [ತೀರ್ಥ, ಯಾತ್ರಾ, ಪವಿತ್ರ ಸ್ಥಾನ] ದಲ್ಲಿಯ ದೇವರಾದವು. ಪ್ರತಿಮಾ [ಮೂರ್ತಿ, ವಿಗ್ರಹ] ದೇವರಾದವು, ಅವತಾರಗಳ ದೇವರಾದವು, ಆದರೆ ಈ ಎಲ್ಲ ಪ್ರಕಾರದ ದೇವರ ಮೇಲೆ ಒಬ್ಬನೇ ಒಬ್ಬ ಅಂತರಾತ್ಮಾ ದೇವನ ಸತ್ತಾಧಿಕಾರ ನಡೆಯುವದು. ಇವನೇ ನಿಜವಾದ ಕರ್ತಾ ಮತ್ತು ಭೋಕ್ತಾ. ಎಲ್ಲದಕ್ಕೂ ಒಡೆಯ, ಗುಣಜ್ಞ ಇರುವನು. ಆದ್ದರಿಂದ ಇವನನ್ನು ವಿಚಾರದಿಂದ ವಿವೇಕದಿಂದ, ಶೋಧಿಸಿ ತಿಳಿಯಬೇಕು. ಮನುಷ್ಯನ ಅಂತರ್ಯಾಮದಲ್ಲಿ ಯಾವ ಶುದ್ಧ ತಿಳುವಳಿಕೆ ಅರ್ಥಾತ್ ಶುದ್ಧ ಅರಿವು ಇರುವದೋ ಅದೇ ನಿಜವಾದ [ಖರೇ] ದೇವರು. ತೀರ್ಥಗಳಲ್ಲಿ ನೋಡಹೋದರೆ ಅಲ್ಲಿ ಅಬ್ಬರಕ್ಕೆ, ಕೊನೆಗೆ ಕಲ್ಲು ಗುಂಡು ಮಾತ್ರ ನೀರೇ ಇರುತ್ತವೆ. ದೇವರು ಸತ್ಸಂಗದಲ್ಲಿ ಇರುವನು. ಅಲ್ಲಿ ಸಿಗುವನು, ನಮ್ಮ ಅಂತರಂಗದ ವೇಧ ಅಂದರೆ ಕಾಳಜಿ ಅಥವಾ ಆಕರ್ಷಣೆ ಸೂಕ್ಷ್ಮ ಅವಲೋಕನ ಮಾಡುವಂಥ ಮನುಷ್ಯರು ಇರಬೇಕು. ನಾವು ನಮ್ಮ ಅಂತರಂಗವನ್ನು ಶೋಧಿಸುತ್ತಲೇ ಹೋಗಬೇಕು. ಆಕಾರ ಹೊಂದಿದ ದೃಶ್ಯ ವಸ್ತುಗಳೆಲ್ಲವೂ ನಾಶವಂತವಿರುವವು. ಇದನ್ನು ತಿಳಿದು ಮನದಿಂದ ದೃಶ್ಯವನ್ನೆಲ್ಲ ಬದಿಗೆ ಸರಿಸಿಬಿಡಬೇಕು. ಇದರ ಆಚೆಗೆ ಪರಬ್ರಹ್ಮನಿರುವನು. ಇವನಿದ್ದಲ್ಲಿ ಭ್ರಮೆಯಿಲ್ಲ, ಕರ್ಮವಿಲ್ಲ, ನಾನು ಅನ್ನುವದೂ ಇಲ್ಲ. ಕರ್ಮದ ಹಿಡಿತದಿಂದ ಬಿಡುಗಡೆ ಹೊಂದಿ [ಪಾರಾಗಿ] ಜಗದ ಜನತೆಯ ಅಂತಃಕರಣದಲ್ಲಿ ತುಂಬಿ ತುಳುಕುವ ದೇವನನ್ನು ಶೋಧಿಸಬೇಕು. ಮತ್ತು ಅನುಭವ ಪಡೆಯಬೇಕು. ಸಗುಣದ ಉಪಾಸನೆಯನ್ನು ಮಾಡಬೇಕು. ಅಂದರೆ ಅದರಿಂದ "ನಾನು" ಅನ್ನುವ ಅಹಂತನ ನಾಶವಾಗುವದು. ಇದೇ ಸಂಗ ತ್ಯಾಗವಾಗಿರುವದು. ನಾನು ಅನ್ನುವದನ್ನು ತ್ಯಜಿಸಿ ಪರಮೇಶ್ವರನಲ್ಲಿ ಅನುಸಂಧಾನ ಹಚ್ಚಬೇಕು ಹೊಂದಬೇಕು. ಈ ರೀತಿಯಿಂದ ಸಗುಣದ ಉಪಾಸನೆಯನ್ನು ಮಾಡಿದರೆ ನಿರ್ಗುಣ ಬ್ರಹ್ಮನು ಸಿಗುವನು. ನಾವು ಸ್ವತಃ ಪಾವನರಾಗಿ ಜಗದ ಉದ್ಧಾರವನ್ನು ಮಾಡಬೇಕು.

### ದಶಕ ೧೮. ಸಮಾಸ ೮. ಅಂತರ್ದೇವ ನಿರೂಪಣ (ನುಡಿ ೨೫)

ಈ ಜಗತ್ತಿನಲ್ಲಿ ಅನೇಕ ದೇವರು ಕಂಡುಬಂದರೂ ಕೊನೆಗೆ ಒಬ್ಬ ಅಂತರಾತ್ಮನೇ ನಿಜವಾದ ದೇವರಿರುವನು. ಮನುಷ್ಯನು ವಿಚಾರಪೂರ್ವಕ ಇದರ ಶೋಧವನ್ನು ಮಾಡಬೇಕು: ಬ್ರಹ್ಮ ನಿರಾಕಾರ ಮತ್ತು ನಿಶ್ಚಲ ನಿರುವನು. ಆತ್ಮಾ ಚಂಚಲನಿದ್ದು ಅವನಿಗೆ ವಿಕಾರಗಳು ಇರುವವು. ಇವನಿಗೇ ಜನರು "ದೇವ" ಎಂದು ಅನ್ನುವರು.(೧) ನಿಜವಾದ ವಸ್ತುಸ್ಥಿತಿ ಹೇಗಿರುವದೆಂದರೆ: ದೇವರ ಪತ್ತೆ ಅಥವಾ ಇವನ ಮೂಲವೇ ಹತ್ತಲೊಲ್ಲದಾಗಿದೆ. ನಿಜವಾದ ಒಬ್ಬನೇ ಒಬ್ಬನಾದ ಆ ದೇವನು ಯಾರು ? ಇದು ನಿಶ್ಚಯ ಪೂರ್ವಕವಾಗಿ ತಿಳಿಯಲೊಲ್ಲದಾಗಿದೆ. ಬಹಳಷ್ಟು ದೇವರನ್ನು ನೋಡಿದಾಗ ಅಂದರೆ ಇವುಗಳಲ್ಲಿ ನಿಜವಾದ [ಖರೇ] ದೇವನೊಬ್ಬನನ್ನು ಗುರುತಿಸಲು, ಕಲ್ಪಿಸಲು ಶಕ್ಯವಾಗಲೊಲ್ಲದು. (೨) ಆದ್ದರಿಂದ ಮನುಷ್ಯರಲ್ಲಿ ವಿಚಾರವೆಂಬುದು ಇರಬೇಕು. ವಿಚಾರದಿಂದ ದೇವನನ್ನು ಶೋಧಿಸಬೇಕು. ಬಹಳಷ್ಟು ದೇವರ ಗೊಂದಲವಾಗಗೊಡಬಾರದು. (೩) ಒಬ್ಬನು ಒಂದು ಕ್ಷೇತ್ರದಲ್ಲಿ ಒಂದು ದೇವರನ್ನು ನೋಡಿದನು. ಅದರಂತೆಯೇ ತದ್ರೂಪ ಒಂದು ಧಾತುವಿನ ಮೂರ್ತಿಯನ್ನು ತಯಾರ ಮಾಡಿದನು. ಜಗತ್ತಿನಲ್ಲಿ ಈ ಪ್ರಕಾರದ ಹಲವು ದೇವತೆಗಳು ನಡೆದು ಬಂದಿರುವವು. (೪) ಕ್ಷೇತ್ರದಲ್ಲಿರುವ ದೇವರು ಅನೇಕ ಪ್ರತಿಮಾ ದೇವರುಗಳಿಗೆ ಮೂಲವಿರುವದು. ಪೃಥ್ವಿಯ ಮೇಲೆ ಅನೇಕ ಕ್ಷೇತ್ರಗಳಿರುವವು. ಇವನ್ನೆಲ್ಲ ಶೋಧಿಸಿ ನೋಡಬೇಕು. (೫) ಕ್ಷೇತ್ರದಲ್ಲಿಯ ದೇವರು ಪಾಷಾಣದಿಂದ ಮಾಡಿದವು ಇರುವವು. ಇವು ಹೇಗೆ ಆದವು? ಇದರ ಬಗ್ಗೆ ವಿಚಾರಮಾಡಿದ್ದಾದರೆ ಅದರ ಮೂಲ ಯಾವುದಾದರೊಂದು ಅವತಾರದದೇವರವರೆಗೆ ಹೋಗಿ ಮುಟ್ಟುವದು(೬)

ಅವತಾರೀ ದೇವ ಸಂಪಲೇ । ದೇಹೆ ಧರೂನೀ ವರ್ತೋನ ಗೇಲೇ ।
ತ್ಯಾಹೂನ ಥೋರ ಅನುಮಾನಲೇ । ಬ್ರಹ್ಮಾ ವಿಷ್ಣು ಮಹೇಶ ॥೭॥

ತ್ಯಾ ತಿಹೀ ದೇವಾಸ ಜ್ಯಾಚೀ ಸತ್ತಾ । ತೋ ಅಂತರಾತ್ಮಾ ಚಿ ಪಾಹಾತಾ ।
ಕರ್ತಾ ಭೋಕ್ತಾ ತತ್ವತಾ । ಪ್ರತ್ಯಕ್ಷ ಆಹೇ ॥೮॥

ಯುಗಾನಯುಗೇ ತಿನ್ಹೀ ಲೋಕ । ಯೇಕ ಚಿ ಚಾಲವೀ ಅನೇಕ ।
ಹಾ ನಿಶ್ಚಯಾಚಾ ವಿವೇಕ । ವೇದಶಾಸ್ತ್ರೀ ಪಾಹಾವಾ ॥೯॥

ಆತ್ಮಾ ವರ್ತವಿತೋ ಶರೀರ । ತೋ ಚಿ ದೇವ ಉತ್ತರೋತ್ತರ ।
ಜಾಣೇವರೂಪೇ ಕಳಿವರ । ವಿವೇಕೇ ವರ್ತವೀ ॥೧೦॥

ತೋ ಅಂತರ್ದೇವ ಚುಕತೀ । ಧಾವಾ ಘೇಊನ ತೀರ್ಥಾ ಜಾತೀ ।
ಪ್ರಾಣೀ ಬಾಪುಡೇ ಕಷ್ಟತೀ । ದೇವಾಸ ನೇಣತಾ ॥೧೧॥

ಮಗ ವಿಚಾರಿತೀ ಅಂತಃಕರ್ಣೀ । ಜೇಥೇ ತೇಥೇ ಧೋಂಡಾ ಪಾಣೀ ।
ಉಗೇ ಚಿ ವಣವಣ ಹಿಂಡೋನೀ। ಕಾಯೆ ಹೋತೇ ॥೧೨॥

ಐಸಾ ಜ್ಯಾಸೀ ವಿಚಾರ ಕಳಲಾ । ತೇಣೇ ಸತ್ಸಂಗ ಧರಿಲಾ ।
ಸತ್ಸಂಗೇ ದೇವ ಸಾಪಡಲಾ । ಬಹುತ ಜನಾಸೀ ॥೧೩॥

ಐಸೀ ಹೇ ವಿವೇಕಾಚೀ ಕಾಮೇ । ವಿವೇಕೀ ಜಾಣತೀಲ ನೇಮೇ ।
ಅವಿವೇಕೀ ಭುಲಲೇ ಭ್ರಮೇ। ತ್ಯಾಸ ಹೇ ಕಳೇನಾ ॥೧೪॥

ಅಂತರವೇಧೀ ಅಂತರ ಜಾಣೇ । ಬಾಹೇರಮುದ್ರಾ ಕಾಹೀಚ ನೇಣೇ ।
ಮ್ಹಣೋನ ವಿವೇಕೀ ಶಾಹಾಣೇ । ಅಂತರ ಶೋಧಿತೀ ॥೧೫॥

ವಿವೇಕೇವಿಣ ಜೋ ಭಾವ । ತೋ ಭಾವ ಚಿ ಅಭಾವ ।
ಮೂರ್ಖಸ್ಯ ಪ್ರತಿಮಾ ದೇವ । ಐಸೇ ವಚನ ॥೧೬॥

ಅವತಾರೀ ದೇವರಾದರೋ ಮುಗಿದು ಬಿಟ್ಟವೆ. ಇವರು ದೇಹದಲ್ಲಿ ಜನ್ಮತಾಳಿ ಬಂದರು. ಮತ್ತು ಬಹಳ ದೊಡ್ಡ ಕಾರ್ಯಮಾಡಿ ಹೋದರು. ಬ್ರಹ್ಮ, ವಿಷ್ಣು, ಮಹೇಶ ಈ ಮೂವರು ದೇವತೆಗಳು ಅವತಾರೀ ದೇವತೆಗಳಿಗಿಂತ ದೊಡ್ಡವರು ಎಂದು ಕಲ್ಪನೆಯನ್ನು ಮಾಡಿದರು. (೭) ಆದರೆ ಈ ಮೂವರೂ ದೇವತೆಗಳ ಮೇಲೆ ಅಂತರಾತ್ಮನ ಅಧಿಕಾರದ ಸತ್ತಾ ನಡೆಯುವದು. ನಿಜವಾಗಿ ತಿಳಿದು ನೋಡಿದರೆ ಅಂತರಾತ್ಮನೇ ಪ್ರತ್ಯಕ್ಷ ಕರ್ತಾ ಇರುವನು. ಮತ್ತು ಭೋಕ್ತಾ-ಗುಣಜ್ಞನೂ ಇರುವನು. (೮) ಮನುಷ್ಯನ ಅಂತರ್ಯಾಮದಲ್ಲಿ ಯಾವ ಶುದ್ಧ ಅರಿವು ಇರುವದೋ ಅದೇ ಅಂತರಾತ್ಮನ ಸ್ವರೂಪವಿರುವದು. ಅದರ ಅನುಭವ ಪಡೆಯಬೇಕಾದರೆ ಮನುಷ್ಯನು ಅಂತರ್ಮುಖನಾಗಬೇಕು. ವಿವೇಕದಿಂದ ಯಾರು ಅಂತರ್ಯಾಮದಲ್ಲಿ ಶೋಧಮಾಡುತ್ತಾ ಅನುಭವ ಪಡೆಯುತ್ತಾ ಹೋಗುವರೋ ಅವರಿಗೆ ಮಾತ್ರ ಖರೇ ದೇವನಾದ ಅಂತರಾತ್ಮನ ಸ್ವರೂಪ ಸಿಗುವದು [ದೊರಕುವದು] : ಈ ಅಂತರಾತ್ಮನು ಅನೇಕ ಯುಗಗಳಿಂದ ಮೂರು ಲೋಕಗಳನ್ನು ನಡೆಯಿಸುತ್ತಿರುವನು. ಇವನು ಒಬ್ಬನೇ ಇದ್ದು ಅನೇಕರನ್ನು [ಅನೇಕವನ್ನು] ನಡೆಸುವನು. ವೇದ ಶಾಸ್ತ್ರಗಳಲ್ಲಿ ಈಗ ಹೇಳಿದ ರೀತಿಯಲ್ಲಿಯೇ ನಿಶ್ಚಿಯ ಪೂರ್ವಕ ನಿರ್ಣಯ ಮಾಡಿದ್ದು ಕಂಡುಬರುವಂಥದಾಗಿದೆ. (೯) ಅಂತರಾತ್ಮನೇ ಶರೀರವನ್ನು ನಡೆಯಿಸುವನು. ಇವನ ಶೋಧ ಮಾಡಿದ್ದಾದರೆ ಅರಿವಿನ ರೂಪದಿಂದ ಮತ್ತು ವಿವೇಕದಿಂದ ಅವನೇ ದೇವರ ಶರೀರವನ್ನೂ ನಡೆಯಿಸುವನು ಅನ್ನುವ ಅನುಭವವು ಬರುವಂಥದ್ದಾಗಿರುವದು. (೧೦) ಈ ಅಂತರ್ದೇವನನ್ನು ಜನರು ಮರೆಯುವರು. ಮತ್ತು ತೀರ್ಥ-ಕ್ಷೇತ್ರದ ಕಡೆಗೆ ಧಾವಿಸುವರು. ನಿಜವಾದ [ಖರೇ] ದೇವನು ಯಾರು ? ಇದು ತಿಳಿಯದೆ ಇದ್ದದ್ದರಿಂದ ತಿಳಿಗೇಡಿ ದೀನ ಜನರು ಕಷ್ಟವನ್ನು ಭೋಗಿಸುವರು. (೧೧) ತೀರ್ಥಕ್ಕೆ ಹೋಗಿ ಅಲ್ಲಿ ದೇವರು ಭೆಟ್ಟಿಯಾಗದಿದ್ದರೆ ಆಗ ಅವನ ಮನದಲ್ಲಿ ಯಾವ ಬಗೆಯ ವಿಚಾರಗಳು ಬರುವವೆಂದರೆ ಪ್ರತಿಯೊಂದು ತೀರ್ಥದಲ್ಲಿ ಕಲ್ಲು ಗುಂಡು ಮತ್ತು ನೀರು ಇದರ ಹೊರತಾಗಿ ಬೇರೆ ಏನೂ ಇರುವದಿಲ್ಲ. ಇದು ಖರೇ ಇದ್ದದ್ದೇ ನಿಜವಾದರೆ ಸುಮ್ಮನೇ ಮಣ ಮಣ ತಿರುಗಿ ಏನೂ ಲಾಭವಿಲ್ಲದಂತಾಯಿತು. (೧೨) ಈ ವಿಚಾರವು ಯಾರಿಗೆ ಸರಿಯಾಗಿ ತಿಳಿಯುವದೋ ಅವರು ಆ ಮೇಲೆ ಅಥವಾ ಆಗಲೇ ಸತ್‌ಸಂಗವನ್ನು ಹಿಡಿಯುವರು. [ಸೇರುವರು]. ಬಹಳಷ್ಟು ಜನರಿಗೆ ಸತ್‌ಸಂಗದಿಂದ ದೇವನು ದೊರಕಿರುವನು. (೧೩) ಹೀಗೆ ಇದು ವಿವೇಕದ ಕೆಲಸವಿರುವದು. ವಿವೇಕಶೀಲ ಜನರಿಗೆ ಮಾತ್ರ ಇದು ಸರಿಯಾಗಿ ತಿಳಿಯುವದು. ಭ್ರಮೆಯಿಂದ ಮೋಹಗೊಂಡ ಅಥವಾ ಮೋಹಕ್ಕೆ ಬಲಿಯಾದ ಯಾವ ವಿವೇಕಹೀನ ಜನರಿರುವರೋ ಅವರಿಗೆ ಇದು ತಿಳಿಯುವದಿಲ್ಲ. (೧೪) ಅಂತರ್ ಮುಖರಾಗಿ ಯಾರು ಒಳಗೆ [ತನ್ನಲ್ಲಿ] ನೋಡುವದನ್ನು ಕಲಿಯುವರೋ ಅವರಿಗೆ ಮಾತ್ರ ಅಂತರಂಗದಿಂದ ಸೂಕ್ಷ್ಮ ವಸ್ತುವಿನ ಜ್ಞಾನವಾಗುವದು. ಯಾರು ಬಹಿರ್ಮುಖರು, ಇಹ ಲೋಕದ ವಿಷಯದಲ್ಲಿ ಮಗ್ನರಾದವರು, ವಿಷಯದ ಮೇಲೆ ಮೋಹವಿಟ್ಟಂಥವರಿರುವರೋ ಅಂದರೆ ಅಂತರಾತ್ಮನ ಕಡೆಗೆ ಲಕ್ಷ್ಯಕೊಡದೇ ಇರುವರೋ ಅವರಿಗೆ ಇಂಥ ವಿಷಯವೆಷ್ಟೂ ತಿಳಿಯುವದಿಲ್ಲ. ಆದ್ದರಿಂದ ಯಾರು ವಿವೇಕಿಗಳು ಮತ್ತು ಜಾಣರು ಇರುವರೋ ಅವರು ತಮ್ಮ ಅಂತರಂಗವನ್ನು ಶೋಧಿಸುವರು. ಸತ್‌ಸಂಗದಲ್ಲಿ ದೇವರು ಸಿಗುವ ನೆಂದು ಶ್ರೀ ಸಮರ್ಥರು ಹೇಳಿರುವ ಮಾತು ಬಹಳ ಮಹತ್ವದ್ದಿರುವದು. ಜಗತ್ತಿನಲ್ಲಿ ಭಕ್ತ ಸಂತ [ಸಾಧು ಶರಣ] ರೆಂಬ ಮಂಡಳಿ ಹೇಗಿರುವದೆಂದರೆ ಮನುಷ್ಯರಿಗೆ ಅಂತರಂಗದಲ್ಲಿ ಒಳಗೆ ಸೇರುವ [ಪ್ರವೇಶಿಸುವ] ದರ ಮಹತ್ವವನ್ನು ಬಿಂಬಿಸುವಂತೆ—ತಿಳಿಸಿ ಹೇಳುವರು. ಮತ್ತು ಅಂತರ್ವೇಧ ಅಂದರೆ ಅಂತರಾತ್ಮನ ಧ್ಯಾನ ತೆಗೆದುಕೊಳ್ಳುವ ಅದನ್ನು ಪಡೆಯುವ, ಹೊಂದುವ, ಮಾಡುವ ಕಲೆಯನ್ನೂ ಸಹಿತ ಕಲಿಸಿಕೊಡುವರು. (೧೫) ವಿವೇಕ ಪೂರ್ವಕವಾಗಿ ಅಂದರೆ ಚನ್ನಾಗಿ ತಿಳಿದು ಶ್ರದ್ಧಾ ಇಡುವದು ಯೋಗ್ಯವಾದದ್ದು. ವಿವೇಕವನ್ನು ಉಪಯೋಗಿಸದೇ ಶ್ರದ್ಧೆ ಇಟ್ಟದ್ದಾದರೆ ಅದು ಒಂದು ಪ್ರಕಾರದ ಅಶ್ರದ್ಧೆಯೇ ಆಗುವದು. "ಮೂರ್ಖಸ್ಯ ಪ್ರತಿಮಾ ದೇವ" ಅಂದರೆ "ಪ್ರತಿಮೆಯು ಮೂರ್ಖರ ದೇವರಿರುವದು." ಹೀಗೆ ಒಂದು ವಚನವೇ ಇರುವದು. (೧೬)

ಸಾಹಾತ ಸವುಜತ ಸೇವಟಾ ಗೇಲಾ। ತೋ ಚಿ ವಿವೇಕೀ ಭಲಾ ।
ತತ್ವೇ ಸಾಂಡುನೀ ಪಾವಲಾ । ನಿರಂಜನೀ ॥೧೭॥

ಅರೇ ಜೇ ಆಕಾರಾಸೀ ಯೇತೇ । ತೇ ಅವಘೇ ಚ ನಾಸೋನ ಜಾತೇ ।
ಮಗ ಗಲಬಲ್ಯಾವೇಗಳೇ ತೇ । ಪರಬ್ರಹ್ಮ ಜಾಣಾವೇ ॥೧೮॥

ಚಂಚಳ ದೇವ ನಿಶ್ಚಳ ಬ್ರಹ್ಮ । ಪರಬ್ರಹ್ಮೀ ನಾಹೀ ಭ್ರಮ ।
ಪ್ರತ್ಯಯ ಜ್ಞಾನೇ ನಿಭ್ರಮ । ಹೋಈ ಜೇತೇ ॥೧೯॥

ಪ್ರಚೀತೀ ವೀಣ ಜೇಕೇಲೇ । ತೇ ತೇ ಅವಘೇ ವ್ಯರ್ಥ ಗೇಲೇ ।
ಪ್ರಾಣೀ ಕಷ್ಟಕಷ್ಟೋ ಚಿ ಮೇಲೇ । ಕರ್ಮಕಚಾಟೇ ॥೨೦॥

ಕರ್ಮಾವೇಗಳೇ ನ ವ್ಹಾವೇ । ತರೀ ದೇವಾಸ ಕಾಸಯಾ ಭಜಾವೇ ।
ವಿವೇಕೀ ಜಾಣತೀ ಸ್ವಭಾವೇ । ಮೂರ್ಖ ನೇಣೇ ॥೨೧॥

ಕಾಂಹೀ ಅನುಮಾನಲೇ ವಿಚಾರೇ । ದೇವ ಆಹೆ ಜಗದಾಂತರೇ ।
ಸಗುಣಾಕರಿತಾ ನಿರ್ಧಾರೇ । ನಿರ್ಗುಣ ಪಾವಿಜೇ ॥೨೨॥

ಸುಗುಣ ಪಾಹಾತಾ ಮುಳಾಸ ಗೇಲಾ । ಸಹಜ ಚಿ ನಿರ್ಗುಣ ಪಾವಲಾ ।
ಸಂಗತ್ಯಾಗೇ ಮೋಕಳಾ ಜಾಲಾ । ವಸ್ತುರೂಪ ॥೨೩॥

ಮೊದಲು ಭಾವ ಭಕ್ತಿಯಿಂದ ಮತ್ತು ವಿಚಾರದಿಂದ ಮತ್ತು ಸಾಧನದಿಂದ ಯಾರು ಅಂತರಂಗದಲ್ಲಿ [ಒಳಗೆ] ನೋಡುತ್ತ ಹೋಗುವರೋ ಮತ್ತು ನೋಡಿದಂತೆಲ್ಲ ಅಂತರಂಗವು ತಿಳಿಯುತ್ತ ಹೋಯಿತೆಂದರೆ ಅವರು ಗುರಿಯನ್ನು ಮುಟ್ಟುವರು. ಅಥವಾ ಕೊನೆಯವರೆಗೆ ಹೋಗಿ ಮುಟ್ಟುವರು. ಅರ್ಥಾತ್ ಅವರು ಆತ್ಮಸ್ವರೂಪದ ವರೆಗೆ ಹೋಗಿ ಮುಟ್ಟುವರು. ಇವರೇ ಉತ್ತಮ ವಿವೇಕವಂತ ಮನುಷ್ಯರು. ಅಶಾಶ್ವತ ತತ್ವಗಳನ್ನು ಹಿಂದಕ್ಕೆ ಬಿಟ್ಟು [ಸರಿಸಿ, ಬಿಟ್ಟುಕೊಟ್ಟು] ಇವರು ನಿರ್ಮಲ ಬ್ರಹ್ಮದವರೆಗೆ ಹೋಗಿ ಮುಟ್ಟುವರು. (೧೭) ಎಲೋ ಶಿಷ್ಯನೇ ಕೇಳು, ಯಾವ ಯಾವುದು ಆಕಾರಕ್ಕೆ ಬರುವದೋ ದೃಷ್ಟಿಗೆ ಕಾಣುವದೋ ಅದೆಲ್ಲವೂ ನಾಶ ಹೊಂದುವದು. ಆಕಾರಮಯ ರೂಪಗೊಂಡಂಥ ಅಶಾಶ್ವತದ ಗೊಂದಲ ಗಡಬಡಿಯ ಆಚೆಗೆ ಇರುವಂಥಾದ್ದೇ ಆ ಪರಬ್ರಹ್ಮ ವಿರುವದು. (೧೮) ದೇವನು ಚಂಚಲನು ಆದರೆ ಪರಬ್ರಹ್ಮವು ನಿಶ್ಚಲವಿರುವದು. ಪರಬ್ರಹ್ಮನಲ್ಲಿ ಭ್ರಮವೆಂಬುದಿಲ್ಲ. ನಾವೆಲ್ಲರೂ ಭ್ರಮದಲ್ಲಿರುವೆವು. ಆದ್ದರಿಂದ ಬ್ರಹ್ಮನ ಪ್ರತ್ಯಕ್ಷ ಅನುಭವವನ್ನು ಪಡೆದು ನಾವು ಭ್ರಮರಹಿತರಾಗ ಬೇಕು. (೧೯) ಅನುಭವ ಪಡೆಯದೆ ನಾವು ಯಾವುದನ್ನು ಮಾಡುವೆವೋ ಅದೆಲ್ಲವೂ ವ್ಯರ್ಥವಾಗಿ ಹೋಗುವದು. ಕರ್ಮದ ಅವಘಡ [ಹಿಡಿತ, ಸಂಕಟ, ಇರುಕಿನಲ್ಲಿ] ದಲ್ಲಿ ಸಿಕ್ಕು ಮನುಷ್ಯನು ಕಷ್ಟ ಭೋಗಿಸುತ್ತಲೇ ಸತ್ತು ಹೋಗುವನು. ಎಲ್ಲಿಯವರೆಗೆ ನಮಗೆ ಸೂಕ್ಷ್ಮದಲ್ಲಿ ಸೇರಲಿಕ್ಕೆ ಬರುವದಿಲ್ಲವೋ ಮತ್ತು ಎಲ್ಲಿಯವರೆಗೆ ನಮಗೆ ಅನುಭವ ಬರುವದಿಲ್ಲವೋ ಅಲ್ಲಿಯವರೆಗೆ ಕರ್ಮದ ಬಂಧನ ಸಡಿಲು ಆಗುವದಿಲ್ಲ. ಕರ್ಮದ ಬಂಧನ ಎಲ್ಲಿಯವರೆಗೆ ಸಡಿಲು ಆಗುವದಿಲ್ಲವೋ ಅಲ್ಲಿಯವರೆಗೆ ಜೀವದ ತಳಮಳವೇನೂ ಕಡಿಮೆ ಆಗುವದಿಲ್ಲ. ಈ ರೀತಿಯಿಂದಾಗಿ ಮನುಷ್ಯನು ದುಃಖದಲ್ಲಿಯೇ ಸಾಯುವನು. (೨೦) ಕರ್ಮ ಬಂಧನದಿಂದ ಬಿಡುಗಡೆ ಆಗದಿದ್ದರೆ ಅಥವಾ ಇದರಿಂದ ಮುಕ್ತನಾಗದಿದ್ದರೆ ಅಂದರೆ ನಿಷ್ಕರ್ಮನಾಗಲಿಕ್ಕೆ ಬರದಿದ್ದರೆ ದೇವರ ಭಜನೆ ಇತ್ಯಾದಿಗಳನ್ನು ಏತಕ್ಕೆ ಮಾಡುವದು? ಈ ವಿಷಯವು ವಿವೇಕಿ ಪುರುಷರಿಗೆ ಸರಿಯಾಗಿ ತಿಳಿಯುವದು. ಮೂರ್ಖರು, ದಡ್ಡರು ಇದನ್ನು ತಿಳಿಯುವದಿಲ್ಲ. ಕರ್ಮವು ಸಗುಣವಿರುವದು, ದೃಶ್ಯವಿರುವದು, ಸ್ಥೂಲವಿರುವದು. ನಮಗೆ ದೃಶ್ಯವನ್ನು ದಾಟಿ ಮುಂದೆ ಸೂಕ್ಷ್ಮದಲ್ಲಿ ಹೋಗಬೇಕಾಗಿದೆ ಎಂಬ ಮಾತು ನಿಜವಿರುವದು. ಆದರೂ ನಮ್ಮಲ್ಲಿ ದೇಹಾಭಿಮಾನವು ಎಲ್ಲಿಯವರೆಗೆ ಇರುವದೋ ಅಲ್ಲಿಯವರೆಗೆ ನಾವು ಸಗುಣದಲ್ಲಿರುವೆವು. ಸಗುಣಕ್ಕೆ ಸಗುಣದ ಉಪಾಸನೆಯನ್ನು ಮಾಡಲು ಶಕ್ಯವಿರುವದು. ಆದರೆ ಈ ಸಗುಣ ಉಪಾಸನೆಯಿಂದ ನಮ್ಮ ನಾನು [ಅಹಂ] ಅನ್ನುವದು ಕ್ಷೀಣವಾಗಿ ಪೂರ್ಣ ಇಲ್ಲದಾಗಿ ಬಿಡುವದು. ಆಗ ಅನಾಯಾಸದಿಂದ ನಾವು ನಿರ್ಗುಣದಲ್ಲಿ ಪ್ರವೇಶಮಾಡುವೆವು. ಅರ್ಥಾತ್ ತಾನಾಗಿಯೇ ಪ್ರವೇಶ ಘಟಿಸು ವದು. (೨೧) ಖರೇ ವಿಚಾರಮಾಡಿ ನೋಡಿದರೆ ದೇವರು ಜಗತ್ತಿನ ಅಂತರ್ಯಾಮದಲ್ಲಿ ತುಂಬಿ ತುಳುಕುವನೆಂಬುದರ ಕಲ್ಪನೆಯು ಬರುತ್ತದೆ. ಈ ಖರೇ ದೇವರನ್ನು ಭಜಿಸುವದಕ್ಕೆ ಸಗುಣದ ಆಧಾರ ಹಿಡಿಯಲಿಕ್ಕೆ ಬೇಕು. ಈ ರೀತಿ ಯಿಂದ ಸಗುಣದ ಉಪಾಸನೆಯನ್ನು ಮಾಡಿದೆವೆಂದರೆ ಆಗ ನಿಶ್ಚಯವಾಗಿ ನಿರ್ಗುಣ ಸ್ವರೂಪದ ಪ್ರಾಪ್ತಿಯಾಗು ವದು. (೨೨) ನಾಮ ರೂಪಾತ್ಮಕ ಸಗುಣದಲ್ಲಿ ಶೋಧ ಮಾಡುತ್ತಾ ಮಾಡುತ್ತಾ ಅನುಭವವನ್ನು ಹೊಂದುತ್ತ ಕೊನೆಗೆ ಮೂಲ ಮಾಯೆಯವರೆಗೆ ಬಂದು ಮುಟ್ಟುವನು. ಅಲ್ಲಿ ಅವನಿಗೆ ಸಹಜವಾಗಿ ನಿರ್ಗುಣ ಸ್ವರೂಪದ ಪ್ರಾಪ್ತಿ ಯಾಗುವದು. ಅಲ್ಲಿಗೆ ಉಪವಾಸನೆಯು ಕೊನೆಯು ಬರುವದು. ಉಪಾಸಕನ "ನಾನು" ಅನ್ನುವ ಅಹಂ ಇಲ್ಲಿಗೆ ಸಂಪೂರ್ಣವಾಗಿ ಇಲ್ಲದಾಗಿ ಬಿಡುವದು. ನಾನು ಅನ್ನುವದು ಸಂಪೂರ್ಣವಾಗಿ ಇಲ್ಲದಾಗಿ ಹೋದ ಮೇಲೆ ಯಾವತ್ತೂ ದೃಶ್ಯ ರೂಪವಾದ ಸಗುಣದಿಂದ ಇವನು [ಉಪಾಸಕನು] ಮುಕ್ತನಾಗುವನು. ಹೀಗೆ ಮುಕ್ತನಾದಂಥ ಸಾಧಕನು ಕೊನೆಯಲ್ಲಿ ಬ್ರಹ್ಮರೂಪವಾಗುವನು. (೨೩)

ಪರಮೇಶ್ವರೀ ಅನುಸಂಧಾನ । ಲಾವಿತಾ ಹೋಇಜೆ ಪಾವನ ।
ಮುಖ್ಯ ಜ್ಞಾನೇಚಿ ವಿಜ್ಞಾನ । ಪಾವಿಜೇತೇ ॥೨೪॥

ಏಸೀ ಹೇ ವಿವೇಕಾಚೀ ವಿವರ್ಣೇ । ಪಾಹಾವೀ ಸುಚಿತ ಅಂತಃಕರ್ಣೇ ।
ನಿತ್ಯಾನಿತ್ಯವಿವೇಕಶ್ರವಣೇ । ಜಗದೋಧಾರ ॥೨೫॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ಅಂತರ್ದೇವ ನಿರೂಪಣ' ನಾಮ ಸಮಾಸ ಅಷ್ಟಮ ॥

• •

ಅಂತರಾತ್ಮನ ಅಖಂಡ ಅನುಸಂಧಾನ ಹಚ್ಚಬೇಕು. ಈ ಪ್ರಕಾರದಲ್ಲಿ ಅನುಸಂಧಾನ ಹತ್ತಿದ ಕೂಡಲೇ ಮನುಷ್ಯನು ಪಾವನನಾಗುವನು. ಇವನಿಗೆ ಆತ್ಮಜ್ಞಾನವಾಗುವದು. ಈ ಜ್ಞಾನದಿಂದ ಮುಂದೆ ಅನುಭವರೂಪ ವಿಜ್ಞಾನವು ಪ್ರಾಪ್ತವಾಗುವದು. ಜೀವಕ್ಕೆ ಭಗವಂತನ ಹೊರತಾಗಿ ಇತರ ಎಲ್ಲವೂ ಲೋಪವಾಗಿ ಮರೆವು ಆಗಿ ಅರ್ಥಾತ್ ಉಳಿದೆಲ್ಲವುಗಳ ಸ್ಮರಣವೆಷ್ಟೂ ಉಳಿಯದಂತಾಗುವದಕ್ಕೇ ಅನುಸಂಧಾನ-ಅನುಸಂಧಾನವೆಂದು ಅನ್ನುವರು. (೨೪) ಅಂತಃಕರಣ ಏಕಾಗ್ರಮಾಡಬೇಕು. ಮತ್ತು ವಿವೇಕದಿಂದ ಇಂಥವುಗಳ ವಿವರಣೆ ಮಾಡಬೇಕು. ನಿತ್ಯಾನಿತ್ಯವಿವೇಕ ಅಂದರೆ ಈ ಸೃಷ್ಟಿಯಲ್ಲಿ ಶಾಶ್ವತ ಯಾವುದು ? ಅಶಾಶ್ವತ ಯಾವುದು ? ಈ ವಿಷಯದ ಬಗ್ಗೆ ನಿತ್ಯವೂ ಶ್ರವಣಮಾಡಿದರೆ ಮನನ ನಿಧಿ ಧ್ಯಾಸ ಮಾಡಿದರೆ ಸರ್ವ ಜಗತ್ತಿನ [ಜಗತ್ತಿನಲ್ಲಿಯ ಜೀವಗಳ] ಉದ್ಧಾರವಾಗುವದು. (೨೫)

ಶ್ರೀ ದಾಸಬೋಧದ ಹದಿನೆಂಟನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ಅಂತರ್ದೇವ ನಿರೂಪಣ"ವೆಂಬ ಹೆಸರಿನ ಎಂಟನೇ ಸಮಾಸವು ಮುಗಿದುದು.

• •

ದಶಕ ಅಷ್ಟದಶ : ಸಮಾಸ ನವಮ : ನಿದ್ರಾನಿರೂಪಣ (ನುಡಿ ೨೪)

॥ಶ್ರೀರಾಮ ಸಮರ್ಥ॥ ವಂದೂನಿಯಾ ಆದಿಪುರುಷ ।
ಬೋಲೋ ನಿದ್ರೇಚಾ ವಿಳಾಸ ।
ನಿದ್ರಾ ಆಲಿಯಾ ಸಾವಕಾಸ । ಜಾಣಾರ ನಾಹೀ ॥೧॥

ನಿದ್ರೇನೇ ವ್ಯಾಪಿಲೀ ಕಾಯಾ । ಆಳಸ ಅಂಗ ಮೋಡೇ ಜಾಂಭಯಾ ।
ತೇಣೇ ಕರಿತಾ ಬೈಸಾವಯಾ । ಧೀರ ನಾಹೀ ॥೨॥

## ದಶಕ ೧೮. ಸಮಾಸ ೯. ನಿದ್ರಾ ನಿರೂಪಣ (ನುಡಿ ೨೪)

ಈ ಸಮಾಸದಲ್ಲಿ ಶ್ರೀ ಸಮರ್ಥರು ನಿದ್ರೆಯ ವರ್ಣನೆಮಾಡಿದ್ದಾರೆ. ಮಾನವ ಜೀವನದಲ್ಲಿ ನಿದ್ರೆಗೆ ಎಷ್ಟು ಮಹತ್ವವಿರುವದೆಂಬುದನ್ನು ಯಾರಿಗೂ ಬಿಡಿಸಿ ಹೇಳಲಿಕ್ಕೆ ಬೇಡ. ತಿನ್ನುವದು, ಕುಡಿಯುವದು, ನಿದ್ರೆ, ಮಲಮೂತ್ರ ವಿಸರ್ಜನೆ ಇತ್ಯಾದಿ ಮಾನವ ಶರೀರದ ಮೂಲಭೂತ ಅವಶ್ಯಕತೆಗಳಿರುವವು ಆದರೂ ಅದರಲ್ಲಿಯೇ ನಿದ್ರೆಗೆ ವಿಶೇಷ ಸ್ಥಾನವಿರುವದು. ಯಾವೊಬ್ಬನಿಗೆ ಒಂದು ದಿವಸ ಅನ್ನ ಸಿಗದಿದ್ದರೆ ಆ ಬಗ್ಗೆ ಅವನಿಗೆ ವಿಶೇಷವೆನಿಸುವದಿಲ್ಲ. ಆದರೆ ಅದೇ ಒಂದು ದಿವಸ ಎಷ್ಟೂ ನಿದ್ರೆ ಆಗದಿದ್ದರೆ ಅವನಿಗೆ ಬಹಳ ಬೇಚೈನ ಆಗುವದು. ಸಂತರು ನಿದ್ರೆಯನ್ನು ಬೇರೆ ಬಗೆಯಿಂದ ನೋಡುವರು. ವ್ಯವಹಾರದಲ್ಲಿ ಮನುಷ್ಯನು ಯಾವಾಗ ಎಚ್ಚರವಿರುವನೋ ಆಗ ಅವನ ವಿವೇಕವು ಸತೇಜವಿರುವದು.[ಪ್ರಫುಲ್ಲಿತವಿರುವದು]. ಅವನ ಜ್ಞಾನ ಕ್ರಿಯೆ ವ್ಯವಸ್ಥಿತ ಕೆಲಸಮಾಡುವದು. ಆದರೆ ಯಾವಾಗ ಮನುಷ್ಯ ನಿದ್ರೆಯ ಅಧೀನನಾಗುವನೋ ಆಗ ಅವನು ಅಜ್ಞಾನದ ಅಂಧಕಾರದಲ್ಲಿ ಮುಳುಗುವನು. ಅರ್ಥಾತ್ ಅವನ ಎಚ್ಚರದಲ್ಲಿಯ ಜ್ಞಾನವೇನೂ ಖರೇ ಅಜ್ಞಾನನಾಶಕ ಜ್ಞಾನವಲ್ಲ. ಅಂತೆಯೇ ಎಚ್ಚರದಲ್ಲಿ ಜಗತ್ತಿನ ದೊಡ್ಡಿಸ್ತನವನ್ನು ಭೋಗಿಸುವವರು ಮತ್ತು ಸೊಕ್ಕಿನಿಂದ ಮೆರೆಯುವ ಜನರು ನಿದ್ರೆಯಲ್ಲಿ ಅತ್ಯಂತ ಬೇರೆ ತರಹದಿಂದ ಕಾಣಿಸುವರು.ಮನುಷ್ಯನು ನಿದ್ರೆ ಹೋದನೆಂದರೆ ಎಷ್ಟೊಂದು ಹಾಸ್ಯಾಸ್ಪದವಾಗುವದು? ಅನ್ನುವ ವಿಷಯ ಈ ಸಮಾಸದಲ್ಲಿ ನೋಡಿರಿ. ಯಾರು ನಿಜವಾದ ಸಾಧನಮಾಡುವ ಸಾಧಕರಿರುವರೋ ಅವರ ನಿದ್ರೆ ಪ್ರಥಮದಲ್ಲಿ ಕಡಿಮೆ ಆಗುವದು. ಮತ್ತು ನಂತರ ನಿದ್ರೆಯ ಮೇಲೆ ಅವರ ಅಧಿಕಾರ [ಹಿಡಿತ] ಬರುವದು. ಆತ್ಮಜ್ಞಾನವಾದ ಮೇಲೆ ಜ್ಞಾನಿಗೆ ಬರುವ ನಿದ್ರೆಯು ನಿದ್ರೆಯಾಗಿರುವದಿಲ್ಲ. ಅಂದರೆ ಅದು ನಿದ್ರೆಯಾಗಿ ಉಳಿಯುವದಿಲ್ಲ. ಜ್ಞಾನೀ ಮನುಷ್ಯನು ಮಲಗಿಕೊಂಡಂತೆ [ನಿದ್ರಿಸುತ್ತಿದ್ದಂತೆ] ಕಾಣಿಸಿದರೂ ಕೂಡಾ ಅಂತರ್ಯಾಮದಲ್ಲಿ ಅವನು ಎಚ್ಚರಾಗಿ ಜಾಗ್ರತನಾಗಿಯೇ ಇರುವನು. ನಿದ್ರೆ ಬರುವದು ಅಜ್ಞಾನದ ಅಸ್ತಿತ್ವದ ಸೂಚಕವಿರುವದು. ಅಷ್ಟಧಾ ಪ್ರಕೃತಿಯ ಪ್ರಕ್ರಿಯೆ, ರೀತಿ, ಪದ್ಧತಿಯ ಸಣ್ಣ ಆವೃತ್ತಿ [ನಮೂನೆ] ಯೇ ಈ ನಿದ್ರೆ ಇರುವದು. ಎಚ್ಚರಿದ್ದಾಗ ಎಲ್ಲ ವ್ಯವಹಾರಮಾಡಿ ಮನುಷ್ಯನ ಜೀವವು ಹೇಗೆ ರಾತ್ರಿಯಲ್ಲಿ ನಿದ್ರಾದೇವಿಯಲ್ಲಿ ಸೇರುವದೋ [ನಿದ್ರಾಧೀನನಾಗುವನೋ] ಇದರಂತೆ ಅಷ್ಟಧಾ ಪ್ರಕೃತಿಯು ಯಾವತ್ತೂ ದೃಶ್ಯ ವಿಶ್ವವನ್ನು ನಿರ್ಮಾಣಮಾಡುವದು. ಕೆಲವು ಕಾಲ ಇದನ್ನು ನಡೆಯಿಸುವದು. ಮತ್ತು ಕೊನೆಗೆ ಇದನ್ನು ನುಂಗಿ ಬಿಡುವದು. ದೃಶ್ಯ ವಿಶ್ವವನ್ನು ನುಂಗಿದ ಮೇಲೆ ಗಾಢವಾಗಿ ಹತ್ತಿದ ನಿದ್ರೆಯಂತೆ ಇದರ ಅವಸ್ಥೆ ಇರುವದು. ಆತ್ಮಜ್ಞಾನಿ ಪುರುಷರು ಮೂಲ ಮಾಯೆಯವರೆಗೆ ಹೋಗುವರು. ತುರ್ಯೆಯಲ್ಲಿ ಪ್ರವೇಶಮಾಡುವರು. ಅಂತೆಯೇ ಆತ್ಮಜ್ಞಾನಿಗೆ ಲೌಕಿಕದ ಅರ್ಥದಲ್ಲಿ ನಿದ್ರೆಯು ಹತ್ತುವದಿಲ್ಲ.

### ದಶಕ ೧೮. ಸಮಾಸ ೯. ನಿದ್ರಾ ನಿರೂಪಣ (ನುಡಿ ೨೪)

ರಾತ್ರಿಯಾಗಿ ಕತ್ತಲೆಯಾಯಿತು. ಊಟ, ಉಪಚಾರಗಳು ಮುಗಿದವು ಅಂದರೆ ಆಗ ಸಾಮಾನ್ಯ ಜನರು ಮಲಗಿ ನಿದ್ರಿಸುವರು. ನಿದ್ರೆ ಹತ್ತುವವರೆಗೆ ಸ್ವತಃದ ನಡೆ-ನುಡಿ ಇತ್ಯಾದಿಗಳ ಮೇಲೆ ಅವರ ಅಧಿಕಾರ ನಡೆಯುವದು. ಆದರೆ ನಿದ್ರೆ ಹತ್ತಿದ ಮೇಲೆ ಅವರ ಅಧಿಕಾರ [ತಾಬಾ] ಉಳಿಯುವದಿಲ್ಲ. ಆಗ ಒಂದೊಂದು ತರಹಗಳು ದೃಷ್ಟಿಗೆ ಬೀಳುವವು: ಶ್ರೀ ಸಮರ್ಥರು ಅನ್ನುವದೇನಂದರೆ ಆದಿ ಪುರುಷನಿಗೆ,ಮೂಲ ಪುರುಷನಿಗೆ ನಮಸ್ಕಾರಮಾಡಿ ನಿದ್ರೆಯ ವಿಲಾಸದ ಸಮಯ, ರೂಢಿಯ ಬೆಡಗನ್ನು ಹೇಳುವೆನು. ಒಮ್ಮೆ ನಿದ್ರೆ ಬಾಧಿತೆಂದರೆ ಅದು ಸಹಜವಾಗಿ ಹೋಗುವದಿಲ್ಲ. ಮನುಷ್ಯನಿಗೆ ನಿದ್ರೆಯು ಬಹಳ ಗಾಢವಾಗಿ ಬರುವದು. ಮತ್ತು ಬಹಳ ಹೊತ್ತಿನವರೆಗೆ ಇರುವದು. (೧) ನಿದ್ರೆಯು ಶರೀರವನ್ನೆಲ್ಲ ವ್ಯಾಪಿಸಿತೆಂದರೆ ಸುಸ್ತಿ (ಆಯಾಸ, ಬಳಲಿಕೆ, ದಣವು) ಬರುವದು. ಆಗ ಮೈಮುರಿಯುವಿಕೆ, ಒಡಮುರಕಿ, ಆಕಳಿಕೆ,ಇವೆಲ್ಲ ಕಾಣಿಸುವವು.ಅಥವಾ ಬರಹತ್ತುವವು. ಮನುಷ್ಯನಿಗೆ ಅನಂತರ ಕೂಡಲಿಕ್ಕಾಗುವದಿಲ್ಲ(೨)

ಕಡಕಡಾ ಜಾಂಭಯಾ ಯೇತೀ । ಚಟಿಚಟಾ ಚಟಕ್ಯಾ ವಾಜತೀ ।
ಡಕಡಕಾ ಡುಕಲ್ಯಾ ದೇತೀ । ಸಾವಕಾಸ ॥೩॥

ಯೇಕಾಚೆ ಡೋಳೇ ಝಾಂಕತೀ । ಯೇಕಾಚೆ ಡೋಳೇ ಲಾಗತೀ ।
ಯೇಕ ತೇ ವಚಕೋನ ಪಾಹಾತೀ । ಚಹುಕಡೆ ॥೪॥

ಯೇಕ ಉಲಥೋನ ಪಡಿಲೇ । ತಿಹೀ ಬ್ರಹ್ಮವಿಣೇ ಘೋಡಿಲೇ ।
ಹುಡಕಾಚೇ ಟೊಕಡೇ ಜಾಲೇ । ಸುಧೀ ನಾಹೀ ॥೫॥

ಯೇಕ ಟೆಕೋನ ಬೈಸಲೇ । ತೇಥೇ ಚಿ ಘೋರೋ ಲಾಗಲೇ ।
ಯೇಕ ಉತಾಣೇ ಪಸರಲೇ । ಸಾವಕಾಸ ॥೬॥

ಕೋಣೇ ಮುಂಕರ್ಗುಂಡೀ ಘಾಲಿತೀ । ಕೋಣೇ ಕಾನವಡೇ ನಿಜತೀ ।
ಕೋಣೇ ಚಕ್ರೀ ಫಿರತೀ । ಚಹುಕಡೇ ॥೭॥

ಯೇಕ ಹಾತ ಹಾಲವಿತೀ । ಯೇಕ ಪಾಯೆ ಹಾಲವಿತೀ ।
ಯೇಕ ದಾತ ಖಾತೀ । ಕರ್ಕರಾಟೇ ॥೮॥

ಯೇಕಾಚೀ ವಸ್ತ್ರೇ ನಿಘೋನಿ ಗೇಲೀ । ತೇ ನಾಗವೀ ಚ ಲೋಳೋ ಲಾಗಲೀ ।
ಯೇಕಾಚೀ ಮುಂಡಾಸೀ ಗಡಬಡಲೀ । ಚಹುಕಡೇ ॥೯॥

ಯೇಕ ನಿಜೇಲೀ ಅವ್ಯಾವೆಸ್ತೇ । ಯೇಕ ದಿಸತೀ ಜೈಸೀ ಪ್ರೇತೇ ।
ದಾತ-ಪಸರುನೀ ಜೈಸೀ ಭೂತೇ । ವಾಈಟ ದಿಸತೀ ॥೧೦॥

ಯೇಕ ವೊಸಣತ ಚಿ ಉಠಿಲೇ । ಯೇಕ ಅಂಧಾರೀ ಫಿರೋ ಲಾಗಲೇ ।
ಯೇಕ ಜಾಲೂನ ನಿಜೇಲೇ । ಉಕರಡ್ಯಾವರೀ ॥೧೧॥

ಯೇಕ ಮುಡಕೀ ಉತರಿತೀ । ಯೇಕ ಭೋಈ ಚಾಂಚಪತೀ ।
ಯೇಕ ಉಠೋನ ವಾಟಾ ಲಾಗತೀ । ಭಲತೀಕಡೇ ॥೧೨॥

ಯೇಕ ಪ್ರಾಣೀ ವೊಸಣಾತೀ । ಯೇಕ ಫುಂದಫುಂದೋ ರಡತೀ ।
ಯೇಕ ಖದಖದಾ ಹಾಸತೀ । ಸಾವಕಾಸ ॥೧೩॥

ಯೇಕ ಹಾಕಾ ಮಾರೂ ಲಾಗಲೇ । ಯೇಕ ಬೊಂಬಲಿತ ಉಠಿಲೇ ।
ಯೇಕ ವಚಕೋನ ರಾಹಿಲೇ । ಆಪುಲೇ ಠಾಈ ॥೧೪॥

ಯೇಕ ಕ್ಷಣಕ್ಷಣಾ ಖುರಡತೀ । ಯೇಕ ಡೋಈ ಖಾಜವಿತೀ ।
ಯೇಕ ಕಢೋ ಲಾಗತೀ । ಸಾವಕಾಸ ॥೧೫॥

ನಿದ್ರೆ ಬಂದ ಮನುಷ್ಯನಿಗೆ ಜೋರಾಗಿ ಮೇಲಿಂದ ಮೇಲೆ ಆಕಳಿಕೆ ಬರುವವು. ಆಗ ಇವನು ಕೈಬೆರಳು ಗಳನ್ನು ಚಟ ಚಟ ಎಂದು ಅನ್ನಿಸುವನು. ಚುಟಿಕಿ ಹೊಡೆಯುವನು. [ಬಾರಿಸುವನು.] ಮತ್ತು ತೂಕಡಿಕೆಯ ಮೇಲೆ ತೂಕಡಿಕೆ ಹೊಡೆಯುವನು. ತಲೆ ಅಲ್ಲಾಡಿಸುವನು. (೩) ನಿದ್ರೆ ಬಂದಿತೆಂದರೆ ಕೆಲವರ ಕಣ್ಣು ಮುಚ್ಚುವವು. ಕೆಲವರವು ಅರ್ಧ ಕಣ್ಣು ಮುಚ್ಚುವವು. ಮತ್ತು ಕೆಲವರು ಅಥವಾ ಎಲ್ಲಿಯೋ ಒಬ್ಬಿಬ್ಬರು ಬೆಚ್ಚಿ ಗಾಬರಿಯಿಂದ ಅತ್ತ ಇತ್ತ ನೋಡಹತ್ತುವರು. (೪) ನಿದ್ರೆಯ ಭರದಲ್ಲಿ ಕೀರ್ತನೆ ಕೇಳಲು ಬಂದು ಕುಳಿತ ಒಬ್ಬ ಶ್ರೋತಾ ಒಮ್ಮಿಂದೊಮ್ಮೆಲೇ ಏಳಲಿಕ್ಕೆ ಹೋಗಿ ಬಕಬರಲಾಗಿ ಅಥವಾ ತೊಡಕಾಗಿ ಮುಗ್ಗರಿಸಿ ಕೊಂಡು ಬೀಳುತ್ತಾನೆ. ಇವನು ಕೀರ್ತನಕಾರನ ವೀಣೆ [ಬ್ರಹ್ಮವೀಣೆ] ಯ ಮೇಲೆ ಬಿದ್ದದ್ದರಿಂದ ವೀಣೆಯು ಒಡೆಯಿತು. ಅಥವಾ ಹುಡುಕಿ ಅನ್ನುವ [ಡಮರು, ಬುಡು ಬುಡಿಕೆಯಂತಹ ವಾದ್ಯ] ವಾದ್ಯದ ಮೇಲೆ ಬಿದ್ದ ಭಾರದಿಂದ ಅದು ತುಕಡಿ-ತುಕಡಿ ಆಯಿತು. ಆದರೆ ಅವನಿಗೆ [ನಿದ್ರೆಯ ಮಬ್ಬಿನಲ್ಲಿದ್ದವನಿಗೆ] ಇದರ ಎಚ್ಚರವಿರುವದಿಲ್ಲ. (೫) ಒಬ್ಬನು ಆನಿಸಿಕೊಂಡು [ಆಧಾರ ಹೊಂದಿ] ಕುಳಿತವನು ಕುಳಿತಲ್ಲಿಯೇ ಘೊರ್ ಘೊರ್ ಎಂದು ಗೊರಕೆ ಹೊಡೆಯ ಹತ್ತಿದನು. ಮತ್ತೊಬ್ಬನು ಸಾವಕಾಶವಾಗಿ ಅಂಗಾತ ಮಲಗಿ ಕಾಲುಚಾಚಿ ನಿದ್ರೆಹೊಡೆಯ ಹತ್ತಿದನು. (೬) ಒಬ್ಬನು ಕೈ ಕಾಲುಗಳನ್ನು ಮುದುರಿ ಕೊಂಡು ಮುದುಡಿಯಾಗಿ ಮಲಗಿದರೆ ಇನ್ನೊಬ್ಬನು ಮಗ್ಗಲಾಗಿ ಮಲಗಿದ್ದನು. ಮತ್ತೊಬ್ಬ ನಿದ್ರೆಯಲ್ಲಿ ಚಕ್ರಾಕಾರ [ದುಂಡಗಾಗಿ,] ತಿರುಗುತ್ತ ನಿದ್ರಿಸುತ್ತಿದ್ದನು. (೭) ನಿದ್ರೆಯಲ್ಲಿ ಒಬ್ಬನು ಕೈಯನ್ನು ತಿರುವುತ್ತಾನೆ. ಇನ್ನೊಬ್ಬನು ಕಾಲನ್ನು ಅಲ್ಲಾಡಿಸುತ್ತಾನೆ. ಮತ್ತೊಬ್ಬನು ಕರ್ ಕರ್ ಎಂದು ಹಲ್ಲು ತಿನ್ನುವನು. (೮) ಒಬ್ಬನಿಗೆ ನಿದ್ರೆ ಆಗದೀ ಜೋರಾಗಿ ಹತ್ತಿದೆ. ಯಾಕೆಂದರೆ ಅವನ ಮೈ ಮೇಲೆ ಅರಿವೆಗಳೇ ಇಲ್ಲ. ಬರೇ ಬತ್ತಲಾಗಿಯೇ ಹೊರಳಾಡುತ್ತಿದ್ದಾನೆ. ಇನ್ನೊಬ್ಬನ ತಲೆಯ ಮೇಲಿನ ಮುಂಡಾಸ [ರುಮಾಲ] ಬಿಚ್ಚಿ ಅವನ ಸುತ್ತಲೂ ಪಸರಿಸಿದೆ. (೯) ಒಬ್ಬನು ನಿದ್ರೆ ಯಲ್ಲಿ ಆಗದೀ ಅಸ್ತವ್ಯಸ್ತ ಬಿದ್ದಿದ್ದರೆ ಇನ್ನೊಬ್ಬನು ಆಗದೀ ಹೆಣದಂತೆ [ಪ್ರೇತವತ್] ಕಾಣುತ್ತಾನೆ. ಮತ್ತೊಬ್ಬನು ಆ ಎಂದು ಬಾಯಿ ತೆರೆದು ತನ್ನ ಹಲ್ಲನ್ನು ಹೊರಗೆಡವಿದ್ದರಿಂದ ಕೇವಲ ಭೂತದಂತೆ ಭಯಂಕರ ಕೆಟ್ಟದಾಗಿ ಕಾಣುವನು. (೧೦) ನಿದ್ರೆಯಲ್ಲಿದ್ದವನೊಬ್ಬ ಬಡಬಡಿಸುತ್ತಲೇ ಏಳುವನು. ಮತ್ತೊಬ್ಬನು ಕತ್ತಲ ಕಡೆಗೆ ಹೋಗಿ ಅಲ್ಲಿ ತಿರುಗಾಡುವನು. ಇನ್ನೊಬ್ಬನಾದರೊ ನಿದ್ರೆಯಲ್ಲಿ ಎದ್ದವನೇ ಸರಳವಾಗಿ ತಿಪ್ಪಿಯ ಕಡೆಗೆ ಹೋಗಿ ಅಲ್ಲಿಯೇ ಮಲಗಿದನು. (೧೧) ಒಬ್ಬನು ನಿಲುವಿನ ಮೇಲಿಟ್ಟ ಮಡಿಕೆಯನ್ನು ಕೆಳಗೆ ಇಳಿಸುವನು. ಆದರೆ ಅದೇ ಇನ್ನೊಬ್ಬನು ಭೂಮಿಯ ಮೇಲೆ ಬರಿ ನೆಲದಲ್ಲಿ ಕೈಯಿಂದ ಸವರಾಡುವನು. ಅದೇ ಮತ್ತೊಬ್ಬನು ಸರಕ್ಕನೇ ಎದ್ದು ನಿದ್ರೆಯಲ್ಲಿಯೇ ಸಿಕ್ಕ ಹಾದೀ ಹಿಡಿದು ಎತ್ತಕಡೆಗೋ ಹೋಗಹತ್ತುವನು. (೧೨) ಒಬ್ಬನು ನಿದ್ರೆಯಲ್ಲಿ ಸುಮ್ಮನೇ ಕೂಗಿದನು. ಚೀರಿದನು, ಒದರಿದನು. ಇನ್ನೊಬ್ಬನು ಬಿಕ್ಕಿ ಬಿಕ್ಕಿ ಅಳಹತ್ತಿದನು. ಮತ್ತೊಬ್ಬನು ಖೊಕ್ ಖೊಕ್ ಎಂದು ನಗುತ್ತಲೇ ಹೊರಟನು. (೧೩) ಒಬ್ಬನು ನಿದ್ರೆಯಲ್ಲಿ ಕೂಗಿ ಕೂಗಿ ಒದರ ಹತ್ತುವನು. ಇನ್ನೊಬ್ಬನು ಬೊಬ್ಬೆ ಹೊಡೆಯುತ್ತ [ಶಂಖ ಹೊಡೆಯುತ್ತ] ಏಳುವನು. ಮತ್ತೊಬ್ಬನು ನಿದ್ರೆಯಲ್ಲಿಯೇ ಭೀತಿಗೊಂಡು ನಡುಗುತ್ತ ಕುಳಿತನು. (೧೪) ಒಬ್ಬನು ಕ್ಷಣ ಕ್ಷಣಕ್ಕೊಮ್ಮೆ ಕಾಲಿನಿಂದ ನೆಲ ತಿಕ್ಕುವನು. ಅಥವಾ ಕಾಲಿಗೆ ಕಾಲು ತಿಕ್ಕುವನು. ಇನ್ನೊಬ್ಬನು ತಲೆಯನ್ನು ಕರ್ ಪರ್ ಎಂದು ತುರಿಸುವನು, ಕೆರೆಯುವನು. ಮತ್ತೊಬ್ಬನು, ಒಂದೇ ಸವನೇ ಮೆತ್ತಗೆ ನರಳುವನು. (೧೫)

ಯೆಕಾಚ್ಯಾ ಲಾಳಾ ಗಳಾಲ್ಯಾ । ಯೆಕಾಚ್ಯಾ ಪಿಕಾ ಸಾಂಡಲ್ಯಾ ।
ಯೆಕೀ ಲಘುಶಂಕಾ ಕೇಲ್ಯಾ । ಸಾವಕಾಸ ॥೧೬॥

ಯೆಕ ರಾಉತ ಸೋಡಿತೀ । ಯೆಕ ಕರ್ಪಟ ಢೇಕರ ದೇತೀ ।
ಯೆಕ ಖಾಂಕರೂನೀ ಥುಂಕಿತೀ । ಭಲತೀಕಡೇ ॥೧೭॥

ಯೆಕ ಹಾಗತೀ ಯೆಕ ವೋಕಿತೀ । ಯೆಕ ಖೋಕಿತೀ ಯೆಕ ಸಿಂಕಿತೀ ।
ಯೆಕ ತೇ ಪಾಣೀ ಮಾಗತೀ । ನಿದಸುರ್‍ಯಾ ಸ್ವರೇ ॥೧೮॥

ಯೆಕ ದುಸ್ವಪ್ನೇ ನಿಬುಜಲೇ । ಯೆಕ ಸುಸ್ವಪ್ನೇ ಸಂತೋಷಲೇ ।
ಯೆಕ ತೇ ಗಾಢಮುಢೀ ಪಡಿಲೇ । ಸುಷುಪ್ತಿಮಧೇ ॥೧೯॥

ಇಕಡೇ ಉಜೆಡಾಯಾ ಜಾಲೇ । ಕೋಣ್ಹೀ ಪಢಣೇ ಆರಂಭಿಲೇ ।
ಕೋಣೀ ಪ್ರಾತಃಸ್ಮರಾಮಿ ಮಾಂಡಿಲೇ । ಹರಿಕೀರ್ತನ ॥೨೦॥

ಕೋಣೀ ಆಠವಿಲ್ಯಾ ಧ್ಯಾನಮೂರ್ತಿ । ಕೋಣೀ ಯೆಕಾಂತೀ ಜಪ ಕರಿತೀ ।
ಕೋಣೀ ಪಾಠಾಂತರ ಉಜಳಿತೀ । ನಾನಾ ಪ್ರಕಾರೇ ॥೨೧॥

ನಾನಾ ವಿದ್ಯಾ ನಾನಾ ಕಳಾ । ಅಪಲಾಲ್ಯಾ ಸಿಕತೀ ಸಕಳಾ ।
ತಾನಮಾನೇ ಗಾಯೆನಕಳಾ । ಯೆಕ ಗಾತೀ ॥೨೨॥

ಮಾಗೇ ನಿದ್ರಾ ಸಂಪಲೀ । ಪುಢೇ ಜಾಗೃತೀ ಪ್ರಾಪ್ತ ಜಾಲೀ ।
ವೆವಸಾಈ ಬುದ್ಧಿ ಆಪುಲೀ । ಪ್ರೇರಿತೇ ಜಾಲೇ ॥೨೩॥

ಜ್ಞಾತಾ ತತ್ವೇ ಸಾಂಡೂನ ಪಳಾಲಾ । ತುರ್ಯೇ ಪೈಲಿಕಡೆ ಗೇಲಾ ।
ಆತ್ಮ ನಿವೇದನೇ ಜಾಲಾ । ಬ್ರಹ್ಮರೂಪ ॥೨೪॥

ಇತಿ ಶ್ರೀ ದಾಸಭೋಧೆ ಗುರುಶಿಷ್ಯ ಸಂವಾದೇ
'ನಿದ್ರಾ ನಿರೂಪಣ' ನಾಮ ಸಮಾಸ ನವಮ ॥

● ●

ಒಬ್ಬನ ಬಾಯಿಯಿಂದ ಜೊಲ್ಲು ಸೋರುವದು. ಇನ್ನೊಬ್ಬನ ಬಾಯಿಯಿಂದ ಉಗುಳು ಹೊರ ಬರುವದು. ಮತ್ತೊಬ್ಬನು ನಿದ್ರೆಯಲ್ಲಿಯೇ ಸಾಕಷ್ಟು ಮೂತ್ರಮಾಡುವನು. (೧೬) ಒಬ್ಬನು ಥು, ಥುಸ್, ಠುಸ್ ಎಂದು ಹೂಸು [ಅಪಾನವಾಯು] ಬಿಡುವನು. ಇನ್ನೊಬ್ಬನಿಗೆ ಥರ್ ಎಂದು ಹುಳಿ ತೇಗು ಬರುವದು. ಮತ್ತೊಬ್ಬನು ನಿದ್ರೆಯಲ್ಲಿ ಸಿಕ್ಕಾಪಟ್ಟೆ ಉಗುಳುವನು. (೧೭) ಒಬ್ಬನಿಗೆ ನಿದ್ರೆಯಲ್ಲಿಯೇ ಮಲವಿಸರ್ಜನೆ ಆಗುವದು. ಇನ್ನೊಬ್ಬನು ವಾಂತಿ ಮಾಡಿಕೊಳ್ಳುವನು. ಮತ್ತೊಬ್ಬನು ಕೆಮ್ಮಿ ಖ್ಯಾಕರಿಸುವನು. ಮುಂಗದೊಬ್ಬನು ನಿದ್ರೆಯಲ್ಲಿ ಸುಂಬಳ ಸೀನುವನು. ಅಥವಾ ಮೂಗಿನಿಂದ ತಾನೇ ಸುಂಬಳ ಸೋರುವದು. ನಿದ್ರೆಯಲ್ಲಿದ್ದವನೊಬ್ಬನು ಕುಡಿಯಲು ನೀರು ಬೇಡುವನು. ಅಥವಾ ಗಟ ಗಟ ನೀರು ಕುಡಿಯುವನು. (೧೮) ಒಬ್ಬನಿಗೆ ನಿದ್ರೆಯಲ್ಲಿ ಬಹು ಕೆಟ್ಟ ಕನಸು ಬಿದ್ದು ಗಾಬರಿಗೊಳ್ಳುವನು. ಇನ್ನೊಬ್ಬನು ಒಳ್ಳೇ ಕನಸು ಕಂಡು ಖುಷಿಪಡುವನು. ಮತ್ತೊಬ್ಬ ಅತ್ಯಂತ ಗಾಢ ನಿದ್ರೆಯಲ್ಲಿ ಅರುಹಮಾಗಿ ಬಿದ್ದು ಬಿಟ್ಟಿರುವನು. [ಮಲಗಿರುವನು]. [೧೯] ಈ ತರಹ ಬೇರೆ ಬೇರೆ ಅವಸ್ಥೆಯಲ್ಲಿ ನಿದ್ರಿಸುವ ಜನರು ಬೆಳಗಾದ ಕೂಡಲೇ ಎಚ್ಚರಗೊಳ್ಳುವರು. ಮತ್ತು ಪ್ರತಿಯೊಬ್ಬರೂ ಸ್ವಾಭಾವಿಕ ತರಹದ ಶುದ್ಧಿಯ ಮೇಲೆ ಬಂದವರಂತೆ ಕಾರ್ಯ ತತ್ಪರರಾಗುವರು:-ಇತ್ತ ಸೂರ್ಯನು ಉದಯಿಸುವ ಸಮಯವಾದ ಕೂಡಲೇಒಬ್ಬರು ತಮ್ಮ ನಿತ್ಯ ಪಾಠ ಆರಂಭಿಸುವರು. ಒಬ್ಬರು ಪ್ರಾತಃಸ್ಮರಣ ಮಾಡುವರು.ಮತ್ತು ಹರಿಕೀರ್ತನೆ ಆರಂಭಿಸುವರು[೨೦] ಒಬ್ಬರು ಧ್ಯಾನಮೂರ್ತಿಯನ್ನು ಮನದಲ್ಲಿ ಸ್ಮರಿಸುವರು. ಇನ್ನೊಬ್ಬರು ಏಕಾಂತದಲ್ಲಿ ಕುಳಿತು ಜಪ ಮಾಡುವರು. ಕೆಲವರು ಅನೇಕ ಪ್ರಕಾರದ ತಮ್ಮ ಪಾಠಾಂತರಗಳನ್ನು ಉಜಳಣಿ ಮಾಡುವರು. [೨೧] ಈ ಸಮಯದಲ್ಲಿ ಎಲ್ಲರೂ ತಮ್ಮ ತಮ್ಮ ವಿದ್ಯೆ ಕಲಾ ಇವುಗಳನ್ನು ಕಲಿಯುವರು. ಒಬ್ಬರು ತಾನಮಾನದಿಂದ ರಾಗಾಲಾಪಗಳಿಂದ ಗಾಯನದ ಅಭ್ಯಾಸವನ್ನು ಮಾಡುವರು· [೨೨] ರಾತ್ರಿಯ ನಿದ್ರೆ ಆದನಂತರ [ಚನ್ನಾಗಿ ನಿದ್ರೆ ಆದನಂತರ] ಎಚ್ಚರವೂ ಆಯಿತು. ಎಲ್ಲರೂ ತಮ್ಮ ತಮ್ಮ ವ್ಯವಸಾಯದಲ್ಲಿ ಲಕ್ಷ್ಯ ಹಾಕಹತ್ತುವರು. [೨೩] ಜ್ಞಾನಿ ಪುರುಷ ದೃಶ್ಯವಾಗಿರುವ ಅಶಾಶ್ವತ ತತ್ವಗಳನ್ನು ಬಿಟ್ಟು ಕೊಟ್ಟು [ಮಾಯಾರೂಪದ ನಿದ್ರೆಯನ್ನು ಸಂಪೂರ್ಣ ತ್ಯಾಗ ಮಾಡಿ] ದೂರ ಸರಿಯುವನು. ತುರ್ಯಾವಸ್ಥೆಯ ಆಚೆಗೆ ಹೋಗುವನು. ಮತ್ತು ಸಂಪೂರ್ಣ ಆತ್ಮನಿವೇದನ ಮಾಡಿಕೊಂಡು ಬ್ರಹ್ಮರೂಪವೇ ಆಗುವನು. [೨೪]

ಶ್ರೀ ದಾಸಬೋಧದ ಹದಿನೆಂಟನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ನಿದ್ರಾ ನಿರೂಪಣ"ವೆಂಬ ಹೆಸರಿನ ಒಂಭತ್ತನೆಯ ಸಮಾಸವು ಮುಗಿದುದು.

• •

॥ಶ್ರೀರಾಮ ಸಮರ್ಥ॥ ಕೋಣೇ ಯೇಕಾ ಕಾರ್ಯಾಚಾ ಸಾಕ್ಷಪ ।
ಕಾಂಹೀ ತರ್ಹೀ ಘಡೇ ವಿಕ್ಷೇಪ ।
ಕಾಳ ಸಾಹೇ ತೇ ಆಪೇಆಪ । ಹೋತ ಜಾತೇ ॥೧॥

ಕಾರ್ಯಭಾಗ ಹೋತ ಚಾಲಿಲಾ । ತೇಣೇ ಪ್ರಾಣೀ ಶೋಕ ಜಾಲಾ ।
ವಿಚಾರ ಹಿ ಸುಚೋ ಲಾಗಲಾ । ದಿವಸೇದಿವಸ ॥೨॥

ಕೋಣೇ ಯೇಕ ಪ್ರಾಣೀ ಜನ್ಮಾಸೀ ಯೇತೋ ।
ಕಾಹೀ ತರ್ಹೀ ಕಾಳ ಸಾಹೇ ಹೋತೋ ।
ದುಃಖಾಉಪರೀ ಸುಖ ದೇತೋ । ದೇವ ಕೃಪಾಳುಪಣೇ ॥೩॥

## ದಶಕ ೧೮. ಸಮಾಸ ೧೦. ಶ್ರೋತಾ ಅವಲಕ್ಷಣ ನಿರೂಪಣ (ನುಡಿ ೫೦)

ದೃಶ್ಯ ವಿಶ್ವದ ಜ್ಞಾನವೇ ಇರಲಿ. ಅದೃಶ್ಯ ಮತ್ತು ಸೂಕ್ಷ್ಮ ಆತ್ಮನ ಜ್ಞಾನವೇ ಇರಲಿ ಅದನ್ನು ಪ್ರಾಪ್ತಮಾಡಿಕೊಳ್ಳಲಿಕ್ಕೆ ಸತತವಾಗಿ ಮನನ ಮತ್ತು ಏಕಾಗ್ರತೆ ಈ ಎರಡು ಸೂಕ್ಷ್ಮ ಶಕ್ತಿಯು ಅವಶ್ಯಕತೆ ಇರುವದು. ಮನವನ್ನು ಏಕಾಗ್ರಮಾಡಿ ಸೂಕ್ಷ್ಮಚಿಂತನವಾಗಬೇಕಾದರೆ ಯಾವಯಾವವಿಷಯುಗಳು ಅಡ್ಡಬರುವವು ಅನ್ನುವದನ್ನು ಹೇಳುವದಕ್ಕಾಗಿ ಈ ಸಮಾಸವನ್ನು ಶ್ರೀ ಸಮರ್ಥರು ಬರೆದಿರುವರು. ಆದರೂ ಇದರಲ್ಲಿ [ಒಟ್ಟಿನಲ್ಲಿ] ಮುಂದಿನ ಆರು ಮಾತುಗಳನ್ನು ಹೇಳಿ ಇಟ್ಟಿರುವರು. (೧) ಜಗತ್ತಿನಲ್ಲಿ ನಡೆಯುವ ಪ್ರತಿಯೊಂದು ಘಟನೆಯು ಕಾಲಾಧೀನ ಇರುವದು. ಕಾಲವು ಅನುಕೂಲ ಇದ್ದದ್ದಾದರೆ ಏನೆಲ್ಲವೂ ತನ್ನಿಂದ ತಾನೇ ಒದಗಿ ಹೋಗುವದು. ಆದರೆ ಕಾಲವು ಯಾವಾಗಲೂ ಅನುಕೂಲವಾಗಿಯೇ ಇರುವದೆಂದು ಹೇಳಲಿಕ್ಕೆ ಆಗುವುದಿಲ್ಲ. (೨) ಜಗತ್ತಿನಲ್ಲಿಯ ಪ್ರತಿಯೊಬ್ಬ ಮನುಷ್ಯನಿಗೆ ಎರಡನೆಯುವರಿಂದ ಕಲಿಯಬೇಕಾಗುವದು. ಎರಡನೆಯವರಿಂದ ಕೇಳಿ [ಶ್ರವಣ] ಮಾಡಿ ಮತ್ತು ಎರಡನೆಯುವರದನ್ನು ನೋಡಿಯೇ ಯಾವೊಬ್ಬ ಮನುಷ್ಯನು ಸ್ವತಃ ಶಹಾಣೆ [ಜಾಣ] ಬುದ್ಧಿವಂತನಾಗುವನು. (೩) ಏಕಾಗ್ರ ಚಿತ್ತದಿಂದ ಶ್ರವಣ ಮತ್ತು ಅದರ ಮೇಲೆ ಸತತ ಚಿಂತನ ಮಾಡುವದೇ ಖರೇ ಪರಮಾರ್ಥ ಸಾಧಿಸಿಕೊಳ್ಳುವ ರಾಜ ಮಾರ್ಗವಿರುವದು. (೪) ನಮ್ಮ ಮನವನ್ನು ನಾವೇ ಹಿಡಿತದಲ್ಲಿಡಬೇಕು. (೫) ಕ್ಷಮಾ ಮತ್ತು ಶಾಂತಿ ಇವು ನಿಜವಾದ [ಖರೇ] ದೊಡ್ಡಸ್ತನದ ಲಕ್ಷಣಗಳೆಂದು ತಿಳಿಯಬೇಕು. (೬) ಮಾನವೀ ಜೀವನದಲ್ಲಿ ಏಕಾಂತಕ್ಕೆ ಬಹಳ ಮಹತ್ವವಿರುವದು. ಯಾವ ಮನುಷ್ಯನಿಗೆ ಏಕಾಂತವು ಸಾಧಿಸುವದೋ ಅಥವಾ ಅದರ ಮಹತ್ವ ಸಂಪೂರ್ಣ ಪಟಾಯಿಸುವದೋ ಆ ಮನುಷ್ಯನು ಬಹಳ ತ್ವರಿತವಾಗಿ ಜ್ಞಾನಿಯಾಗುವನು. ಈ ಸಮಾಸದಲ್ಲಿ ಇದರ ಮಹತ್ವವನ್ನು ಶ್ರೀ ಸಮರ್ಥರು ವಿವರವಾಗಿ ತಿಳಿಸಿಕೊಟ್ಟಿರುವರು.

### ದಶಕ ೧೮. ಸಮಾಸ ೧೦. ಶ್ರೋತಾ ಅವಲಕ್ಷಣ ನಿರೂಪಣ (ನುಡಿ ೫೦)

ನಿಶ್ಚಲದಲ್ಲಿ ಚಂಚಲವು ನಿರ್ಮಾಣ ಹೊಂದಿತು. ಇದರ ಸಂಗಡವೇ ಕಾಲ ನಿರ್ಮಾಣವಾಯಿತು. ಆದ್ದರಿಂದ ಏನೇನು ಕಾಣುವದೋ, ಯಾವುದು ಅದೆಯೋ ಆ ಎಲ್ಲವೂ ಕಾಲಾನುಸಾರಕ್ಕನುಸರಿಸಿ ಇರುವದು. ಕಾಲ ಅನುಕೂಲವಾದರೂ ಇರಬಹುದು ಅಥವಾ ಪ್ರತಿಕೂಲವಾದರೂ ಆಗುವದು. ಇದು [ಕಾಲವು] ಯಾವಾಗಲೂ ಅನುಕೂಲವಾಗಿರುವದಿಲ್ಲ. ಅದರಂತೆ ಯಾವಾಗಲೂ ಪ್ರತಿಕೂಲವೂ ಇರುವದಿಲ್ಲ. ಆದರೆ ಕಾಲ ಅನುಕೂಲವಿದ್ದಾಗ ಸರ್ವವೂ ತನ್ನಷ್ಟಕ್ಕೆ ತಾನೇ ಕೂಡಿ ಹೋಗುವದು. ಅಂದರೆ ಸಾಧ್ಯವಾಗುವದು. ಆದ್ದರಿಂದ ಶಹಾಣೆ ಜನರು. ಪ್ರಯತ್ನಮಾಡುತ್ತಲೇ ಇರುವರು. ಮತ್ತು ತಾವು ಪ್ರಯತ್ನಪಟ್ಟ ಕಾರ್ಯಕ್ಕೆ ಯಶ ಬರುವವರೆಗೂ ಅನುಕೂಲ ಕಾಲದ ಹಾದಿ ನೋಡುವರು: ನಾವು ಒಂದು ಕಾರ್ಯವನ್ನು ಸಿದ್ಧಿಸುವದಕ್ಕಾಗಿ ಒಂದು ಉದ್ಯೋಗವನ್ನು ಆರಂಭಮಾಡಿದ್ದಾರೆ ಅದರಲ್ಲಿ ಏನಾದರೂ ವಿಘ್ನಗಳು ಬರುವವು. ಆದರೆ ಕಾಲನ ಸಹಾಯ ಅನುಕೂಲ ಇದ್ದದ್ದಾದರೆ ಆ ಕಾರ್ಯ ವಿಘ್ನರಹಿತವಾಗಿ ತನ್ನಿಂದ ತಾನೇ ಆಗುತ್ತ ಹೋಗುವದು. (೧) ಕಾರ್ಯದಲ್ಲಿ ಕೆಲಸದಲ್ಲಿ ಪ್ರಗತಿಯು ಹೇಗೆ ಹೇಗೆ ಆಗ ಹತ್ತುವದೋ ಅವರ ಮೇಲಿಂದ ಕಾರ್ಯಮಾಡುವ ಜನರ ಉತ್ಸಾಹ ಬೆಳೆಯುತ್ತ ಹೋಗುವದು. ದಿನ ದಿನಕ್ಕೂ ಕಾರ್ಯಕರ್ತರಿಗೆ ಹೊಸ ಹೊಸ ವಿಚಾರಗಳು ಹೊಳೆಯುವವು. (೨) ಜಗತ್ತಿನಲ್ಲಿ ಕಂಡು ಬರುವದೇನಂದರೆ ಒಬ್ಬ ಮನುಷ್ಯನು ಹುಟ್ಟಿ ಬಂದನು. ಅವನಿಗೆ ಏನೋ ಒಂದು ರೀತಿಯಲ್ಲಿ ಕಾಲನ ಅನುಕೂಲ ದೊರಕಿ ಸಹಾಯವಾಗುವದು. ಮೊದಲಿಗೆ ಇವನು ದುಃಖವನ್ನು ಭೋಗಿಸುವನು. ಆದರೆ ನಂತರ ದೇವರ ಕೃಪಾಳುತನದಿಂದ ಕಾಲನ ಅನುಕೂಲತೆ ಒದಗಿ ಅವನಿಗೆ ಸುಖ ಲಭಿಸುವದು. (೩)

ಅವಘಾ ಚಿ ಕಾಳ ಜರಿ ಸಜೆ । ತರೀ ಅವಘೇ ಚಿ ಹೋತೀ ರಾಜೇ ।
ಕಾಂಹೀ ಸಜೇ ಕಾಂಹೀ ನ ಸಜೇ । ಐಸೇ ಆಹೇ ॥೪॥

ಯೆಹಲೋಕ ಅಥವಾ ಪರಲೋಕ । ಸಾಧತಾ ಕೋಣೇಯೇಕ ವಿವೇಕ ।
ಅದ್ಭುತ ಹೋಯೆ ಸ್ವಭಾವಿಕ । ದೇಣೇ ಈಶ್ವರಾಚೇ ॥೫॥

ಐಕಲ್ಯಾವಿಣ ಕಳಲೇ । ಶಿಕವಿಲ್ಯಾವಿಣ ಶಾಹಾಣಪಣ ಆಲೇ ।
ದೇಖಿಲೇ ನಾ ಐಕಿಲೇ । ಭೂಮಂಡಳೀ ॥೬॥

ಸಕಳ ಕಾಂಹೀ ಐಕತಾ ಕಳೇ । ಕಳತಾ ಕಳತಾ ವೃತ್ತಿ ನಿವಳೇ ।
ನೇಮಸ್ತ ಮನಾಮಧೇ ಆಕಳೇ । ಸಾರಾಸಾರ ॥೭॥

ಶ್ರವಣ ಮ್ಹಣಿಜೆ ಐಕಾವೇ । ಮನನ ಮ್ಹಣಿಜೆ ಮನೀ ಧರಾವೇ ।
ಯೇಣೇ ಉಪಾಯೇ ಸ್ವಭಾವೇ । ತ್ರಯಲೋಕ್ಯ ಚಾಲೇ ॥೮॥

ಶ್ರವಣಾಆಡ ವಿಕ್ಷೇಪ ಯೇತೀ । ನಾನಾ ಜಿನಸ ಸಾಂಗೋ ಕಿತೀ ।
ಸಾವಧ ಅಸತಾ ಪ್ರತ್ಯಯ ಯೇತೀ । ಸಕಳ ಕಾಹೀ ॥೯॥

ಶ್ರವಣೀ ಲೋಕ ಬೈಸಲೇ । ಬೋಲತಾ ಬೋಲತಾ ಯೇಕಾಗ್ರ ಜಾಲೇ ।
ತ್ಯಾಉಪರೀ ಜೆ ನೂತನ ಆಲೇ । ತೇ ಯೇಕಾಗ್ರ ನವ್ಹೇತೀ ॥೧೦॥

ಮನುಷ್ಯ ಬಾಹೇರ ಹಿಂಡೋನಿ ಆಲೇ । ನಾನಾ ಪ್ರಕಾರೀಚೇ ಐಕಿಲೇ ।
ಉದಂಡ ಗಲಬಲೂ ಲಾಗಲೇ । ಉಗೇ ಅಸೇನಾ ॥೧೧॥

ಪ್ರಸಂಗ ಪಾಹೋನ ಚಾಲತೀ । ಐಸೇ ಲೋಕ ಥೋಡೇ ಅಸತೀ ।
ಶ್ರವಣೀ ನಾನಾ ವಿಕ್ಷೇಪ ಹೋತೀ । ತೇ ಹೇ ಐಕಾ ॥೧೨॥

ಶ್ರವಣೀ ಬೈಸಲೇ ಐಕಾಯಾ । ಅಡೋ ಲಾಗಲೀಸೇ ಕಾಯಾ ।
ಯೆತೀ ಕಡಕಡಾ ಜಾಂಭಯಾ । ನಿದ್ರಾಭರೇ ॥೧೩॥

ಒಂದುವೇಳೆ ಕಾಲನು ಸದಾಕಾಲವೂ ಅನುಕೂಲನಾಗಿ ಇದ್ದು ಸಹಾಯ ಮಾಡುತ್ತಿದರೆ ಎಲ್ಲರೂ ರಾಜರೇ ಆಗಬಹುದಾಗಿತ್ತು. ಆದರೆ ಕೆಲವು ಪ್ರಸಂಗದಲ್ಲಿ ಕಾಲನು ಅನುಕೂಲನಿದ್ದರೆ ಕೆಲವು ಪ್ರಸಂಗಗಳಲ್ಲಿ ಪ್ರತಿಕೂಲನಾಗಿರುವನು. ಜೀವನದಲ್ಲಿ ಈ ಏರಿಳಿತ ಅಥವಾ ಇಳಿತದಿಂದ ಏರಿದ್ದು ಕಂಡುಬರುವದು. ಈ ಕ್ರಮವು ಜೀವನದಲ್ಲಿ ನಡೆಯುವದೇ ಆಗಿದೆ. (೪) ಮನುಷ್ಯನ ಜನ್ಮವಾದಾಗ ಅವನು ಜ್ಞಾನಹೀನವಿರುವನು. ಆಗ ಅವನು ಇನ್ನೊಬ್ಬರದನ್ನು ನೋಡುವನು. ಎರಡನೆಯವರ ಕಡೆಯಿಂದ ಕೇಳುವನು. ಎರಡನೆಯವರಿಂದ ಕಲಿಯುವನು. ಮತ್ತು ಆ ಮೇಲೆ ಶಹಾಣೆ [ಜಾಣ] ಆಗುವನು. ಈ ಕಾರಣದಿಂದ ಶ್ರವಣ ಮತ್ತು ಮನನ ಇವುಗಳಿಗೆ ನಮ್ಮ ಜೀವನದಲ್ಲಿ ಬಹಳ ದೊಡ್ಡ ಮಹತ್ವವಿರುವದು: ಪ್ರಪಂಚದಲ್ಲಿಯಾಗಲೀ ಅಥವಾ ಪರಮಾರ್ಥದಲ್ಲಿಯೇ ಆಗಲಿ ಮನುಷ್ಯನಿಗೆ ನಿಜವಾದ ವಿವೇಕ ಪಡೆಯುವದು ಸಾಧಿಸಿದ್ದೇಆದರೆ ಸಹಜ ರೀತಿಯಲ್ಲಿ ಏನಾದರೂ ಅದ್ಭುತ ಕಾರ್ಯ ಅವನ ಕೈಯಿಂದ ಘಟಿಸುವದು. ಹೀಗೆ ಇದು ಘಟಿಸುವದಕ್ಕೆ ಈಶ್ವರೀ ಕೃಪೆಯು ಫಲವಿರುವದೇ ಆಗಿದೆ. (೫) ಯಾರಿಂದಲೂ ಏನೂ ಕೇಳದೇ ತಿಳಿಯಿತು. ಯಾರಿಂದಲೂ ಏನನ್ನೂ ಕಲಿಯದೇ ಶಹಾಣೇತನ [ಜಾಣತನ, ವಿದ್ಯೆ] ಬಂದಿತು. ಅಥವಾ ತಿಳಿದವನಾದನು. ಅನ್ನುವ ಈ ಮಾತು ಜಗತ್ತಿನಲ್ಲಿ ಯಾರೂ ಎಂದೂ ನೋಡಿಲ್ಲ. ಅಥವಾ ಕೇಳಿಲ್ಲ. (೬) ಇನ್ನೊಬ್ಬರಿಂದ ಕೇಳಿದ ಮೇಲೆಯೇ ಏನೆಲ್ಲ ತಿಳಿಯಹತ್ತುವದು. ಹೀಗೆ ತಿಳಿಯುತ್ತ ಹೋದಂತೆ ನಮ್ಮ ವೃತ್ತಿ [ಮನದ ಸ್ಥಿತಿ, ತಿಳುವಳಿಕೆ] ಯು ಶುದ್ಧವಾಗುವದು ಸ್ಪಷ್ಟವಾಗುವದು. ಮತ್ತು ಆ ಮೇಲೆ ಸಾರವುಳ್ಳದ್ದು ಯಾವುದು? ಮತ್ತು ಅಸಾರವುಳ್ಳದ್ದು ಯಾವುದು? ಇದರ ನಿಶ್ಚಿತ ಖರೇ ಜ್ಞಾನವು ನಮ್ಮ ಮನಕ್ಕೆ ತಿಳಿಯುವದು.(೭) ಶ್ರವಣ ಅಂದರೆ ಕೇಳುವದು. ಮತ್ತು ಮನನ ಅಂದರೆ ಮನದಲ್ಲಿ ಧರಿಸುವದು. ಅಂದರೆ ಸ್ಮರಣದಲ್ಲಿ ನೆನಪಿನಲ್ಲಿ ಇಡುವದು. [ಮರೆಯದೆ ಎಲ್ಲವನ್ನೂ ಯಥಾವತ್ ಜ್ಞಾಪಕದಲ್ಲಿಡುವದು]. ಮನನ ಅಂದರೆ ಧಾರಣಾ, ಅಂದರೆ ಬುದ್ಧಿಯ ಗ್ರಹಣ ಶಕ್ತಿ, ಸ್ಮರಣ ಶಕ್ತಿ, ಸ್ಥಿರತ್ವ ಇವುಗಳ ಉಪಾಯದ ಯುಕ್ತಿ, ಸಾಮ, ದಾನ, ಭೇದ, ದಂಡಾದಿ ಉಪಾಯದಿಂದ ತ್ರೈಲೋಕ್ಯದಲ್ಲಿಯ ಜ್ಞಾನದ ವ್ಯವಹಾರ ನಡೆದಿರುವದು. (೮) ಉತ್ತಮ ಶ್ರವಣ ಘಟಿಸಲಿಕ್ಕೆ ಶರೀರ ಮತ್ತು ಮನ ಎರಡೂ ತತ್ಪರ ಇರಬೇಕಾಗುವದು. ಶರೀರ ತತ್ಪರ ಇರದಿದ್ದರೆ ಶ್ರವಣದಲ್ಲಿ ಯಾವ ತರಹದ ಅಡಚಣೆ ಬರುವವು, ಅನ್ನುವದರ ವರ್ಣನೆಯನ್ನು ಕೇಳಿರಿ: ಶ್ರವಣದ ಉತ್ತಮ ಉಪಯೋಗವಾಗಬೇಕಾದರೆ ಯಾವ ಅಡಚಣೆಗಳು ಬರುವವು. ಇದರ ಎಲ್ಲ ಪ್ರಕಾರಗಳನ್ನು ಹೇಳುವದು ಶಕ್ಯವಿಲ್ಲ. ಮನುಷ್ಯನು ಸಾವಧಾನದಿಂದ ಇದ್ದದ್ದಾದರೆ ಬರುವ ಅಡಚಣೆಗಳ ಕಲ್ಪನಾ ಶ್ರವಣ ಮಾಡುವವನಿಗೆ ಬರುವದು. (೯) ತಿಳಿಯಿರಿ: ಜನರು ಕೇಳಲಿಕ್ಕೆ ಕುಳಿತರು. ಮತ್ತು ವಕ್ತಾರನು ಹೇಳುವದನ್ನು ಕೇಳುತ್ತ ಕೇಳುತ್ತ ಏಕಾಗ್ರರಾದರು. ಆದರೆ ನಂತರ ಅಂದರೆ ತಡವಾಗಿ ಬರುವಂಥ ಜನರು ಏಕಾಗ್ರರಿರುವದಿಲ್ಲ. ಇದರಿಂದ ಮೊದಲು ಬಂದ ಜನರಿಗೆ ಅವರ ಏಕಾಗ್ರತೆಗೆ ವ್ಯತ್ಯಯ ಬಂದು ತೊಂದರೆಯಾಗುವದು. (೧೦) ಒಬ್ಬ ಮನುಷ್ಯನು ಬಹಳಷ್ಟು ಕಡೆಗೆ ತಿರುಗಾಡಿ ಬರುವನು. ಇವನು ಅಲ್ಲಲ್ಲಿ ಅನೇಕ ಪ್ರಕಾರದ ವಿಷಯವನ್ನು ಕೇಳಿ ಬಂದಿದ್ದನು. ಬಹಳ ಕಡೆಗೆ ಬಹಳಷ್ಟು ಕೇಳಿ ಬಂದದ್ದರಿಂದ ಇವನ ಮನದಲ್ಲಿ ಗೊಂದಲ ಘೋಟಾಳೆ ಉತ್ಪನ್ನವಾಗಿರುವದು. ಇದರಿಂದ ಅವನಿಗೆ ಸಮಾಧಾನವಿರುವದಿಲ್ಲ. [ಬೇಚೈನ ಆಗುವದು] (೧೧) ಪ್ರಸಂಗ, ಸಮಯ, ಪರಿಸ್ಥಿತಿ, ಸಂದರ್ಭ ತಿಳಿದು ನಡೆಯುವ ಜನರು ಬಹಳ ಸ್ವಲ್ಪ ಇರುವರು ಇದರಿಂದ ಶ್ರವಣಕ್ಕಾಗಿ ಬರುವವರಿಗೆ ಅನೇಕ ಅಡಚಣೆಗಳು ಅನೇಕ ಪ್ರಕಾರದಿಂದ ಕಾಣುವವು. ಅವುಗಳ ಪೈಕಿ ಕೆಲವನ್ನು ಹೇಳುವೆನು, ಕೇಳಿರಿ. (೧೨) ಸಭೆಯಲ್ಲಿ ಕೀರ್ತನ, ಪ್ರವಚನ, ನಿರೂಪಣ, ಪುರಾಣ, ಭಾಷಣ ಕೇಳಲಿಕ್ಕೆ ಕುಳಿತೆವೆಂದರೆ ಇಕ್ಕಟ್ಟಾದ ಜಾಗೆಯಲ್ಲಿ ಬಹಳ ಅಡಚಣೆಯಿಂದ ಕೂಡಬೇಕಾಗುವದು. ಶರೀರಕ್ಕೆ ಆರಾಮವಾಗಿ ಕೂಡಲಿಕ್ಕೆ ಜಾಗ ಇರದೇಇರುವದರಿಂದ ಅಟೂಕಾಗಿ [ಮುದುಡಿ] ಕೂಡ್ರಬೇಕಾಗುವದು. ಇಂಥದರಲ್ಲಿ ಬಹಳ ಜೋರಾಗಿ ನಿದ್ರೆ ಬರಹತ್ತಿದ್ದರಿಂದ ಆಕಳಿಕೆಯ ಮೇಲೆ ಆಕಳಿಕೆ ಬರಹತ್ತುವವು. ತೂಕಡಿಸಿ, ತೂಕಡಿಸಿ ಜೋಲಿ ಹೊಡೆಯುವದು ನಡೆಯುತ್ತವೆ. (೧೩)

ಬೈಸಲೇ ಸುಚಿತ ಕರೂನಿ ಮನಾ । ಪರೀ ತೇ ಮನ ಚಿ ಏಕೇನಾ ।
ಮಾಗೇ ಹೋತೇ ಏಕಿಲೇ ನಾನಾ। ತೇ ಚಿ ಧರುನೀ ಬೈಸಲೇ ॥೧೪॥

ತತ್ಪರ ಕೇಲೇ ಶರೀರ । ಪರೀ ಮನಾಮಧೇ ಅಣೇಕ ವಿಚಾರ ।
ಕಲ್ಪನಾ ಕಲ್ಪೀ ತೋ ವಿಸ್ತಾರ । ಕಿತೀ ಮ್ಹಣೌನಿ ಸಾಂಗಾವಾ ॥೧೫॥

ಜೇ ಜೇ ಕಾಂಹೀ ಶ್ರವಣೀ ಪಡಿಲೇ । ತಿತುಕೇ ಸಮಜೋನ ವಿವರಲೇ ।
ತರೀ ಚ ಕಾಂಹೀ ಸಾರ್ಥಕ ಜಾಲೇ । ನಿರೂಪಣೀ ॥೧೬॥

ಮನ ದಿಸತೇ ಮಾ ಧರಾವೇ । ಜ್ಯಾಚೇ ತ್ಯಾನೇ ಆವರಾವೇ ।
ಆವರೂನ ವಿವೇಕೇ ಧರಾವೇ । ಅರ್ಥಾಂತರೀ ॥೧೭॥

ನಿರೂಪಣೀ ಯೇಊನ ಬೈಸಲಾ । ಪರೀ ತೋ ಉದಂಡ ಜೇವೂನ ಆಲಾ ।
ಬೈಸತಾ ಚ ಕಾಸಾವಿಸ ಜಾಲಾ । ತೃಷಾಕ್ರಾಂತ ॥೧೮॥

ಆಧೀ ಉದಕ ಆಣವಿಲೇ । ಘಳಘಳಾ ಉದಂಡ ಘೇತಲೇ ।
ತೇಣೇ ಮಳಮಳೂ ಲಾಗಲೇ । ಉಠೋನೀ ಗೇಲಾ ॥೧೯॥

ಕರ್ಪಟಿ ಢೇಕರ ಉಚಕ್ಯಾ ದೇತೀ । ವಾರಾ ಸರತಾ ನೋಠೀ ಫಜಿತೀ ।
ಕ್ಷಣಕ್ಷಣಾ ಉಠೋನೀ ಜಾತೀ । ಲಘುಶಂಕೇಸೀ ॥೨೦॥

ದಿಶೇನೇ ಕಾಸಾವಿಸ ಕೇಲಾ । ಅವಘೇ ಚಿ ಸಾಂಡೂನ ಧಾವಿಲಾ ।
ನಿರೂಪಣಪ್ರಸಂಗೀ ನಿಘೋನೀ ಗೇಲಾ । ಅಖಂಡ ಏಸಾ ॥೨೧॥

ದೃಷ್ಟಾಂತೀ ಕಾಂಹೀ ಅಪೂರ್ವ ಆಲೇ । ಅಂತಃಕರ್ಣ ತೇಥೇ ಚಿ ರಾಹಿಲೇ ।
ಕೋಠವರೀ ಕಾಯೆ ವಾಚಿಲೇ । ಕಾಂಹೀ ಕಳೇನಾ ॥೨೨॥

ನಿರೂಪಣೀ ಯೇಊನ ಬೈಸಲಾ । ತೋ ವಿಂಚುವೇ ಫಣಕಾವಿಲಾ ।
ಕೈಚೇ ನಿರೂಪಣ ಜಾಲಾ । ಕಾಸಾವೀಸ ॥೨೩॥

ಪೋಟಾಮಧೇ ತಿಡಿಕ ಉಠಿಲೀ । ಪಾಠೀಮಧೇ ಕರಕ ಭರಲೀ ।
ಚಾಲಕ ಚಿಖಲ್ಯಾ ಪುಳೀ ಜಾಲೀ । ಬೈಸವೇನಾ ॥೨೪॥

ಒಬ್ಬನು ತನ್ನ ಮನವನ್ನು ಶಾಂತಮಾಡಿಕೊಂಡು ಕೇಳಲಿಕ್ಕೆ ಕೂಡ್ರುವದೇನೋ ನಿಜವೇ ಇದೆ. ಆದರೆ ಕೂಡಲೇ ಅವನ ಮನವು ಕೇಳುವದಿಲ್ಲ. ಮೊದಲಿಗೆ ಏನನ್ನು ಕೇಳಿರುವನೋ ಅದು ಒಂದೇ ಸವನೇ ಮನದಲ್ಲಿ ಬರಹತ್ತುವದು. ಇದರಿಂದಾಗಿ ಎದುರಿನಲ್ಲಿ ಕುಳಿತ ವಕ್ತಾ ಏನನ್ನು ಹೇಳುವನೆಂಬುದರ ಕಡೆಗೆ ಲಕ್ಷ್ಯ ಹತ್ತುವದಿಲ್ಲ.(೧೪) ಶರೀರವನ್ನು ಹಿಡಿತದಲ್ಲಿ ತಂದು ಕೇಳಬೇಕೆಂದು ಕುಳಿತದ್ದಾದರೆ ಮನದಲ್ಲಿ ಇತರ ವಿಚಾರಗಳು ಬರಹತ್ತುವವು. ಒಂದರ ನಂತರ ಒಂದರಂತೆ ಒಂದೇ ಸವನೇ ಕಲ್ಪನೆಯು ವಿಸ್ತಾರ ಹೊಂದುವದು. ಮನವು ಗಲಬಿಲಿಗೊಂಡು ಬಿಡುವದು. ಇವೆಲ್ಲವನ್ನೂ ಹೇಳುವದು ಶಕ್ಯವಿಲ್ಲ. (೧೫) ಏನೆಲ್ಲವನ್ನೂ ನಾವು ಕೇಳುವೆವೋ ಅದೆಲ್ಲವನ್ನು ಚನ್ನಾಗಿ ತಿಳಿದುಕೊಂಡು ಅದರ ಮೇಲೆ ಮನನ ಮಾಡಿದರೇನೇ ನಿರೂಪಣ ಕೇಳಿದ್ದರ ಸಾರ್ಥಕತೆ ಅಲ್ಪ ಸ್ವಲ್ಪಾದರೂ ಆಗುವದೆಂದು ಅನ್ನಬೇಕಾಗುವದು. (೧೬) ಮನವು ನಮಗೆ ಕಾಣುವ ಹಾಗಿದ್ದರೆ ಆಗ ಅದನ್ನು ಹಿಡಿಯಲಿಕ್ಕೆ ಬರಬಹುದಾಗಿತ್ತು. ಆದರೆ ಅದಾದರೋ ಕಾಣುವದಿಲ್ಲ. ಅಂತೆಯೇ ಅವರವರೇ ತಮ್ಮ ತಮ್ಮ ಮನವನ್ನು ಹತೋಟಿಯಲ್ಲಿ ತಾವೇ ತಂದುಕೊಳ್ಳಬೇಕು. ನಾವೇ ನಮ್ಮ ಮನವನ್ನು ಹಿಡಿತದಲ್ಲಿ ತಂದುಕೊಂಡು ವಿವೇಕದಿಂದ ವಕ್ತಾ ಹೇಳುವ ವಿಷಯದ ಕಡೆಗೆ ಲಕ್ಷ್ಯಹಾಕಿ ಅದರ ಅಂತರಂಗದ ಅರ್ಥವನ್ನು ವಿವರಿಸಿ ಶೋಧಿಸಿ ನೋಡುವ ಕಡೆಗೆ ಲಕ್ಷ ಹಚ್ಚಬೇಕು. (೧೭) ತಿಳಿಯಿರಿ. ಒಬ್ಬ ಮನುಷ್ಯನು ಹೊಟ್ಟೆ ತುಂಬ [ಭಕ್ಕಂ-ಭರಪೂರಾಗಿ] ಊಟಮಾಡಿದನು. ಮತ್ತು ಶ್ರವಣಕ್ಕೆ ಅಂದರೆ ನಿರೂಪಣ ಕೇಳಲಿಕ್ಕೆ ಬಂದು ಕುಳಿತನು. ಕುಳಿತ ಕೂಡಲೇ ಅವನಿಗೆ ಬಹಳಷ್ಟು ನೀರಡಿಕೆಯಾಗಿ ಕಳವಳಗೊಂಡನು. (೧೮) ಅದಕ್ಕಾಗಿ ಅವನು ತಾನಿದ್ದಲ್ಲಿಯೇ ಕುಡಿಯುವ ನೀರನ್ನು ತರಿಸಿ ಆ ನೀರನ್ನೆಲ್ಲ ಗಳಗಳಾ ಎಂದು, ಗಟಗಟಾ ಎಂದು ಹೊಟ್ಟೆತುಂಬಾ ಕುಡಿದನು. ಆಗ ಅವನ ಹೊಟ್ಟೆಯಲ್ಲಿ ಮುಳ ಮುಳ ಪ್ರಾರಂಭವಾಯಿತು. ಇದರಿಂದಾಗಿ ಕೂಡಲಿಕ್ಕಾಗದೇ ಅವನು ಗಡಬಿಡಿಯಿಂದ ಎದ್ದು ಹೋದನು. ಹೀಗಾಗಿ ಅವನು ತನ್ನ ಶ್ರವಣವನ್ನು ಕಳೆದುಕೊಂಡನು (೧೯) ಶ್ರವಣಕ್ಕೆ ಬಂದು ಕುಳಿತವರಲ್ಲಿ ಒಬ್ಬನಿಗೆ ಒಂದೇ ಸವನೆ ಹೊಲಸು ತೇಗು ಥರ್ ಥರ್ ಎಂದು ಬರುವವು. ಇನ್ನೊಬ್ಬನಿಗೆ ಒಂದೇ ಸವನೇ ಬಿಕ್ಕು ಬರುವದು, ಮತ್ತೊಬ್ಬನು ಹೊಲಸು ಹೂಸನ್ನು ಬಿಟ್ಟರೆ ಆಗ ಎಷ್ಟು ಫಜೀತಿ ಆಗುವದು, ಮುಂಗದೊಬ್ಬನಿಗೆ ಮೇಲಿಂದ ಮೇಲೆ ಮೂತ್ರ ವಿಸರ್ಜನೆಗಾಗಿ ಎದ್ದು ಹೋಗಬೇಕಾಗುವದು. ಇಂಥವರೆಲ್ಲರ ಶ್ರವಣವು ಚನ್ನಾಗಿ ಆಗುವದಿಲ್ಲ. (೨೦) ಒಬ್ಬನಿಗೆ ಶ್ರವಣ ಮಧ್ಯದಲ್ಲಿ ಶೌಚಕ್ಕೆ ಹೋಗಬೇಕಾಗುವದು. ಇದರಿಂದ ಅವರಿಗೆ ಅತಿ ಕಳವಳವಾಗುವದು. ಆಗ ಅವನು ಎಲ್ಲವನ್ನೂ ಬಿಟ್ಟು ಬಹಿರ್ದೆಸೆಗೆ ಓಡುತ್ತ ಹೋಗುವನು. ಈ ರೀತಿಯಲ್ಲಿ ಒಂದಲ್ಲ ಒಂದು ನಿಮಿತ್ತದಿಂದ ನಿರೂಪಣದಲ್ಲಿ ಮನುಷ್ಯರು ಸದಾ ಗೈರಹಾಜರ ಆಗುವರು.(೨೧)ವಕ್ತಾ ತಾನು ಹೇಳುವ ಕಾಲದಲ್ಲಿ ಒಂದು ಅಪೂರ್ವದೃಷ್ಟಾಂತ ಕೊಟ್ಟದ್ದಾದರೆ ಮನವು ಅದಕ್ಕೆ ಅಂಟಿಕೊಂಡು ಉಳಿಯುವದು. ಆ ಮೇಲೆ ಗ್ರಂಥದ ವಾಚನ [ಓದುವದು] ಎಲ್ಲಿಯವರೆಗೆ ಬಂದಿತು ಅನ್ನುವದರ ಎಚ್ಚರ ಉಳಿಯುವದಿಲ್ಲ. (೨೨) ಒಬ್ಬನು ನಿರೂಪಣ ಕೇಳಲು ಬಂದು ಕುಳಿತನು. ಆಗ ಅವನಿಗೆ ಚೇಳು ಕಚ್ಚಿತು. ಆಗ ಅವನಿಗೆ ಎಲ್ಲಿಯ ನಿರೂಪಣ? ಅವನ ಜೀವನ ಬಹಳ ಕಸವಿಸಿಪಡುವದು. ಗೋಳಾಡುವನು. (೨೩) ಶ್ರವಣಕ್ಕೆ ಬಂದವರಲ್ಲಿ ಕೆಲವರಿಗೆ ಹೊಟ್ಟೆಶೂಲಿ ನೋವು ಪ್ರಾರಂಭವಾಯಿತು. ಬೆನ್ನಿನಲ್ಲಿ ನೋವು ಹೊಡೆತ [ಠಣಕಾ] ಪ್ರಾರಂಭವಾಯಿತು. ಸಂಧಿವಾತದಿಂದ ಕೈಕಾಲುಗಳ ಸಂದುಗಳು ಹಿಡಿದುಕೊಂಡು ಅಸಾಧ್ಯ ನೋವು, ಪಾದದ ಬೆರಳುಗಳಲ್ಲಿ ಬಿರುಕು-ಸೀಳು ಬಿಡುವದು. ಅದರ ಉರುಪು ಪ್ರಾರಂಭವಾಗುವದು. ಕೂಡ್ರುವ ಸ್ಥಳದಲ್ಲಿ ಅಂದರೆ ಕುಂಡಿಯ ತಿಗಕ್ಕೆ ಹುಣ್ಣು ಕೀವುಗಳಿಂದ ಕೂಡಲಿಕ್ಕೆ ಬರದಂತಾಗಿದೆ. ಒಬ್ಬೊಬ್ಬರಿಗೆ ಒಂದೊಂದು ತರಹದ ತೊಂದರೆ. ಅದಮೇಲೆ ನಿರೂಪಣಕ್ಕೆ ಹೇಗೆ ಕುಳಿತಾರು? ಅರ್ಥಾತ್ ಕೂಡ್ರಲಾಗುವದಿಲ್ಲ. [ಕೆಲವರು ಹೋದರೂ ಕೆಲವರು ಅಲ್ಲಿಯೇ ಶಾಂತಿ ಭಂಗಮಾಡುತ್ತ ಕುಳಿತರು.] (೨೪)

ಪಿಸೋಳಾ ಚಾವೂನ ಪಳಾಲಾ । ತೇಣೇ ಪ್ರಾಣೀ ದುಶ್ಚಿತ ಜಾಲಾ ।
ಕೋಣೇ ನೇಟೇ ಗಲ್ಬಲಾ ಕೇಲಾ । ತೇಥೇ ಚಿ ಧಾವೇ ॥೨೫॥

ವಿಷಇ ಲೋಕ ಶ್ರವಣೇ ಯೇತೀ । ತೇ ಬಾಯೆಕಾಕಡೇ ಚ ಪಾಹಾತೀ ।
ಚೋರಟೇ ಲೋಕ ಚೋರೂನ ಜಾತೀ । ಪಾದರಕ್ಷಾ ॥೨೬॥

ಹೋಯೆ ನವ್ಹೆ ವಾದವೇವಾದ । ತೇಣೇ ಉದಂಡ ಜಾಲಾ ಖೇದ ।
ಸಿವ್ಯಾ ಗಾಳೀ ಅಪ್ರಮಾದ । ಹೋತಾ ಚುಕಲಾ ॥೨೭॥

ಕೋಣೀ ನಿರೂಪಣೀ ಬೈಸತೀ । ಸಾವಕಾಸ ಗೋಷ್ಟೀ ಲಾವಿತೀ ।
ಹರಿದಾಸ ತೇ ರೇ ರೇ ಕರಿತೀ । ಪೋಟಾಸಾಠೀ ॥೨೮॥

ಬಹುತ ಜಾಣತೇ ಮಿಳಾಲೇ । ಯೇಕಾಪುಢೇ ಯೇಕ ಬೋಲೇ ।
ಲೋಕಾಂಚೇ ಆಶಯೆ ರಾಹಿಲೇ । ಕೋಣ ಜಾಣೇ ॥೨೯॥

ಮಾರ್ಘೋ ಹೋಯೆ ತುರ್ಘೋ ನವ್ಹೇ । ಐಸೀ ಅಖಂಡ ಜಯಾಸ ಸವೇ ।
ನ್ಯಾಯೆ ನೀತಿ ಸಾಂಡೂನ ಧಾವೇ । ಅನ್ಯಾಯಾ ಕಡೆ ॥೩೦॥

ಆಪಲ್ಯಾ ಥೋರಪಣಾಸಾಠೀ । ಅಚ್ಯಾವಾಚ್ಯಾ ತೋಂಡ ಪಿಟೀ ।
ನ್ಯಾಯೇ ನಾಹೀ ತೇ ಸೇವಟೀ । ಪರಮ ಅನ್ಯಾಈ ॥೩೧॥

ಯೇಕೇ ಕಡೆ ಅಭಿಮಾನ ಉಠೇ । ದುಸರೇಕಡೆ ಉದಂಡ ಪೇಟೇ ।
ಐಸೇ ಶ್ರೋತೇ ಖರೇ ಖೋಟೇ । ಕೋಣ ಜಾಣೇ ॥೩೨॥

ಮ್ಹಣೋನ ಜಾಣತೇ ವಿಚಕ್ಷಣ । ತೇ ಆಧೀ ಚ ಧರಿತೀ ನೇಣಪಣ ।
ಮೂರ್ಖ ಟೊಣಪಾ ಆಪಣ । ಕಾಂಹೀ ಚ ನಾಹೀ ॥೩೩॥

ಕೆಂಜಿಗ ಅಥವಾ ಮೆಣಸಿನ ಹುಳ [ಫಿಸೋಳಾ] ಕಡಿದದ್ದರಿಂದ ಹಾ ಹಾ ಎಂದು ಕಿರೆಯುತ್ತ ಓಡಿದರೆ ಮನದ ಏಕಾಗ್ರತೆಗೆ ಭಂಗ ಬರುವದು. ಇಂಥದರಲ್ಲಿ ಹೊರಗೆ ಕೆಲವರು ಬಹಳ ಗಡಿಬಿಡಿ ಒದರಾಟ, ಚೀರಾಟದ ಗೊಂದಲ ಎಬ್ಬಿಸಿದರೆಂದರೆ ಜನರು ನಿರೂಪಣ ಬಿಟ್ಟು ಅತ್ತ ಕಡೆಗೆ ಓಡುವರು. (೨೫) ವಿಷಯಾಸಕ್ತ ಜನರು ಶ್ರವಣ ಮಾಡಲಿಕ್ಕೆ ಬರುವರು. ಆದರೆ ಅವರ ಲಕ್ಷ್ಯವೆಲ್ಲ ಸ್ತ್ರೀಯರ ಕಡೆಗೇ ಇರುವದು. [ಇವರಿಗೆ ಕಾಮುಕ ಶ್ರವಣಿಗಳೆಂದು ಅನ್ನುವರು] ಮತ್ತು ಕೆಲವರು ಕಳ್ಳರೂ ಬರುವರು. ಇವರು ಶ್ರವಣಕ್ಕೆ ಬಂದವರ ಪಾದರಕ್ಷೆಗಳನ್ನು ಹಾರಿಸಿಕೊಂಡು ಹೋಗುವರು. (೨೬) ಒಮ್ಮೊಮ್ಮೆ ಶ್ರವಣಮಾಡುತ್ತ ಕುಳಿತಾಗ ""ಅಸ್ತಿ ಮತ್ತು ನಾಸ್ತಿ" ಅಂದರೆ "ಅಹುದು ಮತ್ತು ಅಲ್ಲ" "ಈಅರ್ಥ ಸರಿ ಇರುವದು. ಈಅರ್ಥ ಸರಿ ಇರುವದಿಲ್ಲ" "ಹೀಗಲ್ಲ–ಹಾಗಲ್ಲ" "ಇದು ಸರಿ, ಅದು ಸರಿ" ಇದರ ವಾದ ಪ್ರಾರಂಭವಾಗುವದು. ಇದರಿಂದಾಗಿ ಮನಸ್ಸಿಗೆ ಬಹುಜನರಿಗೆ ಬಹಳ ಖೇದವಾಗುವದು. ಯಾಕೆಂದರೆ ಈ ವಾದವು ಅತಿರೇಕಕ್ಕೆ ಮುಟ್ಟಿ ಅಲ್ಲದ ಸಲ್ಲದ ಬೈಗಳುಗಳು ಸುರೆಯಾಗುವವು. ಕೈಗೆ ಕೈ ಹತ್ತಿ ಅಪ್ರಮಾದವಾಗುವದು ಆದರೂ ಹೇಗೋ ಉಳಿಯಿತು. ಇರಲಿ ಇವೆಲ್ಲದರಿಂದ ನಮ್ಮಿಂದ ತಪ್ಪು ಘಟಿಸುವದಲ್ಲದೇ ಶ್ರವಣದಂತಹ ಪುಣ್ಯ ಕಾರ್ಯ ಒತ್ತಟ್ಟಿಗೆ ಉಳಿದು ಕಾಲಕ್ಷೇಪ ವ್ಯರ್ಥವಾಗಿ ಹೋಗುವದು. (೨೭) ಕೆಲವು ಜನರು ನಿರೂಪಣ,ಶ್ರವಣಕ್ಕೆಂದು ಬಂದು ಕೂಡುವರು.ಆದರೆ ಗುಜುಗುಜು ಸುರುವು[ಪ್ರಾರಂಭ]ಮಾಡುವರು. ಆದರೆ ಬಡ ಹರಿದಾಸ ಹೊಟ್ಟೆಪಾಡಿಗಾಗಿ ಇವರ ಮುಂದೆ ಆಗ ಆಳಬೂರುಕುತನದ[ಸಾರಹೀನ] ಕೀರ್ತನೆ ಮಾಡುತ್ತಿರುವನು.(೨೮) ಒಂದು ಪ್ರಸಂಗದಲ್ಲಿ ಬಹಳಷ್ಟು ವಿದ್ವಾನ್ ಪಂಡಿತರು ನಿರೂಪಣಕ್ಕಾಗಿ ಬಂದು ಒಂದು ಕಡೆಗೆ ಕೂಡುವರು. ಈ ವಿದ್ವಾನರೇ ಒಬ್ಬರಕ್ಕಿಂತ ಒಬ್ಬರು ಮಾತನಾಡಹತ್ತುವರು. ಇತರ ಶ್ರೋತಾರರ ಸ್ಥಿತಿಯು ಕಡೆಗೆ ಯಾರೂ ಲಕ್ಷ್ಯ ಕೊಡುವದಿಲ್ಲ. [ಇದು ಪಂಡಿತರ ಶ್ರವಣ ವೈಖರಿಯು] ಈ ವಿದ್ವಾನ್ ಪಂಡಿತರು ಇದರ ಕಡೆಗೆ ಲಕ್ಷಕೊಡುವದಿಲ್ಲ. (೨೯) ನಾನು ಅಂದದ್ದೇ ನಿಜ, ನಿಮ್ಮ ಅಭಿಪ್ರಾಯ ಅತ್ಯಂತ ಸುಳ್ಳು ಹೀಗೆ ಹಟ ಹಿಡಿಯುವ ರೂಢಿ ಕೆಲವರಲ್ಲಿ ಇರುವದು. ಇಂಥ ಜನರು ನ್ಯಾಯ ನೀತಿಯ ಕಡೆಗೆ ಎಷ್ಟೂ ಲಕ್ಷ್ಯಕೊಡದೇ ನ್ಯಾಯ, ನೀತಿ ಇವನ್ನು ಬಿಟ್ಟುಕೊಟ್ಟು ಅನ್ಯಾಯದ ಕಡೆಗೆ ಧಾವಿಸುವರು. (೩೦) ತಮಗೆ ದೊಡ್ಡಿಸ್ತನ ಬರಬೇಕೆಂದು ಕೆಲವು ಜನರು ಯದ್ವಾತದ್ವಾ ಸಿಕ್ಕಾಪಟ್ಟೆ ಬಡಬಡಿಸುವರು. ಇದ್ದದ್ದೊಂದು ಇಲ್ಲದ್ದೊಂದು ಮಾತನಾಡುವರು. ಇವರ ಇಂಥ ಮಾತಿಗೆ ಕೊನೆಯೇ ಇರುವದಿಲ್ಲ. ಇವರ ಮಾತುಗಳೇನೂ ನ್ಯಾಯ ನೀತಿಗಳಿಗೆ ಅನುಸರಿಸಿ ಇರುವದಿಲ್ಲ. ಕಟ್ಟಕಡೆಗೆ ಇವರಾಡಿದ ಮಾತುಗಳು ಅತ್ಯಂತ ಅನ್ಯಾಯದವೆಂದು ಗೊತ್ತಾಗುವದು. [ಖರೇ ಇದ್ದದ್ದು ಯಾವಾಗಲೂ ಖರೇ ಆಗುವದು–ಸುಳ್ಳು ಯಾವಾಗಲೂ ಸುಳ್ಳೇ ಅನಿಸುವದು ನ್ಯಾಯಸಮ್ಮತವೇ ಇರುವದು.] (೩೧) ಶ್ರವಣಕ್ಕೆ ಬಂದವರಲ್ಲೊಬ್ಬನು ಗರ್ವದಿಂದ ಕೇವಲ ದೊಡ್ಡದಾಗಿ ಮಾತನಾಡಲಿಕ್ಕೆ ಪ್ರಾರಂಭಿಸಿದನು. ಆದರೆ ಅದೇ ಇನ್ನೊಬ್ಬನು ಭಯಂಕರ ಸಿಟ್ಟಿಗೇಳುವನು. ಈ ನಮೂನೆಯ ಶ್ರೋತಾರಲ್ಲಿ ಖರೇ ಯಾರು ಮತ್ತು ಖೊಟ್ಟಿ ಯಾರು ಇದನ್ನು ಹೇಳುವದೇ ಕಠಿಣವಾಗುವದು. (೩೨) ಯಾರು ನಿಜವಾಗಿ ಖರೇಜಾಣತನ ಇರುವರೋ ಅವರು ಸ್ವತಃದ ಕಡೆಗೆ ಅಜ್ಞಭಾವ ಹಿಡಿದುಕೊಂಡೇ ಮಾತನಾಡಲಿಕ್ಕೆ ಆರಂಭಮಾಡುವರು. ಯಾರಾದರೊಬ್ಬನು ಈ ವಕ್ತಾರನ ಅಪಮಾನಮಾಡಿದರೂ ಕೂಡಾ ಇವನು ಶಾಂತತನದಿಂದ ವಿರುದ್ಧ ಮಾತನಾಡದೆ, ಮೌನದಿಂದ ಇದ್ದು ಅಪಮಾನವನ್ನು ಸಹಿಸುವನು. ಇದೇ ನಿಜವಾದ ದೊಡ್ಡಿಸ್ತನದ ಚಿನ್ಹವಿರುವದು. ಜನರು ಏನೇ ಅನ್ನಲಿ, ಅದನ್ನು ನುಂಗಿಕೊಂಡು [ಸಹಿಸಿ] ನಾವು ಜನರನ್ನು ಸನ್ಮಾರ್ಗಕ್ಕೆ ಹಚ್ಚುವದೇ ನಿಜವಾದ ಸಂತರ ಲಕ್ಷಣವು. ಇದು ಶ್ರೀ ಸಮರ್ಥರಿಗೆ ಅತ್ಯಂತ ಸಮ್ಮತವಾದದ್ದೆಂದು ತಿಳಿಯಬೇಕು. ಆದ್ದರಿಂದ ಯಾರು ನಿಜವಾಗಿ ತಿಳಿದವರು ಮತ್ತು ಶಹಾಣೆ ಇರುವರೋ ಅವರು ಮೊದಲಿಗೆ ತಾವು ತಿಳಿಯದವರು, ಅಜ್ಞಭಾವದವರು ಅನ್ನುವ ಭಾವ ತಳೆಯುವರು. ನಾವು ಮೂರ್ಖರು. ಅಜ್ಞಾನಿಗಳಾದವರು, ದಡ್ಡರು, ತಿಳುವಳಿಕೆಯಿಲ್ಲದ ಹುಂಬರು ಮತ್ತು ಯಾವ ಒಂದು ವಿಶೇಷವಿಲ್ಲದ ಸಾಮಾನ್ಯರು ಅನ್ನುವ ಭೂಮಿಕೆ ಹೊಂದಿದವರಾಗಿರುವರು. (೩೩)

ಆಪಣಾಹೂನ ದೇವ ಥೋರ । ಐಸಾ ಜಯಾಸ ಕಳಲಾ ವಿಚಾರ ।
ಸಕಳ ಕಾಂಹೀ ಜಗದಾಂತರ । ತೇಹಿ ರಾಖಾವೇ ॥೩೪॥

ಸಭೆಮಧೇ ಕಳ್ಹೋ ಜಾಲಾ । ಶಬ್ದ ಯೇತೋ ಜಾಣತ್ಯಾಲಾ ।
ಅಂತರೀ ರಾಖೋ ನಾಹೀ ಸಿಕಲಾ । ಕೈಸಾ ಯೋಗೀ ॥೩೫॥

ವೈರ ಕರಿತಾ ವೈರ ಚಿ ವಾಢೇ। ಆಪಣಾಸ ದುಃಖ ಭೋಗಣೇ ಘಡೇ।
ವ್ಹಾಣೋನಿ ಶಾಹಾಣ್ಯಾಚೆ ಕುಕಡೇ । ಕಳೋ ಆಲೇ ॥೩೬॥

ಅಖಂಡ ಆಪಣಾ ಸಾಂಭಾಳಿತೀ । ಕ್ಷುಲ್ಲಕಪಣ ಯೇಊ ನೇದಿತೀ ।
ಥೋರ ಲೋಕಾಸ ಕ್ಷಮಾ ಶಾಂತೀ । ಅಗತ್ಯ ಕರಣೇ ॥೩೭॥

ಅವಗುಣಾಪಾಸೀ ಬೈಸಲಾ ಗುಣೀ । ಅವಗುಣ ಕಳತೋ ತತಕ್ಷಣೀ ।
ವಿವೇಕೀ ಪುರುಷಾಚೀ ಕರಣೀ । ವಿವೇಕೇ ಹೋತೇ ॥೩೮॥

ಉಪಾಯೆ ಪರಿಯಾಯೆ ದೀರ್ಘ ಪ್ರೇತ್ನ । ವಿವೇಕಬಳೇ ನಾನಾ ಯೆತ್ನ ।
ಕರೀಲ ತಯಾಚೇ ಮಹಿಮಾನ । ತೋ ಚಿ ಜಾಣೇ ॥೩೯॥

ದುರ್ಜನೀ ಮೆಮದರೂನ ಘೇತಲಾ । ಬಾಶ್ಕಳ ಲೋಕೀ ಘುಸರಿಲಾ ।
ವಿವೇಕಾಪಾಸೂನ ಚೆವಲಾ । ವಿವೇಕೀ ಕೈಸಾ ॥೪೦॥

ನ್ಯಾಯೆ ಪರಿಯಾಯೆ ಉಪಾಯೆ । ಮೂರ್ಖಾಸ ಹೇ ಕಳೇ ಕಾಯೆ ।
ಮೂರ್ಖಾಕರಿತಾ ಚಿವಡಾ ಹೋಯೆ । ಮಜ್ಯಾ ಲಸೀಚಾ ॥೪೧॥

ಮಗ ತೇ ಶಾಹಾಣೇ ನೀಟ ಕರಿತೀ । ಸ್ವಯೇ ಸಾಹೋನ ಸಾಹವಿತೀ ।
ಸ್ವಯೇ ಕರೂನ ಕರವಿತೀ । ಲೋಕಾಕರವೀ ॥೪೨॥

ಪೃಥ್ವೀಮಧೇ ಉದಂಡ ಜನ । ಜನಾಮಧೇ ಅಸತೀ ಸಜ್ಜನ ।
ಜಯಾಕರಿತಾ ಸಮಾಧಾನ । ಪ್ರಾಣಿಮಾತ್ರಾಸೀ ॥೪೩॥

ತೋ ಮನೋಗತಾಚೀ ಅಂಗೇ ಜಾಣೇ। ಮಾನ ಪ್ರಸಂಗ ಸಮಯೋ ಜಾಣೇ ।
ಸಂತಪ್ತಾಲಾಗೀ ನಿವವೂ ಜಾಣೇ । ನಾನಾ ಪ್ರಕಾರೇ ॥೪೪॥

ಐಸಾ ತೋ ಜಾಣತಾ ಲೋಕ । ಸಮರ್ಥ ತಯಾಚಾ ವಿವೇಕ ।
ತ್ಯಾಚೇ ಕರಣೇ ಕಾಂಹೀ ಯೇಕ । ಜನಾಸ ಕಳೇನಾ ॥೪೫॥

ನಮಗಿಂತಲೂ ದೇವ ದೊಡ್ಡವನು ಅನ್ನುವ ವಿಚಾರವು ಇವರಿಗೆ ನಿಜವಾದ ಅರ್ಥದಲ್ಲಿ ತಿಳಿದಿರುವದು. ಇವರೇ ಎಲ್ಲ ಜನರ ಅಂತಃಕರುಣವನ್ನು ಸಂಬಾಳಿಸುವರು. ಜನತೆಯೇ ಜನಾರ್ದನರೆಂಬುದು ಇವರಿಗೆ ಖಾತ್ರಿಯಾಗಿರುವದು. ಅಂತೆಯೇ ಇವರು ಸಮುದಾಯದ ಅಂತಃಕರುಣವನ್ನು ದುಃಖಿಸುವದಿಲ್ಲ. (೩೪) ಸಭೆಯಲ್ಲಿ ಒಂದುವೇಳೆ ಜಗಳ, ತಂಟೆ ನಿರ್ಮಾಣವಾದರೆ ಅದರ ದೋಷ ತಿಳಿದವರ ಕಡೆಗೆ [ಹಿರಿಯರ ಕಡೆಗೆ] ಹೋಗುವದು. ಯಾರು ಜನರ ಅಂತಃಕರುಣವನ್ನು ಸಂಬಾಳಿಸಲು ಶಕ್ತರಾಗಿಲ್ಲವೋ ಅವರು ಯೋಗಿ ಎಂದು ಅನ್ನಿಸಿಕೊಳ್ಳಲಿಕ್ಕೆ ಯೋಗ್ಯರಲ್ಲವೆಂದು ಅನ್ನಬೇಕಾಗುವದು. (೩೫) ದ್ವೇಷ-ವೈರ ಮಾಡುವದರಿಂದ ದ್ವೇಷ-ವೈರಗಳು ಮತ್ತಷ್ಟು ಹೆಚ್ಚುವವು. ಮುಂದೆ ನಮಗೇ ದುಃಖವನ್ನು ಭೋಗಿಸಬೇಕಾಗುವದು. ಇದರ ಮೇಲಿಂದ ಬುದ್ಧಿವಂತತನದ ಜಾಣತನದ ರಹಸ್ಯ ಲಕ್ಷ್ಯದಲ್ಲಿ ಬರಬಹುದು. (೩೬) ಯಾರು ನಿಜವಾಗಿ ದೊಡ್ಡವರಿರುವರೋ ಅವರು ಯಾವಾಗಲೂ ತಮ್ಮ ದೊಡ್ಡಸ್ತಸವನ್ನು ಸಂಬಾಳಿಸಿಕೊಂಡು ಹೋಗುವರು. ತಮ್ಮ ಕಡೆಗೆ ದೋಷ, ಹೀನತನ ಬರದಂತೆ ನೋಡಿಕೊಳ್ಳುವರು. ನಿಜವಾದ ದೊಡ್ಡ ಮನುಷ್ಯರ ನಡವಳಿಕೆಯಲ್ಲಿ ಕ್ಷಮೆ ಮತ್ತು ಶಾಂತ ಗುಣಗಳು ಅತಿ ಅವಶ್ಯವಾಗಿ ಇದ್ದೇ ಇರುವವು. (೩೭) ಅವಗುಣಿ ಮತ್ತು ಗುಣಗೇಡಿಯ ಸಂಗತಿಯಲ್ಲಿ ಗುಣವಂತ ಮನುಷ್ಯನು ಇರುವ ಪ್ರಸಂಗ ಬಂದರೆ ಇವನಿಗೆ ಅವನ ಅವಗುಣಗಳು ಕೂಡಲೇ ಎದ್ದು ಕಾಣುವವು. ಯಾರು ವಿವೇಕಿಗಳಾಗುವರೋ ಅವರ ಕೈಯಿಂದ ವಿವೇಕಿ ಜನರಂತೆಯೇ ವರ್ತನ ಘಟಿಸುವದು. (೩೮) ಲೋಕ ಸಂಗ್ರಹಮಾಡುವ ಉಪಾಯ ಮತ್ತು ಅದರ ಪ್ರಕಾರಗಳು, ದೀರ್ಘ ಪ್ರಯತ್ನ. ವಿವೇಕ ಬಲದಿಂದ ಅನೇಕ ಪ್ರಕಾರದ ಯತ್ನಮಾಡುವದು. ಇದನ್ನೆಲ್ಲ ಯಾವನು ತಿಳಿದಿರುವನೋ ಅವನ ದೊಡ್ಡಿಸ್ತನವನ್ನು ಸಾಮಾನ್ಯ ಜನರಿಗೆ ತಿಳಿಯುವದು ಕಠಿಣ ಹೋಗುವದು. ಅರ್ಥಾತ್ ಯಾರು ಖರೇ ತಿಳಿದವರಿರುವರೋ ಅವರೇ ಖರೇ ಜನರನ್ನು [ತಿಳಿದವರನ್ನು] ತಿಳಿಯಬಲ್ಲರು. (೩೯) ಯಾರ ಸುತ್ತು ಮುತ್ತು ದುರ್ಜನರಿರುವರೋ ಯಾರು ಸ್ವೈರ ಅಂದರೆ ಮನಬಂದಂತೆ ನಡೆಯುವವರ ಸಂಗತಿಗೆ ಬಿದ್ದು ಜಾರಿರುವರೋ, ಯಾರು ವಿವೇಕದಿಂದ ಭ್ರಷ್ಟರಾಗಿರುವರೋ, ಇಂಥವರಿಗೆ ವಿವೇಕಿಗಳೆಂಬ ಅನ್ನಲುಬಾರದು-ಬರಲಾರದು. (೪೦) ನ್ಯಾಯವೆಂದರೆ ಏನು? ಉಪಾಯ ಮತ್ತು ಪರ್ಯಾಯ ಅಂದರೆ ಏನು? ಇವೆಲ್ಲ ಮೂರ್ಖರಿಗೆ ತಿಳಿಯುವದಿಲ್ಲ. ಮೂರ್ಖ ಮನುಷ್ಯರಿಂದಾಗಿಯೇ ಸಭೆಯು ವಿರಸ ಮತ್ತು ಗೊಂದಲದಿಂದ ಘೋಟಾಳೆಯದಾಗುವದು. (೪೧) ಸಭೆಯಲ್ಲಿ ಗೊಂದಲ ಆದರೆ ಜಾಣರಾದವರು ಅದನ್ನು ಪುನಃ ಸರಿಪಡಿಸುವರು. ಸ್ವತಃ ಸಹನ ಮಾಡಿಕೊಂಡು [ಸಹಿಸಿಕೊಂಡು] ಮತ್ತು ಇತರರಿಗೆ ಸಹನಮಾಡಿಕೊಳ್ಳುವದು ಹೇಗೆ ಅನ್ನುವದನ್ನು ಕಲಿಸಿಕೊಡುವರು. ಇದರಂತೆ ತಾವು ಸ್ವತಃ ಮಾಡುವರು. ಮತ್ತು ಇತರರ ಕಡೆಯಿಂದ ಮಾಡಿಸಿಕೊಳ್ಳುವರು. (೪೨) ಜಗತ್ತಿನಲ್ಲಿ ಬಹಳಷ್ಟು ಜನರಿರುವರು. ಇವರಲ್ಲಿ ಕೆಲವರು ಸಜ್ಜನರಿರುವರು. ಈ ಸಜ್ಜನರ ಕಡೆಯಿಂದ ಲೋಕದ ಜನರಿಗೆ ಸಮಾಧಾನ ಸಿಗುವದು. (೪೩) ಸಜ್ಜನರೆಂದರೆ ಸಂತ, ಸಾಧು. ದಾಸ, ಶರಣ ಎಂದು ತಿಳಿಯಬೇಕು. ಸಂತರಿಗೆ ಜನರ ಅಂತಃಕರುಣವು ಸರಿಯಾಗಿ ತಿಳಿಯುವದು. ಮಾನ, ಅಂದರೆ ಆದರ, ಸತ್ಕಾರ, ಪ್ರಸಂಗ, ಅಂದರೆ ಅನೇಕ ತರಹದ ಯಾವತ್ತೂ ವ್ಯವಹಾರ ಪರಿಸ್ಥಿತಿ, ಸಂಕಟ, ಆಪತ್ತು ಇತ್ಯಾದಿ ಹೊತ್ತು ಗೊತ್ತುಗಳ ಅರಿವು [ಸಮಯ ಸೂಚಕತೆ] ಇವೆಲ್ಲವೂ ಇವರಿಗೆ ಸರಿಯಾಗಿ ತಿಳಿಯುವವು. ಅತಿಶಯ ಕ್ರೋಧತಪ್ತ ಜನರನ್ನು ಹೇಗೆ ಶಾಂತಗೊಳಿಸಬೇಕು-ಹೇಗೆ ಸಮಾಧಾನ ಮಾಡಬೇಕು. ಅನ್ನುವದರ ಅನೇಕ ಪ್ರಕಾರಗಳು ಇವರಿಗೆ ಗೊತ್ತಿರುವವು. (೪೪) ಈ ತರಹದ ಜ್ಞಾನಿ ಪುರುಷರು ಯಾರಿರುವರೋ ಅವರ ವಿವೇಕವು ಬಹಳ ಸಾಮರ್ಥ್ಯ ಸಂಪನ್ನವಿರುವದು. ಇವರು ಯಾವ ರೀತಿಯಲ್ಲಿ ಕಾರ್ಯಮಾಡುವರೆಂಬುದು ಜನರಿಗೆ ಆಕಲನವಾಗುವದಿಲ್ಲ, ಗೊತ್ತಾಗುವದಿಲ್ಲ. (೪೫)

ಬಹುತ ಜನಾಸ ಚಾಲವೀ । ನಾನಾ ಮಂಡಳೇ ಹಾಲವೀ ।
ಐಸೀ ಹೇ ಸಮರ್ಥಪದವೀ । ವಿವೇಕೇ ಹೋತೇ ॥೪೬॥

ವಿವೇಕ ಯೇಕಾಂತೀ ಕರಾವಾ । ಜಗದೀಶ ಧಾರಣೆನೇ ಧರಾವಾ ।
ಲೋಕ ಆಪಲಾ ಆಣೀ ಪರಾವಾ। ಮ್ಹಣೋ ಚಿ ನಯೆ ॥೪೭॥

ಯೇಕಾಂತೀ ವಿವೇಕ ಠಾಈ ಪಡೇ । ಯೇಕಾಂತೀ ಯೆತ್ನ ಸಾಪಡೇ ।
ಯೇಕಾಂತೀ ತರ್ಕ ಧಾವಡೇ । ಬ್ರಹ್ಮಾಂಡ ಗೋಳೀ ॥೪೮॥

ಯೇಕಾಂತೀ ಸ್ಮರಣ ಕರಾವೇ । ಚುಕಲೇ ನಿಧಾನ ಪಡೆ ಠಾವೇ ।
ಅಂತರಾತ್ಮ್ಯಾ ಸರಿಸೇ ಫಿರಾವೇ । ಕಾಂಹೀ ತರೀ ॥೪೯॥

ಜಯಾಸ ಯೇಕಾಂತ ಮಾನಲಾ । ಅವಘ್ಯಾ ಆಧೀ ಕಳೇ ತ್ಯಾಲಾ ।
ತ್ಯಾವೇಗಳೇ ವಡಿಲಪಣಾಲಾ । ಠಾವ ಚಿ ನಾಹೀ ॥೫೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಶ್ರೋತಾ ಅವಲಕ್ಷಣ ನಿರೂಪಣ' ನಾಮ ಸಮಾಸ ದಶಮ ॥

— ದಶಕ ಅಷ್ಟದಶ ಸಮಾಪ್ತ —

ಇಂಥ ಮಹನೀಯರು ಅನೇಕ ಜನರಿಗೆ ಮಾರ್ಗದರ್ಶನ ಮಾಡುವರು. ಅನೇಕ ಜನಸಮೂಹವನ್ನು ಕಾರ್ಯನಿರತರನ್ನಾಗಿ ಮಾಡುವರು. ಈ ರೀತಿಯಲ್ಲಿ ವಿವೇಕ ಪೂರ್ವಕವಾದ ನಡವಳಿಕೆಯಿಂದ ನಡೆದವರಿಗೆ ಸಮರ್ಥ ಅನ್ನುವ ಪದವಿಯು ಪ್ರಾಪ್ತವಾಗುವದು. (೪೬) ಸಾವಿರಾರು ಜನರನ್ನು ಅನೇಕ ತರಹದ ಪ್ರಯತ್ನಮಾಡಿ ಸನ್ಮಾರ್ಗಕ್ಕೆ ಹಚ್ಚುವಂಥ ಸಮರ್ಥ ಪುರುಷರ ವರ್ಣನೆ ಆಯಿತು. ಇಂಥವರೇ ನಿಜವಾದ ದೊಡ್ಡ ಪುರುಷರೆನಿಸುವರು. ಇವರ ಆತ್ಮಜ್ಞಾನದಲ್ಲಿ ಮತ್ತು ಇವರ ಬಲವಂತವಾದ ವಿವೇಕದಲ್ಲಿ ಇವರ ಎಲ್ಲ ಸಾಮರ್ಥ್ಯವು ಒಂದುಗೂಡಿರುವದು. ಈ ಸಾಮರ್ಥ್ಯವನ್ನು ಸಂಪಾದನ ಮಾಡಲು ಮತ್ತು ಆನಂತರ ಅದನ್ನು ಕಾಯು ಉಳಿಸಿಕೊಳ್ಳಬೇಕಾದರೆ ಏಕಾಂತ ಮಾಡುವದು ಬಹಳ ಅವಶ್ಯವಿರುವದು. ಒಂದು ಮಾತನ್ನು ಸ್ಪಷ್ಟವಾಗಿ ಹೇಳುವದಾದರೆ ಶ್ರೀ ಸಮರ್ಥರ ಹಾಗೆ ಸದಾ ಅತಿ ಏಕಾಂತಪ್ರಿಯರಾದ ಲೋಕ ಸಂಗ್ರಹೀ ಶ್ರೇಷ್ಠ ಪುರುಷರು, ಶ್ರೇಷ್ಠ ಸಂತರು ಸಿಗುವದು ಬಹಳ ವಿರಳ ವಿರುವದು: ಏಕಾಂತದಲ್ಲಿ ವಿವೇಕವನ್ನು ಮಾಡಬೇಕು. ಭಗವಂತನನ್ನು ಬುದ್ಧಿಯು ಬಲದಿಂದ ಹಿಡಿದಿಡಬೇಕು. ಇವನು ನಮ್ಮವ ಮತ್ತು ಇವನು ನಮ್ಮವನಲ್ಲ ಹೀಗೆ ಜನರಲ್ಲಿ ಭೇದ ಎಂದೂ ಮಾಡಲೇಬಾರದು. ಎಲ್ಲರೂ ನಮ್ಮವರೆಂಬ ಭಾವವಿರಬೇಕು. (೪೭) ಏಕಾಂತದಲ್ಲಿ ವಿವೇಕ [ಸಾರಾಸಾರ ವಿಚಾರ] ಸರಿಯಾಗಿ ನಡೆಯುವದು. ಏಕಾಂತದಲ್ಲಿ ಪ್ರಯತ್ನ ಅಂದರೆ ಅರ್ಥಾತ್ ಲೋಕ ಕಲ್ಯಾಣಕ್ಕಾಗಿ ಯಾವ ರೀತಿಯಲ್ಲಿ ಪ್ರಯತ್ನಮಾಡಬೇಕು. ಇದು ಹೊಳೆಯುವದು. ಏಕಾಂತದಲ್ಲಿಯು ನಮ್ಮ ಬುದ್ಧಿಯು ಇಡೀ ಬ್ರಹ್ಮಾಂಡವನ್ನೇ ತಿರುಗಿ ಬರುವದು. (೪೮) ಏಕಾಂತದಲ್ಲಿ ಕುಳಿತು ಸ್ಮರಣ ಮಾಡಬೇಕು. ಅಂದರೆ ನಮ್ಮ ಕೈಯಿಂದ ನಮ್ಮ ನಡೆ ನುಡಿಯಲ್ಲಿ ಆದಂಥ ತಪ್ಪು, ಚೂಕು, ನಮ್ಮ ಲಕ್ಷ್ಯಕ್ಕೆ ಬರುವವು. ಏಕಾಂತದಲ್ಲಿ ನಾವು ಅಂತರಾತ್ಮನಷ್ಟು ಆಗಿ ಅವನೊಂದಿಗೆ ಅಲ್ಪಸ್ವಲ್ಪಾದರೂ [ಪಿಂಡ ಬ್ರಹ್ಮಾಂಡಾದಿ-ಮಾಯೆಯಲ್ಲಿ] ತಿರುಗಾಡಬೇಕು. ನಾವು ಅವನಷ್ಟು, ಅವನ ಹಾಗೆ, ಅವನಂತೆ, ವ್ಯಾಪಕರಾಗಬೇಕು. ಜಗದಾಂತರದಲ್ಲಿ ತಿರುಗಾಡಬೇಕು. ಜಗದಾಂತರ ಅಂದರೆ ಜಗದಲ್ಲಿಯು ಜನರ ಅಂತಃಕರಣ ಅಥವಾ ಜಗದ ಅಂತಃಕರಣದಲ್ಲೆಲ್ಲ ತಿರುಗಾಡಬೇಕು. (೪೯) ಯಾವ ಮನುಷ್ಯನಿಗೆ ಏಕಾಂತವು ಪ್ರಿಯವಾಗುವದೋ ಅವನಿಗೆ ಎಲ್ಲರಿಗಿಂತ ಮೊದಲೇ ಜ್ಞಾನವಾಗುವದು. ಯಾರಿಗೆ ದೊಡ್ಡಿಸ್ತನವನ್ನು ಪಡೆಯುವ ಇಚ್ಛೆ ಇರುವದೋ ಅವರಿಗೆ ಏಕಾಂತ ಸೇವನದ ಹೊರತಾಗಿ ಬೇರೆ ಮಾರ್ಗವಿಲ್ಲ. ಇಲ್ಲಿಯವರೆಗೆ ಜಗತ್ತಿನಲ್ಲಿ ಯಾರು ಯಾರು ಶ್ರೇಷ್ಠ ವಿಚಾರವಂತರು ಮತ್ತು ಸಂತ ಶರಣರು ಆಗಿ ಹೋಗಿರುವರೋ ಅವರೆಲ್ಲರೂ ಕೆಲವೊಂದು ಕಾಲ ಏಕಾಂತ ಸೇವನಮಾಡಿದವರೇ ಇರುವರು. ಇವರ ಪೈಕಿ ಬಹುಜನರು ಬಹಳಷ್ಟು ಏಕಾಂತದ ಅಭಿರುಚಿಯುಳ್ಳವರಾಗಿದ್ದರು. ಆದರೆ ಕೇವಲ ನಾಇಲಾಜದಿಂದ ಇವರು ಲೋಕಾಂತದ ಮಧ್ಯದಲ್ಲಿ ಇಳಿಯುವರು. ಅಂದರೆ ಸಾಮಾನ್ಯ ಜನರ ಕಲ್ಯಾಣಕ್ಕಾಗಿ ಕೆಲ ಸಮಯವನ್ನು ನಮ್ಮೊಂದಿಗೆ ಕಳೆಯಲು ಬರುವರು ಸಾಮಾನ್ಯ ಮನುಷ್ಯನಿಗೆ ಏಕಾಂತದ ಬಗ್ಗೆ ಭಯವೆನಿಸುವದು. ಅದಕ್ಕಾಗಿ ಏಕಾಂತದ ಲಾಭ ದೊರಕುವದಕ್ಕಾಗಿ ಏಕಾಂತವನ್ನು ರೂಢಿಸಿಕೊಳ್ಳಬೇಕು. ಇದನ್ನು ಸಾಧಿಸುವದು ಅವಶ್ಯವಿರುವದು. ಏಕಾಂತದ ಮೇಲೆ ಯಾರಿಗೆ ಅತಿ ಪ್ರೇಮವಿರುವದೋ ಅವರು ಮೂರ್ತಿಮಂತ ಜ್ಞಾನವೇ ಆಗಿರುವರು. [ಇಂಥವರಲ್ಲಿ ಶ್ರೀ ಸಮರ್ಥರು ಅಗ್ರಗಣ್ಯರಾಗಿದ್ದರೆಂಬುದರಲ್ಲಿ ಸಂಶಯವೇ ಇಲ್ಲ.] (೫೦)

ಶ್ರೀ ದಾಸಬೋಧದ ಹದಿನೆಂಟನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ಶ್ರೋತಾ ಅವಲಕ್ಷಣ ನಿರೂಪಣ"ವೆಂಬ ಹೆಸರಿನ ಹತ್ತನೇ ಸಮಾಸವು ಮುಗಿದುದು.

# ದಶಕ ೧೯. ಶಿಕವಣ

ಈ ದಶಕವು ಲೋಕ [ಜನ] ಸಂಗ್ರಹ ಮಾಡಲಿಚ್ಛಿಸುವ ಮುಂದಾಳು, ಪುಢಾರಿ, ಅರ್ಥಾತ್ ನೇತಾನ ಬಗ್ಗೆ ಭಗವದ್ಗೀತೆ ಇದ್ದಂತೆ ಇರುವದೆಂದು ಅಂದರೆ ಅದೇನೂ ಅತಿಶಯೋಕ್ತಿಯಾಗಲಾರದು. ಮಹಂತ ಅಂದರೆ ಶ್ರೇಷ್ಠ [ಮುಟ್ಟಿದ] ಸಾಧು, ಸಾಧು ಸಂತರಿಗೆಲ್ಲ ಮುಖ್ಯಸ್ಥ. ಒಂದು ಸಂಘ. ಅಥವಾ ಗುಂಪಿನ ಮುಖ್ಯಸ್ಥ, ಓರ್ವ ಪೂಜ್ಯ ಪ್ರಭಾವಿ ವ್ಯಕ್ತಿ ಅಥವಾ ಅತಿನಿಸ್ಪೃಹ ವ್ಯಕ್ತಿಯೇ ಶ್ರೀಸಮರ್ಥರ ಸಮಾಜನಾಯಕ[ನೇತಾರ]ನಾಗಿರುವನು. ಜನರಿಗೆ ಸಂಸಾರವನ್ನು ಸರಿಯಾಗಿ ವ್ಯವಸ್ಥಿತವಾಗಿ ಮಾಡಿಕೊಂಡು [ನಡೆಸಿಕೊಂಡು] ಹೋಗಲು ಕಲಿಸುವದು, ನೀತಿ ಮತ್ತು ಧರ್ಮದಂತೆ ಆಚರಣೆ ಮಾಡುವದನ್ನು ಕಲಿಸಿ, ತಿಳಿಸಿ ಹೇಳಿದ್ದನ್ನು ಆಚರಣೆಯಲ್ಲಿ ತರುವಂತೆ ಮಾಡಲಿಕ್ಕೆ ಹಚ್ಚುವದು, ಸಮಾಜದ ಮುಂದೆ ಉತ್ತಮ ವ್ಯಕ್ತಿತ್ವದ ಆದರ್ಶ ಪುರುಷರ ಮಾದರಿಯನ್ನು ಇಡುವದು, ಅಥವಾ ತೋರಿಸುವದು, ಇನ್ನೊಬ್ಬರಿಗಾದ ದುಃಖವನ್ನು ನೋಡಲಾಗದೆ ಸದೈವ ಪರೋಪಕಾರಕ್ಕಾಗಿ ಸಿದ್ಧವಾಗಿರುವದು, ರಾಜಕಾರಣವಿರಲಿ ಅಥವಾ ಸಮಾಜ ಕಾರಣವೇ ಇರಲಿ, ಜೀವನದಲ್ಲಿಯ ಪ್ರತಿಯೊಂದು ಕ್ಷೇತ್ರದಲ್ಲಿ ವಿವೇಕದ ಬೆನ್ನು ಬಿಡದೆ ಸರಿಯಾದ ಮಾರ್ಗದಲ್ಲಿ ಹೋಗುವದು, ಸವಿ ಮಾತುಗಳನ್ನು ಮುಗುಳು ನಗೆಯಿಂದ ಆಡುತ್ತ ಎಲ್ಲ ಕಡೆಯ ಜನರ ಪ್ರೀತಿ, ವಿಶ್ವಾಸವನ್ನು ಗಳಿಸುವದು, ಬಹುಜನ ಸಮುದಾಯವನ್ನು ಭಗವಂತನ ನಾಮಸ್ಮರಣದ ಕಡೆಗೆ ಕರೆದೊಯ್ಯುವದು, ಎಲ್ಲರೂ ನಾಮದ ಬೆನ್ನು ಹತ್ತುವಂತೆ ಮಾಡುವದು, ತಮ್ಮಲ್ಲಿಯೇ ಇರುವ ಆತ್ಮದತ್ತ ಆತ್ಮದ ಕಡೆಗೆ ಇವರು ಸನ್ಮುಖರಾಗುವಂತೆ ಮಾಡುವದು. ಏಕಾಂತ ಮತ್ತು ಲೋಕಾಂತ, ಅಂತರಂಗ ಮತ್ತು ಬಹಿರಂಗ ಇವುಗಳಲ್ಲಿ ಸಮತೋಲವನ್ನು ಕಾಯ್ದುಕೊಂಡು ತಮ್ಮ ಕಡೆಯಿಂದ ಅಥವಾ ತಮ್ಮ ಕೈಯಿಂದ ಆಗತಕ್ಕಂಥ ಕಾರ್ಯಗಳನ್ನು ಚಟಕ್ಕನೇ ಆದಷ್ಟು ಬೇಗ ಮಾಡಿಬಿಡುವದು, ನಮ್ಮ ಸಹವಾಸದಲ್ಲಿರುವ ಜನರಲ್ಲಿ ಒಳ್ಳೆ ಆದರ್ಶ ಮತ್ತು ಹೌದು ಹೌದು ಅನ್ನುವಂತಹ ಬದಲಾವಣೆಯನ್ನು ಉಂಟುಮಾಡುವದು, ಅತ್ಯಂತ ನಿಸ್ಪೃಹತನದಿಂದ ನಡೆಯುವದು, ಆತ್ಮಜ್ಞಾನದ ಮರ್ಮ ಅಥವಾ ಆತ್ಮಜ್ಞಾನದ ಜೀವಂತ ಝರಿಯನ್ನು ಸತತವೂ ನವೀನವಾಗಿ ಟವಟವಿತವಾಗಿ ಇಡುವದು. ಇತ್ಯಾದಿ ಇನ್ನೂ ಅನೇಕಾನೇಕ ಉತ್ತಮ ಗುಣಗಳು ನೇತಾ–ಮಹಂತರು ಮೊದಲಾದ ಜನರಲ್ಲಿ ಅವಶ್ಯವಾಗಿ ಇರಬೇಕು. ಒಬ್ಬ ತಂದೆಯಾದವನು ತನ್ನ ಎಲ್ಲ ಮಕ್ಕಳ ಬಗ್ಗೆ ಯಾವ ರೀತಿಯಲ್ಲಿ ಕಾಳಜಿ ವಹಿಸುವನೋ ಇದರಂತೆ ಶ್ರೀ ಸಮರ್ಥರು ವರ್ಣಿಸಿದ ಸಮಾಜ ನೇತಾ–ಮುಖಂಡನೂ ಕೂಡಾ ಇಷ್ಟೇ ಏಕೆ ಇದಕ್ಕೂ ಹೆಚ್ಚು ಕಾಳಜಿಯನ್ನು ಯಾವತ್ತೂ ಜನರ ಬಗ್ಗೆ ವಹಿಸಬೇಕು. ಮತ್ತು ಎಲ್ಲ ಜನರ ಅಂತರಂಗ ಮತ್ತು ಬಹಿರಂಗಗಳ ಉನ್ನತಿ ಆಗುವಂತೆ ನಾನಾ ತರಹದ ಉಪಾಯಗಳನ್ನು ಯೋಜಿಸಿ ಕಾರ್ಯದಲ್ಲಿ [ಅಮಲಿನಲ್ಲಿ] ತರಬೇಕು. ಯೋಗ್ಯ ನೇತಾರನಲ್ಲಿ ವಿದ್ವತ್ತು ಇರುವದು. ಮಾತನಾಡುವ ಕಲೆಯೂ ಇರುವದು. ಸ್ವತಃ ಉತ್ತಮ ನಡೆ ನುಡಿಯ [ಸಮಯ] ರೂಢಿ ಇರುವದು. ಅಂತೆಯೇ ಇವನ ನಡೆ ನುಡಿಯಲ್ಲಿ ಎಷ್ಟು ಹುಡುಕಿದರೂ ವಿಸಂಗತಿ ಕಂಡುಬರುವದಿಲ್ಲ. ಇವನು ಭಗವಂತನಲ್ಲಿ ಸ್ವಂತದ ಸ್ವಾರ್ಥದ ಆಹುತಿ ಕೊಟ್ಟವನಾಗಿರುವದರಿಂದ ಶ್ರೀ ಸಮರ್ಥರು ವರ್ಣಿಸಿದಂಥ ನೇತಾ ಎಂದೂ ಯಾರನ್ನೂ ಏನನ್ನೂ ಬೇಡುವದಿಲ್ಲ. "ಯಾವತ್ತೂ ಜನರು ಸುಖಿಗಳಾಗಿರಬೇಕು" ಅನ್ನುವ ಈ ಒಂದೇ ವಾಸನಾ ಇವನಲ್ಲಿ ಬಾಕಿ ಉಳಿದಿರುವದು. ಮಾನವೀ ಜೀವನದಲ್ಲಿ ಯಾವುದು ಭವ್ಯವಿರುವದೋ, ಪವಿತ್ರವಿರುವದೋ ಉತ್ತಮವಿರುವದೋ ಧರ್ಮಕ್ಕೆ ಅನುಸರಿಸಿ ಇರುವದೋ ಮತ್ತು ಭಗವಂತನಿಗೆ ಪ್ರಿಯವಿರುವದೋ ಅದಷ್ಟೇ ಇವನಿಗೆ ಪ್ರಿಯವಾಗಿರುವದು. ಇದರಂತೆ ತಾನು ಸ್ವತಃ ನಡೆಯುವನು. ಮತ್ತು ಇದನ್ನೇ ಜನ್ಮವಿರುವವರೆಗೂ ಇವನು ಜನರಿಗೆ ಹೇಳುವನು ಕಲಿಸುವನು. ತಿಳಿಸಿಯೂ ಕೊಡುವನು. ಇಂಥ ನೇತಾನು ಯಾವ ಸಮಾಜದಲ್ಲಿ ನಿರ್ಮಾಣ

ವಾಗುವನೋ ಆ ಸಮಾಜವು ಪ್ರಗತಿಯ ಮಾರ್ಗದಲ್ಲಿ ತ್ವರಿತಗತಿಯಿಂದ ಮುಂದೆ ಮುಂದೆ ಸಾಗುವದೆಂದು ಬಿಡಿಸಿ ಹೇಳಬೇಕಾಗಿಲ್ಲ. ದಾಸಬೋಧದಲ್ಲಿ ಲೋಕಸಂಗ್ರಹದ ಕಾರ್ಯದ ಬಗ್ಗೆ ವರ್ಣನೆ ಮಾಡುವಂಥ ವಚನಗಳು ಅಲ್ಲಲ್ಲಿ [ಇಡೀ ದಾಸಬೋಧದ ತುಂಬೆಲ್ಲ] ಪಸರಿಸಿರುವವು. ಆದರೆ ಈ ದಶಕದಲ್ಲಿಯ ವಚನಗಳು ಮರಾಠಿ ಜನರ ಬಾಯಿಯಲ್ಲಿ ಎಷ್ಟೊಂದು ವಾಸಮಾಡಿರುವವೋ ಅಷ್ಟು ಇನ್ನುಳಿದವುಗಳು ಇಲ್ಲ. [ಇನ್ನಿತರ ರಾಜ್ಯಗಳಲ್ಲಿಯ ಬಹು ಜನರ ಮುಖದಿಂದಲೂ ಇವು ಮೇಲಿಂದ ಮೇಲೆ ಅನ್ನಲ್ಪಡುವವು.] ಇಂಥ ಅಮೌಲ್ಯ ವಚನಗಳಲ್ಲಿ ಕೆಲವನ್ನು ಮುಂದೆ ಕೊಡಲಾಗಿದೆ:

(೧) ಕಾಯಾ ಬಹುತ ಕಷ್ಟವಾವೀ । ಉತ್ಕಟ ಕೀರ್ತಿ ಉರವಾವೀ । ಚಟಕಲಾವೂನೀ ಸೋಡಾವೀ । ಕಾಂಹೀ ಏಕ ॥ ೧೯-೧-೧೩. ಅರ್ಥ : ಲೋಕ ಕಾರ್ಯ ಮತ್ತು ಪರೋಪಕಾರಕ್ಕಾಗಿ ಶರೀರವನ್ನು ಬಹಳಷ್ಟು ದಂಡಿಸಬೇಕು-ದುಡಿಸಬೇಕು.ಹೇಗೆಂದರೆ, ನಿನ್ನ ಹಿಂದೆ ಬಹಳಷ್ಟು ಕೀರ್ತಿ ಉಳಿಯಬೇಕು. ಮತ್ತು ನಿಮ್ಮ ಸಹವಾಸದ ಹಂಬಲ-ಉತ್ಕಂಠತೆ ಜನರಿಗೆ ಹತ್ತಬೇಕು. ಹೀಗೆ ನೀವು ಮಾಡಬೇಕು.

(೨) ಜಗಾಮಧ್ಯೆ ಜಗಮಿತ್ರ । ಜಿವ್ಹೇ ಪಾಸೀ ಆಹೇ ಸೂತ್ರ । ಕೋಠೆ ತರ್ಹೀ ಸತ್ಪಾತ್ರ । ಶೋಧೂನ ಕಾಢಾವೆ ॥ ೧೯-೨-೧೯. ಅರ್ಥ : ಜಗದೊಳಗಿನ ಜನರೆಲ್ಲರೊಂದಿಗೆ ಜಗಮಿತ್ರ ಅನ್ನಿಸಿಕೊಳ್ಳಬೇಕಾದರೆ ಅದರ ಗುಟ್ಟು ನಿಮ್ಮ ನಾಲಿಗೆಯಲ್ಲಿರುವದು ಅವಶ್ಯ. ಎಲ್ಲಿ ಹೋದರೂ ಸ್ನೇಹಿತರನ್ನು ಮಾಡಿಕೊಳ್ಳಿರಿ. ಆದರೆ ಅದರಲ್ಲಿ ಸಜ್ಜನರನ್ನು ಆರಿಸಿ ಹುಡುಕಿ ಅವರೊಂದಿಗೆ ಸ್ನೇಹವನ್ನು ಬೆಳೆಸಿರಿ.

(೩) ರಾಖಾವೀ ಬಹುತಾಂಚೀ ಅಂತರೇ । ಭಾಗ್ಯ ಏತೇ ತದ ನಂತರೇ । ಐಸಿ ಹೀ ವಿವೇಕಾಚೀ ಉತ್ತರೆ । ಏಕಣಾರ ನಾಹೀ ॥ ೧೯-೩-೧೮. ಅರ್ಥ: ಬಹಳ ಜನರ ಅಂತಃಕರಣವನ್ನು ಸಂಬಾಳಿಸಿದರೆ ಆಮೇಲೆ ಕಾಲಾಂತರದಲ್ಲಿ ಭಾಗ್ಯವು ಲಭಿಸುವದು. ಈ ವಿವೇಕದ ಮಾತನ್ನು ಮೂರ್ಖ ಜನರು ಕೇಳಲಿಕ್ಕೆ ತಯಾರಿರುವದಿಲ್ಲ.

(೪) ತೋ ಪರೋಪಕಾರ ಕರಿತಾಚಿ ಗೇಲಾ । ತೋ ಪಾಹಿಜೇ ಜ್ಯಾಲಾ ತ್ಯಾಲಾ । ಮಗ ಕಾಯ ಉಣೆ ತಯಾಲಾ । ಭೂಮಂಡಳೀ ॥ ೧೯-೪-೧೧. ಅರ್ಥ : ಸತತವಾಗಿ ಪರೋಪಕಾರಮಾಡುತ್ತ ಹೋಗುವವನನ್ನು ಎಲ್ಲರೂ [ಬಹು ಜನರು] ಪ್ರೀತಿಸುವರು. ಇಂಥ ಪರೋಪಕಾರೀ ಪುರುಷನಿಗೆ ಈ ಜಗದಲ್ಲಿ ಯಾವುದೂ ಕೊರತೆಯಾಗುವದಿಲ್ಲ.

(೫) ದುಸರ್ಯಾಚ್ಯಾ ದುಃಖೆ ದುಃಖವೇ । ದುಸರ್ಯಾಚ್ಯಾ ಸುಖೆ ಸುಖಾವೇ । ಅವಘೇಚಿ ಸುಖೀ ಅಸಾವೆ । ಐಸೀ ವಾಸನಾ ॥ ೧೯-೪-೨೩. ಅರ್ಥ: ಎರಡನೆಯವರಿಗೆ ದುಃಖವಾದರೆ ತಾನೂ ದುಃಖಿಯಾಗುವನು. ಅದರಂತೆ ಎರಡನೆಯವರಿಗೆ ಸುಖವಾದರೆ ತಾನೂ ಸುಖಿಯಾಗುವನು. ಒಟ್ಟಿನ ಮೇಲೆ ಜಗತ್ತಿನಲ್ಲಿಯ ಮಾನವರೆಲ್ಲರೂ ಸುಖಿಯಾಗಿರಬೇಕೆಂಬುದೇ ಇವನ ಮನದ ಇಚ್ಛೆ ಇರುವದು.

(೬) ಭಾವಾಸ ಭಾವೂ ಉಪದೇಶ ದೇತೀ । ಪುಢೆ ಪುಢೆ ಹೋತೆ ಫಜೀತೀ । ಘೋಳ ಖೀಚ್ಯಾ ಲೋಕಾತ ಮುಹಂತೀ । ಮಾಂಡೂಚಿ ನಯೆ ॥ ೧೯-೬-೬. ಅರ್ಥ: ಕೆಲವು ಕಡೆಗೆ ಅಣ್ಣನು ತಮ್ಮನಿಗೆ ಅಥವಾ ತಮ್ಮನು ಅಣ್ಣನಿಗೆ ಉಪದೇಶಕೊಡುವ ರೂಢಿ ಕಂಡುಬರುವದು. ಆದರೆ ಅಂಥಲ್ಲಿಯೂ ಕೂಡಾ ಮುಂದೆ ಬಹಳ ಗೋಳಾಟಕ್ಕಿಡುವದು. ಗೊಂದಲ ಉಂಟಾಗುವದು. ಆದ್ದರಿಂದ ಗುರುತಿನ ಜನರಲ್ಲಿ ಉಪದೇಶಕೊಟ್ಟು ಗುರುತ್ವವನ್ನು ಮೆರಿಸಬಾರದು. ಸಿಕ್ಕ ಸಿಕ್ಕವರಿಗೆ ಉಪದೇಶಕೊಡುತ್ತ ಕೂಡ್ರಬಾರದು.

(೭) ಉತ್ಕಟ ಭವ್ಯ ತೇಚಿ ಘ್ಯಾವೆ । ಮಳಮಳೀತ ಅವಘೇಚಿ ಟಾಕಾವೆ । ನಿಸ್ಪೃಹ ಪಣೆ ವಿಖ್ಯಾತ ವ್ಹಾವೇ । ಭೂಮಂಡಳೀ ॥ ೧೯-೬-೧೫. ಅರ್ಥ : ಸಮಾಜ ನೇತಾ ಅತಿ ಶ್ರೇಷ್ಠ ಮತ್ತು ವಿಶಾಲವಾದದ್ದನ್ನೇ ತೆಗೆದುಕೊಳ್ಳಬೇಕು, ಆಚರಿಸಬೇಕು. ಗೌರವಹೀನ, ಗತಿಹೀನ, ಬಲಹೀನ, ಇರುವಂಥದೆಲ್ಲವನ್ನೂ ತ್ಯಜಿಸಬೇಕು. ತ್ಯಾಗಮಾಡಬೇಕು. ಅರ್ಥಾತ್ ಹೀನ ಕೆಲಸದ ತ್ಯಾಗಮಾಡಬೇಕು. ನಿಸ್ಪೃಹತನದಿಂದ ಪ್ರಸಿದ್ಧನಾಗಬೇಕು. ನೇತಾನು

ದಿವ್ಯ ದೃಷ್ಟಿಯುವ, ವಿಶಾಲ ವ ದೂರ ದೃಷ್ಟಿಯುವನಿರಬೇಕು. ಅಂದರೆ ಮುಂದಾಗುವದನ್ನು ಅಂದಾಜಮಾಡಿ ಇವರಿಗೆ ಕಾರ್ಯಪ್ರವೃತ್ತರಾಗಲಿಕ್ಕೆ ಬರುವದು.

(೮) ತಸ್ಮಾತ ಲೌಕಿಕೀ ವರ್ತತಾನಯೆ । ತ್ಯಾಸ ಮಹಂತೀ ಕಾಮಾನಯೆ । ಪರಮ ಸಾಧನಾಚಾ ಉಪಾಯೆ । ಶ್ರವಣ ಕರೂನ ಬಸಾವೆ ॥ ೧೯-೭-೧೫. ಅರ್ಥ: ಮಹಂತನಿಗೆ ಜನತೆಯಲ್ಲಿ ಕೂಡಿಕೊಂಡು ನಡೆಯ ಲಿಕ್ಕಾಗದಿದ್ದರೆ ಅಂಥವನು ಲೋಕ ಸಂಗ್ರಹ ಕಾರ್ಯಕ್ಕೆ ಕೈಹಾಕಬಾರದು. ಪರಲೋಕ ಪ್ರಾಪ್ತಿಯ ಪರಮಾರ್ಥ ಸಾಧನೆಯನ್ನು ಮಾಡುತ್ತ ಶ್ರವಣ, ಮನನದಲ್ಲಿ ತನ್ನ ಕಾಲವನ್ನು ಕಳೆಯುತ್ತ ಕೂಡಬೇಕು.

(೯) ಅಭ್ಯಾಸೆ ಪ್ರಗಟ ವ್ಹಾವೆ । ನಾಹೀತರೀ ಝಾಕೋನ ಅಸಾವೆ । ಪ್ರಗಟ ಹೋಊನ ನಾಸಾವೆ । ಹೇ ಬರೇ ನವ್ಹೆ ॥ ೧೯-೭-೧೭. ಅರ್ಥ: ಚೆನ್ನಾಗಿ ಸಾಧನ ಮಾಡಿದ ಮೇಲೆಯೇ ಜನತೆಯಲ್ಲಿ ಮಹಂತತನಕ್ಕಾಗಿ ಪ್ರಕಟವಾಗಬೇಕು. ಸಾಧನ ಸರಿ ಇಲ್ಲದ ಸಾಧಕನು ಸ್ವತಃವೇ ಮರೆಯಾಗಿ ಜನತೆಯಿಂದ ದೂರವಿರಬೇಕು. ಜನತೆಯಲ್ಲಿ ಪ್ರಕಟವಾಗಿ ಕೆಳಗೆ ಸರಿಯುವ ನಾಚಿಕೆಪಡುವ ಪ್ರಸಂಗ ತಂದುಕೊಳ್ಳುವದು ಒಳಿತಲ್ಲ.

(೧೦) ಆಪಣಾಸ ಉಪಾಧೀ ಮುಳೀಚ ನಾಹೀ । ರುಣಾನುಬಂಧೆ ಮಿಳಾಲೆ ಸರ್ವಹಿ । ಅಲ್ಯಾಗೇ ಲಾಚೀ ಕ್ಷಿತೀನಾಹೀ । ಐಸೆ ಜಾಲೆ ಪಾಹಿಜೆ ॥ ೧೯-೮-೨೭. ಅರ್ಥ: ನಾವು [ಜೀವಾತ್ಮಾ] ಮೂಲದಲ್ಲಿ ನಿರು ಪಾಧಿಕರಿರುವೆವು. ಆತ್ಮ ಸ್ವರೂಪರಿರುವೆವು. ಋಣಾನುಬಂಧದಿಂದ ನಮ್ಮ ಸಂತ್ಸ್ರುಮುತ್ತ ಎಲ್ಲರೂ ಒತ್ತೊಟ್ಟಿಗೆ ಕೂಡುವರು. ಅಥವಾ ಬರುವರು. ಕಾರ್ಯ ಮುಗಿಯಿತೆಂದರೆ ಎಲ್ಲರೂ ನಮ್ಮನ್ನು ಬಿಟ್ಟುಹೋಗುವರು.

(೧೧) ಕಾಂಹೀ ಗಲ್ಬಲಾ ಕಾಂಹೀ ನಿವಳ । ಐಸಾ ಕಂಠೀತ ಜಾವಾ ಕಾಳ । ಜೇಣೇ ಕರಿತಾ ವಿಶ್ರಾಂತೀ ವೇಳ । ಆಪಣಾಸೀ ಫಾವೆ ॥ ೧೯-೮-೨೯. ಅರ್ಥ : ಕೆಲವು ವೇಳೆ ಉಪಾಧಿಯ ಗಡಬಿಡಿಯಲ್ಲಿ ಗದ್ದಲದಲ್ಲಿ, ಕೆಲವು ವೇಳೆ ಅಗದೀ ಏನೇನೂ ಉಪಾಧಿ ಇಲ್ಲದಿರುವದು, ಈ ಪ್ರಕಾರ ಕಾಲಕ್ರಮಣ ಮಾಡುತ್ತಿರಬೇಕು. ಇದರಿಂದ ಮಹಂತನಿಗೆ [ನೇತಾನಿಗೆ] ವಿಶ್ರಾಂತಿ ದೊರಕುವದು.

(೧೨) ಜೋ ದುಸರ್ಯಾವರೀ ವಿಶ್ವಾಸಲಾ । ತ್ಯಾಚಾ ಕಾರ್ಯ ಭಾಗ ಬುಡಾಲಾ । ಜೋ ಆಪಣಚಿ ಕಷ್ಟತ ಗೇಲಾ । ತೋಚಿ ಭಲಾ ॥ ೧೯-೯-೧೬. ಅರ್ಥ: ಯಾರು ಎರಡನೆಯವರ ಮೇಲೆ ಅವಲಂಬನ ಮಾಡು ವರೋ ಅಥವಾ ವಿಶ್ವಾಸವಿಡುವರೋ ಅಂಥವರ ಕಾರ್ಯ ಭಾಗವು ನಾಶವಾಗುವದು ಹಾಳಾಗುವದು. ಯಾರು ಸ್ವತಃ ಕಷ್ಟಪಡುವರೋ ಕಾರ್ಯಮಾಡುವರೋ ಅವರು ಭಲೆ ಎನ್ನಿಸಿಕೊಳ್ಳುವರು.

(೧೩) ಧಟಾಸೀ ಆಣಾವಾಧಟ । ಉದ್ಧಟಾಸೀ ಪಾಹಿಜೆ ಉದ್ಧಟ । ಖಟನ ಟಾಸೀ ಖಟನಟ । ಅಗತ್ಯ ಕರೀ ॥ ೧೯-೯-೩೦. ಅರ್ಥ : ದಾಂಡಿಗ-[ಒರಟ]ನ ಎದುರು ಅಂಥ ದಾಂಡಿಗನನ್ನೇ ನಿಲ್ಲಿಸಬೇಕು. ಉದ್ಧಟ [ಉಮರ್ಂಟ] ನ ಎದುರಿಗೆ ಉದ್ಧಟನನ್ನೇ ನಿಲ್ಲಿಸಬೇಕು. ದುಷ್ಟ, ಜಗಳಗಂಟ, ಲಬಾಡ, ಲಫಂಗನಾದ ದುರ್ಜನನಿಗೆ ಅವನಂಥವನೇ ಆದ ದುಷ್ಟ, ಜಗಳಗಂಟ, ಲಫಂಗನಾದ ದುರ್ಜನನ್ನೇ ತಂದು ನಿಲ್ಲಿಸಬೇಕು.

(೧೪) ಜೈಸಾಸ ತೈಸಾ ಜೇವ್ಹಾ ಭೇಟೆ । ತೇವ್ಹಾ ಮಜ್ಯಾಲಸೀ ಥಾಟೆ । ಇತುಕೆ ಹೋತೆ ಪರೀ ಧನೀ ಕೋಠೆ । ದೃಷ್ಟೀಸ ನ ಪಡೆ ॥ ೧೯-೯-೩೧. ಅರ್ಥ : ಹಂದ್ದರಿಗೆ-ಸ್ಪರ್ಧಿಗೆ ಸರಿ ಹಂದ್ದರಿಯ ಸ್ಪರ್ಧಿಯೇ ಭೆಟ್ಟಿ ಆಯಿತೆಂದರೆ ಆಗ ಸಭೆಗೆ ರಂಗು ಬರುವದು. ಆದರೆ ಈ ಎಲ್ಲ ರಾಜಕಾರಣದ ಸೂತ್ರವನ್ನು ನಡೆಸುವ ಮಾಲಕನು [ನೇತಾರನು] ಎಲ್ಲಿಯೂ ಕಂಡಿರಬಾರದು.

(೧೫) ಜಿತುಕೆ ಕಾಂಹೀ ಆಪಣಾಸೀ ಠಾವೆ । ತಿತುಕೆ ಹಳುಹಳು ಶಿಕವಾವೆ । ಶಹಾಣೇ ಕರೂನಿ ಸೋಡಾವೆ । ಬಹುತ ಜನ ॥ ೧೯-೧೦-೧೪. ಅರ್ಥ: ನಿಮ್ಮಲ್ಲಿದ್ದಷ್ಟು ಜ್ಞಾನವನ್ನು ಜನರಿಗೆ ಸಾವಕಾಶವಾಗಿ ಸರಿಯಾಗಿ ಕಲಿಸಬೇಕು. ಈ ರೀತಿಯಿಂದ ಬಹಳಷ್ಟು ಜನರನ್ನು ಜಾಣ [ಶಹಾಣೆ] ರನ್ನಾಗಿ ಮಾಡಬೇಕು.

(೧೬) ಧಕಾ ಧಕೀಚಾ ಮಾಮಲಾ । ಕೈಚಾ ಘಡೆ ಅಶಕ್ತಾಲಾ । ನಾನಾ ಬುದ್ಧಿ ಶಕ್ತಾಲಾ । ವ್ಹಾಣೋನೀ ಸಿಕವಾವ್ಯಾ ॥ ೧೯-೧೧-೨೨. ಅರ್ಥ : ಮಹಂತನ [ನೇತಾನ] ಜೀವನವು ಅಂದರೆ ಸಾರ್ವಜನಿಕ

ಜೀವನವು ಧಕ್ಕೆ ಮುಕ್ಕಿಯ ವ್ಯವಹಾರದ್ದಿದ್ದು, ದೇಹದಿಂದ ಅದರಲ್ಲಿಯೂ ವಿಶೇಷವಾಗಿ ಮನದಿಂದ, ವೃತ್ತಿಯಿಂದ ಅಶಕ್ತವಾಗಿರುವ ಮಹಂತನಿಗೆ ಈ ವ್ಯವಹಾರವು ನಿಭಾಯಿಸುವದಿಲ್ಲ. ಅದಕ್ಕಾಗಿ ಯಾರು ಶರೀರದಿಂದ ಮತ್ತು ಮನದಿಂದ ಬಲವಾನರಿರುವರೋ ಅವರಿಗೆ ಅನೇಕ ಪ್ರಕಾರದ ಯುಕ್ತಿ, ಪ್ರಯುಕ್ತಿಗಳನ್ನು, ನಾನಾ ಪ್ರಕಾರದ ವಿಚಾರಗಳನ್ನು ಮತ್ತು ನಾನಾ ಪ್ರಕಾರದ ಕೌಶಲ್ಯಗಳನ್ನು ಅಶಕ್ತನಿದ್ದವನು ಕಲಿಸಿ ತಯಾರಮಾಡಬೇಕು.

(೧೭) ಕೀರ್ತಿ ಪಾಹತಾ ಸುಖನಾಹೀ । ಸುಖ ಪಾಹತಾ ಕೀರ್ತಿನಾಹೀ । ಕೇಲ್ಯಾ=ವಿಣ ಕಾಂಹೀಚ ನಾಹೀ । ಕೋಠೇತರ್‍ಹೀ ॥ ೧೯-೧೦-೨೫. ಅರ್ಥ: ಕೀರ್ತಿ ಬೇಕಿದ್ದರೆ ಸುಖದ ಇರುವಿಕೆ ಸಾಧ್ಯವಿಲ್ಲ. ಮತ್ತು ಸುಖದ ಇರುವಿಕೆ ಬೇಕಿದ್ದರೆ ಕೀರ್ತಿ ದೊರಕುವದಿಲ್ಲ. ನಾವು ಮಾಡದ ಹೊರತು ಯಾವುದೂ ಸಾಧ್ಯವಿಲ್ಲ. ಮಾಡದ ಹೊರತು ಗತ್ಯಂತರವಿಲ್ಲ.

(೧೮) ಸಂಸಾರ ಮುಳೀಚ ನಾಸಕಾ । ವಿವೇಕೆ ಕರಾವಾನೇಟಕಾ । ನೇಟಕಾ ಕರಿತಾ ಪಿಕಾ । ಹೋತ ಜಾತೋ ॥ ೧೯-೧೦-೨೮. ಅರ್ಥ : ಸಂಸಾರವು ಅಥವಾ ಅದರ ಮೂಲ ಮುಸಾಲೆ ಎಲ್ಲವೂ ಅಶಾಶ್ವತ. [ನಾಶವಂತ] ಇರುವದು. ಇದನ್ನು ವ್ಯವಸ್ಥಿತವಮಾಡಬೇಕು. ಹೀಗೆ ಸರಿಯಾಗಿ ಮಾಡಿದರೆ ಆಗ ಅದರ ರಸ [ಸಂಸಾರದಲ್ಲಿಯ ಆಸಕ್ತಿ] ಕಡಿಮೆ ಆಗುತ್ತ ಹೋಗುವದು. ಮತ್ತು ಕೊನೆಗೆ ಅದು ಸಂಪೂರ್ಣ ಕ್ಷೀಣವಾಗುವದು. ಸಮಾಧಾನ ಪಡೆಯಲು ಸುಲಭವಾಗುವದು, ಸಾಧ್ಯವೂ ಆಗುವದು.

## ದಶಕ ೧೯. ಸಮಾಸ ೧. ಲೇಖನ ಕ್ರಿಯಾ ನಿರೂಪಣ (ನುಡಿ ೩೦)

ಮಾನವ ಜೀವನದಲ್ಲಿ ಜ್ಞಾನ ಪ್ರಸಾರವಾಗುವದಕ್ಕೆ ಮತ್ತು ಜ್ಞಾನವು ಕಾಯಂ ಸ್ಥಿರವಾಗಿ ಉಳಿಯಬೇಕಾದರೆ ಲೇಖನ ಕ್ರಿಯೆಯ ಮಹತ್ವವು ಎಲ್ಲವುಗಳಿಗಿಂತ ಅಧಿಕವಿರುವದು. ಮತ್ತು ಇಲ್ಲಿಯವರೆಗೆ ಇದರ ಉಪಯೋಗ ಬಹಳಷ್ಟು ಆಗಿರುವದು. ಮುದ್ರಣ ಕಲೆಯು ಗೊತ್ತಿಲ್ಲದ ಕಾಲದಲ್ಲಿ ಎಲ್ಲ ಗ್ರಂಥಗಳನ್ನು ಕೈಯಿಂದ ಬರೆಯಬೇಕಾಗುತ್ತಿತ್ತು. ಈಗಿನಂತಹ ಕಾಗದವೂ ಸಹ ಆಗ ಇರಲಿಲ್ಲ. ಅರ್ಥಾತ್ ಗ್ರಂಥ ಲೇಖನಿಗೆ, ಕಾಗದಕ್ಕೆ, ತಾಡಪತ್ರಗಳಿಗೆ [ತಾಡ ಓಲೆಗಳಿಗೆ] ಮಸಿಗೆ [ಶಾಯಿಗೆ] ಮತ್ತು ಲೇಖಣಿಗೆ [ಲೆಕ್ಕಣಿಕೆಗೆ] ಬಹಳ ಮಹತ್ವವಿತ್ತು. ಇದು ಸರಿಯಾದುದೇ ಇರುವದು. ಯಾವ ಲೇಖಕನ ಹಸ್ತಾಕ್ಷರಗಳು ಬಹಳ ಸುಂದರ ಪ್ರಮಾಣಬದ್ಧವಾಗಿರುವವೋ ಅಂಥವನ ಗ್ರಂಥಗಳು ಆಗ ಬಹಳಷ್ಟು ಖರ್ಚಾಗುತ್ತಿದ್ದವು. ಶ್ರೀ ಸಮರ್ಥರ ಕಾಲದವರೆಗೂ ಭಾರತೀಯ ಸಮಾಜದಲ್ಲಿಯ ಗ್ರಂಥ ಲೇಖನದ ಕಾರ್ಯ ಹೆಚ್ಚಾಗಿ ಬ್ರಾಹ್ಮಣರ ಕಡೆಗೇ ಇತ್ತು. ಗ್ರಂಥಗಳ ಪ್ರತಿಮಾಡಿ ಜ್ಞಾನ ಪ್ರಸಾರಮಾಡುವ ಸಾಮಾಜಿಕ ಜವಾಬುದಾರಿಯು ಇವರ ಮೇಲೆ ಇರುತ್ತಿತ್ತು. ಉತ್ತಮ ಕಾಗದ, ಉತ್ತಮ ಮಸಿ. [ಶಾಯಿ] ಉತ್ತಮ ಅಕ್ಷರ ಮತ್ತು ಉತ್ತಮ ಹೊರಮೈ ಇರುವ ಉತ್ತಮ ಗ್ರಂಥಗಳನ್ನು ಜನರ ಮುಂದೆ ಇಡುವಂಥವರಿಗೆ ಸಮಾಜದಲ್ಲಿ ವಿಶೇಷ ಮಾನ್ಯತೆಯೂ ಇತ್ತು. ಈ ದೃಷ್ಟಿಯಿಂದ ಈ ಸಮಾಸದ ಕಡೆಗೆ ನೋಡುವದು ಅವಶ್ಯವಿರುವದು. ಶ್ರೀ ಸಮರ್ಥರಿಗೆ ಲೇಖನ, ವಾಚನದ ಬಗ್ಗೆ ಪ್ರೇಮವಿತ್ತು. ಗ್ರಂಥ ಸಂಗ್ರಹ ಮಾಡುವದರ ಬಗ್ಗೆ ಇವರಿಗೆ ಆಸಕ್ತಿ ಇತ್ತು. ಅಂತೆಯೇ ಅಕ್ಷರಗಳು ಹೇಗಿರಬೇಕು? ಗ್ರಂಥಗಳನ್ನು ಹೇಗೆ ಬರೆಯಬೇಕು? ಕಾಗದಗಳನ್ನು ಹೇಗೆ ತಯಾರ ಮಾಡಬೇಕು? ಅಕ್ಷರಗಳನ್ನು ಸಾಲಾಗಿ ಹೇಗೆ ಬರೆಯಬೇಕು? ಗ್ರಂಥಗಳಿಗೆ ಮಸಿಯು (ಶಾಯಿ) (ಇಂಕ) ಹೇಗಿರಬೇಕು ಮತ್ತು ಎಂಥದನ್ನು ಉಪಯೋಗಿಸಬೇಕು. ಎಂತಹ ಲೆಕ್ಕಣಿಕೆ ಅಂದರೆ ಗಲಗನ್ನು ಉಪಯೋಗಿಸಬೇಕು, ಗ್ರಂಥಗಳಲ್ಲಿ ಚಿತ್ರಗಳನ್ನು ಎಲ್ಲಲ್ಲಿ ಮತ್ತು ಹೇಗೆ ಎಂಥದನ್ನು ಹಾಕಬೇಕು; ಇತ್ಯಾದಿ ವಿಷಯಗಳನ್ನು ಸ್ವಲ್ಪದರಲ್ಲಿ ಆದರೆ ಅತಿ ಸ್ಪಷ್ಟವಾಗಿ ಈ ಸಮಾಸದಲ್ಲಿ ಹೇಳಿರುತ್ತಾರೆ. ಸದ್ಯದ ಗ್ರಂಥ ಯುಗದಲ್ಲಿ ಮುದ್ರಿಸುವ, ಛಾಪಿಸುವ ಕಲೆಯಲ್ಲಿ ವಿಲಕ್ಷಣ ಪ್ರಗತಿ ಆದದ್ದರಿಂದ ಈಗ ಆಗಿನ ವಿಷಯಗಳು ಅಷ್ಟೊಂದು ಮಹತ್ವದ್ದಾಗಿ ಉಳಿದಿಲ್ಲ. ಆದರೂ ಸಹ ಸುಶಿಕ್ಷಿತ ಮನುಷ್ಯನ ಅಕ್ಷರಗಳು ಸುಂದರ, ಸ್ಪಷ್ಟ, ಮತ್ತು ದುಂಡಗೆ ಸಾಲಾಗಿ ಇರಬೇಕು ಅನ್ನುವ ಮಾತಿಗೆ ಈಗಲೂ ಕೂಡ ಮಹತ್ವ ಇರುವದೆಂಬಲ್ಲಿ ಸಂಶಯವಿಲ್ಲ.

ದಶಕ. ಏಕೋನ ವಿಂಶತಿ : ಸಮಾಸ. ಪ್ರಥಮ : ಲೇಖನ ಕ್ರಿಯಾ ನಿರೂಪಣ [ನುಡಿ ೨೦]

॥ಶ್ರೀರಾಮ ಸಮರ್ಥ॥ ಬ್ರಾಹ್ಮಣೇ ಬಾಳಬೋಧ ಅಕ್ಷರ।
ಘಡಸುನೀ ಕರಾವೇ ಸುಂದರ।
ಜೇ ದೇಖತಾ ಚಿ ಚತುರ। ಸಮಾಧಾನ ಪಾವತೀ ॥೧॥

ವಾಟೋಳೇ ಸರಳೇ ಮೋಕಳೇ। ಮೋತಲೇ ಮಸೀಚೇ ಕಾಳೇ।
ಕುಳಕುಳೀತ ವಳೀ ಚಾಲಿಲ್ಯಾ ಢಾಳೇ। ಮುಕ್ತಮಾಳಾ ಜೈಶಾ ॥೨॥

ಅಕ್ಷರ ಮಾತ್ರ ತಿತುಕೇ ನೀಟ। ನೇಮಸ್ತ ಪೈಸ ಕಾನೆ ನೀಟ।
ಆಡವ್ಯಾ ಮಾತ್ರಾ ತ್ಯಾ ಹಿ ನೀಟ। ಆರ್ಕುಲೀ ವೆಲಾಂಡ್ಯಾ ॥೩॥

ಪಹಿಲೇ ಅಕ್ಷರ ಜೇ ಕಾಢಿಲೇ। ಗ್ರಂಥ ಸಂಪೇತೋ ಪಾಹಾತ ಗೇಲೇ।
ಯೇಕಾ ಟಾಕೇ ಚಿ ಲಿಹಿಲೇ। ಐಸೇ ವಾಟೇ ॥೪॥

ಅಕ್ಷರಾಚೇ ಕಾಳೆಪಣ। ಟಾಂಕಾಚೇ ಠೋಸರಪಣ।
ತೈಸೇ ಚಿ ವಳಣ ವಾಂಕಾಣ। ಸಾರಿಖೇ ಚಿ ॥೫॥

ಮೋಳೀಸ ಮೋಳೀ ಲಾಗೇನಾ। ಆರ್ಕುಲೀ ಮಾತ್ರಾ ಭೇದೀನಾ।
ಖಾಲಿಲೆ ಮೋಳೀಸ ಸ್ಪರ್ಶೇನಾ। ಅಥವಾ ಲಂಬಾಕ್ಷರ ॥೬॥

ಪಾನಶಿಷಾನೇ ರೇಖಾಟಾವೇ। ತ್ಯಾವರೀ ನೇಮಕ ಚಿ ಲ್ಯಾಹಾವೇ।
ದುರೀ ಜವಳೀ ನ ವ್ಹಾವೇ। ಅಂತರ ಮೋಳೀಚೇ ॥೭॥

ಕೋರೇ ಶೋಧಾಸೀ ಆಡೇನಾ। ಚುಕೀ ಪಾಹಾತಾ ಸಾಂಪಡೇನಾ।
ಗರಜ ಕೇಲೀ ಹೇ ಘಡೇನಾ। ಲೇಖಕಾ ಪಾಸುನೀ ॥೮॥

ಜ್ಯಾಚೇ ವಯ ಆಹೇ ನೂತನ। ತ್ಯಾನೇ ಲ್ಯಾಹಾವೇ ಜಪೋನ।
ಜನಾಸೀ ಪಡೇ ಮೋಹನ। ಐಸೇ ಕರಾವೇ ॥೯॥

ಬಹುಬಾರಿಕ ತರುಣಪಣೇ। ಕಾಮಾ ನಯೇ ಮ್ಹಾತಾರಪಣೇ।
ಮಧ್ಯಸ್ತ ಲಿಹಿಣ್ಯಾಚೀ ಕರಣೀ। ಕೇಲೀ ಪಾಹಿಜೇ ॥೧೦॥

ಭೋವತೇ ಸ್ಥಳ ಸೋಡೂನ ದ್ಯಾವೇ। ಮಧೇ ಚಿ ಚಮಚಮಿತ ಲ್ಯಾಹಾವೇ।
ಕಾಗದ ಝುಡತಾ ಹಿ ಝುಡಾವೇ। ನಲಗೇ ಚಿ ಅಕ್ಷರ ॥೧೧॥

ಐಸಾ ಗ್ರಂಥ ಜಪೋನೀ ಲ್ಯಾಹಾವಾ। ಪ್ರಾಣೀಮಾತ್ರಾಸ ಉಪಜೇ ಹೇವಾ।
ಐಸಾ ಪುರುಷ ತೋ ಪಹಾವಾ। ಮ್ಹಣತೀ ಲೋಕ ॥೧೨॥

## ದಶಕ ೧೯ : ಸಮಾಸ ೧ : ಲೇಖನ ಕ್ರಿಯಾ ನಿರೂಪಣ (ನುಡಿ ೨೦)

ಸುಂದರ ಹಾಗೂ ಸಾಲಾಗಿ ಕ್ರಮಬದ್ಧವಾಗಿ ದುಂಡಗಾಗಿ ಅಕ್ಷರಗಳನ್ನು ಬರೆಯಲು ಕಲಿಯಬೇಕು. ಈ ಬಗ್ಗೆ ಆಗ್ರಹಮಾಡಿ, ಹೇಳಿ ಆಮೇಲೆ ಗ್ರಂಥವನ್ನು ಹೇಗೆ, ಯಾವ ಪದ್ಧತಿಯಿಂದ ಬರೆಯಬೇಕು ? ಇದರ ಬಗ್ಗೆ ಸವಿಸ್ತರ ವರ್ಣನೆಯನ್ನು ಮಾಡುವರು:- ಬ್ರಾಹ್ಮಣರು ಬಾಲಬೋಧ ಅಕ್ಷರಗಳನ್ನು ಮಾದರಿ ಲಿಪಿಗಳನ್ನು ತೀಡಿ, ತೀಡಿ ಸುಂದರವಾಗುವಂತೆ ಬರೆಯುವ ರೂಢಿಮಾಡಬೇಕು. ಈ ಅಕ್ಷರಗಳನ್ನು ನೋಡಿ ಜಾಣರಾದವರಿಗೆ ಬಹಳ ಸಮಾಧಾನವೆನಿಸುವದು. (೧) ಅಕ್ಷರಗಳು ದುಂಡಾಗಿ ಬಿಡಿಯಾಗಿ ಸರಳವಾಗಿರಬೇಕು. ಇವನ್ನು ಕರಿಯ ಮಸಿಯಿಂದ ಬರೆದಿರಬೇಕು. ಅಕ್ಷರಗಳು ಕರ್ರಗೆ ರಂಗದಾರ ಮಸಿಯಿಂದ ಎದ್ದು ಕಾಣುವಂತಿರಬೇಕು. ಸಾಲುಗಳು ಹೇಗೆ ಕಾಣಬೇಕೆಂದರೆ ಮುತ್ತಿನ ಹಾರವೇ ಇರುವದೋ ಏನೋ ಅನ್ನುವಂತಿರಬೇಕು. (೨) ಪ್ರತಿಯೊಂದು ಅಕ್ಷರವನ್ನೂ ಚನ್ನಾಗಿ ಸ್ಪಷ್ಟವಾಗಿ ಬರೆದಿರಬೇಕು. ಪ್ರತಿಯೊಂದು ಶಬ್ದದಲ್ಲಿ ಸರಿ ಅಂತರವಿರಬೇಕು. ಅಕ್ಷರಗಳ ಮೇಲಿನ ಹಾಗೂ ಮುಂದಿನ ಗೆರೆಗಳು, ಕೆಳಗಿನ ಒತ್ತುಗಳು [ಅರ್ಕಾವಳಿ, ಅಡ್ಡ, ಉದ್ದ ಮಾತ್ರೆಗಳು] ಕೂಡಾ ಚನ್ನಾಗಿರಬೇಕು. ಅರ್ಧ ಅಕ್ಷರಗಳೂ ಚನ್ನಾಗಿರಬೇಕು. (೩) ಗ್ರಂಥಾರಂಭ ಮಾಡುವಾಗಿನ ಮೊದಲನೆಯ ಅಕ್ಷರದ ರೀತಿಯಂತೆಯೇ ಸಮಗ್ರ ಗ್ರಂಥ ಮುಗಿಯುವವರೆಗೂ ಒಂದೇ ಲೆಕ್ಕಣಿಕೆಯಿಂದ [ಟಾಕಿನಿಂದ] ಬರೆದಿರುವರೋ ಏನೋ ಅನ್ನುವಂತೆ ಕಾಣಬೇಕು. [ಇರಬೇಕು] (೪) ಗ್ರಂಥದಲ್ಲಿಯ ಅಕ್ಷರಗಳ ಕರ್ರಗಿನ ಬಣ್ಣ, ಟಾಕಿನ ತುದಿಯ ಕಠಿಣತನ, ಮತ್ತು ಅಕ್ಷರಗಳ ಮಣಿತ, ಮುರಗಿ ಇವುಗಳ ಕ್ರಮಬದ್ಧತನವು ಆರಂಭದಿಂದ ಗ್ರಂಥ ಮುಗಿಯುವವರೆಗೂ ಒಂದೇ ಸಮ ಇರಬೇಕು. (೫) ಸಾಲಿಗೆ ಸಾಲು ಹತ್ತಿರಬಾರದು, ಅರ್ಕಾವಳಿ, ಮಾತ್ರೆಗಳು ಒಂದರ ಮೇಲೊಂದು ಬರಬಾರದು. ಅಕ್ಷರದ ಕೆಳಗಿನ ಸಾಲಿಗೆ ಮೇಲಿನ ಸಾಲಿನಲ್ಲಿಯ ಯಾವ ಅಕ್ಷರ ಒತ್ತಕ್ಷರಗಳೂ ಸ್ಪರ್ಶಮಾಡಿರಬಾರದು. ಇದಲ್ಲದೆ ಅಕ್ಷರಗಳು ಬಹಳ ಉದ್ದವಾಗಿ ಇರಬಾರದು. (೬) ಬರೆಯುವ ಕಾಗದಗಳಿಗೆ ಮೊದಲು ಸೀಸಪೆನಿಸಿಲಿನಿಂದ ಗೆರೆಗಳನ್ನು ಹೊಡೆದು ಇಟ್ಟುಕೊಳ್ಳಬೇಕು. ಇವುಗಳ ಮೇಲೆ ನಿಶ್ಚಿತಪಡಿಸಿಕೊಂಡಷ್ಟು ಶಬ್ದಗಳನ್ನು ಬರೆಯಬೇಕು. ಎಲ್ಲ ಸಾಲುಗಳಲ್ಲಿಯ ಅಂತರವು ಒಂದೇ ಸಮ ಇರಬೇಕು. ಸಾಲುಗಳ ಅಂತರ ದೂರ ಅಥವಾ ಹತ್ತಿರ ಇರಬಾರದು. (೭) ಎಲ್ಲಿಯಾದರೂ ತಿದ್ದುವ ಪ್ರಸಂಗ ಬಂದರೆ ಅಲ್ಲಿ ಅದನ್ನು ಬರೆಯಲು ಅಡಚಣೆ ಆಗಬಾರದು. ಬರೆಯುವದು ಹೇಗಿರಬೇಕೆಂದರೆ ಎಷ್ಟೇ ಶೋಧಿಸಿದರೂ ಕೂಡಾ ತಪ್ಪು [ಚೂಕು] ಸಿಗಬಾರದು. ಬರೆಯುವಲ್ಲಿ ಲೇಖಕನು ಬೇಸರ ಮಾಡಿಕೊಂಡಿರುವನೆಂದು ಅನ್ನಿಸಿಕೊಳ್ಳುವ ಪ್ರಸಂಗ ಬರಬಾರದು. (೮) ಚಿಕ್ಕ ವಯಸ್ಸಿನವರು ಬರೆಯುವಾಗ ಬಹಳ ಜಪ್ಪಿಸಿ ಹುಷಾರಿಯಿಂದ ಬರೆಯಬೇಕು. ಬರೆಯುವಾಗ ಅವಸರ ಮಾಡಬಾರದು. ಚಿಕ್ಕವರು ಬರೆದದ್ದನ್ನು ದೊಡ್ಡವರು ನೋಡಿ ಮೋಹ ಪ್ರೀತಿ ಉಂಟಾಗುವಂತೆ ಇರಬೇಕು. ಆದ್ದರಿಂದ ಸುಂದರವಾಗಿ ಶುದ್ಧವಾಗಿ ಬರೆಯುವ ರೂಢಿಮಾಡಿಕೊಂಡು ಬರೆಯಬೇಕು. (೯) ತರುಣತನದಲ್ಲಿ ಸಣ್ಣ ಅಕ್ಷರಗಳನ್ನು ಬರೆದರೆ ನಡೆಯಬಹುದು. ಆದರೆ ಮುಪ್ಪಿನ ಕಾಲದಲ್ಲಿ ಇದು ನಡೆಯಲಾರದು, [ಉಪಯೋಗ ಬೀಳುವದಿಲ್ಲ.] ಆದ್ದರಿಂದ ಮಧ್ಯಮ ಆಕಾರದ ಅಕ್ಷರಗಳನ್ನು ಬರೆಯುವ ರೂಢಿಯನ್ನು ಅನುಸರಿಸಬೇಕು. ಅಂದರೆ ಎಲ್ಲರಿಗೂ ಉಪಯೋಗವಾಗುವದು. (೧೦) ನಾವು ಬರೆಯುವ ಕಾಗದದ ನಾಲ್ಕೂ ಬದಿಗೆ ಜಾಗ ಬಿಟ್ಟು ಮಧ್ಯದಲ್ಲಿ ಸುಂದರ, ಸ್ಪಷ್ಟ ಮತ್ತು ಪ್ರಫುಲ್ಲಿತವಾಗಿ [ಟವಟವಿತವಾಗಿ] ಬರೆಯಬೇಕು. ಕಾಲಾಂತರದಲ್ಲಿ ಕಾಗದದ ಅಂಚುಗಳು ಹರಿದರೂ ಅಕ್ಷರಗಳು ಸುರಕ್ಷಿತವಾಗಿರುವವು. (೧೧) ಈ ಪ್ರಕಾರ ಗ್ರಂಥಗಳನ್ನು ಅತ್ಯಂತ ಕಾಳಜಿಯಿಂದ ಬರೆಯಬೇಕು. ಇತರೇ ಜನರು ನಿಮ್ಮ ಬರವಣಿಗೆಯನ್ನು ನೋಡಿ ನಾಚಿಕೆಪಡಬೇಕು. ಇಷ್ಟೊಂದು ಸುಂದರ ಗ್ರಂಥ ಬರೆದವರು ಯಾರಿರಬಹುದು. ಒಮ್ಮೆಯಾದರೂ ಇವರನ್ನು ನೋಡಬೇಕು. ಅನ್ನುವ ಇಚ್ಛೆ ಜನರಲ್ಲಿ ಹುಟ್ಟಬೇಕು. (೧೨)

ಕಾಯಾಬಹುತ ಕಷ್ಟವಾವೀ । ಉತ್ಕಟ ಕೀರ್ತಿ ಉರವಾವೀ ।
ಚಟಕಲಾಉನೀ ಸೋಡಾವೀ । ಕಾಂಹೀಯೇಕ ॥೧೩॥

ಘುಟ್ಯ ಕಾಗದ ಆಣಾವೇ । ಜಪೋನ ನೇಮಸ್ತ ಖಳಾವೇ ।
ಲಿಹಿಣ್ಯಾಚೇ ಸಾಮೋ ಅಸಾವೇ । ನಾನಾಪರೀ ॥೧೪॥

ಸುರ್ಯಾ ಕಾತರ್ಯಾ ಜಾಗಾಈತ । ಖಳೀ ಘೋಟಾಳೇ ತಾಗಾಈತ ।
ನಾನಾ ಸುರಂಗ ಮಿಶ್ರಿತ । ಜಾಣೋನಿ ಘ್ಯಾವೇ ॥೧೫॥

ನಾನಾ ದೇಸೀಚೇ ಬರು ಆಣಾವೇ । ಘುಟೇ ಬಾರಿಕ ಸರಳೇ ಘ್ಯಾವೇ ।
ನಾನಾ ರಂಗಾಚೇ ಆಣಾವೇ । ನಾನಾ ಜಿನಸಿ ॥೧೬॥

ನಾನಾ ಜಿನಸೀ ಟಾಂಕತೋಡಣೀ । ನಾನಾ ಪ್ರಕಾರೇ ರೇಖಾಟಣೀ ।
ಚಿತ್ರವಿಚಿತ್ರಕರಣೀ । ಸಿಸೇಲೋಳ್ಯಾ ॥೧೭॥

ಹಿಂಗುಳ ಸಂಗ್ರಹೀ ಅಸಾವೇ । ವಾಳಲೇ ಆಳಿತೇ ಪಾಹೋನ ಘ್ಯಾವೇ ।
ಸೋಪೇ ಭಿಜಲುನೀ ವಾಳವಾವೇ । ಸಂಗ್ರಹ ಮಸೀಚೇ ॥೧೮॥

ಈ ಪ್ರಕಾರದಿಂದ ಗ್ರಂಥಗಳನ್ನು ಬರೆದುಕೊಡುವಲ್ಲಿಯೇ ನಮ್ಮ ಶರೀರವನ್ನು ಬಹಳಷ್ಟು ದುಡಿಸಬೇಕು. ನಿಮ್ಮ ತರುಣಾಯು ನಿಮ್ಮ ಕೀರ್ತಿ ಹೊಗಳುವಂತೆ ನೀವು ನಡೆಯುಬೇಕು. ಜನರಿಗೆ ನಿಮ್ಮ ಬಗ್ಗೆ ವಿಶೇಷ ಆದರ ಉಂಟಾಗುವಂತೆ ನೀವು ಯಾವಾಗಲೂ ಇರಬೇಕು. (೧೩) ಇನ್ನು ಮೇಲೆ ಲೇಖನ ಸಾಮಗ್ರಿಯ [ಸಾಹಿತ್ಯದ] ವರ್ಣನೆಯನ್ನು ಮಾಡುವರು: ಉತ್ತಮವಾದ ಗಟ್ಟಿ ಕಾಗದ, ದಪ್ಪಗಿದ್ದದ್ದನ್ನು ತರಬೇಕು. ಇದನ್ನು ಚನ್ನಾಗಿ ಕಾಳಜಿಯಿಂದ [ಪಟಕದ ನೀರಿನಿಂದ] ತಿಕ್ಕಬೇಕು. ಇದರ ಮೇಲೆ ಬರೆಯುವದಕ್ಕಾಗಿ ಬೇಕಾಗುವ ಅನೇಕ ಪ್ರಕಾರದ ಸಾಮಾನುಗಳನ್ನು ಹತ್ತಿರ ಸಿದ್ಧಮಾಡಿ ಇಟ್ಟುಕೊಳ್ಳಬೇಕು. (೧೪) ಚೂರಿ [ಚಾಕು], ಕತ್ತರಿ, ಅಧ್ಯಾಯ ಮತ್ತು ಸಮಾಸ ಮುಗಿದಾಗ ಗುರುತಿಗಾಗಿ ಉಪಯೋಗಿಸುವ ರಟ್ಟು, ಫಳಿ, ದಪ್ಪ ಕಾಗದಗಳು, ಬರೆಯುವದಕ್ಕಾಗಿ ಹಾಗೂ ಬರೆದವುಗಳನ್ನು ಸುರಕ್ಷಿತವಾಗಿ ಕಟ್ಟಿ ಇಡುವದಕ್ಕಾಗಿ ಕಾಗದ ಫಳಿಗಳು,ಕಾಗದಕ್ಕೆ ತಿಕ್ಕಿ ನುಣುಪು ಬರುವಂತೆಮಾಡುವ ನುಣುಪು ಕಲ್ಲು, ಮತ್ತು ಇಂತಹದೇ ನುಣುಪು ಕಟ್ಟಿಗೆಯ ಸಾಹಿತ್ಯ ಕಾಗದ ಜಿಗುಟುಮಾಡುವ ಸಾಮಾನು [ಬ್ರಶ್] ಚಾಕು ಚೂರಿಗಳನ್ನು ಹರಿತಗೊಳಿಸುವ ಸಾಣೆ ಹಿಡಿಯುವ ಸುರೇಖ ಬಣ್ಣದ ಕಲ್ಲು. [ಇವು ಈಗಲೂ ಸಹ ಸಿಗುವವು] ಈ ಎಲ್ಲ ವಸ್ತುಗಳನ್ನು ಚನ್ನಾಗಿ ನೋಡಿ ಯೋಗ್ಯವಾದವುಗಳನ್ನು ಹತ್ತಿರ ಸಂಗ್ರಹಿಸಿ ಇಡಬೇಕು. ಕಾಗದವನ್ನು ನುಣುಪಾಗಿ ಮಾಡಲು ಅದಕ್ಕೆ ಹಚ್ಚುವ ಮಿಶ್ರಣ ತಯಾರಿಸಿ ಅದನ್ನು ಬ್ರಶ್‌ದಿಂದ ಹಚ್ಚಿ ನುಣುಪು ಕಲ್ಲಿನಿಂದ ತಿಕ್ಕಿ ಹೊಳಪು ಬರುವಂತೆ ಮಾಡುತ್ತಿದ್ದರು. ಕಟ್ಟಿಗೆ ಒನಕೆಯಂತಹದು ಆದರೆ ಕೆಳಗೆ ಗುಂಡಕಾಗಿ ನುಣುಪಾಗಿರುವದನ್ನು ಮಿಶ್ರಣ ತಿಕ್ಕಿ ತಯಾರಿಸಲು ಉಪಯೋಗಿಸುತ್ತಿದ್ದರು. (೧೫) ಬೇರೆ ಬೇರೆ ದೇಶಗಳಿಂದ ನಾನಾ ಬಣ್ಣದ ಗಲಗುಗಳನ್ನು ತರಿಸಿಕೊಳ್ಳಬೇಕು. ಇವುಗಳಲ್ಲಿ ಯಾವವು ಅತ್ಯಂತ ಗಟ್ಟಿ ಮತ್ತು ಬಿರುಸು ಮತ್ತು ಸರಳವಿರುವ ಸಣ್ಣಗಿರುವಂಥವನ್ನು ಉಪಯೋಗಿಸುವದಕ್ಕಾಗಿ ಆರಿಸಿ ತೆಗೆಯಬೇಕು. ಮತ್ತು ಅನೇಕ ರಂಗಿನ ಮತ್ತು ಅನೇಕ ಪ್ರಕಾರದ ಗಲಗುಗಳನ್ನು ಹತ್ತರ ಇಟ್ಟುಕೊಂಡಿರಬೇಕು. (೧೬) ಗಲಗಿನ ತುದಿಯನ್ನು ಕಡಿಯುವ ಅನೇಕ ಪ್ರಕಾರದ ಸಾಮಾನು [ಟಾಕ ಕಡಿಯುವ ಆಯುಧ] ಹತ್ತಿರವಿರಬೇಕು, ಗೆರೆ ಹೊಡೆಯುವದಕ್ಕಾಗಿ ಸಣ್ಣ ದೊಡ್ಡ ರೂಲು ಕಟ್ಟಿಗೆ ಅಥವಾ ಸರಳವಾದ ಪಟ್ಟಿ ಇರಬೇಕು. ಬರೆದ ಗ್ರಂಥ ಸುಂದರವಾಗಿ ಕಾಣಬೇಕೆಂದು ಅನೇಕ ಪ್ರಕಾರದ ಚಿತ್ರಗಳನ್ನು ತೆಗೆಯುವದು. ಮತ್ತು ಅದರಲ್ಲಿ ಕಲಾ ಕುಸುರಿನ ಕೆಲಸಮಾಡುವ ಸಾಹಿತ್ಯವಿರಬೇಕು. ಮತ್ತು ಚಿತ್ರ ತೆಗೆಯಬೇಕು. ಕಾಗದಗಳು ಹಾರಬಾರದೆಂದು ಸೀಸದ ಗುಂಡನ್ನು ಕಾಗದದ ಮೇಲೆ ಇಡಲು ಉಪಯೋಗಿಸಬೇಕು. (೧೭) ಹಿಂಗುಳ [ಪಾರಜ ಮತ್ತು ಗಂಧಕದ ಮಿಶ್ರಣ]ವು ನಿಮ್ಮ ಸಂಗ್ರಹದಲ್ಲಿರಬೇಕು. ಒಣಗಿದ ಅಂಟು ಮತ್ತು ಒಣಗಿದ ಅರಗು ಕೂಡಾ ಇರಬೇಕು. ಬೇರೆ ಬೇರೆ ರಂಗಿನ ಮಸಿಯಲ್ಲಿ ಅಬಿಯ ಚಿಂದಿಯನ್ನು [ಹಳೆ ವಸ್ತ್ರದ ಹರಕು ಚಿಂದಿಯನ್ನು] ಎದ್ದಿ ಒಣಗಿಸಿ ಸಂಗ್ರಹದಲ್ಲಿಟ್ಟಿರಬೇಕು. ಹಿಂಗುಳವು ಒಂದು ಕೆಂಪು ಬಣ್ಣದ ಪದಾರ್ಥವಿರುವದು. ಪಾರಜ + ಗಂಧಕ + ಅರಗು ಇವುಗಳ ಮಿಶ್ರಣದಿಂದ ಇದನ್ನು ತಯಾರಮಾಡುವರು. ಗ್ರಂಥದ ಆರಂಭ ಮತ್ತು ಕೊನೆ ಮತ್ತು ಗ್ರಂಥಗಳಲ್ಲಿಯ ಅಂಕಿಗಳಿಗೆ ಮಿಶ್ರಣ ಹಚ್ಚಬೇಕು. ಅಳಿತಾ ಅಂದರೆ ಹತ್ತಿ [ಅರಳಿ] ಯ ಒಣಗಿದ ಗಂಟು ಅಥವಾ ಮುದ್ದಿ ಇದನ್ನು ಅರಗಿನಿಂದ ತಯಾರಿಸಿ ಮಾಡಿದಂಥ ಕೆಂಪು ರಂಗಿನ ಮಿಶ್ರಣದಲ್ಲಿ [ಹತ್ತಿ, ಅರಳಿಯನ್ನು] ಎದ್ದಿ ತೋಯಿಸಿ ಇದನ್ನು ಒಣಗಿಸಿ ಇಡಬೇಕು. ಅವಶ್ಯವೆನಿಸಿದಾಗ ತಕ್ಕಷ್ಟು ಪ್ರಮಾಣದಲ್ಲಿ ಒಣಗಿದ ಅರಳಿಯನ್ನು ನೀರಿನಲ್ಲಿ ಹಾಕಿ ಕಲಕಿದರೆ ಕೆಂಪು ಮಸಿ ತಯಾರ ಆಗುವದು. ಸೋಪಾ ಅಂದರೆ ಮಸಿಯಲ್ಲಿ ಎದ್ದಿ ಇಟ್ಟಂಥ ಚಿಂದಿ ಹರಕು ಅರಿವೆ. ಪೂರ್ವದಲ್ಲಿ ಅನೇಕ ರಂಗಿನ ಮಸಿಯಲ್ಲಿ ಚಿಂದಿಗಳನ್ನು ಎದ್ದಿ ಒಣಗಿಸಿ ಇಟ್ಟುಕೊಳ್ಳುತ್ತಿದ್ದರು. ಆಗಿನ ಕಾಲದಲ್ಲಿ ಮಸಿಯನ್ನು ತಯಾರಿಸಿ ಇಟ್ಟುಕೊಳ್ಳುವ ಪದ್ಧತಿಯು ಹೀಗಿತ್ತು. (೧೮)

ತಗಟೀ ಇತಿಶ್ರಿಯಾ ಕರಾವ್ಯಾ । ಬಂದರೀ ಘಳ್ಯಾ ಘೋಟಾವ್ಯಾ ।
ನಾನಾ ಚಿತ್ರೀ ಚಿತಾರಾವ್ಯಾ । ಉಂಚ ಚಿತ್ರೇ ॥೧೯॥

ನಾನಾ ಗೋಪ ನಾನಾವಾಸನೇ । ಮೇಣ ಕಾಪಡೇ ಸಿಂದುರವರ್ಣೇ ।
ಪೇಟ್ಯಾ ಕುಲಪೇ ಜಪಣೇ । ಪುಸ್ತಕಾ ಕಾರಣೇ ॥೨೦॥

ಇತಿ ಶ್ರೀ ದಾಸಭೋಧೆ ಗುರುಶಿಷ್ಯ ಸಂವಾದೆ
'ಲೇಖನ ಕ್ರಿಯಾ ನಿರೂಪಣ' ನಾಮ ಸಮಾಸ ಪ್ರಥಮ ॥

● ●

ಗ್ರಂಥಬರೆದು ಪೂರ್ಣವಾಯಿತೆಂದರೆ ಕೊನೆಗೆ"ಇತಿಶ್ರೀ"ಹೀಗೆ ಬರೆಯಬೇಕು.[ಪ್ರತಿಸಮಾಸ ಅಧ್ಯಾಯಗಳಿಗೂ ಬರೆಯಬಹುದು]ಸುರತಅಥವಾಮಲಬಾರಬಂದರದಿಂದ ಬಂದಂಥ ಉತ್ತಮಪ್ರಕಾರದ ಸಾಗವಾನಿಯ ಫಳಿಗಳನ್ನು ಶಿಕ್ಕಿ ನುಣುಪು ಮಾಡಿ ಸರಿಯಾಗಿ ಕತ್ತರಿಸಿ ಗ್ರಂಥದ ಅಳತೆಯ ಪ್ರಕಾರ ಎರಡು ಫಳಿಗಳನ್ನು ತಯಾರಿಸಿ ಅವುಗಳ ಮೇಲೆ ಸುಂದರ ಚಿತ್ರತೆಗೆಯಬೇಕು(೧೯)ಗ್ರಂಥ ತಯಾರ ಆದನಂತರ ಅದನ್ನು ಉತ್ತಮರೀತಿಯಿಂದ ಕಟ್ಟಿ ಇಡುವದು ಬಹಳ ಅವಶ್ಯವಿರುವದು. ಅದಕ್ಕಾಗಿ ಅನೇಕ ಪ್ರಕಾರದ ರೇಶಿಮೆಯ ಗೋಪುಗಳು ಅಥವಾ ದಾರಗಳು ಗ್ರಂಥ ಕಟ್ಟುವ ಅರಿವೆಗಳು ಸೆಂದೂರ ವರ್ಣದ, ಮೇಣದ ಅರಿವೆಯು, ಗ್ರಂಥ ಇಡುವದಕ್ಕಾಗಿ ಮಜಬೂತ ಪೆಟ್ಟಿಗೆ, ಕೀಲಿ-ಕೀಲಿ ಕೈ, ಇತ್ಯಾದಿ ಗ್ರಂಥವನ್ನು ಸುರಕ್ಷಿತವಾಗಿಡಲು ಬೇಕಾಗುವ ಸಾಧನಗಳು ಸಂಗ್ರಹದಲ್ಲಿರಬೇಕು. ಆ ಕಾಲದಲ್ಲಿ ಪುಸ್ತಕವನ್ನು ತಯಾರಿಸುವ ಪದ್ಧತಿಯು ಇದ್ದಿಲ್ಲ. ಎಲ್ಲ ಪಾನು (ಪುಟ) ಗಳೂ ಬಿಡಿ ಬಿಡಿಯಾಗಿ ಇರುತ್ತಿದ್ದವು. ಹಾಗೂ ಗ್ರಂಥವನ್ನು ಕಪಾಟಿನಲ್ಲಿ ಇಡದೆ ಪೆಟ್ಟಿಗೆಯಲ್ಲಿ ಇಡುತ್ತಿದ್ದರು.[೨೦]

ಶ್ರೀ ದಾಸಬೋಧದ ಹತ್ತೊಂಭತ್ತನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ಲೇಖನ ಕ್ರಿಯಾ ನಿರೂಪಣ"ವೆಂಬ ಹೆಸರಿನ ಒಂದನೆಯ ಸಮಾಸವು ಮುಗಿದುದು.

ದಶಕ. ಏಕೋನ ವಿಂಶತಿ : ಸಮಾಸ. ದ್ವಿತೀಯ : ವಿವರಣ ನಿರೂಪಣ (ನುಡಿ ೨೩)

॥ಶ್ರೀರಾಮ ಸಮರ್ಥ॥ಮಾಗಾ ಬೋಲಿಲೇ ಲೇಖನ ಭೇದ। ಆತಾ ಏಕಾ ಅರ್ಥಭೇದ।
ನಾನಾಪ್ರಕಾರೀಚೆ ಸಂವಾದ। ಸಮಜೋನ ಘ್ಯಾವೇ ॥೧॥

ಶಬ್ದಭೇದ ಅರ್ಥಭೇದ। ಮುದ್ರಾಭೇದ ಪ್ರಬಂದಭೇದ॥
ನಾನಾ ಶಬ್ದಾಚೇ ಶಬ್ದಭೇದ। ಜಾಣೋನೀ ಪಾಹಾವೆ ॥೨॥

ನಾನಾ ಆಶಂಕಾ ಪ್ರತ್ಯೋತ್ತರೇ। ನಾನಾ ಪ್ರಚಿತ ಸಾಕ್ಷಾತ್ಕಾರೇ।
ಜೇಣೇ ಕರಿತಾ ಜಗದಾಂತರೇ। ಚಮತ್ಕಾರತೀ ॥೩॥

ನಾನಾ ಪೂರ್ವಪಕ್ಷ ಸಿದ್ಧಾಂತ। ಪ್ರತ್ಯಯೋ ಪಾಹಾವಾ ನೇಮಸ್ತ।
ಅನುಮಾನಾಚೇ ಖಸ್ತವೆಸ್ತ। ಬೋಲೋ ಚಿ ನಯೇ ॥೪॥

ಪ್ರವೃತ್ತಿ ಅಥವಾ ನಿವೃತ್ತೀ। ಪ್ರಚಿತೀವಿಣ ಅವಘೀ ಭ್ರಾಂತೀ।
ಗಳಂಗ್ಯಾಮಧೀಲ ಜಗಜ್ಜ್ಯೋತಿ। ಚೆತೇಲ ಕೋಠೇ ॥೫॥

## ದಶಕ ೧೯. ಸಮಾಸ ೨. ವಿವರಣ ನಿರೂಪಣ (ನುಡಿ ೨೪)

ಸಮಾಜಕ್ಕೆ ಮಾರ್ಗದರ್ಶನ ಮಾಡುವಂತಹ ಮುಂದಾಳು(ನೇತಾರ)ಗೆ ಅವಶ್ಯವಿರುವ ಗುಣಗಳ ವರ್ಣನೆಯು ಈ ಸಮಾಸದಲ್ಲಿ ಇರುವದು. ಸಮಾಜದ ಮುಂದಾಳು (ನೇತಾರನು) ಉತ್ತಮ ವಿದ್ವಾನನಿರಬೇಕು. ಇವನ ಗ್ರಂಥಾವಲೋಕನ ಉತ್ತಮ ಪ್ರಕಾರದ್ದಿರಬೇಕು. ಇವನಲ್ಲಿ ನಮ್ರತೆ ಇರಬೇಕು. ನಿಜವಾದ (ಖರೆ) ನಿಸ್ಪೃಹತನವಿರಬೇಕು. ಇವನು ಅತ್ಯಂತ ಸವಿಮಾತುಗಳನ್ನು ಆಡುತ್ತ ಅನೇಕ ಜನರನ್ನು ತನ್ನವರನ್ನಾಗಿ ಮಾಡಿಕೊಳ್ಳಬೇಕು. ಜನರ ಅಂತಃಕರಣವನ್ನು ಗುರುತಿಸಿ ಅವರಿಗೆ ಯೋಗ್ಯ ಮಾರ್ಗದರ್ಶನ ಮಾಡಬೇಕು. ಶ್ರವಣ ಮತ್ತು ಮನನ ಹೇಗೆ ಮಾಡಬೇಕೆಂಬುದನ್ನು ಅನೇಕ ಜನರಿಗೆ ತಿಳಿಸಿ ಹೇಳಿ ಕೊಡಬೇಕು. ಸತ್ಪಾತ್ರರಾದ ಯೋಗ್ಯ ಜನರನ್ನು ಆರಿಸಿ ತೆಗೆದು ಅವರನ್ನು ತಯಾರ ಮಾಡಬೇಕು.

### ದಶಕ ೧೯. ಸಮಾಸ ೨. ವಿವರಣ ನಿರೂಪಣ (ನುಡಿ ೨೩)

ಬುದ್ಧಿಮಟ್ಟದ ದೃಷ್ಟಿಯಲ್ಲಿ ಸಮಾಜ ನೇತಾ ಮೇಲಿನ ದರ್ಜೆಯು (ಮಟ್ಟದ)ವನಿರಬೇಕು. ಇವನಿಗೆ ಸರ್ವ ಪ್ರಕಾರದ ಮತ ಮತಾಂತರಗಳ (ಭಿನ್ನ ಭಿನ್ನ ಮತಗಳು, ಭಿನ್ನ ಭಿನ್ನ ಪರಿಸ್ಥಿತಿ ಮತ್ತು ಭಿನ್ನ ಭಿನ್ನ ಅಭಿಪ್ರಾಯಗಳು) ಮಾಹಿತಿ ಇರಬೇಕು:- ಹಿಂದಿನ ಸಮಾಸದಲ್ಲಿ ಗ್ರಂಥವನ್ನು ಹೇಗೆ ಬರೆಯಬೇಕು. ಮತ್ತು ಇನ್ನೂ ಕೆಲವು ವಿವರಗಳ-ಮಾಹಿತಿ ಹೇಳಿದ್ದಾಯಿತು. ಈಗ ಈ ಸಮಾಸದಲ್ಲಿ ಗ್ರಂಥಗಳ ಅರ್ಥವನ್ನು ಹೇಗೆ ತಿಳಿದುಕೊಳ್ಳಬೇಕು ಅನ್ನುವದನ್ನು ಹೇಳುವೆನು. ಸಮಾಜ ನೇತಾರನು ಅನೇಕ ಪ್ರಕಾರದ ಸಂಭಾಷಣ, ಚರ್ಚೆ (ಸಂವಾದ) ಇವುಗಳನ್ನು ತಿಳಿದುಕೊಳ್ಳಬೇಕು. (೧) ಶಬ್ದಗಳ ಬೇರೆ ಬೇರೆ ಪ್ರಕಾರಗಳು ಅರ್ಥದಲ್ಲಿಯ ಅನೇಕ ಬೇರೆ ಬೇರೆ ಪ್ರಕಾರಗಳು, ಬೇರೆ-ಬೇರೆ ಮುದ್ರಾ ಪ್ರಕಾರಗಳು (ಓದುವಾಗಿನ ಸ್ವರ ವ್ಯತ್ಯಾಸಾದಿಗಳು ವಿಷಯಕ್ಕೆ ತಕ್ಕಂತೆ ಮುಖದ ಮುದ್ರಾ ಪ್ರಕಾರಗಳು) ಕಾವ್ಯದ ನಾನಾ ಪ್ರಕಾರಗಳು ಹಾಗೂ ಬೇರೆ ಬೇರೆ ಶಬ್ದಗಳ ಬೇರೆಬೇರೆ ಅರ್ಥ ಇವೆಲ್ಲವನ್ನೂ ತಿಳಿದುಕೊಂಡಿರಬೇಕು. (೨) ಅನೇಕ ಪ್ರಕಾರದ ಶಂಕೆಗಳು. ಸಂಶಯಗಳು ಮತ್ತು ಅವಕ್ಕೆ ತಕ್ಕ ಉತ್ತರಗಳು ಮತ್ತು ಅನೇಕ ಪ್ರಕಾರದ ಅನುಭವದ ವಿಷಯಗಳು ಮತ್ತು ಅನೇಕ ಪ್ರಕಾರದ ಸಾಕ್ಷಾತ್ಕಾರ ಘಟನಾ ವಿಷಯಕ ಮಾತುಗಳು ಇನ್ನೂ ಅನೇಕ ಉಪಯುಕ್ತ ನೀತಿ ವಿಷಯಗಳನ್ನು ತಿಳಿದುಕೊಂಡಿರಬೇಕು. ಇವುಗಳ ವಿವರವಾದ ಮಾಹಿತಿ ಗೊತ್ತಿರಬೇಕು. ಇಂಥ ಅನೇಕ ವಿಷಯ ಮತ್ತು ಘಟನಾ (ಪವಾಡಾದಿಗಳು) ಕೇಳಿ ಜನರ ಮನಕ್ಕೆ ಆನಂದ ಆಶ್ಚರ್ಯವಾಗುವದು. (೩) ಅನೇಕ ಪ್ರಕಾರದ ಪೂರ್ವಪಕ್ಷ ಮತ್ತು ಸಿದ್ಧಾಂತ ಇವುಗಳ ಬಗ್ಗೆ ನಿಶ್ಚಿತ(ಖಾತ್ರಿ)ಪೂರ್ವಕವಾಗಿ ಅನುಭವ ಪಡೆದುಕೊಂಡಿರಬೇಕು. ಹೀಗೆ ಇದ್ದದ್ದಾದರೆ ಜನರಿಗೆ ಹೇಳುವಾಗ ಹೀಗೇ ಇರುವದು, ಅಥವಾ ಹೀಗೇ ಇರುವದೇ ಇಲ್ಲ ಎಂದು ನಿಶ್ಚಯವಾಗಿ (ಖಾತ್ರಿ ಕೊಟ್ಟು) ಹೇಳಲಿಕ್ಕೆ ಬರುವದು. ಇಲ್ಲದಿದ್ದರೆ [ಖಾತ್ರಿಪೂರ್ವಕ] ನಿಶ್ಚಯಾತ್ಮಕವಾಗಿ ಹೇಳಲಿಕ್ಕೆ ಬರುವದಿಲ್ಲ. ಸಮಾಜದ ನೇತಾ-ಮುಖಂಡರು ಕೇವಲ ಅನುಮಾನದ ಮತ್ತು ಸುಮ್ಮನೆ ಏನಾದರೂ ಅಸ್ತವ್ಯಸ್ತವಾಗಿ ಬಡಬಡ ಮಾತನಾಡಬಾರದು. [೪] ಪ್ರವೃತ್ತಿ ಅಂದರೆ ಸಂಸಾರದಲ್ಲಿಯ ಆಸಕ್ತಿಯೇ ಇರಲಿ ಅಥವಾ ನಿವೃತ್ತಿ ಅಂದರೆ ವೈರಾಗ್ಯ, ಮೋಕ್ಷ ಮಾರ್ಗವೇ ಇರಲಿ, ಅರ್ಥಾತ್ ಪ್ರಪಂಚ ಅಥವಾ ಪರಮಾರ್ಥ ಯಾವುದೇ ಇರಲಿ ಎರಡೂ ಕಡೆಗೂ ಅನುಭವ ಇಲ್ಲದಿದ್ದರೆ ಎಲ್ಲವೂ ಭ್ರಮೆಯ ಗೊಂದಲದ ಘೋಟಾಳೆ ಆಗುವದು. ಯಾವ ಪ್ರಕಾರ ಕಸದ ತಿಪ್ಪೆ, ಕಸದ ಗುಂಡಿಯಲ್ಲಿಯ ಅಗ್ನಿಯು ಏಕದಂ ಒಮ್ಮೆಲೆ ಭಡಕಾಯಿಸಿ ಉರಿ ಏಳುವದಿಲ್ಲವೋ ಅದರಂತೆ ಕೇವಲ ಅನುಮಾನದ ವಕ್ತೃತ್ವ ಭಾಷಣ ಮತ್ತು ಅಪೂರ್ಣ ಜ್ಞಾನದಿಂದ ಜನರ ಅಂತಃಕರಣದಲ್ಲಿಯ ಜಗಜ್ಜ್ಯೋತಿಯು ಬೆಳಕು ಕೊಡಲಾರದು. ಅಥವಾ ಜಾಗ್ರತವಾಗಲಾರದು. ಅರ್ಥಾತ್ ಜನರ ಅಂತರಂಗದಲ್ಲಿಯ ಅಂತರಾತ್ಮಾ ಜಾಗ್ರತನಾಗಿ ಏಳುವದಿಲ್ಲ. [೫]

ಹೇತ ಸಮಜೋನ ಉತ್ತರ ದೇಣೇ । ದುಸರ್‍ಯಾಚೇ ಜೀವೀಚೇ ಸಮಜಣೇ ।
ಮುಖ್ಯ ಚ್ಯಾತುರ್ಯಾಚೀ ಲಕ್ಷಣೇ । ತೇ ಹೇ ಐಸೀ ॥೬॥

ಚ್ಯಾತುರ್ಯೇವಿಣ ಖಟಪಟ । ತೇ ವಿದ್ಯಾ ಚಿ ಫಲಕಟ ।
ಸಭೆಮಧೇ ಆಟಫಾಟ । ಸಮಾಧಾನ ಕೈಚೇ ॥೭॥

ಬಹುತ ಬೋಲಣೇ ಏಕಾವೇ । ತೇಥೇ ಮೋನ್ಯ ಚಿ ಧರಾವೇ ।
ಅಲ್ಪಚಿನ್ಹೇ ಸಮಜಾವೇ । ಜಗದಾಂತರ ॥೮॥

ಬಾಷ್ಕಳಾಮಧ್ಯೇ ಬೈಸೋ ನಯೆ । ಉದ್ಧಟಾಸೀ ತಂಡೋ ನಯೆ ।
ಆಪಣಾಕರಿತಾ ಖಂಡೋ ನಯೆ । ಸಮಾಧಾನ ಜನಾಚೇ ॥೯॥

ನೇಣತಪಣ ಸೋಡೂ ನಯೆ । ಜಾಣಪಣೇ ಘುಗೋ ನಯೆ ।
ನಾನಾ ಜನಾಚೇ ಹೃದಯೆ । ಮೃದುಶಬ್ದೇ ಉಕಲಾವೇ ॥೧೦॥

ಪ್ರಸಂಗ ಜಾಣಾವಾ ನೇಟಕಾ । ಬಹುತಾಸೀ ಜಾಝಾ ಘೇಊ ನಕಾ ।
ಖರೇ ಅಸತಾ ಚಿ ನಾಸಕಾ । ಘಡ ಹೋತೋ ॥೧೧॥

ಶೋಧ ಘೇತಾ ಆಳಸೋ ನಯೆ । ಭ್ರಷ್ಟ ಲೋಕೀ ಬೈಸೋ ನಯೆ ।
ಬೈಸಲೇ ತರೀ ಟಾಕೂ ನಯೆ । ಮಿಥ್ಯಾ ದೋಷ ॥೧೨॥

ಅಂತರ ಆರ್ತಾಚೇ ಶೋಧಾವೇ । ಪ್ರಸಂಗೀ ಥೋಡೇ ಚಿ ವಾಚಾವೇ ।
ಚಟಕ ಲಾಉನೀ ಸೋಡಾವೇ । ಭಲ್ಯಾ ಮನುಷ್ಯಾಸೀ ॥೧೩॥

ಮಜ್ಯಾಲಸೀತ ಬೈಸೋ ನಯೆ । ಸಮಾರಾಧನೇಸೀ ಜಾಊ ನಯೆ ।
ಜಾತಾ ಯೇಳಿಲವಾಣೇ ಹೋಯೆ । ಜಿಣೇ ಆಪುಲೇ ॥೧೪॥

ಉತ್ತಮ ಗುಣ ಪ್ರಗಟವಾವೇ । ಮಗ ಭಲತ್ಯಾಸೀ ಬೋಲತಾ ಫಾವೇ ।
ಭಲೆ ಪಾಹೋನ ಕರಾವೆ । ಶೋಧೂನ ಮಿತ್ರ ॥೧೫॥

ಉಪಾಸನೆಸಾರಿಖೇ ಬೋಲಾವೇ । ಸರ್ವಜನಾಸೀ ತೋಷವಾವೇ ।
ಸಗಟ ಬರೇಪಣ ರಾಖಾವೇ । ಕೋಣ್ಹೇಯೆಕಾಸೀ ॥೧೬॥

ಸಮಾಜಕ್ಕೆ ಪುಢಾರೀತನದಿಂದ ಮಾರ್ಗದರ್ಶನಮಾಡಲು ವಕ್ತೃತ್ವ ಕಲೆ [ಭಾಷಣ ಕಲೆ] ಯು ಬಹಳ ಮಹತ್ವದ್ದಿರುವದು ಮತ್ತು ಅವಶ್ಯವೂ ಇರುವದು. ಇದರ ಹೊರತಾಗಿ ಸ್ವತಃದ ಕಡೆಗೆ ನಮ್ರತೆಯನ್ನು ತಾಳಿ ನಡೆಯುವ ಕೌಶಲ್ಯವೂ ಬೇಕು. ಇದರಂತೆ ಯಾರ ಭಿಡೆ ಮುರವತ್ತಿಗೆ ವಶವಾಗುವದಾಗಲೀ ಇನ್ನೊಬ್ಬರಿಗೆ ಹಾ ! ಜೀಹಾ! ಜೀ! ಅನ್ನುವದಾಗಲೀ ಇರಬಾರದು: ಪ್ರಶ್ನೆ ಕೇಳುವವನ ಉದ್ದೇಶ ಕಂಡುಹಿಡಿದು ಅವನಿಗೆ ಸ್ಪಷ್ಟ ಉತ್ತರ ಕೊಡಬೇಕು. ಯಾವಾಗಲೂ ಎರಡನೆಯವರ ಹೃದ್ಗತ ತಿಳಿದುಕೊಳ್ಳುತ್ತಿರಬೇಕು. ಇವು ಚತುರತನದ ಲಕ್ಷಣಗಳಿರುವವು. (೬) ಯಾರಲ್ಲಿ ಇಂಥ ಚತುರತನವಿಲ್ಲವೋ ಅಂಥವರ ಪ್ರಯತ್ನ ವ್ಯರ್ಥವಾಗುವದು. ಇಂಥವರ ವಿದ್ಯೆಯೂ ಕೂಡಾ ವ್ಯರ್ಥವಿರುವದು. ಸಭೆಯಲ್ಲಿಯೇ ಕೆಲಸಕ್ಕೆ ಬಾರದ ವಾದ ವಿವಾದ ಮಾಡುವದರಿಂದ ಸಮಾಧಾನವಾಗುವದಿಲ್ಲ. (೭) ಎರಡನೆಯವರು ಹೇಳಿದ್ದೆಲ್ಲವನ್ನೂ ಬೇಸರಪಡದೇ ಸಾಕಷ್ಟು ಕೇಳಿಕೊಳ್ಳಬೇಕು. ಆದರೆ ನಾವು ಮಾತ್ರ ಮೌನವಾಗಿರಬೇಕು. ಒಂದು ಸಣ್ಣ ಸಂಕೇತದಿಂದ ಜನರ ಮನದಲ್ಲಿ ಏನಿರುವದೆಂಬುದನ್ನು ತಿಳಿದುಕೊಂಡಿರಬೇಕು (೮)ಬಾಷ್ಕಳ ಅಂದರೆ ವಡವಡ ವ್ಯರ್ಥವಾದ ಮಾತನಾಡುವವ, ನಿರುದ್ಯೋಗಿ, ಜಗಳಗಂಟ,ಉದ್ಧಟ ಇವರ ಸಂಗಡ ವಾದಕ್ಕಿಳಿಯಬಾರದು. ಕಾರಣವಿಲ್ಲದೆ ಮಾತನಾಡಲಿಕ್ಕೆ ಹೋಗಬಾರದು. ಇಂಥ ಜನರಿದ್ದಲ್ಲಿ ಹೋಗಿ ಕೂಡ್ರಬಾರದು. ನಿಮ್ಮ ನಡೆ ನುಡಿಯಿಂದ ಜನರ ಸಮಾಧಾನಕ್ಕೆ ಧಕ್ಕೆ ಹತ್ತಬಾರದು. ಮನ ನೋಯಬಾರದು. ನಿಮ್ಮಿಂದ ಎಂದೂ ಕೆಡಕಾಗದಂತೆ ನಿಮ್ಮ ವರ್ತನವಿರಲಿ. (೯) ನಾನು ಏನೂ ತಿಳಿದವನಲ್ಲ. ಅನ್ನುವ ಅಜ್ಞಾನತನದ ಭಾವವಿರಬೇಕು. ನಾನು ತಿಳಿದವನೆಂಬ ಹಮ್ಮು ಎಂದೂ ಇರಬಾರದು. ಮೃದು ಮತ್ತು ಸವಿ ಶಬ್ದಗಳಿಂದ ಅನೇಕ ಜನರ ಅಂತಃಕರಣದಲ್ಲಿಯ ಭಾವವನ್ನುಅರಳಿಸಿ,ಗುರುತಿಸಿ ಅವರನ್ನು ತಮ್ಮ ಕಡೆಗೆ ಸೆಳೆದುಕೊಳ್ಳಬೇಕು.(೧೦)ಪ್ರಸಂಗ ಯಾವುದು ? ಹೇಗಿರುವದು ? ಇದನ್ನು ಸರಿಯಾಗಿ ಗುರುತಿಸಬೇಕು. ಬಹು ಜನರ ಸಂಗಡ ಕೆಲಸವಿಲ್ಲದೆ ಸುಮ್ಮನೆ [ವ್ಯರ್ಥವಾಗಿ] ಜಿದ್ದಿನಿಂದ ಮಾತನಾಡಬಾರದು. ಹೀಗೆ ಜಿದ್ದಿನಿಂದ ಮಾತಾಡಿದರೆ ನಮ್ಮ ಅಂಬೋಣವು ನಿಜವಿದ್ದರೂ ಕೂಡಾ ಜನರಿಗೆ ಒಮ್ಮೊಮ್ಮೆ ಪಟಾಯಿಸುವದಿಲ್ಲ. ಅಹಂಕಾರದ ಮಾತಿನಿಂದ ಸಮೂಹ ಮಧ್ಯದಲ್ಲಿ ಮನಸ್ಸಿನ ಅಶಾಂತಿ ಉತ್ಪನ್ನವಾಗುವದು. ಅಸಮಾಧಾನಕಾರಕವೆನಿಸುವದು. (೧೧) ಯಾವುದೇ ವಿಷಯವಿದ್ದರೂ ಅದರ ಶೋಧ ತೆಗೆದುಕೊಳ್ಳಲಿಕ್ಕೆ ಬೇಸರ ಮಾಡಬಾರದು. ಭ್ರಷ್ಟ ಜನರಿದ್ದಲ್ಲಿ ಹೋಗಿ ಕೂಡ್ರಬಾರದು. ಒಂದುವೇಳೆ ಅಂತಹ ಪ್ರಸಂಗವೇ ಬಂದರೂ ಯಾರ ಮೇಲೆಯೂ ಸುಳ್ಳು ಖೊಟ್ಟಿ ಆರೋಪಮಾಡಬಾರದು. (೧೨) ಯಾರು ದುಃಖಿಗಳು ಮತ್ತು ಕಷ್ಟಪಡುವವರಿರುವರೋ ಅವರಲ್ಲಿ ಒಂದಾಗಿ ಸೇರಿ ದುಃಖ ಕಷ್ಟಗಳನ್ನು ಪರಿಹರಿಸಬೇಕು. ಅಥವಾ ಕಡಿಮೆಮಾಡಬೇಕು. ಹೊತ್ತು, ಗೊತ್ತು, ವೇಳೆ ಪ್ರಸಂಗಗಳಲ್ಲಿ ಸ್ವಲ್ಪನ್ನೇ [ಭಕ್ತಿ. ಜ್ಞಾನ, ವೈರಾಗ್ಯದ ಬಗ್ಗೆ] ಓದಬೇಕು. ಆದರೆ ಉತ್ತಮರು, ಯೋಗ್ಯರಾದವರಿಗೆ ನಿಮ್ಮಲ್ಲಿ ವಿಶ್ವಾಸ ಹುಟ್ಟುವಂತೆ ಮಾಡಬೇಕು. ಅಂದರೆ ಅಂಥವರು ವಿಶ್ವಾಸದಿಂದ ನಿಮ್ಮ ಬೆನ್ನು ಹತ್ತುವರು. (೧೩) ಸಭೆಯಲ್ಲಿ ಅಥವಾ ಇತರ ಮನರಂಜನೆಯ ಸ್ಥಳದಲ್ಲಿ ಹೋಗಿ ಕೂಡ್ರಬಾರದು. ಉದ್ಯಾಪನೆ, ಯಾತ್ರಾ, ಅನುಷ್ಠಾನ, ಅಥವಾ ಮುಕ್ತದ್ವಾರದ ಭೋಜನಗಳಿಗೆ ಹೋಗಬಾರದು. ಯಾವುದೇ ಆಶೆಯಿಂದ [ದಕ್ಷಿಣೆ, ದಾನಕ್ಕೆ] ಹೋಗಬಾರದು. ಇಂಥವುಗಳಿಗೆ ಹೋಗುತ್ತಿದರೆ ನಿಮ್ಮ ಜೀವನವು ಹೀನ, ಮತ್ತು ದೀನವಾಗುವದು. ನಿಮ್ಮ ಅಂತಸ್ತು ನಾಚಿಕೆಗೇಡಿನದಾಗುವದು. (೧೪) ನಮ್ಮಲ್ಲಿದ್ದ ಉತ್ತಮ ಗುಣಗಳನ್ನು ನಾವು ಮೊದಲಿಗೆ ಪ್ರಕಟಪಡಿಸಬೇಕು. ಮತ್ತು ಆ ಮೇಲೆ ಯಾರ ಸಂಗಡ ಮಾತನಾಡಿದರೂ ಕೂಡಾ ಅದಕ್ಕೆ ಕಿಮ್ಮತ್ತು [ಬೆಲೆ] ಬರುವದು. ಮತ್ತು ನಿಜವಾದ ಸಜ್ಜನ ಜನರನ್ನು ಹುಡುಕಿ ಅವರೊಂದಿಗೆ ಸ್ನೇಹ ಬೆಳಸಬೇಕು. (೧೫) ಇನ್ನೊಬ್ಬರಕೂಡ ಮಾತನಾಡುವಾಗ ಉಪಾಸನಾಕ್ಕೆ ಶೋಭಿಸುವಂತಹ ಮಾತುಗಳನ್ನು ಆಡಬೇಕು. ಯಾವತ್ತೂ ಜನರನ್ನು ಸಂತುಷ್ಟಪಡಿಸಬೇಕು. ಒಟ್ಟಿನಲ್ಲಿ ಯಾವತ್ತೂ ಜನರ ಸಂಗಡ ಒಳ್ಳೇ ಸಂಬಂಧ ಇಟ್ಟುಕೊಳ್ಳಬೇಕು. (೧೬)

ಠಾಈ ಠಾಈ ಶೋಧ ಘ್ಯಾವಾ । ಮಗ ಗ್ರಾಮೀ ಪ್ರವೇಶ ಕರಾವಾ ।
ಪ್ರಾಣೀಮಾತ್ರ ಬೋಲವಾವಾ । ಆಪ್ತ ಪಣೇ ॥೧೭॥

ಉಂಚ ನೀಚ ಮ್ಹಣೋ ನಯೆ । ಸಕಳಾಚೇ ನಿವವಾವೇ ಹೃದಯೇ ।
ಅಸ್ತಮಾನೀ ಜಾಲ್ಯಾ ನಯೆ । ಕೋಠೇತರ್ಹೀ ॥೧೮॥

ಜಗಾಮಧೇ ಜಗಮಿತ್ರ । ಜಿವ್ಹೇಪಾಸೀ ಆಹೇ ಸೂತ್ರ ।
ಕೋಠೇ ತರ್ಹೀ ಸತ್ಪಾತ್ರ । ಶೋಧೂನ ಕಾಢಾವೇ ॥೧೯॥

ಕಥಾ ಹೋತೀ ತೇಥೇ ಜಾವೇ । ದುರೀ ದೀನಾಸಾರಿಖೇ ಬೈಸಾವೇ ।
ತೇಥೀಲ ಸಕಳ ಹರದ್ರ ಘ್ಯಾವೇ । ಅಂತರ್ಯಾಮೀ ॥೨೦॥

ತೇಥೇ ಭಲೇ ಆಡಳತೀ । ವ್ಯಾಪಕ ತೇ ಹಿ ಕಳೋ ಯೇತೀ ।
ಹಳುಹಳು ಮಂದಗತೀ । ರೀಗ ಕರಾವಾ ॥೨೧॥

ಸಕಳಾಮಧೇ ವಿಶೇಷ ಶ್ರವಣ । ಶ್ರವಣಾಹುನೀ ಥೋರ ಮನನ ।
ಮನನೇ ಹೋಯೇ ಸಮಾಧಾನ । ಬಹುತ ಜನಾಚೇ ॥೨೨॥

ಧೂರ್ತಪಣೇ ಸಕಳ ಜಾಣಾವೇ । ಅಂತರೀ ಅಂತರ ಬಾಣಾವೇ ।
ಸಮಜಲ್ಯಾವಿಣ ಸಿಣಾವೇ । ಕಾಸಯಾಸೀ ॥೨೩॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
'ವಿವರಣ ನಿರೂಪಣ' ನಾಮ ಸಮಾಸ ದ್ವಿತೀಯ ॥

● ●

ಮಹಂತ ಅಥವಾ ನೇತಾ ಯಾವ ಗ್ರಾಮಕ್ಕೆ ಹೋಗಬೇಕಾಗಿರುವದೋ, ಆ ಊರ ಬಗ್ಗೆ ಅಲ್ಲಿಯ ಜನರ ಬಗ್ಗೆ ಮುಂಚಿತವಾಗಿಯೇ ಮಾಹಿತಿ ಸಂಗ್ರಹಿಸಬೇಕು. ಅಲ್ಲಲ್ಲಿ ಕೇಳಿ ತಿಳಿದುಕೊಳ್ಳಬೇಕು. ಆ ನಂತರ ಆ ಗ್ರಾಮಕ್ಕೆ ಹೋಗಬೇಕು. ಹೋದ ಮೇಲೆ ಊರಲ್ಲಿಯ ಜನರನ್ನು ಆದರದಿಂದ ನಮ್ಮವರೇ ಇವರು ಅನ್ನುವಂತೆ ನಿಮ್ಮಲ್ಲಿಗೆ ಕರೆಯಿಸಿಕೊಳ್ಳಬೇಕು. ನಿಮ್ಮ ಕಡೆಗೆ ಬಂದವರಲ್ಲಿ ಶ್ರೇಷ್ಠ, ಕನಿಷ್ಠ, ಉಚ್ಚ–ನೀಚ, ಅನ್ನುವ ಭೇದವನ್ನು ಮಾಡಬಾರದು. ಎಲ್ಲರ ಅಂತಃಕರಣವನ್ನು ಶಾಂತಗೊಳಿಸಬೇಕು. ಸೂರ್ಯಾಸ್ತವಾದ ಮೇಲೆ ಸುಮ್ಮನೆ ಎಲ್ಲಿಗಾದರೂ ಹೋಗಬಾರದು. (೧೮) ಜಗದಲ್ಲಿ ಜಗಮಿತ್ರರಾಗಬೇಕೆಂಬ ಹಂಬಲವಿದ್ದುದಾದರೆ ಅದರ ಮರ್ಮ ನಮ್ಮ ನಾಲಿಗೆಯ ಹತ್ತಿರವೇ ಇರುವದು [ನಿಮ್ಮ ಮೃದು ಮಧುರ ಚತುರ ಮಾತಿನಲ್ಲಿರುವದು] ನಾವು ಎಲ್ಲಿಗೇ ಹೋದರೂ ಕೂಡಾ ಅಲ್ಲಿಯ ಸಜ್ಜನ ಜನರನ್ನು ಹುಡುಕಿ ಗುರುತಿಸಬೇಕು. ಅಂಥವರ ಸ್ನೇಹಮಾಡಬೇಕು.(೧೯) ಎಲ್ಲಿ ಹರಿ ಕಥೆ ಇತ್ಯಾದಿ ನಡೆದಿರುವದೋ ಅಲ್ಲಿಗೆ ನೀವು ಹೋಗಬೇಕು. ಆದರೆ ಅಲ್ಲಿ ಅತ್ಯಂತ ನಮ್ರರಾಗಿ, ಸಾಮಾನ್ಯ ಮನುಷ್ಯನಂತೆ ದೂರ ಕೂಡಬೇಕು. ಅಲ್ಲಿ ನಡೆವ ಕಥೆಯ ರಹಸ್ಯವನ್ನೆಲ್ಲ ನಿಮ್ಮ ಅಂತರಂಗದಲ್ಲಿ ಹಿಡಿದಿಟ್ಟುಕೊಳ್ಳಬೇಕು.(೨೦) ಇಂಥ ಸಮುದಾಯದಲ್ಲಿ ಸಜ್ಜನರು ಕಂಡುಬರುವರು. ಅವರಲ್ಲಿ ವ್ಯಾಪಕ ಅಥವಾ ವಿಶಾಲ ಮನದವರು ಯಾರು ಇರುವರೆನ್ನುವದೂ ತಿಳಿಯುವದು. ಈ ಪದ್ಧತಿಯಿಂದ ಸಾವಕಾಶವಾಗಿ ಮಂದಗತಿಯಿಂದ ಊರ ಜನರಲ್ಲಿ ಸೇರಿಕೊಳ್ಳಬೇಕು. (೨೧) ಎಲ್ಲ ಉಪಾಯಗಳಲ್ಲಿ ವಿಶೇಷವಾದದ್ದು ಯಾವುದೆಂದರೆ ಶ್ರವಣವೇ ಇರುವದು. ಆದರೆ ಶ್ರವಣಕ್ಕಿಂತ ಮನನವು ಹೆಚ್ಚು ಶ್ರೇಷ್ಠವಾದದ್ದು. ಮನನದಿಂದ ಬಹಳ ಜನರ ಸಮಾಧಾನವಾಗುವದು. (೨೨) ಚಾಣಾಕ್ಷತನದಿಂದ ಎಲ್ಲ ವಿಷಯವನ್ನೂ ತಿಳಿದುಕೊಳ್ಳಬೇಕು. ನಮ್ಮ ಅಂತಃಕರಣದಲ್ಲಿ ಎರಡನೆಯವರ ಅಂತಃಕರಣದ ಬಗ್ಗೆ ಸರಿಯಾದ ಕಲ್ಪನೆ ಇರಬೇಕು. ಯಾವುದೇ ಮಾತು ಅಂದರೆ ಅದರ ಅರ್ಥ ತಿಳಿಯದ ಹೊರತು ಅದರ ಬಗ್ಗೆ ಸುಮ್ಮನೇ ಇಲ್ಲದ ಕಲ್ಪನೆ ಮಾಡಿಕೊಂಡು ಶ್ರಮ ಮಾಡಿಕೊಳ್ಳುವಲ್ಲಿ ಅರ್ಥವಿಲ್ಲ. ಜನರೊಂದಿಗೆ ನಡೆಯುವಾಗ ಅವರ ಅಂತಃಕರಣದಲ್ಲಿ ಪ್ರವೇಶ ಮಾಡಿ ಅವರನ್ನು ತಿಳಿದುಕೊಳ್ಳುವದು ಮಹತ್ವದ್ದಿರುವದು. ಇದನ್ನು ಸಾಧಿಸದ ಹೊರತು ಇತರ ವಿಷಯಗಳು ಸುಮ್ಮನೆ ನಿಮ್ಮನ್ನು ದಣಿಸುವವು. [೨೩]

ಶ್ರೀ ದಾಸಬೋಧದ ಹತ್ತೊಂಭತ್ತನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ವಿವರಣ ನಿರೂಪಣ"ವೆಂಬ ಹೆಸರಿನ ಎರಡನೇ ಸಮಾಸವು ಮುಗಿದುದು.

### ದಶಕ. ಏಕೋನ ವಿಂಶತಿ : ಸಮಾಸ. ತೃತೀಯ : ಕರಂಟ ಲಕ್ಷಣ ನಿರೂಪಣ [ನುಡಿ ೩೦]

॥ಶ್ರೀರಾಮ ಸಮರ್ಥ॥ ಸುಚಿತ ಕರುನೀ ಅಂತಃಕರ್ಣ । ಏಕಾ ಕರಂಟಲಕ್ಷಣ ।
ಹೇ ತ್ಯಾಗಿತಾ ಸದೇವ ಲಕ್ಷಣ । ಆಂಗೀ ಬಾಣೇ ॥೧॥

ಪಾಪಾಕರಿತಾ ದರಿದ್ರ ಪ್ರಾಪ್ತ । ದರಿದ್ರೇ ಹೋಯೆ ಪಾಪಸಂಚಿತ ।
ಏಸೇ ಚಿ ಹೋತ ಜಾತ । ಕ್ಷಣಕ್ಷಣಾ ॥೨॥

## ದಶಕ ೧೯. ಸಮಾಸ ೩. ಕರಂಟ [ಕರಟ] ಲಕ್ಷಣ ನಿರೂಪಣ (ನುಡಿ ೩೦)

ಕರಂಟ ಅಂದರೆ ಅಭಾಗಿ, ಭಾಗ್ಯಹೀನ, ನಶಿಬಹೀನ, ಜೀನ, ಹಕನಾಕ, ಕೃಪಣ, ಭಿಕಾರಿ, ದರಿದ್ರ, ಆಲಸಿಗ, ಎಂದು ಅರ್ಥಮಾಡಬಹುದಾಗಿದೆ.

ಶ್ರೀ ಸಮರ್ಥರ ದೃಷ್ಟಿಯಲ್ಲಿ ಸಮಾಜದೊಳಗೆ ಎರಡು ಪ್ರಕಾರದ ಜನರು ಇರುವರು. [೧] ಭಾಗ್ಯವಾನ ಜನರು [೨] ಭಾಗ್ಯಹೀನ ಜನರು. ಈ ಇಬ್ಬರ ಲಕ್ಷಣಗಳು ಸಹಜವಾಗಿಯೇ ಪರಸ್ಪರ ವಿರುದ್ಧವಿರುತ್ತವೆ. ಆದರೆ ಮನುಷ್ಯರಲ್ಲಿಯ ಈ ಎರಡು ಪ್ರಕಾರಗಳನ್ನು ಹೇಳುವಾಗ ಶ್ರೀ ಸಮರ್ಥರು ಎರಡು ಮಾತುಗಳನ್ನು ಬಹಳ ಸ್ಪಷ್ಟವಾಗಿ ಪುನಃ ಪುನಃ ಮಂಡಿಸಿದ್ದಾರೆ. [೧] ವಿವೇಕದ ಅಭಾವ ಮತ್ತು ಕಷ್ಟಪಡುವದರ ಅಭಾವ ಈ ಎರಡು ಕ್ಷುಲ್ಲಕಲಕ್ಷಣಗಳಿಂದಾಗಿ ಮನುಷ್ಯನು ಭಾಗ್ಯಹೀನನಾಗುವನು.[೨]ಇಂದು ಭಾಗ್ಯಹೀನನಾಗಿರುವ ಮನುಷ್ಯನು ವಿವೇಕ ಸಂಪನ್ನನಾಗಿ ದೀರ್ಘ ಪ್ರಯತ್ನ ಅಥವಾ ಸತತ ಕಾರ್ಯ ಸಂಪನ್ನನಾಗಿ ಬಹಳಷ್ಟು ಕಷ್ಟಪಡಹತ್ತಿದರೆ ಅಂಥವನು ನಿಶ್ಚಿತವಾಗಿಯೂ ಭಾಗ್ಯವಂತನಾಗುವನು. ಇದರಲ್ಲಿ ಸಂಶಯವಿಲ್ಲ. ಶ್ರೀ ಸಮರ್ಥರಿಗೆ ವಿವೇಕ ಹೀನ ಮತ್ತು ಆಲಸ್ಯವುಳ್ಳ ಮನುಷ್ಯರ ಬಗ್ಗೆ ಬಹಳಷ್ಟು ತಿರಸ್ಕಾರ ಭಾವನೆ ತಳಮಳಯುಕ್ತ ಕೋಪವಿರುವದು. ಒಟ್ಟಿನಲ್ಲಿ ಇಂಥ ಮನುಷ್ಯ ಎಲ್ಲ ಅವಗುಣಗಳ ತವರುಮನೆ ಆಗಿರುವನು. ಈ ದರಿದ್ರನು ತಾನು ಹೀನನಾಗಿರುವದರ ಜೊತೆಗೆ ತನ್ನ ಸಂಗಾತಿಗಳನ್ನೂ ಬಿಗಡಾಯಿಸುವನು. ತನ್ನಂತೆ ಮಾಡುವನು. ಇವನಿಗೇನೂ ಕಲಿಯುವ ಇಚ್ಛೆ ಇರುವದೇ ಇಲ್ಲ. ಓದು ಬರಹದ ಹವ್ಯಾಸಕ್ಕೂ ಹತ್ತುವದಿಲ್ಲ. ಹೀಗಿದ್ದರೂ ಇಂಥವನ ಮಾತು ಮಾತ್ರ ಕಠೋರ ಅಥವಾ ಒರಟಾಗಿರುವವು. ಎರಡನೆಯದವರದನ್ನು ಪಡೆಯುವ ಹವ್ಯಾಸ ಅಥವಾ ಇಚ್ಛೆಯನ್ನು ಸದಾ ಮಾಡುವನು. ಜಗತ್ತಿನಲ್ಲಿ ನಿಂದ್ಯವೆನಿಸಿದ್ದು ಇವನಿಗೆ ಅತ್ಯಂತ ಪ್ರಿಯವಾಗಿರುವದು. ಸಜ್ಜನರ ಸಂಗತಿ ಇವನಿಗೆ ಆಗುವದಿಲ್ಲ. ಯಾರನ್ನೂ ಇವನು ಮನ್ನಿಸುವದಿಲ್ಲ. ಯಾರ ಮೇಲೆಯೂ ವಿಶ್ವಾಸವಿಡುವದಿಲ್ಲ. ಮತ್ತು ಯಾರ ಕೂಡಾ ಸಖ್ಯತ್ವಮಾಡುವದಿಲ್ಲ. ಇವನು ಕೇವಲ ಆಲಸ್ಯತನದಿಂದ ಆಯುಷ್ಯ ಕಳೆಯುವನು. ಸುಮ್ಮ ಸುಮ್ಮನೇ ಇಲ್ಲದ ಕಲ್ಪನೆಯನ್ನು ಮಾಡುತ್ತ ಕೂಡುವನು. ಇದರಿಂದಾಗಿ ಕೊನೆಯಲ್ಲಿ ಯಾವುದೂ ಕೈಗೆ ಹತ್ತುವದಿಲ್ಲ. ಈ ಪ್ರಕಾರದಿಂದ ಇವನು ತನ್ನ ವೈರಿ ತಾನೇ ಆಗುವನು. ಜಗತ್ತಿನಲ್ಲಿಯ ದುಃಖ ಪ್ರವಾಹದಲ್ಲಿ ವ್ಯರ್ಥವಾಗಿ ತೇಲಿ ಹೋಗುವನು. ಆದ್ದರಿಂದ ಮನುಷ್ಯನು ಇಂಥ ಅವಗುಣ ಬಿಟ್ಟು ಉತ್ತಮ ಗುಣಗಳ ಅಭ್ಯಾಸವನ್ನು ಮಾಡಬೇಕು. ಇದರಿಂದ ಜೀವನದಲ್ಲಿ ಇಷ್ಟವಾದದ್ದು ಕೈವಶವಾಗುವದು. ಮನುಷ್ಯನಾಗಿ ಹುಟ್ಟಿದ್ದಕ್ಕೂ ಕೀರ್ತಿ ಬರುವದು [ಸಾರ್ಥಕವಾಗುವದು].

### ದಶಕ ೧೯. ಸಮಾಸ ೩. ಕರಂಟ (ಕರಟ) ಲಕ್ಷಣ ನಿರೂಪಣ (ನುಡಿ ೩೦)

ಸಂತರು ಸ್ವತಃ ಭಾಗ್ಯವಂತ ಮತ್ತು ಜ್ಞಾನವಂತರಿರುವರು. ಇಂಥವರಿಗೆ ಭಾಗ್ಯಹೀನ ಮತ್ತು ಜ್ಞಾನಹೀನ ಮನುಷ್ಯರ ಅವಲಕ್ಷಣಗಳನ್ನು ತಮ್ಮ ಬಾಯಿಯಿಂದ ಆಡಿ [ಅಂದು] ತೋರಿಸಲಿಕ್ಕೂ ಕೂಡಾ ಜಡವೆನಿಸುವದು, ಬೇಸರವೆನಿಸುವದು. ಆದರೂ ಇವರ ಸುತ್ತುಮುತ್ತೂ ಇರುವವರೆಲ್ಲರೂ ಇಂಥವರೇ ಸಾಕಷ್ಟು ತುಂಬಿರುವದರಿಂದ ಅನಿವಾರ್ಯವಾಗಿ ಈ ದುರ್ದೈವಿಗಳ ಜೀವನವು ಸಾರ್ಥಕಗೊಳ್ಳಲೆಂದು ಜನರಿಗೆ ನಿಮ್ಮ ಅವಗುಣಗಳ ತ್ಯಾಗಮಾಡಿರಿ. ಎಂದು ಯಾವಾಗಲೂ ಆರ್ಜವದಿಂದ ಕಳಕಳಿಯಿಂದ ಹೇಳುವರು. ಕರಂಟ ಅಂದರೆ ಅಭಾಗಿ ದುರ್ದೈವಿ ಎಂದು ತಿಳಿಯಬೇಕು. ಇಂಥ ಲಕ್ಷಣಗಳ ಬಗ್ಗೆ ಈ ಮೊದಲೇ ಅಲ್ಲಲ್ಲಿ [ಸಂದರ್ಭಕ್ಕನುಸಾರವಾಗಿ] ಬಂದು ಹೋಗಿರುವದು. ಅದರಲ್ಲಿಯೇ ಒಂದು ಹೊಸ ನಮೂನೆಯನ್ನು ಹೆಚ್ಚಿನದಾಗಿ ಹಾಕಿ ಈ ಸಮಾಸದಲ್ಲಿಯೂ ದುರ್ದೈವಿ-ಲಕ್ಷಣಗಳ ಒಂದು ಮಾದರಿಯನ್ನು ಶ್ರೀ ಸಮರ್ಥರು ತಯಾರ ಮಾಡಿರುವರು: ಅಂತಃಕರಣವನ್ನು ಏಕಾಗ್ರಮಾಡಿ ಈಗ ಅಭಾಗ್ಯ ದುರ್ದೈವಿಯ ಲಕ್ಷಣಗಳನ್ನು ಕೇಳಿರಿ, ಮತ್ತು ಕೇಳಿ ನೀವು ಇವುಗಳ ತ್ಯಾಗಮಾಡಿದ್ದಾದರೆ ನಿಮ್ಮಲ್ಲಿ ಭಾಗ್ಯವಂತನ ಲಕ್ಷಣಗಳು ಬಿಂಬಿಸುವವು. ಉದಯಿಸುವವು. (೧) ಪಾಪಾಚರಣೆಯಿಂದ ದಾರಿದ್ರ್ಯದ ಪ್ರಾಪ್ತಿಯಾಗುವದು. ದಾರಿದ್ರ್ಯದಿಂದ ಪಾಪದ ಸಂಚಯವಾಗುವದು. ಹೀಗೆಯೇ ಒಂದರ ಹಿಂದೆ ಒಂದರಂತೆ ಒಂದೇ ಸಮನೆ ಆಗಿ ಪಾಪವು ಹೆಚ್ಚುವದು. (೨)

ಯಾಕಾರಣೇ ಕರಂಟ ಲಕ್ಷಣೇ। ಏಕೋನೀ ತ್ಯಾಗ ಚಿ ಕರಣೇ।
ಮ್ಹಣಿಜೆ ಕಾಂಹೀ ಯೇಕ ಬಾಣೇ। ಸದೇವ ಲಕ್ಷಣ ॥೩॥

ಕರಂಟ್ಯಾಸ ಆಳಸ ಆವಡೇ। ಯತ್ನ ಕದಾಪಿ ನಾವಡೇ।
ತ್ಯಾಚೀ ವಾಸನಾ ವಾವಡೇ। ಅಧರ್ಮೀ ಸದಾ ॥೪॥

ಸದಾ ಭ್ರಮಿಷ್ಟ ನಿದಸುರಾ। ಉಗೇ ಚಿ ಬೋಲೇ ಸೈರಾವೈರಾ।
ಕೋಣೇಯೇಕಾಚ್ಯಾ ಅಂತರಾ। ಮಾನೇಚಿನಾ ॥೫॥

ಲೇಹೋ ನೇಣೇ ವಾಚೂ ನೇಣೇ। ಸವದಾಸುತ ಘೇಊ ನೇಣೇ।
ಹಿಶೇಬ ಕಿತೇಬ ರಾಖೋ ನೇಣೇ। ಧಾರಣಾ ನಾಹೀ ॥೬॥

ಹಾರವೀ ಸಾಂಡೀ ಪಾಡೀ ಫೋಡೀ। ವಿಸರೇ ಚುಕೇ ನಾನಾ ಖೋಡೀ।
ಭಲ್ಯಾಚೇ ಸಂಗತೀಚೀ ಆವಡೀ। ಕದಾಪಿ ನಾಹೀ ॥೭॥

ಚಾಟ ಗಡೀ ಮೇಳವಿಲೇ। ಕುಕರ್ಮೀ ಮಿತ್ರ ಕೇಲೇ।
ಖಟ ನಟ ಯೆಕವಟಿಲೇ। ಚೋರಟೇ ಪಾಪೀ ॥೮॥

ಜ್ಯಾಸಿ ತ್ಯಾಸಿ ಕಳಕಟಾ। ಸ್ವಯೇ ಸದಾಚಾ ಚೋರಟಾ।
ಪರಘಾತಕೀ ಧಾಟಾಮೋಟಾ। ವಾಟಾ ಪಾಡೀ ॥೯॥

ದೀರ್ಘ ಸೂಚನಾ ಸುಚೇಚಿನಾ। ನ್ಯಾಯ ನೀತಿ ಹೇ ರುಚೇನಾ।
ಪರಅಭಿಳಾಸೀ ವಾಸನಾ। ನಿರಂತರ ॥೧೦॥

ಆಳಸೇ ಶರೀರ ಪಾಳಿಲೇ। ಪರಂತು ಪೊಟೇವಿಣ ಗೇಲೇ।
ಸುಡಕೇ ಮಿಳೇನಾಸೇ ಜಾಲೇ। ಪಾಂಘುರಾಯಾ ॥೧೧॥

ಆಳಸೇ ಶರೀರ ಪಾಳೀ। ಅಖಂಡ ಕುಸೀ ಕಾಂಡೋಳೀ।
ನಿದ್ರೇಚೇ ಪಾಡೀ ಸುಕಾಳೀ। ಆಪಣಾಸೀ ॥೧೨॥

ಜನಾಸೀ ಮಿತ್ರೀ ಕರೀನಾ। ಕಠೀಣ ಶಬ್ದ ಬೋಲೇ ನಾನಾ।
ಮೂರ್ಖಪಣೇ ಆವರೇನಾ। ಕೋಣೇಯೇಕಾಸೀ ॥೧೩॥

ಪವಿತ್ರ ಲೋಕಾಮಧೇ ಭಿಡಾವೇ। ವೊಂಗಳಾಮಧೇ ನಿಶಂಕ ಧಾವೇ।
ಸದಾ ಮನಾಪಾಸೂನ ಭಾವೇ। ಜನನಿಂದ್ಯ ಕ್ರಿಯಾ ॥೧೪॥

ಆದ್ದರಿಂದ ದರಿದ್ರಲಕ್ಷಣಗಳನ್ನುಕೇಳಿ ಅವುಗಳನ್ನು ನಿಜವಾಗಿ ತ್ಯಜಿಸಿಬಿಡಿರಿ.ಹೀಗೆ ತ್ಯಜಿಸಿದಿರೆಂದರೆ ಆ ಮೇಲೆ ನಿಮ್ಮಲ್ಲಿ ಭಾಗ್ಯದ ಲಕ್ಷಣಗಳು ಕೆಲವಾದರೂ ಸೇರ್ಪಡೆಯಾಗುವವು. ಮುಂದೆ ಅವು ಹೆಚ್ಚುತ್ತಹೋಗುವವು. (೩) ದರಿದ್ರನಿಗೆ ಆಲಸ್ಯವುಬಳ್ಳೇಪ್ರಿಯುವಾದದ್ದು ಅಥವಾ ಹೆಚ್ಚು ಸೇರುವದು.ಪ್ರಯತ್ನಮಾಡುವದಂತೂ ಇವನಿಗೆ ಎಷ್ಟುಸೇರುವದಿಲ್ಲ. ಇವನ ವಾಸನಾ ನಿರಂತರವೂ ಅಧರ್ಮದ ಕಡೆಗೇ ಓಡುತ್ತಿರುವದು. (೪) ಇವನು ಸದಾಕಾಲ ಭ್ರಮಿಷ್ಟನಂತೆ ಇದ್ದು ಸದಾ ನಿದ್ರೆಮಾಡುವನು. ಅರ್ಥಾತ್ ನಿದ್ರಾಪ್ರಿಯನೇ ಇರುವನು. ಕೆಲಸವಿಲ್ಲದೇ ಸುಮ್ಮನೆ ಯದ್ವಾ ತದ್ವಾ ಸಿಕ್ಕ ಪಟ್ಟೆ ಮಾತನಾಡುವನು. ಇನ್ನೊಬ್ಬರ ಅಂತಃಕರಣವನ್ನು ಇವನು ಮನ್ನಿಸುವದಿಲ್ಲ. (೫) ಇವನಿಗೆ ಸರಿಯಾಗಿ ಓದು ಬರೆಹ ಬರುವದಿಲ್ಲ. ವ್ಯಾಪಾರ ವ್ಯವಹಾರದಲ್ಲಿಯು ಕೊಡುವದು ತೆಗೆದುಕೊಳ್ಳುವದು. ಯಾವುದೂ ಗೊತ್ತಿರುವದಿಲ್ಲ. ವಾರದ ಸಂತೆಯು ವ್ಯವಹಾರ ಕೂಡಾ ಇವನಿಗೆ ಗೊತ್ತಿಲ್ಲ. ಜಮಾಖರ್ಚು ಬರೆಯುಲಿಕ್ಕೆ ಬರುವದಿಲ್ಲ. ಇದಲ್ಲದೆ ಇವನಿಗೆ ಜ್ಞಾಪಕ ಶಕ್ತಿಯೂ ಸರಿಯಾಗಿ ಇರುವದಿಲ್ಲ. (೬) ಇವನು ವಸ್ತುಗಳನ್ನು-ಸಾಮಾನುಗಳನ್ನು ಕಳೆದು ಕೊಳ್ಳುವನು, ಚೆಲ್ಲುವನು, ಕೆಡವುವನು, ಒಡೆಯುವನು, ಮರೆಯುವನು. ಮತ್ತು ತಪ್ಪುವನು. ಇವು ಮತ್ತು ಇಂಥವೇ ಕೆಲವು ಅಡ್ಡಾ ತಿಡ್ಡಾ ಕೆಟ್ಟ ಚಾಳಿಗಳು ಇವನಲ್ಲಿ ತುಂಬಿರುವವು. ಸಜ್ಜನರ ಸಂಗ ಹಿಡಿಯುಬೇಕೆಂಬುದಂತೂ ಇವನಿಗೆ ಎಷ್ಟೂ ಸೇರುವದಿಲ್ಲ. (೭) ಇವನು ಉದ್ಧಟ, ಉಡಾಳ ಜನರ ಗೆಳೆತನ ಬೆಳೆಸಿ ಗುಂಪು ಕಟ್ಟುವನು. ಮತ್ತು ಕೆಟ್ಟ ಕೆಲಸಗಳಿಗಾಗಿಯೇ ನಿಮಿತ್ಯ ಮಾತ್ರಕ್ಕೆ ಗೆಳೆಯರ ಗುಂಪು ಕಟ್ಟಿರುವನೆಂಬುದನ್ನು ಒಡೆದು ಹೇಳಬೇಕಾದಿಲ್ಲ. ಈ ಪ್ರಕಾರ ದುಷ್ಟರು, ನಷ್ಟರು. ಕಳ್ಳರು, ಮತ್ತು ಪಾಪಿ ಜನರನ್ನು ತನ್ನ ಸುತ್ತುಮುತ್ತು ಕೂಡಿಸಿಕೊಂಡು ಉಡಾಳರ ಸಂಘ ಮಾಡುವನು. (೮) ಆಮೇಲೆ ದಿನಾಲೂ ಒಬ್ಬರು ತಪ್ಪಿದರೆ ಒಬ್ಬರ ಸಂಗಡ ತಂಟೆ ತಕರಾರು ಇವನದು ಇದ್ದೇ ಇರುವದು ಕಾರಣವಿಲ್ಲದೇ ಜಗಳ ತೆಗೆಯುವನು. ಇದಲ್ಲದೇ ಇವನು ಸ್ವತಃ ಕಳ್ಳ ಮತ್ತು ತುಡುಗನಿರುವನು. ಇದಲ್ಲದೆ ಎರಡನೆಯವರ ಘಾತಮಾಡುವನು. ಆಡದಾಂಡಿಗನಿದ್ದು ದಾರಿ ಬಡಿಯುವವನೂ ಆಗಿರುವನು. (೯) ಇವನಿಗೆ ದೂರದರ್ಶಿತ್ವದ ಕಡೆಗೆ ಲಕ್ಷ್ಯಕೊಡುವದು ಗೊತ್ತಿರುವದಿಲ್ಲ. ಎಷ್ಟೂ ಮುಂದಾಲೋಚನೆ ಇರುವದಿಲ್ಲ. ನ್ಯಾಯ ನೀತಿಗಳ ಮಾತು ಸೇರುವದಿಲ್ಲ. ಯಾವಾಗಲೂ ಇನ್ನೊಬ್ಬರದನ್ನು ಲಪಟಾಯಿಸುವ ಹೀನ ವಿಚಾರವು ಇವನಲ್ಲಿ ಕಾಯಂ ವಾಸಮಾಡಿರುವದು. (೧೦) ಈ ರೀತಿಯ ದರಿದ್ರನು ಕೇವಲ ಆಲಸ್ಯದಿಂದಲೇ ತನ್ನ ಶರೀರವನ್ನು ಬೆಳೆಸುವನು.ಆದರೆ ಇದರಪರಿಣಾಮ ಮುಂದೆ ಹೇಗಾಗುವದೆಂದರೆ,ಕಾಲಾಂತರದಲ್ಲಿ ಇವನಿಗೆ ತಿನ್ನಲಿಕ್ಕೆಅನ್ನ ಸಿಗುವದಿಲ್ಲ. ಮತ್ತು ಹೊದೆಯಲು ಒಂದು ಹರಕು ಅರಿವೆ ಚಿಂದಿಯೂ ಸಹ ಸಿಗುವದಿಲ್ಲ. ಹೀಗಾಗಿ ಅನ್ನ-ವಸ್ತ್ರ ಎರಡೂ ಇಲ್ಲದ ದೈನ್ಯಾವಸ್ಥೆಯುವನಾಗುವನು. (೧೧) ಇಂಥ ಆಲಸ್ಯದಿಂದ ಶರೀರವನ್ನು ಸಂಬಾಳಿಸುವ ದರಿದ್ರನು ಒಂದೇ ಸಮನೇ ತಲೆಯನ್ನು, ಮೈಯನ್ನು ಕೆರೆಯುತ್ತ ಹಲ್ಲು ಕಿರಿದು ಸಿಕ್ಕಾಪಟ್ಟೆ ತುರಿಸುತ್ತ ಕೂಡುವನು. ಇಲ್ಲವಾದರೆ ಆರಾಮವಾಗಿ ಮಲಗಿ ಬಿಡುವನು. (೧೨) ಇವನು ಜನರೊಂದಿಗೆ [ಸಾಮಾನ್ಯ ಜನರೊಂದಿಗೆ] ಸ್ನೇಹಮಾಡುವದಿಲ್ಲ. ಸಿಕ್ಕವರಿಗೆಲ್ಲಾ ಕಠೋರ ಶಬ್ದಗಳನ್ನೂ ಮನಸ್ಸಿಗೆ ನಡುವಂತಹ ಅತ್ಯಂತ ಕೆಟ್ಟ ಮಾತುಗಳನ್ನೂ ಆಡುವನು. ಸ್ವತಃದ ಮೂರ್ಖ ತನದಿಂದಾಗಿ ಯಾರಿಗೂ ಆವರಿಸಲಿಕ್ಕೆ ಬಾರದಷ್ಟು ಬೇಘಾಮ ಆಗುವನು. (೧೩) ಪವಿತ್ರ ಜನರಿದ್ದಲ್ಲಿಗೆ ಹೋಗಲು ಇವನಿಗೆ ಸಂಕೋಚವಾಗುವದು. ಆದರೆ ಅದೇ ಅಪವಿತ್ರ ಹೊಲಸು ಜನರಿದ್ದಲ್ಲಿಗೆ ನಿಃಸಂಕೋಚವಾಗಿ ಹೋಗಿ ಕೂಡುವನು. ಜನರು ಯಾವ ಕಾರ್ಯವನ್ನು ನಿಂದ್ಯವೆಂದು ಅನ್ನುವರೋ ಆ ಕಾರ್ಯ ಈ ದರಿದ್ರನಿಗೆ ಬಹಳ ಮೆಚ್ಚಿಕೆಯುದು-ಪ್ರೀತಿಯುದು ಆಗಿರುತ್ತದೆ (೧೪)

ತೇಥೇ ಕೈಚಾ ಪರೋಪಕಾರ। ಕೇಲಾ ಬಹುತಾಂಚಾ ಸಂವ್ಹಾರ।
ಪಾಪೀ ಅನರ್ಥೀ ಅಪಸ್ಮಾರ। ಸರ್ವಅಬದ್ಧೀ ॥೧೫॥

ಶಬ್ದ ಸಾಂಭಾಳೂನ ಬೋಲೇನಾ। ಆವರಿತಾ ಆವರೇನಾ।
ಕೋಣೇಯೇಕಾಸೀ ಮಾನೇನಾ। ಬೋಲಣೇ ತ್ಯಾಚೇ ॥೧೬॥

ಕೋಣೇಯೇಕಾಸ ವಿಶ್ವಾಸ ನಾಹೀ। ಕೋಣೇಯೇಕಾಸೀ ಸಖ್ಯ ನಾಹೀ।
ವಿದ್ಯಾವೈಭವ ಕಾಹೀ ಚ ನಾಹೀ। ಉಗಾ ಚಿ ತಾಠಾ ॥೧೭॥

ರಾಖಾವೀ ಬಹುತಾಚೀ ಅಂತರೇ। ಭಾಗ್ಯ ಯೇತೇ ತದನಂತರೇ।
ಏಸೀ ಹೇ ವಿವೇಕಾಚೀ ಉತ್ತರೇ। ಏಕಣಾರ ನಾಹೀ ॥೧೮॥

ಸ್ವಯೇ ಆಪಣಾಸ ಕಳೇನಾ। ಶಿಕವಿಲೇ ತೇ ಏಕೇನಾ।
ತಯಾಸೀ ಉಪಾಯ ನಾನಾ। ಕಾಯ ಕರಿತೀ ॥೧೯॥

ಕಲ್ಪನಾ ಕರೀ ಉದಂಡ ಕಾಹೀ। ಪ್ರಾಪ್ತವ್ಯ ತೋ ಕಾಹೀ ಚ ನಾಹೀ।
ಅಖಂಡ ಪಡಿಲಾ ಸಂದೇಹೀ। ಅನುಮಾನಾಚೇ ॥೨೦॥

ಪುಣ್ಯಮಾರ್ಗ ಸಾಂಡಿಲಾ ಮನೇ। ಪಾಪ ಝಾಡಾವೇ ಕಾಶಾನೇ।
ನಿಶ್ಚಯ ನಾಹೀ ಅನುಮಾನೇ। ನಾಸ ಕೇಲಾ ॥೨೧॥

ಕಾಹೀಯೇಕ ಪುರ್ತೇ ಕಳೇನಾ। ಸಭೆಮಧೇ ಬೋಲೋ ರಾಹೇನಾ।
ಬಾಷ್ಕಳ ಲಾಬಾಡ ಏಸೇ ಜನಾ। ಕಳೋ ಆಲೇ ॥೨೨॥

ಕಾಹೀ ನೇಮಕಪಣ ಆಪುಲೇ। ಬಹುತ ಜನಾಸೀ ಕಳೋ ಆಲೇ।
ತೇ ಚಿ ಮನುಷ್ಯ ಮಾನ್ಯ ಜಾಲೇ। ಭೂಮಂಡಳೀ ॥೨೩॥

ಝಿಜಲ್ಯಾವಾಂಚುನೀ ಕೀರ್ತಿ ಕೈಚೀ। ಮಾನ್ಯತಾ ನವ್ಹೇ ಕೀ ಫುಕಾಚೀ।
ಜಿಕಡೆ ತಿಕಡೆ ಹೋತೇ ಚೀ ಚೀ। ಅವಲಕ್ಷಣೇ ॥೨೪॥

ಭಲ್ಯಾಚೀ ಸಂಗತೀ ಧರೀನಾ। ಆಪಣಾಸೀ ಶಾಹಾಣೇ ಕರೀನಾ।
ತೋ ಆಪಲಾ ಆಪಣ ವೈರೀ ಜಾಣಾ। ಸ್ವಹಿತ ನೇಣೇ ॥೨೫॥

ಲೋಕಾಸೀ ಬರೇ ಕರಾವೇ। ತೇ ಉಸಿಣೇ ಸವೇ ಚಿ ಘ್ಯಾವೇ।
ಏಸೇ ಜಯಾಚ್ಯಾ ಜೀವೇ। ಜಾಣಿಜೇನಾ ॥೨೬॥

ಜೇಥೇ ನಾಹೀ ಉತ್ತಮ ಗುಣ। ತೇ ಕರಂಟಪಣಾಚೇ ಲಕ್ಷಣ।
ಬಹುತಾಸೀ ನ ಮನೇ ತೇ ಅವಲಕ್ಷಣ। ಸಹಜ ಚಿ ಜಾಲೇ ॥೨೭॥

ಇವನ ಹತ್ತಿರ ಪರೋಪಕಾರದ ಮಾತೇ ಆಡುವಂತಿಲ್ಲ. ಇವನು ಬಹಳಷ್ಟು ಜನರನ್ನು ಕೊಂದಿರುವನು. ಇವನು ಪಾಪಿ, ಅನರ್ಥಗಳನ್ನು ಉಂಟುಮಾಡುವ ದುರಾತ್ಮನು. ಲಹರಿ, ಹಟಮಾರಿ ಮತ್ತು ಎಲ್ಲ ದೃಷ್ಟಿಯಿಂದ ಅಸಂಬದ್ಧ ಅವಿವೇಕಿಯಾಗಿರುವನು. (೧೫) ಮಾತನಾಡುವಾಗ ಶಬ್ದಗಳನ್ನು ಸಂಬಾಳಿಸಿಕೊಂಡು ಮಾತನಾಡುವದಿಲ್ಲ. ಇವನ ಅಸಂಬದ್ಧ ಮಾತುಗಳನ್ನು ಯಾರಾದರೂ ತಡೆದು ನಿಲ್ಲಿಸಬೇಕೆಂದರೆ ತಡೆಯಲಿಕ್ಕೆ ಆಗುವದಿಲ್ಲ ಇವನ ಮಾತು ಗಳು ಯಾರಿಗೂ ಸರಿ ಎನಿಸುವದಿಲ್ಲ. (೧೬) ಯಾರ ಮೇಲೆಯೂ ಇವನಿಗೆ ವಿಶ್ವಾಸವಿರುವದಿಲ್ಲ. ಯಾರ ಸಂಗಡವೂ ಇವನಿಗೆ ಗೆಳೆತನವಿರುವದಿಲ್ಲ. ವಿದ್ಯಾ, ವೈಭವ, ಇತ್ಯಾದಿ ಯಾವುದೂ ಏನೂ ಹತ್ತಿರ ಇರದಿದ್ದರೂ ಕೂಡಾ ಸುಮ್ಮನೆ ಅಭಿಮಾನ ಮಾತ್ರ ಇವನಲ್ಲಿ ಸಾಕಷ್ಟು ಇರುವದು. (೧೭) ಬಹಳಷ್ಟು ಜನರ ಅಂತಃಕರಣವನ್ನು ಸಂಬಾಳಿಸಿದರೆ ಆಮೇಲೆ ಕಾಲಾಂತರದಲ್ಲಿ ಭಾಗ್ಯ ಲಭಿಸುವದು. ಇಂಥ ವಿವೇಕದ ಹಿತನುಡಿಗಳನ್ನು ಕೇಳುವದಕ್ಕೆ ಈ ಹೀನನ ತಯಾರಿ ಇರುವದಿಲ್ಲ. (೧೮) ಸ್ವತಃ ತನ್ನ ಹಿತವೇ ತನಗೆ ತಿಳಿಯುವದಿಲ್ಲ. ಮತ್ತು ತಿಳಿದವರು ಹೇಳಿದರೆ ಅದನ್ನು ಕೇಳುವದಿಲ್ಲ. ಇಂಥ ಆತ್ಮಘಾತಕಿ ಜನರಿಗೆ ಯಾವ ಹಿತದ ಉಪದೇಶದ ಉಪಾಯವೂ ಅನ್ವಯಿಸುವದಿಲ್ಲ [ಲಾಗೂ ಬೀಳುವದಿಲ್ಲ.] (೧೯) ಇವನು ಬಹಳಷ್ಟು ದೊಡ್ಡ ದೊಡ್ಡ ಕಲ್ಪನೆಯನ್ನು ಮಾಡುವನು. ಆದರೆ ಇದರೊಳಗಿಂದ ಇವನ ಪದರಿನಲ್ಲಿ ಏನೂ ಬೀಳುವದಿಲ್ಲ. ಇವನು ಶಾಶ್ವತವಾಗಿ ಕಲ್ಪನೆಗಳ ಬಲೆಯಲ್ಲಿ ತೊಡಕಿಕೊಂಡೇ ಇರುವನು.(೨೦) ಮನಸ್ಸಿನಿಂದಲೇ ಪುಣ್ಯ ಮಾರ್ಗವನ್ನು ತ್ಯಾಗಮಾಡಿದನು. ಆದ್ದರಿಂದ ಇವನ ಪಾಪವು ಕ್ಷೀಣವಾಗಲು ಉಪಾಯವೇ ಉಳಿಯಲಿಲ್ಲ. ಇವನಲ್ಲಿ ಯಾವುದಾದರೂ ಒಂದರ ಬಗ್ಗೆ ಕೂಡಾ ನಿಶ್ಚಿತವಾದ ನಿರ್ಣಯವಿರುವದಿಲ್ಲ ಇದರಿಂದಾಗಿ ಕೇವಲ ಅನುಮಾನದ ಜೀವನವು ನಾಶವಾಗುವದು-ವ್ಯರ್ಥವಾಗುವದು. (೨೧) ಯಾವುದೇ ಮಾತು ಇವನಿಗೆ ಸಂಪೂರ್ಣವಾಗಿ ಮತ್ತು ಚನ್ನಾಗಿ ತಿಳಿಯುವದಿಲ್ಲ. ತಿಳಿಯಲಿಕ್ಕಾಗುವದಿಲ್ಲ. ಆದರೆ ಇವನು ಸಭೆಯಲ್ಲಿ ಏನಾದರೂ ಅಸಂಬದ್ಧ ಮಾತನಾಡದೇ ಇರುವದಿಲ್ಲ. ಇದರ ಮೇಲಿಂದ ಇವನು ಉದ್ಧಟನಿರುವನು. ಲಬಾಡ-ಲುಚ್ಚಾ ಇರುವನು. ಎಂದು ಅನ್ನುವದು ಜನರಿಗೆ ತಿಳಿಯುವದು. (೨೨) ಯಾವ ಮನುಷ್ಯನ ಜೀವನದಲ್ಲಿ ಉತ್ತಮ ಕಾರ್ಯಾದಿಗಳ ಬಗ್ಗೆ ಏನಾದರೂ ಅಲ್ಪ ಸ್ವಲ್ಪಾದರೂ ನಿಶ್ಚಿತತನದ ನಡವಳಿಕೆ ಕಂಡು ಬಂದರೆ ಇದು ಬಹಳಷ್ಟು ಜನರಿಗೆ ತಿಳಿಯು ವದು. ಇಂಥ ಮನುಷ್ಯರಿಗೇ ಜಗತ್ತಿನಲ್ಲಿ ಮರ್ಯಾದೆ ಪ್ರಾಪ್ತವಾಗುವದು. (೨೩) ಶರೀರದಿಂದ, ಮನದಿಂದ ಮತ್ತು ಧನದಿಂದ ಸವೆಯುದ ಹೊರತು, ಕಷ್ಟಪಡದ ಹೊರತು ಜಗತ್ತಿನಲ್ಲಿ ಕೀರ್ತಿ ದೊರಕುವದಿಲ್ಲ. ಜಗದ ಜನರಿಂದ ಮಾನ್ಯತೆ ಹೊಂದುವದು ಸಾಮಾನ್ಯವಾದದ್ದಲ್ಲ. ಅದು ಪುಕ್ಕಟೆಯಾಗಿ ದೊರಕುವದೂ ಅಲ್ಲ ಯಾರಲ್ಲಿ ಕುಲಕ್ಷಣ ಗಳಿರುವವೋ ಅವರು ಎಲ್ಲ ಕಡೆಯಿಂದಲೂ ಛೀ ಥೂ ಅನ್ನಿಸಿಕೊಳ್ಳುವರು. (೨೪) ಯಾವ ಮನುಷ್ಯ ಉತ್ತಮ ಸಜ್ಜನರ ಸಂಗತಿಯನ್ನು ಹಿಡಿಯುವದಿಲ್ಲವೋ, ಯಾರು ಸ್ವತಃ ಬುದ್ಧಿವಂತಿಕೆ [ಶಹಾಣೆತನ] ಗಳಿಸಿಕೊಳ್ಳುವದಿಲ್ಲವೋ ಅಂಥವರು ತಮ್ಮ ಹಿತವನ್ನು ತಾವೇ ಅರಿಯದವರಾಗುವರು. ಇಂಥವರು ತಮಗೆ ತಾವೇ ವೈರಿಯಾಗುವರು. ಇದನ್ನು ಸರಿಯಾಗಿ ಎಲ್ಲರೂ ತಿಳಿಯಬೇಕು. (೨೫) ನಾವು ಜನರಿಗೆ ಒಳಿತನ್ನು ಮಾಡಿದರೆ ಜನರೂ ನಮಗೆ ಒಳಿತನ್ನು ಮಾಡುವರು. ಈ ಖರೇ ಗುಟ್ಟಿನ ಮಾತು ಈ ಹತಭಾಗಿ ದರಿದ್ರನಿಗೆ ತಿಳಿಯುವದೇ ಇಲ್ಲ. ತಿಳಿಯಲೊಲ್ಲದಾಗಿದೆ.(೨೬) ತಾತ್ಪರ್ಯವೇನಂದರೆ ಯಾರಲ್ಲಿ ಒಂದೂ ಸಹ ಉತ್ತಮ ಗುಣ ಇಲ್ಲವೋ ಅಂಥವರು ದುರ್ದೈವಿಗಳು. ಇಂಥವರಲ್ಲಿ ಹತಭಾಗ್ಯ ಹೀನ ದೀನರ ಲಕ್ಷಣಗಳು ತುಂಬಿರುವವೆಂದು ತಿಳಿಯಿರಿ. ಯಾವುದು ಬಹುಜನರಿಗೆ ಒಪ್ಪಿತವಿರುವದಿಲ್ಲವೋ ಅದು ಸಹಜವಾಗಿಯೇ ಅವಲಕ್ಷಣವೆಂದು ತಿಳಿಯಲಾಗುವದು. (೨೭)

ಕಾರ್ಯಾಕಾರಣ ಸಕಳ ಕಾಂಹೀ । ಕಾರ್ಯೇವಿಣ ತೋ ಕಾಂಹೀ ಚ ನಾಹೀ।
ನಿಕಾಮೀ ತೋ ದುಃಖಪ್ರವಾಹೀ । ವಾಹಾತ ಚಿ ಗೇಲಾ ॥೨೮

ಬಹುತಾಸೀ ಮಾನ್ಯ ಥೋಡಾ । ತ್ಯಾಚ್ಯಾ ಪಾಪಾಸೀ ನಾಹೀ ಜೋಡಾ ।
ನಿರಾಶ್ರಈ ಪಡೆ ಉಘಡಾ । ಜೇಥೇ ತೇಥೇ ॥೨೯

ಯಾಕಾರಣೇ ಅವಗುಣ ತ್ಯಾಗಾವೇ । ಉತ್ತಮಗುಣ ಸಮಜೋನ ಘ್ಯಾವೇ ।
ತೇಣೇ ಮನಾಸಾರಿಖೇ ಫಾವೇ । ಸಕಳ ಕಾಂಹೀ ॥೩೦

ಇತಿ ಶ್ರೀ ದಾಸಭೋಧೆ ಗುರುಶಿಷ್ಯ ಸಂವಾದೆ
'ಕರಂಟ ಲಕ್ಷಣ ನಿರೂಪಣ' ನಾಮ ಸಮಾಸ ತೃತೀಯ ॥

ಕಾರ್ಯ, ಪ್ರಸಂಗ, ನಿಮಿತ್ತದಿಂದ ಎಲ್ಲ ಜನರೂ ಪರಸ್ಪರ ವಿಚಾರವಿನಿಮಯ ಮಾಡುವರು. ಹೇಳುವರು, ಕೇಳುವರು. ಏನೂ ಕೆಲಸವಿಲ್ಲದೇ ಯಾರೂ ಯಾರನ್ನೂ ವಿಚಾರಿಸುವದಿಲ್ಲ. ಆದ್ದರಿಂದ ಯಾವ ಮನುಷ್ಯನು ಒಂದಾದರೂ ಕೆಲಸಕ್ಕೆ ಉಪಯೋಗ ಬೀಳುವದಿಲ್ಲವೋ ಅವನಿಗೆ ಯಾರೂ ಕಿಮ್ಮತ್ತು ಕೊಡುವದಿಲ್ಲ. ನಿರುದ್ಯೋಗಿ ಮತ್ತು ಆಲಸಿಗನಾದ ಇವನು ದುಃಖದ ಪ್ರವಾಹದಲ್ಲಿ ತೇಲುತ್ತಹೋಗುವನು. (೨೮) ಯಾವನು ಬಹು ಜನರಿಗೆ ಮಾನ್ಯನಿರುವದಿಲ್ಲವೋ ಯಾವನು ಬಹುಜನರ ಪ್ರೀತಿಗೆ ಪಾತ್ರನೆನಿಸುವದಿಲ್ಲವೋ ಇಂಥವನ ಪಾಪಕ್ಕೆ ಎಣೆ ಇರುವದಿಲ್ಲ. ಇವನನ್ನು ದೊಡ್ಡ ಪಾಪಿ ಎಂದು ತಿಳಿಯಬೇಕು. ಇಂಥವನಿಗೆ ಯಾರೂ ಎಲ್ಲಿಯೂ ಆಶ್ರಯ ಕೊಡುವದಿಲ್ಲ. ಇವನು ಎಲ್ಲ ಕಡೆಯಿಂದಲೂ ಬೇಡವಾದವನಾಗಿ – ಅನಾಥನಾದವನಿಗೆ ಬಟಾಬಯಲೇ ಗತಿಯು. [ ೨೯ ] ಆದ್ದರಿಂದ ಮನುಷ್ಯನು ತನ್ನಲ್ಲಿರುವ ಎಲ್ಲ ಅವಗುಣಗಳನ್ನು ತ್ಯಜಿಸಬೇಕು. ಉತ್ತಮ ಗುಣಗಳು ಯಾವವು ಅನ್ನುವದನ್ನು ತಿಳಿದು ಅಭ್ಯಾಸ ಮಾಡಬೇಕು. ಆಚರಣೆಯಲ್ಲಿ ನಿರ್ಧಾರದಿಂದ ತರಬೇಕು. ಹೀಗೆ ಮಾಡಿದ್ದಾದರೆ ಏನೆಲ್ಲವೂ ಮನಸ್ಸಿನಂತೆ ಆಗಿ ಸಮಾಧಾನ ಪ್ರಾಪ್ತವಾಗುವದು. (೩೦)

ಶ್ರೀ ದಾಸಬೋಧದ ಹತ್ತೊಂಭತ್ತನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ಕರಂಟ ಲಕ್ಷಣ ನಿರೂಪಣ"ವೆಂಬ ಹೆಸರಿನ ಮೂರನೆಯ ಸಮಾಸವು ಮುಗಿದುದು.

● ●

### ದಶಕ. ಏಕೋನ ವಿಂಶತಿ : ಸಮಾಸ. ಚತುರ್ಥ : ಸದೇವ ಲಕ್ಷಣ ನಿರೂಪಣ (ನುಡಿ ೩೧)

॥ಶ್ರೀರಾಮ ಸಮರ್ಥ॥ ಮಾಗಾ ಬೋಲಿಲೇ ಕರಂಟ ಲಕ್ಷಣ ।
ತೇ ವಿವೇಕೇ ಸಾಂಡಾವೇ ಸಂಪೂರ್ಣ ।
ಆತಾ ಏಕಾ ಸದೇವ ಲಕ್ಷಣ । ಪರಮ ಸೌಖ್ಯದಾಯೆಕ ॥೧॥

ಉಪಜತಗುಣ ಶರೀರೀ । ಪರೋಪಕಾರೀ ನಾನಾಪರೀ ।
ಆವಡೇ ಸರ್ವಾಂಚೇ ಅಂತರೀ । ಸರ್ವಕಾಳ ॥೨॥

ಸುಂದರ ಅಕ್ಷರ ಲೇಹೋ ಜಾಣೇ । ಚಪಳ ಶುದ್ಧ ವಾಚೂ ಜಾಣೇ ।
ಅರ್ಥಾಂತರ ಸಾಂಗೋ ಜಾಣೇ । ಸಕಳ ಕಾಂಹೀ ॥೩॥

## ದಶಕ ೧೯. ಸಮಾಸ ೪. ಸದೇವ [ಸದೈವ] ಲಕ್ಷಣ ನಿರೂಪಣ (ನುಡಿ ೩೧)

ಸದೇವ ಅಂದರೆ ದೈವವಂತ, ಭಾಗ್ಯವಂತ. ಸದೇವ[ಸದೈವ]ಲಕ್ಷಣ ಅಂದರೆ ದೈವವಂತ, ಅಥವಾ ಭಾಗ್ಯವಂತ ಲಕ್ಷಣಗಳು ಅರ್ಥಾತ್ ಮಾನವನಲ್ಲಿ ಸದಾಕಾಲ ಇರಬೇಕಾದ ಸುಯೋಗ್ಯ ಲಕ್ಷಣಗಳು ಎಂದು ತಿಳಿಯಬೇಕು.

ಈ ಸಮಾಸದಲ್ಲಿ ಶ್ರೀ ಸಮರ್ಥರು ಭಾಗ್ಯವಂತ ಪುರುಷನ ಲಕ್ಷಣಗಳನ್ನು ವರ್ಣನೆ ಮಾಡುವರು. ಗ್ರಂಥದಲ್ಲಿಯು ಅನೇಕ ಕಡೆಗೆ ಇಂಥ ಪುರುಷನ ವರ್ಣನೆಯು ಈ ಹಿಂದೆ ಬಂದು ಹೋಗಿರುವದು. ಈ ಹಿಂದೆ ಬಂದು ಹೋದ ವರ್ಣನೆಗಳಲ್ಲಿ ಮುಖ್ಯವಾಗಿ ಮುಂದೆ ಹೇಳಲಾಗಿರುವ ಏಳು ಗುಣಗಳ ಬಗ್ಗೆ ಮೇಲಿಂದ ಮೇಲೆ ಉಲ್ಲೇಖ ವಾದದ್ದು ಕಂಡುಬರುವದು. [೧] ಅತ್ಯಂತ ಮೃದು ಮಧುರ ಸವಿ ಭಾಷೆ. [೨] ಯಾವತ್ತೂ ಜನರ ಅಂತರಂಗ ವನ್ನು ಕಾಯ್ದುಕೊಳ್ಳುವದು. ಅಂದರೆ ಯಾರ ಅಂತಃಕರಣಕ್ಕೂ ನೋವಾಗುವಂತೆ ಮಾತಾಡದಿರುವದು. ಮತ್ತು ನೋವಾಗುವಂತೆ ನಡೆಯದಿರುವದು. ಅಥವಾ ಯಾರ ಮನಸ್ಸಿಗೂ ದುಃಖವಾಗುವಂತೆ ಮಾಡದಿರುವದು. [೩] ಮನಸಾ ನಿಮ್ಮಲ್ಲಿ ಇದ್ದಂಥ ಖರೇ ನಮ್ರತೆ ಅಥವಾ ಲೀನತೆ ಇದನ್ನು ಕಾಯ್ದುಕೊಳ್ಳುವದು. [೪] ಎರಡನೇಯವರಿಗೆ ಆಗುವ ಕೊರತೆಯನ್ನು ತುಂಬಿಕೊಡುವಲ್ಲಿ ನೆರವಾಗುವದು. ಅಥವಾ ನಿಃಸ್ವಾರ್ಥತನದಿಂದ ಇನ್ನೊಬ್ಬರಿಗೆ ಉಪ ಯೋಗ ಬೀಳುವದು. ಅಥವಾ ಪರೋಪಕಾರದಲ್ಲಿ ದೇಹ ಸವೆಸುವದು.[೫] ಅತ್ಯಂತ ನಿಸ್ಪೃಹ ಮತ್ತು ನಿರ್ವಾಸನ, ಆಶೆ, ಆಮಿಷಗಳಿಲ್ಲದೆ ಇರುವದು; ವಾಸನಾ ಇರುವದೇ ಆದರೂ ಅದು ಎಲ್ಲರೂ ಸುಖವಾಗಿರಲಿ ಅನ್ನುವ ವಾಸನಾ ಇದ್ದರೆ ಇರಲಿ [೬] ಆತ್ಮಜ್ಞಾನದ ಬಗ್ಗೆ ಬಹಳಷ್ಟು ಪ್ರೇಮ ನಂಬಿಕೆ ಇರುವದು. [೭] ನಿಮ್ಮಲ್ಲಿ ಕ್ಷಮೆ, ದಮೆ, ಶಾಂತಿ, ಇರಲಿ. ಯಾವ ಮನುಷ್ಯ ಶ್ರೇಷ್ಠ ವಿದ್ವಾನ್, ಅಥವಾ ಮುತ್ಸದ್ದಿ ಅಥವಾ ವಕ್ತಾ ಅಥವಾ ಐಶ್ವರ್ಯ ಸಂಪನ್ನನಿರುವನೋ ಅವನೇ ನಿಜವಾದ [ಖರೇ] ಭಾಗ್ಯವಂತನಲ್ಲ. ಯಾವನು ಬಹು ಜನರಿಗೆ ಬೇಕಾದವನಾಗಿರುವನೋ ಮತ್ತು ಇನ್ನೊಬ್ಬರ ದುಃಖ ಕಂಡು ದುಃಖಪಡುವನೋ, ಮತ್ತು ಎರಡನೆಯವರಿಗಾದ ಸುಖವನ್ನು ನೋಡಿ ಸಂತೋಷಪಡುವನೋ ಮತ್ತು ಯಾವನು ಎಲ್ಲರಿಗೂ ಎಲ್ಲ ಕಾಲಕ್ಕೂ ಬೇಕಾದವನಾಗುವನೋ ಮತ್ತು ಯಾವನು ಅನೇಕ ಜನರನ್ನು ಸನ್ಮಾರ್ಗಕ್ಕೆ ಹಚ್ಚುವನೋ ಅಂಥ ಮನುಷ್ಯನು ಶ್ರೀ ಸಮರ್ಥರ ಮತದಂತೆ ನಿಜವಾದ [ಖರೇ] ಭಾಗ್ಯವಂತನೆಂದು ತಿಳಿಯಬೇಕು.

### ದಶಕ ೧೯. ಸಮಾಸ ೪. ಸದೇವ ಲಕ್ಷಣ ನಿರೂಪಣ (ನುಡಿ ೩೧)

ಹಿಂದಿನ ಸಮಾಸದಲ್ಲಿ ಕರಂಟ [ದರಿದ್ರ] ಲಕ್ಷಣಗಳನ್ನು ಹೇಳಿದರು. ಈಗ ಅದರ ವಿರುದ್ಧ ಲಕ್ಷಣಗಳು ಈ ಸಮಾಸದಲ್ಲಿ ಕಂಡುಬರುವವು. ಸವಿ ಮಧುರ ಭಾಷೆಯನ್ನು ಉಪಯೋಗಿಸಿ- ಎಲ್ಲರ ದೋಷಗಳನ್ನು ಹೊಟ್ಟೆ ಯಲ್ಲಿ ಹಾಕಿಕೊಂಡು ಒಳಗೊಳಗೆ [ಅಪಸಾತದಲ್ಲಿ] ಪರಸ್ಪರ ಪ್ರೇಮ ಬೆಳೆಸಿ ಯಾವನು ಸಮಾಜ ಜೀವನವನ್ನು ಸುಘಟಿಸುವನೋ ಅವನೇ ಉತ್ತಮ ಲಕ್ಷಣಗಳ ಉತ್ತಮ ಪುರುಷನಾಗಿರುವನು. ಅರ್ಥಾತ್ ಇಂಥವನು ಆತ್ಮನಿಷ್ಠ ಮತ್ತು ಅತ್ಯಂತ ನಿಃಸ್ವಾರ್ಥಿ ಇರುವನು ಅನ್ನುವದನ್ನು ಒಡೆದು ಪ್ರತ್ಯೇಕ ಹೇಳುವ ಅವಶ್ಯಕತೆ ಇಲ್ಲ: ಹಿಂದಿನ ಸಮಾಸದಲ್ಲಿ ಕರಂಟ [ದರಿದ್ರ] ಲಕ್ಷಣಗಳನ್ನು ಹೇಳಿದೆವು. ವಿವೇಕದಿಂದ ಅವನ್ನೆಲ್ಲ ಸಂಪೂರ್ಣ ಬಿಡಬೇಕು. ಮತ್ತು ಈಗ ನಿಮಗೆ ಅತಿಶಯ ಸುಖಕೊಡುವಂಥ ಸದೇವ ಲಕ್ಷಣಗಳನ್ನು ತಿಳಿಸಿ ಹೇಳುವೆ, ಲಕ್ಷ್ಯಗೊಟ್ಟು ಅವನ್ನೆಲ್ಲ ಕೇಳಬೇಕು. (೧) ಕೆಲವು ಜನರಲ್ಲಿ ಕೆಲವು ಉತ್ತಮ ಗುಣಗಳು ಜನ್ಮತಃ ಇರುವವು. ಇವರು ಅನೇಕ ಮಾರ್ಗದಿಂದ ಪರೋಪಕಾರವನ್ನು ಮಾಡುವರು. ಮತ್ತು ಇವರು ಸರ್ವಕಾಲವೂ ಸರ್ವರಿಗೂ ಪ್ರೀತಿಯವರಾಗಿರುವರು. ಇವೆಲ್ಲವೂ ಸದೇವ ಲಕ್ಷಣಗಳು. (೨) ಇವರು ಸುಂದರ ಅಕ್ಷರಗಳನ್ನು ಬರೆಯುವರು. ಬರೆದದ್ದನ್ನು ಇವರು ಬೇಗ ಬೇಗ [ಭರಾ ಭರಾ] ಆದರೆ ಶುದ್ಧವಾಗಿ ಓದುವರು, ಮತ್ತು ಇವರು ಯಾವುದನ್ನು ಓದುವರೋ ಅದರ ಎಲ್ಲ ಮತ್ತು ಆಳವಾದ ಅರ್ಥವನ್ನು ಅನೇಕ ರೀತಿಯಿಂದ ತಿಳಿಸಿ ಹೇಳಬಲ್ಲವರಾಗಿರುವರು. (೩)

ಕೋಣಾಚೇ ಮನೋಗತ ತೋಡೀನಾ। ಭಲ್ಯಾಂಚೀ ಸಂಗತೀ ಸೋಡೀನಾ।
ಸದೇವಲಕ್ಷಣ ಅನುಮಾನಾ। ಆಣೂನ ಠೇವೀ ॥೪॥
ತೋ ಸಕಳ ಜನಾಸೀ ವ್ಹಾವಾ। ಜೇಥೇ ತೇಥೇ ನಿತ್ಯ ನವಾ।
ಮೂರ್ಖಪಣೇ ಅನುಮಾನಗೋವಾ। ಕಾಂಹೀ ಚ ನಾಹೀ ॥೫॥
ನಾನಾ ಉತ್ತಮ ಗುಣ ಸತ್ಪಾತ್ರ। ತೇಚಿ ಮನುಷ್ಯ ಜಗಮಿತ್ರ।
ಪ್ರಗಟ ಕೀರ್ತೀ ಸ್ವತಂತ್ರ। ಪರಾಧೇನ ನಾಹೀ ॥೬॥
ರಾಖೆ ಸಕಳಾಚೇ ಅಂತರ। ಉದಂಡ ಕರೀ ಪಾಠಾಂತರ।
ನೇಮಸ್ತಪಣಾಚಾ ವಿಸರ। ಪಡಣಾರ ನಾಹೀ ॥೭॥
ನಮ್ರಪಣೇ ಪುಸೋ ಜಾಣೇ। ನೇಮಸ್ತ ಅರ್ಥ ಸಾಂಗೋ ಜಾಣೇ।
ಬೋಲಾವಿಸೇ ವರ್ತೋ ಜಾಣೇ। ಉತ್ತಮ ಕ್ರಿಯಾ ॥೮॥
ಜೋ ಮಾನಲಾ ಬಹುತಾಸೀ। ಕೋಣೇ ಬೋಲೋ ನ ಶಕೆ ತ್ಯಾಸೀ।
ಧಗಧಗೀತ ಪುಣ್ಯರಾಸೀ। ಮಹಾ ಪುರುಷ ॥೯॥
ತೋ ಪರೋಪಕಾರ ಕರಿತಾ ಚಿ ಗೇಲಾ। ಪಾಹಿಜೇ ತೋ ಜ್ಯಾಲಾ ತ್ಯಾಲಾ।
ಮಗ ಕಾಯೋ ಉಣೇ ತಯಾಲಾ। ಭೂಮಂಡಳೀ ॥೧೦॥
ಬಹುತ ಜನ ವಾಸ ಪಾಹೇ। ವೇಳೆಸೀ ತತ್ಕಾಳ ಉಭಾ ರಾಹೇ।
ಉಣೇ ಕೋಣಾಚೇ ನ ಸಾಹೇ। ತಯಾ ಪುರುಷಾಸೀ ॥೧೧॥
ಚೌದಾ ವಿದ್ಯಾ ಚೌಸಷ್ಟೀ ಕಳಾ। ಜಾಣೇ ಸಂಗೀತ ಗಾಯೆನ ಕಳಾ।
ಆತ್ಮವಿದ್ಯೇಚಾ ಜಿವ್ಹಾಳಾ। ಉದಂಡ ತೇಥೇ ॥೧೨॥
ಸಕಳಾಸೀ ನಮ್ರಬೋಲಣೇ। ಮನೋಗತ ರಾಖೋನ ಚಾಲಣೇ।
ಅಖಂಡ ಕೋಣೇಯೆಕಾಚೇ ಉಣೇ। ಪಡೋ ಚಿ ನೇದೀ ॥೧೩॥
ನ್ಯಾಯ ನೀತಿ ಭಜನ ಮರ್ಯಾದಾ। ಕಾಳ ಸಾರ್ಥಕ ಕರೀ ಸದಾ।
ದರಿದ್ರ ಪಣಾಚಿ ಆಪದಾ। ತೇಥೇ ಕೈಚೀ ॥೧೪॥
ಉತ್ತಮ ಗುಣೇ ಶೃಂಗಾರಲಾ। ತೋ ಬಹುತಾಮಧೇ ಶೋಭಲಾ।
ಪ್ರಗಟ ಪ್ರತಾಪೇ ಉಗವಲಾ। ಮಾರ್ತಂಡ ಜೈಸಾ ॥೧೫॥
ಜಾಣತಾ ಪುರುಷ ಅಸೇಲ ಜೇಥೇ। ಕಳ್ಹೋ ಕೈಚಾ ಉರೇಲ ತೇಥೇ।
ಉತ್ತಮ ಗುಣಾವಿಷೀ ರಿತೇ। ತೇ ಪ್ರಾಣೀ ಕರಂಟೇ ॥೧೬॥

ಸದೇವ ಲಕ್ಷಣದ ಮನುಷ್ಯ ಎರಡನೆಯವರ ಮನಸ್ಸನ್ನು ನೋಯಿಸುವದಿಲ್ಲ. ನೋವನ್ನುಂಟು ಮಾಡುವದಿಲ್ಲ. ಸಜ್ಜನರ ಸಂಗತಿಯನ್ನು ಬಿಡುವದಿಲ್ಲ. ಭಾಗ್ಯವಂತರ ಲಕ್ಷಣದ ಕಲ್ಪನೆ ಇವನಿಗೆ ಸರಿಯಾಗಿ ಗೊತ್ತಿರುವದು. (೪) ಎಲ್ಲರಿಗೂ ಇವನು ಬೇಕೆನಿಸುವನು. ಇವನು ಎಲ್ಲೆಲ್ಲಿ ಹೋಗುವನೋ ಅಲ್ಲಿ ಎಲ್ಲ ಕಡೆಗೂ ಅತ್ಯಂತ ಹೊಸ ರೀತಿಯಲ್ಲಿ ಜನರ ಪ್ರೇಮಗಳಿಸುವನು. ಜನರೂ ಇವನನ್ನು ನಮ್ಮವನೆಂದು ಪ್ರೀತಿಯಿಂದ ಕಾಣು ವರು. ಅರ್ಥಾತ್ ಇದರಿಂದ ಇವನ ಲೋಕಪ್ರಿಯತೆ ಹೆಚ್ಚುತ್ತ ಹೋಗುವದು. ಮೂರ್ಖತನದಿಂದಾಗಿ ಉಂಟಾಗು ವಂತಹ ಸಂಶಯ ಮತ್ತು ಇಲ್ಲದ ಕಲ್ಪನೆಯ ಗೊಂದಲ [ಘೋಟಾಳೆ] ಇವನಲ್ಲಿ ಇರುವದೇ ಇಲ್ಲ. (೫) ಅನೇಕ ಉತ್ತಮ ಗುಣಗಳಿರುವ ಸ್ಥಾನವೇ ಇವನಾಗಿರುವದರಿಂದ ಇವನು ಸತ್ಪಾತ್ರನಿರುವನು. ಇಂಥ ಮನುಷ್ಯನು ನಿಜವಾದ [ಖರೇ] ಜಗಮಿತ್ರನೇ ಇರುವನು. ಇವನ ಕೀರ್ತಿಯು ಇವನ ಗುಣದ ಯೋಗದಿಂದ ಸ್ವತಂತ್ರ ರೀತಿಯಲ್ಲಿ ಜಗತ್ತಿ ನೊಳಗೆ ಪಸರಿಸುವದು. ಇವನ ಕೀರ್ತಿಗೆ ಯಾರ ಆಧಾರವಸಹಾಯವೂ ವಶೀಲಿಯೂ ಬೇಕಾಗುವದಿಲ್ಲ. (೬) ಇವನು ಎಲ್ಲರ ಅಂತಃಕರಣವನ್ನು ಸಂಭಾಳಿಸುವನು. ಇವನು ಬಹಳಷ್ಟು ಪಾಠಾಂತರಮಾಡುವನು–ಓದುವನು. ನಿಯಮಿಂತ ಆಚರಣಾದಿಗಳನ್ನು ಯಾವದೇ ಯೋಗ್ಯ ಕೆಲಸ ಕಾರ್ಯಗಳನ್ನು ಎಂದೂ ಮರೆಯುವದಿಲ್ಲ. ಇದರಿಂದ ಒಳ್ಳೇ ಕಾರ್ಯಶೀಲನೆಂದು ಜನರಿಂದ ಅನಿಸಿಕೊಳ್ಳುವನು. (೭) ಇವನು ಇನ್ನೊಬ್ಬರ ಸಂಗಡ ಅತಿ ನಮ್ರತೆಯಿಂದ ವಿಚಾರವಿನಿಮಯ ಮಾಡುವನು. [ವಿಚಾರಿಸುವನು].ಗ್ರಂಥಗಳಲ್ಲಿಯ ಸರಿಯಾದ ಅರ್ಥವನ್ನು ಹೇಗೆ ಹೇಳಬೇಕೆನ್ನು ವದನ್ನು ಇವನು ತಿಳಿದಿರುವನು. ಇವನು ಹೇಗೆ ಮಾತನಾಡುವನೋ ಅದರಂತೆಯೇ ಇವನ ನಡೆಯೂ ಇರುವದು. ಮತ್ತು ಇವನಿಂದ ಯಾವಾಗಲೂ ಉತ್ತಮ ಕ್ರಿಯೆಗಳೇ ಘಟಿಸುವವು. ಇವನ ಕೆಲಸ ಯಾವಾಗಲೂ ಉತ್ತಮ ವಿರುವದು. (೮) ಇವನನ್ನು ಬಹಳಷ್ಟು ಜನರು ಮನ್ನಿಸುವರು. ಅಂತೆಯೇ ಇವನಿಗೆ ಯಾರೂ ವ್ಯರ್ಥವಾಗಿ [ಸುಮ್ಮನೆ] ಏನೂ ಮಾತಾಡಲು–ಆಡಿಕೊಳ್ಳಲು ಆಗುವದಿಲ್ಲ. ಇವನು ಶ್ರೇಷ್ಠ ತೇಜಸ್ವಿ ಮತ್ತು ಪುಣ್ಯವಂತ ಮಹಾಪುರುಷನಿರುವನು. (೯) ಇವನು ಅವಿರತವಾಗಿ ಪರೋಪಕಾರ ಮಾಡುತ್ತ ಹೋಗುವನು. ಇದರಿಂದಾಗಿ ಎಲ್ಲರಿಗೂ ಇವನು ಬೇಕಾದವನೆನಿಸುವನು. ಇಂಥ ಪರೋಪಕಾರಿ ಪುರುಷನಿಗೆ ಈ ಜಗತ್ತಿನಲ್ಲಿ ಏನೇನೂ ಕಡಿಮೆ ಬೀಳುವದಿಲ್ಲ. (೧೦) ಸದೇವ ಲಕ್ಷಣವುಳ್ಳವನೂ ಸರ್ವತ್ರದಲ್ಲಿಯೂ ಮೈತ್ರಿ ಸಂಪಾದಿಸಿದವನೂ ಆದ ಇವನ ಭೆಟ್ಟಿಯ ಹಾದಿಯನ್ನು ಬಹು ಜನರು ಕಾಯುತ್ತಿರುವರು, ಇವನು ಬರುವ ಹಾದಿಯನ್ನು ನೋಡುತ್ತಿರುವರು. ಅದರಂತೆ ಇವನೂ ಸಹ ಪ್ರತಿಯೊಬ್ಬರ ಅಡಚಣೆ ಆಪತ್ತಿನಲ್ಲಿ ಸಹಾಯಮಾಡುವದಕ್ಕಾಗಿ ಸದಾ ತಯಾರಾಗಿಯೇ ನಿಂತಿರುತ್ತಾನೆ. ಈ ಮಹಾಪುರುಷನಿಗೆ ಯಾರಿಗಾದರೂ ಏನಾದರೂ ಕಡಿಮೆ ಬಿದ್ದರೆ, ತೊಂದರೆ ಆದರೆ, ಸಹನವಾಗು ವದಿಲ್ಲ. (೧೧) ಇವನಲ್ಲಿ ಹದಿನಾಲ್ಕು ವಿದ್ಯೆ ಮತ್ತು ಅರವತ್ನಾಲ್ಕು ಕಲೆಗಳು ಇರುವವು. ಇವನು ಸಂಗೀತವನ್ನು ತಿಳಿದಿರುವನು. ಸ್ವತಃ ಹಾಡಬಲ್ಲವನಿರುವನು. ಇವನ ಅಂತರ್ಯಾಮದಲ್ಲಿ ಆತ್ಮವಿದ್ಯೆಯ ವಿಷಯದ ಬಗ್ಗೆ ಅತಿಶಯ ಪ್ರೇಮವಿರುವದು. (೧೨) ಎಲ್ಲರ ಸಂಗಡವೂ ಇವನು ನಮ್ರತನದಿಂದ ಮಾತನಾಡುವನು. ಇನ್ನೊಬ್ಬರ ಮನದಲ್ಲಿ ರುವದನ್ನು ಮೊದಲು ಗುರುತಿಸುವನು. ಅದಕ್ಕನುಸಾರವಾಗಿ ತಾನೂ ನಡೆಯುವನು. ಯಾವಾಗಲೂ, ಯಾರಿಗಾದರೂ ಕೊರತೆ ಉಂಟಾಗದಂತೆ ಇವನು ದಕ್ಷತೆಯನ್ನು ವಹಿಸುವನು. (೧೩) ನ್ಯಾಯ, ನೀತಿ, ಭಜನೆ ಮತ್ತು ಮರ್ಯಾದೆ ಇವುಗಳನ್ನು ಸಂಬಾಳಿಸಿ ಕಾಯ್ದುಕೊಂಡು ಇವನು ತನ್ನ ವೇಳೆಯನ್ನು ಸತತವೂ ಸಾರ್ಥಕ್ಯಮಾಡಿಕೊಳ್ಳುವನು. ಇಂಥ ಮನುಷ್ಯನ ಜೀವನದಲ್ಲಿ ದಾರಿದ್ರ್ಯದ ಸಂಕಟ ಬರುವದು ಅಶಕ್ಯವಿರುವದು. (೧೪) ಇಂಥ ಪ್ರಕಾರದ ಉತ್ತಮ ಗುಣಗಳಿಂದ ಶೃಂಗಾರಗೊಂಡ ಈ ಪುರುಷನು ಬಹು ಜನರಲ್ಲಿ ಎದ್ದು ಶೋಭಿಸುವನು. ಸೂರ್ಯನು ಉದಯವಾದ ನೆಂದರೆ ಅವನ ಪ್ರಖರ ಪ್ರಕಾಶವು ಹೇಗೆ ಸರ್ವತ್ರ ಬೀಳುವದೋ ಅದರಂತೆ ಇಂಥ ಸದೇವ ಲಕ್ಷಣವುಳ್ಳ ಪುರುಷನ ಪ್ರಕಾಶವೂ ಸರ್ವತ್ರ ಬೀಳುವದು. [೧೫] ಯಾವ ಸ್ಥಳದಲ್ಲಿ ಜಾಣ ಪುರುಷನಿರುವನೋ ಆ ಸ್ಥಳದಲ್ಲಿ ಜಗಳ, ಬಡಿದಾಟ, ಹೊಡೆದಾಟಗಳು, ತಂಟೆ, ತಕರಾರುಗಳು ಆಗುವದಿಲ್ಲ. ಯಾರಲ್ಲಿ ಉತ್ತಮ ಗುಣಗಳಿರುವದಿಲ್ಲವೋ ಅಂಥ ಜನರು ದರಿದ್ರರೂ ಹೀನರೂ ಇರುವರು. ಇಂಥವರಿಂದ ಜಗಳ ತಂಟೆ ತಕರಾರುಗಳು ಉಂಟಾಗುವವು. [೧೬]

ಪ್ರಪಂಚೀ ಜಾಣೇ ರಾಜಕಾರಣ । ಪರಮಾರ್ಥೀ ಸಾಕಲ್ಯ ವಿವರಣ ।
ಸರ್ವಾಂಮಧೇ ಉತ್ತಮ ಗುಣ । ತ್ಯಾಚಾ ಭೋಕ್ತಾ ॥೧೭॥

ಮಾಗೇ ಯೇಕ ಪುಢೇ ಯೇಕ । ಐಸಾ ಕದಾಪಿ ನಾಹೀ ದಂಡಕ ।
ಸರ್ವತ್ರಾಂಸೀ ಅಲೋಲಿಕ । ತಯಾ ಪುರುಷಾಚೀ ॥೧೮॥

ಅಂತರಾಸೀ । ಲಾಗೇಲ ಧಕಾ । ಐಸೀ ವರ್ತಣೂಕ ಕರೂನಕಾ ।
ಜೇಥೇ ತೇಥೇ ವಿವೇಕಾ । ಪ್ರಗಟ ಕರೀ ॥೧೯॥

ಕರ್ಮವಿಧಿ ಉಪಾಸನಾವಿಧೀ । ಜ್ಞಾನವಿಧೀ ವೈರಾಗ್ಯವಿಧೀ ।
ವಿಶಾಳ ಜ್ಞಾತ್ರುತ್ವಾಚೀ ಬುದ್ಧೀ । ಚಳೇಲ ಕೈಸೀ ॥೨೦॥

ಪಾಹಾತಾ ಅವಘೇ ಉತ್ತಮ ಗುಣ । ತಯಾಸ ವಾಈಟ ಮ್ಹಣೇಲ ಕೋಣ ।
ಜೈಸಾ ಆತ್ಮಾ ಸಂಪೂರ್ಣ । ಸರ್ವಾಂ ಘಟೀ ॥೨೧॥

ಆಪಲ್ಯಾ ಕಾರ್ಯಾಸ ತತ್ಪರ । ಲೋಕ ಅಸತೀ ಲಾಹಾನ ಥೋರ ।
ತೈಸಾ ಚಿ ಕರೀ ಪರೋಪಕಾರ । ಮನಾಪಾಸುನೀ ॥೨೨॥

ದುಸರ್ಯಾಚ್ಯಾ ದುಃಖೇದುಖವೇ । ದುಸರ್ಯಾಚ್ಯಾ ಸುಖೇಸುಖಾವೇ ।
ಅವಘೇ ಚಿ ಸುಖೀ ಅಸಾವೇ । ಐಸೀ ವಾಸನಾ ॥೨೩॥

ಉದಂಡ ಮುಲೇ ನಾನಾಪರೀ । ವಡಿಲಾಂಚೇ ಮನ ಅವಘ್ಯಾವರೀ ।
ತೈಸೀ ಅವಘ್ಯಾಚೀ ಚಿಂತಾಕರೀ । ಮಾಹಾಪುರುಷ ॥೨೪॥

ಜಯಾಸ ಕೋಣಾಚೇ ಸೋಸೇನಾ । ತಯಾಚೀ ನಿಃಕಾಂಚನ ವಾಸನಾ ।
ಧೀಕಾರಿಲ್ಯಾ ಧೀಕಾರೇನಾ । ತೋ ಚಿ ಮಹಾಪುರುಷ ॥೨೫॥

ಮಿಥ್ಯಾ ಶರೀರ ನಿಂದಲೇ । ತರೀ ಯಾಚೇ ಕಾಯೋ ಗೇಲೇ ।
ಜ್ಞಾತ್ಯಾಸೀ ಆಣೀ ಜಿಂತಿಲೇ । ದೇಹೇಬುದ್ಧೀನೇ ॥೨೬॥

ಉತ್ತಮ ಪುರುಷನು ಪ್ರಪಂಚದಲ್ಲಿಯ ವ್ಯವಹಾರ ಚಾತುರ್ಯ ತಿಳಿದಿರುವನು. ಮತ್ತು ಪರಮಾರ್ಥದಲ್ಲಿಯ ಆತ್ಮಾನಾತ್ಮ ವಿವೇಕವನ್ನು ತಿಳಿದಿರುವನಲ್ಲದೇ ಸಾರಾಸಾರ ವಿಚಾರವನ್ನೂ ಕೂಡಾ ತಿಳಿದಿರುವನು. ಇದಲ್ಲದೇ ಎಲ್ಲರಲ್ಲಿಯ ಉತ್ತಮ ಗುಣಗಳನ್ನು ಗುರುತಿಸಿ ಅವುಗಳನ್ನು ತಾನು ಸ್ವೀಕರಿಸುವನು. [ರಾಜಕಾರಣವನ್ನೂ ಸಹ ತಿಳಿದಿರುವನು]. ಅರ್ಥಾತ್ ಎಲ್ಲದರಲ್ಲಿಯ ಉತ್ತಮ ಗುಣಗಳನ್ನು ಮಾತ್ರ ಕಂಡುಹಿಡಿಯುವ ಮಾರ್ಮಿಕನಿರುವನು, ರಸಿಕನಿರುವನು. [೧೭] ಜನರ ಸಂಗಡವಾಗಲೀ, ಸಾರ್ವಜನಿಕರಲ್ಲಾಗಲೀ ಇವನು ಹಿಂದೆ ಒಂದು ತರಹ, ಮುಂದೆ ಒಂದು ತರಹದ ಇಮ್ಮಗ್ಗಲಿನ ಧೋರಣೆ [ಹೌದಪ್ಪನ ಕೂಡ ಹೌದಪ್ಪ.-ಅಲ್ಲಪ್ಪನ ಕೂಡ ಅಲ್ಲಪ್ಪನಂತೆ ಇವನ ವರ್ತನೆ] ಇರುವದಿಲ್ಲ. ಇವನಿಗೆ ಸುಳ್ಳೊಂದು ಸೊಟ್ಟೊಂದು ಮಾತನಾಡಿ ಗೊತ್ತೇ ಇರುವದಿಲ್ಲ. ಆದರೆ ಇವನು ಖಂಡಿತ ಮಾತಿನವನು. ಹಾಗೂ ಸತ್ಯವಂತನಿರುವನು. ಅಂತೆಯೇ ಎಲ್ಲರಿಗೂ ಇವನನ್ನು ಕಂಡರೆ ಕೌತುಕ-ಆನಂದವೆನಿಸುವದು [೧೮] ಯಾರ ಅಂತಃಕರಣಕ್ಕೂ ನೋವಾಗದಂತೆ ಇವನ ನಡತೆ ಇರುವದು. ಅಡ್ಡದಾರಿ ಎಂದೂ ಹಿಡಿಯುವದಿಲ್ಲ. ಪ್ರತಿಯೊಂದು ಪ್ರಸಂಗದಲ್ಲಿಯ ಇವನ ನಡವಳಿಕೆಯಲ್ಲಿ ವಿವೇಕವು ಪ್ರಕಟವಾಗುವದು. ಅಥವಾ ವಿವೇಕ ಪ್ರಕಟವಾಗುವಂತೆ ಇವನ ವರ್ತನೆಯು ಇರುವದು. [೧೯] ಕರ್ಮ, ಉಪಾಸನಾ, ಜ್ಞಾನ ಮತ್ತು ವೈರಾಗ್ಯ ಈ ನಾಲ್ಕೂ ಇವನಲ್ಲಿ ಅತ್ಯಂತ ಯೋಗ್ಯ ರೀತಿಯಲ್ಲಿ [ಪದ್ಧತಿಯಲ್ಲಿ] ಕಂಡುಬರುವವು. ತಿಳುವಳಿಕೆಯುಳ್ಳ [ಅರಿವಿನ] ವಿಶಾಲ ಬುದ್ಧಿ ಇವನಲ್ಲಿ ಇರುವದು. ಇದು ಯಾವಾಗಲೂ ತಪ್ಪು ದಾರಿಗೆ ಹೋಗುವದಿಲ್ಲ. ಮತ್ತು ಇದು ಡಳ ಮಳಿಸುವದೂ ಇಲ್ಲ. (೨೦) ಮನುಷ್ಯನಲ್ಲಿ ಇಂಥ ಉತ್ತಮ ಗುಣಗಳು ದೃಷ್ಟಿಗೆ ಬಿದ್ದ ಮೇಲೆ ಇವನಿಗೆ ಯಾರೂ ಕೆಟ್ಟವನೆಂದು ಅನ್ನಲಾರರು. ಯಾವ ಪ್ರಕಾರ ಸರ್ವ ದೇಹದಲ್ಲಿ ಆತ್ಮನು ತುಂಬಿರುವನೋ ಅದರಂತೆಯೇ ಇಂಥ ಉತ್ತಮ ಪುರುಷನು ಸರ್ವರ [ಎಲ್ಲರ] ಅಂತಃಕರಣದಲ್ಲಿ ಪ್ರೇಮ ರೂಪದಿಂದ ಮಮತ್ವತನದಿಂದ ತುಂಬಿ ಇರುವನು. (೨೧) ಯಾವ ಪ್ರಕಾರ ದೊಡ್ಡವರು ಸಣ್ಣವರು ತಮ್ಮ ತಮ್ಮ ಕಾರ್ಯದಲ್ಲಿ ತತ್ಪರರಿರುವರೋ ಅದರಂತೆಯೇ ಈ ಉತ್ತಮ ಪುರುಷನು ಪರೋಪಕಾರ ಮಾಡುವದಕ್ಕಾಗಿ ಮನಃಪೂರ್ವಕ ತತ್ಪರನಿರುವನು. [೨೨] ಎರಡನೆಯವರ ದುಃಖ ನೋಡಿ ತಾನೂ ದುಃಖಪಡುವನು. ಮತ್ತು ಎರಡನೆಯವರಿಗಾದ ಸುಖ ನೋಡಿ ತಾನೂ ಸುಖಿಯಾಗುವನು. ಒಟ್ಟಿನಲ್ಲಿ ಜಗತ್ತಿನಲ್ಲಿರುವವರೆಲ್ಲರೂ ಸದಾ ಸುಖಿಗಳಾಗಿರಲಿ ಅನ್ನುವದೇ ಇವನ ಮನದ ನಿಜವಾದ ಇಚ್ಛೆ ಇರುವದು. [೨೩] ತಿಳಿಯಿರಿ, ಒಬ್ಬನಿಗೆ ಬಹಳಷ್ಟು ಭಿನ್ನ ಭಿನ್ನ ಸ್ವಭಾವದ ಮಕ್ಕಳಿರುವರು. ಆದರೆ ತಂದೆಗೆ ಎಲ್ಲ ಮಕ್ಕಳ ಮೇಲೆಯೂ ಒಂದೇ ರೀತಿಯ, ಲಕ್ಷ್ಯವಿರುವದು ಮತ್ತು ಪ್ರೇಮವಿರುವದು. ಇದರಂತೆಯೇ ಈ ಮಹಾಪುರುಷನಿಗೆ ಎಲ್ಲರ ಕಾಳಜಿಯೂ ಇರುವದು. [೨೪] ಇವನಿಗೆ ಯಾರಿಗಾದರೂ ಕೊರತೆಯಾದರೆ-ಕಷ್ಟವಾದರೆ ಸಹನವಾಗುವದಿಲ್ಲ. ಇವನಿಗೆ ತಪ್ಪಿಯೂ ಕೂಡಾ ಎಂದೂ ಹಣದ ಬಗ್ಗೆ ಆಸೆ ಆಮಿಷ [ಲೋಭ] ಇರುವದಿಲ್ಲ. ಅದು ಹುಟ್ಟುವದೂ ಇಲ್ಲ. ಯಾರಾದರೂ ಇವನನ್ನು ಧಿಕ್ಕರಿಸಿದರೆ, ಹೀಗಳೆದರೆ ಇವನು ಮನದಲ್ಲಿ ಕೂಡಾ ಖತಿ ಪಡುವದಿಲ್ಲ. ಅಂದರೆ ಇವನು ಅಂತಃಕರಣದಲ್ಲಿ ನಿಶ್ಚಲನಿರುವನು. (೨೫) ಇವನು ತನ್ನ ಶರೀರವನ್ನು ಮಿಥ್ಯ ಅಂದರೆ ನಾಶವಂತ ಎಂದು ತಿಳಿದಿರುವನು. ಆದ್ದರಿಂದಲೇ ಯಾರಾದರೂ ಇವನ ನಿಂದೆಮಾಡಿದರೂ ಕೂಡಾ ಇವನು ಇದು ದೇಹದ ಮಟ್ಟಿಗೆ ಮಾತ್ರವಿರುವದು ಅನ್ನುವ ಖಾತ್ರಿ ಇದ್ದದ್ದರಿಂದ ಇವನು ಸ್ವಸ್ಥವಾಗಿರುವನು. ಯಾವನು ಖರೇ ಜ್ಞಾತಾ ಇರುವನೋ ಅವನನ್ನು ದೇಹ ಬುದ್ಧಿಗೆ ಗೆದೆಯಲು ಸಾಧ್ಯವಾಗುವದಿಲ್ಲ. "ನಾನು ಆತ್ಮವೇ ಇರುವೆ" ಅನ್ನುವದು ನಿಜವಾದ ಜ್ಞಾತಾನ ಲಕ್ಷಣವಿರುವದು. "ನಾನು ದೇಹವೇ ಇರುವೆ" ಇದು ದೇಹ ಬುದ್ಧಿಯ ಲಕ್ಷಣವಿರುವದು. ಇವೆರಡೂ ಒಂದಕ್ಕೊಂದು ವಿರುದ್ಧವಿರುವದರಿಂದ ಒಂದು ಇದ್ದಲ್ಲಿ ಇನ್ನೊಂದು ಇರುವದಿಲ್ಲ. ಆದ್ದರಿಂದ ಜ್ಞಾತಾಗೆ ದೇಹದ ನಿಂದೆಯು ಸ್ಪರ್ಶಮಾಡಲು ಸಾಧ್ಯವಿಲ್ಲ [೨೬]

ಹೇ ಅವಘೇ ಅವಲಕ್ಷಣ । ಜ್ಞಾತಾ ದೇಹೀ ವಿಲಕ್ಷಣ ।
ಕಾಂಹೀ ತರ್ಿೀ ಉತ್ತಮ ಗುಣ । ಜನೀ ದಾಖವಾವೇ ॥೨೭॥
ಉತ್ತಮ ಗುಣಾಸ ಮನುಷ್ಯ ವೇಧೇ । ವಾಈಟ ಗುಣಾಸೀ ಪ್ರಾಣೀ ಖೇದೇ ।
ತೀಕ್ಷ್ಣ ಬುದ್ಧಿ ಲೋಕ ಸಾಧೇ । ಕಾಯೇ ಜಾಣತೀ ॥೨೮॥
ಲೋಕೀ ಅತ್ಯಂತ ಕ್ಷಮಾಕರಿತೀ । ಆಲಿಯಾ ಲೋಕಾಂಚೆ ಪ್ರಚಿತೀ ।
ಮಗ ತೇ ಲೋಕ ಪಾಠೀ ರಾಖತೀ । ನಾನಾ ಪ್ರಕಾರೀ ॥೨೯॥
ಬಹುತಾಸೀ ವಾಟೇ ಮೀ ಥೋರ । ಸರ್ವಮಾನ್ಯ ಪಾಹಿಜೇ ವಿಚಾರ ।
ಧೀರ ಉದಾರ ಗಂಭೀರ । ಮಹಾಪುರುಷ ॥೩೦॥
ಜಿತುಕೇ ಕಾಂಹೀ ಉತ್ತಮ ಗುಣ । ತೇ ಸಮರ್ಥಾಚೇ ಲಕ್ಷಣ ।
ಅವಗುಣ ತೇ ಕರಂಟ ಲಕ್ಷಣ । ಸಹಜ ಚಿ ಜಾಲೇ ॥೩೧॥

ಇತಿ ಶ್ರೀ ದಾಸಭೋಧೆ ಗುರುಶಿಷ್ಯ ಸಂವಾದೆ
'ಸದೇವ ಲಕ್ಷಣ ನಿರೂಪಣ' ನಾಮ ಸಮಾಸ ಚತುರ್ಥ ॥

● ●

ದೇಹ ಬುದ್ಧಿ ಎಂಬುದು ಸಂಪೂರ್ಣ ಅವಲಕ್ಷಣದ್ದಾಗಿರುವದೆಂದು ತಿಳಿಯಿರಿ. ಜ್ಞಾತಾ (ತಿಳಿದಂಥವನಾದ) ಪುರುಷ ದೇಹದಲ್ಲಿದ್ದರೂ ಕೂಡಾ ಅವನು ದೇಹದಿಂದ ಅಲಿಪ್ತನಿರುವನು. ದೇಹ ಬುದ್ಧಿಯು ಉಪದ್ರವವಾಗುತ್ತಿದ್ದರೆ ಅಂಥವನು ಜ್ಞಾನಿಯುಲ್ಲವಾದ್ದರಿಂದ ಖರೇ ಜ್ಞಾನಿ ಪುರುಷನು ವಿಲಕ್ಷಣತನದಿಂದ ದೇಹದಲ್ಲಿ ಇರುವನು. ಅಂದರೆ ದೇಹದಲ್ಲಿ ವಿದೇಹಿತನದಿಂದ ಇರುವನು. ಸಾರಾಂಶವೇನಂದರೆ, ಮನುಷ್ಯನಾದವನು ತಾನು ಉತ್ತಮ ಗುಣದವನಾಗಿ ಜನತೆಯಲ್ಲಿ ಏನಾದರೂ ಉತ್ತಮ ಗುಣಗಳನ್ನು ಪ್ರಕಟಮಾಡಬೇಕು. ಇಂಥವನನ್ನು ನೋಡಿ ಜನರು ಸನ್ಮಾರ್ಗಗಾಮಿಗಳಾಗುವರು. (೨೭) ಉತ್ತಮ ಗುಣಗಳನ್ನು ನೋಡಿ ಜನರು ಆಕರ್ಷಿತರಾಗುವರು. ಕೆಟ್ಟ ಗುಣಗಳು ಮನುಷ್ಯನನ್ನು ದುಃಖಕ್ಕೀಡು ಮಾಡುವವು. ತಿಳಿದವರಲ್ಲಿ ಇರುವಂಥ ತೀಕ್ಷ್ಣ ಬುದ್ಧಿಯು ಕಲ್ಪನೆಯು ಸಾದಾ ಸಾಮಾನ್ಯ ಮನುಷ್ಯರಿಗೆ ಬರುವದಿಲ್ಲ. ದೇಹ ಬುದ್ಧಿಯನ್ನು ಇಲ್ಲದಂತೆ ಮಾಡಿಕೊಂಡು ಉತ್ತಮ ಗುಣಗಳನ್ನು ವೃದ್ಧಿಪಡಿಸಿಕೊಳ್ಳುವದಕ್ಕಾಗಿ ಜ್ಞಾನಿ ಪುರುಷನಿಗೆ ತೀಕ್ಷ್ಣ ಮತ್ತು ಸೂಕ್ಷ್ಮ ಬುದ್ಧಿಯು ಇರಬೇಕಾಗುವದು. ಇದು ಹೇಗೆ ಇರುವದು ಅನ್ನುವವರ ಕಲ್ಪನೆಯು ಸಾದಾ ಮನುಷ್ಯನಿಗೆ ತಿಳಿಯುವದಿಲ್ಲ, ಹೊಳೆಯುವದಿಲ್ಲ. [೨೮] ಶ್ರೇಷ್ಠ ಸಜ್ಜನ ಪುರುಷನು ಜನರ ಅನ್ಯಾಯ ಮತ್ತು ಅಪರಾಧಗಳನ್ನು ಕ್ಷಮಾ ಮಾಡುವನು. ಯಾವ ಪುರುಷನು ಹೀಗೆ ಅತ್ಯಂತ ಕ್ಷಮಾಶೀಲನಿರುವನೋ ಅವನ ಕ್ಷಮಾ ಗುಣದ ಪ್ರತ್ಯಕ್ಷ ಅನುಭವ ಬಂದಿತೆಂದರೆ ಆ ಮೇಲೆ ಜನರು ಅನೇಕ ಪ್ರಕಾರದಿಂದ ಇವನ ಹಿಂದೆ ಬೆಂಬಲಿಗರಾಗಿ ನಿಲ್ಲುವರು. (೨೯) ನಾವು ದೊಡ್ಡವರಿರುವೆವು. ಎಂದು ಬಹು ಜನರಿಗೆ ಅನಿಸುವದು. ಆದರೆ ಎಲ್ಲ ಜನರೂ ಯಾರಿಗೆ ಶ್ರೇಷ್ಠ, ಸಜ್ಜನ ಅನ್ನುವರೋ ಅವರೇ ನಿಜವಾದ [ಖರೇ] ಶ್ರೇಷ್ಠ ಸಜ್ಜನರಿರುವರು. ಮಹಾಪುರುಷರು ಯಾವಾಗಲೂ ಧೀರ, ಉದಾರ, ಕ್ಷಮಾಶೀಲ, ಮತ್ತು ಗಂಭೀರರಿರುವರು. [೩೦] ಎಷ್ಟು ಉತ್ತಮ ಗುಣಗಳಿರುವವೋ ಅವೆಲ್ಲವೂ ಸಮರ್ಥ ಪುರುಷರ ಲಕ್ಷಣಗಳಿರುವವು. ಎಂದು ತಿಳಿಯಿರಿ. ಮತ್ತು ಆ ಮೇಲೆ ಅವಗುಣಗಳೆಲ್ಲವೂ ದರಿದ್ರ ಕಂಟಕನ ಲಕ್ಷಣಗಳಿರುವವೆಂಬುದು ತಾನಾಗಿಯೇ ಸಿದ್ಧವಾಗುವದು. [ಸಮರ್ಥ ಲಕ್ಷಣ ಉತ್ತಮ ಲಕ್ಷಣಗಳನ್ನು ಎಲ್ಲರೂ ಲಕ್ಷ್ಯದಲ್ಲಿಡಬೇಕು-ಆಚರಣೆಯಲ್ಲಿ ತರುವ ಪ್ರಯತ್ನ ಮಾಡಬೇಕು.] (೩೧)

ಶ್ರೀ ದಾಸಬೋಧದ ಹತ್ತೊಂಭತ್ತನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ "ಸದೇವ ಲಕ್ಷಣ ನಿರೂಪಣ"ವೆಂಬ ಹೆಸರಿನ ನಾಲ್ಕನೇ ಸಮಾಸವು ಮುಗಿದುದು.

• •

## ದಶಕ ೧೯. ಸಮಾಸ ೫. ದೇಹಮಾನ್ಯನಿರೂಪಣ (ನುಡಿ ೩೦)

ಮಾನವ ಜೀವನದಲ್ಲಿ ಎರಡು ಪ್ರಧಾನ ದೃಷ್ಟಿಕೋನಗಳು ಕಂಡುಬರುವವು. ಒಂದು ಪ್ರವೃತ್ತಿ ಪರವಾದದ್ದು ಇನ್ನೊಂದು ನಿವೃತ್ತಿ ಪರವಾದದ್ದು. ಪ್ರವೃತ್ತಿಪರ ಅಂದರೆ ಸಂಸಾರದಲ್ಲಿ ಆಸಕ್ತಿ ಇರುವಂಥ ಮನೋರಚನೆಯ ಮನುಷ್ಯನಿಗೆ ಈ ದೃಶ್ಯ ಜಗತ್ತು ಅತ್ಯಂತ ನಿಜವಾದದ್ದು ಎಂದು ಅನ್ನಿಸುವದು. ಅರ್ಥಾತ್ ತನ್ನ ದೇಹಕ್ಕೆ ಬಹಳ ಮಹತ್ವವನ್ನು ಇವನು ಕೊಡುವನು. ನಿವೃತ್ತಿಪರ ಅಂದರೆ ವೈರಾಗ್ಯದಲ್ಲಿ ಆಸಕ್ತಿ ಇರುವಂಥ ಮನೋರಚನೆಯ ಮನುಷ್ಯನಿಗೆ ಈ ದೃಶ್ಯ ಜಗತ್ತು ಅತ್ಯಂತ ಮಿಥ್ಯಾ ಎಂದು ಅನಿಸುವದು. ಅರ್ಥಾತ್ ತನ್ನ ದೇಹವನ್ನು ಇವನು ಅತ್ಯಂತ ಕ್ಷುಪದಾರ್ಥವೆಂದು ತಿಳಿಯುವನು. ಅಂದರೆ ದೇಹಕ್ಕೆ ಎಳ್ಳಷ್ಟೂ ಮಹತ್ವಕೊಡುವದಿಲ್ಲ. ಶ್ರೀ ಸಮರ್ಥರು ಸ್ಪಷ್ಟವಾಗಿ ಹೇಳುವದೇನಂದರೆ ಮಾನವೀ ಜೀವನವು ಕೇವಲ ಪ್ರವೃತ್ತಿ ಮಯವಿರುವದಿಲ್ಲ. ಅದರಂತೆ ಅದು ಕೇವಲ ನಿವೃತ್ತಿಮಯವೂ ಕೂಡಾ ಇರುವದಿಲ್ಲ. ಈ ಎರಡೂ ವೃತ್ತಿಗಳು ಯೋಗ್ಯ ಪ್ರಮಾಣದಲ್ಲಿ ಮಿಶ್ರಣವಾಗಿ ಮಾನವೀ ಜೀವನವು ತಯಾರ ಆಗುವದು. ನಿವೃತ್ತಿಯು ಹೇಳುವದೇನಂದರೆ, ಶುದ್ಧ ಅರಿವಿನ ರೂಪವಿರುವಂಥ ಅಂತರಾತ್ಮನು ಸಮಾಧಾನ ರೂಪನಿರುವನು. ಇವನು [ಅಂತರಾತ್ಮಾ] ಅತ್ಯಂತ ಸೂಕ್ಷ್ಮವಿರುವನು. ಇವನು ಯಾವತ್ತೂ ಘಡಾಮೋಡಿಗೆ ಅಲಿಪ್ತ ಸಾಕ್ಷಿಯಾಗಿರುವನು. ಎಲ್ಲ ದೃಶ್ಯಕ್ಕೂ ವ್ಯಾಪಿಸಿ ಇರುವನು, ಯಾವತ್ತೂ

ಪರಮಾರ್ಥ ಸಾಧನಗಳಿಗೆ ಇವನು ಪ್ರಾಣ ನಿರುವನು.ಹೀಗೆ ಅಂದಾಗ, ಇವನ ಅಂಬೋಣವು ಸಂಪೂರ್ಣವಾಗಿ ಖರೇ ಇರುವದು. ಆದರೂ ಅಂತರಾತ್ಮನ ಮಹತ್ವವನ್ನು ಹೊಗಳುವ ಭರದಲ್ಲಿ ನಿವೃತ್ತಿಯು [ನಿವೃತ್ತಿಪರನು] ದೇಹವನ್ನು ತುಚ್ಛೀಕರಿಸಿ ಯಾವಾಗ ಮಾತನಾಡುವನೋ ಆಗ ದೇಹದ ಕರ್ತವ್ಯಗಳನ್ನು ಹೀನವಾಗಿ ಅದು ತಿಳಿಯುವದು. [ಕಾಣುವದು].ಮಾನವನ ಸಾಮಾಜಿಕ ಜೀವನದ ನಾಶಮಾಡುವದು. ಮತ್ತು ಈ ದೃಶ್ಯ ಜಗತ್ತಿನಲ್ಲಿ ಜನ್ಮಹೊಂದಿ ಬರುವದೆಂದರೆ ಹೇಳಿ ಕೇಳಿ ಅಪರಾಧವಾಗುವದು ಎಂದು ತಿಳಿಯುವದು[ಅನಿಸುವದು]. ಹೀಗೆ ಅಂದಾಗ [ತಿಳಿದಾಗ] ಅದು ಏಕಾಂತಿಕ ಅಂದರೆ ಬ್ರಹ್ಮದಲ್ಲಿ ಲೀನವಾಗಿ ಇರುವದು. ಅಥವಾ ಏಕಾಂಗಿಯಾಗಿ ಎಲ್ಲವನ್ನೂ ತೊರೆದು ಒಬ್ಬನೇ ಏಕಾಂತದಲ್ಲಿರುವದಾಗಲೀ ಆಗುವದು. ಅದು ತನ್ನ ಮರ್ಯಾದೆಯ ಹದ್ದನ್ನು ದಾಟುವದು. ಇದು ನಿವೃತ್ತಿಯ ವಿಷಯಕವಾದದ್ದು ಇರುವದು. ಇನ್ನು ಪ್ರವೃತ್ತಿಗೂ ಸಹ ಮಾನವ ಜೀವನದಲ್ಲಿ ಮಹತ್ವದ ಸ್ಥಾನ ವಿರುವದು ಎನ್ನುವದರಲ್ಲಿ ಸಂಶಯವಿಲ್ಲ. ಅಂತರಾತ್ಮಾ ಎಷ್ಟೇ ಸೂಕ್ಷ್ಮ ಮತ್ತು ಶ್ರೇಷ್ಠ ಇರಲೊಲ್ಲದೇಕೆ, ಮಾನವ ದೇಹ ಇಲ್ಲದಿದ್ದರೆ ಅದಕ್ಕೆ [ಅಂತರಾತ್ಮಕ್ಕೆ] ತನ್ನ ಸ್ವತಃದ ಅಸ್ತಿತ್ವವನ್ನು ತಿಳಿಸಿಕೊಡುವದು ಅಶಕ್ಯವಾಗಿ ಹೋಗುತ್ತಿತ್ತು. ಮಾನವ ದೇಹ ಇರುವದೆಂದೇ ಅಂತರಾತ್ಮನ ಗುರುತು ಆಗುವದು ಅಥವಾ ಗುರುತು ಹತ್ತುವದು. ಮತ್ತು ಇವನ ಸಾಕ್ಷಾತ್ ಅನುಭವವೂ ಬರುವದು. ಮತ್ತು ಇವನನ್ನು ಸಾಕ್ಷಾತ್ಕಾರ ಅನ್ನುವ ಶಬ್ದದಲ್ಲಿ ಹಿಡಿದಿಡಲು ಬರುವದು. ಆತ್ಮಜ್ಞಾನದ ಸಲುವಾಗಿ ಸರ್ವಸಂಗ ಪರಿತ್ಯಾಗ ಮಾಡಬೇಕಾಗುವದು. ಇದು ಒಪ್ಪತಕ್ಕದ್ದೇ ಇರುವದು. [ಮಾನ್ಯವಿರುವದು]. ಆದರೂ ಸರ್ವಸಂಗ ಪರಿತ್ಯಾಗಮಾಡಿ ಆತ್ಮ ದರ್ಶನದ ಸಲುವಾಗಿ ಧಡಪಡಿಸುವ ಸನ್ಯಾಸಿಗೂ ಕೂಡಾ ದೇಹವನ್ನು ಜೀವಂತ ಇಡಲೇಬೇಕಾಗುವದು. ಮತ್ತು ಇದರ ಸಲುವಾಗಿ ಅನ್ನ ನೀರಿನ ಶೋಧವನ್ನು ಮಾಡಲೇಬೇಕಾಗುವದು. ಭಾರತೀಯ ಜೀವನದಲ್ಲಿ ಮಧ್ಯಯುಗದ ಸುಮಾರಿಗೆ ದೇಹದ ಮೂಲ್ಯದ [ಕಿಮ್ಮತ್ತಿನ] ಬಗ್ಗೆ ಬಹಳ ಹೀನ ಮತ್ತು ನಿಕೃಷ್ಟ ಅಂದರೆ ಕೆಳಮಟ್ಟದ ಹಾಗೂ ಅವಿವೇಕದ ದೃಷ್ಟಿಕೋನವು ಸೇರಿತು. ಇದರಿಂದಾಗಿ ದೇಹದ ಉಪಯುಕ್ತತೆಯ ಬಗ್ಗೆ ಬಹಳ ವಿಕೃತ ಕಲ್ಪನೆ ಅಂದರೆ ಅಸಹ್ಯವಾದ ಜಿಗುಪ್ಸೆಯನ್ನು ಉಂಟು ಮಾಡುವ ಕಲ್ಪನೆಯು ಹರಡಿತು. ಮತ್ತು ಭಾರತೀಯ ಸಮಾಜದ ಲೌಕಿಕ ಜೀವನದ ಅತಿಶಯ ಹಾನಿಯಾಯಿತು. ಜೀವನದ ಮೌಲ್ಯ ಹಾಳಾಗಿಹೋಯಿತು. ಸಾಮಾನ್ಯ ಮನುಷ್ಯನಿಗೆ ಈ ಜಗತ್ತಿನಲ್ಲಿಯ ಐಶ್ವರ್ಯ, ಸತ್ತಾ [ಅಧಿಕಾರ] ಪರಾಕ್ರಮ, ಕೀರ್ತಿ ಮತ್ತು ಸುಧಾರಣೆ ಇವುಗಳ ಬಗ್ಗೆ ವಿಶೇಷ ಮಹತ್ವ ಇಲ್ಲದಂತಾಯಿತು. ಇವೆಲ್ಲ ಅಶಾಶ್ವತ, ನಾಶವಂತವೆಂದು ಅನಿಸಿತು. ಇದರಿಂದಾಗಿ ಯಾವದಕ್ಕೂ ಮಹತ್ವ ಇಲ್ಲವೆಂದು ಅನಿಸಹತ್ತಿತು. ಆದರೆ ಇದರಿಂದ ಜ್ಞಾನದಲ್ಲಿಯ ಬೇರೆ ಬೇರೆ ಶಾಖೆಯಲ್ಲಿ ಉಪಾಸನೆಯನ್ನು ಮಾಡುವ ಏಕನಿಷ್ಠ ಪುರುಷರ ಪರಂಪರೆಯಲ್ಲಿ ಬಿರುಕು ಬಿಟ್ಟಿತು. ಅಂದರೆ ಇದರಲ್ಲಿ ಅನೇಕ ಭಾಗಗಳಾದವು. ಇದು ಮಾತ್ರ ಎಲ್ಲಕ್ಕಿಂತ ಹೆಚ್ಚಿನ ದುಃಖವನ್ನುಂಟುಮಾಡುವಂತಹದು. ಇದರಲ್ಲಿ ಸಂಶಯವಿಲ್ಲ. ಶ್ರೀ ಸಮರ್ಥರು ಯಾತ್ರೆಯ ನಿಮಿತ್ಯದಿಂದ ಯಾವಾಗ ಯಾವತ್ತೂ ಭಾರತವನ್ನು ತಿರುಗಿದರೋ ಆಗ ಈ ಮೇಲೆ ಹೇಳಿದ ಶೋಚನೀಯ ಪರಿಸ್ಥಿತಿಯು ಅವರ ದೃಷ್ಟಿಗೆ ಬಿದ್ದಿತು. ಅಂತೆಯೇ ಅವರು ಕೃಷ್ಣಾ ತೀರಕ್ಕೆ ತಿರುಗಿ ಬಂದ ನಂತರ ತಮ್ಮ ತತ್ವಜ್ಞಾನವನ್ನು ಬೇರೆಯಾಗಿ ಅಂದರೆ ಪರಂಪರಾಗತ ಹಿಂದಿನಿಂದಲೂ ನಡೆದುಬಂದ ಪರಮಾರ್ಥದ ಮಾಮೂಲಿ ಭಾಷೆಯನ್ನು ಬಿಟ್ಟುಕೊಟ್ಟು ಸದ್ಯದ ವ್ಯಾವಹಾರಿಕವಾದ ಪ್ರತ್ಯಕ್ಷ ಇರುವಂಥ ಕಂಡು ಬರುವಂಥ ಶಬ್ದಗಳಿಂದ ಮಂಡಿಸಲಿಕ್ಕೆ [ಪ್ರತಿಪಾದಿಸಲಿಕ್ಕೆ] ಆರಂಭಮಾಡಿದರು. ಈ ಸಮಾಸದಲ್ಲಿ ಈ ಬಗ್ಗೆ ಸ್ಪಷ್ಟವಾಗಿ ಅವರು ಹೇಳುವದೇನಂದರೆ, ದೇಹದ ಹೊರತಾಗಿ ಪರಮಾರ್ಥವು ಆಗಲಿಕ್ಕೆ ಶಕ್ಯವಿಲ್ಲ. ದೇಹವಿಲ್ಲದೇ ಅಂತರಾತ್ಮಾ ವ್ಯಕ್ತವಾಗಲು ಸಾಧ್ಯವೇ ಇಲ್ಲ. ದೇಹದ ಹೊರತಾಗಿ ದೇಹವಿಲ್ಲದೇ ಜ್ಞಾನದ ವ್ಯವಹಾರವಾಗಲು ಶಕ್ಯವಿಲ್ಲ. ನಾವು ನಮ್ಮ ಕರ್ತಾತನದ ಅಭಿಮಾನವನ್ನು ಸ್ವಲ್ಪ ಬಿಟ್ಟರೆ–ಬಾಜೂಕ್ಕೆ ಸರಿಸಿದರೆ ಅಂತರಾತ್ಮನ ಚಮತ್ಕಾರವು ನೋಡಲಿಕ್ಕೆ ಸಿಗುವದು. ಜ್ಞಾನ ದೃಷ್ಟಿಯಿಂದ ಸದ್ವಸ್ತುವಿನ ರೂಪವನ್ನು ನೋಡಬೇಕು. ನಿದಿಧ್ಯಾಸ ಹೊಂದಿ ವಸ್ತುವಿನೊಂದಿಗೆ ತದ್ರೂಪರಾಗಬೇಕು. ಗುಟ್ಟಿನ ಮಾತೇನಂದರೆ, ಸದ್ಗುರು ದೊರೆತದ್ದಾದರೆ ಎಲ್ಲ ಕಾರ್ಯಗಳು ಸಂಗಮವಾಗಿ ಕಾರ್ಯಸಿದ್ಧಿ ಬೇಗ ಘಟಿಸುವದು.

**ದಶಕ. ಏಕೋನವಿಂಶತಿ : ಸಮಾಸ. ಪಂಚಮ : ದೇಹ ಮಾನ್ಯ ನಿರೂಪಣ (ನುಡಿ ೩೦)**

॥ ಶ್ರೀರಾಮ ಸಮರ್ಥ ॥ ಮಾತೀಚೇ ದೇವ ಧೋಂಡ್ಯಾಚೇ ದೇವ ।
ಸೋನ್ಯಾಚೇ ದೇವ ರುಪ್ಯಾಚೇ ದೇವ ।
ಕಾಶಾಚೇ ದೇವ ಪಿತಳೇಚೇ ದೇವ । ತಾಂಬ್ಯಾಚೇ ದೇವ ಚಿತ್ರಲೇಪೇ ॥೧॥

ರುವಿಚ್ಯಾ ಲಾಕಡಾಚೆ ದೇವ ಪೋವಳ್ಯಾಚೇ ದೇವ ।
ಬಾಣ ತಾಂದಳೇ ನರ್ಮದೆ ದೇವ ।
ಶಾಲಿಗ್ರಾಮ ಕಾಶ್ಮಿರೀ ದೇವ । ಸೂರ್ಯಕಾಂತ ಸೋಮಕಾಂತ ॥೨॥

ತಾಂಬ್ರನಾಣೇ ಹೇಮನಾಣೇ । ಕೋಣೇ ಪೂಜಿತೀ ದೇವಾರ್ಚನೀ।
ಚಕ್ರಾಂಗೀತ ಚಕ್ರತೀರ್ಥಾಹುನೀ । ಘೇಊನ ಯೇತೀ ॥೩॥

ಉದಂಡ ಉಪಾಸನೇಚೇ ಭೇದ । ಕಿತೀ ಕರಾವೆ ವಿಶದ ।
ಆಪಲಾಲೇ ಆವಡೀಚಾ ವೇಧ । ಲಾಗಲಾ ಜನೀ ॥೪॥

ಪರೀ ತ್ಯಾ ಸಕಳಾಚೇ ಹಿ ಕಾರಣ । ಮುಳೀ ಪಾಹಾವೇ ಸ್ಮರಣ ।
ತಯಾ ಸ್ಮರಣಾಚೇ ಅಂಶ ಜಾಣ । ನಾನಾ ದೇವತೇ ॥೫॥

ಮುಳೀ ದೃಷ್ಟಾ ದೇವ ತೋ ಯೇಕ । ತ್ಯಾಚೇ ಜಾಹಾಲೇ ಅನೇಕ
ಸಮಜೋನ ಪಾಹಾತಾ ವಿವೇಕ । ಉಮಜೋ ಲಾಗೇ ॥೬॥

ದೇಹ್ಯಾವೇಗಳೀ ಭಕ್ತಿ ಘಾವೇನಾ । ದೇಹ್ಯಾವೇಗಳಾ ದೇವ ಪಾವೇನಾ ।
ಯಾಕಾರಣೇ ಮೂಳ ಭಜನಾ। ದೇಹೇ ಚಿ ಆಹೇ ॥೭॥

ದೇಹೇ ಮುಳೀ ಚ ಕೇಲಾ ವಾವ । ತರೀ ಭಜನಾಸೀ ಕೈಚಾ ಠಾವ ।
ಮ್ಹಣೋನೀ ಭಜನಾಚಾ ಉಪಾವ । ದೇಹ್ಯಾತ್ಮಯೋಗೇ ॥೮॥

ದೇಹೇವಿಣ ದೇವ ಕೈಸಾ ಭಜಾವಾ । ದೇಹೇವಿಣ ದೇವ ಕೈಸಾ ಪುಜಾವಾ ।
ದೇಹ್ಯಾವಿಣ ಮೋಹಭಾವ ಕೈಸಾ ಕರಾವಾ । ಕೋಣ್ಯಾ ಪ್ರಕಾರೇ ॥೯॥

## ದಶಕ ೧೯. ಸಮಾಸ ೫. ದೇಹ ಮಾಹಾತ್ಮ್ಯ ನಿರೂಪಣ (ನುಡಿ ೩೦)

ಮಾನವ ಸಮಾಜದಲ್ಲಿಯು ದೇವರುಗಳಲ್ಲಿ ಎಷ್ಟೋ ಪ್ರಕಾರಗಳಿರುವದು ಕಂಡುಬರುತ್ತದೆ. ಇದರ ಯೋಗದಿಂದ ಉಪಾಸನೆಯಲ್ಲಿಯೂ ಭೇದಗಳಿರುವದು ಕಂಡುಬರುವದು. ಆದರೆ ಈ ಎಲ್ಲ ದೇವ ದೇವತೆಗಳ ಮೂಲವು ಒಬ್ಬನೇ ಒಬ್ಬ ಅಂತರಾತ್ಮನಲ್ಲಿ ಇರುವದು. ಇವನೇ ನಿಜವಾದ [ಖರೇ] ದೇವರು: ದೇವರ ಪ್ರಕಾರಗಳು ಎಷ್ಟೆಂದು ಹೇಗೆ ಹೇಳುವದು ? ಮಣ್ಣಿನ ದೇವರು, ಕಲ್ಲಿನ ದೇವರು, ಬಂಗಾರದ ದೇವರು, ಬೆಳ್ಳಿಯ ದೇವರು, ಕಂಚಿನ ದೇವರು, ತಾಮ್ರದ ದೇವರು, ಚಿತ್ರಪಟ ಫೋಟೋಗಳಲ್ಲಿಯ ದೇವರು. ಇನ್ನೂ ಅನೇಕ ಪ್ರಕಾರದವೂ ಇರುವವು. ಇವೆಲ್ಲವೂ ಆಯಾ ವಸ್ತುವಿನಿಂದ ತಯಾರಿಸಿದ ದೇವರುಗಳು ಇರುವವು. ಕೆಲವೊಂದು ದೇವರುಗಳಿಗೆ ರಂಗ ಅಂದರೆ ಬಣ್ಣ ಲೇಪನ ಮಾಡಿದವು ಇರುವವು. (೧) ಬಿಳಿ ಎಕ್ಕಿ ಗಿಡದ ಕಟ್ಟಿಗೆಯಿಂದ [ಅರ್ಕ ವೃಕ್ಷ] ಮಾಡಿದ ದೇವರು. ಗೋಮಯ[ಶಿಟ್ಟ] ದಿಂದ ಮಾಡಿದ ದೇವರು. ಇದರ ಹೊರತಾಗಿ ತಾಂಬಳೆ ದೇವ ಅಂದರೆ ಪಾಷಾಣದ ಅವಯವ ರಹಿತ ಅಥವಾ ಆಕಾರ ರಹಿತವಾದ [ಓಬಡ ಧೋಬಡ. ಹುರಬರಕ, ಸೊಟ್ಟಾಪಟ್ಟಾದ] ದೇವರು, ನರ್ಮದಾ ನದಿಯಲ್ಲಿ ಸಿಗುವ ಬಾಣ [ಶಿವಲಿಂಗ, ಅಥವಾ ಗಣಪತಿ] ದೇವರು. ಶಾಲಿಗ್ರಾಮ [ಗಂಡಕಿ ನದಿಯಲ್ಲಿ ಸಿಗುವ ವಿಷ್ಣು ಶಾಲಿಗ್ರಾಮ) ದೇವರು. ಸ್ಫಟಿಕದ ದೇವರು (ಹೆಚ್ಚಾಗಿ ಕಾಶ್ಮೀರದಲ್ಲಿ ಸಿಗುವವು) ಸೂರ್ಯಕಾಂತ (ಮಣಿ) ದೇವರು, ಚಂದ್ರಕಾಂತ (ಮಣಿ) ದೇವರು. ಇವೆಲ್ಲವೂ ದೇವರಿರುವವು. (ಕಟ್ಟಿಗೆಯಲ್ಲಿ ತಯಾರಿಸಿದ ದೇವರೂ ಇರುವವು). ಅಕ್ಕಿಕಾಳಿನಲ್ಲಿ ಅಥವಾ ಒಂದು ವನಸ್ಪತಿಯಲ್ಲಿ ತೆಗೆದ ದೇವರು. (೨) ಕೆಲವು ಜನರು ತಾಮ್ರದ ನಾಣ್ಯ ಅಥವಾ ಬಂಗಾರದ ನಾಣ್ಯವನ್ನು ದೇವರೆಂದು ಪೂಜಿಸುವರು. ಕೆಲವರು ಚಕ್ರತೀರ್ಥ (ಇದು ಬದರಿ ಕ್ಷೇತ್ರದಾಟಿ ನಾರಾಯಣ ಪರ್ವತದ ಹತ್ತಿರ ಇರುವದು) ದಿಂದ ಚಕ್ರಾಂಕಿತ ಕಲ್ಲನ್ನು ತಂದು ದೇವರೆಂದು ಇದರ ಪೂಜೆಯನ್ನು ಮಾಡುವರು. (೩) ದೇವರಲ್ಲಿ ಅನೇಕ ಪ್ರಕಾರಗಳಿದ್ದಂತೆ ಉಪಾಸನೆಯಲ್ಲಿಯೂ ಕೂಡಾ ಬಹಳ ಪ್ರಕಾರಗಳಿರುವವು. ಅವನ್ನೆಲ್ಲ ಎಷ್ಟೆಂದು ಮತ್ತು ಹೇಗೆ ವಿವರಿಸಿ ಹೇಳುವದು? ಜನರು ತಮ್ಮ ತಮ್ಮ ನಂಬಿಗೆಯ ಪ್ರಕಾರ (ಅನಿಸಿಕೆಯ ಪ್ರಕಾರ) ಬೇರೆ ಬೇರೆ ದೇವರಲ್ಲಿ ಆಕರ್ಷಣೆಗೊಳ್ಳುವರು. (೪) ಆದರೆ ಈ ಎಲ್ಲ ದೇವರುಗಳ ಕಾರಣವು ಒಂದೇ ಇರುವದು. ಅದು ಯಾವುದೆಂದರೆ, ತೀರ ಮೂಲದಲ್ಲಿ ಆದಂಥ ಸ್ಫುರಣರೂಪ ಸಂಕಲ್ಪವೇ ಆಗಿರುವದು. ಬೇರೆ ಬೇರೆಯಾಗಿರುವ ದೇವರು ಆ ಮೂಲ ಸ್ಫುರಣದ ಸಣ್ಣ ದೊಡ್ಡ ಅಂಶವೇ ಆಗಿರುವರು. (೫) ತೀರ ಮೂಲದ ದ್ರಷ್ಟಾ ದೇವನು ಒಬ್ಬನೇ ಇರುವನು. ಆ ಮೇಲೆ ಇವನಿಂದ ಅನೇಕ ದೇವರು ಆದರು. ಇದೆಲ್ಲವನ್ನು ವಿವೇಕದಿಂದ ನೋಡಿದ್ದಾದರೆ ಇದು ನಿಮಗೆ ತಿಳಿಯುವದು. (೬) ದೇವರ ಪೂಜೆಯಲ್ಲಿ, ಭಜನೆಯಲ್ಲಿ, ದರ್ಶನದಲ್ಲಿ ಮತ್ತು ಭಕ್ತಿಯಲ್ಲಿ ದೇಹದ ಮಹತ್ವ ಎಷ್ಟಿರುವದೆಂಬುದರ ಬಗ್ಗೆ ಈಗ ವರ್ಣನೆ ಮಾಡುವರು:-- ದೇಹದ ಸಹಾಯವಿಲ್ಲದೆ ಭಕ್ತಿಯನ್ನು ಮಾಡಲಿಕ್ಕೆ ಬರುವದಿಲ್ಲ. ದೇಹದ ಸಹಾಯವಿಲ್ಲದೆ ದೇವರು ದೊರಕುವದಿಲ್ಲ. ಇದರ ಮೇಲಿಂದ ಸ್ಪಷ್ಟವಾಗಿ ಕಂಡು ಬರುವದೇನೆಂದರೆ, ದೇಹವೇ ದೇವರ ಭಜನೆಗೆ ಮೂಲವೂ ಮುಖ್ಯವೂ ಆಗಿದೆ. ದೇವರ ಭಕ್ತಿ ಇರಲಿ ಅಥವಾ ದೇವರ ದರ್ಶನವೇ ಇರಲಿ, ಇವು ಸಾಧ್ಯವಾಗಬೇಕಾದರೆ ದೇಹವೇ ಒಂದು ನಿಜವಾದ ಸಾಧನವಿರುವದು. [ದೇವ ಭಕ್ತ ಈ ಇಬ್ಬರೂ ದೇಹಧಾರಿಗಳೇಬೇಕು. ಅಂದರೆ ಉಪಾಸನೆ-ಭಕ್ತಿ ಇವು ನಡೆಯುವವು] [೭] ದೇಹವನ್ನು ಸಂಪೂರ್ಣ ನಿಂದ್ಯ-ಯೆಂದು ಒಪ್ಪಿದ್ದಾದರೆ, ಅಂದದ್ದಾದರೆ ದೇಹ ಪೋಷಣದ ಕಡೆಗೆ ಸರ್ವಸ್ವೀ ದುರ್ಲಕ್ಷ ಮಾಡಿದ್ದಾದರೆ ಆ ಮೇಲೆ ದೇವರ ಭಜನೆಗೆ ಸ್ಥಳವೇ ಉಳಿಯುವದಿಲ್ಲ. ಪೂಜೆ, ಭಜನೆ ಮಾಡಲು ಶಕ್ಯವಿಲ್ಲ. ಅಂತರಾತ್ಮನದು ದೇಹದೊಂದಿಗೆ ಸಂಯೋಗ [ಕೂಡುವಿಕೆ] ಘಟಿಸುವದು. ಇದರಿಂದಲೇ ಮನುಷ್ಯನು ಭಜನೆಯನ್ನು ಮಾಡಲು ಶಕ್ತನಾಗುವನು [೮] ದೇಹವಿರದಿದ್ದರೆ ದೇವರನ್ನು ಭಜಿಸಲಿಕ್ಕೆ ಬರುವದಿಲ್ಲ. ದೇಹ ಇರದಿದ್ದರೆ ದೇವರ ಪೂಜೆ ಮಾಡಲಿಕ್ಕೆ ಆಗುವದಿಲ್ಲ. ದೇಹ ಇರದಿದ್ದರೆ ದೇವರ ಮಹೋತ್ಸವ ಮಾಡಲಿಕ್ಕೆ ಬರುವದಿಲ್ಲ. [೯]

ಅತ್ರ ಗಂಧ ಪತ್ರ ಪುಷ್ಪ । ಫಲ ತಾಂಬೋಲ ಧೂಪ ದೀಪ ।
ನಾನಾ ಭಜನಾಚಾ ಸಾಕ್ಷೇಪ । ಕೋಠೇ ಕರಾವಾ ॥೧೦॥

ದೇವಾಚೇ ತೀರ್ಥ ಕೈಸೇ ಘ್ಯಾವೇ । ದೇವಾಸೀ ಗಂಧ ಕೋಠೇ ಲಾವಾವೇ ।
ಮಂತ್ರಪುಷ್ಪ ತರೀ ವಾವೇ । ಕೋಣೇ ಠಾಈ ॥೧೧॥

ಮ್ಹಣೋನೀ ದೇಹ್ಯಾವಿಣ ಆಡತೇ । ಅವಘೇ ಸಾಂಕಡೇ ಚಿ ಪಡತೇ ।
ದೇಹ್ಯಾಕರಿತಾ ಘಡತೇ । ಭಜನ ಕಾಂಹೀ ॥೧೨॥

ದೇವ ದೇವತಾ ಭೂತೇ ದೇವತೇ । ಮುಳೀಚೇ ಸಾಮರ್ಥ್ಯೇ ಆಹೆ ತೇಥೇ ।
ಅಧಿಕಾರೇ ನಾನಾ ದೇವತೇ । ಭಜತ ಜಾವೀ ॥೧೩॥

ನಾನಾ ದೇವೀ ಭಜನ ಕೇಲೇ । ತೇ ಮೂಳ ಪುರುಷಾಸೀ ಪಾವಲೇ ।
ಯಾಕಾರಣೇ ಸನ್ಮಾನಿಲೇ । ಪಾಹಿಜೆ ಸಕಳ ಕಾಂಹೀ ॥೧೪॥

ಮಾಯಾವಲ್ಲೀ ಫಾಂಪಾವಲೀ । ನಾನಾ ದೇಹೇಫಳೀ ಲಗಡಲೀ ।
ಮುಳೀಚಿ ಜಾಣೀವ ಕಳೋ ಆಲೀ । ಫಳಾಮಧೇ ॥೧೫॥

ಮ್ಹಣೋನೀ ಯೇಳೀಲ ನ ಕರಾವೇ। ಪಾಹಾಣೇ ತೇ ಯೇಥೇ ಚಿ ಪಾಹಾವೇ।
ತಾಳಾ ಪಡತಾ ರಾಹಾವೇ । ಸಮಾಧಾನೇ ॥೧೬॥

ಪ್ರಾಣೀ ಸಂಸಾರ ಟಾಕಿತೀ । ದೇವಾಸ ಧುಂಡೀತ ಫಿರತೀ ।
ನಾನಾ ಅನುಮಾನೀ ಪಡತೀ । ಜೇಥ ತೇಥೇ ॥೧೭॥

ಲೋಕಾಚೀ ಪಾಹಾತಾ ರೀತೀ । ಲೋಕ ದೇವಾರ್ಚನೇ ಕರಿತೀ ।
ಅಥವಾ ಕ್ಷತ್ರದೇವ ಪಾಹಾತೀ । ಠಾಈ ಠಾಈ ॥೧೮॥

ಅತ್ತರ, ಗಂಧ, ಪತ್ರ, ಪುಷ್ಪ, ಫಲ, ತಾಂಬೂಲ. ಧೂಪ, ದೀಪ ಇತ್ಯಾದಿ ಅನೇಕ ಪ್ರಕಾರ (ಷೋಡಶೋಪಚಾರ ಅಂದರೆ ಹದಿನಾರು ತರಹದ ಉಪಚಾರ) ಗಳಿಂದ, ಇದಲ್ಲದೇ ಇನ್ನೂ ಅನೇಕ ಪ್ರಕಾರಗಳಿಂದ ಭಜಿಸಲಿಕ್ಕೆ ಮತ್ತು ಪೂಜಿಸಲಿಕ್ಕೆ ಮತ್ತು ಉದ್ಯೋಗ ಸೇವೆ, ಇತ್ಯಾದಿ ಮಾಡಲಿಕ್ಕೆ ದೇಹವಿಲ್ಲದಿದ್ದರೆ ಆಗುವದಿಲ್ಲ.(೧೦) ದೇಹ ಇರದಿದ್ದರೆ ದೇವರ ತೀರ್ಥ ತೆಗೆದುಕೊಳ್ಳಲಿಕ್ಕೆ ಬರುವದಿಲ್ಲ. ದೇಹವೇ ಇರದಿದ್ದರೆ ದೇವರಿಗೆ ಗಂಧ ಹಚ್ಚುವದು ಹೇಗೆ ? ಅರ್ಥಾತ್ ಹಚ್ಚಲಿಕ್ಕೆ ಆಗುವದಿಲ್ಲ. ದೇಹ ಇರದಿದ್ದರೆ ಮಂತ್ರ ಪುಷ್ಪ ಅನ್ನುವವರು, (ಅಕ್ಷತೆ, ಹೂಗಳನ್ನು ಅರ್ಪಿಸುವವರು) ಹಾಗೂ ಇತರ ಮಂತ್ರವನ್ನು ಅನ್ನುವವರು ಯಾರು ? ಅಂತೂ ಒಟ್ಟಿನಲ್ಲಿ ದೇಹವು ಬೇಕು. ಅಂದಂತಾಯಿಲ್ಲವೇ? (೧೧) ಈ ಪ್ರಕಾರ ದೇಹವಿಲ್ಲದಿದ್ದರೆ ಎಲ್ಲ ಕಡೆಗೂ ಎಲ್ಲ ಕಾರ್ಯಗಳು ನಿಂತು ಹೋಗುತ್ತವೆ. ದೇಹ ಇರದಿದ್ದರೆ ಬಹಳ ಆತಂಕವಾಗುವದು. ಒಟ್ಟಿನಲ್ಲಿ ದೇಹದ ಸಹಾಯದಿಂದಲೇ ಭಗವಂತನನ್ನು ಭಜಿಸಲಿಕ್ಕೆ ಸಾಧ್ಯವಾಗುವದು. (೧೨) ಜಗತ್ತಿನಲ್ಲಿ ಅನೇಕ ದೇವ ಮತ್ತು ದೇವತಾ ಇರುವವು. ಇವುಗಳಲ್ಲಿ ಮೂಲ ಅಂತರಾತ್ಮನ ಸಾಮರ್ಥ್ಯವು ಹೆಚ್ಚು ಕಡಿಮೆ ರೀತಿಯಲ್ಲಿ ಪ್ರಕಟವಾಗುವದು. ಈ ದೇವ ದೇವತಾ ಪೂಜೆಯನ್ನು ಮಾಡಿದ್ದಾದರೆ ಅದು ಮೂಲ ಅಂತರಾತ್ಮನಿಗೇ ಸಲ್ಲುತ್ತದೆ: ದೇವರು, ದೇವತೆಗಳು, ಭೂತಗಳು, ಮತ್ತು ದೈವತಗಳು, ಉಪ ದೇವತೆಗಳು ಈ ಎಲ್ಲರಲ್ಲಿ ಮೂಲ ಪುರುಷ ಅಂತರಾತ್ಮನ ಸಾಮರ್ಥ್ಯವೇ ಇರುವದು. ಅವರವರ ಅಧಿಕಾರ ಪರತ್ವದ ಪ್ರಕಾರ ಆಯಾ ದೇವ ದೇವತೆಗಳೆಲ್ಲರನ್ನು ಪೂಜಿಸಬೇಕು. ಸರ್ವದೇವ ದೇವತೆಗಳ ಅಧಿಕಾರ ಒಂದೇ ಸಮ ಇರುವದಿಲ್ಲ. ಇದನ್ನು ಲಕ್ಷ್ಯದಲ್ಲಿ ತಂದುಕೊಂಡು ಅನೇಕ ದೇವ ದೇವತಾದಿಗಳನ್ನು ಆ ಆ ರೀತಿಯಲ್ಲಿ ಮನ್ನಿಸಬೇಕು. (೧೩) ಅನೇಕ ಪ್ರಕಾರದ ದೇವರ ಭಜನೆಯನ್ನು ಮಾಡಿದರೂ ಕೂಡಾ ಅದು ಕೊನೆಗೆ ಮೂಲಪುರುಷನಿಗೇ ಅರ್ಥಾತ್ ಅಂತರಾತ್ಮನಿಗೇ ಹೋಗಿ ಮುಟ್ಟುವದು. ಈ ಕಾರಣದಿಂದ ಸರ್ವಪ್ರಕಾರದ ದೇವ ದೇವತಾದಿಗಳನ್ನು ಅವರವರ ಪರಿಯಲ್ಲಿ [ಅಂತಸ್ತಿನಂತೆ] ಮಾನಕೊಡಬೇಕು. (೧೪) ಮಾಯಾರೂಪದ ಬಳ್ಳಿಯು ಬಹಳ ಭರಾಟೆಯಿಂದ ದಿಕ್ಕು ತಪ್ಪುವಂತೆ ಬೆಳೆದು ಎಲ್ಲ ಕಡೆಗೂ ಹಬ್ಬಿರುವದು. ಇದಕ್ಕೆ ಅನೇಕಾನೇಕ ದೇಹ ರೂಪದ ಫಲಗಳು ಆಗಿ ಅಲ್ಲಲ್ಲಿ ಭರಗಚ್ಚಾಗಿ ಬಹಳಷ್ಟು ಇಳಿಬಿದ್ದಿರುವವು. ಮೂಲ ಪುರುಷನಲ್ಲಿರುವ ಆ ಯಾವ ಅರಿವು [ಜ್ಞಾನ, ತಿಳುವಳಿಕೆ] ಅನ್ನುವದು ಇರುವದೋ ಅದೇ ಕೊನೆಯಲ್ಲಿ ದೇಹ ರೂಪದ ಫಲದಲ್ಲಿ ಪ್ರಕಟವಾಯಿತು. (೧೫) ದೃಶ್ಯದಲ್ಲಿ ಕಂಡು ಬರುವ ಅನೇಕಾನೇಕ ದೇವರ ನಾದಿಗೆ ಕಾಯು ಹತ್ತದೆ ಶುದ್ಧ ಅರಿವಿನ ರೂಪವಾಗಿರುವ ಅಂತರಾತ್ಮನ ಶೋಧಮಾಡಿದಲ್ಲಿ ಜೀವಕ್ಕೆ ಖರೇ ಸಮಾಧಾನ ಪ್ರಾಪ್ತವಾಗುವದು: ಉದ್ದರಿಂದ ಬೇಸರ ಮಾಡಬೇಡಿರಿ ತಾತ್ಸಾರ ಮಾಡಬೇಡಿರಿ. ವ್ಯರ್ಥ ಕಾಲಹರಣ ಮಾಡದೆ ಅಂತರಾತ್ಮನ ಬಗ್ಗೆ ಏನೆಲ್ಲವನ್ನು ಶೋಧಿಸಿರಿ. ಅಂದರೆ ದೇಹ ಮತ್ತು ಆತ್ಮ ಇವುಗಳ ಬಗ್ಗೆ ಸರ್ವವನ್ನು ಇಲ್ಲಿಯೇ ಈ ನರದೇಹದಲ್ಲಿಯೇ ತಿಳಿದು ನೋಡಿರಿ. ಮತ್ತು ವಿವೇಕದಿಂದ ತತ್ವದ ಮೇಳ ಹೊಂದಿತೆಂದರೆ ಎಲ್ಲ ದೇವರಲ್ಲಿ ಒಬ್ಬನೇ ಮೂಲ ಪುರುಷನ ತಂತು [ಎಳೆ] ಇರುವದು ಅನ್ನುವದು ಖಾತ್ರಿಯಾದರೆ ಅಥವಾ ಅನುಭವಕ್ಕೆ ಬಂದರೆ ಆಗ ಸಮಾಧಾನವನ್ನು ಹೊಂದುವಿರಿ. ಆ ಮೇಲೆ ಸ್ವಸ್ಥರಾಗಿ ಇರುವವರಾಗಿರಿ. (೧೬) ಮನುಷ್ಯರು ಸಂಸಾರವನ್ನು ಬಿಟ್ಟು ಕೇವಲ ದೇವರನ್ನು ಹುಡುಕುತ್ತ ತಿರುಗುವರು. ಮತ್ತು ಅಲ್ಲಿ ಇಲ್ಲಿ ಹೋದಲ್ಲೆಲ್ಲ ವಿನಾಕಾರಣ ಕಲ್ಪನೆಯ ಸಂಶಯ, ಗೊಂದಲ ಘೋಟಾಳೆಯಲ್ಲಿ ಸಿಕ್ಕು ಬೀಳುವರು. (೧೭) ಲೋಕದ ರೀತಿ ಹೇಗಿರುವದೆಂದರೆ ನಿತ್ಯ ದೇವರ ಪೂಜೆ ಅರ್ಚನೆಮಾಡಬೇಕು. ಅಥವಾ ಅನೇಕ ಸ್ಥಳದಲ್ಲಿರುವ ಪ್ರಸಿದ್ಧ ಕ್ಷೇತ್ರದ ದೇವರನ್ನು ನೋಡಬೇಕು. ಇದೇ ಇವರ ಹವ್ಯಾಸವಿರುವದು. (೧೮)

ಅಥವಾ ನಾನಾ ಅವತಾರ। ಏಕೋನೀ ಧರಿತೀ ನಿರ್ಧಾರ।
ಪರೀ ತೇ ಅವಘೇ ಸವಿಸ್ತರ। ಹೋಊನ ಗೇಲೇ ॥೧೯॥

ಯೇಕ ಬ್ರಹ್ಮಾ ವಿಷ್ಣು ಮಹೇಶ। ಏಕೋನ ಮ್ಹಣತೀ ಹೇ ವಿಶೇಷ।
ಗುಣಾತೀತ ಜೋ ಜಗದೀಶ। ತೋ ಪಾಹಿಲಾ ಪಾಹಿಜೇ ॥೨೦॥

ದೇವಾಸೀ ನಾಹೀ ಥಾನಮಾನ। ಕೋಠೇ ಕರಾವೇ ಭಜನ।
ಹಾ ವಿಚಾರ ಪಾಹಾತಾ ಅನುಮಾನ। ಹೋತ ಜಾತೋ ॥೨೧॥

ನಸತಾ ದೇವಾಚೇ ದರ್ಶನ। ಕೈಸೇನ ಹೋಈಜೆ ಪಾವನ।
ಧನ್ಯ ಧನ್ಯ ತೇ ಸಾಧುಜನ। ಸಕಳ ಜಾಣತೀ ॥೨೨॥

ಭೂಮಂಡಳೀ ದೇವ ನಾನಾ। ತ್ಯಾಂಚೀ ಭೀಡ ಉಲಂಘೇನಾ।
ಮುಖ್ಯ ದೇವ ತೋ ಕಳೇನಾ। ಕಾಂಹೀ ಕೇಲ್ಯಾ ॥೨೩॥

ಕರ್ತುತ್ವ ವೇಗಳೇ ಕರಾವೇ। ಮಗತ್ಯಾ ದೇವಾಸೀ ಪಾಹಾವೇ।
ತರೀ ಚ ಕಾಂಹೀಯೇಕ ಪಡೇ ಠಾವೇ। ಗೌಪ್ಯಗುಹ್ಯ ॥೨೪॥

ಕೆಲವು ಜನರು ಅನೇಕ ಅವತಾರದ ಕಥೆಗಳನ್ನು ಕೇಳುವರು. ಮತ್ತು ಇವುಗಳಲ್ಲಿಯ ಯಾವುದಾದ ರೊಂದು ಅವತಾರದ ಮೇಲೆ ನಿಷ್ಠೆ ಇಡುವರು. ಆದರೆ ಎಲ್ಲ ಅವತಾರಗಳ ಮಹಾಪುರುಷರೂ ತಮ್ಮ ತಮ್ಮ ಅವತಾರ ಕಾರ್ಯವನ್ನು ಯಾವಾಗಲೋ [ಹಿಂದೆಯೇ] ಮುಗಿಸಿ ನಿಜ ಧಾಮಕ್ಕೆ ಅಂದರೆ ಮೂಲ ಪುರುಷನಲ್ಲಿಗೆ ಹೊರಟು ಹೋಗಿರುವರು. (೧೯) ಕೆಲವೊಂದು ಜನರಿಗೆ ಬ್ರಹ್ಮ, ವಿಷ್ಣು, ಮಹೇಶ್ವರ ಇವರ ಬಗ್ಗೆ ಶ್ರವಣಮಾಡಿ ಅವರಲ್ಲಿ ಆಕರ್ಷಣ ಹೊಂದುವರು. ಆದರೆ ಕ್ಷೇತ್ರಾದಿಗಳಲ್ಲಿಯ ದೇವರಾಗಲಿ,ಅಥವಾ ಅವತಾರಿಗಳಲ್ಲಿಯ ದೇವರಾಗಲಿ, ಅಥವಾ ತ್ರಿಮೂರ್ತಿಗಳೇ ಆಗಲಿ, ಈ ಎಲ್ಲ ದೇವರು ತ್ರಿಗುಣ [ಸತ್ವ, ರಜ, ತಮ] ದ ರಾಜ್ಯದಲ್ಲಿ ಇರುವವರಾಗಿ ರುವರು. ಆದ್ದರಿಂದ ತ್ರಿಗುಣದ ಆಚೆಗೆ ಇರುವಂಥ ಜಗದೀಶ್ವರ ಅಥವಾ ಪರಮಾತ್ಮಾ ಇವನನ್ನು ನೋಡುವದು ನಿಜವಾಗಿಯೂ ಖರೇ ಅವಶ್ಯದ್ದಾಗಿರುವದು. (೨೦) ದೇವರು ಸರ್ವ ಸ್ಥಳದಲ್ಲಿ ಇದ್ದದ್ದರಿಂದ ಇವನಿಗೆ ಕಾಯಂ ಇರುವಂಥ ಒಂದು ಸ್ಥಳ ನಮ್ಮಂತೆ ಇರುವದಿಲ್ಲ. ಅಂದ ಮೇಲೆ ಇಂಥ ದೇವರ ಭಜನೆ, ಪೂಜೆ ಎಲ್ಲಿ ಮಾಡಬೇಕು? ಅನ್ನುವ ವಿಚಾರ ಒಂದುವೇಳೆ ನಾವು ಮಾಡುತ್ತ ಕುಳಿತೆವೆಂದರೆ ನಾವು ಕಲ್ಪನೆಯ ಘೋಟಾಳೆಯಲ್ಲಿ ತೊಡಕಿ ಕೊಂಡು ಕೂಡಬೇಕಾಗುವದು. (೨೧) ಪ್ರತ್ಯಕ್ಷ ಸಗುಣ ಸಾಕಾರ ಮೂರ್ತಿಯ ದರ್ಶನವಾಗುವದೆಂದರೆ ಅದು ದೇವರ ದರ್ಶನವೆಂದು ನಾವು ತಿಳಿದಿರುವೆವು ಇದು ನಮ್ಮ ಭ್ರಾಮಕ ಕಲ್ಪನೆ [ತಿಳುವಳಿಕೆ] ಇರುವದು. ಆದ್ದರಿಂದ ನಮ್ಮ ಮನದಲ್ಲಿ ಬರುವದೇನಂದರೆ ದೇವರ ದರ್ಶನವಾಗದಿದ್ದರೆ ನಾವು ಪಾವನರಾಗುವದಿಲ್ಲ. ಅನ್ನುವ ಸಂಶಯ ಬರುವದು. ಅದರಂತೆಯೇ ದೇವರ ಮತ್ತು ದೇವ ದರ್ಶನ ಇದರ ರಹಸ್ಯವು ಸಂಪೂರ್ಣವಾಗಿ ಯಾರಿಗೆ ಗೊತ್ತಿರುವದೋ ಅಂಥ ಸಾಧು ಸಂತರು ಧನ್ಯರಿರುವರು. ಇಂಥವರ ಸಹವಾಸಮಾಡಿ ಇವರ ಉಪದೇಶದಂತೆ ನಡೆಯಿರಿ. (೨೨) ಜಗತ್ತಿನಲ್ಲಿ ಬಹಳಷ್ಟು ದೇವರು ಇರುವದು ಕಂಡುಬರುವದು. ಈ ದೇವರ ಭಿಡೆ ಮುರಿದು ಅದರಾಚೆಗೆ ಹೋಗಬೇಕೆಂದರೆ ಇವರು ಹೋಗಗೊಡಲೊಲ್ಲರು. ಇದರಿಂದ ಒಮ್ಮೆ ಪಾರಾಗಿ ಬಂದೆವೆಂದರೆ ಆಗ ಖರೇ ಮತ್ತು ಮುಖ್ಯ ದೇವನನ್ನು ಗುರುತಿಸಲು ಸಾಧ್ಯವಾದೀತು. ಇಲ್ಲದಿದ್ದರೆ ಏನು ಮಾಡಿದರೂ ತಿಳಿಯುವದಿಲ್ಲ. ಮಾನವಸಮಾಜದಲ್ಲಿ ಕಂಡು ಬರುವ ನಾನಾ ಪ್ರಕಾರದ ಈ ದೇವರುಗಳೆಲ್ಲವೂ ಕೊನೆಯದಾಗಿ ಮಾನವ ನಿರ್ಮಿತವಿರುವವು. ಮತ್ತು ಈ ಎಲ್ಲವು ಗಳನ್ನು ಬದಿಗೆ ನಿರ್ಭಯವಾಗಿ ಸರಿಸಿದ ನಂತರ ಯಾರು ನಿಜವಾದ ಗುಣಾತೀತ ದೇವರ ಶೋಧ ಮಾಡುವರೋ ಅವರಿಗೇ ನಿಜವಾದ ಗುಣಾತೀತ ದೇವರು ಸಿಗುವನು. ಈ ಪ್ರಖರ ಖಂಡತುಂಡ ವಿಚಾರವನ್ನು ಶ್ರೀ ಸಮರ್ಥರು ಎಷ್ಟೊಂದು ನಿಃಸಂದಿಗ್ಧತನದಿಂದ ನಿರ್ಭಿಡೆಯಿಂದ ಹೇಳಿರುವರೆಂಬುದನ್ನು ತಿಳಿದರೆ ಬಹಳಷ್ಟು ಆಶ್ಚರ್ಯವಾಗುವದು. ಖರೇ ವಿಚಾರದ ಗಟ್ಟಿಮುಟ್ಟಾದ ಭೂಮಿಕೆಯ ಮೇಲೆ ಎದ್ದು ನಿಂತು ಮೂರ್ತಿ ಭಂಜಕನಾದ ನಾಸ್ತಿಕನು ಇದಕ್ಕಿಂತ ಹೆಚ್ಚಿಗೆ ಏನೂ ಹೇಳಲು ಶಕ್ತನಾಗುವದಿಲ್ಲ. ಆದರೆ ಇವನು ನಾಸ್ತಿಕನು ಕೇವಲ ವಿಚಾರದ ಕಕ್ಷೆಯಲ್ಲಿ [ಪರಿಮಿತಿ ಯಲ್ಲಿ] ವ್ಯವಹರಿಸುವನು. ಆದ್ದರಿಂದ ಇವನಿಗೆ ಖರೇ ದೇವರ ಪ್ರತ್ಯಕ್ಷ ಅನುಭವ ಬರುವದಿಲ್ಲ ಶ್ರೀ ಸಮರ್ಥರಿಗೆ ಖರೇ ದೇವರ ಪ್ರತ್ಯಕ್ಷ ಅನುಭವವಿದ್ದಿತು. ಇದೇ ಈ ಇಬ್ಬರಲ್ಲಿಯ ದೊಡ್ಡ ಅಂತರ ಇರುವದು. (೨೩) ಮನುಷ್ಯನು "ನಾನು ಮಾಡುವವ" ಅನ್ನುವ ಅಹಂದಿಂದ ವ್ಯವಹರಿಸುತ್ತಾನೆ. ಇದರಿಂದಾಗಿ ದೇವರ ಕರ್ತೃತ್ವವು ಅಹಂಕಾರಿ ಮನುಷ್ಯನಿಗೆ ತಿಳಿಯುವದಿಲ್ಲ. ಅಥವಾ ತಿಳಿದುಕೊಳ್ಳಲಿಕ್ಕೆ ಬೇಕಾಗುವ ಸೂಕ್ಷ್ಮ ಜ್ಞಾನ ದೃಷ್ಟಿ ಇವನಲ್ಲಿ ಇರುವದಿಲ್ಲ. ಆದ್ದರಿಂದ ನಿಮ್ಮ "ನಾನು" ಅನ್ನುವದನ್ನು ಬದಿಗೆ ಸರಿಸಿರಿ, ಹಿಂದಕ್ಕಟ್ಟಿ ಬಿಡಿರಿ. ಅಂದರೆ ಆಗ ನಿಜವಾದ ದೇವರನ್ನು ನೋಡಲಿಕ್ಕೆ ಬರುವದು. ನಾವು ನಮ್ಮ ತನವನ್ನು ಬಿಟ್ಟು ನೋಡಲಿಕ್ಕೆ ಹತ್ತಿದೆವೆಂದರೆ ದೇವರ ಗುಪ್ತ ರಹಸ್ಯವು ಸ್ವಲ್ಪ ಸ್ವಲ್ಪ ತಿಳಿಯಲಿಕ್ಕೆ ಹತ್ತುವದು. ಅರ್ಥಾತ್ ಬ್ರಹ್ಮಜ್ಞಾನದ ರಹಸ್ಯವು ಗೊತ್ತಾಗಲು ತಡವಾಗುವದಿಲ್ಲ.(೨೪)

ತೇ ದಿಸೇನಾ ನಾ ಭಾಸೇನಾ । ಕಲ್ಪಾಂತೀ ಹಿ ನಾಸೇನಾ ।
ಸುಕೃತಾವೇಗಳೀ ವಿಶ್ವಾಸೇನಾ । ತೇಥೇ ಮನ ॥೨೫॥

ಉದಂಡ ಕಲ್ಪಿತೇ ಕಲ್ಪನಾ । ಉದಂಡ ಇಚ್ಛಿತೇ ವಾಸನಾ ।
ಅಭ್ಯಾಂತರೀ ತರಂಗ ನಾನಾ । ಉದಯಾತೇ ಪಾವತೀ ॥೨೬॥

ಮ್ಹಣೋನೀ ಕಲ್ಪನಾ ರಹಿತ। ತೇ ಚಿ ವಸ್ತು ಶಾಶ್ವತ ।
ಅಂತ ನಾಹೀ ಮ್ಹಣೋನೀ ಅನಂತ । ಬೋಲಿಜೆ ತಯಾ ॥೨೭॥

ಹೇ ಜ್ಞಾನದೃಷ್ಟೀನೇ ಪಾಹಾವೇ । ಪಾಹೋನಿ ತೇಥೇ ಚಿ ರಾಹಾವೇ ।
ನಿಜಧ್ಯಾಸೇ ತದ್ರೂಪ ವ್ಹಾವೇ । ಸಂಗತ್ಯಾಗೇ ॥೨೮॥

ನಾನಾ ಲೀಳಾ ನಾನಾ ಲಾಘವೇ । ತೇ ಕಾಯೆ ಜಾಣಿಜೇ ಬಾಪುಡ್ಯಾ ಜೀವೇ ।
ಸಂತಸಂಗೇ ಸ್ವಾನುಭವೇ । ಸ್ಥಿತಿ ಬಾಣೆ ॥೨೯॥

ಐಸೀ ಸೂಕ್ಷ್ಮ ಸ್ಥಿತಿ ಗತೀ । ಕಳತಾ ಚುಕೆ ಅಧೋಗತೀ ।
ಸದ್‌ಗುರುಚೇನಿ ಸದ್ಗತೀ । ತತ್ಕಾಳ ಹೋತೇ ॥೩೦॥

ಇತಿ ಶ್ರೀ ದಾಸಭೋಧೇ ಗುರುಶಿಷ್ಯ ಸಂವಾದೆ
'ದೇಹಮಾನ್ಯ ನಿರೂಪಣ' ನಾಮ ಸಮಾಸ ಪಂಚಮ ॥

• •

ನಿಜವಾದ [ಖರೇ] ದೇವರು ಅಂದರೆ ಅದು ಶಾಶ್ವತ ವಸ್ತುವೇ ಇರುವದು. ಆದರೆ ಇದು ಅನಂತವಿರುವದು. ಕಲ್ಪನಾತೀತ ಇರುವದು. ಜ್ಞಾನ ದೃಷ್ಟಿಯಿಂದ ಇದನ್ನು ನೋಡಬೇಕು. ಮತ್ತು ನಿಧಿಧ್ಯಾಸದಿಂದ ಆ ಖರೇ ದೇವರೊಂದಿಗೆ ತದಾಕಾರವಾಗಿ ಸಮಾಧಾನದಿಂದ ಇರಬೇಕು: ಸತ್ಯವಾಗಿ ಹೇಳುವದಾದರೆ ನಿಜವಾದ ದೇವರು ಅಥವಾ ಶಾಶ್ವತ ಪರಮಾತ್ಮ ಸ್ವರೂಪವು ಇಂದ್ರಿಯಗಳಿಗೆ ಕಾಣುವದಿಲ್ಲ. ಮತ್ತು ಮನಸ್ಸಿಗೆ ಭಾಸವೂ ಆಗುವದಿಲ್ಲ. [ಹೊಳೆಯುವದಿಲ್ಲ]. ಶಾಶ್ವತ ಸ್ವರೂಪಕ್ಕೆ ಕಲ್ಪಾಂತ್ಯದ ವೇಳೆಯಲ್ಲಿ ಕೂಡಾ ನಾಶವಿಲ್ಲ. ಉತ್ತಮವಾದ ಪುಣ್ಯದ ಬಲವಿರದಿದ್ದರೆ ಇದರ ಮೇಲೆ ಮನಸ್ಸಿನ ವಿಶ್ವಾಸವು ಕೂಡುವದಿಲ್ಲ. (೨೫) ಮನುಷ್ಯನ ಮನದಲ್ಲಿ ಪುರುಸೊತ್ತಿಲ್ಲದಷ್ಟು, ಕಲ್ಪನೆಗಳು ಬರುತ್ತಿರುವವು. ಇದರಂತೆ ಇವನ ವಾಸನಾ ಕೂಡಾ ನಾನಾ ಪ್ರಕಾರದಲ್ಲಿ ಬಹಳಷ್ಟು ಇಚ್ಛಾಮಾಡುತ್ತಲೇ ಇರುವದು. ಇವನ ಅಂತರಂಗದಲ್ಲಿ ಅನೇಕ ಪ್ರಕಾರದ ವೃತ್ತಿಗಳು ಭಾವನೆಗಳು ಉದಯುಹೊಂದುವವು. ಮನಸ್ಸಿನ ಈ ಸ್ಥಿತಿಯು ಎಲ್ಲಿಯವರೆಗೆ ಇರುವದೋ ಅಲ್ಲಿಯವರೆಗೆ ನಿಜವಾದ ದೇವರ ದರ್ಶನವಾಗುವದು ಶಕ್ಯವಿಲ್ಲ. (೨೬) ಆದ್ದರಿಂದ ಯಾವುದು ಕಲ್ಪನಾರಹಿತ ತತ್ವ ಇರುವದೋ ಅದೇ ನಿಜವಾದ ಶಾಶ್ವತವಾದ ವಸ್ತು ಇರುವದು. ಈ ವಸ್ತುವಿಗೆ ಅಂತವಿಲ್ಲ. ಅಂತೆಯೇ ಇದಕ್ಕೆ ಅನಂತ ಎಂದು ಅನ್ನುವರು. (೨೭) ಜ್ಞಾನ ದೃಷ್ಟಿಯಿಂದ ಆ ವಸ್ತುವನ್ನು ನೋಡಬೇಕು. ಮತ್ತು ನೋಡಿ ಅದರ ಹತ್ತಿರವೇ ಇರಬೇಕು. ನಾವು ಮೊದಲಿಗೆ ನಿಃಸಂಗರಾಗಬೇಕು. ಮತ್ತು ಅನಂತರ ನಿಧಿಧ್ಯಾಸದಿಂದ ಆ ಮೂಲ ವಸ್ತುವಿನೊಂದಿಗೆ ತದ್ರೂಪರಾಗಬೇಕು. (೨೮) ಸಂಪೂರ್ಣ ಸಂಗತ್ಯಾಗಮಾಡಿ [ಸಾಧಿಸಿ] ನಿಧಿಧ್ಯಾಸದಿಂದ ವಸ್ತುವಿನೊಂದಿಗೆ ತದ್ರೂಪರಾದ ಮೇಲೆ ಆ ಮನುಷ್ಯನ ಕೈಯಿಂದ ಅನೇಕ ಲೀಲಾ, ಚಮತ್ಕಾರ ಮತ್ತು ವಿಸ್ಮಯಕಾರಕ ಕೌತುಕಾಸ್ಪದ ಕ್ರಿಯಾ ಅಥವಾ ಚಮತ್ಕಾರದ ಘಟನೆಗಳು ಘಟಿಸುವವು. ಈ ಆನಂದದ ಕಲ್ಪನೆಯು ಸಾಮಾನ್ಯ ಬಡ ಜೀವನಿಗೆ, ದೇಹ ಬುದ್ಧಿಯು ಪಾಪಿ ಜೀವಕ್ಕೆ, ಬರಲಿಕ್ಕೆ ಶಕ್ಯವಿಲ್ಲ. ಸಂತರ ಸಂಗತಿ ಮತ್ತು ಸ್ವತಃದ ಅನುಭವ ಈ ಎರಡು ಸಾಧನಗಳಿಂದಲೇ ಈ ಅಮೂಲ್ಯ ಸ್ಥಿತಿಯು ನಮ್ಮಲ್ಲಿ ನೆಲೆಗೊಳ್ಳುವದು. (೨೯) ಖರೇ ದೇವರ ದರ್ಶನದ ಸ್ಥಿತಿ ಮತ್ತು ತತ್ ಪರಿಣಾಮದಿಂದಾಗುವ ಸ್ಥಿತಿಯು ಅವಸ್ಥೆ ಅದು ಈ ಪ್ರಕಾರ ಸೂಕ್ಷ್ಮವಿರುವದು. ಇದು ತಿಳಿದದ್ದಾದರೆ, ಅನುಭವಕ್ಕೆ ಬಂದರೆ ಅಧೋಗತಿ ತಪ್ಪುವದು. ಸಾಧಕನಿಗೆ ಸದ್ಗುರುವಿನ ಲಾಭವಾದರೆ ಮಾತ್ರ ಅವನ ಕೃಪೆಯಿಂದ ಉತ್ತಮ ಅವಸ್ಥೆಯು [ಸಮಾಧಾನವು] ಬಹಳ ಬೇಗ ಬರುವದು. ಸದ್ಗತಿ ದೊರಕುವದಕ್ಕೆ ತಡವಾಗುವದಿಲ್ಲ. (೩೦)

ಶ್ರೀ ದಾಸಬೋಧದ ಹತ್ತೊಂಭತ್ತನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ದೇಹಮಾನ್ಯ ನಿರೂಪಣ"ವೆಂಬ ಹೆಸರಿನ ಐದನೇ ಸಮಾಸವು ಮುಗಿದುದು.

● ●

ದಶಕ. ಏಕೋನವಿಂಶತಿ : ಸಮಾಸ. ಷಷ್ಠಮ : ಬುದ್ಧಿವಾದ ನಿರೂಪಣ (ನುಡಿ ೩೦)

॥ಶ್ರೀರಾಮ॥ ಪರಮಾರ್ಥೀ ಆಣಿ ವಿವೇಕೀ । ತ್ಯಾಚೇ ಕರಣೆ ಮಾನೇ ಲೋಕೀ ।
ಕಾ ಜೇ ವಿವರವಿವರೋ ಚುಕೀ । ಪಡೋ ಚಿ ನೇದೀ ॥೧॥

ಜೋ ಜೋ ಸಂದೇಹ ವಾಟೇ ಜನಾ । ತೋ ತೋ ಕದಾಪೀ ಕರೀನಾ ।
ಆದಿ ಅಂತ ಅನುಮಾನಾ । ಆಣೂನ ಸೋಡೀ ॥೨॥

ಸ್ವತಾ ನಿಸ್ಪೃಹ ಅಸೇನಾ । ತ್ಯಾಚೇ ಬೋಲಣೇ ಚಿ ಮಾನೇನಾ ।
ಕರೀಣ ಆಹೆ ಜನಾರ್ದನಾ । ರಾಜೀ ರಾಖಣೇ ॥೩॥

## ದಶಕ ೧೯. ಸಮಾಸ ೬. ಬುದ್ಧಿವಾದ ನಿರೂಪಣ (ನುಡಿ ೪೦)

ಈ ಸಮಾಸದಲ್ಲಿ ಮಹಂತನಾದವನು ಲೋಕ ಸಂಗ್ರಹವನ್ನು ಮಾಡಬೇಕು. ಎಂದು ಹೇಳುವಾಗ ಮಹಂತನು ಅತಿಶಯ ವಿವೇಕದಿಂದ ವರ್ತಿಸಬೇಕೆಂದು ಶ್ರೀ ಸಮರ್ಥರು ಬಹಳ ಆಗ್ರಹದಿಂದ ಹೇಳುವರು. ಮಹಂತನ ಪ್ರತಿಯೊಂದು ಕಾರ್ಯದಲ್ಲಿ ಮುಖ್ಯವಾಗಿ ವಿವೇಕವು ಎದ್ದು ಕಾಣಬೇಕು. ಲೋಕದ ಜನರಲ್ಲಿ ಸಂದೇಹ ಬೆಳೆಯುವಂಥದೇನನ್ನೂ ಮಹಂತನು ಸ್ವಲ್ಪವಾದರೂ ಮಾಡಬಾರದು. ಇವನ ನಿಸ್ಪೃಹತನವು ಅತ್ಯಂತ ಜಾಜ್ವಲ್ಯವಿರಬೇಕು. ಇವನು ಎಂದೂ ಯಾರ ಹತ್ತಿರವೂ ಏನನ್ನೂ ಬೇಡಬಾರದು. ಜನರನ್ನು ಭಜನೆಯ ಕಡೆಗೆ ಹೊರಳಿಸಬೇಕು. ಆದರೆ ಅದೂ ಸಹ ವಿವೇಕದ ಬಲದ ಮೇಲೆಯೇ ಮಾಡಬೇಕು. ಈ ಜಗತ್ತಿನಲ್ಲಿ ಯಾವ ಯಾವುದು ಅತಿ ಉತ್ಕೃಷ್ಟವಿರುವದೋ ಭವ್ಯ ಪ್ರಚಂಡ ಪ್ರಶಸ್ತ ಇರುವದೋ ಮತ್ತು ಅತ್ಯಂತ ಹಿತಕಾರಕವಿರುವದೋ ಇಂಥವುಗಳ ಮೇಲೆ ಮಹಂತನಿಗೆ ಪ್ರೇಮವಿರಬೇಕು. ಎಲ್ಲರ ಮನೋಗತವನ್ನು ಗುರುತಿಸಿಕೊಂಡು ಮತ್ತು ಅದನ್ನು ಕಾಯ್ದುಕೊಂಡು ಜನ ಸಮೂಹವನ್ನು ನಿರ್ಮಾಣಮಾಡುವ ಕಲೆಯು ಮಹಂತನ ಹತ್ತಿರ ಜಾಗ್ರತವಿರಬೇಕು. ಇವನು ಎಲ್ಲರಿಗೂ ಬೇಕಾದವನಾಗಿರಬೇಕು. ಎಲ್ಲರೂ "ಇವನು ನಮ್ಮವ, ಇವನು ನಮ್ಮವ" ಎಂದು ಅನ್ನಿಸಿಕೊಳ್ಳುವ ಅದೃಷ್ಟಶಾಲಿಯಾಗಿರಬೇಕು. ತನ್ನ ಜೊತೆಗೆ ಇರುವ ಮನುಷ್ಯನು ಒಳಗಿನಿಂದ ಮತ್ತು ಹೊರಗಿನಿಂದ ಬದಲಾವಣೆ ಹೊಂದಲಿಕ್ಕೆ ಬೇಕು. [ಪರಿಶುದ್ಧನಾಗಬೇಕು.] ಮಹಂತನಿಗೆ ಏಕಾಂತದ ಅವಶ್ಯಕತೆಯು ಬಹಳವಿರುವದು. ಏಕಾಂತದಲ್ಲಿ ನಿವಾಂತವಾಗಿ ಕುಳಿತು ಇವನು ಮುಂದಿನ ಕಾರ್ಯದ ಯೋಜನೆಯನ್ನು ಮಾಡಬೇಕು. ಮತ್ತು ಲೋಕಾಂತಕ್ಕೆ [ಜನ ಸಂಪರ್ಕಕ್ಕೆ] ಬಂದು ತನಗೆ ಶಕ್ಯವಾದಷ್ಟು ಜನ ಹಿತದ ಕಾರ್ಯವನ್ನು [ತಾಬಡ ತೋಬ] ಶೀಘ್ರವಾಗಿ ಮಾಡಿ ಮೋಕಳೀಕ ಆಗಬೇಕು. ಇದು ಏಕಾಂತಕ್ಕೆ ಅನುಕೂಲವು ಮಹಂತನು ತನ್ನಿಂದ ಆದಷ್ಟು ಭಗವಂತನ ಭಜನೆಯನ್ನು ಬೆಳೆಸಬೇಕು. ಪ್ರಸಾರಮಾಡಬೇಕು. ಅನೇಕ ಜನರಿಗೆ ಭಗವಂತನ ನಾಮಸ್ಮರಣೆ ಮಾಡಲಿಕ್ಕೆ ಹಚ್ಚಬೇಕು. ಆತ್ಮಾರಾಮನನ್ನು ಗುರುತಿಸಬೇಕು. ಮತ್ತು ಭಗವಂತನ ಕೀರ್ತಿಯನ್ನು ಭೂಮಂಡಲದ ತುಂಬೆಲ್ಲ ಭರಪೂರ ತುಂಬಿ ಬಿಡಬೇಕು. ಇಂಥ ಪುರುಷನು ನಿಜವಾದ ನೇತಾ ಇರುವನು.

### ದಶಕ ೧೯. ಸಮಾಸ ೬. ಬುದ್ಧಿವಾದ ನಿರೂಪಣ (ನುಡಿ ೩೦)

ಪರಮಾರ್ಥದಲ್ಲಿ ವಿವೇಕಕ್ಕೆ ಬಹಳ ಉನ್ನತ ಶ್ರೇಷ್ಠ ಸ್ಥಾನವಿರುವದು. ಇದನ್ನು ಎಲ್ಲರೂ ತಿಳಿದೇ ಇರುವರು. ಆದರೂ ಪರಮಾರ್ಥಿ ಮನುಷ್ಯನು ವ್ಯವಹಾರದಲ್ಲಿ ಯಾವಾಗ ಇಳಿಯುವನೋ ಆಗಲೂ ಕೂಡಾ ಅವನು ಅತ್ಯಂತ ವಿವೇಕದಿಂದ ನಡೆದದ್ದೇ ಆದರೆ ಮಾತ್ರ ಅವನ ಕೈಯಿಂದ ಯಶಸ್ವಿ ರೀತಿಯಿಂದ ಲೋಕ ಸಂಗ್ರಹ ಕಾರ್ಯ ಘಟಿಸುವದು. ಇದು ಹೇಗೆ ಎಂಬುದರ ಬಗ್ಗೆ ವರ್ಣನೆಯನ್ನು ಮಾಡುವರು: ಯಾವನು ಪರಮಾರ್ಥಿಯಾಗಿರುವನೋ, ಮತ್ತು ಅದರ ಜೊತೆಗೇ ವಿವೇಕಿಯೂ ಇರುವನೋ ಇವನ ಕಾರ್ಯ ಜನರಿಗೆ ಮಾನ್ಯವಾಗುವದು. ತಾನು ಯಾವುದನ್ನು ಮಾಡಬೇಕಾಗಿರುವದೋ ಅದರ ಮೇಲೆ ಪುನಃ ಪುನಃ ವಿಚಾರಮಾಡಿ ತನ್ನ ಕೈಯಿಂದ ತಪ್ಪು ಆಗದಂತೆ ನೋಡಿಕೊಳುವನು. ಮತ್ತು ಅದರಂತೆ ನಡೆಯುವನು. ಇದೇ ಜನರ ಮನ್ನಣೆಗೆ ಕಾರಣವಾಗಿರುವದು. (೧) ಯಾವ ಯಾವ ಕೃತಿಯಿಂದ ಜನತೆಯ ಮನದಲ್ಲಿ ಸಂದೇಹ ನಿರ್ಮಾಣವಾದೀತೋ ಅಂಥ ಯಾವುದೇ ಕಾರ್ಯವನ್ನು ಎಂದೂ ಇವನು ಮಾಡುವದಿಲ್ಲ. ಪ್ರತಿಯೊಂದು ಕಾರ್ಯದ ಆರಂಭ ಮತ್ತು ಕೊನೆಯ ಪರಿಣಾಮ ಇವುಗಳ ಸರಿಯಾದ ಅಂದಾಜನ್ನು ಮೊದಲಿಗೇ ನಿರ್ಧರಿಸಿಕೊಂಡಿರುವನು. (೨) ಮನುಷ್ಯನು ಸ್ವತಃ ನಿಸ್ಪೃಹನಿರದಿದ್ದರೆ ಇವನ ಮಾತಿಗೆ ಯಾರೂ ವಿಶೇಷ ಬೆಲೆ ಕೊಡುವದಿಲ್ಲ. ಜನತಾ ಜನಾರ್ಧನರನ್ನು ಅಂದರೆ ಜನತೆಯನ್ನು ಸಂತೋಷವಾಗಿಡುವದು ಬಹಳ ಕಠಿಣವಿರುವದು. (೩)

ಕೋಣೀ ದಾಟೂನ ಉಪದೇಶ ದೇತೀ । ಕೋಣೀ ಮಧ್ಯಾವರ್ತೀ ಘಾಲಿತೀ ।
ತೇ ಸಹಜ ಚಿ ಹಳು ಪಡತೀ। ಲಾಲಚೀನೇ ॥೪॥

ಜಯಾಸ ಸಾಂಗಾವಾ ವಿವೇಕ। ತೋ ಚಿ ಜಾಣಾವಾ ಪ್ರತಿಕಂಚಕ ।
ಪುಢೇ ಪುಢೇ ನಾಸಕ । ಕಾರಬಾರ ಹೋತೋ ॥೫॥

ಭಾವಾಸ ಭಾಊ ಉಪದೇಶ ದೇತೀ । ಪುಢೇ ಪುಢೇ ಹೋತೇ ಫಜೀತೀ ।
ವೊಳಖೀಚ್ಯಾ ಲೋಕಾತ ಮಹಂತೀ । ಮಾಂಡೂ ಚಿ ನಯೇ ॥೬॥

ಪಹಿಲೇ ದಿಸೇ ಪರೀ ನಾಸೇ । ವಿವೇಕೀ ಮಾನ್ಯ ಕರಿತೀ ಕೈಸೇ ।
ಅವಿವೇಕೀ ತೇ ಜೈಸೇ ತೈಸೇ । ಮಿಳತೀ ತೇಥೇ ॥೭॥

ಭ್ರತಾರ ಶಿಷ್ಯ ಸ್ತ್ರೀ ಗುರು । ಹಾ ಹಿ ಫಟಿಕಾಳ ವಿಚಾರೂ ।
ನಾನಾ ಭ್ರಷ್ಟಾಕಾರೀ ಪ್ರಕಾರೂ । ತೈಸಾ ಚಿ ಆಹೆ ॥೮॥

ಪ್ರಗಟ ವಿವೇಕ ಬೋಲೇನಾ । ಝಾಂಕಾತಾಪಾ ಕರೀ ಜನಾ ।
ಮುಖ್ಯ ನಿಶ್ಚಯು ಅನುಮಾನಾ । ಆಣೂ ಚ ನೇದೀ ॥೯॥

ಹುಕೀಸರಿಸಾ ಭರೀ ಭರೇ । ವಿವೇಕ ಸಾಂಗತಾ ನ ಧರೇ ।
ದುರೀ ದೃಷ್ಟೀಚೆ ಪುರೇ । ಸಾಧು ನವ್ಹೇತೀ ॥೧೦॥

ಕೋಣ್ಹಾಸ ಕಾಂಹೀ ಚ ನ ಮಾಗಾವೇ । ಭಗವದ್ಭಜನ ವಾಢವಾವೇ ।
ವಿವೇಕಬಳೇ ಜನ ಲಾವಾವೇ । ಭಜನಾಕಡೇ ॥೧೧॥

ಪರಾಂತರ ರಕ್ಷಾಯಾಚೀ ಕಾಮೋ । ಬಹುತ ಕಠೀಣ ವಿವೇಕವರ್ಮೋ ।
ಸ್ವಇಛೇನೇ ಸ್ವಧರ್ಮೋ । ಲೋಕರಾಹಾಟೇ ॥೧೨॥

ಆಪಣ ತುರುಕ ಗುರೂ ಕೇಲಾ । ಶಿಷ್ಯ ಚಾಂಭಾರ ಮೋಳವಿಲಾ ।
ನೀಚ ಯಾತೀನೇ ನಾಸಲಾ । ಸಮುದಾವ ॥೧೩॥

ಗುರುತನದ ವ್ಯವಹಾರದಲ್ಲಿ ಕೆಲವರು ಜುಲುಮಿ ಒತ್ತಾಯ ಜಬರದಸ್ತಿನಿಂದ ಉಪದೇಶಕೊಡುವರು. ಇನ್ನು ಕೆಲವರು ಮಧ್ಯಸ್ಥಗಾರನ ಮೂಲಕ ಮಧ್ಯಸ್ತಿಮಾಡಿಸಿ ಉಪದೇಶ ಕೊಡುವರು. ಆದರೆ ಲೋಭಿತನದ ಮೂಲಕ ಇಂಥ ಗುರುವಿನ ಮಹತ್ವ ತನ್ನಷ್ಟಕ್ಕೆ ತಾನೇ ಕಡಿಮೆಯಾಗುತ್ತ ಹೋಗುವದು. (೪) ಕೆಲವೊಂದು ಸಲ ಏನಾಗುವದೆಂದರೆ ಯಾವನಿಗೆ ಉಪದೇಶ ಮಾಡಬೇಕಾಗಿರುವದೋ ಅವನೇ ಮುಖ್ಯವಾಗಿ ವಿರುದ್ಧವಿರುವನು. ಮತ್ತು ಹೀಗೆ ಇದ್ದದ್ದಾದರೆ ಮುಂದೆ ಎಲ್ಲ ಕಾರ್ಯಭಾರವೂ ಹಾಳಾಗಿ ಹೋಗುವದು. (೫) ಕೆಲವೊಂದು ಕಡೆಯಲ್ಲಿ ಅಣ್ಣನೇ ತಮ್ಮನಿಗೆ ಅಥವಾ ತಮ್ಮನೇ ಅಣ್ಣನಿಗೆ ಉಪದೇಶ ಮಾಡುವನು. ಮುಂದೆ ಕಾಲ ಕಳೆದಂತೆ ಇವರು ಫಜೀತಿಗೊಳಗಾಗುವರು. ಆದ್ದರಿಂದ ಗುರುತಿನ ಜನರಿಗೆ ಅಥವಾ ಸಂಬಂಧಿಕರಿಗೆ ಉಪದೇಶ ಕೊಡಬಾರದು. ಮತ್ತು ಗುರುತನವನ್ನು ಮೆರಿಸಬಾರದು. ದರ್ಪ ತೋರಬಾರದು. (೬) ಪ್ರಾರಂಭದಲ್ಲಿ ಗುರುತನದ [ಮಹಂತಗಿರಿಯ] ಆಡಂಬರ, ಥಳಕು ಕೆಲವು ದಿವಸ ಅರ್ಭಟದಿಂದ ನಡೆದರೂ ನಂತರ ಅದು ಕಡಿಮೆ ಆಗುತ್ತ ಆಗುತ್ತ ಕೆಲದಿನಗಳ ನಂತರ ಅದು ನಶಿಸಿ ಹೋಗುವದು. ವಿವೇಕವುಳ್ಳ ಸಜ್ಜನರಿಗೆ ಇಂಥ ಢೋಂಗಿ ಸೋಗಿನ ಪ್ರಕಾರವು ಸರಿ ಬೀಳುವದಿಲ್ಲ. ಇಂಥ ಗುರುವಿನ ಹತ್ತಿರ ಅವಿವೇಕಿ ಜನರು ಮಾತ್ರ ಹೇಗೋ ಕೂಡುವರು-ಬರುವರು. (೭) ಗಂಡನು ಶಿಷ್ಯ, ಹೆಂಡತಿ ಗುರು, ಇದೂ ಸಹಿತ ಒಂದು ವ್ಯವಹಾರತನದ್ದೆನಿಸುವದು. ಇದು ಅವಿವೇಕತನದ ಒಂದು ಪ್ರಕಾರವಿರುವದು. ಭ್ರಷ್ಟಾಕಾರದ ಇಂಥ ಅನೇಕ ಪ್ರಕಾರಗಳು ಹಲವಾರು ಇರುವವು. (೮) ಇಂಥ ಭ್ರಷ್ಟಾಚಾರಿ ಗುರು ನಿಜವಾದ ಪರಮಾರ್ಥದ ವಿಚಾರಗಳನ್ನು ಸ್ಪಷ್ಟ ರೀತಿಯಲ್ಲಿ ಹೇಳಿ ತಿಳಿಸಿಕೊಡುವದಿಲ್ಲ. ಮುಚ್ಚುಮರಿ ಮಾಡಿ ಅವರನ್ನು ತನ್ನ ನಾದಿಗೆ ಹಚ್ಚಿಕೊಳ್ಳುವನು. ಮುಖ್ಯ ಆತ್ಮಜ್ಞಾನದ ನಿಶ್ಚಯವನ್ನು ಇವರು ಜನತೆಯ ಕಲ್ಪನೆಯಲ್ಲಿಯೋ ಬರಗೊಡುವದಿಲ್ಲ. [ಇದು ಢೋಂಗಿ ಗುರುವಿನ ಸೈತಾನಿ ಲೀಲೆ ಅನಿಸುವದು.] ಈ ಪ್ರಕಾರ ಏನೇನೋ ಗೌಡ ಬಂಗಾಲಿಮಾಡಿ ಜನರನ್ನು ಮೋಸಗೊಳಿಸುವನು [ಫಸಾಯಿಸುವನು.] (೯) ಇಂಥ ಅರೆಬರೆ ಗುರುಗಳು ತಮ್ಮ ಮನದ ಲಹರಿ ಪ್ರಕಾರ ಯಾವುದಾದರೊಂದರ ಹಟ, ಹೇವ, ಜಿದ್ದು ಇವುಗಳಿಗೆ ಬೀಳುವರು. ಯಾರಾದರೂ ವಿವೇಕದ ಮಾತುಗಳನ್ನು ಹೇಳಿದರೆ ಇವರು ಅವುಗಳನ್ನು ಕಿವಿಯ ಮೇಲೆ ಹಾಕಿಕೊಳ್ಳುವದೇ ಇಲ್ಲ. ಇಂಥ ಹಟಮಾರಿ ಅರೆಬರೆ ಗುರುವು ಅಥವಾ ಮಹಂತನು. ದೂರ ದೃಷ್ಟಿಯುಳ್ಳ ಖರೇ ಸಾಧು ಶರಣನೆನಿಸುವದಿಲ್ಲ. (೧೦) ಲೋಕ ಕಲ್ಯಾಣ ಮಾಡುವಂಥ ಖರೇ ಸಾಧು ಹೇಗೆ ಇರುವನು ಎಂಬ ಬಗ್ಗೆ ಈಗ ವರ್ಣನೆಯನ್ನು ಮಾಡುವರು: ಸಾಧು, ಸಂತ, ಶರಣ,ದಾಸ ಈ ಜನರು ಯಾರ ಹತ್ತಿರವೂ ಏನೂ ಬೇಡಬಾರದು.ಭಗವಂತನ ಭಜನೆಯನ್ನು ಹೆಚ್ಚಾಗಿ ಮಾಡಬೇಕು. ಖರೇ ಭಕ್ತಿಯು ಹೆಚ್ಚುವಂತೆ ಮಾಡಬೇಕು. ವಿವೇಕದ ಜೋರಿನ ಮೇಲೆ ಇವನು ಜನತೆಯನ್ನು ಭಜನೆಯ ಕಡೆಗೆ ಹೊರಳಿಸಬೇಕು-ಭಜನಾ ಕಾರ್ಯ ಬೆಳೆಸಬೇಕು. (೧೧) ಲೋಕದ ಜನರ ಅಂತಃಕರಣವನ್ನು ಹೇಗೆ ಸಂಬಾಳಿಸಬೇಕೆಂಬ ಕಾರ್ಯದಲ್ಲಿಯ ವಿವೇಕದ ಮರ್ಮವು ತಿಳಿಯುವದು ಬಹಳ ಕಠಿಣವಾದದ್ದಿರುವದು. ಯಾಕೆಂದರೆ ಬಹು ಜನ ಸಮಾಜವು ತಮ್ಮ ತಮ್ಮ ಇಚ್ಛೆಯ ಪ್ರಕಾರ ಮತ್ತು ತಮ್ಮ ಸ್ವಭಾವ ಧರ್ಮದ ಪ್ರಕಾರ ನಡೆಯುವವರಾಗಿರುವರು. ಸರ್ವ ಜನರನ್ನೂ ಸಂತುಷ್ಟ ಇಡುವಂಥ ಚಾತುರ್ಯ ಕಲೆ ಸಾಧಿಸುವದೇನೂ ಸಾಮಾನ್ಯರು ತಿಳಿದಷ್ಟು ಸುಲಭ ಮತ್ತು ಸರಳವಾದ ಕೆಲಸವಲ್ಲ. ಯಾರಿಗೆ ಈ ಕಲೆ ಅಥವಾ ಮರ್ಮ ಸಾಧಿಸಿರುವದೋ ಅವರೇ ನಿಜವಾಗಿಯೂ ಖರೇ ಯಶಸ್ವಿ ಸಮಾಜ ನೇತಾ ಆಗಲಿಕ್ಕೆ ಯೋಗ್ಯರು. ಅಥವಾ ಯೋಗ್ಯರಾದವರು. ಎಲ್ಲ ಪ್ರಾಣಿಗಳ ಜೀವದೊಂದಿಗೆ ಯಾರು ಏಕರೂಪರಾಗುವರೋ ಅವರಿಗೇ ಈ ಗುಟ್ಟಿನ ಚಾತುರ್ಯ ಸಾಧಿಸುವದು. (೧೨) ತಿಳಿಯಿರಿ, ಒಬ್ಬ ಮನುಷ್ಯನು ಸ್ವತಃ ಮುಸಲ್ಮಾನ ಗುರುವನ್ನು ಮಾಡಿಕೊಂಡನು. ಒಬ್ಬ ಚಮ್ಮಾರನನ್ನು ಶಿಷ್ಯನನ್ನಾಗಿ ಮಾಡಿಕೊಂಡನು. ಇಂಥ ಪ್ರಕಾರಗಳಿಂದ ಲೋಕ ಸಮೂಹವು ಕರಗುವದು ಹಾಳಾಗುವದು. ಸಂಘಟನೆಯಲ್ಲಿ ಒಡಕುಂಟಾಗುವದು. (೧೩)

ಬ್ರಾಹ್ಮಣ ಮಂಡಳ್ಯಾ ಮೇಳವಾವ್ಯಾ । ಭಕ್ತಮಂಡಳ್ಯಾ ಮಾನಾವ್ಯಾ ।
ಸಂತಮಂಡಳ್ಯಾ ಶೋಧಾವ್ಯಾ । ಭೂಮಂಡಳೀ ॥೧೪॥

ಉತ್ಕಟ ಭವ್ಯ ತೇ ಚಿ ಘ್ಯಾವೇ । ಮಳಮಳೀತ ಅವಘೇ ಚಿ ಟಾಕಾವೇ ।
ನಿಸ್ಪೃಹಪಣೇ ವಿಖ್ಯಾತ ವ್ಹಾವೇ । ಭೂಮಂಡಳೀ ॥೧೫॥

ಅಕ್ಷರ ಬರೇ ವಾಚಣೇ ಬರೇ । ಅರ್ಥಾಂತರ ಸಾಂಗಣೇ ಬರೇ ।
ಗಾಣೇ ನಾಚಣೇ ಅವಘೇ ಚಿ ಬರೇ । ಪಾಠಾಂತರ ॥೧೬॥

ದೀಕ್ಷಾ ಬರೀ ಮೈತ್ರೀ ಬರೀ । ತೀಕ್ಷ್ಣ ಬುಧೀ ರಾಜಕಾರಣೀ ಬರೀ ।
ಆಪಣಾಸ ರಾಖೇ ನಾನಾಪರೀ । ಅಲಿಪ್ತಪಣೇ ॥೧೭॥

ಅಖಂಡ ಹರಿಕಥೇಚಾ ಛಂದು । ಸಕಳಾಂಸ ಲಾಗೇ ನಾಮವೇದು ।
ಪ್ರಗಟ ಜಯಾಚಾ ಪ್ರಬೋಧು । ಸೂರ್ಯ ಜೈಸಾ ॥೧೮॥

ದುರ್ಜನಾಸೀ ರಾಖೋ ಜಾಣೇ । ಸಜ್ಜನಾಸೀ ನಿವಲೂ ಜಾಣೇ ।
ಸಕಳಾಂಚೇ ಮನೀಚೇ ಜಾಣೇ । ಜ್ಯಾಚೇ ತ್ಯಾಪರೀ ॥೧೯॥

ಬ್ರಾಹ್ಮಣ ಮಂಡಳಿಯನ್ನು ಸಂಪಾದಿಸಬೇಕು. ಭಕ್ತಮಂಡಳಿಗೆ ಗೌರವಿಸಬೇಕು. ಮತ್ತು ಜಗತ್ತಿನ ಮೇಲಿನ ಯಾವತ್ತೂ ಸಂತ ಸಾಧು ಮಂಡಳಿಯನ್ನು ಹುಡುಕಿ ಶೋಧಿಸಬೇಕು. ಶ್ರೀ ಸಮರ್ಥರು ಮಂಡಳಿ ಈ ಶಬ್ದಕ್ಕೆ ಸಮೂಹ, ಗುಂಪು, ಗಟ, ಮೇಳ, ಕೂಟ, ಗ್ರುಪ್, ಈ ಅರ್ಥದಿಂದ ಇಲ್ಲಿ ಉಪಯೋಗಿಸಿದ್ದಾರೆ. ಸಮಾಜ ದಲ್ಲಿ ಯಾವುದೇ ಒಂದು ಕೆಲಸವಾಗಬೇಕಾದರೆ ಅದು ಬಹುಕಾಲದವರೆಗೆ ನಡೆದುಕೊಂಡು ಬರಬೇಕಾದರೆ ಎಲ್ಲ ರಲ್ಲಿಯೂ ಒಗ್ಗಟ್ಟಿನಿಂದ ಕೆಲಸಮಾಡುವ ಒಮ್ಮನಸ್ಸು, ಧ್ಯೇಯನಿಷ್ಠೆ ಇರಲಿಕ್ಕೇ ಬೇಕಾಗುವದು. ಹೀಗೆ ಎಲ್ಲಿ ಇರುವ ದಿಲ್ಲವೋ ಅಲ್ಲಿಯ ಸಮೂಹದಲ್ಲಿ ಅಂತರ್ಗತ ವಿರೋಧ ನಿರ್ಮಾಣವಾಗಿ ಕಾರ್ಯ ಹಾನಿಯಾಗುವದು. (೧೪) ಸಮಾಜದ ನೇತಾನು ಯಾವುದು ಅತ್ಯಂತ ಉತ್ಕಟ ಮತ್ತು ಭವ್ಯ, ಶ್ರೇಷ್ಠವಾದದ್ದು ಇರುವದೋ ಅದನ್ನು ಮಾತ್ರ ಸ್ವೀಕರಿಸಬೇಕು. ಯಾವುದು ತೇಜೋಹೀನ, ಗತಿಹೀನ ಮತ್ತು ಬಲಹೀನವಾದದ್ದು ಇರುವದೋ ಅದನ್ನೆಲ್ಲ ತ್ಯಜಿಸಿ ಬಿಡಬೇಕು. ಸಾರಾಂಶವೇನಂದರೆ ಶ್ರೇಷ್ಠ ಮತ್ತು ವಿಶಾಲವಾದದ್ದನ್ನು ಸ್ವೀಕಾರಮಾಡಿ ಹೀನವಾದದ್ದನ್ನೆಲ್ಲ ಬಿಟ್ಟು ಬಿಡಬೇಕು. ನೇತಾ ತನ್ನ ನಿಸ್ಪೃಹತನದ ವರ್ತನೆಯಿಂದ ಜಗತ್ತಿನಲ್ಲಿ ಪ್ರಸಿದ್ಧನಾಗಬೇಕು. ನೇತಾ ಅರ್ಥಾತ್ ಪುಢಾರಿಯು ಒಂದು ಅರ್ಥದಿಂದ ದಿವ್ಯ ದೃಷ್ಟಿಯುಳ್ಳವನಿರಬೇಕು. ವರ್ತಮಾನ ಪರಿಸ್ಥಿತಿಯ ಮೇಲಿಂದ ಅಂದಾಜ ಮಾಡಿದ್ದಾದರೆ ಯಾವ ಕೆಲಸವಾಗುವದು ಅಶಕ್ಯವೆನಿಸುವದೋ ಅದರ ಕಲ್ಪನೆಯನ್ನು ಮಾಡುವಂಥ ವಿಶಾಲ ದೃಷ್ಟಿಯು ಪುಢಾರಿಯಲ್ಲಿ ಇರಬೇಕಾಗುವದು. (೧೫)ಇಂಥ ನಿಸ್ಪೃಹ ಮಹಂತನು ಸಮಾಜದಲ್ಲಿ ಪ್ರತ್ಯಕ್ಷ ವ್ಯವಹರಿ ಸುವಾಗ ಜನರೊಂದಿಗೆ ಹೇಗೆ ನಡೆಯುವನು ? ಇದರ ಬಗ್ಗೆ ಈಗ ಹೇಳುವರು : ಇವನ ಅಕ್ಷರಗಳು ಸುಂದರ ವಿರುವವು. ಓದುವದೂ ಕೂಡಾ ಸ್ಪಷ್ಟ ಮತ್ತು ಉತ್ತಮವಿರುವದು ಓದಿದ ವಿಷಯದ ಅರ್ಥವನ್ನು ಹೇಳುವದೂ ಕೂಡಾ ಬಹಳ ಸುರೇಖವಿರುವದು. ಇವನ ಅಭ್ಯಾಸ, ಪಾಠಾಂತರಗಳು ಅತಿ ಉತ್ತಮವಿರುವವು. ಮತ್ತು ಇವನ ಹಾಡು, ಗಾಯನ, ಮತ್ತು ಕುಣಿಯುವದು ಇತ್ಯಾದಿಗಳೆಲ್ಲವೂ ಬಹಳ ಮನೋಹರವಿರುವವು. (೧೬) ಇವನ ದೀಕ್ಷೆ ಉತ್ತಮ ರೀತಿಯದು. ಇವನ ಮೈತ್ರಿ-ಗೆಳೆತನ ಉತ್ತಮ ತರಗತಿಯದು. ರಾಜಕಾರಣದಲ್ಲಿ ಇವನ ತೀಕ್ಷ್ಣ ಬುದ್ಧಿಯು ಒಳ್ಳೇ ಸರಿಯಾಗಿ ನಡೆಯುವದು. ಅಂತೂ ಈ ಪ್ರಕಾರ ಸಮಾಜ ಜೀವನದಲ್ಲಿಯ ಯಾವತ್ತೂ ಕ್ಷೇತ್ರಗಳಲ್ಲಿ ಹೌದು ಹೌದು, ಭಲೆ, ಭಲೆ, ಎಂದು ಅನ್ನಿಸಿಕೊಳ್ಳುತ್ತ ವ್ಯವಹರಿಸುವ ಈ ಪುರುಷ ಮಹಂತ, ಅಥವಾ ಸಮಾಜ ನೇತಾ, ರಾಜಕಾರಣಿಯು ಖರೇ ಅಲಿಪ್ತತನದಿಂದ ಎಲ್ಲವನ್ನೂ ತಾನು ಮಾಡಿದ್ದರೂ ಇವನಿಗೆ ಅದರ ಅಹಂಭಾವವಿರುವದಿಲ್ಲ. ಮತ್ತು ಆ ಉಪಾಧಿಯಲ್ಲಿ ಇಲ್ಲದಂತೆ ಸ್ವತಃ ಅಲಿಪ್ತನಾಗಿರುವನು. ಅನೇಕ ಪ್ರಕಾರದಿಂದ ತನ್ನನ್ನು ಸಂಬಾಳಿಸಿ ಕೊಳ್ಳುವನು. ಮಹಂತನ ಲೋಕ ಸಂಗ್ರಹದ ಮರ್ಮವು ಇದೇ ಇರುವದು. (೧೭) ಇವನಿಗೆ ಸತತವೂ ಹರಿ ಕಥೆ ಯಂದೇ ಹವ್ಯಾಸವಿರುವದು. ಯಾವತ್ತೂ ಜನರಿಗೆ ಇವನು ನಾಮಸ್ಮರಣವೆಂಬ ವೇದ ಪಾಠಮಾಡಲಿಕ್ಕೆ ಹಚ್ಚುವನು. ಅಂದರೆ ಅಖಂಡ ನಾಮಸ್ಮರಣೆಗೆ ಹಚ್ಚುವನು. ಇವನ ಜ್ಞಾನವು ಸೂರ್ಯನಂತೆ ತೇಜಸ್ವಿಯಾಗಿದ್ದು, ಮುಚ್ಚುಮರೆ ಇಲ್ಲದ ಸ್ವಚ್ಛ ಜ್ಞಾನವಿರುವದು. ವೇದ ಪಾಠವು ಹೇಗೆ ಪವಿತ್ರವೋ ಅದರಂತೆಯೇ ಭಗವಂತನ ನಾಮವೂ ಪವಿತ್ರ ವಿರುವದರಿಂದ ಇವನು ಬಹು ಜನರನ್ನು ನಾಮಸ್ಮರಣೆಗೆ ಹಚ್ಚುವನು. (೧೮) ದುರ್ಜನರ ಮನವನ್ನು ಹೇಗೆ ಸಂಬಾ ಳಿಸಬೇಕೆಂಬುದನ್ನು ಇವನು ತಿಳಿದಿರುವನು. ಅದರಂತೆ ಸಜ್ಜನರ ಮನಕ್ಕೆ ಶಾಂತಿ ಸಮಾಧಾನ ಹೇಗೆ ಕೊಡಬೇಕು ಅನ್ನುವದನ್ನೂ ಸಹಿತ ಇವನು ತಿಳಿದಿರುವನು. ಯಾರು ಯಾರು, ಹೇಗೆ ಹೇಗೆ, ಇರುವರೋ ಅವರವರಲ್ಲಿಯ ಭಾವವನ್ನು ತಿಳಿದುಕೊಳ್ಳುವ ಗುಣವು ಇವನಲ್ಲಿ ಇರುವದು. ಶ್ರೀ ಸಮರ್ಥರ ಮಹಂತನು ಸಮಾಜದ ಪುಢಾರಿ ತನವನ್ನು ಯಾವಾಗ ಮಾಡುವನೋ ಆಗ ಪ್ರತಿಯೊಬ್ಬರ ಅಂತರಂಗದಲ್ಲಿಯ ಉದ್ದೇಶ (ಹೇತು) ಕೀವಾ ಗುರುತಿಸಿ ಅದಕ್ಕನುಗುಣವಾಗಿ ವರ್ತಿಸುವನು. ಇದೊಂದು ಇವನಲ್ಲಿಯ ಶ್ರೇಷ್ಠ ವೈಶಿಷ್ಟ್ಯವೆಂದು ತಿಳಿಯಬೇಕು. ಯಾವನು ನಿಜವಾಗಿ ಖರೇ ಅಲಿಪ್ತನಿರುವನೋ ಮತ್ತು ನಿಸ್ಪೃಹನಿರುವನೋ ಮತ್ತು ದಯಾಶೀಲನಿರುವನೋ ಅಂಥವನೇ ಹೀಗೆ ನಡೆಯಬಲ್ಲವನಾಗಿರುವನು. (೧೯)

ಸಂಗತೀಚೇ ಮನುಷ್ಯ ಪಾಲಟೇ । ಉತ್ತಮ ಗುಣ ತತ್ಕಾಳ ಉಠೇ ।
ಅಖಂಡ ಅಭ್ಯಾಸೀ ಲಗಟೇ । ಸಮುದಾವ ॥೨೦॥

ಜೇಥೇ ತೇಥೇ ನಿತ್ಯ ನವಾ । ಜನಾಸೀ ವಾಟೇ ಹಾ ಅಸಾವಾ ।
ಪರಂತು ಲಾಲಚೀಚಾ ಗೋವಾ । ಪಡೋ ಚಿ ನೇದೀ ॥೨೧॥

ಉತ್ಕಟ ಭಕ್ತಿ ಉತ್ಕಟ ಜ್ಞಾನ । ಉತ್ಕಟ ಚಾತುರ್ಯ ಉತ್ಕಟ ಭಜನ ।
ಉತ್ಕಟ ಯೋಗ ಅನುಷ್ಠಾನ । ಠಾಈ ಠಾಈ ॥೨೨॥

ಉತ್ಕಟ ನಿಸ್ಪೃಹತಾ ಧರಿಲೀ । ತ್ಯಾಚೀ ಕೀರ್ತಿ ದಿಗಾಂತೀ ಫಾಂಕಲೀ ।
ಉತ್ಕಟ ಭಕ್ತೀನೇ ನಿವಾಲೀ । ಜನಮಂಡಳೀ ॥೨೩॥

ಕಾಹೀ ಯೇಕ ಉತ್ಕಟೇವಿಣ । ಕೀರ್ತಿ ಕದಾಪಿ ನವ್ಹೇ ಜಾಣ ।
ಉಗೇ ಚ ವಣವಣ ಹಿಂಡೋನ । ಕಾಯೆ ಹೋತೇ ॥೨೪॥

ನಾಹೀ ದೇಹ್ಯಾಚಾ ಭರವಸಾ । ಕೇವ್ಹಾ ಸರೇಲ ವಯಸಾ ।
ಪ್ರಸಂಗ ಪಡೇಲ ಕೈಸಾ । ಕೋಣ ಜಾಣೇ ॥೨೫॥

ಯಾಕಾರಣೇ ಸಾವಧಾನ ಅಸಾವೇ । ಜಿತುಕೇ ಹೋಈಲ ತಿತುಕೇ ಕರಾವೇ ।
ಭಗವತ್ಕೀರ್ತೀನೇ ಭರಾವೇ । ಭೂಮಂಡಳ ॥೨೬॥

ಇವನ ಸಂಗತಿ ಸಹವಾಸದಲ್ಲಿ ಇರುವ ಜನರ ಅಂತರಂಗದಲ್ಲಿ ಬದಲಾವಣೆಯಾಗುವದು. ಇವರಲ್ಲಿ ಬಹು ಬೇಗ ಉತ್ತಮ ಗುಣಗಳು ಕಾಣಹತ್ತುವವು. ಇಂಥ ಮಹಂತನ ಹಿಂದೆ ಇದ್ದಂಥ ಸಮೂಹವು ಪರಮಾರ್ಥದ ಅಭ್ಯಾಸದಲ್ಲಿ ಬಹುಬೇಗ ಏಕಾಗ್ರ ಮನದಿಂದ ತೊಡಗುವದು. ಮನುಷ್ಯರ ಅಂತರ್ಯಾಮದಲ್ಲಿ ಯೋಗ್ಯ ರೀತಿಯ ಬದಲಾವಣೆಯನ್ನು ತರುವ ಕಾರ್ಯವು ಖರೇ ಮಹಂತನಲ್ಲಿಯ ನಿಜವಾದ ಸಾಮರ್ಥ್ಯದ ದ್ಯೋತಕವಾಗಿದೆ. ಅಂದರೆ ಜಗತ್ತಿನಲ್ಲಿ ಕೇವಲ ನಿಜವಾದ ಸತ್ಪುರುಷರೇ ಇಂಥ ಕಾರ್ಯವನ್ನು ಮಾಡಿ ತೋರಿಸಬಲ್ಲವರಾಗಿರುವರು. ದುರ್ಬಲರಿಂದ ಇಂಥದು ಸಾಧ್ಯವಾಗುವದೇ ಇಲ್ಲ.(೨೦) ಇವನು ಎಲ್ಲಿಗೆ ಹೋಗುವನೋ ಅಲ್ಲಿಯ ಜನರಿಗೆ ಇವನು ಹೊಸಬನಾಗಿಯೇ ಕಾಣುವನು. ಇದಲ್ಲದೇ ಒಂದು ಪ್ರಕಾರದ ತರತರಿತ ಹುಮ್ಮಸ್ಸು ಇವನಲ್ಲಿ ಇರುವದು. ಇವನು ನಮ್ಮಲ್ಲಿಯೇ ಕಾಯಂ ಇರಲಿ ಎಂದು ಜನ ಇಷ್ಟಪಡುವರು. ಆದರೆ ಇಷ್ಟೆಲ್ಲ ಇದ್ದರೂ ಯಾರಿಂದಲಾದರೂ ಏನಾದರೂ ಪಡೆಯಬೇಕೆಂಬ ಲೋಭವು ಇವನಲ್ಲಿ ಎಳ್ಳಷ್ಟೂ ಇರುವದಿಲ್ಲ. ಇತರ ರೀತಿಯ [ಸ್ವತಃದ] ಆಶಾ ಲೋಭಾದಿಗಳ ಜಾಲದಲ್ಲಿ ತಪ್ಪಿಯೂ ಸಹ ಸಿಗುವದಿಲ್ಲ. ಲೋಕದ ಜನತೆಯು ತನ್ನ ವಶವಾಗಿದ್ದರೂ ಕೂಡಾ ಮಹಂತನು ತನ್ನ ನಿಸ್ಪೃಹತನವನ್ನು ಬಿಡುವದಿಲ್ಲ. (೨೧) ಮಹಂತನು ಸಮಾಜದ ನೇತಾ ಇರುವನು. ಇವನ ಭಕ್ತಿಯು ಅತಿ ಶ್ರೇಷ್ಠ ಪ್ರತಿಯದಿರುವದು. ಇವನ ಜ್ಞಾನವೂ ಅತ್ಯಂತ ಉಚ್ಚಮಟ್ಟದ್ದಿರುವದು. ಇವನ ಚಾತುರ್ಯವೂ ಉತ್ಕಟವಾದದ್ದಿರುವದು. ಇವನ ಭಜನೆಯು ಅಮೋಘವಾದದ್ದಿರುವದು. ಇವನ ಯೋಗ ಸಾಧನೆಯು ಶ್ರೇಷ್ಠ ಪ್ರತಿಯದು ಮತ್ತು ಅಲ್ಲಲ್ಲಿ ಮಾಡಿದ ಮತ್ತು ಮಾಡುವ ಅನುಷ್ಠಾನಗಳೂ ಬಹು ಉತ್ಕೃಷ್ಟವಾದವು. ಅಂತೂ ಇವನ ಎಲ್ಲ ಕ್ರಿಯೆಗಳು ಹೊಗಳತಕ್ಕಂಥವುಗಳೇ ಇರುವವು.(೨೨) ಇವನಲ್ಲಿ ಅತ್ಯಂತಉತ್ಕಟ ನಿಸ್ಪೃಹತನವಿರುವದು. ಇದರಿಂದಾಗಿಯೇ ಇವನ ಕೀರ್ತಿಯು ಎಲ್ಲ ಕಡೆಗೂ ಪಸರಿಸಿರುವದು. ಇವನ ಉತ್ಕಟ ಭಕ್ತಿಯಿಂದ ಬಹು ಜನ ಸಮುದಾಯದ ಮನಕ್ಕೆ ಶಾಂತಿಯು ಲಭಿಸುವದು. (೨೩) ನಮ್ಮ ಜೀವನದ ಯಾವುದಾದರೊಂದರಲ್ಲಿ ಉತ್ಕಟತೆ ಇಲ್ಲದ ಹೊರತು ಕೀರ್ತಿಯು ಎಂದೂ ಸಿಗಲಾರದು. ಸುಮ್ಮನೆ ವ್ಯರ್ಥವಾಗಿ ಒಣ ಒಣ ತಿರುಗಿದರೆ, ನಿರರ್ಥಕವಾಗಿ ಕಷ್ಟ ಸೋಸುತ್ತ ತಿರುಗಾಡಿದರೆ ಏನೂ ಸಾಧಿಸಲಿಕ್ಕೆ ಆಗುವದಿಲ್ಲ. ಉತ್ಕಟತೆ ಅಂದರೆ ತಳಮಳ ಮನದ ತೀವ್ರತೆ, ಇಂಥ ತಳಮಳವುಳ್ಳ ಪುರುಷ ಏನೇನು ಮಾಡುವನೋ ಅದೆಲ್ಲದರಲ್ಲಿ ಇವನು ತನ್ನ ಇಡೀ ಯಾವತ್ತೂ ಜೀವನವನ್ನೇ ಧಾರೆ ಎರೆದಿರುವನು. ಇದರಿಂದ ಅವನ ಪ್ರತಿಯೊಂದು ಕಾರ್ಯದಲ್ಲಿ ವಿಲಕ್ಷಣ ಜೀವಂತತನವು ಅನುಭವಕ್ಕೆ ಬರುವದು. ಇಂಥ ಪುರುಷನ ಸಂಗತಿಯಿಂದ ಅನೇಕ ಜನರಿಗೆ ಸಮಾಧಾನ ಸಿಗುವದು. (೨೪) ಉತ್ತಮ ಪುರುಷರಾಗಬೇಕೆಂದು ಯಾರಿಗೆ ಅನಿಸುವದೋ ಅವರು ಹೇಗೆ ನಡೆಯಬೇಕು ಅನ್ನುವದನ್ನು ಈಗ ಕೊನೆಯದಾಗಿ ಹೇಳುವರು: ದೇಹದ ಭರವಸೆಯು ಇರುವದಿಲ್ಲ. ಆಯುಷ್ಯವು ಯಾವಾಗ ಮುಗಿಯುವದೋ ಎಂಬುದನ್ನು ಹೇಳಲಿಕ್ಕೆ ಬರುವದಿಲ್ಲ. ಮುಂದೆ ಎಂಥ ಪ್ರಸಂಗ ಬರುವದೆಂಬುದನ್ನು ಯಾರಿಗೂ ಹೇಳಲಿಕ್ಕೆ ಬರುವದಿಲ್ಲ. (೨೫) ಆದ್ದರಿಂದ ಮಾನವನು ಬಹಳ ಸಾವಧತನದಿಂದ ಇರಬೇಕು. ಇವತ್ತು ಜನತೆಗಾಗಿ ನಿಮ್ಮಿಂದ ಮಾಡಲಿಕ್ಕೆ ಸಾಧ್ಯವಿದ್ದಷ್ಟು ಕಲ್ಯಾಣಕಾರಕವಾದದ್ದನ್ನು ಕೂಡಲೇ ಮಾಡಬೇಕು. ಇಂದಿನದನ್ನು ನಾಳೆಗೆ ಹಾಕಬಾರದು. ನಾಳೆ ಮಾಡಿದರಾಯಿತು ಅಂತಾ ಆಲಸ್ಯ ತೋರಬಾರದು. ಭಗವಂತನ ಕೀರ್ತನವನ್ನು ಯಾವತ್ತೂ ಕಡೆಗೆ ಜಗದ ತುಂಬೆಲ್ಲ ದುಮುದುಮಿಸುವಂತೆ ಹರಡಬೇಕು. ಭಕ್ತಿಯನ್ನು ಬಹಳಷ್ಟು ಬೆಳೆಸಬೇಕು. (೨೬)

ಆಪಣಾಸ ಜೇ ಜೇ ಅನಕೂಳ । ತೇ ತೇ ಕರಾವೇ ತಾತ್ಕಾಳ।
ಹೋಈನಾ ತ್ಯಾಸ ನಿವಳ । ವಿವೇಕ ಉಮಜಾವಾ ॥೨೭॥

ವಿವೇಕಾಮಧೇ ಸಾಂಪಡೇನಾ । ಐಸೇ ತೋ ಕಾಂಹೀ ಚ ಅಸೇನಾ ।
ಯೇಕಾಂತೀ ವಿವೇಕ ಅನುಮಾನಾ । ಆಣೂನ ಸೋಡೀ ॥೨೮॥

ಅಖಂಡ ತಜವೀಜಾ ಚಾಳಣಾ ಜೇಥೇ । ಸಾಹಾತಾ ಕಾಯ ಉಣೇ ತೇಥೇ ।
ಯೇಕಾಂತೇವಿಣ ಪ್ರಾಣೀಯಾತೇ । ಬುದ್ಧಿ ಕೈಸೀ ॥೨೯॥

ಯೇಕಾಂತೀ ವಿವೇಕ ಕರಾವಾ । ಆತ್ಮಾರಾಮ ವೊಳಖಾವಾ ।
ಯೇಥೂನ ತೇಥವರೀ ಗೋವಾ । ಕಾಂಹೀ ಚ ನಾಹೀ ॥೩೦॥

ಇತಿ ಶ್ರೀ ದಾಸಭೋಧೆ ಗುರುಶಿಷ್ಯ ಸಂವಾದೆ
'ಬುದ್ಧಿವಾದ ನಿರೂಪಣ' ನಾಮ ಸಮಾಸ ಷಷ್ಠಮ ॥

ಇಂದು ಈಗಲೇ ನಮಗೆಲ್ಲ ಯಾವ ಯಾವುದನ್ನು ಹೇಗೆ ಹೇಗೆ ಮಾಡಲಿಕ್ಕೆ ಸಾಧ್ಯವಿರುವದೋ ಅದನ್ನೆಲ್ಲ ತತ್ಕಾಲದಲ್ಲಿ ಕೂಡಲೇ ಮಾಡಬೇಕು. ಮಾಡಿಯೇ ಬಿಡಬೇಕು. ಯಾವುದು ನಮ್ಮ ಕೈಯಿಂದ ಆಗಲಿಕ್ಕೆ ಅಸಾಧ್ಯವೆನಿಸುವದೋ ಅದರ ಬಗ್ಗೆ ಚನ್ನಾಗಿ ಸಾಧಕ ಬಾಧಕ ವಿಚಾರಮಾಡಿ ವಿವೇಕದಿಂದ ಹೇಗೆ ಮಾಡಬೇಕೆಂಬುದನ್ನು ನಿರ್ಧರಿಸಬೇಕು. ಇಂಥಲ್ಲಿ ಒಣ ಅಭಿಮಾನವು ಯೋಗ್ಯವಲ್ಲ. ಆಗುವದೂ ಬಿಡುವದೂ ಈಶ್ವರೇಚ್ಛೆಗೆ ಸೇರಿದ್ದು. (೨೭) ವಿವೇಕದ ಕಕ್ಷೆಯಲ್ಲಿ [ಅಳವಿನಲ್ಲಿ] ಬರುವದಿಲ್ಲವೆನ್ನುವ ವಿಷಯವೇ ಜಗತ್ತಿನಲ್ಲಿ ಇರುವದಿಲ್ಲ. ಆದ್ದರಿಂದ ಏಕಾಂತದಲ್ಲಿ ಕುಳಿತು ಸಮಾಧಾನದಿಂದ ವಿವೇಕ ಮಾಡಬೇಕು. ಅಂದರೆ ನಿಮ್ಮ ಕೈಯಿಂದ ಯಾವುದು ಆಗುವದಿಲ್ಲವೆನಿಸಿದೆಯೋ ಅದು ಅನುಮಾನದ ಅಂದರೆ ತರ್ಕದ ಅಂದಾಜಿಗೆ ಬರುವದು. ಮತ್ತು ಮುಂದಿನ ದಾರಿ ಹೇಗೆ ಅನ್ನುವದರ ವಿಚಾರವು ಸುಗಮವಾಗುವದು. ಹೇಗೆ ಮಾಡಿದರೆ ಒಳಿತು ಅನ್ನುವದು ಹೊಳೆಯುವದು.(೨೮) ಯಾವ ಮನುಷ್ಯನು ಸತತ ವಿಚಾರಮಾಡಿ ಸರಿಯಾದ ದಾರಿಯನ್ನು ಹಿಡಿಯುವನೋ ಯೋಗ್ಯ ಉಪಾಯ ಹುಡುಕುವನೋ ಅವನ ಹತ್ತಿರ ಯಾವ ಅಡ್ಡಿ ಆತಂಕವೂ ಬರುವದಿಲ್ಲ. ಯಾವುದೂ ಕಡಿಮೆ ಆಗುವದಿಲ್ಲ. ಏಕಾಂತ ಸೇವನ ಮಾಡದ ಹೊರತು ಮನುಷ್ಯನಿಗೆ ಆಳವಾದ ಬುದ್ಧಿಯು ಪ್ರಾಪ್ತವಾಗುವದಿಲ್ಲ. (೨೯) ಆದ್ದರಿಂದ ಮಹಂತನಾದವನು ಏಕಾಂತದಲ್ಲಿ ಕುಳಿತು ವಿವೇಕ ಮಾಡಬೇಕು. ಆತ್ಮಾರಾಮನ ಸಾಕ್ಷಾತ್ಕಾರ ಪಡೆಯಬೇಕು. ಅಂದರೆ ಆಗ ಯಾವುದೇ ವಿಷಯದ ಬಗ್ಗೆ ಯಾವ ತರಹದ್ದೂ ಗೊಂದಲ-ಘೋಟಾಳೆ ಉಂಟಾಗುವದಿಲ್ಲ. ಸರಳವಾಗಿ ಸ್ವರೂಪದ ವರೆಗೆ ಹೋಗಲಿಕ್ಕೆ ಬರುವದು. (೩೦)

ಶ್ರೀ ದಾಸಬೋಧದ ಹತ್ತೊಂಭತ್ತನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ "ಬುದ್ಧಿವಾದ ನಿರೂಪಣ"ವೆಂಬ ಹೆಸರಿನ ಆರನೇ ಸಮಾಸವು ಮುಗಿದುದು.

● ●

## ದಶಕ ೧೯. ಸಮಾಸ ೭. ಯತ್ನ ನಿರೂಪಣ (ನುಡಿ ೩೦)

ಅಧ್ಯಾತ್ಮ ಮತ್ತು ಲೋಕ ಸಂಗ್ರಹ ಅಥವಾ ಪರಮಾರ್ಥ ಮತ್ತು ಸಮಾಜ ಸೇವಾ ಇವುಗಳಲ್ಲಿಯ ಪರಸ್ಪರ ಸಂಬಂಧದ ಬಗ್ಗೆ ಶ್ರೀ ಸಮರ್ಥರಿಗೆ ಏನು ಹೇಳಬೇಕಾಗಿದೆ ಎಂಬುದು ನಮಗೆ ತಿಳಿಯಬೇಕಾದರೆ ಈ ಸಮಾಸವನ್ನು ಸೂಕ್ಷ್ಮ ರೀತಿಯಿಂದ ಅಧ್ಯಯನ ಮಾಡುವದು ಅವಶ್ಯವಿರುವದು. ಎಲ್ಲ ಮನುಷ್ಯರಲ್ಲಿ ಎರಡು ವರ್ಗಗಳು ಇರುವವು. (೧) ಅಜ್ಞಾನಿಗಳಾಗಿರುವ ಜನರು ಮತ್ತು (೨) ಆತ್ಮಜ್ಞಾನಿಗಳಾದವರು. ಇನ್ನು ಅಜ್ಞಾನಿ ಜನರಲ್ಲಿಯೂ ಕೇವಲ ಎರಡು ವರ್ಗಗಳಿರುವವು. (೧) ವಾಸನಾ ತೃಪ್ತಿಪಡಿಸುವದಕ್ಕಾಗಿ ಸದಾ ಧಡಪಡಿಸುವ ಬದ್ಧರಾದ ಜನರ ವರ್ಗ. (೨) ವಾಸನಾ [ಇಚ್ಛಾ] ಇಲ್ಲದಂತೆ ಮಾಡುವದಕ್ಕಾಗಿ ಸದಾ ಧಡಪಡಿಸುವ ಮುಮುಕ್ಷು [ಮೋಕ್ಷ ಬಯಸುವವ] ಮತ್ತು ಸಾಧಕ [ಸಾಧನ ಮಾಡುವವ] ರದು ಇನ್ನೊಂದು ವರ್ಗ ಹೀಗೆ ಇರುವವು. ಇನ್ನು ಸಾಧಕರಲ್ಲಿ ಎರಡು ವರ್ಗಗಳು. (೧) ಸಮುದಾಯ ಸಮಾಜದ ಹವ್ಯಾಸ ಇರುವಂಥವರು. ಮತ್ತು (೨) ಸಮುದಾಯ ಸಮಾಜದ ಹವ್ಯಾಸ ಇಲ್ಲದಂಥವರು. ಪ್ರತಿಯೊಬ್ಬ ಸಾಧಕನ ಧ್ಯೇಯ ಒಂದೇ ಇರುವದು. ಸಿದ್ಧನಾಗುವದು, ಜ್ಞಾನಿಯಾಗುವದು, ಪರಮಾತ್ಮ ಸ್ವರೂಪವಾಗುವದು. ಇದೇ ಆ ಧ್ಯೇಯವು. ಪ್ರತಿಯೊಬ್ಬ ಜ್ಞಾನಿ ಅಥವಾ ಸಿದ್ಧ ಪುರುಷನು ಅತ್ಯಂತ ವಾಸನಾ ರಹಿತ, ನಿರಹಂಕಾರಿ, ಸಮತ್ವ ಬುದ್ಧಿಯುವ ಮತ್ತು ದಯಾವಂತ ನಿರುವನು. ಇವನ ಕೈಯಿಂದ ಲೋಕ ಕಲ್ಯಾಣವಂತೂ ಘಟಿಸಿಯೇ ಘಟಿಸುವದು. ಈ ಮಿಥ್ಯಾ ಜಗತ್ತಿನಲ್ಲಿ ಕೇವಲ ಅಜ್ಞಾನದಿಂದ ಆಸಕ್ತರಾಗಿ ನಾನಾ ಪ್ರಕಾರದ ದುಃಖಗಳನ್ನು ಭೋಗಿಸುವಂಥ ಜೀವದ ಬಗ್ಗೆ ಜ್ಞಾನಿ ಪುರುಷರಿಗೆ ಅಪಾರ ಕರುಣೆ ಬರುವದು. ಈ ಕರುಣೆಯಿಂದಾಗಿ ಇವರು ಜೀವದ ಮೇಲೆ ಅನುಗ್ರಹ ಮಾಡುವರು. ಸ್ವತಃ ಇವರಲ್ಲಿ [ಜ್ಞಾನಿಗಳಲ್ಲಿ] ನಾನು ಅನ್ನುವ ಕರ್ತೃತ್ವದ ಅಭಿಮಾನ ಇರುವದಿಲ್ಲ. ಕರ್ಮದ ಮತ್ತು ಕರ್ಮ ಫಲದ ಆಸಕ್ತಿಯೂ ಕೂಡಾ ಇರುವದಿಲ್ಲ. ಕೀರ್ತಿಯ ಮತ್ತು ಮಾನ ಮರ್ಯಾದೆಯ ಇಚ್ಛೆ ಎಷ್ಟೂ ಇರುವದಿಲ್ಲ. ಆದರೆ ಆ ಯಾವ ದೇಹ ಬುದ್ಧಿಯ ಮೂಲಕ ಅಜ್ಞಾನಿ ಜೀವವು, ದುಃಖ ಭೋಗಿಸುವದೋ ಇದನ್ನು ಕಡಿಮೆ ಮಾಡುವ ಮತ್ತು ಕೊನೆಗೆ ಇದನ್ನು ಪೂರ್ಣ ಇಲ್ಲದಂತೆಮಾಡುವ ಮಾರ್ಗವನ್ನು ಜ್ಞಾನಿ ಪುರುಷರು ಸತತವೂ ತೋರಿಸುತ್ತಲೇ ಇರುವರು. ಜ್ಞಾನಿ ಪುರುಷರಿಂದ ಜಗತ್ತಿಗೆ ಸನ್ಮಾರ್ಗದ ದಾರಿ, ಉದ್ಧಾರವಾಗುವ ರೀತಿ ತಿಳಿಯುವದು. ಇವರ ಕೈಯಿಂದ ಅತ್ಯಂತ ನಿಶ್ಚಿತವಾಗಿ [ಖಾತ್ರಿಯಿಂದ] ಘಟಿಸುವ ಲೋಕ ಕಲ್ಯಾಣವೆಂದರೆ ಅದು ಇದೇ ಆಗಿರುವದು. ಪ್ರತ್ಯಕ್ಷ ಜೀವನದಲ್ಲಿ ಸ್ವಾರ್ಥದ ರೂಪದಿಂದ ಮನುಷ್ಯನ ದೇಹ ಬುದ್ಧಿ ಪ್ರಕಟವಾಗುವದು. ಆದ್ದರಿಂದ ಜ್ಞಾನಿ

ಪುರುಷರು ಸ್ವಾರ್ಥಿ ಜನರನ್ನು ನಿಃಸ್ವಾರ್ಥಿಗಳನ್ನಾಗಿ ಮಾಡುವ ಪ್ರಯತ್ನ [ಖಟಪಟಿ] ಮಾಡುವರು. ಅದಕ್ಕಾಗಿ ಹೆಣಗಾಡುವರು. ಇನ್ನು ನಿಃಸ್ವಾರ್ಥಿಗಳಾಗುವಲ್ಲಿಯೂ ಎರಡು ಮಾರ್ಗಗಳಿರುವವು. (೧) ಪ್ರೇಮದ ಮಾರ್ಗ ಮತ್ತು (೨) ವಿಚಾರದ ಮಾರ್ಗ. ಈ ಎರಡು ಮಾರ್ಗವನ್ನು ಅನುಸರಿಸಿದ ಸಾಧಕರಲ್ಲಿ ಕೂಡಾ ಎರಡು ಪ್ರಕಾರಗಳು ಕಾಣುವವು. [೧] ಪ್ರೇಮ ಪ್ರಧಾನ ಸಾಧಕ ಮತ್ತು [೨] ವಿಚಾರ ಪ್ರಧಾನ ಸಾಧಕ. ಈ ಸಾಧಕರು ಯಾವಾಗ ಸಿದ್ಧರಾಗುವರೋ ಆಗ ಇವರಲ್ಲಿ ಕೂಡಾ ಇವು [ ಈ ಭೇದ ] ಅಲ್ಪ ಸ್ವಲ್ಪ ಭೇದದಿಂದ ದೃಷ್ಟಿಗೆ ಬೀಳುವವು. ವಾಸ್ತವಿಕವಾಗಿ ಜ್ಞಾನಿ ಪುರುಷರು ಸ್ವತಃ ಕೃತಾರ್ಥ ಕೃತಕೃತ್ಯ ಅಂದರೆ ಮಾಡಬೇಕಾದ ಕೆಲಸ ಕಾರ್ಯವನ್ನು ಮಾಡಿ ಸಫಲತೆಯನ್ನು ಹೊಂದಿದವರಿರುವರು. ಇವರು ಪಡೆಯಬೇಕಾದದ್ದು ಮೊದಲಿಗೇ ಇವರ ಪದರಿನಲ್ಲಿ ಬಿದ್ದಿರುವದು. ಇವರು ಕೇವಲ ಪ್ರಾರಬ್ಧ [ನಶೀಬ] ದ ತಂತ್ರದಂತೆ ನಡೆಯುತ್ತಲಿರುವರು. ಜ್ಞಾನಿ ಜನ ಮತ್ತು ಅಜ್ಞಾನಿ ಜನ ಇವರ ಬಾಹ್ಯ ಸ್ವರೂಪದಲ್ಲಿ ಏನೂ ವ್ಯತ್ಯಾಸ [ಅಂತರ] ಇರುವದಿಲ್ಲ. ಆದರೆ ಇವರ ಅಂತರಂಗದಲ್ಲಿ ಮಾತ್ರ ವಿಲಕ್ಷಣವ್ಯತ್ಯಾಸಕಂಡುಬರುವದು. ಈವ್ಯತ್ಯಾಸವನ್ನುಸಂಬಾಳಿಸಿಕೊಂಡು, ಕಾಯ್ದುಕೊಂಡು ಅಥವಾ ಇದನ್ನುಮರೆಮಾಡಿ [ಮುಚ್ಚಿ, ಮುಸುಕುಹಾಕಿ] ಇಟ್ಟು ಈ ಜ್ಞಾನಿ ಪುರುಷರು ಅಜ್ಞಾನಿ ಜನರಿಗೆ ಮಾರ್ಗದರ್ಶನ ಮಾಡಬೇಕಾಗುವದು. ಪ್ರೇಮ ಪ್ರಧಾನದ ಜ್ಞಾನಿಯು ಪ್ರಪಂಚದ ಆಸಕ್ತಿ ಇರುವಂಥ ಅಜ್ಞಾನಿ ಮನುಷ್ಯರ ಜೀವನದಲ್ಲಿ ಮುಕ್ತತನದಿಂದ ಕೂಡಿಕೊಂಡು ಹೋಗುವನು. ಆದರೂ ಪ್ರಾಪಂಚಿಕ ಮೇಲಿನ ಶ್ರದ್ಧೆಯು ಭಂಗಗೊಳ್ಳದಂತೆ ಮತ್ತು ಇವರು [ಪ್ರಾಪಂಚಿಕರು] ಹೆಚ್ಚು ಹೆಚ್ಚು ನಿಃಸ್ವಾರ್ಥಿಗಳೂ ಮತ್ತು ವಿಶಾಲ ವೃತ್ತಿಯವರೂ ಆಗುತ್ತ ಹೋಗುವಂತೆ ಈ ಪ್ರೇಮ ಪ್ರಧಾನ ಜ್ಞಾನಿಯು [ಇವರೊಂದಿಗೇ ಇದ್ದುಕೊಂಡು] ತಮ್ಮ ಆಚರಣೆ ಮತ್ತು ಭಾಷಣ-ಸಂಭಾಷಣೆ ಮೊದಲಾದವುಗಳನ್ನು ಮಾಡುವರು. ಆದರೆ ಅದೇ ವಿಚಾರ ಪ್ರಧಾನದ ಜ್ಞಾನಿಯು ಏಕಾಂತ ಪ್ರಿಯನಿರುವನು. ಗಂಭೀರ ಪ್ರಕೃತಿಯವನಿರುವನು. ಅಜ್ಞಾನಿ ಜನರಲ್ಲಿ ಇವನು ಹೆಚ್ಚಾಗಿ ಕೂಡುವದಿಲ್ಲ. ಆದರೂ ಕೂಡಾ ಗ್ರಂಥ ಲೇಖನ, ಸಂಭಾಷಣ ಮತ್ತು ಜ್ಞಾನೋಪದೇಶ ಇವುಗಳ ಮುಖಾಂತರ ಇವನ ಮಾರ್ಗದರ್ಶನ ಕಾರ್ಯನಡೆಯುವದು. ಶ್ರೀ ಸಮರ್ಥರ ಕಟಾಕ್ಷದಲ್ಲಿ ತೋರುವದೇನೆಂದರೆ ಜ್ಞಾನಿ ಪುರುಷರಲ್ಲಿ ಪ್ರೇಮ ಮತ್ತು ವಿಚಾರ ಈ ಎರಡರದೂ ಸಮತೋಲ ಮಿಶ್ರಣವಿರುವದು ಬಹಳ ಉತ್ತಮವು. ಸಾಧಕನು ಸಾಧನ ಕಾಲದಲ್ಲಿಯು ಕೆಲವೊಂದು ವೇಳೆಯನ್ನು ಲೋಕದ ಜನ ಸಮುದಾಯದಲ್ಲಿ ಕಳೆಯಬೇಕು. ಮತ್ತು ಕೆಲವೊಂದು ಕಾಲ ಸಂಪೂರ್ಣ ಏಕಾಂತದಲ್ಲಿ ಹೋಗಿ ಕುಳಿತುಕೊಳ್ಳಬೇಕು. ಹೀಗೆ ಶ್ರೀ ಸಮರ್ಥರ ಉಪದೇಶದ ತಿರುಳು ಇರುವದು. ಈ ಪ್ರಕಾರದಲ್ಲಿ ತಯಾರಾದ ಸಾಧಕನು ನಂತರ ಸಿದ್ಧನಾಗುವನು. ಆಗ ಅಂದರೆ ಜ್ಞಾನ ಪ್ರಾಪ್ತಿಯ ನಂತರ ಅವನ ಆ ಸಾಧಕ ಸಿದ್ಧ ಜ್ಞಾನಿಯ ಪ್ರಾರಬ್ಧವು ಅವನನ್ನು ಅದರಂತೆಯೇ ಅಂದರೆ ಪ್ರಾರಬ್ಧವಿದ್ದಂತೆ ನಡೆಯಲಿಕ್ಕೆ ಹಚ್ಚುವದು. ಇಂಥ ಪ್ರೇಮಮಯ ಮತ್ತು ವಿಚಾರ ಪ್ರಧಾನ ಜ್ಞಾನಿ ಪುರುಷನ ಕೈಯಿಂದ ಜಗತ್ತಿನ ಕಲ್ಯಾಣ ಅಧಿಕಾಧಿಕವಾಗಿ ಘಟಿಸುವದು. ಇದರಲ್ಲಿ ಯಾವ ಸಂಶಯವೂ ಇಲ್ಲ. ಭಗವಂತನು ಗೀತೆಯಲ್ಲಿ ಪ್ರಶಂಸೆಮಾಡಿದಂಥ ಜ್ಞಾನಿ ಭಕ್ತನೆಂದರೆ ಇವನೇ ಇರುವನು. ಇದೆಲ್ಲವೂ ಮಾನ್ಯವಿದ್ದರೂ ಕೂಡಾ ಜ್ಞಾನಿ ಪುರುಷನಿಗೆ ಇದೇ ಪ್ರಕಾರವಾಗಿ ನಡೆಯಬೇಕೆಂದು ಯಾರೂ ಆಗ್ರಹಪಡಿಸಲಿಕ್ಕೆ ಶಕ್ಯವಿಲ್ಲ. [ಆಗ್ರಹಪಡಿಸಲೂ ಬಾರದು]. ಇದರಂತೆ ಸಮಾಜದಲ್ಲಿ ಖುಲ್ಲಾ ಆಗಿ, ಮುಕ್ತವಾಗಿ, ಮೋಕಳೀಕ ಆಗಿ ಕೂಡಿದರೆ ಆಗ ಯಾವ ಸಾಧಕನ ಆತ್ಮಾನುಸಂಧಾನವು ಸ್ಥಿರವಾಗಿ [ಟಿಕಾಯಿಸಿ] ನಿಲ್ಲುವದಿಲ್ಲವೋ ಅಂಥ ಸಾಧಕನು ಕೇವಲ ಏಕಾಂತದಲ್ಲಿ ಇದ್ದುಕೊಂಡು ತನ್ನ ಸಾಧನೆಯನ್ನು ಸಂಬಾಳಿಸಿಕೊಳ್ಳಬೇಕು: ದೃಢಪಡಿಸಿಕೊಳ್ಳಬೇಕು. ಹೀಗೆ ಶ್ರೀ ಸಮರ್ಥರು ಸ್ಪಷ್ಟವಾಗಿ ಹೇಳುವರು. ಲೋಕಾಂತದಲ್ಲಿ [ಜನ ಸಮೂಹದಲ್ಲಿ] ಇದ್ದು ಅನುಸಂಧಾನವನ್ನು ಸಂಬಾಳಿಸುವದೆಂದರೆ ಅದೇನು ಹಗುರಾದ ಕೆಲಸವಲ್ಲ. ಸುಗಮವಾದದ್ದಲ್ಲ. ಇದನ್ನು ಸಾಧಕನಾದವನು ತಿಳಿದೇ ಇರುವನು.

**ದಶಕ. ಏಕೋನವಿಂಶತಿ : ಸಮಾಸ. ಸಪ್ತಮ : ಯತ್ನ ನಿರೂಪಣ (ನುಡಿ ೩೦)**

॥ಶ್ರೀರಾಮ ಸಮರ್ಥ॥ ಕಥೇಚೇ ಘಮಂಡ ಭರೂನ ದ್ಯಾವೇ ।
ಆಣೀ ನಿರೂಪಣೀ ವಿವರಾವೇ ।
ಉಣೇ ಪಡೋ ಚಿ ನೇದಾವೇ । ಕೋಣೇ ಏಕ ವಿಷೀ ॥೧॥

ಭೇಜಣಾರ ಖಾಲೇ ಪಡಿಲಾ । ತೋ ಭೇಜಣಾರೀ ಜಾಣಿತಲಾ ।
ನೇಣತಾ ಲೋಕ ಉಗಾ ಚ ರಾಹಿಲಾ । ಟಕಮಕಾ ಪಾಹಾತ ॥೨॥

ಉತ್ತರ ವಿಲಂಬೀ ಪಡಿಲೇ । ಶ್ರೋತಯಾಸ ಕಳೋ ಆಲೇ ।
ಮ್ಹಣಿಜೇ ಮಹತ್ವ ಉಡಾಲೇ । ವಕ್ತಯಾಚೇ ॥೩॥

ಥೋಡೇ ಬೋಲೋನಿ ಸಮಾಧಾನ ಕರಣೇ । ರಾಗೇಜೋನ ತರೀ ಮನ ಧರಣೇ ।
ಮನುಷ್ಯ ವೇಧೀ ಚ ಲಾವಣೇ । ಕೋಣೇಯೇಕ ॥೪॥

ಸೋಸವೇನಾ ಚಿಣಚಿಣ ಕೇಲೀ । ತೇಥೇ ತಾಮಸವೃತ್ತೀ ದಿಸೋನ ಆಲೀ ।
ಆವಘೀ ಆವಡೀ ಉಡಾಲೀ । ಶ್ರೋತಯಾಚೀ ॥೫॥

ಕೋಣ ಕೋಣ ರಾಜೀ ರಾಖಿಲೇ । ಕೋಣ ಕೋಣ ಮನೀ ಭಂಗಿಲೇ ।
ಕ್ಷಣ ಕ್ಷಣಾ ಪರೀಕ್ಷಿಲೇ । ಪಾಹೀಜೇ ಲೋಕ ॥೬॥

ಶಿಷ್ಯ ವಿಕಲ್ಪೀ ರಾನ ಘೇತೋ । ಗುರು ಮಾಗೇ ಮಾಗೇ ಧಾಂವತೋ ।
ವಿಚಾರ ಪಾಹೋ ಜಾತಾ ತೋ । ವಿಕಲ್ಪ ಚಿ ಅವಘಾ ॥೭॥

ಆಶಾಬದ್ಧೀ ಕ್ರಿಯಾಹೀನ । ನಾಹೀ ಚಾತುರ್ಯಾಚೇ ಲಕ್ಷಣ ।
ತೇ ಮಹಂತೀಚೀ ಭಣಭಣ । ಬಂದ ನಾಹೀ ॥೮॥

ಏಸೇ ಗೋಸಾವೀ ಹಳು ಪಡತೀ । ಠಾಈ ಠಾಈ ಕಷ್ಟೀ ಹೋತೀ ।
ತೇಥೇ ಸಂಗತೀಚೆ ಲೋಕ ಪಾವತೀ । ಸುಖ ಕೈಚೇ ॥೯॥

## ದಶಕ ೧೯. ಸಮಾಸ ೭. ಯತ್ನ ನಿರೂಪಣ (ನುಡಿ ೩೦)

ಹೊಸ ಲೋಕ [ಜನ] ಸಮೂಹ ನಿರ್ಮಾಣಮಾಡುವಂಥ ಸಮಾಜ ನೇತಾರನು ಹೇಗೆ ಹೇಗೆ ನಡೆಯು ಬೇಕು, ಜನ ಸಮೂಹವನ್ನು ತಮ್ಮವರನ್ನಾಗಿ ಹೇಗೆ ಮಾಡಿಕೊಳ್ಳಬೇಕು. ಇದರ ವರ್ಣನೆಯನ್ನು ಪ್ರಥಮದಲ್ಲಿ ಮಾಡುವರು: ಮಹಂತನು [ಧೂಮ್ ಧಡಾಕಿಯಿಂದ] ಮನಸೋಕ್ತವಾಗಿ ಭರ್ಜರಿಯಾಗಿ ಭಗವಂತನ ಕಥಾ ಕೀರ್ತನೆ ಯನ್ನು ಮಾಡಬೇಕು. ಮತ್ತು ವಾತಾವರಣವು ಕಥೆಯಿಂದ ಸಾಕಷ್ಟು ಭರಪೂರ ತುಂಬಿ ತುಳುಕುವಂತೆಮಾಡಬೇಕು. ಆದರೆ ಇದರ ಸಂಗಡವೇ ನಿರೂಪಣದಲ್ಲಿ ಅಧ್ಯಾತ್ಮ ತತ್ವ ವಿವೇಚನೆಯೂ ಇರುವದು ಅವಶ್ಯವು. [ಇರಬೇಕು] ಇವುಗಳಲ್ಲಿ ಯಾವುದನ್ನೂ ಅಲಕ್ಷಿಸಬಾರದು. ಎರಡರ ಕೊರತೆ ಕಾಣಬಾರದು. ಒಳ್ಳೇ ರಂಗಿನಿಂದ ಕಥಾ ಕೀರ್ತನ ನಡೆಯಬೇಕು. (೧) ಒಬ್ಬಾನೊಬ್ಬ ಕರಾಮತಿ ಆಟಗಾರ [ಚಮತ್ಕಾರ ಮಾಡುವಲ್ಲಿ ಕುಶಲನಾದ ಆಟಗಾರ] ನು ಆಟ ಮಾಡಿ ತೋರಿಸುವಾಗ ತಪ್ಪಿ ಕೆಳಗೆ ಬಿದ್ದನೆಂದರೆ, ಇವನು ಏಕೆ ಬಿದ್ದನು ? ಎಲ್ಲಿ ತಪ್ಪಿ ಬಿದ್ದನು, ಈ ವಿವರ ವನ್ನೆಲ್ಲವನ್ನು ಇನ್ನೊಬ್ಬ ಕರಾಮತಿ ಆಟಗಾರನೇ ತಿಳಿಯಬಲ್ಲವನಾಗಿರುವನು. ಇದರ ಮರ್ಮವನ್ನು ತಿಳಿಯದ ಜನರು ಸುಮ್ಮನೆ ಟಕಮಕ [ಅತ್ತಿತ್ತ] ನೋಡಹತ್ತುವರು. (೨) ಇದರಂತೆ ಶ್ರೋತಾನು ವಕ್ತಾನಿಗೆ ಒಂದಾನೊಂದು ಪ್ರಶ್ನೆ ಯನ್ನು ವಿಚಾರಿಸಿದನು. ಮತ್ತು ಅದಕ್ಕೆ ಉತ್ತರಕೊಡಲು ವಕ್ತಾನಿಗೆ ವೇಳೆ ಹತ್ತಿತು. ಬೇಗ ಉತ್ತರಕೊಡಲು ಆಗಲಿಲ್ಲ. ಅಂದಾಗ ವಕ್ತಾನಿಗೆ ಕೂಡಲೇ ಉತ್ತರ ಹೊಳೆಯಲಿಲ್ಲವೆಂಬ ಮಾತು ಶ್ರೋತಾನ ಲಕ್ಷ್ಯಕ್ಕೆ ಬಂದಿತೆಂದರೆ ಆಗ ಶ್ರೋತಾನು ವಕ್ತಾನ ಕಿಮ್ಮತ್ತು ಎಷ್ಟಿರುವದೆಂಬುದನ್ನು ಕಂಡುಕೊಳ್ಳುವನು. ಮತ್ತು ಹೀಗೆ ಆಯಿತೆಂದರೆ ವಕ್ತಾನ ಮಹತ್ವ ಹಾರಿ ಹೋಗುವದು, ಕಡಿಮೆಯಾಗುವದು. (೩) ಅಂಥ ಹೊತ್ತಿನಲ್ಲಿ ಮಹಂತನು ಸಮಾಧಾನದಿಂದ ಇಡಿಮು ಮಾತನಾಡಿ ಶ್ರೋತಾನನ್ನು ಸಮಾಧಾನಮಾಡಬೇಕು. ಸಿಟ್ಟು ಬಂದರೂ ಕೂಡಾ ಅದನ್ನು ತಡೆದುಕೊಳ್ಳ ಬೇಕು. ಶ್ರೋತಾನ ಮನವನ್ನು ದುಃಖಿತಮಾಡಬಾರದು. ಪ್ರತಿಯೊಬ್ಬ ಮನುಷ್ಯನನ್ನು ತನ್ನ ಕಡೆಗೆ ಆಕರ್ಷಿತ ಮಾಡಿಕೊಳ್ಳಬೇಕು. (೪) ಶ್ರೋತಾನ ವರ್ತನೆ ಸಹನವಾಗದೆ ಮಹಂತನು ಒಂದುವೇಳೆ ಚಿಡಚಿಡ [ಕಿರ್‌ಕಿರ್–ಚಿರ್ ಚಿರ್, ಗುಸ್‌ಪುಸ್] ಮಾಡಿದ್ದಾದರೆ ಇದರಿಂದ ಮಹಂತನ ತಾಮಸ ವೃತ್ತಿಯು ಒಡೆದು ಕಾಣುವದು. ಆಗ ಇವನ ಮೇಲೆ ಇದ್ದ ಶ್ರೋತಾ ಜನರ ಪ್ರೇಮ ಹಾರಿ ಹೋಗುವದು. (೫) ತನ್ನ ಮೇಲೆ ಯಾರು ಪ್ರಸನ್ನರಿರುವರು? ನಾವು ಯಾರ ಮನೋಭಂಗ ಮಾಡಿದೆವು? ನಾವು ಯಾರ ಮನವನ್ನು ದುಃಖಿಸಿದೆವು? ಇದನ್ನು ಮೇಲಿಂದ ಮೇಲೆ ಜನರ ಪರೀಕ್ಷೆಮಾಡಿ ನೋಡಬೇಕು. (೬) ತಿಳಿಯಿರಿ, ನಿಮಗೆ ಒಬ್ಬ ಶಿಷ್ಯನಿರುವನು, ಇವನು [ಫಲಫಲತೆ] ಇಲ್ಲದ ಸಲ್ಲದ ಸಂಶಯ ತೆಗೆಯುವನು. ಮತ್ತು ವಿಕಲ್ಪದ ಅಡವಿಯಲ್ಲಿ ಹೋಗುವನು. ಅಡ್ಡ ಮಾರ್ಗವನ್ನು ಹಿಡಿಯುವನು ಇವನಿಗೆ ತಿಳಿಸಿ ಹೇಳಿ [ಸಮಜೂತಮಾಡಿ] ಸಮಾಧಾನಪಡಿಸಲು ಅವನ ಗುರುವು ಆರ್ಜವಮಾಡುತ್ತ [ಬೆಡಗೆ ಬಿದ್ದು] ಅವನ ಹಿಂದೆ ಹಿಂದೆ ಓಡುವನು. ಇದು ಆ ಗುರು ಶಿಷ್ಯರಲ್ಲಿಯ ರೀತಿಯಿರುವದು. ಇಂಥವು ಎಲ್ಲಿ ಅವೆಯೋ ಅಲ್ಲಿ ಗುರುಶಿಷ್ಯ ಈ ಇಬ್ಬರೂ ಸಂದೇಹದ ಚಕ್ರದಲ್ಲಿ, ವಿಕಲ್ಪದಲ್ಲಿ ತೊಡಕು ಹಾಕಿಕೊಂಡಿರುವರೆಂದು ತಿಳಿಯಬೇಕು. (೭) ಯಾವ ಮಹಂತನು ಆಶೆ ಬುರುಕನಿರುವನೋ ಆಚಾರ ಭ್ರಷ್ಟನಿರುವನೋ ಕ್ರಿಯಾಭ್ರಷ್ಟ ಮತ್ತು ಚಾತುರ್ಯಹೀನ ನಿರುವನೋ ಇಂಥ ಮಹಂತನಮಹಂತಿಯು ವ್ಯರ್ಥಕಟಕಟಿಯನ್ನು ನಿರ್ಮಾಣಮಾಡುವದು. ಇದಕ್ಕೆ ಯಾವ ನಿಯಮ ಮರ್ಯಾದೆ ಎಂಬುದು ಉಳಿಯುವದಿಲ್ಲ. (೮) ಇಂಥ ಆಶೆ ಬುರುಕ ಮಹಂತರು ಅಯೋಗ್ಯರು ಎಂದು ಅನ್ನಿಸಿ ಕೊಳ್ಳುವರು. ಅಲ್ಲಲ್ಲಿ ಆಗಾಗ ಕಷ್ಟಕ್ಕೊಳಗಾಗುವರು. ಖಿನ್ನರಾಗಿ ತಲೆ ಕೆಳಗೆ ಹಾಕಿಕೊಂಡು ನಡೆಯಬೇಕಾಗುವದು. [ಕೊನೆಗೆ ಮೂಲೆಹಿಡಿದು ಮುಸುಕುಹಾಕಿಕೊಂಡು ಕೂಡುವ ಪ್ರಸಂಗವೂ ಬರಬಹುದಾಗಿದೆ] ಇಂಥವರ ಸಂಗತಿ ಯಲ್ಲಿ ಇರುವಂಥ ಜನರಿಗೂ ಕೂಡಾ ಸುಖ ಸಮಾಧಾನವು ಸಿಗುವದು ಅಶಕ್ಯದ ಮಾತಾಗಿದೆ. (೯)

ಜಿಕಡೆ ತಿಕಡೆ ಕೀರ್ತಿ ಮಾಜೇ। ಸಗಟ ಲೋಕಾಸ ಹವ್ಯಾಸ ಉಪಜೇ।
ಲೋಕ ರಾಜೀ ರಾಖೋನ ಕೀಜೇ। ಸಕಳ ಕಾಂಹೀ ॥೧೦॥

ಪರಲೋಕೀ ವಾಸ ಕರಾವಾ। ಸಮುದಾವ ಉಗಾ ಚ ಸಾಹಾವಾ।
ಮಾಗಣ್ಯಾಚಾ ತಗಾದಾ ನ ಲವಾವಾ। ಕಾಂಹೀ ಯೇಕ ॥೧೧॥

ಜಿಕಡೆ ಜಗ ತಿಕಡೆ ಜಗನ್ನಾಯೆಕ। ಕಳಲಾ ಪಾಹಿಜೆ ವಿವೇಕ।
ರಾತ್ರೀದಿವಸ ವಿವೇಕೀ ಲೋಕ। ಸಾಂಭಾಳೀತ ಜಾತೀ ॥೧೨॥

ಜೋ ಜೋ ಲೋಕ। ದೃಷ್ಟೀಸ ಪಡಿಲಾ। ತೋ ತೋ ನಷ್ಟ ಐಸಾ ಕಳಲಾ।
ಅವಘೇ ಚ ನಷ್ಟ ಯೇಕಲಾ ಭಲಾ। ಕಾಶಾವರುನೀ ॥೧೩॥

ವೋಸ ಮುಲಕೀ ಕಾಯೆ ಪಾಹಾವೇ। ಲೋಕಾವೇಗಳೇ ಕೋಠೇ ರಾಹಾವೇ।
ತರ್ಹೀ ಖೋಟೇ ಸಾಂಡತೇ ಘ್ಯಾವೇ। ಕಾಂಹೀ ಯೇಕ ॥೧೪॥

ತಸ್ಮಾತ ಲೋಕಿಕೀ ವರ್ತತಾ ನ ಯೆ। ತ್ಯಾಸ ಮುಹಂತೀ ಕಾವಾ ನಯೆ।
ಪರತ್ರ ಸಾಧನಾಚಾ ಉಪಾಯು। ಶ್ರವಣ ಕರೂನ ಅಸಾವೇ ॥೧೫॥

ಆಪಣಾಸೀ ಬರೇ ಪ್ರೋಹತಾ ನ ಯೆ। ಲೋಕ ಬುಡವಾವಯಾಚೇ ಕೋಣ ಕಾರ್ಯ।
ಗೋಡೀ ಆವಡೀ ನಾಯಾ ಜಾಯೆ। ವಿಕಲ್ಪ ಚಿ ಅವಘಾ ॥೧೬॥

ಅಭ್ಯಾಸೇ ಪ್ರಗಟ ವ್ಹಾವೇ। ನಾಹೀ ತರೀ ಝೂಂಕೋನ ಅಸಾವೇ।
ಪ್ರಗಟ ಹೋಊನ ನಾಸಾವೇ। ಹೇ ಬರೇ ನವ್ಹೇ ॥೧೭

ಮಂದ ಹಳು ಹಳು ಚಾಲತೋ। ಚಪಳ ಕೈಸಾ ಅಟೋಪತೋ।
ಅರಬೀ ಫಿರವಣಾರ ತೋ। ಕೈಸಾ ಅಸಾವಾ ॥೧೮॥

ಮಹಂತನು ಹೇಗೆ ನಡೆಯಬೇಕೆಂದರೆ ನಾಲ್ಕೂ ನಿಟ್ಟಿನಲ್ಲಿ ಇವನ ಕೀರ್ತಿ ಹರಡಬೇಕು. ಯಾವತ್ತೂ ಜನರಿಗೆ ಇವನ ವಿಷಯದಲ್ಲಿ ಪ್ರೀತಿ, ಪ್ರೇಮ, ಆದರ ಉತ್ಪನ್ನವಾಗಬೇಕು. ಇವನು ಲೋಕ ಸಮುದಾಯವನ್ನು ಸಂತುಷ್ಟಗೊಳಿಸುತ್ತ ಸಮಾಧಾನ ಕಾಯ್ದುಕೊಂಡು ಎಲ್ಲ ಕಾರ್ಯ, ಕಾಯಕ, ಮಾಡಬೇಕು. (೧೦) ಮಹಂತನಾದವನು ಆತ್ಮಾನುಸಂಧಾನದ ಉಚ್ಚ ಪಾತಳಿಯ ಮೇಲೆ ಮನಸಾ ಇರಬೇಕು. ಮತ್ತು ಈ ಭೂಮಿಕೆಯಿಂದಲೇ ಈ ಸ್ಥಿತಿಯಲ್ಲಿದ್ದುಕೊಂಡೇ ಜನ ಸಮುದಾಯದ ನಡೆ ನುಡಿಯ ನಿರೀಕ್ಷಣ ಮಾಡುತ್ತಲಿರಬೇಕು. ಯಾರೊಡನೆಯೂ ಅಥವಾ ಯಾರ ಹಿಂದೆಯೂ ದ್ರವ್ಯಾದಿ ಯಾವುದೇ ಬೇಡಿಕೆಯ ತಗಾದೆ [ಒತ್ತಾಯ] ಹಚ್ಚಬಾರದು. "ಯದೃಚ್ಛಾ ಲಾಭ ಸಂತುಷ್ಟ" ಇರಬೇಕು. (೧೧) ಯಾವ ಕಡೆಗೆ ಬಹುಜನ ಸಮಾಜ ಇರುವದೋ ಆ ಕಡೆಗೆ ಜಗದೀಶ್ವರನಿರುವನು. ದೈವ [ಬಹು ಜನ ಸಮುದಾಯ] ಇದ್ದಲ್ಲಿ ದೇವರು ಇರುವನು ಅನ್ನುವ ಗಾದೆಯ ಮಾತು ಎಲ್ಲರಿಗೂ ಗೊತ್ತಿದ್ದದ್ದೇ ಇರುವದು. ಈ ವಿಚಾರವನ್ನು ಚನ್ನಾಗಿ ತಿಳಿಯಬೇಕು ವಿವೇಕಿಯಾದ ಮಹಂತನು ಈ ವಿಚಾರವನ್ನು ಸತತವೂ ಹಗಲು ರಾತ್ರಿ ಕೂಡಾ ತನ್ನ ಕಣ್ಣ ಮುಂದೆ ಇಟ್ಟುಕೊಂಡು ನಡೆಯುವನು. (೧೨) ಯಾವ ಯಾವ ಜನ ದೃಷ್ಟಿಗೆ ಬೀಳುವರೋ ಅವರೆಲ್ಲರೂ ಕೆಟ್ಟವರಿರುವರು. ಕೆಲಸಕ್ಕೆ ಬಾರದವರಿರುವರು. ಎಂದು ಸಾರ್ವತ್ರಿಕವಾಗಿ ಸರಸಕಟಾಗಿ ಅನ್ನುವದು ಬಹಳ ತಪ್ಪು ಯಾಕೆಂದರೆ ಎಲ್ಲರೂ ಕೆಟ್ಟವರು, ನಿರರ್ಥಕರು,ನಾನು ಮಾತ್ರ ಒಳ್ಳೆಯವನು ಎಂದು ಅಂದದ್ದಾದರೆ ಇದನ್ನು ಹೇಗೆ ನಂಬಬೇಕು ? ಇದಕ್ಕೆ ಆಧಾರವೇನು ? ಇದು ಸರಿಯಲ್ಲ. (೧೩) ನಿರ್ಜನ ಪ್ರದೇಶದ ಹಾಳು ಬಿದ್ದ ಮೈದಾನದಲ್ಲಿ ನೋಡುವಂಥದೇನೂ ಹೇಗಿರುವದಿಲ್ಲವೋ ಅದರಂತೆ ಜನತೆಯನ್ನು ಬಿಟ್ಟು ಮಹಂತನಿಗೆ ಇರಲಿಕ್ಕೆ ಬರುವದಿಲ್ಲ. ಮಹಂತನು ತನ್ನ ಹಟಮಾರಿತನವನ್ನು, ಸಿಡುಕುತನವನ್ನು ತೋರಿಸಿಕೊಳ್ಳುವದು ಸರಿಯಲ್ಲ. ಒಳ್ಳೆಯದಲ್ಲ. ಪ್ರಸಂಗ ಬಂದಾಗ ತಾನು ಹಿಂದೆ ಉಳಿಯಬೇಕು. ಅಥವಾ ನಮ್ರನಾಗಿ ನಡೆಯಬೇಕು. ಒಟ್ಟಿನಲ್ಲಿ ಜನತೆಯನ್ನು ಸಮಾಧಾನದಿಂದ ಇಡಬೇಕು. ತಾನು ಹೆಚ್ಚು ಬೇಕಾದವನೆನಿಸಬೇಕು. (೧೪) ಯಾವ ಸಾಧಕನಿಗೆ ಜನರೊಂದಿಗೆ ಸಮಾಧಾನದಿಂದ ನಡೆದು ಜನರನ್ನು ತನ್ನ ಕಡೆಗೆ ಒಲಿಸಿಕೊಳ್ಳಲಿಕ್ಕೆ ಬರುವದಿಲ್ಲವೋ ಅಂಥವರು ಮೊದಲಿನಿಂದಲೇ ಲೋಕ ಸಂಗ್ರಹದ ಕಾರ್ಯದಲ್ಲಿ [ಭಾನಗಡಿಯಲ್ಲಿ] ಬೀಳಬಾರದು. ಇವರು ತಮ್ಮ ಸಾಧನೆಯನ್ನು ಸಂಭಾಳಿಸಿಕೊಂಡು ಏಕಾಕಿಯಾಗಿರಬೇಕು: ಒಟ್ಟಿನಲ್ಲಿ ಹೇಳುವದರ ತಾತ್ಪರ್ಯವೇನೆಂದರೆ ಯಾವ ಮಹಂತನಿಗೆ ಜನತೆಯೊಂದಿಗೆ ಒಂದಾಗಿ ಹೋಗಲಿಕ್ಕೆ ಅಥವಾ ಜನತೆಯ ಸಂಗಡ ಸರಿಯಾಗಿ ನಡೆಯುವದು ಆಗದಿದ್ದರೆ ಅಂಥವನು ಲೋಕ ಸಂಗ್ರಹ ಮಾಡಬಾರದು. ಕೇವಲ ತನ್ನಷ್ಟಕ್ಕೇ ಪರಮಾರ್ಥ ಸಾಧನೆಯನ್ನು ಮಾಡುತ್ತ ಶ್ರವಣ, ಮನನದಲ್ಲಿಯೇ ತನ್ನ ಕಾಲವನ್ನು ಕಳೆಯುತ್ತ ಹೋಗಬೇಕು. (೧೫) ಯಾರಿಗೆ ಸ್ವತಃವೇ ಚನ್ನಾಗಿ ಈಸಲಿಕ್ಕೆ ಬರುವದಿಲ್ಲವೋ ಅಂಥವರು ಜನರನ್ನು ಪಾರುಮಾಡುವದೊತ್ತಟ್ಟಿಗಿರಲಿ ಕನಿಷ್ಠ ಅವರನ್ನು ಮುಳುಗಿಸುವ ಕೆಲಸವನ್ನು ಮಾಡಬಾರದು. ಇಂಥ ಅಪಾತ್ರ ಅಂದರೆ ಅಯೋಗ್ಯ ಗುರುತನವನ್ನು ಧರಿಸಿದ ಮಹಂತನ ನಾದಿಗೆ ಹತ್ತಿದರೆ ಸಹವಾಸಮಾಡಿದರೆ ಮನುಷ್ಯನಲ್ಲಿಯ ಪರಮಾರ್ಥದ ಮೇಲಿನ ಪ್ರೇಮ ಮತ್ತು ಪ್ರೀತಿ ಇವೆಲ್ಲ ವ್ಯರ್ಥವಾಗುವವು. ಮತ್ತು ಇದರೊಂದಿಗೆ ಎಲ್ಲ ಕಡೆಗೂ ತಪ್ಪು ತಿಳುವಳಿಕೆ [ಗೈರ ಸಮಜೂತ] ಪಸರಿಸುವದು. (೧೬) ಸಾಧನದ ಉತ್ತಮ ಅಭ್ಯಾಸವನ್ನು ಮಾಡಿದ ಮೇಲೆ ಜನತೆಯಲ್ಲಿ ಮಹಂತಗಿರಿ ಸಹಜವಾಗಿ ಪ್ರಕಟವಾಗಬೇಕು. ಇಲ್ಲದಿದ್ದರೆ ಸಾಧಕನು ತನ್ನನ್ನು ತಾನೇ ಮರೆ ಮಾಡಿಕೊಂಡು ಜನತೆಯಿಂದ ದೂರ ಹೋಗಿ ಇರಬೇಕು. ಒಮ್ಮೆ ಜನತೆಯ ಮಧ್ಯದಲ್ಲಿ ಪ್ರಕಟವಾದ ಮೇಲೆ ಸಾಧನದಿಂದ ಕೆಳಗೆ ಸರಿಯುವದು ಯಾವ ಕಾಲಕ್ಕೂ ಒಳ್ಳೆಯದಲ್ಲ. (೧೭) ಯಾವ ಮನುಷ್ಯನಿಗೆ ಮಂದ ಮತ್ತು ಸಾವಕಾಶವಾಗಿ ನಡೆಯುವ ಕುದುರೆಯನ್ನು ಹತ್ತಿ ಹೋಗುವ ರೂಢಿ ಇರುವದೋ ಇಂಥವನಿಗೆ ಅತ್ಯಂತ ಚಪಲ ಚುರುಕಾಗಿರುವ ಕುದುರೆಯನ್ನು ನಡೆಯಿಸಿಕೊಂಡು ಹೋಗಲಿಕ್ಕೆ ಆಗುವದಿಲ್ಲ, ಬರುವದಿಲ್ಲ. ಯಾಕೆಂದರೆ ಅರಬ್ಬಿ ಕುದುರೆಯು ಬಹಳ ಚಪಲ ಮತ್ತು ಹುಷಾರ ಇರುವದು. ಇಂಥದರ ಮೇಲೆ ಸವಾರನಾಗುವ ಮನುಷ್ಯನೂ ಕೂಡಾ ಅಷ್ಟೇ ಚಪಲ ಮತ್ತು ಹುಷಾರ ಇರಬೇಕಾಗುವದು. (೧೮)

ಹೇ ಧಕಾಧಕೀಚೀ ಕಾಮೇ। ತಿಕ್ಷಣ ಬುದ್ಧೀಚೀ ವರ್ಮೇ।
ಭೋಳ್ಯಾ ಭಾವಾರ್ಥೇ ಸಂಭ್ರಮೇ। ಕೈಸೇ ಘಡೇ ॥೧೯॥

ಸೇತ ಕೇಲೇ ಪರೀ ವಾಹೇನಾ। ಜವಾರ ಕೇಲೇ ಪರೀ ಫಿರೇನಾ।
ಜನ ಮೇಳವಿಲೇ ಪರೀ ಧರೇನಾ। ಅಂತರ್ಯಾಮೀ ॥೨೦॥

ಜರೀ ಚಢತೀ ವಾಢತೀ ಆವಡೀ ಉಠೇ। ತರೀ ಪರಮಾರ್ಥ ಪ್ರಗಟೇ।
ಘಸಘಸ ಕರಿತಾ ವಿಟೇ। ಸಗಟ ಲೋಕು ॥೨೧॥

ಆಪಲೇ ಲೋಕಾಸ ಮಾನೇನಾ। ಲೋಕಾಂಚೇ ಆಪಣಾಸ ಮಾನೇನಾ।
ಅವಘಾ ವಿಕಲ್ಪ ಚಿ ಮನಾ। ಸಮಾಧಾನ ಕೈಚೇ ॥೨೨॥

ನಾಸಕ ದೀಕ್ಷಾ ಸಿಂತರು ಲೋಕ। ತೇಥೇ ಕೈಚಾ ಅಸೇಲ ವಿವೇಕ।
ಜೇಥೇ ಬಳಾವಲಾ ಅವಿವೇಕ। ತೇಥೇ ರಾಹಣೇ ಖೋಟೇ ॥೨೩॥

ಯಾರ ತೊಂದರೆಯೂ [ಕಟಕಟಿಯೂ] ಇಲ್ಲ, ಪರಿಸ್ಥಿತಿ ಅನುಕೂಲವಿರುವದು, ಪ್ರಕೃತಿ ಚೆನ್ನಾಗಿರುವದು. ಹೀಗೆಲ್ಲ ಇದ್ದಾಗ ನಮ್ಮ ಪರಮಾರ್ಥ ಸಾಧನೆಯನ್ನು ನಡೆಯಿಸುವದೇನೂ ಕಠಿಣ ಕೆಲಸವಲ್ಲ. ಆದರೆ ಜನತೆಯ ಸಮೂಹದಲ್ಲಿ ಇಳಿದ ಮೇಲೆ ನಾನಾ ಪ್ರಕಾರದ [ಘೋಟಾಳೆಯ ಪ್ರಶ್ನೆ] ತೊಡಕಿನ ಪ್ರಶ್ನೆಗಳು ಬೆನ್ನು ಹತ್ತುವವು. ಇವುಗಳ ಗೊಂದಲದಲ್ಲಿ ನಮ್ಮ ಸ್ವರೂಪಾನುಸಂಧಾನವನ್ನು ಟಿಕಾಯಿಸಿ ಉಳಿಸಿಕೊಳ್ಳುವದು ಬಹಳ ಸಾಮರ್ಥ್ಯದ ಶಕ್ತಿಯ ಕೆಲಸವಿರುವದು. ಯಾರಿಗೆ ಇದು ಒಗ್ಗುವದೋ ಅವರೇ ಲೋಕ ಸಂಗ್ರಹ ಮಾಡಬೇಕು. ಮತ್ತು ಅಂಥವರೇ ಮಹಂತಗಿರಿಯನ್ನು ಮೆರೆಯಿಸಬೇಕು: ಈ ಮಹಂತಗಿರಿಯ ಕಾರ್ಯವು ಅರ್ಥಾತ್ ಸಮಾಜದ ಉದ್ಧಾರಾದಿ ಕಾರ್ಯವು ಬಹಳ ಧಕ್ಕಾಮುಕ್ಕಿಯದೂ, ದಗದಗಿಯದೂ, ಗುದಮುರಿಗಿಯದೂ, ಶ್ರಮದ್ದೂ ಆಗಿದೆ. ಇದನ್ನು ಪಾರುಗಾಣಿಸಬೇಕಾದರೆ ಬಹಳ ತೀಕ್ಷ್ಣ ಬುದ್ಧಿಯ ಚುರುಕುತನ ಬೇಕಾಗುವದು. ಇಂಥ ತೀಕ್ಷ್ಣ ಬುದ್ಧಿಯಿಂದ ಕಾರ್ಯದ ಎಳೆ ಎಳೆಯನ್ನು ಅಂದರೆ ಅದರ ಎಲ್ಲ ಮರ್ಮವನ್ನು ಗುರುತಿಸಿ ತಿಳಿದು ಕಾರ್ಯಮಾಡಬೇಕಾಗುವದು. ಸುಮ್ಮನೆ ಕೇವಲ ಭೋಳೆ [ಮುಗ್ಧ, ಏನೂ ತಿಳಿಯದ] ತನದಿಂದ ಶ್ರದ್ಧಾ ಇಟ್ಟು ಆರಾಮಾಗಿ ಇದನ್ನು ಮಾಡಲಿಕ್ಕೆ ಬರುವದಿಲ್ಲ. (೧೯) ಹೊಲ [ಜಮೀನು] ಮಾಡಿ ಬಿತ್ತಿ, ಬಂದ ಪೀಕನ್ನು ಬಜಾರಕ್ಕೆ ಒಯ್ಯದೇ ಅಥವಾ ಅದನ್ನು ಹೊಲದಿಂದ ತರುವ ಕಾರ್ಯಮಾಡದಿದ್ದರೆ ಕಾಳು ನಾಶವಾಗುವದು. ವ್ಯರ್ಥವಾಗುವದು ಅಥವಾ ಮುತ್ತು ರತ್ನ ವ್ಯಾಪಾರಮಾಡುವ ವ್ಯಾಪಾರಿಯು ನಾಲ್ಕು ಕಡೆಗೆ ಅಡ್ಡಾಡದಿದ್ದರೆ ಶ್ರೀಮಂತರಲ್ಲಿ ಹೋಗಿ ತೋರಿಸದಿದ್ದರೆ ಅವನ ವ್ಯಾಪಾರದಲ್ಲಿ ಹಾನಿಯಾಗುವದು. ಇದರಂತೆ ಮಹಂತನಾದವನು ತನ್ನ ಸುತ್ತಲೂ ಜನರನ್ನು ಕೂಡಿಸಿದನು. ಆದರೆ ಆ ಜನರ ಅಂತಃಕರಣವನ್ನು ಸಂಬಾಳಿಸದಿದ್ದರೆ ಇವನ ಮಹಂತಗಿರಿಯು ಫಜೀತಿ ಆಗಿ ಮರ್ಯಾದೆ ಹೋಗುವದು. (೨೦) ಜನತೆಯಲ್ಲಿ ನಿಮ್ಮ ಬಗ್ಗೆ ಇರುವ ಆದರ-ಪ್ರೇಮ ಇವು ಉತ್ತರೋತ್ತರ ವೃದ್ಧಿಗೊಳ್ಳುತ್ತ ಹೋಗಬೇಕು. ಅಂದರೇನೇ ಪರಮಾರ್ಥ ಪ್ರಕಟವಾಗುವದು. ಇಂಥ ಮಹಂತನ ಪ್ರಯತ್ನಕ್ಕೆ ಯಶ ಬಂದು ಜನರು ಪರಮಾರ್ಥವನ್ನು ಮನಸಾ ಹೆಚ್ಚಾಗಿ ಆಚರಿಸಲಿಕ್ಕೆ ಹತ್ತುವರು. ಮಹಂತ ಮತ್ತು ಜನತಾ ಇವರಲ್ಲಿ ಸಂಘರ್ಷ [ತಿಕ್ಕಾಟ] ನಿರ್ಮಾಣವಾದರೆ ಎಲ್ಲ ಜನರೂ ಆ ಮಹಂತನ ಬಗ್ಗೆ ಬೇಸರಗೊಳ್ಳುವರು. ಇವನು ಜನರಿಗೆ ಬೇಡಾದವನಾಗುವನು, ಜನತೆ ಇವನನ್ನು ತಿರಸ್ಕರಿಸುವದು. (೨೧) ಯಾವ ಮಹಂತ ಮಾಡಿದ್ದು ಜನರಿಗೆ ಮನವರಿಕೆಯಾಗುವದಿಲ್ಲವೋ, ಮತ್ತು ಪಟಾಯಿಸುವದಿಲ್ಲವೋ, ಮತ್ತು ಒಪ್ಪಿತವಾಗುವದಿಲ್ಲವೋ, ಮತ್ತು ಜನರು ಮಾಡಿದ್ದು ಯಾವ ಮಹಂತನಿಗೆ ಒಪ್ಪಿತವಾಗುವದಿಲ್ಲವೋ ಅಂಥ ಸ್ಥಳದಲ್ಲಿ ಹಾಗೂ ಅಂಥ ಸಂದರ್ಭಗಳಲ್ಲಿ ಇಬ್ಬರ ಮನದಲ್ಲಿಯೂ ಸಂಶಯ ಮತ್ತು ತಪ್ಪು ತಿಳವಳಿಕೆ ಹಾಗೂ ಅಸಮಾಧಾನ ಉಂಟಾಗುವವು. ಮತ್ತು ಇಬ್ಬರಿಗೂ ಸಮಾಧಾನ ಇಲ್ಲದಾಗುವದು. (೨೨) ಯಾವ ಸ್ಥಳದಲ್ಲಿಯೂ ಗುರುವಿನ ಆಚಾರ ವಿಚಾರ ಮತ್ತು ಸಾಧನೆಗಳೆಲ್ಲ ಕೊಳಕು [ಖರಾಬ], ಹದಗೆಟ್ಟದ್ದು, ಬಿಗಡಾಯಿಸಿದ್ದು ಇರುವದಾದರೆ-ಇದ್ದರೆ ಆಗ ಇಂಥವನ ಸುತ್ತುಮುತ್ತು ಗುಂಪುಗೂಡಿರುವ ಅನುಯಾಯಿಗಳು ಠಕ್ಕ, ಲಬಾಡ ಮತ್ತು ಮೋಸಗೊಳಿಸು(ಫಸಾಯಿಸು)ವವರೇ ಆಗಿರುವರು. [ಗುರುವು ಗುಟುಕು ನೀರಿನಲ್ಲಿ ಮುಳುಗುವವನಾಗಿದ್ದರೆ, ಶಿಷ್ಯ ಮುಳುಗುವ ನೀರಿನಲ್ಲಿಯೇ ಇಳಿಯುವವನಾಗಿರುತ್ತಾನೆ. ಅಥವಾ ಜನರನ್ನು ಇಂಥದರಲ್ಲಿಯೇ ಮುಳುಗಿಸುವಂಥ ಪ್ರಚಂಡನಾಗಿರುವನು. ಅಂತೆಯೇ "ಗುರುವಿಗೆ ಗುಟುಕು ನೀರಾದರೆ ಶಿಷ್ಯನಿಗೆ ಮುಳುಗು ನೀರು" ಎಂಬ ಗಾದೆ ಇರುವದು] ಇಂಥಲ್ಲಿ ವಿವೇಕವು ಹುಡುಕಿದರೂ ಕಂಡುಬರುವದಿಲ್ಲ. ಇಂಥ ಸೈತಾನೀ ವಿವೇಕವು ಎಲ್ಲಿ ರಾಜ್ಯಮಾಡುವದೋ ಅಲ್ಲಿ ಸಂಭಾವಿತರು ಇರುವದು ಒಳಿತಲ್ಲ. (೨೩)

ಬಹುತ ದಿವಸ ಶ್ರಮು ಕೇಲಾ । ಸೇವಟೀ ಅವಘಾ ಚಿ ವೆರ್ಥ ಗೇಲಾ ।
ಆಪಣಾಸ ಠಾಕೇನಾ ಗಲ್ಬಲಾ ಕೋಣೇ ಕರಾವಾ ॥೨೪॥

ಸಂಗೀತ ಚಾಲಿಲಾ ತರೀ ತೋ ವ್ಯಾಪ । ನಾಹೀ ತರೀ ಅವಘಾ ಚಿ ಸಂತಾಪ ।
ಕ್ಷಣಕ್ಷಣಾ ವಿಕ್ಷೇಪ । ಕಿತೀ ಮ್ಹಣೌನಿ ಸಾಂಗಾವಾ ॥೨೫॥

ಮೂರ್ಖ ಮೂರ್ಖಪಣೇ ಭರಂಗಳತೀ । ಜ್ಞಾತೇ ಜ್ಞಾತೇಪಣೇ ಕಳ್ಹೋ ಕರಿತೀ ।
ಹೋತೇ ದೋಹೀಕಡೇ ಫಜೀತೀ । ಲೋಕಾಮಧೇ ॥೨೬॥

ಕಾರಬಾರ ಆಟೋಪೇನಾ ಕರವೇನಾ । ಆಣಿ ಉಗೇ ಹಿ ರಾಹೇನಾ ।
ಯಾಕಾರಣೇ ಸಕಳ ಜನಾ । ಕಾಯೆ ಮ್ಹಣಾವೇ ॥೨೭॥

ನಾಸಕ ಉಪಾಧೀಸ ಸೋಡಾವೇ । ಮಗ ಸಾರ್ಥಕೀ ಘಾಲಾವೇ ।
ಪರಿಭ್ರಮಣೇ ಕಂಠಾವೇ । ಕೋಠೇ ತರೀ ॥೨೮॥

ತಿಳಿಯಿರಿ. ಒಬ್ಬ ಮಹಂತನು ಬಹಳ ದಿವಸ ಕಷ್ಟ ಸೋಸಿದನು. ಮತ್ತು ಉತ್ತಮ ಲೋಕ ಸಮೂಹ ನಿರ್ಮಾಣ ಮಾಡಿದನು. ಈ ಸಮೂಹ ಮಂಡಳದಲ್ಲಿಯ ಎಲ್ಲರನ್ನೂ ಸಂತುಷ್ಟಮಾಡುವದು ಮತ್ತು ಇವರ ಅಂತಃಕರಣವನ್ನು ಸಂಬಾಳಿಸುವದು ಅವಶ್ಯವಿರುವದು. ಇದನ್ನು ಒಂದುವೇಳೆ ಮಾಡದಿದ್ದರೆ ಸಮೂಹದಲ್ಲಿ ಬಿರುಕು ಕಾಣಬರುವದು. ಮತ್ತು ನಂತರ ಕ್ರಮೇಣ ಎಲ್ಲ ಶ್ರಮವೂ ವ್ಯರ್ಥವಾಗಿ ಹೋಗುವದು. ಜನತೆಯ ಉಪಾಧಿ, ಉಪಸರ್ಗ, ಮತ, ಗಡಬಿಡಿ, ಗೊಂದಲ, ಇವೆಲ್ಲ ಮಹಂತನಾದವನಿಗೆ ಅಥವಾ ಆಗಬೇಕೆನ್ನುವವನಿಗೆ ಸಹಿಸಲಿಕ್ಕೆ ನಿರ್ವಹಿಸಲಿಕ್ಕೆ ಆಗದಿದ್ದರೆ ಇದರ ಜವಾಬುದಾರಿಯನ್ನು ಪ್ರಾರಂಭದಲ್ಲಿಯೇ ವಹಿಸಿಕೊಳ್ಳಬಾರದು. [ದೂರವಿರುವದು ಒಳಿತು] (೨೪) ಲೋಕ ಸಂಗ್ರಹದ ರಹಸ್ಯ ಹೇಳಿರುವದೆಂದರೆ ಸಮೂಹವು ಸಂಘರ್ಷ ತಿಕ್ಕಾಟ, ಕಲಹ ರಹಿತ ಇದ್ದು ಮತ್ತು ಸುರಳೀತವಾಗಿ ನಡೆದದ್ದಾದರೆ ಲೋಕ ಕಲ್ಯಾಣದ ಕಾರ್ಯದ ವ್ಯಾಪ ಸಾಕಷ್ಟು ಬೆಳೆಯುವದು. ಜನತೆಗೆ ಒಳಿತೂ ಆಗುವದು. ಮಹಂತನ ಮೇಲೆ ಶ್ರದ್ಧೆ ವಿಶ್ವಾಸವೂ ಹೆಚ್ಚುವದು. ಹೀಗಾದರೆ ಎಲ್ಲರಿಗೂ ಸಮಾಧಾನವಾಗುವದು. ಯಾವ ತಾಪವೂ ಉಂಟಾಗುವದಿಲ್ಲ. ಆದರೆ ಈ ಕಾರ್ಯದಲ್ಲಿ ಘರ್ಷಣೆ ಉದ್ಭವಿಸಿ ಸಂಘರ್ಷ ನಿರ್ಮಾಣವಾದರೆ ಇದರಿಂದ ಎಲ್ಲರಿಗೂ ಸಂತಾಪದಾಯಕವಾಗುವದು. ಇದರಿಂದ ಮನಸ್ಸಿಗೆ ಕ್ಲೇಶವಾಗುವದು. ಸಮೂಹ ಜೀವನದಲ್ಲಿ ಮೇಲಿಂದ ಮೇಲೆ ಅನೇಕ ಅಡಚಣೆಗಳು ಮತ್ತು ತಪ್ಪು ತಿಳವಳಿಕೆ ನಿರ್ಮಾಣವಾಗುವವು. ಆದರೆ ವಿವೇಕದಿಂದ ನಡೆದರೆ ಕಲ್ಯಾಣವಾಗುವದು. ಇಲ್ಲದಿದ್ದರೆ ಕಾರ್ಯವು ಕುಂಠಿತವಾಗುವದು. ಅಥವಾ ಹಾನಿಕಾರಕವಾಗುವದು. ಇದರ ಬಗ್ಗೆ ಎಲ್ಲ ಅಡಚಣೆ ತೊಂದರೆಗಳ ವರ್ಣನೆಯನ್ನು ಎಷ್ಟೆಂದು ಮಾಡುವದು?ಮಾಡಲಿಕ್ಕೆ ಆಗುವದಿಲ್ಲ. (೨೫) ಸಮೂಹದಲ್ಲಿಯ ಮೂರ್ಖ ಜನರು ಮೂರ್ಖತನದಿಂದ ಸಿಕ್ಕಾಪಟ್ಟೆ ವರ್ತಿಸುವರು. ಸಮೂಹದಲ್ಲಿಯ ಜಾಣ [ಶಹಾಣೆ] ಜನರು ಜಾಣತನದ ಅಭಿಮಾನದಿಂದ ತಮ್ಮ ತಮ್ಮಲ್ಲಿ ಬಡಿದಾಡುವರು. ಸಮೂಹದ ಪುಢಾರಿಯಾದ ಮಹಂತನು ಅಡಕೋತಿನಲ್ಲಿ ಅಡಿಕೆ ಸಿಕ್ಕಂತಾಗಿ ಎರಡೂ ಕಡೆಯಿಂದಲೂ ಫಜೀತಿಗೆ ಒಳಗಾಗುವನು. (೨೬) ಕಾರಭಾರ, ಹಿರಿಯತನ ಅಥವಾ ವ್ಯಾಪದ ಕಾರ್ಯ ನಿಭಾಯಿಸಲಿಕ್ಕೆ ಆಗದಿದ್ದರೆ ಸಮೂಹವನ್ನು ಹತೋಟಿಯಲ್ಲಿ ಇಟ್ಟುಕೊಳ್ಳುವ ಕಲೆಯು ಇವನಲ್ಲಿ ಇರದಿದ್ದರೆ ಇಂಥವನಿಂದ ಕಾರ್ಯಮಾಡಲಿಕ್ಕೂ ಆಗುವದಿಲ್ಲ. ಸ್ವಸ್ಥ ಕೂಡ್ರಲಿಕ್ಕೂ ಆಗುವದಿಲ್ಲ. ಇಂಥವರಿಗೆ ಏನನ್ನಬೇಕು ? ಮೊದಲು ಜನತೆಯನ್ನು ಒಂದು ಕಡೆ ಅರ್ಥಾತ್ ತನ್ನ ಕಡೆಗೆ ತಿರುಗಿಸಿಕೊಳ್ಳುವದು ಕಠಿಣವಿರುವದು. ಒಂದುವೇಳೆ ಇದು ಸಾಧಿಸಿ ಜನ ತಿರುಗಿ ನಿಮ್ಮ ಕಡೆ ಬಂದ ಮೇಲೆ ಅವರನ್ನು ಸ್ಥಿರವಾಗಿ ಸಂಬಾಳಿಸಿಕೊಂಡು ಹೋಗುವದು ಇನ್ನೂ ಕಠಿಣವಾದ ಕೆಲಸವಿರುವದು. ಯಾರಿಗೆ ಈ ಎರಡೂ ಸಾಧಿಸುವದಿಲ್ಲವೋ ಮತ್ತು ಆ ತರಹದ ಸಾಮರ್ಥ್ಯವಿಲ್ಲವೋ ಅಂಥವರು ಲೋಕಕಲ್ಯಾಣದ ಭಾನಗಡಿಯಲ್ಲಿ ಅದರಲ್ಲೂ ಜನರನ್ನು ಒಂದುಗೂಡಿಸುವ ಭಾನಗಡಿಯಲ್ಲಿ ಬೀಳಬಾರದು. (೨೭) ನಾಶ ಹೊಂದುವಂಥ ಉಪಾಧಿಗಳನ್ನೆಲ್ಲ ಬದಿಗೆ ಸರಿಸಿ ಬಿಡಬೇಕು. ಪರಮಾರ್ಥ ಸಾಧನೆಮಾಡುತ್ತ ತಮ್ಮ ಆಯುಷ್ಯವನ್ನು ಸಾರ್ಥಕಗೊಳಿಸಬೇಕು. ಮತ್ತು ದೇಶದಲ್ಲಿ ಪರಿಭ್ರಮಣ [ಸಂಚಾರ] ಮಾಡುತ್ತ ತಮ್ಮ ಜೀವನವನ್ನು ಸಾರ್ಥಕಗೊಳಿಸುತ್ತ ಜೀವನವನ್ನು ಎಲ್ಲಿಯಾದರೂ ಕಳೆಯಬೇಕು. (೨೮)

ಪರಿಭ್ರಮಣ ಕರೀನಾ । ದುಸರ್‍ಯಾಚೇ ಕಾಂಹೀ ಚ ಸೋಸೀನಾ ।
ತರೀ ಮಗ ಉದಂಡ ಯಾತನಾ । ವಿಕಲ್ಪಾಚೀ ॥೨೯॥

ಆತಾ ಹೇ ಆಪಣಾಚಿಪಾಸೀ । ಬರೇ ವಿಚಾರಾವೇ ಆಪಣಾಸೀ ।
ಅನಕೂಳ ಪಡೇಲ ತೈಸೀ । ವರ್ತಣೂಕ ಕರಾವೀ ॥೩೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಯೆತ್ನ ನಿರೂಪಣ' ನಾಮ ಸಮಾಸ ಸಪ್ತಮ

ಯಾವ ಮಹಂತನು ಪರಿಭ್ರಮಣ [ಸಂಚಾರ, ಪ್ರವಾಸ] ಮಾಡುವದಿಲ್ಲವೋ ಇನ್ನೊಬ್ಬರ [ಎರಡನೆಯವರ] ಸಲುವಾಗಿ ಕೆಲವೊಂದು ಕಷ್ಟವನ್ನು ಸಹಿಸುವದಿಲ್ಲವೋ [ಸೋಸುವದಿಲ್ಲವೋ] ಅವನು ಹೆಸರು ಪಡೆಯಲಾರನು. ಇವನು ಸಂಶಯದ ವಿಷದಲ್ಲಿ ದೇಹ ಬುದ್ಧಿಯ ಗೊಂದಲದಲ್ಲಿ ಬಿದ್ದು ಬಹಳ ಕಷ್ಟಪಡಬೇಕಾಗುವದು. ಇವನ [ಮಹಂತನ] ದೇಹ ಬುದ್ಧಿಯು ಅಹಂ ಬಲವಂತವಿರುವದರಿಂದ ಅನೇಕ ಪ್ರಕಾರದ ಮಾನಸಿಕ ಸಂಘರ್ಷ ತಿಕ್ಕಾಟದಿಂದ ಬಹಳ ಹೈರಾಣವಾಗುವನು. (೨೯) ತಾತ್ಪರ್ಯವೇನಂದರೆ ಇದೆಲ್ಲವೂ ನಿಮ್ಮ ಮೇಲೆಯೇ ಅವಲಂಬಿಸಿರುವದು. ಗಂಭೀರ-ಖಂಭೀರ ತನದಿಂದ ನೀವೇ ನಿಮ್ಮೊಳಗೆ ಇದರ ಬಗ್ಗೆ ವಿವೇಕ ವಿಚಾರಮಾಡಬೇಕು. ಮತ್ತು ಯೋಗ್ಯ-ಅನುಕೂಲ ಅನಿಸಿದ ಪ್ರಕಾರ ನಡೆಯುವ ನಿರ್ಧಾರಮಾಡಬೇಕು. (೩೦)

ಶ್ರೀ ದಾಸಬೋಧದ ಹತ್ತೊಂಭತ್ತನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದೊಳಗಿನ
"ಯತ್ನ ನಿರೂಪಣ"ವೆಂಬ ಏಳನೆಯ ಸಮಾಸವು ಮುಗಿದುದು.

● ●

ದಶಕ. ಏಕೋನವಿಂಶತಿ : ಸಮಾಸ. ಅಷ್ಟಮ : ಉಪಾಧಿಲಕ್ಷಣ ನಿರೂಪಣ (ಸುಡಿ ೩೦)

॥ಶ್ರೀರಾಮ ಸಮರ್ಥ॥ ಸೃಷ್ಟೀ ಮಧೇ ಬಹು ಲೋಕ।
ಪರಿಭ್ರಮಣೇ ಕಳೇ ಕೌತುಕ।
ನಾನಾ ಪ್ರಕಾರೀಚೆ ವಿವೇಕ। ಆಡಳೋಂ ಲಾಗತೀ ॥೧॥

ಕಿತೀ ಪ್ರಪಂಚೀ ಜನ। ಅಖಂಡ ವೃತ್ತಿ ಉದಾಸೀನ।
ಸುಖ ದುಃಖೇ ಸಮಾಧಾನ। ದಂಡಳೇನಾ ॥೨॥

## ದಶಕ ೧೯. ಸಮಾಸ ೮. ಉಪಾಧಿ ಲಕ್ಷಣ ನಿರೂಪಣ (ನುಡಿ ೪೦)

ಹಿಂದಿನ ಸಮಾಸದಲ್ಲಿಯ ವಿಷಯವನ್ನೇ ಈ ಸಮಾಸದಲ್ಲಿಯೂ ಬೇರೆ ಬೇರೆ ಆಧಾರ ಪ್ರಮಾಣಗಳ ಕಡೆಗೆ ಲಕ್ಷ್ಯಕೊಟ್ಟು ಮಂಡಿಸಿದ್ದಾರೆ. ಜಗತ್ತಿನಲ್ಲಿ ಕಂಡುಬರುವದೇನೆಂದರೆ ಒಬ್ಬ ಮನುಷ್ಯನಿಗೆ ಒಂದು ವಿಷಯ-ಕಾರ್ಯ-ಕೆಲಸವು ಸಹಜವಾಗಿ ಬರುವದು. ಅದೇ ಇನ್ನೊಬ್ಬನಿಗೆ ಅಭ್ಯಾಸ ಬಲದಿಂದ ಸಾಧ್ಯಮಾಡಿಕೊಳ್ಳಬೇಕಾಗುವದು. ಲೋಕ ಸಂಗ್ರಹ ಕಾರ್ಯದ ವಿಷಯವೂ ಕೂಡಾ ಹೀಗೆಯೇ ಇರುವದು. ಒಬ್ಬನಿಗೆ ಸ್ವಾಭಾವಿಕವಾಗಿಯೇ ಉಪಾಧಿ [ವ್ಯಾಪ, ಪ್ರಪಂಚ, ಆಪತ್ತಿ] ಗಳನ್ನು ಸಂಬಾಳಿಸಲಿಕ್ಕೆ ಬರುವದು. ಆದರೆ ಅದೇ ಇನ್ನೊಬ್ಬನಿಗೆ ಇದನ್ನು ಸಂಬಾಳಿಸಲಿಕ್ಕೆ ಬರುವದಿಲ್ಲ. ಯಾರಿಗೆ ಉಪಾಧಿಗಳನ್ನು ಸಂಬಾಳಿಸಲಿಕ್ಕೆ ಆಗುವದಿಲ್ಲವೋ ಅಂಥವರು ವ್ಯಾಪವನ್ನು ಹೆಚ್ಚಿಸುವ-ಬೆಳೆಯಿಸುವ ಭಾನಗಡಿಯಲ್ಲಿ ಬೀಳಬಾರದು. ಇಂಥವರು ವ್ಯಾಪವನ್ನು ಹೆಚ್ಚಿಸ ಹೋದರೆ ಇವರೇ ಮೊದಲಿಗೆ ಕಷ್ಟಕ್ಕೊಳಗಾಗುವರು. ಆ ನಂತರ ಜನರೂ ಕಷ್ಟಕ್ಕೊಳಗಾಗುವರು. ಜಗತ್ತಿನಲ್ಲಿ ಯಾರ ಅಧಿಕಾರ ಏನಿರುವದೆಂಬುದು ಹೇಳಲಿಕ್ಕೆ ಬರುವದಿಲ್ಲ. ಪ್ರಪಂಚದಲ್ಲಿದ್ದುಕೊಂಡು ಉದಾಸೀನ ವೃತ್ತಿಯಿಂದ ಮತ್ತು ಅಲಿಪ್ತತನದಿಂದ ನಡೆಯುವ ಜನರು ಕಣ್ಣಿಗೆ ಬೀಳುವರು. ಇಂಥವರಲ್ಲಿ ಕ್ವಚಿತ್ತಾಗಿ ಒಬ್ಬ ಅಸಾಮಾನ್ಯನಾದ ಭಾರೀ ತೇಜಸ್ವೀ ಮನುಷ್ಯನು ಕಣ್ಣಿಗೆ ಬೀಳುವನು. ಇವನಲ್ಲಿ ಮಹಂತನ ಲಕ್ಷಣಗಳು ಅತ್ಯಂತ ಸಹಜ ರೀತಿಯಲ್ಲಿ ನೆಲೆಸಿರುವವು. ಉಪಾಧಿ ಅಂದ ಮೇಲೆ ಇದರಲ್ಲಿ ಕೆಲವು ಒಳ್ಳೆಯವು - ಕೆಲವು ಕೆಟ್ಟವು ಇರತಕ್ಕವುಗಳೇ ಸರಿ ಇವನ್ನು ಗುರುತಿಸಿ ನಾವು ನಡೆಯಬೇಕು. ಜನರಲ್ಲಿ ಹೇಗೆ ಪರಮಾರ್ಥವನ್ನು ಜಾಗ್ರತಗೊಳಿಸಬೇಕೋ ಅದರಂತೆ ಆ ರೀತಿಯಲ್ಲಿ ಈ ಅಸಾಮಾನ್ಯ ಮನುಷ್ಯನು ಜನರನ್ನು ಜಾಗ್ರತಗೊಳಿಸುವನು. ಆದರೆ ಈ ಯಾವತ್ತೂ ಖಟಪಟಿಯಲ್ಲಿ ನಾವು ಅಂತರಾತ್ಮನ ಅನುಸಂಧಾನವನ್ನು ಮರೆಯಬಾರದು. ನಮ್ಮ ನಿಶ್ಚಲ ಸ್ಥಿತಿಯನ್ನು ನಾವು ವಿವೇಕದಿಂದ ಸಂಬಾಳಿಸಿಕೊಂಡಿರಬೇಕು. ಜಗತ್ತಿನಲ್ಲಿಯ ಯಾವತ್ತೂ ಆಗುಹೋಗುವ ಸಂಬಂಧಗಳು ಋಣಾನುಬಂಧದ ಮೇಲೆ ಅವಲಂಬಿಸಿರುವವು. ಆದ್ದರಿಂದ ಸಂಯೋಗ [ಸಂಪರ್ಕ, ಸೇರುವದು, ಸಂಬಂಧ] ವಿಯೋಗಗಳ ಪರಿಣಾಮವು ಮನಸ್ಸಿನ ಮೇಲೆ ಆಗಗೊಡಬಾರದು. ಅದಕ್ಕಾಗಿ ಕೆಲವೊಂದು ಕಾಲ ಜನರ ಸಂಗಡ ವ್ಯಾಪಮಾಡಬೇಕು. ಮತ್ತು ಕೆಲವೊಂದು ಕಾಲ ತಪ್ಪದೇ ಏಕಾಂತ ವಾಸ ಮಾಡಬೇಕು. ಈ ಪ್ರಕಾರವಾಗಿ ನಡೆದರೆ ಅನುಸಂಧಾನವು ಉಳಿದು ಸಮಾಧಾನವು ಕಾಯಂ ಆಗಿ ಉಳಿಯುವದು. ಸಮಾಧಾನವೇ ಜಗತ್ತಿನಲ್ಲಿಯ ಸರ್ವೋತ್ತಮ ವಸ್ತುವಾಗಿರುವದು.

### ದಶಕ ೧೯. ಸಮಾಸ ೮. ಉಪಾಧಿ ಲಕ್ಷಣ ನಿರೂಪಣ (ನುಡಿ ೩೦)

ಯಾವತ್ತೂ ದೇಶಗಳಲ್ಲಿ ಸಂಚರಿಸಿದ್ದಾದರೆ ಅನೇಕ ಉತ್ತಮೋತ್ತಮರಾದ ಜನರು ದೃಷ್ಟಿಗೆ ಬೀಳುವರು. ಇವರ ಸುಗುಣಗಳು ಸ್ವಾಭಾವಿಕವಾದವುಗಳಾಗಿರುವವು. ಕೆಲವರಿಗೆ ಮಾತ್ರ ಇದರ ಸಲುವಾಗಿ ಅಭ್ಯಾಸಮಾಡಬೇಕಾಗುವದು. ಯಾವ ಮಹಂತನಿಗೆ ಜನರ ಜೊತೆಗೆ ಕೂಡಿಕೊಂಡು ಹೋಗಲಿಕ್ಕೆ ಆಗುವದಿಲ್ಲವೋ ಅಂಥವನು ಲೋಕ ಸಂಗ್ರಹದ ಪ್ರಯತ್ನಕ್ಕೆ [ಖಟಪಟಿಗೆ] ಬೀಳಬಾರದು. ಲೋಕ ಸಂಗ್ರಹಮಾಡುವ ಕಲೆಯ ಕೆಲವು ಅಂಶಗಳು ಹುಟ್ಟುಗುಣದ ಜೊತೆಗೆ ಬಂದಿರುವವು. ಇವು ಅಭಿಜಾತವಿರುವವು. ಎಂದು ಶ್ರೀ ಸಮರ್ಥರು ಸೂಚಿಸಿದ್ದಾರೆ : ಜಗತ್ತಿನಲ್ಲಿ ಎಷ್ಟೆಷ್ಟೋ ಜನರು ಉತ್ತಮರಾದವರು ಇರುವರು. ನಾವು ಯಾವತ್ತೂ ದೇಶದ ಪ್ರವಾಸಮಾಡಿದೆವೆಂದರೆ ಆಗ ಜಗತ್ತಿನ ಜನರ ಮತ್ತು ಇತರ ವಿಷಯದ ಕೌತುಕವನ್ನು ನೋಡಲು ಸಿಗುವದು. ಸಂಚಾರದಲ್ಲಿ ಬೇರೆ ಬೇರೆ ಪ್ರಕಾರದ ವಿಚಾರಗಳೂ ಕೂಡಾ ನಮ್ಮ ದೃಷ್ಟಿಗೆ ಬೀಳುವವು. (೧) ಪ್ರಪಂಚದಲ್ಲಿ ಇರುವಂಥ ಕೆಲವೊಂದು ಜನರು ಹೇಗೆ ಕಂಡುಬರುವರೆಂದರೆ- ಇವರ ವೃತ್ತಿಯು ನಿರಂತರವೂ ಉದಾಸೀನ ಅಂದರೆ ಅಲಿಪ್ತ [ನಿರ್ಲಿಪ್ತ] ಇರುವದು. ಸುಖದಿಂದಾಗಲೀ ಅಥವಾ ದುಃಖದಿಂದಾಗಲೀ ಇವರ ಸಮಾಧಾನವು ಹೊಯ್ದಾಡುವದಿಲ್ಲ [ಡಳಮಳಿಸುವದಿಲ್ಲ]. ಮತ್ತು ಭಂಗವಾಗುವದಿಲ್ಲ. (೨)

ಸ್ವಭಾವೇ ಚಿ ನೇಮಕ ಬೋಲತೀ । ಸಹಜ ಚಿ ನೇಮಕ ಚಾಲತೀ ।
ಅಪೂರ್ವ ಬೋಲಣ್ಯಾಚೀ ಸ್ಥಿತೀ । ಸಕಳಾಸಿ ಮಾನೇ ॥೩॥

ಸಹಜ ಚಿ ತಾಳಜ್ಞಾನ ಯೇತೇ । ಸ್ವಭಾವೇ ಚಿ ರಾಗಜ್ಞಾನ ಉಮಟತೇ ।
ಸಹಜ ಚಿ ಕಳತ ಜಾತೇ । ನ್ಯಾಯೆ ನೀತಿಲಕ್ಷಣ ॥೪॥

ಯೇಖಾದಾ ಆಡಳೇ ಗಾಜೀ । ಸಕಳಲೋಕ ಅಖಂಡ ರಾಜೀ ।
ಸದಾ ಸರ್ವದಾ ಆವಡೀ ತಾಜೀ । ಪ್ರಾಣಿಮಾತ್ರಾಚೀ ॥೫॥

ಚುಕೋನ ಉದಂಡ ಆಡಳತೇ । ಭಾರೀ ಮನುಷ್ಯ ದೃಷ್ಟೀಸ ಪಡತೇ ।
ಮಹಂತಾಚೇ ಲಕ್ಷಣಸೇ ವಾಟತೇ । ಅಕಸ್ಮಾತ ॥೬॥

ಐಸಾ ಆಡಳತಾ ಲೋಕ । ಚಮತ್ಕಾರೇ ಗುಣಗ್ರಾಹಿಕ ।
ಕ್ರಿಯಾ ಬೋಲಣೇ ನೇಮಕ । ಪ್ರತ್ಯಯಾಚೇ ॥೭॥

ಸಕಳ ಅವಗುಣಾಮಧೇ ಅವಗುಣ । ಆಪಲೇ ಅವಗುಣ ವಾಟತೀ ಗುಣ ।
ಮೋಠೇ ಪಾಪ ಕರಂಟಪಣ । ಚುಕೇನಾ ಕೀ ॥೮॥

ಘಾಳೇ ಚಿ ಕಾಮ ಹೋತೇ ಸದಾ । ಜೇ ಜಪಲ್ಯಾನೇ ನವ್ಹೇ ಸರ್ವದಾ ।
ತೇಥೇ ಸೀಳಪೇಚಾಚೀ ಆಪದಾ । ಆಡಳೇಚಿನಾ ॥೯॥

ಯೇಕಾಸೀ ಅಭ್ಯಾಸಿತಾ ನಯೇ । ಯೇಕಾಸೀ ಸ್ವಭಾವೇಚಿಯೇ ।
ಐಸಾ ಭಗವಂತಾಚಾ ಮಹಿಮಾ ಕಾಯೆ । ಕೈಸಾ ಕಳೇನಾ ॥೧೦॥

ಮೋಠೀ ರಾಜಕಾರಣೇ ಚುಕತೀ । ರಾಜಕಾರಣೇ ಮೇಢಾ ಲಾಗತೀ ।
ನಾನಾ ಚುಕೀಚೀ ಫಜೀತೀ । ಚಹುಕಡೇ ॥೧೧॥

ಯಾಕಾರಣೇ ಚುಕೋ ನಯೇ । ಮ್ಹಣಿಜೆ ಉದಂಡ ಉಪಾಯೆ ।
ಉಪಾಯಾಚಾ ಅಪಾಯೆ । ಚುಕತಾ ಹೋಯೆ ॥೧೨॥

ಕಾಯೆ ಚುಕಲೇ ತೇ ಕಳೇನಾ । ಮನುಷ್ಯಾಚೇ ಮನ ಚಿ ವಳೇನಾ ।
ಖವಳಲಾ ಅಭಿಮಾನ ಗಳೇನಾ । ದೋಹೀಕಡೇ ॥೧೩॥

ಅವಘೇ ಘಡ ಚಿ ನಾಸತೀ । ಲೋಕಾಚೀ ಮನೇ ಭಂಗತೀ ।
ಕೋಠೇ ಚುಕತೇ ಯುಕ್ತೀ । ಕಾಂಹೀ ಕಳೇನಾ ॥೧೪॥

ಇವರ ಸ್ವಭಾವವು ಸಂಯಮ ಉಳ್ಳದ್ದು ಮನೋನಿಗ್ರಹ ಉಳ್ಳದ್ದು ಇರುವದು. ಎಷ್ಟು ಅವಶ್ಯಕವೋ ಅಷ್ಟೇ ಇವರು ಮಾತನಾಡುವರು. ಮತ್ತು ಯಾವಾಗಲೂ ಸಂಯಮದಿಂದಲೇ ನಡೆಯುವರು. ಇವರು ಮಾತ ನಾಡುವ ರೀತಿ ಹೇಗಿರುವದೆಂದರೆ ಇವರು ಮಾತನಾಡಿದ ಮಾತು ಯಾವತ್ತರಿಗೂ ಪಟಾಯಿಸುವದು. (೩) ಒಬ್ಬ ಮನುಷ್ಯನು ಎಂಥವನಿರುವನೆಂದರೆ ಇವನಲ್ಲಿ ತಾಳಜ್ಞಾನ ಅತ್ಯಂತ ಸಹಜವಾಗಿರುವದು. ಇನ್ನೊಬ್ಬನಲ್ಲಿ ರಾಗ ಜ್ಞಾನವು ಒಮ್ಮೆಲೇ ತನ್ನಷ್ಟಕ್ಕೆ ತಾನೇ ಪ್ರಕಟವಾಗುವದು. ಮತ್ತೊಬ್ಬನಲ್ಲಿ ನೀತಿ ಮತ್ತು ನ್ಯಾಯ ಇವುಗಳ ಲಕ್ಷಣಗಳು ಯಾರೂ ಹೇಳದೇ ಸಹಜವಾಗಿ ಲಕ್ಷ್ಯಕ್ಕೆ ಬರುವವು. (೪) ಇನ್ನೊಬ್ಬ ಎಂಥವನು ಕಂಡುಬರುವನೆಂದರೆ ಇವನ ಪರಾಕ್ರಮ ನೋಡಿ ಇವನ ಮೇಲೆ ಎಲ್ಲರೂ ಸದಾ ಪ್ರಸನ್ನರಿರುವರು. ಇವನ ಮೇಲಿರುವ ಜನತೆಯ ಪ್ರೇಮವು ಯಾವಾಗಲೂ ಅತ್ಯಂತ ಶುದ್ಧವಿರುವದು. (೫) ಒಮ್ಮೊಮ್ಮೆ ಅಕಸ್ಮಾತ್ ಒಂದು ದೊಡ್ಡ ಭಂಡಾರವು ಕಾಣುವದು. ಅದರಂತೆ ಒಬ್ಬ ಭವ್ಯ ವಕ್ತಿ ದೃಷ್ಟಿಗೆ ಬೀಳುವನು. ಇವನನ್ನು ನೋಡಿದ ಕೂಡಲೇ ಮಹಂತನ ಅಥವಾ ನೇತಾ [ಮುಖಂಡ] ನಲ್ಲಿರಬೇಕಾದ ಎಲ್ಲ ಲಕ್ಷಣಗಳೂ ಇವನಲ್ಲಿ ಸ್ಪಷ್ಟವಾಗಿ ಗೋಚರಿಸುವವು. (೬) ಇಂಥ ಪುರುಷನಲ್ಲಿ ಆಶ್ಚರ್ಯಪಡುವಂಥ ವಿಲಕ್ಷಣ ಗುಣ ಗ್ರಹಣತೆ ಇರುವದೂ ಕೂಡಾ ಕಂಡುಬರುವದು. ಉತ್ತಮ ಗುಣಗಳನ್ನು ಕರಗತ ಮಾಡಿಕೊಳ್ಳುವ ಇವನ ಶಕ್ತಿಯನ್ನು ನೋಡಿ ಚಮತ್ಕಾರವೆನಿಸುವದು. ಇವನ ಮಾತುಗಳು ಮತ್ತು ನಡ ವಳಿಕೆಯು ಒಳ್ಳೇ ನಿಯಮಿತ, ನಿಶ್ಚಿತ ಮತ್ತು ಅನುಭವದವಾಗಿರುವವು. (೭) ತನ್ನಲ್ಲಿಯ ಅವಗುಣಗಳನ್ನು ತಾನೇ ಉತ್ತಮ ಗುಣಗಳೆಂದು ಅಂದುಕೊಳ್ಳುವದು ಮಾನವನಲ್ಲಿನ ಎಲ್ಲ ಅವಗುಣಗಳಲ್ಲಿಯ ಬಹುದೊಡ್ಡ ಅವಗುಣ ವಾಗಿರುವದು. ಹೀಗೆ ಅಂದುಕೊಳ್ಳುವದು ಬಹು ದೊಡ್ಡ ಪಾಪವಿರುವದು. ಇದರಿಂದ ಮನುಷ್ಯನ ದರಿದ್ರತನವು ತಪ್ಪುವದಿಲ್ಲ. [ಹೋಗುವದಿಲ್ಲ] (೮) ಒಬ್ಬ ಮನುಷ್ಯನ ತೇಜ ಶಕ್ತಿ ಹೇಗಿರುವದೆಂದರೆ ಇವನು ಯಾವುದೇ ಕೆಲಸ ವನ್ನು ಧೈರ್ಯದಿಂದ ಮಾಡಿಬಿಡುವನು. ಇದೇ ಕೆಲಸವನ್ನು ಬೇರೊಬ್ಬನು ಎಷ್ಟೇ ಜಪ್ಪಿಸಿಮಾಡಿದರೂ ಕೂಡಾ ಸರಿಯಾಗಿ ಮಾಡಲಿಕ್ಕೆ ಆಗುವದಿಲ್ಲ. ಧೈರ್ಯದಿಂದ ಕೆಲಸಮಾಡುವ ಮನುಷ್ಯನಿಗೆ ಒಳಗಿನಿಂದ ಒಂದು ತರಹ, ಹೊರಗಿನಿಂದ ಒಂದು ತರಹದ ಅಡಚಣೆ, ಲಬಾಡತನ, ಅಡ್ಡಿ ಆತಂಕ, ಇತ್ಯಾದಿಗಳು ಅಡ್ಡ ಬರುವದೇ ಇಲ್ಲ.(೯) ಒಬ್ಬನಿಗೆ ಯಾವದೊಂದು ಕಾರ್ಯ-ಕೆಲಸದ ಅಭ್ಯಾಸಮಾಡಿದ್ದರೂ ಸಹ ಅದನ್ನು ಅವನಿಗೆ ಸರಿಯಾಗಿ ಮಾಡಲಿಕ್ಕೆ ಬರುವದಿಲ್ಲ. ಇದನ್ನೇ ಇನ್ನೊಬ್ಬನು ಅತ್ಯಂತ ಸಹಜವಾಗಿ ಮಾಡಿ ಬಿಡುವನು. ಇದು ಭಗವಂತನ ಅಗಾಧ ಮಹಿಮೆಯೇ ಇರುವದು. ಆದರೆ ಇದರ ಪತ್ತೆಹತ್ತುವದಿಲ್ಲ. (೧೦) ಯಾವನೊಬ್ಬ ಮನುಷ್ಯನು ಒಂದು ಮಹತ್ವದ ದೊಡ್ಡ ರಾಜಕಾರಣವನ್ನು ಒಂದುವೇಳೆ ತಪ್ಪಿದ್ದಾದರೆ ಇದರಿಂದ ಎಲ್ಲ ಜನರೂ ಅಡಚಣೆಯಲ್ಲಿ ಸಿಕ್ಕಿಕೊಳ್ಳುವರು. ಇಂಥ ಅನೇಕ ತಪ್ಪುಗಳು ಮೇಲಿಂದ ಮೇಲೆ ಇವನಿಂದ ಆದದ್ದಾದರೆ ಎಲ್ಲ ಕಡೆಗೂ ಫಜೀತಿ ಆಗುವದು. ತೊಂದರೆ ಯಾಗುವದು. (೧೧) ಆದ್ದರಿಂದ ರಾಜಕಾರಣಿ ಮನುಷ್ಯರು ಸಹಸಾ ಎಂದೂ ತಪ್ಪುಮಾಡಬಾರದು. ಯಾಕೆಂದರೆ ಇವರಲ್ಲಿ ಅನೇಕ ಉಪಾಯಗಳು ರಾಜಕಾರಣದ, ಡಾವಪೇಚುಗಳು ಇರುವವು. ಇಂಥ ರಾಜಕಾರಣಿ ಮನುಷ್ಯನೇ ಅಲಕ್ಷ್ಯದಿಂದ ತಪ್ಪುಮಾಡಿದರೆ ಅವನ ಉಪಾಯಗಳೇ ತಿರುಗಿ ಅಪಾಯವಾಗಿ ಪರಿಣಮಿಸುವವು. (೧೨) ನಾವು ಯಾವುದರಲ್ಲಿ ತಪ್ಪಿದೆವು ಹೇಗೆ ತಪ್ಪಿದೆವು, ಅನ್ನುವದು ನಮಗೇ ತಿಳಿಯುವದಿಲ್ಲ. ಯಾರ ಕೂಡ [ಯಾವನ ಕೂಡ] ರಾಜಕಾರಣವು ಚಾಲೂ ಇರುವದೋ ಅವರ (ಆ ಮನುಷ್ಯನ) ಮನಸ್ಸು ಏನುಮಾಡಿದರೂ ನಮ್ಮ ಕಡೆಗೆ ತಿರುಗ ಲೊಲ್ಲದು. ನಮ್ಮ ಅಂಬೋಣಕ್ಕೆ ಅವನು ಮಾನ್ಯತೆ ಕೊಡುವದಿಲ್ಲವೆಂದಾಗ ಎರಡೂ ಕಡೆಯು ಪರಿಸ್ಥಿತಿಯಲ್ಲಿ ಆಗ ಎರಡೂ ಕಡೆಯವರ ಅಭಿಮಾನವು [ಒಣ ಅಭಿಮಾನವು] ಕ್ಷುಬ್ಧ [ಪ್ರಕ್ಷುಬ್ಧ] ಗೊಳ್ಳುವದು. ಇದು ಕಡಿಮೆ ಆಗುವದಿಲ್ಲ. (೧೩) ಇದರ ಪರಿಣಾಮವೇನಾಗುವದೆಂದರೆ ರಾಜಕಾರಣವು ಹಾಳಾಗುವದು, ಕೆಟ್ಟುಹೋಗುವದು. ಎರಡೂ ಕಡೆಯ ಜನತೆ ಅಸಂತುಷ್ಟರಾಗುವರು. ಅರ್ಥಾತ್ ಅಸ್ತವ್ಯಸ್ತವಾಗಿ ಜನತೆಯ ಮನಸ್ಸು ಭಂಗಗೊಳ್ಳುವದು. ಇಷ್ಟಾದರೂ ಕೂಡಾ ನಮ್ಮ ರಾಜಕಾರಣವು ಎಲ್ಲಿ ತಪ್ಪಿತು ಅನ್ನುವದು ಮಾತ್ರ ತಿಳವಳಿಕೆಗೆ ಬರುವದಿಲ್ಲ. [ತಿಳಿಯ ಲೊಲ್ಲದಾಗಿರುವದು]. (೧೪)

ನ್ಯಾಪೇವಿಣ ಆಟೋಪ ಕೇಲಾ । ತೋ ಅವಘಾ ಘಸರತ ಚಿ ಗೇಲಾ ।
ಅಕಲೇಚಾ ಬಂದ ನಾಹೀ ಫಾತಲಾ । ದುರೀದೃಷ್ಟೀನೇ ॥೧೫॥

ಯೇಖಾದೇ ಮನುಷ್ಯ ತೇ ಸಿಳೇ । ತ್ಯಾಚೇ ಕರಣೇ ಚಿ ಬಾವಳೇ ।
ನಾನಾ ವಿಕಲ್ಪಾಚೇ ಜಾಳೇ । ಕರೂನ ಟಾಕೀ ॥೧೬॥

ತೇ ಆಪಣಾಸೀ ಉಕಲೇನಾ । ದುಸರ್‍ಯಾಸ ಕಾಂಹೀಚ ಕಳೇನಾ ।
ನಾಚೆ ವಿಕಲ್ಪೇ ಕಲ್ಪನಾ । ಠಾಈ ಠಾಈ ॥೧೭॥

ತ್ಯಾ ಗುಪ್ತ ಕಲ್ಪನಾ ಕೋಣಾಸ ಕಳಾವ್ಯಾ।ಕೋಣೇ ಯೇಊನ ಆಟೋಪಾವ್ಯಾ।
ಜ್ಯಾಚ್ಯಾ ತ್ಯಾನೇ ಕರಾವ್ಯಾ । ಬಳಕಟ ಬುದ್ಧಿ ॥೧೮॥

ಜ್ಯಾಸೀ ಉಪಾಧೀ ಆವರೇನಾ । ತೇಣೇ ಉಪಾಧೀ ವಾಢವಾವೀನಾ ।
ಸಾವಚಿತ ಕರೂನಿಯಾ ಮನಾ । ಸಮಾಧಾನೇ ಅಸಾವೇ ॥೧೯॥

ಧಾಂವಧಾವ್ರೋ ಉಪಾಧೀ ವೇಷ್ಟೀ । ಆಪಣ ಕಷ್ಟೀ ಲೋಕ ಹೀ ಕಷ್ಟೀ ।
ಹೇ ಕಾಮಾ ನಯೇ ಗೋಷ್ಟೀ । ಕುಸಮುಸೇಚೀ ॥೨೦॥

ಲೋಕ ಬಹುತ ಕಷ್ಟೀ ಜಾಲಾ । ಆಪಣ ಹೀ ಅತ್ಯಂತ ತ್ರಾಸಲಾ ।
ವ್ಯರ್ಥ ಚಿ ಕೇಲಾ ಗಲ್ಬಲಾ । ಕಾಸಯಾಸೀ ॥೨೧॥

ಅಸೋ ಉಪಾಧೀಚೇ ಕಾಮ ಐಸೇ । ಕಾಂಹೀ ಬರೇ ಕಾಂಹೀ ಕಾಣೋಸೇ ।
ಸಕಳ ಸಮಜೋನ ಐಸೇ । ವರ್ತತಾ ಬರೇ ॥೨೨॥

ಲೋಕಾಪಾಸೀ ಭಾವಾರ್ಥ ಕೈಚಾ । ಆಪಣ ಜಗವಾವಾ ತಯಾಚಾ ।
ಸೇವಟ ಉಪಸಂಹರ ಕೋಣಾಚಾ । ಪಡೋ ಚಿ ನಯೇ ॥೨೩॥

ವಿವೇಕದಿಂದ ಪೂರ್ವ ಯೋಜನೆ ಮಾಡಿಕೊಳ್ಳದೆ ಒಂದುವೇಳೆ ಲೋಕ ಸಮುದಾಯವನ್ನು ಕೂಡಿಸಿದರೆ ಸರಿಯಾಗಿ ಅವರನ್ನು ಸಂಬಾಳಿಸುವದು ಆಗುವದಿಲ್ಲ. ಆಗ ಅಲ್ಲಿ ರಾಜಕಾರಣ ಮತ್ತು ಮುಖಂಡತ್ವವು ಕೆಳಗೆ ಸರಿಯುವದು-ಸಡಿಲಾಗುವದು. ಮೊದಲಿಗೆ ದೂರ ದೃಷ್ಟಿಯನ್ನು ಉಪಯೋಗಿಸಿ ವಿವೇಕದಿಂದ ಏನೇನು ಮಾಡುವದು ಅವಶ್ಯವಿರುವದೋ ಅದನ್ನು ಮಾಡದೇ ಇದ್ದದ್ದರಿಂದ ಕೆಲವೊಂದು ನಿಯಮ ನಿಬಂಧನೆಗಳನ್ನು ಹಾಕಿದ್ದರಿಂದ ಅವ್ಯವಸ್ಥಿತತನದ ಪ್ರಸಂಗ ಬರುವದು. [ಕರ್ತೃತ್ವ ಶಕ್ತಿ] ಇಲ್ಲದ ಹೊರತು ಇಂಥ ಖಟಾಟೋಪ ಮಾಡಿದರೆ ಆಗ ಇಂಥ ಪ್ರಸಂಗ ಬರುವದು.(೧೫) ರಾಜಕಾರಣವನ್ನು ವಿಶೇಷ ಚತುರ ಮನುಷ್ಯರೇ ಮಾಡಬೇಕು ವ್ಯಾಪವನ್ನು ಹಿಡಿತದಲ್ಲಿ ಇಟ್ಟುಕೊಳ್ಳುವ ಸಾಮರ್ಥ್ಯ ಇಲ್ಲದಿದ್ದವರು ವ್ಯಾಪವನ್ನು ನಿರ್ಮಾಣಮಾಡಲಿಕ್ಕೆ ಹೋಗಬಾರದು. ಉಪಾಧಿ ಅಂದ ಮೇಲೆ ಅದರಲ್ಲಿ ಕೆಲವು ಅನುಕೂಲವಿದ್ದರೆ ಕೆಲವು ಪ್ರತಿಕೂಲ ಇರತಕ್ಕವೇ ಆಗಿರುವವು. ಎಲ್ಲವನ್ನೂ ನಿಭಾಯಿಸಿಕೊಂಡು-ಸಂಬಾಳಿಸಿಕೊಂಡು ಮುಖಂಡರು ಜನರಲ್ಲಿ ಜಾಗೃತಿ ಉತ್ಪನ್ನಮಾಡಿ ಅದು ಕಾಯಂ ಟಿಕಾಯಿಸಿ ಉಳಿಯುವಂತೆ ಮಾಡುವದು ಅವಶ್ಯವು. ಒಬ್ಬ ಮನುಷ್ಯನು ಅಗದೀ ಏನೇನೋ ಹೇಗೇಗೋ ಇರುವನು. ಇವನು ತೇಜೋಹೀನ ಮತ್ತು ಕರ್ತೃತ್ವಹೀನನಿರುವನು. ಇವನು ಮಾಡುವದೆಲ್ಲವೂ ಹುಚ್ಚುತನದ್ದಾಗಿರುವದು. ಇವನು ತನ್ನ ಕೆಲಸದಲ್ಲಿ ಕೂಡಾ ಅನೇಕ ಪ್ರಕಾರದ ಘೋಟಾಳೆಯನ್ನು ನಿರ್ಮಾಣಮಾಡಿ ಇಡುವನು. (೧೬) ತಾನು ನಿರ್ಮಾಣ ಮಾಡಿದ ಘೋಟಾಳೆಯು ಜಾಲ, ತೊಡಕು. ಗೊಂದಲವನ್ನು ತನಗೇ ಬಿಡಿಸಲಿಕ್ಕೆ ಬರುವದಿಲ್ಲ. ಸುಗಮಗೊಳಿಸಲಿಕ್ಕೆ ಆಗುವದಿಲ್ಲ. ಎರಡನೆಯವರಿಗೆ ಇದರಲ್ಲಿ ಏನೂ ತಿಳಿಯುವದಿಲ್ಲ. ಮತ್ತು ಸಂಶಯದ ಹೊಟ್ಟೆಯಲ್ಲಿ ಕಲ್ಪನೆಗಳು ಹುಟ್ಟಿ ಸುಮ್ಮನೆ ಒದರಾಟ ಚೀರಾಟಗಳು ಗದ್ದಲವೆಬ್ಬಿಸುವವು. (೧೭) ಈ ತಿಳಿಗೇಡಿಯ ಅಂತರಂಗದಲ್ಲಿಯ ಗುಪ್ತ ಕಲ್ಪನೆಗಳು ಇತರೇ ಜನರಾರಿಗೂ ತಿಳಿಯುವದಿಲ್ಲ. ಎರಡನೆಯವರಾರೂ ಇವನನ್ನು ಪ್ರತಿಬಂಧಿಸಲಿಕ್ಕೆ (ಆವರಿಸಲಿಕ್ಕೆ) ಸಾಧ್ಯವಾಗುವದಿಲ್ಲ. ತನ್ನ ಬುದ್ಧಿಯನ್ನು ತಾನೇ ದೃಢಪಡಿಸಿಕೊಂಡು ಬುದ್ಧಿಯನ್ನು ಸ್ಥಿರಪಡಿಸಿಕೊಂಡು ನಿರ್ಧಾರದಿಂದ ಮನದಲ್ಲಿ ಉಂಟಾಗುವ-ಪುಟಿದೇಳುವ ಕುಕಲ್ಪನೆಗಳನ್ನು ತಡೆಯಬೇಕು. ಹೊಡೆದೋಡಿಸಬೇಕು. (೧೮) ಯಾರಿಗೆ ದೊಡ್ಡ ಕಾರ್ಯದ ಉಪಾಧಿಯನ್ನು ಆವರಿಸಲಿಕ್ಕೆ-ಹಿಡಿತದಲ್ಲಿಡಲಿಕ್ಕೆ ಆಗುವದಿಲ್ಲವೋ ಅಂಥವರು ದೊಡ್ಡ ಕಾರ್ಯಗಳ ಜವಾಬುದಾರಿಯನ್ನು ಹೊತ್ತುಕೊಂಡು (ಅಂಗೀಕರಿಸಿ) ಉಪಾಧಿಯನ್ನು ಬೆಳಸಬಾರದು. ತಮ್ಮಷ್ಟಕ್ಕೆ ತಮ್ಮ ಮನವನ್ನು ಸ್ವಸ್ಥಗೊಳಿಸಿ ಸಮಾಧಾನದಿಂದ ಇವರು ಕಾಲವನ್ನು ಕಳೆಯಬೇಕು. (೧೯) ಯಾವುದೊಂದು ಕೆಲಸವನ್ನು ಅವಸರದಿಂದ ಗಡಿಬಿಡಿಮಾಡಿ ಹೇಗೇಗೋ ಮಾಡಿ ಬಿಟ್ಟಿದ್ದಾದರೆ ತಾವು ಕಷ್ಟಕ್ಕೊಳಗಾಗುವರಲ್ಲದೇ ಜನತೆಯೂ ಕಷ್ಟಪಡುವಂತಾಗುವದು. ಈ ರೀತಿಯಿಂದ ಅಸ್ತವ್ಯಸ್ತ ಕೆಲಸಮಾಡುವದು ಒಳಿತಲ್ಲ. (೨೦) ತಿಳಿಯದ ಒಬ್ಬ ಮನುಷ್ಯನ ಕೆಲಸದಿಂದ ಜನತೆಗೆ ಬಹಳ ಕಷ್ಟವಾಯಿತು. ಮತ್ತು ಇವನೂ ಸಹಿತ ಅತ್ಯಂತ ತೊಂದರೆಗೊಂಡು ಬಿಟ್ಟನು. ಅಂದ ಮೇಲೆ ತಿಳುವಳಿಕೆ ಇಲ್ಲದವರು ಸುಮ್ಮನೇ ಕೆಲಸ ಕಾರ್ಯದ ಧಡಪಡಿಕೆ, ಗಡಬಿಡಿ, ಯಾಕೆಮಾಡಬೇಕಾಗಿತ್ತು. ಎಂದು ಅನ್ನಬೇಕಾಗುವದು.(೨೧) ಇರಲಿ, ಉಪಾಧಿ ಅಂದ ಮೇಲೆ ಅದರ ಕೆಲಸವು ಹೀಗೆ ಇರತಕ್ಕದ್ದೇ ಸರಿ. ಇದರಲ್ಲಿ ಕೆಲವೊಂದು ಒಳ್ಳೆಯವು. ಹಾಗೆಯೇ ಕೆಲವೊಂದು ಗೊಂದಲದವು. ನ್ಯೂನತೆಯವು ಇರತಕ್ಕವೇ, ಆದ್ದರಿಂದ ಇದೆಲ್ಲವನ್ನು ತಿಳಿದುಕೊಂಡು ನಡೆಯುವದು ಯಾವಾಗಲೂ ಯೋಗ್ಯವಾದದ್ದು. (೨೨) ಜನತೆಯಲ್ಲಿ ಶ್ರದ್ಧೆ ಮತ್ತು ನಿಷ್ಠೆ ಅನ್ನುವದು ಅಷ್ಟೊಂದು ಇರುವದಿಲ್ಲ. ಮುಖಂಡನು (ನೇತಾರ, ಮಹಂತನು) ಇದನ್ನು ನಿರ್ಮಾಣ ಮಾಡಿ ಜಾಗೃತಗೊಳಿಸಿ ಸ್ಥಿರಪಡಿಸಬೇಕಾಗುವದು. ಕೊನೆಯ ಪಕ್ಷ ಯಾರದೂ ಫಜೀತಿ ಆಗಬಾರದು ಅನ್ನುವದರ ಬಗ್ಗೆಯಾದರೂ ಕಾಳಜಿವಹಿಸಬೇಕು. (೨೩)

ಅಂತರಾತ್ಮ್ಯಾಕಡೆ ಸಕಳ ಲಾಗೇ । ನಿರ್ಗುಣೀ ಹೇ ಕಾಂಹೀ ಚ ನ ಲಗೇ ।
ನಾನಾ ಪ್ರಕಾರೀಚೆ ದಗೆ । ಚಂಚಳಾ ಮಧೇ ॥೨೪॥

ಶುದ್ಧ ವಿಶ್ರಾಂತೀಚೇ ಸ್ಥಳ । ತೇ ಯೇಕ ನಿರ್ಮಳ ನಿಶ್ಚಳ ।
ತೇಥೇ ವಿಕಾರಚಿ ಸಕಳ । ನಿರ್ವಿಕಾರ ಹೋತೀ ॥೨೫॥

ಉದ್ವೇಗ ಅವಘೇ ತುಟೋನಿ ಜಾತೀ । ಮನಾಸೀ ವಾಟೇ ವಿಶ್ರಾಂತೀ ।
ಐಸೀ ದುಲ್ಲಭ ಪರಬ್ರಹ್ಮಸ್ಥಿತೀ । ವಿವೇಕೇ ಸಾಂಭಾಳಾವೀ ॥೨೬॥

ಆಪಣಾಸ ಉಪಾಧೀ ಮುಳೀ ಚ ನಾಹೀ। ರುಣಾನುಬಂಧೇ ಮಿಳಾಲೇ ಸರ್ವಹೀ।
ಆಲ್ಯಾ ಗೇಲ್ಯಾಚೀ ಕ್ಷಿತೀ ನಾಹೀ । ಐಸೇ ಜಾಲೇ ಪಾಹಿಜೇ ॥೨೭॥

ಜೋ ಉಪಾಧೀಸ ಕಂಟಾಳಲಾ । ತೋ ನಿವಾಂತ ಹೋಊನ ಬೈಸಲಾ ।
ಆಟೋಪೇನಾ ತೋ ಗಲ್ಬಲಾ । ಕಾಸಯಾಸೀ ॥೨೮॥

ಕಾಂಹೀ ಗಲ್ಬಲಾ ಕಾಂಹೀ ನಿವಳ । ಐಸಾ ಕಂಠೀತ ಜಾವಾ ಕಾಳ ।
ಜೇಣೇ ಕರಿತಾ ವಿಶ್ರಾಂತೀ ವೇಳ । ಆಪಣಾಸೀ ಫಾವೇ ॥೨೯॥

ಉಪಾಧೀ ಕಾಂಹೀ ರಾಹಾತ ನಾಹೀ। ಸಮಾಧಾನಾಯೇವಢೇ ಥೋರ ನಾಹೀ।
ನರದೇಹೆ ಪ್ರಾಪ್ತ ಹೋತ ನಾಹೀ । ಕ್ಷಣಕ್ಷಣಾ ॥೩೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
"ಉಪಾಧೀ ಲಕ್ಷಣ ನಿರೂಪಣ" ನಾಮ ಸಮಾಸ ಅಷ್ಟಮ ॥

● ●

ರಾಜಕಾರಣವೇ ಇರಲಿ, ಅಥವಾ ಸಮಾಜ ಕಾರಣವೇ ಇರಲಿ ಇದೆಲ್ಲವೂ ಚಂಚಲ ಅಂತರಾತ್ಮನ ಪ್ರಾಂತದಲ್ಲಿಯೇ. ನಿಶ್ಚಲ ಪರಬ್ರಹ್ಮದಲ್ಲಿ ಎಲ್ಲವೂ ಶಾಂತವಿರುವದು. ನಾವು ವಿವೇಕದಿಂದ ಚಂಚಲವನ್ನು ದಾಟಿ ಹೋಗಿ ನಿಶ್ಚಲದಲ್ಲಿಗೆ ಮುಟ್ಟಿ ಅಲ್ಲಿ ವಿಶ್ರಾಂತಿ ಪಡೆಯಬೇಕು. ತಿಳಿದು ನೋಡಿದರೆ ವಾಸ್ತವಿಕವಾಗಿ ನಮ್ಮ ಮೂಲ ಸ್ವರೂಪವು ಉಪಾಧಿ ರಹಿತವಿರುವದು. ಉಪಾಧಿಯ ಮರ್ಜಿಯನ್ನು ಹಿಡಿಯಬೇಡಿರಿ, ಅದರ ಅಧೀನರಾಗಬೇಡಿರಿ, ಚಿಂತೆ ಮಾಡಬೇಡಿರಿ.ಅಂತೂ ಕೆಲವೊಂದುಕಾಲ ವ್ಯಾಪ ಮತ್ತು ಕೆಲವೊಂದುಕಾಲ ಸಂಪೂರ್ಣ ಏಕಾಂತ-ಈಪ್ರಕಾರ ನಿಮ್ಮ ವೇಳೆಯನ್ನು ಕಳೆಯಿರಿ: ಚಂಚಲ ಮಾಯೆಯಾದಲ್ಲಿ ಘಟಿಸುವ ಒಳಿತು ಕೆಡಕುಗಳೆಲ್ಲವೂ ಅಂತರಾತ್ಮನ ವರೆಗೆ ಹೋಗುವವು. ನಿರ್ಗುಣದೊಂದಿಗೆ ಇದರದಾವುದೂ ಎಳ್ಳಷ್ಟೂ ಸಂಬಂಧವಿಲ್ಲ. ಚಂಚಲದಲ್ಲಿ ಅನೇಕ ಪ್ರಕಾರದ ಭಯ, ಭೀತಿ, ಅನಿಷ್ಟಕಾರಕ ತೊಂದರೆಗಳು ಇರುವವು. ಬ್ರಹ್ಮನಲ್ಲಿ ಇದಾವದೂ ಇರುವದಿಲ್ಲ. (೨೪) ನಿರ್ಮಲ ಮತ್ತು ನಿಶ್ಚಲ ಪರಬ್ರಹ್ಮವೊಂದೇ ಒಂದು ಶುದ್ಧ ವಿಶ್ರಾಂತಿಯು, ಸಮಾಧಾನ ದೊರಕುವ ಸ್ಥಳವಿರುವದು. ಇಲ್ಲಿ ಚಂಚಲದಲ್ಲಿಯ ಎಲ್ಲ ವಿಕಾರಗಳೂ ಒಮ್ಮಿಂದೊಮ್ಮೆಲೇ ನಿರ್ವಿಕಾರವಾಗಿ ಹೋಗುವವು. (೨೫) ಇಲ್ಲಿ ಪರಬ್ರಹ್ಮದಲ್ಲಿ ಸರ್ವ ದುಃಖಗಳು ಇಲ್ಲದಾಗಿ ಹೋಗುವವು ಮತ್ತು ಮನಸ್ಸಿಗೆ ಒಮ್ಮೆಲೇ ವಿಶ್ರಾಂತಿ ಸಿಗುವದು. ಸಮಾಧಾನ ಪ್ರಾಪ್ತವಾಗುವದು. ಇದೇ ದುರ್ಲಭವಾಗಿರುವಂಥ ಪರಬ್ರಹ್ಮಸ್ಥಿತಿಯು. ಈ ಬ್ರಾಹ್ಮೀ ಸ್ಥಿತಿಯನ್ನು ವಿವೇಕದ ಬಲದಿಂದ ಸಂಬಾಳಿಸಬೇಕು, ಕಾಯಂ ಆಗಿ ಸ್ಥಿರಗೊಳಿಸಬೇಕು. (೨೬) ವಾಸ್ತವಿಕದಲ್ಲಿ ನಾವು [ಅಂದರೆ ಜೀವಾತ್ಮನು] ಮೂಲ ಆತ್ಮಸ್ವರೂಪವೇ ಇರುವೆವು. ನಮ್ಮ ಮೂಲದಲ್ಲಿ[ಸ್ವರೂಪದಲ್ಲಿ] ಯಾವುದೇ ಉಪಾಧಿಯೂ ಇರುವದಿಲ್ಲ. ನಿರುಪಾಧಿಕವಿರುವದು ನಮ್ಮ ಸುತ್ತುಮುತ್ತು ಕೂಡಿರುವ ಜನರು, ಆಪ್ತರು, ಬಂಧು ಬಳಗ, ಇಷ್ಟ ಮಿತ್ರರು, ಗೆಳೆಯ ಗೆಳತಿಯರು ಇವರೆಲ್ಲ ಋಣಾನುಬಂಧದಿಂದ ಪೂರ್ವ ಕರ್ಮಕ್ಕನುಸರಿಸಿ ಬರುವರು. ಕರ್ಮದ್ದೇನಾದರೂ ಕೊಡಕೊಳ್ಳುವ ವ್ಯವಹಾರವಿರುವದರಿಂದ ಇವರೆಲ್ಲ ನಮ್ಮಹತ್ತಿರ ಒಂದುಗೂಡಿರುವರು.ಅವರವರ ಕೊಡಕೊಳ್ಳುವ ವ್ಯವಹಾರವಾಯಿತೆಂದರೆ ಅವರೆಲ್ಲರೂ ನಮ್ಮನ್ನುಬಿಟ್ಟು ಹೊರಟು ಹೋಗುವರು.ಅದ್ದರಿಂದ ಬರ ಹೋಗುವವರ ಬಗ್ಗೆ ಚಿಂತೆ, ಕಾಳಜಿ ಮಾಡುವಕಾರಣವಿಲ್ಲವೆನ್ನುವ ಅರಿವನ್ನುತುಂಬಿಕೊಂಡು ನಮ್ಮವೃತ್ತಿಯನ್ನು ಅದಕ್ಕನುಸಾರವಾಗಿಮಾಡಿಕೊಳ್ಳುವದು. ಇಟ್ಟುಕೊಳ್ಳುವದು. ಅತ್ಯಂತ ಅವಶ್ಯವಿರುವದು. (೨೭) ಯಾರು ಈ ಉಪಾಧಿಗೆ ನಿಜವಾಗಿಯೂ ಬೇಸರ ಮಾಡಿಕೊಳ್ಳುವರೋ [ಇದು ನಶ್ವರವೆಂದು ತಿಳಿದು ಬೇಸರಪಡುವರೋ] ಅವರು ಇದನ್ನು ಬದಿಗೆ ಸರಿಸಿಬಿಡುವರು. ಆ ಮೇಲೆ ಇವರು ಅತ್ಯಂತ ನಿವಾಂತ [ಉಪಾಧಿರಹಿತ] ರಾಗಿ, ಶಾಂತರಾಗಿ ಸ್ವಸ್ಥ ಕೂಡ್ರುವರು. ಸಮಾಧಾನದ ಸುಖವನ್ನು ಅನುಭವಿಸುವರು. ಯಾರಿಗೆ ಉಪಾಧಿಯನ್ನು ಆವರಿಸಲಿಕ್ಕೆ ಆಗುವದಿಲ್ಲವೋ ಅಂಥವರು ಅದರ ಗಡಬಿಡಿಯಲ್ಲಿ ಸೇರುವದೇಕೆ? ಅರ್ಥಾತ್ ಸೇರಬಾರದು. (೨೮) ತಿಳಿದವರು ಕೆಲವೊಂದು ವೇಳೆ ಉಪಾಧಿಯ ಗಡಬಿಡಿಯಲ್ಲಿ ಭಾಗಿಯಾಗಿರಬೇಕು. ಮತ್ತು ಕೆಲವೊಂದು ವೇಳೆ ಅಗದೀ ಉಪಾಧಿ ರಹಿತರಾಗಿ ಇರಬೇಕು. ಈ ಪ್ರಕಾರ ನಾವು ವೇಳೆಯನ್ನು ಕಳೆಯುತ್ತ ಇರಬೇಕು. ಅಂದರೆ ನಿಮಗೆ ವಿಶ್ರಾಂತಿ ಹೊಂದುವದಕ್ಕೆ, ಏಕಾಂತ ಸೇವನದ ಸಮಾಧಾನಕ್ಕೆ ಶಾಂತಿಗೆ ಅವಕಾಶ ದೊರಕುವದು. (೨೯) ಜಗತ್ತಿನಲ್ಲಿಯ ಉಪಾಧಿಯು ನಮ್ಮ ಸಲುವಾಗಿಯೇನೂ ಹರಕತ್ತುಗೊಂಡು ನಿಲ್ಲುವದಿಲ್ಲ. ಅದು ಸರ್ವಕಾಲ ನಡೆಯುವಂಥದೇ ಇರುವದು. ಇರಲಿ, ಮನಸ್ಸಿನ ಸಮಾಧಾನದಂತಹ ಶ್ರೇಷ್ಠ ಮಾತು ಜಗತ್ತಿನಲ್ಲಿ ಇನ್ನೊಂದಿಲ್ಲ. ಮಾನವ ದೇಹ ಪುನಃ ಪುನಃ ಪ್ರಾಪ್ತವಾಗುವದಿಲ್ಲ. ಮುಕ್ತರಾಗಲು ಮಾನವನು ತಮ್ಮ ಸಮಾಧಾನವನ್ನು ಸಾಧಿಸಿಕೊಳ್ಳಬೇಕು. ಮತ್ತು ಅದನ್ನು ದೃಢಪಡಿಸಿ ಕಾಯಂ ಟಿಕಾಯಿಸಿ ನಿಲ್ಲುವಂತೆ ಮಾಡಿಕೊಳ್ಳಬೇಕು. (೩೦)

**ಶ್ರೀ ದಾಸಬೋಧದ ಹತ್ತೊಂಭತ್ತನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ "ಉಪಾಧಿ ಲಕ್ಷಣ ನಿರೂಪಣ"ವೆಂಬ ಹೆಸರಿನ ಎಂಟನೇ ಸಮಾಸವು ಮುಗಿದುದು.**

● ●

## ದಶಕ ೧೯. ಸಮಾಸ ೯. ರಾಜಕಾರಣ ನಿರೂಪಣ (ನುಡಿ ೩೧)

ಜಗತ್ತಿನಲ್ಲಿ ಅನೇಕ ಕಲೆಗಳು ಇರುವವು. ಇವುಗಳಲ್ಲಿ ಎರಡು ವಿಭಾಗ ಮಾಡಲಿಕ್ಕೆ ಬರುವದು. [೧ನೆಯ ವಿಭಾಗ] ನಿರ್ಜೀವ ಪದಾರ್ಥವನ್ನು ಕೈಯಲ್ಲಿ ತೆಗೆದುಕೊಂಡು ಅದರ ಮೇಲೆ ತಮ್ಮ ಕಲೆಯ ಸಂಸ್ಕಾರ (ತಿದ್ದು ಪಾಟು) ಮಾಡಿ, ಅದರಿಂದ ಸುಂದರ ಕಲಾಕೃತಿಯನ್ನು ನಿರ್ಮಾಣ ಮಾಡುವದು. ಉದಾಹರಣೆ. ಒಬ್ಬ ಶಿಲ್ಪಕಾರನು ಒಂದು ದೊಡ್ಡ ಕರಿಯ ಬಂಡಿಯನ್ನು (ಬಂಡಿಕಲ್ಲು ಇದು ಸೊಟ್ಟ-ಡೊಂಕು ಮತ್ತು ಹುರುಬರು

ಕಾದಂಥದನ್ನು) ತೆಗೆದುಕೊಂಡು ಅದರ ಮೇಲೆ ತನ್ನ ಉಳಿ, ಸುತ್ತಿಗೆ, ಕಲ್ಲುಕುಟುಕನ ಶಸ್ತ್ರಗಳಿಂದ ಆಘಾತ, ಪೆಟ್ಟು, ಹೊಡೆತ ಮಾಡುವನು. ಮತ್ತು ಕೆಲವು ದಿವಸಗಳ ನಂತರ ಆ ಕಲ್ಲಿನೊಳಗಿಂದ ಪಾಂಡುರಂಗನ ಮನೋಹರ ಮೂರ್ತಿಯನ್ನು ಸಾಕಾರಗೊಳಿಸುವನು. [೨ನೇ ಭಾಗ]. ಸಜೀವ ಪ್ರಾಣಿಯನ್ನು ಕೈಯಲ್ಲಿ ಹಿಡಿದುಕೊಂಡು ಇದರ ಮನದ ಮೇಲೆ ತನಗೆ ಬೇಕೆನಿಸಿದಂತೆ ಮತ್ತು ಬೇಕೆನಿಸಿದ ರೀತಿಯಲ್ಲಿ ಉತ್ತಮ ಸಂಸ್ಕಾರ ಮಾಡುವದು. ಮತ್ತು ಅವುಗಳ ಮನದಲ್ಲಿ ಮತ್ತು ಶರೀರದ ನಡವಳಿಕೆಯಲ್ಲಿ ಕೌತುಕ ನಿರ್ಮಾಣವಾಡುವಂತಹ ಬದಲಾವಣೆಯನ್ನು ಉಂಟು ಮಾಡುವದು. ಪ್ರಾಣಿಗಳ ಪೈಕಿ, ಆನೆ, ಕುದುರೆ, ನಾಯಿ, ಬೆಕ್ಕು, ಮಂಗ, ಕರಡಿ, ಮತ್ತು ಹುಲಿ, ಸಿಂಹದಂತಹ ಕ್ರೂರ ಹಿಂಸ್ರ ಪಶುವನ್ನೂ ಸಹಿತ ತಮ್ಮ ಕೈ ಕೆಳಗೆ ನಡೆಯಿಸಿಕೊಳ್ಳುವದು ಸುಲಭ ಕಾರ್ಯವಲ್ಲದಿದ್ದರೂ, ಕಠಿಣ ವಾದದ್ದೇನೂ ಅಲ್ಲ. ಆದರೆ ನಮ್ಮಂತೆಯೇ ವಿಚಾರ ಶಕ್ತಿ ಸಂಪನ್ನರಾಗಿರುವ ಮನುಷ್ಯರನ್ನು ನಮಗೆ ಬೇಕೆನಿಸಿದಂತೆ ನಡೆಯಿಸಿಕೊಂಡು ಅದರಂತೆ ನಡೆವ ನಮ್ಮೊಂದಿಗೆ ಅವರ ಮತ್ತು ನಮ್ಮ ಜೀವನದಲ್ಲಿ ಏಕತ್ರ ಕ್ರೀಡಾ ಮನೋ ಭಾವದ ಆನಂದವನ್ನು ನಿರ್ಮಾಣಮಾಡುವದು ಮಾತ್ರ ಅತಿಶಯ ಕಠಿಣವಿರುವದು. [ಮನುಷ್ಯರನ್ನು ತಿದ್ದುವದು ಬಹಳ ಕಠಿಣವಿರುವದು].ಸಮಾಜದಲ್ಲಿಯ ಭಿನ್ನ ಪ್ರಕೃತಿಯ, ಭಿನ್ನ ಮಟ್ಟದ, ಭಿನ್ನ ವಿಚಾರದ, ಭಿನ್ನ ತಿಳುವಳಿಕೆಯ ಜನರನ್ನು ಒಂದು ಕಡೆಗೆ ಏಕತ್ರ ಕೂಡ್ರಿಸಿ ಪ್ರತಿಯೊಬ್ಬರಿಂದ ಏನಾದರೂ ಕಾರ್ಯಮಾಡಿಸಿಕೊಳ್ಳುವ ಕಲೆಗೆ ಶ್ರೀ ಸಮರ್ಥರು ರಾಜಕಾರಣ ಎಂದು ಹೆಸರು ಕೊಟ್ಟಿರುವರು. ಇಂಥ ಅರ್ಥದ ರಾಜಕಾರಣದ ಬಗ್ಗೆಯೇ ಈ ಸಮಾಸದ ವಿಷಯವಿರುವದು. ಶ್ರೀ ಸಮರ್ಥರು ಹೇಳುವದೇನಂದರೆ, ಯಾರು ಜ್ಞಾನೀ ಇರುವರೋ ಅತ್ಯಂತ ನಿಷ್ಕಾಮಿ ರುವರೋ ಅದರಂತೆಯೇ ಯಾರು ಅಲಿಪ್ತ ವೃತ್ತಿಯುಳ್ಳವರಿರುವರೋ ಇಂಥವರಿಗೆ ಒಂದುವೇಳೆ ಸಮೂಹ ಜೀವನದ ಹಂಬಲ ಇದ್ದದ್ದೇ ಆದರೆ ಇವರು ಲೋಕ ಸಮುದಾಯ [ಜನ ಸಮೂಹ] ಕೂಡಿಸಬೇಕು. ಪ್ರಥಮದಲ್ಲಿ ಏಕಾಂತ ದಲ್ಲಿ ಕುಳಿತು ಯಾವ ಕೆಲಸಮಾಡಬೇಕು. ಆ ಕೆಲಸದ ಯೋಜನೆಯನ್ನು ಗುರುತಿಸಿ ವಿವರವಾಗಿ ತಯಾರಿಸಿಕೊಳ್ಳ ಬೇಕು. ಜನತೆಯಲ್ಲಿ ಬಹಳಷ್ಟು ಹೆಚ್ಚಿಚ್ಚಾಗಿ ಉಪಾಸನೆಯನ್ನು ಬೆಳಸಬೇಕು. ನಷ್ಟ ದುಷ್ಟರಿಗೆ, ನಷ್ಟ ದುಷ್ಟ ಎಂದು ಅಂದು ಅಣಕಿಸಬೇಡಿರಿ, ಅವರನ್ನು ಲಜ್ಜಿತರಾಗುವಂತೆ ಮಾಡಲಿಕ್ಕೆ ಹೋಗಬೇಡಿರಿ. ವಾಚಾಳ-ಬಡಬಡ್ಯಾನಿಗೆ ವಾಚಾಳನೆಂದು ಹೀಗಳೆಯಬೇಡಿರಿ. ದುರ್ಜನರನ್ನು ಸವಿಮಾತಿನಿಂದ ನಮ್ಮವರನ್ನಾಗಿ ಮಾಡಿ ಸನ್ಮಾರ್ಗಕ್ಕೆ ಹತ್ತುವಂತೆ ಮಾಡಬೇಕು. [ಚೋರ] ಕಳ್ಳನನ್ನೇ ಖಜಾನೆಯ ಮೇಲೆ, ಭಂಡಾರದ ಮೇಲೆ, ಮುಖ್ಯನನ್ನಾಗಿ ನಿಯಮಿಸಿರಿ. ಕೆಲವೊಂದು ಕಡೆಗೆ ಅನಿವಾರ್ಯವೆನಿಸಿದಲ್ಲಿ ಪರಸ್ಪರವಾಗಿ ಮುಳ್ಳಿನಿಂದ ಮುಳ್ಳು ತೆಗೆಯುವದನ್ನು ಮಾಡಿರಿ. ಆದರೆ ನೀವು ಮಾತ್ರ ಅಲಿಪ್ತರಾಗಿಯೇ ಉಳಿಯಬೇಕು. ನೀವು ಸ್ವತಃ ಕಷ್ಟಪಡಬೇಕು.ಕೆಲಸಮಾಡಬೇಕು. ಮತ್ತು ಇತರ ರಿಗೂ ಕಷ್ಟಪಡುವ ರೀತಿಯನ್ನು ಕಲಿಸಬೇಕು. [ಕಾಯಕ] ಕಾರ್ಯವನ್ನು ತಿಳಿಸಬೇಕು. ಎದುರಾಳಿಗೆ ಸರಿಯಾದ ಹುದ್ದೆಯನ್ನು ಭೆಟ್ಟಿಮಾಡಿಸಿ ಪ್ರಕರಣವನ್ನು ಮುಗಿಸಿಬಿಡಬೇಕು. ಸಮಾಜದಲ್ಲಿಯ ಗುಂಡಾಗಿರಿಯನ್ನು ಸಮೂಲ ವಾಗಿ ಮುರಿದೊಗೆಯಬೇಕು. ಈ ಪ್ರಕಾರದಿಂದ ಬಹಳ ಧೂರ್ತತನದಿಂದ ಮೈಯೆಲ್ಲ ಕಣ್ಣಾಗಿ ಮಾಡಿಕೊಂಡು ರಾಜಕಾರಣ ಮಾಡಬೇಕು. ಆದರೆ ತಾವು ಅಂದರೆ ಮಹಂತ-ಮುಖಂಡನು ಮಾತ್ರ ಎಲ್ಲದರಿಂದ ದೂರ ಉಳಿದು ಅಲಿಪ್ತತನದಿಂದ ಇರಬೇಕು.

ದಶಕ. ಏಕೋನವಿಂಶತಿ : ಸಮಾಸ. ನವಮ : ರಾಜಕಾರಣ ನಿರೂಪಣ (ಸುಡಿ ೩೧)

॥ಶ್ರೀರಾಮ ಸಮರ್ಥ॥ ಜ್ಞಾನೀ ಆಣೀ ಉದಾಸ। ಸಮುದಾಯಾಚಾ ಹವ್ಯಾಸ।
ತೇಣೇ ಅಖಂಡ ಸಾವಕಾಶ। ಯೇಕಾಂತ ಸೇವಾವಾ ॥೧॥

ಜೇಥೇ ತಜವೀಜಾ ಕಳತೀ। ಅಖಂಡ ಚಾಳಣಾ ನಿಘತೀ।
ಪ್ರಾಣೀ ಮಾತ್ರಾಚೀ ಸ್ಥಿತೀ ಗತೀ। ಕಳೋ ಯೇತೇ ॥೨॥

ಜರೀ ಹಾ ಚಾಳಣಾ ಚಿ ಕರೀನಾ। ತರೀ ಕಾಂಹೀಚ ಉಮಜೇನಾ।
ಹಿಸೆಬರ್‍ಯಾಡಾ ಚಿ ಪಾಹೀನಾ। ದಿವಾಳಖೋರ ॥೩॥

ಯೇಕ ಮಿರಾಸೀ ಸಾಧಿತೀ। ಯೇಕ ಸೀಧ್ಯಾ ಗಮಾವಿತೀ।
ವ್ಯಾಪಕಪಣಾಚೀ ಸ್ಥಿತೀ। ಐಸೀ ಆಹೇ ॥೪॥

ಜೇಣೇ ಜೇ ಜೇ ಮನೀ ಧರಿಲೇ। ತೇ ತೇ ಆಧೀ ಚ ಸಮಜಲೇ।
ಕೃತ್ರಿಮ ಅವಘೇಚಿ ಖುಂಟಲೇ। ಸಹಜ ಚಿ ಯೇಣೇ ॥೫॥

ಅಖಂಡ ರಾಹತಾ ಸಲಗೀ ಹೋತೇ। ಅತಿಪರಿಚಯೇ ಅವಜ್ಞಾ ಘಡತೇ।
ಯಾಕಾರಣೇ ವಿಶ್ರಾಂತೀ ತೇ। ಘೇತಾ ನಯೇ ॥೬॥

ಆಳಸೇ ಆಳಸ ಕೇಲಾ। ತರೀ ಮಗ ಕಾರಬಾರ ಚಿ ಬುಡಾಲಾ।
ಅಂತರಹೇತ ಚುಕತ ಗೇಲಾ। ಸಮುದಾಯಾಚಾ ॥೭॥

## ದಶಕ ೧೯. ಸಮಾಸ ೯. ರಾಜಕಾರಣ ನಿರೂಪಣ (ನುಡಿ ೩೧)

ಜ್ಞಾನಿಯಾಗಿರುವ ಉದಾಸ, ನಿರ್ವಿಕಾರಿ, ನಿಸ್ಸಂಗನಾದ ಮಹಂತನು ಲೋಕ ಸಮೂಹ ನಿರ್ಮಾಣ ಮಾಡಬೇಕು. ಏಕಾಂತದಲ್ಲಿ ಕುಳಿತು, ಕಾರ್ಯದ ಯೋಜನೆಯನ್ನು ಮಾಡಬೇಕು. ಆದರೆ ನಿಮ್ಮ ವ್ಯವಹಾರದಲ್ಲಿ ಕೃತ್ರಿಮಂತನ ಮಾತ್ರ ಇರಬಾರದು ಮತ್ತು ನಿಮ್ಮ ನಡವಳಿಕೆಯಲ್ಲಿ ಆಲಸ್ಯವು ಇರಬಾರದು: ತಿಳಿಯಿರಿ, ಒಬ್ಬ ಆತ್ಮ ಜ್ಞಾನಿಯು ಅತ್ಯಂತ ಅಲಿಪ್ತನೂ ನಿಃಸಂಗ ವೃತ್ತಿಯವನೂ ಆದ ಪುರುಷನಿದ್ದಾನೆ. ಇವನಿಗೆ ಒಂದು ವೇಳೆ ಲೋಕ ಸಮುದಾಯದ ಉತ್ಸಾಹ ಇದ್ದದ್ದಾದರೆ ಇವನು ಲೋಕ ಸಮೂಹ ನಿರ್ಮಾಣಮಾಡುವ ಮತ್ತು ಅದರ ಮುಖಂಡತ್ವವನ್ನು ವಹಿಸಿಕೊಂಡು ಕಾರ್ಯವನ್ನು ಭರದಿಂದ ಪ್ರಾರಂಭಮಾಡಬೇಕು. ಆದರೆ ಸಧ್ಯದ ಪರಿಸ್ಥಿತಿ, ಮುಂದಿನ ಸ್ಥಿತಿಯನ್ನು ಲಕ್ಷಿಸಿ ಯಾವ ಕಾರ್ಯಮಾಡಬೇಕು ಅದನ್ನು ಹೇಗೆ ಮಾಡಬೇಕು. ಅನ್ನುವದರ ಬಗ್ಗೆ ನಿಶ್ಚಯಪಡಿಸಿಕೊಳ್ಳುವ ಮೊದಲು ಅಖಂಡ ಏಕಾಂತ ವಾಸಮಾಡಬೇಕು. ಅಲ್ಲಿ ಆಲೋಚಿಸಬೇಕು. (೧) ಹೀಗೆ ಮಾಡಿದಾಗ ಯಾರಿಗೆ ಹೇಗೆ ಮಾಡಬೇಕು ಅನ್ನುವ ಯೋಜನೆ ಹೊಳೆಯುವದೋ ಮತ್ತು ಯಾರು ಇದರ ಬಗ್ಗೆ ಸತತ ವಿಚಾರವನ್ನು ಮಾಡುವರೋ ಅಂಥವರಿಗೆ ಅನೇಕ ಉಪಾಯಗಳು ಹೊಳೆಯುವವು. ಇವರಿಗೆ ಜನರ ಪರಿಸ್ಥಿತಿಯೂ ತಿಳಿಯುವದು. ಮತ್ತು ಇವರನ್ನು ಹೇಗೆ ಪ್ರಗತಿಯ ಕಡೆಗೆ ಒಯ್ಯಬೇಕು ಅನ್ನುವದೂ ಕೂಡಾ ಇವರ ಲಕ್ಷ್ಯದಲ್ಲಿ ಬರುವದು. (೨) ಈ ಪ್ರಕಾರದಿಂದ ಜನರ ಪರಿಸ್ಥಿತಿಯ ಬಗ್ಗೆ ಯಾರು ಒಂದೇ ಸವನೇ ವಿಚಾರಮಾಡುವದಿಲ್ಲವೋ ಅಂಥವರಿಗೆ ಇದರ ಬಗ್ಗೆ ಯಾವ ಉಪಾಯವೂ ಹೊಳೆಯುವದಿಲ್ಲ. ಒಬ್ಬ ದಿವಾಳಿ ತೆಗೆದ ಮನುಷ್ಯನು ಯಾವ ಪ್ರಕಾರ ಲೆಕ್ಕಪತ್ರಗಳನ್ನು ಚನ್ನಾಗಿ ತಪಾಸ ಮಾಡುತ್ತಿರುವದಿಲ್ಲವೋ ಅದರಂತೆಯೇ ಇಲ್ಲಿಯೂ ಆಗುವದು. (೩) ಒಬ್ಬ ಮನುಷ್ಯನು ವಿಚಾರದಿಂದ ಮತ್ತು ಜಾಣತನದಿಂದ ನಡೆದು ದುಡಿದು ಇನಾಮ ವತನ ಭೂಮಿ ಸೀಮಿ ಸಂಪಾದನೆ ಮಾಡುವನು. ಅದೇ ಇನ್ನೊಬ್ಬನು ಅವಿಚಾರದಿಂದ ಮತ್ತು ಮೂರ್ಖತನದಿಂದ ನಡೆದು ಹಿರಿಯರು ಗಳಿಸಿ ಬಿಟ್ಟುಹೋದ ವತನ-ವಾಡಿಯನ್ನು ಕಳೆದುಕೊಂಡು ಬರಿಗೈ ದಾಸನಾಗಿ ಕೂಡುವನು. ಎಲ್ಲ ಕಡೆಗೂ ಲಕ್ಷ್ಯ ಕೊಟ್ಟು ಯೋಗ್ಯ ರೀತಿಯಲ್ಲಿ ನಡೆಯದವರ ಸ್ಥಿತಿಯು ಹೀಗಿರುವದು. ವಿಚಾರವಂತರ ಸ್ಥಿತಿ ಹೀಗಿರುವದಿಲ್ಲ. (೪) ಎರಡನೆಯವರ ಮನದ ಹೇತು ಉದ್ದೇಶ ಯಾವದಿರುವದು ಎಂಬುದು ನಿಮಗೆ ಮೊದಲೇ ತಿಳಿದದ್ದಾದರೆ, ಆಗ ನಿಮಗೆ ಅವನ ಕಪಟತನವನ್ನು ತಡೆಯಲು ಸಹಜ ರೀತಿಯಲ್ಲಿ ತನ್ನಷ್ಟಕ್ಕೆ ತಾನೇ ಸಾಧ್ಯವಾಗುವದು. ಶ್ರೀ ಸಮರ್ಥರ ಸಮಾಜ ನೇತಾ ಮಹಂತನು ಜ್ಞಾನಿ ಇರುವದರಿಂದ ಇವನು ಪ್ರಾಣಿ ಮಾತ್ರರೆಲ್ಲರ ಅಂತರಂಗವನ್ನು ಗುರುತಿಸುವನು. ತಿಳಿಯುವನು. ಇದರಿಂದ ಯಾರ ಅಂತರಂಗದಲ್ಲಿ ಯಾವ ತರಹದ ಕಪಟವಿರುವದೆಂಬುದು ಸಹಜವಾಗಿಯೇ ಈ ಮಹಂತನಿಗೆ ತಿಳಿಯುವದು. (೫) ಒಂದೇ ಸ್ಥಳದಲ್ಲಿ ಸತತವೂ ಇರುವದರಿಂದ ಸಲಿಗೆ ಬೆಳೆಯುವದು. ಅತಿ ಪರಿಚಯದಿಂದಾಗಿ ಮಹಂತನ ಮಾನ ಗೌರವ, ಘನತೆ, ಅಲ್ಲಿ ಉಳಿಯುವದಿಲ್ಲ. ಅಥವಾ ಕಡಿಮೆ ಆಗುವದು. ಆದ್ದರಿಂದ ಮಹಂತನಾದವನು ಒಂದೇ ಸ್ಥಳದಲ್ಲಿ ಸ್ವಸ್ಥವಾಗಿ ವಿಶ್ರಾಂತಿ ಪಡೆಯುತ್ತ ಆರಾಮದಿಂದ ಇರಬಾರದು. (೬) ಆಲಸ್ಯದ ಮೇಲಿನ ಪ್ರೇಮದಿಂದ ಒಂದುವೇಳೆ ಕೆಲಸ ಕಾರ್ಯಗಳಲ್ಲಿ ಆಲಸ್ಯಮಾಡಿದ್ದಾದರೆ ಆಗ ಎಲ್ಲ ಕಾರ್ಯಭಾರವೂ ಮಹತ್ವದ ಕೆಲಸಗಳು ಮತ್ತು ಆಡಳಿತ ವ್ಯವಸ್ಥೆಯು ಹಾಳಾಗಿ ಹೋಗುವದು. ಲೋಕ ಸಮುದಾಯಕ್ಕೆ ಜನತೆಗೆ ಮಾರ್ಗದರ್ಶನಮಾಡಿ ಕಾರ್ಯರತ—ಕಾರ್ಯಮಗ್ನರಾಗುವಂತೆ ಮಾಡುವ ಮನದಲ್ಲಿಯ ಉದ್ದೇಶವು ಹಾಗೆಯೇ ಉಳಿದುಹೋಗುವದು. (೭)

ಉದಂಡ ಉಪಾಸನೇಚೀ ಕಾಮೇ । ಲಾವೀತ ಜಾವೀ ನಿತ್ಯನೇಮೇ ।
ಅವಕಾಶ ಕೈಂಚಾ ಕೃತ್ರಿಮೇ । ಕರಾವಯಾಸೀ ॥೮॥

ಚೋರ ಭಾಂಡಾರೀ ಕರಾವಾ । ಘೌಸರತಾಚ ಸಾಂಭಾಳಾವಾ ।
ಗೋವಾ ಮೂರ್ಖ ಪಣಾಚಾ ಕಾಢಾವಾ । ಹಳು ಹಳೂ ॥೯॥

ಯಾ ಅವಘ್ಯಾ ಪಹಿಲ್ಯಾಚ ಗೋಷ್ಟೀ । ಪ್ರಾಣೀ ಕೋಣೀ ನವ್ಹತಾ ಕಷ್ಟೀ ।
ರಾಜಕಾರಣೀ ಮಂಡಳ ವೇಷ್ಟೀ । ಚಹುಕಡೇ ॥೧೦॥

ನಷ್ಟಾಸೀ ನಷ್ಟ ಯೋಜಾವೇ । ವಾಚಾಳಾಸೀ ವಾಚಾಳ ಆಣಾವೇ ।
ಆಪಣಾವರೀ ವಿಕಲ್ಪಾಚೇ ಗೋವೇ । ಪಡೋಚ ನೇದೀ ॥೧೧॥

ಕಾಂಟೇನೇ ಕಾಂಟೇ ಝಾಡಾವೀ । ಝಾಡಾವೀ ಪರೀ ತೇ ಕಳೋ ನೇದಾವೀ ।
ಕಳಕಟೇ ಪಣಾಚೀ ಪದವೀ । ಅಸೋ ದ್ಯಾವೀ ॥೧೨॥

ನ ಕಳತಾ ಕರೀ ಕಾರ್ಯಜೇ ತೇ । ತೇ ಕಾಮ ತತ್ಕಾಳ ಚಿ ಹೋತೇ ।
ಗಚಗಚೇತ ಪಡತಾ ತೇ । ಚಮತ್ಕಾರೇ ನವ್ಹೇ ॥೧೩॥

ಐಕೋನೀ ಆವಡೀ ಲಾಗಾವೀ । ದೇಖೋನೀ ಬಳಕಟ ಚಿ ವ್ಹಾವೀ ।
ಸಲಗೀನೇ ಆಪಲೀ ಪದವೀ । ಸೇವಕಾಮಧೇ ॥೧೪॥

ಕೋಣೇಯೇಕ ಕಾಮ ಕರಿತಾ ಹೋತೇ । ನ ಕರಿತಾ ತೇ ಮಾಗೇ ಪಡತೇ ।
ಯಾ ಕಾರಣೇ ಢಿಲೇಪಣ ತೇ । ಅಸೋ ಚಿ ನಯೇ ॥೧೫॥

- ನಿತ್ಯನೇಮದಿಂದ ಮಾಡುವಂಥ ಉಪಾಸನೆಯ ಬಗೆಗಿನ ಬಹಳಷ್ಟು ಕೆಲಸಗಳನ್ನು ಜನ ಸಮುದಾಯದ ಬೆನ್ನಿಗೆ ಹಚ್ಚಿಬಿಡಬೇಕು. ಜನತೆ ಅದರಲ್ಲಿ ತೊಡಗಿದರೆಂದರೆ ಆಗ ಲಬಾಡಿ, ಲೇವಡಿ ಮಾಡಲಿಕ್ಕೆ ಯಾರಿಗೂ ಪುರಸೊತ್ತೇ ಆಗುವದಿಲ್ಲ. (೮) ಚೋರನನ್ನೇ ಕೋಶಾಧಿಕಾರಿ, ಅಥವಾ ಭಾಂಡಾರದ ಅಧಿಕಾರಿಯನ್ನಾಗಿ ಮಾಡಬೇಕು. ಮುಳ್ಳಿನಿಂದ ಮುಳ್ಳು ತೆಗೆಯುವ ಧೋರಣೆಯನ್ನು ಅನುಸರಿಸಬೇಕು, ಮೌನಿಗಳಾಗಿ ಮುಖ್ಯ ಕೆಲಸಗಳನ್ನು ಮಾಡಿ ಮುಗಿಸಬೇಕು. ಎಲ್ಲಿಯೂ ಯಾವುದರಲ್ಲಿಯೂ ಸಡಿಲುತನ ಢಿಲಾತನ ಇರಬಾರದು. ಅದಕ್ಕೆ ಆಸ್ಪದಕೊಡಬಾರದು. ಮುಖ್ಯ ಸೂತ್ರವನ್ನು ತಮ್ಮ ಕೈಯಲ್ಲಿ ತೆಗೆದುಕೊಂಡು ಜನತೆಯ ಕಡೆಯಿಂದ ಉತ್ತಮ ಕೆಲಸ ಕಾರ್ಯ ಮಾಡಿಸಿಕೊಳ್ಳಬೇಕು. ದುರ್ಜನರನ್ನು ಸುಧಾರಿಸಿ ನಿಮ್ಮವರನ್ನಾಗಿ ಮಾಡಿಕೊಳ್ಳಬೇಕು. ಹುಂಬ-ಶುಂಭರ ದುಷ್ಟತನವನ್ನು ನಿರ್ನಾಮಮಾಡಬೇಕು. ಹುದ್ದರಿಗೆ ಹುದ್ದರಿಯನ್ನು ಭೆಟ್ಟಿಮಾಡಿಸಬೇಕು. ನೀವು ಮಾತ್ರ ಗೊತ್ತಿಲ್ಲದವರಂತೆ ಅಲಿಪ್ತರಾಗಿಯೇ ಇರಬೇಕು. ಇದೆಲ್ಲವೂ ಧೂರ್ತತನದ-ಜಾಗರೂಕತನದ ಕೆಲಸವಿರುವದು : ಚೋರ – ತುಡುಗನನ್ನೇ ಭಾಂಡಾರದ ಮೇಲೆ ಮುಖ್ಯನನ್ನಾಗಿ ಮಾಡಿ ನಿಯಮಿಸಬೇಕು. ಒಂದುವೇಳೆ ಇವನು ತಪ್ಪಿದರೆ, ಜಾರಿದರೆ ಅಥವಾ ಒಂದುವೇಳೆ ಚೋರತನ ಮಾಡಿದ್ದಾದರೆ ಅವನಿಗೆ ಸವಿಮಾತಿನಿಂದ ತಿಳಿ ಹೇಳಿ, ಕ್ಷಮಿಸಿ, ಸಂಬಾಳಿಸಿಕೊಳ್ಳಬೇಕು. ಮೂರ್ಖತನದೊಳಗಿಂದ ಇವನನ್ನು ಸಾವಕಾಶವಾಗಿ ಹೊರತೆಗೆದು ಎತ್ತಿ ಹಿಡಿಯಬೇಕು-ಸುಧಾರಿಸಬೇಕು. (೯) ಈ ಎಲ್ಲ ವಿಷಯಗಳು ಕೆಲಸಗಳು ಪೂರ್ವದಿಂದಲೂ ನಡೆಯುತ್ತ ಬಂದಿರುವವು. ಒಟ್ಟಿನಲ್ಲಿ ಚೋರ ಮೊದಲಾದ ಯಾವುದೇ ಜನರನ್ನು ತ್ಯಾಜ್ಯರೆಂದು ತಿಳಿಯದೇ ಎಲ್ಲರನ್ನೂ ಸಮಾಜ ಕಾರ್ಯದಲ್ಲಿ ಬಹಳ ಜಾಣತನದಿಂದ [ಖೂಬಿಯಿಂದ] ತೊಡಗಿಸಬೇಕು. (೧೦) ಯಾರು ನಷ್ಟ ದುಷ್ಟರಿರುವರೋ ಅವರ ಜೊತೆಗೆ ಇನ್ನೊಬ್ಬ ನಷ್ಟ ದುಷ್ಟನನ್ನೇ ತಂದು ನಿಲ್ಲಿಸಬೇಕು. ಯಾವನು ವಾಚಾಳ, ಬಾಯಿಬಡಾಯಿಯವನಿರುವನೋ ಅವನ ಬಾಯಿಗೆ ಇನ್ನೊಬ್ಬ ವಾಚಾಳ, ಬಾಯಿಬಡಕನನ್ನೇ ತಂದು ನಿಲ್ಲಿಸಬೇಕು. ನಮ್ಮ ಬಗ್ಗೆ ಎರಡನೆಯವರ ಮನದಲ್ಲಿ ವಿಕಲ್ಪ ಅಥವಾ ಸಂಶಯ ನಿರ್ಮಾಣ ಉಂಟಾದೀತೆನ್ನುವಂತಹದೇನನ್ನೂ ನಾವು ಮಾಡಬಾರದು. ನಮ್ಮ ಅಲಿಪ್ತತನವನ್ನು ಕಾಯ್ದುಕೊಂಡು ನಾವು ನಡೆಯಬೇಕು. (೧೧) ಮುಳ್ಳಿನಿಂದ ಮುಳ್ಳನ್ನು ತೆಗೆಯಬೇಕು. ಅಂದರೆ ಒಬ್ಬ ದುರ್ಜನನಿಗೆ ಎದುರಾಗಿ ಇನ್ನೊಬ್ಬ ದುರ್ಜನನನ್ನು ತಂದು ನಿಲ್ಲಿಸಬೇಕು. ಆಗ ಸರಿಯಾದ ಬಂದೋಬಸ್ತು ಆಗುವದು. ಆದರೆ ಯಾರು ಇದನ್ನು ಮಾಡಿಸಿದರು ಅಥವಾ ಹೇಗಾಯಿತು ? ಅನ್ನುವದು ಮಾತ್ರ ಯಾರಿಗೂ ತಿಳಿಯಗೊಡಬಾರದು. ನಾವು [ಮಹಂತ ಮುಖಂಡನು] ಹುಚ್ಚರು ಅಥವಾ ತಿಳವಳಿಕೆ ಇಲ್ಲದ ಬುದ್ಧಿಹೀನರು ಮತ್ತು ಚತುರರಲ್ಲದವರು ಹೀಗೆ ನಮ್ಮ ಬಗ್ಗೆ ಇರುವಂಥ ಜನರ ತಿಳವಳಿಕೆಯನ್ನು ಹಾಗೇ ಕಾಯಂ ಇರಗೊಡಬೇಕು. ಅಂದರೆ ಬಡಿದಾಟ ಜಗಳ ಗಂಟತನಕ್ಕೆ ಅವಸರ ಇಲ್ಲದಂತೆ ಅರ್ಥಾತ್ ತಂಟೆಗೆ ಆಸ್ಪದವಿಲ್ಲದಂತೆ ಮಾಡುವವನಾಗಿರಬೇಕು. ಇವನೇ ಜಗಳಗಂಟನೆಂದು ಅನ್ನಿಸಿಕೊಳ್ಳಬಾರದು. ಅಲಿಪ್ತರಾಗಿಯೇ ಇರಬೇಕು ] (೧೨) ಜನರಲ್ಲಿ ಬಹಳಷ್ಟು ಪ್ರಚಾರ [ಬೊಬ್ಬಾಟ] ಮಾಡದೇ, ಅನ್ಯರಿಗೆ ತಿಳಿಯಗೊಡದೇ ಯಾವ ಕಾರ್ಯ ಮಾಡಿದರೂ ಅದು ಕೂಡಲೇ ಪೂರ್ಣವಾಗಿ ಬಿಡುವದು. ಜನರಲ್ಲಿ ಇದರಬಗ್ಗೆ ಬಹಳ ಮಾತನಾಡುವದರಿಂದ, ಒಣಮಾತಿನ ಚರ್ವಿತ ಚರ್ವಣದಿಂದ ಕಾರ್ಯದಲ್ಲಿಯ ಮಹತ್ವ ಮತ್ತು ನಾವಿನ್ಯತೆ ಇಲ್ಲದಂತಾಗುವದು. (೧೩) ಮಹಂತಮುಖಂಡನ ಕೀರ್ತಿಯನ್ನು ಕೇಳಿಯೇ ಇವನ ಬಗ್ಗೆ ಜನರ ಮನದಲ್ಲಿ ಅಪಾರ ಪ್ರೇಮ ಉತ್ಪನ್ನವಾಗಬೇಕು. ಇವನ ಪ್ರತ್ಯಕ್ಷ ದರ್ಶನದಿಂದ ಈ ಪ್ರೇಮವು ಮತ್ತಷ್ಟು ಹೆಚ್ಚಬೇಕು. ಗಟ್ಟಿಗೊಳ್ಳಬೇಕು. ಮತ್ತು ಇವನೊಂದಿಗೆ ಸಲಿಗೆ ಬೆಳೆದಂತೆ ವಿಶ್ವಾಸ ಕುದುರಿ ಇವನ ಸೇವಕ ಶಿಷ್ಯರಲ್ಲಿ ಅವನೂ ಒಬ್ಬನಾಗುವದರಲ್ಲಿ ಸಂಶಯವಿಲ್ಲ. ತಾನು [ಮುಖಂಡನು] ಜನತೆಯ ಸೇವಕನು ಎಂದು ಅನ್ನಿಸಿಕೊಳ್ಳುವಲ್ಲಿ ಭೂಷಣ, ಹೆಮ್ಮೆ ತಳೆಯಬೇಕು. (೧೪) ಕೆಲಸ ಯಾವುದೇ ಇರಲಿ, ಇದನ್ನು ಶ್ರದ್ಧೆಯಿಂದ ಮಾಡಿದ್ದಾದರೆ ಅದು ಪೂರ್ಣಗೊಳ್ಳುವದು. ಮಾಡದೇ ಇದ್ದರೆ ಅದು ಹಿಂದೆ ಬೀಳುವದು, ಆದ್ದರಿಂದ ಯಾವುದೇ ಕೆಲಸ ಎಂಥದೇ ಇರಲಿ ಅದನ್ನು ಮಾಡುವಾಗ ಸಡಿಲುತನ ಅಲಗರ್ಜಿತನವಿರಬಾರದು. (೧೫)

ಜೋ ದುಸರ್ಯಾವರೀ ವಿಶ್ವಾಸಲಾ । ತ್ಯಾಚಾ ಕಾರ್ಯಭಾಗ ಬುಡಾಲಾ ।
ಜೋ ಆಪಣ ಚಿ ಕಷ್ಟತ ಗೇಲಾ । ತೋ ಚಿ ಭಲಾ ॥೧೬॥

ಅವಘ್ಯಾಸ ಅವಘೇ ಕಳಲೇ । ತೇವ್ಹಾಂ ತೇ ರಿತೇ ಪಡಿಲೇ ।
ಯಾಕಾರಣೇ ಐಸೇ ಘಡಲೇ । ನ ಪಾಹಿಜೇ ಕೀ ॥೧೭॥

ಮುಖ್ಯ ಸೂತ್ರ ಹಾತೀ ಘ್ಯಾವೇ । ಕರಣೇ ತೇ ಲೋಕಾಕರವೀ ಕರವಾವೇ ।
ಕಿತ್ಯೇಕ ಖಲಕ ಉಗವಾವೇ । ರಾಜಕಾರಣಾ ಮಧೇ ॥೧೮॥

ಬೋಲಕೇ ಪಹಿಲವಾನ ಕಳಕಟೇ । ತಯಾಸೀ ಚ ಘ್ಯಾವೇ ಝುಟೇ ।
ದುರ್ಜನೇ ರಾಜಕಾರಣ ದಾಟೇ । ಐಸೇ ನ ಕರಾವೇ ॥೧೯॥

ಗ್ರಾಮಣ್ಯ ವರ್ಮೀ ಸಾಪಡಾವೇ । ರಗಡೂನ ಪೀಠ ಚಿ ಕರಾವೇ ।
ಕರೂನಿ ಮಾಗುತೀ ಸಾಂವರಾವೇ । ಬುಡಊ ನಯೇ ॥೨೦॥

ಖಳದುರ್ಜನಾಸೀ ಭ್ಯಾಲೇ ರಾಜಕಾರಣ ನಾಹೀ ರಾಖಿಲೇ ।
ತೇಣೇ ಅವಘೇ ಪ್ರಗಟ ಜಾಲೇ ಬರೇ ವಾಈಟ ॥೨೧॥

ಸಮುದಾವ ಪಾಹಿಜೇ ಮೋಠಾ । ತರೀ ತನಾವಾ ಅಸಾವ್ಯಾ ಬಳಕಟಾ ।
ಮಗ ಕರೂನೀ ತಾಠಾ । ಧರೂ ನಯೇ ॥೨೨॥

ದುರ್ಜನ ಪ್ರಾಣೇ ಸಮಜಾವೇ । ಪರೀ ತೇ ಪ್ರಗಟ ನ ಕರಾವೇ ।
ಸಜ್ಜನಾಪರೀಸ ಆಳವಾವೇ । ಮಹತ್ವ ದೇಊನೀ ॥೨೩॥

ಜನಾಮಧೇ ದುರ್ಜನ ಪ್ರಗಟ । ತರೀ ಮಗ ಅಖಂಡ ಖಟಖಟ ।
ಯಾಕಾರಣೇ ತೇ ವಾಟ । ಬುಝೂನಿ ಟಾಕಾವೀ ॥೨೪॥

ಗನೀಮಾಚ್ಯಾ ದೇಖತಾ ಫೌಜಾ । ರಣಶೂರಾಚ್ಯಾ ಫುರ್ಫುರಿತೀ ಭುಜಾ ।
ಐಸಾ ಪಾಹಿಜೆ ಕೀ ರಾಜಾ । ಕೈಪಕ್ಷೀ ಪರಮಾರ್ಥೀ ॥೨೫॥

ತಯಾಸ ದೇಖತಾ ದುರ್ಜನ ಧಾಕೇ । ಬೈಸವೀ ಪ್ರಚೀತೀಚೆ ತಡಾಖೇ ।
ಬಂಡಪಾಷಾಂಡಾಚೆ ವಾಖೇ । ಸಹಜ ಚಿ ಹೋತೀ ॥೨೬॥

ಯಾರು ಎರಡನೆಯವರ ಮೇಲೆ ಪೂರ್ಣ ವಿಶ್ವಾಸವಿಟ್ಟು ಬಾಳುವರೋ ಅವರ ಕಾರ್ಯಭಾಗ ನಾಶವಾಗುವದು. ಯಾರು ಸ್ವತಃ ಕಷ್ಟಪಟ್ಟು ಕೆಲಸಮಾಡುವರೋ ಅವರೇ"ಅಹುದು ಅಹುದು"ಎಂದು ಅನ್ನಿಸಿಕೊಳ್ಳುವರು. ಜನರು"ಈ ಮಹಂತ ನಮ್ಮವನೇ ನಮ್ಮೆಲ್ಲರ ಹಿತಚಿಂತಕನೇ ಇರುವನೆ"ಂದು ಅನ್ನುವರು. (೧೬) ಯಾವುದೊಂದು ಕಾರ್ಯದ ಬಗ್ಗೆ ಎಲ್ಲರಿಗೂ ಎಲ್ಲ ವಿಷಯಗಳೂ ಗೊತ್ತಾದರೆ ಆ ಕಾರ್ಯ ಹಿಂದೆ ಬೀಳುವದು. ಅಥವಾ ಅದು ಚನ್ನಾಗಿ ಆಗುವದಿಲ್ಲವಾದ್ದರಿಂದ ಹೀಗೆ ಆಗಬಾರದೆಂದು ಮೊದಲಿನಿಂದಲೇ ಕಾಳಜಿವಹಿಸಬೇಕು. ಯಾರ ಕಡೆಯಿಂದ ಕಾರ್ಯದಲ್ಲಿಯ ಯಾವ ಭಾಗ ಮಾಡಿಸಿಕೊಳ್ಳುವದಿರುವದೋ ಅದರ ಮಟ್ಟಿಗೆ ಸಾಕಾಗುವಷ್ಟು ಮಾಹಿತಿಯನ್ನು ಮಾತ್ರ ಅವರಿಗೆ ತಿಳಿಸಿಹೇಳಬೇಕು. ಯಾವತ್ತೂ ಕಾರ್ಯದ ಮಾಹಿತಿ ಮಾಡಿಕೊಡಬಾರದು. (೧೭) ಕಾರ್ಯದ ಮುಖ್ಯ ಸೂತ್ರವನ್ನು ಮಹಂತ ಮುಖಂಡನು ತನ್ನ ಕೈಯಲ್ಲಿ ಇಟ್ಟುಕೊಂಡಿರಬೇಕು. ಏನೇನು ಕಾರ್ಯಮಾಡುವದಿರುವದೋ ಅವನ್ನು ಜನತೆಯ ಕಡೆಯಿಂದ ಮಾಡಿಸಿಕೊಳ್ಳಬೇಕು. ತಮ್ಮ ಕಾರ್ಯದ ವ್ಯವಹಾರದಲ್ಲಿ ಬಹಳಷ್ಟು ಸಾಮಾನ್ಯ ಸಾದಾ ಜನರನ್ನು ಮುಂದಕ್ಕೆ ತರಬೇಕು. ಅವರಿಗೆ ಕಲಿಸಿ ಕಾರ್ಯಕರ್ತರಾಗುವಂತೆ ಮಾಡಬೇಕು. ಕೆಲವೊಂದು ಧೂರ್ತ ಜನರನ್ನು ಹಿಡಿದುಕೊಂಡಿರಬೇಕು. (೧೮) ಯಾರು ವಾಚಾಳರೂ, ಬಡಾಯಿಕೊಚ್ಚುವವರೂ, ಜಗಳಗಂಟರೂ ಬಲವಾನ-ದಾಂಡಿಗರೂ ಆದ ಪುಢಾರಿ ಇರುವರೋ ಅವರ ಗೂಡ ಹೋರಾಡಿ ಅವರನ್ನು ಪರಾಭವಗೊಳಿಸಬೇಕು. ದುರ್ಜನರಿಂದಾಗಿ ನಮ್ಮ ರಾಜಕಾರಣವು ಹದಗೆಟ್ಟು ಅಥವಾ ಹರಕತ್ತಾಗಿ ನಿಂತುಹೋಗುವಂತೆ ಆಗಬಾರದು. ಅಂಥವರಿಗೆ ಎಷ್ಟೂ ಆಸ್ಪದ ಕೊಡಬಾರದು. ಆಸ್ಪದ ದೊರೆಯದಂತೆ ಮಾಡಬೇಕು. (೧೯) ಗ್ರಾಮದಲ್ಲಿಯ ಕಿಡಗೇಡಿಗಳ ಮತ್ತು ಗುಂಡಾಗಳ [ಜನರ] ರಹಸ್ಯವನ್ನು ಶೋಧಿಸಿ ತೆಗೆಯಬೇಕು. ಮತ್ತು ದುಷ್ಟ ಗುಂಡಾ ಜನರನ್ನು ಹೈರಾಣಮಾಡಿ ನಿಃಸತ್ವಗೊಳಿಸಬೇಕು. ಇವರು ಪೂರ್ಣ ಮೆತ್ತಗಾದ ಮೇಲೆ ಸವಿಮಾತಿನಿಂದ ಜಾಣತನದಿಂದ ತಮ್ಮವರನ್ನಾಗಿ ಮಾಡಿಕೊಳ್ಳಬೇಕು. ನಿಮ್ಮಲ್ಲಿ ವಿಶ್ವಾಸ ಹುಟ್ಟುವಂತೆಮಾಡಿ ಅವರನ್ನೆಲ್ಲ ದಾರಿಗೆ ತರಬೇಕು. ಆದರೆ ಇವರನ್ನು ಸಂಪೂರ್ಣ ನಾಶಗೊಳಿಸಬಾರದು. (೨೦) ದುಷ್ಟ ದುರ್ಜನರ ಭಯದಿಂದ ಒಂದು ವೇಳೆ ನೀವು ನಿಮ್ಮ ರಾಜಕಾರಣ, ಸಮಾಜ ಕಲ್ಯಾಣ ಕಾರ್ಯ ಇವನ್ನು ಕಾಪಾಡಿಕೊಳ್ಳದಿದ್ದರೆ ರಾಜಕಾರಣದಲ್ಲಿಯ ಚಲೋ-ಕೆಟ್ಟದ್ದೆಲ್ಲವೂ ಬೈಲಿಗೆ ಬಂದು ನೀವು ಪತಕರಿಸಿದ ಕಾರ್ಯವು ನಾಶವಾಗುವದು. (೨೧) ಬಹಳ ದೊಡ್ಡ ಜನ ಸಮುದಾಯ ಮಾಡುವದಿದ್ದರೆ ಅದನ್ನು ಸಾವರಿಸಿಕೊಂಡು ಸುಧಾರಿಸಿಕೊಂಡು ಹೋಗುವಂತಹ ನಿಯಮ ನೀತಿ ಇವೂ ಕೂಡಾ ಅಷ್ಟೇ ಬಲಿಷ್ಠ [ಬಲವಾನ] ಇರಲಿಕ್ಕೇ ಬೇಕಾಗುವದು. ಕಠಿಣನಿಯಮ, ನೀತಿ ಇಡದೇ ಮಹಂತನು ಮಠವನ್ನು ಮಾಡಿ ಅಥವಾ ಮಾಡುವ ವ್ಯರ್ಥವಾದ ಅಭಿಮಾನವನ್ನು ಹಿಡಿಯಬಾರದು. (೨೨) ಸಮುದಾಯದಲ್ಲಿಯ ದುರ್ಜನ ಮನುಷ್ಯರನ್ನು ಮನದಲ್ಲಿಯೇ ಗುರುತಿಸಿ ಇಡಬೇಕು. ಆದರೆ ಇವರ ದುಷ್ಟತನವನ್ನು ಪ್ರಕಟಿಸಬಾರದು. ಇವರಿಗೂ ಕೂಡಾ ಸಜ್ಜನರಂತೆಯೇ ಮಹತ್ವಕೊಡಬೇಕು. ಇವರಿಗೂ ಕೂಡಾ ದೊಡ್ಡಿಸ್ತನವನ್ನು ಕೊಡಬೇಕು. ಮತ್ತು ತಮ್ಮವರನ್ನಾಗಿ ಮಾಡಬೇಕು.(೨೩) ದುರ್ಜನರನ್ನು ಜನರಲ್ಲಿ ಪ್ರಕಟಗೊಳಿಸಿದರೆ ಇದು ಒಂದು ಕಾಯಂ ಕಟಕಟಿಯೇ ಪ್ರಾರಂಭವಾಗುವದು. ಆದ್ದರಿಂದ ಈ ಮಾರ್ಗವನ್ನು ಸಂಪೂರ್ಣ ಬಂದು ಮಾಡಿಬಿಡಬೇಕು. (೨೪) ಶತ್ರುವಿನ ಸೈನ್ಯ ನೋಡಿದ ಕೂಡಲೇ ರಣಶೂರ ವೀರರ ಬಾಹುಗಳು ಸ್ಫುರಣಗೊಳ್ಳುವವು. ಇದರಂತೆ ರಾಜನಾದವನು ಪರಮಾರ್ಥದ ಕೈವಾರಿ ಬೆಂಬಲಿಗ ಆಗಿರಬೇಕು. (೨೫) ಈ ಬೆಂಬಲಿಗ ರಾಜನು ಹೇಗಿರಬೇಕೆಂದರೆ ಇವನನ್ನು ನೋಡಿ ದುರ್ಜನರಿಗೆ ಭಯವೆನಿಸಬೇಕು. ಈ ರಾಜನು ದುರ್ಜನರನ್ನು ನಿಃಸತ್ವಗೊಳಿಸಿ [ನರಮ್ ಮಾಡಿ] ಮೂಲೆಗುಂಪು ಮಾಡುವನೆಂಬ ಪ್ರಚೀತಿ ಇರಬೇಕು. ಅಂದರೆ ಆಗ ಬಂಡೆಬ್ಬಿಸುವವರು-ಗದ್ದಲ ಮಾಡುವವರು ಮತ್ತು ಪಾಖಂಡಿಗಳು ತಮ್ಮಷ್ಟಕ್ಕೆ ತಾವೇ ಸಹಜವಾಗಿ ನಾಮಶೇಷರಾಗಿ ಹೋಗುವರು. (೨೬)

ಹೇ ಧೂರ್ತಪಣಾಚೀ ಕಾಮೇ। ರಾಜಕಾರಣ ಕರಾವೇ ನೇಮೇ।
ಢಿಲೇಪಣಾಚ್ಯಾ ಸಂಭ್ರಮೇ। ಜಾಊ ನಯೇ ॥೨೭॥
ಕೋಣೇ ಚ ಪಡೇನಾ ದೃಷ್ಟೀ। ತಾಈ ತಾಈ ತ್ಯಾಚ್ಯಾ ಗೋಷ್ಟೀ।
ವಾಗ್ವಿಲಾಸೇ ಸಕಳ ಸೃಷ್ಟೀ। ವೇಧಿಲೀ ತೇಣೇ ॥೨೮॥
ಹುಂಬ್ಯಾಸೀ ಹುಂಬಾ ಲಾವೂನ ದ್ಯಾವಾ। ಟೊಣಪ್ಯಾಸ ಟೊಣಪಾ ಆಣಾವಾ।
ಲೌಂದಾಸಪುಢೇ ಉಭಾ ಕರಾವಾ। ದುಸರಾ ಲೌಂದ ॥೨೯॥
ಧಟಾಸೀ ಆಣಾವಾ ಧಟ। ಉತ್ಫಟಾಸಿ ಪಾಹಿಜೆ ಉತ್ಫಟ।
ಖಟನಟಾಸೀ ಖಟನಟ। ಅಗತ್ಯ ಕರೀ ॥೩೦॥
ಜೈಶಾಸ ತೈಸಾ ಜೇವ್ಹಾ ಭೇಟೇ। ತೇವ್ಹಾ ಮಜ್ಯಾಲಸೀ ಥಾಟೇ।
ಇತುಕೇ ಹೋತೇ ಪರೀ ಧನೀ ಕೋಣೇ। ದೃಷ್ಟೀಸ ನ ಪಡೇ ॥೩೧॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ರಾಜಕಾರಣ ನಿರೂಪಣ' ನಾಮ ಸಮಾಸ ನವಮ

ಇದೆಲ್ಲ ನಿಜವಾಗಿಯೂ ಬಹಳ ಚತುರತನದ, ಚಾಣಾಕ್ಷತನದ ಕೆಲಸವಿರುವದು. ಮಹಂತ ಮುಖಂಡರು ಅಗದಿ [ಅತ್ಯಂತ] ಸರಿಯಾಗಿ ವ್ಯವಸ್ಥಿತ ರೀತಿಯಲ್ಲಿ ರಾಜಕಾರಣ–ಸಮಾಜಕಾರಣ ಮಾಡಬೇಕು. ಸುಮ್ಮನೆ ಸಡಿಲು ತನ ಅಳಬುರುಕುತನದ ಭ್ರಮೆಗೆ ಒಳಗಾಗಿ ನಡೆಯಬಾರದು. ಒಣ ಡೌಲಿನಿಂದ ನಡೆಯಬಾರದು. (೨೭) ಇಂಥ ಚಾಣಾಕ್ಷ ಪುಢಾರಿ ಮಹಂತನನ್ನು ಪ್ರತ್ಯಕ್ಷ ಕಾಣಬೇಕೆಂದರೆ ಎಲ್ಲಿಯೂ ಬೇಗ ದೃಷ್ಟಿಗೆ ಬೀಳಬಾರದು. ಆದರೆ ಅಲ್ಲಲ್ಲಿ ಅಂದರೆ ಎಲ್ಲಿ ನೋಡಿದಲ್ಲಿ ಜನರು ಇವನ ಬಗ್ಗೆ ಚರ್ಚಾಮಾಡುತ್ತಿರಬೇಕು. ಹೀಗಾಗುವದು ಸರಿಯಾದದ್ದೇ ಇರುವದು. ಯಾಕೆಂದರೆ ಇವನು ತನ್ನ ಉತ್ತಮ ವಕ್ತೃತ್ವ ಮತ್ತು ಮೃದುಮಧುರ ಆದರೆ ಗಂಭೀರ ವಾಣಿಯಿಂದ ಸರ್ವ ಜನರನ್ನೂ ತನ್ನ ಕಡೆಗೆ ಆಕರ್ಷಣ ಮಾಡಿಕೊಳ್ಳುವನು. (೨೮) ಹುಂಬ–ಅವಿವೇಕಿ–ದಡ್ಡರಿಗೆ, ಅವರಿಗೆ ಸರಿಯಾದ ಹುಂಬ ಅವಿವೇಕಿ ದಡ್ಡರನ್ನೇ ತಂದು ನಿಲ್ಲಿಸಬೇಕು. ಮೂರ್ಖರಿಗೆ ಮೂರ್ಖರನ್ನು ಎದುರುನಿಲ್ಲಿಸಬೇಕು. ಅಳಬುರುಕ ತನದ ಲಬಾಡರಿಗೆ ಅಂಥವರನ್ನೇ ಎದುರು ನಿಲ್ಲಿಸಬೇಕು. ಒಬ್ಬ ಲಬಾಡನಿಗೆ ಒಬ್ಬ ಲಬಾಡನೇ ಎದುರುನಿಲ್ಲ ಬೇಕು. (೨೯) ಡೊಣಗ–ಟೊಣ್ಯಾರಿಗೆ ಎದುರಾಗಿ ಡೊಣಗರನ್ನೇ ತಂದು ನಿಲ್ಲಿಸಬೇಕು. ಉದ್ಧಟ, [ಉರ್ಮಟ]ರ ಎದುರಿಗೆ ಉದ್ಧಟರನ್ನೇ ತಂದು ನಿಲ್ಲಿಸಬೇಕು. ದುಷ್ಟ, ನಷ್ಟ, ದುರ್ಜನ, ಜಗಳಗಂಟರಿಗೆ ಅಂಥವರನ್ನೇ ತಂದು ಭೆಟ್ಟಿಮಾಡಿಸಬೇಕು. (೩೦) ಈ ಪ್ರಕಾರ ಸರಿ ಹುದ್ದುಗಳ ಭೆಟ್ಟಿಯಾಯಿತೆಂದರೆ ಆಗ ಸಭೆಗೆ ರಂಗು ಬರುವದು. ಆದರೂ ಈ ಎಲ್ಲ ರಾಜಕಾರಣದ ಸೂತ್ರಗಳನ್ನು ಅಲ್ಲಾಡಿಸುವ, ನಡೆಯಿಸುವ ಮಾಲಕನು ಮಾತ್ರ ಎಲ್ಲಿಯೂ ಕಂಡಿರಬಾರದು. ಇವನಾರೆಂಬುದು ಯಾರಿಗೂ ಗೊತ್ತಾಗಬಾರದು. (೩೧)

ಶ್ರೀ ದಾಸಬೋಧದ ಹತ್ತೊಂಭತ್ತನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ರಾಜಕಾರಣ ನಿರೂಪಣ"ವೆಂಬ ಹೆಸರಿನ ಒಂಭತ್ತನೇ ಸಮಾಸವು ಮುಗಿದುದು.

● ●

### ದಶಕ. ಏಕೋನವಿಂಶತಿ : ಸಮಾಸ. ದಶಮ : ವಿವೇಕಲಕ್ಷಣನಿರೂಪಣ (ನುಡಿ ೩೦)

॥ಶ್ರೀರಾಮ ಸಮರ್ಥ॥ ಜೇಥೇ ಅಖಂಡ ನಾನಾ ಚಾಳಣಾ ।
ಜೇಥೇ ಅಖಂಡ ನಾನಾ ಧಾರಣಾ ।
ಜೇಥೇ ಅಖಂಡ ರಾಜಕಾರಣಾ । ಮನಾಸೀ ಆಣಿತೀ ॥೧॥

ಸೃಷ್ಟೀ ಮಧೇ ಉತ್ತಮ ಗುಣ । ತಿತುಕೇ ಚಾಲೇ ನಿರೂಪಣ ।
ನಿರೂಪಣಾವಿಣ ಕ್ಷಣ । ರಿಕಾಮಾ ನಾಹೀ ॥೨॥

# ದಶಕ ೧೯. ಸಮಾಸ ೧೦. ವಿವೇಕ ಲಕ್ಷಣ ನಿರೂಪಣ (ನುಡಿ ೩೦)

ಲೋಕದ ಜನತೆಯನ್ನು ಜಾಗ್ರತಗೊಳಿಸಿ ಸನ್ಮಾರ್ಗಕ್ಕೆ ಹಚ್ಚುವದರ ಸಲುವಾಗಿ ಶ್ರೀ ಸಮರ್ಥರ [ಮಹಂತ] ಮುಖಂಡನು ಜನ ಸಮುದಾಯವನ್ನು ನಿರ್ಮಾಣಮಾಡುವನು. ಲೋಕದ ಜನತೆಯಲ್ಲಿ ಅನೇಕ ತರಹದವರಿರುವದರಿಂದ ಜನ ಸಮೂಹದ ನೇತೃತ್ವವಹಿಸಿದ ಮಹಂತನು ಒಂದೇ ರೀತಿಯಲ್ಲಿ ನಡೆದರೆ, ಅವನು ಸರಿಯಾದಿ ಯಶಸ್ವಿಯಾಗುವದಿಲ್ಲ. ಕಾರ್ಯ ಸುಗಮವಾಗಿ ನಡೆದು ಉತ್ತಮ ಫಲ ಬರಬೇಕಾದರೆ, ಅನೇಕ ಪ್ರಕಾರದ ಯುಕ್ತಿ ಪ್ರಯುಕ್ತಿಗಳನ್ನು ಉಪಯೋಗಿಸಬೇಕಾಗುವದು. ಇವುಗಳನ್ನು ಉಪಯೋಗಿಸಿ ಕಾರ್ಯಮಾಡುವದೇ ಮಹಂತನ ರಾಜಕಾರಣವಾಗಿರುವದು ಮಹಂತನ ರಾಜಕಾರಣವು ಆತನು ಯೋಜಿಸುವ ಕಾರ್ಯ ಪದ್ಧತಿಯ ಸಾರಾಂಶವೆನ್ನಬಹುದು. ಇದನ್ನೇ ಈ ಸಮಾಸದಲ್ಲಿ ಹೇಳಿರುವರು. ಶ್ರೀ ಸಮರ್ಥರು ಖಂಡ ತುಂಡವಾಗಿ ಆಗ್ರಹಪೂರ್ವಕ (ಬಜಾಯಿಸಿ) ಹೇಳುವದೇನಂದರೆ ಮಹಂತನು ಸ್ವತಃ ವೈರಾಗ್ಯಶೀಲನಿರಬೇಕು. ಇವನು ತನ್ನ ಆಶಾರಹಿತ ವೃತ್ತಿಯನ್ನು ಎಂದೂ ಬಿಡಬಾರದು. ಉಪಾಧಿಯಲ್ಲಿ ಇರುವ ಪ್ರಸಂಗ ಬಂದರೂ ಇವನು ತನ್ನ ಅಲಿಪ್ತತನವನ್ನು ಕಳೆದುಕೊಳ್ಳಬಾರದು. ಮಹಂತನು ಜನತೆಗೆ ಶ್ರವಣ, ಮನನ, ಕಲಿಸಬೇಕು. ಮತ್ತು ಅವರನ್ನು ವಿವೇಕವಂತರನ್ನಾಗಿ ಮಾಡಬೇಕು. ಇವನು ತನಗೆ ಬಂದದ್ದನ್ನೆಲ್ಲ ಜನರಿಗೆ ಕಲಿಸಿ ಕೊಡಬೇಕು. ಜನರಿಗೆ ಇದು ಕೂಡಲೇ ಬರದಿದ್ದರೆ ನಿರಾಶೆಹೊಂದ-ಬಾರದು. ಪರೋಪರಿಯಿಂದ ನಾನಾ ಯುಕ್ತಿಯಿಂದ ಕಲಿಸಬೇಕು. ಈ ಪ್ರಕಾರ ಮಾಡಿ ಬಹುಜನಸಮುದಾಯವನ್ನು ಜಾಣರನ್ನಾಗಿ ಮಾಡಬೇಕು. ಯಾವುದೇ ಕೆಲಸವಿರಲಿ, ಅದನ್ನು ಮಹಂತನು ಸ್ವತಃ ಮಾಡಬೇಕು. ಮತ್ತು ಆಮೇಲೆ ಜನರ ಕಡೆಯಿಂದಲೂ ಮಾಡಿಸಿಕೊಳ್ಳಬೇಕು, ಹೊಸ ಹೊಸ ಜನರಿಗೆ ಕಲಿಸುತ್ತಲೇ ಇರಬೇಕು. ಉಪಾಧಿಗೆ (ಬಾಹ್ಯ ಪಾಶ, ಪ್ರಪಂಚ, ಮಾಯಾ, ವಿಕಾರ, ಆಪತ್ತು ಅಡ್ಡಿಆಡಚಣೆ, ಚಳವಳಿ, ಜಗತ್ತಿಗೆ) ಬೇಸರಪಡಬಾರದು. ದೇಹಕ್ಕೆ ಸುಖ ಕೊಡಬಾರದು. ಸುಖದ ಚಟ ಹಚ್ಚಬಾರದು. ಆದರೆ ನಾನು ಅನ್ನುವ ಅಹಂದಿಂದ ಉಪಾಧಿಯಲ್ಲಿ ತೊಡಕಿಕೊಂಡು, ಆಡಕಾಯಿಸಿಕೊಂಡು ಬಂಧಿತರಾಗಬಾರದು. ಎಲ್ಲಿಯವರೆಗೆ ವ್ಯಾಪ ಸಂಬಾಳಿಸಲಿಕ್ಕೆ ಶಕ್ಯವಾಗುವದೋ ಅಲ್ಲಿಯವರೆಗೆ ಸಂಭಾಳಿಸಬೇಕು, ಆಗದಿದ್ದರೆ ಇದನ್ನು ಬಿಟ್ಟು ಹೊರಟು ಹೋಗಬೇಕು. ಕೀರ್ತಿ ಮತ್ತು ಸುಖ ಒಂದೇ ಕಡೆಗೆ ಇರಲಿಕ್ಕೆ ಶಕ್ಯವಿಲ್ಲ. ಈ ಸಂಸಾರವು ಅಶಾಶ್ವತವಿರುವದರಿಂದ ಇದು ಮೂಲದಲ್ಲಿಯೇ ನಾಶವಾಗುವಂತಾದ್ದಿರುವದು. ಇಂಥದರಲ್ಲಿಯೇ ವಿವೇಕದಿಂದ ಇದನ್ನು ಮಾಡಿದ್ದಾದರೆ ಇದರ ಆಸಕ್ತಿ ಕ್ಷೀಣವಾಗುತ್ತ ಹೋಗುವದು. ಜನ್ಮದ ಸಾರ್ಥಕ್ಯಗೊಳಿಸಲು ಶಕ್ಯವಾಗುವದು.

## ಸಮಾಸ ೧೦. ದಶಕ ೧೦. ವಿವೇಕ ಲಕ್ಷಣ ನಿರೂಪಣ (ನುಡಿ ೩೦)

ಲೋಕ ಸಂಗ್ರಹೀ ಮಹಂತನ ಸುತ್ತುಮುತ್ತು ಒಂದು ತರಹದ (ಪ್ರಕಾರದ) ವಿಶಿಷ್ಟ ವಾತಾವರಣ ಇರುವದು. ಇದರಲ್ಲಿ ಅಧ್ಯಾತ್ಮ, ಉಪಾಸನಾ ಮತ್ತು ರಾಜಕಾರಣ ಹೀಗೆ ಮೂರರ ಸಮಾವೇಶವಿರುವದು:- ಯಾವ ಸ್ಥಳದಲ್ಲಿ ರಾಜಕಾರಣ, ಸಮಾಜಕಾರಣ ಮಾಡುವಂಥ ಮಹಂತ ಮುಖಂಡನಿರುವನೋ ಆಸ್ಥಳದಲ್ಲಿ ಸತತವಾಗಿ ಅನೇಕ ವಿಷಯದ ಮೇಲೆ ವಿಚಾರ ವಿನಿಮಯಗಳು ನಡೆಯುತ್ತಿರುವವು. ಅಲ್ಲಿ ಅನೇಕ ಪ್ರಕಾರದ ವಿಷಯಗಳು ಏಕಾಗ್ರತೆಯಿಂದ ಮನದಲ್ಲಿ ಬಂದು ಹೋಗುವವು. ಅಥವಾ ಲಕ್ಷ್ಯದಲ್ಲಿ ಬರುವವು. ಮನಸ್ಸಿನ ಮೇಲೆ ಬಿಂಬಿಸುವವು. ಮತ್ತು ಅನೇಕ ಪ್ರಕಾರದ ರಾಜಕೀಯ ಸಮಸ್ಯೆಗಳ ಮೇಲೆ ವಿಚಾರ ವಿನಿಮಯ (ಮಂಥನ) ನಡೆಯುವದು. ಬ್ರಹ್ಮಾನುಭವದ ವಿಷಯವೇ ಅಲ್ಲಿ ಇರುವದಿಲ್ಲವೆಂದು ತಿಳಿಯಬಾರದು, ಇದರ ಚರ್ಚೆಯಂತೂ ವಿಶೇಷವಾಗಿ ಇದ್ದೇ ಇರುವದು (೧) ಜಗತ್ತಿನಲ್ಲಿ ಯಾವ ಯಾವ ಉತ್ತಮ ಗುಣಗಳಿರುವವೋ ಅವುಗಳನ್ನು ನಾವು ಹೇಗೆ ಕಲಿಯಬೇಕು ಅನ್ನುವದರ ಬಗ್ಗೆ ಇಲ್ಲಿ ಚರ್ಚೆ ನಡೆಯುವದು. ನಿಜ ಹೇಳುವದಾದರೆ ಇಲ್ಲಿ ಉತ್ತಮ ಗುಣಗಳ ವರ್ಣನೆ ಮತ್ತು ಭಗವಂತನ ನಿರೂಪಣ (ಕಥೆ, ವ್ಯಾಖ್ಯಾನ, ಬ್ರಹ್ಮಜ್ಞಾನದ ಬಗ್ಗೆ ವ್ಯಾಖ್ಯಾನ, ಪ್ರತಿಪಾದನೆ, ವರ್ಣನೆ, ವಿವೇಚನೆ, ಮತ್ತು ಚರ್ಚೆ (ಅದ್ವೈತ ಚರ್ಚೆ ಅಂದರೆ ನಿರೂಪಣ)ಯ ಹೊರತಾಗಿ ಒಂದು ಕ್ಷಣವೂ ಕೂಡಾ ವ್ಯರ್ಥ ಕಳೆಯುವದಿಲ್ಲ. (೨)

ಚರ್ಚಾ ಆಶಂಕಾ ಪ್ರತ್ಯೋತ್ತರೇ । ಕೋಣ ಖೋಟೇ ಕೋಣ ಖರೇ ।
ನಾನಾ ಮತಪ್ರತ್ಯೇ ಶಾಸ್ತ್ರಧಾರೇ । ನಾನಾ ಚರ್ಚಾ ॥೩॥

ಭಕ್ತಿಮಾರ್ಗ ವಿಶದ ಕಳೇ । ಉಪಾಸನಾಮಾರ್ಗ ಆಕಳೇ ।
ಜ್ಞಾನವಿಚಾರ ನಿವಳೇ ಅಂತರ್ಯಾಮೀ ॥೪॥

ವೈರಾಗ್ಯಾಚೀ ಬಹು ಆವಡೀ । ಉದಾಸ ವೃತ್ತೀಚೀ ಗೋಡೀ ।
ಉದಂಡ ಉಪಾಧೀ ತರೀ ಸೋಡೀ । ಲಾಗೋಚ ನೇದೀ ॥೫॥

ಪ್ರಬಂದಾಚೀ ಪಾಠಾಂತರೇ । ಉತ್ತರಾಸೀ ಸಂಗೀತ ಉತ್ತರೇ ।
ನೇಮಕ ಬೋಲತಾ ಅಂತರೇ । ನಿವವೀ ಸಕಳಾಂಚೀ ॥೬॥

ಆವಡೀ ಲಾಗಲೀ ಬಹು ಜನಾ । ತೇಥೇ ಕೋಣಾಚೇ ಕಾಂಹೀ ಚಾಲೇನಾ ।
ದಳವಟ ಪಡಿಲಾ ಅನುಮಾನಾ । ಯೇಈಲ ಕೈಸಾ ॥೭॥

ಉಪಾಸನಾ ಕರೂನಿಯಾ ಪುಢೇ । ಪುರವಲೇ ಪಾಹಿಜೆ ಚಹುಕಡೇ ।
ಭೂಮಂಡಳೀ ಜಿಕಡೇ ತಿಕಡೇ । ಜಾಣತೀ ತಯಾ ॥೮॥

ಜಾಣತೀ ಪರೀ ಆಡಳೇನಾ । ಕಾಯ ಕರಿತೋ ತೇ ಕಳೇನಾ ।
ನಾನಾ ದೇಸೀಚೆ ಲೋಕ ನಾನಾ । ಯೇಊನ ಜಾತೀ ॥೯॥

ತಿತುಕ್ಯಾಂಚೀ ಅಂತರೇ ಧರಾವೀ । ವಿವೇಕೇ ವಿಚಾರೇ ಭರಾವೀ ।
ಕಡೋವಿಕಡೀಚೀ ವಿಮರಾವೀ । ಅಂತಃಕರ್ಣೇ ॥೧೦॥

ಕಿತೀ ಲೋಕ ತೇ ಕಳೇನಾ । ಕಿತೀ ಸಮುದಾವ ಆಕಳೇನಾ ।
ಸಕಳ ಲೋಕ ಶ್ರವಣ ಮನನಾ । ಮಧ್ಯೇ ಘಾಲೀ ॥೧೧॥

ಇಲ್ಲಿ ಅನೇಕ ಸಂಶಯಗಳನ್ನು [ಶಂಕಾ] ತೆಗೆದು ಅದರ ಬಗ್ಗೆ ಚರ್ಚೆ ಆಗಿ ಸಂಶಯಗಳ ಪರಿಹಾರ ಮಾಡಲಾಗುವದು. ಯಾವುದು ನಿಜ ಅಥವಾ ಸತ್ಯವಾದದ್ದು, ಯಾವುದು ಸುಳ್ಳು ಅಥವಾ ಅಸತ್ಯವಾದದ್ದು, ಯಾರು ಹೇಳಿದ್ದು ಸತ್ಯವಾದದ್ದು, ಯಾರು ಹೇಳಿದ್ದು ಅಸತ್ಯವಾದದ್ದು ಇದನ್ನು ಇಲ್ಲಿ ನಿಶ್ಚಿತ ನಿರ್ಣಯ ಮಾಡಲಾಗುವದು. ಮತ್ತು ಇಲ್ಲಿ ಅನೇಕ ಪ್ರಕಾರದ ಭಾಷಣ ಕಥಾ, ಕೀರ್ತನ,ವೇದಾಂತ,ವ್ಯಾಖ್ಯಾನಾದಿ ಅನೇಕಾನೇಕ ವಿಷಯದ ಮೇಲಿನ ಒಳ್ಳೆಯ ಚರ್ಚೆ ವಿವರಗಳು ಕೇಳಲಿಕ್ಕೆ ಸಿಗುವವು. ಮತ್ತು ಶಾಸ್ತ್ರದ ಆಧಾರ ಹಿಡಿದು ಅನೇಕ ಪ್ರಕಾರದ ಚರ್ಚೆ ಆಗುವದು. (೩) ಇಲ್ಲಿ ಭಕ್ತಿಮಾರ್ಗದ ಸ್ವರೂಪ ರಹಸ್ಯ ಸ್ಪಷ್ಟವಾಗಿ ತಿಳಿಯುವದು. ಉಪಾಸನಾ ಮಾರ್ಗದ ಆಕಲನವಾಗುವದು.[ತಿಳಿಯುವದು]. ಮನುಷ್ಯನ ಅಂತರ್ಯಾಮೀ ಜ್ಞಾನ ಸ್ವರೂಪದ ವಿಚಾರವು ಸಂಶಯರಹಿತವಾಗಿ ಹೋಗುವದು. ಭಗವಂತನ ಚರಣದಲ್ಲಿ"ನಾನು"ಅನ್ನುವ ಅಹಂ ವಿಲೀನವಾಗಿ [ಲೀನವಾಗಿ] ದೇವ-ಭಕ್ತ ಏಕರೂಪ ವಾಗುವದೇ ನಿಜವಾದ ಭಕ್ತಿಯು.ಆದರೆ ನಾನು ಅನ್ನುವದನ್ನು ಸಂಪೂರ್ಣ ಇಲ್ಲದಂತೆ ಮಾಡುವದಕ್ಕಾಗಿ ಕೈಕೊಳ್ಳುವ ಸಾಧನೆಯು ಉಪಾಸನಾ ಎನಿಸುವದು. ನಾನು ಅನ್ನುವದು ಯಾವ ಪ್ರಮಾಣದಲ್ಲಿ ಕ್ಷೀಣವಾಗುತ್ತ ಹೋಗುವದೋ ಆ ಮಾನದಿಂದ ಪ್ರತಿಭಾ ಅಥವಾ ವಿಶೇಷ ಪ್ರಜ್ಞಾ,ಸ್ಫೂರ್ತಿ, ತೇಜ, ಒಳ ಅರಿವು ಉದಯಹೊಂದುವದು. ಪ್ರತಿಭೆ ಯಿಂದ ಸ್ವಸ್ವರೂಪದ ಆಕಲನವಾಗುವದು. ಇದೇ ಜ್ಞಾನವಿರುವದು. (೪) ಹೀಗೆ ಭಕ್ತಿ, ಜ್ಞಾನ, ವೈರಾಗ್ಯದ ವಾತಾವರಣ ನಿರ್ಮಾಣ ಮಾಡುವಂಥ ಮಹಂತನು ಸ್ವತಃ ಹೇಗೆ ನಡೆಯುವನು ಎಂಬ ಬಗ್ಗೆ ಹೇಳುವರು : ಸಮಾಜನೇತಾ ಮಹಂತನಿಗೆ ವೈರಾಗ್ಯದ ಬಗ್ಗೆ ಬಹಳ ಪ್ರೇಮವಿರುವದು. ಅಲಿಪ್ತತನದಲ್ಲಿ ಇವನಿಗೆ ಮನಸಾ ರುಚಿ ಇರುವದು. ಈ ಮಹಂತ ಮುಖಂಡನ ಹಿಂದೆ ಬಹಳ ಉಪಾಧಿ [ಭಾನಗಡಿ, ಗೊಂದಲ,] ಉಪಸರ್ಗ ಇರುವವು. ಆದರೆ ಮನದಿಂದ ಇವನಿಗೆ ಇವು ಅಂಟಿಕೊಂಡಿರುವದಿಲ್ಲ. ಅರ್ಥಾತ್ ಅಲಿಪ್ತನಿರುವನು. ಇವುಗಳನ್ನು ಬಿಡಬೇಕೆಂದು ಅಂದರೆ ಇವನು ತಕ್ಷಣ ಬಿಟ್ಟುಬಿಡುವನು. (೫) ಇವನಿಗೆ ಬಹಳಷ್ಟು ಸಾಹಿತ್ಯ ಪಾಠ ಇರುವವು. ಪ್ರಶ್ನೆಗಳಿಗೆ ಇವನು ಯಾವ ಉತ್ತರಕೊಡುವನೋ ಅದು ಅಗದೀ ಸಮರ್ಪಕವಿರುವದು. ಇವನ ಅತ್ಯಂತ [ಅಗದೀ] ಯೋಗ್ಯ ಮತ್ತು ಯಥಾರ್ಥ ಮಾತುಗಳಿಂದ ಎಲ್ಲರ ಮನಸ್ಸಿಗೂ ಶಾಂತಿ ಪ್ರಾಪ್ತವಾಗುವದು. (೬) ಇವನ ಮೇಲೆ ಜನತೆಯ ಪ್ರೇಮ ಬಹಳ ಇರುವದು. ಅಂತೆಯೇ ಇವನ ಮುಂದೆ ಯಾರದೂ ಏನೂ ನಡೆಯುವದಿಲ್ಲ. ಇವನ ಸುತ್ತಮುತ್ತ ಯಾವಾ ಗಲೂ ಜನರ ಗದ್ದಲವಿರುವದು. ಆದರೆ ಇವನ ಅಂತರಂಗದ ಬಗ್ಗೆ ಬಹಳ ಸ್ವಲ್ಪ ಜನರಿಗೆ ಗೊತ್ತಿರುವದು. ಇವನ ಒಳಗಿನ ಅಂತರಂಗದ ಅವಸ್ಥೆಯ ಕಲ್ಪನಾ ಬಹಳ ಕಡಿಮೆ ಜನರಿಗೆ ಇರುವದು. (೭) ಇವನು ಸ್ವತಃ ತಪ್ಪದೇ ಉಪಾಸನೆಯನ್ನು ಆಚರಿಸುವನು. ಉಪಾಸನೆಯ ಪ್ರಸಾರದ ಸಲುವಾಗಿ ಇವನು ಎಲ್ಲ ಕಡೆಗೂ ಪರಿಭ್ರಮಣ ಸಂಚಾರ, ಮಾಡುವನು. ಇದರಿಂದಾಗಿ ಸುತ್ತೂ ಕಡೆಯ ಜನರಿಗೆ ಇವನ ಬಗ್ಗೆ ಮಾಹಿತಿ ಇರುವದು. (೮) ಜನರಿಗೆ ಇವನು ಗೊತ್ತಿದ್ದವನಿದ್ದರೂ ಸಹ ಹಗಲೆಲ್ಲ ಮೇಲಿಂದ ಮೇಲೆ ಜನರ ದೃಷ್ಟಿಗೆ ಬೀಳುವದಿಲ್ಲ ಮತ್ತು ಇವನು ಏನು ಮಾಡುವನೆಂಬುದು ತಿಳಿಯುವದಿಲ್ಲ. ಅನೇಕ ದೇಶದ ಅನೇಕ ಜನರು ಇವನ ಕಡೆಗೆ ಬಂದು ಹೋಗುವರು. (೯) ಭೆಟ್ಟಿಯಾಗಲು ಬಂದಂಥ ಎಲ್ಲರ ಅಂತಃಕರಣವನ್ನು ತನ್ನದನ್ನಾಗಿ ಮಾಡಿಕೊಂಡು ಅವರೆಲ್ಲರ ಪ್ರೇಮ, ವಿಶ್ವಾಸ, ಸಂಪಾದಿಸಿ ಅವರ ಅಂತರಂಗದಲ್ಲಿ ತನ್ನ ವಿಚಾರಗಳನ್ನು ವಿವೇಕದ ಅರಿವಿನಿಂದ ತುಂಬಿಬಿಡುವವನೇ ನಿಜವಾದ ಮಹಂತನು.-ಬಂದವರೊಳಗೆ ಯಾರು ಏಕಾಂತದ ವೃತ್ತಿಯವರು ಇರುವರೋ ಅವರ ಅಂತಃಕರಣವನ್ನು ಕೇವಲ ವಿವೇಕದಿಂದ ಸಮತೋಲ ಮಾಡುವನು. (೧೦) ಮಹಂತನಿಗೆ ಭೆಟ್ಟಿಯಾಗಲು ಎಷ್ಟು ಜನರು ಬರುವರೆಂಬುದನ್ನು ಹೇಳಲಿಕ್ಕಾಗುವದಿಲ್ಲ. ಗಣತಿಮಾಡಲು ಸಾಧ್ಯವಿಲ್ಲ. ಇವನ ಅನುಯಾಯಿಗಳ ಸಂಖ್ಯೆಯ ಕಲ್ಪನೆಯನ್ನು ಮಾಡಲು ಸಾಧ್ಯವಿಲ್ಲ. ಆದರೆ ಸರ್ವರಿಗೂ ಇವನು ಶ್ರವಣ-ಮನನದ ಮಾರ್ಗವನ್ನು ಕಲಿಸುವನು. ಮತ್ತು ತಿಳಿಸಿಕೊಡುವನು. ಇವರನ್ನೆಲ್ಲ ಶ್ರವಣ-ಮನನಕ್ಕೆ ಪಾತ್ರರನ್ನಾಗಿ ಮಾಡುವನು. (೧೧)

ಘಡ ಸಮಜಾವಿಸೀ ಕರಣೇ । ಗದ್ಯ ಪದ್ಯ ಸಾಂಗಣೇ ।
ಪರಾಂತರಾಸೀ ರಾಖಣೇ । ಸರ್ವಕಾಳ ॥೧೨॥

ಏಸಾ ಜ್ಯಾಚಾ ದಂಡಕ । ಅಖಂಡ ಪಾಹಾಣೇ ವಿವೇಕ ।
ಸಾವಧಾ ಪುಢೇ ಅವಿವೇಕ । ಯೇಈಲ ಕೈಚಾ ॥೧೩॥

ಜಿತುಕೇ ಕಾಂಹೀ ಆಪಣಾಸೀ ಠಾವೇ । ತಿತುಕೇ ಹಳುಹಳು ಸಿಕವಾವೇ ।
ಶಾಹಾಣೇ ಕರೂನಿ ಸೋಡಾವೇ । ಬಹುತ ಜನ ॥೧೪॥

ಪರೋಪರೀ ಸಿಕವಣೇ । ಆಡಣುಕಾ ಸಾಂಗತ ಜಾಣೇ ।
ನಿವಳ ಕರೂನೀ ಸೋಡಣೇ । ನಿಸ್ಪೃಹಾಸೀ ॥೧೫॥

ಹೋಈಲ ತೇ ಆಪಣ ಕರಾವೇ । ನ ಹೋತಾ ಜನಾಕರವೀ ಕರವಾವೇ ।
ಭಗವದ್ಭಜನ ರಾಹಾವೇ । ಹಾ ಧರ್ಮ ನವ್ಹೇ ॥೧೬॥

ಆಪಣ ಕರಾವೇ ಕರವಾವೇ । ಆಪಣ ವಿವರಾವೇ ವಿವರವಾವೇ ।
ಆಪಣ ಧರಾವೇ ಧರವಾವೇ । ಭಜನ ಮಾರ್ಗಾಸೀ ॥೧೭॥

ಜುನ್ಯಾ ಲೋಕಾಚಾ ಕಂಟಾಳಾ ಆಲಾ। ತರೀ ನೂತನ ಪ್ರಾಂತ ಪಾಹಿಜೆ ಧರಿಲಾ।
ಜಿತುಕೇ ಹೋಈಲ ತಿತುಕ್ಯಾಲಾ । ಆಳಸ ಕರೂ ನಯೇ ॥೧೮॥

ದೇಹ್ಯಾಚಾ ಅಭ್ಯಾಸ ಬುಡಾಲಾ । ಮ್ಹಣಿಜೆ ಮಹಂತ ಬುಡಾಲಾ ।
ಲಾಗವೇಗೇ ನೂತನ ಲೋಕಾಲಾ । ಶಾಹಾಣೆ ಕರಾವೇ ॥೧೯॥

ಉಪಾಧೀತ ಸಾಂಪಡೋ ನಯೇ । ಉಪಾಧೀಸ ಕಂಟಾಳೋ ನಯೇ ।
ನಿಸುಗಪಣ ಕಾಮಾ ನಯೇ । ಕೋಣೇಯೇಕಾವಿಷೀ ॥೨೦॥

ಕಾಮ ನಾಸಣಾರ ನಾಸತೇ । ಆಪಣ ವೇಡೇ ಉಗೇ ಚ ಪಾಹಾತೇ ।
ಆಳಸೀ ಹೃದಯಸುನ್ಯತೇ । ಕಾಯೆ ಕರೂ ಜಾಣೇ ॥೨೧॥

ಧಕಾಧಕೀಚಾ ಮಾಮಲಾ । ಕೈಸಾ ಘಡೆ ಅಶಕ್ತಾಲಾ ।
ನಾನಾ ಬುದ್ಧಿ ಶಕ್ತಾಲಾ । ಮ್ಹಣೋನೀ ಸಿಕವಾವ್ಯಾ ॥೨೨॥

ಮಹಂತ ನಿರ್ಮಾಣಮಾಡಿದ ಸಮಾಜ ಸಮೂಹದಲ್ಲಿಯ ಜನರಲ್ಲಿ ತಿಳುವಳಿಕೆ ಹುಟ್ಟಿಸುವದು. ಗದ್ಯ ಮತ್ತು ಪದ್ಯಗಳನ್ನು ಬರೆದುಕೊಳ್ಳಲಿಕ್ಕೆ ಹೇಳುವದು. ಸದಾ ಸರ್ವಕಾಲವೂ ಎರಡನೆಯವರ ಅರ್ಥಾತ್ ಜನತೆಯ ಅಂತಃಕರಣವನ್ನು ಸಂಬಾಳಿಸುವದು. (೧೨) ಹೀಗೆ ಮುಖಂಡನ ನಿತ್ಯ ಕ್ರಮವಿರುವದರಿಂದ ಹಗಲೂ ರಾತ್ರಿ ಇವನು ಅತ್ಯಂತ ವಿವೇಕದಿಂದ ನಡೆಯುವನು. ಹೀಗೆ ಸಾವಧತನದಿಂದ ನಡೆಯುವ ಈ ವಿವೇಕಿಯಲ್ಲಿ ಅವಿವೇಕವು ಇವನ ಸಮೀಪವೂ ಸಹ ಸುಳಿಯುವದಿಲ್ಲ.(೧೩)ಇವನು ತನ್ನ ಹತ್ತಿರ ಏನೇನುಜ್ಞಾನವಿರುವದೋ ಅದನ್ನೆಲ್ಲ ಜನರಿಗೆ ಸಾವಕಾಶವಾಗಿ ಶಾಂತತನದಿಂದ ಕಲಿಸಬೇಕು. ಈ ಪ್ರಕಾರದಿಂದ ಬಹಳಷ್ಟು ಜನರನ್ನು ಜಾಣರನ್ನಾಗಿ ಮಾಡಬೇಕು. (೧೪) ಯಾವನು ಅತ್ಯಂತ ನಿಸ್ಪೃಹನಿರುವನೋ ಮತ್ತು ಮಹಂತ ಮುಖಂಡನಾಗಲು ಸರ್ವಸ್ವೀ ಯೋಗ್ಯನಿರುವನೋ ಅಂಥವನಿಗೆ ನಾನಾ ರೀತಿಯಿಂದ ಕಲಿಸಬೇಕು. ಬರತಕ್ಕ ಅಡ್ಡಿ ಅಡಚಣೆಗಳು ಎಂಥವು, ಯಾರಿಂದ ಬರಬಹುದು, ಯಾವಾಗ ಬರಬಹುದು. ಇವುಗಳ ಪ್ರತೀಕಾರ ಹೇಗೆ ? ಅಥವಾ ಇವುಗಳಿಂದ ಪಾರಾಗುವ ಬಗೆ ಹೇಗೆ? ಇತ್ಯಾದಿ ಮಾಹಿತಿ ತಿಳಿಸಿಕೊಡಬೇಕು. ಮತ್ತು ಅತ್ಯಂತ ನಿಃಸಂದೇಹಿಯನ್ನಾಗಿ ಮಾಡಿಬಿಡಬೇಕು. (೧೫) ಲೋಕ ಕಾರ್ಯವನ್ನು ಎಷ್ಟಾಗುವದೋ ಅಷ್ಟು ನೀವು ಮಾಡಬೇಕು. ನಿಮ್ಮ ಕೈಯಿಂದ ಆಗದಿದ್ದರೆ ಅದನ್ನು ಜನತೆಯ ಕಡೆಯಿಂದ ಮಾಡಿಸಿಕೊಳ್ಳಬೇಕು. ಆದರೆ ಭಗವಂತನ ಭಜನೆಯನ್ನು ಹಿಂದಕ್ಕೆ ಸರಿಸಿ ಇದನ್ನೆಲ್ಲ ಮಾಡುವದು ಧರ್ಮವಲ್ಲ. ಇದು ಒಳ್ಳೆಯದೂ ಅಲ್ಲ. (೧೬) ನೀವು ಸ್ವತಃ ಮಾಡಬೇಕು. ಮತ್ತು ಇತರರ ಕಡೆಯಿಂದಲೂ ಮಾಡಿಸಿಕೊಳ್ಳಿರಿ. ನೀವು ವಿವೇಕಮಾಡಿರಿ, ಮತ್ತು ಇತರರಿಗೂ ವಿವೇಕಮಾಡಿ ಸರಿಯಾದ ಮಾರ್ಗದಲ್ಲಿ ನಡೆಯಲು ಹೇಳಿರಿ. ನೀವು ಭಕ್ತಿ ಮಾರ್ಗವನ್ನು ಹಿಡಿಯಬೇಕು. ಮತ್ತು ಇತರರಿಗೂ ಭಕ್ತಿಮಾರ್ಗವನ್ನು ಹಿಡಿಯುವಂತೆ ಹೇಳಬೇಕು. (೧೭) ನಿಮಗೆ ಪರಿಚಿತ ಹಳೆಯ ಜನರಿದ್ದಲ್ಲಿ ಇರಲು ಬೇಸರವೆನಿಸಿದರೆ ಹೊಸ ಪ್ರಾಂತದಲ್ಲಿ ಹೋಗಿ ಮಹಂತತನ ಮಾಡಬೇಕು. ಅಲ್ಲಿ ಹೋದ ಮೇಲೆ ನಿಮ್ಮ ಕಡೆಯಿಂದ ಎಷ್ಟು ಕಾರ್ಯಮಾಡುವದು ಶಕ್ಯವಿದೆಯೋ ಅಷ್ಟನ್ನೇ ಮಾಡಬೇಕು. ಇದರ ಬಗ್ಗೆ ಎಷ್ಟೂ ಆಲಸ್ಯವನ್ನು ಮಾಡಬಾರದು. ಹೊಸ ಸ್ಥಳದಲ್ಲಿ ಬೇಸರಪಡದೆ ಆಲಸ್ಯವನ್ನು ತೊರೆದು ಕಾರ್ಯಮಾಡಬೇಕು. (೧೮) ಪರೋಪಕಾರದಲ್ಲಿ ಅಥವಾ ಜನತೆಯ ಸೇವೆಯಲ್ಲಿ ಅಥವಾ ಭಗವಂತನ ಭಜನೆಯಲ್ಲಿ ದೇಹ ದಂಡಿಸುವ ಅಭ್ಯಾಸ ಬಿಟ್ಟು ಬಿಟ್ಟರೆ ಮಹಂತನ-ಮಹಂತಗಿರಿ ಮುಳುಗಿ ಬಿಟ್ಟಿತೆಂದು ಖಾತ್ರಿಯಿಂದ ತಿಳಿಯಬೇಕು. ಆದ್ದರಿಂದ ಶಕ್ಯವಾದಷ್ಟು ಲಗುಬಗೆಯಿಂದ ಹೊಸ ಹೊಸ ಜನರನ್ನು ಜಾಣರನ್ನಾಗಿ ಮಾಡಬೇಕು. ಮಹಂತನು ತನ್ನ ದೇಹವನ್ನು ಸತತ ದಂಡಿಸಬೇಕು. ಇವನು ಆಲಸಿಗನಾದರೆ ಆಗ ಯಾವತ್ತೂ ಜನ ಸಮೂಹವೇ ಆಲಸಿಗರಾಗುವರು. ಇದರಿಂದ ಉಪಾಸನಾದಲ್ಲಿ ಸಡಿಲು ಉಂಟಾಗುವದು. ಮಂದವಾಗುವದು. ಮತ್ತು ಬರಬರುತ್ತ ಯಾವತ್ತೂ ಕಾರ್ಯವೇ ನಾಶವಾಗಿ ಹೋಗುವದು. (೧೯) ಮಹಂತನು ಉಪಾಧಿಯಲ್ಲಿ ಬೀಳಬಾರದು. ಇದರಲ್ಲಿ ತೊಡಕಿಕೊಳ್ಳಬಾರದು. ಈ ಮಾತು ನಿಜವೇ ಇರುವದು. ಆದರೆ ಇವನು [ಮಹಂತನು] ಉಪಾಧಿಗಳಿಗೆ ಬೇಸರಪಡಬಾರದು ಅನ್ನುವದೂ ಅಷ್ಟೇ ನಿಜವಿರುವದು. ಯಾವುದೇ ಕೆಲಸದ ಬಗ್ಗೆ ಇವನು ಎಳ್ಳಷ್ಟೂ ಆಲಸ್ಯ ತೋರಬಾರದು. (೨೦) ಆಲಸ್ಯತನ ಮಾಡುವದರಿಂದ ಸಮಾಜಕಾರ್ಯದ ನಾಶವಾಗುವದೇನೂ ತಪ್ಪುವದಿಲ್ಲ. ಹುಚ್ಚುತನದಿಂದ ಇವನು ಕಾರ್ಯ ನಾಶವಾಗುವದನ್ನು ಆಗ ಸುಮ್ಮನೇ ನೋಡುತ್ತ ನಿಲ್ಲುವನು. ಹೃದಯ ಶೂನ್ಯ ಮತ್ತು ಆಲಸಿಗನಾದ ಇವನು ಆಗ ಈ ಬಗ್ಗೆ ಏನೂ ಮಾಡಲಿಕ್ಕೆ ಸಾಧ್ಯವಿರುವದಿಲ್ಲ. (೨೧) ಕೊನೆಯದಾಗಿ ಮಹಂತನಿಗೆ ಸರ್ವ ಸಾಧಾರಣ ಮಾರ್ಗದರ್ಶನ ಮಾಡಿರುವರು: ಮಹಂತನ ಜೀವನವೆಂದರೆ ಧಕ್ಕಾಮುಕ್ಕಿಯು, ದಗದಗಿಯು, ಜಿಕೀರಿಯು,ಶ್ರಮದ, ವ್ಯವಹಾರವಿರುವದು. ಯಾವನು ದೇಹದಿಂದ ಅದರಲ್ಲಿಯೂ ಮನದಿಂದ ಮತ್ತು ವೃತ್ತಿಯಿಂದ ಅಶಕ್ತನಿರುವನೋ ಅವನಿಗೆ ಈ ವ್ಯವಹಾರದ ಮಹಂತಗಿರಿ, ಮುಖಂಡತ್ವವು ನಿಭಾಯಿಸುವದಿಲ್ಲ ಆದ್ದರಿಂದ ಯಾರು ಶರೀರದಿಂದ ಮತ್ತು ಮನದಿಂದ ಬಲವಂತರಿರುವರೋ ಅವರಿಗೆ ನೀವು ಅನೇಕ ಪ್ರಕಾರದ ಯುಕ್ತಿ ನಾನಾ ರೀತಿಯ ವ್ಯವಹಾರ ವಿಚಾರ ಮತ್ತು ನಾನಾ ತರಹದ ಕೌಶಲ್ಯಗಳನ್ನು ಕಲಿಸಬೇಕು. [ಅಂದರೆ ಸಮರ್ಥ ಮಹಂತ ಮುಖಂಡನು ಹೆಸರು ಪಡೆಯುವನು.] (೨೨)

ವ್ಯಾಪ ಹೋಈಲ ತೋ ರಾಹಾವೇ। ವ್ಯಾಪ ರಾಹಾತಾ ಉಠೋನ ಜಾವೇ।
ಆನಂದರೂಪ ಫಿರಾವೇ। ಕೋಠೇ ತರ್ಿ ॥೨೩॥

ಉಪಾಧೀಪಾಸುನೀ ಸುಟಲಾ। ತೋ ನಿಸ್ಪೃಹಪಣೇ ಬಳಾವಲಾ।
ಜಿಕಡೆ ಅನಕೂಳ ತಿಕಡೆ ಚಾಲಿಲಾ। ಸಾವಕಾಸ ॥೨೪॥

ಕೀರ್ತಿ ಪಾಹಾತಾ ಸುಖ ನಾಹೀ। ಸುಖ ಪಾಹಾತಾ ಕೀರ್ತಿ ನಾಹೀ।
ಕೇಲ್ಯಾವಿಣ ಕಾಂಹೀ ಚ ನಾಹೀ। ಕೋಠೇ ತರ್ಿ ॥೨೫॥

ಯೆರವೀ ಕಾಯ ರಾಹಾತೇ। ಹೋಣಾರ ತಿತುಕೇ ಹೋಊನ ಜಾತೇ।
ಪ್ರಾಣೀ ಮಾತ್ರ ಅಶಕ್ತ ತೇ। ಪುಢೇ ಆಹೇ ॥೨೬॥

ಆಧೀ ಚ ತಕವಾ ಸೋಡಿಲಾ। ಮಧೇ ಚಿ ಧೀವಸ ಸಾಂಡಿಲಾ।
ತರೀ ಸಂಸಾರ ಹಾ ಸೇವಟಾಲಾ। ಕೈಸಾ ಪಾವೇ ॥೨೭॥

ಸಂಸಾರ ಮುಳೀ ಚ ನಾಸಕಾ। ವಿವೇಕೇ ಕರಾವಾ ನೇಟಕಾ।
ನೇಟಕಾ ಕರಿತಾ ಫಿಕಾ। ಹೋತ ಜಾತೋ ॥೨೮॥

ಏಸಾ ಯಾಚಾ ಜಿನಸಾನಾ। ಪಾಹಾತಾ ಕಳೋ ಯೇತೇ ಮನಾ।
ಪರಂತು ಧೀರ ಸಾಂಡಾವಾನಾ। ಕೋಣೇಯೇಕೇ ॥೨೯॥

ಧೀರ ಸಾಂಡಿತಾ ಕಾಯೆ ಹೋತೇ। ಅವಘೇ ಸೋಸಾವೇ ಲಾಗತೇ।
ನಾನಾ ಬುದ್ಧಿ ನಾನಾ ಮತೇ। ಶಾಹಾಣಾ ಜಾಣೇ ॥೩೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ವಿವೇಕ ಲಕ್ಷಣ ನಿರೂಪಣ' ನಾಮ ಸಮಾಸ ದಶಮ

● ●

— ದಶಕ ಏಕೋಣವಿಂಶತಿ ಸಮಾಪ್ತ —

ಕಾರ್ಯದ ವ್ಯಾಪವನ್ನು ನಾವು ಎಲ್ಲಿಯವರೆಗೆ ಸಂಭಾಳಿಸುವೆವೋ ಅಲ್ಲಿಯವರೆಗೆ ಜನ ಸಮುದಾಯದಲ್ಲಿ ಮುಖಂಡನಾಗಿ ಇರಬೇಕು. ಇದು ಯಾವಾಗ ಅಶಕ್ಯವಾಗುವದೋ ಆಗಲೇ ಅಲ್ಲಿಂದ ಎದ್ದುಹೋಗಬೇಕು. ಆಮೇಲೆ ಆನಂದದಿಂದ ಎತ್ತಕಡೆಗಾದರೂ ನಾಮಸ್ಮರಣಾದಿಗಳನ್ನು ಮಾಡುತ್ತ, ಸಂಚಾರಮಾಡುತ್ತ ಕಾಲಕಳೆಯಬೇಕು. (೨೩) ಯಾವನು ಉಪಾಧಿಯಿಂದ ಬಿಡುಗಡೆಯಾಗುವನೋ ಅವನ ನಿಸ್ಪೃಹತೆಯು ಸ್ಥಿರವಾಗುವದು ಭದ್ರವಿರುವದು. ಆಗ ಅದನಿಗೆ ಯಾವ ಸ್ಥಳದಲ್ಲಿ ಅನುಕೂಲ ಪರಿಸ್ಥಿತಿ ಇರುವದೆಂದು ಅನಿಸುವದೋ ಅಲ್ಲಿ ಇವನು ಸ್ವಸ್ಥವಾಗಿ ಇರಲಿಕ್ಕೆ ಅಡ್ಡಿ ಇಲ್ಲ. ಸಮೂಹದ ಗದ್ದಲದಿಂದ ಮುಕ್ತನಾಗಿ ತನ್ನ ಉದ್ಧಾರಕ್ಕಾಗಿ ತನ್ನ ಸಮಾಧಾನ ಕಾಯ್ದುಕೊಳ್ಳುವ ಸಾಧನದಲ್ಲಿ ತೊಡಗಬೇಕು. (೨೪) ಕೀರ್ತಿ ಬೇಕಾಗಿದ್ದರೆ ಸುಖ ಸೌಕರ್ಯಕ್ಕೆ ತಿಲಾಂಜಲಿಕೊಡಬೇಕಾಗುವದು. ಉಂಡುಟ್ಟು ಉರುಳಾಡುವ ಸುಖ ಇಲ್ಲಿ ನಡೆಯಲಾಗದು. ಮತ್ತು ಸುಖ ಸಂತೋಷ ಬೇಕಾಗಿದ್ದರೆ ಕೀರ್ತಿ ದೊರಕಲಾರದು. ಮನುಷ್ಯನು ಎಲ್ಲಿಗಾದರೂ ಹೋಗಲಿ, ಅಲ್ಲಿ ಕೂಡಾ ತಾನು ಮಾಡದ ಹೊರತು ಯಾವ ಕಾರ್ಯವಾಗುವದಿಲ್ಲವೆಂಬುದು ಕಂಡ ಮಾತೇ ಇರುವದು. (೨೫) ನಾವು ಮಾಡದಿದ್ದರೆ ಕಾರ್ಯವು ನಿಲ್ಲುತ್ತದೆಂದೇನೂ ಅನ್ನಲಿಕ್ಕೆ ಬರುವದಿಲ್ಲ. ಏನು ಆಗಬೇಕಾಗಿರುವದೋ ಅದು ಆಗಿಯೇಹೋಗುವದು. ಶಕ್ತಿಹೀನ ಮತ್ತು ಸಾಮರ್ಥ್ಯಹೀನ ಮನುಷ್ಯ ಪ್ರಾಣಿಯು ಮಾತ್ರ ಯಾವಾಗಲೂ ನಿಮಿತ್ತಕ್ಕೆ ಮುಂದೆ ಇರುವನು. ಅರ್ಥಾತ್ ದುರ್ಬಲತನ, ಹೇಡಿತನವನ್ನು ತನ್ನ ಕಡೆಗೆ ತೆಗೆದುಕೊಳ್ಳುವನು. "ಪ್ರಯತ್ನಾಂತೇ ಪರಮೇಶ್ವರ" ಇದನ್ನು ಸದಾ ಜ್ಞಾಪಕದಲ್ಲಿಡಬೇಕು ನೀವು ಪ್ರಯತ್ನಶೀಲರಾಗಿಯೇ ಇರಬೇಕು. (೨೬) ಸಂಸಾರಮಾಡುವಾಗ ಪ್ರಾರಂಭದಲ್ಲಿಯೇ ಉತ್ಸಾಹ ಹೀನನಾದರೆ ಅಥವಾ ಮಧ್ಯದಲ್ಲಿಯೇ ಧ್ಯೇಯಗೇಡಿಯಾದರೆ, ಅಧೈರ್ಯತಳೆದರೆ, ಅಂಥವನು ಸಂಸಾರವನ್ನು ಕೊನೆಯವರೆಗೂ ನಿಭಾಯಿಸಿಕೊಂಡು ಹೋಗುವದು ಕಠಿಣವಿರುವದು. (೨೭) ಸಂಸಾರವು ಮೂಲದಲ್ಲಿಯೇ ನಾಶವಂತವಿರುವದು. ಅನಿತ್ಯವಿರುವದು, ಅಶಾಶ್ವತವಿರುವದು. ವಿವೇಕದ ಬಲದಿಂದ ಇದನ್ನು ವ್ಯವಸ್ಥಿತಮಾಡಬೇಕು. ಮಾಡಿಕೊಂಡು ಹೋಗಬೇಕು. ಹೀಗೆ ಇದನ್ನು ವ್ಯವಸ್ಥಿತ ಮಾಡಿದ್ದಾದರೆ ಇದರಲ್ಲಿಯ ರಸ ರುಚಿ ಸಾವಕಾಶವಾಗಿ ಕಡಿಮೆ ಆಗುತ್ತ ಹೋಗುವದು. ಇದರ ಆಸಕ್ತಿ ಕ್ಷೀಣವಾಗುತ್ತ ಹೋಗುವದು. (೨೮) ಸಂಸಾರದ ಮೂಲ ಮಸಾಲೆ ಎಲ್ಲವೂ ಒಟ್ಟಿನಲ್ಲಿ ಹೀಗೆ ಅಶಾಶ್ವತವಿರುವದು. ಇದರ ಬಗ್ಗೆ ಚನ್ನಾಗಿ ನಿರೀಕ್ಷಣಮಾಡಿದರೆ ವಿಚಾರಮಾಡಿದ್ದಾದರೆ ಆಗ ಇದರ ಅಸತ್ಯತನದ ಅರಿವಾಗಿ ಮನಸ್ಸಿಗೆ ಹೊಳೆಯುವದು-ತಿಳಿಯುವದು. ಮತ್ತು ಖಾತ್ರಿಯಿಂದ ಪಟಾಯಿಸುವದು. ಈ ಮಾತು ನಿಜವಿದ್ದರೂ ಕೂಡಾ ಯಾರೂ ಧೈರ್ಯಗೆಡಬಾರದು. (೨೯) ಸಂಸಾರದ ಬಗ್ಗೆ ಧೈರ್ಯಗೆಡುವದರಿಂದ ಏನೂ ಲಾಭವಾಗುವದಿಲ್ಲ. ಮನುಷ್ಯನಾದವನು ಏನನ್ನು ಅನುಭವಿಸಬೇಕಾಗಿದೆಯೋ, ಏನನ್ನು ಸೋಸಬೇಕಾಗಿದೆಯೋ ಅದನ್ನೆಲ್ಲ ಅನುಭವಿಸಬೇಕಾಗುವದು-ಸೋಸಬೇಕಾಗುವದು. ಆದ್ದರಿಂದ ಜಾಣರಾದವರು ನಾನಾ ಪ್ರಕಾರದ ವಿಚಾರ ಮತ್ತು ನಾನಾ ಪ್ರಕಾರದ ಅಭಿಪ್ರಾಯ ಮತ್ತು ಅನೇಕ ಯುಕ್ತಿ ಹಾಗೂ ಹೊಸ ವಿಚಾರಗಳನ್ನು ಸಂಸಾರದಲ್ಲಿದ್ದು ಕೊಂಡೇ ತಿಳಿಯುವರು. ಇದರಿಂದ ಸಮಾಧಾನ ಹೊಂದಲಿಕ್ಕೆ ಸಾಧ್ಯವಾಗುವದು. (೩೦)

ಶ್ರೀ ದಾಸಬೋಧದ ಹತ್ತೊಂಭತ್ತನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ವಿವೇಕ ಲಕ್ಷಣ ನಿರೂಪಣ"ವೆಂಬ ಹೆಸರಿನ ಹತ್ತನೇ ಸಮಾಸವು ಮುಗಿದುದು.

● ●

## ದಶಕ ೨೦. ಪೂರ್ಣನಾಮ ದಶಕ

ಇದು ಗ್ರಂಥರಾಜ ದಾಸಬೋಧದ ಕೊನೆಯ ದಶಕವು. ಇದಕ್ಕೆ ಪೂರ್ಣ ದಶಕವೆಂದು ಯೋಗ್ಯವಾದ ಹೆಸರನ್ನು ಕೊಟ್ಟಿರುವರು. ಯಾವುದನ್ನು ಹೇಳುವದಕ್ಕಾಗಿ ಶ್ರೀ ಸಮರ್ಥರು ತಮ್ಮ ಗ್ರಂಥವನ್ನು ಹೇಳಿದರೋ ಆ ಗ್ರಂಥವನ್ನು ಈಗಹೇಳಿ ಪೂರ್ಣವಾಗುವದಿರುವದು. ಅಂತೆಯೇ ಇದು ಪೂರ್ಣದಶಕವಾಗಿರುವದು. ಸಾಧಕರು ಸಾಧನೆಯ ಆರಂಭದಲ್ಲಿ [ಪ್ರಾರಂಭ ಸಮಯದಲ್ಲಿ] ತಮ್ಮ ಸಾಧನೆಯ ಭಾಗವೆಂದು ದಾಸಬೋಧದ ಶ್ರವಣ, ಮನನ, ಪ್ರಾರಂಭ ಮಾಡಿದರು. ಈ ದಶಕದವರೆಗೆ [೧೯ ದಶಕ ಅಥವಾ ೧೯೦ ಸಮಾಸ ಮುಗಿಸಿದ ನಂತರ] ಬಂದ ಮೇಲೆ ಸಾಧನೆಯು ಪೂರ್ಣವಾಯಿತು. ಸಾಧಕರಿಗೆ ಆತ್ಮಜ್ಞಾನವು ಸಾಧ್ಯವಾಯಿತು. ಅರ್ಥಾತ್ ಗ್ರಂಥದ ಕಾರ್ಯ ಮುಗಿಯಿತು. ಸಾಧನಾ ಪೂರ್ಣದಶೆಗೆ [ಪೂರ್ಣಸ್ಥಿತಿಗೆ] ಹೋಯಿತು. ಮುಟ್ಟಿತು. ಇದನ್ನು ತೋರಿಸುವ, ಸೂಚಿಸುವ, ತಿಳಿಸುವ ಈ ದಶಕವು ಪೂರ್ಣ ದಶಕವೆಂದು ಸಮರ್ಥರಿಂದ ನಾಮಕರಣಗೊಂಡಿತು. "ನಾನು ದೇಹವಿರುವೆನು" ಈ ಭಾವನೆಯಿಂದ ದಾಸಬೋಧವನ್ನು ಓದಲಿಕ್ಕೆ ಆರಂಭ ಮಾಡಲಾಯಿತು. ಕೃಪಾ ಮೂರ್ತಿ ಶ್ರೀ ಸಮರ್ಥರು ನಮ್ಮ ಕೈ ಹಿಡಿದು ಕರೆದುಕೊಂಡು ಹತ್ತೊಂಭತ್ತು ದಶಕದವರೆಗೆ ಬರುವಾಗ ಅಥವಾ ಬರಬರುತ್ತಲೇ ಅಶಾಶ್ವತ ಮತ್ತು ಅಪೂರ್ಣ ದೃಶ್ಯವನ್ನು ಬದಿಗೆ ಸರಿಸುತ್ತ ಸರಿಸುತ್ತ ಕೈ ಹಿಡಿದು ಕರೆದುಕೊಂಡು ಬಂದರು. ಈಗ ಇಪ್ಪತ್ತನೆಯ ದಶಕದಲ್ಲಿ ಶಾಶ್ವತ ಮತ್ತು ಪೂರ್ಣಬ್ರಹ್ಮ ವಸ್ತುವಿನ ಪ್ರತ್ಯಕ್ಷಅನುಭವ ಬಂದು ಜೀವಕ್ಕೆ ಪೂರ್ಣತ್ವವು ಖರೇ ಸಮಾಧಾನವು ಪ್ರಾಪ್ತವಾಯಿತು. "ನಾನು ಬ್ರಹ್ಮನಿರುವೆನು" ಹೀಗೆ ಸಾಕ್ಷಾತ್ಕಾರ ಆದದ್ದರಿಂದ ಜೀವವು ಸಮಾಧಾನ ಹೊಂದಿತು. ಹೀಗೆ ಪೂರ್ಣ ಸಮಾಧಾನದ ಅನುಭವ ಬಂದಿತೆಂದೇ ಇದು ಪೂರ್ಣ ದಶಕವಾಗಿರುವದು. "ನನಗೆ ದೇವರು ಬೇಕು" ಅನ್ನುವ ಜಿಜ್ಞಾಸದಿಂದ ಅರಿತುಕೊಳ್ಳುವ ಹಂಬಲದಿಂದ ದಾಸಬೋಧವನ್ನು ಕೈಯಲ್ಲಿ ತೆಗೆದುಕೊಂಡೆನು. ಅಥವಾ ಹಿಡಿದುಕೊಂಡೆನು. ಪ್ರಾರಂಭಕ್ಕೇ ಶ್ರೀ ಸಮರ್ಥರು ಹೇಳಿದ್ದೇನಂದರೆ : ಭಕ್ತಿಯಿಂದ ದೇವನು ಪ್ರಾಪ್ತನಾಗುವನು. ಆಗ "ನಾನು ಕರ್ತಾ ಇರುವೆನು" ಹೀಗೆ ನನ್ನ ನಂಬಿಕೆ ಇತ್ತು. ಪರಂತೂ ಶ್ರೀ ಸಮರ್ಥರ ಅರ್ಥ

ರೂಪ ಸಂಗತಿಯಿಂದ ತಿಳಿಸಿ ಹೇಳಿದ ವಿವರ ಪೂರ್ಣ ವರ್ಣನೆಯಿಂದ "ನಾನು ಕರ್ತಾ ಅಲ್ಲ" ಅನ್ನುವ ವಿಷಯವು ಹತ್ತೊಂಭತ್ತು ದಶಕಗಳನ್ನು ಕೇಳಿದ ಮೇಲೆ ಅಥವಾ ಕೇಳಿದ ನಂತರ ಖಾತ್ರಿಯಾಯಿತು. ಅಖೈರದ [ಕೊನೆಯ] ಇಪ್ಪತ್ತನೆಯ ದಶಕದಲ್ಲಿಯ ವಿವರ ಕೇಳಿ ಜಗದೀಶ್ವರ ಅಥವಾ ಅಂತರಾತ್ಮಾನೇ ನಿಜವಾದ ಖರೇ ಕರ್ತಾ ಇರುವನು ಅನ್ನುವದರ ಸಂಪೂರ್ಣ ಖಾತ್ರಿಯಾಗಿ ಭಕ್ತಿಯ ರಹಸ್ಯವು ಪದರಿನಲ್ಲಿ ಬಿದ್ದಿತು. ಅದು ದೊರಕಿತು ಆದ್ದರಿಂದ ಇದು ಪೂರ್ಣ ದಶಕವಿರುವದು. ದಾಸಬೋಧದ ಆರಂಭವು ಅಜ್ಞಾನದ ವರ್ಣನೆಯಿಂದ ಆಯಿತು. ಆತ್ಮಜ್ಞಾನದಿಂದ ಆ ಅಜ್ಞಾನದ ಪರಿಹಾರವಾಯಿತು. [ನಿರಸನವಾಯಿತು.] ಆದರೆ ಅಜ್ಞಾನವಾಗಲೀ, ಅಥವಾ ಜ್ಞಾನವೇ ಆಗಲಿ ಎರಡೂ ವೃತ್ತಿರೂಪ [ವರ್ತನ, ನಡವಳಿಕೆ, ಮನದಸ್ಥಿತಿ, ಭಾವನಾ] ಇರುವವು. ಜ್ಞಾನವು ವಿಜ್ಞಾನ [ವೃತ್ತಿ ಶೂನ್ಯ ಅವಸ್ಥೆ] ವಾದಿ ಮನವು ಉನ್ಮನ ಅಂದರೆ ಈಶಚಿಂತನೆಯಲ್ಲಿಯೇ ನಿಮಗ್ನವಾಯಿತೆಂದರೆ ಆಗ ಜ್ಞಾನದಕ್ರಿಯಾ ಪೂರ್ಣವಾಗುವದು. ಈ ವಿಜ್ಞಾನದ ಮರ್ಮವು ಈ ಇಪ್ಪತ್ತನೆಯ ದಶಕದಲ್ಲಿ ಇರುವದು. ಅಂತೆಯೇ ಇದು ಪೂರ್ಣ ದಶಕವಾಗಿದೆ. ಒಟ್ಟಿನಲ್ಲಿ ಇಪ್ಪತ್ತನೆಯ ದಶಕವು ದಾಸಬೋಧದ ಉಪಸಂಹಾರವಾಗುವದು. ಹಿಂದಿನ ಹತ್ತೊಂಭತ್ತನೇ ದಶಕದಲ್ಲಿ ಶ್ರೀ ಸಮರ್ಥರು ಒಂದು ಸಂಪೂರ್ಣ ತತ್ವಜ್ಞಾನ ಅಥವಾ ಜೀವನದ ಒಂದು ಸಂಪೂರ್ಣ ಅರ್ಥವನ್ನು ವಾಚಕರ ಮುಂದೆ ಮಂಡಿಸಿರುವರು. ಆದರ ಮೂಲದಲ್ಲಿ ಅಜ್ಞಾನ, ಜ್ಞಾನ, ವಿಜ್ಞಾನ, ಭಕ್ತಿ, ಪ್ರಚೀತಿ[ಅನುಭವ] ಮತ್ತು ವ್ಯವಹಾರ ಈ ವಿಷಯಗಳ ಬಗ್ಗೆ ಕೆಲವೊಂದು ಪ್ರಧಾನ ಸಂಕಲ್ಪದ ವಿಚಾರಗಳು ಇರುವವು. ಈ ಎಲ್ಲ ವಿಚಾರಗಳ ಬಗ್ಗೆ ಶ್ರೀ ಸಮರ್ಥರು ಈ ದಶಕದಲ್ಲಿ ಸ್ವಲ್ಪದರಲ್ಲಿ ಆದರೆ ನಿಃಸಂದಿಗ್ಧತನದಿಂದ ಒಂದೇ ಕಡೆಗೆ ತಂದು ಹೇಳಿದ್ದಾರೆ. ಅವನ್ನೆಲ್ಲ ಹೇಳಿ ಮುಗಿಸಿದೆವೆಂದರೆ ಗ್ರಂಥವು ಪೂರ್ಣವಾಗುವದು. ಆದ್ದರಿಂದ ಈ ದಶಕವು ಪೂರ್ಣ ದಶಕವಾಗಿದೆ. ಈ ದಶಕದಲ್ಲಿ ಹೇಳಿದಂಥ ಪ್ರಧಾನ ವಿಚಾರಗಳು ಮುಂದೆ ಹೇಳಿದಂತೆ ಇರುವವು.

(೧) ಮಾನವ ಶರೀರ ಅಂದರೆ ಬ್ರಹ್ಮಾಂಡವೆಂಬ ವೃಕ್ಷದ ಅತ್ಯುತ್ತಮ ಫಲವಿರುವದು. ನರದೇಹದಂತಹ ವಿಲಕ್ಷಣ ಯಂತ್ರ ಇನ್ನೊಂದಿಲ್ಲ.

(೨) ದೇವರ ಭೆಟ್ಟಿಯಾಗಬೇಕು ಎಂದು ಮನುಷ್ಯನಿಗೆ ಅನಿಸುವದು. ಆದರೆ ಇದಕ್ಕೆ ಅಜ್ಞಾನ ಮತ್ತು ಭೋಳೇತನದ ಭಾವ [ಏನೂ ತಿಳಿಯದ ಸರಳತನದ ಭಾವ] ಎರಡೂ ಉಪಯೋಗ ಬೀಳುವದಿಲ್ಲ.

(೩) ದೇವರ ಪ್ರಾಪ್ತಿಮಾಡಿಕೊಳ್ಳುವಲ್ಲಿ ಎರಡು ಮಾರ್ಗಗಳಿರುವವು. ಒಂದು ಪಿಪೀಲಿಕಾ [ಇರುವೆಯ] ಮಾರ್ಗ, ಇನ್ನೊಂದು ವಿಹಂಗಮ ಮಾರ್ಗ ಅಂದರೆ ಪಕ್ಷಿ ಮಾರ್ಗ! ಅಂತೂ ಒಂದು ಇರುವೆಯ ಮಾರ್ಗವು, ಮತ್ತೊಂದು ಪಕ್ಷಿಗಳ ಮಾರ್ಗವು.

(೪) ವಿವೇಕದ ಮಾರ್ಗ, ಇದು ವಿಹಂಗಮ [ಪಕ್ಷಿ] ಮಾರ್ಗವಿರುವದು. ಇದು ಬಹಳ ಉತ್ತಮ ಮಾರ್ಗವಿರುವದು. ಇದರಲ್ಲಿ ಸತತ ಮನನದಿಂದ ಮೊದಲಿಗೆ ಅಜ್ಞಾನದ ನಾಶವಾಗಿ ಜ್ಞಾನವು ಉದಯಹೊಂದುವದು. ಆದರೆ ಅಜ್ಞಾನ ಮತ್ತು ಜ್ಞಾನ ಇವೆರಡೂ ವೃತ್ತಿರೂಪವಿರುವದರಿಂದ ಜ್ಞಾನದ ಪರ್ಯವಸಾನವು ಕೊನೆಗೆ ವಿಜ್ಞಾನದಲ್ಲಿ ಘಟಿಸುವದು [ಆಗುವದು] ಆಗ ಅಲ್ಲಿ ಮನವು ಉನ್ಮನವಾಗುವದು.

(೫) ಆತ್ಮಸ್ವರೂಪವನ್ನು ಜ್ಞಾನ ದೃಷ್ಟಿಯಿಂದಲೇ ನೋಡಬೇಕಾಗುವದು. ಜ್ಞಾನ ದೃಷ್ಟಿ ಬರಲಿಕ್ಕೆ ಹೊರಗೆ [ಪ್ರತ್ಯೇಕವಾಗಿ] ಯಾವ ಬದಲಾವಣೆ ಮಾಡಲಿಕ್ಕೆ ಬೇಕಾಗಿಲ್ಲ ಒಳಗೆ ಅಂದರೆ ಅಂತರಂಗದಲ್ಲಿ ವಾಸ ಮಾಡಿರುವ ಮನಸ್ಸನ್ನು ಬದಲಾಯಿಸುವದು ಅವಶ್ಯವು. ಅಧೋಮುಖ ಇರುವ ಮನಸ್ಸನ್ನು ಊರ್ಧ್ವ ಮುಖ ಮಾಡಲಿಕ್ಕೆ ಬೇಕು.

(೬) ಪಿಂಡದ ಶೋಧವೇ ಮನದ ಮುಖ್ಯ ವಿಷಯವಿರಬೇಕು, ಸತತವಾಗಿ ಮಾಡುವ ಮನನದಿಂದ ರಾತ್ರೀ ಹಗಲೂ ಅರ್ಥಧಾರಣ ಮಾಡಬೇಕು. ಸ್ಥೂಲ [ಜಡ] ವನ್ನು ಹಿಂದಕ್ಕೆ ಒಗೆದು ಸೂಕ್ಷ್ಮದಲ್ಲಿ ಪ್ರವೇಶಿಸಬೇಕು, ಈ ರೀತಿಯಿಂದ ದೇಹದಲ್ಲಿಯೇ ನಿಷ್ಕಲಂಕ ಆತ್ಮಸ್ವರೂಪವನ್ನು ಅನುಭವಿಸಬೇಕು.

(೭) ಮೂಲ ಮಾಯೆಯಲ್ಲಿಯೇ ಸರ್ವ ದೃಶ್ಯ ಸೃಷ್ಟಿಯ ಬೀಜವಿರುವದು. ಮೂಲ ಸಂಕಲ್ಪವೇ ವಿಶ್ವದಲ್ಲಿ ಕೆಲಸಮಾಡುವದು. ಇದೇ ಅಂತರಾತ್ಮಾ ಅಥವಾ ಚೈತನ್ಯವಿರುವದು. ಇದಕ್ಕೇ ಸರ್ವದ್ರಷ್ಟಾ ಅಥವಾ ಸರ್ವ ಸಾಕ್ಷಿ ಎಂದು ಅನ್ನುವರು.

(೮) ತ್ರಿಗುಣ ಮತ್ತು ಪಂಚಭೂತ ಇವುಗಳಿಂದ ಯಾವತ್ತೂ ವಿಶ್ವವು ನಿರ್ಮಾಣವಾಗುವದು. ದೃಶ್ಯ ಪದಾರ್ಥಗಳಲ್ಲಿ ನಿರ್ಜೀವ ಮತ್ತು ಸಜೀವ ಹೀಗೆ ಭೇದ ಇರುವದೆಂಬುದು ಕಂಡುಬರುವದು. ಸಜೀವದಲ್ಲಿ ಮೂಲ ಅರಿವೇ ಹೆಚ್ಚು ಕಡಿಮೆ ಪ್ರಮಾಣದಿಂದ ಪ್ರಕಟವಾಗುವದು. ಇದರ ಪ್ರಕಟ ಪ್ರಕಾರಗಳು ಬಹಳವಿರುವವು.

(೯) ಮೂಲ ಅರಿವಿಗೆ ಶಿವಶಕ್ತಿ, ಪ್ರಕೃತಿ–ಪುರುಷ, ಅರ್ಧನಾರೀನಟೇಶ್ವರ, ಜಗದೀಶ್ವರ, ಹೀಗೆ ಎಷ್ಟೋ ಹೆಸರುಗಳು ಇರುವವು. ಇವುಗಳಿಗೇ ಅಂತರಾತ್ಮಾ ಅನ್ನುವರು. ಇವನೇ ನಿಜವಾದ ಕರ್ತಾ ಇದ್ದದ್ದರಿಂದ ಜಗತ್ತಿನಲ್ಲಿಯ ಯಾವತ್ತೂ ಘಡಾಮೋಡ [ಕಾರಭಾರ] ಗಳು ಇವನ ಸತ್ತೆಯಿಂದಲೇ ನಡೆಯುವವು.

(೧೦) ಪ್ರತಿಯೊಂದು ದೇಹದಲ್ಲಿ ಅಂತರಾತ್ಮಾನೇ ಕರ್ತಾತನದ ಹಿರಿತನದ ಅಧಿಕಾರವನ್ನು ಮೆರೆಯಿಸುವನು. ಯಾವ ದೇಹವು ಎಷ್ಟು ಸಾಮರ್ಥ್ಯದ್ದಿರುವದೋ ಅಷ್ಟೇ ಆ ದೇಹದ ಕರ್ತೃತ್ವ ಶಕ್ತಿ ಇರುವದು. ಯಾವ ದೇಹದಲ್ಲಿ ಅಂತರಾತ್ಮನ ಉದಂಡ [ಬಹಳ] ಸಾಮರ್ಥ್ಯ ಮತ್ತು ಕರ್ತೃತ್ವ ಪ್ರಕಟವಾಗುವದೋ ಅದಕ್ಕೆ ಅವತಾರ ಎಂದು ಅನ್ನುವರು.

(೧೧) ಯಾವ ದೇಹಕ್ಕೆ ಅಂತರಾತ್ಮನ ಅಖಂಡ [ಸತತ] ಅನುಸಂಧಾನ [ಲಕ್ಷ್ಯ, ಧ್ಯಾನ, ಅವಧಾನ, ಸಂಗತಿ] ಇರುವದೋ ಅವನೇ ಅನುಭವ ಹೊಂದಿದ ಖರೇ ಸಾಧು, ಸಂತ,ಶರಣ, ಇರುವನು. ಅಂತರಾತ್ಮನ ಅನುಸಂಧಾನವೇ ಇವನ [ಸಾಧುವಿನ] ಧ್ಯಾನ ಇರುವದು. ಇದರೊಳಗಿಂದಲೇ ಆತ್ಮಜ್ಞಾನವು ಉದಯ ಹೊಂದುವದು. "ನಾನು ಕೇವಲ ದ್ರಷ್ಟಾ [ನೋಡುವವ, ಜ್ಞಾತಾ] ಇರುವೆನು. ಸಾಕ್ಷಿ ಇರುವೆನು." ಈ ಅನುಭವ ಸಹಜ ಆಗುವಿಕೆ, ಸ್ಥಿರಗೊಳ್ಳುವಿಕೆ ಇದಕ್ಕೆ ಆತ್ಮ ಸಾಕ್ಷಾತ್ಕಾರ ಎಂದು ಅನ್ನುವರು.

(೧೨) ಆತ್ಮಜ್ಞಾನದಿಂದ ಅನಿವಾರ್ಯ ಅಪಾರವಾದ ಸಮಾಧಾನವು ಪ್ರಾಪ್ತವಾಗುವದು. ಈ ಸಮಾಧಾನವು ಯಾವುದರ ಪರಿಣಾಮದಿಂದಲೂ ಕಡಿಮೆ ಆಗುವದಿಲ್ಲ. ಸಾಧ್ಯವು ಅಂದರೆ ಗುರಿಯು ಪದರಿನಲ್ಲಿ ಬಿದ್ದದ್ದರಿಂದ ಜೀವದ ತಳಮಳವು ಶಾಂತವಾಗುವದು.

(೧೩) ಆತ್ಮಜ್ಞಾನವಾಗಿ ಆತ್ಮಾನಂದವನ್ನು ಭೋಗಿಸುವಂಥ ಸಂತ ಸಾಧು ಶರಣರನ್ನು ಶೋಧಿಸಬೇಕು. ಮತ್ತು ಇವರ ಮಾರ್ಗದರ್ಶನದ ಕೆಳಗೆ ನಾವು ಸಾಧನ ಮಾಡಬೇಕು. ಇದರಿಂದ ನಿಃಕಾರಣ ಶ್ರಮವು ಉಳಿಯುವದು. ಸಂದೇಹಗಳು ತೊಂದರೆಯನ್ನು ಕೊಡುವದಿಲ್ಲ.

(೧೪) ಪರಬ್ರಹ್ಮ ಸರ್ವದೇಶಿ ಅಂದರೆ ಎಲ್ಲಸ್ಥಳದಲ್ಲಿ ಇರುವವ ಮತ್ತು ಸರ್ವವ್ಯಾಪಿ ಇರುವನು. ಇವನಲ್ಲಿ ಕಲ್ಪನೆಗಳು ಮತ್ತು ಶಬ್ದಗಳು ಸುಳ್ಳು ಬೀಳುವವು. ಮನಸ್ಸಿನ ಶೋಧನ [ದೋಷ ನಿವಾರಣೆ] ಮಾಡಿಕೊಂಡು ಜ್ಞಾನ ದೃಷ್ಟಿಯನ್ನು ಸಂಪಾದಿಸಬೇಕು. ಮನವನ್ನು ಉನ್ಮನವನ್ನಾಗಿ ಮಾಡಿ ಜ್ಞಾನವನ್ನು ವಿಜ್ಞಾನದಲ್ಲಿ ರೂಪಾಂತರ ಮಾಡಬೇಕು. ಈ ರೀತಿಯಲ್ಲಿ ಸ್ವತಃದ ಅನುಭವದಿಂದ ಗುರುತನ್ನು [ಗುರಿಯನ್ನು] ಪಟಾಯಿಸಿಕೊಳ್ಳಬೇಕು. [ಖಾತ್ರಿಮಾಡಿಕೊಳ್ಳಬೇಕು.]

(೧೫) ದಾಸಬೋಧದಲ್ಲಿ ಇಪ್ಪತ್ತು ದಶಕ ಮತ್ತು ಎರಡುನೂರು ಸಮಾಸಗಳಿರುವವು. ಬ್ರಾಹ್ಮಿ ಅವಸ್ಥೆಯಲ್ಲಿದ್ದಾಗ ಶ್ರೀ ಸಮರ್ಥರ ದಿವ್ಯವಾಣಿಯಿಂದ ಇವು ಸಹಜತನದಿಂದ ಪ್ರಕಟವಾದಂಥ ವಚನಗಳಿರುವವು. ಪರಮಾತ್ಮನು ಇದರ ಕರ್ತಾ ಇರುವನು. ಇವನ ಸತತ ಚಿಂತನ ಮತ್ತು ಮನನ ಯಾರು ಮಾಡುವರೋ ಅವರಿಗೆ ಖಾತ್ರಿಯಿಂದ ಬ್ರಹ್ಮಜ್ಞಾನವು ಪ್ರಾಪ್ತವಾಗುವದು.

# ದಶಕ ೨೦. ಸಮಾಸ ೧. ಪೂರ್ಣಾಪೂರ್ಣ ನಿರೂಪಣ (ನುಡಿ ೪೦)

ಶ್ರೋತಾ ಜನರ ಎರಡು ಪ್ರಶ್ನೆಗಳಿಂದ ಈ ಸಮಾಸವು ಪ್ರಾರಂಭವಾಗುವದು. [ಪ್ರಶ್ನೆ ೧] : ಪರಬ್ರಹ್ಮನು ವ್ಯಾಪಕನಿರುವನು ಎಂದು ಅನ್ನುವರು. ಆದರೆ ಈ ದೃಶ್ಯ ವಿಶ್ವದಲ್ಲಿ ಮನ, ಆಕಾಶ, ಮೂಲ ಮಾಯಾ, ಅಂತರಾತ್ಮಾ ಇಂತಹ ವಸ್ತುಗಳ ವ್ಯಾಪಕ ಇರುವವೆಂದು ಕಂಡುಬರುವವು. ಅಂದ ಮೇಲೆ ನಿರ್ಗುಣ ಬ್ರಹ್ಮನ ವ್ಯಾಪಕತನಕ್ಕೂ ಮತ್ತು ಈ ಮೇಲೆ ಹೇಳಿದ ದೃಶ್ಯ ವಸ್ತುಗಳ ವ್ಯಾಪಕತನಕ್ಕೂ ಯಾವ ಬಗೆಯ ಅಥವಾ ಯಾವ ರೀತಿಯಲ್ಲಿ ಅಂತರ-ವ್ಯತ್ಯಾಸ ಇರುವದು? [ಪ್ರಶ್ನೆ ೨]: ಆತ್ಮ ಈ ಶಬ್ದ ಉಪಯೋಗಿಸುವ ಇದಕ್ಕೆ ಎರಡು ಅರ್ಥ ಇರಬಹುದಾಗಿದೆ. ಅಥವಾ ಇರುವದು ಶಕ್ಯವಿರುವದು. ಆತ್ಮಾ ಅಂದರೆ ಅಂತರಾತ್ಮಾ, ದ್ರಷ್ಟಾ ಅಥವಾ ಸಾಕ್ಷಿ ಎಂದು ಅರ್ಥವಾಗುವದು. ಅಂತರಾತ್ಮಾ ಸಗುಣ ಇರುವನು. ಆತ್ಮಾ ಅಂದರೆ ದ್ರಷ್ಟಾ [ನೋಡುವವನು] ತನ್ನ ಅಥವಾ ಸಾಕ್ಷಿತನದ ನಿರ್ಮಲ [ಮಲ ಇಲ್ಲದ-ಸ್ವಚ್ಛ] ಕೇವಲ ನಿರಂಜನ ಸ್ವರೂಪ ಎಂದು ಸಹ ಅರ್ಥವಾಗುವದು, ನಿರಂಜನ ಆತ್ಮಸ್ವರೂಪವು ನಿರ್ಗುಣ ಇರುವದು. ಅಂದಮೇಲೆ ಆತ್ಮಾ ಅನ್ನುವದು ಸಗುಣ ಇರುವದೋ ಅಥವಾ ನಿರ್ಗುಣ ವ ನಿರಂಜನವಿರುವದೋ ? ಇದನ್ನು ತಿಳಿಸಿರಿ. [ ೧ನೆಯ ಪ್ರಶ್ನೆಗೆ ಉತ್ತರ: ] ವಿಶಾಲ ಮತ್ತು ವ್ಯಾಪಕ ಇವುಗಳಲ್ಲಿ ವ್ಯತ್ಯಾಸ [ಅಂತರ] ಇರುವದು. ಮನ, ಪೃಥ್ವಿ, ವಾಯು-ಸತ್ವ, ರಜ,ತಮ ಈ ತ್ರಿಗುಣಗಳು ಮತ್ತು ಗುಣಕ್ಷೋಭಿಣಿ ಮಾಯಾ ಈ ತತ್ವಗಳು ವಿಶಾಲ ಇರುವವು. ದೃಶ್ಯ, ಸ್ಥಳ, ಕಾಲಗಳಿಂದ ಮರ್ಯಾದಿತ ಇರುವವು. ದೃಶ್ಯದ ಪೈಕಿ ಯಾವುದು ಸ್ಥೂಲ [ಜಡ] ಇರುವದೋ ಅದಕ್ಕಿರುವ ಸ್ಥಳ ಕಾಲಗಳ ಮರ್ಯಾದೆ [ಅಳತೆ] ಯು ಹೆಚ್ಚು ಆಕುಂಚಿತ ಇರುವದು. ನಾವು ಇವುಗಳನ್ನು ಎಣಿಸಲು ಶಕ್ಯವಾಗುವದು.ಆದರೆ ಈ ದೃಶ್ಯದ ಪೈಕಿ ಯಾವುದು ಸೂಕ್ಷ್ಮವಿರುವದೋ ಅದಕ್ಕಿರುವ ಸ್ಥಳ ಕಾಲಗಳ ಮರ್ಯಾದೆ [ಅಳತೆ] ಅಕುಂಚಿತ ಅರ್ಥಾತ್ ಸಂಕುಚಿತವಿರುವದಿಲ್ಲ. ನಾವು ಇವುಗಳನ್ನು ಎಣಿಸಲಿಕ್ಕೆ ಆಗುವದಿಲ್ಲ. ಅಂತೆಯೇ ಇದಕ್ಕೆ ವಿಶಾಲ ಎಂದು ಅನ್ನುವರು. ಇದರ ಹೊರತಾಗಿ ಸೂಕ್ಷ್ಮ ದೃಶ್ಯವು ಚುಚಲವಿರುವದರಿಂದ ವಿನಾಶಿ ಅಂದರೆ ನಾಶ ಹೊಂದುವಂಥದು ಮತ್ತು ಏಕದೇಶಿ ಅಂದರೆ ಮರ್ಯಾದಿತ ಇರುವದು. ಆದ್ದರಿಂದ ಸೂಕ್ಷ್ಮ ದೃಶ್ಯವು ವ್ಯಾಪಕ ಆಗಲಿಕ್ಕೆ ಸಾಧ್ಯವಿಲ್ಲ. ಇದರ ಉಲಟ ಪರಬ್ರಹ್ಮವೂ ಸೂಕ್ಷ್ಮ ಇರುವದು. ಆದರೆ ಇದು ನಿಶ್ಚಲ ಮತ್ತು ಅವಿನಾಶಿ ಇರುವದು. ಅಂತೆಯೇ ಇದು ಸರ್ವದೇಶಿ ಇರುವದು. ವಸ್ತು ಬರುವವು ಮತ್ತು ಹೋಗುವವು. ಆದರೂ ಕೂಡಾ ಪರಬ್ರಹ್ಮವು ಮಾತ್ರ ಹೇಗಿದ್ದಿತೋ ಹಾಗೇ ಇರುವದು. ಅಂತೆಯೇ ಇದು ವ್ಯಾಪಕವಿರುವದು-ಸ್ಥಿರವಾದದ್ದಿರುವದು. [೨ನೆಯ ಪ್ರಶ್ನೆಗೆ ಉತ್ತರ:] ಮೂಲ ಪರಮಾತ್ಮ ವಸ್ತುವು ಗುಣ ರಹಿತವಿರುವದು. ನಮಗೆ ಗುಣಗಳ ಕಲ್ಪನೆಯು ತಿಳುವಳಿಕೆ ಇರುವದು. ಈ ಗುಣ ಎಲ್ಲಿ ಯಾವುದರಲ್ಲಿ ಇಲ್ಲವೋ ಅದಕ್ಕೆ ನಾವು ನಿರ್ಗುಣ ಎಂದು ಅನ್ನುವೆವು. ಮಾನವೀ ಅನುಭವದ ಪರಿಮಿತಿಯ ವ್ಯಾಪ್ತಿ, [ಕಕ್ಷೆ] ಯನ್ನು ನೋಡಿದ್ದಾದರೆ ಅವು ಮೂರು ಇರುವದು ಕಂಡುಬರುವದು. ಪಿಂಡದಲ್ಲಿ ಕಂಡುಬರುವ ಅರಿವು [ಜಾಣೀವ] ಇದು [೧] ಒಂದನೆಯ ಕಕ್ಷೆಯು. ಇದಕ್ಕೆ ಜೀವ ಎಂದು ಅನ್ನುವರು. ಬ್ರಹ್ಮಾಂಡದಲ್ಲಿ ಕಂಡುಬರುವಂಥ ಅರಿವು ಇದು [೨] ಎರಡನೆಯ ಕಕ್ಷೆಯು. ಇದಕ್ಕೆ ಶಿವ ಅಥವಾ ಈಶ್ವರ ಅಥವಾ ಅಂತರಾತ್ಮಾ ಹೀಗೆ ಅನ್ನುವರು. ಈ ಯಾವತ್ತೂ ವಿಶ್ವವನ್ನು ಕಿವುಚಿ ಅದರ ಆಚೆಗೆ ಅಪರಂಪಾರ ಇರುವಂಥ ಅರಿವು [ಜಾಣೀವ] ಇದು [೩] ಮೂರನೆಯ ಕಕ್ಷೆಯು ಇರುವದು. ಈ ಕಲ್ಪನಾತೀತ ಸದ್ವಸ್ತುವಿಗೆ ಪರಬ್ರಹ್ಮ ಎಂದು ಅನ್ನುವರು. ಜೀವವು ಅಜ್ಞಾನಿ ಇದ್ದು ಸಗುಣ ಇರುವದು. ಅದೇ ಈಶ್ವರ-ಜ್ಞಾನಿ ಇದ್ದು ಸಗುಣ ಇರುವದು. ಆದರೆ ಜ್ಞಾನ ಮತ್ತು ಅಜ್ಞಾನ ಇವುಗಳ ಆಚೆಗೆ ಇರುವಂಥ ಪರಬ್ರಹ್ಮವು ಗುಣರಹಿತವಿರುವದು. ಆದ್ದರಿಂದ ಆತ್ಮಾ ಎಲ್ಲಿಯವರೆಗೆ ದ್ರಷ್ಟಾ ಮತ್ತು ಸಾಕ್ಷಿ ಇರುವನೋ ಅಲ್ಲಿಯವರೆಗೆ ಇವನು[ಆತ್ಮಾ]ಸಗುಣ ಇರುವದು. ಇವನ ದ್ರಷ್ಟೃತನ ಮತ್ತು ಸಾಕ್ಷೀತನ ಲೋಪವಾದ ಕೂಡಲೇ [ಮುಗಿಯಿತೆಂದರೆ, ಇಲ್ಲದಾಯಿತೆಂದರೆ] ಇವನು [ಆತ್ಮಾ] ನಿರ್ಗುಣ ಮತ್ತು ನಿರಂಜನ ಇರುವನು. "ನಾನು ದೇಹ ಇರುವೆನು" ಈ ವೃತ್ತಿ ಅಂದರೆ ಅಜ್ಞಾನವು. ಅದೇ "ನಾನು ಬ್ರಹ್ಮ ಇರುವೆನು." ಈ ವೃತ್ತಿ ಅಂದರೆ ಜ್ಞಾನ

ವಿರುವದು. ಅರ್ಥಾತ್ ಅಜ್ಞಾನವು ಹೇಗೆ ವೃತ್ತಿರೂಪ ಇರುವದೋ ಅದರಂತೆ ಜ್ಞಾನವೂ ಸಹಿತ ವೃತ್ತಿರೂಪ ವಿರುವದು. ಮನವು ಉನ್ಮನ ಅಂದರೆ ಈಶ ಚಿಂತನೆಯಲ್ಲಿಯೇ ಮನವು ನಿಮಗ್ನವಾಗುವಿಕೆ. ಹೀಗೆ ಆಯಿತೆಂದರೆ ಆ ಕ್ಷಣದಲ್ಲಿಯೇ ಜ್ಞಾನವು ವಿಜ್ಞಾನದಲ್ಲಿ–ವೃತ್ತಿಶೂನ್ಯ ಅವಸ್ಥೆಯಲ್ಲಿ ರೂಪಾಂತರ ಹೊಂದುವದು. ಮತ್ತು ಸಂಪೂರ್ಣ ನಿವೃತ್ತಿ ಉಂಟಾಗುವದು. ಬ್ರಹ್ಮದಲ್ಲಿ ಲಯ ಹತ್ತುವದು. ಇದಕ್ಕೆ ಉನ್ಮನೀ ಅವಸ್ಥೆ ಅನ್ನುವರು. ಇದು ಐದನೆಯ ಅವಸ್ಥೆಯು ಅರ್ಥಾತ್ ಕೊನೆಯ ಅವಸ್ಥೆಯು. ಇವನಲ್ಲಿ ವೃತ್ತಿ ಉಳಿದಿರುವದಿಲ್ಲ.ಈ ಎಲ್ಲ ದೃಶ್ಯವು ವಿಶ್ವವು ಜ್ಞಾನ ವೃತ್ತಿಯಲ್ಲಿಂದಲೇ ನಿರ್ಮಾಣವಾಗಿರುವದು. ಆದ್ದರಿಂದ ಇವನ ವ್ಯವಹಾರದಲ್ಲಿ ಯೋಜನೆ ಮತ್ತು ವ್ಯವಸ್ಥೆಯು ಕಂಡುಬರುವದು.

### ದಶಕ. ವಿಂಶತೀ : ಸಮಾಸ. ಪ್ರಥಮ : ಪೂರ್ಣಾಪೂರ್ಣ ನಿರೂಪಣ (ನುಡಿ ೩೦)

॥ಶ್ರೀರಾಮ॥ ಪ್ರಾಣೇ ವ್ಯಾಪಕ ಮನ ವ್ಯಾಪಕ । ಪೃಥ್ವೀ ಆಪ ತೇಜ ವ್ಯಾಪಕ ।
ವಾಯೋ ಆಕಾಶ ತ್ರಿಗುಣ ವ್ಯಾಪಕ । ಅಂತರಾತ್ಮಾ ಮೂಳಮಾಯಾ ॥೧॥

ನಿರ್ಗುಣ ಬ್ರಹ್ಮ ತೇ ವ್ಯಾಪಕ । ಐಸೇ ಅವಘೇ ಚ ವ್ಯಾಪಕ ।
ತರೀ ಹೇ ಸಗಟ ಕೀ ಕಾಯೆ ಯೇಕ । ಭೇದ ಆಹೇ ॥೨॥

ಆತ್ಮಾ ಆಣಿ ನಿರಂಜನ । ಯೇಣೇ ಹಿ ವಾಟತೋ ಅನುಮಾನ ।
ಆತ್ಮಾ ಸಗುಣ ಕೀ ನಿರ್ಗುಣ । ಆಣಿ ನಿರಂಜನ ॥೩॥

ಶ್ರೋತಾ ಸಂದೇಹೀ ಪಡಿಲಾ । ತೇಣೇ ಸಂದೇಹ ವಾಢಲಾ ।
ಅನುಮಾನ ಧರೂನ ಬೈಸಲಾ । ಕೋಣ ತೋ ಕೈಸಾ ॥೪॥

ಐಕಾ ಪಹಿಲೀ ಆಶಂಕಾ । ಅವಘಾ ಗಲ್ಬಲಾ ಕರೂ ನಕಾ ।
ಪ್ರಗಟ ಕರೂನ ವಿವೇಕಾ । ಪ್ರತ್ಯಯೋ ಪಾಹಾವಾ ॥೫॥

ಶರೀರಪಾಡೇ ಸಾಮರ್ಥ್ಯಪಾಡೇ । ಪ್ರಾಣೇ ವ್ಯಾಪ ಕರೀ ನಿವಾಡೇ ।
ಪರೀ ಪಾಹಾತಾ ಮನಾಯೆವಢೇ । ಚಪಳ ನಾಹೀ ॥೬॥

## ದಶಕ ೨೦. ಸಮಾಸ ೧. ಪೂರ್ಣಾಪೂರ್ಣ ನಿರೂಪಣ (ನುಡಿ ೩೦)

ಆರಂಭದಲ್ಲಿಯೇ ಶ್ರೋತಾ ವಕ್ತಾನಿಗೆ ಎರಡು ಪ್ರಶ್ನೆಗಳನ್ನು ವಿಚಾರಿಸುವನು. ಮನ, ಪೃಥ್ವಿ, ಆಪ, ತೇಜ, ವಾಯು, ಆಕಾಶ ಮತ್ತು ತ್ರಿಗುಣಗಳು, ಅಂತರಾತ್ಮಾ, ಮೂಲಮಾಯಾ ಈ ಎಲ್ಲ ತತ್ವಗಳು ವ್ಯಾಪಕ ಇರುವವು. ಪರಬ್ರಹ್ಮವೂ ಸಹ ವ್ಯಾಪಕ ಇರುವದು. ಈ ಎರಡರ ವ್ಯಾಪಕತನದಲ್ಲಿ ಏನು ವ್ಯತ್ಯಾಸ ಇರುವದು ? ಅದರಂತೆಯೇ ಆತ್ಮನು ಸಗುಣ ಇರುವನೋ ಅಥವಾ ನಿರ್ಗುಣ ಇರುವನೋ ? ಇವೇ ಆ ಪ್ರಶ್ನೆಗಳು : ಪ್ರಾಣಿ [ಜೀವ, ಜಂತು] ವ್ಯಾಪಕವಿರುವದು. ಮತ್ತು ಮನವು ವ್ಯಾಪಕವಿರುವದು. ಇದರಂತೆ, ಪೃಥ್ವಿ, ಆಪ್, ತೇಜ, ವಾಯು, ಆಕಾಶ. ಈ ಪಂಚಭೂತಗಳು ಮತ್ತು ಸತ್ವ, ರಜ, ತಮ ಈ ಮೂರು ತ್ರಿಗುಣಗಳು, ಅಂತರಾತ್ಮಾ ಮತ್ತು ಮೂಲಮಾಯಾ ಈ ಎಲ್ಲ ತತ್ವಗಳೂ ಕೂಡಾ ವ್ಯಾಪಕವಿರುವವು. ಪ್ರಾಣಿಯು ಪ್ರಾಣಿತನದಿಂದ ವ್ಯಾಪಕ ವಿರುವದು. ಉದಾ: ಮನುಷ್ಯ ಅಂದಕೂಡಲೇ ಸರ್ವಕಾಲದಲ್ಲಿ ಮತ್ತು ಸರ್ವ ಠಿಕಾಣೆ, ಸರ್ವ ಮನುಷ್ಯರು ಮನುಷ್ಯತನದಿಂದ ಅಂದರೆ ಮನುಷ್ಯರ ರೀತಿ ನೀತಿ, ರಿವಾಜು ದೊಡ್ಡಿಸ್ತನಗಳ ದೃಷ್ಟಿಯಿಂದ ಒಂದೇ ತರ, ಒಂದೇ ರೀತಿ, ಒಂದೇ ಸಮ ಇರುವರು. ಇದೇ ನಿಯಮವು ಮನಕ್ಕೂ ಅನ್ವಯಿಸುವದು. ಉಳಿದ [ಬಾಕಿ] ತತ್ವಗಳು ವ್ಯಾಪಕವೇ ಇರುವವು ಅನ್ನುವದು ಒಡೆದು ಕಾಣುವಂಥದೇ ಇರುವದು. ಸ್ಪಷ್ಟ ಇರುವದು. (೧) ನಿರ್ಗುಣ ಬ್ರಹ್ಮವೂ ಕೂಡಾ ವ್ಯಾಪಕವಿರುವದು. ಈ ರೀತಿಯಿಂದ ಚಂಚಲದಲ್ಲಿಯ ಸರ್ವ ತತ್ವಗಳು ಮತ್ತು ನಿಶ್ಚಲಬ್ರಹ್ಮ ಎಲ್ಲವೂ ವ್ಯಾಪಕವೇ ಇರುವವು. ಅಂದ ಮೇಲೆ ಈಗ ಇಲ್ಲಿ ಪ್ರಶ್ನೆ ಏನಂದರೆ ಈ ಎಲ್ಲವೂ ಒಂದೇ ಪ್ರಕಾರದಲ್ಲಿ ಒಂದೇ ಸಮಯದಲ್ಲಿ ವ್ಯಾಪಕ ಇರುವವೋ ಅಥವಾ ಇವುಗಳ ವ್ಯಾಪಕತನದಲ್ಲಿ ಏನಾದರೂ ಅಂತರ [ವ್ಯತ್ಯಾಸ] ಇರುವದೋ ? (೨) ಆತ್ಮಾ ಮತ್ತು ನಿರಂಜನ ಇವುಗಳ ಬಗ್ಗೆ ಕೂಡಾ ಮನದಲ್ಲಿ ಕೆಲವು ಸಂದೇಹಗಳು ಉತ್ಪನ್ನ ವಾಗುವವು ಆತ್ಮಾ ಸಗುಣ ಇರುವನೋ ಅಥವಾ ನಿರ್ಗುಣ ಮತ್ತು ನಿರಂಜನ ಇರುವನೋ? ಹೀಗೆ ಸಹ ಪ್ರಶ್ನೆಯು ಎದುರು ಬಂದು ನಿಲ್ಲುವದು. (೩) ಶ್ರೋತ್ರು ಜನರ ಮನದಲ್ಲಿ ಹೀಗೆ ಸಂದೇಹ ನಿರ್ಮಾಣವಾಯಿತು. ಮತ್ತು ಅದು ಬೆಳೆಯುತ್ತ ನಡೆಯಿತು. ಯಾರು ಹೇಗೆ ಇರುವರು ? ಅನ್ನುವ ಪ್ರಶ್ನೆಯು ಮುಂದೆ ಬಂದು ಶ್ರೋತಾ ಕಲ್ಪನಾಮಾಡುತ್ತ-ಕುಳಿತನು. (೪) ಪ್ರಥಮಕ್ಕೆ ಮೊದಲಿಗೆ ಒಂದನೆಯ ಪ್ರಶ್ನೆಗೆ ಉತ್ತರವನ್ನು ಹೇಳುವನು : ಮೊದಲಿಗೆ ನಿಮ್ಮ ಒಂದನೆಯ ಶಂಕಾ [ಸಂಶಯ] ದ ಬಗ್ಗೆ ಉತ್ತರಕೊಡುವೆ ಕೇಳಿರಿ. ಎಲ್ಲದಕ್ಕೂ ಎಲ್ಲರೂ ಗದ್ದಲ ಮಾಡಬೇಡಿರಿ ವಿವೇಕದಿಂದ ವಿಚಾರ ಮತ್ತು ವಿವರಣ ಮಾಡಿಕೊಂಡು ಪ್ರತ್ಯಕ್ಷ ಬರುವ ಅನುಭವ ನೋಡಬೇಕು. (೫) ಪ್ರಾಣಿಯು ಶರೀರ ಸಣ್ಣದು ದೊಡ್ಡದು ಇರುವದು. ಇದರ ಮಾನದಿಂದ ಅದರ ಸಾಮರ್ಥ್ಯವಿರುವದು. ತಮ್ಮ ಸಾಮರ್ಥ್ಯಕ್ಕನುಸರಿಸಿ ಪ್ರತಿಯೊಂದು ಪ್ರಾಣಿಯು ಸಣ್ಣ ದೊಡ್ಡ ವ್ಯಾಪಾರ [ಕ್ರಿಯೆ, ಪರಿಶ್ರಮ, ಉದ್ಯೋಗ ಧಂದೆ, ವ್ಯವಹಾರ] ಮಾಡುವದು. ಆದರೆ ಇದರ ಅಂದರೆ ಪ್ರಾಣಿಯ ಶರೀರ ಸ್ಥೂಲವಿರುವದು. ಇದು ಮನಸ್ಸಿನಷ್ಟು ಚಪಲವಿರುವದಿಲ್ಲ. (೬)

ಚಪಳಪಣ ಯೋಕದೇಸೀ । ಪೂರ್ಣ ವ್ಯಾಪಕತಾ ನವ್ಹೆ ತ್ಯಾಸೀ ।
ಪಾಹಾತಾ ಪೃಥ್ವೀಚ್ಯಾ ವ್ಯಾಪಾಸೀ । ಸೀಮಾ ಆಹೇ ॥೭॥

ತೈಸೇಚಿ ಆಪ ಆಣಿ ತೇಜ । ಅಪೂರ್ಣ ದಿಸತೀ ಸಹಜ ।
ವಾಯೋ ಚಪಳ ಸಮಜ । ಯೋಕದೇಸೀ ॥೮॥

ಗಗನ ಆಣಿ ನಿರಂಜನ । ತೇ ಪೂರ್ಣ ವ್ಯಾಪಕ ಸಘನ ।
ಕೋಣೀ ಯೋಕ ಅನುಮಾನ । ತೇಥೇ ಅಸೇಚಿನಾ ॥೯॥

ತ್ರಿಗುಣ ಗುಣಕ್ಷೋಭಿಣೀ ಮಾಯಾ । ಮಾಈಕ ಜಾಈಲ ವಿಲಯಾ ।
ಅಪೂರ್ಣ ಯೋಕದೆಸೀ ತಯಾ । ಪೂರ್ಣ ವ್ಯಾಪಕತಾ ನ ಘಡೇ ॥೧೦॥

ಆತ್ಮಾ ಆಣಿ ನಿರಂಜನ । ಹೇ ದೋಹೀಕಡೆ ನಾಮಾಭಿದಾನ ।
ಅರ್ಥಾನ್ವಯೆ ಸಮಜೋನ । ಬೋಲಣೇ ಕರಾವೇ ॥೧೧॥

ಆತ್ಮಾ ಮನ ಅತ್ಯಂತ ಚಪಳ । ತರೀ ಹೇ ವ್ಯಾಪಕ ನವ್ಹೇಚಿ ಕೇವಳ ।
ಸುಚಿತ ಅಂತಃಕರ್ಣ । ನಿವಳಕರೂನ ಪಾಹಾವೇ ॥೧೨॥

ಅಂತರಾಳೀ ಪಾಹಾತಾ ಪಾತಾಳೀ ನಾಹೀ ।
ಪಾತಾಳೀ ಪಾಹಾತಾ ಅಂತರಾಳೀ ನಾಹೀ ।
ಪೂರ್ಣಪಣೇ ವಸತ ನಾಹೀ । ಚಹೂಕಡೆ ॥೧೩॥

ಪುಢೇ ಪಾಹಾತಾ ಮಾಗೇ ನಾಹೀ । ಮಾಗೇ ಪಾಹಾತಾ ಪುಢೇ ನಾಹೀ ।
ವಾಮ ಸವ್ಯ ವ್ಯಾಪ ನಾಹೀ । ದಶದಿಶಾ ॥೧೪॥

ಚಹುಕಡೆ ನಿಶಾಣೆ ಮಾಂಡಾವೀ । ಯೋಕಸರೀ ಕೈಸೀ ಸಿವಾವೀ ।
ಯಾಕಾರಣೇ ಸಮಜೋನ ಉಗವೀ । ಪ್ರತ್ಯಯೋ ಆಪಣಾಸೀ ॥೧೫॥

ಆದರೆ ಚಪಲತನ ಅಥವಾ ಚಂಚಲತನವು ಮೂಲದಲ್ಲಿಯೇ ಏಕದೇಶೀ ಮರ್ಯಾದಿತ ಇರುವದು. ಇದರಲ್ಲಿ ಪೂರ್ಣ ವ್ಯಾಪಕತನ ಇರಲು ಶಕ್ಯವಿಲ್ಲ. ಆದ್ದರಿಂದ ಮನದ ವ್ಯಾಪಕತನಕ್ಕೆ ಮರ್ಯಾದೆ [ಸೀಮೆ. ಹದ್ದು] ಇರುವದು, ಪೃಥ್ವಿಯ ವ್ಯಾಪಕತೆಯನ್ನು ನೋಡಿದ್ದಾದರೆ ಅದಕ್ಕೂ ಸೀಮೆ [ಹದ್ದು] ಇರುವದು, ಅರ್ಥಾತ್ ಪ್ರಾಣ, ಮನ ಮತ್ತು ಪೃಥ್ವಿ ಇವು ಸಂಪೂರ್ಣ ವ್ಯಾಪಕ ಇರುವದಿಲ್ಲ. (೭) ಇದರಂತೆ ನೀರು [ಆಪ್] ಮತ್ತು ತೇಜ ಇವೆರಡೂ ಸಹಜವಾಗಿ ಅಪೂರ್ಣ ಇರುವವೆಂದು ಕಂಡುಬರುವದು. ಪೃಥ್ವಿಯಂತೆ ನೀರಿಗೂ ಮತ್ತು ಅಗ್ನಿಗೂ ಮರ್ಯಾದಾ ಇರುವದರಿಂದ ಇವುಗಳಲ್ಲಿ ಸಂಪೂರ್ಣ ವ್ಯಾಪಕತನವಿರುವದಿಲ್ಲ. ವಾಯುವಾದರೋ ಮೂಲದಿಂದಲೇ ಚಪಲಮತ್ತುಚಂಚಲ ಇರುವದು. ಈ ಕಾರಣದಿಂದ ಈ ವಾಯುವು ಸಹಜವಾಗಿಯೇ ಏಕದೇಶೀ ಇರುವದು. (೮) ಆಕಾಶ ಮತ್ತುನಿರಂಜನ ಈ ಎರಡೂ ಪೂರ್ಣವಾಗಿ ವ್ಯಾಪಕ ಇರುವವು. ಮತ್ತು ನಿಬಿಡ, ಘನದಟ್ಟಾಗಿ ಸಂಪೂರ್ಣ ತುಂಬಿದ್ದು ಇರುವವು ಇದರ ಬಗ್ಗೆ ಯಾರೂ ಯಾವ ಸಂದೇಹಪಡುವ ಕಾರಣವೇ ಇರುವದಿಲ್ಲ (೯) ತ್ರಿಗುಣಗಳು ಮತ್ತು ಗುಣಕ್ಷೋಭಿಣಿ ಮಾಯಾ [ತ್ರಿಗುಣಯುಕ್ತ ಮಾಯಾ] ಈ ಎರಡೂ ಮಾಯಿಕ ಇರುವವು. ಯಾವುದು ಮಾಯಿಕ ಇರುವದೋ ಅದು ನಾಶವಂತ ಇರುವದು. ಯಾವುದು ನಾಶವಂತ ಇರುವದೋ ಅದು ಅಪೂರ್ಣ ಏಕದೇಶೀ ಇರುವದು. ಇದಕ್ಕೆ ಪೂರ್ಣ ವ್ಯಾಪಕತೆ ಇರಲು ಶಕ್ಯವಿಲ್ಲ. ಆದ್ದರಿಂದ ತ್ರಿಗುಣಗಳು ಮತ್ತು ಗುಣಕ್ಷೋಭಿಣಿ ಮಾಯಾ ಇವು ಪೂರ್ಣ ವ್ಯಾಪಕ ಇರುವದಿಲ್ಲ. (೧೦) ಈಗ ಎರಡನೆಯ ಪ್ರಶ್ನೆಗೆ ಉತ್ತರ ಹೇಳುವರು : ಆತ್ಮಾ [ಜೀವಾತ್ಮಾ] ಮತ್ತು ನಿರಂಜನ [ಬ್ರಹ್ಮ–ನಿರ್ಗುಣ] ಇವುಗಳಿಗೆ ಎರಡೂ ಕಡೆಯಲ್ಲಿ ಒಂದೇ ಹೆಸರು ಇರುವದು. ಆದರೆ ಅರ್ಥದ ಸಂದರ್ಭ ನೋಡಿಕೊಂಡು ಆ ಪ್ರಕಾರ ಮಾತನಾಡಬೇಕು [ಅರ್ಥಮಾಡಬೇಕು]. ಆತ್ಮಾಶಬ್ದವನ್ನು ಜೀವಾತ್ಮಾ ಈ ಅರ್ಥದಿಂದಲೂ ಉಪಯೋಗಿಸುವರು. ಮತ್ತು ನಿರಂಜನ ಬ್ರಹ್ಮ ಎಂಬ ಅರ್ಥದಲ್ಲಿಯೂ ಸಹ ಉಪಯೋಗಿಸುವರು. ಆದ್ದರಿಂದ ಆತ್ಮಾ ಶಬ್ದವನ್ನು ಯಾವ ಅರ್ಥದಿಂದ ಉಪಯೋಗಿಸಿರುವರು ಅನ್ನುವದನ್ನು ಲಕ್ಷ್ಯದಲ್ಲಿ ತೆಗೆದುಕೊಂಡು ಆ ಮೇಲೆ ಮಾತನಾಡಬೇಕು. (೧೧) ಆತ್ಮಾ ಎಂದರೆ ಜೀವಾತ್ಮಾ ಎಂದು ಅರ್ಥಮಾಡಿಕೊಂಡರೆ ಅಥವಾ ತೆಗೆದುಕೊಂಡರೆ ಆಗ ಆತ್ಮಾ ಮತ್ತು ಮನ ಇವು ಅತ್ಯಂತ ಚಪಲ, ಚಂಚಲ ಇರುವವು. ಇದರಿಂದಾಗಿ ಜೀವಾತ್ಮಾ ವ್ಯಾಪಕ ಇರಲು ಸಾಧ್ಯವಿಲ್ಲ. ಇದೆಲ್ಲವನ್ನೂ ನಮ್ಮ ಅಂತಃಕರಣವನ್ನು ಸ್ವಸ್ಥ, ಮತ್ತು ಸ್ವಚ್ಛ ಮಾಡಿಕೊಂಡು ನೋಡಬೇಕು. ಅಂದರೆ ತಿಳಿಯುವದು. (೧೨) ಜೀವಾತ್ಮನು ಅಂತರಾಳ ಆಕಾಶದಲ್ಲಿ ಹೋಗುವನು, ಆಗ ಇವನು ಪಾತಾಳದಲ್ಲಿ ಇರುವದಿಲ್ಲ. ಯಾವಾಗ ಇವನು ಪಾತಾಳದಲ್ಲಿ ಹೋಗುವನೋ ಆಗ ಇವನು ಅಂತರಾಳದಲ್ಲಿ ಇರುವದಿಲ್ಲ. [ಮೇಲೆ ಇದ್ದರೆ ಕೆಳಗೆ ಇಲ್ಲ. ಕೆಳಗೆ ಇದ್ದರೆ ಮೇಲೆ ಇಲ್ಲ]. ಈ ಕಾರಣಗಳಿಂದಾಗಿ ಒಂದೇ ವೇಳೆಯಲ್ಲಿ ಇವನು [ಜೀವಾತ್ಮನು] ಸರ್ವಸ್ಥಳದಲ್ಲಿ [ಠಿಕಾಣೆಯಲ್ಲಿ] ಪೂರ್ಣತನದಿಂದ ವ್ಯಾಪಿಸಿರುವದಿಲ್ಲ. (೧೩) ಇವನು ಮುಂದೆ ಇದ್ದರೆ ಹಿಂದೆ ಇರುವದಿಲ್ಲ. ಹಿಂದೆ ಇದ್ದರೆ ಮುಂದೆ ಇರುವದಿಲ್ಲ. ಇವನು ಎಡ ಅಥವಾ ಬಲ ಬಾಜೂದಲ್ಲಿ ಇರುವನು. ಎರಡೂ ಬಾಜೂಕ್ಕೆ ಏಕಕಾಲದಲ್ಲಿ ಇರುವದಿಲ್ಲ. ಒಂದೇ ಕಾಲಕ್ಕೆ ಹತ್ತು ದಿಶೆಯನ್ನು ವ್ಯಾಪಿಸಿ ಇರುವದಿಲ್ಲ. (೧೪) ತಿಳಿಯಿರಿ, ನಾಲ್ಕು ದಿಕ್ಕಿಗೆ ನಿಶಾನೆಗಳನ್ನು ನಿಲ್ಲಿಸಲಾಗಿದೆ. ಒಂದೇ ಕಾಲಕ್ಕೆ ಒಬ್ಬನೇ ಮನುಷ್ಯ ಅವುಗಳನ್ನೆಲ್ಲ ಮುಟ್ಟಲಿಕ್ಕೆ ಸಾಧ್ಯವಿಲ್ಲ. ಅಂದರೆ ಮನುಷ್ಯನು ಏಕದೇಶೀ ಇರುವನು. ಇವನು ಸರ್ವವ್ಯಾಪಿ ಇರಲು ಶಕ್ಯವಿಲ್ಲ. ಇದರ ಮೇಲಿಂದ ಜೀವಾತ್ಮಾ ಇವನು ಏಕದೇಶಿ ಇರುವನು. ಇದನ್ನು ವಿಚಾರದಿಂದ ತಿಳಿಯಿರಿ. ಮತ್ತು ನಿಮ್ಮ ಅನುಭವದ ಮೇಲಿಂದ ನೀವು ನಿಮ್ಮ ಸಂದೇಹದ ನಿವಾರಣೆಯನ್ನು ಮಾಡಿಕೊಳ್ಳಿರಿ. (೧೫)

ಸೂರ್ಯ ಆಲಾ ಪ್ರತಿಬಿಂಬಲಾ । ಹಾ ಹಿ ದೃಷ್ಟಾಂತ ನ ಘಡೆ ವಸ್ತುಲಾ ।
ವಸ್ತುರೂಪ ನಿರ್ಗುಣಾಲಾ । ಮ್ಹಣಿಜೇತ ಆಹೇ ॥೧೬॥

ಘಟಾಕಾಶ ಮಠಾಕಾಶ । ಹಾ ಹಿ ದೃಷ್ಟಾಂತ ವಿಶೇಷ ।
ತುಳೂ ಜಾತಾ ನಿರ್ಗುಣಾಸ । ಸಾಮ್ಯತಾ ಯೇತೇ ॥೧೭॥

ಬ್ರಹ್ಮೀಚಾ ಅಂಶ ಆಕಾಶ । ಆಣೀ ಆತ್ಮ್ಯಾಚಾ ಅಂಶ ಮಾನಸ ।
ದೋಹೀಚಾ ಅನುಭವ ಪ್ರತ್ಯಯಾಸ । ಯೇಥೇ ಘ್ಯಾವಾ ॥೧೮॥

ಗಗನ ಆಣಿ ಹೇ ಮನ । ಕೈಸೆ ಹೋತೀ ಸಮಾನ ।
ಮನನಸೀಳ ಮಹಾಜನ । ಸಕಳ ಹಿ ಜಾಣತೀ ॥೧೯॥

ಮನ ಹೇ ಪುಢೇ ಮಾವಡೆ । ಮಾಗೇ ಅವಘೇ ಚಿ ರಿತೇ ಪಡೇ ।
ಪೂರ್ಣ ಗಗನಾಸ ಸಾಮ್ಯತಾ ಘಡೇ । ಕೋಣ್ಯಾ ಪ್ರಕಾರೇ ॥೨೦॥

ಪರಬ್ರಹ್ಮ ಹಿ ಅಚಳ । ಆಣಿ ಪರ್ವತಾಸ ಹಿ ಮ್ಹಣತೀ ಅಚಳ ।
ದೋನೀ ಹೀ ಯೇಕ ಕೇವಳ । ಹೇ ಕೈಸೇ ಮ್ಹಣಾವೇ ॥೨೧॥

ಸೂರ್ಯ ಉದಯ ಹೊಂದುವನು; ಅವನ ಪ್ರತಿಬಿಂಬವೂ ದೃಷ್ಟಿಗೆ ಬೀಳುವದು. ಆದರೆ ಈ ದೃಷ್ಟಾಂತವು ವಸ್ತುವಿಗೆ ಅಂದರೆ ಬ್ರಹ್ಮನಿಗೆ ಲಾಗೂ ಬೀಳುವದಿಲ್ಲ. ಅನ್ವಯಿಸುವದಿಲ್ಲ. ಯಾಕೆಂದರೆ ಪರಬ್ರಹ್ಮ ವಸ್ತುವಿನ ರೂಪವು ನಿರ್ಗುಣ ಇದ್ದದ್ದರಿಂದ ಈವಸ್ತುವಿಗೆ ಈ ದೃಷ್ಟಾಂತವು ಅನ್ವಯಿಸುವದಿಲ್ಲ ಎಂದು ಅನ್ನುವದು ಯೋಗ್ಯವಿರುವದು. ಸೂರ್ಯ ಉದಯವಾದ ನಂತರ ಇವನ ಪ್ರತಿಬಿಂಬವು ನೀರಿನಲ್ಲಿ ಬೀಳುವದು. ಆದರೆ ಆ ಪ್ರತಿಬಿಂಬವೇನೂ ಸೂರ್ಯನಲ್ಲ. ಇದರಂತೆ ಮನುಷ್ಯನ ಅರಿವಿನಲ್ಲಿ [ಜಾಣೀವದಲ್ಲಿ] ಬ್ರಹ್ಮನ ಆ ಯಾವ ಪ್ರತಿಬಿಂಬ ಬೀಳುವದೋ ಅದಕ್ಕೆ ಜೀವಾತ್ಮಾ ಎಂದು ಅನ್ನುವರು. ಪ್ರತಿಬಿಂಬ ರೂಪವಿರುವ ಜೀವಾತ್ಮವು. ನಿರ್ಗುಣ ಬ್ರಹ್ಮ ವಸ್ತು ಆಗಲಿಕ್ಕೆ ಶಕ್ಯವಿಲ್ಲ. ಇದರ ಹೊರತಾಗಿ ಸೂರ್ಯನಿಗೆ ಉದಯ ಮತ್ತು ಅಸ್ತ ಇರುವವು. ಇದೇ ನಿರ್ಗುಣ ಬ್ರಹ್ಮನಿಗೆ ಉದಯ ಮತ್ತು ಅಸ್ತ ಎರಡೂ ಇರುವದಿಲ್ಲ. ಆದ್ದರಿಂದ ಪರಬ್ರಹ್ಮನಿಗೆ ಸೂರ್ಯನ ದೃಷ್ಟಾಂತ ಅನ್ವಯಿಸುವದಿಲ್ಲ. (೧೬) ಘಟಾಕಾಶ ಮತ್ತು ಮಠಾಕಾಶ. ಈ ದೃಷ್ಟಾಂತಗಳು ಇದ್ದದ್ದರಲ್ಲಿಯೇ ಹೆಚ್ಚು ಸರಿ ಇರುವವು. ಯಾಕೆಂದರೆ ತುಲನಾ ಮಾಡಿನೋಡಿದರೆ ಆಕಾಶ ಇದು ನಿರ್ಗುಣದೊಂದಿಗೆ ಸಾಮ್ಯತೆ ಇರುವದು. [ತೋರುವದು] ಮೂಲ ಆಕಾಶವು ಸಂಪೂರ್ಣವಾಗಿ ವ್ಯಾಪಕವಿರುವದು. ಇದರಂತೆ ನಿರ್ಗುಣ ಪರಬ್ರಹ್ಮವು ಸಂಪೂರ್ಣವಾಗಿ ವ್ಯಾಪಕ ವಿರುವದು. ಘಟ-ಮಡಿಕೆ ಮತ್ತು ಮನೆ ಈ ಉಪಾಧಿ ಬಂದಿತೆಂದರೆ ಘಟಾಕಾಶ ಮತ್ತು ಮಠಾಕಾಶ ಹೀಗೆ ತಾತ್ಪೂರ್ತಿಕ ಭೇದ ಆಕಾಶದಲ್ಲಿ ಉತ್ಪನ್ನವಾದಂತೆ ಕಾಣುವದು. ಇದರಂತೆ ಪಿಂಡ ಮತ್ತು ಬ್ರಹ್ಮಾಂಡ ಇವುಗಳ ಉಪಾಧಿಯಿಂದಾಗಿ ಜೀವ ಮತ್ತು ಶಿವ ಹೀಗೆ ಭೇದವು ಪರಬ್ರಹ್ಮದಲ್ಲಿ ತೋರುವದು. ಘಟ ಮತ್ತು ಮಠ, ಅಥವಾ ಮಡಿಕೆ ಮತ್ತು ಮನೆ ಇವೆರಡೂ ಒಡೆದು ಮುರಿದುಹೋದರೆ ಆಗ ಮೂಲದಲ್ಲಿ ಸಂಪೂರ್ಣತನದಿಂದ ವ್ಯಾಪಕ ಇರುವಂಥ ಆಕಾಶವು ಪುನಃ ಹೇಗಿತ್ತೋ ಹಾಗೇ ಇರುವದು. ಇದರಂತೆ ಜೀವ ಮತ್ತು ಶಿವ ಇಬ್ಬರೂ ಇಲ್ಲದಾಗಿ ಬಿಟ್ಟರೆಂದರೆ ಮೂಲ ಪರಬ್ರಹ್ಮವು ಪುನಃ ಅಗದೀ ಹೇಗಿತ್ತೋ ಹಾಗೆ ಶಿಲಕು ಉಳಿಯುವದು. (೧೭) ಆಕಾಶವು ಪರಬ್ರಹ್ಮದ ಅಂಶವಿರುವದು. ಮತ್ತು ಮನವು ಆತ್ಮನ ಅಂಶವಿರುವದು. ಹೀಗೆ ನೀವು ಒಂದುವೇಳೆ ಅಂದದ್ದಾದರೆ ನಿಮ್ಮ ಖಾತ್ರಿಮಾಡಿಕೊಳ್ಳುವ ಸಲುವಾಗಿ ಈ ಎರಡರದೂ ಅನುಭವವನ್ನು ನೀವು ಸ್ವತಃ ಮಾಡಿಕೊಳ್ಳಬೇಕು. (೧೮) ಆಕಾಶ ಮತ್ತು ಮನಸ್ಸು ಇವುಗಳು ಸರಿಸಮವೆನಿಸಲಾರವು. ಮನನಶೀಲರಾದ ಶ್ರೇಷ್ಠ ಸಂತ ಸಾಧು ಪುರುಷರಿಗೆ ಈ ವಿಷಯ ಸಂಪೂರ್ಣವಾಗಿ ಗೊತ್ತಿರುವದು. ಯಾವಾಗಲೂ ಮನವು ವ್ಯಕ್ತಿಗೆ ಅಂದರೇನೇ ಜೀವಾತ್ಮನನ್ನು ಹಿಡಿದು ಆಶ್ರಯಿಸಿ ಇರುವದು. ಆದರೆ ಆಕಾಶವು ಯಾವಾಗಲೂ ವ್ಯಕ್ತಿ ನಿರಪೇಕ್ಷ.ಯಾರ ಆಶ್ರಯ ಇಲ್ಲದೇ ಇರುವದು. ಆದ್ದರಿಂದ ಮನವು ಯಾವಾಗಲೂ ಆಕಾಶದ ಸರಿಸಮ ಆಗುವದಿಲ್ಲ. ಇದನ್ನು ಗುರುತಿಸಿ ತಿಳಿಯಿರಿ. (೧೯) ಮನವು ಮುಂದೆ ಹರಿದಾಡ ಹತ್ತಿತೆಂದರೆ ಆಗ ಹಿಂದೆ ಅದರ ಅಸ್ತಿತ್ವ ಉಳಿದಿರುವದಿಲ್ಲ. ಯಾಕೆಂದರೆ ಇದು ಏಕದೇಶೀ [ಮರ್ಯಾದಿತ] ಇದ್ದದ್ದರಿಂದ ಇದು [ಮನವು] ಒಮ್ಮೆ ಮುಂದೆ ಇರುವದು. ಇಲ್ಲವೆ ಹಿಂದೆ ಇರುವದು. ಆದರೆ ಆಕಾಶವು ಒಂದೇ ಕಾಲಕ್ಕೆ ಮುಂದೆ ಹಾಗೂ ಹಿಂದೆ ಇರುವದು. ಯಾಕೆಂದರೆ ಇದು ಸರ್ವದೇಶೀ ಇರುವದು. ಸರ್ವವ್ಯಾಪಕವಿರುವದು. ಅಂತೆಯೇ ಪೂರ್ಣವ್ಯಾಪಕವಾಗಿರುವ ಆಕಾಶದೊಂದಿಗೆ ಮನವು ಸರಿಸಮ ಆಗಲು ಶಕ್ಯವಿಲ್ಲ (೨೦) ಅಚಲ ಅಂದರೆ ಅಲ್ಲಾಡದೆ ಇರುವದು-ಚಲಿಸದೆ ಇರುವದು ಅಚಲವು. ಅಚಲ ಶಬ್ದವನ್ನು ಪರಬ್ರಹ್ಮಕ್ಕೆ ಹಚ್ಚುವರು, ಹೋಲಿಸುವರು. ಮತ್ತು ಪರ್ವತಕ್ಕೂ ಸಹಿತ ಅಚಲ ಅನ್ನುವರು ಆದರೆ ಈ ಎರಡೂ ಒಂದೇ ಇರುವವು ಎಂದು ಹೇಗೆ ಅನ್ನಲಿಕ್ಕೆ ಬಂದೀತು? ಅರ್ಥಾತ್ ಅನ್ನಲಿಕ್ಕೆ ಬರುವದಿಲ್ಲ. ಪರಬ್ರಹ್ಮವು ಸಂಪೂರ್ಣವಾಗಿ ನಿಶ್ಚಲ ಅಥವಾ ಅವಿನಾಶಿ ಅನಿಸಿದ್ದಾದರೆ ಪೃಥ್ವಿಯ ಮೇಲಿರುವ ವಸ್ತುಗಳಲ್ಲಿ ಅಲ್ಲಾಡದೇ ಇರುವ ವಸ್ತು ಎಂದು ಪರ್ವತಕ್ಕೆ ನಿಶ್ಚಲ, ಅಚಲ ಎಂದು ಅನ್ನುವರು. ಪೃಥ್ವೀ ನಾಶವಂತ ಇರುವಾಗ ಪರ್ವತವೂ ಕೊನೆಗೆ ನಾಶವಂತವೇ ಇರುವದು. (೨೧)

ಜ್ಞಾನ ಅಜ್ಞಾನ ವಿಪರೀತಜ್ಞಾನ । ತಿನೀ ಕೈಸೀ ಹೋತೀ ಸಮಾನ ।
ಯಾಚಾ ಪ್ರತ್ಯಯೋ ಮನನ । ಕರೂನ ಪಾಹಾವಾ ॥೨೨॥

ಜ್ಞಾನ ಮ್ಹಣಿಜೆ ಜಾಣಣೇ । ಅಜ್ಞಾನ ಮ್ಹಣಿಜೆ ನೇಣಣೇ ।
ವಿಪರೀತಜ್ಞಾನ ಮ್ಹಣಿಜೇ ದೇಖಣೇ । ಯೇಕಾಚೇ ಯೇಕ ॥೨೩॥

ಜಾಣಣೇ ನೇಣಣೇ ವೇಗಳೇ ಕೇಲೇ । ಥೋಬಳೇ ಪಂಚಭೂತಿಕ ಉರಲೇ ।
ವಿಪರೀತಜ್ಞಾನ ಸಮಜಲೇ । ಪಾಹಿಜೆ ಜೀವೀ ॥೨೪॥

ದೃಷ್ಟಾ ಸಾಕ್ಷೀ ಅಂತರಾತ್ಮಾ । ಜೀವಾತ್ಮಾಚಿ ಹೋಯೆ ಶಿವಾತ್ಮಾ ।
ಪುಢೇ ಶಿವಾತ್ಮಾ ತೋ ಚಿ ಜೀವಾತ್ಮಾ । ಜನ್ಮ ಘೇತೋ ॥೨೫॥

ಆತ್ಮತ್ವೀ ಜನ್ಮಮರಣ ಲಾಗೇ । ಆತ್ಮತ್ವೀ ಜನ್ಮಮರಣ ನ ಭಂಗೇ ।
ಸಂಭವಾಮಿ ಯುಗೇ ಯುಗೇ । ಐಸೇ ಹೇ ವಚನ ॥೨೬॥

ಜೀವ ಯೇಕದೇಸೀ ನರ । ವಿಚಾರೇ ಜಾಲಾ ವಿಶ್ವಂಭರ ।
ವಿಶ್ವಂಭರಾಸ ಸಂಸಾರ । ಚುಕೇನಾ ಕೀ ॥೨೭॥

ಜ್ಞಾನ, ಅಜ್ಞಾನ ಮತ್ತು ವಿಪರೀತ ಜ್ಞಾನ ಈ ಮೂರರಲ್ಲಿಯೂ ಜ್ಞಾನ ಎಂಬುವ ಶಬ್ದ ಕಂಡು ಬರುವದು. ಆದರೆ ಈ ಮೂರೂ ಏನೂ ಸರಿಸಮವಾಗಲಾರವು. ಚನ್ನಾಗಿ ಮನನಮಾಡಿ ಇದನ್ನು ಅನುಭವದಿಂದ ತಿಳಿದುಕೊಳ್ಳಬೇಕು.(೨೨) ಜ್ಞಾನ ಅಂದರೆ ವಸ್ತು ಹೇಗಿರುವದೊ ಅದರಂತೆಯೇ ಅದನ್ನು ತಿಳಿಯುವದು. ಅಜ್ಞಾನ ಅಂದರೆ ವಸ್ತು ಇರುವದು, ಆದರೆ ಅದನ್ನು ಇದೆ ಎಂದು ತಿಳಿಯದೇ ಇರುವದು; ವಸ್ತುವಿನ ಗುಣಧರ್ಮವನ್ನು ತಿಳಿಯದೇ ಇರುವದು ಅಜ್ಞಾನವು. ಇನ್ನು ವಿಪರೀತ ಜ್ಞಾನವೆಂದರೆ, ವಸ್ತುವಿನ ರೂಪವು ಒಂದು ಪ್ರಕಾರದ್ದಿರು ವಾಗ ಅದನ್ನು ಅದರಂತೆ ತಿಳಿಯದೆ ಭಲತೆ ಅಥವಾ ಬೇರೆ ಅರ್ಥಾತ್ ಒಂದನ್ನು ಮತ್ತೊಂದರ ತರಹ ತಿಳಿಯುವದು. ಅಥವಾ ಅರ್ಥಮಾಡುವದು. ಇದಕ್ಕೆ ವಿಪರೀತ ಜ್ಞಾನ ಎಂದು ಹೆಸರಿರುವದು. (೨೩) ತಿಳಿಯುವದನ್ನು ಬದಿಗೆ ಮಾಡಿದೆವು. ಅಜ್ಞಾನ ಅಥವಾ ತಿಳಿಯದಿರುವದನ್ನು ಬದಿಗೆ ಸರಿಸಿದೆವು. ಅಂದರೆ ಜ್ಞಾನ ಮತ್ತು ಅಜ್ಞಾನ ಇವುಗಳನ್ನು ಬೇರೆ ಮಾಡಿದ ನಂತರ ಯಾವ ಸ್ಥೂಲ ಪಂಚಭೂತಾತ್ಮಕ ದೃಶ್ಯ ಉಳಿಯುವದೋ ಆ ದೃಶ್ಯದ ಪಸಾರ [ವಿಸ್ತಾರ] ವನ್ನು ಖರೇ, ಸತ್ಯ, ಎಂದು ತಿಳಿಯುವದೇ ಜೀವದವಿಷಯದಲ್ಲಿ ಕಂಡುಬರುವ ವಿಪರೀತ ಜ್ಞಾನ ವಿರುವದು. [ಅದು ಜ್ಞಾನವಲ್ಲ ಮತ್ತು ಅಜ್ಞಾನವೂ ಅಲ್ಲ. ಕಾರಣವೇನಂದರೆ ಅದು ಇರುವದು ಒಂದು ತರಹ ಮತ್ತು ಕಾಣುವದು. ಮತ್ತೊಂದು(ಭಲತೆ) ತರಹಹಲ್ಲಿ. ಆದ್ದರಿಂದ ಇದಕ್ಕೆ ವಿಪರೀತ ಜ್ಞಾನವೆಂದು ಅನ್ನುವರು (೨೪) ವಾಸ್ತವಿಕವಾಗಿ ಹೃದಯದಲ್ಲಿ ವಾಸವಾಗಿರುವ ಅಂತರಾತ್ಮನು ದೃಷ್ಟಾ ಮತ್ತು ಸಾಕ್ಷಿ ಇರುವನು. ಇವನು ಎಲ್ಲ ಪಿಂಡಗಳಲ್ಲಿಯೂ ಸಮಾನ ಇರುವನು. ಒಂದೇ ಪಿಂಡದ ಮಟ್ಟಿಗೆ ನೋಡಿದೆವೆಂದರೆ ಇವನಿಗೆ [ಅಂತರಾತ್ಮನಿಗೆ] ಜೀವಾತ್ಮಾ ಅನ್ನುವರು. ಜೀವಾತ್ಮನು ದೇಹ ಬುದ್ಧಿಯಿಂದ ಹೊರಬಿದ್ದ ಕೂಡಲೇ ಸರ್ವವ್ಯಾಪಕ ಅಂಥ ಶಿವಾತ್ಮನಾಗುವನು. ಆದರೆ ಯಾವಾಗ ಶಿವಾತ್ಮಾ ತನ್ನ ಸಾಕ್ಷಿತನವನ್ನು ಕಳೆದುಕೊಳ್ಳುವನೋ, ದೂರಮಾಡುವನೋ, ತನ್ನ ವ್ಯಾಪಕತನವನ್ನು ಮರೆಯುವನೋ ಆಗ ಆತ್ಮ ಬುದ್ಧಿಯನ್ನು ಬಿಟ್ಟು ದೇಹ ಬುದ್ಧಿಯಲ್ಲಿ ಸೇರುವನು. ಆಗ ಇವನು ಜೀವಾತ್ಮಾ ಆಗಿ ಜನ್ಮ ಹೊಂದುವನು. (೨೫) "ನಾನು ಆತ್ಮಾ ಇರುವೆನು" ಈ ಅರಿವು ಉತ್ಪನ್ನವಾಯಿತೆಂದರೆ ಆಗಲೇ ಜನ್ಮ ಮರಣ ಬೆನ್ನುಹತ್ತುವದು, ದೇಹವೇ ಆತ್ಮಾ ಇರುವದು. ಹೀಗೆ ನಂಬುವ ಅಥವಾ ತಿಳಿಯುವ ಜೀವಾತ್ಮಾ ಮತ್ತು ನಾನು ಆತ್ಮಸ್ವರೂಪ ಇರುವೆನು. ಹೀಗೆ ಅನ್ನುವಂಥ ಶಿವಾತ್ಮಾ ಈ ಇಬ್ಬರಿಗೂ ಜನ್ಮ ಮರಣ ತಪ್ಪಿದ್ದಲ್ಲ. ಆದರೆ ವ್ಯತ್ಯಾಸ ಇಷ್ಟೇ ಅದೆ, ಅದೇನಂದರೆ ಜೀವಾತ್ಮನು ಕರ್ಮದ ಅಧೀನನಾಗಿ ದೇಹಧಾರಣ ಮಾಡುವನು.ಅದೇ ಶಿವಾತ್ಮನು ಅಥವಾಈಶ್ವರನು ಮೊದಲು ಕರ್ಮಕ್ಕೆಅಧೀನವಿಟ್ಟು ನಂತರ ಕರ್ಮದ ಆಜ್ಞೆಯಿಂದ ದೇಹಧಾರಣಮಾಡುವನು.ಈಶ್ವರನೂ ಕೂಡಾ ಯುಗ ಯುಗಗಳಲ್ಲಿ ಭಕ್ತರ ರಕ್ಷಣೆಗಾಗಿ ಅವತಾರ ರೂಪದಿಂದ ಜನ್ಮ ಹೊಂದುವನು. ಜೀವಾತ್ಮನು ಪರತಂತ್ರತನದಿಂದ ದೇಹದಲ್ಲಿ ಸೇರುವನು. ಅದೇ ಈಶ್ವರನು ಸ್ವತಂತ್ರತನದಿಂದ ಮಾಲಕನಂತೆ ದೇಹದಲ್ಲಿ ಪ್ರವೇಶಮಾಡುವನು. (೨೬) ಜೀವ ಇದು ಪರಿಚ್ಛಿನ್ನ ಅಂದರೆ ಸ್ಪಷ್ಟ. ಅಗದೀ, ಏಕದೇಶಿ, ಮತ್ತು ಅಪೂರ್ಣ ಮನುಷ್ಯವಾಗಿರುವದು. ತಿಳಿಯಿರಿ, ಇವನು ವಿವೇಕದಿಂದ ವಿಶ್ವವನ್ನು ವ್ಯಾಪಿಸಿರುವಂಥ ಶಿವಾತ್ಮನಾದನು. ಇವನು ವಿಶ್ವವ್ಯಾಪಿ ಈಶ್ವರನಾದರೂ ಕೂಡಾ ಇವನಿಗೆ ದೃಶ್ಯ ವಿಶ್ವದ ಉಪಾಧಿಯು ಇದ್ದೇ ಇರುವದು. ಅಂತೆಯೇ ಇವನಿಗೂ ಕೂಡಾ ಅವತಾರ ರೂಪದ ಸಂಸಾರವಿರುವದರಿಂದ ಇವನೇನೂ ತಪ್ಪುವದಿಲ್ಲ. [ಬ್ರಹ್ಮಾಂಡದ ಉಪಾಧಿ ಅಥವಾ ಜನ್ಮ ಮರಣ ತಪ್ಪುವದಿಲ್ಲ ] (೨೭)

ಜ್ಞಾನ ಆಣಿ ಅಜ್ಞಾನ । ವೃತ್ತಿರೂಪೇ ಹೇ ಸಮಾನ ।
ನಿವೃತ್ತಿರೂಪೇ ವಿಜ್ಞಾನ । ಜಾಲೇ ಪಾಹಿಜೇ ॥೨೮॥

ಜ್ಞಾನೇ ಯೆವಢೇ ಬ್ರಹ್ಮಾಂಡ ಕೇಲೇ । ಜ್ಞಾನೇ ಯೆವಢೇ ವಾಢವಿಲೇ ।
ನಾನಾ ವಿಕಾರಾಚೇ ವಳಲೇ । ತೇ ಹೇ ಜ್ಞಾನ ॥೨೯॥

ಆಠವೇ ದೇಹ ಬ್ರಹ್ಮಾಂಡೀಚೇ । ತೇ ಹೇ ಜ್ಞಾನ ಸಾಚೇ ।
ವಿಜ್ಞಾನರೂಪ ವಿದೇಹಾಚೇ । ಪದ ಪಾವಿಜೇ ॥೩೦॥

ಇತಿ ಶ್ರೀ ದಾಸಬೋಧೇ ಗುರುಶಿಷ್ಯ ಸಂವಾದೇ
"ಪೂರ್ಣಾಪೂರ್ಣ ನಿರೂಪಣ" ನಾಮ ಸಮಾಸ ಪ್ರಥಮ ॥

"ನಾನು ಬ್ರಹ್ಮ ಇರುವೆನು" ಈ ಭಾವನಾ ಅಂದರೆ ಜ್ಞಾನವು. ಮತ್ತು "ನಾನು ದೇಹ ಇರುವೆನು" ಈ ಭಾವನಾ ಅಂದರೆ ಅಜ್ಞಾನವು. ಜ್ಞಾನ ಮತ್ತು ಅಜ್ಞಾನ ಇವು ವೃತ್ತಿರೂಪದಿಂದ ಎರಡೂ ಸಮಾನವಿರುವವು. ಈ ಎರಡೂ ವೃತ್ತಿಯು ನಿವೃತ್ತಿ ಆಗಿ ಜ್ಞಾನವು ವಿಜ್ಞಾನದಲ್ಲಿ ಅಂದರೆ ಸ್ವಾನುಭವದ ಜ್ಞಾನದಲ್ಲಿ ರೂಪಾಂತರ ಆಗಲಿಕ್ಕೇಬೇಕು. ಜ್ಞಾನದಲ್ಲಿ ಮತ್ತು ಅಜ್ಞಾನದಲ್ಲಿ [ಎರಡೂ ಕಡೆಗೂ] 'ನಾನು' ಅನ್ನುವ ಅಹಂತನ ಇರುವದು. ಇದು ಸಂಪೂರ್ಣ ವಿಲೀನವಾಗಿ ಕೇವಲ ಅನುಭವರೂಪರಾಗುವದೇ ನಿವೃತ್ತಿ ಸ್ವರೂಪ ವಿಜ್ಞಾನವಿರುವದು. ಜೀವ ಮತ್ತು ಶಿವ ಇವೆರಡೂ ಚೈತನ್ಯರೂಪವೇ. ಆದರೆ ಒಂದಕ್ಕೆ ಪಿಂಡದ ಅಭಿಮಾನವೆಂದು ಜೀವ ಅನ್ನುವರು ಇನ್ನೊಂದಕ್ಕೆ ಬ್ರಹ್ಮಾಂಡದ ಅಭಿಮಾನವೆಂದು ಅದಕ್ಕೆ ಶಿವ ಅನ್ನುವರು. ಈ ಪಿಂಡ-ಬ್ರಹ್ಮಾಂಡ ರೂಪ ಉಪಾಧಿಯು ಅಭಿಮಾನದಿಂದ ಎರಡೂ [ಜೀವ, ಶಿವ,] ಜನ್ಮ ಮರಣ ರೂಪ ಸಂಸಾರ ಚಕ್ರದಲ್ಲಿ ತಿರುಗುತ್ತಲಿರುವವು. ಈ ಎರಡೂ ಉಪಾಧಿ [ಜೀವ, ಶಿವ] ಯು ಅಭಿಮಾನ ಕಳಚಿತೆಂದರೆ [ಬಿಟ್ಟು ಹೋದರೆ] ಆಗ ನಿರ್ಗುಣಪದ ಸ್ವತಃಸಿದ್ಧ ಇದ್ದೇ ಇರುವದು. (೨೮) ಒಂದೇ ಜ್ಞಾನದಿಂದ ಅಂದರೆ ಮೂಲಮಾಯೆ ಅಥವಾ ಮಾಯಾ ಈ ಅಪಾರ ಬ್ರಹ್ಮಾಂಡ ನಿರ್ಮಾಣಮಾಡಿ ಮತ್ತು ಜ್ಞಾನದಿಂದಲೇ ಇದನ್ನು ಬೆಳೆಸಿ [ವೃದ್ಧಿಪಡಿಸಿ] ಮತ್ತು ನಡೆಯಿಸಿಕೊಂಡು ಬಂದಿರುವದು. ಇಂಥ ಈ ಜ್ಞಾನವು ಅನೇಕ ವಿಕಾರಗಳಿಂದ ತುಂಬಿರುವದಾಗಿದೆ. ಪರಬ್ರಹ್ಮದಲ್ಲಿಯ ಆ ಮಾಯಾ ಮೂಲ ಸ್ಫುರಣವೇ ಜ್ಞಾನ ಸ್ವರೂಪ ಇರುವದು. ಇದರೊಳಗಿಂದ ಅಷ್ಟಧಾ ಪ್ರಕೃತಿ [ಐದು ಭೂತ ಮತ್ತು ಮೂರು ಗುಣ ಕೂಡಿ] ಪ್ರಕಟವಾಯಿತು. ಮತ್ತು ಯಾವತ್ತೂ ವಿಶ್ವವು ರಚಿಸಲ್ಪಟ್ಟಿತು. ಆದ್ದರಿಂದ ಜ್ಞಾನವು ವಿಕಾರದಿಂದ ತುಂಬಿರುವದು. (೨೯) ಬ್ರಹ್ಮಾಂಡದಲ್ಲಿಯು ಎಂಟನೆಯು ದೇಹ ಅಂದರೆ ಮೂಲಮಾಯಾ ಅಂದರೆ ಪ್ರಥಮ ಸಂಕಲ್ಪ [ಮೂಲ ಸಂಕಲ್ಪ, ಆದಿ ಸಂಕಲ್ಪ]. ಇದು ಸತ್ಯವಾಗಿಯೂ ನಿಜವಾದ ಜ್ಞಾನವಾಗಿರುವದು. ಮೊದಲು ಜ್ಞಾನದಿಂದ ಅಜ್ಞಾನದ ನಾಶ ಮಾಡಬೇಕು. ನಂತರ ವಿಜ್ಞಾನದಿಂದ ಈ ಜ್ಞಾನವನ್ನು ದಾಟಬೇಕು. ಮತ್ತು ಆಗ ಕೇವಲ ವಿಜ್ಞಾನ ರೂಪವಾದ ವಿದೇಹ ಪದ ಪ್ರಾಪ್ತಿಮಾಡಿಕೊಳ್ಳಬೇಕು. [ಇದೇ ಸಾಕ್ಷಾತ್ಕಾರ ರೂಪದ ಅನುಭವ ಸಿದ್ಧ ಜ್ಞಾನವಿರುವದು.] (೩೦)

ಶ್ರೀ ದಾಸಬೋಧದ ಇಪ್ಪತ್ತನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ಪೂರ್ಣಾಪೂರ್ಣ ನಿರೂಪಣ"ವೆಂಬ ಹೆಸರಿನ ಮೊದಲನೇ ಸಮಾಸವು ಮುಗಿದುದು.

• •

ದಶಕ. ವಿಂಶತಿ : ಸಮಾಸ. ದ್ವಿತೀಯ : ಸೃಷ್ಟಿತ್ರಿವಿಧಲಕ್ಷಣ ನಿರೂಪಣ (ನುಡಿ ೩೦)

॥ಶ್ರೀರಾಮ॥ ಮೂಳಮಾಯಾ ನಸ್ತಾ ಚಂಚಳ । ನಿರ್ಗುಣ ಬ್ರಹ್ಮ ತೆ ನಿಶ್ಚಳ ।
ಜೈಸೇ ಗಗನ ಅಂತರಾಳ । ಚಹುಕಡೆ ॥೧॥

ದೃಶ್ಯ ಆಲೇ ಆಣಿ ಗೇಲೇ । ಪರೀ ತೇ ಬ್ರಹ್ಮ ಸಂಚಲೇ ।
ಜೈಸೇ ಗಗನ ಕೋಂದಾಟಲೇ । ಚಹುಕಡೇ ॥೨॥

ಜಿಕಡೆ ಪಾಹಾವೇ ತಿಕಡೇ ಅಪಾರ । ಕೋಣೆಕಡೆ ನಾಹೀ ಪಾರ ।
ಯೇಕಜಿನಸೀ ಸ್ವತಂತ್ರ । ದುಸರೇ ನಾಹೀ ॥೩॥

ಬ್ರಹ್ಮಾಂಡಾವರತೇ ಬೈಸಾವೇ । ಅವಕಾಶ ಭಕಾಸ ಅವಲೋಕಾವೇ ।
ತೇಥೇ ಚಂಚಳ ವ್ಯಾಪಕಾಚ್ಯಾ ನಾವೇ । ಸುನ್ಯಾಕಾರ ॥೪॥

ದೃಶ್ಯ ವಿವೇಕೇ ಕಾಢಿಲೇ । ಮಗ ಪರಬ್ರಹ್ಮ ಕೋಂದಾಟಲೇ ।
ಕೋಣಾಸೀ ಚ ಅನುಮಾನಲೇ । ನಾಹೀ ಕದಾ ॥೫॥

# ದಶಕ ೨೦. ಸಮಾಸ ೨. ಸೃಷ್ಟಿತ್ರಿವಿಧಲಕ್ಷಣ ನಿರೂಪಣ (ನುಡಿ ೪೦)

ಸ್ವರೂಪ ಸಾಕ್ಷಾತ್ಕಾರ ಮಾಡಿಕೊಳ್ಳುವಲ್ಲಿ ಎರಡು ಮಾರ್ಗಗಳು ಇರುವವು. ಒಂದು ಇರುವೆಯ [ಪಿಪೀಲಿಕಾ] ಮಾರ್ಗವು. ಮತ್ತು ಎರಡನೆಯದು ಪಕ್ಷಿಗಳ ಮಾರ್ಗವು. ಪಕ್ಷಿಗಳ [ವಿಹಂಗಮ] ಮಾರ್ಗವು ವಿವೇಕದ್ದಾಗಿದೆ. ಇದು ತೀವ್ರ ಫಲಕಾರಿಯಾದದ್ದಿರುವದು. ಆತ್ಮ ಸಾಕ್ಷಾತ್ಕಾರ ಮಾಡಿಕೊಳ್ಳಲು ಶ್ರವಣದಂತಹ ಸಾಧನ ಇನ್ನೊಂದಿಲ್ಲ. ಸಾಧಕನು ಮನನದಲ್ಲಿ ಅತ್ಯಂತ ಆಳವಾಗಿ ಸೇರಿಕೊಳ್ಳಬೇಕು. ವಿಶ್ವದಲ್ಲಿಯ ತತ್ವದ ಬಗ್ಗೆ ಪುನಃ ಪುನಃ ವಿಚಾರಮಾಡಬೇಕು. ವಿಶ್ವದಲ್ಲಿಯ ವಸ್ತುಗಳಲ್ಲಿ ಎರಡು ಪ್ರಕಾರಗಳಿರುವವು. ಒಂದು ನಿಶ್ಚಲವು. ಮತ್ತು ಎರಡನೆಯದು ಚಂಚಲವು. ಚಂಚಲದ ನಾದಿಗೆ [ಹವ್ಯಾಸಕ್ಕೆ] ಹತ್ತಿದರೆ ದುಃಖ ಭೋಗಿಸಲಿಕ್ಕೆ ಹತ್ತುವೆವು. ನಿಶ್ಚಲದ ನಾದಿಗೆ ಹತ್ತಿದರೆ ಪೂರ್ಣ ವಿಶ್ರಾಂತಿ ಲಭಿಸುವದು. ಯಾವತ್ತೂ ವಿಶ್ವವು ಚಂಚಲವಿರುವದು. ಕಲ್ಪನೆಯದಿರುವದು. ಅದರಂತೆ ವಿಶ್ವವು ತ್ರಿವಿಧವಾಗಿಯೂ ಕೂಡಾ ಇರುವದು. ಮೂಲಮಾಯೆಯಿಂದ ತ್ರಿಗುಣದ ಸಾಮ್ಯಾವಸ್ಥೆಯವರೆಗೆ ಮೊದಲನೆಯ ಅವಸ್ಥೆಯು. ಪಂಚಭೂತಗಳು ಎರಡನೆಯ ಅವಸ್ಥೆಯು. ಮತ್ತು ಪ್ರತ್ಯಕ್ಷ ಚಾರಖಾಣಿ [ನಾಲ್ಕು ಉತ್ಪತ್ತಿ ಸ್ಥಾನಗಳು] ಮತ್ತು ಚಾರವಾಣಿ [ನಾಲ್ಕು ಧ್ವನಿಯ ಪ್ರಕಾರಗಳು– ಧ್ವನಿಯ ಸ್ಥಾನಗಳು] ಇವು ಮೂರನೆಯ ಅವಸ್ಥೆಯು. ನಿಶ್ಚಲ ಪರಬ್ರಹ್ಮವು ಎಲ್ಲಕ್ಕಿಂತ ದೊಡ್ಡದು. ಸತತವಾದ ಸೂಕ್ಷ್ಮ ವಿಚಾರದಿಂದ ಎಲ್ಲ ಚಂಚಲ ದೃಶ್ಯವನ್ನು ಬದಿಗೆ ಸರಿಸಬೇಕು. ಮತ್ತು ಉಳಿದಂಥ ಅಪಾರ ನಿಶ್ಚಲ ಬ್ರಹ್ಮದಲ್ಲಿ ತದಾಕಾರವಾಗಿ [ಸಮಾಧಾನದ] ಸೇವನ ಮಾಡಬೇಕು.

## ದಶಕ ೨೦. ಸಮಾಸ ೨. ಸೃಷ್ಟಿತ್ರಿವಿಧಲಕ್ಷಣ ನಿರೂಪಣ (ನುಡಿ ೪೦)

ಪರಬ್ರಹ್ಮನು ಅಪರಂಪಾರತನದಿಂದ ಅಲ್ಲಿ ಇಲ್ಲಿ ಎಲ್ಲ ಕಡೆಗೂ ತುಂಬಿರುವನು. ಚಂಚಲ ದೃಶ್ಯವು ಇದರ ಮೇಲೆ ಮುಸುಕು ಅಥವಾ ಮರೆಹಾಕುವದು. ಆಳವಾದ ಮತ್ತು ಸೂಕ್ಷ್ಮವಾದ ವಿಚಾರದಿಂದ ದೃಶ್ಯವನ್ನು ಬಾಜೂಕ್ಕೆ ಸರಿಸಬೇಕು. ಮತ್ತು ನಿಶ್ಚಲ ಪರಬ್ರಹ್ಮನ ಭೆಟ್ಟಿಮಾಡಿಕೊಳ್ಳಬೇಕು: ಯಾವ ಪ್ರಕಾರ ನಿಶ್ಚಲ ಆಕಾಶವು ನಾಲ್ಕೂ ಕಡೆಗೆ ಇರುವದೋ ಅದರಂತೆ ಚಂಚಲ ಮೂಲಮಾಯಾ ಉತ್ಪನ್ನವಾಗುವ ಪೂರ್ವದಲ್ಲಿ ನಿರ್ಗುಣ ಬ್ರಹ್ಮವು ನಿಶ್ಚಲತನದಿಂದ ಇರುತ್ತದೆ.(೧) ದೃಶ್ಯ ವಿಶ್ವವು ಬಂದಿತು. ನಿರ್ಮಾಣವಾಯಿತು. ಮತ್ತು ಹೋಯಿತು ನಾಶವಾಗಿ ಹೋಯಿತು. ಆದರೂ ನಿಶ್ಚಲ ಪರಬ್ರಹ್ಮವು ಹೇಗಿದ್ದಿತೋ ಹಾಗೆ ಎಲ್ಲ ಕಡೆಗೂ ತುಂಬಿಕೊಂಡಿರುವದು. ಯಾವ ಪ್ರಕಾರ ಅವಕಾಶಮಯ ಆಕಾಶವು ಎಲ್ಲ ಕಡೆಗೂ ಭರಪೂರ ತುಂಬಿರುವದೋ ಅದರಂತೆ ಪರಬ್ರಹ್ಮವು ಎಲ್ಲ ಕಡೆಗೂ ನಿಬಿಡವಾಗಿ ತುಂಬಿರುವದು. (೨) ಯಾವ ಬಾಜೂದಿಂದ ಪರಬ್ರಹ್ಮನನ್ನು ನೋಡುವಿರೋ ಆ ಬಾಜೂದಿಂದ ಅದು ಅಪಾರವಿರುವದು. ಯಾವ ಬಾಜೂದಿಂದ ನೋಡಿದರೂ ಇವನ ಅಂತ ಹತ್ತುವದಿಲ್ಲ. ಪರಬ್ರಹ್ಮವು ಅತ್ಯಂತ ಏಕ ಜಿನಸಿ, ಏಕರಸ, ಅಂದರೆ ಒಂದೇ ಪ್ರಕಾರದ್ದು ಇರುವದು. ಸ್ವತಂತ್ರವಿರುವದು. ಇದರ ಹೊರತು ಎರಡನೆಯದಾವುದೂ ಇಲ್ಲ. [ತಾನೇ ತಾನಾಗಿರುವದು] (೩) ವಿವೇಕದಿಂದ ಬ್ರಹ್ಮಾಂಡದ ಆಚೆಗೆ [ಬ್ರಹ್ಮಾಂಡದಾಚೆ] ಹೋಗಬೇಕು. ಅಲ್ಲಿಂದ ಬ್ರಹ್ಮಾಂಡವು ಆಗಿಯೇ ಇಲ್ಲ. ಆಗಿರುವದೇ ಇಲ್ಲ ಎಂದು ಅನ್ನುವ ಕಲ್ಪನಾ ಮಾಡಬೇಕು. ಕೇವಲ ಅವಕಾಶಮಯವಾದ ಪೊಳ್ಳು ಆಗಿರುವ ಆಕಾಶವನ್ನು ನೋಡಬೇಕು. ಆಗ ವಿಶ್ವವನ್ನು ವ್ಯಾಪಿಸಿ ಇರುವ ಇಷ್ಟೊಂದು ಚಂಚಲತನವು ಅಲ್ಲಿ ಇಲ್ಲದಾಗಿ ಹೋಗುವದು, ಶೂನ್ಯವತ್ ಆಗುವದು. (೪) ನಿತ್ಯಾನಿತ್ಯ ವಿವೇಕ ಅಂದರೆ ಶಾಶ್ವತ ಯಾವುದು ಮತ್ತು ಅಶಾಶ್ವತ ಯಾವುದು ಇದರ ಶೋಧ ಅಥವಾ ವಿಚಾರಮಾಡಿ ದೃಶ್ಯ [ಅಶಾಶ್ವತ]ವನ್ನು ಇಲ್ಲದಂತೆ ಮಾಡಬೇಕು. ಆಗ ಎಲ್ಲಿ ಅಂದರೆ ಅಲ್ಲಿ ಎಲ್ಲ ಕಡೆಗೂ ಪರಬ್ರಹ್ಮವು ತುಂಬಿರುವದರ ಅನುಭವ ಬರುವದು. ಆದರೆ ಬ್ರಹ್ಮದ ಬಗ್ಗೆ ಸಂಪೂರ್ಣ ಕಲ್ಪನೆಯನ್ನು ಅಥವಾ ಅನುಮಾನವನ್ನು ಮಾಡಲಿಕ್ಕೆಯಾರಿಗೂ ಎಂದೂ ಸಾಧ್ಯವಿಲ್ಲ.(೫)

ಅಧೋರ್ಧ್ವ ಪಾಹಾತಾ ಚಹುಕಡೆ। ನಿರ್ಗುಣ ಬ್ರಹ್ಮ ಜಿಕಡೆ ತಿಕಡೆ।
ಮನ ಧಾವೇಲ ಕೋಣೆಕಡೆ। ಅಂತ ಪಾಹಾವಯಾ ॥೬॥

ದೃಶ್ಯ ಚಳೇ ಬ್ರಹ್ಮ ಚಳೇನಾ। ದೃಶ್ಯ ಕಳೇ ಬ್ರಹ್ಮ ಕಳೇನಾ।
ದೃಶ್ಯ ಆಕಳೇ ಬ್ರಹ್ಮ ಆಕಳೇನಾ। ಕಲ್ಪನೇಸೀ ॥೭॥

ಕಲ್ಪನಾ ಮ್ಹಣಿಜೇ ಕಾಂಹೀ ಚ ನಾಹೀ। ಬ್ರಹ್ಮ ದಾಟಲೇ ಠಾಈಚಾ ಠಾಈ।
ವಾಕ್ಯಾರ್ಥ ವಿವರತ ಜಾಇ। ಮ್ಹಣಿಜೇ ಬರೇ ॥೮॥

ಪರಬ್ರಹ್ಮಾಯೆವಢೇ ಥೋರ ನಾಹೀ। ಶ್ರವಣಾಪರತೇ ಸಾಧನ ನಾಹೀ।
ಕಳಲ್ಯಾವಿಣ ಕಾಂಹೀ ಚ ನಾಹೀ। ಸಮಾಧಾನ ॥೯॥

ಪಿಪ್ಲೀಕಾಮಾರ್ಗೇ ಹಳು ಹಳು ಘಡೇ। ವಿಹಂಗಮೇ ಫಳಾಸೀ ಗಾಠೀ ಪಡೇ।
ಸಾಧಕ ಮನನೀ ಪವಾಡೇ। ಮ್ಹಣಿಜೆ ಬರೇ ॥೧೦॥

ಪರಬ್ರಹ್ಮಾಸಾರಿಖೇ ದುಸರೇ। ಕಾಂಹೀ ಚ ನಾಹೀ ಖರೇ।
ನಿಂದಾ ಆಣೀ ಸ್ತುತಿಉತ್ತರೇ। ಪರಬ್ರಹ್ಮೀ ನಾಹೀ ॥೧೧॥

ಐಸೇ ಪರಬ್ರಹ್ಮ ಯೇಕಜಿನಸೀ। ಕಾಂಹೀ ಚ ತುಳೇನಾ ತಯಾಸೀ।
ಮಹಾನುಭವ ಪುಣ್ಯರಾಸೀ। ತೇಥೇ ಪವಾಡತೀ ॥೧೨॥

ಚಂಚಳೇ ಹೋತೇ ದುಃಖಪ್ರಾಪ್ತೀ। ನಿಶ್ಚಳಾಯೆವಢೀ ನಾಹೀ ವಿಶ್ರಾಂತೀ।
ನಿಶ್ಚಳ ಪ್ರತ್ಯಯೇ ಪಾಹಾತೀ। ಮಹಾನುಭಾವ ॥೧೩॥

ಮುಳಾಪಾಸುನ ಸೇವಟವರೀ। ವಿಚಾರಣಾ ಕೇಲೀ ಚ ಕರೀ।
ಪ್ರತ್ಯಯಾಚಾ ನಿಶ್ಚಯೋ ಅಂತರೀ। ತಯಾಸೀ ಚ ಫಾವೇ ॥೧೪॥

ಕೆಳಗೆ ನೋಡಿದೆನು, ಮೇಲೆ ನೋಡಿದೆನು, ನಾಲ್ಕೂ ಕಡೆಗೂ ನೋಡಿದೆನು. ಅಲ್ಲಿ ಇಲ್ಲಿ ಎಲ್ಲೆಲ್ಲಿಯೂ ಸರ್ವತ್ರವೂ ನಿರ್ಗುಣ ಬ್ರಹ್ಮವೇ ಭರಪೂರ ತುಂಬಿರುವದು ಎನ್ನುವದು ಕಂಡುಬರುವದು. ಆ ಯಾವ ಮನವು ಇದನ್ನು ತಿಳಿಯಲು ಹೋಗುವದು. ಆದರೆ ಅದು [ಮನವು] ಏಕದೇಶೀ ಮರ್ಯಾದಿತ ಇರುವದರಿಂದ ಬ್ರಹ್ಮದ ಕೊನೆಯನ್ನು-ಅಂತವನ್ನು ನೋಡುವದಕ್ಕಾಗಿ ಅದು ಓಡುವದಾದರೂ ಎತ್ತ ಎಲ್ಲಿಗೆ ? (೬) ದೃಶ್ಯವು ಅಸ್ಥಿರವು. ನಾಶ ಹೊಂದುವದು. ವಿಕಾರ ಹೊಂದುವದು. ಆದರೆ ಆದೇ ಬ್ರಹ್ಮವು ಸ್ಥಿರವುಳ್ಳದ್ದು, ನಾಶ ಹೊಂದುವದಿಲ್ಲ. ವಿಕಾರ ಹೊಂದುವದಿಲ್ಲ. ದೃಶ್ಯವು ಮನಕ್ಕೆ ಗೊತ್ತಾಗುವದು, ಆಕಲನವಾಗುವದು. ಆದರೆ ಬ್ರಹ್ಮವು ಮನಕ್ಕೆ ಗೊತ್ತಾಗುವದಿಲ್ಲ, ಆಕಲನವಾಗುವದಿಲ್ಲ. ದೃಶ್ಯವು ಕಲ್ಪನೆಯ ಕಕ್ಷೆಯಲ್ಲಿ ಬರುವದು. ಆದರೆ ಬ್ರಹ್ಮವು ಕಲ್ಪನೆಯ ಕಕ್ಷೆಯಲ್ಲಿ ಬರುವದಿಲ್ಲ. (೭) ಪಿಪೀಲಿಕಾ [ಇರುವೆಯ] ಮಾರ್ಗ ಮತ್ತು ವಿಹಂಗಮ [ಪಕ್ಷಿಯ] ಮಾರ್ಗ ಹೀಗೆ ಎರಡು ಮಾರ್ಗವಿರುವವು. ಶ್ರವಣ, ಮನನದಂತಹ ಉತ್ತಮ ಸಾಧನ ಮಾರ್ಗವು ಬೇರೊಂದಿಲ್ಲ. ಸತತ ಚಿಂತನ ಮಾಡಿ ದೃಶ್ಯವನ್ನು ದಾಟಬೇಕು. ಮತ್ತು ನಿಶ್ಚಲ ಪರಬ್ರಹ್ಮನ ಭೆಟ್ಟಿಯಾಗಬೇಕು; ಕಲ್ಪನಾ ಅಂದರೆ ಏನೂ ಇಲ್ಲ. ಕಲ್ಪನೆಯಿಂದ ಹುಟ್ಟಿದ ವಸ್ತು ಪ್ರತ್ಯಕ್ಷ ಅಸ್ತಿತ್ವದಲ್ಲಿ ಇರುವದಿಲ್ಲ ಪರಬ್ರಹ್ಮವು ಸರ್ವಸ್ಥಳದಲ್ಲಿ ಅತ್ಯಂತ ದಟ್ಟವಾಗಿ ನಿಬಿಡವಾಗಿ ತುಂಬಿರುವದು. "ತತ್ ತ್ವಮ್ ಅಸಿ।" "ಅಹಂ ಬ್ರಹ್ಮ ಅಸ್ಮಿ।" ಈ ಮಹಾ ವಾಕ್ಯದ ಅರ್ಥವನ್ನು ಸತತವೂ ಮನನದಲ್ಲಿಡಬೇಕು. ಇದರ ಯೋಗದಿಂದ ಸಾಧನೆಮಾಡುವಲ್ಲಿ ಸಹಾಯವಾದೀತು ? ಆಗುವದು. (೮) ನಿಜವಾಗಿ ನೋಡಿದ್ದಾದರೆ ಪರಬ್ರಹ್ಮನಷ್ಟು ಶ್ರೇಷ್ಠ ವಸ್ತು ಇನ್ನಾವುದೂ ಇಲ್ಲವೇ ಇಲ್ಲ. ಶ್ರವಣದಂತಹ ಶ್ರೇಷ್ಠ ಸಾಧನ ಬೇರೆ ಯಾವುದೂ ಇಲ್ಲ. ವಸ್ತುವಿನ ರೂಪ ತಿಳಿಯದ ಹೊರತು ಖರೇ ಸಮಾಧಾನ ದೊರಕುವದಿಲ್ಲ (೯) ಯಾರು ಪಿಪೀಲಿಕಾ ಮಾರ್ಗದಿಂದ ಹೋಗುವರೋ ಅಥವಾ ಇರುವೆಯ (ಕಾಲಿನಿಂದ) ನಡಿಗೆಯಿಂದ ಹೋಗುವರೋ ಅವರಿಗೆ ಸಾಧ್ಯವು. ಅಂದರೆ ವಸ್ತು ಪ್ರಾಪ್ತಿ ಅಂದರೆ ಬ್ರಹ್ಮ ವಸ್ತುವಿನ ಅನುಭವ ಹಸ್ತಗತವಾಗುವಲ್ಲಿ ಹೆಚ್ಚು ಸಮಯಬೇಕಾಗುವದು. ಯಾಕಂದರೆ ಇರುವೆಯು ಅಥವಾ ಸಾಧನೆಯು ಸಾವಕಾಶವಾಗಿ ಮಾರ್ಗ ಕ್ರಮಿಸುವದು ಯಾರು ದೃಢ ನಿರ್ಧಾರದಿಂದ. ವಿಹಂಗಮ ಮಾರ್ಗದಿಂದ ಹೋಗುವರೋ ಅಥವಾ ಪಕ್ಷಿಗಳಂತೆ ಹಾರಿ ಚಟಕ್ಕನೆ ಬಹು ವೇಗದಿಂದ ಫಲದವರೆಗೆ ಹೋಗುವರೋ ಅವರಿಗೆ ಸಾಧ್ಯವು. ಬ್ರಹ್ಮ ವಸ್ತು ಹಸ್ತಗತವಾಗುವಲ್ಲಿ ವೇಳೆ ಹತ್ತುವದಿಲ್ಲ. ಯಾಕೆಂದರೆ ಇವನು ಒಮ್ಮಿಂದೊಮ್ಮೆಲೇ ಸೂಕ್ಷ್ಮದಲ್ಲಿ ಪ್ರವೇಶಿಸುವನು. ಆದ್ದರಿಂದ ಸಾಧಕನು ಮನನ ದಲ್ಲಿ ವೇಳೆಯನ್ನು ಹೆಚ್ಚು ಕಳೆಯಬೇಕು. ಅಂದರೆ ಮನನ ಮಾಡುವದನ್ನು ಬೆಳೆಸಬೇಕು. ಇದೇ ಉತ್ತಮ ಉಪಾಯವಾಗಿರುವದು. [ಮೇಲೆ ಹೇಳಿದ ಎರಡು ಮಾರ್ಗಗಳಲ್ಲದೆ "ಕಪಿ ಮಾರ್ಗ" ಮತ್ತು "ಮೀನ ಮಾರ್ಗ" ಎಂದು ಇರುವವು. ಈ ಮಾರ್ಗದಿಂದಲೂ ಸಾಧಕನು ಮನನ ಮಾಡಬಹುದಾಗಿದೆ.] (೧೦) ಪರಬ್ರಹ್ಮದಂತಹದು ಯಾವುದೂ ಇಲ್ಲ ಈ ಮಾತು ಅತ್ಯಂತ ನಿಜವಿರುವದು. ಸ್ತುತಿ ಮತ್ತು ನಿಂದೆ ಇವುಗಳ ಶಬ್ದವು ಪರಬ್ರಹ್ಮದವರೆಗೆ ಹೋಗಿ ಮುಟ್ಟಲಿಕ್ಕೆ ಸಾಧ್ಯವಿಲ್ಲ. (೧೧) ಪರಬ್ರಹ್ಮವು ಈ ಪ್ರಕಾರದ ಏಕಜಿನಸಿ, ಏಕರಸ, ಏಕಾಂಗಿ ಇರುವದು. ಇದರ ಕೂಡ ಸರಿ ಹೋಲುವ ತುಲನಾ ಮಾಡುವಂಥ ಎರಡನೆಯದಾವುದೂ ಇಲ್ಲವೇ ಇಲ್ಲ. ಮಹಾ ಪುಣ್ಯವಂತರಾದ ಶ್ರೇಷ್ಠ ಪುರುಷರು ಮಾತ್ರ ಪರಬ್ರಹ್ಮದ ಅನುಭವಹೊಂದಿ ಮಹಾನ್ ಶ್ರೇಷ್ಠ ಪುಣ್ಯ ಪುರುಷರೆನಿಸುವರು. (೧೨) ಚಂಚಲದ [ನಾದಿನಿಂದ] ಹಂಬಲದಿಂದ ಕಡೆಗೆ ದುಃಖವೇ ಆಗುವದು. ನಿಶ್ಚಲದನಾದಿನಿಂದ ಪರಮವಿಶ್ರಾಂತಿ ಪ್ರಾಪ್ತವಾಗುವದು. ಅತಿಶಯ ಶ್ರೇಷ್ಠ ದೊಡ್ಡ ಪುರುಷರು ನಿಶ್ಚಲದ ಅನುಭವ ಪಡೆಯುವರು. (೧೩) ಯಾವ ಪುರುಷ ಮೊದಲಿನಿಂದ ನೆಟ್ಟಗೆ [ಸೀದಾ] ಕೊನೆಯವರೆಗೆ ಒಂದೇ ಸಮ ಸತತ ವಿಚಾರಮಾಡುವನೋ ಅವನಿಗೇ ಅನುಭವದ ನಿಶ್ಚಯಾತ್ಮಕವಾದ ಜ್ಞಾನವಾಗುವದು. ಪ್ರಥಮ ಸ್ಫುರಣ ಅಥವಾ ಸಂಕಲ್ಪ ಇದು ಮೂಲವು ಮತ್ತು ಅನೇಕ ಸಜೀವ ಪ್ರಾಣಿ ಇದು ಕೊನೆಯದು. ಆದ್ದರಿಂದ ಯಾವ ಸಾಧಕನು ಮೂಲ ಮಾಯೆಯಿಂದ ನೇರವಾಗಿ (ಸೀದಾ) [ಥೇಟ] ಪ್ರಾಣಿ ಮಾತ್ರದವರೆಗೆ ಹಗಲೂ ರಾತ್ರಿ ವಿವರಣ ಅಂದರೆ ಸವಿಸ್ತಾರ ನಿರೂಪಣ, ಸ್ಪಷ್ಟೀಕರಣ, ಚರ್ಚಾಮಾಡುವನೋ ಅವನಿಗೇ ಪ್ರತ್ಯಕ್ಷ ಅನುಭವ ಬರುವದು. ಮತ್ತು ಇವನ ಜ್ಞಾನವು ನಿಶ್ಚಯಾತ್ಮಕ ವಾಗುವದು. (೧೪)

ಕಲ್ಪನೇಚೀ ಸೃಷ್ಟೀ ಜಾಲೀ । ತ್ರಿವಿಧ ಪ್ರಕಾರೇ ಭಾಸಲೀ ।
ತಿಕ್ಷಣ ಬುದ್ಧೀನೇ ಆಣಿಲೀ । ಪಾಹಿಜೇ ಮನಾ ॥೧

ಮೂಳಮಾಯೇ ಪಾಸೂನ ತ್ರಿಗುಣ । ಅವಘೇ ಯೇಕದೇಸೀ ಲಕ್ಷಣ ।
ಪಾಂಚಾ ಭೂತಾಂಚಾ ಥೋಬಳಾ ಗುಣ । ದಿಸತ ಆಹೇ ॥೧

ಪೃಥ್ವೀಪಾಸೂನ ಚ್ಯಾರೀ ಖಾಣೀ । ಚತ್ವಾರ ವೇಗಳಾಲೀ ಕರಣೀ ।
ಸಕಳ ಸೃಷ್ಟೀಚೀ ಚಾಲೀ ಯೇಥುನೀ । ಪುಢೇ ನಾಹೀ ॥೧೭

ಸೃಷ್ಟೀಚೇ ವಿವಿಧ ಲಕ್ಷಣ । ವಿಶದ ಕರೂ ನಿರೂಪಣ ।
ಶ್ರೋತೀ ಸುಚಿತ ಅಂತಃಕರ್ಣ । ಕೇಲೇ ಪಾಹಿಜೇ ॥೧೮

ಮೂಳಮಾಯಾ ಜಾಣಿವೇಚೀ । ಮುಳೀ ಸೂಕ್ಷ್ಮ ಕಲ್ಪನೇಚೀ ।
ಜೈಸೀ ಸ್ಥಿತೀ ಪರೇ ವಾಚೇಚೀ । ತದ್ರೂಪ ಚಿ ತೇ ॥೧೯

ಅಷ್ಟಧಾ ಪ್ರಕೃತೀಚೇ ಮೂಳ । ತೇ ಹೇ ಮೂಳಮಾಯಾ ಚ ಕೇವಳ ।
ಸೂಕ್ಷ್ಮರೂಪ ಬೀಜ ಸಕಳ । ಮೂಳೀ ಚ ಆಹೇ ॥೨೦॥

ಜಡ ಪದಾರ್ಥ ಚೇತವಿತೇ ತೇ । ಮ್ಹಣೌನ ಚೈತನ್ಯ ಬೋಲಿಜೇತೇ ।
ಸೂಕ್ಷ್ಮರೂಪೇ ಸಂಕೇತೇ । ಸಮಜೋನ ಘ್ಯಾವೀ ॥೨೧॥

ಪ್ರಕೃತಿಪುರೂಷಾಚಾ ವಿಚಾರ । ಅರ್ಧನಾರೀನಟೇಶ್ವರ ।
ಅಷ್ಟಧಾಪ್ರಕೃತೀಚಾ ವಿಚಾರ । ಸಕಳ ಕಾಂಹೀ ॥೨೨॥

ಗುಪ್ತ ತ್ರಿಗುಣಾಚೇ ಗೂಢತ್ವ । ಮ್ಹಣೌನ ಸಂಕೇತ ಮಹತ್ತತ್ವ ।
ಗುಪ್ತರೂಪೇ ಶುದ್ಧಸತ್ತ್ವ । ತೇಥೇ ಚಿ ವಸೇ ॥೨೩॥

ಜೇಥೂನ ಗುಣ ಪ್ರಗಟತೀ । ತೀಸ ಗುಣಕ್ಷೋಭಿಣೀ ಮ್ಹಣತೀ ।
ತ್ರಿಗುಣಾಚೀ ರೂಪೇ ಸಮಜತೀ । ಧನ್ಯ ತೇ ಸಾಧು ॥೨೪॥

ಗುಪ್ತರೂಪೇ ಗುಣಸೌಮ್ಯ । ಮ್ಹಣೌನಿ ಬೋಲಿಜೇ ಗುಣಸಾಮ್ಯ ।
ಸೂಕ್ಷ್ಮ ಸಂಕೇತ ಅಗಮ್ಯ । ಬಹುತಾಸ ಕೈಂಚಾ ॥೨೫॥

ಮೂಳಮಾಯೇಪಾಸೂನ ತ್ರಿಗುಣ । ಚಂಚಳ ಯೇಕದೇಸೀ ಲಕ್ಷಣ ।
ಪ್ರತ್ಯಯೇ ಪಾಹಾತಾ ಖೂಣ । ಅಂತರೀ ಯೇತೇ ॥೨೬॥

ಪುಢೇ ಪಂಚಭೂತಾಂಚೀ ಬಂಡೇ । ವಾಢಲೀ ವಿಶಾಳೇ ಉದಂಡೇ ।
ಸಪ್ತದ್ವೀಪೇ ನವಖಂಡೇ । ವಸುಂಧರಾ ಹೇ ॥೨೭॥

ಈಗ ಸೃಷ್ಟಿಯ ವಿವಿಧ ಲಕ್ಷಣಗಳನ್ನು ಹೇಳುವೆನು: ಮೂಲತಃ ಕಲ್ಪನೆಯಿಂದಲೇ ಈ ಸೃಷ್ಟಿ ಆಯಿತು. ಮೂರು ಪ್ರಕಾರದಿಂದ ಇದು ಅನುಭವಕ್ಕೆ ಬರುವದು. ತೀಕ್ಷ್ಣ ಬುದ್ಧಿಯಿಂದ ನಾವು ನಮ್ಮ ಮನದಲ್ಲಿ ವಿಚಾರ ಮಾಡಿ ನೋಡಲಿಕ್ಕೆ ಬೇಕಾಗುವದು. (೧೫) ಮೂಲಮಾಯೆಯಿಂದ ತ್ರಿಗುಣದವರೆಗೆ ಇದು ಒಂದು ವರ್ಗವು. ಇದು ಏಕದೇಶೀಯ ಇರುವದು, ಮರ್ಯಾದಿತವಿರುವದು. ಏಕದೇಶೀ ಅಂದರೆ ಒಂದು ಹೊತ್ತಿನಲ್ಲಿ ಒಂದು ಸಮಯದಲ್ಲಿ ಒಂದೇ ಸ್ಥಳದಲ್ಲಿ ಇರುವಂಥಹದು. ಸ್ಪಷ್ಟ ಸ್ವರೂಪ ಹೊಂದಿದಂಥ ಸ್ಥೂಲ ಪಂಚಭೂತಗಳು ಇದು ಎರಡನೆಯ ವರ್ಗವು ಪಂಚಭೂತಗಳ ವ್ಯಾಪಾರ ಸ್ಪಷ್ಟವಾಗಿಯೇ ಕಾಣುವದು. (೧೬) ಪೃಥ್ವಿಯಿಂದ ಉತ್ಪನ್ನವಾಗುವ ನಾಲ್ಕು ಪ್ರಕಾರದ ಜೀವ ಪ್ರಾಣಿಗಳು ಅಂದರೆ- ಅಂಡಜ, ಜಾರಜ, ಸ್ವೇದಜ, ಉದ್ಭಿಜ ಇದು ಮೂರನೆಯ ವರ್ಗವು. ನಾಲ್ಕು ಪ್ರಕಾರದ ಜೀವ ಪ್ರಾಣಿಗಳಲ್ಲಿ ನಾಲ್ಕು ಪ್ರಕಾರದ ವ್ಯವಹಾರ ಇರುವದು. ಎಲ್ಲ ಸೃಷ್ಟಿಯ ರಚನೆಯು ಇಲ್ಲಿ ಮುಗಿಯುವದು. ಇದರ ಮುಂದೆ ಸೃಷ್ಟಿಯ ರಚನೆ ಇರುವದಿಲ್ಲ. (೧೭) ಇನ್ನು ಮುಂದೆ ಈ ಸಮಾಸ ಮುಗಿಯುವ ಪರ್ಯಂತವೂ ಈ ಮೂರು ವರ್ಗದ ಸವಿಸ್ತರ ವರ್ಣನೆ ಇರುವದು: ಸೃಷ್ಟಿ ರಚನೆಯಲ್ಲಿ ಕಂಡುಬರುವಂಥ ಮೂರು ವರ್ಗವನ್ನು ಮೇಲೆ ಹೇಳಲಾಗಿದೆ. ಅದರ ಸ್ಪಷ್ಟೀಕರಣ- ವಿವೇಚನೆಯನ್ನು ಈಗ ಮಾಡುವೆವು. ಶ್ರೋತಾಜನ ತಮ್ಮ ಅಂತಃಕರಣವನ್ನು ಸ್ಥಿರಮಾಡಿಕೊಂಡು ಇದನ್ನು ಕೇಳಬೇಕು. (೧೮) ಮೂಲಮಾಯಾ ಅರಿವಿನ ರೂಪವಿರುವಳು. ಮೂಲದಲ್ಲಿ ಇದು ಅತ್ಯಂತ ಸೂಕ್ಷ್ಮ ಕಲ್ಪನೆ ಇರುವದು. ಪರಮಾಣು ಹೇಗೆ ಕೇವಲ ಸ್ಫುರಣರೂಪ ಇರುವದೋ ಅದರಂತೆ ಇದು [ಮಾಯೆ.] ಇರುವದು. ಇಷ್ಟೇ ಅಲ್ಲ ಇವಳು ಕೇವಲ ಸ್ಫುರಣ ಸ್ವರೂಪವಿರುವಳು. ["ಏಕೋಹಂ ಬಹುಸ್ಯಾಮಾ" ಅನ್ನುವ ಆದಿ ಸಂಕಲ್ಪಳು ಅಂದರೆ ಮೂಲಮಾಯೆ ಇರುವಳು.] (೧೯) ಈ ಮೂಲಮಾಯೆಯು ಅಷ್ಟಧಾ ಪ್ರಕೃತಿಗೆ ಮೂಲವಿರುವಳು. ಯಾವತ್ತೂ ಸೃಷ್ಟಿಯ ಸೂಕ್ಷ್ಮ ರೂಪ ಬೀಜಗಳು ಮೂಲಮಾಯೆಯಲ್ಲಿಯೇ ಇರುವವು. (೨೦) ಜಡ ಪದಾರ್ಥಗಳಿಗೆ ಇವಳು ಚೇತನಾ ಕೊಡುವಳು. ಚಲಿಸುವ ಶಕ್ತಿಕೊಡುವಳು. ಆದ್ದರಿಂದ ಇವಳಿಗೆ "ಚೈತನ್ಯ" ಎಂದು ಹೆಸರು ಕೊಡುವರು. ಇವಳ ಆ ಯಾವ ಸೂಕ್ಷ್ಮ ರೂಪವಿರುವವೋ ಅವನ್ನು ಚಿನ್ಹಗಳ ಮೇಲಿಂದ ತಿಳಿದುಕೊಳ್ಳಬೇಕು. [ಹೆಸರಿನ ಮೇಲಿಂದ ತಿಳಿದುಕೊಳ್ಳಬೇಕು.] (೨೧) ಪ್ರಕೃತಿ ಪುರುಷ ವಿಚಾರ, ಅರ್ಧನಾರೀ ನಟೇಶ್ವರ, ಅಷ್ಟಧಾ ಪ್ರಕೃತಿ, ಇವುಗಳ ವಿಚಾರ ಈ ಮೂರೂ ಮೂಲಮಾಯೆಯಲ್ಲಿಯೇ ಬರುವವು. (೨೨) ಮೂಲಮಾಯೆಯಲ್ಲಿಯೇ ತ್ರಿಗುಣಗಳು ಗುಪ್ತ ರೀತಿಯಿಂದ ವಾಸಮಾಡುವವು. ಈ ಗೂಢ ತನಕ್ಕೆ ಸಂಕೇತದಿಂದ "ಮಹತ್ ತತ್ವ" ಎಂದು ಅನ್ನುವರು. ಶುದ್ಧ ಸತ್ವಗುಣವೂ ಕೂಡಾ ಗುಪ್ತರೂಪದಿಂದ ಇವಳಲ್ಲಿಯೇ ವಾಸಮಾಡುವದು. (೨೩) ಯಾವಾಗ ತ್ರಿಗುಣವು ವ್ಯಕ್ತದೆಶೆಗೆ ಬರಹತ್ತುವದೋ ಆಗ ಮೂಲಮಾಯೆಗೆ ಗುಣಕ್ಷೋಭಿಣೆ ಎಂದು ಅನ್ನುವರು. ತ್ರಿಗುಣದ ರೂಪಗಳು ಯಾವನಿಗೆ ಸರಿಯಾಗಿ ತಿಳಿಯುವವೋ ಆ ಸಾಧು ಸಂತನು ಧನ್ಯನೆನಿಸುವನು. (೨೪) ಗುಣಗಳು ಗುಪ್ತರೂಪದಿಂದ ಅಂದರೆ ಅವ್ಯಕ್ತ ದೆಶೆಯಲ್ಲಿ [ಅವ್ಯಕ್ತ ಅವಸ್ಥೆಯಲ್ಲಿ] ಸ್ಥಿರ ಮತ್ತು ಸಮಾನವಾಗಿರುವವು. ಅಂತೆಯೇ ಗುಣಕ್ಷೋಭಿಣಿಗೆ ಗುಣಸಾಮ್ಯ ಎಂದು ಹೆಸರು ಇರುವದು ಈ ಸಂಕೇತವು ಸೂಕ್ಷ್ಮವಿರುವದು. ಇದು ತಿಳಿಯಲು ಸರಳವಿಲ್ಲ. ಆದ್ದರಿಂದ ಇದು ಬಹಳ ಜನರಿಗೆ ತಿಳಿದಿಲ್ಲ. ಸುಲಭದಲ್ಲಿ ತಿಳಿಯುವಂಥದೂ ಅಲ್ಲ. (೨೫) ಮೂಲಮಾಯೆಯಿಂದ ಹಿಡಿದು ತ್ರಿಗುಣಗಳವರೆಗೆ ಇರುವಂಥ ತತ್ವಗಳು ಚಂಚಲ ಮತ್ತು ಏಕದೇಶಿ ಇರುವವು. ಇವು ಸರ್ವವ್ಯಾಪಿ ಇರುವದಿಲ್ಲ. ಅನುಭವದಿಂದ ತಿಳಿದುಕೊಂಡರೆ ಆಗ ಇದರ ಗುರುತು ಮನಸ್ಸಿಗೆ ಖಾತ್ರಿಯಾಗುವದು. ಇಲ್ಲಿಗೆ ಒಂದನೆಯ ವರ್ಗ ಹೇಳಿದ್ದಾಯಿತು. (೨೬) ಆನಂತರ ಪಂಚ ಮಹಾಭೂತಗಳ ಆವಾಢವ್ಯ ಮತ್ತು ಅಪಾರ ವಿಸ್ತಾರವಾಗುವದು. ಏಳು ದ್ವೀಪಕಲ್ಪ ಮತ್ತು ಒಂಭತ್ತು ಖಂಡ ಇರುವಂಥ ಪೃಥ್ವಿಯು ಈ ಪಂಚ ಮಹಾಭೂತಗಳಿಂದಲೇ ನಿರ್ಮಾಣವಾಯಿತು. (೨೭)

ತ್ರಿಗುಣಾಪಾಸೂನ ಪೃಥ್ವೀವರೀ । ದುಸರ್‍ಯಾ ಜಿನಸಾನ್ಯಾಚೀ ಪರೀ ।
ದೋನೀ ಜಿನಸ ಯಾಉಪರೀ । ತಿಸರಾ ಐಕಾ ॥೨೮

ಪೃಥ್ವೀ ನಾನಾ ಜಿನಸಾಚೆ ಬೀಜ । ಅಂಡಜ ಜಾರಜ ಸ್ವೇತಜ ಉದ್ಭಿಜ ।
ಚ್ಯಾರೀ ಖಾಣೀ ಚ್ಯಾರೀ ವಾಣೀ ಸಹಜ । ನಿರ್ಮಾಣ ಜಾಲ್ಯಾ ॥೨೯

ಖಾಣೀ ವಾಣೀ ಹೋತೀ ಜಾತೀ । ಪರಂತು ತೈಸೀ ಚ ಆಹೇ ಜಗತೀ ।
ಐಸೇ ಹೋತೀ ಆಣೀ ಜಾತೀ । ಉದಂಡ ಪ್ರಾಣೀ ॥೩೦

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಸೃಷ್ಟಿತ್ರಿವಿಧಲಕ್ಷಣ ನಿರೂಪಣ' ನಾಮ ಸಮಾಸ ದ್ವಿತೀಯ

• •

ಈ ರೀತಿಯಿಂದ ತ್ರಿಗುಣಗಳಿಂದ ಹಿಡಿದು ಪೃಥ್ವಿಯವರೆಗೆ ಚಂಚಲದ ಎರಡನೇ ವರ್ಗವಾಯಿತು. ಈಗ ಇಬ್ಬರ ಮಾಹಿತಿ ಹೇಳಿದ್ದಾಯಿತು. ಈಗ ಮೂರನೆಯ ವರ್ಗ ಕೇಳಿರಿ. (೨೮) ಪೃಥ್ವಿಯ ಮೇಲೆ ಅನೇಕ ವಸ್ತುಗಳ ಬೀಜ ಇರುವವು. ಅಂಡಜ, ಜಾರಜ, ಸ್ವೇದಜ ಮತ್ತು ಉದ್ಭಿಜ, ಹೀಗೆ ಜೀವದಲ್ಲಿ ನಾಲ್ಕು ಪ್ರಕಾರಗಳು ಮತ್ತು ವಾಣಿಯಲ್ಲಿ ಪರಾ, ಪಶ್ಯಂತಿ, ಮಧ್ಯಮಾ, ವೈಖರಿ, ಇವು ನಾಲ್ಕು ಪ್ರಕಾರಗಳು ಇವೆಲ್ಲವೂ ಪೃಥ್ವೀ ತತ್ವದಿಂದಲೇ ನಿರ್ಮಾಣವಾದವು (೨೯) ಖಾಣಿ ಮತ್ತು ವಾಣಿ ಇವು ಉತ್ಪನ್ನವಾಗುವವು ಮತ್ತು ನಾಶಹೊಂದುವವು, ಅನೇಕ ಜೀವಗಳು ಜನ್ಮಕ್ಕೆ ಬರುವವು ಮತ್ತು ಮರಣ ಹೊಂದುವವು ಆದರೆ ಪೃಥ್ವಿಯು ಮಾತ್ರ ಹೇಗಿರುವದೋ ಹಾಗೆಯೇ ಇರುವದು. ಇದರಂತೆ ಮೂಲಮಾಯೆಯಿಂದ ಪೃಥ್ವಿಯವರೆಗಿನ ಸರ್ವ ಚರಾಚರ ಸೃಷ್ಟಿಯೂ ಅನೇಕ ಸಲ ಉತ್ಪನ್ನವಾಗುವದು. ಮತ್ತು ನಾಶವಾಗುವದು. ಆದರೆ ಮಾಯಾತೀತನಾದ ಪರಬ್ರಹ್ಮವು ಮಾತ್ರ ಹೇಗಿತ್ತೋ ಹಾಗೇ ನಿರ್ವಿಕಾರ ಇರುವದು. (೩೦)

ಶ್ರೀ ದಾಸಬೋಧದ ಇಪ್ಪತ್ತನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ಸೃಷ್ಟಿ ತ್ರಿವಿಧಲಕ್ಷಣ ನಿರೂಪಣ"ವೆಂಬ ಹೆಸರಿನ ಎರಡನೇ ಸಮಾಸವು ಮುಗಿದುದು.

• •

## ದಶಕ ೨೦. ಸಮಾಸ ೩. ಸೂಕ್ಷ್ಮನಾಮಾಭಿಧಾನ ನಿರೂಪಣ (ನುಡಿ ೩೦)

ಪರಮಾತ್ಮ ಸ್ವರೂಪವು ಅತಿಸೂಕ್ಷ್ಮ ಮತ್ತು ಅದೃಶ್ಯವಿರುವದು. ನಮಗೆ ಇದರ ಅನುಭವ ತೆಗೆದುಕೊಳ್ಳುವದಿದ್ದರೆ ನಮ್ಮ ಜ್ಞಾನ ದೃಷ್ಟಿಯೂ ಕೂಡಾ ಅಷ್ಟೇ ಸೂಕ್ಷ್ಮ ಮತ್ತು ಅದೃಶ್ಯದಲ್ಲಿ ಸೇರಿಸಿಕೊಳ್ಳುವಷ್ಟು ಆಗಲಿಕ್ಕೇ ಬೇಕು : ಆದರೆ ಇದನ್ನು ಅದು ಹೇಗೆ ತಯಾರಮಾಡಬೇಕು ಅನ್ನುವ ಉಪಾಯಗಳ ಬಗ್ಗೆ ಈ ಸಮಾಸದಲ್ಲಿ ಶ್ರೀ ಸಮರ್ಥರು ನಮಗೆ ಹೇಳುವರು. ಮೊದಲನೆಯದಾಗಿ ನಾವು ನಮ್ಮ ವೃತ್ತಿ ಮುವದ ಸ್ಥಿತಿಯನ್ನು ಹಿಂದಕ್ಕೆ

ತಿರುಗಿಸಬೇಕು. ಆಮೇಲೆ ಅದನ್ನು ವಿವೇಕದ ಓಘ ಪ್ರವಾಹದಲ್ಲಿ ಬಿಟ್ಟುಬಿಡಬೇಕು. ಹೀಗೆ ಮಾಡಿದವೆಂದರೆ-ಯಾವತ್ತೂ ಸ್ಥೂಲ ದೃಶ್ಯವನ್ನು ಹಿಂದಕ್ಕೆಸರಿಸಿ ಅಥವಾ ಹಿಂದಕ್ಕೆಒಗೆದು ಬಿಡಲು ಸಾಧ್ಯವಾಗುವದು; ಆಗ ಸೂಕ್ಷ್ಮದಲ್ಲಿ ಪ್ರವೇಶಮಾಡಲಿಕ್ಕೆ ಬರುವದು. ಮೂಲಮಾಯೆಯಲ್ಲಿ ಸಕಲ ಸೃಷ್ಟಿಯ ಬೀಜಗಳೆಲ್ಲ ಇರುವವು. ಇವು ಅತಿಶಯ ಸೂಕ್ಷ್ಮವಿರುವವು. ಆದರೆ ಈ ವಿಷಯವು ಒಮ್ಮೆ ತಿಳಿಯಿತೆಂದರೆ ಮತ್ತು ಅನುಭವದಲ್ಲಿ ಬಂದಿತೆಂದರೆ ಪರಮಾರ್ಥವು ಸಿದ್ಧಿಸಿದಂತೆ ಆಗುವದು. ಈ ಸೂಕ್ಷ್ಮ ಬೀಜಗಳ ಬಗ್ಗೆ ಯಾರಿಗೆ ತಿಳಿದಿರುವದೋ [ನಿಜವಾದ ಅರ್ಥ ಆಕಲನವಾಗುವದೋ] ಅವನು ಪ್ರಾಮಾಣಿಕತನದ ಮುಸುಕಿನಲ್ಲಿ ಇಲ್ಲದ ಗೊಂದಲ ಎಬ್ಬಿಸುವದಿಲ್ಲ. ಅನಿಷ್ಟ ಪ್ರಕಾರಗಳನ್ನು ಮಾಡುವದಿಲ್ಲ. [ಢೋಂಗಿ ಸಾಧು ಆಗಿ ಢೋಂಗಿ ವೇದಾಂತ ಹೇಳಲಿಕ್ಕೆ ಹೋಗುವದಿಲ್ಲ] ಹಿಂದಿನ ಸಮಾಸದಲ್ಲಿ ಈ ಸೃಷ್ಟಿಯೊಳಗಿನ ಮೂರು ವರ್ಗಗಳ ಬಗ್ಗೆ ಹೇಳಿರುವೆವು. ಮೂಲಮಾಯೆಯಿಂದ ತ್ರಿಗುಣದವರೆಗೆ ಒಂದನೆಯ ವರ್ಗವು. ಪಂಚ ಮಹಾಭೂತಗಳು ಎರಡನೆಯ ವರ್ಗದವು. ಮತ್ತು ಪೃಥ್ವಿಯ ಮೇಲಿನ ನಾಲ್ಕು ಖಾಣಿ ಮತ್ತು ನಾಲ್ಕು ವಾಣಿ ಇವು ಮೂರನೆಯ ವರ್ಗವಾಗಿರುವವು. ಈ ಪೈಕಿ ವರ್ಗ ಎರಡು ಮತ್ತು ವರ್ಗ ಮೂರು ಇವು ಸ್ಥೂಲ ಮತ್ತು ದೃಶ್ಯವಿರುವವು. ಆದರೆ ಒಂದನೆಯ ವರ್ಗವು ಅತ್ಯಂತ ಸೂಕ್ಷ್ಮ ಮತ್ತು ಅದೃಶ್ಯ ಇರುವದು. ಇದನ್ನು ಹದಿನಾಲ್ಕು ಸಂಕೇತ ಚಿನ್ಹಗಳಿಂದ ಗುರುತಿಸಬೇಕು. ಆ ಸಂಕೇತಗಳು ಹೀಗಿರುವವು. [೧]ಸತ್ವ, [೨] ರಜ, [೩]ತಮ, [೪]ಗುಣಕ್ಷೋಭಿಣಿ, [೫] ಶುದ್ಧ ಸತ್ವ, [೬]ಶಿವಶಕ್ತಿ, [೭]ಪ್ರಕೃತಿ ಪುರುಷ, [೮] ಷಡ್ ಗುಣೈಶ್ವರ [೯]ಅರ್ಧನಾರೀ ನಟೇಶ್ವರ, [೧೦]ಗುಣಸಾಮ್ಯ, [೧೧]ಚೈತನ್ಯ, [೧೨]ಮನ, [೧೩]ಮಾಯಾ, [೧೪]ಅಂತರಾತ್ಮಾ: ಈ ಹದಿನಾಲ್ಕು ಸಂಕೇತ [ಗುರುತು] ಗಳ ಬಗ್ಗೆ ಪುನಃ ಪುನಃ ವಿವರಣೆಮಾಡಿ ಜ್ಞಾನ ದೃಷ್ಟಿಯಿಂದ ಇವುಗಳ ಅನುಭವವನ್ನು ನೋಡಬೇಕು. ಮನವು ಅಧೋಮುಖ [ಕೆಳ ಮುಖ] ವಾಗಿದ್ದರೆ ಭೇದಗಳು ಬೆಳೆಯುವವು. ನಾವು ಮಾಯೆಯ ಭಿಡೆಗೆ ಬೀಳುವೆವು. ಮತ್ತು ಇದರಿಂದಾಗಿ ಸ್ವರೂಪ ಸ್ಥಿತಿ ಜಾರುವದು ತಪ್ಪುವದು ಹರಿಯುವದು. ಮನವನ್ನು ಊರ್ಧ್ವಮುಖ ಮಾಡಿದವೆಂದರೆ ಭೇದಗಳು ಕಡಿಮೆಯಾಗುತ್ತ ಹೋಗುವವು ಆದ್ದರಿಂದ ಮನವನ್ನು ಊರ್ಧ್ವಮುಖ ಮಾಡಿ ಪುನಃ ಪುನಃ ಅಂತರ್ಯಾಮದಲ್ಲಿ ಶೋಧಮಾಡಬೇಕು. ಹಗಲೂ ರಾತ್ರಿ ಅರ್ಥನೋಡಬೇಕು. ಇಂಗಿತವನ್ನು ತಿಳಿಯಬೇಕು. ಸ್ವಾನುಭವಿ ಸಾಧು ಸಂತ ಶರಣರನ್ನು ಹುಡುಕಬೇಕು. ಅವರ ಹತ್ತಿರ ಅನುಭವ [ಪ್ರಚೀತಿ] ಕಲಿಯಬೇಕು. ನಾವು ಅನುಭವ ಪಡೆದವೆಂದರೆ ಯಾವತ್ತೂ ಸಂದೇಹಗಳು ದೂರಾಗುವವು. ಬಿಟ್ಟು ಹೋಗುವವು. ಮತ್ತು ಸಮಾಧಾನ ಸಿಗುವದು.

**ದಶಕ. ವಿಂಶತಿ : ಸಮಾಸ. ತೃತೀಯ : ಸೂಕ್ಷ್ಮನಾಮಾಭಿಧಾನ ನಿರೂಪಣ (ನುಡಿ ೩೦)**

॥ಶ್ರೀರಾಮ॥ ಮುಳೀಹೂನ ಸೇವಟವರೀ । ವಿಸ್ತಾರ ಬೋಲಿಲಾ ನಾನಾ ಪರೀ ।
ಪುನ್ಹಾ ವಿವರತ ವಿರತ ಮಾಘಾರೀ । ವೃತ್ತಿ ನ್ಯಾವೀ ॥೧॥

ಚ್ಯಾರೀ ವಾಣೀ ಚ್ಯಾರೀ ಖಾಣೀ । ಚೌರ್‍ಯಾಸೀ ಲಕ್ಷ ಜೀವಯೋನೀ ।
ನಾನಾ ಪ್ರಕಾರೀಚೇ ಪ್ರಾಣೀ । ಜನ್ಮಾಸ ಯೇತೀ ॥೨॥

ಅವಘೇ ಹೋತೀ ಪೃಥ್ವೀಪಾಸುನೀ । ಪೃಥ್ವೀಮಧೇ ಜಾತೀ ನಾಸೋನೀ ।
ಅನೇಕ ಯೇತೀ ಜಾತೀ ಪರೀ ಅವನೀ । ತೈಸೀ ಚ ಆಹೇ ॥೩॥

ಐಸೇ ಹೇ ಸೇಂಡ್ಯಾಕಡೀಲ ಖಾಂಡ । ದುಸರೇ ಭೂತಾಂಚೇ ಬಂಡ ।
ತಿಸರೇ ನಾಮಾಭಿಧಾನೇ ಉದಂಡ । ಸೂಕ್ಷ್ಮರೂಪೇ ॥೪॥

ಸ್ಥೂಳ ಅವಘೇ ಸಾಂಡೂನ ದ್ಯಾವೇ । ಸೂಕ್ಷ್ಮರೂಪೇ ವೋಳಖಾವೇ ।
ಗುಣಾಪಾಸೂನ ಪಾಹಿಲೇ ಚ ಪಾಹಾವೇ । ಸೂಕ್ಷ್ಮದೃಷ್ಟೀ ॥೫॥

ಗುಣಾಚೀ ರೂಪೇ ಜಾಣೀವ ನೇಣೀವ। ಪಾಹಿಲಾ ಚ ಪಾಹಾವಾ ಅಭಿಪ್ರಾವ ।
ಸೂಕ್ಷ್ಮದೃಷ್ಟೀ ಚೆ ಲಾಘವ । ಯೇಥೂನ ಪುಢೇ ॥೬॥

ಶುದ್ಧ ನೇಣೀವ ತಮೋಗುಣ । ಶುದ್ಧ ಜಾಣೀವ ಸತ್ತ್ವಗುಣ ।
ಜಾಣೀವನೇಣೀವ ರಜೋಗುಣ । ಮಿಶ್ರಿತ ಚಾಲಿಲಾ ॥೭॥

ತ್ರಿಗುಣಾಚೀ ರೂಪೇ ಐಸೀ । ಕಳೋ ಲಾಗಲೀ ಅಪೈಸೀ ।
ಗುಣಾಪುಢೀಲ ಕರ್ದಮಾಸೀ । ಗುಣಕ್ಷೋಭಿಣೀ ಬೋಲಿಜೇ ॥೮॥

ರಜ ತಮ ಆಣಿ ಸತ್ವ । ತಿಹೀಚೇ ಜೇಥೇ ಗೂಢತ್ವ ।
ತೇ ಜಾಣಿಜೇ ಮಹತ್ತತ್ವ । ಕರ್ದಮರೂಪ ॥೯॥

## ದಶಕ ೨೦. ಸಮಾಸ ೩. ಸೂಕ್ಷ್ಮನಾಮಾಭಿಧಾನ ನಿರೂಪಣ (ಓವಿ ೩೦)

ಹಿಂದಿನ ಸಮಾಸದಲ್ಲಿ ಸೃಷ್ಟಿಯ ಮೂರು ಜಿನಸು ಅಂದರೆ ಮೂರು ಮೂಲ ದ್ರವ್ಯ [ಮೂರು ವರ್ಗ] ಗಳ ಬಗ್ಗೆ ಹೇಳಿದ್ದೇವೆ. ಪರಮಾರ್ಥ ಸಾಧ್ಯವಾಗಬೇಕಾದರೆ ಎರಡು ಮತ್ತು ಮೂರನೆಯ [ವರ್ಗದ] ಜಿನಸುಗಳನ್ನು ಹಿಂದೆ ಸರಿಸಿ ಮೊದಲನೆಯ ಜಿನಸಿನ [ವರ್ಗದ] ಕಡೆಗೆ ಹೋಗಬೇಕು : ಮೂಲಮಾಯೆಯಿಂದ ಹಿಡಿದು ನಾಲ್ಕು ಪ್ರಕಾರದ ಜೀವ ಪ್ರಾಣಿಗಳವರೆಗೆ ಈ ಸೃಷ್ಟಿಯ ವಿಸ್ತಾರದ ಬಗ್ಗೆ ಅನೇಕ ಪ್ರಕಾರದಿಂದ ಹೇಳಲಾಯಿತು. ಇದರ ಮೇಲೆ ಪುನಃ ಪುನಃ ಮನನಮಾಡಿ ನಿಮ್ಮ ವೃತ್ತಿಯನ್ನು ಹಿಂದಕ್ಕೆ ತಿರುಗಿಸಬೇಕು. ಅಹಂಭಾವ ಕಡಿಮೆ ಮಾಡುತ್ತ, ಮಾಡುತ್ತ ವೃತ್ತಿಯನ್ನು ಮೂಲಮಾಯೆಯವರೆಗೂ ಒಯ್ದು ಮುಟ್ಟಿಸಬೇಕು. (೧) ನಾಲ್ಕು ವಾಣಿ ಮತ್ತು ನಾಲ್ಕು ಖಾಣಿ ಕೂಡಿ ಎಂಭತ್ನಾಲ್ಕು ಲಕ್ಷ ಜೀವಯೋನಿ ಇರುವವು. ಇವುಗಳಲ್ಲಿಯ ಅನೇಕ ಪ್ರಕಾರದ ಪ್ರಾಣಿಗಳು ಜಗತ್ತಿನಲ್ಲಿ ಜನ್ಮ ತಳೆಯುವವು. (೨) ಈ ಎಲ್ಲ ಪ್ರಾಣಿಗಳು ಪೃಥ್ವಿಯಿಂದಲೇ ಜನ್ಮ ಹೊಂದುವವು. [ಹೊಂದಿಬರುವವು]. ಮತ್ತು ಕೊನೆಗೆ ಪೃಥ್ವಿಯಲ್ಲಿಯೇ ನಾಶ ಹೊಂದುವವು. ಅನೇಕ ಪ್ರಾಣಿಗಳು ಬಂದವು ಮತ್ತು ಹೋದವು. ಆದರೆ ಪೃಥ್ವಿಯು ಮಾತ್ರ ಹೇಗಿತ್ತೋ ಹಾಗೇ ಇರುವದು. (೩) ಪೃಥ್ವಿ ಮತ್ತು ಅದರ ಮೇಲೆ ಇರುವ ಜೀವ ಪ್ರಾಣಿಗಳು ಬ್ರಹ್ಮಾಂಡ ವೃಕ್ಷದ ಶಿಖರದ ಕೊನೆಯ ಭಾಗದಲ್ಲಿಯ ಅಂದರೆ [ಅಗ್ರ] ತುದಿಯ ಒಂದು ಭಾಗ ಇರುವದು. ಈ ವರೆಗೆ ಈ ಒಂದು ವಿಭಾಗದ ಬಗ್ಗೆ ಮಾತ್ರ ಇಲ್ಲಿ ಹೇಳಲಾಯಿತು. ಇನ್ನು ಪಂಚಭೂತಗಳ ಅಫಾಟ ಅಪರಂಪಾರ ವಿಸ್ತಾರ. ಇದು ಆ ಬ್ರಹ್ಮಾಂಡ ವೃಕ್ಷದ ಇನ್ನೊಂದು ವಿಭಾಗ ಇರುವದು. ಇದಕ್ಕೆ ಎರಡನೆಯ ವಿಭಾಗ ಅನ್ನೋಣ. ಮೂಲಮಾಯೆಯಿಂದ ತ್ರಿಗುಣಗಳ ವರೆಗೆ ಅನೇಕ ಸೂಕ್ಷ್ಮ ತತ್ವದ ಹೆಸರು ಹೇಳಲಾಗಿದೆ. ಇವು ಆ ಬ್ರಹ್ಮಾಂಡ ವೃಕ್ಷದ ಮೂರನೆಯ ವಿಭಾಗವಿರುವದು. (೪) ಸ್ಥೂಲವಿರುವದೆಲ್ಲವನ್ನೂ ಸಮೂಲವಾಗಿ ಬಿಟ್ಟುಬಿಡಬೇಕು. ಒಗೆದುಬಿಡಬೇಕು. ಯಾವುದು ಸೂಕ್ಷ್ಮವಿರುವದೋ ಅದರ ಗುಣಧರ್ಮವನ್ನು ತಿಳಿಯಬೇಕು. ಗುಣದಿಂದ ಮೂಲಮಾಯೆಯವರೆಗೆ ಮೇಲಿಂದ ಮೇಲೆ ಸೂಕ್ಷ್ಮ ದೃಷ್ಟಿಯಿಂದ ಚಿಂತನಮಾಡುತ್ತಹೋಗಬೇಕು. (೫) ಸೂಕ್ಷ್ಮದ [೧೪] ಹದಿನಾಲ್ಕು ಸಂಕೇತ ಮತ್ತು [೫] ಪಂಚ ಮಹಾಭೂತಗಳು ಮತ್ತು (೪) ನಾಲ್ಕು ಪ್ರಕಾರದ ಯೋನಿ [ಖಾಣಿ, ಉತ್ಪತ್ತಿಸ್ಥಾನ, ಉಗಮ] ಗಳು ಹೀಗೆ ಒಟ್ಟು (೨೩) ಇಪ್ಪತ್ಮೂರು ತತ್ವಗಳನ್ನು ಹೇಳಿ ಅದರ ಮೇಲೆ ಹಗಲೂ ರಾತ್ರಿ ಮನನಮಾಡುವ ಆದೇಶಕೊಡುವರು : ಗುಣಗಳಲ್ಲಿ ಅರಿವು, ಮರೆವು (ತಿಳುವಳಿಕೆಯುಳ್ಳ ಜ್ಞಾನ ಮತ್ತು ತಿಳುವಳಿಕೆ ಇಲ್ಲದ ಅಜ್ಞಾನ) ಇವು ಎರಡೂ ಇರುವವು. ಅದರಿಂದ ತ್ರಿಗುಣದ ಮೇಲೆ ಪುನಃ ಪುನಃ ವಿಚಾರಮಾಡಬೇಕು. ಮತ್ತು ಗುಣಗಳ ರಹಸ್ಯವನ್ನು ತಿಳಿಯಬೇಕು. ಸೂಕ್ಷ್ಮ ದೃಷ್ಟಿಯ ಕೌಶಲ್ಯವು ನಿಜವಾಗಿ ಇಲ್ಲಿಂದ ಪ್ರಾರಂಭವಾಗುವದು. (೬) ತಮೋಗುಣ ಅಂದರೆ ಶುದ್ಧ ಅಜ್ಞಾನವು. ಸತ್ವಗುಣ ಅಂದರೆ ಶುದ್ಧ ಜ್ಞಾನವು. ರಜೋಗುಣ ಅಂದರೆ ಜ್ಞಾನ ಮತ್ತು ಅಜ್ಞಾನ ಇವುಗಳ ಮಿಶ್ರಣವು. ಇದನ್ನೆಲ್ಲ ಲಕ್ಷ್ಯದಲ್ಲಿಡಿರಿ. [೭] ತ್ರಿಗುಣದ ಮೂಲ ಸ್ವಭಾವವು ಹೇಗೆ ಇರುವದು. ಇದು ಸರಿಯಾಗಿ ತಿಳಿಯಿತೆಂದರೆ ಇದರ ಮುಂದೆ [ತ್ರಿಗುಣದ ಮುಂದೆ] ಯಾವ ಮಿಶ್ರಣವಿರುವದೋ ಅದಕ್ಕೆ ಗುಣಕ್ಷೋಭಿಣಿ ಎಂದು ಅನ್ನುವರು. ಇದು ನಿಮಗೆ ತಿಳಿಯುವದು. ಗೊತ್ತಾಗುತ್ತದು. (೮) ರಜ, ತಮ, ಸತ್ವ, ಈ ಮೂರೂ ಯಾವ ಸ್ಥಳದಲ್ಲಿ ಅತ್ಯಂತ ಗುಪ್ತತನದಿಂದ ಇರುವವೋ ಆ ಅವಸ್ಥೆಗೆ ಮಹತ್‌ತತ್ವ ಎಂದು ಅನ್ನುವರು. ಮಹತ್ ತತ್ವವು ಕರ್ದಮದಂತೆ ಅಂದರೆ ಕಲಸಿದ ಮಿಶ್ರಣರೂಪ ಇರುವದು. (೯)

ಪ್ರಕೃತಿ ಪುರುಷ ಶಿವಶಕ್ತೀ । ಅರ್ಧನಾರೀ ನಟೇಶ್ವರ ಮ್ಹಣತೀ ।
ಪರೀ ಯಾಚೀ ಸ್ವರೂಪಸ್ಥಿತೀ । ಕರ್ದಮರೂಪ ॥೧೦॥

ಸೂಕ್ಷ್ಮರೂಪೇ ಗುಣಸೌಮ್ಯ । ತ್ಯಾಸ ಬೋಲಿಜೆ ಗುಣಸಾಮ್ಯ ।
ತೈಸೇ ಚಿ ಚೈತನ್ಯ ಅಗಮ್ಯ । ಸೂಕ್ಷ್ಮರೂಪೀ ॥೧೧॥

ಬಹುಜಿನಸೀ ಮೂಳಮಾಯಾ । ಮಹಾಕಾರಣ ಬ್ರಹ್ಮಾಂಡೀಚೀ ಕಾಯಾ ।
ಏಸಿಯಾ ಸೂಕ್ಷ್ಮ ಅನ್ವಯಾ । ಪಾಹಿಲೇ ಚಿ ಪಾಹಾವೇ ॥೧೨॥

ಚ್ಯಾರೀ ಖಾಣೀ ಪಾಂಚಭೂತೇ । ಚೌದಾ ಸೂಕ್ಷ್ಮ ಸಂಕೇತೇ ।
ಕಾಯೆ ಪಾಹಾಣೇ ತೇ ಯೇಥೇ । ಶೋಧೂನ ಪಾಹಾವೇ ॥೧೩॥

ಆಹಾಚ ಪಾಹಾತಾ ಕಳೇನಾ । ಗರಜ ಕೇಲ್ಯಾ ಸಮಜೇನಾ ।
ನಾನಾ ಪ್ರಕಾರೀ ಜನಾಚ್ಯಾ ಮನಾ । ಸಂದೇಹ ಪಡತೀ ॥೧೪॥

ಚೌದಾ ಪಾಂಚ ಯೇಕೋಣೀಸ । ಯೇಕೋಣೀಸ ಚ್ಯಾರೀ ತೇವಿಸ ।
ಯಾಮಧೇ ಮೂಳ ಚತುರ್ದಶ । ಪಾಹಿಲೇ ಚಿ ಪಾಹಾವೇ ॥೧೫॥

ಜೋ ವಿವರೋನ ಸಮಜಲಾ । ತೇಥೇ ಸಂದೇಹ ನಾಹೀ ಉರಲಾ ।
ಸಮಜಲ್ಯಾವಿಣ ಜೋ ಗಲ್ಬಲಾ । ತೋ ನಿರರ್ಥಕ ॥೧೬॥

ಸಕಳ ಸೃಷ್ಟೀಚೇ ಬೀಜ । ಮೂಳಮಾಯೇತ ಅಸೇ ಸಹಜ ।
ಅವಘೇ ಸಮಜತಾ ಸಜ್ಜ । ಪರಮಾರ್ಥ ಹೋತೋ ॥೧೭॥

ಸಮಜಲೇ ಮಾಣುಸ ಚಾವಳೇನಾ । ನಿಶ್ಚಈ ಅನುಮಾನ ಧರೀನಾ ।
ಸಾವಳಗೊಂದಾ ಕರೀನಾ । ಪರಮಾರ್ಥ ಕದಾ ॥೧೮॥

ಶಬ್ದಾತೀತ ಬೋಲತಾ ಆಲೇ । ತ್ಯಾಸ ವಾಚ್ಯಾಂಶ ಬೋಲಿಲೇ ।
ಶುದ್ಧ ಲಕ್ಷ್ಯಾಂಶ ಲಕ್ಷಿಲೇ । ಪಾಹಿಜೆ ವಿವೇಕೇ ॥೧೯॥

ಪೂರ್ವಪಕ್ಷ ಮ್ಹಣಿಜೆ ಮಾಯಾ । ಸಿದ್ಧಾಂತೇ ಜಾಯೆ ವಿಲಯಾ ।
ಮಾಯಾ ನಸ್ತಾ ಮಗ ತಯಾ । ಕಾಯೆ ಮ್ಹಣಾವೇ ॥೨೦॥

ಪ್ರಕೃತಿ ಪುರುಷ, ಶಿವಶಕ್ತಿ ಅರ್ಧನಾರೀ ನಟೇಶ್ವರ ಈ ಹೆಸರುಗಳನ್ನೂ ಇದಕ್ಕೇ ಉಪಯೋಗಿಸುವರು. ಇವುಗಳ ಸ್ವರೂಪವಾದರೂ ಮಿಶ್ರಣಮಯವೇ ಇರುವದು. (೧೦) ಗುಣಕ್ಷೋಭಿಣಿಯಲ್ಲಿ ಮೂರು ಗುಣಗಳು ಅತ್ಯಂತ ಸೂಕ್ಷ್ಮ ರೂಪದಿಂದ ಇರುವವು. ಹಾಗೆಯೇ ಇವು ಸೌಮ್ಯವಾಗಿರುವವು. ಈ ಅವಸ್ಥೆಗೆ ಗುಣಸಾಮ್ಯ ಎಂದು ಅನ್ನುವರು. ಇದರಂತೆ ಅತ್ಯಂತ ಸೂಕ್ಷ್ಮ ರೂಪದ ಚೈತನ್ಯವೂ ಕೂಡಾ ಅಲ್ಲಿಯೇ ಇರುವದು. ಇದು ತಿಳಿಯ ಬೇಕಾದರೆ ಬಹಳ ಕಠಿಣವಿರುವದು. [೧೧] ಮೂಲಮಾಯೆಯು ಅನೇಕ ತತ್ವಗಳಿಂದ ತುಂಬಿದ್ದಾಳೆ. ಮೂಲಮಾಯಾ ಅಂದರೆ ಬ್ರಹ್ಮಾಂಡದ ಮಹಾಕಾರಣ ದೇಹ [ನಾಲ್ಕನೆಯ ದೇಹ] ವಾಗಿದೆ. ಈ ತತ್ವಗಳು ಮತ್ತು ಅದರ ಸಂಬಂಧ ಗಳು ಸೂಕ್ಷ್ಮವಿರುವವು. ಮೇಲಿಂದ ಮೇಲೆ ವಿಚಾರಮಾಡಿಕೊಂಡು ಇದರ ಜ್ಞಾನವನ್ನು ಮಾಡಿಕೊಳ್ಳಬೇಕು.(೧೨) ನಾಲ್ಕು ಖಾಣಿ [ಉತ್ಪತ್ತಿಸ್ಥಾನ, ಯೋನಿ] ಐದು ಮಹಾಭೂತಗಳು ಮತ್ತು ಮಾಯೆಯ ಹದಿನಾಲ್ಕು ಸೂಕ್ಷ್ಮ ಸಂಕೇತಮಯ ಸೂಕ್ಷ್ಮ ತತ್ವದ ಹದಿನಾಲ್ಕು ಹೆಸರುಗಳು, ಇವೆಲ್ಲವುಗಳ ಬಗ್ಗೆ ಪುನಃ ಪುನಃ ವಿಚಾರಮಾಡಿ ಸೃಷ್ಟಿ ರಚನೆಯ ಬಗೆಗಿನದೆಲ್ಲವನ್ನೂ ಶೋಧಿಸಿ ನೋಡಿರಿ ಮತ್ತು ಅರಿತುಕೊಳ್ಳಿರಿ. [೧೩] ಸುಮ್ಮನೇ ಮೇಲೆಮೇಲೆ ಕೇಳಿಸಿ ನೋಡಿದರಾಗಲಿ ಅಥವಾ ತಾತ್ಪೂರ್ತಿಕವಾಗಿ ತಿಳಿಯುವ ಗಡಬಿಡಿ ಮಾಡಿದರಾಗಲೀ ಅಥವಾ ಕಡಿದಷ್ಟು ತುರಿಸಿ ಕೊಳ್ಳುವವರಂತೆ, ಕೆಲಸದ ಮಟ್ಟಿಗೆ ಮಾತ್ರ ವಿಚಾರಮಾಡಿದರೆ ಈ ವಿಷಯದ ರಹಸ್ಯ ತಿಳಿಯುವದಿಲ್ಲ. ಸಾಮಾನ್ಯ ವಾಗಿ ಜನರು ಇದೇ ರೀತಿಯಲ್ಲಿ ವಿಚಾರಮಾಡುವರು. ಅಂತೆಯೇ ಇವರ ಮನದಲ್ಲಿ [ಸಾಮಾನ್ಯ ಜನರ ಮನದಲ್ಲಿ] ಅನೇಕ ಸಂದೇಹಗಳು ಉತ್ಪನ್ನವಾಗುವವು. (೧೪) ಮೂಲಮಾಯೆಯ ಹದಿನಾಲ್ಕು ಹೆಸರುಗಳು ಇದರಲ್ಲಿ ಐದು ಮಹಾಭೂತಗಳನ್ನು ಕೂಡಿಸಿದರೆ ಹತ್ತೊಂಭತ್ತು ಆಗುವವು. ಇದರಲ್ಲಿ ನಾಲ್ಕು ಖಾಣಿಗಳನ್ನು ಕೂಡಿಸಿದರೆ ಇಪ್ಪತ್ತೂರು ತತ್ವಗಳು ಆಗುವವು. ಇವುಗಳ ಪೈಕಿ ಮೂಲಮಾಯೆಯ ಹದಿನಾಲ್ಕು ಸಂಕೇತ [ಹೆಸರು] ಗಳ ಬಗ್ಗೆ ಪುನಃ ಪುನಃ ವಿಚಾರಮಾಡಬೇಕು. ಮತ್ತು ಇವುಗಳ ಸ್ವರೂಪವನ್ನು ತಿಳಿದುಕೊಳ್ಳಬೇಕು. [೧೫] ಯಾವತ್ತೂ ಸೃಷ್ಟಿಯ ಬೀಜವು ಮೂಲಮಾಯೆಯಲ್ಲಿ ಇರುವದು. ಮನವು ಸ್ಥೂಲದ ಕಡೆಗೆ ಧಾವಿಸುವದು. ಇದರಿಂದಾಗಿ ಸೃಷ್ಟಿ ರಚನೆಯ ರಹಸ್ಯ ಸಾಮಾನ್ಯರಿಗೆ ತಿಳಿಯುವದಿಲ್ಲವಾದ್ದರಿಂದ ಮನವನ್ನು ಊರ್ಧ್ವ ಮುಖ ಮಾಡಲಿಕ್ಕೆ ಬೇಕು : ಯಾರು ಅತ್ಯಂತ ಸೂಕ್ಷ್ಮ ಮನನಮಾಡಿ ಮೂಲಮಾಯೆಯ ಮತ್ತು ತ್ರಿಗುಣದ ಸ್ವರೂಪ ತಿಳಿದುಕೊಳ್ಳುವರೋ ಅವರಿಗೆ ಯಾವ ಸಂದೇಹಗಳೂ ಉಳಿಯಲಾರವು. ಇದನ್ನು ತಿಳಿಯದೆ ವ್ಯರ್ಥವಾಗಿ ವಾಚಾಳತನ ಮಾಡುವದು-ವಟಗುಟ್ಟುವದು ಯೋಗ್ಯವಲ್ಲ. [೧೬] ಈ ಮಾವತ್ತೂ ವಿಶ್ವದ ಬೀಜವು ಮೂಲಮಾಯೆಯಲ್ಲಿ ಅತ್ಯಂತ ಸಹಜತನದಿಂದ ಇರುವದು. ಆದಕೆ ಇದೆಲ್ಲವೂ ಚನ್ನಾಗಿ ತಿಳಿದದ್ದಾದರೆ, ಮನನವಾದದ್ದಾದರೆ ಆಗ ಪರ ಮಾರ್ಥವು ಸಿದ್ಧಿಯಾಗುವದು. (೧೭) ಮೂಲಮಾಯಾ ಮತ್ತು ತ್ರಿಗುಣ ಇವುಗಳ ನಿಜವಾದ ಸ್ವರೂಪ ಅಂದರೆ ತತ್ವಗಳ ಜ್ಞಾನವು ಯಾರಿಗೆ ಆಗಿರುವದೋ ಅಥವಾ ತಿಳಿದಿರುವದೋ ಅವರ ಮನದಲ್ಲಿ ಯಾವ ಸಂಶಯ ಘೋಟಾ- ಳೆಯು ಎಷ್ಟೂ ಬಾಕಿ ಉಳಿಯುವದಿಲ್ಲ ಇಂಥವನ ನಿಶ್ಚಯ. ನಿರ್ಧಾರ ಸ್ಪಷ್ಟ [ಪಕ್ಕಾ] ಆಗಿರುವದರಿಂದ ಇವನು ಸುಮ್ಮನೆ ಕಲ್ಪನಾಮಾಡುತ್ತ ಇರುವದಿಲ್ಲ. ಪರಮಾರ್ಥದಲ್ಲಿ ಗೊಂದಲ ಮಾಡಿಕೊಳ್ಳುವದಿಲ್ಲ ಇವನ ಪರಮಾರ್ಥವು ಪಕ್ಕಾ ಇರುವದರಿಂದ ಇವನ ಪರಮಾರ್ಥದಲ್ಲಿ ಮಲಿನ ಅಥವಾ ಢೋಂಗೀತನದ ಗದ್ದಲವಿರುವದಿಲ್ಲ. (೧೮) ಯಾವುದು ಶಬ್ದಾತೀತವಿರುವದೋ ಅದರ ಬಗ್ಗೆ ಏನಾದರೂ ಮಾತನಾಡಿದರೆ ಅದು ವಾಚ್ಯಾಂಶವೆಂದು ತಿಳಿಯಬೇಕು. [ಕೇವಲ ಮಾತನಾಡುವದು ಎಂದು ತಿಳಿಯಬೇಕು] ಯಾವುದು ಶಬ್ದ ಲಕ್ಷ್ಯಾಂಶ ಇದೆಯೋ ಅದನ್ನು ಕೊನೆಗೆ ವಿವೇಕದ ಜ್ಞಾನದೃಷ್ಟಿಯಿಂದ ನೋಡಬೇಕಾಗುವದು.(೧೯)ಮಾಯೆಗೆ ಪೂರ್ವಪಕ್ಷವೆಂದು ಅನ್ನುವರು. ಸಿದ್ಧಾಂತದಿಂದ ಅಂದರೆ ಪರಮ ತತ್ವವಾದ ಆ ಬ್ರಹ್ಮನ ಅನುಭವದಿಂದ ಈ ಪೂರ್ವ ಪಕ್ಷವು ಲಯವಾಗುವದು ಅಂದರೆ ಪರಬ್ರಹ್ಮನ ಸಾಕ್ಷಾತ್ಕಾರದಿಂದ ಮಾಯಾ ನಾಶವಾಗುವದು. ಮಾಯಾ ನಾಶವಾದ ಮೇಲೆ ಯಾವುದು ಉಳಿಯುವದೋ ಅದಕ್ಕೆ ಏನೆಂದು ಹೆಸರು ಇಡುವದು ಅಥವಾ ಹೆಸರು ಕೊಡುವದು ಅಥವಾ ಹೆಸರು ಕರೆಯುವದು? ಇವೆಲ್ಲವು ಮಾಯೆಯು ಈಚಿಗಿನವು. ಮಾಯೆಇರುವವರೆಗೆ ಇವು ಇರುವಂಥವು. ಆದ್ದರಿಂದ ಮಾಯಾ ವಿಲೀನ ಆದ ಮೇಲೆ ಶಬ್ದಗಳೂ ಸಹ ಉಳಿಯುವದಿಲ್ಲ. [೨೦]

ಅನ್ವಯೆಂ ಆಣೀ ವೀತಿರೇಕ । ಹಾ ಪೂರ್ವಪಕ್ಷಾಚಾ ವಿವೇಕ ।
ಸಿದ್ಧಾಂತ ಮ್ಹಣಿಜೆ ಶುದ್ಧಯೇಕ । ದುಸರೇ ನಾಹೀ ॥೨೧॥

ಅಧೋಮುಖೇ ಭೇದ ವಾಢತೋ । ಊರ್ಧ್ವ ಮುಖೇ ಭೇದ ತುಟತೋ ।
ನಿಃಸಂಗಪಣೇ ನಿರ್ಗುಣೀ ತೋ । ಮಹಾಯೋಗೀ ॥೨೨॥

ಮಾಯಾ ಮಿಥ್ಯಾ ಐಸೀ ಕಳಲೀ । ತರೀ ಮಗ ಭೀಡ ಕಾ ಲಾಗಲೀ ।
ಮಾಯೇಚೆ ಭಿಡೇನೇ ಘುಸರಲೀ । ಸ್ವರೂಪಸ್ಥಿತೀ ॥೨೩॥

ಲಟಕೇ ಮಾಯೇನೇ ದಪಟಾವೇ । ಸತ್ಯ ಪರಬ್ರಹ್ಮ ಸಾಂಡಾವೇ ।
ಮುಖ್ಯ ನಿಶ್ಚಯೇ ಹಿಂಡಾವೇ । ಕಾಸಯಾಸೀ ॥೨೪॥

ಪೃಥ್ವೀಮಧೇ ಬಹುತ ಜನ । ತ್ಯಾಮಧ್ಯೇ ಅಸತೀ ಸಜ್ಜನ ।
ಪರೀ ಸಾಧೂಸ ವೋಳಖತೋ ಕೋಣ । ಸಾಧುವೇಗಳಾ ॥೨೫॥

ಮ್ಹಣೌನ ಸಂಸಾರ ಸಾಂಡಾವಾ । ಮಗ ಸಾಧೂಚಾ ಶೋಧ ಘ್ಯಾವಾ ।
ಫಿರಫಿರೋ ಠಾಈ ಪಾಡಾವಾ । ಸಾಧುಜನ ॥೨೬॥

ಉದಂಡ ಹುಡಕಾವೇ ಸಂತ । ಸಾಂಪಡೇ ಪ್ರಚೀತೀಚಾ ಮಹಂತ ।
ಪ್ರಚೀತೀವಿಣ ಸ್ವಹಿತ । ಹೋಣಾರ ನಾಹೀ ॥೨೭॥

ಪ್ರಪಂಚ ಅಥವಾ ಪರಮಾರ್ಥ । ಪ್ರಚಿತೀವಿಣ ಅವಘೇ ವ್ಯರ್ಥ ।
ಪ್ರತ್ಯಯೆಜ್ಞಾನೀ ತೋ ಸಮರ್ಥ । ಸಕಳಾಮಧ್ಯೇ ॥೨೮॥

ರಾತ್ರಂದಿವಸ ಪಾಹಾವಾ ಅರ್ಥ । ಅರ್ಥ ಪಾಹೇಲ ತೋ ಸಮರ್ಥ ।
ಪರಲೋಕೀಚಾ ನಿಜಸ್ವಾರ್ಥ । ತೇಥೇ ಚಿ ಘಡೇ ॥೨೯॥

ಮ್ಹಣೌನ ಪಾಹಿಲೇ ಚಿ ಪಾಹಾವೇ । ಆಣಿ ಶೋಧಿಲೇ ಚಿ ಶೋಧಾವೇ ।
ಅವಘೇ ಕಳತಾ ಸ್ವಭಾವೇ । ಸಂದೇಹ ತುಟತೀ ॥೩೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
''ಸೂಕ್ಷ್ಮನಾಮಾಭಿಧಾನನಾಮ'' ಸಮಾಸ ತೃತೀಯ ॥

ಮಾಯಾ ಜೀವಂತ ಇದ್ದಾಗ ಅನ್ವಯ ಮತ್ತು ವ್ಯತಿರೇಕ [ಪರಸ್ಪರ ಸಂಬಂಧ ಅಂದರೆ ಸಾಧ್ಯ-ಸಾಧನ. ಇವುಗಳಲ್ಲಿಯ ಪರಸ್ಪರ ಸಂಬಂಧ] ಈ ಪದ್ಧತಿಯಿಂದ ವಿವೇಕದ ಕ್ರಿಯಾ ನಡೆಯುವದು. ಇದರಲ್ಲಿ ದ್ವೈತ ಇರುವದರಿಂದ ಇದು ಶಕ್ಯವಾಗುವದು. ಆದರೆ ಮಾಯಾ ವಿಲೀನವಾದ ಮೇಲೆ "ಶುದ್ಧವಾದ ಒಂದೇ ಒಂದು ಬ್ರಹ್ಮ ವಿರುವದು. ಅಲ್ಲಿ ಎರಡನೆಯದು ಯಾವುದೂ ಇಲ್ಲವೇ ಇಲ್ಲ" ಅನ್ನುವ ಪ್ರತ್ಯಕ್ಷ ಅನುಭವ ಬರುವದು. ಇದೇ ಸಿದ್ಧಾಂತವು ಇಲ್ಲಿ ಸಂಪೂರ್ಣ ಅದ್ವೈತವಿರುವದು. [೨೧] ಜೀವವು ಅಧೋಮುಖವಿದ್ದಾಗ. ಅಂದರೆ ಮಾಯೆಯ [ವಿಷಯದ] ಕಡೆಗೆ ಮುಖಮಾಡಿ ಇರುವದು ಆಗ ಭೇದಗಳು ಬೆಳೆಯುವವು. ಅನೇಕತ್ವದ ಅನೇಕ ಅನುಭವ ಬರುವದು. ಅದೇ ಜೀವವು ಊರ್ಧ್ವಮುಖ ಮಾಡಿದಾಗ ಅಂದರೆ ಬ್ರಹ್ಮನ ಕಡೆಗೆ ಮುಖಮಾಡಿ ಇರುವಾಗ ಭೇದಗಳು ಕಡಿಮೆ ಆಗುತ್ತ ಹೋಗುವವು. ಏಕತ್ವತನದ ಅನುಭವ ಬರಲಿಕ್ಕೆ ಹತ್ತುವದು. ಸರ್ವ ಸಂಗವನ್ನು ಬಿಟ್ಟು ತ್ಯಾಗಮಾಡಿ ಅಲಿಪ್ತತನದಿಂದ ನಿಃಸಂಗನಾಗಿ ಯಾರು ನಿರ್ಗುಣದೊಂದಿಗೆ ಸಮರಸರಾಗುವರೋ ಅವರಿಗೆ ಮಹಾಯೋಗಿ ಎಂದು ಅನ್ನುವರು. (೨೨) ಮಾಯೆಯು ನಿಜವಲ್ಲವೆಂದು ಸತ್ಯವಲ್ಲವೆಂದು ಒಮ್ಮೆ ತಿಳಿದ ಮೇಲೆ ಅದರ ಭಿಡೆ ಭಾರ ಒತ್ತಾಯವು ಜೀವದ ಮೇಲೆ ಬೀಳಬಾರದು. ಇದರೆ ಮಾಯೆಯ ಭಿಡೆ ಭಾರ ಒತ್ತಾಯ ಬೀಳುವದು. ಮತ್ತು ಜೀವವು ತನ್ನ ಸ್ವಸ್ವರೂಪಾವಸ್ಥೆಯಿಂದ ಕೆಳಗೆ ಜಾರುವದು. (೨೩) ಮಿಥ್ಯಾ ಮಾಯೆಯ ಭಿಡೆ ಭಾರದ ಕೆಳಗೆ ಜೀವವು ಸಿಕ್ಕಿದ್ದರಿಂದ ಸತ್ಯ ಪರಬ್ರಹ್ಮವನ್ನು ಬಿಡುವದು ಯೋಗ್ಯವಲ್ಲ. ಪರಬ್ರಹ್ಮವೊಂದೇ ಸತ್ಯವೆಂದು ಪೂರ್ಣ ಖಾತ್ರಿಯಾದ ಮೇಲೆ ಪುನಃ ಸಂಶಯದ ನಾದಿಗೆ [ಹುಚ್ಚಿಗೆ] ಬಿದ್ದು ಖೊಟ್ಟಿ ಸುಖದ ಬೆನ್ನುಹತ್ತಿ ಅತ್ತ ಇತ್ತ ದೀನನಂತೆ ತಿರುಗುವದೂ ಯೋಗ್ಯವಲ್ಲ. (೨೪) ಜಗತ್ತಿನಲ್ಲಿ ಸಂತ ಸಾಧು ಶರಣರಿರುವರು. ಇವರನ್ನು ಶೋಧಿಸಿ ಹುಡುಕಿ ನೋಡಬೇಕು ಅವರ ಹತ್ತಿರ ಇದ್ದು ಅನುಭವ ಪಡೆಯಬೇಕು. ಕಲಿಯಬೇಕು. ಹಗಲೂರಾತ್ರಿ ಸತತವಾಗಿ ಮನನಮಾಡಿ ಅರ್ಥ ಶೋಧಿಸುತ್ತ ಇರಬೇಕು: ಜಗತ್ತಿನಲ್ಲಿ ಬಹಳಷ್ಟು ಜನರಿರುವರು. ಅವರಲ್ಲಿ ಸಾಧು ಪುರುಷರೂ ಕೂಡಾ ಇರುವರು. ಇದೇನೋ ನಿಜವಿರುವದಾದರೂ ಖರೇ ಸಾಧುವನ್ನು ಶೋಧಿಸಬೇಕಾದರೆ ಸಾಧುವಿನ ಹೊರತು ಅನ್ಯರಾರಿಗೂ ಗುರುತಿಸಲಿಕ್ಕೆ ಆಗುವದಿಲ್ಲ. [೨೫] ಆದ್ದರಿಂದ ಯಾರಿಗೆ ಪರಮಾರ್ಥದ ಹಸಿವು ಹಂಬಲ ಇರುವದೋ ಅವರು ಸಂಸಾರವನ್ನು ಬಿಡಬೇಕು. ಮತ್ತು ಸಾಧು ಸಂತರ ಶೋಧವನ್ನು ಮಾಡಬೇಕು. ಊರೂರು ಅಡ್ಡಾಡಿ ತಿರುಗಾಡಿ ಸಾಧು ಸಂತರನ್ನು ಹುಡುಕಿ ಪತ್ತೆಹಚ್ಚಬೇಕು. [೨೬] ಈ ರೀತಿಯಿಂದ ಬಹಳಷ್ಟು ಸಂತರನ್ನು ಹುಡುಕಿ ನೋಡಿದೆವೆಂದರೆ ಆಗ ಅವರಲ್ಲಿಯೇ ಒಬ್ಬ ಶ್ರೇಷ್ಠ ಅಥವಾ ದೊಡ್ಡ ಸ್ವಾನುಭವಿ ಮಹಾತ್ಮನು ಕಂಡುಬರುವನು. ಸಾಕ್ಷಾತ್ಕಾರವಿಲ್ಲದೇ ಆತ್ಮಹಿತ ಸಾಧ್ಯವಾಗುವದಿಲ್ಲ [೨೭] ಪ್ರಪಂಚವೇ ಇರಲಿ ಪರಮಾರ್ಥವೇ ಇರಲಿ. ಪ್ರತ್ಯಕ್ಷ ಅನುಭವ ಇಲ್ಲದಿದ್ದರೆ ಎರಡೂ ವ್ಯರ್ಥವಾಗಿ ಹೋಗುವವು. ಎಲ್ಲದರಲ್ಲಿಯೂ ಸ್ವಾನುಭವದ ಜ್ಞಾನದಿಂದ ಸಂಪನ್ನನಾಗಿರುವಂಥ ಪುರುಷನೇ ಸಮರ್ಥ ಪುರುಷನೆನಿಸುವನು. (೨೮) ಸಾಧಕನು ಹಗಲೂರಾತ್ರಿ ಸತತವಾಗಿ ಅರ್ಥದ ಮನನವನ್ನು ಮಾಡುತ್ತಲಿರಬೇಕು. ಈ ರೀತಿಯಿಂದ ಮನನಮಾಡಿ ಯಾವನು ಅರ್ಥ ಶೋಧಿಸಿ ತೆಗೆಯುವನೋ (ತಿಳಿಯುವನೋ) ಅವನೇ ಸಮರ್ಥ ಪುರುಷನಾಗಿರುವನು. ಪರಮಾರ್ಥದಲ್ಲಿಯ ಆತ್ಮಜ್ಞಾನದ ಸ್ವಾರ್ಥ ಅವನಿಗೆ ಹಸ್ತಗತವಾಗುವದು(೨೯) ಆದ್ದರಿಂದ ಸಾಧಕರು ಯಾವ ಅರ್ಥವನ್ನು ತಿಳಿದುಕೊಂಡಿರುವರೋ ಅದರ ಮೇಲೆಯೇ ಪುನಃ ಪುನಃ ಮನನಮಾಡಬೇಕು. ಯಾವ ಸ್ವರೂಪದ ಶೋಧಮಾಡಿರುವರೋ ಅದರದೇ ಆ ಸ್ವರೂಪದ್ದೇ ಪುನಃಪುನಃ ಶೋಧಮಾಡಬೇಕು. ಈ ಮಾರ್ಗದಿಂದ ಹೋದದ್ದಾದರೆ ಸಹಜವಾಗಿ ಎಲ್ಲವೂ ತಿಳಿಯುವದು. ಮತ್ತು ಎಲ್ಲವೂ ತಿಳಿಯಿತೆಂದರೆ ಆ ಮೇಲೆ ಎಲ್ಲ ಸಂದೇಹಗಳೂ ಇಲ್ಲದಾಗಿ ಹೋಗುವವು. [ಸಮಾಧಾನದ ಅನುಭವ ಬರುವದು.] (೩೦)

ಶ್ರೀ ದಾಸಬೋಧದ ಇಪ್ಪತ್ತನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ಸೂಕ್ಷ್ಮನಾಮಾಭಿಧಾನ"ವೆಂಬ ಹೆಸರಿನ ಮೂರನೇ ಸಮಾಸವು ಮುಗಿದುದು.

● ●

### ದಶಕ. ವಿಂಶತಿ : ಸಮಾಸ. ಚತುರ್ಥ : ಆತ್ಮನಿರೂಪಣ (ನುಡಿ ೩೦)

॥ಶ್ರೀರಾಮ॥ ಸಕಳ ಜನಾಸ ಪ್ರಾರ್ಥನಾ । ಉಗೇ ಚ ಉದಾಸ ಕರಾವೇನಾ ।
ನಿರೂಪಣ ಆಣಾವೇ ಮನಾ । ಪ್ರತ್ಯಯಾಚೇ ॥೧॥

ಪ್ರತ್ಯಯೆ ರಾಹಿಲಾ ಯೇಕೇಕಡೇ । ಆಪಣ ಧಾಂವತೋ ಭಲತೇಕಡೇ ।
ತರೀ ಸಾರಾಸಾರಾಚೇ ನಿವಾಡೇ । ಕೈಸೇ ಹೋತೀ ॥೨॥

## ದಶಕ ೨೦. ಸಮಾಸ ೪. ಆತ್ಮನಿರೂಪಣ (ನುಡಿ ೪೦)

ಈ ವಿಶ್ವದಲ್ಲಿ ಯಾವ ಯಾವ ಘಡಾಮೋಡ [ಏರುಪೇರು] ಗಳು ನಡೆಯುವವೋ ಅವು ಕೇವಲ ಒಬ್ಬ ಅಂತರಾತ್ಮನ ಸತ್ತಾದಿಂದ ನಡೆಯುವವು. ಈ ವಿಷಯದ ವಿಚಾರವೇ ಈ ಸಮಾಸದಲ್ಲಿ ಮುಖ್ಯವಾದದ್ದಿರುವದು. ಕೇಂದ್ರ ಬಿಂದುವಾಗಿರುವದು. ಅನಂತ ಅಂತರಾತ್ಮಾ-ದ್ರಷ್ಟಾ ಇರುವನು. ಸರ್ವಸಾಕ್ಷಿ ಇರುವನು. ಆದರೆ ಇವನು ಅರಿವಿನ ಸ್ವರೂಪನಿರುವನು. ಚೈತನ್ಯ ಸ್ವರೂಪನಿರುವನು. ಇವನಿಗೇ ಜಗದೀಶ ಅಥವಾ ಜಗದೀಶ್ವರ ಎಂದು ಅನ್ನುವರು. ಇವನೊಬ್ಬನ ಸತ್ತಾದ ಅಧಿಕಾರವು ಎಲ್ಲ ಕಡೆಗೂ ಹಂಚಿರುವದು. ಸರ್ವ ಶರೀರಾಂತರದಲ್ಲಿ ವಿಭಾಗಗೊಂಡಿದೆ. ಅಂದರೆ ಒಬ್ಬನೇ ಒಬ್ಬ ಅಂತರಾತ್ಮಾ ಸರ್ವ ದೇಹವನ್ನು ನಡೆಸುವನು. ಇವನೇ ಜಗತ್ತಿನ ಮತ್ತು ಜೀವಗಳ ಧಾರಣ, ರಕ್ಷಣ, ಮತ್ತು ಪೋಷಣಮಾಡುವನು. ಇವನ ಸಾಮರ್ಥ್ಯ-ಕೌಶಲ್ಯದಿಂದ ಸೃಷ್ಟಿಯು ನಡೆಯುವದು ಇವನು ಸಂಪೂರ್ಣ ಜ್ಞಾನಮಯನಿರುವನು. ಜಗತ್ತಿನ ಘಟನೆಯಲ್ಲಿ ಕಂಡುಬರುವ ಸಂಗತಿಗಳು ಮತ್ತು ವ್ಯವಸ್ಥೆಗಳು ಇವನ ಜ್ಞಾನ ಸಾಮರ್ಥ್ಯದಿಂದ ಗಟ್ಟಿಮುಟ್ಟಾಗಿ ತಡೆದುಕೊಂಡು ನಿಂತಿರುವವು. ಮೂಲ ಸಂಕಲ್ಪವೇ ಜಗತ್ತಿನಲ್ಲಿ ಸಾಕಾರವಾಗುವದು, ಆಕಾರ ಹೊಂದುವದು. ಯಾರ ಪದರಿನಲ್ಲಿ ಭಾಗ್ಯ ಇರುವದೋ ಅವರಿಗೇ ಈ ಅಂತರಾತ್ಮನ ವಾಸ್ತವಿಕ ಸ್ವರೂಪ ತಿಳಿಯುವದು. ಸಾಧಕರು ಇದರ ಅನುಸಂಧಾನದ ಯೋಗ್ಯ ಸಂಬಂಧ ಇಟ್ಟು ಕೊಳ್ಳುವದನ್ನು ಕಲಿಯಬೇಕು. ಇವನ ಅನುಸಂಧಾನವೇ ಧ್ಯಾನವಿರುವದು. ಈ ಧ್ಯಾನದೊಳಗಿಂದಲೇ ಅವನ ಬಗೆಗಿನ ಜ್ಞಾನ ಉದಯ ಹೊಂದುವದು. ಅಂತರಾತ್ಮನ ಉಪಾಸನಾ ಮಾಡುತ್ತಾ ಮಾಡುತ್ತಾ ಕಲ್ಪನೆಗಳೆಲ್ಲ ನಾಶ ಹೊಂದಿ ಅನುಭವವು ಬರುವದು. ದೇವ ಮತ್ತು ಭಕ್ತ ಏಕರೂಪರಾಗುವರು. ಅಂತೆಯೇ ಉಪಾಸನಾ, ಇದು ಜ್ಞಾನ ಸ್ವರೂಪವಾಗುವದು. "ನಾನು ಅವನೇ ಇರುವೆನು." ಇದು ಮಹಾ ಕಾರಣ ದೇಹ [ಮೂಲಮಾಯಾ] ಇರುವದು. ಕೊನೆಯಲ್ಲಿ ಇದನ್ನೂ ತ್ಯಜಿಸಿಬಿಡಬೇಕು. ಅಂದರೆ ಅನುಭವದ ಪೂರ್ಣತೆಯು ಆಗುವದು. ತಾತ್ಪರ್ಯವೇನೆಂದರೆ ನಾವು ಮಾಯಿಕರಿರುವೆವು. ಮಾಯೆಯ ಅಧೀನರಿರುವೆವು. ಎಲ್ಲ ಕರ್ತೃತ್ವವೂ ಭಗವಂತನ ಕಡೆಗೇ ಇರುವದು. ಅರ್ಥಾತ್ ನಮ್ಮ ಕೈಯಲ್ಲಿ ಯಾವುದೂ ಇಲ್ಲ. ಅನ್ನುವದನ್ನು ಸ್ಥಿರವಾಗಿ ನಂಬಿರಿ.

### ದಶಕ ೨೦. ಸಮಾಸ ೪. ಆತ್ಮನಿರೂಪಣ (ನುಡಿ ೪೦)

ಜಗದ ವ್ಯವಹಾರದಲ್ಲಿ ಆ ಆ ದೇಶದ ರಾಜರ ಸತ್ತಾ ಅಧಿಕಾರ ಅಮಲು ನಡೆಯುವದು. ಆದರೆ ಈ ಸತ್ತಾ ಅನ್ನುವದೇನೂ ಪ್ರತ್ಯಕ್ಷವಾಗಿ ಕಾಣುವದಿಲ್ಲ. ಆದರೆ ಅವರ ಪರಿಣಾಮ ಮಾತ್ರ ಕಾಣುವದು. ಇದರಂತೆ ಜಗತ್ತಿನಲ್ಲಿ ಅಂತರಾತ್ಮನ ಸತ್ತಾಧಿಕಾರವು ಸರ್ವ ಕಡೆಗೂ ಸರ್ವ ಸ್ಥಳವಲ್ಲಿಯೂ ಎಲ್ಲ ಬಾಬತ್ತಿನ ಎಲ್ಲ ವಿಷಯ, ಕಾರ್ಯ, ಕೆಲಸಗಳ ಬಗ್ಗೆಯೂ ನಡೆಯುವದು. ಇದೂ ಪ್ರತ್ಯಕ್ಷ ಕಾಣುವದಿಲ್ಲ. ಆದರೆ ಇದರ ಅಮಲು ಅಧಿಕಾರ ಕಂಡುಬರುವದು: ಮಾವತ್ತೂ ಜನರಿಗೆ ನನ್ನ ಪ್ರಾರ್ಥನೆ ಏನೆಂದರೆ, ಯಾರೂ ಸುಮ್ಮನೆ ಉದಾಸೀನರಾಗಬಾರದು. ನಾನು ಹೇಳುವ ನಿರೂಪಣ (ಉಪದೇಶದ ವ್ಯಾಖ್ಯಾನ ಅದ್ವೈತದ ವ್ಯಾಖ್ಯಾನ) ಸ್ವಾನುಭವಸ್ಥಿತಿವದು. ಇದನ್ನು ಲಕ್ಷ್ಯದಲ್ಲಿ ತಂದು ತಿಳಿದುಕೊಳ್ಳಬೇಕು. (೧) ಸ್ವಾನುಭವದ ಮಾತು ಒಂದು ಕಡೆಗೆ ಉಳಿಯಿತು. ಮತ್ತು ನಾವು ಭಲತೆ [ಸಂಬಂಧ ಇಲ್ಲದ] ಕಡೆಗೆ ಧಾವಿಸುವೆವು. ಇಂಥ ಪರಿಸ್ಥಿತಿಯಲ್ಲಿ ಸಾರ-ಸತ್ಯ ಯಾವುದು? ಮತ್ತು ಅಸಾರ-ಅನಿತ್ಯ ಯಾವುದು ಇದರ ನಿರ್ಣಯ ಮಾಡಲಿಕ್ಕೆ ಶಕ್ಯವಾಗಲೊಲ್ಲದಾಗಿದೆ. [ಅನಿತ್ಯವಾದ ಮಾಯೆಯನ್ನು ಬಿಟ್ಟು ಸತ್ಯನಾದ ಪರಬ್ರಹ್ಮನನ್ನು ಪ್ರಾಪ್ತಮಾಡಿಕೊಳ್ಳುವದು ಹೇಗೆ ?] (೨)

ಉಗಿ ಚ ಪಾಹಾತಾ ಸೃಷ್ಟೀ । ಗಲ್ಬಲಾ ದಿಸತೋ ದೃಷ್ಟೀ ।<br>
ಪರೀ ತೇ ರಾಜಸತ್ತೇಚೀ ಗೋಷ್ಟೀ । ವೇಗಳೀ ಚ ॥೩॥

ಪೃಥ್ವೀಮಧೇ ಜಿತುಕೀ ಶರೀರೇ । ತಿತುಕೀ ಭಗವಂತಾಚೀ ಘರೇ ।<br>
ನಾನಾ ಸುಖೇ ಯೇಣೇ ದ್ವಾರೇ । ಪ್ರಾಪ್ತ ಹೋತೀ ॥೪॥

ತ್ಯಾಚಾ ಮಹಿಮಾ ಕಳೇಲ ಕೋಣಾಲಾ।ಮಾತಾ ವಾಂಟೂನ ಕೃಪಾಳು ಜಾಲಾ।<br>
ಪ್ರತ್ಯಕ್ಷ ಜಗದೀಶ ಜಗಾಲಾ । ರಕ್ಷಿತಸೇ ॥೫॥

ಸತ್ತಾ ಪೃಥ್ವೀಮಧ್ಯೇ ವಾಂಟಲೀ । ಜೇಥೇ ತೇಥೇ ವಿಭಾಗಲೀ ।<br>
ಕಳೇನೇ ಸೃಷ್ಟಿ ಚಾಲಿಲೀ । ಭಗವಂತಾಚೇ ॥೬॥

ಮೂಳ ಜಾಣತ್ಯಾ ಪುರೂಷಾಚೀ ಸತ್ತಾ । ಶರೀರೀ ವಿಭಾಗಲೀ ತತ್ವತಾ ।<br>
ಸಕಳ ಕಳಾ ಚಾತುರ್ಯತಾ । ತೇಥೇ ವಸೇ ॥೭॥

ಸಕಳ ಪುರಾಚಾ ಈಶ । ಜಗಾಮಧ್ಯೇ ತೋ ಜಗದೀಶ ।<br>
ನಾನಾ ಶರೀರೀ ಸಾವಕಾಸ । ಕರೂ ಲಾಗೇ ॥೮॥

ಪಾಹಾತಾ ಸೃಷ್ಟೀಚೀ ರಚನಾ । ತೇ ಯೇಕಾಚೇನ ಚಾಲೇನಾ ।<br>
ಯೇಕ ಚಿ ಚಾಲವೀ ನಾನಾ । ದೇಹ ಧರೂನೀ ॥೯॥

ನಾಹೀ ಉಂಚ ನೀಚ ವಿಚಾರಿಲೇ । ನಾಹೀ ಬರೇ ವಾಈಟ ಪಾಹಿಲೇ ।<br>
ಕಾರ್ಯೇ ಚಾಲೋ ಐಸೇ ಜಾಲೇ । ಭಗವಂತಾಸೀ ॥೧೦॥

ಕಿಂವಾ ನೇಣತೇ ಆಡವೇ ಕೇಲೇ । ಕಿಂವಾ ಅಭ್ಯಾಸೀ ಘಾತಲೇ ।<br>
ಹೇ ಕೈಸೆಕೈಸೇ ಕೇಲೇ । ತ್ಯಾಚಾ ತೋ ಚಿ ಜಾಣೇ ॥೧೧॥

ಸೃಷ್ಟಿಯ ಕಡೆಗೆ ನಾವು ಸಹಜವಾಗಿ ನೋಡಿದ್ದಾದರೆ ಎಲ್ಲ ಕಡೆಗೆ ಗಡಬಿಡಿ ಗೊಂದಲ ಒದರಾಟ, ಚೀರಾಟದ ಘೋಟಾಳಿಯ ದೃಶ್ಯ ಕಣ್ಣಿಗೆ ಬೀಳುವದು. ಆದರೆ ರಾಜಸತ್ತೆಯು ಮಾತ್ರ ಬೇರೆಯೇ ಇರುವದು. ವ್ಯವಹಾರದಲ್ಲಿಯ ಗದ್ದಲ, ಗೊಂದಲ, ಕಂಡುಬಂದರೂ ಕೂಡಾ ಇದರ ಬೆನ್ನಿಗೆ ಅದೃಶ್ಯ ರಾಜಸತ್ತಾ ಹೇಗೆ ಇರುವದೋ ಇದರಂತೆ ಈ ಜಗತ್ತಿನಲ್ಲಿ ನಮ್ಮ ದೃಷ್ಟಿಗೆ ಗೊಂದಲ ಅಥವಾ ಅವ್ಯವಸ್ಥೆ ಕಂಡುಬಂದರೂ ಸಹಿತ ಇದರ ಬೆನ್ನ ಹಿಂದೆ ಈಶ್ವರೀ ಸತ್ತಾ ಕಾರ್ಯಮಾಡುತ್ತಲೇ ಇರುವದು. ಈ ಮಾತು ಅತ್ಯಂತ ಖರೇ ಇರುವದು. (೩) ಪೃಥ್ವಿಯಲ್ಲಿ ಶರೀರವೆಂಬಂಥವು ಎಷ್ಟು ಇರುವವೋ ಅವೆಲ್ಲವೂ ಭಗವಂತನ ಮನೆಗಳೇ ಇರುವವು. ಪ್ರತಿಯೊಂದು ಶರೀರದಲ್ಲಿ ಭಗವಂತನಿರುವನು. ಇಂಥ ಈ ಶರೀರದ ಮುಖಾಂತರ ಜೀವವು ಅನೇಕ ಪ್ರಕಾರದ ಸುಖವನ್ನು ಭೋಗಿಸುವದು. (೪) ಈ ಈಶ್ವರನ ಮಹಿಮೆ ಯಾರಿಗೂ ತಿಳಿದಿಲ್ಲ. [ತಿಳಿಯುವದೂ ಇಲ್ಲ]. ಭಗವಂತನು ತನ್ನ ಕೃಪಾಳುತನವನ್ನು ಜಗತ್ತಿನಲ್ಲಿರುವ ತಾಯಂದಿರಲ್ಲಿ ಹಂಚಿಕೊಟ್ಟಿದ್ದಾನೆ. ಪ್ರತ್ಯಕ್ಷ ಈಶ್ವರನೇ ಜಗತ್ತಿನ ರಕ್ಷಣೆ ಮಾಡುತ್ತಿರುವನು. ಯಾವ ಕೃಪಾಳುತನದಿಂದ ಈಶ್ವರನು ಜಗತ್ತಿನ ರಕ್ಷಣೆ ಮಾಡುವನೆಂಬುದರ ಕಲ್ಪನೆ ಬರಬೇಕಾದರೆ ತಾಯಿಯ [ಮಾತೆಯ] ಕೃಪಾಳುತನವನ್ನು ನೋಡಬೇಕು. (೫) ಈಶ್ವರನ ಸತ್ತಾ ಸಾಮರ್ಥ್ಯವು ಜಗತ್ತಿನಲ್ಲಿ ಹಂಚಲಾಗಿದೆ [ಹರಡಲಾಗಿದೆ]. ಅತ್ತಿತ್ತಲೆಲ್ಲ ಕಡೆಗೂ ಅದು [ಅವನ ಸತ್ತೆಯು] ವಿಭಾಗವಾಗಿ ಹರಡಿದೆ. ಭಗವಂತನ ಕೌಶಲ್ಯದ ಸತ್ತಾದಿಂದಲೇ ಯಾವತ್ತೂ ಸೃಷ್ಟಿ ನಡೆದಿರುವದು. ಈಶ್ವರನ ಸತ್ತೆಯು ಅರಿವಿನ ರೂಪವಿರುವದು. ಜಗತ್ತಿನಲ್ಲಿಯ ಪ್ರತಿ ವಸ್ತುವಿನ ಅಂತರ್ಯಾಮದಲ್ಲಿ ಇದು ವಾಸಮಾಡುವದು. ಇದರ ಸಾಮರ್ಥ್ಯದಿಂದ ವಸ್ತುಗಳಲ್ಲಿ ಹಾಲಚಾಲ [ಚಲನವಲನ] ಆಗುತ್ತಿರುವದು. [೬] ಮೂಲ ಪುರುಷನಾದ ಆ ಜ್ಞಾನಿ ಅಂತರಾತ್ಮಾ ಇವನ ಸತ್ತೆಯು ಎಲ್ಲ ಕಡೆಗೂ ವ್ಯಾಪಿಸಿರುವದು. ಸರ್ವ ಜೀವದ ದೇಹದಲ್ಲಿ ಅರಿವಿನ ರೂಪದಿಂದ ಇದು ವಿಭಾಗಿಸಲ್ಪಟ್ಟಿದೆ. ಜೀವದಲ್ಲಿ ಕಂಡುಬರುವ ಕೌಶಲ್ಯವು ಮತ್ತು ಚಾತುರ್ಯತನವು ಅಂತರಾತ್ಮನಸತ್ತೆಯ ಪರಿಣಾಮವೇ ಇರುವದು [೭] ಯಾವತ್ತೂ ದೇಹರೂಪಿ ನಗರದ ಸ್ವಾಮಿಯು ಇವನೇ ಇರುವನು. ಜಗತ್ತಿನಲ್ಲಿಯ ಜಗದೀಶ ಅಥವಾ ಜಗತ್ತಿನ ಸ್ವಾಮಿಯೂ ಕೂಡಾ ಇವನೇ ಇರುವನು. ಇವನು ಅನೇಕ ಶರೀರದಲ್ಲಿ ವಾಸಮಾಡುವನು. ಮತ್ತು ಜೀವನದ ವ್ಯವಹಾರವನ್ನು ಕೂಡಾ ಸ್ವಸ್ಥವಾಗಿ ನಡೆಸುವನು. [೮] ಸೃಷ್ಟಿಯ ರಚನಾ ನೋಡಿದಾದರೆ ಹೇಗೆ ಕಂಡುಬರುವದೆಂದರೆ ಇಷ್ಟೊಂದು ಅಪಾರ ವಿಶಾಲವಾದ ಪ್ರಪಂಚ ಪಸಾರವನ್ನು ಯಾವದೊಂದು ಸಾಮಾನ್ಯ ಶರೀರದಿಂದ ಆವರಿಸಲು-ಅಧಿಕಾರ ನಡೆಸಲು ಸಾಧ್ಯವೇ ಇಲ್ಲ ಅಗದೀ ಅಶಕ್ಯವಿರುವದು. ಮೂಲದಲ್ಲಿ ನಡೆಸುವವನು ಇವ ಒಬ್ಬನೇ ಇದ್ದರೂ ಕೂಡಾ ಇವನೇ ಅನೇಕ ದೇಹಧಾರಣ ಮಾಡಿ ಇಷ್ಟೊಂದು ಅವಾಢವ್ಯ ಅಪಾರ ಪಸಾರವನ್ನು ನಡೆಸುವನು. [೯] ಸೃಷ್ಟಿ ನಿರ್ಮಾಣಮಾಡಿದ ಆ ಸಮಯದಲ್ಲಿ ಈಶ್ವರನು ಶ್ರೇಷ್ಠ ಮತ್ತು, ಕನಿಷ್ಠ ಎನ್ನುವ ವಿಚಾರಮಾಡಲಿಲ್ಲ. ಅಥವಾ ಉತ್ತಮ ಮತ್ತು ಕೆಟ್ಟ ಎನ್ನುವ ಭೇದವನ್ನು ನೋಡಲಿಲ್ಲ. ಎತ್ತಲಿಂದಾದರೂ. [ಯಾರಿಂದಲಾದರೂ] ಸೃಷ್ಟಿಕಾರ್ಯ ನಡೆಯಬೇಕೆಂಬ ಇಚ್ಛೆಯಿಂದ ಇವನು ಅನೇಕ ದೇಹ ನಿರ್ಮಾಣಮಾಡಿದನು. ಮತ್ತು ಅದರಲ್ಲಿ ತನ್ನ ಅಧಿಷ್ಠಾನವನು ಇಟ್ಟನು. (೧೦) ಕೆಲವೊಂದು ಜೀವಗಳಲ್ಲಿ (ನಡುವೆ ಅಡ್ಡವಾಗಿ) ಅಜ್ಞಾನವನ್ನು ಹಾಕಿದನು. ಇದನ್ನು ಇವನು ಏಕೆ ಹಾಕಿದನು ? ಕೆಲವು ಜೀವಗಳನ್ನು ಇವನು ಅಭ್ಯಾಸದಲ್ಲಿ ಹಾಕಿದನು. ಇದರಲ್ಲಿ ಏಕೆ ಹಾಕಿದನು ? ಈ ಪ್ರಕಾರವಾಗಿ ಇವನು ಜಗವನ್ನು ಹೇಗೆ ಹೇಗೆ ನಿರ್ಮಾಣ ಮಾಡಿದನು ? ಎನ್ನುವದನ್ನು ಮಾತ್ರ ಅವನದು ಅವನಿಗೇ ಗೊತ್ತು. ಜಗತ್ತನ್ನು ಈಶ್ವರನು ನಿರ್ಮಾಣಮಾಡಿದನು. ಎನ್ನುವ ವಿಷಯ ಮಾತ್ರ ಅತ್ಯಂತ ನಿಜವಿರುವದು. ಆದರೆ ಇವನು ಮಾಡಿದ ರಚನೆ ಅತ್ಯಂತ ಗೂಢ ಮತ್ತು ರಹಸ್ಯಮಯ ಇರುವದರಿಂದ ಮನುಷ್ಯರ ಬುದ್ಧಿಯು ಸೃಷ್ಟಿ ರಚನೆಯನ್ನು ನೋಡಿ ಅತ್ಯಂತ ವಿಸ್ಮಯ ಹೊಂದುವದು. ಈ ವಿಲಕ್ಷಣ ವಿಸ್ಮಯದಲ್ಲಿಯೇ ಮಾನವ ಜೀವನದಲ್ಲಿಯ ಯಾವತ್ತೂ ಜ್ಞಾನೋಪಾಸನೆಯ ಮೂಲವಿರುವದು. (೧೧)

ಜಗದಾಂತರೀ ಅನುಸಂಧಾನ । ಬರೇ ಪಾಹಾಣೇ ಹೇ ಚಿ ಧ್ಯಾನ ।
ಧ್ಯಾನ ಆಣೀ ತೇ ಜ್ಞಾನ । ಯೇಕರೂಪ ॥೧೨॥

ಪ್ರಾಣೀ ಸಂಸಾರಾಸ ಆಲಾ । ಕಾಂಹೀ ಯೇಕ ಶಾಹಣಾ ಜಾಲಾ ।
ಮಗ ತೋ ವಿವರೋ ಲಾಗಲಾ । ಭೂಮಂಡಳೀ ॥೧೩॥

ಪ್ರಗಟ ರಾಮಾಚೀ ನಿಶಾಣ । ಆತ್ಮಾರಾಮ ಜ್ಞಾನಘನ ।
ವಿಶ್ವಂಭರ ವಿದ್ಯಮಾನ । ಭಾಗ್ಯೇ ಕಳೇ ॥೧೪॥

ಉಪಾಸನಾ ಧುಂಡೂನ ವಾಸನಾ ಧರಿಲೀ । ತರೀ ತೇ ಲಾಂಬತ ಚಿ ಗೇಲೀ ।
ಮಹಿಮಾ ನ ಕಳೇ ಬೋಲೀ । ಯಥಾರ್ಥ ಆಹೇ ॥೧೫॥

ದೃಷ್ಟಾ ಮ್ಹಣಿಜೇ ಪಾಹಾತಾ । ಸಾಕ್ಷೀ ಮ್ಹಣಿಜೆ ಜಾಣತಾ ।
ಅನಂತರೂಪೀ ಅನಂತಾ । ವೋಳಖಾವೇ ॥೧೬॥

ಸಂಗತೀ ಅಸಾವೀ ಭಲ್ಯಾಚೀ । ಧಾಟೀ ಕಥಾ ನಿರೂಪಣಾಚೀ ।
ಕಾಂಹೀ ಯೇಕ ಮನಾಚೀ । ವಿಶ್ರಾಂತೀ ಆಹೇ ॥೧೭॥

ತ್ಯಾಹಿಮಧೇ ಪ್ರತ್ಯಯ ಜ್ಞಾನ । ಜಾಳೂನ ಟಾಕಿಲಾ ಅನುಮಾನ ।
ಪ್ರಚಿತೀವಿಣ ಸಮಾಧಾನ । ಪಾವಿಜೇಲ ಕೈಚೇ ॥೧೮॥

ಮೂಳ ಸಂಕಲ್ಪ ತೋ ಹರಿ ಸಂಕಲ್ಪ । ಮೂಳ ಮಾಯೇ ಮಧೀಲ ಸಾಕ್ಷೇಪ ।
ಜಗದಾಂತರೀ ತೇ ಚಿ ರೂಪ । ದೇಖಿಜೇತೇ ॥೧೯॥

ಜಗತ್ತನ್ನು ವಿಭಾಗಣೆಮಾಡಿ ತನ್ನ ಕಲೆಯಿಂದ ಜಗದ ಕಾರ್ಯಭಾರ ಮಾಡುವಂಥ ಆ ಜಗದೀಶ್ವರನ ಅನುಸಂಧಾನ, ಸಾಮೀಪ್ಯ ಇಟ್ಟುಕೊಳ್ಳುವದೇ ಉಪಾಸನೆಯು ಇದೇ ಧ್ಯಾನವು. ಮತ್ತು ಇದೇ ಜ್ಞಾನವಾಗಿರುವದು: ಜಗತ್ತಿನಲ್ಲಿ ಆಗುವ ಘಟನೆಗಳಲ್ಲಿ ಅಂತರ್ಯಾಮಿಯಾಗಿರುವ ಈಶ್ವರನ ಸತ್ತೆಯು ಕಾರ್ಯಮಾಡುವದು. ಈ ಮಾತನ್ನು ನೀವು ಸತತವೂ ನೆನಪಿನಲ್ಲಿಡಬೇಕು. ಇದು ಭಗವಂತನ ಅನುಸಂಧಾನವೆನಿಸುವದು. ಈ ಅನುಸಂಧಾನದಲ್ಲಿ ಸ್ವತಃದ ತನ್ನ ಇರವನ್ನು ಮರೆಯುವದೇ ಧ್ಯಾನವಾಗಿರುವದು. ಸ್ವತಃದ ಸಂಪೂರ್ಣ ಮರೆವಾಗಿ ಧ್ಯಾನವು ಪರಿಪಕ್ವವಾಯಿತೆಂದರೆ ಅದೇ ಜ್ಞಾನವೆನಿಸುವದು. ಧ್ಯಾನ ಮತ್ತು ಜ್ಞಾನ ಕೊನೆಗೆ ಏಕರೂಪವೇ ಇರುವವು. [ಆಗುವವು] (೧೨) ಮನುಷ್ಯನು ಭೂಮಿಯ ಮೇಲೆ [ಜಗತ್ತಿನಲ್ಲಿ] ಜನ್ಮ ತಳೆಯುವನು. ಇವನು ಹೆಚ್ಚು ಕಡಿಮೆ ಜಾಣನಾಗುವನು. ಮತ್ತು ಆಮೇಲೆ ಇವನು ಜಗತ್ತಿನ ಬಗ್ಗೆ ವಿಚಾರಮಾಡಲಿಕ್ಕೆ ಹತ್ತುವನು. (೧೩) ಸಂಸಾರದಲ್ಲಿಯ ಜನತೆಯ ಕಡೆಗೆ ವಿಚಾರಪೂರ್ವಕ ಅಂದರೆ ಜ್ಞಾನಪೂರ್ವಕವಾಗಿ ನೋಡಿದ್ದಾದರೆ ಆ ಅಂತರಾತ್ಮನ ನಿಶಾನೆಯು ಜಗತ್ತಿನಲ್ಲಿ ಪ್ರಕಟವಿರುವದು. ಅಂದರೆ ಇವನ ಸತ್ತಾಧಿಕಾರದ ಗುರುತು ಜಗತ್ತಿನಲ್ಲಿ ಪ್ರಕಟತನದಿಂದ [ಉಘಡ ರೀತಿಯಲ್ಲಿ] ಅನುಭವಕ್ಕೆ ಬರುವದು. ಇದು ಜ್ಞಾನಮಯವಿರುವದು. ಜ್ಞಾನದಿಂದ ಒಳಗೂ ಹೊರಗೂ ದಟ್ಟವಾಗಿ ತುಂಬಿರುವದು. ವಿಶ್ವವನ್ನು ಸಂಬಾಳಿಸುವವನಾದ ಈ ಅಂತರಾತ್ಮಾ ಸರ್ವತ್ರವೂ ವಿದ್ಯಮಾನ [ಅಸ್ತಿತ್ವದಲ್ಲಿದ್ದಂಥವ] ಇರುವನು. ಆದರೂ ಇವನ ಅಸ್ತಿತ್ವದ ಜ್ಞಾನವು ಉತ್ತಮ ಅದೃಷ್ಟವಿರುವಂತಹ ಭಾಗ್ಯವಂತನೊಬ್ಬನಿಗೆ ಮಾತ್ರ ಪ್ರಾಪ್ತವಾಗುವದು. (೧೪) ಒಬ್ಬನು ತನಗೆ ಬೇಕೆನಿಸಿದ ರೀತಿಯಲ್ಲಿ ಉಪಾಸನೆಯನ್ನು ಶೋಧಿಸಿ ತೆಗೆದನು. ಆದರೆ ಇದನ್ನು ಮಾಡುತ್ತಿರುವಾಗ ಇವನು ಕೆಲವೊಂದು ವಾಸನಾ ಮನದಲ್ಲಿ ಹಿಡಿದದ್ದಾದರೆ ಈ ವಾಸನಾ ಏನೂ ನಾಶವಾಗಿ ಹೋಗುವದಿಲ್ಲ. ಅದೇ ಉಲಟ ಬೆಳೆಯುತ್ತ ಹೋಗುವದು. ಇದರಿಂದಾಗಿ ಅಂತರಾತ್ಮನ ಮಹಿಮೆಯು ಇವನಿಗೆ ತಿಳಿಯುವದಿಲ್ಲ, ಎಂದು ಅನ್ನುವರು. ಈ ಮಾತು ಅತ್ಯಂತ [ಅಗದೀ] ಖರೇ ಇರುವದು–ಸರಿಯಾದದ್ದು ಇರುವದು. ಉಪಾಸನೆಯಲ್ಲಿ ವಾಸನಾ ಎಲ್ಲಿಯವರೆಗೆ ಪ್ರಧಾನವಾಗಿ ಮುಖ್ಯವಾಗಿ ಇರುವದೋ ಅಲ್ಲಿಯವರೆಗೆ ಮನವು ಅಧೋಮುಖ [ಕೆಳಮುಖ] ವಾಗಿಯೇ ಇರುವದು. ಅದನ್ನು ಊರ್ಧ್ವಮುಖ [ಮೇಲ್ಮುಖ]ಮಾಡದ ಹೊರತು ಈಶ್ವರನ ಮಹಿಮೆಯು ತಿಳಿಯುವದಿಲ್ಲ. ಮತ್ತು ವಾಸನಾ ಇರುವವರೆಗೆ ಮನವು ಊರ್ಧ್ವಮುಖವಾಗುವದಿಲ್ಲ. ಆದ್ದರಿಂದ ವಾಸನಾರಹಿತರಾಗಬೇಕು. (೧೫) ಅಂತರಾತ್ಮನು ದ್ರಷ್ಟಾ ಮತ್ತು ಸಾಕ್ಷಿ ಇರುವನು. ದ್ರಷ್ಟಾ ಅಂದರೆ ನೋಡುವವನು ಮತ್ತು ಸಾಕ್ಷಿ ಅಂದರೆ ತಿಳಿಯುವವನು. ಅನಂತ ರೂಪಗಳಿಂದ ದ್ರಷ್ಟಾತನ ಮತ್ತು ಸಾಕ್ಷೀತನ ತೋರಿಸುವವನಾದ ಈ ಅನಂತ ಅಂತರಾತ್ಮನನ್ನು ನಾವು ಗುರುತಿಸಬೇಕು. [ದೃಷ್ಟ ಪದಾರ್ಥಗಳ ದರ್ಶನದಲ್ಲಿ] ಮತ್ತು ತಿಳಿಯಬೇಕು. (೧೬) ಸಜ್ಜನರ ಸಂಗತಿಯ ಸಂಪರ್ಕವಿರಬೇಕು. ಮತ್ತು ಕಥಾ ಮತ್ತು ನಿರೂಪಣ ಪ್ರವಚನ [ವ್ಯಾಖ್ಯಾನ] ಕೀರ್ತನ ಕೇಳುವ ರೂಢಿ ಇರಬೇಕು [ನೀವೂ ಮಾಡಬಹುದು]. ಇದರ ಯೋಗದಿಂದ ಮನಸ್ಸಿಗೆ ಅಲ್ಪ ಸ್ವಲ್ಪ ವಿಶ್ರಾಂತಿ ಸಿಗುವದು. (೧೭) ಅದರಲ್ಲಿಯೂ ಮುಖ್ಯವಾಗಿ ಅನುಭವಯುಕ್ತ ಜ್ಞಾನವಿರಬೇಕು. ಇಂಥ ಜ್ಞಾನದಿಂದ ಅನುಮಾನ ಸಂಶಯಗಳೆಲ್ಲವೂ ಭಸ್ಮವಾಗಿ ಹೋಗುವವು. ಪ್ರತ್ಯಕ್ಷ ಅನುಭವ ಆಗದ ಹೊರತು ಮನಸ್ಸಿಗೆ ಸಮಾಧಾನ ಪ್ರಾಪ್ತವಾಗುವದಿಲ್ಲ. (೧೮) ಮೂಲ ಸಂಕಲ್ಪ (ಅಹಂ ಸುಕಲ್ಪ) ಇದೇ ಹರಿ ಸಂಕಲ್ಪವಾಗಿದೆ. ಮೂಲ ಪುರುಷನ ಸಂಕಲ್ಪ ಅಂದರೇನೇ ಹರಿ ಸಂಕಲ್ಪವೆಂದು ತಿಳಿಯಬೇಕು. ಮೂಲಮಾಯೆಯ ಎಲ್ಲ ಖಟಾಟೋಪ (ಆಡಂಬರ, ಕಾರಭಾರ)ವು ಈ ಸಂಕಲ್ಪಕ್ಕನುಸಾರವಾಗಿ ನಡೆಯುವದು. ಜಗತ್ತಿನ ಅಂತರಂಗದಲ್ಲಿ ಈ ಮೂಲ ಸಂಕಲ್ಪವೇ ಭರಪೂರ ತುಂಬಿರುವದು. ಈ ಸಂಕಲ್ಪದಂತೆ ಜಗತ್ತಿನಲ್ಲಿಯ ಎಲ್ಲ ಘಟನೆಗಳು ಆಗುವವು. (೧೯)

ಉಪಾಸನಾ ಜ್ಞಾನಸ್ವರೂಪ । ಜ್ಞಾನೀ ಚೌಥಾ ದೇಹ ಆರೋಪ ।
ಯಾಕಾರಣೇ ಸರ್ವ ಸಂಕಲ್ಪ । ಸೋಡೂನ ದ್ಯಾವಾ ॥೨೦॥

ಪುಢೇ ಪರಬ್ರಹ್ಮ ವಿಶಾಳ । ಗಗನಾಸಾರಿಖೇ ಪೋಕಳ ।
ಘನ ಪಾತಳ ಕೋವಮಳ । ಕಾಯೆ ಮ್ಹಣಾವೇ ॥೨೧॥

ಉಪಾಸನಾ ಮ್ಹಣಿಜೆ ಜ್ಞಾನ । ಜ್ಞಾನೇ ಪಾವಿಜೆ ನಿರಂಜನ ।
ಯೋಗಿಯಾಂಚೇ ಸಮಾಧಾನ । ಯೇಣೇ ರಿತೀ ॥೨೨॥

ವಿಚಾರ ನೆಹಟೂನಸಾ ಪಾಹೇ । ತರೀ ಉಪಾಸನಾ ಆಪಣಚಿ ಆಹೇ ।
ಯೇಕ ಜಾಯೇ ಯೇಕ ರಾಹೇ । ದೇಹ ಧರೂನೀ ॥೨೩॥

ಅಖಂಡ ಐಸೀ ಘಾಲಮೇಲೀ ॥ ಪೂರ್ವಾಪರ ಹೋತ ಗೇಲೀ ।
ಆತಾಹಿ ತೈಸೀ ಚ ಚಾಲಿಲೀ । ಉತ್ಪತ್ತಿ ಸ್ಥಿತೀ ॥೨೪॥

ಬನಾವರೀ ಬನಚರಾಚೀ ಸತ್ತಾ । ಜಳಾವರೀ ಜಳಚರಾಚೀ ಸತ್ತಾ ।
ಭೂಮಂಡಳೀ ಭೂಪಾಳಾ ಸಮಸ್ತಾ । ಯೇಣೇ ಚಿ ನ್ಯಾಯೇ ॥೨೫॥

ಸಾಮರ್ಥ್ಯ ಆಹೇ ಚಳವಳೀಚೇ । ಜೋ ಜೋ ಕರೀಲ ತಯಾಚೇ ।
ಪರಂತು ಯೇಥೇ ಭಗವಂತಾಚೇ । ಅಧಿಷ್ಠಾನ ಪಾಹಿಜೇ ॥೨೬॥

ಕರ್ತಾ ಜಗದೀಶ ಹೇ ತೋ ಖರೇ । ಪರೀ ವಿಭಾಗ ಆಲಾ ಪೃಥಕಾಕಾರೇ ।
ತೇಥೇ ಅಹಂತೇಚೇ ಕಾವಿರೇ । ಬಾಧಿಜೆನಾ ॥೨೭॥

ಮೂಲಮಾಯೆಯು ಬ್ರಹ್ಮಾಂಡದ ನಾಲ್ಕನೆಯ ಮತ್ತು ಜ್ಞಾನರೂಪದ ಮಹಾಕಾರಣ ದೇಹ ಇರುವದು. ಇದು ಜ್ಞಾನ ಸ್ವರೂಪವಿರುವದು. ಇದೇ ಈಶ್ವರನ ಉಪಾಸನೆಯಾಗಿರುವದು. ಈಶ್ವರನ ಉಪಾಸನಾ ಅಂದರೆ ಜ್ಞಾನ ಸ್ವರೂಪದ್ದೇ ಉಪಾಸನೆ ಇರುವದು. ಈ ಮೂಲಮಾಯೆಯು ಸಂಕಲ್ಪ ರೂಪವಿರುವಳು. (ಅಹಂ ರೂಪಳಿರುವಳು)। ಪರಬ್ರಹ್ಮವನ್ನು ಮರೆಮಾಡುವಳು. (ಪರಬ್ರಹ್ಮನ ಮೇಲೆ ಆರೋಪವಿರುವದು). ಆದ್ದರಿಂದ ಸಾಧಕರು. ಸರ್ವಸಂಕಲ್ಪದ ತ್ಯಾಗಮಾಡಲಿಕ್ಕೇಬೇಕು. (ಸರ್ವಸಂಕಲ್ಪಸನ್ಯಾಸಿ, ಯೋಗಾರೂಢಸ್ತದೋಚ್ಯತೇ ಭ.ಗೀ. ೬-೪) (೨೦) ಸರ್ವಸಂಕಲ್ಪದ ತ್ಯಾಗ ಮಾಡಿದ ಮೇಲೆ ಅಂದರೆ ಮಾಯೆಯ ತ್ಯಾಗ ಆದನಂತರವೇ ಮೂಲ ಮಾಯೆಯು ಬಾಜೂಕ್ಕೆ ಸರಿಯುವಳು. ಆಗ ಸಾಧಕನ ಮುಂದೆ ಆಕಾಶದಂತಹ ವಿಶಾಲವಾದ ಮತ್ತು ಪೊಳ್ಳು (ಪೋಕಳ) ಸರ್ವ ಬ್ರಹ್ಮ ಅಂದರೆ ಪರಬ್ರಹ್ಮವು ಸುತ್ತು ಕಡೆಗೂ ಸರ್ವತ್ರವೂ ಅನುಭವಕ್ಕೆ ಬರುವದು. ಈ ಸ್ವರೂಪಕ್ಕೆ ಘನದಟ್ಟಾಗಿ ಸಂಪೂರ್ಣ ತುಂಬಿದ್ದು ಅನ್ನಬೇಕೇ? ಅಥವಾ [ಪಾತಳ] ದ್ರವರೂಪವಾಗಿ ಅಳ್ಳಕ ಇರು ವದು ಅನ್ನಬೇಕೇ?ಅಥವಾ ನಾಜೂಕಾಗಿರುವ ಕೋಮಲ ಅನ್ನಬೇಕೆ? ಏನು ಅನ್ನಬೇಕೆಂಬುದೇ ತಿಳಿಯುವದಿಲ್ಲ.(೨೧) ಉಪಾಸನಾ, ಇದು ಜ್ಞಾನದ ಪೂರ್ವಾವಸ್ಥೆ ಇರುವದು. ಉಪಾಸನೆಯು ಪರ್ಯವಸಾನವು ಜ್ಞಾನದಲ್ಲಿ ಆಗುವದು, ಜ್ಞಾನದಿಂದ ಆ ಮೇಲೆ ನಿರಂಜನ ಬ್ರಹ್ಮನ ಪ್ರಾಪ್ತಿ ಆಗುವದು. ಈ ರೀತಿಯಿಂದಾಗಿ ಯೋಗಿಗಳಿಗೆ ಸಮಾಧಾನ ಲಭಿಸುವದು. (೨೨) ದೃಢ ನಿಶ್ಚಯದಿಂದ ಸೂಕ್ಷ್ಮವಿವೇಕದಿಂದ ಯೋಗ್ಯ ವಿಚಾರಮಾಡಿದ್ದಾದರೆ ಆಗ ತಿಳಿದು ಬರುವದೇನಂದರೆ ಯಾರ ಉಪಾಸನಾ ಮಾಡುವದಿರುವದೋ ಆ ಉಪಾಸ್ಯವು [ಜ್ಞಾನರೂಪ ಹರಿಯು] ನಾವೇ ಇರುವೆವು ಅನ್ನುವವರ ಅನುಭವ ಬರುವದು. ಉಪಾಸನೆಗೆ ದ್ವೈತವು ಬೇಕಾಗುವದು. ಆದರೆ ಉಪಾಸಕನು ಉಪಾ ಸ್ಯದ ಉಪಾಸನಾ ಮಾಡುತ್ತ ಮಾಡುತ್ತ ಸ್ವತಃ ತಾನೇ ಉಪಾಸ್ಯದಲ್ಲಿ ವಿಲೀನವಾಗುವನು. ಜೀವವು ಶಿವರೂಪ ವಾಗುವದು ಅರ್ಥಾತ್ ಒಂದು ಹೋಗುವದು ಮತ್ತು ಒಂದು ಉಳಿಯುವದು ಅಂದರೆ ಉಪಾಸಕ ಹೋಗುವವ ಹಾಗೂ ಉಪಾಸ್ಯವು ಇರುವದು [ಉಳಿಯುವದು] ಎರಡು ಇದ್ದದ್ದು ಒಂದಾಯಿತು. ಯಾವ ದೇಹದಲ್ಲಿ ಉಪಾಸಕ ಇರುತ್ತಿದ್ದನೋ ಅದೇ ದೇಹದಲ್ಲಿ ಈಗ ಉಪಾಸ್ಯ ಇರುವನು. ಉಪಾಸಕನು ಕರಗಿಹೋಗಿ ಅವನೇ ಉಪಾಸ್ಯನಾಗು ವನು. ದ್ವೈತವು ಅದ್ವೈತವಾಯಿತು. (೨೩) ಇಂಥ ಈ ಖಟಾಟೋಪದ ಉಲಾಢಾಲ ಅಂದರೆ ಹುಟ್ಟುವದು, ಸಾಯುವದು. ಪೂರ್ವಕಾಲದಿಂದಲೂ ಆಗುತ್ತ ಬಂದಿರುವದು. ಈಗಲೂ ಕೂಡಾ ಉತ್ಪತ್ತಿ ಮತ್ತು ಸ್ಥಿತಿ, ಸಾವು ಗಳು ಹಾಗೆಯೇ ಮೊದಲಿನಂತೆಯೇ ನಡೆದಿರುವವು (೨೪) ಜಗತ್ತಿನಲ್ಲಿಯ ಎಲ್ಲ ಘಟನೆಗಳಿಗೆ ನಿಜವಾದ ಕರ್ತಾ ಈಶ್ವರನಿರುವನು. ಇವನ ಅಧಿಷ್ಠಾನ ಆಧಾರ, ಆಶ್ರಯ ಹಿಡಿದು ಮನುಷ್ಯನು ನಡೆಯಬೇಕು : ವನದ ಮೇಲೆ ವನಚರರ ಸತ್ತಾ ನಡೆಯುವದು. ಜಲದ ಮೇಲೆ ಜಲಚರರ ಸತ್ತಾ ನಡೆಯುವದು. ಇದೇ ನ್ಯಾಯದಂತೆ ಪೃಥ್ವಿಯ ಮೇಲೆ ಎಲ್ಲ ರಾಜರ ಸತ್ತಾ ನಡೆಯುವದು ಅರ್ಥಾತ್ ಯಾವತ್ತೂ ವಿಶ್ವದ ಮೇಲೆ ಭಗವಂತನ ಸತ್ತಾ ನಡೆಯು ವದು. (೨೫) ಕರ್ಮದಲ್ಲಿ ಸಾಮರ್ಥ್ಯವಿರುವದು. ಯಾರು ಯಾರು ಕರ್ಮಮಾಡುವರೋ ಅವರಿಗೆ ಸಾಮರ್ಥ್ಯ ಪ್ರಾಪ್ತವಾದೀತು ಅಥವಾ ಆಗುವದು. ಆದರೆ ಆ ಕರ್ಮಕ್ಕೆ ಭಗವಂತನ ಅನುಸಂಧಾನದ ಆಶೀರ್ವಾದದ ಆಧಾರ ಬೇಕಾಗುವದು. ನಾವು ನಿಮಿತ್ತ ಮಾತ್ರರಿರುವೆವು. ನಿಜವಾದ ಖರೇ ಕರ್ತಾ ಭಗವಂತನಿರುವನು. ಇವನ ಸತ್ತೆಯಿಂದ ಕರ್ಮ ಘಟಿಸುವದು. ಮತ್ತು ಅದರ ಫಲ ನಮಗೆ ಸಿಗುವದು. ಇಂಥ ನಿಷ್ಠೆ ಇರುವದಕ್ಕೆ ಭಗವಂತನ ಅಧಿಷ್ಠಾನ ವೆಂದು ಅನ್ನುವರು. ಇಂಥ ನಿಷ್ಠೆಯ ಮನುಷ್ಯನು ಕರ್ಮವನ್ನು ಉತ್ತಮವಾಗಿ ಮಾಡಿಯೂ ಕೂಡಾ ಅದರಿಂದ ಅಲಿಪ್ತನಿರುವನು. ಇವನಿಗೆ ನಾನು ಮಾಡಿದೆ ಅನ್ನುವ ಕರ್ತೃತ್ವದ ಅಭಿಮಾನ ಉಂಟಾಗುವದಿಲ್ಲ (೨೬) ಖರೇ ಕರ್ತಾ ಜಗದೀಶ್ವರನಾದ ಭಗವಂತನಿರುವನು. ಈ ಮಾತು ಪೂರ್ಣ [ಅಗದೀ] ನಿಜವಿರುವದು. ಆದರೆ ಭಗವಂತನ ಸತ್ತಾ ಪ್ರತಿಯೊಂದು ಪ್ರಾಣಿಯಲ್ಲಿಯೂ ವಿಭಾಗಹೊಂದಿದೆ. ಈಶ್ವರನು ಸ್ವತಃ ಪ್ರತ್ಯೇಕತನದಿಂದ ಏನೂ ಮಾಡು ವದಿಲ್ಲ. ಬೇರೆ ಬೇರೆ ಪ್ರಾಣಿಗಳಿಂದ ಅವನೇ ತನ್ನ ಸತ್ತೆಯಿಂದ ಕರ್ಮವನ್ನು ಮಾಡಿಸಿಕೊಳ್ಳುವನು. ಮಾಡುವಂತೆ ಮಾಡುವನು ಆದ್ದರಿಂದ ನಮ್ಮ ಕೈಯಿಂದ ಏನೇನು ಕರ್ಮ ಘಟಿಸುವದೋ ಅದರ ಅಹಂಕಾರದ ಹುಚ್ಚು ತಿಳಿದ ವನಿಗೆ [ಅರಿವುಳ್ಳವನಿಗೆ] ಬಾಧಿಸುವದಿಲ್ಲ. (೨೭)

ಹರಿದಾತಾ ಹರಿಘೇಕಾ । ಐಸೇ ಚಾಲತೇ ತತ್ವತಾ ।
ಯೇ ಗೋಷ್ಟೀಚಾ ಆತಾ । ವಿಚಾರ ಪಾಹಾವಾ ॥೨೮॥

ಸಕಳ ಕರ್ತಾ ಪರಮೇಶ್ವರೂ । ಆಪಲಾ ಮಾಇಕ ವಿಚಾರೂ ।
ಜೈಸೇ ಕಳೇಲ ತೈಸೇ ಕರೂ । ಜಗದಾಂತರೇ ॥೨೯॥

ದೇವಾಯೇವಢೇ ಚಪಳ ನಾಹೀ । ಬ್ರಹ್ಮಾಯೇವಢೇ ನಿಶ್ಚಳ ನಾಹೀ ।
ಪಾಇರೀನೇ ಪಾಇರೀ ಚಢೋನ ಪಾಹೀ । ಮೂಳ ಪರಿಯಂತ ॥೩೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಆತ್ಮಾನಿರೂಪಣ' ನಾಮ ಸಮಾಸ ಚತುರ್ಥ

• •

ಭಗವಂತ ದಾತಾ ಇರುವನು. ಅದರಂತೆ ಭಗವಂತನು ಭೋಕ್ತಾ ಅಂದರೆ ಉಪಭೋಗಿಸುವವನು ಕೂಡಾ ಇರುವನು. [ಹರಿರ್ದಾತಾ, ಹರಿರ್ಭೋಕ್ತಾ] ಇದು ನಿಜವಾದ ವಸ್ತುಸ್ಥಿತಿ ಇರುವದು. ಈ ವಿಷಯದ ಬಗ್ಗೆ ಚನ್ನಾಗಿ ವಿಚಾರಮಾಡಬೇಕು. (೨೮) ಪರಮೇಶ್ವರನು ಸಕಲದರ ಕರ್ತಾ ಇರುವನು. ನಾವು ಮಾಯೆಗೆ ಒಳಪಟ್ಟವರಿರುವೆವು. ನಮ್ಮ ಕರ್ತಾತನವೂ ಕೂಡಾ ಮಾಯಿಕವೇ ಇರುವದು. ಖೊಟ್ಟಿಯೇ ಇರುವದು. ಆದ್ದರಿಂದ ಜಗತ್ತಿನ ಅಂತರ್ಯಾಮಿಯಾದ ಈಶ್ವರನು ಎಷ್ಟು ಜ್ಞಾನ ಕೊಡುವನೋ ಅಷ್ಟನ್ನು ಸರಿಯಾಗಿ ತಿಳಿದು ಯಾವ ಕರ್ಮ ಮಾಡಲಿಕ್ಕೆ ಬರುವದೋ ಅದನ್ನು ಮಾಡಬೇಕು. (೨೯) ದೇವರಷ್ಟು ಅಂದರೆ ಅಂತರಾತ್ಮನಷ್ಟು ಚಪಲರು ಎರಡನೆಯವರಾರೂ ಇರುವದೇ ಇಲ್ಲ. ಪರಬ್ರಹ್ಮನಷ್ಟು ನಿಶ್ಚಲ-ನಿರ್ಮಲರು ಎರಡನೆಯವರಾರೂ ಇರುವದೇ ಇಲ್ಲ. ಆದರೆ ಇದು ತಿಳಿಯುಬೇಕಾದರೆ ನಿಧಾನವಾಗಿ ಮೆಟ್ಟಲಿನಿಂದ ಮೆಟ್ಟಲನ್ನು ಸಾವಧಾನದಿಂದ ಏರುತ್ತ [ಹತ್ತುತ್ತ] ಮೂಲಮಾಯೆಯವರೆಗೆ ವಿಚಾರದಿಂದ ಹೋಗಬೇಕು. ಮತ್ತು ಅಲ್ಲಿ ಸ್ವಾನುಭವದಿಂದ ನೋಡಬೇಕು. (೩೦)

ಶ್ರೀ ದಾಸಬೋಧದ ಇಪ್ಪತ್ತನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ಆತ್ಮನಿರೂಪಣ"ವೆಂಬ ಹೆಸರಿನ ನಾಲ್ಕನೇ ಸಮಾಸವು ಮುಗಿದುದು.

ದಶಕ. ವಿಂಶತಿ : ಸಮಾಸ. ಪಂಚಮ : ಚತ್ವಾರಜಿನ್ನಸನಿರೂಪಣ (ನುಡಿ ೩೦)

॥ಶ್ರೀರಾಮ॥ ಯೇಥೂನ ಪಾಹಾತಾ ತೇಥವರೀ । ಚತ್ವಾರ ಜಿನಸ ಅವಧಾರೀ ।
ಯೇಕ ಚೌದಾ ಪಾಚ ಚಾರೀ । ಐಸೇ ಆಹೇ ॥೧॥

ಪರಬ್ರಹ್ಮ ಸಕಳಾಹೂನ ವೇಗಳೇ । ಪರಬ್ರಹ್ಮ ಸಕಳಾಹೂನ ಆಗಳೇ ।
ನಾನಾ ಕಲ್ಪನೇನಿರಾಳೇ । ಪರಬ್ರಹ್ಮ ತೇ ॥೨॥

ಪರಬ್ರಹ್ಮಾಚಾ ವಿಚಾರ । ನಾನಾ ಕಲ್ಪನೆಹೂನ ಪರ ।
ನಿರ್ಮಳ ನಿಶ್ಚಳ ನಿರ್ವಿಕಾರ । ಅಖಂಡ ಆಹೇ ॥೩॥

## ದಶಕ ೨೦. ಸಮಾಸ ೫. ಚತ್ವಾರ ಜಿನ್ನಸ (ಹಂತ)ಗಳ ನಿರೂಪಣ (ನುಡಿ ೩೦)

ಈ ಜಗತ್ತಿನಲ್ಲಿ ಸಾವಿರಾರು ಪ್ರಕಾರದ ದೇಹಧಾರಿ ಪ್ರಾಣಿಗಳು ಇರುವವು. ಈ ಎಲ್ಲ ಪ್ರಾಣಿಗಳ ಜೀವನದಲ್ಲಿ ಯಾವುದು ಕಾಣುವದಿಲ್ಲವೋ ಅದು ಮನುಷ್ಯರ ಜೀವನದಲ್ಲಿ ಕಂಡುಬರುವದು. ಮಾನವೀ ಜೀವನದ ಮಟ್ಟವೇ ಬೇರೆ ತರಹದ್ದಾಗಿರುವದು. ಸೃಷ್ಟಿಯ ವ್ಯವಹಾರದಲ್ಲಿ ಈಶ್ವರನ ನಂತರ ಮನುಷ್ಯನು ಪರಾಕ್ರಮವನ್ನು ಮೆರೆಯಿಸಿದ್ದು ಸ್ಪಷ್ಟವಾಗಿ ಕಂಡುಬರುವದು. ಮನುಷ್ಯನಿಗೆ ಮಾತ್ರ ಇದು ಶಕ್ಯವಾಗುವದು. ಇದಕ್ಕೆ ಕಾರಣ ಯಾವುದೆಂದರೆ ಇವನ ಅಪೂರ್ವ ದೇಹವಾಗಿರುವದು. ಆದ್ದರಿಂದ ಶ್ರೀ ಸಮರ್ಥರು ಈ ನರದೇಹಕ್ಕೆ ದೊಡ್ಡ ಲಾಟ, ಚಾನ್ಸ ಎಂದು ಅನ್ನುವರು. ಮನುಷ್ಯನಿಗೆ ವಿವೇಕಮಾಡುವ ಶಕ್ತಿ ಇರುವದು. ಇದರ ಸದುಪಯೋಗವನ್ನು ವಿಪುಲ ವಾಗಿ ಮಾಡಿಕೊಳ್ಳಬೇಕು. ಮನುಷ್ಯನು ಒಂದುವೇಳೆ ಶ್ರವಣ ಮನನ ಸತತ ಮಾಡಿದ್ದಾದರೆ ನರ ಇವನೇ ನಾರಾಯಣ ನಾಗುವನು ಅನ್ನುವ ಪ್ರತ್ಯಕ್ಷ ಅನುಭವ ಬರುವದು. [ನರನೇ ನಾರಾಯಣನಾಗುವನು]. ಮನುಷ್ಯನು ವಿಶಾಲ ವಿವೇಕಮಾಡಿ ಎಲ್ಲವನ್ನೂ ಶೋಧಿಸಿ ನೋಡಬೇಕು. ಅಂದರೆ ಸಾಧಕನ ಸರ್ವ ಸಂದೇಹಗಳೂ ದೂರಾಗುವವು. ನಮಗೆ ಪ್ರತೀತವಾದ ಹೆಸರು ಮಾಸಿಯಾದ ವಿಶಾಲ ವಿಶ್ವದ ಬಗ್ಗೆ ವಿಚಾರಮಾಡುವದೇ ವಿಶಾಲ ವಿವೇಕವಾಗಿ ರುವದು. ಸರ್ವ ವಿಶ್ವದ ಬಗ್ಗೆ ಶಾಂತತನದಿಂದ ವಿಚಾರಮಾಡಿದ್ದಾದರೆ ಅದರಲ್ಲಿ ಕೇವಲ [ಫಕ್ತ] ನಾಲ್ಕು ಜಿನ್ನಸ [ಪ್ರಕಾರ] ವರ್ಗಗಳು ಇರುವವು. ಎಂದು ಕಂಡುಬರುವವು. [೧ನೆಯ ಜಿನ್ನಸ] ಎಲ್ಲಕ್ಕಿಂತಲೂ ಬೇರೆಯಾಗಿರುವ ಮತ್ತು ಅಪೂರ್ವ ಇರುವಂಥ ಪರಬ್ರಹ್ಮವು. ಇಂಥ ಈ ಪರಬ್ರಹ್ಮದೊಂದಿಗೆ ತುಲನಾ ಮಾಡಲಿಕ್ಕೆ ಬರುವಂತಹದು ಯಾವುದೂ ಇಲ್ಲ. ಈ ವಸ್ತುವು ನಿರ್ಮಲ, ನಿಶ್ಚಲ, ನಿರ್ವಿಕಾರ, ಮತ್ತು ಕಲ್ಪನೆಯ ಆಚೆಗೆ ಇರುವದು. [೨ನೆಯ ಜಿನ್ನಸ] ಅತಿಶಯ ಸೂಕ್ಷ್ಮ, ಮತ್ತು ಕರ್ದಮ [ಕಲಿಸಿದ್ದು] ಮಿಶ್ರಣ ರೂಪವಿರುವಂಥ ಮೂಲಮಾಯಾ, ಮೂಲ ಸ್ಫುರಣ, ಅಥವಾ ಮೂಲ ಸಂಕಲ್ಪ. ಇದು ಇವಳ ಸ್ವರೂಪವಿರುವದು. [೧೪] ಹದಿನಾಲ್ಕು ಹೆಸರಿನಿಂದ ಇವಳನ್ನು ಗುರುತಿಸುವರು. ಆ ಹೆಸರುಗಳು ಹೀಗಿರುತ್ತವೆ : ಚೈತನ್ಯ, ಗುಣಸಾಮ್ಯ, ಅರ್ಧನಾರೀ ನಟೇಶ್ವರ, ಷಡ್ಗುಣೇಶ್ವರ, ಪ್ರಕೃತಿ-ಪುರುಷ, ಶಿವಶಕ್ತಿ, ಶುದ್ಧ ಸತ್ವಗುಣ, ಗುಣಕ್ಷೋಭಿಣಿ, ಸತ್ವ ರಜ, ತಮ, ಮನ, ಮಾಯಾ, ಮತ್ತು ಅಂತರಾತ್ಮಾ ಅಂತರಾತ್ಮನು ಜ್ಞಾನಮಯನಿದ್ದು ಸರ್ವ ತಿಕಾಣೆ ವಿಭಾಗವಾಗಿರುವನು. [೩ನೆಯ ಜಿನ್ನಸ] ಐದು ಮಹಾಭೂತಗಳು. ಇವುಗಳಲ್ಲಿ ಅರಿವಿನ ಅಂಶ, ಅಲ್ಪ ಸ್ವಲ್ಪ ಇರುವದು [೪ನೆಯ ಜಿನ್ನಸ] ನಾಲ್ಕು ಖಾಣಿಯ ಉತ್ಪತ್ತಿ ಸ್ಥಾನಗಳಲ್ಲಿಯ ಅನಂತ ಪ್ರಾಣಿಗಳು. ಈ ಪ್ರಾಣಿಗಳಲ್ಲಿ ಅರಿವು ಅಧಿಕ ಸ್ಪಷ್ಟವಾಗಿ ಪ್ರಕಟವಾಗಿರುವದು. ಈ ಪ್ರಕಾರದ ನಾಲ್ಕು ಜಿನ್ನಸ [ಪ್ರಕಾರಗಳು] ಇರುವಂಥಾ ಈ ಅವಾಢವ್ಯ ವಿಶ್ವರಚನೆಯ ಬಗ್ಗೆ ರಾತ್ರಿ ಹಗಲೂ ಮನನಮಾಡಬೇಕು. ಅಂದರೆ ಸ್ವರೂಪ ದರ್ಶನ ಘಟಿಸುವದು.

### ದಶಕ ೨೦. ಸಮಾಸ ೫. ಚತ್ವಾರ ಜಿನ್ನಸ (ಹಂತ)ಗಳ ನಿರೂಪಣ (ನುಡಿ ३೦)

ಮೊದಲನೆಯ ಜಿನ್ನಸ [ಪ್ರಕಾರ] ಪರಬ್ರಹ್ಮವು. ಇದರ ಬಗ್ಗೆ ಮೊದಲಿಗೆ ವರ್ಣನೆ ಮಾಡುವರು ; ಈ ವಿಶ್ವ ರಚನೆಯಲ್ಲಿ ಇಲ್ಲಿಂದ ಅಲ್ಲಿಯವರೆಗೆ ಕೇವಲ ನಾಲ್ಕೇ ಪ್ರಕಾರಗಳಿರುವವು. ಇವುಗಳನ್ನು ಕೇಳಿ ನೆನಪಿಡಿರಿ : [೧] ಬ್ರಹ್ಮ [೨] ಮಾಯೆಯ ಹದಿನಾಲ್ಕು ಹೆಸರುಗಳು. [೩] ಪಂಚ ಮಹಾಭೂತಗಳು [೪] ನಾಲ್ಕು ಖಾಣಿಗಳು (ಉತ್ಪತ್ತಿ ಸ್ಥಾನಗಳು) ಈ ಪ್ರಕಾರ ನಾಲ್ಕು ಪದಾರ್ಥಗಳಿರುವವು. (೧) ಪರಬ್ರಹ್ಮವು ಎಲ್ಲ ಪದಾರ್ಥಗಳಿಗಿಂತ ಬೇರೆ ಮತ್ತು ಅಗಳೇ ಅಂದರೆ ಶ್ರೇಷ್ಠ ಇರುವದು. ಮಾನವೀ ಕಲ್ಪನೆಗಿಂತ ಬೇರೆಯಾದಂಥಾದ್ದು ಇರುವದು. (೨) ನಾವು ಅನೇಕ ಪ್ರಕಾರದಿಂದ ಕಲ್ಪನೆಯನ್ನು ಮಾಡಿದರೂ ಕೂಡಾ ಅದರ ಆಚೆಗೆ ಪರಬ್ರಹ್ಮದ ವಿಚಾರ ಹೋಗುವದು. ಪರಬ್ರಹ್ಮನು ನಿರ್ಮಲ, ನಿಶ್ಚಲ, ನಿರ್ವಿಕಾರ ಮತ್ತು ಅಖಂಡ ಇರುವನು. (೩)

ಪರಬ್ರಹ್ಮಾಸ ಕಾಂಹೀ ಚ ತುಳೇನಾ । ಹಾ ಯೇಕ ಮುಖ್ಯ ಜಿನಸಾನಾ ।
ದುಸರಾ ಜಿನಸ ನಾನಾ ಕಲ್ಪನಾ । ಮೂಳಮಾಯಾ ॥೪॥

ನಾನಾ ಸೂಕ್ಷ್ಮರೂಪ । ಸೂಕ್ಷ್ಮ ಆಣೀ ಕರ್ದಮರೂಪ ।
ಮುಳೀಚ್ಯಾ ಸಂಕಲ್ಪಾಚಾ ಆರೋಪ । ಮೂಳಮಾಯಾ ॥೫॥

ಹರಿಸಂಕಲ್ಪ ಮೂಳೀಚಾ । ಆತ್ಮಾರಾಮ ಸಕಳಾಂಚಾ ।
ಸಂಕೇತ ನಾಮಾಭಿಧಾನಾಚಾ । ಯೇಣೇ ಪ್ರಕಾರೇ ॥೬॥

ನಿಶ್ಚಳೀ ಚಂಚಳ ಚೇತಲೇ । ಮ್ಹಣೌನಿ ಚೈತನ್ಯ ಬೋಲಿಲೇ ।
ಗುಣಸಮಾನತ್ವೇ ಜಾಲೇ । ಗುಣಸಾಮ್ಯ ಐಸೇ ॥೭॥

ಅರ್ಧನಾರೀ ನಟೇಶ್ವರ । ತೋ ಚಿ ಶಡ್ಗುಣೈಶ್ವರ ।
ಪ್ರಕೃತಿ ಪುರುಷಾಚಾ ವಿಚಾರ । ಶಿವಶಕ್ತೀ ॥೮॥

ಶುದ್ಧ ಸತ್ವಗುಣಾಚೀ ಮಾಂಡಣೀ । ಅರ್ಧಮಾತ್ರಾ ಗುಣಕ್ಷೋಭಿಣೀ ।
ಪುಢೇ ತಿಹೀ ಗುಣಾಚೀ ಕರಣೀ । ಪ್ರಗಟ ಜಾಲೀ ॥೯॥

ಮನ ಮಾಯಾ ಅಂತರಾತ್ಮಾ । ಚೌದಾ ಜಿನಸಾಚೀ ಸೀಮಾ ।
ವಿದ್ಯಮಾನ ಜ್ಞಾನಾತ್ಮಾ । ಇತುಕೇ ಠಾಈ ॥೧೦॥

ಐಸಾ ದುಸರಾ ಜಿನಸ । ಅಭಿಧಾನೇ ಚತುರ್ದಶ ।
ಆತಾ ತಿಸರಾ ಜಿನಸ । ಪಂಚಮಹಾಭೂತೇ ॥೧೧॥

ಯೇಥೇ ಪಾಹಾತಾ ಜಾಣೀವ ಥೋಡೀ । ಆದಿ ಅಂತ ಹೇ ರೋಕಡೀ ।
ಖಾಣೀ ನಿರೋಪಿಲ್ಯಾ ತಾಂತಡೀ । ತೋ ಚೌಥಾ ಜಿನಸ ॥೧೨॥

ಚ್ಯಾರಿ ಖಾಣೀ ಅನಂತ ಪ್ರಾಣೀ । ಜಾಣೀವೇಚೀ ಜಾಲೀ ದಾಟಣೀ ।
ಚ್ಯಾರೀ ಜಿನಸ ಯೇಥುನೀ । ಸಂಪೂರ್ಣ ಜಾಲೇ ॥೧೩॥

ಈಗ ಎರಡನೆಯ ಜಿನ್ನಸಿನ ಪ್ರಕಾರ ಮೂಲಮಾಯಾ ಇವಳ ವರ್ಣನೆಯನ್ನು ಮಾಡುವರು. ಮೂಲಮಾಯೆಗೆ ಹದಿನಾಲ್ಕು ಸಂಕೇತ [ಹೆಸರು] ಇರುವವು. ಮೂಲಮಾಯಾ ಅತ್ಯಂತ ಸೂಕ್ಷ್ಮ ಮತ್ತು ಅತೀಂದ್ರಿಯ ಇದ್ದದ್ದರಿಂದ ಇದರ ಸ್ವರೂಪವನ್ನು ಶಬ್ದಗಳಿಂದ ಹೇಳುವಾಗ ಸಂಕೇತ, ಗುರುತು, ಚಿನ್ಹಗಳನ್ನು ಉಪಯೋಗಿಸಿ ಹೇಳಬೇಕಾಗುವದು. ಸಂಕೇತ ಚಿನ್ಹಗಳಿಂದ ವಸ್ತುವಿನ ಸಾಧಾರಣ ಕಲ್ಪನೆಯು ಬರುವದು. ಆದರೆ ಖೋಲ ಅಂದರೆ ಆಳವಾದ ಮನನದಿಂದ ಈ ಮಾಯಾ ವಸ್ತುವಿನ ಅನುಭವ ಬರುವದು. ಹೀಗೆ ಮನನ ಮಾಡಲಿಕ್ಕೆ ಸುಗಮವಾಗ ಬೇಕೆಂದೇ ಈ ಸಂಕೇತಗಳನ್ನು ಹೇಳಲಾಗಿರುವದು : ಪರಬ್ರಹ್ಮವೊಬ್ಬನೇ ಈ ವಿಶ್ವ ರಚನೆಯಲ್ಲಿಯ ಮೂಲ ಮುಖ್ಯ [ಮೊದಲನೆಯ] ಜಿನ್ನಸ. ಇವನ ಸರಿಸಾಟಿಯಾದಂಥ ಎರಡನೆಯ ಯಾವ ವಸ್ತುವೂ ಇಲ್ಲವೇ ಇಲ್ಲವೆಂದ ಮೇಲೆ ತುಲನಾ ಸಾಮ್ಯ ಇವುಗಳ ಪ್ರಶ್ನೆಯೇ ಇಲ್ಲ. ಅನೇಕ ಕಲ್ಪನೆಗಳಿಂದ ತುಂಬಿದ ಮೂಲಮಾಯೆಯು ಎರಡನೆಯ ಜಿನ್ನಸ ಆಗಿರುವಳು. [೪] ಮೂಲಮಾಯೆಗೆ ಅನೇಕ ಸೂಕ್ಷ್ಮ ರೂಪಗಳಿರುವವು. ಇವು ಅತಿಶಯ ಸೂಕ್ಷ್ಮ ಇದ್ದು ಇವಳು ಶುದ್ಧ ರೂಪಳಲ್ಲ. ಮಿಶ್ರಣಮಯ [ಕರ್ದಮ ರೂಪ] ಇರುವಳು. ಅಂದರೆ ಮಿಶ್ರವಲ್ಲದ ಅಥವಾ ಶುದ್ಧವಿರುವಂಥ ಪರಬ್ರಹ್ಮನಲ್ಲಿ ಆ ಯಾವ"ಏಕೋಹಂ ಬಹುಸ್ಯಾಮ್" ಅನ್ನುವ ಆದಿ ಸಂಕಲ್ಪವೇ ಮೂಲ ಸ್ಫುರಣವೆನಿಸಿತು. ಇದರ ಮೇಲೆ ಯಾವುದು ಆರೋಪವಮಾಡುವದೋ ಅದಕ್ಕೆ ಮೂಲಮಾಯಾ ಅನ್ನುವರು. [೫] ಈ ಮೂಲ ಸಂಕಲ್ಪಕ್ಕೆ ಹರಿ ಸಂಕಲ್ಪ ಎಂದು ಅನ್ನುವರು. ಯಾವತ್ತೂ ಪ್ರಾಣಿಗಳ ಅಂತರ್ಯಾಮದಲ್ಲಿ ವಾಸ ಮಾಡುವಂಥ ಆತ್ಮಾರಾಮ ಅಥವಾ ಅಂತರಾತ್ಮಾ ಇವನೇ ಆಗಿರುವನು. ಇವಳಿಗೆ ಯಾವ ಹದಿನಾಲ್ಕು ಹೆಸರುಗಳನ್ನು ಕೊಟ್ಟಿರುವರೋ ಅವುಗಳ ಸಂಕೇತ ಮುಂದೆ ಹೇಳಿದಂತೆ ಇರುವವು. [೬] ನಿಶ್ಚಲ ಪರಬ್ರಹ್ಮದಲ್ಲಿ ಚೈತನ್ಯವು ಜಾಗ್ರತವಾಯಿತೆಂದು ಅದಕ್ಕೆ ಚೈತನ್ಯ ಎಂದು ಅನ್ನುವರು. ಅಲ್ಲಿ [ಹರಿ ಸಂಕಲ್ಪದಲ್ಲಿ] ಗುಣಗಳ ಪ್ರಮಾಣವು ಸಮ ಅಥವಾ ಒಂದೇ ತರಹ ಇರುವವು. ಆದ್ದರಿಂದ ಇದಕ್ಕೆ ಗುಣಸಾಮ್ಯ ಎಂದೂ ಅನ್ನುವರು. [೭] ಅರ್ಧನಾರೀ ನಟೇಶ್ವರ ಮತ್ತು ಷಡ್ಗುಣೇಶ್ವರನೂ ಇವನೇ ಇರುವನು. ಶಿವಶಕ್ತಿ ಮತ್ತು ಪ್ರಕೃತಿ ಪುರುಷ ವಿಚಾರವೂ ಇವಳ ಬಗ್ಗೆಯೇ ಇರುವದು. [೮] ಶುದ್ಧಸತ್ವಗುಣದ ಕಲ್ಪನೆ, ಅರ್ಧಮಾತ್ರೆ ಇರುವಂಥ ಗುಣಕ್ಷೋಭಿಣಿ ಮತ್ತು ಇದರೊಳಗಿಂದ ಮುಂದೆ ಪ್ರಕಟವಾಗುವ ಸತ್ವ, ರಜ, ತಮ ಈ ಮೂರು ಗುಣಗಳು ಮೂಲಮಾಯೆಯ ಹೆಸರು ಗಳೇ ಇರುವವು. [೯] ಮನ, ಮಾಯಾ, ಅಂತರಾತ್ಮಾ ಹೀಗೆ ಮಾಯೆಯ ಹದಿನಾಲ್ಕು ಪ್ರಕಾರಗಳಿರುವವು. ಯಾವಾಗಲೂ ಅಸ್ತಿತ್ವದಲ್ಲಿರುವಂಥವನಾದ ಈ ಜ್ಞಾನಾತ್ಮಾ ಅಥವಾ ಆದಿ ಸಂಕಲ್ಪವು ಇಷ್ಟೊಂದು ಪ್ರಕಾರದಿಂದ ಅನುಭವಕ್ಕೆ ಬರುವದು. (೧೦) [೧] ಚೈತನ್ಯ [೨] ಗುಣಸಾಮ್ಯ [೩] ಅರ್ಧನಾರೀನಟೇಶ್ವರ [೪] ಷಡ್ಗುಣೇಶ್ವರ [೫] ಪ್ರಕೃತಿ ಪುರುಷ [೬] ಶಿವಶಕ್ತಿ [೭] ಶುದ್ಧ ಸತ್ವಗುಣ [೮] ಅರ್ಧ ಮಾತ್ರಾತ್ಮಕ ಗುಣಕ್ಷೋಭಿಣಿ [೯] ಸತ್ವ [೧೦] ರಜ [೧೧] ತಮ [೧೨] ಮನ [೧೩] ಮಾಯಾ [೧೪] ಅಂತರಾತ್ಮಾ ಹೀಗೆ ೧೪ ಹೆಸರುಗಳು ಮೂಲ ಮಾಯೆಗೆ ಇರುವವು. ಇದು ಹದಿನಾಲ್ಕು ಹೆಸರಿನ ಎರಡನೆಯ ಜಿನ್ನಸ ಇರುವದು. ಇವುಗಳಿಗೆ ಹುಟ್ಟು ಸಾವುಗಳು ಇರುವವು. ಪಂಚ ಮಹಾಭೂತಗಳು ಮೂರನೆಯ ಜಿನ್ನಸ ಇರುವವು. (೧೧) ಪಂಚ ಮಹಾಭೂತಗಳಲ್ಲಿ ಅರಿವಿನ ಅಂಶವು ಕಡಿಮೆ ಪ್ರಮಾಣದಲ್ಲಿ ಇರುವದು ಕಂಡುಬರುವದು. ಆದರೂ ಇವಕ್ಕಿಂತ ಮೊದಲು ಮತ್ತು ನಂತರ [ಆಮೇಲೆ] ಅಂದರೆ ಕೊನೆಯಲ್ಲಿ ಅರಿವಿನ ಅಸ್ತಿತ್ವವು ಪ್ರತ್ಯಕ್ಷ ಕಾಣುವದು. ಮೊದಲಿಗೆ ಮೂಲಮಾಯೆಯಲ್ಲಿ ಅರಿವು ಇರುವದು. ಮತ್ತು ನಂತರ ನಾಲ್ಕು ಖಾಣಿಗಳಲ್ಲಿ ಕೂಡಾ ಅರಿವು ಕಾಣುವದು. ಆದರಿಂದ ಪಂಚಭೂತಗಳ ಆದಿಯಲ್ಲಿ ಮತ್ತು ಅಂತ್ಯದಲ್ಲಿ ಕೂಡಾ ಅರಿವು [ತಿಳುವಳಿಕೆ] ಇರುವದು. ಈ ಮೊದಲು ನಾಲ್ಕು ಖಾಣಿಗಳು ಎಂದು ಅತ್ಯಂತ ಅವಸರದಿಂದ ಹೇಳಿದೆವು. ಇದೇ ನಾಲ್ಕನೆಯ ಜಿನ್ನಸ ಇರುವದು. (೧೨) ನಾಲ್ಕು ಖಾಣಿಗಳಲ್ಲಿ [ಉತ್ಪತ್ತಿ ಸ್ಥಾನದ ನಾಲ್ಕು ಪ್ರಕಾರಗಳಲ್ಲಿ] ಅನಂತ ಪ್ರಾಣಿಗಳು ಇರುವವು. ಈ ಎಲ್ಲ ಪ್ರಾಣಿಗಳ ಅಂತರ್ಯಾಮದಲ್ಲಿ ಅರಿವಿನ ದಟ್ಟಣೆಯು [ಗರ್ದಿ, ಗದ್ದಲ] ಆಗಿರುವದು. ಇವುಗಳಲ್ಲಿ ಬಹಳಷ್ಟು ಅರಿವು ಕಂಡುಬರುವದು. ಇರಲಿ ವಿಶ್ವ ರಚನೆ ಯಲ್ಲಿಯ ನಾಲ್ಕು ಜಿನ್ನಸುಗಳ ಬಗ್ಗೆ ಹೇಳಿದೆವು. (೧೩)

ಬೀಜ ಥೋಡೇ ಪೇರಿಜೇತೇ । ಪುಢೇ ತ್ಯಾಚೇ ಉದಂಡ ಹೋತೇ ।
ತೈಸೇ ಜಾಲೇ ಆತ್ಮಯಾತೇ । ಖಾಣೀ ವಾಣೀ ಪ್ರಗಟತಾ ॥೧೪॥

ಏಸೀ ಸತ್ತಾ ಪ್ರಬಳಲೀ । ಥೋಡೇ ಸತ್ತೇಚೀ ಉದಂಡ ಜಾಲೀ ।
ಮನುಷ್ಯವೇಷೇ ಸೃಷ್ಟೀ ಭೋಗಿಲೀ । ನಾನಾ ಪ್ರಕಾರೇ ॥೧೫॥

ಪ್ರಾಣೀ ಮಾರೂನ ಸ್ವಾಪದ ಪಳೇ । ಮರಕಡ ತ್ಯಾಸ ಕಾಯಿ ಕಳೇ।
ನಾನಾ ಭೋಗ ತೋ ನಿವಳೇ । ಮನುಷ್ಯದೇಹೀ ॥೧೬॥

ನಾನಾ ಶಬ್ದ ನಾನಾ ಸ್ಪರ್ಶ । ನಾನಾ ರೂಪ ನಾನಾ ರಸ ।
ನಾನಾ ಗಂಧ ತೇ ವಿಶೇಷ । ನರದೇಹ ಜಾಣೇ ॥೧೭॥

ಅಮೋಲ್ಯ ರತ್ನೇ ನಾನಾ ವಸ್ತ್ರೇ । ನಾನಾ ಯಾನೇ ನಾನಾ ಶಸ್ತ್ರೇ ।
ನಾನಾ ವಿದ್ಯಾ ಕಳಾ ಶಾಸ್ತ್ರೇ । ನರದೇಹ ಜಾಣೇ ॥೧೮॥

ಪೃಥ್ವೀ ಸತ್ತೇನೇ ವ್ಯಾಪಿಲೀ । ಸ್ಥಳೋಸ್ಥಳೀ ಅಟೋಪಿಲೀ ।
ನಾನಾ ವಿದ್ಯಾ ಕಳಾ ಕೇಲೀ । ನಾನಾ ಧಾರಣಾ ॥೧೯॥

ದೃಶ್ಯ ಅವಘೇಚಿ ಪಾಹಾವೇ । ಸ್ಥಾನಮಾನ ಸಾಂಭಾಳಾವೇ ।
ಸಾರಾಸಾರ ವಿಚಾರಾವೇ । ನರದೇಹೇ ಜಾಲಿಯಾ ॥೨೦॥

ಯೆಹಲೋಕ ಆಣೀ ಪರಲೋಕ । ನಾನಾ ಪ್ರಕಾರೀಚಾ ವಿವೇಕ ।
ವಿವೇಕ ಆಣೀ ಅವಿವೇಕ । ಮನುಷ್ಯ ಜಾಣೇ ॥೨೧॥

ನಾನಾ ಪಿಂಡೀ ಬ್ರಹ್ಮಾಂಡ ರಚನಾ । ನಾನಾ ಮೂಳೀಚೀ ಕಲ್ಪನಾ ।
ನಾನಾ ಪ್ರಕಾರೀ ಧಾರಣಾ । ಮನುಷ್ಯ ಜಾಣೇ ॥೨೨॥

ಇನ್ನು ಮೇಲೆ ಮಾನವ ದೇಹದ ಶ್ರೇಷ್ಠತೆಯು ಮಹತ್ವವನ್ನು ವರ್ಣನೆಮಾಡುವರು. ಮನುಷ್ಯರಲ್ಲಿ ಮಾತ್ರ ಅರಿವಿನ ಪರಮೋತ್ಕರ್ಷವು ಕಂಡುಬರುವದು. ಮನುಷ್ಯನು ದೇಹದ ಉಪಯೋಗವನ್ನು ಚನ್ನಾಗಿ [ಸರಿಯಾದ ರೀತಿಯಲ್ಲಿ] ಉಪಯೋಗ ಮಾಡಿಕೊಂಡದ್ದಾದರೆ ಪರಮೇಶ್ವರನ ಸ್ವರೂಪವೇ ಆಗುವನು. ಆದರೆ ಇದಕ್ಕಾಗಿ [ಈ ಸ್ಥಿತಿ ಪ್ರಾಪ್ತವಾಗಲಿಕ್ಕೆ] ಬಹಳಷ್ಟು ವಿವೇಕದ ಅವಶ್ಯಕತೆ ಇರುವದು:ನಾವು ಸ್ವಲ್ಪ ಬೀಜಗಳನ್ನು ಬಿತ್ತುವೆವು. ಆವರೆ ಮುಂದೆ ಅವುಗಳಿಂದ ಬಹಳಷ್ಟು ಧಾನ್ಯಗಳು ಪ್ರಾಪ್ತವಾಗುವವು. ನಾಲ್ಕು ಖಾಣಿಗಳಲ್ಲಿಯ ಅನಂತ ಪ್ರಾಣಿಗಳಲ್ಲಿ ಪ್ರಕಟವಾಗುವಾಗ ಅಂತರಾತ್ಮನ ಸ್ಥಿತಿಯು ಈ ಬೀಜದಂತೆ ಆಗುವದು. [೧೪] ಈ ಪ್ರಕಾರದಿಂದ ಈಶ್ವರೀ ಸತ್ತಾದ ಬೆಳವಣಿಗೆ [ವೃದ್ಧಿ] ಆಗಿ ಮೂಲದಲ್ಲಿಯ ಸ್ವಲ್ಪ ಸತ್ತೆಯೇ ಜೋರಿನಿಂದ ಬಲಿತು ವಿಸ್ತಾರವಾಯಿತು. ಕೊನೆಯಲ್ಲಿ [ಅಖೈರಕ್ಕೆ] ಮನುಷ್ಯ [ದೇಹದ] ರೂಪದಿಂದ ಈ ಈಶ್ವರ ಸತ್ತೆಯು ಸೃಷ್ಟಿಯಲ್ಲಿಯ ಅನೇಕ ಪ್ರಕಾರದ ಭೋಗವನ್ನು ಭೋಗಿಸುವದು. (೧೫) ಒಂದು ಹಿಂಸ್ರ ಪಶುವು ಇನ್ನೊಂದು ಪ್ರಾಣಿಯನ್ನು ಕೊಂದು ಓಡಿ ಹೋಗುತ್ತದೆ. ಅದಕ್ಕೆ ಇದಕ್ಕಿಂತ ಹೆಚ್ಚಿನ ಜ್ಞಾನವೇನೂ ತಿಳಿದಿರುವದಿಲ್ಲ. [ಗೊತ್ತಿರುವದಿಲ್ಲ]. ಆದರೆ ಅನೇಕ ಪ್ರಕಾರದ ಭೋಗ ಭೋಗಿಸುವಲ್ಲಿ ಮನುಷ್ಯ ಪಟ್ಟಯಿತನಿರುವನು. ಚತುರನಿರುವನು. ಉದಾ:ಪಶುವನ್ನು ಕೊಂದು ಅದರ ಮಾಂಸವನ್ನು ಅನೇಕ ಪ್ರಕಾರದಿಂದ ತಯಾರಿಸಿಕೊಂಡು ತಿನ್ನುವ ಜ್ಞಾನವು ಮನುಷ್ಯನಿಗೆ ಮಾತ್ರ ಇರುವದು. ಇದು ಇತರ ಪ್ರಾಣಿಗಳಿಗೆ ಇರುವದಿಲ್ಲ. [೧೬] ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧ ಇವುಗಳ ನಾನಾ ಪ್ರಕಾರಗಳನ್ನು ಮನುಷ್ಯನೇ ವಿಶೇಷ ರೀತಿಯಲ್ಲಿ ತಿಳಿಯುವನು. ಅರ್ಥಾತ್ ನರದೇಹವು ಅನೇಕ ರೀತಿಯ ಶಬ್ದಗಳನ್ನು,ಅನೇಕ ವಿಧದ ಸ್ಪರ್ಶಗಳನ್ನು, ನಾನಾ ರೀತಿಯ ರೂಪಗಳನ್ನು,ನಾನಾ ತರಹದ ರಸಗಳನ್ನು. ಅನೇಕ ಪ್ರಕಾರದ ವಾಸನೆಗಳನ್ನು, ಇನ್ನೂ ಅನೇಕ ಪ್ರಕಾರಗಳನ್ನು ವಿಶೇಷ ರೀತಿಯಲ್ಲಿ ತಿಳಿಯಬಲ್ಲದು ಇದು ಇತರ ಪ್ರಾಣಿಗಳಿಗೆ ತಿಳಿಯುವದಿಲ್ಲ (೧೭) ಅನೇಕ ಪ್ರಕಾರದ ಅಮೌಲ್ಯ ರತ್ನಗಳನ್ನು, ನಾನಾ ತರಹದ ವಸ್ತ್ರ-ಶಸ್ತ್ರಾದಿಗಳನ್ನು, ಅನೇಕ ಬಗೆಯ ವಾಹನಗಳನ್ನು, ನಾನಾ ಬಗೆಯ ವಿದ್ಯೆಗಳನ್ನು, ಕಲೆಗಳನ್ನು, ಅನೇಕ ಶಾಸ್ತ್ರಗಳನ್ನು ಇನ್ನೂ ಅನೇಕ ವಿದ್ಯೆಗಳನ್ನು ಮನುಷ್ಯನು ಮಾತ್ರ ತಿಳಿದಿರುವನು. ಅಥವಾ ತಿಳಿಯಬಲ್ಲವನಾಗಿರುವನು. [೧೮] ಒಬ್ಬನೇ ಒಬ್ಬನಿರುವ ಅಂತರಾತ್ಮನ ಅಥವಾ ಈಶ್ವರನ ಸತ್ತೆಯೇ ಪೃಥ್ವಿಯನ್ನೆಲ್ಲ ವ್ಯಾಪಿಸಿರುವದು ಅಲ್ಲಲ್ಲಿ [ಸ್ಥಾನ ಸ್ಥಾನಗಳಲ್ಲಿ] ಈ ಸತ್ತೆಯೇ ವ್ಯವಸ್ಥೆಯನ್ನು ನಿರ್ಮಾಣ ಮಾಡುವದು. ಈ ಸತ್ತೆಯ ಪ್ರೇರಣೆಯಿಂದಲೇ ಅನೇಕ ಪ್ರಕಾರದ ವಿದ್ಯೆ, ಕಲೆ,ಮತ್ತು ಆಕಲನ ಶಕ್ತಿ[ಮನಸ್ಸಿನ ಧೈರ್ಯ,ಸ್ಮರಣ ಶಕ್ತಿ ಬುದ್ಧಿಯ ಗ್ರಹಣಶಕ್ತಿ ]ಗಳು ಪ್ರಕಟವಾಗುವವು.(೧೯) ಆದ್ದರಿಂದ ಇಂಥ ಈ ಶ್ರೇಷ್ಠ ನರದೇಹ ಪ್ರಾಪ್ತವಾಗಿದೆ ಎಂದ ಮೇಲೆ ಈ ಎಲ್ಲ ದೃಶ್ಯಗಳನ್ನು ನೋಡಬೇಕು. ತಿಳಿಯಬೇಕು. ವ್ಯವಹಾರದಲ್ಲಿಯು ತನ್ನ ಸ್ಥಾನ ಮತ್ತು ಮಾನ, ಅಧಿಕಾರ ಎರಡನ್ನೂ ಸಂಬಾಳಿಸಿ ಕಾಯ್ದುಕೊಂಡು ಸಾರಾಸಾರ ವಿಚಾರಮಾಡಬೇಕು. ತಿಳಿಯಬೇಕು ಇದನ್ನು ಮನುಷ್ಯನು ಮಾತ್ರ ಮಾಡಬಲ್ಲನು. (೨೦) ಇಹಲೋಕ ಮತ್ತು ಪರಲೋಕ ಇವುಗಳ ಬಗ್ಗೆ ಇನ್ನೂ ಅನೇಕ ಪ್ರಕಾರದ ಇತರ ವಿವೇಕದ ಬಗ್ಗೆ ಇದರ ಹೊರತಾಗಿ ವಿವೇಕ ಮತ್ತು ಅವಿವೇಕ ಈ ಎಲ್ಲವುಗಳ ಬಗ್ಗೆ ಮನುಷ್ಯನು ಮಾತ್ರ ತಿಳಿಯಬಲ್ಲವನಾಗಿರುವನು. (೨೧) ಅನೇಕ ಪ್ರಕಾರದ ಪಿಂಡದ ರಚನೆಯ ಬಗ್ಗೆ, ಬ್ರಹ್ಮಾಂಡದ ರಚನೆಯ ಬಗ್ಗೆ ಮೂಲಮಾಯೆಯಲ್ಲಿಯ ಅನೇಕ ಕಲ್ಪನೆಗಳ ಬಗ್ಗೆ,ಅನೇಕ ಪ್ರಕಾರದ ಧ್ಯಾನ ಧಾರಣಾದಿಗಳ ಬಗ್ಗೆ ಮನುಷ್ಯನು ಮಾತ್ರ ತಿಳಿಯಬಲ್ಲವನಾಗಿರುವನು. (೨೨)

ಅಷ್ಟಭೋಗ ನವರಸ । ನಾನಾ ಪ್ರಕಾರೀಚಾ ವಿಳಾಸ ।
ವಾಚ್ಯಾಂಶ ಲಕ್ಷ್ಯಾಂಶ ಸಾರಾಂಶ । ಮನುಷ್ಯ ಜಾಣೇ ॥೨೩॥

ಮನುಷ್ಯೇ ಸಕಳಾಸ ಆಳಿಲೇ । ತ್ಯಾ ಮನಷ್ಯಾಸ ದೇವೇ ಪಾಳಿಲೇ ।
ಐಸೇ ಹೇ ಅವಘೇ ಕಳಲೇ । ನರದೇಹಯೋಗೇ ॥೨೪॥

ನರದೇಹ ಪರಮ ದುಲ್ಲಭ । ಯೇಣೇ ಘಡೇ ಅಲಭ್ಯ ಲಾಭ ।
ದುಲ್ಲಭ ತೇ ಸುಲ್ಲಭ । ಹೋತ ಆಹೇ ॥೨೫॥

ನರಕಡ ದೇಹೆ ಹೇ ಕಾಬಾಡ । ನರದೇಹ ಮೋಠೇ ಘಬಾಡ ।
ಪರಂತು ಪಾಹಿಜೆ ಜಾಡ । ವಿವೇಕ ರಚನಾ ॥೨೬॥

ಯೇಥೇ ಜೇಣೇ ಆಳಸ ಕೇಲಾ । ತೋ ಸರ್ವಸ್ವೇ ಬುಡಾಲಾ ।
ದೇವ ನಾಹೀ ವೊಳಖಿಲಾ । ವಿವೇಕಬಳೇ ॥೨೭॥

ನರ ತೋ ಚಿ ನಾರಾಯೆಣ । ಜರೀ ಪ್ರತ್ಯಯೋ ಕರೀ ಶ್ರವಣ ।
ಮನನಶೀಳ ಅಂತಃಕರ್ಣ । ಸರ್ವಕಾಳ ॥೨೮॥

ಜೇಣೇ ಸ್ವಯೇ ಚಿ ಪೋಹಾವೇ । ತ್ಯಾಸ ಕಾಸೇಸ ನಲಗೇ ಲಾಗಾವೇ ।
ಸ್ವತಂತ್ರಪಣೇ ಶೋಧಾವೇ । ಸಕಳ ಕಾಂಹೀ ॥೨೯॥

ಸಕಳ ಶೋಧೂನ ರಾಹಿಲಾ । ಸಂದೇಹ ಕೈಚಾ ತಯೂಲಾ ।
ಪುಢೇ ವಿಚಾರ ಕೈಸಾ ಜಾಲಾ । ತ್ಯಾಚಾ ತೋ ಚಿ ಜಾಣೇ ॥೩೦॥

ಇತಿ ಶ್ರೀ ದಾಸಬೋಧೇ ಗುರುಶಿಷ್ಯ ಸಂವಾದೇ
''ಚತ್ವಾರ ಜಿನಸ ನಾಮ ನಿರೂಪಣ'' ಸಮಾಸ ಪಂಚಮ ॥

ಅನ್ನ, ಉದಕ, ತಾಂಬೂಲ, ಪುಷ್ಪ, ಚಂದನ, ವಸನ, [ವಸ್ತ್ರ]· ಶಯ್ಯಾ, ಮತ್ತು ಅಲಂಕಾರ ಇವು ಎಂಟು ಪ್ರಕಾರದ ಭೋಗಗಳು ಅಥವಾ ಸುಗಂಧ, ಸ್ತ್ರೀ, ತಾಂಬೂಲ, ವಸ್ತ್ರ, ಗಾಯನ, ಭೋಜನ, ಶಯ್ಯಾ· ಮತ್ತು ಮಾದಕ ದ್ರವ್ಯ ಇವು ಎಂಟು ಭೋಗಗಳು ಮತ್ತು ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಭೀಭತ್ಸ, ಅದ್ಭುತ ಮತ್ತು ಶಾಂತ; ಇವು ಒಂಭತ್ತು ರಸಗಳು- ಮತ್ತು ಅನೇಕ ವಿಲಾಸಗಳು ಮತ್ತು ವಾಚ್ಯಾಂಶ ಅಂದರೆ ಶಬ್ದದ ಮುಖಾಂತರ ತಿಳಿಯುವಂಥ, ಮಾತಾಡಿ ತೋರಿಸಲಿಕ್ಕೆ ಬರುವಂಥ, ಅರ್ಥ, ಅರ್ಥಾತ್ ಶಾಬ್ದಿಕ ಜ್ಞಾನ ಮತ್ತು ಲಕ್ಷಾಂಶ [ಅಂದರೆ ಗರ್ಭಿತಾರ್ಥ, ರಹಸ್ಯಾರ್ಥ, ಶಬ್ದಜ್ಞಾನ ಲೋಪವಾದ ನಂತರ ಅನುಭವಕ್ಕೆ ಬರುವಂಥ ಆತ್ಮಸ್ವರೂಪ ಮತ್ತು ವಾಚ್ಯಾಂಶದ ತ್ಯಾಗವಾದ ಮೇಲೆ ಶೇಷ ಉಳಿಯುವಂಥ ಅಧಿಷ್ಠಾನ-ಬ್ರಹ್ಮಾತ್ಮ] ಮತ್ತು ಸಾರಾಂಶ ಅಂದರೆ ತಿರುಳು, ತಾತ್ಪರ್ಯ, ಸತ್ವ ಇತ್ಯಾದಿಗಳ ವಿವರಗಳನ್ನೆಲ್ಲ ಮತ್ತು ಸುಖ ದುಃಖಾದಿಗಳನ್ನೆಲ್ಲ ಮನುಷ್ಯನು ಮಾತ್ರ ತಿಳಿಯಬಲ್ಲವನಾಗಿರುವನು. (೨೩) ಮನುಷ್ಯನು ಮಾತ್ರ ಎಲ್ಲ ಪ್ರಾಣಿಗಳನ್ನು ತನ್ನ ಹಿಡಿತದಲ್ಲಿ ಇಟ್ಟುಕೊಳ್ಳಬಲ್ಲವನಾಗಿರುವನು. ಆದರೆ ಇಷ್ಟೆಲ್ಲವನ್ನೂ ತಿಳಿಯುವ ಮನುಷ್ಯನನ್ನು ದೇವರು ಪಾಲಿಸುವನು, ರಕ್ಷಿಸುವನು, ಸಂಬಾಳಿಸುವನು. ತನ್ನ ಹಿಡಿತದಲ್ಲಿ [ತಾಬಾದಲ್ಲಿ] ಇಟ್ಟುಕೊಳ್ಳುವನು. ಈ ಎಲ್ಲ ವಿಚಾರಗಳು, ವಿವರಗಳು, ವಿಷಯಗಳು ಮಾನವ ದೇಹದಲ್ಲಿದ್ದಾಗಲೇ ತಿಳಿಯುವವು. (೨೪) ಇಂಥ ಮಾನವ ದೇಹವು ಅತ್ಯಂತ ದುರ್ಲಭವಾದದ್ದಿರುವದು. ಇದರ ಯೋಗದಿಂದ ಅಲಭ್ಯ ಲಾಭ ಪ್ರಾಪ್ತವಾಗುವದು. ಯಾವ ವಿಷಯವು ದುರ್ಲಭವಿರುವದೋ ಅದು ಇದರಿಂದ ಸುಲಭವಾಗಿ ಹೋಗುವದು. (೨೫) ಮಾನವದೇಹದ ಹೊರತಾಗಿ ಇತರ ದೇಹಗಳೆಲ್ಲ ರಸ ಹೀನವಿರುವವು. ಕೇವಲ ಕಷ್ಟಕಾರಕವಿರುವವು. ಆದರೆ ಮಾನವದೇಹ ಅಂದರೆ ಬಹಳ ದೊಡ್ಡ ನಿಧಿ ಇದ್ದಂತೆ. ಅಥವಾ ಆಕಸ್ಮಿಕವಾಗಿ ದೊರೆತ ದೊಡ್ಡ ಲಾಭವೆಂದು ತಿಳಿಯಬೇಕು. ಇದರ ಸಂಪೂರ್ಣ ಲಾಭ ದೊರಕಬೇಕಾದರೆ ಅತಿಶಯ ದೊಡ್ಡದಾದ ಅಥವಾ ವಿಶಾಲವಾದ ವಿವೇಕವಾಡಲಿಕ್ಕೆ ಬೇಕು. (೨೬) ಮಾನವ ದೇಹ ಪ್ರಾಪ್ತವಾದಿಯೂ ಯಾವನು ಆಲಸ್ಯದಿಂದ ನಡೆಯುವನೋ ಅಂಥವನು ಎಲ್ಲ ರೀತಿಯಿಂದ ಮುಳುಗುವನು. ಇವನ ಸರ್ವಸ್ವವೂ ಹಾನಿಕಾರಕವಾಗುವದು. ಯಾಕೆಂದರೆ ವಿವೇಕದ ಬಲದಿಂದ ಇಂಥವನು ದೇವರ ಗುರುತು ಮಾಡಿಕೊಳ್ಳುವದಿಲ್ಲ. (೨೭) ಯಾರ ಅಂತಃಕರಣವು ನಿರಂತರವೂ ಮನನಶೀಲ ಇರುವದೋ ಮತ್ತು ಮತ್ತು ಯಾರು ಶ್ರವಣಮಾಡಿದ್ದನ್ನು ಪ್ರತ್ಯಕ್ಷ ಅನುಭವ ಪಡೆಯುವರೋ ಅಂಥವರು ದೇಹದಿಂದ ಮನುಷ್ಯರಾಗಿದ್ದರೂ ಕೂಡಾ ದೇವತ್ವದ ಪದವಿಗೆ ಏರುವರು. (೨೮) ಸ್ವತಃ ಯಾರಿಗೆ ಈಸಲಿಕ್ಕೆ ಬರುವದೋ ಅವರಿಗೆ ಎರಡನೆಯವರ ಆಧಾರ ಅಥವಾ ಆಶ್ರಯ ಪಡೆಯುವ ಅವಶ್ಯಕತೆ ಬೀಳುವದಿಲ್ಲ. ಇದರಂತೆಯೇ ಯಾರು ಮನನ ಶೀಲ [ಚಿಂತನ ಶೀಲ] ಇರುವರೋ ಇಂಥವರು ಸರ್ವವನ್ನೂ [ಏನೆಲ್ಲವನ್ನೂ] ಸ್ವತಂತ್ರವಾಗಿ ಶೋಧಿಸಿ ತಿಳಿಯಬೇಕು. ಮತ್ತು ಶೋಧಿಸಿದ್ದನ್ನು ನೋಡಬೇಕು. (೨೯) ಈ ಪ್ರಕಾರದಿಂದ ಯಾವತ್ತೂ ವಿಶ್ವದ ಬಗ್ಗೆ ಯಾರು ವಿವೇಕದಿಂದ ಸಾರ ಸಾರ ವಿಚಾರಮಾಡಿ ಸ್ವತಂತ್ರತನದಿಂದ ಶೋಧಮಾಡಿ ತಿಳಿಯುವರೋ ಅಂಥವರಿಗೆ ಯಾವ ಸಂದೇಹವೂ ಉಳಿಯುವದಿಲ್ಲ. ಈ ರೀತಿಯಿಂದ ಸಂಪೂರ್ಣ ಸಂದೇಹ ರಹಿತರಾದ ಮೇಲೆ ಆಗ ಯಾವ ಅವಸ್ಥೆ ಬರುವದೋ ಅದು ಯಾವ ಅವಸ್ಥೆ ಎಂಬುದು ಯಾರದು ಅವರಿಗೆ ತಿಳಿಯುವದು. ಅಂದರೆ ಅವರದು ಅವರಿಗೇ ತಿಳಿಯುವದು [ಸರ್ವ ಪಿಂಡ, ಬ್ರಹ್ಮಾಂಡದ ಬಗೆಗಿನ ವಿಚಾರ ವಿಷಯವನ್ನು ವಿವೇಕದಿಂದ ನಿರಾಸ ಪರಿಹಾರ ಮಾಡಿ ಯಾವನು ಇರುವನೋ ಅಂದರೆ ಆತ್ಮಸ್ವರೂಪದಲ್ಲಿ ಸ್ಥಿರವಾಗಿರುವನೋ ಅಂಥವನಿಗೆ ಆಗ ಸಂದೇಹವೆಂಬುದು ಉಳಿಯಲಾರದು. ಆ ಮೇಲೆ ಆನಂದ ಅಥವಾ ಸಮಾಧಾನವು ಹೇಗೆ ಮತ್ತು ಎಷ್ಟು ಆಗುವದು ಅಥವಾ ಲೌಕಿಕ ವ್ಯವಹಾರವು ಹೇಗೆ ಅಥವಾ ಯಾವ ರೀತಿ ನಡೆಯುವದು. ಇದೆಲ್ಲವೂ ಅವರದು ಅವರಿಗೇ ತಿಳಿಯುವದು.] (೩೦)

ಶ್ರೀ ದಾಸಬೋಧದ ಇಪ್ಪತ್ತನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ಚತ್ವಾರ ಜಿನ್ನಸ (ಹಂತ)ಗಳ ನಿರೂಪಣ"ವೆಂಬ ಹೆಸರಿನ ಐದನೇ ಸಮಾಸವು ಮುಗಿಯಿತು.

● ●

### ದಶಕ. ವಿಂಶತಿ : ಸಮಾಸ. ಷಷ್ಠಮ : ಆತ್ಮಾಗುಣ ನಿರೂಪಣ (ನುಡಿ ೩೦)

॥ಶ್ರೀರಾಮ ಸಮರ್ಥ॥ ಪಾಹೋ ಜಾತಾ ಭೂಮಂಡಳ। ಠಾಈ ಠಾಈ ಆಹೇ ಜಳ।
ಕಿತ್ಯೇಕ ತೇ ನಿರ್ಮಳ ಮಾಳ । ಜಳೇವಿಣ ಪೃಥ್ವೀ ॥೧॥

ತೈಸೇ ದೃಶ್ಯ ವಿಸ್ತಾರಲೇ । ಕಾಂಹೀಯೇಕ ಜಾಣೇವೇನೇ ಶೋಭಲೇ ।
ಜಾಣೇವರಹಿತ ಉರಲೇ । ಕಿತೀಯೇಕ ದೃಶ್ಯ ॥೨॥

ಚ್ಯಾರೀ ಖಾಣೀ ಚ್ಯಾರೀ ವಾಣೀ । ಚೌರ್‍ಯಾಸೀ ಲಕ್ಷ ಜೀವಯೋನೀ ।
ಶಾಸ್ತ್ರೀ ಅವಘೇ ನೇಮುನೀ । ಬೋಲಿಲೇ ಅಸೇ ॥೩॥

॥ಶ್ಲೋಕ॥ ಜಲಜಾ ನವಲಕ್ಷಾಶ್ಚ ದಶಲಕ್ಷಾಶ್ಚ ಪಕ್ಷಿಣಃ ।
ಕೃಮಯೋ ರುದ್ರ ಲಕ್ಷಾಶ್ಚ ವಿಂಶಲ್ಲಕ್ಷಾ ಗವಾದಯಃ ।
ಸ್ಥಾವರಾಸ್ತ್ರಿಂಶಲ್ಲಕ್ಷಾಶ್ಚ ಚತುರ್ಲಕ್ಷಾಶ್ಚ ಮಾನವಾಃ ।
ಪಾಪಪುಣ್ಯಂ ಸಮಂಕೃತ್ವಾ ನರಯೋನಿಷು ಜಾಯತೇ ॥

ಮನುಷ್ಯೇ ಚ್ಯಾರೀ ಲಕ್ಷ । ಪಶು ವೀಸ ಲಕ್ಷ ।
ಕ್ರಿಮಿ ಅಕ್ರಾ ಲಕ್ಷ । ಬೋಲಿಲೇ ಶಾಸ್ತ್ರೀ ॥೪॥

## ದಶಕ ೨೦. ಸಮಾಸ ೬. ಆತ್ಮಗುಣ ನಿರೂಪಣ (ನುಡಿ ೪೦)

ಈ ವಿಶ್ವದಲ್ಲಿ ದೃಶ್ಯದ ವಿಸ್ತಾರವು ಅವಾಢವ್ಯವಾಗಿರುವದು. ಆದರೆ ಯಾವತ್ತೂ ದೃಶ್ಯವು ಅರಿವಿನಿಂದ ಕೂಡಿದ್ದಾಗಿರುವದಿಲ್ಲ. ಕೆಲವೊಂದು ದೃಶ್ಯವು ಅರಿವಿನಿಂದ ಕೂಡಿದೆ ಅಂದರೆ ಸಜೀವವಾಗಿದ್ದರೆ ಕೆಲವೊಂದು ದೃಶ್ಯವು ಅರಿವು ರಹಿತ ಅಂದರೆ ನಿರ್ಜೀವ ಇರುವದು. ಜೀವಗಳಲ್ಲಿ ಪ್ರಕಟವಾಗುವಂಥ ಅರಿವು ಅನೇಕ ಪ್ರಕಾರದಿಂದ ಕೂಡಿದ್ದಾಗಿರುವದು ವಿಚಾರ, ಧೈರ್ಯ, ದೃಷ್ಟಾ [ನೋಡುವವ, ಜ್ಞಾತಾ] ಸಾಕ್ಷೀ, ಜ್ಞಾನಘನ, ಸತ್ತಾ, ಚೈತನ್ಯ, ಶ್ರವಣ, ಮನನ, ವಿವರಣ, [ವಿವರಿಸುವದು] ಬದ್ಧ, ಸಿದ್ಧ, ಒಂಭತ್ತುಭಕ್ತಿಗಳು, ನಾಲ್ಕು ಮುಕ್ತಿಗಳು, ನಾಲ್ಕು ಅವಸ್ಥೆಗಳು, ಎಂಟು ದೇಹಗಳು, ಅನೇಕ ತ್ರಿಪುಟಿಗಳು ಹೀಗೆ ಅರಿವಿನ ಪ್ರಕಾರಗಳನ್ನು ಎಷ್ಟೆಂದು ಹೇಳುವದು ? ಮೂಲ ಪುರುಷ ಅಂತರಾತ್ಮನು ಸಾವಿರಾರು ಪ್ರಕಾರದಿಂದ ದೃಶ್ಯದಲ್ಲಿ ವಿಲಾಸವಮಾಡುವನು. ಕ್ರೀಡಿಸುವನು. ಆದಿ ಶಕ್ತಿ, ಶಿವ, ಶಿವಶಕ್ತಿ ಇವೆಲ್ಲವೂ ಅವನವೇ ಹೆಸರುಗಳಿರುವವು. ಜ್ಞಾನ, ಅಜ್ಞಾನ, ವಿಪರೀತ ಜ್ಞಾನ, ವಿಜ್ಞಾನ, ಧ್ಯಾನ, ಅನುಸಂಧಾನ, ಆತ್ಮನಿವೇದನ ಈ ಎಲ್ಲ ಅನುಭವದ ಪ್ರಕಾರಗಳು ಅಂತರಾತ್ಮನ ಗುಣಗಳಿರುವವು. ಮೂಲ ಅರಿವಿನದೇ ಈ ಎಲ್ಲ ಪ್ರಸಾರವಿರುವದು. ಆಟವೂ ಇದರದೇ ಇರುವದು. ಮನುಷ್ಯನು ಈ ಆತ್ಮಾರಾಮನ ಉಪಾಸನೆಯನ್ನು ಮಾಡಬೇಕು. ಇದರಿಂದಲೇ ಮುಂದೆ ನಿರಂಜನದ ಪ್ರಾಪ್ತಿ ಆಗುವದು. "ನಾನು ಅವನನ್ನು ತಿಳಿಯುವೆನು." ಈ ಅನುಭವವನ್ನು ದಾಟಿ ತದಾಕಾರತನದಿಂದ ಪರಬ್ರಹ್ಮನನ್ನು ಗುರುತಿಸುವದಿರುವದು. ಆಗ ಅಲ್ಲಿ ಸಂದೇಹ ಮತ್ತು ಅನುಮಾನ ಇವುಗಳಿಗೆ ಸ್ಥಾನವಿರುವದಿಲ್ಲ

### ದಶಕ ೨೦. ಸಮಾಸ ೬. ಆತ್ಮಗುಣ ನಿರೂಪಣ (ನುಡಿ ೩೦)

ದೃಶ್ಯದಲ್ಲಿ ಎರಡು ಭೇದಗಳಿರುವವು. ಒಂದು ಅರಿವಿನಿಂದ ರಹಿತವಾದಂಥದು. ಮತ್ತು ಎರಡನೆಯದು ಅರಿವಿನಿಂದ ಕೂಡಿವಂಥದ್ದು. ಎರಡನೆಯ ಪ್ರಕಾರದ ದೃಶ್ಯ ಅಂದರೇನೇ ವಿಶ್ವದಲ್ಲಿಯ ಅನಂತ ಪ್ರಕಾರದ ಜೀವಂತ ಪ್ರಾಣಿಗಳಿಂದ ಕೂಡಿದ್ದಾಗಿರುವದು. ಈ ಜೀವಂತ ಪ್ರಾಣಿಗಳ ಎಂಭತ್ನಾಲ್ಕು ಲಕ್ಷ [೮೪ ಲಕ್ಷ] ಯೋನಿಯ ಲೆಕ್ಕವನ್ನು ಈಗ ಹೇಳುವೆನು : ಪೃಥ್ವಿಯನ್ನೆಲ್ಲ [ಭೂಮಿಯನ್ನೆಲ್ಲ] ತಿರುಗಿ ಕಾಲ್ನಡಿಗೆಯಿಂದ ಅಡ್ಡಾಡಿ ನೋಡಿದರೆ ಆಗ ನಮಗೆ ಅಲ್ಲಲ್ಲಿ ನೀರು ಇರುವದು ಕಂಡುಬರುವದು. ಕೆಲವೊಂದು ಕಡೆಗೆ ಎಷ್ಟು ನೀರು ಇರುವದಿಲ್ಲವೆಂಬುದೂ ಕಂಡುಬರುವದು. ಮತ್ತು ಜನ ರಹಿತವಾದ ಬರಡು ಬೈಲು ಪ್ರದೇಶವೂ [ಮಾಳಮುರಡಿಯು ಹಾಳು ಬೀಳು ಭೂಮಿ] ಕಂಡುಬರುವದು. (೧) ದೃಶ್ಯದ ವಿಸ್ತಾರವು ಹೀಗೆ ಇರುವದು : ದೃಶ್ಯದ ಪೈಕಿ ಕೆಲವೊಂದು ಭಾಗ ಅರಿವಿನಿಂದ [ತಿಳವಳಿಕೆಯಿಂದ] ಶೋಭಿಸುವದು. ಅದೇ ಕೆಲವು ಭಾಗವು ಅರಿವು ರಹಿತ ಅಂದರೆ ಜ್ಞಾನರಹಿತ [ತಿಳವಳಿಕೆ ಇಲ್ಲದ್ದು] ಇರುವದು. ಒಟ್ಟಿನಲ್ಲಿ ದೃಶ್ಯದ ಬಹಳಷ್ಟು ಭಾಗವು ಅರಿವು ರಹಿತವಾದದ್ದಿರುವದು. (೨) ಅರಿವಿನಿಂದ [ತಿಳುವಳಿಕೆಯಿಂದ] ಶೋಭಿಸುವಂಥ ದೃಶ್ಯದಲ್ಲಿ ನಾಲ್ಕು ಖಾಣಿ [ನಾಲ್ಕು ಪ್ರಕಾರದ ಉತ್ಪತ್ತಿ ಸ್ಥಾನ] ನಾಲ್ಕುವಾಣಿ [ಶಬ್ದ, ಸ್ವರ, ಧ್ವನಿಯ ೪ ಪ್ರಕಾರಗಳು] ಮತ್ತು ಎಂಭತ್ನಾಲ್ಕು [೮೪ ಲಕ್ಷ] ಜೀವ ಯೋನಿ ಇವೆಲ್ಲ ಇರುವವು. ಇವುಗಳ ಬಗ್ಗೆ ಶಾಸ್ತ್ರದಲ್ಲಿ ವ್ಯವಸ್ಥಿತವಾಗಿ ಎಲ್ಲವನ್ನೂ ಹೇಳಿರುವರು. (೩) ಶ್ಲೋಕ : ಜಲಜಾನವಲಕ್ಷಾಶ್ಚ ದಶಲಕ್ಷಾಶ್ಚ ಪಕ್ಷಿಣಃ । ಕ್ರಿಮಯೋ ರುದ್ರಲಕ್ಷಾಶ್ಚ ವಿಂಶಲಕ್ಷಾ ಗವಾದಯಃ ॥ ಸ್ಥಾವರಾಸ್ತ್ರಿಂಶಲಕ್ಷಾಶ್ಚ ಚತುರ್ಲಕ್ಷಾಶ್ಚ ಮಾನವಾಃ । ಪಾಪ ಪುಣ್ಯಂ ಸಮಂ ಕೃತ್ವಾ ನರ ಯೋನಿಷು ಜಾಯತೇ ॥೧॥ ಶ್ಲೋಕಾರ್ಥ: ನೀರಿನಲ್ಲಿ ಜನ್ಮ ಹೊಂದುವವು ಒಂಭತ್ತುಲಕ್ಷ ಪಕ್ಷಿಗಳು ಹತ್ತು ಲಕ್ಷ. ಕ್ರಿಮಿಕೀಟಕಗಳು ಹನ್ನೊಂದು ಲಕ್ಷ. ಆಕಳು ಮತ್ತುಗಳಂಥ ಪಶುಗಳು ಇಪ್ಪತ್ತು ಲಕ್ಷ, ವೃಕ್ಷಾದಿ ಸ್ಥಾವರ [ಅಂದರೆ ತಾನು ಹುಟ್ಟಿದ ಸ್ಥಳದಿಂದ ಅಲ್ಲಾಡದ ಅಥವಾ ಅಡ್ಡಾಡ ದಂಥವು] ಗಳು ಮೂವತ್ತು ಲಕ್ಷ, ಮನುಷ್ಯರು ನಾಲ್ಕು ಲಕ್ಷ. ಪಾಪ-ಪುಣ್ಯಗಳು ಸಮ ಪ್ರಮಾಣದಲ್ಲಿ ಇದ್ದರೆ ಆಗ ನರದೇಹದ ಪ್ರಾಪ್ತಿ ಆಗುವದು: ಮನುಷ್ಯರು ನಾಲ್ಕು ಲಕ್ಷ, ಪಶುಗಳು ಇಪ್ಪತ್ತು ಲಕ್ಷ. ಕ್ರಿಮಿಗಳು ಹನ್ನೊಂದು ಲಕ್ಷ ಹೀಗೆ ಶಾಸ್ತ್ರದಲ್ಲಿ ಹೇಳಲಾಗಿದೆ, (೪)

ದಾಹಾ ಲಕ್ಷ ತೇ ಖೇಚರ । ನವ ಲಕ್ಷ ಜಳಚರ ।
ತೀಸ ಲಕ್ಷ ಸ್ಥಾವರ । ಬೋಲಿಲೇ ಶಾಸ್ತ್ರೀ ॥೫॥
ಏಸೀ ಚೌರ್‍ಯಾಸೀ ಲಕ್ಷ ಯೋನೀ । ಜಿತುಕಾ ತಿತುಕಾ ಜಾಣತಾ ಪ್ರಾಣೀ ।
ಅನಂತ ದೇಹ್ಯಾಂಚೀ ಮಾಂಡಣೀ । ಮರ್ಯಾದಾ ಕೈಚೀ ॥೬॥
ಅನಂತ ಪ್ರಾಣೀ ಹೋತ ಜಾತೀ । ತ್ಯಾಚೇ ಅಧಿಷ್ಠಾನ ಜಗತೀ ।
ಜಗತೀವೇಗಳೀ ಸ್ಥಿತೀ । ತ್ಯಾಸ ಕೈಚೀ ॥೭॥
ಪುಢೇ ಪಾಹಾತಾ ಪಂಚಭೂತೇ । ಪಾವಲೀ ಪಷ್ಟದಶೇತೇ ।
ಕೋಣೀ ವಿದ್ಯಮಾನ ಕೋಣೀ ತೇ। ಊಗೀ ಚ ಅಸತೀ ॥೮॥
ಅಂತರಾತ್ಮ್ಯಾಚೀ ವೊಳಖಣ । ತೇ ಚಿ ಜೇಥೇ ಚಪಳಪಣ ।
ಜಾಣೇವೇಚೇ ಅಧಿಷ್ಠಾನ । ಸಾವಧ ಏಕಾ ॥೯॥
ಸುಖದುಃಖ ಜಾಣತಾ ಜೀವ । ತೈಸಾ ಚಿ ಜಾಣಾವಾ ಸದಾಶಿವ।
ಅಂತಃಕರ್ಣಪಂಚಕ ಅಪೂರ್ವ । ಅಂಶ ಆತ್ಮಯಾಚಾ ॥೧೦॥
ಸ್ಥಳೀ ಆಕಾಶಾಚೆ ಗುಣ । ಅಂಶ ಆತ್ಮಯಾಚೆ ಜಾಣ ।
ಸತ್ತ್ವ ರಜ ತಮೋಗುಣ । ಗುಣ ಆತ್ಮಯಾಚೇ ॥೧೧॥
ನಾನಾ ಚಾಳಣಾ ನಾನಾ ಧೃತೀ । ನವವಿಧಾ ಭಕ್ತಿ ಚತುರ್ವಿಧಾ ಮುಕ್ತೀ ।
ಅಲಿಪ್ತಪಣ ಸಹಜಸ್ಥಿತೀ । ಗುಣ ಆತ್ಮಯಾಚೇ ॥೧೨॥
ದೃಷ್ಟಾ ಸಾಕ್ಷೀ ಜ್ಞಾನಘನ । ಸತ್ತಾ ಚೈತನ್ಯ ಪುರಾತನ ।
ಶ್ರವಣ ಮನನ ವಿವರಣ । ಗುಣ ಆತ್ಮಯಾಚೇ ॥೧೩॥
ದೃಶ್ಯ ದೃಷ್ಟಾ ದರ್ಶನ । ಧ್ಯೇಯು ಧ್ಯಾತಾ ಧ್ಯಾನ ।
ಜ್ಞೇಯು ಜ್ಞಾತಾ ಜ್ಞಾನ । ಗುಣ ಆತ್ಮಯಾಚೇ ॥೧೪॥
ವೇದಶಾಸ್ತ್ರ ಪುರಾಣ ಅರ್ಥ । ಗುಪ್ತ ಚಾಲಿಲಾ ಪರಮಾರ್ಥ ।
ಸರ್ವಜ್ಞಪಣೇ ಸಮರ್ಥ । ಗುಣ ಆತ್ಮಯಾಚೇ ॥೧೫॥
ಬದ್ಧ ಮುಮುಕ್ಷ ಸಾಧಕ ಸಿದ್ಧ । ವಿಚಾರ ಪಾಹಾಣೇ ಶುದ್ಧ ।
ಬೋಧ ಆಣೀ ಪ್ರಬೋಧ । ಗುಣ ಆತ್ಮಯಾಚೇ ॥೧೬॥
ಜಾಗೃತಿ ಸ್ವಪ್ನ ಸುಷುಪ್ತಿ ತುರ್ಯಾ । ಪ್ರಕೃತಿ ಪುರುಷ ಮೂಳಮಾಯಾ ।
ಪಿಂಡ ಬ್ರಹ್ಮಾಂಡ ಅಷ್ಟಕಾಯಾ । ಗುಣ ಆತ್ಮಯಾಚೇ ॥೧೭॥
ಪರಮಾತ್ಮಾ ಆಣಿ ಪರಮೇಶ್ವರೀ । ಜಗದಾತ್ಮಾ ಆಣೀ ಜಗದೇಶ್ವರೀ ।
ಮಹೇಶ ಆಣೀ ಮಾಹೇಶ್ವರೀ । ಗುಣ ಆತ್ಮಯಾಚೇ ॥೧೮॥

ಹತ್ತು ಲಕ್ಷ ಪಕ್ಷಿಗಳು, ಒಂಭತ್ತು ಲಕ್ಷ ಜಲಚರಗಳು, ಮೂವತ್ತು ಲಕ್ಷ ಸ್ಥಾವರಗಳು [ಗಿಡ ಮರ ಮೊದಲಾದವುಗಳು], ಹೀಗೆ ಶಾಸ್ತ್ರದಲ್ಲಿ ಹೇಳಲಾಗಿದೆ. (೫) ಅಂತೂ ಒಟ್ಟು ಎಂಭತ್ತಾಲ್ಕುಲಕ್ಷ ಯೋನಿಯು ಲೆಕ್ಕವು ಹೀಗಿರುವದು. ಇವುಗಳಲ್ಲಿ ಪ್ರಾಣಿಗಳು ಜೀವಂತಿದ್ದಂಥವು ಎಷ್ಟು ಇರುವವೋ ಅವುಗಳಿಗೆಲ್ಲ ಅರಿವು [ತಿಳುವಳಿಕೆ] ಇರುವದು–ಜಾಣತನವಿರುವದು. ಪ್ರಾಣಿಗಳ ದೇಹದ ರಚನೆಯು ಅನಂತ ಪ್ರಕಾರದ್ದಿರುವದು. ಈ ವಿವಿಧ ಪ್ರಕಾರ ಗಳಿಗೆ ಅಳತೆ ಇಲ್ಲ. (೬) ಅಕ್ಷರಶಃ [ಖರೋಖರ] ಅನಂತ ಪ್ರಾಣಿಗಳು ಜನ್ಮಹೊಂದುವವು. ಮತ್ತು ಮರಣವನ್ನೂ ಹೊಂದುವವು. ಇದಕ್ಕೆಲ್ಲ ಪೃಥ್ವಿಯೇ ಆಧಾರವಾಗಿರುವದು. ಪೃಥ್ವಿಯ ಆಸರೆ ಇಲ್ಲದಿದ್ದರೆ ಇವುಗಳಿಗೆ ಜೀವ ತಳೆಯಲು ಮತ್ತು ಬಾಳಿಬದುಕಲು ಶಕ್ಯವಾಗುತ್ತಿದ್ದಿಲ್ಲ. (೭) ಇನ್ನು ಮುಂದೆ ವಿಚಾರಮಾಡಿ ನೋಡಿದ್ದಾದರೆ ವ್ಯಕ್ತದಶೆಗೆ ಬಂದವುಗಳು ಅಂದರೆ ಬಹಿರಂಗವಾಗಿ ತೋರಿಬರುವ ಪಂಚಭೂತಗಳು. ಈ ಪಂಚಭೂತಗಳ ಪೈಕಿ ಕೆಲವು ಇಂದ್ರಿಯ ಗೋಚರವಿರುವವು ಕೆಲವು, ಇಂದ್ರಿಯಗಳಿಗೆ ಪ್ರತ್ಯಕ್ಷ ಕಂಡುಬರುವದಿಲ್ಲ. ಗುಪ್ತವಿರುವವು. (೮) ಎಲ್ಲಿ ಚಂಚಲತನ ವಿರುವದೋ ಅಲ್ಲಿ ಅಂತರಾತ್ಮಾ ಇರುವನೆಂದು ತಿಳಿಯಬೇಕು ಈಗ ಅರಿವಿನ ಇರುವಿಕೆಯು ಎಲ್ಲೆಲ್ಲಿ ಎನ್ನುವದನ್ನು ಹೇಳುವೆವು. ಸಾವಧತನದಿಂದ ಕೇಳಿರಿ. (೯) ಅರಿವೇ ಅಂತರಾತ್ಮನ ಸ್ವರೂಪವಿರುವದರಿಂದ ಎಲ್ಲಿ ಎಲ್ಲಿ ಅರಿವು ಇರುವದೋ ಅಲ್ಲಿ ಅಲ್ಲಿ ಅಂತರಾತ್ಮನು ಇರುವನು. ಆದರೆ ಅರಿವು ವ್ಯಕ್ತವಾಗುವಾಗ ಅನೇಕ ಪ್ರಕಾರದ ರೂಪ ತೆಗೆದುಕೊಳ್ಳುವದು. ಈಗ ಇದರ ಬಗ್ಗೆ ವರ್ಣನೆಯನ್ನು ಮಾಡುವರು : ಸುಖ ಮತ್ತು ದುಃಖದ ಅರಿವು ಜೀವಕ್ಕೆ ಇರುವದು. ಇದರಂತೆಯೇ ಇದು ಸದಾಶಿವನಿಗೆ ಅಂದರೆ ಜಗದೀಶ್ವರನಿಗೆ ಸಹ ಇರುವದು. ವಿಲಕ್ಷಣವೆನಿಸುವ, [ಅಪೂರ್ವವೆನಿಸುವ] ಅಂತಃಕರಣ ಪಂಚಕ ಅಂದರೆ ಅಂತಃಕರಣ, ಮನ, ಬುದ್ಧಿ ಚಿತ್ತ, ಮತ್ತು ಅಹಂಕಾರ. ಇವೆಲ್ಲ ಅಂತರಾತ್ಮನ ಅಂಶವಾಗಿರುವವು. (೧೦) ಸ್ಥೂಲದಲ್ಲಿ ಆಕಾಶದ ಗುಣ ಅಂದರೆ ಕಾಮ, ಕ್ರೋಧ, ಭಯ, ಶೋಕ, ಮೋಹ, ಅಜ್ಞಾನ, ಶೂನ್ಯತ್ವ ಇವೆಲ್ಲ ಆತ್ಮನ ಅಂಶವೆಂದು ತಿಳಿಯಬೇಕು. ಅದರಂತೆ ಸತ್ವ, ರಜ, ತಮ ಇವೂ ಸಹ ಆತ್ಮನ ಗುಣಗಳೇ ಇರುವವು. (೧೧) ಈ ಸಮಾಸದ ಕೊನೆಯವರೆಗೂ ಆತ್ಮನ ಅನೇಕ ಗುಣಗಳ ಬಗ್ಗೆ ಹೇಳಿರುವರು : ಅನೇಕ ಪ್ರಕಾರದ ವಿವೇಕಯುಕ್ತ ವಿಚಾರಗಳು ಧೈರ್ಯ, ಒಂಭತ್ತುಪ್ರಕಾರದ ಭಕ್ತಿಗಳು, ನಾಲ್ಕು ಪ್ರಕಾರದ ಮುಕ್ತಿಗಳು, ಅಲಿಪ್ತತನ, ಸಹಜ ಸ್ಥಿತಿ, (೧೨) ದ್ರಷ್ಟಾ, ಸಾಕ್ಷಿ, ಜ್ಞಾನ ಘನ, ಸತ್ತಾ, ಚೈತನ್ಯ, ಪುರಾತನ, ಶ್ರವಣ, ಮನನ, ವಿವರಣ [ಸ್ಪಷ್ಟೀಕರಣ, ನಿರೂಪಣ] (೧೩) ದೃಶ್ಯ, ದ್ರಷ್ಟಾ, ದರ್ಶನ, ಧ್ಯೇಯ [ಚಿಂತನೀಯಾಅಂತಿಮವಸ್ತುವೇಧ್ಯೇಯವು] ಧ್ಯಾತಾ ಅಂದರೆ ಧ್ಯಾನ ಮಾಡುವವ, ಧ್ಯಾನ [ಏಕಾಗ್ರಚಿಂತನ] ಜ್ಞೇಯ–ಜ್ಞಾತಾ–ಜ್ಞಾನ ತಿಳಿಯುವದಕ್ಕೆ ಯೋಗ್ಯವಾದದ್ದು, ತಿಳಿಯುವವನು, ಬ್ರಹ್ಮಜ್ಞಾನ–ಆತ್ಮಜ್ಞಾನ (೧೪) ವೇದ, ಶಾಸ್ತ್ರ, ಪುರಾಣಗಳು, ಇವುಗಳ ಅರ್ಥ, ಗುಪ್ತತನದಿಂದ ನಡೆದ [ನಡೆಯುವ] ಪರಮಾರ್ಥ, ಸರ್ವಜ್ಞ ತನದಿಂದ ಬಂದ [ಬರುವ] ಸಾಮರ್ಥ್ಯ (೧೫) ಬದ್ಧ, ಮುಮುಕ್ಷು [ಮೋಕ್ಷ ಬಯಸುವವ] ಸಾಧಕ, ಸಿದ್ಧ, ಶುದ್ಧ ವಿಚಾರಮಾಡುವದು, ಬೋಧ, ಪ್ರಬೋಧ, [ಉಪದೇಶ, ಯಥಾರ್ಥ ಜ್ಞಾನ] (೧೬) ಜಾಗ್ರತಿ, ಸ್ವಪ್ನ, ಸುಷುಪ್ತಿ ತುರ್ಯಾ, ಪ್ರಕೃತಿ–ಪುರುಷ, ಮೂಲಮಾಯಾ, ಪಿಂಡ, ಬ್ರಹ್ಮಾಂಡ, ಎಂಟು ದೇಹ [ಪಿಂಡದವು ನಾಲ್ಕು ಮತ್ತು ಬ್ರಹ್ಮಾಂಡದವು ನಾಲ್ಕು] (೧೭) ಪರಮಾತ್ಮಾ ವ ಪರಮೇಶ್ವರೀ, ಜಗದಾತ್ಮಾ, ವ ಜಗದೀಶ್ವರೀ, ಮಹೇಶ, ವ ಮಾಹೇಶ್ವರೀ (೧೮)

ಸೂಕ್ಷ್ಮ ಜಿತುಕೇ ನಾಮರೂಪ । ತಿತುಕೇ ಆತ್ಮಯಾಚೇ ಸ್ವರೂಪ ।
ಸಂಕೇತ ನಾಮಾಭಿಧಾನೇ ಅಮೂಪ । ಸೀಮಾ ನಾಹೀ ॥೧೯॥
ಆದಿಶಕ್ತೀ ಶಿವಶಕ್ತೀ । ಮುಖ್ಯ ಮೂಳಮಾಯಾ ಸರ್ವಶಕ್ತೀ ।
ನಾನಾ ಜೀನಸ ಉತ್ಪತ್ತೀ ಸ್ಥಿತೀ। ತಿತುಕೇ ಗುಣ ಆತ್ಮಯಾಚೆ ॥೨೦॥
ಪೂರ್ವಪಕ್ಷ ಆಣೀ ಸಿದ್ಧಾಂತ । ಗಾಣೇ ವಾಜವಣೇ ಸಂಗೀತ ।
ನಾನಾ ವಿದ್ಯಾ ಅದ್ಭುತ । ಗುಣ ಆತ್ಮಯಾಚೇ ॥೨೧॥
ಜ್ಞಾನ ಅಜ್ಞಾನ ವಿಪರೀತಜ್ಞಾನ । ಅಸದ್ವೃತಿ ಸದ್ವೃತಿ ಜಾಣ ।
ಜ್ಞಪ್ತಿಮಾತ್ರ ಅಲಿಪ್ತಪಣ । ಗುಣ ಆತ್ಮಯಾಚೇ ॥೨೨॥
ಪಿಂಡ ಬ್ರಹ್ಮಾಂಡ ತತ್ತ್ವಝಾಡಾ । ನಾನಾ ತತ್ತ್ವಾಂಚಾ ನಿವಾಡಾ ।
ವಿಚಾರ ಪಾಹಾಣೇ ಉಘಡಾ । ಗುಣ ಆತ್ಮಯಾಚೇ ॥೨೩॥
ನಾನಾ ಧ್ಯಾನೇ ಅನುಸಂಧಾನೇ । ನಾನಾ ಸ್ಥಿತಿ ನಾನಾ ಜ್ಞಾನೇ ।
ಅನನ್ಯ ಆತ್ಮನಿವೇದನೇ । ಗುಣ ಆತ್ಮಯಾಚೇ ॥೨೪॥
ತೇತಿಸ ಕೋಟೀ ಸುರವರ । ಅಠ್ಯಾಸೀ ಸಹಸ್ರ ಋಷೇಶ್ವರ ।
ಭೂತ ಖೇಚರ ಅಪಾರ । ಗುಣ ಆತ್ಮಯಾಚೇ ॥೨೫॥
ಭೂತಾವಳೀ ಔಟ ಕೋಟೀ । ಚಾಮುಂಡಾ ಛಪನ್ನ ಕೋಟೀ ।
ಕಾತ್ಯಾಯಣೀ ನವ ಕೋಟೀ । ಗುಣ ಆತ್ಮಯಾಚೇ ॥೨೬॥
ಚಂದ್ರ ಸೂರ್ಯ ತಾರಾಮಂಡಳೇ । ನಾನಾ ನಕ್ಷತ್ರೇ ಗ್ರಹಮಂಡಳೇ ।
ಶೇಷ ಕೂರ್ಮ ಮೇಘಮಂಡಳೆ । ಗುಣ ಆತ್ಮಯಾಚೇ ॥೨೭॥
ದೇವ ದಾನವ ಮಾನವ । ನಾನಾ ಪ್ರಕಾರೀಚೆ ಜೀವ ।
ಪಾಹಾತಾ ಸಕಳ ಭಾವಾಭಾವ । ಗುಣ ಆತ್ಮಯಾಚೇ ॥೨೮॥
ಆತ್ಮಯಾಚೆ ನಾನಾ ಗುಣ । ಬ್ರಹ್ಮ ನಿರ್ವಿಕಾರ ನಿರ್ಗುಣ ।
ಜಾಣಣೇ ಏಕದೇಸೀ ಪೂರ್ಣ । ಗುಣ ಆತ್ಮಯಾಚೇ ॥೨೯॥
ಆತ್ಮಾರಾಮ ಉಪಾಸನಾ । ತೇಣೇ ಪಾವಲೇ ನಿರಂಜನಾ ।
ನಿಸಂದೇಹೆ ಅನುಮಾನಾ । ಠಾವ ಚಿ ನಾಹೀ ॥೩೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೆ
'ಆತ್ಮಾಗುಣ ನಿರೂಪಣ' ನಾಮ ಸಮಾಸ ಷಷ್ಠಮ ॥

ಈ ಯಾವತ್ತೂ ಪ್ರಕಾರಗಳು ಆತ್ಮನ ಗುಣಗಳಿರುವವು. ಇವೆಲ್ಲವೂ ಅರಿವಿನಲ್ಲಿ ವ್ಯಕ್ತವಾಗುವ ಪ್ರಕಾರಗಳಿರುವವು.ಅಂತೂ ಒಟ್ಟಿನಲ್ಲಿ ಸೂಕ್ಷ್ಮ ನಾಮರೂಪ ಪದವು ಯಾವ ಯಾವವು. ಎಷ್ಟೆಷ್ಟು ಇರುವವೋ ಅವೆಲ್ಲವೂ ಅಂತರಾತ್ಮನ ಸ್ವರೂಪದವಿರುವವು. ಇಂಥ ಸೂಕ್ಷ್ಮ ನಾಮ ರೂಪಗಳ ಸಂಕೇತದ ಹೆಸರುಗಳೂ ಅಗದೀ ಬಹಳಷ್ಟು ಇರುವವು. [ಸಂಕೇತ = ಗುರ್ತು, ಹೆಸರು, ಸಂಜ್ಞೆ] ಇವುಗಳಿಗೆ ಅಳತೆಯಿಲ್ಲ. ಸೂಕ್ಷ್ಮದ ಪ್ರಾಂತದಲ್ಲಿ ಅಂತರಾತ್ಮನು ಅರಿವಿನ ಅನಂತ ರೂಪಗಳನ್ನು ತೆಗೆದುಕೊಳ್ಳುವನೆಂಬುದಕ್ಕೆ ಅಳತೆಯೇ ಇಲ್ಲ. (೧೯) ಇಂಥ ಆತ್ಮನ ಇನ್ನೂ ಕೆಲವು ಗುಣಗಳನ್ನು ಹೇಳುವರು : ಆದಿಶಕ್ತಿ, ಶಿವಶಕ್ತಿ, ಮುಖ್ಯ ಮೂಲಮಾಯಾ, ಸರ್ವಪ್ರಕಾರದ ಶಕ್ತಿ, ನಾನಾ ಪದಾರ್ಥಗಳ ಉತ್ಪತ್ತಿ, ಮತ್ತು ಸ್ಥಿತಿ, [ಅನೇಕ ಪ್ರಕಾರದ ಪದಾರ್ಥಗಳು ಉತ್ಪನ್ನವಾಗುವದು. ಮತ್ತು ಸ್ಥಿತಿ ಅಂದರೆ ಇರುವದು ] (೨೦) ಪೂರ್ವ ಪಕ್ಷ ಮತ್ತು ಸಿದ್ಧಾಂತ, ಗಾಯನ, [ಹಾಡುವದು], ಬಾರಿಸುವದು ಅನೇಕ ಪ್ರಕಾರದ ಅದ್ಭುತ ವಿದ್ಯೆಗಳು (೨೧) ಜ್ಞಾನ, ಅಜ್ಞಾನ, ವಿಪರೀತಜ್ಞಾನ, ಅಸದ್‌ವೃತ್ತಿ, [ಅಸತ್ಯ, ವಿಷಯಾಕಾರಕ ವೃತ್ತಿ] ಸದ್‌ವೃತ್ತಿ, [ಸತ್ಯ, ಆತ್ಮಾಕಾರ ವೃತ್ತಿ] ಜ್ಞಾನಮಾತ್ರ [ಕೇವಲ ಜ್ಞಾನ] ಅಲಿಪ್ತತನ. (೨೨) ಪಿಂಡ ಬ್ರಹ್ಮಾಂಡದಲ್ಲಿಯ ತತ್ವಗಳ ಶೋಧ ಅನೇಕ ತತ್ವಗಳ ನಿರ್ಣಯ ಸ್ಪಷ್ಟವಾಗಿ ವಿವರವಾಗಿ ವಿಚಾರಮಾಡುವದು. (೨೩) ಅನೇಕ ಪ್ರಕಾರದ ಧ್ಯಾನ ಮಾಡುವದು. ಅನುಸಂಧಾನ, [ಲಕ್ಷ್ಯ, ಧ್ಯಾನ, ಅವಧಾನ, ಸಂಗತಿ.] ಅನೇಕ ಪ್ರಕಾರದ ಸ್ಥಿತಿ, ಅನೇಕ ಪ್ರಕಾರದ ಜ್ಞಾನ, ಅನನ್ಯ [ಏಕನಿಷ್ಠ, ಏಕರೂಪ] ವಾದ ಆತ್ಮನಿವೇದನ. (೨೪) ಮೂವತ್ತಮೂರು [೩೩] ಕೋಟಿ ದೇವತೆಗಳು, ಎಂಭತ್ತೆಂಟು [೮೮] ಸಾವಿರ ಋಷೀಶ್ವರರು. ಅಸಂಖ್ಯ ಅಗಣಿತ ಭೂತ, ಪ್ರೇತ, ಪಿಶಾಚಾದಿಗಳು. (೨೫) ಮೂರುವರೆ(೩॥) ಕೋಟಿ ಭೂತಗಣಗಳು. ಐವತ್ತಾರು [೫೬] ಕೋಟಿ ಚಾಮುಂಡಾಗಣ, ಒಂಭತ್ತು [೯] ಕೋಟಿ ಕಾತ್ಯಾಯಿನಿ ಗಣಗಳು [ಚಾಮುಂಡಾ ಮತ್ತು ಕಾತ್ಯಾಯಿನಿ ಇವರು ಕ್ಷುದ್ರ ದೇವತೆಯರು.] (೨೬) ಚಂದ್ರ, ಸೂರ್ಯ, ತಾರಾ ಮಂಡಲ, ಅನೇಕ ನಕ್ಷತ್ರಗಳು, ಗ್ರಹ ಮಂಡಲಗಳು, ಶೇಷ, ಕೂರ್ಮ, ಮೇಘ ಮಂಡಲಗಳು. (೨೭) ದೇವ, ದಾನವ, ಮಾನವ, ಅನೇಕ ಪ್ರಕಾರದ ಜೀವಗಳು ಎಲ್ಲ ಪ್ರಕಾರದ ಭಾವ ಮತ್ತು ಅಭಾವ ಇರುವದು. ಮತ್ತು ಇರದಿರುವದು. [ಚೈತನ್ಯ ಮತ್ತು ಜಡ, ಖರೆ-ಖೋಟಿ, ಅಸ್ತಿತ್ವ-ನಾಸ್ತಿತ್ವ]ಅರ್ಥಾತ್ ಇದ್ದದ್ದು ಮತ್ತು ಇಲ್ಲದ್ದು,ಇವೆಲ್ಲವೂ ಆತ್ಮನವೇ ಗುಣಗಳಾಗಿರುವವು.(೨೮)ಈ ಪ್ರಕಾರದ ಅಂತರಾತ್ಮನವು ಅನೇಕ ಗುಣಗಳಿರುವವು. ಪರಬ್ರಹ್ಮ ಮಾತ್ರ ನಿರ್ಗುಣ ಮತ್ತು ನಿರ್ವಿಕಾರವಿರುವನು, ತಿಳಿಯುವದು. [ಜ್ಞಾನ] ಅಥವಾ ತಿಳಿಯುವ ಶಕ್ತಿ [ಜ್ಞಾನ ಕಲಾ] ಇರುವದೇ ಖರೇ ಅಂತರಾತ್ಮನ ಗುಣವಿರುವದು. ಅಂದರೆ ಈ ತಿಳಿಯುವ ಜ್ಞಾನ ಶಕ್ತಿ ಪೂರ್ಣವಿರಲಿ ಅಥವಾ ಅಪೂರ್ಣವಿರಲಿ ಅಥವಾ ಏಕದೇಶಿಯಾಗಿರಲಿ ಎಲ್ಲವೂ ಅಂತರಾತ್ಮನಿಗೆ ಸಂಬಂಧಿಸಿರುವದು. [ಬ್ರಹ್ಮಮಾತ್ರ ನಿರ್ಗುಣ ನಿರಾಕಾರವಿರುವನು.] (೨೯) ಈ ಪ್ರಕಾರದ ಅನೇಕ ಗುಣಗಳಿಂದ ಅಂತರಾತ್ಮನು ದೃಶ್ಯದಲ್ಲಿ ತುಂಬಿಕೊಂಡಿರುವನು. ಸಗುಣನಾಗಿರುವ ಇಂಥವನನ್ನು ನೋಡುವದೇ ಇವನ [ಉಪಾಸಕನ] ಉಪಾಸನೆಯಾಗಿರುವದು. ಇಂಥ ಉಪಾಸನಾ ಯಾರು ಮಾಡುವರೋ ಅವರಿಗೆ ನಿರಂಜನ ಬ್ರಹ್ಮದ ಪ್ರಾಪ್ತಿಯಾಗುವದು. ಅರ್ಥಾತ್ ಈ ಪುಣ್ಯಾತ್ಮರಾದವರೆ ಉಪಾಸಕರು ನಿಃಸಂದೇಹ ಆಗುವರು. ನಿಃಸಂದೇಹ ಅವಸ್ಥೆಯಲ್ಲಿ ಕಲ್ಪನೆಗೆ ಎಷ್ಟೂ ಸ್ಥಾನ ಇರುವದಿಲ್ಲ. (೩೦)

ಶ್ರೀ ದಾಸಬೋಧದ ಇಪ್ಪತ್ತನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ಆತ್ಮಗುಣ ನಿರೂಪಣ"ವೆಂಬ ಹೆಸರಿನ ಆರನೇ ಸಮಾಸವು ಮುಗಿದುದು.

## ದಶಕ ೨೦. ಸಮಾಸ ೭. ಆತ್ಮನಿರೂಪಣ (ನುಡಿ ೪೧)

ಮಾನವೀ ಜೀವನದಲ್ಲಿ ಅನೇಕ ಪ್ರಕಾರದ ಪ್ರಶ್ನೆಗಳು ನಿರ್ಮಾಣವಾಗುವವು. ಇಂಥ ಎಲ್ಲ ಪ್ರಶ್ನೆಗಳ ತೊಡಕನ್ನು ಯಶಸ್ವಿಯಾಗಿ, ಸರಳವಾಗಿ, ಸರಿಯಾಗಿ, ಬಿಡಿಸುವದಕ್ಕಾಗಿ ಸಾರಾಸಾರ ವಿಚಾರ ವಿವೇಕಗಳಿಗೆ ಆವ್ಹಾಹನ ಮಾಡುವಂಥ ಪುಣ್ಯ ಪುರುಷರಲ್ಲಿ ಶ್ರೀ ಸಮರ್ಥರಂತಹ ಶ್ರೇಷ್ಠ, ಪ್ರಜ್ಞಾವಂತ ಸತ್ಪುರುಷರು ಇರುವದು. "ನ ಭೂತೋ ನ ಭವಿಷ್ಯತಿ". ಇವರು ಸ್ಪಷ್ಟವಾಗಿ ಮತ್ತು ಮುಂಚ್ಯಾಮರೆ ಇಲ್ಲದ ಖುಲ್ಲಾ ರೀತಿಯಲ್ಲಿ ಹೇಳು-

ದೇನಂದರೆ ಜೀವನದ ಸಂಪೂರ್ಣ ಅರ್ಥ ತಿಳಿದು ಆತ್ಮದರ್ಶನವಾಗಲಿಕ್ಕೆ ಹೊರಗಿನ ಪರಿಸ್ಥಿತಿಯಲ್ಲಿ ಏನೂ ಬದಲಾವಣೆ ಮಾಡಿಕೊಳ್ಳುವದರ ಅವಶ್ಯಕತೆ ಇಲ್ಲ. ಹೆಚ್ಚು ಕಡಿಮೆ ಅಥವಾ ಬದಲಾವಣೆ ಮಾಡುವದು ಅಥವಾ ಮಾಡಿಕೊಳ್ಳುವದು ಮನುಷ್ಯನ ಅಂತಃಕರಣ ಪಂಚಕ [ಅಂತಃಕರಣ, ಮನ, ಬುದ್ಧಿ, ಚಿತ್ತ ಮತ್ತು ಅಹಂಕಾರ] ದಲ್ಲಿ ಮಾತ್ರ ಇರುವದು. ಆದರೆ ಕೇವಲ ಯೋಗ್ಯ ವಿಚಾರಗಳ ಸಾಮರ್ಥ್ಯದಿಂದ ಮನುಷ್ಯನು ಈ ಬದಲಾವಣೆ ಯನ್ನು ತರಲಿಕ್ಕೆ ಶಕ್ಯವಿರುವದು. ವಿಶ್ವದಲ್ಲಿ ಅರಿವಿನ ರೂಪದ ಅಂತರಾತ್ಮನಿಂದಲೇ ಎಲ್ಲಾ ಆಟ ನಡೆದಿರುವದು. ಇದರ ಅನುಭವವು ಬರಬೇಕಾದರೆ ಸಾಧಕನು ಪಿಂಡದಲ್ಲಿಯ ತತ್ವಗಳ ಶೋಧಮಾಡಿ ತಿಳಿಯಬೇಕು. ಈ ಶೋಧ ಮಾಡಿದಾಗ ಕಂಡುಬರುವದೇನಂದರೆ ಪಿಂಡದಲ್ಲಿ ಜಡ, ಚಂಚಲ, ಮತ್ತು ನಿಶ್ಚಲ [ಚಲನ ರಹಿತ, ಸ್ಥಿರ] ಹೀಗೆ ಮೂರು ತತ್ವಗಳಿರುವವು. ದೇಹವು ಜಡವಿರುವದು. ಆದರೆ ಅರಿವಿನ ರೂಪದ ಅಂತರಾತ್ಮಾ ಚಂಚಲವಿರುವನು. ಮತ್ತು ಶುದ್ಧ ಪರಬ್ರಹ್ಮವು ನಿಶ್ಚಲವಿರುವದು. ಜಡವು ಬೀಳುತ್ತದೆ. ಚಂಚಲವು ಹೊರಟು ಹೋಗುತ್ತದೆ. ಮತ್ತು ನಿಶ್ಚಲವು ಸರ್ವತ್ರವೂ [ಎಲ್ಲ ಸ್ಥಳದಲ್ಲಿಯೂ] ಹೇಗಿರುವದೋ ಹಾಗೆಯೇ ಸ್ಥಿರವಾಗಿ ಉಳಿಯುತ್ತದೆ. ಯಾವ ವಿಚಾರಗಳು ಪಿಂಡದ ಶೋಧ ಮಾಡುವಾಗ ಉಪಯೋಗ ಬಿದ್ದವೋ ಅವೇ ವಿಚಾರಗಳು ಬ್ರಹ್ಮಾಂಡದ ಶೋಧ ಮಾಡುವಾಗಲೂ ಕೂಡಾ ಸಹಾಯ ಮಾಡುವವು. ಈ ವಿಶ್ವ ರಚನೆಯ ಮೋಜು ಹೇಗಿರುವದೆಂದರೆ ಎಲ್ಲಿಯವರೆಗೆ ಇದು ತಿಳಿಯುವದಿಲ್ಲವೋ ಅಲ್ಲಿಯವರೆಗೆ ವಿಶ್ವ ಅಂದರೆ ಒಂದು ದೊಡ್ಡ ರಹಸ್ಯ ಅನಿಸುವದು—ಗೂಢ ಪ್ರಶ್ನೆ ಅನಿಸುವದು. ಆದರೆ ವಿಚಾರದಿಂದ ವಿವೇಕದಿಂದ ಇದರ ವಿವರಣ ಮಾಡುತ್ತ ಹೋಗಬೇಕು. ಹೀಗೆ ಮಾಡುತ್ತ ಹೋದರೆ ಕೊನೆಗೆ ಈ ವಿಶ್ವವು ಅತ್ಯಂತ ಸರಳ ಮತ್ತು ಸ್ಪಷ್ಟ [ಖುಲ್ಲಾ] ಇರುವದೆಂದು ಅನಿಸುವದು. ಆದ್ದರಿಂದ ವಿವೇಕಿ ಪುರುಷನು ಮೂಲದಿಂದ ಕೊನೆಯವರೆಗೆ ವಿವರಣೆ ಮಾಡುತ್ತ ಹೋಗಬೇಕು. ಹೀಗೆ ಮಾಡುವದರಿಂದ ಕೊನೆಗೆ ಮಾಯಾ ಜಾಲವು ಉಳಿಯುವದಿಲ್ಲ. ಸಾಧಕನಿಗೆ ಅನುಭವ ಬರುವದು. ಮತ್ತು ಈ ಅನುಭವದಿಂದ ಸಾಧಕನ ನಿಶ್ಚಯವು ಅತ್ಯಂತ [ಅಗದೀ] ಸ್ಥಿರಗೊಳ್ಳುವದು. ನಾವು ವಿವೇಕದ ಮಾರ್ಗದಿಂದ ಹೋಗುವಾಗ ಪ್ರತ್ಯಕ್ಷ ಅನುಭವ ಪಡೆದ ಸಂತರನ್ನು ಶೋಧಿಸಬೇಕು. ಅವರ ಸಂಗಡ ಜಡ, ಚಂಚಲ, ಮತ್ತು ನಿಶ್ಚಲ ಇದರ ಬಗ್ಗೆ ಸಂಖ ಸಂವಾದ ಮಾಡಬೇಕು. ಆತ್ಮಜ್ಞಾನದಿಂದ ಅನುಭವಕ್ಕೆ ಬರುವಂಥ ಸಮಾಧಾನವು ಶಬ್ದದ ಆಚೆಗೆ ಇರುವದು. ಅರ್ಥಾತ್ ಇದರ ಬಗ್ಗೆ ಮಾತಾಡಿದರೆ ಅದೇನೂ ಇಲ್ಲದಾಗಿ ಬಿಡುವದಿಲ್ಲ. ಅಥವಾ ಹೋಗುವದಿಲ್ಲ. ಸಾಧಕನು ವಿಚಾರ ಮಾಡಿಮಾಡಿ ಸಾರಾಸಾರ ಹುಡುಕಿ ಗುರುತಿಸಬೇಕು, ತಿಳಿಯಬೇಕು. ಇದರಲ್ಲಿ ಯಾವುದು ಕೃತ್ರಿಮ ಇರು ವದೋ ಅದರ ತ್ಯಾಗ ಮಾಡಬೇಕು. ಆದರೆ ಯಾವುದು ಶುದ್ಧ ಮತ್ತು ಶಾಶ್ವತ ಇರುವದೋ ಅದನ್ನು ಅಗತ್ಯ ವಾಗಿ ಸ್ವೀಕಾರ ಮಾಡಬೇಕು.

**ದಶಕ. ವಿಂಶತಿ : ಸಮಾಸ. ಸಪ್ತಮ : ಆತ್ಮಾನಿರೂಪಣ (ನುಡಿ ೩೧)**

॥ಶ್ರೀರಾಮ ಸಮರ್ಥ॥ ಅನುವಾರ್ಚ್ಯಾ ಸಮಾಧಾನ ಜಾಲೇ ।
ತೇ ಪಾಹಿಜೆ ಬೋಲಿಲೇ ।
ಬೋಲಿಲ್ಯಾ ಸಾರಿ ಸಮಾಧಾನ ಗೇಲೇ । ಹೇ ತೋ ಘಡೇನಾ ॥೧॥

ಕಾಂಹೀ ಸಾಂಡಾವೇ ಲಾಗತ ನಾಹೀ। ಕಾಂಹೀ ಮಾಂಡಾವೇ ಲಾಗತ ನಾಹೀ।
ಯೇಕ ವಿಚಾರ ಶೋಧೂನ ಪಾಹೀ । ಮ್ಹಣಿಜೆ ಕಳೇ ॥೨॥

ಮುಖ್ಯ ಕಾಸೀವಿಶ್ವೇಶ್ವರ । ಶ್ವೇತಬಂದ ರಾಮೇಶ್ವರ ।
ಮಲಕಾರ್ಜುನ ಭೀಮಾಶಂಕರ । ಗುಣ ಆತ್ಮಯಾಚೇ ॥೩॥

ಜೈಸೀ ಮುಖ್ಯ ಬಾರಾ ಲಿಂಗೇ । ಯಾವೇಗಳೀ ಅನಂತ ಲಿಂಗೇ ।
ಪ್ರಚಿತ ಜಾಣಿಜೇತ ಜಗೇ । ಗುಣ ಆತ್ಮಯಾಚೇ ॥೪॥

ಭೂಮಂಡಳೀ ಅನಂತ ಶಕ್ತಿ । ನಾನಾ ಸಾಕ್ಷಾತ್ಕಾರ ಚಮತ್ಕಾರ ಹೋತೀ ।
ನಾನಾ ದೇವಾಂಚ್ಯಾ ಸಾಮರ್ಥ್ಯಮೂರ್ತೀ । ಗುಣ ಆತ್ಮಯಾಚೇ ॥೫॥

ನಾನಾ ಸಿದ್ಧಾಂಚೀ ಸಾಮರ್ಥ್ಯೇ । ನಾನಾ ಮಂತ್ರಾಚೀ ಸಾಮರ್ಥ್ಯೇ ।
ನಾನಾ ಮೋಹರೇವಲ್ಲೀತ ಸಾಮರ್ಥ್ಯೇ । ಗುಣ ಆತ್ಮಯಾಚೇ ॥೬॥

ನಾನಾ ತೀರ್ಥಾಂಚೀ ಸಾಮರ್ಥ್ಯೇ । ನಾನಾ ಕ್ಷೇತ್ರಾಂಚೀ ಸಾಮರ್ಥ್ಯೇ ।
ನಾನಾ ಭೂಮಂಡಳೀ ಸಾಮರ್ಥ್ಯೇ । ಗುಣ ಆತ್ಮಯಾಚೇ ।೭॥

ಜಿತುಕೇ ಕಾಂಹೀ ಉತ್ತಮ ಗುಣ । ತಿತುಕೇ ಆತ್ಮಯಾಚೇ ಲಕ್ಷಣ ।
ಬರೇ ವಾಈಟ ತಿತುಕೇ ಜಾಣ । ಆತ್ಮ್ಯಾಚಕರಿತಾ ।೮॥

ಶ ದ್ಧ ಆತ್ಮಾ ಉತ್ತಮ ಗುಣೀ । ಸಬಳ ಆತ್ಮಾ ಅವಲಕ್ಷಣೀ ।
ಬರೀ ವಾಈಟ ಅವಘೀ ಕರಣೀ । ಆತ್ಮಯಾಚೀ ॥೯॥

ನಾನಾ ಸಾಭಿಮಾನ ಧರಣೇ । ನಾನಾ ಪ್ರತಿಸೃಷ್ಟೀ ಕರಣೇ ।
ನಾನಾ ಶ್ವಾಸಉಶ್ವಾಸಲಕ್ಷಣೇ । ಗುಣ ಆಸ್ಮಯಾಚೇ ನಿಃ ॥೧೦॥

## ದಶಕ ೨೦. ಸಮಾಸ ೭. ಆತ್ಮನಿರೂಪಣ (ನುಡಿ ೩೦)

ಹಿಂದಿನ ಸಮಾಸದಲ್ಲಿ ಅರಿವಿನ ರೂಪದ ಅಂತರಾತ್ಮನು ಅನೇಕ ಪ್ರಕಾರದ ಗುಣಗಳಿಂದ ವ್ಯಕ್ತವಾಗುವನು ಅನ್ನುವದನ್ನು ಹೇಳಿದೆವು. ಈ ಸಮಾಸದಲ್ಲಿಯು ಆರಂಭದ ಹತ್ತು ಓವಿ[ನುಡಿ]ಗಳಲ್ಲಿ ಮತ್ತೆ ಅದೇ ವಿಷಯವನ್ನು ಹೇಳುವರು. ಶ್ರೀ ಸಮರ್ಥರಿಗೆ ಏನನ್ನು ಹೆಚ್ಚು ಸ್ಪಷ್ಟಪಡಿಸಬೇಕಾಗಿದೆಯೆಂದರೆ ಈ ದೃಶ್ಯ ಜಗತ್ತಿನಲ್ಲಿ ಜಡ ಮತ್ತು ಚಂಚಲ ಅರಿವು. ಇವುಗಳ ಆಟ ಸತತವೂ ನಡೆಯುವದು. ಅರಿವು [ತಿಳವಳಿಕೆ, ಜ್ಞಾನ] ಅನಂತರೂಪಗಳನ್ನು ತಾಳಿ ಜಡದ ಮುಖಾಂತರ ಪ್ರಕಟವಾಗುವದು. ನಿಜವಾದ [ಖರೇ] ಸಾಮರ್ಥ್ಯವು ಅರಿವಿನದೇ ಇರುವದು. ಮತ್ತು ಈ ಅರಿವಿನ ಮೂಲವು ಶುದ್ಧ, ಅನಂತ, ಮತ್ತು ಸೂಕ್ಷ್ಮ ಸ್ವರೂಪ ಅಂದರೆ ಅಂತರಾತ್ಮನೇ ಇರುವನು: ಆತ್ಮ ಸಾಕ್ಷಾತ್ಕಾರವಾಗಿ ಶಬ್ದಗಳಿಂದ ಹೇಳಲಿಕ್ಕೆ ಬರದಂಥ ಸಮಾಧಾನ ಪ್ರಾಪ್ತವಾದರೂ ಕೂಡಾ ಅದನ್ನು ಹೇಳಲಿಕ್ಕೇ ಬೇಕು. ಯಾಕೆಂದರೆ ಪ್ರಾಪ್ತವಾದ ಸಮಾಧಾನವನ್ನು ಶಬ್ದಗಳಿಂದ ವರ್ಣನೆ ಮಾಡಿದ್ದಾದರೆ ಪ್ರಾಪ್ತಸಮಾಧಾನವು ಇಲ್ಲದಾಗುವದಿಲ್ಲ ಭಂಗಗೊಳ್ಳುವದಿಲ್ಲ. [ಹೀಗೆ ಅದು ಎಂದೂ ಆಗಲಾರದು.] (೧) ಸಮಾಧಾನವನ್ನು ಪ್ರಾಪ್ತ ಮಾಡಿಕೊಳ್ಳುವದಕ್ಕಾಗಿ ಏನನ್ನೂ ಬಿಡಬೇಕಾಗುವದಿಲ್ಲ. ಒಗೆಯಬೇಕಾಗಿಲ್ಲ. ಮತ್ತು ಹೊಸದಾವುದನ್ನೂ ಮಂಡಿಸಬೇಕಾಗುವದಿಲ್ಲ. ಕೇವಲ ಒಂದು ವಿಚಾರದಿಂದ ಶೋಧಮಾಡಿದೆವೆಂದರೆ ಇದು [ಸಮಾಧಾನ] ತಿಳಿಯುವದು, ಗೊತ್ತಾಗುವದು, ಅನುಭವಕ್ಕೆ ಬರುವದು. (೨) ಮುಖ್ಯ ಕಾಶೀ ವಿಶ್ವೇಶ್ವರ, ಅನಂತರ ದಕ್ಷಿಣದಲ್ಲಿ ಸೇತುಬಂಧ ರಾಮೇಶ್ವರ, ಶ್ರೀಶೈಲ ಮಲ್ಲಿಕಾರ್ಜುನ, ಭೀಮಾಶಂಕರ [ಪುಣೆ ಜಿಲ್ಹಾ] ಸೊರಟಿ ಸೋಮನಾಥ [ಕಾಠೇವಾಡ] ಮಹಾಕಾಲೇಶ್ವರ[ಉಜ್ಜಯಿನಿ] ಓಂಕಾರ ಅಮಲೇಶ್ವರ[ಓಂಕಾರ ಮಾಂಧಾತಾ] ಪರಳಿ ವೈಜನಾಥ [ಮರಾಠವಾಡಾ] ಆವಢ್ಯಾ ನಾಗನಾಥ [ಮರಾಠವಾಡಾ] ತ್ರಯಂಬಕೇಶ್ವರ [ನಾಶಿಕ] ಕೇದಾರೇಶ್ವರ [ಹಿಮಾಲಯ] ಘೃಷ್ಣೇಶ್ವರ [ವೇರೂಳ ಮರಾಠಾವಾಡಾ] (೩) ಹೀಗೆ ಮುಖ್ಯವಾದ ಹನ್ನೆರಡು ಜ್ಯೋತಿರ್ಲಿಂಗಗಳು ಇರುವವು. ಇದರ ಹೊರತಾಗಿ ಅಮರನಾಥದ ಅಮರೇಶ್ವರ, ನೇಪಾಳದ ಪಶುಪತಿನಾಥ, ಗೋಕರ್ಣ ಮಹಾಬಳೇಶ್ವರ, [ಕರ್ನಾಟಕ] ಕಾಲಕಾಲೇಶ್ವರ [ಕರ್ನಾಟಕದ ಧಾರವಾಡ ಜಿಲ್ಹೆ] ಮುಂತಾದ ಬಹಳಷ್ಟು ಪ್ರಖ್ಯಾತ ಲಿಂಗಗಳೂ ಇರುವವು. ಇವುಗಳ ಅನುಭವ ಅನೇಕ ಜನರಿಗೆ ಬರುವದು ಆದರೆ ಇವೆಲ್ಲ ಆತ್ಮನ ಗುಣಗಳಿರುವವು (೪) ಪೃಥ್ವಿಯ ಮೇಲೆ ಅನೇಕ ಶಕ್ತಿ [ದೇವತಾ] ಇರುವವು. ಅನೇಕರಿಗೆ ಇವುಗಳ ಸಾಕ್ಷಾತ್ಕಾರವಾಗುವದು. ಈ ಶಕ್ತಿಯು ಅನೇಕ ಚಮತ್ಕಾರಗಳು ದೃಷ್ಟಿಗೆ ಕಂಡುಬರುವವು. ಇದರಂತೆಯೇ ಅನೇಕ ದೇವರ ಸಾಮರ್ಥ್ಯ ಸಂಪನ್ನ ಮೂರ್ತಿಗಳೂ ಇರುವವು. ಇವೆಲ್ಲವೂ ಆತ್ಮದ ಗುಣವೇ ಇರುವವು. (೫) ಅನೇಕ ಸಿದ್ಧ ಪುರುಷರ ಸಾಮರ್ಥ್ಯ, ಅನೇಕ ಪ್ರಕಾರದ ಮಂತ್ರ ಸಾಮರ್ಥ್ಯ, ಸರ್ಪದ ಮಸ್ತಕದಲ್ಲಿರುವ ಮಣಿಯಲ್ಲಿಯ ಸಾಮರ್ಥ್ಯ ಮತ್ತು ಅನೇಕ ವನಸ್ಪತಿಗಳಲ್ಲಿಯ ಸಾಮರ್ಥ್ಯ(೬) ಅನೇಕ ತೀರ್ಥಗಳ ಮತ್ತು ಕ್ಷೇತ್ರಗಳ ಸಾಮರ್ಥ್ಯ, ಜಗತ್ತಿನಲ್ಲಿಯ ಅನೇಕ ಪ್ರಕಾರದ ಸಾಮರ್ಥ್ಯ-ಇಂಥ ಅನೇಕ ಪ್ರಕಾರದ ಸಾಮರ್ಥ್ಯಗಳು ಆತ್ಮನ ಗುಣವೇ ಆಗಿರುವವು. (೭) ಉತ್ತಮ ಗುಣಗಳೆಂಬುವು ಎಷ್ಟೊಂದು ಇರುವವೋ ಅವೆಲ್ಲವೂ ಆತ್ಮನ ಲಕ್ಷಣಗಳೆಂದು ತಿಳಿಯಬೇಕು. ಆದರೆ ಚಲೋ-ಕೆಟ್ಟವೆಂದು ಕಾಣುವವೆಲ್ಲವೂ ಆತ್ಮನಿಂದಲೇ ಇರುವವೆಂಬುದು ನಿಮ್ಮ ಲಕ್ಷ್ಯದಲ್ಲಿರಲಿ (೮) ಆತ್ಮಾ ಶುದ್ಧ ಇದ್ದನೆಂದರೆ ಉತ್ತಮ ಗುಣ ಪ್ರಕಟಪಡಿಸುವನು. ಅದೇ ಆತ್ಮಾ ಮಿಶ್ರಿತ ಇದ್ದಾಗ ಅವಲಕ್ಷಣಗಳನ್ನು ಪ್ರಕಟಪಡಿಸುವನು. ಉತ್ತಮ [ಚಲೋ] ಮತ್ತು ಕೆಟ್ಟ ಈ ಎಲ್ಲ ಆಗುಹೋಗುಗಳು, ನಡೆ ನುಡಿಯು ನಡವಳಿಕೆಯು ಕೊನೆಗೆ ಆತ್ಮನದೇ ಇರುವದು. (೯) ಅನೇಕ ಪ್ರಕಾರದ ಅಭಿಮಾನ ತಾಳುವದು, ಪ್ರತಿ ಸೃಷ್ಟಿ ನಿರ್ಮಾಣ ಮಾಡುವದು, ಅನೇಕ ಪ್ರಕಾರದ ಶಾಪಕೊಡುವದು ಮತ್ತು ಉಶ್ಶಾಪ ಕೊಡುವದು. ಈ ಎಲ್ಲವೂ ಆತ್ಮನ ಲಕ್ಷಣಗಳಿರುವವು. (೧೦)

ಪಿಂಡಾಚಾ ಬರಾ ಶೋಧ ಘ್ಯಾವಾ । ತತ್ವಾಂಚಾ ಪಿಂಡ ಶೋಧಾವಾ ।
ತತ್ವೇ ಶೋಧಿತಾ ಪಿಂಡ ಆಘವಾ । ಕಳೋ ಯೇತೋ ॥೧೧॥

ಜಡ ದೇಹ ಭೂತಾಂಚಾ । ಚಂಚಳ ಗುಣ ಆತ್ಮಯಾಚಾ ।
ನಿಶ್ಚಳ ಬ್ರಹ್ಮ ವೇಗಳಾ ಠಾವ ಕೈಚಾ । ಜೇಥೇ ತೇಥೇ ॥೧೨॥

ನಿಶ್ಚಳ ಚಂಚಳ ಆಣೀ ಜಡ । ಪಿಂಡೀ ಕರಾವಾ ನಿವಾಡ ।
ಪ್ರತ್ಯಯಾ ವೇಗಳೇ ಜಾಡ । ಬೋಲಣೇ ನಾಹೀ ॥೧೩॥

ಪಿಂಡಾವರೂನ ಆತ್ಮಾ ಜಾತೋ । ತೇಂವ್ಹಾ ನಿವಾಡಾ ಕಳೋ ಯೆತೋ ।
ದೇಹೆ ಜಡ ಹಾ ಪಡತೋ । ದೇಖತ ದೇಖತಾ ॥೧೪॥

ಜಡ ತಿತುಕೇ ಪಡಿಲೇ । ಚಂಚಳ ತಿತುಕೇ ನಿಘೋನಿ ಗೇಲೇ ।
ಜಡ ಚಂಚಳಾಚೇ ರೂಪ ಆಲೇ । ಪ್ರತ್ಯಯಾಸೀ ॥೧೫॥

ನಿಶ್ಚಳ ಆಹೇ ಸಕಳಾ ಠಾಈ । ಹೇ ತೋ ಪಾಹಾಣೇ ನಲಗೆ ಕಾಂಹೀ ।
ಗುಣವಿಕಾರ ತೇಥೇ ನಾಹೀ । ನಿಶ್ಚಳಾಸೀ ॥೧೬॥

ಜೈಸೆ ಪಿಂಡ ತೈಸೇ ಬ್ರಹ್ಮಾಂಡ । ವಿಚಾರ ದಿಸತೋ ಉಘಡ ।
ಜಡ ಚಂಚಳ ಜಾತಾ ಜಾಡ । ಪರಬ್ರಹ್ಮಚಿ ಆಹೇ ॥೧೭॥

ಮಹಾಭೂತಾಂಚಾ ಖಂಬೀರ ಕೇಲಾ । ಆತ್ಮಾ ಘಾಲೂನ ಪುತಳಾ ಜಾಲಾ ।
ಚಾಲಿಲಾ ಸೃಷ್ಟೀಚಾ ಗಲ್ಬಲಾ । ಯೇಣೇ ರಿತೀ ॥೧೮॥

ಆತ್ಮಾ ಮಾಯಾ ವಿಕಾರ ಕರೀ । ಆಳ ಘಾಲಿತೀ ಬ್ರಹ್ಮಾವರೀ ।
ಪ್ರತ್ಯಯೇ ಸಕಳ ಕಾಂಹೀ ವಿವರೀ । ತೋ ಚಿ ಭಲಾ ॥೧೯॥

ಬ್ರಹ್ಮ ವ್ಯಾಪಕ ಅಖಂಡ । ಮರಕಡ ವ್ಯಾಪಕತಾ ಖಂಡ ।
ಶೋಧೂನ ಪಾಹಾತಾ ಜಡ । ಕಾಂಹೀ ಚ ನಾಹೀ ॥೨೦॥

ಪಿಂಡದಲ್ಲಿಯ ತತ್ವಗಳ ಶೋಧಮಾಡಿ ತಿಳಿಯಿರಿ. ಎಂದು ಈಗ ಹೇಳುವರು ; ಸಾರ್ಥಕವು ಪಿಂಡದ ಅಂದರೆ ತನ್ನ ದೇಹದ ಶೋಧವನ್ನು ಚನ್ನಾಗಿ ಮಾಡಿ ಪಂಚೀಕರಣವನ್ನು ತಿಳಿಯಬೇಕು. ಇವುಗಳಲ್ಲಿಯ ಸ್ಥೂಲ ಮತ್ತು ಸೂಕ್ಷ್ಮ ದೇಹದ ತತ್ವಗಳನ್ನು ಸರಿಯಾಗಿ ಶೋಧಿಸಬೇಕು. ತತ್ವದ ಶೋಧ ಮಾಡುವದರಿಂದ ಪಿಂಡದ ರಚನೆಯ ಬಗ್ಗೆ ಸರಿಯಾದ ತಿಳುವಳಿಕೆ ಬರುವದು. (೧೧) ತತ್ವದ ಶೋಧ ಮಾಡಿದ್ದಾದರೆ ಆಗ ತಿಳಿದು ಬರುವ ದೇನಂದರೆ ದೇಹವು ಜಡವಿರುವದು, ಇದು ಪಂಚಭೂತಗಳದಿರುವದು. ಇದು ಮಾಯಿಕ ತತ್ವಗಳಿಂದ ತುಂಬಿದೆ. ದೇಹದಲ್ಲಿಯ ಚಂಚಲತನವು ಅಥವಾ ಅರಿವು ಇದು ಅಂತರಾತ್ಮನ ಗುಣವಿರುವದು. ಇದರ ಜೊತೆಗೆ ನಿಶ್ಚಲ ಬ್ರಹ್ಮವು ಸರ್ವವ್ಯಾಪಿ ಇರುವದರಿಂದ ಇವನು ಇಲ್ಲವೆನ್ನುವ ಸ್ಥಳವೇ ಇಲ್ಲ. (೧೨) ನಮ್ಮ ಪಿಂಡವು ಜಡದೇಹ, ಚಂಚಲ–ಅಂತರಾತ್ಮಾ, ಮತ್ತು ನಿಶ್ಚಲ–ಪರಬ್ರಹ್ಮ. ಈ ಮೂರು ತತ್ವಗಳು ಕೂಡಿ ತಯಾರಾಗುವದು ಈ ತತ್ವಗಳ ನಿರ್ಣಯವನ್ನು ನಮ್ಮ ದೇಹದಲ್ಲಿಯೇ ನಾವು ಮಾಡಿಕೊಳ್ಳಬೇಕು. ಅನುಭವ ಪಡೆಯದ ಹೊರತು ಮಾತನಾಡಲಿಕ್ಕೆ ಹೇಳಲಿಕ್ಕೆ ಬಲ ಬರುವದಿಲ್ಲ. (೧೩) ಅಂತರಾತ್ಮನು ಪಿಂಡದೊಳಗಿಂದ ಹೊರಟು ಹೋಗುವನು. ಆ ಪ್ರಸಂಗದಲ್ಲಿ ತತ್ವದ ನಿರ್ಣಯವು ಲಕ್ಷ್ಯದಲ್ಲಿ ಬರುವದು. ನಿಮ್ಮ ಕಣ್ಣೆದುರಿಗೇ [ನಿಮ್ಮ ಎದುರಿಗೆ] ನೋಡ ನೋಡುವಷ್ಟರಲ್ಲಿ ದೇಹವು ಜಡವಾಗಿ ಬಿದ್ದು ಬಿಡುವದು. (೧೪) ಜಡವಾದದ್ದಷ್ಟೇ ಮಾತ್ರ ನಿಶ್ಚೇಷ್ಟವಾಗಿ ಬೀಳುವದು. ಚಂಚಲವು ದೇಹ ಬಿಟ್ಟು ಹೊರಟು ಹೋಗುವದು. ಆದರೆ ಈ ಅನುಭವದಿಂದ ಜಡ ಮತ್ತು ಚಂಚಲ ಇವುಗಳ ಸ್ವರೂಪ ನಮ್ಮ ಅನುಭವಕ್ಕೆ ಬರುವದು. (೧೫) ನಿಶ್ಚಲವು ಮಾತ್ರ ಸರ್ವತ್ರದಲ್ಲಿ ವ್ಯಾಪಿಸಿರುವದು. ಇದನ್ನೇನೂ ನಾವು ನೋಡಬೇಕಾಗುವದಿಲ್ಲ. ಯಾಕೆಂದರೆ ನಿಶ್ಚಲ ಸ್ವರೂಪದಲ್ಲಿ ಯಾವುದೇ ಪ್ರಕಾರದ ಗುಣವಿಕಾರ ಇರುವದಿಲ್ಲ. ಯಾವಾಗಲೂ ಮತ್ತು ಎಲ್ಲ ಕಡೆಯಲ್ಲಿ [ಎಲ್ಲದರಲ್ಲಿ] ಯೂ ಇವನು [ನಿಶ್ಚಲನು] ಹೇಗಿರುವನೋ ಹಾಗೆಯೇ ಇರುವನು. (೧೬) ಯಾವ ನಿಯಮವು ಪಿಂಡಕ್ಕೆ ಲಾಗೂ ಆಗುವದೋ ಅವೇ ನಿಯಮವು ಬ್ರಹ್ಮಾಂಡಕ್ಕೂ ಕೂಡಾ ಅನ್ವಯ [ಲಾಗೂ] ಬೀಳುವದು. ಯಾವ ತತ್ವಗಳು ಪಿಂಡದಲ್ಲಿ ಇರುವವೋ ಅವೇ ಬ್ರಹ್ಮಾಂಡಲ್ಲಿ ಕೂಡಾ ಇರುವವು : ಪಿಂಡದ ವಿಷಯದಲ್ಲಿ [ಬಾಬತ್ತಿನಲ್ಲಿ] ಯಾವುದು [ಖರೇ] ನಿಜ ಇರುವದೋ ಅವೇ ಬ್ರಹ್ಮಾಂಡದ ಬಾಬತ್ತಿನಲ್ಲಿಯೂ ಖರೇ ಇರುವದು. ಈ ವಿಚಾರವು ಅತ್ಯಂತ ಸ್ಪಷ್ಟವಿರುವದು, ಉಘಡವಿರುವದು ಜಡ ಮತ್ತು ಚಂಚಲ ಇವು ಇಲ್ಲದಾದ ಕೂಡಲೇ ಸರ್ವವ್ಯಾಪಿ ಮತ್ತು ಭರಗಚ್ಚ ಭರಪೂರ ತುಂಬಿದ ಪರಬ್ರಹ್ಮನು ಮಾತ್ರ ಶಿಲುಕು ಉಳಿದಿರುವನು. (೧೭) ಮಹಾಭೂತಗಳ ಮಿಶ್ರಣಮಾಡಿ ಅಂದರೆ ಕೂಡಿಸಿ ಕಲಿಸಿದ ರಾಡಿ ಅಥವಾ ಅಂಟಲಿ [ಗಂಜಿ] ಯಲ್ಲಿ ಆತ್ಮಾ ಅನ್ನುವದನ್ನು ಅದರಲ್ಲಿ ಹಾಕಿದರು. ಅಂದರೆ ಅದರಲ್ಲಿ ಅರಿವನ್ನು ಹಾಕಿತೆಂದರೆ ಆಗ ಅದ ರಿಂದ ಒಂದು ಪುತ್ಥಳಿ [ಗೊಂಬೆ] ತಯಾರ ಆಯಿತು. ಅರ್ಥಾತ್ ಒಂದು ಜೀವಂತ ದೇಹ ತಯಾರಾಯಿತು. ಈ ಪ್ರಕಾರ ಸೃಷ್ಟಿಯ ಕಾರ್ಯದ ಖಟಾಟೋಪ ನಡೆಯುವದು (೧೮) ನಿಜವೇನಂದರೆ ಮಾಯಾ ಮತ್ತು ಅಂತರಾತ್ಮಾ ಇವರಿಂದಲೇ ಯಾವತ್ತೂ ಬದಲಾವಣೆಯ [ವಿಕಾರ] ಕಾರ್ಯ ನಡೆಯುವದು. ಆದರೆ ಬ್ರಹ್ಮನ ಮೇಲೆ ಇದರ ಆರೋಪಮಾಡುವರು. ಇದು ಅಸತ್ಯ ಇರುವದೆಂಬ ಬಗ್ಗೆ ಯಾರು ಎಲ್ಲ ವಿಷಯವನ್ನು ವಿವೇಕಯುಕ್ತ ವಿಚಾರದಿಂದ ವಿವರಣ ಮಾಡಿ ಖಾತ್ರಿಪೂರ್ವಕ ತಿಳಿಯುವರೋ ಅವರೇ ನಿಜವಾದ ಉತ್ತಮ ಮನುಷ್ಯರೆಂದು ತಿಳಿಯಬೇಕು. (೧೯) ಬ್ರಹ್ಮದ ವ್ಯಾಪಕತೆ ಅಖಂಡವಾಗಿರುವದು. ಇದರಿಂದಾಗಿ ಇವನಲ್ಲಿ ಬದಲಾವಣೆ ಉಂಟಾಗಲು ಎಷ್ಟು ಅವಕಾಶವೇ ಇರುವದಿಲ್ಲ. ಆದರೆ ಅದೇ ಮಾಯೆಯ ಮತ್ತು ಅಂತರಾತ್ಮನ ವ್ಯಾಪಕತನವು ಖಂಡಿತ (ಭಗ್ನ ಗೊಳ್ಳುವಂತಹದು) ಇರುವದು. ಭಂಗಗೊಳ್ಳುವದಾಗಿರುವದು. ಇದರಿಂದಾಗಿ ಇವರಲ್ಲಿ ಬದಲು ಘಟಿಸುವದಕ್ಕೆ ಅವಸರವಿರುವದು. ಚನ್ನಾಗಿ ವಿಚಾರಮಾಡಿ ಶೋಧಿಸಿ ನೋಡಿದರೆ ಇದರಲ್ಲಿ ತಿಳಿಯದಂತಹ ಅವಘಡ ವಿಷಯ ಯಾವುದೂ ಇರುವದಿಲ್ಲ. (೨೦)

ಗಗನಾಸೀ ಖಂಡತಾ ನಯೇ। ಗಗನಾಚೇ ನಾಸೇಲ ಕಾಯ।
ಜರೀ ಜಾಲಾ ಮಹಾಪ್ರಳಯ। ಸೃಷ್ಟೀಸಂಹಾರ ॥೨೧॥

ಜೇ ಸಂವ್ಹಾರಾಮಧ್ಯೇ ಸಾಪಡಲೇ। ತೇ ಸಹಜ ಚಿ ನಾಸಿವಂತ ಜಾಲೇ।
ಜಾಣತೇ ಲೋಕೀ ಉಗವಿಲೇ। ಪಾಹಿಜೆ ಕೋಡೇ ॥೨೨॥

ನ ಕಳತಾ ವಾಟೇ ಕೋಡೇ। ಕಳತಾ ಆವಘೇ ದಿಸೆ ಉಘಡೇ।
ಮ್ಹಣೋನೀ ಯೇಕಾಂತೀ ನಿವಾಡೇ। ವಿಚಾರ ಪಾಹಾವಾ ॥೨೩॥

ಮಿಳತಾ ಪ್ರತ್ಯಯಾಚೇ ಸಂತ। ಯೇಕಾಂತಾಪರೀಸ ಯೇಕಾಂತ।
ಕೇಲೀ ಪಾಹಿಜೆ ಸಾವಚೀತ। ನಾನಾ ಚರ್ಚಾ ॥೨೪॥

ಪಾಹಿಲ್ಯಾ ವೇಗಳೇ ಕಳತ ನಾಹೀ। ಕಳತಾ ಕಳತಾ ಸಂದೇಹ ನಾಹೀ।
ವಿವೇಕ ಪಾಹಾತಾ ಕೋಠೇ ಚಿ ನಾಹೀ। ಮಾಯಾಜಾಳ ॥೨೫॥

ಗಗನೀ ಆಭಾಳ ಆಲೇ। ಮಾಗುತೀ ಸವೇ ಚಿ ಉಡಾಲೇ।
ಆತ್ಮ್ಯಕರಿತಾ ದೃಶ್ಯ ಜಾಲೇ। ಉಡೇಲ ತೈಸೇ ॥೨೬॥

ಮೂಳಾಪಾಸೂನ ಸೇವಟವರೀ। ವಿವೇಕೀ ವಿವೇಕೇ ವಿವರೀ।
ತೋ ಚಿ ನಿಶ್ಚಯ ಥಾವರೀ। ಚಳೇನಾ ಏಸಾ ॥೨೭॥

ವರಕಡ ನಿಶ್ಚಯ ಅನುಮಾನಾಚೇ। ಅನುಮಾನೇ ಬೋಲತಾ ಕಾಯ ವೇಚೆ।
ಜಾಣತೇ ಪುರುಷ ಪ್ರಚೀತೀಚೇ। ತೇ ತೋ ಮಾನೀತನಾ ॥೨೮॥

ಉಗೇ ಚ ಬೋಲಣೇ ಅನುಮಾನಾಚೇ। ಅನುಮಾನಾಚೆ ಕೋಣ್ಯಾ ಕಾಮಾಚೇ।
ಯೇಥೇ ಸಗಟ ವಿಚಾರಾಚೇ। ಕಾಮ ನಾಹೀ ॥೨೯॥

ಆಕಾಶವನ್ನು ಭಗ್ನಗೊಳಿಸಲು, ಭಂಗವಾಡಲು ಬರುವದಿಲ್ಲ. ಆಕಾಶವನ್ನು [illegible] [illegible] ಅಥವಾ ಸೀಳಲಿಕ್ಕೆ ಶಕ್ಯವಿಲ್ಲ. ಸಾಧ್ಯವೂ ಇಲ್ಲ. ಅದ್ದರಿಂದ ಮಹಾ ಪ್ರಲಯವಾಗಿ ಸೃಷ್ಟಿಯ ಸಂಹಾರವಾದರೂ ಸಹ ಆಕಾಶವು ಎಷ್ಟೂ ಭಂಗಗೊಳ್ಳುವದಿಲ್ಲ-ನಾಶವಾಗುವದಿಲ್ಲ. (೨೧) ಯಾವುದು ಸಂಹಾರದಲ್ಲಿ [ಜಗತ್ ಸಂಹಾರ ಕಾಲವಲ್ಲಿ] ಆಹುತಿಯಾಗುವದೋ ಅದು ಸ್ವಾಭಾವಿಕವಾಗಿಯೇ ನಾಶವಂತವಿರುವದು. ವಿಚಾರವಂತರಾದ ತಿಳಿದವರು ಈ ಒಗಟನ್ನು ಬಿಡಿಸಲಿಕ್ಕೇ ಬೇಕಾಗುವದು. ತಿಳಿದವರು ಈ ಒಗಟನ್ನು [ಗೂಢವನ್ನು] ಬಿಡಿಸಿ ಹೇಳುವದರ ಅವಶ್ಯಕತೆ ಇರುವದು. ಜಡ ಮತ್ತು ಚಂಚಲ ಎರಡೂ ಬಂದವು ಮತ್ತು ಹೋದವು ಆದರೆ ಪರಬ್ರಹ್ಮ ಮಾತ್ರ ಅಗದೀ ಹೇಗಿದ್ದಿತೋ ಹಾಗೆಯೇ ಉಳಿಯುವದು? ಇದು ಸೃಷ್ಟಿಯ ಗೂಢ ವಿಚಾರವಿರುವದು. ತಿಳಿದವರಾದ ವಿವೇಕ ಉಳ್ಳವರು ಇದರ ಒಗಟನ್ನು [ಗೂಢವನ್ನು] ಬಿಡಿಸಿ ಹೇಳಿಕೊಡಬೇಕು (೨೨) ಆದರೆ ಈ ವಿಶ್ವ ರಚನೆಯ ಮೋಜು ಹೇಗಿರುವದೆಂದರೆ ಇದರ ಗೂಢ ಎಲ್ಲಿಯವರೆಗೆ ತಿಳಿಯುವದಿಲ್ಲವೋ ಅಲ್ಲಿಯವರೆಗೆ ಇದು ಒಂದು ದೊಡ್ಡ ತೊಡಕಿನ [ಗುಂತಾ ಗುಂತಿಯ] ಕಗ್ಗಂಟು ಅನಿಸುವದು. ಆದೇ ಇದರ ರಹಸ್ಯ [ಮಥಿತಾರ್ಥ] ತಿಳಿಯಿತೆಂದರೆ, ಇದರಲ್ಲಿ ಯಾವ ಗೂಢ ಗುಂತಾಗುಂತಿ [ತೊಡಕು] ಇಲ್ಲ. ಇದು ಅತ್ಯಂತ ಸರಳ ಮತ್ತು ಖುಲ್ಲಾ ಸ್ಪಷ್ಟ ಇರುವದು, ಎಂದು ಗೊತ್ತಾಗುವದು. ಆದ್ದರಿಂದ ಏಕಾಂತದಲ್ಲಿಹೋಗಿ ಸ್ವಸ್ಥ ಮನದಿಂದ ಸಾದ್ಯಂತವಾಗಿ ವಿಚಾರಮಾಡಿ ಈ ಗೂಢವನ್ನು ಸ್ಪಷ್ಟಪಡಿಸಿ ತಿಳಿದುಕೊಳ್ಳಬೇಕು. (೨೩) ಸ್ವಾನುಭವ ಸಂಪನ್ನನಾದ ಒಬ್ಬ ಸಂತ, ಶರಣ, ಸಾಧು, ದಾಸನ ಭೆಟ್ಟಿಯಾದರೆ ಒಳ್ಳೇ ಸಾವಧಾನದಿಂದ ಸ್ವಸ್ಥ ಚಿತ್ತದಿಂದ ಅವನ ಕೂಡ ಅನೇಕ ವಿಷಯದ ಚರ್ಚಾಮಾಡಿ ತಿಳಿದುಕೊಳ್ಳಿರಿ. ಯಾಕೆಂದರೆ ಬ್ರಹ್ಮಾನುಭವಿಯಾದಂಥ ಸಂತನ ಭೆಟ್ಟಿ ಆಗುವದೆಂದರೆ ಏಕಾಂತಕ್ಕಿಂತಲೂ ಬಹಳ ದೊಡ್ಡ ಏಕಾಂತದ ಲಾಭವಿರುದೆಂದು ತಿಳಿಯಿರಿ. (೨೪) ಮನುಷ್ಯನು ಶೋಧಿಸಿ ನೋಡದಿದ್ದರೆ ಏನೂ ತಿಳಿಯುವ ದಿಲ್ಲ. ಒಂದು ಸಲ ಅವನಿಗೆ ತಿಳಿಯಲಿಕ್ಕೆ ಪ್ರಾರಂಭವಾಯಿತೆಂದರೆ ತಿಳಿಯುತ್ತಾ ತಿಳಿಯುತ್ತಾ ಎಲ್ಲ ಸಂದೇಹಗಳೂ ನಿವಾರಣೆಯಾಗುವವು ವಿವೇಕದಿಂದ ಸತತವಾಗಿ ಶೋಧಮಾಡುತ್ತ ಹೋದರೆ ಆಗ ಮಾಯಾಜಾಲವು ಖರೇತನದಿಂದ ಎಲ್ಲಿಯೂ ಇಲ್ಲವೇ ಇಲ್ಲ ಅನ್ನುವ ಖಾತ್ರಿ ಆಗುವದು. (೨೫) ಆಕಾಶದಲ್ಲಿ ಮೋಡಗಳು ಬರುವವು. ಮತ್ತು ಆಗಿಂದಾಗಲೇ ಲಗೇಚ ಇಲ್ಲದಾಗಿ ಹೋಗುವವು. ಇದರಂತೆ ಅಂತರಾತ್ಮನ ಆಶ್ರಯ [ಅಧಿಷ್ಠಾನ, ಸತ್ತಾ] ದಿಂದಾಗಿ ಈ ದೃಶ್ಯ ವಿಶ್ವವು ಭಾಸವಾಗುವದು. ಆದರೆ ವಿವೇಕದಿಂದ ಭ್ರಮವು ಇಲ್ಲದಾದರೆ ಕೂಡಲೇ ಅದೂ ಇಲ್ಲದಾಗಿ ಹೋಗುವದು. (೨೬) ವಿವೇಕಿಯಾದ ಸಾಧಕನು ವಿವೇಕದಿಂದ ವಿವರಣ ಮಾಡುತ್ತಾ, ಮಾಡುತ್ತಾ ಮೂಲ ಮಾಯೆಯಿಂದ ಕೊನೆಯವರೆಗೆ ಅಂದರೆ ಸೂಕ್ಷ್ಮ ವಿವೇದಿಂದ ಸರ್ವ ತತ್ವಗಳನ್ನು ದಾಟಿ ಹೋಗುವನು. ಇವನು ತನ್ನ ಸೂಕ್ಷ್ಮ ವಿವೇಕ ವಿವರಣದಿಂದ ಅಶಾಶ್ವತ ತತ್ವಗಳನ್ನೆಲ್ಲ ಬದಿಗೆ ಸರಿಸಿ ಬಿಡುವನು. ಮತ್ತು ಯಾವುದು ಯಾವ ಕಾಲಕ್ಕೂ ಚಲಿಸುವದಿಲ್ಲವೋ ಅಂಥ ಸ್ವಸ್ವರೂಪದ ನಿಶ್ಚಯವನ್ನು ಹೃದಯದಲ್ಲಿ ಧಾರಣ ಮಾಡುವನು ಇಂಥವನ ಆತ್ಮನಿಶ್ಚಯ ಅತ್ಯಂತ ಸ್ಥಿರವಿರುವದು. [ನಿಶ್ಚಲ ಬ್ರಹ್ಮದ ನಿಶ್ಚಯದ ಹೊರತಾದ ಇತರ ನಿಶ್ಚಯಗಳು ಅನುಮಾನ ದವು, ಅಸ್ಥಿರವಾದವು ಇರುವವೆಂಬುದನ್ನು ಪ್ರತ್ಯೇಕ ಹೇಳಬೇಕಾಗಿಲ್ಲ.] (೨೭) ಇನ್ನುಳಿದ ಬಾಕಿ ನಿಶ್ಚಯಗಳು ಅನುಮಾನದ ಬಲದ ಮೇಲಿಂದ ಮಾಡಿದವು ಇರುವವು ಅನುಮಾನದ ಆಧಾರದಿಂದ ಕೇವಲ ಮಾತನಾಡಲಿಕ್ಕೆ ಮನುಷ್ಯನದೇನೂ ಹೋಗುವದಿಲ್ಲ. ಆದರೆ ಯಾರು ಸಾಕ್ಷಾತ್ಕಾರೀ ತಿಳುವಳಿಕೆಯು ಪೂರ್ಣವಿರುವವರೋ ಅವರು ಅನುಮಾನದ ಮಾತುಗಳನ್ನು ಮನ್ನಿಸುವದಿಲ್ಲ. ಆದುಮಾನೂ ಇಲ್ಲ. (೨೮) ಅನುಮಾನದ ವ್ಯರ್ಥ ಮಾತುಗಳು ಕೆಲಸಕ್ಕೆ ಬರುವದಿಲ್ಲ. ಇಲ್ಲಿ ಎಲ್ಲ ರೀತಿಯ ಸರಸಗಟ ತರ್ಕ ನಡೆಯಿಸಿದರೆ ಕೆಲಸ ಕಾರ್ಯ ಬಗೆಹರಿಯುವದಿಲ್ಲ. ಮನುಷ್ಯನ ತರ್ಕಗಳೂ ಕೂಡಾ ಕೊನೆಗೆ ದೃಶ್ಯದಲ್ಲಿಯೇ ತೊಳಲಾಡುವವು. ಆದ್ದರಿಂದ ಅತೀಂದ್ರಿಯ ಕ್ಷೇತ್ರದಲ್ಲಿ ಇವುಗಳಿಗೆ ಯೋಗ್ಯ ರೀತಿಯಲ್ಲಿ ಸಂಚಾರ ಮಾಡಲಿಕ್ಕೆ ಬರುವದಿಲ್ಲ. ಅಲ್ಲಿ ಇವು ಅಂದರೆ ಅನುಮಾನ, ತರ್ಕಗಳು ಸುಳ್ಳು ಬೀಳುವವು. ಪೊಟ್ಟಿಯಾಗುವವು. (೨೯)

ಸಗಟ ವಿಚಾರ ತೋ ಅವಿಚಾರ । ಕಿತ್ಯೇಕ ಮ್ಹಣತೀ ಯೇಕಂಕಾರ ।
ಯೇಕಂಕಾರ ಭ್ರಷ್ಟಾಕಾರ । ಕರೂ ನಯೇ ॥೩೦॥

ಕೃತ್ರಿಮ ಅವಘೇ ಸಾಂಡಾವೇ । ಕಾಂಹೀ ಯೇಕ ಶುದ್ಧ ಘ್ಯಾವೇ ।
ಜಾಣ ಜಾಣೋ ನಿವಡಾವೇ । ಸಾರಾಸಾರ ॥೩೧॥

ಇತಿ ಶ್ರೀ ದಾಸಬೋಧೇ ಗುರುಶಿಷ್ಯ ಸಂವಾದೇ
''ಆತ್ಮನಿರೂಪಣ'' ಸಮಾಸ ಸಪ್ತಮ ॥

• •

ಯಾವ ವಿಚಾರಗಳು ದೃಶ್ಯದಲ್ಲಿ ಉಪಯೋಗ ಬೀಳುವವೋ ಅವನ್ನೇ ಒಂದುವೇಳೆ ನಾವು ಸೂಕ್ಷ್ಮದ ಕ್ಷೇತ್ರದಲ್ಲಿ ಉಪಯೋಗಿಸಿದ್ದಾದರೆ ಅಲ್ಲಿ ಇವು ಅವಿಚಾರದವೆಂದು ಠರಾಯಿಸುವವು. ಕೆಲವೊಂದು ಜನರಾದರೋ ಇದಕ್ಕೆ ಏಕಂಕಾರವೆನ್ನುವರು. ಏಕಂಕಾರ ಇದು ಭ್ರಷ್ಟಾಚಾರವಿರುವದು. [ಸಂಸಾರ, ಪರಮಾರ್ಥ, ಅನುಮಾನ, ಪ್ರತ್ಯಯ ಅನುಭವ ಉಪಾಧಿ, ನಿರುಪಾಧಿ ಇವೆಲ್ಲವನ್ನು ಒಂದೇ ಎಂದು ತಿಳಿಯುವದು ಅವಿಚಾರದ್ದಾಗಿದೆ. ಇದಕ್ಕೆ ಏಕಂಕಾರ ಅಂದರೆ ನಾಸ್ತಿಕತನದ, ಸಬ್ ಗೋಲಂಕಾರದ, ಗೊಂದಲ ಘೋಟಾಳೆಯ ಭ್ರಷ್ಟಾಚಾರವೆಂದು ಬಲ್ಲವರು ಹೇಳುವರು.] ನಾವು ಇಂಥದನ್ನು ಮಾಡಬಾರದು. ಜನರಿಗೆ ಇದರ ಬಗ್ಗೆ ಸಾರಿಸಾರಿ ನಿಜವನ್ನು ತಿಳಿಸಿಹೇಳಬೇಕು. (೩೦) ಯಾವುದು ಕೃತ್ರಿಮ, ಢೋಂಗೀತನ, ವೇಷಧಾರಿತನದ್ದು, ಮೋಸದ್ದು ಇರುವದೋ ಅದನ್ನೆಲ್ಲ ಬಿಟ್ಟು ಬಿಡಬೇಕು. ಶುದ್ಧ ವಿಚಾರ ಸದಾಚಾರದಿಂದ ಕೂಡಿ ಯಾವುದು ಶುದ್ಧ ಸತ್ಯ ಅದೆಯೋ ಅದನ್ನು ಸ್ವೀಕರಿಸಬೇಕು. ಪರಬ್ರಹ್ಮನ ಬಗ್ಗೆ ಚನ್ನಾಗಿ ವಿಚಾರ ವಿವೇಕವನ್ನು ಮಾಡಬೇಕು. ಪುನಃ ಪುನಃ ತಿಳಿದು ಸಾರಾಸಾರವನ್ನು ಹುಡುಕಿ ಗುರುತಿಸಬೇಕು. ಕೃತ್ರಿಮ ಅಂದರೆ ಸತ್ಯವಲ್ಲ. ಸತ್ಯದಂತೆ ಅದು ಕಾಣುವದು. ಅದೇ ಕೃತ್ರಿಮ- ಖೊಟ್ಟಿ ವೇಷದ್ದು ಅರ್ಥಾತ್ ಮಿಥ್ಯಯಾಗಿರುವದು. (೩೧)

ಶ್ರೀ ದಾಸಬೋಧದ ಇಪ್ಪತ್ತನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ಆತ್ಮನಿರೂಪಣ"ವೆಂಬ ಹೆಸರಿನ ಏಳನೇ ಸಮಾಸವು ಮುಗಿದುದು.

● ●

### ದಶಕ. ವಿಂಶತಿ : ಸಮಾಸ. ಅಷ್ಟಮ : ದೇಹೇಕ್ಷೇತ್ರನಿರೂಪಣ (ನುಡಿ ೩೦)

॥ಶ್ರೀರಾಮ ಸಮರ್ಥ॥ ವಿಧೀ ಪ್ರಪಂಚತರೂ ವಾಢಲಾ ।
ವಾಢತಾ ವಾಢತಾ ವಿಸ್ತೀರ್ಣ ಜಾಲಾ ।
ಫಳೇ ಯೇತಾ ವಿಶ್ರಾಂತೀ ಪಾವಲಾ । ಬಹುತ ಪ್ರಾಣೀ ॥೧॥

ನಾನಾ ಫಳೇ ರಸಾಳೇ ಲಾಗಲೀ । ನಾನಾ ಜಿನಸೀ ಗೋಡೀಸ ಆಲೀ ।
ಗೋಡೀ ಪಾಹಾವಯಾ ನಿರ್ಮಾಣ ಕೇಲೀ । ನಾನಾ ಶರೀರೇ ॥೨॥

ನಿರ್ಮಾಣ ಜಾಲೇ ಉತ್ತಮ ವಿಷಯೊ । ಶರೀರೇವಿಣ ಭೋಗಿತಾ ನಯೇ ।
ಮ್ಹಣೋನೀ ನಿರ್ಮಿಲಾ ಉಪಾಯೊ । ನಾನಾ ಶರೀರೇ ॥೩॥

ಜ್ಞಾನ ಇಂದ್ರಿಯೇ ನಿರ್ಮಾಣಕೇಲೀ । ಭಿನ್ನ ಭಿನ್ನ ಗುಣಾಂಚೀ ನಿರ್ಮಿಲೀ ।
ಯೇಕಾ ಶರೀರಾಸೀ ಲಾಗಲೀ । ಪರೀ ವೇಗಳಾಲೀ ॥೪॥

ಶ್ರೋತ್ರಇಂದ್ರಿಈ ಶಬ್ದಪಡಿಲಾ । ತ್ಯಾಚಾ ಭೇದ ಪಾಹಿಜೆ ಕಳಲಾ ।
ಐಸಾ ಉಪಾಯೊ ನಿರ್ಮಾಣ ಕೇಲಾ । ಇಂದ್ರಿಯಾಂಮಧೇ ॥೫॥

ತ್ವಚೇಇಂದ್ರಿಯೇ ಶೀತೋಷ್ಣಭಾಸೇ । ಚಕ್ಷುಇಂದ್ರಿಯೇ ಸಕಳದಿಸೇ ।
ಇಂದ್ರಿಯಾಂಮಧೇ ಗುಣ ಐಸೇ । ವೇಗಳಾಲೇ ॥೬॥

ಜಿವ್ಹೆಮಧೇ ರಸ ಚಾಖಣೇ । ಘ್ರಾಣಾಮಧೇ ಪರಿಮಳ ಘೇಣೇ ।
ಇಂದ್ರಿಯಾಂಮಧೇ ವೇಗಳಾಲ್ಯಾ ಗುಣೇ । ಭೇದ ಕೇಲೇ ॥೭॥

# ದಶಕ ೨೦. ಸಮಾಸ ೮. ದೇಹೇ ಕ್ಷೇತ್ರ ನಿರೂಪಣ (ನುಡಿ ೩೦)

ಬ್ರಹ್ಮದೇವರು ಈ ಪ್ರಚಂಡ ಪ್ರಪಂಚ ವೃಕ್ಷವನ್ನು ನಿರ್ಮಾಣ ಮಾಡಿದನು. ಇದರ ಬೆಳವಣಿಗೆಯೂ ಬಹಳಷ್ಟು ಆಯಿತು. ಕೊನೆಗೆ ಇದಕ್ಕೆ ಮಾನವ ದೇಹದ ಉತ್ತಮ ಫಲ ಬಂದಿತು. ಈ ಫಲದಲ್ಲಿ ಅಂದರೆ ದೇಹದಲ್ಲಿ ಜ್ಞಾನೇಂದ್ರಿಯಗಳು ಇರುವವು ಮತ್ತು ಕರ್ಮೇಂದ್ರಿಯಗಳೂ ಇರುವವು. ಇಂದ್ರಿಯಗಳ ಸಹಾಯದಿಂದ ಮನುಷ್ಯನಿಗೆ ದೃಶ್ಯದ ಜ್ಞಾನವಾಗುವದು. ಮತ್ತು ಅದರೊಳಗಿನ ಭೇದಗಳು ಗೊತ್ತಾಗುವವು. ಇದರಂತೆ ಈ ಶರೀರದ ಸಹಾಯ ವಿಲ್ಲದೇ ಯಾರಿಗೂ ವಿಷಯಗಳ ಭೋಗಪಡೆಯಲು ಬರುವದಿಲ್ಲ. ಒಟ್ಟಿನಲ್ಲಿ ಈ ಶರೀರದಂತಹದಾವುದೂ ವಿಶ್ವದಲ್ಲಿ ಇನ್ನೊಂದು ಉತ್ತಮ ಯಂತ್ರವಿಲ್ಲ. ಈ ಜಗತ್ತಿನಲ್ಲಿಯ ಆಗುಹೋಗುಗಳ ಕಾರ್ಯ [ಕಾರಸ್ಥಾನ] ಗಳು ಅಂತರಾತ್ಮನವೇ ಇರುವವು. ಯಾವತ್ತೂ ದೇಹದಲ್ಲಿ ಇವನೊಬ್ಬನೇ ವಿಭಾಗಿಸಿ ಎಲ್ಲದರಲ್ಲಿ ಇರುವನು. ಯಾವ ದೇಹದ ಸಾಮರ್ಥ್ಯ ಎಷ್ಟಿರುವದೋ ಅಷ್ಟು ಕಾರ್ಯವನ್ನು ಅಂತರಾತ್ಮನು ಅದರ ಕಡೆಯಿಂದ [ಆ ದೇಹದ ಕಡೆಯಿಂದ] ಮಾಡಿಸುವನು, ಯಾವ ದೇಹದ ಸಾಮರ್ಥ್ಯ ಅತಿ ಶ್ರೇಷ್ಠವಿರುವದೋ, ದೊಡ್ಡದಿರುವದೋ ಅದಕ್ಕೆ ಅವತಾರ ಎಂದು ಅನ್ನುವರು. ಮೂಲದಲ್ಲಿ ಅಭೇದವೇ ಇರುವದು. ಜೀವದ ಊರ್ಧ್ವ ಮುಖ ಆಯಿತೆಂದರೆ ಭೇದಗಳು ಕಡಿಮೆಯಾಗುತ್ತ ಹೋಗಿ ಕೊನೆಗೆ ಭೇದಗಳೆಲ್ಲ ಇಲ್ಲದಾಗುವವು. ಆವಾಹನ ಅಂದರೆ ಕರೆಯುವದು ಮತ್ತು ವಿಸರ್ಜನ ಅಂದರೆ ಕಳಿಸುವದು, ನಿರೋಪಕೊಡುವದು. ಇದೇ ಭಜನದ [ಸೇವಾದ] ಲಕ್ಷಣವಿರುವದು.

ದಶಕ ೨೦. ಸಮಾಸ ೮. ದೇಹೇ ಕ್ಷೇತ್ರ ನಿರೂಪಣ (ನುಡಿ ೩೦)

ಈ ದೃಶ್ಯ ವಿಶ್ವದಲ್ಲಿ ಪ್ರಾಣಿಗಳ ಶರೀರಗಳನ್ನು ಹೇಗೆ ನಿರ್ಮಾಣ ಮಾಡಲಾಗಿದೆಯೆಂದರೆ ಇದರ ಯೋಗದಿಂದ ಜೀವಗಳಿಗೆ ಸುಲಭವಾಗಿ ವಿಷಯ ಭೋಗಿಸಲಿಕ್ಕೆ ಬರುವದು. ಅದರಲ್ಲಿಯೂ ಮನುಷ್ಯ ದೇಹ ದ್ದಾದರೋ ಅತಿಶಯ ಉತ್ತಮವಿರುವದು. ಶ್ರೀ ಸಮರ್ಥರು ಮಾನವ ದೇಹಕ್ಕೆ ಸರ್ವೋತ್ತಮ ಯಂತ್ರ ಅನ್ನುವರು ಬ್ರಹ್ಮದೇವರ ಸಂಸಾರ ರೂಪಿ ಪ್ರಪಂಚ ವೃಕ್ಷವು ಬೆಳೆಯಿತು. ಇದರ ಬೆಳವಣಿಗೆ ಆಗುತ್ತಾ ಆಗುತ್ತಾ ಇದು ಬಹಳಷ್ಟು [ಅಪಾರ] ವಿಸ್ತೀರ್ಣವಾಯಿತು. ಅನಂತರ ಇದಕ್ಕೆ ಫಲಗಳು ಬಂದವು. ಆ ಹೊತ್ತಿನಲ್ಲಿ ಬಹಳಷ್ಟು ಪ್ರಾಣಿಗಳಿಗೆ ಸಮಾಧಾನ ದೊರಕಿತು. (೧) ಈ ಪ್ರಪಂಚವೆಂಬ ವೃಕ್ಷಕ್ಕೆ ಅನೇಕ ರಸಭರಿತ ಫಲಗಳು ಇರುವವು. ಇದರ ರುಚಿಯು ಅನೇಕ ಪದಾರ್ಥಗಳ ಮೂಲಕ ಅನುಭವಕ್ಕೆ ಬರುವದು. ಈ ಫಲಗಳ ರುಚಿಯನ್ನು ಸವಿಯುವ ದಕ್ಕಾಗಿ ಅನೇಕ ಶರೀರಗಳು ನಿರ್ಮಾಣವಾದವು. ಜೀವಕ್ಕೆ ನೋಡಬೇಕೆನಿಸಿದ್ದರಿಂದ ಕಣ್ಣುಗಳು ನಿರ್ಮಾಣವಾದವು. ಕೇಳಬೇಕೆನಿಸಿದ್ದರಿಂದ ಕಿವಿಗಳು ನಿರ್ಮಾಣವಾದವು. ರುಚಿ, ಸ್ವಾದ ಪಡೆಯಬೇಕೆನಿಸಿದ್ದರಿಂದ ನಾಲಿಗೆಯು ನಿರ್ಮಾಣ ವಾಯಿತು. ಹೀಗೆ ಎಲ್ಲವೂ ಆದವು. (೨) ಉತ್ತಮ ವಿಷಯಗಳನ್ನು ನಿರ್ಮಾಣ ಮಾಡಿದ್ದರೂ ಕೂಡಾ ಶರೀರವಿಲ್ಲದೆ ಅವುಗಳ ಭೋಗ ಪಡೆಯಲು ಬರುವದಿಲ್ಲ. ಈ ಭೋಗ ಪಡೆಯುವ ಸಾಧನವೆಂದು ಅನೇಕ ಪ್ರಕಾರದ ಶರೀರಗಳು ನಿರ್ಮಾಣವಾದವು. (೩) ಐದು ಜ್ಞಾನೇಂದ್ರಿಯ ೧. ತ್ವಚೆ ೨. ನೇತ್ರ ೩. ನಾಲಿಗೆ ೪. ಕರ್ಣ ೫. ಮೂಗು ಗಳನ್ನು ನಿರ್ಮಾಣ ಮಾಡಿದನು. ಆದರೆ ಪ್ರತಿಯೊಂದರ ಗುಣ ಬೇರೆ ಬೇರೆಯಾಗಿರುವವು. ಇವೆಲ್ಲವುಗಳು ಒಂದೇ ಶರೀರದಲ್ಲಿ ಇರುವವು. ಆದರೆ ಪ್ರತಿಯೊಂದು ಇಂದ್ರಿಯಗಳು ಬೇರೆ ಬೇರೆ ಇರುವವು. (೪) ಶಬ್ದ ಇದು ಕಿವಿಯ ದಾಗಿದೆ. ಶಬ್ದಗಳ ಭೇದ ತಿಳಿಯುವ ಯೋಜನೆ - ವ್ಯವಸ್ಥೆ ಇದನ್ನು ಕಿವಿಯ ಸ್ಥಳದಲ್ಲಿ ಮಾಡಿರುವರು. (೫) ತ್ವಚೆಯಿಂದ ಶೀತ ಮತ್ತು ಉಷ್ಣ ತಿಳಿಯುವದು. ಕಣ್ಣಿನಿಂದ ಎಲ್ಲವನ್ನೂ ನೋಡಲಿಕ್ಕೆ ಬರುವದು. ಜ್ಞಾನೇಂದ್ರಿಯದಲ್ಲಿ ಈ ಪ್ರಕಾರದ ಬೇರೆ ಬೇರೆ ಗುಣಗಳಿರುವವು. (೬) ನಾಲಿಗೆಯಲ್ಲಿ ರಸ ಸ್ವಾದ ತಿಳಿಯುವ ಗುಣವಿರುವದು. ಮೂಗಿನಲ್ಲಿ ವಾಸನೆ ತಿಳಿಯುವ ಗುಣವಿರುವದು. ಹೀಗೆ ಬೇರೆ ಬೇರೆ ಗುಣಗಳಿರುವದರಿಂದಾಗಿ ಇಂದ್ರಿಯಗಳಲ್ಲಿ ಭೇದವಾಗಿರುವದು. (೭)

ವಾಯೋಪಂಚಕೀ ಅಂತಃಕರ್ಣಪಂಚಕ । ಮಿಸಳೋನಿ ಫಿರೇ ನಿಶಂಕ ।
ಜ್ಞಾನಇಂದ್ರಿಯೇ ಕರ್ಮಇಂದ್ರಿಯೇ ಸಕಳಿಕ । ಸಾವಕಾಸ ಪಾಹೇ ॥೮॥

ಕರ್ಮಇಂದ್ರಿಯೇ ಲಾಗವೇಗೀ । ಜೀವ ಭೋಗೀ ವಿಷಯಾಲಾಗೀ ।
ಐಸಾ ಹಾ ಉಪಾಯೆ ಜಗೀ । ಈಶ್ವರೇ ಕೇಲಾ ॥೯॥

ವಿಷಯ ನಿರ್ಮಾಣ ಜಾಲೇಬರವೆ । ಶರೀರೇವಿಣ ಕೈಸೆ ಭೋಗಾವೆ ।
ನಾನಾ ಶರೀರಾಚೆ ಗೋವೆ । ಯಾಕಾರಣೇ ॥೧೦॥

ಅಸ್ಥಿಮಾಂಶಾಚೇ ಶರೀರ । ತ್ಯಾಮಧ್ಯೇ ಗುಣಪ್ರಕಾರ ।
ಶರೀರಾಸಾರಿಖೇ ಯಂತ್ರ । ಆಣೀಕ ನಾಹೀ ॥೧೧॥

ಐಸೀ ಶರೀರೇ ನಿರ್ಮಾಣ ಕೇಲೀ । ವಿಷಯಭೋಗೇ ವಾಢವಿಲೀ ।
ಲಾಹಾನಥೋರ ನಿರ್ಮಾಣ ಜಾಲೀ । ಯೇಣೇ ಪ್ರಕಾರೇ ॥೧೨॥

ಅಸ್ಥಿಮಾಂಶಾಚೀ ಶರೀರೇ । ನಿರ್ಮಾಣ ಕೇಲೀ ಜಗದೀಶ್ವರೇ ।
ವಿವೇಕೇ ಗುಣವಿಚಾರೇ । ಕರೂನಿಯಾ ॥೧೩॥

ಅಸ್ತಿಮೌಂಶಾಚಾ ಪುತಳಾ । ಜೇಣೇ ಜ್ಞಾನೇ ಸಕಳ ಕಳಾ ।
ಶರೀರಭೇದ ವೇಗಳಾ । ಠಾಈ ಠಾಈ ॥೧೪॥

ತೋ ಭೇದ ಕಾರ್ಯಾಕಾರಣ । ತ್ಯಾಚಾ ಉದಂಡ ಆಹೇ ಗುಣ ।
ಸಕಳ ತೀಕ್ಷ್ಣ ಬುದ್ಧೀವಿಣ । ಕಾಯೆ ಕಳೇ ॥೧೫॥

ಸಕಳ ಕರಣೇ ಈಶ್ವರಾಲಾ । ಮ್ಹಣೋನೀ ಭೇದ ನಿರ್ಮಾಣ ಕೇಲಾ ।
ಊರ್ಧ್ವಮುಖ ಹೋತಾ ಭೇದಾಲಾ । ಠಾವ ಕೈಚಾ ॥೧೬॥

ಸೃಷ್ಟಿಕರ್ಣೇ ಆಗತ್ಯ ಭೇದ । ಸಂವ್ಹಾರೇ ಸಹಜ ಚೀ ಅಭೇದ ।
ಭೇದ ಅಭೇದ ಹಾ ಸಂವಾದ । ಮಾಯಾಗುಣೇ ॥೧೭॥

ಅಂತಃಕರಣ ಪಂಚಕ [ಅಂತಃಕರಣ, ಮನ, ಬುದ್ಧಿ, ಚಿತ್ತ, ಅಹಂಕಾರ] ವು ಪ್ರಾಣ ಪಂಚಕ [ಪ್ರಾಣ ಉದಾನ, ಸಮಾನ, ವ್ಯಾನ, ಅಪಾನ] ದಲ್ಲಿ ಬೆರೆಯುವದು. ಮತ್ತು ನಿಃಶಂಕವಾಗಿ ಶರೀರದಲ್ಲಿ ಹರಿದಾಡುವದು. ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯಗಳ ಯಾವತ್ತೂ ಕಾರ್ಯವನ್ನು ಸ್ಪಷ್ಟ ರೀತಿಯಲ್ಲಿ ವಿವರಣೆ ಮಾಡಿ ತಿಳಿದುಕೊಂಡು ನೋಡಬೇಕು. (೮) ಕರ್ಮೇಂದ್ರಿಯಗಳ [ಮಲ, ಮೂತ್ರದ್ವಾರ, ಹಸ್ತ, ಪಾದ, ಮತ್ತು ವಾಣಿ ಗಳ] ಮುಖಾಂತರ ಜೀವವು ಬಹಳ ಉತ್ಸುಕತೆಯಿಂದ ವಿಷಯದ ಭೋಗ ಭೋಗಿಸುವದು. ಈಶ್ವರನು ಜಗತ್ತಿನಲ್ಲಿ ಈ ಬಗೆಯ ಉಪಾಯ [ಯೋಜನೆ] ಮಾಡಿ ಇಟ್ಟಿರುವನು. (೯) ಭೋಗಿಸುವ ವಿಷಯಗಳು ಬಹಳಷ್ಟು ಉತ್ಪನ್ನ ಮಾಡಲಾಗಿರುವವು. ಆದರೆ ಅವನ್ನು ಶರೀರದ ಹೊರತಾಗಿ ಭೋಗಿಸಲಿಕ್ಕೆ ಬರುವದಿಲ್ಲ. ಅಂತೆಯೇ ಅನೇಕ ಪ್ರಕಾರದ ಘೋಟಾಳೆಯ, ತೊಡಕಿನ–ಗೊಂದಲದ, [ಗುಂತಾ ಗುಂತಿಯ] ಶರೀರಗಳನ್ನು ಈಶ್ವರನು ನಿರ್ಮಾಣ ಮಾಡಿರು ವನು. (೧೦) ಶರೀರವು ಎಲವು ಮಾಂಸಗಳಿಂದ ತಯಾರ ಆದದ್ದು ಇರುವದು. ಇದರಲ್ಲಿ ಅನೇಕ ಪ್ರಕಾರದ ಗುಣ ವಿರುವದು. ಇಂಥ ಶರೀರದಂತಹ ಯಂತ್ರ ಬೇರೊಂದು ಯಾವುದೂ ಜಗತ್ತಿನಲ್ಲಿ ಇಲ್ಲ. (೧೧) ಇಂಥ ಶರೀರವನ್ನು ನಿರ್ಮಾಣ ಮಾಡಿ ವಿಷಯ ಭೋಗದಿಂದ ಇದನ್ನು ಬೆಳೆಸಲಾಯಿತು. ಈ ಶರೀರದಲ್ಲಿ ಚಿಕ್ಕ(ಸಣ್ಣ)ದೊಡ್ಡ ಅನ್ನುವ ಭೇದ ನಿರ್ಮಾಣಗೊಂಡಿರುವದು. (೧೨) ಜಗದೀಶ್ವರನು ಈ ಅಸ್ಥಿ ಮಾಂಸದ ಶರೀರವನ್ನು ನಿರ್ಮಾಣ ಮಾಡಿದನು. ನಿರ್ಮಾಣಮಾಡುವಾಗ ವಿವೇಕದಿಂದ ಗುಣ ವಿಚಾರಮಾಡಿ ಇದನ್ನು ನಿರ್ಮಿಸಿರುವನು. [ಪ್ರತಿ ಶರೀರದಲ್ಲಿ ವಿಚಾರ ಮತ್ತು ಗುಣಗಳನ್ನು ಶರೀರ ಪೋಷಣಕ್ಕಾಗಿ ಇಟ್ಟಿರುವನು.] (೧೩) ಶರೀರ ಅಂದರೆ ಅಸ್ಥಿ ಮಾಂಸದ ಗೊಂಬೆ ಇರುವದು. ನಿಜವೇ ಆದರೆ ಇದರಲ್ಲಿ ಜ್ಞಾನ ಇಡಲಾಗಿದೆ. ಇದರ ಸಾಮರ್ಥ್ಯದಿಂದ ಜೀವಕ್ಕೆ ಸರ್ವಕಲಾ ನೈಪುಣ್ಯ ಸಾಧ್ಯವಾಗುವದು. ಅರ್ಥಾತ್ ಅಲ್ಲಲ್ಲಿ ಶರೀರದೊಳಗೆ ಭೇದಗಳು ಕಂಡುಬರುವವು. ದೇಹ ದೇಹದಲ್ಲಿ ಕೂಡಾ ಭಿನ್ನ ತನ [ಭೇದತ್ವ] ಕಂಡುಬರುವದು. ಈ ಶರೀರ ಭೇದಕ್ಕನುಸರಿಸಿ ಆಯಾ ಶರೀರದ ಜ್ಞಾನವೂ ಸಹ ಬೇರೆ ಬೇರೆ ಇರುವದು. (೧೪) ಯಾವ ಶರೀರದಲ್ಲಿ ಎಷ್ಟರ ಮಟ್ಟಿಗೆ ಜ್ಞಾನವಿರುವದೋ ಅದರ ಪ್ರಮಾಣದಲ್ಲಿ ಆ ಶರೀರಕ್ಕೆ ಕಲಾ, ಜ್ಞಾನ ಸಾಧ್ಯವಾಗುವದು. ಶರೀರದಲ್ಲಿ ಆ ಯಾವ ಭೇದ ಕಂಡುಬರುವದೋ ಅದಕ್ಕೂ ಕೂಡಾ ಯೋಗ್ಯ ಕಾರಣವಿರುವದು. ಆಯಾ ಭೇದಗಳ ಉಪಯೋಗ ಬಹಳ ದೊಡ್ಡದಿರುವದು. ಈ ಭೇದದ ಯೋಗದಿಂದಲೇ ಸರ್ವ ವ್ಯವಹಾರ ಅಂದರೆ ದೇಹ ಪೋಷಣ, ಸಂರಕ್ಷಣ, ಇತ್ಯಾದಿ ಅನೇಕ ವ್ಯವಹಾರಗಳು ನಡೆಯುವವು. ಆದರೆ ತೀಕ್ಷ್ಣ ಬುದ್ಧಿಯ ಹೊರತಾಗಿ ಇದು ಲಕ್ಷ್ಯದಲ್ಲಿ ಬರುವದಿಲ್ಲ. (೧೫) ಮೂಲ ವಸ್ತುವಿನಲ್ಲಿ ಭೇದವಿಲ್ಲ. ಭೇದ ಮತ್ತು ಅಭೇದ ಈ ಸಂಕಲ್ಪವು [ಇಚ್ಛೆ] ಮಾಯೆಯಲ್ಲಿ ನಿರ್ಮಾಣವಾಗುವದು. ಯಾರು ಊರ್ಧ್ವ ಮುಖ [ಬ್ರಹ್ಮದ ಕಡೆಗೆ ಮುಖ] ರಾಗುವರೋ ಅಂದರೆ ಯಾರು ಅಂತರ್ಮುಖರಾಗಿ ಸೂಕ್ಷ್ಮದಲ್ಲಿ ಸೇರುವರೋ ಅವರು ಮಾತ್ರ ಅಭೇದದವರೆಗೆ ಹೋಗಿ ಮುಟ್ಟುವರು. ಈ ಎಲ್ಲ ಕರಾಮತಿ, ಜಂಜಾಲವು ಅಂತರಾತ್ಮನ ಅದ್ಭುತ ಕಾರ್ಯವಿರುವದು: ಈಶ್ವರನಿಗೆ ಈ ವಿಚಿತ್ರ ವಿಶ್ವ ನಿರ್ಮಾಣ ಮಾಡಬೇಕಾಗಿದ್ದಿತು ಆದ್ದರಿಂದ ಇವನೇ ಭೇದ ನಿರ್ಮಾಣ ಮಾಡಿದನು. ಊರ್ಧ್ವಮುಖ[ಬ್ರಹ್ಮನಕಡೆ ಮುಖ]ಮಾಡಿನೋಡಿದ್ದಾದರೆ ಭೇದಕ್ಕೆಆಸ್ಪದವೇ ಇಲ್ಲ ಅಂದಮೇಲೆ ಭೇದವಲ್ಲಿ ಉಳಿಯು ಬೇಕು.(೧೬)ಈ ಸೃಷ್ಟಿಯ ನಿರ್ಮಾಣ ಮಾಡಬೇಕು ಎಂದು ಅಂದುಕೊಂಡಾಗ ಭೇದವು ಅವಶ್ಯವಾಗಿ ಇದ್ದಿತು.ಅಥವಾ ಹುಟ್ಟಿತು [ಸೃಷ್ಟಿಯ ಉತ್ಪತ್ತಿ ಸ್ಥಿತಿ ಚಾಲೂ ಇದ್ದಾಗ ಭೇದಭಾವ ಇರತಕ್ಕದ್ದೇ]. ಸೃಷ್ಟಿಯ ಸಂಹಾರ ಮಾಡಿದ ಕೂಡಲೇ ಸರ್ವವೂ ನಷ್ಟವಾಗುವದು. ಆಗ ಅಲ್ಲಿ ಸಹಜವಾಗಿ ಅಭೇದವಿರುವದು. ಭೇದದ ಅಭಾವ ಇರುವದು. ಮಾಯಾ ಇರುವವರೆಗೂ ಭೇದ ವ ಅಭೇದ ಈ ಭಾಷಾ ಸಂಭವಿಸುವದು. ಭೇದಾ ಭೇದದ ಮಾತುಗಳು ಮಾಯೆ ಯಿಂದಾಗಿಯೇ ಇರುವವು. (೧೭)

ಮಾಯೇಮಧೇ ಅಂತರಾತ್ಮಾ । ನಕಳೇ ತಯಾಚಾ ಮಹಿಮಾ ।
ಜಾಲಾ ಚತುರ್ಮುಖ ಬ್ರಹ್ಮಾ। ತೋ ಹೀ ಸಂದೇಹೀ ಪಡೆ ॥೧೮॥

ಪೀಳ ಪೇಚ ಕಡೋ ವಿಕಡೀ । ತರ್ಕ ತೀಕ್ಷ್ಣಣ ಘಡೀನೇ ಘಡೀ ।
ಮನಾಸೀ ಹೋಯೆ ತಾಂತಡೀ । ವಿವರಣ ಕರಿತಾ ॥೧೯॥

ಆತ್ಮತ್ವೇ ಲಾಗತೇ ಸಕಳ ಕಾಂಹೀ । ನಿರಂಜನೀ ಹೇ ಕಾಂಹೀ ಚ ನಾಹೀ ।
ಯೇಕಾಂತಕಾಳೀ ಸಮಜೋನ ಪಾಹೀ । ಮ್ಹಣಿಜೆ ಬರೇ ॥೨೦॥

ದೇಹಸಾಮರ್ಥ್ಯಾನುಸಾರ । ಸಕಳ ಕರೀ ಜಗದೇಶ್ವರ ।
ಥೋರ ಸಾಮರ್ಥ್ಯೇ ಅವತಾರ । ಬೋಲಿಜೇತೀ ॥೨೧॥

ಶೇಷ ಕೂರ್ಮ ವರ್ಹಾವ ಜಾಲೇ । ಯೇವಢೇ ದೇಹ ವಿಶಾಳ ಧರಿಲೇ ।
ತೇಣೇ ಕರಿತಾ ರಚನಾ ಚಾಲೇ । ಸಕಳ ಸೃಷ್ಟೀಚೀ ॥೨೨॥

ಈಶ್ವರೇ ಕೇವಢೇ ಸೂತ್ರ ಕೇಲೇ । ಸೂರ್ಯಬಿಂಬ ಧಾವಾಯಾ ಲಾವಿಲೇ ।
ಧುಕಟಾಕರವೀ ಧರವಿಲೇ । ಅಗಾಧ ಪಾಣೀ ॥೨೩॥

ಪರ್ವತಾ ಐಸೇ ಢಗ ಉಚಲತೀ । ಸೂರ್ಯಬಿಂಬಾಸೀ ಆಚ್ಛಾದಿತೀ ।
ತೇಥೇ ಸವೇ ಚಿ ವಾಯೋಚೀ ಗತೀ । ಪ್ರಗಟ ಹೋಯೇ ॥೨೪॥

ಝಿಡಕಝಿಡಕು ಧಾವೇ ವಾರಾ । ಜೈಸಾ ಕಾಳಾಚಾ ಮ್ಹಣಿಯಾರಾ ।
ಢಗ ಮಾರೂನೀ ದಿನಕರಾ । ಮೋಕಳೇ ಕರೀ ॥೨೫॥

ಬೈಸತೀ ವಿಜಾಂಚೆ ತಡಾಖೇ । ಪ್ರಾಣಿಮಾತ್ರ ಅವಚಿತಾ ಧಾಕೇ ।
ಗಗನ ಕಡಕಡೂನ ತಡಕೇ । ಸ್ಥಳಾವರೀ ॥೨೬॥

ಮೂಲ ಮಾಯೆಯಲ್ಲಿಯೇ ಅಂತರಾತ್ಮಾ ಇರುವನು. ಇವನ ಮಹಿಮಾ ತಿಳಿಯುವದಿಲ್ಲ. ಇಷ್ಟೇ ಅಲ್ಲ ಬ್ರಹ್ಮದೇವನಿಗೆ ನಾಲ್ಕು ಮುಖಗಳಿದ್ದರೂ ಕೂಡಾ ಅಂತರಾತ್ಮನು ಇವನನ್ನು ಸಂಶಯದಲ್ಲಿ ಕೆಡವುವನು. ಮಾನವೀ ಬುದ್ಧಿಯಿಂದ ವಿಶ್ವದ ಗೂಢವನ್ನು ಬಿಡಿಸಬೇಕೆಂದು ಎಷ್ಟೇ ಪ್ರಯತ್ನಮಾಡಿದರೂ ಕೂಡಾ ಕೊನೆಗೆ "ಈ ವಿಶ್ವವು ಏಕೆ ನಿರ್ಮಾಣವಾಯಿತು ?" "ಇದೇ ವಿಶ್ವವು ಏಕೆ ನಿರ್ಮಾಣವಾಯಿತು ?" "ಈ ವಿಶ್ವದ ನಿರ್ಮಾಣವೇ ಏಕಾಯಿತು ?" "ಈ ವಿಶ್ವವೇ ಏಕೆ ನಿರ್ಮಾಣವಾಯಿತು ?" ಮತ್ತು "ಈ ವಿಶ್ವವು ಹೀಗೇ ಏಕೆ ನಿರ್ಮಾಣ ವಾಯಿತು ?" ಈ ಪ್ರಶ್ನೆಗಳಿಗೆ ತರ್ಕ ದೃಷ್ಟಿಯಿಂದ ಸಮಾಧಾನ ಮಾಡುವ ಕೊಡುವ ಉತ್ತರಗಳು ಸಿಗುವದಿಲ್ಲ. ಅಂತೆಯೇ ವಿಶ್ವ ಮತ್ತು ಇದರ ವ್ಯವಹಾರ ಇದರ ಮೇಲೆ ವಿಚಾರಮಾಡುತ್ತಾ ಮಾಡುತ್ತಾ ಮನುಷ್ಯ ವಿಸ್ಮಯ ಹೊಂದುವನು. ಮತ್ತು ವಿಶ್ವಕರ್ತನ ಮಹಿಮಾ ಹೊಗಳ ಹತ್ತುವನು. ಆದರೆ ಇವನ ಆ ಮಹಿಮೆ ಕೂಡಾ ಸಂಪೂರ್ಣವಾಗಿ ಇವನಿಗೆ ತಿಳಿಯುವದಿಲ್ಲ. (೧೮) ಈ ಅಂತರಾತ್ಮನ ಬಗ್ಗೆ ವಿಚಾರಮಾಡುವಾಗ ಮೇಲಿಂದ ಮೇಲೆ ತರ್ಕದ ಅನೇಕ ಪ್ರಕಾರದ ಕ್ಲಿಷ್ಟ [ಪೇಚ] ಪ್ರಸಂಗ ಡಾವಪೇಚಿನ ಗೂಢ ಹಾಗೂ ತೀಕ್ಷ್ಣ ತರ್ಕಗಳನ್ನು ಉಪಯೋಗಿಸಿಯೂ ಕೂಡಾ ಅಂತರಾತ್ಮನ ಅಂತ, ಪಾರ ಹತ್ತುವದಿಲ್ಲ. ಆ ಕಾಲದಲ್ಲಿ ಮಾನವೀ ಮನವು ಅತ್ಯಂತ ಹತಬಲವಾಗಿ, ಮಂದವಾಗಿ, ದುರ್ಬಲವಾಗಿ ಹೋಗುವದು. (೧೯) ಅಂತರಾತ್ಮನ ಬಗ್ಗೆ ವಿಚಾರಮಾಡುವಾಗ ಈ ಎಲ್ಲ ವಿಷಯಗಳು ಬೇಕಾಗುವವು. ಆದರೆ ನಿರಂಜನ ನಿರ್ಗುಣ ನಿರ್ವಿಕಲ್ಪನಾದ ಪರಬ್ರಹ್ಮನ ವಿಷಯದಲ್ಲಿ ಇವಾವವೂ ಬೇಕಾಗುವದಿಲ್ಲ. ಇಷ್ಟೇ ಅಲ್ಲ, ಇವುಎಷ್ಟೂ ಉಪಯೋಗಬೀಳುವದಿಲ್ಲ. ಈ ಎಲ್ಲ ವಿಷಯದ ಬಗ್ಗೆ ಏಕಾಂತದಲ್ಲಿ ಕುಳಿತು ಅಭ್ಯಾಸ ಪೂರ್ಣ ವಿಚಾರಮಾಡಿದರೆ ಆಗ ಅಲ್ಲಿ ಈ ಎಲ್ಲ ವಿಷಯವು ಚನ್ನಾಗಿ ಲಕ್ಷ್ಯಕ್ಕೆ ಬರುವದು. ಎಲ್ಲವೂ ಸ್ಪಷ್ಟ(ಉಲಗಡ)ಆಗುವದು.(೨೦)ಈಗ ಈ ಅವತಾರದ ಬಗ್ಗೆ ಇನ್ನೊಂದು ವ್ಯಾಖ್ಯೆ ಹೇಳುವರು."ಯಾವ ಪುರುಷ ಅತಿಶಯ ವಿಶಾಲ ವಿಚಾರದವನಿರುವನೋ ಅವನು ಅವತಾರೀ ಪುರುಷ ಎಂದು ತಿಳಿಯಿರಿ. ಎಂದು ಈ ಮೊದಲು ಹೇಳಿರುವೆವು. ಯಾವ ಪುರುಷನ ಸಾಮರ್ಥ್ಯ ಅಪಾರವಿರುವದೋ ಅವನೇ ಅವತಾರೀ ಪುರುಷನೆಂದು ತಿಳಿಯಬೇಕು. ಎಂದು ಪುನಃ ಇಲ್ಲಿ ಹೇಳುವರು : ಜಗತ್ತಿನಲ್ಲಿಯ ಸರ್ವ ದೇಹದಲ್ಲಿ ಅಂತರಾತ್ಮಾ ವಿಭಾಗ ಹೊಂದಿರುವನು. ಪ್ರತಿಯೊಬ್ಬರಲ್ಲಿ ಇವನ ಅಂಶವಿರುವದು. ಯಾವ ದೇಹದ ಸಾಮರ್ಥ್ಯ ಎಷ್ಟು ಇರುವದೋ ಅಷ್ಟೇ ಕಾರ್ಯವನ್ನು ಜಗದೀಶ್ವರನು [ಮೂಲಮಾಯಾ] ಆ ದೇಹದ ಕಡೆಯಿಂದ ಮಾಡಿಸಿಕೊಳ್ಳುವನು. ಯಾವ ದೇಹದಲ್ಲಿ ಅತಿಶಯ ದೊಡ್ಡ ಶ್ರೇಷ್ಠ ಸಾಮರ್ಥ್ಯ ಕಂಡುಬರುವದೋ ಅಂಥವರಿಗೆ ಅವತಾರ ಅಂದರೆ ಅವತಾರೀ ಪುರುಷರೆಂದು ಅನ್ನುವರು. (೨೧) ಶೇಷ, ಕೂರ್ಮ, ವರಾಹ, ಇವರ ದೇಹ ಬಹಳಷ್ಟು ವಿಶಾಲವಿರುವವು. ಇವರ ಆಧಾರದ ಮೇಲೆ ಯಾವತ್ತೂ ಸೃಷ್ಟಿ ನಡೆದಿರುವದು. (೨೨) ಆ ಯಾವ ಅಂತರಾತ್ಮಾ ವಿಶ್ವದಲ್ಲಿಯ ಪಂಚಭೂತಗಳ ಮೇಲೆ ತನ್ನ ಸತ್ತಾಧಿಕಾರ ಹೇಗೆ ನಡೆಸುವನು. ಇದರ ಬಗ್ಗೆ ಈಗ ವರ್ಣನೆ ಮಾಡುವರು : ಈಶ್ವರನು ಎಷ್ಟೊಂದು ಕರಾಮತ್ತು [ಚಮತ್ಕಾರ] ಮಾಡಿರುವನೆಂಬುದನ್ನು ನೋಡಿರಿ. ಇವನು ಸೂರ್ಯನಿಗೆ ಆಕಾಶದಲ್ಲಿ ಓಡಲಿಕ್ಕೆ ಹಚ್ಚಿದ್ದಾನೆ. ಢಗ ಅಂದರೆ ಮೋಡ-ಹೊಗೆಯಾದರೆ ಇದರಲ್ಲಿ ಬಹಳಷ್ಟು ನೀರನ್ನು ತುಂಬಿರುವನು, ಇಟ್ಟಿರುವನು. [ಸಂಗ್ರಹಿಸಿರುವನು] (೨೩) ಆಕಾಶದಲ್ಲಿ ಪರ್ವತಪ್ರಾಯ ಮೋಡಗಳು ಉತ್ಪನ್ನವಾಗಿ ಸೂರ್ಯ ಬಿಂಬವನ್ನು ಮುಚ್ಚಿ ಬಿಡುವವು. ಆಮೇಲೆ ಅಲ್ಲಿ ಕೂಡಲೇ ವಾಯುವಿನ ಗತಿ ಗಾಳಿ ಬೀಸುವಿಕೆ ಪ್ರಕಟವಾಗುವದು. (೨೪) ಆಗ ಕೇಳುವದೇನು ? ಒಮ್ಮೆಲೇ ಕಾಲ ಯಮನ ಸೇವಕರಂತೆ ಝಂಝಾವಾತ ಗಾಳಿಯು ಭಾರೀ ಜೋರಿನಿಂದ ಬೀಸಿ ಬೀಸಿ ಹೊಡೆಯುಹತ್ತುವದು. ಇದು ಮೋಡಗಳನ್ನು ಹೊಡೆದು ಓಡಿಸಿ ಸೂರ್ಯ ಬಿಂಬವನ್ನು ಮೋಕಳೀಕ [ಖುಲ್ಲಾ] ಮಾಡುವದು. (೨೫) ಆಕಾಶದಲ್ಲಿ ಒಮ್ಮೊಮ್ಮೆ ಸಿಡಿಲು, ಮಿಂಚು, ಗುಡುಗು ಇವುಗಳ ಕಡಕಡದ [ಖಟ್‌ಖಡಾ] ಸಪ್ಪಳ ಪ್ರಾರಂಭವಾಗುವದು. ಪ್ರಾಣಿಗಳ ಮನದಲ್ಲಿ ಇದರಿಂದ ಭಯ ಉತ್ಪನ್ನವಾಗುವದು. ಮತ್ತು ಆಕಾಶವು ಖಡಖಡ ಎಂದು ಸಿಡಿಲು ಗರ್ಜಿಸಿ ಪೃಥ್ವಿಯ ಮೇಲೆ ಜೋರಿನಿಂದ ಅಪ್ಪಳಿಸಿದಂತಾಗುವದು. ಒಮ್ಮೊಮ್ಮೆ ಭೂಮಿ ಹರಿದಂತೆ ಆಗುವದು. ಬಿರುಕು ಬಿಡುವದು. (೨೬)

ಯೆಂಹಲೋಕಾಸೀ ಯೇಕ ವರ್ಮ ಕೇಲೇ । ಮಹದ್ಭೂತೇ ಮಹದ್ಭೂತ ಆಳಿಲೇ ।
ಸಕಳಾ ಸಮಭಾಗೇ ಚಾಲಿಲೇ । ಸೃಷ್ಟಿರಚನೇಸೀ ॥೨೭॥

ಏಸೇ ಅನಂತ ಭೇದ ಆತ್ಮಯಾಚೇ । ಸಕಳ ಜಾಣತೀ ಏಸೇ ಕೈಚೇ ।
ವಿವರತಾ ವಿವರತಾ ಮನಾಚೇ । ಫಡಕೇ ಹೋತೀ ॥೨೮॥

ಏಸೀ ಮಾಝೀ ಉಪಾಸನಾ । ಉಪಾಸಕೀ ಆಣಾವೀ ಮನಾ ।
ಅಗಾಧ ಮಹಿಮಾ ಚತುರಾನನಾ । ಕಾಯ ಕಳೇ ॥೨೯॥

ಆವಾಹನ ವಿಸರ್ಜನ । ಹೇ ಚಿ ಭಜನಾಚೇ ಲಕ್ಷಣ ।
ಸಕಳ ಜಾಣತೀ ಸಜ್ಜನ । ಮೀ ಕಾಯ ಸಾಂಗೋ ॥೩೦॥

ಇತಿ ಶ್ರೀ ದಾಸಬೋಧೇ ಗುರುಶಿಷ್ಯ ಸಂವಾದೇ
"ದೇಹಕ್ಷೇತ್ರನಿರೂಪಣ" ನಾಮ ಸಮಾಸ ಅಷ್ಟಮ ॥

● ●

ಈ ದೃಶ್ಯ ವಿಶ್ವದಲ್ಲಿ ಈಶ್ವರನು ಒಂದಾನೊಂದು ಮರ್ಮ, ಅಥವಾ ರಹಸ್ಯ, ವಿಚಿತ್ರ ಗುಟ್ಟು ಹೇಗೆ ಇಟ್ಟಿರುವನೆಂದರೆ ಒಂದು ಮಹಾಭೂತವು ಇನ್ನೊಂದು ಮಹಾಭೂತವನ್ನು ಆವರಿಸುವದು. ಅಂದರೆ ಒಂದು ಮಹಾಭೂತದ ಹಿಡಿತದಲ್ಲಿ, ಇನ್ನೊಂದು ಮಹಾಭೂತವು ಇರುವದು. ಆದ್ದರಿಂದ ಎಲ್ಲ ಮಹಾಭೂತಗಳು ಸಮ ಪ್ರಮಾಣದಿಂದ ಉಳಿದು. ಸೃಷ್ಟಿ ರಚನೆ ಇತ್ಯಾದಿ ಕಾರಭಾರವು ವ್ಯವಸ್ಥಿತವಾಗಿ ನಡೆಯುವದು. (೨೭) ಈ ಪ್ರಕಾರ ಅಂತರಾತ್ಮನಲ್ಲಿ ಅನಂತ ಭೇದಗಳು ಇರುವವು. ಈ ಭೇದಗಳೆಲ್ಲವನ್ನು ತಿಳಿದವರು ಯಾರೂ ಇಲ್ಲ. ಈ ಭೇದಗಳ ಬಗ್ಗೆ ವಿವರಿಸಹತ್ತಿದರೆ ಎಷ್ಟು ಹೇಳಿದರೂ ಮುಗಿಯುವದಿಲ್ಲ. ವಿವರಿಸಿ ವಿವರಿಸಿ ಮಾನವನ ಮನವು ಸೋತು ಹರಿದು ಹೋಗಾಗುವ ಪ್ರಸಂಗ ಬಂದರೂ ಮುಗಿಯುವದಿಲ್ಲ. (೨೮) ಶ್ರೀ ಸಮರ್ಥರು ಕೊನೆಯಲ್ಲಿ ಹೇಳುವದೇ ನಂದರೆ: ಯಾವತ್ತೂ ಸೃಷ್ಟಿಯಲ್ಲಿಯ ಆ ಅಂತರಾತ್ಮನ ಸತ್ತಾದ ಅನುಭವ ಹೊಂದುವದೇ ನನ್ನ ಉಪಾಸನಾದ ಮರ್ಮವಿರುವದು : ನನ್ನ ಉಪಾಸನಾ ಅನ್ನುವದು ಹೀಗಿರುವದು : ಯಾವನು ಉಪಾಸಕನಿರುವನೋ ಅಂಥವನು ಇದರ ಬಗ್ಗೆ ವಿಚಾರಮಾಡಬೇಕು. ಈ ಉಪಾಸನೆಯ ಮಹಿಮಾ ಪ್ರತ್ಯಕ್ಷ ಬ್ರಹ್ಮದೇವನಿಗೂ ಕೂಡಾ ತಿಳಿಯು ವದಿಲ್ಲ. (೨೯) ಆವಾಹನ ಮತ್ತು ವಿಸರ್ಜನ ಇದೇ ಭಜನೆಯ ಲಕ್ಷಣವಿರುವದು. ಸಂತ ಸಜ್ಜನರು ಇದನ್ನು ತಿಳಿದಿರುವರು. ನಾನು ಹೆಚ್ಚಿಗೆ ಹೇಳುವ ಅವಶ್ಯಕತೆಯು ಇರುವದಿಲ್ಲ. ಪೂಜೆಯ ಸಲುವಾಗಿ ದೇವರನ್ನು ಕರೆ ಯುವದು ಅಥವಾ ಕರೆದು ತಂದು ಕೂಡಿಸುವದು–ಇದು ಆವಾಹನವಾಗಿರುವದು. ಮತ್ತು ಪೂಜಾ ಮಾಡಿದ ಮೇಲೆ ದೇವರನ್ನು ಅವನ ಸ್ವಸ್ಥಾನಕ್ಕೆ ಮುಟ್ಟಿಸುವದು–ಇದು ವಿಸರ್ಜನವಾಗಿರುವದು. ಸಾಧಕಾವಸ್ಥೆಯಲ್ಲಿ ದೃಶ್ಯ ವಿಶ್ವದ ಪ್ರತಿಯೊಂದು ಘಟನೆಯ ಅಂತರ್ಯಾಮದಲ್ಲಿ ಅಂತರಾತ್ಮನ ಅಸ್ತಿತ್ವವನ್ನು ನೋಡುವದು. ಇದು ಆವಾಹನ ವಾಗಿರುವದು. ಆದರೂ ನಿರಂಜನ ಪರಬ್ರಹ್ಮವು ಅಂತರಾತ್ಮನ ಮೂಲ ಸ್ಥಾನವಿರುವದು, ಸ್ವಸ್ಥಾನವಿರುವದು. ಆದ್ದರಿಂದ ದೃಶ್ಯ ವಿಶ್ವದಲ್ಲಿಯ ಎಲ್ಲ ಸ್ಥಳಗಳಲ್ಲಿಯ ಅಂತರಾತ್ಮನ ಮಹಿಮೆಯನ್ನು ನೋಡಿ ಆದ ಮೇಲೆ ಅಲ್ಲಿಂದ ನಿರ್ವಿಕಾರ ನಿರಂಜನ ಕೇವಲ ದೃಶ್ಯರಹಿತ ಪರಬ್ರಹ್ಮದವರೆಗೆ ಹೋಗಿ ಮುಟ್ಟುವದೇ ಜಗಿ ಸಿ. ಇದು ಅಂತರಾತ್ಮನ ವಿಸರ್ಜನವಾಗಿರುವದು. ಇದೆಲ್ಲವನ್ನು ಯಾರು ಸ್ವಾನುಭವೀ ಸಂತರಿರುವರೋ ಅವರು ಮಾತ್ರ ಈ ವಿಲಕ್ಷಣ ಆವಾಹನ ಮತ್ತು ವಿಸರ್ಜನದ ಬಗ್ಗೆ ತಿಳಿದವರಾಗಿರುವರು. ಇತರರಿಗೆ ಇದರ ಕಲ್ಪನಾ ಬರುವದು ಬಹಳ ಕಠಿಣ ವಿರುವದು. (೩೦)

ಶ್ರೀ ದಾಸಬೋಧದ ಇಪ್ಪತ್ತನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
"ದೇಹ ಕ್ಷೇತ್ರ ನಿರೂಪಣ"ವೆಂಬ ಹೆಸರಿನ ಎಂಟನೇ ಸಮಾಸವು ಮುಗಿದುದು.

● ●

## ದಶಕ ೨೦. ಸಮಾಸ ೯. ಸೂಕ್ಷ್ಮ ನಿರೂಪಣ (ನುಡಿ ೩೦)

ಬಹು ಜನರು ತಮಗೆ ದೇವರ ಭೆಟ್ಟಿಯಾಗಬೇಕೆಂದು ಮನಸಾ ಹಂಬಲಿಸುವರು. ಆದರೆ ಇವರು ವಿವೇಕದ ಮಾರ್ಗದಿಂದ ಹೋಗುವದಿಲ್ಲ. ಅಂತೆಯೇ ಖರೇ ದೇವರು ಹೇಗಿರುವನೆಂಬುದು ಇವರಿಗೆ ಗೊತ್ತಾಗುವದಿಲ್ಲ. ತಿಳಿದಿರುವದಿಲ್ಲ ಅಲ್ಲದೇ ದೇವರ ಪ್ರಾಪ್ತಿಮಾಡಿಕೊಳ್ಳುವ ಯೋಗ್ಯ ಸಾಧನಗಳೂ ಇವರಿಗೆ ಗೊತ್ತಿರುವದಿಲ್ಲ. ವಿಚಾರ ಮಾಡುತ್ತ ಹೋದ ಮೇಲೆ ಯಾವುದು ಶಾಶ್ವತವಾಗಿ ಉಳಿಯುವದಿಲ್ಲವೋ ಅಂತಹದಕ್ಕೆ ದೇವ ಎಂದು ಅನ್ನಲಿಕ್ಕೆ

ಬರುವದಿಲ್ಲ. ಆದರೆ ಈ ಮಾತು ಜನರ ಲಕ್ಷ್ಯದಲ್ಲಿ ಬರುವದಿಲ್ಲ. ಇದಕ್ಕೆ ಉಪಾಯವಿಲ್ಲ. ಜನರು ಅನ್ನುವದೇನೆಂದರೆ "ಭೋಳಾ [ಮುಗ್ಧ] ಭಾವವು ಸಿದ್ಧಿಗೆ ಒಯ್ಯುವದು." ಆದರೆ ಇದು ಇವತ ಗೈರ ಸಮಜೂತ ಇರುವದು. ಭೋಳಾ ಭಾವ ಅಂದರೆ ಅಜ್ಞಾನ. ಅಜ್ಞಾನಕ್ಕೆ ಜ್ಞಾನವು [ಸಹನವಾಗುವದಿಲ್ಲ] ಆಗಿಬರುವದಿಲ್ಲ ಅಥವಾ ಹೊಂದು ವದಿಲ್ಲ. ಹಾಗೆಯೇ ಜ್ಞಾನೀ ಮನುಷ್ಯನಿಗೆ ಅಜ್ಞಾನವು ಪಸಂದ ಬೀಳುವದಿಲ್ಲ. ವ್ಯವಹಾರದಲ್ಲಿ ನಾವು ಮಣ್ಣಿನ ದೇವರನ್ನು ತರುವೆವು. ಅದರ ಪೂಜಾ, ಅರ್ಚನೆ ಮಾಡುವೆವು. ಕೊನೆಗೆ ಅದನ್ನು ಜಲ್ಲಿ ಬಿಡುವೆವು. [ವಿಸರ್ಜಿಸುವೆವು] ಆಗ ಮನಸ್ಸಿಗೆ ಇದರಿಂದ ಸಮಾಧಾನವಾಗುವದಿಲ್ಲ. ಖರೇ ಅಂದರೆ ದೇವ ಹೇಗೆ ಇರುವನು. ಮತ್ತು ಇವನನ್ನು ಹೇಗೆ ಶೋಧಿಸಬೇಕು. ಇದರ ಬಗ್ಗೆ ವಿವರವಾಗಿ ಹೇಳುವ ಅನೇಕ ನಿರೂಪಣ ಪ್ರವಚನಾದಿಗಳು ಇರುತವೆ. ಸಾಧನ ಗಳಿರುವವು. ಆದರೆ ಬ್ರಹ್ಮಜ್ಞಾನದ ಬಗೆಗಿನ ಉಪಾಯವು ಚನ್ನಾಗಿ ತಿಳಿಯದ ಹೊರತು ಯಾವುದನ್ನೂ ತೆಗೆದು ಕೊಳ್ಳಲಿಕ್ಕೆ ಒಪ್ಪಲಿಕ್ಕೆ ಬರುವದಿಲ್ಲ. ಮಾಯೆಯನ್ನು ದಾಟಿ ಮೂಲ ಪರಬ್ರಹ್ಮದವರೆಗೆ ಹೋಗಿ ಮುಟ್ಟುವದೇ ಪರಮಾರ್ಥದ ಮಾರ್ಗವಿರುವದು. ಮಾಯೆಯನ್ನು ದಾಟಿ ಹೋಗಲಿಕ್ಕೆ ಅನೇಕ ಉಪಾಯಗಳಿರುವವು. ಈ ಎಲ್ಲ ಉಪಾಯಗಳಲ್ಲಿ ಅಧ್ಯಾತ್ಮ ಶ್ರವಣದ ಉಪಾಯವು ಉತ್ತಮದಲ್ಲಿ ಅತಿ ಉತ್ತಮ ಉಪಾಯವಾಗಿರುವದು. ಶ್ರವಣ ಇಲ್ಲದಿದ್ದರೆ ಸಾಧಕನ ಸಾಧನಕ್ಕೆ ಅಡ್ಡಿಯಾಗುವದು. ಕಷ್ಟವಾಗುವದು. ಮೂಲಮಾಯಾ ಇದು ಸಂಕಲ್ಪ ರೂಪ ವಿರುವದು. ಪರಾವಾಣಿ [ಮೊದಲನೆಯ ವಾಣಿ, ಶಬ್ದದ ಅಥವಾ ಶ್ವಾಸದ ಮೊದಲನೆಯ ಸ್ಫುರಣ] ಯ ಹತ್ತರ ಸ್ಫುರಿಸುವ ಅಂತಃಕರಣ, ಇದು ಅದರ ಸ್ವರೂಪವಿರುವದು. ಇದೇ ಚೈತನ್ಯ ಇರುವದು. ಇದು ಜಡ ದೇಹವನ್ನು ಚೇತನಗೊಳಿಸುವದು. ಯಾವುದು ಮಿಥ್ಯಾ ಇರುವದೋ ಅದು ಕಾಯಂ ಟಿಕಾಯಿಸಿ ಉಳಿಯುವದಿಲ್ಲವಾದ್ದರಿಂದ ಅದರ ನಾದಿಗೆ ಹತ್ತಬಾರದು. ಅದರ ಸಮೀಪಕ್ಕೆ ಹೋಗಬಾರದು. ಹುಸಿವನ್ನು ಮೊದಲಿಗೆ ಉಲಟಾ ಮಾಡಬೇಕು. ಅಂದರೆ ತಿರುಗಿಸಿ ಇಡಬೇಕು. ಆ ಮೇಲೆ ಸಾವಕಾಶವಾಗಿ ಮನವನ್ನು ಉಲಗಡಿಸಿ, ಅದರಲ್ಲಿಯ ತೊಡಕು, ಗುಂಭ, ಗುಹ್ಯಗಳನ್ನು ತಿಳಿಯುತ್ತ ಹೋಗಬೇಕು. ಮಾಯೆಯ ಹದಿನಾಲ್ಕು ಸಂಕೇತಗಳ ಶೋಧ ಮಾಡಿಕೊಳ್ಳಬೇಕು. ನಿರ್ಗುಣ, ನಿರ್ವಿಕಾರ, ಮತ್ತು ನಿಷ್ಕಲಂಕವು ದೇಹದಲ್ಲಿ ಅದೆಯೋ ಅಥವಾ ಇಲ್ಲವೋ ಅನ್ನುವದನ್ನು ನೋಡಬೇಕು. ಮಾಯೆಯನ್ನು ಸರಿಸಿ ಅಥವಾ ದೂರೀಕರಿಸಿ ಒಗೆದು ಮುಂದೆ ಮೂಲಕ್ಕೆ ಹೋದೆವೆಂದರೆ ಆಗ ಖಾತ್ರಿಯಿಂದ ಸಮಾಧಾನವು ದೊರಕುವದು. ಪಿಂಡದ ನಿರಾಸ ಆಯಿತೆಂದರೆ ಮಾಯಾ ಮತ್ತು ಅದರ ತತ್ವಗಳೆಲ್ಲ ನಿರಾಸವಾಗುವವು. ಪರಿಹಾರವಾಗುವವು. ಆದರೆ ಶಾಶ್ವತ ಬ್ರಹ್ಮ ಮಾತ್ರ ಕಾಯಂ ಇರುವದು. ಅದನ್ನು ಗುರುತಿಸಿ ಗಟ್ಟಿಯಾಗಿ ಅಂದರೆ ದೃಢವಾಗಿ ಹಿಡಿಯಬೇಕು. ಶಿವಶಕ್ತಿ ಒಂದೇ ಒಂದು ತತ್ವವಿರುವದು. ಅಲ್ಲಿ ಗುಣಸಾಮ್ಯ ಇರುವದು. ಗುಣಸಾಮ್ಯ ವನ್ನು ತಿಳಿಯುವಂಥ ಸೂಕ್ಷ್ಮ ದೃಷ್ಟಿಯ ವಿವೇಕಿ ಸಾಧು ಪುರುಷನು ಧನ್ಯ ಧನ್ಯನು. [ಅಂಥವನ ದರ್ಶನ ಲಾಭ ಯಾರಿಗೆ ದೊರಕುವದೋ ಅವರ ಪುಣ್ಯಕ್ಕೆ ಎಣೆಯಿಲ್ಲ ]

ದಶಕ. ವಿಂಶತಿ : ಸಮಾಸ. ನವಮ : ಸೂಕ್ಷ್ಮನಿರೂಪಣ (ನುಡಿ ೩೦)

॥ಶ್ರೀರಾಮ ಸಮರ್ಥ॥ ಮೃತ್ತಿಕಾಪೂಜನ ಕರಾವೇ। ಆಣೀ ಸವೇ ಚಿ ವಿಸರ್ಜಾವೇ।
ಹೇ ಮಾನೇನಾ ಸ್ವಭಾವೇ । ಅಂತಃಕರ್ಣಾಸೀ ॥೧॥

ದೇವ ಪೂಜಾವಾ ಆಣೀ ಟಾಕಾವಾ । ಹೇ ಪ್ರಶಸ್ತ ನ ವಟೇ ಜೀವಾ।
ಯಾಚಾ ವಿಚಾರ ಪಾಹಾವಾ । ಅಂತರ್ಯಾಮೀ ॥೨॥

ದೇವ ಕರಿಜೇ ಐಸಾ ನಾಹೀ । ದೇವ ಟಾಕಿಜೆ ಐಸಾ ನಾಹೀ ।
ಮ್ಹಣೋನೀ ಯಾಚಾ ಕಾಂಹೀ । ವಿಚಾರ ಪಾಹಾವಾ ॥೩॥

ದೇವ ನಾನಾ ಶರೀರೇ ಧರಿತೋ । ಧರೂನಿ ಮಾಗುತೀ ಸೋಡಿತೋ ।
ತರೀ ತೋ ದೇವ ಕೈಸಾ ಆಹೇ ತೋ । ವಿವೇಕೇ ವೊಳಖಾವಾ ॥೪॥

ನಾನಾ ಸಾಧನೇ ನಿರೂಪಣೇ । ದೇವ ಶೋಧಾಯಾಕಾರಣೇ ।
ಸಕಳ ಆಪುಲೇ ಅಂತಃಕರ್ಣೇ । ಸಮಜಲೇ ಪಾಹಿಜೇ ॥೫॥

ಬ್ರಹ್ಮಜ್ಞಾನಾಚಾ ಉಪಾಯೆ । ಸಮಜಲ್ಯಾವಿಣ ದೇತಾ ನಯೇ ।
ಪದಾರ್ಥ ಆಹೇ ಮಾ ಘೇ ಜಾಯೆ । ಐಸೇ ಮ್ಹಣಾವೇ ॥೬॥

ಸಗಟ ಲೋಕಾಂಚೆ ಅಂತರೀಚಾ ಭಾವ । ಮಜ ಪ್ರತ್ಯಕ್ಷ ಭೇಟವಾವಾ ದೇವ ।
ಪರಂತು ವಿವೇಕಾಚಾ ಉಪಾವ । ವೇಗಳಾ ಚಿ ಆಹೇ ॥೭॥

ವಿಚಾರ ಪಾಹಾತಾ ತಗೇನಾ । ತ್ಯಾಸ ದೇವ ಐಸೇ ಮ್ಹಣವೇನಾ ।
ಪರಂತು ಜನ ರಾಹೇನಾ । ಕಾಯೆ ಕರಾವೇ ॥೮॥

ಥೋರ ಲೋಕ ಮರೋನಿ ಜಾತೀ । ತ್ಯಾ ಚ್ಯಾ ಸುರತಾ ಕರೂನೀ ಪಾಹಾತೀ।
ತೈಸೀ ಚ ಆಹೇ ಹೇ ಹಿ ಗತೀ । ಉಪಾಸನೇಚೀ ॥೯॥

ಥೋರ ವ್ಯಾಪಾರ ಠಾಕೇನಾ ಜನೀ । ಮ್ಹಣೋನಿ ಕೇಲೀ ರಖತವಾನೀ ।
ರಾಜಸಂಪದಾ ತಯಾಚೇನೀ । ಪ್ರಾಪ್ತ ಕೈಚೀ ? ॥೧೦॥

ಮ್ಹಣೋನೀ ಜಿತುಕಾ ಭೋಳಾಭಾವ । ತಿತುಕಾ ಅಜ್ಞಾನಾಚಾ ಸ್ವಭಾವ ।
ಅಜ್ಞಾನೇ ತರೀ ದೇವಾಧಿದೇವ । ಪಾವಿಜೇಲ ಕೈಚಾ ॥೧೧॥

ಅಜ್ಞಾನಾಸೀ ಜ್ಞಾನ ನ ಮಾನೇ । ಜ್ಞಾತ್ಯಾಸ ಅನುಮಾನ ನ ಮಾನೇ ।
ಮ್ಹಣೋನಿ ಸಿದ್ಧಾಂಚೀಯೇ ಖುಣೇ । ಪಾವಲೇ ಪಾಹಿಜೆ ॥೧೨॥

## ದಶಕ ೨೦. ಸಮಾಸ ೯. ಸೂಕ್ಷ್ಮ ನಿರೂಪಣ (ಸುಡಿ ೩೦)

ಬಹಳ ಜನಕ್ಕೆ ದೇವರ ದರ್ಶನವಾಗಬೇಕೆಂದು ಅನಿಸುವದು. ಆದರೆ ದೇವರ ಬಗ್ಗೆ ಇರುವ ಇವರ ಲೌಕಿಕ ಕಲ್ಪನೆ ಬರೋಬರಿ ಇರುವದಿಲ್ಲ. ದೇವರ ಸ್ವರೂಪದ ಬಗ್ಗೆ ನಾವು ಚನ್ನಾಗಿ ತಿಳಿದುಕೊಳ್ಳಬೇಕು: ಮಣ್ಣಿನ ದೇವರನ್ನು ತಂದು ಅದರ ಪೂಜಾ ಮಾಡುವದು, ಕೂಡಲೇ ಅದರ ವಿಸರ್ಜನಮಾಡುವದು, ಇದು ನಮ್ಮ ಅಂತಃಕರಣಕ್ಕೆ ಸ್ವಾಭಾವಿಕವಾಗಿ ಬರೋಬರ ಅನಿಸುವದಿಲ್ಲ. (೧) ಯಾವ ದೇವರ ಪೂಜೆ ಮಾಡಿರುವೆವೋ ಅದನ್ನೇ ಒಗೆದು ಬಿಡುವದು ಮನುಷ್ಯನ ಜೀವಕ್ಕೆ ಪ್ರಶಸ್ತವೆನಿಸುವದಿಲ್ಲ. ಇದರ ಬಗ್ಗೆ ನಿಮ್ಮ ಮನದಲ್ಲಿಯೇ ನೀವು ಯೋಗ್ಯ ವಿಚಾರಮಾಡಬೇಕು. (೨) ದೇವರು ತಯಾರಮಾಡಲಿಕ್ಕೆ ಬರುವಂಥ ವಸ್ತು ಅಲ್ಲ. ಅದರಂತೆ ಅದನ್ನು ಒಗೆದು ಬಿಡಲಿಕ್ಕೆ ಬರುವಂಥದೂ ಕೂಡಾ ಇಲ್ಲ. ಅದ್ದರಿಂದ ಇದರ ಬಗ್ಗೆ ಕೆಲವೊಂದು ರೀತಿಯಲ್ಲಿ ವಿಚಾರ ಮಾಡುವದು ಅವಶ್ಯವಿರುವದು. (೩) ದೇವರು ಅನೇಕ ದೇಹಧಾರಣ ಮಾಡುವನು. ಮತ್ತು ಅದನ್ನು ಧಾರಣ ಮಾಡಿದ ನಂತರ ಹಿಂದಿನಿಂದ ಆ ದೇಹ ತ್ಯಜಿಸುವನು [ಒಗೆದು ಬಿಡುವನು]. ದೇಹಧಾರಣ ಮಾಡುವವ ಮತ್ತು ದೇಹ ಬಿಡುವಂಥವನಾದ ದೇವರು ಹೇಗಿರುವನು. ಇದನ್ನು ವಿವೇಕದಿಂದ ಗುರುತಿಸಬೇಕು ತಿಳಿಯಬೇಕು. (೪) ದೇವರನ್ನು ಶೋಧಿಸುವ ಬಗೆಯನ್ನು ಹೇಳುವ ಅನೇಕ ನಿರೂಪಣಗಳು ಪ್ರವಚನಗಳೂ ಇರುವವು. ಅನೇಕ ಸಾಧನಗಳು ಇರುವವು. ಆದರೆ ಇವನ್ನೆಲ್ಲ ನಾವು ನಮ್ಮ ಅಂತಃಕರಣದಿಂದ ತಿಳಿದುಕೊಳ್ಳಬೇಕು. (೫) ಬ್ರಹ್ಮಜ್ಞಾನದ ಬಗೆಗಿನ ಉಪಾಯವನ್ನು ನಾವು ಸ್ವತಃ ತಿಳಿದುಕೊಳ್ಳಬೇಕಾಗುವದು. ಇದು ಸ್ವತಃಕ್ಕೆ ತಿಳಿಯದ ಹೊರತು ಎರಡನೆಯವರಾರೂ ನಮಗೆ ತಿಳಿಸಿಕೊಡಲಿಕ್ಕೆ ಸಾಧ್ಯವಿಲ್ಲ. ಯಾಕೆಂದರೆ ಇದು ಯಾವುದೋ ಒಂದು ಪದಾರ್ಥವಲ್ಲವಲ್ಲಾ? "ಇದನ್ನು ನೀನು ತೆಗೆದುಕೊಂಡುಹೋಗು" ಎಂದು ಎತ್ತಿ ಕೈಯಲ್ಲಿ ಕೊಡುವ ವಸ್ತುವಾಗಿದ್ದರೆ ಹಾಗೆ ಅನ್ನಬಹುದಾಗಿತ್ತಲ್ಲವೇ ? (೬) ಸರ್ವಸಾಧಾರಣ ಮನುಷ್ಯನ ಮನದಲ್ಲಿ ಯಾವ ಹೇತು ಇರುವದೆಂದರೆ "ನನಗೆ ಪ್ರತ್ಯಕ್ಷ ದೇವರ ದರ್ಶನವಾಗಬೇಕು." ಆದರೆ ದೇವರ ದರ್ಶನ ಮಾಡಿಕೊಳ್ಳುವದಕ್ಕೆ ವಿವೇಕದ ಉಪಾಯವು ಒಂದು ಬೇರೆ ರೀತಿಯಿಂದೇ ಇರುವದು (೭) ಈಗ ದೇವರ ಸ್ವರೂಪ ಹೇಗೆ ಇರುವದು ಅನ್ನುವದನ್ನು ಹೇಳುವರು. ಇದರೊಂದಿಗೇನೇ ದೇವ ದರ್ಶನ ಮಾಡಿಕೊಳ್ಳುವದರ ಉಪಾಯವನ್ನೂ ಕೂಡಾ ಹೇಳುವರು : ವಿಚಾರದಿಂದ ಚನ್ನಾಗಿ ಪರ್ಯಾಲೋಚಿಸಿ ನೋಡಿದರೆ, ಯಾವುದು ಶಾಶ್ವತವಾಗಿ ಕಾಯಂ ಆಗಿ, ಸ್ಥಿರವಾಗಿ ಟಿಕಾಯಿಸುವದಿಲ್ಲವೋ ಅದಕ್ಕೆ ದೇವ ಎಂದು ಅನ್ನಲಿಕ್ಕೆ ಬರುವದಿಲ್ಲ. ಆದರೆ ಲೋಕದ ಜನ ಕೇಳುವದಿಲ್ಲ. ಇವರೆಲ್ಲರೂ ಅಶಾಶ್ವತವಾದದ್ದಕ್ಕೆ ದೇವ ಎಂದು ಅನ್ನುವರು. ಇದಕ್ಕೆ ಯಾವ ಉಪಾಯವೂ ಇರುವದಿಲ್ಲ. (೮) ಶ್ರೇಷ್ಠ ಜನರು ಸತ್ತುಹೋದ ಮೇಲೆ ಅವರ ಮೂರ್ತಿಮಾಡಿ ಇಡುವರು. ಮತ್ತು ಈ ಮೂರ್ತಿಯು ಆ ಮನುಷ್ಯನಿರುವನೆಂದು ತಿಳಿಯುವರು. ಉಪಾಸನೆಯ ಬಾಬತ್ತಿನಲ್ಲಿ ಕೂಡಾ ಇದೇ ಪ್ರಕಾರವಾಗುವದು. ತಮ್ಮ ಕಲ್ಪನೆಯಿಂದ ದೇವರ ಮೂರ್ತಿಯನ್ನು ಮಾಡಿ ಇದನ್ನೇ ಸಾಮಾನ್ಯ ಜನರು ದೇವರೆಂದು ತಿಳಿಯುವರು. (೯) ಒಬ್ಬನಿಗೆ ದೊಡ್ಡ ವ್ಯಾಪಾರ ಮಾಡುವದು ಜಮಾಯಿಸಲಿಲ್ಲವೆಂದು ಅವನು ಶಾಯಿ [ಮಸಿ, ಇಂಕ್] ಯ ವ್ಯಾಪಾರ ಮಾಡಹತ್ತಿದನು. ಆದರೆ ಆ ವ್ಯಾಪಾರದಲ್ಲಿ ಅವನಿಗೆ ರಾಜ ಮಹಾರಾಜನಷ್ಟು ಸಂಪತ್ತು ಪ್ರಾಪ್ತವಾಗುವದು ಎಂದಿಗೂ ಶಕ್ಯವಿಲ್ಲ. ಉಪಾಸನಾದಲ್ಲಿಯೂ ಕೂಡಾ ಇದೇ ನಿಯಮ ಅನ್ವಯವಾಗುವದು. ಖರೇ ದೇವ ಪ್ರಾಪ್ತಿ ಸಾಧ್ಯವಾಗುವದಿಲ್ಲವೆಂದು ಮಣ್ಣಿನ ಮೂರ್ತಿಗೇ ದೇವರೆಂದು ಉಪಾಸನಾ ಮಾಡುವದರಿಂದ ಖರೇ ಸಮಾಧಾನ ಪ್ರಾಪ್ತವಾಗುವದಿಲ್ಲ. (೧೦) ಅದ್ದರಿಂದ ಪೊಳ್ಳು ಭಾವ ಅನ್ನುವದು ಯಾವುದು ಇರುವದೋ ಅದೆಲ್ಲ ಅಜ್ಞಾನದ ಸ್ವಭಾವವೆಂದು ತಿಳಿಯಬೇಕು ಅಜ್ಞಾನದಿಂದ ಪರಮಾತ್ಮ ಸ್ವರೂಪದ ಪ್ರಾಪ್ತಿ ಆಗುವದು ಶಕ್ಯವಿಲ್ಲ. ದೃಶ್ಯವೆಲ್ಲ ಮಿಥ್ಯಾ ಇರುವದು ಮಿಥ್ಯೆಯನ್ನು ನಿಜ [ಖರೇ] ಎಂದು ಒಪ್ಪುವದೇ ಅಜ್ಞಾನದ ಸ್ವಭಾವವಾಗಿದೆ. ಇದನ್ನು ನಿಶ್ಚಿತ ತಿಳಿಯಬೇಕು. (೧೧) ಅಜ್ಞಾನಿ ಜನರಿಗೆ ಜ್ಞಾನವು ಒಪ್ಪಿತವಾಗುವದಿಲ್ಲ. ಅದರಂತೆ ಜ್ಞಾನೀ ಜನರಿಗೆ ಕೇವಲ ತರ್ಕವಾದ, ವಿತಂಡವಾದ ಒಪ್ಪಿತವಾಗುವದಿಲ್ಲ. ಅದ್ದರಿಂದ ಯಾರು ಸಾಕ್ಷಾತ್ಕಾರೀ ಸಿದ್ಧ ಪುಣ್ಯ ಪುರುಷರಿರುವರೋ ಅವರ ಅನುಭವವನ್ನು [ಅವರ ಸಾಧನದಲ್ಲಿಯ ಮರ್ಮವನ್ನು] ಪ್ರಮಾಣವೆಂದು ತಿಳಿದು ಅವರಸಂಕೇತದಂತೆ ನಾವುನಡೆಯಲಿಕ್ಕೇಬೇಕು ನಮ್ಮಅನುಭವವುಸಂತಶರಣರಅನುಭವಕ್ಕೆಹೊಂದಬೇಕು.(೧೨)

ಮಾಯಾ ಸಾಂಡೂನ ಮುಳಾಸ ಜಾವೇ। ತರೀ ಚ ಸಮಾಧಾನ ಪಾವಾವೇ।
ಐಸೇ ನ ಹೋತಾ ಭರಂಗಳಾವೇ। ಭಲತೀಕಡೇ ॥೧೩॥

ಮಾಯಾ ಉಲಂಘಾಯಾ ಕಾರಣೇ। ದೇವಾಸೀ ನಾನಾ ಉಪಾಯು ಕರಣೇ।
ಅಧ್ಯಾತ್ಮಶ್ರವಣಪಂಥೇಚೀ ಜಾಣೇ। ಪ್ರತ್ಯಯಾನೇ ॥೧೪॥

ಐಸೇ ನ ಕರಿತಾ ಲೋಕಿಕೀ। ಅವಘೇ ಚ ಹೋತೇ ಚುಕಾಮುಕೀ।
ಸ್ಥಿತಿ ಖರೀ ಆಣಿ ಲಟಿಕೀ। ಐಸೀ ವೊಳಖಾವೀ ॥೧೫॥

ಖೋಟ್ಯಾಚೆ ವಾಟೆ ಜಾಊ ನಯೆ। ಖೋಟ್ಯಾಚೀ ಸಂಗತೀ ಧರೂ ನಯೆ
ಖೋಟೇ ಸಂಗ್ರಹೀ ಕರೂ ನಯೇ। ಕಾಂಹೀಯೇಕ ॥೧೬॥

ಖೋಟೇ ತೇ ಖೋಟೇ ಚಿ ಖೋಟೇ। ಖರ್‍ಯಾಸೀ ತಗೇನಾತ ಬಾಲಟೇ।
ಮನ ಅಧೋಮುಖ ಉಫರಾಟೇ। ಕೇಲೇ ಪಾಹಿಜೇ ॥೧೭॥

ಅಧ್ಯಾತ್ಮಶ್ರವಣ ಕರೀತ ಜಾವೇ। ಮ್ಹಣಿಜೇ ಸಕಳ ಕಾಂಹೀ ಫಾವೇ।
ನಾನಾ ಪ್ರಕಾರೀಚೆ ಗೋವೇ। ತುಟೋನಿ ಜಾತೀ ॥೧೮॥

ಸೂತ ಗುಂತಲೇ ತೇ ಉಕಲಾವೇ। ತೈಸೇ ಮನ ಉಗವಾವೇ।
ಮಾನತ ಮಾನತ ಘಾಲಾವೇ। ಮುಳಾಕಡೇ ॥೧೯॥

ಮಾಯೆಯನ್ನು ಬದಿಗೆ ಒಗೆದು ಮೂಲ ಪರಬ್ರಹ್ಮದವರೆಗೆ ಹೋದ ಮೇಲೆಯೇ ನಿಜವಾದ ಸಮಾಧಾನ ಲಭಿಸುವದು. ಹೀಗೆ ಆಗದಿದ್ದರೆ ಸಾಧಕನು ಸಾಧನದ ಹಾದಿ ತಪ್ಪಿ, ಭಲತೆ ಅಡ್ಡಹಾದಿ ಕಡೆಗೆ ಹೊರಟು, ಘೋಟಾಳೆಯಲ್ಲಿ ತೊಡಕು ಬಿದ್ದಿರುವನೆಂದು ತಿಳಿಯಬೇಕು. ಇದರಿಂದ ಇವನು ಹಿಡಿದ ಅಡ್ಡ ಮಾರ್ಗದಿಂದ ದಿಕ್ಕೆಟ್ಟು ಹೋಗುವನು. ಇವನಿಗೆ ಸಮಾಧಾನವು ಲಭ್ಯವಾಗುವದಿಲ್ಲ. (೧೩) ಮಾಯೆಯನ್ನು ಉಲ್ಲಂಘನಮಾಡಿ ಹೋಗಲಿಕ್ಕೆ ಬರಬೇಕೆಂದು ಭಗವಂತನು ಸಾಧನಗಳ ಅನೇಕ ಪ್ರಕಾರಗಳನ್ನು ನಿರ್ಮಾಣ ಮಾಡಿ ಇಟ್ಟಿರುವನು. ಆದರೂ ಆ ಎಲ್ಲ ಪ್ರಕಾರಗಳಲ್ಲಿ ಶ್ರವಣ, ಮನನ ಅರ್ಥಾತ್ [ಅಧ್ಯಾತ್ಮದವು] ಇವು ಸರ್ವಶ್ರೇಷ್ಠ ಸಾಧನವಿರುವವು. ಸಾಧಕನು ಏಕ ಮನದಿಂದ ಶ್ರವಣ, ಮನನ, ಮಾಡುತ್ತ ಸ್ವತಃ ಅನುಭವ ಪಡೆಯುತ್ತ ಮುಂದೆ ಹೋಗಬೇಕು. ಹೀಗೆ ನಿಜವಾದ ಗುರಿ ಸಾಧಿಸುವವರೆಗೆ ಮಾಡುತ್ತ ಹೋಗಬೇಕು. (೧೪) ಈ ರಾಜಮಾರ್ಗದಿಂದ ಹೋಗದೇ ಸಾಮಾನ್ಯ ಜನರು ಇತರ ಉಪಾಯ ಮಾಡಲಿಕ್ಕೆ ಹೋಗುವರು. ಇದರಿಂದ ಮಾಡುವವನ ಮತ್ತು ಖರೇ ದೇವರ ಭೆಟ್ಟಿ ತಪ್ಪಿ ಹೋಗುವದು. [ಅಂದರೆ ಸಾಧಕನ ದಾರಿ ಮತ್ತು ದೇವರು ಇರುವ ಸ್ಥಳ ಬೇರೆ ಬೇರೆ ಆಗುವವು]. ಹಾಗಾದರೆ ನಿಜವಾದ ಸಾಧನ ಯಾವುದು ? ಮತ್ತು ಖೊಟ್ಟಿ ಸಾಧನ ಯಾವುದು ? ಇದನ್ನು ವಿಚಾರ ಪೂರ್ವಕ ತಿಳಿಯಬೇಕು. (೧೫) ಯಾವುದು ಅತ್ಯಂತ ಸುಳ್ಳು [ಮಿಥ್ಯೆ] ಇರುವದೋ ಆ ದಾರಿಯಿಂದ ಹೋಗಬಾರದು. ಅಡ್ಡ ದಾರಿಯ ಸಂಗತಿ ಹಿಡಿಯಬಾರದು. ಮಿಥ್ಯೆಯಾಗಿರುವಂಥದೇನನ್ನೂ ಸಂಗ್ರಹದಲ್ಲಿಡಬಾರದು. (೧೬) ಈ ಪಂಚ ಭೂತಾತ್ಮಕ-ದೃಶ್ಯದಲ್ಲಿ ಏನೆಲ್ಲವೂ ಏಕತ್ರ ಮಿಶ್ರಮಾಡಲ್ಪಟ್ಟಿದೆ. ಕೂಡಿಸಲಾಗಿದೆ. ನಮ್ಮ ಮನವು ಗೊಂದಲದ ತೊಡಕಿನಲ್ಲಿ ಬಿದ್ದಿರುವದು. ಮೊದಲು ಅದನ್ನು [ಮನವನ್ನು] ಉಲಟಾಮಾಡಬೇಕು. ಮತ್ತು ಆ ಮೇಲೆ ಸಾವಕಾಶವಾಗಿ ಮನದ ತೊಡಕನ್ನು ಒಂದೊಂದಾಗಿ ಬಿಡಿಸಬೇಕು. ಮೂಲಮಾಯೆಯ ಹದಿನಾಲ್ಕು ಸಂಕೇತಗಳ ಬಗ್ಗೆ ಸೂಕ್ಷ್ಮ ವಿಚಾರಮಾಡಬೇಕು. (ಆ ಹೆಸರು ಸಂಕೇತಗಳು ದಶಕ ೨೦, ಸಮಾಸ ೫ ಓವಿ [ಶ್ಲೋಕ] ೪ ರಿಂದ ೧೦ ನೋಡಿರಿ) ಅಂದರೆ ಮಾಯೆಯ ಸ್ವರೂಪ ತಿಳಿಯುವದು. ಮಾಯೆಯ ಸ್ವರೂಪ ತಿಳಿಯಿತೆಂದರೆ ಇವಳು ಅಂತರ್ಧಾನ ಹೊಂದುವಳು ಮರೆಯಾಗುವಳು. ಆಗ ಶಾಶ್ವತ ಬ್ರಹ್ಮವಷ್ಟೇ ಶಿಲುಕು [ಬಾಕಿ] ಉಳಿಯುವದು ; ಯಾವುದು ಮಿಥ್ಯೆಯಾಗಿರುವದೋ ಅದು ಎಲ್ಲ ಕಾಲದಲ್ಲಿಯೂ, ಎಲ್ಲ ಪರಿಸ್ಥಿತಿಯಲ್ಲಿಯೂ ಮಿಥ್ಯೆಯೇ ಆಗಿರುವದು. ಯಾವುದು ನಿಜವಿರುವದೋ ಅದರ ಮುಂದೆ ಸುಳ್ಳಿನ ಅಥವಾ ಖೊಟ್ಟಿಯ ಆಟ ನಡೆಯುವದಿಲ್ಲ. ಖೋಟಾ ಎಂದೂ ಟಿಕಾವು ಆಗಿ ಉಳಿಯುವದಿಲ್ಲ. ಖೊಟ್ಟಿಯಾದಂಥದರಲ್ಲಿ ತೊಡಗಿದ ಮನವನ್ನು ಖರೇ ಅದಂಥದರ ಕಡೆಗೆ ಒಯ್ಯುವದಕ್ಕಾಗಿ ಮನವನ್ನು ಉಪರಾಟಿ ಅಂದರೆ ತಿರುವು ಮುರುವಾಗಿ [ಉಲಟಾ] ಮಾಡಲಿಕ್ಕೇ ಬೇಕು. ಯಾಕೆಂದರೆ ನಮ್ಮ ಮನವು ಅಧೋ ಮುಖಿ. ಅಂದರೆ ಮಾಯಾ ವ ಮಾಯಿಕ ಪದಾರ್ಥ ಇವುಗಳ ಕಡೆಗೆ ಹರಿಯುವದೇ ಆಗಿದೆ. ಇದು ಬಹಿರ್ಮುಖ ಮನವೆನಿಸುವದು. ಇದನ್ನು ಅಂತರ್ಮುಖ ಮಾಡಲಿಕ್ಕೆಬೇಕು. (೧೭) ಮನವು ಅಂತರ್ಮುಖವಾಗಬೇಕಾದರೆ ಅಧ್ಯಾತ್ಮ ಶ್ರವಣ ಮಾಡುತ್ತಹೋಗಬೇಕು. ಇದರ ಯೋಗದಿಂದ ಸರ್ವ ಕಾರ್ಯ, ಕೆಲಸ, ಹಸ್ತಗತವಾಗುವದು. ಅನೇಕ ಪ್ರಕಾರದ ತೊಡಕುಗಳು ಬಿಟ್ಟುಹೋಗುವವು. (೧೮) ದಾರವು ತೊಡಕು ಬಿದ್ದಿದ್ದರೆ ಅದನ್ನು ನಾವು ಯಾವ ಪ್ರಕಾರ ಕುಶಲಕೆಯಿಂದ ಸಾವಧಾನದಿಂದ ತೊಡಕನ್ನು ಬಿಡಿಸುವೆವೋ ಅದರಂತೆ ಮನಕ್ಕೆ ಅಂಟಿಕೊಂಡ ತೊಡಕು ಬಿದ್ದ ತೊಡಕನ್ನು ನಾವು ಬಿಡಿಸಿ ಸರಳ ಮಾಡಬೇಕು. ಮನವನ್ನು ಸಾವಕಾಶವಾಗಿ ಮೂಲ ಬ್ರಹ್ಮದ ಕಡೆಗೆ ತಿರುಗಿಸಬೇಕು. ಮಾಯೆಯ ಮಾಯಾ ಜಾಲವು ಬಹು ವಿಸ್ತಾರವಾಗಿರುವದು. ಇದರ ಅನೇಕ ಸ್ಥಳವಲ್ಲಿ[ಠಿಕಾಣೆಯಲ್ಲಿ] ಅನೇಕ ಪ್ರಕಾರದಿಂದ ತೊಡಕ ಸಿಕ್ಕುಬಿದ್ದ(ಅಡಕಾಯಿಸಿದ)ಮನವನ್ನು ಕ್ರಮ ಕ್ರಮದಿಂದ ಅಲ್ಲಿಂದ ಬಿಡಿಸಬೇಕು. ಮತ್ತು ಇವನ್ನು ಅಂತರ್ಮುಖಮಾಡಿ ಪರಬ್ರಹ್ಮದ ಕಡೆಗೆ ಹೋಗುವ ದಾರಿಗೆ ಸಾವಕಾಶವಾಗಿ ಹಚ್ಚಬೇಕು. ಮತ್ತು ಮುಂದೆ ಸಾಗುವಂತೆ ಗುರಿ ಮುಟ್ಟುವ ಕಡೆಗೆ ಹೋಗುವಂತೆ ಮಾಡಬೇಕು. (೧೯)

ಸಕಳ ಕಾಂಹೀ ಕಾಲವಲೇ । ತ್ಯಾ ಸಕಳಾಚೇ ಸಕಳ ಜಾಲೇ ।
ಶರೀರೀ ವಿಭಾಗಲೇ । ಸಕಳ ಕಾಂಹೀ ॥೨೦॥
ಕಾಯೀ ತೇ ಯೇಥೇ ಚಿ ಪಾಹಾವೇ । ಕೈಸೇ ತೇ ಯೇಥೇ ಚಿ ಶೋಧಾವೇ ।
ಸೂಕ್ಷ್ಮಾಚೀ ಚೌದಾ ನಾವೇ । ಯೇಥೇ ಚಿ ಸಮಜಾವೀ ॥೨೧॥
ನಿರ್ಗುಣ ನಿರ್ವಿಕಾರೀ ಯೇಕ । ತೇ ಸರ್ವಾ ಠಾಈ ವ್ಯಾಪಕ ।
ದೇಹ್ಯಾಮಧ್ಯೇ ತೇ ನಿಷ್ಕಳಂಕ । ಆಹೇ ಕೀ ನಾಹೀ ॥೨೨॥
ಮೂಳಮಾಯಾ ಸಂಕಲ್ಪರೂಪ ತೇ । ಅಂತಃಕರ್ಣಾಚೇ ಸ್ವರೂಪ ।
ಜಡ ಚೇತಮೀ ಚೈತನ್ಯರೂಪ । ತೇ ಹೀ ಶರೀರೀ ಆಹೇ ॥೨೩॥
ಸಮಾನಗುಣ ಗುಣಸಾಮ್ಯ । ಸೂಕ್ಷ್ಮ ವಿಚಾರ ತೋ ಅಗಮ್ಯ ।
ಸೂಕ್ಷ್ಮ ಸಾಧು ಜಾಣತೇ ಪ್ರಣಮ್ಯ । ತಯಾ ಸಮಸ್ತಾಸೀ ॥೨೪॥
ದ್ವಿಧಾ ಭಾಸತೇ ಶರೀರ । ವಾಮಾಂಗ ದಕ್ಷಿಣಾಂಗ ವಿಚಾರ ।
ತೋ ಚಿ ಅರ್ಧನಾರೀ ನಟೇಶ್ವರ । ಪಿಂಡೀ ವೊಳಖಾವಾ ॥೨೫॥
ತೋಚಿ ಪ್ರಕೃತಿಪುರುಷ ಜಾಣಿಜೇ । ಶಿವಶಕ್ತೀ ವೊಳಖಿಜೆ ।
ಶಡಗುಣಈಶ್ವರ ಬೋಲಿಜೇ । ತಯಾ ಕರ್ದಮಾಸೀ ॥೨೬॥
ತಯಾಸೀ ಚ ಮ್ಹಣಿಜೇ ಮಹತ್ತತ್ತ್ವ । ಜೇಥೇ ತ್ರಿಗುಣಾಚೇ ಗೂಢತ್ವ ।
ಅರ್ಧಮಾತ್ರಾ ಶುದ್ಧಸತ್ವ । ಗುಣಕ್ಷೋಭಿಣೀ ॥೨೭॥
ತ್ರಿಗುಣೇ ಚಾಲತೇ ಶರೀರ । ಪ್ರತಕ್ಷ ದಿಸತೋ ವಿಚಾರ ।
ಮೂಳೀಚ್ಯಾ ಕರ್ದಮಾಚೇ ಶರೀರ । ಐಸೇ ಜಾಣಾವೇ ॥೨೮॥
ಮನ ಮಾಯಾ ಆಣಿ ಜೀವ । ಹಾ ಹಿ ದಿಸತೋ ಸ್ವಭಾವ ।
ಚೌದಾ ನಾಮಾಂಚಾ ಅಭಿಪ್ರಾವ । ಪಿಂಡೀ ಪಾಹಾವಾ ॥೨೯॥
ಪಿಂಡ ಪಡತಾ ಅವಘೇ ಚಿ ಜಾತೇ। ಪರಂತು ಪರಬ್ರಹ್ಮ ರಾಹಾತೇ ।
ಶಾಶ್ವತ ಸಮಜೋನ ಮಗ ತೇ । ದೃಢ ಧರಾವೇ ॥೩೦॥

ಇತಿ ಶ್ರೀ ದಾಸಬೋಧೆ ಗುರುಶಿಷ್ಯ ಸಂವಾದೇ
''ಸೂಕ್ಷ್ಮನಿರೂಪಣ''ನಾಮ ಸಮಾಸ ನವಮ ॥

ಮೂಲ ಮಾಯೆಯಲ್ಲಿಯು ಜಡ, ಚಂಚಲ ಮತ್ತು ಇತರ ಎಲ್ಲ ತತ್ವಗಳು ಏಕತ್ರ ಕೂಡಿರುವವು. ಮಿಶ್ರಿತವಾಗಿರುವವು. ಈ ಬೆರೆತ ಮಿಶ್ರಣದಿಂದ ವಿಶ್ವದಲ್ಲಿಯ ಯಾವತ್ತು ವಸ್ತುಗಳು ತಯಾರಾಗಿರುವವು. ಸರ್ವ ಪ್ರಕಾರದ ಶರೀರದಲ್ಲಿ ಇದೇ ಮಿಶ್ರಣವು ವಿಭಾಗಶಃ ತುಂಬಿರುವದು. (೨೦) ಈ ಮಿಶ್ರಣವು ಯಾವ ತತ್ವಗಳಿಂದ ತಯಾರಾಗಿದೆ ? ಮತ್ತು ಅದು ಹೇಗೆ ತಯಾರಾಯಿತು? ಇದನ್ನೆಲ್ಲ ಈ ಮಾನವ ದೇಹದಲ್ಲಿಯೇ ಶೋಧಿಸಬೇಕು. ಸೂಕ್ಷ್ಮದ ಆ ಯಾವ ಹದಿನಾಲ್ಕು ಹೆಸರುಗಳಿರುವವೋ ಅವನ್ನೆಲ್ಲ ಇಲ್ಲಿಯೇ ತಿಳಿದುಕೊಳ್ಳಬೇಕು. (೨೧)ಯಾವತ್ತು ಸ್ಥಳದಲ್ಲಿ ವ್ಯಾಪಿಸಿರುವಂಥ ನಿರ್ಗುಣ ವ ನಿರ್ವಿಕಾರಿ ಅನಿಸಿದ ಪರಬ್ರಹ್ಮವೊಂದೇಒಂದು ಸರ್ವತ್ರವೂ ಇರುವದು. ಈ ನಿಷ್ಕಲಂಕ ಸ್ವರೂಪವು ಈ ದೇಹದಲ್ಲಿ ಇರುವದೋ?ಇಲ್ಲವೋ?ಇದರ ಶೋಧ ಮಾಡಬೇಕು. (೨೨) ಮೂಲ ಮಾಯಾ ಸಂಕಲ್ಪ ರೂಪವಿರುವದು. ಅಂತಃಕರಣವು ಇದೇ ಸ್ವರೂಪವಿರುವದು. ಜಡಕ್ಕೆ ಚೇತನಕೊಡುವ ಚೈತನ್ಯವೂ ಸಹಿತ ಇದೇ ಇರುವದು. ಸಂಕಲ್ಪ, ಅಂತಃಕರಣ ಮತ್ತು ಚೈತನ್ಯ ಈ ಮೂರೂ ಈ ಶರೀರದಲ್ಲಿಯೇ ಇರುವವು(೨೩) ಯಾವ ಅವಸ್ಥೆಯಲ್ಲಿ ಗುಣಗಳು ಸಮ ಸಮಾನವಿರುವವೋ ಅದು ಗುಣಸಾಮ್ಯ ಅವಸ್ಥೆಯಾಗಿರುವದು. ಈ ಸಾಮ್ಯ ಅವಸ್ಥೆಯ ವಿಚಾರವು ಅತಿಶಯ ಸೂಕ್ಷ್ಮವಿರುವದು. ಅಗಮ್ಯವಿರುವದು. ಯಾವ ಸಾಧು ಸಂತ ಶರಣರು ಈ ಗುಣ ಸಾಮ್ಯದ ಸೂಕ್ಷ್ಮ ಅವಸ್ಥೆಯನ್ನು ತಿಳಿದಿರುವರೋ ಅವರು ಸರ್ವರಿಗೂ ವಂದ್ಯರಿರುವರು. (೨೪) ನಮ್ಮ ಶರೀರಕ್ಕೆ ಎಡ ಮತ್ತು ಬಲ ಹೀಗೆ ಎರಡು ವಿಭಾಗವಿರುವವು. ಆದರೆ ಇವು ಎರಡೂ ಹೇಗೆ ಏಕರೂಪವಿರುವವೋಅದರಂತೆ ಪಿಂಡದಲ್ಲಿ ಅರ್ಧನಾರೀ ನಟೇಶ್ವರ ಇರುವನು. ಇದನ್ನು ಗುರುತಿಸಿ ತಿಳಿಯಿರಿ. (೨೫) ಈ ಅರ್ಧನಾರೀ ನಟೇಶ್ವರನೇ ಪ್ರಕೃತಿ ಪುರುಷ ಅನಿಸುವನು. ಶಿವಶಕ್ತಿಯೂ ಇವನೇ ಇರುವನು. ಈ ತತ್ವ ಮಿಶ್ರಣಕ್ಕೆ ಷಡ್ಗುಣೇಶ್ವರ ಎಂತಲೂ ಅನ್ನುವರು. (೨೬) ತ್ರಿಗುಣಗಳು ಯಾವುದರಲ್ಲಿ ಗುಪ್ತರೂಪದಿಂದ ಇರುವವೋ ಆ ಮಹತ್ ತತ್ವವೂ ಕೂಡಾ ಇದೇ ಎಂದು ತಿಳಿಯಬೇಕು. ಅರ್ಧ ಮಾತ್ರಾ [ಓಂಕಾರದಲ್ಲಿಯದು] ಶುದ್ಧ ಸತ್ವ ಮತ್ತು ಗುಣ ಕ್ಷೋಭಿಣಿ ಈ ಮೂರೂ ಕೂಡಾ ಒಂದೇ ಮೂಲ ತತ್ವದ ಹೆಸರುಗಳಿರುವವು. (೨೭) ಮೂರು ಗುಣಗಳ ಮಿಶ್ರಣದಿಂದ ನಮ್ಮ ಶರೀರ ನಡೆಯುವದು. ಈ ಮಾತು ಪ್ರತ್ಯಕ್ಷ ಕಂಡುಬರುವದೇ ಆಗಿದೆ. ಮೂಲದ ಮಿಶ್ರಣದಿಂದ ತಯಾರಾದದ್ದು ಈ ಶರೀರವಿರುವದು. ಇದೆಲ್ಲವನ್ನೂ ನೋಡಿ ತಿಳಿಯಬೇಕು. (೨೮) ಮನ, ಮಾಯೆ ಮತ್ತು ಜೀವ ಈ ಮೂರೂ ಕೂಡಾ ಶರೀರದ ಸ್ವಭಾವವೇ ಇರುವವು. ಈ ಪ್ರಕಾರ ಪಿಂಡದಲ್ಲಿ ಹದಿನಾಲ್ಕು ಹೆಸರಿನ ಸಂಕೇತ ನೋಡಿರಿ. ಮತ್ತು ಇವುಗಳ ಅಸ್ತಿತ್ವ ತಿಳಿಯಿರಿ. (೨೯) ಪಿಂಡ ಬಿದ್ದಿತೆಂದರೆ-ಸತ್ತು ಬಿಟ್ಟರೆ ಇವೆಲ್ಲವೂ ಹೊರಟುಹೋಗುವವು. ಆದರೆ ಪರಬ್ರಹ್ಮವಷ್ಟೇ ಉಳಿಯುವದು. ಇದು ಶಾಶ್ವತವಿರುವದು ಅನ್ನುವದನ್ನು ತಿಳಿದು ನಿಶ್ಚಯಿಸಿ ಅದನ್ನು ಗಟ್ಟಿಯಾಗಿ ದೃಢವಾಗಿ ಹಿಡಿಯಬೇಕು. (೩೦)

ಶ್ರೀ ದಾಸಬೋಧದ ಇಪ್ಪತ್ತನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ
— "ಸೂಕ್ಷ್ಮನಿರೂಪಣ" ನಾಮ ಎಂಬ ಹೆಸರಿನ ಒಂಬತ್ತನೆಯ ಸಮಾಸವು ಮುಗಿದುದು.

● ●

### ದಶಕ. ವಿಂಶತಿ : ಸಮಾಸ. ದಶಮ : ವಿಮಲ ಬ್ರಹ್ಮನಿರೂಪಣ (ನುಡಿ ೩೭)

॥ಶ್ರೀರಾಮ ಸಮರ್ಥ॥ ಧರೂ ಜಾತಾ ಧರಿತಾ ನ ಯೇ ।
ಟಾಕೂ ಜಾತಾ ಟಾಕಿತಾ ನ ಯೇ ।
ಜೇಥೇ ತೇಥೇ ಆಹೇ ಚ ಆಹೇ । ಪರಬ್ರಹ್ಮ ತೇ ॥೧॥

ಜಿಕಡೆ ತಿಕಡೆ ಜೇಥೇ ತೇಥೇ । ವಿನ್ಮುಖ ಹೋತಾ ಸನ್ಮುಖ ಹೋತೇ ।
ಸನ್ಮುಖಪಣ ಚುಕೇನಾ ತೇ । ಕಾಂಹೀ ಕೇಲ್ಯಾ ॥೨॥

ಬೈಸಲೇ ಮಾಣುಸ ಉಠೋನ ಗೇಲೇ । ತೇಥೆ ಆಕಾಶ ಚಿ ರಾಹಿಲೇ ।
ಆಕಾಶ ಚಹುಕಡೆ ಪಾಹಿಲೇ । ತರೀ ಸನ್ಮುಖ ಚಿ ಆಹೇ ॥೩॥

## ದಶಕ ೨೦. ಸಮಾಸ ೧೦. ವಿಮಲಬ್ರಹ್ಮನಿರೂಪಣ (ನುಡಿ ೩೭)

ಇದು ಈ ವಿಲಕ್ಷಣ ಮಹಾಗ್ರಂಥದಲ್ಲಿಯ ಕೊನೆಯ ಸಮಾಸವಿರುವದು ಈ ಸಮಾಸದಲ್ಲಿ ಶ್ರೀ ಸಮರ್ಥರು ತಮ್ಮ ಸಮಗ್ರ ತತ್ವಜ್ಞಾನದ ಸಾರಾಂಶವನ್ನೆಲ್ಲ ಇದರಲ್ಲಿ ಧಾರಾಳವಾಗಿ ತುಂಬಿದ್ದಾರೆ. ಇವುಗಳಲ್ಲಿಯ ಪ್ರಧಾನ ಮುದ್ದೆಗಳು [ಅಂಶಗಳು-ಪ್ರಕಾರಗಳು] ಹೀಗಿರುವವು : ಮುದ್ದೆ [೧] ಒಬ್ಬನೇ ಒಬ್ಬ ಪರಬ್ರಹ್ಮನು ಸರ್ವತ್ರ, ಸರ್ವ ಠಿಕಾಣೆ ಸ್ಥಳಗಳಲ್ಲಿ, ಸರ್ವ ವಸ್ತುಗಳಲ್ಲಿ, ಸರ್ವ ಕಾಲದಲ್ಲಿ, ವ್ಯಾಪಿಸಿ ಇರುವನು. ಮುದ್ದೆ[೨]ಸರ್ವ ಕಲ್ಪನೆಗಳ ಆಚೆಗೆ ಇರುವಂಥ ಪರಬ್ರಹ್ಮವು ಸ್ಥೂಲ ಅಲ್ಲ, ಸೂಕ್ಷ್ಮ ಅಲ್ಲ ದೃಶ್ಯ ಅಲ್ಲ. ಅದೃಶ್ಯ ಅಲ್ಲ, ವ್ಯಾಪ್ಯ ಅಲ್ಲ, [ಅಂತರ್ಭಾವ, ಆಗುವಂಥದು, ಮತ್ತು ಮಾಡುವಂತಹದ್ದಲ್ಲ] ವ್ಯಾಪಕ (ಪಸರಿಸುವಂಥದು) ಅಲ್ಲ. ಇದು ಸರ್ವಸ್ವೀ ಗುಣ ರಹಿತ ಮತ್ತು ವಿಕಾರ ರಹಿತ ಇರುವದು. ಮುದ್ದೆ [೩] ಆದರೆ ಇದು ಸಾಧು ಸಂತ ಶರಣರ ಪರಮ ವಿಶ್ರಾಂತಿ ಸ್ಥಾನವಿರುವದು. ಕೇವಲ ಶುದ್ಧ ಜ್ಞಾನ ದೃಷ್ಟಿಯಿಂದ ಸಂತಾದಿಗಳು ಇದರ ಅನುಭವ ಹೊಂದುವರು [ಪಡೆಯುವರು]. ಆದ್ದರಿಂದ ಇವರಿಗೆ ಬ್ರಹ್ಮಜ್ಞಾನಿಗಳೆಂದು ಅನ್ನುವರು. ಮುದ್ದೆ [೪] ಇಂಥ ಈ ಜ್ಞಾನ ದೃಷ್ಟಿ ಸಂಪಾದನೆ ಮಾಡಿಕೊಳ್ಳಲು ಶ್ರವಣ ಮತ್ತು ಮನನ ಇವೇ ವಿವೇಕದ ಮಾರ್ಗವಿರುವವು. ಸತತ ಶ್ರವಣ, ಮನನ, ಮಾಡಿದರೆ ಜ್ಞಾನವುಂಟಾಗಿ ಅಜ್ಞಾನವು ನಾಶ ಹೊಂದುವದು. ಮತ್ತು ಕೊನೆಗೆ ಮನವು ಉನ್ಮನ ಅಂದರೆ ಮನವು ಈಶ ಚಿಂತನೆಯಲ್ಲಿ ನಿಮಗ್ನವಾಗಿ ಜ್ಞಾನವು ವಿಜ್ಞಾನವಾಗುವದು. ಮುದ್ದೆ [೫] ಅಂತರ್ಯಾಮಿ ನಿಶ್ಚಲ ಪರಬ್ರಹ್ಮವು ಬಿಂಬಿಸಿತೆಂದರೆ ಆಗ ಸಾಧಕನ ಸಾಧನವು ಸಫಲವಾಯಿತೆಂದು ತಿಳಿಯಬೇಕು. ಸಂಸಾರವು ಸಫಲವಾಯಿತು. ಮಾಯೆಯ ಲೆಕ್ಕದ ವ್ಯವಹಾರವು ಮುಗಿಯಿತು. ಜನ್ಮ-ಮೃತ್ಯು ಶೂನ್ಯಾಕಾರವಾಯಿತು. ಮತ್ತು ಅಭಂಗ ಶಾಶ್ವತ, ಸಮಾಧಾನದ ಪ್ರಾಪ್ತಿಯಾಯಿತು. ಮುದ್ದೆ [೬] ನಿಜವಾದ ಗ್ರಂಥ ಇಲ್ಲಿಗೆ ಮುಗಿಯಿತು. ಆದರೆ ಶ್ರೀ ಸಮರ್ಥರು ಉದ್ದೇಶ ಪೂರ್ವಕವಾಗಿ ಕೊನೆಯಲ್ಲಿ ಹೇಳುವದೇನಂದರೆ, ದಾಸಬೋಧ ಅಂದರೆ ಪ್ರತ್ಯಕ್ಷ ಭಗವಂತನ ವಚನಗಳೇ ಇರುವವು. ಆತ್ಮಾರಾಮನು ಗ್ರಂಥ ಕರ್ತಾ ಇರುವನು. ಯಾರು ಮನಃಪೂರ್ವಕವಾಗಿ ಈ ಗ್ರಂಥದ ಅಭ್ಯಾಸ ಮಾಡುವರೋ ಅವರನ್ನು ಈ ಗ್ರಂಥರಾಜ ದಾಸಬೋಧವು ಖಾತ್ರಿಯಿಂದ ಬ್ರಹ್ಮಜ್ಞಾನಿಯನ್ನಾಗಿ ಮಾಡುವದು.

### ದಶಕ ೨೦. ಸಮಾಸ ೧೦. ವಿಮಲ ಬ್ರಹ್ಮನಿರೂಪಣ (ನುಡಿ ೩೭)

ಪರಬ್ರಹ್ಮವು ಅತೀಂದ್ರಿಯವಿರುವದು. [ವರ್ಣಿಸಲಿಕ್ಕೆ ಬರದಂಥ] ಅನಿರ್ವಾಚ್ಯವಿರುವದು. ಕಲ್ಪನಾತೀತವಿರುವದು. ಮತ್ತು ಅತಿಶಯ ದುರ್ಬೋಧ [ತಿಳಿಯಲು ಅತಿ ಕಠಿಣ] ಇರುವದು. ಆದರೂ ಕೂಡಾ ಕೃಪಾಮೂರ್ತಿ ಶ್ರೀ ಸಮರ್ಥರು ಅತ್ಯಂತ ಸುಲಭವಾದ ಮರಾಠಿಯಲ್ಲಿ ಇದರ ಬಗ್ಗೆ ಬಹಳ ಅಪ್ರತಿಮವಾಗಿ ವರ್ಣಿಸಿ ನಮಗೆ ಸುಲಭವಾಗಿ ತಿಳಿಯುವಂತೆ ಈ ಗ್ರಂಥದಲ್ಲಿ ಹೇಳಿಕೊಟ್ಟಿರುವರು : ಇದನ್ನು ಈ ಬ್ರಹ್ಮವನ್ನು ಹಿಡಿಯಬೇಕೆಂದರೆ ಹಿಡಿಯಲಿಕ್ಕೆ ಬರುವದಿಲ್ಲ [ಆಗುವದಿಲ್ಲ]. ಒಗೆಯಬೇಕೆಂದು ಪ್ರಯತ್ನ ಮಾಡಹೋದರೆ ಇದನ್ನು ಒಗೆಯಲಿಕ್ಕೆ ಬರುವದಿಲ್ಲ. ಈ ಪರಬ್ರಹ್ಮವು ಅಲ್ಲಿ ಇಲ್ಲಿ ಎಲ್ಲೆಲ್ಲಿಯೂ ಇದು ಇದ್ದೇ ಇರುವದು. ಎಂದೂ ಯಾವ ಕಾಲಕ್ಕೂ ಇದು ಇಲ್ಲವೆಂದು ಆಗುವದೇ ಇಲ್ಲ. (೧) ಅತ್ತ, ಇತ್ತ, ಅಲ್ಲಿ, ಇಲ್ಲಿ, ಎಲ್ಲೆಲ್ಲಿಯೂ ಇರುವಂಥ ಈ ಪರಬ್ರಹ್ಮನ ಕಡೆಗೆ ಮುಖ ತಿರುಗಿಸಬೇಕು. ಎಂದು ಅಂದದ್ದಾದರೆ, ಮುಖ ಎತ್ತ ತಿರುಗಿಸಿದರೂ ಅತ್ತ ಎದುರಿಗೇ ಬರುವನು. [ಇರುವನು]. ಯಾವ ದಿಕ್ಕಿಗೆ ಮುಖ ತಿರುಗಿಸಿದರೂ ಇವನು ನಮ್ಮ ಎದುರಿಗೇ ನಿಂತಿರುವನು. ಏನಾದರೂ ಯಾವುದಾದರೂ ಉಪಾಯಮಾಡಿ ತಪ್ಪಿಸಬೇಕೆಂದರೂ ತಪ್ಪಿಸಲಿಕ್ಕೆ ಆಗುವದಿಲ್ಲ. (೨) ಒಬ್ಬ ಕುಳಿತ ಮನುಷ್ಯನ ತಲೆಯ ಮೇಲಿದ್ದ ಆಕಾಶವು ಅವನು ಎದ್ದು ಹೋದರೆ ಅವನಗೂಡ ಆಕಾಶವೇನೂ ಹೋಗುವದಿಲ್ಲ. ಅಲ್ಲಿ ಆಕಾಶವು ಇದ್ದೇ ಇರುವದು. ಯಾವ ದಿಕ್ಕಿನ ಕಡೆಗೆ ನಾವು ಮುಖ ತಿರುಗಿಸಿದರೂ ಆಕಾಶವು ನಮ್ಮ ಮುಖದ ಮುಂದೆಯೇ ಇರುವದು. (೩)

ಜಿಕಡೆ ತಿಕಡೆ ಪ್ರಾಣೀ ಪಳೋನ ಜಾತೇ। ತಿಕಡೆ ಆಕಾಶ ಚಿ ಭೋವತೇ।
ಬಳೇ ಆಕಾಶಾಬಾಹೇರ ತೇ। ಕೈಸೇ ಜಾವೇ ॥೪॥

ಜಿಕಡೆ ತಿಕಡೆ ಪ್ರಾಣೀ ಪಾಹೇ। ತಿಕಡೆ ತೇ ಸನ್ಮುಖ ಚಿ ಆಹೇ।
ಸಮಸ್ತಾಚೆ ಮಸ್ತಕೀ ರಾಹೇ। ಮಾಧ್ಯಾನೀ ಮಾರ್ತಂಡ ಜೈಸಾ ॥೫॥

ಪರೀ ತೋ ಆಹೆ ಯೇಕದೇಸೀ। ದೃಷ್ಟಾಂತ ನ ಘಡೇ ವಸ್ತುಸೀ।
ಕಾಂಹೀ ಯೇಕ ಚಮತ್ಕಾರಾಸೀ। ದೇಖುನೀ ಪಾಹಿಲೇ ॥೬॥

ನಾನಾ ತೀರ್ಥೇ ನಾನಾ ದೇಸೀ। ಕಷ್ಟತ ಜಾವೇ ಪಾಹಾವ್ಯಾಸೀ।
ತೈಸೇ ನ ಲಗೆ ಪರಬ್ರಹ್ಮಾಸೀ। ಬೈಸಲೇ ಠಾಈ ॥೭॥

ಪ್ರಾಣೀ ಬೈಸೋನೀ ಚ ರಾಹಾತಾ। ಅಥವಾ ಬಹುತ ಪಳೋನ ಜಾತಾ।
ಪರಬ್ರಹ್ಮ ತೇ ತತ್ವತಾ। ಸಮಾಗಮೇ ॥೮॥

ಪಕ್ಷೀ ಅಂತರಾಳೀ ಗೇಲಾ। ಭೋವತೇ ಆಕಾಶ ಚಿ ತಯಾಲಾ।
ತೈಸೇ ಬ್ರಹ್ಮ ಪ್ರಾಣಿಯಾಲಾ। ವ್ಯಾಪೂನ ಆಹೇ ॥೯॥

ಪರಬ್ರಹ್ಮ ಪೋಕಳ ಘನದಾಟ। ಬ್ರಹ್ಮ ಸೇವಟಾಚಾ ಸೇವಟ।
ಜ್ಯಾಸೀ ತ್ಯಾಸೀ ಬ್ರಹ್ಮ ನೀಟ। ಸರ್ವಕಾಳ ॥೧೦॥

ದೃಶ್ಯಾ ಸಬಾಹೆ ಅಂತರೀ। ಬ್ರಹ್ಮ ದಾಟಲೇ ಬ್ರಹ್ಮಾಂಡೋದರೀ।
ಆರೇ ತ್ಯಾ ವಿಮಳಾಚೀ ಸರೀ। ಕೋಣಾಸ ದ್ಯಾವೀ ॥೧೧॥

ವೈಕುಂಠ ಕೈಳಾಸ ಸ್ವರ್ಗಲೋಕೀ। ಇಂದ್ರಲೋಕೀ ಚೌದಾ ಲೋಕೀ।
ಪನ್ನಗಾದಿಕಪಾತಾಳಲೋಕೀ। ತೇಥೇ ಹಿ ಆಹೇ ॥೧೨॥

ಕಾಸೀಪಾಸೂನ ರಾಮೇಶ್ವರ। ಅವಘೇ ದಾಟಲೇ ಅಪಾರ।
ಪರತಾ ಪರತಾ ಪಾರಾವಾರ। ತ್ಯಾಸ ನಾಹೀ ॥೧೩॥

ಪರಬ್ರಹ್ಮತೇ ಯೇಕಲೇ। ಯೇಕದಾ ಚಿ ಸಕಳಾಸೀ ವ್ಯಾಪಿಲೇ।
ಸಕಳಾಸ ಸ್ಪರ್ಶೋನ ರಾಹಿಲೇ। ಸಕಳಾ ಠಾಈ ॥೧೪॥

ತಿಳಿಯಿರಿ, ಒಂದು ಪ್ರಾಣಿಯು ಓಡಿ ಹೋಗಹತ್ತಿತ್ತು. ಅದು ಯಾವ ಯಾವ ದಿಕ್ಕಿಗೆ ಓಡುವದೋ ಆಯಾ ದಿಕ್ಕಿಗೆ ಅದರ ಸುತ್ತೆಲ್ಲ ಆಕಾಶ ಇದ್ದೇ ಇರುವದು. ಅತಿ ಹೆಚ್ಚಿನ ಪ್ರಯತ್ನಮಾಡಿದರೂ ಕೂಡಾ ಆಕಾಶದ ಹೊರಗೆ ಹೋಗಲಿಕ್ಕೆ ಯಾರಿಗೂ ಸಾಧ್ಯವಿಲ್ಲ. ಹೋಗಲಿಕ್ಕೆ ಆಗುವದಿಲ್ಲ. (೪) ಪ್ರಾಣಿಯು ಯಾವ ಕಡೆಗೆ ನೋಡುವದೋ ಆ ಆ ಕಡೆಗೆ ಆಕಾಶವು ಅದರ ಮುಖದ ಮುಂದೆಯೇ ಬರುವದು. ಮಧ್ಯಾಹ್ನದ ಸೂರ್ಯನು ಯಾವ ಪ್ರಕಾರ ಎಲ್ಲರ ತಲೆಯ [ನೆತ್ತಿಯ] ಮೇಲೆ ಇರುವನೋ ಇದರಂತೆ ಎಲ್ಲರ ತಲೆಯ ಮೇಲೆ ಆಕಾಶವು ಇರುವದು. (೫) ಆದರೆ ಸೂರ್ಯನ ದೃಷ್ಟಾಂತವು ಪರಬ್ರಹ್ಮನಿಗೆ ಲಾಗೂ ಆಗುವದಿಲ್ಲ. ಸರಿ ಆಗುವದಿಲ್ಲ.ಯಾಕೆಂದರೆ ಸೂರ್ಯ ಏಕದೇಶಿ, ಏಕಾಂಗಿ, ಮರ್ಯಾದಿತ, ವ್ಯಾಪಕಅಲ್ಲದಂಥವ ಇರುವನು. ಅದೇ ಬ್ರಹ್ಮವು ಸರ್ವದೇಶಿ, ಸರ್ವವ್ಯಾಪಿ ಇರುವನು. ಬ್ರಹ್ಮದ ಬಗ್ಗೆ ಸ್ವಲ್ಪವಾದರೂ ಕಲ್ಪನೆಯು ಬರಲಿ ಎಂದು ಈ ಒಂದು ಹೋಲಿಕೆಯನ್ನು ಚಮತ್ಕಾರಕ್ಕಾಗಿ ಹೋಲಿಸಿ ಹೇಳಿರುವೆವು. ಒಂದೇ ಸೂರ್ಯನ ಬಿಂಬವು ಅಕ್ಷರಶಃ ಕೋಟ್ಯಾವಧಿ ಜನರ ತಲೆಯ ಮೇಲೆ ಏಕಕಾಲಕ್ಕೆ ಕಾಣಸುವದು. ಇದು ಚಮತ್ಕಾರವೇ ಇರುವದು. (೬) ಅನೇಕ ದೇಶದಲ್ಲಿ ಅನೇಕ ತೀರ್ಥಗಳು ಇರುವವು. ಇವುಗಳನ್ನು ನೋಡಬೇಕೆಂದುಕೊಂಡರೆ ಕಷ್ಟಪಟ್ಟು ಅಲ್ಲಿಗೆ ಹೋಗಬೇಕಾಗುವದು. ಆದರೆ ಪರಬ್ರಹ್ಮನ ದರ್ಶನ ಮಾಡಿಕೊಳ್ಳಲಿಕ್ಕೆ ಇದೆಲ್ಲ ಮಾಡಬೇಕಾಗಿಲ್ಲ. ಕುಳಿತ ಸ್ಥಳದಲ್ಲಿಯೇ ಇವನನ್ನು ನೋಡಲಿಕ್ಕೆ ಬರುವದು. (೭) ತಿಳಿಯಿರಿ, ಒಂದು ಪ್ರಾಣಿ ಒಂದೇ ಸ್ಥಳದಲ್ಲಿ ಕುಳಿತುಕೊಂಡಿತು. ಆ ನಂತರ ಅದು ಓಡುತ್ತ ಓಡುತ್ತ ಬಹುದೂರ ಓಡಿ ಹೋಯಿತು. ಇದರ ಈ ಎರಡೂ ಅವಸ್ಥೆಯಲ್ಲಿ ಪರಬ್ರಹ್ಮವು ಆಗದೀ ಅದರ ಸಂಗಡವೇ ಇರುವದು. (೮) ಒಂದು ಪಕ್ಷಿ ಆಕಾಶದಲ್ಲಿ ಬಹುದೂರ ಹಾರಿತು. ಆಗ ಸಹ ಅದರ ಸುತ್ತು ಮುತ್ತು, ಅತ್ತ ಇತ್ತ ಆಕಾಶವೇ ಇರುವದು. ಇದರಂತೆ ಪರಬ್ರಹ್ಮವು ಪ್ರಾಣಿಗಳ ಸರ್ವಬಾಜೂದಲ್ಲಿ ವ್ಯಾಪಿಸಿ ಇರುವದು. ಅರ್ಥಾತ್ ಆ ಪಕ್ಷಿಯಲ್ಲಿ ಪರಬ್ರಹ್ಮವು ಅದರ ಸಂಗಡವೇ ಇರುವದು. (೯) ಬ್ರಹ್ಮವು [ಪೋಕಳ] ಪೊಳ್ಳು ಅಂದರೆ ರಿಕಾಮಿ ಇರುವದು. ಆದರೆ ಇದು ಅತ್ಯಂತ ನಿಬಿಡವಾಗಿ ತುಂಬಿಯೂ ಇರುವದು. ಬ್ರಹ್ಮ ಪೊಳ್ಳು ರಿಕಾಮಿ ಇರುವದು. ಇದರ ಅರ್ಥ ಏನೆಂದರೆ ಬ್ರಹ್ಮನಲ್ಲಿ, ಬ್ರಹ್ಮನ ಹತ್ತಿರ, ಬ್ರಹ್ಮನ ಒಳಗೆ, ಅವನ ಹೊರತಾಗಿ ಅನ್ಯ ವಸ್ತುಗಳೇ ಇರುವದಿಲ್ಲ. ಅಂತೆಯೇ ಇವನು ಆಗದೀ ತುಂಬಿಯೇ ಇರುವನು. ಎಲ್ಲದರ ಕೊನೆಯು ಕೊನೆಗೆ ಬ್ರಹ್ಮದಲ್ಲಿಯೇ ಆಗುವದು. [ಅಂದರೆ ಬ್ರಹ್ಮವೊಂದೇ ಯಾವಾಗಲೂ ಉಳಿಯುವದು.] ಯಾವಾಗಲೂ ಎಲ್ಲರಿಗೂ ಬ್ರಹ್ಮವು ಅತ್ಯಂತ ಸರಳ ಸಮ್ಮುಖವಾಗಿ ಹತ್ತಿರವೇ ಇರುವದು. (೧೦) ಈ ಅಮಾಧವ್ಯ ಬ್ರಹ್ಮಾಂಡದ ಹೊಟ್ಟೆಯಲ್ಲಿ ಅತ್ಯಂತ ಭರಪೂರ [ಭರಗಚ್ಚ] ಆಗಿ ತುಂಬಿದ ಬ್ರಹ್ಮವು ದೃಶ್ಯದ ಒಳಗೂ ಹೊರಗೂ ವ್ಯಾಪಿಸಿರುವದು. ಈ ನಿರ್ಮಲ ಬ್ರಹ್ಮನ ಹೋಲಿಕೆ ಸಾದೃಶ್ಯ ಯಾರಿಗೂ ಯಾವುದಕ್ಕೂ ಬರಲಿಕ್ಕೆ ಸಾಧ್ಯವಿಲ್ಲ. ಅಂದರೆ ಬ್ರಹ್ಮಕ್ಕೆ ಹೋಲಿಕೆ ಬ್ರಹ್ಮವೇ ಹೊರತು ಇನ್ನೊಂದು ಸಾಧ್ಯವಿಲ್ಲ. ಸರಿಸಾಟಿಯಾದಂದು ಯಾವುದೂ ಇಲ್ಲವೇ ಇಲ್ಲ. (೧೧) ವೈಕುಂಠ, ಕೈಲಾಸ, ಬ್ರಹ್ಮಲೋಕ, ಸ್ವರ್ಗಲೋಕ, ಇಹಲೋಕ, ಪರಲೋಕ, ಇಂದ್ರಲೋಕ, ಹದಿನಾಲ್ಕು ಲೋಕ, ಮಹಾ ಸರ್ಪಾದಿಗಳ ಪಾತಾಳಲೋಕ ಈ ಎಲ್ಲ ಲೋಕವನ್ನು ಬ್ರಹ್ಮವು ವ್ಯಾಪಿಸಿರುವದು. (೧೨) ಕಾಶಿಯಿಂದ ರಾಮೇಶ್ವರದವರೆಗೆ ಸರ್ವ ಸ್ಥಳಗಳಲ್ಲಿ ಅಪಾರವಾದ ಬ್ರಹ್ಮವು ಭರಗಚ್ಚ ತುಂಬಿರುವದು. ಇದರ ಆಚೆಗೆ ಇದನ್ನು ದಾಟಿ ಹೋಗಬೇಕೆಂದು ಎಷ್ಟೆಷ್ಟೋ ದೂರ ದೂರ ನಾವು ಹೋದರೂ ಕೂಡಾ ಇವನಿಗೆ ಕೊನೆಯೇ ಇಲ್ಲ. ಇದರಿಂದಾಗಿ ಬ್ರಹ್ಮವು ಎಲ್ಲಿ ಇಲ್ಲ ? ಎಂದು ಕೇಳಿದರೆ ಅವನು ಇಲ್ಲದ ಸ್ಥಳವೇ ಎಲ್ಲಿಯೂ ಇಲ್ಲವೆಂದು ಹೇಳುವೆವು. (೧೩) ಪರಬ್ರಹ್ಮ ಆಗದೀ ಕೇವಲ ಒಬ್ಬನೇ ಇರುವನು. ಒಬ್ಬನೇ ಇದ್ದೂ ಅದ್ವಿತೀಯನಿರುವನು. ಇವನು ಒಂದೇ ಸಲ ಎಲ್ಲವನ್ನೂ ವ್ಯಾಪಿಸಿ ಬಿಟ್ಟಿರುವನು. ಎಲ್ಲವನ್ನೂ ಎಲ್ಲರನ್ನೂ ಸ್ಪರ್ಶಮಾಡಿ ಇವನು ಎಲ್ಲ ಸ್ಥಳ [ಠಿಕಾಣ]ದಲ್ಲಿಯೂ ಇರುವನು. (೧೪)

ಪರಬ್ರಹ್ಮ ಪಾಲುಸೇ ಬಿಜೇನಾ । ಅಥವಾ ಚಿಖಲಾನೇ ಭರೇನಾ ।
ಪುರಾಮಧೇ ಪರೀ ವಾಹೇನಾ । ಪುರಾಸಮಾಗಮೇ ॥೧೫॥

ಯೇಕಸರೇ ಸನ್ಮುಖ ವಿಮುಖ । ವಾಮ ಸವ್ಯ ದೋಹೀಕಡೇ ಯೇಕ ।
ಆರ್ಧ ಊರ್ಧ ಪ್ರಾಣೀ ಸಕಳೀಕ । ವ್ಯಾಪೂನ ಆಹೇ ॥೧೬॥

ಆಕಾಶಾಚಾ ಡೋಹೋ ಭರಲಾ । ಕದಾಪೀ ನಾಹೀ ಉಚಂಬಳಲಾ ।
ಅಸಂಭಾವ್ಯ ಪಸರಲಾ । ಜಿಕಡೆ ತಿಕಡೆ ॥೧೭॥

ಯೇಕ ಜಿನಸೀ ಗಗನ ಉದಾಸ । ಜೇಥೇ ನಾಹೀ ದೃಶ್ಯಭಾಸ ।
ಭಾಸೇವಿಣ ನಿರಾಭಾಸ । ಪರಬ್ರಹ್ಮ ಜಾಣಾವೇ ॥೧೮॥

ಸಂತ ಸಾಧು ಮಹಾನುಭಾವಾ । ದೇವದಾನವ ಮಾನವಾ ।
ಬ್ರಹ್ಮ ಸಕಳಾಸೀ ವಿಸಾವಾ । ವಿಶ್ರಾಂತಿಠಾವ ॥೧೯॥

ಕೋಣೇಕಡೆ ಸೇವಟಾ ಜಾವೇ । ಕೋಣೇಕಡೆ ಕಾಯ ಪಾಹಾವೇ ।
ಅಸಂಭಾವ್ಯ ತೇ ನೇಮಾವೇ । ಕಾಯ ಮ್ಹಣೋನೀ ॥೨೦॥

ಸ್ಥೂಳ ನವ್ಹೇ ಸೂಕ್ಷ್ಮ ನವ್ಹೇ । ಕಾಂಹೀ ಯೇಕಾಸಾರಿಖೇ ನವ್ಹೇ ।
ಜ್ಞಾನ ದೃಷ್ಟೀವಿಣ ನವ್ಹೇ । ಸಮಾಧಾನ ॥೨೧॥

ಪಿಂಡ ಬ್ರಹ್ಮಾಂಡ ನಿರಾಸ । ಮಗ ತೇ ಬ್ರಹ್ಮ ನಿರಾಭಾಸ ।
ಯೇಥೂನ ತೇಥವರೀ ಅವಕಾಸ । ಭಕಃಸರೂಪ ॥೨೨॥

ಬ್ರಹ್ಮ ವ್ಯಾಪಕ ಹೇ ತೋ ಖರೇ । ದೃಶ್ಯ ಆಹೇ ತೋ ಹೇ ಉತ್ತರೇ ।
ವ್ಯಾಪೇವಿಣ ಕೋಣ್ಯಾ ಪ್ರಕಾರೇ । ವ್ಯಾಪಕ ಮ್ಹಣಾವೇ ॥೨೩॥

ಬ್ರಹ್ಮಾಸೀ ಶಬ್ದಚಿ ಲಾಗೇನಾ । ಕಲ್ಪನಾ ಕಲ್ಪೂ ಶಕೇನಾ ।
ಕಲ್ಪನೇತೀತ ನಿರಂಜನಾ । ವಿವೇಕೇ ವೋಳಖಾವೇ ॥೨೪॥

ಪರಬ್ರಹ್ಮವು ಮಳೆಯಿಂದ ತೊಯ್ಯುವದಿಲ್ಲ. ಅಥವಾ ಕೆಸರಿನಿಂದ ರಾಡಿಯಾಗುವದಿಲ್ಲ. ಅಥವಾ ಇವನಿಗೆ ಹೊಲಸು ಹತ್ತುವದಿಲ್ಲ. ಯಾವುದೇ ನೀರಿಗೆ ಸಮುದ್ರ, ನದಿ, ಹಳ್ಳ, ಕೊಳ್ಳ, ಇತ್ಯಾದಿಗಳಿಗೆ ಮಹಾಪೂರ ಬಂದರೂ ಕೂಡಾ ಅದರ ಸೆಳವಿಗೆ ಸಿಕ್ಕು ಅದರ ಸಂಗಡ ಇವನು ಕೊಚ್ಚಿ ಹೋಗುವದಿಲ್ಲ, ಮುಳುಗುವದಿಲ್ಲ, ತೇಲಿ ಹೋಗುವದಿಲ್ಲ.(೧೫)ಒಂದೇಸಮಯದಲ್ಲಿ ಇದು ಎದುರಿಗೆಇರುವದು.ಮತ್ತು ಹಿಂದೆಯೂಇರುವದು,ಬಲಬಾಜೂಕೂ, ಎಡ ಬಾಜೂಕೂ ಇರುವದು, ಕೆಳಗೂ ಇರುವದು, ಮೇಲೆಯೂ ಇರುವದು. ಸರ್ವ ಪ್ರಾಣಿಗಳಿಗೆ ಇದು ಸರ್ವ ಬಾಜೂದಿಂದ ವ್ಯಾಪಿಸಿರುವದು. (೧೬) ಪರಬ್ರಹ್ಮನು ಆಕಾಶದಂತಹ ವಿಶಾಲ ಮಡುವನ್ನು [ಮಡುವು ಅಂದರೆ ಪ್ರವಾಹದಲ್ಲಿಯ ಆಳವಾದ ತಗ್ಗು ತಿರುಗಣಿ ಮಡುವು, ದೊಡ್ಡ ಮಡುವು ಎಂದು ತಿಳಿಯಬೇಕು ಆಕಾಶವು ಪೊಳ್ಳು ಪೋಕಳ ಇದ್ದು ನೋಡಲಿಕ್ಕೆ ಕೊಪ್ಪರಿಗೆ ಡಬ್ಬು ಹಾಕಿದಂತೆ ಕಾಣುವದು ಇದರ ಆಳತೆ ಹತ್ತುವದಿಲ್ಲ. ಇದೂ ಒಂದು ಮಡುವು ಎಂದು ತಿಳಿಯಬೇಕು. ಇಂಥ ವಿಶಾಲ ಮಡುವನ್ನು ಕೂಡಾ ಪರಬ್ರಹ್ಮ ಭರಗಚ್ಚ ತುಂಬಿದ್ದಾನೆಂದು ತಿಳಿಯಬೇಕು] ಅರ್ಥಾತ್ ಆಕಾಶವನ್ನೆಲ್ಲ ತುಂಬಿ ಬಿಟ್ಟಿದ್ದಾನೆ ಆದರೆ ಈ ಆಕಾಶವೆಂಬ ಮಡುವಿನಲ್ಲಿಯ ನೀರು ಎಂದೂ ತುಂಬಿ ಹೊರ ಚೆಲ್ಲುವದಿಲ್ಲ. ಕಲ್ಪನಾ ಮಾಡಲಿಕ್ಕೆ ಬರುವದಿಲ್ಲವೆನ್ನುವಷ್ಟು ಅಫಾಟ ವಿಸ್ತಾರದಿಂದ ಈ ಮಡುವು ಅತ್ತ ಇತ್ತೆಲ್ಲ ಕಡೆಗೂ ವ್ಯಾಪಿಸಿರುವದು ಪಸರಿಸಿರುವದು. (೧೭) ಯಾಂಲ್ಲಿ ದೃಶ್ಯದ ಬಗ್ಗೆ ಎಳ್ಳಷ್ಟೂ ಭಾಸವಿಲ್ಲವೋ ಅಂಥ ಅಗದೀ ಏಕ ಜಿನಸಿ, ಏಕ ಜಾತ, ಏಕ ಪ್ರಕಾರದ ಅಂದರೆ ಒಂದೇ ಪ್ರಕಾರದ ಶೂನ್ಯ ಆಕಾಶ ವನ್ನು ಕಲ್ಪಿಸಿರಿ. ಇಂಥ ಈ ಪ್ರಕಾರವು ಇಂದ್ರಿಯಗಳಿಗೆ ಭಾಸವಾಗದಿರುವಂಥದು ಮನಕ್ಕೆ ಆಕಲನವಾಗದೇ ಇರುವಂಥದು ಇರುವದು. ಇಂಥ ಆ ಯಾವ ಆಕಾಶ ಮೇಲೆ ಹೇಳಿದಂಥಾದ್ದು ಇರುವದೋ ಅದೇ ಪರಬ್ರಹ್ಮ ಎಂದು ತಿಳಿಯಬೇಕು. ನಿಮ್ಮ ಅನುಭವಕ್ಕೆ ಬರುವಂಥ ಆಕಾಶದಲ್ಲಿಯ ಎಲ್ಲ ದೃಶ್ಯ ಭಾಸವನ್ನು ಇಲ್ಲದಂತೆ ಮಾಡಿದ ಮೇಲೆ ಆ ಯಾವ ಕೇವಲ ಆಕಾಶ ಉಳಿಯುವದೋ ಅದೇ ಪರಬ್ರಹ್ಮವೆಂದು ತಿಳಿಯಬೇಕು.(೧೮) ಸಂತ,ಸಾಧು, ಮಹಾತ್ಮಾ, ದೇವ, ದಾನವ, ಮತ್ತು ಮಾನವ ಈ ಎಲ್ಲರಿಗೂ ಪರಬ್ರಹ್ಮ ಇದೇ ನಿಜವಾದ ವಿಶ್ರಾಂತಿಯ ಸ್ಥಳ ವಾಗಿರುವದು. ಇದರ ಹತ್ತಿರ ಎಲ್ಲರಿಗೂ ವಿಶ್ರಾಂತಿ, ಆರಾಮು, ಸಮಾಧಾನ ಸಿಗುವದು. (೧೯) ಯಾವ ಬಾಜೂಕೆ ಪರಬ್ರಹ್ಮದ ಕೊನೆ ಇರುವದು? ಯಾವ ಬಾಜೂದಿಂದ ಇದನ್ನು ಹೇಗೆ ನೋಡಬೇಕು? ಅನ್ನುವದರ ಬಗ್ಗೆ ಹೇಳಲಿಕ್ಕೆ ಅಶಕ್ಯವಿರುವದು. ಯಾವುದು ಮೂಲದಲ್ಲಿಯೇ ಅನಂತ ಅಂದರೆ ಅಂತವಿಲ್ಲದ ಮತ್ತು ಅಪಾರ ಅಮರ್ಯಾದ ಇರುವದೋ? ಇಂಥದಕ್ಕೆ ಯಾವುದೇ ಮರ್ಯಾದೆ ಹಾಕಲಿಕ್ಕೆ ಬರುವದು ಶಕ್ಯವಿಲ್ಲ. ಹೇಳಲಿಕ್ಕೆ ಸಾಧ್ಯವೇ ಇಲ್ಲ (೨೦) ಪರಬ್ರಹ್ಮವು ಸ್ಥೂಲ ಇಲ್ಲ. ಜಡವಿಲ್ಲ. ಮತ್ತು ಸೂಕ್ಷ್ಮವೂ ಇಲ್ಲ. ಈ ವಿಶ್ವದಲ್ಲಿಯ ಯಾವುದೇ ವಸ್ತುವಿನಂತೆ ಇದು ಇರುವದಿಲ್ಲ. ಕೇವಲ ಜ್ಞಾನ ದೃಷ್ಟಿಗೆ ಮಾತ್ರ ಇದರ ಸ್ವರೂಪವು ಆಕಲನವಾಗುವದು, ತಿಳಿಯುವದು. ಅಂತೆಯೇ ಜ್ಞಾನ ದೃಷ್ಟಿಯಿಂದ ಮನದ ಸಮಾಧಾನವಾಗುವದು. (೨೧) ಪಿಂಡ ಮತ್ತು ಬ್ರಹ್ಮಾಂಡ ಈ ಎರಡೂ ಭಾಸರೂಪವಿರುವವು. [ಭ್ರಾಂತಿರೂಪ, ಅನಿಶ್ಚಿತ ರೂಪವಿರುವದು]. ಇವುಗಳ ನಿರಾಸ ಆಯಿತೆಂದರೆ [ಇದರಲ್ಲಿಯ ಅಷ್ಟದೇಹಗಳಿಲ್ಲದರ ನಿರಾಸ ಆದ ಮೇಲೆ] ಆಗ ಬ್ರಹ್ಮವು ನಿರಾಭಾಸ ಅಥವಾ ಭಾಸ ರಹಿತವಾಗುವದು. ಆ ಮೇಲೆ ಇಲ್ಲಿಂದ ಅಲ್ಲಿಯುವರೆಗೆ ಅಂದರೆ ಪೃಥ್ವಿಯಿಂದ ಮೂಲಮಾಯೆವರೆಗೆ ಭಕಾಸ ಅರ್ಥಾತ್ ಕೇವಲ ರಿಕಾಮಿ [ಪೊಳ್ಳಾದ] ಅವಕಾಶವು ಅಂದರೆ ಆಕಾಶವು ಒಂದೇ ಸಮ ಇರುವದು. ಅನುಭವಕ್ಕೆ ಬರುವದು. (೨೨) ಬ್ರಹ್ಮವು ವ್ಯಾಪಕ ವಿರುವದೆಂಬ ಅಭಿಯೋಣವು ನಿಜವೇ ಇರುವದು. ಆದರೆ ವ್ಯಾಪ್ಯವು [ದೃಶ್ಯ ಜಗವು] ಎಲ್ಲಿಯುವರೆಗೆ ಇರುವದೋ ಅಲ್ಲಿಯುವರೆಗೆ ಈ ಮಾತು ನಿಜವೇ [ಖರೇ] ಇರುವದು. ಬ್ರಹ್ಮಸಿಗೆ ವ್ಯಾಪಿಸಿ ಇರಲು ದೃಶ್ಯವೇ ಉಳಿಯದಿದ್ದರೆ [ದೃಶ್ಯ, ಭಾಸಾತ್ಮಕ, ಜಗತ್ತು, ಮಿಥ್ಯೆ ಇರುವದರಿಂದ] ಆಗ ಮಾತ್ರ ಬ್ರಹ್ಮ ವ್ಯಾಪಕ ಇರುವನು ಅನ್ನುವ ಭಾಷೆಯೇ ಸಂಭವಿಸುವದಿಲ್ಲ-ಉತ್ಪನ್ನವಾಗುವದಿಲ್ಲ. (೨೩) ಶಬ್ದವು ಬ್ರಹ್ಮದವರೆಗೆ ಹೋಗಿ ಮುಟ್ಟಲಿಕ್ಕೆ ಸಾಧ್ಯವಿಲ್ಲ. ಮಾನವೀ ಕಲ್ಪನೆಗಳು ಬ್ರಹ್ಮದ ಕಲ್ಪನೆ ಮಾಡಲಿಕ್ಕೆ ಶಕ್ಯವಾಗುವದಿಲ್ಲ. ಇಂಥ ಈ ಕಲ್ಪನಾತೀತ ನಿರಂಜನ ಸ್ವರೂಪ ವನ್ನು ವಿವೇಕದಿಂದ ತಿಳಿಯಬೇಕು ಗುರುತಿಸಬೇಕು. (೨೪)

ಶುದ್ಧ ಸಾರ ಶ್ರವಣ । ಶುದ್ಧ ಪ್ರತ್ಯಯಾಚೇ ಮನನ ।
ವಿಜ್ಞಾನೀ ಪಾವತಾ ಉನ್ಮನ । ಸಹಜ ಚಿ ಹೋತೇ ॥೨೫॥

ಜಾಲೇ ಸಾಧನಾಚೇ ಫಳ । ಸಂಸಾರ ಜಾಲಾ ಸಫಳ ।
ನಿರ್ಗುಣ ಬ್ರಹ್ಮ ತೇ ನಿಶ್ಚಳ । ಅಂತರೀ ಬಿಂಬಲೇ ॥೨೬॥

ಹಿಸೇಬ ಜಾಲಾ ಮಾಯೇಚಾ । ಜಾಲಾ ನಿವಾಡಾ ತತ್ವಾಚಾ ।
ಸಾಧ್ಯ ಹೋತಾ ಸಾಧನಾಚಾ । ಠಾವ ನಾಹೀ ॥೨೭॥

ಸ್ವಪ್ನೀ ಜೇ ಜೇ ದೇಖಿಲೇ । ತೇ ತೇ ಜಾಗೃತೀಸ ಉಡಾಲೇ ।
ಸಹಜ ಚಿ ಅನಿರ್ವಾಚ್ಯ ಜಾಲೇ । ಬೋಲತಾ ನ ಯೇ ॥೨೮॥

ಐಸೇ ಹೇ ವಿವೇಕೇ ಜಾಣಾವೇ । ಪ್ರತ್ಯಯೇ ಖುಣೇಸೀ ಬಾಣಾವೇ ।
ಜನ್ಮಮೃತ್ಯಾಚಾ ನಾವೇ । ಸೂನ್ಯಾಕಾರ ॥೨೯॥

ಭಕ್ತಾಚೇನಿ ಸಾಭಿಮಾನೇ । ಕೃಪಾ ಕೇಲೀ ದಾಶರಥೀನೇ ।
ಸಮರ್ಥ ಕೃಪೇಚೀ ವಚನೇ । ತೋ ಹಾ ದಾಸಬೋಧ ॥೩೦॥

ವೀಸದಶಕ ದಾಸಬೋಧ । ಶ್ರವಣದ್ವಾರೇ ಘೇತಾ ಶೋಧ ।
ಮನನ ಕರ್ತ್ಯಾಸ ವಿಶದ । ಪರಮಾರ್ಥ ಹೋತೋ ॥೩೧॥

ಅಧ್ಯಾತ್ಮದ ಶ್ರವಣ ಮನನದಿಂದ ಈ ವಿವೇಕವು ಸಾಧಿಸುವದು. ವಿವೇಕದಿಂದ ಬ್ರಹ್ಮ ಸ್ವರೂಪವನ್ನು ಗುರುತಿಸಬೇಕು. ಇದನ್ನು ಗುರುತಿಸಿದೆವೆಂದರೆ, ಜನ್ಮವು ಸಾರ್ಥಕ್ಯಹೊಂದಿ ಸಂಪೂರ್ಣ ಸಮಾಧಾನವು ಲಭಿಸುವದು. ಸಾಧನದ ಎಲ್ಲ ರಹಸ್ಯವು ಮುಖ್ಯವಾಗಿ ಅಧ್ಯಾತ್ಮದ ಸತತ ಶ್ರವಣದಲ್ಲಿಯೇ ಇರುವದೆಂದು ಸಂಪೂರ್ಣ ನಂಬು. ಸಾಧನದ ಯಶಸ್ಸಿಗೆ ಸತತ ಶ್ರವಣ ಬೇಕೇ ಬೇಕು. ಶ್ರವಣ ಮಾಡಿದ್ದನ್ನು ಸತತವೂ ಮನನ ಮಾಡಬೇಕು. ವಿವರ ವಿವರವಾಗಿ ಮನನಮಾಡಿ ತಿಳಿಯಬೇಕು. ತಿಳಿದದ್ದರ ಅನುಭವವನ್ನು ಸ್ವತಃ ಪಡೆಯಬೇಕು. ಸ್ವಾನುಭವ ಪ್ರಾಪ್ತವಾಯಿತೆಂದರೆ, ಆಗಲೇ ಜ್ಞಾನವು ವಿಜ್ಞಾನ ಸ್ಥಿತಿಗೆ ಮುಟ್ಟುವದು. ಅಥವಾ ಜ್ಞಾನವು ವಿಜ್ಞಾನವಾಗುವದು. ಆತ್ಮ ಸಾಕ್ಷಾತ್ಕಾರವಾಗುವದು. ಆಗ ಸಹಜವಾಗಿ ತನ್ನಷ್ಟಕ್ಕೆ ತಾನೇ ಉನ್ಮನಿಯ ಅವಸ್ಥೆ ಪ್ರಾಪ್ತ ಆಗುವದು.(೨೫) ಯಾವ ಪುಣ್ಯಾತ್ಮರಿಗೆ ಉನ್ಮನಿಯ ಅವಸ್ಥೆ ಸಾಧಿಸುವದೋ ಅವರಿಗೆ, ಅವರು ಮಾಡಿದ ಶ್ರವಣದಿಂದ ನಿವೇದನದ ವರೆಗಿನ ಎಲ್ಲ ಸಾಧನದ ಫಲ ದೊರಕಿತು. ಅವರ ಸಂಸಾರ ಸಫಲವಾಯಿತು; ಮಾನವ ದೇಹ ಹೊಂದಿ ಬಂದದ್ದು ಸಾರ್ಥಕವಾಯಿತು. ನಿಶ್ಚಲ ಮತ್ತು ನಿರ್ಮಲ ನಿರ್ಗುಣ ಬ್ರಹ್ಮವು ಸಾಧಕರ ಅಂತರ್ಯಾಮದಲ್ಲಿ ಸ್ಥಿರವಾಯಿತು. [ದಿನ ನಿತ್ಯ ದಾಸಬೋಧ ವಾಚನ (ಪಾರಾಯಣ) ಮಾಡುವವರು ಕೊನೆಗೆ ಈ ೨೬ನೇ ಓವಿಯಿಂದ ಕೊನೆಯ ೩೭ನೇ ಓವಿ ಪೂರ್ಣ ಓದುವ ಸಂಪ್ರದಾಯವಿರುವದು ] (೨೬) ಮಾಯೆಯ ಲೆಕ್ಕದ ಹಿಸಾಬ ಆಯಿತು. ಮಾಯೆಯ ಕೊಡಕೊಳ್ಳುವದೆಲ್ಲ ಮುಗಿಯಿತು. ಯಾವುದೂ ಏನೂ ಬಾಕಿ ಉಳಿಯಲಿಲ್ಲ. ಬೇಬಾಕ ಆಯಿತು. ಮೂಲಮಾಯೆಯಿಂದ ನಾಲ್ಕು ಖಾಣಿ [ಉತ್ಪತ್ತಿ ಸ್ಥಾನ] ಗಳ ವರೆಗಿನ ಯಾವತ್ತೂ ತತ್ವಗಳು ಅಶಾಶ್ವತವಿರುವವು. ಅನ್ನುವದನ್ನು ನಿಶ್ಚಿತತನದಿಂದ ಮನದಟ್ಟಾಯಿತು. ಮನಕ್ಕೆ ಸಂಪೂರ್ಣ ಖಾತ್ರಿಯಾಯಿತು. ಮನವು ಸಂಪೂರ್ಣ ಒಪ್ಪಿತು. ಸಾಧ್ಯವು ಉದ್ದಿಷ್ಟ ಗುರಿಯು ಪದರಿನಲ್ಲಿ ಬಿದ್ದಿತು. ಅಂದರೆ ಯಾವ ಉದ್ದೇಶದಿಂದ ಸಾಧನ ಮಾಡಿದೆವೋ ಅದರ ಫಲ ಪೂರ್ಣ ದೊರಕಿತು. ಶುದ್ಧ ಪರಬ್ರಹ್ಮ ಸ್ಥಿತಿಯ ಅನುಭವ ಅರ್ಥಾತ್ ತದ್ರೂಪತೆ ಅಂದರೆ ಸಿದ್ಧತನ ಬಂದ ಮೇಲೆ ಸಾಧನಕ್ಕೆ ಅವಕಾಶ ಉಳಿಯಲಿಲ್ಲ. ಅರ್ಥಾತ್ ಸಾಧನೆಯು ಸಹಜವಾಗಿ ತನ್ನಷ್ಟಕ್ಕೆ ತಾನೇ ವಿರಾಮಹೊಂದಿತು.(೨೭) ಸ್ವಪ್ನದಲ್ಲಿ ಏನೇನು ಯಾವ ಯಾವುದನ್ನು ನೋಡಿರುವವೋ ಅವೆಲ್ಲವೂ ಎಚ್ಚರಾದ ಮೇಲೆ ಇಲ್ಲದಾಗುವವು. ಇದರಂತೆ ಸಹಜವಾಗಿಯೇ ಅನಿರ್ವಾಚ್ಯ ಸ್ವರೂಪದ ಪ್ರಾಪ್ತಿ ಆದ ಮೇಲೆ ಇದರ ಬಗ್ಗೆ ಏನನ್ನೂ ಮಾತನಾಡಲು ಬರುವದಿಲ್ಲ. ಈ ದೃಶ್ಯ ವಿಶ್ವದ ಸ್ವಪ್ನ ನೋಡುವ ಜೀವವು. ಆತ್ಮಜ್ಞಾನದ ಎಚ್ಚರ ಬಂದ ಮೇಲೆ ಯಾವತ್ತೂ ದೃಶ್ಯಾಭಾಸವನ್ನು ಮರೆಯುವದು. ಇದು ಅಂದರೆ ಜೀವವು ಅನಿರ್ವಾಚ್ಯ ಪರಬ್ರಹ್ಮದಲ್ಲಿ ಸ್ಥಿರವಾಗುವದು. (೨೮) ಒಟ್ಟಿನಲ್ಲಿ ಹೇಳುವದೇನಂದರೆ, ಈ ಪ್ರಕಾರ ಇರುವ ಎಲ್ಲ ವಿಷಯವನ್ನು ಸಾಧಕರು ವಿವೇಕದಿಂದ ಸುವಿಚಾರದಿಂದ ತಿಳಿಯಬೇಕು. ಸ್ವತಃ ಇದೆಲ್ಲದರ ಅನುಭವದ ರಹಸ್ಯ ಬಿಂಬಿಸಿಕೊಂಡಿರೆಂದರೆ ಈ ಅನುಭವದಿಂದ ಆತ್ಮಜ್ಞಾನದ ಗುರುತು ನಿಮ್ಮಲ್ಲಿ ನೆಡುವಂತೆ, ನಿಮ್ಮಲ್ಲಿ ಸ್ಥಿರಗೊಳ್ಳುವಂತೆ ಮಾಡಬೇಕು. ಅಂದರೆ ಆಗ ನಮ್ಮ ಜನ್ಮ ಮತ್ತು ಮರಣ ಶೂನ್ಯವತ್ ಆಗುವವು. ಜನ್ಮ ಮರಣಗಳ ಹೆಸರಿಗೆ ಸೊನ್ನೆ ಪೂಜಿ ಬೀಳುವದು. ಅರ್ಥಾತ್ ನಾವು ಅಮೃತ ಪದವಿಗೆ ಮುಟ್ಟುವೆವು. ಮುಕ್ತರಾಗುವೆವು. (೨೯) ಗ್ರಂಥದ ಕೊನೆಗೆ ಉಪ ಸಂಹಾರವೆಂದು ಎಂಟು ಓವಿ [ನುಡಿ] ಹೇಳುವರು. ದಾಸಬೋಧವೆಂದರೆ ಪ್ರತ್ಯಕ್ಷ ಭಗವಂತನ ವಾಣಿ ಇರುವದು. ಭಗವಂತನೇ ಇದರ ನಿಜವಾದ ಗ್ರಂಥ ಕರ್ತನಿರುವನು-; ಶ್ರೀರಾಮಚಂದ್ರ ಪ್ರಭುವು ಭಕ್ತನ ಅಭಿಮಾನ ಹಿಡಿದು ಮತ್ತು ಭಕ್ತ ದಾಸನ ಮೇಲೆ ಕೃಪೆ ಮಾಡಿದನು. ಅಂತೆಯೇ ಸಮರ್ಥ ರಾಮರಾಯನ ಕೃಪೆಯಿಂದ ಈ ಎಲ್ಲ ವಚನಗಳು ಸ್ಫುರಿಸಿದವು, ಗೋಚರಿಸಿದವು. ಹೊರಟವು ಈ ವಚನಗಳ ಸಂಗ್ರಹವೆಂದರೇನೇ ದಾಸಬೋಧವಿರುವದು (೩೦) ದಾಸಬೋಧದಲ್ಲಿ ಇಪತ್ತು ದಶಕಗಳಿರುವವು. ಇವನ್ನು ಶ್ರವಣ ಮಾಡಿ ಶ್ರವಣ ಮಾಡಿದ ವಿಷಯವನ್ನು ಯಾರು ಶೋಧ ಪೂರ್ವಕ ವಿವರ ತಿಳಿಯುತ್ತ ಮನನ ಮಾಡುವರೋ ಅಂಥ ಮನನಶೀಲರಿಗೆ ಪರಮಾರ್ಥ ಅಂದರೇನು ಇದು ಸ್ಪಷ್ಟವಾಗಿ ತಿಳಿಯುವದು. (೩೧)

ವೀಸದಶಕ ದೋನೀಸೇ ಸಮಾಸ । ಸಾಧಕೇ ಪಾಹಾವೇ ಸಾವಕಾಸ ।
ವಿವರತಾ ವಿಶೇಷಾ ವಿಶೇಷ । ಕಳೋ ಲಾಗೇ ॥೩೨॥

ಗ್ರಂಥಾಚೇ ಕರಾವೇ ಸ್ತವನ । ಸ್ತವನಾಚೇ ಕಾಯೆ ಪ್ರಯೋಜನ ।
ಯೇಥೇ ಪ್ರತ್ಯಯಾಸ ಕಾರಣ । ಪ್ರತ್ಯಯೋ ಪಾಹಾವಾ ॥೩೩॥

ದೇಹೇ ತವ ಪಾಚಾ ಭೂತಾಚಾ । ಕರ್ತಾ ಆತ್ಮಾ ತೇಥೀಚಾ ।
ಆಣೀ ಕವಿತ್ವಪ್ರಕಾರ ಮನುಶಾಚಾ । ಕಶಾವರೂನೀ ॥೩೪॥

ಸಕಳ ಕರಣೇ ಜಗದೀಶಾಚೇ । ಆಣೀ ಕವಿತ್ವ ಚಿ ಕಾಯೆ ಮಾನುಶಾಚೇ ।
ಐಶಾ ಅಪ್ರಮಾಣ ಬೋಲಣ್ಯಾಚೇ । ಕಾಯೆ ಘ್ಯಾವೇ ॥೩೫॥

ಸಕಳ ದೇಹಾಚಾ ಝಾಡಾ ಕೇಲಾ । ತತ್ವಸಮುದಾವ ಉಡಾಲಾ ।
ತೇಥೇ ಕೋಣ್ಯಾ ಪದಾರ್ಥಾಲಾ । ಆಪುಲೇ ಮ್ಹಣಾವೇ ॥೩೬॥

ಐಸೀ ಹೇ ವಿಚಾರಾಚೀ ಕಾಮೇ । ಉಗೇ ಚ ಭ್ರಮೋ ನಯೇ ಭ್ರಮೇ ।
ಜಗದೇಶ್ವರೇ ಅನುಕ್ರಮೇ । ಸಕಳ ಕೇಲೇ ॥೩೭॥

ಇತಿ ಶ್ರೀ ದಾಸಬೋಧೇ ಗುರುಶಿಷ್ಯ ಸಂವಾದೇ
''ವಿಮಳ ಬ್ರಹ್ಮ ನಿರೂಪಣ'' ನಾಮ ಸಮಾಸ ದಶಮ ॥

— ದಶಕ ವಿಸಾವಾ ಸಮಾಪ್ತ —

ಈ ದಾಸಬೋಧವು ಇಪ್ಪತ್ತು ದಶಕದ್ದಿರುವದು. ಒಂದೊಂದು ದಶಕದಲ್ಲಿ ಹತ್ತು ಸಮಾಸಗಳಂತೆ ಒಟ್ಟು ಎರಡುನೂರು ಸಮಾಸಗಳನ್ನು ಸಾಧಕರಾದವರು ಸ್ವಸ್ಥ ಚಿತ್ತದಿಂದ ಆರಾಮವಾಗಿ ಅಭ್ಯಾಸಮಾಡಬೇಕು. ವಿವರ ವಿವರಗಳನ್ನೆಲ್ಲ ತಿಳಿಯುತ್ತ ಅಭ್ಯಾಸಮಾಡಬೇಕು. ಅಭ್ಯಾಸಮಾಡಿದ್ದರ ಮೇಲೆ ಸೂಕ್ಷ್ಮ ವಿಚಾರಮಾಡಬೇಕು. ಅಂದರೆ ವಿಷಯು ಹೆಚ್ಚು ಹೆಚ್ಚಾಗಿ ಸ್ಪಷ್ಟವಾಗಿ ತಿಳಿಯಲಿಕ್ಕೆ ಹತ್ತುವದು. (೩೨) ಗ್ರಂಥದ ಸ್ತುತಿಮಾಡುವ ಪದ್ಧತಿ ಇರುವದು ಸಾಂಪ್ರದಾಯಿಕವಿರುವದು. ಆದರೆ ಗ್ರಂಥದ ಸ್ತುತಿಮಾಡುವ ಕಾರಣವಿಲ್ಲ. ಯಾಕೆಂದರೆ ಈ ಸ್ಥಳದಲ್ಲಿ ಈಗ ಇಲ್ಲಿ ಅನುಭವವೇ ಪ್ರಧಾನವಾಗಿ ಮುಖ್ಯವಿರುವದು. ಆದ್ದರಿಂದ ಗ್ರಂಥದಲ್ಲಿ ಹೇಳಿದ ವಿಷಯದ ಪ್ರತ್ಯಕ್ಷ ಅನುಭವವನ್ನು ಪಡೆದು ನೋಡಬೇಕು. [ಇದು ಸಮರ್ಥರ ಆಶೀರ್ವಾದವೆಂದು ತಿಳಿಯಿರಿ.] (೩೩) ದೇಹವಾದರೋ ಪಂಚಭೂತಗಳಿಂದ ತಯಾರಾದದ್ದಿರುವದು. ಅಂತರಾತ್ಮಾ ಇವನೇ ದೇಹದಲ್ಲಿಯ ಖರೇ ಕರ್ತಾ ಇರುವನು. ಇದು ನಿಜವಾಗಿಯೂ ಖರೇ ಇರುವದಾದರೆ ಕವಿತ್ವದ ಕರ್ತಾತನವು ಆತ್ಮನ ಕಡೆಗೇನೇ ಇರುವದು. ಮನುಷ್ಯರ ಕಡೆಗೆ ಇರುವದಿಲ್ಲ. (೩೪) ಜಗತ್ತಿನಲ್ಲಿಯ ಯಾವತ್ತೂ ಕರ್ತಾತನವು ಜಗದೀಶ್ವರನದಿರುವದು. ಅರ್ಥಾತ್ ಕವಿತ್ವದ ಗ್ರಂಥದ ಕರ್ತಾತನವು ಮನುಷ್ಯನ ಕಡೆಗೆ ಇರುವದು ಸಾಧ್ಯವಿಲ್ಲ. [ನಾನು ಮಾಡುವವನು, ನಾನು ಮಾಡಿದೆನು, ಅನ್ನಲಿಕ್ಕೆ ಖರೇ ಆಧಾರವೇನಿರುವದು ? ಇವನಿಗೆ ಸ್ವಾತಂತ್ರ್ಯವಾದರೂ ಎಲ್ಲಿದೆ ? ಅರ್ಥಾತ್ ಯಾವ ಆಧಾರವೂ ಇಲ್ಲ. ಆಧಾರವೇ ಇಲ್ಲವೆಂದ ಮೇಲೆ ಸ್ವಾತಂತ್ರ್ಯವಂತೂ ಎಷ್ಟೂ ಇಲ್ಲವೇ ಇಲ್ಲ] ಮನುಷ್ಯನು ಕವಿತ್ವದ ಕರ್ತಾತನ ಸ್ವತಃದ ಕಡೆಗೆ [ತನ್ನ ಕಡೆಗೆ] ತೆಗೆದುಕೊಳ್ಳುವದು ಅಗದೀ ಅಪ್ರಮಾಣದ್ದೆನಿಸುವದು. (೩೫) ನಮ್ಮ ದೇಹದ ಸಂಪೂರ್ಣ ನಿರಾಸ ಮಾಡಿದೆವೆಂದರೆ ಯಾವತ್ತೂ ದೇಹವು ನಾಶವಂತವಿರುವದು, ಅನ್ನುವದರ ಅನುಭವ ಬಂದಿತೆಂದರೆ ತತ್ವದ ಸಮುದಾಯವು ಹಾರಿ ಹೋಗುವದು [ಸುಳ್ಳಾಗುವದು]. ಆಗ ಯಾವುದೇ ವಸ್ತುವಿಗೆ "ನನ್ನದು" ಎಂದು ಅನ್ನಲಿಕ್ಕೆ ಬರುವದಿಲ್ಲ. (೩೬) ಇದೆಲ್ಲ ವಿಷಯವು ಈ ರೀತಿಯ ವಿಚಾರದ್ದಾಗಿದೆ. ಮನುಷ್ಯನು ಭ್ರಮದಲ್ಲಿ ಬಿದ್ದು ವ್ಯರ್ಥವಾಗಿ ಸುಮ್ಮನೆ ತಿರುಗಾಡಬಾರದು. ದಿಕ್ಕೆಡಬಾರದು. ಜಗದೀಶ್ವರನು ವ್ಯವಸ್ಥಿತವಾಗಿ ಕ್ರಮ ಕ್ರಮವಾಗಿ ಎಲ್ಲವನ್ನೂ ರಚಿಸಿರುವನು. ಮಾಡಿರುವನು. [ಈ ದಾಸಬೋಧವನ್ನು ರಚಿಸಿದವನೂ ಮತ್ತು ಮಾಕ್ಯಾಯು ಮಾಡಿದವನೂ ಅವನೇ ಇರುವನು.] (೩೭)

ಶ್ರೀ ದಾಸಬೋಧದ ಇಪ್ಪತ್ತನೆಯ ದಶಕದೊಳಗಿನ ಗುರುಶಿಷ್ಯರ ಸಂವಾದದ "ವಿಮಲ ಬ್ರಹ್ಮನಿರೂಪಣ"ವೆಂಬ ಹೆಸರಿನ ಹತ್ತನೇ ಸಮಾಸವು ಮುಗಿದುದು.

## — ಇಪ್ಪತ್ತನೆಯ ದಶಕ ಮುಗಿಯಿತು —

# ಆರತಿ ೧. ಶ್ರೀ ದಾಸಬೋಧ

ವೇದಾಂತ ಸಮ್ಮತೀಚಾ ಕಾವ್ಯಸಿಂಧು ಭರಲಾ । ಶ್ರುತಿ ಶಾಸ್ತ್ರಗ್ರಂಥ ಗೀತಾ ಸಾಕ್ಷ ಸುಗಮ ಕೇಲಾ ॥
ಮಹಾನುಭಾವ ಸಂತಜನೀ ಅನುಭವ ಚಾಖಿಲಾ । ಅಜ್ಞಾನ ಜಡ ಜೀವಾ ಮಾರ್ಗ ಸುಗಮ ಜಾಲಾ ॥೧॥
ಜಯ ಜಯಾ ದಾಸಬೋಧಾ ಗ್ರಂಥರಾಜ ಪ್ರಸಿದ್ಧಾ । ಆರತೀ ಓವಾಳೀನ ವಿಮಳಜ್ಞಾನ ಬಾಳಬೋಧಾ ॥ಪ॥
ನವವಿಧಾ ಭಕ್ತಿಪಂಥೇ ರಾಮರೂಪ ಅನುಭವೀ । ಚಾತುರ್ಯನಿಧೀ ಮೋಠಾ ಮಾಯಾಚಕ್ರ ಉಗವೀ ॥
ಹರಿಹರಹೃದಯೀಂಚೇ ಗುಹ್ಯ ಪ್ರಗಟ ದಾವೀ । ಬದ್ಧಚಿ ಸಿದ್ಧ ಜಾಲೇ ಅಸಂಖ್ಯಾತ ಮಾನವೀ ॥೨॥
ಏಸಹೀ ದಶಕೀಚಾ ಅನುಭವ ಜೋ ಪಾಹೇ । ನಿತ್ಯನೇಮ ವಿವರಿತಾ ಸ್ವಯೇಂ ಬ್ರಹ್ಮ ಚಿ ಹೋಯೇಂ ॥
ಅಪಾರ ಪುಣ್ಯ ಗಾಠೀ ತರೀ ಶ್ರವಣ ಲಾಹೇ । ಕಲ್ಯಾಣ ಲೇಖಕಾಚೇ ಭಾವಗರ್ಭಹೃದಯೀಂ ॥೩॥ ಜಯಾಜಯಾ

# ಆರತಿ ೨. ಶ್ರೀ ಸಮರ್ಥ (ರಾಮದಾಸ)ರ

ಆರತೀ ರಾಮದಾಸಾ। ಸದ್ಗುರೂ ಸರ್ವೇಶಾ । ಕಾಯಾ ವಾಚಾ ಮನೋಭಾವೇ । ಓವಾಳೂ ಪರೇಶಾ ॥೧॥
ರಾಮದಾಸ ಮೂರ್ತಿಮಂತ। ರಾಮಚಂದ್ರ ಅವತಾರ। ಕಲಿಯುಗೀ ಅವತರೋನೀ। ಕೇಲಾ ಭಕ್ತಾಚಾ ಉದ್ಧಾರ ॥೨॥
ವೈರಾಗ್ಯ ಭಕ್ತಿ ಜ್ಞಾನ । ಶಾಂತಿ ಕ್ಷಮಾ ವಿರಕ್ತೀ । ವಿವೇಕ ಸಾಲಂಕೃತ । ಕ್ಷಮಾ ದಯಾ ಸರ್ವಭೂತೀ ॥೩॥
ಸಚ್ಚಿದಾನಂದ ಘನ। ರಾಮದಾಸ ಕೇವಳ। ದಿನಕರ ಕೃಪಾಯೋಗೇ। ರಾಮಚಂದ್ರ ನಿರ್ಮಳ ॥೪॥ ಆರತೀ ರಾಮದಾಸಾ

### ಆರತಿ ೧. ದಾಸಬೋಧದ ಆರತಿಯ ಭಾವಾರ್ಥವು.

ವೇದಾಂತ ಸಮ್ಮತವಾದಂಥ (ಒಪ್ಪಿತವಾದಂಥ) ಕಾವ್ಯಸಿಂಧು (ಅಂದರೆ ಕಾವ್ಯದ ಸಾಗರವೇ) ಇದರಲ್ಲಿ ತುಂಬಿದೆ ।
ಇದಕ್ಕೆ ಶ್ರುತಿ (ವೇದ) ಶಾಸ್ತ್ರ. ಗೀತಾದಿ ಗ್ರಂಥಗಳ ಸಾಕ್ಷಿ ಆಧಾರ ಕೊಡಲಾಗಿದೆ ।
ಮಹಾನುಭಾವರಾದಂಥ ಸಂತ ಸಜ್ಜನರು ಇದರ [ದಾಸಬೋಧ ಗ್ರಂಥದ] ಅನುಭವದ ರುಚಿಯನ್ನು ಹೊಂದಿದ್ದಾರೆ. ।
ಅಜ್ಞಾನಿಗಳೂ ಜಡರೂ ಆದ ಜೀವಗಳಿಗೆ ಉದ್ಧಾರ ಹೊಂದುವ ಮಾರ್ಗವನ್ನು ಸುಗಮಗೊಳಿಸಲಾಗಿದೆ, ॥೧॥
ಜಯ ಜಯವು ದೇವ ಸ್ವರೂಪಿ ದಾಸಬೋಧವೆಂದು ಪ್ರಸಿದ್ಧಿಪಡೆದ ಗ್ರಂಥ ರಾಜನೇ ।
ನಿನಗೆ ಆರತಿಯನ್ನು ಬೆಳಗುವೆನು । ವಿಮಲ ಜ್ಞಾನಕೊಡುವಂಥ ಬಾಲ ಬೋಧದಲ್ಲಿ ಬರೆದ ಪ್ರಸಿದ್ಧ ಗ್ರಂಥ ರಾಜನೇ।
ಜಯ ದೇವಾ ಜಯ ದೇವಾ ॥ಪಲ್ಲಾ॥
ಒಂಭತ್ತು ಪ್ರಕಾರದ ಭಕ್ತಿ ಮಾರ್ಗದಿಂದ ರಾಮ ರೂಪದ ಅನುಭವ ಬರುವದು ।
ಚತುರತೆಯ (ಚಾತುರ್ಯದ) ಖಣಿಯಾದ ಶ್ರೇಷ್ಠ ಗ್ರಂಥರಾಜನೇ, ಮಾಯಾ ಚಕ್ರ (ಪ್ರಪಂಚ ಬಂಧನ) ದಿಂದ
ಮುಕ್ತಮಾಡುವಿ । ಹರಿಹರರ ಹೃದಯದ ಗುಹ್ಯವನ್ನು ಪ್ರಕಟಪಡಿಸಿ ತೋರಿಸಿ [ತಿಳಿಸಿ] ಕೊಡುವಿ ।
ಬದ್ಧರಾದ [ಸಂಸಾರದಲ್ಲಿ ಆಸಕ್ತರಾದ] ಅಸಂಖ್ಯಾತ ಮಾನವರು
ನಿನ್ನ ಬೋಧಾಮೃತದಿಂದ ಸಿದ್ಧ [ಮುಕ್ತ] ರಾದರು ॥೨॥ ಜಯ ಜಯವು ॥
ಇಪ್ಪತ್ತು ದಶಕದ ಅನುಭವವನ್ನು ಯಾರು ಹೊಂದುವರೋ [ಪಡೆಯುವರೋ] ನೋಡುವರೋ ।
ನಿತ್ಯ ನೇಮದಿಂದ ವಿವರಣೆ ಮಾಡುವರೋ ಅವರು ಸ್ವತಃ ಬ್ರಹ್ಮವೇ ಆಗುವರು ।
ಅಪಾರ ಪುಣ್ಯ ಸಂಚಯವಿದ್ದವರಿಗೆ ಇದರ ಶ್ರವಣ ಲಭಿಸುವದು । [ರಾಮದಾಸರ ಹೇಳಿಕೆಯಂತೆ ಈ ದಾಸಬೋಧ
ವನ್ನು ಬರೆದ] ಲೇಖಕ ಕಲ್ಯಾಣ ಸ್ವಾಮಿಯ ಸ್ವತಃದ ಅನುಭವದ ಭಾವವನ್ನು ಹೃದಯದಲ್ಲಿ ಧರಿಸಿ. ॥೩॥
ಜಯ ಜಯವು.

### ಆರತಿ ೨. ಶ್ರೀ ಸಮರ್ಥ ರಾಮದಾಸರ ಆರತಿಯ ಭಾವಾರ್ಥ

ಆರತಿಯು ರಾಮದಾಸರಿಗೆ । ಸದ್ಗುರು ಸರ್ವೇಶ್ವರರಿಗೆ ।
ಶರೀರ ವಾಣಿ [ಶಬ್ದ] ಮತ್ತು ಮನದಿಂದ । ಎತ್ತುವೆವು [ಮಾಡುವೆವು] ॥೧॥
ರಾಮದಾಸರು ಸಾಕ್ಷಾತ್ತಾಗಿ [ಸ್ವತಃ] ರಾಮಚಂದ್ರ ದೇವರ ಅವತಾರರು ।
ಕಲಿಯುಗದಲ್ಲಿ ಅವತರಿಸಿ ಮಾಡಿದರು ಭಕ್ತರ ಉದ್ಧಾರವ ॥೨॥
ವೈರಾಗ್ಯ, ಭಕ್ತಿ, ಜ್ಞಾನ। ಶಾಂತಿ, ಕ್ಷಮಾ, ವಿರಕ್ತಿ। ವಿವೇಕಾದಿ ಗುಣಗಳಿಂದ
ಅಲಂಕೃತರಾದವರು । ಕ್ಷಮಾ ದಯಾ ಎಲ್ಲರ ಮೇಲೆ ಇದ್ದವರು ॥೩॥
ಕೇವಲ ಸಚ್ಚಿದಾನಂದ ಘನ । ರಾದವರು ರಾಮದಾಸರು .। ದಿನಕರ ಕೃಪಾಯೋಗ ।
ರಾಮಚಂದ್ರ ನಿರ್ಮಲನು ॥೪॥ ಆರತಿಯು ರಾಮದಾಸರಿಗೆ

# ಗ್ರಂಥ ಪ್ರಕಟಣೆಗೆ ದಾನ ನೀಡಿದ

## ❖ ದಾನಿಗಳ ಹೆಸರುಗಳು ❖

೧) ಧೋಂಡೋಪಂತ್ ಕೃಷ್ಣಗೌಡ ಕುಲಕರ್ಣಿ ಹಾಗೂ ಅವರ ಧರ್ಮಪತ್ನಿಯವರು ಹಾಗೂ ಬಂಧುಗಳು ಸಾ॥ ಹೊಳೆಆಲೂರು ಇವರು ದಿ॥ ಕೃಷ್ಣಗೌಡರ ಸ್ಮರಣಾರ್ಥ — ೩೦೦೦ ರೂಪಾಯಿ

೨) ಪಾಂಡುರಂಗ ಶಂಕರರಾವ ಕುಲಕರ್ಣಿ, ಕೋಟುಮಚಗಿ, ಮುಕ್ಕಾಂ ಧಾರವಾಡ ಹಾಗೂ ಇವರ ಧರ್ಮಪತ್ನಿ ಶ್ರೀಮತಿ ಲಕ್ಷ್ಮೀಬಾಯಿ ಪಾಂಡುರಂಗ ಕುಲಕರ್ಣಿ (ಗಂಗಾಬಾಯಿ ಹಾಗೂ ಶಂಕರರಾವ ಕುಲಕರ್ಣಿ ಇವರ ಸ್ಮರಣಾರ್ಥವಾಗಿ) — ೨೦೦೦ ರೂಪಾಯಿ

೩) ಆರ್. ಎನ್. ಕುಲಕರ್ಣಿ, ಯುಕೋ ಬ್ಯಾಂಕ್, ಕಲಕತ್ತಾ ಹಾಗೂ ಶ್ರೀಮತಿ ಸುಧಾ ಆರ್. ಕುಲಕರ್ಣಿ (ದಿ॥ ನಾರಾಯಣರಾವ ಹಾಗೂ ತಾಯಿಯವರ ಸ್ಮರಣಾರ್ಥವಾಗಿ) — ೨೦೦೦ ರೂಪಾಯಿ

೪) ಹನುಮಂತರಾವ ಗುರುನಾಥ ಮಣ್ಣೂರು. ಸಾ॥ ಮೆಣಸಗಿ ಮುಕ್ಕಾಂ : ಆಸ್ಟ್ರೇಲಿಯಾ (ತಂದೆಯವರ ಸ್ಮರಣಾರ್ಥವಾಗಿ) — ೨೦೦೦ ರೂಪಾಯಿ

## ೧೧೧೧ ರೂಪಾಯಿಗಳನ್ನು ಕೊಟ್ಟವರು

೧) ಶ್ರೀಪಾದ ನಾರಾಯಣ ಕುಲಕರ್ಣಿ ಕೋಟುಮಚಗಿ (ತಂದೆಯವರ ಸ್ಮರಣಾರ್ಥವಾಗಿ)

೨) ಸತೀಶ ಗಣಪತರಾವ ಮೇವುಂಡಿ (ಬೆಂಗಳೂರು) ಹಾಗೂ ಶ್ರೀಮತಿ ಸುಭದ್ರಾ (ಅಕ್ಕಕ್ಕ) ಸತೀಶ ಮೇವುಂಡಿ (ದಿ॥ ಇಂದಿರಾಬಾಯಿ ಗಣಪತರಾವ್ ಮೇವುಂಡಿ ಇವರ ಸ್ಮರಣಾರ್ಥವಾಗಿ)

೩) ಮಲ್ಹಾರರಾವ ನಾರಾಯಣ ಕುಲಕರ್ಣಿ, ಕೋಟುಮಚಗಿ(ಹಾವೇರಿ) (ತಾಯಿ ಲಕ್ಷ್ಮೀಬಾಯಿ ಸ್ಮರಣಾರ್ಥವಾಗಿ)

೪) ಭಾಲಚಂದ್ರ ವೆಂಕಟೇಶ ಫಾಣೇಕರ (ಧಾರವಾಡ)

೫) ಭಾಲಚಂದ್ರ ಸ್ವಾಮಿರಾವ ಕುಲಕರ್ಣಿ, ಕೋಟುಮಚಗಿ (ತಂದೆಯವರ ಸ್ಮರಣಾರ್ಥವಾಗಿ)

೬) ವಿಶ್ವನಾಥ ವೆಂಕಟೇಶ ಕುಲಕರ್ಣಿ, ಕೋಟುಮಚಗಿ ಹಾಗೂ ಜಗನ್ನಾಥ ವೆಂಕಟೇಶ ಕುಲಕರ್ಣಿ ಕೋಟುಮಚಗಿ [ತಂದೆಯವರ ಸ್ಮರಣಾರ್ಥವಾಗಿ]

೭) ಎನ್. ಆರ್. ಕುಲಕರ್ಣಿ [ಶ್ರೀನಗರ-ಹುಬ್ಬಳ್ಳಿ] ಹಾಗೂ ಶ್ರೀಮತಿ ಶಾರದಾಬಾಯಿ ಎನ್. ಕುಲಕರ್ಣಿ [ತಂದೆಯವರ ಸ್ಮರಣಾರ್ಥವಾಗಿ]

೮) ಡಾ. ಕೆ. ಜಿ. ದೇಸಾಯಿ [ವಾಳ್ವೇಕರಗಲ್ಲಿ-ಹುಬ್ಬಳ್ಳಿ] [ತಾಯಿ ಕೃಷ್ಣಾಬಾಯಿ ಸ್ಮರಣಾರ್ಥವಾಗಿ]

೯) ಲಕ್ಷ್ಮಣರಾವ ಸಂಜೀವರಾವ್ ಕುಲಕರ್ಣಿ, ಕವಲೂರು [ದಿ॥ ಧರ್ಮಪತ್ನಿ ಶಾಂತಾಬಾಯಿ ಸ್ಮರಣಾರ್ಥ]

೧೦) ಸುನೀಲ ಹಾಗೂ ಸುನೀತಾ ಆರ್. ಕುಲಕರ್ಣಿ [ತಾಯಿ-ತಂದೆ ಇವರ ಪ್ರೀತಿಗಾಗಿ]

೧೧) ರಾಮರಾವ ಬಾಳಕೃಷ್ಣರಾವ ಇನಾಮದಾರ, ಹಿರೇಮಣ್ಣೂರು [ತಾಯಿ ಸುಭದ್ರಾಬಾಯಿ ಸ್ಮರಣಾರ್ಥವಾಗಿ]

೧೨) ರಾಮರಾವ ಬಾಳಕೃಷ್ಣರಾವ ಇನಾಮದಾರ, ಹಿರೇಮಣ್ಣೂರು [ಧರ್ಮಪತ್ನಿ ರಮಾಬಾಯಿ (ಸಾಬಕ್ಕ) ಸ್ಮರಣಾರ್ಥವಾಗಿ]

೧೩) ದಾಮೋದರ ರಾಮಚಂದ್ರ ಗುಡಿ, ಧಾರವಾಡ [ಶ್ರೀನಗರ-ಹುಬ್ಬಳ್ಳಿ]

೧೪) ಡಾ. ದತ್ತಮೂರ್ತಿ ವಸಂತರಾವ ಕುಲಕರ್ಣಿ ಕೋಟುಮಚಗಿ ಹಾಗೂ ಶ್ರೀಮತಿ ಡಾ. ಅರುಂಧತಿ ದ.ಕುಲಕರ್ಣಿ [ದಿ॥ ವಸಂತರಾವ ಇವರ ಸ್ಮರಣಾರ್ಥವಾಗಿ]

೧೫) ಡಾ. ಕೃಷ್ಣರಾವ ದತ್ತಾತ್ರಯ ಕರ್ತಕೋಟಿ, ಶ್ರೀಮತಿ ಗಾಯತ್ರಿ ಕೃ.ಕರ್ತಕೋಟಿ[ಹುಬ್ಬಳ್ಳಿ ವಿಠೋಬಗಲ್ಲಿ] [ದಿ॥ ಅಂಬೂತಾಯಿ ಹಾಗೂ ದಿ॥ ದತ್ತಾತ್ರಯ ಕರ್ತಕೋಟಿ ಸ್ಮರಣಾರ್ಥವಾಗಿ]

೧೬) ಡಾ. ಕಮಲಾಕರ ಪಾಂಡುರಂಗ ದೇಶಮುಖ, ಗುಲಬುರ್ಗಾ ಶ್ರೀಮತಿ ಗೀತಾ ಕೆ. ದೇಶಮುಖ ಹಾಗೂ
ಶ್ರೀ ಪ್ರಭಾಕರ ಹಾಗೂ ಶ್ರೀ ಬಾಬುರಾವ ದೇಶಮುಖ
[ದಿ॥ ಪಾಂಡುರಂಗರಾವ ಇವರ ಸ್ಮರಣಾರ್ಥವಾಗಿ]

೧೭) ಲಕ್ಷ್ಮಣರಾವ ಭೀಮಸೇನರಾವ ಪೋಲೀಸ ಪಾಟೀಲ [ತಂದೆ ಭೀಮಶೇನರಾಯರ ಸ್ಮರಣಾರ್ಥವಾಗಿ]

೧೮) ಗುರುನಾಥ ಸಾಂಭಟ್ಟ ಗ್ರಾಮ ಪುರೋಹಿತ, ಹೊಳೇಮಣ್ಣೂರು ಹಾಗೂ ಅವರ ಬಂಧುಗಳು

೧೯) ಶ್ರೀಮತಿ ಪ್ರೇಮಾಬಾಯಿ ನಾಗೇಶರಾವ ಮುಂಗಸೂಳಿ, ಶಿರಹಟ್ಟಿ ಹಾಗೂ
ರಾಮಚಂದ್ರ ಬಾಳಕೃಷ್ಣ ಮುಂಗಸೂಳಿ, ಶಿರಹಟ್ಟಿ [ದಿ॥ ನಾಗೇಶರಾವ ಸ್ಮರಣಾರ್ಥವಾಗಿ]

೨೦) ವೆಂಕಟೇಶ ಕೃಷ್ಣರಾವ ಮುತಾಲಿಕ ದೇಸಾಯಿ, ಶ್ರೀಮತಿ ಲಕ್ಷ್ಮೀ ವೆಂ, ಮುತಾಲಿಕ ದೇಸಾಯಿ, ಪಟ್ಟದಕಲ್ಲ
[ದಿ॥ ಕೃಷ್ಣರಾವ ಇವರ ಸ್ಮರಣಾರ್ಥವಾಗಿ]

೨೧) ಗೋಪಾಲರಾವ ಚಿಂತಾಮಣಿರಾವ ಕೊರ್ಲಹಳ್ಳಿ [ಧಾರವಾಡ ಇಂಜನೀಯರ] ಶ್ರೀಮತಿ ನಂದಾ ಜಿ. ಕೊರ್ಲಹಳ್ಳಿ
[ದಿ॥ ಚಿಂತಾಮಣಿರಾವ ಇವರ ಸ್ಮರಣಾರ್ಥವಾಗಿ]

೨೨) ಅರುಣಕುಮಾರ ಹಲಗತ್ತಿ ಹಾಗೂ ಶ್ರೀಮತಿ ಕರುಣಾ [ರಾಣಿ] ಅ. ಹಲಗತ್ತಿ
[ಅಜ್ಜಿ ಕಾವೇರಿಬಾಯಿ ಹಲಗತ್ತಿ ಇವರ ಸ್ಮರಣಾರ್ಥವಾಗಿ]

೨೩) ಮೆಣಸಗಿ ಗ್ರಾಮದ ಶ್ರೀ ಶರಣ ಬಸವೇಶ್ವರ ಪುರಾಣ ಕಮಿಟಿಯವರು

೨೪) ಶಾಮರಾವ ಗುರುನಾಥ ಮಣ್ಣೂರು, ಮೆಣಸಗಿ ಹಾಗೂ ಪ್ರಲ್ಹಾದ ಗುರುನಾಥ ಮಣ್ಣೂರು, ಮೆಣಸಗಿ
ಅರವಿಂದ ಗುರುನಾಥ ಮಣ್ಣೂರು, ಮೆಣಸಗಿ [ತಂದೆಯವರ ಸ್ಮರಣಾರ್ಥವಾಗಿ)

೨೫) ಶ್ರೀಪಾದರಾವ ದತ್ತಂಭಟ್ಟ ಕುರ್ತಕೋಟಿ ಹಾಗೂ ಶ್ರೀಮತಿ ಲತಾಬಾಯಿ ಎಸ್. ಕುರ್ತಕೋಟಿ, ಹುಬ್ಬಳ್ಳಿ
[ದಿ॥ ದತ್ತಂಭಟ್ಟ ರಾಮಭಟ್ಟ ಕುರ್ತಕೋಟಿ ಇವರ ಸ್ಮರಣಾರ್ಥವಾಗಿ]

೨೬) ಡಾ. ವಿನಾಯಕ ಶಂಕರರಾವ ಕುರ್ತಕೋಟಿ [ನವನಗರ-ಹುಬ್ಬಳ್ಳಿ] ಹಾಗೂ ಧರ್ಮಪತ್ನಿ ಇವರು
[ದಿ॥ ಶಂಕರರಾವ ಇವರ ಸ್ಮರಣಾರ್ಥವಾಗಿ]

೨೭) ಡಾ. ಶ್ರೀನಿವಾಸ ವೆಂಕಟೇಶ ಮುತಾಲಿಕ ಪಾಟೀಲ, M.D. ಹುಬ್ಬಳ್ಳಿ ಹಾಗೂ ಶ್ರೀಮತಿ ಸಂಧ್ಯಾ ಎಸ್.
ಮುತಾಲಿಕ ಪಾಟೀಲ (ತಂದೆ ತಾಯಿ ಮತ್ತು ಮಗನ ಕ್ಷೇಮ ಚಿಂತನೆಗಾಗಿ)

೨೮) ಶ್ರೀ ವೆಂಕಟರಾವ ಮುತಾಲಿಕ ಪಾಟೀಲ,ಅಶೋಕನಗರ ಹುಬ್ಬಳ್ಳಿ, ಶ್ರೀಮತಿ ಪದ್ಮಾವತಿ ವೆಂ. ಮು.ಪಾಟೀಲ
(ಶ್ರೀ ವೆಂಕಟರಾವ ಇವರ ತಂದೆ ತಾಯಿ ಸ್ಮರಣಾರ್ಥವಾಗಿ)

೨೯) ರಾಮಚಂದ್ರ ವ್ಹಿ. ಕುಲಕರ್ಣಿ, ಕೋಟುಮಚಗಿ [ತಾಯಿ-ತಂದೆ ಇವರ ಸ್ಮರಣಾರ್ಥವಾಗಿ]

೩೦) ದಿ. ಶ್ರೀ ಶಂಕರರಾವ ನಾರಾಯಣಭಟ್ಟ ಜೋಶಿ, ಮೆಣಸಿಗಿ ಇವರ ಮಕ್ಕಳು ಹಾಲಿವಸ್ತಿ ಮುಂಬೈ

೩೧) ಶ್ರೀ ಎಸ್.ನರಸಿಂಗರಾವ,ಮಲಪ್ರಭಾ ಗ್ರಾಮೀಣ ಬ್ಯಾಂಕ ಏರಿಯಾ ಮ್ಯಾನೇಜರ ಹಾಲಿವಸ್ತಿ ಶ್ರೀನಗರ ಹುಬ್ಬಳ್ಳಿ
ಹಾಗೂ ಶ್ರೀಮತಿ ವಿಜಯಲಕ್ಷ್ಮೀ ಎಸ್. ನರಸಿಂಗರಾವ

೩೨) ಪಾಂಡುರಂಗ ತಮ್ಮಾಜಿ ಕುಲಕರ್ಣಿ, ಮೆಣಸಗಿ
[ಸಹೋದರಿ ಬಹಿಣಾಬಾಯಿ ಶಂಕರರಾವ ಕುಲಕರ್ಣಿ ಸಾ। ಖನ್ನೂರು ತಾ। ನವಲಗುಂದ ಇವರ ಸ್ಮರಣಾರ್ಥವಾಗಿ]

೩೩) ಪಾಂಡುರಂಗ ತಮ್ಮಾಜಿ ಕುಲಕರ್ಣಿ ಮೆಣಸಗಿ
[ಸಹೋದರಿ ಜೀವೂಬಾಯಿ ಭೀಮರಾವ ಕುಲಕರ್ಣಿ ಸಾ। ವಡವಟ್ಟಿ, ತಾ। ಬಾದಾಮಿ ಇವರ ಸ್ಮರಣಾರ್ಥವಾಗಿ]

೩೪) ಗಣೇಶ ಭಟ್ಟ ಸಾಂಭಟ್ಟ ಗ್ರಾಮಪುರೋಹಿತ, ಹೊಳೆಮಣ್ಣೂರು,
[ತಾಯಿ ಉಮಾಬಾಯಿ ಹಾಗೂ ತಂದೆ ಇವರ ಸ್ಮರಣಾರ್ಥವಾಗಿ]

೩೫) ವಿಶ್ವನಾಥ ಭೀಮರಾವ ದೇಶಪಾಂಡೆ, ಆದರಹಳ್ಳಿ [ತಂದೆಯವರ ಸ್ಮರಣಾರ್ಥವಾಗಿ]

೩೬) ವಿ.ಎಲ್.ಜಿ. ದೇಶಪಾಂಡೆ [ವೈದ್ಯ] ಮೆಣಸಿಗಿ ಇವರ ಸ್ಮರಣಾರ್ಥವಾಗಿ ಇವರ ಹಿರಿಯ ಮಗ ವಿಶ್ವನಾಥ
ಹಾಗೂ ಬಂಧುಗಳು

## ೫೧೧ ರೂ.ಗಳನ್ನು ಕೊಟ್ಟವರು

೧) ವಿರೂಪಾಕ್ಷ ಶಿವರಾವ ಕುಲಕರ್ಣಿ ಹಾಗೂ ಬಂಧುಗಳು, ಕೋಟುಮಚಗಿ [ತಾಯಿ-ತಂದೆ ಸ್ಮರಣಾರ್ಥವಾಗಿ]
೨) ಗುರುನಾಥರಾವ ಕುಲಕರ್ಣಿ, ಕೋಟುಮಚಗಿ [ತಾಯಿ-ತಂದೆ ಸ್ಮರಣಾರ್ಥವಾಗಿ]
೩) ದೀಪಕ ಎಸ್. ಕುಲಕರ್ಣಿ ಹಾಗೂ ಶ್ರೀಮತಿ ವೀಣಾ ದೀಪಕ ಕುಲಕರ್ಣಿ ಬೆಳಗಾಂವ
೪) ಸಿ. ವ್ಹಿ. ಗ್ರಾಮೋಪಾಧ್ಯೆ ಹಾಗೂ ಶ್ರೀಮತಿ ವಸುಂಧರಾ ಸಿ. ಗ್ರಾಮೋಪಾಧ್ಯೆ. ಬೆಳಗಾಂವ
[ಸಿ.ವ್ಹಿ.ಗ್ರಾಮೋಪಾಧ್ಯೆ ತಂದೆಯವರ ಸ್ಮರಣಾರ್ಥವಾಗಿ]
೫) ರಂಗರಾವ ಕುಲಕರ್ಣಿ,ನೀಲಗುಂದ,ಮುಕ್ಕಾಂ:ಮುಂಬೈ ಹಾಗೂ ತಮ್ಮಂದಿರು.(ತಂದೆಯವರ ಸ್ಮರಣಾರ್ಥವಾಗಿ)
೬) ಅನಿಲ ವ್ಹಿ. ಭಂಡಿವಾಡ ಹಾಗೂ ಶ್ರೀಮತಿ ವಿದ್ಯಾ ಎ. ಭಂಡಿವಾಡ ಮುಕ್ಕಾಂ : ಫೋಂಡಾ (ಗೋವಾ)

## ಪ್ರೋತ್ಸಾಹಕರವಾಗಿ ೧೧೧ ರೂ.ಗಳನ್ನು ಕೊಟ್ಟವರು

೧) ಭಗಿನಿ ಮಂಡಳ, (ಜಯಚಾಮರಾಜ ನಗರ) ಹುಬ್ಬಳ್ಳಿ.
೨) ಮಹಾರಾಷ್ಟ್ರ ಮಂಡಳ, ಗದಗ
೩) ಧುಂಡಪ್ಪ ಗುಡಗೋಳಿ, ಸಾಕೀನ, ಹೊಳೇಮಣ್ಣೂರು

## ಪ್ರೋತ್ಸಾಹಕರವಾಗಿ ೫೧ ರೂ.ಗಳನ್ನು ಕೊಟ್ಟವರು

೧) ಡಾಕ್ಟರ ಸುಭಾಷ ಜೋಶಿ ಇವರ ತಾಯಿ ಸುಶೀಲಾಬಾಯಿ ಗ. ಜೋಶಿ ಹುಬ್ಬಳ್ಳಿ

## ಆಶೀರ್ವಾದಪೂರ್ವಕ ನೀಡಿದವರು

೧) ವೇದಮೂರ್ತಿ ಶಂಕರ ಶಾಸ್ತ್ರಿಗಳು, ಮುಳಗುಂದ. (ಹುಬ್ಬಳ್ಳಿ-ರಾಧಾಕೃಷ್ಣಗಲ್ಲಿ)
೨) ವೇದಮೂರ್ತಿ ರಮೇಶಭಟ್ಟ ಕೃಷ್ಣಭಟ್ಟ ಗ್ರಾಮ ಪುರೋಹಿತ ಸಾ॥ ಹೊಳೇಮಣ್ಣೂರು ಮುಕ್ಕಾಂ ಧಾರವಾಡ
೩) ವೇದಮೂರ್ತಿ ಪ್ರಭಾಕರಭಟ್ಟ ಸದಾಶಿವಭಟ್ಟ ಗ್ರಾಮ ಪುರೋಹಿತ ಸಾ॥ ಹೊಳೇಮಣ್ಣೂರು, ಮು: ಧಾರವಾಡ

॥ ಶ್ರೀ ಗುರುಭ್ಯೋನಮಃ ॥

# (ಹಿನ್ನುಡಿ)

# ಕೃತಜ್ಞತೆಗಳು

ಶ್ರೀಸಮರ್ಥ ರಾಮದಾಸರ ಕೃಪೆಯಿಂದ ಅವರದೇ ಆದ ಈ 'ದಾಸಬೋಧ'ವನ್ನು ಕನ್ನಡಕ್ಕೆ ಅನುವಾದಗೊಳಿಸಿ, ಆಸಕ್ತ ಆಸ್ತಿಕ ಕನ್ನಡಿಗರ ಕೈಯಲ್ಲಿ ಇಡುತ್ತಿರುವ ಈ ಸಂತಸದ ಕ್ಷಣದಲ್ಲಿ, ಇದಕ್ಕೆ ಕಾರಣರಾದವರನ್ನೆಲ್ಲ ಕೃತಜ್ಞತೆಯಿಂದ ನೆನೆಯಬೇಕಾದುದು ನನ್ನ ಕರ್ತವ್ಯ.

ನಾನು ಪಂಡಿತನಲ್ಲ, ವೇದಾಂತಿಯೂ ಅಲ್ಲ. ಪವಿತ್ರ 'ದಾಸಬೋಧ'ದಿಂದ ಪ್ರಭಾವಿತನಾಗಿರುವ ಓರ್ವ ಪಾಮರ ಮಾತ್ರ. ಬಾಲ್ಯದಿಂದಲೂ ಈ ಮಹಾಗ್ರಂಥದ ಸವಿಯನ್ನು ಸವಿದ ನನಗೆ ಈ ಜೀವನ ಧರ್ಮ ಬೋಧಿನಿಯನ್ನು ಕನ್ನಡಿಗರಿಗೂ ಪರಿಚಯಿಸಬೇಕೆಂಬ ಹೆಬ್ಬಯಕೆ ಬಹುಕಾಲದಿಂದ ಇತ್ತು.

೧೯೫೭ರಲ್ಲಿಯೇ ಸಮರ್ಥರ 'ಮನಾಚೆ ಶ್ಲೋಕ'ವನ್ನು ಕನ್ನಡಕ್ಕೆ ಅನುವಾದಗೊಳಿಸಿ, ನಮ್ಮದೇ ಆದ 'ವೃಂದಾ ಪ್ರಕಟಣಾ ಮಂದಿರ, ಮುಣಸಿಗಿ'ಯ ಮೂಲಕ ಪ್ರಕಟಿಸಿದ್ದೆ. ಅನಂತರ ವೃತ್ತಿ ಪರವಾಗಿ ಹಲವು ವೈದ್ಯಕೀಯ ಗ್ರಂಥಗಳನ್ನೂ ಬರೆದು ಪ್ರಕಟಗೊಳಿಸಿದ್ದೆ. ಆಗಿನಿಂದಲೂ "ದಾಸಬೋಧ"ದ ಕನ್ನಡಾನುವಾದದ ಬಯಕೆ ಬೀಜವಾಗಿ, ಮೊಳೆತು, ನನ್ನ ಮನದಂಗಳದಲ್ಲಿ ತನ್ನ ಬೇರುಗಳನ್ನು ಬಿಟ್ಟು ನನ್ನಲ್ಲಿ ಸದಾ ಜಾಗೃತಿಯನ್ನುಂಟುಮಾಡುತ್ತಿತ್ತು. ಜೀವನದ ಸುಖ ದುಃಖಗಳಲ್ಲೆಲ್ಲ ನನ್ನ ನಿತ್ಯ ಸಂಗಾತಿಯಾಗಿದ್ದ "ದಾಸಬೋಧ" ಬದುಕಿನ ದಾರಿದೀಪವಾಗಿತ್ತು.

ಶ್ರೀ ಬ್ರಹ್ಮಚೈತನ್ಯರ ಕರುಣೆ, ಶ್ರೀ ಬ್ರಹ್ಮಾನಂದರ ಅನುಗ್ರಹ ಶಿಶುವಾಗಿ ಬೆಳೆದ ನನಗೆ ನನ್ನ ತಂದೆ ಶ್ರೀ ತಮ್ಮಣ್ಣರಾಯರದೇ ಈ ದಿಸೆಯಲ್ಲಿ ಮಾರ್ಗದರ್ಶನ. ಚಿಕ್ಕಂದಿನಲ್ಲಿಯೇ ಮಾತೃವಿಹೀನನಾದ ನನಗೆ ತಂದೆಯೇ ಮೊದಲ ಗುರು. ಹೆತ್ತಮ್ಮನಲ್ಲದಿದ್ದರೂ ತಾಯಿಯಂತೆ ಪೋಷಿಸಿದ ಶ್ರೀಮತಿ ಸೀತಮ್ಮ ಜೋಶಿಯವರ ನೆರಳಲ್ಲಿ, ತಂದೆಯ ಕೃಪಾಶೀರ್ವಾದದಿಂದ ದೊರೆತ ಸಂಸ್ಕಾರ ನನ್ನಲ್ಲಿ ಆಸ್ತಿಕ ಭಾವನೆಯನ್ನು ಹುಟ್ಟಿ ಬೆಳೆಸಿತು. ನಿತ್ಯವೂ ನಾನು ನಮಸ್ಕರಿಸುತ್ತಿದ್ದ ಶ್ರೀ ಬ್ರಹ್ಮಚೈತನ್ಯರ ಭಾವಚಿತ್ರದಲ್ಲಿ, ಅವರ ಕೈಯಲ್ಲಿರುವ "ದಾಸಬೋಧ" ಬಾಲ್ಯದಲ್ಲಿಯೇ ನನ್ನ ಗಮನ ಸೆಳೆಯಿತು. ಆಗಿನಿಂದಲೇ ಈ ಪವಿತ್ರ ಗ್ರಂಥದ ಪಠಣ, ಅಧ್ಯಯನ ಆರಂಭವಾಯಿತು. ಓದುತ್ತ ಸಾಗಿದಂತೆಲ್ಲ ಮನಸ್ಸು ಅದರಲ್ಲಿಯೇ ಲೀನವಾಯಿತು. ಹೀಗೆಯೇ "ದಾಸಬೋಧ" ನನ್ನ ನಿತ್ಯ ಸಂಗಾತಿಯಾಯಿತು.

ಈ ಮಹಾನ್ ಕೃತಿಯ ಕನ್ನಡಾನುವಾದದ ಬಯಕೆ ಬಲಿಯುತ್ತಿದ್ದಂತೆ, ಅರ್ಥಸಹಿತ ವಿವರಿಸಬೇಕೆಂಬ ಹಂಬಲ ಉಂಟಾಯಿತು. ಈ ಸಂದರ್ಭದಲ್ಲಿ ಬಾಂಧವರೊಬ್ಬರು "ಸಜ್ಜನಗಡ ಟ್ರಸ್ಟ್"ನಿಂದ ಪ್ರಕಾಶಿತವಾದ ಪ್ರೊ. ಬೆಲಸರೆ ಅವರ "ಸಾರ್ಥ ಶ್ರೀಮದ್ ದಾಸಬೋಧ" ಗ್ರಂಥವನ್ನು ತರಿಸಿಕೊಟ್ಟರು. ಅದನ್ನು ಓದುತ್ತಿದ್ದಂತೆಯೇ, ಈ ಕೃತಿಯನ್ನೇ ಕನ್ನಡದಲ್ಲಿ ಅನುವಾದಿಸಬೇಕೆಂಬ ಇಚ್ಛೆ ಪ್ರಬಲವಾಯಿತು. ಈ ನನ್ನ ಇಚ್ಛೆಗೆ ಮೂಲ ಪ್ರೇರಕರಾದ ಹೊಸಪೇಟೆಯ ಶ್ರೀ ಕೃಷ್ಣಾಜಿ ಕಾಶೀನಾಥ ಗ್ರಾಮಪುರೋಹಿತ ಅವರಿಗೆ ನಾನು ಅಜನ್ಮ ಋಣಿಯಾಗಿದ್ದೇನೆ.

ಪ್ರೊ. ಬೆಲಸರೆ ಅವರನ್ನು ಸಂಪರ್ಕಿಸಿ ಅನುವಾದಕ್ಕೆ ಅನುಮತಿ ಕೇಳಿದಾಗ, ಆ ಸಹೃದಯರು "ಗ್ರಂಥದ ಮೇಲೆ ನನ್ನ ಯಾವ ಅಧಿಕಾರವೂ ಇಲ್ಲ. ಅದು ಸಜ್ಜನಗಡ ಟ್ರಸ್ಟ್‌ನ ಸ್ವತ್ತು. ಅವರನ್ನೇ ಕೇಳಿ ಅನುಮತಿ ಪಡೆಯಿರಿ. ನೀವು ಕನ್ನಡದಲ್ಲಿ ಅನುವಾದಿಸುವುದಾದರೆ ಅದು ನಿಜಕ್ಕೂ ಸಂತಸದ ವಿಷಯ. ನನ್ನಿಂದ ಯಾವ ಅಭ್ಯಂತರವೂ ಇಲ್ಲ" ಎಂದು ಹೇಳಿದರು.

ಸಜ್ಜನಗಡ ಟ್ರಸ್ಟ್‌ನ ಅಧ್ಯಕ್ಷ ಶ್ರೀ ಆರ್. ಎನ್. ಗೋಡಬೋಲೆ ಅವರು ಅನುವಾದಕ್ಕೆ ಅನುಮತಿ ನೀಡಿದರು. ಈ ಅನುಮತಿಗೆ ಅವರು ಹಾಕಿದ ಕರಾರು ಏನು ಗೊತ್ತೇ ? ತಮ್ಮ ಗ್ರಂಥ ಭಂಡಾರಕ್ಕೆ ಅನುವಾದಿತ ಕೃತಿಯ ಎರಡು ಪ್ರತಿಗಳ ಕೊಡುಗೆ ಮಾತ್ರ !

ಮೂಲ ಗ್ರಂಥ ಕರ್ತೃ ಪ್ರೊ. ಬೆಲಸರೆ, ಪ್ರಕಾಶಕರಾದ ಸಜ್ಜನಗಡ ಟ್ರಸ್ಟ್ ಹಾಗೂ ಶ್ರೀ ಕೇತಕರ ಅವರಿಗೆ ಮೊದಲ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಹೀಗೆ ಗುರು-ಹಿರಿಯರ ಅನುಗ್ರಹದಿಂದ, ೧೯೭೭-೭೮ ರಲ್ಲಿ "ಸಾರ್ಥ ಶ್ರೀಮತ್ ದಾಸಬೋಧ" ದ ಕನ್ನಡಾನುವಾದ ಕಾರ್ಯವನ್ನು ನಮ್ಮ ಊರಾದ ಮುಣಸಿಗಿ (ಜಿ : ಧಾರವಾಡ) ಯಲ್ಲಿ ಆರಂಭಿಸಿದೆ. ಈ ಕಾರ್ಯ ಸತತ ೭-೮ ವರ್ಷ ಮುಂದುವರೆಯಿತು.

ಆದರೆ, ಬರೆದವನು ನಾನೇ ? ಖಂಡಿತ ಅಲ್ಲ. ಶ್ರೀ ಸಮರ್ಥರ ದಿವ್ಯ ಚೇತನ ನನ್ನಿಂದ ಬರೆಯಿಸಿತು. ನಾನು ನಿಮಿತ್ತ ಮಾತ್ರ. ಪ್ರೇರಕ–ಕಾರಕರು ಸ್ವತಃ ಶ್ರೀ ಸಮರ್ಥರು ಹಾಗೂ ಅವರ ಆರಾಧ್ಯ ದೈವ ಶ್ರೀರಾಮರೇ ಆಗಿರುವಾಗ "ನಾನು ಬರೆದೆ" ಎನ್ನುವದು ಅರ್ಥಹೀನ. ಅವರು ನಿಂತು ನುಡಿಸಿದುದನ್ನು ನಾನು ಬರೆದೆ. ನಾನು ಕೃತಿಕಾರನಲ್ಲ. ಕೇವಲ ಲಿಪಿಕಾರ ಎಂದು ವಿನಮ್ರನಾಗಿ ಹೇಳಬಯಸುವೆ. ಅವರ ಕೃಪೆಯಿಂದ ಹಸ್ತಪ್ರತಿ ಸಿದ್ಧ ವಾಯಿತು. ಮೆಣಸಿಗಿಯಲ್ಲಿ ಬರೆದ ಈ ಕೃತಿ ಹುಬ್ಬಳ್ಳಿಯಲ್ಲಿ ಪರಿಷ್ಕರಣಗೊಂಡಿತು.

ಈ ಹಸ್ತಪ್ರತಿ ಸಿದ್ಧತೆಯ ಆರಂಭದಲ್ಲಿ ನನಗೆ ಬೇಕಾದ ಸಂದರ್ಭ ಗ್ರಂಥಗಳು, ಶಬ್ದಕೋಶಗಳು, "ದಾಸಬೋಧ"ದ ವಿವಿಧ ಆವೃತ್ತಿಗಳನ್ನು ಒದಗಿಸಿದ ಸಹೃದಯರು ಹಲವರು. ಶ್ರೀ ಅಪ್ಪಾಸಾಹೇಬ ವಾಡದೇಕರ, ಪ್ರೊ. ಗುಂಡಿ, ಶ್ರೀಮತಿ ಉಮಾತಾಯಿ ಗೋರೆ, ಶ್ರೀಯುತ ಸಾರೆ ಮೊದಲಾದವರು ಪುಸ್ತಕ ಸಂಗ್ರಹ, ಶಬ್ದಾರ್ಥ ವಿವರಣೆಗೆ ತುಂಬು ನೆರವು ನೀಡಿದರು. ಅವರೆಲ್ಲರನ್ನು ಈ ಸಂದರ್ಭದಲ್ಲಿ ನಾನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಪ್ರೊ. ಬೆಲಸರೆ ಅವರ ಕೃತಿಯ ಯಥಾನುವಾದ ನನ್ನ ಆಶಯವಾಗಿತ್ತು. ಈ ದಿಸೆಯಲ್ಲಿ ಪ್ರತಿಯೊಂದು ಶಬ್ದವನ್ನು ಯಥಾವತ್ ಕನ್ನಡಕ್ಕೆ ಅನುವಾದಿಸಲು ನಾನು ಇಷ್ಟಪಟ್ಟಿದ್ದೆ. ಹೀಗಾಗಿ ಅನೇಕ ಗ್ರಂಥಗಳನ್ನು ಪರಿಶೀಲಿ ಸುವದು ಅನಿವಾರ್ಯವಾಗಿತ್ತು. ಬಲ್ಲವರನ್ನೆಲ್ಲ ಕೇಳಿ ಖಚಿತಪಡಿಸಿಕೊಂಡು ಮುಂದುವರೆಯುತ್ತಿದ್ದೆ. ಈ ಸಂದರ್ಭದಲ್ಲಿ ನನ್ನೆಲ್ಲ "ಕಿರಿ ಕಿರಿ"ಯನ್ನು ಸಹಿಸಿದ ನನ್ನೆಲ್ಲ ಹಿತೈಷಿಗಳಿಗೆ, ಪಂಡಿತ- ಪರಿಣಿತರಿಗೆ ನಾನು ಆಜನ್ಮ ಋಣಿಯಾಗಿದ್ದೇನೆ.

ಈ ಕೃತಿಯ "ಲಿಪಿಕಾರ" ನಾನು ಎಂದೆನಲ್ಲವೇ ? ಮೂಲ ಪ್ರತಿ ನನ್ನದೆಂಬುದು ನಿಜ. ಆದರೆ ವೃದ್ಧಾಪ್ಯ ದಲ್ಲಿರುವ ನನ್ನ ದುರ್ಬಲ ಕೈಗಳಿಂದ ಈ ಕೆಲಸ ನಿಜಕ್ಕೂ ಅಸಾಧ್ಯವಾಗಿತ್ತು. ಹಸ್ತಾಕ್ಷರಗಳು ಸರಿಯಾಗಿರಲಿಲ್ಲ. ಆ ಸಂದರ್ಭದಲ್ಲಿ ನನಗೆ ಹಸ್ತಪ್ರತಿಯನ್ನು ಮುದ್ದಾದ ಅಕ್ಷರಗಳಿಂದ ಸಿದ್ಧಪಡಿಸಿಕೊಟ್ಟವರು ನನ್ನ ಸೋದರಳಿಯ ಕನ್ನಡ ಶಾಲಾ ಶಿಕ್ಷಕ ಶ್ರೀ ಗಣೇಶ ಸಾಂಭಟ್ಟ ಗ್ರಾಮ ಪುರೋಹಿತರು. ಅವರ ಈ ಅಮೂಲ್ಯ ಸಹಕಾರವನ್ನು ನಾನು ಹೃತ್ಪೂರ್ವಕ ಸ್ಮರಿಸುತ್ತೇನೆ.

ಹಸ್ತಪ್ರತಿ ಸಿದ್ಧವಾಯಿತು. ಮನೆಯ ಮೂಲೆಯಲ್ಲಿ ಇಟ್ಟೆತ್ತರ ಕುಳಿತ ಆ ಗಂಟು ನನ್ನ ಮನದ ಮೂಲೆ ಮೂಲೆಯನ್ನು ಚುಚ್ಚತೊಡಗಿತು. ಪರಿಶ್ರಮವಹಿಸಿ ಸಿದ್ಧಪಡಿಸಿದ ಈ ಹಸ್ತಪ್ರತಿ ಕೃತಿರೂಪ ತಳೆಯುವ ಬಗೆ ಎಂತು ? ಇದು ಹೀಗೆಯೇ ಕುಳಿತು ಜಿರಲೆಗಳಿಗೆ ಆಹಾರವಾದರೆ ನನ್ನ, ನನ್ನೆಲ್ಲ ಹಿತೈಷಿಗಳ ಪರಿಶ್ರಮ ವ್ಯರ್ಥ ವಾದಂತಲ್ಲವೇ ? ಆದರೆ ಪ್ರಕಟಿಸಬೇಕೆಂದರೆ, ಕನಿಷ್ಠ 2000 ಮುದ್ರಿತ ಪುಟಗಳಷ್ಟಾಗುವ ಈ ಸಾಹಿತ್ಯ ಆರ್ಥಿಕವಾಗಿ ದುಬಾರಿ ಎನಿಸತೊಡಗಿತು. ಬಿಟ್ಟೇನೆನ್ನಲಾಗದ ಈ ಚಿಂತೆ ಬಿಡದೇ ನನಗೆ ಅಂಟಿಕೊಂಡಿತು. ನಿದ್ರಾಹಾರಗಳು ಬೇಡ ವೆನಿಸಿದವು. ಯಾರೆದುರೂ ಹೇಳಲಾಗದ ತಳಮಳ.

ಆದರೆ, ನನ್ನ ಮನದ ದುಗುಡ ನನ್ನ ಮಕ್ಕಳಿಬ್ಬರನ್ನೂ ಚಿಂತೆಗೀಡುಮಾಡಿತು. ಒಂದು ದಿನ ಹಿರಿಯ ಮಗನಾದ ತಮ್ಮಣ್ಣ ನನ್ನ ಚಿಂತೆಗೆ ಏನು ಕಾರಣ ಎಂದು ಕೇಳಿದ. ತಡೆಯಲಾಗದೇ ನನ್ನೆದೆಯ ತಳಮಳವನ್ನೆಲ್ಲ ಅವ ನೆದುರು ತೋಡಿಕೊಂಡೆ. ಒಂದೆರೆಗಳಿಗೆ ಸುಮ್ಮನಾದ ಅವನು ನಂತರ, "ಚಿಂತಿ ಯಾಕ ಮಾಡ್ತೀರಿ ? ಕಷ್ಟಪಟ್ಟು ಬರಿದೀರಿ. ಅದನ್ನ ಪ್ರಕಟಿಸಬೇಕು. ಅದರ ಕಾಳಜಿ ನೀವು ಇನ್ನ ಬಿಡ್ರಿ" ಎಂದು ಹೇಳಿದ. ಮರುದಿನವೇ ತನ್ನ ತಮ್ಮ (ನನ್ನ ಕಿರಿಯ ಮಗ) ಡಾ. ಅರುಣಕುಮಾರ (ಚಿದಂಬರ) ನನ್ನು ಕರೆದುಕೊಂಡು ದಾಂಡೇಲಿಗೆ ಹೋಗೇಬಿಟ್ಟನು. ಶ್ರೀ ಎಸ್. ಎನ್. ಕುಲಕರ್ಣಿ, ಶ್ರೀ ಮೊಖಾಶಿ ಅವರ ನೆರವಿನಿಂದ ಅಲ್ಲಿಂದ ಕಾಗದ ಖರೀದಿಸಿ ಮಕ್ಕಳಿಬ್ಬರೂ ತಂದು ಹಾಕಿದರು. ಲಕ್ಷಾಂತರ ರೂ.ಗಳ ಈ ಮುದ್ರಣ ಕಾಗದ ಮನೆಯ ಕೋಣೆಯನ್ನೆಲ್ಲ ವ್ಯಾಪಿಸಿದಾಗ ನನ್ನ ಮನದ ಕಳವಳ ಕೊನೆಗೊಂಡಿತು.

ಆದರೆ, ಮುದ್ರಣ ಎಲ್ಲಿ ಮಾಡಿಸುವದು ಎಂಬ ಚಿಂತೆ ಆರಂಭವಾಯಿತು. ಹಲವಾರು ಕಡೆಗೆ ವಿಚಾರಿ ಸಿದ್ದಾಯಿತು. ಕೊನೆಗೆ ಅರ್ಥವಿಕಾಸ ಪತ್ರಿಕೆಯ ಸಂಪಾದಕರಾದ ಮಿಂತ್ರಿಕೋಟಿಯ ಶ್ರೀ: ಕೃ ಪ ಜೋಶಿಯವರ ಹಾಗೂ ಪತ್ರಕರ್ತರಾದ ಶ್ರೀ ಎನ್. ಎಸ್. ಘಳಗಿಯವರ ಮಾರ್ಗದರ್ಶನದ ಮೇರೆಗೆ ಹುಬ್ಬಳ್ಳಿಯ ಘಂಟಿಕೇರಿ ಓಣಿಯಲ್ಲಿ ಶ್ರೀ ಪವಾರ ಅ್ಯಂಡ್ ಸನ್ಸ್‌ರವರ ಶ್ರೀ ಶಕ್ತಿ ಪ್ರಿಂಟಿಂಗ್ ಪ್ರೆಸ್‌ಗೆ ಈ ಕೃತಿಯ ಮುದ್ರಣದ ಹೊಣೆ ಒಪ್ಪಿಸ ಲಾಯಿತು. ಅಂದವಾಗಿ ಮುದ್ರಿಸಿದ ಶ್ರೀ ಶಕ್ತಿ ಪ್ರಿಂಟಿಂಗ್ ಪ್ರೆಸ್‌ನವರಿಗೂ ಹಾಗೂ ಮುದ್ರಣ ಕಾರ್ಯಕ್ಕೆ ಮುತುವರ್ಜಿ ವಹಿಸಿ ಕಾರ್ಯಮಾಡಿದ ಪತ್ರಕರ್ತರಾದ ಶ್ರೀ ಕೃ. ಪ. ಜೋಶಿಯವರಿಗೂ, ಶ್ರೀ ಎನ್. ಎಸ್. ಘಳಗಿ ಇವರಿಗೂ ಕೃತಜ್ಞತೆಗಳು.

ಮುದ್ರಿತ ಅಧ್ಯಾಯಗಳ ಕರಡು ತಿದ್ದಲು ನೆರವಾದವರು ಅನೇಕರು. ಶ್ರೀ ಪಾಡದೇಕರ್, ಶ್ರೀ ಎನ್. ಆರ್. ಕುಲಕರ್ಣಿ, ಶ್ರೀ ನಾ. ಕುಲಕರ್ಣಿ (ಕೋಟುಮಚಗಿ), ಮುಂತಾದ ಅನೇಕ ಮಹನೀಯರು ಪ್ರತಿಹಂತದಲ್ಲಿಯೂ ತಮ್ಮ ಕೆಲಸ ಕಾರ್ಯಗಳನ್ನು ಬದಿಗೊತ್ತಿ ಈ ಗ್ರಂಥದ ಮುದ್ರಣಕ್ಕೆ ಕರಡು ತಿದ್ದಲು ನೆರವಾದರು. ಅಗತ್ಯ ಸಲಹೆ ನೀಡಿದರು. ನನ್ನ ಮಗ ಡಾ. ಎ. ಪಿ. ಕುಲಕರ್ಣಿ ಮುದ್ರಣ ಕಾರ್ಯದ ಮೇಲುಸ್ತುವಾರಿ ಮಾಡಿದನು. ಸೊಸೆ ಶ್ರೀಮತಿ ಶೀಲಾಬಾಯಿ, ಮೊಮ್ಮಕ್ಕಳಾದ ಕುಮಾರಿ ಶೈಲಜಾ, ಜೀವಿತಾ, ಅನುರಾಧಾ, ಚಿ॥ ವೆಂಕಟೇಶ, ಪ್ರವೀಣ ಪ್ರಸನ್ನ, ಪ್ರಸಾದ ಇವರೆಲ್ಲರೂ ಆಸಕ್ತಿಯಿಂದ ಕರಡು ತಿದ್ದಿದರು. ಈ ಕಾರ್ಯದಲ್ಲಿ ಶ್ರೀ ಎನ್. ಆರ್. ಕುಲಕರ್ಣಿ ಅವರು ವಹಿಸಿದ ಶ್ರದ್ಧೆ ಅಪಾರ. ಶ್ರೀ ಗುರುರಾಜ ಜೋಶಿ, ಸಂಯುಕ್ತ ಕರ್ನಾಟಕ ಕಾರ್ಯಾಲಯ ಹುಬ್ಬಳ್ಳಿ ಇವರೂ ಬಹುವಿಧವಾಗಿ ನೆರವಾಗಿದ್ದಾರೆ. ಈ ಎಲ್ಲ ಸ್ನೇಹಿತರಿಗೂ, ಹಿತೈಷಿಗಳಿಗೂ, ಬಂಧು ವರ್ಗಕ್ಕೂ ಶ್ರೀ ಎಸ್. ನರಸಿಂಗರಾವ ಅವರಿಗೂ, ನನ್ನ ಕೃತಜ್ಞತೆಗಳು, ಶ್ರೀ ಸಮರ್ಥರ ಸತ್ಕೃಪೆ ಈ ಎಲ್ಲ ಮಹನೀಯರಿಗೂ ದೊರೆಯಲಿ.

ಈ ಗ್ರಂಥಕ್ಕೆ ಅಂದವಾದ ಮುಖ ಚಿತ್ರವನ್ನು ಸಿದ್ಧಪಡಿಸಿಕೊಟ್ಟ ಪುಣೆಯ ಜೋಶಿ ಮತ್ತು ಕಂಪನಿ ಅವರಿಗೆ ಹಾಗೂ ಛಾಯಾ ಚಿತ್ರಗಳನ್ನು ತರಿಸಿಕೊಟ್ಟ ಶ್ರೀ ಎನ್. ಸಿ. ಗೋಡಬೋಲೆ ಅವರಿಗೂ ನಾನು ಕೃತಜ್ಞನಾಗಿದ್ದೇನೆ.

ಈ ಕೃತಿ ರಚನೆಯಲ್ಲಿ ಮುದ್ರಣದಲ್ಲಿ ನೆರವಾದವರು ಅನೇಕರು. ಈ ಅವರ ವಯಸ್ಸಿನಲ್ಲಿ ಸಾಧ್ಯವಾದಷ್ಟು ಎಲ್ಲ ಮಹನೀಯರನ್ನೂ ಈ ಸಂದರ್ಭದಲ್ಲಿ ನಾನು ನೆನೆದಿದ್ದೇನೆ. ಆದರೆ ವಿಸ್ಮರಣೆಯಿಂದ ಯಾರದಾದರೂ ಹೆಸರು ಕೈ ತಪ್ಪಿದ್ದರೆ, ಅವರು ದಯವಿಟ್ಟು ನನ್ನನ್ನು ಕ್ಷಮಿಸಲಿ. ಈ ಪುಣ್ಯ ಕಾರ್ಯದಲ್ಲಿ ಪ್ರತ್ಯಕ್ಷ ಹಾಗೂ ಅಪ್ರತ್ಯಕ್ಷವಾಗಿ ನೆರವಾದ ಎಲ್ಲರಿಗೂ ಇದೋ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ನನ್ನ "ಮನಾಚೆ ಶ್ಲೋಕ" ಕನ್ನಡಾನುವಾದವನ್ನು ನೋಡಿ, ಸಂತೋಷದಿಂದ ಬೆನ್ನು ಚಪ್ಪರಿಸಿದ ಭೂದಾನ ಯಜ್ಞದ ಆಧ್ವರ್ಯು, ಮಹಾನ್ ದೇಶಭಕ್ತ ಸಂತ ವಿನೋಬಾ ಭಾವೆ ಅವರು ಆವಾಗಲೇ ನನಗೆ, "ದಾಸಬೋಧವನ್ನೂ ಕನ್ನಡದಲ್ಲಿ ಮಾಡು" ಎಂದು ಹರಸಿದ್ದರು. ವರದಳ್ಳಿಯ ಪೂಜ್ಯ ಶ್ರೀ ಶ್ರೀಧರ ಸ್ವಾಮಿಗಳು ಹಾಗೂ ಗುರುದೇವ ರಾನಡೆ ಅವರೂ ಸ್ಫೂರ್ತಿ ನೀಡಿದ್ದರು. ಕೃತಿ ರಚನೆಯಾಗುತ್ತಿದ್ದಂತೆ ಗದುಗಿನ ಮಹಾರಾಷ್ಟ್ರ ಮಂಡಳ ಹಾಗೂ ಡಾಕ್ಟರ ಶ್ರೀ ಅರವಿಂದರಾವ ಚಾಫೇಕರ, ಹುಬ್ಬಳ್ಳಿಯ ಭಗಿನಿ ಮಂಡಳ, ಶ್ರೀಮತಿ ಚಿತ್ರಾತಾಯಿ ಹುನಗುಂದ ಮುಂತಾದವರು ಈ ಕೃತಿಯ ಪ್ರಕಟಣೆಗೆ ಒತ್ತಾಯಿಸುತ್ತಿದ್ದರು. ಜೊತೆಗೆ ಈ ಕೃತಿಯ ಪ್ರಕಟಣೆಗೆ ಸ್ವಯಂ ಸ್ಫೂರ್ತಿಯಿಂದ ಹಣಕಾಸಿನ ನೆರವನ್ನೂ ಅನೇಕ ಮಹನೀಯರು ನೀಡಿದರು. (ಇವರ ಪಟ್ಟಿಯನ್ನು ಪ್ರತ್ಯೇಕವಾಗಿ ನೀಡಲಾಗಿದೆ.) ಈ ಎಲ್ಲ ಸಹೃದಯರನ್ನೂ ನಾನು ಈ ಸಂದರ್ಭದಲ್ಲಿ ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಹಸ್ತಪ್ರತಿ ನೋಡಿದ ಅನೇಕ ಪೀಠಾಧಿಪತಿಗಳು, ಬುದ್ಧಿಜೀವಿಗಳು, ಧರ್ಮಾಭಿಮಾನಿಗಳು, ಸುಸಂಸ್ಕೃತಿಯ ಕಟ್ಟಾಳುಗಳು ತಮ್ಮ ಪ್ರಾಮಾಣಿಕ ಅನಿಸಿಕೆಯನ್ನು ಬರೆದುಕೊಟ್ಟು ಹರಸಿದ್ದಾರೆ.

ದಕ್ಷಿಣಾಮ್ನಾಯ ಶ್ರೀಶಾರದಾ ಪೀಠ ಮಹಾ ಸಂಸ್ಥಾನ ಶೃಂಗೇರಿ ಹಾಗೂ ಕೂಡ್ಲಿ ಶೃಂಗೇರಿ ಪೀಠದ ಉಭಯ ಜಗದ್ಗುರುಗಳು, ಶ್ರೀ ಶಂಕರಾಚಾರ್ಯರು, ಪೇಜಾವರ ಮಠಾಧೀಶ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು, ಹುಬ್ಬಳ್ಳಿ ಚೈತನ್ಯಾಶ್ರಮದ ಶ್ರೀ ದತ್ತಾವಧೂತರು, ಚಿದಂಬರ ನಗರದ ಶ್ರೀ ಸುಂದರೇಶ ದೀಕ್ಷಿತರು, ಅಗಡಿ ಆನಂದ ವನದ ಶ್ರೀ ಚಿದಂಬರ ಚಕ್ರವರ್ತಿಗಳು, ಗದುಗಿನ ತೋಂಟದ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು, ಹುಬ್ಬಳ್ಳಿಯ ಶಾಂಡಿಲ್ಯಾಶ್ರಮದ ಶ್ರೀ ಚಂದ್ರಶೇಖರ ಸ್ವಾಮೀಜಿಯವರು, ಶ್ರೀ ಗಣಪತ ಮಹಾರಾಜ ಕಿತ್ತೂರ, ನೀಲಮ್ಮತಾಯಿ ಅಸುಂಡಿ ಮುಂತಾದ ವಿರಾಗಿವರೇಣ್ಯರು ಹಸ್ತಪ್ರತಿಯನ್ನು ನೋಡಿ ತುಂಬು ಹೃದಯದಿಂದ ಆಶೀರ್ವದಿಸಿದ್ದಾರೆ.

ಧಾರವಾಡದ ಪಂಡಿತ ಪ್ರಕಾಂಡ ಶ್ರೀ ಭಾಲಚಂದ್ರ ಶಾಸ್ತ್ರಿಗಳು, ಮುಳಗುಂದದ ಸಂಸ್ಕೃತ ವಿದ್ವಾನ್ ಶ್ರೀ ಶ್ರೀಪಾದ ದೀಕ್ಷಿತ ತಾಪಸ ಹಾಗೂ ಶ್ರೀ ಶಂಕರ ಶಾಸ್ತ್ರಿಗಳು, ಹುಬ್ಬಳ್ಳಿಯ ಶ್ರೀ ಶ್ರೀಪಾದ ಶಾಸ್ತ್ರಿ ಉತ್ತರಕೋಟಿ, ಪಂ. ನಾರಾಯಣ ಶಾಸ್ತ್ರಿ ಕುರಂದವಾಡ ಹಾಗೂ ಪಂ. ಪಂಢರಿನಾಥಾಚಾರ್ಯ ಗಲಗಲಿ, ಸುರಪುರದ ಪಂ. ಪೆರುಮಾಳ ಗುಂಡಾಚಾರ್ಯರು ಹಾಗೂ ಪಂ. ನರಸಿಂಹ ಶಾಸ್ತ್ರಿ ಅಷ್ಟಾವಧಾನಿ, ಸಂತ ಭದ್ರಗಿರಿ ಅಚ್ಯುತದಾಸರು, ಸಜ್ಜನಗಡ ಶ್ರೀ ರಾಮದಾಸಜಿ ನಾರಾಯಣ ಮಹಾದೇವ ಕುಮಠಕರ, ಶಿರೋಳ (ಕೊಲ್ಹಾಪುರ) ದ ಕೀರ್ತನಕಾರ ವಿಶ್ವನಾಥ ಹರಿಭಾವು ಕಾಳೆ ಮುಂತಾದ ಹಿರಿಯ ಮಹನೀಯರು ಈ ಕೃತಿಗೆ ಆಶೀರ್ವಚನ ನೀಡಿದ್ದಾರೆ.

ಪ್ರೊ. ಜಿ. ಡಿ. ನಾಡಕರ್ಣಿ, ಡಾ. ವಾಮನ ಬೇಂದ್ರೆ, ಫಲಟಣದ ಮುಧೋಜಿ ಕಾಲೇಜಿನ ಪ್ರಾಚಾರ್ಯ ಶ್ರೀ ಶಿವಾಜಿರಾವ ಭೋಸಲೆ, ಶಿವಾಜಿ ವಿಶ್ವವಿದ್ಯಾಲಯದ ಡಾ. ಭೋಗಿಶಯನ ಮುಂತಾದ ಬುದ್ಧಿಜೀವಿಗಳೂ ಈ ಕೃತಿಯನ್ನು ಮೆಚ್ಚಿ ಪ್ರೋತ್ಸಾಹಿಸಿದ್ದಾರೆ.

ಹಿಂದೂ ಸಂಸ್ಕೃತಿಯ ಕಟ್ಟಾಭಿಮಾನಿಗಳಾಗಿದ್ದ ದಿ.ಜಗನ್ನಾಥರಾವ ಜೋಶಿಯವರೂ ನನ್ನ ಈ ಕೃತಿಯನ್ನು ಮೆಚ್ಚಿ ಪ್ರಶಂಸಿದ್ದಾರೆ. ಅಂತೆಯೇ ಶ್ರೀ ಹರಿಭಾವು ವಜೆ, ಶ್ರೀ ರಾಮದಾಸ ನಾಯಕ (ಮಾಜಿ ಶಾಸಕ) ಮುಂತಾದವರೂ ಸಮರ್ಥರ "ದಾಸಬೋಧ"ವನ್ನು ಕನ್ನಡದಲ್ಲಿ ನೀಡಿದ ನನ್ನ ಸಾಹಸವನ್ನು ಮೆಚ್ಚಿದ್ದಾರೆ.

ಹುಬ್ಬಳ್ಳಿ-ಧಾರವಾಡ ಮಹಾನಗರ ಸಭೆಯ ಉಪ ಮಹಾಪೌರರಾಗಿದ್ದ ಶ್ರೀಮತಿ ನೈನಾ ತಾಮ್ಹಣಕರ, ಶ್ರೀಮತಿ ಗಿರಿಜಾ ಶಾಸ್ತ್ರಿ ಹಾಗೂ ಮಹಾನಗರ ಪಾಲಿಕೆ ಸದಸ್ಯೆ ಶ್ರೀಮತಿ ಉಷಾತಾಯಿ ಜೋಶಿ ಮೊದಲಾದವರೂ ಮೆಚ್ಚುಗೆ ಸೂಚಿಸಿದ್ದಾರೆ.

ಈ ಎಲ್ಲ ಪೀಠಾಧಿಪತಿಗಳು, ಬುದ್ಧಿಜೀವಿಗಳು, ಮಹನೀಯರು ಹಾಗೂ ಮಾತೆಯರಿಗೆ ನನ್ನ ಕೃತಜ್ಞತೆಗಳು.

**ನವವಿಧಾ ಭಕ್ತಿ ಅಣಿಜ್ಞಾನ । ಬೋಲಿಲೇ ವೈರಾಗ್ಯಾಚೇ ಲಕ್ಷಣ ।**
**ಬಹುಧಾ ಅಧ್ಯಾತ್ಮ ನಿರೋಪಣ—ನಿರೋಪಿಲೇ । ಭಕ್ತಿ ಚೇನ ಯೋಗೇ ದೇವ ।**
**ನಿಶ್ಚಯೇ ಪಾವತೀ ಮಾನವ । ಏಸಾ ಅಹೇ ಅಭಿಪ್ರಾಯ । ಈ ಯೇ ಗ್ರಂಥಿ**

ನವವಿಧ ಭಕ್ತಿ, ಬ್ರಹ್ಮಜ್ಞಾನ, ವೈರಾಗ್ಯ ಲಕ್ಷಣಗಳು, ಅಲ್ಲಲ್ಲಿ ಆತ್ಮವಿದ್ಯೆಯ ಅನೇಕ ಪ್ರಕಾರದ ವಿವೇಚನೆ, ಜೀವ-ಭಕ್ತ, ಪಂಚಮಹಾಭೂತ ಲಕ್ಷಣ, ಕಾವ್ಯ ಲಕ್ಷಣ, ಭ್ರಮೆ ನಿವಾರಣೆ, ಜೀವ-ಶಿವ ಸ್ವರೂಪ ವಿವರಣೆ- ಹೀಗೆ ಇಹ-ಪರ ಬದುಕಿನ ಆಳ, ವಿಸ್ತಾರಗಳನ್ನೆಲ್ಲ ಅಳೆದು ಅಣಿ ಮಾಡಿಕೊಟ್ಟಿರುವ "ದಾಸಬೋಧ" ನಮ್ಮ ಜೀವನ ಮಾರ್ಗದರ್ಶಿಯಾದ ಮಹಾಗ್ರಂಥ. ಇದರಲ್ಲಿ ಐಹಿಕ ಬದುಕಿನ ಬಗೆ ಇದೆ. ಪಾರಮಾರ್ಥಿಕ ಚಿಂತನೆ ಇದೆ. ಲೌಕಿಕದ ಜಂಜಡದಲ್ಲಿದ್ದೂ ಅಲೌಕಿಕ ಸಾಧನೆಯ ಸನ್ಮಾರ್ಗದರ್ಶನವಿದೆ. ಶ್ರೀ ಸಾಮಾನ್ಯ ತನ್ನ ನಿತ್ಯ ಜೀವನದಲ್ಲಿ ಅನುಸರಿಸಬೇಕಾದ ಕ್ರಮಗಳ ವಿವರವಿದೆ.

ಒಟ್ಟಾರೆ, "ದಾಸಬೋಧದಲ್ಲಿ ಏನಿದೆ ?" ಎಂಬ ಪ್ರಶ್ನೆಗೆ "ಏನಿಲ್ಲ ?" ಎಂಬ ಮರು ಪ್ರಶ್ನೆಯೇ ಉತ್ತರ ಏಕೆಂದರೆ ಇಲ್ಲಿ, ಇಲ್ಲಿ-ಅಲ್ಲಿಯ ಎಲ್ಲ ಬದುಕಿನ ಎಲ್ಲ ಅಗತ್ಯವೂ ಇದೆ.

ಇಂಥ ಅಮೂಲ್ಯ, ಪವಿತ್ರ ಹಾಗೂ ಇಹ-ಪರ ಮಾರ್ಗದರ್ಶಿಯಾದ ಮಹಾನ್ "ದಾಸಬೋಧ"ವನ್ನು ಕನ್ನಡಕ್ಕೆ ಅನುವಾದಿಸಿ, ಪ್ರಕಟಿಸುವದೇ ನನಗೆ ದೊರೆತ ಮಹಾಭಾಗ್ಯ. ನನ್ನ ಎಳೆವಯಂದ ಈ ಕನಸು ೮೩ ರ ಈ ಇಳಿವಯಂದಲ್ಲಿ ನನಸಾಗುತ್ತಿರುವದು ನನ್ನ ಸೌಭಾಗ್ಯ. ಈ ಕೃತಿಯನ್ನು ಕನ್ನಡಿಗರು ಓದಿ, ಮೆಚ್ಚಿ. ಶ್ರೀ ಸಮರ್ಥರ ಸದ್ಬೋಧೆಯನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುವಂತಾದರೆ ಅದೇ ನನ್ನ ಜೀವನದ ಮಹದಾನಂದ !

ಭಕ್ತ ಜನಸಮೂಹದ ಎದೆಯಾಳದಲ್ಲಿ ಸಂಸ್ಥಿತರಾಗಿರುವ ಶ್ರೀ ಸಮರ್ಥ ರಾಮದಾಸರ ಹೃತ್ಕಮಲವಾಸಿ ಶ್ರೀರಾಮನ ಕೃಪೆ ಎಲ್ಲರಿಗೂ ದೊರೆಯಲಿ. ಅವರ ಅನುಗ್ರಹ ಪಡೆದ ತಮ್ಮೆಲ್ಲರ ಶುಭಾಶೀರ್ವಾದ ನನಗೆ, ನನ್ನ ಕುಟುಂಬ ವರ್ಗಕ್ಕೆ ಇರಲಿ.

ಸಜ್ಜನ ವಿಧೇಯ

**ಪಾಂಡುರಂಗ ತಮ್ಮಾಜಿ ಕುಲಕರ್ಣಿ, ಮೆಣಸಿಗಿ**

– ಶುಭಂ –

---

ಇವರಿಗೂ ಕೃತಜ್ಞತೆಗಳು.